ಅವರ ಲೀಲೆಗಳನ್ನು ಪ್ರಕಟಿಸುತ್ತದೆ ಎಂದು ಅರ್ಥವು. ಅಚೇತನವಾದ ಯೌವನಮದಕ್ಕೆ ಉಪದೇಶ ಸಾಮರ್ಥ್ಯವು ಇಲ್ಲವಾದುದರಿಂದ ಅದು ಬಾಧಿತವಾಗಿ ಲಕ್ಷಣೆಯಿಂದ उपदिशति ಎಂಬ ಪದಕ್ಕೆ ಆವಿಷ್ಕಾರ ವೆಂಬ ಅರ್ಥವು ಅತಿಸ್ಫುಟವಾಗಿ ತೋರುವುದರಿಂದ ಈ ವ್ಯಂಗ್ಯವು ಅಗೂಢವು.

**अगूढगन्ध** ಅಗೂಢಗಂಧ (पुं०) ಹಿಂಗು. न गूढो गन्धो यस्य।

**अगूढभाव** ಅಗೂಢಭಾವ (वि०) ಸ್ಪಷ್ಟವಾದ ಅಭಿಪ್ರಾಯವುಳ್ಳ. अगूढो भावो यस्य। स्त्रियाम् –भावा –ಭಾವಾ. "अगूढभावापि विलोकने सा न लोचने मीलयितुं विषेहे" किरा० ३-३६।

**अगोचर** ಅಗೋಚರ (वि०) 1. ದೃಷ್ಟಿಗೆ ಬೀಳದ, ಕಣ್ಣಿಗೆ ಕಾಣಿಸದ, ಅಸ್ಪಷ್ಟವಾದ. 2. ಇಂದ್ರಿಯಗಳಿಗೂ ತಿಳಿಯದಿರುವ.

**अग्नायी** ಅಗ್ನಾಯೀ (स्त्री०) ಅಗ್ನಿಯ ಪತ್ನಿ, ಸ್ವಾಹಾದೇವಿ. अग्नेः स्त्री "ऐ" "ङीप्" च (४-१-३७)।

**अग्नाविष्णु** ಅಗ್ನಾವಿಷ್ಣು (पुं० द्वि० व०) ಒಂದೇ ಹವಿಸ್ಸನ್ನು ಸ್ವೀಕರಿಸುವ ಅಗ್ನಿ ಮತ್ತು ವಿಷ್ಣು ದೇವತೆಗಳು. अग्निश्च विष्णुश्च "आनङ्" (६-३-२६)।

**अग्नि** ಅಗ್ನಿ (पुं०) 1. ಬೆಂಕಿ. अङ्गति – अगि (गतौ) "निः" (उ० ४-५०)। "शमीतरुं शुष्कमिवाग्निरुच्छिखः" किरा० १-३२। 2. ಅಗ್ನಿದೇವತೆ. 3. ದಕ್ಷಿಣ, ಗಾರ್ಹಪತ್ಯ ಮತ್ತು ಆಹವನೀಯಗಳೆಂಬ ಅಗ್ನಿತ್ರಯ. 4. ಜಾಠರಾಗ್ನಿ, ಆಹಾರವನ್ನು ಜೀರ್ಣಮಾಡುವ ಒಂದು ಶಕ್ತಿ. 5. ಮೂರು ಸಂಖ್ಯೆ. 6. ಚಿನ್ನ. 7. ಚಿತ್ರಕ, ಚಿತ್ರಮೂಲ. 8. ಹರಳುಗಿಡ. "अग्निर्वैश्वानरेऽपि स्याच्चित्रकाख्यौषधौ पुमान्" मेदि०। 9. ಗೇರುಮರ. "अथ भल्लातकी त्रिषु। पर्यायोऽन्यर्कयोश्चापि वातारिः स्यादरुष्करः" कल्पद्रु०।

**अग्निकण** ಅಗ್ನಿಕಣ (पुं०) ಬೆಂಕಿಯ ಕಿಡಿ. अग्नेः कणः।

**अग्निकर्मन्** ಅಗ್ನಿಕರ್ಮನ್ (नं०) 1. ಅಗ್ನಿಕಾರ್ಯ, ಹೋಮ, ಅಗ್ನಿಹೋತ್ರ. 2. ಅಗ್ನಿಯ ಪೂಜೆ. 3. ಅಗ್ನಿವೈದ್ಯ, ಅಗ್ನಿರಕ್ಷೆ, ಬರೆಹಾಕುವುದು.

**अग्निकला** ಅಗ್ನಿಕಲಾ (स्त्री०) ಬೆಂಕಿಯ ಒಂದು ಭಾಗ.

**अग्निकाष्ठ** ಅಗ್ನಿಕಾಷ್ಠ (नं०) 1. ಬೆಂಕಿಯನ್ನುಂಟುಮಾಡುವ ಕಟ್ಟಿಗೆ, ಹೋಮಾಗ್ನಿಯನ್ನು ಉತ್ಪತ್ತಿ ಮಾಡುವ ಅರಣಿ. 2. ಅಗುರುಕಾಷ್ಠ. अग्नेरुद्दीपनं काष्ठम्।

**अग्निकुण्ड** ಅಗ್ನಿಕುಂಡ (नं०) ಹೋಮಕ್ಕಾಗಿ ಅಗ್ನಿಯನ್ನು ಪ್ರತಿಷ್ಠಿಸುವ (ಇಡುವ) ಸ್ಥಾನ (ಒಂದು ಜಾಗ) अग्नेराधानार्थं कुण्डम्।

**अग्निकुमार** ಅಗ್ನಿಕುಮಾರ (पुं०) ಕಾರ್ತಿಕೇಯ, ಷಣ್ಮುಖ.

**अग्निकेतु** ಅಗ್ನಿಕೇತು (पुं०) ಧೂಮ, ಹೊಗೆ. अग्नेः केतुरिव।

**अग्निकोण** ಅಗ್ನಿಕೋಣ (पुं०) ಆಗ್ನೇಯದಿಕ್ಕು, ಪೂರ್ವ ಮತ್ತು ದಕ್ಷಿಣದಿಕ್ಕುಗಳ ಮಧ್ಯದ ವಿದಿಕ್ಕು. अग्निदेवताकः कोणः।

**अग्निगर्भ** ಅಗ್ನಿಗರ್ಭ (पुं०) 1. ಸೂರ್ಯಕಾಂತ ಶಿಲೆ. 2. ಅರಣಿ, ಯಜ್ಞದ ಅಗ್ನಿಯನ್ನು ಉತ್ಪತ್ತಿಮಾಡುವ ಕಾಷ್ಠ (ಮರದತುಂಡು). अग्निर्गर्भे यस्य। 3. ಅಗ್ನಿಜಾರದಮರ.

**अग्निगर्भा** ಅಗ್ನಿಗರ್ಭಾ (स्त्री०) 1. ಶಮೀಲತೆ. "अवेहि तनयां ब्रह्मन्नग्निगर्भां शमीमिव" शाकु० ४-३। 2. ಪೃಥ್ವಿ, ಭೂಮಿ. अग्निः अग्नेर्वा गर्भो यस्याः। 3. ಜ್ಯೋತಿಷ್ಮತೀಲತೆ. अग्निरिव गर्भो मध्यभागो यस्याः।

**अग्निगृह** ಅಗ್ನಿಗೃಹ (नं०) ಹೋಮಗೃಹ, ಅಗ್ನಿಕಾರ್ಯ ಮಾಡುವ ಮನೆ.

**अग्निचित्** ಅಗ್ನಿಚಿತ್ (पुं०) ಅಗ್ನಿಯನ್ನು (ಉಪಾಸಿಸುವವನು) ಪೂಜಿಸುವವನು, ಅಗ್ನಿಹೋತ್ರಿ. अग्निमचैषीत् – चिञ् (चयने) "क्विप्" (३-२-९१)। "यतिभिः सार्धमनग्निमग्निचित्" रघु० ८-२५।

**अग्निचित्या** ಅಗ್ನಿಚಿತ್ಯಾ (स्त्री०) ಅಗ್ನಿಯನ್ನು ರಕ್ಷಿಸುವುದು, ಯಾಗಾಗ್ನಿಯನ್ನು ಕಾಪಾಡಿಡುವುದು.

**अग्निज** ಅಗ್ನಿಜ (पुं०) 1. ಕಾರ್ತಿಕೇಯ, ಷಣ್ಮುಖ. (नं०) 2. ಸುವರ್ಣ, ಚಿನ್ನ. (वि०) ಅಗ್ನಿಯಿಂದ ಉತ್ಪನ್ನವಾದ. अग्नेर्जायते – जनी (प्रादुर्भावे) "डः" (३-२-९८)।

**अग्निजन्मन्** ಅಗ್ನಿಜನ್ಮನ್ (पुं०) 1. ಕಾರ್ತಿಕೇಯ, ಷಣ್ಮುಖ. (नं०) 2. ಸುವರ್ಣ, ಚಿನ್ನ. अग्नेर्जन्म यस्य। (वि०) 3. ಅಗ್ನಿಯಿಂದ ಹುಟ್ಟಿದ.

अग्निजिह्व ಅಗ್ನಿಜಿಹ್ವ (पुं०) 1. ವರಾಹರೂಪಿಯಾದ ವಿಷ್ಣು. 2. ದೇವತೆ. (वि०) 3. ಅಗ್ನಿಯಂತೆ ನಾಲಿಗೆಯುಳ್ಳವನು.

अग्निजिह्वा ಅಗ್ನಿಜಿಹ್ವಾ (स्त्री०) 1. ಅಗ್ನಿಯ ಶಿಖೆ, ಅಗ್ನಿಯ ನಾಲಿಗೆ. ಅಗ್ನಿಯ ಏಳು ಜಿಹ್ವೆಗಳು: "करालो धूमिनी श्वेता लोहिता नीललोहिता। सुवर्णा पद्मरागा च जिह्वाः सप्त विभावसोः"। 2. ಗಜಹಿಪ್ಪಲಿ.

अग्निज्वाला ಅಗ್ನಿಜ್ವಾಲಾ (स्त्री०) 1. ಅಗ್ನಿಯ ಜಿಹ್ವೆ, ಬೆಂಕಿಯ ಉರಿ. 2. ಗಜಹಿಪ್ಪಲಿ.

अग्नितपस् ಅಗ್ನಿತಪಸ್ (पुं०) 1. ಪಂಚಾಗ್ನಿಗಳ ಮಧ್ಯದಲ್ಲಿ ನಿಂತು ತಪಸ್ಸುಮಾಡುವವನು. अग्निभिः तप्यते—तप (सन्तापे) "असुन्" (उ० ४-१८८)। (वि०) 2. ಬೆಂಕಿಯಂತೆ ಬಿಸಿಯುಂಟುಮಾಡುವ. अग्निरिव तपति।

अग्नितेजस् ಅಗ್ನಿತೇಜಸ್ (न०) 1. ಅಗ್ನಿಯಪ್ರಕಾಶ. (वि०) 2. ಅಗ್ನಿಯಂತೆ ಪ್ರಕಾಶವುಳ್ಳ. अग्नेरिव तेजो यस्य।

अग्नित्रय ಅಗ್ನಿತ್ರಯ (न०) ದಕ್ಷಿಣಾಗ್ನಿ, ಗಾರ್ಹಪತ್ಯ ಮತ್ತು ಆಹವನೀಯಗಳೆಂಬ ಮೂರು ಅಗ್ನಿ.

अग्निद ಅಗ್ನಿದ (पुं०) 1. ಮನೆಗೆ ಬೆಂಕಿಯಿಟ್ಟು ಸುಡುವವನು. [ಈತನಿಗೆ ಆತತಾಯಿಯೆಂದು ಹೆಸರು.] अग्निं गृहादौ ददाति—डु दाञ् (दाने) "कः"(३-२-३)। "अग्निदो गरदश्चैव शस्त्रपाणिर्धनापहः। क्षेत्रदारापहारी च षडेते ह्याततायिनः" ಎಂದು ಆತತಾಯಿಗಳು ಆರು ಬಗೆ. 2. ಜಾಠರಾಗ್ನಿಯನ್ನು ಹೆಚ್ಚುಮಾಡುವ ಔಷಧ; ಲೇಹ್ಯ ಮುಂತಾದುದು.

अग्निदग्ध ಅಗ್ನಿದಗ್ಧ (वि०) 1. ಶಾಸ್ತ್ರೋಕ್ತವಾಗಿ ಅಗ್ನಿಯಿಂದ ಸುಡಲ್ಪಟ್ಟ. 2. ಬೆಂಕಿಯಿಂದ ಸುಡಲ್ಪಟ್ಟ. अग्निना दग्धः।

अग्निदमनी ಅಗ್ನಿದಮನೀ (स्त्री०) ಅಗ್ನಿಯನ್ನು ಆರಿಸುವ ಒಂದು ಜಾತಿಯ ಮುಳ್ಳುಗಿಡ. अग्निर्दम्यतेऽनया—दमु (उपशमे) करं० "ल्युट्" (३-३-११७)।

अग्निदातृ ಅಗ್ನಿದಾತೃ (पुं०) ಶಾಸ್ತ್ರೋಕ್ತವಾಗಿ ಅಗ್ನಿಯಿಂದ ಸುಡುವವನು.

अग्निदीपन ಅಗ್ನಿದೀಪನ (वि०) ಜಾಠರಾಗ್ನಿಯನ್ನು ಹೆಚ್ಚಿಸುವ ಔಷಧ.

अग्निदीप्ता ಅಗ್ನಿದೀಪ್ತಾ (स्त्री०) ಜ್ಯೋತಿಷ್ಮತೀಲತೆ, ಮಿಂಚುಬಳ್ಳಿಗಿಡ. अग्निः जठराग्निः दीप्तो यस्याः।

अग्निदूत ಅಗ್ನಿದೂತ (पुं०) 1. ಅಗ್ನಿಯೇ ದೂತನಾಗಿ ಉಳ್ಳ ಯಜ್ಞ. 2. ದೇವತೆ. अग्निः दूतो यस्मिन् यस्य वा।

अग्निदेव ಅಗ್ನಿದೇವ (पुं०) 1. ಅಗ್ನಿ. 2. ಅಗ್ನಿಯ ಉಪಾಸಕ. अग्निर्देवोऽस्य।

अग्निदेवा ಅಗ್ನಿದೇವಾ (स्त्री०) ಕೃತ್ತಿಕಾನಕ್ಷತ್ರ. अग्निर्देवोऽस्याः। [ಕೃತ್ತಿಕಾನಕ್ಷತ್ರಕ್ಕೆ ಅಗ್ನಿಯು ದೇವತೆ.]

अग्निनक्षत्र ಅಗ್ನಿನಕ್ಷತ್ರ (न०) ಕೃತ್ತಿಕಾನಕ್ಷತ್ರ. अग्नेः नक्षत्रम्।

अग्निनेतृ ಅಗ್ನಿನೇತೃ (पुं०) ದೇವತೆ. अग्निः नेता यस्य।

अग्निपद ಅಗ್ನಿಪದ (न०) 1. ಅಗ್ನಿಯನ್ನು ಪ್ರತಿಷ್ಠಿಸುವ ಸ್ಥಳ. अग्नेः पदम्। 2. ಅಗ್ನಿವಾಚಕಪದ, ಅಗ್ನಿಯೆಂಬ ಅರ್ಥವನ್ನು ಕೊಡುವ ಪದ.

अग्निपर्वत ಅಗ್ನಿಪರ್ವತ (पुं०) ಜ್ವಾಲಾಮುಖಿ, ಬೆಂಕಿಯನ್ನು ಹೊಂದಿರುವ ಬೆಟ್ಟ.

अग्निपुच्छ ಅಗ್ನಿಪುಚ್ಛ (पुं०) ಯಜ್ಞಶಾಲೆಯ ಹಿಂಭಾಗ.

अग्निपुराण ಅಗ್ನಿಪುರಾಣ (न०) ಹದಿನೆಂಟು ಪುರಾಣಗಳಲ್ಲೊಂದು, ವ್ಯಾಸಮಹರ್ಷಿಪ್ರಣೀತವಾದ ಹದಿನೆಂಟು ಪುರಾಣಗಳಲ್ಲಿ ಎಂಟನೆಯ ಪುರಾಣ. ಈ ಪುರಾಣದಲ್ಲಿ ಪರಮಾತ್ಮನ ಅವತಾರ, ಸೃಷ್ಟಿಕ್ರಮ, ವಿಷ್ಣುಪೂಜೆ, ಅಗ್ನಿಪೂಜೆ, ದೀಕ್ಷೆ, ಅಭಿಷೇಕ, ಮಂಟಪಲಕ್ಷಣ, ದೇವಾಲಯನಿರ್ಮಾಣಕ್ರಮ, ಸಾಲಗ್ರಾಮಲಕ್ಷಣ ಮತ್ತು ಪೂಜೆ, ದೇವರಪ್ರತಿಷ್ಠೆ, ಗಂಗಾದಿಪುಣ್ಯತೀರ್ಥಗಳ ಮಹಿಮೆ, ಊರ್ಧ್ವಾಧೋಲೋಕವರ್ಣನೆ, ಯಂತ್ರ ಮಂತ್ರ ಔಷಧಗಳು, ಬ್ರಹ್ಮಚರ್ಯಧರ್ಮ, ವೈದಿಕ ಮತ್ತು ಸ್ಮಾರ್ತ ಕರ್ಮಗಳು, ಪ್ರಾಯಶ್ಚಿತ್ತ, ನರಕನಿರೂಪಣ, ಸಂಧ್ಯಾವಿಧಿ, ಗಾಯತ್ರಿಯ ಅರ್ಥ, ರಾಜ್ಯಾಭಿಷೇಕಕ್ರಮ, ರಾಜಧರ್ಮ, ರತ್ನಲಕ್ಷಣ, ಧನುರ್ವಿದ್ಯೆ, ಛಂದಶ್ಶಾಸ್ತ್ರ, ಸಾಹಿತ್ಯ, ಪುರಾಣಮಾಹಾತ್ಮ್ಯ ಮುಂತಾದ ವಿಷಯಗಳು ಹೇಳಲ್ಪಟ್ಟಿವೆ.

अग्निप्रणयन ಅಗ್ನಿಪ್ರಣಯನ (न०) 1. ಶಾಸ್ತ್ರಕ್ರಮದಲ್ಲಿ ಅಗ್ನಿಯ ಸಂಸರಣ. 2. ಅಗ್ನಿಯನ್ನು ಬೇರೆ ಕಡೆಗೆ ಒಯ್ಯುವುದು. अग्नेः प्रणयनम्।

**अग्निबाहु** ಅಗ್ನಿಬಾಹು (पुं०) ಧೂಮ, ಹೊಗೆ. अग्नेः बाहुरिव।

**अग्निभ** ಅಗ್ನಿಭ (नं०) 1. ಸ್ವರ್ಣ, ಚಿನ್ನ. अग्निरिव भाति — भा (दीप्तौ) "कः" (३-२-४)। 2. ಕೃತ್ತಿಕಾ ನಕ್ಷತ್ರ. अग्नेः भम्।

**अग्निभु** ಅಗ್ನಿಭು (नं०) ಸ್ವರ್ಣ, ಚಿನ್ನ.

**अग्निभू** ಅಗ್ನಿಭೂ (पुं०) 1. ಕಾರ್ತಿಕೇಯ, ಷಣ್ಮುಖ. अग्नेर्भवति — भू (सत्तायाम्) "क्विप्" (३-२-१७९)। (वि०) 2. ಅಗ್ನಿಯಿಂದ ಹುಟ್ಟಿದ.

**अग्निभूति** ಅಗ್ನಿಭೂತಿ (पुं०) 1. ಕೊನೆಯತೀರ್ಥಂಕರರ ಶಿಷ್ಯ. (स्त्री०) 2. ಅಗ್ನಿಯ ಶಕ್ತಿ. 3. ಅಗ್ನಿಯ ಕಾಂತಿ. (वि०) 4. ಅಗ್ನಿಯಿಂದ ಹುಟ್ಟಿದ.

**अग्निमणि** ಅಗ್ನಿಮಣಿ (पुं०) ಸೂರ್ಯಕಾಂತಶಿಲೆ. अग्न्युत्थापको मणिः।

**अग्निमत्** ಅಗ್ನಿಮತ್ (पुं०) 1. ಆಹಿತಾಗ್ನಿ, ಶಾಸ್ತ್ರೀಯವಾದ ಅಗ್ನಿಯುಳ್ಳವನು, ಪತ್ನಿಯುಳ್ಳ ದ್ವಿಜ. अग्निरस्त्यस्य "मतुप्" (५-२-९४)। "दारास्वग्निं विनिक्षिप्य प्रवसेदग्निमान् द्विजः"। (वि०) 2. ಒಳ್ಳೆಯ ಜಾಠರಾಗ್ನಿ ಶಕ್ತಿಯುಳ್ಳ, ಜೀರ್ಣಶಕ್ತಿಯುಳ್ಳ.

**अग्निमथ्** ಅಗ್ನಿಮಥ್ (पुं०) 1. ಯಾಗಕ್ಕಾಗಿ ಅರಣಿಯಿಂದ ಅಗ್ನಿಯನ್ನು ಕಡೆಯುವ ಯಾಜ್ಞಿಕ. अग्निं मथ्नाति — मन्थ (विलोडने) "क्विप्" (३-२-७६)। 2. ಅರಣಿಯನ್ನು ಕಡೆಯುವ ಮಂತ್ರ. अग्निः मथ्यतेऽनेन — मन्थ कर० "क्विप्" (३-२-७६)।

**अग्निमन्थ** ಅಗ್ನಿಮಂಥ (पुं०) 1. ನರುವಲುಗಿಡ, ನೆಲ್ಲಿಗಿಡ. अग्निः मथ्यतेऽनेन — मन्थ (विलोडने) "घञ्" (३-३-१२१)। 2. ಅರಣಿಯನ್ನು ಕಡೆಯುವ ಮಂತ್ರ.

**अग्निमान्द्य** ಅಗ್ನಿಮಾಂದ್ಯ (नं०) ಜಠರಾಗ್ನಿಯ ಶಕ್ತಿಯು ಕಡಿಮೆಯಾಗುವಿಕೆ. अग्नेः जठरानलस्य मान्द्यम्।

**अग्निमित्र** ಅಗ್ನಿಮಿತ್ರ (पुं०) ಒಬ್ಬರಾಜ, ಪುಷ್ಪಮಿತ್ರನ ಮಗ.

**अग्निमुख** ಅಗ್ನಿಮುಖ (पुं०) 1. ದೇವತೆ. अग्निर्मुखमिव यस्य। [ಯಾಗಗಳಲ್ಲಿ ದೇವತೆಗಳನ್ನುದ್ದೇಶಿಸಿ ಕೊಡುವ ಹವಿಸ್ಸನ್ನು ಅಗ್ನಿಯು ಸ್ವೀಕರಿಸಿ ದೇವತೆಗಳಿಗೆ ಒಪ್ಪಿಸುವುದರಿಂದ ಈ ಹೆಸರು.] "अग्निमुखा वै देवाः" श्रुतिः। 2. ಅಗ್ನಿಹೋತ್ರಿಯಾದ ಬ್ರಾಹ್ಮಣ. अग्निः मुखं प्रधानं यस्य। 3. ಬ್ರಾಹ್ಮಣ. अग्निः शापाग्निः मुखे यस्य। (नं०) 4. ಜಾಠರಾಗ್ನಿಯನ್ನುಂಟುಮಾಡುವ ಒಂದು ಔಷಧ, ಒಂದು ಚೂರ್ಣ, ಲೇಹ್ಯ ಮುಂತಾದುದು. अग्नेर्जठरानलस्य मुखम्। **ಈ ಚೂರ್ಣದ ಯೋಗ:** ಇಂಗು 1 ಭಾಗ ಬಜೆ 2 ಭಾಗ ಹಿಪ್ಪಲಿ 3 ಭಾಗ ಹಸಿಶುಂಠಿ 4 ಭಾಗ ಓಮ 5 ಭಾಗ ಅಳಲೆಕಾಯಿ 6 ಭಾಗ ಚಿತ್ರಮೂಲ 7 ಭಾಗ ಮತ್ತು ಚಂಗಲುಕೋಷ್ಠ 8 ಭಾಗ. ಇವುಗಳನ್ನು ಚೂರ್ಣಮಾಡಿ ಮೊಸರಿನಕೆನೆ ಮದ್ಯ ಅಥವಾ ಬಿಸಿನೀರಿನಲ್ಲಿ ಸೇರಿಸಿ ಸೇವಿಸಬೇಕು. ಇದರಿಂದ ಅಜೀರ್ಣ, ಪ್ಲೀಹ, ಅರ್ಶಸ್ಸು (ಮೂಲವ್ಯಾಧಿ), ಶ್ಲೇಷ್ಮರೋಗ, ಗುಲ್ಮ, ಕಾಸ, ಶ್ವಾಸ ಮತ್ತು ಕ್ಷಯ ಇವುಗಳ ಪರಿಹಾರವಾಗುವುದು. 5. ಪಾಕಶಾಲೆ, ಅಡಿಗೆಮನೆ. 6. ಕುಂಕುಮಕೇಸರಿ. 7. ಚಿತ್ರಮೂಲದಗಿಡ. 8. ಕುಸುಂಭದಹೂವು. "भवेदग्निमुखो देवे विप्रे भल्लातके स्त्रियाम्। अथाग्निमुखमुद्दिष्टं कुसुम्भे कुङ्कुमेऽपि च" मेदि०।

**अग्निमुखी** ಅಗ್ನಿಮುಖೀ (स्त्री०) 1. ಗೇರುಮರ. अग्निरिव मुखं यस्याः "ङीप्" (४-१-४१)। 2. ಗಾಯತ್ರೀಮಂತ್ರ. अग्निरिव मुखं मुखत्वेन कल्पितं यस्याः। "कदाचिदपि नो विद्वान् गायत्रीमुदके जपेत्। गायत्र्यग्निमुखी यस्मात्तस्मादुत्थाय तां जपेत्" गोभिलः। 3. ನೀರುಹಿಪ್ಪಲಿ. 4. ಜೆಣ್ಣೆಬಿದಿರುಸೊಪ್ಪು. 5. ಚಂದ್ರನ ಸೂಕ್ಷ್ಮವಾದ ರೇಖೆ. 6. ಅಮೃತಬಳ್ಳಿ. 7. ಸೋಮಲತೆ. 8. ಚಂದ್ರನ ಕಲೆ (ಹದಿನಾರನೆಯ ಒಂದು ಭಾಗ). "लाङ्गलिकाख्यौषधौ च विशल्यायां च योषिति। इन्दुलेखामृतासोमलताशशिकलासु च" मेदि०।

**अग्निरजस्** ಅಗ್ನಿರಜಸ್ (पुं०) 1. ಕೆಂಪುಬಣ್ಣದ ಇಂದ್ರಗೋಪವೆಂಬ ಹುಳ. अग्निरिव रज्यते दीप्यते — रञ्ज (रागे) "असुन्" (उ० ४-१८८)। (नं०) 2. ಸ್ವರ್ಣ, ಚಿನ್ನ. 3. ಅಗ್ನಿಯ ಶಕ್ತಿ.

**अग्निरहस्य** ಅಗ್ನಿರಹಸ್ಯ (नं०) ಅಗ್ನಿಯ ಉಪಾಸನೆಯ ಕ್ರಮವನ್ನು ತಿಳಿಸುವ ಶಾಸ್ತ್ರ.

**अग्निरूप** ಅಗ್ನಿರೂಪ (नं०) 1. ಬೆಂಕಿಯ ಸ್ವಭಾವ. 2. ಅಗ್ನಿಪುರುಷನ ಸ್ವರೂಪ. (वि०) 3. ಅಗ್ನಿಗೆ ಸಮಾನವಾದ ರೂಪವುಳ್ಳ.

**अग्निवधू** ಅಗ್ನಿವಧೂ (स्त्री०) ಅಗ್ನಿಯಪತ್ನಿ, ಸ್ವಾಹಾದೇವಿ. अग्नेः वधूः।

**अग्निवर्ण** ಅಗ್ನಿವರ್ಣ (पु०) 1. ಸೂರ್ಯವಂಶದ ಒಬ್ಬ ರಾಜ. "अग्निवर्णमभिषिच्य राघवः" रघु० १९-१। 2. ಬೆಂಕಿಯ ಬಣ್ಣ. (वि०) 3. ಬೆಂಕಿಗೆ ಸಮಾನವಾದ ವರ್ಣವುಳ್ಳ.

**अग्निवर्धक** ಅಗ್ನಿವರ್ಧಕ (पु०) 1. ಜಾಠರಾಗ್ನಿಯನ್ನು ಬಲಪಡಿಸುವ ಔಷಧ. (वि०) 2. ಪುಷ್ಟಿಕರವಾದ.

**अग्निवाह** ಅಗ್ನಿವಾಹ (पु०) 1. ಧೂಮ, ಹೊಗೆ. 2. ಮೇಕೆ, ಆಡು. अग्निं वाहयति गमयति — वह (प्रापणे) + णिच् "अण्" (३-२-१)। (वि०) 3. ಅಗ್ನಿಯನ್ನು ವಹಿಸಿರುವ.

**अग्निवाहन** ಅಗ್ನಿವಾಹನ (न०) ಮೇಕೆ, ಆಡು. अग्नेः वाहनम्।

**अग्निविद्** ಅಗ್ನಿವಿದ್ (पु०) 1. ಅಗ್ನಿಹೋತ್ರಿ. 2. ಅಗ್ನಿಯ ಉಪಾಸನಾಶಾಸ್ತ್ರವನ್ನರಿತವನು. अग्नि वेत्ति — विद (ज्ञाने) "क्विप्" (३-२-६१)।

**अग्निविश्** ಅಗ್ನಿವಿಶ್ (पु०) ಇದ್ದಲು. "अङ्गारोऽस्त्री प्रशान्तार्चिरिङ्गालः कारिकाग्निविट्" वैज०।

**अग्निवीर्य** ಅಗ್ನಿವೀರ್ಯ (न०) 1. ಸ್ವರ್ಣ, ಚಿನ್ನ. 2. ಅಗ್ನಿಯ ಶಕ್ತಿ.

**अग्निशरण** ಅಗ್ನಿಶರಣ (न०) ಅಗ್ನಿಕಾರ್ಯವನ್ನು ಮಾಡುವ ಗೃಹ, ಹೋಮಗೃಹ, ಯಜ್ಞಶಾಲೆ.

**अग्निशाला** ಅಗ್ನಿಶಾಲಾ (स्त्री०) ಹೋಮಗೃಹ, ಯಜ್ಞಶಾಲೆ.

**अग्निशिख** ಅಗ್ನಿಶಿಖ (पु०) 1. ದೀಪ. 2. ಆಕಾಶ ಬಾಣ. 3. ಬಾಣ. 4. ಕುಸುಬೆಗಿಡ. 5. ಕುಂಕುಮ ಕೇಸರಿ. (न०) 6. ಸ್ವರ್ಣ, ಚಿನ್ನ. (वि०) 7. ಅಗ್ನಿಯಂತೆ ಅಗ್ರವುಳ್ಳ. 8. ಅಗ್ನಿಯಂತೆ ಜಟೆಯುಳ್ಳ. अग्निरिव शिखा यस्य।

**अग्निशिखा** ಅಗ್ನಿಶಿಖಾ (स्त्री०) 1. ಅಗ್ನಿಯ ಜ್ವಾಲೆ, ಬೆಂಕಿಯ ಉರಿ. 2. ನೀರು ಹಿಪ್ಪಲಿ. 3. ಕೋಲು ಕುಟುಕನ ಗಿಡ. 4. ಬೆಣ್ಣೆ ಬಿದಿರಿನ ಸೊಪ್ಪು. 5. ಸೋಮಲತೆ. 6. ಅಮೃತಬಳ್ಳಿ. 7. ಚಂದ್ರನ ಸೂಕ್ಷ್ಮವಾದ ರೇಖೆ. 8. ಚಂದ್ರನ ಕಲೆ (ಹದಿನಾರನೆಯ ಒಂದು ಭಾಗ). "अग्निशिखा लाङ्गलिक्या-मिन्दुलेखेन्दुखण्डके। गुडूचीसोमलतयोः" हेम०।

**अग्निष्टोम** ಅಗ್ನಿಷ್ಟೋಮ (पु०) 1. ಅಗ್ನಿಯನ್ನು ಸ್ತೋತ್ರಮಾಡುವ ಯಾಗ, ಜ್ಯೋತಿಷ್ಟೋಮದ ಒಂದು ಅಂಗಯಾಗ. अग्नेः स्तोमः स्तुतिसाधनं यत्र। 2. ಆರನೇ ಮನುವಿನ ಮಗ.

**अग्निसंस्कार** ಅಗ್ನಿಸಂಸ್ಕಾರ (पु०) ಶಾಸ್ತ್ರೋಕ್ತವಾಗಿ ಅಗ್ನಿಯಿಂದ ಮಾಡುವ ಸಂಸ್ಕಾರ.

**अग्निसङ्काश** ಅಗ್ನಿಸಂಕಾಶ (वि०) ಅಗ್ನಿಗೆ ಸಮಾನವಾದ ವರ್ಣವುಳ್ಳ, ಅಗ್ನಿಗೆ ಸಮಾನವಾದ ತೇಜಸ್ಸುಳ್ಳ.

**अग्निसंभव** ಅಗ್ನಿಸಂಭವ (न०) 1. ಸ್ವರ್ಣ, ಚಿನ್ನ. (वि०) 2. ಅಗ್ನಿಯಿಂದ ಹುಟ್ಟಿದ.

**अग्निसख** ಅಗ್ನಿಸಖ (पु०) ವಾಯು, ಗಾಳಿ. अग्नेः सखा "टच्" (५-४-९१)।

**अग्निसाक्षिक** ಅಗ್ನಿಸಾಕ್ಷಿಕ (वि०) ಅಗ್ನಿಯೇ ಸಾಕ್ಷಿಯಾಗಿ ಉಳ್ಳ ಕೆಲಸ, ಅಗ್ನಿಯ ಮುಂದೆ ಮಾಡುವ ಕಾರ್ಯ. अग्निः साक्षी यत्र। "चक्रेऽग्निसाक्षिकं सख्यम्" रामा०।

**अग्निसात्** ಅಗ್ನಿಸಾತ್ (अव्य०) ಅಗ್ನಿಗೆ ಅಧೀನವಾಗಿ. "न चकार शरीरमग्निसात्" रघु० ८-७२।

**अग्निसार** ಅಗ್ನಿಸಾರ (न०) ರಸಾಂಜನ, ಕಣ್ಣಿನ ಮುಲಾಮು, ಕಣ್ಣಿಗೆ ಹಾಕುವ ಅಂಜನ.

**अग्निसूत्र** ಅಗ್ನಿಸೂತ್ರ (न०) ಮೌಂಜೀಮೇಖಲೆ, ಬ್ರಹ್ಮಚಾರಿಗಳು ನಡುವಿಗೆ ಕಟ್ಟುವ ಮೌಂಜಿ.

**अग्निस्तम्भ** ಅಗ್ನಿಸ್ತಂಭ (पु०) 1. ಅಗ್ನಿಶಕ್ತಿಯ ತಡೆ. अग्नेः स्तम्भः। 2. ಅಗ್ನಿಯ ಶಕ್ತಿಯನ್ನು ತಡೆಗಟ್ಟುವ ಮಂತ್ರ. 3. ಅಗ್ನಿಯ ಶಕ್ತಿಯನ್ನು ತಡೆಗಟ್ಟುವ ಮಣಿ. 4. ಅಗ್ನಿಯ ಶಕ್ತಿಯನ್ನು ತಡೆಗಟ್ಟುವ ಔಷಧ. अग्निः स्तम्यतेऽनेन — स्तम्भु (रोधने) (सौत्रो धातुः) "घञ्" (३-३-१२१)।

**अग्निहोत्र** ಅಗ್ನಿಹೋತ್ರ (पु०) 1. ಅಗ್ನಿ. (न०) 2. ಹವಿಸ್ಸು. "अग्निहोत्रोऽग्निहविषोः" मेदि०। 3. ಅಗ್ನಿಕಾರ್ಯ, ಹೋಮ. अग्निः हूयतेऽत्र।

**अग्निहोत्रहवनी** ಅಗ್ನಿಹೋತ್ರಹವನೀ (स्त्री०) 1. ಹೋಮದಲ್ಲಿ ಹವಿಸ್ಸನ್ನು ತೆಗೆಯಲು ಉಪಯೋಗಿಸುವ ಸವಟು. अग्निहोत्रः अग्निः हूयतेऽनया — हु (दानादनयोः) "ल्युट्" (३-३-११७)। 2. ಹವಿಸ್ಸನ್ನು ತೆಗೆಯುವ ಋಕ್ಕು, -ಮಂತ್ರ.

**अग्निहोत्रिन्** ಅಗ್ನಿಹೋತ್ರಿನ್ (पु०) ಅಗ್ನಿಹೋತ್ರವುಳ್ಳವನು, ವಿಹಿತಕಾಲದಲ್ಲಿ ಅಗ್ನಿಕಾರ್ಯವನ್ನು ಮಾಡುವವನು. अग्निहोत्रमस्यास्ति "इनिः" (५-२-११५)

**अग्नीध्** ಅಗ್ನೀಧ್ (पुं०) ಋತ್ವಿಕ್ಕು, ಯಾಜಕ. अग्निमिन्धे — ञि इन्धी (दीप्तौ) "क्विप्" (३-२-७६)।

**अग्नीवरुण** ಅಗ್ನೀವರುಣ (पुं० द्वि० व०) ಒಂದೇ ಹವಿಸ್ಸನ್ನು ಸ್ವೀಕರಿಸುವ ಅಗ್ನಿ ಮತ್ತು ವರುಣ ದೇವತೆಗಳು. अग्निश्च वरुणश्च "ईत्" (६-३-२७)।

**अग्नीषोम** ಅಗ್ನೀಷೋಮ (पुं० द्वि० व०) ಒಂದೇ ಹವಿಸ್ಸನ್ನು ಸ್ವೀಕರಿಸುವ ಅಗ್ನಿ ಮತ್ತು ಸೋಮದೇವತೆಗಳು. अग्निश्च सोमश्च "ईत्" (६-३-२७)।

**अग्नीषोमीय** ಅಗ್ನೀಷೋಮೀಯ (वि०) ಅಗ್ನಿ ಮತ್ತು ಸೋಮದೇವತೆಗಳಿಗೆ ಸಂಬಂಧಿಸಿದ. अग्नीषोमौ देवते अस्य "छः" (४-२-३२)।

**अग्नेन्द्र** ಅಗ್ನೇಂದ್ರ (पुं० द्वि० व०) ಒಂದೇ ಹವಿಸ್ಸನ್ನು ಸ್ವೀಕರಿಸುವ ಅಗ್ನಿ ಮತ್ತು ಇಂದ್ರದೇವತೆಗಳು. अग्निश्च इन्द्रश्च "आनङ्" (६-३-२६)। गुणः (६-१-८७)।

**अग्न्यगार** ಅಗ್ನ್ಯಗಾರ (नं०) ಅಗ್ನಿಗೃಹ, ಹೋಮಾಗ್ನಿಯನ್ನು ರಕ್ಷಿಸಿಡುವ ಗೃಹ. अग्नेः अगारम्। "वसंश्चतुर्थोऽग्निरिवाग्न्यगारे" रघु० ५-२५।

**अग्न्याधान** ಅಗ್ನ್ಯಾಧಾನ (नं०) ಅಗ್ನಿಯ ಸ್ಥಾಪನೆ, ಅಗ್ನಿಯಪ್ರತಿಷ್ಠೆ. अग्नेराधानम्।

**अग्न्याहित** ಅಗ್ನ್ಯಾಹಿತ (पुं०) ಅಗ್ನಿಹೋತ್ರಿ, ವೈದಿಕಾಗ್ನಿಯುಳ್ಳ ಬ್ರಾಹ್ಮಣ. आहिताः आधानेन संस्कृताः अग्नयो येन। परनिपातः (२-२-३७)।

**अग्न्युत्पात** ಅಗ್ನ್ಯುತ್ಪಾತ (पुं०) 1. ಅಗ್ನಿಯಿಂದ ಸೂಚಿತವಾದ ಅನಿಷ್ಟ. 2. ಅನಿಷ್ಟಸೂಚಕವಾದ ಬೆಂಕಿಯ ಸುರಿಮಳೆ. 3. ಧೂಮಕೇತು. अग्नेः उत्पातः।

**अग्न्युपस्थान** ಅಗ್ನ್ಯುಪಸ್ಥಾನ (नं०) 1. ಅಗ್ನಿಯ ಪೂಜೆ. अग्नेरुपस्थानम्। 2. ಅಗ್ನಿಪೂಜೆಯ ಮಂತ್ರ. अग्निरुपस्थीयतेऽनेन — ष्ठा (गतिनिवृत्तौ) "ल्युट्" (३-३-११७)।

**अग्र** ಅಗ್ರ (पुं०) 1. ನೋಡದಿರುವ ವಸ್ತುವನ್ನು ಕಾಣುವ ಸ್ವಪ್ನ, — ಕನಸು. "संस्कारमात्रजः स्वप्नः कामिको रसकोऽपि च। अदृष्टजस्त्वग्रचाग्रः" वैज०। (नं०) 2. ಊರ್ಧ್ವಭಾಗ, ಮೇಲುಭಾಗ. अग (कुटिलायां गतौ) "रन्" (उ० २-२९)। "पद्मानि यस्याग्रसरोरुहाणि" कुमा० १-१६। 3. ಮುಂಭಾಗ, ಎದುರುಭಾಗ. "आनीतमग्रे निजबन्धनार्थम्" याद० ४-३४। 4. ಆಲಂಬನ, ವಿಶ್ರಾಂತಿಸ್ಥಾನ. 5. ಸಮೂಹ, ಗುಂಪು. 6. ಅಗ್ರಭಾಗ, ತುದಿ. "प्रणतितानेकलता-भुजाग्रान्" माघ० ४-७। 7. ಒಂದು ಪಲದತೂಕ. 8. ಬ್ರಾಹ್ಮಣಭೋಜನ, ಬ್ರಾಹ್ಮಣಭೋಜನಕ್ಕಾಗಿ ಬಿಟ್ಟಿರುವ ವೃತ್ತಿ, ದಾನ. 9. ಉತ್ಕರ್ಷ, ಶ್ರೇಷ್ಠತೆ, ಮೇಲ್ಮೆ. 10. ಪ್ರಾಂತಭಾಗ, ಸಮೀಪಪ್ರದೇಶ. "हर्म्याग्रसंरूढतृणाङ्कुरेषु" रघु० ६-४७। (वि०) 11. ಮೊದಲನೆಯ, ಪ್ರಧಾನ, ಮುಖ್ಯ, ಪ್ರಮುಖ. 12. ಅಧಿಕ, ಹೆಚ್ಚಾದ. 13. ಮೊದಲನೆಯ, ಒಂದನೆಯ. "अग्रं पुरस्तादुपरि परिमाणे पलस्य च। आलम्बने समूहे च प्रान्ते च स्यान्नपुंसकम्। अधिके च प्रधाने च प्रथमे चाभिधेयवत्" मेदि०।

**अग्रकाय** ಅಗ್ರಕಾಯ (पुं०) ದೇಹದ ಪೂರ್ವಭಾಗ. अग्रश्चासौ कायश्च।

**अग्रग** ಅಗ್ರಗ (वि०) ಮುಂದೆಹೋಗುವ, ಮುಂದೆ ನಡೆಯುವ. अग्रे गच्छति — गम्लृ (गतौ) "डः" (वा० ३-२-४८)।

**अग्रगण्य** ಅಗ್ರಗಣ್ಯ (वि०) 1. ಪ್ರಧಾನ, ಮುಖ್ಯ. 2. ಮೊದಲು ಎಣಿಸಲು ಅರ್ಹವಾದ. अग्रे गण्यते — गण (संख्याने) "यत्" (३-१-९७)।

**अग्रगामिन्** ಅಗ್ರಗಾಮಿನ್ (वि०) ಮುಂದೆಹೋಗುವ, ಮುಂದೆ ನಡೆಯುವ. अग्रे गच्छति — गम्लृ (गतौ) "णिनिः" (३-१-१३४)। स्त्रियां "ङीप्" (४-१-५)। अग्रगामिनी — ಗಾಮಿನೀ.

**अग्रज** ಅಗ್ರಜ (पुं०) ಜ್ಯೇಷ್ಠ ಸಹೋದರ, ಹಿರಿಯಣ್ಣ. "अग्रजेन हरिणा हरिः स्वयम्" याद० १७-५।

**अग्रजन्मन्** ಅಗ್ರಜನ್ಮನ್ (पुं०) 1. ಬ್ರಾಹ್ಮಣ. 2. ಜ್ಯೇಷ್ಠ ಸಹೋದರ. (वि०) 3. ಮೊದಲು ಹುಟ್ಟಿದ. अग्रे जन्म यस्य।

**अग्रजात** ಅಗ್ರಜಾತ (पुं०) 1. ಬ್ರಾಹ್ಮಣ. 2. ಜ್ಯೇಷ್ಠ ಸಹೋದರ. अग्रे जातः। (स्त्री०) — ता — ತಾ. 3. ಜ್ಯೇಷ್ಠ ಸಹೋದರಿ. (वि०) 4. ಮೊದಲು ಹುಟ್ಟಿದ.

**अग्रजाति** ಅಗ್ರಜಾತಿ (पुं०) ಬ್ರಾಹ್ಮಣ. अग्रा श्रेष्ठा जातिर्यस्य।

**अग्रणी** ಅಗ್ರಣೀ (पुं०) 1. ಅಗ್ನಿ, ಬೆಂಕಿ. अग्रं नयति देवेभ्यः। 2. ಪ್ರಭು, ಯಜಮಾನ. 3. ವಿಷ್ಣು. "अग्रणीर्ग्रामणीः श्रीमान्" वि० स०। (वि०) 4. ಶ್ರೇಷ್ಠ. 5. ಮುಂದಾಳು. "अथाङ्गिरसमग्रण्यम्" कुमा० ६-६५।

**अग्रतस् ಅಗ್ರತಸ್** (अव्य०) ಮುಂದೆ, ಮುಂಭಾಗದಲ್ಲಿ. अग्रे "तसिः" (५-४-४४)। "धनुर्भृतामग्रत एव रक्षिणाम्" रघु० ३-३९।

**अग्रतःसर ಅಗ್ರತಃಸರ** (वि०) ಮುಂದೆ ನಡೆಯುವ, ಮುಂದಾಳಾಗಿರುವ. अग्रतः सरति गच्छति — सृ (गतौ) "टः" (३-२-१८)।

**अग्रनासिका ಅಗ್ರನಾಸಿಕಾ** (स्त्री०) ಮೂಗಿನ ತುದಿ.

**अग्रपाद ಅಗ್ರಪಾದ** (पु०) ಮುಂಗಾಲು, ಕಾಲಿನ ಮುಂಭಾಗ. "नवकिसलयरागेणाग्रपादेन बाला" माल० ३-१२।

**अग्रपूजा ಅಗ್ರಪೂಜಾ** (स्त्री०) ಅಗ್ರಮರ್ಯಾದೆ, ಮೊದಲನೆಯ ಮರ್ಯಾದೆ. अग्रे पूजा।

**अग्रभागिन् ಅಗ್ರಭಾಗಿನ್** (वि०) ಮೊದಲನೇ ಹಕ್ಕುದಾರ, ವಾರಸುದಾರ. अग्रे भागी। स्त्रियां "ङीप्" (४-१-५)। अग्रभागिनी — ಸೀ.

**अग्रभुज् ಅಗ್ರಭುಜ್** (वि०) (ಎಲ್ಲರಿಗಿಂತಲೂ) ಮುಂಚೆ ಊಟಮಾಡುವವನು, ತಿಂಡಿಪೋತ, ಹೊಟ್ಟೆಬಾಕ. अग्रे भुङ्क्ते — भुज (पालनाभ्यवहारयोः) "क्विप्" (३-२-७६)।

**अग्रभू ಅಗ್ರಭೂ** (पु०) ಹಿರಿಯವನು, ಮೊದಲು ಹುಟ್ಟಿದವನು, ಜ್ಯೇಷ್ಠ ಸಹೋದರ. अग्रे भवति — भू (सत्तायाम्) "क्विप्" (३-२-७६)।

**अग्रमांस ಅಗ್ರಮಾಂಸ** (न०) ಹೃದಯದೊಳಗಿನ (ಮುಖ್ಯವಾದ) ಮಾಂಸ. अग्रं मुख्यं मांसम्।

**अग्रयण ಅಗ್ರಯಣ** (न०) ಮಾರ್ಗಶಿರಮಾಸದಲ್ಲಿ ಹೊಸಧಾನ್ಯ ಬಂದಮೇಲೆ ಮಾಡುವ ಯಾಗ. [ಪ್ರತಿ ವರ್ಷದಲ್ಲೂ ಹೊಸಧಾನ್ಯ ಬಂದಾಗ ಮೊದಲು ದೇವತೆಗಳಿಗೆ ಅರ್ಪಿಸಿ ಅನಂತರ ನಾವು ಉಪಯೋಗಿಸಬೇಕು. ಇದಕ್ಕೆ "ನವಾಗ್ರಯಣ" ಸ್ಥಾಲೀಪಾಕವೆಂದು ಹೆಸರು.] अग्रं अयनात् उत्तरायणात्। शक०। तत्कालोऽस्यास्ति "अच्" (५-२-१२७)।

**अग्रयान ಅಗ್ರಯಾನ** (न०) 1. ಮುಂದೆಹೋಗುವ ಸೈನ್ಯ. (वि०) 2. ಮುಂದೆಹೋಗುವ. अग्रे यानं यस्य।

**अग्रयायिन् ಅಗ್ರಯಾಯಿನ್** (वि०) 1. ಮುಂದೆ ಹೋಗುವ. 2. ಶ್ರೇಷ್ಠನಾದ. अग्रे याति — या (प्रापणे) "णिनिः" (३-१-१३४)।

**अग्रयोधिन् ಅಗ್ರಯೋಧಿನ್** (पु०) ಮುಖ್ಯವೀರ, ಸೈನ್ಯದಮುಂದೆ ನಿಂತು ಯುದ್ಧಮಾಡುವವನು. अग्रे स्थित्वा युध्यति — युध (संप्रहारे) "णिनिः" (३-१-१३४)।

**अग्ररन्ध्र ಅಗ್ರರಂಧ್ರ** (न०) ಮುಂಭಾಗದ ರಂಧ್ರ, ಮುಂದಿನ ಸಂಧು. अग्रे रन्ध्रम्। "त्रासान्नासाग्ररन्ध्रं विशति फणिपतौ भोगसंकोचभाजि" मालती० १-२।

**अग्रसन्धानी ಅಗ್ರಸಂಧಾನೀ** (स्त्री०) ಯಮರಾಜನ ಪಟ್ಟಿ, ಪ್ರಾಣಿಗಳ ಪೂರ್ವಜನ್ಮದ ಕರ್ಮಕ್ಕೆ ತಕ್ಕ ಫಲಗಳನ್ನು ಸೂಚಿಸುವ ಪಟ್ಟಿ. अग्रे फलोत्पत्तेः प्राक् सन्धीयते शुभाशुभफलं ज्ञायतेऽनया — सम् + डु धाञ् (धारणे) "ल्युट्" (३-३-११७)। "ङीप्" (४-१-१५)।

**अग्रसन्ध्या ಅಗ್ರಸಂಧ್ಯಾ** (स्त्री०) 1. ಸಂಧ್ಯಾಕಾಲದ ಮುಂಚಿನ ಕಾಲ. अग्रं सन्ध्यायाः। 2. ಪ್ರಾತಃಸಂಧ್ಯಾ ಸಮಯ. अग्रा चासौ सन्ध्या च।

**अग्रसर ಅಗ್ರಸರ** (पु०) ಮುಂದಾಳು, ಮುಂದೆ ಹೋರಾಡುವ ವೀರ. अग्रे सरति — सृ (गतौ) "टः" बाहु०। "हरिहयाग्रसरेण धनुर्भृता" रघु० ९-२३।

**अग्रह ಅಗ್ರಹ** (पु०) 1. ಯತಿ, ಸಂನ್ಯಾಸಿ. न ग्रहः परिग्रहो यस्य। (वि०) 2. ಜ್ಞಾನಶೂನ್ಯ, ತಿಳಿವಳಿಕೆಯಿಲ್ಲದ. न ग्रहो ज्ञानं यस्य।

**अग्रहस्त ಅಗ್ರಹಸ್ತ** (पु०) ಮುಂಗೈ, ಕೈಯ ತುದಿ. अग्रश्चासौ हस्तश्च। "अथाग्रहस्ते मुकुलीकृताङ्गुलौ" कुमा० ५-६३।

**अग्रहायण ಅಗ್ರಹಾಯಣ** (पु०) ಮಾರ್ಗಶೀರ್ಷಮಾಸ, ಹೊಸಧಾನ್ಯ ಬರುವ ಕಾಲ, ವರ್ಷಾರಂಭ. अग्रः श्रेष्ठः हायनो व्रीहिरत्र — णत्वम् (८-४-३)।

**अग्रहार ಅಗ್ರಹಾರ** (पु०) 1. ರಾಜರುಗಳಿಂದ ಬ್ರಾಹ್ಮಣರಿಗೆ ದಾನವಾಗಿ ಕೊಡಲ್ಪಡುವ ಜಮೀನು ಅಥವಾ ಗ್ರಾಮ. अग्रं ब्राह्मणभोजनं तदर्थं ह्रियते पृथक् क्रियते राजधनात् — अग्र + हृञ् (हरणे) कर्म० "घञ्" (३-३-१९)। 2. (ಜಮೀನಿನ ಬೆಳೆಯಿಂದ ಬ್ರಾಹ್ಮಣರಿಗೆ ದಾನಕೊಡುವ ಉದ್ದೇಶದಿಂದ ತೆಗೆದಿಡುವ) ಧಾನ್ಯ. 3. (ಗುರುಕುಲದಿಂದ ವಿದ್ಯಾಭ್ಯಾಸ ಮುಗಿಸಿಕೊಂಡು ಬಂದ) ಬ್ರಹ್ಮಚಾರಿಗೆ ಕೊಡುವ ಭೂಮಿ, ಗ್ರಾಮ ಅಥವಾ ವೃತ್ತಿ.

**अग्राक्षि ಅಗ್ರಾಕ್ಷಿ** (न०) ಅಪಾಂಗ, ಕಡೆಗಣ್ಣು. अग्रं च तत् अक्षि च। "अग्राक्ष्णा वीक्षमाणस्तु तिर्यग्भ्रातरमब्रवीत्" रामा०।

**अग्राम्य** ಅಗ್ರಾಮ್ಯ (ವಿ०) 1. ನಗರದಲ್ಲಿ ಹುಟ್ಟಿದ, ಸುಶಿಕ್ಷಿತನಾದ, ಸಭ್ಯತೆಯಿಂದಕೂಡಿದ. 2. ಸುಂದರವಾದ, ಚೆಲುವಾಗಿರುವ. ग्रामे भवः "यः" (४-२-९४)। न ग्राम्यः।

**अग्रासन** ಅಗ್ರಾಸನ (ನ०) 1. ಶ್ರಾದ್ಧದಲ್ಲಿ ಬ್ರಾಹ್ಮಣನಿಗೆ ಕಲ್ಪಿತವಾದ ಆಸನ. अग्रं अर्घादिदानात् पूर्वं कल्पितमासनम्। 2. ಮುಂಭಾಗದಲ್ಲಿರುವ ಆಸನ, ಮೊದಲನೆಯ ಆಸನ. "मामग्रासनतोऽवकृष्टमवशं ये दृष्टवन्तः पुरा" मुद्रा० १-१२।

**अग्राह्य** ಅಗ್ರಾಹ್ಯ (ವಿ०) 1. ತೆಗೆದುಕೊಳ್ಳಲು ಅಯೋಗ್ಯವಾದ. 2. ಪ್ರತಿಗ್ರಹಕ್ಕೆ ಅನರ್ಹವಾದ. न ग्राह्यम्।

**अग्रिम** ಅಗ್ರಿಮ (ಪು०) 1. ಮೊದಲನೆಯವನು, ಜ್ಯೇಷ್ಠ ಸಹೋದರ. अग्रे भवः "डिमच्" (वा० ४-३-२३)। (ವಿ०) 2. ಉತ್ತಮ, ಶ್ರೇಷ್ಠ. 3. ಮೊದಲನೆಯ. "अग्रिमं विशतां स्कन्धमामूलमहितां चमूम्" याद० १६-९२।

**अग्रिय** ಅಗ್ರಿಯ (ಪು०) 1. ಜ್ಯೇಷ್ಠ ಸಹೋದರ. अग्रे भवः "घः" (४-४-११७)। (ವಿ०) 2. ಶ್ರೇಷ್ಠವಾದ, ಉತ್ತಮವಾದ. 3. ಮೊದಲು ಹುಟ್ಟಿದ.

**अग्रीय** ಅಗ್ರೀಯ (ಪು०) 1. ಜ್ಯೇಷ್ಠ ಸಹೋದರ. (ವಿ०) 2. ಶ್ರೇಷ್ಠವಾದ, ಉತ್ತಮವಾದ. अग्रे भवः "छः" (४-४-११७)। 3. ಮೊದಲು ಹುಟ್ಟಿದ.

**अग्रे** ಅಗ್ರೇ (ವಿ० ಪ್ರ० अव्य०) 1. ಮುಂಭಾಗದಲ್ಲಿ, ಎದುರಿಗೆ. 2. ಪ್ರಾರಂಭದಲ್ಲಿ, ಮೊದಲು. "प्रतापोऽग्रे ततः शब्दः परागस्तदनन्तरम्" रघु० ४-३०। 3. ಮುಂಚಿತವಾಗಿ, ಪೂರ್ವದಲ್ಲಿ. 4. ಅನಂತರ, ಬಳಿಕ, ತರುವಾಯ. "स्पष्टमग्रे भविष्यति"। 5. ಸಮಕ್ಷದಲ್ಲಿ, ಸಾನ್ನಿಧ್ಯದಲ್ಲಿ.

**अग्रेग** ಅಗ್ರೇಗ (ವಿ०) 1. ಮುಂದೆಹೋಗುವ, ಮುಂದೆ ನಡೆಯುವ. अग्रे गच्छति—गम्लृ (गतौ) "डः" (वा० ३-२-४८)। 2. ಮುಂದಾಳು, ಯಜಮಾನ.

**अग्रेगू** ಅಗ್ರೇಗೂ (ವಿ०) ಮುಂಭಾಗದಲ್ಲಿ ಹೋಗುವ. (ಸೇವಕ ಮುಂತಾದವನು).

**अग्रेदिधिषु** ಅಗ್ರೇದಿಧಿಷು / **अग्रेदिधिषू** ಅಗ್ರೇದಿಧಿಷೂ (ಪು०) ದಿಧಿಷುವನ್ನು ಮದುವೆಯಾದವನು, ಜ್ಯೇಷ್ಠ ಸಹೋದರನ ಮರಣಾನಂತರ ಅವನ ಪತ್ನಿಯನ್ನು ಮದುವೆಯಾದವನು, ದಿಧಿಷುವೇ ಯಾವನ ಮನೆಯಲ್ಲಿ ಯಜಮಾನಿಯೋ ಅವನು. (ಎರಡುಸಲ ಮದುವೆಯಾದವಳು ದಿಧಿಷು). दिधिं धैर्यं स्यति त्यजति इन्द्रियदौर्बल्यात्—षो (अन्तकर्मणि) "कुः" (उ० १-९३)। अग्रे प्रधानं दिधिषूर्यस्य। 'भ्रातुर्मृतस्य जायायां संसक्तो दिधिषूपतिः। स तु स्यादग्रदिधिषुर्योऽनुजो रमते तया। स्यादग्रेदिधिषुश्चासौ स्यादग्रेदिधिषूरपि" वैज०। "स तु द्विजोऽग्रेदिधिषूः सैव यस्य कुटुम्बिनी" अम०।

**अग्रेदिधिषू** ಅಗ್ರೇದಿಧಿಷೂ (स्त्री०) ಜ್ಯೇಷ್ಠ ಸಹೋದರಿಯು ಮದುವೆಯಾಗುವುದಕ್ಕೆ ಮುಂಚೆ ಮದುವೆಯಾದವಳು. "या ज्येष्ठायामनूढायामूढाग्रेदिधिषूरसौ" वैज०।

**अग्रेदिधिषूपति** ಅಗ್ರೇದಿಧಿಷೂಪತಿ (ಪು०) ಅಕ್ಕನ ಮದುವೆಗೆ ಮುಂಚೆ ಮದುವೆಯಾದವಳ ಗಂಡ.

**अग्रेवण** ಅಗ್ರೇವಣ (ನ०) ಅರಣ್ಯದ ಮುಂಭಾಗದಲ್ಲಿ. वनस्याग्रे। परनिपातः (२-२-३१)। णत्वम् (८-४-४)। "हव्याध्वानमनल्पकोपमकरोदग्रेवणं रावणम्" च० रा० ३-५७।

**अग्रेसर** ಅಗ್ರೇಸರ (ವಿ०) ಮುಂದೆ ಹೋಗುವ, ಮುಂದೆ ನಡೆಯುವ. अग्रे सरति—सृ (गतौ) "टः" (३-२-१८)। स्त्रियां "ङीप्" (४-१-१५)। अग्रेसरी—ಸ್ತ್ರೀ. "विभूतिमग्रेसरखेदवादाः" याद० २-३५।

**अग्र्य** ಅಗ್ರ್ಯ (ಪು०) 1. ಜ್ಯೇಷ್ಠ ಸಹೋದರ. अग्रे भवः "यत्" (४-४-११६)। "स्वसुतमग्र्यमसूयत रोहिणी" याद० ३-४५। (ವಿ०) 2. ಶ್ರೇಷ್ಠವಾದ, ಉತ್ತಮವಾದ. "वधूवरं पुष्यति कान्तिमग्र्याम्" कुमा० ७-७८। 3. ಮೊದಲು ಹುಟ್ಟಿದ.

**अघ** ಅಘ (ಪು०) 1. ಅಘಾಸುರ, ಒಬ್ಬ ರಾಕ್ಷಸ. (ನ०) 2. ಪಾಪ. अङ्घते गच्छति दानादिना—अघि (गतौ) "अच्" (३-१-१३४)। "अघौघविध्वंसविधौ पटीयसीः" माघ० १-१८। 3. ದುಃಖ. "श्रियं विकर्षत्यपहन्त्यघानि श्रेयः परिस्नौति तनोति कीर्तिम्" किरा० ३-७। 4. ಅಶೌಚ.

**अघकृत्** ಅಘಕೃತ್ (ವಿ०) 1. ಪಾಪಕಾರ್ಯವನ್ನು ನಡೆಸುವವನು. 2. ಕೇಡಿಗ, ಕೇಡಾಳಿ. अघं पापं करोति—डु कृञ् (करणे) "क्विप्" (३-२-१७८)।

**अघघ्न—नाशन** ಅಘಘ್ನ—ನಾಶನ (ಪು०) 1. ಶ್ರೀಕೃಷ್ಣ. (ವಿ०) 2. ಪಾಪವನ್ನು ನಾಶಪಡಿಸುವ ಜಪ

ಮತ್ತು ದಾನ. अघं हन्ति — हन (हिंसादौ) "कः" (वा० ३-२-५)। अघं नाशयति — णश (अदर्शने) + णिच् "ल्युः" (३-१-१३४)।

**अघभोजिन् ಅಘಭೋಜಿನ್** (पु०) ದೇವರು ಮತ್ತು ಅತಿಥಿಗಳ ಉದ್ದೇಶವಿಲ್ಲದೆ ಕೇವಲ ಆತ್ಮಾರ್ಥ (ತನಗಾಗಿ) ಪಾಕಮಾಡಿ ತಿನ್ನುವವನು. अघं भुङ्क्ते — भुज (पालनादौ) "णिनिः" (३-२-७८)। "भुञ्जते ते त्वघं पापा ये पचन्त्यात्मकारणात्" गीता ३-१३।

**अघमर्षण ಅಘಮರ್ಷಣ** (त्रि०) ಸಕಲ ಪಾಪಗಳ ನಾಶಕ್ಕಾಗಿ ಜಪಿಸುವ ಮಂತ್ರ. मृष्यतेऽनेन — मृष (तितिक्षायाम्) "ल्युट्" (३-३-११७)। अघस्य मर्षणः। (पु०) अघमर्षणो मन्त्रः। (स्त्री०) अघमर्षणी ऋक्। टित्वात् "ङीप्" (४-१-१५)।

**अघरुद् ಅಘರುದ್** (पु०) 1. ಪಾಪವನ್ನು ಹೋಗಲಾಡಿಸುವ ಮಂತ್ರ. अघं रोदिति यस्मात् स्वकर्माक्षमतया — रुदिर् (अश्रुविमोचने) "क्विप्" (३-२-७६)। (वि०) 2. ಪಾಪವನ್ನು ತುಳಿಯಲು ಪ್ರತಿಕ್ರಿಯೆ ಮಾಡುವ ಶಕ್ತಿಯಿಲ್ಲದೆ ದುಃಖಿಸುವ. अघे रोदिति — रुदिर् कर्त० "क्विप्" (३-२-७६)।

**अघर्म ಅಘರ್ಮ** (पु०) 1. ಅನುಷ್ಣತೆ, ಶೈತ್ಯ. न० त०। (वि०) 2. ಶೀತವಾಗಿರುವ, ಅನುಷ್ಣವಾದ. "अघर्मघर्मोदकबिन्दुमौक्तिकैरलञ्चकारास्य वधूरहस्करः" माघ० १-५८।

**अघल ಅಘಲ** (वि०) ಪಾಪನಾಶಕ, ಪಾಪವನ್ನು ಹೋಗಲಾಡಿಸುವ. अघं निवर्तयितुं लाति — ला (आदाने) "कः" (३-२-३)।

**अघवत् ಅಘವತ್** (वि०) ಪಾಪದಿಂದಕೂಡಿದ. अघमस्यास्ति "मतुप्" (५-२-९४)।

**अघायुस् ಅಘಾಯುಸ್** (पु०) ಪಾಪಕೃತ್ಯದಿಂದ ಜೀವಿಸಿರುವವನು. अघं पापसाधनमायुरस्य।

**अघ्न्य ಅಘ್ನ್ಯ** (पु०) 1. ಪ್ರಜಾಪತಿ, ಬ್ರಹ್ಮ. (स्त्री०) — घ्न्या — ಘ್ನ್ಯಾ. 2. ಹಸು, ಆಕಳು. न हन्यते — हन (हिंसागत्योः) "यक्" (उ० ४-१११) निपा०।

**अघ्रेय ಅಘ್ರೇಯ** (न०) 1. ಮದ್ಯ. (वि०) 2. ದುರ್ಗಂಧ ವಸ್ತು. न घ्रातुमर्हः — घ्रा (गन्धोपादाने) "यत्" (३-१-९७)।

**अङ्क ಅಂಕ** (पु०) 1. ಲಾಂಛನ, ಗುರುತು, ಚಿಹ್ನೆ. "रतिवलयपदाङ्के चापमासज्य कण्ठे" कुमा० २-६४। 2. ಕಳಂಕ. अङ्क्यतेऽनेन — अकि (लक्षणे) "घञ्" (३-३-१२१)। "एको हि दोषो गुणसन्निपाते निमज्जतीन्दोः किरणेष्विवाङ्कः" कुमा० १-३। (पुं०) 3. ಉತ್ಸಂಗ, ತೊಡೆ. "अङ्काद्ययावङ्कमुदीरिताशीः सा मण्डनान्मण्डनमन्वभुङ्क्त" कुमा० ७-५। 4. ನಾಟಕದ ಒಂದು ಭಾಗ. "प्रत्यक्षनेतृचरितो बिन्दुव्याप्तिपुरस्कृतः। अङ्को नानाप्रकारार्थसंविधानरसाश्रयः"। 5. ನಾಟಕಾದಿ ಹತ್ತು ರೂಪಕಗಳಲ್ಲೊಂದು. "उत्सृष्टिकाङ्क एकाङ्को नेतारः प्राकृता नराः। रसोऽत्र करुणः स्थायी बहुस्त्रीपरिदेवितम्। प्रख्यातमितिवृत्तं च कविर्बुद्ध्या प्रपञ्चयेत्" सा० द०। 6. ಚಿತ್ರಯುದ್ಧ. 7. ಸಮೀಪ. "प्रेम्णोपकण्ठं मुहुरङ्कभाजो रत्नावलीरम्बुधिराबबन्ध" माघ० ३-३६। 8. ಸ್ಥಾನ. 9. ಪಾಪ. 10. ದುಃಖ. 11. ಅಪರಾಧ, ತಪ್ಪು. 12. ರೇಖೆ, ಗೆರೆ. 13. ಅಲಂಕಾರ, ಒಡವೆ, ಭೂಷಣ. "अङ्कः स्थानेऽन्तिके मन्तौ रूपकोत्सङ्गलक्ष्मसु। नाटकादिपरिच्छेदे चित्रयुद्धे च भूषणे" विश्व०। "अङ्को रूपकभेदागश्चिह्नरेखाजिभूषणे। रूपकांशान्तिकोत्सङ्गे स्थानेऽङ्कं पापदुःखयोः" मेदि०। 14. ಶರೀರ, ದೇಹ. 15. ಪರ್ವತ, ಬೆಟ್ಟ. 16. ಸಂಖ್ಯೆ, ಅಂಕಿ. 17. ಬುದ್ಧಿ. "अङ्को नाटकविच्छेदे संख्यायां युधि भूषणे। समीपे रूपके स्थाने मतावुत्सङ्गचिह्नयोः" नानार्थर०। ಮೇದಿನಿಯಲ್ಲಿ ಪಾಪ ಮತ್ತು ದುಃಖ ಎಂಬ ಅರ್ಥಗಳಲ್ಲಿ ನಪುಂಸಕಲಿಂಗದಲ್ಲಿದೆ.

**अङ्कति ಅಂಕತಿ** (पु०) 1. ವಾಯು, ಗಾಳಿ. अञ्चति गच्छति — अञ्चु (गतौ) "अतिः" कादेशश्च (उ० ४-६१)। "नभः प्राणोऽङ्कतिः सरः। आशुगः पवनः स्पर्शः" वैज०। 2. ಅಗ್ನಿ, ಬೆಂಕಿ. 3. ಬ್ರಹ್ಮ, ಚತುರ್ಮುಖ. 4. ಅಗ್ನಿಹೋತ್ರಿ. "अङ्कतिर्वह्निवेधसोः। अग्निहोत्रिणि" हेम०।

**अङ्कधारण ಅಂಕಧಾರಣ** (न०) 1. ಗುರುತನ್ನು ಹೊಂದುವುದು, ಗುರುತುಹಾಕಿಕೊಳ್ಳುವುದು. 2. ತಪ್ತಮುದ್ರಾಧಾರಣ, ವೈಷ್ಣವಮತದ ಗುರುತಾದ ಶಂಖ ಚಕ್ರಾದಿಧಾರಣ. अङ्कस्य धारणम् — धृञ् (धारणे) + णिच् भावे "ल्युट्" (३-३-११५)। भावे युचि स्त्रियाम् अङ्कधारणा — ಣಾ.

**अङ्कन ಅಂಕನ** (न०) 1. ಗುರುತು, ಚಿಹ್ನೆ. अङ्क्यतेऽनेन — अकि (लक्षणे) "ल्युट्" (३-३-११७)।

"स्नेहाङ्कनानि मम मुग्धदृशश्च कण्ठे" मालती० ९-४८। 2. ಗುರುತುಹಾಕುವುದು, ಮುದ್ರೆಹಾಕುವುದು. अङ्क्यते — अकि भावे "ल्युट्" (३-३-११५)। भावे युचि अङ्कना — ನಾ.

**अङ्कपालि–ली ಅಂಕಪಾಲಿ – ಲೀ** (स्त्री०) 1. ತೊಡೆಯ ತುದಿ, ಅಂಕಸೀಠ. अङ्कस्य पालिः। 2. ಔಷಧ. 3. ದಾದಿ, ಉಪಮಾತೆ. "अथ गदद्रुहि। धात्र्यां पाल्यां चाङ्कपालिः" वैज०। 4. ಆಲಿಂಗನ. "तावद्गाढं वितर सकृदप्यङ्कपालिं प्रसीद" मालती० ८-२।

**अङ्कपूरण ಅಂಕಪೂರಣ** (न०) ಅಂಕೆಗಳನ್ನು ತುಂಬುವುದು. अङ्कानां पूरणम्।

**अङ्कबन्ध ಅಂಕಬಂಧ** (पु०) ತೊಡೆಯನ್ನು ಕಟ್ಟಿಕೊಂಡು ಕುಳಿತುಕೊಳ್ಳುವುದು. अङ्कस्य बन्धः।

**अङ्कलोप ಅಂಕಲೋಪ** (पु०) ಕಳೆಯುವಿಕೆ, ವಜಾ ಮಾಡುವುದು, ವ್ಯವಕಲನ. अङ्कस्य वियोज्यसंख्यायाः लोपः।

**अङ्कस् ಅಂಕಸ್** (न०) 1. ಶರೀರ, ದೇಹ. 2. ಚಿಹ್ನೆ, ಗುರುತು. अञ्चु (गतौ) "असुन्" कादेशश्च (उ० ४-२१५)।

**अङ्कावतार ಅಂಕಾವತಾರ** (पु०) ನಾಟಕ (ರೂಪಕ) ಗಳಲ್ಲಿ ಮುಂದಿನ ಅಂಕದ ಪ್ರಾರಂಭದ ವಿಷಯವನ್ನು ಸೂಚಿಸುವ ಒಂದು ಕಥಾಭಾಗ, ಹಿಂದಿನ ಅಂಕದ ಕೊನೆಯ ಕಥಾಭಾಗವೇ ಮುಂದಿನ ಅಂಕದ ಪ್ರಾರಂಭದಲ್ಲೂ ಸೇರಿದಹಾಗೆ ವರ್ಣಿಸಲ್ಪಡುವಂತೆ ಪೂರ್ವಾಂಕಾಂತ ಪಾತ್ರದಿಂದ ಮಾಡುವ ಮುನ್ಸೂಚನೆ. अव+तॄ (प्लवनतरणयोः) भावे "घञ्" (३-३-१८)। "अङ्कान्ते सूचितः पात्रैस्तदङ्कस्याविभागतः। यत्राङ्कोऽवतरत्येषोऽङ्कावतार इति स्मृतः" सा० द० ६-५८। ಮಾಲವಿಕಾಗ್ನಿಮಿತ್ರದಲ್ಲಿ "तेन हि द्वावेव वर्गौ प्रेक्षागृहे संगीतरचनां कृत्वा तत्रभवतोर्दूतं प्रेषयतम्। अथवा मृदङ्गशब्द एव न उपस्थापयिष्यति" ಎಂಬ ಮೊದಲನೇ ಅಂಕದ ಕೊನೆಯಲ್ಲಿ ವಿದೂಷಕನ ವಾಕ್ಯವು ಅಂಕಾವತಾರವು. अव+तॄ (प्लवनतरणयोः) भावे "ल्युट्" (३-३-११५)। —अवतरणम् — ಅವತರಣಮ್.

**अङ्कित ಅಂಕಿತ** (न०) 1. ಗುರುತು, ಚಿಹ್ನೆ. अकि (लक्षणे) भावे "क्तः" (३-३-११४)। (वि०) 2. ಗುರುತುಹಾಕಲ್ಪಟ್ಟ. अकि (लक्षणे) "क्तः" (३-२-१०२)।

**अङ्किन् ಅಂಕಿನ್** (वि०) ಮೃದಂಗ, ಮದ್ದಳೆ (ಮುಂತಾದುದು). अङ्कः आलिङ्गनसाधनत्वेनास्यास्ति "इनिः" (५-२-११५)।

**अङ्कुर ಅಂಕುರ** (पु०) 1. ಮೊಳಕೆ. अकि (लक्षणे) "उरच्" (उ० १-३८)। "बीजाङ्कुरः प्रागुदयादिवाम्भः" कुमा० ३-१८। 2. ಜಲ, ನೀರು. 3. ರಕ್ತ. 4. ಕೂದಲು. 5. ಮೊಗ್ಗು. "चूताङ्कुरास्वादकषायकण्ठः पुंस्कोकिलो यन्मधुरं चुकूज" कुमा० ३-३२। "अङ्कुरो रुधिरे लोम्नि पानीयेऽभिनवोद्भिदि" मेदि०।

**अङ्कुरक ಅಂಕುರಕ** (पु०) ಪಶುಪಕ್ಷ್ಯಾದಿಗಳ ವಾಸಸ್ಥಾನ.

**अङ्कुरित ಅಂಕುರಿತ** (वि०) ಮೊಳಕೆ ಹೊರಟಿರುವ, ಅಂಕುರಿಸಿದ. अङ्कुरोऽस्य सञ्जातः "इतच्" (५-२-३६)।

**अङ्कुश ಅಂಕುಶ** (पुंन०) ಆನೆಯನ್ನು ಶಿಕ್ಷಿಸಲು ಉಪಯೋಗಿಸುವ ಮುಳ್ಳುಕೋಲು, ಮೊನೆಯಾದ ಮತ್ತು ತುದಿಯಲ್ಲಿ ಬಗ್ಗಿದ ಕಬ್ಬಿಣದ ಆಯುಧ. अङ्क्यतेऽनेन — अकि (लक्षणे) "उशच्" (उ० ४-१०७)। "अङ्कुशेन निशितेन हस्तिपः" याद० १७-६७।

**अङ्कुशग्रह ಅಂಕುಶಗ್ರಹ** (पु०) ಮಾವಟಿಗ. अङ्कुशस्य ग्रहः — ग्रह (उपादाने) "अच्" (३-१-१३४)। "अन्वेतुकामोऽवमताङ्कुशग्रहः" माघ० १२-१६।

**अङ्कुशदुर्धर ಅಂಕುಶದುರ್ಧರ** (पु०) ದುಷ್ಟಗಜ, ಅಂಕುಶಕ್ಕೂ ಅಡಗದ ಆನೆ. अङ्कुशेन दुर्धरः।

**अङ्कुशधारिन् ಅಂಕುಶಧಾರಿನ್** (पु०) ಮಾವಟಿಗ. धरति — धृञ् (धारणे) "णिनिः" (३-१-१३४)। अङ्कुशस्य धारी।

**अङ्कुशमुद्रा ಅಂಕುಶಮುದ್ರಾ** (स्त्री०) ಅಂಕುಶಾಕಾರದ ಮುದ್ರೆ, ತಂತ್ರೋಕ್ತವಾದ ಒಂದು ಮುದ್ರೆ. [ನೆಟ್ಟಗೆ ಬಿಚ್ಚಿದ ಮಧ್ಯಮ ಬೆರಳಿನ ಮಧ್ಯದ ಗಿಣ್ಣಿಗೆ ಸರಿಯಾಗಿ ತರ್ಜನೀ ಬೆರಳನ್ನು ಸ್ವಲ್ಪ ಬಗ್ಗಿಸಿ ತೋರುವುದು ಅಂಕುಶ ಮುದ್ರೆಯು.] "ऋज्वीं च मध्यमां कृत्वा तन्मध्यं पर्वमूलतः। तर्जनीं किञ्चिदाकुञ्चेत् सा मुद्राऽङ्कुशसंज्ञिता"।

**अङ्कूर ಅಂಕೂರ** (पु०) 1. ಮೊಳಕೆ. अकि (लक्षणे) "ऊरः" (उ० ४-९०)। "वाताङ्कूराजिहीर्षादरविवृतफणाशृङ्गभूषाभुजङ्गम्" चं०भा०। 2. ಜಲ, ನೀರು.

3. ಮೊಗ್ಗು. 4. ರಕ್ತ. 5. ಕೂದಲು. "अङ्कुरस्त्वङ्कुरस्तुल्यौ" द्विरूप०।

**अङ्कोट ಅಂಕೋಟ** (पु०) ಅಂಕೋಲೆಗಿಡ. अकि (लक्षणे) "ओटः" बाहु०।

**अङ्क्य ಅಂಕ್ಯ** (पु०) ಮೃದಂಗ, ತೊಡೆಯಮೇಲಿಟ್ಟು ಬಾರಿಸುವ ವಾದ್ಯ. अङ्के उत्सङ्गे भवः "यत्" (४-३-५५)। "मृदङ्गा मुरजाभेदास्त्वङ्क्यालिङ्ग्योर्ध्वकास्त्रयः" अम०।

**अङ्ग ಅಂಗ** (न०) 1. ಅವಯವ. 2. ದೇಹ, ಶರೀರ. अगि (गतौ) "अच्" (३-१-१३४)। "अङ्गानि वध्वाः कुलवृद्धनार्यः प्रसाधनैरन्तरयांबभूवुः" याद० १३-८२। 3. ಉಪಾಯ. "सर्वकार्यशरीरेषु मुक्त्वाङ्गस्कन्धपञ्चकम्" माघ० २-२८। "मन्त्रो योध इवाधीरः सर्वाङ्गैः संवृतैरपि" माघ० २-२९। 4. ಒಂದು ಭಾಗ, ವಸ್ತುವಿನ ಒಂದು ಅಂಶ, ಸಂಸ್ಥೆಯ ಒಂದು ಭಾಗ. **ಉದಾ: (क) ಸೇನಾಂಗಗಳು ನಾಲ್ಕು:** (1) ಆನೆ, (2) ಕುದುರೆ, (3) ರಥ ಮತ್ತು (4) ಕಾಲಾಳು. "हस्त्यश्वरथपादातं सेनाङ्गम्" अम०। "सर्वैर्बलाङ्गैर्द्विरदप्रधानैः" रघु० ७-५९। **(ख) (1) ಮಂತ್ರಾಂಗಗಳು ಐದು:** १. सहायाः, २. साधनोपायाः, ३. देशकालविभागः, ४. विनिपातप्रतीकारः ಮತ್ತು ५. सिद्धिः। [(1) ಕಾರ್ಯದ ಆರಂಭೋಪಾಯ, (2) ಪುರುಷಸಂಪತ್ತು ಮತ್ತು ದ್ರವ್ಯಸಂಪತ್ತು, (3) ದೇಶ ಮತ್ತು ಕಾಲಗಳ ವಿಭಾಗ, (4) ಅನರ್ಥಗಳ ಪ್ರತಿಕ್ರಿಯೆ ಮತ್ತು (5) ಕಾರ್ಯಸಿದ್ಧಿ.] **(2) ಜ್ಯೋತಿಶ್ಶಾಸ್ತ್ರದಲ್ಲಿ ಪಂಚಾಂಗಗಳು:** (1) ತಿಥಿ, (2) ವಾರ, (3) ನಕ್ಷತ್ರ, (4) ಯೋಗ ಮತ್ತು (5) ಕರಣ. **(3) ಸಂಗೀತದ ತಾಳಾಂಗಗಳು ಐದು:** (1) ಅನುದ್ರುತ, (2) ದ್ರುತ, (3) ಲಘು, (4) ಗುರು ಮತ್ತು (5) ಪ್ಲುತ. **(ग) ವೇದಾಂಗಗಳು ಆರು:** (1) ಶಿಕ್ಷೆ, (2) ವ್ಯಾಕರಣ, (3) ಛಂದಸ್ಸು, (4) ನಿರುಕ್ತ, (5) ಜ್ಯೋತಿಷ ಮತ್ತು (6) ಕಲ್ಪ. **(घ) (1) ರಾಜ್ಯಾಂಗಗಳು ಏಳು:** (1) ಸ್ವಾಮಿ, (2) ಅಮಾತ್ಯ, (3) ಸುಹೃತ್ತು, (4) ಕೋಶ (ಬೊಕ್ಕಸ), (5) ರಾಷ್ಟ್ರ, (6) ದುರ್ಗ (ಕೋಟೆ) ಮತ್ತು (7) ಬಲ (ಸೈನ್ಯ). **(2) ವೃಕ್ಷಾಂಗಗಳು ಏಳು:** (1) ಸ್ಕಂಧ (ಬುಡದಿಂದ ಕೊಂಬೆಯವರೆಗೂ ಇರುವ ದೂಲ), (2) ಕೊಂಬೆ, (3) ಪರ್ಣ (ಎಲೆ), (4) ಪುಷ್ಪ, (5) ಫಲ, (6) ಮೂಲ (ಬೇರು) ಮತ್ತು (7) ವಲ್ಕಲ (ತೊಗಟೆ, ಸಿಪ್ಪೆ). **(ङ) (1) ಯೋಗಾಂಗಗಳು ಎಂಟು:** (1) ಯಮ, (2) ನಿಯಮ, (3) ಆಸನ, (4) ಪ್ರಾಣಾಯಾಮ, (5) ಪ್ರತ್ಯಾಹಾರ, (6) ಧಾರಣ, (7) ಧ್ಯಾನ ಮತ್ತು (8) ಸಮಾಧಿ. **(2) ನಮಸ್ಕಾರದ ಅಂಗಗಳು ಎಂಟು:** (1) ಭುಜಗಳು, (2) ಪಾದಗಳು, (3) ಮಂಡಿಗಳು, (4) ವಕ್ಷಸ್ಸು (ಎದೆ), (5) ಲಲಾಟ (ಹಣೆ), (6) ದೃಷ್ಟಿ, (7) ಮನಸ್ಸು ಮತ್ತು (8) ಮಾತು. [ಈ ಎಂಟು ಅಂಗಗಳಿಂದ ಮಾಡುವ ನಮಸ್ಕಾರವು ಸಾಷ್ಟಾಂಗಪ್ರಣಾಮವೆನಿಸಿಕೊಳ್ಳುವುದು.] "दोर्भ्यां पद्भ्यां च जानुभ्यामुरसा शिरसा दृशा। मनसा वचसा चेति प्रणामोऽष्टाङ्ग ईरितः" वैद्यना० आह्निक०। **(च) ನಾಟಕೀಯಾಂಗಗಳು ಅರವತ್ತನಾಲ್ಕು:** उपक्षेपः, परिकरः, परिन्यासः, विलोभनम्, युक्तिः, प्राप्तिः ಇತ್ಯಾದಿ 64 ಅಂಗಗಳು. [सा० द० 6ನೇ ಪರಿಚ್ಛೇದ ನೋಡಿ.] 5. ಅಪ್ರಧಾನ, ಅಮುಖ್ಯ. **ಉದಾ:** ಅಂಗರಸಗಳು. "अङ्गी रौद्ररसस्तत्र सर्वेऽङ्गानि रसाः पुनः" सा० द० ६-२४२। 6. ವ್ಯಾಕರಣಶಾಸ್ತ್ರೋಕ್ತವಾದ ಅಂಗಸಂಜ್ಞೆ — ಯಾವುದಾದರೊಂದು ಶಬ್ದಸ್ವರೂಪವು ಅದರ ಮುಂದೆ ಒಂದು ಪ್ರತ್ಯಯವು ವಿಹಿತವಾದರೆ ಅಂಗಸಂಜ್ಞೆಯನ್ನು ಹೊಂದುವುದು. **ಉದಾ:** राम ಶಬ್ದಕ್ಕೆ "टा" ಪ್ರತ್ಯಯವು ವಿಹಿತವಾದಾಗ राम ಎಂಬ ಶಬ್ದಸ್ವರೂಪವು ಅಂಗಸಂಜ್ಞೆಯನ್ನು ಹೊಂದುವುದು. 7. ಚಿತ್ತ, ಮನಸ್ಸು. 8. ಲಗ್ನ. (पु० बं० व०)। 9. ಅಂಗದೇಶ ಮತ್ತು ಅಂಗದೇಶವಾಸಿಗಳು (अव्य०) 10. ಸಂಬೋಧನ. "अङ्ग, अस्ति कश्चिद्विमर्दको नामात्रभवतः" दशकु०। ಮತ್ತು ಕೋಶಕಾರರು 11. ಜಾಗ್ರತೆಯಾಗಿ. 12. ಪುನಃ, ಮತ್ತೆ. 13. ಸಂಗಮ. 14. ಅಸೂಯೆ ಮತ್ತು 15. ಹರ್ಷ, ಸಂತೋಷ ಇಷ್ಟು ಅರ್ಥಗಳಲ್ಲಿಯೂ "अङ्ग" ಶಬ್ದವನ್ನು ಹೇಳಿರುವರು. "क्षिप्रे च पुनरर्थे च सङ्गमासूययोस्तथा। हर्षे संबोधने चैव ह्यङ्गशब्दः प्रयुज्यते"। (वि०) 16. ಅವಯವಗಳಿಂದ ಕೂಡಿದ, ಅವಯವಗಳುಳ್ಳ, ಅಂಗವುಳ್ಳ. अङ्गान्यस्य सन्ति अङ्गमस्यास्ति वा "अच्" (५-२-१२७)। "उपायगात्रयोरङ्गवानङ्ग उच्यते" शाश्व०।

**अङ्गकर्मन् ಅಂಗಕರ್ಮನ್** (न०) 1. ದೇಹಾಲಂಕಾರ, ಮೈಯನ್ನು ಉಜ್ಜಿ ಗಂಧ ಮೊದಲಾದವುಗಳನ್ನು ಬಳಿಯುವುದು. अङ्गस्य कर्म मर्दनानुलेपनादिपरिकर्म। 2. ಪ್ರಧಾನವಾದ ಯಾಗಕ್ಕೆ ಅಂಗಭೂತವಾದ ಇತರ ಕಾರ್ಯ.

**अङ्गज ಅಂಗಜ** (पुं०) 1. ಪುತ್ರ, ಮಗ. अङ्गात् जायते — जनी (प्रादुर्भावे) "डः" (३-२-९८)। स्त्रियाम् "टाप्" (४-१-४)। **अङ्गजा — ಜಾ.** ಪುತ್ರಿ, ಮಗಳು. 2. ರೋಮ, ಮೈಕೂದಲು. 3. ಕಾಮ, ಮನ್ಮಥ. अङ्गात् मनसः जायते। 4. ರೋಗ, ವ್ಯಾಧಿ. (न०) 5. ರಕ್ತ. (वि०) 6. ದೇಹದಿಂದ ಹುಟ್ಟಿದ. "अङ्गजं रुधिरेऽनङ्गकेशपुत्रमदेषु ना" मेदि०।

**अङ्गण ಅಂಗಣ** (न०) 1. ಅಂಗಳ, ತೊಟ್ಟಿ, ಗೋಡೆಗಳಿಂದ ಅಥವಾ ಕಟ್ಟಡಗಳಿಂದ ಸುತ್ತುವರಿದಿರುವ ಪ್ರದೇಶ. अङ्गत्यत्र — अगि (गतौ) अधि० "ल्युट्" (३-३-११७)। "आरोहणान्यङ्गणवेदिकानाम्" याद० ४-२५। 2. ಗಾಡಿ, ರಥ, ವಾಹನ. अङ्गयतेऽनेन — कर० "ल्युट्" (३-३-११७)। 3. ಗಮನ, ಸಂಚಾರ. अङ्गयते — भावे "ल्युट्" (३-३-११५)। 4. ಮೈದಾನ, ಅಂಗಳ. क्रीडाङ्गणम्, सभाङ्गणम्। ಇತ್ಯಾದಿ.

**अङ्गति ಅಂಗತಿ** (पुं०) 1. ಗಾಡಿ, ರಥ. अङ्गति यात्यनेन — अगि (गतौ) "अतिः" बाहु०। 2. ವಿಷ್ಣು. 3. ಬ್ರಹ್ಮ. 4. ಅಗ್ನಿ. 5. ಅಗ್ನಿಹೋತ್ರಿ.

**अङ्गद ಅಂಗದ** (पुं०) 1. ವಾಲಿಯ ಮಗ. (न०) 2. ತೋಳಿನ ಆಭರಣ, ವಂಕಿ. अङ्गं दायति शोधयति — दैप् (शोधने) "कः" (३-२-३)। "तमङ्गदे मन्दरकूटकोटिव्याघट्टनोत्तेजनया मणीनाम्" माघ० ३-६। (स्त्री०) **-दा — ದಾ.** 3. ದಕ್ಷಿಣದಿಗ್ಗಜದ ಪತ್ನಿ. 4. ಪುರುಷನನ್ನು ಅಪೇಕ್ಷಿಸುವ ಹೆಂಗಸು. अङ्गं ददाति — डु दाञ् (दाने) "कः" (३-२-३)। (वि०) 5. ದೇಹವನ್ನು ಕೊಡುವ, ದೇಹವನ್ನು ಒಪ್ಪಿಸುವ.

**अङ्गना ಅಂಗನಾ** (स्त्री०) 1. ಹೆಂಗಸು. 2. ಸುಂದರವಾದ ದೇಹವುಳ್ಳ ಹೆಂಗಸು. प्रशस्तान्यङ्गान्यस्याः — अङ्गात्कल्याणे (ग०) "नः" (५-२-१००)। "तरुकिसलयजालमग्रहस्तैः प्रसभमनीयत भङ्गमङ्गनानाम्" माघ० ७-२९।

**अङ्गनाप्रिय ಅಂಗನಾಪ್ರಿಯ** (पुं०) ಅಶೋಕ ವೃಕ್ಷ. अङ्गनायाः प्रियः।

**अङ्गन्यास ಅಂಗನ್ಯಾಸ** (पुं०) ಮಂತ್ರೋಚ್ಚಾರಣಪೂರ್ವಕ ಹೃದಯ ಮುಂತಾದ ಸ್ಥಾನಗಳಲ್ಲಿ ಹಸ್ತಸ್ಪರ್ಶದಿಂದ ಮಾಡುವ ನ್ಯಾಸ.

**अङ्गपालि ಅಂಗಪಾಲಿ** (स्त्री०) ಆಲಿಂಗನ. अङ्गं पाल्यतेऽत्र — पाल (रक्षणे) "इः" (उ० ४-१३९)।

**अङ्गपालिका ಅಂಗಪಾಲಿಕಾ** (स्त्री०) ದಾದಿ, ಉಪಮಾತೆ, ಸಾಕುತಾಯಿ. पालयति — पाल (रक्षणे) "ण्वुल्" (३-१-१३३)। अङ्गस्य पालिका।

**अङ्गभू ಅಂಗಭೂ** (पुं०) 1. ಪುತ್ರ, ಮಗ. अङ्गात् देहात् भवति — भू (सत्तायाम्) "क्विप्" (३-२-७६)। "हिरण्यगर्भाङ्गभुवं मुनिं हरिः" माघ० १-१। 2. ಕಾಮ, ಮನ್ಮಥ. अङ्गात् मनसः भवति—भू (सत्तायाम्) "क्विप्" (३-२-१७९)। (वि०) 3. ದೇಹದಿಂದ ಹುಟ್ಟಿದ.

**अङ्गभङ्ग ಅಂಗಭಂಗ** (पुं०) ಮೈಮುರಿಯುವಿಕೆ, ನಿದ್ರೆಯಿಂದ ಎದ್ದಬಳಿಕ ಮೈಯನ್ನು ಚಾಚಿ ಮುರಿಯುವಿಕೆ. अङ्गानां भङ्गः। "आत्मव्यापारगुर्वी जनितजललवा जृम्भितैः साङ्गभङ्गैः" मुद्रा० ३-२१।

**अङ्गमर्द ಅಂಗಮರ್ದ** (पुं०) 1. ಮೈಯನ್ನು ಜಜ್ಜುವ ಸೇವಕ. अङ्गं मृद्नाति — मृद (क्षोदे) "अण्" (३-२-१)। 2. ಮೈಯನ್ನು ಜಜ್ಜುವಿಕೆ. भावे "घञ्" (३-३-१८)।

**अङ्गमर्दक ಅಂಗಮರ್ದಕ** (पुं०) 1. ಮೈಯನ್ನು ಜಜ್ಜುವ ಸೇವಕ. अङ्गस्य मर्दकः — मृद (क्षोदे) "ण्वुल्" (३-१-१३३)। (वि०) 2. ಮೈಯನ್ನು ಜಜ್ಜುವವನು.

**अङ्गमर्दिन् ಅಂಗಮರ್ದಿನ್** (पुं०) 1. ಮೈಯನ್ನು ಜಜ್ಜುವ ಸೇವಕ. अङ्गस्य मर्दी — मृद (क्षोदे) "णिनिः" (३-१-१३४)। (वि०) 2 ಮೈಯನ್ನು ಜಜ್ಜುವವನು. स्त्रियाम् "ङीप्" (५-१-५)। **अङ्गमर्दिनी — ನೀ.**

**अङ्गयज्ञ ಅಂಗಯಜ್ಞ** (पुं०) ಅಂಗಭೂತವಾದ ಪಂಚವಿಧ ಯಜ್ಞ, ಪ್ರಧಾನಯಾಗಕ್ಕೆ ಸಾಧನವಾದ ಯಜ್ಞ. अङ्गीभूतः यज्ञः। "रक्षांसि वेदीं परितो निरास्थदङ्गान्ययाक्षीदभितः प्रधानम्" भट्टि० १-१२।

**अङ्गरक्षक ಅಂಗರಕ್ಷಕ** (पुं०) ಮೈಗಾವಲುಗಾರ. अङ्गस्य रक्षकः — रक्ष (पालने) "ण्वुल्" (३-१-१३३)।

**अङ्गरक्षण ಅಂಗರಕ್ಷಣ** (न०) ದೇಹಸಂರಕ್ಷಣೆ, ಶರೀರವನ್ನು ಕಾಪಾಡುವುದು. अङ्गस्य रक्षणम्।

**अङ्गरक्षिणी ಅಂಗರಕ್ಷಿಣೀ** (स्त्री०) ಕವಚ. अङ्गं रक्ष्यतेऽनया — रक्ष (पालने) कर० "ल्युट्" (३-३-११७)।

**अङ्गराग ಅಂಗರಾಗ** (पुं०) 1. ದೇಹಕ್ಕೆ ಪೂಸಿಕೊಳ್ಳುವ ಸುಗಂಧದ್ರವ್ಯ, ವಾಸನೆಯ ಪುಡಿ. अङ्गं रज्यतेऽनेन — रञ्ज (रागे) कर० "घञ्" (३-३-१२१)। "पाण्डयोऽयमंसार्पितलम्बहारः क्लृप्ताङ्गरागो हरिचन्दनेन" रघु० ६-६०। 2. ವಾಸನೆಯ ಪುಡಿಯನ್ನು ಮೈಗೆ ಹಚ್ಚುವುದು.

**अङ्गराज्** ಅಂಗರಾಜ್ (पुं०) 1. ಅಂಗದೇಶದ ದೊರೆ. 2. ಕರ್ಣ. अङ्गेषु राजते — राज् (दीप्तौ) "क्विप्" (३-२-६१)।

**अङ्गराज** ಅಂಗರಾಜ (पुं०) 1. ಅಂಗದೇಶದ ದೊರೆ. 2. ಕರ್ಣ. अङ्गानां राजा "टच्" (५-४-९१)।

**अङ्गरुह्** ಅಂಗರುಹ್ (नं०) ಶರೀರದಲ್ಲಿ ಹುಟ್ಟಿದ ಕೂದಲು. अङ्गे रोहति — रुह् (बीजजन्मनि प्रादुर्भावे च) "क्विप्"।

**अङ्गरुह** ಅಂಗರುಹ (नं०) ಶರೀರದಲ್ಲಿ ಹುಟ್ಟಿದ ಕೂದಲು. अङ्गे रोहति — रुह् (बीजजन्मनि प्रादुर्भावे च) "कः" (३-१-१३५)। "विहङ्गराजाङ्गरुहैरिवायतैः" माघ० १-७।

**अङ्गलेप** ಅಂಗಲೇಪ (पुं०) 1. ಸುಗಂಧದ್ರವ್ಯ, ವಾಸನೆಯ ಪುಡಿ. अङ्गं लिप्यतेऽनेन — लिप (उपदेहे) करं० "घञ्" (३-३-१२१)। 2. ಮೈಗೆ ಸುಗಂಧದ್ರವ್ಯವನ್ನು ಹಚ್ಚುವುದು. लिप भावे "घञ्"। अङ्गस्य लेपः।

**अङ्गविकल** ಅಂಗವಿಕಲ (वि०) ಅಂಗಹೀನ. अङ्गेन विकलः।

**अङ्गविक्षेप** ಅಂಗವಿಕ್ಷೇಪ (पुं०) 1. ನೃತ್ಯ. अङ्गस्य विक्षेपः चलनं यत्र। 2. ಮೈಯನ್ನು ಆಡಿಸುವಿಕೆ. अङ्गस्य विक्षेपः।

**अङ्गविद्या** ಅಂಗವಿದ್ಯಾ (स्त्री०) ವೇದಾಂಗಗಳು. [ವಿವರಕ್ಕೆ अङ्ग ಪದದಲ್ಲಿ ನೋಡಿ.]

**अङ्गविधि** ಅಂಗವಿಧಿ (पुं०) ಪ್ರಧಾನಕಾರ್ಯಕ್ಕೆ ಅಂಗಭೂತವಾದ ಕಾರ್ಯ. अङ्गस्य प्रधानोपकारिणः विधिः विधानम्।

**अङ्गवैकृत** ಅಂಗವೈಕೃತ (नं०) ಮನೋಭಾವವನ್ನು ತಿಳಿಸುವ ಅಭಿನಯ, ಕಣ್ಣು ಕೈ ಮೊದಲಾದವುಗಳಿಂದ ಮಾಡುವ ಸನ್ನೆ. अङ्गेन अङ्गचेष्टया वैकृतम्।

**अङ्गवैगुण्य** ಅಂಗವೈಗುಣ್ಯ (नं०) ಅಂಗಭೂತವಾದ ಕಾರ್ಯಕ್ಕೆ ಕುಂದನ್ನುಂಟುಮಾಡುವುದು. अङ्गस्य वैगुण्यम् अन्यथाकरणम्।

**अङ्गशुद्धि** ಅಂಗಶುದ್ಧಿ (स्त्री०) 1. ಮೈಯನ್ನು ಶುದ್ಧಿಗೊಳಿಸುವ ಸಾಬೂನು ಮುಂತಾದುದು. शुध (शौचे) करं० "क्तिच्" (३-३-१७४)। 2. ಮೈಯನ್ನು ತೊಳೆದುಕೊಳ್ಳುವುದು. अङ्गस्य शुद्धिः।

**अङ्गसंस्कार** ಅಂಗಸಂಸ್ಕಾರ (पुं०) 1. ದೇಹವನ್ನು ಶುದ್ಧಿಮಾಡುವ ಸ್ನಾನ ಮೊದಲಾದುದು. अङ्गं संस्क्रियतेऽनेन — सम् + डु कृञ् (करणे) करं० "घञ्" (३-३-१२१)। 2. ವಾಸನೆಪುಡಿಯಿಂದ ದೇಹಕ್ಕೆ ಲೇಪನಮಾಡುವುದು, ದೇಹವನ್ನು ಶೃಂಗರಿಸುವುದು. अङ्गस्य संस्कारः — सम् + कृञ् भावे "घञ्" (३-३-१८)। (वि०) 3. ದೇಹವನ್ನು ಶೃಂಗರಿಸುವವನು. अङ्गं संस्करोति — सम् + कृञ् "अण्" (३-२-१)।

**अङ्गसंस्क्रिया** ಅಂಗಸಂಸ್ಕ್ರಿಯಾ (स्त्री०) ದೇಹವನ್ನು ಅಲಂಕರಿಸುವುದು, ದೇಹದ ಶೃಂಗಾರ. अङ्गस्य संस्क्रिया।

**अङ्गसंहति** ಅಂಗಸಂಹತಿ (स्त्री०) ಅವಯವಗಳ ಸಮೂಹ. अङ्गानां अवयवानां संहतिः। "स्थेयसीं दधतमङ्गसंहतिम्" किरा० १३-५०।

**अङ्गहानि** ಅಂಗಹಾನಿ (स्त्री०) 1. ಅಂಗಭೂತವಾದ ಕಾರ್ಯದ ನ್ಯೂನತೆ (ಕೊರತೆ). 2. ಅವಯವನಾಶ.

**अङ्गहार** ಅಂಗಹಾರ (पुं०) ನೃತ್ಯವಿಶೇಷ, ಹಸ್ತಾದಿಗಳಿಂದ ಮಾಡುವ ಅಭಿನಯ. अङ्गस्य हारः हरणम् — हृञ् (हरणे) "घञ्" (३-३-१८)। "प्रयोगमाद्यं ललिताङ्गहारम्" कुमा० ७-९१।

**अङ्गहीन** ಅಂಗಹೀನ (पुं०) 1. ಕಾಮ, ಮನ್ಮಥ. (वि०) 2. ಅವಯವಗಳಿಂದ ಹೀನನಾದ, ಅಂಗಶೂನ್ಯ. अङ्गेन हीनः। [ತಾಯಿಯು ಗರ್ಭಧರಿಸಿದಾಗ ಅಪೇಕ್ಷಿಸಿದುದನ್ನು (ಬಯಕೆಯನ್ನು) ಒದಗಿಸದಿದ್ದರೆ ಜನಿಸುವ ಮಗುವು ಅಂಗಹೀನವಾಗುವುದು.] "इन्द्रियार्थांस्तु यान् यान् सा भोक्तुमिच्छति गर्भिणी। गर्भाबाधभयात्तांस्तान् भिषगाहृत्य दापयेत्॥ सा प्राप्तदौहृदा पुत्रं जनयेत गुणान्वितम्। अलब्धदौहृदा गर्भे लभेतात्मनि वा भयम्। येषु येष्विन्द्रियार्थेषु दौहृदे वै विमानना। जायेत तत्सुतस्यार्तिस्तस्मिंस्तस्मिंस्तथेन्द्रिये" सुश्रु०। 3. ಅಂಗಕ್ಕೆ ಲೋಪವುಂಟಾದ ಪ್ರಧಾನಕಾರ್ಯ.

**अङ्गाङ्गिभाव** ಅಂಗಾಂಗಿಭಾವ (पुं०) ಗೌಣಮುಖ್ಯಭಾವ, ಉಪಕಾರ್ಯೋಪಕಾರಕಭಾವ, ಪ್ರಧಾನಕಾರ್ಯಕ್ಕೂ ಅಂಗಕಾರ್ಯಕ್ಕೂ ಇರುವ ಸಂಬಂಧ. अङ्गस्य अङ्गिनश्च भावः।

**अङ्गाधिप** ಅಂಗಾಧಿಪ (पुं०) 1. ಅಂಗದೇಶದ ದೊರೆ, ಕರ್ಣ. 2. ಲಗ್ನಾಧಿಪತಿ. "अङ्गाधिपे बलिनि सर्वविभूतिसम्पत्"।

**अङ्गाधीश** ಅಂಗಾಧೀಶ (पुं०) 1. ಅಂಗದೇಶದ ದೊರೆ, ಕರ್ಣ. 2. ಲಗ್ನಾಧಿಪತಿ.

**अङ्गाधीश्वर ಅಂಗಾಧೀಶ್ವರ** (ಪುಂ) 1. ಅಂಗದೇಶದ ದೊರೆ, ಕರ್ಣ. 2. ಲಗ್ನಾಧಿಪತಿ.

**अङ्गार ಅಂಗಾರ** (ಪುಂನ०) 1. ಇದ್ದಲು. 2. ಅರ್ಧ ಬೆಂದಿರುವ ಕಟ್ಟಿಗೆ, ಕೊಳ್ಳಿ. अङ्गति गच्छत्यङ्गारः— अगि (गतौ) "आरन्" (उ० ३-१३४)। "अङ्गार-चुम्बितमिव व्यथमानमारते" मालती० १-२२। "उष्णो दहति चाङ्गारः शीतः कृष्णायते करम्"। 3. ಬೆಂಕಿಯ ಕೆಂಡ. 4. ಅಂಗಾರಕ, ಕುಜಗ್ರಹ. "कुजार-मङ्गलाङ्गाराः" वैज०। "अङ्गारोऽस्त्री प्रशान्तार्चिरिङ्गालः कारिकाग्निविट्" वैज०।

**अङ्गारक ಅಂಗಾರಕ** (ಪುಂ) 1. ಇದ್ದಲು. 2. ಅರ್ಧ ಬೆಂದಿರುವ ಕಟ್ಟಿಗೆ, ಕೊಳ್ಳಿ. 3. ಕುಜಗ್ರಹ. ಅಂಗಾರಕಗ್ರಹದಶಾಸಂವತ್ಸರಗಳು ಏಳು (7).

ಇತರ ಗ್ರಹಗಳ ದಶೆಗಳಲ್ಲಿ ಅಂಗಾರಕನ ಅಂತರ್ದಶಾ (ಭುಕ್ತಿ) ಮಾನ:

| ದಶೆ | | ವರ್ಷ | ಮಾಸಗಳು | ದಿನಗಳು |
|---|---|---|---|---|
| ರವಿದಶೆ | .. | – | 4 | 6 |
| ಚಂದ್ರದಶೆ | .. | – | 7 | – |
| ಅಂಗಾರಕದಶೆ | .. | – | 4 | 27 |
| ರಾಹುದಶೆ | .. | 1 | – | 18 |
| ಗುರುದಶೆ | .. | – | 11 | 6 |
| ಶನಿದಶೆ | .. | 1 | 1 | 9 |
| ಬುಧದಶೆ | .. | – | 11 | 27 |
| ಕೇತುದಶೆ | .. | – | 4 | 27 |
| ಶುಕ್ರದಶೆ | .. | 1 | 2 | – |

ಅಂಗಾರಕ ಮಹಾದಶೆಯಲ್ಲಿ ತನ್ನ (ಸ್ವ) ಮತ್ತು ಇತರ ಗ್ರಹಗಳ ಅಂತರ್ದಶಾ (ಭುಕ್ತಿ) ಮಾನ:

| | | ವರ್ಷ | ಮಾಸಗಳು | ದಿನಗಳು |
|---|---|---|---|---|
| ಸ್ವಭುಕ್ತಿ | .. | – | 4 | 27 |
| ರಾಹುಭುಕ್ತಿ | .. | 1 | – | 18 |
| ಗುರುಭುಕ್ತಿ | .. | – | 11 | 6 |
| ಶನಿಭುಕ್ತಿ | .. | 1 | 1 | 9 |
| ಬುಧಭುಕ್ತಿ | .. | – | 11 | 27 |
| ಕೇತುಭುಕ್ತಿ | .. | – | 4 | 27 |
| ಶುಕ್ರಭುಕ್ತಿ | .. | 1 | 2 | – |
| ರವಿಭುಕ್ತಿ | .. | – | 4 | 6 |
| ಚಂದ್ರಭುಕ್ತಿ | .. | – | 7 | – |

4. ಮಂಗಳವಾರ. 5. ಗೋರಂಟಿಮರ. "अङ्गारकः कुजेऽपि स्याद्दग्धकाष्ठे कुरण्टके" मेदि०।

**अङ्गारकारिन् ಅಂಗಾರಕಾರಿನ್** (ಪುಂ) ಮಾರಾಟಕ್ಕಾಗಿ ಇದ್ದಲನ್ನು ತಯಾರಿಸುವವನು. अङ्गारं करोति—डु कृञ् (करणे) "णिनिः" (३-२-७८)।

**अङ्गारकमणि ಅಂಗಾರಕಮಣಿ** (ಪುಂ) ಹವಳ. अङ्गारकस्य प्रियः मणिः। "माणिक्यं भास्करे देयं चन्द्रे मुक्तां प्रदापयेत्। प्रवालं च कुजे दद्यात्" ಎಂದಿರುವುದರಿಂದ ಅಂಗಾರಕ ಪ್ರೀತಿಗಾಗಿ ಹವಳದ ದಾನ ಮಾಡಬೇಕು.

**अङ्गारधानी ಅಂಗಾರಧಾನೀ** (ಸ್ತ್ರೀ०) ಅಗ್ಗಿಷ್ಟಿಕೆ. अङ्गारा धीयन्तेऽस्याम्—डु धाञ् (धारणे) "ल्युट्" (३-३-११७)। "ङीप्" (४-१-१५)।

**अङ्गारधानिका ಅಂಗಾರಧಾನಿಕಾ** (ಸ್ತ್ರೀ०) ಅಗ್ಗಿಷ್ಟಿಕೆ. अङ्गारा धीयन्तेऽस्याम्—डु धाञ् (धारणे) "ल्युट्" (३-३-११७)। "ङीप्" (४-१-१५)। "कन्" (५-४-५)।

**अङ्गारशकटी ಅಂಗಾರಶಕಟೀ** (ಸ್ತ್ರೀ०) ಅಗ್ಗಿಷ್ಟಿಕೆ. अङ्गाराणां शकटी।

**अङ्गारावक्षेपण ಅಂಗಾರಾವಕ್ಷೇಪಣ** (ನ०) ಬೆಂಕಿಕೆಂಡವನ್ನು ತೆಗೆದುಹಾಕುವ ದೊಡ್ಡ ಅಪೆ. अङ्गारोऽवक्षिप्यतेऽनेन—क्षिपु कर० "ल्युट्" (३-३-११७)।

**अङ्गारिका ಅಂಗಾರಿಕಾ** (ಸ್ತ್ರೀ०) 1. ಕಬ್ಬಿನಜಲ್ಲೆ. 2. ಮುತ್ತುಗದ ಮೊಗ್ಗು. "भवेदङ्गारिकाचेक्षुदण्डे किंशुककोरके" मेदि०।

**अङ्गारीय ಅಂಗಾರೀಯ** (ವಿ०) ಇದ್ದಲಿಗೆ ಸಂಬಂಧಿಸಿದ, ಇದ್ದಲನ್ನು ತಯಾರಿಸಲು ಉಪಯೋಗಿಸುವ (ಮರ). अङ्गारेभ्यः एतानि "छः" (५-१-१२)।

**अङ्गार्या ಅಂಗಾರ್ಯಾ** (ಸ್ತ್ರೀ०) ಇದ್ದಲಿನ ರಾಶಿ. अङ्गाराणां समूहः "यः" (४-२-४९)।

**अङ्गिका ಅಂಗಿಕಾ** (ಸ್ತ್ರೀ०) ಅಂಗಿ, ರವಿಕೆ, ಕುಪ್ಪಸ. अङ्गमस्यास्ति "इनिः" (५-२-११५)। स्वार्थे "कन्" (५-४-२९)।

**अङ्गिन् ಅಂಗಿನ್** (ವಿ०) 1. ಅವಯವಗಳಿಂದ ಕೂಡಿದ. 2. ದೇಹದಿಂದ ಕೂಡಿದ. 3. ಪ್ರಧಾನ, ಮುಖ್ಯ. अङ्गान्यस्य सन्ति "इनिः" (५-२-११५)।

**अङ्गिरस् ಅಂಗಿರಸ್** (ಪುಂ) ಅಂಗಿರಸ್ಸೆಂಬ ಋಷಿ. अगि (गतौ) "असिः" इरुडागमश्च (उ० ४-२३५)। [ಈ ಋಷಿಯು ಬ್ರಹ್ಮನ ಮಾನಸಪುತ್ರರಲ್ಲೊಬ್ಬರು. ಮಹಾಭಾರತದಲ್ಲಿ ಈ ಋಷಿಯು ಅಗ್ನಿಪುತ್ರರೆಂದು ಹೇಳಿರುತ್ತೆ.] "अथाङ्गिरसमग्रण्यम्" कुमा० ६-६५।

**अङ्गीकरण** ಅಂಗೀಕರಣ (न०) 1. ಅಂಗೀಕಾರ, ಸ್ವೀಕಾರ. 2. ಒಪ್ಪಿಗೆ, ಸಮ್ಮತಿ. 3. ಕರಾರು. अङ्गीकृ "ल्युट्" (३-३-११५)।

**अङ्गीकार** ಅಂಗೀಕಾರ (पु०) 1. ಸ್ವೀಕಾರ, ತೆಗೆದು ಕೊಳ್ಳುವುದು. 2. ಒಪ್ಪಿಗೆ, ಸಮ್ಮತಿ. 3. ಕರಾರು. अङ्गीक्रियते — डु कृञ् (करणे) भावे "घञ्" (३-३-१८)।

**अङ्गीकृत** ಅಂಗೀಕೃತ (वि०) 1. ಸ್ವೀಕರಿಸಲ್ಪಟ್ಟ, ತೆಗೆದುಕೊಳ್ಳಲ್ಪಟ್ಟ. 2. ಒಪ್ಪಲ್ಪಟ್ಟ, ಸಮ್ಮತಿಸಲ್ಪಟ್ಟ. अङ्गीकृ "क्तः" (३-२-१०२)। स्त्रियाम् अङ्गीकृता—आ. "अङ्गीकृतामादिमदम्पतीभ्याम्" याद० १३-१०१।

**अङ्ग** ಅಂಗು (पु०) 1. ಹಸ್ತ, ಕೈ. 2. ಪಕ್ಷಿ, ಹಕ್ಕಿ. "पतङ्गः पतगः प्लावी पतत्र्यङ्गुपतत्रयः" वैज०।

**अङ्गुल** ಅಂಗುಲ (पु०) 1. ಬೆರಳು. अङ्गुं लाति — ला (आदाने) "कः" (३-२-३)। 2. ಅಶ್ವತ್ಥವೃಕ್ಷ, ಅರಳೀಮರ. "श्रीवृक्षे पिप्पलोऽश्वत्थः प्लक्षश्चलदलोऽङ्गुलः" वैज०। (पुंन०) 3. ಅಂಗುಷ್ಠ, ಹೆಬ್ಬೆರಳು. अङ्गौ पाणौ लीयते — लीङ् (संश्लेषणे) "डः" बाहु०। "ज्येष्ठा तु मध्यमाङ्गुष्ठस्त्वङ्गुलः" वैज०। 4. ಒಂದು ಅಂಗುಲ, ಎಂಟು ಬಾರ್ಲಿಕಾಳುಗಳ ಉದ್ದ. "अङ्गुलोऽस्त्री यवा अष्टौ" वैज०।

**अङ्गुलि** ಅಂಗುಲಿ (स्त्री०) 1. ಬೆರಳು. अगि (गतौ) "उलिः" (उ० ४-२)। "उद्वेजयत्यङ्गुलिपार्ष्णिभागान्" कुमा० १-११। 2. ಆನೆಯ ಸೊಂಡಿಲಿನ ತುದಿ.

**अङ्गुलित्र** ಅಂಗುಲಿತ್ರ (न०) (ಬಿಲ್ಲಿನ ಹೆದೆಯನ್ನು ಎಳೆಯುವಾಗ ಗಾಯವಾಗದಿರಲು) ಬೆರಳಿಗೆ ಹಾಕಿಕೊಳ್ಳುವ ಚರ್ಮದ ಮುಚ್ಚಳ. अङ्गुलिं त्रायते — त्रैङ् (पालने) "कः" (३-२-३)।

**अङ्गुलित्राण** ಅಂಗುಲಿತ್ರಾಣ (न०) ಬೆರಳಿಗೆ ಹಾಕಿಕೊಳ್ಳುವ ಚರ್ಮದ ಮುಚ್ಚಳ. अङ्गुलिः त्रायतेऽनेन — त्रैङ् (पालने) "ल्युट्" (३-३-११७)।

**अङ्गुलिमुद्रा** ಅಂಗುಲಿಮುದ್ರಾ (स्त्री०) ಮುದ್ರೆಯ ಉಂಗುರ, ಸಂಕೇತಾಕ್ಷರಗಳಿಂದ ಕೂಡಿದ ಅಂಗುಲ್ಯಾಭರಣ. अङ्गुलेः मुदं राति — रा (दाने) "कः" (३-२-३)।

**अङ्गुलिमोटन** ಅಂಗುಲಿಮೋಟನ (न०) ಚುಟಕಿ, ಶಬ್ದವಾಗುವಂತೆ ಬೆರಳುಗಳ ಉಜ್ಜುವಿಕೆ. अङ्गुल्योर्मोटनं मर्दनम्।

**अङ्गुलिसंज्ञा** ಅಂಗುಲಿಸಂಜ್ಞಾ (स्त्री०) ಬೆರಳಿನ ಸನ್ನೆ.

**अङ्गुलिसंदेश** ಅಂಗುಲಿಸಂದೇಶ (पु०) ಬೆರಳಿನ ಸನ್ನೆಯಿಂದ ಮಾಡುವ ಆಜ್ಞೆ. अङ्गुल्या सन्दिश्यते — सम् + दिश (अतिसर्जने) भावे "घञ्" (३-३-१८)।

**अङ्गुली** ಅಂಗುಲೀ (स्त्री०) ಬೆರಳು. अङ्गति — अगि (गतौ) "उलिः" (उ० ४-२)। "त्याज्यो दुष्टः प्रियोऽप्यासीदङ्गुलीवोरगक्षता" रघु० १-२८।

**अङ्गुलीय** ಅಂಗುಲೀಯ (न०) ಉಂಗುರ. अङ्गुलौ भवम् "छः" (४-३-६२)। "तव सुचरितमङ्गुलीय नूनम्" शाकु० ६-११।

**अङ्गुलीयक** ಅಂಗುಲೀಯಕ (न०) ಉಂಗುರ. अङ्गुलीय स्वार्थे "कन्"। "देशापेक्षास्तथा यूयं याताऽऽदायाऽङ्गुलीयकम्" भट्टि० ७-४९।

**अङ्गुष्ठ** ಅಂಗುಷ್ಠ (पु०) ಹೆಬ್ಬೆರಳು. अङ्गौ पाणौ तिष्ठति — ष्ठा (गतिनिवृत्तौ) "कः" (३-२-४)। "अभ्युन्नताङ्गुष्ठनखप्रभाभिः" कुमा० १-३३।

**अङ्गुष्ठ्य** ಅಂಗುಷ್ಠ್ಯ (पु०) ಹೆಬ್ಬೆರಳಿನ ಉಗುರು. अङ्गुष्ठे भवः "यत्" (४-३-५५)।

**अङ्गूष** ಅಂಗೂಷ (पु०) 1. ಬಾಣ. 2. ನಕುಲ, ಕೀರ, ಮುಂಗುಸಿ. अगि (गतौ) "ऊषन्" बाहु०।

**अङ्घस्** ಅಂಘಸ್ (न०) ಪಾಪ. अङ्घते नरकमनेन — अघि (गतौ) "असुन्" (उ० ४-१८८)।

**अङ्घ्रि** ಅಂಘ್ರಿ (पु०) 1. ಪಾದ, ಕಾಲು. अघि (गतौ) "क्रिन्" (उ० ४-६६)। 2. ಮರದ ಬೇರು. 3. ಶ್ಲೋಕದ ನಾಲ್ಕನೇ ಒಂದು ಭಾಗ, ಪಾದ.

**अङ्घ्रिप** ಅಂಘ್ರಿಪ (पु०) ವೃಕ್ಷ, ಮರ. अङ्घ्रिणा मूलेन पिबति — पा (पाने) "कः" (३-२-४)।

**अङ्घ्रिपर्णी** ಅಂಘ್ರಿಪರ್ಣೀ (स्त्री०) ನರಿಹೊನ್ನೆಗಿಡ. अङ्घ्रौ पर्णान्यस्याः "ङीष्" (४-१-६४)।

**अङ्घ्रिवल्ली** ಅಂಘ್ರಿವಲ್ಲೀ (स्त्री०) ನರಿಹೊನ್ನೆಗಿಡ.

**अचक्षुस्** ಅಚಕ್ಷುಸ್ (वि०) ಕಣ್ಣಿಲ್ಲದವನು, ಕುರುಡ. न विद्येते चक्षुषी यस्य।

**अचण्ड** ಅಚಂಡ (वि०) ಸಾಧು, ಸೌಮ್ಯ, ಶಾಂತ.

**अचण्डी** ಅಚಂಡೀ (स्त्री०) ಸಾಧುವಾದ ಹಸು. "स्यादचण्डी तु सुकरा" अम०।

**अचतुर ಅಚತುರ** (वि०) 1. ನಾಲ್ಕು ಇಲ್ಲದ. अविद्यमानानि चत्वारि यस्य—निपा० (५-४-७७)। 2. ದಡ್ಡ. न चतुरः।

**अचपल ಅಚಪಲ** (वि०) ಚಾಪಲ್ಯವಿಲ್ಲದ, ಸ್ಥಿರಮನಸ್ಸುಳ್ಳ. न चपलः।

**अचर ಅಚರ** (पु०) 1. ಸ್ಥಿರ ಲಗ್ನ, ಸ್ಥಿರ ರಾಶಿ. [ವೃಷಭ, ಸಿಂಹ, ವೃಶ್ಚಿಕ ಮತ್ತು ಕುಂಭ ಇವು ಸ್ಥಿರ ರಾಶಿಗಳು.] (वि०) 2. ಸ್ಥಿರವಾದ, ಚಂಚಲವಲ್ಲದ. 3. ಚಲನೆಯಿಲ್ಲದ, ಸಂಚಾರವಿಲ್ಲದ, ಸ್ಥಾವರ. न चरति—चर (गतौ) "अच्" (३-१-१३४)। "अतश्चराचरं विश्वम्" कुमा० २-५।

**अचल ಅಚಲ** (पु०) 1. ಬೆಟ್ಟ, ಪರ್ವತ. न चलति—चल (कम्पने) "अच्" (३-१-१३४)। "अचल एष भवानिव राजते" माघ० ४-२१। 2. ಈಶ್ವರ, ಶಿವ. 3. ಏಳು, ಸಪ್ತಸಂಖ್ಯೆ. 4. ಅಗಳಿ, ಚಿಲಕ. "अचलस्तु गिरिकीलयोः" हेम०। (वि०) 5. ಚಲಿಸದಿರುವ, ಸ್ಥಿರವಾದ. "अचलनलिनलक्ष्मीहारि नालं बभूव" किरा० ६-४७। "अचला कमला कस्य कस्य मित्रं महीपतिः। शरीरं च स्थिरं कस्य कस्य वश्या वराङ्गना"।

**अचलकन्या ಅಚಲಕನ್ಯಾ** (स्त्री०) ಪಾರ್ವತಿ, ಪರ್ವತರಾಜನ ಮಗಳು. अचलस्य कन्या।

**अचलकीला ಅಚಲಕೀಲಾ** (स्त्री०) ಪೃಥ್ವಿ, ಭೂಮಿ. अचलाः कीला इव यस्याः।

**अचलज ಅಚಲಜ** (वि०) ಬೆಟ್ಟದಲ್ಲಿ ಹುಟ್ಟಿದ. अचले जायते—जनी (प्रादुर्भावे) "डः" (३-२-९७)।

**अचलजा ಅಚಲಜಾ** (स्त्री०) ಪಾರ್ವತಿ. अचलात् हिमाचलात् जायते—जनी "डः" (३-२-९८)।

**अचलत्विष् ಅಚಲತ್ವಿಷ್** (पु०) 1. ಕೋಗಿಲೆ. अचला स्थिरा त्विट् कान्तिर्यस्य। (स्त्री०) 2. ಗಟ್ಟಿಬಣ್ಣ. अचला च सा त्विट् च। (वि०) 3. ಗಟ್ಟಿ ಬಣ್ಣವುಳ್ಳ. अचला त्विट् वर्णः यस्य।

**अचलद्विष् ಅಚಲದ್ವಿಷ್** (पु०) ಇಂದ್ರ, ಪರ್ವತಗಳ ಶತ್ರು. अचलान् द्वेष्टि—द्विष (अप्रीतौ) "क्विप्" (३-२-६१)।

**अचलराज ಅಚಲರಾಜ** (पु०) ಪರ್ವತರಾಜ, ಹಿಮಾಲಯ. अचलानां राजा "टच्" (५-४-९१)।

**अचला ಅಚಲಾ** (स्त्री०) ಭೂಮಿ. न चलति—चल (कम्पने) "अच्" (३-१-१३४)।

**अचापल ಅಚಾಪಲ** (न०) 1. ಸ್ಥಿರತೆ. चपलस्य भावः "अण्" (५-१-१२२)। न चापलम्। (वि०) 2. ಅಚಂಚಲವಾದ, ಸ್ಥಿರವಾದ. न चापलं यस्य।

**अचापल्य ಅಚಾಪಲ್ಯ** (न०) 1. ಸ್ಥಿರತೆ. चपलस्य भावः "ष्यञ्" (५-१-१२४)। (वि०) 2. ಸ್ಥಿರವಾದ, ಅಚಂಚಲವಾದ. न चापल्यं यस्य।

**अचिक्कण ಅಚಿಕ್ಕಣ** (वि०) 1. ಪ್ರೇಮವಿಲ್ಲದ, ಸ್ನೇಹವಿಲ್ಲದ. 2. ನುಣುಪಲ್ಲದ. 3. ಒರಟಾಗಿರುವ.

**अचित् ಅಚಿತ್** (वि०) ಜಡವಾದ, ಚೇತನವಲ್ಲದ. न चित्।

**अचित्त ಅಚಿತ್ತ** (वि०) 1. ಬುದ್ಧಿಯಿಲ್ಲದವನು, ಮಂಕನು. नास्ति चित्तं यस्य। 2. ಗಮನವಿಡದ. नास्ति चित्तं यत्र।

**अचिन्तनीय ಅಚಿಂತನೀಯ** (वि०) ಬುದ್ಧಿಗೆಮೀರಿದ, ಯೋಚಿಸಲು ಅಶಕ್ಯವಾದ, ಊಹಿಸಲು ಅಸಾಧ್ಯವಾದ. चिन्तयितुमशक्यः—चिति (स्मृत्याम्) "अनीयर्" (३-१-९६)। "अचिन्तनीयस्तु तव प्रभावः" रघु० ५-३३।

**अचिन्तित ಅಚಿಂತಿತ** (वि०) ಯೋಚಿಸಲ್ಪಡದಿರುವ, ಅನಿರೀಕ್ಷಿತ, ಅತರ್ಕಿತ. न चिन्तितः। "अचिन्तितानि दुःखानि यथैवायान्ति देहिनाम्। सुखान्यपि तथा मन्ये" व्यासः।

**अचिन्त्य ಅಚಿಂತ್ಯ** (वि०) ಬುದ್ಧಿಗೆಮೀರಿದ, ಊಹಿಸಲು ಸಾಧ್ಯವಿಲ್ಲದ. न चिन्तयितुं शक्यः—चिति (स्मृत्याम्) +णिच् कर्म० "यत्" (३-१-९७)। "अचिन्त्यचिन्त्यैरवतारनाटकैः" याद० १४-३५।

**अचिर ಅಚಿರ** (न०) 1. ಈಚಿನಕಾಲ, ಸಮೀಪಕಾಲ, ಅಲ್ಪಕಾಲ. (वि०) 2. ಕ್ಷಣಿಕ, ಸ್ವಲ್ಪಕಾಲದ. 3. ನವೀನ, ಹೊಸದಾದ.

**अचिर ಅಚಿರ** (अव्य०) 1. ಜಾಗ್ರತೆಯಾಗಿ. 2. ಹೊಸದಾಗಿ. "अचिराधिष्ठितराज्यः प्रकृतिष्वरूढमूलत्वात्" माल० १-८।

**अचिरद्युति ಅಚಿರದ್ಯುತಿ** (स्त्री०) 1. ವಿದ್ಯುತ್ತು, ಮಿಂಚು. अचिरा द्युतिर्यस्याः। "अचिरद्युतिभास्वरोऽथ चैद्यः" याद० १५-१११। 2. ಕ್ಷಣಿಕವಾದ ಕಾಂತಿ. अचिरा च सा द्युतिश्च। (वि०) 3. ಕ್ಷಣಿಕವಾದ ಕಾಂತಿಯುಳ್ಳ. अचिरा द्युतिर्यस्य।

**अचिरप्रभा ಅಚಿರಪ್ರಭಾ** (स्त्री०) 1. ವಿದ್ಯುತ್ತು, ಮಿಂಚು. अचिरा प्रभा यस्याः। 2. ಕ್ಷಣಿಕವಾದ ಕಾಂತಿ. अचिरा च सा प्रभा च।

अचिरस्य ಅಚಿರಸ್ಯ (अव्य०) ಅಲ್ಪಕಾಲ.

अचिरांशु ಅಚಿರಾಂಶು (स्त्री०) ವಿದ್ಯುತ್ತು, ಮಿಂಚು. अचिराः अंशवो यस्याः। "अचिरांशुविलासचञ्चला ननु लक्ष्मीः फलमानुषङ्गिकम्" किरा० २-१९।

अचिरात् ಅಚಿರಾತ್ (अव्य०) ಜಾಗ್ರತೆಯಾಗಿ, ತಡವಿಲ್ಲದೆ. "अचिराज्जितमीनकेतनो विलसन् वृष्णिगणैर्नमस्कृतः" माघ० १६-५८।

अचिराभा ಅಚಿರಾಭಾ (स्त्री०) ವಿದ್ಯುತ್ತು, ಮಿಂಚು. अचिरा आभा यस्याः।

अचिराय ಅಚಿರಾಯ (अव्य०) ಜಾಗ್ರತೆಯಾಗಿ, ತಡವಿಲ್ಲದೆ. न चिराय।

अचिरेण ಅಚಿರೇಣ (अव्य०) ಜಾಗ್ರತೆಯಾಗಿ, ತಡವಿಲ್ಲದೆ. न चिरेण। "अचिरेण परस्य भूयसीं विपरीतां विगणय्य चात्मनः" किरा० २-९।

अचेतन ಅಚೇತನ (वि०) 1. ಚೇತನವಿಲ್ಲದ, ಪ್ರಜ್ಞೆಯಿಲ್ಲದ, ಜ್ಞಾನವಿಲ್ಲದ. न चेतना ज्ञानं यस्य। 2. ಜೀವವಿಲ್ಲದ, ಜಡವಾದ. न चेतना चैतन्यं यस्य। "कामार्ता हि प्रकृतिकृपणाश्चेतनाचेतनेषु" मेघ० १-५। 3. ಅರಿವಿಲ್ಲದ, ತಿಳಿವಳಿಕೆಯಿಲ್ಲದ. "बुद्धिशतमचेतने नष्टम्" हितो० २-१६१।

अचेतस् ಅಚೇತಸ್ (वि०) 1. ಪ್ರಜ್ಞೆಯಿಲ್ಲದ, ಜ್ಞಾನವಿಲ್ಲದ. 2. ಜೀವವಿಲ್ಲದ, ಜಡ. 3. ಮನಸ್ಸಿಲ್ಲದ. 4. ಅರಿವಿಲ್ಲದ, ತಿಳಿವಳಿಕೆಯಿಲ್ಲದ. न विद्यते चेतो यस्य।

अचेष्ट ಅಚೇಷ್ಟ (वि०) ಪ್ರಯತ್ನಶೂನ್ಯ. ವ್ಯಾಪಾರಶೂನ್ಯ. नास्ति चेष्टा यस्य।

अचैतन्य ಅಚೈತನ್ಯ (न०) 1. ಜಡತೆ, ಅರಿವಿಲ್ಲದಿರುವಿಕೆ, ಜ್ಞಾನಶೂನ್ಯತೆ. न चैतन्यम्। (वि०) 2. ಜಡ, ನಿರ್ಜೀವ, ಜ್ಞಾನಶೂನ್ಯ. न चैतन्यं यस्य।

अच्छ ಅಚ್ಛ (पु०) 1. ಕರಡಿ. 2. ಸ್ಫಟಿಕ. (वि०) 3. ನಿರ್ಮಲ, ಶುದ್ಧ, ಪ್ರಸನ್ನ, ತಿಳಿಯಾದ. न च्छ्यति दृष्टिम्—छो (छेदने) "कः" (३-२-४)। "विभान्तमच्छस्फटिकाक्षमालया" माघ० १-९। (अव्य०) 4. ಅಭಿಮುಖ್ಯ, ಎದುರು. न च्छ्यति दृष्टि संमुखत्वात्—छो (छेदने) "कः" (३-२-४)। "अच्छो भल्लूके स्फटिकेऽमलेऽच्छोऽभिमुखेऽव्ययम्" हेम०।

अच्छगत्य ಅಚ್ಛಗತ್ಯ (अव्य०) ಅಭಿಮುಖನಾಗಿ ಹೋಗಿ, ಎದುರಾಗಿ ಹೋಗಿ. अच्छं अभिमुखं गत्वा (१-४-६९)।

अच्छन्दस् ಅಚ್ಛಂದಸ್ (वि०) 1. ವೇದಾಧ್ಯಯನವಿಲ್ಲದವನು, ಉಪನಯನವಾಗದಿರುವ (ಹುಡುಗ). 2. ವೇದಾಧ್ಯಯನವಿಲ್ಲದ (ಶೂದ್ರ). नास्ति छन्दो वेदोऽस्य। 3. ಛಂದಸ್ಸಿಲ್ಲದ, ವೃತ್ತನಿಯಮವಿಲ್ಲದ, (ಗದ್ಯಕಾವ್ಯ). नास्ति छन्दो यत्र। 4. ಅಭಿಪ್ರಾಯವಿಲ್ಲದ.

अच्छभल्ल ಅಚ್ಛಭಲ್ಲ (पु०) ಕರಡಿ. अच्छं आभिमुख्येन भल्लते—भल्ल (हिंसायाम्) "अच्" (३-१-१३४)।

अच्छावाक ಅಚ್ಛಾವಾಕ (पु०) 1. ಮೊರೆಯಿಡುವವನು, ಪ್ರಾರ್ಥನೆಮಾಡುವವನು, ಋತ್ವಿಕ್ಕು. उच्यते—वच (परिभाषणे) "घञ्" (३-३-१८)। अच्छं वाको यस्य। पृषो०। (वि०) 2. ಎದುರು ಮಾತನಾಡುವವನು.

अच्छावाकीय ಅಚ್ಛಾವಾಕೀಯ (न०) 1. ಋತ್ವಿಕ್ಕಿಗೆ ಸಂಬಂಧಿಸಿದ ಕಾರ್ಯ, ಪ್ರಾರ್ಥನೆ. अच्छावाकस्य भावः कर्म वा "छः" (५-१-१३५)। (वि०) 2. ಅಚ್ಛಾವಾಕಶಬ್ದದಿಂದ ಕೂಡಿದ (ಸೂಕ್ತ). अच्छावाक-शब्दोऽस्मिन्नस्ति—मत्वर्थे "छः" (५-२-५९)।

अच्छिद्र ಅಚ್ಛಿದ್ರ (न०) 1 ದೋಷವಿಲ್ಲದಿರುವಿಕೆ, ತಪ್ಪಿಲ್ಲದಿರುವಿಕೆ. (वि०) 2. ಒಡೆಯದಿರುವ, ಅಖಂಡವಾದ, ಸಂಪೂರ್ಣವಾದ. 3. ರಂಧ್ರವಿಲ್ಲದ, ತೂತಿಲ್ಲದಿರುವ. 4. ಕೆಡದಿರುವ, ನಾಶವಾಗದಿರುವ, ದೋಷವಿಲ್ಲದ. न छिद्रं यत्र।

अच्छिन्न ಅಚ್ಛಿನ್ನ (वि०) 1. ಅವಿಚ್ಛಿನ್ನವಾದ, ಸತತವಾದ, ತಡೆಯಿಲ್ಲದ, ಎಡಬಿಡದ. न छिन्नम्। "अच्छिन्नामलसन्तानाः समुद्रोर्म्यनिवारिताः। पुनन्ति लोकान् पुण्यत्वात् कीर्तयः सरितश्च ते" कुमा० ६-६९। 2. ಕತ್ತರಿಸಲ್ಪಡದ.

अच्छेद्य ಅಚ್ಛೇದ್ಯ (पु०) 1. ಆತ್ಮ, ಜೀವ. न च्छेत्तुमर्हति। "अच्छेद्योऽयमदाह्योऽयम्" गीता २-२४। (वि०) 2. ಕತ್ತರಿಸಲು ಯೋಗ್ಯವಲ್ಲದ.

अच्छैदिक ಅಚ್ಛೈದಿಕ (वि०) ಕತ್ತರಿಸಲು ಯೋಗ್ಯವಲ್ಲದ. छेदं नित्यमर्हति "ठक्" (५-१-६४)। न च्छैदिकः।

अच्छोद ಅಚ್ಛೋದ (न०) ಒಂದು ಸರಸ್ಸು. अच्छमुदकं यत्र।

अच्छोद्य ಅಚ್ಛೋದ್ಯ (अव्य०) ಎದುರಿನಲ್ಲಿ ಹೇಳಿ. अच्छम् अभिमुखम् उदित्वा—अच्छ+वद (व्यक्तायां वाचि) "क्त्वा" "ल्यप्" (१-४-६९)।

**अनिर्वचनीयख्याति** ಅನಿರ್ವಚನೀಯಖ್ಯಾತಿ (स्त्री०) ಹೇಳಲು ಅಶಕ್ಯವಾದ ವಸ್ತುಗಳ ತೋರಿಕೆ. [ಭ್ರಾಂತಿಯಿಂದ ತೋರಿಬರುವ ಜಗತ್ತು ಮತ್ತು ಅಜ್ಞಾನಗಳು ಸತ್ತು ಮತ್ತು ಅಸತ್ತುಗಳೆಂದು ಹೇಳಲ್ಕು ಸಾಧ್ಯವಿಲ್ಲ. "ಸತ್" ಎಂದರೆ ಬ್ರಹ್ಮನಂತೆ ಕಾಲತ್ರಯದಲ್ಲಿಯೂ ಬಾಧೆಯಿಲ್ಲದಿರುವುದು. "ಅಸತ್" ಎಂದರೆ ಎಂದೆಂದಿಗೂ ತೋರದಿರುವುದು. ಪ್ರಪಂಚ ಮತ್ತು ಅಜ್ಞಾನಗಳು ಯಾವಾಗಲೂ ತೋರಿಬರುವುದರಿಂದ "ಅಸತ್" ಎಂದು ಹೇಳಲಾಗುವುದಿಲ್ಲ. ಬಾಧವಿರುವುದರಿಂದ "ಸತ್" ಎಂದೂ ಹೇಳಲಾಗುವುದಿಲ್ಲವಾದ ಕಾರಣ ಜಗತ್ತು ಮತ್ತು ಅಜ್ಞಾನಗಳು ಅನಿರ್ವಚನೀಯಗಳಾಗಿಯೇ ತೋರಿಬರುವುವು. ಇದಕ್ಕೆ ಅನಿರ್ವಚನೀಯ ಖ್ಯಾತಿಯೆಂದು ಹೆಸರು.]

**अनिर्वाण** ಅನಿರ್ವಾಣ (वि०) ಸ್ನಾನವಿಲ್ಲದ, ಮೈ ತೊಳೆಯದಿರುವ. न निर्वाणं (गज) मज्जनं यस्य। "निर्वाणं निर्वृतौ मोक्षे विनाशे गजमज्जने" यादव:। "अरुन्तुदमिवालानमनिर्वाणस्य दन्तिन:" रघु० १-७१।

**अनिर्वाह** ಅನಿರ್ವಾಹ (पु०) 1. ನೆರವೇರಿಸದಿರುವಿಕೆ, ಪೂರ್ತಿಮಾಡದಿರುವಿಕೆ. 2. ಅಸಂಗತಿ, ಹೊಂದಿಕೆಯಿಲ್ಲದಿರುವಿಕೆ. 3. ಬಡತನ.

**अनिर्विण्ण** ಅನಿರ್ವಿಣ್ಣ (पु०) 1. ವಿಷ್ಣು. "अनिर्विण्ण: सदामर्षी" वि० स०। (वि०) 2. ಖೇದವಿಲ್ಲದ. 3. ದಣಿವಿಲ್ಲದ, ಆಯಾಸವಿಲ್ಲದ. 4. ಧೈರ್ಯಗೆಡದ.

**अनिर्विद्** ಅನಿರ್ವಿದ್ (वि०) 1. ಆಯಾಸವಿಲ್ಲದ, ದಣಿವಿಲ್ಲದ. 2. ಖೇದವಿಲ್ಲದ. न निर्विद्यते — निर्+विद (ज्ञाने) "क्विप्" (३-२-६१)। "अनिर्विदा या विदधे विधात्रा" माघ० ३-३४।

**अनिर्वृति** ಅನಿರ್ವೃತಿ (स्त्री०) 1. ಅಸುಖ. 2. ದಾರಿದ್ರ್ಯ, ಬಡತನ. न० त०। (वि०) 3. ಸುಖವಿಲ್ಲದ. 4. ಬಡತನವುಳ್ಳ. न निर्वृति: यस्य।

**अनिर्वेद** ಅನಿರ್ವೇದ (पु०) ಖೇದವಿಲ್ಲದಿರುವಿಕೆ, ಕುಗ್ಗದಿರುವಿಕೆ. न० त०। "अनिर्वेद: श्रियो मूलमनिर्वेद: परं सुखम्" रामा०।

**अनिल** ಅನಿಲ (पु०) 1. ಗಾಳಿ, ವಾಯು. अनित्यनेन—अन (प्राणने) "इलच्" (उ० १-५४)। "प्राणानामनिलेन वृत्तिरुचिता सत्कल्पवृक्षे वने" शाकु० ७-१२। 2. ವಾಯುದೇವತೆ. 3. ವಿಷ್ಣು. "अह:संवर्तको वह्निरनिलो धरणीधर:" वि० स०।

**अनिलसख** ಅನಿಲಸಖ (पु०) ಅಗ್ನಿ, ಬೆಂಕಿ. अनिलस्य सखा "टच्" (५-४-९१)।

**अनिलान्तक** ಅನಿಲಾಂತಕ (पु०) ಇಂಗುದೀವೃಕ್ಷ, ಇಂಗಳದಗಿಡ. अनिलस्य वातरोगस्य अन्तक:।

**अनिलामय** ಅನಿಲಾಮಯ (पु०) ವಾತರೋಗ. अनिलादामय:।

**अनिवर्तिन्** ಅನಿವರ್ತಿನ್ (पु०) 1. ವಿಷ್ಣು. न निवर्तते— नि+वृतु (वर्तने) "णिनि:" (३-२-७८)। "अनिवर्ती निवृत्तात्मा संक्षेप्ता क्षेमकृच्छिव:" वि० स०। (वि०) 2. ಹಿಂದಕ್ಕೆ ತಿರುಗದ, ಹಿಮ್ಮೆಟ್ಟದಿರುವ, ಸಾಹಸಿಕ.

**अनिविशमान** ಅನಿವಿಶಮಾನ (वि०) (ಒಂದು ಜಾಗದಲ್ಲಿ ಕೂಡದೆ) ಯಾವಾಗಲೂ ತಿರುಗಾಡುತ್ತಿರುವ.

**अनिश** ಅನಿಶ (वि०) 1. ಬಿಡುವಿಲ್ಲದ, ಎಡಬಿಡದ. (क्रि० वि०) 2. ಯಾವಾಗಲೂ, ಬಿಡುವಿಲ್ಲದೆ. "शत्रूणामनिशं विनाशपिशुन:" माघ० १-७५।

**अनिष्ट** ಅನಿಷ್ಟ (न०) 1. ಅಶುಭ. 2. ವಿಪತ್ತು, ತೊಂದರೆ. 3. ಅಪರಾಧ, ತಪ್ಪು. न इष्टम्—इषु (इच्छायाम्) "क्त:" (३-३-११४)। "भवत्यनिष्टादपि नाम दु:सहान्मनस्विनीनां प्रतिपत्तिरीदृशी" कुमा० ५-४२। (वि०) 4. ಅಪೇಕ್ಷಿಸಲ್ಪಡದ. 5. ಅಪ್ರಿಯವಾದ. 6. ಕೆಟ್ಟಸ್ವಭಾವದ, ದುಷ್ಟವಾದ.

**अनिष्पत्ति** ಅನಿಷ್ಪತ್ತಿ (स्त्री०) ಅಸಮಾಪ್ತಿ, ಕೊನೆಗಾಣದಿರುವಿಕೆ, ಸಂಪೂರ್ಣವಾಗದಿರುವಿಕೆ.

**अनिष्पन्न** ಅನಿಷ್ಪನ್ನ (वि०) ಅಸಮಾಪ್ತ, ಕೊನೆಗಾಣದ, ಅಸಂಪೂರ್ಣ.

**अनीक** ಅನೀಕ (न०) 1. ಯುದ್ಧ. न नीयतेऽपसार्यतेऽस्मात्—णीञ् (प्रापणे) "क्विप्" कप् च। 2. ಸೈನ್ಯ, ಸೇನೆ. अनित्यनेन—अन (प्राणने) "ईकन्" (उ० ४-१७)। "अनीकं रणसैन्ययो:" हेम०।

**अनीकनेतृ** ಅನೀಕನೇತೃ (पु०) 1. ವಿಷ್ವಕ್ಸೇನ. "अनीकनेतारमवेक्षतारात्" याद० २-२३। 2. ಸ್ಕಂದ, ಷಣ್ಮುಖ.

**अनीकस्थ** ಅನೀಕಸ್ಥ (पु०) 1. ಯುದ್ಧದಲ್ಲಿ ನಿಂತಿರುವ ಸೇನೆ. 2. ಅಂಗರಕ್ಷಕ, ಮೈಗಾವಲಿನವನು. 3. ಮಾವಟಿಗ, ಆನೆಯ ಶಿಕ್ಷಕ. 4. ನಗಾರಿ, ರಣಭೇರಿ. अनीके तिष्ठति—ष्ठा (गतिनिवृत्तौ) "क:" (३-२-४)। 5. ಚಿಹ್ನೆ, ಗುರುತು. "अनीकस्थो रणगते हस्ति

शिक्षाविचक्षणे। राजरक्षिणि चिह्ने च वीरमर्दलकेऽपि च" मेदि०।

**अनीकिनी** ಅನೀಕಿನೀ (स्त्री०) 1. ಸೇನೆ, ದಂಡು, ಪಡೆ. अनीकं रणोऽस्ति प्रयोजनत्वेनास्याः — अनीक "इनिः" (५-२-११५)। "समं समन्ततो राज्ञामापतन्तीरनीकिनीः" माघ० १९-१०। 2. ಸೇನೆಗಳ ಗುಂಪು, ಆನೆ ರಥ ಕುದುರೆ ಮತ್ತು ಕಾಲಾಳುಗಳ ಒಂದು ಗುಂಪು, ಅಕ್ಷೌಹಿಣಿಯ ಹತ್ತನೆಯ ಒಂದು ಭಾಗದ ಸೈನ್ಯ.

**ಸೇನೆಗಳ ಗುಂಪುಗಳಲ್ಲಿ ಆನೆ ರಥ ಕುದುರೆ ಮತ್ತು ಕಾಲಾಳುಗಳ ಸಂಖ್ಯಾವಿವರ**— ಇವು ಕ್ರಮವಾಗಿ ಒಂದಕ್ಕಿಂತಲೂ ಒಂದು ಮೂರರಷ್ಟು ಅಧಿಕವಾಗಿರುವುವು.

| ಸೇನೆಗಳ ಗುಂಪುಗಳ ಹೆಸರು | ಆನೆಗಳು | ರಥಗಳು | ಕುದುರೆಗಳು | ಕಾಲಾಳುಗಳು |
|---|---|---|---|---|
| ಪತ್ತಿ | 1 | 1 | 3 | 5 |
| ಸೇನಾಮುಖ | 3 | 3 | 9 | 15 |
| ಗುಲ್ಮ | 9 | 9 | 27 | 45 |
| ಗಣ | 27 | 27 | 81 | 135 |
| ವಾಹಿನೀ | 81 | 81 | 243 | 405 |
| ಪೃತನಾ | 243 | 243 | 729 | 1215 |
| ಚಮೂ | 729 | 729 | 2187 | 3645 |
| ಅನೀಕಿನೀ | 2187 | 2187 | 6561 | 10935 |
| ಅಕ್ಷೌಹಿಣೀ | 21870 | 21870 | 65610 | 109350 |

(ಅಕ್ಷೌಹಿಣಿಯು ಅನೀಕಿನಿಯ ಹತ್ತರಷ್ಟು ಅಧಿಕವಾಗಿರುವುದು.) "एकेभैकरथा त्र्यश्वा पत्तिः पञ्चपदातिका। पत्त्यङ्गैः त्रिगुणैः सर्वैः क्रमादाख्या यथोत्तरम्। सेनामुखं गुल्मगणौ वाहिनी पृतना चमूः। अनीकिनी दशानीकिन्यक्षौहिणी" अम०।

**अनीति** ಅನೀತಿ (स्त्री०) 1. ದುರಾಚಾರ, ಅಧರ್ಮ, ಅನ್ಯಾಯ. (वि०) 2. ಈತಿಬಾಧೆಯಿಲ್ಲದ. नास्ति ईतिर्यस्य। 3. ದುರಾಚಾರವುಳ್ಳ, ನ್ಯಾಯವಿಲ್ಲದ, ಧರ್ಮವಿಲ್ಲದ. न नीतिर्यस्य।

**अनीश** ಅನೀಶ (पुं०) 1. ವಿಷ್ಣು, ಸರ್ವೇಶ್ವರ. नास्ति ईशः स्वामी यस्य। "अनीशः शाश्वतः स्थिरः" वि० स०। 2. ಯಜಮಾನನಲ್ಲದವನು, ಒಡೆಯನಲ್ಲದವನು. न ईशः स्वामी। "मम गात्राणामनीशोऽस्मि संवृत्तः" शाकु० २। (वि०) 3. ಸ್ವಾಮಿಯಿಲ್ಲದ, ಒಡೆಯನಿಲ್ಲದ. "सर्वप्रभुरनीशस्त्वमेकस्त्वं सर्वरूपभाक्" रघु० १०-२०। 4. ಅಸ್ವತಂತ್ರ, ಪರಾಧೀನ. 5. ಅಸಮರ್ಥ, ಕೈಯಲ್ಲಾಗದ, ಅಶಕ್ತ.

**अनीश्वर** ಅನೀಶ್ವರ (न०) 1. ಈಶ್ವರನಿಲ್ಲದ ಜಗತ್ತು, ಸಾಂಖ್ಯರು ಒಪ್ಪಿರುವ ನಿರೀಶ್ವರ ಜಗತ್ತು. न ईश्वरः नियन्ता यस्य। (वि०) 2. ಈಶ್ವರನಿಗೆ ಸಂಬಂಧಪಡದ. "ध्यानेनानीश्वरान् गुणान्" मनु० ६-७२। 3. ಈಶ್ವರನಿಲ್ಲದ. 4. ಒಡೆಯನಿಲ್ಲದ, ಯಜಮಾನನಿಲ್ಲದ. नास्ति ईश्वरः यस्य। 5. ಅಸಮರ್ಥ. "शयिता सविधेऽप्यनीश्वरा" भामि० वि० २-१८२।

**अनीश्वरवाद** ಅನೀಶ್ವರವಾದ (पुं०) ನಿರೀಶ್ವರವಾದ, ನಾಸ್ತಿಕಮತ, ದೇವರನ್ನು ಒಪ್ಪದಿರುವ ಮತ.

**अनीश्वरवादिन्** ಅನೀಶ್ವರವಾದಿನ್ (वि०) ನಾಸ್ತಿಕಮತಾವಲಂಬಿ, ದೇವರಿಲ್ಲವೆಂದು ಹೇಳುವವನು.

**अनीह** ಅನೀಹ (वि०) 1. ಅಪೇಕ್ಷೆಯಿಲ್ಲದ, ಆಸೆಯಿಲ್ಲದ. 2. ಉದಾಸೀನ, ಅಸಡ್ಡೆಯ, ಯಾವ ಕಾರ್ಯವೂ ಇಲ್ಲದ. नास्ति ईहा यस्य।

**अनीहा** ಅನೀಹಾ (स्त्री०) 1. ಅನಾದರ, ಉಪೇಕ್ಷೆ, ಉದಾಸೀನತೆ, ಅನುತ್ಸಾಹ. "प्रभुशक्ति द्विषतामनीहया" किरा० २-१०। 2. ಆಸೆಯಿಲ್ಲದಿರುವಿಕೆ.

**अनु** ಅನು (अव्य०) 1. ತರುವಾಯ, ಬಳಿಕ, ಆಮೇಲೆ. अनिति — अन (प्राणने) "उः" बाहु०। "क्रमेण सुप्तामनु संविवेश" रघु० २-२४। "तं गच्छन्त्यनु ये विपत्तिषु सदा" मुद्रा० १-१४। 2. ಉದ್ದಕ್ಕೂ, ದೀರ್ಘವಾಗಿ. "वहत्ययोध्यामनु राजधानीम्" रघु० १३-६१। "गङ्गामनु चतुःशतान्" भा०। 3. ಜೊತೆಯಲ್ಲಿ, ಸಂಗಡ, ಒಡನೆ. "उमास्तनोद्भेदमनु प्रवृद्धो मनोरथो यः प्रथमं बभूव" कुमा० ७-२४। 4. ಕಡಿಮೆಯಾದ, ಹೀನವಾದ. "मित्रलाभमनु लाभसंपदः" किरा० १३-५२। 5. ನಿಕೃಷ್ಟ, ಅಧಮ, ನೀಚ. "अनु हरिं सुराः"। 6. ಭಾಗ, ಪಾಲು. "लक्ष्मीर्हरिमनु"। 7. ವೀಪ್ಸೆ, ವ್ಯಾಪ್ತಿ, ಎರಡು ವಸ್ತುಗಳು ಒಂದಿದ್ದ ಕಡೆ ಮತ್ತೊಂದಿರಬೇಕೆಂಬ ನಿಯಮ. अनुदिवसम् अनुवृक्षम्। 8. ಸಮೀಪದಲ್ಲಿ, ಹತ್ತಿರದಲ್ಲಿ. "अनुनदि शुश्रुविरे रुतानि ताभिः" माघ० ७-२४। 9. ಸಾದೃಶ್ಯ, ಸಾಮ್ಯ, ಹೋಲಿಕೆ. "सर्वं मामनु ते प्रियाविरहितां त्वं तु व्यथां मानुभूः" विक्र० ४-२५। "अनुगर्जितसन्दिग्धाः" कुमा० ६-४०। 10. ಅನುರೂಪವಾದ, ಹೊಂದುವ, ಯುಕ್ತವಾದ, ಅನುಕೂಲವಾದ. "तथैव सोऽभूदन्वर्थो राजा प्रकृतिरञ्जनात्" रघु० ४-१२। 11. ಅಭಿಮುಖ್ಯ, ಎದುರು. "मातरमनुधावति कृष्णः"। 12. ಅನುಷ್ಠಾನ, ಆಚರಣೆ.

"प्रजापतिः कल्पितयज्ञभागं शैलाधिपत्यं स्वयमन्वतिष्ठत्" कुमा० १-१७। 13. ಲಕ್ಷಣ, ಜ್ಞಾಪಕ, ಚಿಹ್ನೆ, ಗುರುತು, "वृक्षमनु विद्योतते विद्युत्"। [ಇಲ್ಲಿ ಮಿಂಚಿನಿಂದ ವೃಕ್ಷವು ಗೋಚರವಾಗುವುದರಿಂದ ಮಿಂಚು ನಷ್ಟವಾದನಂತರವೂ ಮಿಂಚು ಹೊಳೆದ ಪ್ರದೇಶವು ವೃಕ್ಷದಿಂದ ತಿಳಿಯಲ್ಪಡುವುದು. ಆದುದರಿಂದ ಮಿಂಚನ್ನು ತಿಳಿಯಲು ವೃಕ್ಷವು ಗುರುತಾಯಿತು.] 14. ಉಪಾಸನೆ, ಸೇವೆ. "अन्वासितमरुन्धत्या स्वाहयेव हविर्भुजम्" रघु० १-५६। 15. ಅನುಕ್ರಮ, ಒಂದಾದ ಮೇಲೊಂದು (ಕ್ರಮವಾಗಿ) ಬರುವಿಕೆ. 16. ಅಪ್ರಧಾನ, ಮುಖ್ಯವಲ್ಲದ. अनुबन्धः। [ಈ ಎಲ್ಲಾ ಅರ್ಥಗಳಿಗೂ "अनु" ವು ದ್ಯೋತಕವಾಗಿರುವುದು.]

**अनुक ಅನುಕ** (वि०) ಕಾಮುಕ, ಸ್ತ್ರೀಲೋಲ, ಕಾಮಾತುರವುಳ್ಳವನು. अनुकामयते — अनु "कन्" (५-२-७४)।

**अनुकथन ಅನುಕಥನ** (न०) 1. ಅನಂತರ ಹೇಳುವುದು, ತರುವಾಯ ನಿರ್ದೇಶಿಸುವುದು. 2. ಸಂಭಾಷಣೆ.

**अनुकम्पक ಅನುಕಂಪಕ** (वि०) ದಯೆತೋರಿಸುವವನು. अनुकम्पते—अनु+कपि (चलने) "ण्वुल्" (३-१-१३३)।

**अनुकम्पन ಅನುಕಂಪನ** (न०) 1. ದಯೆ, ಕರುಣೆ, ಕನಿಕರ. अनुकम्प्यते — अनु + कपि (चलने) भावे "ल्युट्" (३-३-११५)। (वि०) 2. ದಯಾಶೀಲ, ಕರುಣೆಯ ಸ್ವಭಾವದ. कर्त० "युच्" (३-२-१४८)।

**अनुकम्पा ಅನುಕಂಪಾ** (स्त्री०) ದಯೆ, ಕರುಣೆ. अनु+कपि (चलने) "अः" (३-३-१०३)। "भक्त्या गुरौ मय्यनुकम्पया च" रघु० २-६३।

**अनुकम्प्य ಅನುಕಂಪ್ಯ** (वि०) 1. ವೇಗವುಳ್ಳ. 2. ದಯೆ ತೋರಿಸಲು ಅರ್ಹನಾದ. अनुकम्पितुमर्हः। "दुहितरमनुकम्प्यामद्रिरादाय दोर्भ्याम्" कुमा० ३-७६।

**अनुकम्प्र ಅನುಕಂಪ್ರ** (वि०) ದಯೆ ತೋರಿಸುವ ಸ್ವಭಾವದ, ಕನಿಕರದ ಸ್ವಭಾವವುಳ್ಳ. अनु+कपि (चलने) "रः" (३-२-१६७)।

**अनुकरण ಅನುಕರಣ** (न०) 1. ಅನುಕರಿಸುವುದು, ಅಣಕಿಸುವುದು, (ಒಬ್ಬನು) ಮಾಡಿದಂತೆ ಮಾಡುವುದು. अनुक्रियते — डु कृञ् (करणे) "ल्युट्" (३-३-११५)। "तव सुचरितैकदेशस्यानुकरणं किलैतत्" मुद्रा० ७। 2. ನಕಲು, ಪ್ರತಿಕೃತಿ. अनुक्रियतेऽनेन — करं० "ल्युट्" (३-३-११७)।

**अनुकर्तृ ಅನುಕರ್ತೃ** (पुं०) 1. ನಟ. अनुकरोति — अनु+डु कृञ् (करणे) "तृन्" (३-२-१३५)। (वि०) 2. ಅನುಕರಿಸುವವನು, (ಒಬ್ಬನು) ಮಾಡಿದಂತೆ ಮಾಡುವವನು.

**अनुकर्ष ಅನುಕರ್ಷ** (पुं०) 1. ಬಂಡಿಯ ನೊಗದ ಕೆಳಗಿನ ತೋಳುಮರ. [ಈ ಮರವು ಗಾಡಿಯ ಹಿಂಭಾಗದಿಂದ ಹಿಡಿದು ಅಚ್ಚಿನ ಮೇಲೆ ಹಾದು ನೊಗದವರೆಗೂ ಉದ್ದಕ್ಕೂ ಅಖಂಡವಾಗಿರುವುದು. ಇದರ ಮೇಲೆ ನೊಗವನ್ನಿಟ್ಟು ಕಟ್ಟುವರು.] अनुकृष्यते कृष (विलेखने) "घञ्" (३-३-१९)। 2. ಕರ್ಷಣೆ, ಎಳೆಯುವುದು. "अनुकर्षो रथस्याधःस्थिते दारुणि कर्षणे" नानार्थर०।

**अनुकर्षण ಅನುಕರ್ಷಣ** (न०) 1. ಆಕರ್ಷಣ, ಎಳೆಯುವಿಕೆ. 2. ಹಿಂದಿನ ವಾಕ್ಯದಿಂದ ಬೇಕಾದ ಪದಗಳನ್ನು ಮುಂದಿನ ವಾಕ್ಯದ ಅನ್ವಯಕ್ಕಾಗಿ ತೆಗೆದುಕೊಳ್ಳುವುದು. [ಇದಕ್ಕೆ ವ್ಯಾಕರಣ ಶಾಸ್ತ್ರದಲ್ಲಿ ಅನುವೃತ್ತಿಯೆಂದು ಹೆಸರು.] अनु+कृष (विलेखने) "ल्युट्" (३-३-११५)।

**अनुकल्प ಅನುಕಲ್ಪ** (पुं०) 1. ಗೌಣ, ಅಪ್ರಧಾನ, ಪ್ರತಿನಿಧಿ, ಮುಖ್ಯಕಲ್ಪಕ್ಕಿಂತಲೂ ಹೀನವಾದ ವಿಧಿ. अनु हीनः कल्पः।

**अनुकल्पता ಅನುಕಲ್ಪತಾ** (स्त्री०) ಅಪ್ರಧಾನತೆ. अनुकल्पस्य भावः। "व्यथित कल्पतरोरनुकल्पताम्" याद० ३-६५।

**अनुकाम ಅನುಕಾಮ** (पुं०) 1. ಅನುರೂಪವಾದ ಅಪೇಕ್ಷೆ, ಯುಕ್ತವಾದ ಆಸೆ. अनुरूपः कामः। (वि०) 2. ಅಪೇಕ್ಷೆಗೆ ಅನುರೂಪವಾದ, ಆಸೆಗೆ ತಕ್ಕಂತಿರುವ. (क्रि० वि०) 3. ಅಪೇಕ್ಷೆಗೆ ತಕ್ಕಂತೆ, ಆಸೆಗೆ ಅನುಗುಣವಾಗಿ. कामस्य सदृशम्।

**अनुकामीन ಅನುಕಾಮೀನ** (वि०) ಇಷ್ಟಬಂದಂತೆ ನಡೆಯುವ ಸ್ವಭಾವವುಳ್ಳ. कामस्य सदृशम्; अनुकामं गच्छति — गम्लृ (गतौ) "खः" (५-२-११)।

**अनुकार ಅನುಕಾರ** (पुं०) ಅಣಕಿಸುವುದು, ಅನುಕರಿಸುವುದು, ಹೋಲುವಂತೆ ಮಾಡುವುದು. अनु+डु कृञ् (करणे) "घञ्" (३-३-१८)। "सुलभानुकारः खलु जगति वेधसो निर्माणसंनिवेशः" मालती० ९।

**अनुकारिन् ಅನುಕಾರಿನ್** (वि०) ಇತರರಿಗೆ ಸದೃಶವಾಗಿ ಮಾಡುವ, ಅನುಕರಿಸುವ, ಹೋಲುವ. अनुकरोति — डु कृञ् (करणे) "णिनिः" (३-२-७८)।

"आमोदमुपजिघ्रन्तौ स्वनिःश्वासानुकारिणम्" रघु० १-४३। स्त्रियाम् "ङीप्" (४-१-५)। –रिणी –ರಿಣೀ. "दधत्सन्ध्यारुणव्योमस्फुरत्तारानुकारिणीः" माघ० २-१८।

**अनुकार्य ಅನುಕಾರ್ಯ** (वि०) ಹೋಲಲು ಅರ್ಹವಾದ, ಅನುಕರಿಸಲು ಯೋಗ್ಯವಾದ. अनु+डु कृञ् (करणे) "ण्यत्" (३-१-१२४)। [ನಾಟಕದಲ್ಲಿ ನಾಯಕಾದಿಗಳು ಅನುಕಾರ್ಯರು.]

**अनुकाल ಅನುಕಾಲ** (वि०) 1. ಕಾಲಕ್ಕೆ ತಕ್ಕಂತಹ, ಸಮಯೋಚಿತವಾದ. (क्रि० वि०) 2. ಸಮಯೋಚಿತವಾಗಿ, ಕಾಲಕ್ಕೆ ತಕ್ಕಂತೆ.

**अनुकीर्तन ಅನುಕೀರ್ತನ** (न०) ಸ್ತುತಿ, ಸ್ತೋತ್ರ. "साङ्गं भवति तत्सर्वं हरेर्नामानुकीर्तनात्"।

**अनुकूल ಅನುಕೂಲ** (पु०) 1. ವಿಷ್ಣು, ಪರಮಾತ್ಮ. "अनुकूलः शतावर्तः" वि० स०। 2. ನಾಯಕರಲ್ಲಿ ಒಂದು ಭೇದ, ಒಬ್ಬಳೇ ನಾಯಿಕೆಯಲ್ಲಿ ಅನುರಾಗವುಳ್ಳವನು. "अनुकूलस्त्वेकनिरतः" सा० द० ३-३७। (न०) 3. ಸಾಹಾಯ್ಯ, ಉಪಕಾರ. 4. ದಯೆ, ಪ್ರೀತಿ. (वि०) 5. ಸಹಾಯಕ, ಉಪಕಾರಮಾಡುವ. "मन्दं मन्दं नुदति पवनश्चानुकूलो यथा त्वाम्" मेघ० १-९। 6. ಸ್ನೇಹಭಾವವುಳ್ಳ, ಪ್ರೀತಿಯುಳ್ಳ. "सदानुकूलेषु हि कुर्वते रतिम्" किरा० १-५। 7. ದಯೆಯುಳ್ಳ. 8. ಒಪ್ಪುವಂತಹ, ಅನುರೂಪವಾದ, ಯೋಗ್ಯವಾದ. "कुशलविरचितानुकूलवेषः" रघु० ५-७६। 9. ಹಿತವಾದ, ಸುಖಕರವಾದ.

**अनुकूलत्व ಅನುಕೂಲತ್ವ** (न०) ಆನುಗುಣ್ಯ, ಅನುಕೂಲತೆ. – अनुकूलस्य भावः। "पवनस्यानुकूलत्वात् प्रार्थनासिद्धिशंसिनः" रघु० १-४२।

**अनुकृत ಅನುಕೃತ** (वि०) ಅನುಕರಿಸಲ್ಪಟ್ಟ, ಹೋಲಿಸಲ್ಪಟ್ಟ. अनु+डु कृञ् (करणे) "क्तः" (३-२-१०२)। "अनुकृतशिखरौघश्रीभिरभ्यागतेऽसौ" माघ० ४-६८।

**अनुकृति ಅನುಕೃತಿ** (स्त्री०) ಹೋಲಿಕೆ, ಅನುಕರಿಸುವಿಕೆ. अनु+डु कृञ् (करणे) "क्तिन्" (३-३-९४)। "धूमोद्गारानुकृतिनिपुणाः" मेघ० २-६।

**अनुक्त ಅನುಕ್ತ** (वि०) 1. ಹೇಳಲ್ಪಡದ, ಉಚ್ಚರಿಸಲ್ಪಡದ, ಪ್ರೇರಿಸಲ್ಪಡದ. न उक्तः। "असावनुक्तोऽपि सहाय एव" कुमा० ३-२१। 2. ಆಖ್ಯಾತಪ್ರತ್ಯಯಾದಿಗಳಿಂದ ಹೇಳಲ್ಪಡದ. [ವ್ಯಾಕರಣ ಶಾಸ್ತ್ರದಲ್ಲಿ ಹೇಳಿರುವಂತೆ ಕರ್ಮವು ತಿಙ್ ಕೃತ್ ತದ್ಧಿತ ಮತ್ತು ಸಮಾಸಗಳಿಂದ ಉಕ್ತವಾಗಿದ್ದರೆ ಅಂತಹ ಪ್ರಾತಿಪದಿಕಗಳ ಮೇಲೆ ಪ್ರಥಮಾ ವಿಭಕ್ತಿಯು ಬರುವುದು. ಉದಾ: ಕ್ರಮವಾಗಿ हरिः सेव्यते। लक्ष्म्या सेवितः। शतेन क्रीतः शत्यः। आरूढो वानरो यं सः आरूढवानरः। ಈ ರೀತಿ ಕರ್ಮವು ಹೇಳಲ್ಪಡದಿದ್ದರೆ ದ್ವಿತೀಯಾ ವಿಭಕ್ತಿಯು ಬರುವುದು. ಉದಾ: हरिं भजति ಇತ್ಯಾದಿ.]

**अनुक्रम ಅನುಕ್ರಮ** (पु०) 1. ಕ್ರಮ, ಪರಂಪರೆ, ಒಂದಾದಮೇಲೆ ಮತ್ತೊಂದು ಬರುವಿಕೆ, ಪರ್ಯಾಯ. "प्रचक्रमे वक्तुमनुक्रमज्ञा" रघु० ६-७०। (वि०) 2. ಕ್ರಮವಾದ, ಪರಂಪರೆಯ. अनुगतः क्रमम्। (अव्य०) 3. ಕ್ರಮವಾಗಿ, ಪರಂಪರೆಯಾಗಿ. क्रममनतिक्रम्य। यथार्थेऽव्ययी०।

**अनुक्रमणी ಅನುಕ್ರಮಣೀ** (स्त्री०) ವಿಷಯಸೂಚಿ, ಗ್ರಂಥದ ಕ್ರಮವನ್ನು ಸೂಚಿಸುವ ಪಟ್ಟಿ. अनुक्रम्यतेऽनया – अनु+क्रमु (पादविक्षेपे) कर० "ल्युट्" (३-३-११७)।

**अनुक्रोश ಅನುಕ್ರೋಶ** (पु०) 1. ದಯೆ, ಕನಿಕರ, ಇತರರ ಕಷ್ಟವನ್ನು ನೋಡಿ ಮರುಕಗೊಳ್ಳುವಿಕೆ. अनुक्रोशत्यनेन अनु+क्रुश (आह्वाने रोदने च) "घञ्" (३-३-१२१)। "अपाङ्गाः परिपात्यन्तामनुक्रोशानुवर्तिनः" याद० १६-२४। (वि०) 2. ಒಂದು ಕ್ರೋಶ (ಎರಡು ಮೈಲಿ) ದಷ್ಟೇ ದೂರ ನಡೆದವನು. अनुगतः क्रोशम्।

**अनुक्षण ಅನುಕ್ಷಣ** (वि०) 1. ಯಾವಾಗಲೂ ಇರುವ, ಪ್ರತಿಕ್ಷಣದಲ್ಲೂ ಉಂಟಾಗುವ. क्षणमनुगतः। (अव्य०) 2. ಯಾವಾಗಲೂ, ಪ್ರತಿಕ್ಷಣದಲ್ಲೂ. क्षणे क्षणे।

**अनुख्याति ಅನುಖ್ಯಾತಿ** (स्त्री०) ಸ್ವರೂಪಾವಿಷ್ಕರಣ, ಸಾಕ್ಷಾತ್ಕಾರದಿಂದ ಸ್ವರೂಪವನ್ನು ಪ್ರಕಾಶಪಡಿಸುವುದು.

**अनुग ಅನುಗ** (वि०) 1. ಸಹಚರ, ಸಂಗಡಿಗ, ಒಡನಾಡಿ, ಜೊತೆಗಾರ. 2. ಸೇವಕ, ಆಳು, ಅನುಚರ. "तद्भूतनाथानुग नार्हसि त्वम्" रघु० २-५८। 3. ಹಿಂಬಾಲಿಸುವ, ಹಿಂದೆ ನಡೆಯುವ. अनुगच्छति – अनु+गम्लृ (गतौ) "डः" (वा० ३-२-४८)। "गीतानुगं वारिमृदङ्गवाद्यम्" रघु० १६-६४।

**अनुगङ्ग ಅನುಗಂಗ** (अव्य०) 1. ಗಂಗಾನದಿಯ ಸಮೀಪದಲ್ಲಿ. गङ्गाया अनु। 2. ಗಂಗಾನದಿಯಲ್ಲಿ.

गङ्गायाम् — विभ० अव्ययी०। 3. ಗಂಗಾನದಿಯಷ್ಟು ಉದ್ದವಿರುವ. "अनुगङ्गं वाराणसी"।

**अनुगत** ಅನುಗತ (वि०) 1. ಹಿಂಬಾಲಿಸಲ್ಪಟ್ಟ. अनु+गम्लृ (गतौ) "क्तः" (३-२-१०२)। "अनुगतमलिवृन्दैर्गण्डभित्तीर्विहाय" रघु० १२-१०२। 2. ವ್ಯಾಪ್ತವಾದ, ಕೂಡಿರುವ. "शिवमिवानुगतं गजचर्मणा" किरा० ५-२। 3. ಹಿಂಬಾಲಿಸುವ, ಅನುಸರಿಸುವ, ಆಜ್ಞೆಪಾಲಿಸುವ. अनु+गम्लृ "क्तः" (३-४-७२)। "रामादेशादनुगता सेना तस्यार्थसिद्धये" रघु० १५-९। 4. ಹೊಂದಿಕೆಯಾಗುವ, ತಾಳೆಯಾಗುವ, ಸಮ ಕೂಡುವ, ಒಪ್ಪುವ. "मृदङ्गानुगतसङ्गीतमधुरः पौराणां समुच्चरति चर्चरीध्वनिः" रत्ना० १। 5. ಸದೃಶವಾದ, ಸಮಾನವಾದ, ಹೋಲುವ. 6. ಅಧೀನ, ವಿಧೇಯ. "स्वमतमनुगतस्त्वं तु मह्यं ददासि" मुद्रा० ५-१९।

**अनुगति** ಅನುಗತಿ (स्त्री०) 1. ಹಿಂಬಾಲಿಸುವಿಕೆ. 2. ಸಾದೃಶ್ಯ, ಹೋಲಿಕೆ. 3. ಒಪ್ಪಿಗೆ, ಸಮ್ಮತಿ, ಹೊಂದಿಕೆ. अनु+गम्लृ (गतौ) "क्तिन्" (३-३-९४)।

**अनुगम** ಅನುಗಮ (पु०) 1. ಹಿಂಬಾಲಿಸುವಿಕೆ, ಅನುಸರಣ. अनु+गम्लृ (गतौ) "अप्" (३-३-५८)। 2. ಹೊಂದಿಕೆ, ಒಪ್ಪಿಗೆ. 3. ಸಾದೃಶ್ಯ, ಹೋಲಿಕೆ.

**अनुगमन** ಅನುಗಮನ (न०) 1. ಅನುಸರಿಸಿ ನಡೆಯುವುದು, ಹಿಂಬಾಲಿಸುವಿಕೆ. अनु+गम्लृ (गतौ) भावे "ल्युट्" (३-३-११५)। "वन्यवृत्तिरिमां शश्वदात्मानुगमनेन गाम्" रघु० १-८८। 2. ಸಹಗಮನ, ಪತಿಯ ಜೊತೆಯಲ್ಲಿ ಮರಣಹೊಂದುವುದು.

**अनुगव** ಅನುಗವ (पु०) ಎತ್ತಿನ ಉದ್ದಕ್ಕೆ ಅನುಗುಣವಾದ ಗಾಡಿ, ಎತ್ತಿಗೆ ಅನುಗುಣವಾದ ಉದ್ದವುಳ್ಳ ಗಾಡಿ. गोः अनु गोः सदृश आयामो यस्य — समासान्तः "अच्" (५-४-८३)। निपा०।

**अनुगवीन** ಅನುಗವೀನ (वि०) ಗೋಪಾಲಕ, ಗೋವುಗಳನ್ನು ಅನುಸರಿಸಿ ನಡೆಯುವವನು. गोः पश्चात् अनुगु। अनुगु अलं गच्छति — गम्लृ (गतौ) "खः" (५-२-१५)।

**अनुगामिन्** ಅನುಗಾಮಿನ್ (वि०) 1. ಹಿಂಬಾಲಕ, ಹಿಂದೆಹೋಗುವ, ಅನುಸರಿಸಿನಡೆಯುವ. 2. ಸಂಗಡಿಗ, ಜೊತೆಗಾರ. अनु+गम्लृ (गतौ) "णिनिः" (३-२-७८)। स्त्रियाम् "ङीप्" (४-१-५)। —गामिनी —ಗಾಮಿನೀ.

**अनुगुण** ಅನುಗುಣ (वि०) 1. ಅನುಕೂಲವಾದ. 2. ಅನುರೂಪವಾದ, ಯೋಗ್ಯವಾದ. 3. ಹೊಂದಿಕೆಯಿರುವ, ಒಪ್ಪುವಂತಿರುವ, ಮೆಚ್ಚುವಂತಿರುವ. "अद्वैतं सुखदुःखयोरनुगुणं सर्वास्ववस्थासु यत्" उ० रा० १-३९। 4. ಗುಣದಲ್ಲಿ ಪ್ರೀತಿಯುಳ್ಳ, ಗುಣದಲ್ಲಿ ಅನುರಾಗವುಳ್ಳ. अनुगतः गुणम्। (अव्य०) 5. ಗುಣದಲ್ಲಿ. गुणे — विभ० अव्ययी०। 6. ಗುಣವನ್ನು ಮೀರದೆ. गुणमनतिक्रम्य। 7. ಅನುಸಾರವಾಗಿ, ಸರಿಯಾಗಿ, ಒಪ್ಪುವಂತೆ.

**अनुगुणा** ಅನುಗುಣಾ (स्त्री०) 1. ತಂತಿಯಿಂದ ಕೂಡಿದ ವೀಣೆ. अनुगता गुणं तन्त्रीसूत्रम्। 2. ಗುಣದಲ್ಲಿ ಅನುರಾಗವುಳ್ಳ ಹೆಂಗಸು.

**अनुगुप्त** ಅನುಗುಪ್ತ (वि०) 1. ಮುಚ್ಚಲ್ಪಟ್ಟ, ಹೊದ್ದಿಸಲ್ಪಟ್ಟ. अनु+गुपू (रक्षणे) "क्तः" (३-२-१०२)। 2. ರಕ್ಷಿಸಲ್ಪಟ್ಟ, ಕಾಪಾಡಲ್ಪಟ್ಟ.

**अनुगृहीत** ಅನುಗೃಹೀತ (वि०) ಅನುಗ್ರಹಮಾಡಲ್ಪಟ್ಟ, ದಯೆತೋರಿಸಲ್ಪಟ್ಟ. अनु+ग्रह (उपादाने) "क्तः" (३-२-१०२)।

**अनुग्रह** ಅನುಗ್ರಹ (पु०) 1. ಅನುಕೂಲ್ಯ, (ಹಿತವನ್ನುಂಟುಮಾಡುವ ಮತ್ತು ಅಹಿತವನ್ನು ನಿವಾರಿಸುವ) ದಯೆ. अनु+ग्रह (उपादाने) "अप्" (३-३-५८)। "प्रलयेष्वपि दीर्घायुः प्रतिभूस्त्वदनुग्रहः" याद० १-५७। 2. ಸಾಹಾಯ್ಯ, ಉಪಕಾರ. 3. ಅಂಗೀಕಾರ, ಸ್ವೀಕಾರ, ಒಪ್ಪಿಗೆ. 4. ದೀನದಲಿತರ ಪೋಷಣೆ. (वि०) 5. ಸೂರ್ಯಾದಿ ಗ್ರಹಗಳನ್ನು ಹಿಂಬಾಲಿಸುವ (ಇತರ ಗ್ರಹಗಳು).

**अनुग्रहण** ಅನುಗ್ರಹಣ (न०) "अनुग्रह" ಪದದ 1–4 ಅರ್ಥ. अनु+ग्रह (उपादाने) "ल्युट्" (३-३-११५)।

**अनुग्राहक** ಅನುಗ್ರಾಹಕ (वि०) 1. ಹಿತವನ್ನುಂಟು ಮಾಡುವ, ದಯೆತೋರಿಸುವ. 2. ಉಪಕಾರ ಮಾಡುವ. अनु+ग्रह (उपादाने) "ण्वुल्" (३-१-१३३)।

**अनुग्राह्य** ಅನುಗ್ರಾಹ್ಯ (वि०) 1. ದಯೆತೋರಿಸಲು ಅರ್ಹನಾದ. 2. ಸಾಹಾಯ್ಯ ಪಡೆಯಲು ಯೋಗ್ಯನಾದ. अनु+ग्रह (उपादाने) "ण्यत्" (३-१-१२४)। "यदि तेऽहमनुग्राह्यो यदि स्मरसि मे गुणान्" रामा०।

**अनुचर** ಅನುಚರ (वि०) 1. ಸೇವಕ, ಆಳು, ಪರಿಚಾರಕ. अनुचरति — अनु+चर (गतिभक्षणयोः) "अच्" (३-१-१३४)। "अनुचरेण धनाधिपतेरथो" किरा० ५-१६।

2. ಸಂಗಡಿಗ, ಜೊತೆಗಾರ. 3. ಹಿಂಬಾಲಕ, ಹಿಂದೆ ನಡೆಯುವವನು. "व्रताय तेनानुचरेण धेनोः" रघु० २-४। 4. ದೂತನನ್ನು ಅನುಸರಿಸಿಹೋಗುವ. अनुगतः चरं दूतम्। स्त्रियाम् "ङीप्" (४-१-१५)। **-चरी -ಚರೀ.**

**अनुचित ಅನುಚಿತ** (वि०) 1. ಅಯುಕ್ತವಾದ, ಅಸಮಂಜಸವಾದ, ಅಯೋಗ್ಯವಾದ. 2. ಅಪರಿಚಿತವಾದ, ಹೊಸದಾದ, ಮಾಮೂಲಲ್ಲದ. "अभ्यस्तेऽप्युचितं न्याय्येऽपि" वैज०। "अनुचितनूपुरविरहं नार्हसि तपनीयपीठिकालम्बि" माल० ४-३।

**अनुचिन्तन ಅನುಚಿಂತನ** (न०) 1. ಸ್ಮರಣೆ, ನೆನಪು. 2. ಯಾವಾಗಲೂ ಚಿಂತಿಸುವುದು, ವಿರಾಮವಿಲ್ಲದ ಚಿಂತೆ. अनु+चिति (स्मृत्याम्) "ल्युट्" (३-३-११५)।

**अनुचिन्ता ಅನುಚಿಂತಾ** (स्त्री०) ಯಾವಾಗಲೂ ಚಿಂತಿಸುತ್ತಿರುವುದು. अनु+ चिति (स्मृत्याम्) "अङ्" (३-३-१०५)।

**अनुचिन्तित ಅನುಚಿಂತಿತ** (वि०) ಚಿಂತಿಸಲ್ಪಟ್ಟ, ಸ್ಮರಿಸಲ್ಪಟ್ಟ. अनु+चिति (स्मृत्याम्) "क्तः" (३-२-१०२)। "अनुचिन्तितमात्रस्तमुपतस्थे खगेश्वरः" याद० १६-५१।

**अनुच्च ಅನುಚ್ಚ** (वि०) 1. ಎತ್ತರವಲ್ಲದ, ಉನ್ನತವಲ್ಲದ, ಕುಳ್ಳಾಗಿರುವ. न उच्चः। विरोधे न० त०। 2. ಗ್ರಹಗಳ ನೀಚಸ್ಥಾನ. [ವಿವರಗಳಿಗೆ "उच्च" ಪದದಲ್ಲಿ ನೋಡಿ.]

**अनुच्छित्ति ಅನುಚ್ಛಿತ್ತಿ** (स्त्री०) ನಾಶವಾಗದಿರುವಿಕೆ. उद्+छिदिर् (द्वैधीकरणे) "क्तिन्" (३-३-९४)। न० त०।

**अनुच्छिष्ट ಅನುಚ್ಛಿಷ್ಟ** (वि०) ಶುದ್ಧವಾದ, ಎಂಜಲಲ್ಲದ, ಉಪಯೋಗಿಸಲ್ಪಡದ, ತಿಂದು ಮಿಗಿಸಲ್ಪಡದ. उद्+शिष (असर्वोपयोगे) "क्तः" (३-२-१०२)। न० त०।

**अनुज ಅನುಜ** (पु०) ಕಿರಿಯ ಸಹೋದರ, ತರುವಾಯ ಹುಟ್ಟಿದವನು, ತಮ್ಮ. अनु पश्चात् जायते—जनी (प्रादुर्भावे) "ड:" (३-२-९९)। "प्रविश्य कृष्णासदनं महीभुजा तदाऽऽचचक्षेऽनुजसन्निधौ वचः" किरा० १-२६। स्त्रियाम् **-जा -ಜಾ.** ತಂಗಿ, ಸಹೋದರಿ.

**अनुजन्मन् ಅನುಜನ್ಮನ್** (पु०) ತಮ್ಮ, ಕಿರಿಯ ಸಹೋದರ. अनु जन्म यस्य। "जननाथ तवानुजन्मनाम्" किरा० २-१७।

**अनुजात ಅನುಜಾತ** (पु०) 1. ತಮ್ಮ, ಕಿರಿಯ ಸಹೋದರ. (वि०) 2. ಅನಂತರ ಹುಟ್ಟಿದ. अनु+जनी (प्रादुर्भावे) "क्तः" (३-४-७२)। "असौ कुमारस्तमजोऽनुजातः" रघु० ६-७८।

**अनुजीविन् ಅನುಜೀವಿನ್** (वि०) 1. ಸೇವಕ, ಆಳು, ಭೃತ್ಯ. अनुजीवितुं शीलमस्य—अनु+जीव (प्राणधारणे) "णिनिः" (३-२-७८)। "न वञ्चनीयाः प्रभवोऽनुजीविभिः" किरा० १-४। 2. ಆಶ್ರಿತ, ಇತರರ ಆಶ್ರಯದಿಂದ ಜೀವಿಸುವ, ಪರಾಧೀನ, ಅಸ್ವತಂತ್ರ.

**अनुजीव्य ಅನುಜೀವ್ಯ** (पु०) 1. ಯಜಮಾನ. (वि०) 2. ಆಶ್ರಯವನ್ನು ನೀಡುವ, ಆಶ್ರಯಿಸಲ್ಪಡುವ. अनुजीव्यतेऽसौ — अनु+जीव (प्राणधारणे) "ण्यत्" (३-१-१२४)।

**अनुज्ञा ಅನುಜ್ಞಾ** (स्त्री०) 1. ಅನುಮತಿ, ಸಮ್ಮತಿ, ಒಪ್ಪಿಗೆ. अनु+ज्ञा (नियोगे) "अङ्" (३-३-१०६)। "ऋषेरनुज्ञामधिगम्य मातः" रघु० २-६६। 2. ಆಜ್ಞೆ, ಅಪ್ಪಣೆ. "रहस्यनुज्ञामधिगम्य भूभृतः" किरा० १-३।

**अनुज्ञात ಅನುಜ್ಞಾತ** (वि०) 1. ಅಪ್ಪಣೆಮಾಡಲ್ಪಟ್ಟ. 2. ಅನುಮತಿಸಲ್ಪಟ್ಟ, ಸಮ್ಮತಿಸಲ್ಪಟ್ಟ. अनु+ज्ञा (नियोगे) "क्तः" (३-२-१०२)।

**अनुज्ञापक ಅನುಜ್ಞಾಪಕ** (वि०) 1. ಅಪ್ಪಣೆ ಮಾಡುವವನು. 2. ಅನುಮತಿಕೊಡುವವನು. अनु+ज्ञा (नियोगे) +णिच् "ण्वुल्" (३-१-१३३)।

**अनुज्ञापन ಅನುಜ್ಞಾಪನ** (न०) 1. ಅಪ್ಪಣೆಮಾಡುವಿಕೆ. 2. ಅನುಮತಿಕೊಡುವಿಕೆ. अनु+ज्ञा (नियोगे) +णिच् "ल्युट्" (३-३-११५)।

**अनुज्येष्ठ ಅನುಜ್ಯೇಷ್ಠ** (वि०) 1. ಜ್ಯೇಷ್ಠನ (ಹಿರಿಯನ) ತರುವಾಯ ಹುಟ್ಟಿದವನು. अनुगतः ज्येष्ठम्। (अव्य०) 2. ಜ್ಯೇಷ್ಠನ ಕ್ರಮದಲ್ಲಿ. ज्येष्ठस्यानुपूर्व्येण। 3. ಹಿರಿಯನನ್ನು ಮೀರದೆ. ज्येष्ठमनतिक्रम्य। यथार्थेऽव्ययी०।

**अनुतर ಅನುತರ** (न०) ನದಿಯನ್ನು ದಾಟಲು ಕೊಡುವ ಶುಲ್ಕ, ದೋಣಿಯ ಬಾಡಿಗೆ, ನದಿಯನ್ನು ದಾಟಿಸಿದ ಕೂಲಿ. अनुतीर्यतेऽनेन — अनु+तॄ (प्लवनतरणयोः) कर० "अप्" (३-३-५७)।

**अनुतर्ष ಅನುತರ್ಷ** (पु०) 1. ಮದ್ಯಪಾನ. 2. ನೀರಡಿಕೆ, ಬಾಯಾರಿಕೆ. 3. ಅಪೇಕ್ಷೆ, ಅಭಿಲಾಷೆ. अनुतृष्यते — अनु+ञि तृषा (पिपासायाम्) "घञ्" (३-३-१८)।

(न०) 4. ಮದ್ಯ. अनुतृष्यते इदम् — कर्म० "घञ्" (३-३-१९)। 5. ಮದ್ಯಪಾನದ ಪಾತ್ರೆ. अनुतृष्यतेऽनेन — कर० "घञ्" (३-३-१२१)। "सानुतर्षमनुतर्षपदेन" माघ० १०-२। "मद्येऽनुतर्षं तत्पाने पात्रे तृष्णाभिलाषयोः" विश्व०। अनुतर्षः सुरापानपात्रे तृष्णाभिलाषयोः" नानार्थर०।

**अनुतर्षण ಅನುತರ್ಷಣ** (न०) 1. ಮದ್ಯ. अनु+ञि तृषा (पिपासायाम्) भावे "ल्युट्" (३-३-११५)। 2. ಮದ್ಯಪಾನದ ಪಾತ್ರೆ. कर० "ल्युट्" (३-३-११७)।

**अनुतप्त ಅನುತಪ್ತ** (वि०) 1. ಕಾಯಿಸಲ್ಪಟ್ಟ, ಬಿಸಿ ಮಾಡಲ್ಪಟ್ಟ. 2. ಪಶ್ಚಾತ್ತಾಪಹೊಂದಿದ, ಮರುಗಿದ.

**अनुताप ಅನುತಾಪ** (पु०) 1. ಪಶ್ಚಾತ್ತಾಪ, ಅನುಚಿತ ಕಾರ್ಯದಿಂದುಂಟಾದ ದುಃಖ. अनु+तप (सन्तापे) भावे "घञ्" (३-३-१८)। "यस्याः करिष्यामि दृढानुतापं प्रवालशय्याशरणं शरीरम्" कुमा० ३-८। 2. ಬಿಸಿ, ಕಾವು.

**अनुतापन ಅನುತಾಪನ** (वि०) ಪಶ್ಚಾತ್ತಾಪವುಂಟು ಮಾಡುವ. अनु+तप (सन्तापे)+णिच् "ल्युः" (३-१-१३४)।

**अनुतापिन् ಅನುತಾಪಿನ್** (वि०) ಪಶ್ಚಾತ್ತಾಪವುಳ್ಳ, ಮರುಗುವ, ಅನುಚಿತಕಾರ್ಯದಿಂದ ದುಃಖಪಡುವ. अनुतापोऽस्यास्ति "इनिः" (५-२-११५)।

**अनुत्क ಅನುತ್ಕ** (वि०) ಉತ್ಸಾಹವಿಲ್ಲದ, ಇಷ್ಟವಾದುದನ್ನು ಹೊಂದಲು ತವಕಪಡದಿರುವ. न उत्कः।

**अनुत्तम ಅನುತ್ತಮ** (वि०) ಬಹಳ ಶ್ರೇಷ್ಠವಾದ, ಎಲ್ಲದಕ್ಕಿಂತಲೂ ಉನ್ನತವಾದ, ಸರ್ವೋತ್ತಮವಾದ. नास्ति उत्तमो यस्मात्। "अनुत्तमादुत्तरमार्यधाम्नः" याद० १८-१२४।

**अनुत्तर ಅನುತ್ತರ** (न०) 1. ಜವಾಬು ಕೊಡದಿರುವುದು, ಉತ್ತರ ಹೇಳದಿರುವುದು. "भवत्यवज्ञा च भवत्यनुत्तरात्" नैष० ९-२५। (वि०) 2. ಉತ್ತಮ, ಸರ್ವ ಶ್ರೇಷ್ಠ, ಅನುಪಮ. न विद्यते उत्तरः यस्मात्। "अनुत्तराणि विलसितानि" दशकु०। 3. ಉತ್ತರವಿಲ್ಲದ, ಪ್ರತಿಯಿಲ್ಲದ, ಜವಾಬಿಲ್ಲದ. नास्ति उत्तरं यस्य। 4. ಅಪಕೃಷ್ಟವಾದ, ಉತ್ತಮವಲ್ಲದ, ಶ್ರೇಷ್ಠವಲ್ಲದ. न उत्तरः।

**अनुत्तरङ्ग ಅನುತ್ತರಂಗ** (वि०) ಅಚಂಚಲ, ಸ್ಥಿರವಾದ, ಅಲೆಗಳಿಂದ ಚಲಿಸದ (ಅಲೆಗಳು ಹುಟ್ಟದಿರುವ). न उत्तरङ्गाः यस्मिन्। "अपामिवाधारमनुत्तरङ्गम्" कुमा० ३-४८।

**अनुत्पत्ति ಅನುತ್ಪತ್ತಿ** (स्त्री०) 1. ಉತ್ಪತ್ತಿಯಿಲ್ಲದಿರುವಿಕೆ. न उत्पत्तिः। न० त०। (वि०) 2. ಉತ್ಪತ್ತಿಯಿಲ್ಲದ.

**अनुत्पत्तिक ಅನುತ್ಪತ್ತಿಕ** (वि०) ಉತ್ಪತ್ತಿಯಿಲ್ಲದ, ಹುಟ್ಟಿಲ್ಲದ. न उत्पत्तिर्यस्य।

**अनुत्पन्न ಅನುತ್ಪನ್ನ** (वि०) 1. ಜನ್ಯವಲ್ಲದ, ಹುಟ್ಟಿಲ್ಲದ. 2. ಇನ್ನೂ ಹುಟ್ಟದಿರುವ, ಇನ್ನೂ ಉಂಟಾಗದಿರುವ.

**अनुत्पाद ಅನುತ್ಪಾದ** (पु०) 1. ಉತ್ಪತ್ತಿಯಿಲ್ಲದಿರುವಿಕೆ, ಹುಟ್ಟು ಇಲ್ಲದಿರುವಿಕೆ. (वि०) 2. ಉತ್ಪತ್ತಿಯಿಲ್ಲದ.

**अनुत्साह ಅನುತ್ಸಾಹ** (पु०) 1. ಉತ್ಸಾಹವಿಲ್ಲದಿರುವಿಕೆ, ದೊಡ್ಡ ಕಾರ್ಯದಲ್ಲಿ ಪ್ರಯತ್ನವಿಲ್ಲದಿರುವಿಕೆ. "ध्रुवमेतदवेहि विद्विषां त्वदनुत्साहहता विपत्तयः" किरा० २-२२। (वि०) 2. ಉತ್ಸಾಹವಿಲ್ಲದ, ಪ್ರಯತ್ನವಿಲ್ಲದ.

**अनुत्सिक्त ಅನುತ್ಸಿಕ್ತ** (वि०) ಗರ್ವವಿಲ್ಲದ, ಕೊಬ್ಬಿಲ್ಲದ, ದರ್ಪವಿಲ್ಲದ, ಅಹಂಕಾರವಿಲ್ಲದ. न० त०।

**अनुत्सुक ಅನುತ್ಸುಕ** (वि०) ಶಾಂತನಾದ, ತವಕವಿಲ್ಲದ, ಇಷ್ಟವಾದುದನ್ನು ಪಡೆಯಲು ಹೆಚ್ಚು ಆತುರವಿಲ್ಲದ.

**अनुत्सूत्र ಅನುತ್ಸೂತ್ರ** (वि०) ಸೂತ್ರವನ್ನು ಮೀರದ, ಶಾಸ್ತ್ರವನ್ನು ಮೀರದಿರುವ. उत्क्रान्तः सूत्रं व्याकरण सूत्रं नीतिशास्त्रं वा उत्सूत्रः। न० त०। "अनुत्सूत्रपदन्यासा सद्वृत्तिः सन्निबन्धना" माघ० २-११२।

**अनुत्सेक ಅನುತ್ಸೇಕ** (पु०) 1. ಗರ್ವವಿಲ್ಲದಿರುವಿಕೆ, ದರ್ಪವಿಲ್ಲದಿರುವಿಕೆ, ಅಹಂಕಾರವಿಲ್ಲದಿರುವಿಕೆ. (वि०) 2. ಗರ್ವವಿಲ್ಲದ, ದರ್ಪವಿಲ್ಲದ, ಅಹಂಕಾರವಿಲ್ಲದ.

**अनुत्सेकिन् ಅನುತ್ಸೇಕಿನ್** (वि०) ಗರ್ವವಿಲ್ಲದ, ಅಹಂಕಾರವಿಲ್ಲದ. न उत्सेकी। स्त्रियाम् "ङीप्" (४-१-५)। -किनी -ಕಿನೀ. "भूयिष्ठं भव दक्षिणा परिजने भाग्येष्वनुत्सेकिनी" शाकु० ४-१७।

**अनुद ಅನುದ** (वि०) 1. ಪ್ರೇರಕನಲ್ಲದ. नुदति — णुद (प्रेरणे) "कः" (३-१-१३५)। न० त०। 2. ಅನುರೂಪವಾದುದನ್ನು ಕೊಡುವ. अनु ददाति — अनु+दाञ् (दाने) "कः" (३-१-१३६)।

**अनुदक ಅನುದಕ** (पु०) 1. ಮರುಭೂಮಿ, ಊಷರಭೂಮಿ. नास्ति उदकं यत्र। 2. ಸ್ವಲ್ಪ ನೀರುಳ್ಳ ಕೊಳ. न अल्पं उदकं यत्र। 3. ಜಲತರ್ಪಣವಿಲ್ಲದ ಶ್ರಾದ್ಧ.

अनुदग्र ಅನುದಗ್ರ (वि०) 1. ಎತ್ತರವಲ್ಲದ, ಉನ್ನತವಲ್ಲದ. 2. ಮೃದುವಾದ, ಮೆದುವಾದ, ಮೆತ್ತಗಿರುವ. 3. ತೀಕ್ಷ್ಣವಲ್ಲದ, ಹರಿತವಲ್ಲದ. न उदग्रमस्य। 4. ಬಹಳ ಉನ್ನತವಾದ, ಹೆಚ್ಚು ಎತ್ತರವಾದ. नास्ति उदग्रो यस्मात्।

अनुदर ಅನುದರ (वि०) ಕೃಶವಾದ ಉದರವುಳ್ಳ, ತೆಳುವಾದ ಹೊಟ್ಟೆಯುಳ್ಳ. न अल्पं उदरं यस्य। स्त्रियाम् "टाप्" अनुदरा कन्या।

अनुदात्त ಅನುದಾತ್ತ (पु०) 1. ಅನುದಾತ್ತಸ್ವರ, ತಗ್ಗಿದ ಸ್ವರ, ತಾಲ್ವಾದಿ ಸ್ಥಾನಗಳಲ್ಲಿ ಕೆಳಭಾಗದಲ್ಲಿ ಹುಟ್ಟುವ ಸ್ವರ. "नीचैरनुदात्तः" पा० सू०। [ವಿವರಗಳಿಗೆ "स्वर" ಪದದಲ್ಲಿ ನೋಡಿ.] (वि०) 2. ಔದಾರ್ಯವಿಲ್ಲದವನು, ದೊಡ್ಡ ಮನಸ್ಸಿಲ್ಲದವನು.

अनुदार ಅನುದಾರ (वि०) 1. ಲೋಭಿ, ಜಿಪುಣ, ಕೃಪಣ. 2. ದೊಡ್ಡದಲ್ಲದ. न उदारः। 3. ತ್ಯಾಗಶೀಲ, ದಾನಿ, ಹೆಚ್ಚು ದಾನದ ಬುದ್ಧಿಯುಳ್ಳ. न उदारो यस्मात्। 4. ಪತ್ನಿಯನ್ನು ಅನುಸರಿಸುವ, ಪತ್ನಿಯನ್ನು ಅವಲಂಬಿಸಿರುವ. अनुगतो दारान्। 5. ಅನುರೂಪಳಾದ ಪತ್ನಿಯುಳ್ಳ. अनु दारा यस्य।

अनुदित ಅನುದಿತ (पु०) 1. ಸೂರ್ಯನು ಸ್ವಲ್ಪಮಾತ್ರ ಉದಯಿಸಿರುವ ಕಾಲ. न अल्पं उदितः। "उदितेऽनुदितेचैव समयाध्युषिते तथा" मनु० २-१५। (वि०) 2. ಉದಯಿಸದಿರುವ, ಹುಟ್ಟದಿರುವ. न उदितः। 3. ಹೇಳಲ್ಪಡದ. वद (व्यक्तायां वाचि) "क्तः" (३-२-१०२)। न० त०।

अनुदिन ಅನುದಿನ (अव्य०) ಪ್ರತಿದಿನವೂ. दिने दिने—वीप्सायाम् अव्ययी०।

अनुदृष्टि ಅನುದೃಷ್ಟಿ (स्त्री०) 1. ಅನುಕೂಲವಾದ ದೃಷ್ಟಿ. अनुकूला दृष्टिः। (वि०) 2. ಅನುಕೂಲದೃಷ್ಟಿಯುಳ್ಳ. अनुकूला दृष्टिर्यस्य।

अनुद्धत ಅನುದ್ಧತ (वि०) ನಮ್ರ, ವಿನಯಶೀಲ, ಶಾಂತವಾದ. न उद्धतः। "अनुद्धताकारतया विविक्ताम्" किरा० ३-३।

अनुद्धरण ಅನುದ್ಧರಣ (न०) 1. ಬೇರೆ ಜಾಗಕ್ಕೆ ಬದಲಾಯಿಸದೆ ಇರುವಿಕೆ, ಮೇಲಕ್ಕೆ ತೆಗೆಯದಿರುವಿಕೆ. न उद्धरणम्। 2. ಸ್ಥಾಪಿಸದಿರುವಿಕೆ, ಸ್ಥಿರಪಡಿಸದಿರುವಿಕೆ.

अनुद्धार ಅನುದ್ಧಾರ (पु०) 1. ಮೇಲಕ್ಕೆ ತೆಗೆಯದಿರುವಿಕೆ. 2. ಸಾಲವಿಲ್ಲದಿರುವಿಕೆ. "स्यादृणं पर्युदञ्चनम्। तदवृद्धिकमुद्धारः" वैजं०। 3. ವಿಭಾಗಮಾಡದಿರುವಿಕೆ, ಪಾಲು ಹಂಚದಿರುವಿಕೆ. न उद्धारः।

अनुद्धृत ಅನುದ್ಧೃತ (वि०) 1. ಮೇಲಕ್ಕೆ ಎತ್ತಲ್ಪಡದ. 2. ವಿಭಾಗಮಾಡಲ್ಪಡದ.

अनुद्भट ಅನುದ್ಭಟ (वि०) 1. ಧೈರ್ಯವಿಲ್ಲದ, ಮೃದುಸ್ವಭಾವದ. 2. ಗರ್ವವಿಲ್ಲದ. न० त०।

अनुद्यत ಅನುದ್ಯತ (वि०) 1. ಉದ್ಯೋಗವಿಲ್ಲದ, ಸೋಮಾರಿ, ಕೆಲಸಮಾಡದ, ಜಡ. 2. ಮೇಲಕ್ಕೆ ಎತ್ತಲ್ಪಡದ.

अनुद्यम ಅನುದ್ಯಮ (पु०) 1. ಕೆಲಸವಿಲ್ಲದಿರುವಿಕೆ, ಸೋಮಾರಿತನ. न उद्यमः। न० त०। (वि०) 2. ಸೋಮಾರಿಯಾದ, ಜಡ, ಕೆಲಸವಿಲ್ಲದ. न उद्यमो यस्य।

अनुद्यूत ಅನುದ್ಯೂತ (न०) 1. ಪುನಃ ಆಟವಾಡುವುದು, ಎರಡನೇಸಲದ ಆಟ. अनु+दिवु (क्रीडायाम्) "क्तः" (३-३-११४)। 2. ಮಹಾಭಾರತದಲ್ಲಿ ಸಭಾಪರ್ವದ ಒಂದು ಭಾಗ, ಅನುದ್ಯೂತಪರ್ವ, ದ್ಯೂತವಿಷಯವನ್ನು ಕುರಿತು ರಚಿಸಿದ ಗ್ರಂಥ.

अनुद्योग ಅನುದ್ಯೋಗ (पु०) 1. ಸೋಮಾರಿತನ. न उद्योगः। (वि०) 2. ಸೋಮಾರಿತನವುಳ್ಳ, ಕೆಲಸವಿಲ್ಲದಿರುವ. न उद्योगो यस्य।

अनुद्रुत ಅನುದ್ರುತ (न०) 1. ಅರ್ಧದ್ರುತ ತಾಳ. [ಅರ್ಧಮಾತ್ರೆಯ ಉಚ್ಚಾರಣೆಯಕಾಲವು ದ್ರುತ. ದ್ರುತದ ಅರ್ಧಕಾಲವು ಅನುದ್ರುತ.] (वि०) 2. ಹಿಂಬಾಲಿಸಲ್ಪಟ್ಟ, ಬೆನ್ನಟ್ಟಿ ಓಡಿಸಲ್ಪಟ್ಟ. अनु+द्रु (गतौ) "क्तः" (३-२-१०२)। "अनुद्रुतः संयति येन केवलम्" माघ० १-५२।

अनुद्वाह ಅನುದ್ವಾಹ (पु०) 1. ಮದುವೆಯಾಗದಿರುವಿಕೆ, ಬ್ರಹ್ಮಚರ್ಯದಲ್ಲಿರುವಿಕೆ. न उद्वाहः। न० त०। (वि०) 2. ಮದುವೆಯಾಗದಿರುವ. नास्ति उद्वाहो यस्य।

अनुद्विग्न ಅನುದ್ವಿಗ್ನ (वि०) 1. ನಿಶ್ಶಂಕ, ಭಯವಿಲ್ಲದ. 2. ನಿಶ್ಚಿಂತನಾದ. 3. ದುಃಖಗೊಳ್ಳದ. न उद्विग्नः।

अनुद्वेग ಅನುದ್ವೇಗ (पु०) 1. ಭಯವಿಲ್ಲದಿರುವಿಕೆ. 2. ಚಿಂತೆಯಿಲ್ಲದಿರುವಿಕೆ. 3. ದುಃಖವಿಲ್ಲದಿರುವಿಕೆ. न उद्वेगः। न० त०। "अनुद्वेगकरं वाक्यं सतां स्वाभाविकं मतम्"। (वि०) 4. ಭಯವಿಲ್ಲದ. 5. ಚಿಂತೆಯಿಲ್ಲದ. 6. ದುಃಖವಿಲ್ಲದ, ನೋವಿಲ್ಲದ.

अनुधावन ಅನುಧಾವನ (न०) 1. ಹಿಂಬಾಲಿಸಿ ಹೋಗುವಿಕೆ, ಅನುಸರಿಸಿ ನಡೆಯುವಿಕೆ. 2. ತತ್ತ್ವವನ್ನು

ತಿಳಿಯುವುದಕ್ಕಾಗಿ ಅನುಸರಣ. 3. ತತ್ತ್ವಾನ್ವೇಷಣ. 4. ಶುದ್ಧಿ ಮಾಡುವಿಕೆ, ತೊಳೆಯುವಿಕೆ.

**अनुध्या** ಅನುಧ್ಯಾ (स्त्री०) 1. ಒಳ್ಳೆಯದನ್ನು ಕುರಿತು ಚಿಂತನೆ, ಒಳ್ಳೆಯದನ್ನು ಕೋರುವಿಕೆ. 2. ಅನುಗ್ರಹ, ಹಿತದ ಬಯಕೆ. 3. ಆಸಕ್ತಿ. अनु+ध्यै (चिन्तायाम्) "अङ्" (३-३-१०६)।

**अनुध्यात** ಅನುಧ್ಯಾತ (वि०) ಧ್ಯಾನಮಾಡಲ್ಪಟ್ಟ, ಚಿಂತಿಸಲ್ಪಟ್ಟ. अनु+ध्यै (चिन्तायाम्) "क्तः" (३-२-१०२)।

**अनुध्यान** ಅನುಧ್ಯಾನ (न०) ಎಡಬಿಡದ ಚಿಂತೆ, ಯಾವಾಗಲೂ ಯೋಚಿಸುತ್ತಿರೋಣ, ಸತತ ಧ್ಯಾನ. अनु+ध्यै (चिन्तायाम्) "ल्युट्" (३-३-११५)। "या नः प्रीतिर्विरूपाक्ष त्वदनुध्यानसम्भवा" कुमा० ६-२१।

**अनुध्येय** ಅನುಧ್ಯೇಯ (वि०) 1. ಅನುಗ್ರಹಮಾಡಲು ಅರ್ಹನಾದ, ಶುಭವನ್ನು ಕೋರಲು ಯೋಗ್ಯನಾದ. अनु+ध्यै (चिन्तायाम्) "यत्" (३-१-९७)। "अनु-दध्युरनुध्येयं सान्निध्यैः प्रतिमागतैः" रघु० १७-३६। 2. ಧ್ಯಾನಮಾಡಲು ಯೋಗ್ಯವಾದ, ಧ್ಯಾನಮಾಡಲ್ಪಡುವ.

**अनुनय** ಅನುನಯ (पु०) 1. ವಿನಯ, ನಮ್ರತೆ, ಸೌಜನ್ಯ, ಸರಳತೆ. 2. ಸಂಧಾನ, ಸಮಾಧಾನ, ವಿರೋಧಿಗಳ ಮನಸ್ಸನ್ನು ಒಲಿಸುವಿಕೆ, ಕೋಪವನ್ನು ಹೋಗಲಾಡಿಸುವಿಕೆ. अनु+णीञ् (प्रापणे) "अच्" (३-३-५६)। "कथं नु शक्योऽनुनयो महर्षेः" रघु० २-५४। 3. ಪ್ರಾರ್ಥನೆ, ಯಾಚನೆ. "अनुनयम-गृहीत्वा व्याजसुप्ता पराची" माघ० ११-९। 4. ನಮಸ್ಕಾರ. "प्रणिपातस्त्वनुनयः प्रणतिः" कल्पद्रु०।

**अनुनाद** ಅನುನಾದ (पु०) 1. ಪ್ರತಿಧ್ವನಿ, ಅನುಸರಿಸಿದ ಸದ್ದು. 2. ಅನುರೂಪವಾದ ಧ್ವನಿ. अनुरूपो नादः। "गुरुतरकलनूपुरानुनादम्" माघ० ७-१८।

**अनुनादिन्** ಅನುನಾದಿನ್ (वि०) ಪ್ರತಿಧ್ವನಿಯನ್ನು ಕೊಡುವ, ಅನುಸರಿಸಿ ಶಬ್ದವನ್ನುಂಟುಮಾಡುವ. अनुनदति—अनु+णद (अव्यक्ते शब्दे) "णिनिः" (३-२-७८)। "गम्भीरेणानुनादिना" रामा०।

**अनुनायिका** ಅನುನಾಯಿಕಾ (स्त्री०) ನಾಯಿಕೆಯನ್ನು ಅನುಸರಿಸಿಕೊಂಡಿರುವ ಸಖಿ, ದಾಸಿ ಮೊದಲಾದ ಹೆಂಗಸು. "सखी प्रव्रजिता दासी प्रेष्या धात्रेयिका तथा। अन्याश्च शिल्पकारिण्यो विज्ञेयाह्यनुनायिकाः"।

**अनुनासिक** ಅನುನಾಸಿಕ (वि०) ಮೂಗಿನ ಮೂಲಕ ಉಚ್ಚರಿಸಲ್ಪಡುವ, ಮೂಗನ್ನು ಅನುಸರಿಸಿ ಹೊರಡುವ (ವರ್ಣ). अनुगतो नासिकाम्। "मुखसहितनासिकया उच्चार्यमाणो वर्णः अनुनासिकसंज्ञः स्यात्" सि० कौ०। [ಸ್ವರವರ್ಣಗಳು, ಯ ವ ಲ, ಮತ್ತು ವರ್ಗೀಯ ಪಂಚಮಾಕ್ಷರಗಳು ಇವುಗಳಿಗೆ ಅನುನಾಸಿಕಸಂಜ್ಞೆಯುಂಟು.]

**अनुनीति** ಅನುನೀತಿ (स्त्री०) ಸಮಾಧಾನಗೊಳಿಸುವಿಕೆ, ಕೋಪವು ಶಾಂತವಾಗುವ ರೀತಿಯನ್ನು ಅನುಸರಿಸುವಿಕೆ. अनु+णीञ् (प्रापणे) "क्तिन्" (३-३-९४)।

**अनुनेय** ಅನುನೇಯ (वि०) 1. ಅನುನಯಕ್ಕೆ ಅರ್ಹನಾದ, ಸಮಾಧಾನಗೊಳಿಸಲು ಯೋಗ್ಯನಾದ. अनु+णीञ् (प्रापणे) "यत्" (३-१-९७)। 2. ಬೇಡಲು ಅರ್ಹನಾದ.

**अनुपठित** ಅನುಪಠಿತ (न०) 1. ಅನುಸರಿಸಿ ಪಠಿಸುವುದು, ಗುರುವು ಹೇಳಿಕೊಟ್ಟಂತೆ ಹೇಳುವುದು. अनु+पठ (व्यक्तायां वाचि) भावे "क्तः" (३-३-११४)। (वि०) 2. ಅನುಸರಿಸಿ ಹೇಳಲ್ಪಟ್ಟ. अनु+पठ कर्म० "क्तः" (३-२-१०२)।

**अनुपठितिन्** ಅನುಪಠಿತಿನ್ (वि०) ಗುರುವಿನ ಪಾಠವನ್ನು ಅನುಸರಿಸಿ ಅಧ್ಯಯನ ಮಾಡಿದವನು. अनुपठित-मनेन "इनिः" (५-२-८८)। स्त्रियाम् "ङीप्" (४-१-५)। –पठितिनी – ಪಠಿತಿನೀ.

**अनुपतन** ಅನುಪತನ (न०) ಅನುಸರಿಸಿ ಹೋಗುವುದು, ಬಳಿಕ ಹೋಗುವುದು. अनु+पत्लृ (गतौ) भावे "ल्युट्" (३-३-११५)।

**अनुपति** ಅನುಪತಿ (अव्य०) ಪತಿಯ ಸಮೀಪದಲ್ಲಿ. पत्युः समीपे — सामीप्येऽव्ययी०।

**अनुपथ** ಅನುಪಥ (पु०) 1. ಅನುಕೂಲವಾದ ಮಾರ್ಗ. अनुकूलः पन्थाः "अः" (५-४-७४)। (वि०) 2. ಮಾರ್ಗವನ್ನು ಅನುಸರಿಸಿರುವ. पन्थानमनुगतः। (अव्य०) 3. ಮಾರ್ಗದ ಸಮೀಪದಲ್ಲಿ. पथः समीपे सामीप्येऽव्ययी०। 4. ಮಾರ್ಗದಲ್ಲಿ. पथि — सप्तम्यर्थेऽव्ययी०।

**अनुपद** ಅನುಪದ (न०) 1. ಅನುಕೂಲವಾದ ಸ್ಥಳ. अनुरूपं पदम्। 2. ಸಂಗೀತದ ಪಲ್ಲವಿ. (अव्य०) 3. ಅನಂತರ, ಬಳಿಕ, ತರುವಾಯ. पदस्य पश्चात् — पश्चादर्थे अव्ययी०। "अमोघाः प्रतिगृह्णन्तावर्घ्यानु-पदमाशिषः" रघु० १-४४। 4. ಕಾಲಿನ ಸಮೀಪದಲ್ಲಿ. सामीप्येऽव्ययी०।

**अनुपदवि ಅನುಪದವಿ** (वि०) 1. ದಾರಿಯನ್ನು ಅನುಸರಿಸಿರುವ. पदवीमनुगतः। (अव्य०) 2. ದಾರಿಯ ಸಮೀಪದಲ್ಲಿ. पदव्याः समीपे। 3. ದಾರಿಯಲ್ಲಿ. पदव्याम्। सप्तम्यर्थेऽव्ययी०।

**अनुपदवी ಅನುಪದವೀ** (स्त्री०) 1. ಅನುಕೂಲವಾದ ಮಾರ್ಗ, —ದಾರಿ, —ರಸ್ತೆ. अनुकूला पदवी। 2. ಕಾಲುದಾರಿ. अनु अप्रधाना पदवी।

**अनुपदिक ಅನುಪದಿಕ** (वि०) ಅನುಸರಿಸುವ, ಹಿಂಬಾಲಿಸುವ, ಅನಂತರದಲ್ಲಿ ಹೋಗುವ. अनुपदमस्त्यस्य गन्तृत्वेन "ठन्" (५-२-११५)।

**अनुपदिन् ಅನುಪದಿನ್** (वि०) 1. ಅನುಸರಿಸುವ, ಹಿಂಬಾಲಿಸುವ. 2. ಹುಡುಕುವ, ವಿಚಾರಿಸುವ, ಶೋಧಿಸುವ. अनुपद "इनिः" (५-२-९०)। "उदिते ततः सपदि लब्धपदैः क्षणदाकरेऽनुपदिभिः प्रयये" माघ० ९-७०।

**अनुपदिष्ट ಅನುಪದಿಷ್ಟ** (वि०) ಉಪದೇಶ ಮಾಡಲ್ಪಡದ. न उपदिष्टः।

**अनुपदीना ಅನುಪದೀನಾ** (स्त्री०) ಪಾದರಕ್ಷೆ, ಮೋಜಾ, ಜೋಡು, ಕಾಲಿನ ಉದ್ದಕ್ಕೆ ಅನುಗುಣವಾದ ಮೆಟ್ಟು. अनुपदं बद्धा — अनुपद "खः" (५-२-९)।

**अनुपधि ಅನುಪಧಿ** (वि०) ನಿಷ್ಕಪಟವಾದ, ವಂಚನೆಯಿಲ್ಲದ. नास्ति उपधिर्यत्र। "रहस्यं साधूनामनुपधि विशुद्धं विजयते" उ० रा० २-२।

**अनुपनीत ಅನುಪನೀತ** (पु०) 1. ಉಪನಯನ ಸಂಸ್ಕಾರವಿಲ್ಲದ ಬಾಲಕ. (वि०) 2. ಹತ್ತಿರಕ್ಕೆ ತರಲ್ಪಡದ.

**अनुपपत्ति ಅನುಪಪತ್ತಿ** (स्त्री०) 1. ಅಸಂಗತಿ, ಹೊಂದಿಕೆಯಿಲ್ಲದಿರುವಿಕೆ. 2. ಯುಕ್ತಿಯಿಲ್ಲದಿರುವಿಕೆ. 3. ಕಷ್ಟ, ತೊಂದರೆ, ದಾರಿದ್ರ್ಯ, ಬಡತನ.

**अनुपपन्न ಅನುಪಪನ್ನ** (वि०) 1. ಉಪಪತ್ತಿಯಿಲ್ಲದ. 2. ಯುಕ್ತಿಯಿಲ್ಲದ, ಉಪಾಯವಿಲ್ಲದ. 3. ಸಂಬಂಧವಿಲ್ಲದ.

**अनुपप्लव ಅನುಪಪ್ಲವ** (वि०) ತೊಂದರೆಯಿಲ್ಲದ, ನಾಶವಿಲ್ಲದ. "श्रुतिभिरप्यनुपप्लवनीतिभिः" याद० ३-८।

**अनुपबाध ಅನುಪಬಾಧ** (वि०) ತೊಂದರೆಯಿಲ್ಲದ, ಪ್ರತಿಬಂಧಕವಿಲ್ಲದ. नास्ति उपबाधा यस्य।

**अनुपम ಅನುಪಮ** (वि०) ಅಸಮಾನವಾದ, ಹೋಲಿಕೆಯಿಲ್ಲದ, ಉತ್ಕೃಷ್ಟವಾದ. नास्ति उपमा सादृश्यं यस्य। स्त्रियाम्। —मा —ಮಾ.

**अनुपमा ಅನುಪಮಾ** (स्त्री०) ಒಂದು ಹೆಣ್ಣಾನೆ, ಕುಮುದವೆಂಬ ದಿಗ್ಗಜದ ಪತ್ನಿ.

**अनुपमेय ಅನುಪಮೇಯ** (वि०) ಹೋಲಿಕೆಯಿಲ್ಲದ, ಅಪ್ರತಿಮ, ಅದ್ವಿತೀಯ. न उपमीयतेऽसौ — उप+माङ् (माने) "यत्" (३-१-९७)।

**अनुपयुक्त ಅನುಪಯುಕ್ತ** (वि०) 1. ಉಪಯೋಗಿಸಲ್ಪಡದ, ಅನುಭವಿಸಲ್ಪಡದ. 2. ಯೋಗ್ಯವಲ್ಲದ. 3. ಉಪಯೋಗವಿಲ್ಲದ, ಪ್ರಯೋಜನವಿಲ್ಲದ.

**अनुपयोग ಅನುಪಯೋಗ** (पु०) 1. ಪ್ರಯೋಜನವಿಲ್ಲದಿರುವಿಕೆ, ಅನುಕೂಲ್ಯವಿಲ್ಲದಿರುವಿಕೆ. (वि०)2. ಅನುಕೂಲ್ಯವಿಲ್ಲದ, ಪ್ರಯೋಜನವಿಲ್ಲದ, ಯೋಗ್ಯವಲ್ಲದ.

**अनुपरत ಅನುಪರತ** (वि०) 1. ಮರಣಹೊಂದದ. 2. ವಿರಾಮವಿಲ್ಲದ, ವಿಶ್ರಾಂತಿಯಿಲ್ಲದ, ಬಿಡುವಿಲ್ಲದ. 3. ನಿವೃತ್ತಿಯಿಲ್ಲದ, ವಿಷಯಾಭಿಲಾಷೆಯಿಂದ ಹಿಂತಿರುಗದ. 4. ಮುಗಿಯದ, ಸಮಾಪ್ತಿಹೊಂದದ.

**अनुपलक्षित ಅನುಪಲಕ್ಷಿತ** (वि०)1. ಚೆನ್ನಾಗಿ ತಿಳಿಯಲ್ಪಡದ. 2. ಊಹಿಸಲ್ಪಡದ. 3. ನೋಡಲ್ಪಡದ. न० त०।

**अनुपलब्ध ಅನುಪಲಬ್ಧ** (वि०) 1. ಲಕ್ಷಿಸಲ್ಪಡದ, ಇಂದ್ರಿಯದಿಂದ ತಿಳಿಯಲ್ಪಡದ. 2. ಹೊಂದಲ್ಪಡದ. न उपलब्धः।

**अनुपलब्धि ಅನುಪಲಬ್ಧಿ** (स्त्री०) 1. ಪಡೆಯದಿರುವಿಕೆ, ಹೊಂದದಿರುವಿಕೆ. 2. ಪ್ರತ್ಯಕ್ಷವಾಗಿ ಕಾಣದಿರುವಿಕೆ, ಇಂದ್ರಿಯಗಳಿಂದ ಗ್ರಹಿಸದಿರುವಿಕೆ. न उपलब्धिः। अभावे न० त०। 3. ಅಭಾವವನ್ನು ತಿಳಿಸುವ (ಮೀಮಾಂಸಕರ) ಒಂದು ಪ್ರಮಾಣ.

**अनुपवीत ಅನುಪವೀತ** (पु०) 1. ಉಪನಯನವಿಲ್ಲದ ಬಾಲಕ. (वि०) 2. ಯಜ್ಞೋಪವೀತವಿಲ್ಲದ. न उपवीतं यस्य।

**अनुपशम ಅನುಪಶಮ** (पु०) 1. ಶಾಂತಿಯಿಲ್ಲದಿರುವಿಕೆ. 2. ವಿಷಯಾಭಿಲಾಷೆಯಿಂದ ನಿವೃತ್ತಿಯಿಲ್ಲದಿರುವಿಕೆ. न उपशमः शान्तिः निवृत्तिर्वा। न० त०।

**अनुपसेचन ಅನುಪಸೇಚನ** (न०) ಮೊಸರು ಸಂಬಾರ ಹುಳಿ ಮೊದಲಾದುವುಗಳೊಡನೆ ಬೆರಸದ ಅನ್ನ, ಯಾವ ವ್ಯಂಜನವೂ ಇಲ್ಲದ ಅನ್ನ. नास्ति उपसेचनं व्यञ्जनं यस्य।

**अनुपस्कार ಅನುಪಸ್ಕಾರ** (पु०) ಅಧ್ಯಾಹಾರದೋಷವಿಲ್ಲದೆ ಇರುವಿಕೆ, ಪದಗಳ ಲೋಪವಿಲ್ಲದಿರುವಿಕೆ. "साकाङ्क्षमनुपस्कारम्" किरा० ११-३८।

**अनुपस्कृत** ಅನುಪಸ್ಕೃತ (वि०) 1. ಬೇಯಿಸಲ್ಪಡದ. 2. ಒಗ್ಗರಿಸಲ್ಪಡದ. 3. ವಿಕಾರಹೊಂದದ, ಚೊಕ್ಕ, ಶುದ್ಧವಾದ, ಪರಿಷ್ಕರಿಸಲ್ಪಡದ. उप+डु कृञ् (करणे) "क्तः" (३-२-१०२)। सुट् (६-१-१३९)। न० त०। 4. ಪ್ರತ್ಯಕ್ಷಪ್ರಯೋಜನವನ್ನು ಅಪೇಕ್ಷಿಸದೆ. "ब्राह्मणार्थे गवार्थे वा देहत्यागोऽनुपस्कृतः" मनु० १०-६२।

**अनुपस्थान** ಅನುಪಸ್ಥಾನ (न०) 1. ಅಭಾವ, ಇಲ್ಲದಿರುವಿಕೆ, ಗೈರುಹಾಜರಿ, ಬರದಿರುವಿಕೆ. (वि०) 2. ಹಾಜರಾಗಿಲ್ಲದ.

**अनुपस्थापन** ಅನುಪಸ್ಥಾಪನ (न०) 1. ಹಾಜರುಪಡಿಸದಿರುವಿಕೆ, ಸಮೀಪಕ್ಕೆ ತರದಿರುವಿಕೆ. 2. ಜ್ಞಾಪಿಸದಿರುವಿಕೆ.

**अनुपस्थापित** ಅನುಪಸ್ಥಾಪಿತ (वि०) 1. ಹಾಜರುಪಡಿಸಲ್ಪಡದ, ತರಲ್ಪಡದಿರುವ, ಎದುರಿಗೆ ತೋರಿಸಲ್ಪಡದ. 2. ಜ್ಞಾಪಿಸಲ್ಪಡದ.

**अनुपस्थित** ಅನುಪಸ್ಥಿತ (वि०) 1. ಹಾಜರಾಗದ, ಬರದಿರುವ, ಸಮೀಪದಲ್ಲಿಲ್ಲದ, ತತ್ಕಾಲದಲ್ಲಿಲ್ಲದ. 2. ಜ್ಞಾಪಕವಿಲ್ಲದ, ನೆನಪಿಲ್ಲದ.

**अनुपस्थिति** ಅನುಪಸ್ಥಿತಿ (स्त्री०) 1. ಗೈರುಹಾಜರಿ, ಬರದಿರುವಿಕೆ, ಸಮೀಪದಲ್ಲಿ ಇಲ್ಲದಿರೋಣ. 2. ನೆನಪಿಲ್ಲದಿರುವಿಕೆ, ಮರವು, ಮರೆಯುವಿಕೆ. न उपस्थितिः। न० त०।

**अनुपहत** ಅನುಪಹತ (न०) 1. ಹೊಸದಾದ ಮತ್ತು ಉಪಯೋಗಿಸದ ಬಟ್ಟೆ. "अनुपहतमतिधवलं दुकूलयुगलम्" काद०। (वि०) 2. ಕೆಡಿಸಲ್ಪಡದ. 3. ಗಾಯ ಮಾಡಲ್ಪಡದ. 4. ಉಪಯೋಗಿಸಲ್ಪಡದ, ಹೊಸದಾದ.

**अनुपात** ಅನುಪಾತ (पु०) 1. ತ್ರೈರಾಶಿಕ [ಗಣಿತ]. अनुरूपः त्रैराशिकेन पातः। 2. ಹಿಂಬಾಲಿಸುವುದು. अनु पश्चात् पातः। "उपवनपवनानुपातदक्षैः" माघ० ७-२७।

**अनुपातक** ಅನುಪಾತಕ (न०) ಬ್ರಹ್ಮಹತ್ಯೆ ಮೊದಲಾದ ಮಹಾಪಾತಕಕ್ಕೆ ಸಮವಾದ ಪಾಪ. अनुपातयति नरकं गमयति – अनु + पत्लृ (गतौ) +णिच् "ण्वुल्" (३-१-१३३)। [ಇಂತಹ ಪಾಪಗಳು 35 ಬಗೆಯಾಗಿ ವಿಷ್ಣುಸ್ಮೃತಿಯಲ್ಲಿ ವಿವರಿಸಲ್ಪಟ್ಟಿವೆ.]

**अनुपातकिन्** ಅನುಪಾತಕಿನ್ (वि०) ಮಹಾಪಾತಕಗಳಿಗೆ ಸಮನಾದ ಪಾಪವುಳ್ಳ. अनुपातकमस्त्यस्य "इनिः" (५-२-११५)।

**अनुपातिन्** ಅನುಪಾತಿನ್ (वि०) ಅನುಸರಿಸಿ ಬರುವ, ಹಿಂಬಾಲಿಸುವ. अनुपतति – अनु + पत्लृ (गतौ) "णिनिः" (३-२-७८)।

**अनुपान** ಅನುಪಾನ (न०) 1. ಔಷಧದ ಜೊತೆಯಲ್ಲಿ ಅಥವಾ ಔಷಧ ಸೇವಿಸಿದ ಮೇಲೆ ಕುಡಿಯುವ ಪಾನೀಯ(ನೀರು, ಹಾಲು ಮೊದಲಾದುದು). अनु सह पश्चाद्वा पीयते – अनु+पा (पाने) "ल्युट्" (३-३-११३)। (अव्य०) 2. ನೀರಿನ ಸಮೀಪದಲ್ಲಿ. पानस्य जलस्य समीपे। सामीप्येऽव्ययी०।

**अनुपानीय** ಅನುಪಾನೀಯ (न०) ಔಷಧದ ಜೊತೆಯಲ್ಲಿ ಅಥವಾ ಸೇವಿಸಿದ ಮೇಲೆ ಕುಡಿಯುವ ನೀರು, ಹಾಲು ಮೊದಲಾದುದು.

**अनुपालयत्** ಅನುಪಾಲಯತ್ (वि०) ಉಪೇಕ್ಷಿಸುವ, ಉದಾಸೀನತೆಯಿಂದ ಕಾಣುವ. "अनुपालयतामुदेष्यतीं प्रभुशक्तिं द्विषतामनीहया" किरा० २-१०।

**अनुपूर्व** ಅನುಪೂರ್ವ (वि०) 1. ಕ್ರಮವಾಗಿ ಬಂದ, ಕ್ರಮವನ್ನು ಅನುಸರಿಸಿದ. 2. ಮುಂದೆ ಇರುವವನನ್ನು ಹಿಂಬಾಲಿಸಿ ಬಂದ. अनुगतः क्रमं पूर्वं वा। "वृत्तानुपूर्वे च न चातिदीर्घे" कुमा० १-३५।

**अनुपूर्वशस्** ಅನುಪೂರ್ವಶಸ್ (अव्य०) ಕ್ರಮವಾಗಿ, ಒಂದಾದ ಮೇಲೆ ಒಂದಾಗಿ, ಒಬ್ಬರ ಹಿಂದೆ ಒಬ್ಬರಾಗಿ, ವರಸೆಯಾಗಿ. अनुपूर्व "शस्" (५-४-४३)।

**अनुपेत** ಅನುಪೇತ (वि०) 1. ಅನುಪನೀತ, ಉಪನಯನವಿಲ್ಲದವನು, ವಿದ್ಯಾಭ್ಯಾಸಕ್ಕಾಗಿ ಗುರುಗಳ ಸಮೀಪಕ್ಕೆ ಹೋಗದಿರುವ. 2. ಸಮೀಪಕ್ಕೆ ಹೋಗದಿರುವ.

**अनुप्त** ಅನುಪ್ತ (वि०) 1. ಬಿತ್ತಲ್ಪಡದ (ಬೀಜ). 2. ಬಿತ್ತನೆಯಾಗದಿರುವ (ನೆಲ).

**अनुप्रदान** ಅನುಪ್ರದಾನ (न०) 1. ದಾನ, ಕಾಣಿಕೆ. 2. ಧ್ವನಿಗಳನ್ನು ಹೊರಡಿಸುವ ಬಾಹ್ಯಪ್ರಯತ್ನ. अनुप्रदीयतेऽनेन–अनु+प्र+दाञ् (दाने) करं० "ल्युट्" (३-३-११७)। "खयां यमाः खय्ᳲक᳴पौ विसर्गः शर एव च। एते श्वासानुप्रदाना अघोषाश्च विवृण्वते" सि० कौ०।

**अनुप्रवचन** ಅನುಪ್ರವಚನ (न०) ಗುರುವು ಹೇಳಿಕೊಟ್ಟಂತೆ ಹೇಳುವುದು, ಗುರುವಿನ ಉಚ್ಚಾರಣೆಯನ್ನು ಅನುಸರಿಸಿ ಹೇಳುವುದು. अनुरूपं प्रवचनम्, अनु पश्चाद्वा प्रवचनम्।

**अनुप्रवचनीय ಅನುಪ್ರವಚನೀಯ** (ಪುಂ) ಉಪದೇಶಿಸಲ್ಪಡುವ ಮಂತ್ರದ ಸಿದ್ಧಿಗಾಗಿ ಅದರ ಅಂಗವಾಗಿ ಶಿಷ್ಯನಿಗೆ ಮಾಡುವ ಒಂದು ಸಂಸ್ಕಾರ. अनुप्रवचनं प्रयोजनमस्य "छः" (५-१-१११)।

**अनुप्रवेश ಅನುಪ್ರವೇಶ** (ಪುಂ) 1. ಒಳಗೆ ಪ್ರವೇಶಿಸುವುದು. अनु+प्र+विश (प्रवेशने) "घञ्" (३-३-१८)। "पुपोष वृद्धि हरिदश्वदीधितेरनुप्रवेशादिव बालचन्द्रमाः" रघु० ३-२२। 2. ಅನುಸರಿಸುವುದು, ಹೊಂದಿಕೊಳ್ಳುವುದು, ಸೇರಿಕೊಳ್ಳುವುದು. "भजते विदेशमधिकेन जितस्तदनुप्रवेशमथ वा कुशलः" माघ० ९-४८।

**अनुप्रश्न ಅನುಪ್ರಶ್ನ** (ಪುಂ) ಅನಂತರದ ಪ್ರಶ್ನೆ, ಹಿಂದಿನ ವಿಷಯವನ್ನು ಅನುಸರಿಸಿದ ಪ್ರಶ್ನೆ, ಹಿಂದೆ ಹೇಳಿದ್ದಕ್ಕೆ ಸಂಬಂಧಿಸಿದ ಕೇಳಿಕೆ.

**अनुप्रसक्ति ಅನುಪ್ರಸಕ್ತಿ** (ಸ್ತ್ರೀಂ) ಬಹಳ ಸಮೀಪ ಸಂಬಂಧ, ವಿಷಯಕ್ಕೆ ಹೊಂದಿಕೆಯಾಗುವ ಯುಕ್ತಿಯುತವಾದ ಸಂಬಂಧ.

**अनुप्रास ಅನುಪ್ರಾಸ** (ಪುಂ) ಒಂದು ಶಬ್ದಾಲಂಕಾರ, ರಸಾದಿಗಳಿಗೆ ಅನುಕೂಲವಾದ ಸಜಾತೀಯ ವರ್ಣಗಳ ಆವೃತ್ತಿ, ಒಂದೇ ಜಾತಿಯ ಅಕ್ಷರಗಳನ್ನು ಮತ್ತೆ ಮತ್ತೆ ಉಪಯೋಗಿಸುವುದು. अनुगतः रसाद्यनुगुणः प्रकृष्टः आसः समवर्णोच्चारणम्। "अनुप्रासः शब्दसाम्यं वैषम्येऽपि स्वरस्य यत्" सा० द० १०-३। [ಅನುಪ್ರಾಸವು ಛೇಕಾನುಪ್ರಾಸ, ವೃತ್ತ್ಯನುಪ್ರಾಸ, ಶ್ರುತ್ಯನುಪ್ರಾಸ, ಅಂತ್ಯಾನುಪ್ರಾಸ ಮತ್ತು ಲಾಟಾನುಪ್ರಾಸಗಳೆಂದು ಐದು ವಿಧ.] ಉದಾ: "आदाय बकुलगन्धानन्धीकुर्वन्पदे पदे भ्रमरान्। अयमेति मन्दमन्दं कावेरीवारिपावनः पवनः" सा० द०। [ವಿವರಕ್ಕೆ ಆಯಾ "अनुप्रास" ಪದಗಳಲ್ಲಿ ನೋಡಿ.]

**अनुप्लव ಅನುಪ್ಲವ** (ಪುಂ) 1. ಸಂಗಡಿಗ, ಜೊತೆಗಾರ, ಸಹಾಯಕ. 2. ಸೇವಕ, ಆಳು. अनु पश्चात् प्लवते प्लुङ् (गतौ) "अच्" (३-१-१३४)। "सानुप्लवः प्रभुरपि क्षणदाचराणाम्" रघु० १३-७५।

**अनुबद्ध ಅನುಬದ್ಧ** (ವಿಂ) 1. ಸಂಬಂಧಿಸಿದ, ಸೇರಿರುವ. 2. ಅವಿಚ್ಛಿನ್ನವಾಗಿ ಮುಂದುವರೆದ, ಅನುವರ್ತಿಸಿರುವ. "नित्यानुबद्धकुलवैरः" वेणी० १।

**अनुबध्यमान ಅನುಬಧ್ಯಮಾನ** (ವಿಂ) ಪ್ರಾರ್ಥಿಸಲ್ಪಡುವ, ಬೇಡಲ್ಪಡುವ, ಯಾಚಿಸಲ್ಪಡುವ. अनु+बन्ध (बन्धने)+यक् "शानच्" (३-२-१२४)। "तया चानुबध्यमानस्तां वकुलमालामात्मनः कण्ठादवतार्य दत्तवान्" मालती० १।

**अनुबन्ध ಅನುಬಂಧ** (ಪುಂ) 1. ಸಂಬಂಧ, ಹೊಂದಿಕೆ. अनुबध्यते—अनु+बन्ध (बन्धने) "घञ्" (३-३-१८)। "यस्यां मनश्चक्षुषोरनुबन्धस्तस्यामृद्धिः" मालती० २। 2. ಎಡಬಿಡದ ಸಂಬಂಧ. "सानुबन्धाः कथं न स्युः संपदो मे निरापदः" रघु० १-६४। 3. ಗ್ರಂಥದ ಆರಂಭದಲ್ಲಿ ಹೇಳುವ ಅಧಿಕಾರಿ, ವಿಷಯ, ಸಂಬಂಧ ಮತ್ತು ಪ್ರಯೋಜನಗಳೆಂಬ ಅನುಬಂಧ ಚತುಷ್ಟಯ. अनुबध्यतेऽनेन—अनु+बन्ध (बन्धने) कर० "घञ्" (३-३-१२१)। 4. ಮುಂದೆ ಉಂಟಾಗುವ ಶುಭ ಮತ್ತು ಅಶುಭ ಫಲಗಳು. अनुबध्यते अनुरुध्यते—अनु+बन्ध कर्म० "घञ्"(३-३-१९)। "अनुबन्धमजानन्तः कर्मणामविचालिताः" रामा०। 5. "इत्" ಸಂಜ್ಞೆಯುಳ್ಳ ವರ್ಣ. गम्लृ, पत्लृ, यण् ಇತ್ಯಾದಿಗಳಲ್ಲಿ ऌ ಮತ್ತು ण् ಇತ್ಯಾದಿ ವರ್ಣಗಳು ಅನುಬಂಧಗಳು. "रिपुराप पराभवाय मध्यं प्रकृतिप्रत्यययोरिवानुबन्धः" किरा० १३-१९। 6. ದೋಷೋತ್ಪಾದನ, ದೋಷವನ್ನುಂಟುಮಾಡುವುದು. 7. ಮುಖ್ಯವಾದ ವಿಷಯದೊಡನೆ ಹೊಂದಿಕೊಂಡು ಬರುವ ಅಪ್ರಧಾನ ವಿಷಯ. 8. ಕಾರಣ, ಉದ್ದೇಶ, ಅಭಿಪ್ರಾಯ. "अनुबन्धं परिज्ञाय देशकालौ च तत्वतः। सत्वापराधौ चालोक्य दण्डं दण्डयेषु पातयेत्" मनु० ८-१२६। 9. ಅನುಸರಣ, ಅನುಸರಿಸಿ ಬರುವಿಕೆ. "शान्तज्वरोऽपि शोध्यः स्यादनुबन्धभयान्नरः" सुश्रुत०। 10. ತಾಯಿ ತಂದೆಗಳ ನಡತೆಯನ್ನು ಅನುಸರಿಸುವವನು. 11. ಆರಂಭ, ಉಪಕ್ರಮ. 12. ಮಾತಪಿತ್ರಾದಿ ದೋಷಗಳ ಅಪ್ರಾಧಾನ್ಯ. 13. ಶಿಶು. 14. ಲೇಶ, ಚೂರು, ಸ್ವಲ್ಪ. "अनुबन्धः शिशौ दोषोत्पादे मुख्यानुयायिनि। विनश्वरे प्रकृत्यादौ प्रवृत्तस्यानुवर्तने" मेदि०।

**अनुबन्धन ಅನುಬಂಧನ** (ನಂ) ಸಂಬಂಧ, ಪರಂಪರೆ, ವಂಶ. अनु+बन्ध (बन्धने) "ल्युट्" (३-३-११५)।

**अनुबन्धिन् ಅನುಬಂಧಿನ್** (ವಿಂ) 1. ಸಂಬಂಧವುಳ್ಳ. 2. ಹಿಂಬಾಲಿಸುವ. 3. ಜೊತೆಗಾರ, ಸಂಗಡಿಗ. अनु+बन्ध (बन्धने) "णिनिः" (३-२-७८)। स्त्रियाम् "ङीप्" (४-१-५)। —बन्धिनी—ಬಂಧಿನೀ. "अनयोः सरसरमणीयानुबन्धिनी स्त्रीजनकथा" मालती० १।

4. ಮಿಶ್ರವಾದ, ಬೆರೆತಿರುವ. "नीलकण्ठकलकेकानुबन्धिना मन्द्रहुंकृतेन मामनुमन्यते" मालती० ९। 5. ಸಮೃದ್ಧಿ ಹೊಂದುವ, ಏಳಿಗೆಹೊಂದುವ, ಎಡಬಿಡದೆ ಬೆಳೆಯುವ. "प्रवालमासामनुबन्धि वीरुधाम्" कुमा० ५-३४।

**अनुबन्धी** ಅನುಬಂಧೀ (स्त्री०) 1. ತೃಷ್ಣೆ, ಆಸೆ. 2. ಬಿಕ್ಕಳಿಕೆ. अनुबध्यते अतिश्वासेन व्याप्रियतेऽनया — अनु+बन्ध (बन्धने) करे० "घञ्" (३-३-१२१)। गौरा० "ङीष्" (४-१-४१)। "अनुबन्धी तृषा हिक्का" हेम०।

**अनुबन्ध्य** ಅನುಬಂಧ್ಯ (वि०) ಕೊಲ್ಲಲು ಬಂಧಿಸಲ್ಪಟ್ಟ. अनु+बन्ध (बन्धने) "ण्यत्" (३-१-१२४)। "गौरनुबन्ध्यः" काव्यप्र०।

**अनुबल** ಅನುಬಲ (न०) ಹಿಂಗಾವಲು ಸೈನ್ಯ, ಸಹಾಯಕ ಸೈನ್ಯ. अनु पश्चात् स्थितं बलम्।

**अनुबोध** ಅನುಬೋಧ (पु०) 1. ಪುನರಾಲೋಚನೆ, ಕಾರ್ಯವಾದನಂತರ ಮತ್ತೆ ಯೋಚಿಸುವುದು, ಸ್ಮರಣೆ, ನೆನಪು. 2. ವಾಸನೆಯು ಕಡಿಮೆಯಾದ ಚಂದನ ಮೊದಲಾದುವಕ್ಕೆ ಪುನಃ ವಾಸನೆ ಕಟ್ಟುವುದು, ಸುಗಂಧ ದ್ರವ್ಯಗಳಿಂದ ಮತ್ತೆ ವಾಸನೆಯನ್ನುಂಟುಮಾಡುವುದು. अनु+बुध (अवगमने) भावे "घञ्" (३-३-१८)।

**अनुभव** ಅನುಭವ (पु०) 1. ಬುದ್ಧಿ, ಜ್ಞಾನ, ತಿಳಿವಳಿಕೆ. अनु+भू (सत्तायाम्) "अप्" (३-३-५७)। [ಎಲ್ಲಾ ನಡವಳಿಕೆಗಳಿಗೂ ಕಾರಣವಾದ ತಿಳಿವಳಿಕೆಯೇ (ಜ್ಞಾನವೇ) ಬುದ್ಧಿಯೆನಿಸುವುದು. ಆ ಬುದ್ಧಿಯು ಸ್ಮೃತಿ ಮತ್ತು ಅನುಭವಗಳೆಂದು ಎರಡು ವಿಧ. ಅನುಭವವು ಯಥಾರ್ಥಾನುಭವ ಮತ್ತು ಅಯಥಾರ್ಥಾನುಭವಗಳೆಂದು ಎರಡು ವಿಧ. ಆ ಯಥಾರ್ಥಾನುಭವವೂ ಪ್ರತ್ಯಕ್ಷ, ಅನುಮಿತಿ, ಉಪಮಿತಿ ಮತ್ತು ಶಾಬ್ದಗಳೆಂದು ನಾಲ್ಕು ವಿಧ. ನೈಯಾಯಿಕರು ಈ ನಾಲ್ಕು ವಿಧ ಜ್ಞಾನವನ್ನೂ ಅಂಗೀಕರಿಸಿರುತ್ತಾರೆ. संस्कारजन्यं ज्ञानं स्मृतिः। तद्भिन्नं ज्ञानमनुभवः। ಇತ್ಯಾದಿ ತಂ ಸಂ। ವೇದಾಂತಿಗಳೂ ಮೀಮಾಂಸಕರೂ ಈ ನಾಲ್ಕರ ಜೊತೆಗೆ ಅರ್ಥಾಪತ್ತಿ ಮತ್ತು ಅನುಪಲಬ್ಧಿಗಳೆಂದು ಹೆಚ್ಚಾಗಿ ಎರಡನ್ನು ಸೇರಿಸಿರುತ್ತಾರೆ. ಆಲಂಕಾರಿಕರು ಮತ್ತು ಪೌರಾಣಿಕರು ಈ ಆರರ ಜೊತೆಗೆ ಸಂಭವ ಮತ್ತು ಐತಿಹ್ಯಗಳೆಂಬ ಪ್ರಮಾಣಗಳನ್ನು ಅಂಗೀಕರಿಸಿರುತ್ತಾರೆ. ವೈಶೇಷಿಕರೂ ಬೌದ್ಧರೂ ಪ್ರತ್ಯಕ್ಷ ಮತ್ತು ಅನುಮಿತಿಗಳನ್ನು ಮಾತ್ರ ಒಪ್ಪುತ್ತಾರೆ. ಚಾರ್ವಾಕರು ಪ್ರತ್ಯಕ್ಷವನ್ನು ಮಾತ್ರ ಒಪ್ಪುತ್ತಾರೆ. ಸಾಂಖ್ಯರು ಪ್ರತ್ಯಕ್ಷ, ಅನುಮಾನ ಮತ್ತು ಶಾಬ್ದ ಪ್ರಮಾಣಗಳನ್ನು ಮಾತ್ರ ಅಂಗೀಕರಿಸುತ್ತಾರೆ.] 2. ಮನಗಂಡದ್ದು, ಮನವರಿಕೆಮಾಡುದು, ಮನಸ್ಸಿಗೆ ಚೆನ್ನಾಗಿ ತಿಳಿದಿರುವುದು. "अनुभवं वचसा सखि लुम्पसि" नैष० ४-१०५। 3. ಅಭಿಪ್ರಾಯ, ತಿಳಿವಳಿಕೆ. 4 ಪ್ರಯತ್ನದ ಫಲ, ಪರಿಣಾಮ.

**अनुभाव** ಅನುಭಾವ (पु०) 1. ಪ್ರಭಾವ, ಮಹಿಮೆ. अनुभावयति — अनु+भू (सत्तायाम्)+णिच् "अच्" (३-१-१३४)। "तवानुभावोऽयमवेदि यन्मया निगूढतत्त्वं नयवर्त्म विद्विषाम्" किरा० १-६। 2. ರಾಜನ ತೇಜಸ್ಸು, ಬೊಕ್ಕಸ ಮತ್ತು ದಂಡಿಸುವ ಅಧಿಕಾರ ಪ್ರಯುಕ್ತವಾದ ತೇಜಸ್ಸು. "अनुभावविशेषात्तु सेनापरिवृताविव" रघु० १-३७। 3. ಅಲಂಕಾರ ಶಾಸ್ತ್ರದಲ್ಲಿ ಹೇಳಿರುವ ರಸಸೂಚಕವಾದ ಮತ್ತು ಮನಸ್ಸಿನ ಅಭಿಪ್ರಾಯವನ್ನು ತಿಳಿಯಪಡಿಸುವ ದೃಷ್ಟಿ, ಭ್ರೂಭಂಗ ಇತ್ಯಾದಿ ಚೇಷ್ಟೆ. "भावं मनोगतं साक्षात् स्वगतं व्यञ्जयन्ति ये। तेऽनुभावा इति ख्याताः"। 4. ಹಿರಿಯರ ಬುದ್ಧಿನಿಶ್ಚಯ, ವೃದ್ಧರ ದೃಢಸಂಕಲ್ಪ. "अनुभाववता गुरुस्थिरत्वात्" किरा० १३-१५। "अनुभावः प्रभावे स्यान्निश्चये भावसूचने" मेदि०।

**अनुभावक** ಅನುಭಾವಕ (वि०) ತಿಳಿಯಪಡಿಸುವ, ಬೋಧಿಸುವ. अनुभावयति बोधयति — अनु + भू (सत्तायाम्)+णिच् "ण्वुल्" (३-१-१३३)।

**अनुभावन** ಅನುಭಾವನ (न०) ಅಭಿನಯ, ಅನುಭವವನ್ನು ಹೊರಪಡಿಸುವಿಕೆ, ಅಭಿಪ್ರಾಯವನ್ನು ತಿಳಿಯಪಡಿಸುವಿಕೆ.

**अनुभाविन्** ಅನುಭಾವಿನ್ (वि०) 1. ಮನೋಗತವನ್ನು ಚೇಷ್ಟೆಗಳಿಂದ ತಿಳಿಯಪಡಿಸುವ. 2. ಸಾಕ್ಷಾತ್ಕಾರವನ್ನುಂಟುಮಾಡುವ. अनुभावयति — अनु + भू (सत्तायाम्)+णिच् "णिनिः" (३-२-७८)। 3. ಕನಿಷ್ಠ, ಕಿರಿಯನು. अनु पश्चात् भवति। 4. ಪ್ರಭಾವಶಾಲಿ, ಮಹಿಮೆಯುಳ್ಳ. 5. ದೃಢಸಂಕಲ್ಪವುಳ್ಳ. अनुभावोऽस्यास्ति "इनिः" (५-२-११५)। 6. ಸಾಕ್ಷಿ, ಎದುರಿಗೆ ನೋಡಿದವನು. अनुभवति — अनु+भू "णिनिः" (३-१-१३४)। "अनुभावी तु यः कश्चित् कुर्यात्साक्ष्यं विवादिनाम्" मनु० ८-६९।

**अनुभाषण ಅನುಭಾಷಣ** (न०) ಬಳಿಕ ಮಾತನಾಡುವುದು, ಒಬ್ಬರ ಭಾಷಣಾನಂತರ ಭಾಷಣಮಾಡುವುದು. अनु पश्चात् भाषणम्।

**अनुभू ಅನುಭೂ** (स्त्री०) 1. ಅನುಭವ, ಜ್ಞಾನ, ತಿಳಿವಳಿಕೆ. अनु+भू (सत्तायाम्) "क्विप्" (वा० ३-३-९४)। (वि०) 2. ಅನುಭವವುಳ್ಳ, ತಿಳಿವಳಿಕೆಯುಳ್ಳ. कर्त० "क्विप्" (३-२-७६)।

**अनुभूत ಅನುಭೂತ** (वि०) 1. ಅನಂತರ ಹುಟ್ಟಿದ. अनु + भू (सत्तायाम्) "क्तः" (३-४-७२)। 2. ಅನುಭವಿಸಲ್ಪಟ್ಟ, ತಿಳಿಯಲ್ಪಟ್ಟ. कर्म० "क्तः" (३-२-१०२)।

**अनुभूति ಅನುಭೂತಿ** (स्त्री०) ಅನುಭವ, ಜ್ಞಾನ, ತಿಳಿವಳಿಕೆ. अनु + भू (सत्तायाम्) "क्तिन्" (३-३-९४)। [ವಿವರಕ್ಕೆ "अनुभव" ಪದದಲ್ಲಿ ನೋಡಿ.]

**अनुमत ಅನುಮತ** (वि०) 1. ಒಪ್ಪಲ್ಪಟ್ಟ, ಸಮ್ಮತಿಸಲ್ಪಟ್ಟ, ಅನುಮೋದಿಸಲ್ಪಟ್ಟ. अनु+मन (ज्ञाने) "क्तः" (३-२-१०२)। "सम्यग्विनीयानुमतो गृहाय" रघु ५-१०। 2. ಅಪ್ಪಣೆಮಾಡಲ್ಪಟ್ಟ. "मखेष्वखिन्नोऽनुमतः पुरोधसा" किरा० १-२२।

**अनुमति ಅನುಮತಿ** (स्त्री०) 1. ಒಪ್ಪಿಗೆ, ಸಮ್ಮತಿ, ಅನುಮೋದನೆ. 2. ಅಪ್ಪಣೆ, ಆಜ್ಞೆ. अनु+मन (ज्ञाने) "क्तिन्" (३-३-९४)। "अनुमत्या मुनिमुख्यसंमते च" याद० १५-९५। 3. (ಒಂದು ಕಲೆಯು ಕಡಿಮೆಯಾದ ಚಂದ್ರನುಳ್ಳ) ಶುಕ್ಲ ಚತುರ್ದಶಿಯಿಂದ ಕೂಡಿದ ಪೂರ್ಣಿಮಾ ತಿಥಿ. अनुमन्यते कलाहीनत्वेऽपि पूर्णिमाविहितयागादिकरणाय अनुज्ञायतेऽस्याम् — अनु+मन (ज्ञाने) "क्तिच्" (३-३-१७४)।

**अनुमतिपत्र ಅನುಮತಿಪತ್ರ** (न०) ಅನುಮೋದನೆಯ ಕಾಗದ, ಒಪ್ಪಿತದ ಕಾಗದ, ಕರಾರುಪತ್ರ.

**अनुमनन ಅನುಮನನ** (न०) ಅನುಮೋದನೆ, ಸಮ್ಮತಿ, ಒಪ್ಪಿಗೆ.

**अनुमन्तृ ಅನುಮಂತೃ** (वि०) 1. ಅನುಮೋದಿಸುವ, ಸಮ್ಮತಿಸುವ, ಒಪ್ಪಿಗೆಯೀಯುವ. 2. ಅಪ್ಪಣೆಮಾಡುವ. अनु+मन (ज्ञाने) "तृच्"। स्त्रियाम् "ङीप्" (४-१-५)। —मन्त्री—ಮಂತ್ರೀ.

**अनुमन्त्रण ಅನುಮಂತ್ರಣ** (न०) ಮಂತ್ರೋಚ್ಚಾರಣಪೂರ್ವಕವಾದ ಸಂಸ್ಕಾರ.

**अनुमरण ಅನುಮರಣ** (न०) 1. ಪತಿಯು ದೇಶಾಂತರದಲ್ಲಿ ಮೃತಿಹೊಂದಿದ ವಾರ್ತೆಯನ್ನು ಕೇಳಿ ಪತ್ನಿಯು ಆತನ ಪಾದುಕೆಗಳೊಡನೆ ಸೇರಿ ಪ್ರಾಣತ್ಯಾಗಮಾಡುವುದು. [ಇಂತಹ ಮರಣ ಕ್ಷತ್ರಿಯರಿಗೆ ಮಾತ್ರ. ಬ್ರಾಹ್ಮಣರಿಗೆ ಸಹಗಮನದ ವಿಧಿಯಿರುವುದು.] 2. ಸಹಗಮನ, ಪತಿಯ ಜೊತೆಯಲ್ಲಿ ಅಗ್ನಿಸಂಸ್ಕಾರ ಹೊಂದುವುದು.

**अनुमा ಅನುಮಾ** (स्त्री०) ಅನುಮಾನ, ತರ್ಕ, ಪರಾಮರ್ಶದಿಂದ ಉಂಟಾಗುವ ಜ್ಞಾನ, ಊಹೆ. अनु + माङ् (माने) "अङ्" (३-३-१०६)। [ಪ್ರತ್ಯಕ್ಷಾದಿ ನಾಲ್ಕು ಜ್ಞಾನಗಳಲ್ಲೊಂದು. ವಿವರಕ್ಕೆ "अनुमिति" ಪದದಲ್ಲಿ ನೋಡಿ.]

**अनुमातृ ಅನುಮಾತೃ** (वि०) ತರ್ಕಿಸುವ, ಊಹಿಸುವ. अनु+माङ् (माने) "तृच्" (३-१-१३३)। "न हि करिणि दृष्टे चीत्कारेण तमनुमिमतेऽनुमातारः"।

**अनुमान ಅನುಮಾನ** (न०) 1. ಅನುಮಿತಿಗೆ ಕಾರಣ, ಊಹೆಗೆ ಕಾರಣ, ವ್ಯಾಪ್ಯವಸ್ತುವೊಂದರ ಜ್ಞಾನದಿಂದ ವ್ಯಾಪಕವಸ್ತುವಿದೆಯೆಂಬ ನಿಶ್ಚಯ. अनु+माङ् (माने) "ल्युट्" (३-३-११७)। [ವ್ಯಾಪ್ಯವಾದ ಧೂಮ ವ್ಯಾಪಕವಾದ ವಹ್ನಿ (ಬೆಂಕಿ) ಇವೆರಡನ್ನೂ ಮಹಾನಸದಲ್ಲಿ ನೋಡಿದವನಿಗೆ ಪರ್ವತಾದಿಗಳಲ್ಲೂ ಧೂಮದರ್ಶನದಿಂದ "वह्निमान् पर्वतः धूमात्" ಎಂಬ ನಿಶ್ಚಯವುಂಟಾಗುವುದು. ಇದು ಪ್ರತ್ಯಕ್ಷಾದಿ ನಾಲ್ಕು ವಿಧಗಳಲ್ಲೊಂದಾದ ಅನುಮಿತಿ ಜ್ಞಾನವುಂಟಾಗಲು ಕಾರಣ.] 2. ತರ್ಕ, ಊಹೆ. भावे "ल्युट्" (३-३-११५)। 3. ಅನುಮಿತಿ ಜ್ಞಾನಕ್ಕೆ ಕಾರಣವಾದ ಧೂಮ ಮೊದಲಾದುದು. अनुमीयतेऽनेन — अनु+माङ् कर० "ल्युट्" (३-३-११७)। 4. ಯುಕ್ತಿ. "अनुमानेन न चागमः क्षतः" किरा० २-२८। 5. ಸಾದೃಶ್ಯ, ಸಾಮ್ಯ. "आत्मनो हृदयानुमानेन प्रेक्षसे" शाकु० ५।

**अनुमापक ಅನುಮಾಪಕ** (वि०) ತರ್ಕಕ್ಕೆ ಕಾರಣವಾದ, ಅನುಮಿತಿ ಜ್ಞಾನವನ್ನುಂಟುಮಾಡುವ. अनुमापयति— अनु+माङ् (माने)+णिच् "ण्वुल्" (३-१-१३३)। स्त्रियाम् —मापिका—ಮಾಪಿಕಾ.

**अनुमास ಅನುಮಾಸ** (अव्य०) ಪ್ರತಿಮಾಸದಲ್ಲೂ. वीप्सायामव्ययी०।

**अनुमित ಅನುಮಿತ** (वि०) ಅನುಮಾನಮಾಡಲ್ಪಟ್ಟ, ಊಹಿಸಲ್ಪಟ್ಟ. अनु+माङ् (माने) "क्तः" (३-२-१०२)।

**अनुमिति ಅನುಮಿತಿ** (स्त्री०) ಪರಾಮರ್ಶದಿಂದುಂಟಾಗುವ ಜ್ಞಾನ, ಅನುಭವದ ನಾಲ್ಕು ಭೇದಗಳಲ್ಲೊಂದು. अनु+मा "क्तिन्" (३-३-९४)। "यत्र धूमस्तत्राग्निः" ಎಂಬಲ್ಲಿ ಧೂಮವಿದ್ದ ಕಡೆ ಅಗ್ನಿಯೂ ಇರುವುದೆಂಬ ಇವೆರಡರ ಸಾಹಚರ್ಯಕ್ಕೆ ವ್ಯಾಪ್ತಿಯೆಂದು ಹೆಸರು. ಇಂತಹ ವ್ಯಾಪ್ತಿಯಿಂದ ಕೂಡಿದ ಪಕ್ಷಧರ್ಮತಾ (ಅಗ್ನಿಯನ್ನು ಊಹಿಸಲು ಕಾರಣವಾದ ಧೂಮವು ಪರ್ವತಾದಿಗಳಲ್ಲಿರುವಿಕೆಯು) ಜ್ಞಾನಕ್ಕೆ ಪರಾಮರ್ಶವೆಂದು ಹೆಸರು.

**अनुमित्सा ಅನುಮಿತ್ಸಾ** (स्त्री०) ಊಹಿಸಲು ಅಪೇಕ್ಷೆ. अनुमातुमिच्छा—अनु+माङ् (माने)+सन् भावे "अः" (३-३-१०२)।

**अनुमृत ಅನುಮೃತ** (वि०) ಮೃತಿಹೊಂದಿದ, ದುಃಖದಿಂದ ಮರಣಹೊಂದಿದ.

**अनुमेय ಅನುಮೇಯ** (वि०) 1. ಊಹಿಸಲ್ಪಟ್ಟ. अनुमीयतेऽसौ—अनु+माङ् (माने) कर्म० "यत्" (३-१-९७)। 2. ಊಹಿಸಲು ಯೋಗ್ಯವಾದ. "एतावता नन्वनुमेयशोभि काञ्चीगुणस्थानमनिन्दितायाः" कुमा० १-३७। 3. ಊಹಿಸಲು ಶಕ್ಯವಾದ.

**अनुमोद ಅನುಮೋದ** (पु०) ಒಪ್ಪಿಗೆ, ಸಮ್ಮತಿ. अनु+मुद (हर्षे) "घञ्" (३-३-१८)।

**अनुमोदन ಅನುಮೋದನ** (न०) 1. ಒಪ್ಪಿಗೆ, ಸಮ್ಮತಿ. अनु+मुद (हर्षे) "ल्युट्" (३-३-११५)। "अनुमोदनजालमौलिकम्पैः" याद० १५-७७। (वि०) 2. ಒಪ್ಪುವ, ಸಮ್ಮತಿಸುವ. अनु+मुद "ल्युः" (३-१-१३४)।

**अनुमोदित ಅನುಮೋದಿತ** (वि०) ಒಪ್ಪಲ್ಪಟ್ಟ, ಸಮ್ಮತಿಸಲ್ಪಟ್ಟ. अनु+मुद (हर्षे) "क्तः" (३-२-१०२)। "श्रूयन्ते परिणीतास्ताः पितृभिश्चानुमोदिताः" शाकु० ३-२०।

**अनुयात ಅನುಯಾತ** (वि०) 1. ಹಿಂಬಾಲಿಸಿ ಹೋಗಿರುವ, ಅನುಸರಿಸಿ ಹೋಗಿರುವ. अनु+या (प्रापणे) "क्तः" (३-४-७२)। 2. ಹಿಂಬಾಲಿಸಲ್ಪಟ್ಟ, ಅನುಸರಿಸಲ್ಪಟ್ಟ. अनु+या कर्म० "क्तः" (३-२-१०२)। "आकाशगङ्गारतिरप्सरोभिर्वृतो मरुत्वाननुयातलीलः" रघु० १६-७१।

**अनुयातृ ಅನುಯಾತೃ** (वि०) ಹಿಂಬಾಲಕ, ಹಿಂದೆ ನಡೆಯುವ, ಅನುಸರಿಸಿ ಹೋಗುವ. अनु+या (प्रापणे) "तृच्" (३-१-१३३)।

**अनुयात्र ಅನುಯಾತ್ರ** (पु०) 1. ಭೃತ್ಯವರ್ಗ, ಅನುಯಾಯಿವರ್ಗ, ಪರಿವಾರ. अनुगता यात्रा येन। "त्यक्तभोगस्य मे राजन् वने वन्येन जीवतः। किं कार्यमनुयात्रेण" रामा०। (वि०) 2. ಹಿಂಬಾಲಕ, ಅನುಸರಿಸಿ ನಡೆಯುವ. (अव्य०) 3. ಯಾತ್ರೆಯಲ್ಲಿ. यात्रायाम्—विभ० अव्ययी०। 4. ಯಾತ್ರೆಯ ಅನಂತರದಲ್ಲಿ. यात्रायाः पश्चात्—अव्ययी० (२-१-६)।

**अनुयात्रा ಅನುಯಾತ್ರಾ** (स्त्री०) ಅನಂತರದ ಯಾತ್ರೆ, ಮರುಪ್ರಯಾಣ. अनुगता यात्रा।

**अनुयायिन् ಅನುಯಾಯಿನ್** (पु०) 1. ಸೇವಕ, ಪರಿಜನ, ಹಿಂಬಾಲಕ, ಅನುಚರ. अनु पश्चात् याति गच्छति—अनु+या (प्रापणे) "णिनिः" (३-२-७८)। "न्यषेधि शेषोऽप्यनुयायिवर्गः" रघु० २-४। स्त्रियाम् "ङीप्" (४-१-५)। —यायिनी—ಯಾಯಿನೀ. (वि०) 2. ಸದೃಶ, ಸಮಾನವಾದ. 3. ಅನುಸರಿಸಿ ನಡೆಯುವ, ಹಿಂಬಾಲಿಸಿ ಹೋಗುವ.

**अनुयास्यत् ಅನುಯಾಸ್ಯತ್** (वि०) ಅನುಸರಿಸಿ ಹೋಗಲಿರುವ, ಹಿಂಬಾಲಿಸಲಿರುವ. अनु+या (प्रापणे) लृटः "शतृ" (३-३-१४)। "अनुयास्यन्मुनितनयां सहसा विनयेन वारितप्रसरः" शाकु० १-२५।

**अनुयुक्त ಅನುಯುಕ್ತ** (वि०) ಪ್ರಶ್ನೆ ಮಾಡಲ್ಪಟ್ಟ, ಕೇಳಲ್ಪಟ್ಟ. अनु+युजिर् (योगे) "क्तः" (३-२-१०२)। "वयस्ययाऽभावविदानुयुक्ता" याद० २-१७।

**अनुयोक्तृ ಅನುಯೋಕ್ತೃ** (वि०) 1. ಕೇಳುವವನು, ಪ್ರಶ್ನೆ ಮಾಡುವವನು. 2. ಸಂಬಳ ತೆಗೆದುಕೊಂಡು ಪಾಠಹೇಳುವವನು. अनु+युजिर् (योगे) "तृच्" (३-१-१३३)। स्त्रियाम् "ङीप्" (४-१-५)। —योक्त्री—ಯೋಕ್ತ್ರೀ.

**अनुयोग ಅನುಯೋಗ** (पु०) ಪ್ರಶ್ನೆ, ಕೇಳಿಕೆ. अनु+युजिर् (योगे) "घञ्" (३-३-१८)। "वार्तानुयोगमधुराक्षरया च वाचा" रघु० १३-७१।

**अनुयोगकृत् ಅನುಯೋಗಕೃತ್** (पु०) 1. ಆಚಾರ್ಯ, ಉಪಾಧ್ಯಾಯ, ಪ್ರಶ್ನೆಯ ವಿಷಯದ ಸಂಶಯವನ್ನು ಹೋಗಲಾಡಿಸುವವನು. अनुयोगं प्रश्नविषयसंशयं कृन्तति—कृती (छेदने) "क्विप्" (३-२-७६)। (वि०) 2. ಪ್ರಶ್ನೆಮಾಡುವ, ಕೇಳುವ. अनुयोगं करोति—डु कृञ् (करणे) "क्विप्" (३-२-७६)।

**अनुयोगिन्** ಅನುಯೋಗಿನ್ (वि०) 1. ಪ್ರಶ್ನೆಮಾಡುವವನು. 2. ಸಂಬಂಧವುಳ್ಳ. "भूतलं घटवत्" ಎಂಬಲ್ಲಿ ಘಟವು ಪ್ರತಿಯೋಗಿ. ಭೂತಲವು ಅನುಯೋಗಿ.

**अनुयोजन** ಅನುಯೋಜನ (न०) 1. ಪ್ರಶ್ನೆ, ಕೇಳಿಕೆ. अनु+युजिर् (योगे) "ल्युट्" (३-३-११५)। 2. ಅನಂತರ ಸೇರಿಸುವಿಕೆ. अनु पश्चात् योजनम्।

**अनुयोज्य** ಅನುಯೋಜ್ಯ (वि०) 1. ಸೇವಕ, ವಿಧೇಯ. "वासवानुयोज्यो दुष्यन्तः प्रथमति" शाकु० ७। 2. ಪ್ರಶ್ನಿಸಲು ಯೋಗ್ಯನಾದ.

**अनुरक्त** ಅನುರಕ್ತ (वि०) 1. ಅನುರಾಗದಿಂದ ಕೂಡಿದ, ಪ್ರೀತಿಯಿಂದ ಕೂಡಿದ. "अपि वृषलमनुरक्ताः प्रकृतयः" मुद्रा० १। 2. ಅನುಕೂಲವಾದ. "गुणानुरक्तामनुरक्तसाधनः" किरा० १-३१। 3. ಕೆಂಪಾಗಿರುವ, ಕೆಂಪಾಗಿ ಮಾಡಲ್ಪಟ್ಟ, ಬಣ್ಣ ಹಾಕಲ್ಪಟ್ಟ.

**अनुरक्ति** ಅನುರಕ್ತಿ (स्त्री०) ಅನುರಾಗ, ಪ್ರೀತಿ, ಪ್ರೇಮ. अनु+रञ्ज (रागे) "क्तिन्" (३-३-९४)।

**अनुरञ्जन** ಅನುರಂಜನ (न०) 1. ಸಂತೋಷಪಡಿಸುವಿಕೆ. अनु+रञ्ज (रागे) भावे "ल्युट्" (३-३-११५)। "युक्तः प्रजानामनुरञ्जने स्याः" उ० रा० १-११। (वि०) 2. ಸಂತೋಷಪಡಿಸುವ. कर्त० "ल्युः" (३-१-१३४)।

**अनुरञ्जित** ಅನುರಂಜಿತ (वि०) 1. ಸಂತೋಷಪಡಿಸಲ್ಪಟ್ಟ, ಪ್ರೀತಿ ತೋರಿಸಲ್ಪಟ್ಟ. अनु+रञ्ज (रागे)+णिच् "क्तः" (३-२-१०२)। 2. ಪುನಃ ಬಣ್ಣ ಹಾಕಿಸಲ್ಪಟ್ಟ.

**अनुरणन** ಅನುರಣನ (न०) 1. ಧ್ವನಿ, ಅನುಸರಿಸಿದ ಶಬ್ದ, ಗಂಟೆಯ ಶಬ್ದದಿಂದುಂಟಾದ ನಾದಸಂತಾನ. 2. ವ್ಯಂಜನಾರೂಪವಾದ ಶಬ್ದದ ಒಂದು ಶಕ್ತಿ. अनु+रण (शब्दे) भावे "ल्युट्" (३-३-११५)। 3. ಪ್ರತಿಧ್ವನಿ.

**अनुरत** ಅನುರತ (वि०) ಪ್ರೀತಿಯುಳ್ಳ, ಅನುರಾಗವುಳ್ಳ. अनु+रमु (क्रीडायाम्) "क्तः" (३-४-७२)। "धर्मानुरतमत्यर्थं शान्तं सूनृतभाषिणम्" भा०।

**अनुरति** ಅನುರತಿ (स्त्री०) ಅನುರಾಗ, ಪ್ರೀತಿ. अनु+रमु (क्रीडायाम्) "क्तिन्" (३-३-९४)।

**अनुरस** ಅನುರಸ (पु०) 1. ಪ್ರತಿಧ್ವನಿ, ಎದುರು ಶಬ್ದ. (वि०) 2. ರಸವನ್ನು ಅನುಸರಿಸಿದ. रसमनुगतः।

**अनुरसित** ಅನುರಸಿತ (न०) 1. ಪ್ರತಿಧ್ವನಿ, ಎದುರು ಧ್ವನಿ. (वि०) 2. ಅನುಸರಿಸಿ ಶಬ್ದಮಾಡಲ್ಪಟ್ಟ. "उद्ग्रीवैरनुरसितस्य पुष्करस्य" माल० १-२१।

**अनुराग** ಅನುರಾಗ (पु०) 1. ಪ್ರೀತಿ, ಸ್ನೇಹ. अनु+रञ्ज (रागे) "घञ्" (३-३-१८)। "प्रियानुरागस्य मनःसमुन्नतेः" रघु० ३-१०। 2. ಅರುಣ್ಯ, ಕೆಂಪು. "अनुरागवन्तमपि लोचनयोः" माघ० ९-१०। 3. ಆಸಕ್ತಿ, ಶ್ರದ್ಧೆ.

**अनुरागिन्** ಅನುರಾಗಿನ್ (वि०) 1. ಪ್ರೀತಿಯುಳ್ಳ, ವಿಶ್ವಾಸವುಳ್ಳ, ಸ್ನೇಹವುಳ್ಳ. 2. ಶ್ರದ್ಧೆಯುಳ್ಳ, ಆಸಕ್ತಿಯುಳ್ಳ. अनुराग "इनिः" (५-२-११५)। स्त्रियाम् "ङीप्" (४-१-५)। –रागिणी –ರಾಗಿಣೀ. "वयस्याञ्चानुरागिणीम्" सा० द०।

**अनुरात्र** ಅನುರಾತ್ರ (वि०) 1. ರಾತ್ರಿಯನ್ನು ಅನುಸರಿಸುವ. अनुगतो रात्रिम् "अच्" (५-४-८७)। (अव्य०)2. ರಾತ್ರಿಯಲ್ಲಿ. 3. ಪ್ರತಿ ರಾತ್ರಿಯಲ್ಲಿಯೂ. वीप्सायाम् अव्ययी०।

**अनुराधा** ಅನುರಾಧಾ (स्त्री०) ಅನೂರಾಧಾ ನಕ್ಷತ್ರ, ಇಪ್ಪತ್ತೇಳು ನಕ್ಷತ್ರಗಳಲ್ಲಿ ಹದಿನೇಳನೆಯ ನಕ್ಷತ್ರ. अनुगता राधां विशाखाम्। ಅನೂರಾಧಾ ನಕ್ಷತ್ರದಲ್ಲಿ ಹುಟ್ಟಿದವನು ಧನಿಕನಾಗಿಯೂ ಪರದೇಶದಲ್ಲಿ ವಾಸಮಾಡತಕ್ಕವನೂ ಹಸಿವನ್ನು ತಡೆಯದವನೂ ಸಂಚಾರಸ್ವಭಾವದವನೂ ಆಗುತ್ತಾನೆ. "आढ्यो विदेशवासी क्षुधालुरटनोऽनुराधासु" बृह०।

**अनुरूप** ಅನುರೂಪ (वि०) 1. ಸದೃಶವಾದ, ಸರಿಹೋಲುವ, ಸರಿಸಮಾನವಾದ. 2. ಯೋಗ್ಯವಾದ, ಒಪ್ಪುವ, ಸರಿಯಾದ. अनुगतो रूपम्। "अथानुरूपाभिनिवेशतोषिणा" कुमा० ५-७।

**अनुरोध** ಅನುರೋಧ (पु०) 1. ಅನುಸರಣ, ಅನುವರ್ತನ, ಹೊಂದಿಕೊಂಡು ನಡೆಯುವಿಕೆ, ಅನುಕೂಲವಾಗಿರುವುದು. अनु+रुधिर् (आवरणे) "घञ्" (३-३-१८)। "इत्याधारानुरोधात् त्रिपुरविजयिनः पातु वो दुःखनृत्यम्" मुद्रा० १-२। 2. ಸಂತೋಷಪಡಿಸುವಿಕೆ, ತೃಪ್ತಿಪಡಿಸುವಿಕೆ. 3. ಇಷ್ಟವನ್ನು ಪಡೆಯುವ ಆಸೆ. भावे "ल्युट्" (३-३-११५)।–रोधनम्–ರೋಧನಂ.

**अनुरोधिन्** ಅನುರೋಧಿನ್ (वि०) 1. ಅನುವರ್ತಿಯಾದ, ಅನುಸರಿಸುವ. 2. ಸಂತೋಷಪಡಿಸುವ. अनु+रुधिर् (आवरणे) "णिनिः" (३-१-१३४)। स्त्रियाम् "ङीप्" (४-१-५)। –रोधिनी–ರೋಧಿನೀ.

**अनुलाप** ಅನುಲಾಪ (पुं०) ಪುನಃ ಮಾತನಾಡುವುದು, ಪುನರುಕ್ತಿ. अनु+लप (व्यक्तायां वाचि) "घञ्" (३-३-१८)।

**अनुलिप्त** ಅನುಲಿಪ್ತ (वि०) ಗಂಧ ಮೊದಲಾದುವು ಗಳಿಂದ ಪೂಸಲ್ಪಟ್ಟ. अनु+लिप (उपदेहे) "क्तः" (३-२-१०२)।

**अनुलेप** ಅನುಲೇಪ (पुं०) 1. ಲೇಪನ ಮಾಡುವಿಕೆ, ಬಳಿಯುವಿಕೆ, ಪೂಸುವುದು, ಹಚ್ಚುವುದು. अनुलिप्यते—अनु+लिप (उपदेहे) "घञ्" (३-३-१८)। 2. ಗಂಧ, ಚಂದನ. 3. ಮುಲಾಮು. अनुलिप्यते अनेन—कर० "घञ्" (३-३-१२१)।

**अनुलेपक** ಅನುಲೇಪಕ (वि०) ಹಚ್ಚುವ, ಬಳಿಯುವ, ಪೂಸುವ. अनुलिम्पति—अनु+लिप (उपदेहे) "ण्वुल्" (३-१-१३३)। स्त्रियाम् "टाप्" (४-१-४)। —लेपिका—ಲೇಪಿಕಾ.

**अनुलेपन** ಅನುಲೇಪನ (न०) 1. ಹಚ್ಚುವುದು, ಪೂಸುವುದು, ಬಳಿಯುವುದು. अनु+लिप (उपदेहे) भावे "ल्युट्" (३-३-११५)। 2. ಗಂಧ, ಚಂದನ. कर० "ल्युट्" (३-३-११७)। "अनुलेपनानि कुसुमान्यबलाः" माघ० ९-२४।

**अनुलेपिन्** ಅನುಲೇಪಿನ್ (वि०) ಹಚ್ಚುವ, ಬಳಿಯುವ, ಪೂಸುವ. अनु+लिप (उपदेहे) "णिनिः" (३-१-१३४)। स्त्रियाम् "ङीप्"। —लेपिनी—ಲೇಪಿನೀ.

**अनुलोम** ಅನುಲೋಮ (वि०) 1. ಯಥಾಕ್ರಮವಾದ, ಅನುಕೂಲವಾದ, ನಿಯಮಕ್ಕೆ ಅನುಸಾರವಾದ. अनुगतं लोम "अच्" (५-४-७५)। (अव्य०) 2. ಅನುಕೂಲವಾಗಿ, ನಿಯಮಕ್ಕೆ ಅನುಸಾರವಾಗಿ, ಕ್ರಮವಾಗಿ. लोम अनतिक्रम्य।

**अनुलोमज** ಅನುಲೋಮಜ (पुं०) ಬ್ರಾಹ್ಮಣಜಾತಿಯ ಪುರುಷನಿಗೆ ಮುಂದಿನಜಾತಿಯ ಹೆಂಗಸಿನಲ್ಲಿ ಹುಟ್ಟಿದವನು, ಬ್ರಾಹ್ಮಣಾದಿ ಜಾತಿಯವನಿಗೆ ಕ್ಷತ್ರಿಯಾದಿ ಜಾತಿಯ ಹೆಂಗಸಿನಲ್ಲಿ ಹುಟ್ಟಿದ ಮಿಶ್ರಜಾತಿಯವನು. [ಬ್ರಾಹ್ಮಣನು ಮದುವೆಯಾದ ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಹೆಂಗಸಿನಲ್ಲೂ, ಕ್ಷತ್ರಿಯನು ಮದುವೆಯಾದ ವೈಶ್ಯ ಮತ್ತು ಶೂದ್ರ ಹೆಂಗಸಿನಲ್ಲೂ ವೈಶ್ಯನು ಮದುವೆಯಾದ ಶೂದ್ರ ಹೆಂಗಸಿನಲ್ಲೂ ಹುಟ್ಟಿದ ಮಿಶ್ರಜಾತಿಯವನು ಅನುಲೋಮಜನು.]

**अनुलोमा** ಅನುಲೋಮಾ (स्त्री०) ಬ್ರಾಹ್ಮಣಾದಿ ಜಾತಿಯವನನ್ನು ಮದುವೆಯಾದ ಕ್ಷತ್ರಿಯಾದಿ ಮುಂದಿನಜಾತಿಯ ಹೆಂಗಸು. "सकामास्वनुलोमासु न दोषस्त्वन्यथा दमः" याज्ञ० २-२८८।

**अनुलोमार्थ** ಅನುಲೋಮಾರ್ಥ (वि०) ಅನುಕೂಲವಾದ ಅರ್ಥವುಳ್ಳ, ಅನುಕೂಲವಾದ ಅಭಿಪ್ರಾಯವುಳ್ಳ. अनुलोमः अनुकूलोऽर्थो यस्य। "जडानप्यनुलोमार्थान् प्रवाचः कृतिनां गिरः" माघ० २-२५।

**अनुवंश** ಅನುವಂಶ (पुं०) 1. ವಂಶಾವಳಿಯ ಪಟ್ಟಿ, ಪರಂಪರೆಯ ಸೂಚಿ. अनुसृतो वंशम्। (अव्य०) 2. ವಂಶದಲ್ಲಿ. वंशे—विभ० अव्ययी०।

**अनुवक्तृ** ಅನುವಕ್ತೃ (वि०) ಅನುಸರಿಸಿ ಹೇಳುವ, ಗುರುವು ಹೇಳಿದಂತೆ ಹೇಳುವ. अनु अनुरूपं वक्ति वदति—अनु+वच (परिभाषणे) "तृच्" (३-१-१३३)। स्त्रियाम् "ङीप्" (४-१-५)। —वक्त्री—ವಕ್ತ್ರೀ.

**अनुवक्र** ಅನುವಕ್ರ (वि०) 1. ಬಹಳ ಡೊಂಕಾದ, ಹೆಚ್ಚು ಬಗ್ಗಿರುವ. 2. ಹೆಚ್ಚು ವಕ್ರವಾದ, ಮುಂದಿನ ರಾಶಿಯಿಂದ ಹಿಂದಿನ ರಾಶಿಗೆ ಕ್ರಮತಪ್ಪಿಬರುವ (ಗ್ರಹ).

**अनुवचन** ಅನುವಚನ (न०) ಅನುಸರಿಸಿ ಹೇಳುವುದು, ಗುರುವು ಹೇಳಿದಂತೆ ಹೇಳುವುದು.

**अनुवर्तन** ಅನುವರ್ತನ (न०) 1. ಅನುಸರಿಸುವಿಕೆ. 2. ಹಿಂಬಾಲಿಸುವಿಕೆ. 3. ವ್ಯಾಕರಣ ಶಾಸ್ತ್ರದಲ್ಲಿ ಹಿಂದಿನ ಸೂತ್ರಗಳಿಂದ ಬೇಕಾದ ಪದಗಳನ್ನು ಮುಂದಿನ ಸೂತ್ರಗಳಿಗೆ (ಸೂತ್ರಾರ್ಥವು ಪೂರ್ಣವಾಗುವುದಕ್ಕಾಗಿ) ತೆಗೆದುಕೊಳ್ಳುವುದು. अनु+वृतु (वर्तने) "ल्युट्" (३-३-११५)।

**अनुवर्तिन्** ಅನುವರ್ತಿನ್ (वि०) 1. ಹಿಂದೆ ನಡೆಯುವ. 2. ಹಿಂಬಾಲಿಸುವ, ಅನುಸರಿಸುವ. स्त्रियाम् "ङीप्" (४-१-५)। —वर्तिनी—ವರ್ತಿನೀ. "सशरीरा गता स्वर्गं भर्तारमनुवर्तिनी" रामा०।

**अनुवाक** ಅನುವಾಕ (पुं०) 1. ವೇದದ ಭಾಗ, ವೇದದ ಅಧ್ಯಾಯ. 2. ವೇದಪಠನ. 3. (ಗಾನವಿಲ್ಲದ) ಋಗ್ವೇದದ ಅಥವಾ ಯಜುರ್ವೇದದ ಸಮೂಹ.

**अनुवाक्या** ಅನುವಾಕ್ಯಾ (स्त्री०) ಋತ್ವಿಕ್ಕುಗಳು (ಯಾಗದಲ್ಲಿ ಹವಿಸ್ಸನ್ನು ಸ್ವೀಕರಿಸಲು) ದೇವತೆಗಳನ್ನು ಕರೆಯುವ ಮಂತ್ರ (ಋಕ್ಕು). अनूच्यते—अनु+वच (परिभाषणे) "ण्यत्" (३-१-१२४)। "शब्दितामनपशब्दमुच्चकैर्वाक्यलक्षणविदोऽनुवाक्यया" माघ० १४-२०।

**अनुवाचन ಅನುವಾಚನ** (ನಂ) 1. (ಗುರುವು) ತಾನು ಹೇಳಿದಂತೆ ಶಿಷ್ಯನಿಂದ ಹೇಳಿಸುವುದು. 2. (ಯಜ್ಞದಲ್ಲಿ) ಅಧ್ವರ್ಯುಗಳು ಹೋತೃಗಳಿಂದ ಮಂತ್ರಗಳನ್ನು ಹೇಳಿಸುವುದು. अनु+वच (परिभाषणे)+णिच् "ल्युट्" (३-३-११५)।

**अनुवात ಅನುವಾತ** (ಪುಂ) ಶಿಷ್ಯನ ಕಡೆಯಿಂದ ಗುರುವಿನ ಕಡೆಗೆ ಬೀಸುವ ಗಾಳಿ, ಎದುರಾಗಿ ಬೀಸುವ ಗಾಳಿ. अनुगतो वातः। "प्रतिवातेऽनुवाते च नासीत गुरुणा सह" मनु० २-२०३।

**अनुवाद ಅನುವಾದ** (ಪುಂ) 1. ಹೇಳಿದ ವಿಷಯವನ್ನು ಮತ್ತೆ ಹೇಳುವುದು. अनु+वद "घञ्" (३-३-१८)। 2. ಗ್ರಂಥದ ಪರಿವರ್ತನೆ, ಭಾಷಾಂತರ. 3. ಅರ್ಥವಾದದ ಒಂದು ಭೇದ, ಪ್ರಮಾಣಾಂತರದಿಂದ ಸಿದ್ಧವಾದ ವಿಷಯವನ್ನು ಪುನಃ ಹೇಳುವುದು. [ವಿವರಕ್ಕೆ "अर्थवाद" ಪದದಲ್ಲಿ ನೋಡಿ.]

**अनुवादक ಅನುವಾದಕ** (ವಿಂ) ಅನುವಾದಮಾಡುವ, ವಿವರಿಸುವ, ಭಾಷಾಂತರಮಾಡುವ. अनुवदति— अनु+वद (व्यक्तायां वाचि) "ण्वुल्" (३-३-१३३)।

**अनुवादिन् ಅನುವಾದಿನ್** (ವಿಂ) ಅನುವಾದಮಾಡುವ, ಅನುವಾದಮಾಡುವ ಸ್ವಭಾವದ, ಭಾಷಾಂತರ ಮಾಡುವ. अनुवदति—अनु+वद (व्यक्तायां वाचि) "णिनिः" (३-२-७८)। स्त्रियाम् "ङीप्"। –वादिनी –ವಾದಿನೀ.

**अनुवाद्य ಅನುವಾದ್ಯ** (ವಿಂ) 1. ಅನುವಾದಮಾಡಲು ಅರ್ಹವಾದ, ಭಾಷಾಂತರಿಸಲು ಯೋಗ್ಯವಾದ, ವಿವರಿಸಲ್ಪಡುವ. 2. ಉದ್ದೇಶ್ಯ. अनु+वद (व्यक्तायां वाचि) "ण्यत्" (३-१-१२४)। ಒಂದು ವಿಷಯವನ್ನು ಉದ್ದೇಶಿಸಿ ಮತ್ತೊಂದನ್ನು ವಿಧಿಸಬೇಕು. "अदेङ् गुणः" ಎಂಬಲ್ಲಿ ಅಕಾರ, ಏಕಾರ ಮತ್ತು ಓಕಾರಗಳನ್ನು ಉದ್ದೇಶಿಸಿ ಗುಣಸಂಜ್ಞೆಯು ವಿಧಿಸಲ್ಪಟ್ಟಿದೆ. "अनुवाद्यमनुक्त्वैव न विधेयमुदीरयेत्"। "वृद्धिरादैच्" ಎಂಬಲ್ಲಿ ವಿಧೇಯವಾದ ವೃದ್ಧಿ ಪದವು ಅನಂತರ ಹೇಳಲ್ಪಡಬೇಕಾಗಿದ್ದರೂ ಮಂಗಳಾರ್ಥಕವಾದುದರಿಂದ ಮೊದಲು ಹೇಳಲ್ಪಟ್ಟಿದೆ.

**अनुवासन ಅನುವಾಸನ** (ಪುಂ) 1. ಪಿಚಕಾರಿ, ಔಷಧ ಪ್ರಯೋಗಮಾಡುವ ಕೊಳವೆ, "ಎನಿಮಾ"ಕೊಡುವ ಚುಂಗಾಣಿ. अनु+वस (निवासे)+णिच् "ल्युट्" (३-३-११७)। "द्विधा बस्तिः परिज्ञेयो निरूहश्चानुवासनम्। कषायाद्यैर्निरूहः स्यात् स्नेहाद्यैरनुवासनम्"। (ನಂ) 2. ಧೂಪ ಮೊದಲಾದುವುಗಳಿಂದ ವಾಸನೆ ಕಟ್ಟುವುದು. 3. ಪಿಚಕಾರಿಯ ಕೆಲಸ, ಪಿಚಕಾರಿಯಿಂದ ಔಷಧಪ್ರಯೋಗ, ಬಸ್ತಿಕ್ರಿಯೆ. अनु+वस (निवासे)+णिच् "ल्युट्" (३-३-११५)।

**अनुवासित ಅನುವಾಸಿತ** (ವಿಂ) 1. ವಾಸನೆಕೊಡಲ್ಪಟ್ಟ. 2. ಪಿಚಕಾರಿಯಿಂದ(ಔಷಧಾದಿಗಳ) ಪ್ರಯೋಗ ನಡೆಸಲ್ಪಟ್ಟ, ಬಸ್ತಿಕ್ರಿಯೆಯಿಂದ ಚಿಕಿತ್ಸೆ ನಡೆಸಲ್ಪಟ್ಟ. अनु+वस (निवासे)+णिच् "क्तः" (३-२-१०२)।

**अनुविधान ಅನುವಿಧಾನ** (ನಂ) 1. ಅಧೀನತೆ, ವಿಧೇಯತೆ, ಅಜ್ಞಾಪಾಲನೆ. 2. ಅನಂತರದ ಕೆಲಸ.

**अनुविधायिन् ಅನುವಿಧಾಯಿನ್** (ವಿಂ) 1. ವಿಧೇಯ, ನಮ್ರ. 2. ಅನಂತರ ಕೆಲಸಮಾಡುವ. 3. ಸದೃಶವಾದ, ಹೋಲುವ. अनुविधत्ते—अनु+वि+डु धाञ् (धारणपोषणयोः) "णिनिः" (३-२-७८)। "निजवधूश्वसितानुविधायिनि" माघ० ६-२३। स्त्रियाम् "ङीप्" (४-१-५)। –विधायिनी–ವಿಧಾಯಿನೀ.

**अनुविद्ध ಅನುವಿದ್ಧ** (ವಿಂ) 1. ಇರಿಯಲ್ಪಟ್ಟ, ತಿವಿಯಲ್ಪಟ್ಟ. 2. ಪಸರಿಸಲ್ಪಟ್ಟ, ವ್ಯಾಪಿಸಲ್ಪಟ್ಟ, ಸಂಬಂಧಿಸಲ್ಪಟ್ಟ, ಹೆಣೆಯಲ್ಪಟ್ಟ, ಕೂಡಿರುವ. अनु+व्यध (ताडने) "क्तः" (३-२-१०२)। "सरसिजमनुविद्धं शैवलेनापि रम्यम्" शाकु० १-१७। "संलक्ष्यते विविधरत्नकरानुविद्धम्" माघ० ४-४९।

**अनुवृत्त ಅನುವೃತ್ತ** (ವಿಂ) 1. ಮುಂದುವರೆದ, ಹಿಂದಿನ ವಿಷಯಕ್ಕೆ ಸಂಬಂಧಿಸಿದಂತೆ ಮುಂದೆ ಸಾಗಿದ. 2. ವರ್ತುಲಾಕಾರವಾದ, ಗುಂಡಾಗಿರುವ. 3. ಚರಿತ್ರೆಯನ್ನು ಅನುಸರಿಸಿದ. 4. ಶೀಲಕ್ಕೆ ಹೊಂದಿಕೊಂಡಿರುವ. 5. (ವ್ಯಾಕರಣಶಾಸ್ತ್ರದಲ್ಲಿ) ಹಿಂದಿನ ಸೂತ್ರಗಳಿಂದ ಮುಂದಿನ ಸೂತ್ರಗಳಿಗೆ ತೆಗೆದುಕೊಳ್ಳಲ್ಪಟ್ಟ ಪದ ಮೊದಲಾದುದು. 6. ಅನುಸರಿಸಿ ನಡೆಯುವ, ಅಧೀನವಾದ.

**अनुवृत्ति ಅನುವೃತ್ತಿ** (ಸ್ತ್ರೀಂ) 1. ಅನುಸರಣೆ, ಸೇವೆ. अनु+वृतु (वर्तने) "क्तिन्" (३-३-९४)। "तवानुवृत्ति न च कर्तुमुत्सहे" कुमा० ५-६५। 2. ಹಿಂದಿನ ಸೂತ್ರಗಳಿಂದ ಮುಂದಿನ ಸೂತ್ರಾರ್ಥಕ್ಕೆ ಬೇಕಾದ ಪದಗಳನ್ನು ತೆಗೆದುಕೊಳ್ಳುವುದು. 3. ವಿಧೇಯತೆ, ಅನುಸರಿಸಿ ನಡೆಯುವಿಕೆ. "छन्दानुवृत्तिदुःसाध्याः" माघ० २-१०५। 4. ಸಾದೃಶ್ಯ, ಹೋಲಿಕೆ. 5. ನೆನಪು, ಜ್ಞಾಪಕ.

**अनुवेध ಅನುವೇಧ** (पुं०) ಸಂಸರ್ಗ, ಸಂಬಂಧ. अनु+विध (विधाने) "घञ्" (३-३-१८)।

**अनुवेल ಅನುವೇಲ** (अव्य०) 1. ಪ್ರತಿಕ್ಷಣದಲ್ಲಿಯೂ. वेलायां वेलायाम्। "तस्यानुवेलं व्रजतोऽधिवेलम्" माघ० ३-७९। 2. ದಡದಲ್ಲಿ, ತೀರದಲ್ಲಿ. वेलायाम्। विभ० अव्ययी०।

**अनुवेल्लित ಅನುವೇಲ್ಲಿತ** (नं०) 1. ಘಾಯಕ್ಕೆ ಕಟ್ಟುವ ಪಟ್ಟಿ, ಘಾಯದ ಕಟ್ಟು. (वि०) 2. ವಕ್ರವಾದ, ಕ್ರಮವಾಗಿ ಬಗ್ಗಿರುವ.

**अनुवेश ಅನುವೇಶ** (पुं०) 1. ಹಿಂಬಾಲಿಸುವಿಕೆ, ಅನಂತರ ಪ್ರವೇಶಿಸುವುದು. 2. ಹಿರಿಯನಿಗಿಂತ ಕಿರಿಯವನು ಮುಂಚೆ ಮದುವೆಯಾಗುವುದು. "यवीयसोऽनुवेशो हि ज्येष्ठस्य विधिलोपकः" भा०। 3. ನೆರೆಮನೆಯ ಪಕ್ಕದಮನೆ.

**अनुवेश्य ಅನುವೇಶ್ಯ** (पुं०) ನೆರೆಮನೆಯ ಪಕ್ಕದಮನೆಯಲ್ಲಿ ವಾಸವಾಡುವವನು, ತನ್ನ ಮನೆಯಿಂದ ಮೂರನೆಯ ಮನೆಯಲ್ಲಿ ವಾಸಿಸುವವನು. अनुक्रमेण वेशमर्हति—वेश "यत्" (४-३-५४)।

**अनुव्याध ಅನುವ್ಯಾಧ** (पुं०) ಸಂಸರ್ಗ, ಸಂಬಂಧ. अनु+व्यध (ताडने) "घञ्" (३-३-१८)। "मुखामोदं मदिरया कृतानुव्याधमुद्वमन्" माघ० २-२०।

**अनुव्रजत् ಅನುವ್ರಜತ್** (वि०) ಅನುಸರಿಸಿ ಬರುವ, ಹಿಂಬಾಲಿಸುವ. अनु+व्रज (गतौ) "शतृ" (३-२-१२४)। "निवर्त्य सोऽनुव्रजतः कृतानतीन्" माघ० १-११।

**अनुव्रजन ಅನುವ್ರಜನ** (नं०) ಹಿಂಬಾಲಿಸುವಿಕೆ, ಅನುಸರಿಸಿ ಬರುವುದು. अनु+व्रज (गतौ) "ल्युट्" (३-३-११५)।

**अनुव्रज्या ಅನುವ್ರಜ್ಯಾ** (स्त्री०) 1. ಅನುಸರಿಸಿ ನಡೆಯುವುದು. 2. ಸೇವೆ. अनु+व्रज (गतौ) "क्यप्" (३-३-९८)। "अनुव्रज्या च शुश्रूषा यावदध्ययनं गुरोः" मनु० २-२४१।

**अनुव्रत ಅನುವ್ರತ** (वि०) ಅನುರಕ್ತ, ಅನುರಾಗವುಳ್ಳ, ಅನುಕೂಲ ಧರ್ಮಾಚರಣೆಯುಳ್ಳ. स्त्रियाम् अनुव्रता ಅನುವ್ರತಾ. "अनुव्रतां राममतीव मैथिलीम्" रामा०। "अनुव्रता कामकलास्वधीतिनी" याद० १४-७२।

**अनुशय ಅನುಶಯ** (पुं०) 1. ಪಶ್ಚಾತ್ತಾಪ. अनु+शीङ् (स्वप्ने) "अच्" (३-३-५६)। "ततः सपत्नापनयस्मरणानुशयस्फुरा" माघ० २-१४। 2. ಕ್ರೋಧ, ಕೋಪ. "यस्मिन्नमुक्तानुशया सदैव" मालती० ६-१। 3. ದ್ವೇಷ, ವೈರ. 4. ಕ್ರಯಕ್ಕೆ ಕೊಂಡ ವಸ್ತುವಿನ ವಿಷಯದಲ್ಲಿ ಅಸಮಾಧಾನ, ಕ್ರಯದಲ್ಲಿ ಮೋಸ ನಡೆದಿರುವುದೆಂದು ಪಶ್ಚಾತ್ತಾಪ. "क्रीत्वा मूल्येन यः पण्यं क्रेता न बहु मन्यते। क्रीतानुशय इत्येतद्विवादपदमुच्यते"। "क्रीत्वा मूल्येन यत् पण्यं दुःक्रीतं मन्यते क्रयी। विक्रेतुः प्रतिदेयं तत्तस्मिन्नेवाह्न्यविक्षतम्" नारद०। 5. ಸ್ವರ್ಗಪ್ರಾಪ್ತಿಗಾಗಿ ಮಾಡಿದ ಪುಣ್ಯ ಕರ್ಮದ ಶೇಷ, ಸ್ವರ್ಗಾನುಭವಾನಂತರ ಭೂಮಿಗೆ ಪತನವಾಗುವ ಸಮಯದಲ್ಲಿ ಪುಣ್ಯಫಲದ ಉಳಿಕೆ. "कृतात्ययेऽनुशयवान् दृष्टस्मृतिभ्यां यथेतमनेवं च" ब्र० सू० ३-१।

**अनुशयान ಅನುಶಯಾನ** (वि०) 1. ಪಶ್ಚಾತ್ತಾಪಪಡುವ. 2. ದ್ವೇಷಿಸುವ. अनु+शीङ् (स्वप्ने) "शानच्" (३-२-१२४)।

**अनुशयाना ಅನುಶಯಾನಾ** (स्त्री०) ಪರಕೀಯ ನಾಯಿಕೆಯ ಒಂದು ಭೇದ.

**अनुशयिन् ಅನುಶಯಿನ್** (वि०) 1. ಪಶ್ಚಾತ್ತಾಪವುಳ್ಳ. 2. ದ್ವೇಷವುಳ್ಳ. अनुशयोऽस्यास्ति "इनिः" (५-२-११५)।

**अनुशासक ಅನುಶಾಸಕ** (वि०) 1. ಶಿಕ್ಷಕ, ದಂಡವನ್ನು ವಿಧಿಸುವವನು. 2. ಆಜ್ಞೆಮಾಡುವವನು. 3. ತಿಳಿಸುವವನು. 4. ಆಳುವವನು. अनु+शासु (अनुशिष्टौ) "ण्वुल्" (३-१-१३३)।

**अनुशासत् ಅನುಶಾಸತ್** (वि०) 1. ಆಳುವ, ದೊರೆತನ ಮಾಡುವ. अनु+शासु (अनुशिष्टौ) "शतृ" (३-२-१२४)। 2. ತಿಳಿಸುವ, ಉಪದೇಶ ಮಾಡುವ. "अनुशासतमित्यनाकुलं नयवर्त्माकुलमर्जुनाग्रजम्" किरा० २-५४। 3. ಶಿಕ್ಷಿಸುವ, ದಂಡಿಸುವ. 4. ಆಜ್ಞೆಮಾಡುವ.

**अनुशासन ಅನುಶಾಸನ** (नं०) 1. ಉಪದೇಶ, ತಿಳಿವಳಿಕೆ ಕೊಡುವುದು. 2. ಸಲಹೆ ಕೊಡುವುದು. अनुशिष्यते—अनु+शासु (अनुशिष्टौ) भावे "ल्युट्" (३-३-११५)। "भवादृशेषु प्रमदाजनोदितं भवत्यधिक्षेप इवानुशासनम्" किरा० १-२८। 3. ಆಜ್ಞೆ, ಅಪ್ಪಣೆ. 4. ವಿಧಿಶಾಸ್ತ್ರ, ನಿಯಮಶಾಸ್ತ್ರ, ಅಸಾಧು ವಿಷಯಗಳಿಂದ ಸಾಧುವಿಷಯಗಳನ್ನು ವಿಮರ್ಶಿಸಿ ಹೇಳುವುದು. "अथ शब्दानुशासनम्" "नामलिङ्गानुशासनम्" ಇತ್ಯಾದಿ. अनुशिष्यतेऽनेन—कर० "ल्युट्"। 5. ಶಿಕ್ಷೆ.

**अनुशासितृ ಅನುಶಾಸಿತೃ** (वि०) 1. ಉಪದೇಶಕ, ತಿಳಿವಳಿಕೆ ಕೊಡುವವನು. 2 ಶಿಕ್ಷಕ, ದಂಡಿಸುವವನು. स्त्रियाम् "ङीप्"। –शासित्री –ಶಾಸಿತ್ರೀ.

**अनुशासिन् ಅನುಶಾಸಿನ್** (वि०) 1. ಉಪದೇಶಕ. 2. ಶಿಕ್ಷಕ. अनु+शासु (अनुशिष्टौ) "णिनिः" (३-२-७८)।

**अनुशास्तृ ಅನುಶಾಸ್ತೃ** (वि०) 1. ಉಪದೇಶಕ, ತಿಳಿವಳಿಕೆ ಕೊಡುವವನು. 2. ಶಿಕ್ಷಕ, ದಂಡಿಸುವವನು. स्त्रियाम् "ङीप्" (४-१-५)। –शास्त्री –ಶಾಸ್ತ್ರೀ.

**अनुशिष्ट ಅನುಶಿಷ್ಟ** (वि०) 1. ಉಪದೇಶ ಮಾಡಲ್ಪಟ್ಟ, ತಿಳಿವಳಿಕೆಯುಂಟುಮಾಡಲ್ಪಟ್ಟ. 2. ದಂಡಿಸಲ್ಪಟ್ಟ, ಶಿಕ್ಷಿಸಲ್ಪಟ್ಟ. अनु+शासु (अनुशिष्टौ) "क्तः" (३-२-१०२)।

**अनुशिष्टि ಅನುಶಿಷ್ಟಿ** (स्त्री०) 1. ಆಜ್ಞೆ, ಅಪ್ಪಣೆ. 2. ಉಪದೇಶ, ಶಿಕ್ಷಣ. अनु+शासु (अनुशिष्टौ) "क्तिन्" (३-३-९४)।

**अनुशीलन ಅನುಶೀಲನ** (न०) 1. ಎಡೆಬಿಡದ ಅಭ್ಯಾಸ, ಸತತವಾದ ಕಾರ್ಯಾಚರಣೆ. अनुक्षणं शीलनम्। "गुरुस्थिराण्युत्तमवंशजत्वात् विज्ञातसाराण्यनुशीलनेन" किरा० १६-२८। 2. ವಿಚಾರಣೆ, ತನಿಖೆ.

**अनुशोक ಅನುಶೋಕ** (पु०) 1. ದುಃಖ, ವ್ಯಸನ. 2. ಅನುಸರಿಸಿ ದುಃಖಿಸುವುದು, ಅನಂತರ ದುಃಖಿಸುವಿಕೆ. अनु+शुच (शोके) "घञ्" (३-३-१८)।

**अनुशोचन ಅನುಶೋಚನ** (न०) 1. ದುಃಖ. 2. ಪಶ್ಚಾತ್ತಾಪ.

**अनुश्रव ಅನುಶ್ರವ** (पु०) ವೇದ. अनुश्रूयते–अनु+श्रु (श्रवणे) "अप्" (३-३-५७)। "अनुश्रवाणामवतंसभूतम्" यादव० ४-५४।

**अनुषक्त ಅನುಷಕ್ತ** (वि०) ಸಂಬಂಧಿಸಿದ, ಅಂಟಿಕೊಂಡಿರುವ, ಸೇರಿಕೊಂಡಿರುವ, ಹೊಂದಿಕೊಂಡಿರುವ. अनु+षञ्ज (सङ्गे) "क्तः" (३-४-७२)।

**अनुषङ्ग ಅನುಷಂಗ** (पु०) 1. ಸಂಬಂಧ, ಹೊಂದಿಕೊಂಡಿರುವಿಕೆ, ಸೇರಿರುವಿಕೆ, ಅಂಟಿಕೊಂಡಿರುವಿಕೆ. 2. ಒಟ್ಟುಗೂಡುವಿಕೆ, ಮಿಶ್ರಣ, ಬೆರಕೆ. 3. ವಾಕ್ಯಾಂತರದಲ್ಲಿರುವ ಪದಗಳೊಡನೆ ಸಂಬಂಧ. 4. ಪ್ರಸಂಗ, ಪ್ರಸಕ್ತಿ, ಹಿಂದಿನ ವಿಷಯದೊಡನೆ ಸಂಬಂಧ. 5. ಒಂದು ಕಾರ್ಯಕ್ಕೆ ಯತ್ನಿಸಿದಾಗ ಆಗುವ ಮತ್ತೊಂದು ಕಾರ್ಯಸಿದ್ಧಿ. "नित्यक्रियां तथा चान्ये ह्यनुषङ्गफलां श्रुतिम्"। अनु+षञ्ज (सङ्गे) "घञ्" (३-३-१८)।

**अनुषङ्गिन् ಅನುಷಂಗಿನ್** (वि०) 1. ಸಂಬಂಧವುಳ್ಳ, ಅಂಟಿಕೊಂಡಿರುವ, ಸೇರಿಕೊಂಡಿರುವ. अनुषङ्ग "इनिः" (५-२-११५)। "महीयसां महति दिगन्तदन्तिनामनीकजे रजसि मुखानुषङ्गिनि" माघ० १७-५७। 2. ವ್ಯಾಪಿಸುವ, ಹರಡುವ. "शमिनोऽपि तस्य नवसङ्गमने विभुतानुषङ्गि भयमेति जनः" किरा० ६-३५।

**अनुषिक्त ಅನುಷಿಕ್ತ** (वि०) 1. ಯಾವಾಗಲೂ ಸಿಂಪಡಿಸಲ್ಪಟ್ಟ. 2. ಅನಂತರ ಸೇಚನೆ ಮಾಡಲ್ಪಟ್ಟ. अनु+षिच (क्षरणे) "क्तः" (३-२-१०२)।

**अनुषेक ಅನುಷೇಕ** (पु०) ಪುನಃ ಚಿಮುಕಿಸುವುದು, ಮತ್ತೆ ಸಿಂಪಡಿಸುವುದು. अनु+षिच (क्षरणे) "घञ्" (३-३-१८)।

**अनुष्टुभ् ಅನುಷ್ಟುಭ್** (स्त्री०) 1. ಸರಸ್ವತಿ. 2. ಮಾತು. 3. ಒಂದು ಛಂದಸ್ಸು, ಎಂಟು ಅಕ್ಷರಗಳಿಂದ ಕೂಡಿದ ನಾಲ್ಕು ಪಾದಗಳುಳ್ಳ ಛಂದಸ್ಸು. अनु निरन्तरं स्तुम्नोति –अनु+स्तुन्भु (निष्कोषणे) "क्विप्" (३-२-७६)।

**अनुष्ठ ಅನುಷ್ಠ** (वि०) ಕ್ರಮವಾಗಿ ನಿಲ್ಲುವ. अनुक्रमेण तिष्ठति–अनु+ष्ठा (गतिनिवृत्तौ) "कः" (३-१-१३६)।

**अनुष्ठा ಅನುಷ್ಠಾ** (स्त्री०) ಅನುಷ್ಠಾನ, ಆಚರಣೆ, अनु+ष्ठा (गतिनिवृत्तौ) "अङ्" (३-३-१०६)।

**अनुष्ठातृ ಅನುಷ್ಠಾತೃ** (वि०) ಆಚರಿಸುವವನು. अनु+ष्ठा (गतिनिवृत्तौ) "तृच्" (३-१-१३३)। स्त्रियाम् "ङीप्" (४-१-५)। –त्री –ತ್ರೀ.

**अनुष्ठान ಅನುಷ್ಠಾನ** (न०) ಆಚರಣೆ, ಮಾಡುವುದು, ನೆರವೇರಿಸುವುದು, ಕಾರ್ಯನಿರ್ವಾಹ. अनु+ष्ठा (गतिनिवृत्तौ) भावे "ल्युट्" (३-३-११५)। "उपरुध्यते तपोऽनुष्ठानम्" शाकु० ४।

**अनुष्ठित ಅನುಷ್ಠಿತ** (वि०) ಆಚರಿಸಲ್ಪಟ್ಟ, ಶಾಸ್ತ್ರರೀತಿಯಿಂದ ಮಾಡಲ್ಪಟ್ಟ. अनु+ष्ठा (गतिनिवृत्तौ) "क्तः" (३-२-१०२)। "विक्रियायै न कल्पन्ते संबन्धाः सदनुष्ठिताः" कुमा० ६-२९।

**अनुष्ठेय ಅನುಷ್ಠೇಯ** (वि०) ಆಚರಿಸಲ್ಪಡಬೇಕಾದ, ನಿರ್ವಹಿಸಲ್ಪಡಬೇಕಾದ. अनु+ष्ठा (गतिनिवृत्तौ) कर्म० "यत्" (३-१-९७)। "अस्माभिर्यदनुष्ठेयं गन्धर्वैस्तदनुष्ठितम्" भा० वन० २४३-१७।

अनुष्ण ಅನುಷ್ಣ (पुं०) 1. ಶೀತಸ್ಪರ್ಶ. (न०) 2. ಉತ್ಪಲ, ಕನ್ನೈದಿಲೆ, ನೀಲಕಮಲ. (वि०) 3. ಬಿಸಿಯಿಲ್ಲದ, ಶೀತಲವಾದ. न उष्णः। "अनुष्णबाष्पोदयमन्थराक्षीम्" यादं० १३-२४। 4. ಅಲಸ, ಸೋಮಾರಿ, ಕಾರ್ಯಾಸಮರ್ಥ. उष्णो दक्षः। तदन्यः। अन्यार्थे न० त०। "उष्णो ग्रीष्मे पुमान् दक्षाशीतयोरन्यलिङ्गकः" मेदि०।

अनुष्णगु ಅನುಷ್ಣಗು (पुं०) ಚಂದ್ರ. अनुष्णाः शीतलाः गावः किरणाः यस्य।

अनुसंवत्सर ಅನುಸಂವತ್ಸರ (अव्य०) 1. ವರ್ಷದಲ್ಲಿ, ಸಂವತ್ಸರದಲ್ಲಿ. विभ० अव्ययी०। 2. ಪ್ರತಿಸಂವತ್ಸರದಲ್ಲಿಯೂ. वीप्सायां अव्ययी०।

अनुसंवरण ಅನುಸಂವರಣ (न०) ಕ್ರಮವಾಗಿ ಮುಚ್ಚಿಡುವುದು, ಮರೆಮಾಡುವುದು. अनु+सम्+वृञ् (वरणे) "ल्युट्" (३-३-११५)।

अनुसंहित ಅನುಸಂಹಿತ (वि०) ಪುನಃ ವಿಚಾರಣೆ ಮಾಡಲ್ಪಟ್ಟ, ಮೇಲ್ತನಿಖೆ ಮಾಡಲ್ಪಟ್ಟ. अनु+सम्+डु धाञ् (धारणपोषणयोः) "क्तः" (३-२-१०२)।

अनुसन्तति ಅನುಸಂತತಿ (स्त्री०) ಎಡೆಬಿಡದೆ ಮುಂದುವರಿಯುವಿಕೆ, ಅನುಸ್ಯೂತವಾಗಿ ನಡೆದುಕೊಂಡು ಬರುವಿಕೆ, ವಿಚ್ಛೇದವಿಲ್ಲದಿರುವಿಕೆ.

अनुसन्धातृ ಅನುಸಂಧಾತೃ (वि०) 1. ವಿಚಾರಣೆ ನಡೆಸುವ, ತನಿಖೆಮಾಡುವ, ಶೋಧಿಸುವ. 2. ಧ್ಯಾನಿಸುವ, ಚಿಂತಿಸುವ, ದೀರ್ಘಾಲೋಚನೆ ಮಾಡುವ.

अनुसन्धान ಅನುಸಂಧಾನ (न०) 1. ವಿಚಾರಣೆ, ತನಿಖೆ, ಶೋಧನೆ. 2. ಚಿಂತಿಸುವುದು, ಧ್ಯಾನ, ಮನನ, ದೀರ್ಘಾಲೋಚನೆ. अनु+सम्+डु धाञ् (धारणपोषणयोः) भावे "ल्युट्" (३-३-११५)।

अनुसन्धानिन् ಅನುಸಂಧಾನಿನ್ (वि०) 1. ಚಿಂತಿಸುವ, 2. ತನಿಖೆ ನಡೆಸುವ.

अनुसन्धेय ಅನುಸಂಧೇಯ (वि०) 1. ಅನುಸಂಧಾನ ಮಾಡಲು ಯೋಗ್ಯವಾದ. 2. ಅನುಸಂಧಾನ ಮಾಡಲ್ಪಡಬೇಕಾದ. अनुसन्धातुमर्हं शक्यं वा—अनु+सम्+धाञ् (धारणपोषणयोः) "यत्" (३-१-९७)।

अनुसर ಅನುಸರ (वि०) 1. ಅನುಚರ, ಸೇವಕ. 2. ಜೊತೆಯಲ್ಲಿ ಸಂಚರಿಸುವ, ಸಂಗಡಿಗ. अनु+सृ (गतौ) "टः" बाहु०। 3. ಹಿಂಬಾಲಕ, ಅನುಸರಿಸಿ ನಡೆಯುವ. स्त्रियाम् "ङीप्" (४-१-१५)।—सरी—ಸರೀ.

अनुसरण ಅನುಸರಣ (न०) ಹಿಂಬಾಲಿಸುವಿಕೆ, ಅನುಸರಿಸುವಿಕೆ. अनु+सृ (गतौ) "ल्युट्" (३-३-११५)। "इन्दोर्दैन्यं त्वदनुसरणक्लिष्टकान्तेर्बिभर्ति" मेघ० २-२१।

अनुसार ಅನುಸಾರ (पुं०) ಅನುಸರಣ, ಅನುಸರಿಸಿ ನಡೆಯುವಿಕೆ. अनु+सृ (गतौ) "घञ्" (३-२-१८)। "धर्मशास्त्रानुसारेण क्रोधलोभविवर्जितः" याज्ञ०२-१।

अनुसारणा ಅನುಸಾರಣಾ (स्त्री०) 1. ಅನುಸರಿಸಿ ಓಡುವುದು, ಬೆನ್ನಟ್ಟುವುದು, ಓಡಿಸಿಕೊಂಡು ಹೋಗುವುದು. 2. ಹಿಂದೆ ನಡೆಯುವುದು. अनु+सृ (गतौ) णिच् "युच्" (३-३-१०७)।

अनुसारिन् ಅನುಸಾರಿನ್ (वि०) 1. ಬೆನ್ನಟ್ಟುವ, ಹಿಂಬಾಲಿಸುವ, ಅನುಸರಿಸಿ ಹೋಗುವ. अनुसरति पश्चाद्गच्छति—अनु+सृ (गतौ) "णिनिः।" (३-२-७८)। "मृगानुसारिणं साक्षात्पश्यामीव पिनाकिनम्" शाकु० १-६।

अनुसृत ಅನುಸೃತ (वि०) ಅನುಸರಿಸಲ್ಪಟ್ಟ, ಹಿಂಬಾಲಿಸಲ್ಪಟ್ಟ, अनु+सृ (गतौ) "क्तः" (३-२-१०२)।

अनुसृति ಅನುಸೃತಿ (स्त्री०) 1. ಅನುಸರಣ, ಹಿಂಬಾಲಿಸುವಿಕೆ. अनु+सृ (गतौ) "क्तिन्" (३-३-९४)। 2. ಸ್ವೈರಿಣಿ, ವ್ಯಭಿಚಾರಿಣಿ, ಅಸಭ್ಯ ಹೆಂಗಸು. अनुसरति कुलान्तरम्—अनु+सृ "क्तिच्" (३-३-१७४)।

अनुसृष्ट ಅನುಸೃಷ್ಟ (वि०) ಹಿಂಬಾಲಿಸಲ್ಪಟ್ಟ. अनु+सृज (विसर्गे) "क्तः" (३-२-१०२)। "अनुसृष्टस्तदा काकः जगाम विविधां गतिम्" रामा०।

अनुसृष्टि ಅನುಸೃಷ್ಟಿ (स्त्री०) 1. ಕ್ರಮವಾದ ಸೃಷ್ಟಿ. अनु+सृज (विसर्गे) "क्तिन्" (३-३-९४)। 2. ಬುದ್ಧಿವಂತೆಯಾದ ಹೆಂಗಸು. अनु+सृज "क्तिच्" (३-३-१७४)।

अनुसैन्य ಅನುಸೈನ್ಯ (न०) ಹಿಂಗಾವಲು ಸೈನ್ಯ.

अनुस्तरण ಅನುಸ್ತರಣ (न०) 1. ಹೊದಿಸುವುದು. अनु+स्तृञ् (आच्छादने) भावे "ल्युट्" (३-३-११५)। (वि०) 2. ಹೊದಿಸುವ. अनु+स्तृञ् कर० "ल्युट्" (३-३-११७)। (स्त्री०)—स्तरणी—ಸ್ತರಣೀ. 3. ವೈತರಣೀ ನದಿಯನ್ನು ದಾಟಿಸುವ ಹಸು.

अनुस्मरण ಅನುಸ್ಮರಣ (न०) 1. ಸ್ಮೃತಿ, ನೆನಪು, ಜ್ಞಾಪಕ. 3. ಮತ್ತೆ ಸ್ಮರಿಸುವುದು. अनु+स्मृ (चिन्तायाम्) "ल्युट्" (३-३-११५)।

**अनुस्मृत ಅನುಸ್ಮೃತ** (वि०) ನೆನೆಯಲ್ಪಟ್ಟ, ಜ್ಞಾಪಿಸಿಕೊಳ್ಳಲ್ಪಟ್ಟ. अनु+स्मृ (चिन्तायाम्) "क्तः" (३-२-१०२)। "कथाप्रसङ्गेन जनैरुदाहृतादनुस्मृताखण्डलसूनुविक्रमः" किरा० १-२४।

**अनुस्मृति ಅನುಸ್ಮೃತಿ** (स्त्री०) ಸ್ಮರಣೆ, ನೆನಪು. अनु+स्मृ (चिन्तायाम्) "क्तिन्" (३-३-९४)।

**अनुस्यूत ಅನುಸ್ಯೂತ** (वि०) 1. ಒಟ್ಟಿಗೆ ಸೇರಿಕೊಂಡಿರುವ, ಎಡೆಬಿಡದ ಸಂಬಂಧವುಳ್ಳ. 2. ಒಟ್ಟಿಗೆ ನೇಯಲ್ಪಟ್ಟ, ಸೇರಿದಂತೆ ಹೊಲಿಯಲ್ಪಟ್ಟ. अनु+षिवु (तन्तुसन्ताने) "क्तः" (३-२-१०२)।

**अनुसृत ಅನುಸ್ರುತ** (वि०) 1. ಸುರಿಯಲ್ಪಟ್ಟ. अनु+स्रु (गतौ) कर्म० "क्तः" (३-२-१०२)। 2. ಸುರಿದು ಹೋದ, ಸ್ರವಿಸಿದ. कर्त० "क्तः" (३-४-७२)।

**अनुस्वान ಅನುಸ್ವಾನ** (पुं०) 1. ಅನುರೂಪವಾದ ಶಬ್ದ, ಒಪ್ಪುವ ಧ್ವನಿ. 2. ಪ್ರತಿಧ್ವನಿ, ಎದುರು ಶಬ್ದ. अनुरूपः अनुसृतो वा स्वानः।

**अनुस्वार ಅನುಸ್ವಾರ** (पुं०) ಮೂಗಿನ ಸಹಾಯದಿಂದ ಸ್ವರವರ್ಣದನಂತರವೇ ಉಚ್ಚರಿಸಬಹುದಾದ ವರ್ಣ. [ಇದು ಸಂಸ್ಕೃತದಲ್ಲಿ ಬಿಂದುವಿನ (·) ಆಕಾರದಲ್ಲಿಯೂ, ಕನ್ನಡದಲ್ಲಿ ಸೊನ್ನೆ (0) ಆಕಾರದಲ್ಲಿಯೂ ಇರುವುದು.]

**अनुहार ಅನುಹಾರ** (पुं०) 1. ಅನುಕರಣ. 2. ಹೋಲಿಕೆ, ಸಾದೃಶ್ಯ. अनु+हृञ् (हरणे) "घञ्" (३-३-१८)। 3. ಅನಂತರ ಒಯ್ಯುವುದು.

**अनुहार्य ಅನುಹಾರ್ಯ** (वि०) ಹೋಲಿಸಲು ಯೋಗ್ಯವಾದ, ಹೋಲಿಸಲ್ಪಡುವ. अनु+हृञ् (हरणे) "ण्यत्" (३-१-१२४)।

**अनूक ಅನೂಕ** (पुं०) 1. ಹಿಂದಿನ ಜನ್ಮ. 2. ಬೆನ್ನು ಮೂಳೆ. (न०) 3. ಕುಲ, ವಂಶ. 4. ಶೀಲ, ಸ್ವಭಾವ. अनुकायति—अनु+कै (शब्दे) "कः" (३-१-१३६)। "अनूकं तु कुले शीले पुंसि स्याद्गतजन्मनि" मेदि०। 5. ಒಂದು ವಿಧ ಯಜ್ಞದ ಪಾತ್ರೆ.

**अनूचान ಅನೂಚಾನ** (पुं०) 1. ಸಾಂಗವೇದಾಧ್ಯಯನ ಮಾಡಿದವನು, ಗುರುವಿನಿಂದ ಷಡಂಗಸಹಿತ ವೇದವನ್ನು ಕಲಿತವನು. अन्ववोचत्—अनु+वच (परिभाषणे) "कानच्" (३-२-१०९)। निपा०। "इदमूचुरनूचानाः प्रीतिकण्टकितत्वचः" कुमा० ६-१५। (वि०) 2. ವಿನೀತ, ವಿಧೇಯ, ಸಭ್ಯತೆಯಿಂದ ಕೂಡಿದ. "अनूचानः साङ्गवेदकोविदे विनयान्विते" हेम०।

**अनूचीन ಅನೂಚೀನ** (वि०) ಕ್ರಮವಾದ, ಅನುಲೋಮವಾದ. "अनुलोममनूचीनम्" वैज०।

**अनूच्य ಅನೂಚ್ಯ** (न०) 1. ಮಂಚದ ಎರಡು ಪಾರ್ಶ್ವಗಳಲ್ಲಿಯೂ ಇರುವ ಹಲಗೆ. "दक्षिणोत्तरयोर्दीर्घे खट्वाङ्गे अनूच्यसंज्ञे" शङ्कराचार्याः। (वि०) 2. ಆಚಾರ್ಯರ ಉಚ್ಚಾರಣೆಯನ್ನನುಸರಿಸಿ ಹೇಳುವ ಪಾಠಭಾಗ.

**अनूढ ಅನೂಢ** (वि०) 1. ಅವಿವಾಹಿತ, ಮದುವೆಯಾಗದ. 2. ವಹಿಸಲ್ಪಡದ, ಎತ್ತಿಕೊಳ್ಳಲ್ಪಡದ. न ऊढः। स्त्रियाम् –ढा–ಢಾ.

**अनूदित ಅನೂದಿತ** (वि०) 1. ಬೇರೆ ಮಾತಿನಿಂದ ಹೇಳಲ್ಪಟ್ಟ, ಭಾಷಾಂತರಿಸಲ್ಪಟ್ಟ. अनु+वद (व्यक्तायां वाचि) "क्तः" (३-२-१०२)। 2. ಪುನಃ ಹೇಳಲ್ಪಟ್ಟ. (ಪ್ರಮಾಣಾಂತರ ಸಿದ್ಧವಾದ ವಿಷಯ).

**अनूद्य ಅನೂದ್ಯ** (अव्य०) 1. ಅನುವಾದಮಾಡಿ, ಭಾಷಾಂತರಿಸಿ. अनु+वद (व्यक्तायां वाचि) "ल्यप्" (७-१-३७)।

**अनून ಅನೂನ** (वि०) 1. ಪರಿಪೂರ್ಣವಾದ, ತುಂಬಿರುವ. 2. ಸಮಗ್ರವಾದ, ಸಂಪೂರ್ಣವಾದ. 3. ಉತ್ತಮವಾದ, ಅಧಮವಲ್ಲದ, ನಿಕೃಷ್ಟವಲ್ಲದ. न ऊनः। "अनूपराजस्य गुणैरनूनाम्" रघु० ६-३७।

**अनूप ಅನೂಪ** (पुं०) 1. ನೀರಿನಿಂದ ತುಂಬಿದ ಪ್ರದೇಶ, ಜವುಗುಪ್ರದೇಶ. 2. ಮಹಿಷ, ಕೋಣ. 3. ಮಂಡೂಕ, ಕಪ್ಪೆ. "अनूपो महिषे नाम्बुप्रायदेशे तु वाच्यवत्" मेदि०। 4. ಆನೆ. 5. ಗೌಜಿಗಹಕ್ಕಿ. 6. ಮಯೂರ, ನವಿಲು. 7. ಸಮುದ್ರ. 8. ಬಿಲದ ಬಾಯಿ. श० कल्प०। (पुं० ब० व०) 9. ಅನೂಪವೆಂಬ ಒಂದು ದೇಶ. अनुगता आपो यत्र। "अनूपराजस्य गुणैरनूनाम्" रघु० ६-३७।

**अनूपज ಅನೂಪಜ** (न०) 1. ಹಸಿಶುಂಠಿ. (वि०) 2. ಜವುಗುಪ್ರದೇಶದಲ್ಲಿ ಹುಟ್ಟಿದ. अनूपे जायते—जनी (प्रादुर्भावे) "डः" (३-२-९७)।

**अनूराधा ಅನೂರಾಧಾ** (स्त्री०) (ಇಪ್ಪತ್ತೇಳು ನಕ್ಷತ್ರಗಳಲ್ಲೊಂದಾದ) ಅನೂರಾಧಾ ನಕ್ಷತ್ರ. ಇದು ಮಿತ್ರದೇವತಾಕವಾದುದು. ಈ ನಕ್ಷತ್ರದಲ್ಲಿ

ಜನಿಸಿದವನು ದಯಾಪರ, ಶೂರ, ಸುಂದರ, ಸನ್ಮಾರ್ಗ ದಲ್ಲಿ ನಡೆಯುವವನು. ರಾಜನ ಅಧೀನನು. ಸವಿ ನುಡಿಯುಳ್ಳವನು (ಮೃದುಭಾಷಿ), ಅಲ್ಪಪುತ್ರನು. ಶಾನ್ತನು. ಅಧಿಕ ಸೌಖ್ಯವುಳ್ಳವನು. ರಾಜನಿಂದ ಪೂಜಿಸಲ್ಪಡುವವನು. ತರುಣಿಯರಲ್ಲಿ ಪ್ರೀತಿಯುಳ್ಳವನು. ದೇಶಾಂತರದಲ್ಲಿ ಪ್ರವಾಸಮಾಡುವವನು. ಈ ನಕ್ಷತ್ರವು ಋತು, ಪುಂಸವನ, ನಾಮಕರಣ, ಅನ್ನಪ್ರಾಶನ, ಕರ್ಣವೇಧನ, ಚೌಲ, ಉಪನಯನ, ವೇದ ಮತ್ತು ಶಾಸ್ತ್ರಾಭ್ಯಾಸ, ಸಮಾವರ್ತನ, ವಿವಾಹ, ತೈಲಾಭ್ಯಂಗ, ನವವಸ್ತ್ರ ಮತ್ತು ಆಭರಣ, ಸುವರ್ಣ ರತ್ನಾದಿ ನವಾಭರಣ ಧಾರಣ, ರಾಜ್ಯಾಭಿಷೇಕ, ರಥ, ಗಜ ಮತ್ತು ಆಂದೋಳಿಕಾ (ಉಯ್ಯಾಲೆ) ಆರೋಹಣ, ಸ್ತಂಭಪ್ರತಿಷ್ಠಾ, ಶಂಕುಸ್ಥಾಪನ, ಪುರನಗರ ಗ್ರಾಮಾದಿ ಪ್ರವೇಶ, ನೃತ್ತ ಗೀತ ವಾದ್ಯ ಪ್ರಯೋಗ, ಶಿಲ್ಪಶಾಸ್ತ್ರಾಭ್ಯಾಸ, ಕನಕ ಮಣಿ ವಸ್ತ್ರ ಸಂಗ್ರಹ, ಕ್ರಯ ವಿಕ್ರಯ ಕೃಷಿ ಪ್ರಾರಂಭ, ಬೀಜಾವಾಪ, ಭೈಷಜ್ಯಕರ್ಮ, ರಾಜದರ್ಶನ, ಶಾನ್ತಿಕ ಪೌಷ್ಟಿಕ ಯಾತ್ರಾರಂಭ, ಚೂರ್ಣಪ್ರಯೋಗ, ಚಿತ್ರಕರ್ಮ, ಸ್ತ್ರೀಸಂಭೋಗ, ಮಹೋತ್ಸವ ಇವುಗಳಿಗೆ ಪ್ರಶಸ್ತವಾದುದು.

**अनूरु ಅನೂರು** (पुं०) 1. ಅರುಣ, ಸೂರ್ಯನ ಸಾರಥಿ, ವಿನತಾದೇವಿಯ ಜ್ಯೇಷ್ಠಪುತ್ರ. अविद्यमानावूरू यस्य। [ಇವನು ಗರ್ಭದಲ್ಲಿದ್ದಾಗ ಇವನ ಬಲತಾಯಿ ಕದ್ರುವಿಗೆ ಮೊದಲು ಮಕ್ಕಳಾದುದರಿಂದ ವಿನತೆಯು ತನ್ನ ಹೊಟ್ಟೆಯನ್ನು ಹಿಸುಕಿದಕಾರಣ ಇವನ ತೊಡೆಯು ಬೆಳೆಯದೆ ಹೋಯಿತು. ಈ ಕಾರಣದಿಂದ ಇವನಿಗೆ ಈ ಹೆಸರು.] (वि०) 2. ತೊಡೆಯಿಲ್ಲದ.

**अनूरुसारथि ಅನೂರುಸಾರಥಿ** (पुं०) ಸೂರ್ಯ. अनूरुः सारथिर्यस्य। "गतं तिरश्चीनमनूरुसारथेः" माघ० १-२।

**अनृच ಅನೃಚ** (पुं०) 1. ಉಪನಯನವಿಲ್ಲದ ಬಾಲಕ. नास्ति ऋक् यस्य "अः" (५-४-७४)। 2. ಋಗ್ವೇದವನ್ನು ಅಧ್ಯಯನ ಮಾಡದವನು.

**अनृजु ಅನೃಜು** (वि०) 1. ವಕ್ರವಾದ, ಡೊಂಕಾದ. 2. ಶಠ, ಮೂರ್ಖ, ಕುಟಿಲಹೃದಯವುಳ್ಳ. न ऋजुः। "न पाणिपादचपलो न नेत्रचपलोऽनृजुः" मनु० ४-१७७।

**अनृण ಅನೃಣ** (वि०) ಋಣವಿಲ್ಲದ, ಸಾಲವಿಲ್ಲದ. न विद्यते ऋणं यस्य। [ಋಣವೆಂಬುದು ಒಬ್ಬನಿಂದ ದ್ರವ್ಯಾದಿಗಳನ್ನು ತೆಗೆದುಕೊಂಡು ಪುನಃ ಹಿಂತಿರುಗಿಸತಕ್ಕುದು. ಈ ಋಣವನ್ನು ತೀರಿಸದಿದ್ದರೆ ಉಪಪಾತಕವುಂಟಾಗುವುದು. ಇದರಂತೆಯೇ ಋಷಿಋಣ, ದೇವಋಣ ಮತ್ತು ಪಿತೃಋಣಗಳೆಂದು ಮೂರುವಿಧ ಋಣಗಳುಂಟು. ವೇದಾಧ್ಯಯನದಿಂದ ಋಷಿಋಣವನ್ನೂ, ಯಜ್ಞದಿಂದ ದೇವಋಣವನ್ನೂ, ಪ್ರಜೆ (ಸಂತತಿ) ಯಿಂದ ಪಿತೃಋಣವನ್ನೂ ತೀರಿಸಬೇಕು. ಈ ಋಣಗಳನ್ನು ತೀರಿಸದವನಿಗೆ ಮೋಕ್ಷವಿಲ್ಲ. [ವಿವರಕ್ಕೆ "ऋणवत्" ಪದದಲ್ಲಿ ನೋಡಿ.] "दशलक्षणकं धर्ममनुतिष्ठन् समाहितः। वेदान्तं विधिवच्छ्रुत्वा संन्यसेदनृणो द्विजः" मनु० ६-९४।

**अनृणिन् ಅನೃಣಿನ್** (वि०) ಸಾಲವಿಲ್ಲದವನು, ಸಾಲಗಾರನಲ್ಲದವನು. न ऋणी। "एकमप्यक्षरं यस्तु गुरुः शिष्यं प्रबोधयेत्। पृथिव्यां नास्ति तद्द्रव्यं यद्दत्वा सोऽनृणी भवेत्"। "पञ्चमेऽहनि षष्ठे वा शाकं पचति यो नरः। अनृणी चाप्रवासी च स वारिचर मोदते" भा० वन० ३१४-११७।

**अनृत ಅನೃತ** (न०) 1. ಸಟೆ, ಸುಳ್ಳು. 2. ಕೃಷಿ, ವ್ಯವಸಾಯ, ಬೇಸಾಯ. न ऋतम्। "वर्णिनां हि वधो यत्र तत्र साक्ष्यनृतं वदेत्" याज्ञ० २-८३। "अनृतं वितथे कृषौ" वैज०।

**अनृतवादिन् ಅನೃತವಾದಿನ್** (वि०) ಸುಳ್ಳುಹೇಳುವ ಸ್ವಭಾವದ. अनृतं वदति — वद "णिनिः" (३-२-७८)।

**अनेक ಅನೇಕ** (वि०) ಬಹಳ, ಅಸಂಖ್ಯಾತ, ಒಂದಕ್ಕಿಂತಲೂ ಹೆಚ್ಚಾದ. "अनेकराजन्यरथाश्वसङ्कुलम्" किरा० १-१६।

**अनेकधा ಅನೇಕಧಾ** (अव्य०) ಅನೇಕ ಪ್ರಕಾರವಾಗಿ. अनेक प्रकारे "धा" (५-३-४२)। "तत्रैकस्थं जगत्कृत्स्नं प्रविभक्तमनेकधा" गीता ११-१३।

**अनेकप ಅನೇಕಪ** (पुं०) ಗಜ, ಆನೆ. अनेकाभ्यां पिबति — पा (पाने) "कः" (३-२-४)। "मालवनाथोऽप्यनेकानेकपयूथसनाथः" दशकु०।

**अनेकमूर्ति ಅನೇಕಮೂರ್ತಿ** (पुं०) ಪರಮಾತ್ಮ, ವಿಷ್ಣು. अनेका नानाविधा मूर्तयो यस्य। "अनेकमूर्तिरव्यक्तः शतमूर्तिः शताननः" वि० स०।

**अनेकरूप ಅನೇಕರೂಪ** (पुं०) ಪರಮಾತ್ಮ, ವಿಷ್ಣು. अनेकानि रूपाणि यस्य।

**अनेकलोचन ಅನೇಕಲೋಚನ** (पुं०) 1. ಇಂದ್ರ. 2. ಪರಮಾತ್ಮ, ಈಶ್ವರ.

**अनेकविध ಅನೇಕವಿಧ** (वि०) ನಾನಾವಿಧವಾದ, ಬಹು ಪ್ರಕಾರವಾದ. अनेका विधा यस्य।

**अनेकशस् ಅನೇಕಶಸ್** (अव्य०) ಅನೇಕ ಸಲ. अनेक "शस्" (५-४-४३)। "अनेकशो निर्जितराजकस्त्वं पितॄनतार्प्सीर्नृपरक्ततोयैः" भट्टि० २-५२।

**अनेकान्त ಅನೇಕಾಂತ** (पु०) 1. ದುಷ್ಟವಾದ ಹೇತು, ಹೇತ್ವಾಭಾಸಗಳಲ್ಲಿ ಒಂದು, ಸವ್ಯಭಿಚಾರ. (वि०) 2. ಅನಿಶ್ಚಿತ, ಅಸ್ಥಿರ, ಮಾರ್ಪಡುವ. 3. ನಿಯಮವಿಲ್ಲದ.

**अनेकार्थ ಅನೇಕಾರ್ಥ** (वि०) 1. ಒಂದಕ್ಕಿಂತಲೂ ಹೆಚ್ಚು ಅರ್ಥವುಳ್ಳ. अनेके अर्था यस्य। "अनेकार्थस्य शब्दस्य संयोगाद्यैर्नियन्त्रिते। एकत्रार्थेऽन्यधीहेतुर्व्यञ्जना साभिधाश्रया" सा० द० २-१४। 2. ಹೆಚ್ಚು ಪ್ರಯೋಜನವುಳ್ಳ. अनेके अर्थाः प्रयोजनानि यस्य।

**अनेडमूक ಅನೇಡಮೂಕ** (वि०) 1. ಶಬ್ದವನ್ನು ಕೇಳುವ ಶಕ್ತಿಯೂ ಮಾತನಾಡುವ ಶಕ್ತಿಯೂ ಇಲ್ಲದ. नास्ति एडः मूकश्च यस्मात्। 2. ಶಠ, ಮೂರ್ಖ, ಅಜ್ಞ. "अनेडमूक उद्दिष्टः शठे वाक्श्रुतिवर्जिते" मेदि०।

**अनेनस् ಅನೇನಸ್** (वि०) 1. ಪಾಪವಿಲ್ಲದ. 2. ದೋಷವಿಲ್ಲದ, ತಪ್ಪಿಲ್ಲದ, ಅಪರಾಧವಿಲ್ಲದ. नास्ति एनः यस्य। "एनः पापापराधयोः" मेदि०।

**अनेहस् ಅನೇಹಸ್** (पु०) 1. ಕಾಲ, ಸಮಯ. न हन्यते — हन (हिंसागत्योः) "असिः" एहश्च (उ० ४-२२४)। (वि०) 2. ಹಿಂಸಿಸಲ್ಪಡದ.

**अनैकाग्र्य ಅನೈಕಾಗ್ರ್ಯ** (न०) 1. ಏಕಾಗ್ರತೆಯಿಲ್ಲದಿರುವಿಕೆ, ಚಿತ್ತಸ್ಥೈರ್ಯವಿಲ್ಲದಿರುವಿಕೆ. (वि०) 2. ಏಕಾಗ್ರತೆಯಿಲ್ಲದ, ಒಂದೇ ವಿಷಯದಲ್ಲಿ ಮನಸ್ಸಿಲ್ಲದ.

**अनैकान्त ಅನೈಕಾಂತ** (पु०) ದುಷ್ಟಹೇತು, ಹೇತ್ವಾಭಾಸ.

**अनैकान्तिक ಅನೈಕಾಂತಿಕ** (पु०) 1. ದುಷ್ಟಹೇತು, ಹೇತ್ವಾಭಾಸ. "अनैकान्तो विरुद्धश्चाप्यसिद्धः प्रतिपक्षितः। कालात्ययापदिष्टश्च हेत्वाभासश्च पञ्चधा" ಎಂದು ಹೇತ್ವಾಭಾಸವು ಐದುವಿಧ. (वि०) 2. ನಿಶ್ಚಯವಿಲ್ಲದ, ಭರವಸೆಯಿಲ್ಲದ, ಅಸ್ಥಿರ, ಮಾರ್ಪಡುವ.

**अनैक्य ಅನೈಕ್ಯ** (न०) 1. ಅನೇಕವಾಗಿರುವಿಕೆ, ಬಹುವಾಗಿರುವಿಕೆ. 2. ಒಗ್ಗಟ್ಟಿಲ್ಲದಿರುವಿಕೆ, ಐಕಮತ್ಯವಿಲ್ಲದಿರುವಿಕೆ.

**अनैतिह्य ಅನೈತಿಹ್ಯ** (वि०) ಐತಿಹ್ಯರೂಪವಾದ ಪ್ರಮಾಣವಿಲ್ಲದ, (ಒಬ್ಬರಿಂದ ಮತ್ತೊಬ್ಬರು ಪರಂಪರೆಯಾಗಿ ಕೇಳುವ) ಪೂರ್ವಕಥಾರೂಪವಾದ ಪ್ರಮಾಣವಿಲ್ಲದ. नास्ति ऐतिह्यं यत्र। "अनागतमनैतिह्यं कथं ब्रह्माधिगच्छति" भा०।

**अनोकह ಅನೋಕಹ** (पु०) ವೃಕ್ಷ, ಮರ. अनसः शकटस्य अकं गतिं हन्ति — हन (हिंसागत्योः) "डः" (३-२-१०१)। "अनोकहाकम्पितपुष्पगन्धी" रघु० २-१३।

**अन्त ಅಂತ** (पु०) 1. ಸೀಮೆ, ಎಲ್ಲೆ, ಗಡಿ. अति (बन्धने) "अच्" (३-१-१३४)। "वनान्तपर्यन्तमुपेत्य सस्पृहम्" नैष० १-७५। "पक्षान्ते निष्फला यात्रा"। 2. ನಾಶ. "वैरस्यान्तं करिष्यति" रामा०। 3. ನಿಶ್ಚಯ. "निर्णयोऽन्तश्च निश्चयः" वैज०। "उभयोरपि दृष्टोऽन्तस्त्वनयोस्तत्त्वदर्शिभिः" गीता २-१६। 4. ಸೆರಗು, ಅಂಚು, ಬಟ್ಟೆಯ ತುದಿ. "पवनप्रणर्तितान्तदेशे दुकूले" काद०। 5. ಸಮೀಪ, ಹತ್ತಿರ. "गङ्गाप्रपातान्तनिरूढशष्पम्" रघु० २-२६। 6. ಕೊನೆ, ಸಮಾಪ್ತಿ, ಮುಕ್ತಾಯ. "सेकान्ते मुनिकन्याभिः" रघु० १-५१। "दिनान्ते निहितं तेजः" रघु० ४-१। 7. ಪ್ರಾಂತ, ಪ್ರದೇಶ. "अमुं वनान्ताद्वनितापहारिणम्" माघ० १-६८। 8. ನಿಧನ, ಮರಣ. "वार्धके मुनिवृत्तीनां योगेनान्ते तनुत्यजाम्" रघु० १-८। 9. ಕೊನೆಯಭಾಗ. "नेत्रे कर्णान्तविश्रान्ते कर्णौ दोःस्तम्भदोलिनौ" चन्द्रा०। (न०) 10. ಸ್ವರೂಪ. "स्वरूपेऽन्तं विनाशे ना" त्रिकाण्ड०। (पुंन०) 11. ಕೊನೆಯದು, ಉಳಿದಿರುವುದು, ಶೇಷ. 12. ಅವಯವ. "अन्तः स्वरूपे निकटे प्रान्ते निश्चयनाशयोः। अवयवेऽपि" हेम०। "अन्तं स्वरूपे नाशे ना नस्त्री शेषेऽन्तिके त्रिषु" मेदि०। 13. ಒಂದು ಸಂಖ್ಯೆ, 1,0000000000000000. [ವಿವರಕ್ಕೆ "परार्ध" ಪದದಲ್ಲಿ ನೋಡಿ.] (वि०) 14. ಮನೋಹರ, ರಮ್ಯ. "दन्तोज्ज्वलासु विमलोपलमेखलान्ताः" माघ० ४-४०। 15. ಸಮೀಪದ, ಹತ್ತಿರದ.

**अन्तःकरण ಅಂತಃಕರಣ** (न०) ಅಂತರಿಂದ್ರಿಯ, ಬುದ್ಧಿ, ಚಿತ್ತ, ಮನಸ್ಸು. अन्तरम्यन्तरस्थं करणम्। "सतां हि सन्देहपदेषु वस्तुषु प्रमाणमन्तःकरणप्रवृत्तयः" शाकु० १-१९। [ಅದ್ವೈತಿಗಳು ಮನಸ್ಸು, ಬುದ್ಧಿ, ಅಹಂಕಾರ ಮತ್ತು ಚಿತ್ತಗಳೆಂದು ಅಂತಃಕರಣವು ನಾಲ್ಕುವಿಧವೆಂದು ಹೇಳುತ್ತಾರೆ.]

**अन्तःकलह ಅಂತಃಕಲಹ** (पुं०) ಒಳಜಗಳ, ಆಂತರಿಕ ಅಸಮಾಧಾನ.

**अन्तःकुटिल ಅಂತಃಕುಟಿಲ** (पुं०) 1. ಶಂಖ. (वि०) 2. ಕುಟಿಲ ಮನಸ್ಸುಳ್ಳ, ವಕ್ರಬುದ್ಧಿಯುಳ್ಳ.

**अन्तःपतित ಅಂತಃಪತಿತ** (वि०) ಒಳಗೆ ಸೇರಿರುವ, ಒಳಹೊಕ್ಕಿರುವ. अन्तरभ्यन्तरे पतितः।

**अन्तःपदवी ಅಂತಃಪದವೀ** (स्त्री०) ಸುಷುಮ್ನಾ ನಾಡಿಯ ಮಧ್ಯದಲ್ಲಿರುವ ಮಾರ್ಗ.

**अन्तःपशु ಅಂತಃಪಶು** (पुं०) ಊರಿನೊಳಗೆ ಹಸುಗಳಿರುವ ಕಾಲ, ಪೂರ್ವಾಹ್ಣ ಮತ್ತು ಸಾಯಂಕಾಲ. अन्तः ग्राममध्ये पशुर्यत्र। [ಪೂರ್ವಾಹ್ಣ ಮತ್ತು ಸಾಯಂಕಾಲಗಳಲ್ಲಿ ಗ್ರಾಮಮಧ್ಯದಲ್ಲಿ ಪಶುಗಳಿರುವುವು. ಮಧ್ಯಾಹ್ನಕಾಲದಲ್ಲಿ ಕಾಡಿಗೆ ಮೇಯಲು ಹೋಗುವುವು.]

**अन्तःपात ಅಂತಃಪಾತ** (पुं०) ಮಧ್ಯದಲ್ಲಿ ಸೇರುವುದು, ಮಧ್ಯದಲ್ಲಿ ಬೀಳುವುದು.

**अन्तःपातिन् ಅಂತಃಪಾತಿನ್** (वि०) ಮಧ್ಯದಲ್ಲಿ ಸೇರಿರುವ, ಮಧ್ಯದಲ್ಲಿ ಬಿದ್ದಿರುವ. अन्तः पतति—पत्लृ (गतौ) "णिनिः" (३-२-१३४)। स्त्रियाम् "ङीप्" (४-१-५)। **—पातिनी — ಪಾತಿನೀ.**

**अन्तःपुर ಅಂತಃಪುರ** (न०) 1. ರಾಜಸ್ತ್ರೀಯರು ವಾಸಮಾಡುವ ಮನೆ, ರಾಣಿವಾಸ, ಅರಮನೆಯ ಒಳಭಾಗದಲ್ಲಿ ಸ್ತ್ರೀಯರಿಗಾಗಿ ಏರ್ಪಟ್ಟ ಮನೆ. 2. ರಾಣಿ, ಮಹಿಷಿ, ಅಂತಃಪುರದ ಸ್ತ್ರೀಯರು. "अन्तःपुरविरहपर्युत्सुकस्य राजर्षेः" शाकु० ३।

**अन्तःपुरचर ಅಂತಃಪುರಚರ** (पुं०) ಕಂಚುಕಿ, ಅಂತಃಪುರದಲ್ಲಿ ನೇಮಿಸಿರುವ ಕಾವಲುಗಾರ, ಅಂತಃಪುರದ ರಕ್ಷಕ. अन्तःपुरे चरति—चर (गतौ) "टः" (३-२-१६)। स्त्रियाम् "ङीप्" (४-१-१५)। **—चरी —ಚರೀ.**

**अन्तःपुरसहाय ಅಂತಃಪುರಸಹಾಯ** (पुं०) ರಾಜನ ಅಂತಃಪುರದ ಸಹಾಯಕ. अन्तःपुरे सहायः [ರಾಜನಿಗೆ ಅಂತಃಪುರದಲ್ಲಿ ಕುಬ್ಜ, ಷಂಡ, ಕಿರಾತ, ಮ್ಲೇಚ್ಛ ಮತ್ತು ಶಕಾರಾದಿಗಳು ಸಹಾಯಕರು. सा० द० ३-४३।]

**अन्तःपुरिक ಅಂತಃಪುರಿಕ** (वि०) ಅಂತಃಪುರದಲ್ಲಿ ನಿಯುಕ್ತನಾದವನು. अन्तःपुरे नियुक्तः "ठक्" (४-४-६९)।

**अन्तःप्रकृति ಅಂತಃಪ್ರಕೃತಿ** (स्त्री०) ರಾಜನ ಮಂತ್ರಿಮಂಡಲ. अन्तर्वर्तिनी प्रकृतिः राज्याङ्गम्। "अणुरप्युपहन्ति विग्रहः प्रभुमन्तःप्रकृतिप्रकोपजः" किरा० २-५१।

**अन्तःप्रकोप ಅಂತಃಪ್ರಕೋಪ** (पुं०) ಒಳಗಡೆಯ ಕೋಪ, ಆಂತರಿಕ ಅಸಮಾಧಾನ, ವೈಮನಸ್ಯ.

**अन्तःप्रज्ञ ಅಂತಃಪ್ರಜ್ಞ** (वि०) 1. ಆತ್ಮಾನುಸಂಧಾನದಲ್ಲಿ ಆಸಕ್ತನಾದ, ಪರಮಾತ್ಮನ ಧ್ಯಾನದಲ್ಲಿ ತೊಡಗಿದ. अन्तःस्था प्रज्ञा यस्य। 2. ಸ್ವಪ್ನಾವಸ್ಥೆಯಲ್ಲಿರುವ (ಆತ್ಮ).

**अन्तःप्रविष्ट ಅಂತಃಪ್ರವಿಷ್ಟ** (वि०) 1. ಒಳಗೆ ಪ್ರವೇಶಿಸಿರುವ, ಒಳಹೊಕ್ಕಿರುವ. 2. ಹೃದಯದಲ್ಲಿ ಅಡಗಿರುವ.

**अन्तःशल्य ಅಂತಃಶಲ್ಯ** (न०) ಮನಸ್ಸಿಗೆ ನೋವುಂಟುಮಾಡುವ ವಿಷಯ, ಶಲ್ಯದಂತೆ ಮನಸ್ಸನ್ನು ನೋಯಿಸುವ ವಸ್ತು.

**अन्तःसंज्ञ ಅಂತಃಸಂಜ್ಞ** (वि०) ಒಳಚೈತನ್ಯವುಳ್ಳ ಮರ, ಗಿಡ, ಬಳ್ಳಿ ಮೊದಲಾದುವು; ಮಾತನಾಡಲು ಸಾಮರ್ಥ್ಯವಿಲ್ಲದ ಜೀವಿಗಳು. "तमसा बहुरूपेण वेष्टिताः कर्महेतुना। अन्तःसंज्ञा भवन्त्येते सुखदुःखसमन्विताः" मनु० १-४९।

**अन्तःसत्वा ಅಂತಃಸತ್ವಾ** (स्त्री०) ಗರ್ಭಿಣಿ, ಗರ್ಭವತಿ. अन्तः गर्भे सत्वं प्राणी यस्याः।

**अन्तःस्वेद ಅಂತಃಸ್ವೇದ** (पुं०) ಗಜ, ಆನೆ. अन्तः स्वेदो मदजलं यस्य।

**अन्तक ಅಂತಕ** (पुं०) 1. ಮೃತ್ಯು. अन्तयति—अन्त+णिच् "ण्वुल्" (३-१-१३३)। 2. ಯಮ. "ऋषिप्रभावान्मयि नान्तकोऽपि प्रभुः प्रहर्तुं किमुतान्यहिंस्राः" रघु० २-६२। 3. ವಿಷ್ಣು, ಪರಮೇಶ್ವರ, ಪರಮಾತ್ಮ. "महोदधिशयोऽन्तकः" वि० स०। (वि०) 4. ವಿನಾಶಪಡಿಸುವ. "क्रोधान्धस्तस्य तस्य स्वयमिह जगतामन्तकस्यान्तकोऽहम्" वेणी० ३-३०।

**अन्तकर ಅಂತಕರ** (वि०) ನಾಶಪಡಿಸುವ. अन्तं करोति—डुकृञ् (करणे) "टः" (३-२-२०)।

**अन्तकरण ಅಂತಕರಣ** (न०) 1. ನಾಶಪಡಿಸುವಿಕೆ. (वि०) 2. ನಾಶಪಡಿಸುವ. अन्तं करोति—डुकृञ् (करणे) "ल्युः" (३-१-१३४)। "द्यूतं समाह्वयं चैव राजा राष्ट्रान्निवारयेत्। राजान्तकरणावेतौ द्वौ दोषौ पृथिवीक्षिताम्" मनु० ९-२२१।

अन्तकर्मन् ಅಂತಕರ್ಮನ್ (न०) ನಾಶಪಡಿಸುವ ಕಾರ್ಯ.

अन्तकारिन् ಅಂತಕಾರಿನ್ (वि०) ನಾಶಪಡಿಸುವ. अन्तं करोति — डु कृञ् (करणे) "णिनिः" (३-२-७८)। स्त्रियाम् "ङीप्" —कारिणी —ಕಾರಿಣೀ.

अन्तकाल ಅಂತಕಾಲ (पु०) ಮೃತ್ಯುಕಾಲ, ಕೊನೆಗಾಲ. "अन्तकाले च मामेव स्मरन् मुक्त्वा कलेवरम्" गीता ८-५।

अन्तकृत् ಅಂತಕೃತ್ (वि०) ನಾಶಪಡಿಸುವ, ಕೊನೆಗಾಣಿಸುವ. अन्तं करोति — डु कृञ् (करणे) "क्विप्" (३-२-७६)।

अन्तग ಅಂತಗ(वि०) ಕೊನೆಗಾಣುವ, ಕಾರ್ಯದ ಕೊನೆಯನ್ನು ಮುಟ್ಟುವ. अन्तं गच्छति—गम्लृ (गतौ) "डः" (३-२-४८)।

अन्तचर ಅಂತಚರ (वि०) 1. ಕೊನೆಯಲ್ಲಿ ಸಂಚರಿಸುವ, ಗಡಿಯಲ್ಲಿ ಓಡಾಡುವ. 2. ಸಂಪೂರ್ಣವಾಗಿ ಮಾಡುವ, ಕಾರ್ಯದ ಕೊನೆಮುಟ್ಟುವ.

अन्ततस् ಅಂತತಸ್ (अव्य०) 1. ಕೊನೆಯಿಂದ. 2. ಕೊನೆಯಲ್ಲಿ, ಸಮಾಪ್ತಿಯಲ್ಲಿ. अन्त "तसिः" (वा० ५-४-४४)। 3. ಒಳಭಾಗದಲ್ಲಿ, ಮಧ್ಯದಲ್ಲಿ. 4. ಕೊನೆಯ ಪಕ್ಷ. [ಇದು अन्त ಶಬ್ದದ ಎಲ್ಲಾ ಅರ್ಥಗಳಲ್ಲಿಯೂ ಪ್ರಯೋಗಿಸಲ್ಪಡುವುದು.]

अन्तपाल ಅಂತಪಾಲ (पु०) ದ್ವಾರಪಾಲಕ. "त्वदीयेनान्तपालेनावस्कन्द्य गृहीतः" माल० १।

अन्तर् ಅಂತರ್ (अव्य०) 1. ಮಧ್ಯಭಾಗ. अम (गतौ) "अरन्" "तुट्" च (उ० ५-६०)। अन्तर्जलौघमवगाढवतः कपोलौ" माघ० ५-३८। 2. ಒಳಭಾಗ. "अन्तः कञ्चुकिकञ्चुकस्य विशति त्रासादयं वामनः" रत्ना० २-३। "अन्तः प्रविश्यावसरेऽथ तत्र" कुमा० ९-३१। 3. ಸ್ವೀಕಾರ. 4. ಹೃದಯ. "अनाविलधियामन्तश्चिन्ता मणिरिव स्फुरन्" याद० १-५२।

अन्तर ಅಂತರ (पु०) 1. ಉಡುವ ವಸ್ತ್ರ. "अन्तरे शाटकाः"। 2. ಪರಮಾತ್ಮ. (न०) 3. ಅವಕಾಶ, ಒಳಭಾಗ. अन्तं राति — रा (दाने) "कः"(३-२-३)। "ज्वलितज्योतिरिवान्तरं दिवः" किरा० ३-५८। 4. ಅವಧಿ, ಗಡು, ವಾಯಿದೆ. "मासान्तरं देयम्। 5. ವಿಶೇಷ, ಭೇದ, ವ್ಯತ್ಯಾಸ. "यदन्तरं वायसवैनतेययोः" रामा०। 6. ಕಾಲಾವಕಾಶ, ಮಧ್ಯಕಾಲ, ಕಾಲದ ಮಧ್ಯಭಾಗ. "गीतान्तरेषु श्रमवारिलेशैः" कुमा० ३-३८। 7. ವ್ಯವಧಾನ, ನಡುವಣ ಪ್ರದೇಶ. "तदन्तरे सा विरराज धेनुः" रघु० २-२०। 8. ಜಾಗ, ಸ್ಥಾನ, ಅವಕಾಶ. "लेभेऽन्तरं चेतसि नोपदेशः" रघु० ६-६६। "मृणालसूत्रान्तरमप्यलभ्यम्" कुमा० १-४०। 9. ತಾದರ್ಥ್ಯ, ಉದ್ದೇಶ. [ಅದಕ್ಕೋಸ್ಕರ ಎಂಬ ಅರ್ಥ.] "अवैमि कार्यान्तरमानुषस्य" रघु० १६-८२। 10. ಅಶಕ್ತತೆ, ಬಲಹೀನತೆ, ದೌರ್ಬಲ್ಯ. "सुजयः खलु तादृगन्तरे" किरा० २-५२। 11. ಅವಸರ, ಸಮಯ. "अत्रान्तरे किमपि वाग्विभवातिवृत्तवैचित्र्यमुल्लसितविभ्रममायताक्ष्याः" मालती० १-२९। 12. ವಿನಾ, ಅದನ್ನುಳಿದು. 13. ಅಂತರ್ಧಾನ, ಮರೆಯಾಗುವಿಕೆ. "पर्वतान्तरितो रविः"। 14. ಬೇರೊಂದು, ಮತ್ತೊಂದು. "पात्रविशेषे न्यस्तं गुणान्तरं व्रजति शिल्पमाधातुः" माल० १-६। 15. ವಿವರ, ರಂಧ್ರ, ತೂತು. 16. ಅವಸಾನ, ಕೊನೆ. (वि०) 17. ತನ್ನದಾದ, ತನ್ನ ಸಂಬಂಧವಾದ. "न चैतादृष्टं माता मे यदवोचन्मदन्तरम्" रामा०। 18. ಒಳಗಿರುವ, ಮಧ್ಯದಲ್ಲಿರುವ. 19. ಸಮೀಪದಲ್ಲಿರುವ, ಹತ್ತಿರದಲ್ಲಿರುವ. 20. ಸದೃಶವಾದ, ಸಮಾನವಾದ. "स्थानेऽन्तरतमः"। 21. ಬೇರೆಯಾದ. 22. ಹೊರಗಡೆಯಿರುವ. "अन्तरमवकाशावधिपरिधानान्तर्धिभेदतादर्थ्ये। छिद्रात्मीयविनाबहिरवसरमध्यसदृशेषु" मेदि०। "विशेषविवरान्तर्धिष्ववसानविनार्थयोः" वैज०।

अन्तरग्नि ಅಂತರಗ್ನಿ (पु०) 1. ಜಠರಾಗ್ನಿ, ಆಹಾರವನ್ನು ಅರಗಿಸುವ ಶಕ್ತಿ. अन्तर्वर्ती अग्निः। (अव्य०) 2. ಅಗ್ನಿಯ ಮಧ್ಯದಲ್ಲಿ. "दीप्तान्तरग्निपरिशुद्धकोष्ठः" सुश्रु०।

अन्तरङ्ग ಅಂತರಂಗ (न०) 1. ಹೃದಯ, ಮನಸ್ಸು, ಅಂತಃಕರಣ. 2. (ವ್ಯಾಕರಣದಲ್ಲಿ) ಪರ ಮತ್ತು ನಿತ್ಯಶಾಸ್ತ್ರಗಳನ್ನು ಬಾಧಿಸಿ ಬರುವ ಒಂದು ಶಾಸ್ತ್ರ, ಅಂತರಂಗಶಾಸ್ತ್ರ. "परनित्यान्तरङ्गापवादानामुत्तरोत्तरं बलीयः" (परि० ३९)। (वि०)3. ಬಹಳ ಪ್ರಿಯವಾದ, ಪ್ರೇಮಪಾತ್ರವಾದ. अन्तरं सदृशमङ्गं यस्य। "चरमगिरिकुरङ्गीशृङ्गकण्डूयनेन स्वपिति सुखमिदानीमन्तरङ्गः कुरङ्गः"। 4. ವಿಶ್ವಾಸಕ್ಕೆ ಪಾತ್ರನಾದ, ನಂಬಿಕೆಗೆ ಅರ್ಹನಾದ (ಸ್ನೇಹಿತ). "अन्तरङ्गेषु राज्यभारं समर्प्य" दशकु०।

**अन्तरचक्र** ಅಂತರಚಕ್ರ (नं०) 1. ದೇಹದಲ್ಲಿ ಸುಷುಮ್ನಾ ನಾಡಿಯ ಮಧ್ಯದಲ್ಲಿರುವ ಪದ್ಮಾಕಾರದ ಆರು ಚಕ್ರಗಳು. 2. ತನ್ನವರ ಸಮೂಹ, ಆತ್ಮೀಯರ ಗುಂಪು. [ವಿವರಕ್ಕೆ "चक्र" ಪದದಲ್ಲಿ ನೋಡಿ.]

**अन्तरज्ञ** ಅಂತರಜ್ಞ (वि०) ವಿಶೇಷ ವಿಷಯಗಳನ್ನು ತಿಳಿದಿರುವ, ವ್ಯತ್ಯಾಸವನ್ನು ಅರಿತಿರುವ. अन्तरं भेदं जानाति — ज्ञा (अवबोधने) "क." (३-२-३)। "नान्तरज्ञाः श्रियो जातु प्रियैरासां न भूयते" किरा० ११-२४।

**अन्तरतम** ಅಂತರತಮ (वि०) ಹೆಚ್ಚು ಹೋಲುವ, ಬಹುಭಾಗ ಸಮಾನವಾಗಿರುವ. "स्थानेऽन्तरतमः" (१-१-५०)।

**अन्तरतस्** ಅಂತರತಸ್ (अव्य०) ಮಧ್ಯದಲ್ಲಿ, ನಡುವೆ. अन्तर "तसिः" (वा० ५-४-४४)। "तृणमन्तरतः कृत्वा रावणं वाक्यमब्रवीत्" रामा०।

**अन्तरदिश्** ಅಂತರದಿಶ್ (स्त्री०) ವಿದಿಕ್ಕು, ಮಧ್ಯದ ದಿಕ್ಕು; ಆಗ್ನೇಯ, ನೈರ್ಋತ್ಯ, ವಾಯುವ್ಯ ಮತ್ತು ಈಶಾನ್ಯ ದಿಕ್ಕುಗಳು.

**अन्तरदृश्** ಅಂತರದೃಶ್ (पुं०) 1. ಪರಮಾತ್ಮಸ್ವರೂಪವನ್ನು ತಿಳಿದವನು, ಪರಮಾತ್ಮಧ್ಯಾನಾಸಕ್ತ. अन्तरे परमात्मनि दृक् यस्य। (वि०) 2. ವಿಶೇಷವನ್ನು ತಿಳಿದಿರುವ, ಭೇದವನ್ನು ಅರಿತಿರುವ. अन्तरं पश्यति — दृशिर् (प्रेक्षणे) "क्विप्" (३-२-७६)।

**अन्तरदेश** ಅಂತರದೇಶ (पुं०) ಮಧ್ಯದೇಶ, ನಡುವಣ ಪ್ರದೇಶ.

**अन्तरपट** ಅಂತರಪಟ (पुंनं०) ಇಬ್ಬರ ಮಧ್ಯೆ ಹಿಡಿಯುವ ಬಟ್ಟೆಯ ಪರದೆ, ವಧೂವರರ ಅಥವಾ ಗುರುಶಿಷ್ಯರ ಸಮಾಗಮಕ್ಕೆ ಮುಂಚೆ ಅವರಿಬ್ಬರ ಮಧ್ಯದಲ್ಲಿ ಹಿಡಿಯುವ ತೆರೆ.

**अन्तरपुरुष** ಅಂತರಪುರುಷ (पुं०) 1. ಅಂತರ್ಯಾಮಿ, ಪರಮಾತ್ಮ. 2. ಮಧ್ಯಸ್ಥನಾದ ಮನುಷ್ಯ.

**अन्तरपूजा** ಅಂತರಪೂಜಾ (स्त्री०) ಮಾನಸಿಕ ಪೂಜೆ, ತಂತ್ರೋಕ್ತಕ್ರಮದಲ್ಲಿ ಮನಸ್ಸಿನಿಂದ ಕಲ್ಪಿತವಾದ ಉಪಚಾರಗಳಿಂದ ಮಾಡುವ ಪೂಜೆ.

**अन्तरप्रभव** ಅಂತರಪ್ರಭವ (पुं०) ಮಿಶ್ರಜಾತಿಯವನು, ಬೆರಕೆ ಜಾತಿಯವನು. अन्तराभ्यां भिन्नवर्णमातापितृभ्यां प्रभवति। "अन्तरप्रभवाणां च धर्मान्नो वक्तुमर्हसि" मनु० १-२।

**अन्तरय** ಅಂತರಯ (पुं०) 1. ವ್ಯವಧಾನ. (वि०) 2. ಚಿತ್ತದಲ್ಲಿರುವ, ಮನಸ್ಸಿನಲ್ಲಿರುವ.

**अन्तरशायिन्** ಅಂತರಶಾಯಿನ್ (पुं०) 1. ಹೃದಯದಲ್ಲಿ ನೆಲೆಸಿರುವ ಜೀವ. (वि०) 2. ಮಧ್ಯದಲ್ಲಿರುವ.

**अन्तरा** ಅಂತರಾ (अव्य०) 1. ಮಧ್ಯದಲ್ಲಿ, ನಡುವೆ. (1) ಮಾರ್ಗದ ಮಧ್ಯದಲ್ಲಿ. "कुमार! ममान्तिकमुपागच्छन् अन्तरा त्वदीयेनान्तपालेनावस्कन्द्य गृहीतः" माल० १। (2) ಮಧ್ಯಕಾಲದಲ್ಲಿ. "नाद्याच्चैवान्तरा तथा"। (3) ಮಧ್ಯೆ ಮಧ್ಯೆ, ಆಗಾಗ್ಗೆ. "अन्तरा पितृसक्कमन्तरा मातृसक्कमालापं कुर्वन्" काद०। (4) ಎರಡರ ನಡುವೆ, ಎರಡು ವಸ್ತುಗಳ ಮಧ್ಯದಲ್ಲಿ. "अन्तरा त्वां च मां च कमण्डलुः"। "अन्तरा त्वां मां हरिः"। 2. ಇಲ್ಲದೆ, ವಿನಾ, ಹೊರತು, ಬಿಟ್ಟು. "न च प्रयोजनमन्तरा चाणक्यः स्वप्नेऽपि चेष्टते" मुद्रा० ३। 3. ಸನ್ನಿಧಿ, ಸಾಮೀಪ್ಯ, ಹತ್ತಿರ. 4. ಸುತ್ತಲೂ. 5. ಎದುರು. 6. ಸಂಪೂರ್ಣ. 7. ಎರಡು ಕಡೆಯೂ. 8. ಶೀಘ್ರ, ಬೇಗ, ಜಾಗ್ರತೆ. "अन्तरा पुनः। विनार्थे सन्निधौ मध्येऽभितोऽभिमुखकार्त्स्न्ययोः। समीपोभयतःशीघ्रेषु" हेम०।

**अन्तरात्मन्** ಅಂತರಾತ್ಮನ್ (पुं०) 1. ಜೀವಾತ್ಮ. "जातो ममायं विशदः प्रकामं प्रत्यर्पितन्यास इवान्तरात्मा" शाकु० ४-२१। 2. ಅಂತರ್ಯಾಮಿ, ಪರಮಾತ್ಮ. "अन्तरात्मनि निविष्टमन्तरा" याद० १७-१२६।

**अन्तराय** ಅಂತರಾಯ (पुं०) 1. ವಿಘ್ನ, ಪ್ರತಿಬಂಧಕ. अन्तर्मध्ये अयनम् — अय (गतौ) "घञ्" (३-३-१८)। "त्वमन्तरायो भवसि च्युतो विधिः" रघु० ३-४५। 2. ವ್ಯವಧಾನ, ನಡುವೆ ಬರೋಣ. (वि०) 3. ವಿಘ್ನವನ್ನುಂಟುಮಾಡುವ.

**अन्तराराम** ಅಂತರಾರಾಮ (पुं०) ಒಳಗೇ ಸಂತೋಷಪಡುವವನು, ಹೃದಯದಲ್ಲಿ ಆತ್ಮಾನಂದವನ್ನನುಭವಿಸುವವನು. अन्तरे आत्मनि आरमते। "योऽन्तःसुखोऽन्तराराम:" गीता ५-२४।

**अन्तराल** ಅಂತರಾಳ (नं०) 1. ಒಳಭಾಗ, ಮಧ್ಯಭಾಗ, ಮಧ್ಯಪ್ರದೇಶ. अन्तरमवकाशं लाति — ला (आदाने) "कः" (३-२-३)। "मुहुरन्तरालभुवमस्तगिरेः" माघ० ९-२। 2. ಮಿಶ್ರಜಾತಿ, ಬೆರಕೆಜಾತಿ. "वर्णानां सान्तरालानां स सदाचार उच्यते"।

**अन्तरालदिश्** ಅಂತರಾಳದಿಶ್ (स्त्री०) ವಿದಿಕ್ಕು, ಆಗ್ನೇಯ ಮೊದಲಾದ ಮಧ್ಯ ದಿಕ್ಕುಗಳು.

**अन्तरिक्ष ಅಂತರಿಕ್ಷ** (नं०) ಗಗನ, ಆಕಾಶ. अन्तः ऋक्षाण्यस्य। पृषो०। "अन्तरिक्षमणिदर्पणान्तरे" याद० १७-२५।

**अन्तरित ಅಂತರಿತ** (वि०) 1. ಒಳಗೆ ಸೇರಿರುವ. अन्तर्+ इण्(गतौ) "क्तः" (३-४-७२)। 2. ಮುಚ್ಚಲ್ಪಟ್ಟ, ಮರೆಮಾಡಲ್ಪಟ್ಟ. अन्तर+ णिच् कर्म० "क्तः" (३-२-१०२)। "श्रियः पद्मनिषण्णायाः क्षौमान्तरितमेखले" रघु० १०-८। 3. ಮರೆಯಾದ, ಅದೃಶ್ಯವಾದ. "द्विषत्प्रतापान्तरितोरुतेजाः" किरा० ३-४५।

**अन्तरिन्द्रिय ಅಂತರಿಂದ್ರಿಯ** (नं०) ಅಂತಃಕರಣ, ಚಿತ್ತ, ಮನಸ್ಸು.

**अन्तरीक्ष ಅಂತರೀಕ್ಷ** (नं०) ಗಗನ, ಆಕಾಶ. द्यावा-पृथिव्योरन्तरीक्ष्यते —अन्तर्+ईक्ष (दर्शने) "घञ्" (३-३-१९)। "अन्तर्जलौघमवगाढवतः कपोलौ हित्वा क्षणं विततपक्षतिरन्तरीक्षे" माघ० ५-३८।

**अन्तरीप ಅಂತರೀಪ** (नं०) ದ್ವೀಪ, ನೀರಿನ ಮಧ್ಯ ಪ್ರದೇಶ, ನೀರಿನ ಮಧ್ಯದಲ್ಲಿರುವ ದಿಣ್ಣೆ. अन्तर्गता आपो यस्मिन् "अः" (५-४-७४) "ईत्" (६-३-९७)।

**अन्तरीय ಅಂತರೀಯ** (नं०) ಕೆಳಗಿನ ಬಟ್ಟೆ, ಉಡುವ ಬಟ್ಟೆ. अन्तरे भवम् "छः" (४-२-१३८)।

**अन्तरे ಅಂತರೇ** (अव्य०) ಮಧ್ಯದಲ್ಲಿ, ನಡುವೆ. अन्तरेति—इण् (गतौ) "विच्" (३-२-७५)। "आवयोरन्तरे जाताः पर्वताः सरितो द्रुमाः"। "मध्ये स्यादन्तरेणान्तरेऽन्तरा" वैज०।

**अन्तरेण ಅಂತರೇಣ** (अव्य०) 1. ವಿನಾ, ಹೊರತು, ಬಿಟ್ಟು. अन्तरेति —इण् (गतौ) "णः"। "क्रियान्तरान्तरायमन्तरेण" मुद्रा० ३। 2. ಮಧ್ಯದಲ್ಲಿ, ನಡುವೆ. "मृणालसूत्रामलमन्तरेण" माघ० ३-३।

**अन्तर्गडु ಅಂತರ್ಗಡು** (वि०) ನಿರರ್ಥಕವಾದ, ಆಡಿನ ಕತ್ತಿನಲ್ಲಿರುವ ಮಾಂಸ ಪಿಂಡದಂತೆ ಪ್ರಯೋಜನವಿಲ್ಲದ. अन्तर्मध्ये गडुरिव। "अन्तर्गडु निरर्थकम्" वैज०।

**अन्तर्गत ಅಂತರ್ಗತ** (वि०) 1. ಹೃದಯದಲ್ಲಿರುವ, ಮನಸ್ಸಿನಲ್ಲಿರುವ. अन्तः अन्तःकरणे गतः। "अन्तर्गतं प्राणभृतां हि वेद" रघु० २-४३। 2. ದೇಹದಲ್ಲಿರುವ, ಶರೀರದಲ್ಲಿರುವ. 3. ಮಧ್ಯದಲ್ಲಿರುವ, ಒಳಗಡೆಯಿರುವ. "नभः प्रतिच्छन्दनिभेन नूनमन्तर्गतं व्यञ्जयति स्वधाम्ना" याद० १८-१०६।

**अन्तर्गृह ಅಂತರ್ಗೃಹ** (नं०) 1. ಒಳಗಿನ ಮನೆ, ಮನೆಯೊಳಗಿನ ಕೊಠಡಿ, ಮಧ್ಯದ ಮನೆ. 2. ಕಾಶಿಯಲ್ಲಿ ಒಂದು ಯಾತ್ರಾಸ್ಥಳ. "पञ्चक्रोश्यां कृतं पापमन्तर्गृहे विनश्यति"। (अव्य०) 3. ಮನೆಯ ಮಧ್ಯದಲ್ಲಿ.

**अन्तर्जठर ಅಂತರ್ಜಠರ** (अव्य०) ಉದರದ ಮಧ್ಯದಲ್ಲಿ, ಹೊಟ್ಟೆಯೊಳಗೆ. जठरस्यान्तः।

**अन्तर्दशा ಅಂತರ್ದಶಾ** (स्त्री०) (ಜ್ಯೋತಿಃಶಾಸ್ತ್ರದಲ್ಲಿ ಹೇಳಿರುವ) ಒಂದು ಗ್ರಹದ ಮಹಾದಶೆಯಲ್ಲಿ ಇತರ ಗ್ರಹಗಳು ಅಧಿಕಾರ ನಡೆಯಿಸಿ ಫಲಕೊಡುವ ಕಾಲ, ಭುಕ್ತಿ. अन्तर्गता दशा आधिपत्यकालः।

**अन्तर्दाह ಅಂತರ್ದಾಹ** (पुं०) ದೇಹದೊಳಗಿನ ತಾಪ, ಬೇಗುದಿ, अन्तः शरीरमध्ये दाहः तापः।

**अन्तर्दुष्ट ಅಂತರ್ದುಷ್ಟ** (वि०) ದುಷ್ಟಹೃದಯವುಳ್ಳ, ಕೆಟ್ಟ ಮನಸ್ಸುಳ್ಳ, ಹೊರಗಡೆ ಸಾಧುವಾಗಿ ತೋರುವ. अन्तः अन्तःकरणे दुष्टः।

**अन्तर्द्वार ಅಂತರ್ದ್ವಾರ** (नं०) ಒಳಬಾಗಿಲು, ಮನೆಯೊಳಗಿನ ರಹಸ್ಯವಾದ ಬಾಗಿಲು. अन्तर्गतं द्वारम्।

**अन्तर्धा ಅಂತರ್ಧಾ** (स्त्री०) ಮರೆಯಾಗುವಿಕೆ. अन्तर्+ डु धाञ् (धारणपोषणयोः) "अङ्" (वा० ३-३-१०६)। "अन्तर्धामुपययुरुत्पलावलीषु" माघ० ८-१२।

**अन्तर्धान ಅಂತರ್ಧಾನ** (नं०) ಮರೆಯಾಗುವಿಕೆ. अन्तर्+डु धाञ् (धारणपोषणयोः) "ल्युट्" (३-३-११५)। "अन्तर्धानव्यसनरसिका रात्रिकापालिकीयम्" कुव० पु० ५९।

**अन्तर्धि ಅಂತರ್ಧಿ** (पुं०) ಮರೆಯಾಗುವಿಕೆ. अन्तर्+डु धाञ् (धारणपोषणयोः) "किः" (३-३-९२)। "अन्तर्धिं द्रुतमिव कर्तुमश्रुवर्षैः" माघ० ८-४२।

**अन्तर्नगर ಅಂತರ್ನಗರ** (नं०) 1. ಅಂತಃಪುರ, ರಾಣಿವಾಸ. "दशाननान्तर्नगरं ददर्श" रामा०। (अव्य०) 2. ನಗರದ ಮಧ್ಯದಲ್ಲಿ, ನಗರದ ಒಳಭಾಗದಲ್ಲಿ. नगरस्यान्तः। अव्ययी०।

**अन्तर्निहित ಅಂತರ್ನಿಹಿತ** (वि०) ಒಳಗೆ ಸೇರಿಸಲ್ಪಟ್ಟ, ಒಳಗೆ ಇಡಲ್ಪಟ್ಟ. अन्तः निहितम्। "अङ्गैरन्तर्निहितवचनैः सूचितः सम्यगर्थः" माल० २-९।

**अन्तर्भाव ಅಂತರ್ಭಾವ** (पुं०) 1. ಮಧ್ಯದಲ್ಲಿ ಸೇರುವಿಕೆ. 2. ಮರೆಯಾಗುವಿಕೆ. 3. ಮನೋಭಾವ, ಮನಸ್ಸಿನ ಗುಣ, ಚಿತ್ತವೃತ್ತಿ. अन्तर्+भू (सत्तायाम्) "घञ्" (३-३-१८)।

**अन्तर्भावना** ಅಂತರ್ಭಾವನಾ (स्त्री०) 1. ಮಧ್ಯದಲ್ಲಿ ಸೇರಿಸುವಿಕೆ. 2. ಚಿಂತೆ, ಹಂಬಲ. 3. ಧ್ಯಾನ. अन्तर्+भू (सत्तायाम्) + णिच् "युच्" (३-३-१०७)।

**अन्तर्भावित** ಅಂತರ್ಭಾವಿತ (वि०) ಮಧ್ಯೆ ಸೇರಿಸಲ್ಪಟ್ಟ, ಮಧ್ಯೆ ಪ್ರವೇಶಗೊಳಿಸಲ್ಪಟ್ಟ. अन्तर्+भू (सत्तायाम्) +णिच् "क्तः" (३-२-१०२)।

**अन्तर्भूत** ಅಂತರ್ಭೂತ (वि०) 1. ಒಳಗೆ ಸೇರಿರುವ. 2. ಮಧ್ಯದಲ್ಲಿರುವ. 3. ಮರೆಯಾದ.

**अन्तर्मनस्** ಅಂತರ್ಮನಸ್ (वि०) 1. ದುಃಖಗೊಂಡ ಮನಸ್ಸುಳ್ಳ, ಚಿಂತೆಯಿಂದ (ಹೊರಗಿನ ವ್ಯಾಪಾರವನ್ನು ಬಿಟ್ಟು) ಕೊರಗುವ ಮನಸ್ಸುಳ್ಳ. 2. ಸಮಾಧಾನಗೊಂಡ ಮನಸ್ಸುಳ್ಳ, ಯೋಚನೆಯಿಲ್ಲದೆ ಪರಮಾತ್ಮನ ಧ್ಯಾನದಲ್ಲಿ ಆಸಕ್ತವಾದ ಮನಸ್ಸುಳ್ಳ. अन्तः अन्तर्मुखं मनो यस्य।

**अन्तर्मातृका** ಅಂತರ್ಮಾತೃಕಾ (स्त्री०) ತಂತ್ರೋಕ್ತವಾದ ಷಟ್‌ಚಕ್ರದಲ್ಲಿರುವ ಮಾತೃಕೆಗಳು, "अ" ಕಾರಾದಿ ವರ್ಣಗಳು.

**अन्तर्मातृकान्यास** ಅಂತರ್ಮಾತೃಕಾನ್ಯಾಸ (पु०) ದೇಹದೊಳಗಿನ (ತಂತ್ರೋಕ್ತವಾದ) ಪದ್ಮಗಳಲ್ಲಿ "अ" ಕಾರಾದಿ ವರ್ಣಗಳ ಉಚ್ಚಾರಣ ಪೂರ್ವಕ ಆಯಾ ಸ್ಥಾನಗಳಲ್ಲಿ ಮಾಡುವ ನ್ಯಾಸ. ಇದರ ಕ್ರಮವು ತಂತ್ರಸಾರದಲ್ಲಿ ಈ ರೀತಿ ಹೇಳಲ್ಪಟ್ಟಿದೆ:—"द्व्यष्टपत्राम्बुजे कण्ठे स्वरान् षोडश विन्यसेत्। द्वादशच्छदहृत्पद्मे कादीन् द्वादश विन्यसेत्। दशपत्राम्बुजे नाभौ डकारादीन्न्यसेद्दश। षट्पत्रमध्ये लिङ्गस्थे बकारादीन् न्यसेच्च षट्। आधारे चतुरो वर्णान् न्यसेद्वादीन् चतुर्दले। हस्तौ भ्रूमध्यगे पद्मे द्विदले विन्यसेत् प्रिये। तन्मध्ये परबिन्दुं च सृष्टिस्थितिलयात्मकम्। एवं समाहितमना ध्यायेन्न्यासोऽयमान्तरः" तन्त्रसा०।

**अन्तर्मुख** ಅಂತರ್ಮುಖ (वि०) ಬಾಹ್ಯ ವ್ಯಾಪಾರವನ್ನು ಬಿಟ್ಟು ಪರಮಾತ್ಮನ ಧ್ಯಾನಾಸಕ್ತವಾದ. अन्तरभ्यन्तरे मुखं यस्य। "अन्तर्मुखं चित्तमिवान्वविन्दत्" याद० १-८७।

**अन्तर्मृत** ಅಂತರ್ಮೃತ (पु०) ಹೊಟ್ಟೆಯೊಳಗೆ ಮೃತವಾದ ಶಿಶು.

**अन्तर्य** ಅಂತರ್ಯ (वि०) ಮಧ್ಯದಲ್ಲಿರುವ. अन्तरे भवः—अन्तर "यत्" (४-३-५४)।

**अन्तर्याग** ಅಂತರ್ಯಾಗ (पु०) ತಂತ್ರೋಕ್ತವಾದ ಮಾನಸ ಪೂಜೆ. अन्तः मनसा कृतो यागः।

**अन्तर्यामिन्** ಅಂತರ್ಯಾಮಿನ್ (पु०) ಈಶ್ವರ, ಪರಮಾತ್ಮ. [ಒಳಗಡೆ ಪ್ರವೇಶಿಸಿ ಜೀವನನ್ನು ತನ್ನ ಕಾರ್ಯಗಳಲ್ಲಿ ಪ್ರೇರಿಸುವುದರಿಂದ ಪರಮಾತ್ಮನು ಅಂತರ್ಯಾಮಿ.]

**अन्तर्वंशिक** ಅಂತರ್ವಂಶಿಕ (पु०) ಅಂತಃಪುರದಲ್ಲಿ ನಿಯುಕ್ತನಾದ ಅಧಿಕಾರಿ, ಕುಬ್ಜ, ವಾಮನ, ಕಿರಾತ ಮೊದಲಾದವರು. अन्तर्वंशे अभ्यन्तरगृहे नियुक्तः "ठक्" (४-४-६९)।

**अन्तर्वत्नी** ಅಂತರ್ವತ್ನೀ (स्त्री०) ಗರ್ಭಿಣಿ. अन्तरस्त्यस्यां गर्भः "नुक्" (४-१-३२)। "मतुप्" निपा०। "ङीप्" (४-१-५)। "तस्यामेवास्य यामिन्यामन्तर्वत्नी प्रजावती। सुतावसूत संपन्नौ कोशदण्डाविव क्षितिः" रघु० १५-१३।

**अन्तर्वर्तिन्** ಅಂತರ್ವರ್ತಿನ್ (वि०) ಮಧ್ಯದಲ್ಲಿರುವ, ಒಳಗಡೆಯಿರುವ. अन्तः वर्तते—वृतु (वर्तने) "णिनिः" (३-२-७८)।

**अन्तर्वाणि** ಅಂತರ್ವಾಣಿ (पु०) ಪಂಡಿತ, ಶಾಸ್ತ್ರಗಳನ್ನರಿತವನು. अन्तः अन्तःकरणे वाणी शास्त्रात्मिका यस्य।

**अन्तर्विगाह** ಅಂತರ್ವಿಗಾಹ (पु०) ಒಳಗಡೆ ಪ್ರವೇಶಿಸುವುದು, ಮಧ್ಯೆ ಪ್ರವೇಶಿಸುವುದು.

**अन्तर्वेश** ಅಂತರ್ವೇಶ (पु०) ಅಂತಃಪುರ, ರಾಣಿವಾಸ.

**अन्तर्वेशिक** ಅಂತರ್ವೇಶಿಕ (पु०) ಅಂತಃಪುರದಲ್ಲಿ ನಿಯುಕ್ತನಾದ ಅಧಿಕಾರಿ. अन्तर्वेशे नियुक्तः "ठक्" (४-४-६९)।

**अन्तर्वेश्मन्** ಅಂತರ್ವೇಶ್ಮನ್ (न०) 1. ಮನೆಯ ಒಳಭಾಗ. 2. ಅಂತಃಪುರ.

**अन्तर्वेश्मिक** ಅಂತರ್ವೇಶ್ಮಿಕ (पु०) ಅಂತಃಪುರದ ಅಧಿಕಾರಿ. अन्तर्वेश्मनि नियुक्तः।

**अन्तर्हास** ಅಂತರ್ಹಾಸ (पु०) 1. ಬಾಯಿ ಮುಚ್ಚಿಕೊಂಡು ನಗುವುದು, ಮುಗುಳುನಗೆ, ಹೊರಕ್ಕೆ ತಿಳಿಯದಂತೆ ಒಳಗೇ ನಗುವುದು. अन्तः अप्रकाशो हासः "अन्तर्हासलसत्कपोलफलकां धूर्तोऽपरां चुम्बति" काव्यप्र०। (वि०) 2. ಗೂಢವಾದ ನಗುವುಳ್ಳ, ಒಳಗೇ ಅಡಗಿಸಿಕೊಂಡು ನಗುವ.

**अन्तर्हित** ಅಂತರ್ಹಿತ (वि०) 1. ಮರೆಯಾದ, ಅದೃಶ್ಯವಾದ. अन्तर्+डु धाञ् (धारणे) "क्तः" (३-२-१०२) "अन्तर्हिते शशिनि सैव कुमुद्वती मे" शाकु० ४-२। 2. ಗುಪ್ತವಾದ, ರಹಸ್ಯವಾದ.

**अन्तवत्** ಅಂತವತ್ (वि०) 1. ನಶ್ವರವಾದ, ನಾಶ ಸ್ವಭಾವದ, ಕೊನೆಯುಳ್ಳ. अन्तो नाशोऽस्यास्ति "मतुप्" (५-२-९४)। "अन्तवन्त इमे देहा नित्यस्योक्ताः शरीरिणः" गीता २-१८। 2. ಎಲ್ಲೆಯುಳ್ಳ, ಅವಧಿಯುಳ್ಳ.

**अन्तश्छिद्र** ಅಂತಶ್ಛಿದ್ರ (वि०) 1. ಒಳಗಡೆ ರಂಧ್ರವುಳ್ಳ, ಒಳಗಡೆ ಟೊಳ್ಳಾಗಿರುವ. अन्तः छिद्रम्। "अन्तश्छिद्राणि भूयांसि कण्टका बहवो बहिः" कुव० पु० ७९। 2. ಒಳಜಗಳವುಳ್ಳ, ಅಂತಃಕಲಹವುಳ್ಳ.

**अन्तसद्** ಅಂತಸದ್ (पु०) ಶಿಷ್ಯ. अन्ते समीपे सीदति — षद्लृ (विशरणादौ) "क्विप्" (३-२-६१)। "तमुपासते गुरुमिवान्तसदः" किरा० ६-३४।

**अन्तःसलिल** ಅಂತಃಸಲಿಲ (न०) 1. ಭೂಮಿಯೊಳಗಿನ ನೀರು. अन्तरप्रकाशं सलिलम्। (वि०) 2. ಒಳಗಡೆ ನೀರುಳ್ಳ. (अव्य०) 3. ನೀರಿನೊಳಗೆ, ನೀರಿನ ಮಧ್ಯದಲ್ಲಿ.

**अन्तःसलिला** ಅಂತಃಸಲಿಲಾ (स्त्री०) ಗುಪ್ತಗಾಮಿನಿ, ಸರಸ್ವತೀ ನದಿ. अन्तर्गतं सलिलमस्याः।

**अन्तस्ताप** ಅಂತಸ್ತಾಪ (पु०) 1. ದೇಹದೊಳಗಿನ ಬೇನೆ, ಜ್ವರ. 2. ಚಿಂತೆ, ಯೋಚನೆ.

**अन्तावसायिन्** ಅಂತಾವಸಾಯಿನ್ (पु०) 1. ಮುನಿ, ತಪಸ್ವಿ. अन्ते वयसि अवस्यति तत्त्वम्। 2. ನಾಪಿತ, ನಾಯಿಂದ, ಕ್ಷೌರಕ. नखानामन्तमवसातुं शीलमस्य — अन्त+अव+षो (अन्तकर्मणि) "णिनिः" (३-२-७८)। 3. ಚಂಡಾಲ. अन्ताय प्राणनाशाय अवस्यति। 4. ಚಂಡಾಲನಿಗೆ ನಿಷಾದಿಯಲ್ಲಿ ಹುಟ್ಟಿದ ಸಂಕರ ಜಾತಿಯವನು. "चण्डालात् पुल्कसी डोम्बं निषाद्यन्तावसायिनम्" वैज०।

**अन्ति** ಅಂತಿ (स्त्री०) (ನಾಟಕ ಸಂಕೇತದಲ್ಲಿ) ಜ್ಯೇಷ್ಠ ಸಹೋದರಿ.

**अन्तिक** ಅಂತಿಕ (न०) 1. ಸಮೀಪ, ಹತ್ತಿರ. अन्तोऽस्यास्ति "ठन्" (५-२-११५)। "सिंहासनान्तिकचरेण सहोपसर्पन्" माल० १-१२। (वि०) 2. ಸಮೀಪದ, ಹತ್ತಿರದ.

**अन्तिकतम** ಅಂತಿಕತಮ (वि०) ಬಹಳ ಸಮೀಪದ. अतिशयेनान्तिकम् "तमप्" (५-३-५५)। "नेदिष्ठमन्तिकतमम्" अम०।

**अन्तिका** ಅಂತಿಕಾ (स्त्री०) 1. (ನಾಟಕ ಸಂಕೇತದಲ್ಲಿ) ಜ್ಯೇಷ್ಠ ಸಹೋದರಿ. "नाट्योक्तौ चाग्रजान्तिका" त्रिकाण्ड०। 2. ಒಲೆ. "अधिश्रयणी चुल्लिरन्तिका" वैज०।

**अन्तिकान्तिक** ಅಂತಿಕಾಂತಿಕ (न०) ಹೆಚ್ಚುಸಮೀಪ, ಬಹಳ ಹತ್ತಿರ. "अन्तिकान्तिकगतेन्दुविसृष्टे" किरा० ९-२१।

**अन्तिकाश्रय** ಅಂತಿಕಾಶ್ರಯ (पु०) ಆಶ್ರಯಸ್ಥಾನ, ಅವಲಂಬನಸ್ಥಾನ. [ಲತೆಗಳಿಗೆ ವೃಕ್ಷಗಳು ಆಶ್ರಯ. ಪಂಡಿತರಿಗೆ ರಾಜನು ಆಶ್ರಯ.] "उपघ्नन्त्वन्तिकाश्रयः" वैज०।

**अन्तिम** ಅಂತಿಮ (वि०) 1. ಕೊನೆಯದಾದ. 2. ಕೊನೆಯಲ್ಲಿರುವ. अन्ते भवः "डिमच्" (वा० ४-३-२३)। "अजातमृतमूर्खाणां वरमाद्यौ न चान्तिमः" हितो०।

**अन्तेवसत्** ಅಂತೇವಸತ್ (पु०) ವಿದ್ಯಾರ್ಥಿ, ಶಿಷ್ಯ. अन्ते समीपे वसति — वस (निवासे) "शतृ" (३-२-१२४)। "छन्दोमयीनां निलयस्य वाचामन्तेवसन्तौ मुनिपुङ्गवस्य" चं० रा०।

**अन्तेवासिन्** ಅಂತೇವಾಸಿನ್ (पु०) 1. ವಿದ್ಯಾರ್ಥಿ, ಶಿಷ್ಯ. अन्ते समीपे वसति — वस (निवासे) "णिनिः" (३-२-७८)। "वेदमनूच्याचार्योऽन्तेवासिनमनुशास्ति" तै० उ०। 2. ಚಂಡಾಲ. ग्रामादेरन्ते वसति। (वि०) 3. ಕೊನೆಯಲ್ಲಿ ವಾಸಮಾಡುವ. "अन्तेवासी शिष्येऽपि स्याच्चण्डाले प्रान्तगेऽपि च" मेदि०।

**अन्त्य** ಅಂತ್ಯ (पु०) 1. ಚಂಡಾಲ. अन्ते भवः "यत्" (४-३-५४)। (वि०) 2. ಕೊನೆಯದಾದ, ಕಡೆಯಲ್ಲಿರುವ, ಕೊನೆಯಲ್ಲುಂಟಾದ. अन्ते भवम्। 3. ಅಧಮ, ನೀಚ ಗುಣವುಳ್ಳವನು. (स्त्री०) **अन्त्या** ಅಂತ್ಯಾ. 4. ಮುಸ್ತೆ, ಕೊನ್ನಾರಿ.

**अन्त्यऋण** ಅಂತ್ಯಋಣ (न०) ಮೂರು ಋಣಗಳಲ್ಲಿ ಕೊನೆಯದು, ಪಿತೃಋಣ. [ವಿವರಕ್ಕೆ "ऋणवत्" ಪದದಲ್ಲಿ ನೋಡಿ.]

**अन्त्यज** ಅಂತ್ಯಜ (पु०) 1. ಶೂದ್ರ. 2. ಅಗಸ, ಚಮ್ಮಾರ ಮೊದಲಾದ ಏಳು ಜಾತಿಯವರು. "रजकश्चर्मकारश्च नटो वरुड एव च। कैवर्तमेदभिल्लाश्च सप्तैते चान्त्यजाः स्मृताः" अत्रिसं०। (वि०) 3. ಕೊನೆಯಲ್ಲಿ ಹುಟ್ಟಿದ. स्त्रियां "टाप्" (४-२-४)। **–जा** **–ಜಾ**.

**अन्त्यजन्मन् ಅಂತ್ಯಜನ್ಮನ್** (ಪುಂ) 1. ಶೂದ್ರ. अन्त्यं जन्मास्य। "प्रतिग्रहस्तु क्रियते शूद्रादप्यन्त्यजन्मन:" ಮನು० १०-११। 2. ಚಂಡಾಲ.

**अन्त्यभ ಅಂತ್ಯಭ** (ನಂ) ಕೊನೆಯ ನಕ್ಷತ್ರ, ರೇವತೀ ನಕ್ಷತ್ರ.

**अन्त्यवर्ण ಅಂತ್ಯವರ್ಣ** (ಪುಂ) 1. ಪದದ ಕೊನೆಯ ಅಕ್ಷರ. 2. ವರ್ಣಮಾಲೆಯಲ್ಲಿ ಕೊನೆಯ ಅಕ್ಷರ. 3. ಶೂದ್ರ, ನಾಲ್ಕು ವರ್ಣಗಳಲ್ಲಿ ಕೊನೆಯ ವರ್ಣದವನು. स्त्रियाम् "टाप्" (४-१-४)। -वर्णा -ವರ್ಣಾ.

**अन्त्यानुप्रास ಅಂತ್ಯಾನುಪ್ರಾಸ** (ಪುಂ) ಶಬ್ದಾಲಂಕಾರಗಳಲ್ಲಿ ಒಂದು ಭೇದ. ಸದೃಶಸ್ವರಸಹಿತವಾದ ವ್ಯಂಜನ ವರ್ಣವು ಪದಾಂತ್ಯದಲ್ಲೂ ಪಾದಾಂತ್ಯದಲ್ಲೂ ಪುನಃ ಸೇರಿಸಲ್ಪಟ್ಟರೆ ಅಂತ್ಯಾನುಪ್ರಾಸವಾಗುವುದು. "व्यञ्जनं चेद्यथावस्थं सहाद्येन स्वरेण तु। आवर्त्यतेऽन्त्ययोज्यत्वादन्त्यानुप्रास एव तत्" ಸಾ०ದ० १०-६। ಉದಾ: ಪದಾಂತ್ಯದಲ್ಲಿ—"मन्दं हसन्तः पुलकं वहन्तः"। ಪಾದಾಂತ್ಯದಲ್ಲಿ—"केशः काशस्तबकविकासः कायः प्रकटितकरभविलासः"।

**अन्त्यावसायिन् ಅಂತ್ಯಾವಸಾಯಿನ್** (ಪುಂ) 1. ಚಂಡಾಲನಿಂದ ಬೇಡರ ಹೆಂಗಸಿನಲ್ಲಿ ಹುಟ್ಟಿದ ಬೆರಕೆ ಜಾತಿಯವನು. "निषादस्त्री तु चण्डालात् पुत्रमन्त्यावसायिनम्" ಮನು० १०-३९। 2. ಅಗಸ, ಚಮ್ಮಾರ ಮೊದಲಾದ ಏಳು ಜಾತಿಗೆ ಸೇರಿದವರು. स्त्रियाम् "ङीप्" (४-१-५)। -अवसायिनी -ಅವಸಾಯಿನೀ.

**अन्त्याश्रम ಅಂತ್ಯಾಶ್ರಮ** (ಪುಂನ०) ಕೊನೆಯ ಆಶ್ರಮ, ಸಂನ್ಯಾಸಾಶ್ರಮ.

**अन्त्याश्रमिन् ಅಂತ್ಯಾಶ್ರಮಿನ್** (ಪುಂ) ಭಿಕ್ಷು, ಸಂನ್ಯಾಸಿ. अन्त्याश्रमोऽस्यास्ति "इनिः" (५-२-११५)।

**अन्त्र ಅಂತ್ರ** (ನಂ) ಕರುಳು. अन्त्यते बध्यते देहोऽनेन —अति (बन्धने) "ष्ट्रन्" (उ० ४-१५९)।

**अन्त्रकूजित ಅಂತ್ರಕೂಜಿತ** (ನಂ) ಕರುಳಿನ ಒಳಗೆ ಆಗುವ ಶಬ್ದ, ಹೊಟ್ಟೆಯೊಳಗಿನ ಗುಡುಗಾಟ.

**अन्दुक ಅಂದುಕ** (ಪುಂ) 1. ಕಾಲು ಸರಪಣಿ, ಕಾಲಂದಿಗೆ, ಗೊಲಸು. अन्दू स्वार्थे "कन्" (५-४-५)। 2. ಆನೆಯನ್ನು ಕಟ್ಟುವ ಸರಪಣಿ.

**अन्दू ಅಂದೂ** (ಸ್ತ್ರೀ०) ಕಾಲು ಸರಪಣಿ, (ಹೆಂಗಸರ) ಕಾಲಂದಿಗೆ, ಗೊಲಸು. अन्द्यते बध्यतेऽनेन ಚರಣಮ्—अदि (बन्धने) "कूः" (उ० १-९३)।

**अन्ध ಅಂಧ** (ನಂ) 1. ಅಂಧಕಾರ, ಕತ್ತಲೆ. अन्धयति —अन्ध (दृष्टयुपघाते) + णिच् "अच्" (३-१-१३४)। (ವಿ०) 2. ಕುರುಡ, ಕಣ್ಣಿಲ್ಲದವನು. "अन्धस्य दैवादिव दृष्टिलाभः" याद० २-६९। 3. ಅಮಲು ಮತ್ತು ಆವೇಶಗಳಿಂದ ವೈಮರೆತವನು. मदान्धः, क्रोधान्धः, कामान्धः, अज्ञानान्धः ಇತ್ಯಾದಿ. "अन्धं स्यात्तिमिरे क्लीबं चक्षुर्हीनेऽभिधेयवत्" मेदि०।

**अन्धक ಅಂಧಕ** (ಪುಂ) 1. ಒಬ್ಬ ರಾಕ್ಷಸ, ಅಂಧಕಾಸುರ. 2. ಬೃಹಸ್ಪತಿಯ ಶಾಪದಿಂದ ಕುರುಡನಾದ ಉತಥ್ಯ ಋಷಿಯ ಮಗ. अन्ध स्वार्थे "कन्"। 3. ಮರಣ, ಸಾವು. "कालधर्मस्तु दिष्टान्तो निपातो गमिरन्धकः" ವೈಜ०। 4. ಅಂಧಕವಂಶದ ಮೂಲಪುರುಷನಾದ ಒಬ್ಬ ರಾಜ. 5. ಕತ್ತಲೆ. (ವಿ०) 6. ಕುರುಡ, ಕಣ್ಣಿಲ್ಲದವನು.

**अन्धकरिपु ಅಂಧಕರಿಪು** (ಪುಂ) 1. ಪರಮೇಶ್ವರ, ಶಿವ. अन्धकस्य तन्नामकस्यासुरस्य रिपुः। 2. ಸೂರ್ಯ. 3. ಚಂದ್ರ. 4. ಅಗ್ನಿ, ಬೆಂಕಿ. अन्धकस्यान्धकारस्य रिपुः। ಈ ಅರ್ಥಗಳಲ್ಲಿ अन्धकशत्रुः अन्धकारि ಇತ್ಯಾದಿ.

**अन्धकार ಅಂಧಕಾರ** (ಪುಂ) ಕತ್ತಲೆ. अन्धं करोति —कृञ् (करणे) "अण्" (३-२-१)। "अथान्धकार[illegible] गिरिगह्वराणाम्" रघु० २-४६।

**अन्धकूप ಅಂಧಕೂಪ** (ಪುಂ) 1. ಕತ್ತಲೆಯಾಗಿರುವ ಬಾವಿ, ಪಾಳುಬಾವಿ. 2. ಒಂದು ನರಕ. 3. ಅಜ್ಞಾನ, ಮೋಹ.

**अन्धतमस ಅಂಧತಮಸ** (ನಂ) 1. ಕಗ್ಗತ್ತಲೆ, ದಟ್ಟವಾದ ಕತ್ತಲೆ. अन्धं च तत्तमश्च "अच्" (५-४-७९) "प्रध्वंसितान्धतमसस्तत्रोदाहरणं रविः" माघ० २-३३ 2. ಕಗ್ಗತ್ತಲೆಯಿಂದ ಕೂಡಿದ ಒಂದು ನರಕ.

**अन्धतामस ಅಂಧತಾಮಸ** (ನಂ) ಕಗ್ಗತ್ತಲೆ, ದಟ್ಟವಾದ ಕತ್ತಲೆ. अन्धं च तत्तामसं च।

**अन्धतामिस्र ಅಂಧತಾಮಿಸ್ರ** (ನಂ) ಕಗ್ಗತ್ತಲೆ, ದಟ್ಟವಾದ ಕತ್ತಲೆ. अन्धं च तत्तामिस्रं च। (ಪುಂನ०) 2. ಇಪ್ಪತ್ತೊಂದು ನರಕಗಳಲ್ಲಿ ಎರಡನೆಯದು, ಆತ್ಮಹತ್ಯೆ ಮಾಡಿಕೊಂಡವನಿಗೆ ಪ್ರಾಪ್ತವಾಗುವ ನರಕ. "अन्धतामिस्रा ह्यसूर्यास्ते लोकास्तेभ्यः प्रतिविधीयन्ते आत्मघातिन इति ऋषयो मन्यन्ते" उ० रा० ४। "यस्तु परवित्तापत्यकलत्राण्यपहरति स हि कालपाशब[illegible]

यमपुरुषैरतिभयानकैस्तामिस्रे नरके बलान्निपात्यते। एवमेवान्धतामिस्रे" भाग० ५-२६।

**अन्धत्व ಅಂಧತ್ವ** (ನಂ) ಕುರುಡುತನ, ವಸ್ತುಗಳನ್ನು ನೋಡುವ ಶಕ್ತಿಯಿಲ್ಲದಿರುವಿಕೆ. अन्धस्य भावः "त्वः" (५-१-११९)।

**अन्धपूतना ಅಂಧಪೂತನಾ** (स्त्री०) ಒಂದು ಬಾಲಗ್ರಹ, ಸಣ್ಣ ಮಕ್ಕಳಿಗೆ ಹಿಡಿಯುವ ಒಂದು ಭೂತ. "यो द्वेष्टि स्तनमतिसारकासहिक्काछर्दीभिर्ज्वरसहिताभिरर्द्यमानः। दुर्वर्णः सततमधःशयोऽम्लगन्धिस्तं ब्रूयुर्वरभिषजोऽन्धपूतनार्तम्" सुश्रु०।

**अन्धमूषिका ಅಂಧಮೂಷಿಕಾ** (स्त्री०) ದೇವತಾಳೆ ಮರ. अन्धं दृष्टयभावं मुष्णाति — मुष (स्तेये) "किकन्" दीर्घश्च (उ० २-४२)। [ಇದರ ಸೇವನೆ ಯಿಂದ ದೃಷ್ಟಿಶಕ್ತಿಯುಂಟಾಗುವುದು.]

**अन्धम्भविष्णु ಅಂಧಂಭವಿಷ್ಣು** (वि०) ಕುರುಡನಾಗಿ ಆಗುವವನು. अनन्धोऽन्धो भवति — अन्ध (च्व्यर्थे) भू (सत्तायाम्) "खिष्णुच्" (३-२-५७)। मुम् (६-३-६७)।

**अन्धम्भावुक ಅಂಧಂಭಾವುಕ** (वि०) ಕುರುಡನಾಗಿ ಆಗುವವನು. अनन्धोऽन्धो भवति — अन्ध (च्व्यर्थे) भू (सत्तायाम्) "खुकञ्" (३-२-५७)। मुम् (६-३-६७)।

**अन्धस् ಅಂಧಸ್** (नं०) ಅನ್ನ. अद्यते — अद (भक्षणे) "असुन्" नुम् धश्च (उ० ४-२०६)। "द्विजातिशेषेण यदेतदन्धसा" किरा० १-३९।

**अन्धु ಅಂಧು** (पुं०) 1. ಬಾವಿ. 2. ಪುರುಷನ ಲಿಂಗ, ಪುರುಷನ ಜನನೇಂದ್ರಿಯ. अमि (गतौ) "कुः" धुक्च (उ० १-२७)। "वाक्पाणिपादपाय्वन्धुसंज्ञान्याहुर्मनीषिणः"।

**अन्न ಅನ್ನ** (पुं०) 1. ಸೂರ್ಯ. [ಅನ್ನಕ್ಕೆ ಕಾರಣವಾದ ನೀರಿಗೂ ಕಾರಣನಾದುದರಿಂದ ಸೂರ್ಯನಿಗೆ ಈ ಹೆಸರು.] "आदित्याज्जायते वृष्टिर्वृष्टेरन्नं ततः प्रजाः" मनु० ३-७६। 2. ಅನ್ನ, ಆಹಾರ. अद्यते स्म — अद (भक्षणे) "क्तः" (३-२-१०२)। "अद्यतेऽत्ति च भूतानि। तस्मादन्नं तदुच्यत इति" तै० उ०। 3. ಬೇಯಿಸದ ಅನ್ನ. "चण्डालान्नं भुक्त्वा त्रिरात्रमुपवसेत्"। 4. ಆಹಾರಧಾನ್ಯ. 5. ಭೂಮಿ. 6. ನೀರು. [ಭೂಮಿ ಮತ್ತು ನೀರು ಎರಡೂ ಬೆಳೆಗೆ ಕಾರಣವಾದುದರಿಂದ.] 7. ಭೋಗ್ಯವಸ್ತು, ಸುಖಸಾಧನ. "स्त्रियोऽन्नं पशवोऽन्नं च विशोऽन्नं च महीक्षिताम्"। 8. ವಿಷ್ಣು. "यज्ञान्तकृद्यज्ञगुह्यमन्नमन्नाद एव च" वि० स०। (वि०) 9. ತಿನ್ನಲ್ಪಟ್ಟ.

**अन्नकोष्ठ ಅನ್ನಕೋಷ್ಠ** (नं०) ಉಗ್ರಾಣ, ಧಾನ್ಯಗಳನ್ನು ಶೇಖರಿಸಿಡುವ ಸ್ಥಳ, ಕಣಜ.

**अन्नद ಅನ್ನದ** (वि०) ಅನ್ನವನ್ನು ಕೊಡುವ, ಆಹಾರವನ್ನು ಕೊಡುವ. अन्नं ददाति — डु दाञ् (दाने) "कः" (३-२-३)। स्त्रियाम् —दा—दा.

**अन्नदा ಅನ್ನದಾ** (स्त्री०) ಅನ್ನಪೂರ್ಣಾದೇವಿ.

**अन्नदास ಅನ್ನದಾಸ** (पुं०) ಅನ್ನದಿಂದ ರಕ್ಷಿಸಲ್ಪಟ್ಟ ಸೇವಕ.

**अन्नदोष ಅನ್ನದೋಷ** (पुं०) 1. ನಿಷಿದ್ಧವಾದ ಅನ್ನವನ್ನು ಊಟಮಾಡಿದುದರಿಂದ ಉಂಟಾಗುವ ದೋಷ (ಪಾಪ). 2. ಅಪಥ್ಯಾಹಾರ ಸೇವನೆಯಿಂದುಂಟಾಗುವ ರೋಗರುಜಿನಾದಿರೂಪವಾದ ದೋಷ. 3. ವೈಶ್ವದೇವದಿಂದ ಹೋಗಲಾಡಿಸಲ್ಪಡುವ ಐದು ಅನ್ನದೋಷಗಳು. [ವಿವರಕ್ಕೆ "पञ्चसूना" ಪದದಲ್ಲಿ ನೋಡಿ.]

**अन्नपाक ಅನ್ನಪಾಕ** (पुं०) 1. ಅಡಿಗೆ ಮಾಡುವುದು, ಆಹಾರ ವಸ್ತುಗಳನ್ನು ಬೇಯಿಸುವುದು. 2. ಹೊಟ್ಟೆಯಲ್ಲಿ ತಿಂದ ಆಹಾರವು ಜೀರ್ಣವಾಗುವಿಕೆ.

**अन्नपूर्णा ಅನ್ನಪೂರ್ಣಾ** (स्त्री०) ಅನ್ನಪೂರ್ಣಾದೇವಿ. अन्नं पूर्णं यया।

**अन्नप्राशन ಅನ್ನಪ್ರಾಶನ** (नं०) ಮಕ್ಕಳಿಗೆ ಮೊದಲು ಶಾಸ್ತ್ರೋಕ್ತ ರೀತಿಯಲ್ಲಿ ಅನ್ನವನ್ನು ಉಣಿಸುವುದು. प्रकृष्टं शास्त्रक्रमेण प्रथममाशनं प्राशनम्। अन्नस्य प्राशनम्। [ಮಕ್ಕಳಿಗೆ ಆರು ಅಥವಾ ಎಂಟನೇ ತಿಂಗಳಲ್ಲಿ ಅನ್ನಪ್ರಾಶನ ಮಾಡಿಸಬೇಕು.] "षष्ठेऽन्नप्राशनं मासि यद्वेष्टं मङ्गलं कुले" मनु० २-३४। "अष्टमे वास्य कर्तव्यं यद्वेष्टं मङ्गलं कुले"।

**अन्नभक्त ಅನ್ನಭಕ್ತ** (पुं०) ಅನ್ನದಿಂದ ಸೇವಕನಾದವನು, ಒಬ್ಬರ ಮನೆಯಲ್ಲಿ ಅನ್ನತಿಂದು ಅವರ ಚಾಕರಿ ಮಾಡುವವನು.

**अन्नमल ಅನ್ನಮಲ** (नं०) 1. ಮದ್ಯ, ಮಾದಕ ದ್ರವ್ಯ. 2. ಅನ್ನದಮೇಲಿನ ಸಾರ.

**अन्नरस ಅನ್ನರಸ** (पुं०) 1. ಅನ್ನದ ಸಾರ, ಅನ್ನದಲ್ಲಿರುವ ಪುಷ್ಟಿಕರ ದ್ರವ್ಯ. 2. ಅನ್ನದ ರುಚಿ. अन्नस्य रसः सारांशः स्वादो वा।

**अन्नविकार ಅನ್ನವಿಕಾರ** (ಪುಂ) ಸಪ್ತಧಾತುಗಳಲ್ಲಿ ಮುಖ್ಯವಾದ ಶುಕ್ರಧಾತು. [ಶೋಣಿತಾದಿಧಾತುಗಳೆಲ್ಲವೂ ಕ್ರಮವಾಗಿ ಪಾಕಹೊಂದಿ ಶುಕ್ರಧಾತುವಾಗುವುದರಿಂದ ಇದೇ ಪ್ರಧಾನವಾದುದು.]

**अन्नाद ಅನ್ನಾದ** (ಪುಂ) 1. ವಿಷ್ಣು. "यज्ञान्तकृद्यज्ञ-गुह्यमन्नमन्नाद एव च" विंस०। (ವಿಂ) 2. ಅನ್ನವನ್ನು ತಿನ್ನುವ. अन्नमत्ति—अद (भक्षणे) "अण्" (३-२-१)। 3. ಅನ್ನವನ್ನು ಊಟಮಾಡಲು ಶಕ್ತಿಯುಳ್ಳ, ಜಠರಾಗ್ನಿಯ ಬಲವುಳ್ಳ. स्त्रियाम् "टाप्" (४-१-४)। –दा–ದಾ.

**अन्नादिन् ಅನ್ನಾದಿನ್** (ವಿಂ) ಅನ್ನವನ್ನು ತಿನ್ನುವ. अन्नमत्ति—अद (भक्षणे) "णिनिः" (३-२-७८)। "भैक्षेण वर्तयेन्नित्यं नैकान्नादी भवेद्व्रती" मनु० २-१८८। स्त्रियाम् "ङीप्" (४-१-५)। अन्नादिनी–ಶೀ.

**अन्नाद्य ಅನ್ನಾದ್ಯ** (ನಂ) 1. ಅನ್ನರೂಪವಾದ ತಿಂಡಿ. (ವಿಂ) 2. ಅನ್ನ ಮೊದಲಾದ.

**अन्नायुस् ಅನ್ನಾಯುಸ್** (ವಿಂ) ಅನ್ನದಿಂದ ಜೀವಿಸುವ. अन्नमायुर्जीवनसाधनं यस्य।

**अन्नाशन ಅನ್ನಾಶನ** (ನಂ) ಅನ್ನಪ್ರಾಶನ, ಮಕ್ಕಳಿಗೆ ಶಾಸ್ತ್ರೋಕ್ತ ರೀತಿಯಲ್ಲಿ ಮೊದಲು ಅನ್ನವನ್ನು ಉಣಿಸುವುದು. अन्नस्य शास्त्रविधानेन आशनम्।

**अन्य ಅನ್ಯ** (ವಿಂ) 1. ಇತರ, ಬೇರೆಯಾದ, ಭಿನ್ನವಾದ. अन (प्राणने) "यः" (उ० ४-१११)। "अदृष्टान्तमभूद्युद्धमन्यदृष्टान्तवर्जितम्" याद० १६–१०१। "नास्ति जीवितादन्यदभिमतं सर्वजन्तूनाम्" काद०। 2. ಮತ್ತೊಂದು, ಮತ್ತೊಬ್ಬ. "अन्येन विदधेऽरीणामतिमात्रा विलासिना" माघ० १९-५०। 3. ಅಧಿಕವಾದ, ಹೆಚ್ಚಾದ. "अन्यान् दश सुवर्णान् प्रयच्छ" मृच्छ०। 4. ಸಾಮಾನ್ಯ, ಉದಾಸೀನ. "साधारण्यान्निरातङ्कः कन्यामन्योऽपि याचते" म० वी० १-३१। 5. ಬೇರೆ ರೀತಿಯಾದ, ಇತರ ವಿಲಕ್ಷಣವಾದ. "अन्यदुच्छृङ्खलं सत्त्वमन्यच्छास्त्रनियन्त्रितम्" माघ० २-६२। स्त्रियाम् अन्या–ನ್ಯಾ. (ನಂ) अन्यत् ಅನ್ಯತ್.

**अन्यक्षेत्र ಅನ್ಯಕ್ಷೇತ್ರ** (ನಂ) 1. ಮತ್ತೊಬ್ಬನ ಪತ್ನಿ. 2. ಇನ್ನೊಬ್ಬನ ಜಮೀನು. 3. ಪರದೇಶ, ಪರರಾಷ್ಟ್ರ, ಪರರಾಜ್ಯ.

**अन्यचित्त ಅನ್ಯಚಿತ್ತ** (ನಂ) 1. ಬೇರೆ ವಿಷಯದಲ್ಲಿ ಆಸಕ್ತವಾದ ಮನಸ್ಸು. (ವಿಂ) 2. ಬೇರೆ ವಿಷಯದಲ್ಲಿ ಆಸಕ್ತವಾದ ಮನಸ್ಸುಳ್ಳ.

**अन्यत् ಅನ್ಯತ್** (ಅವ್ಯಂ) ಇದಲ್ಲದೆ, ಮತ್ತೆ. "अन्यच्च, कृतककलहं कृत्वा स्वतन्त्रेण वर्तितव्यमित्यायदिशः" मुद्रा० ३।

**अन्यतम ಅನ್ಯತಮ** (ವಿಂ) ಬಹುಮಂದಿಗಳಲ್ಲೊಬ್ಬ, ಬಹುಮಂದಿಗಳಲ್ಲಿ ಯಾವನಾದರೊಬ್ಬ.

**अन्यतर ಅನ್ಯತರ** (ವಿಂ) ಇಬ್ಬರಲ್ಲೊಬ್ಬ, ಎರಡರಲ್ಲೊಂದು.

**अन्यतरेद्युस् ಅನ್ಯತರೇದ್ಯುಸ್** (ಅವ್ಯಂ) ಮತ್ತೊಂದು ದಿವಸ, ಎರಡರಲ್ಲೊಂದು ದಿವಸ. अन्यतर "एद्युस्" (५-३-२२)।

**अन्यतस् ಅನ್ಯತಸ್** (ಅವ್ಯಂ) 1. ಮತ್ತೊಬನಿಂದ, ಮತ್ತೊಂದರಿಂದ, ಮತ್ತೊಂದು ಕಡೆಯಿಂದ. अन्यस्मात्—अन्य "तसिल्" (५-३-७)। "न चान्यतस्तस्य शरीररक्षा स्ववीर्यगुप्ता हि मनोः प्रसूतिः" रघु० २-४। 2. ಬೇರೆ ಕಡೆಗೆ, ಮತ್ತೊಂದೆಡೆಗೆ. "गुरोर्यत्र परीवादो निन्दा वापि प्रवर्तते। कर्णौ तत्र पिधातव्यौ गन्तव्यं वा ततोऽन्यतः" मनु० २-२००। "आर्ये व्रजामोऽन्यत इत्यथैनाम्" रघु० ६-८२। 3. ಬೇರೆ ಕಡೆಯಲ್ಲಿ, ಮತ್ತೊಂದೆಡೆಯಲ್ಲಿ. "तपनमण्डलदीपितमेकतः सततनैशतमोवृतमन्यतः" किरा० ५-२।

**अन्यतस्त्य ಅನ್ಯತಸ್ತ್ಯ** (ವಿಂ) ಶತ್ರುಪಕ್ಷದಲ್ಲಿರುವ. अन्यतो भवः "त्यप्" (४-२-१०४)।

**अन्यत्र ಅನ್ಯತ್ರ** (ಅವ್ಯಂ) 1. ಬೇರೆ ಕಡೆ, ಮತ್ತೊಂದೆಡೆಯಲ್ಲಿ. अन्यस्मिन्—अन्य "त्रल्" (५-३-१०)। 2. ಅದಕ್ಕಿಂತಲೂ ಬೇರೆ ಕಡೆಯಲ್ಲಿ. "अन्यत्र रक्षोभवनोषितायाः परिग्रहान्मानववेव देव्याः" रघु० १४-३२। 3. ಬೇರೆ ಪ್ರಸಂಗದಲ್ಲಿ, ಬೇರೆ ಸಂದರ್ಭದಲ್ಲಿ. "मधुपर्के च यज्ञे च पितृदैवतकर्मणि। अन्यत्र पशवो हिंस्या नान्यत्रेत्यब्रवीन्मनुः" मनु० ५-४१।

**अन्यथा ಅನ್ಯಥಾ** (ಅವ್ಯಂ) 1. ಬೇರೆ ರೀತಿಯಾಗಿ, ಬೇರೆ ಪ್ರಕಾರವಾಗಿ. अन्य "थाल्" (५-३-२३)। "मन्त्रभङ्गभयाद्राज्ञां कथयन्त्यन्यथा पुरः। अन्यथा विवृतार्थेषु स्वैरालापेषु मन्त्रिणः" मुद्रा० ४-८। 2. ಹಾಗಿಲ್ಲದಿದ್ದಲ್ಲಿ, ಬೇರೆ ರೀತಿಯಾಗಿದ್ದಲ್ಲಿ, ಇಲ್ಲದಿದ್ದರೆ, ಅಭಾವ ಪಕ್ಷದಲ್ಲಿ. "श्रीरेषा पाणिरप्यस्याः पारिजातस्य पल्लवः। कुतोऽन्यथा स्रवत्येषः स्वेदच्छद्मामृतद्रवम्" रत्ना० २-१७। 3. ವಿರುದ್ಧವಾಗಿ, ಪ್ರತಿಯಾಗಿ. "त्वया कदाचिदपि मम वचनं नान्यथा

कृतम्"। 4. ಮಿಥ್ಯೆಯಾಗಿ, ಸುಳ್ಳಾಗಿ, ಅಸತ್ಯವಾಗಿ. "किमन्यथा भट्टिन्यै निवेदितम्" मालं ४। 5. ನಿಷ್ಕಾರಣವಾಗಿ, ಕಾರಣವಿಲ್ಲದೆ. "निष्कारणेऽन्यथा पुनः। वितथे चापरार्थे च" मेदिं।

**अन्यथाकारम्** ಅನ್ಯಥಾಕಾರಮ್ (अव्यं) ಬೇರೆ ರೀತಿಯಾಗಿ ಮಾಡಿ, (ಯೋಗ್ಯವಾದ ಕ್ರಮವನ್ನು ಬಿಟ್ಟು) ಬೇರೆ ಕ್ರಮದಲ್ಲಿ ಮಾಡಿ. अन्यथा+डु कृञ् (करणे) "णमुल्" (३-४-२७)।

**अन्यथाख्याति** ಅನ್ಯಥಾಖ್ಯಾತಿ (स्त्रीं) ತಪ್ಪು ತಿಳಿವಳಿಕೆ, ಒಂದು ವಸ್ತುವನ್ನು ಮತ್ತೊಂದು ವಸ್ತುವನ್ನಾಗಿ ತಿಳಿಯುವಿಕೆ, ಭ್ರಾಂತಿ. अन्यथा अन्यरूपेण ख्यातिः ज्ञानम्। ಒಂದು ವಸ್ತುವಿನಲ್ಲಿ ಬೇರೆ ವಿಧವಾದ ಜ್ಞಾನವು ಅನ್ಯಥಾಖ್ಯಾತಿಯೆನಿಸುವುದು. ಶುಕ್ತಿ (ಕಪ್ಪೆ ಚಿಪ್ಪು) ಯನ್ನು ನೋಡಿ ರಜತ (ಬೆಳ್ಳಿ) ವೆಂದು ತಿಳಿಯುವುದೂ ದಾಸಾಳಿ ಪುಷ್ಪದ ಸಮೀಪದಲ್ಲಿರುವ ಸ್ಫಟಿಕವನ್ನು ಕೆಂಪು ಸ್ಫಟಿಕವೆಂದು ತಿಳಿಯುವುದೂ ಅನ್ಯಥಾಖ್ಯಾತಿ (ಭ್ರಾಂತಿ) ಯಾಗುವುದು.

**अन्यथानुपपत्ति** ಅನ್ಯಥಾನುಪಪತ್ತಿ (स्त्रीं) ಆಗಿರುವ ಕಾರ್ಯವು ಬೇರೆ ಕಾರಣದಿಂದ ಸಂಭವಿಸದಿರುವಿಕೆ. अन्यथा अभावे अनुपपत्तिः कार्यासंभवः। "पीनो देवदत्तो दिवा न भुङ्क्ते" ಎಂಬಲ್ಲಿ ಹಗಲು ಊಟಮಾಡದಿರುವ ದೇವದತ್ತನು ರಾತ್ರಿ ಊಟ ಮಾಡದಿದ್ದರೆ ಪುಷ್ಟನಾಗಿರುವುದು ಅಸಂಭವ ಎಂಬ ಜ್ಞಾನವು ಅರ್ಥಾಪತ್ತಿ ಪ್ರಮಾಣದಿಂದುಟಾಗುವುದು.

**अन्यथाभाव** ಅನ್ಯಥಾಭಾವ (पुं) 1. ಬದಲಾವಣೆ, ವ್ಯತ್ಯಾಸ, ರೂಪಾಂತರ ಹೊಂದುವುದು. अन्यथा अन्यरूपेण भावः। 2. ಬೇರೆ ವಿಧವಾದ ಅಭಿಪ್ರಾಯ.

**अन्यथाभूत** ಅನ್ಯಥಾಭೂತ (विं) ಬದಲಾವಣೆ ಹೊಂದಿದ, ರೂಪಾಂತರ ಹೊಂದಿದ, ವ್ಯತ್ಯಾಸವಾದ.

**अन्यथावृत्ति** ಅನ್ಯಥಾವೃತ್ತಿ (स्त्रीं) ಬೇರೆ ರೀತಿಯಲ್ಲಿರುವುದು.

**अन्यथासिद्ध** ಅನ್ಯಥಾಸಿದ್ಧ (विं) 1. ಬೇರೆ ರೀತಿಯಲ್ಲಿ ಸಿದ್ಧವಾದ, ಬೇರೆ ಕಾರಣದಿಂದ ಸಿದ್ಧವಾದ, ಬೇರೆ ಪ್ರಮಾಣದಿಂದ ಸಿದ್ಧವಾದ. अन्यथा अन्यप्रकारेण सिद्धः। 2. ಅನ್ಯಥಾ ಸಿದ್ಧಿಯುಳ್ಳದ್ದು. [ಕಾರ್ಯೋತ್ಪತ್ತಿಗೆ ಪೂರ್ವದಲ್ಲಿ ಅವಶ್ಯವಾಗಿರಬೇಕಾದುದನ್ನುಳಿದು ಬೇರೆ ಎಲ್ಲವೂ ಅನ್ಯಥಾಸಿದ್ಧ. ಘಟಕ್ಕೆ ದಂಡ ಚಕ್ರ ಕುಲಾಲ (ಕುಂಬಾರ) ರನ್ನು ಬಿಟ್ಟು ಉಳಿದ ದಂಡತ್ವ, ದಂಡರೂಪ, ಆಕಾಶ, ಕುಂಬಾರನ ತಂದೆ, ಮಣ್ಣು ಹೊತ್ತು ತರುವ ರಾಸಭ (ಕತ್ತೆ) ಮೊದಲಾದುವು ಅನ್ಯಥಾ ಸಿದ್ಧಗಳು. ದಾರ್ಶನಿಕರು ಇವನ್ನು ಕಾರಣವನ್ನಾಗಿ ಅಂಗೀಕರಿಸುವುದಿಲ್ಲ.]

**अन्यथासिद्धि** ಅನ್ಯಥಾಸಿದ್ಧಿ (स्त्रीं) ಬೇರೆ ರೀತಿಯಲ್ಲಿ ಸಿದ್ಧವಾಗುವಿಕೆ, ಬೇರೆ ಕಾರಣದಿಂದ ಸಿದ್ಧಿಸುವುದು. 2. ನಿಜವಾದ ಕಾರಣವಲ್ಲದಿರುವುದು.

**अन्यदा** ಅನ್ಯದಾ (अव्यं) 1. ಬೇರೆ ಕಾಲದಲ್ಲಿ, ಬೇರೆ ಸಂದರ್ಭದಲ್ಲಿ, ಮತ್ತೊಂದು ಸಮಯದಲ್ಲಿ. अन्य "दा" (५-३-१५)। "अन्यदा भूषणं पुंसः क्षमा लज्जेव योषितः" माघं २-४४। 2. ಒಂದು ಕಾಲದಲ್ಲಿ, ಒಂದು ಸಮಯದಲ್ಲಿ, ಒಂದು ಸಂದರ್ಭದಲ್ಲಿ.

**अन्यदाशा** ಅನ್ಯದಾಶಾ (स्त्रीं) 1. ಬೇರೆ ಅಪೇಕ್ಷೆ, ಮತ್ತೊಂದು ಅಪೇಕ್ಷೆ. अन्या च सा आशा च "दुक्" (६-३-९९)। अन्यस्याशा "दुक्" न। अन्याशा ಅನ್ಯಾಶಾ. 2. ಮತ್ತೊಬ್ಬನ ಆಸೆ, ಮತ್ತೊಂದು ವಸ್ತುವಿನ ಆಸೆ.

**अन्यदाशिस्** ಅನ್ಯದಾಶಿಸ್ (स्त्रीं) 1. ಮತ್ತೊಂದು ಆಶೀರ್ವಾದ. अन्या आशीः "दुक्" (६-३-९९)। अन्यस्याशीः "दुक्" न। अन्याशीः ಅನ್ಯಾಶೀಃ. 2. ಮತ್ತೊಬ್ಬನ ಆಶೀರ್ವಾದ.

**अन्यदास्था** ಅನ್ಯದಾಸ್ಥಾ (स्त्रीं) 1. ಮತ್ತೊಂದು ಅನುರಾಗ, ಮತ್ತೊಂದು ಭಕ್ತಿ, ಶ್ರದ್ಧೆ. अन्या आस्था "दुक्" (६-३-९९)। अन्यस्यास्था "दुक्" न। अन्यास्था ಅನ್ಯಾಸ್ಥಾ. 2. ಮತ್ತೊಬ್ಬನ ಭಕ್ತಿ, ಶ್ರದ್ಧೆ.

**अन्यदास्थित** ಅನ್ಯದಾಸ್ಥಿತ (विं) 1. ಮತ್ತೊಬ್ಬನನ್ನು ಆಶ್ರಯಿಸಿರುವ, ಮತ್ತೊಬ್ಬನನ್ನು ಸೇರಿರುವ. अन्यमास्थितः "दुक्" (६-३-९९)। अन्येनास्थितः "दुक्" न। अन्यास्थितः ಅನ್ಯಾಸ್ಥಿತಃ. 2. ಮತ್ತೊಬ್ಬನಿಂದ ಆಶ್ರಯಿಸಲ್ಪಟ್ಟ.

**अन्यदीय** ಅನ್ಯದೀಯ (विं) ಮತ್ತೊಬ್ಬನಿಗೆ ಸಂಬಂಧಿಸಿದ. अन्य "छः" (४-२-१३८)। "दुक्" (६-३-९९)। "अन्यदीयविशिखे न केवलम्" किरां १३-४६।

**अन्यदुत्सुक** ಅನ್ಯದುತ್ಸುಕ (विं) ಮತ್ತೊಂದು ವಿಷಯದಲ್ಲಿ ಆಸೆಯುಳ್ಳ, ಬೇರೆ ವಸ್ತುವಿನಲ್ಲಿ ಬಯಕೆಯುಳ್ಳ. अन्यस्मिन्नुत्सुकः "दुक्" (६-३-९९)। अन्येनोत्सुकः "दुक्" न। अन्योत्सुकः ಅನ್ಯೋತ್ಸುಕಃ.

**अन्यदूति ಅನ್ಯದೂತಿ** (स्त्री०) 1. ಮತ್ತೊಂದು ರಕ್ಷಣೆ. अन्या ऊतिः "दुक्" (६-३-९९)। अन्यस्योतिः "दुक्" न। **अन्योतिः ಅನ್ಯೋತಿಃ.** 2. ಮತ್ತೊಬ್ಬನ ರಕ್ಷಣೆ.

**अन्यद्राग ಅನ್ಯದ್ರಾಗ** (पुं०) 1. ಮತ್ತೊಂದರಲ್ಲಿ ಪ್ರೀತಿ, ಮತ್ತೊಂದು ವಿಷಯದಲ್ಲಿ ಶ್ರದ್ಧೆ. अन्यस्मिन् रागः "दुक्" (६-३-९९)। अन्यस्य रागः "दुक्" न। **अन्यरागः ಅನ್ಯರಾಗಃ.** 2. ಮತ್ತೊಬ್ಬನ ಪ್ರೀತಿ.

**अन्यपुष्ट ಅನ್ಯಪುಷ್ಟ** (पुं०) ಕೋಗಿಲೆ. अन्येन काकेन पुष्टः। "बलिपुष्टकुलादिवान्यपुष्टैः" माघ० २-११६। स्त्रियाम् **अन्यपुष्टा ಅನ್ಯಪುಷ್ಟಾ.** "अप्यन्यपुष्टा प्रतिकूलशब्दा" कुमा० १-४५।

**अन्यपूर्वा ಅನ್ಯಪೂರ್ವಾ** (स्त्री०) 1. ಮತ್ತೊಬ್ಬನನ್ನು ಮದುವೆಯಾದ ವಿತಂತು. अन्यः पतिः पूर्वो यस्याः। 2. ಮತ್ತೊಬ್ಬನಿಗೆ ನಿಶ್ಚಿತವಾಗಿದ್ದ ಕನ್ಯೆ.

**अन्यभृत् ಅನ್ಯಭೃತ್** (पुं०) ವಾಯಸ, ಕಾಗೆ. अन्यं बिभर्ति—डु भृञ् (धारणपोषणयोः) "क्विप्" (३-२-७६)।

**अन्यभृत ಅನ್ಯಭೃತ** (पुं०) ಕೋಗಿಲೆ. अन्येन भृतः। स्त्रियाम् अन्यभृता **–ಭೃತಾ.** "कलमन्यभृतासु भाषितम्" रघु० ८-५९।

**अन्यमनस् ಅನ್ಯಮನಸ್** (वि०) 1. ಚಪಲಚಿತ್ತ, ಚಂಚಲವಾದ ಮನಸ್ಸುಳ್ಳ. 2. ಬೇರೆಕಡೆ ಮನಸ್ಸುಳ್ಳ, ಬೇರೆ ವಿಷಯದಲ್ಲಿ ಆಸಕ್ತವಾದ ಮನಸ್ಸುಳ್ಳ. अन्यस्मिन् मनो यस्य। वा "कप्" (५-४-१५४)। **–मनस्कः –ಮನಸ್ಕಃ.**

**अन्यमातृक ಅನ್ಯಮಾತೃಕ** (पुं०) ಮಲತಾಯಿಯ ಮಗ. अन्या माता यस्य "कप्" (५-४-१५३)। स्त्रियाम् अन्यमातृका **–ಮಾತೃಕಾ.**

**अन्यमातृज ಅನ್ಯಮಾತೃಜ** (पुं०) ಮಲತಾಯಿಯ ಮಗ. अन्यस्या मातुर्जायते—जनी (प्रादुर्भावे) "डः" (३-२-९८)। स्त्रियाम् अन्यमातृजा **–ಮಾತೃಜಾ.**

**अन्यलिङ्ग ಅನ್ಯಲಿಂಗ–लिङ्गक–ಲಿಂಗಕ** (पुं०) ವಿಶೇಷ್ಯಾಧೀನವಾದ ಶಬ್ದ, ವಿಶೇಷ್ಯ ಪದದ ಲಿಂಗವುಳ್ಳ ಶಬ್ದ. अन्यस्य स्वविशेष्यस्य लिङ्गमिव लिङ्गमस्य—वा "कप्" (५-४-१५४)। "ऊषवानूषरो द्वावप्यन्यलिङ्गौ"। "हिमः सप्तान्यलिङ्गकाः" अम०।

**अन्यवादिन् ಅನ್ಯವಾದಿನ್** (वि०) 1. ಸುಳ್ಳು ಹೇಳುವವನು, ಅಸತ್ಯ ನುಡಿಯುವವನು. 2. ಪ್ರತಿವಾದಿ, ಎದುರು ಪಕ್ಷದವನು. प्रतिज्ञातार्थादन्यथा वदति—वद (व्यक्तायां वाचि) "णिनिः" (३-२-७८)। स्त्रियाम् अन्यवादिनी **–ವಾದಿನೀ.**

**अन्यशाख ಅನ್ಯಶಾಖ** (पुं०) ತನ್ನ ಶಾಖೆಯನ್ನು ಬಿಟ್ಟು ಬೇರೆ ಶಾಖೆಯ ವೇದವನ್ನು ಅಧ್ಯಯನ ಮಾಡುವವನು. अन्या शाखा वेदभागो यस्य।

**अन्यसङ्गम ಅನ್ಯಸಂಗಮ** (पुं०) ಪರಪುರುಷನೊಡನೆ ಅಥವಾ ಪರಸ್ತ್ರೀಯೊಡನೆ ಮಾಡುವ ಸಂಭೋಗ. अन्यस्यान्यस्या वा सङ्गमः।

**अन्यसाधारण ಅನ್ಯಸಾಧಾರಣ** (वि०) ಇತರರಿಗೆ ಸಮಾನವಾದ. अन्यैः साधारणः।

**अन्यादृक्ष ಅನ್ಯಾದೃಕ್ಷ** (वि०) 1. ಅನ್ಯಾದೃಶವಾದ, ವಿಲಕ್ಷಣವಾದ. 2. ಬೇರೆಯವನಂತೆ ಕಾಣುವ. अन्य इव पश्यति—अन्य + दृशिर् (प्रेक्षणे) "क्सः" (वा० ३-२-५७)। आत्वम् (६-३-९१)।

**अन्यादृश् ಅನ್ಯಾದೃಶ್** (वि०) 1. ಬೇರೆಯವನಂತೆ ಕಾಣುವ. 2. ಅಸಾಧಾರಣವಾದ, ವಿಲಕ್ಷಣವಾದ. अन्य इव पश्यति—अन्य+दृशिर् (प्रेक्षणे) "क्विन्" (वा० ३-२-५७)। आत्वम् (६-३-९१)।

**अन्यादृश ಅನ್ಯಾದೃಶ** (वि०) 1. ಬೇರೆಯವನಂತೆ ಕಾಣುವ. 2. ವಿಲಕ್ಷಣವಾದ, ಅಸಾಧಾರಣವಾದ. अन्य इव पश्यति—अन्य+दृशिर् (प्रेक्षणे) "कञ्" (वा० ३-२-५७)। आत्वम् (६-३-९१)। "कामदेवोद्यानयात्राप्रतिनिवृत्तं भवन्तमन्यादृशमिवावधारयामि" मालती० १। स्त्रियाम् "ङीप्" (४-१-१५)। अन्यादृशी **–ದೃಶೀ.**

**अन्याय ಅನ್ಯಾಯ** (पुं०) 1. ನ್ಯಾಯದ ಅಭಾವ, ನ್ಯಾಯವಿಲ್ಲದಿರುವಿಕೆ. 2. ಔಚಿತ್ಯವಿಲ್ಲದಿರುವಿಕೆ, ಅಯೋಗ್ಯತೆ. (वि०) 3. ನ್ಯಾಯವಲ್ಲದ, ಅಯುಕ್ತವಾದ, ವಿಮರ್ಶೆಮಾಡದ.

**अन्याय्य ಅನ್ಯಾಯ್ಯ** (वि०) 1. ಅನುಚಿತವಾದ, ಅಯೋಗ್ಯವಾದ. 2. ನ್ಯಾಯವಲ್ಲದ. न न्याय्यम्।

**अन्यार्थ ಅನ್ಯಾರ್ಥ** (पुं०) 1. ಬೇರೆ ಅರ್ಥ, ಮತ್ತೊಂದು ಅರ್ಥ. 2. ಬೇರೆ ಪ್ರಯೋಜನ. अन्योऽर्थः। (वि०) 3. ಬೇರೆ ಅರ್ಥವುಳ್ಳ. 4. ಬೇರೆ ಪ್ರಯೋಜನವುಳ್ಳ. अन्योऽर्थोऽभिधेयः प्रयोजनं वा यस्य।

**अन्यून ಅನ್ಯೂನ** (वि०) ಕಡಿಮೆಯಾಗದ, ಕಡಿಮೆಯಲ್ಲದ, ಹೀನವಲ್ಲದ, ಸಂಪೂರ್ಣವಾದ. न न्यूनः।

**अन्यूनाधिक ಅನ್ಯೂನಾಧಿಕ** (वि०) ಹೆಚ್ಚು ಕಡಿಮೆ ಯಿಲ್ಲದ, ಸಮವಾದ.

**अन्यूनातिरिक्त ಅನ್ಯೂನಾತಿರಿಕ್ತ** ಹೆಚ್ಚು ಕಡಿಮೆ ಯಿಲ್ಲದ, ಸಮವಾದ.

**अन्यूनातिरेक ಅನ್ಯೂನಾತಿರೇಕ** (पु०) ಹೆಚ್ಚು ಕಡಿಮೆ ಯಿಲ್ಲದಿರುವಿಕೆ, ಸಮವಾಗಿರುವಿಕೆ.

**अन्येद्युस् ಅನ್ಯೇದ್ಯುಸ್** (अव्य०) ಮತ್ತೊಂದು ದಿವಸ, ಮರು ದಿವಸ. अन्य "एद्युस्" (५-३-२२)। "अन्येद्युरात्मानुचरस्य भावम्" रघु० २-२६।

**अन्योढा ಅನ್ಯೋಢಾ** (स्त्री०) ಅನ್ಯನಾಯಿಕೆ, ಪರಕೀಯಳು. अन्येन ऊढा। "यात्रादिनिरतान्योढा कुलटा गलितत्रपा" सा० द० ३-६६।

**अन्योदर्य ಅನ್ಯೋದರ್ಯ** (पु०) ಮಲತಾಯಿಯ ಮಗ, ಭಿನ್ನೋದರ. अन्यस्मिन्नुदरे स्वमातृभिन्ने गर्भे भवः "यत्" (४-३-५४)। "अन्योदर्यस्तु संसृष्टी नान्योदर्यो धनं हरेत्" याज्ञ० २-१३४।

**अन्योन्य ಅನ್ಯೋನ್ಯ** (न०) 1. ಅನ್ಯೋನ್ಯಾಲಂಕಾರ, ಅರ್ಥಾಲಂಕಾರದ ಒಂದು ಭೇದ. ಪರಸ್ಪರ ಉಪಕಾರ ವರ್ಣನೆಯು ಅನ್ಯೋನ್ಯಾಲಂಕಾರವು. "अन्योन्यं नाम यत्र स्यादुपकारः परस्परम्। त्रियामा शशिना भाति शशी भाति त्रियामया" चन्द्रा०। (वि०) 2. ಪರಸ್ಪರವಾದ. अन्य कर्मव्य० द्वित्वम् सुश्च (वा० ८-१-१२)। "अन्योन्यव्यतिकरचारुभिर्विचित्रैः" माघ० ४-५३। (क्रि०वि०) 3. ಪರಸ್ಪರವಾಗಿ. "अन्योन्यरक्तमनसामथ बिभ्रतीनाम्" किरा० ९-७४।

**अन्योन्याध्यास ಅನ್ಯೋನ್ಯಾಧ್ಯಾಸ** (पु०) ಎರಡು ವಸ್ತುಗಳೊಳಗೆ (ಪರಸ್ಪರ) ಒಂದರ ಧರ್ಮವನ್ನು ಮತ್ತೊಂದರಲ್ಲಿ ತಪ್ಪಾಗಿ ತಿಳಿಯುವುದು.—ರೈಲಿನಲ್ಲಿ ಕುಳಿತು ಹೋಗುವವನು ತನ್ನಲ್ಲಿರುವ ಚಲನವನ್ನು ರಸ್ತೆಯ ಪಕ್ಕದ ಮರಗಳಲ್ಲಿಯೂ, ಮರಗಳಲ್ಲಿರುವ ನಿಶ್ಚಲತೆಯನ್ನು ತನ್ನಲ್ಲಿಯೂ ತಪ್ಪಾಗಿ ತಿಳಿಯುವುದು ಅನ್ಯೋನ್ಯಾಧ್ಯಾಸವು. अन्योन्यस्मिन् अन्योन्यतादात्म्याध्यासः आरोपः।

**अन्योन्याभाव ಅನ್ಯೋನ್ಯಾಭಾವ** (पु०) ಅಭಾವದ ಒಂದು ಭೇದ, ಒಂದು ಮತ್ತೊಂದಲ್ಲದಿರುವುದು, ಪರಸ್ಪರಾಭಾವ. "घटः पटो न भवति" ಎಂಬಲ್ಲಿ ಹೇಗೆ ಘಟವು ಪಟವಾಗುವುದಿಲ್ಲವೋ ಹಾಗೆಯೇ ಪಟವೂ ಘಟವಾಗುವುದಿಲ್ಲ. ಇದೇ ಅನ್ಯೋನ್ಯಾಭಾವ.

**अन्योन्याश्रय ಅನ್ಯೋನ್ಯಾಶ್ರಯ** (पु०) ಒಂದು ಮತ್ತೊಂದನ್ನು (ಪರಸ್ಪರ) ಆಶ್ರಯಿಸಿಕೊಂಡಿರುವಿಕೆ, (ಪರಸ್ಪರ) ಒಂದರ ಅಧೀನದಲ್ಲಿ ಮತ್ತೊಂದಿರುವಿಕೆ, ಪರಸ್ಪರಾವಲಂಬನ, ಅನ್ಯೋನ್ಯಾಧೀನತೆ.—ಅನ್ಯೋನ್ಯಾಶ್ರಯವು ಜ್ಞಪ್ತಿ, ಉತ್ಪತ್ತಿ ಮತ್ತು ಸ್ಥಿತಿಗಳ ವಿಷಯವಾಗಿ ಮೂರು ವಿಧ. (1) ಎರಡು ವಸ್ತುಗಳಲ್ಲಿ (ಪರಸ್ಪರ) ಒಂದರ ಜ್ಞಾನವುಂಟಾದರೇನೇ ಮತ್ತೊಂದರ ಜ್ಞಾನವುಂಟಾಗುವುದು ಮೊದಲನೆಯದು. (2) ಎರಡು ವಸ್ತುಗಳಲ್ಲಿ (ಪರಸ್ಪರ) ಒಂದರ ಉತ್ಪತ್ತಿಯು ಮತ್ತೊಂದರ ಉತ್ಪತ್ತಿಯನ್ನು ಅಪೇಕ್ಷಿಸಿಕೊಂಡಿರುವುದು ಎರಡನೆಯದು. (3) ಎರಡು ವಸ್ತುಗಳಲ್ಲಿ (ಪರಸ್ಪರ) ಒಂದಿರಬೇಕಾದರೆ ಮತ್ತೊಂದರ ಇರುವಿಕೆಯೂ ಅವಶ್ಯವಾಗಿರಬೇಕಾಗುವುದು ಮೂರನೆಯದು.

**अन्वक्ष ಅನ್ವಕ್ಷ** (वि०) 1. ಪ್ರತ್ಯಕ್ಷವಾದ, ಇಂದ್ರಿಯಗಳಿಗೆ ಗೋಚರವಾಗುವ. 2. ಅನುಸರಿಸುವ, ಹಿಂಬಾಲಿಸುವ. अनुगतमक्षमिन्द्रियम्। (अव्य०) 3. ಅನಂತರ, ತರುವಾಯ. 4. ಕೂಡಲೆ, ಒಡನೆ. 5. ಪ್ರತ್ಯಕ್ಷವಾಗಿ, ಕಣ್ಣೆದುರಿಗೆ. अक्ष्णः समीपम्। अव्ययी०।

**अन्वच् ಅನ್ವಚ್** (वि०) 1. ಅನುಸರಿಸುವ, ಹಿಂಬಾಲಿಸುವ. (क्रि० वि०) 2. ಹಿಂಭಾಗದಲ್ಲಿ, ಹಿಂದುಗಡೆಯಿಂದ. अनु अञ्चति — अञ्चु (गतौ) "क्विन्" (३-२-५९)। "पिदधानमन्वगुपगम्य दृशौ" माघ० ९-७६। (अव्य०) 3. ತರುವಾಯ, ಬಳಿಕ, ಅನಂತರ.

**अन्वय ಅನ್ವಯ** (पु०) 1. ವಂಶ, ಕುಲ. अन्वीयते—अनु+इण् (गतौ) भावे "अच्" (३-३-५६)। "तदन्वये शुद्धिमति प्रसूतः शुद्धिमत्तरः" रघु० १-१२। 2. ಕ್ರಮವಾದ ಸಂಬಂಧ, ಒಂದು ವಾಕ್ಯದಲ್ಲಿ ಒಂದು ಪದಾರ್ಥಕ್ಕೆ ಮತ್ತೊಂದು ಪದಾರ್ಥದೊಡನೆ ಇರುವ ಸಂಬಂಧ. 3. ಹಿಂಬಾಲಿಸುವಿಕೆ, ಅನುಸರಿಸುವಿಕೆ. 4. ತಾತ್ಪರ್ಯ, ಅಭಿಪ್ರಾಯ. 5. ಕುಲದಲ್ಲಿ ಜನಿಸಿದವರು. अनु+इण् (गतौ) कर्त० "अच्"। "स जीवन्नेव शूद्रत्वमाशु गच्छति सान्वयः" मनु० २-१६८। 6. ಸಂಬಂಧ. "धर्मसूकररूपस्य तवासौ क्षमयान्वये" याद० १६-२७। 7. ಪ್ರತ್ಯಕ್ಷ. अन्वेति इन्द्रियम्। 8. (ತಾರ್ಕಿಕ ಮತದಲ್ಲಿ) ಹೇತು ಸಾಧ್ಯಗಳ ವ್ಯಾಪ್ತಿ. [ವ್ಯಾಪ್ತಿಯು ಅನ್ವಯವ್ಯಾಪ್ತಿ ಮತ್ತು ವ್ಯತಿರೇಕ ವ್ಯಾಪ್ತಿ ಎಂದು ಎರಡು ವಿಧ. ಹೇತು ಸಾಧ್ಯಗಳ ವ್ಯಾಪ್ತಿಯು ಅನ್ವಯವ್ಯಾಪ್ತಿ. "यत्र धूमस्तत्राग्निः यथा महानसः" ಇಲ್ಲಿ ಧೂಮವು ಹೇತು. ಅಗ್ನಿಯು

ಸಾಧ್ಯ. ಇವೆರಡರ ಸಾಹಚರ್ಯವು ಮಹಾನಸದಲ್ಲಿರುವುದರಿಂದ ಅನ್ವಯವ್ಯಾಪ್ತಿಯೆನಿಸುವುದು. ಸಾಧ್ಯಾಭಾವ ಮತ್ತು ಹೇತ್ವಭಾವಗಳ ವ್ಯಾಪ್ತಿಯು ವ್ಯತಿರೇಕ ವ್ಯಾಪ್ತಿ. "यत्र वह्न्यभावः तत्र धूमाभावः यथा महाह्रदः" ಇಲ್ಲಿ ಸಾಧ್ಯಾಭಾವವು ವಹ್ನ್ಯಭಾವ. ಹೇತ್ವಭಾವವು ಧೂಮಾಭಾವ. ಇವೆರಡರ ವ್ಯಾಪ್ತಿಯು ಹ್ರದದಲ್ಲಿರುವುದರಿಂದ ವ್ಯತಿರೇಕವ್ಯಾಪ್ತಿಯೆನಿಸುವುದು. "साध्ये निश्चितमन्वयेन घटितम्" मुद्रा० ५-१३।] 9. ಕಾರಣವಿದ್ದ ಕಡೆ ಕಾರ್ಯವಿರುವಿಕೆ.—ಯಾವುದು ಇರುವಾಗ ಕಾರ್ಯವುಂಟಾಗುವುದೋ ಅದು ಅನ್ವಯ. ಯಾವುದು ಇಲ್ಲದುದರಿಂದ ಕಾರ್ಯವುಂಟಾಗುವುದಿಲ್ಲವೋ ಅದು ವ್ಯತಿರೇಕ. यत्सत्वे यत्सत्वम् अन्वयः। यदभावे यदभावो व्यतिरेकः। ಈ ಅನ್ವಯವ್ಯತಿರೇಕಗಳಿಂದ ಕಾರ್ಯಕಾರಣಭಾವಗಳನ್ನು ನಿರ್ಣಯಿಸಬೇಕು.

**अन्वयज्ञ** ಅನ್ವಯಜ್ಞ (वि०) ವಂಶಾವಳಿಯನ್ನರಿತವನು, ವಂಶದ ಚರಿತ್ರೆಯನ್ನು ಬಲ್ಲವನು. अन्वयं जानाति—ज्ञा (अवबोधने) "कः" (३-२-३)। "अथ स्तुते बन्दिभिरन्वयज्ञैः" रघु० ६-८।

**अन्वयबोध** ಅನ್ವಯಬೋಧ (पु०) ಶಾಬ್ದಬೋಧ, ಪದಾರ್ಥಗಳಿಗೆ ಪರಸ್ಪರ ಇರುವ ಸಂಬಂಧದ ಜ್ಞಾನ.

**अन्वयव्याप्ति** ಅನ್ವಯವ್ಯಾಪ್ತಿ (स्त्री०) ಹೇತುಸಾಧ್ಯಗಳ ವ್ಯಾಪ್ತಿ. अन्वयेन व्याप्तिः व्यापनं नियमेन स्थितिः। [ವಿವರಕ್ಕೆ "अन्वय" ಪದದಲ್ಲಿ ನೋಡಿ.]

**अन्वयागत** ಅನ್ವಯಾಗತ (वि०) ವಂಶಪರಂಪರೆಯಿಂದ ಬಂದ, ಕುಲಕ್ರಮವಾಗಿ ಬಂದಿರುವ. अन्वयादागतः। "श्रुतं शौर्यं तपः कन्या शिष्ययाज्यान्वयागतम्। धनं सप्तविधं शुद्धम्" नारदसं०।

**अन्वर्थ** ಅನ್ವರ್ಥ (वि०) ಅರ್ಥಕ್ಕೆ ಅನುಸಾರವಾದ, ಅರ್ಥವನ್ನು ಅನುಸರಿಸಿ ಬಂದಿರುವ, ಅರ್ಥಕ್ಕೆ ತಕ್ಕಂತಿರುವ. अनुगतः अर्थम्। "तथैव सोऽभूदन्वर्थो राजा प्रकृतिरञ्जनात्" रघु० ४-१२।

**अन्ववसर्ग** ಅನ್ವವಸರ್ಗ (पु०) ಕಾಮಚಾರಾನುಜ್ಞೆ, ಸ್ವೇಚ್ಛೆಯಿಂದ ನಡೆಯಲು ಅಪ್ಪಣೆ. अपि स्तुहि, अपि सिञ्च। अन्ववसर्गः कामचारानुज्ञा सि० कौ०।

**अन्ववाय** ಅನ್ವವಾಯ (पु०) ವಂಶ, ಸಂತತಿ, ಸಂತಾನ. अन्ववाय्यते अनुसम्बध्यते—अनु+अव+अय (गतौ) "घञ्" (३-३-१९)। "प्राह ते नु सदृशी दिवौकसामन्ववायमवदातमाकृतिः" किरा० १३-३७।

**अन्वष्टका** ಅನ್ವಷ್ಟಕಾ (स्त्री०) ಮಾರ್ಗಶೀರ್ಷ ಮೊದಲು ನಾಲ್ಕು ತಿಂಗಳ ಕೃಷ್ಣ ನವಮಿ.

**अन्वहम्** ಅನ್ವಹಮ್ (अव्य०) ಪ್ರತಿ ದಿನವೂ, ನಿತ್ಯವೂ. अह्नि अह्नि।

**अन्वाख्यान** ಅನ್ವಾಖ್ಯಾನ (न०) ಹಿಂದೆ ಹೇಳಿದ ವಿಷಯದ ಅರ್ಥವಿವರಣೆ. अनु+आ+ख्या (प्रकथने) "ल्युट्" (३-३-११५)।

**अन्वाचय** ಅನ್ವಾಚಯ (पु०) ಮುಖ್ಯವಾದ ಕೆಲಸದೊಡನೆ ಮತ್ತೊಂದು (ಗೌಣ, ಅಪ್ರಧಾನ) ಕೆಲಸವನ್ನೂ ಸಾಧಿಸಲು ಹೇಳುವುದು, ಪ್ರಧಾನಕಾರ್ಯದ ಜೊತೆಯಲ್ಲಿ ಅಪ್ರಧಾನ ಕಾರ್ಯವನ್ನೂ ಮಾಡಲು ಅಪ್ಪಣೆ. (प्रधानस्य) पश्चात् अन्य आचीयते बोध्यते यत्र—अनु+आ+चिञ् (चयने) "अच्" (३-३-५६)। "भिक्षामट गां चानय" ಎಂಬಲ್ಲಿ ಭಿಕ್ಷಾಟನೆಯು ಮುಖ್ಯವಾದುದು. ಗವಾನಯನವು ಆನುಷಂಗಿಕ (ಅಪ್ರಧಾನ).

**अन्वादेश** ಅನ್ವಾದೇಶ (पु०) ಒಂದು ಕಾರ್ಯವನ್ನು ಬೋಧಿಸಲು ಹೇಳಿರುವುದನ್ನು ಮತ್ತೊಂದು ಕಾರ್ಯವನ್ನು ಬೋಧಿಸಲು ಮತ್ತೆ ಹೇಳುವುದು. किञ्चित्कार्यं विधातुमुपात्तस्य कार्यान्तिरं विधातुं पुनरुपादानमन्वादेशः। ಉದಾ :—"अनेन व्याकरणमधीतमेनं छन्दोऽध्यापय" इति सि० कौ०।

**अन्वाधान** ಅನ್ವಾಧಾನ (न०) ಯಜ್ಞವೇದಿಕೆಯಲ್ಲಿ ಸ್ಥಂಡಿಲಕಲ್ಪನಾನಂತರ ಅಗ್ನಿ ಪ್ರತಿಷ್ಠೆ ಮಾಡಿ ಅದರಲ್ಲಿ ಮಾಡುವ ಸಮಿತ್ತುಗಳ ಆಧಾನ. अनु पश्चात् आधानम्।

**अन्वाधि** ಅನ್ವಾಧಿ (पु०) 1. ತನ್ನಲ್ಲಿಟ್ಟಿದ್ದ ವಸ್ತು ಅಥವಾ ಧನವನ್ನು ಅದರ ಯಜಮಾನನಿಗೆ ಕೊಡಲು ಮತ್ತೊಬ್ಬನಲ್ಲಿಡುವುದು, अनु पश्चात् आधीयते—अनु+आ+डु धाञ् (धारणपोषणयोः) "किः" (३-३-९२)। "अर्थमार्गणकार्येषु अन्यस्मिन् वचनान्मम। दद्यास्त्वमिति यो दत्तः स इहान्वाधिरुच्यते" कात्या०। 2. ಪಶ್ಚಾತ್ತಾಪ.

**अन्वाधेय** ಅನ್ವಾಧೇಯ (न०) ವಿವಾಹಾನಂತರ ವಧುವಿಗೆ ಪತಿಗೃಹದಲ್ಲಿಯೂ ಪಿತೃಗೃಹದಲ್ಲಿಯೂ ಕೊಡಲ್ಪಟ್ಟ ಹಣ, ಸ್ತ್ರೀ ಧನ. "विवाहात्परतो यत्तु लब्धं भर्तृकुले स्त्रिया। अन्वाधेयं तदुक्तं तु लब्धं बन्धुकुले तथा" कात्या०।

अन्वायतन ಅನ್ವಾಯತನ (अव्यं) ಮನೆಯಲ್ಲಿ, ಮನೆಯೊಳಗೆ, ಮನೆಯ ಮಧ್ಯದಲ್ಲಿ.

अन्वारब्ध ಅನ್ವಾರಬ್ಧ (विं) 1. ಯಾಗಾದಿಗಳ ಫಲವು ತನಗೂ ಲಭಿಸಲು ಯಜಮಾನನನ್ನು ಸ್ಪರ್ಶ ಮಾಡಿಕೊಂಡು ಕುಳಿತಿರುವ. 2. ದೇಹದಲ್ಲಿ ಇಡಲ್ಪಟ್ಟ. 3. ಅನುಸರಿಸಲ್ಪಟ್ಟ.

अन्वारम्भ ಅನ್ವಾರಂಭ (पुं) ಯಾಗಾದಿಗಳ ಫಲವು ತನಗೂ ಉಂಟಾಗಲು ಯಜಮಾನನನ್ನು ಸ್ಪರ್ಶಮಾಡಿಕೊಂಡು ಕೂಡುವುದು.

अन्वारूढ ಅನ್ವಾರೂಢ (विं) 1. ಹತ್ತಲ್ಪಟ್ಟ. 2. ಅನಂತರ ಹತ್ತಲ್ಪಟ್ಟ. अनु+आ+रुह (बीजजन्मनि प्रादुर्भावे च) "क्तः" (३-२-१०२)।

अन्वारोह ಅನ್ವಾರೋಹ (पुं) ಪತಿಯ ಮರಣಾನಂತರ ಪತ್ನಿಯ ಸಹಗಮನ. अनु पश्चात् आरोहः।

अन्वासन ಅನ್ವಾಸನ (नं) 1. ಸೇವೆ, ಶುಶ್ರೂಷೆ, ಉಪಾಸನೆ, ಅನಂತರ ಕುಳಿತುಕೊಂಡು ಮಾಡುವ ಸೇವೆ. 2. ಅನಂತರ ಕುಳಿತುಕೊಳ್ಳುವುದು. 3. ದುಃಖ, ಶೋಕ. 4. ಕೈಗಾರಿಕೆಯ ಶಾಲೆ. 5. ವಸ್ತಿಕ್ರಿಯೆ. "अन्वासनं स्नेहवस्तौ सेवायामनुशोचने" हेमं।

अन्वासित ಅನ್ವಾಸಿತ (विं) ಅನಂತರ ಕುಳಿತುಕೊಳ್ಳೋಣದರಿಂದ ಗೌರವಿಸಲ್ಪಟ್ಟ. अनु+आस (उपवेशने) कर्मं "क्तः" (३-२-१०२)। "अन्वासितमरुन्धत्या स्वाहयेव हविर्भुजम्" रघुं १-५६।

अन्वासीन ಅನ್ವಾಸೀನ (विं) ಅನಂತರ ಕುಳಿತುಕೊಂಡ, ಗುರುಹಿರಿಯರು ಕುಳಿತಮೇಲೆ ಕುಳಿತುಕೊಂಡ. अनु पश्चात् आसीनः।

अन्वाहार्य ಅನ್ವಾಹಾರ್ಯ (नं) 1. ಯಾಗದಲ್ಲಿ ಪುರೋಹಿತನಿಗೆ ಕೊಡುವ ದಾನ, ಕಾಣಿಕೆ, ದಕ್ಷಿಣೆ. 2. ಮಾಸಿಕ ಶ್ರಾದ್ಧ, ಪ್ರತಿ ತಿಂಗಳಲ್ಲಿಯೂ ನಡೆಸುವ ಶ್ರಾದ್ಧ, ಅಮಾವಾಸ್ಯೆಯ ದಿನ ಮಾಡುವ ಶ್ರಾದ್ಧ. अनु+आ+हृञ् (हरणे) "ण्यत्" (३-१-१२४)। "अन्वाहार्यममावास्याश्राद्धमिष्टेश्च दक्षिणा" हेमं।

अन्वित ಅನ್ವಿತ (विं) 1. ಸಂಬಂಧಿಸಲ್ಪಟ್ಟ. 2. ಸೇರಿಸಲ್ಪಟ್ಟ. 3. ಅನುಸರಿಸಲ್ಪಟ್ಟ, ಹಿಂಬಾಲಿಸಲ್ಪಟ್ಟ. अनु+इण् (गतौ) "क्तः" (३-२-१०२)। "स वृत्तचूलश्चलकाकपक्षकैरमात्यपुत्रैः सवयोभिरन्वितः" रघुं ३-२८।

अन्विष्ट ಅನ್ವಿಷ್ಟ (विं) 1. ಹುಡುಕಲ್ಪಟ್ಟ, ಶೋಧಿಸಲ್ಪಟ್ಟ. अनु+इषु (इच्छायाम्) "क्तः" (३-२-१०२)। "यद्वायुरन्विष्टमृगैः किरातैः" कुमां १-१५। 2. ಅಪೇಕ್ಷಿಸಲ್ಪಟ್ಟ.

अन्वीक्षा ಅನ್ವೀಕ್ಷಾ (स्त्रीं) 1. ಪರ್ಯಾಲೋಚನೆ, ವಿಮರ್ಶೆ. 2. ಚಿಂತನೆ, ಆಲೋಚನೆ.

अन्वेष ಅನ್ವೇಷ (पुं) 1. ಹುಡುಕುವುದು. 2. ಧ್ಯಾನ, ಚಿಂತನೆ. अनु+इषु (इच्छायाम्) "घञ्" (३-३-१८)। "वयं तत्त्वान्वेषान्मधुकर हतास्त्वं खलु कृती" शाकुं १-२४।

अन्वेषण ಅನ್ವೇಷಣ (नं) 1. ಹುಡುಕುವುದು. 2. ಧ್ಯಾನ, ಚಿಂತನೆ. अनु+इषु (इच्छायाम्) "ल्युट्"। "रन्ध्रान्वेषणदक्षाणां द्विषामामिषतां ययौ। रघुं १२-११।

अन्वेषणा ಅನ್ವೇಷಣಾ (स्त्रीं) 1. ಹುಡುಕುವುದು. 2. ತತ್ತ್ವಾನುಸಂಧಾನ, ವಿಮರ್ಶೆ, ವಿಚಾರ. अनु+इष (गतौ) "युच्" (वां ३-३-१०७)।

अन्वेषित ಅನ್ವೇಷಿತ (विं) 1. ಹುಡುಕಲ್ಪಟ್ಟ. 2. ಚಿಂತಿಸಲ್ಪಟ್ಟ, ಧ್ಯಾನಿಸಲ್ಪಟ್ಟ. 3. ವಿಮರ್ಶಿಸಲ್ಪಟ್ಟ. अनु+एषृ (गतौ) "क्तः" (३-२-१०२)।

अन्वेषितृ ಅನ್ವೇಷಿತೃ (विं) ಹುಡುಕುವ, ಶೋಧಿಸುವ. अनु+एषृ (गतौ) "तृन्" (३-२-१३५)।

अन्वेषिन् ಅನ್ವೇಷಿನ್ (विं) ಹುಡುಕುವ. अनु+इषु (इच्छायाम्) "णिनिः" (३-१-१३४)। "तौ सीतान्वेषिणौ गृध्रं लूनपक्षमपश्यताम्" रघुं १२-५४। स्त्रियाम् "ङीप्" (४-१-५)। अन्वेषिणी ಅನ್ವೇಷಿಣೀ.

अन्वेष्टृ ಅನ್ವೇಷ್ಟೃ (विं) ಹುಡುಕುವವನು. अनु+इषु (इच्छायाम्) "तृच्" (३-१-१३३)।

अप् ಅಪ್ (स्त्रीं बं वं) ನೀರು, ಜಲ. आप्लृ (व्याप्तौ) "क्विप्" ह्रस्वश्च (उं २-५१)। आपः अपः अद्भिः अद्भ्यः अद्भ्यः अपाम् अप्सु। "अप एव ससर्जादौ तासु वीर्यमवासृजत्" मनुं १-८।

अप ಅಪ (अव्यं) ಒಂದು ಉಪಸರ್ಗ. [ಇದು ಕೆಳಗಿನ ಅರ್ಥಗಳಿಗೆ ದ್ಯೋತಕವಾಗಿರುವುದು.] 1. ವಿಯೋಗ, ಅಗಲಿಕೆ. अपयाति, अपसरति। 2. ಚೌರ್ಯ, ಕಳ್ಳತನ. अपहरति। 3. ಸತ್ಯವನ್ನಡಗಿಸುವುದು, ಮರೆಮಾಚುವುದು. अपलपति, अपवदति। 4. ಪರಿಹಾಸ್ಯ, ಕುಚೋದ್ಯ. अपहसति। 5. ವರ್ಜಿಸುವುದು, ತಳ್ಳಿಹಾಕುವುದು, ಬಹಿಷ್ಕರಿಸುವುದು. अपविष्णु संसारः।

6. ಹೀನದೆಶೆ ಹೊಂದುವುದು, ಕ್ಷೀಣವಾಗುವುದು. अपचयः। 7. ವಿಪರೀತ, ವಿರೋಧ. अपशब्दः। 8. ನಿದರ್ಶನ, ನಿರ್ದೇಶ ಮಾಡುವುದು, ತೋರಿಸುವುದು. अपदिशति। 9. ಅಪಕರ್ಷ, ಕೀಳುತನ. अपकर्म। 10. ಕೆಳಗಡೆ, ಕೆಳಮುಖ. अपानः। 11. ಸಂತೋಷ, ಆನಂದ. "वर्जने विकृतौ चौर्ये विपरीतवियोगयोः। अपकृष्टे च निर्देशे हर्षे चापः प्रयुज्यते"।

**अपकर्तृ ಅಪಕರ್ತೃ** (पुं०) 1. ಶತ್ರು, ಹಗೆ, ವೈರಿ. अप+डु कृञ् (करणे) "तृच्" (३-१-१३३)। (वि०) 2. ಅಪಕಾರ ಮಾಡುವ, ಹಾನಿಯುಂಟುಮಾಡುವ. स्त्रियाम् "ङीप्" (४-१-५)। **-कर्त्री -ಕರ್ತ್ರೀ.**

**अपकर्मन् ಅಪಕರ್ಮನ್** (नं०) 1. ಕೆಟ್ಟ ಕೆಲಸ. 2. ದಾನ ಮಾಡಿದುದನ್ನು ಕೋಪದಿಂದಾಗಲಿ, ದಾನ ತೆಗೆದುಕೊಂಡವನು ಅಯೋಗ್ಯನೆಂಬ ಕಾರಣದಿಂದಾಗಲಿ ಹಿಂದಕ್ಕೆ ತೆಗೆದುಕೊಳ್ಳುವುದು. 3. ತೆಗೆದುಕೊಂಡ ಹಣವನ್ನು ಹಿಂತಿರುಗಿಸುವುದು, ಸಾಲ ತೀರಿಸುವುದು. "तेषामाद्यमृणादानं निक्षेपोऽस्वामिविक्रयः। संभूय च समुत्थानं दतस्यानपकर्म च" मनु० ८-४।

**अपकर्ष ಅಪಕರ್ಷ** (पुं०) 1. ಎಳೆದುಕೊಳ್ಳುವುದು, ಹಿಂದಕ್ಕೆ ತೆಗೆದುಕೊಳ್ಳುವುದು. अप+कृष (विलेखने) "घञ्" (३-३-१८)। 2. (ಗುಣದಲ್ಲಿ) ಕಡಿಮೆಯಾಗುವುದು, ಹೀನವಾಗುವುದು, ಕೀಳುತನ. 3. ಮುಂದೆ ಮಾಡಬೇಕಾದ (ಶ್ರಾದ್ಧಾದಿ) ಕಾರ್ಯವನ್ನು ಮುಂಚಿತವಾಗಿ ಮಾಡುವುದು. 4. (ವ್ಯಾಕರಣದಲ್ಲಿ) ಮುಂದಿನ ಸೂತ್ರಗಳ ಪದಗಳನ್ನು ಹಿಂದಿನ ಸೂತ್ರಾರ್ಥಾನ್ವಯಕ್ಕಾಗಿ ಎಳೆದುಕೊಳ್ಳುವುದು.

**अपकर्षक ಅಪಕರ್ಷಕ** (वि०) 1. ಎಳೆಯುವ, ಹಿಂದಕ್ಕೆ ತೆಗೆದುಕೊಳ್ಳುವ. 2. (ಗುಣದಲ್ಲಿ) ಕಡಿಮೆಮಾಡುವ, ಹೀನವಾಗಿಮಾಡುವ, ಕೆಡಿಸುವ. अप+कृष (विलेखने) "ण्वुल्" (३-१-१३३)। "दोषास्तस्य (काव्यस्य) अपकर्षकाः" सा० द० १-३।

**अपकर्षण ಅಪಕರ್ಷಣ** (नं०) 1. ಎಳೆದುಕೊಳ್ಳುವುದು, ಹಿಂದಕ್ಕೆ ತೆಗೆದುಕೊಳ್ಳುವುದು. 2. (ಗುಣದಲ್ಲಿ) ಕಡಿಮೆಮಾಡುವುದು, ಹೀನವಾಗಿ ಮಾಡುವುದು. अप+कृष (विलेखने) "ल्युट्" (३-३-११५)। (वि०) 3. ಎಳೆದುಕೊಳ್ಳುವ, ಹಿಂದಕ್ಕೆ ತೆಗೆದುಕೊಳ್ಳುವ. 4. (ಗುಣದಲ್ಲಿ) ಕಡಿಮೆಮಾಡುವ, ಹೀನವಾಗಿ ಮಾಡುವ, ಕೆಡಿಸುವ. कर्त० "ल्युः" (३-१-१३४)।

**अपकार ಅಪಕಾರ** (पुं०) 1. ಕೆಡಕು, ಪೀಡೆ, ತೊಂದರೆ. अप+डु कृञ् (करणे) "घञ्" (३-३-१८)। "उपकारापकारो हि लक्ष्यं लक्षणमेतयोः" माघ० २-३७। 2. ಕೆಡಕು ಮಾಡುವ ಅಪೇಕ್ಷೆ, ಕೇಡುಬಯಸುವುದು. 3. ಇತರರನ್ನು ಪೀಡಿಸುವುದು. "अपकारः परपीडनम्" वैज०।

**अपकारगिर् ಅಪಕಾರಗಿರ್** (स्त्री०) ಕೇಡುಂಟುಮಾಡುವೆನೆಂಬ ಬೆದರಿಕೆಯ ಮಾತು, ಭಯೋತ್ಪಾದಕ ವಚನ. अपकारेण गीर्यते—गृ (निगरणे) "क्विप्"।

**अपकारिन् ಅಪಕಾರಿನ್** (वि०) 1. ಅಪಕಾರ ಮಾಡುವ, ಕೆಡಕುಂಟುಮಾಡುವ. 2. ಅಪಕಾರವನ್ನು ಬಯಸುವ, ಕೆಡಕನ್ನು ಯೋಚಿಸುವ. अप+डु कृञ् (करणे) "णिनिः" (३-१-१३४)। "उपकर्त्रारिणा सन्धिर्न मित्रेणापकारिणा" माघ० २-३७।

**अपकृत ಅಪಕೃತ** (नं०) 1. ಅಪಕಾರ, ಕೆಡಕು. अप+डु कृञ् (करणे) भावे "क्तः" (३-३-११४)। (वि०) 2. ಕೆಡಕು ಮಾಡಲ್ಪಟ್ಟ, ತೊಂದರೆಪಡಿಸಲ್ಪಟ್ಟ. अप+कृञ् कर्म० "क्तः" (३-२-१०२)।

**अपकृति ಅಪಕೃತಿ** (स्त्री०) 1. ಅಪಕಾರ, ಕೆಡಕು. 2. ಕೆಡಕುಂಟುಮಾಡುವ ಯೋಚನೆ. अप+डु कृञ् (करणे) "क्तिन्" (३-३-९४)।

**अपकृत्य ಅಪಕೃತ್ಯ** (नं०) 1. ಅಪಕಾರ, ಕೆಡಕು. अप+डु कृञ् (करणे) भावे "क्यप्" (३-१-१२०)। 2. ಅಕೃತ್ಯ, ನಿಂದ್ಯವಾದ ಕೆಲಸ. अपकृष्टं कृत्यम्।

**अपकृत्या ಅಪಕೃತ್ಯಾ** (स्त्री०) ಅಪಕಾರ, ಕೆಡಕು. अप+डु कृञ् (करणे) भावे "क्यप्" (३-३-१००)।

**अपकृष्ट ಅಪಕೃಷ್ಟ** (पुं०) 1. ವಾಯಸ, ಕಾಗೆ. "शक्रजः सत्यवाक्काणो ऽपकृष्टो नगरीबकः" त्रिकाण्ड०। (वि०) 2. ನೀಚವಾದ, ಹೀನವಾದ. 3. ಮುಂಚಿತವಾಗಿ ಮಾಡಲ್ಪಟ್ಟ. 4. ಎಳೆಯಲ್ಪಟ್ಟ. 5. ಮುಂದಿನ ಸೂತ್ರದಿಂದ ಹಿಂದಿನ ಸೂತ್ರಾರ್ಥಾನ್ವಯಕ್ಕಾಗಿ ತೆಗೆದುಕೊಳ್ಳಲ್ಪಟ್ಟ (ಪದ).

**अपक्रम ಅಪಕ್ರಮ** (पुं०) 1. ಪಲಾಯನ, ಓಡಿಹೋಗುವುದು. अप+क्रमु (पादविक्षेपे) भावे "घञ्" (३-३-१८)। 2. ಓಡಿಹೋಗುವ ಸ್ಥಳದ ಎಲ್ಲೆ. अप+क्रमु कर्म० "घञ्" (३-३-१९)। "विक्षिपत्येष विक्षेपं चन्द्रादीनामपक्रमात्" सू० सि०। (वि०) 3. ಅಕ್ರಮವಾದ, ಕ್ರಮತಪ್ಪಿದ. अपगतः क्रमो यस्मात्।

**अपक्रमण** ಅಪಕ್ರಮಣ (नं०) ಓಟ, ಪಲಾಯನ, ತಪ್ಪಿಸಿಕೊಂಡು ಓಡುವುದು. अप+क्रमु (पादविक्षेपे) भावे "ल्युट्" (३-३-११५)।

**अपक्रिया** ಅಪಕ್ರಿಯಾ (स्त्री०) ಅಪಕಾರ, ಕೆಡಕು. अप+डु कृञ् (करणे) "श:"(३-३-१००)। "चतुर्थोपायसाध्ये तु रिपौ सान्त्वमपक्रिया" माघ० २-५४।

**अपक्रोश** ಅಪಕ್ರೋಶ (पु०) ನಿಂದೆ, ದೂಷಣೆ. अप+क्रुश (आह्वाने रोदने च) "घञ्" (३-३-१८)। भावे "ल्युट्" (३-३-११५)। –क्रोशनम् – ಕ್ರೋಶನಮ್.

**अपक्व** ಅಪಕ್ವ (वि०) 1. ಬಲಿಯದ, ಮಾಗದಿರುವ, ಹಣ್ಣಾಗದ. 2. ಬೇಯಿಸಲ್ಪಡದ, ಹಸಿಯಾದ. नं० त०।

**अपक्ष** ಅಪಕ್ಷ (वि०) 1. ರೆಕ್ಕೆಯಿಲ್ಲದ. 2. ಸಹಾಯವಿಲ್ಲದ. नास्ति पक्षो गरुत् सहायो वा यस्य।

**अपक्षपात** ಅಪಕ್ಷಪಾತ (पु०) ನಿಷ್ಪಕ್ಷಪಾತ, ನ್ಯಾಯ, ಸಮದೃಷ್ಟಿ.

**अपक्षपातिन्** ಅಪಕ್ಷಪಾತಿನ್ (वि०) ಪಕ್ಷಪಾತವಿಲ್ಲದ, ನ್ಯಾಯವಾದ, ಸಮದೃಷ್ಟಿಯುಳ್ಳ.

**अपक्षय** ಅಪಕ್ಷಯ (पु०) ಕಡಿಮೆಯಾಗುವುದು, ಕ್ಷೀಣವಾಗುವುದು, ನಾಶವಾಗುವುದು.

**अपक्षेपण** ಅಪಕ್ಷೇಪಣ (नं०) 1. ಕೆಳಕ್ಕೆ ಹಾಕುವುದು, ಕೆಳಕ್ಕೆ ಎಸೆಯುವುದು. 2. ಕೆಳಗೆ ಇಡುವುದು. "उत्क्षेपणाव(प)क्षेपणाकुञ्चनप्रसारणगमनानि" ಎಂದು ಹೇಳಿರುವ ಐದು ಕರ್ಮಗಳಲ್ಲೊಂದು.

**अपगण्ड** ಅಪಗಂಡ (पु०) ಶಿಶು, ಬಾಲಕ.

**अपगत** ಅಪಗತ (वि०) 1. ಪಲಾಯನ ಮಾಡಿದ, ಓಡಿಹೋದ. 2. ಹೊರಟುಹೋದ, ಕಳೆದುಹೋದ. अप+गम्लृ (गतौ) कर्त० "क्त:" (३-४-७२)। "अपगतनवयावकैश्चिराय" माघ० ७-६७।

**अपगम** ಅಪಗಮ (पु०) 1. ಪಲಾಯನ, ಓಡಿಹೋಗುವುದು. 2. ಹೋಗುವುದು, ಹೊರಡುವುದು, ಚಲಿಸುವುದು. 3. ಅದೃಶ್ಯವಾಗುವುದು, ಕಣ್ಣಿಗೆ ಕಾಣಿಸದಿರುವುದು, ನಾಶ ಹೊಂದುವುದು. अप+गम्लृ (गतौ) भावे "अप्" (३-३-५८)। "पुराणपत्रापगमादनन्तरं लतेव संनद्धमनोज्ञपल्लवा" रघु० ३-७। 4. ಗತಿಸಿಹೋಗುವುದು, ತೀರಿಹೋಗುವುದು.

**अपगति** ಅಪಗತಿ (स्त्री०) ದುರ್ದೈವ.

**अपगर** ಅಪಗರ (पु०) ನಿಂದೆ, ದೂಷಣೆ.

**अपगुण** ಅಪಗುಣ (वि०) ನಿರ್ಗುಣ, ಗುಣಶೂನ್ಯ. अपगता गुणा यस्मात्। "व्यक्तमपगुण गुणत्रितयत्यजनप्रयासमुपयासि किं मुधा" माघ० १५-३२।

**अपगुरण** ಅಪಗುರಣ (नं०) ದ್ರೋಹ, ವಂಚನೆ. अप+गुरी (उद्यमने) "ल्युट्" (३-३-११५)।

**अपघन** ಅಪಘನ (पु०) 1. ಅಂಗ, ಅವಯವ. अपहन्यते — अप+हन (हिंसागत्योः) "अप्" (३-३-८१)। "अङ्गं प्रतीकोऽवयवोऽपघनः" अम०। (वि०) 2. ಮೋಡವಿಲ್ಲದ. अपगतो घनो यस्मात्।

**अपघात** ಅಪಘಾತ (पु०) 1. ಹಾನಿ, ತೊಂದರೆ. 2. ದುರಂತ ಮರಣಕ್ಕೆ ಕಾರಣ, ಮರಣಕ್ಕೆ ಕಾರಣವಾದ ಆಕಸ್ಮಿಕ. अप+हन भावे "घञ्" (३-३-१८)।

**अपच** ಅಪಚ (पु०) 1. ಅಡಿಗೆ ಮಾಡಲು ಶಕ್ತಿಯಿಲ್ಲದವನು. पक्तुमशक्त: (६-२-१५७)। 2. ಅಯೋಗ್ಯನಾದ ಅಡಿಗೆಯವನು. (ಕೋಪದಿಂದ ಹೇಳುವ ಮಾತು.) अपचो जाल्मः। सि० कौ० (६-२-१५८)।

**अपचय** ಅಪಚಯ (पु०) 1. ಕಡಿಮೆಯಾಗುವುದು, ಕ್ಷೀಣವಾಗುವುದು. अप+चिञ् (चयने) "अच्" (३-३-५६)। "तेनास्यापचयं यान्ति व्याधेर्मूलान्यशेषत:" सुश्रुत०। 2. ನಷ್ಟ. 3. ಹಾನಿ, ಕೆಡಕು.

**अपचरित** ಅಪಚರಿತ (नं०) ಅಕಾರ್ಯ, ಕೆಟ್ಟಕೆಲಸ. अपकृष्टं चरितम्। "आहोस्वित्प्रसवो ममापचरितैर्विष्टम्भितो वीरुधाम्" शाकु० ५-९।

**अपचायित** ಅಪಚಾಯಿತ (वि०) ಪೂಜಿಸಲ್ಪಟ್ಟ. अप+चायृ (पूजानिशामनयोः) "क्त:" (३-२-१०२)।

**अपचार** ಅಪಚಾರ (पु०) 1. ಅಪರಾಧ, ತಪ್ಪು, ಅಕೃತ್ಯ. अप+चर (गतौ) भावे "घञ्"(३-३-१८)। "राजन् प्रजासु ते कश्चिदपचार: प्रवर्तते" रघु० १५-४७। 2. ನಾಶ. 3. ನಿರ್ಗಮನ, ಪ್ರಯಾಣ. 4. ಲೋಪ, (ಕರ್ಮಾಚರಣೆಯಲ್ಲಿ) ವಿಷಯ ವೈಪರೀತ್ಯದಿಂದುಂಟಾಗುವ ದೋಷ. 5. ಅಪಥ್ಯ, ಆಹಾರ ನಿಯಮದ ಉಲ್ಲಂಘನೆ. "कृतापचारोऽपि परैरनाविष्कृतविक्रिय:" माघ० २-८४।

**अपचारिन्** ಅಪಚಾರಿನ್ (वि०) ತಪ್ಪು ಕೆಲಸಮಾಡುವ, ಅಪರಾಧ ಮಾಡುವ ಸ್ವಭಾವದ. अप+चर (गतौ) "घिनुण्"(३-२-१४२)। स्त्रियाम् "ङीप्"(४-१-५)। –चारिणी –ಚಾರಿಣೀ.

**अपचिकीर्षा ಅಪಚಿಕೀರ್ಷಾ** (स्त्री०) ಅಪಕಾರ ಮಾಡುವ ಅಪೇಕ್ಷೆ, ಕೆಡಕನ್ನುಂಟುಮಾಡುವ ಅಭಿಲಾಷೆ. अपकर्तुमिच्छा—अप+डु कृञ् (करणे)+सन् "अः" (३-३-१०२)।

**अपचिकीर्षु ಅಪಚಿಕೀರ್ಷು** (वि०) ಅಪಕಾರಮಾಡುವ ಅಪೇಕ್ಷೆಯುಳ್ಳ. अप+ डु कृञ् (करणे) +सन् "उः" (३-२-१६८)।

**अपचित ಅಪಚಿತ**(न०) 1. ಗೌರವ, ಪೂಜೆ, ಮರ್ಯಾದೆ. अप+चायृ (पूजानिशामनयोः)+णिच् (चिभावः) "क्तः" (३-३-११४)। (वि०) 2. ಪೂಜಿಸಲ್ಪಟ್ಟ, ಗೌರವಿಸಲ್ಪಟ್ಟ. कर्म० "क्तः" (७-२-३०) निपा०। 3. ಕಡಿಮೆ ಮಾಡಲ್ಪಟ್ಟ. अप+चिञ् (चयने) कर्म० "क्तः" (३-२-१०२)।

**अपचिति ಅಪಚಿತಿ** (स्त्री०) 1. ಪೂಜೆ, ಗೌರವ. अपचाय्यते—अप+चायृ (पूजानिशामनयोः) "क्तिन्" (३-३-९४)। "आशंसितापचितिचारु पुरः सुराणाम्" किरा० ६-४६। 2. ವ್ಯಯ, ಖರ್ಚು. 3. ಕಡಿಮೆಯಾಗುವುದು. 4. ನಾಶ, ಹಾನಿ. 5. ಪ್ರಾಯಶ್ಚಿತ್ತ. "अपचितिर्व्यये हानौ पूजायां निष्कृतावपि" हेम०।

**अपचीयमान ಅಪಚೀಯಮಾನ** (वि०) ಕಡಿಮೆಯಾಗುತ್ತಿರುವ, ನಾಶಹೊಂದುತ್ತಿರುವ. अप+चिञ् (चयने) "शानच्" (३-२-१२४)।

**अपच्छाय ಅಪಚ್ಛಾಯ** (पु०) 1. ದೇವತೆ. (वि०) 2. ನೆರಳಿಲ್ಲದ. 3. ಕಾಂತಿಯಿಲ್ಲದ.

**अपजय ಅಪಜಯ** (पु०) ಪರಾಜಯ, ಸೋಲು. अप+जि (जये) "अच्" (३-३-५६)।

**अपजर ಅಪಜರ** (पु०) 1. ದೇವತೆ. अपगता जरा यस्मात्। (वि०) 2. ಮುಪ್ಪಿಲ್ಲದ.

**अपजात ಅಪಜಾತ** (पु०) ಕೆಟ್ಟಮಗ, ಅಯೋಗ್ಯನಾದ ಮಗ. "मातृतुल्यगुणो जातस्त्वनुजातः पितुः समः। अतिजातोऽधिकस्तस्मादपजातोऽधमाधमः"।

**अपञ्चीकृत ಅಪಂಚೀಕೃತ**(वि०) ಪಂಚೀಕರಣ ಮಾಡಲ್ಪಡದ. [ವಿವರಕ್ಕೆ "पञ्चीकरण" ಪದದಲ್ಲಿ ನೋಡಿ.]

**अपटान्तर ಅಪಟಾಂತರ** (वि०) ಸೇರಿಕೊಂಡಿರುವ, ವ್ಯವಧಾನವಿಲ್ಲದ, ಮಧ್ಯೆ ತಡೆಯಿಲ್ಲದ, ಸಮೀಪದಲ್ಲಿ ಸೇರಿದಂತಿರುವ. न पटेन अन्तरमत्र।

**अपटिमन् ಅಪಟಿಮನ್** (पु०) ಅಸಮರ್ಥತೆ, ಚಟುವಟಿಕೆಯಿಲ್ಲದಿರುವಿಕೆ, ಮಂಕುತನ. अपटु "इमनिच्" (५-१-१२२)।

**अपटी ಅಪಟೀ** (स्त्री०) ತೆರೆ, ಪರದೆ, ಜವನಿಕೆ. अल्पः पटः पटी। न० त०।

**अपटीक्षेप ಅಪಟೀಕ್ಷೇಪ** (पु०) ತೆರೆಯನ್ನು ಪಕ್ಕಕ್ಕೆ ತಳ್ಳುವುದು. अपटयाः काण्डपटस्य क्षेपः। [ನಾಟಕದಲ್ಲಿ ಅವಸರವಾಗಿ ಪಾತ್ರಗಳು ಪ್ರವೇಶಿಸಬೇಕಾದರೆ ತೆರೆಯನ್ನು ತಳ್ಳಿಕೊಂಡು ಪ್ರವೇಶಿಸುವ ವಾಡಿಕೆ.]

**अपटु ಅಪಟು** (वि०) 1. ಸಾಮರ್ಥ್ಯವಿಲ್ಲದ, ಶಕ್ತಿಯಿಲ್ಲದ. 2. ದಕ್ಷತೆಯಿಲ್ಲದ, ನೈಪುಣ್ಯವಿಲ್ಲದ, ಜಾಣ್ಮೆಯಿಲ್ಲದ. "सा क्रान्ता जघनस्थलेन गुरुणा गन्तुं न शक्ता वयं दोषैरन्यजनाश्रयैरपटवो जाताः स्म इत्यद्भुतम्" अमरु०। 3. ರೋಗಿ. न पटुः।

**अपण्डित ಅಪಂಡಿತ** (वि०) ಮೂರ್ಖ, ಅಜ್ಞಾನಿ, ತಿಳಿವಳಿಕೆಯಿಲ್ಲದ. "विभूषणं मौनमपण्डितानाम्" भर्तृ० २-६।

**अपण्य ಅಪಣ್ಯ** (वि०) ವಿಕ್ರಯಿಸಲು ಅರ್ಹವಲ್ಲದ, ಮಾರಲು ಯೋಗ್ಯವಲ್ಲದ. न पण्यः। **ವಿಕ್ರಯಿಸಲು ಅನರ್ಹವಾದ ವಸ್ತುಗಳು:** कृष्णवस्त्रम्, रङ्गः (ತಗರ), रत्नम्, गुडः (ಬೆಲ್ಲ), गन्धः (ಚಂದನ), मधु (ಜೇನುತುಪ್ಪ), रसः ಮತ್ತು ऊर्णा (ಉಣ್ಣೆ).

**अपतन्त्रक ಅಪತಂತ್ರಕ** (पु०) ಒಂದು ವಿಧ ವಾಯು ರೋಗ, ವೈದ್ಯನಿಗೆ ಸ್ವಾಧೀನವಾಗದ ರೋಗ. अपगतं तन्त्रकं भिषजामधीनता यत्र। "अपतन्त्रकातुरं नापतर्पयेत्" सुश्रुत०।

**अपतर्पण ಅಪತರ್ಪಣ** (न०) 1. ಉಪವಾಸ. 2. ತೃಪ್ತಿಯಿಲ್ಲದಿರುವಿಕೆ.

**अपतानक ಅಪತಾನಕ** (पु०) ಒಂದು ವಿಧ ವಾಯು ರೋಗ, ಬಿಟ್ಟು ಬಿಟ್ಟು ಬರುವ ವಾಯುರೋಗ, ಮೂರ್ಛೆರೋಗ.' अपक्रम्य अन्तरान्तरा तनुते—तनु (विस्तारे) कर्त० "ण्वुल्" (३-१-१३३)।

**अपति ಅಪತಿ** (स्त्री०) ಗಂಡನಿಲ್ಲದ ಹೆಂಗಸು.

**अपतिका ಅಪತಿಕಾ** (स्त्री०) ಗಂಡನಿಲ್ಲದ ಹೆಂಗಸು.

**अपत्नी ಅಪತ್ನೀ** (स्त्री०) ಮದುವೆ ಇಲ್ಲದ ಹೆಂಗಸು, ಇನ್ನೂ ಗಂಡನನ್ನು ಹೊಂದದ ಹೆಂಗಸು. नास्ति पतिर्यस्याः "नः" (४-१-३४)। "ङीप्" (४-१-५)।

**अपत्नीक ಅಪತ್ನೀಕ** (वि०) 1. ಕರ್ಮಗಳಿಗೆ ಅನರ್ಹಳಾದ ಪತ್ನಿಯುಳ್ಳವನು. 2. ಪತ್ನಿಯನ್ನು ಕಳೆದುಕೊಂಡವನು. 3. ಪತ್ನಿಯು ಸಮೀಪದಲ್ಲಿಲ್ಲದೆ ಮಾಡುವ ಕಾರ್ಯ. (ಪಿತೃಯಜ್ಞ ಮೊದಲಾದುದು.)

**अपत्य ಅಪತ್ಯ** (नं०) 1. ಸಂತತಿ, ಸಂತಾನ. (ಮಗ ಅಥವಾ ಮಗಳು) न पतन्ति पितरो नरकेऽनेन—पत्लृ (गतौ) कर० "यक्" (उ० ४-१११)। "अपत्यभावमापन्नमात्मानममृतोदधेः" याद० १६-२। "अपत्यैरिव नीवारभागधेयोचितैर्मृगैः" रघु० १-५०। 2. ಒಂದು ಗೋತ್ರದಲ್ಲಿ ಹುಟ್ಟಿದ ಮೊಮ್ಮಗ ಮತ್ತು ಮುಂದಿನ ಪ್ರಜೆ.

**अपत्यद ಅಪತ್ಯದ** (वि०) ಸಂತಾನವನ್ನು ಕೊಡುವ, ಮಕ್ಕಳನ್ನು ಕೊಡುವ ಮಂತ್ರ ಮುಂತಾದುದು. अपत्यं तद्धेतुं गर्भं ददाति।

**अपत्यदा ಅಪತ್ಯದಾ** (स्त्री०) 1. ಗರ್ಭೋತ್ಪತ್ತಿ ಮಾಡುವ ಔಷಧ. 2. ಗರ್ಭೋತ್ಪತ್ತಿ ಮಾಡುವ ವಿದ್ಯೆ, ಮಂತ್ರ.

**अपत्यपथ ಅಪತ್ಯಪಥ** (पुं०) ಹೆಂಗಸರ ಗುಹ್ಯಸ್ಥಾನ, ಯೋನಿ. अपत्यस्य पन्थाः "अः" (५-४-७४)।

**अपत्यशत्रु ಅಪತ್ಯಶತ್ರು** (पुं०) 1. ಸರ್ಪ, ಹಾವು. [ಹಾವು ಮೊಟ್ಟೆ ಹಾಕಿಕೊಂಡು ಹೋಗಿ ಹಿಂತಿರುಗುವಾಗ ಒಡೆಯದಿರುವ ಮೊಟ್ಟೆಗಳನ್ನು ತಿಂದು ಹಾಕುವುದು.] अपत्यस्य शत्रुः। 2. ಹೆಣ್ಣು ನಳ್ಳಿ. 3. ಚೇಳು. अपत्यं शत्रुः यस्याः। [ಇವುಗಳ ಗರ್ಭದಿಂದ ಮರಿಯು ಹೊರಕ್ಕೆ ಬರುವಾಗ ತಾಯಿಯ ಹೊಟ್ಟೆಯನ್ನು ಭೇದಿಸಿಕೊಂಡು ಬರುವುದು.]

**अपत्र ಅಪತ್ರ** (पुं०) 1. ಅಂಕುರ, ಮೊಳಕೆ. 2. ಬಿದಿರಿನ ಚಿಗುರು. 3. ಎಲೆಗಳಿಲ್ಲದ ಮರ. 4. ರೆಕ್ಕೆಗಳಿಲ್ಲದ ಹಕ್ಕಿ. नास्ति पत्र दलं पक्षो वा यस्य।

**अपत्रप ಅಪತ್ರಪ** (वि०) ಲಜ್ಜೆಯಿಲ್ಲದ, ನಾಚಿಕೆಯಿಲ್ಲದ. अपगता त्रपा यस्मात्।

**अपत्रपा ಅಪತ್ರಪಾ** (स्त्री०) 1. ಲಜ್ಜೆ, ನಾಚಿಕೆ. अप+त्रपूष् (लज्जायाम्) भावे "अङ्" (३-३-१०४)। "अपत्रपामप्सरसामकार्षीत्" याद० १८-५५। 2. ಮತ್ತೊಬ್ಬರ ದೆಸೆಯಿಂದ ಉಂಟಾಗುವ ಲಜ್ಜೆ. "अपत्रपाविप्लुतचेतसो ये" याद० १३-७६।

**अपत्रपिष्णु ಅಪತ್ರಪಿಷ್ಣು** (वि०) ಲಜ್ಜೆಯುಳ್ಳ, ನಾಚಿಕೆಯ ಸ್ವಭಾವದ, ಸಂಕೋಚಸ್ವಭಾವದ. अपत्रपते—अप+त्रपूष् (लज्जायाम्) "इष्णुच्" (३-२-१३६)। "लोलाक्षे सुरतगुरावपत्रपिष्णोः" माघ० ८-४६।

**अपथ ಅಪಥ** (नं०) 1. ಕುಮಾರ್ಗ, ಕೆಟ್ಟದಾರಿ. 2. ತಪ್ಪುದಾರಿ, ದುರ್ನಡತೆ. न पन्थाः "अः" (५-४-७२)। "अपथे पदमर्पयन्ति हि श्रुतवन्तोऽपि रजोनिमीलिताः" रघु० ९-७४। (वि०) 3. ದಾರಿಯಿಲ್ಲದ (ದೇಶ). नास्ति पन्थाः यस्य। (अव्य०) 4. ತಪ್ಪು ದಾರಿಯಲ್ಲಿ. अव्ययी०। अपथं वर्तते। सि० कौ०।

**अपथिन् ಅಪಥಿನ್** (पुं०) ಕೆಟ್ಟದಾರಿ, ಕುಮಾರ್ಗ. न पन्थाः। "पथो विभाषा" (५-४-७२)। "अ" प्रत्ययाभावे रूपम्।

**अपथ्य ಅಪಥ್ಯ** (नं०) 1. ವೈದ್ಯನು ಹೇಳಿದ ಆಹಾರ ನಿಯಮವನ್ನು ಮೀರಿ ನಡೆಯುವುದು, ಕೆಡಕುಂಟು ಮಾಡುವ ಊಟ. 2. ಶಾಸ್ತ್ರೋಕ್ತವಾದ ಆಚಾರವನ್ನು ಮೀರಿ ನಡೆಯುವುದು, ಅಹಿತವಾದ ವರ್ತನೆ, ನಿಯಮೋಲ್ಲಂಘನೆ. पथः अनपेतम् "यत्" (४-४-९२)। नं० त०। "राजापथ्यकारी क्षपणको नगरान्निर्वास्यते" मुद्रा० १।

**अपद ಅಪದ** (पुं०) 1. ಕಾಲಿಲ್ಲದ ಹುಳು, ಹರಿದಾಡುವ ಹುಳು. 2. ಸರ್ಪ, ಹಾವು. (नं०) 3. ನಿಂದ್ಯವಾದ ಜಾಗ, ಅಸ್ಥಾನ. 4. ಅರ್ಹವಲ್ಲದ ಜಾಗ. "प्रेम पश्यति भयान्यपदेऽपि" किरा० ९-६०। 5. ಸುಬಂತ ಅಥವಾ ತಿಙಂತವಲ್ಲದ್ದು. नास्ति पदं पादः स्थानं सुप्तिङन्तात्मकं वा यस्य। 6. ಆಕಾಶ. अस्य विष्णोः पदम्। (वि०) 7. ಕಾಲಿಲ್ಲದ.

**अपदान ಅಪದಾನ** (नं०) 1. ಶುದ್ಧವಾದ ನಡತೆ, ಪರಿಶುದ್ಧವಾದ ಆಚಾರ. अपदायति परिशुद्ध्यति अनेन—अप+दैप् (शोधने) कर० "ल्युट्" (३-३-११७)। 2. ಹಿಂದೆ ನಡೆದ ಸಂಗತಿ, ಹಿಂದೆ ನಡೆಯಿಸಿದ ಕಾರ್ಯ. "अपदानं कर्म वृत्तम्" अम०।

**अपदान्तर ಅಪದಾಂತರ** (वि०) 1. ಅವ್ಯವಹಿತವಾದ. 2. ಸೇರಿಕೊಂಡಿರುವ. 3. ಸನ್ನಿಹಿತವಾದ. न पदान्तरं यत्र।

**अपदिशम् ಅಪದಿಶಮ್** (नं० अव्य०) ಎರಡು ದಿಕ್ಕುಗಳ ಮಧ್ಯಪ್ರದೇಶ, ಆಗ್ನೇಯ ಮೊದಲಾದ ವಿದಿಕ್ಕು. दिशयोर्मध्यं अपदिशम्। दिशोर्मध्य इति विग्रहे "टच्" (५-४-१०७)। "क्लीबाव्ययंत्वपदिशं दिशोर्मध्ये विदिक् स्त्रियाम्" अम०।

**अपदिष्ट ಅಪದಿಷ್ಟ** (वि०) ಹೇಳಲ್ಪಟ್ಟ, ಉಪದೇಶಿಸಲ್ಪಟ್ಟ. अप+दिश (अतिसर्जने) "क्तः" (३-२-१०२)।

**अपदेश** ಅಪದೇಶ (पुं०) 1. ವ್ಯಾಜ, ನೆಪ. अपदिश्यते —अप+दिश (अतिसर्जने) "घञ्" (३-३-१८)। "रक्षापदेशान्मुनिहोमधेनोः वन्यान्विनेष्यन्निव दुष्टसत्वान्" रघु २-८। 2. ಛಲ, ಕಪಟ, ವಂಚನೆ. 3. ಲಕ್ಷ್ಯ, ಗುರಿ. 4. ಆಕಾರ, ವೇಷ. "विकटदुष्टश्वापदापदेशकालगोचरं गता मदयन्तिका" मालती० ८। 5. ಹೇತು, ಕಾರಣ. 6. ಸ್ಥಾನ, ಸ್ಥಳ, ಜಾಗ. "अपदेशस्तु कारणे। व्याजे लक्ष्येऽपि" हेम०। "अपदेशः पदे लक्ष्यनिमित्तव्याजयोरपि" नानार्थर०।

**अपदेश्य** ಅಪದೇಶ್ಯ (वि०) 1. ಕಪಟದಿಂದ ಹೇಳಲ್ಪಡುವ, ಮೋಸದಿಂದ ಹೇಳಲ್ಪಡುವ. अप+दिश (अतिसर्जने) कर्म० "ण्यत्" (३-१-१२४)। 2. ಅಯೋಗ್ಯವಾದ ಪ್ರದೇಶದಲ್ಲಿರುವ. अपदेशे भवः "यत्" (४-३-५४)।

**अपद्वार** ಅಪದ್ವಾರ (नं०) ಕಳ್ಳಬಾಗಿಲು, ಮುಖ್ಯವಾದ ಬಾಗಿಲುಗಳಿಗಿಂತಲೂ ಬೇರೆಯಾದ ಒಂದು ಪಕ್ಕದ ಬಾಗಿಲು.

**अपध्यान** ಅಪಧ್ಯಾನ (नं०) ಕೆಟ್ಟಯೋಚನೆ, ಅರಿಷ್ಟದ ಚಿಂತೆ, अपकृष्टं ध्यानम्।

**अपध्वंस** ಅಪಧ್ವಂಸ (पुं०) 1. ಅವನತಿ, ಅಧಃಪತನ, ಕೆಳದರ್ಜೆಗೆ ಬರುವುದು. 2. ನಾಶ. 3. ಧಿಕ್ಕಾರ, ತಿರಸ್ಕಾರ, ಅಪಮಾನ. अप+ध्वंसु (अवस्रंसने) "घञ्" (३-३-१८)।

**अपध्वंसिन्** ಅಪಧ್ವಂಸಿನ್ (वि०) 1. ನಾಶಪಡಿಸುವ ಸ್ವಭಾವದ. 2. ತಿರಸ್ಕರಿಸುವ ಸ್ವಭಾವದ. अपध्वंसयितुं शीलमस्य — अप+ध्वंसु (अवस्रंसने)+णिच् "णिनिः" (३-२-७८)। "सर्वेनसामपध्वंसि जप्यं त्रिष्वघमर्षणम्" अम०।

**अपध्वस्त** ಅಪಧ್ವಸ್ತ (वि०) 1. ಧಿಕ್ಕರಿಸಲ್ಪಟ್ಟ, ತಿರಸ್ಕರಿಸಲ್ಪಟ್ಟ. अप+ध्वंसु (अवस्रंसने) "क्तः" (३-२-१०२)। 2. ನಿಂದಿಸಲ್ಪಟ್ಟ, ಹಳಿಯಲ್ಪಟ್ಟ. 3. ಬಿಡಲ್ಪಟ್ಟ, ತ್ಯಜಿಸಲ್ಪಟ್ಟ. 4. ಪುಡಿಮಾಡಲ್ಪಟ್ಟ, ಧೂಳುಮಾಡಲ್ಪಟ್ಟ.

**अपध्वान्त** ಅಪಧ್ವಾಂತ (वि०) ಕತ್ತಲೆಯಿಲ್ಲದ, ಅಂಧಕಾರವಿಲ್ಲದ. अपगतं ध्वान्तं यस्मात्।

**अपनय** ಅಪನಯ (पुं०) 1. ದೂರಕ್ಕೆ ಒಯ್ಯುವುದು, ಬೇರೆ ಕಡೆಗೆ ಸಾಗಿಸುವುದು. 2. ಕೆಟ್ಟ ನೀತಿ, ಕೆಟ್ಟ ನಡತೆ. 3. ಅಪಕಾರ. अप+णीञ् (प्रापणे) "अच्" (३-३-५६)। "ततः सपत्नापनयस्मरणानुशयस्फुरा" माघ० २-२४।

**अपनयन** ಅಪನಯನ (नं०) 1. ಬೇರೆ ಕಡೆಗೆ ಒಯ್ಯುವುದು, ಬೇರೆ ಕಡೆಗೆ ಸಾಗಿಸುವುದು. 2. ಹೋಗಲಾಡಿಸುವುದು, ಪರಿಹರಿಸುವುದು. अप+णीञ् (प्रापणे) "ल्युट्" (३-३-११५)। "नातिश्रमापनयनाय न च श्रमाय" शाकु० ५-६। 3. ವ್ಯವಕಲನ, ಕಳೆಯುವುದು. (वि०) 4. ಕಣ್ಣಿಲ್ಲದ, ನೇತ್ರವಿಲ್ಲದ. अपगतं नयनं यस्य।

**अपनस** ಅಪನಸ (वि०) ಮೂಗಿಲ್ಲದ, ನಾಶವಾದ ಮೂಗುಳ್ಳ. अपगता नासिका यस्य "अच्" (५-४-११९)। "नस्" आदेशश्च। "असिं कौक्षेयमुद्यम्य चकारापनसं मुखम्" भट्टि० ४-३१।

**अपनीत** ಅಪನೀತ (वि०) 1. ದೂರಕ್ಕೆ ಒಯ್ಯಲ್ಪಟ್ಟ, ಬೇರೆ ಕಡೆಗೆ ಸಾಗಿಸಲ್ಪಟ್ಟ. अप+णीञ् (प्रापणे) "क्तः" (३-२-१०२)। "गोचरं गतयोर्भ्रात्रोरपनीता त्वयाधम" रामा०। 2. ತಳ್ಳಲ್ಪಟ್ಟ, ನೂಕಲ್ಪಟ್ಟ. 3. ವಿರುದ್ಧವಾದ, ಅಸಂಗತವಾದ. "तत्त्वधर्मापनीतस्य दृश्यते कर्मणः फलम्" रामा०। 4. ಕಿತ್ತುಕೊಳ್ಳಲ್ಪಟ್ಟ, ಕೊಳ್ಳೆ ಹೊಡೆಯಲ್ಪಟ್ಟ, ಸುಲಿಗೆ ಮಾಡಲ್ಪಟ್ಟ.

**अपनुत्ति** ಅಪನುತ್ತಿ (स्त्री०) 1. ಪರಿಹಾರ, ನಿವಾರಣೆ, ಹೋಗಲಾಡಿಸುವಿಕೆ. 2. ದೂರಕ್ಕೆ ಒಯ್ಯುವುದು. अप+णुद (प्रेरणे) "क्तिन्" (३-३-९४)।

**अपनोद** ಅಪನೋದ (पुं०) 1. ಪರಿಹಾರ, ನಿವಾರಣೆ, ಹೋಗಲಾಡಿಸುವುದು. अप+णुद (प्रेरणे) "घञ्" (३-३-१८)। "ब्रह्महत्यापनोदाय मितभुङ्नियतेन्द्रियः" मनु० ११-७६। 2. ದೂರಕ್ಕೆ ತಳ್ಳುವುದು, ದೂರಕ್ಕೆ ಸಾಗಿಸುವುದು.

**अपनोदन** ಅಪನೋದನ (नं०) 1. ಹೋಗಲಾಡಿಸುವಿಕೆ, ನಿವಾರಣೆ, ಪರಿಹಾರ. अप+णुद (प्रेरणे) "ल्युट्" (३-३-११५)। "एनसां स्थूलसूक्ष्माणां चिकीर्षन्नपनोदनम्" मनु० ११-२५२। (वि०) 2. ಹೋಗಲಾಡಿಸುವ, ಪರಿಹರಿಸುವ, ನಿವಾರಿಸುವ. अप + णुद (प्रेरणे) कर्त० "ल्युः" (३-१-१३४)। "पराको नाम कृच्छ्रोऽयं सर्वपापापनोदनः" मनु० ११-२१५।

**अपप्रदान** ಅಪಪ್ರದಾನ (नं०) ಲಂಚ, ಉತ್ಕೋಚ. अपकृष्टं प्रदानम्।

**अपभय** ಅಪಭಯ (वि०) ಭಯವಿಲ್ಲದ, ಹೆದರಿಕೆಯಿಲ್ಲದ. अपगतं भयं यस्मात्। "ततः प्रहस्यापभयः पुरन्दरं पुनर्बभाषे तुरगस्य रक्षिता" रघु० ३-५१।

**अपभाषण** ಅಪಭಾಷಣ (न०) 1. ನಿಂದೆ, ದೂಷಣೆ, ಹಳಿಯುವುದು. 2. ಮಾನಭಂಗಪಡಿಸುವುದು.

**अपभी** ಅಪಭೀ (वि०) ಭಯವಿಲ್ಲದ, ಹೆದರಿಕೆಯಿಲ್ಲದ. अपगता भीर्यस्मात्।

**अपभ्रंश** ಅಪಭ್ರಂಶ (पु०) 1. ಅಧಃಪತನ, ಕೆಳಗೆ ಬೀಳುವುದು. अप + भ्रंशु (अधःपतने) "घञ्" (३-३-१८)। 2. ಅಪಶಬ್ದ, ವ್ಯಾಕರಣನಿಯಮಕ್ಕೆ ವಿರುದ್ಧವಾದ ಶಬ್ದ. 3. ಅಶುದ್ಧವಾದ ಭಾಷೆ, ಸಂಸ್ಕೃತಕ್ಕಿಂತಲೂ ಬೇರೆಯಾದ ಭಾಷೆ. "शास्त्रेषु संस्कृतादन्यदपभ्रंशतयोदितम्" काव्या० १-३६।

**अपभ्रष्ट** ಅಪಭ್ರಷ್ಟ (वि०) 1. ಕೆಳಗೆಬಿದ್ದಿರುವ. 2. ಅಶುದ್ಧವಾದ, (ಪ್ರಾಂತಭಾಷೆ, ನಾಡಿನಭಾಷೆ).

**अपमर्द** ಅಪಮರ್ದ (पु०) ಕಸ, ಧೂಳು, ಹೊಲಸು, ಕೊಳೆ. अप+मृद (क्षोदे) "घञ्" (३-३-१८)। "हयहस्तिकरीषाभ्यामपमर्दः कृतो महान्" रामा०।

**अपमान** ಅಪಮಾನ (पु०) ಅವಮಾನ, ಅಗೌರವ, ಅನಾದರ, ಅವಮರ್ಯಾದೆ. अप + मान (पूजायाम्) "घञ्" (३-३-१८)। "मानापमानयोस्तुल्यस्तुल्यो मित्रारिपक्षयोः" गीता १४-२५। "अर्थनाशं मनस्तापं गृहे दुश्चरितानि च। वञ्चनञ्चापमानञ्च मतिमान्न-प्रकाशयेत्"।

**अपमानित** ಅಪಮಾನಿತ (वि०) ಅವಮಾನಗೊಳಿಸಲ್ಪಟ್ಟ. अप + मान (पूजायाम्) "क्तः" (३-२-१०२)।

**अपमार्ग** ಅಪಮಾರ್ಗ (पु०) ದುರ್ಮಾರ್ಗ, ಕೆಟ್ಟದಾರಿ. अपकृष्टो मार्गः।

**अपमार्जन** ಅಪಮಾರ್ಜನ (न०) ಶೋಧನೆ, ಶುದ್ಧಿಗೊಳಿಸುವುದು. अप+मृजूष् (शुद्धौ)+णिच् "ल्युट्" (३-३-११५)।

**अपमित** ಅಪಮಿತ (वि०) ತಿರಸ್ಕರಿಸಲ್ಪಟ್ಟ, ಅವಮಾನಗೊಳಿಸಲ್ಪಟ್ಟ. अप+मेङ् (प्रणिदाने) "क्तः" (३-२-१०२)।

**अपमित्यक** ಅಪಮಿತ್ಯಕ (न०) ಋಣ, ಸಾಲ. अपमित्य अपमानं स्वीकृत्य गृह्यते—अप+मेङ् (प्रणिदाने) "ल्यप्" (७-१-३७)। "इत्" (६-४-७०)। "कन्"।

**अपमुख** ಅಪಮುಖ (न०) 1. ಹಿಂದಕ್ಕೆ ತಿರುಗಿಸಿದ ಮುಖ. (वि०) 2. ತಿರುಗಿಸಿದ ಮುಖವುಳ್ಳ.

**अपमूर्धन्** ಅಪಮೂರ್ಧನ್ (वि०) ತಲೆಯಿಲ್ಲದ (ಶರೀರ), ಮುಂಡ. अपगतो मूर्धा यस्य।

**अपमृषित** ಅಪಮೃಷಿತ (वि०) 1. ಸಹಿಸಲ್ಪಡದ, ಸಹಿಸಲಾಗದ, ತಾಳಲಾಗದ. अप+मृष (तितिक्षायाम्) "क्तः" (३-२-१०२)। "विहितं मयाद्य सदसीदमप-मृषितमच्युतार्चनम्" माघ० १५-४६। 2. ತಿಳಿಯಲಿಕ್ಕಾಗದ, ಅಸ್ಪಷ್ಟವಾದ, ಅರ್ಥವಾಗದ (ಮಾತು). अपमृषितं वाक्यमविस्पष्टमित्यर्थः सि० कौ०।

**अपयशस्** ಅಪಯಶಸ್ (न०) ಅಪಕೀರ್ತಿ, ಅಪಖ್ಯಾತಿ, ಅಪವಾದ. अपकृष्टं यशः। "अपयशो यद्यस्ति किं मृत्युना" भर्तृ० १-४४।

**अपयशस्कर** ಅಪಯಶಸ್ಕರ (वि०) ಅಪಕೀರ್ತಿಯನ್ನು ಉಂಟುಮಾಡುವ.

**अपयान** ಅಪಯಾನ (न०) ಹೊರಕ್ಕೆ ಹೋಗುವುದು, ದೂರಕ್ಕೆ ಹೋಗುವುದು, ತಪ್ಪಿಸಿಕೊಂಡು ಹೋಗುವುದು. अप+या (प्रापणे) "ल्युट्" (३-३-११५)।

**अपर** ಅಪರ (पु०) 1. ಆನೆಯ ಹಿಂದಿನ ಕಾಲು. अप राति—रा (दाने) "कः" (३-१-१३६)। "बद्धापराणि परितो निगडान्यलावीत्" माघ० ५-४८। (न०) 2. ಮುಂದಿನ ಕಾರ್ಯ, ಅಪರಕಾರ್ಯ. (वि०) 3. ಉತ್ತಮವಾದ, ಅದಕ್ಕೆ ಸಮಾನವಿಲ್ಲದ, ಶ್ರೇಷ್ಠವಾದ. नास्ति परो यस्मात्। "स्त्रीरत्नसृष्टिरपरा प्रतिभाति सा मे" शाकु० २-९। 4. ನಿಕೃಷ್ಟವಾದ, ಉತ್ತಮವಲ್ಲದ. न परः। "अपरेयमितस्त्वन्यां प्रकृतिं विद्धि मे पराम्" गीता ७-५। 5. ಹೆಚ್ಚು ವ್ಯಾಪ್ತಿಯಿಲ್ಲದ, ಕಡಿಮೆ ವ್ಯಾಪ್ತಿಯುಳ್ಳ, ಅಲ್ಪಪ್ರದೇಶದಲ್ಲಿರುವ. परमपरं चेति सामान्यं द्विविधम्। अधिक-देशवृत्ति परम्। अपरं तु अल्पदेशवृत्ति। 6. ಭಿನ್ನವಾದ, ಬೇರೆಯಾದ, ಇತರ. "अन्ये कृतयुगे धर्मास्त्रेतायां द्वापरेऽपरे" मनु० १-८५। 7. ಹಿಂಭಾಗದ, ಪಶ್ಚಿಮಭಾಗದ. "पूर्वापरौ तोयनिधी वगाह्य स्थितः पृथिव्या इव मानदण्डः" कुमा० १-१। 8. ಮುಂದಿನ, ಅನಂತರದ. "अपरं भवतो जन्म परं जन्म विवस्वतः" गीता ४-४। 9. ಇನ್ನೊಬ್ಬನು, ಮತ್ತೊಬ್ಬನು. [ಏಕಶಬ್ದವನ್ನು ಉಪಯೋಗಿಸಿದಾಗ ಮತ್ತೊಬ್ಬನು ಎನ್ನುವ ಅರ್ಥದಲ್ಲಿ ಉಪಯೋಗಿಸುವ ಶಬ್ದವಿದು.] "एके

समूहुर्बलरेणुसंहतिं शिरोभिराज्ञामपरे महीभृतः" माघ० १२-४५। (स्त्री०) –रा–ರಾ. 10. ಪಶ್ಚಿಮದಿಕ್ಕು. 11. ಪಶ್ಚಿಮಸಂಧ್ಯೆ. 12. ನಾಲ್ಕು ವೇದಗಳು. 13. ಆರು ವೇದಾಂಗಗಳು. "द्वे विद्ये विदितव्ये इति ह्स्म ब्रह्मविदो वदन्ति पराचैवापरा च तत्रापरा ऋग्वेदो यजुर्वेदः सामवेदोऽथर्ववेदः शिक्षा कल्पो व्याकरणं निरुक्तं छन्दो ज्योतिषमिति" श्रुतिः। 14. ಗರ್ಭಾಶಯ. (अव्य०) 15. ಮತ್ತೆ, ಇನ್ನೂ, ಅದಲ್ಲದೆ.

**अपरक्त ಅಪರಕ್ತ** (वि०) 1. ಪ್ರೀತಿಯಿಲ್ಲದ, ವಿಶ್ವಾಸವಿಲ್ಲದ, ಅನುರಾಗವಿಲ್ಲದ. अप+रञ्ज (रागे) "क्तः" (३-२-१०२)। "अपि चन्द्रगुप्तादपरक्ताः प्रकृतयः?" मुद्रा० १। 2. ಕೆಂಪಾಗಿಲ್ಲದ, ಕೆಂಪುಬಣ್ಣವಿಲ್ಲದ. अपगतो रक्तः रक्तवर्णः यस्मात्।

**अपरति ಅಪರತಿ** (स्त्री०) 1. ನಿಲ್ಲುವಿಕೆ, ನಿಲುಗಡೆ, ವಿರಾಮ. 2. ಅಸಮಾಧಾನ, ಅಸಂತುಷ್ಟಿ, ಬೇಸರ. अप + रमु (क्रीडायाम्) भावे "क्तिन्" (३-३-९४)।

**अपरत्र ಅಪರತ್ರ** (अव्य०) 1. ಬೇರೆಕಡೆಯಲ್ಲಿ. 2. ಬೇರೆ ಕಾಲದಲ್ಲಿ. अपर "त्रल्" (५-३-१०)।

**अपरथा ಅಪರಥಾ** (अव्य०) ಬೇರೆ ರೀತಿಯಾಗಿ, ಬೇರೆ ಪ್ರಕಾರವಾಗಿ. अपर "थाल्" (५-३-२३)। "अपरथा-परथावयवायुधः" माघ० ६-४१।

**अपरदक्षिण ಅಪರದಕ್ಷಿಣ** (अव्य०) ದಕ್ಷಿಣ ಮತ್ತು ಪಶ್ಚಿಮ ದಿಕ್ಕುಗಳ ಮಧ್ಯಭಾಗ, ನಿರ್ಋತಿ (ಮೂಲೆ) ದಿಕ್ಕು. अपरस्याः दक्षिणस्याश्च अन्तरालं दिक्। निपा० (२-१-१७)।

**अपरपक्ष ಅಪರಪಕ್ಷ** (पु०) 1. ಕೃಷ್ಣಪಕ್ಷ, ತಿಂಗಳಿನ ಎರಡನೆಯ ಅರ್ಧ ಭಾಗ. 2. ಭಾದ್ರಪದ ಕೃಷ್ಣಪಕ್ಷ. 3. ಎದುರು ಪಕ್ಷ, ಪ್ರತಿಪಕ್ಷ.

**अपररात्र ಅಪರರಾತ್ರ** (पु०) ರಾತ್ರಿಯ ಉತ್ತರಭಾಗ, ರಾತ್ರಿಯ ಎರಡನೆಯ ಅರ್ಧಭಾಗ. अपरं रात्रेः "अच्" (५-४-८७)।

**अपरव ಅಪರವ** (पु०) 1. ಅಪಯಶಸ್ಸು, ಅಪಕೀರ್ತಿ. अपकृष्टो रवः। 2. ಕೆಟ್ಟಶಬ್ದ, ಅಶ್ಲೀಲವಾದ ಶಬ್ದ, ಕಠೋರವಾದ ಧ್ವನಿ.

**अपरस्पर ಅಪರಸ್ಪರ** (वि०) 1. ಪರಸ್ಪರವಲ್ಲದ, ಅನ್ಯೋನ್ಯವಲ್ಲದ. 2. ಕ್ರಿಯಾಸಾತತ್ಯವುಳ್ಳ, ಎಡೆಬಿಡದ ಕೆಲಸವುಳ್ಳ. अपरे च परे च (सातत्येन गच्छन्ति) "सुट्" (६-१-१४४)। "अपरस्पराः सार्था गच्छन्ति" सि० कौ०। (क्रि० वि०) 3. ಸತತವಾಗಿ, ಎಡೆಬಿಡದೆ (ಕೆಲಸ). अपरस्परं गच्छन्ति।

**अपराग ಅಪರಾಗ** (पु०) ದ್ವೇಷ, ಪ್ರೀತಿಯಿಲ್ಲದಿರುವಿಕೆ. अप + रञ्ज (रागे) "घञ्" (३-३-१८)। "आर्य, एतेषामपरागहेतून् श्रोतुमिच्छामि" मुद्रा० ३। "अपराग-समीरणेरितः क्रमशीर्णाकुलमूलसन्ततिः" किरा० २-५०।

**अपराङ्ग ಅಪರಾಂಗ** (न०) ಗುಣೀಭೂತವ್ಯಂಗ್ಯ ಕಾವ್ಯ, ಎರಡನೆಯ (ಮಧ್ಯಮ) ತರಗತಿಯ ಕಾವ್ಯ. अपरस्य रसादेरङ्गम्। "अयं स रसनोत्कर्षी पीनस्तनविमर्दनः। नाभ्यूरुजघनस्पर्शी नीवीविस्रंसनः करः" ಇಲ್ಲಿ ಶೃಂಗಾರ ರಸವು ಕರುಣರಸಕ್ಕೆ ಅಂಗವಾಗಿರುವುದು.

**अपराजित ಅಪರಾಜಿತ** (पु०) 1. ವಿಷ್ಣು. 2. ಈಶ್ವರ. "अपराजितः सर्वसहो नियन्ता नियमो यमः" वि० स०। "हरीशावपराजितौ" वैज०। (वि०) 3. ಜಯಿಸಲ್ಪಡದ, ಸೋಲಿಸಲ್ಪಡದ. न पराजितः।

**अपराजिता ಅಪರಾಜಿತಾ** (स्त्री०) 1. ದುರ್ಗಾದೇವಿ, ವಿಜಯದಶಮಿಯ ದಿನ ಜಯಗಳಿಸಲು ಪೂಜಿಸಲ್ಪಡುವ ದೇವತೆ. "दशम्यां च नरैः सम्यक् पूजनीयापराजिता। क्षेमार्थं विजयार्थं च पूर्वोक्तविधिना नरैः। नवमीशेष-युक्तायां दशम्यामपराजिता। ददाति विजयं देवी पूजिता जयवर्धिनी" स्कान्द०। 2. ಗರಿಕೆ ಹುಲ್ಲು. 3. ಶೇಫಾಲಿಕಾ ವೃಕ್ಷ, ಕರಿಲಕ್ಕಿಗಿಡ. 4. ಹೊನ್ನೇಮರ. 5. ತಕ್ಕಿಲೆ ಗಿಡ. 6. ಹಕ್ಕರಿಕೆ ಗಿಡ, ಕಡಿಯಾಲದ ಮರ. 7. ವಿಷ್ಣುಕ್ರಾಂತಿ ಗಿಡ. 8. ಉತ್ತರ ಪೂರ್ವ ದಿಕ್ಕುಗಳ ಮಧ್ಯಭಾಗ, ಈಶಾನ್ಯ ದಿಕ್ಕು. "अपराजितां वास्थाय व्रजेद्दिशमजिह्मगः" मनु० ६-३१। 9. ಸತ್ಯಲೋಕದ ಪ್ರಧಾನ ನಗರ. "ब्रह्मलोकस्सत्यलोकस्तत्र पुर्यपराजिता" वैज०।

**अपराद्ध ಅಪರಾದ್ಧ** (न०) 1. ಅಪರಾಧ, ತಪ್ಪು. अप+राध (संसिद्धौ)भावे "क्तः" (३-३-११४)। "न तु ग्रीष्मस्यैवं सुभगमपराद्धं युवतिषु" शाकु० ३-९। (वि०) 2. ಅಪರಾಧ ಮಾಡಿದ, ತಪ್ಪು ಮಾಡಿದ. अप+राध कर्तं० "क्तः" (३-४-७२)। "कृतवत्यसि नावधीरणामपराद्धेऽपि यदा चिरं मयि" रघु० ८-४८। 3. ಸ್ಖಲಿತವಾದ, ತಪ್ಪಿದ, ಜಾರಿದ, ಗುರಿತಪ್ಪಿದ. "निमित्तादपराद्धेषोर्धानुष्कस्येव वल्गितम्" माघ० २-२७।

**अपराध** ಅಪರಾಧ (ಪುಂ) ತಪ್ಪು, ಅಕೃತ್ಯ, ದೋಷ. अप+राध (संसिद्धौ) "घञ्" (३-३-१८)। "अपराधशतक्षमं नृपः क्षमयात्येति भवन्तमेकया" माघ० १६-४८।

**अपराधिन्** ಅಪರಾಧಿನ್ (वि०) ಅಪರಾಧವುಳ್ಳ, ತಪ್ಪಿತವುಳ್ಳ, ತಪ್ಪು ಮಾಡಿದ. अपराध "इनिः" (५-२-११५)। स्त्रियाम् "ङीप्" (४-१-५)। –राधिनी –ರಾಧಿನೀ.

**अपरान्त** ಅಪರಾಂತ (ಪುಂ) 1. ಒಂದು ದೇಶ, ಪಶ್ಚಿಮ ದಿಕ್ಕಿನ ಕೊನೆಯಲ್ಲಿರುವ ದೇಶ. अपरस्याः पश्चिमायाः सीमाभूतो देशः। 2. ಪಾಶ್ಚಾತ್ಯರು, ಪಶ್ಚಿಮ ದಿಕ್ಕಿನಲ್ಲಿ ವಾಸಮಾಡುವ ಜನರು. 3. ಪಶ್ಚಿಮ ದೇಶದ ರಾಜರು. "तस्यानीकैर्विसर्पद्भिरपरान्तजयोद्यतैः" रघु० ४-५३। "अपरान्तमहीपालव्याजेन रघवे करम्" रघु० ४-५८।

**अपराह्ण** ಅಪರಾಹ್ಣ (ಪುಂ) 1. ಹಗಲಿನ ಎರಡನೇ ಅರ್ಧ ಭಾಗ. अह्नः अपरम्—एकदेशितत्पुरुषसमासः (२-२-१)। "अपराह्णशीतलतरेण शनैः" माघ० ९-४। 2.(ಹಗಲಿನ ಐದು ಭಾಗಗಳಾದ) ಪ್ರಾತಃ ಸಂಗವ ಮಧ್ಯಾಹ್ನ ಅಪರಾಹ್ಣ ಮತ್ತು ಸಾಯಾಹ್ನಗಳಲ್ಲಿ ನಾಲ್ಕನೆಯದು.

**अपराह्णतन** ಅಪರಾಹ್ಣತನ (वि०) 1. ಅಪರಾಹ್ಣವನ್ನು ಸಹಿಸುವ ಸ್ವಭಾವದ, ಅಪರಾಹ್ಣವನ್ನು ಸಹಿಸಲು ಶಕ್ತಿಯುಳ್ಳ. अपराह्णः सोढोऽस्य "टयुः" (४-३-५२)। अपराह्णे भवः जातो वा वा "ट्युः" (४-३-२४)। अपराह्णेतनम्। सप्तम्या अलुक् (६-३-१७)। पक्षे "ठञ्" (४-३-११)। आपराह्णिकम्। 2. ಅಪರಾಹ್ಣದಲ್ಲಿರುವ, ಅಪರಾಹ್ಣದಲ್ಲಿ ಉಂಟಾದ.

**अपरिकलित** ಅಪರಿಕಲಿತ (वि०) 1. ತಿಳಿಯಲ್ಪಡದ. 2. ನೋಡಲ್ಪಡದ. 3. ಕೇಳಲ್ಪಡದ. 4. ಪರ್ಯಾಲೋಚಿಸಲ್ಪಡದ. न परिकलितः।

**अपरिक्रम** ಅಪರಿಕ್ರಮ (ಪುಂ) 1. ಸುತ್ತಲೂ ಸಂಚರಿಸದಿರುವಿಕೆ. परितः क्रमः क्रमणम्। न० त०। (वि०) 2. ಸುತ್ತಲೂ ಸಂಚರಿಸದ. 3. ಉದ್ಯೋಗಶೀಲನಲ್ಲದ, ಶ್ರಮಪಡುವ ಸ್ವಭಾವವಿಲ್ಲದ, ಆಸಕ್ತಿಯಿಲ್ಲದ.

**अपरिगत** ಅಪರಿಗತ (वि०) 1. ತಿಳಿಯಲ್ಪಡದ. 2. ಹೊಂದಲ್ಪಡದ.

**अपरिग्रह** ಅಪರಿಗ್ರಹ (ಪುಂ) 1. ಸ್ವೀಕರಿಸದಿರುವಿಕೆ, ಬೇಡವೆನ್ನುವುದು. 2. ಪಾತಂಜಲ ಯೋಗದಲ್ಲಿ ಹೇಳಲ್ಪಟ್ಟ ಒಂದು ವಿಧ ಯಮ, ಅಷ್ಟಾಂಗ ಯೋಗಗಳಲ್ಲೊಂದಾದ ಯಮದ ಒಂದು ಭೇದ. न परिग्रहः। "अहिंसासत्यास्तेयब्रह्मचर्यापरिग्रहाः यमाः" पा० यो० सू० २-३०। 3. ಯತಿ, ಸಂನ್ಯಾಸಿ, ಸರ್ವಸಂಗ ಪರಿತ್ಯಾಗಮಾಡಿದವನು. नास्ति परिग्रहो यस्य। "निराशीरपरिग्रहः" गीता ६-१०। 4. ಪತ್ನಿಯಿಲ್ಲದವನು.

**अपरिचित** ಅಪರಿಚಿತ (वि०) ಪರಿಚಯವಿಲ್ಲದ, ಮೊದಲು ತಿಳಿಯದಿರುವ, ಗುರುತಿಲ್ಲದ. न परिचितः।

**अपरिच्छद** ಅಪರಿಚ್ಛದ (वि०) ದರಿದ್ರ, ನಿರ್ಗತಿಕ, ಜೀವನಕ್ಕೆ ಬೇಕಾದ (ಸರಿಯಾದ) ಉಪಕರಣವಿಲ್ಲದವನು. न परिच्छदो यस्य। अप्राशस्त्ये न० ब०।

**अपरिच्छिन्न** ಅಪರಿಚ್ಛಿನ್ನ (वि०) 1. ಸ್ಪಷ್ಟವಾಗಿ ತಿಳಿಯಲ್ಪಡದ, ಪರಿಶೀಲಿಸಿ ತಿಳಿಯಲ್ಪಡದ, ಭೇದವರಿಯಲ್ಪಡದ. 2. ಇಷ್ಟೆಂದು ತಿಳಿಯಲಾಗದ,—ಅಳತೆ ಮಾಡಲಾಗದ. 3. ಎಡೆಬಿಡದೆ ಮುಂದುವರಿದ, ಅವಿಚ್ಛಿನ್ನವಾದ.

**अपरिच्छेद** ಅಪರಿಚ್ಛೇದ (ಪುಂ) 1. ಸ್ಪಷ್ಟವಾಗಿ ತಿಳಿಯದಿರುವಿಕೆ, ತಾರತಮ್ಯವನ್ನು ಅರಿಯದಿರುವಿಕೆ. 2. ಮುಂದುವರಿಯುವಿಕೆ, ಮುಂದೆ ಸಾಗುವಿಕೆ. 3. ತೀರ್ಮಾನವಾಗದಿರುವಿಕೆ, ಸಂಶಯ ಪರಿಹಾರವಾಗದಿರುವಿಕೆ. (वि०) 4. ಇಯತ್ತಾಶೂನ್ಯವಾದ, ಇಷ್ಟೆಂದು ಅಳತೆಯಿಲ್ಲದ.

**अपरिणत** ಅಪರಿಣತ (वि०) 1. ಮಾಗದಿರುವ, ಬಲಿಯದಿರುವ, ಹಣ್ಣಾಗದಿರುವ. 2. ನಿಷ್ಣಾತನಲ್ಲದ, ಪರಿಶ್ರಮವಿಲ್ಲದ. 3. ರೂಪಾಂತರವನ್ನು ಹೊಂದದ, ಉಚಿತ ಪರಿಣಾಮವನ್ನು ಹೊಂದದ. न परिणतः।

**अपरिणय** ಅಪರಿಣಯ (ಪುಂ) ವಿವಾಹವಾಗದಿರುವಿಕೆ, ಮದುವೆಯಾಗದಿರುವಿಕೆ.

**अपरितोष** ಅಪರಿತೋಷ (ಪುಂ) 1. ಸಂತೋಷವಿಲ್ಲದಿರುವಿಕೆ. 2. ತೃಪ್ತಿಯಿಲ್ಲದಿರುವಿಕೆ. न परितोषः।

**अपरिपक्व** ಅಪರಿಪಕ್ವ (वि०) 1. ಪಕ್ವವಾಗದ, ಬೇಯಿಸಲ್ಪಡದ. 2. ರೂಪಾಂತರವನ್ನು ಹೊಂದದ, ಉಚಿತ ಪರಿಣಾಮವನ್ನು ಹೊಂದದ. 3. ಮಾಗದ, ಚೆನ್ನಾಗಿ ಹಣ್ಣಾಗದ. 4. ಚೆನ್ನಾಗಿ ವಿಮರ್ಶಿಸುವ ಸಾಮರ್ಥ್ಯವಿಲ್ಲದ (ಬುದ್ಧಿ).

**अपरिमाण** ಅಪರಿಮಾಣ (ನಂ) 1. ಅಳತೆಯಿಲ್ಲದಿರುವಿಕೆ, ಪರಿಮಾಣವಿಲ್ಲದಿರುವಿಕೆ. (वि०) 2. ಪರಿಮಾಣವಿಲ್ಲದ, ಅಳತೆಯಿಲ್ಲದ, ಅಪಾರವಾದ. नास्ति परिमाणं यस्य।

**अपरिमित ಅಪರಿಮಿತ** (वि०) ಅಳತೆಯಿಲ್ಲದ, ಅಪಾರವಾದ, ಹೆಚ್ಚಾದ.

**अपरिमेय ಅಪರಿಮೇಯ** (वि०) 1. ಅಳೆಯಲಾಗದ, ಇಯತ್ತಾಶೂನ್ಯವಾದ, ಅಳತೆಯಿಲ್ಲದ. "अथ कदाचिदपरिमेयमायाभयानकयुद्धसमुद्धतदैत्यबलावस्कन्दकान्दिशीकबृन्दारकानीकपरिवार्यमाणरथः पङ्क्तिरथः" चं० रा०। 2. ಅಳೆಯಲು ಯೋಗ್ಯವಲ್ಲದ. न परिमातुं शक्यमर्हं वा।

**अपरिविष्ट ಅಪರಿವಿಷ್ಟ** (वि०) ಬಡಿಸಲ್ಪಡದ.

**अपरिवृत ಅಪರಿವೃತ** (वि०) 1. ಸುತ್ತುವರಿಯಲ್ಪಡದ, ಬೇಲಿ ಹಾಕದಿರುವ (ಜಮೀನು). 2. ಹೊದಿಸಲ್ಪಡದ, ಮುಚ್ಚಲ್ಪಡದ.

**अपरिष्कार ಅಪರಿಷ್ಕಾರ** (पु०) 1. ಶುದ್ಧಿಮಾಡದಿರುವಿಕೆ, ತೊಳೆಯದಿರುವಿಕೆ. 2. ಅಲಂಕರಿಸದಿರುವಿಕೆ.

**अपरिष्कृत ಅಪರಿಷ್ಕೃತ** (वि०) 1. ಶುದ್ಧಿಮಾಡಲ್ಪಡದ, ತೊಳೆಯಲ್ಪಡದ, ಮೆರುಗು ಹಾಕಲ್ಪಡದ. 2. ಅಲಂಕರಿಸಲ್ಪಡದ, ಶೃಂಗರಿಸಲ್ಪಡದ. न परिष्कृतः।

**अपरिहरणीय ಅಪರಿಹರಣೀಯ** (वि०) 1. ಬಿಡಲು ಅಶಕ್ಯವಾದ. 2. ಬಿಡಲು ಅಯೋಗ್ಯವಾದ. न परिहर्तुं शक्यमर्हं वा — परि+हृञ् (हरणे) "अनीयर्" (३-१-९६)। 3. ಹೋಗಲಾಡಿಸಲು ಆಗದ. 4. ನಿವಾರಿಸಲು ಅರ್ಹವಲ್ಲದ.

**अपरिहार्य ಅಪರಿಹಾರ್ಯ** (वि०) 1. ಪರಿಹರಿಸಲಾಗದ. 2. ಬಿಡಲು ಅಶಕ್ಯವಾದ. 3. ಪರಿಹರಿಸಲು ಅರ್ಹವಲ್ಲದ. 4. ಬಿಡಲು ಯೋಗ್ಯವಲ್ಲದ. न परिहर्तुं शक्यमर्हं वा—परि+हृञ् (हरणे) "ण्यत्" (३-१-१२४)। "तस्मादपरिहार्येऽर्थे न त्वं शोचितुमर्हसि" गीता २-२७।

**अपरीक्षित ಅಪರೀಕ್ಷಿತ** (वि०) ಪರೀಕ್ಷಿಸಲ್ಪಡದ, ವಿಮರ್ಶಿಸಲ್ಪಡದ. न० त०।

**अपरुष् ಅಪರುಷ್** (वि०) ಕೋಪವಿಲ್ಲದ. अपगता रुट् यस्य। "अपरुषा परुषाक्षरमीरिता" रघु० ९-८।

**अपरुष ಅಪರುಷ** (वि०) 1. ಕಠಿನವಲ್ಲದ, ಕ್ರೂರವಲ್ಲದ. न परुषः। 2. ಕೋಪವಿಲ್ಲದ, ಶಾಂತನಾದ. अपगता रुषा यस्य। स्त्रियाम् –रुषा –ರುಷಾ.

**अपरूप ಅಪರೂಪ** (न०) 1. ವಿಕಾರವಾದ ರೂಪ, ಕುರೂಪ. (वि०) 2. ವಿಕಾರವಾದ ರೂಪವುಳ್ಳ, ಕುರೂಪವುಳ್ಳ.

**अपरेद्युस् ಅಪರೇದ್ಯುಸ್** (अव्य०) ಮಾರನೆಯ ದಿನ, ಮರುದಿವಸ. अपर "एद्युस्" (५-३-२२)।

**अपरोक्ष ಅಪರೋಕ್ಷ** (वि०) 1. ಪ್ರತ್ಯಕ್ಷವಾದ, ದೃಶ್ಯವಾದ, ಕಣ್ಣಿಗೆ ಕಾಣುವ. (अव्य०) 2. ಪ್ರತ್ಯಕ್ಷವಾಗಿ, ಎದುರಿಗೆ.

**अपरोक्षानुभूति ಅಪರೋಕ್ಷಾನುಭೂತಿ** (स्त्री०) 1. ಪ್ರತ್ಯಕ್ಷ ಜ್ಞಾನ. 2. ಶ್ರೀ ಶಂಕರಾಚಾರ್ಯರು ರಚಿಸಿದ ಒಂದು ಗ್ರಂಥ.

**अपरोध ಅಪರೋಧ** (पु०) ತಡೆ, ನಿರೋಧ. अप+रुधिर् (आवरणे) "घञ्" (३-३-१८)।

**अपरोप ಅಪರೋಪ** (पु०) ಸಮೂಲನಾಶ, ಬುಡಸಹಿತ ಕಿತ್ತುಹಾಕುವುದು. "श्रुत्वा स्वाम्यपरोपरौद्रविषमान्" मुद्रा० २-२१।

**अपर्ण ಅಪರ್ಣ** (वि०) ಪರ್ಣವಿಲ್ಲದ, ಎಲೆಯಿಲ್ಲದ. न पर्णानि यस्य।

**अपर्णा ಅಪರ್ಣಾ** (स्त्री०) ಪಾರ್ವತಿ. नास्ति पर्णं वृत्तिसाधनं यस्याः। [ಪಾರ್ವತಿಯು ತಪಸ್ಸು ಮಾಡುವಾಗ ಮರದಿಂದ ಬಿದ್ದ ಎಲೆಗಳ ಆಹಾರವನ್ನೂ ಬಿಟ್ಟಿದ್ದರಿಂದ ಅಪರ್ಣೆಯೆಂದು ಹೆಸರಾಯಿತು.] "स्वयं विशीर्णद्रुमपर्णवृत्तिता परा हि काष्ठा तपसस्तया पुनः। तदप्यपाकीर्णमतः प्रियंवदां वदन्त्यपर्णेति च तां पुराविदः" कुमा० ५-२८।

**अपर्तु ಅಪರ್ತು** (स्त्री०) 1. ಮುಟ್ಟು ನಿಂತಿರುವ ಹೆಂಗಸು. अपगतः ऋतुः स्त्रीपुष्पं यस्याः। (वि०) 2. ಅಕಾಲದ, ಋತುನಿಯಮವನ್ನು ಮೀರಿದ.

**अपर्यन्त ಅಪರ್ಯಂತ** (वि०) ಎಲ್ಲೆಯಿಲ್ಲದ, ಅವಧಿಯಿಲ್ಲದ, ಕೊನೆಯಿಲ್ಲದ, ಅಪಾರವಾದ. नास्ति पर्यन्तो यस्य। "तदक्षयमपर्यन्तं दुर्जयं वानरं बलम्" रामा०।

**अपर्याप्त ಅಪರ್ಯಾಪ್ತ** (वि०) 1. ಅಪಾರವಾದ, ಅಪರಿಮಿತವಾದ, ಅಳತೆಯನ್ನು ಮೀರಿದ. "जगत्यपर्याप्तसहस्रभानुना न यन्नियन्तुं समभावि भानुना" माघ० १-२७। 2. ಸಾಕಾಗದ, ಕಡಿಮೆಯಾದ್ದು, ಅಸಂಪೂರ್ಣವಾದ. 3. ಅಸಮರ್ಥವಾದ, ಶಕ್ತಿಯಿಲ್ಲದ. "अपर्याप्तं तदस्माकं बलं भीष्माभिरक्षितम्" गीता १-१०।

**अपर्याप्ति ಅಪರ್ಯಾಪ್ತಿ** (स्त्री०) 1. ಸಾಕಾಗದಿರುವಿಕೆ, ಕಡಿಮೆಯಾಗಿರುವಿಕೆ, ಅಸಂಪೂರ್ಣತೆ. 2. ಅಶಕ್ತತೆ, ಅಸಾಮರ್ಥ್ಯ. 3. ಅಳತೆಯನ್ನು ಮೀರಿರುವಿಕೆ.

**अपर्याय ಅಪರ್ಯಾಯ** (पु०) 1. ಕ್ರಮವಿಲ್ಲದಿರುವಿಕೆ. (वि०) 2. ಕ್ರಮವಿಲ್ಲದ. 3. ಪರ್ಯಾಯವಿಲ್ಲದ, ಸಮಾನವಾದ ಅರ್ಥವಿಲ್ಲದ (ಶಬ್ದ).

**अपर्युषित ಅಪರ್ಯುಷಿತ** (वि०) ಹೊಸದಾದ, ಹಿಂದಿನ ದಿನದ್ದಲ್ಲದ, ಹಳಸದ.

**अपर्वन् ಅಪರ್ವನ್** (वि०) 1. ಗ್ರಂಥಿಗಳಿಲ್ಲದ, ಗೆಣ್ಣುಗಳಿಲ್ಲದ (ಕೋಲು). 2. ಪರ್ವ (ಅಧ್ಯಾಯ) ಗಳಿಲ್ಲದ ಗ್ರಂಥ.

**अपल ಅಪಲ** (नं०) 1. ಅಗುಳಿ, ಚಿಲಕ. अपलाति गृह्णात्यत्र — अप+ला (आदाने) "कः" (३-१-१३६)। (वि०) 2. ಮಾಂಸವಿಲ್ಲದ. नास्ति पलं मांसं यस्य।

**अपलपन ಅಪಲಪನ** (नं०) ಮುಚ್ಚುಮರೆ, ಸತ್ಯವನ್ನಡಗಿಸುವಿಕೆ. अपलप्यते — अप+लप (व्यक्तायां वाचि) "ल्युट्" (३-३-११५)। "दैन्यादुन्मुखदर्शनापलपनैः पिण्डार्थमायस्यतः" मुद्रा० ३-१४।

**अपलपित ಅಪಲಪಿತ** (नं०) 1. ಮುಚ್ಚುಮರೆ, ಸತ್ಯವನ್ನಡಗಿಸುವಿಕೆ, ನಿಜವನ್ನು ಮರೆಮಾಚುವುದು. अपलपनम्—अप+लप (व्यक्तायां वाचि) भावे "क्तः" (३-३-११४)। (वि०) 2. ಮರೆಮಾಚಲ್ಪಟ್ಟ.

**अपलापिन् ಅಪಲಾಪಿನ್** (वि०) ಸತ್ಯವನ್ನಡಗಿಸುವ, ನಿಜವನ್ನು ಮರೆಮಾಚುವ. अपलपति — अप+लप (व्यक्तायां वाचि) "णिनिः" (३-२-७८)।

**अपलाषिका ಅಪಲಾಷಿಕಾ** (स्त्री०) ಅತ್ಯಾಸೆ, ಕ್ರಮ ಮೀರಿದ ಆಸೆ. अप+लष (कान्तौ) "ण्वुच्" (३-३-१११)।

**अपलाषिन् ಅಪಲಾಷಿನ್** (वि०) ಅತ್ಯಾಸೆಯುಳ್ಳ. अप+लष (कान्तौ) "घिनुण्" (३-२-१४४)।

**अपलाषुक ಅಪಲಾಷುಕ** (वि०) ಅತ್ಯಾಸೆಪಡುವ. अप+लष (कान्तौ) "उकञ्" (३-२-१५४)।

**अपवरक ಅಪವರಕ** (नं०) ಕೊಠಡಿ, ಕೋಣೆ, ಕಿರುಮನೆ. अपव्रियते — अप+वृञ् (वरणे) "वुन्" (उ० ५-३५)।

**अपवर्ग ಅಪವರ್ಗ** (पुं०) 1. ಮೋಕ್ಷ, ಮುಕ್ತಿ. अप+वृजी (वर्जने) "घञ्" (३-३-१२१)। "स्तुतिभिः कतिचित्त्रिवर्गमृच्छन्त्यपवर्गं च यमेकमाश्रिताभिः" याद० १५-५८। 2. ತ್ಯಾಗ, ದಾನ. 3. ಸಮಾಪ್ತಿ, ಕೊನೆ. "साफल्यमस्त्रे रिपुपौरुषस्य कृत्वा गते भाग्य इवापवर्गम्" किरा० १६-४९। 4. ವಿಸರ್ಜಿಸುವುದು, ಬಿಡುವುದು, ತೊರೆಯುವುದು, ತ್ಯಜಿಸುವುದು. "मुष्टेरसंभेद इवापवर्गे" किरा० १६-२०। 5. ಕ್ರಿಯೆ, ಕೆಲಸ. 6. ಕೆಲಸದಿಂದಾಗುವ ಪ್ರಯೋಜನ, ಫಲಪ್ರಾಪ್ತಿ. 7. ಕ್ರಿಯಾಸಾಫಲ್ಯ. "स्यादपवर्गस्त्यागे मोक्षे कार्यावसाने साफल्ये" मेदि०। "अपवर्गः क्रियामुक्त्योः क्रियासाध्यफलागमे" नानार्थर०।

**अपवर्जन ಅಪವರ್ಜನ** (नं०) 1. ವಿಸರ್ಜಿಸುವುದು, ಬಿಡುವುದು, ತ್ಯಜಿಸುವುದು. अप+वृजी (वर्जने) "ल्युट्" (३-३-११५)। 2. ತ್ಯಾಗ, ದಾನ. 3. ಮೋಕ್ಷ, ಮುಕ್ತಿ. "अपवर्जनन्तु दाने निर्वाणत्यागयोरपि" मेदि०।

**अपवर्जित ಅಪವರ್ಜಿತ** (वि०) 1. ಬಿಡಲ್ಪಟ್ಟ, ತ್ಯಜಿಸಲ್ಪಟ್ಟ. अप+वृजी (वर्जने) "क्तः" (३-२-१०२)। 2. ಪರಿಹರಿಸಲ್ಪಟ್ಟ, ಹೋಗಲಾಡಿಸಲ್ಪಟ್ಟ. "अपवर्जितविप्लवे शुचौ हृदयग्राहिणि मङ्गलास्पदे" किरा० २-२६। 3. ದಾನಮಾಡಲ್ಪಟ್ಟ, ಕೊಡಲ್ಪಟ್ಟ.

**अपवर्तन ಅಪವರ್ತನ** (नं०) 1. ವರ್ಗಾಯಿಸುವಿಕೆ, ಬದಲಾವಣೆ. 2. ಅಪಹರಣ, ಕಸಿದುಕೊಳ್ಳುವಿಕೆ. अप+वृतु (वर्तने) "ल्युट्" (३-३-११५)। 3. (ಗಣಿತ ಶಾಸ್ತ್ರದಲ್ಲಿ) ಯಾವುದಾದರೂ ಒಂದು ಪೂರ್ಣಾಂಕವನ್ನು ನಿಃಶೇಷವಾಗಿ ಭಾಗಿಸುವ ಇತರ ಸಣ್ಣ ಸಂಖ್ಯೆಗಳು. ಉದಾ: 15 ಎಂಬ ಸಂಖ್ಯೆಯನ್ನು 5 ಮತ್ತು 3 ಭಾಗಿಸುತ್ತವೆ. ಇವು 15ರ ಅಪವರ್ತನಗಳು. ಇಲ್ಲಿ 5 ಮತ್ತು 3 ಇವುಗಳಿಗೆ ಬೇರೆ ಅಪವರ್ತನಗಳಿಲ್ಲ. ಇಂತಹ ಸಂಖ್ಯೆಗಳು ಅವಿಭಾಜ್ಯಗಳು. 12ರ ಅಪವರ್ತನಗಳು 6, 2; 3, 4; 3, 2, 2 ಇವು. ಇವುಗಳಲ್ಲಿ 6 ಮತ್ತು 4 ಸಂಖ್ಯೆಗಳು 3, 2 ಮತ್ತು 2, 2ನ್ನು ಅಪವರ್ತನಗಳನ್ನಾಗಿ ಹೊಂದಿರುತ್ತವೆ. ಮಹತ್ತಮ ಸಾಮಾನ್ಯ ಅಪವರ್ತನ ಮತ್ತು ಲಘುತಮ ಸಾಮಾನ್ಯ ಅಪವರ್ತ್ಯಗಳು: ಕೆಲವು ಸಂಖ್ಯೆಗಳನ್ನು ನಿಃಶೇಷವಾಗಿ ಭಾಗಿಸುವ ಒಂದೇ ದೊಡ್ಡ ಸಂಖ್ಯೆಯು ಮಹತ್ತಮ ಸಾಮಾನ್ಯ ಅಪವರ್ತನ (ಮ. ಸಾ. ಅ.). ನಾಲ್ಕಾರು ಸಂಖ್ಯೆಗಳಿಂದ ನಿಃಶೇಷವಾಗಿ ಭಾಗಿಸಲ್ಪಡುವ ಒಂದೇ ಸಂಖ್ಯೆಯು ಲಘುತಮ ಸಾಮಾನ್ಯ ಅಪವರ್ತ್ಯ (ಲ. ಸಾ. ಅ.). **ಉದಾ:** 48, 60, 84, 120ರ ಮ. ಸಾ. ಅ. = 12. ಇವುಗಳ ಲ. ಸಾ. ಅ. ವು = 1680.

**अपवाद ಅಪವಾದ** (पुं०) 1. ನಿಂದೆ, ದೂಷಣೆ. अप + वद (व्यक्तायां वाचि) "घञ्" (३-३-१८)। "कोऽपवादः स्तुतिपदे यदशीलेषु चञ्चलाः" किरा० ११-२५। 2. ಮಿಥ್ಯಾವಾದ, ನಿಜವನ್ನು ಮರೆಸಿ ಸುಳ್ಳು ಹೇಳುವುದು. "गुणापवादेन तदन्यरोपणात्" किरा०

१४-१२। 3. ಅಜ್ಞೆ, ಅಪ್ಪಣೆ. "ततोऽपवादेन पताकिनीपतेश्चचाल निर्ह्लादवती महाचमूः" किरा० १४-२७। 4. ವಿಶೇಷಶಾಸ್ತ್ರ, ಬಾಧಕಶಾಸ್ತ್ರ. अपोद्यते सामान्यशास्त्रमनेन — अप+वद "घञ्" (३-३-१२१)। "अपवाद इवोत्सर्गं व्यावर्तयितुमीश्वरः" रघु० १५-७। 5. ವಿಶ್ವಾಸ, ಪ್ರೀತಿ. 6. ಸಣ್ಣ ವಾದ್ಯ, ಕಿರುಗಂಟೆ ಮೊದಲಾದುದು. "मधुकरैरपवादकरैरिव" माघ० ६-९। 7. ನಂಬಿಕೆ. "अपवादस्तु निर्देशे निन्दाविस्रम्भयोरपि" हेम०। 8. ಅಪಕೀರ್ತಿ.

**अपवादक ಅಪವಾದಕ** (वि०) 1. ನಿಂದಿಸುವವನು, ದೂಷಿಸುವವನು. अप + वद (व्यक्तायां वाचि) "ण्वुल्" (३-१-१३३)। 2. ವಿಶೇಷಶಾಸ್ತ್ರ.

**अपवादिन् ಅಪವಾದಿನ್** (वि०) ನಿಂದಕ, ದೂಷಿಸುವವನು. अप + वद (व्यक्तायां वाचि) "णिनिः" (३-२-७८)। "मन्दोत्साहः कृतोऽस्मि मृगयापवादिना माढव्येन" शाकु० २।

**अपवारण ಅಪವಾರಣ** (न०) 1. ಅಂತರ್ಧಾನ, ಮರೆಯಾಗುವಿಕೆ. अप + वृञ् (आवरणे) भावे "ल्युट्" (३-३-११५)। 2. ಮರೆಮಾಡುವುದು, ಆಚ್ಛಾದನ, ಮುಚ್ಚುವುದು. (वि०) 3. ಮರೆಮಾಡುವ, ಮುಚ್ಚುವ. अपवारयति — अप+वृञ्+णिच् "ल्युः" (३-१-१३४)।

**अपवारित ಅಪವಾರಿತ** (न०) 1. ಅಪ್ರಕಾಶ, ರಹಸ್ಯ. 2. (ನಾಟಕದಲ್ಲಿ) ಒಂದು ಕಡೆ ತಿರುಗಿಕೊಂಡು ಮತ್ತೊಬ್ಬನಿಗೆ ಹೇಳುವುದು, ಇತರರಿಗೆ ಕೇಳಿಸದಂತೆ ರಹಸ್ಯವನ್ನು ಹೇಳುವುದು. "तद्भवेदपवारितम्। रहस्यन्तु यदन्यस्य परावृत्य प्रकाश्यते" सा० द० ६-१३८। (वि०) 3. ಮುಚ್ಚಲ್ಪಟ್ಟ, ಮರೆಮಾಡಲ್ಪಟ್ಟ. अप + वृञ् (आच्छादने) + णिच् "क्तः" (३-२-१०२)।

**अपवार्य ಅಪವಾರ್ಯ** (अव्य०) ಮರೆಮಾಡಿ. अप + वृञ् (आच्छादने) + णिच् "ल्यप्" (७-१-३७)। "त्रिपताकाकरेणान्यानपवार्यान्तिरा कथाम्" सा० द० ६-१३९।

**अपवाह ಅಪವಾಹ** (पु०) ಒಂದು ಜಾಗದಿಂದ ಮತ್ತೊಂದು ಜಾಗಕ್ಕೆ ಒಯ್ಯುವುದು, ಸ್ಥಳಾಂತರಕ್ಕೆ ತೆಗೆದುಕೊಂಡು ಹೋಗುವುದು. अपसार्य वाहः स्थानान्तरनयनम्।

**अपवाहन ಅಪವಾಹನ** (न०) ಪರದೇಶದಿಂದ ಜನರನ್ನು ತನ್ನ ದೇಶಕ್ಕೆ ಕರೆತರುವುದು. अप + वह (प्रापणे) + णिच् "ल्युट्" (३-३-११५)। "स्वदेशं वर्द्धयेद्राजा परदेशापवाहनात्" हितो०।

**अपवाह्य ಅಪವಾಹ್ಯ** (वि०) 1. ದೂರಕ್ಕೆ ಒಯ್ಯಲ್ಪಡುವ. अप + वह (प्रापणे) "ण्यत्" (३-१-१२४)। (अव्य०) 2. ದೂರಕ್ಕೆ ತಳ್ಳಿ. अप + वह + णिच् "ल्यप्" (७-१-३७)।

**अपविघ्न ಅಪವಿಘ್ನ** (वि०) ವಿಘ್ನರಹಿತವಾದ, ಅಡ್ಡಿಯಿಲ್ಲದ. अपगतो विघ्नो यस्मात्। "शतं क्रतूनामपविघ्नमाप" रघु० ३-३८।

**अपविद्ध ಅಪವಿದ್ಧ** (पु०) 1. ಹನ್ನೆರಡುವಿಧ ಪುತ್ರರಲ್ಲೊಬ್ಬ, ತಾಯಿ ತಂದೆಗಳಿಂದ ತ್ಯಜಿಸಲ್ಪಟ್ಟು, ತಂದು ಸಾಕಲ್ಪಟ್ಟ ಮಗ. (वि०) 2. ತಿರಸ್ಕರಿಸಲ್ಪಟ್ಟ, ಎಸೆಯಲ್ಪಟ್ಟ. 3. ಹೋಗಲಾಡಿಸಲ್ಪಟ್ಟ, ಪರಿಹರಿಸಲ್ಪಟ್ಟ. अप + व्यध (ताडने) "क्तः" (३-२-१०२)। "रक्षोविप्रकृतावास्तामपविद्धशुचाविव" रघु० १०-७४। 4. ಬಿಡಲ್ಪಟ್ಟ, ತ್ಯಜಿಸಲ್ಪಟ್ಟ. "अपविद्धगदो बाहुभंग्नशाख इव द्रुमः" कुमा० २-२२।

**अपविद्या ಅಪವಿದ್ಯಾ** (स्त्री०) 1. ಅವಿದ್ಯೆ, ಅಜ್ಞಾನ. "तत्त्वस्य संवित्तिरिवापविद्याम्" किरा० १६-३२। 2. ನೀಚವಿದ್ಯೆ. अपकृष्टा विद्या।

**अपव्यय ಅಪವ್ಯಯ** (पु०) 1. ವ್ಯರ್ಥವಾದ ಖರ್ಚು, ದುಬಾರಿ ಖರ್ಚು, ಅನ್ಯಾಯವಾದ ಖರ್ಚು. अपकृष्टो व्ययः। 2. ನಿಜವನ್ನು ಮರೆಮಾಚುವುದು, ಸತ್ಯವನ್ನು ಅಡಗಿಸುವುದು.

**अपशङ्क ಅಪಶಂಕ** (वि०) 1. ಸಂದೇಹವಿಲ್ಲದ, ಸಂಶಯರಹಿತವಾದ. अपगता शङ्का यस्य। (क्रि० वि०) 2. ಸಂದೇಹವಿಲ್ಲದೆ, ಸಂಶಯರಹಿತವಾಗಿ. "अपशङ्कमङ्कपरिवर्तनोचिताः" माघ० ४-४७।

**अपशद ಅಪಶದ** (पु०) 1. ಅನುಲೋಮಜಾತಿಯವನು. "वर्णमात्रानुलोमा ये षट्तेऽपशदसंज्ञिताः" वैज०। (वि०) 2. ನೀಚ, ಅಧಮ, ಕೆಳದರ್ಜೆಯವನು. अप + शद्लृ (शातने) "अच्" (३-१-१३४)। "निहीनोऽपशदो जाल्मः" अम०।

**अपशब्द ಅಪಶಬ್ದ** (पु०) 1. ಅಪಭ್ರಂಶಶಬ್ದ, ತಪ್ಪಾಗಿ ಉಚ್ಚರಿಸಲ್ಪಡುವ ಶಬ್ದ, ವ್ಯಾಕರಣ ನಿಯಮಕ್ಕೆ ವಿರುದ್ಧವಾದ ಶಬ್ದ. 2. ನಿಂದಾವಚನ, ಬೈಗಳು,

ದೂಷಣೆ. "प्रापाक्षणोर्गलदपशब्दमञ्जनाम्भः" माघ० ८-४३।

अपशु ಅಪಶು (पु०) 1. ಹಸು ಮತ್ತು ಕುದುರೆಗಳಿಗಿಂತ ಬೇರೆಯಾದ ತಿರ್ಯಗ್‌ಜಂತು. 2. ಶ್ರೇಷ್ಠವಲ್ಲದ ಪಶು. (वि०) 3. ಪಶುಗಳಿಲ್ಲದ, ಗೋವುಗಳಿಲ್ಲದ. नास्ति पशुर्यत्र।

अपशुच् ಅಪಶುಚ್ (वि०) ಶೋಕರಹಿತವಾದ, ದುಃಖವಿಲ್ಲದ. अपगता शुक् यस्य।

अपशोक ಅಪಶೋಕ (वि०) ಶೋಕರಹಿತವಾದ, ದುಃಖವಿಲ್ಲದ. अपगतः शोको यस्मात्।

अपश्चिम ಅಪಶ್ಚಿಮ (वि०) 1. ಮೊದಲನೆಯ, ಮೊದಲಿಗ, ಅಗ್ರೇಸರ. न पश्चिमः। "शिश्रिये सुमनसामपश्चिमः पश्चिमे वयसि नैमिशं वशी" रघु० १९-१। 2. ಕೊನೆಯದಲ್ಲದ. "प्रसीदतु महाराजो ममानेनापश्चिमेन प्रणयेन" वेणी० ६। 3. ಅಧಿಕವಾದ, ಮಿತಿಮೀರಿದ. "अपश्चिमामिमां कष्टामापदं प्राप्तवत्यहम्" रामा०।

अपश्यत् ಅಪಶ್ಯತ್ (वि०) ನೋಡದಿರುವ, ಕಾಣದಿರುವ. न पश्यति—दृशिर् (प्रेक्षणे) "शतृ" (३-२-१२४)। "अपश्यद्भिरिवेशानम्" किरा० १५-२। "अपश्यतोऽभवदतिदुःखितं मनः सुचक्षुषः प्रविचरतो महात्मनः" रामा०।

अपश्री ಅಪಶ್ರೀ (वि०) 1. ದರಿದ್ರ, ಬಡವ. अपगता श्रीः संपद्यस्य। 2. ಕಾಂತಿಯಿಲ್ಲದ. अपगता श्रीः शोभा यस्मात्। "कुमुदवनमपश्रि श्रीमदम्भोजषण्डम्" माघ० ११-६४।

अपष्ठ ಅಪಷ್ಠ (न०) ಅಂಕುಶದ ತುದಿ. अप + ष्ठा (गतिनिवृत्तौ) "कः" (३-१-१३६)। "अपष्ठन्त्वङ्कुशस्याग्रम्" वैज०।

अपष्ठु ಅಪಷ್ಠು (पु०) 1. ಕಾಲ, ಸಮಯ. (वि०) 2. ಪ್ರತಿಕೂಲವಾದ, ವಿರುದ್ಧವಾದ. 3. ಅನುಕೂಲವಾದ. 4. ಎಡಭಾಗದ. अप + ष्ठा (गतिनिवृत्तौ) "कुः" (उ० १-२५)। "अपष्ठुः पुंसि काले च वामे स्यादन्यलिङ्गकः" मेदि०। (अव्य०) 5. ತಪ್ಪಾಗಿ, ವಿರುದ್ಧವಾಗಿ, ಸುಳ್ಳಾಗಿ. "तव धर्मराज इति नाम कथमिदमपष्ठु पठ्यते" माघ० १५-१७। 6. ತಪ್ಪಿಲ್ಲದೆ, ನಿರ್ದೋಷವಾಗಿ. 7. ಸುಂದರವಾಗಿ, ಅಂದವಾಗಿ. "प्रतिकूलानुकूलार्थे अपष्ठुरमपष्ठु च" वैज०। "अपष्ठु चारौ निर्दोषे" हेम०।

अपस् ಅಪಸ್ (न०) 1. ಕೆಲಸ, ಕಾರ್ಯ. आप्लृ (व्याप्तौ) "असुन्" ह्रस्वश्च (उ० ४-२०७)। 2. ಪವಿತ್ರಕಾರ್ಯ, ಧರ್ಮಕಾರ್ಯ. 3. ನೀರು. (वि०) 4. ಕಾರ್ಯನಿರತನಾದ, ಪ್ರಯತ್ನಶೀಲ.

अपसद् ಅಪಸದ್ (वि०) ಅಧಮ, ನೀಚ, ಪಾಪಾತ್ಮ. "पापे त्वधमापसदध्रुवाः" त्रिकाण्ड०।

अपसर ಅಪಸರ (पु०) 1. ನಿರ್ಗಮನ, ಹೊರಡುವಿಕೆ. अप+सृ (गतौ) "अच्" (३-३-११८)। 2. ಪ್ರತಿಗ್ರಹ, ಸ್ವೀಕಾರ, ಕ್ರಯಕ್ಕೆ ತೆಗೆದುಕೊಳ್ಳುವುದು. "निरन्वयोऽनपसरः प्राप्तः स्यात्" मनु० ८-१९८।

अपसरण ಅಪಸರಣ (न०) ನಿರ್ಗಮನ, ಹೊರಡುವಿಕೆ. अप + सृ (गतौ) भावे "ल्युट्" (३-३-११५)।

अपसर्ग ಅಪಸರ್ಗ (पु०) 1. ತ್ಯಾಗ, ದಾನ. 2. ವಿಸರ್ಜನ, ತ್ಯಜಿಸುವುದು. अप + सृज (विसर्गे) भावे "घञ्" (३-३-१८)।

अपसर्प ಅಪಸರ್ಪ (पु०) 1. ಗೂಢಚಾರ. अपसर्पति—अप+सृप्लृ (गतौ) "अच्" (३-१-१३४)। "सर्पाधिराजोरुभुजोऽपसर्पं पप्रच्छ भद्रं विजितारिभद्रः" रघु० १४-३१। 2. ಅಪಸರಣ, ನಿರ್ಗಮನ, ಹೊರಡುವಿಕೆ. अप+सृप्लृ भावे "घञ्" (३-३-१८)।

अपसर्पण ಅಪಸರ್ಪಣ (न०) ನಿರ್ಗಮನ, ಹೊರಡುವಿಕೆ, ಹಿಂತಿರುಗುವಿಕೆ. अप + सृप्लृ (गतौ) "ल्युट्" (३-३-११५)।

अपसव्य ಅಪಸವ್ಯ (न०) 1. ಶರೀರದ ಬಲಭಾಗ. अपक्रान्तं सव्यात्। (वि०) 2. ವಿರುದ್ಧವಾದ, ಪ್ರತಿಕೂಲವಾದ. 3. ಬಲಭಾಗದ.

अपसार ಅಪಸಾರ (पु०) 1. ದೂರಕ್ಕೆ ತಳ್ಳುವುದು. 2. ಬಹಿಷ್ಕಾರ, ಹೊರದೂಡುವುದು. अप+सृ (गतौ) "घञ्" (३-३-१८)। 3. ಓಡಿಹೋಗುವುದು, ಪಲಾಯನ. "व्याप्तं लोकैर्दुःखलभ्यापसारम्" माघ० १८-४०। अप+सृ+णिच् भावे "ल्युट्" (३-३-११५)। —सारणम्—ಸಾರಣಂ. भावे "युच्" (३-३-१०७)। —सारणा—ಸಾರಣಾ.

अपसारित ಅಪಸಾರಿತ (वि०) 1. ದೂರಮಾಡಲ್ಪಟ್ಟ. 2. ಬಹಿಷ್ಕರಿಸಲ್ಪಟ್ಟ, ಹೊರದೂಡಲ್ಪಟ್ಟ. 3. ಓಡಿಸಲ್ಪಟ್ಟ. अप + सृ (गतौ) + णिच् "क्तः" (३-२-१०२)।

अपस्कर ಅಪಸ್ಕರ (पु०) ರಥದ ಅವಯವ, ರಥದ ಭಾಗ. "अपस्करो रथाङ्गम्" पा० सू० (६-१-१४९)।

**अपस्नात** ಅಪಸ್ನಾತ (ವಿ०) ಮೃತನಿಗಾಗಿ ಸ್ನಾನ ಮಾಡಿದ, ಮರಣಕ್ಕಾಗಿ ಸ್ನಾನಮಾಡಿದ. अपकृष्टं स्नातः।

**अपस्नान** ಅಪಸ್ನಾನ (ನಂ०) 1. ಮರಣವಾರ್ತೆಯನ್ನು ಕೇಳಿ ಮಾಡುವ ಸ್ನಾನ. अपकृष्टं स्नानम्। 2. ಸ್ನಾನ ಮಾಡಿ ನಿಂತ ನೀರು, ಮೈ ತೊಳೆದ ನೀರು. अपक्रान्तः स्नानात्। "उद्वर्तनमपस्नानं विण्मूत्रे रक्तमेव च। श्लेष्मनिष्ठ्यूतवान्तानि नाधितिष्ठेत्तु कामतः" मनु० ४-१३२।

**अपस्पश** ಅಪಸ್ಪಶ (ವಿ०) 1. ಗೂಢಚಾರನಿಲ್ಲದ. अपगतः स्पशः यस्मात्। "शब्दविद्येव नो भाति राजनीति-रपस्पशा" माघ० २-११२। 2. ಪಸ್ಪಶ ಗ್ರಂಥವಿಲ್ಲದ.

**अपस्मार** ಅಪಸ್ಮಾರ (ಪು०) ಮೂರ್ಛೆ ರೋಗ. अप-स्मारयति — अप+स्मृ (चिन्तायाम्)+णिच् "अच्" (३-१-१३४)।

**अपस्मारिन्** ಅಪಸ್ಮಾರಿನ್ (ವಿ०) ಮೂರ್ಛೆ ರೋಗ ವುಳ್ಳ.

**अपहत** ಅಪಹತ (ವಿ०) ನಾಶಪಡಿಸಲ್ಪಟ್ಟ. अप + हन (हिंसागत्योः) "क्तः" (३-२-१०२)।

**अपहति** ಅಪಹತಿ (स्त्री०) ನಾಶಪಡಿಸುವುದು. अप+हन (हिंसागत्योः) भावे "क्तिन्" (३-३-९४)।

**अपहर** ಅಪಹರ (ವಿ०) ಅಪಹರಿಸುವ, ಕದಿಯುವ. अप+हृञ् (हरणे) "अच्" (३-१-१३४)।

**अपहरण** ಅಪಹರಣ (ನಂ०) 1. ಕದಿಯುವುದು, ಕಳ್ಳತನ. 2. ಒಯ್ಯುವುದು, ಸ್ಥಳಾಂತರಕ್ಕೆ ಬದಲಾಯಿಸುವುದು. अप + हृञ् (हरणे) "ल्युट्" (३-३-११५)।

**अपहरणीय** ಅಪಹರಣೀಯ (ವಿ०) 1. ಅಪಹರಿಸಲು ಯೋಗ್ಯವಾದ. 2. ಅಪಹರಿಸಲು ಶಕ್ಯವಾದ. 3. ಅಪಹರಿಸಲ್ಪಡುವ. अपहर्तुमर्हं शक्यम् अपह्रियते वा — अप+हृञ् (हरणे) "अनीयर्" (३-१-९६)। 4. ಒಯ್ಯಲು ಅರ್ಹವಾದ. 5. ಒಯ್ಯಲು ಶಕ್ಯವಾದ. 6. ಒಯ್ಯಲ್ಪಡುವ.

**अपहर्तृ** ಅಪಹರ್ತೃ (ವಿ०) ಅಪಹಾರಮಾಡುವ, ಕದಿಯುವ, ಕಳ್ಳತನಮಾಡುವ. अप+हृञ् (हरणे) "तृच्" (३-१-१३३)। स्त्रियाम् "ङीप्" (४-१-५)। –हर्त्री –ಹರ್ತ್ರೀ.

**अपहसन** ಅಪಹಸನ (ನಂ०) ಅಪಹಾಸ್ಯ, ಕುಚೋದ್ಯ. अप + हसे (हसने) "ल्युट्" (३-३-११५)।

**अपहसित** ಅಪಹಸಿತ (ನಂ०) 1. ಅಪಹಾಸ್ಯ, ಕುಚೋದ್ಯ. अप + हसे (हसने) भावे "क्तः" (३-३-११४)। (ವಿ०) 2. ಅಪಹಾಸ್ಯಮಾಡಲ್ಪಟ್ಟ. कर्म० "क्तः" (३-२-१०२)।

**अपहस्त** ಅಪಹಸ್ತ (ಪು०) ಹೊರದೂಡಲು ಕುತ್ತಿಗೆಯ ಮೇಲೆ ಇಟ್ಟಿರುವ ಹಸ್ತ, ತಳ್ಳಲು ಕತ್ತಿನ ಮೇಲೆ ಇಟ್ಟಿರುವ ಕೈ. अपसारणाय उद्यतो हस्तः।

**अपहस्तित** ಅಪಹಸ್ತಿತ (ವಿ०) 1. ಕುತ್ತಿಗೆಯ ಮೇಲೆ ಕೈಯಿಟ್ಟು ನೂಕಲ್ಪಟ್ಟ, ಕತ್ತುಹಿಡಿದು ತಳ್ಳಲ್ಪಟ್ಟ. अपहस्तोऽस्य सञ्जातः "इतच्" (५-२-३६)। 2. ತಿರಸ್ಕರಿಸಲ್ಪಟ್ಟ, ಅಪಮಾನಗೊಳಿಸಲ್ಪಟ್ಟ.

**अपहार** ಅಪಹಾರ (ಪು०) 1. ಹಾನಿ, ನಾಶ. अप+हृञ् (हरणे) "घञ्" (३-३-१८)। "अपहारस्त्वपचयः" अम०। 2. ಚೋರ, ಕಳ್ಳ. 3. ಜೂಜು ಮತ್ತು ಯುದ್ಧಗಳ ಮಧ್ಯೆ ಕೊಡುವ ವಿರಾಮ. 4. ಆಹ್ವಾನದ ಮೇಲೆ ಹೋದಕಡೆ ಅವಶ್ಯಕೊಡಬೇಕಾದ ವಸ್ತು. 5. ಮೊಸಳೆ. "अपहारः पुनश्चोरे द्यूतयुद्धादिविश्रमे। निमन्त्रणोपनेतव्यद्रव्ये ग्राहास्ययादसि" वैज०। 6. ತೆಗೆದುಹಾಕುವುದು, ಕಿತ್ತೊಗೆಯುವುದು. "कर्ण-नासापहारेण भगिनी मे विरूपिता" रामा०। 7. ಮರೆಮಾಚುವುದು, ನಿಜವನ್ನು ಮುಚ್ಚುವುದು, ವಂಚಿಸುವುದು. "कथमात्मानं निवेदयामि। कथं वात्मापहारं करोमि" शाकु०। 8. ಒಯ್ಯುವುದು, ಬೇರೆಕಡೆಗೆ ಸಾಗಿಸುವುದು.

**अपहारक** ಅಪಹಾರಕ (ವಿ०) 1. ಅಪಹರಿಸುವ, ಕದಿಯುವ. अपहरति — अप+हृञ् (हरणे) "ण्वुल्" (३-१-१३३)। 2. ಬೇರೆಕಡೆಗೆ ಒಯ್ಯುವ, ಸ್ಥಳಾಂತರಕ್ಕೆ ಬದಲಾಯಿಸುವ. 3. ಮರೆಮಾಚುವ, ವಂಚಿಸುವ. 4. ನಾಶಪಡಿಸುವ. अप + हृञ् "णिनिः" (३-२-७८)। अपहारिन् –ಹಾರಿನ್. स्त्रियाम् "ङीप्" (४-१-५)। –हारिणी –ಹಾರಿಣೀ.

**अपहास** ಅಪಹಾಸ (ಪು०) ಕಾರಣವಿಲ್ಲದೆ ನಗುವುದು. अप+हसे (हसने) भावे "घञ्" (३-३-१८)। "अपहासः परमाददे महद्भिः" याद० १५-१०८।

**अपहृत** ಅಪಹೃತ (ವಿ०) 1. ಕದಿಯಲ್ಪಟ್ಟ. 2. ಒಯ್ಯಲ್ಪಟ್ಟ. अप + हृञ् (हरणे) "क्तः" (३-२-१०२)।

**अपह्नव** ಅಪಹ್ನವ (ಪು०) 1. ಸತ್ಯವನ್ನಡಗಿಸುವಿಕೆ, ಇರುವುದನ್ನು ಅದಲ್ಲವೆಂದು ಹೇಳುವುದು. अप + ह्नुङ्

(अपनयने) "अप्" (३-३-५७)। 2. ಪ್ರೇಮ, ಪ್ರೀತಿ, ಸ್ನೇಹ. 3. ಸ್ತುತಿ, ಸ್ತೋತ್ರ, ಹೊಗಳಿಕೆ. "स्तुतिस्नेहावपह्नवौ" वैजं। 4. ಅರ್ಥಾಲಂಕಾರದ ಒಂದು ಭೇದ; ಇರುವುದನ್ನು ಅದಲ್ಲವೆಂದು ಹೇಳಿ ಅದನ್ನೇ ಮತ್ತೊಂದು ವಿಷಯವನ್ನಾಗಿ ವರ್ಣಿಸುವುದು ಅಪಹ್ನವಾಲಂಕಾರ. ["अपह्नुति" ಪದದಲ್ಲಿ ನೋಡಿ.]

**अपह्नुति ಅಪಹ್ನುತಿ** (स्त्रीं) 1. ಸತ್ಯವನ್ನಡಗಿಸುವಿಕೆ, ಇರುವುದನ್ನು ಅದಲ್ಲವೆಂದು ಹೇಳುವುದು. 2. ಅರ್ಥಾಲಂಕಾರದ ಒಂದು ಭೇದ; ಇರುವುದನ್ನು ಅದಲ್ಲವೆಂದು ಹೇಳಿ ಅದನ್ನೇ ಮತ್ತೊಂದು ವಿಷಯವನ್ನಾಗಿ ವರ್ಣಿಸುವುದು ಅಪಹ್ನುತ್ಯಲಂಕಾರ. "प्रकृतं यन्निषिध्यान्यत्साध्यते सात्वपह्नुतिः" काव्यप्रं।

**अपांगर्भ ಅಪಾಂಗರ್ಭ** (पुं) 1. ಅಗ್ನಿ, ಬೆಂಕಿ. 2. ವಾಯು, ಗಾಳಿ. "वह्निवातावपांगर्भौ" वैजं।

**अपांनपात् ಅಪಾಂನಪಾತ್** (पुं) ಯಜ್ಞದೇವತೆ. अपो न पातयति। षष्ठया अलुक् (६-३-१४)।

**अपांनिधि ಅಪಾಂನಿಧಿ** (पुं) 1. ಸಮುದ್ರ. षष्ठया अलुक् (६-३-१४)। 2. ವಿಷ್ಣು. "अपां निधिरधिष्ठानमप्रमत्तः प्रतिष्ठितः" विं सं।

**अपांपति ಅಪಾಂಪತಿ** (पुं) 1. ಸಮುದ್ರ. 2. ವರುಣ. षष्ठया अलुक्(६-३-१४)। "अपांपतिर्नित्यमबिन्धनेन" यादं १८-४५।

**अपांयोनि ಅಪಾಂಯೋನಿ** (पुं) ಸಮುದ್ರ. षष्ठया अलुक् (६-३-१४)।

**अपाक ಅಪಾಕ** (पुं) 1. ಪಚನವಾಗದಿರುವಿಕೆ. 2. ಅಜೀರ್ಣ, ಅಗ್ನಿಯ ಮಾಂದ್ಯದಿಂದ ಆಹಾರವು ಜೀರ್ಣವಾಗದಿರುವಿಕೆ. 3. ಅಜೀರ್ಣರೋಗ. (विं) 4. ಬೇಯಿಸಲ್ಪಡದ, ಪಕ್ವವಾಗದ.

**अपाकज ಅಪಾಕಜ** (विं) 1. ಪಾಕದಿಂದುಂಟಾಗದ. 2. ಸ್ವಭಾವ ಸಿದ್ಧವಾದ, ಪ್ರಕೃತಿ ಸಿದ್ಧವಾದ. पाकाज्जायते—जनी (प्रादुर्भावे) "डः" (३-२-९८)। नं तं।

**अपाकरण ಅಪಾಕರಣ** (नं) 1. ತಿರಸ್ಕಾರ, ನಿರಾಕರಣೆ. 2. ದೂರಕ್ಕೆ ತಳ್ಳುವುದು. 3. ಬಹಿಷ್ಕರಿಸುವುದು. अप+आ+डु कृञ् (करणे) "ल्युट्" (३-३-१८)।

**अपाकरिष्णु ಅಪಾಕರಿಷ್ಣು** (विं) 1. ದೂರಕ್ಕೆ ತಳ್ಳುವ ಸ್ವಭಾವದ. 2. ತಿರಸ್ಕರಿಸುವ ಸ್ವಭಾವದ. अप+आ+डु कृञ् (करणे) "इष्णुच्" बाहुं।

**अपाकर्मन् ಅಪಾಕರ್ಮನ್** (नं) ಸಾಲದ ಸಂದಾಯ, ಸಾಲವನ್ನು ತೀರಿಸುವಿಕೆ.

**अपाकृत ಅಪಾಕೃತ** (विं) 1. ಓಡಿಸಲ್ಪಟ್ಟ, ಚೆದರಿಸಲ್ಪಟ್ಟ, ತೊಲಗಿಸಲ್ಪಟ್ಟ. 2. ದೂರಮಾಡಲ್ಪಟ್ಟ, ತ್ಯಜಿಸಲ್ಪಟ್ಟ. अप+आ+डु कृञ् (करणे) "क्तः" (३-२-१०२)। "त्वयि पूजनं जगति जाल्म कृतमिदमपाकृते गुणैः" माघं १५-३३। 3. ತಿರಸ್ಕರಿಸಲ್ಪಟ್ಟ.

**अपाकृति ಅಪಾಕೃತಿ** (स्त्रीं) 1. ತಿರಸ್ಕಾರ. 2. ನಿವಾರಣೆ, ಪರಿಹಾರ. 3. ಅಪಕಾರದಿಂದುಂಟಾಗುವ ಚಿತ್ತವಿಕಾರ, ಕಳವಳ. अप+आ+डु कृञ् (करणे) "क्तिन्" (३-३-९४)। "निशम्य सिद्धिं द्विषतामपाकृतीः" किरां १-२७।

**अपाङ्क्त ಅಪಾಂಕ್ತ** (विं) ಒಂದೇ ಪಂಕ್ತಿಯಲ್ಲಿ ಕುಳಿತು ಭೋಜನಾದಿಗಳನ್ನು ಮಾಡಲು ಯೋಗ್ಯನಲ್ಲದವನು. "अपाङ्क्तदाने यो दातुर्भवत्यूर्ध्वं फलोदयः" मनुं ३-१६९।

**अपाङ्क्तेय ಅಪಾಂಕ್ತೇಯ** (विं) ಪಂಕ್ತಿಗೆ ಯೋಗ್ಯನಲ್ಲದ, ಪಂಕ್ತಿಯಲ್ಲಿ ಕುಳಿತು ಭೋಜನಾದಿಗಳನ್ನು ಮಾಡಲು ಅರ್ಹನಲ್ಲದ. न पङ्क्तिमर्हति "ढक्"। "एतान्विगर्हिताचारानपाङ्क्तेयान् द्विजाधमान्" मनुं ३-१६७।

**अपाङ्क्त्य ಅಪಾಂಕ್ತ್ಯ** (विं) ಒಂದೇ ಪಂಕ್ತಿಯಲ್ಲಿ ಕುಳಿತು ಭೋಜನಾದಿಗಳನ್ನು ಮಾಡಲು ಯೋಗ್ಯನಲ್ಲದ. पङ्क्ति "अञ्" (४-१-८६)। "ष्यञ्" (वां ७-३-३१)। "अपाङ्क्त्यो यावतः पाङ्क्त्यान्भुञ्जानाननुपश्यति" मनुं ३-१७६।

**अपाङ्ग ಅಪಾಂಗ** (पुं) 1. ಕಡೆಗಣ್ಣು, ಕಣ್ಣಿನ ಕೊನೆಯ ಭಾಗ. अप अङ्गति—अगि (गतौ) "अच्" (३-१-१३४)। "अपाङ्गाः परिपात्यन्ताम्" यादं १६-२४। 2. ತಿಲಕ, ಪುಂಡ್ರ. "अपाङ्गो नेत्रान्तपुण्ड्रयोः" हेमं। (विं) 3. ಅಂಗವಿಹೀನ, ಊನವಾದ ಅವಯವಗಳುಳ್ಳ. अपगतान्यङ्गान्यस्य।

**अपाङ्गदर्शन ಅಪಾಂಗದರ್ಶನ** (नं) ಕಡೆಗಣ್ಣಿನ ನೋಟ, ಕಡೆಗಣ್ಣಿನಿಂದ ನೋಡುವುದು. अपाङ्गेन दर्शनम्।

**अपाच् ಅಪಾಚ್** (विं) 1. ಹಿಂದಕ್ಕೆ ಹೋಗುವ, ಹಿಮ್ಮೆಟ್ಟುವ. 2. ಅಪ್ರಕಾಶವಾದ, ಅಸ್ಪಷ್ಟವಾದ. अपाञ्चति—अञ्चु (गतौ) "क्विन्" (३-२-५९)।

(अव्यं०) 3. ಹಿಂಭಾಗಕ್ಕೆ. 4. ದಕ್ಷಿಣ ದಿಕ್ಕಿಗೆ. 5. ಪಶ್ಚಿಮ ದಿಕ್ಕಿಗೆ.

**अपाची ಅಪಾಚೀ** (स्त्री०) 1. ದಕ್ಷಿಣದಿಕ್ಕು. 2. ಪಶ್ಚಿಮ ದಿಕ್ಕು. अपाञ्चति सूर्यम् — अप+अञ्चु(गतौ) "क्विन्" (३-२-५९)। "ङीप्" (४-१-६)।

**अपाचीन ಅಪಾಚೀನ** (वि०) 1. ದಕ್ಷಿಣದಿಕ್ಕಿನ. 2. ಪಶ್ಚಿಮದಿಕ್ಕಿನ. अपाच्यां भवः "खः"(५-४-८)। 3. ಹಿಂಭಾಗದಲ್ಲಿರುವ. 4. ಅಪ್ರಕಾಶವಾದ, ಕಣ್ಣಿಗೆ ಕಾಣದ.

**अपाच्य ಅಪಾಚ್ಯ** (वि०) ದಕ್ಷಿಣ ದಿಕ್ಕಿನಲ್ಲಿರುವ, ದಕ್ಷಿಣ ದಿಕ್ಕಿನಲ್ಲಿ ಹುಟ್ಟಿದ. अपाच्यां भवः "यत्"(४-२-१०१)।

**अपाटव ಅಪಾಟವ** (न०) 1. ಅಕುಶಲತೆ, ಚುರುಕಿಲ್ಲದಿರುವಿಕೆ. न पाटवम्। 2. ಅಸಾಮರ್ಥ್ಯ, ಅಶಕ್ತತೆ. 3. ರೋಗ, ಬೇನೆ, ಜಾಡ್ಯ. नास्ति पाटवं यत्र। (वि०) 4. ಅಕುಶಲ, ಚತುರನಲ್ಲದ, ಅಸಮರ್ಥ.

**अपाणिनीय ಅಪಾಣಿನೀಯ** (वि०) 1. ಪಾಣಿನಿ ಮಹರ್ಷಿಯಿಂದ ಹೇಳಲ್ಪಡದ, ಪಾಣಿನಿ ಸೂತ್ರಗಳಿಗೆ ಅನುಗುಣವಲ್ಲದ. 2. ಪಾಣಿನಿಯ ಗ್ರಂಥ (ಅಷ್ಟಾಧ್ಯಾಯಿ) ವನ್ನು ಅಧ್ಯಯನ ಮಾಡದವನು.

**अपात्र ಅಪಾತ್ರ** (न०) 1. ಕೆಲಸಕ್ಕೆ ಬಾರದ ಪಾತ್ರೆ. 2. ದಾನಕ್ಕೆ ಯೋಗ್ಯನಲ್ಲದ ಮನುಷ್ಯ. "अदेशकाले यद्दानमपात्रेभ्यश्च दीयते। असत्कृतमवज्ञातं तत्तामसमुदाहृतम्" गीता १७-२२।

**अपात्रीकरण ಅಪಾತ್ರೀಕರಣ** (न०) 1. ಅಯೋಗ್ಯನನ್ನಾಗಿ ಮಾಡುವುದು. 2. ಅನರ್ಹನನ್ನಾಗಿ ಮಾಡುವ ಪಾಪಕೃತ್ಯ. "निन्दितेभ्यो धनादानं वाणिज्यं शूद्रसेवनम्। अपात्रीकरणं ज्ञेयमसत्यस्य च भाषणम्" ಎಂದು ಅನರ್ಹತೆಯ ಕಾರಣಗಳು ನಾಲ್ಕು. मनु० ११-६९।

**अपादान ಅಪಾದಾನ** (न०) 1. ಅಪಹಾರ, ಕಸಿದುಕೊಳ್ಳುವುದು. 2. ವ್ಯಾಕರಣ ಶಾಸ್ತ್ರದಲ್ಲಿ ಹೇಳಿರುವ ಅಪಾದಾನ ಸಂಜ್ಞೆಯುಳ್ಳದ್ದು. "ध्रुवमपायेऽपादानम्" ಅಪಾಯವೆಂದರೆ ವಿಶ್ಲೇಷ (ವಿಯೋಗ) ವೆಂದರ್ಥ. ಒಟ್ಟಿಗೆ ಸೇರಿಕೊಂಡಿರುವ ಎರಡು ವಸ್ತುಗಳಲ್ಲಿ ಯಾವುದಾದರೊಂದಕ್ಕೆ ಅಗಲಿಕೆ (ವಿಯೋಗ, ವಿಶ್ಲೇಷ) ಯುಂಟಾದಾಗ ಚಲಿಸದೆ ಸ್ಥಿರವಾಗಿ ನಿಲ್ಲುವುದು ಅಪಾದಾನಸಂಜ್ಞೆಯನ್ನು ಹೊಂದುವುದು. ಈ ಅಪಾದಾನಸಂಜ್ಞೆಯಿರುವ ಪದಕ್ಕೆ ಪಂಚಮೀವಿಭಕ್ತಿ ಬರುವುದು. वृक्षात् पर्णं पतति ಎಂಬಲ್ಲಿ ವೃಕ್ಷದಲ್ಲಿರುವ ಪರ್ಣಕ್ಕೆ ವಿಶ್ಲೇಷವುಂಟಾದಾಗ ವೃಕ್ಷ ಪದಕ್ಕೆ ಅಪಾದಾನಸಂಜ್ಞೆ ಬಂದು ಪಂಚಮೀವಿಭಕ್ತಿ ಬರುವುದು. ಹೀಗೆಯೇ, (1) ಜುಗುಪ್ಸೆ, (2) ವಿರಾಮ, (3) ಪ್ರಮಾದ, (4) ಭಯ, (5) ತ್ರಾಣ (ರಕ್ಷಣೆ), (6) ಪರಾಜಯ (ಸೋಲು), (7) ಉತ್ಪತ್ತಿ (ಹುಟ್ಟು), (8) ವಾರಣ (ತಡೆ) ಮತ್ತು (9) ಅಂತರ್ಧಾನ (ಮರೆಯಾಗುವಿಕೆ) ಈ ಅರ್ಥಗಳನ್ನು ಕೊಡುವ ಧಾತುಗಳ ಯೋಗವಿದ್ದಲ್ಲಿ ಇವುಗಳಿಗೆ ಕಾರಣವಾದ ವಿಷಯಗಳೂ, (10) ಶಾಸ್ತ್ರರೀತಿಯಲ್ಲಿ ಅಧ್ಯಯನ ಮಾಡಿಸುವ ಗುರುವೂ, (11) ವಸ್ತುವಿನ ಪ್ರಥಮ ಪ್ರಕಾಶಕ್ಕೆ ಕಾರಣವಾದುದೂ ಅಪಾದಾನಸಂಜ್ಞೆಯನ್ನು ಹೊಂದಿ ಪಂಚಮೀವಿಭಕ್ತಿಯನ್ನು ಹೊಂದುವುವು. ಕ್ರಮವಾಗಿ ಉದಾ: (1) पापाज्जुगुप्सते। (2) पापाद्विरमति। (3) धर्मात् प्रमाद्यति। (4) चोराद्बिभेति। (5) व्याघ्रात्त्रायते। (6) सिंहात्पराजयते। (7) ब्रह्मणः प्रजाः प्रजायन्ते। (8) यवेभ्यो गां वारयति। (9) मातुर्निलीयते कृष्णः। (10) उपाध्यायादधीते। (11) हिमवतो गङ्गा प्रभवति।

**अपान ಅಪಾನ** (पु०) 1. ದೇಹದಲ್ಲಿರುವ ಪಂಚ ಪ್ರಾಣವಾಯುಗಳಲೊಂದು. अपसारणेन अनित्यनेन—अप+अन(प्राणने) "घञ्"(३-३-१२१)। (न०) 2. ಗುದ, ಮಲದ್ವಾರ. 3. ವೃಷಣ, ಅಂಡಕೋಶ. "अपानो देहजो वायुरपानं वृषणे गुदे" वैज०।

**अपानन ಅಪಾನನ** (न०) 1. ಶ್ವಾಸೋಚ್ಛ್ವಾಸ. 2. ಮಲಮೂತ್ರಾದಿಗಳ ವಿಸರ್ಜನೆ. अप+अन(प्राणने) भावे "ल्युट्" (३-३-११५)।

**अपामार्ग ಅಪಾಮಾರ್ಗ** (पु०) ಉತ್ತರೇಣಿ ಗಿಡ. अपकृष्टः आ समन्तात् मार्गोऽस्य।

**अपाय ಅಪಾಯ** (पु०) 1. ವಿಶ್ಲೇಷ, ಅಗಲಿಕೆ. अप+इण् (गतौ) "अच्" (३-३-५६)। 2. ಪಲಾಯನ, ಓಟ. 3. ನಾಶ. "नाशस्त्वपक्रमोऽपायः" वैज०। "मालत्यपायमधिगम्य विरक्तचेताः" मालती० १०-९। 4. ಹಾನಿ, ಕೇಡು, ದುರ್ಘಟನೆ. "उपायं चिन्तयेत् प्राज्ञस्तथापायं च चिन्तयेत्" पञ्चत०।

**अपायिन् ಅಪಾಯಿನ್** (वि०) 1. ಅಪಾಯವುಳ್ಳ. 2. ಅಗಲಿಕೆಯುಳ್ಳ. 3. ನಾಶವುಳ್ಳ, ನಶ್ವರವಾದ. अपायोऽस्यास्ति "इनिः" (५-२-११५)। "आगमापायिनोऽनित्याः" गीता २-१४।

**अपार ಅಪಾರ** (ಪುಂ) 1. ಸಮುದ್ರ. (ನಂ) 2. ನದಿಯ ಎದುರು ದಡ. (ವಿಂ) 3. ಹೆಚ್ಚಾದ, ಅಧಿಕವಾದ. नास्ति पारं यस्य। "अपारहर्षादनघामवस्थाम्" याद० १३-६१। 4. ಅವಧಿಯಿಲ್ಲದ, ಎಲ್ಲೆಯಿಲ್ಲದ. 5. ತೀರವಿಲ್ಲದ, ದಡವಿಲ್ಲದ. 6. ಬಹಳ ಕಷ್ಟವಾದ. 7. ಅಗಾಧವಾದ, ಆಳವಾದ. (स्त्री०) –रा –ರಾ. 8. ಪೃಥ್ವಿ, ಭೂಮಿ.

**अपार्थ ಅಪಾರ್ಥ** (ಪುಂ) 1. ಅಸಂಬದ್ಧವಾದ ಅರ್ಥ. (ನಂ) 2. ಅರ್ಥವಿಲ್ಲದ ಮಾತು, ಅಸಂಬದ್ಧವಾಕ್ಯ. "समुदायार्थशून्यं यत्तदपार्थमितीष्यते" काव्यप्र०। (ವಿಂ) 3. ವ್ಯರ್ಥವಾದ, ಪ್ರಯೋಜನವಿಲ್ಲದ. अपगतोऽर्थः प्रयोजनं यस्मात्।

**अपावर्तन ಅಪಾವರ್ತನ** (ನಂ) 1. ಸುತ್ತುವುದು, ತಿರುಗುವಿಕೆ, ಪ್ರದಕ್ಷಿಣೆ. 2. ತಿರಸ್ಕಾರ. 3. ಹಿಂದಕ್ಕೆ ಓಡುವುದು, ಹಿಮ್ಮೆಟ್ಟುವುದು. अप+आ+वृतु (वर्तने) "ल्युट्" (३-३-११५)। 4. ಭೂಮಿಯಮೇಲೆ ಹೊರಳಾಡುವುದು.

**अपावृत ಅಪಾವೃತ** (ವಿಂ) 1. ಆವರಣ ತೆಗೆಯಲ್ಪಟ್ಟ, ಅನಾವೃತವಾದ. 2. ತೆರೆಯಲ್ಪಟ್ಟ, ಬಿಚ್ಚಲ್ಪಟ್ಟ. "यदृच्छयाचोपपन्नं स्वर्गद्वारमपावृतम्" गीता २-३२। 3. ಮುಚ್ಚಲ್ಪಟ್ಟ. 4. ಸ್ವತಂತ್ರ, ನಿರ್ಬಂಧವಿಲ್ಲದ. अपगतमावृतमावरणं यस्य। "त्वं ब्रह्म परमं साक्षादनाद्यन्तमपावृतम्" भाग० ११-१६-१।

**अपावृति ಅಪಾವೃತಿ** (स्त्री०) 1. ಆವರಣ ತೆಗೆಯುವುದು, ನೋಟದ ವಿಘ್ನ (ತಡೆ) ವನ್ನು ಹೋಗಲಾಡಿಸುವುದು. 2. ತೆರೆಯುವುದು, ಬಿಚ್ಚುವುದು. 3. ಮುಚ್ಚುವುದು, ಮರೆಮಾಡುವುದು. अप+आ+वृञ् (वरणे) "क्तिन्" (३-३-९४)।

**अपावृत्त ಅಪಾವೃತ್ತ** (ವಿಂ) 1. ತಿರುಗಿದ, ಸುತ್ತಿದ. 2. ಹಿಮ್ಮೆಟ್ಟಿದ, ಓಡಿಹೋದ. अप+आ+वृतु (वर्तने) "क्तः" (३-४-७२)। 3. ಪರಾಙ್ಮುಖವಾದ, ಹಿಂದಕ್ಕೆ ತಿರುಗಿದ. "पुरः सूर्यादपावृत्तां छायामिव महातरुः" किरा० १५-३३।

**अपावृत्ति ಅಪಾವೃತ್ತಿ** (स्त्री०) 1. ತಿರುಗುವಿಕೆ, ಸುತ್ತುವಿಕೆ. 2. ಹಿಮ್ಮೆಟ್ಟುವುದು, ಹಿಂದಕ್ಕೆ ಓಡುವುದು. अप+आ+वृतु (वर्तने) "क्तिन्" (३-३-९४)।

**अपाश्रय ಅಪಾಶ್ರಯ** (ಪುಂ) 1. ಆಶ್ರಯ, ಅಭಯಸ್ಥಾನ. 2. ಮಂಚ, ಪರ್ಯಂಕ. 3. ಚಪ್ಪರ, ಅಂಗಳದ ಮೇಲ್ಚಾವಣಿ. (ವಿಂ) 4. ಆಶ್ರಯವಿಲ್ಲದ, ಸಹಾಯವಿಲ್ಲದ. अपगत आश्रयो यस्य।

**अपासङ्ग ಅಪಾಸಂಗ** (ಪುಂ) ಬತ್ತಳಿಕೆ. अप+आ+षञ्ज (सङ्गे) "घञ्" (३-३-१२१)।

**अपासन ಅಪಾಸನ** (ನಂ) 1. ಎಸೆಯುವುದು. 2. ತಳ್ಳುವುದು, ನೂಕುವುದು. 3. ವಧೆ, ಕೊಲ್ಲುವುದು. अप+असु (क्षेपणे) "ल्युट्" (३-३-११५)।

**अपासित ಅಪಾಸಿತ** (ವಿಂ) 1. ಎಸೆಯಲ್ಪಟ್ಟ. 2. ಹೊರಡಿಸಲ್ಪಟ್ಟ. 3. ಕೊಲ್ಲಿಸಲ್ಪಟ್ಟ. अप+असु (क्षेपणे)+णिच् "क्तः" (३-२-१०२)।

**अपासृत ಅಪಾಸೃತ** (ವಿಂ) 1. ದೂರವಾದ, ಬಿಟ್ಟು ಹೊರಟಿರುವ. 2. ಓಡಿಹೋದ. अप+आ+सृ (गतौ) "क्तः" (३-४-७२)।

**अपास्त ಅಪಾಸ್ತ** (ವಿಂ) 1. ಎಸೆಯಲ್ಪಟ್ಟ. 2. ಹೋಗಲಾಡಿಸಲ್ಪಟ್ಟ. 3. ಓಡಿಸಲ್ಪಟ್ಟ, ಹೊರಡಿಸಲ್ಪಟ್ಟ. अप+असु (क्षेपणे) "क्तः" (३-२-१०२)। "निरस्तगाम्भीर्यमपास्तपुष्पकम्" माघ० १-५५। 4. ಇಡಲ್ಪಟ್ಟ. "अस्तापास्तसमस्तभासि नभसः पारं प्रयाते रवौ" रत्ना० १-२३। 5. ತ್ಯಜಿಸಲ್ಪಟ್ಟ, ಬಿಡಲ್ಪಟ್ಟ. "अपास्तसमस्ताशमपि उपगतदक्षिणाशम्" चं० रा० ३।

**अपास्य ಅಪಾಸ್ಯ** (अव्य०) 1. ಎಸೆದು. 2. ಹೋಗಲಾಡಿಸಿ. 3. ತ್ಯಜಿಸಿ, ಬಿಟ್ಟು. अप+असु (क्षेपणे) "ल्यप्" (७-१-३७)। "किमित्यपास्याभरणानि यौवने" कुमा० ५-४४।

**अपि ಅಪಿ** (अव्य०) 1. ನಿಂದೆ, ಬೈಗಳು. "धिग्देवदत्तम् अपि स्तुयाद्वृषलम्"। 2. ಪದಾರ್ಥ. "सर्पिषोऽपि स्यात्"। 3. ಸಂಭಾವನೆ, ಹೆಚ್ಚು ಶಕ್ತಿಯನ್ನು ತೋರಿಸಿಕೊಡುವ ಅತಿಶಯೋಕ್ತಿ. संभावनं शक्त्युत्कर्षमाविष्कर्तुमत्युक्तिः सि० कौ०। "अपि स्तुयाद्विष्णुम्"। 4. ಕಾಮಚಾರಾನುಜ್ಞೆ, ಇಷ್ಟಬಂದಂತೆ ನಡೆಯಲು ಅನುಮತಿ. "अपि स्तुहि"। 5. ಸಮುಚ್ಚಯ. "अपि स्तुहि, अपि सिञ्च"। "अस्ति मे सोदरस्नेहोप्येतेषु" शाकु० १। [ಈ ಮೇಲಿನ ಅರ್ಥಗಳಿಗೆ ದ್ಯೋತಕವಾದಾಗ "अपि" ಶಬ್ದವು ಕರ್ಮಪ್ರವಚನೀಯ ಸಂಜ್ಞೆಯನ್ನು ಹೊಂದುವುದು.] "अपिः पदार्थसंभावनान्ववसर्गगर्हासमुच्चयेषु" पा० सू० (१-४-९६)। 6. ಪ್ರಶ್ನೆ. "अपि क्रियार्थं सुलभं समित्कुशम्?" कुमा० ५-३३। 7. ಪ್ರತ್ಯಾಶೆ, ನಿರೀಕ್ಷಣೆ. "अपि

नाम दुरात्मा राक्षसो गृह्येत!" मुद्रा० १। 8. ಶಂಕೆ, ಸಂದೇಹ, ಸಂಶಯ. "अपि चोरो भवेत्? अपि देवदत्तो गच्छेत्?"। 9. ಆದರೂ, ಆದಾಗ್ಯೂ. "अपि दृष्टमपि श्रुतं प्रभावं भवदीयं भविनस्तमोऽभिभूताः" याद० १५-२५। 10. ಅನಿರ್ದಿಷ್ಟ, ಅನಿರ್ವಾಚ್ಯ. "स्वस्ति, यथास्थाने कुतोऽपि कोऽपि कमपि पुरुषविशेषमवगमयति" मुद्रा० ५। "व्यतिषजति पदार्थानान्तरः कोऽपि हेतुः" उ० रा० ६-१२।

**अपिगीर्ण ಅಪಿಗೀರ್ಣ** (वि०) 1. ಹೇಳಲ್ಪಟ್ಟ. 2. ವರ್ಣಿಸಲ್ಪಟ್ಟ. 3. ಹೊಗಳಲ್ಪಟ್ಟ, ಸ್ತೋತ್ರಮಾಡಲ್ಪಟ್ಟ.

**अपिच ಅಪಿಚ** (अव्य०) ಮತ್ತೆ, ಇದಲ್ಲದೆ. "अपिच, दुराराध्या हि राजलक्ष्मीः आत्मवद्भिरपि" मुद्रा० ३। अपि च ಇವು ಬೇರೆ ಬೇರೆ ಪದಗಳೆಂದು ಕೆಲವರ ಅಭಿಪ್ರಾಯ.

**अपित् ಅಪಿತ್** (वि०) इत् ಸಂಜ್ಞೆಯುಳ್ಳ "प"ಕಾರವಿಲ್ಲದ. "सार्वधातुकमपित्" पा० सू० (१-२-४)।

**अपितु ಅಪಿತು** (अव्य०) 1. ಆದರೆ (ವಿರೋಧದ್ಯೋತಕ). "अपितु त्रपया न तास्तदुक्तीस्त इमे नन्विह चेतसा नमन्ति" याद० १५-६०। 2. ಹಾಗಾದರೆ.

**अपिधान ಅಪಿಧಾನ** (न०) 1. ಮುಚ್ಚುವುದು, ಮರೆಮಾಡುವುದು. अपि+डु धाञ् (धारणे) भावे "ल्युट्" (३-३-११५)। "नैकजलदच्छत्रापिधानं जगत्" मृच्छ० ५-२४। (वि०) 2. ಮುಚ್ಚುವ, ಮರೆಮಾಡುವ (ಸಾಧನ). धाञ् कर० "ल्युट्" (३-३-११७)। "अमृतापिधानमसि"।

**अपिहित ಅಪಿಹಿತ** (वि०) 1. ಮುಚ್ಚಲ್ಪಟ್ಟ, ಮರೆಮಾಡಲ್ಪಟ್ಟ. अपि+डु धाञ् (धारणे) "क्तः" (३-२-१०२)। 2. ಮುಚ್ಚಲ್ಪಡದ, ಮರೆಮಾಡಲ್ಪಡದ. न पिहितम्।

**अपीति ಅಪೀತಿ** (स्त्री०) 1. ಪ್ರಳಯ, ವಿನಾಶ. "अपीतौ तद्वत् प्रसङ्गादसमञ्जसम्" ब्र० सू० २-१-८। 2. ಲಯ, ಕರಗುವಿಕೆ. 3. ಸಂಗ್ರಾಮ, ಯುದ್ಧ.

**अपीव्य ಅಪೀವ್ಯ** (वि०) ಬಹಳ ಸುಂದರವಾದ, ಅತಿ ಸೊಗಸಾದ. "अपीव्यदर्शनं शश्वत्सर्वलोकनमस्कृतम्। सन्तं वयसि कैशोरे भृत्यानुग्रहकातरम्" भाग०।

**अपुंस् ಅಪುಂಸ್** (पु०) ಕ್ಲೀಬ, ಷಂಡ, ನಪುಂಸಕ. न पुमान्। [ಪುರುಷನ ವೀರ್ಯವು ಬಲವಾಗಿದ್ದರೆ ಪುಂಶಿಶುವೂ, ಹೆಂಗಸಿನ ವೀರ್ಯವು ಬಲವಾಗಿದ್ದರೆ ಸ್ತ್ರೀಶಿಶುವೂ, ಇಬ್ಬರದೂ ಸಮಬಲವಾಗಿದ್ದರೆ ಹೆಣ್ಣುಗಂಡು ಅವಳಿಯಾಗಲಿ ನಪುಂಸಕಶಿಶುವಾಗಲಿ ಜನಿಸುವುದು. ಇಬ್ಬರದೂ ಕ್ಷೀಣಬಲವಾಗಿದ್ದರೆ ಗರ್ಭಧಾರಣೆಯೇ ಆಗುವುದಿಲ್ಲ.] "पुमान् पुंसोऽधिके शुक्रे स्त्री भवत्यधिके स्त्रियाः। समेऽपुमान् पुंस्त्रियौ वा क्षीणेऽल्पे च विपर्ययः" मनु० ३-४९।

**अपुंस्का ಅಪುಂಸ್ಕಾ** (स्त्री०) ಪುರುಷನಿಲ್ಲದ ಹೆಂಗಸು, ಪತಿಯಿಲ್ಲದವಳು. न पुमान् यस्याः।

**अपुण्य ಅಪುಣ್ಯ** (न०) 1. ಪಾಪ. (वि०) 2. ಪುಣ್ಯವಿಲ್ಲದ.

**अपुण्यकृत् ಅಪುಣ್ಯಕೃತ್** (वि०) 1. ಪಾಪಕೃತ್ಯವನ್ನು ಮಾಡುವ. अपुण्यं करोति। 2. ಪುಣ್ಯಕಾರ್ಯವನ್ನು ಮಾಡದ. न पुण्यं करोति। "गृहानुपेतुं प्रणयाद-भीप्सवो भवन्ति नापुण्यकृतां मनीषिणः" माघ० १-१४।

**अपुत्र ಅಪುತ್ರ** (पुंस्त्री०) 1. ಪುತ್ರನಿಲ್ಲದ, ಮಗನಿಲ್ಲದ. नास्ति पुत्रो यस्य यस्या वा। "अपुत्रोऽनेन विधिना सुतां कुर्वीत पुत्रिकाम्। यदपत्यं भवेदस्यां तन्मम स्यात्स्वधाकरम्" मनु० ९-१२७। 2. ಅಯೋಗ್ಯನಾದ ಮಗ. स्त्रियाम् –त्रा –ತ್ರಾ. "कप्" (५-४-१५४)। अपुत्रकः ಅಪುತ್ರಕಃ. स्त्रियाम् अपुत्रिका ಅಪುತ್ರಿಕಾ.

**अपुनर् ಅಪುನರ್** (अव्य०) ಒಂದು ಸಲ. न पुनः।

**अपुनरावृत्ति ಅಪುನರಾವೃತ್ತಿ** (स्त्री०) 1. ಹಿಂದಿರುಗದಿರುವಿಕೆ, ಪುನಃ ಬರದಿರುವಿಕೆ. 2. ಮೋಕ್ಷ, ಮುಕ್ತಿ. (वि०) 3. ಪುನಃ ಬರದಿರುವ, ಹಿಂದಿರುಗದಿರುವ. न पुनरावृत्तिर्यस्य।

**अपुनर्भव ಅಪುನರ್ಭವ** (पु०) 1. ಮೋಕ್ಷ, ಮುಕ್ತಿ. 2. ಮತ್ತೆ ಹುಟ್ಟದಿರುವಿಕೆ, ಪುನಃ ಬರದಿರುವಿಕೆ. न पुनर्भवः। "हेतौ लिङ्गे प्रशमने रोगाणामपुनर्भवे। ज्ञानं चतुर्विधं यस्य स राजार्हो भिषक्तमः" चरक०। 3. ತತ್ತ್ವಜ್ಞಾನ, ಬ್ರಹ್ಮಜ್ಞಾನ. 4. ಪರಿಹಾರ, ನಿವಾರಣೆ. (वि०) 5. ಪುನರ್ಜನ್ಮವಿಲ್ಲದ, ಬ್ರಹ್ಮಜ್ಞಾನಿ.

**अपुष्ट ಅಪುಷ್ಟ** (न०) 1. ಒಂದುವಿಧ ಅರ್ಥದೋಷದಿಂದ ಕೂಡಿದ ಪದ, ಪ್ರಕೃತಾರ್ಥಕ್ಕೆ ಉಪಕಾರಕವಲ್ಲದ ಪದ. [ವಿವರಕ್ಕೆ "अपुष्टता" ಪದದಲ್ಲಿ ನೋಡಿ.] (वि०) 2. ಪೋಷಣೆಮಾಡಲ್ಪಡದ. 3. ಮೃದುವಾದ, ಗಟ್ಟಿಯಲ್ಲದ (ಧ್ವನಿ).

**अपुष्टता** ಅಪುಷ್ಟತಾ (ಸ್ತ್ರೀಂ) ಒಂದು ಅರ್ಥದೋಷ, ವಿವಕ್ಷಿತಾರ್ಥಕ್ಕೆ ಉಪಕಾರಕವಲ್ಲದ ಅರ್ಥ. अपुष्टस्य भाव:। "विलोक्य वितते व्योम्नि विधुं मुञ्च रुषं प्रिये" ಎಂಬಲ್ಲಿ वितत ಪದಾರ್ಥವಿಲ್ಲದಿದ್ದರೂ ಪ್ರಕೃತಾರ್ಥವುಂಟಾಗುವುದರಿಂದ ಅದು ಅಪ್ರಯೋಜಕವಾಗಿರುವುದು.

**अपुष्पफलद** ಅಪುಷ್ಪಫಲದ (ಪುಂ) 1. ಪನಸ, ಹಲಸಿನ ಮರ. 2. ಉದುಂಬರ, ಅತ್ತಿಮರ. अपुष्प: सन् फलं ददाति — डु दाञ् (दाने) "क:" (३-२-३)।

**अपूजा** ಅಪೂಜಾ (ಸ್ತ್ರೀಂ) 1. ಶಾಸ್ತ್ರಮರ್ಯಾದೆಯನ್ನು ಬಿಟ್ಟು ಮಾಡುವ ಪೂಜೆ. 2. ಅಗೌರವ. 3. ಅವಿಶ್ವಾಸ. 4. ಪೂಜೆಯಿಲ್ಲದಿರುವಿಕೆ.

**अपूजित** ಅಪೂಜಿತ (ವಿಂ) 1. ತಿರಸ್ಕರಿಸಲ್ಪಟ್ಟ. 2. ಗೌರವಿಸಲ್ಪಡದ. 3. ಪೂಜಿಸಲ್ಪಡದ. न पूजित:।

**अपूत** ಅಪೂತ (ವಿಂ) 1. ಪವಿತ್ರವಲ್ಲದ, ಪರಿಶುದ್ಧವಲ್ಲದ. 2. ವ್ರಾತ್ಯ, ಸಂಸ್ಕಾರವಿಲ್ಲದವನು.

**अपूप** ಅಪೂಪ (ಪುಂ) 1. ಹಿಟ್ಟಿನಿಂದ ಮಾಡುವ ರೊಟ್ಟಿ, ದೋಸೆ, ಹೋಳಿಗೆ, ಕಜ್ಜಾಯ ಮೊದಲಾದುದು. न पूय्यते — पूयी (विशरणे) "प:" बाहुं (३-३-१)। 2. ಪುರೋಡಾಶ. "वृथाकृशरसंयावं पायसापूपमेव च" मनुं ५-७।

**अपूर्ण** ಅಪೂರ್ಣ (ನಂ) 1. ಪೂರ್ಣವಾಗದಿರುವಿಕೆ, ಅಸಂಪೂರ್ಣತೆ. पृ (पालनपूरणयो:) भावे "क:" (३-३-११४)। नं तं। (ವಿಂ) 2. ಪೂರ್ಣವಲ್ಲದ, ಪೂರ್ತಿಯಾಗಿಲ್ಲದ, ತುಂಬಿಲ್ಲದ. "अपूर्ण एव पञ्चरात्रे दोहदस्य" मालं ३।

**अपूर्णकाल** ಅಪೂರ್ಣಕಾಲ (ಪುಂ) 1. ಪೂರ್ತಿಯಾಗದ ಕಾಲ, ಸಾಕಾಗದಷ್ಟುಕಾಲ. (ವಿಂ) 2. ಅಕಾಲದ, ಅನಿಯತಕಾಲದ.

**अपूर्व** ಅಪೂರ್ವ (ನಂ) 1. ಜನ್ಮಾಂತರದಲ್ಲಿ ಅನುಭವಿಸಲ್ಪಡುವ ಸುಖ ದುಃಖಾದಿಗಳಿಗೆ ಕಾರಣವಾದ ಪುಣ್ಯ ಪಾಪಗಳು, ವಿಹಿತ ಮತ್ತು ನಿಷಿದ್ಧಕರ್ಮಗಳಿಂದುಂಟಾದ ಅದೃಷ್ಟ. [ವಿಹಿತ ಕರ್ಮಾಚರಣೆಯಿಂದುಂಟಾದುದು ಪುಣ್ಯ. ನಿಷಿದ್ಧಕರ್ಮಾಚರಣೆಯಿಂದುಂಟಾದುದು ಪಾಪ. ಈ ರೀತಿ ಅಪೂರ್ವ (ಅದೃಷ್ಟ)ವು ಎರಡು ವಿಧ. ಪ್ರಾರಬ್ಧ, ಫಲದಾನೋನ್ಮುಖ ಮತ್ತು ಸಂಚಿತಗಳೆಂದು ಪುಣ್ಯ ಪಾಪಗಳೆರಡೂ ಮೂರು ವಿಧ. ಈ ಜನ್ಮವೆತ್ತಿದ ಮೊದಲುಗೊಂಡು ಅನುಭವಿಸುತ್ತಿರುವುದು ಪ್ರಾರಬ್ಧವು. ಬಹುಕಾಲದಿಂದ ಕೂಡಿಟ್ಟಿರುವ ಅನೇಕ ಅದೃಷ್ಟ (ಪುಣ್ಯ ಪಾಪ)ಗಳ ಮಧ್ಯೆ ಫಲಕೊಡುವುದಕ್ಕೆ ಸಿದ್ಧವಾಗಿರುವುದು ಫಲದಾನೋನ್ಮುಖವು. ಈ ಜನ್ಮದಲ್ಲಿ ಪ್ರಾರಂಭವಾಗದೆ ಮತ್ತು ಫಲೋನ್ಮುಖವಾಗಿಯೂ ಇಲ್ಲದೆ ಅನೇಕ ಜನ್ಮಗಳಲ್ಲಿ ಕೂಡಿಟ್ಟಿರುವುದು ಸಂಚಿತವು. ಕರ್ಮವು ಅಚೇತನವೆಂದೂ ಅದಕ್ಕೆ ಫಲಕೊಡುವ ಸಾಮರ್ಥ್ಯವಿಲ್ಲವೆಂದೂ ಕೆಲವರ ವಾದವುಂಟು. ಕರ್ಮವು ಮಾಡಲ್ಪಟ್ಟರೆ "ಅಪೂರ್ವ"ವೆಂಬುದು ಉತ್ಪತ್ತಿಯಾಗುತ್ತದೆ. ಇದು ಫಲ ಕೊಡುವುದಕ್ಕಾಗಿ ಏರ್ಪಟ್ಟಿದ್ದು ಫಲಕೊಟ್ಟನಂತರ ನಾಶಹೊಂದುವುದು. ಇದನ್ನೇ ಕರ್ಮವೀಯುವ ಫಲವಾಗಿ ಪರಿಗಣಿಸತಕ್ಕುದೆಂದು ಸಮಾಧಾನ. ಭೌತಶಾಸ್ತ್ರದಲ್ಲಿ, ಯಾವ ಕೆಲಸವನ್ನು ಮಾಡಿದರೂ "ಎಂಟ್ರೊಪಿ" ಎಂಬುದುಂಟಾಗುತ್ತದೆ. ಇದು ಏರುವ ಬೀಜೋಕ್ತಿ. ಎಂದಮೇಲೆ ಇದಕ್ಕೊಂದು ಉಚ್ಚಮಟ್ಟವುಂಟು. ಅದನ್ನು ಹೊಂದಿದ ಕೂಡಲೆ ವಿಶ್ವದಲ್ಲಿ ಕೆಲಸ ನಡೆಯುವುದಸಾಧ್ಯ. ಆಗ ಪ್ರಳಯವೆಂದು ಹೇಳಿರುತ್ತೆ. ಈ "ಎಂಟ್ರೊಪಿ"ಯು ಅಪೂರ್ವವೆನ್ನಬಹುದು.] (ವಿಂ) 2. ಹೊಸದಾದ, ಹಿಂದಿನದಲ್ಲದ, ಹಿಂದೆ ಅನುಭವಿಸದ. "अपूर्वयेव तत्कालसमागमसकामया" माघं १९-८५। 3. ಆಶ್ಚರ್ಯಕರವಾದ, ವಿಚಿತ್ರವಾದ, ವಿಲಕ್ಷಣವಾದ. "अपूर्वेयं हरेर्माया त्रिगुणा रज्जुरूपिणी। यया मुक्तो न चलति बद्धो धावति धावति" उद्भं। 4. ಮೊದಲನೆಯದಲ್ಲದ. 5. ತಿಳಿಯಲ್ಪಡದ. "विदितेऽप्यपूर्व इव तत्र हरि:" किरां ६-३[illegible] [illegible]6. "अ" ವರ್ಣವೇ ಪೂರ್ವದಲ್ಲಿರುವ. 7. [illegible]ದಿಕ್ಕು,-ದೇಶ,-ಕಾಲಗಳಿಗಿಂತಲೂ ಭಿನ್ನವಾದ.

**अपूर्वपति** ಅಪೂರ್ವಪತಿ (ಸ್ತ್ರೀಂ) ಮೊದಲು ಗಂಡನಿಲ್ಲದವಳು, ಹಿಂದೆ ಮದುವೆಯಾಗದವಳು, ಕನ್ಯೆ, ಕುಮಾರಿ. न पूर्व: पतिर्यस्या:।

**अपूर्वविधि** ಅಪೂರ್ವವಿಧಿ (ಪುಂ) ಹೊಸಕಟ್ಟಳೆ, ಹೊಸ ಆಜ್ಞೆ, ಬೇರೆ ಪ್ರಮಾಣದಿಂದ ಹೇಳಲ್ಪಡದ ವಿಧಿ. "ज्योतिष्टोमेन स्वर्गकामो यजेत" ಎಂಬ ವಾಕ್ಯದಿಂದ ಪ್ರಮಾಣಾಂತರದಿಂದ ಅಪ್ರಾಪ್ತವಾದ ವಿಧಿಯು ಬೋಧಿಸಲ್ಪಡುವುದು. ಈ ವಿಧಿಯು ಕರ್ಮವಿಧಿ, ಗುಣವಿಧಿ, ವಿನಿಯೋಗವಿಧಿ ಮತ್ತು ಪ್ರಯೋಗವಿಧಿಗಳೆಂದು ನಾಲ್ಕುವಿಧ.

**अपृक्त** ಅಪೃಕ್ತ (ಪುಂ) 1. (ಬೇರೆ ಅಕ್ಷರದಿಂದ ಕೂಡದೇ ಇರುವ) ಒಂದೇ ವರ್ಣದ ಪ್ರತ್ಯಯ. "अपृक्त एकाल्प्रत्ययः" पा० सू० (१-२-४१)। (वि०) 2. ಕೂಡಿಕೊಂಡಿರದ, (ಮತ್ತೊಂದರೊಡನೆ) ಸೇರಿಕೊಂಡಿರದ, ಒಂಟಿಯಾದ. पृची (संपर्के) "क्तः" (३-२-१०२)। पृक्तः। न० त०।

**अपेक्षणीय** ಅಪೇಕ್ಷಣೀಯ (वि०) 1. ಅಪೇಕ್ಷಿಸಲ್ಪಡುವ, ಇಚ್ಛಿಸಲ್ಪಡುವ, ಪ್ರಿಯವಾದ, ಇಷ್ಟವಾದ. अप+ईक्ष (दर्शने) "अनीयर्" (३-१-९६)। 2. ನಿರೀಕ್ಷಿಸಲ್ಪಡುವ, ನಿರೀಕ್ಷಿಸಲ್ಪಡಬೇಕಾದ.

**अपेक्षमाण** ಅಪೇಕ್ಷಮಾಣ (वि०) ಅಪೇಕ್ಷಿಸುವ, ಇಚ್ಛಿಸುವ, ಆಸೆಪಡುವ. अप+ईक्ष (दर्शने) "शानच्" (३-२-१२४)। "भवत्कृतां भूतिमपेक्षमाणः" किरा० ३-४९।

**अपेक्षा** ಅಪೇಕ್ಷಾ (स्त्री०) 1. ಇಚ್ಛೆ, ಆಸೆ, ಅಪೇಕ್ಷೆ. अप + ईक्ष (दर्शने) "अः" (३-३-१०३)। "अध्यात्मरतिरासीनो निरपेक्षो निरामिषः" मनु० ६-४९। 2. ಆವಶ್ಯಕತೆ, ಅವಶ್ಯವಾಗಿ ಬೇಕಾಗಿರುವಿಕೆ. "स्फुलिङ्गावस्थया वह्निरेधापेक्ष इव स्थितः" शाकु० ७-१५। "सोऽहमवसितप्रतिज्ञाभरोऽपि वृषलापेक्षया शस्त्रं धारयामि" मुद्रा० १। 3. ಅನ್ವಯ, ತಮ್ಮ ತಮ್ಮ ಅರ್ಥಗಳನ್ನು ಕೊಡತಕ್ಕ ಪದಗಳಿಗೆ ಇರುವ ಪರಸ್ಪರ ಸಂಬಂಧ; ಪದಗಳಿಗೆ ಸಮಾಸ ಬರಲು ಈ ಸಂಬಂಧವು ಮುಖ್ಯವಾದುದು. ಈ ಸಂಬಂಧವಿಲ್ಲದ ಕಡೆ ಸಮಾಸ ಬರುವುದಿಲ್ಲ. ಮತ್ತು ಪ್ರತ್ಯಯವೂ ಬರುವುದಿಲ್ಲ. "सापेक्षे प्रत्ययो न स्यात् समासो वा कथञ्चन। सापेक्षं तद्विजानीयादसमस्तविशेषणम्"। ಉದಾ: "ऋद्धस्य राज्ञः पुरुषः" ಇಲ್ಲಿ ಸಮಾಸವು ಬರುವುದಿಲ್ಲ. "प्रवीरं पुत्रमात्मन इच्छति" ಇಲ್ಲಿ "काम्यच्" ಪ್ರತ್ಯಯವೂ ಬರುವುದಿಲ್ಲ. 4. ಗಮನ, ಲಕ್ಷ್ಯ, ಎಚ್ಚರಿಕೆ, ಜಾಗರೂಕತೆ. "देशापेक्षास्तथा यूयं याताऽऽदायाङ्गुलीयकम्" भट्टि० ७-४९। 5. ನಿರೀಕ್ಷಣೆ, ಕಾಯುವಿಕೆ. 6. ಅವಲಂಬನ, ಆಶ್ರಯ, ಅಧೀನತೆ. भावे "ल्युट्"। अपेक्षणम् ಅಪೇಕ್ಷಣವು.

**अपेक्षित** ಅಪೇಕ್ಷಿತ (न०) 1. ಇಚ್ಛೆ, ಅಪೇಕ್ಷೆ, ಆಸೆ. अप+ईक्ष (दर्शने) भावे "क्तः" (३-३-११४)। (वि०) 2. ಅಪೇಕ್ಷಿಸಲ್ಪಟ್ಟ, ಇಚ್ಛಿಸಲ್ಪಟ್ಟ. अप+ईक्ष "क्तः" (३-२-१०२)। 3. ನಿರೀಕ್ಷಿಸಲ್ಪಟ್ಟ, ಎದುರು ನೋಡಲ್ಪಟ್ಟ. 4. ಗಮನಿಸಲ್ಪಟ್ಟ, ಎಚ್ಚರಿಕೆಯಿಂದ ನೋಡಲ್ಪಟ್ಟ.

**अपेक्षिन्** ಅಪೇಕ್ಷಿನ್ (वि०) ಆಸೆಯುಳ್ಳ, ಆಸೆಪಡುವ. अपेक्षते — अप + ईक्ष (दर्शने) "णिनिः" (३-१-१३४)। "प्रयोजनापेक्षितया प्रभूणां प्रायश्चलं गौरवमाश्रितेषु" कुमा० ३-१।

**अपेक्ष्य** ಅಪೇಕ್ಷ್ಯ (वि०) 1. ಅಪೇಕ್ಷಿಸಲ್ಪಡುವ, ಇಚ್ಛಿಸಲ್ಪಡುವ. अप + ईक्ष (दर्शने) "ण्यत्" (३-१-१२४)। (अव्य०) 2. ಅಪೇಕ್ಷಿಸಿ, ಆಸೆಪಟ್ಟು. अप + ईक्ष "ल्यप्" (७-१-३७)। "किमपेक्ष्य फलं पयोधरान् ध्वनतः प्रार्थयते मृगाधिपः" किरा० २-२१।

**अपेत** ಅಪೇತ (वि०) 1. ಓಡಿಹೋದ, ಹೊರಟುಹೋದ. अप + इण् (गतौ) "क्तः" (३-४-७२)। 2. ಹೋಗಲಾಡಿಸಲ್ಪಟ್ಟ, ನಿವಾರಿಸಲ್ಪಟ್ಟ. अप+इण् "क्तः" (३-२-१०२)। "अपेतयुद्धाभिनिवेशसौम्यो हरिर्हरिप्रस्थमथ प्रतस्थे" माघ० ३-१। "अपेतभारामतिदेवमानुषैः" याद० १४-३४।

**अपेय** ಅಪೇಯ (वि०) ಪಾನಕ್ಕೆ ಅರ್ಹವಲ್ಲದ (ಮದ್ಯ ಮುಂತಾದುದು). न पातुं योग्यम् — पा (पाने) "यत्" (३-१-९७)। ಪಾನಮಾಡಲು ಅನರ್ಹವಾದುವು: ಲವಣಮಿಶ್ರವಾದ ಹಾಲು, ಕರುಹಾಕಿದ ಹತ್ತು ದಿವಸದೊಳಗೆ ಹಸುವಿನ ಹಾಲು, ಶೂದ್ರೋಚ್ಛಿಷ್ಟ, ಸ್ತ್ರೀಯರ ಉಚ್ಛಿಷ್ಟ, ಚಂಡಾಲಸ್ಪೃಷ್ಟ, ಚಂಡಾಲರು ತೋಡಿದ ಬಾವಿಯ ನೀರು, [ಆಪತ್ಕಾಲದಲ್ಲಿ ಈ ನೀರೂ ಸ್ನಾನಪಾನಾದಿಗಳಿಗೆ ಯೋಗ್ಯವು.] ಶೂದ್ರ, ಮತ್ತು ಚಂಡಾಲರ ಪಾತ್ರೆಯಲ್ಲಿರುವ ನೀರು. ಇತ್ಯಾದಿ.

**अपोगण्ड** ಅಪೋಗಂಡ (वि०) 1. ಅಂಗಹೀನ. अपसि कर्मणि गण्डः त्याज्यः। "विकलाङ्गन्तु सर्वत्र धर्मकार्येषु वर्जयेत्" स्मृतिः। "विकलाङ्गस्त्वपोगण्डः" अम०। 2. ಅಂಜುಬುರುಕ, ಹೇಡಿ, ಬಹಳ ಭಯಸ್ವಭಾವದವನು. 3. ಶಿಶು, ಮಗು. "अपोगण्डोऽतिभीरौ स्याच्छिशुके विकलाङ्गके" हेम०। 4. ತ್ರಿವಳಿಗಳಿಂದ ಕೂಡಿದ. "अपोगण्डस्तु वलिभे विकलाङ्गे शिशावपि" मेदि०। 5. ಹದಿನಾರು ವರ್ಷ ವಯಸ್ಸು ಕಳೆದವನು. "बाल आषोडशाद्वर्षात्पोगण्ड इति कथ्यते" नारद०। तद्भिन्नोऽपोगण्डः।

**अपोढ** ಅಪೋಢ (वि०) ತ್ಯಜಿಸಲ್ಪಟ್ಟ, ಬಿಡಲ್ಪಟ್ಟ. अप+वह (प्रापणे) "क्तः" (३-२-१०२)।

**अपोह ಅಪೋಹ** (ಪುಂ) 1. ಪರಿತ್ಯಾಗ, ವರ್ಜಿಸುವುದು. 2. ಸಂಶಯಪರಿಚ್ಛೇದ, ಸಂದೇಹವನ್ನು ಪರಿಹರಿಸುವುದು.

**अपोहनीय ಅಪೋಹನೀಯ** (ವಿಂ) ಸಂಶಯವನ್ನು (ತರ್ಕ ಕಾರಣಗಳಿಂದ) ಪರಿಹರಿಸಲು ಯೋಗ್ಯವಾದ. अप+ऊह (वितर्के) "अनीयर्" (३-१-९६)।

**अपोह्य ಅಪೋಹ್ಯ** (ವಿಂ) 1. ವರ್ಜಿಸಲ್ಪಡುವ, ತ್ಯಜಿಸಲ್ಪಡುವ. (ಅವ್ಯಂ) 2. ನಿವಾರಿಸಿ, ಹೋಗಲಾಡಿಸಿ.

**अपौरुष ಅಪೌರುಷ** (ನಂ) 1. ಪರಾಕ್ರಮವಿಲ್ಲದಿರುವಿಕೆ. ಹೇಡಿತನ, ಅಧೈರ್ಯ, ಪುಕ್ಕಲು. (ವಿಂ) 2. ಪರಾಕ್ರಮವಿಲ್ಲದ, ಹೇಡಿ, ಅಧೀರ. नास्ति पौरुषमस्य।

**अपौरुषेय ಅಪೌರುಷೇಯ** (ನಂ) 1. ದಿವ್ಯಶಕ್ತಿ, ಅಮಾನುಷ ಸಾಮರ್ಥ್ಯ. (ವಿಂ) 2. ಅಮಾನುಷವಾದ, ಮನುಷ್ಯಕಲ್ಪಿತವಲ್ಲದ. पुरुषेण कृतं पौरुषेयम् — पुरुष "ढञ्" (वा० ५-१-१०)। ನಂ ತಂ।

**अप्चर ಅಪ್‌ಚರ** (ವಿಂ) ಜಲಚರಪ್ರಾಣಿ. अप्सु चरति — चर (गतौ) "ट:" (३-२-१६)। स्त्रियाम् "ङीप्" (४-१-१५)। –चरी–ಚರೀ.

**अप्पति ಅಪ್ಪತಿ** (ಪುಂ) 1. ವರುಣ. 2. ಸಮುದ್ರ. अपां पतिः।

**अप्पित्त ಅಪ್ಪಿತ್ತ** (ನಂ) 1. ಅಗ್ನಿ, ಬೆಂಕಿ. अपां पित्तमिव। 2. ಚಿತ್ರಮೂಲದ ಗಿಡ.

**अप्रकम्प ಅಪ್ರಕಂಪ** (ಪುಂ) 1. ಚಲನೆಯಿಲ್ಲದಿರುವಿಕೆ. न प्रकम्पः। 2. ಚಲನೆಯಿಲ್ಲದ. न प्रकम्पो यस्य।

**अप्रकर्ष ಅಪ್ರಕರ್ಷ** (ಪುಂ) 1. ಹೀನವಾಗಿರುವುದು, ಕಡಿಮೆಯಾಗಿರುವುದು. (ವಿಂ) 2. ಹೀನವಾದ, ಕಡಿಮೆಯಾದ, ಪ್ರಶಸ್ತವಲ್ಲದ.

**अप्रकाण्ड ಅಪ್ರಕಾಂಡ** (ಪುಂ) ದಂಟಿಲ್ಲದ ಗಿಡ, ಲತೆ ಪೊದೆ ಮೊದಲಾದುದು. न प्रकाण्डोऽस्य।

**अप्रकाश ಅಪ್ರಕಾಶ** (ಪುಂ) 1. ರಹಸ್ಯ, ಗುಟ್ಟು. (ವಿಂ) 2. ಪ್ರಕಾಶವಲ್ಲದ, ರಹಸ್ಯವಾದ, ಗುಟ್ಟಾದ. "प्रकाशश्चाप्रकाशश्च लोकालोक इवाचलः" ರಘುಂ ೧-೬೮। (ಕ್ರಿಂ ವಿಂ) 3. ರಹಸ್ಯವಾಗಿ, ಗುಟ್ಟಾಗಿ.

**अप्रकाश्य ಅಪ್ರಕಾಶ್ಯ** (ವಿಂ) ಪ್ರಕಾಶಪಡಿಸಲು ಅರ್ಹವಲ್ಲದ, ರಹಸ್ಯವಾಗಿಡಲು ಯೋಗ್ಯವಾದ. **ರಹಸ್ಯವಾಗಿಡಲ್ಪಡತಕ್ಕ ವಿಷಯಗಳು:** "जन्मर्क्षं मैथुनं मन्त्रो गृहच्छिद्रं च वञ्चनम्। आयुर्धनापमानं स्त्री न प्रकाश्यानि सर्वथा"।

**अप्रकृत ಅಪ್ರಕೃತ** (ನಂ) 1. ಉಪಮಾನ. [ಪ್ರಕೃತ ಉಪಮೇಯ. ಅಪ್ರಕೃತ ಉಪಮಾನ.] 2. ಮುಖ್ಯವಲ್ಲದ, ಅಪ್ರಧಾನವಾದ. 3. ವಿಷಯಕ್ಕೆ ಸಂಬಂಧಿಸದ, ಅಸಮಂಜಸವಾದ.

**अप्रकृति ಅಪ್ರಕೃತಿ** (ಸ್ತ್ರೀಂ) 1. ಸಾಂಖ್ಯಮತಸಿದ್ಧವಾದ ಪ್ರಕೃತಿಭಿನ್ನ (ಪುರುಷ). 2. ವಿಕೃತಿ, ಪ್ರಕೃತಿಯ ಕಾರ್ಯ. (ವಿಂ) 3. ಸ್ವಭಾವಶೂನ್ಯ, ನಿಸರ್ಗವಲ್ಲದ, ಸ್ವಾಭಾವಿಕವಲ್ಲದ.

**अप्रकृष्ट ಅಪ್ರಕೃಷ್ಟ** (ವಿಂ) ಪ್ರಶಸ್ತವಲ್ಲದ, ನೀಚವಾದ.

**अप्रगल्भ ಅಪ್ರಗಲ್ಭ** (ವಿಂ) ಅಧೀರ, ಸಂಕೋಚದ ಸ್ವಭಾವದವನು. "धृष्टः पार्श्वे वसति नियतं दूरतश्चाप्रगल्भः" हितो०।

**अप्रगुण ಅಪ್ರಗುಣ** (ವಿಂ) 1. ಚೆದರಿದ, ಬೇರೆ ಬೇರೆಯಾದ. 2. ಪ್ರಶಸ್ತಗುಣವಿಲ್ಲದ. न विद्यते प्रकृष्टो गुणो यस्य।

**अप्रज ಅಪ್ರಜ** (ಪುಂ) 1. ಪ್ರಜೆಯಿಲ್ಲದವನು, ಸಂತಾನವಿಲ್ಲದವನು, ಪುತ್ರರೂಪದಿಂದ ಹುಟ್ಟದವನು. "आत्मा वै पुत्रनामासि" ಎಂಬ ಶ್ರುತಿಯಂತೆ ತಾನೇ ಪುತ್ರರೂಪದಿಂದ ಜನಿಸುವುದರಿಂದ न प्रजायते आत्मरूपेण ಎಂಬ ವ್ಯುತ್ಪತ್ತಿಯಿಂದ ಸಂತಾನವಿಲ್ಲದವನು ಅಪ್ರಜನು. स्त्रियाम् अप्रजा ಅಪ್ರಜಾ. ಮಕ್ಕಳಿಲ್ಲದವಳು, ಬಂಜೆ.

**अप्रजस् ಅಪ್ರಜಸ್** (ಪುಂಸ್ತ್ರೀಂ) ಪ್ರಜೆಯಿಲ್ಲದ, ಮಕ್ಕಳಿಲ್ಲದ. न प्रजा सन्ततिर्यस्य "असिच्" (५-४-१२२)। "अतीतायामप्रजसि बान्धवास्तदवाप्नुयुः" याज्ञ० २-१४४।

**अप्रजाता ಅಪ್ರಜಾತಾ** (ಸ್ತ್ರೀಂ) ಬಂಜೆ, ಮಕ್ಕಳನ್ನು ಹಡೆಯದವಳು. न प्रजाता।

**अप्रणीत ಅಪ್ರಣೀತ** (ವಿಂ) ಪವಿತ್ರಗೊಳಿಸಲ್ಪಡದ, ಶುದ್ಧಿಮಾಡಲ್ಪಡದ, ಶಾಸ್ತ್ರವಿಧಾನದಿಂದ ಸಂಸ್ಕಾರಹೊಂದದ. (ಅಗ್ನಿ ಮುಂತಾದುದು.)

**अप्रतर्क्य ಅಪ್ರತರ್ಕ್ಯ** (ವಿಂ) ಊಹಿಸಲು ಶಕ್ಯವಲ್ಲದ, ಅನುಮಾನದಿಂದ ತಿಳಿಯಲಾಗದ. "अप्रतर्क्यतरसो गरुत्मतः" याद० १७-६१।

**अप्रतिकर ಅಪ್ರತಿಕರ** (ವಿಂ) ನಂಬಿಕೆಯವನು, ವಿಶ್ವಾಸಪಾತ್ರ, ಅನುಕೂಲವಾಗಿರುವ.

**अप्रतिकर्मन् ಅಪ್ರತಿಕರ್ಮನ್** (ವಿಂ) 1. ಪ್ರತೀಕಾರ ಮಾಡಲು ಶಕ್ಯವಲ್ಲದ. 2. ಪ್ರತೀಕಾರವಿಲ್ಲದ. नास्ति

प्रतिकर्म प्रतीकारो यस्य। 3. ಸಮಾನವಾದ ಕೆಲಸವಿಲ್ಲದ. स्त्रियाम् "डाप्" (४-१-१३)। अप्रतिकर्मा–ಕರ್ಮಾ.

**अप्रतिक्रिय ಅಪ್ರತಿಕ್ರಿಯ** (वि०) 1. ಪ್ರತಿಕ್ರಿಯೆಯಿಲ್ಲದ. 2. ಪ್ರತಿಕ್ರಿಯೆ ಮಾಡಲು ಶಕ್ಯವಲ್ಲದ. नास्ति प्रतिक्रिया यस्य।

**अप्रतिक्रिया ಅಪ್ರತಿಕ್ರಿಯಾ** (स्त्री०) ಪ್ರತೀಕಾರವಿಲ್ಲದಿರುವಿಕೆ. ನಂ ತಂ।

**अप्रतिग्राह्य ಅಪ್ರತಿಗ್ರಾಹ್ಯ** (वि०) ತೆಗೆದುಕೊಳ್ಳಲು ಯೋಗ್ಯವಲ್ಲದ, ಸ್ವೀಕರಿಸಲು ಅರ್ಹವಲ್ಲದ. न प्रतिग्रहीतुं योग्यम्।

**अप्रतिघ ಅಪ್ರತಿಘ** (वि०) ಜಯಿಸಲಾಗದ, ಪ್ರತಿಹತಿಯಿಲ್ಲದ. नास्ति प्रतिघा यस्य।

**अप्रतिद्वन्द्व ಅಪ್ರತಿದ್ವಂದ್ವ** (वि०) 1. ಎದುರಾಳಿಯಿಲ್ಲದ, ಎದುರಿಸುವವನಿಲ್ಲದ. 2. ಸಮಾನವಿಲ್ಲದ, ಈಡಿಲ್ಲದ. "पौरुषे चाप्रतिद्वन्द्वः शरैनं जहि रावणिम्" रामा०।

**अप्रतिपक्ष ಅಪ್ರತಿಪಕ್ಷ** (वि०) 1. ವಿರೋಧಿಯಿಲ್ಲದ, ಶತ್ರುಗಳಿಲ್ಲದ. नास्ति प्रतिपक्षः शत्रुर्यस्य। 2. ಅಸದೃಶ, ಅಸಮಾನ. नास्ति प्रतिपक्षः सदृशो यस्य।

**अप्रतिपत्ति ಅಪ್ರತಿಪತ್ತಿ** (स्त्री०) 1. ಅನಂಗೀಕಾರ, ಅಸಮ್ಮತಿ. 2. ಅನಿಶ್ಚಯ, ಏನು ಮಾಡಬೇಕೆಂಬ ನಿರ್ಧಾರವಿಲ್ಲದಿರುವುದು, ಗಾಬರಿ, ಗಡಿಬಿಡಿ. "यथुः क्षणादप्रतिपत्तिमूढतां महानुभावः प्रतिहन्ति पौरुषम्" किरा० १४-४३। 3. ಅಪ್ರತಿಭೆ, ಸ್ಫೂರ್ತಿಯಿಲ್ಲದಿರುವುದು. 4. ತಾತ್ಸಾರ, ಅನಾದರ, ಅಲಕ್ಷ್ಯ.

**अप्रतिपन्न ಅಪ್ರತಿಪನ್ನ** (वि०) 1. ತಿಳಿಯಲ್ಪಡದ. 2. ಸ್ವೀಕರಿಸಲ್ಪಡದ, ಅಂಗೀಕರಿಸಲ್ಪಡದ, ಸಮ್ಮತಿಸಲ್ಪಡದ.

**अप्रतिबद्ध ಅಪ್ರತಿಬದ್ಧ** (वि०) ತಡೆಯಲ್ಪಡದ, ಎದುರಿಸಲ್ಪಡದ. न प्रतिबद्धः।

**अप्रतिबन्ध ಅಪ್ರತಿಬಂಧ** (पुं०) 1. ತಡೆಯಿಲ್ಲದಿರುವಿಕೆ, ವಿರೋಧವಿಲ್ಲದಿರುವಿಕೆ. (वि०) 2. ತಡೆಯಿಲ್ಲದ, ವಿರೋಧವಿಲ್ಲದ. न प्रतिबन्धो यस्य।

**अप्रतिबल ಅಪ್ರತಿಬಲ** (वि०) 1. ಪ್ರತಿಪಕ್ಷವಿಲ್ಲದ, ಶತ್ರುಗಳಿಲ್ಲದ. 2. ಪ್ರಬಲನಾದ, ಹೆಚ್ಚು ಬಲಶಾಲಿಯಾದ. नास्ति प्रतिबलो यस्य यस्माद्वा।

**अप्रतिभ ಅಪ್ರತಿಭ** (वि०) 1. ಪ್ರತಿಭೆಯಿಲ್ಲದವನು, ಸ್ಫೂರ್ತಿಯಿಲ್ಲದವನು. 2. ಸಂಕೋಚ ಸ್ವಭಾವದ. 3. ಅಪ್ರಗಲ್ಭ, ಧೈರ್ಯವಿಲ್ಲದ.

**अप्रतिभा ಅಪ್ರತಿಭಾ** (स्त्री०) 1. ಬುದ್ಧಿಯು ಹೊಳೆಯದಿರುವುದು, ಸಮಯದಲ್ಲಿ ಹೊಸ ಹೊಸದಾಗಿ ಉತ್ತರಕೊಡಲು ಸ್ಫೂರ್ತಿಯುಂಟಾಗದಿರುವುದು. 2. ಸಂಕೋಚ.

**अप्रतिम ಅಪ್ರತಿಮ** (वि०) ಸಮಾನವಿಲ್ಲದ, ಅಸದೃಶ, ಈಡಿಲ್ಲದ. नास्ति प्रतिमा उपमा यस्य। "त्वामप्रतिमकर्माणमप्रतिद्वन्द्वमाहवे" रामा०।

**अप्रतियोगिन् ಅಪ್ರತಿಯೋಗಿನ್** (वि०) 1. ಸಮಾನವಿಲ್ಲದ, ಅಸದೃಶ. 2. ಎದುರಾಳಿಯಿಲ್ಲದ, ಶತ್ರುಗಳಿಲ್ಲದ.

**अप्रतिरथ ಅಪ್ರತಿರಥ** (वि०) 1. ಶತ್ರುಗಳಿಲ್ಲದ, ಎದುರಾಳಿಯಿಲ್ಲದ. न विद्यते प्रतिरथो यस्य। "दौष्यन्तिमप्रतिरथं तनयं निवेश्य" शाकु० ४-१९। 2. ಅಪ್ರತಿಮ, ಸಮಾನವಿಲ್ಲದ, ಅಜೇಯ.

**अप्रतिरूप ಅಪ್ರತಿರೂಪ** (वि०) ಅಪ್ರತಿಮ, ಸಮಾನವಿಲ್ಲದ, ಅಸದೃಶ. नास्ति प्रतिरूपः तुल्यरूपो यस्य।

**अप्रतिष्ठ ಅಪ್ರತಿಷ್ಠ** (नं०) 1. (ಸ್ವಸ್ಥಾನದಲ್ಲಿರುವ) ಪರಬ್ರಹ್ಮ. (वि०) 2. ಆಶ್ರಯವಿಲ್ಲದ. 3. ಪ್ರಶಸ್ತವಲ್ಲದ, ನಿಂದ್ಯವಾದ. 4. ಪ್ರಯೋಜನವಿಲ್ಲದ. "सोमविक्रयिणे विष्ठा भिषजे पूयशोणितम्। नष्टं देवलके दत्तमप्रतिष्ठं तु वार्धुषौ" मनु० ३-१८०। 5. ಅಸ್ಥಿರವಾದ. 6. ಕಾರಣವಿಲ್ಲದ.

**अप्रतिष्ठा ಅಪ್ರತಿಷ್ಠಾ** (स्त्री०) ಅಸ್ಥಿರತೆ, ಚಾಂಚಲ್ಯ.

**अप्रतिष्ठित ಅಪ್ರತಿಷ್ಠಿತ** (वि०) ಅಸ್ಥಿರವಾದ, ಚಂಚಲವಾದ.

**अप्रतिश्रुत ಅಪ್ರತಿಶ್ರುತ** (वि०) ಒಪ್ಪಲ್ಪಡದ, ಅಂಗೀಕರಿಸಲ್ಪಡದ.

**अप्रतिहत ಅಪ್ರತಿಹತ** (वि०) 1. ಇತರರಿಂದ ಎದುರಿಸಲ್ಪಡದ, ತಡೆಯಲ್ಪಡದ. 2. ಕೆಡಿಸಲ್ಪಡದ, ಭಂಗಪಡಿಸಲ್ಪಡದ.

**अप्रतीक ಅಪ್ರತೀಕ** (नं०) 1. ಪರಬ್ರಹ್ಮ (ನಿರಾಕಾರ). (वि०) 2. ಅವಯವವಿಲ್ಲದ. नास्ति प्रतीकोऽवयवो यस्य।

**अप्रतीक्ष ಅಪ್ರತೀಕ್ಷ** (वि०) ನಿರೀಕ್ಷಿಸದಿರುವ, ಎದುರು ನೋಡದಿರುವ. न प्रतीक्षते–प्रति+ईक्ष (दर्शने) "अच्" (३-१-१३४)। "शानच्" (३-२-१२४)। –ईक्षमाणः –ಈಕ್ಷಮಾಣಃ.

**अप्रतीक्षा ಅಪ್ರತೀಕ್ಷಾ** (स्त्री०) ನಿರೀಕ್ಷಣೆಯಿಲ್ಲದಿರುವುದು, ಪ್ರತ್ಯಾಶೆಯಿಂದ ಎದುರು ನೋಡದಿರುವುದು. ನಂ ತಂ।

**अप्रतीत ಅಪ್ರತೀತ** (ಪುಂ) 1. ಒಂದು ಶಬ್ದದೋಷದಿಂದ ಕೂಡಿದ ಪದ. [ವ್ಯಾಕರಣಶಾಸ್ತ್ರರೀತ್ಯಾ ಸರಿಯಾಗಿದ್ದರೂ ಲೋಕವ್ಯವಹಾರದಲ್ಲಿಯೂ ಕಾವ್ಯಗಳಲ್ಲಿಯೂ ಪ್ರಸಿದ್ಧವಾಗಿಲ್ಲದ ಪದವು अप्रतीतत्व ದೋಷಯುಕ್ತವಾದುದು. "अप्रतीतत्वमेकदेशमात्रप्रसिद्धत्वम्" ಸಾಂ ದಂ। "योगेन दलिताशयः" ಎಂಬಲ್ಲಿ ಪ್ರಕೃತಿ ಪುರುಷರ ಅಭೇದಚಿಂತನೆಯಿಂದ ನಾಶವಾದ ವಾಸನೆಯುಳ್ಳ ಎಂದರ್ಥವು. "क्लेशकर्मविपाकाशयैरपरामृष्टः पुरुषविशेष ईश्वरः" (पा० यो० सू० १-२४) ಎಂಬ ಸೂತ್ರದಲ್ಲಿ ಆಶಯ ಪದವು ವಾಸನೆ (ಸಂಸ್ಕಾರ) ಎಂಬ ಅರ್ಥದಲ್ಲಿ ಪ್ರಯೋಗಿಸಲ್ಪಟ್ಟಿರುವುದರಿಂದಲೂ ಯೋಗಶಾಸ್ತ್ರಮಾತ್ರಪ್ರಸಿದ್ಧವಾದ ಆಶಯ ಪದವು ಇತರರಿಗೆ ಅರ್ಥವಾಗದಿರುವುದರಿಂದಲೂ अप्रतीतत्व ದೋಷಯುಕ್ತವಾದುದು.] (ವಿಂ) 2. ಹಿಮ್ಮೆಟ್ಟದಿರುವ, ಓಡಿಹೋಗದಿರುವ. 3. ತಿಳಿಯಲಾಗದ, ಅರ್ಥವಾಗದ. 4. ಪ್ರಸಿದ್ಧವಲ್ಲದ.

**अप्रतीतत्व ಅಪ್ರತೀತತ್ವ** (ನಂ) ಪ್ರಸಿದ್ಧವಲ್ಲದಿರುವಿಕೆ. [ವಿವರಕ್ಕೆ "अप्रतीत" ಪದದಲ್ಲಿ ನೋಡಿ.]

**अप्रतीति ಅಪ್ರತೀತಿ** (ಸ್ತ್ರೀಂ) 1. ಅಪ್ರಸಿದ್ಧಿ. 2. ಚೆನ್ನಾಗಿ ತಿಳಿಯದಿರುವಿಕೆ, ಅಸ್ಪಷ್ಟತೆ.

**अप्रतीप ಅಪ್ರತೀಪ** (ವಿಂ) ವಿರುದ್ಧವಲ್ಲದ, ಅನುಕೂಲವಾದ.

**अप्रत्यक्ष ಅಪ್ರತ್ಯಕ್ಷ** (ವಿಂ) ಇಂದ್ರಿಯಗಳಿಂದ ತಿಳಿಯಲಾಗದ, ಇಂದ್ರಿಯಗಳಿಗೆ ಗೋಚರವಾಗದ.

**अप्रत्यय ಅಪ್ರತ್ಯಯ** (ಪುಂ) 1. ಅವಿಶ್ವಾಸ, ಅಪನಂಬಿಕೆ. 2. ಅಜ್ಞಾನ, ತಿಳಿವಳಿಕೆಯಿಲ್ಲದಿರುವಿಕೆ. न प्रत्ययो विश्वासो ज्ञानं वा। (ವಿಂ) 3. ನಂಬಿಕೆಯಿಲ್ಲದ, ವಿಶ್ವಾಸವಿಲ್ಲದ. "बलवदपि शिक्षितानामात्मन्यप्रत्ययं चेतः" शाकु० १-२। 4. ತಿಳಿವಳಿಕೆಯಿಲ್ಲದ. 5. ಪ್ರಕೃತಿ, ಸುಬಾದಿಪ್ರತ್ಯಯವಿಲ್ಲದ (ಕೇವಲ ಪ್ರಾತಿಪದಿಕ ರೂಪವಾದ) ಶಬ್ದಸ್ವರೂಪ. 6. ಉಳಿಯದಿರುವ (क्विप्, क्विन्, विच् ಇತ್ಯಾದಿ) ಪ್ರತ್ಯಯಗಳು. [ಇವು ಸಂಪೂರ್ಣವಾಗಿ ಲುಪ್ತವಾಗುವುದರಿಂದ ಅಪ್ರತ್ಯಯಗಳು.] "विष्वग्देवयोश्च टेरद्र्यञ्चतावप्रत्यये" पा० सू० (६-३-९२)।

**अप्रधान ಅಪ್ರಧಾನ** (ನಂ) 1. ಪ್ರಧಾನಕರ್ಮದ ಅಂಗ. (ವಿಂ) 2. ಮುಖ್ಯವಲ್ಲದ, ಗೌಣ, ಎರಡನೆಯ ದರ್ಜೆಯ. 3. ಕೆಳಮಟ್ಟದ, ಕೆಳದರ್ಜೆಯ.

**अप्रधृष्य ಅಪ್ರಧೃಷ್ಯ** (ವಿಂ) 1. ಮೀರಲು ಶಕ್ಯವಲ್ಲದ. 2. ಜಯಿಸಲಾಗದ, ಎದುರಿಸಲಾಗದ. न प्रधर्षितुं शक्यः। "यस्याप्रधृष्यः प्रभवस्त्वमुच्चैः" माल० ५-१७।

**अप्रभु ಅಪ್ರಭು** (ವಿಂ) 1. ಅಸಮರ್ಥ, ಅಶಕ್ತ, ಯೋಗ್ಯತೆಯಿಲ್ಲದವನು. न प्रभवति — प्र+भू (सत्तायाम्) "डुः" (३-२-१८०)। 2. ರಾಜನಿಲ್ಲದ (ದೇಶ).

**अप्रमत्त ಅಪ್ರಮತ್ತ** (ಪುಂ) 1. ವಿಷ್ಣು. "अपांनिधिरधिष्ठानमप्रमत्तः प्रतिष्ठितः" वि० स०। (ವಿಂ) 2. ಜಾಗರೂಕ, ಎಚ್ಚರಿಕೆಯುಳ್ಳ. 3. (ಮದ್ಯಪಾನದಿಂದ) ಮದಿಸಿದವನಲ್ಲದ.

**अप्रमाद ಅಪ್ರಮಾದ** (ಪುಂ) 1. ಎಚ್ಚರಿಕೆ, ಜಾಗರೂಕತೆ. (ವಿಂ) 2. ಎಚ್ಚರಿಕೆಯುಳ್ಳ, ಜಾಗರೂಕತೆಯುಳ್ಳ. (ಕ್ರಿಂ ವಿಂ) 3. ಎಚ್ಚರಿಕೆಯಿಂದ, ಜಾಗರೂಕತೆಯಿಂದ. न विद्यते प्रमादः यस्मिन् कर्मणि।

**अप्रमादिन् ಅಪ್ರಮಾದಿನ್** (ವಿಂ) ಎಚ್ಚರಿಕೆಯುಳ್ಳ, ಜಾಗರೂಕನಾದ. न प्रमादोऽस्यास्ति।

**अप्रमित ಅಪ್ರಮಿತ** (ವಿಂ) 1. ಪ್ರಸಿದ್ಧನಲ್ಲದವನು. 2. ಹೆಚ್ಚಾದ, ಅಪರಿಮಿತವಾದ, ಅಳತೆಮೀರಿದ. 3. ಪ್ರಮಾಣಗಳಿಂದ ತಿಳಿಯಲ್ಪಡದ.

**अप्रमृष्ट ಅಪ್ರಮೃಷ್ಟ** (ವಿಂ) 1. ಸಹಿಸಲ್ಪಡದ. न + प्र + मृषु (सहने) "क्तः" (३-२-१०२)। 2. ಉಜ್ಜಲ್ಪಡದ, ಶುದ್ಧಿಮಾಡಲ್ಪಡದ. मृजू (शुद्धौ) "क्तः" (३-२-१०२)। 3. ಅಳಿಸಲ್ಪಡದ, ತೊಳೆಯಲ್ಪಡದ. 4. ತಿಳಿಯಲ್ಪಡದ. मृश (आमर्शे) "क्तः" (३-२-१०२)।

**अप्रमृष्य ಅಪ್ರಮೃಷ್ಯ** (ವಿಂ) ತೊಂದರೆಪಡಿಸಲಾಗದ, ಬಾಧಿಸಲು ಅಶಕ್ಯವಾದ. प्र + मृष "ण्यत्" (३-१-१२४)।

**अप्रमेय ಅಪ್ರಮೇಯ** (ನಂ) 1. ಬ್ರಹ್ಮ, ಪರಮಾತ್ಮ. [ಪರಬ್ರಹ್ಮಸ್ವರೂಪವನ್ನು ಯಾವ ಪ್ರಮಾಣದಿಂದಲೂ ತಿಳಿಯಲು ಸಾಧ್ಯವಿಲ್ಲ.] (ವಿಂ) 2. ಅಳೆಯಲಾಗದ. न प्रमातुं योग्यम्। 3. ತಿಳಿಯಲಾಗದ, ತಿಳಿಯಲು ಅಶಕ್ಯವಾದ. 4. ನಿರ್ಣಯಿಸಲಾಗದ, ಹೀಗೆಂದು ಹೇಳಲಾಗದ.

**अप्रयत्न ಅಪ್ರಯತ್ನ** (ಪುಂ) 1. ಪ್ರಯತ್ನವಿಲ್ಲದಿರುವಿಕೆ, ಉದಾಸೀನತೆ. (ವಿಂ) 2. ಪ್ರಯತ್ನವಿಲ್ಲದ, ಉದಾಸೀನನಾದ. "अप्रयत्नः सुखार्थेषु ब्रह्मचारी धराशयः" मनु० ६-२६।

**अप्रयुक्त** ಅಪ್ರಯುಕ್ತ (ನಂ) 1. ಶಾಸ್ತ್ರಕಾರರಿಂದ ಅಂಗೀಕರಿಸಲ್ಪಟ್ಟಿದ್ದರೂ ಕವಿಗಳಿಂದ ಪ್ರಯೋಗಿಸಲ್ಪಡದ ಪದ. "तथा मन्ये दैवतोऽस्य पिशाचो राक्षसोऽथवा" ಎಂಬಲ್ಲಿ दैवत ಪದವು ಅಮರಸಿಂಹನಿಂದ ಪುಂನಪುಂಸಕದಲ್ಲಿ ಹೇಳಲ್ಪಟ್ಟಿದ್ದರೂ ಯಾವ ಕವಿಯೂ ಪುಲ್ಲಿಂಗದಲ್ಲಿ ಪ್ರಯೋಗಿಸದಿರುವುದರಿಂದ अप्रयुक्तत्व ದೋಷದಿಂದ ಕೂಡಿರುವುದು. (ವಿಂ) 2. ಉಪಯೋಗಿಸಲ್ಪಡದ. 3. ಅಕ್ರಮವಾಗಿ ಉಪಯೋಗಿಸಲ್ಪಟ್ಟ.

**अप्रलम्ब** ಅಪ್ರಲಂಬ (ನಂ) 1. ವೇಗ, ಶೀಘ್ರತೆ. (ವಿಂ) 2. ವೇಗವಾದ, ಚುರುಕಾದ.

**अप्रवर्तक** ಅಪ್ರವರ್ತಕ (ವಿಂ) 1. ಜಡ, ಮಂದ, ಕೆಲಸಮಾಡದಿರುವ, ಸೋಮಾರಿ. 2. ಕಾರ್ಯಕ್ಕೆ ಪ್ರೇರಕನಲ್ಲದ, ಕೆಲಸವನ್ನು ಮಾಡಿಸದ.

**अप्रवर्तन** ಅಪ್ರವರ್ತನ (ನಂ) ಕೆಲಸಮಾಡದಿರುವಿಕೆ, ಕೆಲಸಕ್ಕೆ ತೊಡಗದಿರುವಿಕೆ.

**अप्रवर्तिन्** ಅಪ್ರವರ್ತಿನ್ (ವಿಂ) ಕೆಲಸಮಾಡದಿರುವ, ಕೆಲಸಕ್ಕೆ ತೊಡಗದಿರುವ, ಸೋಮಾರಿ. न प्रवर्तते— प्र+वृतु (वर्तने) "णिनिः" (३-२-१३४)।

**अप्रवृत्ति** ಅಪ್ರವೃತ್ತಿ (ಸ್ತ್ರೀಂ) ಜಡತೆ, ನಿಶ್ಚಲತೆ, ಕೆಲಸ ಮಾಡದಿರುವಿಕೆ, ಸೋಮಾರಿತನ.

**अप्रशस्त** ಅಪ್ರಶಸ್ತ (ವಿಂ) 1. ಶ್ಲಾಘ್ಯವಲ್ಲದ, ಗುಣಹೀನ, ನಿಷ್ಪ್ರಯೋಜಕ. 2. ನಿಂದಿತವಾದ, ತುಚ್ಛವಾದ, ಕೆಲಸಕ್ಕೆ ಬಾರದ. न प्रशस्तः।

**अप्रसक्त** ಅಪ್ರಸಕ್ತ (ವಿಂ) 1. ಸಂಬಂಧಪಡದ, ಅಪ್ರಕೃತವಾದ. 2. ಆಗ್ರಹವಿಲ್ಲದ, ಸೌಮ್ಯವಾದ. 3. ಸೇರಿಕೊಂಡಿಲ್ಲದ. 4. ಜ್ಞಾನಕ್ಕೆ ವಿಷಯವಾಗದ.

**अप्रसक्ति** ಅಪ್ರಸಕ್ತಿ (ಸ್ತ್ರೀಂ) 1. ಹೊಂದಿಕೆಯಿಲ್ಲದಿರುವಿಕೆ. 2. ಸಂಬಂಧವಿಲ್ಲದಿರುವಿಕೆ. 3. ಶಾಂತತೆ, ಸೌಮ್ಯತೆ. 4. ಜ್ಞಾನಕ್ಕೆ ವಿಷಯವಾಗದಿರುವಿಕೆ.

**अप्रसङ्ग** ಅಪ್ರಸಂಗ (ಪುಂ) 1. ಸಂಬಂಧವಿಲ್ಲದಿರುವಿಕೆ. 2. ವಿಷಯಕ್ಕೆ ಹೊಂದಿಕೆಯಿಲ್ಲದಿರುವಿಕೆ. (ವಿಂ) 3. ಅಸಂಗತವಾದ, ಹೊಂದಿಕೆಯಿಲ್ಲದ.

**अप्रसन्न** ಅಪ್ರಸನ್ನ (ವಿಂ) 1. ಸ್ವಚ್ಛವಲ್ಲದ, ತಿಳಿಯಲ್ಲದ, ಬಗ್ಗಡವಾದ. 2. ಅಸಂತುಷ್ಟ, ಸಂತೋಷಪಡದ. 3. ಮನಃಕಾಲುಷ್ಯವುಳ್ಳ. "अप्रसन्नमपराद्धरि पत्यौ" माघं १०-१४। 4. ತೃಪ್ತಿಯಿಲ್ಲದ, ಮನಸ್ಸಿಗೆ ಸಮಾಧಾನವಿಲ್ಲದ.

**अप्रसाद** ಅಪ್ರಸಾದ (ಪುಂ) 1. ಅಸಮಾಧಾನ. 2. ಪ್ರೀತಿಯಿಲ್ಲದಿರುವಿಕೆ. 3. ಕೋಪ.

**अप्रसाद्य** ಅಪ್ರಸಾದ್ಯ (ವಿಂ) 1. ಸಮಾಧಾನಪಡಿಸಲು ಅಶಕ್ಯವಾದ, ಬಹಳ ಕೋಪದಿಂದ ಕೂಡಿದ. (अव्यं) 2. ಸಮಾಧಾನಪಡಿಸದೆ.

**अप्रसिद्ध** ಅಪ್ರಸಿದ್ಧ (ವಿಂ) 1. ಪ್ರಸಿದ್ಧಿಪಡೆಯದ, ಮುಖ್ಯವಲ್ಲದ. न प्रसिद्धः। "अप्यप्रसिद्धं यशसे हि पुंसामनन्यसाधारणमेव कर्म" कुमां ३-१९। 2. ರೂಢವಲ್ಲದ, ಬಳಕೆಯುಲ್ಲಿಲ್ಲದ (ಪದ). [ಶಾಸ್ತ್ರಸಮ್ಮತವಾಗಿದ್ದರೂ ರೂಢಿಯಲ್ಲಿಲ್ಲದ ಪದಗಳ ಪ್ರಯೋಗವು ದೋಷಯುಕ್ತವಾದುದು.]

**अप्रास्ताविक** ಅಪ್ರಾಸ್ತಾವಿಕ (ವಿಂ) ಪ್ರಕೃತ ವಿಷಯಕ್ಕೆ ಸಂಬಂಧಪಡದ, ಅಸಂಗತವಾದ, ಬೇರೆ ವಿಷಯಕ್ಕೆ ಸಂಬಂಧಿಸಿದ.

**अप्रस्तुत** ಅಪ್ರಸ್ತುತ (ವಿಂ) 1. ಪ್ರಕೃತ ವಿಷಯಕ್ಕೆ ಸಂಬಂಧಪಡದ, ಬೇರೆ ವಿಷಯಕ್ಕೆ ಸಂಬಂಧಿಸಿದ. 2. ಅಬದ್ಧಕಂತೆ, ಅರ್ಥವಿಲ್ಲದ ಮಾತು. "रे गोरम्भ किमप्रस्तुतं लपसि" पञ्चतं।

**अप्रस्तुतप्रशंसा** ಅಪ್ರಸ್ತುತಪ್ರಶಂಸಾ (ಸ್ತ್ರೀಂ) ಅರ್ಥಾಲಂಕಾರದ ಒಂದು ಭೇದ; ಅಪ್ರಸ್ತುತ (ಅಪ್ರಕೃತ) ವಾದ ಅರ್ಥವರ್ಣನೆಯಿಂದ ಪ್ರಸ್ತುತ (ಪ್ರಕೃತ) ವಾದ ಅರ್ಥಕ್ಕೆ ಪ್ರತೀತಿಯುಂಟಾದಲ್ಲಿ ಅಪ್ರಸ್ತುತ ಪ್ರಶಂಸಾಲಂಕಾರವು. ಇದು

1. ಕಾರ್ಯವು ಪ್ರಸ್ತುತವಾದರೆ ಅಪ್ರಸ್ತುತ ಕಾರಣದ ವರ್ಣನೆ
2. ಕಾರಣವು ,, ಅಪ್ರಸ್ತುತ ಕಾರ್ಯದ ವರ್ಣನೆ
3. ಸಾಮಾನ್ಯವು ,, ಅಪ್ರಸ್ತುತ ವಿಶೇಷ ವರ್ಣನೆ
4. ವಿಶೇಷವು ,, ಅಪ್ರಸ್ತುತ ಸಾಮಾನ್ಯ ವರ್ಣನೆ
5. ಸಮಾನವಿಷಯವು ,, ಅಪ್ರಸ್ತುತ ಸಮಾನವಿಷಯ ವರ್ಣನೆ.

ಈ ರೀತಿ ಐದು ವಿಧವಾಗುವುದು. "कार्ये निमित्ते सामान्ये विशेषे प्रस्तुते सति। तदन्यस्य वचस्तुल्ये तुल्यस्येति च पञ्चधा" काव्यप्रं।

**अप्रहत ಅಪ್ರಹತ** (ನಂ) 1. ಚಲುವೆಮಾಡಲ್ಪಡದ ಬಟ್ಟೆ. "ईषद्धौतं नवं श्वेतं सदशं यन्न धारितम्। निर्णेजकाक्षालितं चाप्रहतं वास उच्यते"। (त्रिं) 2. ನೇಗಿಲಿನಿಂದ ಉಳಲ್ಪಡದ ಭೂಮಿ, ಬಂಜರು ಭೂಮಿ. स्त्रियाम् अप्रहता ಅಪ್ರಹತಾ. (विं) 3. ಖಿಲವಾಗದ, ನಾಶವಾಗದ, ಗಾಯವಾಗದ, ಸವೆಯದ.

**अप्रहित ಅಪ್ರಹಿತ** (विं) ಕಳುಹಿಸಲ್ಪಡದ. न प्रहितः।

**अप्राकरणिक ಅಪ್ರಾಕರಣಿಕ** (विं) ಅಪ್ರಸ್ತುತವಾದ, ಪ್ರಕೃತವಿಷಯಕ್ಕೆ ಸಂಬಂಧಪಡದ.

**अप्राकृत ಅಪ್ರಾಕೃತ** (विं) 1. ಪ್ರಕೃತಿಗೆ ಸಂಬಂಧಪಡದ, ಪ್ರಕೃತಿಯ ಕಾರ್ಯವಲ್ಲದ. 2. ಅಸಾಧಾರಣವಾದ, ಲೋಕೋತ್ತರವಾದ. 3. ಸ್ವಾಭಾವಿಕವಲ್ಲದ, ಅನೈಸರ್ಗಿಕವಾದ.

**अप्राग्र्य ಅಪ್ರಾಗ್ರ್ಯ** (विं) ಪ್ರಧಾನವಲ್ಲದ, ಮುಖ್ಯವಲ್ಲದ.

**अप्राण ಅಪ್ರಾಣ** (पुं) 1. ಈಶ್ವರ, ಪರಮಾತ್ಮ. "अप्राणोह्यमनाः शुभ्रो ह्यक्षरात्परतः परः" श्रुतिः। (विं) 2. ಪ್ರಾಣವಿಲ್ಲದ.

**अप्राप्त ಅಪ್ರಾಪ್ತ** (विं) 1. ಹೊಂದಲ್ಪಡದ, ಪಡೆಯದಿರುವ. 2. ಸೇರದಿರುವ, ತಲುಪದಿರುವ. 3. ಪ್ರಮಾಣಾಂತರದಿಂದ ತಿಳಿಯಲ್ಪಡದ. 4. ವಿವಾಹಕ್ಕೆ ಯೋಗ್ಯವಾದ ವಯಸ್ಸನ್ನು ಹೊಂದದಿರುವ.

**अप्राप्तकाल ಅಪ್ರಾಪ್ತಕಾಲ** (ನಂ) 1. ಅಕ್ರಮವಾದವಾದ, ಕ್ರಮತಪ್ಪಿ ಮಾಡುವ ಚರ್ಚೆ. [ಸಭಾಕಂಪದಿಂದಾಗಲಿ ಭ್ರಾಂತಿಯಿಂದಾಗಲಿ ವಾದಕ್ಕೆ ಸಂಬಂಧಿಸಿದ ಪ್ರತಿಜ್ಞಾ, ಹೇತು, ಉದಾಹರಣೆ, ಉಪನಯ ಮತ್ತು ನಿಗಮನಗಳೆಂಬ ಪಂಚಾವಯವಗಳನ್ನು ಕ್ರಮತಪ್ಪಿ ಉಪಯೋಗಿಸುವುದು ಅಪ್ರಾಪ್ತಕಾಲವೆನಿಸುವುದು.] शब्दोऽनित्यः शब्दत्वात् ಎನ್ನುವ ಬದಲು शब्दत्वात् शब्दोऽनित्यः ಎಂದು ಹೇಳುವುದು ಅಪ್ರಾಪ್ತಕಾಲವು. (विं) 2. ಅಸಮಯದ, ಕಾಲೋಚಿತವಲ್ಲದ. "अप्राप्तकालं वचनं बृहस्पतिरपि ब्रुवन्। लभते बुद्ध्यवज्ञानमपमानं च पुष्कलम्" पञ्चतं० १-६३।

**अप्राप्ति ಅಪ್ರಾಪ್ತಿ** (स्त्रीं) 1. ಪಡೆಯದಿರುವಿಕೆ. 2. ಸೇರದಿರುವಿಕೆ, ತಲುಪದಿರುವಿಕೆ.

**अप्रामाणिक ಅಪ್ರಾಮಾಣಿಕ** (विं) 1. ಪ್ರಮಾಣದಿಂದ ಸಿದ್ಧವಲ್ಲದ. 2. ಪ್ರಮಾಣವನ್ನರಿಯದ. 3. ನಂಬಿಕೆಯಿಲ್ಲದ, ವಿಶ್ವಾಸಕ್ಕೆ ಪಾತ್ರನಲ್ಲದ. न प्रामाणिकः।

**अप्रिय ಅಪ್ರಿಯ** (ನಂ) 1. ದುಃಖ. "न प्रहृष्येत्प्रियं प्राप्य नोद्विजेत्प्राप्य चाप्रियम्" गीता ५-२०। (विं) 2. ಇಷ್ಟವಲ್ಲದ, ಪ್ರೀತಿಯಿಲ್ಲದ.

**अप्रियंवद ಅಪ್ರಿಯಂವದ** (विं) ಕಠಿನವಾಗಿ ಮಾತನಾಡುವ, ಬಿರುಸಾಗಿ ಮಾತನಾಡುವ, ಮನನೋಯುವಂತೆ ಮಾತನಾಡುವ. अप्रियं वदति — वद (व्यक्तायां वाचि) "खच्" (३-२-३८)।

**अप्रियवादिन् ಅಪ್ರಿಯವಾದಿನ್** (विं) ಕಠಿನವಾಗಿ ಮಾತನಾಡುವ, ಮನನೋಯುವಂತೆ ಮಾತನಾಡುವ. अप्रियं वदति—वद (व्यक्तायां वाचि) "णिनिः" (३-२-७८)।

**अप्रीति ಅಪ್ರೀತಿ** (स्त्रीं) 1. ಹಗೆತನ, ದ್ವೇಷ, ವೈರ, ಶತ್ರುತ್ವ. 2. ವ್ಯಸನ, ದುಃಖ.

**अप्रेमन् ಅಪ್ರೇಮನ್** (पुं) 1. ದ್ವೇಷ, ಶತ್ರುತ್ವ. (विं) 2. ಪ್ರೀತಿಯಿಲ್ಲದ, ದ್ವೇಷವುಳ್ಳ. न प्रेम यस्य।

**अप्रौढ ಅಪ್ರೌಢ** (विं) 1. ಗರ್ವವಿಲ್ಲದ. 2. ನಮ್ರ, ಸಾಧು, ಸೌಮ್ಯ, ವಿನೀತ. 3. ಬೆಳೆಯದ, ಅಭಿವೃದ್ಧಿ ಹೊಂದದ. (स्त्रीं) —अप्रौढा—ಅಪ್ರೌಢಾ. 4. ಮದುವೆಯಾಗದ ಕನ್ಯೆ. 5. ಸದ್ಯಃ ಮದುವೆಯಾದ ಕನ್ಯೆ, ಸಂಪೂರ್ಣ ತಾರುಣ್ಯಹೊಂದದ ಕನ್ಯೆ. 6. ಮುಗ್ಧ ನಾಯಿಕೆ, ಹೊಸ ತಾರುಣ್ಯ ಮತ್ತು ಕಾಮವಿಕಾರ ಹೊಂದಿರುವ ನಾಯಿಕೆ.

**अप्सरस् ಅಪ್ಸರಸ್** (स्त्रीं ಬಂ ವಂ) ದೇವಲೋಕದ ವೇಶ್ಯೆಯರು. अद्भ्यः सरन्ति — सृ (गतौ) "असुन्" (ಉಂ ४-१३७)। "अप्सु निर्मथनादेव रसात्तस्माद्वरस्त्रियः। उत्पेतुर्मनुजश्रेष्ठ तस्मादप्सरसोऽभवन्"। "अप्सरस्सु निखिलास्वलक्षितां रूपसम्पदमसौ तवाद्भुताम्" यादं १७-२६।

**अफल ಅಫಲ** (पुं) 1. ಇಂದ್ರ. 2. ಹೋತ, ಆಡು. (विं) 3. ಗೊಡ್ಡು, ಬಂಜೆ, ಫಲಿಸದ, ಫಲಕಾಲದಲ್ಲಿ ಫಲವಿಲ್ಲದ (ಮರ ಮುಂತಾದುದು). 4. ನಿಷ್ಫಲವಾದ, ಪ್ರಯೋಜನವಿಲ್ಲದ. "यथा षण्डोऽफलः स्त्रीषु यथा गौर्गवि चाफला। यथा चाज्ञेऽफलं दानं तथा मत्योंऽनृचोऽफलः" मनुं २-१५८। (स्त्रीं)—फला—ಫಲಾ. 5. ಹತ್ತಿಗಿಡ. "केसराबदराऽफला कार्पासी" वैजं। 6. ಲೋಳೆಸರ, ಕತ್ತಾಳೆಗಿಡ.

**अबद्ध ಅಬದ್ಧ** (विं) 1. ಅಸಂಬದ್ಧವಾದ, ಅರ್ಥವಿಲ್ಲದ. 2. ಕಟ್ಟಲ್ಪಡದ. 3. ನಿರ್ಬಂಧವಿಲ್ಲದ, ಅಂಕೆಯಿಲ್ಲದ, ಸ್ವತಂತ್ರ, ಮುಕ್ತ.

**अबद्धमुख ಅಬದ್ಧಮುಖ** (वि०) ಅಪ್ರಿಯವನ್ನು ಹೇಳುವವನು, ದುರ್ಮುಖ, ದುರ್ಭಾಷೆಯಾಡುವ. न बद्धं नियमितं मुखमस्य। स्त्रियाम् वा "ङीष्" (४-१-५४)। **–मुखा–ಮುಖಾ, –मुखी–ಮುಖೀ.**

**अबन्धक ಅಬಂಧಕ** (न०) 1. ಯಾವ ಆಧಾರವೂ ಇಲ್ಲದೆ ತೆಗೆದುಕೊಳ್ಳುವ ಸಾಲ. (वि०) 2. ಅಂಕೆಯಲ್ಲಿಡದ, ನಿರ್ಬಂಧದಲ್ಲಿಡದ, ಕಟ್ಟುಮಾಡದ.

**अबन्धन ಅಬಂಧನ** (न०) 1. ಸ್ವಾತಂತ್ರ್ಯ, ನಿರ್ಬಂಧವಿಲ್ಲದಿರುವಿಕೆ. (वि०) 2. ಬಂಧನವಿಲ್ಲದ, ಸಂಕೋಲೆಯಿಲ್ಲದ, ಸ್ವತಂತ್ರ.

**अबन्धुर ಅಬಂಧುರ** (वि०) 1. ದೀನವಾದ. 2. ಎತ್ತರವಾಗಿಯೂ ಬಗ್ಗಿಯೂ ಇಲ್ಲದ, ಹಳ್ಳತಿಟ್ಟಿಲ್ಲದ. (क्रि० वि०) 3. ದೀನವಾಗಿ, ಕೋಪ ಮತ್ತು ದುಃಖದಿಂದ. "सनयनाम्बुसखीजनसंभ्रमाद्विधुरबन्धुरबन्धुरमैक्षत" माघ० ६-२९।

**अबल ಅಬಲ** (पु०) 1. ವಲಸೆಗಿಡ. (न०) 2. ದೌರ್ಬಲ್ಯ, ಬಲಹೀನತೆ. (वि०) 3. ದುರ್ಬಲ, ಬಲಹೀನನಾದ. नास्ति बलं यस्य।

**अबला ಅಬಲಾ** (स्त्री०) ಹೆಂಗಸು. अल्पं बलं यस्याः। अल्पार्थे नञ्। "सकठिनकुचचूचुकप्रणोदं प्रियमबलासविलासमन्वियाय" माघ० ७-१९।

**अबाध ಅಬಾಧ** (पु०) 1. ವಿಘ್ನವಿಲ್ಲದಿರುವಿಕೆ, ತಡೆಯಿಲ್ಲದಿರುವಿಕೆ. 2. ತೊಂದರೆಯಿಲ್ಲದಿರುವಿಕೆ. (वि०) 3. ತಡೆಯಿಲ್ಲದ, ಆತಂಕವಿಲ್ಲದ. 4. ಬಾಧೆಯಿಲ್ಲದ, ತೊಂದರೆಯಿಲ್ಲದ, ಪೀಡೆಯಿಲ್ಲದ.

**अबाधक ಅಬಾಧಕ** (वि०) 1. ವಿಘ್ನವನ್ನುಂಟುಮಾಡದ, ಅನುಕೂಲವಾದ. 2. ತೊಂದರೆಯಿಲ್ಲದ, ಪೀಡೆಯಿಲ್ಲದ.

**अबाधित ಅಬಾಧಿತ** (वि०) ತೊಂದರೆಪಡಿಸಲ್ಪಡದ, ಪೀಡಿಸಲ್ಪಡದ. न बाधितः।

**अबालिश ಅಬಾಲಿಶ** (वि०) ಬಾಲಕನಲ್ಲದ, ಹುಡುಗನಲ್ಲದ. "अबालिशो बालिशवत्प्रजानाम्" याद० ४-७१।

**अबिन्धन ಅಬಿಂಧನ** (पु०) ಬಡಬಾಗ್ನಿ. आपः इन्धनमस्य। "अबिन्धनं वह्निमसौ बिभर्ति" रघु० १३-४।

**अबुद्ध ಅಬುದ್ಧ** (वि०) 1. ಮಂಕ, ದಡ್ಡ, ಹೆಡ್ಡ. 2. ಮೂರ್ಖ, ತಿಳಿಗೇಡಿ.

**अबुद्धि ಅಬುದ್ಧಿ** (स्त्री०) 1. ಅವಿವೇಕ, ತಿಳಿಗೇಡಿತನ. 2. ದಡ್ಡತನ, ಮಂಕು.

**अबुध ಅಬುಧ** (पु०) 1. ಮೂರ್ಖ, ತಿಳಿಗೇಡಿ. "धृतोऽन्धमुखदर्पणो यदबुधो जनः सेवितः" कुव० पु० ५६। 2. ಹೆಡ್ಡ, ಮಂಕ, ಪೆದ್ದ. "अबुधैः कृतमानसंविदः" माघ० १६-४७।

**अबोध ಅಬೋಧ** (पु०) 1. ಅಜ್ಞಾನ, ತಿಳಿವಳಿಕೆಯಿಲ್ಲದಿರುವಿಕೆ. "निसर्गदुर्बोधमबोधविक्लवाः क्व भूपतीनां चरितं क्व जन्तवः" किरा० १-६। 2. ಗೋಚರವಾಗದಿರುವಿಕೆ, ಕಣ್ಣಿಗೆ ಕಾಣಿಸದಿರುವಿಕೆ. "जलदकालमबोधकृतं दिशाम्" माघ० ६-४१। (वि०) 3. ಅಜ್ಞಾನಿ, ತಿಳಿವಳಿಕೆಯಿಲ್ಲದ. न बोधो यस्य।

**अबोधगम्य ಅಬೋಧಗಮ್ಯ** (वि०) ಬುದ್ಧಿಗೆ ಮೀರಿದ, ಊಹಾತೀತ.

**अब्ज ಅಬ್ಜ** (पु०) 1. ಚಂದ್ರ. 2. ಧನ್ವಂತರಿ. 3. ನೀರುಹಲಸಿನಗಿಡ. अप्सु जायते — जनी (प्रादुर्भावे) "डः" (३-२-९७)। (पुंन०) 4. ಶಂಬು, ಶಂಖ. (न०) 5. ಲವಣ, ಉಪ್ಪು. 6. ಕಮಲ, ತಾವರೆ. "लवणाम्बुजयोरब्जं क्लीबे शंखे तु पुंसि वा। पुंस्येव निचुले शीतरश्मौ धन्वन्तरावपि" नानार्थर०। 7. ನೂರುಕೋಟಿ, ಹತ್ತುಸಾವಿರ ಲಕ್ಷ, 1,00,00,00,000. 8. ಕಣಗಿಲೆಗಿಡ. (वि०) 9. ನೀರಿನಲ್ಲಿ ಹುಟ್ಟಿದ. (स्त्री०) **अब्जा ಅಬ್ಜಾ.** 10. ಲಕ್ಷ್ಮಿ.

**अब्जज ಅಬ್ಜಜ** (पु०) 1. ಬ್ರಹ್ಮ, ಚತುರ್ಮುಖ. अब्जात् विष्णोर्नाभिकमलात् जातः — जनी (प्रादुर्भावे) "डः" (३-२-९८)। [ವಿಷ್ಣುವಿನ ನಾಭಿಕಮಲದಿಂದ ಚತುರ್ಮುಖಬ್ರಹ್ಮನು ಹುಟ್ಟಿದನು.]

**अब्जबन्धु ಅಬ್ಜಬಂಧು –बान्धव –ಬಾಂಧವ** (पु०) ಸೂರ್ಯ.

**अब्जनयन ಅಬ್ಜನಯನ –लोचन–ಲೋಚನ** (वि०) ಕಮಲದಂತೆ ಕಣ್ಣುಗಳುಳ್ಳ. अब्जे इव नयने लोचने वा यस्य।

**अब्जभव ಅಬ್ಜಭವ** (पु०) ಬ್ರಹ್ಮ, ಚತುರ್ಮುಖ. अब्जे भवः।

**अब्जभू ಅಬ್ಜಭೂ** (पु०) ಬ್ರಹ್ಮ, ಚತುರ್ಮುಖ. अब्जात् भवति — भू (सत्तायाम्) "क्विप्"।

**अब्जभोग ಅಬ್ಜಭೋಗ** (पु०) 1. ತಾವರೆಯ ದಂಟು. 2. ತಾವರೆಯ ಬೀಜಕೋಶ. 3. ಕವಡೆ. अब्जस्य शङ्खस्य भोगः अवयव इव भोगो यस्य।

**अब्जयोनि ಅಬ್ಜಯೋನಿ** (पु०) ಬ್ರಹ್ಮ, ಚತುರ್ಮುಖ. अब्जं विष्णुनाभिकमलं योनिरुत्पत्तिस्थानं यस्य।

**अब्जवाहन ಅಬ್ಜವಾಹನ** (ಪುಂ) 1. ಚಂದ್ರಮೌಳಿ, ಈಶ್ವರ, ವೃಷಭವಾಹನ. अब्ज इव शंख इव शुभ्रो वृषभो वाहनमस्य। "मिहिराणो जगद्योनिष्टङ्कटीकोऽब्जवाहनः" त्रिकाण्ड०। (स्त्री०) –वाहना –ವಾಹನಾ. 2. ಲಕ್ಷ್ಮಿ. अब्जं कमलं वाहनमिव यस्याः।

**अब्जिनी ಅಬ್ಜಿನೀ** (ಸ್ತ್ರೀ०) 1. ಕಮಲಲತೆ. 2. ಕಮಲಗಳ ಸಮೂಹ. अब्ज "इनिः" (४-२-५१)। 3. ಪುಷ್ಕರಿಣಿ, ಸರಸ್ಸು. अब्ज "इनिः" (५-१-१३१)।

**अब्द ಅಬ್ದ** (ಪುಂ) 1. ಮೇಘ, ಮೋಡ. अपः ददाति – डु दाञ् (दाने) "कः" (३-२-३)। 2. ಮುಸ್ತೆ, ಕೊನ್ನಾರಿಗೆಡ್ಡೆ. 3. ವರ್ಷ, ಸಂವತ್ಸರ. आप्यन्ते ऋतुमासादयो येन – आप्लृ (व्याप्तौ) "दन्" ह्रस्वश्च निपा० (उ० ४-९८)। ಸಂವತ್ಸರವು (1) ಬ್ರಾಹ್ಮ, (2) ದಿವ್ಯ, (3) ಪಿತ್ರ್ಯ, (4) ಪ್ರಾಜಾಪತ್ಯ, (5) ಬಾರ್ಹಸ್ಪತ್ಯ, (6) ಸೌರ, (7) ಸಾವನ, (8) ಚಾಂದ್ರ ಮತ್ತು (9) ಆರ್ಕ್ಷಗಳೆಂದು ಒಂಭತ್ತು ವಿಧ. ಇವುಗಳಲ್ಲಿ ಮನುಷ್ಯಲೋಕದ ವ್ಯವಹಾರಕ್ಕೆ ಕೊನೆಯ ನಾಲ್ಕು ಸಂವತ್ಸರಗಳು ಮಾತ್ರ ಸಂಬಂಧಪಟ್ಟಿವೆ.

(1) **ಬ್ರಾಹ್ಮಸಂವತ್ಸರ:** ಮನುಷ್ಯನ ಒಂದು ಸೌರವರ್ಷ ಅಥವಾ 365¼ ದಿನಗಳು ದೇವತೆಗಳಿಗೆ ಒಂದು ದಿನ. ಮನುಷ್ಯನ 360 ವರ್ಷಗಳು ದೇವತೆಗಳಿಗೆ ಒಂದು ವರ್ಷ.

**ಯುಗಮಾನ**

| ದೇವವರ್ಷಗಳು | | ಮಾನುಷವರ್ಷಗಳು |
|---|---|---|
| 4,800 | ಕೃತಯುಗ | 17,28,000 |
| 3,600 | ತ್ರೇತಾಯುಗ | 12,96,000 |
| 2,400 | ದ್ವಾಪರಯುಗ | 8,64,000 |
| 1,200 | ಕಲಿಯುಗ | 4,32,000 |
| 12,000 | ಚತುರ್ಯುಗಮಾನ | 43,20,000 |

ಈ ಯುಗಮಾನಗಳ ಆರನೆಯ ಒಂದು ಭಾಗವು ಸಂಧ್ಯಾಸಂಧ್ಯಾಂಶಗಳು. ಅದನ್ನು ಕಳೆದರೆ 4,000, 3,000, 2,000 ಮತ್ತು 1,000 ದೇವವರ್ಷಗಳು ಯುಗಮಾನ.

**ಬ್ರಹ್ಮನ ದಿನ (ಹಗಲು) ಮಾನ**
(ದೇವತೆಗಳ 1,000 ಚತುರ್ಯುಗಗಳು)

| ದೇವವರ್ಷಗಳು | ಮಾನುಷವರ್ಷಗಳು |
|---|---|
| 1,20,00,000 | 4,32,00,00,000 |

**ಬ್ರಹ್ಮನ ರಾತ್ರಿಮಾನ**

| ದೇವವರ್ಷಗಳು | ಮಾನುಷವರ್ಷಗಳು |
|---|---|
| 1,20,00,000 | 4,32,00,00,000 |

**ಬ್ರಹ್ಮನ ಒಂದು ದಿನದ (ಅಹೋರಾತ್ರ) ಮಾನ**

| | |
|---|---|
| 2,40,00,000 | 8,64,00,00,000 |

**ಬ್ರಹ್ಮನ ಒಂದು ವರ್ಷದ ಮಾನ**
(ಬ್ರಾಹ್ಮಸಂವತ್ಸರ)

| | |
|---|---|
| 8,64,00,00,000 | 31,10,40,00,00,000 |

**ಬ್ರಹ್ಮನ ಆಯುಸ್ಸು**

| | |
|---|---|
| 864,00,00,00,000 | 3110,40,00,00,00,000 |

[ಬ್ರಹ್ಮನ ಆಯುಸ್ಸಿಗೆ ಪರವೆಂದು ಹೆಸರು.]

(2) **ದಿವ್ಯ ಸಂವತ್ಸರ:** ಮನುಷ್ಯರ 365¼ ದಿನಗಳು ದೇವತೆಗಳಿಗೆ ಒಂದು ದಿನ. [ಉತ್ತರಾಯಣ ಹಗಲು, ದಕ್ಷಿಣಾಯನ ರಾತ್ರಿ.] 360 ಮಾನುಷ ವರ್ಷಗಳು ದೇವತೆಗಳಿಗೆ ಒಂದು ವರ್ಷ (ದಿವ್ಯಾಬ್ದ).

(3) **ಪಿತ್ರ್ಯ ಸಂವತ್ಸರ:** ಮನುಷ್ಯರ ಒಂದು ತಿಂಗಳು ಪಿತೃದೇವತೆಗಳಿಗೆ ಒಂದು ಅಹೋರಾತ್ರ (ಒಂದು ದಿನ) ವಾಗುವುದು. [ಶುಕ್ಲಪಕ್ಷ ಹಗಲು, ಕೃಷ್ಣಪಕ್ಷ ರಾತ್ರಿ.] ಮನುಷ್ಯರ 360 ತಿಂಗಳು ಅಥವಾ 10,800 ದಿನಗಳು ಪಿತೃಗಳಿಗೆ ಒಂದು ವರ್ಷ.

(4) **ಪ್ರಾಜಾಪತ್ಯಾಬ್ದ** (ಮನ್ವಂತರಮಾನ): ಬ್ರಹ್ಮನ ಒಂದು ಹಗಲಿನ ಹದಿನಾಲ್ಕನೆಯ ಒಂದು ಭಾಗ, ಒಂದು ಮನುವಿನ ಕಾಲ. (ಒಂದು ಮನ್ವಂತರ)

| ದೇವವರ್ಷಗಳು | ಮಾನುಷವರ್ಷಗಳು |
|---|---|
| 8,52,000 | 30,67,20,000 |

ಮಾನುಷಮಾನರೀತ್ಯಾ ಸಂಧ್ಯಾ ಸಂಧ್ಯಾಂಶಗಳಲ್ಲಿ ಕಳೆದುಹೋಗುವ ಅಧಿಕ ಕಾಲವೂ ಸೇರಿ 308,571,428 ಮಾನುಷವರ್ಷಗಳಾಗುವುವು.

(5) **ಬಾರ್ಹಸ್ಪತ್ಯಾಬ್ದ:** ಬೃಹಸ್ಪತಿಯು ಒಂದೊಂದು ರಾಶಿಯಲ್ಲೂ ಇರುವ ಕಾಲಕ್ಕೆ ಬಾರ್ಹಸ್ಪತ್ಯಾಬ್ದವೆಂದು ಹೆಸರು. ಸರಿಯಾದ ಚಾರದಲ್ಲಿದ್ದರೆ ಒಂದು ರಾಶಿಯಲ್ಲಿರುವುದು ಒಂದು ವರ್ಷ ಕಾಲ. ಅತಿಚಾರ ಮತ್ತು ವಕ್ರಚಾರಗಳಿಂದ ಹೆಚ್ಚು ಕಡಿಮೆಯಾಗುವುದೂ ಉಂಟು. ಸೌರಮಾನದಿನಗಣನೆಯಂತೆ ಬೃಹಸ್ಪತಿಯು ದ್ವಾದಶರಾಶಿಗಳಲ್ಲೂ ಸಂಚರಿಸಲು 4332 ದಿನಗಳು ಬೇಕಾಗುವುವು.

(6) **ಸೌರಸಂವತ್ಸರ:** ಸಾಮಾನ್ಯವಾಗಿ ಒಂದು ಅಹೋರಾತ್ರವು ಸೌರದಿನವೆನಿಸುವುದು. ಹೀಗೆ ಒಂದು ವರ್ಷಕ್ಕೆ 360 ದಿನಗಳಾಗುವುವು. ಆದರೆ

ಸೂರ್ಯನು ಇಪ್ಪತ್ತೇಳು ನಕ್ಷತ್ರಗಳಲ್ಲೂ (12 ರಾಶಿಗಳಲ್ಲಿ) ಸಂಚರಿಸುವ ಕಾಲದಲ್ಲಿ ಸ್ವಲ್ಪ ಹೆಚ್ಚು ಕಡಿಮೆಯಾಗಿ ಒಂದು ವರ್ಷಕ್ಕೆ 365 ದಿನಗಳು 6 ಗಂಟೆಗಳು ಕೆಲವು ನಿಮಿಷಗಳು (ಸುಮಾರು 365¼ ದಿನಗಳು) ಆಗುವುವು. ಸೂರ್ಯನು ಮೇಷರಾಶಿಯನ್ನು ಪ್ರವೇಶಿಸಿದಾಗ ಮೇಷಮಾಸ ಮೊದಲುಗೊಂಡು ವರ್ಷ ಪ್ರಾರಂಭವಾಗುವುದು.

(7) **ಸಾವನಸಂವತ್ಸರ:** ಸೂರ್ಯೋದಯವಾದಾಗಿನಿಂದ ಮರುದಿನದ ಸೂರ್ಯೋದಯದವರೆಗೆ ಒಂದು ಸಾವನದಿನವಾಗುವುದು. ಹೀಗೆ 30 ದಿನಗಳಿಗೆ ಒಂದು ಸಾವನಮಾಸವೂ 360 ದಿನಗಳಿಗೆ ಒಂದು ಸಾವನಸಂವತ್ಸರವೂ ಆಗುವುದು.

(8) **ಚಾಂದ್ರಸಂವತ್ಸರ:** ಶುಕ್ಲಪ್ರತಿಪತ್ತು ಮೊದಲುಗೊಂಡು ಮೂವತ್ತು ತಿಥಿಗಳಿಗೆ ಒಂದು ಚಾಂದ್ರಮಾಸ. ಹೀಗೆ ಹನ್ನೆರಡು ತಿಂಗಳಿಗೆ ಒಂದು ಚಾಂದ್ರಸಂವತ್ಸರ. ಆದರೆ ಚಂದ್ರನು ಅಶ್ವಿನ್ಯಾದಿ 27 ನಕ್ಷತ್ರಗಳಲ್ಲೂ (12 ರಾಶಿಗಳಲ್ಲಿ) ಸಂಚರಿಸುವಾಗ ತಿಥಿಗಳ ಕಾಲದ ಹೆಚ್ಚು ಕಡಿಮೆಯಿಂದ 30 ದಿನಗಳಿಗಿಂತಲೂ ಕಡಿಮೆಯಾಗಿ ಸೌರಮಾನದ ಗಣನೆಗಿಂತ ಕಡಿಮೆಯಾಗಬಹುದಾದುದರಿಂದ ಸುಮಾರು ಮೂರು ವರ್ಷಗಳಿಗೊಮ್ಮೆ ಒಂದು ತಿಂಗಳು ಅಧಿಕಮಾಸವೆಂದು ಪರಿಗಣಿಸಲ್ಪಟ್ಟು ಸೌರಮಾನಕ್ಕನುಗುಣವಾಗಿ ಸರಿಹೊಂದುವುದು.

(9) **ಆರ್ಕ್ಷಸಂವತ್ಸರ:** ಅಶ್ವಿನ್ಯಾದಿ ಒಂದೊಂದು ನಕ್ಷತ್ರದ ಕಾಲಕ್ಕೂ ಒಂದು ಆರ್ಕ್ಷದಿನವೆಂದೂ ಈ ರೀತಿ 27 ನಕ್ಷತ್ರಗಳಕಾಲಕ್ಕೆ ಒಂದು ತಿಂಗಳೆಂದೂ ಇಂತಹ 12 ತಿಂಗಳಿಗೆ ಒಂದು ಆರ್ಕ್ಷಸಂವತ್ಸರವೆಂದೂ ಶಾಸ್ತ್ರದಲ್ಲಿ ಉಕ್ತವಾಗಿರುವುದು. ಪ್ರತಿ ತಿಂಗಳಿನ ಹುಣ್ಣಿಮೆಯ ದಿನದ ನಕ್ಷತ್ರದ ಹೆಸರೇ ಆಯಾ ತಿಂಗಳ ಹೆಸರು. ಚಿತ್ರಾನಕ್ಷತ್ರದ ಸಂಬಂಧದಿಂದ ಚೈತ್ರವೆಂದೂ ವಿಶಾಖಾ ಸಂಬಂಧದಿಂದ ವೈಶಾಖವೆಂದೂ ಮುಂತಾಗಿ ತಿಳಿಯಬೇಕು. ಹೀಗೆ ಉಳಿದುವನ್ನು ಸೂರ್ಯಸಿದ್ಧಾಂತದಲ್ಲಿ ನೋಡಿ ತಿಳಿಯಬಹುದು.

**अब्दप ಅಬ್ದಪ** (ಪ್ಪುಂ) ವರ್ಷಾಧಿಪತಿ. अब्दं पाति — पा (रक्षणे) "कः" (३-२-३)।

**अब्दसार ಅಬ್ದಸಾರ** (ಪ್ಪುಂ) ಕರ್ಪೂರ. अब्दस्य मुस्तायाः सारः।

**अब्दवाहन ಅಬ್ದವಾಹನ** (ಪ್ಪುಂ) ಇಂದ್ರ. अब्दो मेघो वाहनमस्य।

**अब्धि ಅಬ್ಧಿ** (ಪ್ಪುಂ) 1. ಸಾಗರ, ಸಮುದ್ರ, ಕಡಲು. आपः धीयन्तेऽस्मिन् — डु धाञ् (धारणे) "किः" (३-३-९३)। "विधाय तार्क्ष्यं गगनाब्धिपोतं सार्धं मया देवि समाव्रजन्तीम्" यादಂ १८-११६। 2. ಸರಸ್ಸು, ಕೊಳ. 3. ಕೆರೆ. 4. ನಾಲ್ಕು ಮತ್ತು ಏಳು ಸಂಖ್ಯೆ.

**अब्धिकन्या ಅಬ್ಧಿಕನ್ಯಾ —तनया —ತನಯಾ, —सुता —ಸುತಾ** (स्त्रीಂ) ಲಕ್ಷ್ಮಿ. "विशुद्धदेहद्युतिरब्धिकन्या" यादಂ ४-५८।

**अब्धिकफ ಅಬ್ಧಿಕಫ** (ಪ್ಪುಂ) ಸಮುದ್ರದ ನೊರೆ.

**अब्धिज ಅಬ್ಧಿಜ** (ಪ್ಪುಂ) 1. ಚಂದ್ರ. 2. ಶಂಖ. (ಪ್ಪುಂ द्विಂ ವಂ) 3. ಅಶ್ವಿನೀದೇವತೆಗಳು. (विಂ) 4. ಸಮುದ್ರದಲ್ಲಿ ಹುಟ್ಟಿದ. (स्त्रीಂ) —जा —ಜಾ. 5. ಲಕ್ಷ್ಮಿ. अब्धौ जायते — जनी (प्रादुर्भावे) "डः" (३-२-९७)।

**अब्धिनगरी ಅಬ್ಧಿನಗರೀ** (स्त्रीಂ) ದ್ವಾರಕಾಪಟ್ಟಣ. अब्धौ तत्तीरे नगरी।

**अब्धिमण्डूकी ಅಬ್ಧಿಮಂಡೂಕೀ** (स्त्रीಂ) ಮುತ್ತಿನ ಚಿಪ್ಪು. अब्धि मण्डयति—मडि (भूषायाम्) "ऊकन्" (उಂ ४-४२)। "ङीष्" (४-१-४१)।

**अब्धिशय ಅಬ್ಧಿಶಯ** (ಪ್ಪುಂ) ವಿಷ್ಣು. अब्धौ शेते—शीङ् (स्वप्ने) "अच्" (३-३-५६)। [ಜಗತ್ತಿನ ಪ್ರಳಯಾನಂತರ ಪರಮಾತ್ಮನು ಅಬ್ಧಿಯಲ್ಲಿ ಮಲಗಿ ಯೋಗನಿದ್ರೆಯಲ್ಲಿರುವುದರಿಂದ ಈ ಹೆಸರು.]

**अब्ध्यग्नि ಅಬ್ಧ್ಯಗ್ನಿ** (ಪ್ಪುಂ) ಬಡಬಾಗ್ನಿ.

**अब्भक्ष ಅಬ್ಭಕ್ಷ** (ಪ್ಪುಂ) 1. ಸರ್ಪ, ಹಾವು. (विಂ) 2. ನೀರು ಕುಡಿದು ಜೀವಿಸುವ. अपो भक्षयति—भक्ष (अदने) "अण्" (३-२-१)।

**अब्रह्मण्य ಅಬ್ರಹ್ಮಣ್ಯ** (ನಂ) 1. ಸಂಹಾರ ಮಾಡಕೂಡದೆಂಬ ಮಾತು. ब्रह्मणि साधु ब्रह्मण्यं शान्तता "यत्" (४-४-९८)। तन्नभवति। "अब्रह्मण्यमवध्योक्तौ" ಅಮಂ। 2. ರಕ್ಷಣೆಗಾಗಿ ಭಯಂಕರವಾಗಿ ಕೂಗಿಕೊಳ್ಳುವಿಕೆ. "अब्रह्मण्यमब्रह्मण्यम्" शाकुಂ ६। 3. ಬ್ರಾಹ್ಮಣನು ಮಾಡಬಾರದ ಕಾರ್ಯ, ಹಿಂಸೆ. (विಂ) 4. ಬ್ರಾಹ್ಮಣನಿಗೆ ಹಿತವಾಗಿಲ್ಲದ, ಬ್ರಾಹ್ಮಣನಿಗೆ ಅಪಾಯಕರವಾದ.

**अब्रह्मन् ಅಬ್ರಹ್ಮನ್** (विಂ) ಬ್ರಾಹ್ಮಣನಿಲ್ಲದ, ಬ್ರಾಹ್ಮಣರಹಿತವಾದ. न ब्रह्मा ब्राह्मणो यत्र। "नाब्रह्म क्षत्रमृध्नोति नाक्षत्रंब्रह्म वर्धते" मनुಂ ९-३२२।

**अब्राह्मण ಅಬ್ರಾಹ್ಮಣ** (ಪುಂ) 1. ನೀಚಬ್ರಾಹ್ಮಣ, ಪತಿತನಾದ ಬ್ರಾಹ್ಮಣ. न ब्राह्मणः । अप्राशस्त्ये नं० तं०। "अब्राह्मणास्तु षट् प्रोक्ता ऋषिणा तत्त्ववादिना। आद्यो राजभृतस्तेषां द्वितीयः क्रयविक्रयी। तृतीयो बहुयाज्यः स्याच्चतुर्थो ग्रामयाजकः। पञ्चमस्तु वृतस्तेषां ग्रामस्य नगरस्य च। अनागतां तु यः पूर्वां सादित्यां चैव पश्चिमाम्। नोपासीत द्विजः सन्ध्यां स षष्ठोऽब्राह्मणः स्मृतः" ಎಂದು ಅಬ್ರಾಹ್ಮಣನು ಆರು ವಿಧ. (ವಿಂ) 2. ಬ್ರಾಹ್ಮಣನಿಲ್ಲದ, ಬ್ರಾಹ್ಮಣ ರಹಿತವಾದ. 3. ಬ್ರಾಹ್ಮಣನಲ್ಲದವನು, ಬ್ರಾಹ್ಮಣನಿಗೆ ಸಮಾನನಾದವನು, ಬ್ರಾಹ್ಮಣನಂತೆ ತೋರಿಸಿಕೊಳ್ಳುವವನು.

**अब्लिङ्ग ಅಬ್ಲಿಂಗ** (ನಂ) ಜಲವೇ ದೇವತೆಯಾಗುಳ್ಳ ಮಂತ್ರ. अपां लिङ्गं बोधनसामर्थ्यं यत्र।

**अभक्त ಅಭಕ್ತ** (ವಿಂ) 1. ಭಕ್ತನಲ್ಲದ, ಸೇವಕನಲ್ಲದವನು. न भक्तः। 2. ಬೇರೆಮಾಡಲ್ಪಡದ, ಪ್ರತ್ಯೇಕಿಸಲ್ಪಡದ.

**अभक्षण ಅಭಕ್ಷಣ** (ನಂ) ತಿನ್ನದಿರುವುದು, ಊಟಮಾಡದಿರುವುದು.

**अभक्ष्य ಅಭಕ್ಷ್ಯ** (ವಿಂ) 1. ನಿಷಿದ್ಧವಾದ ಆಹಾರ, ಊಟಮಾಡಲು ಯೋಗ್ಯವಲ್ಲದ ಆಹಾರ. न भक्षयितुं योग्यम्। ವಸ್ತುವಿನ ಸ್ವಭಾವ, ಕಾಲದೇಶಗಳ ಸಂಬಂಧ, ಬೇರೆ ವಸ್ತುವಿನ ಸಂಪರ್ಕ, ನಿಷಿದ್ಧವಾದ ಲೋಹ ಸಂಬಂಧ ಮತ್ತು ಅವುಗಳಲ್ಲಿ ಪಾಕ—ಈ ಕಾರಣದಿಂದ ಆಹಾರವು ಅಭಕ್ಷ್ಯವಾಗುವುದು. **ವಸ್ತುಸ್ವಭಾವದಿಂದ ದುಷ್ಟವಾದ ಆಹಾರ:** "लशुनं गृञ्जनं चैव पलाण्डुः कवकानि च। अभक्ष्याणि द्विजातीनाममेध्यप्रभवाणि च। अनिर्दशाया गोः क्षीरमौष्ट्रमेकशफं तथा। आविकं सन्धिनीक्षीरं विवत्सायाश्च गोः पयः। ಮನುಂ ५-५, ८। **ಬ್ರಾಹ್ಮಣನಿಗೆ ವಿಶೇಷವಾಗಿ ಅಭಕ್ಷ್ಯವಾದ ಆಹಾರ:** "राजान्नं तेज आदत्ते शूद्रान्नं ब्रह्मवर्चसम्। आयुः सुवर्णकारान्नं यशश्चर्मविकर्तिनः। कारुकान्नं प्रजा हन्ति बलं निर्णेजकस्य च। गणान्नं गणिकान्नं च लोकेभ्यः परिकृन्तति। नाद्यात् शूद्रस्य पक्वान्नं विद्वानश्राद्धिनो द्विजः। आददीताममेवास्मादवृत्तावेकरात्रिकम्" ಮನುಂ ४-२१८, १९, २३। **ವಸ್ತುಸಂಪರ್ಕದಿಂದ ಅಭಕ್ಷ್ಯವಾದ ಆಹಾರ:** ಬೆಲ್ಲ ಮತ್ತು ಸಕ್ಕರೆ ಬೆರಸಿದ ಹಿಂದಿನ ದಿನದ ಮೊಸರೂ ಕೇಶ, ಕ್ರಿಮಿ ಮುಂತಾದುವುಗಳೊಡನೆ ಪಕ್ವವಾದ ಅನ್ನವೂ ಅಭಕ್ಷ್ಯಗಳು. ಕೈಯಿಂದ ತೆಗೆದುಕೊಡಲ್ಪಟ್ಟ ಜೇನುತುಪ್ಪ, ಕಾಕಂಬಿ, ಬೇಯಿಸಲ್ಪಟ್ಟ ಶಾಕ (ಪಲ್ಯ ಮುಂತಾದುದು) ಗೋರಸ (ಹಾಲು, ಮೊಸರು) ಉಪ್ಪು, ತುಪ್ಪ ಇವು ಅಭಕ್ಷ್ಯಗಳು. ಇವನ್ನು ಪಾತ್ರೆಗಳಲ್ಲಿ ಕೊಡಬೇಕು ಅಥವಾ ಸೌಟಿನಿಂದ ಬಡಿಸಬೇಕು. "माक्षिकं फाणितं शाकं गोरसं लवणं घृतम्। हस्तदत्तानि भुक्त्वा च भोक्ता सान्तपनं चरेत्"। **ಲೋಹ ಸಂಬಂಧದಿಂದ ಅಭಕ್ಷ್ಯವಾದ ಆಹಾರ:** ಕಂಚಿನ ಪಾತ್ರೆಯಲ್ಲಿ ಎಳನೀರನ್ನೂ ತಾಮ್ರದ ಪಾತ್ರೆಯಲ್ಲಿ ಬೆಲ್ಲದ ಪದಾರ್ಥವನ್ನೂ ಇಡಕೂಡದು. ಇವು ಅಭಕ್ಷ್ಯವಾಗುವುವು. "नारिकेलोदकं कांस्ये ताम्रपात्रे गुडस्तथा। सुरातुल्यं भवेदेतत् ताम्रे गव्यं घृतं विना"। 2. ತಿನ್ನಲು ಯೋಗ್ಯವಲ್ಲದ. 3. ಊಟಮಾಡಲು ನಿಷಿದ್ಧವಾದ.

**अभङ्ग ಅಭಂಗ** (ಪುಂ) 1. ಒಡೆಯದಿರುವುದು, ಮುರಿಯದಿರುವುದು. 2. ಅಭಂಗಶ್ಲೇಷ, ಶಬ್ದಾಲಂಕಾರವಾದ ಶ್ಲೇಷದ ಒಂದು ಭೇದ. "पुनस्त्रिधा सभङ्गोऽथाभङ्गस्तदुभयात्मकः" ಸಾಂ ದಂ १०-१२। **ಉದಾ:** "पायात्स स्वयमन्वकक्षयकरस्त्वां सर्वदोमाधवः"।

**अभङ्गुर ಅಭಂಗುರ** (ವಿಂ) ಸ್ಥಿರವಾದ, ನಾಶವಾಗದ. भञ्जो (आमर्दने) "घुरच्" (३-२-१६१)। न भङ्गुरः। "अभङ्गुरविभूतिर्नस्तरङ्गयतु मङ्गलम्"।

**अभद्र ಅಭದ್ರ** (ನಂ) 1. ದುಃಖ. 2. ಅಮಂಗಳ. (ವಿಂ) 3. ಅಶುಭದ, ಮಂಗಳವಲ್ಲದ.

**अभय ಅಭಯ** (ಪುಂ) 1. ಪರಮಾತ್ಮ, ವಿಷ್ಣು. न भयमस्मात्। 2. ಬ್ರಹ್ಮಜ್ಞಾನ. 3. "ಅಭಯ" ವೆಂಬ ಪ್ರಯಾಣದ ಒಂದು ಶುಭಯೋಗ. "यत्रैकादशगश्चन्द्रो भानुर्वा प्रबलः शुभः। अभयो नाम योगोऽयमरिभूतविनाशकृत्"। 4. ಆತ್ಮನಿಷ್ಠ, ತಪಸ್ವಿ. 5. ಭಯವನ್ನು ಹೋಗಲಾಡಿಸುವ ಅಭಯಹಸ್ತ, ಅಭಯವಚನ. (ನಂ) 6. ಭಯವಿಲ್ಲದಿರುವಿಕೆ, ಧೈರ್ಯ. "यो दत्वा सर्वभूतेभ्यः प्रव्रजत्यभयं गृहात्। तस्य तेजोमया लोका भवन्ति ब्रह्मवादिनः" ಮನುಂ ६-३९। 7. ರಕ್ಷಣೆ, ಕಾಪಾಡುವಿಕೆ. 8. ಲಾಮಂಚದ ಬೇರು. "अभयं नलदं सेव्यममृणालं जलाशयम्" ಅಮಂ। (ಸ್ತ್ರೀಂ) –या –ಯಾ. 9. ಅಳಲೆಕಾಯಿ. "अभयमुशीराभीत्योरभया तु हरीतकी" ಹೇಮಂ। (ವಿಂ) 10. ಭಯವಿಲ್ಲದ, ಹೆದರಿಕೆಯಿಲ್ಲದ. "अभयं नलदे स्त्री तु पथ्यायां निर्भये त्रिषु" नानार्थरं।

**अभयकृत् ಅಭಯಕೃತ್** (ವಿಂ) ರಕ್ಷಿಸುವ, ಕಾಪಾಡುವ. अभयं त्राणं करोति। 2. ಭಯಂಕರವಲ್ಲದ, ಶಾಂತವಾದ, ಸೌಮ್ಯವಾದ.

**अभयङ्कर** ಅಭಯಂಕರ (वि०) ಭಯವನ್ನುಂಟು ಮಾಡದ, ಶಾಂತವಾದ, ಸೌಮ್ಯವಾದ. न० त०।

**अभयद** ಅಭಯದ (वि०) ರಕ್ಷಿಸುವವನು, ಧೈರ್ಯವನ್ನುಂಟುಮಾಡುವವನು. अभयं ददाति अभयवचनं दत्वा रक्षति—डु दाञ् (दाने) "कः" (३-२-३)।

**अभयदक्षिणा** ಅಭಯದಕ್ಷಿಣಾ (स्त्री०) 1. ಅಭಯರೂಪವಾದ ರಕ್ಷಣೆ, ರಕ್ಷಣೆಯ ಭರವಸೆಯ ಮಾತು. 2. ಭಯದಿಂದ ಕಾಪಾಡಿದವನಿಗೆ ಕೊಡುವ ದಕ್ಷಿಣೆ.

**अभयमुद्रा** ಅಭಯಮುದ್ರಾ (स्त्री०) ತಂತ್ರೋಕ್ತವಾದ ಒಂದುವಿಧ ಮುದ್ರೆ, ಅಭಯವನ್ನು ಸೂಚಿಸುವ ಮುದ್ರೆ. अभयार्था मुद्रा।

**अभययाचना** ಅಭಯಯಾಚನಾ (स्त्री०) ಅಭಯದ ಬೇಡಿಕೆ, ರಕ್ಷಣೆಗಾಗಿ ಪ್ರಾರ್ಥನೆ. अभयार्थं याचना। "बध्यतामभययाचनाञ्जलिः" रघु० ११-७८।

**अभयवचन** ಅಭಯವಚನ (न०) ರಕ್ಷಣೆಯ ಭರವಸೆಯ ಮಾತು, ಕಾಪಾಡುವುದಾಗಿ ನೀಡುವ ಅಭಯಹಸ್ತ.

**अभव** ಅಭವ (पु०) 1. ಹುಟ್ಟದಿರುವಿಕೆ, ಜನ್ಮಪಡೆಯದಿರುವಿಕೆ. न भवः उत्पत्तिः। 2. ಮೋಕ್ಷ, ಮುಕ್ತಿ. न विद्यते भवः उत्पत्तिर्यत्र। "प्राप्तुमभवमभिवाञ्छति वा वयमस्य नो विषहितुं क्षमा रुचः" किरा० १२-३०। 3. ವಿನಾಶ. "भवाय सर्वभूतानामभवाय च रक्षसाम्" रामा०।

**अभव्य** ಅಭವ್ಯ (न०) 1. ದುರದೃಷ್ಟ, ಕೆಟ್ಟ ಅದೃಷ್ಟ. (वि०) 2. ಅದೃಷ್ಟಹೀನ, ಭಾಗ್ಯಹೀನ. "उपनतमवधीरयन्त्यभव्याः" किरा० १०-५१। 3. ಮಂಗಳವಲ್ಲದ.

**अभाव** ಅಭಾವ (पु०) 1. ಅಸತ್ತೆ, ಇಲ್ಲದಿರುವಿಕೆ. न० त०। "अस्ति पुत्रो वशे यस्य भृत्यो भार्या तथैव च। अभावे सति सन्तोषः स्वर्गस्थोऽसौ महीयते" चाणक्यः। 2. (ತಾರ್ಕಿಕಮತದಲ್ಲಿ) ದ್ರವ್ಯಾದಿ ಸಪ್ತ ಪದಾರ್ಥಗಳಲ್ಲಿ ಒಂದು. "द्रव्यगुणकर्मसामान्यविशेषसमवायाभावाः सप्त पदार्थाः" त०स०। ಅಭಾವವು ಪ್ರಾಗಭಾವ, ಪ್ರಧ್ವಂಸಾಭಾವ, ಅತ್ಯಂತಾಭಾವ ಮತ್ತು ಅನ್ಯೋನ್ಯಾಭಾವಗಳೆಂದು ನಾಲ್ಕು ವಿಧ. 3. ಕೊರತೆ, ಬಡತನ. 4. ನಾಶ. (वि०) 5. ಸ್ಥಾಯಿಭಾವವಿಲ್ಲದ. 6. ಅನುರಾಗವಿಲ್ಲದ, ಪ್ರೀತಿಯಿಲ್ಲದ.

**अभावनीय** ಅಭಾವನೀಯ (वि०) ಚಿಂತಿಸುವುದಕ್ಕೂ ಶಕ್ಯವಲ್ಲದ. न भावयितुं शक्यम्।

**अभाषण** ಅಭಾಷಣ (न०) ಮೌನ, ಮಾತನಾಡದಿರುವಿಕೆ.

**अभि** ಅಭಿ (अव्य०) [ಇದು ಕ್ರಿಯಾಪದದೊಡನೆ ಸೇರಿದಾಗ ಉಪಸರ್ಗಸಂಜ್ಞೆಯನ್ನೂ, ಸುಬಂತದೊಡನೆ ಸೇರಿದಾಗ ಕರ್ಮಪ್ರವಚನೀಯಸಂಜ್ಞೆಯನ್ನೂ ಹೊಂದಿ ಆಯಾ ಅರ್ಥಗಳಿಗೆ ದ್ಯೋತಕವಾಗುವುದು.] 1. ಲಕ್ಷಣ, ಚಿಹ್ನೆ, ಗುರುತು. "हरिमभि वर्तते"। 2. ಪ್ರಕಾರಾಂತರವನ್ನು ಹೊಂದುವುದು. "भक्तो हरिमभि"। भक्तो भक्तिरूपं प्रकारविशेषं प्राप्तवान्। हरिविषयकभक्तिमानित्यर्थः। 3. ವೀಪ್ಸೆ, ವ್ಯಾಪ್ತಿ. "देवंदेवमभिसिञ्चति"। कृत्स्नं देवमभिसिञ्चतीत्यर्थः। 4. ಅಭಿಮುಖ್ಯ, ಎದುರು. "अभिचैद्यं प्रतिष्ठासुरासीत्कार्यद्वयाकुलः" माघ० २-१। 5. ಇಚ್ಛೆ, ಅಪೇಕ್ಷೆ. "अभिलाषमुदीरितेन्द्रियः स्वसुतायामकरोत्प्रजापतिः" कुमा० ४-४१। 6. ಸುತ್ತಲೂ. "अभ्युन्नताङ्गुष्ठनखप्रभाभिः" कुमा० १-३३। 7. ಸೌಮ್ಯತೆ, ಗಾಂಭೀರ್ಯ, ಔದಾರ್ಯ, ಘನತೆ. "जात्यस्तेनाभिजातेन शूरः शौर्यवता कुशः" रघु० १७-४। 8. ಒಳಕ್ಕೆ, ಒಳಗಡೆಗೆ. "भ्रश्यद्भिर्जलमभि भूषणैर्वधूनामङ्गेभ्यो गुरुभिरमज्जि लज्जयेव" माघ० ८-६०। 9. ತೀಕ್ಷ್ಣ, ಕಲಿಯುವುದು. "अभ्यस्यन्ति तटाघातं निर्जितैरावता गजाः" कुमा० २-५०। 10. ಮುಂಭಾಗ, ಸಮೀಪ. "प्रियमभि कुसुमोद्यतस्य बाहोः" माघ० ७-४०। 11. ವಚನ, ಮಾತು. "अभिधाय रूक्षमिति मा स्म गम इति पृथासुतेरिताम्" माघ० १५-६७। 12. ಸಪ್ತಮ್ಯರ್ಥ. "अभिगौरि रतासक्तम्" कुमा० १०-७। 13. ಭಾಗ, ಪಾಲು. "यदत्र ममाभिष्यात् तद्दीयताम्" सि० कौ०। 14. ಪೂಜೆ. "अभिवादयते"। 15. ಊಟ, ಭೋಜನ. "अभ्यवहरति"। "अभीत्थंभूतकथनेऽप्यभि वीप्साभिमुख्ययोः" विश्व०। "अभीत्थंभूतकथने चाभिमुख्याभिलाषयोः" मेदि०।

**अभिक** ಅಭಿಕ (वि०) ಕಾಮುಕ, ಸ್ತ್ರೀಲೋಲ. अभिकामयते—"कन्" (५-२-७४)। "सोऽधिकारमभिकः कुलोचितं काश्चन स्वयमवर्तयत्समाः" रघु० १९-४।

**अभिकाङ्क्षा** ಅಭಿಕಾಂಕ್ಷಾ (स्त्री०) ಇಚ್ಛೆ, ಅಭಿಲಾಷೆ, ಅಪೇಕ್ಷೆ. अभि + काक्षि (काङ्क्षायाम्) "अः" (३-३-१०३)।

**अभिकाङ्क्षित ಅಭಿಕಾಂಕ್ಷಿತ** (वि०) ಅಪೇಕ್ಷಿಸಲ್ಪಟ್ಟ. अभि + काक्षि (काङ्क्षायाम्) "क्तः" (३-२-१०२)।

**अभिकाङ्क्षिन् ಅಭಿಕಾಂಕ್ಷಿನ್** (वि०) ಅಪೇಕ್ಷಿಸುವ, ಆಸೆಪಡುವ. अभि + काक्षि (काङ्क्षायाम्) "णिनिः" (३-२-७८)। स्त्रियाम् "ङीप्" (४-१-५)।—काङ्क्षिणी —ಕಾಂಕ್ಷಿಣೀ.

**अभिकाम ಅಭಿಕಾಮ** (पु०) 1. ಅಭಿಲಾಷೆ, ಅಪೇಕ್ಷೆ. अभि + कमु (कान्तौ) "घञ्" (३-३-१८)। (वि०) 2. ಕಾಮಿಸುವ, ಪ್ರೀತಿಸುವ, ಕಾಮುಕ. अभि+कमु (कान्तौ) + णिङ् "अच्" (३-१-१३४)। "याचे त्वामभिकामाहं तस्मात्कुरु मम प्रियम्" भा०।

**अभिक्रम ಅಭಿಕ್ರಮ** (पु०) 1. ಪ್ರಾರಂಭ, ಉಪಕ್ರಮ. 2. ಧಾಳಿ, ಮೇಲೆಬೀಳುವುದು. 3. ಧೈರ್ಯದಿಂದ ಶತ್ರುಗಳ ಮೇಲೆ ಯುದ್ಧಕ್ಕೆ ಹೊರಡುವುದು. 4. ಏರುವುದು, ಹತ್ತುವುದು. अभि + क्रमु (पादविक्षेपे) भावे "घञ्" (३-३-१८)। "अभिक्रमो रणे यानमभीतस्य रिपून् प्रति"। "आरोहणं त्वभिक्रमः" अभि० चि०। (न०) 5. ಯುದ್ಧ. अभि + क्रमु अधि० "घञ्" (३-३-१२१)। (वि०) 6. ಪ್ರಾರಂಭಿಸಲ್ಪಟ್ಟ. कर्म० "घञ्" (३-३-१९)। "नेहाभिक्रमनाशोऽस्ति प्रत्यवायो न विद्यते" गीता २-४।

**अभिक्रमण ಅಭಿಕ್ರಮಣ** (न०) 1. ಧಾಳಿ, ಮೇಲೆ ಬೀಳುವುದು. अभि + क्रमु (पादविक्षेपे) "ल्युट्" (३-३-११५)। 2. ಪ್ರಾರಂಭ, ಉಪಕ್ರಮ.

**अभिक्रान्त ಅಭಿಕ್ರಾಂತ** (वि०) 1. ಪ್ರಾರಂಭಿಸಲ್ಪಟ್ಟ. 2. ಧಾಳಿಮಾಡಲ್ಪಟ್ಟ. अभि + क्रमु (पादविक्षेपे) "क्तः" (३-२-१०२)।

**अभिक्रान्ति ಅಭಿಕ್ರಾಂತಿ** (स्त्री०) 1. ಪ್ರಾರಂಭ, ಉಪಕ್ರಮ. 2. ಧಾಳಿ, ಮೇಲೆಬೀಳುವುದು. अभि+ क्रमु (पादविक्षेपे) "क्तिन्" (३-३-९४)। दीर्घः (६-४-१५)।

**अभिक्रान्तिन् ಅಭಿಕ್ರಾಂತಿನ್** (वि०) 1. ಪ್ರಾರಂಭಿಸುವ, ಉಪಕ್ರಮಿಸುವ. अभिक्रान्तमनेन "इनिः" (५-२-८८)। 2. ಧಾಳಿಮಾಡುವ, ಮೇಲೆಬೀಳುವ.

**अभिक्रोश ಅಭಿಕ್ರೋಶ** (पु०) 1. ನಿಂದೆ, ದೂಷಣೆ. 2. ಗಟ್ಟಿಯಾಗಿ ಕೂಗಿಕೊಳ್ಳುವುದು, ಕಿರುಚುವುದು, ಚೀರಾಟ. अभि + क्रुश (आह्वाने रोदने च) "घञ्" (३-३-१८)।

**अभिक्रोशक ಅಭಿಕ್ರೋಶಕ** (वि०) 1. ನಿಂದಿಸುವ, ದೂಷಿಸುವ. 2. ಗಟ್ಟಿಯಾಗಿ ಕೂಗಿಕೊಳ್ಳುವ, ಕಿರುಚುವ. अभि + क्रुश (आह्वाने रोदने च) "ण्वुल्" (३-३-१३३)।

**अभिख्या ಅಭಿಖ್ಯಾ** (स्त्री०) 1. ಕಾಂತಿ, ಪ್ರಕಾಶ, ಹೊಳಪು, ಶೋಭೆ. अभि + ख्या (प्रकथने) "अङ्" (३-३-१०६)। "काप्यभिख्या तयोरासीद्व्रजतोः शुद्धवेषयोः" रघु० १-४६। 2. ಕೀರ್ತಿ, ಯಶಸ್ಸು. 3. ಹೆಸರು. 4. ಮಾಹಾತ್ಮ್ಯ, ಮಹಿಮೆ. 5. ಬುದ್ಧಿ. "अभिख्या तु शोभायां कीर्तिसंज्ञयोः" हेम०।

**अभिख्यात ಅಭಿಖ್ಯಾತ** (वि०) ಪ್ರಸಿದ್ಧನಾದ, ಹೆಸರು ಪಡೆದ, ಕೀರ್ತಿಶಾಲಿಯಾದ.

**अभिख्यान ಅಭಿಖ್ಯಾನ** (न०) ಕೀರ್ತಿ, ಯಶಸ್ಸು.

**अभिगच्छत् ಅಭಿಗಚ್ಛತ್** (वि०) ಹೊರಡುವ, ಎದುರಾಗಿ ಹೋಗುವ. अभि + गम्लृ (गतौ) "शतृ" (३-२-१२४)। "अभिगच्छन् यदुपुङ्गवं दिदृक्षुः" याद० १५-१।

**अभिगत ಅಭಿಗತ** (वि०) 1. ಎದುರಾಗಿ ಹೋದ. 2. ಅನುಕೂಲವಾಗಿ ಒದಗಿದ. अभि + गम्लृ (गतौ) "क्तः" (३-४-७२)। 3. ಸೇವಿಸಲ್ಪಟ್ಟ. 4. ಕೂಡಿರುವ, ಸಹಿತವಾದ. "अभिगतमुषया तदानिरुद्धम्" याद० १८-१३५।

**अभिगन्तव्य ಅಭಿಗಂತವ್ಯ** (वि०) ಹೊಂದಲು ಯೋಗ್ಯನಾದ, ಸಮೀಪಿಸಲ್ಪಡುವ. अभि + गम्लृ (गतौ) "तव्यः" (३-१-९६)।

**अभिगन्तृ ಅಭಿಗಂತೃ** (वि०) 1. ಎದುರಾಗಿ ಹೋಗುವ. 2. ಅನುಕೂಲವಾಗಿ ಹೋಗುವ. 3. ಯುದ್ಧಕ್ಕಾಗಿ ಎದುರುಗೊಂಡು ಹೋಗುವ. अभि + गम्लृ (गतौ) "तृच्" (३-१-१३३)।

**अभिगम ಅಭಿಗಮ** (पु०) 1. ಎದುರಾಗಿ ಹೋಗುವುದು, ಆಗಮನ, ಬರುವುದು. "तवार्हतो नाभिगमेन तृप्तं मनो नियोगक्रिययोत्सुकं मे" रघु० ५-११। 2. ಅನುಕೂಲವಾಗಿ ಹೋಗುವುದು, ಅನುಕೂಲ ಪ್ರವೇಶ, ಅನುಕೂಲ ಸಮಾಗಮ. अभि + गम्लृ (गतौ) "अप्" (३-३-५८)।

**अभिगम्य ಅಭಿಗಮ್ಯ** (वि०) 1. ಸುಖವಾಗಿ ಹೊಂದಲು ಶಕ್ಯನಾದ, ಸುಲಭವಾಗಿ ಸಮೀಪಿಸಬಹುದಾದ. अभिगन्तुं शक्यः — अभि + गम्लृ (गतौ) "यत्"

(३-१-९८)। "अधृष्यश्चाभिगम्यश्च यादोरत्नैरिवार्णवः" रघु० १-१६। (अव्य०) 2. ಹೊಂದಿ, ಎದುರಾಗಿ ಹೋಗಿ. "मनुमेकाग्रमासीनमभिगम्य महर्षयः" मनु० १-१।

**अभिगामिन्** **ಅಭಿಗಾಮಿನ್** (वि०) ಅಭಿಮುಖವಾಗಿ ಹೋಗುವ, ಸುಲಭವಾಗಿ ಸಮೀಪಿಸುವ. अभि+गम्लृ (गतौ) "णिनिः" (३-१-१३४)। "ऋतुकालाभिगामी स्यात् स्वदारनिरतः सदा" मनु० ३-४५।

**अभिगुप्ति** **ಅಭಿಗುಪ್ತಿ** (स्त्री०) ರಕ್ಷಣೆ, ಕಾಪಾಡುವುದು. अभि + गुपू (रक्षणे) "क्तिन्" (३-३-९४)।

**अभिगोप्तृ** **ಅಭಿಗೋಪ್ತೃ** (वि०) ರಕ್ಷಿಸುವ. ಕಾಪಾಡುವ. अभितो गोपायति — अभि + गुपू (रक्षणे) "तृच्" (३-१-१३३)।

**अभिग्रस्त** **ಅಭಿಗ್ರಸ್ತ** (वि०) 1. ಆಕ್ರಮಿಸಲ್ಪಟ್ಟ, ಹಿಡಿಯಲ್ಪಟ್ಟ. 2. ತಿನ್ನಲ್ಪಟ್ಟ, ನುಂಗಲ್ಪಟ್ಟ. अभि + ग्रसु (अदने) "क्तः" (३-२-१०२)।

**अभिग्रह** **ಅಭಿಗ್ರಹ** (पु०) 1. ಲೂಟಿಮಾಡುವುದು, ಕೊಳ್ಳೆಹೊಡೆಯುವುದು, ದರೋಡೆ. 2. ಧಾಳಿ, ಮೇಲೆಬೀಳುವುದು. 3. ಗೌರವ, ಮರ್ಯಾದೆ. 4. ಯುದ್ಧ. 5. ದೂರು, ಫಿರ್ಯಾದು. अभि+ग्रह (उपादाने) "अप्" (३-३-५८)। "अभिग्रहस्तु गौरवे। अभियोगेऽभिग्रहणे" हेम०। "अभिहारस्त्वभिग्रहः" वैज०।

**अभिग्रहण** **ಅಭಿಗ್ರಹಣ** (न०) "अभिग्रह" ಪದದ ಅರ್ಥ. अभि + ग्रह (उपादाने) "ल्युट्" (३-३-११५)।

**अभिघर्षण** **ಅಭಿಘರ್ಷಣ** (न०) ಪರಸ್ಪರ ಹೊಡೆದಾಟ, ತಿಕ್ಕಾಟ, ದುರಾಗ್ರಹದಿಂದ ಹೋರಾಟ. अभि + घृषु (संघर्षे) "ल्युट्" (३-३-११५)।

**अभिघात** **ಅಭಿಘಾತ** (पु०) 1. ಸಂಪೂರ್ಣವಾಗಿ ನಿರ್ಮೂಲಮಾಡುವುದು, ಬುಡಸಹಿತ ನಾಶಪಡಿಸುವುದು. अभि+हन (हिंसागत्योः) "घञ्" (३-३-१८)। 2. ಏಟು, ಪೆಟ್ಟು, ಹೊಡೆತ. "तटाभिघातादिव लग्नपङ्के" कुमा० ७-४९। 3. ಶಬ್ದವನ್ನುಂಟುಮಾಡುವ ಎರಡು ವಸ್ತುಗಳ ಸಂಯೋಗ. [ಯಾವ ಎರಡು ವಸ್ತುಗಳ ಸಂಯೋಗದಿಂದ ಶಬ್ದವುಂಟಾಗುವುದೋ ಮತ್ತು ಆ ಎರಡು ವಸ್ತುಗಳನ್ನು ಯಾವ ಸಂಯೋಗವು ಬೇರ್ಪಡಿಸಲು ಕಾರಣವಾಗುವುದೋ ಅಂತಹ ಸಂಯೋಗವೇ ಅಭಿಘಾತವು.]

**अभिघातक** **ಅಭಿಘಾತಕ** (पु०) 1. ಶತ್ರು, ವೈರಿ, ಹಗೆ. (वि०) 2. ಅಭಿಘಾತವನ್ನುಂಟುಮಾಡುವ. 3. ಬುಡಸಹಿತ ನಾಶಮಾಡುವ. अभि + हन (हिंसागत्योः) "ण्वुल्" (३-१-१३३)।

**अभिघातिन्** **ಅಭಿಘಾತಿನ್** (पु०) 1. ಶತ್ರು, ವೈರಿ, ಹಗೆ. (वि०) 2. ಅಭಿಘಾತವನ್ನುಂಟುಮಾಡುವ. 3. ಬುಡಸಹಿತ ನಾಶಮಾಡುವ. अभि + हन (हिंसागत्योः) "णिनिः" (३-२-७८)। स्त्रियाम् "ङीप्" (४-१-५)। —घातिनी—ಘಾತಿನೀ.

**अभिघार** **ಅಭಿಘಾರ** (पु०) 1. ಘೃತಸೇಚನೆ, ಹವಿಸ್ಸಿಗೆ ತುಪ್ಪಹಾಕುವುದು. 2. ಘೃತಸೇಚನೆಯಿಂದಾಗುವ ಒಂದು ಸಂಸ್ಕಾರ (ಶುದ್ಧಿ). अभि + घृ (सेचने) + णिच् भावे "घञ्" (३-३-१८)। 3. ಘೃತ, ತುಪ್ಪ. अभि+ घृ कर्म० "घञ्" (३-३-१९)।

**अभिचर** **ಅಭಿಚರ** (पु०) 1. ಭೃತ್ಯ, ಸೇವಕ, ಚಾಕರ, ಆಳು. अभि + चर (गतौ) "अच्" (३-१-१३४)। (वि०) 2. ಸುತ್ತಲೂ ಸಂಚರಿಸುವ. स्त्रियाम् "टाप्" (४-१-४)। —चरा—ಚರಾ.

**अभिचरण** **ಅಭಿಚರಣ** (पु०) ಶತ್ರುಗಳ ನಾಶಕ್ಕಾಗಿ ಮಾಡುವ ಅಭಿಚಾರಕೃತ್ಯ, ಮಾಟ, ಶ್ಯೇನಯಾಗ ಮೊದಲಾದುದು. अभि + चर (गतौ) "ल्युट्" (३-३-११५)। "कौटिल्यः कोपनोऽपि स्वयमभिचरणे ज्ञातदुःखः प्रतिज्ञाम्" मुद्रा० ४-१२।

**अभिचरणीय** **ಅಭಿಚರಣೀಯ** (वि०) ಮಾಟ ಮೊದಲಾದ ಮಾಂತ್ರಿಕನ ಕಾರ್ಯಕ್ಕೆ ಗುರಿಯಾಗುವ, ಅಭಿಚಾರಕೃತ್ಯಕ್ಕೆ ಯೋಗ್ಯನಾದ (ಶತ್ರು). अभि+चर (गतौ) "अनीयर्" (३-१-९६)।

**अभिचार** **ಅಭಿಚಾರ** (पु०) ಶತ್ರುಸಂಹಾರಕ್ಕಾಗಿ ಮಾಡುವ ಹೋಮ, ಹಿಂಸೆಯನ್ನುಂಟುಮಾಡುವ ಕಾರ್ಯ, ಮಾಟ. अभि + चर (गतौ) "घञ्" (३-३-१८)। "स्फुटमिदमभिचारमन्त्र एव प्रतियुवतेरभिधानमङ्गनानाम्" माघ० ७-५८।

**अभिचारिन्** **ಅಭಿಚಾರಿನ್** (वि०) ಮಾಟವನ್ನು ಮಾಡುವ, ಶತ್ರುವಿಗೆ ಹಿಂಸೆಯನ್ನುಂಟುಮಾಡುವ ಹೋಮಾದಿಗಳನ್ನು ನಡೆಸುವ. अभि + चर (गतौ) "णिनिः" (३-२-७८)। स्त्रियाम् "ङीप्" (४-१-५)। —चारिणी—ಚಾರಿಣೀ.

**अभिच्छाय** **ಅಭಿಚ್ಛಾಯ** (वि०) 1. ನೆರಳಿಗೆ ಎದುರಾಗಿರುವ. (अव्य०) 2. ನೆರಳಿಗೆ ಎದುರಾಗಿ.

**अभिजन** ಅಭಿಜನ (पुं०) 1. ವಂಶ, ಕುಲ. अभिजायतेऽस्मिन्—अभि+जनी (प्रादुर्भावे) "घञ्" (३-३-१२१)। "पतिं त्यक्त्वा देवं भुवनपतिमुच्चैरभिजनम्" मुद्रा० ६-६। 2. ಜನ್ಮಭೂಮಿ, ಹುಟ್ಟಿದ ಊರು. 3. ಪೂರ್ವಿಕರು (ತಾತ, ಮುತ್ತಾತ ಮೊದಲಾದವರು) ವಾಸ ಮಾಡುತ್ತಿದ್ದ ಜಾಗ. "यत्र पूर्वैरुषितं सोऽभिजनः" सि० कौ०। 4. ಕೀರ್ತಿ, ಯಶಸ್ಸು. अभिजायते सत्पुरुषो भवति येन—अभि+जनी कर० "घञ्" (३-३-१२१)। 5. ಸದ್ವಂಶ, ಒಳ್ಳೆಯ ಕುಲ. "स्तुतं तन्माहात्म्यं यदभिजनतो यच्च गुणतः" मालती० २-१३। 6. ಕುಲದ ಯಜಮಾನ, ವಂಶದಲ್ಲಿ ಶ್ರೇಷ್ಠನಾದವನು. "भवेदभिजनः ख्यातौ जन्मभूम्यां कुलध्वजे। कुलेऽपि च" मेदि०।

**अभिजनन** ಅಭಿಜನನ (न०) ಸತ್ಕುಲದಲ್ಲಿ ಹುಟ್ಟುವಿಕೆ.

**अभिजय** ಅಭಿಜಯ (पुं०) ವಿಜಯ, ಜಯಿಸುವುದು, ಗೆಲುವು. अभि+जि (जये) "अच्" (३-३-५६)।

**अभिजात** ಅಭಿಜಾತ (वि०) 1. ಸತ್ಕುಲದಲ್ಲಿ ಹುಟ್ಟಿದವನು. अभिमतं जातं यस्य। "जात्यस्तेनाभिजातेन शूरः शौर्यवता कुशः" रघु० १७-४। 2. ಪಂಡಿತ, ಜ್ಞಾನಿ. "संकीर्णं नाभिजातेषु नाप्रबुद्धेषु संस्कृतम्"। 3. ಮನೋಹರವಾದ, ಮಧುರವಾದ, ಇಂಪಾದ. "प्रजल्पितायामभिजातवाचि" कुमा० १-४५।

**अभिजाति** ಅಭಿಜಾತಿ (स्त्री०) ಶ್ರೇಷ್ಠವಾದ ಜನ್ಮ, ಸತ್ಕುಲದಲ್ಲಿ ಹುಟ್ಟುವುದು.

**अभिजित्** ಅಭಿಜಿತ್ (पुं०) 1. ವಿಷ್ಣು. 2. ಒಂದು ಯಾಗ. 3. ಒಂದು ನಕ್ಷತ್ರ. (न०) 4. ಪ್ರಯಾಣಕ್ಕೆ ಪ್ರಶಸ್ತವಾದ ಒಂದು ಲಗ್ನ. 5. ಅಭಿಜನ್ಮುಹೂರ್ತ, ಅಪರಾಹ್ಣ, ಕುತುಪಕಾಲ. "अपराह्णे तु संप्राप्ते अभिजिद्रोहिणोदये। यदत्र दीयते जन्तोस्तदक्षयमुदाहृतम्" मत्स्यपु०। (वि०) 6. ಎದುರಿಗೆ ನಿಂತು ಹೋರಾಡಿ ಶತ್ರುವನ್ನು ಜಯಿಸುವ. अभि जयति शत्रून्—अभि+जि (जये) "क्विप्" (३-२-६१)। 7. ಸಂಪೂರ್ಣವಾದ ಜಯಗಳಿಸುವ. अभिजयत्यनेन—कर० "क्विप्"। 8. ಅಭಿಜಿತ್ ನಕ್ಷತ್ರದಲ್ಲಿ ಹುಟ್ಟಿದ. अभिजिति जातः—अणो लुक् (४-३-३६)।

**अभिजित** ಅಭಿಜಿತ (पुं०) ಅರ್ಧ ರಾತ್ರಿಯಲ್ಲಿ ಬರುವ "अभिजित्" ಎಂಬ ಮುಹೂರ್ತ. "मुहूर्तेऽभिजिते प्राप्ते सार्धरात्रे विभूषिते। देवक्यजनयद्विष्णुं यशोदा तां तु कन्यकाम्" विष्णुपु०।

**अभिज्ञ** ಅಭಿಜ್ಞ (वि०) 1. ತಿಳಿದವನು, ಬಲ್ಲವನು, ಪಂಡಿತ. अभिजानाति—अभि+ज्ञा (अवबोधने) "कः" (३-१-१३६)। "यद्वा कौशलमिन्द्रसूनुदमने तत्राप्यभिज्ञो जनः" उ० रा० ५-३५। 2. ನಿಪುಣ, ಚತುರ, ಜಾಣ.

**अभिज्ञा** ಅಭಿಜ್ಞಾ (स्त्री०) 1. ಮೊದಲು ಉಂಟಾದ ತಿಳಿವಳಿಕೆ. 2. ಸ್ಮರಣೆ, ನೆನಪು. अभि+ज्ञा (अवबोधने) "अङ्" (३-३-१०६)।

**अभिज्ञात** ಅಭಿಜ್ಞಾತ (वि०) ಹಿಂದಿನ ಗುರುತಿನಿಂದ (ಸ್ಮರಣೆಯಿಂದ) ತಿಳಿಯಲ್ಪಟ್ಟ.

**अभिज्ञान** ಅಭಿಜ್ಞಾನ (न०) 1. ಲಕ್ಷಣ, ಹಿಂದಿನ ನೆನಪನ್ನುಂಟುಮಾಡುವ ಗುರುತು. अभिज्ञायतेऽनेन—अभि+ज्ञा (अवबोधने) कर० "ल्युट्" (३-३-११७)। "उपपन्नैरभिज्ञानैर्दूतं तमवगच्छत" रामा०। 2. ಸ್ಮರಣೆ, ನೆನಪು. अभि+ज्ञा भावे "ल्युट्" (३-३-११५)। (वि०) 3. ನೆನಪನ್ನುಂಟುಮಾಡುವ ವಸ್ತು. "तस्य भर्तुरभिज्ञानमङ्गुलीयं ददौ कपिः" रघु० १२-६२।

**अभिज्ञानपत्र** ಅಭಿಜ್ಞಾನಪತ್ರ (न०) ಪರಿಚಯಪತ್ರ, ಯೋಗ್ಯತೆಯನ್ನು ತಿಳಿಸುವ ಕಾಗದ, ಶಿಪಾರ್ಸಿನ ಕಾಗದ, ಗುಣವನ್ನು ತಿಳಿಸುವ ಕಾಗದ (Certificate).

**अभिज्ञानशाकुन्तल** ಅಭಿಜ್ಞಾನಶಾಕುಂತಲ (न०) ಕಾಳಿದಾಸನ ಪ್ರಸಿದ್ಧವಾದ "ಶಾಕುಂತಲ" ನಾಟಕ. अभिज्ञानेन गृहीता शकुन्तला। तामधिकृत्य कृतं नाटकम् "अण्" (४-३-८७)। [ದುಷ್ಯಂತಮಹಾರಾಜನು ಕಣ್ವಮಹರ್ಷಿಯ ಆಶ್ರಮದಲ್ಲಿ ಶಕುಂತಲೆಯನ್ನು ಗಾಂಧರ್ವ ರೀತಿಯಲ್ಲಿ ಮದುವೆಯಾಗಿ ದುರ್ವಾಸ ಮಹರ್ಷಿಯ ಶಾಪದಿಂದ ತಾನು ಶಕುಂತಲೆಯನ್ನು ಮದುವೆಯಾದುದನ್ನೇ ಮರೆತುಬಿಡುವನು. ಆಮೇಲೆ, ಮದುವೆಯಾದಾಗ ತಾನು ಅವಳಿಗೆ ಕೊಟ್ಟಿದ್ದ ಉಂಗುರದ ಗುರುತಿನಿಂದ ಮದುವೆಯಾದುದು ನೆನಪಿಗೆ ಬಂದು ಅವಳನ್ನು ಸ್ವೀಕರಿಸಿದ ವಿಷಯವನ್ನು ಕುರಿತು ರಚಿಸಿರುವುದರಿಂದ ಈ ನಾಟಕಕ್ಕೆ "अभिज्ञानशाकुन्तलम्" ಎಂದು ಹೆಸರಾಯಿತು.]

**अभिज्ञापक** ಅಭಿಜ್ಞಾಪಕ (वि०) ನೆನಪಿಗೆ ತರುವ, ನೆನಪನು ಂಟುಮಾಡುವ.

**अभितप्त** ಅಭಿತಪ್ತ (वि०) ಚೆನ್ನಾಗಿ ಕಾಯಿಸಲ್ಪಟ್ಟ, ಸುತ್ತಲೂ ಬಿಸಿ ಮಾಡಲ್ಪಟ್ಟ.

**अभितस्** ಅಭಿತಸ್ (अव्य०) 1. ಸಮೀಪದಲ್ಲಿ, ಹತ್ತಿರದಲ್ಲಿ. अभि "तसिल्" (५-३-९)। "ततो राजाब्रवीद्

वाक्यं सुमन्त्रमभितः स्थितम्" रामा०। 2. ಎದುರಿನಲ್ಲಿ, ಅಭಿಮುಖವಾಗಿ. "अभितः सदोऽथ हरिपाण्डवौ रथात्" माघ० १३-६१। 3. ಶೀಘ್ರವಾಗಿ, ಜಾಗ್ರತೆಯಾಗಿ. 4. ಎರಡು ಕಡೆಯಲ್ಲಿಯೂ. "अभितः क्षुभिताम्बुराशिधीरध्वनिराकृष्टसमूलपादपौघः" माघ० २०-५७। 5. ಸುತ್ತಲೂ, ಎಲ್ಲಾ ಕಡೆಯಲ್ಲಿಯೂ. "अभितोऽभ्यागतान् योद्धुं वीरान् रणविशारदान्" कुमा० १६-२१। 6. ಸಂಪೂರ್ಣವಾಗಿ, ಸಮಗ್ರವಾಗಿ. "अभितः शीघ्रसाकल्यसम्मुखोभयतोऽन्तिके" विश्व०।

**अभिताप ಅಭಿತಾಪ** (पुं०) ಹೆಚ್ಚು ಸೆಕೆ, ಅಧಿಕ ಸಂತಾಪ. "अभितापसंपदमथोष्णरुचिर्निजतेजसामसहमान इव" माघ० ९-१।

**अभिताम्र ಅಭಿತಾಮ್ರ** (वि०) ಬಹಳ ಕೆಂಪಾದ, ಅಚ್ಚ ಗೆಂಪಾದ. अभितः ताम्रम्। "अथधूमाभिताम्रं वृक्षशाखावलम्बिनम्" रघु० १५-४९।

**अभितोमुख ಅಭಿತೋಮುಖ** (वि०) ಎಲ್ಲಾ ಕಡೆಗೂ ವ್ಯಾಪಿಸುವ. (लाक्ष०)।

**अभिदर्शन ಅಭಿದರ್ಶನ** (नं०) 1. ಎದುರು ನೋಟ. 2. ಪ್ರತ್ಯಕ್ಷವಾಗಿ ನೋಡುವುದು. "ग्रामघाते हिताभङ्गे पथि मोषाभिदर्शने" मनु० ९-२७४।

**अभिद्रव ಅಭಿದ್ರವ** (पुं०) ವೇಗವಾಗಿ ಓಡುವುದು. अभि+द्रु (गतौ) "अप्" (३-३-५७)। भावे "ल्युट्" (३-३-११५)। –द्रवणम् –ದ್ರವಣವೂ.

**अभिद्रुह् ಅಭಿದ್ರುಹ್** (वि०) ದ್ರೋಹಮಾಡುವ, ಅಪಕಾರಮಾಡುವ. अभि + द्रुह (जिघांसायाम्) "क्विप्" (३-२-६१)।

**अभिद्रोह ಅಭಿದ್ರೋಹ** (पुं०) 1. ಅಪಕಾರ, ತೊಂದರೆ, ಹಿಂಸೆ. अभि+द्रुह (जिघांसायाम्)"घञ्"(३-३-१८)। "अभिद्रोहेण भूतानामर्जयन् गत्वरीः श्रियः" किरा० ११-२१। 2. ದೂಷಣೆ, ನಿಂದೆ, ಬೈಗಳು. "नामजातिग्रहं तेषामभिद्रोहेण कुर्वतः" मनु० ८-२७१। 3. ಮೋಸ.

**अभिधर्षण ಅಭಿಧರ್ಷಣ** (नं०) 1. ಹಿಂಸಿಸುವುದು. 2. ಅದುಮುವುದು, ಅಡಗಿಸುವುದು. 3. ಭೂತದ ಆವೇಶ.

**अभिधा ಅಭಿಧಾ** (स्त्री०) 1. ಶಬ್ದದಲ್ಲಿರುವ ಸಂಕೇತ ಅರ್ಥವನ್ನು ಕೊಡುವ ಒಂದು ಶಕ್ತಿ, ಶಬ್ದಕ್ಕಿರುವ ಅರ್ಥವನ್ನು ತಿಳಿಸುವ ಮೂರು ವಿಧ ಶಕ್ತಿಗಳಲ್ಲೊಂದು. अभि+डु धाञ् (धारणे) करं० "अङ्" (३-३-१०६)। "वाच्योऽर्थोऽभिधया बोध्यो लक्ष्यो लक्षणया मतः। व्यङ्ग्यो व्यञ्जनया ताः स्युः तिस्रः शब्दस्य शक्तयः" सा० द० २-३। 2. ಪದ, ಅರ್ಥವನ್ನು ಕೊಡುವ ಶಬ್ದ. 3. ನಾಮಧೇಯ, ಹೆಸರು. "कुसुमवसन्ताद्यभिधः" सा० द० ३-४२।

**अभिधान ಅಭಿಧಾನ** (नं०) 1. ನಾಮಧೇಯ, ಹೆಸರು. अभिधीयतेऽनेन — अभि+डु धाञ् (धारणे) "ल्युट्" (३-३-११७)। "तवाभिधानाद्व्यथते नताननः सुदुःसहान्मन्त्रपदादिवोरगः" किरा० १-२४। 2. ಕಥನ, ಹೇಳುವುದು. अभि+धाञ् भावे "ल्युट्"(३-३-११५)। 3. ನಿಘಂಟು, ಶಬ್ದಕೋಶ.

**अभिधानी ಅಭಿಧಾನೀ** (स्त्री०) ರಜ್ಜು, ಹಗ್ಗ. अभिधीयते आभिमुख्येन धीयतेऽनेन बन्धेनाऽनया — अभि+डु धाञ् (धारणे)"ल्युट्"(३-३-११७)। "ङीप्"(४-१-१५)।

**अभिधामूला ಅಭಿಧಾಮೂಲಾ** (स्त्री०) ಅಭಿಧಾ ಮೂಲವಾದ ವ್ಯಂಜನಾವೃತ್ತಿ. ಅಭಿಧಾಮೂಲ ಮತ್ತು ಲಕ್ಷಣಾಮೂಲಗಳೆಂದು ವ್ಯಂಜನಾವೃತ್ತಿಯು ಎರಡು ವಿಧ. "अनेकार्थस्य शब्दस्य संयोगाद्यैर्नियन्त्रिते। एकत्रार्थेऽन्यधीहेतुर्व्यञ्जना साऽभिधाश्रया" सा० द० २-१४। ಅನೇಕಾರ್ಥಗಳುಳ್ಳ ಶಬ್ದದ ಒಂದು ಅರ್ಥವು ಸಂಯೋಗಾದಿಗಳಿಂದ ನಿಯಂತ್ರಿತವಾದಾಗ ಮತ್ತೊಂದು ಅರ್ಥವನ್ನು ಕೊಡುವ ಶಕ್ತಿಯು "अभिधामूला व्यञ्जना" ಎನಿಸುವುದು. "सशङ्खचक्रो हरिः" ಎಂಬಲ್ಲಿ ಶಂಖ ಚಕ್ರಗಳ ಸಂಯೋಗದಿಂದ ಹರಿ ಶಬ್ದವು ವಿಷ್ಣುವಾಚಕವಾಗುವುದು. "भीमार्जुनौ" ಎಂಬಲ್ಲಿ ಭೀಮನ ಸಾಹಚರ್ಯದಿಂದ ಅರ್ಜುನಪದವು ಪೃಥಾಪುತ್ರನಾದ ಅರ್ಜುನವಾಚಕವಾಗುವುದು. ಈ ರೀತಿ ಒಂದು ಅರ್ಥವು ಸಂಯೋಗಾದಿಗಳಿಂದ ನಿಯಂತ್ರಿತವಾದಾಗ ಮತ್ತೊಂದು ಅರ್ಥವನ್ನು ಕೊಡುವ ಶಕ್ತಿಗೆ "अभिधामूला" ಎಂದು ಹೆಸರು. "गामाक्रम्य विभूतिभूषिततनू राजत्युमावल्लभः" ಎಂಬಲ್ಲಿ ಪ್ರಕರಣದಿಂದ "उमावल्लभ" ಶಬ್ದಕ್ಕೆ ಉಮಾದೇವಿಯ ಪತಿ ಭಾನುದೇವನೆಂಬ ಅರ್ಥವು ಅಭಿಧಾವೃತ್ತಿಯಿಂದ ನಿಯಂತ್ರಿತವಾಗಲಾಗಿ ವ್ಯಂಜನೆಯಿಂದ "ಗೌರೀಪತಿ" ರೂಪವಾದ ಅರ್ಥವುಂಟಾಗುವುದು. ಇದೇ ಅಭಿಧಾಮೂಲವ್ಯಂಜನೆ.

**अभिधायक ಅಭಿಧಾಯಕ** (वि०) ವಾಚಕ ಶಬ್ದ, ಅಭಿಧಾವೃತ್ತಿಯಿಂದ ಅರ್ಥವನ್ನು ಕೊಡುವ ಪದ. अभि+डु धाञ् (धारणे) "ण्वुल्" (३-३-१३३)।

**अभिधायिन्** ಅಭಿಧಾಯಿನ್ (वि०) 1. ಹೇಳುವ, ಮಾತನಾಡುವ. 2. ಶಬ್ದವನ್ನು ಪ್ರಯೋಗಿಸುವ. अभिधत्ते – अभि + डु धाञ् (धारणे) "णिनिः" (३-१-१३४)। स्त्रियाम् "ङीप्" (४-१-५)। –धायिनी – ಧಾಯಿನೀ.

**अभिधावक** ಅಭಿಧಾವಕ (वि०) ಎದುರಾಗಿ ಓಡಿ ಹೋಗುವ. अभि+धावु (गतिशुद्ध्योः) "ण्वुल्" (३-१-१३३)।

**अभिधित्सत्** ಅಭಿಧಿತ್ಸತ್ (वि०) ಮಾಡಬೇಕೆಂಬ ಅಪೇಕ್ಷೆ ಯುಳ್ಳ. अभि+डु धाञ् (धारणे) + सन् "शतृ" (३-२-१२४)। "अभिधित्सतः किमपि राहुवदनविकृतं व्यभाव्यत" माघ० १५-५१।

**अभिधित्सा** ಅಭಿಧಿತ್ಸಾ (स्त्री०) ಹೇಳಲು ಅಪೇಕ್ಷೆ, ಮಾಡಬೇಕೆಂಬ ಇಚ್ಛೆ. अभिधातुमिच्छा – अभि+डु धाञ् (धारणे) + सन् "अः" (३-३-१०२)।

**अभिधेय** ಅಭಿಧೇಯ (न०) 1. ಅರ್ಥ, ಅಭಿಧಾವೃತ್ತಿ ಯಿಂದ ಹೇಳುವ ಶಬ್ದಾರ್ಥ. अभि+डु धाञ् (धारणे) "यत्" (३-१-९७)। "अभिधेयाविनाभूतप्रतीतिलक्षणोच्यते" काव्यप्र०। 2. ಗ್ರಂಥದಲ್ಲಿ ಪ್ರತಿಪಾದಿಸ ಲ್ಪಡುವ ವಿಷಯ.

**अभिध्या** ಅಭಿಧ್ಯಾ (स्त्री०) 1. ಚಿಂತನೆ, ಆಲೋಚನೆ, ಧ್ಯಾನ. अभि+ध्यै(चिन्तायाम्)"अङ्"(३-३-१०६)। 2. ತೆಗೆದುಕೊಳ್ಳುವ ಆಸೆ. 3. ಇತರರ ಸ್ವತ್ತನ್ನು ಅಪಹರಿಸುವ ಆಸೆ. "अभिध्या तु परस्वेहा" अभि० चि०।

**अभिध्यान** ಅಭಿಧ್ಯಾನ (न०) "अभिध्या" ಪದದ ಅರ್ಥ. अभि+ध्यै (चिन्तायाम्) "ल्युट्" (३-३-११५)।

**अभिनद्ध** ಅಭಿನದ್ಧ (वि०) ಸುತ್ತಲೂ ಕಟ್ಟಲ್ಪಟ್ಟ. अभितो नद्धः–अभि+णह(बन्धने)"क्तः"(३-२-१०२)। "परिरम्भरुचि ततिर्जलानामभिनद्धा रसमानसारसेन" माघ० ६-७५।

**अभिनन्द** ಅಭಿನಂದ (पुं०) 1. ಆನಂದ, ಸಂತೋಷ. अभि+टु नदि (समृद्धौ) "घञ्" (३-३-१८)। 2. ಹೊಗಳಿಕೆ, ಪ್ರಶಂಸೆ. 3. ಅಲ್ಪಸುಖ, ಸುಖಲೇಶ. 4. ಪ್ರೋತ್ಸಾಹ. 5. ಈಶ್ವರ, ಪರಮಾತ್ಮ. अभितो नन्दः सुखं यस्मिन्। (वि०) 6. ಪ್ರೋತ್ಸಾಹಕ, ಪ್ರೇರಕ. 7. ಸಂತೋಷವುಂಟುಮಾಡುವ. अभिनन्दयति – अभि+नदि+णिच् "अच्" (३-१-१३४)।

**अभिनन्दन** ಅಭಿನಂದನ (न०) 1. ಪ್ರಶಂಸೆ, ಹೊಗಳಿಕೆ. अभि+टु नदि (समृद्धौ) भावे "ल्युट्" (३-३-११५)। 2. ಸಂತೋಷ, ಆನಂದ. (वि०) 3. ಸಂತೋಷ ಪಡಿಸುವ, ಆನಂದವುಂಟುಮಾಡುವ. 4. ಪ್ರಶಂಸಿ ಸುವ, ಹೊಗಳುವ. 5. ಪ್ರೋತ್ಸಾಹಿಸುವ, ಪ್ರೇರಿ ಸುವ. अभि+नदि+णिच् "ल्युः" (३-१-१३४)।

**अभिनन्दनीय** ಅಭಿನಂದನೀಯ (वि०) 1. ಹೊಗಳಿಕೆಗೆ ಅರ್ಹನಾದ. 2. ಹೊಗಳಲ್ಪಡುವ. 3. ಪ್ರೋತ್ಸಾಹಿಸ ಲ್ಪಡುವ. 4. ಪ್ರೋತ್ಸಾಹಕ್ಕೆ ಅರ್ಹನಾದ. अभि+टु नदि (समृद्धौ) "अनीयर्" (३-१-९६)।

**अभिनन्दित** ಅಭಿನಂದಿತ (वि०) 1. ಹೊಗಳಲ್ಪಟ್ಟ. 2. ಪ್ರೋತ್ಸಾಹಿಸಲ್ಪಟ್ಟ. अभि+टु नदि (समृद्धौ) "क्तः" (३-२-१०२)। "अभिनन्दितवृत्तिरार्यमिश्रैः" याद० १५-९४।

**अभिनन्दिन्** ಅಭಿನಂದಿನ್ (वि०) 1. ಸಂತೋಷಪಡುವ. अभि+टु नदि (समृद्धौ) "णिनिः" (३-२-७८)। 2. ಹೊಗಳುವ, ಪ್ರಶಂಸಿಸುವ. 3. ಪ್ರೋತ್ಸಾಹಿಸುವ. अभि + नदि "णिनिः" (३-१-१३४)। स्त्रियाम् "ङीप्" (४-१-५)। –नन्दिनी – ನಂದಿನೀ.

**अभिनन्द्य** ಅಭಿನಂದ್ಯ (वि०) 1. ಹೊಗಳಿಕೆಗೆ ಅರ್ಹ ನಾದ, ಪ್ರಶಂಸೆಗೆ ಯೋಗ್ಯನಾದ. अभि+टु नदि (समृद्धौ) "यत्" (३-१-९७)। "जनस्य साकेतनिवासिनस्तौ द्वावप्यभूतामभिनन्द्यसत्त्वौ" रघु० ५-३१। "गौरप्रभा गोत्रभिदाभिनन्द्या" याद० २-५१। (अव्य०) 2. ಹೊಗಳಿ, ಪ್ರಶಂಸೆಮಾಡಿ. अभि+ नदि "ल्यप्" (७-१-३७)।

**अभिनभ** ಅಭಿನಭ (अव्य०) ಅಂತರಿಕ್ಷಕ್ಕೆ ಅಭಿಮುಖ ವಾಗಿ, ಆಕಾಶಕ್ಕೆ ಎದುರಾಗಿ. अव्ययी० (२-१-१४)। "गुरुकाव्यानुगां बिभ्रच्चान्द्रीमभिनभः श्रियम्" माघ० २-२।

**अभिनम्र** ಅಭಿನಮ್ರ (वि०) ಬಗ್ಗಿರುವ, ಎದುರಾಗಿ ಬಗ್ಗಿದ. "इमां तटाशोकलतां च तन्वीं स्तनाभिरामस्तबकाभिनम्राम्" रघु० १३-३२।

**अभिनय** ಅಭಿನಯ (पुं०) 1. ಮನಸ್ಸಿನ ಅಭಿಪ್ರಾಯ ವನ್ನು ತಿಳಿಸುವ ಅಂಗಚೇಷ್ಟೆ (ಶರೀರವ್ಯಾಪಾರ). अभिनयत्यर्थान् अनेन – अभि+णीञ् (प्रापणे) "अच्" (३-३-५६)। "अभिनयान् परिचेतुमिवोद्यता मलयमारुतकम्पितपल्लवा" रघु० ९-३३। 2. ಇತರರ

(ರಾಮಾದಿಗಳ) ಅವಸ್ಥೆಯನ್ನು ಅನುಕರಿಸುವುದು, ರಂಗಸ್ಥಳದಲ್ಲಿ ತನ್ನ ಶರೀರವ್ಯಾಪಾರ ಭಾಷಣ ಮೊದಲಾದುವುಗಳಿಂದ ಮತ್ತೊಬ್ಬನು ಮಾಡಿದಂತೆ ಮಾಡುವುದು.

ಇಂತಹ ಅಭಿನಯವು ಆಂಗಿಕ, ವಾಚಿಕ, ಆಹಾರ್ಯ ಮತ್ತು ಸಾತ್ವಿಕಗಳೆಂದು ನಾಲ್ಕು ವಿಧ. (1) ಶರೀರ ವ್ಯಾಪಾರದಿಂದ ಮಾಡುವ ಅನುಕರಣವು ಆಂಗಿಕವು. (2) ಮಾತಿನಿಂದ ಮಾಡುವುದು ವಾಚಿಕವು. (3) ವೇಷಾದಿಗಳಿಂದ ಮಾಡುವ ಅನುಕರಣವು ಆಹಾರ್ಯವು. (4) ಸ್ತಂಭ, ಪ್ರಳಯ, ರೋಮಾಂಚ ಮೊದಲಾದ ಸಾತ್ತ್ವಿಕ ಭಾವಗಳಿಂದ ಉಂಟಾದ ಅನುಕರಣವು ಸಾತ್ತ್ವಿಕಾಭಿನಯ. "भवेदभिनयोऽवस्थानुकारः स चतुर्विधः। आङ्गिको वाचिकश्चैवमाहार्यः सात्त्विकस्तथा" सा० द० ६-२। "नर्तकीरभिनयातिलङ्घिनीः" रघु० १९-१४।

**अभिनव** ಅಭಿನವ (पुं०) 1. ಮುಖಸ್ತುತಿ, ಎದುರಿಗೆ ಹೊಗಳುವುದು, ಅಧಿಕಪ್ರಶಂಸೆ. (वि०) 2. ಹೊಸದಾದ, ನವೀನವಾದ, ನೂತನವಾದ. अभिनूयते—अभि+णु (स्तुतौ) "अप्" (३-३-५७)। "विरचिता मधुनोपवनश्रियामभिनवा इव पत्रविशेषकाः" रघु० ९-२९।

**अभिनवतामरस** ಅಭಿನವತಾಮರಸ (नं०) 1. ಹೊಸದಾದ ತಾವರೆ ಹೂವು. 2. ಹನ್ನೆರಡನೆಯ ಛಂದಸ್ಸಿನ ಒಂದು(ವರ್ಣ) ವೃತ್ತ. "अभिनवतामरसं नजजाद्यः" वृ० र०।

**अभिनवोद्भिद्** ಅಭಿನವೋದ್ಭಿದ್ (पुं०) ಅಂಕುರ. ಮೊಳಕೆ. उद्भिनत्ति भुवम्—उद्+भिदिर् (विदारणे) "क्विप्" (३-२-६१)। अभिनवश्चासौ उद्भिच्च।

**अभिनहन** ಅಭಿನಹನ (नं०) 1. ಸುತ್ತಲೂ ಕಟ್ಟುವುದು, ಭದ್ರವಾಗಿ ಕಟ್ಟುವುದು. 2. ಗಾಯಕ್ಕೆ ಕಟ್ಟುವ ಪಟ್ಟಿ. अभि+णह (बन्धने) भावे करं० वा "ल्युट्" (३-३-११५, ११७)।

**अभिनिधन** ಅಭಿನಿಧನ (वि०) 1. ನಾಶೋನ್ಮುಖವಾದ, ಅವಸಾನವನ್ನು ಎದುರು ನೋಡುವ. अभिगतो निधनम्। (अव्य०) 2. ನಾಶಕ್ಕೆ ಎದುರಾಗಿ.

**अभिनिधान** ಅಭಿನಿಧಾನ (नं०) ಅಭಿಮುಖವಾಗಿ ಇಡುವುದು. अभि+नि+डु धाञ् (धारणे) "ल्युट्" (३-३-११५)।

**अभिनिर्मुक्त** ಅಭಿನಿರ್ಮುಕ್ತ (पुं०) ಸೂರ್ಯಾಸ್ತಮಯ ಕಾಲದಲ್ಲಿ ಮಾಡಬೇಕಾದ (ಸಂಧ್ಯಾವಂದನಾದಿ) ಕಾರ್ಯವನ್ನು ಬಿಟ್ಟು ನಿದ್ರಿಸುವವನು. अभिभूय निर्मुक्तोऽस्तमितोऽर्कोऽस्य, अभि सर्वं सायन्तनं कर्म निश्चयेन मुक्तं येन वा। "सुप्ते यस्मिन्नस्तमेति सुप्ते यस्मिन्नुदेति च। अंशुमानभिनिर्मुक्ताभ्युदितौ तौ यथाक्रमम्" अम०।

**अभिनिर्याण** ಅಭಿನಿರ್ಯಾಣ (नं०) ಶತ್ರುವನ್ನು ಜಯಿಸಲು ಯುದ್ಧಕ್ಕಾಗಿ ಹೊರಡುವುದು. अभि+निर्+या (प्रापणे) "ल्युट्" (३-३-११५)।

**अभिनिर्वृत्त** ಅಭಿನಿರ್ವೃತ್ತ (वि०) ಉಂಟಾದ, ತಯಾರಾದ, ಸಿದ್ಧವಾದ, ಪೂರ್ಣವಾದ.

**अभिनिर्वृत्ति** ಅಭಿನಿರ್ವೃತ್ತಿ (स्त्री०) ನಿಷ್ಪತ್ತಿ, ತಯಾರಿಕೆ, ಪರಿಪೂರ್ಣತೆ. अभि+निर्+वृतु (वर्तने) "क्तिन्" (३-३-९४)।

**अभिनिविष्ट** ಅಭಿನಿವಿಷ್ಟ (वि०) 1. ತತ್ಪರನಾದ, ಆಸಕ್ತನಾದ. 2. ಚಿಂತೆಯಿಂದ ಕೂಡಿದ, ಯೋಚನೆಯಲ್ಲಿ ಮಗ್ನನಾದ. 3. ಆಗ್ರಹದಿಂದ ಕೂಡಿದ, ಹಠದಿಂದ ಕೂಡಿದ. अभि + नि + विश (प्रवेशने) "क्तः" (३-४-७२)। "अथवाभिनिविष्टबुद्धिषु" माघ० १६-४३।

**अभिनिवेश** ಅಭಿನಿವೇಶ (पुं०) 1. ಆಗ್ರಹ, ಹಠ. अभि+नि+विश (प्रवेशने) "घञ्" (३-३-१२१)। "अपेतयुद्धाभिनिवेशसौम्यो हरिर्हरिप्रस्थमथ प्रतस्थे" माघ० ३-१। 2. ತತ್ಪರತೆ, ಆಸಕ್ತಿ, ಉತ್ಸಾಹದಿಂದ ಕೂಡಿದ ಪ್ರಯತ್ನ. "अहो निरर्थकव्यापारेष्वभिनिवेशः" काद०।

**अभिनिवेशिन्** ಅಭಿನಿವೇಶಿನ್ (वि०) 1. ಆಗ್ರಹವುಳ್ಳ, ಹಠವುಳ್ಳ. 2. ಆಸಕ್ತಿಯುಳ್ಳ, ಉತ್ಸಾಹದಿಂದ ಕೂಡಿದ. अभि+नि+ विश (प्रवेशने) "णिनिः" (३-२-७८)।

**अभिनिष्क्रम** ಅಭಿನಿಷ್ಕ್ರಮ (पुं०) ಎದುರಾಗಿ ಹೊರಡುವುದು. अभि+निस्+क्रमु (पादविक्षेपे) "घञ्" (३-३-१८)। भावे "ल्युट्" (३-३-११५)। **–निष्क्रमणम्** –ನಿಷ್ಕ್ರಮಣಮ್.

**अभिनिष्क्रान्त** ಅಭಿನಿಷ್ಕ್ರಾಂತ (वि०) ಎದುರಾಗಿ ಹೊರಟ. अभि+निस्+क्रमु (पादविक्षेपे) "क्तः" (३-४-७२)।

**अभिनिष्टान** ಅಭಿನಿಷ್ಟಾನ(पु०) 1. ಅಕ್ಷರ. 2. ವಿಸರ್ಗ, ವರ್ಣಗಳ ಮುಂದೆ ಬರುವ ಎರಡು ಸೊನ್ನೆ. अभि+निस्+स्तन (देवशब्दे) "घञ्" (३-३-१२१)। "वर्णमात्रे विसर्गे चाभिनिष्टानः" त्रिकाण्ड०।

**अभिनिष्पतन** ಅಭಿನಿಷ್ಪತನ (न०) ಎದುರಾಗಿ ಹೊರಡುವುದು. अभि+निस्+पत्लृ (गतौ) "ल्युट्" (३-३-११५)।

**अभिनिष्पत्ति** ಅಭಿನಿಷ್ಪತ್ತಿ (स्त्री०) ಕಾರ್ಯಸಿದ್ಧಿ, ನೆರವೇರುವಿಕೆ, ಈಡೇರುವಿಕೆ. अभि+निस्+पद(गतौ) "क्तिन्" (३-३-९४)।

**अभिनिष्पन्न** ಅಭಿನಿಷ್ಪನ್ನ(वि०) ಸಿದ್ಧವಾದ, ನೆರವೇರಿದ, ಈಡೇರಿದ. अभि+निस्+पद(गतौ) "क्तः" (३-४-७२)।

**अभिनिह्नव** ಅಭಿನಿಹ್ನವ (पु०) ನಿಷೇಧ, ಸತ್ಯವನ್ನಡಗಿಸುವಿಕೆ, ಮರೆಮಾಚುವುದು. अभि + नि + ह्नुङ् (अपनयने) "अप्" (३-३-५७)।

**अभिनीत** ಅಭಿನೀತ (वि०) 1. ಯೋಗ್ಯವಾದ, ಯುಕ್ತವಾದ, ತಕ್ಕುದಾದ. 2. ಕೋಪವುಳ್ಳ, ಕುಪಿತನಾದ. 3. ಚೆನ್ನಾಗಿ ಮಾಡಲ್ಪಟ್ಟ. 4. ಪೂಜಿಸಲ್ಪಟ್ಟ. 5. ಅಲಂಕರಿಸಲ್ಪಟ್ಟ. 6. ಅನುಕರಿಸಲ್ಪಟ್ಟ, ಅಭಿನಯಿಸಲ್ಪಟ್ಟ. 7. ಎದುರಾಗಿ ತರಲ್ಪಟ್ಟ. अभि+णीञ् (प्रापणे) "क्तः" (३-४-७२, ३-२-१०२)। "अभिनीतस्तु न्याय्येऽमर्षिणि संस्कृते" हेम०।

**अभिनीति** ಅಭಿನೀತಿ (स्त्री०) 1. ಅಭಿನಯ, ಇತರರ ಅವಸ್ಥೆಯ ಅನುಕರಣ. 2. ಯುಕ್ತಿ. अभि+णीञ् (प्रापणे) "क्तिन्" (३-३-९४)। "सान्त्वपूर्वमभिनीतिहेतुकम्" किरा० १३-३६।

**अभिनेतव्य** ಅಭಿನೇತವ್ಯ (वि०) 1. ಶರೀರಾದಿ ವ್ಯಾಪಾರಗಳಿಂದ ಅನುಕರಿಸಲ್ಪಡಲು ಯೋಗ್ಯವಾದ. 2. ಅನುಕರಿಸಲ್ಪಡುವ. 3. ಎದುರಿಗೆ ಕರೆತರಲ್ಪಡುವ. अभि+णीञ् (प्रापणे) "तव्यः" (३-१-९६)।

**अभिनेतृ** ಅಭಿನೇತೃ (पु०) ನಟ, ಅಭಿನಯಮಾಡುವವನು, ಇತರರ ಅವಸ್ಥೆಯನ್ನು ಅನುಕರಿಸುವವನು. अभि+णीञ् (प्रापणे) "तृच्" (३-१-१३३)। स्त्रियाम् "ङीप्" (४-१-५)। –नेत्री –ನೇತ್ರೀ.

**अभिनेय** ಅಭಿನೇಯ (वि०) 1. ಶರೀರಾದಿ ವ್ಯಾಪಾರಗಳಿಂದ ಅನುಕರಿಸಲ್ಪಡುವ. 2. ಎದುರಿಗೆ ಕರೆತರಲು ಯೋಗ್ಯನಾದ. अभि+णीञ् (प्रापणे) "यत्" (३-१-९७)। "दृश्यं तत्राभिनेयम्" सा० द० ६-१।

**अभिन्न** ಅಭಿನ್ನ (वि०) 1. ಒಡೆಯಲ್ಪಡದ. 2. ಸೀಳಲ್ಪಡದ. 3. ವ್ಯತ್ಯಾಸಹೊಂದದ, ಏಕರೀತಿಯಾದ. "अभिन्नवर्णा गृहिणीव भव्या" याद० १८-८०। 4. ಒಡೆಯದಿರುವ, ಅಖಂಡವಾದ, ಪೂರ್ಣವಾದ. "अभिन्नमन्योन्यलयादकार्षीत्" याद० १८-३५।

**अभिन्नपुट** ಅಭಿನ್ನಪುಟ (पु०) ಹೊಸಚಿಗುರು. अभिन्नं पुटं यस्य। "दूर्वायवाङ्कुरप्लक्षत्वगभिन्नपुटोत्तरान्" रघु० १७-१२।

**अभिपत्ति** ಅಭಿಪತ್ತಿ (स्त्री०) ಸಿದ್ಧಿ, ನಿಷ್ಪತ್ತಿ, ಈಡೇರುವಿಕೆ. अभि+पद (गतौ) "क्तिन्" (३-३-९४)।

**अभिपन्न** ಅಭಿಪನ್ನ (वि०) 1. ಎದುರಿಗೆ ಬಂದಿರುವ. अभि+पद (गतौ) "क्तः" (३-४-७२)। 2. ರಕ್ಷಣೆಯನ್ನು ಅಪೇಕ್ಷಿಸಿ ಬಂದಿರುವ, ಮರೆಹೊಕ್ಕಿರುವ. "अभिपन्नः शरणार्थी" अभि० चि०। 3. ಆಪತ್ತಿಗೆ ಸಿಲುಕಿದ, ತೊಂದರೆಗೆ ಒಳಗಾದ. 4. ಅಪರಾಧ ಮಾಡಿದ. 5. ಹಿಡಿಯಲ್ಪಟ್ಟ, ನುಂಗಲ್ಪಟ್ಟ. "अभिपन्नोऽपराध्येऽभिद्रुते ग्रस्ते विपद्गते" विश्व०। "कालाभिपन्नाः सीदन्ति सिकतासेतवो यथा" रामा०। 6. ಹೊಂದಿರುವ, ಪಡೆದಿರುವ. "त्वमन्यमाकारमिवाभिपन्नः" किरा० ३-४५।

**अभिप्रणयन** ಅಭಿಪ್ರಣಯನ(न०) ವೇದೋಕ್ತರೀತಿಯಲ್ಲಿ ಅಗ್ನಿ ಮೊದಲಾದುವುಗಳ ಸಂಸ್ಕಾರ. अभिप्रणीयतेऽनेन —अभि+प्र+णीञ् (प्रापणे) "ल्युट्" (३-३-११५)।

**अभिप्रणीत** ಅಭಿಪ್ರಣೀತ (वि०) ವೇದೋಕ್ತರೀತಿಯಲ್ಲಿ ಸಂಸ್ಕೃತವಾದ (ಅಗ್ನಿ ಮೊದಲಾದುದು). अभितः प्रणीतः। "जज्वाल लोकस्थितये स राजा यथाध्वरे वह्निरिव प्रणीतः" भट्टि० १-४।

**अभिप्राय** ಅಭಿಪ್ರಾಯ (पु०) 1. ವಿಷ್ಣು. अभिमुखं (प्रलये) प्रैति जगदस्मिन्। "अभिप्रायः प्रियार्होऽर्हः प्रियकृत् प्रीतिवर्धनः" वि० स०। 2. ಮನೋಭಾವ, ಉದ್ದೇಶ, ಇಂಗಿತ, ಆಶಯ. अभि+प्रीञ् (तर्पणे) "घञ्" (३-३-१८)। "तेषां स्वं स्वमभिप्रायमुपलभ्य पृथक् पृथक्" मनु० ७-५७। 3. ಮತ, ಸಲಹೆ. (वि०) 4. ಎದುರಿಗೆ ಬರುವ, ಸಮೀಪಕ್ಕೆ ಬರುವ. अभि+प्र+इण् (गतौ) "अच्" (३-१-१३४)।

**अभिप्रेत** ಅಭಿಪ್ರೇತ (वि०) 1. ಅಪೇಕ್ಷಿಸಲ್ಪಟ್ಟ. 2. ಉದ್ದೇಶಿಸಲ್ಪಟ್ಟ. 3. ಅಂಗೀಕರಿಸಲ್ಪಟ್ಟ. अभि+प्र+इण् (गतौ) "क्तः" (३-२-१०२)।

**अभिप्रेप्सु ಅಭಿಪ್ರೇಪ್ಸು** (वि०) ಹೊಂದಲು ಅಪೇಕ್ಷಿಸುವ, ಪಡೆಯುವ ಆಸೆಯುಳ್ಳ. अभि+प्र+आप्लृ (व्याप्तौ)+सन्, "उः" (३-२-१६८)। "सहासनमभिप्रेप्सुरुत्कृष्टस्यापकृष्टजः" मनु० ८-२८१।

**अभिप्रोक्षण ಅಭಿಪ್ರೋಕ್ಷಣ** (न०) ನೀರು ಮೊದಲಾದುವುಗಳಿಂದ ಪ್ರೋಕ್ಷಿಸುವುದು, ಶಾಸ್ತ್ರೋಕ್ತವಾಗಿ ಮಂತ್ರಿಸಿದ ನೀರನ್ನು ಶುದ್ಧಿಗಾಗಿ ಚಿಮುಕಿಸುವುದು. अभि+प्र+उक्ष (सेचने) "ल्युट्" (३-३-११५)।

'**अभिप्लव ಅಭಿಪ್ಲವ** (पु०) 1. ಉಪದ್ರವ, ತೊಂದರೆ, ಕ್ಷೋಭೆ. 2. ಜಲಪ್ರಳಯ, ನೀರಿನಲ್ಲಿ ತೇಲುವುದು. अभि+ प्लुङ् (गतौ) "अच्" (३-१-१३४)।

**अभिप्लुत ಅಭಿಪ್ಲುತ** (वि०) 1. ಸುತ್ತಲೂ ನೆನೆಸಲ್ಪಟ್ಟ, ಚೆನ್ನಾಗಿ ನೀರಿನಲ್ಲಿ ಅದ್ದಲ್ಪಟ್ಟ. 2. ಎಲ್ಲಾ ಕಡೆಯಲ್ಲಿಯೂ ವ್ಯಾಪಿಸಿರುವ. अभि+प्लुङ् (गतौ) "क्तः" (३-२-१०२)।

**अभिभव ಅಭಿಭವ** (पु०) 1. ತಿರಸ್ಕಾರ. 2. ಅಪಮಾನ. अभि+भू (सत्तायाम्) "अप्" (३-३-५७)। "अभिभवोदितमन्युविदीपितः समभिसृत्य भृशं जवमोजसा" किरा० १८-७। "अलभ्यशोकाभिभवेयमाकृतिः" कुमा० ५-४३। 3. ಪರಾಜಯ, ಸೋಲು. "रघोरभिभवाशङ्कि चुक्षुभे द्विषतां मनः" रघु० ४-२१। 4. ಕುಗ್ಗುವುದು, ರೋಗಾದಿಗಳಿಂದ ಜ್ಞಾನತಪ್ಪುವುದು. भावे "ल्युट्" (३-३-११५)। –भवनम् –ಭವನವು್.

**अभिभावन ಅಭಿಭಾವನ** (न०) 1. ಸೋಲಿಸುವಿಕೆ. 2. ತಿರಸ್ಕರಿಸುವುದು. 3. ಅಪಮಾನಗೊಳಿಸುವುದು. अभि+भू (सत्तायाम्)+णिच् "ल्युट्" (३-३-११५)।

**अभिभावक ಅಭಿಭಾವಕ** (वि०) 1. ತಿರಸ್ಕರಿಸುವ. 2. ಅಪಮಾನಗೊಳಿಸುವ. 3. ಜಯಿಸುವ, ಸೋಲಿಸುವ. 4. ಜ್ಞಾನ ತಪ್ಪಿಸುವ. अभि+भू (सत्तायाम्) "ण्वुल्" (३-१-१३३)।

**अभिभाविन् ಅಭಿಭಾವಿನ್** (वि) "अभिभावक" ಪದದ ಅರ್ಥ. अभि+भू (सत्तायाम्) "णिनिः" (३-२-७८)। "सर्वातिरिक्तसारेण सर्वतेजोऽभिभाविना" रघु० १-१३।

**अभिभावुक ಅಭಿಭಾವುಕ** (वि०) "अभिभावक" ಪದದ ಅರ್ಥ. अभि+भू (सत्तायाम्) "उकञ्" (३-२-१५४)।

**अभिभाषण ಅಭಿಭಾಷಣ** (न०) ಸಂಭಾಷಣೆ, ಎದುರಿಗೆ (ಪರಸ್ಪರ) ಮಾತಾಡುವುದು. आभिमुख्येन भाषणम्।

**अभिभाषिन् ಅಭಿಭಾಷಿನ್** (वि०) ಸಂಭಾಷಣೆಮಾಡುವ, ಎದುರಿಗೆ (ಪರಸ್ಪರ) ಮಾತಾಡುವ. अभि + भाष (व्यक्तायां वाचि) "णिनिः" (३-२-७८)। "प्रसन्नमुखरागं तं स्मितपूर्वाभिभाषिणम्" रघु० १७-३१।

**अभिभू ಅಭಿಭೂ** (वि०) "अभिभावक" ಪದದ ಅರ್ಥ. अभि+भू (सत्तायाम्) "क्विप्" (३-२-७६)।

**अभिभूत ಅಭಿಭೂತ** (वि०) 1. ತಿರಸ್ಕರಿಸಲ್ಪಟ್ಟ. 2. ಸೋಲಿಸಲ್ಪಟ್ಟ. 3. ಅವಮಾನಗೊಳಿಸಲ್ಪಟ್ಟ. अभि+भू (सत्तायाम्) "क्तः" (३-२-१०२)।

**अभिभूति ಅಭಿಭೂತಿ** (स्त्री०) 1. ತಿರಸ್ಕಾರ, ಧಿಕ್ಕಾರ. 2. ಅಪಮಾನ, ಪರಾಭವ. 3. ಪರಾಜಯ, ಸೋಲು. अभि+भू (सत्तायाम्) "क्तिन्" (३-३-९४)। "अभिभूतिभयादसूनतः सुखमुज्झन्ति न धाम मानिनः" किरा० २-२०।

**अभिभूय ಅಭಿಭೂಯ** (अव्य०) 1. ತಿರಸ್ಕರಿಸಿ, ಧಿಕ್ಕರಿಸಿ. 2. ಸೋಲಿಸಿ. 3. ಅವಮಾನಗೊಳಿಸಿ.

**अभिमत ಅಭಿಮತ** (न०) 1. ಇಚ್ಛೆ, ಅಪೇಕ್ಷೆ. अभि+मन (ज्ञाने) भावे "क्तः" (३-३-११४)। "द्वीपादन्यस्मादपि मध्यादपि जलनिधेर्दिशोऽप्यन्तात्। आनीय झटिति घटयति विधिरभिमतमभिमुखीभूतः" रत्ना० १-६। 2. ಅಭಿಮಾನ. 3. ಅಭಿಪ್ರಾಯ, ಆಶಯ. (वि०) 4. ಸಮ್ಮತವಾದ, ಪ್ರಿಯವಾದ, ಇಷ್ಟವಾದ. अभि+मन (ज्ञाने) कर्म० "क्तः" (३-२-१०२)। "स माधवेनाभिमतेन सख्या" कुमा० ३-२३। 5. ಅಪೇಕ್ಷಿಸಲ್ಪಟ್ಟ. "अभिमतफलशंसी चारु पुस्फोर बाहुः" भट्टि० १-१७। 6. ಆದರಿಸಲ್ಪಟ್ಟ, ಪ್ರೀತಿಸಲ್ಪಟ್ಟ.

**अभिमति ಅಭಿಮತಿ** (स्त्री०) 1. ಆದರ, ಪ್ರೀತಿ. 2. ಅಭಿಮಾನ, ಅಹಂಕಾರ. 3. ಗೌರವ, ಸನ್ಮಾನ. 4. ಅಭಿಲಾಷೆ, ಅಪೇಕ್ಷೆ. अभि+मन (ज्ञाने) "क्तिन्" (३-३-९४)।

**अभिमनस् ಅಭಿಮನಸ್** (वि०) ವ್ಯಗ್ರ, ಆಸಕ್ತ, ತತ್ಪರನಾದ, ನೆಟ್ಟ ಮನಸ್ಸುಳ್ಳ. अभिमुखं मनो यस्य। "भवतोऽभिमनाः समीहते सरुषः कर्तुमुपेत्य माननाम्" माघ० १६-२।

**अभिमन्तव्य ಅಭಿಮಂತವ್ಯ** (वि०) 1. ತಿಳಿಯಲು ಯೋಗ್ಯವಾದ. 2. ತಿಳಿಯಲ್ಪಡುವ. अभि+मन (ज्ञाने) "तव्यः" (३-१-९६)।

**अभिमन्तृ** ಅಭಿಮಂತೃ (वि०) 1. ಅಹಂಕಾರಪಡುವ, ಹೆಮ್ಮೆಪಡುವ, ಸ್ವಾಭಿಮಾನದಿಂದ ಕೂಡಿದ. अभि+मन (ज्ञाने) "तृच्" (उ० २-९६)। 2. ಪ್ರೀತಿಸುವ. 3. ಗೌರವಿಸುವ.

**अभिमन्त्रण** ಅಭಿಮಂತ್ರಣ (न०) 1. ಮಂತ್ರವನ್ನು ಉಚ್ಚರಿಸಿ ಪವಿತ್ರಗೊಳಿಸುವುದು. 2. ಮಂತ್ರಿಸುವುದು, ಮೋಹಗೊಳಿಸುವುದು, ವಶಪಡಿಸುವುದು. अभि+मत्रि (गुप्तपरिभाषणे) भावे "ल्युट्" (३-३-११५)।

**अभिमन्त्र्य** ಅಭಿಮಂತ್ರ್ಯ (अव्य०) 1. ಮಂತ್ರವನ್ನು ಉಚ್ಚರಿಸಿ. 2. ಅಭಿಮಂತ್ರಣಮಾಡಿ, ಪವಿತ್ರಗೊಳಿಸಿ. अभि+मत्रि (गुप्तपरिभाषणे) "ल्यप्" (७-१-३७)।

**अभिमन्यु** ಅಭಿಮನ್ಯು (पु०) ಅರ್ಜುನನ ಮಗನಾದ ಅಭಿಮನ್ಯು, ಶ್ರೀಕೃಷ್ಣನ ಸಹೋದರಿಯಾದ ಸುಭದ್ರೆಯ ಮಗ. [ಮಹಾಭಾರತ ಯುದ್ಧದಲ್ಲಿ ಬಹಳ ಪರಾಕ್ರಮಿಯಾದ ಇವನು, ಅರ್ಜುನನು ಸಮೀಪದಲ್ಲಿಲ್ಲದಕಾಲದಲ್ಲಿ ಕೌರವರಿಂದ ಚಕ್ರವ್ಯೂಹದಲ್ಲಿ ಸೇರಿಸಲ್ಪಟ್ಟು ಹತನಾದನು.]

**अभिमर** ಅಭಿಮರ (पु०) 1. ಯುದ್ಧ. अभिम्रियतेऽत्र—अभि + मृङ् (प्राणत्यागे) "घः" (३-३-११८)। 2. ತನ್ನ ಸೈನ್ಯದಿಂದ ಉಂಟಾಗುವ ಭಯ. 3. ವಧೆ, ಕೊಲ್ಲುವಿಕೆ. "भवेदभिमरो युद्धे वधे स्वबलसाध्वसे" मेदि०।

**अभिमर्द** ಅಭಿಮರ್ದ (पु०) 1. ಪುಡಿಮಾಡುವುದು. 2. ಹಿಂಡುವುದು, ಹಿಸುಕುವುದು. 3. ನಾಶಪಡಿಸುವುದು, ಧ್ವಂಸಮಾಡುವುದು. अभि+मृद (क्षोदे) भावे "घञ्" (३-३-१८)। 4. ಯುದ್ಧ. 5. ಮದ್ಯ. अभि+मृद अधि० "घञ्" (३-३-१२१)। (वि०) 6. ಪುಡಿಮಾಡುವ. 7. ನಾಶಪಡಿಸುವ. 8. ಹಿಂಡುವ, ಹಿಸುಕುವ.

**अभिमर्दन** ಅಭಿಮರ್ದನ (न०) "अभिमर्द" ಪದದ ಅರ್ಥ. अभि+मृद (क्षोदे) "ल्युट्" (३-३-११५)।

**अभिमर्श** ಅಭಿಮರ್ಶ (पु०) 1. ಸ್ಪರ್ಶ, ಸಂಪರ್ಕ, ಸಂಬಂಧ, ಮುಟ್ಟುವುದು. अभि+मृश (आमर्शने) "घञ्" (३-३-१८)। "फलद्भिरुष्णांशुकराभिमर्शात्काशानवं धाम पतङ्गकान्तैः" माघ० ४-१६। 2. ಧಾಳಿಮಾಡುವುದು, ಮೇಲೆ ಬೀಳುವುದು. "पराभिमर्शो न तवास्ति कः करं प्रसारयेत्पन्नगरत्नसूचये" कुमा० ५-४३।

**अभिमर्शक** ಅಭಿಮರ್ಶಕ (वि०) 1. ಸ್ಪರ್ಶಮಾಡುವ, ಮುಟ್ಟುವ. 2. ಧಾಳಿಮಾಡುವ, ಮೇಲೆಬೀಳುವ. अभि + मृश (आमर्शने) "ण्वुल्" (३-१-१३३)। "न दुष्टः कश्चिदप्यासीत्परदाराभिमर्शकः" रामा०।

**अभिमर्शन** ಅಭಿಮರ್ಶನ (न०) "अभिमर्श" ಪದದ ಅರ್ಥ. अभि+मृश (आमर्शने) "ल्युट्" (३-३-११५)।

**अभिमर्शिन्** ಅಭಿಮರ್ಶಿನ್ (वि०) "अभिमर्शक" ಪದದ ಅರ್ಥ. अभि+मृश (आमर्शने) "णिनिः" (३-२-७८)। "त्वत्कलत्राभिमर्शी वैरास्पदं धनमित्रः" दशकु०।

**अभिमान** ಅಭಿಮಾನ (पु०) 1. ಗರ್ವ, ಅಹಂಕಾರ. अभि+मन (ज्ञाने) "घञ्" (३-३-१८)। "मुनिरस्मि निरागसः कुतो मे भयमित्येष न भूतयेऽभिमानः" किरा० १३-७। 2. ದರ್ಪ, ಆತ್ಮಗೌರವ. "सदाभिमानैकधना हि मानिनः" माघ० १-६७। "निघ्नन् प्रियं प्राणमिवाभिमानम्" किरा० ३-४१। 3. ಪ್ರಣಯ, ಪ್ರೀತಿ. 4. ಜ್ಞಾನ, ತಿಳಿವಳಿಕೆ. "उत्साहादिसमुद्बोधः साधारण्याभिमानतः" सा० द० ३-११। 4. ತಪ್ಪು ತಿಳಿವಳಿಕೆ, ಮಿಥ್ಯಾಜ್ಞಾನ, ತಪ್ಪುಭಾವನೆ. 5. ಹೆಮ್ಮೆ, ಸೊಕ್ಕು, ಕೊಬ್ಬು. "वयं स्वपक्षशिथिलाभिमानाः संवृत्ताः" माल० २। 6. ಹಿಂಸೆ, ತೊಂದರೆ, ಪೀಡೆ. "अभिमानस्त्वहंकृतौ। हिंसायां प्रणये ज्ञाने" हेम०।

**अभिमानशालिन्** ಅಭಿಮಾನಶಾಲಿನ್ (वि०) 1. ಗರ್ವವುಳ್ಳ, ಅಹಂಕಾರವುಳ್ಳ. अभिमानेन शालते—शाड़ (श्लाघायाम्) "णिनिः" (३-१-१३४)। "प्रभवन्त्यभिमानशालिनां मदमुत्तम्भयितुं विभूतयः" किरा० २-४८।

**अभिमानित** ಅಭಿಮಾನಿತ (न०) 1. ಸ್ತ್ರೀಪುರುಷರ ಕೂಡಿಕೆ, ಸಂಭೋಗ, ರತಿ, ಸುರತ. "सुरतं त्वभिमानितम्" त्रिकाण्ड०। (वि०) 2. ಆತ್ಮಗೌರವವುಳ್ಳ. 3. ಅಹಂಕಾರವುಳ್ಳ. अभिमानोऽस्य सञ्जातः "इतच्" (५-२-३६)।

**अभिमानिन्** ಅಭಿಮಾನಿನ್ (वि०) 1. ಅಹಂಕಾರವುಳ್ಳ, ಗರ್ವವುಳ್ಳ. अभिमानोऽस्यास्ति "इनिः" (५-२-११५)। 2. ಆತ್ಮಗೌರವವುಳ್ಳ, ಸ್ವಾಭಿಮಾನವುಳ್ಳ. "गुणानुरक्तामनुरक्तसाधनः कुलाभिमानी कुलजां नराधिपः" किरा० १-३१।

**अभिमाय** ಅಭಿಮಾಯ (पु०) ಅಜ್ಞಾನಿ, ತಿಳಿಗೇಡಿ, ತಿಳಿವಳಿಕೆಯಿಲ್ಲದ. मायामभिगतः।

**अभिमुख** ಅಭಿಮುಖ (वि०) 1. ಎದುರಾಗಿರುವ. अभिगतोमुखम्। "अभिमुखे मयि संहृतमीक्षणम्" शाकु० २-११। 2. ಸಮೀಪಿಸಿರುವ. 3. ಎದುರುಗೊಳ್ಳುವ, ಎದುರಾಗುವ. "प्रसादाभिमुखो वेधाः प्रत्युवाच दिवौकसः" कुमा० २-१६। (क्रि० वि०) 4. ಎದುರಿನಲ್ಲಿ, ಮುಂಭಾಗದಲ್ಲಿ, ಎದುರಾಗಿ. अभिगतो मुखम्। "कर्णं ददात्यभिमुखं मयि भाषमाणे" शाकु० १-२७। "तिष्ठन्मुनेरभिमुखं स विकीर्णधाम्नः" किरा० २-५९।

**अभिमुखीकरण** ಅಭಿಮುಖೀಕರಣ (न०) 1. ಎದುರಾಗಿ ಮಾಡಿಕೊಳ್ಳುವುದು. 2. ಸಂಬೋಧನೆ.

**अभिमृष्ट** ಅಭಿಮೃಷ್ಟ (वि०) 1. ಸ್ಪರ್ಶಮಾಡಲ್ಪಟ್ಟ, ಮುಟ್ಟಲ್ಪಟ್ಟ. अभि+मृश (आमर्शने) "क्तः" (३-२-१०२)। 2. ಧಾಳಿಮಾಡಲ್ಪಟ್ಟ. 3. ಬೆರಸಲ್ಪಟ್ಟ. 4. ಸೇರಿಸಲ್ಪಟ್ಟ, ಒಟ್ಟುಗೂಡಿಸಲ್ಪಟ್ಟ. 5. ಅಳಿಸಲ್ಪಟ್ಟ, ತೊಳೆಯಲ್ಪಟ್ಟ. अभि+मृजू (शुद्धौ) "क्तः" (३-२-१०२)।

**अभियाति** ಅಭಿಯಾತಿ (पु०) ಶತ್ರು, ಹಗೆ, ವೈರಿ. अभिमुखं (युद्धार्थं) याति—अभि+या (प्रापणे) "क्तिच्" (३-३-१७४)। "अभियातिपराराातिप्रत्यर्थिपरिपन्थिनः" अम०।

**अभियातृ** ಅಭಿಯಾತೃ (पु०) 1. ಶತ್ರು, ವೈರಿ, ಹಗೆ. (वि०) 2. ಎದುರಾಗಿ ಹೋಗುವ. अभि+या (प्रापणे) "तृच्" (३-१-१३३)।

**अभियान** ಅಭಿಯಾನ (न०) ಯುದ್ಧಕ್ಕಾಗಿ ಶತ್ರುವನ್ನು ಕುರಿತು ಮಾಡುವ ಪ್ರಯಾಣ. अभि+या (प्रापणे) "ल्युट्" (३-३-११५)।

**अभियायिन्** ಅಭಿಯಾಯಿನ್ (वि०) ಎದುರಾಗಿ ಹೋಗುವ. अभि+या (प्रापणे) "णिनिः" (३-१-१३४)। "रामाभियायिनां तेषां तदेवासीदमङ्गलम्" रघु० १२-४३।

**अभियुक्त** ಅಭಿಯುಕ್ತ (वि०) 1. ಅಭಿಜ್ಞ, ಪ್ರವೀಣ, ನಿಷ್ಣಾತ, ತಿಳಿದವನು. अभि+युजिर् (योगे) "क्तः" (३-२-१०२)। "नहि शक्यते दैवमन्यथाकर्तुमभियुक्तेनापि" काद०। 2. ತತ್ಪರ, ಆಸಕ್ತ, ಶ್ರದ್ಧೆಯುಳ್ಳವನು. "स्वस्वकर्मण्यधिकतरमभियुक्तः परिजनः" मुद्रा० १। 3. ಅವಧಾನವುಳ್ಳ, ನೆಟ್ಟಮನಸ್ಸುಳ್ಳ. "भवतु भूयोभूयोऽभियुक्तः स्वरव्यक्तिमुपलप्स्ये" मुद्रा० १। 4. (ಶತ್ರುವಿನಿಂದ) ಧಾಳಿಮಾಡಲ್ಪಟ್ಟ, ತಡೆದು ನಿಲ್ಲಿಸಲ್ಪಟ್ಟ. "स हि भृशमभियुक्तो यद्युपेयाद्विनाशम" मुद्रा० ३-२५। 5. ಅಪರಾಧಿ, ಪ್ರತಿವಾದಿ, ಆಪಾದಿಸಲ್ಪಟ್ಟವನು. 6. ವೃದ್ಧ, ಹಿರಿಯನು.

**अभियुज्** ಅಭಿಯುಜ್ (वि०) 1. ಧಾಳಿಮಾಡುವ, ಮೇಲೆಬೀಳುವ. अभि+युजिर् (योगे) "क्विप्" (३-२-६१)। 2. ಶತ್ರು, ವೈರಿ, ಹಗೆ.

**अभियोक्तव्य** ಅಭಿಯೋಕ್ತವ್ಯ (वि०) 1. ಎದುರಾಗಿ ಸೇರಿಸಲ್ಪಡುವ. 2. ಆಪಾದಿಸಲು (ತಪ್ಪುಹೊರಿಸಲು) ಯೋಗ್ಯನಾದ, ತಪ್ಪು ಹೊರಿಸಲ್ಪಡುವ, ಅಪರಾಧಿ, ಪ್ರತಿವಾದಿ. अभि+युजिर् (योगे) "तव्यः" (३-१-९६)। 3. ಧಾಳಿಮಾಡಲ್ಪಡುವ.

**अभियोक्तृ** ಅಭಿಯೋಕ್ತೃ (पु०) 1. ಶತ್ರು, ವೈರಿ, ಹಗೆ. अभि+युजिर् (योगे) "तृच्" (३-१-१३३)। "त्वय्युत्कृष्टबलेऽभियोक्तरि नृपे नन्दानुरक्ते पुरे" मुद्रा० ४-१५। 2. ವಾದಿ, ಅಪರಾಧ ಹೊರಿಸುವವನು. "अभियोक्ता न चेद्ब्रूयाद्बध्यो दण्डयश्च धर्मतः" मनु० ८-१२।

**अभियोग** ಅಭಿಯೋಗ (पु०) 1. ಅಭಿನಿವೇಶ, ಆಸಕ್ತಿ. अभि+युजिर् (योगे) "घञ्" (३-३-१८)। "अथ कस्यां कलायामभियोगो भवतः?"। 2. ಹೊಸದಾದ ಅವಮಾನ, ಸದ್ಯಃ ಒದಗಿದ ಪರಿಭವ. "अभियोगस्तु शपथे स्यादार्द्रे च पराभवे" विश्व०। "अभियोग इमान् महीभुजो भवता तस्य कृतः कृतावधेः" किरा० २-४६। 3. ಧಾಳಿ, ಮೇಲೆಬೀಳುವುದು, ಮುತ್ತಿಗೆ ಹಾಕುವುದು. "स प्रापदप्राप्तपराभियोगम्" कुमा० ७-५०। 4. ಆಪಾದನೆ, ತಪ್ಪುಹೊರಿಸುವುದು. "अभियोगमनिस्तीर्य नैनं प्रत्यभियोजयेत्" याज्ञ० २-९। 5. ಯುದ್ಧಕ್ಕಾಗಿ ಕರೆಯುವುದು. 6. ಉದ್ಯೋಗ, ಪ್ರಯತ್ನ. "निरुत्सुकानामभियोगभाजां समुत्सुकेवाङ्कमुपैति सिद्धिः" किरा० ३-४०। 7. ಶಪಥ, ಪ್ರತಿಜ್ಞೆ. 8. ತಡೆಗಟ್ಟುವುದು. "क्षुभितं वनगोचराभियोगात्" किरा० १३-१०। 9. ಅಭ್ಯಾಸ. "गुरुचर्यातपस्तन्त्रमन्त्रयोगाभियोगजाम्" मालती० ९-५३।

**अभियोगिन्** ಅಭಿಯೋಗಿನ್ (वि०) 1. ವಾದಿ, ಅಪರಾಧ ಹೊರಿಸುವವನು. अभि+युजिर् (योगे) "घिनुण्" (३-२-१४२)। "मिथ्याभियोगी द्विगुणमभियोगाद्धनं वहेत्" याज्ञ० २-११। 2. ಧಾಳಿಕಾರ, ಮುತ್ತಿಗೆಹಾಕುವವನು, ಮೇಲೆಬೀಳುವವನು. 3. ಆಸಕ್ತಿಯುಳ್ಳವನು, ಉತ್ಕಟೇಚ್ಛೆಯುಳ್ಳವನು.

**अभिरक्षण** ಅಭಿರಕ್ಷಣ (न०) ಸಂಪೂರ್ಣರಕ್ಷಣೆ, ಸುತ್ತಲೂ ಕಾಪಾಡುವುದು. अभितो रक्षणम्।

**अभिरक्षा** ಅಭಿರಕ್ಷಾ (स्त्री०) "अभिरक्षण" ಪದದ ಅರ್ಥ. अभि+रक्ष (पालने) "अः"(३-३-१०३)। "प्रशान्तबाधं दिशतोऽभिरक्षया" किरा० १-१८।

**अभिरक्षित** ಅಭಿರಕ್ಷಿತ (वि०) ಸಂಪೂರ್ಣವಾಗಿ ರಕ್ಷಿಸಲ್ಪಟ್ಟ, ಎಲ್ಲಾ ಕಡೆಯಲ್ಲಿಯೂ ಕಾಪಾಡಲ್ಪಟ್ಟ. अभितो रक्षितः।

**अभिरक्षितृ** ಅಭಿರಕ್ಷಿತೃ (वि०) ಸಂಪೂರ್ಣವಾಗಿ ಕಾಪಾಡುವ, ಎಲ್ಲಾ ಕಡೆಯಲ್ಲಿಯೂ ರಕ್ಷಣೆಯನ್ನು ಕೊಡುವ अभितो रक्षिता। "वर्णानामाश्रमाणां च राजा सृष्टोऽभिरक्षिता" मनु० ७-३५।

**अभिरत** ಅಭಿರತ (वि०) 1. ಹೆಚ್ಚು ಆಸಕ್ತಿಯುಳ್ಳ, ಬಹಳ ಶ್ರದ್ಧೆಯುಳ್ಳ. अभि+रमु (क्रीडायाम्) "क्तः" (३-४-७२)। 2. ಸಂತೋಷಗೊಂಡ, ಆನಂದ ಹೊಂದಿದ. "रेचितं परिजनेन महीयः केवलाभिरत-दम्पति धाम" माघ० १०-५५। 3. ವ್ಯಗ್ರ, ಕಾರ್ಯತತ್ಪರ. "आस्तृतेऽभिनवपल्लवपुष्पैरप्यनारतरताभि-रताभ्यः" माघ० १०-८९।

**अभिरति** ಅಭಿರತಿ (स्त्री०) 1. ಶ್ರದ್ಧೆ, ಆಸಕ್ತಿ. 2. ಸಂತೋಷ, ಆನಂದ. अभितो रतिः। "अविमृष्य-मेतदभिलष्य स द्विषतां वधेन विषयाभिरतिम्" किरा० ६-४४।

**अभिराज्** ಅಭಿರಾಜ್ (पु०) 1. ಚಕ್ರವರ್ತಿ, ಸಾರ್ವಭೌಮ. (वि०) 2. ಹೆಚ್ಚು ಪ್ರಕಾಶವುಳ್ಳ, ಬಹಳ ಪ್ರಕಾಶಮಾನವಾದ. अभितो राजते — राजृ (दीप्तौ) "क्विप्" (३-२-६१)।

**अभिराद्ध** ಅಭಿರಾದ್ಧ (वि०) ಸೇವಿಸಲ್ಪಟ್ಟ. अभि+राध (संसिद्धौ) "क्तः" (३-२-१०२)। "दशाननादी-नभिराद्धदेवतावितीर्णवीर्यातिशयान् हसत्यसौ" माघ० १-७१।

**अभिराद्धृ** ಅಭಿರಾದ್ಧೃ (वि०) ಸೇವಿಸುವ, ಆರಾಧಿಸುವ. अभि+राध (संसिद्धौ) "तृच्" (३-१-१३३)।

**अभिराम** ಅಭಿರಾಮ (वि०) 1. ಸುಂದರವಾದ, ಮನೋಹರವಾದ. अभिरमतेऽस्मिन् — अभि + रमु (क्रीडायाम्) "घञ्" (३-३-१२१)। "राम इत्यभि-रामेण वपुषा तस्य चोदितः" रघु० १०-६७। 2. ಮಧುರವಾದ, ಇಂಪಾದ. "मनोऽभिरामाः शृण्वन्तौ रथनेमिस्वनोन्मुखैः" रघु० १-३९। (क्रि० वि०) 3. ಸುಂದರವಾಗಿ, ಮನೋಹರವಾಗಿ, ಸೊಗಸಾಗಿ. "ग्रीवाभङ्गाभिरामं मुहुरनुपतति स्यन्दने बद्धदृष्टिः पश्चार्धेन प्रविष्टः शरपतनभयाद्भूयसा पूर्वकायम्" शाकु० १-७।

**अभिरुचि** ಅಭಿರುಚಿ (स्त्री०) ಇಚ್ಛೆ, ಅಪೇಕ್ಷೆ अभि अत्यन्ता रुचिः। "यशसि चाभिरुचिर्व्यसनं श्रुतौ" भर्तृ० २-६३।

**अभिरूप** ಅಭಿರೂಪ (पु०) 1. ವಿಷ್ಣು. 2. ಶಿವ, ಈಶ್ವರ. अभिरूपयति सर्वम् — अभि+रूप (रूपक्रियायाम्)+ णिच् "अच्" (३-१-१३४)। 3. ಚಂದ್ರ. 4. ಕಾಮ, ಮನ್ಮಥ. अभिरूपमस्य। (वि०) 5. ಮನೋಹರವಾದ, ಸುಂದರವಾದ. "उत्कृष्टायाभिरूपाय वराय सदृशाय च" मनु० ९-८८। 6. ಪಂಡಿತ, ಜ್ಞಾನಿ, ತಿಳಿವಳಿಕೆಯುಳ್ಳವನು. अभिगतं रूपं येन। "अभिरूप-भूयिष्ठा परिषदियम्" शाकु० १। 7. ಪ್ರಿಯವಾದ, ಅಚ್ಚುಮೆಚ್ಚಾದ. "यो यः प्रदेशः सख्या मेऽभिरूपस्तं तमालिखितुकामो भवेत्" शाकु० ६। 8. ಯುಕ್ತವಾದ, ಯೋಗ್ಯವಾದ, ತಕ್ಕುದಾದ, ಸಂಗತವಾದ.

**अभिलक्ष्य** ಅಭಿಲಕ್ಷ್ಯ (वि०) 1. ಗುರಿಯಿಡಲ್ಪಡುವ, ಉದ್ದೇಶಿಸಲ್ಪಡುವ. अभि+लक्ष (दर्शनाङ्कनयोः)+ णिच् "यत्" (३-१-९७)। (अव्य०) 2. ಲಕ್ಷ್ಯಕ್ಕೆ ಎದುರಾಗಿ ನೋಡಿ, ಗುರಿಯಿಟ್ಟು ನೋಡಿ. अभि+लक्ष "ल्यप्" (७-१-३७)। (क्रि० वि०) 3. ಲಕ್ಷ್ಯಕ್ಕೆ ಎದುರಾಗಿ, ಗುರಿಯ ಕಡೆಗೆ.

**अभिलङ्घन** ಅಭಿಲಂಘನ (न०) ಹಾರುವುದು, ದಾಟುವುದು, ನೆಗೆಯುವುದು. अभि+लघि (गतौ) "ल्युट्" (३-३-११५)।

**अभिलषणीय** ಅಭಿಲಷಣೀಯ (वि०) 1. ಅಪೇಕ್ಷಿಸಲು ಯೋಗ್ಯವಾದ. 2. ಅಪೇಕ್ಷಿಸಲ್ಪಡುವ. अभि+लष (कान्तौ) "अनीयर्" (३-१-९६)।

**अभिलषित** ಅಭಿಲಷಿತ (न०) 1. ಅಪೇಕ್ಷೆ, ಇಚ್ಛೆ, ಆಸೆ. अभि+लष (कान्तौ) भावे "क्तः"(३-३-११४)। "यथाभिलषितमनुष्ठीयताम्" पञ्चत०। (वि०) 2. ಅಪೇಕ್ಷಿಸಲ್ಪಟ್ಟ, ಇಷ್ಟವಾದ. अभि+लष (कान्तौ) (३-२-१०२)।

**अभिलाप** ಅಭಿಲಾಪ (पु०) 1. ಶಬ್ದಪ್ರಯೋಗ, ವಾಕ್ಯಪ್ರಯೋಗ, ಮಾತು. अभिलप्यतेऽनेन — अभि+लप

(व्यक्तायां वाचि) "घञ्" (३-३-१२१)। "भृशकुसुमशरेषुपातमोहादनवसितार्थपदाकुलोऽभिलापः" किरा० १०-६१। 2. ವಿವರಣೆ, ವಿಶೇಷ ನಿರ್ದೇಶ. 3. ಪ್ರಕಟನೆ, ಘೋಷಣೆ, ಪ್ರಸಿದ್ಧಪಡಿಸುವಿಕೆ.

**अभिलाष ಅಭಿಲಾಷ** (पु०) 1. ಇಚ್ಛೆ, ಅಪೇಕ್ಷೆ, ಆಸೆ. अभि+लष (कान्तौ) "घञ्" (३-३-१९)। "अतोऽभिलाषे प्रथमं तथाविधे मनो बबन्धान्यरसान् विलङ्घ्य सा" रघु० ३-४। 2. ಪ್ರೀತಿ, ಅನುರಾಗ. "अभिलाषमुदीरितेन्द्रियः" कुमा० ४-४१।

**अभिलाषिन् ಅಭಿಲಾಷಿನ್** (वि०) ಇಚ್ಛಿಸುವ, ಅಪೇಕ್ಷಿಸುವ, ಆಸೆಪಡುವ. अभि+लष (कान्तौ) "णिनिः" (३-१-१३४)। "जलाभिलाषी जलमाददानां छायेव तां भूपतिरन्वगच्छत्" रघु० २-६।

**अभिलाषुक ಅಭಿಲಾಷುಕ** (वि०) ಹೆಚ್ಚು ಆಸೆಪಡುವ, ಅಧಿಕವಾಗಿ ಆಸೆಪಡುವ. अभि + लष (कान्तौ) "उकञ्" (३-२-१५४)। "रभसादुदस्थुरथ युद्धमनुचितभियोऽभिलाषुकाः" माघ० १५-५९।

**अभिलिखित ಅಭಿಲಿಖಿತ** (नं०) 1. ಲೇಖನ, ಬರವಣಿಗೆ. अभि+लिख (अक्षरविन्यासे) भावे "क्तः" (३-३-११४)। (वि०) 2. ಬರೆಯಲ್ಪಟ್ಟ. कर्मं० "क्तः" (३-२-१०२)।

**अभिवन्दन ಅಭಿವಂದನ** (नं०) ವಿನಯಪೂರ್ವಕ ನಮಸ್ಕಾರ, ಗೌರವದಿಂದ ಮಾಡುವ ನಮಸ್ಕಾರ. अभिमुखं वन्दनम्।

**अभिवर्तन ಅಭಿವರ್ತನ** (नं०) ಸಮೀಪಿಸುವುದು, ಹತ್ತಿರಕ್ಕೆ ಹೋಗುವುದು, ಎದುರಾಗಿ ಹೋಗುವುದು. अभि+वृतु (वर्तने) "ल्युट्" (३-३-११५)।

**अभिवर्तिन् ಅಭಿವರ್ತಿನ್** (वि०) ಎದುರಾಗಿರುವ, ಅಭಿಮುಖವಾಗಿರುವ. अभि+ वृतु (वर्तने) "णिनिः" (३-१-१३४)। स्त्रियाम् "ङीप्" (४-१-५)। –वर्तिनी –ವರ್ತಿನೀ.

**अभिवर्धन ಅಭಿವರ್ಧನ** (नं०) 1. ಬೆಳೆಸುವುದು, ಹೆಚ್ಚಿಸುವುದು. अभि+वृधु (वृद्धौ) "ल्युट्" (३-३-११५)। (वि०) 2. ಬೆಳೆಸುವ, ಹೆಚ್ಚಿಸುವ. अभि+वृधु "ल्युः" (३-१-१३४)। स्त्रियाम् "टाप्" (४-१-४)। –वर्धना –ವರ್ಧನಾ.

**अभिवर्धिन् ಅಭಿವರ್ಧಿನ್** (वि०) ಬೆಳೆಸುವ, ಹೆಚ್ಚಿಸುವ. अभि+वृधु (वृद्धौ) "णिनिः" (३-३-१७०)। स्त्रियाम् "ङीप्" (४-१-५)। –वर्धिनी –ವರ್ಧಿನೀ.

**अभिवर्षण ಅಭಿವರ್ಷಣ** (नं०) 1. ಎಲ್ಲಾ ಕಡೆಯಲ್ಲಿಯೂ ಮಳೆಯಾಗುವುದು. 2. ಸುತ್ತಲೂ ಚಿಮುಕಿಸುವುದು. अभितो वर्षणम्।

**अभिवर्षिन् ಅಭಿವರ್ಷಿನ್** (वि०) 1. ಎಲ್ಲಾ ಕಡೆಯಲ್ಲಿಯೂ ಮಳೆಸುರಿಸುವ (ಮೋಡ). 2. ಸುತ್ತಲೂ ಚಿಮುಕಿಸುವ. अभितो वर्षति–वृषु (सेचने) "णिनिः" (३-२-७८)।

**अभिवाद ಅಭಿವಾದ** (पु०) ನಮಸ್ಕಾರ, ಪ್ರಣಾಮ. अभि+वद (व्यक्तायां वाचि) "घञ्" (३-३-१८)। "प्रत्युत्थानाभिवादाभ्यां पुनस्तान् प्रतिपद्यते" मनु० २-१२०।

**अभिवादक ಅಭಿವಾದಕ** (वि०) ನಮಸ್ಕರಿಸುವವನು. अभि+वद (व्यक्तायां वाचि) "ण्वुल्" (३-१-१३३)। "आयुष्मान् भव सौम्येति वाच्यो विप्रोऽभिवादकः" मनु० २-१२५।

**अभिवादन ಅಭಿವಾದನ** (नं०) ಗೌರವದಿಂದ ಮಾಡುವ ನಮಸ್ಕಾರ, ವಿನಯಪೂರ್ವಕವಾದ ನಮಸ್ಕಾರ, ತನ್ನ ಹೆಸರನ್ನು ಹೇಳಿ ನಮಸ್ಕಾರ ಮಾಡುವುದು. अभिमुखं वाद्यते आशीरनेन — अभि+वद (व्यक्तायां वाचि) +णिच् "ल्युट्" (३-३-११७)। "अभिवादनशीलस्य नित्यं वृद्धोपसेविनः। चत्वारि संप्रवर्धन्ते आयुर्विद्या यशो बलम्" मनु० २-१२१। [ಹಿರಿಯರನ್ನು ನಿತ್ಯವೂ ನಮಸ್ಕರಿಸುತ್ತ ಅವರಿಂದ ಆಶೀರ್ವಾದ ಪಡೆಯುವವನಿಗೆ ಆಯುಸ್ಸು, ವಿದ್ಯೆ, ಕೀರ್ತಿ ಮತ್ತು ಬಲ ಇವು ಅಭಿವೃದ್ಧಿ ಹೊಂದುವುವು.]

**अभिवाद्य ಅಭಿವಾದ್ಯ** (वि०) 1. ನಮಸ್ಕರಿಸಲು ಯೋಗ್ಯನಾದ. अभिवादयितुमर्हः — अभि+वद (व्यक्तायां वाचि) + णिच् "ण्यत्" (३-१-९७)। (अव्य०) 2. ಪ್ರಣಾಮಮಾಡಿ, ನಮಸ್ಕರಿಸಿ.

**अभिवाह्य ಅಭಿವಾಹ್ಯ** (नं०) 1. ಒಯ್ಯುವುದು. अभि+वह (प्रापणे) भावे "ण्यत्" (३-१-१२४)। "हव्यकव्याभिवाह्याय सर्वस्यास्य च गुप्तये" मनु० १-९४। (वि०) 2. ಸಮೀಪಕ್ಕೆ ಒಯ್ಯಲು ಯೋಗ್ಯವಾದ. 3. ಸಮೀಪಕ್ಕೆ ಒಯ್ಯಲ್ಪಡುವ. अभि+वह (प्रापणे) + णिच् "ण्यत्" (३-१-१२४)।

**अभिविधि ಅಭಿವಿಧಿ** (पु०) ವ್ಯಾಪ್ತಿ, ಸೇರಿಸಿಕೊಳ್ಳುವಿಕೆ, ಅಂತರ್ಗಣನ. अभितो विधिः व्याप्तिः। "आङ्मर्यादाभिविध्योः" पा०सू० (२-१-१३)। [ಮರ್ಯಾದೆಯು

ಅವಧಿಯನ್ನು ಬಿಟ್ಟು ಹೇಳುವುದು. ಅಭಿವಿಧಿಯು ಅವಧಿಯನ್ನು ಸೇರಿಸಿಕೊಳ್ಳುವುದು. ಅಲ್ಲಿಯವರೆಗೆ (ಅದನ್ನು ಬಿಟ್ಟು) ಎಂಬ ಅರ್ಥದಲ್ಲಿ ಮರ್ಯಾದೆಯೂ ಅದನ್ನು ಸೇರಿಸಿಕೊಂಡು ಎಂಬ ಅರ್ಥದಲ್ಲಿ ಅಭಿವಿಧಿಯೂ ಪ್ರಯೋಗಿಸಲ್ಪಡುವುದು." ಈ ಎರಡು ಅರ್ಥಗಳಲ್ಲಿಯೂ "आङ्" ಎಂಬ ಉಪಸರ್ಗವು ಪ್ರಯೋಗಿಸಲ್ಪಡುವುದು.] **ಉದಾ: ಮರ್ಯಾದೆಗೆ** "आमुक्तेः संसारः"। **ಅಭಿವಿಧಿಗೆ** "आबालं हरिभक्तिः"।

**अभिविनीत ಅಭಿವಿನೀತ** (वि०) 1. ಬಹಳ ವಿನಯವುಳ್ಳವನು, ಒಳ್ಳೆಯ ನಡತೆಯುಳ್ಳವನು. 2. ಸುಶಿಕ್ಷಿತ, ಚೆನ್ನಾಗಿ ಪಳಗಿಸಲ್ಪಟ್ಟ.

**अभिविश्रुत ಅಭಿವಿಶ್ರುತ** (वि०) ಪ್ರಸಿದ್ಧನಾದ, ಪ್ರಖ್ಯಾತಿ ಪಡೆದ, ಕೀರ್ತಿವಂತ.

**अभिवीक्षण ಅಭಿವೀಕ್ಷಣ** (न०) ಚೆನ್ನಾಗಿ ನೋಡುವುದು, ಸುತ್ತಲೂ ನೋಡುವುದು. अभितो वीक्षणम्।

**अभिवृत्ति ಅಭಿವೃತ್ತಿ** (स्त्री०) ಎದುರಾಗಿರುವುದು, ಅಭಿಮುಖವಾಗಿರುವುದು. अभि+वृतु (वर्तने) "क्तिन्" (३-३-९४)।

**अभिवृद्धि ಅಭಿವೃದ್ಧಿ** (स्त्री०) ಹೆಚ್ಚುವುದು, ಅಧಿಕವಾಗುವುದು, ಏಳಿಗೆ. अभि+वृधु (वृद्धौ) "क्तिन्" (३-३-९४)।

**अभिव्यक्त ಅಭಿವ್ಯಕ್ತ** (वि०) ಸ್ಪಷ್ಟವಾದ, ಪ್ರಕಾಶವಾದ, ಚೆನ್ನಾಗಿ ಕಾಣಿಸಿಕೊಂಡ. अभि+वि+अञ्जू (व्यक्तयादौ) "क्तः" (३-२-१०२)। "पूरप्यभिव्यक्तमुखप्रसादा शरीरबन्धेन तिरोबभूव" रघु० १६-२३।

**अभिव्यक्ति ಅಭಿವ್ಯಕ್ತಿ** (स्त्री०) ಸ್ಪಷ್ಟವಾಗಿ ಕಾಣುವಿಕೆ, ಪ್ರಕಟವಾಗಿರುವಿಕೆ, ಸೂಕ್ಷ್ಮರೂಪದಲ್ಲಿದ್ದುದು ಸ್ಥೂಲರೂಪದಿಂದ ಕಾಣಿಸಿಕೊಳ್ಳುವಿಕೆ. अभि+वि+अञ्जू (व्यक्तयादौ) "क्तिन्" (३-३-९४)।

**अभिव्यञ्जक ಅಭಿವ್ಯಂಜಕ** (वि०) 1. ಪ್ರಕಾಶಪಡಿಸುವ, ಸ್ಪಷ್ಟಪಡಿಸುವ, ಚೆನ್ನಾಗಿ ತಿಳಿಯಪಡಿಸುವ. अभि+अञ्जू (व्यक्तयादौ) "ण्वुल्" (३-१-१३३)। 2. ವ್ಯಂಜನಾವೃತ್ತಿಯಿಂದ ತಿಳಿಯಪಡಿಸುವ.

**अभिव्यापक ಅಭಿವ್ಯಾಪಕ** (वि०) ಎಲ್ಲಾ ಕಡೆಗೂ ವ್ಯಾಪಿಸುವ, ಎಲ್ಲಾ ಕಡೆಗೂ ಸಂಬಂಧಿಸುವ, ಸುತ್ತಲೂ ಹರಡುವ. अभि+वि+आप्लृ (व्याप्तौ) "ण्वुल्" (३-१-१३३)।

**अभिव्यापिन् ಅಭಿವ್ಯಾಪಿನ್** (वि०) "अभिव्यापक" ಪದದ ಅರ್ಥ. अभि+वि+आप्लृ (व्याप्तौ) "णिनिः" (३-२-७८)।

**अभिव्याप्ति ಅಭಿವ್ಯಾಪ್ತಿ** (स्त्री०) ಸುತ್ತಲೂ ಹರಡುವಿಕೆ, ಎಲ್ಲಾ ಕಡೆಗೂ ಸಂಬಂಧಪಡುವಿಕೆ. अभि+वि+आप्लृ (व्याप्तौ) "क्तिन्" (३-३-९४)।

**अभिव्याप्य ಅಭಿವ್ಯಾಪ್ಯ** (वि०) 1. ಸುತ್ತಲೂ ಹರಡಲ್ಪಡುವ, ಎಲ್ಲಾ ಕಡೆಯಲ್ಲಿಯೂ ಸೇರಿಸಲ್ಪಡುವ. अभि + वि + आप्लृ (व्याप्तौ) कर्म० "ण्यत्" (३-१-१२४)। (अव्य०) 2. ಎಲ್ಲಾ ಕಡೆಗೂ ಹರಡಿ, ಸುತ್ತಲೂ ಸೇರಿಕೊಂಡು. अभि+वि+आप्लृ "ल्यप्" (७-१-३७)।

**अभिव्याहार ಅಭಿವ್ಯಾಹಾರ** (पु०) ಸ್ಪಷ್ಟವಾದ ಉಚ್ಚಾರಣೆ, ಸ್ಫುಟವಾಗಿ ಮಾತಾಡುವುದು. अभि+वि+आ+हृञ् (हरणे) "घञ्" (३-३-१८)।

**अभिशंसन ಅಭಿಶಂಸನ** (न०) 1. ಅಪವಾದ, ದೋಷಾರೋಪ, ತಪ್ಪುಹೊರಿಸುವುದು. अभि+शंसु (स्तुतौ) "ल्युट्" (३-३-११५)। 2. ಎದುರಿಗೆ ಮಾತಾಡುವುದು. 3. ಪ್ರತ್ಯಕ್ಷವಾಗಿ ಕಠಿನವಾಗಿ ಮಾತಾಡುವುದು. "अभिशापोऽभिशंसनम्" वैज०।

**अभिशंसिन् ಅಭಿಶಂಸಿನ್** (वि०) 1. ಎದುರಿಗೆ ಕಠಿನವಾಗಿ ಮಾತಾಡುವ. 2. ಅಪವಾದವನ್ನು ಹೊರಿಸುವ, ಇಲ್ಲದ ದೋಷವನ್ನು ಹೇಳುವ. अभि+शंसु (स्तुतौ) "णिनिः" (३-२-७८)। "मिथ्याभिशंसिनो दोषो द्विः समो भूतवादिनः" याज्ञ० ३-२८४।

**अभिशङ्का ಅಭಿಶಂಕಾ** (स्त्री०) 1. ಸಂಶಯ, ಸಂದೇಹ. 2. ಭ್ರಾಂತಿ. अभि+शकि (शङ्कायाम्) "अः" (३-३-१०३)। "उपेयुषी कल्पलताभिशङ्कया कथं न्वितस्त्रस्यति षट्पदावलिः" किरा० ८-७।

**अभिशङ्कित ಅಭಿಶಂಕಿತ** (वि०) 1. ಭ್ರಾಂತಿಗೆ ವಿಷಯವಾದ. 2. ಸಂಶಯಕ್ಕೆ ಒಳಗಾದ. अभि+शकि (शङ्कायाम्) "क्तः" (३-२-१०२)।

**अभिशप्त ಅಭಿಶಪ್ತ** (वि०) ಶಪಿಸಲ್ಪಟ್ಟ, ಕೆಡಕುಂಟಾಗಲೆಂದು ಹಿರಿಯರ ಶಾಪಹೊಂದಿದ. अभि + शप (आक्रोशे) "क्तः" (३-२-१०२)। "न नामग्रहणं कुर्याज्जिनकस्य गुरोस्तथा। भार्याया अभिशप्तस्य कृपणस्य विशेषतः"।

**अभिशब्दित** ಅಭಿಶಬ್ದಿತ (वि०) 1. ಎದುರಿಗೆ ಕರೆಯಲ್ಪಟ್ಟ. 2. ಎದುರಿಗೆ ಹೇಳಲ್ಪಟ್ಟ. अभि आभिमुख्येन शब्दितः।

**अभिशस्त** ಅಭಿಶಸ್ತ (न०) 1. ಶಾಪ, ಬೈಗಳು. 2. ಹಿಂಸೆ, ತೊಂದರೆಪಡಿಸುವಿಕೆ. अभि+शसु (हिंसायाम्) भावे "क्तः" (३-३-११४)। (वि०) 3. ಮಹಾಪಾತಕಿಯೆಂದು ಮಿಥ್ಯಾಪವಾದಕ್ಕೆ ಗುರಿಯಾದ, ಜನರಿಂದ ದೂಷಿಸಲ್ಪಟ್ಟ. अभिशस्यते स्म — अभि+शंसु (स्तुतौ) "क्तः" (३-२-१०२)। "अभिशस्तस्य षण्डस्य पुंश्चल्या दाम्भिकस्य च। शुक्तं पर्युषितं चैव शूद्रस्योच्छिष्टमेव च" मनु० ४-२११। 4. ಹಿಂಸಿಸಲ್ಪಟ್ಟ, ತೊಂದರೆಪಡಿಸಲ್ಪಟ್ಟ. 5. ಶಪಿಸಲ್ಪಟ್ಟ. अभि+शसु कर्म० "क्तः" (३-२-१०२)।

**अभिशस्ति** ಅಭಿಶಸ್ತಿ (स्त्री०) 1. ಲೋಕಾಪವಾದ. 2. ಪರಸ್ತ್ರೀ ಸಂಗಮವಿಷಯದಲ್ಲಿ ಮಿಥ್ಯಾಪವಾದ, —ಚಾಡಿ ಹೇಳುವುದು. 3. ಯಾಚನೆ, ಬೇಡಿಕೆ. अभि+शंसु (स्तुतौ) "क्तिन्" (३-३-९४)। "अभिशस्तिः पुनर्लोकापवादे प्रार्थनेऽपि च" हेम०। 4. ಹಿಂಸೆ, ತೊಂದರೆ. अभि+शसु(हिंसायाम्)"क्तिन्"(३-३-९४)।

**अभिशाप** ಅಭಿಶಾಪ (पु०) 1. ಮಿಥ್ಯಾಪವಾದ, ಚಾಡಿ ಹೇಳುವಿಕೆ. 2. ಶಾಪ, ಬೈಗಳು. अभि+शप (आक्रोशे) "घञ्" (३-३-१८)।

**अभिश्रवण** ಅಭಿಶ್ರವಣ (न०) ಶ್ರಾದ್ಧಭೋಜನ ಮಾಡುತ್ತಿರುವಾಗ ಶ್ರವಣಮಾಡಿಸುವ ಮಂತ್ರ.

**अभिषङ्ग** ಅಭಿಷಂಗ (पु०) 1. ಪರಿಭವ, ಅಪಮಾನ. अभि+षञ्ज (सङ्गे) "घञ्" (३-३-१८)। "जाताभिषङ्गो नृपतिर्निषङ्गादुद्धर्तुमैच्छत्प्रसभोद्धृतारिः" रघु० २-३०। 2. ಶಾಪ, ಬೈಗಳು. 3. ಸಂಬಂಧ, ಸಂಪರ್ಕ. "मुहुरिति वरविभ्रमाभिषङ्गात्" माघ० ७-६८। 4. ಶಪಥ, ಪ್ರತಿಜ್ಞೆ. "अभिषङ्गस्त्वभिषवे सङ्ग आक्रोशनेऽपि च" वैज०। "अभिषङ्गः पुंल्लिगः पराभवाक्रोशशपथेषु" मेदि०।

**अभिषव** ಅಭಿಷವ (पु०) 1. ಸೋಮಲತೆಯನ್ನು ಕುಟ್ಟಿ ರಸವನ್ನು ಹಿಂಡುವುದು. 2. ಯಾಗದ ಸಲುವಾಗಿ ಮಾಡುವ ಸ್ನಾನ. 3. ಭಟ್ಟಿ ಇಳಿಸುವುದು, ಸಾರಾಯಿ ತೆಗೆಯುವುದು. 4. ಸ್ನಾನ. 5. ಸೋಮರಸದ ಪಾನ. 6. ಸೋಮರಸವನ್ನು ಹಿಂಡುವ ಬೆರಳು. 7. ಯಜ್ಞ. अभि+षुञ् (अभिषवे) "अप्" (३-३-५७)। "जपोपवासाभिषवैर्मुनीनाम्" किरा० ३-२८। "अभिषवः क्रतौ मद्यसन्धानस्नानयोरपि" हेम०।

**अभिषवण** ಅಭಿಷವಣ (न०) 1. ಸ್ನಾನ. अभि+षुञ् (अभिषवे) "ल्युट्" (३-३-११५)। "शिरसा हरिन्मणिनिभः स वहन् कृतजन्मनोऽभिषवणेन जटाः" किरा० ६-२३। 2. ಸೋಮರಸವನ್ನು ಹಿಂಡುವುದು.

**अभिषवणी** ಅಭಿಷವಣೀ (स्त्री०) ಸೋಮಲತೆಯಿಂದ ರಸವನ್ನು ತೆಗೆಯುವ ಸಾಧನ (ಯಂತ್ರ). अभि+षुञ् (अभिषवे)"ल्युट्"(३-३-११७)। "ङीप्"(४-१-१५)।

**अभिषिक्त** ಅಭಿಷಿಕ್ತ (वि०) 1. ಪಟ್ಟಾಭಿಷೇಕ ಮಾಡಲ್ಪಟ್ಟ (ದೊರೆ). 2. ಸ್ನಾನ ಮಾಡಿದ. अभि+षिच (क्षरणे) "क्तः" (३-२-१०२)। "सुधारसैरिवाम्भोभिरभिषिक्तो हुताशनः" कुमा० १०-३९।

**अभिषिषेणयिषा** ಅಭಿಷಿಷೇಣಯಿಷಾ (स्त्री०) ಸೇನೆಯೊಡನೆ ಶತ್ರುವಿನ ಮೇಲೆ ಯುದ್ಧಕ್ಕೆ ಹೊರಡುವ ಅಪೇಕ್ಷೆ. अभिषेणयितुमिच्छा — अभि+सेना+णिच्+सन् "अः" (३-३-१०२)।

**अभिषिषेणयिषु** ಅಭಿಷಿಷೇಣಯಿಷು (वि०) ಸೇನೆಯೊಡನೆ ಶತ್ರುವಿನ ಮೇಲೆ ಯುದ್ಧಕ್ಕೆ ಹೊರಡುವ ಅಪೇಕ್ಷೆಯುಳ್ಳ. अभिषेणयितुमिच्छुः — अभि+सेना+णिच्+सन् "उः" (३-२-१६८)। "अभिषिषेणयिषुं भुवनानि यः" माघ० ६-६४।

**अभिषुत** ಅಭಿಷುತ (न०) 1. ಗಂಜಿ, ಅಂಬಲಿ. "अवन्तिसोमं रक्षोघ्नं शुक्ताभिषुतकुञ्जलम्" वैज०।

**अभिषेक** ಅಭಿಷೇಕ (पु०) 1. ಪಟ್ಟಾಭಿಷೇಕ, ಮುಕುಟಾಭಿಷೇಕ. अभि + षिच (क्षरणे) भावे "घञ्" (३-३-१८)। "अथाभिषेकं रघुवंशकेतोः प्रारब्धमानन्दजलैर्जनन्योः" रघु० १४-७। 2. ಸ್ನಾನ. "कृताभिषेकैर्दिव्यायां त्रिस्रोतसि च सप्तभिः" रघु० १०-६३। 3. ಶಾಂತಿಗಾಗಿ ಮಾಡುವ ಪ್ರೋಕ್ಷಣೆ. 4. ದೇವತಾ ಪ್ರತಿಷ್ಠೆಗಾಗಿ ಮಾಡುವ ವಿಗ್ರಹದ ಅಭಿಷೇಕ. 5. ಪ್ರೋಕ್ಷಣೆ, ನೀರು ಚಿಮುಕಿಸುವುದು. 6. ಜಲ, ನೀರು. अभिषिच्यतेऽनेन — अभि+षिच (क्षरणे) कर० "घञ्" (३-३-१२१)।

**अभिषेक्तृ** ಅಭಿಷೇಕ್ತೃ (वि०) 1. ಪಟ್ಟಾಭಿಷೇಕ ಮಾಡುವವನು. 2. ನೀರನ್ನು ಪ್ರೋಕ್ಷಿಸುವವನು. अभि+षिच (क्षरणे) "तृच्" (३-१-१३३)। स्त्रियाम् "ङीप्" (४-१-५)। अभिषेक्त्री ಅಭಿಷೇಕ್ತ್ರೀ.

**अभिषेचन** ಅಭಿಷೇಚನ (नं०) "अभिषेक" ಪದದ ಅರ್ಥ. अभि+षिच (क्षरणे) "ल्युट्"(३-३-११५)। "अनुभूय वसिष्ठसंभृतैः सलिलैस्तेन सहाभिषेचनम्" रघु० ८-३।

**अभिषेचनीय** ಅಭಿಷೇಚನೀಯ (वि०) ಅಭಿಷೇಕಕ್ಕೆ ಯೋಗ್ಯನಾದ. अभि + षिच (क्षरणे) "अनीयर्" (३-१-९६)।

**अभिषेणन** ಅಭಿಷೇಣನ (नं०) ಶತ್ರುವಿಗೆ ಅಭಿಮುಖವಾಗಿ ಯುದ್ಧಕ್ಕಾಗಿ ದಂಡೆತ್ತಿ ಹೋಗುವುದು. अभि+सेना+णिच् "ल्युट्" (३-३-११५)।

**अभिष्टव** ಅಭಿಷ್ಟವ (पुं०) 1. ಸ್ತುತಿ, ಸ್ತೋತ್ರ, ಹೊಗಳಿಕೆ. 2. ವರ್ಣನೆ. अभि+ष्टुञ्(स्तुतौ)"अप्" (३-३-५७)।

**अभिष्टुत** ಅಭಿಷ್ಟುತ (वि०) 1. ಸ್ತುತಿಸಲ್ಪಟ್ಟ, ಹೊಗಳಲ್ಪಟ್ಟ. अभि+ष्टुञ् (स्तुतौ) "क्तः" (३-२-१०२)। "स दैत्यहत्यामिच्छद्भिः सुरैरेवमभिष्टुतः" याद० १-६५। 2. ವರ್ಣಿಸಲ್ಪಟ್ಟ.

**अभिष्यन्द** ಅಭಿಷ್ಯಂದ (पुं०) 1. ಪ್ರವಹಿಸುವುದು, ಹರಿಯುವುದು. अभि+स्यन्दू (प्रस्रवणे) भावे "घञ्" (३-३-१८)। 2. ಸೋರುವುದು, ತೊಟ್ಟಿಕ್ಕುವುದು, ಜಿನುಗುವುದು. 3. ಅಧಿಕವಾಗುವುದು, ದೊಡ್ಡದಾಗುವಿಕೆ, ವಿಸ್ತಾರವಾಗುವುದು. "स्वर्गाभिष्यन्दवमनं कृत्वेवोपनिवेशितम्" कुमा० ६-३७।

**अभिष्यन्दनगर** ಅಭಿಷ್ಯಂದನಗರ (नं०) ಶಾಖಾನಗರ, ಬಡಾವಣೆ, ನಗರದ ಬೆಳವಣಿಗೆಯಿಂದ ನಿರ್ಮಿತವಾದ ಉಪನಗರ. अभिष्यन्देन निर्मितं नगरम्।

**अभिष्यन्दिन्** ಅಭಿಷ್ಯಂದಿನ್ (वि०) 1. ಪ್ರವಹಿಸುವ, ಹರಿಯುವ. 2. ಸೋರುವ, ಜಿನುಗುವ. अभिष्यन्दते— अभि+स्यन्दू (प्रस्रवणे) "णिनिः" (३-२-७८)।

**अभिष्वङ्ग** ಅಭಿಷ್ವಂಗ (पुं०) 1. ಸಂಬಂಧ, ಸಂಪರ್ಕ. 2. ಪ್ರೀತಿ, ಅನುರಾಗ. अभि+ष्वञ्ज (परिष्वङ्गे) "घञ्" (३-३-१८)। "असक्तिरनभिष्वङ्गः पुत्रदारगृहादिषु" गीता १३-९।

**अभिसंरब्ध** ಅಭಿಸಂರಬ್ಧ (वि०) ಕೋಪಗೊಂಡ, ಕುಪಿತನಾದ. अभि+सम्+रभ (राभस्ये) "क्तः" (३-४-७२)।

**अभिसंरम्भ** ಅಭಿಸಂರಂಭ (पुं०) ಕೋಪ, ರೋಷ. अभि+सम्+रभ (राभस्ये) "घञ्" (३-३-१८)।

**अभिसंवृत** ಅಭಿಸಂವೃತ (वि०) ಸುತ್ತಲೂ ಮುಚ್ಚಲ್ಪಟ್ಟ, ಚೆನ್ನಾಗಿ ಹೊದಿಸಲ್ಪಟ್ಟ. अभि+सम्+वृञ् (वरणे) "क्तः" (३-२-१०२)।

**अभिसंश्रय** ಅಭಿಸಂಶ್ರಯ (पुं०) ಆಶ್ರಯ, ಆಸರೆ, ಅಭಯಸ್ಥಾನ. अभितः संश्रयः।

**अभिसंसारम्** ಅಭಿಸಂಸಾರಂ (अव्य०) ಒಟ್ಟಿಗೆ ಕಲೆತು ಎದುರಿಗೆ ಬಂದು, ಗುಂಪು ಗುಂಪಾಗಿ ಎದುರಿಗೆ ಬಂದು. अभि + सम् + सृ (गतौ) "णमुल्" (३-४-२२)।

**अभिसंताप** ಅಭಿಸಂತಾಪ (पुं०) 1. ಯುದ್ಧ. अभिसन्तप्यतेऽत्र — अभि+सम्+तप (सन्तापे) अधि० "घञ्" (३-३-१२१)। 2. ಆಕ್ಷೇಪಣೆ, ಬೈಗಳು. अभि+सम्+तप कर० "घञ्" (३-३-१२१)। 3. ಜಗಳ, ಹೋರಾಟ. 4. ಎಲ್ಲಾ ಕಡೆಯಿಂದಲೂ ಉಂಟಾಗುವ ದುಃಖ. भावे "घञ्" (३-३-१८)।

**अभिसन्धा** ಅಭಿಸಂಧಾ (स्त्री०) 1. ಅಭಿಸಂಧಿ, ಪ್ರತಿಜ್ಞೆ, ದೃಢವಾಗಿ ಹೇಳುವುದು. 2. ಕಪಟ, ಮೋಸ, ವಂಚನೆ, ಠಕ್ಕು. अभि+सम्+डु धाञ् (धारणे) "अङ्" (३-३-१०६)। 3. ಉದ್ದೇಶ, ಗುರಿ.

**अभिसन्धान** ಅಭಿಸಂಧಾನ (नं०) 1. ವಂಚನೆ, ಮೋಸಪಡಿಸುವುದು. अभि+सम्+डु धाञ् (धारणे) "ल्युट्" (३-३-११५)। "पराभिसन्धानपरं यद्यप्यस्य विचेष्टितम्" रघु० १७-७६। 2. ಉದ್ದೇಶ, ಗುರಿ. 3. ದೃಢವಚನ, ಪ್ರತಿಜ್ಞೆ. 4. ಸಂಧಿಮಾಡಿಸುವುದು, ಶಾಂತಪಡಿಸುವುದು, ಸಖ್ಯವೇರ್ಪಡಿಸುವುದು.

**अभिसन्धाय** ಅಭಿಸಂಧಾಯ (पुं०) 1. ಧ್ಯೇಯ, ಉದ್ದೇಶ, ಗುರಿ. अभि+सम्+डु धाञ् (धारणे) "घञ्" (३-३-१८)। (अव्य०) 2. ಧ್ಯೇಯವಿಟ್ಟು, ಉದ್ದೇಶಿಸಿ. 3. ವಂಚಿಸಿ, ಮೋಸಪಡಿಸಿ. अभि + सम् + धाञ् "ल्यप्" (७-१-३७)।

**अभिसन्धि** ಅಭಿಸಂಧಿ (पुं०) 1. ಪ್ರತಿಜ್ಞೆ, ದೃಢವಚನ. 2. ಧ್ಯೇಯ, ಉದ್ದೇಶ, ಗುರಿ. अभि+सम्+डु धाञ् (धारणे) "किः" (३-३-९२)। "स्वर्गाभिसन्धिसुकृतं वञ्चनामिव मेनिरे" कुमा० ६-४७। 3. ನಂಬಿಕೆ, ವಿಶ್ವಾಸ. 4. ನಿಬಂಧನೆ, ವಿಶೇಷವಾದ ಒಪ್ಪಂದ, ಕರಾರು, ಷರತ್ತು. "अथावश्यमेव माधवसेनो मोचयितव्यः श्रूयतामयमभिसन्धिः" माल० १। 5. ಅಭಿಪ್ರಾಯ.

**अभिसम्पात** ಅಭಿಸಂಪಾತ (पुं०) 1. ಯುದ್ಧ. अभि+सम्+पत्लृ (गतौ) "घञ्" (३-३-१२१)। "जन्यं स्यादभिसम्पातः संमर्दो विग्रहस्तथा" हला०। 2. ಪತನ, ಬೀಳುವುದು. भावे "घञ्" (३-३-१८)। 3. ಶಾಪ, ಬೈಗಳು.

**अभिसम्बन्ध** ಅಭಿಸಂಬಂಧ (पुं०) ಸಂಪೂರ್ಣ ಸಂಬಂಧ, ಎಲ್ಲಾ ಕಡೆಯಲ್ಲಿಯೂ ಸೇರಿಕೊಂಡಿರುವಿಕೆ. अभि+सम्+बन्ध (बन्धने) "घञ्" (३-३-१८)।

**अभिसर** ಅಭಿಸರ (वि०) 1. ಅನುಚರ, ಸೇವಕ, ಅಂಗ ಸೇವಕ. अभि+सृ (गतौ) "अच्" (३-१-१३४)। "अथ साभिसरं शरैस्तपस्वी स तिरस्कर्तुमुपेन्द्रमभ्यवर्षत्" माघ० २०-८। 2. ಸಹಾಯಕ, ನೆರವಾಗುವವನು, ಒಡನಾಡಿ, ಸಂಗಡಿಗ. "मन्मथाभिसरा तदागारमभिसरामि" दशकु०।

**अभिसरण** ಅಭಿಸರಣ (नं०) 1. ಎದುರಾಗಿ ಹೋಗುವುದು. 2. ಪ್ರಣಯಿಯು ಸಂಭೋಗಕ್ಕಾಗಿ ಸಂಕೇತಸ್ಥಾನಕ್ಕೆ ಹೋಗುವುದು. अभि+सृ (गतौ) "ल्युट्" (३-३-११५)।

**अभिसर्जन** ಅಭಿಸರ್ಜನ (नं०) 1. ದಾನ, ಧರ್ಮ. 2. ವಧೆ, ಕೊಲ್ಲುವುದು. अभि+सृज (विसर्गे) "ल्युट्" (३-३-११५)।

**अभिसाय** ಅಭಿಸಾಯ (अव्यं०) ಸಾಯಂಕಾಲಕ್ಕೆ ಅಭಿಮುಖವಾಗಿ. सायमभि – अव्ययी०। (२-१-१४)। "श्रितोदयाद्रेरभिसायमुच्चकैरचूचुरच्चन्द्रमसोऽभिरामताम्" माघ० १-१६।

**अभिसार** ಅಭಿಸಾರ (पुं०) 1. ಪ್ರಣಯಿಯು ಸಂಭೋಗಕ್ಕಾಗಿ ಸಂಕೇತಸ್ಥಾನಕ್ಕೆ ಹೋಗುವುದು. अभि+सृ (गतौ) भावे "घञ्" (३-३-१८)। 2. ಆಕ್ರಮಣ, ಮುತ್ತಿಗೆ. "श्वोऽभिसारः पुरस्य नः" रामा०। 3. ಬಲ, ಶಕ್ತಿ. 4. ಯುದ್ಧ. 5. ಸಂಕೇತಸ್ಥಾನ. अधि० "घञ्" (३-३-१२१)। (वि०) 6. ಸಂಗಡಿಗ, ಒಡನಾಡಿ. अभि+सृ (गतौ)+णिच् "अच्" (३-१-१३४)।

**अभिसारण** ಅಭಿಸಾರಣ (नं०) ಸಂಭೋಗಕ್ಕಾಗಿ ನಾಯಿಕೆಯು ನಾಯಕನನ್ನಾಗಲೀ, ನಾಯಕನು ನಾಯಿಕೆಯನ್ನಾಗಲೀ ಸಂಕೇತಸ್ಥಾನಕ್ಕೆ ಬರಮಾಡಿಕೊಳ್ಳುವುದು. अभि+सृ (गतौ)+णिच् "ल्युट्" (३-३-११५)।

**अभिसारिका** ಅಭಿಸಾರಿಕಾ (स्त्री०) ಸಂಭೋಗಕ್ಕಾಗಿ ಸಂಕೇತಸ್ಥಾನಕ್ಕೆ ಹೋಗುವ ಅಥವಾ ನಾಯಕನನ್ನು ಬರಮಾಡಿಕೊಳ್ಳುವ ಹೆಂಗಸು (ನಾಯಿಕೆ). अभिसरति अभिसारयते वा कान्तं संकेतस्थानम् – अभि + सृ (गतौ)+णिच् "ण्वुल्" (३-१-१३३)। "अभिसारयते कान्तं या मन्मथवशंवदा। स्वयं वाभिसरत्येषा धीरैरुक्ताभिसारिका" सा० द० ३-७६। "निशासु भास्वत्कलनूपुराणां यः सञ्चरोऽभूदभिसारिकाणाम्" रघु० १६-१२।

**अभिसारिन्** ಅಭಿಸಾರಿನ್ (वि०) 1. ಅನುಚರ, ಸೇವಕ. अभिसरति–अभि+सृ (गतौ) "णिनिः" (३-२-७८)। 2. ಎದುರಿಗೆ ಹೋಗುವ, ಅಭಿಮುಖವಾಗಿ ನಡೆಯುವ. स्त्रियाम् "ङीप्" (४-१-५)। –सारिणी – ಸಾರಿಣೀ.

**अभिसृष्ट** ಅಭಿಸೃಷ್ಟ (वि०) 1. ಬಿಡಲ್ಪಟ್ಟ. 2. ಕೊಡಲ್ಪಟ್ಟ, ದಾನಮಾಡಲ್ಪಟ್ಟ. अभि+सृज (विसर्गे) "क्तः" (३-२-१०२)। "अभिसृष्टस्तदा काकः प्रतिपेदे स्वमालयम्" रामा०।

**अभिहत** ಅಭಿಹತ (वि०) 1. ಹೊಡೆಯಲ್ಪಟ್ಟ, ಬಡಿಯಲ್ಪಟ್ಟ, ಗಾಯಗೊಳಿಸಲ್ಪಟ್ಟ. अभि+हन (हिंसागत्योः) "क्तः" (३-२-१०२)। "धाराभिरातप इवाभिहतं सरोजम्" माल० ५-३। 2. ನಾಟಲ್ಪಟ್ಟ, ತಗುಲಿಸಲ್ಪಟ್ಟ, ತಾಕಿಸಲ್ಪಟ್ಟ. 3. ಗುಣಿಸಲ್ಪಟ್ಟ, ಹೆಚ್ಚಿಸಲ್ಪಟ್ಟ. "अन्योन्यहाराभिहतौ हरांशौ" लीला०।

**अभिहति** ಅಭಿಹತಿ (स्त्री०) 1. ಹೊಡೆಯುವುದು, ಬಡಿಯುವುದು, ಗಾಯಗೊಳಿಸುವುದು. 2. ಗುಣಾಕಾರ, ಹೆಚ್ಚಿಸುವುದು. अभि+हन (हिंसागत्योः) "क्तिन्" (३-३-९४)।

**अभिहरण** ಅಭಿಹರಣ (नं०) 1. ವಿವಾಹ ಮೊದಲಾದುವುಗಳಲ್ಲಿ ಕೊಡುವ ಬಳುವಳಿ, ಬಹುಮಾನ, ಉಡುಗೊರೆ. 2. ಸಮೀಪಕ್ಕೆ ತರುವುದು. अभि+हृञ् (हरणे) "ल्युट्" (३-३-११५)। "व्यादिदेश गणशोऽथ पार्श्वगान् कार्मुकाभिहरणाय मैथिलः" रघु० ११-४३।

**अभिहार** ಅಭಿಹಾರ (पुं०) 1. ಆಕ್ರಮಣ, ಮುತ್ತಿಗೆ. 2. ಚೌರ್ಯ, ಎದುರಿಗೆ ಕದಿಯುವುದು. 3. ಒಟ್ಟುಗೂಡಿಸುವುದು, ಬೆರಸುವುದು. अभि+हृञ् (हरणे) "घञ्" (३-३-१८)। "अभिहारोऽभियोगे च चौर्ये सन्नहनेऽपि च" अम०। 4. ಉದ್ಯಮ, ಪ್ರಯತ್ನ. "अभिहारः सन्नहने चौरिकोद्यमयोरपि" हेम०।

**अभिहित** ಅಭಿಹಿತ (वि०) 1. ಹೇಳಲ್ಪಟ್ಟ. अभि+डु धाञ् (धारणे) "क्तः" (३-२-१०२)। "एषा तेऽभिहिता सांख्ये बुद्धिर्योगेत्विमां शृणु" गीता २-३९। 2. ಅಭಿಧಾವೃತ್ತಿಯಿಂದ ಬೋಧಿಸಲ್ಪಟ್ಟ.

**अभिहितान्वय** ಅಭಿಹಿತಾನ್ವಯ (पु०) ಅಭಿಧಾವೃತ್ತಿಯಿಂದ ತಿಳಿಸಲ್ಪಟ್ಟ ಪದಾರ್ಥಗಳ ಸಂಬಂಧ, ಪದಗಳಿಗೆ ಆಯಾಪದಾರ್ಥಗಳಲ್ಲಿ ಮಾತ್ರ ಶಕ್ತಿಯಿರುವುದರಿಂದ ಪ್ರತ್ಯೇಕ ಪದಗಳಿಂದ ಬೋಧಿತವಾದ ಅರ್ಥಗಳನ್ನು ತಾತ್ಪರ್ಯವೆಂಬ ವೃತ್ತಿಯಿಂದ ಸಂಬಂಧಪಡಿಸಿ ಹೇಳುವುದು. अभिहितानामभिधावृत्त्या बोधितानां (प्रत्येकमुपस्थापितानां) पदार्थानां परस्परमन्वयः। "तात्पर्याख्यां वृत्तिमाहुः पदार्थान्वियबोधने। तात्पर्यार्थं तदर्थं च वाक्यं तद्बोधकं परे" सा० द० २-२०। ಇದು ನೈಯಾಯಿಕರ ಮತ. ಇವರು ಅಭಿಹಿತಾನ್ವಯವಾದಿಗಳು.

**अभिहूति** ಅಭಿಹೂತಿ (स्त्री०) ಎದುರಿಗೆ ನಿಂತು ಕೂಗುವುದು, ಅಭಿಮುಖವಾಗಿ ಕರೆಯುವುದು. अभि+ह्वेञ् (स्पर्धायां शब्दे च) "क्तिन्" (३-३-९४)।

**अभी** ಅಭೀ (वि०) ಭಯವಿಲ್ಲದ, ಹೆದರಿಕೆಯಿಲ್ಲದ. नास्ति भीर्यस्य। "व्याघ्रानभीरभिमुखोत्पतितान् गुहाभ्यः" रघु० ९-६३।

**अभीक** ಅಭೀಕ (पु०) 1. ಕವಿ. 2. ಯಜಮಾನ. (वि०) 3. ಕ್ರೂರ. 4. ಭಯವಿಲ್ಲದವನು, ಹೆದರದವನು. नास्ति भीर्यस्य। "अभीकमतिकेनेद्धे भीता नन्दस्य नाशने। कनतसकामसेनाके मन्दकामकमस्यति" माघ० १९-७२। 5. ಕಾಮುಕ, ಕಾಮಾತುರವುಳ್ಳವನು. अभिकामयते — अभि "कन्" (५-२-७४)। निपा०। "मेदस्विनः सरभसोपगतानभीकान्" माघ० ५-६४। 6. ಉತ್ಸುಕ, ಉತ್ಸಾಹವುಳ್ಳವನು. "अभीकः कामुके क्रूरे निर्भये त्रिषु ना कवौ" मेदि०।

**अभीक्ष्ण** ಅಭೀಕ್ಷ್ಣ (वि०) 1. ನಿರಂತರವಾದ, ಎಡೆಬಿಡದ. 2. ಅತಿಶಯವಾದ, ಹೆಚ್ಚಾದ. 3. ಪುನಃ ಪುನಃ ಸಂಭವಿಸುವ, ಬಾರಿ ಬಾರಿಗೂ ಉಂಟಾಗುವ. अभिगतः क्षणम्। पृषो०। "क्षते प्रहारा निपतन्त्यभीक्ष्णम्" पञ्चत० २-१७८।

**अभीक्ष्णम्** ಅಭೀಕ್ಷ್ಣಮ್ (अव्य०) 1. ಅತಿಶಯವಾಗಿ, ಹೆಚ್ಚಾಗಿ. अभिक्ष्णौति — अभि+क्ष्णु (तेजने) "डमुः" बाहु०। "अभीक्ष्णमुष्णैरपि तस्य सोष्मणः" माघ० १-६५। 2. ನಿರಂತರವಾಗಿ, ಎಡೆಬಿಡದೆ. "उदीर्णरागप्रतिरोधकं जनैरभीक्ष्णमक्षुण्णतयातिदुर्गमम्" माघ० १-३२। 3. ಪುನಃ ಪುನಃ, ಮತ್ತೆ ಮತ್ತೆ, ಬಾರಿ ಬಾರಿಗೂ. 4. ಶೀಘ್ರವಾಗಿ, ಜಾಗ್ರತೆಯಾಗಿ. "अभीक्ष्णं शीघ्रप्रकर्षयोः" हेम०।

**अभीत** ಅಭೀತ (वि०) 1. ಎದುರಿಗೆ ಬಂದ, ಅಭಿಮುಖವಾಗಿ ಬಂದ. अभि+इण् (गतौ) "क्तः" (३-४-७२)। 2. ಹೆದರದ, ಭಯಪಡದ. न भीतः।

**अभीति** ಅಭೀತಿ (स्त्री०) 1. ಭಯವಿಲ್ಲದಿರುವಿಕೆ. न० त०। 2. ಅಭಯಮುದ್ರೆ. 3. ಎದುರಿಗೆ ಹೋಗುವುದು, ಹತ್ತಿರಕ್ಕೆ ಹೋಗುವುದು. 4. ಸಮಿಾಪ, ಹತ್ತಿರ. अभि+इण् (गतौ) "क्तिन्" (३-३-९४)। (वि०) 5. ಭಯವಿಲ್ಲದ, ಹೆದರಿಕೆಯಿಲ್ಲದ. न भीतिर्यस्य।

**अभीप्सित** ಅಭೀಪ್ಸಿತ (न०) 1. ಆಸೆ, ಅಪೇಕ್ಷೆ. अभि+आप्लृ (व्याप्तौ) + सन् "क्तः" (३-३-११४)। (वि०) 2. ಅಪೇಕ್ಷಿಸಲ್ಪಟ್ಟ, ಇಷ್ಟವಾದ. अभि+आप्लृ+सन् "क्तः" (३-२-१०२)।

**अभीप्सु** ಅಭೀಪ್ಸು (वि०) ಆಸೆಪಡುವ, ಪಡೆಯಲು ಅಪೇಕ್ಷೆಯುಳ್ಳ, ಹೊಂದಲು ಅಭಿಲಾಷೆಯುಳ್ಳ. अभि+आप्लृ (व्याप्तौ) + सन् "उः" (३-२-१६८)। "गृहानुपैतुं प्रणयादभीप्सवो भवन्ति नापुण्यकृतां मनीषिणः" माघ० १-१४।

**अभीर** ಅಭೀರ (पु०) ಗೋಪಾಲಕ, ಗೊಲ್ಲ. अभि ईरयति गाः — अभि+ईर् (गतौ कम्पने च) + णिच् "अच्" (३-१-१३४)। स्त्रियाम् "ङीप्" (४-१-६३)। अभीरी ಅಭೀರೀ.

**अभीरु** ಅಭೀರು (पु०) 1. ಭೈರವ. (स्त्री०) 2. ಶತಾವರಿ ಗಿಡ. (न०) 3. ಯುದ್ಧಭೂಮಿ. (वि०) 4. ಭಯವಿಲ್ಲದ, ಹೆದರಿಕೆಯಿಲ್ಲದ. न भीरुः।

**अभीरुपत्री** ಅಭೀರುಪತ್ರೀ (स्त्री०) ಶತಾವರಿ ಗಿಡ.

**अभीलाप** ಅಭೀಲಾಪ (पु०) "अभिलाप" ಪದದ ಅರ್ಥ. अभि+लप (व्यक्तायां वाचि) "घञ्" (३-३-१८)। दीर्घः (६-३-१२२)।

**अभीषङ्ग** ಅಭೀಷಂಗ (पु०) "अभिषङ्ग" ಪದದ ಅರ್ಥ. अभि+षञ्ज (सङ्गे) "घञ्" (३-३-१८)। दीर्घः (६-३-१२२)।

**अभीषु** ಅಭೀಷು (पु०) 1. ಕಿರಣ, ರಶ್ಮಿ. अभि+इष (गतौ) "उः" (उ० १-१३)। "प्रफुल्लतापिच्छनिभैरभीषुभिः" माघ० १-२२। 2. ಕುದುರೆಯ ಹಗ್ಗ,

ಲಗಾಮು. "अभीषुः प्रग्रहरोचिषोः" हेम०। 3. ಅನು ರಾಗ, ಪ್ರೀತಿ.

**अभीष्ट** ಅಭೀಷ್ಟ (वि०) 1. ಇಷ್ಟವಾದ, ಅಪೇಕ್ಷಿಸಲ್ಪಟ್ಟ. अभि+इषु (इच्छायाम्) "क्तः" (३-२-१०२)। "अभीष्टसिद्धेरधिदेवतेयं यद्वा सवित्रीति यथार्थमूचे" याद० १३-९७। 2. ಪ್ರಿಯವಾದ, ಪ್ರೀತಿಪಾತ್ರವಾದ. "अभीष्टमासाद्य चिराय काले समुद्धृताशं कमनी चकाशे" माघ० ६-७४। 3. ಸುಂದರವಾದ, ಮನೋಹರವಾದ.

**अभुक्त** ಅಭುಕ್ತ (वि०) 1. ತಿನ್ನಲ್ಪಡದ. 2. ಅನುಭವಿಸಲ್ಪಡದ. भुज (पालनाभ्यवहारयोः) कर्म० "क्तः" (३-२-१०२)। न० त०। "नाभुक्तं क्षीयते कर्म कल्पकोटिशतैरपि"। 3. ತಿನ್ನದಿರುವ, ಊಟಮಾಡದಿರುವ. भुज भावे "क्तः" (३-३-११४)। भुक्तं भोजनमस्यास्ति "अच्" (५-२-१२७)। न० त०। "अभुक्तस्य दिवानिद्रा पाषाणमपि जीर्यति"। 4. ಅನುಭವಿಸದಿರುವ.

**अभुक्तमूल** ಅಭುಕ್ತಮೂಲ (न०) ಜ್ಯೇಷ್ಠಾನಕ್ಷತ್ರದ ಕೊನೆಯ ಎರಡು ಘಳಿಗೆ ಮತ್ತು ಮೂಲದ ಮೊದಲನೆಯ ಎರಡು ಘಳಿಗೆ ಈ ಕಾಲದೊಳಗಿನದು ಅಭುಕ್ತಮೂಲ. "ज्येष्ठान्ते घटिके द्वे च मूलाद्यघटिकाद्वयम्। अभुक्तमूलमित्याहुर्जातं तत्र विवर्जयेत्"।

**अभूत** ಅಭೂತ (वि०) 1. ಅವಿದ್ಯಮಾನ, ಇಲ್ಲದಿರುವ. न भूतः। "स्तुवन्त्यश्रान्तास्याः क्षितिपतिमभूतैरपि गुणैः" मुद्रा० ३-१६। 2. ಮಿಥ್ಯೆಯಾದ, ನಿಜವಲ್ಲದ. "अभूतमासज्य विरुद्धमीहितम्" किरा० १४-१९। 3. ಹಿಂದಿನದಲ್ಲದ.

**अभूततद्भाव** ಅಭೂತತದ್ಭಾವ (पु०) ಪದಾರ್ಥವು ಹಿಂದಿನ ರೂಪವನ್ನು ಬಿಟ್ಟು ಹೊಸ ರೂಪವನ್ನು ತಾಳುವುದು, ಹಿಂದೆ ಇಲ್ಲದಿದ್ದ ರೂಪವನ್ನು ಹೊಂದುವುದು, ಹಿಂದೆ ಯಾವ ರೂಪದಿಂದಿರಲಿಲ್ಲವೋ (ಈಗ) ಆ ಹೊಸ ರೂಪವನ್ನು ಹೊಂದುವುದು. अभूतस्य प्रकृतिरूपेणानाविर्भूतस्य तेन रूपेण भावः तद्रूपप्राप्तिः। ಉದಾ: वशीभवति—अवशो वशः सम्पद्यमानो भवति, ब्रह्मी भवति—अब्रह्म ब्रह्म सम्पद्यमानं भवति "च्विः" (५-४-५०)। दीर्घः (७-४-३२)।

**अभूतपूर्व** ಅಭೂತಪೂರ್ವ (वि०) ಹಿಂದೆ ಇಲ್ಲದಿದ್ದ, ಅಪೂರ್ವವಾದ, ಹೊಸದಾದ, ನವೀನವಾದ. न भूतपूर्वः। "भेजेऽभितः पातुकसिद्धसिन्धोरभूतपूर्वा श्रियमम्बुराशेः" माघ० ३-३।

**अभूताभिनिवेश** ಅಭೂತಾಭಿನಿವೇಶ (पु०) ಅಸತ್ಯವಾದುದರಲ್ಲಿ ಸತ್ಯವೆಂಬ ಅಭಿಮಾನ, ನಿಜವಲ್ಲದುದರಲ್ಲಿ ನಿಜವೆಂಬ ಭಾವನೆ. अभूतेऽभिनिवेशः।

**अभूताहरण** ಅಭೂತಾಹರಣ (न०) ಕಪಟದಿಂದ ಕೂಡಿದ ಮಾತು, ಅಸತ್ಯದ ಮಾತು, ಮೋಸದ ಮಾತು. ಇದು ಗರ್ಭಸಂಧಿಯ ಒಂದು ಅಂಗ. "अभूताहरणं मार्गो रूपोदाहरणक्रमाः" सा० द० ६-९४। "तत्र व्याजाश्रयं वाक्यमभूताहरणं मतम्" सा० द० ६-९५।

**अभूति** ಅಭೂತಿ (स्त्री०) 1. ಅಭಾವ, ಇಲ್ಲದಿರುವಿಕೆ. 2. ದಾರಿದ್ರ್ಯ, ಬಡತನ. न० त०। (वि०) 3. ಐಶ್ವರ್ಯವಿಲ್ಲದ. न भूतिर्यस्य।

**अभूमि** ಅಭೂಮಿ (स्त्री०) 1. ಆಶ್ರಯವಿಲ್ಲದಿರುವಿಕೆ, ಯೋಗ್ಯವಾದ ಸ್ಥಾನವಲ್ಲದಿರುವಿಕೆ. न० त०। "अभूदभूमिः प्रतिपक्षजन्मनां भियां तनूजस्तपनद्युतिर्दितेः" माघ० १-४२। 2. ಪ್ರಶಸ್ತವಲ್ಲದ ಭೂಮಿ. (वि०) 3. ಭೂಮಿಯಿಲ್ಲದ. 4. ವಿಷಯವಿಲ್ಲದ.

**अभूमिज** ಅಭೂಮಿಜ (वि०) 1. ಭೂಮಿಯಲ್ಲಿ ಹುಟ್ಟದಿರುವ, ಆಕಾಶದಲ್ಲಿ ಹುಟ್ಟಿದ. न भूमौ जायते। 2. ಅಪ್ರಶಸ್ತವಾದ ಭೂಮಿಯಲ್ಲಿ ಬೆಳೆದ, ಕೆಟ್ಟ ಭೂಮಿಯಲ್ಲಿ ಬೆಳೆದ (ಧಾನ್ಯ ಮೊದಲಾದುದು). "अभूमिजं नवञ्चापि न धान्यं गुणवत् स्मृतम्" सुश्रुत०।

**अभेद** ಅಭೇದ (पु०) 1. ಐಕ್ಯ, ಭೇದವಿಲ್ಲದಿರುವಿಕೆ, ಒಂದೇ ಆಗಿರುವಿಕೆ. न भेदः—अभावे न० त०। "विषयभेदताद्रूप्यरञ्जनं विषयस्य यत्। रूपकम्" चन्द्रा०। गुणगुणिनोरभेदः, कार्यकारणयोरभेदः ಇತ್ಯಾದಿ. 2. ಸಮೀಪಸಂಬಂಧ, ಬಿಟ್ಟಿಲ್ಲದಿರುವಿಕೆ, ಅವಿಯೋಗ. "इच्छतां सह वधूभिरभेदं यामिनीविरहिणां विहगानाम्" किरा० ९-१३। (वि०) 3. ಒಂದೇ ಆದ, ಏಕರೂಪವಾದ.

**अभेद्य** ಅಭೇದ್ಯ (न०) 1. ವಜ್ರ. (वि०) 2. ಭೇದಿಸಲು ಅಶಕ್ಯವಾದ, ಒಡೆಯಲು ಸಾಧ್ಯವಿಲ್ಲದ. न भेत्तुं शक्यम्—भिदिर् (विदारणे) "ण्यत्" (३-१-१२४)। "तारास्मि वज्रहृदया विशिखैरभेद्या धन्वी कथं भवसि राघव मामविद्ध्वा" चं० रा०।

**अभोजन ಅಭೋಜನ** (ನಂ) 1. ಊಟಮಾಡದಿರುವಿಕೆ, ಉಪವಾಸ. ನಂ ತಂ। "तृणकाष्ठद्रुमाणां च शुष्कान्नस्य गुडस्य च। चेलचर्मामिषाणां च त्रिरात्रं स्यादभोजनम्" मनुं ११-१६६। (ವಿಂ) 2. ಊಟವಿಲ್ಲದ, ಭೋಜನವಿಲ್ಲದ. न भोजनं यस्य।

**अभोज्य ಅಭೋಜ್ಯ** (ವಿಂ) ಊಟಮಾಡಲು ಅರ್ಹವಲ್ಲದ, ಭುಜಿಸಲು ನಿಷಿದ್ಧವಾದ, ಅಶುದ್ಧವಾದ (ಆಹಾರ). न भोक्तुमर्हम्। "अभोज्यमन्नं नात्तव्यमात्मनः शुद्धिमिच्छता" मनुं ११-१६०।

**अभौतिक ಅಭೌತಿಕ** (ವಿಂ) ಪಂಚಮಹಾಭೂತಗಳಿಂದ ಹುಟ್ಟದಿರುವ.

**अभौम ಅಭೌಮ** (ವಿಂ) ಭೂಮಿಯಲ್ಲಿ ಹುಟ್ಟದಿರುವ, ಆಕಾಶಾದಿಗಳಲ್ಲಿ ಹುಟ್ಟಿದ. भूमौ भवम्। ನಂ ತಂ। "अभौमसंभाव्यविभूतियोगम्" यादं १८-१२४।

**अभ्यक्त ಅಭ್ಯಕ್ತ** (ವಿಂ) 1. ತೈಲಾಭ್ಯಂಗವನ್ನು ಮಾಡಿದ, ಎಣ್ಣೆ ಬಳಿದುಕೊಂಡ. अभि+अञ्जू (व्यक्त्यादौ) "क्तः" (३-२-१०२)। "अभ्यक्तमिव स्नातः शुचिरशुचिमिव प्रबुद्ध इव सुप्तम्" शाकुं ५-११। 2. ಚೆನ್ನಾಗಿ ಬಳಿಯಲ್ಪಟ್ಟ, ಸುತ್ತಲೂ ಲೇಪನಮಾಡಲ್ಪಟ್ಟ.

**अभ्यग्र ಅಭ್ಯಗ್ರ** (ವಿಂ) 1. ನವೀನವಾದ, ಹೊಸದಾದ. 2. ಸಮೀಪದ, ಹತ್ತಿರದ. अभिमुखमग्रमस्य। "उपकण्ठान्तिकाभ्यर्णाभ्यग्राः" अमं।

**अभ्यङ्ग ಅಭ್ಯಂಗ** (ಪುಂ) 1. ತೈಲಾಭ್ಯಂಗ, ಮೈಗೆ ಎಣ್ಣೆ ಹಚ್ಚುವುದು. अभि+अञ्जू (व्यक्त्यादौ) "घञ्" (३-३-१८)। "निर्नाभि कौशेयमुपात्तबाणमभ्यङ्गनेपथ्यमलंचकार" कुमां ७-७। 2. ಬಳಿಯುವುದು, ಲೇಪನೆ ಮಾಡುವುದು. 3. ಮುಲಾಮು, ಲೇಪನೆ ಮಾಡುವ ತೈಲ (ಮೊದಲಾದುದು). करं "घञ्" (३-३-१२१)।

**अभ्यञ्जन ಅಭ್ಯಂಜನ** (ನಂ) 1. ತೈಲ ಮೊದಲಾದುದನ್ನು ಮೈಗೆ ಲೇಪನೆಮಾಡುವುದು. 2. ಕಣ್ಣಿಗೆ ಅಂಜನ ಹಾಕುವುದು. 3. ಕಣ್ಣಿಗೆ ಕಾಡಿಗೆ ಹಚ್ಚುವುದು. 4. ಬಳಿಯುವುದು, ಲೇಪನೆಮಾಡುವುದು. 5. ಲೇಪನೆಮಾಡುವ ತೈಲ. 6. ಮುಲಾಮು. अभि+अञ्जू (व्यक्त्यादौ) भावे करं वा "ल्युट्" (३-३-११५, १७)। "अभ्यञ्जनं स्नापनं च गात्रोत्सादनमेव च। गुरुपत्न्या न कार्याणि केशानां च प्रसाधनम्" मनुं २-२११।

**अभ्यतीत ಅಭ್ಯತೀತ** (ವಿಂ) ಮೃತನಾದ, ಮರಣಹೊಂದಿದ. "गुरुषु त्वभ्यतीतेषु विना वा तैर्गृहे वसन्" मनुं ४-२५२।

**अभ्यधिक ಅಭ್ಯಧಿಕ** (ವಿಂ) 1. ಬಹಳ ಹೆಚ್ಚಾದ, ಆವಶ್ಯಕತೆಗಿಂತಲೂ ಅಧಿಕವಾದ. अभितोऽधिकः। "सद्यः प्रसूतप्रियापीतादभ्यधिकम्" उं रां ४-१। 2. ಸರ್ವಶ್ರೇಷ್ಠವಾದ, ಬಹಳ ಉತ್ಕೃಷ್ಟವಾದ, ಎಲ್ಲರಿಗಿಂತಲೂ ಮಿಗಿಲಾದ. "न त्वत्समोऽस्त्यभ्यधिकः कुतोऽन्यः" गीता ११-४३। 3. ಅಸಾಧಾರಣವಾದ, ಲೋಕೋತ್ತರವಾದ. (क्रिं विं) 4. ಬಹಳ ಅಧಿಕವಾಗಿ, ಹೆಚ್ಚಾಗಿ.

**अभ्यध्व ಅಭ್ಯಧ್ವ** (अव्यं) ದಾರಿಯ ಎದುರಿಗೆ, ದಾರಿಯ ಕಡೆಗೆ. अध्वनोऽभिमुखम् — अभि + अध्वन् "टच्" (५-४-१०८)। नलोपः (६-४-१४४)।

**अभ्यनुज्ञा ಅಭ್ಯನುಜ್ಞಾ** (स्त्रीं) 1. ಅನುಮತಿ, ಅಪ್ಪಣೆ, ಸಮ್ಮತಿ. अभि+अनु+ज्ञा (अवबोधने) "अङ्" (३-३-१०६)। "अथानुरूपाभिनिवेशतोषिणा कृताभ्यनुज्ञा गुरुणा गरीयसा" कुमां ५-७। "पपौ वसिष्ठेन कृताभ्यनुज्ञः" रघुं २-६९। 2. ಆಜ್ಞೆ, ಅಪ್ಪಣೆ.

**अभ्यनुज्ञात ಅಭ್ಯನುಜ್ಞಾತ** (ವಿಂ) 1. ಅನುಮತಿಸಲ್ಪಟ್ಟ, ಒಪ್ಪಿಗೆಕೊಡಲ್ಪಟ್ಟ, ಸಮ್ಮತಿಸಲ್ಪಟ್ಟ. अभि+अनु+ज्ञा (अवबोधने) "क्तः" (३-२-१०२)। 2. ಅಪ್ಪಣೆಮಾಡಲ್ಪಟ್ಟ.

**अभ्यनुज्ञान ಅಭ್ಯನುಜ್ಞಾನ** (ನಂ) 1. ಅನುಮತಿ, ಅನುಜ್ಞೆ, ಸಮ್ಮತಿ, ಒಪ್ಪಿಗೆ. 2. ಆಜ್ಞೆ, ಅಪ್ಪಣೆ. अभि+अनु+ज्ञा (अवबोधने) "ल्युट्" (३-३-११५)। "भरद्वाजाभ्यनुज्ञानाच्चित्रकूटस्य दर्शनम्" रामां।

**अभ्यन्तर ಅಭ್ಯಂತರ** (ನಂ) 1. ಮಧ್ಯಭಾಗ, ಅಂತರಾಳ, ಒಳಪ್ರದೇಶ. अभिगतमन्तरम्। "निधानगर्भामिव सागराम्बरां शमीमिवाभ्यन्तरलीनपावकाम्" रघुं ३-९। 2. ಅವಕಾಶ, ಮಧ್ಯಕಾಲ. 3. ಚಿತ್ತ, ಮನಸ್ಸು. (ವಿಂ) 4. ಮಧ್ಯದಲ್ಲಿರುವ, ಒಳಭಾಗದಲ್ಲಿರುವ, ಒಳಪ್ರದೇಶದಲ್ಲಿರುವ. "अतः सोऽभ्यन्तरान्नित्यान् षट्पूर्वमजयद्रिपून्" रघुं १७-४५। 5. ಪರಿಚಯಹೊಂದಿದ, ಪ್ರಾವೀಣ್ಯಪಡೆದ, ನೈಪುಣ್ಯಹೊಂದಿದ. "सङ्गीतकेऽभ्यन्तरे स्वः" मालं ५। 6. ಸಮೀಪದಲ್ಲಿರುವ, ಹತ್ತಿರದಲ್ಲಿರುವ. "त्यक्ताश्चाभ्यन्तरा येन" पञ्चतं १-२५९। (अव्यं) 7. ಒಳಭಾಗದಲ್ಲಿ, ಮಧ್ಯಭಾಗದಲ್ಲಿ, ಒಳಗಡೆ. 8. ಮಧ್ಯಕಾಲದಲ್ಲಿ.

**अभ्यन्तराराम** ಅಭ್ಯಂತರಾರಾಮ (वि०) ಯೋಗಿ, ಆತ್ಮಾರಾಮ, ಪರಮಾತ್ಮಧ್ಯಾನಾಸಕ್ತ. अभ्यन्तरे आरामः आरमणं यस्य।

**अभ्यमन** ಅಭ್ಯಮನ (न०) 1. ಎದುರಾಗಿ ನುಗ್ಗುವುದು, ಮುತ್ತಿಗೆ, ಮೇಲೆಬೀಳುವುದು. अभि+अम (गत्यादिषु) "ल्युट्" (३-३-११५)। 2. ಅಭಿಮುಖವಾಗಿ ಹೋಗುವುದು. 3. ರೋಗ, ವ್ಯಾಧಿ.

**अभ्यमित** ಅಭ್ಯಮಿತ (वि०) 1. ವ್ಯಾಧಿಗ್ರಸ್ತ, ರೋಗಿ. अभि+अम (रोगे) "क्तः"(३-२-१०२)। "आतुरोऽभ्यमितोऽभ्यान्तः" अम०। 2. ಗಾಯಗೊಂಡವನು, ನೋಯಾಳಿ.

**अभ्यमित्र** ಅಭ್ಯಮಿತ್ರ (अव्य०) ಶತ್ರುವಿಗೆ ಎದುರಾಗಿ. अमित्रानभि—अव्ययी० (२-१-१४)। "हताहतेत्युद्धतभीमघोषैः समुज्झिता योद्धृभिरभ्यमित्रम्" किरा० १६-५।

**अभ्यमित्रीण** ಅಭ್ಯಮಿತ್ರೀಣ (पु०) ಶತ್ರುವಿನ ಕಡೆಗೆ ಧೈರ್ಯದಿಂದ ದಂಡೆತ್ತಿ ನುಗ್ಗುವವನು, ವೀರನಾದ ಯೋಧ. अभ्यमित्रमलं गामी—अभ्यमित्र "खः" (५-२-१७)। "उद्योगमभ्यमित्रीणो यथेष्टं त्वं च संतनु" भट्टि० ५-४७। ಇದೇ ಅರ್ಥದಲ್ಲಿ अभ्यमित्र "छः" (५-२-१७)। अभ्यमित्रीयः ಅಭ್ಯಮಿತ್ರೀಯಃ. अभ्यमित्र "यत्" (५-२-१७)। अभ्यमित्र्यः ಅಭ್ಯಮಿತ್ರ್ಯಃ. "मारीचोऽनुनयंस्त्रासादभ्यमित्र्यो भवामि ते" भट्टि० ५-४६।

**अभ्यर्चन** ಅಭ್ಯರ್ಚನ (न०) ಅನುಗ್ರಹ ಸಂಪಾದನೆಗಾಗಿ ಮಾಡುವ ಪೂಜೆ, ಉಪಾಸನೆ. अभि+अर्च (पूजायाम्) "ल्युट्" (३-३-११५)।

**अभ्यर्चना** ಅಭ್ಯರ್ಚನಾ (स्त्री०) ಉಪಾಸನೆ, ಅನುಗ್ರಹ ಸಂಪಾದನೆಗಾಗಿ ಮಾಡುವ ಪೂಜೆ. अभि+अर्च (पूजायाम्)+णिच् "युच्" (३-३-१०७)। "गर्लाङ्घ्र्या वलयप्रसूनैरभ्यर्चनामातनुतेव शौरेः" याद० १३-५९।

**अभ्यर्चा** ಅಭ್ಯರ್ಚಾ (स्त्री०) ಪೂಜೆ. अभि+अर्च (पूजायाम्) भावे "अः" (३-३-१०३)।

**अभ्यर्चित** ಅಭ್ಯರ್ಚಿತ (वि०) ಪೂಜಿಸಲ್ಪಟ್ಟ, ಆರಾಧಿಸಲ್ಪಟ್ಟ. अभि+अर्च (पूजायाम्) "क्तः" (३-२-१०२)। "अभ्यर्चितानां त्रिदशातिथीनाम्" याद० १८-८२।

**अभ्यर्च्य** ಅಭ್ಯರ್ಚ್ಯ (वि०) 1. ಪೂಜೆಗೆ ಯೋಗ್ಯನಾದ, ಪೂಜಿಸಲ್ಪಡುವ. अभि+अर्च (पूजायाम्) "ण्यत्" (३-१-१२४)। (अव्य०) 2. ಪೂಜಿಸಿ, ಆರಾಧಿಸಿ. "अभ्यर्च्य कस्मैचिदुपाश्रिताय वितीर्य विप्राय विलोचने स्वे" चं० रा०।

**अभ्यर्ण** ಅಭ್ಯರ್ಣ(पु०)1. ಸಮೀಪ, ಹತ್ತಿರ. अभ्यर्द्यते—अभि+अर्द (गतौ याचने च) "क्तः" (३-२-१०२)। "अभ्यर्णेऽम्भः पतनसमये पर्णलीभूतसानुम्" भट्टि० ६-१४३। (वि०) 2. ಸಮೀಪದಲ್ಲಿರುವ, ಹತ್ತಿರದಲ್ಲಿರುವ. "तपति प्रावृषि नितरामभ्यर्णजलागमो दिवसः" रत्ना० ३-१०।

**अभ्यर्थन** ಅಭ್ಯರ್ಥನ (न०) ಬೇಡಿಕೆ, ಪ್ರಾರ್ಥನೆ, ಕೋರಿಕೆ. अभि+अर्थ (याचने) + णिच् "ल्युट्" (३-३-११५)।

**अभ्यर्थना** ಅಭ್ಯರ್ಥನಾ (स्त्री०) ಪ್ರಾರ್ಥನೆ, ಬೇಡಿಕೆ, ಕೋರಿಕೆ. अभि+अर्थ (याचने) + णिच् "युच्" (३-३-१०७)। "अभ्यर्थनाभङ्गभयेन साधुर्माध्यस्थ्यमिष्टेऽप्यवलम्बतेऽर्थे" कुमा० १-५२।

**अभ्यर्थनीय** ಅಭ್ಯರ್ಥನೀಯ (वि०) ಎದುರಿಗೆ ಪ್ರಾರ್ಥಿಸಲ್ಪಡುವ, ಪ್ರತ್ಯಕ್ಷವಾಗಿ ಬೇಡಲ್ಪಡುವ. अभि+अर्थ (याचने) कर्म० "अनीयर्" (३-१-९६)।

**अभ्यर्थिन्** ಅಭ್ಯರ್ಥಿನ್ (वि०) ಯಾಚಿಸುವ, ಬೇಡುವ. अभि+अर्थ (याचने) "णिनिः" (३-२-७८)। स्त्रियां "ङीप्" (४-१-५)। —अर्थिनी – ಅರ್ಥಿನೀ.

**अभ्यर्थ्य** ಅಭ್ಯರ್ಥ್ಯ (वि०) 1. ಪ್ರಾರ್ಥಿಸಲ್ಪಡುವ, ಯಾಚಿಸಲ್ಪಡುವ, ಬೇಡಲ್ಪಡುವ. अभि+अर्थ (याचने) +णिच् "यत्" (३-३-९७)। "कार्येषु चैककार्यत्वादभ्यर्थ्योऽस्मि न वज्रिणा" रघु० १०-४०। (अव्य०) 2. ಪ್ರಾರ್ಥಿಸಿ, ಯಾಚನೆಮಾಡಿ. अभि+अर्थ "ल्यप्" (७-१-३७)।

**अभ्यर्थ्यमान** ಅಭ್ಯರ್ಥ್ಯಮಾನ (वि०) ಯಾಚಿಸಲ್ಪಡುವ, ಬೇಡಲ್ಪಡುವ. अभि+अर्थ (याचने) + णिच्+शानच् (३-२-१२४)। "अभ्यर्थ्यमाना विबुधैः समग्रैः प्रह्वैः सुरेन्द्रप्रमुखैरुपेत्य" कुमा० ११-१।

**अभ्यर्दन** ಅಭ್ಯರ್ದನ (न०) 1. ಬಹಳವಾಗಿ ಪೀಡಿಸುವುದು. अभि + अर्द (हिंसायाम्) +णिच्+"ल्युट्" (३-३-११५)। 2. ಎದುರಿಗೆ ಯಾಚಿಸುವುದು. अभि+अर्द (गतौ याचने च) "ल्युट्" (३-३-११५)।

**अभ्यर्दित** ಅಭ್ಯರ್ದಿತ (वि०) 1. ಎದುರಿಗೆ ಬೇಡಲ್ಪಟ್ಟ. अभि+अर्द (याचने) "क्तः" (३-२-१०२)। 2. ಎದುರಿಗೆ ಬಹಳವಾಗಿ ಪೀಡಿಸಲ್ಪಟ್ಟ. अभि+अर्द (हिंसायाम्) "क्तः" (३-२-१०२)।

**अभ्यर्हण** ಅಭ್ಯರ್ಹಣ (न०) 1. ಪೂಜೆ, ಸತ್ಕಾರ. अभि+अर्ह (पूजायाम्) "ल्युट्" (३-३-११५)। 2. ಗೌರವ, ಮರ್ಯಾದೆ.

**अभ्यर्हणा** ಅಭ್ಯರ್ಹಣಾ (स्त्री०) 1. ಪೂಜೆ, ಸತ್ಕಾರ. अभि+अर्ह (पूजायाम्)+णिच् "युच्" (३-३-१०७)। 2. ಗೌರವ, ಮರ್ಯಾದೆ.

**अभ्यर्हणीय** ಅಭ್ಯರ್ಹಣೀಯ (वि०) 1. ಪೂಜಿಸಲ್ಪಡುವ, ಪೂಜೆಗೆ ಅರ್ಹನಾದ. 2. ಗೌರವಿಸಲ್ಪಡುವ. अभि+अर्ह (पूजायाम्) "अनीयर्" (३-१-९६)।

**अभ्यर्हित** ಅಭ್ಯರ್ಹಿತ (वि०) 1. ಪೂಜಿಸಲ್ಪಟ್ಟ, ಸತ್ಕರಿಸಲ್ಪಟ್ಟ. अभि+अर्ह (पूजायाम्) "क्तः" (३-२-१०२)। 2. ಶ್ರೇಷ್ಠವಾದ, ಉಚಿತವಾದ, ಯೋಗ್ಯವಾದ. "अभ्यर्हिता बन्धुषु तुल्यरूपा वृत्तिर्विशेषेण तपोधनानाम्" किरा० ३-११।

**अभ्यवकर्षण** ಅಭ್ಯವಕರ್ಷಣ (न०) ಹೊರಕ್ಕೆ ಎಳೆಯುವುದು. अभि + अव + कृष (विलेखने) "ल्युट्" (३-३-११५)।

**अभ्यवस्कन्द** ಅಭ್ಯವಸ್ಕಂದ (पु०) 1. ಶತ್ರುವಿನ ಆಕ್ರಮಣ, ಮುತ್ತಿಗೆ. "प्रपातस्त्वभ्यवस्कन्दो धाटघाभ्यासादनं च सः" अभि० चि०। 2. ಶತ್ರುವನ್ನು ಶಕ್ತಿಗುಂದಿದವನನ್ನಾಗಿ ಮಾಡಲು ಹೊಡೆಯುವುದು. 3. ಪ್ರಹಾರ, ಏಟು, ಪೆಟ್ಟು. 4. ಹೊಂದುವುದು, ತಲುಪುವುದು, ಸೇರುವುದು. 5. ಪ್ರಪಾತ, ಪತನ, ಬೀಳುವುದು. अभि+अव+स्कन्दिर् (गतिशोषणयोः) "घञ्" (३-३-१८)। भावे "ल्युट्" (३-३-११५)। –स्कन्दनम्–ಸ್ಕಂದನಂ. "अभ्यवस्कन्दनं त्वभ्यासादनम्" वैज०।

**अभ्यवहरण** ಅಭ್ಯವಹರಣ (न०) ಭೋಜನ, ಊಟ. अभि+अव+हृञ् (हरणे) "ल्युट्" (३-३-११५)। भावे "घञ्" (३-३-१८)। –अवहारः –ಅವಹಾರಃ. "सर्वमप्यौदरिकस्याभ्यवहार एव पर्यवस्यति" रत्ना० २।

**अभ्यवहार्य** ಅಭ್ಯವಹಾರ್ಯ (न०) 1. ಆಹಾರ, ಊಟದ ವಸ್ತು. (वि०) 2. ತಿನ್ನಲು ಯೋಗ್ಯವಾದ, ಭುಜಿಸಲು ಅರ್ಹವಾದ. अभि+अव+हृञ् (हरणे) कर्म० "ण्यत्" (३-१-१२४)। "सर्वत्रौदरिकस्याभ्यवहार्यमेव विषयः" विक्र० ३।

**अभ्यवहृत** ಅಭ್ಯವಹೃತ (वि०) ಭುಜಿಸಲ್ಪಟ್ಟ, ತಿನ್ನಲ್ಪಟ್ಟ. अभ्यवह्रियते – अभि + अव + हृञ् (हरणे) "क्तः" (३-२-१०२)।

**अभ्यसन** ಅಭ್ಯಸನ (न०) 1. ಅಭ್ಯಾಸ, ಪುನರಾವೃತ್ತಿ. 2. ಶಿಕ್ಷಣ, ಕಲಿಯುವುದು. 3. ಪುನರಾಚರಣೆ, ಮತ್ತೆ ಮಾಡುವಿಕೆ. अभि+असु (क्षेपणे) "ल्युट्" (३-३-११५)। "विद्यामभ्यसनेनेव प्रसादयितुमर्हसि" रघु० १-८८।

**अभ्यसनीय** ಅಭ್ಯಸನೀಯ (वि०) ಅಭ್ಯಾಸಮಾಡಲು ಯೋಗ್ಯವಾದ, ಕಲಿಯಲು ಅರ್ಹವಾದ. अभि+असु (क्षेपणे) "अनीयर्" (३-१-९६)।

**अभ्यसूयक** ಅಭ್ಯಸೂಯಕ (वि०) ಬಹಳ ಅಸೂಯೆ ಪಡುವವನು, ಗುಣದಲ್ಲಿ ದೋಷವನ್ನು ತೋರಿಸುವವನು. अभि+असूञ् (उपतापे) "यक्" (३-१-२७)। "ण्वुल्" (३-१-१३३)। "मामात्मपरदेहेषु प्रद्विषन्तोऽभ्यसूयकाः" गीता १६-१८।

**अभ्यसूया** ಅಭ್ಯಸೂಯಾ (स्त्री०) ಅಸೂಯೆ, ಇತರರ ಗುಣ ಮತ್ತು ವೃದ್ಧಿಯಲ್ಲಿ ದೋಷವನ್ನು ಎಣಿಸುವ ಬುದ್ಧಿ. अभि+असूञ् (उपतापे) "यक्" (३-१-२७)। "अः" (३-३-१०२)। केनाभ्यसूया पदकाङ्क्षिणा ते नितान्तदीर्घैर्जनिता तपोभिः" कुमा० ३-४।

**अभ्यस्त** ಅಭ್ಯಸ್ತ (वि०) 1. ಅಭ್ಯಾಸ ಮಾಡಲ್ಪಟ್ಟ, ಕಲಿಯಲ್ಪಟ್ಟ. 2. ಪುನರಾವೃತ್ತಿ ಮಾಡಲ್ಪಟ್ಟ. अभि + असु (क्षेपणे) "क्तः" (३-२-१०२)। "शैशवेऽभ्यस्तविद्यानां यौवने विषयैषिणाम्" रघु० १-८। 3. ದ್ವಿತ್ವಹೇಳಲ್ಪಟ್ಟ ಧಾತುವಿನ ಭಾಗಗಳು, ಅಭ್ಯಾಸಸಂಜ್ಞೆ ಹೊಂದಿರುವ ಧಾತು. "उभे अभ्यस्तम" (६-१-५)। "नाभ्यस्ताच्छतुः" पा० सू० (७-१-७८)।

**अभ्यस्य** ಅಭ್ಯಸ್ಯ (अव्य०) 1. ಅಭ್ಯಾಸಮಾಡಿ, ಕಲಿತು. 2. ಪುನಃ ಆವೃತ್ತಿಮಾಡಿ. अभि + असु (क्षेपणे) "ल्यप्" (७-१-३७)।

**अभ्याख्यात** ಅಭ್ಯಾಖ್ಯಾತ (वि०) ಅಪವಾದ ಹೊರಿಸಲ್ಪಟ್ಟ, ಚಾಡಿ ಹೇಳಲ್ಪಟ್ಟ, ಇಲ್ಲದುದನ್ನು ಹೇಳಿ ಆಕ್ಷೇಪಿಸಲ್ಪಟ್ಟ. अभि+आ+ख्या (प्रकथने) "ल्युट्" (३-३-११५)।

**अभ्यागत** ಅಭ್ಯಾಗತ (पुं०) 1. ಔತಣಿಗ, ಊಟಕ್ಕೆ ಕರೆದು ಬಂದವನು. अभि+आ+गम्लृ (गतौ) "क्तः" (३-४-७२)। [ಆಹ್ವಾನವನ್ನು ಪಡೆದು ಊಟಕ್ಕೆ ಬಂದವನು ಅಭ್ಯಾಗತ. ಆಹ್ವಾನವಿಲ್ಲದೆ ತಾನಾಗಿ ಊಟಕ್ಕೆ ಬಂದವನು ಅತಿಥಿ.] "आस्वादितार्द्रक्रमुकाः समुद्रादभ्यागतस्य प्रतिपत्तिमीयुः" माघ० ३-८१। (वि०)2. ಅಭಿಮುಖವಾಗಿ ಬಂದ."अभ्याजतोऽभ्यागततूर्णतर्णकाम्" माघ० १२-४१। 3. ಸಮೀಪಕ್ಕೆ ಬಂದ.

**अभ्यागम** ಅಭ್ಯಾಗಮ (पुं०) 1. ಆಗಮನ, ಬರುವಿಕೆ, ಎದುರಾಗಿ ಬರುವುದು. अभि+आ+गम्लृ (गतौ) भावे "अप्" (३-३-५८)। "का त्वं शुभे कस्य परिग्रहो वा किं वा मदभ्यागमकारणं ते" रघु० १६-८।2. ಯುದ್ಧ, ಕದನ. अभ्यागम्यतेऽत्र —अधि० "अप्" (३-३-५८)। 3. ಸಮೀಪ, ಹತ್ತಿರ. 4. ವೈರ, ವಿರೋಧ, ಹಗೆ, ಶತ್ರುತ್ವ. अभ्यागम्यतेऽनेन — कर० "अप्"। 5. ಏಟು, ಪೆಟ್ಟು, ಹೊಡೆತ. 6. ಎದುರುಗೊಳ್ಳುವುದು. 7. ತಲುಪುವುದು, ಸೇರುವುದು. 8. ಆಕ್ರಮಣ, ಮುತ್ತಿಗೆ. "अभ्यागमो विरोधाजिघाताभ्युद्गमनान्तिके" मेदि०। "अभ्यागमः समरेऽन्तिके। घाते रोधेऽभ्युद्गमे" हेम०।

**अभ्यागमन** ಅಭ್ಯಾಗಮನ (न०) 1. ಎದುರುಗೊಳ್ಳುವುದು. 2. ಅಭಿಮುಖವಾಗಿ ಬರುವುದು. अभि+आ+गम्लृ(गतौ)"ल्युट्"(३-३-११५)। "हेतुं तदभ्यागमने परीप्सुः सुखोपविष्टं मुनिमाबभाषे" किरा० ३-४।

**अभ्यागारिक** ಅಭ್ಯಾಗಾರಿಕ (वि०) ಗೃಹಕೃತ್ಯದಲ್ಲಿ ನಿರತನಾದವನು, ಕುಟುಂಬ ಪೋಷಣೆಯಲ್ಲಿ ಆಸಕ್ತನಾದವನು. अभ्यागारे नियुक्तः "ठन्" (४-४-७०)।

**अभ्याघात** ಅಭ್ಯಾಘಾತ (पुं०) 1. ಧಾಳಿ, ಮೇಲೆ ಬೀಳುವುದು. 2. ಏಟು, ಪೆಟ್ಟು, ಹೊಡೆತ. अभि+आ+हन (हिंसागत्योः) "घञ्"(३-३-१८)। 3. ಕಳ್ಳತನದ ಉಪದೇಶ, ಕಳ್ಳತನ ಮಾಡಲು ಒಡಂಬಡಿಸುವುದು. "अभ्याघातेषु मध्यस्थान् शिष्याच्चौरानिव द्रुतम्" मनु० ९-२७२।

**अभ्याघातिन्** ಅಭ್ಯಾಘಾತಿನ್ (वि०) ಹೊಡೆಯುವ ಸ್ವಭಾವದ, ಹಿಂಸಿಸುವ ಸ್ವಭಾವದ. अभि+आ+हन (हिंसागत्योः) "घिनुण्" (३-२-१४२)।

**अभ्याजत्** ಅಭ್ಯಾಜತ್ (वि०) ಎದುರಿಗೆ ಬರುತ್ತಿರುವ. अभि+आ+अज (गतौ) "शतृ" (३-२-१२४)। "अभ्याजतोऽभ्यागततूर्णतर्णकाम्" माघ० १२-४१।

**अभ्यादान** ಅಭ್ಯಾದಾನ(न०)1. ಪ್ರಾರಂಭ, ಉಪಕ್ರಮ. 2. ಎದುರಾಗಿ ತೆಗೆದುಕೊಳ್ಳುವುದು. अभि आभिमुख्येनादानम्। "अथाभ्यादानमारम्भः" वैज०।

**अभ्याधान** ಅಭ್ಯಾಧಾನ (न०) ಮಂತ್ರಪೂರ್ವಕ ಸಮಿತ್ತುಗಳನ್ನು ಅಗ್ನಿಯಲ್ಲಿ ಅರ್ಪಿಸುವುದು.

**अभ्यान्त** ಅಭ್ಯಾಂತ (वि०) ರೋಗಪೀಡಿತನಾದವನು, ವ್ಯಾಧಿಗ್ರಸ್ತ. अभ्यम्यते स्म — अभि+अम (रोगे) "क्तः"(३-२-१०२)। दीर्घः (६-४-१५)। "आतुरोऽभ्यमितोऽभ्यान्तः" अम०।

**अभ्यापतत्** ಅಭ್ಯಾಪತತ್ (वि०) ಅಭಿಮುಖವಾಗಿ ಬರುತ್ತಿರುವ. अभि + आ + पत्लृ (गतौ) "शतृ" (३-२-१२४)। "अभ्यापतन्तमसुराधिपमीशपुत्रः" कुमा० १७-४९।

**अभ्यापत्ति** ಅಭ್ಯಾಪತ್ತಿ (स्त्री०) ಅಭಿಮುಖವಾಗಿ ಬರುವುದು, ಎದುರಿಗೆ ಬರುವುದು. अभि + आ + पद (गतौ) "क्तिन्" (३-३-९४)।

**अभ्यापन्न** ಅಭ್ಯಾಪನ್ನ (वि०) ಎದುರಿಗೆ ಬಂದಿರುವ, ಅಭಿಮುಖವಾಗಿ ಬಂದಿರುವ. अभि+आ+पद (गतौ) "क्तः" (३-४-७२)।

**अभ्यापात** ಅಭ್ಯಾಪಾತ (पुं०) ವಿಪತ್ತು, ಆಕಸ್ಮಿಕ, ಅನಾಹುತ, ದುರ್ಘಟನೆ.

**अभ्यामर्द** ಅಭ್ಯಾಮರ್ದ (पुं०) 1. ಯುದ್ಧ, ಸಮರ, ಕದನ. अभि+आ+मृद (क्षोदे) अधि० "घञ्" (३-३-१२१)। 2. ಹೊಡೆದಾಟ, ಘರ್ಷಣೆ. भावे "घञ्". (३-३-१८)।

**अभ्यायत्** ಅಭ್ಯಾಯತ್ (वि०) ಅಭಿಮುಖವಾಗಿ ಬರುತ್ತಿರುವ. अभि+आ+इण् (गतौ) "शतृ" (३-२-१२४)। "अभ्यायतः संप्रति धूमधूम्रम्" किरा० १६-६।

**अभ्यारूढ** ಅಭ್ಯಾರೂಢ (वि०) 1. ಮಿಗಿಲಾದ, ಮೀರಿದ. 2. ಮೇಲಕ್ಕೆ ಏರಿದ, ಮೇಲಕ್ಕೆ ಹತ್ತಿದ. अभि+आ+रुह (बीजजन्मनि प्रादुर्भावे च) "क्तः" (३-४-७२)।

**अभ्यारोह** ಅಭ್ಯಾರೋಹ(पुं०)1. ಎದುರಾಗಿ ಮೇಲಕ್ಕೆ ಹತ್ತುವುದು. अभि+आ+रुह (बीजजन्मनि प्रादुर्भावे च) "घञ्" (३-३-१८)। 2. ಅಭಿವೃದ್ಧಿ, ಏಳಿಗೆ, ಪ್ರಗತಿ, ಬೆಳವಣಿಗೆ. 3. ಮಂತ್ರವನ್ನು ಜಪಿಸುವುದು. 4. ಸ್ಥಳಾಂತರಕ್ಕೆ ಬದಲಾವಣೆ.

**अभ्यावर्त** ಅಭ್ಯಾವರ್ತ (पुं०) 1. ಪುನರಾವೃತ್ತಿ, ಮತ್ತೆ ಮಾಡುವುದು. अभि+आ+वृतु (वर्तने) भावे "घञ्" (३-३-१८)। 2. ಪುನಃ ಪುನಃ ಜಪಿಸಲ್ಪಡುವ ಮಂತ್ರ. कर्मं० "घञ्" (३-३-१९)।

**अभ्यावृत्त** ಅಭ್ಯಾವೃತ್ತ (पुं०) 1. ಎದುರಿಗೆ ತರಲ್ಪಟ್ಟ ಹೋಮ ಶೇಷದ ವಸ್ತು. अभि+वृतु (वर्तने) "क्तः" (३-२-१०२)। (वि०) 2. ಪುನರಾವೃತ್ತಿ ಮಾಡಲ್ಪಟ್ಟ. 3. ಸಮೀಪಕ್ಕೆ ಬಂದಿರುವ.

**अभ्यावृत्ति** ಅಭ್ಯಾವೃತ್ತಿ (स्त्री०) ಪುನರಾವೃತ್ತಿ, ಮಾಡಿದ ಕೆಲಸವನ್ನೇ ಮತ್ತೆ ಮಾಡುವುದು. अभि+आ+वृतु (वर्तने) "क्तिन्" (३-३-९४)। "मनागनभ्यावृत्त्या वा कामं क्षाम्यतु यः क्षमी" माघ० २-४३।

**अभ्याश** ಅಭ್ಯಾಶ(पुं०)1. ಸಮೀಪ, ಹತ್ತಿರ. अभ्यश्यते—अभि+अशू(व्याप्तौ)"घञ्" (३-३-१९)। "चूतयष्टिरिवाभ्याशे मधौ परभृतोन्मुखी" कुमा० ६-२। 2. ಪಸರಿಸುವುದು, ಹರಡುವುದು, ವ್ಯಾಪಿಸುವುದು. भावे "घञ्" (३-३-१८)।

**अभ्यास** ಅಭ್ಯಾಸ(पुं०)1. ಸಮೀಪ, ಹತ್ತಿರ. अभ्यस्यते—अभि+असु (क्षेपणे) "घञ्"(३-३-१९)। "महोर्मिभिर्व्याहृतवाञ्छितार्थैर्व्रीडादिवाभ्यासगतैर्विलिल्ये" माघ० ३-४०। 2. ಪುನರಾವೃತ್ತಿ, ಮಾಡಿದುದನ್ನು ಮತ್ತೆ ಮಾಡುವುದು. "अभ्यासेन च कौन्तेय वैराग्येण च गृह्यते" गीता ६-३५। 3. ವೇದ ಮೊದಲಾದುವನ್ನು ಆವೃತ್ತಿಮಾಡುವುದು, ಗಟ್ಟಿಯಾಗಿ ಪಠಿಸುವುದು, ಮನಸ್ಸಿಗೆ ಹಿಡಿಯುವಂತೆ ವ್ಯಾಸಂಗ ಮಾಡುವುದು. "वेदाभ्यासजडः कथं नु विषयव्यावृत्तकौतूहलः" विक्र० १-१०। 4. ದ್ವಿತ್ವ ಹೊಂದಿದ ಧಾತುವಿನ ಪೂರ್ವ ಭಾಗ. "पूर्वोऽभ्यासः" पा० सू० (६-१-४)। 5. ಗುಣಾಕಾರ. 6. ಸಂಗೀತದಲ್ಲಿ ಹೇಳುವ ಪಲ್ಲವಿ. 7. ರೂಢಿ, ಚಾಳಿ, ನಡತೆ. "अमङ्गलाभ्यासरतिं विचिन्त्य" कुमा० ५-६५। 8. ವ್ಯಾಯಾಮ ಕಲಿಯುವುದು, ಅಂಗಸಾಧನೆ ಮಾಡುವುದು.

**अभ्यासयोग** ಅಭ್ಯಾಸಯೋಗ (पुं०) ಬಹಳ ಕಾಲದ ಧ್ಯಾನದಿಂದುಂಟಾದ ಚಿತ್ತೈಕಾಗ್ರತೆ, ಸಮಾಧಿ. अभ्यासेन योगः। "अभ्यासयोगेन ततो मामिच्छाप्तुं धनञ्जय" गीता १२-९।

**अभ्यासादन** ಅಭ್ಯಾಸಾದನ(नं०) ಶತ್ರುವನ್ನು ದುರ್ಬಲನನ್ನಾಗಿ ಮಾಡಲು ಹೊಡೆಯುವುದು. 2. ಸಮೀಪದಲ್ಲಿಡುವುದು. 3. ಶತ್ರುವಿಗೆ ಎದುರಾಗಿ ಹೋಗುವುದು. अभि+आ+षद्लृ(विशरणादौ)"ल्युट्" (३-३-११५)।

**अभ्याहार** ಅಭ್ಯಾಹಾರ (पुं०) 1. ಅಭಿಮುಖವಾಗಿ ತರುವುದು. 2. ದರೋಡೆ, ಕಳ್ಳತನ, ಎದುರಿಗಿರುವಾಗಲೇ ಅಪಹರಿಸುವುದು. अभि+आ+हृञ् (हरणे) "घञ्" (३-३-१८)।

**अभ्याहित** ಅಭ್ಯಾಹಿತ (पुं०) 1. ಮಂತ್ರಪೂರ್ವಕ ಸಮಿತ್ತುಗಳಿಂದ ಹೋಮ ಮಾಡಲ್ಪಟ್ಟ ಅಗ್ನಿ. (वि०) 2. ಎದುರಿಗೆ ಇಡಲ್ಪಟ್ಟ. अभि+आ+डु धाञ्(धारणपोषणयोः) "क्तः" (३-२-१०२)।

**अभ्युक्त** ಅಭ್ಯುಕ್ತ(वि०)ಎದುರಿಗೆ ಹೇಳಲ್ಪಟ್ಟ, ಎದುರಿಗೆ ಸೂಚಿಸಲ್ಪಟ್ಟ.

**अभ्युक्षण** ಅಭ್ಯುಕ್ಷಣ (नं०) 1. ಮಂತ್ರಪೂರ್ವಕ ಬೋರಲು (ಕೆಳಮುಖವಾದ) ಕೈಯಿಂದ ನೀರನ್ನು ಚಿಮುಕಿಸುವುದು. अभि+उक्ष+(सेचने)भावे "ल्युट्" (३-३-११५)। "उत्तानेनैव हस्तेन प्रोक्षणं परिकीर्तितम्। न्यञ्चताभ्युक्षणं प्रोक्तं तिरश्चावोक्षणं स्मृतम्"। 2. ನೀರನ್ನು ಚಿಮುಕಿಸುವುದು, ನೀರನ್ನು ಎರಚುವುದು. "परस्पराभ्युक्षणतत्पराणां तासां नृपो मज्जनरागदर्शी" रघु० १६-५७।

**अभ्युच्चय** ಅಭ್ಯುಚ್ಚಯ(पुं०)1. ಅಭಿವೃದ್ಧಿ, ಬೆಳವಣಿಗೆ. 2. ಐಶ್ವರ್ಯ, ಸಂಪತ್ತು. अभि+उत्+चिञ् (चयने) "अच्" (३-३-५६)।

**अभ्युत्थान** ಅಭ್ಯುತ್ಥಾನ (नं०) 1. ಗೌರವದಿಂದ ಎದ್ದು ನಿಂತು ಕೊಳ್ಳುವುದು. 2. ಗೌರವದಿಂದ ಎದುರುಗೊಳ್ಳುವುದು. 3. ಮೇಲಕ್ಕೆ ಏಳುವುದು. 4. ಉತ್ಪತ್ತಿ, ಉದ್ಭವಿಸುವಿಕೆ. अभि + उद् + ष्ठा (गतिनिवृत्तौ) "ल्युट्" (३-३-११५)। "यदा यदा हि धर्मस्य ग्लानिर्भवति भारत। अभ्युत्थानमधर्मस्य तदात्मानं सृजाम्यहम्" गीता ४-७। 5. ಅಭಿವೃದ್ಧಿ, ಏಳಿಗೆ. "नवाभ्युत्थानदर्शिन्यो ननन्दुः सप्रजाः प्रजाः" रघु० ४-३।

**अभ्युत्थायिन्** ಅಭ್ಯುತ್ಥಾಯಿನ್ (वि०) 1. ಗೌರವದಿಂದ ಮೇಲಕ್ಕೆ ಏಳುವ. 2. ಗೌರವದಿಂದ ಎದುರುಗೊಳ್ಳುವ. 3. ಅಭಿವೃದ್ಧಿ ಹೊಂದುವ. अभि+उद्+ष्ठा (गतिनिवृत्तौ) "णिनिः" (३-१-१३४)।

**अभ्युत्थित** ಅಭ್ಯುತ್ಥಿತ (त्रि०) 1. ಗೌರವದಿಂದ ಎದುರುಗೊಳ್ಳಲ್ಪಟ್ಟ. अभि + उद् + ष्ठा (गतिनिवृत्तौ) "क्तः" (३-२-१०२)। 2. ಮೇಲಕ್ಕೆ ಎದ್ದಿರುವ.

अभि+उद्+ष्ठा कर्त० "क्तः" (३-४-७२)। "अभ्युत्थिताग्निपिशुनैरतिथीनाश्रमोन्मुखान्" रघु० १-५३।

**अभ್ಯುತ್ಥೇಯ** ಅಭ್ಯುತ್ಥೇಯ (वि०) ಪೂಜ್ಯ, ಗೌರವಾರ್ಹ, ನಮಸ್ಕಾರಕ್ಕೆ ಅರ್ಹನಾದ. अभि+उद्+ष्ठा (गतिनिवृत्तौ) "यत्" (३-१-९७)।

**अभ्युत्पतन** ಅಭ್ಯುತ್ಪತನ (न०) 1. ಮೇಲೆ ಹಾರುವುದು, ಅಭಿಮುಖವಾಗಿ ಮೇಲೆ ಬೀಳುವುದು. अभि+उद्+पत्लृ (गतौ) "ल्युट्" (३-३-११५)। "अलक्षिताभ्युत्पतनो नृपेण प्रसह्य सिंहः किल तां चकर्ष" रघु० २-२७।

**अभ्युदय** ಅಭ್ಯುದಯ (पु०) 1. ಅಭಿವೃದ್ಧಿ, ಏಳಿಗೆ, ಪ್ರಗತಿ. अभि+उद्+इण् (गतौ) "अच्" (३-३-५६)। "बभूव सर्वं शुभशंसि तत्क्षणं भवो हि लोकाभ्युदयाय तादृशाम्" रघु० ३-१४। 2. ಕಲ್ಯಾಣ, ಮಂಗಳ, ಶ್ರೇಯಸ್ಸು. "सर्वथा स्पृशन्ति नः स्वामिनमभ्युदयाः" रत्ना० १। 3. ಇಷ್ಟಕಾರ್ಯಸಿದ್ಧಿ. 4. ಅಭಿವೃದ್ಧಿಗೆ ಕಾರಣವಾದ ಒಂದು ಶ್ರಾದ್ಧ, ವೃದ್ಧಿಶ್ರಾದ್ಧ, ನಾಂದೀ ಶ್ರಾದ್ಧ. 5. ಮುಂದಿನ ಅಭಿವೃದ್ಧಿ. 6. ಉತ್ಸವ, ಸಂತೋಷ ಸಮಾರಂಭ. "प्रतिषिद्धापि चेद्या तु मद्यमभ्युदयेष्वपि" मनु० ९-८४।

**अभ्युदित** ಅಭ್ಯುದಿತ (वि०) 1. ಸೂರ್ಯೋದಯ ಕಾಲದಲ್ಲಿ ಮಲಗಿ ನಿದ್ರಿಸುವವನು, ಸೂರ್ಯೋದಯ ಕಾಲದಲ್ಲಿ ಮಾಡಬೇಕಾದ ಸಂಧ್ಯಾವಂದನಾದಿ ಕಾರ್ಯಗಳನ್ನು ಬಿಟ್ಟು ನಿದ್ರಿಸುವವನು. अभि सर्वतः उद् अतिशयेन इतं गतं प्रातस्तनं कर्म यस्मात्। "सुप्ते यस्मिन्नस्तमेति सुप्ते यस्मिन्नुदेति च। अंशुमानभिनिर्मुक्ताभ्युदितौ तौ यथाक्रमम्" अम०। 2. ಸುತ್ತಲೂ ಉಂಟಾದ.

**अभ्युदीरित** ಅಭ್ಯುದೀರಿತ (न०) 1. ಹೇಳುವುದು, ಮಾತಾಡುವುದು. अभि+उद्+ईर (गतौ कम्पने च) "क्तः" (३-३-११४)। (वि०) 2. ಹೇಳಲ್ಪಟ್ಟ. अभि+उद्+ईर कर्म० "क्तः" (३-२-१०२)। 3. ಎಸೆಯಲ್ಪಟ್ಟ, ಎರಚಲ್ಪಟ್ಟ. "अशेषतीर्थोपहृताः कमण्डलोर्निधाय पाणावृषिणाभ्युदीरिताः" माघ० १-१८।

**अभ्युद्गत** ಅಭ್ಯುದ್ಗತ (वि०) 1. ಎದುರುಗೊಳ್ಳಲು ಮುಂದೆ ಬಂದಿರುವ, ಸಂಧಿಸಲು ಎದುರಿಗೆ ಬಂದಿರುವ. 2. ಉದ್ಭವಿಸಿದ, ಉತ್ಪನ್ನವಾದ. अभि+उद्+गम्लृ (गतौ) "क्तः" (३-४-७२)। 3. ಎದುರುಗೊಳ್ಳಲ್ಪಟ್ಟ. कर्म० "क्तः" (३-२-१०२)।

**अभ्युद्गम** ಅಭ್ಯುದ್ಗಮ (पु०) 1. ಪ್ರತ್ಯುತ್ಥಾನ, ಎದುರುಗೊಳ್ಳುವುದು. 2. ಸಂಭವಿಸುವುದು, ಉದ್ಭವಿಸುವುದು, ಉಂಟಾಗುವುದು. अभि+उद्+गम्लृ (गतौ) "अप्" (३-३-५८)। भावे "ल्युट्" (३-३-११५)। –गमनम् –ಗಮನಂ.

**अभ्युद्यत** ಅಭ್ಯುದ್ಯತ (वि०) 1. ಮೇಲಕ್ಕೆ ಎತ್ತಲ್ಪಟ್ಟ, ಮೇಲಕ್ಕೆ ಏರಿಸಲ್ಪಟ್ಟ. 2. ಯಾಚಿಸದೆ ಹೊಂದಲ್ಪಟ್ಟ, ಅಯಾಚಿತವಾಗಿ ಒದಗಿದ. अभि+उद्+यम (उपरमे) "क्तः" (३-२-१०२)। 3. ಕಾರ್ಯಾಸಕ್ತನಾದ, ಉತ್ಸಾಹದಿಂದ ಕಾರ್ಯದಲ್ಲಿ ತೊಡಗಿರುವ. "अभ्युद्यतस्य क्रमितुं जवेन गां तमालनीला नितरां धृतायति:" माघ० १२-७०। 4. ಅಭಿವೃದ್ಧಿ ಹೊಂದಿದ, ಏಳಿಗೆ ಪಡೆದ. कर्त० "क्तः" (३-४-७२)। "कुलमभ्युद्यतनूतनेश्वरम्" रघु० ८-१५। 5. ಪ್ರವೃತ್ತನಾದ, ಯತ್ನಿಸಿದ. "चण्डी चण्डं हन्तुमभ्युद्यता माम्" माल० ३-२१।

**अभ्युद्धृत** ಅಭ್ಯುದ್ಧೃತ (वि०) 1. ಮೇಲಕ್ಕೆ ಎತ್ತಲ್ಪಟ್ಟ, ಮೇಲಕ್ಕೆ ಎತ್ತಿ ಹಿಡಿಯಲ್ಪಟ್ಟ. अभि+उद्+हृञ् (हरणे) "क्तः" (३-२-१०२)। 2. ಅಯಾಚಿತವಾಗಿ ಹೊಂದಲ್ಪಟ್ಟ, ಬೇಡದೆ ಒದಗಿದ. 3. ಯಾಚಿಸಿದ ನಂತರ ಕೊಡಲ್ಪಟ್ಟ.

**अभ्युन्नत** ಅಭ್ಯುನ್ನತ (वि०) ಎತ್ತರವಾದ, ಉನ್ನತವಾದ. आभिमुख्येन उन्नतः। "अभ्युन्नताङ्गुष्ठनखप्रभाभिर्निक्षेपणाद्रागमिवोद्गिरन्तौ" कुमा० १-३३।

**अभ्युन्नति** ಅಭ್ಯುನ್ನತಿ (स्त्री०) ಅಭಿವೃದ್ಧಿ, ಏಳಿಗೆ, ಉತ್ಕರ್ಷ.

**अभ्युपगत** ಅಭ್ಯುಪಗತ (वि०) 1. ಅಂಗೀಕರಿಸಲ್ಪಟ್ಟ, ಸಮ್ಮತಿಸಲ್ಪಟ್ಟ. अभि+उप+गम्लृ (गतौ) "क्तः" (३-२-१०२)। 2. ಹೊಂದಲ್ಪಟ್ಟ. 3. ಸಮೀಪವನ್ನು ಹೊಂದಿದ, ಹತ್ತಿರಕ್ಕೆ ಹೋಗಿರುವ. 4. ಎದುರಾಗಿ ಹೋಗಿರುವ, ಅಭಿಮುಖವಾಗಿ ಬಂದಿರುವ. कर्त० "क्तः" (३-४-७२)।

**अभ्युपगम** ಅಭ್ಯುಪಗಮ (पु०) 1. ಒಪ್ಪಿಗೆ, ಅಂಗೀಕಾರ, ಸಮ್ಮತಿ. अभि+उप+गम्लृ (गतौ) "अप्" (३-३-५८)। "करिष्याम्येवं नो पुनरिति भवेदभ्युपगमः" रत्ना० २-१९। 2. ಸಮೀಪವನ್ನು ಹೊಂದುವುದು, ಹತ್ತಿರಕ್ಕೆ ಹೋಗುವುದು. 3. ಭರವಸೆಯ ಮಾತು ಕೊಡುವುದು, ವಾಗ್ದಾನಮಾಡುವುದು.

**अभ्युपपत्ति** ಅಭ್ಯುಪಪತ್ತಿ (स्त्री०) 1. ಅನುಗ್ರಹ, ಹಿತಾಚರಣೆ, ಅನಿಷ್ಟವನ್ನು ತೊಲಗಿಸಿ ಒಳ್ಳೆಯದನ್ನು ಮಾಡುವುದು. अभि+उप+पद (गतौ) "क्तिन्" (३-३-९४)। "अनयाभ्युपपत्त्या सूचिता ते भर्तुर्गेहेऽनुभवितव्या राजलक्ष्मीरिति" शाकु० ४। 2. ರಕ್ಷಣೆ, ಮರೆಹೊಕ್ಕಿದವನನ್ನು ಕಾಪಾಡುವುದು. "ब्राह्मणाभ्युपपत्तौ च शपथे नास्ति पातकम्" मनु० ८-११२। 3. ಆಶ್ವಾಸನ, ಸಮಾಧಾನ. 4. ಭರವಸೆಯ ಮಾತು ಕೊಡುವುದು, ವಾಗ್ದಾನ ಮಾಡುವುದು.

**अभ्युपपन्न** ಅಭ್ಯುಪಪನ್ನ (वि०) ಅನುಗ್ರಹಿಸಲ್ಪಟ್ಟ, ಒಳ್ಳೆಯದುಂಟುಮಾಡಲ್ಪಟ್ಟ. अभि+उप+पद (गतौ) "क्तः" (३-२-१०२)।

**अभ्युपाय** ಅಭ್ಯುಪಾಯ (पु०) 1. ಉಪಾಯ, ಯುಕ್ತಿ. उपायतेऽनेन — उप+अय (गतौ) "घञ्" (३-३-१२१)। "तस्मिन् सुराणां विजयाभ्युपाये तवैव नामास्त्रगतिः कृती त्वम्" कुमा० ३-१९। 2. ಅಂಗೀಕಾರ, ಒಪ್ಪಿಗೆ. भावे "घञ्" (३-३-१८)। "संविदागूः प्रतिज्ञास्थाप्यभ्युपायः प्रतिश्रवः" वैज०।

**अभ्युपेत** ಅಭ್ಯುಪೇತ (वि०) 1. ಎದುರಾಗಿ ಸಮೀಪವನ್ನು ಹೊಂದಿದ, ಅಭಿಮುಖವಾಗಿ ಹತ್ತಿರಕ್ಕೆ ಬಂದ. अभि + उप + इण् (गतौ) "क्तः" (३-४-७२)। 2. ಅಂಗೀಕರಿಸಲ್ಪಟ್ಟ, ಒಪ್ಪಲ್ಪಟ್ಟ, ಸಮ್ಮತಿಸಲ್ಪಟ್ಟ. कर्म० "क्तः" (३-२-१०२)।

**अभ्युपेत्य** ಅಭ್ಯುಪೇತ್ಯ (अव्य०) 1. ಎದುರಾಗಿ ಸಮೀಪವನ್ನು ಹೊಂದಿ, ಅಭಿಮುಖವಾಗಿ ಹತ್ತಿರಕ್ಕೆ ಬಂದು. 2. ಅಂಗೀಕರಿಸಿ, ಸಮ್ಮತಿಸಿ.

**अभ्युपेय** ಅಭ್ಯುಪೇಯ (वि०) ಆಶ್ರಯಿಸಲು ಯೋಗ್ಯನಾದ, ಸಮೀಪಕ್ಕೆ ಹೋಗಲು ಅರ್ಹನಾದ. अभि+उप+इण् (गतौ) "यत्" (३-१-९७)।

**अभ्युषित** ಅಭ್ಯುಷಿತ (वि०) 1. ಸೇವಕ, ಆಳು. 2. ಸಮೀಪದಲ್ಲಿ ವಾಸಮಾಡುವ. अभि+वस (निवासे) "क्तः" (३-४-७२)।

**अभ्यूष** ಅಭ್ಯೂಷ (पु०) 1. ಉಸಲಿ, ಗುಗ್ಗರಿ. अभि+ऊष (रुजायाम्) "कः" (३-१-१३५)। 2. ರೊಟ್ಟಿ. 3. ಹುರಿಗಾಳು.

**अभ्यूह** ಅಭ್ಯೂಹ (पु०) 1. ತರ್ಕ, ಊಹೆ, ಕಲ್ಪನೆ, ಅನುಮಾನ. अभि+ऊह (वितर्के) "घञ्" (३-३-१८)। "बहिः सर्वाकारप्रवणरमणीयं व्यवहरन् पराभ्यूहस्थानान्यपि तनुतराणि स्थगयति" मालती० १-१७। 2. ಅಧ್ಯಾಹಾರ, ಪದಲೋಪವಿದ್ದಲ್ಲಿ ಬೇಕಾದ ಪದಗಳನ್ನು ಸೇರಿಸಿಕೊಳ್ಳುವುದು.

**अभ्यूह्य** ಅಭ್ಯೂಹ್ಯ (वि०) 1. ಊಹಿಸಲು ಶಕ್ಯವಾದ. (अव्य०) 2. ಊಹಿಸಿ, ತರ್ಕಿಸಿ, ಕಲ್ಪನೆಮಾಡಿ.

**अभ्र** ಅಭ್ರ (न०) 1. ಮೇಘ, ಮೋಡ. न भ्रश्यन्त्यापोऽस्मात् — भ्रंशु (अधःपतने) "डः" (वा० ३-२-१०१)। "विच्छिन्नाभ्रविलायं वा विलीये नगमूर्धनि" किरा० ११-७१। 2. ಗಗನ, ಆಕಾಶ, ಅಂತರಿಕ್ಷ. "आलोकयिष्यन्मुदितामयोध्यां प्रासादमभ्रंलिहमारुरोह" रघु० १४-२९। 3. ಮುಸ್ತಕ, ಕೊನ್ನಾರಿಗೆಡ್ಡೆ. 4. ಸುವರ್ಣ, ಚಿನ್ನ. 5. ಕರ್ಪೂರ. 6. ಕಾಗೆಬಂಗಾರ. 7. ಪೂಜ್ಯ, ಸೊನ್ನೆ. "अभ्रं मेघे च गगने धातुभेदे च काञ्चने" मेदि०। 8. ಸ್ವರ್ಗ, ದೇವಲೋಕ. "अभ्रं तु त्रिदिवे गगनेऽम्बुदे" हेम०।

**अभ्रक** ಅಭ್ರಕ (पं०न०) ಕಾಗೆಬಂಗಾರ. अभ्रस्य प्रतिकृतिः "कन्" (५-३-९६)। [ಕಾಗೆಬಂಗಾರವು ಪಾರ್ವತಿಯ ರಜಸ್ಸಿನಿಂದುಂಟಾದುದು.] "अभ्रकस्तव बीजन्तु मम बीजन्तु पारदः। उभयोर्मेलनं देवि! मृत्युदारिद्र्यनाशनम्"।

**अभ्रंलिह** ಅಭ್ರಂಲಿಹ (पु०) 1. ವಾಯು, ಗಾಳಿ. (वि०) 2. ಗಗನವನ್ನು ಚುಂಬಿಸುವ, ಆಕಾಶವನ್ನು ಮುಟ್ಟುವ, ಬಹಳ ಎತ್ತರವಾದ. अभ्रं लेढि स्पृशति — अभ्र + लिह (आस्वादने) "खश्" (३-२-३२)। "मुम्" (६-३-६७)। "प्रासादमभ्रंलिहमारुरोह" रघु० १४-२९। "अभ्रंलिहान् फलवतस्तटनारिकेलान् सह्यात्मजासलिलवैवधिकानमंस्त" चं० भा०।

**अभ्रघन** ಅಭ್ರಘನ (पु०) ಮೇಘದ ಸಮೂಹ. "वर्षात्ययेन रुचमभ्रघनादिवेन्दोः" रघु० १३-७७।

**अभ्रङ्कष** ಅಭ್ರಂಕಷ (पु०) 1. ವಾಯು, ಗಾಳಿ. (वि०) 2. ಬಹಳ ಎತ್ತರವಾದ, ಆಕಾಶವನ್ನು ತಿಕ್ಕುವ, ಗಗನವನ್ನು ಚುಂಬಿಸುವ. अभ्रं कषति—कष (हिंसायाम्) "खच्" (३-२-४२)। "मुम्" (६-३-६७)। "आदायाभ्रङ्कषं प्रायान्मलयं फलशालिनम्" भट्टि० ६-१०३।

**अभ्रनाग** ಅಭ್ರನಾಗ (पु०) ಐರಾವತ, ಇಂದ್ರನ ಆನೆ.

**अभ्रपथ** ಅಭ್ರಪಥ (पु०) 1. ಆಕಾಶಮಾರ್ಗ. 2. ವಿಮಾನ. 3. ಆಕಾಶಬುಟ್ಟಿ.

**अभ्रपिशाच** ಅಭ್ರಪಿಶಾಚ (पुं०) ಆಕಾಶದ ಭೂತ, ರಾಹುಗ್ರಹ.

**अभ्रपुष्प** ಅಭ್ರಪುಷ್ಪ (पुं०) 1. ಹಬ್ಬೆಗಿಡ. (नं०) 2. ನೀರು. 3. ಗಗನಕುಸುಮ. [ಅಸಂಭವ, ಅಸಾಧ್ಯ ಎಂಬ ಅರ್ಥದಲ್ಲಿ ಪ್ರಯೋಗ.]

**अभ्रम** ಅಭ್ರಮ (पुं०) 1. ಭ್ರಾಂತಿಯಿಲ್ಲದಿರುವಿಕೆ. 2. ಭ್ರಮಣ(ತಿರುಗುವಿಕೆ) ವಿಲ್ಲದಿರುವಿಕೆ. (वि०)3. ಭ್ರಾಂತಿಯಿಲ್ಲದ. 4. ಭ್ರಮಣವಿಲ್ಲದ.

**अभ्रमांसी** ಅಭ್ರಮಾಂಸೀ (स्त्री०) ಜಟಾಮಾಂಸಿ.

**अभ्रमातङ्ग** ಅಭ್ರಮಾತಂಗ (पुं०) ಐರಾವತ, ಇಂದ್ರನ ಆನೆ. अभ्रात्मको मातङ्गः अभ्रे मातङ्गो वा।

**अभ्रमाला** ಅಭ್ರಮಾಲಾ (स्त्री०) ಮೇಘಪಂಕ್ತಿ, ಮೋಡಗಳ ಸಾಲು. अभ्राणां माला।

**अभ्रमु** ಅಭ್ರಮು (स्त्री०) ಐರಾವತದ ಪತ್ನಿ.

**अभ्रमुवल्लभ** ಅಭ್ರಮುವಲ್ಲಭ (पुं०) ಐರಾವತ, ಇಂದ್ರನ ಆನೆ.

**अभ्रवर्ष** ಅಭ್ರವರ್ಷ (पुं०) ಮಳೆ ಸುರಿಯುವುದು.

**अभ्रातृक** ಅಭ್ರಾತೃಕ (वि०) ಸಹೋದರನಿಲ್ಲದವನು. न भ्राता यस्य "कप्" (५-४-१५३)। स्त्रियां अभ्रातृका ಅಭ್ರಾತೃಕಾ.

**अभ्रातृव्य** ಅಭ್ರಾತೃವ್ಯ (वि०) ಶತ್ರುಗಳಿಲ್ಲದವನು, ಹಗೆಯಿಲ್ಲದವನು. नास्ति भ्रातृव्यः शत्रुर्यस्य।

**अभ्रावकाश** ಅಭ್ರಾವಕಾಶ (पुं०) ಆಕಾಶದ ಆವರಣ, ಮೇಲಿನ ಛಾವಣಿಯಿಲ್ಲದಿರುವಿಕೆ.

**अभ्रि** ಅಭ್ರಿ (स्त्री०)1. ಹಡಗಿನಲ್ಲಿ ಕಸವನ್ನು ಬಗೆಯುವ ಮರದ ಗುದ್ದಲಿ. 2. ಗುದ್ದಲಿ, ಸಲಿಕೆ, ಪಿಕಾಸಿ. अभ्रति मलमस्मात्—अभ्र(गतौ)"इन्"(उ०४-११८)। "अभ्रिं कार्ष्णायसीं दद्यात्सर्पं हत्वा द्विजोत्तमः" मनु० ११-१३३।

**अभ्रित** ಅಭ್ರಿತ (वि०) ಮೋಡದಿಂದ ಕವಿಯಲ್ಪಟ್ಟ. अभ्रमस्य सञ्जातम् "इतच्" (५-२-३६)। "पतिः प्रतीतः प्रसवोन्मुखीं प्रियां ददर्श काले दिवमभ्रितामिव" रघु० ३-१२।

**अभ्रिय** ಅಭ್ರಿಯ (वि०) ಮೇಘದಲ್ಲಿ ಉಂಟಾದ, ಮೋಡಕ್ಕೆ ಸಂಬಂಧಿಸಿದ. अभ्रे भवम् "घः" (४-४-११८)।

**अभ्रेष** ಅಭ್ರೇಷ(पुं०)1. ಚ್ಯುತಿಯಿಲ್ಲದಿರುವಿಕೆ. भ्रेषादन्यः—अन्यार्थे नं० त०। 2. ಯುಕ್ತತೆ, ಔಚಿತ್ಯ, ಯೋಗ್ಯವಾಗಿರುವುದು. (वि०)3. ಚ್ಯುತಿಯಿಲ್ಲದ, ತಪ್ಪದಿರುವ,

**अम्** ಅಮ್ (अव्य०) 1. ಜಾಗ್ರತೆ. 2. ಸ್ವಲ್ಪ. अम (गत्यादौ) "क्विप्"।

**अम** ಅಮ (पुं०)1. ಪ್ರಾಣ. अम (गत्यादौ) "अच्" (३-१-१३४)। 2. ರೋಗ, ವ್ಯಾಧಿ. अम (रोगे) "घञ्" (३-२-१८)। 3. ಸೇವಕ, ಆಳು. 4. ಬಲ, ಶಕ್ತಿ. (वि०) 5. ಅಪಕ್ವವಾದ, ಬಲಿತಿಲ್ಲದ, ಮಾಗದಿರುವ, ಹಣ್ಣಾಗದ.

**अमङ्गल** ಅಮಂಗಲ (पुं०) 1. ಹರಳುಗಿಡ. (नं०) 2. ಅಶುಭ, ಅರಿಷ್ಟ. "रामाभियायिनां तेषां तदेवाभूदमङ्गलम्" रामा०। (वि०) 3. ಅಶುಭವಾದ, ಕೆಟ್ಟದಾದ. "अमङ्गलाभ्यासरतिं विचिन्त्य तम्" कुमा० ५-६५।

**अमङ्गल्य** ಅಮಂಗಲ್ಯ (वि०) ಅಶುಭಕ್ಕೆ ಕಾರಣವಾದ. न मङ्गलाय हितम्।

**अमण्ड** ಅಮಂಡ (पुं०) 1. ಹರಳುಗಿಡ. "चञ्चुः पञ्चाङ्गुलामण्डवर्धमानव्यडम्बकाः" अम०। (वि०)2. ಕೆನೆಯಿಲ್ಲದ (ಅನ್ನ ಮುಂತಾದುದು). 3. ಅಲಂಕಾರವಿಲ್ಲದ, ಶೃಂಗಾರವಿಲ್ಲದ.

**अमत** ಅಮತ (पुं०) 1. ರೋಗ, ವ್ಯಾಧಿ. 2. ಮೃತ್ಯು, ಮರಣ. 3. ಕಾಲ, ಸಮಯ. 4. ಧೂಳು, ಕಸ. अम (गत्यादौ) "अतच्" (उ०३-११०)। (वि०)5. ಸಮ್ಮತವಿಲ್ಲದ, ಇಷ್ಟವಿಲ್ಲದ. 6. ತಿಳಿಯಲ್ಪಡದ. न मतः।

**अमति** ಅಮತಿ (पुं०) 1. ಚಂದ್ರ. 2. ಕಾಲ, ಸಮಯ. (स्त्री०) 3. ಬುದ್ಧಿಯಿಲ್ಲದಿರುವಿಕೆ. अभावे नं० त०। 4. ಕೆಟ್ಟಬುದ್ಧಿ. अप्राशस्त्ये नं० त०। (वि०) 5. ಬುದ್ಧಿಯಿಲ್ಲದ. 6. ದುರ್ಜನ, ದುಷ್ಟ, ಕೆಟ್ಟವನು. "अमतिः पुंसि कालेऽपि दुष्टे हिमकरेऽपि च" शब्दर०।

**अमत्र** ಅಮತ್ರ (नं०) 1. ಪಾತ್ರೆ. 2. ಊಟದ ಪಾತ್ರೆ. अम (गत्यादौ) "अत्रन्" (उ० ३-१०५)। 3. ಬಲ, ಶಕ್ತಿ.

**अमनस्** ಅಮನಸ್ (पुं०) 1. ಪರಮಾತ್ಮ. "अप्राणोह्यमनाः शुभ्रः" मुण्डक०। (वि०) 2. ಸರಿಯಾದ ಮನಸ್ಸಿಲ್ಲದ. 3. ಬೇರೆ ವಿಷಯದಲ್ಲಿ ಮನಸ್ಸುಳ್ಳ. 4. ಮನೋನಿಗ್ರಹವಿಲ್ಲದ, ಮನಸ್ಸಿನ ಹತೋಟಿಯಿಲ್ಲದ.

**अमनि** ಅಮನಿ (स्त्री०) 1. ಮಾರ್ಗ, ದಾರಿ. अमति गच्छत्यत्र—अम (गत्यादौ) अधि० "अनिः" (उ० २-१०२)। 2. ಗತಿ, ಗಮನ, ಚಲನೆ, ಸಂಚಾರ. भावे "अनिः"।

**अमनुष्य ಅಮನುಷ್ಯ** (वि०) 1. ಮನುಷ್ಯಕೃತ್ಯವಿಲ್ಲದವನು, ಹೆಸರಿಗೆ ಮಾತ್ರ ಮನುಷ್ಯನಾದವನು. 2. ಮನುಷ್ಯನಲ್ಲದ (ಗಂಧರ್ವ, ರಾಕ್ಷಸ ಮೊದಲಾದವರು).

**अमनोगत ಅಮನೋಗತ** (वि०) ಮನಸ್ಸಿನಿಂದ ಯೋಚಿಸಲ್ಪಡದ, ಅಚಿಂತಿತವಾದ, ಮನಸ್ಸಿನಲ್ಲಿಲ್ಲದ.

**अमन्त्रक ಅಮಂತ್ರಕ** (वि०) 1. ವೇದೋಕ್ತ ಮಂತ್ರವಿಲ್ಲದ (ಕರ್ಮ). 2. ವೇದಮಂತ್ರಾಧಿಕಾರವಿಲ್ಲದವನು.

**अमम ಅಮಮ** (वि०) ನನ್ನದು ನನಗೆ ಎಂಬ ಅಭಿಮಾನವನ್ನು ತೊರೆದಿರುವ, ಪ್ರಾಪಂಚಿಕ ಸಂಬಂಧವನ್ನು ಬಿಟ್ಟಿರುವ, ಪತ್ನಿ ಪುತ್ರ ಮನೆ ಮಠ ಮೊದಲಾದುವುಗಳಲ್ಲಿ ಅಭಿಮಾನಶೂನ್ಯನಾದ. नास्ति ममेत्यभिमानो यस्य।

**अममकार ಅಮಮಕಾರ** (पु०) 1. ಸ್ವಾರ್ಥತೆಯಿಲ್ಲದಿರುವಿಕೆ, ತನ್ನದೆಂಬ ಅಭಿಮಾನಶೂನ್ಯತೆ. (वि०) 2. ಅಭಿಮಾನವಿಲ್ಲದ. नास्ति ममकारो यस्य।

**अमर ಅಮರ** (पु०) 1. ದೇವತೆ. न म्रियते—मृङ् (प्राणत्यागे) "अच्" (३-१-१३४)। "अमरस्त्रीकटाक्षाणामप्यभङ्गुरधन्वनः" याद० १६-९२। 2. ಅಮರಸಿಂಹ (ನಾಮಲಿಂಗಾನುಶಾಸನವನ್ನು ರಚಿಸಿದ ಕವಿ). 3. ಕಳ್ಳಿಗಿಡ. 4. ಪಾದರಸ. 5. ಮೂಳೆಗಳ ರಾಶಿ, ಎಲುಬುಗಳ ಗುಪ್ಪೆ. (वि०) 6. ಮರಣವಿಲ್ಲದ. "अजरामरवत्प्राज्ञो विद्यामर्थं च साधयेत्" हितो०। "अमरः सुरे। स्नुहीवृक्षेऽस्थिसंहारेऽपि" हेम०। (स्त्री०) –रा –ರಾ. 7. ಅಮರಾವತೀಪಟ್ಟಣ. 8. ಅಪ್ಪುತಬಳ್ಳಿ. 9. ಗರಿಕೆಹುಲ್ಲು. 10. ಮನೆಯ ಕಂಬ. 11. ಗರ್ಭಾಶಯ, ಬಸುರು ಉಂಟಾಗುವ ಭಾಗ. 12. ಗರ್ಭನಾಳ, ಹೊಕ್ಕಳ ಕುಡಿ. 13. ಹಾವುಮೆಕ್ಕೆಗಿಡ. "अमरस्त्रिदशोऽप्यस्थिसंहारे कुलिशद्रुमे। स्त्री गुडूच्यमरावत्योः स्थूणादूर्वाजरायुषु" मेदि०। "अमरा नाभिनालायां गुडूच्यामपि" त्रिकाण्ड०।

**अमरकोश ಅಮರಕೋಶ** (पु०) ಅಮರಸಿಂಹನಿಂದ ರಚಿತವಾದ "ನಾಮಲಿಂಗಾನುಶಾಸನ" ವೆಂಬ ನಿಘಂಟು.

**अमरण ಅಮರಣ** (न०) ಅಮರತ್ವ, ಸಾಯದಿರುವಿಕೆ.

**अमरतरु ಅಮರತರು** (पु०) 1. ಇಂದ್ರನ ನಂದನವನದ ವೃಕ್ಷ. 2. ದೇವದಾರು ಮರ. 3. ಕಲ್ಪವೃಕ್ಷ.

**अमरता ಅಮರತಾ** (स्त्री०) ದೇವತ್ವ, ಅಮರತ್ವ, ಮರಣಹೊಂದದಿರುವಿಕೆ.

**अमरद्विज ಅಮರದ್ವಿಜ** (पु०) ದೇವಲಕ, ದೇವರ ಪೂಜೆಯಿಂದ ಜೀವಿಸುವ ಬ್ರಾಹ್ಮಣ, ಜೀವನಕ್ಕಾಗಿ ದೇವಪೂಜಾಕಾರ್ಯವನ್ನಿಟ್ಟುಕೊಂಡಿರುವವನು.

**अमरपुर ಅಮರಪುರ** (न०) ಇಂದ್ರನ ನಗರ, ಅಮರಾವತೀಪಟ್ಟಣ.

**अमरपुष्प ಅಮರಪುಷ್ಪ** (पु०) 1. ಕಲ್ಪವೃಕ್ಷ. 2. ಜೊಂಡುಹುಲ್ಲು.

**अमरपुष्पिका ಅಮರಪುಷ್ಪಿಕಾ –पुष्पी –ಪುಷ್ಪೀ.** (स्त्री०) 1. ನೆಗ್ಗಿಲುಗಿಡ. 2. ಕೊಳವಳಿಕೆಗಿಡ. 3. ಕಾಡುಸಬ್ಬಸಿಗೆಗಿಡ.

**अमरप्रभु ಅಮರಪ್ರಭು** (पु०) 1. ವಿಷ್ಣು. 2. ಇಂದ್ರ. अमराणां प्रभुः। "अप्रमेयो हृषीकेशः पद्मनाभोऽमरप्रभुः" वि० स०।

**अमररत्न ಅಮರರತ್ನ** (न०) ಸ್ಫಟಿಕಮಣಿ.

**अमरराज ಅಮರರಾಜ** (पु०) ಇಂದ್ರ. अमराणां राजा "टच्" (५-४-९१)।

**अमरलोक ಅಮರಲೋಕ** (पु०) ಸ್ವರ್ಗ, ದೇವಲೋಕ.

**अमरसरित् ಅಮರಸರಿತ್** (स्त्री०) ದೇವನದಿ, ಗಂಗಾನದಿ.

**अमराङ्गना ಅಮರಾಂಗನಾ** (स्त्री०) ದೇವತಾಸ್ತ್ರೀಯರು, ಅಪ್ಸರಸ್ತ್ರೀಗಳು. अमराणामङ्गनाः। "पुरीमवस्कन्द लुनीहि नन्दनं मुषाण रत्नानि हरामराङ्गनाः" माघ० १-५१।

**अमराद्रि ಅಮರಾದ್ರಿ** (पु०) ಮೇರುಪರ್ವತ. अमराणामद्रिः।

**अमराधिप ಅಮರಾಧಿಪ** (पु०) ಇಂದ್ರ, ದೇವತೆಗಳ ಒಡೆಯ. अमराणामधिपः।

**अमरापगा ಅಮರಾಪಗಾ** (स्त्री०) ದೇವನದಿ, ಗಂಗಾನದಿ. अमराणामापगा।

**अमरालय ಅಮರಾಲಯ** (पु०) 1. ಸ್ವರ್ಗ, ದೇವಲೋಕ. 2. ಮೇರುಪರ್ವತ.

**अमरावती ಅಮರಾವತೀ** (स्त्री०) ಇಂದ್ರನ ಪಟ್ಟಣ, ಇಂದ್ರನ ರಾಜಧಾನಿ.

**अमरु ಅಮರು** (पु०) ಅಮರು ಶತಕವನ್ನು ಬರೆದ ಕವಿ.

**अमर्त्य** ಅಮರ್ತ್ಯ (ಪುಂ) ದೇವತೆ. म्रियन्तेऽस्मिन्निति मर्तो भूलोकः — मृङ् (प्राणत्यागे) "तन्" (उं ३-८६)। तत्र भवा अपि मर्ता जनाः। स्वार्थे "यत्" (वा० ५-४-३६)। मर्त्याः। तद्भिन्ना अमर्त्याः। "विधत्स्व विपदुत्तीर्णानमर्त्याननुकम्पया" याद० १६-४९।

**अमर्त्यभुवन** ಅಮರ್ತ್ಯಭುವನ (नं) ಸ್ವರ್ಗ, ದೇವಲೋಕ. अमर्त्यानां भुवनम्।

**अमर्याद** ಅಮರ್ಯಾದ (वि०) 1. ಶಾಸ್ತ್ರಮರ್ಯಾದೆಯನ್ನು ಮೀರಿದ, ನಿಯಮವನ್ನು ಉಲ್ಲಂಘಿಸಿದ. "अमर्यादः क्षुद्रश्चलमतिरसूयाप्रसवभूः कृतघ्नो दुर्मानी स्मरपरवशो वञ्चनपरः" स्तो० र०। 2. ಎಲ್ಲೆಯಿಲ್ಲದ, ಮೇರೆಯಿಲ್ಲದ. 3. ಗೌರವವಿಲ್ಲದ. नास्ति मर्यादा यस्य।

**अमर्यादा** ಅಮರ್ಯಾದಾ (स्त्री०) ಎಲ್ಲೆ ಮೀರುವುದು, ಉಲ್ಲಂಘಿಸುವುದು, ಅತಿಕ್ರಮಿಸುವುದು.

**अमर्ष** ಅಮರ್ಷ (ಪುಂ) 1. ಕೋಪ. 2. ಸಹನೆಯಿಲ್ಲದಿರುವಿಕೆ. मृष (तितिक्षायाम्) "घञ्" (३-३-१८)। "अमर्षशून्येन जनस्य जन्तुना न जातहार्देन च विद्विषादरः" किरा० १-३३।

**अमर्षण** ಅಮರ್ಷಣ (वि०) 1. ಸಹನೆಯಿಲ್ಲದ, ಅಸಹಿಷ್ಣು. "विशेषात्परिपूर्णस्य याति शत्रोरमर्षणः। आभिमुख्यम्" पञ्चतं० १-३५५। 2. ಕುಪಿತನಾದ, ಕೋಪಗೊಂಡ. न मर्षशीलः — मृष (तितिक्षायाम्) ताच्छील्ये "युच्" (३-२-१५१)। "रघोरवष्टम्भमयेन पत्रिणा हृदि क्षतो गोत्रभिदप्यमर्षणः" रघु० ३-५३।

**अमर्षित** ಅಮರ್ಷಿತ (वि०) ಕೋಪಗೊಂಡ, ಕುಪಿತನಾದ. अमर्षोऽस्य सञ्जातः "इतच्" (५-२-३६)। "अभिमन्युवधामर्षितैः पाण्डुपुत्रैः" वेणी० ४।

**अमर्षिन्** ಅಮರ್ಷಿನ್ (वि०) ಕೋಪವುಳ್ಳ, ಕುಪಿತನಾಗಿರುವ. अमर्षोऽस्यास्ति "इनिः" (५-२-११५)। "अमर्षिणा कृत्यमिव क्षमाश्रयं मदोद्धतेनेव हितं प्रियं वचः" किरा० १४-६३। स्त्रियां "ङीप्" (४-१-५)। अमर्षिणी ಅಮರ್ಷಿಣೀ.

**अमल** ಅಮಲ (नं) 1. ಕಾಗೆಬಂಗಾರ. 2. ಸ್ವಚ್ಛವಾದ, ಕೊಳೆಯಿಲ್ಲದ. 3. ದೋಷವಿಲ್ಲದ, ಕಳಂಕವಿಲ್ಲದ. नास्ति मलं यस्य। "मम तु दयितः श्लाघ्यस्तातो जनन्यमलान्वया" मालती० २-२। (स्त्री०) -ला -ಲಾ. 4. ಲಕ್ಷ್ಮಿ. "अमला कमलायां स्यादमलं विशदेऽभ्रके" हेम०।

**अमलात्मन्** ಅಮಲಾತ್ಮನ್ (ಪುಂ) 1. ನಿರ್ಮಲಚಿತ್ತನಾದ ಯೋಗಿ, ವಿಷಯಾಭಿಲಾಷೆಯನ್ನು ತ್ಯಜಿಸಿದ ಯೋಗಿ. (वि०) 2. ನಿರ್ಮಲವಾದ ದೇಹವುಳ್ಳ. "अमलातमसु प्रतिफलन्नभितस्तरुणीकपोलफलकेषु मुहुः" माघ० ९-३७।

**अमा** ಅಮಾ (ಪುಂ) 1. ಆತ್ಮ. (स्त्री०) 2. ಚಂದ್ರನ ಹದಿನಾರನೆಯ ಕಲೆ. 3. ಅಮಾವಾಸ್ಯೆ ತಿಥಿ. "दर्शोऽमामावसी च सा" त्रिकाण्ड०। (अव्य०) 4. ಸಂಗಡ, ಒಡನೆ, ಜೊತೆಯಲ್ಲಿ, ಕೂಡ. 5. ಹತ್ತಿರ, ಸಮೀಪ. न माति — मा (माने) "क्विप्" (३-२-७६)। "स्यादमा सन्निधानार्थे सहार्थे" हेम०।

**अमांस** ಅಮಾಂಸ (वि०) ಶಕ್ತಿಯಿಲ್ಲದವನು, ದುರ್ಬಲ. नास्ति मांसं यस्य।

**अमात्य** ಅಮಾತ್ಯ (ಪುಂ) 1. ಸಚಿವ, ಮಂತ್ರಿ. अमा सह वसति "त्यप्" (४-२-१०४)। "नृपेष्वमात्येषु च सर्वसम्पदः" किरा० १-५। "अमात्यव्यञ्जना राज्ञां दूष्यास्ते शत्रुसंज्ञिताः" माघ० २-५६। (वि०) 2. ಮನೆಯ ಒಡನಾಡಿ, ಕುಟುಂಬಕ್ಕೆ ಸೇರಿದವನು.

**अमात्र** ಅಮಾತ್ರ (ಪುಂ) 1. ಪರಮಾತ್ಮ. नास्ति मात्रा परिच्छेदो यस्य। (नं) 2. ಅಳತೆಯಿಲ್ಲದಿರುವಿಕೆ. (वि०) 3. ಪರಿಮಾಣಶೂನ್ಯವಾದ, ಅಳತೆಯಿಲ್ಲದ, ಅಳೆಯಲಾಗದ.

**अमानन** ಅಮಾನನ (नं) 1. ಅಗೌರವ, ಅವಮರ್ಯಾದೆ. (वि०) 2. ಗೌರವವಿಲ್ಲದ, ಆದರವಿಲ್ಲದ.

**अमानव** ಅಮಾನವ (वि०) ಅಮಾನುಷ, ಮನುಷ್ಯನಲ್ಲದ, ಮನುಷ್ಯನ ಸಂಬಂಧವಿಲ್ಲದ. मनोरयं मानवः। नं तं। "अमानवं जातमजं मनोः कुले प्रभाविनं भाविनमन्तमात्मनः" माघ० १-६७।

**अमानस्य** ಅಮಾನಸ್ಯ (नं) ಮನಸ್ಸನ್ನು ನೋಯಿಸುವ ದುಃಖ. मानसे साधु — मानस "यत्" (४-४-९८)। मानस्यम्। नं तं।

**अमाय** ಅಮಾಯ (ಪುಂ) 1. ಪರಬ್ರಹ್ಮ, ಪರಮಾತ್ಮ. (वि०) 2. ಕಪಟವಿಲ್ಲದ, ಋಜುವಾದ, ಪ್ರಾಮಾಣಿಕನಾದ. नास्ति माया यस्य।

**अमाया** ಅಮಾಯಾ (स्त्री०) 1. ಪ್ರಾಮಾಣಿಕತೆ, ಕಪಟವಿಲ್ಲದಿರುವಿಕೆ. 2. ಅವಿದ್ಯಾಶೂನ್ಯತೆ.

**अमायिन्** ಅಮಾಯಿನ್ (वि०) ಕಪಟವಿಲ್ಲದ, ಪ್ರಾಮಾಣಿಕನಾದ.

**अमाव(वा)स्या** ಅಮಾವ(ವಾ)ಸ್ಯಾ (स्त्री०) ಅಮಾವಾಸ್ಯೆ, ಕೃಷ್ಣಪಕ್ಷದ ಹದಿನೈದನೆಯ ತಿಥಿ. अमा सह वसतश्चन्द्रार्कौ यस्याम्—अमा+वस (निवासे) "ण्यत्" (३-१-१२२)। वा ह्रस्वः। निपा०।

**अमित** ಅಮಿತ (वि०) 1. ಮಿತವಲ್ಲದ, ಹೆಚ್ಚಾದ, ಅಳತೆಯಿಲ್ಲದ. मा (माने) "क्तः" (३-२-१०२)। न मितः। 2. ತಿಳಿಯಲ್ಪಡದ. "अमितस्य महिम्नस्ते प्रयातुं पारमिच्छताम्" याद० १-४७।

**अमिताशन** ಅಮಿತಾಶನ (पु०) ಪರಮೇಶ್ವರ, ಪರಮಾತ್ಮ. अमितमश्नाति—अश (भोजने) "ल्युः" (३-१-१३४)। "महीधरो महाभागो वेगवानमिताशनः" वि० स० [ಪ್ರಳಯಕಾಲದಲ್ಲಿ ಪರಮಾತ್ಮನು ಎಲ್ಲವನ್ನೂ ನುಂಗುವನು.]

**अमितौजस्** ಅಮಿತೌಜಸ್ (वि०) ಹೆಚ್ಚು ಬಲಶಾಲಿ. अमितमोजो यस्य।

**अमित्र** ಅಮಿತ್ರ (पु०) ಶತ್ರು, ಹಗೆ, ವೈರಿ. अम (गत्यादौ) "इत्रः" (उ० ४-१७४)। "गुणार्जनोपायविरुद्धबुद्धयः प्रकृत्यमित्रा हि सतामसाधवः" किरा० १४-२१।

**अमिथ्या** ಅಮಿಥ್ಯಾ (अव्य०) ಸತ್ಯವಾಗಿ, ನಿಜವಾಗಿ. न मिथ्या। "कृच्छ्रं महत्तीर्ण इति प्रियार्हां तामूचतुस्ते प्रियमप्यमिथ्या" रघु० १४-६।

**अमिन्** ಅಮಿನ್ (वि०) ಅಸ್ವಸ್ಥ, ರೋಗಿ. अम "इनिः" (५-२-११५)।

**अमिष** ಅಮಿಷ (न०) 1. ಲೌಕಿಕಸುಖ. 2. ಭೋಗ್ಯವಸ್ತು, ಸುಖದ ಪದಾರ್ಥ. 3. ಮೋಸವಿಲ್ಲದಿರುವಿಕೆ. न मिषः। (वि०) 4. ಕಪಟವಿಲ್ಲದ, ಮೋಸವಿಲ್ಲದ. नास्ति मिषश्छलं यस्य।

**अमुक्त** ಅಮುಕ್ತ (न०) 1. ಖಡ್ಗ, ಕತ್ತಿ. (वि०) 2. ಮುಕ್ತಿಹೊಂದದ, ಸಂಸಾರದಿಂದ ಬಿಡುಗಡೆಹೊಂದದ. 3. ಬಿಡಲ್ಪಡದ. न मुक्तः। "अमुक्ता भवता नाथ मुहूर्तमपि सा पुरा" सा० द०।

**अमुक्तहस्त** ಅಮುಕ್ತಹಸ್ತ (वि०) ಜಿಪುಣ, ಜೀನ, ಕೃಪಣ, ಲೋಭಿ. न मुक्तहस्तो यस्य। स्त्रियां –हस्ता –ಹಸ್ತಾ. "सुसंस्कृतोपस्करया व्यये चामुक्तहस्तया" मनु० ५-१५०।

**अमुक्ति** ಅಮುಕ್ತಿ (स्त्री०) 1. ಮೋಕ್ಷವಿಲ್ಲದಿರುವಿಕೆ, ಸಂಸಾರದಿಂದ ಬಿಡುಗಡೆಹೊಂದದಿರುವಿಕೆ. 2. ಬಂಧನದಿಂದ ಬಿಡುಗಡೆಯಿಲ್ಲದಿರುವಿಕೆ. न मुक्तिः।

**अमुतस्** ಅಮುತಸ್ (अव्य०) 1. ಅಲ್ಲಿಂದ, ಆ ಪ್ರದೇಶದಿಂದ, ಅವನಿಂದ, ಅವಳಿಂದ, ಅದರಿಂದ. अदस् "तसिल्" (वा० ५-४-४४)। 2. ಪರಲೋಕದಿಂದ.

**अमुत्र** ಅಮುತ್ರ (अव्य०) 1. ಅಲ್ಲಿ, ಅವನಲ್ಲಿ, ಅದರಲ್ಲಿ. 2. ಪರಲೋಕದಲ್ಲಿ. अदस् "त्रल्" (५-३-१०)। 3. ಜನ್ಮಾಂತರದಲ್ಲಿ, ಬೇರೆ ಜನ್ಮದಲ್ಲಿ. "तथैव यः क्षमाकाले क्षत्रियो नोपशाम्यति। अप्रियः सर्वभूतानां सोऽमुत्रेह च नश्यति"।

**अमूदृश्** ಅಮೂದೃಶ್ –दृक्ष –ದೃಕ್ಷ (वि०) ಅದರಂತಿರುವ, ಅವನಂತಿರುವ. अदस्+दृशिर् (प्रेक्षणे) "क्विन्" (३-२-६०)। "क्सः" (६-३-८९)।

**अमूर्त** ಅಮೂರ್ತ (पु०) 1. ಪರಮಾತ್ಮ. (वि०) 2. ಅವಯವರಹಿತ, ಆಕಾರಶೂನ್ಯ. न मूर्तः। "क्षितिर्जलं तथा तेजः पवनो मन एव च। परापरत्वमूर्तत्वक्रिया-योगाश्रया अमी" भाषाप०। "अविच्छिन्नपरिमाणवत्वं मूर्तत्वम्" मुक्ता०।

**अमूर्तगुण** ಅಮೂರ್ತಗುಣ (पु०) ಅಮೂರ್ತವಾದ ಆಕಾಶ ಮೊದಲಾದುವುಗಳ ಗುಣ. "धर्माधर्मौ भावना च शब्दो बुद्ध्यादयोऽपि च। एतेऽमूर्तगुणाः सर्वे" भाषाप०।

**अमूर्ति** ಅಮೂರ್ತಿ (पु०) 1. ವಿಷ್ಣು, ಪರಮಾತ್ಮ. नास्ति मूर्तिः स्थूलभौतिकमूर्तिर्यस्य। "अमूर्तिरनघोऽचिन्त्यो भयकृद्भयनाशनः" वि० स०। (वि०) 2. ಆಕಾರರಹಿತವಾದ, ಅವಯವವಿಲ್ಲದ.

**अमूर्तिमत्** ಅಮೂರ್ತಿಮತ್ (पु०) 1. ವಿಷ್ಣು, ಪರಮಾತ್ಮ. "विश्वमूर्तिर्महामूर्तिर्दीप्तमूर्तिरमूर्तिमान्" वि० स०। (वि०) 2. ಆಕಾರರಹಿತವಾದ, ಅವಯವವಿಲ್ಲದ. न मूर्तिमान्।

**अमूल्य** ಅಮೂಲ್ಯ (वि०) ಬೆಲೆಯಿಲ್ಲದ, ಬಹಳ ಬೆಲೆಬಾಳುವ, ಬೆಲೆ ಕಟ್ಟಲಾಗದ.

**अमृणाल** ಅಮೃಣಾಲ (न०) ಲಾಮಂಚದ ಬೇರು. मृणालमिव—सादृश्ये न० त०।

**अमृत** ಅಮೃತ (पु०) 1. ವಿಷ್ಣು, ಪರಮಾತ್ಮ. न मृतं मरणं यस्य। "अमृतः शाश्वतस्थाणुर्वरारोहो महा-तपाः" वि० स०। 2. ಧನ್ವಂತರಿ. 3. ಶಿವ, ಈಶ್ವರ. 4. ದೇವತೆ. 5. ನಕ್ಷತ್ರ ಮತ್ತು ವಾರಗಳ ಯೋಗದಿಂದುಂಟಾಗುವ ಒಂದು ಯೋಗ. [ಭಾನು–ಹಸ್ತ,

ಸೋಮ–ಶ್ರವಣ, ಕುಜ–ರೇವತಿ, ಬುಧ–ಅನೂರಾಧೆ, ಗುರು–ಪುಷ್ಯ, ಶುಕ್ರ–ಅಶ್ವಿನಿ ಮತ್ತು ಶನಿ–ರೋಹಿಣಿ ಇವುಗಳ ಯೋಗವು ಅಮೃತಯೋಗವು.] 6. ಚಂದ್ರ. (ನಂ) 7. ಅಮೃತ, ಸುಧೆ. न म्रियन्तेऽनेन — मृङ् (प्राणत्यागे) "तन्" (उ० ३-८८)। "देवासुरैरमृतमम्बुनिधिर्ममन्थे" किरा० ५-३०। 8. ಮೋಕ್ಷ, ಮುಕ್ತಿ. न मृतं मरणं यत्र। "स श्रियैचामृताय च" अम०। 9. ಸ್ವರ್ಗ. 10. ಜಲ, ನೀರು. 11. ಕ್ಷೀರ, ಹಾಲು. 12. ಯಜ್ಞಶೇಷ. "विघसो भुक्तशेषं तु यज्ञशेषं तथामृतम्" मनु० ३-२८५। 13. ಯಾಚಿಸದೆ ದೊರೆತ ಭಿಕ್ಷೆ. "मृतं स्याद्याचितं भैक्ष्यममृतं स्यादयाचितम्" मनु० ४-५। 14. ಘೃತ, ತುಪ್ಪ. "अमृतं नाम यत्सन्तो मन्त्रजिह्वेषु जुह्वति। शोभैव मन्दरक्षुब्धक्षुभिताम्भोधिवर्णना" माघ० २-१०७। 15. ಅನ್ನ, ಆಹಾರ. 16. ಚಿನ್ನ, ಸುವರ್ಣ. 17. ಪಾದರಸ. 18. ವಿಷ. 19. ಭೋಜನ, ಊಟ. 20. ಆಕಾಶ, ಗಗನ. 21. ರಸಾಯನ. (वि०) 22. ಸಿಹಿಯಾದ, ಮಧುರವಾದ. 23. ಮರಣಹೊಂದದ, ಬದುಕಿರುವ. 24. ಅಮರತ್ವಕ್ಕೆ ಕಾರಣವಾದ. 25. ಮೋಕ್ಷ ಹೊಂದಿದ, ಮುಕ್ತನಾದ. 26. ರಮ್ಯವಾದ, ಸುಂದರವಾದ. "अमृतं यज्ञशेषाम्बुसुधामोक्षेष्वयाचिते। अन्नकाञ्चनयोर्जग्धौ खे स्वादुनि रसायने। घृते हृद्ये गोरसे चामृतो धन्वन्तरौ सुरे" हेम०। 27. ನಾಶವಿಲ್ಲದ, ಶಾಶ್ವತವಾದ. "ब्रह्मणो हि प्रतिष्ठाहममृतस्याव्ययस्य च। शाश्वतस्य च धर्मस्य सुखस्यैकान्तिकस्य च" गीता १४-२७। (स्त्री०) –ता –ತಾ. 28. ವಾರಾಹಿ ಗೆಡ್ಡೆ. 29. ಅಮೃತಬಳ್ಳಿ. 30. ಕಾಡು ಹೆಸರು. 31. ಗರಿಕೆ. 32. ಮದ್ಯ, ಹೆಂಡ. 33. ತುಲಸಿ. 34. ಹಾವುಮೆಕ್ಕೆ ಗಿಡ. 35. ಹಿಪ್ಪಲಿ. 36. ಅಳಲೆ ಗಿಡ. 37. ಜ್ಯೋತಿಷ್ಮತೀಲತೆ, ಕಂಗೊಂಗೆಗಿಡ. 38. ನೆಲ್ಲಿಮರ. "अमृता मागधीपथ्यागुडूच्यामलकीषु च" मेदि०। "स्याद्यज्ञशेषाम्बुनभोरसायनक्षीराज्यसोमान्नसुधासु चामृतम्। पथ्यागुडूच्यामलकीष्वयं स्त्रियां देवेषु ना स्वाद्वविनाशिनोस्त्रिषु" नानार्थर०। 39. ಸೂರ್ಯನ ಕಿರಣಗಳಲ್ಲೊಂದು. 40. ಶರೀರದೊಳಗಿನ ಒಂದು ನಾಡಿ. "नाडीनामुदयक्रमेण जगतः पञ्चामृताकर्षणात्" मालती० ५-२।

**अमृतत्व** ಅಮೃತತ್ವ (ನಂ) ಮೋಕ್ಷ, ಮುಕ್ತಿ. "अहिंसया च भूतानाममृतत्वाय कल्पते" मनु० ६-६०।

**अमृतकिरण** ಅಮೃತಕಿರಣ –दीधिति –ದೀಧಿತಿ –द्युति –ದ್ಯುತಿ (पुं०) ಚಂದ್ರ. "अमृतदीधितिरेष विदर्भजे भजसि तापममुष्य किमंशुभिः" नैष० ४-१०४।

**अमृतप** ಅಮೃತಪ (पुं०) 1. ವಿಷ್ಣು. अमृतं पाति असुरेभ्यः — पा (रक्षणे) "सोमपोऽमृतपः सोमः" वि० स०। 2. ದೇವತೆ. अमृतं पिबति — पा (पाने) "कः" (३-२-३)।

**अमृतयोग** ಅಮೃತಯೋಗ (पुं०) ವಾರ ಮತ್ತು ನಕ್ಷತ್ರಗಳ ಯೋಗ (ಸಂಬಂಧ) ದಿಂದುಂಟಾಗುವ ಒಂದು ಶುಭಯೋಗ. [ವಿವರಕ್ಕೆ "अमृत" ಪದದಲ್ಲಿ ನೋಡಿ.]

**अमृतरस** ಅಮೃತರಸ (पुं०) 1. ವಿಷ್ಣು, ಪರಮಾತ್ಮ. 2. ಸುಧಾರಸ. (स्त्री) –रसा –ರಸಾ. 3. ಕರಿದ್ರಾಕ್ಷಿ. 4. ಒಂದುವಿಧ ಸಿಹಿರೊಟ್ಟಿ.

**अमृतलता** ಅಮೃತಲತಾ –वल्ली –ವಲ್ಲೀ (स्त्री०) ಅಮೃತಬಳ್ಳಿ ಗಿಡ.

**अमृतसंभवा** ಅಮೃತಸಂಭವಾ (स्त्री०) ಅಮೃತಬಳ್ಳಿ ಗಿಡ.

**अमृतसार** ಅಮೃತಸಾರ (पुं०) ಘೃತ, ತುಪ್ಪ. अमृतस्य क्षीरस्य सारः।

**अमृतसू** ಅಮೃತಸೂ (पुं०) 1. ಚಂದ್ರ. अमृतं सूते — षूङ् (प्राणिगर्भविमोचने) "क्विप्" (३-२-६१)। (स्त्री०) 2. ಅದಿತಿದೇವಿ. अमृतान् सूते।

**अमृतांशु** ಅಮೃತಾಂಶು (पुं०) ಚಂದ್ರ. अमृतमिवांशवोऽस्य।

**अमृतांशूद्भव** ಅಮೃತಾಂಶೂದ್ಭವ (पुं०) 1. ವಿಷ್ಣು. अमृतांशोश्चन्द्रस्य उद्भवो यस्मात्। "अमृतांशूद्भवो भानुः शशबिन्दुः सुरेश्वरः" वि० स०। (वि०) 2. ಚಂದ್ರನಿಂದ ಹುಟ್ಟಿದ. अमृतांशोरुद्भवति।

**अमृतान्धस्** ಅಮೃತಾಂಧಸ್ (पुं०) ದೇವತೆ. अमृतमन्धोऽन्नं दर्शनात् तृप्तिकारकं यस्य। "न वै देवा अश्नन्ति पिबन्ति एतदेवामृतं दृष्ट्वा तृप्यन्ति" श्रुतिः।

**अमृताश** ಅಮೃತಾಶ (पुं०) 1. ವಿಷ್ಣು. अमृतं क्षयाभावमश्नुते—अशू (व्याप्तौ) "अण्" (३-२-१)। "अमृताशोऽमृतवपुः" वि० स०। 2. ದೇವತೆ. अमृतं सुधामश्नाति — अश (भोजने) "अण्" (३-२-१)।

**अमृताशन** ಅಮೃತಾಶನ (पुं०) ದೇವತೆ. अमृतमश्नाति — अश (भोजने) "ल्युः" (३-१-१३४)।

**अमृत्यु** ಅಮೃತ್ಯು (पुं०) 1. ವಿಷ್ಣು. नास्ति मृत्युर्यस्य। "अमृत्युः सर्वदृक् सिंहः सन्धाता सन्धिमान् स्थिरः" वि० स०। 2. ಮರಣವಿಲ್ಲದಿರುವಿಕೆ. (वि०) 3. ಮರಣವಿಲ್ಲದ. नास्ति मृत्युर्यस्य। 4. ಮರಣಕ್ಕೆ ಕಾರಣವಿಲ್ಲದ. नास्ति मृत्युर्यस्मात्।

**अमृषा** ಅಮೃಷಾ (अव्य०) ಸತ್ಯವಾಗಿ, ನಿಜವಾಗಿ.

**अमेधस्** ಅಮೇಧಸ್ (वि०) ಮೂರ್ಖ, ಮೂಢ, ತಿಳಿವಳಿಕೆಯಿಲ್ಲದವನು, ಬುದ್ಧಿಯಿಲ್ಲದವನು. नास्ति मेधा यस्य "असिच्" (५-४-१२२)।

**अमेध्य** ಅಮೇಧ್ಯ (नं०) 1. ಪುರೀಷ, ಮಲ. "समुत्सृजेद्राजमार्गे यस्त्वमेध्यमनापदि" मनु० ९-२८२। (वि०) 2. ಅಶುದ್ಧವಾದ, ಪವಿತ್ರವಲ್ಲದ. "उच्छिष्टमपि चामेध्यं भोजनं तामसप्रियम्" गीता १७-१०। 3. ಯಾಗಕ್ಕೆ ಅರ್ಹವಲ್ಲದ. "नामेध्यं प्रक्षिपेदग्नौ न च पादौ प्रतापयेत्" मनु० ४-५३।

**अमेय** ಅಮೇಯ (वि०) 1. ಅಳೆಯಲಾಗದ. 2. ತಿಳಿಯಲಾಗದ. न मातुं शक्यः। "अमेयो मितलोकस्त्वम्" रघु० १०-१८।

**अमेयात्मन्** ಅಮೇಯಾತ್ಮನ್ (पुं०) 1. ವಿಷ್ಣು. अमेय आत्मा यस्य। "वृषाकपिरमेयात्मा" वि० स०। (वि०) 2. ಹಿರಿದಾದ ಮನಸ್ಸುಳ್ಳ, ಉದಾರವಾದ ಹೃದಯವುಳ್ಳ.

**अमोघ** ಅಮೋಘ (पुं०) 1. ವಿಷ್ಣು. "अमोघः पुण्डरीकाक्षो वृषकर्मा वृषाकृतिः" वि० स०। (वि०) 2. ಸಫಲವಾದ, ವ್ಯರ್ಥವಲ್ಲದ. "अमोघाः प्रतिगृह्णन्तावर्ध्यानुपदमाशिषः" रघु० १-४४। "अमोघं शाम्भवं बीजं सद्यो नद्योज्झितं महत्" कुमा० १०-५७। 3. ಗುರಿ ಮುಟ್ಟುವ, ಗುರಿತಪ್ಪದಿರುವ. "धनुष्यमोघं समधत्त बाणम्" कुमा० ३-६६। (स्त्री०)–घा–ಘಾ. 4. ವಾಯುವಿಳಂಗ. 5. ಹಸರು ಪಾದರಿಗಿಡ. 6. ಅಳಲೆ ಗಿಡ. "अमोघः सफले वाच्यवत् स्त्री पथ्याविडङ्गयोः" मेदि०।

**अम्ब** ಅಂಬ (पुं०) 1. ಶಬ್ದ, ಧ್ವನಿ, ಸದ್ದು. अबि (शब्दे) "घञ्" (३-३-१८)। 2. ತಂದೆ.

**अम्बक** ಅಂಬಕ (पुं०) 1. ತಂದೆ. अम्ब्यते स्नेहेन शब्द्यते– अबि (शब्दे) "घञ्" (३-३-१९)। स्वार्थे "कः"। (नं०) 2. ನೇತ್ರ, ಕಣ್ಣು. अम्बति शीघ्रं नक्षत्रस्थानपर्यन्तं गच्छति–अबि "ण्वुल्" (३-१-१३३)। "ईक्षणं नयनं चक्षुरक्षि लोचनमम्बकम्" वैज०।

**अम्बर** ಅಂಬರ (नं०) 1. ವಸ್ತ್ರ, ಬಟ್ಟೆ. अम्बं (मर्मर) शब्दं राति–रा (दाने) "कः" (३-२-३)। "स तप्तकार्तस्वरभास्वराम्बरः कठोरताराधिपलाञ्छनच्छविः" माघ० १-२०। 2. ಗಗನ, ಆಕಾಶ. अम्बं शब्दं राति–रा (दाने) "कः" (३-२-३)। "वसन् ददर्शावतरन्तमम्बराद्धिरण्यगर्भाङ्गभुवं मुनिं हरिः" माघ० १-१। 3. ಕಾಗೆಬಂಗಾರ. 4. ಕುಂಕುಮಕೇಸರಿ. 5. ಹತ್ತಿ. 6. ಒಂದು ಸುಗಂಧ ದ್ರವ್ಯ. "अम्बरं वाससि व्योम्नि कापसि च सुगन्धके" विश्व०।

**अम्बरीष** ಅಂಬರೀಷ (पुं०) 1. ವಿಷ್ಣು. 2. ಶಿವ, ಈಶ್ವರ. 3. ಸೂರ್ಯ. 4. ಸೂರ್ಯವಂಶದ ಒಬ್ಬ ದೊರೆ, ವಿಷ್ಣುಭಕ್ತನಾದ ಅಂಬರೀಷ ಮಹಾರಾಜ. [ಅಂಬರೀಷ ಮಹಾರಾಜನು ವೈವಸ್ವತ ಮನುವಿನ ಸಂತತಿಯವನಾದ ನಾಭಾಗನ ಮಗ. ಈತನು ವಿಷ್ಣು ಭಕ್ತಾಗ್ರೇಸರನಾಗಿದ್ದನು. ಏಕಾದಶೀ ವ್ರತವನ್ನು ಆಚರಿಸುತ್ತಿದ್ದ ಈತನ ನಿಯಮವನ್ನು ಭಂಗಪಡಿಸಲು ಒಂದು ದಿನ ದುರ್ವಾಸಮುನಿಯು ದ್ವಾದಶಿಯ ದಿನ ಬೆಳಿಗ್ಗೆ ಈತನ ಮನೆಗೆ ಬಂದು ಭೋಜನಕ್ಕೆ ಆಹ್ವಾನ ಪಡೆದನು. ಸ್ನಾನಕ್ಕಾಗಿ ನದಿಗೆ ಹೋಗಿ ಬಹಳ ಹೊತ್ತಾದರೂ ಬರದಿರಲು ಅಂಬರೀಷನು ಪಾರಣೆಯ ಕಾಲವು ಮೀರುವುದೆಂಬ ಭಯದಿಂದ ಜಲಪಾರಣೆಯನ್ನು ಮಾಡಿದನು. ಆ ಕೂಡಲೇ ದುರ್ವಾಸ ಮುನಿಯು ಬಂದು ಅಂಬರೀಷನನ್ನು ನಿಗ್ರಹಿಸಲು ತನ್ನ ಜಟೆಯಿಂದ ಒಂದು ದೇವತೆಯನ್ನು ಸೃಷ್ಟಿಸಿದನು. ಆ ಕೂಡಲೆ ವಿಷ್ಣುವಿನ ಚಕ್ರವು ಆ ದೇವತೆಯನ್ನು ದಹಿಸಿಬಿಟ್ಟು ಅಲ್ಲಿದ್ದ ದುರ್ವಾಸ ಋಷಿಯನ್ನು ಅಟ್ಟಿಕೊಂಡು ಹೋಯಿತು. ಮುನಿಯು ಅದರ ತಾಪವನ್ನು ತಡೆಯಲಾರದೆ ಮೂರು ಲೋಕಗಳಲ್ಲಿಯೂ ಓಡುತ್ತಾ ಬಳಲಿ ಬೆಂಡಾಗಿ ಬ್ರಹ್ಮರುದ್ರಾದಿಗಳೆಲ್ಲರನ್ನೂ ಪ್ರಾರ್ಥಿಸಿದರೂ ಸಾಧ್ಯವಾಗದೆ ಕೊನೆಗೂ ಅದರಿಂದ ತಪ್ಪಿಸಿಕೊಳ್ಳಲಾರದೆ ಅಂಬರೀಷನನ್ನೇ ಮರೆಹೊಕ್ಕು ಅದರಿಂದ ಪಾರಾದನು.] 5. ಬಾಲಕ. 6. ಅಮಟೆಮರ. 7. ಅಂಬರೀಷವೆಂಬ ಒಂದು ನರಕ. 8. ಅನುತಾಪ. (नं०) 9. ಹುರಿಯುವ ಓಡು, ಬಾಣಲಿ. 10. ರಣ, ಯುದ್ಧ. अम्ब्यतेऽत्र–अबि (शब्दे) "ईषन्" अरुडागमश्च (उ० ४-२९)। निपा०। "अम्बरीषं रणे भ्राष्ट्रेऽप्यम्बरीषो नृपान्तरे। मार्तण्डे खण्डपरशावाम्रातककिशोरयोः" विश्व०। "अम्बरीषं रणे भ्राष्ट्रे क्लीबं पुंसि नृपान्तरे। नरकस्य प्रभेदे च किशोरे भास्करेऽपि च। आम्रातकेऽनुतापे च" मेदि०।

**अम्बष्ठ** ಅಂಬಷ್ಠ (ಪುಂ) 1. ಬ್ರಾಹ್ಮಣನಿಗೆ ವೈಶ್ಯ ಹೆಂಗಸಿನಲ್ಲಿ ಜನಿಸಿದ ಬೆರಕೆ ಜಾತಿಯವನು. 2. ಚಿಕಿತ್ಸಕ, ವೈದ್ಯ. 3. ಮಾವಟಿಗ, ಮಾವುತ. (ಪುಂ ಬಂ ಬಂ) 4. ಅಂಬಷ್ಠದೇಶ. (ಸ್ತ್ರೀಂ) –ष्ठा–ष्ठा. 5. ಕಾಡು ಮಲ್ಲಿಗೆ. 6. ಹಿಪ್ಪಲಿ. 7. ಪುಲ್ಲಂಪುರಿಚಿ.

**अम्बष्ठिका** ಅಂಬಷ್ಠಿಕಾ (ಸ್ತ್ರೀಂ) ಹೊನಗೊನ್ನೆ ಸೊಪ್ಪು.

**अम्बा** ಅಂಬಾ (ಸ್ತ್ರೀಂ) 1. ತಾಯಿ. अम्ब्यते शब्द्यते – अबि (शब्दे) "अ:" (३-३-१०३)। "कृताञ्जलिस्तत्र यदम्ब सत्यात्" रघुं १४-१६। ಇದೇ ಅರ್ಥದಲ್ಲಿ अम्बाडा, अम्बाला ಪ್ರಯೋಗಗಳೂ ಉಂಟು. 2. ಕಾಶೀರಾಜನ ಮಗಳು, ಅಂಬಿಕೆಯ ಸಹೋದರಿ. [ಕಾಶೀರಾಜನಿಗೆ ಅಂಬೆ, ಅಂಬಿಕೆ ಮತ್ತು ಅಂಬಾಲಿಕೆಯೆಂಬ ಮೂವರು ಹೆಣ್ಣು ಮಕ್ಕಳಿದ್ದರು. ಭೀಷ್ಮನು ಈ ಮೂವರನ್ನೂ ವಿಚಿತ್ರವೀರ್ಯನಿಗೆ ಮದುವೆ ಮಾಡಲು ಕದ್ದೊಯ್ದನು. ಹಿರಿಯಳಾದ ಅಂಬೆಯನ್ನು ಈ ಮೊದಲೇ ಸೌಭನೆಂಬ ರಾಜನಿಗೆ ನಿಶ್ಚಯಮಾಡಿದ್ದುದರಿಂದ ಅವಳನ್ನು ಆ ಸೌಭನಲ್ಲಿಗೇ ಕಳುಹಿಸಿಕೊಟ್ಟನು. ಅಂಬೆಯು ಪರಪುರುಷನ ಮನೆಯಲ್ಲಿದ್ದು ಬಂದುದರಿಂದ ಸೌಭನು ಅವಳನ್ನು ಮದುವೆಯಾಗಲು ಒಪ್ಪದಿರಲು ಅವಳು ಪುನಃ ಭೀಷ್ಮನಲ್ಲಿಗೆ ಹೋಗಿ ತನ್ನನ್ನು ಅಂಗೀಕರಿಸುವಂತೆ ಪ್ರಾರ್ಥಿಸಿದಳು. ಭೀಷ್ಮನೂ ತನ್ನ ಆಜೀವ ಬ್ರಹ್ಮಚರ್ಯೆಯ ಪ್ರತಿಜ್ಞೆಯ ಕಾರಣದಿಂದ ನಿರಾಕರಿಸಲು ಮುಂದಿನ ಜನ್ಮದಲ್ಲಿ ಸೇಡನ್ನು ತೀರಿಸಿಕೊಳ್ಳುವುದಾಗಿ ಹೇಳಿ ಈಶ್ವರನಿಂದ ವರ ಪಡೆದು ಶಿಖಂಡಿಯೆಂಬ ಹೆಸರಿನಿಂದ ದ್ರುಪದರಾಜನ ಮಗಳಾಗಿ ಹುಟ್ಟಿ ಭೀಷ್ಮಾಚಾರ್ಯರ ಮರಣಕ್ಕೆ ಕಾರಣಳಾಗುವಳು.] 3. ದುರ್ಗಾದೇವಿ. 4. ಅಗುರು ಶುಂಠಿ. 5. ಜ್ಯೇಷ್ಠ ಸಹೋದರಿ. "अथ भगिनी स्वसा। सा ज्येष्ठाम्बाप्यवन्ती च" वैजं। 6. ತಾಯಿ. (ನಾಟಕಗಳಲ್ಲಿ ಪ್ರಯೋಗ.) "आर्यो मारिषमार्षकौ। आबुकस्तु पिताम्बा तु माता" वैजं।

**अम्बालिका** ಅಂಬಾಲಿಕಾ (ಸ್ತ್ರೀಂ) ಕಾಶೀರಾಜನ ಮೂರನೆಯ ಮಗಳು, ವಿಚಿತ್ರವೀರ್ಯನ ಪತ್ನಿ, ಪಾಂಡು ಮಹಾರಾಜನ ತಾಯಿ. [ಶಂತನು ಮಹಾರಾಜನ ಮಗನಾದ ವಿಚಿತ್ರವೀರ್ಯನು ಸಂತಾನವಿಲ್ಲದೆ ಕಾಲವಾಗಲು ಅವನ ಹಿರಿಯ ಹೆಂಡತಿಯಾದ ಅಂಬಿಕೆಯಲ್ಲಿ ವ್ಯಾಸರಿಂದ ಧೃತರಾಷ್ಟ್ರನೆಂಬ ಮಗನು ಹುಟ್ಟಿದರೂ ಅವನು ಕುರುಡನಾದುದರಿಂದ ಅವನ ತಾಯಿಯಾದ ಸತ್ಯವತಿಯು ಅವನ ಕಿರಿಯ ಪತ್ನಿಯಾದ ಅಂಬಾಲಿಕೆಯಲ್ಲಿ ಸಂತಾನಕ್ಕಾಗಿ ತನ್ನ ಹಿರಿಯ ಮಗನಾದ ವ್ಯಾಸಮಹರ್ಷಿಯನ್ನು ಪುನಃ ಪ್ರಾರ್ಥಿಸಿದಳು. ಅವಳ ನಿಯೋಗದಿಂದ ಅಂಬಾಲಿಕೆಯು ವ್ಯಾಸಮಹರ್ಷಿಯಿಂದ ಪಾಂಡುವೆಂಬ ಮಗನನ್ನು ಪಡೆದಳು.]

**अम्बिका** ಅಂಬಿಕಾ (ಸ್ತ್ರೀಂ) 1. ತಾಯಿ. 2. ದುರ್ಗಾದೇವಿ, ಪಾರ್ವತಿ. 3. ಸೋದರಮಾವನ ಹೆಂಡತಿ. "अम्बिका पार्वतीमात्रोर्धृतराष्ट्रस्य मातरि" मेदिं। "अम्बिका मातुलीगौर्यो:" नानार्थरं। 4. ಕಾಶೀರಾಜನ ಎರಡನೆಯ ಮಗಳು, ಧೃತರಾಷ್ಟ್ರನ ತಾಯಿ, ವಿಚಿತ್ರವೀರ್ಯನ ಪತ್ನಿ. [ಶಂತನು ಮಹಾರಾಜನ ಮಗನಾದ ವಿಚಿತ್ರವೀರ್ಯನು ಸಂತಾನವಿಲ್ಲದೆ ಕಾಲವಾಗಲು ಅವನ ತಾಯಿಯಾದ ಸತ್ಯವತಿಯು ಅವನ ಪತ್ನಿಯಾದ ಅಂಬಿಕೆಯಲ್ಲಿ ಸಂತಾನಕ್ಕಾಗಿ ತನ್ನ ಹಿರಿಯ ಮಗನಾದ ವ್ಯಾಸಮಹರ್ಷಿಯನ್ನು ಪ್ರಾರ್ಥಿಸಿದಳು. ಅವಳ ನಿಯೋಗದಿಂದ ಅಂಬಿಕೆಯು ವ್ಯಾಸಮಹರ್ಷಿಯಿಂದ ಧೃತರಾಷ್ಟ್ರನೆಂಬ ಮಗನನ್ನು ಪಡೆದಳು.] 5. ಕಿರಿಯ ಸಹೋದರಿ, ಕಿರಿಯ ತಂಗಿ. "अथ भगिनी स्वसा। सा ज्येष्ठाम्बाप्यवन्ती च कनिष्ठा कन्यसाम्बिका" वैजं।

**अम्बु** ಅಂಬು (ನಂ) 1. ಜಲ, ನೀರು. अबि (शब्दे) "उण्" बाहुं। "स्वेदाम्बुस्नपितमजायतेतरस्या:" माघं ८-३६। "विततशीकरराशिभिरुच्छ्रितैरुपलरोधविवर्तिभिरम्बुभि:" किरां ५-१५। 2. ಲಗ್ನದಿಂದ ನಾಲ್ಕನೆಯ ಸ್ಥಾನ.

**अम्बुकण** ಅಂಬುಕಣ (ಪುಂ) ನೀರಿನ ಹನಿ, ಜಲಬಿಂದು, ನೀರಿನ ತೊಟ್ಟು.

**अम्बुकण्टक** ಅಂಬುಕಂಟಕ (ಪುಂ) ಮೊಸಳೆ. अम्बुनि कण्टकमिव।

**अम्बुकिरात** ಅಂಬುಕಿರಾತ (ಪುಂ) ಮೊಸಳೆ. अम्बुनि किरात इव हिंस्र:। "नक्रस्तु वार्भट: स्यादम्बुकिरातोऽम्बुकण्टक:" त्रिकाण्डं।

**अम्बुकीश** ಅಂಬುಕೀಶ (ಪುಂ) ಕೂರ್ಮ, ಆಮೆ. "जलकूर्मस्त्वम्बुकीशो वसाढ्य: शिशुकश्च स:" त्रिकाण्डं।

**अम्बुकूर्म** ಅಂಬುಕೂರ್ಮ (ಪುಂ) ಕೂರ್ಮ, ಆಮೆ. अम्बुन: कूर्म:। "शिशुमारस्त्वम्बुकूर्म उग्णवीर्यो महावस:" अभिं चिं।

**अम्बुकेसर** ಅಂಬುಕೇಸರ (ಪುಂ) ನಿಂಬೆಗಿಡ.

**अम्बुज** ಅಂಬುಜ –जन्मन् –ಜನ್ಮನ್ (पुं०) 1. ಶಂಖ. 2. ಚಂದ್ರ. 3. ಕೊಕ್ಕರೆ. 4. ಕರ್ಪೂರ. 5. ನೀರು ಹಲಸಿನಗಿಡ. (न०) 6. ಕಮಲ, ತಾವರೆಹೂವು. अम्बुनि जायते – जनी (प्रादुर्भावे) "डः" (३-२-९७)। अम्बुनो जन्म यस्य वा। 7. ಇಂದ್ರನ ವಜ್ರಾಯುಧ. "शतधारं शतारं चाभ्रोत्थं भिदिरम्बुजम्" त्रिकाण्ड०। (वि०) 8. ನೀರಿನಲ್ಲಿ ಹುಟ್ಟಿದ.

**अम्बुजासन** ಅಂಬುಜಾಸನ (पुं०) 1. ಬ್ರಹ್ಮ, ಚತುರ್ಮುಖ. (स्त्री०) –आसना –ಆಸನಾ. 2. ಲಕ್ಷ್ಮಿ.

**अम्बुद** ಅಂಬುದ (पुं०) 1. ಮೇಘ, ಮೋಡ. अम्बु ददाति – डु दाञ् (दाने) "कः" (३-२-३)। "प्रवृद्धमन्द्राम्बुदधीरनादः कृष्णार्णवाभ्यर्णचरैकहंसः" माघ० ३-२१। 2. ಕೊನ್ನಾರಿ ಗೆಡ್ಡೆ. (वि०) 3. ನೀರನ್ನು ಕೊಡುವ.

**अम्बुधर** ಅಂಬುಧರ (पुं०) 1. ಮೇಘ, ಮೋಡ. अम्बुनो धरः – धृञ् (धारणे) "अच्" (३-१-१३४)। "शरदम्बुधरच्छायागत्वर्यो यौवनश्रियः" किरा० ११-१२। "शरत्प्रमृष्टाम्बुधरोपरोधः" रघु० ६-४४। 2. ಕೊನ್ನಾರಿಗೆಡ್ಡೆ.

**अम्बुधि** ಅಂಬುಧಿ (पुं०) 1. ಸಮುದ್ರ, ಕಡಲು. अम्बूनि धीयन्तेऽत्र – डु धाञ् (धारणे) "किः" (३-३-९३)। "बभूव नहुषस्तस्मिन् ऐरावत इवाम्बुधौ" याद० १-१३। "रत्नावलीरम्बुधिराबबन्ध" माघ० ३-३६। 2. ನೀರು ತುಂಬಿಡುವ ಪಾತ್ರೆ, ಬಿಂದಿಗೆ, ಘಟ, ಹೂಜಿ ಮುಂತಾದುದು. 3. ನಾಲ್ಕು ಸಂಖ್ಯೆ.

**अम्बुनिधि** ಅಂಬುನಿಧಿ (पुं०) ಸಮುದ್ರ, ಕಡಲು. अम्बूनि निधीयन्तेऽत्र – अम्बु+नि+डु धाञ् (धारणे) "किः" (३-३-९३)। "त्वरितमम्बुनिधेरभिसारिकाम्" याद० ३-३९। "ये पक्षिणः प्रथमममम्बुनिधिं गतास्ते" माघ० ५-३१।

**अम्बुप** ಅಂಬುಪ (पुं०) 1. ವರುಣ. अम्बूनि पाति – पा (रक्षणे) "कः" (३-२-३)। 2. ಸಮುದ್ರ, ಕಡಲು. (वि०) 3. ನೀರನ್ನು ಕುಡಿಯುವ. अम्बूनि पिबति – पा (पाने) "कः" (३-२-३)।

**अम्बुप्रसाद** ಅಂಬುಪ್ರಸಾದ –प्रसादन –ಪ್ರಸಾದನ (पुं०) ಚಿಲ್ಲದಬೀಜ. अम्बूनि प्रसादयति – अम्बु+प्र+षदॢ (विशरणादौ)+णिच् "अच्" "ल्युः" वा (३-१-१३४)।

**अम्बुभृत्** ಅಂಬುಭೃತ್ (पुं०) 1. ಮೇಘ, ಮೋಡ, ಮುಗಿಲು. अम्बु बिभर्ति – डु भृञ् (धारणपोषणयोः) "क्विप्" (३-२-७६)। 2. ಸಮುದ್ರ. 3. ಕೊನ್ನಾರಿ, ಭದ್ರಮುಸ್ತೆ. (वि०) 4. ನೀರನ್ನು ಹೊರುವವನು.

**अम्बुमुच्** ಅಂಬುಮುಚ್ (पुं०) ಮೇಘ, ಮೋಡ. अम्बूनि मुञ्चति—मुच्ऌ (मोक्षणे) "क्विप्" (३-२-७६)। "विगलितजलभारशुक्लभासां निचय इवाम्बुमुचां नगाधिराजः" किरा० ४-३७।

**अम्बुराज** ಅಂಬುರಾಜ (पुं०) 1. ವರುಣ. 2. ಸಮುದ್ರ. अम्बूनां राजा "टच्" (५-४-९१)।

**अम्बुराशि** ಅಂಬುರಾಶಿ (पुं०) ಸಮುದ್ರ. अम्बूनां राशिः यत्र। "प्रसक्तपातश्रमरमाम्बुराशौ" याद० २-३९। "श्रमागतैरम्बुभिरम्बुराशिः" माघ० ३-३८।

**अम्बुरुह्** ಅಂಬುರುಹ್ (न०) ಕಮಲ, ತಾವರೆಹೂವು. अम्बुनि रोहति—रुह (बीजजन्मनि प्रादुर्भावे च) "क्विप्" (३-२-७६)। "विसृत्वरैरम्बुरुहां रजोभिर्यमस्वसुश्चित्र इवोदभारः" माघ० ३-११।

**अम्बुरुह** ಅಂಬುರುಹ (न०) 1. ಕಮಲ, ತಾವರೆಹೂವು. अम्बुनि रोहति – रुह (बीजजन्मनि प्रादुर्भावे च) "कः" (३-१-१३५)। "श्रवणनियमितेन कान्तमन्या सममसिताम्बुरुहेण चक्षुषा च" माघ० ७-५६। (स्त्री०) –रुहा –ರುಹಾ. 2. ಸ್ಥಲಕಮಲ, ನೆಲದಾವರೆ.

**अम्बुरुहिणी** ಅಂಬುರುಹಿಣೀ (स्त्री०) 1. ಕಮಲಲತೆ. 2. ಕಮಲಗಳಿಂದ ಕೂಡಿದ ದೇಶ (ಸರೋವರ). अम्बुरुहाण्यत्र सन्ति "इनिः" (५-२-१३५)। "नीयते स्म नतिमुज्झितहर्षं पङ्कजं मुखमिवाम्बुरुहिण्या" किरा० ९-१४।

**अम्बुवाह** ಅಂಬುವಾಹ (पुं०) 1. ಮೇಘ, ಮೋಡ. अम्बूनि वहति – वह (प्रापणे) "अण्" (३-२-१)। "रसन्नरोदीद्भृशमम्बुवर्षव्याजेन यस्या बहिरम्बुवाहः" माघ० ३-४१। "जटास्तटित्वन्तमिवाम्बुवाहम्" किरा० ३-१। 2. ಕೊನ್ನಾರಿಗೆಡ್ಡೆ, ಭದ್ರಮುಸ್ತೆ. (वि०) 3. ನೀರು ಹೊರುವವನು.

**अम्बुवाहिन्** ಅಂಬುವಾಹಿನ್ (पुं०) 1. ಮೇಘ, ಮೋಡ. अम्बूनि वहति – वह (प्रापणे) "णिनिः" (३-२-७८)। 2. ಕೊನ್ನಾರಿ, ಭದ್ರಮುಸ್ತೆ. (वि०) 3. ನೀರನ್ನು ಹೊರುವವನು. (स्त्री०) –वाहिनी –ವಾಹಿನೀ. 4. ಹಡಗಿನಿಂದ ನೀರನ್ನು ಹೊರಕ್ಕೆ ಚೆಲ್ಲಲು ಮಾಡಿರುವ ಮರದ ಪೀಪಾಯಿ.

**अम्बुविहार** ಅಂಬುವಿಹಾರ (ಪುಂ) ಜಲಕ್ರೀಡೆ, ನೀರಿನಲ್ಲಿ ಆಟವಾಡುವುದು.

**अम्बुवेतस** ಅಂಬುವೇತಸ (ಪುಂ) ನೀರು ಹಬ್ಬೆಗಿಡ.

**अम्बुसरण** ಅಂಬುಸರಣ (ನಂ) ಜಲಪ್ರವಾಹ, ನೀರು ಹರಿಯುವುದು.

**अम्बुसर्पिणी** ಅಂಬುಸರ್ಪಿಣೀ (ಸ್ತ್ರೀಂ) ಜಿಗಣೆ, ಜಲೌಕೆ. अम्बुनि सर्पति — सृप्लृ (गतौ) "णिनिः" (३-२-७८)। "ङीष्" (४-१-५)। "पटालुका जलौकाम्बुसर्पिणी वेणिवेधिनी" त्रिकाण्ड०।

**अम्बूकृत** ಅಂಬೂಕೃತ (ನಂ) ಕಫವು ಹೊರಡುವ ಸಮಯದಲ್ಲಿ ಆಡುವ ಮಾತು, ಬಾಯಲ್ಲಿ ಉಗುಳು ತುಂಬಿರುವಾಗ ಆಡುವ ಮಾತು. अनम्बु अम्बु (तद्युक्तं) कृतम्। "अनुरसितगुरूणि स्त्यानमम्बूकृतानि" मालती० ९-६।

**अम्भस्** ಅಂಭಸ್ (ನಂ) 1. ಜಲ, ನೀರು. अम्बते — अबि (शब्दे) "असुन्" (उ० ४-१८८)। "अम्भोभिरुल्लङ्घित-तुङ्गरोधसः प्रतीपनाम्नीः कुरुते स्म निम्नगाः" माघ० १२-५७। "भयादिवाश्लिष्य झषाहतेऽम्भसि" किरा० ८-४६। 2. ದೇವತೆ. 3. ಅಸುರ. 4. ಮನುಷ್ಯ. 5. ಲಗ್ನದಿಂದ ನಾಲ್ಕನೆಯ ಸ್ಥಾನ. 6. ಪಿತೃಲೋಕ. (द्वि० ವಂ) 7. ಆಕಾಶ ಮತ್ತು ಭೂಮಿ.

**अम्भसांनिधि** ಅಂಭಸಾಂನಿಧಿ (ಪುಂ) ಸಮುದ್ರ. षष्ठ्या अलुक् बाहु०। "शिखाभिराश्लिष्ट इवाम्भसांनिधिः" माघ० १-२०।

**अम्भोज** ಅಂಭೋಜ (ಪುಂ) 1. ಚಂದ್ರ. 2. ಶಂಖ. 3. ಕೊಕ್ಕರೆ. 4. ಕರ್ಪೂರ. (ನಂ) 5. ಕಮಲ, ತಾವರೆಹೂವು. अम्भसि जायते — जनी (प्रादुर्भावे) "डः" (३-२-९७)। "संसर्पिभिः पयसि गैरिकरेणु-रागैरम्भोजगर्भरजसाङ्गनिषङ्गिणा च" माघ०५-३९। (वि०) 6. ನೀರಿನಲ್ಲಿ ಹುಟ್ಟಿದ.

**अम्भोजजन्मन्** ಅಂಭೋಜಜನ್ಮನ್ **–जात** –ಜಾತ, **–योनि** –ಯೋನಿ (ಪುಂ) ಬ್ರಹ್ಮ, ಚತುರ್ಮುಖ. अम्भोजे जन्मास्य जातो वा अम्भोजं योनिरुत्पत्ति-स्थानमस्य वा।

**अम्भोजिनी** ಅಂಭೋಜಿನೀ (ಸ್ತ್ರೀಂ) 1. ಕಮಲಗಳಿಂದ ಕೂಡಿದ ದೇಶ. अम्भोजान्यत्र सन्ति "इनिः" (५-२-१३५)। 2. ಕಮಲಗಳ ಸಮೂಹ. 3. ಕಮಲ ಲತೆ.

**अम्भोद** ಅಂಭೋದ (ಪುಂ) 1. ಮೇಘ, ಮೋಡ, ಮುಗಿಲು. अम्भो ददाति — डु दाञ् (दाने) "कः" (३-२-३)। "दृप्तारिसंत्रासखिलीकृतास्त कथंचिदम्भोद-विहारमार्गान्" कुमा० १२-२। 2. ಕೊನ್ನಾರಿ, ಭದ್ರಮುಸ್ತೆ. (वि०) 3. ನೀರನ್ನು ಕೊಡುವ.

**अम्भोधर** ಅಂಭೋಧರ (ಪುಂ) 1. ಮೇಘ, ಮೋಡ, ಮುಗಿಲು. 2. ಕೊನ್ನಾರಿ, ಭದ್ರಮುಸ್ತೆ. अम्भसां धरः। "नवोद्यदम्भोधरघोरदर्शने युद्धाय रूढो मकरे महत्तरे" कुमा० १४-९।

**अम्भोधि** ಅಂಭೋಧಿ (ಪುಂ) ಸಮುದ್ರ, ಕಡಲು. अम्भांसि धीयन्तेऽत्र — डु धाञ् (धारणपोषणयोः) "किः" (३-३-९३)। "अपारममृताम्भोधिममन्यन्त दिवौकसः" याद० १-७४।

**अम्भोनिधि** ಅಂಭೋನಿಧಿ (ಪುಂ) ಸಮುದ್ರ, ಕಡಲು. अम्भांसि निधीयन्तेऽत्र — अम्भस्+नि+डु धाञ् (धारण-पोषणयोः) "किः" (३-३-९३)। "अम्भोनिधे-रन्तरयन्ति घोषान्" याद० १८-११५।

**अम्भोमुच्** ಅಂಭೋಮುಚ್ (ಪುಂ) ಮೇಘ, ಮೋಡ, ಮುಗಿಲು. अम्भांसि मुञ्चति — मुच्लृ (मोक्षणे) "क्विप्" (३-२-७६)। "काले कालियकायकालवपुषः पांसून् गजाम्भोमुचः" माघ० १७-६९।

**अम्भोराशि** ಅಂಭೋರಾಶಿ (ಪುಂ) ಸಮುದ್ರ, ಕಡಲು. अम्भसां राशिर्यत्र।

**अम्भोरुह्** ಅಂಭೋರುಹ್ **–रुह** –ರುಹ (ನಂ) 1. ಕಮಲ, ತಾವರೆಹೂವು. अम्भसि रोहति — रुह (बीजजन्मनि प्रादुर्भावे च) "क्विप्" (३-२-७६)। "कः" (३-१-१३५)वा। "दधानमम्भोरुहकेसरद्युतीर्जटाः शर-च्चन्द्रमरीचिरोचिषम्" माघ० १-५। "अम्भोरुहाणामव-लेपसीमाम्" याद० १३-७०। 2. ಕೊಕ್ಕರೆ, ನೀರುಹಕ್ಕಿ.

**अम्मय** ಅಮ್ಮಯ (वि०) 1. ಜಲವಿಕಾರ. 2. ನೀರಿನಿಂದ ತುಂಬಿದ, ನೀರಾಗಿರುವ. अपां विकारः "मयट्" (वा० ४-३-१४४)। स्त्रियां "ङीप्" (४-१-१५)। **–मयी** – ಮಯೀ.

**अम्ल** ಅಂಬ್ಲ (ಪುಂ) 1. ಹುಳಿ, ಅಮ್ಲರಸ, ಆರು ಭೋಜ್ಯ ರಸಗಳಲ್ಲೊಂದು. अबि (शब्दे) "क्लः" (उ० ४-१०८)। 2. ಹುಳಿ ಹಬ್ಬೆಗಿಡ. 3. ನಿಂಬೆಗಿಡ. (ನಂ) 4. ಮಜ್ಜಿಗೆ. 5. ನಿಂಬೆ ಹಣ್ಣು. (वि०) 6. ಹುಳಿಯಾಗಿರುವ, ಅಮ್ಲರಸದಿಂದ ಕೂಡಿದ.

**अम्ल** ಅಮ್ಲ (ಪುಂ) "अम्ल" ಪದದ ಅರ್ಥ. अम (गत्यादौ) "कलः" बाहु०। "कट्वम्ललवणात्युष्ण-तीक्ष्णरूक्षविदाहिनः। आहारा राजसस्येष्टाः" गीता १७-९।

**अम्लक** ಅಮ್ಲಕ (ಪುಂ) 1. ಗಜನಿಂಬೆಗಿಡ. (ನಂ) 2. ಗಜನಿಂಬೆಹಣ್ಣು.

**अम्लकेसर** ಅಮ್ಲಕೇಸರ (ಪುಂ) 1. ಮಾದಳದಗಿಡ. (ನಂ) 2. ಮಾದಳದ ಹಣ್ಣು.

**अम्लजम्बीर** ಅಮ್ಲಜಂಬೀರ (ಪುಂ) 1. ನಿಂಬೆಗಿಡ. (ನಂ) 2. ನಿಂಬೆಹಣ್ಣು.

**अम्लनिशा** ಅಮ್ಲನಿಶಾ (ಸ್ತ್ರೀಂ) ಕಚೋರದಗಿಡ.

**अम्लपञ्चक** ಅಮ್ಲಪಂಚಕ (ನಂ) ಐದು ಹುಳಿಯ ಹಣ್ಣುಗಳು. अम्लानां पञ्चकम्। "जम्बीरं नागरङ्गं च तथाम्लं वेतसं पुनः। तिन्तिडीकं बीजपूरमम्लपञ्चफलं स्मृतम्"। ನಿಂಬೆ, ಹೇರಿಳೆ, ಹುಳಿಹಬ್ಬೆ, ಹುಣಿಸೆ ಮತ್ತು ಮಾದಳ ಇವು ಅಮ್ಲಪಂಚಕ.

**अम्लपनस** ಅಮ್ಲಪನಸ (ಪುಂ) 1. ಗಜನಿಂಬೆಗಿಡ. (ನಂ) 2. ಗಜನಿಂಬೆಹಣ್ಣು.

**अम्लपित्त** ಅಮ್ಲಪಿತ್ತ (ನಂ) ಒಂದು ರೋಗ, ತಿಂದ ಆಹಾರವನ್ನು ಹುಳಿಯನ್ನಾಗಿ ಮಾಡುವ ರೋಗ.

**अम्लपूर** ಅಮ್ಲಪೂರ (ನಂ) ಹುಣಿಸೆಹಣ್ಣು. अम्लं पूरयति – पूर (पूरणे)+णिच् "अच्" (३-१-१३४)।

**अम्लफल** ಅಮ್ಲಫಲ (ಪುಂ) 1. ಹುಣಿಸೆಮರ. (ನಂ)2. ಹುಣಿಸೆಹಣ್ಣು.

**अम्लरस** ಅಮ್ಲರಸ (ಪುಂ) 1. ಹುಳಿ. (ವಿಂ) 2. ಹುಳಿಯಾಗಿರುವ, ಅಮ್ಲರಸದಿಂದ ಕೂಡಿದ.

**अम्ललोणिका** ಅಮ್ಲಲೋಣಿಕಾ (ಸ್ತ್ರೀಂ) ಪುಲ್ಲಂಪುರಿಚಿಗಿಡ.

**अम्लवर्ग** ಅಮ್ಲವರ್ಗ (ಪುಂ) ಹುಳಿಯಿಂದ ಕೂಡಿದ ವಸ್ತುಗಳ ಗುಂಪು; ದಾಳಿಂಬೆ, ನೆಲ್ಲಿ, ಮಾದಳ, ಅಮಟೆ, ಬೇಲ, ಕಮರಿಕೆ, ಎಲಚಿ(ಬೋರೆ), ಹುಣಿಸೆ, ಪುಲ್ಲಂಪುರಿಚಿ, ನಿಂಬೆ, ಗಜನಿಂಬೆ, ಹೇರಿಳೆ, ಹುಳಿಹಬ್ಬೆ, ಮೊಸರು, ಮದ್ಯ ಇತ್ಯಾದಿ.

**अम्लवास्तूक** ಅಮ್ಲವಾಸ್ತೂಕ (ಪುಂ) ಹುಳಿಹಬ್ಬೆಗಿಡ.

**अम्लवृक्ष** ಅಮ್ಲವೃಕ್ಷ (ಪುಂ) ಹುಣಿಸೆಮರ.

**अम्लवेतस** ಅಮ್ಲವೇತಸ (ಪುಂ) ಹುಳಿಹಬ್ಬೆಗಿಡ.

**अम्लसार** ಅಮ್ಲಸಾರ (ಪುಂ) 1. ನಿಂಬೆಗಿಡ. 2. ಹುಳಿಹಬ್ಬೆಗಿಡ. (ನಂ) 3. ಅಂಬಲಿ, ಗಂಜಿ.

**अम्लान** ಅಮ್ಲಾನ (ಪುಂ) 1. ದೊಡ್ಡಗೋರಂಟೆ. (ವಿಂ) 2. ಬಾಡದಿರುವ.

**अम्लिका** ಅಮ್ಲಿಕಾ (ಸ್ತ್ರೀಂ)1. ಹುಣಿಸೆಮರ. 2. ಪುಲ್ಲಂಪುರಿಚಿಗಿಡ. 3. ಹುಳಿತೇಗು.

**अम्ली** ಅಮ್ಲೀ (ಸ್ತ್ರೀಂ) ಪುಲ್ಲಂಪುರಿಚಿ.

**अम्लोद्गार** ಅಮ್ಲೋದ್ಗಾರ (ಪುಂ) ಹುಳಿತೇಗು.

**अय** ಅಯ (ಪುಂ) 1. ಪೂರ್ವಜನ್ಮದ ಪುಣ್ಯಕಾರ್ಯ. 2. ಒಳ್ಳೆಯ ಅದೃಷ್ಟ, ಒಳ್ಳೆಯದನ್ನುಂಟುಮಾಡುವ ಭಾಗ್ಯ. एति सुखमनेन – इण् (गतौ) "घः" (३-३-११८)। "स गुप्तमूलप्रत्यन्तः शुद्धपार्ष्णिरयान्वितः" रघು० ४-२६। 3. ಪಗಡೆಯ ದಾಳ. अयते जयमनेन।

**अयःपान** ಅಯಃಪಾನ (ನಂ) (ಪಾಪಮಾಡಿದವರಿಗೆ) ಕರಗಿಸಿದ ಕಬ್ಬಿಣವನ್ನು ಕುಡಿಯಿಸುವ ಒಂದು ನರಕ.

**अयःशूल** ಅಯಃಶೂಲ (ನಂ) 1. ಈಟಿ, ಭರ್ಜಿ, ಕುಂತ, ಕಬ್ಬಿಣದ ಒಂದು ಚೂಪಾದ ಆಯುಧ. 2. ಒಂದು ತೀಕ್ಷ್ಣವಾದ ಉಪಾಯ.

**अयज्ञिय** ಅಯಜ್ಞಿಯ (ವಿಂ) 1. ಯಜ್ಞಕ್ಕೆ ಯೋಗ್ಯವಲ್ಲದ, ಯಜ್ಞಕರ್ಮಕ್ಕೆ ಅರ್ಹವಲ್ಲದ. न यज्ञमर्हति – यज्ञ "घः" (५-१-७१)। ನಂ ತಂ। 2. ಯಜ್ಞವನ್ನು ಮಾಡಲು ಅರ್ಹನಲ್ಲದ. 3. ಯಜ್ಞಕಾಲದಲ್ಲಿ ಆಡಬಾರದ ಅಸಭ್ಯ (ಗ್ರಾಮ್ಯ) ಮಾತು.

**अयत** ಅಯತ (ವಿಂ) 1. ಇಂದ್ರಿಯನಿಗ್ರಹವಿಲ್ಲದ. यम्यते—यम (उपरमे) "क्तः" (३-२-१०२)। ನಂ ತಂ। 2. ಪ್ರಯತ್ನವಿಲ್ಲದ. यतते – यती (प्रयत्ने) "क्तः" (३-४-७२)। ನಂ ತಂ।

**अयति** ಅಯತಿ (ವಿಂ) ಪ್ರಯತ್ನವಿಲ್ಲದ. "अयतिः श्रद्धयोपेतः योगाच्चलितमानसः" गीता ६-३७।

**अयत्न** ಅಯತ್ನ (ಪುಂ) 1. ಯತ್ನವಿಲ್ಲದಿರುವಿಕೆ, ಆಯಾಸವಿಲ್ಲದಿರುವಿಕೆ. न यत्नः। "तदवाप्नोत्ययत्नेन यो हिनस्ति न किञ्चन" मनु० ५-४७। (ವಿ) 2. ಪ್ರಯತ್ನವಿಲ್ಲದ.

**अयथा** ಅಯಥಾ (ಅವ್ಯಂ)1. ಅಯೋಗ್ಯವಾಗಿ. 2. ಇರಬೇಕಾದುದಕ್ಕಿಂತಲೂ ಬೇರೆ ರೀತಿಯಾಗಿ, ಅಕ್ರಮವಾಗಿ, ಸುಳ್ಳಾಗಿ.

**अयथातथ** ಅಯಥಾತಥ (ವಿಂ) ನಿಜವಲ್ಲದ, ಸುಳ್ಳಾದ, ಯೋಗ್ಯವಲ್ಲದ. तथात्वमनतिक्रम्य यथातथम्। ನಂ ತಂ।

**अयथार्थ** ಅಯಥಾರ್ಥ (ವಿಂ) ಅರ್ಥಕ್ಕೆ ಅನುಸಾರವಲ್ಲದ. न यथार्थः। "परित्यक्तान्यार्थो नियतमयथार्थः

क्षितिपतिः" मुद्रा० ३-४। 2. ನಿಜವಲ್ಲದ, ಯೋಗ್ಯವಲ್ಲದ. "अयथार्थक्रियारम्भैः पतिभिः किं तवेक्षितैः" किरा० १.१५२।

**अयथार्थानुभव** ಅಯಥಾರ್ಥಾನುಭವ (ಪುಂ) ಅದಲ್ಲದ (ಬೇರೊಂದು) ವಸ್ತುವಿನಲ್ಲಿ ಅದು ಎಂಬ ತಪ್ಪು ತಿಳಿವಳಿಕೆ (ಜ್ಞಾನ). अयथार्थश्चासावनुभवश्च। तदभाववति तत्प्रकारकानुभवोऽयथार्थानुभवः। न० त०। ಶುಕ್ತಿ (ಕಪ್ಪೆಚಿಪ್ಪು) ಯನ್ನು ನೋಡಿ (ಭ್ರಾಂತಿಯಿಂದ) ರಜತ (ಬೆಳ್ಳಿ) ವೆಂದು ತಿಳಿಯುವುದು ಅಯಥಾರ್ಥಾನುಭವ. ಇದನ್ನೇ "अप्रमा" ಎನ್ನುವರು.

**अयथावत्** ಅಯಥಾವತ್ (अव्य०) ಅನುರೂಪವಲ್ಲದೆ, ಅಯೋಗ್ಯವಾಗಿ, ಅಕ್ರಮವಾಗಿ, ತಪ್ಪಾಗಿ.

**अयन** ಅಯನ (ನಂ) 1. ಗಮನ, ಸಂಚಾರ. अय (गतौ) "ल्युट्" (३-३-११५)। 2. (ಮೇಷಾದಿ ಹನ್ನೆರಡು ರಾಶಿಗಳಲ್ಲಿ) ಸೂರ್ಯನ ಗತಿ. [ರಾಶಿ ಚಕ್ರದಲ್ಲಿ ಮಕರ ರಾಶಿಯಿಂದ ಮಿಥುನ ರಾಶಿಯವರೆಗೆ ಸೂರ್ಯನು ಸಂಚರಿಸುವಾಗ ಉತ್ತರಾಯಣ. ಕರ್ಕಾಟಕ ರಾಶಿಯಿಂದ ಧನೂರಾಶಿಯವರೆಗೆ ಸಂಚರಿಸುವಾಗ ದಕ್ಷಿಣಾಯನ.] 3. ಆಶ್ರಯಸ್ಥಾನ, ಪ್ರಾಪ್ಯಸ್ಥಾನ. "आपो नारा इति प्रोक्ता आपो वै नरसूनवः। ता यदस्यायनं पूर्वं तेन नारायणः स्मृतः" मनु० १-१०। 4. ಸೈನ್ಯವ್ಯೂಹದ ಪ್ರವೇಶಮಾರ್ಗ. "अयनेषु च सर्वेषु यथाभागमवस्थिताः। भीष्ममेवाभिरक्षन्तु भवन्तः सर्व एव हि" गीता १-११। 5. ಮಾರ್ಗ, ದಾರಿ. "अगस्त्यचिह्नादयनात्" रघु० १६-४४। 6. ಒಂದು ಯಾಗ. 7. ಅಯನಾಭಿಮಾನಿ ದೇವತೆ. 8. ಸಂಕ್ರಾಂತಿಯ ಸಮಯ. [ಕರ್ಕಾಟಕ ಸಂಕ್ರಾಂತಿಯು ದಕ್ಷಿಣಾಯನ. ಮಕರ ಸಂಕ್ರಾಂತಿಯು ಉತ್ತರಾಯಣ.] 9. ಮೋಕ್ಷ, ಮುಕ್ತಿ. "तमेव विदित्वाऽतिमृत्युमेति नान्यः पन्था अयनाय विद्यते" श्रुतिः। 10. ಗೃಹ, ಮನೆ. 11. ಸ್ಥಾನ, ಜಾಗ. 12. ಅಯನದ ವಿಷಯವನ್ನು ತಿಳಿಸುವ ಶಾಸ್ತ್ರ.

**अयनकाल** ಅಯನಕಾಲ (ಪುಂ) ಮಕರಸಂಕ್ರಾಂತಿಯಿಂದ ಕರ್ಕಾಟಕ ಸಂಕ್ರಾಂತಿ ಮತ್ತು ಕರ್ಕಾಟಕ ಸಂಕ್ರಾಂತಿಯಿಂದ ಮಕರಸಂಕ್ರಾಂತಿ ಇವುಗಳ ಮಧ್ಯ ಕಾಲ.

**अयन्त्रित** ಅಯಂತ್ರಿತ (ವಿಂ) ಅಡ್ಡಿಯಿಲ್ಲದ, ನಿರ್ಬಂಧವಿಲ್ಲದ, ತಡೆಯಿಲ್ಲದ, ಸ್ವತಂತ್ರನಾದ.

**अयव** ಅಯವ (ಪುಂ) 1. ಮಲದಲ್ಲಿ ಹುಟ್ಟಿದ ಕ್ರಿಮಿ. 2. ಶತ್ರು. न यौति सम्बध्नाति — यु (मिश्रणेऽमिश्रणे च) "अच्" (३-१-१३४)। 3. ಕೃಷ್ಣಪಕ್ಷ. (ವಿಂ) 4. ಯವ ಸಂಬಂಧವಿಲ್ಲದ, ತಿಲದಿಂದ ಮಾಡುವ (ಪಿತೃಕರ್ಮ). न विद्यते यवो यत्र।

**अयशस्** ಅಯಶಸ್ (ನಂ) 1. ಅಪವಾದ, ಅಪಕೀರ್ತಿ, ಅಪಖ್ಯಾತಿ. "अयशोभिदुरालोके कोपधा मरणादृते" माघ० १९-५८। (ವಿಂ) 2. ಕೀರ್ತಿಪಡೆಯದ, ಹೆಸರು ಪಡೆಯದ.

**अयशस्कर** ಅಯಶಸ್ಕರ (ವಿಂ) ಅಪಕೀರ್ತಿಯನ್ನುಂಟುಮಾಡುವ. अयशः करोति — डु कृञ् (करणे) "टः" (३-२-२०। स्त्रियां "ङीप्" (५-१-१५)। अयशस्करी ಅಯಶಸ್ಕರೀ.

**अयशस्य** ಅಯಶಸ್ಯ (ವಿಂ) ಅಪಕೀರ್ತಿಯನ್ನುಂಟುಮಾಡುವ, ಅವಮಾನಕರವಾದ, ಕೆಟ್ಟ ಹೆಸರನ್ನು ತರುವ. यशसे हितम् "यत्" (५-१-५)। यशस्यम्। न० त०।

**अयश्चूर्ण** ಅಯಶ್ಚೂರ್ಣ. (ನಂ) ಕಬ್ಬಿಣದ ಪುಡಿ, ಕಬ್ಬಿಣದ ಪುಡಿಯಿಂದ ತಯಾರಿಸಿದ ಔಷಧ, ಅಯೋಭಸ್ಮ.

**अयस्** ಅಯಸ್ (ನಂ) 1. ಕಬ್ಬಿಣ. अय (गतौ) "असुन्" (उ० ४-१८८)। 2. ಉಕ್ಕು.

**अयस्कंस** ಅಯಸ್ಕಂಸ (ಪುಂನಂ) ಉಕ್ಕಿನಿಂದ ತಯಾರಾದ ಕುಡಿಯುವ ಬಟ್ಟಲು.

**अयस्कान्त** ಅಯಸ್ಕಾಂತ (ಪುಂ) ಸೂಜಿಗಲ್ಲು, ಲೋಹಚುಂಬಕ, ಲೋಹಗಳನ್ನು ಆಕರ್ಷಿಸುವ ಕಬ್ಬಿಣದ ಅದುರು. अयस्सु कान्तः। "शम्भोर्यतध्वमाक्रष्टुमयस्कान्तेन लोहवत्" कुमा० २-५९।

**अयस्कार** ಅಯಸ್ಕಾರ (ಪುಂ) ಕಮ್ಮಾರ, ಕಬ್ಬಿಣದ ಕೆಲಸಮಾಡುವವನು. अयः अयोविकारं करोति — डु कृञ् (करणे) "अण्" (३-२-१)। सुट् (८-३-४६)।

**अयस्कुम्भ** ಅಯಸ್ಕುಂಭ (ಪುಂ) ಕಬ್ಬಿಣದ ಬಿಂದಿಗೆ.

**अयस्कुशा** ಅಯಸ್ಕುಶಾ (ಸ್ತ್ರೀಂ) ಕಬ್ಬಿಣದ ಸರಪಣಿಯಿಂದ ಕೂಡಿದ ಹಗ್ಗ. अयःसहिता कुशा।

**अयस्कृति** ಅಯಸ್ಕೃತಿ (ಸ್ತ್ರೀಂ) ಕುಷ್ಠರೋಗದ ಚಿಕಿತ್ಸೆ.

**अयाचित** ಅಯಾಚಿತ (ನಂ) 1. ಯಾಚಿಸದೆ ದೊರೆತ ಭಿಕ್ಷೆ. (ವಿಂ) 2. ಯಾಚಿಸಲ್ಪಡದ, ಬೇಡಲ್ಪಡದ,

**अयाज्य ಅಯಾಜ್ಯ** (वि०) ಯಾಗಕ್ಕೆ ಅರ್ಹನಲ್ಲದ, ಯಾಗಮಾಡಿಸಲು ಯೋಗ್ಯನಲ್ಲದ, ಪತಿತ. न याजयितुमर्हः — यज (देवपूजायाम्) "ण्यत्" (३-१-१२४)। "पतितेन सहोषित्वा जानन् संवत्सरं नरः। मिश्रितस्तेन सोऽब्दान्ते स्वयं च पतितो भवेत्। याजनं योनिसंबन्धं स्वाध्यायं सहभोजनम्। कृत्वा सद्यः पतत्येष पतितेन न संशयः"।

**अयाज्ययाजन ಅಯಾಜ್ಯಯಾಜನ** (नं०) (ಯಾಗಕ್ಕೆ) ಅನರ್ಹನಾದವನಿಂದ ಯಾಗವನ್ನು ಮಾಡಿಸುವುದು, ಪತಿತನಿಂದ ಯಾಗಮಾಡಿಸುವುದು.

**अयातयाम ಅಯಾತಯಾಮ** (वि०) 1. ಹಳೆಯದಲ್ಲದ, ಹೊಸದಾದ, ಉಪಯೋಗಿಸಲ್ಪಡದ. 2. ದೋಷವಿಲ್ಲದ. न यातो यामो यस्य।

**अयान ಅಯಾನ** (नं०) 1. ಸ್ವಭಾವ. न यानं चलनं यस्य। 2. ಸಂಚಾರವಿಲ್ಲದಿರುವಿಕೆ. (वि०) 3. ಸಂಚಾರವಿಲ್ಲದ.

**अयि ಅಯಿ** (अव्य०) 1. ಪ್ರೀತಿಯಿಂದ ಮಾಡುವ ಸಂಬೋಧನೆ. "अयि, विवेकविश्रान्तमभिहितम्" माल० १। 2. ದೈನ್ಯದಿಂದ ಮಾಡುವ ಸಂಬೋಧನೆ. "अयि कबलय मामम् विमुञ्चेत्यतिकरुणं रुदतीमवेक्ष्य सीताम्" चं० रा०। 3. ಅನುನಯ, ಪ್ರಾರ್ಥನೆ. "अयि संप्रति देहि दर्शनम्" कुमा० ४-२८। 4. ಪ್ರಶ್ನೆ, ಕೇಳಿಕೆ. "अयि जीवितनाथ जीवसि" कुमा० ४-३। "अयि प्रश्नानुनययोस्तथा सम्बोधनेऽपि च" मेदि०।

**अयुक्छद ಅಯುಕ್ಛದ** (पुं०) ಏಳೆಲೆ ಬಾಳೆಯಗಿಡ.

**अयुक्त ಅಯುಕ್ತ** (वि०) 1. ಅಯೋಗ್ಯವಾದ, ಅನುಚಿತವಾದ. "अयुक्तरूपं किमतःपरं वद" कुमा० ५-६९। 2. ಸೇರಿಕೊಂಡಿಲ್ಲದ, ಬೇರೆಯಾಗಿರುವ. 3. ಉದಾಸೀನ, ಕರ್ತವ್ಯಪರಾಙ್ಮುಖ. 4. ಸ್ಥಿರಚಿತ್ತವಿಲ್ಲದವನು, ಚಿತ್ತವೃತ್ತಿನಿರೋಧವಿಲ್ಲದವನು. शां० भा०। 5. ಶಾಸ್ತ್ರೀಯಕರ್ಮಕ್ಕೆ ಯೋಗ್ಯನಲ್ಲದವನು. रा० भा०। "अयुक्तः प्राकृतः स्तब्धः शठो नैकृतिकोऽलसः" गीता १८-२८। 6. ಕಷ್ಟಕ್ಕೊಳಗಾದ, ಪೇಚಾಟಕ್ಕೆ ಸಿಲುಕಿದ. 7. ಅವಿವಾಹಿತ, ಮದುವೆಯಿಲ್ಲದವನು. न युक्तः।

**अयुक्ति ಅಯುಕ್ತಿ** (स्त्री०) 1. ಯುಕ್ತಿಯಿಲ್ಲದಿರುವಿಕೆ. 2. ಅಗಲಿಕೆ, ವಿರಹ. 3. ಅನರ್ಹತೆ, ಅಯೋಗ್ಯತೆ, ಅಸಭ್ಯತನ.

**अयुग ಅಯುಗ** (नं०) 1. ವಿಷಮ, ಬೆಸ. (वि०) 2. ನೊಗವಿಲ್ಲದ (ರಥ). 3. ಬೆಸಸಂಖ್ಯೆಯುಳ್ಳ, ಸಮಸಂಖ್ಯೆಯಿಲ್ಲದ. न युगमत्र। "युगपदयुगसप्तिस्तुल्यसंख्यैर्मयूखैः" माघ० ११-६१।

**अयुग्म ಅಯುಗ್ಮ** (नं०) 1. ವಿಷಮ, ಬೆಸ. (वि०) 2. ಬೆಸಸಂಖ್ಯೆಯುಳ್ಳ, ಸಮಸಂಖ್ಯೆಯಿಲ್ಲದ. न युग्ममत्र। "अथेन्द्रियक्षोभमयुग्मनेत्रः" कुमा० ३-६९।

**अयुग्मच्छद ಅಯುಗ್ಮಚ್ಛದ** (पुं०) ಏಳೆಲೆ ಬಾಳೆಯಗಿಡ. अयुग्माः छदाः पत्राणि यस्य। "नयत्ययुग्मच्छदगन्धिरार्द्रताम्" किरा० १-१६।

**अयुग्मनयन ಅಯುಗ್ಮನಯನ –नेत्र –ನೇತ್ರ, –लोचन –ಲೋಚನ** (पुं०) 1. ಪರಮೇಶ್ವರ, ಮಹಾದೇವ. अयुग्मानि नयनानि नेत्राणि लोचनानि वा यस्य। "अथेन्द्रियक्षोभमयुग्मनेत्रः" कुमा० ३-६९। 2. ಲಕ್ಷ್ಮೀನರಸಿಂಹ. 3. ಸುದರ್ಶನ, ವಿಷ್ಣುಚಕ್ರ.

**अयुग्मबाण ಅಯುಗ್ಮಬಾಣ –शर –ಶರ** (पुं०) ಮನ್ಮಥ, ಕಾಮ. अयुग्माः पञ्च बाणाः शरा वा यस्य।

**अयुज् ಅಯುಜ್** (वि०) ವಿಷಮಸಂಖ್ಯೆಯ, ಬೆಸಸ್ಥಾನದ, ವಿಷಮಸ್ಥಾನದ. "अयुग्भवा चारुहासिनी"। "चपलावक्त्रमयुजोर्नकारश्चेत्पयोराशेः" वृ० र०।

**अयुत ಅಯುತ** (नं०) 1. ದಶಸಹಸ್ರ, ಹತ್ತುಸಾವಿರ. (वि०) 2. ಹತ್ತುಸಾವಿರವುಳ್ಳ. "अयुतं दशसाहस्रम्" अम०। 3. ಸೇರಿಕೊಂಡಿಲ್ಲದ, ಬೆರೆಯದಿರುವ, ಮಿಶ್ರವಲ್ಲದ.

**अयुतसिद्ध ಅಯುತಸಿದ್ಧ** (वि०) ಕಾರ್ಯ ಮತ್ತು ಕಾರಣಗಳು ಬೇರೆಬೇರೆಯಿರದೆ ಒಟ್ಟಿಗೆ ಸೇರಿ ಸಿದ್ಧವಾದ. युतः पृथग्भूतःसन् सिद्धः। नं० त०। ಕಾರಣಭೂತವಾದ ಕಪಾಲದ್ವಯಕ್ಕೂ ಕಾರ್ಯವಾದ ಘಟಕ್ಕೂ ಅವಿನಾಭಾವವಿರುವುದು. ಈ ಅವಿನಾಭೂತವಾದ ಕಾರ್ಯಕಾರಣಗಳಿಂದ ಸಿದ್ಧವಾದ ಘಟರೂಪವಾದ ಕಾರ್ಯವು ಅಯುತಸಿದ್ಧ. ಇದು ಐದು ವಿಧ: (1) ಅವಯವಾವಯವಿ, (2) ಗುಣ–ಗುಣಿ, (3) ಕ್ರಿಯೆ–ಕ್ರಿಯಾವತ್, (4) ಜಾತಿ–ವ್ಯಕ್ತಿ ಮತ್ತು (5) ನಿತ್ಯದ್ರವ್ಯ–ವಿಶೇಷ.

**अयुतसिद्धि ಅಯುತಸಿದ್ಧಿ** (स्त्री०) ಕಾರ್ಯಕಾರಣಗಳು ಬೇರೆ ಬೇರೆಯಿರದೆ ಒಟ್ಟಿಗೆ ಕಲೆತು ಸಿದ್ಧಿಸುವುದು; ಕಪಾಲದ್ವಯ ಮತ್ತು ಘಟ ಎರಡೂ ಒಟ್ಟಿಗೇ ಸೇರಿಕೊಂಡು ಘಟರೂಪವಾದ ಕಾರ್ಯವು ಸಿದ್ಧಿಸುವುದು.

**अयुताजित् ಅಯುತಾಜಿತ್** (पुं०) ಯದುವಂಶದ ಒಬ್ಬ ದೊರೆ. "अयुताजित् सहस्राजित् शताजिदथ दासकः" हरिवं०।

**अयुतायु ಅಯುತಾಯು** (पुं०) ಸೂರ್ಯವಂಶದ ಒಬ್ಬ ದೊರೆ.

**अये ಅಯೇ** (अव्य०) 1. ಸಂಭ್ರಮ. 2. ಆಶ್ಚರ್ಯ. "अये, कथमार्यः पाश्चाल्याश्चतुःशालकं प्रति प्रस्थितः" वेणी०। 3. ಕೋಪ. "अये, अश्वमेध इति विश्वजयिनां क्षत्रियाणां महानुत्कर्षनिकर्षः" उ० रा० ४। 4. ಸ್ಮರಣೆ, ನೆನಪು. "अये, कुसुमपुरवृत्तान्तज्ञः अहं भवत्प्रणिधिश्चेति गतार्थः" मुद्रा० २। 5. ಭಯ. "अये, तत्कथं सत्यमेव कुपित आर्यः?" मुद्रा० ३। 6. ಸಂಬೋಧನ. "अये, कले, भद्रमव्याहतम्" प्रबोध० २। 7. ದುಃಖ. "अये, देवपादपद्मोपजीविनोऽवस्थेयम्" मुद्रा० २। "अये क्रोधविषादयोः। संभ्रमे स्मरणे च". हेम०।

**अयोग ಅಯೋಗ** (पुं०) 1. ಸಂಬಂಧವಿಲ್ಲದಿರುವಿಕೆ. न० त०। 2. ತಿಥಿ ವಾರಾದಿಗಳ ಕೆಟ್ಟಯೋಗ. अप्राशस्त्ये न० त०। 3. ವಿಧುರ. "अयोगो विधुरोऽपि च" त्रिकाण्ड०। 4. ಅರುಚಿ, ಅಪ್ರೀತಿ. 5. ಸುತ್ತಿಗೆ, ಕೊಡತಿ. 6. ವಿಯೋಗ. 7. ಕಷ್ಟವಾದ ಪ್ರಯತ್ನ. (वि०) 8. ಸಂಬಂಧವಿಲ್ಲದ. "अयोगः कठिनोद्यमे। विश्लेषे विधुरे कूटे" हेम०।

**अयोगव ಅಯೋಗವ** (पुं०) ಶೂದ್ರನಿಗೆ ವೈಶ್ಯ ಹೆಂಗಸಿನಲ್ಲಿ ಹುಟ್ಟಿದ ಬೆರಕೆಜಾತಿಯವನು. "शूद्रादयोगवः क्षत्ता चण्डालश्चाधमो नृणाम्। वैश्यराजन्यविप्रासु जायन्ते वर्णसंकराः" मनु० १०-१२।

**अयोगवाह ಅಯೋಗವಾಹ** (पुं०) ಅನುಸ್ವಾರ, ವಿಸರ್ಗ, ಜಿಹ್ವಾಮೂಲೀಯ ಮತ್ತು ಉಪಧ್ಮಾನೀಯಗಳು. ಇವು ವರ್ಣಸಮಾಮ್ನಾಯಗಳಲ್ಲಿ ಸೇರದಿದ್ದರೂ ಷತ್ವಣತ್ವ ಮೊದಲಾದ ಕಾರ್ಯಗಳನ್ನುಂಟುಮಾಡುವುವು. नास्ति योगः (वर्णसमाम्नायसूत्रेषु) संबन्धो येषां ते; न विद्यते योगः संयोगो वर्णान्तरेण येषां ते इति वा — तथाभूताः सन्तः वाहयन्ति (प्रयोगं) निष्पादयन्ति। "अनुस्वारो विसर्गश्च ≍क ≍पौ चैव पराश्रितौ। अयोगवाहा विज्ञेया आश्रयस्थानभागिनः"।

**अयोग्य ಅಯೋಗ್ಯ** (वि०) 1. ಅನರ್ಹವಾದ. 2. ಅನುಚಿತವಾದ.

**अयोग्र ಅಯೋಗ್ರ** (न०) ಮುಸಲ, ಒನಕೆ. अयः अग्रे यस्य।

**अयोघन ಅಯೋಘನ** (पुं०) ಸುತ್ತಿಗೆ, ಚಮ್ಮಟಿಗೆ. अयांसि हन्यन्तेऽनेन — हन (हिंसागत्योः) "अप्" घनादेशश्च (३-३-८२)।

**अयोजाल ಅಯೋಜಾಲ** (न०) 1. ಕಬ್ಬಿಣದ ಬಲೆ. अयोमयं जालम्। (वि०) 2. ರಾಕ್ಷಸಸ್ವಭಾವದ. अय इव जालमस्य।

**अयोध्य ಅಯೋಧ್ಯ** (वि०) ಯುದ್ಧಮಾಡಲು ಸಾಧ್ಯವಿಲ್ಲದ. योद्धुं शक्यः — युध (संप्रहारे) "ण्यत्" (३-१-१२४)। न योध्यः।

**अयोध्या ಅಯೋಧ್ಯಾ** (स्त्री०) ಅಯೋಧ್ಯಾನಗರ, ಇಕ್ಷ್ವಾಕು ವಂಶದ ದೊರೆಗಳ ರಾಜಧಾನಿ, ಭೂವೈಕುಂಠ, ಮೋಕ್ಷಪ್ರದವಾದ ಏಳು ನಗರಗಳಲ್ಲೊಂದು. "अयोध्या मथुरा माया काशी काञ्ची अवन्तिका। पुरी द्वारवती चैव सप्तैता मोक्षदायिकाः"।

**अयोध्याकाण्ड ಅಯೋಧ್ಯಾಕಾಂಡ** (पुं०) ಅಯೋಧ್ಯಾನಗರದಲ್ಲಿ ನಡೆದ ವೃತ್ತಾಂತವನ್ನು ವರ್ಣಿಸುವ (ರಾಮಾಯಣದ) ಗ್ರಂಥ ಭಾಗ.

**अयोनि ಅಯೋನಿ** (वि०) ಉತ್ಪತ್ತಿಯಿಲ್ಲದ, ನಿತ್ಯವಾದ. नास्ति योनिरुत्पत्तिस्थानं यस्य। "जगद्योनिरयोनिस्त्वं जगदन्तो निरन्तकः" कुमा० २-९।

**अयोनिज ಅಯೋನಿಜ** (पुं०) 1. ವಿಷ್ಣು, ನಾರಾಯಣ. "दिविस्पृक् सर्वदृग्व्यासो वाचस्पतिरयोनिजः" वि० स०। (वि०) 2. ಮನುಷ್ಯಾದಿ ದೇಹದಲ್ಲಿ ಉತ್ಪತ್ತಿಹೊಂದದ, ಹೆಂಗಸರ ಗರ್ಭದಲ್ಲಿ ಹುಟ್ಟದ; ಅಗಸ್ತ್ಯ ಮಹರ್ಷಿ, ದ್ರೋಣಾಚಾರ್ಯರು, ದ್ರೌಪದಿ, ಸೀತೆ ಮುಂತಾದವರು ಅಯೋನಿಜರು. 3. ಶಾಖದಿಂದ ಹುಟ್ಟುವ ಹುಳು, ನೊಣ ಮೊದಲಾದುವು.

**अयोमल ಅಯೋಮಲ** (न०) ಕಬ್ಬಿಣದ ಕಿಲುಬು, ಕಬ್ಬಿಣದ ಮೇಲೆ ಹಿಡಿಯುವ ತುಕ್ಕು.

**अयोमुख ಅಯೋಮುಖ** (पुं०) 1. ಬಾಣ. (वि०) 2. ತುದಿಯಲ್ಲಿ ಕಬ್ಬಿಣವುಳ್ಳ, ಕಬ್ಬಿಣದ ಮೂತಿಯುಳ್ಳ, (ನೇಗಿಲು ಮುಂತಾದುದು). स्त्रियां वा "ङीष्" (४-१-५४)। — मुखा — ಮುಖಾ — मुखी — ಮುಖೀ. 3. ಕಬ್ಬಿಣದಂತೆ ಕಠಿನವಾದ ಮೂತಿಯುಳ್ಳ (ಹಕ್ಕಿ ಮೊದಲಾದುದು).

**अयोहृदय** ಅಯೋಹೃದಯ (वि०) ಕಬ್ಬಿಣದಂತೆ ಕಠಿನವಾದ ಮನಸ್ಸುಳ್ಳ, ಕನಿಕರವಿಲ್ಲದ, ನಿರ್ದಯನಾದ. अय इव हृदयं यस्य।

**अयौगिक** ಅಯೌಗಿಕ (पुं०) ವ್ಯುತ್ಪತ್ತಿಯಿಂದ ಸಿದ್ಧವಾಗದ ಶಬ್ದ, ಅವಯವಾರ್ಥವಿಲ್ಲದ ಶಬ್ದ.

**अर** ಅರ (पुंन०) 1. ಚಕ್ರದ ಅರೆಕಾಲು, ಚಕ್ರದ ಅಂಚಿಗೂ ಗುಂಬಕ್ಕೂ ಮಧ್ಯೆ ಇರುವ ಮರದ ಪಟ್ಟಿ ಅಥವಾ ಕಬ್ಬಿಣದ ಸಲಾಕೆ. इयर्ति गच्छत्यनेन — ऋ (गतौ) "अच्" (३-१-१३४)। "गण्डोज्ज्वलामुज्ज्वलनाभिचक्रया विराजमानां नवयोदरश्रिया" माघ० १२-८। 2. ಶೈವಾಲ, ಪಾಚಿ. 3. ಒಂದು ಮೂಲೆ. (वि०) 4. ಶೀಘ್ರತೆಯಿಂದ ಕೂಡಿದ, ಶೀಘ್ರವಾಗಿ ನಡೆಯುವ. (अव्य०) 5. ಶೀಘ್ರವಾಗಿ, ಜಾಗ್ರತೆಯಾಗಿ. "अरमङ्गे रथाङ्गस्य शीघ्रशीघ्रगयोरपि" शाश्व०। "अरमरचयतामुभावसिम्यां पिशितभुजं भुजभारहीनमेनम्" चं० रा०।

**अरघट्ट** ಅರಘಟ್ಟ (पु०) 1. ರಾಟೆ, ಬಾವಿಯಿಂದ ನೀರು ಸೇದಲು ಹಾಕಿರುವ ಚಕ್ರ. 2. ದೊಡ್ಡಬಾವಿ, ಆಳವಾದ ಬಾವಿ. अरं शीघ्रं घटयते चाल्यतेऽसौ। "कोट्टारघट्टहट्टाश्च" अम०। "तदाकर्ण्य तु अरघट्टमार्गमहमाश्रित्य" पञ्चतं०।

**अरजस्** ಅರಜಸ್ (स्त्री०) 1. ಪುಷ್ಪವತಿಯಾಗದ ಹೆಂಗಸು, ಕನ್ಯೆ. (वि०) 2. ಧೂಳಿಲ್ಲದ, ಕೊಳೆಯಿಲ್ಲದ, ಶುದ್ಧವಾದ. 3. ಕಾಮಕ್ರೋಧಾದಿಗಳಿಲ್ಲದ, ರಜೋಗುಣವಿಲ್ಲದ.

**अरज्जु** ಅರಜ್ಜು (न०) ಕಾರಾಗೃಹ, ಸೆರೆಮನೆ. नास्ति रज्जुर्बन्धनसाधनं यत्र।

**अरणि** ಅರಣಿ (पु०) 1. ಸೂರ್ಯ. ऋच्छति — ऋ (गतौ) "अनिः" (उ० २-१०२)। 2. ಅಗ್ನಿಮಂಥವೃಕ್ಷ, ಬೆಂಕಿಯನ್ನುಂಟುಮಾಡುವ ಒಂದು ಮರ. 3. ಬೆಂಕಿ, ಅಗ್ನಿ. 4. ಚಕಮಕಿ ಕಲ್ಲು, ಅಗ್ನಿಶಿಲೆ. (पुंस्त्री०) 5. ಯಾಗದ ಅಗ್ನಿಯನ್ನು ಉತ್ಪತ್ತಿಮಾಡಲು ಉಪಯೋಗಿಸುವ ಮರದ ತುಂಡು. "निर्मन्थ्यदारुणि त्वरणिर्द्वयोः" अम०। स्त्रियां वा "ङीष्" (ग० ५०)। अरणी ಅರಣೀ. अरणिः ಅರಣಿಃ. "अरणिसंभवपावकसङ्गमादभजताध्वरवेदिरिव श्रियम्" याद० ३-४६।

**अरणीकेतु** ಅರಣೀಕೇತು (पु०) ಅಗ್ನಿಮಂಥವೃಕ್ಷ.

**अरणीसुत** ಅರಣೀಸುತ (पु०) ಶುಕಮಹರ್ಷಿ. [ವ್ಯಾಸಮಹರ್ಷಿಯು ಒಂದು ದಿನ ಘೃತಾಚಿಯೆಂಬ ಅಪ್ಸರಸ್ಸನ್ನು ಕಂಡು ಮೋಹಿಸಿದಾಗ ಅಗ್ನಿಯನ್ನು ಕಡೆಯಲು ಇಟ್ಟಿದ್ದ ಅರಣಿಯಮೇಲೆ ಮಹರ್ಷಿಯ ರೇತಸ್ಸು ಬಿದ್ದಿತು. ಆ ಅರಣಿಯನ್ನು ಕಡೆಯಲು ಶುಕಮಹರ್ಷಿಯು ಜನಿಸಿದರು.] "ऋषिरप्सरसं दृष्ट्वा सहसा काममोहितः। अरण्यामेव सहसा तस्य शुक्रमवापतत्। सोऽविशङ्केन मनसा तथैव द्विजसत्तमः। अरणीं ममन्थ ब्रह्मर्षिः तस्यां जज्ञे शुको नृप। शुक्रे निर्मथ्यमाने स शुको जज्ञे महातपाः" भा० शान्ति० ३३२-३, ७, ८, ९।

**अरण्य** ಅರಣ್ಯ (न०) 1. ವನ, ಕಾಡು. अर्यते — ऋ (गतौ) "अन्यः" (उ० ३-१०२)। "आरण्यकानां प्रभवः फलानामरण्यजातानि फलान्यभीप्सन्" याद० ४-३०। 2. ತೇಗದ ಮರ.

**अरण्यकन्दली** ಅರಣ್ಯಕಂದಲೀ (स्त्री०) ಕಾಡುಬಾಳೆಗಿಡ.

**अरण्यकाण्ड** ಅರಣ್ಯಕಾಂಡ (पु०) ಶ್ರೀರಾಮನ ಅರಣ್ಯಸಂಚಾರದ ವಿಷಯವನ್ನು ವರ್ಣಿಸುವ ರಾಮಾಯಣದ ಗ್ರಂಥಭಾಗ.

**अरण्यकार्पासी** ಅರಣ್ಯಕಾರ್ಪಾಸೀ (स्त्री०) ಕಾಡುಹತ್ತಿಗಿಡ.

**अरण्यचटक** ಅರಣ್ಯಚಟಕ (पु०) ಕಾಡುಗುಬ್ಬಚ್ಚಿ.

**अरण्यचन्द्रिका** ಅರಣ್ಯಚಂದ್ರಿಕಾ (स्त्री०) ಕಾಡಿನಲ್ಲಿ ಬೀಳುವ ಬೆಳದಿಂಗಳು; ಉಪಯೋಗವಿಲ್ಲದ ಸಂಪತ್ತು, ರೂಪ ಮುಂತಾದುದು ಕಾಡಿನಲ್ಲಿ ಬೀಳುವ ಬೆಳದಿಂಗಳಿನಂತೆ ನಿಷ್ಪ್ರಯೋಜನವೆಂಬ ಅರ್ಥದಲ್ಲಿ ಪ್ರಯೋಗ.

**अरण्यचर** ಅರಣ್ಯಚರ (वि०) ಕಾಡಿನಲ್ಲಿ ಸಂಚರಿಸುವ. अरण्ये चरति — चर (गतौ) "टः" (३-२-१६)। स्त्रियां "ङीप्" (४-१-१५)। —चरी —ಚರೀ.

**अरण्यधर्म** ಅರಣ್ಯಧರ್ಮ (पु०) ಕಾಡಿನಲ್ಲಿ ಆಚರಿಸಲ್ಪಡುವ ಧರ್ಮ. [ಗೃಹಸ್ಥನು ಮುಪ್ಪಿನಲ್ಲಿ ಗೃಹವನ್ನು ತ್ಯಜಿಸಿ ಪತ್ನೀಸಹಿತನಾಗಿ ಅರಣ್ಯದಲ್ಲಿ ವಾಸಮಾಡುತ್ತಾ ಕಂದಮೂಲಾದಿಗಳನ್ನೇ ಆಹಾರವನ್ನಾಗಿ ಉಪಯೋಗಿಸುತ್ತಿರಬೇಕು. ಜಿತೇಂದ್ರಿಯನಾಗಿದ್ದುಕೊಂಡು ಕಾಲತ್ರಯದಲ್ಲಿಯೂ ಸ್ನಾನಮಾಡುತ್ತಾ ಜಟಾವಲ್ಕಲಧಾರಣ, ಯಜ್ಞಯಾಗಾದಿಗಳ ಅನುಷ್ಠಾನ ಇವುಗಳೊಡನೆ ಸ್ವಾಧ್ಯಾಯ, ಜಪ, ತಪಸ್ಸು ಇತ್ಯಾದಿಗಳಲ್ಲಿ

ನಿರತನಾಗಿರಬೇಕು. ಇತ್ಯಾದಿ, ಇತ್ಯಾದಿ. ಇದೇ ವಾನಪ್ರಸ್ಥಧರ್ಮ.] "गृहस्थस्तु यदा पश्येद्वलीपलितमात्मनः। अपत्यस्यैव चापत्यं तदारण्यं समाश्रयेत्॥ संत्यज्य ग्राम्यमाहारं सर्वं चैव परिच्छदम्। पुत्रेषु भार्यां निक्षिप्य वनं गच्छेत्सहैव वा॥ अग्निहोत्रं समादाय गृह्यं चाग्निपरिच्छदम्। ग्रामादरण्यं निःसृत्य निवसेन्नियतेन्द्रियः॥ मुन्यन्नैर्विविधैर्मेध्यैः शाकमूलफलेन वा। एतानेव महायज्ञान्निर्वपेद्विधिपूर्वकम्" मनु० ६-२-५।

**अरण्यमक्षिका** ಅರಣ್ಯಮಕ್ಷಿಕಾ (स्त्री०) ಕಾಡುನೊಣ.

**अरण्यमार्जार** ಅರಣ್ಯಮಾರ್ಜಾರ (पु०) ಕಾಡುಬೆಕ್ಕು.

**अरण्यमुद्ग** ಅರಣ್ಯಮುದ್ಗ (न०) ಕಾಡುಹೆಸರು.

**अरण्यरुदित** ಅರಣ್ಯರುದಿತ (पु०) ಅರಣ್ಯದಲ್ಲಿ ಮಾಡುವ ರೋದನ, ಕಾಡಿನಲ್ಲಿ ಅಳುವುದು; ಅರಣ್ಯರೋದನವನ್ನು ಕೇಳುವವರು ಯಾರೂ ಇಲ್ಲವಾದುದರಿಂದ ಅದು ನಿಷ್ಪ್ರಯೋಜಕವಾಗುವಂತೆ ಪ್ರಯೋಜನವಿಲ್ಲದ ವಿಷಯದಲ್ಲಿ ಇದರ ಪ್ರಯೋಗ.

**अरण्यवास** ಅರಣ್ಯವಾಸ (वि०) ಕಾಡಿನ ವಾಸ.

**अरण्यवासिन्** ಅರಣ್ಯವಾಸಿನ್ (वि०) ಕಾಡಿನಲ್ಲಿ ವಾಸ ಮಾಡುವ (ಋಷಿ ಮೊದಲಾದವರು). अरण्ये वसति—वस (निवासे) "णिनिः" (३-२-७८)।

**अरण्यसूकर** ಅರಣ್ಯಸೂಕರ (पु०) ಕಾಡುಹಂದಿ.

**अरण्यश्वन्** ಅರಣ್ಯಶ್ವನ್ (पु०) ಕಾಡುನಾಯಿ, ವೃಕ, ತೋಳ.

**अरण्यषष्ठी** ಅರಣ್ಯಷಷ್ಠೀ (स्त्री०) ಜ್ಯೇಷ್ಠ ಶುದ್ಧ ಷಷ್ಠಿ. "ज्येष्ठे मासि सिते पक्षे षष्ठी याऽरण्यसंज्ञिता। व्यजनैककरास्तस्यामटन्ति विपिने स्त्रियः"।

**अरण्याध्यक्ष** ಅರಣ್ಯಾಧ್ಯಕ್ಷ (पु०) ಅರಣ್ಯವನ್ನು ರಕ್ಷಿಸಲು ರಾಜನಿಂದ ನಿಯುಕ್ತನಾದ ಅಧಿಕಾರಿ (Chief Conservator of Forests).

**अरण्यानी** ಅರಣ್ಯಾನೀ (स्त्री०) ದೊಡ್ಡ ಕಾಡು, ವಿಸ್ತಾರವಾದ ಅಡವಿ. महदरण्यम्—"आनुक्" "ङीष्" च (४-१-४९)।

**अरण्यौकस्** ಅರಣ್ಯೌಕಸ್ (पु०) 1. ಮುನಿ, ಋಷಿ. अरण्यमोको यस्य। "वैक्लव्यं मम तावदीदृशमिदं स्नेहादरण्यौकसः" शाकु० ४-५। 2. ವಾನಪ್ರಸ್ಥ, ಸಂಸಾರವನ್ನು ತ್ಯಜಿಸಿ ಅರಣ್ಯದಲ್ಲಿ ವಾಸಮಾಡುವವನು.

**अरत** ಅರತ (वि०) 1. ವಿರಕ್ತ, ವೈರಾಗ್ಯವುಳ್ಳವನು, ಉದಾಸೀನ, 2. ಅನುರಾಗವಿಲ್ಲದ, ಪ್ರೀತಿಯಿಲ್ಲದ. न रतः।

**अरति** ಅರತಿ (पु०) 1. ಕ್ರೋಧ, ಕೋಪ. ऋ (गतौ) "अतिः" (उ० ४-६०)। (स्त्री०) 2. ಸಂತೋಷವಿಲ್ಲದಿರುವಿಕೆ, ನೆಮ್ಮದಿಯಿಲ್ಲದಿರುವಿಕೆ. रमु (क्रीडायाम्) "क्तिन्" (३-३-९४)। न० त०। 3. ಪ್ರೀತಿಯಿಲ್ಲದಿರುವಿಕೆ. "विविक्तदेशसेवित्वमरतिर्जनसंसदि" गीता १३-१०। 4. ನೋವು, ದುಃಖ. 5. ಯಾವುದರಲ್ಲಿಯೂ ಇಚ್ಛೆಯಿಲ್ಲದಿರುವಿಕೆ, ಬೇಸರ, ಹತ್ತು ಮನ್ಮಥಾವಸ್ಥೆಗಳಲ್ಲೊಂದು. "दृङ्मनःसङ्गसंकल्पा जागरः कृशताऽरतिः। ह्रीत्यागोन्मादमूर्च्छान्ता इत्यनङ्गदशा दश"। (वि०) 6. ಪ್ರೀತಿಯಿಲ್ಲದ, ಅನುರಾಗವಿಲ್ಲದ.

**अरत्नि** ಅರತ್ನಿ (पु०) 1. ಕಿರುಬೆರಳು ನೀಡಿದ ಒಂದು ಗುದ್ದು ಮೊಳ, ಮೊಳಕೈಯಿಂದ ಹಿಡಿದು ಕಿರುಬೆರಳಿನ ತುದಿಯವರೆಗಿನ ಅಳತೆ. 2. ಮೊಳಕೈ. 3. ಬಾಹು, ತೋಳು. "अरत्निर्ना सप्रकोष्ठततान्गुलिकरेऽपि च। कफोणावपि" मेदि०।

**अरर** ಅರರ (पु०) 1. ಚಂದ್ರ. (न०) 2. ಕಬ್ಬಿಣ. 3. ಕವಾಟ, ಬಾಗಿಲು. (स्त्रीन०)वैज०। 4. ಬದಿಯ ಒರೆ, ಗವಸಣಿಗೆ. 5. ಮುಚ್ಚಳ, ಒರೆ, ಕೋಶ. इयर्ति—ऋ (गतौ) "अरन्" (उ० ३-१३२)। "न ना कवाटे क्ली लोहे सोमे स्यादररः पुमान्" वैज०। "अररं छदकपाटयोः" मेदि०।

**अररि** ಅರರಿ (पुंन०) ಕವಾಟ, ಬಾಗಿಲು. "कपाटोऽररिः कुवाटः" अभि० चि०।

**अररु** ಅರರು (पु०) 1. ಶತ್ರು. 2. ಆಯುಧ. ऋ (गतौ) "अरुः" (उ० ४-७९)।

**अरविन्द** ಅರವಿಂದ (पु०) 1. ತಾಮ್ರಲೋಹ. 2. ಕೊಕ್ಕರೆ, ನೀರುಹಕ್ಕಿ. (न०) 3. ಪದ್ಮ, ಕಮಲ, ತಾವರೆ. अराणि अरसदृशानि दलानि विन्दति—अर + विद्लृ (लाभे) "शः" (३-१-१३८)। "सरसीष्वरविन्दानां वीचिविक्षोभशीतलम्" रघु० १-४३। "क्रीडाहृतं क्षिप्रमिवारविन्दम्" याद० २-४१। 4. ಕೆಂದಾವರೆ. 5. ಕನ್ನೈದಿಲೆ, ನೀಲಕಮಲ.

**अरविन्दनाभ** ಅರವಿಂದನಾಭ (पु०) ವಿಷ್ಣು. अरविन्दं नाभौ यस्य "अच्" (५-४-७५)।

**अरविन्दाक्ष** ಅರವಿಂದಾಕ್ಷ (पु०) 1. ವಿಷ್ಣು. (वि०) 2. ಕಮಲದಂತೆ ಕಣ್ಣುಳ್ಳ. अरविन्दे इव अक्षिणी यस्य "षच्" (५-४-११३)। स्त्रियां "ङीष्" (४-१-४१)। —अक्षी —ಅಕ್ಷೀ.

**अरविन्दिनी** ಅರವಿಂದಿನೀ (स्त्री०) 1. ಕಮಲಲತೆ. 2. ಕಮಲಗಳಿಂದ ಕೂಡಿದ ದೇಶ. 3. ಕಮಲಗಳ ಸಮೂಹ. अरविन्द "इनिः"(५-२-१३५)। "ङीप्" (४-१-५)।

**अरस** ಅರಸ (वि०) 1. ರಸವಿಲ್ಲದ. 2. ಶಕ್ತಿಯಿಲ್ಲದ. 3. ಸಪ್ಪೆಯಾದ. रस्यते — रस (आस्वादनस्नेहनयोः) + णिच् कर्म० "अच्" (३-३-५६)। न० ब०।

**अरसिक** ಅರಸಿಕ (वि०) ರಸವನ್ನರಿಯದ, ರಸಸ್ವರೂಪವನ್ನು ತಿಳಿಯದ. रसोऽस्त्यस्य "ठन्" (५-२-११५)। न० त०। "अरसिकेषु रसस्य निवेदनं शिरसि मा लिख मा लिख मा लिख"।

**अराजक** ಅರಾಜಕ (पु०) ರಾಜನಿಲ್ಲದ ದೇಶ. नास्ति राजा यत्र "कप्" (५-४-१५४)।

**अराति** ಅರಾತಿ (पु०) 1. ಶತ್ರು, ಹಗೆ, ವೈರಿ. न राति सुखम् — रा (दाने) "क्तिच्" (३-३-१७४)। "अरातिपक्षार्णवमन्दराभे" याद० १३-८४। "अरातिभिर्युधि सहयुध्वनो हतान्" माघ० १७-३४। 2. ಜಾತಕದ ಕುಂಡಲಿಯಲ್ಲಿ ತನ್ವಾದಿ ಭಾವಗಳ ಪೈಕಿ ಆರನೆಯದು. [ಆರನೆಯದು ಶತ್ರುಸ್ಥಾನ.] 3. ಆರು ಸಂಖ್ಯೆ.

**अराल** ಅರಾಲ (पु०) 1. ಮದಿಸಿದ ಆನೆ. 2. ಸರ್ಜರಸ, ಮತ್ತಿಮರದ ಹಾಲು. (वि०) 3. ವಕ್ರವಾದ, ಕುಟಿಲವಾದ, ಡೊಂಕಾದ. ऋ (गतौ) "विच्" (३-२-७५)। अरमालाति — आ+ला (आदाने) "कः" (वा० ३-२-५)। "अरालः कुटिले सर्जरसे समददन्तिनि" मेदि०। "करोति लक्ष्यं चिरमस्य चक्षुषो न वक्त्रमात्मीयमरालपक्ष्मणः" कुमा० ५-४९। (स्त्री०) —ला —ಲಾ. 4. ವೇಶ್ಯೆ, ಸೂಳೆ, ಸ್ವೈರಿಣಿ.

**अरि** ಅರಿ (पु०) 1. ಶತ್ರು, ವೈರಿ, ಹಗೆ. इर्यति विरोधम् — ऋ (गतौ) "इः" (उ० ४-१३८)। "अरिषु हि विजयार्थिनः क्षितीशाः विदधति सोपधि सन्धिदूषणानि" किरा० १-४५। 2. ಕಾಮ ಕ್ರೋಧ ಲೋಭ ಮೋಹ ಮದ ಮಾತ್ಸರ್ಯಗಳೆಂಬ ಮನುಷ್ಯನ ಶತ್ರುವರ್ಗ. 3. ಲಗ್ನದಿಂದ ಆರನೆಯ ಸ್ಥಾನ, ಶತ್ರುಸ್ಥಾನ. 4. ಆರು ಸಂಖ್ಯೆ.

**अरिचिन्तन** ಅರಿಚಿಂತನ (न०) ಶತ್ರುರಾಷ್ಟ್ರದ ವಿಷಯವಾಗಿ ಮಾಡುವ ಯೋಚನೆ. "तन्त्रं स्वराष्ट्रचिन्ता स्यादावापस्त्वरिचिन्तनम्" वैज०।

**अरित्र** ಅರಿತ್ರ (न०) 1. ಹಡಗುಗಳನ್ನು ನಡೆಸುವ ಜಲ್ಲೆ. ऋच्छत्यनेन — ऋ (गतौ) "इत्रः" (३-२-१८४)। "लोलैररित्रैश्चरणैरिवाभितः" माघ० १२-७१। 2. ಹಡಗಿನ ಚುಕ್ಕಾಣಿ, ಲಂಗರು. (वि०) 3. ಶತ್ರುಗಳಿಂದ ಕಾಪಾಡುವ. अरिभ्यः त्रायते—त्रैङ् (पालने) "कः" (३-२-४)।

**अरिन्दम** ಅರಿಂದಮ (वि०) ಶತ್ರುಗಳನ್ನು ಅಡಗಿಸುವ. ಶತ್ರುಗಳನ್ನು ಕುಗ್ಗಿಸುವ. अरीन् दाम्यति — अरि+दमु (उपशमे) "खच्" (३-२-४६)। "मुम्" (६-३-६७)।

**अरिभद्र** ಅರಿಭದ್ರ (पु०) ಅರಿಶ್ರೇಷ್ಠ, ಬಹಳ ಬಲಶಾಲಿಯಾದ ಶತ್ರು. "सर्पाधिराजोरुभुजोऽपसर्पं पप्रच्छ भद्रं विजितारिभद्रः" रघु० १४-३१।

**अरिमेद** ಅರಿಮೇದ (पु०) ಕೆಟ್ಟ ವಾಸನೆಯುಳ್ಳ ಕಗ್ಗಲಿ ಮರ.

**अरिषड्वर्ग** ಅರಿಷಡ್ವರ್ಗ (पु०) ಕಾಮ ಕ್ರೋಧ ಲೋಭ ಮೋಹ ಮದ ಮಾತ್ಸರ್ಯಗಳೆಂಬ ಆರು ಶತ್ರುಗಳ ಗುಂಪು.

**अरिष्ट** ಅರಿಷ್ಟ (पु०) 1. ಬೇವಿನ ಮರ. 2. ಬೆಳ್ಳುಳ್ಳಿ. 3. ಹದ್ದು. 4. ಕಾಗೆ, ವಾಯಸ. 5. ಶ್ರೀಕೃಷ್ಣನಿಂದ ಹತನಾದ ಒಬ್ಬ ರಾಕ್ಷಸ. "अरिष्टचाणूरमुखेष्वलक्षितम्" याद० १४-११। (न०) 6. ಅಶುಭ. 7. ಮಜ್ಜಿಗೆ, ಕಡೆದು ನೀರು ಬೆರಸಿದ ಮೊಸರು. 8. ಅಶುಭ ಸೂಚನೆ. "अरिष्टमाशङ्क्य विपाकदारुणम्" कुमा० १५-२६। 9. ಸಾವಿನ ಲಕ್ಷಣ, ಮರಣದ ಕುರುಹು. 10. ಶುಭ, ಕ್ಷೇಮ. 11. ಮದ್ಯ. 12. ಸೂತಿಕಾಗೃಹ, ಪ್ರಸವಗೃಹ, ಹೆರಿಗೆಯ ಮನೆ. "अरिष्टशय्यां परितो विसारिणा" रघु० ३-१५। (स्त्री०) —ष्टा —ಷ್ಟಾ. 13. ಕಟುಕ ರೋಹಿಣಿ. (वि०) 14. ಸುಖವಾದ, ಕ್ಷೇಮವಾದ, ತೊಂದರೆಯಿಲ್ಲದ. "अरिष्टं गच्छ पन्थानम्" रामा०। "अरिष्टो लशुने निम्बे फेनिले काककङ्कयोः। अरिष्टमशुभे तक्रे सूतिकागार आसवे। शुभे मरणचिह्ने च" मेदि०।

**अरिष्टताति** ಅರಿಷ್ಟತಾತಿ (वि०) ಶುಭವನ್ನುಂಟು ಮಾಡುವವನು. अरिष्टं करोति — अरिष्ट "तातिल्" (४-४-१४३)।

**अरिष्टदुष्टधी** ಅರಿಷ್ಟದುಷ್ಟಧೀ (वि०) ಅಶುಭ ಚಿಹ್ನೆಯಿಂದ ಕಳವಳಗೊಂಡ ಮನಸ್ಸುಳ್ಳ. अरिष्टेन दुष्टा धीर्यस्य। "विवशोऽरिष्टदुष्टधीः" अम०।

**अरिष्टनेमि ಅರಿಷ್ಟನೇಮಿ** (पुं०) 1. ವಿನತಾದೇವಿಯ ಮಗ. "तार्क्ष्यश्चारिष्टनेमिश्च गरुडश्च महाबलः। अरुणश्चारुणिश्चैव विनतायाः सुताः स्मृताः" हरिवं०। 2. ಒಬ್ಬ ಜೈನತೀರ್ಥಂಕರರ ಹೆಸರು.

**अरिष्टि ಅರಿಷ್ಟಿ** (स्त्री०) ಕ್ಷೇಮ, ಶುಭ. न रिष्टिः। नं तं।

**अरुचि ಅರುಚಿ** (स्त्री०) 1. ಅಪೇಕ್ಷೆಯಿಲ್ಲದಿರುವಿಕೆ. 2. ಸಂತೋಷವಿಲ್ಲದಿರುವಿಕೆ.

**अरुण ಅರುಣ** (पुं०) 1. ಸೂರ್ಯ. ऋच्छति — ऋ (गतौ) "उनन्" (उ० ३-६०)। "रागेण बालारुणकोमलेन" कुमा० ३-३०। 2. ಸೂರ್ಯನ ಸಾರಥಿ. अरुणो वर्णोऽस्यास्ति — अरुण "अच्" (५-२-१२७)। "आविष्कृतारुणपुरःसर एकतोऽर्कः" शाकु० ४-१। 3. ಕೆಂಪು ಬಣ್ಣ, ಸಂಧ್ಯಾರಾಗ. 4. ಎಳೆಗೆಂಪು. 5. ಎಣ್ಣೆಗೆಂಪು, ಕಪ್ಪು ಬೆರೆತ ಕೆಂಪು ಬಣ್ಣ. 6. ಒಂದು ಜಾತಿ ಕುಷ್ಠರೋಗ. 7. ಕಾಕಂಬಿ, ಬೆಲ್ಲದ ಪಾಕ. 8. ಒಬ್ಬ ರಾಕ್ಷಸ. 9. ದ್ವಾದಶಾದಿತ್ಯರಲ್ಲೊಬ್ಬ. "अरुणो माघमासे वै" आदित्यहृ०। 10. ಸುರಗಿ ಮರ, ಸುರಹೊನ್ನೆಮರ. 11. ಬುಧ ಗ್ರಹ. 12. ಸಂಧ್ಯಾಕಾಲದ ಮೇಘ. (नं०) 13. ಕುಂಕುಮ ಕೇಸರಿ. 14. ಚಿನ್ನ, ಸುವರ್ಣ. 15. ತಾಮ್ರ ಲೋಹ. "विषारुणारुणं ताम्रमरुणः सूर्यसारथौ। अव्यक्तरागे शशिजे सन्ध्याभ्रे लोहिते रवौ" वैज०। (स्त्री०) —णा —ಣಾ. 16. ಮಂಜಿಷ್ಠೆ. 17. ಅತಿಬಜೆ. 18. ಸಾವೆ. 19. ಕೆಂಪು ತಿಗಡೆಮರ. 20. ಗುಲಗಂಜಿ ಬಳ್ಳಿ. 21. ಒಂದು ನದಿ. 22. ಹಾವು ಮೆಕ್ಕೆ ಗಿಡ. (वि०) 23. ಕೆಂಪು ಬಣ್ಣದ, ಎಳೆಗೆಂಪಿನಿಂದ ಕೂಡಿದ. "अरुणजलजराजीमुग्धहस्ताग्रपादा" माघ० ११-४०। "अरुणाधरसाभिलाषवंशां करुणां कारणमानुषीं भजामि" याद० १५-८९। 24. ಎಣ್ಣೆಗೆಂಪಾದ. 25. ಮೂಕ, ಮಾತಾಡಲಾರದವನು. 26. ಚಿಂತಾಕ್ರಾಂತನಾದ. "अरुणोऽव्यक्तरागेऽर्के सन्ध्यारागेऽर्कसारथौ। निःशब्दे कपिले कुष्ठभेदे ना गुणिनि त्रिषु। अरुणातिविषा श्यामा मञ्जिष्ठा त्रिवृतासु च" मेदि०। "मञ्जिष्ठातिविषारुणा। त्रिष्वारक्ते व्याकुले" त्रिकाण्ड०।

**अरुणप्रिया ಅರುಣಪ್ರಿಯಾ** (स्त्री०) ಸೂರ್ಯನ ಪತ್ನಿ— (1) ಸಂಜ್ಞಾದೇವಿ. (2) ಛಾಯಾದೇವಿ.

**अरुणनयन ಅರುಣನಯನ** —नेत्र —ನೇತ್ರ, —लोचन —ಲೋಚನ (पुं०) 1. ಪಾರಾವತ, ಪಾರಿವಾಳದ ಹಕ್ಕಿ. (वि०) 2. ಕೆಂಪಾದ ಕಣ್ಣುಳ್ಳ. अरुणे नयने नेत्रे लोचने वा यस्य।

**अरुणसारथि ಅರುಣಸಾರಥಿ** (पुं०) ಸೂರ್ಯ. अरुणः सारथिर्यस्य।

**अरुणात्मज ಅರುಣಾತ್ಮಜ** (पुं०) 1. ಸೂರ್ಯನ ಮಗ— (1) ಶನಿದೇವ. (2) ಸುಗ್ರೀವ. (3) ಯಮ. (4) ಕರ್ಣ. (5) ಸಾವರ್ಣಿಮನು. (द्वि० व०) (6) ಅಶ್ವಿನೀ ಕುಮಾರರು. 2. ಸೂರ್ಯನ ಸಾರಥಿಯಾದ ಅರುಣನ ಮಗ—(1) ಜಟಾಯು. (2) ಸಂಪಾತಿ. (स्त्री०) —जा —ಜಾ. ಸೂರ್ಯನ ಮಗಳು— (1) ಯಮುನಾನದಿ. (2) ತಪತೀನದಿ.

**अरुणानुज ಅರುಣಾನುಜ —अवरज —ಅವರಜ** (पुं०) ಅರುಣನ ತಮ್ಮ, ಗರುಡ. अरुणस्यानुजः अवरजो वा।

**अरुणित ಅರುಣಿತ** (वि०) ಕೆಂಪಾಗಿ ಮಾಡಲ್ಪಟ್ಟ. अरुण "इतच्" (५-२-३६)। "स्तनाङ्गरागारुणिताच्च कन्दुकात्" कुमा० ५-११। "अरुणिताखिलशैलवना मुहुः" माघ० ६-२१।

**अरुणोदय ಅರುಣೋದಯ** (पुं०) 1. ಸೂರ್ಯೋದಯಕ್ಕೆ ಪೂರ್ವದಲ್ಲಿ ನಾಲ್ಕು ಘಳಿಗೆಯ ಕಾಲ. "चतस्रो घटिकाः प्रातररुणोदय उच्यते"। 2. ಅರುಣನ ಆವಿರ್ಭಾವ, ಅರುಣನು ಕಾಣಿಸಿಕೊಳ್ಳುವಿಕೆ.

**अरुणोदयविद्धा ಅರುಣೋದಯವಿದ್ಧಾ** (स्त्री०) ಅರುಣೋದಯ ಕಾಲದಲ್ಲಿ ದಶಮೀ ತಿಥಿಯ ಸಂಬಂಧವುಳ್ಳ ಏಕಾದಶೀ ತಿಥಿ. अरुणोदये विद्धा। "दशमी शेषसंयुक्ता यदि स्यादरुणोदये। वैष्णवेन न कर्तव्यं तद्दिनैकादशीव्रतम्" भविष्य०।

**अरुणोदयसप्तमी ಅರುಣೋದಯಸಪ್ತಮೀ** (स्त्री०) ಮಾಘ ಶುಕ್ಲ ಸಪ್ತಮಿ, ರಥಸಪ್ತಮಿ. "माघे मासि सिते पक्षे सप्तमी कोटिभास्करा। दद्यात्स्नानार्घदानाभ्यामायुरारोग्यसंपदः" भविष्य०। [ಈ ದಿನ ಅರುಣೋದಯ ಕಾಲದಲ್ಲಿ ಸ್ನಾನ ಅರ್ಘ್ಯಪ್ರದಾನಾದಿಗಳಿಂದ ಪುಣ್ಯವುಂಟಾಗುವುದರಿಂದ ಈ ಹೆಸರು.]

**अरुणोपल ಅರುಣೋಪಲ** (पुं०) ಪದ್ಮರಾಗ, ಮಾಣಿಕ್ಯ.

**अरुन्तुद ಅರುಂತುದ** (वि०) ಮನಸ್ಸನ್ನು ನೋಯಿಸುವ, ಮರ್ಮಭೇದಕವಾದ. अरूंषि तुदति — अरुस्+तुद (व्यथने) "खश्" (३-२-३५)। मुमागमः (६-३-६७)। "अरुन्तुदमिवालानमनिर्वाणस्य दन्तिनः" रघु० १-७१

**अरुन्धती** ಅರುಂಧತೀ (स्त्री०) 1. ವಸಿಷ್ಠ ಮಹರ್ಷಿಯ ಪತ್ನಿ. "अन्वासितमरुन्धत्या स्वाहयेव हविर्भुजम्" रघु० १-५६। "आर्याप्यरुन्धती तत्र व्यापारं कर्तुमर्हति" कुमा० ६-३२। [ಸಪ್ತರ್ಷಿ ಮಂಡಲದಲ್ಲಿ ವಸಿಷ್ಠ ಮಹರ್ಷಿಯ ಸಮೀಪದಲ್ಲಿ ಅರುಂಧತೀ ದೇವಿಯು ನಕ್ಷತ್ರ ರೂಪದಲ್ಲಿರುವಳು. ವಿವಾಹ ಕಾಲದಲ್ಲಿ ವಧೂವರರಿಗೆ ಅರುಂಧತೀ ನಕ್ಷತ್ರವನ್ನು ತೋರಿಸುತ್ತಾರೆ.] 2. ಜಿಹ್ವೆ, ನಾಲಿಗೆ. "अरुन्धती भवेज्जिह्वा ध्रुवो नासाग्रमुच्यते" काशीखं०।

**अरुन्धतीजानि** ಅರುಂಧತೀಜಾನಿ (पु०) ವಸಿಷ್ಠ ಮಹರ್ಷಿ. अरुन्धती जाया यस्य "निङ्" (५-४-१३४)।

**अरुन्धतीदर्शनन्याय** ಅರುಂಧತೀದರ್ಶನನ್ಯಾಯ (पु०) ಮೊದಲು ಸ್ಥೂಲವಾಗಿ ಸುಲಭವಾದ ವಿಷಯವನ್ನು ತಿಳಿಸಿ ಅನಂತರ ವಿಮರ್ಶೆಯಿಂದ ಸೂಕ್ಷ್ಮವಾದ ವಿಷಯವನ್ನು ತಿಳಿಸುವುದು. [ಅರುಂಧತಿಯನ್ನು ತೋರಿಸಲು ಮೊದಲು ಅಕ್ಕಪಕ್ಕದ ಸ್ಥೂಲವಾದ ನಕ್ಷತ್ರಗಳನ್ನು ತೋರಿಸಿ ಅನಂತರ ಅವುಗಳ ಪಕ್ಕದಲ್ಲಿರುವ ಸೂಕ್ಷ್ಮವಾದ ಅರುಂಧತೀ ನಕ್ಷತ್ರವನ್ನು ತೋರಿಸುವಂತೆ.]

**अरुल** ಅರುಲ (न०) 1. ಜಲ, ನೀರು. 2. ದೋಣಿ. "अरुलं सलिले पोतेऽपि" वैज०।

**अरुष्कर** ಅರುಷ್ಕರ (पु०) 1. ಗೇರುಮರ. अरुः व्रणं करोति — डु कृञ् (करणे) "टः" (३-२-२१)। (वि०) 2. ಗಾಯವನ್ನುಂಟುಮಾಡುವ.

**अरुस्** ಅರುಸ್ (पु०) 1. ಎಕ್ಕದ ಗಿಡ. 2. ಕೆಂಪು ಕಗ್ಗಲಿ ಮರ. (पुंन०) 3. ವ್ರಣ, ಹುಣ್ಣು. 4. ಗಾಯ. (न०) 5. ಮರ್ಮಸ್ಥಾನ. ऋ (गतौ) "उसिः" (उ० २-११७)।

**अरूप** ಅರೂಪ (न०) 1. ಬ್ರಹ್ಮ. 2. ಕುರೂಪ. (वि०) 3. ರೂಪವಿಲ್ಲದ. 4. ಸೌಂದರ್ಯವಿಲ್ಲದ. नास्ति रूपं यस्य।

**अरूपहार्य** ಅರೂಪಹಾರ್ಯ (वि०) ಸೌಂದರ್ಯದಿಂದ ವಶಪಡಿಸಿಕೊಳ್ಳಲಾಗದ. रूपेण सौन्दर्येण हार्यो न भवति। "अरूपहार्यं मदनस्य निग्रहात् पिनाकपाणिं पतिमाप्तुमिच्छति" कुमा० ५-५३।

**अरूष** ಅರೂಷ (पु०) 1. ಸೂರ್ಯ, 2. ಒಂದು ಜಾತಿಯ ಹಾವು.

**अरे** ಅರೆ (अव्य०) 1. ನೀಚಸಂಬೋಧನ. "अरे कुम्भीरक, कथय कुत्र त्वयैतद्राजकीयमङ्गुलीयकं समासादितम्" शाकु० ६। 2. ಕೋಪದ ಸಂಬೋಧನೆ. "अरे मूढ, जाल्मा काममवध्योऽहम्। इयं सा जातिः परित्यक्ता" वेणी० ३। 3. ಅಸೂಯೆ, ಹೊಟ್ಟೆಕಿಚ್ಚು. "अरेऽपाकृत्यसूययोः" मेदि०।

**अरोक** ಅರೋಕ (पु०) 1. ಕಾಂತಿಯಿಲ್ಲದ, ಪ್ರಕಾಶಶೂನ್ಯವಾದ, ಕಳೆಗುಂದಿದ. रुच (दीप्तौ) "घञ्" (३-३-१८)। रोको दीप्तिः। न रोको यस्य। 2. ರಂಧ್ರವಿಲ್ಲದ, ತೂತಿಲ್ಲದ.

**अरोग** ಅರೋಗ (पु०) 1. ಆರೋಗ್ಯ, ರೋಗವಿಲ್ಲದಿರುವಿಕೆ. न रोगः। "न नाममात्रेण करोत्यरोगम्" हितो० १-१६७। (वि०) 2. ರೋಗವಿಲ್ಲದ. न रोगो यस्य।

**अरोगिन्** ಅರೋಗಿನ್ (वि०) ರೋಗವಿಲ್ಲದ, ಆರೋಗ್ಯದಿಂದ ಕೂಡಿದ. न रोगी। स्त्रियां "ङीप्" (४-१-५)। अरोगिणी ಅರೋಗಿಣೀ.

**अरोचक** ಅರೋಚಕ (पु०) ಒಂದು ರೋಗ, ಯಾವ ಆಹಾರದಲ್ಲಿಯೂ ಅಪೇಕ್ಷೆಯನ್ನುಂಟುಮಾಡದ ರೋಗ, ಜಠರಾಗ್ನಿಯು ಕುಂದಿರುವಿಕೆ, ಅಜೀರ್ಣರೋಗ.

**अरोचकिन्** ಅರೋಚಕಿನ್ (वि०) ಅಜೀರ್ಣರೋಗವುಳ್ಳ.

**अर्क** ಅರ್ಕ (पु०) 1. ಸೂರ್ಯ. अर्च्यते — अर्च (पूजायाम्) "कः" (उ० ३-४०)। "जगत्पवित्रैरपि तं न पादैः स्प्रष्टुं जगत्पूज्यमयुज्यतार्कः" माघ० ३-२। 2. ವಿಷ್ಣು. "अर्को वाजसनिः शृङ्गी" वि० स०। 3. ಇಂದ್ರ. 4. ಸ್ಫಟಿಕ. 5. ತಾಮ್ರಲೋಹ. 6. ಭಾನುವಾರ. 7. ಎಕ್ಕದ ಗಿಡ. 8. ಶುಕ್ಲಸಪ್ತಮಿ. 9. ಪಂಡಿತ. 10. ಜ್ಯೇಷ್ಠ ಸಹೋದರ. 11. ಹರಳುಗಿಡ. 12. ಉತ್ತರಫಲ್ಗುನೀ ನಕ್ಷತ್ರ. 13. ಹನ್ನೆರಡು ಸಂಖ್ಯೆ. 14. ಕಷಾಯ. "अर्कोऽर्कपर्णे स्फटिके रवौ ताम्रे दिवस्पतौ" मेदि०। "अर्को मघोनि स्फटिके ज्येष्ठभ्रातरि भास्करे। शुभ्रेऽर्कपादपे" नानार्थर०। (वि०) 15. ಪೂಜಿಸಲ್ಪಡುವ, ಪೂಜಿಸಲು ಯೋಗ್ಯವಾದ.

**अर्कक्षेत्र** ಅರ್ಕಕ್ಷೇತ್ರ (न०) ಸಿಂಹರಾಶಿ. अर्कस्य क्षेत्रम्।

**अर्कज** ಅರ್ಕಜ (पु०) ಸೂರ್ಯನ ಮಗ—(1) ಶನಿದೇವ. (2) ಯಮ. (3) ಸುಗ್ರೀವ. (4) ಕರ್ಣ. (5) ಸಾವರ್ಣಿಮನು. (द्वि० व०) (6) ಅಶ್ವಿನೀ

ಕುಮಾರರು. (स्त्री०) –जा – ಜಾ. ಸೂರ್ಯನ ಮಗಳು—(1) ಯಮುನಾನದಿ. (2) ತಪತೀನದಿ. अर्काज्जायते — जनी (प्रादुर्भावे) "ड:" (३-२-९८)।

**अर्कतनय ಅರ್ಕತನಯ** –पुत्र – ಪುತ್ರ, –सुत – ಸುತ, –सूनु – ಸೂನು (पु०) "अर्कज" ಪದದ ಅರ್ಥ.

**अर्कनयन ಅರ್ಕನಯನ**–नेत्र – ನೇತ್ರ (पु०) 1. ವಿರಾಟ್ ಪುರುಷ. (वि०) 2. ಸೂರ್ಯನಂತೆ ತೀಕ್ಷ್ಣವಾದ ಕಣ್ಣುಗಳುಳ್ಳ.

**अर्कपत्र ಅರ್ಕಪತ್ರ** –पर्ण – ಪರ್ಣ (पु०) 1. ಎಕ್ಕದಗಿಡ. अर्क इव तीक्ष्णं पत्रं पर्णं वा यस्य। (न०) 2. ಎಕ್ಕದ ಎಲೆ.

**अर्कपादप ಅರ್ಕಪಾದಪ** (पु०) ಎಕ್ಕದಗಿಡ.

**अर्कप्रिया ಅರ್ಕಪ್ರಿಯಾ** (स्त्री०) ಸೂರ್ಯನ ಪತ್ನಿ— (1) ಛಾಯಾದೇವಿ. (2) ಸಂಜ್ಞಾದೇವಿ.

**अर्कबन्धु ಅರ್ಕಬಂಧು** (पु०) 1. ಬುದ್ಧದೇವ. 2. ಕಮಲ, ತಾವರೆಹೂವು. अर्को बन्धुर्यस्य।

**अर्कभ ಅರ್ಕಭ** (न०) 1. ಉತ್ತರಫಲ್ಗುನೀ ನಕ್ಷತ್ರ, ಸೂರ್ಯದೇವತಾಕ ನಕ್ಷತ್ರ. 2. ಸೂರ್ಯನೇ ಅಧಿಪತಿಯಾದ ಸಿಂಹರಾಶಿ.

**अर्कविवाह ಅರ್ಕವಿವಾಹ** (पु०) ಮೂರನೆಯ ವಿವಾಹವನ್ನು ಮಾಡಿಕೊಳ್ಳುವ ಮೊದಲು ಎಕ್ಕದಗಿಡವನ್ನು ಕನ್ಯೆಯನ್ನಾಗಿ ಮಾಡಿ (ಭಾವಿಸಿ) ಅದರೊಡನೆ ಮಾಡಿಕೊಳ್ಳುವ ಮದುವೆ. [ಇದರಿಂದ ಮೂರನೆಯ ವಿವಾಹವು ನಾಲ್ಕನೆಯದಾಗುವುದು.] "चतुर्थादिविवाहार्थं तृतीयेऽर्कं समुद्वहेत्। आदित्यदिवसे वापि हस्तर्क्षे वा शनैश्चरे। शुभे दिने वा पूर्वाह्णे कुर्यादर्कविवाहकम्" कश्यप०।

**अर्कवेध ಅರ್ಕವೇಧ** (पु०) ತಾಳೀಶಪತ್ರೆ ಗಿಡ.

**अर्कव्रत ಅರ್ಕವ್ರತ** (न०) 1. ಮಾಘಶುಕ್ಲ ಸಪ್ತಮಿ (ರಥಸಪ್ತಮಿ) ಯ ದಿನ ಮಾಡುವ ಸೂರ್ಯನ ಪೂಜೆ. 2. ರಾಜನು ಪ್ರಜೆಗಳಿಂದ ಕಂದಾಯ (ತೆರಿಗೆ) ತೆಗೆದುಕೊಳ್ಳುವುದು. अर्कस्येव व्रतम्। [ಸೂರ್ಯನು ಲೋಕರಕ್ಷಣಾರ್ಥವಾಗಿ ಎಂಟು ತಿಂಗಳು ಕಾಲ ಭೂಮಿಯಿಂದ ನೀರನ್ನು ಎಳೆದುಕೊಂಡು ಆಮೇಲೆ ಅಧಿಕವಾಗಿ ಮಳೆಯನ್ನು ಸುರಿಸುವಂತೆ ರಾಜನು ಪ್ರಜೆಗಳ ಅಭಿವೃದ್ಧಿಗಾಗಿಯೇ ಪ್ರಜೆಗಳಿಂದ ಎಂಟು ತಿಂಗಳು ಕಾಲ (ಕಂತಿನ ರೂಪದಲ್ಲಿ) ಕಂದಾಯವನ್ನು ತೆಗೆದುಕೊಳ್ಳುವನು. ಇದಕ್ಕೆ ಅರ್ಕವ್ರತವೆಂದು ಹೆಸರು.] "अष्टौ मासान् यथादित्यः तोयं गृह्णाति रश्मिभिः। तथा हरेत्करं राष्ट्रान्नित्यमर्कव्रतं हितम्" मनु० ९-३०५। "सहस्रगुणमुत्स्रष्टुमादत्ते हि रसं रविः" रघु० १-१८।

**अर्काश्मन् ಅರ್ಕಾಶ್ಮನ್** (पु०) 1. ಸೂರ್ಯಕಾಂತ ಶಿಲೆ. 2. ಪದ್ಮರಾಗ, ಮಾಣಿಕ್ಯ.

**अर्केन्दुसंगम ಅರ್ಕೇಂದುಸಂಗಮ** (पु०) ಅಮಾವಾಸ್ಯೆ, ಸೂರ್ಯ ಚಂದ್ರರು ಒಂದೇ ರಾಶಿಯಲ್ಲಿ ಸೇರುವ ದಿನ. अर्केन्दू सङ्गच्छतोऽत्र सम्+गम्लृ (गतौ) "घ:" (३-३-११८)।

**अर्कोपल ಅರ್ಕೋಪಲ** (पु०) 1. ಸೂರ್ಯಕಾಂತ ಶಿಲೆ. 2. ಪದ್ಮರಾಗ, ಮಾಣಿಕ್ಯ.

**अर्क्य ಅರ್ಕ್ಯ** (वि०) ಪೂಜಿಸಲ್ಪಡುವ, ಪೂಜಿಸಲು ಯೋಗ್ಯವಾದ. अर्क (स्तवने) "ण्यत्" (३-१-१२४)।

**अर्गल ಅರ್ಗಳ** (स्त्रीन०) 1. ಅಗಳಿ, ಚಿಲಕ, ಲಾಳಮುಂಡಿಗೆ. 2. ಬಾಗಿಲು. अर्ज्यते — अर्ज (अर्जने) "कलच्" (उ० १-१०६)। कुत्वम् (७-३-५३)। "पुरार्गलादीर्घभुजो बुभोज" रघु० १८-४। (त्रि०) 3. ತರಂಗ, ಅಲೆ. "अर्गलस्त्रिषु कल्लोलेऽन्तर्दण्डावारयोर्नना" मेदि०।

**अर्गलिका ಅರ್ಗಳಿಕಾ** (स्त्री०) ಅಗಳಿ, ಚಿಲಕ, ಮರದ ಅಡ್ಡಪಟ್ಟಿ.

**अर्घ ಅರ್ಘ** (पु०) 1. ಬೆಲೆ, ಕ್ರಯ. अर्ह्यतेऽनेन — अर्ह (पूजायाम्) "घञ्" (३-३-१२१)। कुत्वम् (७-३-५३)। "मणिमुक्ताप्रवालानां लोहानां तान्तवस्य च। गन्धानां च रसानां च विद्यादर्घबलाबलम्" मनु० ९-३२९। 2. ಪೂಜೆ, ಪೂಜಾಕಾರ್ಯ. "स प्रत्यग्रैः कुटजकुसुमैः कल्पितार्घाय तस्मै" मेघ० १-४।

**अर्घ्य ಅರ್ಘ್ಯ** (न०) 1. ಪೂಜಾದ್ರವ್ಯ, ಪೂಜೆಗೆ ಬೇಕಾದ ಪತ್ರಪುಷ್ಪ ಮೊದಲಾದುದು. 2. ಪೂಜಾಸಂಬಂಧವಾದ ಉಪಚಾರಗಳಲ್ಲೊಂದು. अर्घायेदम् "यत्" (५-४-२५)। (वि०) 3. ಪೂಜಿಸಲ್ಪಡುವ, ಪೂಜೆಗೆ ಯೋಗ್ಯವಾದ. अर्ह्यते—अर्ह (पूजायाम्) "ण्यत्" (३-१-१२४)। कुत्वम् (७-३-५३)। "तानर्घ्यानर्घ्यमादाय दूरात् प्रत्युद्ययौ गिरिः" कुमा० ६-५०। "तमर्घ्यमर्घ्यादिकयादिपूरुषः" माघ० १-१४।

**अर्चक ಅರ್ಚಕ** (पु०) ಪೂಜಿಸುವವನು, ಆರಾಧಿಸುವವನು, ಆರಾಧಕ. अर्च (पूजायाम्) "ण्वुल्" (३-१-१३३)। "ब्रह्मचारी व्रती च स्याद्गुरुदेवद्विजार्चकः" मनु० ११-२२४। स्त्रियां **अर्चिका ಅರ್ಚಿಕಾ.**

**अर्चन ಅರ್ಚನ** (नं०) ಪೂಜೆ, ಆರಾಧನೆ. अर्च(पूजायाम्) "ल्युट्" (३-३-११५)। अर्च+णिच् "युच्" (३-३-१०७)। **अर्चना ಅರ್ಚನಾ.**

**अर्चनीय ಅರ್ಚನೀಯ**(वि०) ಪೂಜಾರ್ಹನಾದ, ಪೂಜೆಗೆ ಯೋಗ್ಯನಾದ, ಪೂಜಿಸಲ್ಪಡುವ. अर्च (पूजायाम्) "अनीयर्" (३-१-९६)। "अर्चनीयचरणाम्बुजे भवत्याततायिपदवीमुपेयुषाम्" याद० १७-११५।

**अर्चा ಅರ್ಚಾ** (स्त्री०) 1. ಪೂಜೆ, ಆರಾಧನೆ. अर्च (पूजायाम्) "अ:" (३-३-१०३)। 2. ಪ್ರತಿಮೆ, ವಿಗ್ರಹ, ಪೂಜಿಸಲ್ಪಡುವ ಮೂರ್ತಿ. "अर्चा पूजाप्रतिमयो:" वैज०। [ಪೂಜೆಗಾಗಿ ನಿರ್ಮಿತವಾದ ವಿಗ್ರಹಕ್ಕೆ ಅರ್ಚೆಯೆಂದು ಹೆಸರು. ಈ ವಿಗ್ರಹವು ಸ್ವಯಂವ್ಯಕ್ತ, ದೈವ, ಆರ್ಷ ಮತ್ತು ಮಾನುಷವೆಂದು ನಾಲ್ಕು ವಿಧ. (1) ಪುರಾಣಾದಿಗಳಲ್ಲಿ ತಾನಾಗಿ ಆವಿರ್ಭವಿಸಿದುದಾಗಿ ಹೇಳಲ್ಪಟ್ಟದ್ದು ಸ್ವಯಂವ್ಯಕ್ತ. (2) ದೇವತೆಗಳು ಪ್ರತಿಷ್ಠಿಸಿದುದು ದೈವ. (3) ಋಷ್ಯಾದಿ ಸಿದ್ಧಪುರುಷರು ಪ್ರತಿಷ್ಠೆ ಮಾಡಿದುದು ಆರ್ಷ. (4) ಮನುಷ್ಯರಿಂದ ಪ್ರತಿಷ್ಠಿಸಲ್ಪಟ್ಟುದು ಮಾನುಷ. ಈ ಅರ್ಚೆಯು ಪರವ್ಯೂಹಾದಿ ರೂಪದಿಂದ ಇರುವ ಮಹಾವಿಷ್ಣುವಿನ ಒಂದು ಪ್ರಕಾರ. (ಅವತಾರಗಳಲ್ಲೊಂದು). [ಪರ, ವ್ಯೂಹ, ಅಂತರ್ಯಾಮಿ, ವಿಭವ ಮತ್ತು ಅರ್ಚೆಗಳೆಂದು ಪರಮಾತ್ಮನು ಭಕ್ತಾನುಗ್ರಹಕ್ಕಾಗಿ ಐದು ವಿಧವಾಗಿ ಅವತಾರ ಹೊಂದುವನು ಎಂದು ಪಾಂಚರಾತ್ರ ಮತ್ತು ವೈಖಾನಸಾಗಮಗಳಲ್ಲಿ ಉಕ್ತವಾಗಿದೆ. ಶೈವಾಗಮದಲ್ಲಿ ಪರಮೇಶ್ವರನು ಬೇರ ಮತ್ತು ಲಿಂಗ ರೂಪದಲ್ಲಿದ್ದುಕೊಂಡು ಭಕ್ತರನ್ನು ಅನುಗ್ರಹಿಸುವುದಾಗಿ ಹೇಳಲ್ಪಟ್ಟಿದೆ. ವಿವರಕ್ಕೆ "बेर" ಮತ್ತು "लिङ्ग" ಪದಗಳಲ್ಲಿ ನೋಡಿ.] ಈ ಐದು ವಿಧ ಅವತಾರಗಳಲ್ಲಿ ಅರ್ಚಾವತಾರದಲ್ಲೇ ಭಕ್ತಾನುಗ್ರಹವು ಅತಿಶಯವಾಗಿ ತೋರುವುದು. ಪರಮಾತ್ಮನ ಭಕ್ತರ ಅನುಗ್ರಹಕ್ಕಾಗಿ ಅವರವರಿಗೆ ಇಷ್ಟವಾದ ಶಿಲೆ ಲೋಹಾದಿಗಳಲ್ಲಿ ರಾಮ, ಕೃಷ್ಣ, ಭೈರವ, ಆಂಜನೇಯ, ವೃಷಭ ಇತ್ಯಾದಿ ರೂಪಗಳಿಂದ ಅಪ್ರಾಕೃತ ದಿವ್ಯಮಂಗಳ ವಿಗ್ರಹವುಳ್ಳವನಾಗಿ ಮನೆ, ಗ್ರಾಮ, ನಗರ, ಬೆಟ್ಟ ಇತ್ಯಾದಿ ಸ್ಥಳಗಳಲ್ಲಿ ತನ್ನ ಭಕ್ತರಾದ ಮನುಷ್ಯರಿಗೆ ಗೋಚರನಾಗಿದ್ದುಕೊಂಡು ಸಕಲ ಜಗತ್ತಿಗೂ ಕಲ್ಯಾಣವುಂಟುಮಾಡುವನು.]

**अर्चि ಅರ್ಚಿ** (स्त्री०) ಬೆಂಕಿಯ ಉರಿ, ಜ್ವಾಲೆ. अर्च (पूजायाम्) "इन्" (उ० ४-११८)। "आसीदासन्ननिर्वाण: प्रदीपार्चिरिवोषसि" रघु० १२-१।

**अर्चिचयिषा ಅರ್ಚಿಚಯಿಷಾ** (स्त्री०) ಪೂಜಿಸಲು ಅಪೇಕ್ಷೆ, ಆರಾಧಿಸಲು ಇಚ್ಛೆ. अर्च (पूजायाम्)+णिच्+सन् "अ:" (३-३-१०२)।

**अर्चिचयिषु ಅರ್ಚಿಚಯಿಷು** (वि०) ಪೂಜಿಸಲು ಅಪೇಕ್ಷೆಯುಳ್ಳ, ಆರಾಧಿಸಲು ಇಷ್ಟವುಳ್ಳ. अर्चयितुमिच्छु:—अर्च (पूजायाम्) + णिच् + सन् "उ:" (३-२-१६८)। "यष्टुमिच्छसि पितॄन्न साम्प्रतं संवृतोऽर्चिचयिषुर्दिवौकस:" किरा० १३-६५।

**अर्चित ಅರ್ಚಿತ** (पु०) 1. ವಿಷ್ಣು. "अर्चिष्मानर्चित: कुम्भो विशुद्धात्मा विशोधन:" वि० स०। (वि०) 2. ಪೂಜಿಸಲ್ಪಡುವ, ಆರಾಧಿಸಲ್ಪಡುವ. अर्च (पूजायाम्) "क्त:" (३-२-१८८)। "अनर्घ्यमर्घ्येण तमद्रिनाथ: स्वर्गौकसामर्चितमर्चयित्वा" कुमा० १-५८। 3. ಪೂಜಿಸಲ್ಪಟ್ಟ. कर्म "क्त:" (३-२-१०२)।

**अर्चिष्मत् ಅರ್ಚಿಷ್ಮತ್** (पु०) 1. ವಿಷ್ಣು. "अर्चिष्मानर्चित: कुम्भ:" वि०स०। 2. ಸೂರ್ಯ. 3. ಅಗ್ನಿ, ಬೆಂಕಿ. अर्चिरस्यास्ति "मतुप्" (५-२-९४)। (वि०) 4. ಉರಿಯುತ್ತಿರುವ, ಪ್ರಕಾಶಮಾನವಾದ.

**अर्चिस् ಅರ್ಚಿಸ್** (पु०) 1. ಕಿರಣ, ರಶ್ಮಿ. 2. ಅಗ್ನಿ, ಬೆಂಕಿ. (नं०) 3. ಬೆಂಕಿಯ ಉರಿ, ಜ್ವಾಲೆ. अर्च (पूजायाम्) "इसि:" (उ० २-१०८)। 4. ಕಾಂತಿ, ಪ್ರಕಾಶ. "प्रशमादर्चिषामेतदनुद्गीर्णसुरायुधम्" कुमा० २-२०।

**अर्च्य ಅರ್ಚ್ಯ** (वि०) ಪೂಜಾರ್ಹ, ಪೂಜಿಸಲ್ಪಡುವ. अर्च (पूजायाम्) "ण्यत्" (३-१-१२४)। "मरुत्प्रयुक्ताश्च मरुत्सखाभं तमर्च्यमारादभिवर्तमानम्" रघु० २-१०।

**अर्जक ಅರ್ಜಕ** (पु०) 1. ಬಿಳಿಗಗ್ಗರೆ ಗಿಡ. अर्ज (अर्जने) "ण्वुल्" (३-१-१३३)। (वि०) 2. ಸಂಪಾದಿಸುವವನು.

**अर्जन ಅರ್ಜನ** (नं०) ಸಂಪಾದನೆ. अर्ज (प्रतियत्ने) "ल्युट्" (३-३-११५)।

**अर्जुन ಅರ್ಜುನ** (पु०) 1. ಪಾಂಡುವಿನ ಮಗನಾದ ಅರ್ಜುನ, ಕುಂತಿಯ ಪುತ್ರ. [ದುರ್ವಾಸಮಹರ್ಷಿಯು ಉಪದೇಶಿಸಿದ ಮಂತ್ರದ ಮಹಿಮೆಯಿಂದ ಇಂದ್ರನ ಅನುಗ್ರಹ ಪಡೆದ ಕುಂತಿಯಲ್ಲಿ ಅರ್ಜುನನು

ಹುಟ್ಟಿದನು. ಇವನಿಗೆ (1) ದ್ರೌಪದಿ, (2) ಸುಭದ್ರೆ, (3) ಉಲೂಪಿ ಮತ್ತು (4) ಚಿತ್ರಾಂಗದೆಯೆಂಬ ನಾಲ್ವರು ಪತ್ನಿಯರು. (1) ಶ್ರುತಕೀರ್ತಿ, (2) ಅಭಿಮನ್ಯು, (3) ಇರಾವಂತ ಮತ್ತು (4) ಬಭ್ರುವಾಹನನೆಂಬ ನಾಲ್ವರು ಮಕ್ಕಳು. ಇವನು ಮಹಾ ಪರಾಕ್ರಮಶಾಲಿಯಾಗಿ ದ್ರೋಣಾಚಾರ್ಯರಿಂದ ಧನುರ್ವಿದ್ಯೆಯನ್ನು ಕಲಿತು ಅವರ ಪ್ರಿಯ ಶಿಷ್ಯನಾದನು. ಈ ವಿದ್ಯೆಯ ಪ್ರಾವೀಣ್ಯದಿಂದ ಮತ್ಸ್ಯಯಂತ್ರವನ್ನು ಭೇದಿಸಿ ದ್ರೌಪದಿಯನ್ನು ಮದುವೆಯಾದನು. ಅಬುದ್ಧಿಪೂರ್ವಕವಾಗಿ (ಆಕಸ್ಮಿಕವಾಗಿ) ಪ್ರತಿಜ್ಞೆಯ ಉಲ್ಲಂಘನೆಯಿಂದ ಇವನು ಕೆಲವು ಕಾಲ ತೀರ್ಥಯಾತ್ರೆಯನ್ನು ಕೈಗೊಂಡು ಆ ಕಾಲದಲ್ಲಿ ಚಿತ್ರಾಂಗದೆಯನ್ನು ಮದುವೆಯಾಗಿ ಇರಾವಂತನೆಂಬ ಮಗನನ್ನೂ, ಉಲೂಪಿಯನ್ನು ಮದುವೆಯಾಗಿ ಬಭ್ರುವಾಹನನನ್ನೂ, ಸುಭದ್ರೆಯನ್ನು ಮದುವೆಯಾಗಿ ಅಭಿಮನ್ಯುವೆಂಬ ಪುತ್ರನನ್ನೂ ಪಡೆದನು. ಖಾಂಡವವನ ದಹನದಿಂದ ಪ್ರೀತನಾದ ಅಗ್ನಿಯಿಂದ ಗಾಂಡೀವ ಧನುಸ್ಸನ್ನು ಪಡೆದನು. ಕೆಲವು ಕಾಲ ದೇವಲೋಕದಲ್ಲಿದ್ದು ಚಿತ್ರಸೇನನೆಂಬ ಗಂಧರ್ವನಿಂದ ಗಾಂಧರ್ವ ವಿದ್ಯಾಭ್ಯಾಸ ಮಾಡಿದನು. ಕಿರಾತರೂಪಿಯಾದ ಪರಮೇಶ್ವರನೊಡನೆ ಯುದ್ಧಮಾಡಿ ಅನಂತರ ಪ್ರತ್ಯಕ್ಷನಾದ ಪರಮೇಶ್ವರನನ್ನು ಸ್ತೋತ್ರ ಮಾಡಿ ಪಾಶುಪತಾಸ್ತ್ರವನ್ನು ಪಡೆದನು. ನಿವಾತಕವಚ ಮತ್ತು ಕಾಲಕೇಯರನ್ನು ಸಂಹರಿಸಿದುದರಿಂದ ಇವನ ಪರಾಕ್ರಮಕ್ಕೆ ಮೆಚ್ಚಿ ಪುತ್ರವಾತ್ಸಲ್ಯದಿಂದ ಇಂದ್ರನು ಇವನಿಗೆ ಅಭೇದ್ಯವಾದ ಕವಚವನ್ನೂ ಕಿರೀಟವನ್ನೂ ಕೊಟ್ಟನು. ಇವನನ್ನು ಅಪೇಕ್ಷಿಸಿ ತಿರಸ್ಕರಿಸಲ್ಪಟ್ಟ ಊರ್ವಶಿಯಿಂದ "ನಪುಂಸಕನಾಗು" ಎಂಬ ಶಾಪ ಹೊಂದಿದನು. ಈ ಷಂಡವೇಷದಿಂದಲೇ ಬೃಹನ್ನಳೆಯೆಂಬ ಹೆಸರಿನಿಂದ ವಿರಾಟನಗರದಲ್ಲಿ ಅಜ್ಞಾತವಾಸ ಮಾಡಿದನು. ಉತ್ತರ ಗೋಗ್ರಹಣದಲ್ಲಿ ದ್ರೋಣ, ಅಶ್ವತ್ಥಾಮ ಮೊದಲಾದವರನ್ನು ಜಯಿಸಿ ಓಡಿಸಿದನು. ಶ್ರೀಕೃಷ್ಣನ ಸಹಾಯಪಡೆದು ದುಃಶಾಸನಾದಿಗಳನ್ನು ಲೀಲೆಯಿಂದ ಜಯಿಸಿದನು. ಯುದ್ಧದಲ್ಲಿ ಪರ್ಜನ್ಯಾಸ್ತ್ರ ಪ್ರಯೋಗದಿಂದ ಜಲವನ್ನು ತರಿಸಿ ಭೀಷ್ಮಾಚಾರ್ಯರ ಬಾಯಾರಿಕೆಯನ್ನು ಪರಿಹರಿಸಿದನು. ಶ್ರೀಕೃಷ್ಣನ ಸಾರಥ್ಯವನ್ನು ಪಡೆದು ಯುದ್ಧರಂಗಕ್ಕೆ ಬಂದಾಗ ಬಂಧುವರ್ಗವೆಲ್ಲವನ್ನೂ ಕೊಂದು ತಾನು ರಾಜ್ಯ ಸಂಪಾದಿಸಬೇಕಿಲ್ಲವೆಂದು ಯುದ್ಧವಿಮುಖನಾಗಲು ಶ್ರೀಕೃಷ್ಣನಿಂದ ಶ್ರೀಭಗವದ್ಗೀತೆಯ ಉಪದೇಶಹೊಂದಿ ಯುದ್ಧದಲ್ಲಿ ಅದ್ಭುತ ಜಯವನ್ನು ಪಡೆದನು. ಶಿಖಂಡಿಯನ್ನು ಮುಂದಿಟ್ಟು ಭೀಷ್ಮಾಚಾರ್ಯರನ್ನೂ ಬಾಣ ಪ್ರಯೋಗದಿಂದ ಕೆಡವಿ ಅವರಿಗೆ ಬಾಣಗಳಿಂದ ತಲೆದಿಂಬನ್ನು ಮಾಡಿಕೊಟ್ಟನು. ಕರ್ಣಾದಿಗಳನ್ನು ಸಂಹರಿಸಿ ಕೊನೆಗೆ ಅಶ್ವಮೇಧಯಾಗದ ಕುದುರೆಯೊಡನೆ ಹೊರಟು ಯುದ್ಧದಲ್ಲಿ ಬಭ್ರುವಾಹನನಿಂದ ಹತನಾಗಿ ಉಲೂಪಿಯು ತಂದ ಸಂಜೀವಿನೀ ಮಣಿಯಿಂದ ಬದುಕಿದನು. ಇತ್ಯಾದಿ, ಇತ್ಯಾದಿ. ಇವನಿಗೆ ಅರ್ಜುನ, ಫಲ್ಗುನ, ಜಿಷ್ಣು, ಕಿರೀಟಿ, ಶ್ವೇತವಾಹನ, ಬೀಭತ್ಸು, ವಿಜಯ, ಕೃಷ್ಣ, ಸವ್ಯಸಾಚಿ ಮತ್ತು ಧನಂಜಯ ನೆಂದು ಹತ್ತು ಹೆಸರು. "अर्जुन: फल्गुनो जिष्णु: किरीटी श्वेतवाहन:। बीभत्सुर्विजय: कृष्ण: सव्यसाची धनञ्जय:" भा० विरा० ४०-९। **ಅರ್ಜುನನ ದಶನಾಮ ನಿರ್ವಚನ:** ವಿರಾಟಪರ್ವ—೪೦ ನೆಯ ಅಧ್ಯಾಯ (ಮೇಲಿನ ಶ್ಲೋಕದಲ್ಲಿರುವ ಹೆಸರಿನ ಕ್ರಮದಲ್ಲಿ) (1) ಭೂಮಂಡಲದಲ್ಲಿ ನನ್ನ ಬಣ್ಣಕ್ಕೆ ಸರಿಯಾದ ಬಣ್ಣವು ಯಾರಲ್ಲಿಯೂ ದೊರೆಯುವುದಿಲ್ಲವಾದುದರಿಂದಲೂ ನನ್ನ ಕೆಲಸವೆಲ್ಲ ಶುದ್ಧವಾದುದರಿಂದಲೂ ನನಗೆ "ಅರ್ಜುನ"ನೆಂದು ಹೆಸರು. "पृथिव्यां चतुरन्तायां वर्णो मे दुर्लभ: सम:। करोमि कर्म शुक्लं च तस्मान्मामर्जुनं विदु:" २०। (2) ಆಕಾಶದಲ್ಲಿ ಫಲ್ಗುನೀ ನಕ್ಷತ್ರಗಳೆಂಬ ನಾಲ್ಕು ಚುಕ್ಕಿಗಳ ಪೈಕಿ ಉತ್ತರಫಲ್ಗುನಿಯೆಂಬ ಎರಡು ಚುಕ್ಕಿಗಳ ಸಮಸೂತ್ರದಲ್ಲಿ ನಾನು ಹುಟ್ಟಿದುದರಿಂದ ನನ್ನನ್ನು "ಫಲ್ಗುನ"ನೆಂದು ಕರೆಯುವರು. "उत्तराभ्यां फल्गुनीभ्यां नक्षत्राभ्यामहं दिवा। जातो हिमवत: पृष्ठे तेन मां फल्गुनं विदु:" १६। (3) ನಾನು ಯುದ್ಧದಲ್ಲಿ ಯಾರಿಗೂ ಸಿಕ್ಕದೆ ಯಾರಿಂದಲೂ ತಿರಸ್ಕರಿಸಲ್ಪಡದೆ ಇರುವುದರಿಂದಲೂ, ಇಂದ್ರನ ಮಗನಾದುದರಿಂದಲೂ ನಾನು "ಜಿಷ್ಣು"ವೆಂದು ಪ್ರಸಿದ್ಧನಾದೆನು. "अहं दुरापो दुर्धर्षो दमन: पाकशासनि:। तेन देवमनुष्येषु जिष्णुर्नामास्मि विश्रुत:" २१। (4) ನಿವಾತಕವಚಾದಿ ದಾನವರೊಡನೆ ನಾನು ಯುದ್ಧ ಮಾಡುತ್ತಿದ್ದಾಗ ಇಂದ್ರನು ಪ್ರಕಾಶಮಾನವಾದ ಕಿರೀಟವೊಂದನ್ನು ನನ್ನ ತಲೆಯ ಮೇಲೆ ಅಲಂಕರಿಸಿದನಾದುದರಿಂದ ನನ್ನನ್ನು "ಕಿರೀಟಿ"ಯೆನ್ನುವರು. "पुरा शक्रेण मे दत्तं युध्यतो दानवर्षभै:। किरीटं मूर्ध्नि सूर्याभं तेनाहुर्मां किरीटिनम्" १७। (5) ನಾನು ಯುದ್ಧಮಾಡುವಾಗ ಸುವರ್ಣಭೂಷಾಲಂಕೃತವಾದ ಶ್ವೇತಾಶ್ವಗಳು ನನ್ನ

ರಥಕ್ಕೆ ಕಟ್ಟಲ್ಪಡುವಕಾರಣ "ಶ್ವೇತವಾಹನ" ನೆನೆಸಿಕೊಂಡೆನು. "श्वेताः काञ्चनसन्नाहा रथे युज्यन्ति ये हयाः। संग्रामे युध्यमानस्य तेनाहं श्वेतवाहनः" १५। (6) ನಾನು ಯುದ್ಧದಲ್ಲಿ ಅಸಹ್ಯವಾದ ಕೆಲಸ ಮಾಡುವುದಿಲ್ಲವಾದುದರಿಂದ "ಬೀಭತ್ಸು" ವೆಂದು ನನಗೆ ಪ್ರಸಿದ್ಧಿಯುಂಟಾಯಿತು. "न कुर्यां कर्म बीभत्सं युध्यमानः कथंचन। तेन देवमनुष्येषु बीभत्सुरिति विश्रुतः" १८। (7) ಯುದ್ಧದಲ್ಲಿ ಶತ್ರುಗಳನ್ನು ಎದುರಿಸಿಹೋಗಿ ಅವರನ್ನು ಜಯಿಸದೆ ಹಿಂತಿರುಗುವುದಿಲ್ಲವಾದುದರಿಂದ ನನ್ನನ್ನು "ವಿಜಯ"ನೆನ್ನುವರು. "अभिप्रयामि संग्रामे यदहं युद्धदुर्मदान्। नाजित्वा विनिवर्तामि तेन मां विजयं विदुः" १४। (8) ನಾನು ಬಣ್ಣದಲ್ಲಿ ಕಪ್ಪಾದರೂ ನಿರ್ಮಲನಾದುದರಿಂದ ನಮ್ಮ ತಂದೆಯು ಪ್ರೀತಿಯಿಂದ ನನಗೆ "ಕೃಷ್ಣ"ನೆಂದು ಹೆಸರಿಟ್ಟನು. "कृष्ण इत्येव दशमं नाम चक्रे पिता मम। कृष्णावदातस्य सतः प्रियत्वाद्बालकस्य वै" २२। (9) ನಾನು ಎರಡು ಕೈಗಳಿಂದಲೂ ಗಾಂಡೀವವನ್ನು ಸೆಳೆಯುವುದರಲ್ಲಿ ಚತುರನಾದುದರಿಂದ ನನಗೆ "ಸವ್ಯಸಾಚಿ"ಯೆಂದು ಹೆಸರಾಯಿತು. "उभौ मे तुल्यकर्माणौ गाण्डीवस्य विकर्षणे। भुजौ मे भवतः सङ्ख्ये परसैन्यविनाशिनौ। तयोः सव्योऽधिकस्तस्मात्सव्यसाचीति मां विदुः" ३२, ३३। (10) ದೇಶವೆಲ್ಲವನ್ನೂ ಗೆದ್ದು ಧನವನ್ನು ಸಂಪಾದಿಸಿ ಅದರ ನಡುವೆ ಇರುವೆನಾದುದರಿಂದ ನನ್ನನ್ನು "ಧನಂಜಯ"ನೆಂದು ಕರೆಯುವರು. "सर्वान् जनपदान् जित्वा वित्तमादाय केवलम्। मध्ये धनस्य तिष्ठामि तेनाहुर्मां धनञ्जयम्" १३]। 2. ಕಾರ್ತವೀರ್ಯಾರ್ಜುನ, ಕೃತವೀರ್ಯನ ಮಗ; ಇವನಿಗೆ "ಸಹಸ್ರಾರ್ಜುನ"ನೆಂದೂ ಹೆಸರು. [ಕಾರ್ತವೀರ್ಯಾರ್ಜುನನು ದತ್ತಾತ್ರೇಯನ ವರಪ್ರಸಾದದಿಂದ ಸಾವಿರ ಬಾಹುಗಳನ್ನೂ ದಿವ್ಯವಾದ ಸುವರ್ಣ ರಥವನ್ನೂ ಪಡೆದನು. ಈತನು ಯುದ್ಧಕಾಲದಲ್ಲಿ ಮಾತ್ರ ಸಹಸ್ರಬಾಹುವಾಗಿಯೂ, ಉಳಿದ ಕಾಲದಲ್ಲಿ ದ್ವಿಬಾಹುವಾಗಿಯೂ ಜನರ ಕಣ್ಣಿಗೆ ಕಾಣಿಸಿಕೊಳ್ಳುತ್ತಿದ್ದನು. ಇವನು ಬಹಳ ಪರಾಕ್ರಮಿ ಮತ್ತು ವಿದ್ವಾಂಸನು. ಸುಮಾರು 85,000 ವರ್ಷಗಳ ಕಾಲ ಧರ್ಮದಿಂದ ರಾಜ್ಯನಾಳಿದನು. ಇವನ ರಾಜ್ಯದಲ್ಲಿ ಯಾವನಾದರೊಬ್ಬನು ಮನಸ್ಸಿನಲ್ಲಿ ಯಾವ ಅಕಾರ್ಯವನ್ನು ಮಾಡಲು ಯೋಚಿಸಿದರೂ ಆ ಕೂಡಲೆ ರಾಜನು (ಕಾರ್ತವೀರ್ಯನು) ಧನುರ್ಧಾರಿಯಾಗಿ ಎದುರಿಗೆ ಕಾಣಿಸಿಕೊಂಡು ಶಿಕ್ಷಿಸುತ್ತಿದ್ದನು. ಇವನು ಎಲ್ಲಾ ದೇಶಗಳನ್ನೂ ಗೆದ್ದು ಸಾವಿರಾರು ಯಾಗಗಳನ್ನು ಮಾಡಿರುತ್ತಾನೆ. ಇವನ ಸ್ಮರಣೆಮಾಡಿದರೆ ಕಳೆದು ಹೋದ ವಸ್ತುವೆಲ್ಲವೂ ಸಿಕ್ಕುವುವು. "कार्तवीर्यार्जुनो नाम राजा बाहुसहस्रवान्। तस्य स्मरणमात्रेण हृतं नष्टं च लभ्यते"। ಇಂದ್ರಾದಿ ಸಕಲ ದೇವತೆಗಳನ್ನೂ ಗೆದ್ದ ರಾವಣನನ್ನು ಈತನು ಒಂದು ಸಲ ಹಿಡಿದು ತನ್ನ ನಗರಕ್ಕೆ ತಂದು ಸೆರೆಮನೆಯಲ್ಲಿ ಕ್ರಿಮಿಕೀಟಗಳಂತೆ ಒಂದು ಮೂಲೆಯಲ್ಲಿ ಬಿಸಾಡಿದ್ದನು. ಒಂದು ಸಲ ಜಮದಗ್ನಿಯ ಧೇನುವನ್ನು ಬಲಾತ್ಕಾರವಾಗಿ ಎಳೆದುದರಿಂದ ಪರಶುರಾಮನಿಂದ ಇವನು ಹತನಾದನು.] 3. ಕೆಂಪು ಮತ್ತಿಮರ. अर्ज (अर्जने) "उनन्" (उ० २-५८)। "अनादराकृष्टमुलूखलं तद्यावर्जुनौ शैलनिभौ बभञ्ज" याद० ४-३७। 4. ತಾಯಿಯ ಏಕಮಾತ್ರ ಪುತ್ರ. 5. ನವಿಲು. "अर्जुनः ककुभे पार्थे कार्तवीर्यमयूरयोः। मातुरेकसुतेऽपि स्यात् पुल्लिङ्गो धवलेऽन्यवत्" मेदि०। (न०) 6. ತೃಣ, ಹುಲ್ಲು. 7. ಒಂದು ನೇತ್ರರೋಗ. (वि०) 8. ಬಿಳುಪಾದ, ಶುಭ್ರವಾದ. (स्त्री०)—नी—ನೀ. 9. ಹಸು, ಆಕಳು. 10. ಅನಿರುದ್ಧನ ಪತ್ನಿ, ಉಷಾದೇವಿ. 11. ಬಾಹುದಾ ನದಿ. 12. ತಲೆಹಿಡಕಿ, ಸೂಳೆಯನ್ನು ವಿಟನೊಡನೆ ಕೂಡಿಸುವ ಹೆಂಗಸು. "नपुंसकं तृणे नेत्रगदे चाप्यर्जुनी गवि। उषायां बाहुदानद्यां कुट्टिन्यामपि च क्वचित्" मेदि०।

**अर्ण ಅರ್ಣ** (पुं०) ವರ್ಣ, ಅಕ್ಷರ. "अस्त्रियौ वर्णमर्णं च" वैज०।

**अर्णव ಅರ್ಣವ** (पु०) ಸಮುದ್ರ, ಕಡಲು. अर्णांस्यत्र सन्ति—अर्णस् "वः" सलोपश्च (वा० ५-२-१०९)। "प्रवृद्धमन्द्राम्बुदधीरनादः कृष्णार्णवाभ्यर्णचरैकहंसः" माघ० ३-२१। "यादोरत्नैरिवार्णवः" रघु० १-१६।

**अर्णस् ಅರ್ಣಸ್** (न०) ಜಲ, ನೀರು. ऋ (गतौ) "असुन्" नुट् च (उ० ४-१९६)। "गाङ्गौघनिर्भर्त्सितशम्भुकन्धरासवर्णमर्णः कथमन्यथास्य तत्" माघ० १२-६९।

**अर्णस्वत् ಅರ್ಣಸ್ವತ್** (पु०) 1. ಸಮುದ್ರ, ಕಡಲು. अर्णांसि सन्त्यत्र "मतुप्" (५-२-९४)। (वि०) 2. ಜಲಸಹಿತವಾದ, ನೀರಿನಿಂದಕೂಡಿದ.

**अर्णोद** ಅರ್ಣೋದ (पुं०) 1. ಮೇಘ, ಮೋಡ. 2. ಕೊನ್ನಾರಿಗೆಡ್ಡೆ, ಮುಸ್ತಕ. अर्णांसि ददाति — डुदाञ् (दाने) "कः" (३-२-३)। (वि०) 3. ನೀರನ್ನು ಕೊಡುವ.

**अर्णोभव** ಅರ್ಣೋಭವ (पुं०) 1. ಶಂಖ. (वि०) 2. ನೀರಿನಲ್ಲಿ ಹುಟ್ಟಿದ. अर्णसि भवः।

**अर्तन** ಅರ್ತನ (नं०) 1. ಜುಗುಪ್ಸೆ. 2. ನಿಂದೆ, ಬೈಗಳು, ವಾಗ್ದಂಡನೆ. ऋति (सौत्रधातुः) "ल्युट्" (३-३-११५)।

**अर्ति** ಅರ್ತಿ (स्त्री०) 1. ಪೀಡೆ, ಬಾಧೆ. 2. ಧನುಸ್ಸಿನ ಅಗ್ರಭಾಗ, ಬಿಲ್ಲಿನ ತುದಿ. अर्द (हिंसायाम्) "क्तिन्" (वा० ३-३-९४)। "नान्नं वाञ्छति नो निद्रामुपैत्यर्तिनिपीडितः" सुश्रुत०।

**अर्तिका** ಅರ್ತಿಕಾ (स्त्री०) ಜ್ಯೇಷ್ಠ ಸಹೋದರಿ, ಅಕ್ಕ. (ನಾಟಕದಲ್ಲಿ ಮಾತ್ರ ಪ್ರಯೋಗ.)

**अर्थ** ಅರ್ಥ (पुं०) 1. ದ್ರವ್ಯ, ಧನ, ಹಣ, ಐಶ್ವರ್ಯ. अर्थ्यते — अर्थ (उपयाच्ञायाम्) "घञ्" (३-३-१९)। "त्यागाय संभृतार्थानां सत्याय मितभाषिणाम्" रघु० १-७। "निष्क्रष्टुमर्थं चकमे कुबेरात्" रघु० ५-२६। 2. ವಿಷಯ, ಉದ್ದೇಶ, ಗುರಿ. "न हि बुद्धिगुणेनैव सुहृदामर्थदर्शनम्" माल० ४-६। 3. ಶಬ್ದಶಕ್ತಿಯಿಂದ ತಿಳಿಯಿಸಲ್ಪಡುವ ಅರ್ಥ, ಶಬ್ದವು ಅಭಿಧಾದಿಶಕ್ತಿಗಳಿಂದ ತಿಳಿಯಿಸುವ ಅರ್ಥ. [ವಾಚ್ಯ, ಲಕ್ಷ್ಯ ಮತ್ತು ವ್ಯಂಗ್ಯಗಳೆಂದು ಅರ್ಥವು ಮೂರು ವಿಧವಾಗಿ ಶಬ್ದದಿಂದ ಬೋಧಿಸಲ್ಪಡುವುದು. ವಿವರಕ್ಕೆ ಆಯಾ ಪದಗಳಲ್ಲಿ ನೋಡಿ.] "अर्थो वाच्यश्च लक्ष्यश्च व्यङ्ग्यश्चेति त्रिधा मतः। वाच्योऽर्थोऽभिधया बोध्यो लक्ष्यो लक्षणया मतः। व्यङ्ग्यो व्यञ्जनया ताः स्युः तिस्रः शब्दस्य शक्तयः" सा० द० २-२, ३। "वागर्थाविव संपृक्तौ वागर्थप्रतिपत्तये" रघु० १-१। 4. ವಸ್ತು, ಪದಾರ್ಥ. "अर्थो हि कन्या परकीय एव" शाकु० ४-२१। 5. ಕಾರಣ, ನಿಮಿತ್ತ. "तद्गच्छ सिद्धयै कुरु देवकार्यमर्थोऽयमर्थान्तरलभ्य एव" कुमा० ३-१८। 6. ನಿವೃತ್ತಿ, ತಡೆ, ಅಡ್ಡಿ. "मशकार्थो धूमः"। 7. ಯಾಚನೆ, ಬೇಡಿಕೆ. 8. ವಿಷ್ಣು. "अर्थोऽनर्थो महाकोशः" वि० स०। 9. ಲಗ್ನದಿಂದ ಎರಡನೆಯ ಸ್ಥಾನ. 10. ಫಲ, ಪರಿಣಾಮ. 11. ಅಪೇಕ್ಷೆ, ಅಭಿಲಾಷೆ. 12. ನಿಜಸ್ಥಿತಿ, ವಸ್ತುಸ್ವಭಾವ. 13. ಪ್ರಕಾರ, ವಿಧ, ಬಗೆ. 14. ವಿಷಯ, ಪ್ರತಿಪಾದನೆಯ ವಸ್ತು. "तया भवतोऽविनयमन्तरेण परिगृहीतार्था कृता देवी" माल० ४। 15. ಪ್ರಯೋಜನ, ಕಾರ್ಯ. "सेना परिच्छदस्तस्य द्वयमेवार्थसाधनम्" रघु० १-१९। 16. ರಾಜನ ತಂತ್ರಾವಾಪಗಳು. (ಸ್ವಪರರಾಷ್ಟ್ರಗಳ ಚಿಂತೆ.) 17. ವ್ಯವಹಾರ. 18. ಶಾಸ್ತ್ರ. "अर्थः प्रकारे विषये व्यवहारे प्रयोजने। अभिधेये धने शास्त्रे वस्तुहेतुनिवृत्तिषु" नानार्थर०।

**अर्थगत** ಅರ್ಥಗತ (पुं०) 1. ಅರ್ಥದೋಷ, ಅರ್ಥದಲ್ಲಿರುವ (ಕಾವ್ಯ) ದೋಷ. अपुष्टत्वम्, दुष्क्रमता, ग्राम्यत्वम्, व्याहतत्वम्, अश्लीलत्वम्, कष्टत्वम्, अनवीकृतत्वम्, निर्हेतुत्वम्, प्रकाशितविरुद्धत्वम्, सन्दिग्धत्वम्, पुनरुक्तत्वम् ಮುಂತಾದುವು ಅರ್ಥದೋಷಗಳು. सा० द० ७-९-१२। (वि०) 2. ಅರ್ಥದಲ್ಲಿರುವ.

**अर्थगौरव** ಅರ್ಥಗೌರವ (नं०) ಅರ್ಥಗಾಂಭೀರ್ಯ, ಗಂಭೀರವಾದ ಬಹಳ ಅರ್ಥಗಳಿಂದ ಕೂಡಿರುವಿಕೆ. अर्थस्य गौरवम्। "स्फुटता न पदैरपाकृता न च न स्वीकृतमर्थगौरवम्" किरा० २-२७।

**अर्थघ्न** ಅರ್ಥಘ್ನ (वि०) ಕಾರ್ಯವನ್ನು ನಾಶಪಡಿಸುವ. अर्थं हन्ति — हन (हिंसागत्योः) "कः" (वा० ३-२-५)। स्त्रियां — घ्नी — ಘ್ನೀ. "व्याधिता वाविवेत्तव्या हिंस्रार्थघ्नी च सर्वदा" मनु० ९-८०।

**अर्थचिन्ता** ಅರ್ಥಚಿಂತಾ (स्त्री०) 1. ರಾಜನ ತಂತ್ರಾವಾಪ ರೂಪವಾದ ಚಿಂತೆ. (ತನ್ನ ಮತ್ತು ಪರರಾಷ್ಟ್ರಗಳ ಚಿಂತೆ.) 2. ದ್ರವ್ಯಚಿಂತೆ. 3. ಕಾರ್ಯಚಿಂತೆ.

**अर्थज्ञ** ಅರ್ಥಜ್ಞ (वि०) ಪ್ರಯೋಜನವನ್ನು ಅರಿತಿರುವ, ಕಾರ್ಯಸ್ವರೂಪವನ್ನು ತಿಳಿದಿರುವ. अर्थं जानाति—ज्ञा (अवबोधने) "कः" (३-२-३)।

**अर्थतस्** ಅರ್ಥತಸ್ (अव्य०) 1. ಅರ್ಥಾನುಸಾರವಾಗಿ. 2. ಅರ್ಥದಿಂದ. अर्थ "तसिः" (वा० ५-४-४४)। "यत्प्रौढित्वमुदारता च वचसां यच्चार्थतो गौरवम्" मालती० १-१०। 3. ನಿಜವಾಗಿ, ವಸ್ತುಸ್ವಭಾವದಿಂದ. "आकाशसाम्यं दधुरम्बराणि न नामतः केवलमर्थतोऽपि" माघ० ३-५६। 4. ನಿಮಿತ್ತದಿಂದ, ಕಾರಣದಿಂದ. 5. ಧನಕ್ಕಾಗಿ, ಹಣಕ್ಕೋಸ್ಕರ. "ऐश्वर्यादनपेतमीश्वरमयं लोकोऽर्थतः सेवते" मुद्रा० १-१४।

**अर्थद** ಅರ್ಥದ (पुं०) 1. ಕುಬೇರ. 2. ಶಿಷ್ಯ, ಗುರುವನ್ನು ಗುರುದಕ್ಷಿಣೆಯಿಂದ ಸಂತೋಷಪಡಿಸುವ ವಿದ್ಯಾರ್ಥಿ. (वि०) 3. ಅರ್ಥವನ್ನು ಅರ್ಪಿಸುವ, ಹಣವನ್ನು

ಕೊಡುವ. अर्थं ददाति—डु दाञ् (दाने) "कः" (३-२-३)। "आप्तः शक्तोर्थदः साधुः स्वोऽध्याप्या दश धर्मतः" मनु० २-१०९।

**अर्थदर्शन** ಅರ್ಥದರ್ಶನ (न०) 1. ಕಾರ್ಯಜ್ಞಾನ, ಕಾರ್ಯಸ್ವರೂಪದ ತಿಳಿವಳಿಕೆ. 2. ವಸ್ತುವಿನ ತೋರುವಿಕೆ. अर्थस्य दर्शनम्। "सुकृतः परिशुद्ध आगमः कुरुते दीप इवार्थदर्शनम्" किरा० २-३३।

**अर्थदोष** ಅರ್ಥದೋಷ (पु०) "अर्थगत" ಪದದ 1 ನೆಯ ಅರ್ಥ.

**अर्थना** ಅರ್ಥನಾ (स्त्री०) ಯಾಚನೆ, ಬೇಡಿಕೆ, ಭಿಕ್ಷೆ. अर्थ (याच्ञायाम्) + णिच् "युच्" (३-३-१०७)। "अर्थना मयि भवद्भिरिवास्यै कर्तुमर्हति मयापि भवत्सु" नैष० ५-११२।

**अर्थपति** ಅರ್ಥಪತಿ (पु०) 1. ರಾಜ, ದೊರೆ. अर्थानां पतिः। "अर्घ्यमर्घ्यपतिर्वाचमाददे वदतां वरः" रघु० १-५९। "किञ्चिद्विहस्यार्थपतिं बभाषे" रघु० २-४६। 2. ಕುಬೇರ, ಧನದ ಅಧಿಪತಿ.

**अर्थप्रकृति** ಅರ್ಥಪ್ರಕೃತಿ (स्त्री०) ಪ್ರಧಾನಕಾರ್ಯದ ಕಾರಣ, ಮುಖ್ಯ ಪ್ರಯೋಜನದ ಹೇತು. [ನಾಟಕದಲ್ಲಿ ಪ್ರಧಾನಫಲಕ್ಕೆ ಕಾರಣಭೂತವಾದ ಬೀಜ, ಬಿಂದು, ಪತಾಕಾ, ಪ್ರಕರೀ ಮತ್ತು ಕಾರ್ಯಗಳೆಂದು ಐದು ಅರ್ಥಪ್ರಕೃತಿಗಳು ಇರುವುವು. ಇವು ಆರಂಭ, ಯತ್ನ, ಪ್ರಾಪ್ತ್ಯಾಶಾ, ನಿಯತಾಪ್ತಿ ಮತ್ತು ಫಲಾಗಮಗಳೆಂಬ ಐದು ಅವಸ್ಥೆಗಳೊಡನೆ ಸೇರಿ ಕ್ರಮವಾಗಿ ಮುಖ, ಪ್ರತಿಮುಖ, ಗರ್ಭ, ಅವಮರ್ಶ ಮತ್ತು ನಿರ್ವಹಣಗಳೆಂದು ಐದು ಸಂಧಿಗಳಾಗುವುವು.] "बीजबिन्दु-पताकाख्यप्रकरीकार्यलक्षणाः। आरम्भयत्नप्राप्त्याशा-नियताप्तिफलागमाः। अर्थप्रकृतयः पञ्च पञ्चावस्था-समन्विताः। यथासंख्येन जायन्ते मुखाद्याः पञ्च सन्धयः" दशरू०।

**अर्थप्रयोग** ಅರ್ಥಪ್ರಯೋಗ (पु०) ರಾಜ್ಯಾಡಳಿತ, ಸರ್ಕಾರವನ್ನು ನಡೆಸುವುದು, ಸ್ವಪರರಾಷ್ಟ್ರಗಳ ವಿಷಯಗಳನ್ನು ಚೆನ್ನಾಗಿ ತಿಳಿದುಕೊಂಡು ವ್ಯವಹಾರ ನಡೆಸುವುದು. 2. ಸಾಲಕೊಡುವುದು ಮತ್ತು ವ್ಯಾಪಾರ ಇವುಗಳಿಂದ ಧನವನ್ನು ಹೆಚ್ಚಿಸುವ ಉದ್ಯೋಗ, ಬಡ್ಡಿ ಸಂಪಾದನೆಗಾಗಿ ಸಾಲಕೊಡುವುದು.

**अर्थप्राप्त** ಅರ್ಥಪ್ರಾಪ್ತ (वि०) 1. ಅರ್ಥಲಬ್ಧವಾದ, ಉಪಾತ್ತ ಶಬ್ದದಿಂದ ತಿಳಿಯದೆ ಅದರ ಅರ್ಥದಿಂದ ತಿಳಿಯಲ್ಪಟ್ಟ. 2. ಕಾರ್ಯಾಂತರದಿಂದ ಲಬ್ಧವಾದ, ಬೇರೆ ಕಾರ್ಯದ ಸಂದರ್ಭದಿಂದ ಒದಗಿದ.

**अर्थवत्** ಅರ್ಥವತ್ (वि०) 1. ಅರ್ಥದಿಂದ ಕೂಡಿದ, ಅರ್ಥಗರ್ಭಿತವಾದ. अर्थोऽस्यास्ति "मतुप्"(५-२-९४)। 2. ಧನಿಕ, ಹಣವಂತ, ಐಶ್ವರ್ಯದಿಂದ ಕೂಡಿದ. "तेनार्थवान् लोभपराङ्मुखेन तेन घ्नता विघ्नभयं क्रियावान्" रघु० १४-२३। 3. ಪ್ರಯೋಜನಸಹಿತವಾದ, ಫಲದಿಂದ ಕೂಡಿದ, ಸಫಲವಾದ. स्त्रियां "ङीप्" (४-१-४)। –वती – ವತೀ. "करोति योऽशेष-जनातिरिक्तां संभावनामर्थवतीं क्रियाभिः" किरा० ३-५१। (अव्य०)4. ಅರ್ಥದಂತೆ, ಅರ್ಥಕ್ಕೆ ಸರಿಯಾಗಿ. 5. ಕಾರ್ಯಕ್ಕೆ ಅನುಸಾರವಾಗಿ. अर्थ "वतिः" (५-१-११५)।

**अर्थवाद** ಅರ್ಥವಾದ (पु०) 1. ಸ್ತುತಿವಾಕ್ಯ, ಹೊಗಳಿಕೆಯ ಮಾತು, ಪ್ರಶಂಸಾವಚನ. 2. ನಿಂದಾವಚನ. अर्थस्य प्रयोजनस्य वादः। ಅರ್ಥವಾದವು ಸ್ವಾರ್ಥಪ್ರತಿಪಾದನೆಯಲ್ಲಿ ಪ್ರಯೋಜನಹೊಂದದೆ ಲಕ್ಷಣೆಯಿಂದ ವಿಧ್ಯರ್ಥದ ಪ್ರಶಂಸೆ ಅಥವಾ ನಿಂದೆಯ ಮೂಲಕ ಪುರುಷನನ್ನು ಕಾರ್ಯದಲ್ಲಿ ಜಾಗ್ರತೆಯಾಗಿ ಪ್ರವರ್ತಿಸುವಂತೆಯೂ ಅಥವಾ ತೊಡಗದಂತೆಯೂ ಮಾಡುವುದು. ಇದರ ಪ್ರಶಂಸಾ ಅಥವಾ ನಿಂದಾಪರವಾದ ವಾಕ್ಯಕ್ಕೆ ಅರ್ಥವಾದವೆಂದು ಹೆಸರು. "ओदनकामस्तण्डुलं पचेत, तृप्तिकामस्तण्डुलौदनं भुञ्जीत" ಇತ್ಯಾದಿ ಪಾಕಕರಣರೂಪವಾದ ವಿಧ್ಯರ್ಥಕ್ಕೆ "तण्डुलपाक ऋषिभिः पूर्वं स्वर्गाद्यर्थं कृतः, ओदनममृतम्" ಇತ್ಯಾದಿ ವಾಕ್ಯವು ಪ್ರಶಂಸಾರೂಪವಾಗಿದ್ದು ಪಾಕಕಾರ್ಯದಲ್ಲಿ ಪ್ರವರ್ತಿಸುವಂತೆ ಮಾಡುವುದು. ಮತ್ತು ಇದು ನಿಂದೆಯ ಮೂಲಕ ನಿಷಿದ್ಧವಾದ ಕಾರ್ಯದಲ್ಲಿ ತೊಡಗದಂತೆ ಮಾಡುವುದು. "कफज्वरपीडितो दुग्धं न पिबेत्" ಇತ್ಯಾದಿ ದುಗ್ಧಪಾನ ನಿಷೇಧರೂಪವಾದ ವಿಧ್ಯರ್ಥಕ್ಕೆ "पशुभिर्भक्षितेनापथ्यतृणादिना दुग्धं जन्यते, तच्च विषरूपम्" ಇತ್ಯಾದಿ ವಾಕ್ಯವು ನಿಂದಾರೂಪವಾಗಿದ್ದು ಪಾನಕಾರ್ಯದಲ್ಲಿ ಪ್ರವರ್ತಿಸದಂತೆ ಮಾಡುವುದು. ಈ ಅರ್ಥವಾದವು (1) गुणवादः, (2) अनुवादः ಮತ್ತು (3) भूतार्थवादः ಎಂದು ಮೂರು ವಿಧ. ವಿಶೇಷ್ಯ ವಿಶೇಷಣಗಳಿಗೆ ಸಾಮಾನಾಧಿಕರಣ್ಯದಿಂದ ಅನ್ವಯಕ್ಕೆ ಬಾಧೆ (ವಿರೋಧ) ಬಂದಲ್ಲಿ ಗುಣವಾದವೆನಿಸುವುದು. "सिंहो माणवकः"। ಪ್ರಮಾಣಾಂತರದಿಂದ ವಿಷಯವು ಸಿದ್ಧವಾದಲ್ಲಿ ಅನುವಾದವೆನಿಸುವುದು. "नान्तरिक्षे

अग्निश्चेतव्यः" "अग्निर्हिमस्य भेषजम्"। ವಿರೋಧ ಮತ್ತು ಪ್ರಮಾಣಾಂತರದಿಂದ ಸಿದ್ಧಿ ಇವುಗಳಿಲ್ಲದಿದ್ದಲ್ಲಿ (ಸಿದ್ಧವಾದ ಅರ್ಥವನ್ನು ಹೇಳುವಲ್ಲಿ) ಭೂತಾರ್ಥವಾದವು. "इन्द्रो वृत्रहन्" ಇತ್ಯಾದಿ. "विरोधे गुणवादः स्यादनुवादोऽवधारिते। भूतार्थवादस्तद्धानावर्थवादस्त्रिधा मतः"॥ 3. ಗ್ರಂಥದ ತಾತ್ಪರ್ಯವನ್ನು ನಿರ್ಣಯಿಸುವ ಆರು ಲಿಂಗ (ಉಪಕರಣ) ಗಳಲ್ಲೊಂದು. "उपक्रमोपसंहारावभ्यासोऽपूर्वताफलम्। अर्थवादोपपत्ती च हेतुस्तात्पर्यनिर्णये"॥

**अर्थविद्** ಅರ್ಥವಿದ್ (ವಿ०) 1. ಕಾರ್ಯಜ್ಞ, ಕಾರ್ಯದ ಸ್ವರೂಪವನ್ನು ಬಲ್ಲವನು, ಚತುರ, ಬುದ್ಧಿವಂತ. अर्थं वेत्ति—विद (ज्ञाने) "क्विप्" (३-२-६१)। 2. ಅರ್ಥವನ್ನು ಬಲ್ಲವನು, ಶಬ್ದಾರ್ಥವನ್ನು ತಿಳಿದವನು. "अवेक्ष्य धातोर्गमनार्थमर्थविच्चकार नाम्ना रघुमात्मसंभवम्" रघु० ३-२१।

**अर्थवृद्धि** ಅರ್ಥವೃದ್ಧಿ (ಸ್ತ್ರೀ०) ಧನವೃದ್ಧಿ, ಐಶ್ವರ್ಯವು ಅಧಿಕವಾಗುವಿಕೆ.

**अर्थव्यय** ಅರ್ಥವ್ಯಯ (ಪು०) ಹಣದ ಖರ್ಚು, ಹಣದ ವೆಚ್ಚ.

**अर्थव्ययज्ञ** ಅರ್ಥವ್ಯಯಜ್ಞ (ವಿ०) ಕಾಲ ದೇಶ ಮತ್ತು ಪಾತ್ರಾಪಾತ್ರಗಳನ್ನು ವಿಮರ್ಶಿಸಿ ಹಣವನ್ನು ಖರ್ಚು ಮಾಡುವವನು, ಹಣದ ಖರ್ಚಿನ ಕ್ರಮವನ್ನರಿತವನು.

**अर्थशास्त्र** ಅರ್ಥಶಾಸ್ತ್ರ (ನ०) 1. ನೀತಿಶಾಸ್ತ್ರ, ರಾಜನೀತಿ, ದಂಡನೀತಿ. अर्थस्य धनादेः प्रापकं शास्त्रम्। "इह खलु अर्थशास्त्रकाराः त्रिविधां सिद्धिमुपवर्णयन्ति" मुद्रा० ३। 2. ಮಂತ್ರ ತಂತ್ರಗಳ ಪ್ರಯೋಗದಿಂದ ಮಾಡುವ ಹಿಂಸಾಕೃತ್ಯ (ಮಾಟ, ಶೂನ್ಯ) ಗಳನ್ನು ನಿರೂಪಿಸುವ ಶಾಸ್ತ್ರ.

**अर्थशौच** ಅರ್ಥಶೌಚ (ನ०) ದ್ರವ್ಯಶುದ್ಧಿ, ನ್ಯಾಯ ಮಾರ್ಗದಿಂದ ಸಂಪಾದಿಸಿದ ಧನದ ಪರಿಶುದ್ಧತೆ. "सर्वेषामेव शौचानामर्थशौचं परं स्मृतम्" मनु० ५-१०६।

**अर्थसंग्रह** ಅರ್ಥಸಂಗ್ರಹ (ಪು०) ಹಣದ ಸಂಪಾದನೆ, ಹಣದ ಕೂಡಿಕೆ, ಧನದ ಶೇಖರಣೆ.

**अर्थसमाज** ಅರ್ಥಸಮಾಜ (ಪು०) 1. ಹಣದ ರಾಶಿ. 2. ಅನೇಕಾರ್ಥಗಳ ಗುಂಪು. 3. ಕಾರಣಗಳ ಸಮೂಹ. ಅನೇಕ ಕಾರಣಗಳಿಂದ ಉಂಟಾಗುವ ಒಂದು ಕಾರ್ಯವು ಯಾವುದೊಂದು ಪ್ರತ್ಯೇಕ ಕಾರಣಕ್ಕೂ ಸಂಬಂಧಪಡುವುದಿಲ್ಲ. ಉದಾ: नीलघटत्वम्। ಇಲ್ಲಿ ಘಟತ್ವವು ದಂಡ ಮೊದಲಾದುವುಗಳ ಕಾರ್ಯ. ನೀಲತ್ವವು ನೀಲಕಪಾಲದ್ವಯದ ಕಾರ್ಯ. ಹೀಗೆ ನೀಲತ್ವವೂ ಘಟತ್ವವೂ ಬೇರೆ ಬೇರೆ ಕಾರಣಜನ್ಯವಾದುದರಿಂದ ನೀಲಘಟತ್ವವು ಯಾವುದೊಂದು ಕಾರಣದಿಂದಲೂ ಹುಟ್ಟಿಲ್ಲ. ಆದುದರಿಂದ ನೀಲಘಟತ್ವವು ಅರ್ಥಸಮಾಜಗ್ರಸ್ತವು.

**अर्थसमाहार** ಅರ್ಥಸಮಾಹಾರ (ಪು०) 1. ಹಣದ ಸಂಪಾದನೆ. 2. ನಿಧಿ, ನಿಕ್ಷೇಪ, ಹಣದ ಕೂಡಿಕೆ.

**अर्थसिद्ध** ಅರ್ಥಸಿದ್ಧ (ವಿ०) 1. ಉಪಾತ್ತವಾದ ಶಬ್ದಗಳ ಶಕ್ತಿಯಿಂದ ಉಂಟಾಗದೆ ಪೂರ್ವೋತ್ತರ ಸಂಬಂಧ (ಸನ್ನಿವೇಶದ ಔಚಿತ್ಯ) ದಿಂದ ಸಿದ್ಧವಾದ, ಅನ್ವಯ ಲಬ್ಧವಾದ. 2. ಪ್ರಯೋಜನ (ಫಲ) ವನ್ನು ಪಡೆದ. 3. ಧನವನ್ನು ಪಡೆದ.

**अर्थसिद्धि** ಅರ್ಥಸಿದ್ಧಿ (ಸ್ತ್ರೀ०) ಕಾರ್ಯಸಿದ್ಧಿ, ಕಾರ್ಯವು ಕೈಗೂಡುವಿಕೆ. अर्थस्य कार्यस्य सिद्धिः। "अर्थसिद्धये हरिश्रेष्ठ गच्छ सौम्य यथासुखम्" रामा०।

**अर्थहर** ಅರ್ಥಹರ (ವಿ०) ಹಣವನ್ನು ಪಡೆಯುವವನು, ಹಿರಿಯರಿಂದ ಆಸ್ತಿಯನ್ನು ತೆಗೆದುಕೊಳ್ಳುವವನು. अर्थं हरति—हृञ् (हरणे) "अच्" (३-२-९)।

**अर्थहीन** ಅರ್ಥಹೀನ (ವಿ०) 1. ದರಿದ್ರ, ಧನಹೀನ, ಬಡವ. अर्थेन हीनः। 2. ಅರ್ಥವಿಲ್ಲದ (ಶಬ್ದ).

**अर्थागम** ಅರ್ಥಾಗಮ (ಪು०) 1. ಅರ್ಥಲಾಭ, ಧನಲಾಭ, ವರಮಾನ. अर्थस्यागमः। "अर्थागमो नित्यमरोगिता च" हितो०। 2. ಸಂದರ್ಭವಿಶೇಷದಿಂದ ಮತ್ತೊಂದು ಅರ್ಥವುಂಟಾಗುವಿಕೆ. 3. ದ್ರವ್ಯ ಸಂಪಾದನೆಗೆ ಕಾರಣವಾದ ವ್ಯಾಪಾರ. अर्थं आगम्यतेऽनेन।

**अर्थान्तर** ಅರ್ಥಾಂತರ (ನ०) 1. ಬೇರೆ ಅರ್ಥ. 2. ಬೇರೊಂದು ಕಾರಣ. अन्योऽर्थः। "तद्गच्छ सिद्धयै कुरु देवकार्यमर्थोऽयमर्थान्तरलभ्य एव" कुमा० ३-१८। 3. ತರ್ಕಶಾಸ್ತ್ರದಲ್ಲಿ ಉಕ್ತವಾದ ಒಂದು ದೋಷ, ನಡೆಸಿದ ಪ್ರಯತ್ನದಿಂದ ಪ್ರಕೃತ ಕಾರ್ಯ ಸಿದ್ಧಿಸದೆ ಬೇರೊಂದು ಕಾರ್ಯವು ಸಿದ್ಧಿಸುವಿಕೆ.

**अर्थान्तरन्यास** ಅರ್ಥಾಂತರನ್ಯಾಸ (ಪು०) ಅರ್ಥಾಲಂಕಾರದ ಒಂದು ಭೇದ, ಒಂದು ಅರ್ಥವು ಸಿದ್ಧಿಸುವುದಕ್ಕಾಗಿ (ದೃಢಪಡುವುದಕ್ಕಾಗಿ) ಅದರ ಸಮರ್ಥನರೂಪವಾದ ಮತ್ತೊಂದು ಅರ್ಥವನ್ನು ಹೇಳುವುದು.

अर्थान्तरं न्यस्यतेऽत्र — नि + असु (क्षेपणे) "घञ्" (३-३-१२१)। "उक्तिरर्थान्तरन्यासः स्यात्सामान्य विशेषयोः" चन्द्रा०। ಸಾಮಾನ್ಯಾರ್ಥದಿಂದ ವಿಶೇಷಾರ್ಥಸಮರ್ಥನರೂಪ, ವಿಶೇಷಾರ್ಥದಿಂದ ಸಾಮಾನ್ಯಾರ್ಥಸಮರ್ಥನರೂಪಗಳೆಂದು ಅರ್ಥಾಂತರನ್ಯಾಸವು ಎರಡು ವಿಧ. ಉದಾ: (1) "हनूमानब्धिमतरद्दुष्करं किं महात्मनाम्"। (2) "गुणवद्वस्तुसंसर्गाद्याति स्वल्पोऽपि गौरवम्। पुष्पमालानुषङ्गेण सूत्रं शिरसि धार्यते"।

**अर्थापत्ति ಅರ್ಥಾಪತ್ತಿ** (स्त्री०) 1. ಒಂದು ಅಂಶದಿಂದ ಮತ್ತೊಂದು ಅಂಶವನ್ನು ಕಲ್ಪಿಸುವುದು, ಉಪಪಾದ್ಯವಾದ ಅರ್ಥದಿಂದ ಅದರ ಉಪಪಾದಕ ಜ್ಞಾನವುಂಟಾಗುವಿಕೆ [ಯಾವುದಿಲ್ಲದಿದ್ದರೆ ಯಾವ ಒಂದು ಕಾರ್ಯವು ಉಂಟಾಗುವುದಿಲ್ಲವೋ ಅದು ಉಪಪಾದಕ. ಅದರಿಂದಾಗುವ ಕಾರ್ಯವು ಉಪಪಾದ್ಯ.] ಅನುಪಪದ್ಯಮಾನ (ಕಾರಣವಿಲ್ಲದೆ ಉಂಟಾಗದಿರುವ) ಅರ್ಥದಿಂದ ಅದರ ಉಪಪಾದಕ (ಕಾರಣ) ಕಲ್ಪನೆ. अर्थस्य शब्दतः अनुक्तस्य आपत्तिः सिद्धिः (कल्पना)। "पीनो देवदत्तो दिवा न भुङ्क्ते" ಎಂಬಲ್ಲಿ ದೇವದತ್ತನು ಪುಷ್ಟನಾಗಿದ್ದಾನೆ. ಹಗಲು ಊಟಮಾಡುವುದಿಲ್ಲವೆಂದು ತಿಳಿದರೆ ರಾತ್ರಿ ಭೋಜನವಿಲ್ಲದೆ ಪುಷ್ಟಿಬರಲಾರದೆಂದು ರಾತ್ರಿ ಭೋಜನವನ್ನು ಕಲ್ಪಿಸುತ್ತೇವೆ. ಇಲ್ಲಿ ಪೀನತ್ವವು (ಪುಷ್ಟಿಯು) ಉಪಪಾದ್ಯ. ಹಗಲು ಭೋಜನವಿಲ್ಲದ ದೇವದತ್ತನಿಗೆ ರಾತ್ರಿ ಭೋಜನ ಕಲ್ಪನೆಯು ಉಪಪಾದಕ. ಇದೇ ಅರ್ಥಾಪತ್ತಿ ಪ್ರಮಾಣ. ನೈಯಾಯಿಕರು ಅರ್ಥಾಪತ್ತಿಯನ್ನು ಅನುಮಾನ ಪ್ರಮಾಣದಲ್ಲಿ ಸೇರಿಸುತ್ತಾರೆ. ಮೀಮಾಂಸಕರು ಹಗಲು ಭೋಜನ ಮಾಡದಿರುವಾಗ ಉಂಟಾದ ಪೀನತ್ವವು (ಪುಷ್ಟಿಯು) ರಾತ್ರಿ ಭೋಜನವಿಲ್ಲದೆ ಸಂಭವಿಸುವುದಿಲ್ಲವಾದುದರಿಂದ ರಾತ್ರಿ ಭೋಜನದಲ್ಲಿ ಈ ಪೀನತ್ವವೇ ಪ್ರಮಾಣವೆಂದೂ ಇದು ಪ್ರತ್ಯಕ್ಷಾದಿ ಪ್ರಮಾಣಗಳಿಗಿಂತಲೂ ಅತಿರಿಕ್ತವಾದ ಬೇರೊಂದು ಪ್ರಮಾಣವೆಂದೂ ಅಭಿಪ್ರಾಯಪಡುತ್ತಾರೆ. "दिवाऽभुञ्जानत्वे सति पीनत्वं रात्रिभोजनमन्तरेण नोपपद्यते। अतः पीनत्वान्यथानुपपत्त्या अर्थापत्तिरेव रात्रिभोजने प्रमाणम् प्रत्यक्षादिभ्यो भिन्नम्, रात्रिभोजनस्य प्रत्यक्षाद्यविषयत्वात्। 2. ಒಂದು ಅರ್ಥಾಲಂಕಾರ; ಬಹಳ ಕಷ್ಟವಾದ ಕಾರ್ಯದ ವರ್ಣನೆಯಿಂದ ಸುಲಭವಾದ ಕಾರ್ಯದ ಸಿದ್ಧಿವರ್ಣನೆಯು "ಅರ್ಥಾಪತ್ತಿ" ಅಲಂಕಾರವಾಗುವುದು. ಇದು ಕೈಮುತಿಕ ನ್ಯಾಯದಿಂದ ಸಿದ್ಧಿಸುವುದು. ಮೇಲೆ ಹೇಳಿದ ಅರ್ಥಾಪತ್ತಿಗಿಂತಲೂ ಕಾವ್ಯಗಳಲ್ಲಿ ಬರುವ ಇದು ವಿಲಕ್ಷಣವಾದುದರಿಂದ ಕಾವ್ಯಾರ್ಥಾಪತ್ತಿಯೆಂದು ಹೇಳಿರುತ್ತಾರೆ. "कैमुत्येनार्थसंसिद्धिः काव्यार्थापत्तिरिष्यते। स जितस्त्वन्मुखेनेन्दुः का वार्ता सरसीरुहाम्"॥

**अर्थिक ಅರ್ಥಿಕ** (पुं०) ಸ್ತುತಿಪಾಠಕ, ಹೊಗಳುಭಟ. अर्थिन एव अर्थिकाः। "वैतालिका बोधकरा अर्थिकाः सौखसुप्तिकाः" अभि० चि०।

**अर्थित ಅರ್ಥಿತ** (वि०) ಪ್ರಾರ್ಥಿಸಲ್ಪಟ್ಟ, ಯಾಚಿಸಲ್ಪಟ್ಟ, ಬೇಡಲ್ಪಟ್ಟ. अर्थ (उपयाच्ञायाम्) "क्तः" (३-२-१०२)।

**अर्थिता ಅರ್ಥಿತಾ** (स्त्री०) 1. ಪ್ರಾರ್ಥನೆ, ಯಾಚನೆ, ಬೇಡಿಕೆ. अर्थिनो भावः "तल्" (५-१-११९)। "अप्यसुप्रणयिनां रघोः कुले न व्यहन्यत कदाचिदर्थिता" रघु० ११-२। 2. ಇಚ್ಛೆ, ಅಪೇಕ್ಷೆ, ಬಯಕೆ. "यदर्थिता निर्हृतवाच्यशल्यान् प्राणान् मया धारयितुं चिरं वः" रघु० १४-४२। अर्थिन् "त्वः" (५-१-११९)। अर्थित्वम् ಅರ್ಥಿತ್ವಂ. "अर्थित्वे प्रकटीकृतेऽपि न फलप्राप्तिः प्रभोः" म० वी० २-९।

**अर्थिन् ಅರ್ಥಿನ್** (वि०) 1. ಯಾಚಕ, ಭಿಕ್ಷುಕ, ಬೇಡುವವನು. अर्थयते — अर्थ (उपयाच्ञायाम्) "णिनिः" (३-१-१३४)। "यथाविधि हुताग्नीनां यथाकामार्चितार्थिनाम्" रघु० १-६। 2. ದರಿದ್ರ, ಬಡವ. असंनिहितोऽर्थोऽस्यास्ति "इनिः" (वा० ५-२-१३५)। 3. ಸೇವಕ, ಆಳು. 4. ವಾದಿ, ವ್ಯಾಜ್ಯ ಹೂಡುವವನು. "स धर्मस्थसखः शश्वदर्थिप्रत्यर्थिनां स्वयम्। ददर्श संशयच्छेद्यान् व्यवहारानतन्द्रितः" रघु० १७-३९। 5. ಅಪೇಕ್ಷೆಯುಳ್ಳ, ಆಸೆಯುಳ್ಳ. अर्थोऽपेक्षाऽस्यास्ति— अर्थ "इनिः" (५-२-११५)। स्त्रियां "ङीप्" (४-१-१५)। अर्थिनी ಅರ್ಥಿನೀ.

**अर्थिभाव ಅರ್ಥಿಭಾವ** (पुं०) ಯಾಚನೆ, ಬೇಡಿಕೆ. अर्थिनो भावः। "कं याचे यत्र तत्र ध्रुवमनवसरग्रस्त एवार्थिभावः" मालती० ९-३०।

**अर्थिसात् ಅರ್ಥಿಸಾತ್** (अव्य०) ಯಾಚಕನಿಗೆ ಸಂಪೂರ್ಣ ಅಧೀನವಾಗಿ. अर्थिन् "सातिः" (५-४-५२)। "विभज्य मेरुर्न यदर्थिसात्कृतो न सिन्धुरुत्सर्गजलव्ययैर्मरुः' नैष० १-१६।

**अर्थोपक्षेपक** ಅರ್ಥೋಪಕ್ಷೇಪಕ (पु०) ನಾಟಕದ ಒಂದು ಅಂಗ. अर्थान् उपक्षिपति—उप+क्षिपु(निरसने) "ण्वुल्" (३-१-१३३)। विष्कम्भः चूलिका अङ्कास्यम् प्रवेशकः अङ्कावतारः ಎಂದು ಅರ್ಥೋಪಕ್ಷೇಪಕಗಳು ಐದು. [ನಾಟಕದ ಅಂಕಮಧ್ಯದಲ್ಲಿ ಪ್ರತ್ಯಕ್ಷವಾಗಿ ಪ್ರದರ್ಶಿಸಲು ಅನುಚಿತವಾದ ಮತ್ತು ನೀರಸವಾದ ಕಥಾವಸ್ತುಗಳನ್ನು ವಿಷ್ಕಂಭಾದಿ ಐದು ಅರ್ಥೋಪಕ್ಷೇಪಕಗಳ ಮೂಲಕ ಸೂಚಿಸಬೇಕು.]

**अर्थोपपत्ति** ಅರ್ಥೋಪಪತ್ತಿ (स्त्री०) ಕಾರ್ಯಸಿದ್ಧಿ, ಕಾರ್ಯ ಕೈಗೂಡುವಿಕೆ. अर्थस्य उपपत्तिः। "स्वार्थोपपत्तिं प्रति दुर्बलाशस्तमित्यवोचद्वरतन्तुशिष्यः" रघु० ५-१२।

**अर्घ्य** ಅರ್ಘ್ಯ (न०)1. ಶಿಲಾಜತು. (वि०)2. ಪಂಡಿತ, ತಿಳಿವಳಿಕೆಯುಳ್ಳವನು. 3. ಅರ್ಥಸಹಿತವಾದ, ಅರ್ಥಗರ್ಭಿತವಾದ. अर्थादनपेतः—अर्थ "यत्"(४-४-९२)। "वागीशं वाग्भिरर्थ्याभिः प्रणिपत्योपतस्थिरे" कुमा० २-३। "अर्थ्यामर्थपतिर्वाचमाददे वदतां वरः" रघु० १-५९। 4. ನ್ಯಾಯವಾದ, ಯೋಗ್ಯವಾದ, ತಕ್ಕುದಾದ. 5. ಯಾಚಿಸಲು ಯೋಗ್ಯವಾದ. 5. ಅಪೇಕ್ಷಿಸಲು ಅರ್ಹವಾದ. "अर्थ्यं शिलाजतुन्यर्थ्यो बुधे न्याय्ये च वाच्यवत्" मेदि०।

**अर्द—गतौ याचने च** (भ्वा० प० से०) अर्दति। आनर्द। आर्दीत्। कर्म० अर्द्यते। 1. ನಡೆ, ಚಲಿಸು. 2. ಯಾಚಿಸು, ಬೇಡು, ಪ್ರಾರ್ಥಿಸು. "स्वस्त्यस्तु ते निर्गलिताम्बुगर्भं शरद्घनं नार्दति चातकोऽपि" रघु० ५-१७।

**अर्द—हिंसायाम्** (चु० उ० से०) अर्दयति, —ते। अर्दति, —ते। आर्दिदत्, —त। ಹಿಂಸಿಸು, ಪೀಡಿಸು. "अभ्यर्णो गिरिकूटाभानभ्यर्णानार्दिदद्द्रुतम्" भट्टि० ९-१९।

**अर्दन** ಅರ್ದನ (न०) 1. ಹಿಂಸಿಸುವುದು, ಪೀಡಿಸುವುದು. 2. ಯಾಚಿಸುವುದು, ಬೇಡುವುದು. 3. ಗಮನ, ಚಲನ, ನಡಿಗೆ. 4. ಕೊಲ್ಲುವುದು. अर्द (गतौ याचने हिंसायां च) "ल्युट्" (३-३-११५)। (वि०) 5. ಹಿಂಸಿಸುವ, ಪೀಡಿಸುವ. अर्द "ल्युः" (३-१-१३४)। "सुजस्वेति तदोवाच बलं परबलार्दनम्" रामा०।

**अर्दना** ಅರ್ದನಾ (स्त्री०) 1. ಪ್ರಾರ್ಥನೆ, ಬೇಡುವುದು, ಯಾಚನೆ. 2. ಗಮನ, ನಡಿಗೆ, ಚಲನೆ. अर्द (गतौ याचने च)+णिच् "युच्" (३-३-१०७)। 3. ಹಿಂಸೆ, ಪೀಡೆ.

**अर्दित** ಅರ್ದಿತ (न०) 1. ಒಂದು ವಿಧವಾದ ವಾತರೋಗ. (वि०) 2. ಹಿಂಸಿಸಲ್ಪಟ್ಟ, ಪೀಡಿಸಲ್ಪಟ್ಟ. अर्द (हिंसायाम्)+णिच् "क्तः" (३-२-१०२)। 3. ಯಾಚಿಸಲ್ಪಟ್ಟ. अर्द(याचने)"क्तः"(३-२-१०२)। "अर्दितं याचितेऽपि स्याद्वातव्याधौ च हिंसिते" मेदि०।

**अर्ध** ಅರ್ಧ (पु०) 1. ಶಕಲ, ಚೂರು, ಮುರುಕು, ತುಂಡು, ಒಂದು ಭಾಗ. "पश्चार्धेन प्रविष्टः शरपतनभयाद्भूयसा पूर्वकायम्" शाकु० १-४। (न०) 2. ಸಮಾರ್ಧ, ಸರಿಯಾಗಿ ಅರ್ಧಭಾಗ. ऋध्नोत्यनेन—ऋधु (वृद्धौ) कर० "घञ्" (३-३-१२१)। "अर्धः खण्डे समांशेऽर्धम्" हेम०। 3. ಗೃಹ, ಮನೆ, ವಾಸಸ್ಥಾನ, ಜಾಗ. ऋधु अधि० "घञ्" (३-३-१२१)। 4. ಅಭಿವೃದಿ, ಏಳಿಗೆ. ऋधु भावे "घञ्" (३-३-१८)।

**अर्धगङ्गा** ಅರ್ಧಗಂಗಾ (स्त्री०) ಕಾವೇರೀನದಿ. अर्धं गङ्गायाः।

**अर्धगुच्छ** ಅರ್ಧಗುಚ್ಛ (पु०) ಇಪ್ಪತ್ತನಾಲ್ಕು ಎಳೆಗಳುಳ್ಳ ಹಾರ.

**अर्धगर्भ** ಅರ್ಧಗರ್ಭ (पु०) ಸೂರ್ಯನ ಕಿರಣ. अर्धे वत्सरस्यार्धे गर्भं गर्भस्थानीयमुदकं यस्य। [ಸೂರ್ಯನ ಕಿರಣಗಳು ಮಾರ್ಗಶಿರ ಅಥವಾ ಪುಷ್ಯಮಾಸದ ಆದಿಯಲ್ಲಿ ಭೂಮಿಯಿಂದ ನೀರನ್ನು ಎಳೆದುಕೊಂಡು ಆಕಾಶದಲ್ಲಿ ಗರ್ಭವನ್ನುಂಟುಮಾಡುತ್ತವೆ.]

**अर्धचन्द्र** ಅರ್ಧಚಂದ್ರ (पु०) 1. ಚಂದ್ರನ ಅರ್ಧಭಾಗ. अर्धं चन्द्रस्य। "शब्दमीश्वर इत्युच्चैः सार्धचन्द्रं बिभर्ति यः" कुमा० ६-७५। 2. ಅರ್ಧಚಂದ್ರಾಕಾರದ ಉಗುರಿನ ಗಾಯ, ನಖಕ್ಷತ. 3. ನವಿಲುಗರಿಯಲ್ಲಿರುವ ಅರ್ಧಚಂದ್ರಾಕಾರದ ಗುರುತು. 4. ಅರ್ಧಚಂದ್ರನಂತೆ ಮುಖ (ತುದಿ)ವುಳ್ಳ ಬಾಣ. 5. ಕತ್ತುಹಿಡಿದು ನೂಕಲು ಅರ್ಧಚಂದ್ರಾಕಾರವಾಗಿ ಮಾಡುವ ಹಸ್ತ, ಗಳಹಸ್ತ. (स्त्री०) –चन्द्रा–ಚಂದ್ರಾ. 6. ತಿಗಡೆಮರ. "अर्धचन्द्रस्तु गलहस्तेन्दुखण्डयोः। चन्द्रके बाणभेदे चार्धचन्द्रा त्रिवृताभिदि" हेम०।

**अर्धचन्द्रक** ಅರ್ಧಚಂದ್ರಕ (पु०) ನವಿಲುಗರಿಯಲ್ಲಿರುವ ಅರ್ಧಚಂದ್ರಾಕಾರದ ಗುರುತು.

**अर्धचोलक** ಅರ್ಧಚೋಲಕ (पु०) ಕುಪ್ಪಸ, ಕಂಚುಕ, ರವಿಕೆ.

**अर्धजरतीय** ಅರ್ಧಜರತೀಯ (पुं०) ಅರ್ಧಮುದುಕಿಯಂತಿರುವ ಒಂದು ನ್ಯಾಯ, ಕೆಲವು ಅಂಶದಲ್ಲಿ ಸಿದ್ಧವಾದ ಕೆಲವು ಅಂಶದಲ್ಲಿ ಅಸಿದ್ಧವಾದ ವಿಷಯದಲ್ಲಿ ಪ್ರಯೋಗಿಸುವ ಒಂದು ನ್ಯಾಯ, ಕೆಲವು ಅಂಶದಲ್ಲಿ ಉಪಯುಕ್ತವಾಗಿದ್ದು ಕೆಲವು ಅಂಶದಲ್ಲಿ ಅಪ್ರಯೋಜಕವಾದ ವಿಷಯದಲ್ಲಿ ಪ್ರಯೋಗಿಸುವ ಒಂದು ನ್ಯಾಯ. [ವೃದ್ಧೆ (ಮುದುಕಿ) ಯ ಮುಖವು ಸುಂದರವಾಗಿದ್ದು ಸ್ತನಾದಿಗಳೆಲ್ಲವೂ ಗಳಿತವಾಗಿದ್ದರೆ ಹೇಗೆ ಉಪಭೋಗಯೋಗ್ಯಳಲ್ಲವೋ ಹಾಗೆ ಕೆಲವು ಭಾಗವು ಉಪಯುಕ್ತವಾಗಿದ್ದು ಉಳಿದ ಭಾಗವು ಅಪ್ರಯೋಜಕವಾಗಿದ್ದರೆ ಅದು ಸರ್ವಥಾ ತ್ಯಾಜ್ಯವೆನ್ನುವ ಅರ್ಥದಲ್ಲಿ ಈ ನ್ಯಾಯದ ಪ್ರಯೋಗ.] "अर्धं मुखमात्रं जरत्याः कामयते नाङ्गानीति सोऽयमर्धजरतीयन्यायः स चात्र न युक्तः"।

**अर्धजाह्नवी** ಅರ್ಧಜಾಹ್ನವೀ (स्त्री०) ಕಾವೇರೀ ನದಿ. अर्धं जाह्नव्याः। [ಕಾವೇರೀಸ್ನಾನದಿಂದ ಗಂಗಾಸ್ನಾನದ ಅರ್ಧಫಲವುಂಟಾಗುವುದರಿಂದ ಈ ಹೆಸರು.]

**अर्धनारीश** ಅರ್ಧನಾರೀಶ –ईश्वर –ಈಶ್ವರ (पुं०) ಅರ್ಧ ಪಾರ್ವತಿಯ ಮತ್ತು ಅರ್ಧ ಈಶ್ವರನ ದೇಹಗಳಿಂದ ಕೂಡಿದ ಪರಮೇಶ್ವರನ ಒಂದು ರೂಪ. अर्धं नार्याः। अर्धनारीयुक्त ईशः ईश्वरो वा। [ಭೃಂಗಿಯೆಂಬ ಗಣನಾಯಕನು ಮೋಕ್ಷಾರ್ಥಿಯಾಗಿ ಪಾರ್ವತಿಯ ರೂಪವನ್ನು ಅಸಡ್ಡೆಮಾಡಿ ಶಿವನನ್ನೇ ಧ್ಯಾನಿಸಲಾಗಿ ಕುಪಿತಳಾದ ಪಾರ್ವತಿಯು ಭೃಂಗಿಯ ತೇಜಸ್ಸನ್ನು ಕುಗ್ಗಿಸಲು ಶಿವನು ತನ್ನ ದಂಡಾಯುಧವನ್ನು ಭೃಂಗಿಗೆ ಆಸರೆಯಿತ್ತನು. ಪಾರ್ವತಿಯು ಇನ್ನೂ ಸಿಟ್ಟುಗೊಂಡು ತಪಸ್ಸುಮಾಡಿ ಈಶ್ವರನ ಅರ್ಧಾಂಗವನ್ನು ಸೂರೆಗೊಂಡಳು. शिवपु०]।

**अर्धनाव** ಅರ್ಧನಾವ (नं०) ಅರ್ಧ ಹಡಗು. अर्धं नावः—नौ "टच्" (५-४-१००)।

**अर्धनिशा** ಅರ್ಧನಿಶಾ (स्त्री०) ಅರ್ಧರಾತ್ರಿ. अर्धं निशायाः।

**अर्धपण** ಅರ್ಧಪಣ (पुं०) ನಲವತ್ತು ಕವಡೆಗಳ ಬೆಲೆಯುಳ್ಳ ಒಂದು ನಾಣ್ಯ. [ಇಪ್ಪತ್ತು ಕವಡೆಗಳು ಒಂದು ಕಾಕಿಣಿ. ನಾಲ್ಕು ಕಾಕಿಣಿಗಳು ಒಂದು ಪಣ. ಒಂದು ಪಣಕ್ಕೆ 80 ಕವಡೆಗಳ ಬೆಲೆ.] "अशीतिभिर्वराटकैः पण इत्यभिधीयते"।

**अर्धपादिक** ಅರ್ಧಪಾದಿಕ (वि०) ಅರ್ಧ ಕಾಲನ್ನು ಕತ್ತರಿಸಲು ಅರ್ಹ, ಅರ್ಧಕಾಲನ್ನು ಕತ್ತರಿಸುವ ಶಿಕ್ಷೆಗೆ ಅರ್ಹನಾದವನು. अर्धपादमर्हति—"ठञ्" (५-१-६३)। "गोषु ब्राह्मणसंस्थासु छुरिकायाश्च भेदने। पशूनां हरणे चैव सद्यः कार्योऽर्धपादिकः" मनु० ८-३२५।

**अर्धपुलायित** ಅರ್ಧಪುಲಾಯಿತ (पुं०) ಕುದುರೆಯ ನಾಗಾಲೋಟ, ಅಶ್ವಗತಿಯ ಒಂದು ಭೇದ. पुलाख्यया अयितं गतिः पुलायितम्—अय (गतौ) भावे "क्तः" (३-३-११४)। ಇದರ ಲಕ್ಷಣ: "शतार्धार्धक्रमाद्नैर्मण्डलायितवल्गितैः। उन्मुखस्याश्वमुख्यस्य गतिरर्धपुलायितम्।

**अर्धभाग** ಅರ್ಧಭಾಗ (पुं०) ಒಂದು ವಸ್ತುವಿನ ಅರ್ಧ, ಏಕದೇಶ. "तदर्धभागेन लभस्व काङ्क्षितं वरं तमिच्छामि च साधु वेदितुम्" कुमा० ५-५०।

**अर्धभाज्** ಅರ್ಧಭಾಜ್ (वि०) ಅರ್ಧಭಾಗವನ್ನು ಹೊಂದುವ, ಅರ್ಧಭಾಗವನ್ನು ಹೊಂದಲು ಹಕ್ಕುದಾರನಾದ. अर्धं भजति—भज (सेवायाम्) "क्विप्" (३-२-७६)। "निधीनां तु पुराणानां धातूनामेव च क्षितौ। अर्धभाग्रक्षणाद्राजा भूमेरधिपतिर्हि सः" मनु० ८-३९।

**अर्धभ्रम (क)** ಅರ್ಧಭ್ರಮ (ಕ) (पुं०) ಶಬ್ದಾಲಂಕಾರದ ಒಂದು ಭೇದ, ಅರ್ಧವಾದ ಅರ್ಧ ಶ್ಲೋಕಗಳ ಭ್ರಮಣವಿರುವ ಒಂದು ಬಂಧ. "आहुरर्धभ्रमं नाम श्लोकार्धभ्रमणं यदि"। ಉದಾ:

| अ | भी | क | म | ति | के | ने | द्वे |
|---|---|---|---|---|---|---|---|
| भी | ता | न | न्द | स्य | ना | श | ने |
| क | न | त्स | का | म | से | ना | के |
| म | न्द | का | म | क | म | स्य | ति |

माघ० १९-७२।

**अर्धमाणवक** ಅರ್ಧಮಾಣವಕ (पुं०) ಹನ್ನೆರಡು ಎಳೆಗಳ ದಾರ. अर्धं माणवकस्य। "द्वादशस्त्वर्धमाणवः" वैज०।

**अर्धमात्रक** ಅರ್ಧಮಾತ್ರಕ (नं०) "ಹಲ್" ವರ್ಣ, ವ್ಯಂಜನಾಕ್ಷರ. "एकमात्रो भवेद्ह्रस्वः द्विमात्रो दीर्घ उच्यते। त्रिमात्रस्तु प्लुतो ज्ञेयः व्यञ्जनं त्वर्धमात्रकम्"।

**अर्धमात्रा** ಅರ್ಧಮಾತ್ರಾ (स्त्री०) ಒಂದು ವ್ಯಂಜನಾಕ್ಷರವನ್ನು ಉಚ್ಚರಿಸುವ ಕಾಲ.

**अर्धमास** ಅರ್ಧಮಾಸ (पु०) ಒಂದು ತಿಂಗಳಿನ ಅರ್ಧ ಭಾಗ, ಒಂದು ಪಕ್ಷ, ಹದಿನೈದು ದಿನಗಳು. अर्धं मासस्य।

**अर्धयाम** ಅರ್ಧಯಾಮ (पु०) ಹಗಲಿನ ಅಥವಾ ರಾತ್ರಿಯ ಎಂಟನೆಯ ಒಂದು ಭಾಗ, ಮೂರೂ ಮುಕ್ಕಾಲು ಘಳಿಗೆ, ಒಂದೂವರೆ ಗಂಟೆಯ ಕಾಲ, ಅರ್ಧಜಾವ. अर्धं यामस्य।

**अर्धरथ** ಅರ್ಧರಥ (पु०) ಚೆನ್ನಾಗಿ ನುರಿಯದ ಯೋಧ, ಒಳ್ಳೆಯ ಅನುಭವ ಪಡೆಯದ ರಥಿಕ. रथोऽस्यास्ति — "अच्" (५-२-१२७)। अर्धः असंपूर्णः रथी। "रणे रणेऽभिमानी च विमुखश्चापि दृश्यते। घृणी कर्णः प्रमादी च तेन सोऽर्धरथो मतः" भा० उद्योग० १६८-९।

**अर्धरात्र** ಅರ್ಧರಾತ್ರ (पु०) ನಡುರಾತ್ರಿ, ಮಧ್ಯರಾತ್ರಿ. अर्धं रात्रेः "अच्" (५-४-८७)। "अथार्धरात्रे स्तिमितप्रदीपे शय्यागृहे सुप्तजने प्रबुद्धः" रघु० १६-४।

**अर्धविसर्ग** ಅರ್ಧವಿಸರ್ಗ (पु०) ಜಿಹ್ವಾಮೂಲೀಯ ಮತ್ತು ಉಪಧ್ಮಾನೀಯ. [क ख ಗಳಿಗೆ ಹಿಂದಿನ ವಿಸರ್ಗವು ಜಿಹ್ವಾಮೂಲೀಯ. प फ ಗಳಿಗೆ ಹಿಂದಿನ ವಿಸರ್ಗವು ಉಪಧ್ಮಾನೀಯ.] **ಉದಾ:** ≍क ≍ख ≍प ≍फ।

**अर्धवीक्षण** ಅರ್ಧವೀಕ್ಷಣ (न०) ಅರೆನೋಟ, ವಾರೆ ನೋಟ, ಕಟಾಕ್ಷ.

**अर्धशत** ಅರ್ಧಶತ (न०) ಐವತ್ತು. अर्धं शतस्य।

**अर्धसम** ಅರ್ಧಸಮ (न०) ವರ್ಣವೃತ್ತದ ಒಂದು ಭೇದ, 1, 3 ನೆಯ ಪಾದಗಳೂ, 3, 4 ನೆಯ ಪಾದಗಳೂ ಸಮವಾಗಿರುವ ಒಂದು ವೃತ್ತ. "सममर्धसमं वृत्तं विषमं च त्रिधा मतम्। प्रथमाङ्घ्रिसमो यस्य तृतीयश्चरणो भवेत्। द्वितीयस्तुर्यवद्वृत्तं तदर्धसममुच्यते" वृ० र०।

**अर्धसीरिन्** ಅರ್ಧಸೀರಿನ್ (पु०) ರೈತ, ಬೇಸಾಯಗಾರ, ತಾನು ಮಾಡಿದ ವ್ಯವಸಾಯಕ್ಕಾಗಿ ಅರ್ಧ ಫಲವನ್ನು ಪಡೆಯುವವನು. अर्धं सीरस्य। सोऽस्यास्ति "इनिः" (५-२-११५)। "शूद्रेषु दासगोपालकुलमित्रार्धसीरिणः" याज्ञ० १-१६६।

**अर्धहर** ಅರ್ಧಹರ (वि०) ಅರ್ಧಭಾಗವನ್ನು ಆಕ್ರಮಿಸುವ, ಅರ್ಧಭಾಗವನ್ನು ತೆಗೆದುಕೊಳ್ಳುವ. अर्धं हरति — हृञ् (हरणे) "अच्" (३-२-९)। स्त्रियां -हरा- ಹರಾ. "समादिदेशैकवधूं भवित्रीं प्रेम्णा शरीरार्धहरां हरस्य" कुमा० १-५०।

**अर्धहार** ಅರ್ಧಹಾರ (पु०) ಅರವತ್ತನಾಲ್ಕು (64) ಎಳೆಗಳ ಹಾರ. "अर्धहारश्चतुःषष्टिः" वैज०।

**अर्धांश** ಅರ್ಧಾಂಶ (पु०) ಒಂದು ಅರ್ಧ, ಅರ್ಧ ಭಾಗ.

**अर्धार्ध** ಅರ್ಧಾರ್ಧ (पु०) ಅರ್ಧದಲ್ಲಿ ಅರ್ಧಭಾಗ, ನಾಲ್ಕನೆಯ ಒಂದು ಭಾಗ. अर्धमर्धस्य। "चरोरर्धार्धभागाभ्यां तामयोजयतामुभे" रघु० १०-५६।

**अर्धासन** ಅರ್ಧಾಸನ (न०) 1. ಪೀಠದ ಅರ್ಧ ಭಾಗ. अर्धमासनस्य। "उपेयुषः स्वामपि मूर्तिमग्र्यामर्धासनं गोत्रभिदोऽधितष्ठौ" रघु० ६-७३। 2. ಪ್ರೀತಿಯಿಂದ ಮಾಡುವ ದಾನ.

**अर्धेन्दु** ಅರ್ಧೇಂದು (पु०) 1. ಅರ್ಧಚಂದ್ರ, ಚಂದ್ರನ ಅರ್ಧಭಾಗ. 2. ಅರ್ಧಚಂದ್ರಾಕಾರದ ಮುಖವುಳ್ಳ ಒಂದು ಬಾಣ. 3. ಅರ್ಧಚಂದ್ರಾಕಾರದ ಉಗುರಿನ ಗುರುತು, ನಖಕ್ಷತ. 4. ನವಿಲಿನ ಗರಿಯಲ್ಲಿರುವ ಅರ್ಧಚಂದ್ರಾಕಾರದ ಗುರುತು. 5. ಕತ್ತುಹಿಡಿದು ನೂಕಲು ಅರ್ಧಚಂದ್ರಾಕಾರವಾಗಿ ಮಾಡುವ ಹಸ್ತ, ಗಳಹಸ್ತ. 6. ಪ್ರೌಢಸ್ತ್ರೀಯ ಯೋನಿಯಲ್ಲಿ ಬೆರಳನ್ನಿಡುವುದು. "अर्धेन्दुरर्धचन्द्रे स्याद्गलहस्तनखाङ्कयोः। अर्धेन्दुः स्यादतिप्रौढस्त्रीयोन्यङ्गुलियोजने" मेदि०।

**अर्धोदक** ಅರ್ಧೋದಕ (न०) ಅರ್ಧ ಮೈ ಮುಳುಗುವಷ್ಟು ನೀರು, ನೀರಿನಲ್ಲಿ ನಿಂತುಕೊಂಡಾಗ ನಾಭಿಯವರೆಗೆ ಬರುವ ನೀರು.

**अर्धोदय** ಅರ್ಧೋದಯ (पु०) ಒಂದು ಪುಣ್ಯಕಾಲ, ತಿಥಿ ವಾರಾದಿಗಳ ಯೋಗದಿಂದುಂಟಾಗುವ ಒಂದು ಪರ್ವಕಾಲ. अर्धस्य समृद्धस्य पुण्यस्य उदयो यत्र। [ಪುಷ್ಯ ಅಥವಾ ಮಾಘ ಮಾಸದಲ್ಲಿ ಅಮಾವಾಸ್ಯೆ, ಭಾನುವಾರ, ಶ್ರವಣನಕ್ಷತ್ರ ಮತ್ತು ವ್ಯತೀಪಾತ ಇವುಗಳು ಸೇರಿದರೆ ಅರ್ಧೋದಯ ಪುಣ್ಯಕಾಲವೆಂದು ತಿಳಿಯಬೇಕು.] "माघे मासि अमावास्या यदि अर्कयुता भवेत्। नक्षत्रे श्रवणे देवि व्यतीपातो भवेद्यदा। अर्धोदयः स विज्ञेयः सूर्यपर्वशतैः समः। दिवैव योगः शस्तोऽयं न च रात्रौ कदाचन" स्कान्द०। "अमार्कपातश्रवणैर्युक्ता चेत्पौषमाघयोः। अर्धोदयः स विज्ञेयः कोटिसूर्यग्रहैः समः" निर्णया०।

**अर्धोदयासन** ಅರ್ಧೋದಯಾಸನ (ನಂ) ಯೋಗಾಸನದ ಒಂದು ಭೇದ, ಭೂಮಿಯ ಮೇಲೆ ಎರಡು ಹಸ್ತಗಳನ್ನು ಮಾತ್ರ ಊರಿ ದೇಹವೆಲ್ಲವನ್ನೂ ಮೇಲೆ ಆಕಾಶದಲ್ಲಿ ನಿಲ್ಲಿಸುವ ಒಂದು ಆಸನ. "अर्धोदयासनं नाथ सर्वाङ्गं खे नियोजयेत्। केवलं हस्तयुगलं भुव्यवष्टभ्य तिष्ठति"।

**अर्धोरुक** ಅರ್ಧೋರುಕ (पुंन०) ಹೆಂಗಸರ ಒಳ ಲಂಗ, ಪಾವಡೆ, ಮಂಡಿಯವರೆಗೂ ಇರುವ ಒಳ ಲಂಗ. अर्धोरौ काशते—काशृ (दीप्तौ) "ड:" (वा० ३-२-१०१)। "अर्धोरुकं वरस्त्रीणां स्याच्चण्डातकमस्त्रियाम्" अम०।

**अर्ध्य** ಅರ್ಧ್ಯ (वि०) 1. ವೃದ್ಧಿಹೊಂದಲು ಯೋಗ್ಯವಾದ. ऋधु (वृद्धौ)+णिच् "यत्" (३-१-९७)। 2. ಅರ್ಧದ ಸಂಬಂಧವಾದ. अर्धस्येदम्। 3. ಅರ್ಧದಲ್ಲಿರುವ. अर्धे भव:।

**अर्पण** ಅರ್ಪಣ (ನಂ) 1. ಇಡುವುದು, ಇರಿಸುವುದು. ऋ (गतौ)+णिच् "ल्युट्" (३-३-११५)। पुगागम:। 2. ಮೇಲೆ ಇಡುವುದು. "कैलासगौरं वृषमारुरुक्षो: पादार्पणानुग्रहपूतपृष्ठम्" रघु० २-३५। 3. ಕೊಡುವುದು, ಅರ್ಪಿಸುವುದು, ದಾನಮಾಡುವುದು. "सेयं स्वदेहार्पणनिष्क्रयेण न्याय्या मया मोचयितुं भवत्त:" रघु० २-५५। 4. ಹಿಂದಕ್ಕೆ ಕೊಡುವುದು, ಹಿಂತಿರುಗಿಸಿ ಕೊಡುವುದು. 5. ಇರಿಯುವುದು, ಕೊರೆಯುವುದು, ತಿವಿಯುವುದು. "तीक्ष्णतुण्डार्पणैर्ग्रीवां नखै: सर्वां व्यदारयत्" रामा०। 6. ಅಗ್ನಿ, ಬೆಂಕಿ. अर्प्यतेऽत्र—अधि० "ल्युट्" (३-३-११७)। 7. ಮಂತ್ರ. अर्प्यतेऽनेन—कर० "ल्युट्" (३-३-११७)। 8. ಹವಿಸ್ಸು. कर्म० "ल्युट्" (३-३-११३)।

**अर्पित** ಅರ್ಪಿತ (वि०) 1. ಕೊಡಲ್ಪಟ್ಟ, ದಾನಮಾಡಲ್ಪಟ್ಟ. ऋ (गतौ)+ णिच् "क्त:" (३-२-१०२)। पुगागम:। "अर्पितं रसितवत्यपि नामग्राहमन्ययुवतेर्दयितेन" माघ० १०-२७। 2. ಇರಿಸಲ್ಪಟ್ಟ. 3. ಮೇಲೆ ಇಡಲ್ಪಟ್ಟ. "हरिचक्रेण तेनास्य कण्ठे निष्कमिवार्पितम्" कुमा० २-४९। "भक्तिभिर्बहुविधाभिरर्पिता भाति भूतिरिव मत्तहस्तिन:" कुमा० ८-६९।

**अर्बुद** ಅರ್ಬುದ (पुंन०) 1. ದಶಕೋಟಿ, ಹತ್ತುಕೋಟಿ. (पु०) 2. ಮಾಂಸಪಿಂಡ, ಎರಡು ತಿಂಗಳಿನ ಗರ್ಭಪಿಂಡ. "प्रथमे मासि संक्लेदभूतो धातुविमूर्च्छित:। मास्यर्बुदं द्वितीये तु तृतीयेऽङ्गेन्द्रियैर्युत:" याज्ञ० ३-७५ 3. ಪಶ್ಚಿಮಭಾರತದ ಒಂದು ಪರ್ವತ. "अर्बुदो मांसपुरुषे दशकोटिषु न स्त्रियाम्। महीधरविशेषे ना" मेदि०। 4. ಮಾಂಸಗ್ರಂಥಿ ಬೆಳೆದುಂಟಾಗುವ ಒಂದು ರೋಗ. "अर्बुद: पर्वते मांसकीलके दशकोटिषु" हेम०। 5. ಮೇಘ, ಮೋಡ.

**अर्भ** ಅರ್ಭ (पु०) 1. ಬಾಲಕ, ಮಗು, ಶಿಶು. ऋ (गतौ) "भन्" (उ० ३-१५२)। (वि०) 2. ಚಿಕ್ಕದಾದ, ಸಣ್ಣದಾದ.

**अर्भक** ಅರ್ಭಕ (पु०) 1. ಬಾಲಕ, ಮಗು, ಶಿಶು. ऋध्नोति वृद्धिं प्राप्नोति—ऋधु (वृद्धौ) "वुन्" भकारादेशश्च (उ० ५-५३)। "अनघवैभवमर्भकमुद्वहन्" याद० ३-२९। "श्रुतस्य यायादयमन्तमर्भक:" रघु० ३-२१। 2. ಹೆಂಗಸರ ಗರ್ಭ. (वि०) 3. ಕೃಶವಾದ, ತೆಳ್ಳಗಿರುವ, ಬಡವಾದ, ಬಾಡಿರುವ. 4. ಮೂರ್ಖನಾದ, ತಿಳವಳಿಕೆಯಿಲ್ಲದ, ವಿವೇಕವಿಲ್ಲದ. 5. ಚಿಕ್ಕದಾದ, ಸಣ್ಣದಾದ. 6. ದರಿದ್ರ, ಬಡವ. "अथार्भकस्त्रिषु। दरिद्रे बालके मूर्खे जडे भ्रूणे तु पुंस्ययम्" नानार्थर०। "अर्भक: कथितो बाले मूर्खेऽपि च कृशेऽपि च" मेदि०।

**अर्मन्** ಅರ್ಮನ್ (ನಂ) ಒಂದು ವಿಧ ನೇತ್ರರೋಗ.

**अर्य** ಅರ್ಯ (पु०) 1. ವೈಶ್ಯ, ಮೂರನೆಯ ವರ್ಣದವನು. 2. ಯಜಮಾನ, ಸ್ವಾಮಿ. ऋ (गतौ) "यत्" (३-१-१०३)। "स्यादर्य: स्वामिवैश्ययो:" हेम०। स्त्रियां विकल्पेन "आनुक्" "ङीष्" च (वा० ४-१-४९)। अर्या ಅರ್ಯಾ अर्याणी ಅರ್ಯಾಣೀ. ವೈಶ್ಯಜಾತಿಯ ಹೆಂಗಸು ಅಥವಾ ಯಜಮಾನಿ, ಒಡತಿ. अर्य "ङीप्" (४-१-४८)। अर्यी ಅರ್ಯೀ. ವೈಶ್ಯನ ಪತ್ನಿ. (वि०) 3. ಶ್ರೇಷ್ಠವಾದ.

**अर्यमन्** ಅರ್ಯಮನ್ (पु०) 1. ಸೂರ್ಯ. अर्य+ माङ् (माने) "कनि:" (उ० १-१५७)। निपा०। "अर्यमप्रभृतिभिश्च संहतै:" याद० १७-६१। 2. ದ್ವಾದಶಾದಿತ್ಯರಲ್ಲೊಬ್ಬ. ["आदित्य" ಪದದಲ್ಲಿ ನೋ...] 3. ಪಿತೃದೇವತೆ. "सूरसूर्यार्यमादित्यद्वादशात्मदिवाकरा:" अम०। "अर्यमा तु पुमान् सूर्ये पितृदेवान्तरेऽपि च" मेदि०। 4. ಅರ್ಕವೃಕ್ಷ, ಎಕ್ಕದ ಗಿಡ. 5. ಸೂರ್ಯದೇವತಾಕವಾದ ಉತ್ತರ ಫಲ್ಗುನೀ ನಕ್ಷತ್ರ.

**अर्वत्** ಅರ್ವತ್ (वि०) ಹಿಂಸಿಸುವ, ಪೀಡಿಸುವ. अर्व (हिंसायाम्) "शतृ" (३-२-१२४)। स्त्रियां "ङीप्" (४-१-६)। अर्वन्ती ಅರ್ವಂತೀ.

**अर्वन्** ಅರ್ವನ್ (पुं०) 1. ಅಶ್ವ, ಕುದುರೆ. ऋ (गतौ) "वनिप्" (३-२-७५)। "उत्तेरुरुत्तालखुरारवं द्रुता: श्लथीकृतप्रग्रहमर्वतां व्रजा:" माघ० १२-३१। 2. ಇಂದ್ರ. 3. ಹಸುವಿನ ಕಿವಿಯ ಅಳತೆ. (वि०) 4. ಅಧಮವಾದ, ತುಚ್ಛವಾದ, ನೀಚವಾದ. "अर्वाऽश्वेऽधमे" हेम०। "अर्वा तुरङ्गमे पुंसि कुत्सिते वाच्यलिङ्गक:" मेदि०। 5. ಸಂಚಾರಸ್ವಭಾವದ. स्त्रियां अर्वती ಅರ್ವತೀ. अर्वरी ಅರ್ವರೀ. 1. ಹೆಣ್ಣು ಕುದುರೆ. 2. ಕುಟ್ಟನಿ, ತಲೆಹಿಡುಕಿ. "अर्वती कुम्भदास्यां च" त्रिकाण्ड०।

**अर्वाच्** ಅರ್ವಾಚ್ (अव्य०) 1. ಮುಂಚಿನಕಾಲ, –ಕಾಲದಿಂದ, –ಕಾಲದಲ್ಲಿ. 2. ಈಚಿನದೇಶ, –ದೇಶದಿಂದ, –ದೇಶದಲ್ಲಿ. अर्वन्तमश्वति—अञ्चु (गतौ) "क्विन्" (३-२-५९)। "अस्ताति:" (५-३-२७)। तस्य लुक् (५-३-३०)।

**अर्वाचीन** ಅರ್ವಾಚೀನ (वि०) 1. ಈಚಿನ ಕಾಲದ, ನವೀನ ಕಾಲದ. अर्वाक् भव: वा "ख:" (५-४-८)। 2. ಅನಂತರ ಹುಟ್ಟಿದ. स्त्रियां अर्वाचीना ಅರ್ವಾಚೀನಾ.

**अर्श** ಅರ್ಶ (न०) 1. ಮೂಲವ್ಯಾಧಿ. (वि०) 2. ಪಾಪಾತ್ಮ, ಪಾಪಿ. अर्शस्—पृषो० सलोप:।

**अर्शस्** ಅರ್ಶಸ್ (न०) ಮೂಲವ್ಯಾಧಿ. ऋ (गतौ) "असुन्" (उ० ४-१९५)।

**अर्शस** ಅರ್ಶಸ (वि०) ಮೂಲವ್ಯಾಧಿಯುಳ್ಳವನು. अर्शांसि सन्त्यस्य "अच्" (५-२-१२७)। "अर्शोरोगयुतोऽर्शस:" अम०।

**अर्शिन्** ಅರ್ಶಿನ್ (वि०) ಮೂಲವ್ಯಾಧಿಯುಳ್ಳವನು. अर्शोऽस्यास्ति "इनि:" (५-२-११५)।

**अर्शोघ्न** ಅರ್ಶೋಘ್ನ (पुं०) 1. ಸೂರಣದ ಗೆಡ್ಡೆ. अर्शो हन्ति—हन (हिंसागत्यो:) "टक्" (३-२-५३)। (न०) 2. ನಾಲ್ಕನೆಯ ಒಂದು ಭಾಗ ನೀರು ಬೆರಸಿದ ಮೊಸರು. "अथ घोल: पादाम्बुसंयुते। तक्रं कट्वरमर्शोघ्नम्" वैज०। (वि०) 3. ಮೂಲವ್ಯಾಧಿಯನ್ನು ಗುಣಪಡಿಸುವ (ಮನುಷ್ಯೇತರ ವಸ್ತು).

**अर्शोहित** ಅರ್ಶೋಹಿತ (पुं०) 1. ಗೇರುಮರ. अर्शसे हित:। [ಗೋಡಂಬಿಯು ಮೂಲವ್ಯಾಧಿಯನ್ನು ಗುಣಪಡಿಸುವುದು.] (वि०) 2. ಮೂಲವ್ಯಾಧಿಗೆ ಹಿತಕರವಾದ.

**अर्षण** ಅರ್ಷಣ (न०) 1. ಗಮನ, ಚಲನ. ऋषी (गतौ) भावे "ल्युट्" (३-३-११५)। (स्त्री०) –णी –ಣೀ. 2. ಗಮನೋಪಾಯ, ಗಾಡಿ, ಗಮನಸಾಧನ, ವಾಹನ. 3. ದುಡಿತದಿಂದ ಕೂಡಿದ ನೋವು, ಚುಚ್ಚುವ ನೋವು.

**अर्ह्–पूजायाम्** (भ्वा० प० सक० से०)।

| | | | |
|---|---|---|---|
| १. लट्— | अर्हति | अर्हत: | अर्हन्ति। |
| | अर्हसि | अर्हथ: | अर्हथ। |
| | अर्हामि | अर्हाव: | अर्हाम:। |
| २. लिट्— | आनर्ह | आनर्हतु: | आनर्हु:। |
| | आनर्हिथ | आनर्हथु: | आनर्ह। |
| | आनर्ह | आनर्हिव | आनर्हिम। |
| ३. लुट्— | अर्हिता | अर्हितारौ | अर्हितार:। |
| | अर्हितासि | अर्हितास्थ: | अर्हितास्थ। |
| | अर्हितास्मि | अर्हितास्व: | अर्हितास्म:। |
| ४. लृट्— | अर्हिष्यति | अर्हिष्यत: | अर्हिष्यन्ति। |
| | अर्हिष्यसि | अर्हिष्यथ: | अर्हिष्यथ। |
| | अर्हिष्यामि | अर्हिष्याव: | अर्हिष्याम:। |
| ५. लोट्— | अर्हतु, अर्हतात् | अर्हताम् | अर्हन्तु। |
| | अर्ह, अर्हतात् | अर्हतम् | अर्हत। |
| | अर्हाणि | अर्हाव | अर्हाम। |
| ६. लङ्— | आर्हत् | आर्हताम् | आर्हन्। |
| | आर्ह: | आर्हतम् | आर्हत। |
| | आर्हम् | आर्हाव | आर्हाम। |
| ७. लिङ्— | अर्हेत् | अर्हेताम् | अर्हेयु:। |
| | अर्हे: | अर्हेतम् | अर्हेत। |
| | अर्हेयम् | अर्हेव | अर्हेम। |
| ८. आशीर्लिङ्— | अर्ह्यात् | अर्ह्यास्ताम् | अर्ह्यासु:। |
| ९. लुङ्— | आर्हीत् | आर्हिष्टाम् | आर्हिषु:। |
| १०. लृङ्— | आर्हिष्यत् | आर्हिष्यताम् | आर्हिष्यन्। |

1. ಹೊಂದಲು ಅರ್ಹನಾಗು, ಪಡೆಯಲು ಯೋಗ್ಯನಾಗು. "गुरोर्गुरौ सन्निहिते गुरुवन्मानमर्हति" मनु० २-२०५। 2. ಶಕ್ತನಾಗು, ಸಮರ್ಥನಾಗು. "विनाशमव्ययस्यास्य न कश्चित् कर्तुमर्हति" गीता २-१७।

"अनुद्योगेन तैलानि तिलेभ्यो नाप्तुमर्हति" हितो०। 3. ಕೃಪೆಮಾಡು, ದಯೆತೋರು. "आर्याप्यरुन्धती तत्र व्यापारं कर्तुमर्हति" कुमा० ६-३२। 4. ಬಾಧ್ಯನಾಗು, ಹಕ್ಕುದಾರನಾಗು. "ननु गर्भः पित्र्यं रिक्थमर्हति" शाकु० ६। 5. ಮಾಡಲು ಯೋಗ್ಯನಾಗು, ತಕ್ಕವನಾಗು. "अर्थना मयि भवद्भिरिवास्यै कर्तुमर्हति मयापि भवत्तु" नैष० ५-११२। 6. ಸಮಾನವಾಗು, ಹೋಲು. "सर्वे ते जपयज्ञस्य कलां नार्हन्ति षोडशीम्" मनु० २-८६।

कर्मणिः— अर्ह्यते। आनर्हे। अर्हिता। अर्हिष्यते। अर्ह्यताम्। आर्ह्यत। अर्ह्येत। अर्हिषीष्ट। आर्हि। आर्हिष्यत।

णिचि :—१. अर्हयति, –ते। २. अर्हयांचकार, –चक्रे, –बभूव, –आस। ३. अर्हयिता। ४. अर्हयिष्यति, –ते। ५. अर्हयतु, –ताम्। ६. आर्हयत्, –त। ७. अर्हयेत्, –त। ८. अर्ह्यात्, अर्हयिषीष्ट। ९. आर्जिहत्, –त। १०. आर्हयिष्यत्, –त। "स्रग्विणं तल्प आसीनमर्हयेत्प्रथमं गवा" मनु० ३-३। "रामं वरीतुं परिरक्षणार्थं राजाऽऽर्जिहत्तं मधुपर्कपाणिः" भट्टि० १-१७।

ण्यन्तात् कर्मणि :—१. अर्ह्यते। २. अर्हयांचक्रे, –बभूवे, –आसे। ३. अर्हयिता, अर्हिता। ४. अर्हयिष्यते, अर्हिष्यते। ५. अर्ह्यताम्। ६. आर्ह्यत। ७. अर्ह्येत। ८. अर्हयिषीष्ट, अर्हिषीष्ट। ९. आर्हि। १०. आर्हयिष्यत, आर्हिष्यत।

सनि :—१. अर्जिहिषति। २. अर्जिहिषांचकार, –बभूव, –आस। ३. अर्जिहिषिता। ४. अर्जिहिषिष्यति। ५. अर्जिहिषतु। ६. आर्जिहिषत्। ७. अर्जिहिषेत्। ८. अर्जिहिष्यात्। ९. आर्जिहिषीत्। १०. आर्जिहिषिष्यत्।

केवलात् कृत्सु :— तव्यः—अर्हितव्यः। अनीयर्—अर्हणीयः। ण्यत्—अर्ह्यः। कर्म० क्तः—अर्हितः। क्तवतुः—अर्हितवान्। शतृ—अर्हन्; अर्हन्ती। शानच्—व्यत्यर्हमाणः। अर्हिष्यन्; अर्हिष्यती, अर्हिष्यन्ती। तुमुन्—अर्हितुम्। भावे—अर्हितम्। ल्युट्—अर्हणम्। युच्—अर्हणा। क्त्वा—अर्हित्वा। ल्यप्—समर्ह्य। णमुल्—अर्हमर्हम्। अर्हित्वार्हित्वा।

ण्यन्तात् कृत्सु :—तव्यः—अर्हयितव्यः। अनीयर्—अर्हणीयः। ण्यत्—अर्ह्यः। कर्म० क्तः—अर्हितः। क्तवतुः—अर्हितवान्। शतृ—अर्हयन्; अर्हयन्ती। शानच्—अर्हयमाणः। अर्हयिष्यन्; अर्हयिष्यती, अर्हयिष्यन्ती। तुमुन्—अर्हयितुम्। भावे क्तः—अर्हितम्। ल्युट्—अर्हणम्। युच्—अर्हणा। क्त्वा—अर्हयित्वा। ल्यप्—समर्ह्य। णमुल्—अर्हमर्हम्। क्त्वा—अर्हयित्वार्हयित्वा।

**अर्ह** ಅರ್ಹ (पु०) 1. ಇಂದ್ರ. अर्ह (पूजायाम्) "घञ्" (३-३-१९)। 2. ವಿಷ್ಣು. "अभिप्रायः प्रियार्होऽर्हः" वि० स०। 3. ಕ್ರಯ, ಬೆಲೆ, ಮೌಲ್ಯ. "महार्हशय्यापरिवर्तनच्युतैः स्वकेशपुष्पैरपि या स्म दूयते" कुमा० ५-१२। 4. ಪೂಜೆ, ಗೌರವ. भावे "घञ्" (३-३-१८)। 5. ಗತಿ, ಗಮನ, ಚಲನ. (वि०) 6. ಗೌರವಿಸಲು ಯೋಗ್ಯವಾದ, ಪೂಜೆಗೆ ಅರ್ಹವಾದ. "प्रातिवेश्यानुवेश्यौ च कल्याणे विंशतिद्विजे। अर्हाविभोजयन्विप्रो दण्डमर्हति माषकम्" मनु० ८-३९२। 7. ಹಕ್ಕುದಾರ. "नियुक्तायामपि पुमान्नार्यां जातोऽविधानतः। नैवार्हः पैतृकं रिक्थं पतितोत्पादितो हि सः" मनु० ९-१४४। "तस्मान्नार्हा वयं हन्तुं धार्तराष्ट्रान स्वबान्धवान्" गीता १-३७। 8. ಬೆಲೆಬಾಳುವ. 9. ಯೋಗ್ಯನಾದ, ತಕ್ಕುದಾದ. "स भृत्योऽर्हो महीभुजाम्" पञ्चतं० १-८७। (स्त्री०) **–र्हा**—ಹಾ. 10. ಪೂಜೆ, ಗೌರವ. अर्ह भावे "अः" (३-३-१०३)। "अवहितहृदयो विधाय सोऽर्हामृषिवदृषिप्रवरे गुरूपदिष्टाम्" किरा० २-५८।

**अर्हण** ಅರ್ಹಣ (न०) ಪೂಜೆ, ಸತ್ಕಾರ, ಗೌರವ. अर्ह (पूजायाम्) भावे "ल्युट्" (३-३-११५)। "प्रतिपत्तुमङ्ग घटते च न तव नृपयोग्यमर्हणम्" माघ० १५-२२। (स्त्री०) अर्ह + णिच् भावे "युच्" (३-३-१०७)। **–णा** –ಣಾ. "अर्हणामर्हते चक्रुर्मुनयो नयचक्षुषे" रघु० १-५५।

**अर्हणीय** ಅರ್ಹಣೀಯ (वि०) 1. ಪೂಜಿಸಲು ಅರ್ಹನಾದ, ಪೂಜಿಸಲ್ಪಡುವ. अर्ह (पूजायाम्) कर्म० "अनीयर्" (३-१-९६)। 2. ಪೂಜಾದ್ರವ್ಯ.

**अर्हत्** ಅರ್ಹತ್ (पु०) 1. ಬುದ್ಧದೇವ. 2. ಒಬ್ಬ ಜೈನಾಚಾರ್ಯರು. "सर्वज्ञो जितरागादिदोषस्त्रैलोक्यपूजितः। यथास्थितार्थवादी च देवोऽर्हन् परमेश्वरः"। 3. ಯೋಗ್ಯನಾದ, ಗೌರವಾರ್ಹನಾದ, ಪೂಜೆಗೆ ಯೋಗ್ಯನಾದ. अर्ह (पूजायाम्) "शतृ" (३-२-१३३)। "अर्हणामर्हते चक्रुर्मुनयो नयचक्षुषे" रघु० १-५५।

**अर्हन्त** ಅರ್ಹಂತ (पुं०) 1. ಶಿವ, ಈಶ್ವರ. 2. ಬೌದ್ಧ ಸಂನ್ಯಾಸಿ. 3. ಬುದ್ಧದೇವ. अर्ह (पूजायाम्) "झच्" बाहु०। "

**अर्हा** ಅರ್ಹಾ (स्त्री०) ಪೂಜೆ, ಗೌರವ, ಸತ್ಕಾರ. ["अर्ह" ಪದದಲ್ಲಿ ನೋಡಿ.]

**अर्हित** ಅರ್ಹಿತ (न०) 1. ಪೂಜೆ, ಗೌರವ, ಸತ್ಕಾರ. अर्ह (पूजायाम्) भावे "क्तः" (३-३-११४)। (वि०) 2. ಪೂಜಿಸಲ್ಪಟ್ಟ, ಸತ್ಕರಿಸಲ್ಪಟ್ಟ, ಗೌರವಿಸಲ್ಪಟ್ಟ. अर्हते – अर्ह कर्म० "क्तः" (३-२-१०२)।

**अल** – भूषणपर्याप्तिवारणेषु (भ्वा० प० सक० से०)।

| | | |
|---|---|---|
| १. लट्— अलति | अलतः | अलन्ति। |
| अलसि | अलथः | अलथ। |
| अलामि | अलावः | अलामः। |
| २. लिट्—आल | आलतुः | आलुः। |
| ३. लुट्— अलिता | अलितारौ | अलितारः। |
| ४. लृट्— अलिष्यति | अलिष्यतः | अलिष्यन्ति। |
| ५. लोट्—अलतु, अलतात् | अलताम् | अलन्तु। |
| ६. लङ्— आलत् | आलताम् | आलन्। |
| ७. लिङ्—अलेत् | अलेताम् | अलेयुः। |
| ८. आशीर्लिङ्— अल्यात् | अल्यास्ताम् | अल्यासुः। |
| ९. लुङ्— आलीत् | आलिष्टाम् | आलिषुः। |
| १०. लृङ्— आलिष्यत् | आलिष्यताम् | आलिष्यन्। |

1. ಅಲಂಕರಿಸು, ಶೃಂಗರಿಸು. 2. ಸಮರ್ಥನಾಗು, ಶಕ್ತನಾಗು. 3. ತಡೆಗಟ್ಟು, ನಿವಾರಿಸು, ಹೋಗಲಾಡಿಸು.

**भावे**:—१. अल्यते। २. आले। ३. अलिता। ४. अलिष्यते। ५. अल्यताम्। ६. आल्यत। ७. अल्येत। ८. अलिषीष्ट। ९. आलि। १०. आलिष्यत।

**णिचि**:—१. आलयति, –ते। २. आलयांचकार, –चक्रे, –बभूव, –आ। ३. आलयिता। ४. आलयिष्यति, –ते। ५. आलयतु, –ताम्। ६. आलयत्, –त। ७. आलयेत्, –त। ८. आल्यात्, आलयिषीष्ट। ९. आलिलत्, –त। १०. आलयिष्यत्, –त।

**ण्यन्तात् कर्मणि**:— १. आल्यते। २. आलयांचक्रे, –बभूवे, –आसे। ३. आलयिता, आलिता। ४. आलयिष्यते, आलिष्यते। ५. आल्यताम्। ६. आल्यत। ७. आल्येत। ८. आलयिषीष्ट, आलिषीष्ट। ९. आलि आलिषाताम्। आलयिषाताम्। १०. आलयिष्यत, आलिष्यत।

**सनि**:—१. अलिलिषति। २. अलिलिषांचकार, –बभूव, –आस। ३. अलिलिषिता। ४. अलिलिषिष्यति। ५. अलिलिषतु। ६. आलिलिषत्। ७. अलिलिषेत्। ८. अलिलिष्यात्। ९. आलिलिषीत्। १०. आलिलिषिष्यत्।

**केवलात् कृत्सु**:—तव्यः–अलितव्यम्। अनीयर्–अलनीयम्। ण्यत्–आल्यम्। कर्म० क्तः–अलितः। क्तवतुः–अलितवान्। शतृ–अलन्; अलन्ती। अलिष्यन्; अलिष्यती, अलिष्यन्ती। तुमुन्–अलितुम्। भावे क्तः–अलितम्। ल्युट्–अलनम्। क्त्वा–अलित्वा। ल्यप्–समल्य। णमुल्–आलमालम्। अलित्वालित्वा।

**ण्यन्तात् कृत्सु**:—आलयितव्यः। आलनीयः। आल्यः। आलितः। आलितवान्। आलयन्; आलयन्ती। आलयमानः। आलयिष्यन्; आलयिष्यती, आलयिष्यन्ती। आलयिष्यमाणः। आलयितुम्। आलितम्। आलनम्। आलयित्वा। उपाल्य। आलमालम्। आलयित्वालयित्वा।

**अल** ಅಲ (न०) 1. ಚೇಳಿನ ಕೊಂಡಿಯ ಮುಳ್ಳು. 2. ಹರಿತಾಳ, ಅರಿದಳ. "वृश्चिको द्रुण आल्यालिः अलं तत्पुच्छकण्टकः" अभि० चि०।

**अलक** ಅಲಕ (पुं०) 1. ಉಂಗುರಗೂದಲು, ಗುಂಗುರುಗೂದಲು. अलति – अल (भूषणादौ) "वुन्" (उ० ५-३५)। 2. ಮುಂಗುರುಳು. "तदाप्रभृत्युन्मदना पितुर्गृहे ललाटिकाचन्दनधूसरालका" कुमा० ५-५५। 3. ವಾಸನೆಯ ಪುಡಿ, ಮೈಗೆ ಪೂಸಿ(ಹಾಕಿ)ಕೊಳ್ಳುವ ಸುಗಂಧ ಚೂರ್ಣ. 4. ಹುಚ್ಚುನಾಯಿ.

**अलकनन्दा** ಅಲಕನಂದಾ (स्त्री०) ಗಂಗಾನದಿ.

**अलकप्रभा** ಅಲಕಪ್ರಭಾ (स्त्री०) ಕುಬೇರನ ಪಟ್ಟಣ.

**अलका** ಅಲಕಾ (स्त्री०) 1. ಕುಬೇರನ ಪಟ್ಟಣ. "अलकामतिवाह्यैव वसतिं वसुसंपदाम्" कुमा० ६-३७। 2. ಎಂಟರಿಂದ ಹತ್ತು ವಯಸ್ಸಿನೊಳಗಿನ ಕನ್ಯೆ.

**अलकाधिप** ಅಲಕಾಧಿಪ –अधिपति –ಅಧಿಪತಿ (पुं०) ಕುಬೇರ. अलकाया अधिपः अधिपतिर्वा। "अलकाधिपभृत्यदर्शितं शिवमुर्वीधरवर्त्म संप्रयान्" किरा० ३-५९।

**अलक्त** – **क** ಅಲಕ್ತ–ಕ (पुं०) ಅರಗು, ಒಂದು ಮರದ ರಸ (ಅಂಟು). न रक्तोऽस्मात्। रस्य लः (वा० ८-२-१०)। स्वार्थे "कन्" वा। "न्यस्तालक्तकरक्तमाल्यवसना" मालती० ५-२४।

**अलक्षण** ಅಲಕ್ಷಣ (न०) 1. ಕೆಟ್ಟಲಕ್ಷಣ. 2. ಕಾರಣವಲ್ಲದ ಹೇತು. (वि०) 3. ಸುಂದರವಲ್ಲದ. 4. ಗುರುತಿಲ್ಲದ. 5. ಕೆಟ್ಟಲಕ್ಷಣವುಳ್ಳ.

**अलक्षित** ಅಲಕ್ಷಿತ (वि०) ನೋಡಲ್ಪಡದ, ಕಾಣಲ್ಪಡದ. न लक्षितः। "अलक्षिताभ्युत्पतनो नृपेण" रघु० २-२७।

**अलक्ष्मन्** ಅಲಕ್ಷ್ಮನ್ (वि०) ಗುರುತಿಲ್ಲದ, ಚಿಹ್ನೆಯಿಲ್ಲದ. न लक्ष्म यस्य।

**अलक्ष्मी** ಅಲಕ್ಷ್ಮೀ (स्त्री०) 1. ವಿಪತ್ತು, ತೊಂದರೆ, ಕಷ್ಟ. 2. ದಾರಿದ್ರ್ಯ, ದುರ್ಗತಿ, ಬಡತನ. "कामान् दुग्धे विप्रकर्षत्यलक्ष्मीम्" उ० रा० ५-३१।

**अलक्ष्मीक** ಅಲಕ್ಷ್ಮೀಕ (वि०) 1. ದರಿದ್ರ, ಬಡವ, ನಿರ್ಗತಿಕ. न विद्यते लक्ष्मीर्यस्य "कप्"। 2. ತೊಂದರೆಗೊಳಗಾದವನು. 3. ಕಾಂತಿಹೀನನಾದ.

**अलक्ष्य** ಅಲಕ್ಷ್ಯ (वि०) 1. ಅದೃಶ್ಯವಾದ, ನೋಡಲಾಗದ, ನೋಡಲು ಅಶಕ್ಯವಾದ. 2. ಗುರುತಿಸಲಾಗದ. 3. ಲಕ್ಷ್ಯವಲ್ಲದ, ಕ್ಷುಲ್ಲಕ, ಅಲ್ಪ. 4. ಕಪಟವಿಲ್ಲದ, ವಂಚನೆಯಿಲ್ಲದ, ವಾಸ್ತವವಾದ. 5. ವಿವಕ್ಷಿತವಲ್ಲದ, ಉದಾಸೀನನಾದ. 6. (ಬಾಣಕ್ಕೆ) ಗುರಿಯಿಲ್ಲದ. न० त०। 7. ಲಕ್ಷಣಾವೃತ್ತಿಯಿಂದ ತೋರದ (ಅರ್ಥ). 8. ಲಕ್ಷಣಸಮನ್ವಯವಾಗಬಾರದ ಜಾಗ. "शृङ्गित्वं गोर्लक्षणम्" ಈ ಲಕ್ಷಣಕ್ಕೆ ಮಹಿಷವು ಅಲಕ್ಷ್ಯ.

**अलक्ष्यगति** ಅಲಕ್ಷ್ಯಗತಿ (वि०) ಕಣ್ಣಿಗೆ ಕಾಣದ ಗಮನವುಳ್ಳ, ನೋಡಲು ಅಶಕ್ಯವಾದ ಚಲನೆಯುಳ್ಳ. अलक्ष्या गतिर्यस्य।

**अलक्ष्यजन्मता** ಅಲಕ್ಷ್ಯಜನ್ಮತಾ (स्त्री०) ತಿಳಿಯಲಾಗದ ಜನ್ಮ, ಅವ್ಯಕ್ತವಾದ ಉತ್ಪತ್ತಿ. अलक्ष्यजन्मनो भावः "तल्" (५-१-११९)। "वपुर्विरूपाक्षमलक्ष्यजन्मता दिगम्बरत्वेन निवेदितं वसु" कुमा० ५-७२।

**अलक्ष्यजन्मन्** ಅಲಕ್ಷ್ಯಜನ್ಮನ್ (न०) 1. ತಿಳಿಯಲಾಗದ ಹುಟ್ಟು, ಅವ್ಯಕ್ತವಾದ ಉತ್ಪತ್ತಿ. न० त०। (वि०) 2. ತಿಳಿಯಲಾಗದ ಉತ್ಪತ್ತಿಯುಳ್ಳ, ಅವ್ಯಕ್ತವಾದ ಜನ್ಮವುಳ್ಳ. अलक्ष्यं जन्म यस्य।

**अलक्ष्यवाच्** ಅಲಕ್ಷ್ಯವಾಚ್ (स्त्री०) 1. ಅಸ್ಪಷ್ಟವಾದ ಮಾತು. (वि०) 2. ಅಸ್ಪಷ್ಟವಾದ ಮಾತುಳ್ಳ. अलक्ष्या वाक् यस्य।

**अलगर्द** ಅಲಗರ್ದ (पु०) 1. ನೀರುಹಾವು. लगति — लगे (सङ्गे) "क्विप्" (३-२-१७८)। अर्दयति — अर्द (हिंसायाम्) "अच्" (३-१-१३४)। लक् चासावर्दश्च। लग्नः सन् पीडक इत्यर्थः। निर्विषत्वात्तद्भिन्नोऽलगर्दः। [ನೀರುಹಾವು ಮೈಗೆ ಸುತ್ತಿಕೊಂಡು ಪೀಡಿಸುವುದಿಲ್ಲವಾದುದರಿಂದ ಈ ಹೆಸರು.] (स्त्री०) -र्दा -ರ್ದಾ. 2. ಜಲೂಕೆ, ಜಿಗಣೆ, ರಕ್ತವನ್ನು ಹೀರುವ ಒಂದು ಹುಳು.

**अलघु** ಅಲಘು (पु०) 1. ಗುರುವರ್ಣ, ಗುರುಸಂಜ್ಞೆಯುಳ್ಳ ಅಕ್ಷರ. (वि०) 2. ಹಗುರವಲ್ಲದ, ಭಾರವಾದ. न लघुः। "जघनमलघुपीवरोरु कृच्छ्रादुरुनिबिरीसनितम्बभारखेदि" माघ० ७-२०। 3. ಉದ್ದವಾದ, ದೊಡ್ಡದಾದ. "अलघुचरणाकृष्टग्राहां विषाणिभिरुन्मदैः" माघ० १२-७७। 4. ದೊಡ್ಡದಾದ, ಸಣ್ಣದಲ್ಲದ. 5. ವೇಗವಾದ. (क्रि० वि०) 6. ವೇಗವಾಗಿ. "अलघुचलितजङ्घावातनिष्पेषदोषात्" चं० रा०। 7. ಉದ್ದವಾಗಿ. 8. ದೊಡ್ಡದಾಗಿ. 9. ಭಾರವಾಗಿ.

**अलङ्करण** ಅಲಂಕರಣ (न०) 1. ಅಲಂಕಾರ, ಶೃಂಗಾರ. अलम्+डु कृञ् (करणे) भावे "ल्युट्" (३-३-११५)। 2. ಭೂಷಣ, ಒಡವೆ. अलंक्रियतेऽनेन — करं "ल्युट्" (३-३-११७)। "सृजति तावदशेषगुणाकरं पुरुषरत्नमलङ्करणं भुवः" भर्तृ० १-८६।

**अलङ्करिष्णु** ಅಲಂಕರಿಷ್ಣು (वि०) 1. ಅಲಂಕಾರ ಮಾಡುವವನು, ಶೃಂಗರಿಸುವವನು. अलम्+डु कृञ् (करणे) "इष्णुच्" (३-२-१३६)। 2. ಅಲಂಕಾರ ಮಾಡುವ ಸ್ವಭಾವದವನು.

**अलङ्कर्तृ** ಅಲಂಕರ್ತೃ (वि०) ಅಲಂಕಾರ ಮಾಡುವವನು, ಶೃಂಗರಿಸುವವನು. अलम्+डु कृञ् (करणे) "तृन्" (३-२-१३५)। स्त्रियां "ङीप्" (४-१-५)। -कर्त्री -ಕರ್ತ್ರೀ.

**अलङ्कर्मीण** ಅಲಂಕರ್ಮೀಣ (वि०) ಕಾರ್ಯದಲ್ಲಿ ದಕ್ಷನಾದ, ಕೆಲಸ ಮಾಡುವುದರಲ್ಲಿ ಸಮರ್ಥನಾದ. कर्मणे क्रियायै अलम् — अलंकर्मन् "खः" (५-४-७)। "कर्मक्षमोऽलङ्कर्मीणः क्रियावान् कर्मसूद्यतः" अम०।

**अलङ्कार** ಅಲಂಕಾರ (पु०) 1. ಭೂಷಣ, ಒಡವೆ. अलङ्क्रियतेऽनेन — अलम्+डु कृञ् (करणे) "घञ्" (३-३-१९)। 2. ಅಲಂಕಾರ, ಶೃಂಗಾರ. 3. ಅಲಂಕಾರಶಾಸ್ತ್ರ. 4. ಶಬ್ದ ಮತ್ತು ಅರ್ಥಾಲಂಕಾರ, ಶಬ್ದಾರ್ಥಗಳಿಗೆ ಹೆಚ್ಚು ಕಾಂತಿಯನ್ನು ಕೊಡುವ ಒಂದು ಧರ್ಮ. "काव्यशोभाकरान् धर्मानलङ्कारान् प्रचक्षते"

काव्या० २-१। (1) ಅನುಪ್ರಾಸ ಯಮಕಾದಿಗಳು ಶಬ್ದಾಲಂಕಾರ. (2) ಉಪಮಾ ರೂಪಕ ಉತ್ಪ್ರೇಕ್ಷಾದಿ ಗಳು ಅರ್ಥಾಲಂಕಾರ.

**अलङ्कृत** ಅಲಂಕೃತ (वि०) ಅಲಂಕರಿಸಲ್ಪಟ್ಟ, ಶೃಂಗರಿಸಲ್ಪಟ್ಟ. अलम्+डु कृञ् (करणे) "क्तः" (३-२-१०२)। "अलङ्कृतानां ऋजुतागुणेन गुरूपदिष्टां गतिमास्थितानाम्" किरा० १७-२९।

**अलङ्कृति** ಅಲಂಕೃತಿ (स्त्री०) 1. ಅಲಂಕಾರ, ಶೃಂಗಾರ. अलम्+डु कृञ् (करणे) "क्तिन्" (३-३-९४)। 2. ಶಬ್ದ ಮತ್ತು ಅರ್ಥಾಲಂಕಾರ. "तददोषौ शब्दार्थौ सगुणावनलङ्कृती पुनः क्वापि" काव्यप्र०।

**अलङ्क्रिया** ಅಲಂಕ್ರಿಯಾ (स्त्री०) ಅಲಂಕಾರ ಮಾಡು ವುದು, ಶೃಂಗರಿಸುವುದು. अलम्+डु कृञ् (करणे) भावे "शः" (३-३-१००)।

**अलङ्घन** ಅಲಂಘನ (न०) ಮೀರದಿರುವಿಕೆ, ಅತಿಕ್ರಮಿಸ ದಿರುವಿಕೆ. न लङ्घनम्।

**अलङ्घनीय** ಅಲಂಘನೀಯ (वि०) ಅತಿಕ್ರಮಿಸಲು ಯೋಗ್ಯವಲ್ಲದ, ಮೀರಲಾಗದ. न लङ्घयितुं योग्यम्। "अलङ्घनीयं प्रकृतावपि स्थितं निवातनिष्कम्पमिवापगापतिम्" किरा० १४-३७।

**अलङ्घनीयता** ಅಲಂಘನೀಯತಾ (स्त्री०) 1. ಅತಿಕ್ರಮಿಸಲು ಆಗದಿರುವಿಕೆ, ಮೀರಲು ಶಕ್ಯವಲ್ಲದಿರುವಿಕೆ. अलङ्घनीय "तल्" (५-१-११९)। "अलङ्घनीयताहेतुरुभयं तन्मनस्विनि" माघ० २-४८। 2. ಪೂಜ್ಯತೆ, ಗೌರವಾರ್ಹತೆ.

**अलङ्घ्य** ಅಲಂಘ್ಯ (वि०) 1. ದಾಟಲಾಗದ. 2. ಅತಿಕ್ರಮಿಸಲು ಅಶಕ್ಯವಾದ, ಮೀರಲಾಗದ. न लङ्घयितुं शक्यम्। "अलङ्घ्यं तत्तदुद्वीक्ष्य यद्यदुच्चैर्महीभृताम्" किरा० ११-६०। 3. ಅಸಾಧ್ಯವಾದ, ಪಡೆಯಲಾಗದ. "उपहितपरमप्रभावधाम्नां न हि जयिनां तपसामलङ्घ्यमस्ति" किरा० १०-६।

**अलञ्ज (ञ्जु)** र ಅಲಂಜ (ಜು) ರ (पु०) ಮಣ್ಣಿನ ಹೂಜಿ. अलं सामर्थ्यं जृणाति—जृ (वयोहानौ) "अच्" (३-१-१३४)।

**अलभ्य** ಅಲಭ್ಯ (वि०) ಹೊಂದಲು ಅನರ್ಹವಾದ, ಪಡೆಯಲು ಅಯೋಗ್ಯವಾದ. न लब्धुमर्हः। "अलभ्यशोकाभिभवेयमाकृतिर्विमानना सुभ्रु कुतः पितुर्गृहे" कुमा० ५-४३।

**अलभ्ययोग** ಅಲಭ್ಯಯೋಗ (पु०) ಪರ್ವಕಾಲ, ಪುಣ್ಯ ಕಾಲ, ಅಪೂರ್ವವಾಗಿ ಒದಗುವ ತಿಥಿ ವಾರ ನಕ್ಷತ್ರಾದಿ ಗಳು ಸೇರುವ ಕಾಲ; ಅರ್ಧೋದಯ, ಮಹೋದಯ ಮುಂತಾದುವು.

**अलम्** ಅಲಮ್ (अव्य०) 1. ಭೂಷಣ, ಅಲಂಕಾರ, ಒಡವೆ. 2. ಸಾಮರ್ಥ್ಯ, ಶಕ್ತಿ. 3. ಪರ್ಯಾಪ್ತಿ, ಸಾಕಾಗುವಿಕೆ. 4. ತಡೆ, ನಿಷೇಧ. अल (भूषणपर्याप्तिवारणेषु) "अम्" बाहु०। "अलं विवादेन यथाश्रुतं त्वया तथाविधस्तावदशेषमस्तु सः" कुमा० ५-८२। 5. ಅತಿಶಯವಾಗಿ, ಹೆಚ್ಚಾಗಿ, ಬಹಳವಾಗಿ, ಮತ್ತೆ ಮತ್ತೆ. "कुरु तात तपांस्यमार्गदायी विजयायेत्यलमन्वशान्मुनिर्माम्" किरा० १३-१३।

**अलम्पुरुषीण** ಅಲಂಪುರುಷೀಣ (पु०) (ಯುದ್ಧದಲ್ಲಿ) ಶತ್ರುಪಕ್ಷದ ಸೈನ್ಯದ ಯಜಮಾನ (ಸೇನಾಪತಿ). अलं पुरुषाय—अलम्पुरुष "खः" (५-४-७)।

**अलम्बुद्धि** ಅಲಂಬುದ್ಧಿ (स्त्री०) 1. "ಸಾಕು" ಎಂಬ ಬುದ್ಧಿ, ತೃಪ್ತಿ. 2. ಸಾಕಾದಷ್ಟು ಬುದ್ಧಿ, ತಕ್ಕಷ್ಟು ಬುದ್ಧಿ. 3. ಮಿಥ್ಯಾಜ್ಞಾನ, ತಪ್ಪು ತಿಳವಳಿಕೆ.

**अलम्बुष** ಅಲಂಬುಷ (पु०) 1. ವಮನ, ವಾಂತಿ. 2. ಒಬ್ಬ ರಾಕ್ಷಸ. 3. ರಾವಣನ ಮಂತ್ರಿ ಪ್ರಹಸ್ತ. "अलम्बुषं तथा युद्धे विचरन्तमभीतवत्" भा० द्रोण०। (स्त्री०)—षा—ಷಾ. 4. ಒಬ್ಬ ಅಪ್ಸರಸ್ಸು. "अलम्बुषायामिक्ष्वाकोर्जातः कश्चिन्महीपतिः" चं० रा०। 5. ತಡೆಯ ಗೆರೆ, ಇತರರ ಪ್ರವೇಶವನ್ನು ತಡೆಗಟ್ಟುವ ನೀರಿನ ಗೆರೆ. 6. ಮಂಗರವಳ್ಳಿ. "अलम्बुषः प्रहस्ते च छर्दने राक्षसान्तरे। अलम्बुषा तु मुण्डीर्यां स्वर्गवाराङ्गनान्तरे" मेदि०।

**अलम्भूष्णु** ಅಲಂಭೂಷ್ಣು (वि०) ಸಮರ್ಥ, ಶಕ್ತ. अलंभवनशीलः—अलम्+भू "ग्स्नुः" (३-२-१३९)। "विनाप्यस्मदलम्भूष्णुरिज्यायै तपसः सुतः" माघ० २-९।

**अलर्क** ಅಲರ್ಕ (पु०) 1. ಹುಚ್ಚುನಾಯಿ. अलम् अर्क्यते—अर्क (स्तवने) "घञ्" (३-३-१९)। 2. ಬಿಳಿ ಎಕ್ಕದ ಗಿಡ. 3. ಹಂದಿಯ ಆಕಾರದ ಎಂಟು ಕಾಲುಗಳುಳ್ಳ ಒಂದು ಮೃಗ. 4. ಪುತ್ರ, ಮಗ. 5. ಒಬ್ಬ ರಾಜ. [ಈತನು ತನ್ನನ್ನು ಯಾಚಿಸಿದ ಒಬ್ಬ ಬ್ರಾಹ್ಮಣನಿಗೆ ತನ್ನ ಎರಡು ಕಣ್ಣುಗಳನ್ನೂ ಸ್ವಲ್ಪವೂ ಅನುಮಾನಿಸದೆ ದಾನಮಾಡಿ ಅವನ ಇಷ್ಟವನ್ನು ಪೂರ್ತಿಮಾಡಿದನು.] "अभ्यर्च्य कस्मैचिदुपाश्रिताय वितीर्य विप्राय विलोचने

स्वे। अपूरयत्कश्चिदलर्कसंज्ञ: प्राज्ञ: प्रतिज्ञां प्रथितप्रभाव:" चं० रा०। 6. ಗುಂಗೆಹುಳು, ಕರ್ಣನು ಪರಶುರಾಮನನ್ನು ತೊಡೆಯ ಮೇಲೆ ಮಲಗಿಸಿಕೊಂಡಿದ್ದಾಗ ಅವನ ತೊಡೆಯನ್ನು ಕೊರೆದ ಹುಳು. "रोमभि: सन्निरुद्धाङ्गमलर्कं नाम नामत:" भा० शान्ति० ३-१३। (स्त्री०) -र्का -ರ್ಕಾ. 7. ಮದಾಲಸೆಯೆಂಬ ಒಬ್ಬ ಅಪ್ಸರಸ್ಸು. "अथात्मजे। मदालसायां श्वेतार्केऽप्यलर्को भ्रान्तशुन्यपि" नानार्थर०।

**अलस ಅಲಸ** (पु०) 1. ಕಾಲಿನ ಬೆರಳು ಸಂದಿಯ ಹುಣ್ಣು, ವ್ರಣ, ಕೆಸರಿನ ಹುಣ್ಣು. (वि०) 2. ಸೋಮಾರಿ, ಮೈಗಳ್ಳ, ಕೆಲಸಮಾಡದವನು. न लसति—लस (श्लेषणे) "अच्" (३-१-१३४)। "अव्यवसायिनमलसं दैवपरं साहसाच्च परिहीनम्। प्रमदेव वृद्धपति नेच्छत्युपगृहीतुं लक्ष्मी:" हितो०। 3. ಬಳಲಿದ, ಆಯಾಸಗೊಂಡ. "अलसपदमनोरमं प्रकृत्या जितकलहंसवधूगति प्रयातम्" किरा० १०-६०। 4. ಬೇಸರವುಳ್ಳ, ಕೆಲಸದಲ್ಲಿ ದ್ವೇಷವುಳ್ಳ. "गमनमलसं शून्या दृष्टि: शरीरमसौष्ठवम्" मालती० १-२०। 5. ಮಂದಸ್ವಭಾವದವನು, ಜಡಪ್ರಕೃತಿಯುಳ್ಳವನು. (स्त्री०)-सा-ಸಾ. 6. ಹಂಸಪದೀಲತೆ. "अलसा हंसपद्यां ना पादरोगद्रुभेदयो:" मेदि०।

**अलसक ಅಲಸಕ** (पु०) ಹೊಟ್ಟೆಯ ರೋಗ, ಉದರವ್ಯಾಧಿ, ಒಂದು ವಿಧ ಅಜೀರ್ಣ ರೋಗ. "प्रयाति नोर्ध्वं नाधस्तात् आहारो न च पच्यते। आमाशयोऽलसीभूतस्तेन सोऽलसक: स्मृत:" भावप्र०।

**अलात ಅಲಾತ** (न०) ಅರ್ಧಬೆಂದ ಮರ, ಕೊಳ್ಳಿ, ಅರ್ಧ ಉರಿದ ಕಟ್ಟಿಗೆ. न लातमस्य। "कुर्वतेऽस्मिन्नमोघेऽपि निर्वाणालातलाघवम्" कुमा० २-२३।

**अलाबू ಅಲಾಬೂ** (स्त्री०) 1. ಸೋರೆಗಿಡ. न लम्बते—लबि (अवस्रंसने) "ऊ:" (उ० १-८७)। (न०) -बु -ಬು. 2. ಸೋರೆಕಾಯಿ. 3. ಸೋರೆ ಬುರುಡೆ.

**अलार ಅಲಾರ** (न०) ಬಾಗಿಲು. शब्दर०।

**अलि ಅಲಿ** (पु०) 1. ಭ್ರಮರ, ದುಂಬಿ. अलति दंशने समर्थो भवति—अल (भूषणादौ) "इन्" (उ० ४-११८)। "गण्डोड्डीनालिमालामुखरितककुभस्ताण्डवे शूलपाणे:" मालती० १-२। 2. ವೃಶ್ಚಿಕ, ಚೇಳು. 3. ವಾಯಸ, ಕಾಗೆ. 4. ಕೋಗಿಲೆ. 5. ಮದ್ಯ. 6. ವೃಶ್ಚಿಕರಾಶಿ. "अलि: सुरापुष्पलिहो:" मेदि०।

**अलिक ಅಲಿಕ** (न०) ಹಣೆ, ಲಲಾಟ, ನೊಸಲು. अलति—अल (भूषणादौ) "इकन्" (उ० ४-२७)। "ललाटमलिकं गोधि:" अम०।

**अलिगर्द्ध ಅಲಿಗರ್ದ್ಧ** (पु०) ನೀರುಹಾವು. अलिरिव गृघ्नोति—गृधु (अभिकाङ्क्षायाम्) "अच्" (३-१-१३४)।

**अलिजिह्वा ಅಲಿಜಿಹ್ವಾ** (स्त्री०) ಕಿರುನಾಲಿಗೆ, ಉಪನಾಲಿಗೆ, ನಂಗಿಲು, अलिरिव क्षुद्रा जिह्वा।

**अलिञ्जर ಅಲಿಂಜರ** (पु०) ಮಣ್ಣಿನ ಹೂಜಿ. अलि जरयति—जृष् (वयोहानौ) "अच्" (३-१-१३४)। "अलिञ्जर: स्यान्मणिक:" अम०।

**अलिदूर्वा ಅಲಿದೂರ್ವಾ** (स्त्री०) ಉದ್ದವಾಗಿ ಬಳ್ಳಿಯಂತೆ ಬೆಳೆಯುವ ಗರುಕೆ.

**अलिन् ಅಲಿನ್** (पु०) 1. ಭ್ರಮರ, ದುಂಬಿ. अलं वृश्चिकलाङ्गूलं तदिवास्यास्ति—"इनि:" (५-२-११५)। "मलिनिमार्यलिनि माधवयोषिताम्" माघ० ६-४। 2. ವೃಶ್ಚಿಕ, ಚೇಳು. अलमस्यास्ति — "इनि:" (५-२-११५)।

**अलिन्द ಅಲಿಂದ** (पु०) 1. ಮನೆಯ ಬಾಗಿಲ ಮುಂದಿನ ಜಗುಲಿ. 2. ಮನೆಯ ಮುಂಭಾಗದಲ್ಲಿ ಚತುರಶ್ರ (ಚಚ್ಚೌಕ) ವಾದ ಒಂದು ಪ್ರದೇಶ. अल (भूषणादौ) "किन्दच्" बाहु०। "यस्यामलिन्देषु न चक्रुरेव मुग्धाङ्गनागोमयगोमुखानि" माघ० ३-४८।

**अलिपक ಅಲಿಪಕ** (पु०) 1. ಭ್ರಮರ, ದುಂಬಿ. 2. ಕೋಗಿಲೆ. 3. ನಾಯಿ. "अलिपको भृङ्गकोकिलकुक्कुरे" मेदि०।

**अलिप्रिय ಅಲಿಪ್ರಿಯ** (पु०) 1. ರಕ್ತಕಮಲ, ಕೆಂದಾವರೆ. अलीनां प्रिय:। (वि०) 2. ದುಂಬಿಗಳಿಗೆ ಪ್ರಿಯವಾದ, ಭ್ರಮರಗಳಿಗೆ ಸಂತೋಷವುಂಟುಮಾಡುವ. (स्त्री०) -या- ಯಾ. 3. ತುತೂರಿಹೂವು.

**अलिमक ಅಲಿಮಕ** (पु०) 1. ಕಮಲದ ಕುಸುರು. 2. ಹಿಪ್ಪೆಮರ. 3. ಕೋಗಿಲೆ. 4. ಮಂಡೂಕ, ಕಪ್ಪೆ. 5. ಭ್ರಮರ, ದುಂಬಿ. "भवेदलिमको भेके पिकेऽलौ पद्मकेसरे। मधूकेऽपि" मेदि०।

**अलीक ಅಲೀಕ** (न०) 1. ಹಣೆ, ಲಲಾಟ, ನೊಸಲು. अल (भूषणादौ) "कीकन्" (उ० ४-२५)। निपा०। "दिशामलीकालकभङ्गतां गतस्त्रयीवधूकर्णतमालपल्लव:" काद०। 2. ಮಿಥ್ಯೆ, ಸುಳ್ಳು. "तद्यथा स महाराजो नालीकमधिगच्छति" रामा०। 3. ಸ್ವರ್ಗ. (वि०) 4. ಅಪ್ರಿಯವಾದ. 5. ಅಸತ್ಯವಾದ, ಸುಳ್ಳಾದ.

**अल्** ಅಲು (ಪುಂ) ನೀರಿನ ಸಣ್ಣ ಪಾತ್ರೆ, ಸಣ್ಣ ಹೂಜಿ.

**अलोक** ಅಲೋಕ (ಪುಂ) 1. ಪ್ರಳಯ, ಜಗತ್ತಿನ ನಾಶ. "रक्ष सर्वानिमाल्लोकान्नालोकं कर्तुमर्हसि" रामा०। 2. ಪಾತಾಳಲೋಕ. 3. ಆಧ್ಯಾತ್ಮಿಕ ಜಗತ್ತು, ಧಾರ್ಮಿಕ ಪ್ರಪಂಚ. (ವಿಂ) 4. ಕಣ್ಣಿಗೆ ಕಾಣದಿರುವ, ಅಪ್ರಕಾಶವಾದ. "प्रकाशश्चाप्रकाशश्च लोकालोक इवाचल:" रघु० १-६८।

**अलौकिक** ಅಲೌಕಿಕ (ವಿಂ) 1. ಲೋಕದಲ್ಲಿಲ್ಲದ, ಲೋಕದಲ್ಲಿ ತಿಳಿಯದ, ಲೋಕಾತೀತವಾದ, ಲೋಕಕ್ಕೆ ಸಂಬಂಧಪಡದ. लोके विदित: "ठञ्" (५-१-४४)। ನಂ ತಂ। 2. ಅಸಾಧಾರಣವಾದ, ಲೋಕಸಾಮಾನ್ಯವಲ್ಲದ, ಉತ್ಕೃಷ್ಟವಾದ.

**अल्प** ಅಲ್ಪ (ವಿಂ) 1. ಸ್ವಲ್ಪ, ಕೊಂಚ. अल (भूषणादौ) "प:" बाहु०। "क्व सूर्यप्रभवो वंश: क्वचाल्पविषया मति:" रघु० १-२। "अल्पस्य हेतो: बहु हातुमिच्छन् विचारमूढ: प्रतिभासि मे त्वम्" रघु० २-४७। 2. ಚಿಕ್ಕದಾದ, ಸಣ್ಣದಾದ. (क्रिं वि०) 3. ಸ್ವಲ್ಪವಾಗಿ, ಕೊಂಚವಾಗಿ. 4. ಚಿಕ್ಕದಾಗಿ, ಸಣ್ಣದಾಗಿ.

**अल्पक** ಅಲ್ಪಕ (ಪುಂ) 1. ತೀಟಕಸಂಧಿ ಮರ. (ನಂ) 2. ಸ್ವಲ್ಪ, ಕೊಂಚ. (ವಿಂ) 3. ಚಿಕ್ಕದಾದ, ಸಣ್ಣದಾದ. अल्प एव अल्पक: स्वार्थे "कन्"। स्त्रियां अल्पिका ಅಲ್ಪಿಕಾ. 4. ತುಚ್ಛವಾದ, ನೀಚವಾದ, ನಿಂದ್ಯವಾದ. "नाग्निपरिशुद्धिमपि अल्पका: प्रतिपद्यन्ते" उ० रा० ४। "परदोषकथाभिरल्पक: स्वजनं तोषयितुं किलेच्छति" माघ० १६-२८।

**अल्पक्रीत** ಅಲ್ಪಕ್ರೀತ (ವಿಂ) ಕೊಂಚ ಬೆಲೆಗೆ ಕೊಂಡುಕೊಂಡ, ಅಗ್ಗದ ಬೆಲೆಗೆ ತೆಗೆದುಕೊಂಡ. अल्पेन क्रीतम्। स्त्रियां "ङीष्" (४-१-५०)। **-ती -ತೀ.**

**अल्पगन्ध** ಅಲ್ಪಗಂಧ (ನಂ) 1. ರಕ್ತೋತ್ಪಲ, ಕೆಂದಾವರೆ. (ವಿಂ) 2. ಕೊಂಚ ವಾಸನೆಯುಳ್ಳ. अल्पो गन्धो यस्य।

**अल्पज्ञ** ಅಲ್ಪಜ್ಞ (ವಿಂ) ಕೊಂಚಮಾತ್ರ ತಿಳಿದಿರುವ, ಅಲ್ಪಜ್ಞಾನವುಳ್ಳ. अल्पं जानाति — ज्ञा (अवबोधने) "क:" (३-२-३)।

**अल्पतनु** ಅಲ್ಪತನು (ವಿಂ) 1. ತೆಳುವಾದ ಮೈಯುಳ್ಳ. 2. ಬಡವಾದ, ದುರ್ಬಲ. 3. ಕುಳ್ಳ, ವಾಮನ, ಗಿಡ್ಡ. अल्पा तनुर्यस्य। "पृश्नि: किरातोऽल्पतनुर्दुर्बलस्तु कृशस्तनु:" वैज०।

**अल्पद** ಅಲ್ಪದ (ವಿಂ) ಕೊಂಚಕೊಡತಕ್ಕ, ಔದಾರ್ಯವಿಲ್ಲದ, ಕೊಡುಗೈಯಿಲ್ಲದ. अल्पं ददाति — डु दाञ् (दाने) "क:" (३-२-३)।

**अल्पदृष्टि** ಅಲ್ಪದೃಷ್ಟಿ (ವಿಂ) 1. ಸಂಕುಚಿತವಾದ ಮನಸ್ಸುಳ್ಳ, ಕ್ಷುದ್ರವಾದ ಹೃದಯವುಳ್ಳ. 2. ಮಂದದೃಷ್ಟಿಯುಳ್ಳ, ದೂರದ ನೋಟವಿಲ್ಲದ, ದೂರದ ವಸ್ತುವನ್ನು ನೋಡುವ ಶಕ್ತಿಯಿಲ್ಲದ. अल्पा दृष्टिर्यस्य।

**अल्पधी** ಅಲ್ಪಧೀ **-बुद्धि -ಬುದ್ಧಿ -मति -ಮತಿ** (ವಿಂ) ಅಲ್ಪವಾದ ಬುದ್ಧಿಯುಳ್ಳ, ಕೊಂಚ ತಿಳಿವಳಿಕೆಯುಳ್ಳ. अल्पा धी: बुद्धि: मतिर्वा यस्य।

**अल्पप्राण** ಅಲ್ಪಪ್ರಾಣ (ಪುಂ) 1. ಅಲ್ಪಪ್ರಾಣವಾಯುವಿನ ವ್ಯಾಪಾರವುಳ್ಳ ವರ್ಣ, ಅಲ್ಪಪ್ರಯತ್ನದಿಂದ ಉಚ್ಚರಿಸಲ್ಪಡುವ ಅಕ್ಷರ; ಕಾದಿಪಂಚವರ್ಗದ ಅಕ್ಷರಗಳಲ್ಲಿ ಒಂದು, ಮೂರು ಮತ್ತು ಐದನೆಯ ಅಕ್ಷರಗಳೂ ಯಮ (ಪೂರ್ವಸದೃಶವರ್ಣ) ಸಹಿತವಾದ ಒಂದು ಮತ್ತು ಮೂರನೆಯ ಅಕ್ಷರಗಳೂ यण् (ಯ ವ ರ ಲ) ವರ್ಣಗಳೂ ಅಲ್ಪಪ್ರಾಣಾಕ್ಷರಗಳು. "अयुग्मा वर्गयमगा यणश्चाल्पासव: स्मृता:" सि० कौ०। 2. ಅಕ್ಷರಗಳನ್ನು ಉಚ್ಚರಿಸುವ ಬಾಹ್ಯಪ್ರಯತ್ನಗಳಲ್ಲೊಂದು. विवार:, संवार:, श्वास:, नाद:, घोष:, अघोष:, अल्पप्राण:, महाप्राण:, उदात्त:, अनुदात्त: ಮತ್ತು स्वरित: ಎಂದು ಬಾಹ್ಯಪ್ರಯತ್ನವು ಹನ್ನೊಂದು ವಿಧ. (ವಿಂ) 3. ಅಲ್ಪಬಲವುಳ್ಳ, ಅಲ್ಪಪ್ರಾಣವಾಯುವುಳ್ಳ, ಬಹಳ ಕಷ್ಟದಿಂದ ಉಸಿರಾಡುವ, ಉಬ್ಬಸ ರೋಗವುಳ್ಳ. अल्प: ह्रस्व: प्राण: प्राणवायुर्यस्य।

**अल्पमारिष** ಅಲ್ಪಮಾರಿಷ (ಪುಂ) ಚಿಲುಕೀರೆ ಸೊಪ್ಪು. "तण्डुलीयोऽल्पमारिष:" अम०।

**अल्पमूल्य** ಅಲ್ಪಮೂಲ್ಯ (ವಿಂ) ಕೊಂಚ ಬೆಲೆಯುಳ್ಳ, ಅಗ್ಗದ ಬೆಲೆಯುಳ್ಳ. अल्पं मूल्यं यस्य।

**अल्पवयस्** ಅಲ್ಪವಯಸ್ (ವಿಂ) ಚಿಕ್ಕವಯಸ್ಸಿನ, ಪ್ರಾಯದ ವಯಸ್ಸುಳ್ಳ. अल्पं वयो यस्य।

**अल्पवादिन्** ಅಲ್ಪವಾದಿನ್ (ವಿಂ) ಕೊಂಚ ಮಾತಾಡುವ ಸ್ವಭಾವದ, ಮೌನಶೀಲ, ಮಿತಭಾಷಿ. अल्पं वदति — वद (व्यक्तायां वाचि) "णिनि:" (३-२-७८)। स्त्रियां "ङीप्" (४-१-५)। **-वादिनी -ವಾದಿನೀ.**

**अल्पविद्य** ಅಲ್ಪವಿದ್ಯ (ವಿಂ) ಅಲ್ಪವಿದ್ಯೆಯುಳ್ಳ, ಕೊಂಚ ತಿಳಿವಳಿಕೆಯುಳ್ಳ. अल्पा विद्या यस्य। "अल्पविद्यो महागर्वी"।

अवरीण ಅವರೀಣ (वि०) ತಿರಸ್ಕರಿಸಲ್ಪಟ್ಟ, ಧಿಕ್ಕರಿಸಲ್ಪಟ್ಟ. अवरीयते स्म — अव+रीङ् (स्रवणे) "क्तः" (३-२-१०२)। "अवरीणो धिक्कृतश्च" अम०।

अवरीयस् ಅವರೀಯಸ್ (वि०) ಬಹಳ ನಿಕೃಷ್ಟವಾದ. न वरीयान्। स्त्रियाम् "ङीप्" (४-१-६)। अवरीयसी ಅವರೀಯಸೀ.

अवरुग्ण ಅವರುಗ್ಣ (वि०) 1. ರೋಗದಿಂದ ಕೂಡಿದ. अव + रुज (हिंसायाम्) "क्तः" (३-२-१०२)। 2. ಮುರಿದಿರುವ, ಒಡೆದುಹೋಗಿರುವ. अव+रुजो (भङ्गे) "क्तः" (३-२-१०२)। "अवरुग्णतुङ्ग-सुरदारुतरौ" किरा० ६-५।

अवरुद्ध ಅವರುದ್ಧ (वि०) 1. ತಡೆಯಲ್ಪಟ್ಟ. अव+रुधिर् (आवरणे) "क्तः" (३-२-१०२)। 2. ರಹಸ್ಯವಾದ, ಇತರರಿಗೆ ತಿಳಿಯದಂತಿರುವ. "अस्ति कश्चिद्राज-सूनुरवरुद्धश्चरन्" दशकु०। 3. ರಹಸ್ಯವಾಗಿ ರಕ್ಷಿಸಲ್ಪಟ್ಟ, ಯಾರಿಗೂ ತಿಳಿಯದಂತೆ ಗೋಪ್ಯವಾಗಿಡಲ್ಪಟ್ಟ. "तासां चेदवरुद्धानां चरन्तीनां मिथो वने। यामुत्प्लुत्य वृको हन्यान्न पालस्तत्र किल्बिषी" मनु० ८-२३६। 4. ಬಂಧಿಸಲ್ಪಟ್ಟ, ತಡೆದಿಡಲ್ಪಟ್ಟ. 5. ಆಕ್ರಮಿಸಲ್ಪಟ್ಟ, ಮುತ್ತಿಗೆ ಹಾಕಲ್ಪಟ್ಟ.

अवरुद्धि ಅವರುದ್ಧಿ (स्त्री०) 1. ತಡೆ, ಅಡ್ಡಿ. 2. ಮುತ್ತಿಗೆ, ಆಕ್ರಮಣ. अव + रुधिर् (आवरणे) "क्तिन्" (३-३-९४)।

अवरूढ ಅವರೂಢ (वि०) 1. ಕೆಳಕ್ಕೆ ಇಳಿಸಲ್ಪಟ್ಟ. 2. ಕೆಳಕ್ಕೆ ಇಳಿದಿರುವ. अव + रुह कर्तं० "क्तः" (३-४-७२)। 3. ಕೀಳಲ್ಪಟ್ಟ, ಕಿತ್ತುಹಾಕಲ್ಪಟ್ಟ. अव+रुह (बीजजन्मादौ) "क्तः" (३-२-१०२)।

अवरोध ಅವರೋಧ (पु०) 1. ಅಂತಃಪುರ, ರಾಣಿವಾಸ. अवरुध्यतेऽत्र — अव + रुधिर् (आवरणे) "घञ्" (३-३-१२१)। "तेनावरोधप्रमदासखेन विगाहमानेन सरिद्वरां ताम्" रघु० १६-७१। 2. ಅಂತಃಪುರದ ಹೆಂಗಸು, ಮಹಿಷಿ, ರಾಜನ ಪತ್ನಿ. अवरुध्यते स्म— अव+रुधिर् कर्म० "घञ्" (३-३-१९)। "काकुत्स्थ-श्चिरविरहोत्सुकावरोधान् राजन्यान् स्वपुरनिवृत्तयेऽनुमेने" रघु० ४-८७। 3. ತಡೆ, ಅಡ್ಡಿ, ಪ್ರತಿಬಂಧಕ. अव+रुधिर् भावे "घञ्" (३-३-१८)। 4. ಮುತ್ತಿಗೆ, ಆಕ್ರಮಣ. 5. ಮರೆಯಾಗುವಿಕೆ. "अवरोधस्तिरोधाने राजवारेषु तद्गृहे" मेदि०। 6. ರಾಜನ ಅರಮನೆ. 7. ಹಳ್ಳ, ತಗ್ಗು ಪ್ರದೇಶ, ಗುಳಿ. 8. ಕೈಸೆರೆ, ಸೈದು, "अवरोधस्तु नृपौकसि। शुद्धान्ते च तिरोधाने गर्तादौ रोधनेऽपि च" हेम०। "अवरोधो राजगृहे शुद्धान्तेऽप्यवरोधने" नानार्थर०। 9. ಕಾವಲುಗಾರ. 10. ಆಚ್ಛಾದನ, ಹೊದಿಕೆ. 11. ಬೇಲಿ, ಮುಳಿನ ಆವರಣ. अव+रुधिर् भावे "ल्युट्" (३-३-११५)। –रोधनम् –ರೋಧನವು. "कण्ठावसक्तमृदुबाहुलता-स्तुरङ्गाद्राबावरोधनवधूरवतारयन्तः" माघ० ५-१८।

अवरोधक ಅವರೋಧಕ (पु०) 1. ಕಾವಲುಗಾರ. (न०) 2. ಬೇಲಿ. अव+रुधिर् (आवरणे) "ण्वुल्" (३-१-१३३)। (वि०) 3. ತಡೆಗಟ್ಟುವ, ಅಡ್ಡಿಮಾಡುವ. 4. ಮುತ್ತಿಗೆ ಹಾಕುವ. "सुधन्वा वीर्यवान् राजा मिथिलामवरोधकः" रामा०।

अवरोधिक ಅವರೋಧಿಕ (पु०) 1. ಕಂಚುಕಿ, ಅಂತಃಪುರದ ರಕ್ಷಕ. अवरोधे नियुक्तः "ठक्" (४-४-६९)। (स्त्री०) –रोधिका –ರೋಧಿಕಾ. ಅಂತಃಪುರದ ಹೆಂಗಸು, ರಾಜನಪತ್ನಿ. अवरोधो वासत्वेनास्त्यस्याः। "वल्गद्गरीयःस्तनकम्प्रकञ्चुकं ययुस्तुरङ्गाधिरुहोऽवरोधिकाः" माघ० १२-२०।

अवरोधिन् ಅವರೋಧಿನ್ (वि०) 1. ತಡೆಯುವ, ಅಡ್ಡಿಪಡಿಸುವ, ವಿಘ್ನವುಂಟುಮಾಡುವ. 2. ಮುತ್ತಿಗೆ ಹಾಕುವ, ಆಕ್ರಮಿಸುವ. अवरुणद्धि — अव+रुधिर् (आवरणे) "णिनिः" (३-१-१३४)। स्त्रियाम् "ङीप्" (४-१-५)। –रोधिनी –ರೋಧಿನೀ.

अवरोपण ಅವರೋಪಣ (न०) 1. ಕೀಳುವುದು, ಕಿತ್ತುಹಾಕುವುದು. 2. ಕೆಳಕ್ಕೆ ಇಳಿಸುವುದು. अव+रुह (बीजजन्मादौ)+णिच् (पुक्) "ल्युट्" (३-३-११५)।

अवरोपित ಅವರೋಪಿತ (वि०) 1. ಕೆಳಕ್ಕೆ ಇಳಿಸಲ್ಪಟ್ಟ. 2. ಕಿತ್ತುಹಾಕಲ್ಪಟ್ಟ. अव+रुह (बीजजन्मादौ)+णिच् (पुक्) "क्तः" (३-२-१०२)।

अवरोह ಅವರೋಹ (पु०) 1. ಇಳಿಕೆ, ಇಳಿಯುವುದು, ಕೆಳಕ್ಕೆ ಬರುವುದು. अव+रुह (बीजजन्मादौ) "घञ्" (३-३-१८)। 2. ಆರೋಹಣ, ಮೇಲಕ್ಕೇರುವಿಕೆ. 3. ಸ್ವರ್ಗ. अवरोहत्यस्मात्। [ಪುಣ್ಯದ ಫಲವನ್ನನುಭವಿಸಿದನಂತರ ಸ್ವರ್ಗದಿಂದ ಭೂಮಿಗೆ ಇಳಿಯುವುದರಿಂದ ಈ ಹೆಸರು.] "क्षीणे पुण्ये मर्त्यलोकं विशन्ति"। "स्वर्लोको देवलोकः स्यादवरोहः फलोदयः" त्रिकाण्ड०। 4. ಲತೆ, ಬುಡದಿಂದ ಮರದ ಮೇಲಿನವರೆಗೂ ಹಬ್ಬುವ

ಬಳ್ಳಿ. "अवरोहोऽवतरणेऽप्यारोहे च लतोद्गमे" मेदि०। 5. ಮರದ ರೆಂಬೆಗಳಿಂದ ಭೂಮಿಯವರೆಗೂ ಇಳಿಯುವ ಬಿಳಲು (ಆಲದ ಮರದ ಬಿಳಲು). "अवरोहशताकीर्णं वटमासाद्य तस्थतुः" रामा०। 6. ಸಂಗೀತದ ಅವರೋಹಣ, ಸ್ವರಗಳ ಇಳಿಕೆ. अव+रुह "घः" (३-३-११८)।

**अवरोहण** ಅವರೋಹಣ (ನಂ) ಇಳಿಯುವಿಕೆ, ಮೇಲಿನಿಂದ ಕೆಳಕ್ಕೆ ಬರುವಿಕೆ. अव+रुह (बीजजन्मादौ) "ल्युट्" (३-३-११५)।

**अवरोहशाख** ಅವರೋಹಶಾಖ (ಪುಂ) ವಟವೃಕ್ಷ, ಆಲದಮರ.

**अवरोहशाखिन्** ಅವರೋಹಶಾಖಿನ್ (ಪುಂ) ವಟವೃಕ್ಷ, ಆಲದಮರ. अवरोहाः अधोगच्छन्त्यः शाखाः सन्त्यस्य "इनिः" (५-२-११५)।

**अवरोहिका** ಅವರೋಹಿಕಾ (स्त्री०) ಅಶ್ವಗಂಧಾಲತೆ. अवरोहति अधोगच्छति—अव+रुह (बीजजन्मादौ) "ण्वुल्" (३-१-१३३)। "टाप्" (४-१-४)। अत इत्वम् (७-३-४४)।

**अवरोहिन्** ಅವರೋಹಿನ್ (ಪುಂ) 1. ವಟವೃಕ್ಷ, ಆಲದ ಮರ. अवरोहति—अव+रुह (बीजजन्मादौ) "णिनिः" (३-२-७८)। (वि०) 2. ಕೆಳಕ್ಕೆ ಇಳಿಯುವ. स्त्रियाम् "ङीप्" (४-१-५)। **–रोहिणी** –ರೋಹಿಣೀ.

**अवर्ग** ಅವರ್ಗ (ಪುಂ) 1. "अ" ಕಾರಕ್ಕೆ ಸಮನಾದ ಸ್ವರವರ್ಣಗಳ ಗುಂಪು. [ವಿವರಕ್ಕೆ "अ" "आ" ಪದಗಳಲ್ಲಿ ನೋಡಿ.] (वि०) 2. ಸಮೂಹವಿಲ್ಲದ, ಗುಂಪಿಲ್ಲದ. नास्ति वर्गः समूहो यत्र।

**अवर्गीय** ಅವರ್ಗೀಯ (वि०) ಅವರ್ಗೀಯ ವ್ಯಂಜನ, ಕಾದಿ ಪಂಚವರ್ಗ (ಕವರ್ಗ, ಚವರ್ಗ, ಟವರ್ಗ, ತವರ್ಗ ಮತ್ತು ಪವರ್ಗ)ಗಳಿಗೆ ಸೇರದ ವ್ಯಂಜನ ವರ್ಣಗಳು. य र ल व श ष स ह ವರ್ಣಗಳು ಅವರ್ಗೀಯ ವ್ಯಂಜನಗಳು.

**अवर्ण** ಅವರ್ಣ (ಪುಂ) 1. ಹ್ರಸ್ವ ದೀರ್ಘ ಪ್ಲುತ ಮೊದಲಾದ ಹದಿನೆಂಟು ಭೇದಗಳುಳ್ಳ "अ" ವರ್ಣ. "अ इत्यष्टादशानां संज्ञा" सि० कौ०। 2. ಅಪವಾದ, ಅಪಕೀರ್ತಿ. वर्ण्यते—वर्ण (वर्णने) "घञ्" (३-३-१८)। वर्णः स्तुतिः। न वर्णः। विरोधे ನಂ ತಂ। "सोढुं न तत्पूर्वमवर्णमीशे आलानिकं स्थाणुमिव द्विपेन्द्रः" रघु० १४-३८। 3. ನಿಂದೆ, ಬೈಗಳು. "न चावदद्भर्तुरवर्णमार्या निराकरिष्णोर्वृजिनादृतेऽपि" रघु० १४-५७।

**अवर्तन** ಅವರ್ತನ (ನಂ) 1. ಅಸತ್ತೆ, ಅಭಾವ, ಇಲ್ಲದಿರುವಿಕೆ. 2. ಜೀವನೋಪಾಯವಿಲ್ಲದಿರುವಿಕೆ, ಹೊಟ್ಟೆಪಾಡಿಗೆ ಗತಿಯಿಲ್ಲದಿರುವಿಕೆ. ನಂ ತಂ। (वि०) 3. ಜೀವನೋಪಾಯವಿಲ್ಲದ. न वर्तनं यस्य।

**अवर्तमान** ಅವರ್ತಮಾನ (वि०) 1. ಇಲ್ಲದಿರುವ. 2. ಹಿಂದಿನಕಾಲದ, ಈಗಿನದಲ್ಲದ. 3. ಮುಂದಿನ ಕಾಲದ.

**अवलक्ष** ಅವಲಕ್ಷ (ಪುಂ) 1. ಬಿಳುಪು. अवलक्ष्यते—अव+लक्ष (दर्शनाङ्कनयोः) "घञ्" (३-३-१९)। [ಇಲ್ಲಿ "अव" ದ "अ" ಕಾರಕ್ಕೆ ವಿಕಲ್ಪವಾಗಿ ಲೋಪವನ್ನು (वष्टि भागुरिरल्लोपमवाप्योरुपसर्गयोः) ಹೇಳಿರುವುದರಿಂದ "वलक्षः" ಎಂದೂ ರೂಪವುಂಟು.] (वि०) 2. ಬಿಳುಪಾದ, ಬಿಳಿಬಣ್ಣದ.

**अवलक्षण** ಅವಲಕ್ಷಣ (ನಂ) 1. ಕೆಟ್ಟಲಕ್ಷಣ, ಕೆಟ್ಟ ಚಿಹ್ನೆ. (वि०) 2. ಕೆಟ್ಟ ಲಕ್ಷಣವುಳ್ಳ, ದುರ್ಲಕ್ಷಣವುಳ್ಳ. अव निकृष्टं लक्षणं यस्य।

**अवलग्न** ಅವಲಗ್ನ (ಪುಂನಂ) 1. ದೇಹದ ಮಧ್ಯಭಾಗ, ನಡುವು, ಸೊಂಟ. लगे (सङ्गे) "क्तः" (७-२-१८)। अवकृष्टं लग्नम्। (वि०) 2. ಸಂಬಂಧಿಸಿರುವ, ಸೇರಿಕೊಂಡಿರುವ, ಅಂಟಿಕೊಂಡಿರುವ. "विपुलतरनिरन्तरावलग्नस्तनपिहितप्रियवक्षसा ललम्बे" माघ० ७-७१।

**अवलम्ब** ಅವಲಂಬ (ಪುಂ) 1. ಆಶ್ರಯ, ಸಹಾಯ, ಒತ್ತಾಸೆ. अव+लबि (अवस्रंसने) "घञ्" (३-३-१८)। 2. ಸಹಾಯಪಡೆಯುವಿಕೆ, ಆಶ್ರಯಹೊಂದುವಿಕೆ. "तस्य पाण्डुवदनाल्पभूषणा सावलम्बगमना मृदुस्वना" रघु० १९-५०। 3. ಊರುಗೋಲು, ಒತ್ತುಗಂಬ. अव+लबि कर० "घञ्" (३-३-१२१)। (वि०) 4. ಜೋಲಾಡುವ, ತೂಗಾಡುವ. कर्त० "अच्" (३-१-१३४)। **–लम्बन** –ಲಂಬನ. (ನಂ) 1. ಆಶ್ರಯ, ಒತ್ತಾಸೆ. अव+लबि भावे "ल्युट्" (३-३-११५)। "अवलम्बनाय दिनभर्तुरभून्न पतिष्यतः करसहस्रमपि" माघ० ९-६। 2. ಊರುಗೋಲು, ಒತ್ತುಗಂಬ. कर० "ल्युट्" (३-३-११७)। 3. ಒಬ್ಬರನ್ನು ಸೇರುವಿಕೆ, ಆಶ್ರಯಪಡೆಯುವಿಕೆ. "इतरपक्षावलम्बनद्वारेण" काद०।

**अवलम्बित** ಅವಲಂಬಿತ (वि०) 1. ಆಶ್ರಯಿಸಲ್ಪಟ್ಟ. "अवलम्बितैलविलपाणिपल्लवः श्रयति स्म मेघमिव

मेघवाहनः" माघ० १३-१८। 2. ತೂಗಾಡಿಸಲ್ಪಟ್ಟ. अव + लबि (अवस्रंसने) "क्तः" (३-३-१०२)। 3. ಕೆಳಕ್ಕೆ ಇಳಿದಿರುವ, ಕೆಳಕ್ಕೆ ಬಂದಿರುವ. अव+लबि कर्त० "क्तः" (३-४-७२)। (क्रि० वि०) 4. ಶೀಘ್ರವಾಗಿ, ಜಾಗ್ರತೆಯಾಗಿ.

**अवलम्बिन् ಅವಲಂಬಿನ್** (वि०) 1. ಆಶ್ರಯಹೊಂದಿದ, ಸಹಾಯಪಡೆದಿರುವ, ಒತ್ತಾಸೆಯುಳ್ಳ. अवलम्बोऽस्यास्ति "इनिः" (५-२-११५)। 2. ಆಶ್ರಯಕೊಟ್ಟಿರುವ, ಆಸರೆಯನ್ನಿತ್ತಿರುವ. अव+लबि "णिनिः" (३-१-१३४)। "तामेकतस्तव बिभर्ति गुर्विनिद्रस्तस्या भवानपरधुर्यपदावलम्बी" रघु० ५-६६। "अस्ताचलचूडावलम्बिनि भगवति भासांनिधौ" काद०। 3. ತೂಗಾಡುವ, ಜೋಲಾಡುವ. "अथ धूमाभिताम्राक्षं वृक्षशाखावलम्बिनम्" रघु० १५-४९।

**अवलिप्त ಅವಲಿಪ್ತ** (वि०) 1. ಗರ್ವವುಳ್ಳ, ಅಹಂಕಾರವುಳ್ಳ, ಕೊಬ್ಬಿದ. अव + लिप (उपदेहे) "क्तः" (३-२-१०२)। "केनान्येनावलिप्ता नव नवतिशतद्रव्यकोटीश्वरास्ते" मुद्रा० ३-२७। 2. ಲೇಪನಮಾಡಲ್ಪಟ್ಟ, ಬಳಿಯಲ್ಪಟ್ಟ. 3. ಸುತ್ತಲೂ ಬಳಿಯಲ್ಪಟ್ಟ.

**अवलीढ ಅವಲೀಢ** (वि०) 1. ತಿನ್ನಲ್ಪಟ್ಟ. अव+लिह (आस्वादने) "क्तः" (३-२-१०२)। "दर्भैरर्धावलीढैः श्रमविवृतमुखभ्रंशिभिः कीर्णवर्त्मा पश्योदग्रप्लुतत्वाद्वियति बहुतरं स्तोकमुर्व्यां प्रयाति" शाकु० १-७। 2. ರುಚಿನೋಡಲ್ಪಟ್ಟ. 3. ನೆಕ್ಕಲ್ಪಟ್ಟ, "ಲೊಚ ಲೊಚ" ಎಂದು ಕುಡಿಯಲ್ಪಟ್ಟ. 4. ಸುತ್ತಲೂ ವ್ಯಾಪಿಸಲ್ಪಟ್ಟ, ಎಲ್ಲಾ ಕಡೆಯಲ್ಲಿಯೂ ಸುತ್ತುವರಿಯಲ್ಪಟ್ಟ. "अवलीढसनाभिरश्वसेनः प्रसभं खाण्डवजातवेदसा वा" किरा० १३-११।

**अवलुञ्चन ಅವಲುಂಚನ** (न०) 1. ಛೇದನ, ಕತ್ತರಿಸುವಿಕೆ. 2. ಉತ್ಪಾಟನ, ಕಿತ್ತುಹಾಕುವಿಕೆ. 3. ಕೆದರಿರುವಿಕೆ, ಬಿಚ್ಚಿರುವಿಕೆ. 4. ಒಯ್ಯುವಿಕೆ, ತೆಗೆದುಕೊಂಡು ಹೋಗುವುದು. अव+लुञ्च (अपनयने) "ल्युट्" (३-३-११५)।

**अवलुण्ठन ಅವಲುಂಠನ** (न०) 1. ನೆಲದಮೇಲೆ ಬಿದ್ದು ಹೊರಳಾಡುವಿಕೆ. अव + लुठि (स्तेये) "ल्युट्" (३-३-११५)। 2. ಕಳ್ಳತನ.

**अवलुप्त ಅವಲುಪ್ತ** (वि०) ಲೋಪಹೊಂದಿದ, ನಾಶವಾದ. अव+लृप्लृ (छेदने) "क्तः" (३-४-७२)।

**अवलेप ಅವಲೇಪ**(पु०) 1. ಗರ್ವ, ಕೊಬ್ಬು, ಅಹಂಕಾರ. अव+लिप (उपदेहे) "घञ्" (३-३-१८)। "अवलेपभराक्रान्ता सुरलोकतरङ्गिणी" चं० रा०। "दंष्ट्राभङ्गं मृगाणामधिपतय इव व्यक्तमानावलेपाः" मुद्रा० ३-२२। 2. ಭೂಷಣ, ಒಡವೆ. 3. ಲೇಪನ, ಬಳಿಯುವಿಕೆ. "अवलेपस्तु गर्वे स्याल्लेपने भूषणेऽपि च" मेदि०। 4. ಮುತ್ತಿಗೆ, ಧಾಳಿ, ಆಕ್ರಮಣ. "किं भवतीनामसुरावलेपेनापराद्धम्" विक्र० १। 5. ಸಂಗ, ಸಂಬಂಧ. "अवलेपः सङ्गगर्वयोः" त्रिकाण्ड०।

**अवलेपन ಅವಲೇಪನ** (न०) 1. ಲೇಪನ, ಬಳಿಯುವಿಕೆ. 2. ಕೊಬ್ಬು, ಗರ್ವ. अव+लिप (उपदेहे) "ल्युट्" (३-३-११७)। 3. ಗಂಧ, ಚಂದನ. 4. ಎಣ್ಣೆ, ತೈಲ. कर० "ल्युट्" (३-३-११७)।

**अवलेह ಅವಲೇಹ** (पु०) 1. ನೆಕ್ಕುವುದು, "ಲೊಚ ಲೊಚ" ಎಂದು ಕುಡಿಯುವುದು. अव + लिह (आस्वादने) "घञ्" (३-३-१८)। 2. ಲೇಹ, ಲೇಹ್ಯ. कर्म० "घञ्" (३-३-१९)।

**अवलेहन ಅವಲೇಹನ** (न०) ನಾಲಿಗೆಯಿಂದ ನೆಕ್ಕುವಿಕೆ.

**अवलेह्य ಅವಲೇಹ್ಯ** (वि०) ನೆಕ್ಕಲು ಯೋಗ್ಯವಾದ, ನಾಲಿಗೆಯಿಂದ ಕುಡಿಯಲು ಅರ್ಹವಾದ.

**अवलोक ಅವಲೋಕ** (पु०) 1. ನೋಟ, ದೃಷ್ಟಿ. 2. ನೋಡುವಿಕೆ. अव + लोकृ (दर्शने) "घञ्" (३-३-१८)। "अवलोक एव नृपतेः स्म दूरतो रभसाद्रथादवतरीतुमिच्छतः" माघ० १३-७।

**अवलोकन ಅವಲೋಕನ** (न०) 1. ನೋಟ, ದೃಷ್ಟಿ. 2. ನೋಡುವುದು, ದೃಷ್ಟಿಯಿಡುವುದು. अव+लोकृ (दर्शने) "ल्युट्" (३-३-११५)। "अवलोकनाय सुरविद्विषां द्विषः पटहप्रणादविहितोपहूतयः" माघ० १३-३०। 3. ನೇತ್ರ, ಕಣ್ಣು. कर० "ल्युट्" (३-३-११७)। "योगनिद्रान्तविशदैः पावनैरवलोकनैः" रघु० १०-१४।

**अवलोकमान ಅವಲೋಕಮಾನ** (वि०) ನೋಡುತ್ತಿರುವ. अव + लोकृ (दर्शने) "शानच्" (३-२-१२४)।

**अवलोकित ಅವಲೋಕಿತ** (न०) 1. ನೋಟ, ದೃಷ್ಟಿ. अव+लोकृ (दर्शने) भावे "क्तः" (३-३-११४)। (वि०) 2. ನೋಡಲ್ಪಟ್ಟ. अव + लोकृ "क्तः" (३-२-१०२)।

**अवलोकिन्** ಅವಲೋಕಿನ್ (वि०) ನೋಡುವ, ವೀಕ್ಷಿಸುವ. अव+लोकृ (दर्शने) "णिनिः" (३-१-१३४)। "अवैमि सौभाग्यमदेन वञ्चितं तव प्रियं यश्चतुरावलोकिनः" कुमा० ५-४९।

**अवलोप** ಅವಲೋಪ (पुं०) 1. ನಾಶ. 2. ಕತ್ತರಿಸುವಿಕೆ, ತುಂಡುಮಾಡುವಿಕೆ. 3. ಅಧರಖಂಡನ, ಚುಂಬನ. अव+लुप्लृ (छेदने) भावे "घञ्" (३-३-१८)। "यदधयदधरावलोपनृत्यत्करवलयस्वनितेन तद्विवव्रे" माघ० ७-४५।

**अवलोम** ಅವಲೋಮ (वि०) ಅನುಕೂಲವಾದ. अवगतं लोम "अच्" (५-४-७५)।

**अवल्गुज** ಅವಲ್ಗುಜ (पुं०) 1. ಸೋಮರಾಜೀಲತೆ, ಬಾಹುಜಿಗೆ ಗಿಡ. 2. ಅಸದ್ವಂಶದಲ್ಲಿ ಜನಿಸಿದ, ನೀಚ ಕುಲದಲ್ಲಿ ಹುಟ್ಟಿದ. अवल्गोरशोभनाज्जातः—जनी (प्रादुर्भावे) "डः" (३-२-९८)।

**अववर्षण** ಅವವರ್ಷಣ (न०) ಸಂಪೂರ್ಣವಾಗಿ ಮಳೆಯಾಗುವುದು. अव + वृषु (सेचने) भावे "ल्युट्" (३-३-११५)।

**अववाद** ಅವವಾದ (पुं०) 1. ನಿಂದೆ, ದೂಷಣೆ. 2. ತಿರಸ್ಕಾರ, ಅನಾದರ. 3. ಅಪಕೀರ್ತಿ, ಅಪವಾದ. अव+वद (व्यक्तायां वाचि) "घञ्" (३-३-१८)।

**अवश** ಅವಶ (वि०) 1. ಪರತಂತ್ರ, ಇತರರಿಗೆ ಅಧೀನನಾದ. "भूतग्राममिमं कृत्स्नमवशं प्रकृतेर्वशात्" गीता ९-८। 2. ಪರಾಧೀನನಲ್ಲದ, ಸ್ವತಂತ್ರನಾದ. 3. ಪ್ರತಿಕೂಲವಾದ. नास्ति वश स्वस्य परस्य वा आयत्तत्वं यस्य। "मधुरैरवशानि लम्भयन्नपि तिर्यञ्चि शमं निरीक्षितैः" किरा० २-५५। 4. ಅಸಮರ್ಥ, ಪ್ರತೀಕಾರಾಶಕ್ತ. "मामग्रासनतोऽवकृष्टमवशं ये दृष्टवन्तः पुरा" मुद्रा० १-१२।

**अवशिरस्** ಅವಶಿರಸ್ (वि०) ಬಗ್ಗಿದ ತಲೆಯುಳ್ಳ. अवनतं शिरो यस्य।

**अवशिष्ट** ಅವಶಿಷ್ಟ (न०) 1. ಉಳಿಕೆ, ಶೇಷ. अव+शिष (असर्वोपयोगे) "क्तः" (३-३-११४)। (वि०) 2. ಉಳಿದಿರುವ, ಅಧಿಕವಾದ, ಹೆಚ್ಚಾದ. अव+शिष "क्तः" (३-४-७२)। "आरण्यकोपात्तफलप्रसूतिः स्तम्बेन नीवार इवावशिष्टः" रघु० ५-१५।

**अवशीर्ष** ಅವಶೀರ್ಷ (पुं०) 1. ಕ್ರಮತಪ್ಪಿ ಮಲಗುವಿಕೆ, ಮೊಗುಚಿಕೊಂಡು ಮಲಗುವಿಕೆ. [ವೈದ್ಯಶಾಸ್ತ್ರದಲ್ಲಿ ಈ ರೀತಿ ಮಲಗುವುದು ದೋಷವೆಂದು ಹೇಳಲ್ಪಟ್ಟಿದೆ.] "अवाक्शीर्षं दीर्घन्युब्जोत्तानसंकुचितदेहस्थितता दक्षिणपार्श्वस्थायिनः प्रदानमिति सप्त शय्यादोषाः" सुश्रुत०। 2. ಒಂದುವಿಧ ನೇತ್ರರೋಗ. (वि०) 3. ಬಗ್ಗಿದ ತಲೆಯುಳ್ಳ. अवनतं शीर्षं यस्य—वा "कप्" (५-४-१५४)। –शीर्षक –ಶೀರ್ಷಕ. "अतिपीडितवद्दोषान् विधि चाप्यवशीर्षके" सुश्रुत०।

**अवशेष** ಅವಶೇಷ (पुं०) 1. ಶೇಷ, ಉಳಿಕೆ. अव+शिष (असर्वोपयोगे) "घञ्" (३-३-१८)। (वि०) 2. ಅವಶಿಷ್ಟವಾದ, ಉಳಿದಿರುವ. "स नन्दिनीस्तन्यमनिन्दितात्मा सद्वत्सलो वत्सहुतावशेषम्" रघु० २-६९।

**अवशोष** ಅವಶೋಷ (पुं०) ಚೆನ್ನಾಗಿ ಒಣಗುವಿಕೆ. अव+शुष (शोषणे) भावे "घञ्" (३-३-१८)।

**अवश्य** ಅವಶ್ಯ (वि०) 1. ಅಧೀನನಲ್ಲದ, ಸ್ವತಂತ್ರನಾದ. 2. ಅಡಗಿಸಲು ಶಕ್ಯವಲ್ಲದ, ವಶಪಡಿಸಿಕೊಳ್ಳಲಾಗದ. 3. ಅನಿವಾರ್ಯ, ಅಪರಿಹಾರ್ಯ, ತಪ್ಪಿಸಲಾಗದ. न वश्यः।

**अवश्यम्** ಅವಶ್ಯಮ್ (अव्य०) 1. ಅಗತ್ಯವಾಗಿ, ಅವಶ್ಯವಾಗಿ, ಅನಿವಾರ್ಯವಾಗಿ. 2. ನಿಜವಾಗಿ, ನಿಃಸಂದೇಹವಾಗಿ. अवश्यायते—अव+श्यैङ् (गतौ) "डम्"। "तां चावश्यं दिवसगणनातत्परामेकपत्नीम्" मेघ० १-१०।

**अवश्यपुत्र** ಅವಶ್ಯಪುತ್ರ (पुं०) ಶಿಕ್ಷಿಸಲು ಸಾಧ್ಯವಿಲ್ಲದ ಮಗ, ಅಧೀನನಲ್ಲದ ಮಗ, ಅವಿಧೇಯನಾದ ಮಗ.

**अवश्या** ಅವಶ್ಯಾ (स्त्री०) ಸ್ವತಂತ್ರಳಾದ ಹೆಂಗಸು.

**अवश्याय** ಅವಶ್ಯಾಯ (पुं०) 1. ಹಿಮ, ಹೆಪ್ಪುಗಟ್ಟಿದ ಮಂಜು, ಗಟ್ಟಿಯಾದ ಮಂಜು. अव + श्यैङ् (गतौ) "णः" (३-१-१४१)। "अवश्यायकणास्रावाश्चारुमुक्ताफलत्विषः" भट्टि० ६-८०। 2. ಗರ್ವ, ಅಭಿಮಾನ, ಅಹಂಕಾರ. "अवश्यायस्तु नीहारेऽप्यभिमानेऽपि पुंस्ययम्" मेदि०।

**अवश्रयण** ಅವಶ್ರಯಣ (न०) ಅಡಿಗೆಯಾದನಂತರ ಒಲೆಯ ಮೇಲಿನಿಂದ ಕೆಳಕ್ಕೆ ಇಳಿಸುವುದು. अव+श्रीञ् (सेवायाम्) "ल्युट्" (३-३-११५)।

**अवष्टब्ध** ಅವಷ್ಟಬ್ಧ (वि०) 1. ಆಶ್ರಯಿಸಲ್ಪಟ್ಟ. 2. ಆಕ್ರಮಿಸಲ್ಪಟ್ಟ. 3. ಹತ್ತಿರದ. 4. ತಡೆಯಲ್ಪಟ್ಟ, ನಿಲ್ಲಿಸಲ್ಪಟ್ಟ. अव+स्तम्भु (रोधने) "क्तः" (३-२-१०२)। षत्वं (८-३-६८)। "अवष्टब्धोऽविदूरे स्यादाक्रान्ते चावलम्बिते" मेदि०।

**अवष्टम्भ್ಯ** ಅವಷ್ಟಭ್ಯ (अव्य०) 1. ಆಶ್ರಯಿಸಿ. 2. ತಡೆದು. अव+स्तन्भु (रोधने) "ल्यप्" (७-१-३७)। षत्वं (८-३-६८)।

**अवष्टम्भ** ಅವಷ್ಟಂಭ (पु०) 1. ಆಶ್ರಯ, ಆಸರೆ, ಒತ್ತಾಸೆ. "खड्गलतावष्टम्भनिश्चलः" मालती० ३। 2. ಪ್ರಾರಂಭ, ಉಪಕ್ರಮ. 3. ಗರ್ವ, ಅಹಂಕಾರ. 4. ಕಂಬ. 5. ತಡೆ, ವಿಘ್ನ, ಅಡ್ಡಿ. 6. ಸುವರ್ಣ, ಚಿನ್ನ. 7. ಸಂಭ್ರಮ. अव+स्तन्भु (रोधने) "घञ्" (३-३-१८)। "अवष्टम्भः सुवर्णे च स्तम्भप्रारम्भयोरपि" मेदि०।

**अवष्टम्भन** ಅವಷ್ಟಂಭನ (न०) 1. ಆಶ್ರಯ, ಆಸರೆ, ಒತ್ತಾಸೆ. 2. ಪ್ರಾರಂಭ, ಉಪಕ್ರಮ. अव+स्तन्भु (रोधने) भावे "ल्युट्" (३-३-११५)। षत्वं (८-३-६८)।

**अवस** ಅವಸ (पु०) 1. ರಾಜ, ದೊರೆ. अवति—अव (रक्षणे) "असच्" (उ० ३-११७)। 2. ಸೂರ್ಯ. 3. ಎಕ್ಕದಗಿಡ, ಅರ್ಕವೃಕ್ಷ. 4. ಫಲಾಹಾರದ ವಸ್ತು, ಪ್ರಯಾಣಕಾಲದಲ್ಲಿ ದಾರಿಯ ಆಹಾರಕ್ಕಾಗಿ ತೆಗೆದುಕೊಳ್ಳುವ ತಿಂಡಿ, ಬುತ್ತಿ.

**अवसक्त** ಅವಸಕ್ತ (न०) 1. ಸಂಸರ್ಗ, ಸಂಬಂಧ. अव+षञ्ज (सङ्गे) भावे "क्तः" (३-३-११४)। (वि०) 2. ಅಂಟಿಕೊಂಡಿರುವ, ಸೇರಿಕೊಂಡಿರುವ. कर्त० "क्तः" (३-४-७२)। 3. ಇಡಲ್ಪಟ್ಟ. कर्म० "क्तः" (३-२-१०२)। "कर्णावसक्तामलदन्तपत्रं माता तदीयं मुखमुन्नमय्य" कुमा० ७-२३।

**अवसक्थिका** ಅವಸಕ್ಥಿಕಾ (स्त्री०) 1. ಪರ್ಯಂಕ, ಮಂಚ. "पर्यङ्कस्त्ववसक्थिका" त्रिकाण्ड०। 2. (ಕುಳಿತುಕೊಳ್ಳುವಾಗ) ತೊಡೆಗಳನ್ನು ಮಡಿಸಿಕೊಂಡು (ಬೆನ್ನಿಗೆ ಸೇರಿಸಿ) ಸುತ್ತಲೂ ಹಾಕುವ ಬಟ್ಟೆಯ ಕಟ್ಟು. अवबन्धे सक्थिनी यया। "योगपट्टस्तु चीना स्यात् पर्यस्तिरवसक्थिका" वैज०।

**अवसण्डीन** ಅವಸಂಡೀನ (न०) (ಮೇಲಿನಿಂದ ಕೆಳಕ್ಕೆ) ಹಕ್ಕಿಗಳ ಇಳಿಯುವಿಕೆ, ಹಕ್ಕಿಗಳ ಗತಿಭೇದ, ಹಕ್ಕಿಗಳು ಹಾರುವ ಒಂದು ಕ್ರಮ. अव+सम्+डीङ् (विहायसा गतौ) भावे "क्तः" (३-३-११४)।

**अवसन्न** ಅವಸನ್ನ (वि०) 1. ಧೈರ್ಯಗುಂದಿದ, ಕುಗ್ಗಿದ ಮನಸ್ಸುಳ್ಳ, ಕಡಿಮೆಯಾದ ಉತ್ಸಾಹವುಳ್ಳ. "यातमवनिमवसन्नभुजात्" माघ० १५-८५। 2. ತನ್ನ ಕರ್ತವ್ಯನಿರ್ವಾಹದಲ್ಲಿ ಅಸಮರ್ಥನಾದ. 3. ಸಮಾಪ್ತಿ ಹೊಂದಿದ, ಕೊನೆಗೊಂಡ. "अवसन्नतापमतमिस्रमभात्" माघ० ९-१२। 4. ಮುಳುಗಿಹೋದ. 5. ಕಳೆದುಹೋದ. अव+षद्लृ (विशरणादौ) "क्तः" (३-४-७२)। "पित्रोः सकाशमवसन्नदृशोर्निनाय" रघु० ९-७७।

**अवसर** ಅವಸರ (पु०) 1. ಅವಕಾಶ, ಸಮಯ, ಸಂದರ್ಭ. अव+सृ (गतौ) "अप्" बाहु०। "भवद्गिरामवसरप्रदानाय वचांसि नः" माघ० २-८। 2. ಸರಿಯಾದಕಾಲ, ಸಕಾಲ, ಸದವಕಾಶ. "विमानशृङ्गाण्यवगाहमानः शशंस सेवावसरं सुरेभ्यः" कुमा० ७-४०। 3. ಪ್ರಸಂಗ, ಪ್ರಸ್ತಾವ, ಪೀಠಿಕೆ. 4. ಸಂವತ್ಸರ. 5. ಮಳೆ. 6. ಸ್ಥಳ, ಜಾಗ, ಎಡೆ. "द्रुतमेत्य पुष्पधनुषो धनुषः कुमुदेऽङ्गनामनसि चावसरम्" माघ० ९-४१। 7. ಮಂತ್ರಾಲೋಚನೆ. 8. ವಿರಾಮ, ಪುರುಸತ್ತು. "अवसरो वत्सरे क्षणे" हेम०। "अथावसरः पुमान्। प्रस्तावे मन्त्रभेदे च वर्षणे चापि कीर्तितः" मेदि०।

**अवसर्प** ಅವಸರ್ಪ (पु०) ಗೂಢಚಾರ, ಗುಪ್ತ ಬಾತ್ಮೀದಾರ. अवसर्पति—अव+सृप्लृ (गतौ) "अच्" (३-१-१३४)।

**अवसर्पण** ಅವಸರ್ಪಣ (न०) ಕೆಳಕ್ಕೆ ಇಳಿಯುವಿಕೆ, ಕೆಳಕ್ಕೆ ಬರುವಿಕೆ. अव+सृप्लृ (गतौ) भावे "ल्युट्" (३-३-११५)।

**अवसर्पिन्** ಅವಸರ್ಪಿನ್ (वि०) ಕೆಳಕ್ಕೆ ಹೋಗುವ, ಕೆಳಕ್ಕೆ ಇಳಿಯುವ. अव+सृप्लृ (गतौ) "णिनिः" (३-१-१३४)। स्त्रियाम् "ङीप्" (४-१-५)। **-सर्पिणी-ಸರ್ಪಿಣೀ.**

**अवसर्पिणी** ಅವಸರ್ಪಿಣೀ (स्त्री०) ಜೈನರ ಕಲ್ಪಕಾಲದ ಒಂದು ಭಾಗ. [ಜೈನರ ಕಾಲವು ಉತ್ಸರ್ಪಿಣಿ ಮತ್ತು ಅವಸರ್ಪಿಣಿಗಳೆಂದು ಎರಡು ವಿಧ. ಇವೆರಡೂ ಸೇರಿ ಒಂದು ಕಲ್ಪವೆನಿಸುವುದು. ಉತ್ಸರ್ಪಿಣೀ ಕಾಲದಲ್ಲಿ ಮನುಷ್ಯರ ವೃದ್ಧಿಯೂ ಅವಸರ್ಪಿಣೀ ಕಾಲದಲ್ಲಿ ಹ್ರಾಸ (ಅವನತಿ) ವೂ ಉಂಟಾಗುವುವು. ಉತ್ಸರ್ಪಿಣಿಯಲ್ಲಿ ಕ್ರಮವಾಗಿ ಮನುಷ್ಯರ ಅನುಭವ (ಉಪಭೋಗ), ಆಯುಃಪ್ರಮಾಣ, ಶರೀರೋತ್ಸೇಧ ಇವುಗಳ ಅಭಿವೃದ್ಧಿಯಾಗುವುದು. ಅವಸರ್ಪಿಣಿಯಲ್ಲಿ ಕ್ರಮವಾಗಿ ಇವುಗಳ ಹ್ರಾಸ (ಅವನತಿ) ವುಂಟಾಗುವುದು. ಇದರಲ್ಲಿ (1) (ಉತ್ತಮಭೋಗಭೂಮಿಯ ಲಕ್ಷಣವುಳ್ಳ) ಸುಷಮಸುಷಮ, (2) (ಮಧ್ಯಮಭೋಗಭೂಮಿಯ

ಗುಣವುಳ್ಳ) ಸುಷಮ, (3) (ಜಘನ್ಯ ಭೋಗಭೂಮಿಯ ಗುಣವುಳ್ಳ) ಸುಷಮದುಃಷಮ, (4) ದುಃಷಮ ಸುಷಮ, (5) ದುಃಷಮ ಮತ್ತು (6) ದುಃಷಮ ದುಃಷಮಗಳೆಂದು ಆರು ಭಾಗಗಳುಂಟು. "भरतैरावतयोर्वृद्धिह्रासौ षट्समयाभ्यामुत्सर्पिण्यवसर्पिणीभ्याम्" सर्वार्थं ३-२७। ಮೊದಲನೆಯ ಮೂರು ಕಾಲಗಳಲ್ಲಿ ಹತ್ತು ವಿಧ ಕಲ್ಪವೃಕ್ಷಗಳಿದ್ದು ಜನರಿಗೆ ಸಕಲಾಭೀಷ್ಟ ಗಳನ್ನೂ ನೀಡುತ್ತವೆ. ಮೂರನೆಯ ಕಾಲದಲ್ಲಿ ಕ್ರಮ ವಾಗಿ ಈ ಕಲ್ಪವೃಕ್ಷಗಳ ಶಕ್ತಿಯೂ, ಪ್ರಕಾಶವೂ ಕುಂದುತ್ತ ಬರುವುವು. ಈ ಕಾಲದ ಕೊನೆಯ ಘಟ್ಟ ದಲ್ಲಿ 14 ಮಂದಿ ಮನುಗಳು ಹುಟ್ಟಿ ಜನರಿಗೆ ಧೈರ್ಯ ವನ್ನು ಹೇಳಿ ಕಾಲದ ಪರಿಸ್ಥಿತಿಯನ್ನು ವಿವರಿಸು ವರು. ಈ ಮನುಗಳಿಗೆ ಕುಲಧರರೆಂದೂ ಕುಲಂಕರ ರೆಂದೂ ಹೆಸರು. ಇವರಲ್ಲಿ 14 ನೆಯ ಮನುವೇ ನಾಭಿರಾಜರು. ನಾಭಿರಾಜರ ಪತ್ನಿ ಮರುದೇವಿ. ಆದಿ ತೀರ್ಥಂಕರರಾದ ಋಷಭಸ್ವಾಮಿಯೇ ಇವರ ಪುತ್ರರು. ಯಶಸ್ವತೀದೇವಿ ಮತ್ತು ಸುನಂದಾದೇವಿಯರು ಋಷಭ ಸ್ವಾಮಿಯ ಪತ್ನಿಯರು. ಯಶಸ್ವತೀದೇವಿಯಲ್ಲಿ ಭರತ ಮೊದಲಾದ 100 ಮಂದಿ ಗಂಡುಮಕ್ಕಳೂ, ಬ್ರಾಹ್ಮಿಯೆಂಬ ಹೆಣ್ಣುಮಗಳೂ ಜನಿಸುವರು. ಸುನಂದಾದೇವಿಯಲ್ಲಿ ಬಾಹುಬಲಿ(ಶ್ರೀಗೋಮಟೇಶ್ವರ) ಎಂಬ ಪುತ್ರನೂ, ಸುಂದರಿಯೆಂಬ ಮಗಳೂ ಜನಿಸು ವರು. ಇಲ್ಲಿಗೆ ಮೂರನೆಯ ಕಾಲವು ಮುಗಿಯುವುದು. 4 ನೆಯ ಕಾಲವಾದ ದುಃಷಮಸುಷಮದಲ್ಲಿ 63 ಶಲಾಕಾಪುರುಷರು ಅವತರಿಸುವರು. [ವಿವರಕ್ಕೆ "शलाकापुरुष" ಪದದಲ್ಲಿ ನೋಡಿ.] ಇವರಲ್ಲಿ 20ನೆಯ ತೀರ್ಥಂಕರರಾದ ಮುನಿಸುವ್ರತರ ಕಾಲದಲ್ಲಿ ರಾಮಾಯಣಕಥೆಯು ನಡೆಯಿತು. ರಾಮನು ಎಂಟನೆಯ ಬಲಭದ್ರ. ಎಂಟನೆಯ ವಾಸುದೇವನಾದ ಲಕ್ಷ್ಮಣನು ಎಂಟನೆಯ ಪ್ರತಿವಾಸುದೇವನಾದ ರಾವಣನನ್ನು ಸಂಹರಿಸುವನು. 22 ನೆಯ ತೀರ್ಥಂಕರ ರಾದ ನೇಮಿನಾಥರ ಕಾಲದಲ್ಲಿ ಮಹಾಭಾರತ ಕಥೆಯು ನಡೆಯಿತು. ನೇಮಿನಾಥರು ಶ್ರೀಕೃಷ್ಣ ಪರಮಾತ್ಮನ ದೊಡ್ಡಪ್ಪನಾದ ಸಮುದ್ರವಿಜಯ ಮಹಾರಾಜನ ಮಗ. ನೇಮಿನಾಥರು ತಮ್ಮ ವಿವಾಹಕಾಲದ ಸಂಭಾರ ಗಳನ್ನು ನೋಡಿ ವೈರಾಗ್ಯಹೊಂದಿ ತಪಸ್ಸಿಗೆ ಹೊರಟ ನಂತರ ಶ್ರೀಕೃಷ್ಣನಿಗೆ ರಾಜ್ಯಪ್ರಾಪ್ತಿಯಾಗುವುದು. 23 ನೆಯ ತೀರ್ಥಂಕರರಾದ ಪಾರ್ಶ್ವನಾಥರು ಕ್ರಿ. ಪೂ. 8 ನೆಯ ಶತಮಾನದಲ್ಲಿಯೂ, 24 ನೆಯ ತೀರ್ಥಂಕರ ರಾದ ಮಹಾವೀರ(ವರ್ಧಮಾನ)ಸ್ವಾಮಿಯು ಕ್ರಿ.ಪೂ. 6 ನೆಯ ಶತಮಾನದಲ್ಲಿಯೂ ಇದ್ದರು. ಕ್ರಿ. ಪೂ. 527 ಕ್ಕೆ 4 ನೆಯ ಕಾಲದ ಸಮಾಪ್ತಿ. 5 ನೆಯ ಕಾಲವಾದ ದುಃಷಮದಲ್ಲಿ ಮಹಾವೀರಸ್ವಾಮಿಯ ನಿರ್ವಾಣದ ನಂತರ ಗೌತಮಗಣಧರರು, ಸುಧರ್ಮ ಗಣಧರರು, ಜಂಬುಸ್ವಾಮಿ ಗಣಧರರು ಹೀಗೆ ಮೂವರು ಗಣಧರರು ಕ್ರಮವಾಗಿ ಮುಕ್ತಿಪಡೆದರು. ಇವರ ನಂತರ 5 ಮಂದಿ ಶ್ರುತಕೇವಲಿಗಳು 100 ವರ್ಷಗಳ ಕಾಲ ಧರ್ಮಪ್ರಚಾರ ಮಾಡುವರು. ಶ್ರವಣಬೆಳ್ಗೊಳದ ಚಂದ್ರಗಿರಿ ಪರ್ವತದ ಮೇಲೆ ತಪಸ್ಸುಮಾಡಿ ಸಮಾಧಿ ಹೊಂದಿದವರು ಅಂತಿಮಶ್ರುತಕೇವಲಿಯಾದ ಭದ್ರ ಬಾಹು ಸ್ವಾಮಿಗಳು. ಇವರು ಮೌರ್ಯಚಕ್ರವರ್ತಿ ಚಂದ್ರಗುಪ್ತನ ಗುರುಗಳು. ಭದ್ರಬಾಹುಸ್ವಾಮಿಯ ಮುಖ್ಯ ಶಿಷ್ಯರು ವಿಶಾಖಾಚಾರ್ಯರು. 6 ನೆಯದಾದ ದುಃಷಮದುಃಷಮದಲ್ಲಿ ಬಹಳ ಕಷ್ಟ ಪರಿಸ್ಥಿತಿಯು ಏರ್ಪಡುವುದು. ಇಲ್ಲಿಗೆ ಅಹಿಂಸಾಧರ್ಮವೆಲ್ಲಾ ಕ್ಷಯ ಹೊಂದಿ ಹಿಂಸೆಯು ಮೂಡಿ ಪ್ರಳಯವಾಗುವುದು.]

**अवसाद** ಅವಸಾದ (पुं०) 1. ನಾಶ, ಧ್ವಂಸ. अव+षद्लृ (विशरणादौ) "घञ्" (३-३-१८)। "धैर्यविसादेन हृतप्रसादा वन्यद्विपेनेव निदाघसिन्धुः" किरा० ३-३८। 2. ಅಶಕ್ತತೆ, ಅಸಾಮರ್ಥ್ಯ. 3. ದಣಿವು, ಆಯಾಸ. "किमिवावसादकरमात्मवताम्" किरा० ६-१९। 4. ಅಳಿವು, ಮುಳುಗಿಹೋಗುವುದು. "धुरं गुर्वीं वोढुं स्थितमनवसादाय जगतः" किरा० १८-४७। 5. ಪರಾ ಜಯ, ಸೋಲು. "अलं स्वपक्षावसादशङ्कया" माल० १। 6. ಅವಸಾನ, ಕೊನೆ, ಸಮಾಪ್ತಿ.

**अवसादक** ಅವಸಾದಕ (वि०) 1. ಅಸಾಮರ್ಥ್ಯವನ್ನು ಉಂಟುಮಾಡುವ. अव+षद्लृ (विशरणादौ)+णिच् "ण्वुल्" (३-१-१३३)। "एष शोकः परित्यक्तः सर्वकार्यावसादकः" रामा०। 2. ಸಮಾಪ್ತಿಯನ್ನುಂಟು ಮಾಡುವ, ಕೊನೆಗಾಣಿಸುವ. 3. ಸೋಲಿಸುವ, ಪರಾಜಯಗೊಳಿಸುವ. 4. ನಾಶಗೊಳಿಸುವ. 5. ದುಃಖ ವುಂಟುಮಾಡುವ. 6. ದಣಿವುಂಟುಮಾಡುವ.

**अवसादन** ಅವಸಾದನ (न०) 1. ನಾಶಪಡಿಸುವಿಕೆ. 2. ಕಾರ್ಯದಲ್ಲಿ ಅಸಾಮರ್ಥ್ಯವನ್ನುಂಟುಮಾಡುವಿಕೆ. अव+षद्लृ (विशरणादौ)+णिच् "ल्युट्" (३-३-११५)। 3. ದುರ್ಬಲನನ್ನಾಗಿ ಮಾಡುವಿಕೆ. 4. ಪರಾಜಯ ಗೊಳಿಸುವಿಕೆ, ಸೋಲಿಸುವಿಕೆ. 5. ಸಮಾಪ್ತಿಗೊಳಿಸು ವಿಕೆ. 6. ದುಃಖವುಂಟುಮಾಡುವಿಕೆ. 7. ವೈಯಲ್ಲಿ

ದಪ್ಪನಾಗಿ ಎದ್ದಿರುವ ಕುರು ಮೊದಲಾದ ವ್ರಣವು ಸಣ್ಣದಾಗಲು ಮಾಡುವ ಚಿಕಿತ್ಸೆ, ಮಾಂಸಗ್ರಂಥಿಯನ್ನು ಹೊರತೆಗೆಯಲು ಮಾಡುವ ಚಿಕಿತ್ಸೆ. "उत्सन्नमृदुमांसानां व्रणानामवसादनम्" सुश्रुत०।

**अवसान** ಅವಸಾನ (न०) 1. ವಿರಾಮ, ನಿಲ್ಲಿಸುವಿಕೆ. अव+षो (अन्तकर्मणि) "ल्युट्" (३-३-११५)। "विरामोऽवसानम्" पा० सू० (१-४-११०)। 2. ಕೊನೆ, ಸಮಾಪ್ತಿ. "दोहावसाने पुनरेव दोग्ध्रीं भेजे भुजोच्छिन्नरिपुर्निषण्णाम्" रघु० २-२३। 3. ಮುಗಿಸುವಿಕೆ, ಕೊನೆಗಾಣಿಸುವಿಕೆ. 4. ಮೃತ್ಯು, ಮರಣ, ಕೊನೆಗಾಲ. "दिष्टान्तोऽस्तं कालधर्मोऽवसानम्" अभि० चि०। 5. ಸೀಮೆ, ಗಡಿ, ಎಲ್ಲೆ. "अन्तोऽवसानं सीमा च मर्यादाऽपि च सीमनि" अभि० चि०।

**अवसाय** ಅವಸಾಯ (पु०) 1. ಸಮಾಪ್ತಿ, ಕೊನೆ. अव+षो(अन्तकर्मणि) "ण:" (३-१-१४१)। "परित: प्रसभेन नीयमान: शरवर्षैरवसायमाश्रयाश:" माघ० २०-७२। 2. ಶೇಷ, ಉಳಿಕೆ. 3. ಮುಗಿಸುವಿಕೆ, ಕೊನೆಗಾಣಿಸುವಿಕೆ, ಸಮಾಪ್ತಿಗೊಳಿಸುವಿಕೆ. 4. ನಿಶ್ಚಯ, ನಿರ್ಧಾರ. "अथावसाय: शेषे स्यात् समाप्तौ निश्चयेऽपि च" मेदि०। (अव्य०)5. ಸಮಾಪ್ತಿಗೊಳಿಸಿ, ಕೊನೆಗಾಣಿಸಿ. 6. ನಿಶ್ಚಯಿಸಿ, ನಿರ್ಣಯ ಮಾಡಿ. अव+षो "ल्यप्" (७-१-३७)।

**अवसायक** ಅವಸಾಯಕ (वि०) 1. ನಿಶ್ಚಯಿಸುವ, ನಿರ್ಣಯಮಾಡುವ. 2. ಮುಗಿಸುವ, ಸಮಾಪ್ತಿಗೊಳಿಸುವ. अव+षो (अन्तकर्मणि) "ण्वुल्" (३-१-१३३)।

**अवसायित** ಅವಸಾಯಿತ (वि०) 1. ಮುಗಿಸಲ್ಪಟ್ಟ, ಸಮಾಪ್ತಿಗೊಳಿಸಲ್ಪಟ್ಟ. 2. ನಿರ್ಣಯಿಸಲ್ಪಟ್ಟ, ನಿಶ್ಚಯಿಸಲ್ಪಟ್ಟ. अव+षो (अन्तकर्मणि) + णिच् "क्त:" (३-२-१०२)।

**अवसिक्त** ಅವಸಿಕ್ತ (वि०) 1. ಪ್ರೋಕ್ಷಿಸಲ್ಪಟ್ಟ, ಚಿಮುಕಿಸಲ್ಪಟ್ಟ. अव+षिच (क्षरणे) "क्त:" (३-२-१०२)। 2. ನೆನಸಲ್ಪಟ್ಟ, ತೋಯಿಸಲ್ಪಟ್ಟ, ಒದ್ದೆಮಾಡಲ್ಪಟ್ಟ.

**अवसित** ಅವಸಿತ (न०) 1. ಗಮನ, ಗತಿ. 2. ಅವಸಾನ, ಕೊನೆ. 3. ಒಕ್ಕಿದ ಧಾನ್ಯ. (वि०) 4. ಮುಗಿಸಲ್ಪಟ್ಟ, ಸಮಾಪ್ತಿಗೊಳಿಸಲ್ಪಟ್ಟ. अव+षो(अन्तकर्मणि) "क्त:" (३-२-१०२)। "वचस्यवसिते तस्मिन् ससर्ज गिरमात्मभू:" कुमा० २-५३। "अवसितललितक्रियेण बाह्वो:" माघ० ७-६४। 5. ಮುಗಿಸಲ್ಪಟ್ಟ, ನಿರ್ವಹಿಸಲ್ಪಟ್ಟ, ಸಾಧಿಸಲ್ಪಟ್ಟ. "सोऽहमिदानीमवसितप्रतिज्ञाभरोऽपि वृषलापेक्षया शस्त्रं धारयामि" मुद्रा० १। 6. ತಿಳಿಯಲ್ಪಟ್ಟ. 7. ನಿಶ್ಚಯಿಸಲ್ಪಟ್ಟ. 8. ಚೆನ್ನಾಗಿ ಪಕ್ವವಾಗಿರುವ, ಹಣ್ಣಾಗಿರುವ. "अवसितं समाप्ते निश्चितेऽपि च" नानार्थर०। "अवसितं गतौ। ऋद्धे ज्ञातेऽवसाने च" हेम०। 9. ತಡೆಯಲ್ಪಟ್ಟ, ಅಡ್ಡಿಪಡಿಸಲ್ಪಟ್ಟ. 10. ಸಂಬಂಧಿಸಿದ, ಸಂಬಂಧಹೊಂದಿದ. नदीमन्ववसिता सेना। नद्या सह सम्बद्धेत्यर्थ: सि० कौ०। "भवेदवसितं ज्ञाते गतौ ऋद्धावसानयो:" विश्व०।

**अवसृष्ट** ಅವಸೃಷ್ಟ (वि०) 1. ಕೊಡಲ್ಪಟ್ಟ, ದಾನಮಾಡಲ್ಪಟ್ಟ. अव+सृज(विसर्गे) "क्त:" (३-२-१०२)। 2. ಬಿಡಲ್ಪಟ್ಟ, ತ್ಯಜಿಸಲ್ಪಟ್ಟ. 3. ಹೊರಟಿರುವ.

**अवसेक** ಅವಸೇಕ (पु०) 1. ಸ್ನಾನ. 2. ಚಿಮುಕಿಸುವುದು, ಸಿಂಪಡಿಸುವುದು. अव+षिच (क्षरणे) "घञ्" (३-३-१८)। 3. ಒಂದು ಬಗೆ ನೇತ್ರರೋಗ.

**अवसेचन** ಅವಸೇಚನ (न०) 1. ಸುತ್ತಲೂ ಚಿಮುಕಿಸುವಿಕೆ. अव+षिच (क्षरणे) "ल्युट्" (३-३-११५)। 2. ರಕ್ತವನ್ನು ಸುರಿಸುವಿಕೆ, ರಕ್ತಸ್ರಾವಣ.

**अवसेय** ಅವಸೇಯ (वि०) 1. ನಿರ್ಣಯಿಸಲ್ಪಡುವ, ನಿಶ್ಚಯಿಸಲ್ಪಡುವ. 2. ಸಮಾಪ್ತಿಗೊಳಿಸಲ್ಪಡುವ, ಮುಗಿಸಲ್ಪಡುವ. अव+षो (अन्तकर्मणि) "यत्" (३-१-९७)।

**अवस्कन्द** ಅವಸ್ಕಂದ (पु०) 1. ಆಕ್ರಮಣ, ಮುತ್ತಿಗೆ. 2. ಇಳಿಕೆ, ಇಳಿಯುವಿಕೆ. अव + स्कन्दिर् (गतिशोषणयो:) भावे "घञ्" (३-३-१८)। "लतानुपातं कुसुमान्यगृह्णात् स नद्यवस्कन्दमुपास्पृशच्च" भट्टि० २-११। 3. ಸೇನಾನಿವೇಶಸ್ಥಾನ, ಸೇನೆಗಳ ಶಿಬಿರ. अव+स्कन्दिर् अधि० "घञ्" (३-३-१२१)।

**अवस्कन्दन** ಅವಸ್ಕಂದನ (न०) 1. ಆಕ್ರಮಣ, ಮುತ್ತಿಗೆ. 2. ಇಳಿಯುವಿಕೆ, ಕೆಳಕ್ಕೆ ಬರುವಿಕೆ. अव + स्कन्दिर् (गतिशोषणयो:) भावे "ल्युट्" (३-३-११५)।

**अवस्कन्दित** ಅವಸ್ಕಂದಿತ (वि०) 1. ಆಕ್ರಮಿಸಲ್ಪಟ್ಟ, ಮುತ್ತಿಗೆಹಾಕಲ್ಪಟ್ಟ. 2. ಖಂಡಿಸಲ್ಪಟ್ಟ, ನಿರಾಕರಿಸಲ್ಪಟ್ಟ. अव+स्कन्दिर् (गतिशोषणयो:) "क्त:" (३-२-१०२)। 3. ಕೆಳಕ್ಕೆ ಇಳಿದಿರುವ. कर्त० "क्त:" (३-४-७२)।

**अवस्कर** ಅವಸ್ಕರ (पुं०) 1. ಸಗಣಿ, ಲದ್ದಿ, ಹಿಕ್ಕೆ, ಮಲ, ವಿಷ್ಠೆ, ಪುರೀಷ. 2. ಗುಹ್ಯಪ್ರದೇಶ. 3. ಕಸ. अव+कॄ (विक्षेपे) "अप्" (३-३-५७)। "अवस्करोऽपि वर्चस्के गुह्ये" मेदि०। 4. ಕಸದರಾಶಿ, ಗೊಬ್ಬರದ ಗುಪ್ಪೆ, ತಿಪ್ಪೆ.

**अवस्करक** ಅವಸ್ಕರಕ (पुं०) 1. ಕ್ರಿಮಿ, ಹುಳ. (वि०) 2. ಕಸದರಾಶಿಯಲ್ಲಿ ಹುಟ್ಟಿದ. अवस्करे जातः "वुन्" (४-३-२८)।

**अवस्तरण** ಅವಸ್ತರಣ (नं०) ಹೊರಭಾಗದಲ್ಲಿ ಹರಡುವುದು. अव+स्तृञ् (आच्छादने) "ल्युट्" (३-३-११५)।

**अवस्तात्** ಅವಸ್ತಾತ್ (अव्य०) 1. ಕೆಳಗಡೆ, ಕೆಳಗಡೆಯಿಂದ, ಕೆಳಗಡೆಯಲ್ಲಿ. 2. ಹಿಂದಿನಕಾಲ, ಹಿಂದಿನಕಾಲದಿಂದ, ಹಿಂದಿನಕಾಲದಲ್ಲಿ. 3. ಹಿಂಭಾಗ, ಹಿಂಭಾಗದಿಂದ, ಹಿಂಭಾಗದಲ್ಲಿ. अवर "अस्तातिः" "अव्" आदेशश्च (५-३-४१)।

**अवस्तार** ಅವಸ್ತಾರ (पुं०) 1. ಜವನಿಕೆ, ತೆರೆ, ಪರದೆ. 2. ಚಾಪೆ. 3. ಹೊದಿಕೆ. अव+स्तृञ् (आच्छादने) "घञ्" (३-३-१९)।

**अवस्तु** ಅವಸ್ತು (नं०) ಅಯೋಗ್ಯವಸ್ತು, ಅನರ್ಹವಾದ ಪದಾರ್ಥ. न वस्तु। कुत्सितार्थे नं० त०। "अवस्तुनिर्बन्धपरे कथं नु ते" कुमा० ५-६६।

**अवस्था** ಅವಸ್ಥಾ (स्त्री०) 1. ಕಾಲದಿಂದ ಉಂಟಾದ ಶರೀರದ ವಿಶೇಷ ಧರ್ಮ; ಬಾಲ್ಯ, ಕೌಮಾರ, ಯೌವನ ಮೊದಲಾದ ದೇಹದ ವಿಶೇಷ ಧರ್ಮ. अव+ष्ठा (गतिनिवृत्तौ) "अङ्" (३-३-१०६)। "वयोऽवस्थां तस्याः शृणुत सुहृदो यत्र मदनः प्रगल्भव्यापारश्चरति हृदि मुग्धश्च वपुषि" मालती० ९-२९। 2. ಸ್ಥಿತಿ, ಇರುವಿಕೆ. 3. ಕಾಲಕೃತವಾದ ಪರಿಣಾಮ; ಈ ಅವಸ್ಥೆಯು (ಭಾವ ವಿಕಾರವು) जायते, अस्ति, वर्धते, विपरिणमते, अपक्षीयते, नश्यति ಎಂದು ಆರು ವಿಧವೆಂದು ಯಾಸ್ಕರ ಅಭಿಪ್ರಾಯ. "अविद्याऽस्मितारागद्वेषाभिनिवेशाः" ಎಂದು ಐದು ವಿಧವೆಂದು ಯೋಗಶಾಸ್ತ್ರದಲ್ಲಿ ಉಕ್ತವಾಗಿರುವುದು. अनागतावस्था, अभिव्यक्त्यवस्था, अतिरोहितावस्था ಹೀಗೆ ಮೂರು ವಿಧವೆಂದು ಸಾಂಖ್ಯರ ಅಭಿಪ್ರಾಯ.

**अवस्थान** ಅವಸ್ಥಾನ (नं०) 1. ಸ್ಥಿತಿ, ಇರುವಿಕೆ. 2. ವಾಸಮಾಡುವಿಕೆ. अव+ष्ठा (गतिनिवृत्तौ) "ल्युट्" (३-३-११५)। "वटतले चतुर्मण्डलावस्थानेन अवस्थितः" पञ्चतं० १। 3. ವಾಸಸ್ಥಳ, ಮನೆ. अधि० "ल्युट्" (३-३-११७)।

**अवस्थापन** ಅವಸ್ಥಾಪನ (नं०) ಇರಿಸುವಿಕೆ, ಇಡುವಿಕೆ. अव+ष्ठा (गतिनिवृत्तौ) + णिच् (पुक्) "ल्युट्" (३-३-११५)।

**अवस्थापित** ಅವಸ್ಥಾಪಿತ (वि०) ಇರಿಸಲ್ಪಟ್ಟ, ಇಡಲ್ಪಟ್ಟ. अव+ष्ठा (गतिनिवृत्तौ) + णिच् (पुक्) "क्तः" (३-२-१०२)।

**अवस्थायिन्** ಅವಸ್ಥಾಯಿನ್ (वि०) ಇರುವ, ವಾಸಮಾಡುವ. अव+ष्ठा (गतिनिवृत्तौ) "णिनिः" (३-१-१३४)। स्त्रियाम् "ङीप्" (४-१-५)। –स्थायिनी –ಸ್ಥಾಯಿನೀ.

**अवस्थित** ಅವಸ್ಥಿತ (वि०) 1. ಇರುವ, ನಿಂತಿರುವ, ಉಳಿದಿರುವ. अव+ष्ठा (गतिनिवृत्तौ) "क्तः" (३-४-७२)। "यानेव हत्वा न जिजीविषामस्तेऽवस्थिताः प्रमुखे धार्तराष्ट्राः" गीता २-६। "तत्कथय कथमियन्तं कालमवस्थिता मया विना भवती" विक्र० ४। "कश्चिद्यथाभागमवस्थितेऽपि स्वसंनिवेशाद्व्यतिलङ्घिनीव" रघु० ६-१९। 2. ವಾಸವಾಗಿರುವ, ನೆಲೆಸಿರುವ. 3. ನಿರತನಾದ, ಉದ್ಯುಕ್ತನಾದ. "प्रिया भवन्ति लोकस्य स्वे स्वे कर्मण्यवस्थिताः" मनु० ८-४२। 4. ಸ್ಥಿರವಾಗಿರುವ, ದೃಢವಾಗಿರುವ. 5. ಅವಲಂಬಿಸಿರುವ, ಆಶ್ರಯಿಸಿರುವ. "मयि सृष्टिर्हि लोकानां रक्षा युष्मास्ववस्थिता" कुमा० २-२८। 6. ತೀರ್ಮಾನವಾದ, ನಿಶ್ಚಿತವಾದ. "विपर्यये तु पितुरस्याः समीपनयनमवस्थितमेव" शाकु० ५।

**अवस्थिति** ಅವಸ್ಥಿತಿ (स्त्री०) 1. ಸ್ಥಿತಿ, ಇರುವಿಕೆ. अव+ष्ठा (गतिनिवृत्तौ) "क्तिन्" (३-३-९४)। 2. ವಾಸಸ್ಥಾನ, ಮನೆ. "नियतमिह सर्वात्मना कृतावस्थितिना भगवता धर्मेण न स्मर्यते कृतयुगस्य" काद० ८८।

**अवस्यन्दन** ಅವಸ್ಯಂದನ (नं०) ಸ್ರವಿಸುವಿಕೆ, ಸುರಿಯುವಿಕೆ, ಸೋರುವಿಕೆ. अव+स्यन्दू (प्रस्रवणे) "ल्युट्" (३-३-११५)।

**अवस्रंसन** ಅವಸ್ರಂಸನ (नं०) ಕೆಳಕ್ಕೆ ಬೀಳುವುದು. अव+स्रंसु (अवस्रंसने) भावे "ल्युट्" (३-३-११५)।

**अवस्रंसित** ಅವಸ್ರಂಸಿತ (वि०) ಕೆಳಕ್ಕೆ ಬೀಳಿಸಲ್ಪಟ್ಟ, ಕೆಳಕ್ಕೆ ತಳ್ಳಲ್ಪಟ್ಟ. अव+स्रंसु (अवस्रंसने) + णिच् "क्तः" (३-२-१०२)।

**अवस्रस्त** ಅವಸ್ರಸ್ತ (वि०) ಕೆಳಗೆಬಿದ್ದ, ಕೆಳಕ್ಕೆ ಜಾರಿಬಿದ್ದ. अव+स्रंसु (अवस्रंसने) "क्तः" (३-२-१०२)।

**अवह** ಅವಹ (वि०) 1. ಪ್ರವಾಹವಿಲ್ಲದ, ನದಿಯು ಹರಿಯದಿರುವ (ದೇಶ). वह (प्रापणे) "अच्" (३-१-१३४)। न० त०। 2. ವಹಿಸದಿರುವ, ಹೊರದಿರುವ.

**अवहत** ಅವಹತ (वि०) 1. ಬಡಿಯಲ್ಪಟ್ಟ, ಒಕ್ಕಲ್ಪಟ್ಟ, ತೆನೆ ಬಡಿಯಲ್ಪಟ್ಟ. अव+हन (हिंसागत्योः) "क्तः" (३-२-१०२)। 2. ಕುಟ್ಟಲ್ಪಟ್ಟ (ಬತ್ತ).

**अवहति** ಅವಹತಿ (स्त्री०) 1. ತೆನೆ ಬಡಿಯುವುದು, ಧಾನ್ಯ ಒಕ್ಕುವುದು. 2. ಕುಟ್ಟುವಿಕೆ. अव+हन (हिंसागत्योः) "क्तिन्" (३-३-९४)।

**अवहनन** ಅವಹನನ (न०) 1. ತೆನೆ ಬಡಿಯುವಿಕೆ,' ಧಾನ್ಯ ಒಕ್ಕುವುದು. 2. ಧಾನ್ಯವನ್ನು ಕುಟ್ಟುವಿಕೆ. अव+हन (हिंसागत्योः) "ल्युट्" (३-३-११५)। 3. ಶ್ವಾಸಕೋಶ. अवहन्यते शोणितमनेन — कर० "ल्युट्" (३-३-११७)।

**अवहरण** ಅವಹರಣ (न०) 1. ಬೇರೆ ಕಡೆಗೆ ಒಯ್ಯುವುದು. 2. ಸೇನೆಗಳನ್ನು ರಣಕ್ಷೇತ್ರದಿಂದ ಶಿಬಿರಕ್ಕೆ ಒಯ್ಯುವುದು. 3. ತತ್ಕಾಲದಲ್ಲಿ (ಹಂಗಾಮಿಯಾಗಿ) ಯುದ್ಧವನ್ನು ನಿಲ್ಲಿಸುವುದು. 4. ಸುಲಿಗೆಮಾಡುವುದು. ದೋಚಿಕೊಳ್ಳುವುದು, ಅಪಹರಿಸುವುದು. अव+हृञ् (हरणे) "ल्युट्" (३-३-११५)।

**अवहस्त** ಅವಹಸ್ತ (पु०) ಕೈಯ ಹಿಂಭಾಗ. अवरं हस्तस्य। "अवहस्तो हस्तपृष्ठतः" अभि० चि०।

**अवहार** ಅವಹಾರ (पु०) 1. ಚೋರ, ಕಳ್ಳ. 2. ಒಂದು ಜಲಚರಪ್ರಾಣಿ. अव + हृञ् (हरणे) "णः" (३-१-१४१)। "नक्रे चौरेऽवहारः स्यात्" त्रिकाण्ड०। 3. ಹಾವುಮೀನು. 4. ತತ್ಕಾಲದಲ್ಲಿ (ಹಂಗಾಮಿಯಾಗಿ) ಯುದ್ಧವನ್ನು ನಿಲ್ಲಿಸುವುದು. 5. ಸೇನೆಯನ್ನು ರಣಕ್ಷೇತ್ರದಿಂದ ಶಿಬಿರಕ್ಕೆ ಒಯ್ಯುವುದು. "ततोऽवहारः सैन्यानां तव तेषां च भारत" भा० भीष्म० ४८-१२०। "क्रियतामवहारोऽस्माद्युद्धाद् ब्राह्मणसंवृतात्" भा०। 6. ದ್ಯೂತ, ಜೂಜು. "अवहारो भवेच्चौरे द्यूते ग्राहाख्ययादसि। निमन्त्रणोपनेतव्यद्रव्ये युद्धादिविश्रमे" नानार्थर०। 7. ವಿರಾಮ, ವಿಶ್ರಾಂತಿ, ನಿಲುಗಡೆ. 8. ಸಮೀಪಕ್ಕೆ ತರಲ್ಪಡುವ ವಸ್ತು. 9. ಜೂಜು, ಯುದ್ಧ ಮುಂತಾದುವುಗಳ ವಿರಾಮ. 10. ನಿಮಂತ್ರಣಕಾಲದಲ್ಲಿ ಬ್ರಾಹ್ಮಣನಿಗೆ ಕೊಡುವ ದ್ರವ್ಯ. "अवहारः पुमान् चौरे द्यूतयुद्धादिविश्रमे। निमन्त्रणोपनेतव्यद्रव्ये ग्राहाख्ययादसि" मेदि०।

**अवहारक** ಅವಹಾರಕ (वि०) 1. ಮೊಸಳೆ. 2. ಬೇರೆ ಕಡೆಗೆ ಒಯ್ಯುವ, ಇನ್ನೊಂದು ಕಡೆಗೆ ಸಾಗಿಸುವ. अव+हृञ् (हरणे) "ण्वुल्" (३-१-१३३)। 3. ಯುದ್ಧದಿಂದ ಸೈನ್ಯವನ್ನು ತಡೆಯುವ. 4. ನಿಲ್ಲಿಸುವ, ತಡೆಯುವ, ಅಡ್ಡಿಪಡಿಸುವ.

**अवहार्य** ಅವಹಾರ್ಯ (वि०) 1. ಬೇರೆ ಕಡೆಗೆ ಸಾಗಿಸಲ್ಪಡುವ. अव+हृञ् (हरणे) "ण्यत्" (३-१-१२४)। 2. ಅವಶ್ಯವಾಗಿ ಕೊಡಲ್ಪಡುವ, ಅವಶ್ಯವಾಗಿ ಕೊಡಬೇಕಾದ. "आधिश्चोपनिधिश्चोभौ न कालात्ययमर्हतः। अवहार्यौ भवेतां तौ दीर्घकालमवस्थितौ" मनु० ८-१४५। 3. ಶಿಕ್ಷಿಸಲ್ಪಡುವ, ದಂಡವಿಧಿಸಲ್ಪಡುವ. "अवहार्यो भवेच्चैव सान्वयः षट्शतं दमम्" मनु० ८-१९८। 4. ಹಿಂತಿರುಗಿಸಲು ಯೋಗ್ಯವಾದ, ಹಿಂದಕ್ಕೆ ಕೊಡಲು ಅರ್ಹವಾದ.

**अवहास** ಅವಹಾಸ (पु०) 1. ಹಾಸ್ಯ, ವಿನೋದ, ಗೇಲಿ. अव + हसे (हसने) "घञ्" (३-३-१८)। "यच्चावहासार्थमसत्कृतोऽसि विहारशय्यासनभोजनेषु" गीता ११-४२। 2. ಮುಗುಳುನಗೆ, ಮಂದಹಾಸ, ಮಂದಸ್ಮಿತ.

**अवहास्य** ಅವಹಾಸ್ಯ (वि०) ನಗಲ್ಪಡುವ, ಗೇಲಿಮಾಡಲ್ಪಡುವ, ನಕಲಿಮಾಡಲ್ಪಡುವ. अव+हसे (हसने) कर्म० "ण्यत्" (३-१-१२४)।

**अवहित** ಅವಹಿತ (वि०) ಅವಧಾನವಿಡಲ್ಪಟ್ಟ, ಜಾಗರೂಕವಾದ, ಎಚ್ಚರವಿಡಲ್ಪಟ್ಟ. अव+डु धाञ् (धारणपोषणयोः) "क्तः" (३-२-१०२)। "अवहित-हृदयो विधाय सोऽर्हामृषिवदृषिप्रवरे गुरूपदिष्टाम्" किरा० २-५८)।

**अवहित्था** ಅವಹಿತ್ಥಾ (स्त्री०) ಭಯ, ಲಜ್ಜೆ ಮುಂತಾದುವುಗಳಿಂದ ಹರ್ಷ ಮೊದಲಾದ ಅನುಭಾವಗಳನ್ನು (ಹೊರಕ್ಕೆ ತೋರಿಸದೆ) ಅಡಗಿಸಿಕೊಳ್ಳುವುದು. न बहिः तिष्ठति — ष्ठा (गतिनिवृत्तौ) "कः" (३-२-४)। ಇದು 33 ವ್ಯಭಿಚಾರಿಭಾವಗಳಲ್ಲೊಂದು. "भयगौरव-लज्जादेर्हर्षाद्याकारगुप्तिरवहित्था" सा० द० ३-१५८। "एवंवादिनि देवर्षौ पार्श्वे पितुरधोमुखी। लीलाकमल-पत्राणि गणयामास पार्वती" कुमा० ६-८४।

**अवहेल (ला)** ಅವಹೇಳ (ಳಾ) (स्त्रीन०) ಅನಾದರ, ತಿರಸ್ಕಾರ. अव+हेड् (अनादरे) "कः" (वा० ३-३-५८)। "अङ्" (३-३-१०३) वा। भावे "ल्युट्" (३-३-११५)। -हेलनम् - ಹೇಳನವು.

**अवहेलित** ಅವಹೇಳಿತ (वि०) ತಿರಸ್ಕರಿಸಲ್ಪಟ್ಟ, ಅನಾದರದಿಂದ ಕಾಣಲ್ಪಟ್ಟ, अव+हेड् (अनादरे) "क्तः" (३-२-१०२)।

**अवह्वर** ಅವಹ್ವರ (पु०) 1. ಕುಟಿಲಮಾರ್ಗ, ಠಕ್ಕು, ವಂಚನೆ, ಮೋಸ. (वि०) 2. ಕುಟಿಲವಾದ, ವಕ್ರವಾದ. ह्वृ (कौटिल्ये संवरणे च) "घः" (३-३-११८)।

**अवाक् (च्)** ಅವಾಕ್ (ಚ್) (वि०) 1. ಮೂಗ, ಮಾತನಾಡದವನು. नास्ति वाक् यस्य। अवाक् अवाचौ अवाचः। (अव्य०) 2. ದಕ್ಷಿಣದಿಕ್ಕು, ದಕ್ಷಿಣ ದಿಕ್ಕಿನಿಂದ, ದಕ್ಷಿಣದಿಕ್ಕಿನಲ್ಲಿ. 3. ದಕ್ಷಿಣದೇಶ, ದಕ್ಷಿಣದೇಶದಿಂದ, ದಕ್ಷಿಣದೇಶದಲ್ಲಿ. अव+अञ्चु (गतौ) "क्विन्" (३-२-५९)। "अस्तातिः" (५-३-२७)। अञ्चेर्लुक् (५-३-३०)। अवाची दिक्; अवाच्या दिशः, अवाच्यां दिशि। अवाङ् देशः, अवाचो देशात्, अवाचि देशे।

**अवाक्पुष्पी** ಅವಾಕ್‌ಪುಷ್ಪೀ (स्त्री०) ಕಾಡುಸಬ್ಬಸಿಗೆ. अवाञ्चि अधोमुखानि पुष्पाण्यस्याः "ङीष्" (४-१-४१)।

**अवाक्शाख** ಅವಾಕ್‌ಶಾಖ (पु०) (ಶ್ರೀ ಭಗವದ್ಗೀತೆ ಯಲ್ಲಿ ಉಕ್ತವಾದ) ಸಂಸಾರ, ಕೆಳಮುಖವಾದ ರೆಂಬೆ ಗಳುಳ್ಳ ಅಶ್ವತ್ಥವೃಕ್ಷ. अवाच्यः शाखा यस्य। "ऊर्ध्वमूलमधःशाखमश्वत्थं प्राहुरव्ययम्। छन्दांसि यस्य पर्णानि यस्तं वेद स वेदवित्" गीता १५-१।

**अवाक्शिरस्** ಅವಾಕ್‌ಶಿರಸ್ (वि०) ಬಗ್ಗಿದ ತಲೆ ಯುಳ್ಳ. अवाक् शिरो यस्य। "श्राद्धं भुक्त्वा य उच्छिष्टं वृषलाय प्रयच्छति। स मूढो नरकं याति कालसूत्रमवाक्शिराः" मनु० ३-२४९।

**अवाग्र** ಅವಾಗ್ರ (वि०) ಬಗ್ಗಿದ ತಲೆಯುಳ್ಳ, ಬಗ್ಗಿದ ತುದಿಯುಳ್ಳ. अवनतमग्रं यस्य।

**अवाङ्** ಅವಾಙ್ (पु०) 1. ದಕ್ಷಿಣದೇಶ. (स्त्री०)-ची -ಚೀ. 2. ದಕ್ಷಿಣ ದಿಕ್ಕು. (वि०) 3. ಅಧೋಮುಖ ವಾದ, ಕೆಳಮುಖವಾದ. अवाञ्चति - अव+अञ्चु (गतौ) "क्विन्" (३-२-५९)। अवाङ् अवाञ्चौ अवाञ्चः।

**अवाङ्मनसगोचर** ಅವಾಙ್ಮನಸಗೋಚರ (पु०) ಪರಮಾತ್ಮ, ಹೇಳಲೂ ತಿಳಿದುಕೊಳ್ಳಲೂ ಅಶಕ್ಯನಾದ ಈಶ್ವರ. वाक् च मनश्च वाङ्मनसे। तयोर्गोचरो न भवति।

**अवाङ्मुख** ಅವಾಙ್ಮುಖ (वि०) ಬಗ್ಗಿದ ತಲೆಯುಳ್ಳ. अवाक् मुखं यस्य। "तस्युस्तेऽवाङ्मुखाः सर्वे फलिता इव शालयः" रघु० १५-८७। स्त्रियाम् "ङीष्" (४-१-५४)।

**अवाची** ಅವಾಚೀ (स्त्री०) ದಕ್ಷಿಣದಿಕ್ಕು. अवाञ्चति - अव+अञ्चु (गतौ) "क्विन्" (३-२-५७)। "ङीप्" (४-१-६)।

**अवाचीन** ಅವಾಚೀನ (वि०) ದಕ್ಷಿಣದೇಶದಲ್ಲಿರುವ. अवाच्यां भवः - अवाक् "खः" (५-४-८)। ಅಮರ ಕಾರನು ದಕ್ಷಿಣ ಮೊದಲಾದ ದಿಕ್ಕಿನಲ್ಲಿರುವ ಎಂಬ ಅರ್ಥದಲ್ಲಿ "अवाग्भवमवाचीनमुदीचीनमुदग्भवम्। प्रत्यग्भवं प्रतीचीनं प्राचीनं प्राग्भवं त्रिषु" ಎಂದು ಹೇಳಿರುತ್ತಾನೆ. "विभाषाञ्चेरदिक् स्त्रियाम्" पा० सू० (५-४-८)। ಎಂಬ ಸೂತ್ರದಿಂದ ಈ ಅರ್ಥದಲ್ಲಿ "ख" ಪ್ರತ್ಯಯವನ್ನು ವಿಧಿಸಿರುವುದಿಲ್ಲ.

**अवाच्य** ಅವಾಚ್ಯ (न०) 1. ಕೆಟ್ಟಮಾತು. न वक्तुं योग्यम् - वच (परिभाषणे) "ण्यत्" (३-१-१२४)। "अवाच्यं वदतो जिह्वा कथं न पतिता तव" रामा०। (वि०) 2. ಹೇಳಲು ಅನರ್ಹವಾದ. 3. ಹೇಳಲು ಅಶಕ್ಯವಾದ. 4. ಅಭಿಧಾವೃತ್ತಿಯಿಂದ ತಿಳಿಸಲು ಆಗದ.

**अवाञ्चित** ಅವಾಂಚಿತ (वि०) ಬಗ್ಗಿಸಲ್ಪಟ್ಟ. अव+अञ्चु (गतौ)+णिच् "क्तः" (३-२-१०२)। "तृणवाञ्छया मुहुरवाञ्चिताननान्निचयेषु यत्र हरिताश्मवेश्मनाम्" माघ० १३-५६।

**अवान्तर** ಅವಾಂತರ (वि०) ಪ್ರಧಾನಕಾರ್ಯದ ಮಧ್ಯೆ ಬರುವ (ಕಾರ್ಯ), ಮುಖ್ಯಕಾರ್ಯಕ್ಕೆ ಉಪ ಷ್ಟಂಭಕವಾದ ಅಂಗಭೂತವಾದ (ಕಾರ್ಯ). अवगतमन्तरं मध्यम्। "पिब निम्बं प्रदास्यामि खलु ते खण्डलड्डुकान्। पित्रैवमुक्तः पिबति तिक्तमप्यतिबालकः"। ಇಲ್ಲಿ ಸಿಹಿ ತಿಂಡಿಯು ದೊರೆಯುವುದು ಮಾತ್ರ ಫಲ ವಲ್ಲ. ತಂದೆಯು ಸಿಹಿ ತಿಂಡಿಯನ್ನು ಕೊಟ್ಟು ಬೇವಿನ ಎಣ್ಣೆಯನ್ನು ಕುಡಿಸುವುದರಿಂದ ಮುಖ್ಯ ಫಲವಾದ ಆರೋಗ್ಯವೂ ದೊರಕುನಂತೆ ವೇದವೂ ಅವಾಂತರ

ಫಲಗಳ ಆಸೆಯನ್ನು ತೋರಿಸಿ ಕರ್ಮಗಳನ್ನು ಮಾಡಿಸುವುದರಿಂದ ಪ್ರಧಾನ ಫಲವಾದ ಮೋಕ್ಷವೂ ದೊರಕುವುದು.

**अवान्तरदिश्** ಅವಾಂತರದಿಶ್ (स्त्री०) ವಿದಿಕ್ಕು, ಈಶಾನ್ಯ ಮೊದಲಾದ ಮೂಲೆ ದಿಕ್ಕುಗಳು. अवान्तरा द्वयोर्दिशोर्मध्ये दिक्।

**अवान्तरदेश** ಅವಾಂತರದೇಶ (पु०) ನಡುಭಾಗ, ಮಧ್ಯ ಪ್ರದೇಶ.

**अवापित** ಅವಾಪಿತ (वि०) 1. ಬಿತ್ತಲ್ಪಡದ, ಬೀಜವನ್ನು ಬಿತ್ತದೆ ನೆಟ್ಟು ಬೆಳೆಸಲ್ಪಟ್ಟ (ಗಿಡ). 2. ಕತ್ತರಿಸಲ್ಪಡದ (ಕೂದಲು). डु वप् (बीजसन्ताने)+णिच् "क्तः" (३-२-१०२)। ನಂ ತಂ। 3. ಹೊಂದಿಸಲ್ಪಟ್ಟ. अव+आप्लृ (व्याप्तौ)+णिच् "क्तः" (३-२-१०२)। "फणिभाषितभाष्यफक्किका विषमा कुण्डलनामवापिता" नैष० २-९५।

**अवाप्त** ಅವಾಪ್ತ (वि०) ಹೊಂದಲ್ಪಟ್ಟ, ಪಡೆಯಲ್ಪಟ್ಟ. अव + आप्लृ (व्याप्तौ) "क्तः" (३-२-१०२)। "नानवाप्तमवाप्तव्यं वर्त एव च कर्मणि" गीता ३-२२।

**अवाप्तव्य** ಅವಾಪ್ತವ್ಯ (वि०) ಹೊಂದಲ್ಪಡುವ, ಅವಶ್ಯವಾಗಿ ಪಡೆಯಬೇಕಾದ. अव+आप्लृ (व्याप्तौ) "तव्यः" (३-१-९६)। "अनवाप्तमवाप्तव्यं न ते किञ्चन विद्यते" रघु० १०-३१।

**अवाप्ति** ಅವಾಪ್ತಿ (स्त्री०) ಹೊಂದುವಿಕೆ, ಪಡೆಯುವಿಕೆ. अव+आप्लृ (व्याप्तौ) "क्तिन्" (३-३-९४)। "तपः किलेदं तदवाप्तिसाधनं मनोरथानामगतिर्न विद्यते" कुमा० ५-६४।

**अवाप्य** ಅವಾಪ್ಯ (वि०) 1. ಹೊಂದಲ್ಪಡುವ, ಹೊಂದಬೇಕಾದ, ಪಡೆಯಲು ಯೋಗ್ಯವಾದ. अव+आप्लृ (व्याप्तौ) "ण्यत्" (३-१-१२४)। "ज्येष्ठता च निवर्तेत ज्येष्ठावाप्यं च यद्धनम्" मनु० ११-१८५। (अव्य०) 2. ಹೊಂದಿ, ಪಡೆದು. अव+आप्लृ "ल्यप्" (७-१-३७)।

**अवाम** ಅವಾಮ (न०) 1. ಬಲಭಾಗ. न वामम्। 2. ಅನುಕೂಲವಾದ, ಪ್ರತಿಕೂಲವಲ್ಲದ. 3. ಸುಂದರವಲ್ಲದ.

**अवाय** ಅವಾಯ (पु०) ಅಂಗ, ಅವಯವ. अव+इण् (गतौ) "घञ्"।

**अवार** ಅವಾರ (न०) ನದಿಯ ಸಮೀಪದ ದಡ, ಹೊಳೆಯ ಈಚೆ ದಡ. अर्वाक्तीरम् अव अर्यते—ऋ (गतौ) कर्म० "घञ्" (३-३-१९)। न वार् अस्त्यत्र वा "अच्" (५-२-१२७)।

**अवारण** ಅವಾರಣ (न०) 1. ತಡೆಯಿಲ್ಲದಿರುವಿಕೆ, ಅಡ್ಡಿಯಿಲ್ಲದಿರುವಿಕೆ. ನಂ ತಂ। (वि०) 2. ತಡೆಯಿಲ್ಲದ, ಅಡ್ಡಿಯಿಲ್ಲದ. न वारणं यस्य।

**अवारणीय** ಅವಾರಣೀಯ (वि०) 1. ತಡೆಯಲಾಗದ, ಅಡ್ಡಿಪಡಿಸಲಾಗದ. न वारयितुं शक्यः। 2. ಹೋಗಲಾಡಿಸಲು ಶಕ್ಯವಲ್ಲದ, ಗುಣ.

**अवारपार** ಅವಾರಪಾರ (पु०) ಸಮುದ್ರ, ಕಡಲು. अवारं पारं च अर्वाक्तीरम् उत्तरतीरं च स्तोऽस्य "अच्" (५-२-१२७)।

**अवारपारीण** ಅವಾರಪಾರೀಣ (वि०) ತೀರವನ್ನು ಮುಟ್ಟುವ, ದಡವನ್ನು ತಲುಪುವ. अवारपारे गच्छति "खः" (४-२-९३)।

**अवारित** ಅವಾರಿತ (वि०) ತಡೆಯಲ್ಪಡದ, ಅಡ್ಡಿಪಡಿಸಲ್ಪಡದ. न वारितः। "ग्रामेषु सैन्यैरकरोदवारितैः किमव्यवस्थां चलितोऽपि केशवः" माघ० १२-३६।

**अवारीण** ಅವಾರೀಣ (वि०) ನದಿಯ ಈಚೆ ದಡವನ್ನು ಮುಟ್ಟುವ. अवारमर्वाक्तीरं गच्छति "खः" (वा० ४-२-९३)।

**अवार्य** ಅವಾರ್ಯ (वि०) 1. ತಡೆಯಲಾಗದ, ಅಡ್ಡಿಪಡಿಸಲಾಗದ. 2. ನಿವಾರಿಸಲಾಗದ, ಗುಣಪಡಿಸಲಾಗದ. "उपद्रवैस्तु ये जुष्टा व्याधयो यान्त्यवार्यताम्" सुश्रुत०।

**अवावट** ಅವಾವಟ (पु०) ಸಜಾತೀಯ ಹೆಂಗಸಿನಲ್ಲಿ ಉಪಪತಿಯಿಂದ ಹುಟ್ಟಿದ ಮಗ. "द्वितीयेन तु यः पित्रा सवर्णायां प्रजायते। अवावट इति ख्यातो शूद्रधर्मा स जातितः" स्मृतिः।

**अवासस्** ಅವಾಸಸ್ (वि०) ನಗ್ನ, ದಿಗಂಬರ, ಬಟ್ಟೆಯಿಲ್ಲದವನು. नास्ति वासो वस्त्रं यस्य।

**अवास्तव** ಅವಾಸ್ತವ (वि०) 1. ನಿಜವಲ್ಲದ, ಸುಳ್ಳಾದ. 2. ಅಯೋಗ್ಯವಾದ, ಯುಕ್ತಿಗೆ ವಿರುದ್ಧವಾದ, ಆಧಾರರಹಿತ. न वास्तवम्।

**अवि** ಅವಿ (पु०) 1. ಸೂರ್ಯ. अवति—अव (रक्षणादौ) "इन्" (उ० ४-११७)। 2. ಅರ್ಕವೃಕ್ಷ, ಎಕ್ಕದ ಗಿಡ. 3. ಕುರಿ, ಟಗರು. "महान्त्यपि समृद्धानि

गोऽजाविधनधान्यतः। स्त्रीसम्बन्धे दशैतानि कुलानि परिवर्जयेत्" मनु० ३-६। 4. ಪರ್ವತ, ಬೆಟ್ಟ. 5. ಯಜಮಾನ. 6. ಇಲಿಯ ಚರ್ಮದ ಕಂಬಳಿ. "अविर्नाथे रवौ मेषे शैलमूषिककम्बले" मेदि०। 7. ಪ್ರಾಕಾರ, ಮನೆಯ ಸುತ್ತುಗೋಡೆ, ಆವರಣದ ಗೋಡೆ. 8. ಮನೆ. 9. ಕಾಂತಿ, ಪ್ರಕಾಶ. 10. ವಾಯು, ಗಾಳಿ. (स्त्री०) 11. ಭೂಮಿ. 12. ಋತುಮತಿ ಯಾದ ಹೆಂಗಸು, ರಜಸ್ವಲೆ. 13. ಕುರಿ. "अविर्ना पर्वते सूर्ये मेषे मूषिककम्बले। प्राकारे भवने भासि स्त्री तु पुष्पवतीभुवोः" नानार्थर०। "अविर्भूपुष्पवत्योः स्त्री वायुप्राकारभासु ना" वैज०। "मेषी स्याज्जालकिन्यविः" त्रिकाण्ड०।

**अविक** ಅವಿಕ (पु०) "अवि" ಪದದ ಅರ್ಥ. अवि स्वार्थे "कः" (५-४-२८)।

**अविकट** ಅವಿಕಟ (पु०) 1. ಕುರಿಗಳ ಮಂದೆ, ಟಗರುಗಳ ಗುಂಪು. अवीनां सङ्घातः "कटच्" (वा० (५-२-२९)। (वि०) 2. ಉಗ್ರವಲ್ಲದ, ಸೌಮ್ಯವಾದ. न विकटः।

**अविकटोरण** ಅವಿಕಟೋರಣ (पु०) ಟಗರುಗಳ ಗುಂಪಿನಿಂದ ರಾಜನಿಗೆ ಕೊಡಬೇಕಾದ ಟಗರು ರೂಪವಾದ ಕಾಣಿಕೆ, –ಕಪ್ಪ, –ತೆರಿಗೆ. अविकटे मेषसङ्घाते देयः उरणः।

**अविकत्थन** ಅವಿಕತ್ಥನ (वि०) ಆತ್ಮಶ್ಲಾಘನೆ ಮಾಡಿಕೊಳ್ಳದವನು. न विकत्थनः। "विद्वांसोऽप्यविकत्थना भवन्ति" मुद्रा० ३।

**अविकल** ಅವಿಕಲ (वि०) 1. ಸಂಪೂರ್ಣವಾದ, ಊನವಲ್ಲದ, ಕೆಡದಿರುವ, ಕಡಿಮೆಯಾಗದಿರುವ. न विकलः। "इहायातः संप्रत्यविकलशरच्चन्द्रवदनः" मालती० २-११। 2. ಕ್ರಮಬದ್ಧವಾದ, ನಿಯಮಾನುಸಾರವಾದ, ಅಸಂಗತವಲ್ಲದ, ಹೊಂದಿಕೆಯಾದ. "गतमनुगतवीणैरेकतां वेणुनादैः कलमविकलतालं गायकैर्बोधहेतोः" माघ० ११-१०। (क्रि० वि०)3. ಸಂಪೂರ್ಣವಾಗಿ, ಪೂರ್ತಿಯಾಗಿ. "रक्षोभिः सुरमनुजैर्दितेः सुतैर्वा यल्लोकेष्वविकलमाप्तमाधिपत्यम्" किरा० १८-३६।

**अविकल्प** ಅವಿಕಲ್ಪ (पु०) 1. ವಿಕಲ್ಪವಿಲ್ಲದಿರುವಿಕೆ, ಇದು ಅಥವಾ ಅದು ಎಂಬ ಬದಲಾವಣೆಯಿಲ್ಲದಿರುವಿಕೆ. (वि०) 2. ವಿಕಲ್ಪವಿಲ್ಲದ, ಇದಾಗಲಿ ಅದಾಗಲಿ ಎಂಬ ಬದಲಾವಣೆಗೆ ಅವಕಾಶವಿಲ್ಲದ. (क्रि० वि०)3. ವಿಕಲ್ಪವಿಲ್ಲದಂತೆ, ಅನುಮಾನಕ್ಕೆ ಎಡೆಯಿಲ್ಲದಂತೆ, ಸಂಶಯವಿಲ್ಲದೆ.

**अविकार** ಅವಿಕಾರ (पु०) 1. ವಿಕಾರವಿಲ್ಲದಿರುವಿಕೆ, ಬದಲಾವಣೆಯಿಲ್ಲದಿರುವಿಕೆ. (वि०)2. ವಿಕಾರವಿಲ್ಲದ, ಬದಲಾವಣೆಯಿಲ್ಲದ.

**अविकार्य** ಅವಿಕಾರ್ಯ (वि०) ವಿಕಾರಹೊಂದದ, ಬದಲಾವಣೆಹೊಂದಲು ಯೋಗ್ಯವಲ್ಲದ, ಸ್ವಸ್ವರೂಪದ ವಿಕಾರವನ್ನು ಹೊಂದುವ ಸುವರ್ಣಾದಿಗಳಂತೆ ಯಾವ ವಿಕಾರವನ್ನೂ ಹೊಂದದ. न विकार्यः। "अव्यक्तोऽयमचिन्त्योऽयमविकार्योऽयमुच्यते" गीता २-२५।

**अविकृत** ಅವಿಕೃತ (वि०) ವಿಕಾರಹೊಂದದ, ಬದಲಾವಣೆ ಹೊಂದದ. न विकृतः।

**अविकृति** ಅವಿಕೃತಿ (स्त्री०) 1. ಸಾಂಖ್ಯರು ಹೇಳುವ ಮೂಲಪ್ರಕೃತಿ. "मूलप्रकृतिरविकृतिः" सां० का० ३। [ವಿವರಕ್ಕೆ "प्रकृति" ಪದದಲ್ಲಿ ನೋಡಿ.] 2. ವಿಕಾರವಿಲ್ಲದಿರುವಿಕೆ. (वि०) 3. ವಿಕಾರವಿಲ್ಲದ, ವಿಕಾರ ಹೊಂದದ.

**अविक्रिय** ಅವಿಕ್ರಿಯ (वि०) ವಿಕಾರವಿಲ್ಲದ, ವಿಕಾರ ಹೊಂದದ. नास्ति विक्रिया विकारो यस्य। "देशे देशे गुणेष्वेवमवस्थास्त्वमविक्रियः" रघु० १०-१७।

**अविक्रीत** ಅವಿಕ್ರೀತ (वि०) ಕ್ರಯಕ್ಕೆ ತೆಗೆದುಕೊಂಡರೂ (ಒಪ್ಪಿಗೆಯಿಲ್ಲವಾದರೆ) ನಿರ್ದಿಷ್ಟಕಾಲದಲ್ಲಿ ಹಿಂತಿರುಗಿಸಲು ಯೋಗ್ಯವಾದ ವಸ್ತು. [ಕ್ರಯಕ್ಕೆ ಕೊಂಡ ವಸ್ತುವು ಸರಿಯಲ್ಲವೆಂದು ಪಶ್ಚಾತ್ತಾಪವುಂಟಾದರೆ ಕೊಂಡನಂತರ ಹತ್ತು ದಿನಗಳೊಳಗಾಗಿ ಹಿಂತಿರುಗಿಸಬೇಕು. ಕೊಟ್ಟವನೂ ಅದನ್ನು ಹಿಂದಕ್ಕೆ ಪಡೆಯಬೇಕು. ಇಂತಹ ವಸ್ತುವು ಅವಿಕ್ರೀತವು]. "क्रीत्वा विक्रीय वा किञ्चित् यस्येहानुशयो भवेत्। सोऽन्तर्दशाहात्तद्द्रव्यं दद्याच्चैवाददीत वा" मनु० ८-२२२।

**अविक्रेय** ಅವಿಕ್ರೇಯ (वि०) ವಿಕ್ರಯಿಸಲು ಅನರ್ಹವಾದ, ಮಾರಲು ಯೋಗ್ಯವಲ್ಲದ. न विक्रेतुं योग्यम्।

**अविक्षत** ಅವಿಕ್ಷತ (वि०) 1. ನಾಶಹೊಂದದ. 2. ಕೆಡಿಸಲ್ಪಡದ. न विक्षतः। "विक्रेतुः प्रतिदेयं तत्तस्मिन्नेवाह्न्यविक्षतम्"।

**अविगर्हित** ಅವಿಗರ್ಹಿತ (वि०) ನಿಂದಿಸಲ್ಪಡದ, ದೂಷಿಸಲ್ಪಡದ. न विगर्हितः।

**अविगीत** ಅವಿಗೀತ (वि०) ನಿಂದಿಸಲ್ಪಡದ, ದೂಷಿಸಲ್ಪಡದ. न विगीतः।

**अविग्न** ಅವಿಗ್ನ (पुं०) 1. ಕಮರಂಕೆ ಗಿಡ. (वि०) 2. ಭಯಪಡದ, ಹೆದರದ, ಕಳವಳಪಡದ. ओ विजी (भयचलनयोः) "क्तः" (३-४-७२)।

**अविग्रह** ಅವಿಗ್ರಹ (पुं०) 1. ನಿತ್ಯಸಮಾಸ. नास्ति विग्रहो वृत्त्यर्थविबोधकं वाक्यं यस्य। (वि०) 2. ದೇಹವಿಲ್ಲದ, ಶರೀರವಿಲ್ಲದ. नास्ति विग्रहो देहो यस्य। "अविग्रहस्याप्यतुलेन हेतुना समेतभिन्नद्वयमूर्ति तिष्ठतः" किरा० १८-३३। 3. ತಿಳವಳಿಕೆಯಿಲ್ಲದ, ಅರಿವಿಲ್ಲದ. नास्ति विशेषेण ग्रहो यस्य।

**अविघ्न** ಅವಿಘ್ನ (नं०) 1. ವಿಘ್ನವಿಲ್ಲದಿರುವಿಕೆ, ಅಡ್ಡಿಯಿಲ್ಲದಿರುವಿಕೆ. विघ्नस्याभावः। अव्ययी०। "अविघ्नमस्तु ते स्थेयाः पितेव धुरि पुत्रिणाम्" रघु० १-९१। "अविघ्नमस्तु सावित्र्याः प्रदाने दुहितुस्तव" भा० वन० २९५-३२। (वि०) 2. ವಿಘ್ನವಿಲ್ಲದ, ತಡೆಯಿಲ್ಲದ, ಪ್ರತಿಬಂಧಕವಿಲ್ಲದ. "सोऽहमविघ्नक्रियोपलम्भाय धर्मारण्यमिदमायातः" शाकु० १।

**अविचलित** ಅವಿಚಲಿತ (वि०) ಚಲಿಸದಿರುವ, ಸ್ಥಿರವಾದ. न विचलितः। "अविचलितमनोभिः साधकैर्मृग्यमाणः स जयति परिणद्धः शक्तिभिः शक्तिनाथः" मालती० ५-१।

**अविचार** ಅವಿಚಾರ (पुं०) 1. ವಿಚಾರವಿಲ್ಲದಿರುವಿಕೆ, ವಿಮರ್ಶೆಯಿಲ್ಲದಿರುವಿಕೆ, ಅವಿವೇಕ. न विचारः। 2. ಕುರಿಗಳು ಸಂಚರಿಸಲು (ಮೇಯಲು) ಯೋಗ್ಯವಾದ ದೇಶ. अवीनां चारो यत्र। (वि०) 3. ವಿಚಾರವಿಲ್ಲದ, ವಿವೇಚನೆಯಿಲ್ಲದ, ವಿಮರ್ಶೆಯಿಲ್ಲದ. न विचारो यत्र।

**अविचारणीय** ಅವಿಚಾರಣೀಯ (वि०) ವಿಮರ್ಶಿಸಲು ಯೋಗ್ಯವಲ್ಲದ, ವಿಚಾರಮಾಡಲು ಅರ್ಹವಲ್ಲದ. न विचारयितुमर्हः। "प्रत्यग्रहीदग्रजशासनं तदाज्ञा गुरूणामविचारणीया" रघु० १४-४६।

**अविचारित** ಅವಿಚಾರಿತ (वि०) 1. ವಿಮರ್ಶೆಮಾಡಲ್ಪಡದ, ಚೆನ್ನಾಗಿ ವಿಚಾರಮಾಡಲ್ಪಡದ. न विचारितः। (क्रि० वि०) 2. ವಿಚಾರಮಾಡದೆ, ವಿವೇಚನೆಯಿಲ್ಲದೆ. "स किं भृत्यः स किं मन्त्री य आदावेव भूपतिम्। युद्धोद्योगं स्वभूत्यागं निर्दिशत्यविचारितम्" हितो०।

**अविचारिन्** ಅವಿಚಾರಿನ್ (वि०) ವಿಚಾರಮಾಡದ, ಹಿಂದುಮುಂದು ನೋಡದೆ ಕೆಲಸಮಾಡುವ. न विचारयितुं शीलमस्य "णिनिः" (३-२-७८)। स्त्रियाम् –चारिणी –ಚಾರಿಣೀ.

**अविचालित** ಅವಿಚಾಲಿತ (वि०) 1. ಚಲಿಸಲ್ಪಡದ, ಕದಲಿಸಲ್ಪಡದ. 2. ಸೋಲಿಸಲ್ಪಡದ, ಜಯಶಾಲಿಯಾದ. न विचालितः। "अविचालितचारुचक्रयोरनुरागादुपगूढयोः श्रिया" माघ० १६-७०।

**अविचाल्य** ಅವಿಚಾಲ್ಯ (वि०) ಸ್ಥಿರವಾದ, ಬದಲಾವಣೆ ಹೊಂದದ, ಕದಲಿಸಲಾಗದ. न विचाल्यः। "अविचाल्यमेतदुक्तं तथ्यं च भवता वचः" भा० वन०।

**अविच्छिन्न** ಅವಿಚ್ಛಿನ್ನ (वि०) 1. ಬೇರೆಯಾಗಿ ಮಾಡಲ್ಪಡದ, ಬೇರ್ಪಡಿಸಲ್ಪಡದ. 2. ಅಖಂಡವಾದ, ನಿರಂತರವಾದ, ಎಡೆಬಿಡದ. न विच्छिन्नः। "अन्वमीयत कल्याणं तस्याविच्छिन्नसन्तति" रघु० १७-११।

**अविच्छेद** ಅವಿಚ್ಛೇದ (पुं०) 1. ವಿಚ್ಛೇದವಿಲ್ಲದಿರುವಿಕೆ, ನಿರಂತರವಾಗಿರುವಿಕೆ, ಅಖಂಡವಾಗಿರುವಿಕೆ, ಸೇರಿದಂತಿರುವಿಕೆ. न विच्छेदः। "गणैरविच्छेदनिरुद्धमाबभौ वनं निरुच्छ्वासमिवाकुलाकुलम्" किरा० १४-३२। (वि०) 2. ಎಡೆಬಿಡದ, ನಿರಂತರವಾದ, ಸೇರಿದಂತಿರುವ, ವಿಚ್ಛೇದವಿಲ್ಲದ. न विच्छेदो यस्य।

**अविज्ञात** ಅವಿಜ್ಞಾತ (वि०) ಚೆನ್ನಾಗಿ ತಿಳಿಯಲ್ಪಡದ. न विज्ञातः। "अविज्ञातप्रबन्धस्य वचो वाचस्पतेरपि" किरा० ११-४३।

**अविज्ञातृ** ಅವಿಜ್ಞಾತೃ (पुं०) 1. ವಿಷ್ಣು. "अविज्ञाता सहस्रांशुः" वि० स०। (वि०) 2. ಅರಿಯದವನು, ತಿಳವಳಿಕೆಯಿಲ್ಲದವನು. स्त्रियाम् "ङीप्" (४-१-६)। –ज्ञात्री –ಜ್ಞಾತ್ರೀ.

**अविज्ञेय** ಅವಿಜ್ಞೇಯ (पुं०) 1. ಪರಮಾತ್ಮ. (वि०) 2. ತಿಳಿಯಲು ಅಶಕ್ಯವಾದ. न विज्ञातुं शक्यः।

**अवित** ಅವಿತ (वि०) ರಕ್ಷಿಸಲ್ಪಟ್ಟ, ಕಾಪಾಡಲ್ಪಟ್ಟ. अव (रक्षणादौ) "क्तः" (३-२-१०२)। "त्राणं त्रातं रक्षितमवितं गोपायितं च गुप्तं च" अम०।

**अवितथ** ಅವಿತಥ (नं०) 1. ಸತ್ಯ, ನಿಜ. न वितथम्। विरोधे नं० त०। "तदवितथमवादीर्यन्मम त्वं प्रियेति प्रियजनपरिभुक्तं यद्दुकूलं दधानः" माघ० ११-३३। (वि०) 2. ಸಫಲವಾದ, ವ್ಯರ್ಥವಲ್ಲದ. "तथेति तस्यावितथं प्रतीतः प्रत्यग्रहीत्संगरमग्रजन्मा" रघु० ५-२६। 3. ಸತ್ಯವಾದ, ನಿಜವಾದ. "अवितथा वितथाः सखि मा गिरः" माघ० ६-१८। (क्रि० वि०) 4. ಸತ್ಯವಾಗಿ, ನಿಜವಾಗಿ.

**अवितृ** ಅವಿತೃ (वि०) ರಕ್ಷಕ, ಕಾಪಾಡುವವನು. अव (रक्षणादौ) "तृच्" (३-१-१३३)। स्त्रियाम् "ङीप्" (४-१-६)। **अवित्री** ಅವಿತ್ರೀ.

**अवित्त** ಅವಿತ್ತ (वि०) 1. ಪ್ರಸಿದ್ಧನಲ್ಲದವನು, ಹೆಸರು ಪಡೆಯದವನು. न वित्तः प्रसिद्धः। 2. ದರಿದ್ರ, ಬಡವ. न वित्तं यस्य।

**अवित्ति** ಅವಿತ್ತಿ (स्त्री०) 1. ಜ್ಞಾನಶೂನ್ಯತೆ, ಅರಿವಿಲ್ಲದಿರುವಿಕೆ. 2. ದಾರಿದ್ರ್ಯ, ಬಡತನ. 3. ಹೊಂದದಿರುವಿಕೆ, ಪಡೆಯದಿರುವಿಕೆ. (वि०) 4. ಜ್ಞಾನವಿಲ್ಲದ, ತಿಳಿವಳಿಕೆಯಿಲ್ಲದ. 5. ಮೂರ್ಖ. (अव्य०) 6. ಜ್ಞಾನವಿಲ್ಲದೆ, ತಿಳಿವಳಿಕೆಯಿಲ್ಲದೆ. नास्ति वित्तिः ज्ञानं यस्य। 7. ಸಂಪಾದನೆಯಿಲ್ಲದೆ, ಜೀವನಕ್ಕೆ ಮಾರ್ಗವಿಲ್ಲದೆ. नास्ति वित्तिर्लाभो यस्य।

**अविथ्या** ಅವಿಥ್ಯಾ (स्त्री०) ಜಾಜಿಗಿಡ. अविभ्यो हिता "यत्" (५-१-८)।

**अविदग्ध** ಅವಿದಗ್ಧ (वि०) 1. ದಡ್ಡ, ಮಡ್ಡಿ, ಹೆಡ್ಡ. न विदग्धः। 2. ಚೆನ್ನಾಗಿ ಸುಡಲ್ಪಡದ.

**अविदित** ಅವಿದಿತ (वि०) ತಿಳಿಯಲ್ಪಡದ. न विदितः। "अविदितगतयामा रात्रिरेव व्यरंसीत्" उ० रा० १-२७।

**अविदुग्ध** ಅವಿದುಗ್ಧ (न०) ಕುರಿಯಹಾಲು. अवेः दुग्धम्।

**अविदूर** ಅವಿದೂರ (न०) 1. ಸಾಮೀಪ್ಯ, ಹತ್ತಿರ. (वि०) 2. ಸಮೀಪದ, ಹತ್ತಿರದ. (अव्य०) 3. ಸಮೀಪದಿಂದ, ಸಮೀಪದಲ್ಲಿ, ಇತ್ಯಾದಿ. **अविदूरेण, अविदूरात्, –दूरतः, –दूरे**।

**अविद्ध** ಅವಿದ್ಧ (वि०) ತೂತುಕೊರೆಯಲ್ಪಡದ, ರಂಧ್ರಮಾಡಲ್ಪಡದ. व्यध (ताडने) "क्तः" (३-२-१०२)। न० त०।

**अविद्धकर्ण** ಅವಿದ್ಧಕರ್ಣ (पु०) ಮ್ಲೇಚ್ಛ, ಯವನ.

**अविद्धकर्णी** ಅವಿದ್ಧಕರ್ಣೀ (स्त्री०) ಅಗುರುಶುಂಠಿ ಗಿಡ.

**अविद्य** ಅವಿದ್ಯ (वि०) ವಿದ್ಯೆಯಿಲ್ಲದ, ವಿದ್ಯಾಭ್ಯಾಸಮಾಡದ, ಮೂರ್ಖ, ತಿಳಿವಳಿಕೆಯಿಲ್ಲದ. नास्ति विद्या ज्ञानं यस्य। "अविद्यानां तु सर्वेषामीहातश्चेद्धनं भवेत्। समस्तत्र विभागः स्यादपित्र्य इति धारणा" मनु० ९-२०५।

**अविद्यमान** ಅವಿದ್ಯಮಾನ (वि०) ಇಲ್ಲದಿರುವ. न विद्यमानः। "अविद्यमाने पित्र्यंशे स्वांशादुद्धृत्य वा पुनः। अवश्यकार्याः संस्काराः भ्रातृभिः पूर्वसंस्कृतैः"।

**अविद्या** ಅವಿದ್ಯಾ (स्त्री०) 1. ಅಜ್ಞಾನ, ತಿಳಿಗೇಡಿತನ, ತಿಳಿವಳಿಕೆಯಿಲ್ಲದಿರುವಿಕೆ. न विद्या। विरोधे न० त०। 2. (ವಿಶಿಷ್ಟಾದ್ವೈತಿಗಳ ಮತದಲ್ಲಿ) ವಿದ್ಯೆಗಿಂತಲೂ ಬೇರೆಯಾದ ಕರ್ಮ. [ಈ ಕರ್ಮದಿಂದಲೇ ಚೇತನನ ಧರ್ಮಭೂತಜ್ಞಾನದ ಸಂಕೋಚವಾಗುವುದು. ಅದರಿಂದ ಅಹಂಕಾರಮಮಕಾರಗಳುಂಟಾಗುವುವು.] "ततँ मृत्युमविद्यया" बृहदा०। "अविद्या कर्मसंज्ञान्या तृतीया शक्तिरिष्यते। यया क्षेत्रज्ञशक्तिः सा वेष्टिता नृप सर्वगा। संसारतापानखिलानवाप्नोत्यतिसन्ततान्। तया तिरोहितत्वाच्च शक्तिः क्षेत्रज्ञसंज्ञिता। सर्वभूतेषु भूपाल तारतम्येन लक्ष्यते" वि० पु० ६-७-६१-६३। 3. (ಅದ್ವೈತಿಗಳ ಮತದಲ್ಲಿ) ವಿದ್ಯೆಗೆ (ಜ್ಞಾನಕ್ಕೆ) ವಿರೋಧಿಯಾದ ಅಜ್ಞಾನ, ಮಾಯೆ, ಭ್ರಾಂತಿ, ಮಿಥ್ಯಾಜ್ಞಾನ. [ಈ ಅವಿದ್ಯೆಯಿಂದ, ಮಿಥ್ಯಾಭೂತವಾದ ಜಗತ್ತು ಸತ್ಯವೆಂಬಂತೆ ತೋರುವುದೆಂದು ಅಭಿಪ್ರಾಯಪಡುತ್ತಾರೆ. "अहं ब्रह्मास्मि" ಎಂಬ ಬ್ರಹ್ಮಸ್ವರೂಪಜ್ಞಾನಕ್ಕೆ नाहं ब्रह्म ಎಂಬ ಜ್ಞಾನವು (ಅವಿದ್ಯೆಯು) ವಿರೋಧಿಯಾದುದು. ಈ ಸಿದ್ಧಾಂತದಲ್ಲಿ ಜೀವ ಬ್ರಹ್ಮ ಇಬ್ಬರೂ ಒಂದೇ. ಆದರೆ ಅವಿದ್ಯೆಯಿಂದ अहं कर्ता, अहं भोक्ता, अहं सुखी, अहं दुःखी, अहं जानामि ಇವೇ ಮೊದಲಾದ ಅಹಂಕಾರ ಮಮಕಾರಗಳಿಂದ ಜೀವಾತ್ಮನು ಕರ್ತೃತ್ವ ಭೋಕ್ತೃತ್ವಾದಿ ಧರ್ಮಗಳುಳ್ಳವನೆಂದು ತಿಳಿಯುವುದು ಅವಿದ್ಯಾಮೂಲಕವಾದುದು. "मायोपाधिरयं जीवः अविद्योपाधिरीश्वरः"। ಒಂದು ಚಂದ್ರಬಿಂಬವು ದೃಷ್ಟಿದೋಷದಿಂದ ಅನೇಕವಾಗಿ ತೋರಿಬರುವಂತೆ ಬ್ರಹ್ಮನೆಂಬ ಒಂದು ವಸ್ತು ಅವಿದ್ಯೆ (ಮಾಯೆ) ಯಿಂದ ಜೀವ ಬ್ರಹ್ಮ ಎಂದು ಬೇರೆಬೇರೆಯಾಗಿ ತೋರಿ ಜೀವನು ದೇಹ, ಇಂದ್ರಿಯ ಮತ್ತು ಅಂತಃಕರಣಗಳೊಡನೆ ಬೆರೆತು ತಾನೇ ದೇಹಾದಿ ಸಂಘಾತನೆಂದು ಭ್ರಮಿಸಿ ಅಹಂಕಾರ ಮಮಕಾರವುಳ್ಳವನಾಗಿ ಜನ್ಮ ಜರಾಮರಣ ಮೊದಲಾದ ದುಃಖವನ್ನು ಅನುಭವಿಸುತ್ತಿರುವನು. ರಜ್ಜು (ಹಗ್ಗ) ವಿನಲ್ಲಿ ತೋರುವ ಸರ್ಪದಂತೆಯೂ, ಶುಕ್ತಿ (ಕಪ್ಪೆಚಿಪ್ಪು) ಯಲ್ಲಿ ತೋರುವ ರಜತ (ಬೆಳ್ಳಿ) ದಂತೆಯೂ ಕರ್ತೃತ್ವಾದಿ ಧರ್ಮಗಳು ಆತ್ಮನಲ್ಲಿ ವಾಸ್ತವವಾಗಿ ಇಲ್ಲವಾದರೂ ತೋರುತ್ತವೆ. ಇಲ್ಲದೇ ಇರುವ ಸ್ಥಳದಲ್ಲಿ ಇರುವಂತೆ ತೋರುವುದೇ ಅಧ್ಯಾಸ ಆರೋಪಗಳು. ಇವು ಅವಿದ್ಯಾ ಮೂಲಕವಾದುವು.] 4. (ಯೋಗಶಾಸ್ತ್ರದಲ್ಲಿ) ಐದು ವಿಧವಾದ

ಕ್ಲೇಶಗಳಲ್ಲೊಂದು. [अविद्या, अस्मिता, रागः, द्वेषः, अभिनिवेशः (पा० यो० सू० २-३) ಎಂದು ಕ್ಲೇಶಗಳು ಐದು ವಿಧ. "अनित्याशुचिदुःखानात्मसु नित्यशुचिसुखात्मख्यातिरविद्या" पा० यो० सू० २-५। ಅದಲ್ಲದ ವಿಷಯದಲ್ಲಿ ಅದು ಎಂಬ ಬುದ್ಧಿಯು ಅವಿದ್ಯೆಯು. ಅನಿತ್ಯವಾದ ಸ್ವರ್ಗಾದಿಗಳಲ್ಲಿ ನಿತ್ಯತ್ವಾಭಿಮಾನವುಂಟಾಗಿ ಕರ್ಮಗಳನ್ನು ಮಾಡುವುದೂ ಅಶುಚಿಯಾದ ದೇಹದಲ್ಲಿ ಶುಚಿತ್ವಬುದ್ಧಿಯೂ "स्थानाद्बीजादुपष्टम्भान्निष्यन्दान्निधनादपि। कायमाधेयशौचत्वात्पण्डिता ह्यशुचिं विदुः"। ದುಃಖಪ್ರಾಯವಾದ ಸ್ರಕ್ ಚಂದನಾದಿಗಳಲ್ಲಿ ಸುಖತ್ವಭ್ರಾಂತಿಯೂ ಅನಾತ್ಮವಾದ ದೇಹಾದಿಗಳಲ್ಲಿ ಆತ್ಮಬುದ್ಧಿಯೂ ಅವಿದ್ಯೆಯು.]

**अविधा ಅವಿಧಾ** (अव्य०) ಅಪಾಯ ಸಮಯದಲ್ಲಿ ಸಹಾಯಕ್ಕಾಗಿ ಕರೆಯಲು ಉಪಯೋಗಿಸುವ ಒಂದು ವಿಕಾರಸ್ವರದ ಶಬ್ದ.

**अविधान ಅವಿಧಾನ** (ನ०) 1. ನಿಯಮವಿಲ್ಲದಿರುವಿಕೆ, ನಿರ್ದಿಷ್ಟವಾದ ನಿಯಮವನ್ನು ಮೀರುವಿಕೆ, ಅಕ್ರಮ ವರ್ತನೆ. ನ० ತ०। "अविधानेन यत् कुर्यात्तत्सर्वं विफलं भवेत्"। (वि०) 2. ನಿಯಮರಹಿತವಾದ, ಅಕ್ರಮವಾದ.

**अविधि ಅವಿಧಿ** (पु०) 1. ಅಕ್ರಮ, ನಿಯಮವಿಲ್ಲದಿರುವಿಕೆ. न विधिः। अभावे ನ० ತ०। "यजन्ते नामयज्ञैस्ते दम्भेनाविधिपूर्वकम्" गीता १६-१७। (वि०) 2. ನಿಯಮರಹಿತವಾದ, ಕ್ರಮಬದ್ಧವಲ್ಲದ. न विधिर्यस्य।

**अविधेय ಅವಿಧೇಯ** (वि०) 1. ಹಠೋಟಿಯಲ್ಲಿಡಲು ಸಾಧ್ಯವಿಲ್ಲದ, ಹೇಳಿದಮಾತಿನಂತೆ ನಡೆಯದ, ಅಂಕೆಯಲ್ಲಿಲ್ಲದ. न विधातुं शक्यः — वि+डु धाञ् (धारणपोषणयोः) "यत्" (३-१-९७)। 2. ಮಾಡಲು ಯೋಗ್ಯವಲ್ಲದ, ಮಾಡಲು ಸಾಧ್ಯವಲ್ಲದ, ಮಾಡಲ್ಪಡದ.

**अविधेयता ಅವಿಧೇಯತಾ** (स्त्री०) ಅವಿಧೇಯತೆ, ಹೇಳಿದಂತೆ ನಡೆಯದಿರುವಿಕೆ, ಹಠೋಟಿಯಲ್ಲಿಲ್ಲದಿರುವಿಕೆ, ಪ್ರತಿಕೂಲವಾಗಿರುವಿಕೆ. विधेयस्य भावः। ನ० ತ०। "मम विमृशतः कार्यारम्भे विधेरविधेयतां सहजकुटिलां कौटिल्यस्य प्रचिन्तयतो मतिम्" मुद्रा० ४-२।

**अविन ಅವಿನ** (पु०) ಅಧ್ವರ್ಯು, ಯಾಗದಲ್ಲಿ ಯಜುರ್ವೇದವನ್ನು ಬಲ್ಲ ಋತ್ವಿಕ್ಕು. अवति यज्ञम् — अव (रक्षणे) "इनच्" (उ० २-४७)। अविनोऽध्वर्युः। सि० कौ०।

**अविनय ಅವಿನಯ** (पु०) 1. ವಿನಯವಿಲ್ಲದಿರುವಿಕೆ, ಉದ್ಧಟತನ. न विनयः। अभावे ನ० ತ०। "अयमाचरत्यविनयं मुग्धासु तपस्विकन्यासु" शाकु० १-२१। 2. ದುರ್ವರ್ತನೆ, ಅಸಭ್ಯತೆ, ಅಪರಾಧ, ಮರ್ಯಾದೆಯಿಲ್ಲದಿರುವಿಕೆ. "बहवोऽविनयान्नष्टा राजानः सपरिच्छदाः" मनु० ७-४०। "वेनो नष्टोऽविनयान्नहुषश्चैव पार्थिवः" मनु० ७-४१। (वि०) 3. ವಿನಯವಿಲ್ಲದ, ಮರ್ಯಾದೆಯಿಲ್ಲದ, ಅಸಭ್ಯ. न विनयो यस्य।

**अविनश्वर ಅವಿನಶ್ವರ** (पु०) 1. ಪರಮಾತ್ಮ. (वि०) 2. ನಾಶದ ಸ್ವಭಾವವಿಲ್ಲದ, ಸ್ಥಿರವಾದ, ನಿತ್ಯವಾದ. न विनश्वरः। विरोधे ನ० ತ०।

**अविनाभाव ಅವಿನಾಭಾವ** (पु०) 1. ಒಂದನ್ನು (ವ್ಯಾಪಕವನ್ನು) ಬಿಟ್ಟು ಇನ್ನೊಂದು (ವ್ಯಾಪ್ಯವು) ಇಲ್ಲದಿರುವಿಕೆ, ಎರಡು ವಸ್ತುಗಳು (ವ್ಯಾಪ್ಯ ವ್ಯಾಪಕಗಳು) ಯಾವಾಗಲೂ ಒಂದೇ ಕಡೆ ಇರುವಿಕೆ, ವ್ಯಾಪ್ತಿ. विना ऋते न भावः स्थितिः। 2. ಸಂಬಂಧ.

**अविनाभूत ಅವಿನಾಭೂತ** (वि०) ಒಂದು (ವ್ಯಾಪ್ಯವು) ಇನ್ನೊಂದನ್ನು (ವ್ಯಾಪಕವನ್ನು) ಬಿಡದೆ ಯಾವಾಗಲೂ ಸೇರಿಕೊಂಡಿರುವ, ಒಂದನ್ನು ಇನ್ನೊಂದು ಅಗಲದೆ ಒಂದೇ ಕಡೆ ಇರುವ. न विना व्यापकं विना भूतः स्थितः।

**अविनाशिन् ಅವಿನಾಶಿನ್** (वि०) 1. ಪರಮಾತ್ಮ, ಪರಬ್ರಹ್ಮ. 2. ನಶ್ವರವಲ್ಲದ, ಸ್ಥಿರವಾದ, ನಿತ್ಯವಾದ. न विनाशी। "अविनाशि तु तद्विद्धि येन सर्वमिदं ततम्। विनाशमव्ययस्यास्य न कश्चित्कर्तुमर्हति" गीता २-१७। स्त्रियाम् "ङीप्" (४-१-५)। **अविनाशिनी ಅವಿನಾಶಿನೀ.**

**अविनीत ಅವಿನೀತ** (वि०) 1. ಅವಿಧೇಯ, ಅಂಕೆಯಿಲ್ಲದ, ಹಠೋಟಿಮೀರಿದ. 2. ಉದ್ಧಟ, ದುಡುಕು ಸ್ವಭಾವದ. 3. ಅಸಭ್ಯ, ಮರ್ಯಾದೆಯಿಲ್ಲದ. न विनीतः। "ववृते विनीतमविनीतशासिभिः" माघ० १३-२४। 4. ಅಶಿಕ್ಷಿತವಾದ, ಪಳಗಿಸಲ್ಪಡದ. "नाविनीतैर्व्रजेद्धुर्यैर्न च क्षुद्व्याधिपीडितैः। न भिन्नशृङ्गाक्षिखुरैर्न वालधिविरूपितैः" मनु० ४-६७।

**अविनीता ಅವಿನೀತಾ** (स्त्री०) ಸ್ವೈರಿಣಿ, ವ್ಯಭಿಚಾರಿಣಿ, ಅಸಭ್ಯ ಹೆಂಗಸು.

**अविनीय** ಅವಿನೀಯ (वि०) ಕಪಟವಿಲ್ಲದ, ಹೃತ್ಪೂರ್ವಕವಾದ. न विनीयः कल्कः यस्य। "अविनीयसंभ्रमविकासिभक्तिभिः" माघ० १३-२४।

**अविनेय** ಅವಿನೇಯ (वि०) ಶಿಕ್ಷಿಸಲು ಅಶಕ್ಯವಾದ, ಅಡಗಿಸಲು ಸಾಧ್ಯವಲ್ಲದ. न विनेतुं शक्यः।

**अविपाक** ಅವಿಪಾಕ (पुं०) 1. ಫಲರೂಪವಾಗಿ ಪರಿಣಮಿಸದ ಪಾಪ ಪುಣ್ಯಗಳು, ಫಲೋನ್ಮುಖವಾಗದ ಧರ್ಮಾಧರ್ಮಗಳು. विशेषेण पच्यन्ते फलरूपेण — वि+डुपचष् (पाके) "घञ्" (३-३-१९)। 2. ಪಾಕವಾಗದಿರುವಿಕೆ, ತಿಂದ ಆಹಾರವು ಜೀರ್ಣವಾಗದಿರುವಿಕೆ, ಅಜೀರ್ಣರೋಗ. नास्ति विपाको यत्र। 3. ಚೆನ್ನಾಗಿ ಬೇಯದಿರುವಿಕೆ, ಅನ್ನವು ಸರಿಯಾಗಿ ಪಕ್ವವಾಗದಿರುವಿಕೆ.

**अविपाल** ಅವಿಪಾಲ (पुं०) ಕುರುಬ, ಕುರಿಯನ್ನು ಕಾಪಾಡುವವನು. अवीन् पालयति — पाल (रक्षणे)+णिच् "अण्" (३-२-१)।

**अविपुल** ಅವಿಪುಲ (वि०) ದೊಡ್ಡದಲ್ಲದ, ಸಣ್ಣದಾದ, ಚಿಕ್ಕದಾದ, ಸಂಕುಚಿತವಾದ, ಇಕ್ಕಟ್ಟಾದ.

**अविप्लुत** ಅವಿಪ್ಲುತ (वि०) ನಷ್ಟವಾಗದ, ನಾಶಹೊಂದದ. न विप्लुतः नष्टः। "अविप्लुतब्रह्मचर्यः सवर्णां स्त्रियमुद्वहेत्"।

**अविभक्त** ಅವಿಭಕ್ತ (वि०) 1. ಬೇರೆಮಾಡಲ್ಪಡದ, ಒಟ್ಟಿಗೆ ಸೇರಿರುವ, ಭಾಗಮಾಡಲ್ಪಡದ. "अविभक्तं स्थावरं यत् सर्वेषामेव तद्भवेत्"। 2. ಭಾಗಹೊಂದದ, ಆಸ್ತಿಯನ್ನು ಪಾಲುಮಾಡಿಕೊಳ್ಳದೆ ಒಂದೇ ಕುಟುಂಬದಲ್ಲಿರುವ (ಸೋದರರು). "अविभक्ता विभक्ता वा सपिण्डाः स्थावरे समाः"। 3. ಒಡೆಯಲ್ಪಡದ, ಸಂಪೂರ್ಣವಾದ.

**अविभावित** ಅವಿಭಾವಿತ (वि०) 1. ತಿಳಿಯಲ್ಪಡದ. 2. ಯೋಚಿಸಲ್ಪಡದ. 3. ನೋಡಲ್ಪಡದ. न विभावितः। "अविभावितेषुविषयः प्रथमं मदनोऽपि नूनमभवत्तमसा" माघ० ९-४०।

**अविमुक्त** ಅವಿಮುಕ್ತ (नं०) 1. ಕಾಶೀಕ್ಷೇತ್ರ. न विमुक्तम्। "मुने प्रलयकालेऽपि न तत्क्षेत्रं कदाचन। विमुक्तं न शिवाभ्यां यदविमुक्तं ततो विदुः" काशीखं०। 2. ತಲೆಗೂ ಗಲ್ಲಕ್ಕೂ ನಡುವಣ ಭಾಗ. "य एषोऽनन्तोऽव्यक्त आत्मा सोऽविमुक्ते प्रतिष्ठितः" जा० उ०। (वि०) 3. ಬಿಡಲ್ಪಡದ, ತ್ಯಜಿಸಲ್ಪಡದ.

**अविमृष्य** ಅವಿಮೃಷ್ಯ (वि०) ವಿಚಾರಮಾಡಲು ಯೋಗ್ಯವಲ್ಲದ, ಸಂದೇಹಪಡಲು ಅವಕಾಶವಿಲ್ಲದ. न विमृष्यम्। "अविमृष्यमेतदभिलष्यति स द्विषतां वधेन विषयाभिरतिम्" किरा० ६-४४।

**अवियुक्त** ಅವಿಯುಕ್ತ (वि०) ಬೇರೆಯಾಗಿಲ್ಲದ, ಅಗಲದಿರುವ, ಯಾವಾಗಲೂ ಸೇರಿಕೊಂಡಿರುವ. न वियुक्तः।

**अवियोग** ಅವಿಯೋಗ (पुं०) 1. ವಿಯೋಗವಿಲ್ಲದಿರುವಿಕೆ, ಅಗಲದಿರುವಿಕೆ. अभावे नं० तं०। 2. ಸಂಬಂಧ, ಸೇರಿಕೊಂಡಿರುವಿಕೆ. (वि०) 3. ವಿಯೋಗವಿಲ್ಲದ, ಅಗಲದಿರುವ. 4. ಸಂಬಂಧಹೊಂದಿರುವ, ಸೇರಿಕೊಂಡಿರುವ. न वियोगो यस्य।

**अवियोगव्रत** ಅವಿಯೋಗವ್ರತ (नं०) ಪತಿ ಪತ್ನಿಯರು ಅಗಲದಿರಲು ಮಾರ್ಗಶೀರ್ಷ ಶುಕ್ಲ ತೃತೀಯಾ (ತದಿಗೆ) ದಿವಸ ಮಾಡುವ ಒಂದು ವ್ರತ.

**अविरत** ಅವಿರತ (नं०) 1. ವಿರಾಮವಿಲ್ಲದಿರುವಿಕೆ, ಕಾಲಾವಕಾಶವಿಲ್ಲದಿರುವಿಕೆ. विरतं विरामः भावे "क्तः"। अभावे नं० तं०। (वि०) 2. ವಿರಾಮವಿಲ್ಲದ, ನಿಲುಗಡೆಯಿಲ್ಲದ. 3. ಅನುಸ್ಯೂತವಾದ, ಎಡೆಬಿಡದೆ ನಡೆಯುವ. "अविरतरतलीलायासजातश्रमाणामुपशमंमुपयान्तं निःसहेऽङ्गेऽङ्गनानाम्" माघ० ११-१७। (क्रि० वि०) 4. ಎಡೆಬಿಡದೆ, ನಿರಂತರವಾಗಿ, ವಿರಾಮವಿಲ್ಲದೆ. "अविरतोज्झितवारिविपाण्डुभिर्विरहितैरचिरद्युतितेजसा" किरा० ५-६।

**अविरति** ಅವಿರತಿ (स्त्री०) 1. ವಿರಾಮವಿಲ್ಲದಿರುವಿಕೆ, ನಿಲುಗಡೆಯಿಲ್ಲದಿರುವಿಕೆ. 2. ಎಡೆಬಿಡದ ಸಂಬಂಧ, ನಿರಂತರತೆ. 3. ವಿಷಯಾಭಿಲಾಷೆ, ಅತಿಕಾಮುಕತೆ, ಅತಿಯಾದ ಕಾಮೇಚ್ಛೆ. विरामो विरतिः — वि+रमु (क्रीडायाम्) भावे "क्तिन्" (३-३-९४)। नं० तं०। (वि०) 4. ವಿರಾಮವಿಲ್ಲದ, ಎಡೆಬಿಡದ, ನಿರಂತರವಾದ. नास्ति विरतिर्यस्य।

**अविरल** ಅವಿರಳ (वि०) 1. ನಿಬಿಡವಾದ, ಸಾಂದ್ರವಾದ, ಘನವಾದ, ದಟ್ಟವಾದ. न विरलः। "अध्यूषुश्च्युतकुसुमाचितां सहाया वृत्रारेरविरलशाद्वलां धरित्रीम्" किरा० ७-२६। 2. ಸೇರಿಕೊಂಡಿರುವ, ಹೊಂದಿಕೊಂಡಿರುವ. (क्रि० वि०) 3. ನಿಬಿಡವಾಗಿ, ಸಾಂದ್ರವಾಗಿ, ದಟ್ಟವಾಗಿ. "संभिन्नामविरलपातिभिर्मयूखैर्नीलानां भृशमुपमेखलं मणीनाम्" किरा० ७-२३।

**अविराम** ಅವಿರಾಮ (पुं०) 1. ವಿರಾಮವಿಲ್ಲದಿರುವಿಕೆ, ನಿಲುಗಡೆಯಿಲ್ಲದಿರುವಿಕೆ, ತಡೆಯಿಲ್ಲದಿರುವಿಕೆ. (वि०) 2. ವಿರಾಮವಿಲ್ಲದ, ಎಡೆಬಿಡದ, ಸತತವಾದ. "अनिमिषमविरामा रागिणां सर्वरात्रं नवनिधुवनलीला: कौतुकेनातिवीक्ष्य" माघ० ११-१८। (क्रि० वि०) 3. ಎಡೆಬಿಡದೆ, ವಿರಾಮವಿಲ್ಲದೆ.

**अविरुद्ध** ಅವಿರುದ್ಧ (वि०) 1. ವಿರೋಧವಿಲ್ಲದ. 2. ತಡೆಯಲ್ಪಡದ, ಅಡ್ಡಿಪಡಿಸಲ್ಪಡದ. 3. ಅನುಗುಣವಾದ, ಅನುರೂಪವಾದ, ತಕ್ಕುದಾದ. न विरुद्ध:।

**अविरोध** ಅವಿರೋಧ (पुं०) 1. ಸಮ್ಮತಿ, ಒಪ್ಪಿಗೆ. 2. ಅಡ್ಡಿಯಿಲ್ಲದಿರುವಿಕೆ, ತಡೆಯಿಲ್ಲದಿರುವಿಕೆ. 3. ಅನುಗುಣ್ಯ, ಹೊಂದಿಕೆ, ಸಾಮಂಜಸ್ಯ. न विरोध:। "श्रुतिस्मृतिविरोधे तु श्रुतिरेव गरीयसी। अविरोधे तयो: कार्यं स्मार्तं वैदिकवत् सदा" स्मृति:।

**अविलक्षण** ಅವಿಲಕ್ಷಣ (वि०) ಭೇದವಿಲ್ಲದ, ವ್ಯತ್ಯಾಸವಿಲ್ಲದ, ಸಮಾನವಾದ. न विलक्षण:। विरोधे न० त०।

**अविलक्ष्य** ಅವಿಲಕ್ಷ್ಯ (वि०) 1. ಲಕ್ಷ್ಯವಿಲ್ಲದ, ಗುರಿಯಿಲ್ಲದ. 2. ಉದ್ದೇಶವಿಲ್ಲದ. 3. ಕಪಟವಿಲ್ಲದ. 4. ಪ್ರತೀಕಾರವಿಲ್ಲದ. नास्ति विशेषेण लक्ष्यं व्याज: उद्देश्यं शरव्यं वा यस्य।

**अविलम्ब** ಅವಿಲಂಬ (पुं०) 1. ಶೀಘ್ರತೆ. न विलम्ब:। (वि०) 2. ವಿಲಂಬವಿಲ್ಲದ, ಸಾವಕಾಶವಿಲ್ಲದ, ತಡವಿಲ್ಲದ. नास्ति विलम्बो यस्य। (क्रि० वि०) 3. ತಡವಿಲ್ಲದೆ, ಜಾಗ್ರತೆಯಾಗಿ.

**अविलम्बित** ಅವಿಲಂಬಿತ (वि०) 1. ತಡವಿಲ್ಲದ, ಸಾವಕಾಶವಿಲ್ಲದ. न विलम्बितम्। (क्रि० वि०) 2. ಜಾಗ್ರತೆಯಾಗಿ, ಶೀಘ್ರವಾಗಿ, ತಡವಿಲ್ಲದೆ.

**अविला** ಅವಿಲಾ (स्त्री०) 1. ಕುರಿ. अव (रक्षणे) "इलच्" बाहु०। "मेषी तु कुररी रुजा। जालकिन्यविला वेणी" अभि० चि०।

**अविवक्षित** ಅವಿವಕ್ಷಿತ (वि०) 1. ಹೇಳಲು ಇಷ್ಟವಲ್ಲದ. वक्तुमिष्टम्। न० त०। 2. ಉದ್ದೇಶವಿಲ್ಲದ, ಗುರಿಯಿಲ್ಲದ, ಲಕ್ಷ್ಯವಿಲ್ಲದ.

**अविवाद** ಅವಿವಾದ (पुं०) 1. ಐಕಮತ್ಯ, ವಿರುದ್ಧವಾದ ಮಾತಿಲ್ಲದಿರುವಿಕೆ. विरुद्धो वाद: कथनं विवाद:। न० त०। 2. ವ್ಯವಹಾರವಿಲ್ಲದಿರುವಿಕೆ, ಚರ್ಚೆಯಿಂದ ಜಗಳವಿಲ್ಲದಿರುವಿಕೆ. विरुद्धो वाद: व्यवहार: विवाद:। न० त०। 3. ವಿರೋಧವಿಲ್ಲದಿರುವಿಕೆ. विरुद्धो वाद: विवाद: विरोध:। न० त०। (वि०) 4. ಸಂದೇಹಕ್ಕೆ ಅವಕಾಶವಿಲ್ಲದ, ನಿರ್ಣೀತವಾದ. नास्ति विरुद्धो वादो यत्र।

**अविवाहित** ಅವಿವಾಹಿತ (वि०) ಮದುವೆಯಾಗದ. न विवाहित:।

**अविविक्त** ಅವಿವಿಕ್ತ (वि०) 1. ಒಟ್ಟಿಗೆ ಸೇರಿಕೊಂಡಿರುವ, ಬೇರೆಬೇರೆಯಾಗಿರದ, ಒಟ್ಟಿಗೆ ಬೆರೆತಿರುವ. 2. ವಿವೇಕಶೂನ್ಯನಾದ, ವಿವೇಚನೆಯಿಲ್ಲದ, ವಿಚಾರ ಮಾಡದ. 3. ರಹಸ್ಯವಾಗಿಲ್ಲದ, ಜನನಿಬಿಡವಾದ. न विविक्तम्। 4. ಪರಿಶುದ್ಧವಲ್ಲದ. "विविक्तं त्रिष्वसंपृक्ते रह:पूतविवेकिषु" मेदि०। 5. ವಿವೇಚನೆಯಿಂದ ಬೇರೆಬೇರೆಯಾಗಿ ತಿಳಿಯಲ್ಪಡದ.

**अविवेक** ಅವಿವೇಕ (पुं०) 1. ವಿವೇಕವಿಲ್ಲದಿರುವಿಕೆ, ವಿವೇಚನೆಯಿಲ್ಲದಿರುವಿಕೆ, ವಿಮರ್ಶೆ ಮಾಡದಿರುವಿಕೆ. विवेक: भेदकधर्मेण ज्ञानम्। अभावे न० त०। "सहसा विदधीत न क्रियामविवेक: परमापदां पदम्" किरा० २-३०। 2. ದುಡುಕು, ಆತುರಪಡುವಿಕೆ. 3. ಅಜ್ಞಾನ, ತಿಳಿಗೇಡಿತನ, ಮಿಥ್ಯಾಜ್ಞಾನ.

**अविवेकिन्** ಅವಿವೇಕಿನ್ (वि०) 1. ವಿವೇಕವಿಲ್ಲದ, ವಿಮರ್ಶೆ ಮಾಡದ. विवेकोऽस्यास्ति "इनि:" (५-२-११५)। न० त०। 2. ಮಿಥ್ಯಾಜ್ಞಾನವುಳ್ಳ, ತಿಳಿಗೇಡಿ, ಅಜ್ಞಾನಿ. 3. ದುಡುಕುವ, ಆತುರದ ಸ್ವಭಾವದ.

**अविशेष** ಅವಿಶೇಷ (पुं०) 1. ವ್ಯತ್ಯಾಸವಿಲ್ಲದಿರುವಿಕೆ, ಸಮಾನವಾಗಿರುವಿಕೆ. न विशेष: भेदकधर्म:। अभावे न० त०। 2. ಅಭೇದ, ಐಕ್ಯ, ತಾದಾತ್ಮ್ಯ. (वि०) 3. ಭೇದವಿಲ್ಲದ, ವ್ಯತ್ಯಾಸವಿಲ್ಲದ. नास्ति विशेषो यस्य।

**अविशेषित** ಅವಿಶೇಷಿತ (वि०) ಭೇದವಿಲ್ಲದ, ವ್ಯಾವರ್ತಕ ಧರ್ಮದಿಂದ ಭೇದ ತೋರಿಸಲ್ಪಡದ. न विशेषित:।

**अविश्रान्त** ಅವಿಶ್ರಾಂತ (वि०) 1. ವಿರಾಮವಿಲ್ಲದ. 2. ಸತತವಾದ, ಎಡೆಬಿಡದ. वि+श्रमु (तपसि खेदे च) "क्त:" (३-४-७२)। न० त०। (क्रि० वि०) 3. ವಿರಾಮವಿಲ್ಲದೆ. 4. ಸತತವಾಗಿ, ಅವಿಚ್ಛಿನ್ನವಾಗಿ, ಎಡೆಬಿಡದೆ.

**अविश्वसनीय** ಅವಿಶ್ವಸನೀಯ (वि०) ನಂಬಿಕೆಗೆ ಅರ್ಹನಲ್ಲದ, ನಂಬಿಕೆಯಿಡಲು ಯೋಗ್ಯನಲ್ಲದ. विश्वसितुं योग्य: — वि+श्वस (प्राणने) "अनीयर्" (३-१-९६)। न० त०।

**अविश्वस्त** ಅವಿಶ್ವಸ್ತ (वि०) ನಂಬದಿರುವ. न विश्वस्तः। "न विश्वसेदविश्वस्ते विश्वस्ते नातिविश्वसेत्" हितो०।

**अविश्वास** ಅವಿಶ್ವಾಸ (पु०) 1. ಅಪನಂಬಿಕೆ, ನಂಬಿಕೆ ಯಿಲ್ಲದಿರುವಿಕೆ. न विश्वासः। अभावे न० त०। 2. ವಿಶ್ವಾಸವಿಲ್ಲದ, ನಂಬಿಕೆಯಿಲ್ಲದ. 3. ನಂಬ ಲಾಗದ. न विश्वासो यस्मिन्।

**अविश्वासिन्** ಅವಿಶ್ವಾಸಿನ್ (वि०) ನಂಬಿಕೆಯಿಡದಿರುವ, ನಂಬದಿರುವ, ನಂಬಿಕೆಯಿಲ್ಲದ. न विश्वसिति — वि+ श्वस (प्राणने) "णिनिः" (३-१-१३४)।

**अविष** ಅವಿಷ (पु०) 1. ಸಮುದ್ರ, ಕಡಲು. अव (रक्षणे) "टिषच्" (उ० १-४५)। 2. ರಾಜ, ದೊರೆ. 3. ಗಗನ, ಆಕಾಶ. (वि०) 4. ವಿಷರಹಿತವಾದ. 5. ಕಾಪಾ ಡುವ, ರಕ್ಷಕ. (स्त्री०) –षी – ಷೀ. 6. ನದಿ, ಹೊಳೆ. 7. ಸ್ವರ್ಗ. 8. ಭೂಮಿ.

**अविषय** ಅವಿಷಯ (पु०) 1. ಗೋಚರವಾಗದಿರುವಿಕೆ, ಕಾಣಿಸದಿರುವಿಕೆ. 2. ವಿಷಯವಾಗದಿರುವಿಕೆ, ಉದ್ದೇಶವಾಗದಿರುವಿಕೆ. (वि०) 3. ಕಾಣಿಸಿಕೊಳ್ಳದ, ಇಂದ್ರಿಯಕ್ಕೆ ಗೋಚರವಾಗದ. 4. ಉದ್ದೇಶವಲ್ಲದ, ಗುರಿಯಲ್ಲದ. "परिच्छेदातीतः सकलवचनानामविषयः पुनर्जन्मन्यस्मिन्ननुभवपथं यो न गतवान्" मालती० १-३१।

**अविषह्य** ಅವಿಷಹ್ಯ (वि०) 1. ಸಹಿಸಲು ಅಶಕ್ಯವಾದ, ಸಹಿಸಲಾಗದ. 2. ಎದುರಿಸಲಾಗದ, ತಡೆಯ ಲಾಗದ, ಜಯಿಸಲಾಗದ. न विशेषेण सह्यः।

**अविष्टम्भ** ಅವಿಷ್ಟಂಭ (पु०) 1. ಆಶ್ರಯವಿಲ್ಲದಿರುವಿಕೆ, ಒತ್ತಾಸೆಯಿಲ್ಲದಿರುವಿಕೆ. न० त०। (वि०) 2. ಆಶ್ರಯ ವಿಲ್ಲದ, ಒತ್ತಾಸೆಯಿಲ್ಲದ, ಆಸರೆಯಿಲ್ಲದ. नास्ति विष्टम्भो यस्य।

**अविसंवाद** ಅವಿಸಂವಾದ (पु०) ಅನುಗುಣವಾಗಿರುವಿಕೆ, ಪ್ರಮಾಣಕ್ಕೆ ಸರಿಯಾಗಿರುವಿಕೆ, ವಿರೋಧವಿಲ್ಲದಿರುವಿಕೆ. न विसंवादः प्रमाणाननुगुणः। विरोधे न० त०।

**अविसंवादिन्** ಅವಿಸಂವಾದಿನ್ (वि०) 1. ಅನುಗುಣ ವಾಗಿರುವ, ಪ್ರಮಾಣಕ್ಕೆ ಸರಿಯಾಗಿರುವ, ಸರಿಯಾಗಿ ಒಪ್ಪುವ, ಸಂಶಯವಿಲ್ಲದ. न विसंवादी। विरोधे न० त०। "अभिनन्दितवृत्तिरार्यमिश्रैरविसंवादिभि-रागमोदितेषु" याद० १५-९४। 2. ಅಭಂಗುರವಾದ, ಭಂಗಹೊಂದದ, ನಾಶಹೊಂದದ. "अनुभाववता गुरु स्थिरत्वादविसंवादि धनुर्धनंजयेन" किरा० १३-१५।

**अविसर्गिन्** ಅವಿಸರ್ಗಿನ್ (पु०) 1. ನಿರಂತರವಾಗಿ ಕಾಯುವ ಜ್ವರ, ನಿಲ್ಲದೆ ಬರುತ್ತಿರುವ ಜ್ವರ. अविसर्गी अविसर्जनशीलः। [ಏಳು ದಿನ, ಹತ್ತು ದಿನ ಮತ್ತು ಹನ್ನೆರಡು ದಿನಗಳ ವಾಯಿದೆ ಜ್ವರವು ನಿಲ್ಲದೆ ಕಾಯು ವುದರಿಂದ ಅವಿಸರ್ಗಿಯೆಂದು ಹೆಸರು.] "सप्ताहं वा दशाहं वा द्वादशाहमथापि वा। सन्तत्या योऽविसर्गी स्यात्सन्ततः स निगद्यते" सुश्रुत०। ಇಂತಹ ಜ್ವರವು ಸುಖಸಾಧ್ಯವು. "सन्ततज्वर एवान्यः स्वल्पदुर्बल-कारणः। एकदोषो द्विदोषो वा सुखसाध्यः प्रकीर्तितः"। (वि०) 2. ಬಿಡದಿರುವ, ಬಿಟ್ಟುಹೋಗದಿರುವ.

**अविस्पष्ट** ಅವಿಸ್ಪಷ್ಟ (न०) ಅಸ್ಪಷ್ಟವಾದ ಮಾತು, ಸ್ಫುಟವಲ್ಲದ ಮಾತು. न विस्पष्टम्।

**अविस्मरण** ಅವಿಸ್ಮರಣ (न०) ಮರೆಯದಿರುವಿಕೆ, ನೆನಪು, ಸ್ಮರಣೆ. न विस्मरणम्। अभावे न० त०।

**अविस्मृत** ಅವಿಸ್ಮೃತ (वि०) ಮರೆಯದಿರುವ, ಸ್ಮರಿಸ ಲ್ಪಟ್ಟ.

**अविस्मृति** ಅವಿಸ್ಮೃತಿ (स्त्री०) ಸ್ಮರಣೆ, ಮರೆಯದಿರು ವಿಕೆ, ನೆನಪು. न विस्मृतिः। "अविस्मृतिस्त्वच्चरणार-विन्दे भवे भवे मेऽस्तु भवत्प्रसादात्" मु० मा०।

**अविहित** ಅವಿಹಿತ (वि०) 1. ಮಾಡಲ್ಪಡದ. 2. ಶಾಸ್ತ್ರ ದಲ್ಲಿ ಹೇಳಲ್ಪಡದ, ನಿಷಿದ್ಧವಾದ. न विहितम्।

**अवी** ಅವೀ (स्त्री०) ಋತುಮತಿ, ರಜಸ್ವಲೆ. अवत्यात्मानं लज्जया — अव (रक्षणे) "ईः" (उ० ३-१५८)।

**अवीचि** ಅವೀಚಿ (पु०) 1. ಒಂದು ನರಕ. "वीचिः स्वल्पतरङ्गे स्यादवकाशे सुखेऽपि च" विश्व०। "यस्त्विहानृतं वदति साक्ष्ये द्रव्यविनिमये दाने वा स वै प्रेत्य नरके अवीचिमत्यधःशिरा निरवकाशे योजनशतो-च्छ्रायात् गिरिमूर्ध्नः संपात्यते। यत्र जलमिव स्थलमश्म-पृष्ठमवभासते तदवीचिमत्तिलशो विशीर्यमाणशरीरो न म्रियमाणः पुनरारोपितो निपतति" भाग० ५-२६। (वि०) 2. ಅಲೆಗಳಿಲ್ಲದ, ತರಂಗಗಳಿಲ್ಲದ.

**अवीर** ಅವೀರ (वि०) 1. ಮಕ್ಕಳಿಲ್ಲದ. 2. ಹೆಣ್ಣಿಗ, ಹೆಂಗಸಿನ ಸ್ವಭಾವದ, ಹೇಡಿ, ಬಲವಿಲ್ಲದ.

**अवीरा** ಅವೀರಾ (स्त्री०) ಪತಿ ಮತ್ತು ಪುತ್ರರಿಲ್ಲದ ಹೆಂಗಸು. न वीरा। "पतिपुत्रवती नारी वीरा प्रोक्ता मनीषिभिः"।

**अवेक्षक** ಅವೇಕ್ಷಕ (पु०) 1. ಮೇಲ್ವಿಚಾರಣೆ ನಡೆಸು ವವನು. 2. ನೋಡುವವನು. 3. ಪರೀಕ್ಷಿಸುವವನು,

ತನಿಖೆಮಾಡುವವನು. 4. ಯೋಚಿಸುವವನು. ಅव+ईक्ष (दर्शने) "ण्वुल्" (३-१-१३३)।

**अवेक्षण ಅವೇಕ್ಷಣ** (नಂ) 1. ದರ್ಶನ, ಅವಲೋಕನ, ನೋಡುವುದು. "दूरादवेक्षणं हासः संप्रश्ने सादरो भृशम्। परोक्षेऽपि गुणश्लाघा स्मरणं प्रियवस्तुषु" हितो०। 2. ಎಚ್ಚರದಿಂದ ನೋಡುವುದು. 3. ಮೇಲ್ವಿಚಾರಣೆ ನಡೆಸುವುದು, ಕಾಯುವುದು. 4. ಗಮನಿಸುವುದು, ಆಸಕ್ತಿಯಿಂದ ನೋಡುವುದು. अव+ईक्ष (दर्शने) "ल्युट्" (३-३-११५)। "निगृह्य शोकं स्वयमेव धीमान् वर्णाश्रमावेक्षणजागरूकः". रघु० १४-८५।

**अवेक्षणीय ಅವೇಕ್ಷಣೀಯ** (वि०) 1. ನೋಡಲ್ಪಡುವ, ನೋಡಲು ಅರ್ಹವಾದ. अव+ईक्ष (दर्शने) "अनीयर्" (३-१-९६)। "निर्वासिताप्येवमतस्त्वयाहं तपस्विसामान्यमवेक्षणीया" रघु० १४-६७। 2. ಆಲೋಚಿಸಲ್ಪಡುವ, ಆಲೋಚಿಸಲು ಯೋಗ್ಯವಾದ.

**अवेक्षमाण ಅವೇಕ್ಷಮಾಣ** (वि०) ಅವಲೋಕಿಸುತ್ತಿರುವ, ನೋಡುತ್ತಿರುವ. अव+ईक्ष (दर्शने) "शानच्" (३-२-१२४)। "स्फुटीभवद्ग्रामविशेषमूर्च्छनामवेक्षमाणं महतीं मुहुर्मुहुः" माघ० १-१०।

**अवेक्षा ಅವೇಕ್ಷಾ** (स्त्री०) 1. ನೋಡುವುದು. 2. ಗಮನಿಸುವುದು, ಆಸಕ್ತಿಯಿಂದ ನೋಡುವುದು. 3. ಮೇಲ್ವಿಚಾರಣೆ ನಡೆಸುವುದು. 4. ಎಚ್ಚರದಿಂದ ಕಾಯುವುದು. अव+ईक्ष (दर्शने) "अः" (३-३-१०३)। "अलब्धमिच्छेद्दण्डेन लब्धं रक्षेदवेक्षया। रक्षितं वर्धयेद्वृद्ध्या वृद्धं पात्रेषु निक्षिपेत्" मनु० ७-१०१।

**अवेक्षित ಅವೇಕ್ಷಿತ** (वि०) 1. ನೋಡಲ್ಪಟ್ಟ. अव+ईक्ष (दर्शने) "क्तः" (३-२-१०२)। "अवेक्षितानायतवल्गमग्रे तुरङ्गिभिर्यत्ननिरुद्धवाहैः" माघ० ३-३०। 2. ಆಲೋಚಿಸಲ್ಪಟ್ಟ.

**अवेक्षितृ ಅವೇಕ್ಷಿತೃ** (वि०) 1. ಮೇಲ್ವಿಚಾರಣೆ ನಡೆಸುವ. 2. ನೋಡುವ. 3. ಪರೀಕ್ಷಿಸುವ, ತನಿಖೆ ನಡೆಸುವ. 4. ಯೋಚಿಸುವ. अव+ईक्ष (दर्शने) "तृच्" (३-१-१३३)। स्त्रियाम् "ङीप्" (४-१-५)। –ईक्षित्री –ಈಕ್ಷಿತ್ರೀ.

**अवेक्ष्य ಅವೇಕ್ಷ್ಯ** (वि०) 1. ನೋಡಲು ಅರ್ಹವಾದ, ನೋಡಲ್ಪಡುವ. 2. ಆಲೋಚಿಸಲ್ಪಡುವ. अव+ईक्ष (दर्शने) "ण्यत्" (३-१-१२४)। (अव्य०) 3. ನೋಡಿ. 4. ಆಲೋಚಿಸಿ. अव + ईक्ष "ल्यप्" (७-१-३७)। "अवेक्ष्य नूनं चतुरः पुमर्थानितन्यलम्यानलभन्त पौराः" याद० १३-६५।

**अवेद्य ಅವೇದ್ಯ** (वि०) 1. ತಿಳಿಯಲಾಗದ, ತಿಳಿಯಲು ಅಶಕ್ಯವಾದ. न वेद्यः। 2. ಹೊಂದಲು ಅಶಕ್ಯವಾದ, ಪಡೆಯಲು ಸಾಧ್ಯವಿಲ್ಲದ. (स्त्री०) –द्या –ದ್ಯಾ 3. ಮದುವೆಯಾಗಲು ಅರ್ಹಳಲ್ಲದ ಹೆಂಗಸು. "व्यभिचारेण वर्णानामवेद्यावेदनेन च। स्वकर्मणां च त्यागेन जायन्ते वर्णसंकराः" मनु० १०-२४।

**अवेल ಅವೇಲ** (पु०) 1. ಅಪಲಾಪ, ಸತ್ಯವನ್ನು ಅಡಗಿಸುವಿಕೆ, ಸುಳ್ಳು ಹೇಳುವುದು. (वि०) 2. ವೇಳೆಯಿಲ್ಲದ, ಸಮಯವಿಲ್ಲದ. 3. ಎಲ್ಲೆಯಿಲ್ಲದ, ಮೇರೆಯಿಲ್ಲದ. नास्ति वेला यत्र। (स्त्री०) –ला –ಲಾ. 4. ಅಕಾಲ, ಅಸಮಯ. 5. ಅಡಿಕೆ ಪುಡಿ. "अवेलस्त्वपलापे स्यादवेला पूगचूर्णके" विश्व०।

**अवैध ಅವೈಧ** (वि०) 1. ವಿಧಿಯಿಂದ ಪ್ರಾಪ್ತವಲ್ಲದ, ಶಾಸ್ತ್ರದಲ್ಲಿ ಉಕ್ತವಲ್ಲದ. विधेरागतः "अण्" (४-३-७४)। "अवैधं पञ्चमं कुर्वन् राज्ञो दण्डेन शुद्धयति"।

**अवैधव्य ಅವೈಧವ್ಯ** (न०) ಸೌಮಂಗಲ್ಯ, ಪತಿಯೊಡನೆ ಕೂಡಿರುವಿಕೆ. अभावे न० त०।

**अवैमत्य ಅವೈಮತ್ಯ** (न०) 1. ಏಕಮತ್ಯ, ಒಗ್ಗಟ್ಟು. अभावे न० त०। 2. ಭಿನ್ನಾಭಿಪ್ರಾಯವಿಲ್ಲದಿರುವಿಕೆ. (वि०) 3. ಭಿನ್ನಾಭಿಪ್ರಾಯವಿಲ್ಲದ. न वैमत्यं यत्र।

**अवैयात्य ಅವೈಯಾತ್ಯ** (न०) 1. ಧೈರ್ಯವಿಲ್ಲದಿರುವಿಕೆ, ದಿಟ್ಟತನವಿಲ್ಲದಿರುವಿಕೆ, ಗಡುಸಾಗಿಲ್ಲದಿರುವಿಕೆ. वियातस्य भावः वैयात्यम्। न० त०। (वि०) 2. ಧೈರ್ಯವಿಲ್ಲದ, ದಿಟ್ಟತನವಿಲ್ಲದ.

**अवैराग्य ಅವೈರಾಗ್ಯ** (न०) 1. ವಿಷಯಾಭಿಲಾಷೆ, ವೈರಾಗ್ಯವಿಲ್ಲದಿರುವಿಕೆ. वैराग्यं विषयवितृष्णा। अभावे न० त०। 2. ಸಾಂಖ್ಯರು ಹೇಳುವ ಧರ್ಮಾಧರ್ಮಾದಿ ಎಂಟು ವಿಧ ಪ್ರಕೃತಿ ಧರ್ಮಗಳಲ್ಲೊಂದು.

**अवोक्षण ಅವೋಕ್ಷಣ** (न०) ಅರ್ಧ ಬಗ್ಗಿಸಿದ ಕೈಯಿಂದ ನೀರನ್ನು ಪ್ರೋಕ್ಷಿಸುವುದು, ಹಸ್ತವನ್ನು ಸ್ವಲ್ಪ ಓರೆ ಮಾಡಿ ನೀರು ಚಿಮುಕಿಸುವುದು. अव+उक्ष (सेचने) भावे "ल्युट्" (३-३-११५)। "उत्तानेनैव हस्तेन प्रोक्षणं परिकीर्तितम्। न्यञ्चताभ्युक्षणं प्रोक्तं तिरश्चावोक्षणं स्मृतम्"।

**अवोद** ಅವೋದ (ಪುಂ) 1. ನೀರು ಚಿಮುಕಿಸುವುದು, ತೇವ ಮಾಡುವುದು. अव+उन्दी (क्लेदने) भावे "घञ्" (६-४-२९)। नलोपस्य निपा०। (वि०) 2. ತೇವವಾದ, ಒದ್ದೆಯಾದ.

**अवोष** ಅವೋಷ (ಪುಂ) ಬಿಸಿಯಾದ ಅನ್ನ. अव+उष (दाहे) कर्म० "क:" (३-१-१३५)।

**अव्यक्त** ಅವ್ಯಕ್ತ (ಪುಂ) 1. ವಿಷ್ಣು. 2. ಶಿವ, ಮಹೇಶ್ವರ. (ನಂ) 3. ಸಾಂಖ್ಯರು ಹೇಳುವ ಪ್ರಧಾನ, ಮೂಲ ಪ್ರಕೃತಿ. 4. ಅಜ್ಞಾನ. 5. ಬ್ರಹ್ಮ. 6. ಸುಷುಪ್ತ್ಯವಸ್ಥಾ. 7. ಜೀವ, ಆತ್ಮ. "अव्यक्तोऽयमचिन्त्योऽयमविकार्योऽयमुच्यते। तस्मादेवं विदित्वैनं नानुशोचितुमर्हसि" गीता २-२५। 8. ಸ್ವಭಾವ. (ವಿ०)9. ಸ್ಪಷ್ಟವಲ್ಲದ, ಅಸ್ಫುಟವಾದ, ವಿಶದವಲ್ಲದ. नं० त०। "अव्यक्तवर्णरमणीयवचःप्रवृत्तिम्" शाकु० ७-१७। 10. ಅಗೋಚರವಾದ, ಕಣ್ಣಿಗೆ ಕಾಣಿಸದ, ಅತಿ ಸೂಕ್ಷ್ಮವಾದ. "अव्यक्तः शङ्करे विष्णावव्यक्तं महदादिके। आत्मन्यपि स्यादव्यक्तमस्फुटे त्वभिधेयवत्" विश्व०। (अव्य०)11. ಅಸ್ಫುಟವಾಗಿ. 12. ಅಗೋಚರವಾಗಿ, ಸೂಕ್ಷ್ಮವಾಗಿ.

**अव्यक्तराग** ಅವ್ಯಕ್ತರಾಗ (ಪುಂ) ಎಳೆಗೆಂಪು, ಉದಯಕಾಲದ ಕೆಂಪು.

**अव्यक्तलिङ्ग** ಅವ್ಯಕ್ತಲಿಂಗ (ಪುಂ) 1. ಸಂನ್ಯಾಸಿ. (ನಂ)2. ಸಾಂಖ್ಯೋಕ್ತವಾದ ಮಹತ್ತತ್ತ್ವ. अव्यक्तस्य लिङ्गमनुमापकम्। 3. ಚೆನ್ನಾಗಿ ಲಕ್ಷಣಗಳು ತಿಳಿಯದ ರೋಗ. अव्यक्तं लिङ्गमस्य।

**अव्यग्र** ಅವ್ಯಗ್ರ (ವಿ०)1. ಶಾಂತ, ಸ್ಥಿರಚಿತ್ತ. 2. ತತ್ಪರನಲ್ಲದ, ಕೆಲಸದಲ್ಲಿ ನಿರತನಲ್ಲದ. 3. ಉದಾಸೀನ, ತಟಸ್ಥ.

**अव्यङ्ग** ಅವ್ಯಂಗ(ವಿ०)1. ಅಂಗಹೀನವಲ್ಲದ, ಸಂಪೂರ್ಣವಾದ. (स्त्री०) -ङ्गा -ಗಾ. 2. ನಸುಗುನ್ನಿಗಿಡ.

**अव्यञ्जन** ಅವ್ಯಂಜನ (ಪುಂ) 1. ಕೊಂಬಿಲ್ಲದ ಪಶು, ಕೊಂಬು ಹುಟ್ಟದಿರುವ ಹಸು ಮೊದಲಾದ ಪ್ರಾಣಿ. (ವಿ०) 2. ಲಕ್ಷಣವಿಲ್ಲದ, ಗುರುತಿಲ್ಲದ. 3. ಒಳ್ಳೆಯ ಲಕ್ಷಣವಿಲ್ಲದ. 4. ವ್ಯಂಜನಾವೃತ್ತಿಯಿಲ್ಲದ. नास्ति व्यञ्जना व्यञ्जनावृत्तिर्यत्र।

**अव्यण्डा** ಅವ್ಯಂಡಾ (स्त्री०) ನಸುಗುನ್ನಿ ಗಿಡ. नास्ति विगतमण्डं बीजमस्याः।

**अव्यथ** ಅವ್ಯಥ (ಪುಂ) 1. ಸರ್ಪ, ಹಾವು. न व्यथते पद्भ्यां न सञ्चलति—व्यथ (भयसञ्चलनयोः) "अच्" (३-१-१३४)। (वि०) 2. ವ್ಯಥೆಯಿಲ್ಲದ, ದುಃಖವಿಲ್ಲದ. "लब्धस्पर्शं भूव्यधादव्यथेन स्थित्वा किञ्चिद्दन्तयोरन्तराले" माघ० १८-४७। (स्त्री०) -था -ಥಾ. 3. ಶುಂಠಿ. 4. ಅಳಲೆಕಾಯಿ. 5. ಬೆಟ್ಟದಾವರೆ. "अव्यथो निर्व्यथे सर्पे चारटीपथ्ययोः स्त्रियाम्" मेदि०।

**अव्यथा** ಅವ್ಯಥಾ (स्त्री०) ದುಃಖವಿಲ್ಲದಿರುವಿಕೆ. न व्यथा।

**अव्यथिन्** ಅವ್ಯಥಿನ್ (वि०) 1. ವ್ಯಥೆಯಿಲ್ಲದ, ದುಃಖವಿಲ್ಲದ. 2. ಭಯವಿಲ್ಲದ, ಹೆದರಿಕೆಯಿಲ್ಲದ.

**अव्यथिष** ಅವ್ಯಥಿಷ (ಪುಂ)1. ಸೂರ್ಯ. 2. ಸಮುದ್ರ. न+व्यथ (भयसञ्चलनयोः) "टिषच्" (उ० १-४९)। (स्त्री०) -व्यथिषी -ವ್ಯಥಿಷೀ. 3. ರಾತ್ರಿ. 4. ಭೂಮಿ. "अव्यथिषोऽब्धिसूर्ययोः। अव्यथिषी धराराज्योः" सिं० कौ०।

**अव्यपेक्षा** ಅವ್ಯಪೇಕ್ಷಾ (स्त्री०) 1. ಅಜಾಗರೂಕತೆ, ಉದಾಸೀನತೆ, ಎಚ್ಚರಿಕೆಯಿಲ್ಲದಿರುವಿಕೆ. न विशेषेणापेक्षा। "बाष्पासारा हेमकाञ्चीगुणेन श्रोणीबिम्बादव्यपेक्षाच्युतेन" माल० ३-२१। 2. ಏಕಾರ್ಥೀಭಾವರೂಪವಾದ ಸಾಮರ್ಥ್ಯ, ಪ್ರಕ್ರಿಯಾದಶೆಯಲ್ಲಿ ಪದಗಳಿಗೆ ಪ್ರತ್ಯೇಕ ಅರ್ಥವಿರುವುದರಿಂದ ಸಮುದಾಯದಲ್ಲಿ ವಿಶಿಷ್ಟವಾದ ಅರ್ಥವನ್ನು ಕೊಡುವ ಶಕ್ತಿ. (वि०) -क्ष -ಕ್ಷ. 3. ಅಧಿಕ ಅಪೇಕ್ಷೆಯಿಲ್ಲದ, ಹೆಚ್ಚು ಆಸೆಯಿಲ್ಲದ.

**अव्यभिचरित** ಅವ್ಯಭಿಚರಿತ (वि०) 1. ವ್ಯಭಿಚಾರರೂಪವಾದ ದೋಷವಿಲ್ಲದ (ಹೇತು). ವ್ಯಭಿಚಾರವು अन्वयव्यभिचारः व्यतिरेकव्यभिचारश्च ಎಂದು ಎರಡು ವಿಧ. साध्याभाववद्वृत्तित्वं स्वसमानाधिकरणाभावप्रतियोगिसामानाधिकरण्यं च ಎಂದು ಅನ್ವಯ ವ್ಯಭಿಚಾರವೂ ಎರಡು ವಿಧ. "धूमवान् वह्नेः" ಎಂಬಲ್ಲಿ ವಹ್ನಿರೂಪವಾದ ಹೇತುವು ದುಷ್ಟ(ವ್ಯಭಿಚಾರರೂಪವಾದ ದೋಷಾಕ್ರಾಂತ) ವಾದುದು. ಧೂಮವಿಲ್ಲದ ತಪ್ತಾಯಃಪಿಂಡ (ಕಾಯಿಸಿದ ಕಬ್ಬಿಣದ ತುಂಡು)ದಲ್ಲಿ ವಹ್ನಿಯಿರುವುದರಿಂದಲೂ ವಹ್ನಿಯಿರುವ ತಪ್ತಾಯಃಪಿಂಡದಲ್ಲಿ ಧೂಮವಿಲ್ಲದಿರುವುದರಿಂದಲೂ ವಹ್ನಿಯಲ್ಲಿ ಎರಡು ವಿಧ ವ್ಯಭಿಚಾರಗಳೂ ಇರುವುವು. 2. ಅನುಕೂಲವಾದ, ವಿರೋಧವಿಲ್ಲದ, ಅಬಾಧಿತವಾದ.

**अव्यभि (भी) चार** ಅವ್ಯಭಿ (ಭೀ) ಚಾರ (पुं०) 1. ಅಗಲದಿರುವಿಕೆ, ಬೇರೆಯಾಗದಿರುವಿಕೆ, ವಿರಹವಿಲ್ಲದಿರುವಿಕೆ. "अन्योन्यस्याव्यभीचारो भवेदामरणान्तिकः" मनु० ९-१०१। 2. ಬಾಧೆಯಿಲ್ಲದಿರುವಿಕೆ, ಅನುಕೂಲವಾಗಿರುವಿಕೆ. 3. ಸ್ಥಿರವಾಗಿರುವಿಕೆ, ನಿಶ್ಚಲವಾಗಿರುವಿಕೆ.

**अव्यभिचारिन्** ಅವ್ಯಭಿಚಾರಿನ್ (वि०) 1. ಅನುಕೂಲವಾದ, ವಿರುದ್ಧವಲ್ಲದ. वि+अभि+चर (गतिभक्षणयोः) "णिनिः" (३-२-७८)। स्त्रियाम् "ङीप्" (४-१-५)। **-चारिणी -ಚಾರಿಣೀ.** "भवेदव्यभिचारिण्यो भर्तुरिष्टे पतिव्रताः" कुमा० ६-८६। 2. ಸತ್ಯವಾದ, ನಿಜವಾದ. "यदुच्यते पार्वति पापवृत्तये न रूपमित्यव्यभिचारि तद्वचः" कुमा० ५-३६। 3. ನಿಶ್ಚಲವಾದ, ಸ್ಥಿರವಾದ.

**अव्यय** ಅವ್ಯಯ (पुं०) 1. ವಿಷ್ಣು. न वीयते न व्यपगम्यते चेतनोऽस्मात् — वि+इण् (गतौ) "अच्" (३-३-५६)। "अव्ययः पुरुषः साक्षी क्षेत्रज्ञोऽक्षर एव च" वि० स०। 2. ಶಿವ, ಪರಮೇಶ್ವರ. (नं०) 3. ಪರಬ್ರಹ್ಮ. 4. ಅವ್ಯಯ, ಎಲ್ಲಾ ಲಿಂಗ, ವಿಭಕ್ತಿ ಮತ್ತು ವಚನಗಳಲ್ಲೂ (ರೂಪವ್ಯತ್ಯಾಸ ಹೊಂದದೆ) ಒಂದೇ ರೂಪವುಳ್ಳ ಶಬ್ದ. "सदृशं त्रिषु लिङ्गेषु सर्वासु च विभक्तिषु। वचनेषु च सर्वेषु यन्नव्येति तदव्ययम्"। (वि०) 5. ನಾಶಹೊಂದದ, ಶಾಶ್ವತವಾದ. 6. ವ್ಯತ್ಯಾಸಹೊಂದದ, ವಿಕಾರಹೊಂದದ. "वेदाविनाशिनं नित्यं य एनमजमव्ययम्" गीता २-२१। 7. ಶಾಶ್ವತ ಫಲವನ್ನು ಕೊಡುವ. 8. ವ್ಯಯವಿಲ್ಲದ, ಖರ್ಚಿಲ್ಲದ.

**अव्ययात्मन्** ಅವ್ಯಯಾತ್ಮನ್ (वि०) ನಾಶದ ಸ್ವಭಾವವಲ್ಲದ, ನಾಶಹೊಂದದ ಸ್ವಭಾವದ. अव्यय आत्मा स्वभावो यस्य।

**अव्ययीभाव** ಅವ್ಯಯೀಭಾವ (पुं०) ಅವ್ಯಯವಲ್ಲದ ಶಬ್ದವನ್ನು ಅವ್ಯಯವನ್ನಾಗಿ ಮಾಡುವ ಒಂದು ಸಮಾಸ. अनव्ययमव्ययं भवत्यनेन — अव्यय+च्वि+भू (सत्तायाम्) "घञ्" (३-३-२४)। कृष्णस्य समीपम् उपकृष्णम् विष्णोः पश्चात् अनुविष्णु ಇತ್ಯಾದಿ ಸ್ಥಳಗಳಲ್ಲಿ कृष्ण विष्णु ಶಬ್ದಗಳು ಅವ್ಯಯವಲ್ಲದಿದ್ದರೂ ಸಾಮೀಪ್ಯ ಮತ್ತು ಪಶ್ಚಾತ್ ಅರ್ಥಗಳಲ್ಲಿ ಅವ್ಯಯತ್ವವು ಬಂದಿರುವುದು. "द्वन्द्वो द्विगुरपिचाहं मद्गेहे नित्यमव्ययीभावः। तत्पुरुष! कर्मधारय येनाहं स्यां बहुव्रीहिः" उद्भ०।

**अव्यर्थ** ಅವ್ಯರ್ಥ (वि०) 1. ವ್ಯರ್ಥವಲ್ಲದ, ಸಾರ್ಥಕವಾದ, ಪ್ರಯೋಜನಸಹಿತವಾದ. 2. ಸಫಲವಾದ, ಕೈಗೂಡಿದ, ಸಿದ್ಧಿಸಿದ. न व्यर्थः।

**अव्यलीक** ಅವ್ಯಲೀಕ (वि०) 1. ಸತ್ಯವಾದ, ನಿಜವಾದ. 2. ಪ್ರಿಯವಾದ, ಹಿತವಾದ. न व्यलीकः। विरोधे नं० त०। "इत्थं गिरः प्रियतमा इव सोऽव्यलीकाः शुश्राव सूततनयस्य तदा व्यलीकाः" माघ० ५-१।

**अव्यवधान** ಅವ್ಯವಧಾನ (नं०) 1. ಸಾಮೀಪ್ಯ, ಮಧ್ಯೆ ಯಾವುದೂ ಇಲ್ಲದಿರುವಿಕೆ, ಹತ್ತಿರದಲ್ಲಿ ಸೇರಿಕೊಂಡಿರುವಿಕೆ. [ವ್ಯವಧಾನವು ಕಾಲ, ದೇಶ ಭೇದದಿಂದ ಎರಡು ವಿಧ. ಎಡೆಬಿಡದೆ ಸತತವಾಗಿ ಕೆಲಸ ನಡೆಯುವುದಕ್ಕೆ ಕಾಲಕೃತ ಅವ್ಯವಧಾನವೆಂದೂ, ಎರಡು ವಸ್ತುಗಳ ನಡುವೆ ಮತ್ತಾವುದೂ ಅಡ್ಡಬರದೆ ಸಮೀಪಸಂಬಂಧ ಹೊಂದಿರುವುದಕ್ಕೆ ದೇಶಕೃತ ಅವ್ಯವಧಾನವೆಂದೂ ಹೆಸರು.] (वि०) 2. ಸಮೀಪದ, ಹತ್ತಿರದ.

**अव्यवसाय** ಅವ್ಯವಸಾಯ (पुं०) 1. ಉದ್ಯೋಗವಿಲ್ಲದಿರುವಿಕೆ, ಕೆಲಸವಿಲ್ಲದಿರುವಿಕೆ, ಪ್ರಯತ್ನವಿಲ್ಲದಿರುವಿಕೆ. 2. ನಿಶ್ಚಯವಿಲ್ಲದಿರುವಿಕೆ. नं० त०। (वि०) 3. ನಿಶ್ಚಯವಿಲ್ಲದ, ನಿರ್ಧಾರವಿಲ್ಲದ. 4. ಉದ್ಯೋಗವಿಲ್ಲದ. न व्यवसायो यस्य।

**अव्यवसायिन्** ಅವ್ಯವಸಾಯಿನ್ (वि०) 1. ಉದ್ಯೋಗವಿಲ್ಲದ, ಪ್ರಯತ್ನವಿಲ್ಲದ. 2. ನಿಶ್ಚಯವಿಲ್ಲದ, ನಿರ್ಣಯವಿಲ್ಲದ. "बहुशाखा ह्यनन्ताश्च बुद्धयोऽव्यवसायिनाम्" गीता २-४१।

**अव्यवस्थ** ಅವ್ಯವಸ್ಥ (वि०) 1. ಸ್ಥಿರವಲ್ಲದ, ಚಂಚಲವಾದ, ಚಲಿಸುವ. "स्थलारविन्दश्रियमव्यवस्थाम्" कुमा० १-३३। 2. ನಿಶ್ಚಯವಿಲ್ಲದ, ಭರವಸೆಯಿಲ್ಲದ, ಅನಿಯತವಾದ. "अव्यवस्थौ हि दृश्येते युद्धे जयपराजयौ" रामा० सुं०। "व्यूहावुभौ तावितरेतरस्मात् भङ्गं जयं चापतुरव्यवस्थम्" रघु० ७-५४। 3. ಎಲ್ಲೆಯಿಲ್ಲದ, ಮಿತಿಮೀರಿದ. 4. ಕಟ್ಟಳೆಯಿಲ್ಲದ, ನಿಯಮರಹಿತವಾದ, ಶಾಸ್ತ್ರವಿರುದ್ಧವಾದ.

**अव्यवस्था** ಅವ್ಯವಸ್ಥಾ (स्त्री०) 1. ನಿಶ್ಚಯವಿಲ್ಲದಿರುವಿಕೆ. 2. ಅಕ್ರಮ, ನಿಯಮಕ್ಕೆ ವಿರುದ್ಧವಾಗಿರುವಿಕೆ. "ग्रामेषु सैन्यैरकरोदवारितैः किमव्यवस्थां चलितोऽपि केशवः" माघ० १२-३६।

**अव्यवस्थित** ಅವ್ಯವಸ್ಥಿತ (वि०) 1. ಶಾಸ್ತ್ರಮರ್ಯಾದೆಯಿಲ್ಲದ, ನಿಯಮರಹಿತವಾದ. 2. ಅಸ್ಥಿರವಾದ,

ಚಂಚಲವಾದ. वि+अव+ष्ठा (गतिनिवृत्तौ) "क्तः" (३-४-७२)। ನಂ ತಂ। "अव्यवस्थितचित्तस्य प्रसादोऽपि भयंकरः"। 3. ಶಾಶ್ವತವಲ್ಲದ, ಅನಿತ್ಯವಾದ.

**अव्यवहार्य** ಅವ್ಯವಹಾರ್ಯ (ವಿಂ) "ವ್ಯವಹರಿಸಲು ಅನರ್ಹನಾದ, ಅಪಾಂಕ್ತೇಯ, ಭೋಜನ ಶಯನ ಪಾನಾದಿಗಳಿಗೆ ಅರ್ಹನಲ್ಲದ (ಪತಿತ, ಸಮಾಜದಿಂದ ಬಹಿಷ್ಕರಿಸಲ್ಪಟ್ಟವನು). वि+अव+हृञ् (हरणे) "ण्यत्" (३-१-१२४)।

**अव्यवहित** ಅವ್ಯವಹಿತ (ವಿಂ) ಸಮೀಪದ, ಹತ್ತಿರದ, ಸಾಕ್ಷಾತ್ ಸಂಬಂಧಹೊಂದಿದ, ಸೇರಿಕೊಂಡಿರುವ. ನಂ ತಂ।

**अव्यवहृत** ಅವ್ಯವಹೃತ (ವಿಂ) ವ್ಯವಹರಿಸಲ್ಪಡದ.

**अव्यसन** ಅವ್ಯಸನ (ನಂ) 1. ಸನ್ಮಾರ್ಗ, ಸದಾಚಾರ. 2. ಪಾಪವಿಲ್ಲದಿರುವಿಕೆ, ದೋಷವಿಲ್ಲದಿರುವಿಕೆ. 3. ಕ್ಷೇಮ, ಶುಭ. (ವಿಂ) 4. ದೋಷವಿಲ್ಲದ, ಪಾಪವಿಲ್ಲದ. 5. ಸದಾಚಾರವುಳ್ಳ. 6. ದುಃಖವಿಲ್ಲದ. 7. ಆಸಕ್ತಿಯಿಲ್ಲದ. 8. ಏಳುವಿಧ ವ್ಯಸನವಿಲ್ಲದ. [ವಿವರಕ್ಕೆ "व्यसन" ಪದದಲ್ಲಿ ನೋಡಿ.]

**अव्यस्त** ಅವ್ಯಸ್ತ (ವಿಂ) 1. ಬೇರ್ಪಡಿಸಲ್ಪಡದ, ಬಿಡಿಸಲ್ಪಡದ, ಸೇರಿಕೊಂಡಿರುವ. 2. ವ್ಯತ್ಯಾಸಹೊಂದದ, ಮಾರ್ಪಾಡಾಗದ. 3. ಎಸೆಯಲ್ಪಡದ, ಬಿಸಾಡಲ್ಪಡದ. न व्यस्तः।

**अव्याकुल** ಅವ್ಯಾಕುಲ (ವಿಂ) ಕಳವಳವಿಲ್ಲದ, ಚಿತ್ತಸ್ವಾಸ್ಥ್ಯವುಳ್ಳ, ನೆಮ್ಮದಿಯುಳ್ಳ.

**अव्याकृत** ಅವ್ಯಾಕೃತ (ನಂ) 1. (ಸಾಂಖ್ಯಮತದಲ್ಲಿ) ಪ್ರಧಾನ, ಮೂಲಪ್ರಕೃತಿ. 2. (ಅದ್ವೈತಿಗಳ ಮತದಲ್ಲಿ) ಜಗತ್ಕಾರಣವಾದ ಬೀಜಭೂತವಾದ ಮಾಯೆ. 3. (ವಿಶಿಷ್ಟಾದ್ವೈತಿಗಳ ಮತದಲ್ಲಿ) ನಾಮರೂಪಗಳಿಂದ ಅಭಿವ್ಯಕ್ತವಲ್ಲದ ಪ್ರಕೃತಿ. "अव्याकृताद्व्याकृतवानसि त्वं नामानि रूपाणि च यानि पूर्वम्" हयं।

**अव्याज** ಅವ್ಯಾಜ (ಪುಂ) 1. ಕಪಟವಿಲ್ಲದಿರುವಿಕೆ. 2. ಸ್ವಭಾವದಿಂದಿರುವಿಕೆ, ನಿಸರ್ಗತೆ. "इदं किलाव्याजमनोहरं वपुः" शाकुं १-१६। (ವಿಂ) 3. ಕಪಟವಿಲ್ಲದ, ಸರಳವಾದ, ಋಜುವಾದ. 4. ನಿಸರ್ಗವಾದ, ಕೃತಕವಲ್ಲದ.

**अव्यापक** ಅವ್ಯಾಪಕ (ವಿಂ) 1. ವಿಸ್ತಾರವಲ್ಲದ, ಹರಡದಿರುವ. 2. ಎಲ್ಲಾ ಕಡೆಯಲ್ಲೂ ಸಂಬಂಧವಿಲ್ಲದ, ಪರಿಮಿತಿಯುಳ್ಳ. न व्यापकः।

**अव्यापकत्व** ಅವ್ಯಾಪಕತ್ವ (ನಂ) ಪ್ರತ್ಯೇಕತೆ, ಬೇರೆಯಾಗಿರುವಿಕೆ, ಪರಿಮಿತಿ, ಒಂಟಿಯಾಗಿರುವಿಕೆ.

**अव्यापिन्** ಅವ್ಯಾಪಿನ್ (ವಿಂ) 1. ಹರಡದಿರುವ, ವಿಸ್ತಾರವಲ್ಲದ. 2. ಪರಿಮಿತಿಯುಳ್ಳ, ಇತರ ಸಂಬಂಧವಿಲ್ಲದ. न व्याप्नोति – वि+आप्लृ (व्याप्तौ) "णिनिः" (३-२-७८)।

**अव्याप्त** ಅವ್ಯಾಪ್ತ (ವಿಂ) 1. ಪರಿಮಿತಿಯುಳ್ಳ, ಒಂದು ಮಿತಿಯಲ್ಲಿರುವ. 2. ಹರಡದಿರುವ, ಹಬ್ಬದಿರುವ, ಪಸರಿಸದಿರುವ, ಪ್ರತ್ಯೇಕವಾದ. न व्याप्तः।

**अव्याप्ति** ಅವ್ಯಾಪ್ತಿ (ಸ್ತ್ರೀಂ) 1. ಕೆಲವು ಲಕ್ಷ್ಯಗಳಲ್ಲಿ ಲಕ್ಷಣವಿಲ್ಲದಿರುವುದು. "शिखासूत्रवान् ब्राह्मणः" ಎಂಬ ಲಕ್ಷಣವು ಶಿಖಾಸೂತ್ರಗಳಿಲ್ಲದ ಬ್ರಾಹ್ಮಣ ಸಂನ್ಯಾಸಿಯಲ್ಲಿಲ್ಲದುದರಿಂದ ಅಲ್ಲಿ ಅವ್ಯಾಪ್ತಿ. 2. ವ್ಯಾಪಿಸದಿರುವುದು, ಹರಡದಿರುವುದು, ಪಸರಿಸದೆ ಇತರ ಸಂಬಂಧವಿಲ್ಲದಿರುವಿಕೆ.

**अव्याप्य** ಅವ್ಯಾಪ್ಯ (ವಿಂ) 1. ಎಲ್ಲಾ ಕಡೆಯಲ್ಲೂ ಹರಡದಿರುವ, ಎಲ್ಲದರ ಸಂಬಂಧ ಪಡೆಯದ, ಎಲ್ಲಾ ಕಡೆಯಲ್ಲೂ ಇಲ್ಲದ. 2. ವ್ಯಾಪ್ತಿಯಿಲ್ಲದ, ಸಾಹಚರ್ಯ ನಿಯಮವಿಲ್ಲದ. ವಹ್ನಿಗೆ ಆಧಾರವಾದ ತಪ್ತಾಯಃಪಿಂಡ (ಕಾಯಿಸಿದ ಕಬ್ಬಿಣ) ದಲ್ಲಿ ಧೂಮವಿಲ್ಲದಿರುವುದರಿಂದ ಧೂಮಕ್ಕೆ ವಹ್ನಿಯು ಅವ್ಯಾಪ್ಯ. (ಅವ್ಯಂ) 3. ಹರಡದೆ, ಹಬ್ಬದೆ, ಪಸರಿಸದೆ, ಎಲ್ಲಾ ಕಡೆಯಲ್ಲೂ ಸಂಪೂರ್ಣ ಸಂಬಂಧಹೊಂದದೆ. वि+आप्लृ (व्याप्तौ) "ल्यप्" (७-१-३७)। ನಂ ತಂ।

**अव्याप्यवृत्ति** ಅವ್ಯಾಪ್ಯವೃತ್ತಿ (ವಿಂ) ತನ್ನ ಅಭಾವವಿರುವ ವಸ್ತುವಿನಲ್ಲಿ ತಾನೂ ಇರುವ; ಯಾವುದಾದರೊಂದು ವಸ್ತುವು ತನಗೆ ಅಧಿಕರಣಭೂತವಾದ ಕಾಲ ಅಥವಾ ದೇಶದಲ್ಲಿ ಸಂಪೂರ್ಣ ಸಂಬಂಧವನ್ನು ಹೊಂದದಿರುವುದು ಅವ್ಯಾಪ್ಯವೃತ್ತಿಯೆನಿಸುವುದು. ಉದಾ: "अग्रे वृक्षः कपिसंयोगी मूले न" ಕಪಿಯು ತನಗೆ ಅಧಿಕರಣಭೂತವಾದ ಮರದ ಎಲ್ಲಾ ಕಡೆಯಲ್ಲೂ ಸಂಬಂಧಹೊಂದದೆ ಏಕದೇಶದಲ್ಲಿ (ಕೊಂಬೆಯಲ್ಲಿ) ಮಾತ್ರವಿದ್ದು ಬುಡದಲ್ಲಿಲ್ಲದಿರುವುದು. ಇತ್ಯಾದಿ.

**अव्यावर्तक** ಅವ್ಯಾವರ್ತಕ (ವಿಂ) 1. ಮತ್ತೊಂದರಿಂದ ಬೇರ್ಪಡಿಸದ, ಮತ್ತೊಂದನ್ನು ತಡೆಯದ. 2. ಮತ್ತೊಂದರಿಂದ ಭೇದವನ್ನು ಉಂಟುಮಾಡದ, ವಿಶೇಷಣವಲ್ಲದ. न व्यावर्तयति – वि+आ+वृतु (वर्तने) + णिच् "ण्वुल्" (३-१-१३३)।

अव्यावर्तन ಅವ್ಯಾವರ್ತನ (नं०) 1. ಮತ್ತೊಂದರಿಂದ ಬೇರ್ಪಡಿಸದಿರುವಿಕೆ. 2. ಮತ್ತೊಂದರಿಂದ ತಡೆಯಿಲ್ಲದಿರುವಿಕೆ. न व्यावर्तनम्। (वि०) 3. ಮತ್ತೊಂದರಿಂದ ಬೇರ್ಪಡಿಸದ. 4. ವಿಶೇಷ ಧರ್ಮದಿಂದ ತಡೆಹೊಂದದ. वि+आ+वृतु (वर्तने)+णिच् "ल्युट्" (३-३-११५)। न व्यावर्तनं यस्य।

अव्याहत ಅವ್ಯಾಹತ (नं०) 1. ಸತ್ಯವಾದ ಮಾತು. (वि०) 2. ತಡೆಯಿಲ್ಲದ, ಆತಂಕವಿಲ್ಲದ. न विशेषेण आहतः। "अव्याहतैः स्वैरगतैस्स तस्याः सम्राट् समाराधनतत्परोऽभूत्" रघु० २-५। "अव्याहतक्षिप्रगतैः समुच्छ्रितान्" माघ० १२-७६।

अव्युत्पन्न ಅವ್ಯುತ್ಪನ್ನ (वि०) 1. ಶಬ್ದಗಳ ಅವಯವಾರ್ಥಜ್ಞಾನವಿಲ್ಲದವನು, ವ್ಯಾಕರಣ ಜ್ಞಾನವಿಲ್ಲದವನು. 2. ಅವಯವಾರ್ಥವಿಲ್ಲದೆ ಕೇವಲ ಸಮುದಾಯದ ಅರ್ಥವನ್ನು ಹೊಂದಿರುವ (ಶಬ್ದ). [ಉಣಾದಿನಿಷ್ಪನ್ನವಾದ ಶಬ್ದಗಳಿಗೆ ಕೇವಲ ಸಮುದಾಯದಲ್ಲಿ ಅರ್ಥವಿರುವುದರಿಂದ ಅವು ಅವ್ಯುತ್ಪನ್ನ ಶಬ್ದಗಳು.]

अशकुन ಅಶಕುನ (नं०) ದುಃಶಕುನ, ಅನಿಷ್ಟವನ್ನು ಸೂಚಿಸುವ ಉತ್ಪಾತ ಮೊದಲಾದುದು. अप्राशस्त्ये नं० त०। "कलयन्निव सव्यथोऽवतस्थेऽशकुनेन स्खलितः किलेतरोऽपि" माघ० ९-८३।

अशक्त ಅಶಕ್ತ (वि०) 1. ಅಸಮರ್ಥ, ಕಾರ್ಯಕ್ಕೆ ಅನರ್ಹ, ಕೈಯಲ್ಲಾಗದವನು, ದುರ್ಬಲ. 2. ಅಭಿಧಾ ಶಕ್ತಿಯಿಲ್ಲದ (ಪದ).

अशक्तता ಅಶಕ್ತತಾ (स्त्री०) ಅಸಾಮರ್ಥ್ಯ, ಕಾರ್ಯಕ್ಕೆ ಅನರ್ಹತೆ, ಕೈಯಲ್ಲಾಗದಿರುವಿಕೆ, ದೌರ್ಬಲ್ಯ. अशक्तस्य भावः "तल्" (५-१-११९)।

अशक्ति ಅಶಕ್ತಿ (स्त्री०) ಅಸಾಮರ್ಥ್ಯ, ಕಾರ್ಯಕ್ಕೆ ಅನರ್ಹತೆ, ದೌರ್ಬಲ್ಯ. न शक्तिः। "श्रमेण तदशक्तया वा न गुणानामियत्तया" रघु० १०-३२।

अशक्नुवत् ಅಶಕ್ನುವತ್ (वि०) ಅಸಮರ್ಥನಾದ, ಬಲಹೀನನಾದ. "अशक्नुवन् सोढुमधीरलोचनः सहस्ररश्मेरिव यस्य दर्शनम्" माघ० १-५३।

अशक्य ಅಶಕ್ಯ (वि०) ಅಸಾಧ್ಯವಾದ, ಸಾಧ್ಯವಿಲ್ಲದ. शक्लृ (शक्तौ) "यत्" (३-१-९९)। नं० त०। "अशक्यशङ्कव्यभिचारहेतुर्वाणी न वेदा यदि सन्तु केत्" नैष० ३-७८।

अशङ्क ಅಶಂಕ (वि०) 1. ಸಂಶಯವಿಲ್ಲದ. 2. ಭಯವಿಲ್ಲದ. नास्ति शङ्का यस्य।

अशङ्का ಅಶಂಕಾ (स्त्री०) 1. ಸಂಶಯವಿಲ್ಲದಿರುವಿಕೆ. 2. ಭಯವಿಲ್ಲದಿರುವಿಕೆ.

अशङ्कित ಅಶಂಕಿತ (वि०) 1. ಭಯಪಡದ, ಹೆದರದ. 2. ಸಂದೇಹಪಡದ.

अशन ಅಶನ (नं०) 1. ಭೋಜನ, ಊಟ. अश (भोजने) "ल्युट्" (३-३-११५)। 2. ಆಹಾರ, ಅನ್ನ. अश कर्मं० "ल्युट्" (३-३-११३)। 3. ವ್ಯಾಪನೆ, ಹರಡುವಿಕೆ. अशू (व्याप्तौ) भावे "ल्युट्" (३-३-११५)।

अशनाया ಅಶನಾಯಾ (स्त्री०) ಭೋಜನದ ಅಪೇಕ್ಷೆ, ಹಸಿವು. अशनस्येच्छा — अशन "क्यच्" (३-१-८)। "अः" (३-३-१०३)।

अशनायित ಅಶನಾಯಿತ (वि०) ಭೋಜನದ ಅಪೇಕ್ಷೆಯುಳ್ಳ, ಹಸಿವುಳ್ಳ. अशनाया जाताऽस्य "इतच्" (५-२-३६)।

अशनि ಅಶನಿ (पुंस्त्री०) 1. ವಜ್ರಾಯುಧ. अश (भोजने) "अनिः" (उ० २-१०२)। "अशनिरिव कठोरः शीतलाम्भोदपङ्क्तौ" चं० रा०। 2. ಸಿಡಿಲು. 3. ವಿದ್ಯುತ್ತು, ಮಿಂಚು. "वज्रे विद्युति चाशनिः" त्रिकाण्ड०। (पु०) 4. ಇಂದ್ರ. 5. ವಹ್ನಿ, ಬೆಂಕಿ. 6. ಶತ್ರುವನ್ನು ನಾಶಮಾಡುವ ಅನುಯಾಜವೆಂಬ ಯಾಗ.

अशरण ಅಶರಣ (वि०) 1. ರಕ್ಷಕನಿಲ್ಲದ, ಸಹಾಯಕನಿಲ್ಲದ, ದಿಕ್ಕಿಲ್ಲದ. 2. ಗೃಹವಿಲ್ಲದ, ಮನೆಯಿಲ್ಲದ.

अशरीर ಅಶರೀರ (पु०) 1. ಈಶ್ವರ. 2. ಪರಮಾತ್ಮ. 3. ಕಾಮ, ಮನ್ಮಥ. नास्ति शरीरं यस्य। "निजमैक्षि मन्दमनिशं निशितैः कृशितं शरीरमशरीरशरैः" माघ० ९-६१। 4. ದೇವತೆ. 5. ಶರೀರಾಭಿಮಾನವನ್ನು ತ್ಯಜಿಸಿದ ಸಂನ್ಯಾಸಿ, ಜೀವನ್ಮುಕ್ತ. (वि०) 6. ಶರೀರವಿಲ್ಲದ, ದೇಹವಿಲ್ಲದ.

अशरीरिन् ಅಶರೀರಿನ್ (पु०) 1. ಪರಮಾತ್ಮ. 2. ಈಶ್ವರ. 3. ದೇವತೆ. (वि०) 4. ಶರೀರವಿಲ್ಲದ, ದೇಹವಿಲ್ಲದ. स्त्रियाम् "ङीप्" (४-१-५)। अशरीरिणी ಅಶರೀರಿಣೀ.

अशर्मन् ಅಶರ್ಮನ್ (नं०) 1. ದುಃಖ, ಅಸಂತೋಷ. "एकौघभूतं तदशर्म कृष्णां विभावरीं ध्वान्तमिव प्रपेदे" किरा० ३-३५। (वि०) 2. ಸುಖವಿಲ್ಲದ, ಸಂತೋಷವಿಲ್ಲದ.

**अशान्त ಅಶಾಂತ** (वि०) ನೆಮ್ಮದಿಯಿಲ್ಲದ, ಶಾಂತಿಯಿಲ್ಲದ, ಶಮಗುಣವಿಲ್ಲದ. न शान्तः। "नास्ति बुद्धिरयुक्तस्य न चायुक्तस्य भावना। न चाभावयतः शान्तिरशान्तस्य कुतः सुखम्" गीता २-६६।

**अशान्ति ಅಶಾಂತಿ** (स्त्री०) 1. ಶಾಂತಿಯಿಲ್ಲದಿರುವಿಕೆ. (वि०) 2. ಶಮಗುಣವಿಲ್ಲದ. नास्ति शान्तिर्यस्य।

**अशाश्वत ಅಶಾಶ್ವತ** (वि०) ಅಸ್ಥಿರವಾದ, ನಶ್ವರವಾದ, ಅನಿತ್ಯವಾದ. न शाश्वतः।

**अशास्त्र ಅಶಾಸ್ತ್ರ** (न०) ವೇದಶಾಸ್ತ್ರವಿರುದ್ಧವಾದ ನಾಸ್ತಿಕ ಮತ.

**अशास्त्रीय ಅಶಾಸ್ತ್ರೀಯ** (वि०) ಶಾಸ್ತ್ರವಿರುದ್ಧವಾದ, ಶಾಸ್ತ್ರದಲ್ಲಿ ಹೇಳಲ್ಪಡದ, ನಿಷಿದ್ಧವಾದ. शास्त्र "छः" (४-२-११४)। न० त०।

**अशिक्षित ಅಶಿಕ್ಷಿತ** (वि०) ಶಿಕ್ಷಿಸಲ್ಪಡದ, ಪಳಗಿಸಲ್ಪಡದ ಆನೆ ಕುದುರೆ ಮುಂತಾದುದು.

**अशित ಅಶಿತ** (न०) 1. ಅನ್ನ. (वि०) 2. ತಿನ್ನಲ್ಪಟ್ಟ. अश (भोजने) "क्तः" (३-२-१०२)।

**अशित्र ಅಶಿತ್ರ** (पु०) 1. ಹವ್ಯ, ಚರು, ದೇವತೆಗಳ ನೈವೇದ್ಯಕ್ಕಾಗಿ ಮಾಡುವ ಅನ್ನ. अशू (व्याप्तौ संघाते च) "इत्रः" (उ० ४-१७२)।

**अशिथिल ಅಶಿಥಿಲ** (वि०) 1. ಸಡಿಲವಲ್ಲದ, ಬಿಗಿಯಾದ, ದೃಢವಾದ. (क्रि० वि०) 2. ದೃಢವಾಗಿ, ಗಟ್ಟಿಯಾಗಿ, ಬಿಗಿಯಾಗಿ. "अशिथिलमपरावसज्य कण्ठे दृढपरिरब्धबृहद्बहिःस्तनेन" माघ० ७-१६।

**अशिर ಅಶಿರ** (पु०) 1. ರಾಕ್ಷಸ. 2. ಸೂರ್ಯ. अश (भोजने) "किरच्" (उ० १-५२)। 3. ಅಗ್ನಿ, ಬೆಂಕಿ. "अशिरो वीतिहोत्रे स्याद्राक्षसे भास्करे पुमान्" मेदि०। 4. ವಾಯು, ಗಾಳಿ. (स्त्री०) -रा -ರಾ. 5. ಹೆಂಗಸು.

**अशिरस् ಅಶಿರಸ್** (पु०) 1. ತಲೆಯಿಲ್ಲದ ದೇಹ, ಮುಂಡ. (वि०) 2. ತಲೆಯಿಲ್ಲದ. 3. ಅಗ್ರವಿಲ್ಲದ, ತುದಿಯಿಲ್ಲದ. नास्ति शिरो यस्य।

**अशिव ಅಶಿವ** (न०) 1. ಅಮಂಗಳ. (वि०) 2. ಶುಭವಲ್ಲದ, ಮಂಗಳವಲ್ಲದ. न शिवम्। "अदभ्रदर्भामधिशय्य स स्थलीं जहासि निद्रामशिवैः शिवारुतैः" किरा० १-३८। 3. ಉಗ್ರವಾದ, ಭಯಂಕರವಾದ. नास्ति शिवं यस्मात्। -वा -ವಾ. ರಾಕ್ಷಸಿ, ಭೂತ.

**अशिशिषा ಅಶಿಶಿಷಾ** (स्त्री०) ಭೋಜನೇಚ್ಛೆ, ಊಟಮಾಡುವ ಅಪೇಕ್ಷೆ. अशितुमिच्छा — अश (भोजने) + सन् "अः" (३-३-१०६)।

**अशिष्ट ಅಶಿಷ್ಟ** (वि०) 1. ಅಸಾಧು, ಅಸಭ್ಯ, ಅನಾಗರಕ. 2. ನಾಸ್ತಿಕ, ವೇದಾಕ್ಷರಗಳಲ್ಲಿ ನಂಬಿಕೆಯಿಲ್ಲದವನು, ಧರ್ಮದೂಷಕ. 3. ಅಶಿಕ್ಷಿತ. 4. ಕಾಮುಕ, ವ್ಯಭಿಚಾರಿ.

**अशिष्ठ ಅಶಿಷ್ಠ** (पु०) 1. ಅಗ್ನಿ. ಬೆಂಕಿ. (वि०) 2. ಹೆಚ್ಚು ಊಟಮಾಡುವ. अतिशयेन अशिता "इष्ठन्" (५-३-५५)।

**अशिष्य ಅಶಿಷ್ಯ** (वि०) 1. ಶಿಕ್ಷಾನರ್ಹ, ಕಲಿಸಲು ಯೋಗ್ಯನಲ್ಲದ. 2. ಶಿಷ್ಯನಲ್ಲದ. 3. ವಿಧಿಸಲು ಅರ್ಹನಲ್ಲದ.

**अशीति ಅಶೀತಿ** (स्त्री०) ಎಂಭತ್ತು. अष्टौ दशतः परिमाणमस्य "तिः" प्रत्ययः अश्यादेशश्च निपात्यते (५-१-५९)।

**अशुच् ಅಶುಚ್** (वि०) ಶೋಕವಿಲ್ಲದ, ದುಃಖವಿಲ್ಲದ. नास्ति शुक् यस्य।

**अशुचि ಅಶುಚಿ** (पु०) 1. ಕಪ್ಪುಬಣ್ಣ. (स्त्री०) 2. ಅಪವಿತ್ರತೆ, ಮೈಲಿಗೆ. (वि०) 3. ಅಪವಿತ್ರವಾದ. 4. ಕೊಳಕಾದ. 5. ಕಪ್ಪಾಗಿರುವ.

**अशुद्ध ಅಶುದ್ಧ** (वि०) 1. ಅಪವಿತ್ರವಾದ. 2. ಕೊಳಕಾದ. 3. ತಪ್ಪಾಗಿರುವ, ದೋಷದಿಂದ ಕೂಡಿದ.

**अशुद्धि ಅಶುದ್ಧಿ** (स्त्री०) 1. ಅಪವಿತ್ರತೆ, ಮೈಲಿಗೆ. 2. ತಪ್ಪು, ದೋಷ. (वि०) 3. ಅಪವಿತ್ರವಾದ, ಶುದ್ಧವಲ್ಲದ.

**अशुभ ಅಶುಭ** (न०) 1. ಅಮಂಗಳ. "यः सर्वत्रानभिस्नेहः तत्तत्प्राप्य शुभाशुभम्। नाभिनन्दति न द्वेष्टि तस्य प्रज्ञा प्रतिष्ठिता" गीता २-५७। 2. ವಿಪತ್ತು, ತೊಂದರೆ. 3. ದುರ್ದೈವ, ದುರ್ದಶೆ. न शुभम्। विरोधे न० त०। "प्रायः शुभं च विदधात्यशुभं च जन्तोः सर्वङ्कषा भगवती भवितव्यतैव" मालती० १-२६। (वि०) 4. ಅಮಂಗಳವಾದ. 5. ಅಪವಿತ್ರವಾದ, ಅಶುದ್ಧವಾದ.

**अशून्य ಅಶೂನ್ಯ** (वि०) ಖಾಲಿಯಿಲ್ಲದ, ತುಂಬಿರುವ, ಸಂಪೂರ್ಣವಾದ. "अङ्कमङ्कपरिवर्तनोचिते तस्य निन्यतुरशून्यतामुभे" रघु० १९-१३।

**अशृत ಅಶೃತ** (वि०) ಬೇಯಿಸಲ್ಪಡದ, ಅಪಕ್ವವಾದ,

**अशेष ಅಶೇಷ** (वि०) 1. ಸಮಸ್ತ, ಸಕಲ, ಸಂಪೂರ್ಣ. "जगत्प्रकाशं तदशेषमिज्यया भवद्गुरुर्लङ्घयितुं ममोद्यतः" रघु० ३-४८। (अव्य०) **–षं, अशेषेण, अशेषतः ಅಶೇಷಂ, ಅಶೇಷೇಣ, ಅಶೇಷತಃ.** 2. ಸಂಪೂರ್ಣವಾಗಿ. "अलं विवादेन यथा श्रुतस्त्वया तथाविधस्तावदशेषमस्तु सः" कुमा० ५-८२। "येन भूतान्यशेषेण द्रक्षस्यात्मन्यथो मयि" गीता ४-३५। "ज्येष्ठ एव तु गृह्णीयात्पित्र्यं धनमशेषतः" मनु० ९-१०५।

**अशोक ಅಶೋಕ** (पु०) 1. ವಿಷ್ಣು. 2. ಮಗಧದೇಶದ ಸಾರ್ವಭೌಮನಾದ ಅಶೋಕ ಚಕ್ರವರ್ತಿ. 3. ಅಶೋಕ ವೃಕ್ಷ. [ನೂಪುರ (ಕಾಲುಗೆಜ್ಜೆ) ಸಹಿತವಾದ ಹೆಂಗಸರ ಪಾದತಾಡನ (ಕಾಲಿನ ಒದೆತ, ಏಟು)ದಿಂದ ಅಶೋಕ ವೃಕ್ಷವು ಆ ಕೂಡಲೆ ಚಿಗುರಿ ಪುಷ್ಪಿಸುವುದೆಂದು ಕವಿಸಮಯಸಿದ್ಧ.] "असूत सद्यः कुसुमान्यशोकः स्कन्धात्प्रभृत्येव सपल्लवानि। पादेन नापैक्षत सुन्दरीणां संपर्कमासिञ्जितनूपुरेण" कुमा० ३-२६। "नवकिसलयरागेणार्द्रपादेन बाला स्फुरितनखरुचा द्वौ हन्तुमर्हत्यनेन। अकुसुमितमशोकं दोहदापेक्षया वा प्रणमितशिरसं वा कान्तमार्द्रापराधम्" माल० ३-१२। 4. ವಕುಳ ವೃಕ್ಷ, ಪವಳದ ಗಿಡ. (न०) 5. ಪಾದರಸ. (वि०) 6. ಶೋಕವಿಲ್ಲದ, ದುಃಖವಿಲ್ಲದ. (स्त्री०) **–का – ಕಾ.** 7. ಕಟುಕರೋಹಿಣಿ. "अशोकस्त्रिषु निःशोके पुंसि कङ्केलिपादपे। स्त्रियाम् तु कटुरोहिण्यां पारदे स्यान्नपुंसकम्" मेदि०। 8. ಚೈತ್ರ ಶುಕ್ಲ ಷಷ್ಠಿ.

**अशोकपूर्णिमा ಅಶೋಕಪೂರ್ಣಿಮಾ** (स्त्री०) ಫಾಲ್ಗುಣ ಮಾಸದ ಹುಣ್ಣಿಮೆ.

**अशोकरोहिणी ಅಶೋಕರೋಹಿಣೀ** (स्त्री०) ಕಟುಕರೋಹಿಣಿ.

**अशोकवनिका ಅಶೋಕವನಿಕಾ** (स्त्री०) ಅಶೋಕವನ, ಅಶೋಕ ವೃಕ್ಷಗಳ ತೋಪು.

**अशोच्य ಅಶೋಚ್ಯ** (वि०) ದುಃಖಿಸಲು ಅಯೋಗ್ಯ. न शोच्यः—शुच (शोके) "ण्यत्" (३-१-१२४)। "अशोच्यानन्वशोचस्त्वं प्रज्ञावादांश्च भाषसे" गीता २-११।

**अशोधन ಅಶೋಧನ** (न०) 1. ಶುದ್ಧಿಮಾಡದಿರುವಿಕೆ, ತೊಳೆಯದಿರುವಿಕೆ. 2. ಸಾಲ ತೀರಿಸದಿರುವಿಕೆ.

**अशोधित ಅಶೋಧಿತ** (वि०) 1. ಶುದ್ಧಿಮಾಡಲ್ಪಡದ, ತೊಳೆಯಲ್ಪಡದ. 2. ತೀರಿಸಲ್ಪಡದ (ಸಾಲ).

**अशोष्य ಅಶೋಷ್ಯ** (वि०) ಒಣಗಿಸಲಾಗದ. न शोषयितुं शक्यम्। "अच्छेद्योऽयमदाह्योऽयमक्लेद्योऽशोष्य एव च" गीता २-२४।

**अशौच ಅಶೌಚ** (न०) 1. ಅಶುಚಿ, ಅಪವಿತ್ರತೆ, ಕೊಳಕು. 2. ಆಶೌಚ, ಸೂತಕ, ಮೈಲಿಗೆ, ಜನನ ಮತ್ತು ಮರಣಗಳಿಂದ ಉಂಟಾದ ಅಶುದ್ಧಿ.

**अशौचसंकर ಅಶೌಚಸಂಕರ** (पु०) ಜನನ ಮತ್ತು ಮರಣಾಶೌಚಗಳ ಮಧ್ಯೆ ಮತ್ತೊಂದು ಆಶೌಚವು ಬರುವುದು.

**अश्नीतपिबता ಅಶ್ನೀತಪಿಬತಾ** (स्त्री०) ಭೋಜನಪಾನಗಳು ಯಥೇಚ್ಛವಾಗಿ ನಡೆಯಲೆಂದು ಉಪಚಾರದ ಮಾತನ್ನು ಹೇಳುವ ಸಮಾರಂಭ. "अश्नीत पिबत इत्युच्यते यस्यां निदेशक्रियायाम्"। "अश्नीतपिबतीयन्ती प्रसिता स्मरकर्मणि" भट्टि० ५-९२।

**अश्मगर्भ ಅಶ್ಮಗರ್ಭ** (पु०) ಮರಕತಮಣಿ, ಪಚ್ಚೆಕಲ್ಲು.

**अश्मगर्भज ಅಶ್ಮಗರ್ಭಜ** (पु०) 1. ಮರಕತಮಣಿ. 2. ಶಿಲೆಯಿಂದ ಉಂಟಾದ ಬೆಂಕಿ, ಚಕಮುಕಿ ಕಲ್ಲಿನಿಂದ ಹೊರಟ ಬೆಂಕಿ.

**अश्मज ಅಶ್ಮಜ** (न०) 1. ಶಿಲಾಜತು. 2. ಕಬ್ಬಿಣ.

**अश्मदारण ಅಶ್ಮದಾರಣ** (पु०) ಕಲ್ಲನ್ನು ಒಡೆಯುವ ಉಳಿ. अश्मानं दारयति—दॄ (विदारणे) + णिच् "ल्युः" (३-१-१३४)।

**अश्मन् ಅಶ್ಮನ್** (पु०) 1. ಶಿಲೆ, ಕಲ್ಲು. अश्नुते—अशू (व्याप्तौ संघाते च) "मनिन्" (३-२-७५)। "नाराचक्षेपणीयाश्मनिष्पेषोत्पतितानलम्" रघु० ४-७७। 2. ಬೆಟ್ಟ, ಪರ್ವತ. 3. ಮೇಘ, ಮೋಡ. 4. ಮರಕತ, ಪಚ್ಚೆ. 5. ಬಂಡೆ, ದೊಡ್ಡ ಕಲ್ಲು. 6. ವಜ್ರಾಯುಧ. (वि०) 7. ವ್ಯಾಪಿಸುವ, ಹರಡುವ.

**अश्मन्त ಅಶ್ಮಂತ** (न०) 1. ಒಲೆ. 2. ಮೈದಾನ, ಬಯಲು. अश्मनोऽप्यन्तोऽत्र। शक०। 3. ಮರಣ. (त्रि०) 4. ಅಶುಭವಾದ. 5. ಅವಧಿಯಿಲ್ಲದ, ಎಲ್ಲೆಯಿಲ್ಲದ, ಗಡುವಿಲ್ಲದ. "अश्मन्तमशुभे चुल्ल्यां मरणेऽनवधावपि। क्षेत्रेऽपि" मेदि०।

**अश्मन्तक ಅಶ್ಮಂತಕ** (पु०) 1. ಕೋವಿದಾರವೃಕ್ಷ, ಕೆಂಗಾಂಚಾಳ ಗಿಡ. (न०) 2. ಒಲೆ. 3. ದೀಪದ ಮೇಲಿನ ಮುಸುಕು,—ಮುಚ್ಚಳ.

**अश्मयोनि ಅಶ್ಮಯೋನಿ** (पु०) ಮರಕತಮಣಿ, ಪಚ್ಚೆ. अश्मा योनिरस्य।

**अश्मर** ಅಶ್ಮರ (वि०) ಶಿಲೆಯಿಂದ ನಿರ್ಮಿತವಾದ, ಶಿಲಾಮಯವಾದ, ಶಿಲಾಸಂಬಂಧವಾದ. अश्मन् "रः" (४-२-८०)।

**अश्मरी** ಅಶ್ಮರೀ (स्त्री०) ಮೂತ್ರರೋಗ, ಕಲ್ಲಿನಂತೆ ಗಟ್ಟಿಯಾದ ಮಾಂಸಖಂಡವು ಮೂತ್ರದಲ್ಲಿ ಬೀಳುವ ರೋಗ. अश्मानं राति — रा (दाने) "कः" (३-२-३)। "ङीप्" (४-१-४१)। "अश्मरी मूत्रकृच्छ्रं स्यात्" अम०।

**अश्मरीघ्न** ಅಶ್ಮರೀಘ್ನ (पु०) ವರುಣವೃಕ್ಷ, ವಲಸೆ ಗಿಡ. अश्मरीं हन्ति — हन (हिंसागत्योः) "टक्" (३-२-५३)।

**अश्मसार** ಅಶ್ಮಸಾರ (पु०) ಕಬ್ಬಿಣ.

**अश्मार्म** ಅಶ್ಮಾರ್ಮ (न०) ಮೂತ್ರರೋಗ. अश्मकारकम् अर्म।

**अश्मीर** ಅಶ್ಮೀರ (पु०) ಮೂತ್ರರೋಗ.

**अश्र** ಅಶ್ರ (न०) ಕಂಬನಿ, ಕಣ್ಣೀರು. अश्नुते — अशू (व्याप्तौ) "रक्" बाहु०। "सखीभिरश्रोत्तरमीक्षितामिमाम्" कुमा० ५-६१।

**अश्रद्धान** ಅಶ್ರದ್ಧಧಾನ (वि०) ನಂಬದಿರುವ, ವಿಶ್ವಾಸವಿಡದಿರುವ. न श्रद्धानः। "अश्रद्दधानाः पुरुषा धर्मस्यास्य परन्तप। अप्राप्य मां निवर्तन्ते मृत्युसंसारवर्त्मनि" गीता ९-३।

**अश्रद्ध** ಅಶ್ರದ್ಧ (वि०) ನಂಬಿಕೆಯಿಲ್ಲದ, ವಿಶ್ವಾಸವಿಲ್ಲದ.

**अश्रद्धा** ಅಶ್ರದ್ಧಾ (स्त्री०) 1. ನಂಬಿಕೆಯಿಲ್ಲದಿರುವಿಕೆ, ವಿಶ್ವಾಸವಿಲ್ಲದಿರುವಿಕೆ. न श्रद्धा। अभावे न० त०। "अश्रद्धया हुतं दत्तं तपस्तप्तं कृतं च यत्। असदित्युच्यते पार्थ न च तत्प्रेत्य नो इह" गीता १७-२८। 2. ಅಪನಂಬಿಕೆ. विरोधे न० त०। 3. ಆಸೆಯಿಲ್ಲದಿರುವಿಕೆ. "श्रद्धादरे च काङ्क्षायाम्" मेदि०।

**अश्रद्धेय** ಅಶ್ರದ್ಧೇಯ (वि०) ನಂಬಲನರ್ಹವಾದ, ನಂಬಬಾರದಾದ. न श्रद्धेयम्। "किमनेनाश्रद्धेयव्याधवचनप्रत्ययमात्रपरिगृहीतेनाण्डजेन" पञ्चत०।

**अश्रम** ಅಶ್ರಮ (पु०) 1. ಶ್ರಮವಿಲ್ಲದಿರುವಿಕೆ, ಆಯಾಸವಿಲ್ಲದಿರುವಿಕೆ. (वि०) 2. ಶ್ರಮವಿಲ್ಲದ, ಆಯಾಸವಿಲ್ಲದ, ದುಡಿಮೆಯಿಲ್ಲದ.

**अश्रवण** ಅಶ್ರವಣ (पु०) 1. ಸರ್ಪ, ಹಾವು. [ಸರ್ಪಕ್ಕೆ ಕಣ್ಣುಗಳೇ ಕಿವಿ, ಬೇರೆ ಕಿವಿಯಿಲ್ಲ.] (न०) 2. ಕೇಳದಿರುವಿಕೆ, ಕಿವುಡು. न० त०। (वि०) 3. ಶ್ರೋತ್ರವಿಲ್ಲದ, ಶ್ರವಣೇಂದ್ರಿಯವಿಲ್ಲದ, ಕಿವುಡ. न श्रवणं श्रवणेन्द्रियं यस्य।

**अश्रान्त** ಅಶ್ರಾಂತ (न०) 1. ವಿಶ್ರಾಂತಿಯಿಲ್ಲದಿರುವಿಕೆ, ವಿರಾಮವಿಲ್ಲದಿರುವಿಕೆ. श्रमु (तपसि खेदे च) भावे "क्तः" (३-३-११४)। न० त०। (वि०) 2. ಶ್ರಮ ಹೊಂದದ, ಬಳಲದ, ದಣಿಯದ, ಆಯಾಸವಿಲ್ಲದ. 3. ವಿರಾಮವಿಲ್ಲದ, ನಿರಂತರವಾದ. "अश्रान्तसन्ततिभिराभरणप्रकाशैः" याद० १९-३। (क्रि० वि०) 4. ವಿರಾಮವಿಲ್ಲದೆ, ಬಿಡುವಿಲ್ಲದೆ, ಸತತವಾಗಿ, ನಿರಂತರವಾಗಿ.

**अश्रि** ಅಶ್ರಿ (स्त्री०) 1. ಮನೆಯ ಒಂದು ಕೋಣ, ಒಂದು ಮೂಲೆ. अशू (व्याप्तौ संघाते च) "क्रिः" (उ० ४-६६)। 2. ಕತ್ತಿಯ ಅಲುಗು, ಕತ್ತಿಯ ಅಂಚು (ಧಾರೆ). आश्रीयते — आ+श्रिञ् (सेवायाम्) "इण्" आङो ह्रस्वश्च (उ० ४-१३७)। "वृत्रस्य हन्तुः कुलिशं कुण्ठिताश्रीव लक्ष्यते" कुमा० २-२०।

**अश्रीक** ಅಶ್ರೀಕ (वि०) 1. ದರಿದ್ರ, ಬಡವ. नास्ति श्रीः संपद्यस्य। 2. ಕಾಂತಿಯಿಲ್ಲದ, ಪ್ರಕಾಶವಿಲ್ಲದ, ಶೋಭೆಯಿಲ್ಲದ. नास्ति श्रीः कान्तिर्यस्य। "अश्रीकाः काश्चिद्दन्तर्दिश इव दधिरे दाहमुद्भ्रान्तसत्त्वाः" माघ० १५-९६।

**अश्रु** ಅಶ್ರು (न०) ಕಂಬನಿ, ಕಣ್ಣೀರು. अश्नुते — अशू (व्याप्तौ) "रुन्" (उ० ५-२९)। "रघुर्भृशं वक्षसि तेन ताडितः पपात भूमौ सह सैनिकाश्रुभिः" रघु० ३-६१।

**अश्रुत** ಅಶ್ರುತ (वि०) 1. ಕೇಳಲ್ಪಡದ. न० त०। 2. ಶಾಸ್ತ್ರಾಭ್ಯಾಸವಿಲ್ಲದ, ಶಾಸ್ತ್ರಜ್ಞಾನವಿಲ್ಲದ. नास्ति श्रुतं शास्त्रज्ञानं यस्य।

**अश्रुति** ಅಶ್ರುತಿ (स्त्री०) 1. ಅಶ್ರವಣ, ಕೇಳದಿರುವಿಕೆ. 2. ವೇದದ ಪ್ರಮಾಣವಿಲ್ಲದಿರುವಿಕೆ. (वि०) 3. ಕಿವಿಯಿಲ್ಲದ, ಶ್ರವಣೇಂದ್ರಿಯವಿಲ್ಲದ. नास्ति श्रुतिः श्रवणेन्द्रियं यस्य।

**अश्रुपात** ಅಶ್ರುಪಾತ (पु०) ಕಣ್ಣೀರು ಸುರಿಸುವುದು, ಅಳುವಿಕೆ.

**अश्रेयस्** ಅಶ್ರೇಯಸ್ (न०) 1. ಕೇಡು, ತೊಂದರೆ, ಕಷ್ಟ. न श्रेयः। (वि०) 2. ಹೀನವಾದ, ನೀಚವಾದ, न श्रेयान्। 3. ಅಯೋಗ್ಯವಾದ.

**अश्लील** ಅಶ್ಲೀಲ (न०) 1. ಅಸಭ್ಯವಾದ ಮಾತು, ಅಸಹ್ಯಕರವಾದ ಮಾತು. श्रियं लाति — ला (आदाने) "कः" (३-२-३)। रस्य लत्वं (वा० ८-२-१८)। न० त०। 2. ಗ್ರಾಮ್ಯಭಾಷೆ. 3. ಒಂದು ವಿಧ ಕಾವ್ಯ

ದೋಷ. ಅಶ್ಲೀಲವು ವ್ರೀಡಾವ್ಯಂಜಕ, ಜುಗುಪ್ಸಾವ್ಯಂಜಕ ಮತ್ತು ಅಮಂಗಳವ್ಯಂಜಕಗಳೆಂದು ಮೂರು ವಿಧ.."दृप्तारिविजये राजन् साधनं सुमहत्तव। प्रससार शनैर्वायुर्विनाशे तन्वि ते तदा"। ಇಲ್ಲಿ ಸೈನ್ಯ ಗಾಳಿ ಮತ್ತು ಅದರ್ಶನರೂಪವಾದ ಅರ್ಥಗಳಲ್ಲಿ ಹೇಳಿರುವ साधन वायु ಮತ್ತು विनाश ಶಬ್ದಗಳು ಕ್ರಮವಾಗಿ ಪುರುಷನ ಲಿಂಗ ಅಪಾನವಾಯು ಮತ್ತು ನಾಶರೂಪವಾದ ಅರ್ಥಗಳನ್ನು ಕೊಟ್ಟು ಲಜ್ಜೆ ಜುಗುಪ್ಸೆ ಮತ್ತು ಅಮಂಗಳವನ್ನುಂಟುಮಾಡುವುದರಿಂದ ಇಲ್ಲಿ ಅಶ್ಲೀಲರೂಪವಾದ ಕಾವ್ಯದೋಷವು.

**अश्व ಅಶ್ವ** (पु०) 1. ಕುದುರೆ. अशू (व्याप्तौ) "क्वन्" (उ० १-१४९)। "सिद्धं मुखे नवसु वीथिषु कश्चिदश्वं वल्गाविभागकुशलो गमयांबभूव" माघ० ५-६०। ಅಶ್ವದ ಉತ್ಪತ್ತಿಸ್ಥಾನಗಳು: "अमृताद्वाष्पतो वह्नेः वेदेभ्योऽण्डाच्च गर्भतः। साम्नो हयानामुत्पत्तिः सप्तधा परिकीर्तिता"। ಅಶ್ವಶಾಸ್ತ್ರೋಕ್ತವಾದ (ಅಶ್ವದ) ಕೆಲವು ಶುಭಲಕ್ಷಣಗಳು: (1) ರೋಮವರ್ಣ: "यस्य गौराणि पीतानि गात्ररोमाणि वाजिनः। स भर्तुः श्रियमाधत्ते यस्य शुक्लासितानि च॥ यस्य पादाः सिताः सर्वे पुच्छं वक्षो मुखं तथा। ऊर्ध्वजङ्घा सिता यस्य तं विद्यादष्टमङ्गलम्॥ प्रभूतासिततारारश्च प्रशस्ता मुनिभिः स्मृताः। यस्तु पीतासितैस्तारैः स धन्यः कीर्तितो हयः॥ प्रशस्तः कृष्णतारस्तु मल्लिकाक्षः प्रकीर्तितः। श्वेतजावेष्टितं कृष्णरेखया तारकं च यत्॥ मल्लिकाक्षः स विज्ञेयः स्वामिनः सुखवर्धनः"॥ (2) ಅಶ್ವದ ಪ್ರಮಾಣ: "हस्तोऽङ्गुलानां विंशत्या चतुरुत्तरया स्मृतः। चतुर्हस्तस्तु विख्यातः शास्त्रोक्तेनोत्तमो हयः॥ अर्धहस्तेन हीनस्तु भवेन्मध्यस्तुरङ्गमः। मुष्टिन्यूनेन हस्तेन हीनश्चाप्यधमः स्मृतः॥ (3) ಅಶ್ವದ ಆಯುರ್ಲಕ್ಷಣ: "सुसंहताश्च ये वाहाः ह्रस्वकर्णास्तथैव च। स्वरनेत्रस्वभावेषु न दीनाश्चिरजीविनः॥ महाघोणा महाकाया ये चाश्वाः पृथुवक्षसः। तेषां दीर्घं भवेदायुः स्निग्धाङ्गाश्चैव ये सदा। कर्णाग्रे पीडिते येषां सिन्दूराभस्य दर्शनम्। शोणितस्य भवेत्क्षिप्रं ते मताश्चिरजीविनः॥ न विष्किरन्ति ये वालं स्वग्रासाय तुरङ्गमाः। न जिघ्रन्ति ये चापि तेऽपि दीर्घायुषो मताः"॥ ಇತ್ಯಾದಿ. 2. ಅಶ್ವಬಲವುಳ್ಳ ಒಂದು ಜಾತಿ ಮನುಷ್ಯ. 3. ಅಗ್ನಿ, ಬೆಂಕಿ. अश्नाति सर्वम्—अश (भोजने) "क्वन्" (उ० १-१४९)। 4. ಸಪ್ತ (ಏಳು) ಸಂಖ್ಯೆ. [ಸೂರ್ಯನ ಅಶ್ವಗಳು ಏಳಾದುದರಿಂದಲೂ, ಸೂರ್ಯನ ಅಶ್ವಕ್ಕೆ "ಸಪ್ತ" ಎಂದು ಹೆಸರಿರುವುದರಿಂದಲೂ "सूर्याश्वो वहति सप्तनाम" ಅಶ್ವಗಳ ಉತ್ಪತ್ತಿಸ್ಥಾನಗಳು ಏಳಾದುದರಿಂದಲೂ "ಅಶ್ವ" ಪದಕ್ಕೆ ಸಪ್ತಸಂಖ್ಯೆಯಲ್ಲಿ ಸಂಕೇತವಿರುವುದು.] (वि०)5. ವ್ಯಾಪಕವಾದ. अश्नुते व्याप्नोति।

**अश्वक ಅಶ್ವಕ** (पु०)1. ಸಣ್ಣ ಕುದುರೆ, ಸಣ್ಣ ಜಾತಿಯ ಕುದುರೆ. अल्पोऽश्वः "कः" (५-३-८५)। 2. ಪೋಲಿ ಕುದುರೆ. कुत्सितोऽश्वः "कः" (५-३-७४)। 3. ಯಜಮಾನನಿಲ್ಲದ ಕುದುರೆ, ವಾರಸುದಾರನಿಲ್ಲದ ಕುದುರೆ. कस्यायमश्वः अज्ञाते "कः" (५-३-७३)।

**अश्वकन्दा ಅಶ್ವಕಂದಾ** (स्त्री०) ಅಶ್ವಗಂಧಿ ಗಿಡ. अश्वस्य मेढ्रमिव कन्दोऽस्य।

**अश्वकर्ण ಅಶ್ವಕರ್ಣ** (पु०) ಮತ್ತಿ ಮರ. अश्वस्य कर्ण इव पत्रं यस्य।

**अश्वकिनी ಅಶ್ವಕಿನೀ** (स्त्री०) ಅಶ್ವಿನೀನಕ್ಷತ್ರ. अश्वस्य कं मुखमिवाकारोऽस्त्यस्य "इनिः" (५-२-११५)। "ङीप्" (४-१-५)।

**अश्वकुटी ಅಶ್ವಕುಟೀ** (स्त्री०) ಕುದುರೆಯ ಲಾಯ.

**अश्वखरज ಅಶ್ವಖರಜ** (पु०) ಹೇಸರಗತ್ತೆ, ಕತ್ತೆ ಮತ್ತು ಕುದುರೆಗಳಿಂದ ಜನಿಸಿದ ಮಿಶ್ರಜಾತಿಯ ಪ್ರಾಣಿ. अश्वश्च खरी च अश्वा च खरश्च वा ताभ्यां जातः।

**अश्वगन्धा ಅಶ್ವಗಂಧಾ** (स्त्री०) ಅಶ್ವಗಂಧಿ ಗಿಡ.

**अश्वग्रीव ಅಶ್ವಗ್ರೀವ** (पु०) 1. ಹಯಗ್ರೀವಾವತಾರವನ್ನು ಸ್ವೀಕರಿಸಿದ ಮಹಾವಿಷ್ಣು. 2. ಹಯಗ್ರೀವನೆಂಬ ಒಬ್ಬ ರಾಕ್ಷಸ. [ವಿವರಕ್ಕೆ "हयग्रीव" ಪದದಲ್ಲಿ ನೋಡಿ.]

**अश्वघ्न ಅಶ್ವಘ್ನ** (पु०) ಗನ್ನೇರಳೆ ಗಿಡ. अश्वं हन्ति—हन (हिंसागत्योः) "टक्" (३-२-५३)।

**अश्वचिकित्सक ಅಶ್ವಚಿಕಿತ್ಸಕ** (पु०) ಕುದುರೆಯ ವೈದ್ಯ, ಕುದುರೆಯ ರೋಗಕ್ಕೆ ಚಿಕಿತ್ಸೆ ನಡೆಸುವವನು.

**अश्वतर ಅಶ್ವತರ** (पु०) 1. ಹೇಸರಗತ್ತೆ, ಕತ್ತೆ ಮತ್ತು ಕುದುರೆಗಳಿಂದ ಹುಟ್ಟಿದ ಮಿಶ್ರಜಾತಿಯ ಪ್ರಾಣಿ. तनुः न्यूनः अश्वः—तनुत्वे "ष्टरच्" (५-३-९१)। 2. ಒಂದು ಸರ್ಪ. स्त्रियाम्" "ङीप्" (४-१-१५)। —तरी —ತರೀ.

**अश्वत्थ ಅಶ್ವತ್ಥ** (पु०) 1. ಅಶ್ವತ್ಥವೃಕ್ಷ, ಅರಳಿ ಮರ. (वटाद्यपेक्षया) न श्वश्चिरं तिष्ठति—ष्ठा (गति-

निवृत्तौ) "कः" (३-२-४)। पृषो०। "अश्वत्थः सर्ववृक्षाणां देवर्षीणां च नारदः" गीता १०-२६। 2. ನಂದಿ ಮರ. 3. ಬಸುರಿ ಮರ. 4. ಸಂಸಾರ ವೃಕ್ಷ. "ऊर्ध्वमूलमधःशाखमश्वत्थं प्राहुरव्ययम्। छन्दांसि यस्य पर्णानि यस्तं वेद स वेदवित्" गीता १५-१। 5. ಅಶ್ವಿನೀ ನಕ್ಷತ್ರ. 6. ಅಶ್ವಿನೀ ನಕ್ಷತ್ರದಿಂದ ಕೂಡಿದ ಕಾಲ. अश्वत्थेन अश्विनीनक्षत्रेण युक्तः कालः "अण्" (४-२-३)। तस्य लुप् (४-२-५)। अश्वत्थो मुहूर्तः सि० कौ०। 7. ಅರಳೀ ಹಣ್ಣು. अश्वत्थस्य फलम्।

**अश्वत्थक** ಅಶ್ವತ್ಥಕ (पु०) 1. ಅರಳಿ ಮರ. स्वार्थे "कन्"। 2. ಅಶ್ವತ್ಥ ವೃಕ್ಷವು ಫಲಿಸುವ ಕಾಲದಲ್ಲಿ ಕೊಡುವ ಸಾಲ. अश्वत्थस्य फलमश्वत्थः। तद्युक्तः कालोऽप्यश्वत्थः। अश्वत्थे तत्फलकाले देयमृणम्— अश्वत्थ "वुन्" (४-३-४८)।

**अश्वत्थकुण** ಅಶ್ವತ್ಥಕುಣ (पु०) ಅರಳಿಯ ಹಣ್ಣು ಬಿಡುವ ಕಾಲ. अश्वत्थस्य पाकः "कुणप्" (५-२-२४)।

**अश्वत्थामन्** ಅಶ್ವತ್ಥಾಮನ್ (पु०) ದ್ರೋಣಾಚಾರ್ಯರ ಪುತ್ರ, ಕೃಪಾಚಾರ್ಯರ ತಂಗಿ ಕೃಪಿಯ ಮಗ. अश्वस्येव स्थाम बलमस्य। [ಇವನು ಹುಟ್ಟಿದಕೂಡಲೆ ಕುದುರೆಯಂತೆ ಗಟ್ಟಿಯಾಗಿ ಕೂಗಿದುದರಿಂದ ಇವನಿಗೆ "ಅಶ್ವತ್ಥಾಮ" ನೆಂದು ಹೆಸರಾಯಿತು.] "स जातमात्रो व्यनदद्यथैवोच्चैःश्रवा हयः। तच्छ्रुत्वान्तर्हितं भूत-मन्तरीक्षस्यमब्रवीत्। अश्वस्येवास्य यत् स्थाम नदतः प्रदिशो गतम्। अश्वत्थामैव बालोऽयं तस्मान्नाम्ना भविष्यति" भा० आदि० १४०-४९। [ಅಶ್ವತ್ಥಾಮನು ಕೌರವಸೇನೆಯಲ್ಲಿ ಬಹಳ ಪರಾಕ್ರಮಿಯಾದ ಒಬ್ಬ ಯೋಧನು. ದ್ರೋಣಾಚಾರ್ಯರು ಕಾಲವಾದ ನಂತರ ದುರ್ಯೋಧನನ ಎದುರಿಗೆ ಕರ್ಣನಿಗೂ ಕೃಪನಿಗೂ ಬಹಳ ಬಿರುಸಾದ ಮಾತುಗಳು ನಡೆದಾಗ, ಇವನು ಕರ್ಣನನ್ನು ಕೊಲ್ಲಲು ಪ್ರಯತ್ನಿಸಲು ಕೃಪ ದುರ್ಯೋಧನರು ತಡೆಯುವರು. ಮಹಾಭಾರತ ಯುದ್ಧವೆಲ್ಲಾ ಪೂರ್ತಿಯಾದ ಮೇಲೆ ಕೌರವಪಕ್ಷಪಾತಿಯಾದ ಅಶ್ವತ್ಥಾಮನು ಪಾಂಡವರಮೇಲಿನ ದ್ವೇಷದಿಂದ ಅವರ ಶಿಬಿರಕ್ಕೆ ಒಂದು ದಿನ ರಾತ್ರಿ ನುಗ್ಗಿ ಐವರು ಉಪಪಾಂಡವರನ್ನೂ, ಧೃಷ್ಟದ್ಯುಮ್ನನನ್ನೂ ಕೊಂದು ಬಿಡುವನು. ಮಾರನೆಯ ದಿನ ದ್ರೌಪದಿಯು ಪುತ್ರ ಮರಣವಾರ್ತೆಯನ್ನು ಕೇಳಿ ಹೇಗಾದರೂ ಮಾಡಿ ಅಶ್ವತ್ಥಾಮನನ್ನು ಸಂಹರಿಸಿ ಶಿರೋರತ್ನವನ್ನು ತಂದು ಕೊಟ್ಟು ಸೇಡು ತೀರಿಸಿಕೊಳ್ಳಬೇಕೆಂದು ಹಠಹಿಡಿದಾಗ, ಶ್ರೀಕೃಷ್ಣ ಭೀಮಾರ್ಜುನರು ಹೋಗಿ ಆತನ ಶಿರೋರತ್ನವನ್ನು ಕಸಿದು ತಂದು ಸಮಾಧಾನ ಪಡಿಸುವರು. ಅಶ್ವತ್ಥಾಮನು ಉತ್ತರೆಯ ಗರ್ಭದಲ್ಲಿದ್ದ ಪರೀಕ್ಷಿತ್ತನ್ನೂ ಕೊಲ್ಲುವುದರಲ್ಲಿದ್ದಾಗ ಶ್ರೀಕೃಷ್ಣನು ಬಹಳ ಪ್ರಯಾಸದಿಂದ ಪರೀಕ್ಷಿತ್ತನ್ನು ರಕ್ಷಿಸುವನು. ಇವನು ಬಹಳ ಧೈರ್ಯಶಾಲಿ, ಸಾಹಸಿ ಮತ್ತು ಬಹಳ ಶೂರ. ಬಹಳ ಕೋಪದ ಪ್ರಕೃತಿಯವನು. ಓಜಸ್ವಿ ಮತ್ತು ತೇಜಸ್ವಿಯಾಗಿದ್ದನು.]

**अश्वत्थिक** ಅಶ್ವತ್ಥಿಕ (वि०) ಅರಳಿ ಹಣ್ಣನ್ನು ತಿಂದು ಜೀವಿಸುವ. अश्वत्थेन चरति—"ष्ठन्" (४-४-१०)।

**अश्वदंष्ट्रा** ಅಶ್ವದಂಷ್ಟ್ರಾ (स्त्री०) ನೆಗ್ಗಿಲು ಗಿಡ.

**अश्वनाय** ಅಶ್ವನಾಯ (पु०) ಅಶ್ವಪಾಲಕ.

**अश्वप** ಅಶ್ವಪ (पु०) ಅಶ್ವಪಾಲಕ. अश्वं पाति—पा (रक्षणे) "कः" (३-२-३)।

**अश्वपति** ಅಶ್ವಪತಿ(पु०)1. ಕೇಕಯರಾಜ. 2. ಕುದುರೆಯ ಯಜಮಾನ. 3. ಸಾವಿತ್ರಿಯ ತಂದೆ.

**अश्वपर्ण** ಅಶ್ವಪರ್ಣ (पु०) 1. ರಥ. अश्वानां पर्णं गमनं यत्र। 2. ಮೇಘ, ಮೋಡ. अश्वं व्यापि पर्णं यस्य।

**अश्वपाल** ಅಶ್ವಪಾಲ (वि०) ಕುದುರೆಯನ್ನು ಕಾಪಾಡುವವನು. अश्वं पालयति—पाल (रक्षणे) + णिच् "अण्" (३-२-१)। "ण्वुल्" (३-१-१३३)। —पालकः —ಪಾಲಕः.

**अश्वपुच्छी** ಅಶ್ವಪುಚ್ಛೀ (स्त्री०) ಕಾಡು ಉದ್ದಿನ ಗಿಡ.

**अश्वमहिषिका** ಅಶ್ವಮಹಿಷಿಕಾ (स्त्री०) ಕುದುರೆ ಮತ್ತು ಎಮ್ಮೆಗಳ ವೈರ. अश्वस्य महिषस्य च समाहारः। अश्वमहिषस्य वैरम् "वुन्" (४-३-१२५)।

**अश्वमार** ಅಶ್ವಮಾರ (पु०) ಗನ್ನೇರಳೆ ಗಿಡ. अश्वं मारयति—मृङ् (प्राणत्यागे) + णिच् "अण्" (३-२-१)। "ण्वुल्" (३-१-१३३)। —मारकः —ಮಾರಕः.

**अश्वमुख** ಅಶ್ವಮುಖ (पु०) ಕಿನ್ನರ, ಕುದುರೆಯ ಮುಖವುಳ್ಳ ಮತ್ತು ಮನುಷ್ಯಾಕಾರದ ಕಿಂಪುರುಷ. अश्वस्य मुखमिव मुखमस्य। स्त्रियाम् "ङीष्" (४-१-६३)। —मुखी —ಮುಖೀ.

**अश्वमेध** ಅಶ್ವಮೇಧ (पु०) ಅಶ್ವಮೇಧಯಾಗ. अश्वः प्रधानतया मेध्यते हिंस्यतेऽत्र—मेधृ (हिंसने) "घञ्" (३-३-१२१)।

**अश्वमेधीय ಅಶ್ವಮೇಧೀಯ** (ಪುಂ) ಅಶ್ವಮೇಧ ಯಾಗಕ್ಕೆ ಅರ್ಹವಾದ ಕುದುರೆ. अश्वमेधाय हित: "छ" (५-१-५)।

**अश्वयुज् ಅಶ್ವಯುಜ್** (स्त्री०) 1. ಅಶ್ವಿನೀ ನಕ್ಷತ್ರ. अश्वं युनक्ति—युजिर् (योगे) "क्विप्" (३-२-६१)। 2. ಅಶ್ವಯುಜ ಮಾಸ. अश्वेन अश्वाकारतया नक्षत्रेण युज्यते पौर्णमास्यत्र—अधि० "क्विप्"। 3. ಕುದುರೆಯಿಂದ ಕೂಡಿದ ರಥ. (वि०) 4. ಅಶ್ವಿನೀ ನಕ್ಷತ್ರದಲ್ಲಿ ಹುಟ್ಟಿದ. अश्वयुजि जात: "अण्" (४-३-१६)। वा लुक्। 5. ರಥಕ್ಕೆ ಕುದುರೆಯನ್ನು ಕಟ್ಟುವ.

**अश्वरत्न ಅಶ್ವರತ್ನ** (न०) 1. ಶ್ರೇಷ್ಠವಾದ ಕುದುರೆ. 2. ಉಚ್ಚೈಃಶ್ರವಸ್ಸು, ಇಂದ್ರನ ಕುದುರೆ. अश्वो रत्नमिव।

**अश्वराज ಅಶ್ವರಾಜ** (पु०) ಉಚ್ಚೈಃಶ್ರವಸ್ಸು, ಇಂದ್ರನ ಕುದುರೆ. अश्वानां राजा "टच्" (५-४-९१)।

**अश्ववार ಅಶ್ವವಾರ** (पु०) ಕುದುರೆಯ ಸವಾರ. अश्वं वारयति—वृञ् (वरणे)+णिच् "अण्" (३-२-१)। "परस्परोत्पीडितजानुभागा दु:खेन निश्चक्रमुरश्ववारा:" माघ० ३-६६।

**अश्ववाह ಅಶ್ವವಾಹ** (पु०) ಕುದುರೆಯ ಸವಾರ. अश्वं वाहयति—वह (प्रापणे)+णिच् "अण्" (३-२-१)। "ण्वुल्" (३-१-१३३)। –वाहक:–ವಾಹಕಃ. "ल्यु:" (३-१-१३४)। –वाहन:–ವಾಹನಃ.

**अश्वविक्रयिन् ಅಶ್ವವಿಕ್ರಯಿನ್** (वि०) ಕುದುರೆಯ ವ್ಯಾಪಾರಿ, ಕುದುರೆಯ ಮಾರಾಟಗಾರ. अश्वं विक्रेतुं शीलमस्य "णिनि:" (३-२-७८)।

**अश्ववैद्य ಅಶ್ವವೈದ್ಯ** (पु०) ಕುದುರೆಯ ರೋಗಕ್ಕೆ ಚಿಕಿತ್ಸೆ ನಡೆಸುವವನು.

**अश्वशास्त्र ಅಶ್ವಶಾಸ್ತ್ರ** (न०) ಕುದುರೆಯ ಶುಭಾಶುಭ ಲಕ್ಷಣವನ್ನು ತಿಳಿಸುವ ಶಾಸ್ತ್ರ.

**अश्वसाद ಅಶ್ವಸಾದ** (पु०) ಕುದುರೆಯ ಸವಾರ. अश्वं सादयति—षद्लृ (विशरणादौ)+णिच् "अण्" (३-२-१)।

**अश्वसादिन् ಅಶ್ವಸಾದಿನ್** (पु०) ಕುದುರೆಯ ಸವಾರ. अश्वे सीदत्यवश्यम्—षद्लृ (विशरणादौ) "णिनि:" (३-३-१७०)। "पूर्वं प्रहर्ता न जघान भूय: प्रतिप्रहाराक्षममश्वसादी" रघु० ७-४७।

**अश्वारोह ಅಶ್ವಾರೋಹ** (पु०) ಕುದುರೆಯ ಸವಾರ. अश्वमारोहति—आ+रुह (बीजजन्मनि प्रादुर्भावे च) "अण्" (३-२-१)। "अश्वारोहा गजारोहप्राणान् प्रासैरपाहरन्" कुमा० १६-२९। (स्त्री०)–आरोहा –ಆರೋಹಾ. ಅಶ್ವಗಂಧಿ ಗಿಡ.

**अश्विक ಅಶ್ವಿಕ** (वि०) ಕುದುರೆಯ ಮೇಲೆ ಕುಳಿತು ಸಂಚರಿಸುವವನು. अश्वेन चरति—चर (गतिभक्षणयो:) "ष्ठन्" (४-४-१०)।

**अश्विन् ಅಶ್ವಿನ್** (पु० द्वि० व०) ಅಶ್ವಿನೀ ದೇವತೆಗಳು, ದೇವತೆಗಳ ವೈದ್ಯರು. प्रशस्ता अश्वा: सन्त्यनयो: "इनि:" (५-२-११५)। अश्विनौ।

**अश्विनी ಅಶ್ವಿನೀ** (स्त्री०) 1. ಅಶ್ವಿನೀ ನಕ್ಷತ್ರ. अश्व: अश्वरूपमस्त्यस्या: "इनि:" (५-२-११५)। "ङीप्" (४-१-५)। 2. ಕುದುರೆಯ ರೂಪವನ್ನು ಧರಿಸಿದ ಸೂರ್ಯನ ಪತ್ನಿ, ಅಶ್ವಿನೀ ದೇವತೆಗಳ ತಾಯಿ.

**अश्विनीकुमार ಅಶ್ವಿನೀಕುಮಾರ** (पु० द्वि० व०) ಅಶ್ವ ರೂಪವನ್ನು ಹೊಂದಿದ ಸೂರ್ಯನ ಪತ್ನಿ ಸಂಜ್ಞಾ ದೇವಿಯ (ಅಶ್ವಿನಿಯ) ಕುಮಾರರು.

**अश्वीय ಅಶ್ವೀಯ** (न०) ಅಶ್ವಸಮೂಹ, ಕುದುರೆಗಳ ಗುಂಪು. अश्वानां समूह: "छ:" (४-२-४८)। "वर्ध्राबद्धाधौरितेन प्रयातामश्वीयानामुच्चकैरुच्चलन्त:" माघ० १८-५।

**अषडक्षीण ಅಷಡಕ್ಷೀಣ** (पु०) ಮೂರನೆಯವನಿಗೆ ತಿಳಿಯದಂತೆ ಇಬ್ಬರು ಮಾತ್ರ ಕಲೆತು ಮಾಡುವ ಮಂತ್ರಾಲೋಚನೆ. न सन्ति षडक्षीणि अत्र "ख:" (५-४-७)।

**अषाढ ಅಷಾಢ** (पु०) 1. ಆಷಾಢ ಮಾಸ. अषाढया युक्ता पौर्णमासी अषाढा—सा यत्र मासे "अण्" (४-२-२१)। 2. ಬ್ರಹ್ಮಚಾರಿಯು ಹಿಡಿಯುವ ಪಾಲಾಶದಂಡ, ಮುತ್ತುಗದ ದಂಡ. आषाढी पूर्णिमा प्रयोजनमस्य "अण्" (५-१-११०)। पृषो० ह्रस्व:।

**अषाढा ಅಷಾಢಾ** (स्त्री०) ಪೂರ್ವಾಷಾಢಾ ಮತ್ತು ಉತ್ತರಾಷಾಢಾ ನಕ್ಷತ್ರಗಳು.

**अष्टक ಅಷ್ಟಕ** (न०) 1. ಎಂಟು ಅಧ್ಯಾಯಗಳನ್ನೊಳಗೊಂಡ ಪಾಣಿನಿ ಸೂತ್ರ. अष्टौ अध्याया: परिमाणमस्य "कन्" (५-१-२२)। 2. ಎಂಟು ಸಂಖ್ಯೆ. (पु० ब० व०) 3. ಪಾಣಿನಿ ಸೂತ್ರಗಳನ್ನು ತಿಳಿದವರು ಅಥವಾ ಅಧ್ಯಯನ ಮಾಡುವವರು. अष्टकं पाणिनि-

**सूत्रं** विदन्ति अधीयते वा "अण्" (४-१-५९)। तस्य लुक् (४-२-६५)। 4. ಋಗ್ವೇದದ ಒಂದು ಭಾಗ. [ಋಗ್ವೇದವು ಎಂಟು ಅಷ್ಟಕಗಳಾಗಿ ಭಾಗಿಸಲ್ಪಟ್ಟಿದೆ.] (ವಿಂ) 5. ಎಂಟರಷ್ಟಾದ, ಎಂಟು ಸಂಖ್ಯೆಯುಳ್ಳ. अष्टौ परिमाणमस्य "कन्"।

**अष्टकर्ण** ಅಷ್ಟಕರ್ಣ (ಪುಂ) ಬ್ರಹ್ಮ, ಚತುರ್ಮುಖ. अष्टौ कर्णा अस्य।

**अष्टकर्मन्** ಅಷ್ಟಕರ್ಮನ್ (ಪುಂ) ರಾಜ, ದೊರೆ. अष्टौ कर्माण्यस्य। "आदाने च विसर्गे च तथा प्रैषनिषेधयोः। पञ्चमे चार्थवचने व्यवहारस्य चेक्षणे। दण्डशुद्ध्योः सदा रक्तस्तेनाष्टगतिको नृपः"। (1) आदानम् – ಕರಗ್ರಹಣ. (2) विसर्गः – ಭೃತ್ಯಾದಿಗಳಿಗೆ ಧನ ಮೊದಲಾದ ದಾನ. (3) प्रैषः – ಮಾಡಬೇಕಾದ ಕಾರ್ಯಗಳಲ್ಲಿ ಮಂತ್ರಿಗಳನ್ನು ಆಜ್ಞಾಪಿಸುವುದು. (4) निषेधः – ವಿರುದ್ಧ ಕಾರ್ಯಾಚರಣೆಯನ್ನು ತಡೆಯುವುದು. (5) अर्थवचनम् – ಕರ್ತವ್ಯದಲ್ಲಿ ಸಂದೇಹವೊದಗಿದಾಗ ರಾಜಾಜ್ಞೆಯಿಂದಲೇ ಕಾರ್ಯವನ್ನು ನಡೆಸುವುದು. (6) व्यवहारेक्षणम् – ಪ್ರಜೆಗಳ ಋಣಬಾಧೆಯ ವಿಷಯದಲ್ಲಿ ಪರಿಹಾರಚಿಂತೆ. (7) दण्डः – ಪರಾಜಯಹೊಂದಿದವರಿಂದ ಶಾಸ್ತ್ರರೀತಿಯಿಂದ ಧನವನ್ನು ಸ್ವೀಕರಿಸುವುದು. (8) शुद्धिः – ಪಾಪಕಾರ್ಯವನ್ನೆಸಗಿದಾಗ ಅದರ ಪ್ರಾಯಶ್ಚಿತ್ತ. ಈ ರೀತಿ ರಾಜನ ಕಾರ್ಯಗಳು ಎಂಟು.

**अष्टका** ಅಷ್ಟಕಾ (ಸ್ತ್ರೀಂ) 1. ಮಾರ್ಗಶೀರ್ಷ ಮೊದಲು ನಾಲ್ಕು ತಿಂಗಳ ಕೃಷ್ಣಪಕ್ಷದ ಸಪ್ತಮಿ, ಅಷ್ಟಮಿ ಮತ್ತು ನವಮಿ ತಿಥಿತ್ರಯ. 2. ಈ ಮೂರು ತಿಥಿಗಳಲ್ಲಿ ಮಾಡತಕ್ಕ ಶ್ರಾದ್ಧ. अश्नन्ति पित्रर्थं ब्राह्मणाः यस्याम् – अश (भोजने) "तकन्" शकारस्य षत्वष्टुत्वे (उं ३-१४८)। 3. ಅಷ್ಟಮಿ ತಿಥಿ. "अमावास्या गुरुं हन्ति शिष्यं हन्ति चतुर्दशी। ब्रह्माष्टकापौर्णमास्यौ तस्मात्ताः परिवर्जयेत्" मनुं ४-११४।

**अष्टकिक** ಅಷ್ಟಕಿಕ (ವಿಂ) ಅಷ್ಟಕೆಯಿಂದ ಕೂಡಿದ. अष्टकास्त्यस्य "ठन्" (५-२-११५)।

**अष्टकिन्** ಅಷ್ಟಕಿನ್ (ವಿಂ) ಅಷ್ಟಕಾಶ್ರಾದ್ಧವನ್ನು ಮಾಡುವವನು. अष्टका "इनिः" (५-२-११५)।

**अष्टक्य** ಅಷ್ಟಕ್ಯ (ವಿಂ) ಎಂಟರಿಂದ ಕೊಳ್ಳಲ್ಪಟ್ಟ. अष्टकेन क्रीतम् "यत्" (५-१-२)।

**अष्टगुण** ಅಷ್ಟಗುಣ (ಪುಂ) 1. ಎಂಟು ಗುಣಗಳಿಂದ ಕೂಡಿದ ಬ್ರಾಹ್ಮಣ. (1) सर्वभूतेषु दया, (2) क्षान्तिः, (3) अनसूया, (4) शौचम्, (5) अनायासः, (6) मङ्गलम्, (7) अकार्पण्यम् ಮತ್ತು (8) अस्पृहा ಇವು ಬ್ರಾಹ್ಮಣನ ಎಂಟು ಗುಣಗಳು. (ವಿಂ) 2. ಎಂಟರಿಂದ ಗುಣಿಸಲ್ಪಟ್ಟ, ಎಂಟರಷ್ಟು ಹೆಚ್ಚಾದ.

**अष्टचत्वारिंश** ಅಷ್ಟಚತ್ವಾರಿಂಶ (ವಿಂ) ನಲವತ್ತೆಂಟನೆಯ. अष्टचत्वारिंशतः पूरणः "डट्" (५-२-४८)।

**अष्टचत्वारिंशत्** ಅಷ್ಟಚತ್ವಾರಿಂಶತ್ (ಸ್ತ್ರೀಂ) ನಲವತ್ತೆಂಟು. अष्टभिरधिका चत्वारिंशत्।

**अष्टचत्वारिंशत्तम** ಅಷ್ಟಚತ್ವಾರಿಂಶತ್ತಮ (ವಿಂ) ನಲವತ್ತೆಂಟನೆಯ. अष्टचत्वारिंशतः पूरणः वा "तमट्" (५-२-५६)। पक्षे "डट्" (५-२-४८)। अष्टचत्वारिंशः – ಚತ್ವಾರಿಂಶ.

**अष्टतय** ಅಷ್ಟತಯ (ನಂ) 1. ಎಂಟು, ಎಂಟು ಭಾಗಗಳ ಒಂದು ಸಮೂಹ. (ವಿಂ) 2. ಎಂಟು ಭಾಗಗಳುಳ್ಳ, ಎಂಟು ಅವಯವಗಳುಳ್ಳ, ಎಂಟು ಸಂಖ್ಯೆಯುಳ್ಳ. अष्टौ अवयवा यस्य "तयप्" (५-२-४२)।

**अष्टत्रिक** ಅಷ್ಟತ್ರಿಕ (ನಂ) ಇಪ್ಪತ್ತನಾಲ್ಕು.

**अष्टत्रिंश** ಅಷ್ಟತ್ರಿಂಶ (ವಿಂ) ಮೂವತ್ತೆಂಟನೆಯ अष्टत्रिंशतः पूरणः "डट्" (५-२-४८)।

**अष्टत्रिंशत्** ಅಷ್ಟತ್ರಿಂಶತ್ (ಸ್ತ್ರೀಂ) ಮೂವತ್ತೆಂಟು.

**अष्टदल** ಅಷ್ಟದಳ (ನಂ) ಅಷ್ಟದಳ ಪದ್ಮ, ಎಂಟು ದಳಗಳುಳ್ಳ ಕಮಲ. अष्टौ दलान्यस्य।

**अष्टदिक्करिणी** ಅಷ್ಟದಿಕ್ಕರಿಣೀ (ಸ್ತ್ರೀಂ ಬಂ ವಂ) ಎಂಟು ದಿಗ್ಗಜಗಳ ಪತ್ನಿಯರು; ಅಭ್ರಮು, ಕಪಿಲೆ, ಪಿಂಗಳೆ, ಅನುಪಮೆ, ತಾಮ್ರಪರ್ಣಿ, ಶುಭ್ರದಂತಿ, ಅಂಗನೆ ಮತ್ತು ಅಂಜನಾವತಿ. ಈ ಹೆಣ್ಣಾನೆಗಳು ದಿಗ್ಗಜಗಳ ಪತ್ನಿಯರು.

**अष्टदिक्पाल** ಅಷ್ಟದಿಕ್ಪಾಲ (ಪುಂ ಬಂ ವಂ) ಎಂಟು ದಿಕ್ಕುಗಳ ಅಧಿಪತಿಗಳು; (1) ಇಂದ್ರ, (2) ಅಗ್ನಿ, (3) ಯಮ, (4) ನಿರ್ಋತಿ, (5) ವರುಣ, (6) ವಾಯು, (7) ಕುಬೇರ ಮತ್ತು (8) ಈಶ. ಇವರು ಕ್ರಮವಾಗಿ ಎಂಟು ದಿಕ್ಕುಗಳ ಅಧಿಪತಿಗಳು.

**अष्टदिग्गज** ಅಷ್ಟದಿಗ್ಗಜ (ಪುಂ ಬಂ ವಂ) ಎಂಟು ದಿಕ್ಕುಗಳಲ್ಲಿರುವ ಆನೆಗಳು; (1) ಐರಾವತ, (2) ಪುಂಡರೀಕ, (3) ವಾಮನ, (4) ಕುಮುದ, (5) ಅಂಜನ, (6) ಪುಷ್ಪದಂತ, (7) ಸಾರ್ವಭೌಮ ಮತ್ತು (8) ಸುಪ್ರತೀಕ. ಇವು ಪೂರ್ವ ಮೊದಲಾದ ಎಂಟು ದಿಕ್ಕುಗಳಲ್ಲಿರುವ ಆನೆಗಳು.

**अष्टद्रव्य** ಅಷ್ಟದ್ರವ್ಯ (ನಂ) ಯಾಗಕ್ಕೆ ಬೇಕಾಗುವ ಎಂಟು ದ್ರವ್ಯಗಳು. "अश्वत्थोदुम्बरप्लक्षन्यग्रोधसमिधस्तिलाः। सिद्धार्थपायसाज्यानि द्रव्याण्यष्टौ विदुर्बुधाः"।

**अष्टधा** ಅಷ್ಟಧಾ (अव्यं) ಎಂಟು ಪ್ರಕಾರವಾಗಿ, ಎಂಟು ವಿಧವಾಗಿ. अष्टन् प्रकारे "धा" (५-३-४२)। "सुरद्विपानामिव सामयोनिर्भिन्नोऽष्टधा विप्रससार वंशः" रघुं १६-३।

**अष्टधातु** ಅಷ್ಟಧಾತು (पुं बं वं) ಸುವರ್ಣ ಮೊದಲಾದ ಎಂಟು ಧಾತುಗಳು. "स्वर्णं रूप्यं च ताम्रं च रङ्गं यशदमेव च। सीसं लौहं रसश्चेति धातवोऽष्टौ प्रकीर्तिताः"।

**अष्टन्** ಅಷ್ಟನ್ (त्रिं बं वं) ಎಂಟು. अशू (व्याप्तौ) "कनिन्" (उं १-१५५)। अष्ट अष्टौ। अष्ट अष्टौ। अष्टभिः, अष्टाभिः। अष्टभ्यः, अष्टाभ्यः। अष्टभ्यः, अष्टाभ्यः। अष्टानाम्। अष्टसु, अष्टासु। "निन्द्यास्वष्टासु चान्यासु स्त्रियो रात्रिषु वर्जयन्" मनुं ३-५०।

**अष्टपद** ಅಷ್ಟಪದ (पुं) 1. ಶರಭ ಮೃಗ. 2. ಜೇಡರ ಹುಳು. अष्टौ पदान्यस्य।

**अष्टम** ಅಷ್ಟಮ (विं) ಎಂಟನೆಯ. अष्टानां पूरणः "डट्" (५-२-४८)। "मट्" (५-२-४९)। "गर्भाष्टमेऽब्दे कुर्वीत ब्राह्मणस्योपनायनम्" मनुं २-३६। स्त्रियाम् "ङीप्" (४-१-१५)। अष्टमी ಅಷ್ಟಮೀ.

**अष्टमङ्गल** ಅಷ್ಟಮಂಗಳ (नं बं वं) ಮಂಗಳ ವಸ್ತುಗಳು. अष्टौ मङ्गलानि। "लोकेऽस्मिन् मङ्गलान्यष्टौ ब्राह्मणो गौर्हुताशनः। हिरण्यं सर्पिरादित्य आपो राजा तथाष्टमः"। "मृगराजो वृषो नागः कलशो व्यजनं तथा। वैजयन्ती तथा भेरी दीप इत्यष्टमङ्गलम्"।

**अष्टमभाव** ಅಷ್ಟಮಭಾವ (पुं) (ಜಾತಕದಲ್ಲಿ) ಜನ್ಮಲಗ್ನದಿಂದ ಎಂಟನೆಯ ಸ್ಥಾನ, ತನ್ವಾದಿ ದ್ವಾದಶಭಾವಗಳಲ್ಲೊಂದಾದ ಆಯುಃಸ್ಥಾನ. अष्टमो भावः। "अष्टमं चायुषः स्थानमष्टमादष्टमं च यत्। तयोरपि व्ययस्थानं मारकस्थानमुच्यते"।

**अष्टमी** ಅಷ್ಟಮೀ (स्त्रीं) ಪಾಡ್ಯ ಮೊದಲಾಗಿ (ಪಕ್ಷದ) ಎಂಟನೆಯ ತಿಥಿ. अष्टम "ङीप्" (४-१-१५)।

**अष्टमूर्ति** ಅಷ್ಟಮೂರ್ತಿ (पुं) 1. ಶಿವ, ಈಶ್ವರ. अष्टौ मूर्तयोऽस्य। ಪೃಥಿವಿ, ಜಲ, ತೇಜಸ್ಸು, ವಾಯು, ಆಕಾಶ, ಯಜಮಾನ (ಯಾಗ ಮಾಡುವವನು), ಚಂದ್ರ ಮತ್ತು ಸೂರ್ಯ ಈ ಎಂಟೂ ಈಶ್ವರನ ಮೂರ್ತಿಗಳು. "या सृष्टिः स्रष्टुराद्या वहति विधिहुतं या हविर्या च होत्री ये द्वे कालं विधत्तः श्रुतिविषयगुणा या स्थिता व्याप्य विश्वम्। यामाहुः सर्वबीजप्रकृतिरिति यया प्राणिनः प्राणवन्तः प्रत्यक्षाभिः प्रपन्नस्तनुभिरवतु वस्ताभिरष्टाभिरीशः" शाकुं १-१। "अवेहि मां किंकरमष्टमूर्तेः कुम्भोदरं नाम निकुम्भमित्रम्" रघुं २-३५। ಪೃಥಿವೀ ಮೊದಲಾದ ಮೂರ್ತಿಗಳಿಗೆ ಕ್ರಮವಾಗಿ ಈ ಹೆಸರುಗಳು: (1) शर्वः, (2) भवः, (3) रुद्रः, (4) उग्रः, (5) भीमः, (6) पशुपतिः, (7) महादेवः ಮತ್ತು (8) ईशानः। (स्त्रीं बं वं) 2. ಈಶ್ವರನ ಪೃಥಿವಿ ಮೊದಲಾದ ಎಂಟು ಮೂರ್ತಿಗಳು.

**अष्टमूर्तिधर** ಅಷ್ಟಮೂರ್ತಿಧರ (पुं) ಶಿವ, ಈಶ್ವರ. अष्टानां मूर्तीनां धरः। "आप्लुतः स विमलैर्जलैरभूदष्टमूर्तिधरमूर्तिरष्टमी" माघं १४-१८।

**अष्टवर्ग** ಅಷ್ಟವರ್ಗ (पुं) 1. (ಜ್ಯೋತಿಷೋಕ್ತವಾದ) ಶುಭಾಶುಭಗಳನ್ನು ತಿಳಿಸುವ ರೇಖಾಕಾರವಾದ ಒಂದು ಚಕ್ರ. 2. ವರ್ಣ (ಅಕ್ಷರ)ಗಳ ಎಂಟು ಗುಂಪು.

(1) अवर्गः (ಅಕಾರಾದಿ 15 ವರ್ಣಗಳು)
(2) कवर्गः (ಕಕಾರಾದಿ 5 ,, )
(3) चवर्गः (ಚಕಾರಾದಿ 5 ,, )
(4) टवर्गः (ಟಕಾರಾದಿ 5 ,, )
(5) तवर्गः (ತಕಾರಾದಿ 5 ,, )
(6) पवर्गः (ಪಕಾರಾದಿ 5 ,, )
(7) यवर्गः (ಯಕಾರಾದಿ 4 ,, )
(8) शवर्गः (ಶಕಾರಾದಿ 4 ,, )

**अष्टाङ्ग** ಅಷ್ಟಾಂಗ (पुं) 1. ಎಂಟು ಅಂಗಗಳುಳ್ಳ ಯೋಗ; अष्टौ अङ्गान्यस्य। (1) ಯಮ, (2) ನಿಯಮ, (3) ಆಸನ, (4) ಪ್ರಾಣಾಯಾಮ, (5) ಪ್ರತ್ಯಾಹಾರ, (6) ಧ್ಯಾನ, (7) ಧಾರಣ ಮತ್ತು (8) ಸಮಾಧಿ ಗಳೆಂದು ಯೋಗದ ಅಂಗಗಳು ಎಂಟು. "यमनियमासनप्राणायामप्रत्याहारधारणाध्यानसमाधयोऽष्टावङ्गानि" पां यों सूं २-२९। [ಇವುಗಳ ಲಕ್ಷಣಕ್ಕೆ ಆಯಾ ಪದಗಳಲ್ಲಿ ನೋಡಿ.] 2. ಅಷ್ಟಾಂಗಗಳಿಂದ ಮಾಡುವ ನಮಸ್ಕಾರ. "दोर्भ्यां पद्भ्यां च जानुभ्यामुरसा शिरसा दृशा। मनसा वचसा चेति प्रणामोऽष्टाङ्ग ईरितः" वैद्यनां आह्निकं। 3. ಎಂಟು ವಿಧ ಪೂಜಾ ದ್ರವ್ಯಗಳು. "आपः क्षीरं कुशाग्रं च दधि सर्पिः सतण्डुलम्। यवः सिद्धार्थकश्चैव अष्टाङ्गोऽर्घः प्रकीर्तितः"।

4. ಎಂಟು ಅಂಗಗಳುಳ್ಳ ಆಯುರ್ವೇದ; (1) ಶಲ್ಯ, (2) ಶಾಲಾಕ್ಯ, (3) ಕಾಯಚಿಕಿತ್ಸೆ, (4) ಭೂತವಿದ್ಯೆ, (5) ಕೌಮಾರಭೃತ್ಯ, (6) ಅಗದತಂತ್ರ, (7) ರಸಾಯನ ತಂತ್ರ ಮತ್ತು (8) ವಾಜೀಕರಣ ತಂತ್ರಗಳೆಂದು ಆಯುರ್ವೇದ ಅಂಗಗಳು ಎಂಟು.

**अष्टाङ्गधूप** ಅಷ್ಟಾಂಗಧೂಪ(ಪುಂ) ಜ್ವರ ವಾಸಿಯಾಗಲು ಉಪಯೋಗಿಸುವ ಒಂದು ಧೂಪ; (1) ನೆಗ್ಗಿಲು ಗಿಡ, (2) ಬೇವಿನಸೊಪ್ಪು, (3) ಬಜೆ, (4) ಚಂಗಲು ಕೋಷ್ಠ, (5) ಅಳಲೆಕಾಯಿ, (6) ಸಾಸುವೆ, (7) ಯವ ಮತ್ತು (8) ತುಪ್ಪ. ಈ ಎಂಟು ವಸ್ತುಗಳ ಧೂಪದ ಸೇವನೆಯಿಂದ ಜ್ವರವು ವಾಸಿಯಾಗುವುದು. "पलङ्कषा निम्बपत्रं वचा कुष्ठं हरीतकी। सर्षपाः सयवाः सर्पिर्धूपनं ज्वरनाशनम्" चक्रद०।

**अष्टाङ्गमैथुन** ಅಷ್ಟಾಂಗಮೈಥುನ (ನಂ) ಸ್ತ್ರೀ ಸಂಬಂಧ ವಾದ ಎಂಟು ವಿಧ ಸುಖಾನುಭವ; ಇದು (1) स्मरणम्, (2) कीर्तनम्, (3) केलिः, (4) प्रेक्षणम्, (5) गुह्य-भाषणम्, (6) संकल्पः, (7) अध्यवसायः ಮತ್ತು (8) क्रियानिष्पत्तिः ಎಂದು ಎಂಟು ವಿಧ.

**अष्टादश** ಅಷ್ಟಾದಶ(ವಿಂ) ಹದಿನೆಂಟನೆಯ. अष्टादशानां पूरणः — अष्टादशन् "डट्" (५-२-४८)। "अगाहताष्टादशतां जिगीषया नवद्वयद्वीपपृथग्जयश्रियाम्" नैष० १-५। स्त्रियाम् "ङीप्" (४-१-१५)। –दशी –ದಶೀ.

**अष्टादशधान्य** ಅಷ್ಟಾದಶಧಾನ್ಯ (ನಂ ಬಂ ವಂ) ಹದಿನೆಂಟು ವಿಧ ಧಾನ್ಯಗಳು; (1) ಯವ, (2) ಗೋಧೂಮ (ಗೋಧಿ), (3) ಬತ್ತ, (4) ತಿಲ (ಎಳ್ಳು), (5) ಕಂಗು (ನವಣೆ), (6) ಕುಳುತ್ಥ (ಹುರುಳಿ), (7) ಮಾಷ (ಉದ್ದು), (8) ಮುದ್ಗ (ಹೆಸರು), (9) ಕಾಡುಕಡಲೆ, (10) ನಿಷ್ಪಾವ (ಅವರೆ), (11) ಶ್ಯಾಮಕ (ಸಾವೆ), (12) ಸರ್ಷಪ (ಸಾಸುವೆ), (13) ಕಾಡು ಗೋಧಿ, (14) ತೃಣಧಾನ್ಯ, (15) ತೊಗರಿ, (16) ನೆಲಗಡಲೆ, (17) ಕಡಲೆ ಮತ್ತು (18) ಚೀನಕ (60 ದಿನಗಳಲ್ಲಿ ಫಲ ಕೊಡುವ ಒಂದು ಬತ್ತ). ಇವು ಹದಿನೆಂಟು ವಿಧ ಧಾನ್ಯಗಳು. "यवगोधूमधान्यानि तिलाः कङ्गुकुलत्थकाः। माषा मुद्गा मसूराश्च निष्पावाः श्यामसर्षपाः। गवेधुकाश्च नीवारा आढक्योऽथ सतीनकाः। चणकाश्चीनकाश्चैव धान्यान्यष्टादशैव तु" हेमाद्रि० दा० ख०।

**अष्टादशन्** ಅಷ್ಟಾದಶನ್ (ಸ್ತ್ರೀಂ) ಹದಿನೆಂಟು. अष्टौ च दश च।

**अष्टादशपुराण** ಅಷ್ಟಾದಶಪುರಾಣ (ನಂ ಬಂ ವಂ) ವ್ಯಾಸಮಹರ್ಷಿಪ್ರಣೀತವಾದ ಹದಿನೆಂಟು ಮಹಾಪುರಾಣಗಳು; (1) ಬ್ರಾಹ್ಮಪುರಾಣ, (2) ಪಾದ್ಮಪುರಾಣ, (3) ವಿಷ್ಣುಪುರಾಣ, (4) ಶಿವಪುರಾಣ, (5) ಭಾಗವತಪುರಾಣ, (6) ನಾರದಪುರಾಣ, (7) ಮಾರ್ಕಂಡೇಯಪುರಾಣ, (8) ಅಗ್ನಿಪುರಾಣ, (9) ಭವಿಷ್ಯತ್ಪುರಾಣ, (10) ಬ್ರಹ್ಮವೈವರ್ತಪುರಾಣ, (11) ಲಿಂಗಪುರಾಣ, (12) ವರಾಹಪುರಾಣ, (13) ಸ್ಕಾಂದಪುರಾಣ, (14) ವಾಮನಪುರಾಣ, (15) ಕೂರ್ಮಪುರಾಣ, (16) ಮತ್ಸ್ಯಪುರಾಣ, (17) ಗರುಡಪುರಾಣ ಮತ್ತು (18) ಬ್ರಹ್ಮಾಂಡಪುರಾಣ. ಇವು ಹದಿನೆಂಟು ಪುರಾಣಗಳು. ಈ ಮಹಾಪುರಾಣಗಳ ಗ್ರಂಥಪರಿಮಾಣ: [ಒಂದು ಅನುಷ್ಟುಪ್ ಶ್ಲೋಕ ಅಥವಾ 32 ಅಕ್ಷರಗಳಿಗೆ ಒಂದು ಗ್ರಂಥ.]

| | | ಗ್ರಂಥಸಂಖ್ಯೆ |
|---|---|---|
| (1) | ಬ್ರಾಹ್ಮಪುರಾಣ | 10,000 |
| (2) | ಪಾದ್ಮ ,, | 55,000 |
| (3) | ವಿಷ್ಣು ,, | 23,000 |
| (4) | ಶಿವ ,, | 24,000 |
| (5) | ಭಾಗವತ ,, | 18,000 |
| (6) | ನಾರದ ,, | 25,000 |
| (7) | ಮಾರ್ಕಂಡೇಯಪುರಾಣ | 9,000 |
| (8) | ಅಗ್ನಿ ,, | 15,400 |
| (9) | ಭವಿಷ್ಯತ್ ,, | 14,500 |
| (10) | ಬ್ರಹ್ಮವೈವರ್ತಪುರಾಣ | 18,000 |
| (11) | ಲಿಂಗ ,, | 11,000 |
| (12) | ವರಾಹ ,, | 24,000 |
| (13) | ಸ್ಕಾಂದ ,, | 80,100 |
| (14) | ವಾಮನ ,, | 10,000 |
| (15) | ಕೂರ್ಮ ,, | 17,000 |
| (16) | ಮತ್ಸ್ಯ ,, | 14,000 |
| (17) | ಗರುಡ ,, | 980 |
| (18) | ಬ್ರಹ್ಮಾಂಡ ,, | 12,000 |

**अष्टादशविद्या** ಅಷ್ಟಾದಶವಿದ್ಯಾ (ಸ್ತ್ರೀಂ ಬಂ ವಂ) ವೇದ ಮೊದಲಾದ ಹದಿನೆಂಟು ವಿದ್ಯೆಗಳು; ಋಕ್, ಯಜುಸ್ಸು, ಸಾಮ ಮತ್ತು ಅಥರ್ವಗಳೆಂಬ ನಾಲ್ಕು (4) ವೇದಗಳು; ಶಿಕ್ಷೆ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ ಮತ್ತು ಕಲ್ಪಗಳೆಂಬ ಆರು (6) ವೇದಾಂಗಗಳು; ಮೀಮಾಂಸೆ, ನ್ಯಾಯ, ಧರ್ಮ

ಶಾಸ್ತ್ರ ಮತ್ತು ಪುರಾಣ ಇವು ನಾಲ್ಕು (4) ಸೇರಿ ಚತುರ್ದಶ (14) ವಿದ್ಯೆಗಳು; ಆಯುರ್ವೇದ, ಧನುರ್ವೇದ, ಗಾಂಧರ್ವವೇದ ಮತ್ತು ಅರ್ಥಶಾಸ್ತ್ರ ಇವೂ ಸೇರಿ ಹದಿನೆಂಟು ವಿದ್ಯೆಗಳು. "अङ्गानि वेदाश्चत्वारो मीमांसा न्यायविस्तरः। धर्मशास्त्रं पुराणं च विद्याह्येताश्चतुर्दश। आयुर्वेदो धनुर्वेदो गान्धर्वश्चेति ते त्रयः। अर्थशास्त्रं चतुर्थं तु विद्याह्यष्टादशैव तु" हेमाद्रि०।

**अष्टादशविवादपद ಅಷ್ಟಾದಶವಿವಾದಪದ**(ನಂ೦ಬಂ೦ವಂ೦) ಹದಿನೆಂಟು ವಿಧ ವ್ಯವಹಾರ ಸ್ಥಾನಗಳು. ಮನುಷ್ಯರಲ್ಲಿ ಉದ್ಭವಿಸಬಹುದಾದ ವ್ಯವಹಾರಗಳಿಗೆ ಕೆಳಗೆ ಕಂಡ 18 ವಿಧವಾದ ಅವಕಾಶವಿರುವುವು; (1) ಋಣಾದಾನ (ಸಾಲ ಕೊಟ್ಟು ತೆಗೆದುಕೊಳ್ಳುವುದು), (2) ನಿಕ್ಷೇಪ (ತನ್ನ ಹಣವನ್ನು ಇತರರಲ್ಲಿ ಕೊಟ್ಟಿಟ್ಟಿರುವುದು), (3) ಅಸ್ವಾಮಿವಿಕ್ರಯ (ಯಜಮಾನನಲ್ಲದವನಿಂದ ನಡೆಯುವ ಆಸ್ತಿಯ ಮಾರಾಟ), (4) ವರ್ತಕರು ಗುಂಪುಕಟ್ಟಿಕೊಂಡು ನಡೆಸುವ ಕಾರ್ಯ, (5) ದಾನ ಮಾಡಿದುದನ್ನು ತೆಗೆದುಕೊಂಡವನು ಅನರ್ಹನೆಂಬ ಕಾರಣದಿಂದಾಗಲಿ, ಕೋಪದಿಂದಾಗಲಿ ಹಿಂದಕ್ಕೆ ತೆಗೆದುಕೊಳ್ಳುವುದು, (6) ಸೇವಕನಿಗೆ ಸಂಬಳ ಕೊಡದಿರುವುದು, (7) ಮಾತಿನಂತೆ ನಡೆಯದಿರುವಿಕೆ, (8) ಕ್ರಯವಿಕ್ರಯಗಳ ವಿಷಯದಲ್ಲಿ (ಸರಿಯಾಗಿ ನಡೆದಿಲ್ಲವೆಂದು ತಿಳಿದು) ಉಂಟಾಗುವ ಪಶ್ಚಾತ್ತಾಪ, (9) ಯಜಮಾನ ಮತ್ತು ಸೇವಕರ ಜಗಳ, (10) ಜಮೀನು ಗ್ರಾಮ ವಗೈರೆ ಗಡಿ ವಿವಾದ, (11) ಕಠಿನವಾದ ಮಾತು ಮತ್ತು ಏಟುಗಳಿಂದ ಕ್ರೂರವಾಗಿ ವ್ಯವಹರಿಸುವಿಕೆ, (12) ಕಳ್ಳತನ, (13) ಬಲಾತ್ಕಾರದಿಂದ ಮಾಡುವ ದರೋಡೆ, (14) ಸ್ತ್ರೀಯರ ಪರಪುರುಷ ಸಂಬಂಧ, (15) ಸ್ತ್ರೀ ಪುರುಷರ ಧರ್ಮ ವ್ಯವಸ್ಥೆ, (16) ಪಾಲುಗಾರಿಕೆ, (17) ದ್ಯೂತ (ಪಗಡೆಯಾಟ ಮೊದಲಾದ ಜೂಜು), ಮತ್ತು (18) ಆಹ್ವಯ (ಕೋಳಿ ಟಗರು ಮುಂತಾದುವುಗಳ ಕಾಳಗ). ಇವು ಹದಿನೆಂಟು ವಿಧ ವ್ಯವಹಾರಸ್ಥಾನಗಳು. "तेषामाद्यमृणादानं निक्षेपोऽस्वामिविक्रयः। संभूय च समुत्थानं दत्तस्यानपकर्म च। वेतनस्यैव चादानं संविदश्च व्यतिक्रमः। क्रयविक्रयानुशयो विवादः स्वामिपालयोः। सीमाविवादधर्मश्च पारुष्ये दण्डवाचिके। स्तेयं च साहसं चैव स्त्रीसंग्रहणमेव च। स्त्रीपुंधर्मौ विभागश्च द्यूतमाह्वय एव च। पदान्यष्टादशैतानि व्यवहारस्थिताविह" मनु० ८-४, ५, ६, ७।

**अष्टादशस्मृतिकारिन् ಅಷ್ಟಾದಶಸ್ಮೃತಿಕಾರಿನ್** (ಪುಂ೦ಬಂ೦ವಂ೦) ಹದಿನೆಂಟು ಸ್ಮೃತಿಗಳನ್ನು ಬರೆದ ಮಹರ್ಷಿಗಳು; (1) ವಿಷ್ಣು, (2) ಪರಾಶರ, (3) ದಕ್ಷ, (4) ಸಂವರ್ತ, (5) ವ್ಯಾಸ, (6) ಹಾರೀತ, (7) ಶಾತಾತಪ, (8) ವಸಿಷ್ಠ, (9) ಯಮ, (10) ಆಪಸ್ತಂಬ, (11) ಗೌತಮ, (12) ದೇವಲ, (13) ಶಂಖಲಿಖಿತ, (14) ಭರದ್ವಾಜ, (15) ಉಶನಸ್ಸು, (16) ಅತ್ರಿ, (17) ಶೌನಕ ಮತ್ತು (18) ಯಾಜ್ಞವಲ್ಕ್ಯ. ಇವರು ಅಷ್ಟಾದಶ ಸ್ಮೃತಿಕಾರರು. "विष्णुः पराशरो दक्षः संवर्तव्यासहारिताः। शातातपो वसिष्ठश्च यमापस्तम्बगौतमाः। देवलः शङ्खलिखितौ भरद्वाजोशनोऽत्रयः। शौनको याज्ञवल्क्यश्च दशाष्टौ स्मृतिकारिणः" हेमाद्रि०।

**अष्टादशोपचार ಅಷ್ಟಾದಶೋಪಚಾರ** (ಪುಂ೦ಬಂ೦ವಂ೦) ಪೂಜಾ ಸಂಬಂಧವಾದ ಹದಿನೆಂಟು ಉಪಚಾರಗಳು; (1) ಆಸನ, (2) ಸ್ವಾಗತ, (3) ಪಾದ್ಯ, (4) ಅರ್ಘ್ಯ, (5) ಆಚಮನೀಯ, (6) ಸ್ನಾನ, (7) ವಸ್ತ್ರ, (8) ಉಪವೀತ, (9) ಗಂಧ, (10) ಪುಷ್ಪ, (11) ಆಭರಣ, (12) ಧೂಪ, (13) ದೀಪ, (14) ಭೋಜ್ಯ (ನೈವೇದ್ಯ), (15) ತರ್ಪಣ, (16) ಮಾಲ್ಯಾನುಲೇಪನ; (17) ನಮಸ್ಕಾರ ಮತ್ತು (18) ವಿಸರ್ಜನ. ಇವು ಹದಿನೆಂಟು ವಿಧ ಪೂಜೋಪಚಾರಗಳು. तन्त्रसा०।

**अष्टादिशाब्दिक ಅಷ್ಟಾದಿಶಾಬ್ದಿಕ**(ಪುಂ೦) ಎಂಟು ಮಂದಿ ವ್ಯಾಕರಣಶಾಸ್ತ್ರ ಪ್ರವರ್ತಕರು; (1) ಇಂದ್ರ, (2) ಚಂದ್ರ, (3) ಕಾಶಕೃತ್ಸ್ನ, (4) ಆಪಿಶಲಿ, (5) ಶಾಕಟಾಯನ, (6) ಪಾಣಿನಿ, (7) ಅಮರ ಮತ್ತು (8) ಜೈನೇಂದ್ರ. ಇವರು ಎಂಟು ಮಂದಿ ಆದಿಶಾಬ್ದಿಕರು. "इन्द्रश्चन्द्रः काशकृत्स्नापिशलिः शाकटायनः। पाणिन्यमरजैनेन्द्राः जयन्त्यष्टादिशाब्दिकाः"।

**अष्टापद ಅಷ್ಟಾಪದ** (ಪುಂನಂ೦) 1. ಸ್ವರ್ಣ, ಚಿನ್ನ. अष्टसु लोहेषु पदं प्रतिष्ठाऽस्य। "अचेष्टताष्टापदभूमिरेणुः पादाहतो यत्सदृशं गरिम्णः" माघ० ३-२८। 2. ಪಗಡೆಯ ಹಾಸು. अष्टौ अष्टौ पदानि पङ्क्तावस्य। (ಪುಂ೦)3. ಶರಭ ಮೃಗ. 4. ಮರ್ಕಟ, ಕಪಿ. 5. ಜೇಡರ ಹುಳು. (ಸ್ತ್ರೀ೦) –पदी –ಪದೀ. 6. ಕಾಡುಮಲ್ಲಿಗೆ. "अष्टापदोऽस्त्री कनके शाराणां फलकेऽपि च। अष्टापदी चन्द्रमल्यां शरभे मर्कटे पुमान्" मेदि०।

**अष्टाविंश** ಅಷ್ಟಾವಿಂಶ (वि०) ಇಪ್ಪತ್ತೆಂಟನೆಯ. अष्टाविंशति "डट्" (५-२-४८)। स्त्रियाम् "ङीप्" (४-१-१५)।

**अष्टाविंशति** ಅಷ್ಟಾವಿಂಶತಿ (स्त्री०) ಇಪ್ಪತ್ತೆಂಟು. अष्टाधिका विंशतिः "आत्" (६-३-४७)।

**अष्टाविंशतितम** ಅಷ್ಟಾವಿಂಶತಿತಮ (वि०) ಇಪ್ಪತ್ತೆಂಟನೆಯ. अष्टाविंशति "डट्" (५-२-४८)। "तमट्" (५-२-५६)।

**अष्टावक्र** ಅಷ್ಟಾವಕ್ರ (पु०) ಕಹೋಡಋಷಿಯ ಮಗ. अष्टसु भागेषु वक्रः। पृषो० दीर्घः। [ಉದ್ದಾಲಕನೆಂಬ ಮುನಿಯು ತನ್ನ ಶಿಷ್ಯನಾದ ಕಹೋಡನು ತನಗೆ ಮಾಡಿದ ಶುಶ್ರೂಷೆಗೆ ಮೆಚ್ಚಿ, ವಿದ್ಯೆಯನ್ನು ಕಲಿಸಿ ತನ್ನ ಮಗಳನ್ನೂ ಕೊಟ್ಟು ಮದುವೆ ಮಾಡಿದನು. ಆಕೆಯು ಗರ್ಭಿಣಿಯಾಗಿರಲು ಉದರದಲ್ಲಿ ಶಿಶುವು ಬೆಳೆಯುತ್ತ, ತಂದೆಯು ಅನವರತವೂ ಮಾಡುತ್ತಿದ್ದ ವೇದಾಧ್ಯಯನದಿಂದ ತಾನೂ ಉದರದಲ್ಲಿದ್ದಾಗಲೇ ವೇದವನ್ನು ಕಲಿತುಕೊಂಡಿತು. ಅಹೋರಾತ್ರವೂ ವೇದಾಧ್ಯಯನ ಮಾಡುತ್ತ ಪತ್ನಿಯನ್ನು ಉದಾಸೀನನಾಗಿ ಕಾಣುತ್ತಿದ್ದ ತನ್ನ ತಂದೆಯು ಒಂದು ದಿನ ಶಿಷ್ಯರೊಡನೆ ಕುಳಿತಿದ್ದಾಗ ಶಿಶುವು ಆತನನ್ನು ಕುರಿತು, "ತಂದೆಯೆ, ನಿನ್ನ ಅನುಗ್ರಹದಿಂದ ನಾನು ಗರ್ಭದಲ್ಲೇ ಸಾಂಗವೇದಾಧ್ಯಯನ ಮಾಡಿದೆನು. ನೀನು ಈ ರೀತಿ ರಾತ್ರಿಕಾಲದಲ್ಲಿಯೂ ವೇದಾಧ್ಯಯನ ಮಾಡುತ್ತ ನಮ್ಮ ತಾಯಿಯ ವಿಷಯದಲ್ಲಿ ಉದಾಸೀನನಾಗಿರುವುದು ಯುಕ್ತವಲ್ಲ"ವೆಂದು ನಿಂದಿಸಲು, ತಂದೆಯು ಕೋಪದಿಂದ "ನೀನು ಅಷ್ಟಾವಕ್ರನಾಗು" ಎಂದು ಶಪಿಸಿದನು. ಶಿಶುವು ದೇಹದ ಎಂಟು ಭಾಗಗಳಲ್ಲಿ ವಕ್ರವಾಗಿ ಜನಿಸಿ ಮುಂದೆ "ಅಷ್ಟಾವಕ್ರಮಹರ್ಷಿ"ಯೆಂದು ಪ್ರಸಿದ್ಧಿ ಪಡೆಯಿತು.] "उपालब्धः शिष्यमध्ये महर्षिः स तं कोपादुदरस्थं शशाप। यस्मात् कुक्षौ वर्तमानो ब्रवीषि तस्माद्वक्रो भवितास्यष्टकृत्वः" भा० वन० १३४-११।

**अष्टि** ಅಷ್ಟಿ (स्त्री०) 1. ಬೀಜ, ಕಾಳು. अस्यते भूमौ क्षिप्यते — असु (क्षेपणे) "क्तिन्" (३-३-९४)। पृषो०। 2. ವ್ಯಾಪ್ತಿ, ಹರಡುವಿಕೆ, ಹಬ್ಬುವಿಕೆ. अक्ष (व्याप्तौ) "क्तिन्"। 3. ಸುಖಸಾಧನವಾದ ದೇಹ, ಶರೀರ. 4. ಹದಿನಾರನೆಯ ಛಂದಸ್ಸು. 5. ಹದಿನಾರು ಸಂಖ್ಯೆ. 6. ಪಗಡೆಯ ದಾಳ.

**अष्ठीवत्** ಅಷ್ಠೀವತ್ (पु०) ಮಂಡಿ, ತೊಡೆ ಮತ್ತು ಮೊಣಕಾಲುಗಳ ಸಂದು. अतिशयितमस्थि यस्मिन् "मतुप्" अष्ठीभावश्च निपा० (८-२-१२)। "जानूरुपर्वाष्ठीवदस्त्रियाम्" अम०।

**अस – भुवि** (अदा० पर० अक० से०)।

| | | | |
|---|---|---|---|
| लट्— | अस्ति | स्तः | सन्ति। |
| | असि | स्थः | स्थ। |
| | अस्मि | स्वः | स्मः। |
| लिट्— | बभूव | बभूवतुः | बभूवुः। |
| | बभूविथ | बभूवथुः | बभूव। |
| | बभूव | बभूविव | बभूविम। |
| लुट्— | भविता | भवितारौ | भवितारः। |
| | भवितासि | भवितास्थः | भवितास्थ। |
| | भवितास्मि | भवितास्वः | भवितास्मः। |
| लृट्— | भविष्यति | भविष्यतः | भविष्यन्ति। |
| | भविष्यसि | भविष्यथः | भविष्यथ। |
| | भविष्यामि | भविष्यावः | भविष्यामः। |
| लोट्— | अस्तु | स्ताम् | सन्तु। |
| | स्तात् | | |
| | एधि | स्तम् | स्त। |
| | स्तात् | | |
| | असानि | असाव | असाम। |
| लङ्— | आसीत् | आस्ताम् | आसन्। |
| | आसीः | आस्तम् | आस्त। |
| | आसम् | आस्व | आस्म। |
| विधिलिङ्— | स्यात् | स्याताम् | स्युः। |
| | स्याः | स्यातम् | स्यात। |
| | स्याम् | स्याव | स्याम। |
| आशीर्लिङ्— | भूयात् | भूयास्ताम् | भूयासुः। |
| | भूयाः | भूयास्तम् | भूयास्त। |
| | भूयासम् | भूयास्व | भूयास्म। |
| लुङ्— | अभूत् | अभूताम् | अभूवन्। |
| | अभूः | अभूतम् | अभूत। |
| | अभूवम् | अभूव | अभूम। |
| लृङ्— | अभविष्यत् | अभविष्यताम् | अभविष्यन्। |
| | अभविष्यः | अभविष्यतम् | अभविष्यत। |
| | अभविष्यम् | अभविष्याव | अभविष्याम। |

**भावे** :—भूयते। बभूवे। भविता। भविष्यते। भूयताम्। अभूयत। भूयेत। भविषीष्ट। अभावि। अभविष्यत।

ण्यन्तात् –

लट्–पर० भावयति भावयतः भावयन्ति।
भावयसि भावयथः भावयथ।
भावयामि भावयावः भावयामः।
आत्म० भावयते भावयेते भावयन्ते।
भावयसे भावयेथे भावयध्वे।
भावये भावयावहे भावयामहे।

लिट्–पर० भावयाञ्चकार भावयाञ्चक्रतुः भावयाञ्चक्रुः।
भावयाञ्चकर्थ भावयाञ्चक्रथुः भावयाञ्चक्र।
भावयाञ्चकार / भावयाञ्चकर भावयाञ्चकृव भावयाञ्चकृम।
भावयांबभूव भावयांबभूवतुः भावयांबभूवुः।
भावयामास भावयामासतुः भावयामासुः।
आत्म० भावयांचक्रे भावयाञ्चक्राते भावयाञ्चक्रिरे।
भावयाञ्चकृषे भावयाञ्चक्राथे भावयाञ्चकृढ्वे।
भावयाञ्चक्रे भावयाञ्चकृवहे भावयाञ्चकृमहे।
भावयांबभूव। भावयामास।

लुट्–पर० भावयिता भावयितारौ भावयितारः।
भावयितासि भावयितास्थः भावयितास्थ।
भावयितास्मि भावयितास्वः भावयितास्मः।
आत्म० भावयितासे।
भावयिताहे इति विशेषः।

लृट्–पर० भावयिष्यति भावयिष्यतः भावयिष्यन्ति।
भावयिष्यसि भावयिष्यथः भावयिष्यथ।
भावयिष्यामि भावयिष्यावः भावयिष्यामः।
आत्म० भावयिष्यते भावयिष्येते भावयिष्यन्ते।
भावयिष्यसे भावयिष्येथे भावयिष्यध्वे।
भावयिष्ये भावयिष्यावहे भावयिष्यामहे।

लोट्–पर० भावयतु / भावयतात् भावयतां भावयन्तु।
आत्म० भावयताम् भावयेताम् भावयन्ताम्।
भावयस्व भावयेथाम् भावयध्वम्।
भावयै भावयावहै भावयामहै।

लङ्–पर० अभावयत् अभावयताम् अभावयन्।
अभावयः अभावयतम् अभावयत।
अभावयम् अभावयाव अभावयाम।
आत्म० अभावयत अभावयेताम् अभावयन्त।
अभावयथाः अभावयेथाम् अभावयध्वम्।
अभावये अभावयावहि अभावयामहि।

विधिलिङ्–पर०
भावयेत् भावयेताम् भावयेयुः।
आत्म० भावयेत भावयेयाताम् भावयेरन्।

अशीर्लिङ्–पर०
भाव्यात् भाव्यास्ताम् भाव्यासुः।
भाव्याः भाव्यास्तम् भाव्यास्त।
भाव्यासम् भाव्यास्व भाव्यास्म।
आत्म० भावयिषीष्ट भावयिषीयास्ताम् भावयिषीरन्।
भावयिषीष्ठाः भावयिषीयास्ताम् भावयिषीध्वम्
भावयिषीय भावयिषीवहि भावयिषीमहि।

लुङ्–पर० अबीभवत् अबीभवताम् अबीभवन्।
अबीभवः अबीभवतम् अबीभवत।
अबीभवम् अबीभवाव अबीभवाम।
आत्म० अबीभवत अबीभवेताम् अबीभवन्त।
अबीभवथाः अबीभवेथाम् अबीभवध्वम्।
अबीभवे अबीभवावहि अबीभवामहि।

लृङ्–पर० अभावयिष्यत् अभावयिष्यताम् अभावयिष्यन्।
आत्म० अभावयिष्यत अभावयिष्येताम् अभावयिष्यन्त।

**ण्यन्तात् कर्मणि**:–१. भाव्यते भाव्येते भाव्यन्ते। २. भावयाञ्चक्रे, भावयाम्बभूवे, भावयामासे। ३. भावयिता, भाविता। ४. भावयिष्यते, भाविष्यते। ५. भाव्यताम्। ६. अभाव्यत। ७. भाव्येत। ८. भावयिषीष्ट, भाविषीष्ट। ९. अभावि, अभाविष्ठाः, अभावयिष्ठाः। अभाविषि, अभावयिषि। १०. अभाविष्यत, अभाविष्येताम्, अभाविष्यन्त। अभावयिष्यत, अभावयिष्येताम्, अभावयिष्यन्त।

**केवलात् कृत्सु**:–तव्यः–भवितव्यम्। अनीयर्–भवनीयम्। यत्–भव्यम्। भावे क्तः–भूतम्। क्तवतुः–भूतवान्। शतृ–सन् सन्तौ सन्तः, सती। ल्युट्–भवनम्। तुमुन्–भवितुम्। क्त्वा–भूत्वा। ल्यप्–संभूय। णमुल्–भावं भावम्। भूत्वाभूत्वा।

**ण्यन्तात् कृत्सु**:–भावयितव्यः। भावनीयः। भाव्यः। भावितः। भावितवान्। भावयन्, भावयन्ती। शानच्–भावयमानः। भावयिष्यन्, भावयिष्यती, भावयिष्यन्ती। शानच्–भावयिष्यमाणः। भावयितुम्। भावितम्। भावनम्। भावयित्वा। परिभाव्य। भावंभावम्। भावयित्वाभावयित्वा।

**असंयत** ಅಸಂಯತ (वि०) 1. ಬಂಧಿಸಲ್ಪಡದ, ಕಟ್ಟಲ್ಪಡದ. न संयतः। 2. ಹತೋಟಿಯಲ್ಲಿಡಲ್ಪಡದ. "असंयतात्मना योगो दुष्प्राप इति मे मतिः" गीता ६-३६।

**असंपृक्त** ಅಸಂಯುಕ್ತ (वि०) ಒಟ್ಟಿಗೆ ಸೇರಿಕೊಂಡಿರದ, ಬೇರೆ ಬೇರೆಯಾಗಿರುವ. न संयुक्तः।

**असंयुत** ಅಸಂಯುತ (वि०) ಬೆರಸಲ್ಪಡದ, ಮಿಶ್ರ ಮಾಡಲ್ಪಡದ. अ+सम्+यु (मिश्रणेऽमिश्रणे च) "क्तः" (३-२-१०२)।

**असंलग्न** ಅಸಂಲಗ್ನ (वि०) ಒಟ್ಟಿಗೆ ಸೇರಿಕೊಂಡಿರದ, ಬೇರೆ ಬೇರೆಯಾಗಿರುವ. न संलग्नः।

**असंवृत** ಅಸಂವೃತ (न०) 1. ಒಂದು ನರಕ. "योऽह्यस्य धर्ममाचष्टे यश्चैवादिशति व्रतम्। सोऽसंवृतं नाम तमः सह तेनैव गच्छति" मनु० ४-८१। (वि०)2. ಮುಚ್ಚಲ್ಪಡದ, ತೆರೆದಿರುವ. न संवृतः। "नासंवृतमुखः कुर्यात् क्षुतं जृम्भां तथैव च"।

**असंशय** ಅಸಂಶಯ (पु०) 1. ಸಂದೇಹವಿಲ್ಲದಿರುವಿಕೆ. न० त०। (वि०) 2. ಸಂದೇಹವಿಲ್ಲದ. (क्रि० वि०) 3. ಸಂದೇಹವಿಲ್ಲದೆ. "असंशयं महाबाहो मनो दुर्निग्रहं चलम्। अभ्यासेन तु कौन्तेय वैराग्येण च गृह्यते" गीता ६-३५। "असंशयं क्षत्रपरिग्रहक्षमा" शाकु० १-२२।

**असंश्लिष्ट** ಅಸಂಶ್ಲಿಷ್ಟ (वि०) ಸೇರಿಕೊಂಡಿಲ್ಲದ, ಬೇರೆ ಬೇರೆಯಾಗಿರುವ. न संश्लिष्टः।

**असंसृष्ट** ಅಸಂಸೃಷ್ಟ (वि०) 1. ಸಂಬಂಧವಿಲ್ಲದ, ಸೇರಿಕೊಂಡಿಲ್ಲದ, ಬೆರತಿರದ. न संसृष्टः। 2. ಆಸ್ತಿಯ ವಿಭಾಗವಾದ ನಂತರ ಮತ್ತೆ ಒಂದೇ ಕುಟುಂಬದಲ್ಲಿ ಸೇರಿಕೊಂಡಿರದ, ಬೇರೆ ಬೇರೆಯಾಗಿರುವ.

**असंस्कृत** ಅಸಂಸ್ಕೃತ (पु०) 1. ವ್ಯಾಕರಣ ಸಂಸ್ಕಾರವಿಲ್ಲದ ಅಪಶಬ್ದ. (वि०) 2. ಸಂಸ್ಕಾರ ಮಾಡಲ್ಪಡದ, ಪರಿಷ್ಕರಿಸಲ್ಪಡದ. 3. ಗರ್ಭಾಧಾನ ಮೊದಲಾದ ಸಂಸ್ಕಾರವಿಲ್ಲದ. 4. ಬೇರೆ ಗುಣ ಹೊಂದಿಸಲ್ಪಡದ.

**असंस्तुत** ಅಸಂಸ್ತುತ (वि०) 1. ಪರಿಚಯವಿಲ್ಲದ, ಹೊಸದಾದ. न संस्तुतः। "प्रसह्य चेतःसु समासजन्तमसंस्तुतानामपि भावमार्द्रम्" किरा० ३-२। 2. ಚೆನ್ನಾಗಿ ಸ್ತುತಿಸಲ್ಪಡದ.

**असकृत्** ಅಸಕೃತ್ (अव्य०) ಪುನಃ ಪುನಃ, ಮತ್ತೆ ಮತ್ತೆ, ಅನೇಕಾವೃತ್ತಿ. न सकृत्। "असकृद्गृहीतबहुदेहसंभवस्तपसो विभक्तनवगोपुरान्तरम्" माघ० १३-२८।

**असक्त** ಅಸಕ್ತ (वि०) 1. ಆಸಕ್ತಿಯಿಲ್ಲದ, ಆಸೆಯಿಲ್ಲದ, ನಿಃಸ್ಪೃಹನಾದ. न सक्तः। "जुगोपात्मानमत्रस्तो भेजे धर्ममनातुरः" रघु० १-२१। 2. ಸಂಬಂಧವಿಲ್ಲದ, ಸೇರಿಕೊಂಡಿಲ್ಲದ, ಅಂಟಿಕೊಂಡಿರದ. "आसीद्विवृत्तवदना च विमोचयन्ती शाखासु वल्कलमसक्तमपि द्रुमाणाम्" शाकु० २-१२। 3. ವ್ಯಸನಿಯಲ್ಲದ, ತತ್ಪರನಲ್ಲದ, ಫಲಾಭಿಲಾಷಿಯಲ್ಲದ. (क्रि० वि०) 4. ವ್ಯಸನಿಯಲ್ಲದೆ, ನಿಮಗ್ನನಾಗದೆ, ಫಲಾಭಿಲಾಷೆಯಿಲ್ಲದೆ. "असक्तमाराधयतो यथायथं विभज्य भक्त्या समपक्षपातया" किरा० १-११। 5. ಪ್ರತಿಬಂಧಕವಿಲ್ಲದೆ, ಅಡ್ಡಿಯಿಲ್ಲದೆ, ತಡೆಯಿಲ್ಲದೆ. "असक्तमूधांसि पयः क्षरन्त्यमूरुपायनानीव नयन्ति धेनवः" किरा० ४-३१।

**असङ्कुस** ಅಸಂಕುಸ (वि०) ಸ್ಥಿರಬುದ್ಧಿಯುಳ್ಳ. संकसति— कस (गतौ) "उकन्" (उ० २-२९)। न० त०।

**असङ्ख्य** ಅಸಂಖ್ಯ (वि०) ಎಣಿಸಲಾಗದ, ಲೆಕ್ಕವಿಲ್ಲದ, ಎಣಿಕೆಯಿಲ್ಲದ. नास्ति सङ्ख्या यस्य। "असङ्ख्यैरद्भुतैस्तुङ्गैः कम्प्ये राक्षसपर्वतैः" याद० १-३९।

**असङ्ख्यात** ಅಸಂಖ್ಯಾತ (वि०) ಲೆಕ್ಕವಿಲ್ಲದ, ಎಣಿಕೆಯಿಲ್ಲದ, ಹೇರಳವಾದ. न सङ्ख्यातः। "असङ्ख्याता-स्त्रौघद्रविणमदमत्तस्य च रिपोः" वेणी० ३-२२।

**असङ्ख्येय** ಅಸಂಖ್ಯೇಯ (पु०)1. ವಿಷ್ಣು. न सङ्ख्यातुं शक्यः। [ಎಣಿಸಲು ಅಶಕ್ಯವಾದ ಮಹಿಮಾತಿಶಯವುಳ್ಳವನು.] "असङ्ख्येयोऽप्रमेयात्मा" वि० स०। (वि०)2. ಎಣಿಸಲಾಗದ, ಲೆಕ್ಕವಿಲ್ಲದ. 3. ಸಾಮಾನ್ಯ ಜನರಿಂದ ತಿಳಿಯಲಾಗದ.

**असङ्ग** ಅಸಂಗ (पु०) 1. ಸಂಬಂಧವಿಲ್ಲದಿರುವಿಕೆ. न० त०। "अहिंसयेन्द्रियासङ्गैर्वैदिकैश्चैव कर्मभिः" मनु० ६-७५। 2. (ಸಾಂಖ್ಯಮತದಲ್ಲಿ) ಪುರುಷ. (वि०)3. ಸಂಬಂಧವಿಲ್ಲದ. 4. ಅಡ್ಡಿಯಿಲ್ಲದ, ಪ್ರತಿಬಂಧಕವಿಲ್ಲದ, ತಡೆಯಿಲ್ಲದ. "असङ्गमद्रिष्वपि सारवत्तया न मे त्वदन्येन विसोढमायुधम्" रघु० ३-६३।

**असङ्गत** ಅಸಂಗತ (वि०) 1. ಅಯುಕ್ತವಾದ, ಅಸಭ್ಯವಾದ, ಅಕ್ರಮವಾದ. 2. ವಿರುದ್ಧವಾದ, ಹೊಂದಿಕೆಯಿಲ್ಲದ. 3. ಸಂಬಂಧವಿಲ್ಲದ, ಪ್ರಸಂಗ ಮೊದಲಾದ ಆರು ವಿಧವಾದ ಸಂಗತಿಯಿಲ್ಲದ.

**असङ्गति** ಅಸಂಗತಿ (स्त्री०) 1. ಅಸಂಬದ್ಧತೆ, ಅಬದ್ಧ. 2. ಸಂಬಂಧವಿಲ್ಲದಿರುವಿಕೆ. 3. ಅಸಂಗತಿಯೆಂಬ ಒಂದು ಅರ್ಥಾಲಂಕಾರ; ಕಾರ್ಯಕಾರಣಗಳಿಗೆ ವಿರುದ್ಧವಾದ ಬೇರೆ ಬೇರೆ ಸ್ಥಳಗಳ ವರ್ಣನೆಯು "असङ्गति" ಅಲಂಕಾರವು. "विरुद्धं भिन्नदेशत्वं कार्यहेत्वोरसङ्गतिः। विषं जलधरैः पीतं मूर्च्छिताः पथिकाङ्गनाः" चन्द्रा०।

**असत्** ಅಸತ್ (ಪು०) 1. ಇಂದ್ರ. (ನ०) 2. ಅಸತ್ತು, ಅಭಾವ, ಅವ್ಯಕ್ತತೆ. 3. ಅಸತ್ಯ, ಸುಳ್ಳು. (ವಿ०) 4. ದೇಶಕಾಲಗಳ ಸಂಬಂಧವಿಲ್ಲದ. शशशृङ्गम् गगनारविन्दम् ಇತ್ಯಾದಿ. 5. ಕಾರ್ಯರೂಪಕ್ಕೆ ಬರದೆ ಅವ್ಯಾಕೃತವಾದ. "असद्वा इदमग्र आसीत्" ತೈ० ಉ०। 6. ಈಗ ಇಲ್ಲದ, ಅತೀತವಾದ, ಅನಾಗತವಾದ. "तपाम्यहमहं वर्षं निगृह्णाम्युत्सृजामि च। अमृतं चैव मृत्युश्च सदसच्चाहमर्जुन" गीता ९-१९। 7. ಒಳ್ಳೆಯದಲ್ಲದ, ಕೆಟ್ಟದಾದ. "तं सन्तः श्रोतुमर्हन्ति सदसद्व्यक्तिहेतवः" रघु० १-१०। 8. ಕೆಟ್ಟನಡತೆಯುಳ್ಳ, ದುರಾಚಾರವುಳ್ಳ. 9. ಶ್ರದ್ಧೆಯಿಲ್ಲದೆ ಮಾಡುವ (ಕಾರ್ಯ). "अश्रद्धया हुतं दत्तं तपस्तप्तं कृतं च यत्। असदित्युच्यते पार्थ न च तत्प्रेत्य नो इह" गीता १७-२८। 10. ಇಲ್ಲದ, ಸುಳ್ಳಾದ, ನಿಜವಲ್ಲದ. "आत्मनो ब्रह्मणो भेदमसन्तं कः करिष्यति" संक्षेपशारीरकम्। (स्त्री०) –ती –ತೀ. ಸ್ವೈರಿಣಿ, ಕುಲಟೆ, ಜಾರಸ್ತ್ರೀ, ವ್ಯಭಿಚಾರಿಣಿ.

**असत्ता** ಅಸತ್ತಾ (स्त्री०) 1. ಅಸತ್ಯ, ಮಿಥ್ಯೆ, ಸುಳ್ಳು. 2. ಕೆಟ್ಟತನ, ದುರುಳತನ. 3. ಅಸತ್ತು, ಅಭಾವ, ಅವ್ಯಕ್ತತೆ. असतो भावः "तल्" (५-१-११९)।

**असत्त्व** ಅಸತ್ತ್ವ (ನ०) 1. ಅಸತ್ಯ, ಮಿಥ್ಯೆ, ಸುಳ್ಳು. 2. ಕೆಟ್ಟತನ, ದುರುಳತನ. 3. ಅವ್ಯಕ್ತತೆ, ಕಾರಣಾವಸ್ಥೆ, ಅಭಾವ. 4. ರಜೋಗುಣ. 5. ತಮೋಗುಣ. (ವಿ०)6. ಬಲವಿಲ್ಲದ, ಶಕ್ತಿಯಿಲ್ಲದ. नास्ति सत्त्वं बलं यस्य। 7. ಸತ್ತ್ವಗುಣವಿಲ್ಲದ. न सत्त्वं सत्त्वगुणो यस्य। 8. ಪ್ರಾಣಿಗಳಿಲ್ಲದ. नास्ति सत्त्वानि प्राणिनो यत्र।

**असत्य** ಅಸತ್ಯ (ನ०) 1. ಮಿಥ್ಯೆ, ಸುಳ್ಳು. (ವಿ०) 2. ಸುಳ್ಳಾದ. 3. ಕಾಲ್ಪನಿಕ, ನಿಜವಲ್ಲದ. "असत्यकण्ठार्पितबाहुबन्धना" कुमा० ५-५७।

**असदागम** ಅಸದಾಗಮ (ಪು०)1. ಅಸಚ್ಛಾಸ್ತ್ರ, ನಾಸ್ತಿಕಮತ, ವೇದವನ್ನು ನಂಬದ ಮತ. असंश्चासावागमश्च। 2. ಅನ್ಯಾಯವಾದ ದ್ರವ್ಯಸಂಪಾದನೆ. 3. ಅಕ್ರಮವಾದ ವಸ್ತುಪ್ರಾಪ್ತಿ. असत आगमः।

**असदाचार** ಅಸದಾಚಾರ (ಪು०) 1. ಕೆಟ್ಟನಡತೆ. असंश्चासावाचारश्च। (ವಿ०) 2. ಕೆಟ್ಟನಡತೆಯುಳ್ಳ. असन् आचारो यस्य।

**असदृश** ಅಸದೃಶ (ವಿ०)1. ಅಸಮಾನ, ಸರ್ವೋತ್ಕೃಷ್ಟವಾದ. 2. ಅನನುರೂಪವಾದ, ಹೊಂದಿಕೆಯಿಲ್ಲದ. 3. ಅಯೋಗ್ಯವಾದ, ಅಕ್ರಮವಾದ.

**असद्ग्रह** ಅಸದ್ಗ್ರಹ (ಪು०) 1. ಭ್ರಾಂತಿಜ್ಞಾನ, ಮಿಥ್ಯಾಜ್ಞಾನ. 2. ಮಕ್ಕಳ ಮೊಂಡುತನ, ಇಲ್ಲದಿರುವುದನ್ನು ಕೇಳುವ ಹಟ. असति अविद्यमाने मिथ्याभूते वस्तुनि ग्रहः आग्रहः।

**असद्धेतु** ಅಸದ್ಧೇತು (ಪು०) ದೋಷದಿಂದ ಕೂಡಿದ ಕಾರಣ. "धूमवान् वह्नेः" ಎಂಬಲ್ಲಿ ವಹ್ನಿಯು ಧೂಮಸಾಧನವಾಗಿ (ಹೇತುವಾಗಿ) ಹೇಳಲ್ಪಟ್ಟಿದೆ. ಕಾಯಿಸಿದ ಕಬ್ಬಿಣದ ತುಂಡಿನಲ್ಲಿ ಹೊಗೆ (ಧೂಮ) ಯಿಲ್ಲದೆ ಅಗ್ನಿಯಿರುವುದರಿಂದ ಈ ಕಾರಣವು ವ್ಯಭಿಚರಿತವಾಗಿದೆ. (ದೋಷದಿಂದ ಕೂಡಿದೆ.)

**असद्भाव** ಅಸದ್ಭಾವ (ಪು०) 1. ವಿರುದ್ಧಾಭಿಪ್ರಾಯ. 2. ಅಭಾವ, ಇಲ್ಲದಿರುವುದು.

**असद्वृत्ति** ಅಸದ್ವೃತ್ತಿ (स्त्री०) 1. ದುರಾಚಾರ, ಕೆಟ್ಟನಡವಳಿಕೆ. असती वृत्तिः। (ವಿ०) 2. ದುರಾಚಾರವುಳ್ಳ, ಕೆಟ್ಟನಡತೆಯುಳ್ಳ. असती वृत्तिः यस्य।

**असद्व्यवहार** ಅಸದ್ವ್ಯವಹಾರ (ಪು०) 1. ಕೆಟ್ಟ ಅಭ್ಯಾಸ, ಕೆಟ್ಟ ಚಾಳಿ, ಕೆಟ್ಟ ನಡವಳಿಕೆ. 2. ಕೆಟ್ಟನಡತೆಯುಳ್ಳವರೊಡನೆ ವ್ಯವಹಾರ. (ವಿ०) 3. ಕೆಟ್ಟನಡತೆಯುಳ್ಳ.

**असन** ಅಸನ (ಪು०) 1. ಹೊನ್ನೆ ಮರ. अस्यति रुजम् – असु (क्षेपणे) "ल्युः" (३-१-१३४)। (ನ०) 2. ಎಸೆಯುವುದು, ಬಿಸಾಡುವುದು. असु "ल्युट्" (३-३-११५)।

**असन्तुष्ट** ಅಸಂತುಷ್ಟ (ವಿ०) ಸಂತೋಷಹೊಂದದ, ತೃಪ್ತಿಪಡದ. ನ० ತ०। "असन्तुष्टो द्विजो नष्टः सन्तुष्टश्च महीपतिः"।

**असन्तोष** ಅಸಂತೋಷ (ಪು०) 1. ಅತೃಪ್ತಿ, ಸಂತೋಷವಿಲ್ಲದಿರುವಿಕೆ. ನ० ತ०। (ವಿ०)2. ಸಂತೋಷವಿಲ್ಲದ, ತೃಪ್ತಿಯಿಲ್ಲದ. न सन्तोषो यस्य।

**असन्नद्ध** ಅಸನ್ನದ್ಧ (ವಿ०) 1. ಕೊಬ್ಬಿದ, ಗರ್ವಗೊಂಡ, ಸ್ವಾಭಿಮಾನವುಳ್ಳ, ಅಹಂಕಾರವುಳ್ಳ, ತಾನೇ ಸರ್ವಜ್ಞನೆಂದು ತಿಳಿದಿರುವ. 2. ಕವಚ ತೊಟ್ಟು ಯುದ್ಧಕ್ಕೆ ಸಿದ್ಧನಾಗಿಲ್ಲದ. न सन्नद्धः।

**असन्निकर्ष** ಅಸನ್ನಿಕರ್ಷ (ಪು०) 1. ದೂರ, ಸಮೀಪಸಂಬಂಧವಿಲ್ಲದಿರುವಿಕೆ. (ವಿ०) 2. ದೂರದಲ್ಲಿರುವ, ಸಮೀಪಸಂಬಂಧವಿಲ್ಲದ. 3. ವಿಷಯಪ್ರತ್ಯಕ್ಷಕ್ಕೆ ಬೇಕಾದ ಸಂಯೋಗ ಮೊದಲಾದ ಆರು ವಿಧ ಸಂಬಂಧವಿಲ್ಲದ.

**असन्निकृष्ट** ಅಸನ್ನಿಕೃಷ್ಟ (ವಿಂ) 1. ದೂರದಲ್ಲಿರುವ. 2. ವಿಷಯಪ್ರತ್ಯಕ್ಷಕ್ಕೆ ಬೇಕಾದ ಸಂಯೋಗ ಮೊದಲಾದ ಆರು ವಿಧ ಸಂಬಂಧವಿಲ್ಲದ. न सन्निकृष्टः।

**असन्निधि** ಅಸನ್ನಿಧಿ (ಪುಂ) 1. ದೂರ. (ವಿಂ) 2. ದೂರದಲ್ಲಿರುವ.

**असन्निहित** ಅಸನ್ನಿಹಿತ (ವಿಂ) ದೂರದಲ್ಲಿರುವ, ಸಮೀಪದಲ್ಲಿಲ್ಲದ.

**असपत्न** ಅಸಪತ್ನ (ಪುಂ) 1. ಮಿತ್ರ, ಸುಹೃತ್ತು, ಸ್ನೇಹಿತ. न० त०। (ವಿಂ) 2. ಶತ್ರುವಿಲ್ಲದ, ವೈರಿಯಿಲ್ಲದ. "अवाप्य भूमावसपत्नमृद्धम्" गीता २-८।

**असपिण्ड** ಅಸಪಿಂಡ (ಪುಂ) ಒಂದು ವಂಶದಲ್ಲಿ ಏಳು ತಲೆಯ ನಂತರ ಹುಟ್ಟಿದವನು, ರಕ್ತಸಂಬಂಧವಿಲ್ಲದವನು. [ಒಂದು ವಂಶದಲ್ಲಿ ಏಳು ತಲೆಯವರೆಗೂ ಹುಟ್ಟುವ ಜ್ಞಾತಿಗಳು ಸಪಿಂಡರು ಮತ್ತು ರಕ್ತಸಂಬಂಧವುಳ್ಳವರು. ಮುಂದಿನ ತಲೆಯವರು ಸಮಾನೋದಕರು.] "सपिण्डता तु पुरुषे सप्तमे विनिवर्तते" मनु० ५-६०।

**असभ्य** ಅಸಭ್ಯ (ವಿಂ) ಸಭೆಗೆ ಯೋಗ್ಯನಲ್ಲದವನು, ನೀಚ, ಅಯೋಗ್ಯ. सभायां साधुः "यः" (४-४-१०५)। न० त०।

**असम** ಅಸಮ (ವಿಂ) 1. ಸಮಾನವಿಲ್ಲದ. नास्ति समो यस्य। 2. ಸಮಾನವಲ್ಲದ. न समः। "समवतारसमैरसमैस्तटैः" किरा० ५-७। 3. ಸಮವಲ್ಲದ, ಬೆಸನಾದ (ಸಂಖ್ಯೆ) 1, 3, 5, 7, 9 ಇತ್ಯಾದಿ. 4. ಸಮವಲ್ಲದ, ಹಳ್ಳತಿಟ್ಟಾದ (ನೆಲ). 5. ವಿಷಮವಾದ, ಇಕ್ಕಟ್ಟಾದ.

**असमग्र** ಅಸಮಗ್ರ (ವಿಂ) ಅಸಂಪೂರ್ಣವಾದ, ಕೊನೆಮುಟ್ಟದ.

**असमञ्ज** ಅಸಮಂಜ (ಪುಂ) ಸಗರಚಕ್ರವರ್ತಿಯ ಮಗ.

**असमञ्जस** ಅಸಮಂಜಸ (ವಿಂ) 1. ಅಸಂಗತವಾದ, ಅಸಂಬದ್ಧವಾದ, ಸಮಂಜಸವಲ್ಲದ. "असमञ्जसमिति मत्वा तथापि तरलायते चेतः" उद्भ०। 2. ಅವ್ಯಕ್ತವಾದ, ಅಸ್ಪಷ್ಟವಾದ. "स्खलदसमञ्जसमुग्धजल्पितं ते" मालती० १०-२।

**असमनयन** ಅಸಮನಯನ —नेत्र—ನೇತ್ರ, —लोचन —ಲೋಚನ (ಪುಂ) ಶಿವ, ಈಶ್ವರ, ಮಹಾದೇವ. असमानि नयनानि नेत्राणि लोचनानि वा यस्य।

**असमय** ಅಸಮಯ (ಪುಂ) 1. ಅಕಾಲ, ಯೋಗ್ಯವಲ್ಲದ ಕಾಲ. अप्राशस्त्ये न० त०। "असमये मतिरुन्मिषति ध्रुवं करगतैव गता यदियं कुहूः" नैष० ४-५७। 2. ಕೆಟ್ಟ ಕಾಲ.

**असमर्थ** ಅಸಮರ್ಥ (ವಿಂ) 1. ಅಶಕ್ತ, ದುರ್ಬಲ. 2. ಅಯೋಗ್ಯ, ಅನರ್ಹ. 3. ಪರಸ್ಪರ ಸಂಬಂಧವಿಲ್ಲದೆ ಅನ್ವಯಯೋಗ್ಯತೆಯಿಲ್ಲದ (ಪದ). पुत्रो राज्ञः भार्या देवदत्तस्य ಎಂಬಲ್ಲಿ राज्ञः भार्या ಇವುಗಳಿಗೆ ಅನ್ವಯಯೋಗ್ಯತೆಯಿಲ್ಲದಿರುವುದರಿಂದ ಅಸಮರ್ಥವಾಗಿ ಸಮಾಸ ಬರುವುದಿಲ್ಲ. 4. ಆಯಾ ಅರ್ಥದಲ್ಲಿ ಶಕ್ತಿಯಿಲ್ಲದ (ಪದ).

**असमवायिकारण** ಅಸಮವಾಯಿಕಾರಣ (ನಂ) ಗುಣಕ್ರಿಯಾರೂಪವಾದ ಕಾರಣ. ಅಸಮವಾಯಿಕಾರಣವು ಎರಡು ವಿಧ. (1) ಕಾರಣದಲ್ಲಿ ಸಮವಾಯ ಸಂಬಂಧದಿಂದ ಇದ್ದುಕೊಂಡು ಕಾರ್ಯವನ್ನುಂಟುಮಾಡುವ ಕಾರಣ. ಉದಾ: तन्तुसंयोगः पटस्य असमवायिकारणम्। ಕಾರಣವಾದ ತಂತುವಿನಲ್ಲಿ ಸಮವಾಯ ಸಂಬಂಧದಿಂದ ಇರುವ ಸಂಯೋಗವು ಪಟರೂಪ ಕಾರ್ಯಕ್ಕೆ ಕಾರಣವಾಗುವುದು. (2) ತನ್ನ ಸಮವಾಯಿ ಕಾರಣದೊಡನೆ ಅದರ ಕಾರಣದಲ್ಲಿ ಸಮವಾಯ ಸಂಬಂಧದಿಂದ ಇದ್ದುಕೊಂಡು ಕಾರ್ಯವನ್ನುಂಟು ಮಾಡುವ ಕಾರಣ. ಉದಾ: तन्तुरूपं पटगतरूपस्य असमवायिकारणम्। ಇಲ್ಲಿ ಕಾರ್ಯವು ಪಟರೂಪ. ಅದರ ಕಾರಣ ಪಟ. ಪಟವೂ ತಂತುರೂಪವೂ ಸಮವಾಯಿಕಾರಣದಿಂದ ತಂತುವಿನಲ್ಲಿರುವುದರಿಂದ ತಂತುರೂಪವು ಪಟರೂಪಕ್ಕೆ ಅಸಮವಾಯಿಕಾರಣ.

**असमस्त** ಅಸಮಸ್ತ (ನಂ) 1. ವಿಗ್ರಹವಾಕ್ಯ, ಸಮಾಸವಿಲ್ಲದ ಪದಗಳ ಗುಂಪು, ಒಟ್ಟುಗೂಡಿಸಲ್ಪಡದ ಪದಗಳ ಸಮೂಹ. (ವಿಂ) 2. ಅಸಂಪೂರ್ಣವಾದ, ಸಮಗ್ರವಲ್ಲದ. 3. ಸಂಕ್ಷೇಪಿಸಲ್ಪಡದ. 4. ಬಿಡಿಸಲ್ಪಟ್ಟ, ಬೇರೆಮಾಡಲ್ಪಟ್ಟ.

**असमान** ಅಸಮಾನ (ವಿಂ) 1. ಸಮಾನವಿಲ್ಲದ, ಅಸದೃಶವಾದ. 2. ಸಮಾನವಲ್ಲದ.

**असमापन** ಅಸಮಾಪನ (ನಂ) ಸಮಾಪ್ತಿಗೊಳಿಸದಿರುವಿಕೆ, ಪೂರ್ತಿಗೊಳಿಸದಿರುವಿಕೆ, ಕೊನೆಮುಟ್ಟಿಸದಿರುವಿಕೆ.

**असमापित** ಅಸಮಾಪಿತ (ವಿಂ) ಸಮಾಪ್ತಿಗೊಳಿಸಲ್ಪಡದ, ಕೊನೆಮುಟ್ಟಿಸಲ್ಪಡದ. न समापितम्। "असमापितकृत्यसम्पदां हतवेगं विनयेन तावता" किरा० २-४८।

**असमाप्त ಅಸಮಾಪ್ತ** (वि०) ಸಮಾಪ್ತಿಗೊಳ್ಳದ, ಕೊನೆ ಮುಟ್ಟದ, ಪೂರ್ಣವಾಗದ. "असमाप्तप्रतिज्ञोऽपि याते त्वयि महाभुजे" वेणी० ६-३३।

**असमाप्ति ಅಸಮಾಪ್ತಿ** (स्त्री०) ಪೂರ್ತಿಯಾಗದಿರುವಿಕೆ, ಮುಗಿಯದಿರುವಿಕೆ.

**असमावृत्त ಅಸಮಾವೃತ್ತ** (पु०) ವಿದ್ಯಾಭ್ಯಾಸವನ್ನು ಪೂರ್ಣಗೊಳಿಸಿ ಗುರುವಿನಿಂದ ಅನುಮತಿ ಪಡೆಯದವನು, ಗೃಹಸ್ಥಾಶ್ರಮ ಸ್ವೀಕಾರಕ್ಕಾಗಿ ಸಮಾವರ್ತನ ಮಾಡದವನು. न समावृत्तः।

**असमाहित ಅಸಮಾಹಿತ** (वि०) ಏಕಾಗ್ರತೆಯಿಲ್ಲದ, ಚಿತ್ತಸ್ಥೈರ್ಯವಿಲ್ಲದ.

**असमीक्ष्यकारिन् ಅಸಮೀಕ್ಷ್ಯಕಾರಿನ್**(वि०)ವಿವೇಚನೆಯಿಲ್ಲದೆ ಕೆಲಸಮಾಡುವವನು, ವಿಚಾರಮಾಡದೆ ಕಾರ್ಯ ನಡೆಸುವವನು. असमीक्ष्य कर्तुं शीलमस्य डु कृञ् (करणे) "णिनिः" (३-२-७८)।

**असम्पत्ति ಅಸಂಪತ್ತಿ** (स्त्री०) 1. ದಾರಿದ್ರ್ಯ, ಬಡತನ. (वि०) 2. ದರಿದ್ರ, ಬಡವ. नास्ति सम्पत्तिर्यस्य।

**असम्पन्न ಅಸಂಪನ್ನ** (वि०) ದರಿದ್ರ, ಬಡವ.

**असम्पूर्ण ಅಸಂಪೂರ್ಣ** (वि०)1. ಪೂರ್ಣವಾಗದಿರುವ, ಮುಗಿಯದಿರುವ, ಸಮಾಪ್ತಿಹೊಂದದಿರುವ. 2. ತುಂಬಿರದ, ಕೊಂಚ ಕಡಿಮೆಯಾದ, ನ್ಯೂನವಾದ. "क्रूरग्रहः सकेतुश्चन्द्रमसम्पूर्णमण्डलमिदानीम्" मुद्रा० १-६।

**असम्पृक्त ಅಸಂಪೃಕ್ತ** (वि०) ಸೇರಿಕೊಂಡಿಲ್ಲದ, ಬೇರೆ ಬೇರೆಯಾಗಿರುವ. न सम्पृक्तः।

**असम्प्रज्ञात ಅಸಂಪ್ರಜ್ಞಾತ**(वि०)ನಿರ್ವಿಕಲ್ಪಕಸಮಾಧಿ. न सम्यक् प्रकर्षेण ज्ञातः भेदो यत्र। [ಸಮಾಧಿಯು ಸಂಪ್ರಜ್ಞಾತ ಮತ್ತು ಅಸಂಪ್ರಜ್ಞಾತಗಳೆಂದು ಎರಡು ವಿಧ. (1) ಜ್ಞಾನ, ಜ್ಞೇಯ ಮತ್ತು ಜ್ಞಾತೃಗಳ ಭೇದ ತೋರಿದರೂ ಧ್ಯಾನಮಾಡಲ್ಪಡುವ ವಸ್ತುವಿನಲ್ಲೇ ಚಿತ್ತವು ಏಕಾಗ್ರವಾಗುವುದು ಸಂಪ್ರಜ್ಞಾತ ಸಮಾಧಿಯೆನಿಸುವುದು. ಇದಕ್ಕೆ ಸವಿಕಲ್ಪಕ ಸಮಾಧಿಯೆಂದು ಹೆಸರು. (2) ಮೇಲಿನ ಭೇದವು ತೋರದೆ ಯಾವ ವ್ಯಾಪಾರವೂ ಇಲ್ಲದೆ ಚಿತ್ತವು ಧ್ಯೇಯವಸ್ತುವಿನಲ್ಲಿ ಲಯವಾಗುವುದು ಅಸಂಪ್ರಜ್ಞಾತ ಸಮಾಧಿಯೆನಿಸುವುದು. ಇದಕ್ಕೆ ನಿರ್ವಿಕಲ್ಪಕಸಮಾಧಿಯೆಂದು ಹೆಸರು. ಸಂಪ್ರಜ್ಞಾತ ಸಮಾಧಿಯು ಏಕಾಗ್ರಸ್ವಭಾವವುಳ್ಳ ಚಿತ್ತಕ್ಕೆ ಮಾತ್ರ ಸಾಧ್ಯ. ಅಸಂಪ್ರಜ್ಞಾತ ಸಮಾಧಿಯು ನಿರೋಧಸ್ವಭಾವವುಳ್ಳ ಚಿತ್ತಕ್ಕೆ ಮಾತ್ರ ಸಾಧ್ಯ.]

**असम्प्रति ಅಸಂಪ್ರತಿ** (अव्य०) 1. ಅಯೋಗ್ಯವಾದ ಕಾಲ. 2. ದೂರದ ಕಾಲ. निपा० (२-१-१७)।

**असम्बद्ध ಅಸಂಬದ್ಧ** (न०) 1. ಪ್ರಕೃತದ ಅರ್ಥವಿಲ್ಲದ ಮಾತು, ಸಂಬಂಧವಿಲ್ಲದ ಮಾತು. (वि०)2. ಪ್ರಕೃತಕ್ಕೆ ಸಂಬಂಧಿಸಿದ ಅರ್ಥವಿಲ್ಲದ, ಸಂಬಂಧವಿಲ್ಲದ.

**असम्बन्ध ಅಸಂಬಂಧ** (पु०)1. ಸಂಬಂಧವಿಲ್ಲದಿರುವಿಕೆ. न० त०। (वि०)2. ಸಂಬಂಧವಿಲ್ಲದ. नास्ति सम्बन्धो यस्य।

**असम्बाध ಅಸಂಬಾಧ** (वि०) 1. ಒತ್ತಡವಿಲ್ಲದ, ವಿರಳವಾದ. 2. ವಿಜನವಾದ, ಜನರಹಿತವಾದ. नास्ति सम्बाधा पीडा प्रतिबन्धो वा यत्र। "मा गाश्चिरायैकचरः प्रमादं वसन्नसम्बाधशिवेऽपि देशे" किरा० ३-५३।

**असम्बाधा ಅಸಂಬಾಧಾ** (स्त्री०) ಪೀಡೆಯಿಲ್ಲದಿರುವಿಕೆ, ತೊಂದರೆಯಿಲ್ಲದಿರುವಿಕೆ. न सम्यक् बाधा।

**असम्भव ಅಸಂಭವ** (पु०)1. ಆಗದಿರುವಿಕೆ, ಹುಟ್ಟದಿರುವಿಕೆ, ಅಭಾವ. न सम्भवः उत्पत्तिः। "असम्भवं हेममृगस्य जन्म"। "हरिराक्रमणेन संनतिं किल विभ्रीत भियेत्यसम्भवः" माघ० १६-३४। 2. ಉತ್ಪತ್ತಿ ಕಾರಣದ ಅಭಾವ, ಕಾರ್ಯದ ಅತ್ಯಂತಾಭಾವ. (वि०) 3. ಉತ್ಪತ್ತಿಯಿಲ್ಲದ. 4. ಉತ್ಪತ್ತಿಕಾರಣವಿಲ್ಲದ. 5. "ಅಸಂಭವ"ವೆಂಬ ಒಂದು ದೋಷ. "एकशफवत्त्वं गोर्लक्षणम्" ಎಂಬಲ್ಲಿ ಲಕ್ಷ್ಯವಾದ ಹಸುಗಳಾವುದರಲ್ಲಿಯೂ ಏಕಶಫವತ್ತ್ವವಿಲ್ಲದುದರಿಂದ ಇದು ಅಸಂಭವರೂಪ ದೋಷಾಕ್ರಾಂತ. ಅವ್ಯಾಪ್ತಿ, ಅತಿವ್ಯಾಪ್ತಿ ಮತ್ತು ಅಸಂಭವ ಈ ಮೂರು ದೋಷಗಳು ಇಲ್ಲದುದು ಲಕ್ಷಣವೆನಿಸುವುದು.

**असम्भावना ಅಸಂಭಾವನಾ** (स्त्री०) 1. ಅವಮರ್ಯಾದೆ. 2. ಸಂದೇಹವಿಲ್ಲದಿರುವಿಕೆ, ಊಹೆಯಿಲ್ಲದಿರುವಿಕೆ. 3. ಇಲ್ಲವೆಂಬ ಭಾವನೆ. [ಇದು ಅದ್ವೈತಿಗಳ ಮತದಲ್ಲಿ ಪ್ರಮಾಣಾಸಂಭಾವನೆ ಮತ್ತು ಪ್ರಮೇಯಾಸಂಭಾವನೆಗಳೆಂದು ಎರಡು ವಿಧ. ಬ್ರಹ್ಮನ ಇರುವಿಕೆಯಲ್ಲಿ ಪ್ರಮಾಣವೇ ಇಲ್ಲವೆನ್ನುವುದು ಪ್ರಮಾಣಾಸಂಭಾವನೆ. ಬ್ರಹ್ಮನೇ ಇಲ್ಲವೆನ್ನುವುದು ಪ್ರಮೇಯಾಸಂಭಾವನೆ. ಇವೆರಡೂ ಕ್ರಮವಾಗಿ ಶ್ರವಣ ಮತ್ತು ಮನನದಿಂದ ನಿವೃತ್ತವಾಗುವುವು.]

**असम्भावनीय ಅಸಂಭಾವನೀಯ** (वि०) 1. ಊಹಾತೀತವಾದ, ಊಹಿಸಲಸಾಧ್ಯವಾದ. 2. ಅಸಾಧ್ಯವಾದ, ಆಗದ, ಅಶಕ್ಯವಾದ.

**असम्भूति** ಅಸಂಭೂತಿ (स्त्री०) 1. ಆಗದಿರುವಿಕೆ, ಹುಟ್ಟದಿರುವಿಕೆ. 2. ಪ್ರಕೃತಿ, ಮಾಯೆ, ಅವ್ಯಾಕೃತ, ಅಗಸ್ತ್ಯರಣ. सम् + भू (सत्तायाम्) "क्तिन्" (३-३-९४)। अभावे न० त०।

**असम्भृत** ಅಸಂಭೃತ (वि०) 1. ಸ್ವಾಭಾವಿಕವಾದ, ಅಯತ್ನಸಿದ್ಧವಾದ, ಅಕೃತ್ರಿಮವಾದ. "असम्भृतं मण्डनमङ्गयष्टेरनासवाख्यं करणं मदस्य" कुमा० १-३१। 2. ಚೆನ್ನಾಗಿ ಪೋಷಿಸಲ್ಪಡದ. 3. ಶೇಖರಿಸಲ್ಪಡದ, ಕೂಡಿಸದ.

**असम्मत** ಅಸಮ್ಮತ (वि०) 1. ಒಪ್ಪಿಗೆಯಿಲ್ಲದ, ಸಮ್ಮತವಲ್ಲದ. न० त०। "असम्मतः कस्तव मुक्तिमार्गं पुनर्भवक्लेशभयात्प्रपन्नः" कुमा० ३-५। 2. ಇಷ್ಟವಿಲ್ಲದ, ಪ್ರತಿಕೂಲವಾದ, ವಿರುದ್ಧವಾದ.

**असम्मति** ಅಸಮ್ಮತಿ (स्त्री०) 1. ಒಪ್ಪದಿರುವಿಕೆ. 2. ಇಷ್ಟವಿಲ್ಲದಿರುವಿಕೆ.

**असम्मूढ** ಅಸಂಮೂಢ (वि०) ನಿಶ್ಚಯಜ್ಞಾನವುಳ್ಳ, ಭ್ರಾಂತಿಪಡದ. न० त०। "स्थिरबुद्धिरसम्मूढः" गीता ५-२०।

**असम्मोह** ಅಸಂಮೋಹ (पु०) 1. ವಾಸ್ತವಿಕಜ್ಞಾನ, ಯಥಾರ್ಥಜ್ಞಾನ. "बुद्धिर्ज्ञानमसम्मोहः क्षमा सत्यं दमः शमः" गीता १०-४। 2. ಭ್ರಮೆಯಿಲ್ಲದಿರುವಿಕೆ, ಮರುಳಾಗದಿರುವಿಕೆ.

**असवर्ण** ಅಸವರ್ಣ (वि०) ಸಜಾತೀಯನಲ್ಲದ, ಬೇರೆ ಜಾತಿಯ. न समानो वर्णो यस्य। "अपि नाम कुलपतेरियमसवर्णक्षेत्रसम्भवा स्यात्?" शाकु० १।

**असह** ಅಸಹ (वि०) ಸಹಿಸದ, ಸಹನೆಯಿಲ್ಲದ. न सहते—षह (मर्षणे) "अच्" (३-१-१३४)।

**असहन** ಅಸಹನ (पु०) 1. ಶತ್ರು, ವೈರಿ, ಹಗೆ. न सहते—षह (मर्षणे) "ल्युः" (३-१-१३४)। (न०) 2. ಅಸಹನೆ, ಸಹನೆಯಿಲ್ಲದಿರುವಿಕೆ. षह भावे "ल्युट्" (३-३-११५)। न० त०। "सोढरिपुबलभरोऽसहनः न जहास दत्तकरतालमुच्चकैः" माघ० १५-३९। (वि०) 3. ಸಹನೆಯಿಲ್ಲದ.

**असहमान** ಅಸಹಮಾನ (वि०) ಸಹಿಸದ, ಸಹನೆಯಿಲ್ಲದ. न सहते — षह (मर्षणे) "शानच्" (३-२-१२४)। "अम्भोजभूरसहमान इवाविरासीत्" चं० रा०।

**असहाय** ಅಸಹಾಯ (वि०) 1. ಸಹಾಯವಿಲ್ಲದ, ಇತರರ ನೆರವಿಲ್ಲದ. नास्ति सहायो यस्य। 2. ಸಹಾಯಕರಿಲ್ಲದ, ಏಕಾಕಿ, ಒಂಟಿಗ. "सोऽसहायेन मूढेन लुब्धेनाकृतबुद्धिना" मनु० ७-३०।

**असहिष्णु** ಅಸಹಿಷ್ಣು (वि०) ಸಹಿಸದ, ಸಹನೆಯಿಲ್ಲದ, ತಾಳ್ಮೆಯಿಲ್ಲದ. न सहिष्णुः। "स सुश्रुवांस्तद्वचनं मुमोह राजाऽसहिष्णुः सुतविप्रयोगम्" भट्टि० १-२०।

**असह्य** ಅಸಹ್ಯ (वि०) ಸಹಿಸಲಾಗದ, ಸಹಿಸಲಶಕ್ಯವಾದ. न सह्यः। "असह्यहुंकारनिवर्तितः पुरा पुरारिमप्राप्तमुखः शिलीमुखः" कुमा० ५-५४।

**असाक्षिक** ಅಸಾಕ್ಷಿಕ (वि०) ಸಾಕ್ಷಿಯನ್ನು ಹೊಂದದಿರುವ, ಸಾಕ್ಷಾತ್ತಾಗಿ ಯಾರೂ ನೋಡದಿರುವ (ವ್ಯವಹಾರ). नास्ति साक्षी साक्षाद्द्रष्टा यस्य। "कप्"। "असाक्षिकेषुत्वर्थेषु मिथो विवदमानयोः" मनु० ८-१०९।

**असाधन** ಅಸಾಧನ (न०) 1. ಕಾರಣವಲ್ಲದಿರುವಿಕೆ. 2. ಉಪಕರಣವಲ್ಲದಿರುವಿಕೆ. (वि०) 3. ಉಪಕರಣವಿಲ್ಲದ, ಉಪಾಯವಿಲ್ಲದ. 4. ಕಾರಣವಿಲ್ಲದ.

**असाधारण** ಅಸಾಧಾರಣ (न०) 1. (ತಾರ್ಕಿಕ ಮತದಲ್ಲಿ) ಸಪಕ್ಷ ಅಥವಾ ವಿಪಕ್ಷಗಳಲ್ಲಿಲ್ಲದ ಕಾರಣ, ಮೂರು ವಿಧ ವ್ಯಭಿಚಾರದೋಷಗಳಲ್ಲೊಂದು. 2. ನಿರ್ದಿಷ್ಟವಾದ ಒಂದೇ ಕಾರ್ಯಕ್ಕೆ ಮೀಸಲಾದ ಕಾರಣ. [ಎಲ್ಲಾ ಕಾರ್ಯಗಳಿಗೂ ಸಾಮಾನ್ಯವಾಗಿ ಈಶ್ವರ, ಕಾಲ, ಅದೃಷ್ಟ ಮುಂತಾದುವು ಸಾಧಾರಣಕಾರಣವಾಗುವುವು. ದಂಡ, ಕುಲಾಲ, ಚಕ್ರ ಮುಂತಾದುವು ಘಟಕ್ಕೆ ಮಾತ್ರ ಕಾರಣವಾಗುವುದರಿಂದ ಅಸಾಧಾರಣ ಕಾರಣವೆನಿಸುವುವು.] (वि०) 3. ಸಾಮಾನ್ಯವಲ್ಲದ, ವಿಶೇಷಗುಣವುಳ್ಳ, ಅಧಿಕಗುಣವುಳ್ಳ. 4. ಮತ್ತೊಬ್ಬರ ಅಧಿಕಾರಕ್ಕೊಳಪಡದ ಕೇವಲ ತನ್ನದೇ ಆದ (ಆಸ್ತಿ ಮತ್ತು ಧನ).

**असाधु** ಅಸಾಧು (वि०) 1. ಒಳ್ಳೆಯದಲ್ಲದ, ಕೆಟ್ಟದಾದ. न साधु। "अतोऽर्हसि क्षन्तुमसाधु साधु वा हितं मनोहारि च दुर्लभं वचः" किरा० १-४। 2. ದುಷ್ಟನಾದ, ಪಾಪಕಾರ್ಯಾಚರಣೆಯುಳ್ಳ, ನೀಚ. 3. ಅಪಭ್ರಂಶ, ಅಪಶಬ್ದ, ಅಸಂಸ್ಕೃತ ಶಬ್ದ. "असाधूनां प्रयोगे तु प्रत्यवायोऽपि नो तथा"। स्त्रियां "ङीष्"। असाध्वी वाणी। असाध्वी नारी।

**असाध्य** ಅಸಾಧ್ಯ (वि०) 1. ಸಾಧಿಸಲಾಗದ, ಶಕ್ಯವಲ್ಲದ. साधयितुमशक्यः। 2. ಪ್ರತೀಕಾರ ಮಾಡಲಾಗದ. "असाध्यः कुरुते कोपं प्राप्ते काले गदो यथा" माघ० २-८४।

**असामञ्जस्य** ಅಸಾಮಂಜಸ್ಯ (ನಂ) 1. ಅಯುಕ್ತತೆ. 2. ಅಕ್ರಮ, ಯುಕ್ತಿಯಿಂದ ಕೂಡಿಲ್ಲದಿರುವಿಕೆ.

**असामयिक** ಅಸಾಮಯಿಕ (ವಿಂ) ಅಕಾಲಿಕ, ಸಮಯದ್ದಲ್ಲದ, ಅಕಾಲದ. समयोऽस्य प्राप्तः "ठञ्" (५-१-१०४)। ನಂ ತಂ। "किमसामयिकं वितन्वता मनसि क्षोभमुपात्तरंहसः" किरा० २-४०।

**असामान्य** ಅಸಾಮಾನ್ಯ (ವಿಂ) ಅಸಾಧಾರಣವಾದ, ಸಮಾನವಿಲ್ಲದ, ಹೋಲಿಕೆಯಿಲ್ಲದ. नास्ति सामान्यं यस्य। "रामं सीतापरित्यागादसामान्यपतिं भुवः" रघु० १५-३९।

**असाम्प्रतम्** ಅಸಾಂಪ್ರತಮ್ (अव्य०) ಅಯುಕ್ತ, ಅಕ್ರಮ. न साम्प्रतम्। "विषवृक्षोऽपि संवर्ध्य स्वयं छेत्तुमसाम्प्रतम्" कुमा० २-५५।

**असार** ಅಸಾರ (ಪುಂ) 1. ಹರಳು ಗಿಡ, (ವಿಂ) 2. ಬಲವಿಲ್ಲದ, ಶಕ್ತಿಯಿಲ್ಲದ. नास्ति सारो बलं यस्य। "निदर्शनमसाराणां लघुर्बहुतृणं नरः" माघ० २-५०। 3. ಸಾರವಿಲ್ಲದ, ತಿರುಳಿಲ್ಲದ, ಸತ್ತ್ವವಿಲ್ಲದ. "असारं संसारं परिमुषितरत्नं त्रिभुवनम्" मालती० ५-३०।

**असि** ಅಸಿ (ಪುಂ) 1. ಖಡ್ಗ, ಕತ್ತಿ. अस्यते — असु (क्षेपणे) "इन्" (ಉಂ ४-११८)। "उद्गूर्णेन चमूस्तूर्णमतिमात्राविलासिना" माघ० १९-५०। 2. ಒಂದು ದಿನ. अस्यति पापानि। 3. ಶ್ವಾಸ, ಉಸಿರು. (अव्य०) 4. ನೀನು. [ನೀನು ಎಂಬ ಅರ್ಥದಲ್ಲಿ ತಿಜನ್ತಪ್ರತಿರೂಪಕಾವ್ಯಯ.]

**असिक** ಅಸಿಕ (ನಂ) ಕೆಳತುಟಿಗೂ ಗಲ್ಲಕ್ಕೂ ಮಧ್ಯಭಾಗ. "दन्तवस्त्रं च तत्प्रान्तौ सृक्कणी असिकं त्वधः। असिकाधस्तु चिबुकम्" अभि० चि०।

**असिक्नी** ಅಸಿಕ್ನೀ (स्त्री०) 1. ಚಿಕ್ಕ ವಯಸ್ಸಿನ ಅಂತಃಪುರದ ದಾಸಿ. सिता शुक्लकेशा, तद्भिन्नाऽसिता। असिता "क्नः" (वा० ४-१-३९)। "ङीप्" (४-१-५)। 2. ಒಂದು ಚಿಕ್ಕ ನದಿ, ಹೊಳೆ. "असिक्नी स्यादवृद्धान्तःपुरप्रेष्यानदीभिदोः" मेदि०। 3. ರಾತ್ರಿ.

**असिगण्ड** ಅಸಿಗಂಡ (ಪುಂ) ಚಿಕ್ಕ ತಲೆದಿಂಬು. असिः क्षिप्तो गण्डो यत्र।

**असिजीविन्** ಅಸಿಜೀವಿನ್ (ವಿಂ) ಕತ್ತಿಯಿಂದ ಜೀವಿಸುವ. असिना जीवति — जीव (प्राणधारणे) "णिनिः" (३-२-७८)।

**असित** ಅಸಿತ (ಪುಂ) 1. ಕಪ್ಪುಬಣ್ಣ. 2. ಕೃಷ್ಣಪಕ್ಷ. 3. ಶನಿಗ್ರಹ. (स्त्री०)—ता—ತಾ. 4. ಚಿಕ್ಕ ವಯಸ್ಸಿನ ಅಂತಃಪುರದ ದಾಸಿ. 5. ನೀಲಿ ಗಿಡ.

**असितग्रीव** ಅಸಿತಗ್ರೀವ (ಪುಂ) ಈಶ್ವರ, ಮಹಾದೇವ. असितं ग्रीवायां यस्य।

**असितोत्पल** ಅಸಿತೋತ್ಪಲ (ನಂ) ನೀಲಕಮಲ, ಇಂದೀವರ. असितं च तदुत्पलं च। "आननैर्मधुरसो विकसद्भिः नासिकाभिरसितोत्पलगन्धः" माघ० १०-८।

**असितोपल** ಅಸಿತೋಪಲ (ಪುಂ) ಇಂದ್ರನೀಲಮಣಿ. असितश्चासावुपलश्च।

**असिद्ध** ಅಸಿದ್ಧ (ಪುಂ) 1. (ತಾರ್ಕಿಕ ಮತದಲ್ಲಿ) ಐದು ವಿಧ ದುಷ್ಟಹೇತು (ಪಂಚ ಹೇತ್ವಾಭಾಸ)ಗಳಲ್ಲೊಂದು. "अनैकान्तो विरुद्धश्चाप्यसिद्धः प्रतिपक्षितः। कालात्ययापदिष्टश्च हेत्वाभासश्च पञ्चधा" भाषाप०। ಅಸಿದ್ಧವು (1) ಆಶ್ರಯಾಸಿದ್ಧ, (2) ಸ್ವರೂಪಾಸಿದ್ಧ ಮತ್ತು (3) ವ್ಯಾಪ್ಯತ್ವಾಸಿದ್ಧಗಳೆಂದು ಮೂರು ವಿಧ. ಉದಾ: (1) गगनारविन्दं सुरभि अरविन्दत्वात् सरोजारविन्दवत्" ಇಲ್ಲಿ ಆಶ್ರಯವಾದ ಗಗನಾರವಿಂದವು ಅಸಿದ್ಧವಾದುದರಿಂದ ಹೇತುವು ದುಷ್ಟವಾಗಿ ಸೌರಭ್ಯರೂಪವಾದ ಅನುಮಿತಿಗೆ ಪ್ರತಿಬಂಧಕವಾಗುವುದು. (2) "शब्दोऽनित्यश्चाक्षुषत्वात् रूपवत्" ಇಲ್ಲಿ ಪಕ್ಷವಾದ ಶಬ್ದದಲ್ಲಿ ಚಾಕ್ಷುಷತ್ವ (ಹೇತು) ವು ಅಸಿದ್ಧವಾದುದರಿಂದ ಹೇತುವು ಸ್ವರೂಪಾಸಿದ್ಧರೂಪವಾದ ದೋಷಾಕ್ರಾಂತವಾಗಿರುವುದು. (3) "पर्वतो धूमवान् वह्निमत्त्वात्" ಎಂಬಲ್ಲಿ ಹೇತುವಾದ ವಹ್ನಿಮತ್ತ್ವವು ಸೋಪಾಧಿಕ (ಆರ್ದ್ರೇಂಧನ ಸಂಯೋಗರೂಪವಾದ ಉಪಾಧಿಸಹಿತ) ವಾದುದರಿಂದ ಹೇತುವು ವ್ಯಾಪ್ಯತ್ವಾಸಿದ್ಧರೂಪದೋಷಾಕ್ರಾಂತವಾದುದು. (ವಿಂ) 2. ಅನಿಷ್ಪನ್ನವಾದ, ಹುಟ್ಟದಿರುವ. 3. ಅಪಕ್ವವಾದ.

**असिद्धि** ಅಸಿದ್ಧಿ (स्त्री०) 1. ಅನಿಷ್ಪತ್ತಿ, ಕಾರ್ಯವು ನೆರವೇರದಿರುವಿಕೆ, ಕಾರ್ಯವು ಪೂರ್ಣವಾಗದಿರುವಿಕೆ. 2. (ತಾರ್ಕಿಕ ಮತದಲ್ಲಿ) ಆಶ್ರಯಾಸಿದ್ಧಿ ಮೊದಲಾದ ಹೇತುವಿನ ದೋಷ. ಅಸಿದ್ಧಿಯು (1) ಆಶ್ರಯಾಸಿದ್ಧಿ, (2) ಸ್ವರೂಪಾಸಿದ್ಧಿ ಮತ್ತು (3) ವ್ಯಾಪ್ಯತ್ವಾಸಿದ್ಧಿಗಳೆಂದು ಮೂರು ವಿಧ. "आश्रयासिद्धिराद्या स्यात् स्वरूपासिद्धिरप्यथ। व्याप्यत्वासिद्धिरपरा स्यादसिद्धिरतस्त्रिधा" भाषाप०। (1) पक्षे पक्षतावच्छेदकस्याभावः आश्रयासिद्धिः। "काञ्चनमयः पर्वतो वह्निमान्

धूमात्" ಎಂಬಲ್ಲಿ ಪಕ್ಷದಲ್ಲಿ ವಿಶೇಷಣವಾಗಿರುವ ಕಾಂಚನಮಯತ್ವವು ಇಲ್ಲದಿರುವುದರಿಂದ ಆಶ್ರಯಾಸಿದ್ಧಿರೂಪವಾದ ದೋಷ. (2) पक्षे व्याप्यत्वेनाभिमतस्याभावः स्वरूपासिद्धिः। "ह्रदो द्रव्यं धूमात्" ಎಂಬಲ್ಲಿ ಪಕ್ಷವಾದ ಹ್ರದದಲ್ಲಿ ವ್ಯಾಪ್ಯವಾಗಿ ತಿಳಿದಿರುವ ಧೂಮವು ಇಲ್ಲದಿರುವುದರಿಂದ ಸ್ವರೂಪಾಸಿದ್ಧಿರೂಪವಾದ ದೋಷ. (3) साध्ये साध्यतावच्छेदकस्याभावः व्याप्यत्वासिद्धिः। "काञ्चनमयवह्निमान् पर्वतः" ಎಂಬಲ್ಲಿ ಸಾಧ್ಯವಾದ ವಹ್ನಿಯಲ್ಲಿ ಸಾಧ್ಯತಾವಚ್ಛೇದಕ (ಕಾಂಚನಮಯತ್ವ)ವು ಇಲ್ಲದಿರುವುದರಿಂದ ವ್ಯಾಪ್ಯತ್ವಾಸಿದ್ಧಿರೂಪವಾದ ದೋಷ.

**असिधारा** ಅಸಿಧಾರಾ (स्त्री०) ಕತ್ತಿಯ ತುಂಚು, ಕತ್ತಿಯ ಅಲಗು. असेर्धारा। "राजसेवा मनुष्याणामसिधारावलेहनम्" कुव०।

**असिधाराव्रत** ಅಸಿಧಾರಾವ್ರತ (न०) 1. ಕತ್ತಿಯ ಅಂಚಿನ ಮೇಲೆ ನಿಲ್ಲುವಷ್ಟು ಕಷ್ಟವಾದ ವ್ರತ. असिधारायां स्थितिरिव दुष्करं व्रतम्। "यत्रैकशयनस्थापि प्रमदा नोपभुज्यते। असिधाराव्रतमिदं वदन्ति मुनिपुङ्गवाः"। 2. ಸ್ವಲ್ಪ ತಪ್ಪಿದರೂ ಹೆಚ್ಚು ಅನರ್ಥವನ್ನುಂಟುಮಾಡುವ ಕೆಲಸ. "असिधाराव्रतमिदं सखे बर्बरिणा सह संवासः" हितो०।

**असिधावक** ಅಸಿಧಾವಕ (पु०) ಕತ್ತಿಯನ್ನು ಉಜ್ಜಿ ಮೆರುಗುಕೊಡುವವನು. असिं धावयति — धावु (गतिशुद्ध्योः) "ण्वुल्" (३-१-१३३)।

**असिधेनुका** ಅಸಿಧೇನುಕಾ (स्त्री०) ಚೂರಿ, ಚಾಕು, ಸಣ್ಣ ಕತ್ತಿ. असिर्धेनुरिव यस्याः। वा "कप्" (५-४-१५४)। पक्षे असिधेनुः ಅಸಿಧೇನುಃ.

**असिपत्र** ಅಸಿಪತ್ರ (पु०) 1. ಕಬ್ಬು. असिरिव तीक्ष्णं पत्रमस्य। 2. ಎರಡುಕಡೆಯೂ ಅಲಗುಳ್ಳ ಕತ್ತಿ. 3. ಕತ್ತಿಯ ಒರೆ, ಗವಸಣಿಗೆ. 4. ಒಂದು ನರಕ. "असिपत्रः खड्गकोशे पुमानिक्षौ च नारके" मेदि०।

**असिपत्रवन** ಅಸಿಪತ್ರವನ (न०) ಒಂದು ನರಕ. [ಇಲ್ಲಿರುವ ಮರದ ಎಲೆಗಳು ಕತ್ತಿಯಂತೆ ಚೂಪಾಗಿವೆ. ತನ್ನ ಧರ್ಮವನ್ನು ಬಿಟ್ಟು, ತನ್ನ ಸಂಪ್ರದಾಯವನ್ನು ತ್ಯಜಿಸಿ ಪಾಷಂಡಮತವನ್ನು ಆಶ್ರಯಿಸುವವನಿಗೆ ಅಸಿಪತ್ರ ನರಕವು ಪ್ರಾಪ್ತವಾಗುವುದು. ಅಲ್ಲಿ ಇವನು ಚಾವಟಿಯ ಏಟು ತಿಂದು ಎರಡು ಕಡೆಯೂ ಅಲಗುಳ್ಳ ಅಸಿಪತ್ರದಿಂದ ಕತ್ತರಿಸಲ್ಪಟ್ಟು ಅತಿಯಾದ ವೇದನೆಯಿಂದ ಪದೇ ಪದೇ ಮೂರ್ಛೆಹೊಂದಿ ಬೀಳುವನು.] "यस्त्विह वै निजवेदपथादनापद्यपगतः पाखण्डं चोपगतः तमसिपत्रवनं प्रवेश्य कशया प्रहरन्ति। तत्रहासावितस्ततो धावमान उभयतोधारैस्तालवनासिपत्रैश्छिद्यमानसर्वाङ्गो हा हतोऽस्मीति परमया वेदनया मूर्च्छितः पदेपदे निपतति स्वधर्महा पाखण्डानुगतं फलं भुङ्क्ते" भाग० ५-२६।

**असिपुच्छ** ಅಸಿಪುಚ್ಛ (पु०) ಕಡಲಹಂದಿ, ನೀರುಹಂದಿ. असिरिव पुच्छोऽस्य।

**असिपुत्रिका** ಅಸಿಪುತ್ರಿಕಾ (स्त्री०) ಚೂರಿ, ಚಾಕು, ಸಣ್ಣ ಕತ್ತಿ.

**असिहेति** ಅಸಿಹೇತಿ (वि०) ಕತ್ತಿಯೇ ಆಯುಧವಾಗಿ ಉಳ್ಳವನು, ಕತ್ತಿಯಿಂದ ಯುದ್ಧ ಮಾಡುವವನು. असिः हेतिः साधनमस्य।

**असु – क्षेपणे** (दि० प० सक० से०)

| | | | |
|---|---|---|---|
| लट्— | अस्यति | अस्यतः | अस्यन्ति। |
| | अस्यसि | अस्यथः | अस्यथ। |
| | अस्यामि | अस्यावः | अस्यामः। |
| लिट्— | आस | आसतुः | आसुः। |
| | आसिथ | आसथुः | आस। |
| | आस | आसिव | आसिम। |
| लुट्— | असिता | असितारौ | असितारः। |
| | असितासि | असितास्थः | असितास्थ। |
| | असितास्मि | असितास्वः | असितास्मः। |
| लृट्— | असिष्यति | असिष्यतः | असिष्यन्ति। |
| | असिष्यसि | असिष्यथः | असिष्यथ। |
| | असिष्यामि | असिष्यावः | असिष्यामः। |
| लोट्— | अस्यतु / अस्यतात् | अस्यताम् | अस्यन्तु। |
| | अस्य / अस्यतात् | अस्यतम् | अस्यत। |
| | अस्यानि | अस्याव | अस्याम। |
| लङ्— | आस्यत् | आस्यताम् | आस्यन्। |
| | आस्यः | आस्यतम् | आस्यत। |
| | आस्यम् | आस्याव | आस्याम। |
| विधिलिङ्— | अस्येत् | अस्येताम् | अस्येयुः। |
| | अस्येः | अस्येतम् | अस्येत। |
| | अस्येयम् | अस्येव | अस्येम। |

आशीर्लिङ्— अस्यात् अस्यास्ताम् अस्यासुः।
अस्याः अस्यास्तम् अस्यास्त।
अस्यासम् अस्यास्व अस्यास्म।
लुङ्— आस्थत् आस्थताम् आस्थन्।
आस्थः आस्थतम् आस्थत।
आस्थम् आस्थाव आस्थाम।
लृङ्— आसिष्यत् आसिष्यताम् आसिष्यन्।
आसिष्यः आसिष्यतम् आसिष्यत।
आसिष्यम् आसिष्याव आसिष्याम।

1. ಎಸೆ, ಬಿಸಾಡು, ಒಗೆ. 2. ಇಡು, ಹಾಕು. "ततः प्रजघटे युद्धं शस्त्राण्यासुः परस्परम्" भट्टि० १४-७७। "तस्मिन्नास्थदिषीकास्त्रं रामो रामावबोधितः" रघु० १२-२३। "रामे रिपुः शरानाजिमहेष्वास विचक्षणे" माघ० १९-५। "अग्नौ प्रास्ताहुतिः सम्यगादित्यमुपतिष्ठते" मनु० ३-७६।

**कर्मणि:**—१. अस्यते अस्येते अस्यन्ते। २. आसे आसाते आसिरे। ३. असिता। ४. असिष्यते। ५. अस्यताम्। ६. आस्यत। ७. अस्येत। ८. असिसीष्ट। ९. आसि। १०. आसिष्यत।

**ण्यन्तात् कर्तरि:**—१. आसयति। २. आसयांचकार, –चक्रे, –बभूव, –आस। ३. आसयिता। ४. आसयिष्यति। ५. आसयतु। ६. आसयत्। ७. आसयेत्। ८. आस्यात्। ९. आसिसत्। १०. आसयिष्यत्।

**ण्यन्तात् कर्मणि:**—१. आस्यते। २. आसयांचक्रे, –बभूवे, –आसे। ३. आसयिता, आसिता। ४. आसयिष्यते, आसिष्यते। ५. आस्यताम्। ६. आस्यत। ७. आस्येत। ८. आसयिषीष्ट। ९. आसि आसिषाताम्, आसयिषाताम्। १०. आसयिष्यत, आसिष्यत।

**सनि:**—१. असिसिषति। २. असिसिषाञ्चकार, –बभूव, –आस। ३. असिसिषिता। ४. असिसिषिष्यति। ५. असिसिषतु। ६. आसिसिषत्। ७. असिसिषेत्। ८. असिसिष्यात्। ९. आसिसिषीत्। १०. आसिसिषिष्यत्।

**केवलात् कृत्सु:**—तव्यः–असितव्यम्। अनीयर्–असनीयम्। ण्यत्–आस्यम्। कर्म० क्तः–अस्तः। क्तवतुः–असितवान्। शतृ–असन्, असन्ती। असिष्यन्, असिष्यती, असिष्यन्ती। तुमुन्–असितुम्। भावे क्तः–अस्तम्। ल्युट्–असनम्। क्त्वा–असित्वा, अस्त्वा। ल्यप्–प्रत्यस्य। णमुल्–आसमासम्।

**ण्यन्तात् कृत्सु:**—आसयितव्यः। आसनीयः। आस्यः। आसितः। आसितवान्। आसयन्, आसयन्ती। आसयमानः। आसयिष्यन्, आसयिष्यती, आसयिष्यन्ती। आसयिष्यमाणः। आसयितुम्। आसितम्। आसनम्। आसयित्वा। उपास्य। आसमासम्। आसयित्वा आसयित्वा।

**ಈ ಧಾತುವಿಗೆ ಉಪಸರ್ಗಗಳ ಯೋಗದಿಂದ ಉಂಟಾಗುವ ಅರ್ಥಭೇದಗಳು:**

(1) अति+असु = ಬಹಳ ದೂರಕ್ಕೆ ಎಸೆ. अत्यस्तः। अत्यासः। "बहुभिश्चैकमत्यस्यन् एकेन च बहून् जनान्" भा०।

(2) वि+अति+असु = ಬದಲಾವಣೆ ಮಾಡು, ಪ್ರತಿಯಾಗಿ ಇಡು, ವಿರೋಧವಾಗಿ ಇಡು. व्यत्यस्तः। व्यत्यासः। "व्यत्यस्तपाणिना कार्यमुपसंग्रहणं गुरोः" मनु० २-७२।

(3) अधि+असु = ಆರೋಪಿಸು, ಅದಲ್ಲದುದನ್ನು ಅದನ್ನಾಗಿ (ಸುಳ್ಳಾಗಿ) ತಿಳಿ, ಒಂದು ವಸ್ತುವನ್ನು ಬೇರೆ ವಸ್ತುವನ್ನಾಗಿ ತಿಳಿ. अध्यासः। अध्यस्तः। "सर्वो हि पुरोऽवस्थिते विषये विषयान्तरमध्यस्यति, बाह्यधर्मानात्मन्यध्यस्यति"। "शुक्तौ रजतमध्यस्तं, ब्रह्मणि जगदध्यस्तम्"।

(4) अनु+असु=1. ಜೊತೆಯಲ್ಲಿಡು. 2. ಅನಂತರ ಇಡು. अन्वस्तः।

(5) अप+असु = ದೂರಮಾಡು, ನಿವಾರಿಸು, ತಳ್ಳು ಹಾಕು. अपास्तम्। अपास्य। "निरस्तगाम्भीर्यमपास्तपुष्पकं प्रकम्पयामास न मानसं न सः" माघ० १-५५। "किमित्यपास्याभरणानि यौवने धृतं त्वया वार्धकशोभि वल्कलम्" कुमा० ५-४४।

(6) अभि+असु = 1. ಅಭ್ಯಾಸ ಮಾಡು, ಕಲಿ. 2. ಆವೃತ್ತಿ ಮಾಡು, ಪುನಃ ಪುನಃ ಮಾಡು. अभ्यासः। अभ्यस्तम्। "शैशवेऽभ्यस्तविद्यानां यौवने विषयैषिणाम्" रघु० १-७। "अभ्यासेन तु कौन्तेय वैराग्येण च गृह्यते" गीता ६-३५।

(7) उद्+असु = 1. ಮೇಲಕ್ಕೆ ಎಸೆ, ಮೇಲಕ್ಕೆ ಹಾರಿಸು, ಮೇಲಕ್ಕೆ ಎತ್ತು. उदस्य। उदस्तम्। "दयिताय सासवमुदस्तमपतदवसादिनः करात्" माघ० १५-८१। 2. ಕೆಳಕ್ಕೆ ತಳ್ಳು. "उदस्ताधोरणः" दशकु०। 3. ತಳ್ಳಿಹಾಕು, ನಿವಾರಿಸು, ಹೋಗಲಾಡಿಸು. "रिपुतिमिरमुदस्योदीयमानं दिनादौ" किरा० १-४६।

(8) परि+उद्+असु = ವಿಧಿಗೆ ಪ್ರಾಧಾನ್ಯಕೊಟ್ಟು ನಿಷೇಧಕ್ಕೆ ಅಪ್ರಾಧಾನ್ಯ ಕೊಡು. पर्युदासः। "प्राधान्यं हि विधेर्यत्र प्रतिषेधेऽप्रधानता। पर्युदासः स विज्ञेयः यत्रोत्तरपदेन नञ्"। "जुगोपात्मानमत्रस्तो भेजे धर्ममनातुरः। अगृध्नुराददे सोऽर्थमसक्तः सुखमन्वभूत्" ಇಲ್ಲಿ ಅತ್ರಸ್ತತ್ವಾದಿಗಳನ್ನುದ್ದೇಶಿಸಿ ಆತ್ಮಗೋಪನಾದಿಗಳು ವಿಧಿಸಲ್ಪಟ್ಟಿವೆ. "नञ्" ಗೆ ಉತ್ತರಪದದೊಡನೆ ಸಂಬಂಧವನ್ನು ಹೇಳದಿರುವುದರಿಂದ ಗುಣೀಭಾವಹೊಂದಿ ಅಪ್ರಧಾನವಾಯಿತು.

(9) वि+उद्+असु = ನಿವಾರಿಸು, ತ್ಯಜಿಸು, ತಳ್ಳು, ಹಾಕು. व्युदासः। व्युदस्तः। व्युदस्य। "त्वन्तु हेतूनतीत्यैतान् कामक्रोधौ व्युदस्य च" भा०। "शकटव्युदासतरुभङ्गधरणिधरधारणादिकम्" माघ० १५-३७।

(10) उप+असु = ಸಮೀಪದಲ್ಲಿಡು.

(11) नि+असु = ಇಡು, ಅರ್ಪಿಸು, ಒಪ್ಪಿಸು. न्यासः। न्यस्तः। "न्यासं शुभं निश्चितयोगलक्ष्म्याः" पाद० १८-५६।

(12) उप+नि+असु = ಹೇಳು, ಉದಾಹರಿಸಿ ವಿವರಿಸು. उपन्यासः। उपन्यस्तम्। उपन्यस्य। "प्रभवति निजस्य कन्यकाजनस्य देव इत्युभयलोकाविरुद्धमुत्तरमुपन्यस्तम्" मालती० २।

(13) सम्+नि+असु = 1. ತ್ಯಜಿಸು, ವರ್ಜಿಸು, ಬಿಡು. (ಸರ್ವಪರಿತ್ಯಾಗ.) संन्यासः। संन्यस्य। "काम्यानां कर्मणां न्यासं संन्यासं कवयो विदुः" गीता १८-२। "न च संन्यसनादेव सिद्धिं समधिगच्छति" गीता ३-४। 2. ಇಡು, ಅರ್ಪಿಸು. "मयि सर्वाणि कर्माणि संन्यस्याध्यात्मचेतसा" गीता ३-३०।

(14) निर्+असु = 1. ತ್ವರೆಯಿಂದ ಹೇಳು, ಜಾಗ್ರತೆಯಾಗಿ ಹೇಳು. "निरस्तं त्वरितोदितम्" अम०। 2. ಹೋಗಲಾಡಿಸು, ನಿವಾರಿಸು. "निरस्तगाम्भीर्यमपास्तपुष्पकं प्रकम्पयामास न मानसं न सः" माघ० १-५५।

(15) परा+असु = ನಿರಾಕರಿಸು, ತಿರಸ್ಕರಿಸು. परास्तम्।

(16) परि+असु=1. ಹರಡು, ವ್ಯಾಪಿಸು. पर्यस्तः। "ततोऽनुकुर्याद्विशदस्य तस्यास्ताम्रौष्ठपर्यस्तरुचः स्मितस्य" कुमा० १-४४। 2. ಸುತ್ತು, ತಿರುಗು. "साचीकृता चारुतरेण तस्थौ मुखेन पर्यस्तविलोचनेन" कुमा० १-६८। 3. ಬೀಳು, ಉರುಳು. "भग्नाक्षपर्यस्तरथं क्षणेन" रघु० ५-४९।

(17) वि+परि+असु = 1. ವ್ಯತ್ಯಾಸಹೊಂದು, ಬದಲಾವಣೆಹೊಂದು. विपर्यासः। "विपर्यासं यातो घनविरलभावः क्षितिरुहाम्" उ० रा० २-२६। 2. ಭ್ರಾಂತಿಹೊಂದು, ತಪ್ಪು ತಿಳಿ.

(18) प्र+असु = ಇಡು, ಹಾಕು. प्रास्तम्। प्रास्य। "अग्नौ प्रास्ताहुतिः सम्यगादित्यमुपतिष्ठते" मनु० ३-७६।

(19) अनु+प्र+असु = ಒಂದೇ ಕ್ರಮದಲ್ಲಿಡು, ಅನುಗುಣವಾಗಿಡು. अनुप्रासः। अनुगतत्वेन प्रकर्षेण न्यासः। शब्दसाम्यमनुप्रासः। "अनुप्रासः शब्दसाम्यं वैषम्येऽपि स्वरस्य यत्" सा० द०।

(20) वि+असु = 1. ವಿಸ್ತಾರವಾಗಿಡು, ಬಿಡಿಸಿ ಇಡು, ವಿವರಿಸು. व्यासः। व्यस्तः। 2. ವಿಭಾಗಿಸು, ಬೇರೆಬೇರೆ ಮಾಡು. "स चतुर्धा बभौ व्यस्तः प्रसवः पृथिवीपतेः" रघु० १०-८४।

(21) वि+नि+असु = ಇಡು, ಇರಿಸು. विन्यासः। विन्यस्तः। "विन्यस्तमङ्गलमहौषधिरीश्वरायाः" किरा० ५-३३।

(22) सम्+असु = ಸಂಕ್ಷೇಪಿಸು, ಸಂಗ್ರಹಿಸು, ಚಿಕ್ಕದಾಗಿ ಮಾಡು. समासः। समस्तः। "सिद्धिं प्राप्तो यथा ब्रह्म तथाप्नोति निबोध मे। समासेनैव कौन्तेय निष्ठा ज्ञानस्य या परा" गीता १८-५०।

**असु** ಅಸು (पु०) 1. ಶ್ವಾಸ, ಉಸಿರು. अस्यते — असु (क्षेपणे) "उन्" (उ० १-१०)। 2. ನೀರು, ಜಲ. 3. ಶಾಖ, ಬಿಸಿ. 4. ಚಿತ್ತ, ಮನಸ್ಸು. (पु० ब० व०) 5. ಪಂಚಪ್ರಾಣವಾಯುಗಳು. "अभिमानधनस्य गत्वरैरसुभिः स्थास्नु यशश्चिचीषतः" किरा० २-१९।

**असुकर** ಅಸುಕರ (वि०) ಸುಖವಾಗಿ ಮಾಡಲು ಆಗದ, ಕಷ್ಟದಿಂದ ಮಾಡಬಹುದಾದ. सुखेन क्रियते — सु+डुकृञ् (करणे) "खल्" (३-३-१२६)।

**असुख** ಅಸುಖ (न०) 1. ಸುಖದ ಅಭಾವ, ದುಃಖ. "तौ धर्मं पश्यतस्तस्य पापं चातन्द्रितौ सह। याभ्यां प्राप्नोति संपृक्तः प्रेत्येह च सुखासुखम्" मनु० १२-१९। (वि०) 2. ಸುಖವಿಲ್ಲದ. 3. ಕಷ್ಟವಾದ, ಅಶಕ್ಯವಾದ. "श्रेयांसि लब्धुमसुखानि विनान्तरायैः" किरा० ५-४९।

**असुखोदय** ಅಸುಖೋದಯ (वि०) ಅಸುಖಕ್ಕೆ ಕಾರಣವಾದ, ದುಃಖವನ್ನುಂಟುಮಾಡುವ. "न कर्म निष्फलं कुर्यान्नायत्यामसुखोदयम्" मनु० ४-७०।

**असुखोदर्क** ಅಸುಖೋದರ್ಕ (वि०) ದುಃಖವೇ ಫಲ ವಾಗಿ ಉಳ್ಳ, ದುಃಖವನ್ನುಂಟುಮಾಡುವ. "तद्भवत्यसुखोदर्कं जीवतश्च मृतस्य च" मनु० ११-१०।

**असुधारण** ಅಸುಧಾರಣ (न०) ಪ್ರಾಣಧಾರಣೆ, ಬದುಕಿರುವುದು, ಜೀವಿಸಿರುವುದು. असूनां प्राणवायूनां धारणम्।

**असुमत्** ಅಸುಮತ್ (वि०) ಪ್ರಾಣಿ. असवः सन्त्यस्य "मतुप्" (५-२-९४)। "सततमसुमतामगम्यरूपाः परिणतदिक्करिकास्तटीर्बिभर्ति" माघ० ४-२९।

**असुर** ಅಸುರ (पु०) 1. ರಾಕ್ಷಸ. अस्यन्ति क्षिपन्ति देवान्—असु (क्षेपणे) "उरन्" (उ० १-४२)। "सुराप्रतिग्रहाद्देवाः सुरा इत्यभिविश्रुताः। अप्रतिग्रहणात्तस्या दैतेयाश्चासुरास्तथा" रामा०। "स मत्सरेणासुर इत्युपेयुषा चिराय नाम्नः प्रथमाभिधेयताम्" माघ० १-४३। 2. ಸೂರ್ಯ. अस (दीप्तौ) "उरन्" (उ० १-४२)। "असुरः सूर्यदैत्ययोः। असुरा रजनीवाश्योः" हेम०। 3. ಗಜ, ಆನೆ. "दन्तावलो महाकायो वारणः कुञ्जरोऽसुरः" वैज०। (स्त्री०) -रा -ರಾ. 4. ರಾತ್ರಿ. 5. ಬಾಚಿ, ಬಡಗಿಯ ಒಂದು ಆಯುಧ. -री -ರೀ. 6. ರಾಕ್ಷಸ ಹೆಂಗಸು, ರಕ್ಕಸಿ. 7. ಕರಿ ಸಾಸುವೆ. "असुरी कृष्णिकाचासौ" अभि० चि०।

**असुरक्ष** ಅಸುರಕ್ಷ (वि०) 1. ಸುಖವಾಗಿ ಕಾಪಾಡಲು ಆಗದ. सुखेन रक्ष्यते—सु+रक्ष (पालने) "खल्" (३-३-१२६)। न० त०। "शरदभ्रचलाश्चलेन्द्रियैरसुरक्षा हि बहुच्छलाः श्रियः" किरा० २-३९। 2. ಪ್ರಾಣವನ್ನು ಕಾಪಾಡುವ. असून् रक्षति—रक्ष "अच्" (३-१-१३४)।

**असुरराज्** ಅಸುರರಾಜ್ -राज-ರಾಜ (पु०) 1. ಅಸುರರ ದೊರೆ. 2. ಬಲಿಚಕ್ರವರ್ತಿ. असुराणां राट् राजा वा।

**असुररिपु** ಅಸುರರಿಪು (पु०) ವಿಷ್ಣು, ವಾಸುದೇವ.

**असुरगुरु** ಅಸುರಗುರು (पु०) ಶುಕ್ರಾಚಾರ್ಯರು, ರಾಕ್ಷಸರ ಗುರು.

**असुराधिप** ಅಸುರಾಧಿಪ (पु०) 1. ರಾಕ್ಷಸರ ದೊರೆ, ಅಸುರರ ಒಡೆಯ. 2. ಬಲಿಚಕ್ರವರ್ತಿ. असुराणामधिपः।

**असुसू** ಅಸುಸೂ (पु०) ಬಾಣ. असून् प्राणान् सुवति—षू (प्रेरणे) "क्विप्" (३-२-६१)। "स सासिः सासुसूः सासो येया येया ययाययः" किरा० १५-५।

**असू** ಅಸೂ (स्त्री०) ಪ್ರಸವಿಸದ ಹೆಂಗಸು. न सूते—षूङ् (प्राणिप्रसवे) "क्विप्" (३-२-६१)।

**असूर्क्षण** ಅಸೂರ್ಕ್ಷಣ (न०) ಅನಾದರ, ತಿರಸ್ಕಾರ. सूर्क्ष (आदरे) "ल्युट्" (३-३-११५)। अभावे न० त०।

**असूयक** ಅಸೂಯಕ (वि०) ಅಸೂಯೆಯುಳ್ಳ, ಗುಣದಲ್ಲಿ ದೋಷವನ್ನು ಎಣಿಸುವ. असूञ् (उपतापे)+यक् "ण्वुल्" (३-१-१३३)। "अहंकारं बलं दर्पं कामं क्रोधं च संश्रिताः। मामात्मपरदेहेषु प्रद्विषन्तोऽभ्यसूयकाः" गीता १६-१८।

**असूया** ಅಸೂಯಾ (स्त्री०) 1. ಇತರರ ಗುಣದಲ್ಲಿ ದೋಷವನ್ನು ಹೇಳುವುದು. असु (उपतापे)+कण्ड्वादि यक्+"अः" (३-३-१०६)। असूया परगुणेषु दोषाविष्करणम् सि० कौ०। "असूयान्यगुणर्धीनामौद्धत्यादसहिष्णुता" सा० द०। "असूययेव तन्नागाः सप्तधैव प्रसुस्रुवुः" रघु० ४-२३। 2. ರೋಷ, ಕೋಪ. "आर्ये, व्रजामोऽन्यत इत्यथैनां वधूरसूयाकुटिलं ददर्श" रघु० ६-८२।

**असूर्यंपश्य** ಅಸೂರ್ಯಂಪಶ್ಯ (वि०) 1. ಸೂರ್ಯನನ್ನು ನೋಡದಿರುವ. (स्त्री०) -पश्या -ಪಶ್ಯಾ. "असूर्यंपश्यरूपा त्वं किमभीरुररायसे" भट्टि० ४-२१। 2. ಸೂರ್ಯನನ್ನೂ ಕಾಣದಿರುವ ರಾಜಪತ್ನಿ, ಘೋಷಾ ಪದ್ಧತಿಯಲ್ಲಿರುವ ರಾಜಸ್ತ್ರೀಯರು. न सूर्यं पश्यति—दृशिर् (प्रेक्षणे) "खश्" (३-२-३६)। "मुम्" (६-३-६७)। "असूर्यंपश्या राजदाराः" सि० कौ०।

**असृक्कर** ಅಸೃಕ್ಕರ (पु०) ದೇಹದಲ್ಲಿರುವ ರಸಧಾತು, ರಕ್ತಸಾರ, ವಸೆ. असृजं रक्तं करोति—डु कृञ् (करणे) "टः" (३-२-२०)। [ಊಟಮಾಡಿದ ಆಹಾರವು ಮೊದಲು ರಸರೂಪವಾಗುವುದು. ರಸವು ರಕ್ತವಾಗಿ ಪರಿಣಮಿಸುವುದು.] "रसाद्रक्तं ततो मांसं मांसान्मेदः प्रजायते। मेदसोऽस्थि ततो मज्जा मज्ज्ञः शुक्रं तु जायते" सुश्रुत० सूत्रस्था० १४-१०।

**असृग्धरा** ಅಸೃಗ್ಧರಾ (स्त्री०) (ರಕ್ತವನ್ನು ಧರಿಸುವ) ಚರ್ಮ. असृजो रक्तस्य धरा।

**असृग्धारा** ಅಸೃಗ್ಧಾರಾ (स्त्री०) ರಕ್ತದ ಪ್ರವಾಹ. असृजो धारा।

**असृग्वहा** ಅಸೃಗ್ವಹಾ (स्त्री०) (ರಕ್ತ ಸಂಚರಿಸುವ) ನಾಡಿ. वह (प्रापणे) "अच्" (३-१-१३४)। असृजो वहा। [ವಿವರಕ್ಕೆ "नाडी" ಪದದಲ್ಲಿ ನೋಡಿ.

**असृग्विमोक्षण** ಅಸೃಗ್ವಿಮೋಕ್ಷಣ (ನಂ) ದೇಹದಿಂದ ರಕ್ತವನ್ನು ತೆಗೆಯುವುದು. असृजः रक्तस्य देहाद्विमोक्षणम्। [ದೇಹದಲ್ಲಿ ರಕ್ತವು ಅಧಿಕವಾಗಿದ್ದರೂ ಅಥವಾ ಕೆಟ್ಟಿದ್ದರೂ ಅದನ್ನು ಹೊರಕ್ಕೆ ತೆಗೆಯಬೇಕೆಂದು ವೈದ್ಯನಿಯಮ.] ರಕ್ತಮೋಕ್ಷಣಕಾಲ ಮುಂತಾದುವು: "तस्मान्न शीते नात्युष्णे नास्विन्ने नातितापिते। यवागूं प्रतिपीतस्य शोणितं मोक्षयेद्भिषक्" सुश्रुत० सूत्रस्था० १४-३१। ರಕ್ತ ಮೋಕ್ಷಣಾನಂತರ ದೇಹವು ಶುದ್ಧವಾದುದಕ್ಕೆ ಲಕ್ಷಣ: "सम्यग्गत्वा यदा रक्तं स्वयमेवावतिष्ठते। शुद्धं तदा विजानीयात् सम्यग्विस्रावितं च तत्। लाघवं वेदनाशान्तिर्व्याधेर्वेगपरिक्षयः। सम्यग्विस्राविते लिङ्गं प्रसादो मनसस्तथा" सुश्रुत० सूत्रस्था० १४-३२, ३३। ರಕ್ತಮೋಕ್ಷಣದ ಫಲ: "त्वग्दोषाः ग्रन्थयः शोफा रोगाः शोणितजाश्च ये। रक्तमोक्षणशीलानां न भवन्ति कदाचन" सुश्रुत० सूत्रस्था० १४-३४।

**असृज्** ಅಸೃಜ್ (ನಂ) 1. ಶೋಣಿತ, ರಕ್ತ. न सृज्यते इतररागवत् संसृज्यते — सृज (विसर्गे) "क्विन्" (३-२-५९)। "असृग्जनोऽस्त्रक्षतिमानवमज्जवसादनम्" माघ० १९-७८। 2. ಕುಂಕುಮಕೇಸರಿ. 3. ಕುಜ, ಮಂಗಳಗ್ರಹ.

**असृपाटी** ಅಸೃಪಾಟೀ (स्त्री०) ರಕ್ತಧಾರೆ. असृजः पाटी परिपाटी। पृषो०।

**असेचनक** ಅಸೇಚನಕ (वि०) ರಮಣೀಯ ವಸ್ತು, ಬಹಳ ಪ್ರಿಯವಾದ ವಸ್ತು, ಎಷ್ಟು ನೋಡಿದರೂ ತೃಪ್ತಿಯನ್ನುಂಟುಮಾಡದ ವಸ್ತು. न सिच्यते मनोऽत्र — षिच (क्षरणे) "ल्युट्" (३-३-११७)। "कन्" (५-३-७५)।

**असेवन** ಅಸೇವನ (ನಂ) 1. ಸೇವೆ ಮಾಡದಿರುವಿಕೆ. 2. ಉದಾಸೀನತೆ. (वि०) 3. ಸೇವೆಯಿಲ್ಲದ.

**असेवित** ಅಸೇವಿತ (वि०) 1. ಸೇವಿಸಲ್ಪಡದ. 2. ತಿರಸ್ಕರಿಸಲ್ಪಟ್ಟ.

**असौम्य** ಅಸೌಮ್ಯ (वि०) ಭಯಂಕರವಾದ, ಕುರೂಪದ, ಸುಂದರವಲ್ಲದ. न सौम्यः।

**असौम्यस्वर** ಅಸೌಮ್ಯಸ್ವರ (पु०) 1. ಭಯಂಕರವಾದ ಸ್ವರ, ಕರ್ಕಶವಾದ ಶಬ್ದ. (वि०) 2. ಭಯಂಕರ ಶಬ್ದವುಳ್ಳ, ಕ್ರೂರವಾದ ಧ್ವನಿಯುಳ್ಳ. असौम्यः स्वरो यस्य।

**असौष्ठव** ಅಸೌಷ್ಠವ (ನಂ) 1. ಗುಣಹೀನತೆ, ಯೋಗ್ಯವಾಗಿಲ್ಲದಿರುವಿಕೆ. 2. ಕುರೂಪ, ವಿಕಾರ ರೂಪ. (वि०) 3. ಬಲಹೀನವಾದ, ತೇಜೋಹೀನವಾದ, ಶಕ್ತಿಕುಂದಿದ. "गमनमलसं शून्या दृष्टिः शरीरमसौष्ठवं श्वसितमधिकं किन्वेतत्स्यात् किमन्यदतोऽथवा" मालती० १-२०।

**अस्खलित** ಅಸ್ಖಲಿತ (वि०) 1. ತಪ್ಪದಿರುವ. 2. ಸ್ಥಿರವಾದ, ನಿಶ್ಚಲವಾದ. 3. ಮುಗ್ಗರಿಸದಿರುವ, ಜಾರದಿರುವ, ಎಡವದಿರುವ.

**अस्त** ಅಸ್ತ (पु०) 1. ಅಸ್ತಪರ್ವತ, ಅಸ್ತಾಚಲ, ಸೂರ್ಯನು ಮುಳುಗುವ ಬೆಟ್ಟ. अस्यन्ते रविकिरणा अत्र — असु (क्षेपणे) अधि० "क्तः" (३-४-७६)। "यात्येकतोऽस्तशिखरं पतिरोषधीनाम्" शाकु० ४-१। 2. ಸೂರ್ಯ ಮೊದಲಾದ ಗ್ರಹಗಳ ಅಸ್ತಮಯ, ಸೂರ್ಯಾದಿಗ್ರಹಗಳ ಮುಳುಗುವಿಕೆ. "गतोऽस्तमर्कः"। (ನಂ) 3. ಸಮಾಪ್ತಿ, ಕೊನೆ. (वि०) 4. ಎಸೆಯಲ್ಪಟ್ಟ, ಬಿಸಾಡಲ್ಪಟ್ಟ. 5. ಮುಗಿಸಲ್ಪಟ್ಟ, ಸಮಾಪ್ತಿಗೊಳಿಸಲ್ಪಟ್ಟ. 6. ಹೂಡಿಬಿಡಲ್ಪಟ್ಟ, ಪ್ರಯೋಗಿಸಲ್ಪಟ್ಟ. "पश्यन्तोऽधोलोकमस्तेषुजालाः" माघ० १८-२४। 7. ಲಗ್ನದಿಂದ ಏಳನೇ ಸ್ಥಾನ.

**अस्तक** ಅಸ್ತಕ (पु०) ಅಪವರ್ಗ, ಮೋಕ್ಷ, ಮುಕ್ತಿ. अस्तमवसानं करोति — अस्त+णिच् "ण्वुल्" (३-१-१३३)।

**अस्तम्** ಅಸ್ತಮ್ (अव्य०) 1. ಕಾಣಿಸದಿರುವಿಕೆ, ಗೋಚರವಾಗದಿರುವಿಕೆ. 2. ನಾಶ. "विप्रोषितकुमारं तद्राज्यमस्तमितेश्वरम्" रघु० १२-११। "अस्तंगतेषु तनयेषु विलीनमोहे" प्रबोध० ६-१।

**अस्तमन** ಅಸ್ತಮನ (ನಂ) 1. ಕಣ್ಣಿಗೆ ಕಾಣಿಸದಂತೆ ಸಂಚರಿಸುವುದು. 2. ನಾಶಹೊಂದುವುದು. 3. ಸೂರ್ಯಾದಿ ಗ್ರಹಗಳ ಮುಳುಗುವಿಕೆ.

**अस्तमय** ಅಸ್ತಮಯ (पु०) 1. ಸೂರ್ಯಾದಿಗಳ ಮುಳುಗುವಿಕೆ, ಗ್ರಹಗಳು ಕಾಣಿಸದಿರುವಿಕೆ. अस्तम्+इण् (गतौ) "अच्" (३-३-५६)। "स एष कैलास उपान्तसर्पिणः करोत्यकालास्तमयं विवस्वतः" किरा० ५-३५। 2. ಪ್ರಳಯ, ನಾಶ. "भाग्यास्तमयमिवाक्ष्णोः हृदयस्य महोत्सवावसानमिव" माल० २-११। 3. ಮರೆಮಾಡುವುದು, ಕಾಣಿಸದಂತೆ ಅಡಗಿಸುವುದು. "कुर्वन्ति सामन्तशिखामणीनां प्रभाप्ररोहास्तमयं रजांसि" रघु० ६-३३।

**अस्ताचल** ಅಸ್ತಾಚಲ (ಪುಂ) ಪಶ್ಚಿಮಾದ್ರಿ, ಅಸ್ತಪರ್ವತ.

**अस्ताद्रि** ಅಸ್ತಾದ್ರಿ (ಪುಂ) ಪಶ್ಚಿಮಾದ್ರಿ, ಅಸ್ತಪರ್ವತ.

**अस्ति** ಅಸ್ತಿ (अव्य०) ಸ್ಥಿತಿ, ಇರುವಿಕೆ. तिङन्तप्रतिरूपकमव्ययम्।

**अस्तिकाय** ಅಸ್ತಿಕಾಯ (ಪುಂ) ಕಾಲತ್ರಯ ಸಂಬಂಧವುಳ್ಳ ಮತ್ತು ಬಹು ಪ್ರದೇಶ ವ್ಯಾಪ್ತಿಯುಳ್ಳ ವಸ್ತು. अस्ति कायः स्वरूपं यस्य। ಇದು ಜೀವಾಸ್ತಿಕಾಯ, ಧರ್ಮಾಸ್ತಿಕಾಯ, ಅಧರ್ಮಾಸ್ತಿಕಾಯ, ಆಕಾಶಾಸ್ತಿಕಾಯ ಮತ್ತು ಪುದ್ಗಲಾಸ್ತಿಕಾಯಗಳೆಂದು ಐದು ವಿಧ. ಕಾಲತ್ರಯದಲ್ಲಿಯೂ ಇರುವುದರಿಂದ ಅಸ್ತಿಯೆಂದೂ, ಶರೀರದಂತೆ ಅನೇಕ ಪ್ರದೇಶದಲ್ಲಿರುವುದರಿಂದ ಕಾಯವೆಂದೂ ವ್ಯವಹಾರ. ಇದು ಜೈನಮತ ಸಿದ್ಧವಾದುದು.

**अस्तिक्षीरा** ಅಸ್ತಿಕ್ಷೀರಾ (स्त्री०) ಹೆಚ್ಚು ಹಾಲುಳ್ಳ ಹಸು. अस्ति क्षीरं यस्याः सा अस्तिक्षीरा (गौः)।

**अस्तित्व** ಅಸ್ತಿತ್ವ (न०) ಸ್ಥಿತಿ, ಇರುವಿಕೆ.

**अस्तिमत्** ಅಸ್ತಿಮತ್ (वि०) ಧನಿಕ, ಐಶ್ವರ್ಯವಂತ. अस्ति विद्यमानं धनं यस्य "मतुप्" (५-२-९४)। स्त्रियाम् "ङीप्" (४-१-६)। -मती-ಮತೀ.

**अस्तु** ಅಸ್ತು (अव्य०) 1. ಅನುಜ್ಞೆ, ಅಪ್ಪಣೆ. 2. ಅಸೂಯೆ, ಮಾತ್ಸರ್ಯ. 3. ಪೀಡೆ, ಬಾಧೆ, ತೊಂದರೆ. 4. ಉತ್ಕರ್ಷ. 5. ಅಂಗೀಕಾರ. 6. ಪ್ರಶಂಸೆ, ಸ್ತುತಿ, ಹೊಗಳಿಕೆ. 7. ಸೂಚನೆ, ಲಕ್ಷಣ. 8. ಅಸೂಯೆಯಿಂದ ಅಂಗೀಕರಿಸುವುದು. 9. ಆಕ್ಷೇಪಣೆ, ನಿಂದೆ. ಇದು ತಿಙನ್ತಪ್ರತಿರೂಪಕಾವ್ಯಯ. "अस्तु स्यादभ्यनुज्ञानेऽप्यसूयापीडयोरपि। प्रतिक्षेपे प्रशंसायां प्रकर्षे लक्षणेऽपि च" मेदि०।

**अस्तुङ्कार** ಅಸ್ತುಂಕಾರ (ಪುಂ) ಒಪ್ಪಿಗೆ, ಸಮ್ಮತಿ, ಅಂಗೀಕಾರ. अस्तु+कारः "मुम्" (वा० ६-३-७०)।

**अस्तेय** ಅಸ್ತೇಯ (न०) 1. ಕದಿಯದಿರುವಿಕೆ, ಪರಸ್ವತ್ತನ್ನು ಅಪಹರಿಸದಿರುವಿಕೆ. न स्तेयम्। ಇದು ಅಷ್ಟಾಂಗಯೋಗಗಳಲ್ಲಿ ಒಂದಾದ ಯಮದ ಒಂದು ಭೇದ. "अहिंसास्तेयब्रह्मचर्यापरिग्रहा यमाः" पा० यो० सू० २-३२। "लोभस्य पुरतः केऽमी सत्यास्तेयापरिग्रहाः" प्रबोध० १-१५।

**अस्तोभ** ಅಸ್ತೋಭ (वि०) ನಿರರ್ಥಕವಲ್ಲದ ಶಬ್ದವುಳ್ಳ, ಸಾರ್ಥಕವಾದ ಶಬ್ದವುಳ್ಳ. नास्ति स्तोभः निरर्थकशब्दः यत्र। "अल्पाक्षरमसंदिग्धं सारवद्विश्वतोमुखम्। अस्तोभमनवद्यं च सूत्रं सूत्रविदो विदुः"।

**अस्त्यान** ಅಸ್ತ್ಯಾನ (न०) 1. ನಿಂದೆ, ಬೈಗಳು. 2. ಒಟ್ಟುಗೂಡಿಸದಿರುವ.

**अस्त्र** ಅಸ್ತ್ರ (न०) 1. ಬಾಣ. अस्यते—असु (क्षेपणे) "ष्ट्रन्" (उ० ४-१५८)। "अस्त्रज्वालावलीढप्रतिबलजलधेरन्तरौर्वायमाणे" वेणी० ३-७। "अस्त्रग्रामविधौ कृती न समरेषु" वेणी० ४-१२। 2. ಧನುಸ್ಸು, ಬಿಲ್ಲು. अस्यतेऽनेन—करं० "ष्ट्रन्" (उ० ४-१५८)। "अस्त्रवेदमधिगम्य तत्त्वतः कस्य चेह भुजवीर्यशालिनः" किरा० १३-६२। 3. ಆಯುಧ. 4. ಮಂತ್ರಶಕ್ತಿಯಿಂದ ಪ್ರಯೋಗಿಸಲ್ಪಡುವ ಆಯುಧ.

**अस्त्रजीविन्** ಅಸ್ತ್ರಜೀವಿನ್ (वि०) ಆಯುಧದಿಂದ ಜೀವಿಸುವ, ಆಯುಧವ್ಯಾಪಾರದಿಂದ ಜೀವನ ಮಾಡುವ. (ಯೋಧ, ಸೈನಿಕ.) अस्त्रेण अस्त्रव्यापारेण जीवति—अस्त्र + जीव (प्राणधारणे) "णिनिः" (३-२-७८)।

**अस्त्रधारिन्** ಅಸ್ತ್ರಧಾರಿನ್ (वि०) ಆಯುಧವನ್ನು ಧರಿಸಿರುವ. (ಯೋಧ, ಸೈನಿಕ.) अस्त्रं धारयति—अस्त्र+धृञ् (धारणे)+णिच् "णिनिः" (३-२-७८)।

**अस्त्रमन्त्र** ಅಸ್ತ್ರಮಂತ್ರ (ಪುಂ) ಬಾಣವನ್ನು ಬಿಡುವಾಗ (ಪ್ರಯೋಗಿಸುವಾಗ) ಮತ್ತು ಉಪಸಂಹರಿಸುವಾಗ ಉಚ್ಚರಿಸುವ ಮಂತ್ರ. अस्त्राणां प्रयोगोपसंहारयोर्मन्त्रः। "उदङ्मुखः सोऽस्त्रविदस्त्रमन्त्रं जग्राह तस्मान्निगृहीतशापात्" रघु० ५-५९।

**अस्त्रमार्ज** ಅಸ್ತ್ರಮಾರ್ಜ (वि०) ಅಸ್ತ್ರಗಳಿಗೆ ಮೆರುಗು ಕೊಡುವವನು, ಅಸ್ತ್ರಗಳನ್ನು ಉಜ್ಜಿ ಹೊಳಪುಕೊಡತಕ್ಕವನು. अस्त्रं मार्ष्टि—मृजूष् (शुद्धौ) "अण्" (३-२-१)। "ण्वुल्" (३-१-१३३)। —मार्जकः—ಮಾರ್ಜಕಃ.

**अस्त्रविद्** ಅಸ್ತ್ರವಿದ್ (वि०) ಬಾಣಪ್ರಯೋಗ ಮತ್ತು ಉಪಸಂಹಾರಗಳನ್ನು ಅರಿತಿರುವ. अस्त्र+विद (ज्ञाने) "क्विप्" (३-२-७६)। "उदङ्मुखः सोऽस्त्रविदस्त्रमन्त्रम्" रघु० ५-५९।

**अस्त्रविद्या** ಅಸ್ತ್ರವಿದ್ಯಾ (स्त्री०) 1. ಬಾಣಗಳ ಪ್ರಯೋಗ ಮತ್ತು ಉಪಸಂಹಾರಗಳನ್ನು ತಿಳಿಸುವ ವಿದ್ಯೆ. 2. ಧನುರ್ವೇದ, ಅಸ್ತ್ರವಿದ್ಯೆಯನ್ನು ತಿಳಿಸುವ ಶಾಸ್ತ್ರ.

**अस्त्रवेद** ಅಸ್ತ್ರವೇದ (ಪುಂ) ಧನುರ್ವೇದ. "अस्त्रवेदमधिगम्य तत्त्वतः कस्य चेह भुजवीर्यशालिनः" किरा० १३-६२।

**अस्त्रागार** ಅಸ್ತ್ರಾಗಾರ (न०) ಆಯುಧಶಾಲೆ, ಆಯುಧಗಳನ್ನು ಇಡುವ ಮನೆ.

**अस्त्रिन्** ಅಸ್ತ್ರಿನ್ (वि०) 1. ಬಿಲ್ಲುಗಾರ, ಧನುಸ್ಸನ್ನು ಹಿಡಿದವನು. 2. ಬಿಲ್ಲುಹಿಡಿದು ಯುದ್ಧಮಾಡುವವನು. अस्त्रं धनुरस्यास्ति "इनिः" (५-२-११५)।

**अस्थान** ಅಸ್ಥಾನ (न०) 1. ಅಯೋಗ್ಯವಾದ ಸ್ಥಾನ, ಕೆಟ್ಟ ಜಾಗ. अप्रशस्तं स्थानम्। "अस्थाने पततामतीव महतामेतादृशी स्याद्गतिः"। 2. ಸರಿಯಲ್ಲದ ಸ್ಥಳ, ಸರಿಯಲ್ಲದ ಪಾತ್ರ. "अस्थानं परिभवस्य"।

**अस्थाने** ಅಸ್ಥಾನೇ (अव्य०) 1. ಕಾರಣವಿಲ್ಲದೆ. "एवमेतत्। अस्थाने कोप इत्यनुपपन्नं त्वयि" माल० ४। 2. ಅಯೋಗ್ಯ ಕಾಲ, ಅಯೋಗ್ಯ ಸ್ಥಾನ, ಅಯೋಗ್ಯವಾದ ವಿಷಯ. "अस्थाने महानर्थोत्सर्गः क्रियते" मुद्रा० ३।

**अस्थायिन्** ಅಸ್ಥಾಯಿನ್ (वि०) ಸ್ಥಿರವಲ್ಲದ, ಚಂಚಲವಾದ. न स्थायी। स्त्रियाम् "ङीप्" (४-१-५)।

**अस्थावर** ಅಸ್ಥಾವರ (वि०) 1. ಚಲಿಸುವ, ಸ್ಥಿರವಾಗಿಲ್ಲದ, ಜಂಗಮವಾದ. 2. ಚಲಿಸುವ ಆಸ್ತಿ. (ಧನ ಕನಕಾದಿಗಳು.)

**अस्थि** ಅಸ್ಥಿ (न०) ಮೂಳೆ, ಎಲುಬು, ಶರೀರದೊಳಗಿನ ಏಳು ಧಾತುಗಳಲ್ಲೊಂದು. अस्यते — असु (क्षेपणे) "क्थिन्" (उ० ३-१५४)।

**ಮನುಷ್ಯನ ಶರೀರದೊಳಗಿರುವ 360 ಎಲುಬುಗಳ ವಿವರ:**

| | | |
|---|---|---|
| दन्ताः | ಹಲ್ಲುಗಳು | 32 |
| दन्तोलूखलानि | ಹಲ್ಲುಗಳ ಗುಣಿಗಳು | 32 |
| नखाः | ಉಗುರುಗಳು | 20 |
| पाणिपादाङ्गुल्यस्थीनि | ಕೈಕಾಲುಗಳ ಬೆರಳುಗಳ ಎಲುಬುಗಳು | 60 |
| पाणिपादशलाकाः | ಅಂಗೈ ಮತ್ತು ಅಂಗಾಲು ಎಲುಬುಗಳು | 20 |
| पादशलाकाधिष्ठितानि | ಹಿಜ್ಜೆಯ ಕೀಲುಗಳು | 4 |
| पार्ष्ण्योरस्थिनी | ಹಿಮ್ಮಡಿಯ ಮೂಳೆಗಳು | 2 |
| पादयोर्गुल्फाः | ಕಾಲುಗಳ ಪಕ್ಕದ ಗಂಟುಗಳು | 4 |
| मणिकौ | ಮಣಿಕಟ್ಟುಗಳ ಎಲುಬುಗಳು | 2 |
| अरत्न्योः | ಮೊಣಕೈ ಎಲುಬುಗಳು | 4 |
| जङ्घयोः | ಕಣಕಾಲು ,, | 4 |
| जानुकपालिके | ಮಂಡಿಚಿಪ್ಪುಗಳು | 4 |
| ऊरुनलकौ | ತೊಡೆಯ ಎಲುಬುಗಳು | 2 |
| बाहुनलकौ | ತೋಳು ,, | 2 |
| अंसयोः | ಹೆಗಲು ಎಲುಬುಗಳು | 2 |
| अंसफलके | ಹೆಗಲಿನ ಮೇಲುಭಾಗದ ಎಲುಬುಗಳು | 2 |
| अक्षकौ | ಕಣ್ಣು ಮತ್ತು ಕಿವಿಗಳ ಮಧ್ಯದ ಎಲುಬುಗಳು | 2 |
| जत्रु | ಭುಜ ಮತ್ತು ಎದೆ ಮಧ್ಯದ ಎಲುಬು | 1 |
| तालुषके | ದವಡೆ ಎಲುಬುಗಳು | 2 |
| श्रोणिफलके | ಸೊಂಟದ ,, | 2 |
| भगास्थि | ಗುಹ್ಯಪ್ರದೇಶದ ಎಲುಬು | 1 |
| पृष्ठास्थीनि | ಬೆನ್ನಿನ ಎಲುಬುಗಳು | 45 |
| ग्रीवायाम् | ಕುತ್ತಿಗೆ ,, | 15 |
| उरसि | ಎದೆ ,, | 14 |
| पार्श्वास्थीनि | ಪಕ್ಕೆಗಳ ,, | 24 |
| स्थालकानि | ಸ್ಥಾಲಕಗಳು | 24 |
| स्थालकार्बुदानि | ಸ್ಥಾಲಕಾರ್ಬುದಗಳು | 24 |
| हन्वस्थि | ಕೆನ್ನೆಗಳ ಮೇಲುಭಾಗದ ಎಲುಬು | 1 |
| हनुमूलबन्धने | ಕೆನ್ನೆಗಳ ಕೆಳಭಾಗದ ಎಲುಬುಗಳು | 2 |
| नासिकागण्डकूटललाटम् | ಮೂಗು, ಕೆನ್ನೆ ಮತ್ತು ಹಣೆ ಎಲುಬು | 1 |
| शिरःकपालानि | ತಲೆಯ ಚಿಪ್ಪುಗಳು | 4 |
| शङ्खौ | ಹುಬ್ಬು ಮತ್ತು ಕಿವಿಗಳ ಮಧ್ಯದ ಎಲುಬುಗಳು | 2 |
| | | 360 |

चरक० शारीर० ७-६।

**अस्थिकर** ಅಸ್ಥಿಕರ -कृत्-ಕೃತ್ (पु०) ಮೇದಸ್ಸು. अस्थि करोति — डु कृञ् (करणे) "टः" (३-२-२०)। "क्विप्" वा (३-२-७८)।

**अस्थिज** ಅಸ್ಥಿಜ (पु०) ಮಜ್ಜೆ, ಮೂಳೆಯೊಳಗಿನ ಪೊಳ್ಳುಭಾಗದಲ್ಲಿರುವ ಮೆತ್ತನೆಯ ಕೊಬ್ಬು. अस्थ्नो जायते — जनी (प्रादुर्भावे) "डः" (३-२-९८)।

**अस्थिति** ಅಸ್ಥಿತಿ (स्त्री०) 1. ಅಸ್ಥಿರತೆ, ಸ್ಥಿರವಲ್ಲದಿರುವಿಕೆ. अभावे न० त०। 2. ಮರ್ಯಾದೆಯಿಲ್ಲದಿರುವಿಕೆ. (वि०) 3. ಸ್ಥಿರವಲ್ಲದ. 4. ಮರ್ಯಾದೆಯಿಲ್ಲದ. न० ब०।

**अस्थितुण्ड** ಅಸ್ಥಿತುಂಡ (पु०) ಪಕ್ಷಿ, ಹಕ್ಕಿ. अस्थीव कठिनं तुण्डं यस्य।

**अस्थिधन्वन्** ಅಸ್ಥಿಧನ್ವನ್ (पुं०) ಶಿವ, ಈಶ್ವರ. अस्थि अस्थिमयं धनुर्यस्य "अनङ्" (५-४-१३२)।

**अस्थिपञ्जर** ಅಸ್ಥಿಪಂಜರ (पुं०) ಕಂಕಾಲ, ಎಲುಬಿನ ಗೂಡು. अस्थि पञ्जर इव।

**अस्थिभक्ष** ಅಸ್ಥಿಭಕ್ಷ (पुं०) 1. ನಾಯಿ. 2. ಪಕ್ಷಿ, ಹಕ್ಕಿ. अस्थि भक्षयति—भक्ष (अदने) "अण्" (३-२-१)।

**अस्थिमाला** ಅಸ್ಥಿಮಾಲಾ (स्त्री०) 1. ಎಲುಬಿನಿಂದ ತಯಾರಿಸಿದ ಸರ. 2. ಎಲುಬುಗಳ ಸಾಲು.

**अस्थिमालिन्** ಅಸ್ಥಿಮಾಲಿನ್ (पुं०) ಶಿವ, ಈಶ್ವರ. अस्थिमयी मालाऽस्य "इनिः" (५-२-११६)।

**अस्थिर** ಅಸ್ಥಿರ (वि०) ಸ್ಥಿರವಲ್ಲದ, ಚಂಚಲವಾದ, ಶಾಶ್ವತವಲ್ಲದ.

**अस्थिशेष** ಅಸ್ಥಿಶೇಷ (वि०) ಬಹಳ ಕೃಶವಾಗಿರುವ, ಮಾಂಸವಿಲ್ಲದೆ ಕೇವಲ ಮೂಳೆ ಮಾತ್ರ ಉಳಿದಿರುವ (ದೇಹ).

**अस्थिसार** ಅಸ್ಥಿಸಾರ (पुं०) 1. ಮಜ್ಜೆಯೆಂಬ ಧಾತು. 2. ರಕ್ತ ಮಾಂಸಗಳಿಲ್ಲದ ದೇಹ.

**अस्थिस्नेह** ಅಸ್ಥಿಸ್ನೇಹ (पुं०) ಮಜ್ಜೆಯೆಂಬ ಧಾತು.

**अस्थैर्य** ಅಸ್ಥೈರ್ಯ (नं०) 1. ಸ್ಥಿರವಾಗಿಲ್ಲದಿರುವಿಕೆ, ಚಾಂಚಲ್ಯ. (वि०) 2. ಸ್ಥಿರವಲ್ಲದ, ಚಂಚಲವಾದ.

**अस्नेह** ಅಸ್ನೇಹ (पुं०) 1. ಪ್ರೀತಿಯಿಲ್ಲದಿರುವಿಕೆ, ವಿಶ್ವಾಸವಿಲ್ಲದಿರುವಿಕೆ. 2. ತುಪ್ಪ ತೈಲಗಳಿಲ್ಲದಿರುವಿಕೆ. 3. ಜಿಡ್ಡಿಲ್ಲದಿರುವಿಕೆ. (वि०) 4. ಪ್ರೀತಿಯಿಲ್ಲದ, ವಿಶ್ವಾಸವಿಲ್ಲದ. 5. ತೈಲವಿಲ್ಲದ. 6. ಜಿಡ್ಡಿಲ್ಲದ.

**अस्पन्द** ಅಸ್ಪಂದ (वि०) ಸ್ವಲ್ಪವೂ ಚಲನವಿಲ್ಲದ, ಸ್ಥಿರವಾಗಿರುವ. न स्पन्दो यस्य। "अङ्गैरवज्ञातकदम्बगोलैरस्पन्दमन्देन विलोचनेन" यादः १३-३।

**अस्पन्दन** ಅಸ್ಪಂದನ (नं०) 1. ಸ್ವಲ್ಪವೂ ಚಲನವಿಲ್ಲದಿರುವಿಕೆ. (वि०) 2. ಚಲನವಿಲ್ಲದ, ಸ್ಥಿರವಾಗಿರುವ.

**अस्पष्ट** ಅಸ್ಪಷ್ಟ (वि०) ಅವ್ಯಕ್ತವಾದ, ಅಸ್ಫುಟವಾದ, ಪ್ರಕಾಶವಾಗಿಲ್ಲದ.

**अस्पृश्य** ಅಸ್ಪೃಶ್ಯ (वि०) ಸ್ಪರ್ಶಕ್ಕೆ ಯೋಗ್ಯವಲ್ಲದ, ಮುಟ್ಟಲು ಅರ್ಹವಲ್ಲದ, ಅಶುಚಿಯಾದ ವಸ್ತು. न स्प्रष्टुमर्हः—स्पृश (संस्पर्शने) "क्यप्" (३-३-१६९)। "मलमूत्रपुरीषास्थिनिर्गतं ह्यशुचि स्मृतम्"। "अस्पृश्यस्पर्शने चैव सद्यः स्नानं समाचरेत्"।

**अस्पृह** ಅಸ್ಪೃಹ (वि०) ಆಸೆಯಿಲ್ಲದ. नास्ति स्पृहा यस्य।

**अस्पृहा** ಅಸ್ಪೃಹಾ (स्त्री०) ಆಸೆಯಿಲ್ಲದಿರುವಿಕೆ. न स्पृहा। "यथोत्पन्नेन सन्तोषः कर्तव्योऽप्यल्पवस्तुना। परस्याचिन्तयित्वार्थं साऽस्पृहा परिकीर्तिता"।

**अस्फुट** ಅಸ್ಫುಟ (वि०) ಸ್ಪಷ್ಟವಲ್ಲದ, ಚೆನ್ನಾಗಿ ತೋರದಿರುವ, ಸ್ಫುಟವಾಗಿ ಕಾಣದಿರುವ. न स्फुटः। "क्वचित्प्रकाशां क्वचिदस्फुटार्णसम्" नैष० ९-४।

**अस्फुटवाच्** ಅಸ್ಫುಟವಾಚ್ (वि०) ಅಸ್ಪಷ್ಟವಾಗಿ ಮಾತನಾಡುವ, ತೊದಲುತ್ತ ಮಾತನಾಡುವ. अस्फुटा वाक् यस्य। "लोहलः स्यादस्फुटवाक्" अम०।

**अस्मद्** ಅಸ್ಮದ್ (पुं०) 1. ಶರೀರದಲ್ಲಿ ಅಭಿಮಾನವುಳ್ಳ ಜೀವ. असु (क्षेपणे) "मदिक्" (उ० १-१३६)। "यूयं वयं वयं यूयमित्यासीन्मतिरावयोः। किं जातमधुना येन यूयं यूयं वयं वयम्"। 2. ಪರಮಾತ್ಮ. "अहमात्मा गुडाकेश सर्वभूताशयस्थितः" ಗೀತಾ १०-२०। (त्रि०) 3. "ನಾನು" ಎಂಬ ಅರ್ಥವನ್ನು ಕೊಡುವ ಒಂದು ಸರ್ವನಾಮ ಶಬ್ದ. ಸಪ್ತ ವಿಭಕ್ತಿಗಳಲ್ಲಿಯೂ ಲಿಂಗತ್ರಯಸಮಾನವಾದ ಇದರ ರೂಪ:

| | | |
|---|---|---|
| अहं | आवाम् | वयम् |
| माम् / मा | आवाम् / नौ | अस्मान् / नः |
| मया | आवाभ्याम् | अस्माभिः |
| मह्यम् / मे | आवाभ्याम् / नौ | अस्मभ्यम् / नः |
| मत् | आवाभ्याम् | अस्मत् |
| मम / मे | आवयोः / नौ | अस्माकम् / नः |
| मयि | आवयोः | अस्मासु |

ಉದಾ: (पुं०) "सोऽहमाजन्मशुद्धानामाफलोदयकर्मणाम्" रघु० १-५। (स्त्री०) "तथापि वक्तुं व्यवसाययन्ति मां निरस्तनारीसमया दुराधयः" किरा० १-२८। (नं०) "अहमेव गुरुः सुदारुणानामिति हालाहल मास्म तात दृप्यः। ननु सन्ति भवादृशानि भूयो भुवनेऽस्मिन् वचनानि दुर्जनानाम्"।

**अस्मदीय** ಅಸ್ಮದೀಯ (वि०) ನಮ್ಮದಾದ, ನಮ್ಮ ಸಂಬಂಧವಾದ. अस्माकमिदम्—अस्मद् "छः" (४-२-१२४)।

**अस्मद्र्यञ्च्** ಅಸ್ಮದ್ರ್ಯಂಚ್ (वि०) ನಮ್ಮ ಕಡೆಗೆ ತಿರುಗಿದ, ನಮಗೆ ಅಭಿಮುಖವಾದ. अस्मान् अञ्चति—अञ्चु (गतौ) अद्र्यादेशः (६-३-९२)। "क्विन्" (३-२-५९)।

**अस्मि** ಅಸ್ಮಿ (अव्य०) ನಾನು. [ತ್ರಿಜನ್ತಪ್ರತಿರೂಪ ಕಾವ್ಯಯ.]

**अस्मिता** ಅಸ್ಮಿತಾ (स्त्री०) ಅಹಂಭಾವ, ನಾನು ಎಂಬ ಅಭಿಮಾನ, ಸಾಂಖ್ಯೋಕ್ತವಾದ ಅವಿದ್ಯಾದಿಪಂಚ ವಿಧ ಕ್ಲೇಶಗಳಲ್ಲೊಂದು. [ವಿವರಕ್ಕೆ "क्लेश" ಪದದಲ್ಲಿ ನೋಡಿ.]

**अस्र** ಅಸ್ರ (पु०) 1. ಕೋಣ, ಮೂಲೆ. असु (क्षेपणे) "रक्" बाहु०। 2. ಕೇಶ, ಕೂದಲು. (न०) 3. ಕಣ್ಣೀರು. 4. ರಕ್ತ. "प्रावर्तयन्नदीरस्रैर्द्विषां तद्योषितां च सः" माघ० १९-११५। "अस्रः कोणे कचे पुंसि क्लीबमश्रुणि शोणिते" मेदि०।

**अस्रकण्ठ** ಅಸ್ರಕಂಠ (पु०) ಬಾಣ. अस्रः कोण इव कण्ठोऽस्य।

**अस्रज** ಅಸ್ರಜ (न०) ಮಾಂಸ. अस्रात् रक्तात् जायते — अस्र+जनी (प्रादुर्भावे) "ड:" (३-२-९८)।

**अस्रप** ಅಸ್ರಪ(पु०) 1. ರಾಕ್ಷಸ. अस्रं रक्तं पिबति—अस्र+ पा (पाने) "कः" (३-२-४)। 2. ರಾಕ್ಷಸ ದೇವತಾಕ ವಾದ ಮೂಲಾನಕ್ಷತ್ರ. (स्त्री०)–पा–ಪಾ. 3. ಜಿಗಣೆ, ರಕ್ತವನ್ನು ಹೀರುವ ಒಂದು ಹುಳ. 4. ರಾಕ್ಷಸಿ.

**अस्रार्जक** ಅಸ್ರಾರ್ಜಕ (पु०) 1. ಬಿಳಿತುಲಸಿ ಗಿಡ. अस्रं रक्तं अर्जयति — अर्ज (प्रतियत्ने) "ण्वुल्" (३-१-१३३)। 2. ರಕ್ತವನ್ನುಂಟುಮಾಡುವ ದೇಹರಸ. (वि०) 3. ರಕ್ತವನ್ನುಂಟುಮಾಡುವ.

**अस्रु** ಅಸ್ರು (न०) ಕಣ್ಣೀರು. असु (क्षेपणे) "रुक्" (उ० ५-२९)।

**अस्व** ಅಸ್ವ (वि०) 1. ದರಿದ್ರ, ಬಡವ. नास्ति स्वं यस्य। 2. ತನ್ನದಲ್ಲದ, ತನ್ನವನಲ್ಲದ. न स्वः स्वकीयः।

**अस्वक** ಅಸ್ವಕ (वि०) ತನ್ನದಲ್ಲದ, ತನ್ನವನಲ್ಲದ. अस्व "अकच्" (५-३-७१)। स्त्रियाम् "टाप्"। अस्विका ಅಸ್ವಿಕಾ.

**अस्वच्छन्द** ಅಸ್ವಚ್ಛಂದ (वि०) ಪರತಂತ್ರ, ಸ್ವತಂತ್ರ ವಲ್ಲದ. न स्वच्छन्दः।

**अस्वतन्त्र** ಅಸ್ವತಂತ್ರ (वि०) ಪರಾಧೀನ, ಸ್ವತಂತ್ರ ವಲ್ಲದ. न स्वतन्त्रः। स्त्रियाम् अस्वतन्त्रा ಅಸ್ವತಂತ್ರಾ. "अस्वतन्त्राः स्त्रियः कार्याः पुरुषैः स्वैर्दिवानिशम्" मनु० ९-२।

**अस्वन्त** ಅಸ್ವಂತ (पु०) 1. ಸಾವು, ಮರಣ. असूनामन्तः। (न०) 2. ಒಲೆ. (वि०) 3. ಕೆಟ್ಟಪರಿಣಾಮವುಳ್ಳ.

**अस्वप्न** ಅಸ್ವಪ್ನ (पु०) 1. ದೇವತೆ. नास्ति स्वप्नो निद्रा यस्य। 2. ನಿದ್ರೆಯಿಲ್ಲದಿರುವಿಕೆ. (वि०) 3. ನಿದ್ರೆಯಿಲ್ಲದ.

**अस्वस्थ** ಅಸ್ವಸ್ಥ (वि०) 1. ರೋಗಪೀಡಿತನಾದ. 2. ಚಿತ್ತಕ್ಕೆ ನೆಮ್ಮದಿಯಿಲ್ಲದ.

**अस्वाच्छन्द्य** ಅಸ್ವಾಚ್ಛಂದ್ಯ (न०) 1. ಅಸ್ವತಂತ್ರತೆ, ಪರಾಧೀನತೆ. नास्ति स्वाच्छन्द्यं यस्य। (वि०) 2. ಪರಾಧೀನ, ಅಸ್ವತಂತ್ರ.

**अस्वातन्त्र्य** ಅಸ್ವಾತಂತ್ರ್ಯ (न०) 1. ಪರಾಧೀನತೆ. (वि०) 2. ಪರಾಧೀನ.

**अस्वाध्याय** ಅಸ್ವಾಧ್ಯಾಯ (पु०) 1. ಅನಧ್ಯಯನ ಕಾಲ, ವೇದಾಧ್ಯಯನಕ್ಕೆ ನಿಷಿದ್ಧವಾದ ಕಾಲ. न स्वाध्यायो वेदाध्ययनं यस्मिन्। (वि०) 2. ವೇದಾಧ್ಯಯನ ಮಾಡ ದವನು. नास्ति स्वाध्यायो वेदाध्ययनं यस्य।

**अस्वामिक** ಅಸ್ವಾಮಿಕ (वि०) 1. ಯಜಮಾನನಿಲ್ಲದ. न स्वामी यस्य। "अटव्यः पर्वताः पुण्या नद्यस्तीर्थानि यानि च। सर्वाण्यस्वामिकान्याहुः न हि तेषु परिग्रहः"। 2. ವಾರಸುದಾರನಿಲ್ಲದ (ನಿಧಿ, ಬೊಕ್ಕಸ).

**अस्वामिन्** ಅಸ್ವಾಮಿನ್ (वि०) 1. ಯಜಮಾನನಲ್ಲ ದವನು, ಒಡೆಯನಲ್ಲದವನು, ಹಕ್ಕಿಲ್ಲದವನು. न स्वामी। 2. ಯಜಮಾನನಿಲ್ಲದ, ಒಡೆಯನಿಲ್ಲದ. नास्ति स्वामी यस्य।

**अस्वामिविक्रय** ಅಸ್ವಾಮಿವಿಕ್ರಯ (पु०) ಒಡೆಯನಲ್ಲ ದವನಿಂದ ಮಾಡಲ್ಪಡುವ ಮಾರಾಟ. अस्वामिना कृतो विक्रयः। "निक्षिप्तं वा परद्रव्यं नष्टं लब्ध्वाऽपहृत्य वा। विक्रीयतेऽसमक्षं यत् स ज्ञेयोऽस्वामिविक्रयः"।

**अस्वाम्य** ಅಸ್ವಾಮ್ಯ (न०) 1. ಸ್ವತ್ವವಿಲ್ಲದಿರುವಿಕೆ, ಹಕ್ಕಿಲ್ಲ ದಿರುವಿಕೆ, ಅಧಿಕಾರವಿಲ್ಲದಿರುವಿಕೆ. (वि०) 2. ಒಡೆತನ ವಿಲ್ಲದ, ಯಜಮಾನತನವಿಲ್ಲದ. न स्वाम्यं यस्य।

**अस्वास्थ्य** ಅಸ್ವಾಸ್ಥ್ಯ (न०) 1. ನೆಮ್ಮದಿಯಿಲ್ಲದಿರುವಿಕೆ. न स्वास्थ्यम्। "विगृह्य चक्रे नमुचिद्विषा बली य इत्थ-मस्वास्थ्यमहर्दिवं दिवः" माघ० १-५१। 2. ಆರೋಗ್ಯ ವಿಲ್ಲದಿರುವಿಕೆ, ರೋಗ. (वि०) 3. ನೆಮ್ಮದಿಯಿಲ್ಲದ. 4. ಆರೋಗ್ಯವಿಲ್ಲದ, ರೋಗಬಾಧೆಯುಳ್ಳ.

**अह** ಅಹ (अव्य०) 1. ಪೂಜೆ. 2. ಪ್ರಶಂಸೆ, ಹೊಗಳಿಕೆ. 3. ನಿಂದೆ. 4. ಆಜ್ಞೆ, ಅಪ್ಪಣೆ. 5. ನಿಗ್ರಹ. "अह प्रशंसाक्षिपयोर्नियोगे च विनिग्रहे" मेदि०।

**अहंयु** ಅಹಂಯು (वि०) ಅಹಂಕಾರದಿಂದ ಕೂಡಿದ, ಗರ್ವಿತನಾದ. अहम् "युस्" (५-२-१४०)। "अहं-

युनाऽथ क्षितिपः शुभंयुरूचे वचस्तापसकुञ्जरेण" भट्टि० १-२०।

**अहःपति ಅಹಃಪತಿ** (पुं०) 1. ಸೂರ್ಯ. अह्नः पतिः। 2. ಎಕ್ಕದ ಗಿಡ.

**अहःशेष ಅಹಃಶೇಷ** (पुं०) ಹಗಲಿನ ಕೊನೆಯ ಭಾಗ, ಸಾಯಂಕಾಲ. अह्नःशेषः।

**अहङ्कार ಅಹಂಕಾರ** (पुं०) 1. ಗರ್ವ, ನಾನು ಎಂಬ ದುರಭಿಮಾನ, ತನ್ನಲ್ಲಿ ಹಿರಿಮೆಯ ಜ್ಞಾನ. अहमिति क्रियतेऽनेन — डु कृञ् (करणे) "घञ्" (३-३-१२१)। 2. ಅಂತಃಕರಣದ ಒಂದು ಭೇದ. "मनो बुद्धिरहङ्कारश्चित्तं करणमान्तरम्"। 3. ಹೆಮ್ಮೆ, ಸೊಕ್ಕು.

**अहङ्कारिन् ಅಹಂಕಾರಿನ್** (वि०) 1. ಅಭಿಮಾನವುಳ್ಳ. 2. ಗರ್ವದಿಂದ ಕೂಡಿದ. अहङ्कारोऽस्यास्ति "इनिः" (५-२-११५)।

**अहङ्कृत ಅಹಂಕೃತ** (वि०) 1. ನಾನು ಮಾಡುತ್ತೇನೆ ನಾನು ಮಾಡಿದೆನು ಎಂಬ ಭಾವದಿಂದ ಕೂಡಿದ, ದುರಭಿಮಾನದಿಂದ ಕೂಡಿದ. अहमिति कृतं येन। "यस्य नाहङ्कृतो भावः बुद्धिर्यस्य न लिप्यते। हत्वापि स इमाल्लोकान्न हन्ति न निबध्यते" गीता १८-१७। 2. ಸೊಕ್ಕುಳ್ಳ, ಹೆಮ್ಮೆಪಡುವ, ಜಂಬದಿಂದ ಕೂಡಿದ. "जातिरूपवयोवृत्तविद्यादिभिरहङ्कृतः" याज्ञ० ३-१५१।

**अहङ्कृति ಅಹಂಕೃತಿ** (स्त्री०) 1. ಅಹಂಕಾರ, ದುರಭಿಮಾನ, ನಾನು ಮಾಡಿದೆನೆಂಬ ಭಾವ. 2. ಗರ್ವ, ಸೊಕ್ಕು, ಹೆಮ್ಮೆ. अहम्+डु कृञ् (करणे) "क्तिन्" (३-३-९४)।

**अहत ಅಹತ** (वि०) 1. ಒಗೆಯದ ಬಟ್ಟೆ, ಚಲುವೆಮಾಡಲ್ಪಡದ ಬಟ್ಟೆ. 2. ಉಪಯೋಗಿಸಲ್ಪಡದ ಬಟ್ಟೆ, ಹೊದೆಯಲ್ಪಡದ ಬಟ್ಟೆ. 3. ಹರಿಯದ ಬಟ್ಟೆ, ಉಟ್ಟು ನಾಶಪಡಿಸಲ್ಪಡದ ಬಟ್ಟೆ. (वि०) 4. ಹೊಡೆಯಲ್ಪಡದ, ಬಡಿಯಲ್ಪಡದ.

**अहन् ಅಹನ್** (न०) 1. ಹಗಲು, ದಿವಸ. न जहाति — ओ हाक् (त्यागे) "कनिन्" (उ० १-१५६)। "सव्यापारामहनि न तथा पीडयेन्मद्वियोगः" मेघ० २-२५। 2. ಆಕಾಶ. 3. ಹಗಲು ರಾತ್ರಿ ಸೇರಿದ ಒಂದು ದಿನ. 4. ವಿಷ್ಣು. अहरिव। "अहः संवत्सरो व्यालः प्रत्ययः सर्वदर्शनः" वि० स०।

**अहन्ता ಅಹಂತಾ** (स्त्री०) ಅಹಂಭಾವ, ನಾನು ಎಂಬ ದುರಭಿಮಾನ. अहमो भावः "तल्" (५-१-११९)।

**अहम् ಅಹಮ್** (अव्य०) 1. ನಾನು. [ಇದು ಮಾಂತವಾದ ವಿಭಕ್ತಿಪ್ರತಿರೂಪಕಾವ್ಯಯ.] 2. ಅಹಂಕಾರ, ದುರಭಿಮಾನ.

**अहमहमिका ಅಹಮಹಮಿಕಾ** (स्त्री०) 1. ನಾನು ತಾನು ಎಂಬ ಪರಸ್ಪರ ಅಹಂಕಾರ, ತಾನೇ ಶ್ರೇಷ್ಠ ತಾನೇ ಸಮರ್ಥ ಎಂದು ಅಹಂಕಾರಪಡುವಿಕೆ. अहमहंशब्दोऽस्त्यत्र — वीप्सायां द्वित्वम् (८-१-२)। "ठन्" (५-२-११६)। "अहमहमिका तु सा स्यात्परस्परं यो भवत्यहङ्कारः" अम०। 2. ನಾನು ಮುಂದು ತಾನು ಮುಂದು ಎಂಬ ಸ್ಪರ್ಧೆ. "क्रियासातत्येनाप्यहमहमिकाक्रान्तमनसः" म० वी० ६-५४।

**अहम्पूर्विका ಅಹಂಪೂರ್ವಿಕಾ** (स्त्री०) ನಾನು ಮೊದಲು ತಾನು ಮೊದಲು ಎಂದು ಸಂತೋಷದಿಂದ ಸೈನಿಕರ ಮುಂದೋಟ. अहम्पूर्वमहम्पूर्वमित्यस्यां क्रियायाम्। [ನಾನು ತಾನು ಎಂದು ಸ್ಪರ್ಧೆಯಿಂದ ಮಾಡುವ ಕೆಲಸ.] "सुगेषु दुर्गेषु च तुल्यविक्रमैर्जवादहम्पूर्विकया यियासुभिः" किरा० १४-३२।

**अहम्प्रत्यय ಅಹಂಪ್ರತ್ಯಯ** (पुं०) ನಾನು ನನ್ನದು ಎಂಬ ಜ್ಞಾನ. अहमिति प्रत्ययः।

**अहम्भाव ಅಹಂಭಾವ** (पुं०) ನಾನು ಎಂಬ ದುರಭಿಮಾನ, ಗರ್ವ, ಅಹಂಕಾರ. अहमिति भावः।

**अहम्मति ಅಹಂಮತಿ** (स्त्री०) ನಾನು ಎಂಬ ಜ್ಞಾನ, ಅವಿದ್ಯೆ, ಅಜ್ಞಾನ. अहमिति मतिः।

**अहर्गण ಅಹರ್ಗಣ** (पुं०) ದಿನಗಳ ಗುಂಪು, ದಿನಗಳ ಸಮೂಹ. अह्नां गणः। रेफः (८-२-६९)। ಇದು ಸೌರ, ಚಾಂದ್ರ ಮತ್ತು ಸಾವನಗಳೆಂದು ಮೂರು ವಿಧ. [ವಿವರಕ್ಕೆ ಸೂರ್ಯಸಿದ್ಧಾಂತದಲ್ಲಿ ನೋಡಿ.]

**अहर्दिव ಅಹರ್ದಿವ** (अव्य०) ಪ್ರತಿದಿನದಲ್ಲೂ. अहनि च दिवा च — वीप्सायां द्वन्द्वो निपा० (५-४-७७)। "विगृह्य चक्रे नमुचिद्विषा बली य इत्थमस्वास्थ्यमहर्दिवं दिवः" माघ० १-५१।

**अहर्निश ಅಹರ್ನಿಶ** (न०) ಹಗಲು ಮತ್ತು ರಾತ್ರಿ, ಒಂದು ದಿನ. अहश्च निशा च। "विरमेत्पक्षिणीं रात्रिं तदेवैकमहर्निशम्" मनु० ४-९७।

**अहर्पति ಅಹರ್ಪತಿ** (पुं०) 1. ಸೂರ್ಯ, ಹಗಲಿನ ಒಡೆಯ. अह्नः पतिः — रेफः (वा० ८-२-६९)। "द्यावापृथिव्योः प्रत्यग्रमहर्पतिरिवातपम्" रघु० १०-५४। 2. ಎಕ್ಕದ ಗಿಡ.

**अहर्मणि** ಅಹರ್ಮಣಿ(ಪುಂ) 1. ಸೂರ್ಯ. अह्नो मणिरिव। 2. ಎಕ್ಕದ ಗಿಡ.

**अहर्मुख** ಅಹರ್ಮುಖ (ನಂ) ಪ್ರಾತಃಕಾಲ, ದಿವಸದ ಪ್ರಾರಂಭಕಾಲ. अह्नो मुखम्।

**अहल्य** ಅಹಲ್ಯ(ವಿಂ) 1. ನೇಗಿಲಿನಿಂದ ಉಳಲು ಯೋಗ್ಯವಲ್ಲದ (ಭೂಮಿ), ಸಾಗುವಳಿಗೆ ಅರ್ಹವಲ್ಲದ. 2. ನೇಗಿಲಿನಿಂದ ಉಳಲ್ಪಡದ. हलेन कृष्यम् "यत्" (४-४-९७)। ನಂ ತಂ।

**अहल्या** ಅಹಲ್ಯಾ (स्त्रीं) ಗೌತಮ ಮಹರ್ಷಿಯ ಪತ್ನಿ ಅಹಲ್ಯಾದೇವಿ, ನಿಮಿಕುಲ ಪುರೋಹಿತನಾದ ಶತಾನಂದ ಮಹರ್ಷಿಯ ತಾಯಿ. [ಗೌತಮ ಮಹರ್ಷಿಯು ಒಂದು ದಿನ ಪ್ರಾತರಾಹ್ನಿಕಕ್ಕಾಗಿ ನದಿಗೆ ತೆರಳಿದಾಗ ಇಂದ್ರನು ಗೌತಮಋಷಿಯ ವೇಷವನ್ನು ತಾಳಿಬಂದು ಅಹಲ್ಯಾದೇವಿಯನ್ನು ಮೋಹಿಸಿದನು. ಮಹರ್ಷಿಗೆ ಈ ವಿಷಯ ತಿಳಿದು ಅಹಲ್ಯೆಯು ಶಿಲೆಯಾಗುವಂತೆಯೂ, ಇಂದ್ರನ ವೃಷಣವು ಬಿದ್ದು ಹೋಗುವಂತೆಯೂ ಶಪಿಸಿ, ಮುಂದೆ ಇಲ್ಲಿಗೆ ಬರಲಿರುವ ಶ್ರೀರಾಮಚಂದ್ರನ ಪಾದಸ್ಪರ್ಶದಿಂದ ಅಹಲ್ಯೆಯ ಶಾಪವಿಮೋಚನೆಯಾಗುವುದೆಂದು ಹೇಳಿ ತಪಸ್ಸಿಗೆ ಹೊರಟರು. ಶ್ರೀರಾಮಚಂದ್ರನು ಆಗಮಿಸಿ ತನ್ನ ಪಾದಧೂಳಿಯಿಂದ ಅಹಲ್ಯೆಗೆ ನಿಜರೂಪವನ್ನುಂಟುಮಾಡಲು ಶಾಪವಿಮುಕ್ತಳಾದ ಪತ್ನಿಯೊಡನೆ ಗೌತಮ ಮಹರ್ಷಿಯು ಶ್ರೀರಾಮಚಂದ್ರನನ್ನು ಸತ್ಕರಿಸುವರು.] ಈ ಅಹಲ್ಯೆಯು ಪಂಚಪತಿವ್ರತಾಸ್ತ್ರೀಯರಲ್ಲೊಬ್ಬಳು. "अहल्या द्रौपदी कुन्ती तारा मण्डोदरी तथा। पञ्चकन्याः स्मरेन्नित्यं महापातकनाशिनीः"।

**अहल्याजार** ಅಹಲ್ಯಾಜಾರ (ಪುಂ) ಇಂದ್ರ.

**अहल्याह्रद** ಅಹಲ್ಯಾಹ್ರದ(ಪುಂ) ಗೌತಮ ಮಹರ್ಷಿಯ ಆಶ್ರಮದಲ್ಲಿರುವ ಒಂದು ತೀರ್ಥ.

**अहस्कर** ಅಹಸ್ಕರ (ಪುಂ) 1. ಸೂರ್ಯ. अहः करोति— डु कृञ् (करणे) "ट:" (३-२-२१)। "स:" (८-३-४८)। "अपमेघमोदकबिन्दुमौक्तिकैरलञ्चकारास्य वधूरहस्कर:" माघं १-५८। 2. ಎಕ್ಕದ ಗಿಡ.

**अहह** ಅಹಹ(अव्यं) 1. ಆಶ್ಚರ್ಯ. 2. ದುಃಖ. 3. ಕಷ್ಟ, ಶ್ರಮ. 4. ಸಂಬೋಧನೆ, ಕರೆ. 5. ಸಂತೋಷ. ಈ ಅರ್ಥಗಳನ್ನು ಕೊಡುವ ಶಬ್ದ. अहं जहाति —ओ हाक् (त्यागे) "ड:" (३-२-१०१)। "अहहेत्यद्भुते खेदे परिक्लेशप्रहर्षयोः। संबोधनेऽपि" मेदिं।

**अहार्य** ಅಹಾರ್ಯ (ಪುಂ) 1. ಪರ್ವತ, ಬೆಟ್ಟ. न हार्यः— हृञ् (हरणे) "ण्यत्" (३-१-१२४)। ನಂ ತಂ। (ವಿಂ) 2. ಒಯ್ಯಲಾಗದ, ಕದಿಯಲಾಗದ. 3. ಒಯ್ಯಲನರ್ಹವಾದ. 4. ಭೇದಿಸಲಾಗದ. 5. ದೃಢವಾದ, ಸ್ಥಿರವಾದ. "विमुच्य सा हारमहार्यनिश्चया विलोलयष्टिप्रविलुप्तचन्दनम्" कुमां ५-८।

**अहि** ಅಹಿ (ಪುಂ) 1. ಸರ್ಪ, ಹಾವು. आहन्ति — आ+हन (हिंसागत्योः) "इण्" आङो ह्रस्वश्च (उं ४-१३७)। "करेण शम्भोर्वलयीकृताहिना सहिष्यते तत्प्रथमावलम्बनम्" कुमां ५-६६। 2. ವೃತ್ರಾಸುರ. 3. ಸೂರ್ಯ. 4. ರಾಹು. 5. ಪಥಿಕ, ಪಾಂಥ. 6. ಆಶ್ಲೇಷಾ ನಕ್ಷತ್ರ. 7. ನೀರು. 8. ಭೂಮಿ. 9. ಕರೆಯುವ ಹಸು. 10. ಸೀಸಲೋಹ. (ವಿಂ) 11. ವ್ಯಾಪಕವಾದ, ಹರಡುವ, ಪಸರಿಸುವ. (द्विवं) 12. ಭೂಮಿ ಮತ್ತು ಆಕಾಶ.

**अहिंसा** ಅಹಿಂಸಾ(स्त्रीं) 1. ಹಿಂಸಿಸದಿರುವಿಕೆ, ತೊಂದರೆ ಕೊಡದಿರುವಿಕೆ, ವಾಕ್ಕು ಶರೀರ ಮತ್ತು ಮನಸ್ಸು ಇವುಗಳಿಂದ ಇತರರನ್ನು ನೋಯಿಸದಿರುವಿಕೆ. 2. ಅಷ್ಟಾಂಗಯೋಗದ ಅಂಗವಾದ ಯಮದ ಒಂದು ಭೇದ. "अहिंसासत्यास्तेयब्रह्मचर्यापरिग्रहा यमाः" पां यों सूं २-३०।

**अहिंस्र** ಅಹಿಂಸ್ರ (ವಿಂ) ಹಿಂಸಿಸದಿರುವ, ಹಿಂಸಿಸುವ ಸ್ವಭಾವದವನಲ್ಲದ. ನಂ ತಂ।

**अहिच्छत्र** ಅಹಿಚ್ಛತ್ರ (ಪುಂ) 1. ಅರ್ಜುನನು ಗೆದ್ದು ದ್ರೋಣಾಚಾರ್ಯರಿಗೆ ಒಪ್ಪಿಸಿದ ಒಂದು ದೇಶ. 2. ಬಲಮುರಿ ಗಿಡ, ಕುರುಟಿಗೆ ಗಿಡ.

**अहिजित्** ಅಹಿಜಿತ್ (ಪುಂ) 1. ಶ್ರೀಕೃಷ್ಣ, ಕಾಳಿಯ ಮರ್ದನ. 2. ಇಂದ್ರ.

**अहित** ಅಹಿತ (ಪುಂ) 1. ಶತ್ರು, ವೈರಿ, ಹಗೆ. न हितः। "अहितानभि वाहिन्या स मानी चतुरङ्गया" माघं १९-२५। (ನಂ) 2. ನಷ್ಟ, ಹಾನಿ, ಕೇಡು. "अहितं न विचिन्तितं मयैतत्" यादं १५-२७। (ವಿಂ) 3. ಪಥ್ಯವಲ್ಲದ, ಹಿತವಲ್ಲದ. 4. ಅನರ್ಥಕರವಾದ, ಹಾನಿಯನ್ನುಂಟುಮಾಡುವ. "अहितादनपत्रपस्त्रसन्नतिमात्रोज्झितभीरनास्तिकः" माघं १६-७।

**अहितुण्डिक** ಅಹಿತುಂಡಿಕ (ಪುಂ) ಹಾವಾಡಿಗ, ಹಾವಿನೊಡನೆ ಆಟವಾಡುವವನು. अहितुण्डेन दीव्यति "ठक्" (४-४-२)। संज्ञापूर्वकत्वात् वृद्ध्यभावे रूपम्।

**अहिद्विष्** ಅಹಿದ್ವಿಷ್ (पु०) 1. ಗರುಡ. 2. ಶ್ರೀಕೃಷ್ಣ. 3. ಮುಂಗಸಿ, ಕೀರ. 4. ಮಯೂರ, ನವಿಲು. अहिं सर्पं द्वेष्टि—द्विष (अप्रीतौ) "क्विप्" (३-२-६१)। 5. ಇಂದ್ರ. अहिं वृत्रासुरं द्वेष्टि—द्विष "क्विप्" (३-२-६१)। "समस्तकार्येषु गतेन धुर्यतामहिद्विष-स्तद्वचता निशम्यताम्" माघ० १-४१। ಹೀಗೆಯೇ अहिद्रुह्, अहिविद्विष् ಇತ್ಯಾದಿ.

**अहिनकुल** ಅಹಿನಕುಲ (न०) ಸರ್ಪಗಳು ಮತ್ತು ಮುಂಗಸಿಗಳು. अहयश्च नकुलाश्च एषां समाहारः (२-४-९)।

**अहिनिर्मोक** ಅಹಿನಿರ್ಮೋಕ (पु०) ಹಾವಿನ ಸೋಲೆ, ಹಾವಿನ ಪೊರೆ.

**अहिपति** ಅಹಿಪತಿ -राज -ರಾಜ (पु०) ಸರ್ಪರಾಜ, ವಾಸುಕಿ.

**अहिफेन** ಅಹಿಫೇನ (पु०) 1. ಹಾವಿನ ನೊರೆ, ಹಾವಿನ ಬಾಯಿ ಜೊಲ್ಲು. 2. ಅಫೀಮು.

**अहिभय** ಅಹಿಭಯ (न०) 1. ರಾಜನಿಗೆ ತನ್ನವರಾದ ವಿಶ್ವಾಸಘಾತಕರಿಂದುಂಟಾಗುವ ಭಯ. "महीभुजा-महिभयं स्वपक्षप्रभवं भयम्" अम०। 2. ಹಾವಿನ ಭಯ.

**अहिभानु** ಅಹಿಭಾನು (पु०) ಸೂರ್ಯ ಸಂಚಾರಕ್ಕೆ ಕಾರಣವಾದ ವಾಯು.

**अहिभुज्** ಅಹಿಭುಜ್ (पु०) 1. ಗರುಡ. 2. ಮುಂಗಸಿ, ಕೀರ. 3. ಮಯೂರ, ನವಿಲು. अहिं भुङ्क्ते—भुज (पालनाभ्यवहारयोः) "क्विप्" (३-२-७६)।

**अहिभृत्** ಅಹಿಭೃತ್ (पु०) ಶಿವ, ಈಶ್ವರ. अहिं बिभर्ति—डु भृञ् (धारणपोषणयोः) "क्विप्" (३-२-७६)।

**अहिम** ಅಹಿಮ (न०) 1. ಉಷ್ಣತೆ, ಬಿಸಿ. (वि०) 2. ಬಿಸಿಯಾದ.

**अहिमकर** ಅಹಿಮಕರ -द्युति -ದ್ಯುತಿ -रुचि -ರುಚಿ (पु०) ಸೂರ್ಯ. अहिमः करः अहिमा द्युतिः रुचिर्वा यस्य। "अहिमरुचौ हिमधाम्नि याति चास्तम्" माघ० ४-२०।

**अहिमर्दनी** ಅಹಿಮರ್ದನೀ (स्त्री०) ಸರ್ಪಾಕ್ಷಿ, ಈಶ್ವರೀ ಹಂಬು. अहिर्मर्द्यतेऽनया—मृद (क्षोदे) "ल्युट्" (३-३-११७)।

**अहिमार** ಅಹಿಮಾರ -मारक -ಮಾರಕ (पु०) 1. ಕಗ್ಗಲಿ ಮರ. 2. ಗರುಡ. 3. ಮಯೂರ, ನವಿಲು. 4. ಮುಂಗಸಿ, ನಕುಲ, ಕೀರ. अहिं मारयति—मृङ् (प्राणत्यागे) + णिच् "अण्" (३-२-१)। "ण्वुल्" (३-१-१३३) वा।

**अहिमांशु** ಅಹಿಮಾಂಶು (पु०) ಸೂರ್ಯ. अहिमा अंशवोऽस्य। "दोषापि नूनमहिमांशुरसौ किलेति" माघ० ४-४६।

**अहिमेद** ಅಹಿಮೇದ (पु०) ಕಗ್ಗಲಿ ಮರ.

**अहिरिपु** ಅಹಿರಿಪು (पु०) 1. ಗರುಡ. 2. ಮುಂಗಸಿ, ಕೀರ. 3. ಮಯೂರ, ನವಿಲು. 4. ಶ್ರೀಕೃಷ್ಣ, ಕಾಳಿಯ ಮರ್ದನ. अहेः सर्पस्य रिपुः। 5. ಇಂದ್ರ. अहेः वृत्रासुरस्य रिपुः।

**अहिलता** ಅಹಿಲತಾ (स्त्री०) 1. ವೀಳ್ಯದೆಲೆಯ ಬಳ್ಳಿ. 2. ಈಶ್ವರೀ ಹಂಬು, ಸರ್ಪಾಕ್ಷಿ ಲತೆ.

**अहिहन्** ಅಹಿಹನ್ (पु०) 1. ಗರುಡ. 2. ಇಂದ್ರ. अहिं सर्पं वृत्रासुरं वा हतवान्—हन (हिंसागत्योः) "क्विप्" (३-२-७६)।

**अहीन** ಅಹೀನ (पु०) 1. ಸರ್ಪರಾಜ, ವಾಸುಕಿ. अहीनां इनः स्वामी। 2. ಅನೇಕ ದಿನಗಳಲ್ಲಿ ಮಾಡಬಹುದಾದ ಯಾಗ. अहोभिः साध्यते "खः" (५-१-८७)। द्व्यहीनः त्र्यहीनः ಇತ್ಯಾದಿ. (वि०) 3. ಬಿಡದಿರುವ. 4. ಸಂಪೂರ್ಣವಾದ, ಕಡಿಮೆಯಾಗಿಲ್ಲದ, ನ್ಯೂನತೆಯಿಲ್ಲದ. 5. ನಿಕೃಷ್ಟವಲ್ಲದ, ಶ್ರೇಷ್ಠವಾದ.

**अहीन्द्र** ಅಹೀಂದ್ರ (पु०) ಸರ್ಪರಾಜ, ವಾಸುಕಿ. अहीना-मिन्द्रः। "अहीन्द्रदामभिर्भीमैरंसलम्बिभिरंसलः" याद० १६-५१।

**अहे** ಅಹೇ (अव्य०) 1. ವಿಯೋಗ, ಅಗಲಿಕೆ. 2. ದುಃಖ. 3. ನಿಂದೆ—ಇವುಗಳನ್ನು ಸೂಚಿಸುವ ಶಬ್ದ.

**अहेरु** ಅಹೇರು (पु०) ಶತಮೂಲಿ ಗಿಡ, ಶತಾವರಿ ಗಿಡ.

**अहो** ಅಹೋ (अव्य०) ಈ ಕೆಳಗಿನ ಅರ್ಥವನ್ನು ಕೊಡುವ ಶಬ್ದ : 1. ಆಶ್ಚರ್ಯ. "अहो स्थिरः कोऽपि तवेप्सितो युवा चिराय कर्णोत्पलशून्यतां गते" कुमा० ५-४७। "अहो महत्सत्त्वमहो पराक्रमः" याद० १४-२५। 2. ದಯೆ, ಕನಿಕರ, ಕರುಣೆ. "अहो दुरन्ता बलव-द्विरोधिता" किरा० १-२३। 3. ನಿಂದೆ, ಬೈಗಳು. 4. ಕರೆ, ಸಂಬೋಧನೆ. "अहो अहो देवगणाः सुरेन्द्र-मुख्याः शृणुध्वं वचनं ममैते" कुमा० १२-५४। 5. ಶೋಕ, ದುಃಖ. 6. ಅಸೂಯೆ, ಹೊಟ್ಟೆಕಿಚ್ಚು. 7. ಸಂದೇಹ, ಸಂಶಯ. 8. ಪ್ರಶಂಸೆ, ಹೊಗಳಿಕೆ. 9. ಪಾದಪೂರಣ. 10. ಸಂತೋಷ, ತೃಪ್ತಿ. "अहो

धिगर्थे शोके च करुणार्थविषादयोः। सम्बोधने प्रशंसायां विस्मये पादपूरणे। असूयायां वितर्के च" मेदि०।

**अहोरात्र** ಅಹೋರಾತ್ರ (पु०) ಹಗಲು ರಾತ್ರಿ ಇವು ಗಳಿಂದ ಕೂಡಿದ ಒಂದು ದಿನ. अहश्च रात्रिश्च अनयोः समाहारः "अच्" (५-४-८७)।

**अहोबत** ಅಹೋಬತ (अव्य०) 1. ಸಂಬೋಧನ, ಕರೆ. 2. ದಯೆ, ಕನಿಕರ. 3. ಆಶ್ಚರ್ಯ—ಈ ಅರ್ಥಗಳನ್ನು ಕೊಡುವ ಶಬ್ದ. "अहोबत महत्पापं कर्तुं व्यवसिता वयम्" गीता १-४५। "अहोबतासि स्पृहणीयवीर्यः" कुमा० ३-२०।

**अह्नाय** ಅಹ್ನಾಯ (अव्य०) ಶೀಘ್ರವಾಗಿ, ಜಾಗ್ರತೆ ಯಾಗಿ, ತತ್‌ಕ್ಷಣದಲ್ಲಿ. "अह्नाय कोपकलुषो विकटं विहस्य" कुमा० १७-२५। "अह्नाय तावदरुणेन तमो निरस्तम्" रघु० ५-७१।

**अह्रीक** ಅಹ್ರೀಕ (पु०) 1. ಕ್ಷಪಣಕ, ಜೈನ (ದಿಗಂಬರ) ಸಂನ್ಯಾಸಿ. (वि०) 2. ಲಜ್ಜೆಯಿಲ್ಲದ, ನಾಚಿಕೆಯನ್ನು ತ್ಯಜಿಸಿದ. नास्ति ह्रीर्यस्य।

**अह्वल** ಅಹ್ವಲ (पु०) 1. ಗೇರುಮರ. (वि०) 2. ವಿಹ್ವಲ ನಲ್ಲದ, ಸ್ಥಿರಚಿತ್ತನಾದ, ಧೈರ್ಯಶಾಲಿ.

इति "अ" कारादिपदार्थनिरूपणम्।

---

# आ

**आ** ಆ ಇದು ವರ್ಣಮಾಲೆ (ವರ್ಣಸಮಾಮ್ನಾಯ) ಯಲ್ಲಿ ಎರಡನೆಯ ಅಕ್ಷರ. ಉದಾತ್ತ, ಅನುದಾತ್ತ ಮತ್ತು ಸ್ವರಿತಗಳೆಂಬ ಮೂರು ಭೇದಗಳುಳ್ಳ ಈ ದೀರ್ಘಾ ಕಾರವು ಪುನಃ ಅನುನಾಸಿಕ ಮತ್ತು ಅನನುನಾಸಿಕ ಗಳೆಂಬ ಭೇದದಿಂದ ಎರಡು ವಿಧವಾಗಿ ಒಟ್ಟು ಆರು ವಿಧವಾಗುವುದು.

**आ** ಆ (अव्य०) 1. ಸ್ಮೃತಿ, ಸ್ಮರಣೆ, ನೆನಪು. आप्लृ (व्याप्तौ) "क्विप्" (३-२-१७८)। "आ एवं किल तत्"। 2. ವಾಕ್ಯಾರ್ಥಸೂಚನೆ. "आ एवं मन्यसे" (पूर्वं मैवं मंस्था इदानीमेवं मन्यसे इत्यर्थः)। 3. ಅನು ಕಂಪ, ದಯೆ. 4. ಸಮುಚ್ಚಯ, ಒಟ್ಟುಗೂಡಿಸುವಿಕೆ. [ಇದು ಪ್ರಗೃಹ್ಯಸಂಜ್ಞೆಯುಳ್ಳ ಅವ್ಯಯವಾದುದರಿಂದ ಮೇಲಿನ ವಾಕ್ಯಗಳಲ್ಲಿ ಸಂಧಿ ಬಂದಿರುವುದಿಲ್ಲ.] "आ प्रगृह्यं स्मृतौ वाक्येऽनुकम्पायां समुच्चये" मेदि०।

**आकम्प** ಆಕಂಪ (पु०) 1. ಸ್ವಲ್ಪ ನಡುಕ. आ+कपि (चलने) "घञ्" (३-३-१८)। 2. ಸ್ವಲ್ಪ ಚಲನೆ.

**आकम्पन** ಆಕಂಪನ (न०) 1. ಸ್ವಲ್ಪ ನಡುಕ. 2. ಸ್ವಲ್ಪ ಚಲನೆ. आ+कपि (चलने) भावे "ल्युट्" (३-३-११५)। (वि०) 3. ಸ್ವಲ್ಪ ನಡುಕವುಳ್ಳ, ಸ್ವಲ್ಪ ನಡುಕದ ಸ್ವಭಾವದ. 4. ಸ್ವಲ್ಪ ಚಲನೆಯನ್ನುಂಟುಮಾಡುವ. आ+कपि (चलने)+णिच् "ल्युः" (३-१-१३४)।

**आकम्पित** ಆಕಂಪಿತ (न०) 1. ಸ್ವಲ್ಪ ಅಲ್ಲಾಡುವಿಕೆ. ಸ್ವಲ್ಪ ನಡುಗುವಿಕೆ. आ+कपि (चलने) भावे "क्तः" (३-३-११४)। (वि०) 2. ಸ್ವಲ್ಪ ಅಲ್ಲಾಡಿಸಲ್ಪಟ್ಟ, ಸ್ವಲ್ಪ ನಡುಗಿಸಲ್ಪಟ್ಟ. आ+कपि "क्तः" (३-२-१०२)। "पृक्तस्तुषारैर्गिरिनिर्झराणामनोकहाकम्पितपुष्पगन्धी" रघु० २-१३।

**आकर** ಆಕರ (पु०) 1. ಸಮೂಹ, ಗುಂಪು. आ+डु कृञ् (करणे) "घः" (३-३-११८)। "ततो मन्दानिलोद्धूतकमलाकरशोभिना" कुमा० २-२९। 2. ಗಣಿ, ಚಿನ್ನ ಬೆಳ್ಳಿ ಮುಂತಾದುವುಗಳ ಉತ್ಪತ್ತಿಸ್ಥಾನ. आकीर्यन्ते धातवोऽत्र—आ+कॄ (विक्षेपे) "अप्" (३-३-५७)। "दिलीपसूनुर्मणिराकरोद्भवः प्रयुक्तसंस्कार इवाधिकं बभौ" रघु० ३-१८।

**आकरिक** ಆಕರಿಕ (पु०) ರಾಜನಿಂದ ನೇಮಿಸಲ್ಪಟ್ಟ ಗಣಿಯ ಅಧಿಕಾರಿ. आकरे नियुक्तः "ठक्" (४-४-६९)। (Superintendent of Mines).

**आकरिन्** ಆಕರಿನ್ (वि०) 1. ಗಣಿಯಲ್ಲಿ ಹುಟ್ಟಿದ, ಗಣಿಯೇ ಉತ್ಪತ್ತಿಸ್ಥಾನವಾಗಿ ಉಳ್ಳ. 2. ಶ್ರೇಷ್ಠವಾದ ಉತ್ಪತ್ತಿಸ್ಥಾನವುಳ್ಳ. आकर "इनिः" (५-२-११५)। "दधतमाकरिभिः करिभिः क्षतैः समवतारसमैरसमैस्तटैः" किरा० ५-७।

**आकर्णं** ಆಕರ್ಣ (अव्य०) ಕಿವಿಯವರೆಗೂ. कर्णमभिव्याप्य। अव्ययी०। "आकर्णमुल्लसितमम्बु विकासिकाशनीकाशमाप समतां सितचामरस्य" माघ० ५-३५।

**आकर्णन** ಆಕರ್ಣನ (न०) ಶ್ರವಣಮಾಡುವುದು, ಕೇಳುವುದು. आ+कर्ण (भेदने)+णिच् "ल्युट्" (३-३-११५)। "द्रुतं विधूयान्यदभूयतानया मुदा तदाकर्णनसज्जकर्णया" नैष० १-३५।

**आकर्णित** ಆಕರ್ಣಿತ (वि०) ಕೇಳಲ್ಪಟ್ಟ. आ+कर्ण (भेदने)+णिच् "क्तः" (३-२-१०२)। "अस्मिन् धनाधीश्वरराजधान्यामाकर्णितं हैमवतीसखेन" याद० १८-२४।

**आकर्ष** ಆಕರ್ಷ (पु०) 1. ದ್ಯೂತ, ಜೂಜು. 2. ಪಗಡೆ ಕಾಯಿ. 3. ಪಗಡೆಯಾಟದ ಹಲಗೆ (ಹಾಸು). आकृष्यते—आ+कृष (विलेखने) "घञ्" (३-३-१९)। 4. ಆಕರ್ಷಿಸುವಿಕೆ, ಎಳೆಯುವಿಕೆ. आ+कृष भावे "घञ्" (३-३-१८)। 5. ಒರೆಗಲ್ಲು. 6. ಸಾಣೆಕಲ್ಲು. आकृष्यतेऽत्र—अधि० "घञ्" (३-३-१२१)। 7. ಕಣದಲ್ಲಿ ಧಾನ್ಯವನ್ನು ಬೇರ್ಪಡಿಸಿ ಹುಲ್ಲು ಕಡ್ಡಿಗಳನ್ನು ಎಳೆಯಲು ಅಂಕುಶದಂತೆ ಮಾಡಿರುವ ಕೋಲು. आ+कृष कर० "घञ्" (३-३-१२१)। 8. ಧನುರ್ವಿದ್ಯಾಭ್ಯಾಸಕ್ಕಾಗಿ ಉಪಯೋಗಿಸುವ ವಸ್ತು. 9. ಅಯಸ್ಕಾಂತ, ಸೂಜಿಗಲ್ಲು. 10. ಇಂದ್ರಿಯ. (वि०) 11. ಆಕರ್ಷಿಸುವ, ಎಳೆಯುವ. आ+कृष कर्त० "अच्" (३-१-१३४)। "आकर्षो द्यूत इन्द्रिये। पाशके शारिफलके कोदण्डाभ्यासवस्तुनि। आकर्षणेऽपि पुंसि स्यात्" मेदि०।

**आकर्षक** ಆಕರ್ಷಕ (पु०) 1. ಅಯಸ್ಕಾಂತ, ಸೂಜಿಗಲ್ಲು. 2. ಕಣದಲ್ಲಿ ಧಾನ್ಯವನ್ನು ಬೇರ್ಪಡಿಸಿ ಹುಲ್ಲು ಕಡ್ಡಿಗಳನ್ನು ಎಳೆಯಲು ಅಂಕುಶದಂತೆ ಮಾಡಿರುವ ಕೋಲು. आकर्षति—आ+कृष (विलेखने) "ण्वुल्" (३-१-१३३)। (वि०) 3. ಎಳೆಯುವವನು.

**आकर्षण** ಆಕರ್ಷಣ (न०) 1. ಎಳೆಯುವಿಕೆ, ಸೆಳೆಯುವಿಕೆ. आ+कृष (विलेखने) "ल्युट्" (३-३-११५)। 2. ಮೋಹಗೊಳಿಸುವಿಕೆ, ವಶಪಡಿಸಿಕೊಳ್ಳುವಿಕೆ. 3. ವಶೀಕರಣಸಾಧನವಾದ ಒಂದು ಕಾರ್ಯ. आकृष्यतेऽनेन—आ+कृष कर० "ल्युट्" (३-३-११७)।

**आकर्षणी** ಆಕರ್ಷಣೀ (स्त्री०) 1. ತಂತ್ರೋಕ್ತವಾದ ಒಂದು ವಿಧ ಮುದ್ರೆ. 2. ಗಿಡದಿಂದ ಹಣ್ಣು ಹೂವು ಮೊದಲಾದುವನ್ನು ಎಳೆದುಕೊಳ್ಳಲು ಮಾಡಿರುವ ತುದಿಯಲ್ಲಿ ಬಗ್ಗಿರುವ ಕೋಲು, ದೋಟಿ, ಕೊಕ್ಕೆ ಕೋಲು. आकृष्यतेऽनया—आ+कृष (विलेखने) कर० "ल्युट्" (३-३-११७)। "ङीप्" (४-१-१५)।

**आकर्षिन्** ಆಕರ್ಷಿನ್ (वि०) ಎಳೆಯುವವನು. आकर्षति—आ+कृष (विलेखने) "णिनिः" (३-१-१३४)। स्त्रियाम् "ङीप्" (४-१-५)। **आकर्षिणी ಆಕರ್ಷಿಣೀ.**

**आकलन** ಆಕಲನ (न०) 1. ಅಪೇಕ್ಷೆ, ಆಸೆ. 2. ಅನುಸಂಧಾನ, ವಿಮರ್ಶೆ, ವಿಚಾರ. 3. ಗ್ರಹಣ, ತಿಳಿದುಕೊಳ್ಳುವಿಕೆ. 4. ಲೆಕ್ಕ, ಎಣಿಕೆ. 5. ಹಿಡಿಯುವಿಕೆ, ಸ್ವಾಧೀನಪಡಿಸಿಕೊಳ್ಳುವುದು, ಬಂಧನ. "सेव्योऽपि सानुनयमाकलनाय यन्त्रा" माघ० ५-४२।

**आकलित** ಆಕಲಿತ (वि०) 1. ಮಾಡಲ್ಪಟ್ಟ, ರಚಿಸಲ್ಪಟ್ಟ. आ+कल (शब्दसंख्यानयोः) "क्तः" (३-२-१०२)। 2. ಕಟ್ಟಲ್ಪಟ್ಟ. "सुवर्णसूत्राकलिताधराम्बरां विडम्बयन्तं शितिवाससस्तनुम्" माघ० १-६। 3. ವಿಮರ್ಶಿಸಲ್ಪಟ್ಟ.

**आकल्प** ಆಕಲ್ಪ (पु०) 1. ವೇಷ, ಉಡುವುದು ಮತ್ತು ತೊಡುವುದು. 2. ಭೂಷಣ, ಒಡವೆ, ಅಲಂಕಾರ. आ+कृपू (सामर्थ्ये)+णिच् "घञ्" (३-३-१८)। "अवधि दर्शनीयानामाकल्पमनघं दिवः" याद० १६-१८। (अव्य०) 3. ಕಲ್ಪಕಾಲದವರೆಗೂ, ಕಲ್ಪಕಾಲಪರ್ಯಂತ.

**आकष** ಆಕಷ (पु०) 1. ಸಾಣೆಕಲ್ಲು. 2. ಒರೆಗಲ್ಲು. आकषति—आ+कष (हिंसायाम्) "अच्" (३-१-१३४)।

**आकस्मिक** ಆಕಸ್ಮಿಕ (वि०) 1. ಅಕಸ್ಮಾತ್ತಾಗಿ ಉಂಟಾದ, ಅನಿರೀಕ್ಷಿತವಾದ. 2. ಕಾರಣವಿಲ್ಲದ. अकस्मात् भवः "ठक्" (५-४-३४)। स्त्रियाम् "ङीप्" (४-१-१५)। **आकस्मिकी ಆಕಸ್ಮಿಕೀ.** "अतर्कितप्रत्युपकारलेशामाकस्मिकीमाद्रियतानुकम्पाम्" याद० २०-८७।

**आकाङ्क्षा** ಆಕಾಂಕ್ಷಾ (स्त्री०) 1. ಆಸೆ, ಅಭಿಲಾಷೆ. आ+काक्षि (काङ्क्षायाम्) "अः" (३-३-१०३)। 2. ವಾಕ್ಯಾರ್ಥವು ಪೂರ್ತಿಯಾಗಲು ಬೇಕಾದ ಪದಗಳ ಅಪೇಕ್ಷೆ, ಅವಶ್ಯವಾಗಿರಬೇಕಾದ ಪದಗಳ ಅಭಾವದಿಂದ ಅರ್ಥಪೂರ್ತಿಯಾಗದಿರುವಿಕೆ. "अभिधानापर्यवसानमाकाङ्क्षा" शब्दचिं०। "पदस्य पदान्तराभावप्रयुक्तान्वयाननुभावकत्वम् आकाङ्क्षा" त० सं०। "आकाङ्क्षा प्रतीतिपर्यवसानविरहः" सा० द० २। "गौरश्वः पुरुषो हस्ती" ಇಲ್ಲಿನ ಪದಗಳಿಗೆ ಪದಾಂತರಾಪೇಕ್ಷೆಯಿಲ್ಲದಿರುವುದರಿಂದ ಆಕಾಂಕ್ಷೆಯಿಲ್ಲ.

**आकाङ्क्षित** ಆಕಾಂಕ್ಷಿತ (वि०) ಅಪೇಕ್ಷಿಸಲ್ಪಟ್ಟ. आ+काक्षि (काङ्क्षायाम्) "क्तः" (३-२-१०२)।

**आकाङ्क्षिन्** ಆಕಾಂಕ್ಷಿನ್ (वि०) 1. ಅಪೇಕ್ಷೆಯುಳ್ಳ, ಆಸೆಯುಳ್ಳ. आ+काक्षि (काङ्क्षायाम्) "णिनिः" (३-२-१३४)। "अफलाकाङ्क्षिभिर्यज्ञो विधिदृष्टो य इज्यते" गीता १७-११। स्त्रियाम् "ङीप्" (४-१-५)। आकाङ्क्षिणी ಆಕಾಂಕ್ಷಿಣೀ. "तं भावार्थं प्रसवसमयाकाङ्क्षिणीनां प्रजानाम्" रघु० १९-५७। 2. ಕೇಳುವ, ಪ್ರಶ್ನೆಮಾಡುವ.

**आकार** ಆಕಾರ (पु०) 1. ರೂಪ, ಮೂರ್ತಿ. आ+डु कृञ् (करणे) "घञ्" (३-३-१८)। 2. ನೋಟ, ತೋರಿಕೆ, ಮುಖಭಾವ, ಮುಖಚಹರೆ. "आकारसदृशप्रज्ञः प्रज्ञया सदृशागमः" रघु० १-१५। 3. ಮನೋಭಾವವನ್ನು ಸೂಚಿಸುವ ಮುಖರಾಗಾದಿಗಳು, ಹೊರಗಿನ ರೂಪ. आ+डु कृञ् करं० "घञ्" (३-३-१२१)। "तस्य संवृतमन्त्रस्य गूढाकारेङ्गितस्य च" रघु० १-२०। 4. ಸೂಚನೆ, ಸಂಜ್ಞೆ, ಸನ್ನೆ. 5. "आ" ಎಂಬ ಅಕ್ಷರ.

**आकारगुप्ति** ಆಕಾರಗುಪ್ತಿ (स्त्री०) 1. ಮನೋಭಾವವನ್ನು ಮುಚ್ಚುವುದು. 2. ಅನುರಾಗಾದಿಗಳಿಂದ ಉಂಟಾದ ಚೇಷ್ಟೆಯನ್ನು ಮರೆಮಾಚುವುದು. आकारस्य गुप्तिः।

**आकारगोपन** ಆಕಾರಗೋಪನ (न०) "आकारगुप्ति" ಪದದ ಅರ್ಥ.

**आकारण** ಆಕಾರಣ (न०) ಆಹ್ವಾನ, ಕರೆ. आ+डु कृञ् (करणे)+णिच् "ल्युट्" (३-३-११५)। "तैश्च मणिभद्राकारणाय कश्चित् प्रेषितः" पञ्चतं०।

**आकारणा** ಆಕಾರಣಾ (स्त्री०) ಆಹ್ವಾನ, ಕರೆ. आ+डु कृञ् (करणे)+णिच् "युच्" (३-३-१०७)।

**आकारित** ಆಕಾರಿತ (वि०) ಕರೆಯಲ್ಪಟ್ಟ. आ+डु कृञ् (करणे)+णिच् "क्तः" (३-२-१०२)।

**आकालिक** ಆಕಾಲಿಕ (वि०) 1. ಅಕಾಲದಲ್ಲಿ ಉಂಟಾದ. अकाले भवः "ठक्" (४-३-६०)। 2. ಅಲ್ಪಕಾಲದ, ಕ್ಷಣಿಕವಾದ. समानकालावाद्यन्तौ यस्य आकालिकः। समानकाल "इकट्" आकालादेशश्च निपा० (५-१-११४)। आशुविनाशीत्यर्थः। आकालिकः स्तनयित्नुः। "विद्युत्स्तनितवर्षेषु महोल्कानां च संप्लवे। आकालिकमनध्यायमेतेषु मनुरब्रवीत्" मनु० ४-१०३। आकाल "ठञ्" (वा० ५-१-११४)। स्त्रियाम् "टाप्" (४-१-४)। आकालिका। इकट् प्रत्यये "ङीप्" (४-१-१५)। आकालिकी ಆಕಾಲಿಕೀ. ಮಿಂಚು ಮುಂತಾದುದು. "तपस्विनः स्थाणुवनौकसस्तामाकालिकीं वीक्ष्य मधुप्रवृत्तिम्" कुमा० ३-३४।

**आकाश** ಆಕಾಶ (पुंन०) 1. ಗಗನ, ಅಂತರಿಕ್ಷ, ಪಂಚಭೂತಗಳಲ್ಲೊಂದು, ನವದ್ರವ್ಯಗಳಲ್ಲೊಂದು. आसमन्तात् काशन्ते सूर्यादयोऽत्र — काशृ (दीप्तौ) "घञ्" (३-३-१२१)। "आकाशं काशपुष्पच्छविमभिभवता भस्मना शुक्लयन्ती" मुद्रा० ३-२०। [ಶಬ್ದವು ಆಕಾಶದ ವಿಶೇಷ ಗುಣ. ಸಂಖ್ಯೆ, ಪರಿಮಾಣ, ಪೃಥಕ್ತ್ವ, ಸಂಯೋಗ ಮತ್ತು ವಿಭಾಗಗಳು ಸಾಮಾನ್ಯ ಗುಣಗಳು.] 2. ರಂಧ್ರ, ಛಿದ್ರ. 3. ಶೂನ್ಯ, ಸೊನ್ನೆ, ಪೂಜ್ಯ.

**आकाशग** ಆಕಾಶಗ (पु०) 1. ಪಕ್ಷಿ, ಹಕ್ಕಿ. (वि०) 2. ಆಕಾಶದಲ್ಲಿ ಸಂಚರಿಸುವ. आकाशे गच्छति — गम्लृ (गतौ) "डः" (वा० ३-२-४८)।

**आकाशगङ्गा** ಆಕಾಶಗಂಗಾ (स्त्री०) ಗಂಗಾನದಿ, ದೇವನದಿ. "उभौ यदि व्योम्नि पृथक्प्रवाहावाकाशगङ्गापयसः पतेताम्" माघ० ३-८।

**आकाशदीप** ಆಕಾಶದೀಪ (पु०) 1. ಕಾರ್ತಿಕಮಾಸದಲ್ಲಿ ಸಾಯಂಕಾಲ ಎತ್ತರವಾದ ಕಂಬದ ತುದಿಯಲ್ಲಿ ಹಚ್ಚುವ ದೀಪ. 2. ಕಂಬದ ತುದಿಯಲ್ಲಿನ ದೀಪ.

**आकाशभाषित** ಆಕಾಶಭಾಷಿತ (न०) 1. ಆಕಾಶದಿಂದ ಹೊರಡುವ ಮಾತು, ದೇವತೆಗಳು ಅದೃಶ್ಯರಾಗಿ ಆಕಾಶದಲ್ಲಿ ಆಡುವ ಮಾತು. आकाशे भाषितम्। 2. ಬೇರೊಂದು ಪಾತ್ರಪ್ರವೇಶವೇ ಇಲ್ಲದಿದ್ದರೂ ಆಕಾಶದಲ್ಲಿ ಯಾರೋ ಮಾತನಾಡಿದಂತೆ ಭಾವಿಸಿ ಅದನ್ನು ಅನುವಾದ ಮಾಡುತ್ತ ಉತ್ತರಕೊಟ್ಟು ಮಾತನಾಡುವುದು. "किं ब्रवीष्येवमित्यादि विना पात्रं ब्रवीति यत्। श्रुत्वेवानुक्तमप्येकस्तत्स्यादाकाशभाषितम्" सा० द०।

**आकाशयान** ಆಕಾಶಯಾನ (न०) ವಿಮಾನ. आकाशे यान्त्यनेन — या (प्रापणे) "ल्युट्" (३-३-११७)।

**आकाशवचन** ಆಕಾಶವಚನ (न०) "आकाशभाषित" ಪದದ ಅರ್ಥ.

**आकाशवर्त्मन्** ಆಕಾಶವರ್ತ್ಮನ್ (न०) 1. ಆಕಾಶಮಾರ್ಗ, ವಿಮಾನ ಮೊದಲಾದುವು ಸಂಚರಿಸುವ ಮಾರ್ಗ. (वि०) 2. ಆಕಾಶದಲ್ಲಿ ಸಂಚರಿಸುವ.

**आकाशवाणी** ಆಕಾಶವಾಣೀ (स्त्री०) ಅಶರೀರವಾಕ್ಯ, ಆಕಾಶದಲ್ಲಿ ದೇವತೆಗಳು ಅದೃಶ್ಯರಾಗಿ ಆಡುವ ಮಾತು.

**आकाशस्फटिक** ಆಕಾಶಸ್ಫಟಿಕ (पु०) ಆಲಿಕಲ್ಲು, ಆನೆಕಲ್ಲು.

**आकिञ्चन्य** ಆಕಿಂಚನ್ಯ (न०) ದಾರಿದ್ರ್ಯ, ದುರ್ಗತಿ, ಬಡತನ. अकिञ्चनस्य भावः "ष्यञ्" (५-१-१२४)।

**आकीर्ण** ಆಕೀರ್ಣ (वि०) ವ್ಯಾಪ್ತವಾದ, ಹರಡಲ್ಪಟ್ಟ. आकीर्यते—आ+कॄ (विक्षेपे) "क्तः" (३-२-१०२)। "आकीर्णमृषिपत्नीनामुटजद्वाररोधिभिः" रघु० १-५०।

**आकुञ्चन** ಆಕುಂಚನ (न०) ಸಂಕೋಚ, ಎಳೆದುಕೊಳ್ಳುವಿಕೆ, ಅಡಕಮಾಡಿಕೊಳ್ಳುವಿಕೆ. आ+कुञ्च (कौटिल्याल्पीभावयोः) "ल्युट्" (३-१-११५)। [ಇದು ನ್ಯಾಯ ಮತದಲ್ಲಿ ಹೇಳಲ್ಪಟ್ಟ ಐದು ಕರ್ಮಗಳಲ್ಲೊಂದು. ವಿವರಕ್ಕೆ "अवक्षेपण" ಪದದಲ್ಲಿ ನೋಡಿ.]

**आकुञ्चित** ಆಕುಂಚಿತ (वि०) 1. ಎಳೆದುಕೊಳ್ಳಲ್ಪಟ್ಟ, ಅಡಕಮಾಡಿಕೊಳ್ಳಲ್ಪಟ್ಟ. 2. ವಕ್ರವಾಗಿ ಮಾಡಲ್ಪಟ್ಟ, ಬಗ್ಗಿಸಲ್ಪಟ್ಟ. आ+कुञ्च "क्तः" (३-२-१०२)। "नतांसमाकुञ्चितसव्यपादम्" कुमा० ३-७०।

**आकुटिल** ಆಕುಟಿಲ (वि०) ಸ್ವಲ್ಪ ವಕ್ರವಾದ, ಸ್ವಲ್ಪ ತಿರುಗಿಸಿರುವ. आ ईषत् कुटिलः। "तं तावदाकुटिलपक्ष्मविलग्नमद्य" शाकु० ७-२५।

**आकुल** ಆಕುಲ (वि०) 1. ಹರಡಿರುವ, ಚೆದರಿರುವ, ಕೆದರಿರುವ. आ+कुल (संस्त्याने बन्धुषु च) "कः" (३-१-१३५)। "विलम्बमानाकुलकेशपाशया कयाचिदाविष्कृतबाहुमूलया" किरा० ८-१८। 2. ಚಿಂತಾಕ್ರಾಂತವಾದ. "अभिचैद्यं प्रतिष्ठासुरासीत्कार्यद्वयाकुलः" माघ० २-१। 3. ಕ್ಲೇಶದಿಂದ ಕೂಡಿದ. 4. ತುಂಬಿರುವ, ಪೂರ್ಣವಾದ. "प्रचलदूर्मिमालाकुलम्" भर्तृ० १-३। 5. (ಕಾರ್ಯದಲ್ಲಿ) ಮಗ್ನನಾದ, (ಕಾರ್ಯ) ತತ್ಪರನಾದ. "विभवगुरुभिः कृत्यैस्तस्य प्रतिक्षणमाकुला" शाकु० ४-२८। (क्रि० वि०) 6. ದಿಗ್ಭ್ರಮೆಹೊಂದಿ, ತಬ್ಬಿಬ್ಬಾಗಿ, ಕಕ್ಕಾಬಿಕ್ಕಿಯಾಗಿ. "किमेतदित्याकुलमीक्षितं जनैः" माघ० १-२।

**आकुलित** ಆಕುಲಿತ (वि०) 1. ಕ್ಲೇಶಪಡಿಸಲ್ಪಟ್ಟ, ತೊಂದರೆಪಡಿಸಲ್ಪಟ್ಟ. 2. ಚೆದರಿಸಲ್ಪಟ್ಟ, ಚಲ್ಲಾಪಿಲ್ಲಿಯಾಗಿ ಮಾಡಲ್ಪಟ್ಟ. आ+कुल (संस्त्याने बन्धुषु च)+णिच् "क्तः" (३-२-१०२)। "मार्गाचलव्यतिकराकुलितेव सिन्धुः शैलाधिराजतनया न ययौ न तस्थौ" कुमा० ५-८५। 3. ಕೆದರಿಸಲ್ಪಟ್ಟ, ತಾರುಮಾರು ಮಾಡಲ್ಪಟ್ಟ, ಸ್ಥಳಪಲ್ಲಟಮಾಡಲ್ಪಟ್ಟ. "मनोज्ञ एव प्रमदामुखानामम्भोविहाराकुलितोऽपि वेषः" रघु० १६-६७। 4. ದಿಗ್ಭ್ರಮೆಗೊಳಿಸಲ್ಪಟ್ಟ, ತಬ್ಬಿಬ್ಬಾಗಿ ಮಾಡಲ್ಪಟ್ಟ.

**आकुलीकृत** ಆಕುಲೀಕೃತ (वि०) 1. ತುಂಬಿಸಲ್ಪಟ್ಟ, ಕೂಡಿಸಲ್ಪಟ್ಟ. 2. ದಿಗ್ಭ್ರಮೆಗೊಳಿಸಲ್ಪಟ್ಟ. 3. ತೊಂದರೆಪಡಿಸಲ್ಪಟ್ಟ, ನೋಯಿಸಲ್ಪಟ್ಟ. अनाकुलः आकुलः कृतः—आकुल+च्वि+डु कृञ् (करणे) "क्तः" (३-२-१०२)। 4. ಚೆದರಿಸಲ್ಪಟ್ಟ.

**आकूणित** ಆಕೂಣಿತ (वि०) ಸ್ವಲ್ಪ ಬಗ್ಗಿಸಲ್ಪಟ್ಟ, ಸ್ವಲ್ಪ ಸಂಕೋಚಮಾಡಲ್ಪಟ್ಟ. आ+कूण (संकोचे) "क्तः" (३-२-१०२)। "मदनशरशल्यवेदनाकूणितत्रिभागेन" काद०।

**आकूत** ಆಕೂತ (न०) ಅಭಿಪ್ರಾಯ, ಆಶಯ. आ+कू (शब्दे) भावे "क्तः" (३-३-११४)। "इतीरिताकूतमनीलवाजिनं जयाय दूतः प्रतितर्ज्य तेजसा" किरा० १४-२६। "छन्दोऽभिप्राय आकूतं मतभावाशया अपि" अभि० चि०।

**आकूति** ಆಕೂತಿ (स्त्री०) ಆಶಯ, ಅಭಿಪ್ರಾಯ. आ+कू (शब्दे) "क्तिन्" (३-३-९४)।

**आकृति** ಆಕೃತಿ (स्त्री०) 1. ರೂಪ, ಮೂರ್ತಿ. आ+डु कृञ् (करणे) "क्तिन्" (३-३-९४)। "किमिव हि मधुराणां मण्डनं नाकृतीनाम्" शाकु० १-१७। "गोवर्धनस्याकृतिरन्वकारि" माघ० ३-४। 2. ದೇಹ, ಶರೀರ. 3. ಮಾದರಿ, ಲಕ್ಷಣ. 4. ಸುಂದರವಾದ ನೋಟ. "न ह्याकृतिः सुसदृशं विजहाति वृत्तम्" मृच्छ० ९-१६। 5. ಜಾತಿ, ಬಗೆ. 6. ಜಾತಿಯ ಅಭಿವ್ಯಂಜಕವಾದ ಅವಯವಗಳ ಜೋಡಣೆ.

**आकृष्ट** ಆಕೃಷ್ಟ (वि०) ಎಳೆಯಲ್ಪಟ್ಟ, ಆಕರ್ಷಿಸಲ್ಪಟ್ಟ. आ+कृष (विलेखने) "क्तः" (३-२-१०२)। "आकृष्टप्रतनुवपुर्लतैस्तरद्भिः तस्याम्भस्तदथ सरो महार्णवस्य" माघ० ८-२५।

**आकृष्टि** ಆಕೃಷ್ಟಿ (स्त्री०) ಎಳೆತ, ಆಕರ್ಷಣ. आ+कृष (विलेखने) "क्तिन्" (३-३-९४)।

**आकेकरा** ಆಕೇಕರಾ (स्त्री०) ಅರ್ಧ ತೆರೆದು ಅರ್ಧ ಮುಚ್ಚಿದ ದೃಷ್ಟಿ, ಕಡೆಗಣ್ಣಿನ ಕಡೆ ಮುಚ್ಚಿಕೊಂಡು ಉಳಿದ ಭಾಗದಲ್ಲಿ ತೆರೆದುಕೊಂಡು ಕಣ್ಣಿನ ಗುಡ್ಡೆಗಳನ್ನು ತಿರುಗಿಸುತ್ತ ನೋಡುವ ನೋಟ. "आकुञ्चितपुटापाङ्गसङ्गतार्धनिमेषिणी। मुहुर्व्यावृत्ततारा च दृष्टि-

राकेकरा स्मृता"। "आकेकराणामनघस्तदानीमेकक्षणं लक्ष्यममूद्दूनाम्" याद० १३-९। "निद्राच्छेदाभिताम्रा चिरमवतु हरेर्दृष्टिराकेकरा वः" मुद्रा० ३-२१।

**आक्रन्द ಆಕ್ರಂದ** (पु०) 1. ಆಹ್ವಾನ, ಕರೆ. आ+क्रदि (आह्वाने रोदने च) "घञ्" (३-३-१८)। 2. ಶಬ್ದ, ಧ್ವನಿ, ಗಟ್ಟಿಯಾದ ಕೂಗು. "आक्रन्दे चाप्यपंहीति न दण्डं मनुरब्रवीत्" मनु० ८-२९२। 3. ಭಯಂಕರವಾದ ಯುದ್ಧ. 4. ಶಬ್ದವುಂಟಾಗುವಂತೆ ರೋದನ. "तासामाक्रन्दशब्देन सहसोद्भ्रान्तलोचनः" रामा०। 5. ಸ್ನೇಹಿತ, ಮಿತ್ರ, ಗೆಳೆಯ. 6. ಪಾರ್ಷ್ಣಿಗ್ರಾಹನಿಗೆ ಹಿಂಭಾಗದಲ್ಲಿರುವ ರಾಜ. कर्म० "घञ्" (३-३-१९)। [ಒಂದು ದಿಕ್ಕಿಗೆ ಗೆಲ್ಲಲು ಹೋಗಿರುವ ರಾಜನನ್ನು ಹಿಂಬಾಲಿಸಿ ಹೋಗುವ ಶತ್ರುವು ಪಾರ್ಷ್ಣಿಗ್ರಾಹನು.] "पार्ष्णिग्राहास्ततः पश्चादाक्रन्दस्तदनन्तरम्। आसाराबनयोश्चैव विजिगीषोस्तु पृष्ठतः"। 7. ಸಹೋದರ. आ+क्रदि "अच्" (३-१-१३४)। "आक्रन्दः क्रन्दने ह्वाने मित्रदारुणयुद्धयोः। भ्रातर्यपि च पुंसि स्यात्" मेदि०। 8. ಅಳುವ ಜಾಗ.

**आक्रन्दन ಆಕ್ರಂದನ** (न०) 1. ಆಹ್ವಾನ, ಕರೆ. 2. ಶಬ್ದವುಂಟಾಗುವಂತೆ ರೋದನ. आ+क्रदि (आह्वाने रोदने च) "ल्युट्" (३-३-११५)। (वि०) 3. ಕರೆಯುವ. 4. ಅಳುವ. आ+क्रदि "ल्युः" (३-१-१३४)।

**आक्रन्दिक ಆಕ್ರಂದಿಕ** (वि०) ಅಳುವ ಜಾಗಕ್ಕೆ ಓಡಿಹೋಗುವ. आक्रन्दं रोदनस्थानं धावति—"ठञ्" (४-४-३८)। स्त्रियाम् "ङीप्" (४-१-१५)। आक्रन्दिकी ಆಕ್ರಂದಿಕೀ.

**आक्रन्दिन् ಆಕ್ರಂದಿನ್** (वि०) ರೋದನಪೂರ್ವಕ ಆಹ್ವಾನಮಾಡುವ, ಅಳುತ್ತ ಕರೆಯುವ. आक्रन्दति—आ+क्रदि (आह्वाने रोदने च) "णिनिः" (३-१-१३४)। "परस्पराक्रन्दिनि चक्रवाकयोः पुरो वियुक्ते मिथुने कृपावती" कुमा० ५-२६।

**आक्रम ಆಕ್ರಮ** (पु०) 1. ಆಕ್ರಮಣ. 2. ಮುತ್ತುವಿಕೆ, ಮೇಲೆಬೀಳುವಿಕೆ. आ+क्रमु (पादविक्षेपे) "घञ्" (३-३-१८)। 3. ಪರಾಕ್ರಮ, ಶೌರ್ಯ. 4. ಶಕ್ತಿಯಿಂದ ಹೊಂದುವಿಕೆ, ಸ್ವಾಧೀನಪಡಿಸಿಕೊಳ್ಳುವಿಕೆ. 5. ವ್ಯಾಪ್ತಿ, ಹರಡುವಿಕೆ. 6. ಸೋಲಿಸುವಿಕೆ. भावे "ल्युट्" (३-३-११५)। —क्रमणम्—ಕ್ರಮಣ०. "हरिराक्रमणेन संनतिं किल बिभ्रीत भियेत्यसंभवः" माघ० १६-३४।

**आक्रम्यमाण ಆಕ್ರಮ್ಯಮಾಣ** (वि०) ಮುತ್ತಲ್ಪಡುವ, ಮುತ್ತಿಗೆಹಾಕಲ್ಪಡುವ, ಆಕ್ರಮಿಸಲ್ಪಡುವ. आ+क्रमु (पादविक्षेपे) कर्म० "शानच्" (३-२-१२४)। "असह्यवेगैस्सहसा बलौघैराक्रम्यमाणा बलिनां यदूनाम्" याद० २०-१७।

**आक्रान्त ಆಕ್ರಾಂತ** (वि०) 1. ಆಕ್ರಮಿಸಲ್ಪಟ್ಟ, ಹಿಡಿಯಲ್ಪಟ್ಟ. 2. ಮುತ್ತಿಗೆಹಾಕಲ್ಪಟ್ಟ. आ+क्रमु (पादविक्षेपे) "क्तः" (३-२-१०२)। 3. ತಿರಸ್ಕರಿಸಲ್ಪಟ್ಟ, ಪೀಡಿಸಲ್ಪಟ್ಟ, ನೋಯಿಸಲ್ಪಟ್ಟ. "ननाम मध्योऽतिगुरुत्वभाजा नितान्तमाक्रान्त इवाङ्गनानाम्" माघ० ३-१५। 4. ಅತಿಕ್ರಮಿಸಲ್ಪಟ್ಟ, ಮೀರಲ್ಪಟ್ಟ. "आक्रान्ता तिलकक्रियापि तिलकैर्लग्नद्विरेफाञ्जनैः" माल० ३-५। 5. ವ್ಯಾಪಿಸಲ್ಪಟ್ಟ. "तस्येदमाक्रान्तविमानमार्गम्" रघु० १३-३७। 6. ಹೊಂದಲ್ಪಟ್ಟ. "तामङ्कमारोप्य कृशाङ्गयष्टिं वर्णान्तराक्रान्तपयोधराग्राम्" रघु० १४-२७।

**आक्रान्ति ಆಕ್ರಾಂತಿ** (स्त्री०) 1. ಆಕ್ರಮಣ, ಹಿಡಿಯುವಿಕೆ. आ+क्रमु (पादविक्षेपे) "क्तिन्" (३-३-९४)। "आक्रान्तिसंभावितपादपीठम्" कुमा० ३-११। 2. ಮೇಲೆ ಬೀಳುವಿಕೆ, ಮುತ್ತಿಗೆಹಾಕುವಿಕೆ. 3. ತುಂಬುವುದು, ಆವರಿಸುವುದು. "नालङ्कुर्वन्ति रथ्याः पृथुजघनभराक्रान्तिमन्दैः प्रयातैः" मुद्रा० ३-१०। 4. ಶೌರ್ಯ, ಪರಾಕ್ರಮ, ಬಲ. "आक्रान्तितो न वशमेति महान् परस्य" माघ० ५-४१।

**आक्रीड ಆಕ್ರೀಡ** (पु०) 1. ಕ್ರೀಡಾಸ್ಥಾನ, ಆಟವಾಡುವ ಜಾಗ, ಉದ್ಯಾನ ಮೊದಲಾದುದು. आक्रीडन्त्यत्र—आ+क्रीडृ (विहारे) "घञ्" (३-३-१२१)। "आक्रीडपर्वतास्तेन कल्पितास्तेषु वेश्मसु" कुमा० २-४३। (वि०) 2. ಆಟದ ಸ್ವಭಾವದ, ಆಟವಾಡುವ. आ+क्रीडृ कर्त० "अच्" (३-१-१३४)।

**आक्रीडत् ಆಕ್ರೀಡತ್** (वि०) ಕ್ರೀಡಿಸುತ್ತಿರುವ, ಆಟವಾಡುತ್ತಿರುವ. आ+क्रीडृ (विहारे) "शतृ" (३-२-१२४)।

**आक्रीडन ಆಕ್ರೀಡನ** (न०) ಕ್ರೀಡೆ, ಆಟ. आ+क्रीडृ (विहारे) भावे "ल्युट्" (३-३-११५)।

**आक्रीडिन् ಆಕ್ರೀಡಿನ್** (वि०) ಆಟವಾಡುವ ಸ್ವಭಾವದ. आ+क्रीडृ (विहारे) "घिनुण्" (३-२-१४२)। स्त्रियाम् "ङीप्" (४-१-६)। आक्रीडिनी ಆಕ್ರೀಡಿನೀ.

**आक्रुष्ट** ಆಕ್ರುಷ್ಟ (न०) 1. ಕಠಿನವಾದ ಮಾತು, ಬೈಗಳು. आ+क्रुश (आह्वाने रोदने च) "क्तः" (३-३-११४)। 2. ಕೋಪಗೊಳ್ಳಲ್ಪಟ್ಟ. 3. ಕರೆಯಲ್ಪಟ್ಟ. 4. ದೂಷಿಸಲ್ಪಟ್ಟ. आ+क्रुश कर्मं० "क्तः" (३-२-१०२)। "भेरीभिराक्रुष्टमहागुहामुखः" माघ० १२-२७।

**आक्रोश** ಆಕ್ರೋಶ (पु०) 1. ಕೂಗಾಟ, ಚೀರಾಟ, ಗಟ್ಟಿಯಾಗಿ ಕೂಗಿಕೊಳ್ಳುವುದು. 2. ಆಕ್ಷೇಪಣೆ, ವಾಗ್ದಂಡನೆ. 3. ಬೈಗಳು, ಶಾಪ. आ+क्रुश (आह्वाने रोदने च) "घञ्" (३-३-१८)।

**आक्रोशक** ಆಕ್ರೋಶಕ (वि०) 1. ಕೂಗಾಡುವವನು. 2. ನಿಂದಿಸುವವನು, ದೂಷಿಸುವವನು. 3. ಬೈಯುವವನು. आ+क्रुश (आह्वाने रोदने च) "ण्वुल्" (३-१-१३३)।

**आक्रोशन** ಆಕ್ರೋಶನ (न०) 1. ಶಾಪ, ಬೈಗಳು. 2. ಕೂಗಾಟ. आ+क्रुश (आह्वाने रोदने च) "ल्युट्" (३-३-११५)।

**आक्रोष्टृ** ಆಕ್ರೋಷ್ಟೃ (वि०) 1. ಬೈಯುವವನು. 2. ನಿಂದಿಸುವವನು, ದೂಷಿಸುವವನು. 3. ಗಟ್ಟಿಯಾಗಿ ಕೂಗಾಡುವವನು. आ+क्रुश (आह्वाने रोदने च) "तृच्" (३-१-१३३)।

**आक्लेद** ಆಕ್ಲೇದ (पु०) ನೆನಸುವುದು, ಒದ್ದೆಮಾಡುವುದು, ತೇವಮಾಡುವುದು. आ+क्लिदू (आर्द्रीभावे) "घञ्" (३-३-१८)।

**आक्षद्यूतिक** ಆಕ್ಷದ್ಯೂತಿಕ (वि०) ಪಗಡೆಯಾಟದಿಂದ ಉಂಟಾದ (ವೈರ ಮುಂತಾದುದು). अक्षद्यूतेन निर्वृत्तम् "ठक्" (४-४-१९)।

**आक्षपाटिक** ಆಕ್ಷಪಾಟಿಕ (पु०) 1. ಜೂಜಾಟದ ಅಧ್ಯಕ್ಷ, ಆಟದ ತೀರ್ಪುಗಾರ. 2. ನ್ಯಾಯಾಧೀಶ, ತೀರ್ಪುಗಾರ. अक्षपटे नियुक्तः "ठक्" (४-४-६९)।

**आक्षार** ಆಕ್ಷಾರ (पु०) ವ್ಯಭಿಚಾರದ ದೋಷಾರೋಪಣೆ, — ಅಪವಾದ. आ+क्षर (सञ्चलने)+णिच् "घञ्" (३-३-१८)।

**आक्षारण** ಆಕ್ಷಾರಣ (न०) ವ್ಯಭಿಚಾರದ ದೋಷಾರೋಪಣೆ,— ಅಪವಾದ. आ+क्षर (सञ्चलने)+णिच् "ल्युट्" (३-३-११५)। (स्त्री०) -णा -ಣಾ. आ+क्षर+णिच् "युच्" (३-३-१०७)।

**आक्षारित** ಆಕ್ಷಾರಿತ (वि०) ವ್ಯಭಿಚಾರದೋಷದಿಂದ ದೂರಲ್ಪಟ್ಟವನು. आक्षार्यते—आ+क्षर (सञ्चलने)+णिच् "क्तः" (३-२-१०२)। "आक्षारितः क्षारितोऽभिशस्ते" अम०।

**आक्षिक** ಆಕ್ಷಿಕ (वि०) 1. ಪಗಡೆಯಾಟವಾಡುವವನು. अक्षेण दीव्यति — अक्ष "ठक्" (४-४-२)। 2. ಪಗಡೆಯಾಟದಿಂದ ಜಯಿಸುವವನು. अक्षेण जयति "ठक्" (४-४-२)। 3. ಪಗಡೆಯಾಟದಿಂದ ಜಯಿಸಲ್ಪಟ್ಟ. अक्षेण जितम् "ठक्" (४-४-२)।

**आक्षिप्त** ಆಕ್ಷಿಪ್ತ (वि०) 1. ಆಕ್ಷೇಪಿಸಲ್ಪಟ್ಟ. आ+क्षिप (प्रेरणे) "क्तः" (३-२-१०२)। 2. ಎಸೆಯಲ್ಪಟ್ಟ, ಬಿಸಾಡಲ್ಪಟ್ಟ. आ + क्षिपु (निरसने) "क्तः" (३-२-१०२)। 3. ತಡೆಯಲ್ಪಟ್ಟ. "आक्षिप्तसंपातमपेतशोभम्" किरा० १६-४१। 4. ಹಿಡಿಯಲ್ಪಟ್ಟ. "आक्षिप्ता अपि दन्तीन्द्रैः कोपनैः पतयः परम्" कुमा० १६-३३। 5. ಅಪಹರಿಸಲ್ಪಟ್ಟ. "आक्षिप्तचापावरणेषुजालश्छिन्नोत्तमासिः स मृधेऽवधूतः" किरा० १७-५९। 6. ಗಾಬರಿಗೊಳಿಸಲ್ಪಟ್ಟ. 7. ಅರ್ಥಾಪತ್ತಿ ಪ್ರಮಾಣದಿಂದ ಸಿದ್ಧವಾದ. "पीनो देवदत्तो दिवा न भुङ्क्ते" ಎಂಬಲ್ಲಿ ದೇವದತ್ತನ ಪೀನತ್ವವು ರಾತ್ರಿ ಭೋಜನವಿಲ್ಲದಿದ್ದರೆ ಕೂಡುವುದಿಲ್ಲವಾದುದರಿಂದ ರಾತ್ರಿ ಭೋಜನವು ಆಕ್ಷಿಪ್ತವಾಗುವುದು. 8. ದೂಷಿಸಲ್ಪಟ್ಟ.

**आक्षेप** ಆಕ್ಷೇಪ (पु०) 1. ಹೆದರಿಸುವಿಕೆ. 2. ಎಸೆಯುವುದು, ಬಿಸಾಡುವುದು. 3. ಎಳೆದುಕೊಳ್ಳುವುದು, ಹಿಂದಕ್ಕೆ ತೆಗೆದುಕೊಳ್ಳುವುದು. आ+क्षिप (प्रेरणे) "घञ्" (३-३-१८)। "वदनमपहरन्तीं तत्कृताक्षेपमीशः" कुमा० ७-९५। 4. ತಿರಸ್ಕಾರ. "विरुद्धमाक्षेपवचस्तितिक्षितम्" किरा० १४-२५। 5. ಅಪವಾದ. 6. ನಿಕ್ಷೇಪ, ಕೂಡುಹಣ, ನಿಧಿ. 7. ಇಡುವಿಕೆ, ಹಚ್ಚುವಿಕೆ. "गोरोचनाक्षेपनितान्तगौरे" कुमा० ७-१७। 8. ಅನುಮಾನ. "गामानय" ಎಂಬಲ್ಲಿ ಗೋತ್ವ ಕರ್ಮಕಾನಯನವು ಗೋಕರ್ಮಕ ಆನಯನವಿಲ್ಲದೆ ಆಗುವುದಿಲ್ಲವೆಂದು ಅನುಪಪತ್ತಿಜ್ಞಾನದಿಂದ ಗೋತ್ವಕ್ಕೆ ಆಶ್ರಯವಾದ ವ್ಯಕ್ತಿಯ ಜ್ಞಾನವು ಅನುಮಾನಲಬ್ಧವಾದುದು. 9. ಅರ್ಥಾಪತ್ತಿಪ್ರಮಾಣದಿಂದ ಕಲ್ಪಿಸುವಿಕೆ. 10. ಒಂದು ಅರ್ಥಾಲಂಕಾರ; ವಿಮರ್ಶೆ ಮಾಡಿದ ನಂತರ ತಾನು ಹೇಳಿದ ಮಾತನ್ನು ನಿಷೇಧಿಸುವುದು ಆಕ್ಷೇಪಾಲಂಕಾರ. "आक्षेपः स्वयमुक्तस्य प्रतिषेधो विचारणात्। चन्द्र ! सन्दर्शयात्मानमथवास्ति प्रियामुखम्" चन्द्रा०।

**आक्षेपक** ಆಕ್ಷೇಪಕ (पुं०) 1. ವ್ಯಾಧ, ಬೇಡರವನು. 2. ಒಂದು ವಾತರೋಗ. 3. ಒಂದು ಅರ್ಥಸಿದ್ಧಿಯ ಉಪಪಾದಕವಾಗಿ ಹೇಳುವ ಹೇತು. "पीनो देवदत्तो दिवा न भुङ्क्ते" ಎಂಬಲ್ಲಿ ಪೀನತ್ವವು ರಾತ್ರಿ ಭೋಜನ ರೂಪವಾದ ಅರ್ಥಸಿದ್ಧಿಯ ಉಪಪಾದಕವಾಗಿ (ಹೇತುವಾಗಿ) ಹೇಳಲ್ಪಟ್ಟಿದೆ. (वि०) 4. ನಿಂದಿಸುವವನು, ದೂಷಿಸುವವನು. 5. ಎಸೆಯುವವನು. 6. ಎಳೆಯುವವನು, ಆಕರ್ಷಿಸುವವನು. "आक्षेपकोऽनिलव्याधौ व्याधे निन्दाकरेऽपि च" मेदि०।

**आक्षेपण** ಆಕ್ಷೇಪಣ (न०) "आक्षेप" ಪದದ ಅರ್ಥ. आ+क्षिप "ल्युट्" (३-३-११५)।

**आक्षेपिन्** ಆಕ್ಷೇಪಿನ್ (वि०) "आक्षेपक" ಪದದ ಅರ್ಥ. आ+क्षिप "णिनिः" (प्रेरणे) (३-२-७८)।

**आख** ಆಖ (पुं०) ಸನಿಕೆ, ಗುದ್ದಲಿ. आखनत्यनेन—खनु (अवदारणे) "डः" (वा० ३-३-१२५)।

**आखकी** ಆಖಕೀ (स्त्री०) ಸಣ್ಣ ಗುದ್ದಲಿ, ಕೈಗುದ್ದಲಿ. आख अल्पार्थे "कन्"। गौरा० "ङीप्" (४-१-४१)।

**आखण्डल** ಆಖಂಡಲ (पुं०) ಇಂದ್ರ, ದೇವತೆಗಳ ಒಡೆಯ. आखण्डयति पर्वतान्—खडि (भेदने) "कलच्" (उ० १-१०६)। "अखण्डमाखण्डलतुल्यधामभिः" किरा० १-२९।

**आखन** ಆಖನ (पुं०) ಸನಿಕೆ, ಗುದ್ದಲಿ. आखनत्यनेन—आ+खनु (अवदारणे) "घः" (३-३-१२५)। घञि आखानः ಆಖಾನಃ.

**आखनिक** ಆಖನಿಕ (पुं०) 1. ಚೋರ, ಕಳ್ಳ. 2. ಸನಿಕೆ, ಗುದ್ದಲಿ. आखनत्यनेन—आ+खनु (अवदारणे) "इकः" (वा० ३-३-१२५)। 3. ವರಾಹ, ಹಂದಿ. 4. ಮೂಷಿಕ, ಇಲಿ. आ+खनु "इकन्" (उ० २-४६)। (वि०) 5. ಅಗೆಯುವವನು. "भवेदाखनिकश्चौरे सूकरे मूषिकेऽपि च" मेदि०।

**आखनिकबक** ಆಖನಿಕಬಕ (पुं०) 1. ಸನಿಕೆ, ಗುದ್ದಲಿ. आ+खनु (अवदारणे) "इकवक" (वा० ३-३-१२५)। 2. ಚೋರ, ಕಳ್ಳ. 3. ಮೂಷಿಕ, ಇಲಿ. 4. ವರಾಹ, ಹಂದಿ. (वि०) 5. ಅಗೆಯುವವನು.

**आखर** ಆಖರ (पुं०) ಸನಿಕೆ, ಗುದ್ದಲಿ. आखनत्यनेन—आ+खनु (अवदारणे) "डरः" (वा० ३-३-१२५)।

**आखान** ಆಖಾನ (पुं०) 1. ಸನಿಕೆ, ಗುದ್ದಲಿ. आखनत्यनेन—आ+खनु (अवदारणे) "घञ्" (३-३-१२५)। 2. ಸುತ್ತಲೂ ಅಗೆಯುವಿಕೆ. आ+खनु भावे "घञ्"।

**आखु** ಆಖು (पुं०) 1. ಮೂಷಿಕ, ಇಲಿ. आखनति—आ+खनु (अवदारणे) "डुः" (उ० १-३३)। "भक्ष्याशयाहिमञ्जूषां दष्ट्वाखुस्तेन भक्षितः" चन्द्रा०। "अत्तुं वाञ्छति शाम्भवो गणपतेराखुं क्षुधार्तः फणी" पञ्चतं०। 2. ಚೋರ, ಕಳ್ಳ. 3. ವರಾಹ, ಹಂದಿ. 4. ಸನಿಕೆ, ಗುದ್ದಲಿ. 5. ಕೃಪಣ, ಜಿಪುಣ. "विभवे सति नैवात्ति न ददाति जुहोति न। तमाहुराखुम्"। "आखनिकस्त्वाखुरिव किरावुन्दुरुचौरयोः" हेम०।
6. ದೇವತಾಳೆ ಮರ.

**आखुकर्णी** ಆಖುಕರ್ಣೀ (स्त्री०) ಇಲಿಕಿವಿ ಗಿಡ. आखोः मूषिकस्य कर्ण इव पर्णमस्याः। "ङीष्" (४-१-५४)।

**आखुग** ಆಖುಗ (पुं०) ಗಣಪತಿ, ವಿನಾಯಕ. आखुना गच्छति—गम्लृ (गतौ) "डः" (वा० ३-२-४८)।

**आखुघात** ಆಖುಘಾತ (पुं०) ಇಲಿಯನ್ನು ಕೊಲ್ಲುವ ಶೂದ್ರ.

**आखुपर्णी** ಆಖುಪರ್ಣೀ (स्त्री०) ಇಲಿಕಿವಿ ಗಿಡ.

**आखुपाषाण** ಆಖುಪಾಷಾಣ (पुं०) ಲೋಹಕಾಂತ, ಸೂಜಿಗಲ್ಲು, ಲೋಹಗಳನ್ನು ಆಕರ್ಷಿಸುವ ಕಬ್ಬಿಣದ ಅದುರು.

**आखुभुज्** ಆಖುಭುಜ್ (पुं०) ಮಾರ್ಜಾರ, ಬೆಕ್ಕು. आखुं भुङ्क्ते—भुज (पालनाभ्यवहारयोः) "क्विप्" (३-२-१७८)।

**आखुविषहा** ಆಖುವಿಷಹಾ (पुं०) ದೇವತಾಳೆ ಮರ.

**आखेट** ಆಖೇಟ (पुं०) ಬೇಟೆ. आखिटचतेऽत्र—आ+खिट (त्रासे) "घञ्" (३-३-१२१)। स्वार्थे "कन्"। आखेटकः ಆಖೇಟಕಃ. 1. ಬೇಟೆಗಾರ. 2. ಬೇಟೆ.

**आख्या** ಆಖ್ಯಾ (स्त्री०) 1. ಹೇಳುವಿಕೆ. 2. ನಾಮಧೇಯ. आख्यायतेऽनेन आ+ख्या (प्रकथने) "अङ्" (३-३-१०६)। "उमेति मात्रा तपसो निषिद्धा पश्चादुमाख्यां सुमुखी जगाम" कुमा० १-२६।

**आख्यात** ಆಖ್ಯಾತ (न०) 1. ಧಾತುವಿನ ಮುಂದೆ ವಿಧಿಸಲ್ಪಡುವ "तिङ्" ಪ್ರತ್ಯಯ. (वि०) 2. ಹೇಳಲ್ಪಟ್ಟ. आ+ख्या (प्रकथने) "क्तः" (३-२-१०२)। "आश्वास्य रामावरजः सतीं तामाख्यातवाल्मीकिनिकेतमार्गः" रघु० १४-५८। 3. ಪ್ರಸಿದ್ಧವಾದ.

**आख्यातव्य** ಆಖ್ಯಾತವ್ಯ (वि०) ಹೇಳಲ್ಪಡುವ, ಹೇಳಬೇಕಾದ. आ+ख्या (प्रकथने) "तव्यः" (३-१-९६)। "आख्यातव्यं तु तत्तस्मै पृच्छते यदि पृच्छति" मनु० ११-१७।

**आख्याति** ಆಖ್ಯಾತಿ (स्त्री०) 1. ಹೇಳುವುದು. आ+ख्या (प्रकथने) "क्तिन्" (३-३-९४)। 2. ಪ್ರಸಿದ್ಧಪಡಿಸುವುದು. 3. ಯಶಸ್ಸು, ಕೀರ್ತಿ. 4. ಹೆಸರು.

**आख्यातृ** ಆಖ್ಯಾತೃ (वि०) 1. ಹೇಳುವವನು. 2. ಉಪದೇಶಕ, ಉಪಾಧ್ಯಾಯ. आ+ख्या (प्रकथने) "तृच्" (३-१-१३३)। "आख्यातोपयोगे" पा० सू० (१-४-२९)। स्त्रियाम् "ङीप्" (४-१-५)। **आख्यात्री** ಆಖ್ಯಾತ್ರೀ.

**आख्यान** ಆಖ್ಯಾನ (न०) 1. ಹೇಳುವುದು. आ+ख्या (प्रकथने) भावे "ल्युट्" (३-३-११५)। 2. ಪೂರ್ವಕಥೆಯನ್ನು ಹೇಳುವುದು. "आख्यानं पूर्ववृत्तोक्तिः" सा० द०। 3. ಕಲ್ಪಿತ ಕಥೆ.

**आख्यानक** ಆಖ್ಯಾನಕ (न०) ಕಥೆ, ಕಲ್ಪಿತವಾದ ಸಣ್ಣ ಕಥೆ, ಉಪಕಥೆ. "कदाचिदाख्यानकाख्यायिकेतिहासपुराणाकर्णनेन" काद०।

**आख्यायक** ಆಖ್ಯಾಯಕ (पु०) 1. ದೂತ, ಸಂದೇಶವನ್ನು ತಿಳಿಸುವವನು. आ+ख्या (प्रकथने) "ण्वुल्" (३-१-१३३)। "आख्यायकेभ्यः श्रुतसूनुवृत्तिः" भट्टि० २-४४। (वि०) 2. ಹೇಳುವ, ತಿಳಿಸುವ.

**आख्यायिका** ಆಖ್ಯಾಯಿಕಾ (स्त्री०) ಯಥಾರ್ಥವಾದ ಕಥೆ, ನಿಜವಾಗಿ ನಡೆದ ಕಥೆ, ಹರ್ಷಚರಿತ ಮುಂತಾದ ಗದ್ಯಕಾವ್ಯ. आ+ख्या (प्रकथने) "ण्वुल्" (३-१-१३३)। [ಗದ್ಯಕಾವ್ಯವು ಕಥಾ ಮತ್ತು ಆಖ್ಯಾಯಿಕಾ ಎಂದು ಎರಡು ವಿಧ. ಕಾದಂಬರಿಯು ಕಥೆ. ಹರ್ಷಚರಿತವು ಆಖ್ಯಾಯಿಕೆ.] "अपादः पदसन्तानो गद्यमाख्यायिका कथा। इति तस्य प्रभेदौ द्वौ" काव्या० १-२३।

**आख्यायिन्** ಆಖ್ಯಾಯಿನ್ (वि०) 1. ಹೇಳುವವನು, ತಿಳಿಸುವವನು. आ + ख्या (प्रकथने) "णिनिः" (३-२-७८)। "रहस्याख्यायीव स्वनति मृदु कर्णान्तिकचरः" शाकु० १-२०।

**आख्येय** ಆಖ್ಯೇಯ (वि०) ಹೇಳಲು ಯೋಗ್ಯವಾದ, ತಿಳಿಸಲು ಅರ್ಹವಾದ. आख्यातुं योग्यम्—आ+ख्या (प्रकथने) "यत्" (३-१-९१)। "शब्दाख्येयं यदपि किल ते यः सखीनां पुरस्तात्" मेघ० २-४०।

**आगत** ಆಗತ (न०) 1. ಆಗಮನ, ಬರುವಿಕೆ. आ+गम्लृ (गतौ) "क्तः" (३-३-११४)। 2. ಸಂಭವ, ಸಂಘಟನೆ, ಆಗು. (वि०) 3. ಬಂದಿರುವ. "आगतानगणितप्रतियातान्" माघ० १०-२०। 4. ಸಂಭವಿಸಿರುವ. "आगतेयमसमीक्ष्यकारिता" याद० १७-१११। 5. ಸಂಪಾದಿಸಿದ, ಗಳಿಸಿದ. आ+गम्लृ "क्तः" (३-४-७२)।

**आगतवत्** ಆಗತವತ್ (वि०) ಬಂದಿರುವ, ಆಗಮಿಸಿರುವ. आ+गम्लृ (गतौ) "क्तवतुः" (३-२-१०२)।

**आगति** ಆಗತಿ (स्त्री०) 1. ಆಗಮನ, ಬರುವಿಕೆ. आ+गम्लृ (गतौ) "क्तिन्" (३-३-९४)। "इति निश्चितप्रियतमागतयः" माघ० ९-४३। 2. ಹೊಂದುವಿಕೆ, ಪಡೆಯುವಿಕೆ.

**आगन्तव्य** ಆಗಂತವ್ಯ (वि०) ಅವಶ್ಯವಾಗಿ ಬರಬೇಕಾಗಿರುವ. आ+गम्लृ (गतौ) "तव्यः" (३-१-९६)।

**आगन्तु** ಆಗಂತು (पु०) 1. ಅತಿಥಿ, ಮನೆಗೆ ಹೊಸದಾಗಿ ಬಂದು ಇಳಿದುಕೊಂಡಿರುವವನು. आगच्छति—आ+गम्लृ (गतौ) "तुन्" (उ० १-६९)। "मेने यथा तत्र जनः समेतो वैदर्भमागन्तुमजं गृहेशम्" रघु० ५-६२। (वि०) 2. ಅಕಸ್ಮಾತ್ತಾಗಿ ಮನೆಗೆ ಬಂದಿರುವ, ಅಪರಿಚಿತನಾದ. "आगन्तुना सह मैत्री न कार्या" हितो०। स्वार्थे "कन्" आगन्तुकः ಆಗಂತುಕಃ. "त्वया च मूलभृत्यानपास्यायमागन्तुकः पुरस्कृतः" हितो०।

**आगन्तुज** ಆಗಂತುಜ (वि०) ಅಕಸ್ಮಾತ್ತಾಗಿ ಉಂಟಾದ ರೋಗ ಮೊದಲಾದುದು. आगन्तोः अकस्मादुपस्थितात् जायते—जनी (प्रादुर्भावे) "डः" (३-२-९८)। "आगन्तुजे भिषग्रोगे शस्त्रेणोत्कृत्य यत्नतः" सुश्रुत०।

**आगम** ಆಗಮ (पु०) 1. ಬರುವಿಕೆ, ಸೇರುವಿಕೆ, ತಲುಪುವಿಕೆ, ಆಗಮನ. आ+गम्लृ (गतौ) "अप्" (३-३-५८)। "तनोति नस्तामुदितात्मगौरवो गुरुस्तवैवागम एष धृष्टताम्" माघ० १-३०। 2. ಶಾಸ್ತ್ರ. "आगमादिव तमोऽपहादितः संभवन्ति मतयो भवच्छिदः" किरा० ५-२२। 3. ಉತ್ಪತ್ತಿ, ಜನನ. "आगमापायिनोऽनित्यास्तांस्तितिक्षस्व भारत" गीता २-१४। 4. ಪ್ರಾಪ್ತಿ, ಲಾಭ, ಸಂಪಾದನೆ. "एषोऽस्या मुद्राया आगमः" मुद्रा० १। 5. ಶಾಸ್ತ್ರಜ್ಞಾನ, ಶಾಸ್ತ್ರಪರಿಚಯ, ಶಾಸ್ತ್ರಪರಿಶ್ರಮ. "आकारसदृशप्रज्ञः प्रज्ञया सदृशागमः। आगमैः सदृशारम्भः" रघु० १-१५। 6. ನ್ಯಾಯಸಮ್ಮತವಾದ ಸಂಪಾದನೆ. "आगमोऽभ्यधिको भोगाद्विना पूर्वक्रमागतात्" याज्ञ० २-२७। 7. ದಾರ್ಶನಿಕರು ಅಂಗೀಕರಿಸಿರುವ ಶಬ್ದಪ್ರಮಾಣ. 8. ವೇದ. "बहुधाप्यागमैर्भिन्नाः पन्थानः सिद्धिहेतवः" रघु० १०-२६। 9. (ವ್ಯಾಕರಣ ಶಾಸ್ತ್ರದಲ್ಲಿ) ಒಂದು ವರ್ಣದ ಜೊತೆಗೆ ವಿಧಿಸಲ್ಪಡುವ ಮತ್ತೊಂದು ವರ್ಣ. ಇದು (1) ಕೇವಲ, (2) ಕಿತ್, (3) ಟಿತ್ ಮತ್ತು (4) ಮಿತ್ ಎಂದು ನಾಲ್ಕು ವಿಧ. (1) ಇತ್ ಸಂಜ್ಞೆ,

ಯಿಲ್ಲದ ಆಗಮವು ಕೇವಲ. कृर्णर्द्धिः ಎಂಬಲ್ಲಿ "उरण्रपरः" (ಪಾ೦ ಸೂ೦ ೧-೧-೫೧) ಸೂತ್ರದಿಂದ ಋ ಕಾರ ಸ್ಥಾನದಲ್ಲಿ ವಿಧಿಸಲ್ಪಟ್ಟಿರುವ "अण्" ಎಂಬುದಕ್ಕೆ ಬಂದಿರುವ ರೇಫಾಗಮವು ಕೇವಲ ಆಗಮ. (೨) ಕ ಕಾರವು ಇತ್ ಸಂಜ್ಞೆಯಾಗುಳ್ಳ ಆಗಮವು ಕಿತ್. इत्यः स्तुत्यः ಎಂಬಲ್ಲಿ "ह्रस्वस्य पिति कृति तुक्" (ಪಾ೦ ಸೂ೦ ೬-೧-೭೧) ಸೂತ್ರದಿಂದ ವಿಧಿಸಲ್ಪಟ್ಟಿರುವ तुक् ಆಗಮವು ಕಿದಾಗಮ. (3) ಟ ಕಾರವು ಇತ್ಸಂಜ್ಞೆಯಾಗುಳ್ಳ ಆಗಮವು ಟಿತ್. अभूत् ಎಂಬಲ್ಲಿ "लुङ्लङ्लृङ्क्ष्वडुदात्तः" (ಪಾ೦ ಸೂ೦ ೬-೪-೭೧) ಸೂತ್ರದಿಂದ ವಿಧಿಸಲ್ಪಟ್ಟಿರುವ अट्, भविता ಎಂಬಲ್ಲಿ "आर्धधातुकस्येड्वलादेः" (ಪಾ೦ ಸೂ೦ ೭-೨-೩೫) ಸೂತ್ರದಿಂದ ವಿಧಿಸಲ್ಪಟ್ಟಿರುವ इट् ಇತ್ಯಾದಿ ಟಿದಾಗಮ. ಟಿತ್ ಕಿತ್ ಆಗಮಗಳು ಕ್ರಮವಾಗಿ ಆದ್ಯವಯವ ಮತ್ತು ಅಂತ್ಯಾವಯವಗಳಾಗಿ ಬರುವುವು. "आद्यन्तौ टकितौ" (ಪಾ೦ ಸೂ೦ ೧-೧-೪೬)। (4) म ಕಾರವು ಇತ್ ಸಂಜ್ಞೆಯಾಗುಳ್ಳ ಆಗಮವು ಮಿತ್. विश्वम्भरः ಎಂಬಲ್ಲಿ "अरुर्द्विषदजन्तस्य मुम्" (ಪಾ೦ ಸೂ೦ ೬-೩-೬೭) ಸೂತ್ರದಿಂದ ವಿಧಿಸಲ್ಪಟ್ಟಿರುವ मुम्, श्विन्दते, स्पन्दते ಎಂಬಲ್ಲಿ "इदितो नुम् धातोः" (ಪಾ೦ ಸೂ೦ ೭-೧-೫೮) ಸೂತ್ರದಿಂದ ವಿಧಿಸಲ್ಪಟ್ಟಿರುವ नुम् ಇತ್ಯಾದಿ ಮಿದಾಗಮ. ಇದು ಉದ್ದೇಶ್ಯದ अच् ಗಳಲ್ಲಿ ಕೊನೆಯ अच् ಗೆ ಅಂತ್ಯಾವಯವವಾಗಿ ಬರುವುದು. "मिदचोऽन्त्यात्परः" (ಪಾ೦ ಸೂ೦ ೧-೧-೪೭)। 10. ಸಗುಣ ಮತ್ತು ನಿರ್ಗುಣೋಪಾಸನೆಯ ಕ್ರಮವನ್ನು ತಿಳಿಸುವ ಭಗವನ್ಮುಖೋದಿತವಾದ ಒಂದು ಶಾಸ್ತ್ರ. आ समन्ताद्गमयति। "आसमन्ताद्गमयति धर्माधर्मौ परंपदम्। आगमस्तेन कथित इति वेदविदो विदुः"। ಸಂಸಾರ ಪಾಶದ ಬಂಧನಕ್ಕೆ ಒಳಗಾಗಿರುವ ಜೀವಿಯು ಧರ್ಮಾಧರ್ಮಗಳ ವಿವೇಕದಿಂದ ಬಾಳಿ ಸದ್ಗತಿಯನ್ನು ಪಡೆಯಬೇಕಾದರೆ ಅದು ಆಗಮೋಕ್ತಕ್ರಮದಲ್ಲಿ ಪರಮಾತ್ಮನ ಉಪಾಸನೆಯೊಂದರಿಂದಲೇ ಸಾಧ್ಯ. "आगमोक्तविधानेन कलौ देवान् यजेत् सुधीः। न हि देवाः प्रसीदन्ति कलौचान्यविधानतः" तन्त्रसा०। ತತ್ತ್ವ ಮತ್ತು ಮಂತ್ರಾರ್ಥಗಳನ್ನು ತಿಳಿಸುವ ಈ ಶಾಸ್ತ್ರಕ್ಕೆ "ತಂತ್ರ" ವೆಂದೂ ಹೆಸರು. "तनोति विपुलानर्थान् तन्त्रमन्त्रसमन्वितान्। त्राणं च कुरुते यस्मात्तन्त्रमित्यभिधीयते" कामिका०। ಈ ಉಪಾಸನೆ (ಪೂಜೆ)ಯ ವಿಧಾನ ಮತ್ತು ಸಾಧನ ಮಾರ್ಗಗಳು, ಅವರವರ ಆಚಾರ ಮತ್ತು ಉಪಾಸ್ಯ ದೇವತಾ ಭೇದಗಳಿಂದ ಭಿನ್ನವಾಗಿ ಶೈವ, ಶಾಕ್ತ, ವೈಷ್ಣವ, ಜೈನ ಮೊದಲಾದ ಆಗಮಗಳಲ್ಲಿ ಹೇಳಲ್ಪಟ್ಟಿವೆ.

(1) **ಶೈವಾಗಮ:** ಶೈವಾಗಮದಲ್ಲಿ ಪರಶಿವನೇ ಉಪಾಸ್ಯದೇವತೆ. ಇದರಲ್ಲಿ ಶೈವ, ಸೋಮ, ಲಾಕುಳ ಮತ್ತು ಪಾಶುಪತಗಳೆಂಬ ನಾಲ್ಕು ಸಂಪ್ರದಾಯಗಳಿವೆ. ಮತ್ತು ಇದು ವರುಣಪದ್ಧತಿ, ಮಹೇಂದ್ರ ಪದ್ಧತಿ, ಈಶಾನಶಿವಗುರುದೇವ ಪದ್ಧತಿ, ಸೋಮಶಂಭು ಪದ್ಧತಿ ಮುಂತಾದ ಹದಿನೆಂಟು ಪದ್ಧತಿಗಳಿಂದ ಕೂಡಿದೆ. ಇದು ಪರಮೇಶ್ವರನ ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ ಮತ್ತು ಈಶಾನಗಳೆಂಬ ಪಂಚಮುಖಗಳಿಂದ ಉಪದಿಷ್ಟವಾಗಿ ಕಾಮಿಕಾದಿ ವಾತುಳಾಂತ ಅಷ್ಟಾವಿಂಶತಿ (28) ಸಂಹಿತಾ ರೂಪವಾಗಿದೆ. ಇವುಗಳಲ್ಲಿ ಹತ್ತು ಸಂಹಿತೆಗಳು ಸದಾಶಿವನಿಂದ ದಶಶಿವರಿಗೆ ಉಪದಿಷ್ಟವಾದುದರಿಂದ ಶೈವಾಗಮವೆಂದೂ, ಹದಿನೆಂಟು ಸಂಹಿತೆಗಳು ಅಷ್ಟಾದಶರುದ್ರರಿಗೆ ಉಪದಿಷ್ಟವಾದುದರಿಂದ ರೌದ್ರಾಗಮವೆಂದೂ ಪ್ರಸಿದ್ಧವಾಗಿವೆ. ರೌದ್ರಾಗಮದ ಮುಖ್ಯ ಸಂಹಿತೆಯಾದ ವಾತುಳಾಗಮದ ಉತ್ತರ ಭಾಗವು ವೀರಶೈವ ಸಂಪ್ರದಾಯದ ಅನುಷ್ಠಾನಕ್ಕೆ ಆಧಾರವಾಗಿದೆ.

(2) **ಶಾಕ್ತಾಗಮ:** ಶೈವಾಗಮದಲ್ಲಿ ಪರಶಿವನು ಆರಾಧ್ಯದೇವತೆಯಾದರೆ ಶಾಕ್ತಾಗಮದಲ್ಲಿ ಪರಶಿವನ ಶಕ್ತಿಯು ಉಪಾಸ್ಯದೇವತೆ. ಇದರಲ್ಲಿ ಶಕ್ತಿಗೇ ಪ್ರಾಧಾನ್ಯಕೊಟ್ಟಿರುತ್ತಾರೆ. ಇದಕ್ಕೆ ದೇವ್ಯಾಗಮವೆಂದೂ ಹೆಸರು. ಶಾಕ್ತಗ್ರಂಥಗಳಿಗೆ "ಶಾಕ್ತತಂತ್ರ" ವೆಂದೂ ರೂಢಿಯಿದೆ. ಶ್ರೀವಿದ್ಯೋಪಾಸನಾದಿ ಸಮಸ್ತ ಮಂತ್ರಶಾಸ್ತ್ರಗಳಿಗೂ ಈ ಶಾಕ್ತತಂತ್ರವು ಆಧಾರವಾಗಿದೆ.

(3) **ವೈಷ್ಣವಾಗಮ:** ಇದರಲ್ಲಿ 1. ಪಾಂಚರಾತ್ರ, 2. ವೈಖಾನಸಗಳೆಂಬ ಎರಡು ಭೇದಗಳಿವೆ.

**1. ಪಾಂಚರಾತ್ರಾಗಮ:** ಭಗವನ್ಮುಖದಿಂದ ಅನಂತ, ಗರುಡ, ವಿಷ್ವಕ್ಸೇನ, ಬ್ರಹ್ಮ ಮತ್ತು ಇಂದ್ರರೆಂಬ ಐದು ದೇವತೆಗಳಿಗೆ ಐದು ರಾತ್ರಿಗಳಲ್ಲಿ ಉಪದೇಶಿಸಲ್ಪಟ್ಟುದುದರಿಂದ ಇದಕ್ಕೆ "ಪಾಂಚರಾತ್ರಾಗಮ" ವೆಂದು ಹೆಸರಾಯಿತು. ಈ ಆಗಮದಲ್ಲಿ ವಿಷ್ಣುವು ಆರಾಧ್ಯದೇವತೆ. ಇದಕ್ಕೆ ಭಗವಚ್ಛಾಸ್ತ್ರವೆಂದೂ ಹೆಸರು. ಇದರಲ್ಲಿ **ದಿವ್ಯಸಿದ್ಧಾಂತ, ಆಗಮಸಿದ್ಧಾಂತ, ತಂತ್ರಸಿದ್ಧಾಂತ** ಮತ್ತು **ತಂತ್ರಾಂತರ**

ಸಿದ್ಧಾಂತಗಳೆಂಬ ನಾಲ್ಕು ಭೇದಗಳಿವೆ. ಪಾಂಚರಾತ್ರಾಗಮವು ಜ್ಞಾನ, ಯೋಗ, ಕ್ರಿಯಾ ಮತ್ತು ಚರ್ಯಾ ಪಾದಗಳೆಂಬ ನಾಲ್ಕು ಪಾದಗಳಿಂದ ಕೂಡಿದೆ.

ಶ್ರೀಮದಾನಂದತೀರ್ಥಾಚಾರ್ಯರು ಪಾದ್ಮಸಂಹಿತೆಯನ್ನು ಸಂಗ್ರಹಿಸಿ ಮಾಧ್ವಸಂಪ್ರದಾಯದ ದೇವಸ್ಥಾನಗಳಲ್ಲಿ' ಪೂಜೆಗೆ ಅನುಕೂಲಿಸುವಂತೆ ಅಳವಡಿಸಿರುವ ಪಾಂಚರಾತ್ರಾಗಮಭಾಗವು "ತಂತ್ರಸಾರಾಗಮು"ವೆಂದು ಪ್ರಸಿದ್ಧವಾಗಿದೆ.

**2. ವೈಖಾನಸಾಗಮ:** ವೈಖಾನಸಾಗಮವು ಲೋಕೋದ್ಧಾರಕ್ಕಾಗಿ ಪರಮಾತ್ಮನ ಅಂಶದಿಂದ ಅವತರಿಸಿದ ಶ್ರೀ ವಿಖನಸಮಹರ್ಷಿಗಳಿಂದ ಭೃಗು, ಅತ್ರಿ, ಮರೀಚಿ ಮತ್ತು ಕಶ್ಯಪರಿಗೆ ಸಂಹಿತಾರೂಪದಲ್ಲಿ ಉಪದಿಷ್ಟವಾದುದು. ಇದು **ಸಂಹಿತೆ, ಅಧಿಕರಣ,** **ತಂತ್ರ** ಮತ್ತು **ಕಾಂಡ**ಗಳೆಂಬ ನಾಲ್ಕು ಭಾಗಗಳಿಂದ ಕೂಡಿದೆ. (1) ಮರೀಚಿಮಹರ್ಷಿ ಪ್ರೋಕ್ತವಾದ ಜಯ, ಆನಂದ, ಸಂಜ್ಞಾನ, ವೀರ, ವಿಜಯ ಮುಂತಾದ ಎಂಟು ಆಗಮಗಳಿಗೆ '**ಸಂಹಿತೆ**'ಯೆಂದು ಹೆಸರು. (2) ಭೃಗುಮಹರ್ಷಿ ಪ್ರೋಕ್ತವಾದ ಖಿಲ, ಖಿಲಾಧಿಕಾರ, ಪುರಾಧಿಕಾರ, ವಾಸಾಧಿಕಾರ, ಅರ್ಚಾಧಿಕಾರ ಮುಂತಾದ ಹತ್ತು ಭಾಗಗಳಿಗೆ '**ಅಧಿಕರಣ**'ವೆಂದು ಹೆಸರು. (3) ಅತ್ರಿಮಹರ್ಷಿ ಪ್ರೋಕ್ತವಾದ ಪೂರ್ವತಂತ್ರ, ವಿಷ್ಣುತಂತ್ರ, ಉತ್ತರತಂತ್ರ ಮತ್ತು ಮಹಾತಂತ್ರಗಳೆಂಬ ನಾಲ್ಕು ಭಾಗಗಳಿಗೆ '**ತಂತ್ರ**'ವೆಂದು ಹೆಸರು. (4) ಕಶ್ಯಪಮಹರ್ಷಿ ಪ್ರೋಕ್ತವಾದ ಸತ್ಯಕಾಂಡ, ಧರ್ಮಕಾಂಡ ಮತ್ತು ಜ್ಞಾನಕಾಂಡಗಳೆಂಬ ಮೂರು ಭಾಗಗಳಿಗೆ '**ಕಾಂಡ**' ವೆಂದು ಹೆಸರು.

**(4) ಜೈನಾಗಮ:** ದ್ವಾದಶಾಂಗಾತ್ಮಕ ಜೈನಾಗಮದ ಸ್ವರೂಪ: ಸರ್ವಜ್ಞರಾದ ತೀರ್ಥಂಕರರಿಂದ ಮೊದಲು ಸಮವಸರಣ ಸಭೆಯಲ್ಲಿ ಗಣಧರರಾದಿಯಾಗಿ ಅಲ್ಲಿ ಸೇರಿದ ಭವ್ಯರಿಗೆ ಹೇಳಲ್ಪಟ್ಟ ವಾಙ್ಮಯವು ಜೈನಾಗಮ, ಜೈನಸಿದ್ಧಾಂತ, ದ್ವಾದಶಾಂಗಶ್ರುತ ಇತ್ಯಾದಿ ಹೆಸರುಗಳಿಂದ ಪ್ರಸಿದ್ಧವಾಗಿದೆ. ಈ ಜೈನಾಗಮವನ್ನು ಸರ್ವಜ್ಞರಾದ ತೀರ್ಥಂಕರರು ಅನಾದಿಕಾಲದಿಂದ ಅನಂತಕಾಲದವರೆಗೆ ಉಪದೇಶಿಸುತ್ತಲೇ ಇರುತ್ತಾರೆ. ಆದುದರಿಂದ ಇದು ಸಾದಿಯೆಂದೂ, ಅನಾದಿಯೆಂದೂ ಹೇಳಲ್ಪಡುವುದು. ಸರ್ವಜ್ಞರಾದ ತೀರ್ಥಂಕರರು ಉಪದೇಶಿಸಿದ ಶಾಸ್ತ್ರವೇ ಜೈನಾಗಮವು. ಇದು ಅಂಗಬಾಹ್ಯ ಮತ್ತು ಅಂಗಪ್ರವಿಷ್ಟಗಳೆಂದು ಎರಡು ವಿಧ.

ಅಂಗಪ್ರವಿಷ್ಟವು (1) ಆಚಾರಾಂಗ, (2) ಸೂತ್ರಕೃತಾಂಗ, (3) ಸ್ಥಾನಾಂಗ, (4) ಸಮವಾಯಾಂಗ, (5) ವ್ಯಾಖ್ಯಾಪ್ರಜ್ಞಪ್ತಿ, (6) ಜ್ಞಾತೃಕಥಾ, (7) ಉಪಾಸಕಾಧ್ಯಯನ, (8) ಅನುತ್ತರೋಪಪಾದಿಕ, (9) ಅಂತಕೃದ್ದಶಾಂಗ, (10) ಪ್ರಶ್ನವ್ಯಾಕರಣ, (11) ವಿಪಾಕಸೂತ್ರ ಮತ್ತು (12) ದೃಷ್ಟಿವಾದ ದಶಾಂಗಗಳೆಂಬ ಹನ್ನೆರಡು ಅಂಗಗಳಿಂದ ಕೂಡಿದೆ. ಏಳನೆಯದಾದ ಉಪಾಸಕಾಧ್ಯಯನಾಂಗದಲ್ಲಿ ದೇವರ ಪ್ರತಿಷ್ಠೆ, ಪೂಜಾಕ್ರಮ, ಶ್ರಾವಕಾಚಾರ, ಯತ್ಯಾಚಾರ ಇತ್ಯಾದಿ ವಿಷಯಗಳು ಪ್ರತಿಪಾದಿಸಲ್ಪಟ್ಟಿವೆ.

ಜೈನಾಗಮದಲ್ಲಿ (1) ದೇವ, (2) ಗುರು ಮತ್ತು (3) ಶಾಸ್ತ್ರ ಈ ಮೂರು ಆರಾಧ್ಯದೇವತೆಗಳು.

**(1) ದೇವರು:** ಅರ್ಹಂತರು ಮತ್ತು ಸಿದ್ಧರು. ಅರ್ಹಂತರಲ್ಲಿ ಭೂತಭವಿಷ್ಯದ್ವರ್ತಮಾನದ 72 ತೀರ್ಥಂಕರರು, ಪಂಚವಿದೇಹದಲ್ಲಿರುವ ವರ್ತಮಾನ ಕಾಲದ ಸೀಮಂಧರ ಯುಗಮಂಧರಾದಿ 20 ತೀರ್ಥಂಕರರು.

**(2) ಗುರುಗಳು:** ಚತುರಶೀತಿ ಲಕ್ಷಗುಣಸಂಪನ್ನ ಗಣಧರ ಆಚಾರ್ಯಪರಮೇಷ್ಠಿಗಳು, ದ್ವಾದಶಾಂಗ ಪಾಠಕರಾದ ಉಪಾಧ್ಯಾಯ ಪರಮೇಷ್ಠಿಗಳು, ಜ್ಞಾನ ಧ್ಯಾನ ತಪೋರಕ್ತರಾದ ಸರ್ವಸಾಧುಪರಮೇಷ್ಠಿಗಳು.

**(3) ಶಾಸ್ತ್ರ:** ಜಿನಮುಖೋದ್ಭೂತ ಸ್ಯಾದ್ವಾದನಯಗರ್ಭಿತ ದ್ವಾದಶಾಂಗ ರೂಪವಾದ ಜಿನಭಾರತಿ ಪ್ರತಿಷ್ಠೆ ಮತ್ತು ಪೂಜಾಕ್ರಮಗಳು (1) ಅಕಲಂಕ ಸ್ವಾಮಿರಚಿತ ಅಕಲಂಕಸಂಹಿತೆ, (2) ನೇಮಿಚಂದ್ರ ವಿರಚಿತ ಪ್ರತಿಷ್ಠಾತಿಲಕ, (3) ಆಶಾಧರಸೂರಿ ವಿರಚಿತ ಪ್ರತಿಷ್ಠಾತಿಲಕ, (4) ವಸುನಂದ್ಯಾಚಾರ್ಯರಚಿತ ಸಂಹಿತೆ, (5) ಬ್ರಹ್ಮಸೂರಿ ವಿರಚಿತ ಸಂಹಿತೆ ಮತ್ತು (6) ಭಗವಜ್ಜಿನಸೇನಾಚಾರ್ಯ ವಿರಚಿತ ಆದಿಪುರಾಣ ಇವುಗಳಲ್ಲಿ ವಿವರಿಸಲ್ಪಟ್ಟಿವೆ.

**आगमन** ಆಗಮನ (ನಂ) 1. ಬರುವಿಕೆ, ಸೇರುವಿಕೆ. आ+गम्लृ(गतौ) "ल्युट्" (३-३-११५)। "गतस्पृहोप्यागमनप्रयोजनं वदेति वक्तुं व्यवसीयते यया" माघ० १-३०। 2. ಪ್ರಾಪ್ತಿ, ಲಾಭ, ಸಂಪಾದನೆ. "एतत्ते सर्वमाख्यातं वैरस्यागमनं महत्" रामा०। 3. ಉತ್ಪತ್ತಿ, ಜನನ.

**आगमवृद्ध** ಆಗಮವೃದ್ಧ (ತ್ರಿ) ಜ್ಞಾನವೃದ್ಧ, ಪರಿಪೂರ್ಣ ಶಾಸ್ತ್ರಜ್ಞಾನವುಳ್ಳವನು. आगमेन शास्त्रज्ञानेन वृद्धः।

**आगमवेत्** ಆಗಮವೇತ್ತೃ (वि०) ವೇದವನ್ನು ತಿಳಿದಿರುವ, ವೇದಾಭ್ಯಾಸ ಮಾಡಿರುವ. आगमं वेत्ति – विद (ज्ञाने) "तृच्" (३-१-१३३)। स्त्रियाम् "ङीप्" (४-१-५)। –वेत्त्री – ವೇತ್ರೀ.

**आगमवेदिन्** ಆಗಮವೇದಿನ್ (पु०) 1. ಶ್ರೀ ಶಂಕರಾಚಾರ್ಯರ ಪರಮಗುರುಗಳಾದ ಗೌಡಪಾದಾಚಾರ್ಯರು. (वि०) 2. ವೇದವನ್ನು ತಿಳಿದಿರುವ, ವೇದಾಭ್ಯಾಸಮಾಡಿರುವ. आगमं वेत्ति–विद (ज्ञाने) "णिनिः" (३-२-७८)। स्त्रियाम् "ङीप्" (४-१-५)। –वेदिनी – ವೇದಿನೀ.

**आगमापायिन्** ಆಗಮಾಪಾಯಿನ್ (वि०) ಉತ್ಪತ್ತಿ ಮತ್ತು ನಾಶಸ್ವಭಾವದ. आगमश्चापायश्च आगमापायौ, तौ विद्येतेऽस्य "इनिः" (५-२-११५)। "आगमापायिनोऽनित्यास्तांस्तितिक्षस्व भारत" गीता २-१४। स्त्रियाम् "ङीप्" (४-१-५)। –अपायिनी – ಅಪಾಯಿನೀ.

**आगमिन्** ಆಗಮಿನ್ (वि०) 1. ಮುಂದೆ ಬರುವ, ಮುಂದೆ ಉಂಟಾಗುವ, ಭವಿಷ್ಯತ್ ಕಾಲದ. आ+गम्लृ (गतौ) "इनिः" (३-३-३)। 2. ಶಾಸ್ತ್ರಜ್ಞಾನವುಳ್ಳ, ಶಾಸ್ತ್ರಾಭ್ಯಾಸವುಳ್ಳ. आगमोऽस्यास्ति "इनिः" (५-२-११५)। "द्वावपि किलागमिनौ प्रयोगनिपुणौ च" माल० ३। 3. ಆಗಮವು ವಿಧಿಸಲ್ಪಡುವ (ಪ್ರಕೃತಿಪ್ರತ್ಯಯ ಮುಂತಾದುದು). 4. ಬರುವ, ತಲುಪುವ, ಸೇರುವ. स्त्रियाम् "ङीप्" (४-१-५)। आगमिनी ಆಗಮಿನೀ.

**आगर** ಆಗರ (पु०) ಅಮಾವಾಸ್ಯೆ. आगीर्यंते उद्गमितुमारभ्यते चन्द्रोऽत्र – गृ (निगरणे) "अप्" (३-३-५७)।

**आगवीन** ಆಗವೀನ (पु०) (ಹಸುವನ್ನು ಮನೆಗೆ ತಂದು ಸೇರಿಸುವವರೆಗೂ ಅದರ ಯೋಗಕ್ಷೇಮವನ್ನು ನೋಡಿಕೊಳ್ಳುವ) ಗೋಪಾಲಕ. गोः पत्यर्पणपर्यन्तं कर्म करोति – आ+गो "खः" (५-२-१४)।

**आगस्** ಆಗಸ್ (न०) 1. ಅಪರಾಧ, ತಪ್ಪು, ಅಪಚಾರ. इण् (गतौ) "असुन्" आगादेशश्च (उ० ४-२९२)। "सहिष्ये शतमागांसि सूनोस्त इति यत्त्वया" माघ० २-१०८। "यत्ते चतुर्विधमकारि रणे तदागः क्षन्तव्यमद्य भवता करुणार्णवेन" चं० भा०। 2. ಪಾಪ. "आगोऽपराधे पापेऽपि" मेदि०।

**आगस्कृत्** ಆಗಸ್ಕೃತ್ (वि०) 1. ಅಪರಾಧಿ, ತಪ್ಪು ಮಾಡಿದವನು. आगः करोति – डु कृञ् (करणे) "क्विप्" (३-२-७६)। "अभ्यर्णमागस्कृतमस्पृशद्भिः" रघु० २-३२। 2. ಪಾಪಕೃತ್ಯವನ್ನೆಸಗಿದವನು.

**आगस्ती** ಆಗಸ್ತೀ (स्त्री०) ದಕ್ಷಿಣ ದಿಕ್ಕು, ಅಗಸ್ತ್ಯ ಸಂಬಂಧವಾದ ದಿಕ್ಕು. अगस्त्यस्येयम् "अण्" (४-२-१२०)। "ङीप्" (४-१-१५)।

**आगस्त्य** ಆಗಸ್ತ್ಯ (पु०) 1. ದಕ್ಷಿಣ ದಿಗ್ಭಾಗ. "कौबेरदिग्भागमपास्य मार्गमागस्त्यमुष्णांशुरिवावतीर्णः" माघ० ३-१। 2. ಅಗಸ್ತ್ಯಮಹರ್ಷಿಯ ಪುತ್ರ. अगस्तेरपत्यम् "यञ्" (४-१-१०५)। 3. ಆಗಸ್ತ್ಯಗೋತ್ರದಲ್ಲಿ ಹುಟ್ಟಿದವನು. अगस्त्यस्य गोत्रापत्यम् "अण्" (४-२-१११)। स्त्रियाम् "ङीप्" (४-१-१५)। आगस्ती ಆಗಸ್ತೀ. (वि०) 4. ಅಗಸ್ತ್ಯ ಸಂಬಂಧವಾದ (ದಿಕ್ಕು ಮೊದಲಾದುದು).

**आगार** ಆಗಾರ (न०) ಗೃಹ, ಮನೆ. अगान् वृक्षान् स्तम्भभूतान् ऋच्छति – ऋ (गतौ) "अण्" (३-२-१)।

**आगारगोधिका** ಆಗಾರಗೋಧಿಕಾ (स्त्री०) ಹಲ್ಲಿ, ಗೌಳಿ.

**आगुर् (गूः)** ಆಗುರ್ (ಗೂಃ) (स्त्री०) ಪ್ರತಿಜ್ಞೆ. आ+गुरी (उद्यमने) -"क्विप्"।

**आगुरण** ಆಗುರಣ (न०) ಉದ್ಯಮ, ಪ್ರಯತ್ನ. आ+गुरी (उद्यमने) "ल्युट्" (३-३-११५)।

**आगू** ಆಗೂ (स्त्री०) ಪ್ರತಿಜ್ಞೆ. आ+गम्लृ (गतौ) "डूः" (उ० २-६८)।

**आगूर्ण** ಆಗೂರ್ಣ (न०) 1. ಪ್ರಯತ್ನ. आ+गुरी (उद्यमने) भावे "क्तः" (३-३-११४)। (वि०) 2. ಪ್ರಯತ್ನವುಳ್ಳ. आ+गुरी "क्तः" (३-४-७२)।

**आग्नापौष्ण** ಆಗ್ನಾಪೌಷ್ಣ (वि०) ಅಗ್ನಿ ಮತ್ತು ಪೂಷ ದೇವತೆಗಳಿಗೆ ಸಂಬಂಧಿಸಿದ (ಹವಿಸ್ಸು ಮೊದಲಾದುದು). अग्निश्च पूषा च अग्नापूषणौ, ते देवते अस्य "अण्" (४-२-२४)।

**आग्नावैष्णव** ಆಗ್ನಾವೈಷ್ಣವ (वि०) ಅಗ್ನಿ ಮತ್ತು ವಿಷ್ಣು ದೇವತೆಗಳಿಗೆ ಸಂಬಂಧಿಸಿದ (ಹವಿಸ್ಸು ಮೊದಲಾದುದು). अग्निश्च विष्णुश्च अग्नाविष्णू, ते देवतेऽस्य "अण्" (४-२-२४)।

**आग्निपद** ಆಗ್ನಿಪದ (वि०) 1. ಅಗ್ನಿಯ ಸನ್ನಿಧಿಯಲ್ಲಿ ಮಾಡುವ ಕಾರ್ಯ. 2. ಅಗ್ನಿಯ ಸನ್ನಿಧಿಯಲ್ಲಿ ಕೊಡುವ ಪದಾರ್ಥ. अग्निपदे कार्यं दीयते वा "अण्" (वा० ५-१-९७)।

**आग्निमारुत** ಆಗ್ನಿಮಾರುತ (वि०) ಅಗ್ನಿ ಮತ್ತು ಮರುತ್ತುಗಳಿಗೆ ಸಂಬಂಧಿಸಿದ (ಹವಿಸ್ಸು ಮೊದಲಾ

ದುದು). अग्निश्च मरुच्च अग्नामरुतौ, ते देवतेऽस्य "अण्" (४-२-२४)। इत् (६-३-२८)।

**आग्निवारुण ಆಗ್ನಿವಾರುಣ** (वि०) ಅಗ್ನಿ ಮತ್ತು ವರುಣ ದೇವತೆಗಳಿಗೆ ಸಂಬಂಧಿಸಿದ (ಹವಿಸ್ಸು ಮೊದಲಾದುದು). अग्निश्च वरुणश्च अग्नीवरुणौ, ते देवतेऽस्य "अण्" (४-२-२४)। इत् (६-३-२८)।

**आग्निष्टोमिक ಆಗ್ನಿಷ್ಟೋಮಿಕ** (पु०) 1. ಅಗ್ನಿಷ್ಟೋಮ ಯಾಗವನ್ನು ತಿಳಿದವನು. 2. ಅಗ್ನಿಷ್ಟೋಮ ಯಾಗದ ವಿಷಯವನ್ನು ತಿಳಿಸುವ ಗ್ರಂಥದ ಅಧ್ಯಯನ ಮಾಡುವ. अग्निष्टोमं वेत्ति तत्प्रतिपादकं ग्रन्थमधीते वा "ठक्" (४-२-६०)। (वि०)3. ಅಗ್ನಿಷ್ಟೋಮ ಯಾಗಕ್ಕೆ ಸಂಬಂಧಿಸಿದ.

**आग्निष्टोमिकी ಆಗ್ನಿಷ್ಟೋಮಿಕೀ** (स्त्री०) ಅಗ್ನಿಷ್ಟೋಮ ಯಾಗದ ದಕ್ಷಿಣೆ. अग्निष्टोमस्य दक्षिणा "ठञ्" (५-१-९५)। "ङीप्" (४-१-५)।

**आग्नीध्र ಆಗ್ನೀಧ್ರ** (पु०) 1. ಋತ್ವಿಕ್ಕು, ಯಾಜಕ, ಯಾಗದಲ್ಲಿ ಸಹಾಯಕ. अग्निमिन्धयति अग्नीत्। तस्य स्थानमाग्नीध्रम्। तात्स्थ्यात् सोऽप्याग्नीध्रः। [ಅಗ್ನಿಯನ್ನು ಪ್ರಕಾಶಪಡಿಸುವವನು ಅಗ್ನೀತ್ತು. ಅವನ ಸ್ಥಾನವು ಆಗ್ನೀಧ್ರವು. ಅಲ್ಲಿರುವುದರಿಂದ ಋತ್ವಿಕ್ಕೂ ಆಗ್ನೀಧ್ರನು]. (न०) 2. ಆಗ್ನೀಧ್ರನೆಂಬ ಋತ್ವಿಕ್ಕಿನ ಸ್ಥಾನ. अग्निमिन्धयति इति अग्नीत्। तस्य स्थानम् "रण्" (वा० ४-३-१२०)। 3. ಆಗ್ನೀಧ್ರನ ಕರ್ಮ (ಕೆಲಸ). आग्नीध्रस्य कर्म भावो वा "अण्"।

**आग्नीध्रा ಆಗ್ನೀಧ್ರ್ಯಾ** (स्त्री०) ಅಗ್ನಿಶಾಲೆ, ಅಗ್ನಿಗೆ ಯೋಗ್ಯವಾದ ಗೃಹ. आग्नीध्रस्थानमर्हति "यत्"।

**आग्नेन्द्र ಆಗ್ನೇಂದ್ರ** (वि०) ಅಗ್ನಿ ಮತ್ತು ಇಂದ್ರ ದೇವತಾಕವಾದ(ಹವಿಸ್ಸು ಮೊದಲಾದುದು). अग्निश्च इन्द्रश्च अग्नेन्द्रौ, तौ देवतेऽस्य "अण्" (४-२-२४)।

**आग्नेय ಆಗ್ನೇಯ** (पु०) 1. ಕಾರ್ತಿಕೇಯ, ಷಣ್ಮುಖ. अग्नेरपत्यम्। 2. ಅಗಸ್ತ್ಯಮಹರ್ಷಿ. 3. ದಕ್ಷಿಣಾಪಥದಲ್ಲಿ ಕಿಷ್ಕಿಂಧಾಪಟ್ಟಣಕ್ಕೆ ಸಮೀಪದಲ್ಲಿರುವ ಒಂದು ದೇಶ. ಈ ದೇಶದಲ್ಲಿ ಅಗ್ನಿಯು ವಾಸಮಾಡುತ್ತಿದ್ದುದರಿಂದ ಈ ಹೆಸರು. [ಅಗ್ನಿಯು ನೀಲರಾಜನ ಮಗಳನ್ನು ಮೋಹಿಸಿ ಆಕೆಯನ್ನು ಮದುವೆಯಾಗಿ ಆ ರಾಜನ ಸಹಾಯಕ್ಕಾಗಿ ಅಲ್ಲಿಯೇ ಕೆಲವು ಕಾಲ ವಾಸಮಾಡುತ್ತಿದ್ದನು.] भा० सभा० ३२। 4. ಅಗ್ನಿಪರ್ವತ. (न०)5. ಚಿನ್ನ, ಸುವರ್ಣ. अग्नेरपत्यम्। 6. ಕೃತ್ತಿಕಾ ನಕ್ಷತ್ರ. [ಇದು ಅಗ್ನಿದೇವತಾಕವಾದುದು.] 7. ರಕ್ತ. 8. ಅಗ್ನಿಯ ಉಪಾಸನೆಯ ಮಂತ್ರ. 9. ಅರಗು. 10. ಘೃತ, ತುಪ್ಪ. 11. ಒಂದು ವಿಧ ಸ್ನಾನ. "आग्नेयं भस्मना स्नानम्"। 12. ಅಗ್ನಿದೇವತಾಕವಾದ ಒಂದು ಅಸ್ತ್ರ. (वि०)13. ಅಗ್ನಿಯ ಸಂಬಂಧವಾದ. 14. ಅಗ್ನಿಯನ್ನು ಅಭಿವೃದ್ಧಿಪಡಿಸುವ. 15. ಜಾಠರಾಗ್ನಿಯನ್ನುಂಟುಮಾಡುವ, ಜೀರ್ಣಶಕ್ತಿಯನ್ನುಂಟುಮಾಡುವ. 16. ಅಗ್ನಿದೇವತಾಕವಾದ ಹವಿಸ್ಸು ಮೊದಲಾದುದು. 17. ಅಗ್ನಿಯ ಭಕ್ತ, ಅಗ್ನಿಯ ಉಪಾಸಕ. अग्नेर्भक्तः "ढक्" (वा० ४-२-२४)।

**आग्नेयी ಆಗ್ನೇಯೀ** (स्त्री०)1. ಸ್ವಾಹಾದೇವಿ, ಅಗ್ನಿಯ ಪತ್ನಿ. 2. ಆಗ್ನೇಯ ದಿಕ್ಕು, ಪೂರ್ವ ಮತ್ತು ದಕ್ಷಿಣ ದಿಕ್ಕುಗಳ ಮಧ್ಯಭಾಗ. 3. ಪ್ರತಿಪತ್ ತಿಥಿ, ಪಕ್ಷದ ಮೊದಲನೆಯ ದಿನ, ಅಗ್ನಿದೇವತಾಕವಾದ ತಿಥಿ. "वह्निस्त्वष्टृहिमाद्रिजा गणपतिः सर्पः कुमारो रविगौरीशो वसुनागधर्महरयः कामः कलीन्दू पिता। एते सर्वदिनाधिपाः स्युः" काला० २।

**आग्न्याधानिकी ಆಗ್ನ್ಯಾಧಾನಿಕೀ** (स्त्री०) ಅಗ್ನ್ಯಾಧಾನ ಯಜ್ಞದ ದಕ್ಷಿಣೆ. अग्न्याधानस्य यज्ञस्य दक्षिणा "ठञ्" (५-१-९५)। "ङीप्" (४-१-१५)।

**आग्रभोजनिक ಆಗ್ರಭೋಜನಿಕ** (पु०)1. ಅಗ್ರಭೋಜನಕ್ಕೆ ಯೋಗ್ಯನಾದ ಬ್ರಾಹ್ಮಣ, ಭೋಜನಪಂಕ್ತಿಯಲ್ಲಿ ಅಗ್ರಸ್ಥಾನಕ್ಕೆ ಅರ್ಹನಾದವನು. अग्रभोजनमर्हति – "ठञ्" (५-१-६३)। 2. ಪ್ರಥಮಭೋಜನಕ್ಕೆ ಕುಳ್ಳಿರಿಸಲ್ಪಡುವ ಬ್ರಾಹ್ಮಣ. अग्रभोजनं नियतं दीयतेऽस्मै "ठक्" (४-४-६६)।

**आग्रयण ಆಗ್ರಯಣ** (पु०) ಹೊಸ ಧಾನ್ಯವು ಬಂದಾಗ ದೇವತೆಗಳ ಪ್ರೀತ್ಯರ್ಥವಾಗಿ ಅದರಿಂದ ಮಾಡುವ ಯಜ್ಞ. अग्रस्य नवधान्यादेः अयनं (देवान् प्रति) प्रापणं येन कर्मणा – पृषो०। [ಹೊಸ ಧಾನ್ಯವನ್ನು ದೇವತೆಗಳಿಗೆ ಅರ್ಪಿಸುವುದಕ್ಕೆ ಮುಂಚೆ ಉಪಯೋಗಿಸಕೂಡದು.] "शस्यं नाश्नीयादग्निहोत्रमहुत्वा" आश्व० श्रौ० सू०।

**आग्रह ಆಗ್ರಹ** (पु०)1. ಆವೇಶ, ಆಸಕ್ತಿ, ದೃಢಸಂಕಲ್ಪ, ಹಠ. आ+ग्रह (उपादाने) "अप्" (३-३-५८)। "चलेऽपि काकस्य पदार्पणाग्रहः" नैष० १२-२१। 2. ತೆಗೆದುಕೊಳ್ಳುವಿಕೆ, ಸ್ವೀಕಾರ. 3. ಅನುಗ್ರಹ, ದಯೆ. 4. ಆಕ್ರಮಣ, ಮುತ್ತಿಗೆ, ಹಿಡಿಯುವಿಕೆ. "आग्रहोऽनुग्रहासक्त्योराक्रमे ग्रहणेऽपि च" मेदि०।

**आग्रहायण** ಆಗ್ರಹಾಯಣ (पु०) ಮಾರ್ಗಶೀರ್ಷಮಾಸ. अग्रे हायनमस्त्यस्याः आग्रहायणी—सा पौर्णमास्यस्त्यत्र मासे "अण्" (४-२-२१)।

**आग्रहायणक** ಆಗ್ರಹಾಯಣಕ (न०) ಮಾರ್ಗಶೀರ್ಷ ಮಾಸದ ಹುಣ್ಣಿಮೆಯ ದಿನ ಕೊಡಬೇಕಾದ ಸಾಲ. आग्रहायण्यां देयं ऋणम् "वुञ्" (४-३-५०)।

**आग्रहायणिक** ಆಗ್ರಹಾಯಣಿಕ(पु०) 1. ಮಾರ್ಗಶೀರ್ಷ ಮಾಸ. आग्रहायणी पौर्णमास्यस्मिन् मासे "ठक्" (४-२-२२)। (न०) 2. ಮಾರ್ಗಶೀರ್ಷಮಾಸದ ಹುಣ್ಣಿಮೆಯ ದಿನ ಕೊಡಬೇಕಾದ ಸಾಲ.

**आग्रहायणी** ಆಗ್ರಹಾಯಣೀ (स्त्री०) ಮಾರ್ಗಶೀರ್ಷ ಮಾಸದ ಹುಣ್ಣಿಮೆ. अग्रे हायनमस्याः "अण्" (५-४-३८)। "ङीप्" (४-१-१५)।

**आग्रहारिक** ಆಗ್ರಹಾರಿಕ (पु०) ಬ್ರಾಹ್ಮಣ. अग्रहारो नियतं दीयतेऽस्मै "ठक्" (४-४-६६)।

**आघट्टक** ಆಘಟ್ಟಕ (पु०) ಕೆಂಪು ಉತ್ತರಣೆ ಗಿಡ. आघट्टयति रोगान्—घट्ट (चलने) "ण्वुल्" (३-१-१३३)।

**आघट्टन** ಆಘಟ್ಟನ(न०) ಹೊಡೆತ, ತಿಕ್ಕಾಟ, ಉಜ್ಜುವಿಕೆ. आ+घट्ट (चलने) भावे "ल्युट्" (३-३-११५)। (स्त्री०) –घट्टना –ಘಟ್ಟನಾ. आ+घट्ट+णिच् "युच्" (वा० ३-३-१०७)। "रणद्भिराघट्टनया नभस्वतः पृथग्विभिन्नश्रुतिमण्डलैः स्वरैः" माघ० १-१०।

**आघर्ष** ಆಘರ್ಷ (पु०) ಉಜ್ಜುವಿಕೆ, ತಿಕ್ಕಾಟ. आ+घृषु (संघर्षे) "घञ्" (३-३-१८)। "गण्डस्थलाघर्षगलन्मदोदकद्रवद्रुमस्कन्धनिलायिनोऽलयः" माघ० १२-६४। भावे "ल्युट्" (३-३-११५)। –घर्षणम् –ಘರ್ಷಣಮ್.

**आघर्षणी** ಆಘರ್ಷಣೀ (स्त्री०) 1. ಕೂರ್ಚ, ಕುಂಚ, ತೂಲಿಕೆ. 2. ಉಜ್ಜುವ ವಸ್ತು, ರಬ್ಬರು ಮೊದಲಾದುದು. आघृष्यतेऽनेन आ+घृषु (संघर्षे) "ल्युट्" (३-३-११७)। "ङीप्" (४-१-१५)।

**आघाट** ಆಘಾಟ (पु०) 1. ಉತ್ತರಣೆ ಗಿಡ. 2. ಗಡಿ, ಎಲ್ಲೆ. 3. ಕೈತಾಳ, ಝಲ್ಲರಿ. (वि०) 4. ಹೊಡೆಯುವ. आ+घट (चेष्टायाम्) "घञ्" (३-३-१९)।

**आघात** ಆಘಾತ (पु०) 1. ಹೊಡೆತ, ಬಡಿತ, ಏಟು. 2. ವಧೆ, ಕೊಲೆ. 3. ಗಾಯ. आ+हन (हिंसागत्योः) "घञ्" (३-३-१८, १९)। 4. ವಧ್ಯಸ್ಥಾನ, ಕೊಲೆಮಾಡುವ ಜಾಗ. आ+हन अधि० "घञ्" (३-३-१२१)।

**आघातन** ಆಘಾತನ (न०) 1. ವಧ್ಯಸ್ಥಾನ. आ+हन (हिंसागत्योः)+णिच् "ल्युट्" (३-३-११७)। 2. ಕೊಲೆ, ವಧೆ. भावे "ल्युट्" (३-३-११५)।

**आघार** ಆಘಾರ (पु०) 1. ಘೃತ, ತುಪ್ಪ. आ+घृ (सेचने)+णिच् कर्म० "घञ्" (३-३-१९)। 2. ಘೃತ ಸೇಚನೆ, ಅಗ್ನಿಗೆ ವಾಯುವ್ಯದಿಂದ ಆಗ್ನೇಯ ದಿಕ್ಕಿನ ವರೆಗೂ ನಿರ್ಋತಿ ದಿಕ್ಕಿನಿಂದ ಈಶಾನ್ಯದವರೆಗೂ ಅವಿಚ್ಛಿನ್ನವಾಗಿ ಮಾಡುವ ತುಪ್ಪದ ಹೋಮ.

**आघूर्णन** ಆಘೂರ್ಣನ (न०) ಸುತ್ತುವಿಕೆ, ತಿರುಗುವಿಕೆ. आ+घूर्ण (भ्रमणे) "ल्युट्" (३-३-११५)।

**आघूर्णित** ಆಘೂರ್ಣಿತ (वि०) ಸುತ್ತಿಸಲ್ಪಟ್ಟ, ತಿರುಗಿಸಲ್ಪಟ್ಟ. आ+घूर्ण (भ्रमणे) "क्तः" (३-२-१०२)।

**आघोषण** ಆಘೋಷಣ (न०) (ಎಲ್ಲಾ ಕಡೆಯಲ್ಲೂ ಪ್ರಚಾರವಾಗಲು) ಗಟ್ಟಿಯಾಗಿ ಹೇಳುವುದು, ಸಾರುವುದು, ಡಂಗೂರ ಹೊಡೆಸುವುದು. आ + घुषिर् (विशब्दने) "ल्युट्" (३-३-११५)। (स्त्री०) –घोषणा –ಘೋಷಣಾ. आ+घुषिर्+णिच् "युच्" (३-३-१०७)।

**आघ्राण** ಆಘ್ರಾಣ (न०) 1. ವಾಸನೆ ನೋಡುವುದು, ಮೂಸಿನೋಡುವುದು. 2. ತೃಪ್ತಿ, ಸಂತೋಷ. आ+घ्रा (गन्धोपादाने) "ल्युट्" (३-३-११५)। "तृप्तिः सौहित्यमाघ्राणम्" अभि० चि०। (वि०) 3. ವಾಸನೆ ನೋಡಲ್ಪಟ್ಟ. आ+घ्रा कर्म० "क्तः" (३-२-१०२)। नत्वम् (८-२-५६)। 4. ತೃಪ್ತಿಹೊಂದಿದ. कर्त० "क्तः" (३-४-७२)।

**आघ्रात** ಆಘ್ರಾತ (वि०) ವಾಸನೆನೋಡಲ್ಪಟ್ಟ, ಮೂಸಿನೋಡಲ್ಪಟ್ಟ. आ + घ्रा (गन्धोपादाने) "क्तः" (३-२-१०२)। "आघ्रातवर्त्मनिमरण्यभागेष्वारण्यकैराश्रितधेनुभावैः" याद० ४-८१।

**आघ्रापित** ಆಘ್ರಾಪಿತ (वि०) 1. ಮೂಸಿನೋಡಿಸಲ್ಪಟ್ಟ, ವಾಸನೆನೋಡಿಸಲ್ಪಟ್ಟ. 2. ತೃಪ್ತಿಪಡಿಸಲ್ಪಟ್ಟ. आ+घ्रा (गन्धोपादाने)+णिच् "क्तः" (३-२-१०२)।

**आघ्रायक** ಆಘ್ರಾಯಕ (वि०) 1. ವಾಸನೆನೋಡುವವನು. 2. ತೃಪ್ತಿಹೊಂದುವವನು. आ+घ्रा (गन्धोपादाने) "ण्वुल्" (३-१-१३३)। स्त्रियाम् आघ्रायिका ಆಘ್ರಾಯಿಕಾ.

**आघ्रेय** ಆಘ್ರೇಯ (वि०) 1. ವಾಸನೆನೋಡಲು ಅರ್ಹವಾದ. 2. ವಾಸನೆನೋಡಲ್ಪಡುವ. आ+घ्रा (गन्धोपादाने) "यत्" (३-१-९७)।

**आङ् ಆಙ್**(अव्य०) 1. ಸ್ವಲ್ಪ. 2. ಎಲ್ಲೆ, ಗಡಿ. "आसमुद्रक्षितीशानाम्" रघु० १-५। 3. ಅಭಿವಿಧಿ. "सोऽहमाजन्मशुद्धानाम्" रघु० १-५। 4. ಧಾತುವಿನೊಡನೆ ಸೇರಿದಾಗ ಕ್ರಿಯಾವಿಶೇಷವನ್ನು ಸೂಚಿಸುವ ಉಪಸರ್ಗ. "तेनोपमीयेत तमालनीलमामुक्तमुक्तालतमस्य वक्षः" माघ० ३-८। "आङीषदर्थेऽभिव्याप्तौ सीमार्थे धातुयोगजे" अम०।

**आङ्कुशिक ಆಂಕುಶಿಕ** (वि०) ಅಂಕುಶವೇ ಆಯುಧವಾಗಿ ಉಳ್ಳವನು. अङ्कुशः प्रहरणमस्य "ठक्" (४-४-५७)।

**आङ्ग ಆಂಗ** (पु०) 1. ಅಂಗದೇಶದ ದೊರೆ. अङ्गानां राजा। 2. ಅಂಗರಾಜನ ಮಗ. (न०) 3. ಕೋಮಲವಾದ ಶರೀರ. अङ्ग स्वार्थे "अण्" (५-४-३८)। (वि०) 4. (ವ್ಯಾಕರಣಶಾಸ್ತ್ರದಲ್ಲಿ) ಅಂಗಾಧಿಕಾರದಲ್ಲಿ ಉಕ್ತವಾದ ಕಾರ್ಯ. "वार्णादाङ्गं बलीयः" परि० ५६। 5. ಶಾರೀರಕ, ಶರೀರಸಂಬಂಧವಾದ. अङ्गस्येदम् "अण्" (४-३-१२०)। 6. ಅಂಗದೇಶದಲ್ಲಿ ಹುಟ್ಟಿದ. अङ्गेषु भवः "अण्"।

**आङ्गक ಆಂಗಕ** (पु०) 1. ಅಂಗರಾಜನ ಸೇವಕ. 2. ಅಂಗದೇಶದ ಸೇವಕ, ಅಂಗದೇಶದ ಭಕ್ತ. अङ्गाः क्षत्रियाः जनपदो वा भक्तिरस्य "वुञ्" (४-३-१००)। (वि०) 3. ಅಂಗದೇಶದಲ್ಲಿ ಹುಟ್ಟಿದ. अङ्गेषु भवः "वुञ्" (४-२-१२५)।

**आङ्गविद्य ಆಂಗವಿದ್ಯ** (वि०) 1. ಶಿಕ್ಷೆ, ವ್ಯಾಕರಣ ಮೊದಲಾದ ಅಂಗವಿದ್ಯೆಯನ್ನು ತಿಳಿದಿರುವ, ವೇದಾಂಗಗಳನ್ನು ತಿಳಿದಿರುವ. 2. ಅಂಗಸಾಮುದ್ರಿಕವನ್ನು ತಿಳಿದಿರುವ. अङ्गविद्यां वेत्ति "अण्" (४-२-५९)। 3. ಅಂಗವಿದ್ಯೆಯ ವ್ಯಾಖ್ಯಾನ ಗ್ರಂಥ. अङ्गविद्याया व्याख्यानो ग्रन्थः "अण्" (४-३-६६)। 4. ಅಂಗವಿದ್ಯೆಯಲ್ಲಿರುವ. "अङ्गविद्यायां भवः "अण्" (६-३-६६)।

**आङ्गविद्या ಆಂಗವಿದ್ಯಾ** (स्त्री०) 1. ವ್ಯಾಕರಣ ಮೊದಲಾದ ಅಂಗವಿದ್ಯೆ. 2. ಸಾಮುದ್ರಿಕಶಾಸ್ತ್ರ. आङ्गी च सा विद्या च।

**आङ्गार ಆಂಗಾರ** (न०) ಕೆಂಡದ ರಾಶಿ. अङ्गाराणां समूहः "अण्" (४-२-३८)।

**आङ्गिक ಆಂಗಿಕ** (पु०) ಭಾವಸೂಚಕವಾದ ಅಂಗಗಳ ಅಭಿನಯ, ಭಾವಾಭಿನಯ. अङ्गेन अङ्गचालनेन निर्वृत्तम् "ठक्" (४-४-१९)। "भवेदभिनयोऽवस्थानुकारः स चतुर्विधः। आङ्गिको वाचिकश्चैवमाहार्यः सात्त्विकस्तथा" सा० द० ६-२।

**आङ्गिरस ಆಂಗಿರಸ** (पु०) 1. ಅಂಗಿರಸ್ಸಿನ ಮಗ— (1) ಬೃಹಸ್ಪತಿ. (2) ಉತಥ್ಯ. (3) ಸಂವರ್ತ. अङ्गिरसोऽपत्यम् "अण्" (४-१-९२)। "त्रयस्त्वङ्गिरसः पुत्रा लोके सर्वत्र विश्रुताः। बृहस्पतिरुतथ्यश्च संवर्तश्च धृतव्रताः" भा० आदि० ६७-५। "अध्यापयामास पितॄन् शिशुराङ्गिरसः कविः। पुत्रका इतिहोवाच ज्ञानेन परिगृह्य तान्" मनु० २-१५१। 2. ಅಥರ್ವವೇದದ ಒಂದು ಸೂಕ್ತ. अङ्गिरसा दृष्टम् "अण्" (४-२-७)। 3. ಜೀವಾತ್ಮ.

**आचक्षाण ಆಚಕ್ಷಾಣ** (वि०) ಕಥೆಯನ್ನು ಹೇಳುವ. आचक्षते — आ+चक्षिङ् (व्यक्तायां वाचि) "शानच्" (३-२-१२४)।

**आचक्षुस् ಆಚಕ್ಷುಸ್** (वि०) ತಿಳಿದವನು, ಪೂರ್ವಕಥೆ ಬಲ್ಲವನು. आ+चक्षिङ् (व्यक्तायां वाचि) "उसिः" (उ० २-१२०)।

**आचतुर ಆಚತುರ** (अव्य०) ನಾಲ್ವರವರೆಗೂ, ನಾಲ್ಕು ತಲೆಯ ಪರ್ಯಂತ, ವಂಶದ ನಾಲ್ಕನೆಯ ತಲಾಂತರದವರೆಗೂ. चतुःपर्यन्तम् — अव्ययी०। आ+चतुर् "टच्" (५-४-१०७)।

**आचतुर्य ಆಚತುರ್ಯ** (न०) ನಿಪುಣನಾಗಿಲ್ಲದಿರುವಿಕೆ. अचतुरस्य भावः "ष्यञ्" (५-१-१२३)।

**आचमन ಆಚಮನ** (न०) 1. ಜಲಪಾನ, (ವೈದಿಕ ಕರ್ಮಗಳನ್ನು ಮಾಡುವ ಸಮಯದಲ್ಲಿ) ಶುದ್ಧಿಗಾಗಿ ಮಾಡುವ ಮಂತ್ರಪೂರ್ವಕ ಜಲಪಾನ. आ+चमु (अदने) "ल्युट्" (३-३-११५)। **ಆಚಮನದ ಕ್ರಮ:** "आयतं पर्वणां कृत्वा गोकर्णाकृतिमत्करम्। संहताङ्गुलिना तोयं गृहीत्वा पाणिना द्विजः। मुक्ताङ्गुष्ठकनिष्ठाभ्यां शेषेणाचमनं चरेत्। माषमज्जनमात्रास्तु संगृह्य त्रिः पिबेदपः"। [ಚೆನ್ನಾಗಿ ನೀಡಿದ ಬೆರಳುಗಳನ್ನು ಒಟ್ಟಿಗೆ ಸೇರಿಸಿ ಕೈಯನ್ನು ಗೋವಿನಕರ್ಣದ ಆಕಾರಕ್ಕೆ ಮಾಡಿ ಹಸ್ತದೊಳಗೆ ಉದ್ದಿನಕಾಳು ಮುಳುಗುವಷ್ಟು ಮಾತ್ರ ನೀರನ್ನು ತೆಗೆದುಕೊಂಡು ಮಂತ್ರಪೂರ್ವಕ ಮೂರು ಸಲ ನೀರನ್ನು ಕುಡಿಯಬೇಕು.] 2. ಆಚಮನದ ನೀರು. आचम्यतेऽनेन — कर० "ल्युट्" (३-३-११७)।

**आचमनक ಆಚಮನಕ** (न०) 1. ಆಚಮನದ ನೀರು. आचम्यतेऽनेन कर० "ल्युट्"। ततः स्वार्थे "कन्"। 2. ಬಾಯಿನೀರನ್ನು ಉಗುಳುವ ಪಾತ್ರೆ.

**आचमनीय** ಆಚಮನೀಯ (नं०) ಆಚಮನದ ನೀರು, ಆಚಮನಕ್ಕಾಗಿ ಉಪಯೋಗಿಸುವ ಜಲ. आचमनाय हितम् "छ:" (५-१-५)।

**आचय** ಆಚಯ (पुं०) ಕೂಡಿಸಿಡುವುದು, ಶೇಖರಿಸಿಡುವುದು, ಸಂಗ್ರಹಿಸುವುದು. आ+चिञ् (चयने) "अच्" (३-३-५६)।

**आचरण** ಆಚರಣ(नं०)1. ಕೃತಿ, ಮಾಡುವಿಕೆ. 2. ನಡತೆ, ನಡವಳಿಕೆ, ವರ್ತನೆ, ಆಚಾರ. आ+चर (गतौ) "ल्युट्" (३-३-११५)। "अधीतिबोधाचरणप्रचारणैः दशाश्चतस्रः प्रणयन्नुपाधिभिः" नैष० १-४। 3. ಸಂಪ್ರದಾಯ, ವಾಡಿಕೆ, ಪದ್ಧತಿ. 4. ರಥ, ಗಾಡಿ. आचरत्यनेन — करं० "ल्युट्" (३-३-११७)।

**आचरणीय** ಆಚರಣೀಯ(वि०)1. ಆಚರಿಸಲು ಯೋಗ್ಯವಾದ. 2. ಅವಶ್ಯವಾಗಿ ಮಾಡಬೇಕಾದ. आ+चर (गतौ) "अनीयर्" (३-१-९६)।

**आचरित** ಆಚರಿತ(नं०)1. ನಡತೆ, ನಡವಳಿಕೆ, ವರ್ತನೆ. आ+चर (गतौ) भावे "क्तः" (३-३-११४)। 2. ಕೊಟ್ಟ ಸಾಲವನ್ನು ಹಿಂದಕ್ಕೆ ಪಡೆಯುವ ಐದು ಉಪಾಯಗಳಲ್ಲೊಂದು. "धर्मेण व्यवहारेण छलेनाचरितेन च। प्रयुक्तं साधयेदर्थं पञ्चमेन बलेन च" मनु० ८-४९। [ಪತ್ನಿ ಪುತ್ರ ಮತ್ತು ಹಸುಗಳನ್ನು ಹೊಡೆದು ಬಡಿದು ಮನೆಯ ಬಾಗಿಲಲ್ಲಿ ಕುಳಿತು ಸಾಲಗಾರನು ಕೊಟ್ಟ ಸಾಲವನ್ನು ಹಿಂದಕ್ಕೆ ಪಡೆಯುವುದು ಆಚರಿತವು.] "दारपुत्रपशून् हत्वा कृत्वा द्वारोपवेशनम्। यत्रार्थी साध्यतेऽर्थं स्वं तदाचरितमुच्यते"। (वि०) 3. ಮಾಡಲ್ಪಟ್ಟ. आ+चर कर्मं० "क्तः" (३-२-१०२)। "नृपस्य पूर्वाचरितैः कृतं शुभैः" माघ० १-२६।

**आचरितव्य** ಆಚರಿತವ್ಯ (वि०)1. ಅವಶ್ಯವಾಗಿ ಮಾಡಬೇಕಾದ. 2. ಆಚರಿಸಲು ಯೋಗ್ಯವಾದ. आ+चर (गतौ) "तव्यः" (३-१-९६)।

**आचर्य** ಆಚರ್ಯ (वि०) ಆಚರಣೆಗೆ ಯೋಗ್ಯವಾದ ದೇಶ. आ+चर (गतौ) "यत्" (वा० ३-१-१००)।

**आचान्त** ಆಚಾಂತ (वि०) ಆಚಮನ ಮಾಡಿದವನು. आ+चमु (अदने) "क्तः" (३-४-७२)।

**आचाम** ಆಚಾಮ (पुं०) 1. ಆಚಮನ. आ+चमु (अदने) "घञ्" (३-३-१८)। 2. ಅನ್ನದಮೇಲಿನ ಗಂಜಿ. 3. ಭಕ್ಷ್ಯ, ತಿಂಡಿ. आचम्यते — आ+चमु कर्मं० "घञ्" (३-३-१९)।

**आचार** ಆಚಾರ(पुं०)1. ಆಚರಣೆ, ಅನುಷ್ಠಾನ. आ+चर (गतौ) "घञ्" (३-३-१८)। 2. ಒಳ್ಳೆಯ ನಡತೆ, ಸದ್ವರ್ತನೆ. "आचारमागन्तुकदम्पतीनाम्" याद० १३-८९। [ಮನುಷ್ಯನಿಗೆ ಆಚಾರವೇ ಸರ್ವಶ್ರೇಷ್ಠವಾದುದು. ಸದಾಚಾರವು ಐಶ್ವರ್ಯವನ್ನೂ, ಕೀರ್ತಿಯನ್ನೂ, ಆಯುರ್ವೃದ್ಧಿಯನ್ನೂ ಉಂಟುಮಾಡಿ ಅನಿಷ್ಟಗಳನ್ನು ದೂರಮಾಡುವುದು. ಆಚಾರದಿಂದ ಧರ್ಮವೂ ಧರ್ಮದಿಂದ ಆಯುರ್ವೃದ್ಧಿಯೂ ಉಂಟಾಗುವುವು.] "आचारो भूतिजनन आचारः कीर्तिवर्द्धनः। आचाराद्वर्द्धते ह्यायुराचारो हन्त्यलक्षणम्। आगमानां हि सर्वेषामाचारः श्रेष्ठ उच्यते। आचारप्रभवो धर्मः धर्मादायुर्विवर्द्धते। एतद्यशस्यमायुष्यं स्वर्ग्यं स्वस्त्ययनं महत्" भा० आनु० १६१–१७०, ७१, ७२। 3. ಸಂಪ್ರದಾಯ, ಪದ್ಧತಿ, ವಾಡಿಕೆ. "आचारलाजैरिव पौरकन्याः" रघु० २-१०। 4. ರೀತಿ, ಕ್ರಮ. 5. ವಿಧಿ, ಕಟ್ಟಳೆ, ನಿಯಮ. "आचार इत्यवहितेन मया गृहीता या वेत्रयष्टिरवरोधगृहेषु राज्ञः" शाकु० ५-३।

**आचारदीप** ಆಚಾರದೀಪ (पुं०) ಆರತಿ ಎತ್ತುವ ದೀಪ, ದಿಗ್ವಿಜಯಕ್ಕಾಗಿ ರಾಜನು ಹೊರಟುಬರುವಾಗ ಎತ್ತುವ ಆರತಿಯ ದೀಪ. आचारार्थो दीपः।

**आचारवत्** ಆಚಾರವತ್ (वि०) ಸದಾಚಾರವುಳ್ಳ, ಒಳ್ಳೆಯ ನಡತೆಯುಳ್ಳ. प्रशस्त आचारोऽस्त्यस्य "मतुप्" (५-२-९४)। स्त्रियाम् "ङीप्" (४-१-६)। –वती –ವತೀ.

**आचारपूत** ಆಚಾರಪೂತ (वि०) ಸದಾಚಾರದಿಂದ ಪವಿತ್ರನಾದ. आचारेण पूतः। "तमातपक्लान्तमनातपत्रमाचारपूतं पवनः सिषेवे" रघु० २-१३।

**आचारलाज** ಆಚಾರಲಾಜ (पुं० ब० व०) ಸಂಪ್ರದಾಯದಂತೆ ರಾಜನ ಅಥವಾ ಇತರ ಮಹಾಪುರುಷರ ಮೇಲೆ ಗೌರವದಿಂದ ಶುಭವನ್ನು ಕೋರಿ ಎರಚುವ ಅರಳು. "अवाकिरन् बाललताः प्रसूनैराचारलाजैरिव पौरकन्याः" रघु० २-२०।

**आचारवेत्तृ** ಆಚಾರವೇತ್ತೃ (वि०) ಸಂಪ್ರದಾಯವನ್ನು ತಿಳಿದಿರುವ, ಪದ್ಧತಿಯನ್ನು ಅರಿತಿರುವ. आचारं वेत्ति — विद (ज्ञाने) "तृच्" (३-१-१३३)। स्त्रियाम् "ङीप्" (४-१-५)। –वेत्री –ವೇತ್ರೀ.

**आचारवेदिन्** ಆಚಾರವೇದಿನ್ (वि०) ಸಂಪ್ರದಾಯವನ್ನು ತಿಳಿದಿರುವ, ಪದ್ಧತಿಯನ್ನು ಅರಿತಿರುವ. आचारं वेत्ति — विद (ज्ञाने) "णिनिः" (३-२-७८)। स्त्रियाम् "ङीप्" (४-१-५)। –वेदिनी –ವೇದಿನೀ

**आचारिन्** ಆಚಾರಿನ್ (वि०) ಸದಾಚಾರಸಂಪನ್ನ, ಶಾಸ್ತ್ರೋಕ್ತವಾದ ಕರ್ಮಾಚರಣೆಯುಳ್ಳ. आचारोऽस्यास्ति "इनिः" (५-२-११५)। स्त्रियाम् "ङीप्" (४-१-५)। आचारिणी ಆಚಾರಿಣೀ.

**आचार्य** ಆಚಾರ್ಯ (पु०) 1. ಉಪಾಧ್ಯಾಯ. आ+चर (गतौ) "ण्यत्" (३-१-१२४)। 2. ಉಪನಯನ ಮಾಡಿ ಸಾಂಗವೇದಾಧ್ಯಯನ ಮಾಡಿಸುವ ಗುರು, ಮಂತ್ರೋಪದೇಶವಮಾಡುವ ಗುರು. "उपनीय तु यः शिष्यं वेदमध्यापयेद्द्विजः। साङ्गं च सरहस्यं च तमाचार्यं प्रचक्षते" मनु० २-१४०। "अन्वेषयन् दित्सितदक्षिणोऽहमाचार्यसान्दीपिनिसूनुवृत्तम्" याद० १८-१०९। 3. ಶಾಸ್ತ್ರಾರ್ಥಗಳನ್ನು ವಿವರಿಸಿ ತಾನೂ ಶಾಸ್ತ್ರಕ್ಕನುಗುಣವಾಗಿ ನಡೆದುಕೊಂಡು ಜನರಿಗೆ ಮಾರ್ಗದರ್ಶಿಯಾಗಿರುವ ಮತಪ್ರವರ್ತಕ. "आचिनोति हि शास्त्रार्थं आचारे स्थापयत्यपि। स्वयमाचरते यस्मात्तस्मादाचार्य उच्यते"। 4. ಯಜ್ಞದಲ್ಲಿ ಕರ್ಮೋಪದೇಶ ಮಾಡುವವನು. (वि०) 5. ಪೂಜ್ಯ.

**आचार्यक** ಆಚಾರ್ಯಕ (न०) 1. ಗುರುತ್ವ, ಗುರುವಿನ ಕಾರ್ಯ, ಶಿಕ್ಷಣ, ಕಲಿಸುವಿಕೆ. 2. ಶಿಕ್ಷಣದ ನೈಪುಣ್ಯ. आचार्यस्य कर्म भावो वा "वुञ्" (५-१-१३२)। "तद्भूरिसात्त्विकविकारमपास्तधैर्यमाचार्यकं विजयि मान्मथमाविरासीत्" मालती० १-२९।

**आचार्यभोगीन** ಆಚಾರ್ಯಭೋಗೀನ (वि०) ಗುರುವಿನ ಸೌಖ್ಯಕ್ಕಾಗಿ ಕೊಡುವ ಧನ, ಆಚಾರ್ಯನ ಜೀವನಕ್ಕೆ ಹಿತವಾದ ಧನ. आचार्यभोगाय हितम् "खः" (५-१-९)।

**आचार्यमिश्र** ಆಚಾರ್ಯಮಿಶ್ರ (वि०) ಪೂಜ್ಯನಾದ, ಗೌರವಾರ್ಹನಾದ.

**आचार्या** ಆಚಾರ್ಯಾ (स्त्री०) ಮಂತ್ರವ್ಯಾಖ್ಯಾನ ಮಾಡುವವಳು, ವಿದ್ಯೆ ಕಲಿಸುವವಳು. आ+चर (गतौ) "ण्यत्" (३-१-१२४)।

**आचार्यानी** ಆಚಾರ್ಯಾನೀ (स्त्री०) ಆಚಾರ್ಯನ ಪತ್ನಿ, ಗುರುಪತ್ನಿ. आचार्यस्य स्त्री—आचार्य "आनुक्" "ङीष्" च (४-१-४९)। "शत्रुमूलमनुत्खाय न पुनर्द्रष्टुमुत्सहे। त्र्यम्बकं देवमाचार्यमाचार्यानीं च पार्वतीम्" म० वी० ३-६।

**आचिख्यासा** ಆಚಿಖ್ಯಾಸಾ (स्त्री०) ಹೇಳಲು ಅಪೇಕ್ಷೆ. आख्यातुमिच्छा—आ+ख्या (प्रकथने)+सन् "अः" (३-३-१०२)।

**आचिख्यासु** ಆಚಿಖ್ಯಾಸು (वि०) ಹೇಳಲು ಅಪೇಕ್ಷಿಸುವ, ಹೇಳಲು ಇಷ್ಟಪಡುವ. आख्यातुमिच्छुः—आ+ख्या (प्रकथने)+सन् "उः" (३-२-१६८)।

**आचित** ಆಚಿತ (पु०) 1. ಒಂದು ಬಂಡಿಯ ಹೊರೆ, ಒಂದು ಬಂಡಿಯಲ್ಲಿ ತುಂಬಬಹುದಾದ ಚಿನ್ನ. (पुंन०) 2. ಹತ್ತು ಭಾರಗಳ ತೂಕ, 20,000 ಪಲಗಳ ತೂಕ. आचीयते—आ+चिञ् (चयने) "क्तः" (३-२-१०२)। "आचितो दश भाराः स्युः शाकटो भार आचितः" अम०। ಚಿನ್ನದ ತೂಕ:

| | |
|---|---|
| 5 ಗುಲಗಂಜಿಗಳ ತೂಕ | 1 ಆದ್ಯಮಾಷಕ |
| 16 ಆದ್ಯಮಾಷಕಗಳು | 1 ಕರ್ಷ |
| 4 ಕರ್ಷಗಳು | 1 ಪಲ |
| 100 ಪಲಗಳು | 1 ತುಲ |
| 20 ತುಲಗಳು | 1 ಭಾರ |
| 10 ಭಾರ ಅಥವಾ / 200 ತುಲ ಅಥವಾ / 20,000 ಪಲಗಳು | 1 ಆಚಿತ. |

(वि०) 3. ಹರಡಲ್ಪಟ್ಟ, ಕೆದರಲ್ಪಟ್ಟ, ವ್ಯಾಪ್ತವಾದ. "वनान्तशय्याकठिनीकृताकृती कचाचितौ विष्वगिवागजौ गजौ" किरा० १-३६। 4. ಕಟ್ಟಲ್ಪಟ್ಟ, ಗಂಟುಹಾಕಲ್ಪಟ್ಟ. "अर्धाचिता सत्वरमुत्थितायाः" कुमा० ७-६१। 5. ತುಂಬಿರುವ. 6. ಮುಚ್ಚಲ್ಪಟ್ಟ. 7. ಒಟ್ಟುಗೂಡಿಸಲ್ಪಟ್ಟ. 8. ಸಂಗ್ರಹಿಸಲ್ಪಟ್ಟ.

**आचितिक** ಆಚಿತಿಕ (वि०) 1. ಒಂದು ಆಚಿತ ತೂಕದಷ್ಟು ಹಿಡಿಸುವ. 2. ಒಂದು ಆಚಿತಕ್ಕೆ ಸಮವಾದ. 3. ಒಂದು ಆಚಿತದಷ್ಟು ಬೇಯಿಸುವ. आचितं संभवति अवहरति पचति वा "ठञ्" (५-१-५३)। स्त्रियाम् "ङीप्" (४-१-१५)। आचितिकी ಆಚಿತಿಕೀ.

**आचितीन** ಆಚಿತೀನ (वि०) "आचितिक" ಪದದ ಅರ್ಥ. आचितं संभवत्यवहरति पचति वा "खः" (५-१-५३)। स्त्रियाम् "टाप्" (४-१-४)। आचितीना ಆಚಿತೀನಾ.

**आचूषण** ಆಚೂಷಣ (न०) 1. ಬಾಯಿಂದ ಹೀರುವುದು, ನೀರು ಮುಂತಾದುವನ್ನು ಬಾಯೊಳಕ್ಕೆ ಎಳೆದುಕೊಳ್ಳುವುದು. आ+चूष (पाने) "ल्युट्" (३-३-११५)। 2. ವಿಷ ಮೊದಲಾದುವನ್ನು ದೇಹದಿಂದ ಹೊರಕ್ಕೆ ತೆಗೆಯಲು ಮಾಡುವ ಯಂತ್ರವ್ಯಾಪಾರ. 3. ದೇಹದಿಂದ ವಿಷ ಮುಂತಾದುವನ್ನು ಎಳೆಯುವ ಯಂತ್ರ, ಪಿಚಕಾರಿ. आ+चूष करं० "ल्युट्" (३-३-११७)।

**आच्छन्न** ಆಚ್ಛನ್ನ (वि०) ಮುಚ್ಚಲ್ಪಟ್ಟ. आ+छद (अपवारणे) "क्तः" (३-२-१०२)।

**आच्छाद** ಆಚ್ಛಾದ (पु०) 1. ವಸ್ತ್ರ, ಬಟ್ಟೆ. आच्छाद्यतेऽनेन– आ+छद (अपवारणे)+णिच् "घञ्" (३-३-१२१)। 2. ಹೊದಿಕೆ.

**आच्छादक** ಆಚ್ಛಾದಕ (वि०) 1. ಹೊದಿಸುವ. 2. ಮುಚ್ಚುವ, ಮರೆಮಾಡುವ. आ+छद (अपवारणे)+णिच् "ण्वुल्" (३-१-१३३)।

**आच्छादन** ಆಚ್ಛಾದನ (न०) 1. ವಸ್ತ್ರ, ಬಟ್ಟೆ. आ+छद (अपवारणे)+णिच् कर० "ल्युट्" (३-३-११७)। "तस्मादेताः सदा पूज्याः भूषणाच्छादनाशनैः" मनु० ३-५९। 2. ಮುಚ್ಚಳ. 3. ಮುಚ್ಚುವಿಕೆ. भावे "ल्युट्" (३-३-११५)।

**आच्छादित** ಆಚ್ಛಾದಿತ (वि०) 1. ಹೊದಿಸಲ್ಪಟ್ಟ. 2. ಮುಚ್ಚಲ್ಪಟ್ಟ, ಮರೆಮಾಡಲ್ಪಟ್ಟ. आ+छद (अपवारणे)+णिच् "क्तः" (३-२-१०२)। "आच्छादितायतदिगम्बरमुच्चकैर्गाम्" माघ० ४-१९।

**आच्छादिन्** ಆಚ್ಛಾದಿನ್ (वि०) 1. ಮುಚ್ಚುವ, ಮರೆಮಾಡುವ. आ+छद (अपवारणे)+णिच् "णिनिः" (३-१-१३४)। "स्तनयुगपरिणाहाच्छादिना वल्कलेन"। 2. ಹೊದಿಸುವ.

**आच्छाद्य** ಆಚ್ಛಾದ್ಯ (वि०) 1. ಹೊದಿಸಲ್ಪಡುವ. 2. ಮುಚ್ಚಲ್ಪಡುವ, ಮರೆಮಾಡಲ್ಪಡುವ. आ+छद (अपवारणे)+णिच् "यत्" (३-१-५७)। (अव्य०) 3. ಮುಚ್ಚಿ, ಮರೆಮಾಡಿ. 4. ಹೊದಿಸಿ. आ+छद+णिच् "ल्यप्" (७-३-३७)।

**आच्छुरित** ಆಚ್ಛುರಿತ (न०) 1. ಗಟ್ಟಿಯಾಗಿ ನಗುವಿಕೆ, ಶಬ್ದವಾಗುವಂತೆ ನಗುವುದು. आ+छुर (छेदने) "क्तः" (३-३-११४)। 2. ಉಗುರಿನಿಂದ ನುಡಿಸಬಹುದಾದ ಒಂದು ವಾದ್ಯ. 3. ಉಗುರಿನಿಂದ ಗೀರುವುದು. (वि०) 4. ಮಿಶ್ರವಾದ, ಬೆರತಿರುವ. 5. ಕೆರಳಿಸಲ್ಪಟ್ಟ, ಒಟ್ಟುಗೂಳಿಸಲ್ಪಟ್ಟ. कर्म० "क्तः" (३-२-१०२)। 6. ಉಗುರಿನಿಂದ ಗೀರಲ್ಪಟ್ಟ. "सामोन्मुखेनाच्छुरिता प्रियेण दत्तेऽथ काचित् पुलकेन भेदे" भट्टि० ११-१४।

**आच्छुरितक** ಆಚ್ಛುರಿತಕ (न०) 1. ಶಬ್ದವಾಗುವಂತೆ ಗಟ್ಟಿಯಾಗಿ ನಗುವಿಕೆ. 2. ಉಗುರಿನಿಂದ ಗೀರುವಿಕೆ. आच्छुरित स्वार्थे "कः"।

**आच्छेद** ಆಚ್ಛೇದ (पु०) 1. ಸುತ್ತಲೂ ಕತ್ತರಿಸುವುದು. 2. ಸ್ವಲ್ಪ ಕತ್ತರಿಸುವುದು. आ+छिदिर् (द्वैधीकरणे) "घञ्" (३-३-१८)। 3. ಬಲಾತ್ಕಾರದಿಂದ ತೆಗೆದುಕೊಳ್ಳುವುದು, ಕಿತ್ತುಕೊಳ್ಳುವುದು.

**आच्छेदन** ಆಚ್ಛೇದನ (न०) "आच्छेद" ಪದದ ಅರ್ಥ. आ+छिदिर् (द्वैधीकरणे) "ल्युट्" (३-३-११५)।

**आच्छोटन** ಆಚ್ಛೋಟನ (न०) ಚಿಟಿಕೆಹಾಕುವುದು, ಶಬ್ದವಾಗುವಂತೆ ಬೆರಳುಗಳ ಉಜ್ಜುವಿಕೆ. आ+छुट (छेदने) "ल्युट्" (३-३-११५)।

**आच्छोटित** ಆಚ್ಛೋಟಿತ (वि०) ಚಿಟಿಕೆಹಾಕಲ್ಪಟ್ಟ, ಉಜ್ಜುವಿಕೆಯಿಂದ ಶಬ್ದಮಾಡಲ್ಪಟ್ಟ (ಬೆರಳುಗಳು). आ+छुट (छेदने) "क्तः" (३-२-१०२)।

**आच्छोदन** ಆಚ್ಛೋದನ (न०) ಬೇಟೆ. आच्छिद्यतेऽत्र – आ+छिदिर् (द्वैधीकरणे) "ल्युट्" (३-३-११७)। पृषो०।

**आज** ಆಜ (पु०) 1. ಎಸೆಯುವಿಕೆ. अज (गतिक्षेपणयोः) भावे "घञ्" (३-३-१८)। (न०) 2. ತುಪ್ಪ. आ अज्यतेऽनेन – आ+अञ्जू (व्यक्त्यादौ) "कः" (वा० ३-३-५८)। 3. ಆಡಿನ ತುಪ್ಪ. (वि०) 4. ಆಡಿನ ಸಂಬಂಧವಾದ, ಆಡಿನ ಮಾಂಸ ಮೊದಲಾದುದು. अजस्येदम् "अण्" (४-३-१२०)।

**आजक** ಆಜಕ (न०) ಆಡುಗಳ ಸಮೂಹ. अजानां समूहः "वुञ्" (४-२-३९)।

**आजगव** ಆಜಗವ (न०) 1. ಶಿವನ ಧನುಸ್ಸು. अजगव स्वार्थे "अण्" (५-४-३८)। 2. ಶಿವಧನುಸ್ಸಿನಂತೆ ದೃಢವಾದ ಧನುಸ್ಸು. "तथेत्युक्त्वा पृथुर्वैन्यो गृहीत्वाऽऽजगवं धनुः" भा० द्रोण० ६९-३०।

**आजनन** ಆಜನನ (न०) 1. ಪ್ರಸಿದ್ಧವಾದ ಜನನ. आ+जनी (प्रादुर्भावे) "ल्युट्" (३-३-११५)। "तेषामाजननं पुण्यं कर्मणः प्रीतिमावहेत्" भा० आदि०। (अव्य०) 2. ಜನ್ಮಪರ್ಯಂತ, ಹುಟ್ಟುವವರೆಗೂ. 3. ಹುಟ್ಟಿದ ಮೊದಲುಗೊಂಡು. जननमभिव्याप्य। अव्ययी०।

**आजन्म** ಆಜನ್ಮ (अव्य०) 1. ಹುಟ್ಟುವ ಪರ್ಯಂತ. 2. ಹುಟ್ಟಿದ ಮೊದಲುಗೊಂಡು. जन्माभिव्याप्य। अव्ययी०। "सोऽहमाजन्मशुद्धानामाफलोदयकर्मणाम्" रघु० १-५।

**आजन्मसुरभिपत्र** ಆಜನ್ಮಸುರಭಿಪತ್ರ (पु०) ಮರುಗ,

**आजान** ಆಜಾನ (पुं०) 1. ಜನ್ಮ, ಉತ್ಪತ್ತಿ. आ+जनी (प्रादुर्भावे) "घञ्" (३-३-१८)। 2. ಪ್ರಕೃತಿ, ಸ್ವಭಾವ. "आजानसम्पदवलेपमिवादधानैः" यादं० १८-१२८। 3. ಜನನಸಾಧನ, ಉತ್ಪತ್ತಿಗೆ ಕಾರಣ. (अव्य०) 4. ಹುಟ್ಟಿದ ಮೊದಲುಗೊಂಡು. "आजानपावनक्षीरां वृषानन्दविधायिनीम्" चं० रा०। 5. ಜನರ ಗುಂಪಿನ ಸುತ್ತಲೂ. आसमन्तात् जानम्। 6. ಸ್ವಭಾವವಾಗಿ.

**आजानज** ಆಜಾನಜ (पुं०) ಸ್ಮಾರ್ತಕರ್ಮಗಳಿಂದ ದೇವತೆಗಳಾಗಿ ಹುಟ್ಟಿದವರು. [ದೇವತೆಗಳು ಆಜಾನಜರೆಂದೂ ಕರ್ಮದೇವತೆಗಳೆಂದೂ ಸಾಮಾನ್ಯ ದೇವತೆಗಳೆಂದೂ ಮೂರು ಬಗೆ. ಸ್ಮಾರ್ತಕರ್ಮಗಳಿಂದ ದೇವತ್ವ ಸಂಪಾದಿಸಿದ ಆಜಾನಜ ದೇವತೆಗಳಿಗಿಂತಲೂ ವೈದಿಕ ಕರ್ಮಗಳಿಂದ ದೇವತೆಗಳಾದ ಕರ್ಮದೇವತೆಗಳೂ ಅವರಿಗಿಂತಲೂ ಹವಿಸ್ಸಿನ ಭಾಗವನ್ನು ಹೊಂದುವ ಅಧಿಕಾರಪಡೆದ ವಸುರುದ್ರಾದಿ ದೇವತೆಗಳೂ ಶ್ರೇಷ್ಠರು.]

**आजानदेव** ಆಜಾನದೇವ (पुं०) ಉತ್ಪತ್ತಿಯಿಂದಲೇ ದೇವತ್ವವನ್ನು ಹೊಂದಿದವರು. आजानं जन्मारभ्य देवः।

**आजानेय** ಆಜಾನೇಯ (पुं०) ಶ್ರೇಷ್ಠವಾದ ಕುದುರೆ, ಒಳ್ಳೆಯ ಜಾತಿ ಕುದುರೆ. आजेन क्षेपणानेयाः।

**आजि** ಆಜಿ (पुं०) 1. ಮಾರ್ಗ, ರಸ್ತೆ. अजन्त्यस्याम्—अज (गतिक्षेपणयोः) "इण्" (वा० ३-३-१०८)। 2. ದಶರಥ. 3. ಬ್ರಹ್ಮ, ಚತುರ್ಮುಖ. अजस्य अजमहाराजस्य विष्णोर्वा अपत्यम् "इञ्" (४-१-९५)। 4. ಆಕ್ಷೇಪ. 5. ನಿಮಿಷ, ಕ್ಷಣ. (स्त्री०) 6. ಯುದ್ಧ. "ते तु यावन्त एवाजौ तावांश्च ददृशे स तैः" रघु० १२-४५। 7. ಸಮಭೂಮಿ. "आजिः क्षणे समक्ष्मायां युधि" हेम०।

**आजिगीषा** ಆಜಿಗೀಷಾ (स्त्री०) ಜಯಿಸಲು ಅಪೇಕ್ಷೆ, ಜಯದಲ್ಲಿ ಆಸೆ. आ+जि (जये)+सन् "अः" (३-३-१०२)।

**आजिगीषु** ಆಜಿಗೀಷು (वि०) ಜಯಿಸಲು ಅಪೇಕ್ಷೆಯುಳ್ಳ. आ+जि (जये)+सन् "उः" (३-२-१६८)।

**आजिहीर्षा** ಆಜಿಹೀರ್ಷಾ (स्त्री०) ತೆಗೆದುಕೊಂಡು ಬರಲು ಅಪೇಕ್ಷೆ, ತರಲು ಆಸೆ. आहर्तुमिच्छा—आ+हृञ् (हरणे)+सन् "अः" (३-३-१०२)।

**आजिहीर्षु** ಆಜಿಹೀರ್ಷು (वि०) ತೆಗೆದುಕೊಂಡುಬರಲು ಅಪೇಕ್ಷೆಯುಳ್ಳ. आहर्तुमिच्छुः—आ+हृञ् (हरणे)+सन् "उः" (३-२-१६८)।

**आजीव** ಆಜೀವ (पुं०) 1. ಶರೀರ ಪೋಷಣೆ, ಹೊಟ್ಟೆಪಾಡು. आ+जीव (प्राणधारणे) "घञ्" (३-३-१८)। 2. ಉದ್ಯೋಗ, ಕಸಬು, ವೃತ್ತಿ, ಜೀವನೋಪಾಯ. आजीवत्यनेन करं० "घञ्" (३-३-१२१)। "विशुद्ध इदानीमाजीवः" शाकु० ६। 3. ಕಸಬುದಾರ. आजीवति—कर्त० "अच्" (३-१-१३४)। (अव्य०) 4. ಬದುಕಿರುವವರೆಗೂ. जीवमभिव्याप्य। अव्ययी०।

**आजीवक** ಆಜೀವಕ (पुं०) ಭಿಕ್ಷುಕ, ತಿರುಕ. आजीवति—आ+जीव (प्राणधारणे) "ण्वुल्" (३-१-१३३)।

**आजीवन** ಆಜೀವನ (न०) 1. ಪೋಷಣೆ, ಹೊಟ್ಟೆಪಾಡು. आ+जीव (प्राणधारणे) भावे "ल्युट्" (३-३-११५)। 2. ಉದ್ಯೋಗ, ಕಸಬು, ವೃತ್ತಿ. आजीवत्यनेन करं० "ल्युट्" (३-३-११७)।

**आजीविका** ಆಜೀವಿಕಾ (स्त्री०) ಉದ್ಯೋಗ, ಕಸಬು. आ+जीव (प्राणधारणे)+णिच् "ण्वुल्" (३-१-१३३)। "आर्ये, कलेति शिक्षिता। आजीविकेदानीं संवृत्ता" मृच्छ० २।

**आजीव्य** ಆಜೀವ್ಯ (वि०) 1. ಜೀವನಕ್ಕಾಗಿ ಆಶ್ರಯಿಸಲ್ಪಡುವವನು. आ+जीव (प्राणधारणे) "ण्यत्" (३-१-१२४)। 2. ಜೀವನಕ್ಕಾಗಿ ಸೇರಲು ಯೋಗ್ಯವಾದ ದೇಶ.

**आजू** ಆಜೂ (स्त्री०) 1. ಕೂಲಿ ಕೊಡದೆ ಬಲಾತ್ಕಾರದಿಂದ ಕೆಲಸ ಮಾಡಿಸುವಿಕೆ. 2. ಭದ್ರವೆಂಬ ಒಂದು ಕರಣ. आजुष्तेऽनया नरकम्। (वि०) 3. ಕೂಲಿ ಕೊಡದೆ ಕೆಲಸ ಮಾಡಿಸುವವನು. आजवति—आ+जु (गतौ) "क्विप्" (३-२-१७८)। 4. ಕೂಲಿ ಪಡೆಯದೆ ಕೆಲಸ ಮಾಡುವವನು.

**आजूर्** ಆಜೂರ್ (स्त्री०) 1. ನಿಷ್ಟಿ, ಕೂಲಿ ಕೊಡದೆ ಕೆಲಸ ಮಾಡಿಸುವಿಕೆ. आ+ज्वर (रोगे) "क्विप्" (३-२-७६)। "ऊठ्" (६-४-२०)। (वि०) 2. ಸಂತಾಪವುಳ್ಳವನು.

**आज्ञप्त** ಆಜ್ಞಪ್ತ (वि०) 1. ಅಪ್ಪಣೆ ಮಾಡಲ್ಪಟ್ಟ. आ + ज्ञप (ज्ञाने)+णिच् "क्तः" (३-२-१०२)। "आज्ञप्तास्मि देव्या धारिण्या। अचिरप्रवृत्तोपदेशं छलिकं नाम नाटयमन्तरेण आर्यगणदासं प्रष्टुम्" माल० १। 2. ಚೆನ್ನಾಗಿ ತಿಳಿಸಲ್ಪಟ್ಟ. आ+ज्ञप (ज्ञापने) "क्तः" (३-२-१०२)।

**आज्ञप्ति** ಆಜ್ಞಪ್ತಿ (स्त्री०) ಆಜ್ಞೆ, ಅಪ್ಪಣೆ. आ+ज्ञप (ज्ञाने) + णिच् "क्तिन्" (३-३-९४)।

**आज्ञा** ಆಜ್ಞಾ (स्त्री०) 1. ಅಪ್ಪಣೆ. आ+ज्ञा (नियोगे) "अङ्" (३-३-१०६)। "आज्ञामवाप्य महतीं द्विषतां निपातान्निर्वर्त्य तां सपदि लब्धसुखप्रसादः" प्रबोध० ३-२४। 2. ಜನ್ಮಲಗ್ನದಿಂದ ಹತ್ತನೆಯ ಸ್ಥಾನ.

**आज्ञाकर** ಆಜ್ಞಾಕರ (वि०) ಸೇವಕ, ಆಳು, ಅಪ್ಪಣೆಯಂತೆ ಕೆಲಸ ಮಾಡುವವನು. करोति—डु कृञ् (करणे) "अच्" (३-१-१३४)। आज्ञायाः करः।

**आज्ञाकारिन्** ಆಜ್ಞಾಕಾರಿನ್ (वि०) ಅಪ್ಪಣೆಯಂತೆ ನಡೆಯುವವನು, ಅಪ್ಪಣೆಯನ್ನು ನಡೆಸುವವನು. आज्ञां करोति—डु कृञ् (करणे) "णिनिः" (३-१-१३४)। स्त्रियाम् "ङीप्" (४-१-५)। —कारिणी—ಕಾರಿಣೀ.

**आज्ञाचक्र** ಆಜ್ಞಾಚಕ್ರ (न०) ದೇಹದಲ್ಲಿರುವ ಸುಷುಮ್ನಾ ನಾಡಿಯ ಮಧ್ಯದಲ್ಲಿ ಹುಬ್ಬುಗಳ ಮಧ್ಯದಲ್ಲಿರುವ ದ್ವಿದಳಪದ್ಮಾಕಾರದ ಒಂದು ಚಕ್ರ. "आज्ञाचक्रं तदूर्ध्वं तु आत्मनोऽधिष्ठितं परम्। आज्ञासंक्रमणं तत्र गुरोराज्ञेति कीर्तिता"। [ಈ ಆಜ್ಞಾಚಕ್ರದಲ್ಲಿ ಮನಸ್ಸನ್ನು ಇಟ್ಟು ಧ್ಯಾನಮಾಡುತ್ತಿರುವವನಿಗೆ ಸಕಲವಸ್ತುಸಾಕ್ಷಾತ್ಕಾರವೂ, ಕಾಲತ್ರಯಜ್ಞಾನವೂ ಉಂಟಾಗಿ ಅದಕ್ಕೂ ಮೇಲೆ ಸಹಸ್ರದಳ ಕಮಲದಲ್ಲಿರುವ ಪರಮ ಗುರುವಾದ ಈಶ್ವರನ "ಇನ್ನುಮುಂದೆ ನೀನು ಈ ರೀತಿ ನಡೆಯಬೇಕು" ಎಂಬ ಆಜ್ಞೆಯು ಈ ಚಕ್ರದಮೇಲೆ ಸಂಕ್ರಾಂತವಾಗುವುದರಿಂದ ಇದಕ್ಕೆ "आज्ञाचक्रम्" ಎಂದು ಹೆಸರು.]

**आज्ञान** ಆಜ್ಞಾನ (न०) ಆಜ್ಞೆಯಂತೆ ನಡೆಯುವುದು, ಅಪ್ಪಣೆಯನ್ನು ಪಾಲಿಸುವುದು.

**आज्ञानुग** ಆಜ್ಞಾನುಗ (पु०) ಅಪ್ಪಣೆಯಂತೆ ನಡೆಯುವವನು. आज्ञामनुगच्छति—आज्ञा+अनु+गम्लृ (गतौ) "डः" (वा० ३-२-४८)।

**आज्ञानुगामिन्** ಆಜ್ಞಾನುಗಾಮಿನ್ (वि०) ಅಪ್ಪಣೆಯಂತೆ ನಡೆಯುವವನು. आज्ञामनुगच्छति—आ+अनु+गम्लृ (गतौ) "णिनिः" (३-१-१३४)। स्त्रियाम् "ङीप्" (४-१-५)। —अनुगामिनी—ಅನುಗಾಮಿನೀ.

**आज्ञानुयायिन्** ಆಜ್ಞಾನುಯಾಯಿನ್ —अनुवर्तिन् —ಅನುವರ್ತಿನ್, —अनुसारिन् —ಅನುಸಾರಿನ್ (वि०) ಅಪ್ಪಣೆಯಂತೆ ನಡೆಯುವ, ಆಜ್ಞೆಯನ್ನು ಪಾಲಿಸುವ. आज्ञामनुयाति अनुवर्तते अनुसरति वा "णिनिः" (३-१-१३४)। स्त्रियाम् "ङीप्" (४-१-५)। —अनुयायिनी—ಅನುಯಾಯಿನೀ, —अनुवर्तिनी—ಅನುವರ್ತಿನೀ, —अनुसारिणी—ಅನುಸಾರಿಣೀ.

आज्ञापक ಆಜ್ಞಾಪಕ (वि०) ಅಪ್ಪಣೆ ಮಾಡುವವನು, ಯಜಮಾನ. आज्ञापयति—आ+ज्ञा (नियोगे)+णिच् "ण्वुल्" (३-१-१३३)। "दातुं क्षमाया दयिते तदानीमाज्ञापको नूनमभूदनङ्गः" याद० १३-५।

आज्ञापत्र ಆಜ್ಞಾಪತ್ರ (न०) ಅಪ್ಪಣೆಯ ಕಾಗದ, ಶಾಸನಮಾಡಿ ಹೊರಡಿಸುವ ಪತ್ರ. आज्ञासूचकं पत्रम्।

आज्ञापन ಆಜ್ಞಾಪನ (न०) 1. ಅಪ್ಪಣೆಮಾಡುವುದು. 2. ತಿಳಿಯಪಡಿಸುವುದು. आ+ज्ञा (नियोगे)+णिच् "ल्युट्" (३-३-११५)।

आज्ञाभङ्ग ಆಜ್ಞಾಭಂಗ (पु०) 1. ಶಾಸನವನ್ನು ಮುರಿಯುವುದು, ಅಪ್ಪಣೆಯನ್ನು ಮೀರಿ ನಡೆಯುವುದು. आज्ञाया भङ्गः। "नाज्ञाभङ्गं सहन्ते नृवर! नृपतयस्त्वादृशाः सार्वभौमाः" मुद्रा० ३-२२। 2. ರಾಜದ್ರೋಹ.

आज्ञावह ಆಜ್ಞಾವಹ (वि०) ವಿಧೇಯ, ಸೇವಕ, ಅಪ್ಪಣೆಯಂತೆ ನಡೆಯುವವನು. वहति—वह (प्रापणे) "अच्" (३-१-१३४)। आज्ञाया वहः।

आज्य ಆಜ್ಯ (न०) ಘೃತ, ತುಪ್ಪ. आ+अञ्जू (व्यक्तिम्रक्षणकान्तिगतिषु) "क्यप्" (वा० ६-१-७१)। "अन्वदीपि गरुडः प्रतापवानाज्यसिक्त इव वह्निराध्वरः" याद० १७-५५।

आज्यदोह ಆಜ್ಯದೋಹ (न०) ಸಾಮವೇದದ ಒಂದು ಸೂಕ್ತ.

आज्यप ಆಜ್ಯಪ (पु० ब० व०) 1. ವೈಶ್ಯರ ಪಿತೃದೇವತೆಗಳು, ಪುಲಸ್ತ್ಯನ ಪುತ್ರರು. "सोमपा नाम विप्राणां क्षत्रियाणां हविर्भुजः। वैश्यानामाज्यपा नाम शूद्राणां तु सुकालिनः" मनु० ३-१९७। (वि०)2. ತುಪ್ಪವನ್ನು ಕುಡಿಯುವ. आज्यं पिबति—पा (पाने) "कः" (३-२-३)।

आज्यपात्र ಆಜ್ಯಪಾತ್ರ (न०) ಹೋಮಕ್ಕಾಗಿ ಕರಗಿಸಿದ ತುಪ್ಪವನ್ನು ಇಟ್ಟುಕೊಳ್ಳುವ ಪಾತ್ರೆ.

आज्यभुज् ಆಜ್ಯಭುಜ್ (पु०) ಅಗ್ನಿ, ಬೆಂಕಿ. आज्यं मन्त्रपूर्वकं प्रक्षिप्तं सर्पिः भुङ्क्ते—भुज (पालनाभ्यवहारयोः) "क्विप्" (३-१-७६)।

आञ्जन ಆಂಜನ (पु०) 1. ಆಂಜನೇಯ, ಹನುಮಂತ. अञ्जनाया अयम् "अण्" (४-३-१२०)। (न०)2. ಸುತ್ತಲೂ ಅಂಜನವನ್ನು ಹಾಕುವಿಕೆ. आ+अञ्जू (व्यक्त्यादौ) "ल्युट्" (३-३-११५)। (वि०) 3. ಕಣ್ಣಿನ ಮುಲಾಮಿಗೆ ಸಂಬಂಧಿಸಿದ, ಕಾಡಿಗೆ (ಕಣ್ಣಿನ ಕಪ್ಪು) ಸಂಬಂಧವಾದ. अञ्जनस्येदम्।

**आञ्जनेय** ಆಂಜನೇಯ (पुं०) ಹನುಮಂತ, ಅಂಜನಾ ದೇವಿಯ ಮಗ. अञ्जनाया अपत्यम् "ढक्" (४-१-१२०)।

**आटविक** ಆಟವಿಕ (वि०) 1. ಅರಣ್ಯದಲ್ಲಿ ಸಂಚರಿಸುವವನು, ಕಾಡಿನಲ್ಲಿ ವಾಸಮಾಡುವವನು. अटव्यां चरति भवो वा "ठक्" (४-३-६७)। "दण्डे सुहृत्कुमाराटविका सामन्तसैनिकाद्याश्च" सा० द०। 2. ಆರು ವಿಧ ಸೈನ್ಯಗಳಲ್ಲೊಂದು. "षड्विधं बलमादाय प्रतस्थे दिग्जिगीषया" (रघु० ४-२६) ಎಂಬ ಶ್ಲೋಕದ ವ್ಯಾಖ್ಯಾನದಲ್ಲಿ ಮಲ್ಲಿನಾಥನು "मौलं भृत्यः सुहृच्छ्रेणीद्विषदाटविकं बलम्" ಎಂದು ಕೋಶಪ್ರಮಾಣವನ್ನು ಕೊಟ್ಟಿರುತ್ತಾನೆ.

**आटि** ಆಟಿ (पुं०) 1. ಮರಕುಟಿಗ ಹಕ್ಕಿ. आ अटति—अट (गतौ) "इन्" (उ० ४-११७)। 2. ಒಂದು ಜಾತಿ ಮೀನು.

**आटीकन** ಆಟೀಕನ (नं०) 1. ಸಣ್ಣ ಕರುಗಳ ಹಾರಾಟ, ಕರುಗಳು ನೆಗೆಯುತ್ತ ನಡೆಯುವುದು. आ+टीकृ (गतौ) "ल्युट्" (३-३-११५)। 2. ವೇಗವಾಗಿ ಮೇಲಕ್ಕೆ ಏಳುವುದು.

**आटीमुख** ಆಟೀಮುಖ (नं०) ಮರಕುಟಿಗ ಹಕ್ಕಿಯ ಮುಖದಂತಿರುವ ಆಯುಧ, ರಕ್ತವನ್ನು ಹೊರ ತೆಗೆಯಲು ಉಪಯೋಗಿಸುವ ಒಂದು ಶಸ್ತ್ರ. आट्याः मुखमिव मुखं यस्य।

**आटोप** ಆಟೋಪ (पुं०) 1. ದರ್ಪ, ಗರ್ವ, ಅಹಂಕಾರ. आ+तुप (हिंसायाम्) "घञ्" (३-३-१९)। पृषो०। 2. ಆಡಂಬರ, ತೋರಿಕೆ, ಪ್ರದರ್ಶನ. पटाटोपः, घनघटाटोपः। 3. ಸಂರಂಭ, ಸಡಗರ. "साटोपमुर्वीमनिशं नदन्तः" माघ० ३-७४। 4. ಹೊಟ್ಟೆಯೊಳಗಿನ ವಾಯುವಿನ ಶಬ್ದ. "आमाटोपापचिश्लेष्मगुल्मे क्रिमिविकारिणाम्" सुश्रुत०।

**आडम्बर** ಆಡಂಬರ (पुं०) 1. ಹರ್ಷ, ಸಂತೋಷ. 2. ತುತೂರಿಯ ಶಬ್ದ. 3. ತೋರಿಕೆ, ಪ್ರದರ್ಶನ. 4. ಪ್ರಾರಂಭ. 5. ಸಂರಂಭ. 6. ದರ್ಪ, ಅಹಂಕಾರ. 7. ಆನೆಯ ಗರ್ಜನೆ. 8. ಎವೆ, ರೆಪ್ಪೆ. 9. ಯುದ್ಧದ ನಗಾರಿ. आ+डबि (क्षेपे) "घञ्" (३-३-१९)। आडम्बं राति—रा (दाने) "कः" (३-२-३)। "आडम्बरः समारम्भे गजगर्जिततूर्ययोः" विश्व०। "आडम्बरस्तूर्यपक्ष्मसंरम्भे गजगर्जिते" मेदि०।

**आडि** ಆಡಿ (पुंस्त्री०) 1. ಮರಕುಟಿಗ ಹಕ್ಕಿ. 2. ಒಂದು ಜಾತಿ ಮೀನು. आ+अड (उद्यमे) "इन्" (उ० ४-११७)। स्त्रियाम् वा "ङीष्" (४-१-४५)। आडी ಆಡೀ.

**आढ** ಆಢೂ (पुं०) ತೆಪ್ಪ. अण (शब्दे) "ऊः" डश्चादेशः (उ० १-८६)। जलप्लवद्रव्यम् सि० कौ०।

**आढक** ಆಢಕ (पुंन०) ಒಂದು ಕೊಳಗ. आढौकते—ढौकृ (गतौ) "अच्" (३-१-१३४)। पृषो०। ಈ ಕೊಳಗವು ದ್ರೋಣದ ನಾಲ್ಕನೆಯ ಒಂದು ಭಾಗ. ನಾಲ್ಕು ಪ್ರಸ್ಥಗಳ ಅಥವಾ ಹದಿನಾರು ಕುಡವಗಳ ಅಳತೆ.

**आढकिक** ಆಢಕಿಕ (वि०) 1. ಒಂದು ಕೊಳಗ ಧಾನ್ಯವನ್ನು ತೆಗೆದುಕೊಂಡು ಹೋಗಬಹುದಾದ. 2. ಒಂದು ಕೊಳಗ ಧಾನ್ಯವನ್ನು ಇಡಬಹುದಾದ. 3. ಒಂದು ಕೊಳಗ ಧಾನ್ಯವನ್ನು ಬೇಯಿಸಬಹುದಾದ. आढकं सम्भवत्यवहरति पचति वा "ठञ्" (५-१-५३)।

**आढकी** ಆಢಕೀ (स्त्री०) 1. ತೊಗರಿ. 2. ಸುವಾಸನೆಯುಳ್ಳ ಭೂಮಿ.

**आढकीन** ಆಢಕೀನ (वि०) "आढकिक" ಪದದ ಅರ್ಥ. आढकं सम्भवत्यवहरति पचति वा "खः" (५-१-५३)।

**आढ्य** ಆಢ್ಯ (वि०) 1. ಧನಿಕ, ಐಶ್ವರ್ಯವಂತ, आ+ध्यै (चिन्तायाम्) "कः" (३-२-१३६)। पृषो०। "आढ्योऽभिजनवानस्मि कोऽन्योऽस्ति सदृशो मया" गीता १६-१५। 2. ಕೂಡಿರುವ, ತುಂಬಿರುವ. धनाढ्यः सत्याढ्यः। 3. ಬೆರತಿರುವ, ಮಿಶ್ರವಾದ, 4. ಸಮೃದ್ಧವಾದ, ಹೆಚ್ಚಾದ, ಧಾರಾಳವಾದ.

**आढ्यकुलीन** ಆಢ್ಯಕುಲೀನ (वि०) ಶ್ರೀಮಂತನ ಕುಲದಲ್ಲಿ ಹುಟ್ಟಿದ, ಐಶ್ವರ್ಯವಂತನ ಮನೆಯಲ್ಲಿ ಹುಟ್ಟಿದ. आढ्यकुले भवः "खः" (४-१-१३९)।

**आढ्यङ्करण** ಆಢ್ಯಂಕರಣ (नं०) ಧನಿಕನನ್ನಾಗಿ ಮಾಡುವ ಉಪಾಯ, –ಸಾಧನ, ಐಶ್ವರ್ಯವಂತನನ್ನಾಗಿ ಮಾಡುವ ದ್ರವ್ಯಾನುಕೂಲ್ಯ. अनाढ्यम् आढ्यं करोत्यनेन—आढ्य+कृञ् (करणे) "ख्युन्" (३-२-५६)। मुम् (६-३-६७)।

**आढ्यचर** ಆಢ್ಯಚರ (वि०) ಹಿಂದೆ ಧನಿಕನಾಗಿದ್ದವನು, ಈಗ ಬಡವನಾಗಿರುವವನು. भूतपूर्वः आढ्यः "चरट्" (५-३-५३)। स्त्रियाम् "ङीप्" –चरी –ಚರೀ.

**आढ्यतम** ಆಢ್ಯತಮ (वि०) ಬಹಳ ಐಶ್ವರ್ಯವಂತ. अतिशयेनाढ्यः "तमप्" (५-३-५५)।

**आढ्यम्भविष्णु** ಆಢ್ಯಂಭವಿಷ್ಣು (वि०) ಧನಿಕನಾಗಿ ಆಗುವವನು, ದರಿದ್ರನಾಗಿದ್ದು ಐಶ್ವರ್ಯವನ್ನು ಪಡೆಯುವವನು. अनाढ्यः आढ्यो भवति "खिष्णुच्" (३-२-५७)। "आढ्यम्भविष्णुर्यदासा कुमारः" भट्टि० ३-१।

**आढयम्भावुक** ಆಢ್ಯಂಭಾವುಕ (वि०) "आढयम्भविष्णु" ಪದದ ಅರ್ಥ. अनाढय: आढयो भवति "खुकञ्" (३-२-५७)। मुम् (६-३-६७)।

**आढयता** ಆಢ್ಯತಾ (स्त्री०) ಐಶ್ವರ್ಯ, ಸಮೃದ್ಧಿ, ಶ್ರೀಮಂತತನ. आढयस्य भाव: "तल्" (५-१-११९)।

**आणक** ಆಣಕ (न०) 1. ಒಂದು ವಿಧ ಸಂಭೋಗ. "आणकं सुरतं नाम दम्पत्योः पार्श्वसंस्थयोः"। (वि०) 2. ಅಧಮ, ನೀಚ. अणति — अण (शब्दे) "अच्" (३-१-१३४)। कुत्सायां "कन्" (५-३-७४)। स्वार्थे "अण्" (५-४-३८)।

**आणव** ಆಣವ (न०) ಅಣುತ್ವ. अणोर्भाव: "अण्" (५-१-१२२)।

**आणवमल** ಆಣವಮಲ (न०) ಏಕದಲ್ಲಿ ಅನೇಕತ್ವಕ್ಕೆ ಕಾರಣವಾದ ಮೂಲವುಹಾಮಾಯೆ. [ಈ ಆಣವ ಮಲದಿಂದ ಎಲ್ಲ ಜೀವಗಳೂ ಶಿವಭಾವವನ್ನು ಕಳೆದು ಕೊಂಡು ಜೀವಭಾವವನ್ನು ತಾಳುವುವು.]

**आणवीन** ಆಣವೀನ (न०) ಸೂಕ್ಷ್ಮ ಧಾನ್ಯಗಳು ಬೆಳೆ ಯುವ ಭೂಮಿ, ಕಿರುನೆಲ್ಲು ಕಿರುನವಣೆ ಮೊದಲಾ ದುವು ಬೆಳೆಯುವ ಕ್ಷೇತ್ರ. अणूनां भवनं क्षेत्रम् — अणु "खञ्" (५-२-१)।

**आणव्य** ಆಣವ್ಯ (न०) "आणवीन" ಪದದ ಅರ್ಥ. अणूनां भवनं क्षेत्रम् "यत्" (५-२-४)।

**आणि** ಆಣಿ (पुंस्त्री०) 1. ಬಂಡಿಯ ಕಡಾಣಿ, ಚಕ್ರವು ಬೀಳದಂತೆ ತಡೆಗಟ್ಟುವ ಕಬ್ಬಿಣದ ಸಲಾಕಿ, ಗಾಲಿಯ ಕೀಲು. 2. ಎಲ್ಲೆ, ಗಡಿ, ಮರ್ಯಾದೆ. 3. ಕತ್ತಿಯ ತುದಿ. अण (शब्दे) "इण्" (वा० ३-३-१०८)। "अणिराणिवदक्षाग्रकीलाश्रिसीमसु द्वयो:" मेदि०।

**आण्ड** ಆಂಡ (पु०) 1. ಹಿರಣ್ಯಗರ್ಭ, ಬ್ರಹ್ಮ. अण्डे भव: "अण्" (४-३-५३)। "अप एव ससर्जादौ तासु वीर्यमवासृजत्। तदण्डमभवद्धैमं सहस्रांशुसमप्रभम्। तस्मिन् जज्ञे स्वयं ब्रह्मा सर्वलोकपितामहः" मनु० १-८, ९। (न०) 2. ಮೊಟ್ಟೆಗಳ ರಾಶಿ. अण्डानां समूह: "अण्" (४-२-३७)। 3. ಪುರುಷನ ವೃಷಣದ ಕೋಶ. (वि०) 4. ಮೊಟ್ಟೆಯಿಂದ ಹುಟ್ಟಿದ ಹಕ್ಕಿ ಮೊದಲಾ ದುದು.

**आण्डज** ಆಂಡಜ (पु०) ಮೊಟ್ಟೆಯಿಂದ ಹುಟ್ಟಿದ 1. ಹಕ್ಕಿ. 2. ಸರ್ಪ, ಹಾವು ಮುಂತಾದುದು. अण्डात् जायते — जनी (प्रादुर्भावे) "ड:" (३-२-९६)। स्वार्थे "अण्" (५-४-३८)। 3. ಹಕ್ಕಿ ಮತ್ತು ಹಾವಿನ ಶರೀರ. अण्डजस्येदम् "अण्" (४-३-१२०)।

**आण्डायन** ಆಂಡಾಯನ (वि०) ತತ್ತಿಯಿಂದ ಹುಟ್ಟಿದ, ಮೊಟ್ಟೆಯಿಂದ ಹುಟ್ಟಿದ. अण्डेन निर्वृत्तम् — अण्ड "फक्" (४-२-८०)।

**आत्** ಆತ್ (पु०) "आ" ಕಾರ, ಆ ಎಂಬ ಅಕ್ಷರ. "वृद्धिरादैच्" (पा० सू० १-१-१)।

**आत** ಆತ (वि०) ಸುತ್ತಲೂ ಹರಡಿರುವ. आ+अत (सातत्यगमने) "अच्" (३-१-१३४)।

**आतक** ಆತಕ (पु०) 1. ಒಂದು ಸರ್ಪ. (वि०) 2. ಯಾವಾಗಲೂ ಸಂಚರಿಸುವ. आ+अत (सातत्यगमने) "ण्वुल्" (३-१-१३३)।

**आतङ्क** ಆತಂಕ (पु०) 1. ರೋಗ, ವ್ಯಾಧಿ. आ+तकि (कृच्छ्रजीवने) "घञ्" (३-३-१२१)। "दीर्घतीव्रामयग्रस्तं ब्राह्मणं गामथापि वा। दृष्ट्वा पथि निरातङ्कं कृत्वा तु ब्रह्महा शुचिः" याज्ञ० ३-२४५। 2. ತಾಪ, ಜ್ವರ. "आतङ्कश्रमसाध्वसव्यतिकरोत्कम्पः कथं सह्यताम्" म० वी० २-२१। 3. ಸಂಶಯ, ಸಂದೇಹ, ಶಂಕೆ. 4. ಭಯ, ದಿಗಿಲು. "पुरुषायुषजीविन्यो निरातङ्का निरीतयः" रघु० १-६३। 5. ಮುರಜಧ್ವನಿ, ಮೃದಂಗದ ಶಬ್ದ. "आतङ्को रोगसन्तापशङ्कासु मुरजध्वनौ" मेदि०।

**आतञ्चन** ಆತಂಚನ (न०) 1. ಹಾಲಿಗೆ ಹೆಪ್ಪುಹಾಕು ವುದು. 2. ವೇಗ. 3. ತೃಪ್ತಿಪಡಿಸುವಿಕೆ. 4. ಹೆಪ್ಪು ಹಾಕುವ ವಸ್ತು. आ+तञ्चु (गतौ) भावे करं० वा "ल्युट्" (३-३-११५, १७)। "आतञ्चनं प्रतीवापजवनाप्यायनेषु च" मेदि०।

**आतत** ಆತತ (वि०) ಹರಡಲ್ಪಟ್ಟ, ವಿಸ್ತರಿಸಲ್ಪಟ್ಟ. ನೀಡಲ್ಪಟ್ಟ, ಮುಂದಕ್ಕೆ ಚಾಚಲ್ಪಟ್ಟ. आ+तनु (विस्तारे) "क्त:" (३-२-१०२)। "शास्त्रेष्वव्याहता बुद्धिः मौर्वी धनुषि चातता" रघु० १-१९।

**आततायिन्** ಆತತಾಯಿನ್ (वि०) ಕೊಲ್ಲುವ ಪ್ರಯತ್ನ ವುಳ್ಳವನು, ಕೊಲ್ಲುವ ಸ್ವಭಾವದವನು. आततेन विस्तीर्णेन शस्त्रादिना अयितुं शीलमस्य — अय (गतौ) "णिनि:" (३-२-७८)। [ಇತರರನ್ನು ಹಿಂಸಿಸುವವರು ಆತತಾಯಿಗಳು.] ಇವರು ಆರು ವಿಧ: "अग्निदो गरदश्चैव शस्त्रपाणिर्धनापहः। क्षेत्रदारहरश्चैव षडेते ह्याततायिनः"। "अर्चनीयचरणाम्बुजे भवत्याततायिपदवीमुपेयुषाम्" याद० १७-११५।

आतनु ಆತನು "तनु" ಧಾತುವಿನಲ್ಲಿ ನೋಡಿ.

आतन्वत् ಆತನ್ವತ್ (वि०) 1. ವಿಸ್ತಾರಗೊಳಿಸುವ, ಹೆಚ್ಚು ಮಾಡುವ. आ + तनु (विस्तारे) "शतृ" (३-२-१२४)। "आतन्वद्भिर्दिक्षु तत्राग्रनादं प्राप्तैर्दूरादाशु तीक्ष्णैर्मुखाग्रैः" माघ० १८-७४। 2. ಮಾಡುತ್ತಲಿರುವ.

आतन्वान ಆತನ್ವಾನ (वि०) "आतन्वत्" ಪದದ ಅರ್ಥ. आ + तनु (विस्तारे) "शानच्" (३-२-१२४)। "आतन्वानं भुजगशयने कामपि क्षौमगौरे निद्रामुद्रां निखिलजगतीरक्षणे जागरूकाम्" चं० रा०।

आतप ಆತಪ (पु०) 1. ಬಿಸಿಲು, ಸೂರ್ಯನ ಪ್ರಕಾಶ. आतपति—आ+तप (सन्तापे) "अच्" (३-१-१३४)। "आतपे धृतिमता सह वध्वा यामिनीविरहिणा विहगेन" किरा० ९-३०। 2. ಪ್ರಕಾಶ. "प्रकाशस्तु द्योत आलोक आतपः" वैज०।

आतपत्र ಆತಪತ್ರ (न०) ಛತ್ರಿ, ಕೊಡೆ. आतपात् त्रायते — त्रैङ् (पालने) "कः" (३-२-४)। "आतपत्रमथ तत्प्रचेतसो मन्दरस्य मणिशृङ्गमुन्नतम्" याद० १७-१। "राज्यं स्वहस्तधृतदण्डमिवातपत्रम्" शाकु० ५-६।

आतपवत् ಆತಪವತ್ (वि०) ಬಿಸಿಲಿನಿಂದ ಕೂಡಿದ. आतपोऽस्यास्ति "मतुप्" (५-२-९४)। "शृङ्गाणि यस्यातपवन्ति सिद्धाः" कुमा० १-५।

आतपवारण ಆತಪವಾರಣ (न०) ಛತ್ರಿ. आतपं वारयति — वृञ् (वरणे)+णिच् "ल्युः" (३-१-१३४)। "नृपतिककुदं दत्वा यूने सितातपवारणम्" रघु० ३-७०।

आतपात्यय ಆತಪಾತ್ಯಯ (पु०) ಸೂರ್ಯನ ಪ್ರಕಾಶ ಕಡಿಮೆಯಾಗುವುದು. आतपस्य अत्ययः। "आतपात्ययसंक्षिप्तनीवारासु निषादिभिः" रघु० १-५२। 2. ಸಾಯಂಕಾಲ. आतपस्यात्ययो यत्र।

आतपीय ಆತಪೀಯ (वि०) ಬಿಸಿಲಿಗೆ ಸಮೀಪದಲ್ಲಿರುವ. आतपस्यादूरभवः "छः" (४-२-९०)।

आतपोदक ಆತಪೋದಕ (न०) ಮೃಗತೃಷ್ಣಿಕೆ, ಬಿಸಿಲುಗುದುರೆ, ಸೂರ್ಯನ ಕಿರಣದಲ್ಲಿ ಕಾಣುವ ನೀರು. आतपे सूर्यकिरणे लक्ष्यमाणमुदकम्। [ಮರಳುಗಾಡಿನಲ್ಲಿ ಸೂರ್ಯನ ಕಿರಣವು ನೀರಿನಂತೆ ಭ್ರಾಂತಿಯನ್ನು ಹುಟ್ಟಿಸುವುದು.]

आतर ಆತರ (पु०) ನದಿಯನ್ನು ದಾಟಿಸಲು ಕೊಡುವ ಕೂಲಿ. आतरत्यनेन—आ+तृ (प्लवनतरणयोः) "अप्" (३-३-५७)। "तस्मै सौमित्रिमैत्रीमयमुपकृतवानातरं नाविकाय" अनर्घ०।

आतापि ಆತಾಪಿ (पु०) ಒಬ್ಬ ರಾಕ್ಷಸ, ಅಗಸ್ತ್ಯ ಮಹರ್ಷಿಯಿಂದ ತಿನ್ನಲ್ಪಟ್ಟವನು. "आतापिर्भक्षितो येन वातापिश्च महासुरः। समुद्रः शोषितो येन स मेऽगस्त्यः प्रसीदतु"।

आतापिन् ಆತಾಪಿನ್ (पु०) ಉದ್ದವಾದ ರೆಕ್ಕೆಗಳುಳ್ಳ ಹದ್ದು. ಇದನ್ನು ಕೆಲವರು ಕೆಂಪು ಕಾಗೆಯೆಂದೂ ಕೆಲವರು ಮುಂಡುಮುಳುಕನಹಕ್ಕಿಯೆಂದೂ ಕರೆಯುವರು. आतापयति — आ + तप (सन्तापे) + णिच् "णिनिः" (३-१-१३४)।

आति ಆತಿ (पु०) ಮರಕುಟಿಗ ಹಕ್ಕಿ.

आतिथेय ಆತಿಥೇಯ (न०) 1. ಆತಿಥ್ಯ, ಅತಿಥಿಸತ್ಕಾರ. "आतिथेयमनिवारितातिथिः कर्तुमाश्रमगुरुः स नाश्रमत्" माघ० १४-३८। (वि०) 2. ಅತಿಥಿಸತ್ಕಾರದಲ್ಲಿ ಸಮರ್ಥನಾದವನು. अतिथिषु साधुः "ढञ्" (४-४-१०४)। "प्रत्युज्जगामातिथिमातिथेयः" रघु० ५-२। स्त्रियाम् "ङीप्" (४-१-१५)। आतिथेयी ಆತಿಥೇಯೀ. "आतिथेयीमथासाद्य सुतादपचितिं हरिः" किरा० ११-९।

आतिथ्य ಆತಿಥ್ಯ (पु०) 1. ಅತಿಥಿ. अतिथि स्वार्थे "ष्यञ्" (न०) 2. ಅತಿಥಿಸತ್ಕಾರ. अतिथये इदम् "ञ्यः" (५-४-२६)। "तमातिथ्यक्रियाशान्तरथक्षोभपरिश्रमम्" रघु० १-५८।

आतिदेशिक ಆತಿದೇಶಿಕ (वि०) ಅತಿದೇಶದಿಂದ ಬಂದ. अतिदेशादागतः "ठञ्" (४-२-११५)।

आतिवाहिक ಆತಿವಾಹಿಕ (वि०) ಈ ಲೋಕದಿಂದ ಲೋಕಾಂತರಕ್ಕೆ ಕರೆದುಕೊಂಡು ಹೋಗಲು ನೇಮಿಸಲ್ಪಟ್ಟ. अतिवाहे इहलोकात् परलोकप्रापणे नियुक्तः "ठक्" (४-४-६९)। [ಕರ್ಮಾಚರಣೆಯಿಂದ ಸ್ವರ್ಗ ಸಂಪಾದಿಸಿದವರನ್ನು ದಕ್ಷಿಣಮಾರ್ಗದಲ್ಲಿ ಧೂಮಾದಿಗಣದೇವತೆಗಳೂ ಜ್ಞಾನದಿಂದ ಮೋಕ್ಷಸಂಪಾದಿಸಿದವರನ್ನು ಉತ್ತರಮಾರ್ಗದಲ್ಲಿ ಅರ್ಚಿರಾದಿಗಣದೇವತೆಗಳೂ ಈಶ್ವರನಿಂದ ನಿಯುಕ್ತರಾಗಿ ಲೋಕಾಂತರಕ್ಕೆ ಕರೆದುಕೊಂಡು ಹೋಗುವರು.]

आतिशय्य ಆತಿಶಯ್ಯ (न०) ಅತಿಶಯ, ಆಧಿಕ್ಯ, ಬಾಹುಳ್ಯ, ಹೆಚ್ಚಿಗೆ. अतिशय एव स्वार्थे "ष्यञ्"।

आतु ಆತು (पु०) ತೆಪ್ಪ. अत (सातत्यगमने) "उण्" (उ० १-१)।

**आतुर ಆತುರ** (वि०) 1. ರೋಗಪೀಡಿತನಾದ. आतुतोति—आ+तुर (त्वरणे) "कः" (३-१-१३५)। "जराशोकसमाविष्टं रोगायतनमातुरम्" मनु० ६-७७। 2. ನೋಯಿಸಲ್ಪಟ್ಟ, ಗಾಯಗೊಳಿಸಲ್ಪಟ್ಟ. 3. ಪೀಡಿಸಲ್ಪಟ್ಟ, ಪಾಡುಪಡಿಸಲ್ಪಟ್ಟ. "रावणावरजा तत्र राघवं मदनातुरा" रघु० १२-३२। 4. ಔತ್ಸುಕ್ಯವುಳ್ಳ, ತವಕಪಡುವ.

**आतुरोपक्रमणीय ಆತುರೋಪಕ್ರಮಣೀಯ** (पु०) 1. ರೋಗಿಯ ಚಿಕಿತ್ಸೆಗಾಗಿ ಆಯುರ್ದಾಯ ವ್ಯಾಧಿಯ ಸ್ವರೂಪ ಋತು ವಯಸ್ಸು ದೇಹಶಕ್ತಿ ಪ್ರಕೃತಿ ದೇಶ ಮತ್ತು ಔಷಧ ಇವುಗಳನ್ನನುಸರಿಸಿ ಮಾಡುವ ಕೆಲಸ. आतुरमधिकृत्य उपक्रमणीयम्। 2. ರೋಗಿಯ ಚಿಕಿತ್ಸಾ ಕ್ರಮವನ್ನು ಹೇಳುವ ಗ್ರಂಥ. आतुरोपक्रमणमधिकृत्य कृतो ग्रन्थः "छः" (४-३-८८)।

**आतोद्य ಆತೋದ್ಯ** (न०) ವೀಣೆ. आसमन्तात् तुद्यते—तुद (व्यथने) "ण्यत्" (३-१-१२४)। "स्रजमातोद्यशिरोनिवेशिताम्" रघु० ८-३४।

**आत्त ಆತ್ತ** (वि०) ಸ್ವೀಕರಿಸಲ್ಪಟ್ಟ, ತೆಗೆದುಕೊಳ್ಳಲ್ಪಟ್ಟ. आ+डु दाञ् (दाने) "क्तः" (३-२-१०२)। "आत्तदेहमिव स्वर्गमासेचनकदर्शनम्" याद० १६-३।

**आत्तगर्व ಆತ್ತಗರ್ವ** (वि०) 1. ತಿರಸ್ಕರಿಸಲ್ಪಟ್ಟ, ಶತ್ರುಗಳಿಂದ ಜಯಿಸಲ್ಪಟ್ಟ. आत्तः शत्रुणा गृहीतो गर्वः यस्य। 2. ಗರ್ವವನ್ನು ಹೊಂದಿದ. आत्तो गृहीतो गर्वो येन।

**आत्मकर्मन् ಆತ್ಮಕರ್ಮನ್** (न०) ಸ್ವಂತಕೆಲಸ, ತನ್ನ ಕರ್ತವ್ಯ. "आत्मकर्मक्षमं देहं क्षात्रो धर्म इवाश्रितः" रघु० १-१३।

**आत्मकाम ಆತ್ಮಕಾಮ** (वि०) 1. ಆತ್ಮಜ್ಞಾನವನ್ನು ಅಪೇಕ್ಷಿಸುವ. 2. ಆತ್ಮನನ್ನು ಅಪೇಕ್ಷಿಸುವ, ವಿರಕ್ತನಾದ, ವಿಷಯಾಭಿಲಾಷೆಯನ್ನು ತೊರೆದಿರುವ. आत्मानमेव कामयते—कमु (कान्तौ) "अण्" (३-२-१)।

**आत्मगत ಆತ್ಮಗತ** (वि०) 1. ತನ್ನಲ್ಲಿರುವ. 2. ತನ್ನ ಮನಸ್ಸಿನಲ್ಲಿರುವ. आत्मनि गतम्। (क्रि० वि०) 3. ತನ್ನಲ್ಲಿಯೇ, ಬೇರೊಬ್ಬರಿಗೂ ತಿಳಿಯದಂತೆ. [ರಂಗಭೂಮಿಯಲ್ಲಿ ನಟರು ಮತ್ತಾರಿಗೂ ತಿಳಿಯದಂತೆ ಮಾತನಾಡಿಕೊಳ್ಳುವುದಕ್ಕೆ ಸ್ವಗತ ಆತ್ಮಗತಗಳೆಂದು ಸಂಜ್ಞೆ.] "सर्वश्राव्यं प्रकाशं स्यादश्राव्यं स्वगतं मतम्"।

**आत्मगुप्त ಆತ್ಮಗುಪ್ತ** (वि०) ತನ್ನಿಂದಲೇ ರಕ್ಷಿಸಲ್ಪಟ್ಟ. ಇತರರಿಂದ ರಕ್ಷಿಸಲ್ಪಡದ, ಬೇರೊಬ್ಬರ ರಕ್ಷಣೆಗೆ ಒಳಪಡದ. आत्मना गुप्तः।

**आत्मगुप्ता ಆತ್ಮಗುಪ್ತಾ** (स्त्री०) ಕಪಿತುರಚಿ ಗಿಡ. आत्मना गुप्ता। [ಇದನ್ನು ಮುಟ್ಟಿದರೆ ನವೆಯಾಗುವುದರಿಂದ ಯಾರೂ ಈ ಗಿಡವನ್ನು ಮುಟ್ಟದಿರುವ ಕಾರಣ ಈ ಹೆಸರು.]

**आत्मग्राहिन् ಆತ್ಮಗ್ರಾಹಿನ್** (वि०) 1. ಸ್ವಾರ್ಥಪರ, ತನ್ನ ಹೊಟ್ಟೆಪಾಡನ್ನು ಮಾತ್ರ ನೋಡಿಕೊಳ್ಳುವವನು, ಹೊಟ್ಟೆಬಾಕ. आत्मार्थं गृह्णाति—ग्रह (उपादाने) "णिनिः" (३-१-१३४)। 2. ಆತ್ಮನನ್ನು ತಿಳಿದ, ಆತ್ಮಸ್ವರೂಪವನ್ನು ಅರಿತಿರುವ. आत्मानं गृह्णाति—ग्रह "णिनिः" (३-१-१३४)।

**आत्मघात ಆತ್ಮಘಾತ** (पु०) 1. ಆತ್ಮಹತ್ಯೆ. [ಆತ್ಮಹತ್ಯೆಯು ಶಾಸ್ತ್ರೀಯ ಮತ್ತು ಅಶಾಸ್ತ್ರೀಯಗಳೆಂದು ಎರಡು ವಿಧ. ಮುದುಕನಾಗಿ ಚಿಕಿತ್ಸೆಯು ಅಸಾಧ್ಯವೆಂದರಿತು ಸ್ನಾನಾದಿಗಳನ್ನು ಮಾಡಲೂ ಅಶಕ್ತನಾಗಿದ್ದಲ್ಲಿ ಉಪವಾಸದಿಂದಲೂ ಬೆಟ್ಟದ ಶಿಖರದಿಂದ ಬೀಳುವುದರಿಂದಲೂ ಅಗ್ನಿ ಪ್ರವೇಶದಿಂದಲೂ ನೀರಿನಲ್ಲಿ ಬೀಳುವುದರಿಂದಲೂ ಆತ್ಮಹತ್ಯೆಮಾಡಿಕೊಳ್ಳುವುದು ಶಾಸ್ತ್ರೀಯವಾದುದು. ಈ ಕಾರಣದಿಂದಲ್ಲದೆ ಮತ್ತು ಬೇರೆ ಕ್ರಮದಲ್ಲಿ ಆತ್ಮಹತ್ಯೆಯು ಅಶಾಸ್ತ್ರೀಯ ಮತ್ತು ದೋಷವಾಗುವುದು.] "वृद्धः शौचक्रियालुप्तः प्रत्याख्यातभिषक्क्रियः। आत्मानं घातयेद्यस्तु भृग्वग्न्यनशनाम्बुभिः"। 2. ಪಾಖಂಡಮತ.

**आत्मघातिन् ಆತ್ಮಘಾತಿನ್** (वि०) 1. ಅಶಾಸ್ತ್ರೀಯವಾಗಿ ಆತ್ಮಹತ್ಯೆ ಮಾಡಿಕೊಳ್ಳುವವನು. आत्मानं हन्ति—हन (हिंसागत्योः) "णिनिः" (३-१-१३४)। ಅಶಾಸ್ತ್ರೀಯವಾಗಿ ಮಾಡಿಕೊಳ್ಳುವ ಆತ್ಮಹತ್ಯೆಯು ಪಾಪಕರ. "व्यापादयेत् वृथात्मानं स्वयं योऽग्न्युदकादिभिः। अवैधेनैव मार्गेण आत्मघाती स उच्यते। "आत्मघातिभिरहम्मतिग्रहात्" याद० १७-९३। 2. ಪಾಖಂಡಿ, ವೇದಮತಬಾಹ್ಯ. 3. ಆತ್ಮಜ್ಞಾನ ಸಂಪಾದಿಸದೆ ಬಾಹ್ಯಸುಖದಲ್ಲೇ ಆಸಕ್ತನಾಗಿರುವವನು, ಆತ್ಮಜ್ಞಾನ ಸಂಪಾದಿಸದವನು.

**आत्मघोष ಆತ್ಮಘೋಷ** (पु०) 1. ಕಾಗೆ. 2. ಕುಕ್ಕುಟ, ಕೋಳಿ. आत्मानं घोषयति (का का का कू इति शब्दनात्) घुषिर् (विशब्दने) "अण्" (३-२-१)।

**आत्मज** ಆತ್ಮಜ (पुं०) 1. ಪುತ್ರ, ಮಗ. आत्मनो देहाज्जायते — जनी (प्रादुर्भावे) "ड:" (३-२-९८)। "अयाचितदयासिन्धुमात्मजस्य शुभां गतिम्" याद० १६-११०। 2. ಕಾಮ, ಮನ್ಮಥ. आत्मनो मनसो जायते — जनी "ड:" (३-२-९८)। स्त्रियाम् आत्मजा ಆತ್ಮಜಾ. 1. ಮಗಳು. 2. ಬುದ್ಧಿ.

**आत्मजन्मन्** ಆತ್ಮಜನ್ಮನ್ (पुं०) 1. ಪುತ್ರ, ಮಗ. आत्मनो जन्म यस्य। "आत्मा वै पुत्रनामासि"। "अत आहर्तुमिच्छामि पार्वतीमात्मजन्मने" कुमा० ६-२८। 2. ಕಾಮ, ಮನ್ಮಥ.

**आत्मज्ञ** ಆತ್ಮಜ್ಞ (वि०) 1. ತಪಸ್ವಿ, ಆತ್ಮಸ್ವರೂಪವನ್ನು ಅರಿತವನು. 2. ತನ್ನನ್ನು ಅರಿತವನು, ತನ್ನ ಸ್ವರೂಪವನ್ನು ತಿಳಿದವನು. आत्मानं जानाति — ज्ञा (अवबोधने) "क:" (३-२-३)।

**आत्मज्ञान** ಆತ್ಮಜ್ಞಾನ (नं०) 1. ಆತ್ಮಸ್ವರೂಪದ ಅರಿವು. "सर्वेषामपि चैतेषामात्मज्ञानं परं स्मृतम्। तद्ध्यग्र्यं सर्वविद्यानां प्राप्यते ह्यमृतं यत:" मनु० १२-८५। 2. ತನ್ನ ಸ್ವರೂಪದ ತಿಳಿವಳಿಕೆ. आत्मनो ज्ञानम्।

**आत्मतत्त्व** ಆತ್ಮತತ್ತ್ವ (नं०) ಆತ್ಮನ ನಿಜಸ್ವರೂಪ. आत्मनस्तत्त्वम्।

**आत्मदर्श** ಆತ್ಮದರ್ಶ (पुं०) 1. ದರ್ಪಣ, ಕನ್ನಡಿ. आत्मा दृश्यतेऽत्र—दृशिर् (प्रेक्षणे) "घञ्"(३-३-१२१)। "नि:श्वासबाष्पापगमात्प्रपन्न: प्रसादमात्मीयमिवात्मदर्श:" रघु० ७-६८। 2. ಆತ್ಮಸಾಕ್ಷಾತ್ಕಾರ. आत्मनो दर्श: दर्शनम्।

**आत्मदर्शन** ಆತ್ಮದರ್ಶನ (नं०) 1. ಆತ್ಮಸಾಕ್ಷಾತ್ಕಾರ. आत्मनो दर्शनम्। 2. ಆತ್ಮಸಾಕ್ಷಾತ್ಕಾರಕ್ಕೆ ಸಾಧನ, ಪರಮಾತ್ಮನನ್ನು ಎದುರಿಗೆ ಕಾಣಲು ಉಪಾಯ. आत्मा दृश्यतेऽनेन—दृशिर् (प्रेक्षणे)करं० "ल्युट्"(३-३-११७)। [ಆತ್ಮದರ್ಶನಕ್ಕೆ ಕಾರಣಗಳು ಶ್ರವಣ ಮನನ ನಿದಿಧ್ಯಾಸನಗಳು.] "आत्मा वा अरे द्रष्टव्य: श्रोतव्यो मन्तव्यो निदिध्यासितव्य:" श्रुति:।

**आत्मध्यान** ಆತ್ಮಧ್ಯಾನ (नं०) ಪರಮಾತ್ಮನ ಧ್ಯಾನ. [ಬೇರೆ ವಿಷಯದ ಜ್ಞಾನದಿಂದ ಅಡ್ಡಿಯುಂಟಾಗದೆ ಕೇವಲ ಒಂದೇ ವಿಷಯದಲ್ಲಿ ಧಾರಾಕಾರವಾದ ಜ್ಞಾನ ಪರಂಪರೆಯು ಧ್ಯಾನ.] आत्मनो ध्यानम्।

**आत्मन्** ಆತ್ಮನ್ (पुं०) 1. ಪರಮಾತ್ಮ, ಬ್ರಹ್ಮ. अत (सातत्यगमने) "मनिण्" (उ० ४-१५३)। "यच्चाप्नोति यदादत्ते यच्चात्ति विषयानिह। यच्चास्य सन्ततो भाव: तस्मादात्मेति कीर्त्यते"। "आत्मेव दृष्ट: सहसा प्रजानामादर्शनेच्छामितरेषु दत्ते" याद० १८-९३। 2. ಜೀವಾತ್ಮ. "आत्मानं रथिनं विद्धि मन: प्रग्रहमेव च। इन्द्रियाणि ह्यानाहु: विषयांस्तेषु गोचरम्। आत्मेन्द्रियमनोयुक्तं भोक्तेत्याहुर्मनीषिण:" कठ०।

ಆತ್ಮನ ವಿಷಯದಲ್ಲಿ ದಾರ್ಶನಿಕರ ಮತಭೇದ: (1) ಚಾರ್ವಾಕಮತ: ಚಾರ್ವಾಕರು ದೇಹವೇ ಆತ್ಮವೆಂದು ಹೇಳುತ್ತಾರೆ. ಪೃಥಿವಿ ಅಪ್ ತೇಜಸ್ಸು ಮತ್ತು ವಾಯು ಈ ಭೂತಚತುಷ್ಟಯದಿಂದ ಶರೀರವು ಉತ್ಪನ್ನವಾಗಿ ಚೈತನ್ಯವು ಹುಟ್ಟುವುದು. ದೇಹೋತ್ಪತ್ತಿಗೆ ಮೊದಲೂ ದೇಹನಾಶಾನಂತರವೂ ಈ ಆತ್ಮ ನಿರುವುದಿಲ್ಲವೆಂದು ಇವರ ಅಭಿಪ್ರಾಯ. स्थूलोऽहम् कृशोऽहम् कृष्णोऽहम् ಇತ್ಯಾದಿ ವ್ಯವಹಾರವೇ ದೇಹಾತ್ಮವಾದದಲ್ಲಿ ಪ್ರಮಾಣ.

(2) ಬೌದ್ಧಮತ: ಬೌದ್ಧರಲ್ಲಿ ಮಾಧ್ಯಮಿಕ, ಯೋಗಾಚಾರ, ಸೌತ್ರಾಂತಿಕ ಮತ್ತು ವೈಭಾಷಿಕರೆಂದು ನಾಲ್ಕು ಪಕ್ಷದವರಿರುವರು. ಇವರು ಕ್ರಮವಾಗಿ ಸರ್ವಶೂನ್ಯತ್ವ, ಬಾಹ್ಯಾರ್ಥಶೂನ್ಯತ್ವ, ಬಾಹ್ಯಾರ್ಥಾನುಮೇಯತ್ವ ಮತ್ತು ಬಾಹ್ಯಾರ್ಥ ಪ್ರತ್ಯಕ್ಷತ್ವವಾದಿಗಳು. ಮಾಧ್ಯಮಿಕರು ಸತ್ ಅಸತ್ ಸದಸತ್ ಸದಸದ್ವಿಲಕ್ಷಣ ಈ ನಾಲ್ಕಕ್ಕಿಂತಲೂ ಅತಿರಿಕ್ತವಾದ ಶೂನ್ಯವೇ ಆತ್ಮವೆಂದೂ ಯೋಗಾಚಾರ ಪಕ್ಷದವರು अहम् ಎಂಬ ಭಾವನೆಯಿಂದ ಆತ್ಮನೆನ್ನಲ್ಪಡುವ ಆಲಯ ವಿಜ್ಞಾನಸಂತತಿಯೇ ಆತ್ಮವೆಂದೂ ಹೇಳುವರು. ಸೌತ್ರಾಂತಿಕರು ಮತ್ತು ವೈಭಾಷಿಕರು ಆತ್ಮನ ವಿಷಯದಲ್ಲಿ ಇವರನ್ನೇ ಅನುಸರಿಸಿದರೂ ಸೌತ್ರಾಂತಿಕರು ವಿಜ್ಞಾನವ್ಯತಿರಿಕ್ತ ಪದಾರ್ಥಗಳೂ ಇವೆಯೆಂದೂ ಅವು ಅನುಮೇಯವೆಂದೂ ವೈಭಾಷಿಕರು ಅವೂ ಪ್ರತ್ಯಕ್ಷವೆಂದೂ ಅಭಿಪ್ರಾಯಪಡುವರು.

(3) ಜೈನಮತ: ಆತ್ಮನು ಜ್ಞಾನದರ್ಶನಸ್ವರೂಪಿಯಾದ ಚೈತನ್ಯವಸ್ತು. ಆತ್ಮನು ನಿತ್ಯ. "चेतनालक्षणो जीव:"। ಆತ್ಮನು ಕರ್ಮಬದ್ಧ (ಸೋಪಾಧಿಕ) ಮತ್ತು ಕರ್ಮಮುಕ್ತ (ನಿರುಪಾಧಿಕ) ಎಂದು ಎರಡು ವಿಧ. "जीवा: संसारिणो मुक्ताश्च" तत्त्वा० सू०। ಕರ್ಮಮುಕ್ತನಾದ ಆತ್ಮನು ಶುದ್ಧ ಚೈತನ್ಯ. ಸಿದ್ಧ, ಸರ್ವಜ್ಞ, ಸರ್ವಲೋಕದರ್ಶಿ. ದೇಹದ ಪರಿಮಾಣವೇ ಆತ್ಮನ ಪರಿಮಾಣ. ಇರುವೆಯ ಶರೀರದಲ್ಲಿ ಇರುವೆಯಷ್ಟು ಆನೆಯ ಶರೀರದಲ್ಲಿ ಆನೆಯಷ್ಟು ಈ ರೀತಿ ಅಣು

ಗುರುದೇಹ ಪ್ರಮಾಣವುಳ್ಳವನು. ಹಿಂದಿನ ಜನ್ಮದಲ್ಲಿ ಮಾಡಿದ ಪಾಪಪುಣ್ಯಗಳಿಂದ ಭಾರವಾಗಿ ಸಂಸಾರ ಸಾಗರದಲ್ಲಿ ಮುಳುಗಿ ಸಮ್ಯಕ್‌ಜ್ಞಾನಾದಿಗಳಿಂದ ಕರ್ಮವನ್ನು ಕಳೆದುಕೊಂಡು ಲೋಕಾಗ್ರದಲ್ಲಿ ನೆಲೆಸುತ್ತಾನೆ. ಇದೇ ಇವನಿಗೆ ಮುಕ್ತಿಯೆಂದು ಇವರ ಅಭಿಪ್ರಾಯ.

(4) ನೈಯಾಯಿಕರ ಮತ್ತು ವೈಶೇಷಿಕರ ಮತ: ದೇಹ ಇಂದ್ರಿಯ ಮನಸ್ಸು ಬುದ್ಧಿ ಇವುಗಳಿಗಿಂತಲೂ ಆತ್ಮನು ಬೇರೆ. ಆತ್ಮನು ನಿತ್ಯ ಮತ್ತು ವಿಭು. ಜೀವಾತ್ಮನು ಪರಮಾತ್ಮನಿಗಿಂತಲೂ ಭಿನ್ನನು. ಪರಮಾತ್ಮನು ಒಬ್ಬನೇ. ಜೀವಾತ್ಮರು ಅಸಂಖ್ಯಾತರು. ಪರಮಾತ್ಮನಲ್ಲಿ ನಿತ್ಯಜ್ಞಾನ, ಕೃತಿ, ಇಚ್ಛೆಗಳಿವೆ. ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳ ಸಾಮರ್ಥ್ಯವಿದೆ. ಕುಲಾಲನು ಘಟಕ್ಕೆ ಕಾರಣನಾಗಿರುವಂತೆ ಜಗತ್ಸೃಷ್ಟಿಗೆ ನಿಮಿತ್ತಕಾರಣ. ಇವನು ಸರ್ವಜ್ಞ. ಜೀವಾತ್ಮನು ಜ್ಞಾನ ಇಚ್ಛೆ ಕೃತಿ ಧರ್ಮ ಅಧರ್ಮ ದ್ವೇಷ ಸುಖ ದುಃಖ ಇತ್ಯಾದಿ ಗುಣವುಳ್ಳವನು. ಆತ್ಮನಿಗೆ ಮನಸ್ಸಿನೊಡನೆ ವಿಜಾತೀಯ ಸಂಯೋಗದಿಂದ ಜ್ಞಾನವುಂಟಾಗುವುದು. ದುಃಖಧ್ವಂಸವೇ ಮೋಕ್ಷವೆಂದು ಇವರ ಅಭಿಪ್ರಾಯ.

(5) ಸಾಂಖ್ಯ ಮತ: ಸಾಂಖ್ಯಮತದಲ್ಲಿ ಚತುರ್ವಿಂಶತಿ ತತ್ತ್ವಕ್ಕಿಂತಲೂ ಅತಿರಿಕ್ತನಾದ ಪುರುಷನೇ ಆತ್ಮ. ಆತ್ಮನು ಅಸಂಖ್ಯಾತ, ವಿಭು, ನಿತ್ಯ, ನಿರ್ಗುಣ, ನಿಷ್ಕ್ರಿಯ ಮತ್ತು ನಿರ್ಲಿಪ್ತ. ಆತ್ಮನಿಗೆ ಸುಖದುಃಖಾದಿಗಳ ಸಂಬಂಧವಿರುವುದಿಲ್ಲ. ಸಂಸಾರ ಭೋಗ ಮತ್ತು ಮೋಕ್ಷಗಳು ಪುರುಷನಲ್ಲಿ ಪ್ರಕೃತಿ ಸಂಬಂಧದಿಂದ ತೋರುವುವು. ಪ್ರಕೃತಿ ಪುರುಷರ ಸಂಬಂಧದಿಂದ ಜಗತ್ತಿನ ಸೃಷ್ಟಿ ಮೊದಲಾದ ವ್ಯಾಪಾರಗಳು ನಡೆಯುವುವು. ಪ್ರಕೃತಿಪುರುಷರ ವಿವೇಕ ಜ್ಞಾನದಿಂದ ಬುದ್ಧಿತತ್ತ್ವನಾಶವೂ ಆದರಿಂದ ಸುಖದುಃಖಗಳ ಛಾಯಾನಾಶವೂ ಉಂಟಾಗಿ ಆತ್ಮನು ಶುದ್ಧನಾಗುವನು. ಇದೇ ಮೋಕ್ಷವು.

(6) ಯೋಗದರ್ಶನ: ಇವರ ಮತದಲ್ಲಿ ಜೀವಾತ್ಮ ಪರಮಾತ್ಮರಿಗೆ ಭೇದವುಂಟು. ಚೇತನ ತತ್ತ್ವವು ಪುರುಷ, ಈಶ್ವರನೆಂದು ಎರಡು ವಿಧ. ಜೀವಾತ್ಮನೆಂಬ ಪುರುಷನು ಅಸಂಖ್ಯಾತ, ವಿಭು, ಅಜ, ನಿತ್ಯ, ಶಾಶ್ವತ ಮತ್ತು ನಿರ್ಲೇಪ, ಜ್ಞಾನಸ್ವರೂಪ. ಈಶ್ವರನು ಕ್ಲೇಶ ಕರ್ಮವಿಪಾಕಾಶಯಗಳ ಸಂಬಂಧವಿಲ್ಲದವನು. ಜೀವರು ಈಶ್ವರಪ್ರಣಿಧಾನವೆಂಬ ಈಶ್ವರ ಭಕ್ತಿಯಿಂದ ಸಮಾಧಿಪಡೆಯುವರು. ಇದೇ ಮೋಕ್ಷ.

(7) ದ್ವೈತದರ್ಶನ: ಈ ದರ್ಶನಕಾರರು ಜೀವಾತ್ಮ ಮತ್ತು ಪರಮಾತ್ಮರಿಗೆ ಭೇದವನ್ನು ಅಂಗೀಕರಿಸಿರುತ್ತಾರೆ. ಜೀವನು ಅಣು ಜ್ಞಾನಸ್ವರೂಪ, ಅಸಂಖ್ಯಾತ; ಅಜ, ನಿತ್ಯ, ಶಾಶ್ವತ, ಅಚ್ಛೇದ್ಯ, ಅದಾಹ್ಯ, ಅಕ್ಲೇದ್ಯ ಮತ್ತು ಅಶೋಷ್ಯನು. ಪರಮಾತ್ಮನು (ನಾರಾಯಣನು) ವಿಭು. ಎಲ್ಲರಿಗೂ ನಾರಾಯಣನೇ ನಿಯಾಮಕನು. ಎಲ್ಲರೂ ಅವನ ಆಜ್ಞೆಗೆ ಒಳಪಟ್ಟಿರಬೇಕು. ಜೀವರು ಸುಖಾದಿತಾರತಮ್ಯವುಳ್ಳವರೆಂದೂ ಸ್ತ್ರೀಪುರುಷಭೇದವುಳ್ಳವರೆಂದೂ ಇವರ ಅಭಿಪ್ರಾಯ. ಜೀವಾತ್ಮರಲ್ಲಿ ಉತ್ತಮ, ಮಧ್ಯಮ, ಅಧಮ ಭೇದದಿಂದ ಮುಕ್ತಿಯೋಗ್ಯರು, ನಿತ್ಯ ಸಂಸಾರಿಗಳು ತಮೋಯೋಗ್ಯರೆಂದು ಭೇದವಿರುವುದು. ಸಾಧನಾನುಷ್ಠಾನದಿಂದ ಸ್ವರೂಪಾನಂದವನ್ನು ಅನುಭವಿಸುವವರು ಮುಕ್ತಿಯೋಗ್ಯರು. ನಿತ್ಯನರಕವೆಂಬ ತಮೋಲೋಕಪ್ರಾಪ್ತಿಗೆ ಸಾಧನ ಸಂಪಾದಿಸಿಕೊಂಡು ನಿತ್ಯ ದುಃಖಾನುಭವಕ್ಕೆ ಸಿದ್ಧರಾಗುವವರು ತಮೋಯೋಗ್ಯರು. ಸಾಧನಾನುಷ್ಠಾನದಿಂದ ನಿತ್ಯ ಸುಖದುಃಖಮಿಶ್ರಾನುಭವಕ್ಕೆ ಸಿದ್ಧರಾಗುವವರು ನಿತ್ಯ ಸಂಸಾರಿಗಳು. ಗುರುಕುಲವಾಸ, ಗುರುಭಕ್ತಿ, ಸಚ್ಛಾಸ್ತ್ರಶ್ರವಣ, ಮನನ, ಸಂಸಾರದುಃಖದರ್ಶನದಿಂದುಂಟಾಗುವ ವೈರಾಗ್ಯ, ನಿವೃತ್ತಿಧರ್ಮಾನುಷ್ಠಾನ, ತಾರತಮ್ಯಜ್ಞಾನ, ಪರಮಾತ್ಮಭಕ್ತಿ ಮೊದಲಾದ ಸಾಧನಗಳಿಂದ ಅಪರೋಕ್ಷಜ್ಞಾನವುಂಟಾಗಿ ಅದು ಮೋಕ್ಷಸಾಧನವಾಗುವುದು. ಅಪರೋಕ್ಷ ಜ್ಞಾನದಿಂದ ಪರಮಾತ್ಮನ ಪ್ರಸಾದವುಂಟಾಗಿ ಪ್ರಕೃತಿ ಸಂಬಂಧವಿನಾಶವೆಂಬ ಮುಕ್ತಿ ಸಿದ್ಧಿಸುವುದು. ದೇಹಾವಸಾನಕಾಲದಲ್ಲಿ ಜೀವನು ಬ್ರಹ್ಮನಾಡೀಮೂಲಕ ಹೊರಟು ಅರ್ಚಿರಾದಿ ಮಾರ್ಗದಲ್ಲಿ ಅನೇಕ ಲೋಕಾಧಿಪತಿಗಳಿಂದ ಸತ್ಕರಿಸಲ್ಪಟ್ಟು ಕೊನೆಗೆ ಭಗವಲ್ಲೋಕದಲ್ಲಿ ತಾರತಮ್ಯಾನುಗುಣವಾಗಿ ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ ಮತ್ತು ಸಾಯುಜ್ಯರೂಪವಾದ ಮೋಕ್ಷವನ್ನು ಅನುಭವಿಸುವನು.

(8) ಅದ್ವೈತ ಮತ: ಅದ್ವೈತಮತದಲ್ಲಿ ಆತ್ಮನು ಒಬ್ಬನೇ. ಅವನು ನಿತ್ಯ, ವಿಭು, ಅಚ್ಛೇದ್ಯ, ಅಕ್ಲೇದ್ಯ, ಅದಾಹ್ಯ, ನಿತ್ಯಶುದ್ಧ, ನಿತ್ಯಮುಕ್ತ, ನಿರ್ಲಿಪ್ತ ಮತ್ತು ಅಸಂಗನು. ಇವನಿಗೆ ಸ್ಥೂಲ ಸೂಕ್ಷ್ಮ ಕಾರಣಗಳೆಂಬ ಮೂರು ಉಪಾಧಿಗಳುಂಟು. ಮಾಯೆಯೆಂಬ ಕಾರಣೋಪಾಧಿಯುಳ್ಳ ಚೈತನ್ಯದಿಂದ ನಡೆಯುವ ಸೃಷ್ಟಿ ಸ್ಥಿತಿ ಮತ್ತು ಪ್ರಳಯರೂಪಕಾರ್ಯಗಳಿಂದ

ಬ್ರಹ್ಮ ವಿಷ್ಣು ರುದ್ರರೆಂಬ ನಾಮರೂಪ ಭೇದಗಳನ್ನು ಹೊಂದುತ್ತಾನೆ. ಬೇರೆ ಬೇರೆ ಉಪಾಧಿಗಳಾದ ಶರೀರಗಳಲ್ಲಿ ಅನಾದಿಯಾದ ಅವಿದ್ಯೆಯಿಂದ ನಾನು ನನ್ನದು ಎಂಬ ಅಭಿಮಾನ ಹುಟ್ಟಿ ಬೇರೆ ಬೇರೆ ಜೀವಗಳಾಗಿ ವ್ಯವಹರಿಸಲ್ಪಡುತ್ತಾನೆ. ಒಂದೇ ಆಕಾಶವು ಘಟಮಠ ರೂಪ ಉಪಾಧಿಭೇದದಿಂದ ಘಟಾಕಾಶ ಮಠಾಕಾಶಗಳೆಂದು ವ್ಯವಹರಿಸಲ್ಪಡುವಂತೆಯೂ ಅನೇಕ ಜಲಾಶಯಗಳಲ್ಲಿ ಬಿದ್ದ ಅನೇಕ ಸೂರ್ಯಪ್ರತಿಬಿಂಬಗಳು ಬೇರೆ ಬೇರೆ ಕಾಣುತ್ತಿದ್ದು ನೀರೆಲ್ಲಾ ನಾಶವಾದ ನಂತರ ಎಲ್ಲವೂ ಸೂರ್ಯನಲ್ಲೇ ಐಕ್ಯವಾಗುವಂತೆಯೂ ಆತ್ಮನೂ ಉಪಾಧಿಭೇದದಿಂದ ಬೇರೆ ಬೇರೆಯಾಗಿ ತೋರುತ್ತಿದ್ದು ಉಪಾಧಿ ನಾಶಾನಂತರ ಆತ್ಮನೊಬ್ಬನೇ ಉಳಿಯುತ್ತಾನೆ. ಇದೇ ಮೋಕ್ಷ. ಜೀವನು (ಫಲಾಪೇಕ್ಷೆಯಿಲ್ಲದೆ) ಈಶ್ವರಾರ್ಪಣ ಬುದ್ಧಿಯಿಂದ ಮಾಡಿದ ವಿಹಿತಕರ್ಮಾಚರಣೆಯಿಂದ ಸಂಸಾರದಲ್ಲಿ ಅಸಾರತ್ವ ಬುದ್ಧಿಯೂ, ಕರ್ಮಫಲದಲ್ಲಿ ಪ್ರಬಲ ವೈರಾಗ್ಯವೂ, ಅದರಿಂದ ಗೃಹ ಪುತ್ರಕಳತ್ರಾದಿಗಳಲ್ಲಿ ಜಿಹಾಸೆಯೂ ಉಂಟಾಗಿ ತನ್ನ ದೇಹದಲ್ಲಿಯೂ ಅಭಿಮಾನ ತೊರೆದು ಸದ್ಗುರುವಿನ ಉಪದೇಶ ಪಡೆದು ಶ್ರವಣಮನನ ನಿದಿಧ್ಯಾಸನಗಳ ಸಹಾಯದಿಂದ ಪರಬ್ರಹ್ಮಸಾಕ್ಷಾತ್ಕಾರ ಹೊಂದಿ ಅಜ್ಞಾನ ನಿವೃತ್ತಿಯಾದ ನಂತರ ಸಂಸಾರಪಾಶದಿಂದ ಮುಕ್ತನಾಗಿ ಬ್ರಹ್ಮಸ್ವರೂಪವನ್ನು ಪಡೆಯುವನು. ಇದೇ ಮುಕ್ತಿ.

(9) ವಿಶಿಷ್ಟಾದ್ವೈತ: ಇವರು ಜೀವಾತ್ಮನಿಗೂ ಪರಮಾತ್ಮನಿಗೂ ಭೇದವನ್ನು ಹೇಳಿ ಶೇಷ ಶೇಷಿ ಭಾವ ಹೇಳುತ್ತಾರೆ. ಜೀವನು ಜ್ಞಾನಸ್ವರೂಪ, ಅಸಂಖ್ಯಾತ, ಅಣು, ಅಜ, ನಿತ್ಯ, ಶಾಶ್ವತ, ಅಚ್ಛೇದ್ಯ, ಅದಾಹ್ಯ, ಅಕ್ಲೇದ್ಯ ಮತ್ತು ಅಶೋಷ್ಯನು. ಜೀವರೆಲ್ಲಾ ಪರಮಾತ್ಮನ ಶರೀರ. ಪ್ರತ್ಯಕ್ತ್ವ ಚೇತನತ್ವ ಕರ್ತೃತ್ವ ಮೊದಲಾದವು ಈಶ್ವರ ಮತ್ತು ಜೀವರುಗಳಿಗೆ ಸಾಧಾರಣ ಲಕ್ಷಣ. ಶೇಷತ್ವ ಆಧೇಯತ್ವ ವಿಧೇಯತ್ವ ಪರಾಧೀನ ಕರ್ತೃತ್ವ ಪರತಂತ್ರತ್ವ ಮುಂತಾದುವು ಜೀವನ ವಿಶೇಷ ಲಕ್ಷಣ. ಜೀವನು ದೇಹ ಇಂದ್ರಿಯ ಮನಸ್ಸು ಪ್ರಾಣ ಇವುಗಳಿಗಿಂತಲೂ ಭಿನ್ನನು. मम शरीरम् (ನನ್ನ ಶರೀರ) ಎಂದು ವ್ಯವಹರಿಸುವುದರಿಂದ ದೇಹಕ್ಕಿಂತಲೂ ಭಿನ್ನನು. चक्षुषा पश्यामि (ಕಣ್ಣಿನಿಂದ ನೋಡುತ್ತೇನೆ), श्रोत्रेण शृणोमि (ಕಿವಿಯಿಂದ ಕೇಳುತ್ತೇನೆ) ಎಂಬ ವ್ಯವಹಾರದಿಂದ ಬಾಹ್ಯೇಂದ್ರಿಯಗಳಿಗಿಂತಲೂ ಭಿನ್ನನು. मनसा जानामि (ಮನಸ್ಸಿನಿಂದ ತಿಳಿಯುತ್ತೇನೆ), मम प्राणाः, जानाम्यहम् ಇತ್ಯಾದಿ ವ್ಯವಹಾರದಿಂದ ಮನಸ್ಸು ಪ್ರಾಣ ಜ್ಞಾನಗಳಿಗಿಂತಲೂ ಭಿನ್ನನು. ಪ್ರತಿಶರೀರದಲ್ಲಿಯೂ ಬೇರೆ ಬೇರೆ ಜೀವನಿರುವನು. "देहेन्द्रियमनःप्राणधीभ्योऽन्योऽनन्यसाधनः। नित्यो व्यापी प्रतिक्षेत्रमात्मा भिन्नः स्वतः सुखी" आत्मसि०। ಬದ್ಧ ಮುಕ್ತ ನಿತ್ಯರೆಂದು ಜೀವರು ಮೂರು ವಿಧ. ಸಂಸಾರದಿಂದ ಬಿಡುಗಡೆ ಹೊಂದದವರು ಬದ್ಧ ಜೀವರು. ಪ್ರಕೃತಿಸಂಬಂಧವನ್ನು ಬಿಡಿಸಿಕೊಂಡಿರುವ ಶುಕ, ವ್ಯಾಸ, ಪರಾಶರ, ಆಳ್ವಾರುಗಳು ಮುಕ್ತರು. ಯಾವಾಗಲೂ ಪ್ರಕೃತಿಸಂಬಂಧವೇ ಇಲ್ಲದ ಅನಂತ, ಗರುಡ, ವಿಷ್ವಕ್ಸೇನ ಮೊದಲಾದ ಭಗವಂತನ ಪರಿಜನರು ನಿತ್ಯರು. ಫಲಾಪೇಕ್ಷೆಯಿಲ್ಲದೆ ಭಗವತ್ಪ್ರೀತಿಗೋಸ್ಕರವಾಗಿಯೇ ಕರ್ತವ್ಯಭಾವನೆಯಿಂದ ಮಾಡುವ ಕರ್ಮಯೋಗದಿಂದ ನೇರವಾಗಿಯಾಗಲೀ ಜ್ಞಾನಯೋಗದ ಮೂಲಕವಾಗಲೀ ಆತ್ಮಾವಲೋಕನವು ಸಿದ್ಧಿಸುವುದು. ಅನಂತರ ಭಗವಂತನಲ್ಲಿ ಬೆಳೆಯುವ ಭಕ್ತಿ ಅಥವಾ ಪ್ರಪತ್ತಿ ಎಂಬ ಮೋಕ್ಷೋಪಾಯದಿಂದ ಆತ್ಮನು ಪರಮಾತ್ಮನ ಅನುಗ್ರಹಕ್ಕೆ ಪಾತ್ರನಾಗಿ ದೇಹಾವಸಾನ ಸಮಯದಲ್ಲಿ ಸುಷುಮ್ನಾನಾಡೀಮಾರ್ಗವಾಗಿ ಸುಖದಿಂದ ಪ್ರಯಾಣಮಾಡಿ ಶ್ರೀ ವೈಕುಂಠದಲ್ಲಿ ಆನಂದಮಯ ದಿವ್ಯಮಂಟಪದಲ್ಲಿ ಸಕಲ ವೈಭವದೊಡನೆ ಬಿಜಯಮಾಡಿಸಿರುವ ಶ್ರೀಮಹಾಲಕ್ಷ್ಮೀಸಮೇತನಾದ ಶ್ರೀ ಪರವಾಸುದೇವನ ಸಮೀಪವನ್ನು ಹೊಂದಿ ಅಲ್ಲಿ ನಿತ್ಯಸೂರಿಗಳೊಡನೆ ನಿತ್ಯಕಿಂಕರನಾಗಿ ಪರಮಾತ್ಮಾನುಭವವೆಂಬ ಆನಂದವನ್ನು ಅನುಭವಿಸುವನು. ಇದೇ ಮುಕ್ತಿ.

(10) ಶಕ್ತಿ ವಿಶಿಷ್ಟಾದ್ವೈತ (ವೀರಶೈವ) ಮತ: ಇವರು ಜೀವಾತ್ಮ ಪರಮಾತ್ಮರಿಗೆ ಭೇದವನ್ನು ಹೇಳುವರು. ಜೀವನು ಅಣು, ಪರಮಾತ್ಮನು ವಿಭು. ಜೀವನು ಅಸಂಖ್ಯಾತ. ಜೀವರೆಲ್ಲಾ ಪರಮಾತ್ಮನ (ಲಿಂಗದ) ಅಂಶ (ಅಂಗ), ಸರ್ವಜ್ಞತ್ವ, ನಿತ್ಯತೃಪ್ತತ್ವ, ಅನಾದಿಬೋಧಕತ್ವ, ಸ್ವಾತಂತ್ರ್ಯ, ಅಲುಪ್ತಶಕ್ತಿಮತ್ತ್ವ, ಅನಂತಶಕ್ತಿಮತ್ತ್ವ ಇತ್ಯಾದಿ ಪರಮಾತ್ಮನ ವಿಶೇಷ ಲಕ್ಷಣಗಳು. ಅಸ್ವಾತಂತ್ರ್ಯ, ಅನಂತತ್ವ, ದೇಹೇಂದ್ರಿಯಾದ್ಯತಿರಿಕ್ತತ್ವ, ಪರಾಧೀನ ಕರ್ತೃತ್ವ, ಅಂಶತ್ವ ಮೊದಲಾದುವು ಜೀವನ ಲಕ್ಷಣಗಳು. ಜೀವನು ಚೈತನ್ಯಸ್ವರೂಪ. ಅವನು ಮಾಯೆಯ ಮೂಲಕ ಅಲ್ಪಜ್ಞನೂ ಅಲ್ಪಶಕ್ತಿಯೂ ಅಹಂಕಾರಿಯೂ ಆಗುವನು. ಆಣವಮಲ, ಮಾಯಾಮಲ

ಮತ್ತು ಕಾರ್ಮಿಕಮಲ ಮತ್ತು ಅಹಂಕಾರ ಇವುಗಳ ಮೂಲಕ ಕರ್ಮಬದ್ಧನಾಗಿ ಜನ್ಮಾಂತರಗಳನ್ನು ತಾಳು ವನು. ಲಿಂಗಧಾರಣಾತ್ಮಕವಾದ ಶಿವದೀಕ್ಷೆಯಿಂದ ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ ಮತ್ತು ಐಕ್ಯಗಳೆಂಬ ಷಟ್‌ಸೋಪಾನಗಳ ಮೂಲಕ ಮಲತ್ರಯ ನಿವೃತ್ತಿಹೊಂದಿದ ನಂತರ ಬ್ರಹ್ಮಸಾಕ್ಷಾತ್ಕಾರವಾಗಿ ಮುಕ್ತಿಹೊಂದುವನು. ಈ ಪಾಶಗಳಿಂದ ಬದ್ಧನಾದರೆ ಜೀವನು. ಇವುಗಳಿಂದ ಮುಕ್ತನಾದರೆ ಸದಾಶಿವನಾಗುವನು. ಈ ಪಾಶಗಳಿಂದ ಮುಕ್ತನಾಗುವುದೇ ಮುಕ್ತಿ.

3. ಶರೀರ, ದೇಹ. "आत्मानमालोक्य च शोभमानमादर्शबिम्बे स्तिमितायताक्षी" कुमा० ७-२२। 4. ಯತ್ನ. 5. ಸ್ವಭಾವ. "तमात्मसंपन्नमनिन्दितात्मा" रघु० १८-१८। 6. ಮನಸ್ಸು, ಚಿತ್ತ. "आरेभिरे जितात्मानः पुत्रीयामिष्टिमृत्विजः" रघु० १०-४। 7. ಬುದ್ಧಿ, ಜ್ಞಾನ. "तमात्मसम्पन्नमनिन्दितात्मा कृत्वा युवानं युवराजमेव" रघु० १८-१८। 8. ಧೈರ್ಯ. 9. ಸ್ವಯಂ, ತಾನು. "आत्मानममृतोदन्वदन्तस्स्थितममन्यत" याद० १६-१३८। 10. ಸ್ವರೂಪ. "अथ विश्वात्मने गौरी संदिदेश मिथः सखीम्" कुमा० ६-१। "त्वत्सम्भावितमात्मानं बहुमन्यामहे वयम्" कुमा० ६-२०। 11. ಅಗ್ನಿ, ಬೆಂಕಿ. 12. ಸೂರ್ಯ. 13. ವಾಯು, ಗಾಳಿ. 14. ಪುತ್ರ, ಮಗ. "आत्मा वै पुत्रनामासि"। 15. ಇಂದ್ರಿಯ. "आत्मा चित्ते धृतौ यत्ने धिषणायां कलेवरे। परमात्मनि जीवेऽर्के हुताशनसमीरयोः। स्वभावे" हेम०।

**आत्मनिन्दा** ಆತ್ಮನಿಂದಾ (स्त्री०) ತನ್ನನ್ನು ದೂಷಿಸಿಕೊಳ್ಳುವುದು.

**आत्मनिष्ठ** ಆತ್ಮನಿಷ್ಠ (वि०) ಮೋಕ್ಷಾರ್ಥಿ, ಬ್ರಹ್ಮಜ್ಞಾನವನ್ನು ಅಪೇಕ್ಷಿಸುವವನು. आत्मनि नितरां तिष्ठति – ष्ठा (गतिनिवृत्तौ) "कः" (३-२-४)।

**आत्मनीन** ಆತ್ಮನೀನ (पु०) 1. ಪುತ್ರ, ಮಗ. 2. ಸ್ಯಾಲ, ಭಾವಮೈದುನ, ಹೆಂಡತಿಯ ಸಹೋದರ. 3. ವಿದೂಷಕ. (वि०) 4. ತನಗೆ ಹಿತವಾದ. आत्मने हितम् – आत्मन् "खः" (५-१-९)। "नैवात्मनीनमथवा क्रियते मदान्धैः" माघ० ५-४४। 5. ಚೇತನ, ಜೀವ, ಪ್ರಾಣ ಹೊಂದಿರುವ. "आत्मनीनः सुते स्याले प्राणधारिणि दूषके" वैज०।

**आत्मनेपद** ಆತ್ಮನೇಪದ (न०) ಕ್ರಿಯೆಯಿಂದ ಹುಟ್ಟಿದ ಫಲವು ಆತ್ಮಗಾಮಿ (ಕರ್ತೃವಿನದು) ಎಂದು ತಿಳಿಸುವುದಕ್ಕಾಗಿರುವ ಪ್ರತ್ಯಯ, ಧಾತುವಿನ ಮುಂದೆ ಬರುವ तङ् ಮತ್ತು आन ಪ್ರತ್ಯಯಗಳು. [त आताम् झ थास् आथाम् ध्वम् इट् वहि महिङ् शानच् ಮತ್ತು कानच्] आत्मने आत्मार्थफलबोधनाय पदम्। सप्तम्या अलुक् (६-३-७)।

**आत्मनेपदिन्** ಆತ್ಮನೇಪದಿನ್ (पु०) ಆತ್ಮನೇಪದದ ಪ್ರಕೃತಿಯಾದ ಧಾತು. आत्मने पदमस्त्यस्य "इनिः" (५-२-११५)। [अनुदात्तङित आत्मनेपदम् ಮುಂತಾದ ಸೂತ್ರಗಳಿಂದ ಉಕ್ತವಾಗಿರುವ ಧಾತುಗಳು ಆತ್ಮನೇಪದಿಗಳು.]

**आत्मप्रभ** ಆತ್ಮಪ್ರಭ (पु०) 1. ಪರಮಾತ್ಮ. (वि०) 2. ಸ್ವಯಂಪ್ರಕಾಶವುಳ್ಳ. आत्मना प्रकर्षेण भाति।

**आत्मप्रभा** ಆತ್ಮಪ್ರಭಾ (स्त्री०) ತನ್ನ ಪ್ರಕಾಶ. आत्मनः प्रभा।

**आत्मप्रभव** ಆತ್ಮಪ್ರಭವ (पु०) 1. ಪುತ್ರ, ಮಗ. 2. ಕಾಮ, ಮನ್ಮಥ. आत्मा देहः मनो वा प्रभवो यस्य। स्त्रियाम् –प्रभवा –ಪ್ರಭವಾ. (1) ಕನ್ಯೆ, ಮಗಳು. (2) ಬುದ್ಧಿ. (वि०) 3. ಆಕಾಶ ಮೊದಲಾದ ಪ್ರಪಂಚ. आत्मा परमात्मा प्रभवो यस्य। आत्मन आकाशः सम्भूतः। आकाशाद्वायुः। वायोरग्निः। ಇತ್ಯಾದಿ.

**आत्मबन्धु** ಆತ್ಮಬಂಧು –बान्धव –ಬಾಂಧವ (पु०) 1. ಸ್ನೇಹಿತ. 2. ತಾಯಿಯ ಸಹೋದರಿಯ ಮಕ್ಕಳು, ತಂದೆಯ ಸಹೋದರಿಯ ಮಕ್ಕಳು ಮತ್ತು ಸೋದರಮಾವನ ಮಕ್ಕಳು. "आत्ममातृष्वसुः पुत्राः आत्मपितृष्वसुः सुताः। आत्ममातुलपुत्राश्च विज्ञेया ह्यात्मबन्धवः"। 3. ತನ್ನ ಹಿತವನ್ನು ಸಾಧಿಸುವ ಮನಸ್ಸು. [ತನ್ನ ಯೋಗಕ್ಷೇಮವನ್ನು ವಿಷಯಾನಾಸಕ್ತವಾದ ಮನಸ್ಸೇ ಸಾಧಿಸಬೇಕಾಗಿರುವುದರಿಂದ ಮನಸ್ಸು ಆತ್ಮಬಂಧು.] "आत्मैव ह्यात्मनो बन्धुरात्मैव रिपुरात्मनः" गीता ६-५।

**आत्मबुद्धि** ಆತ್ಮಬುದ್ಧಿ (स्त्री०) ತನ್ನ ಸ್ವಂತಬುದ್ಧಿ. आत्मनो बुद्धिः। [ಮನುಷ್ಯನು ಸ್ವಬುದ್ಧಿಯಿಂದ ಮಾಡುವ ಕಾರ್ಯವು ಸುಖಕರ. ಗುರುವಿನ ಸಲಹೆಯಂತೆ ನಡೆದರೆ ಮತ್ತೂ ವಿಶೇಷ. ಪರಬುದ್ಧಿಯಿಂದ (ತಾನು ಯೋಚಿಸದೆ) ಮಾಡುವ ಕಾರ್ಯದಿಂದ ವಿನಾಶ ಹೊಂದುತ್ತಾನೆ.] "आत्मबुद्धिः सुखायैव गुरुबुद्धिर्विशेषतः। परबुद्धिर्विनाशाय स्त्रीबुद्धिः प्रलयावहा"

आत्मभू ಆತ್ಮಭೂ (पुं०) 1. ಪುತ್ರ, ಮಗ. आत्मनो देहात् भवति — भू (सत्तायाम्) "क्विप्" (३-२-१७९)। 2. ಕಾಮ, ಮನ್ಮಥ. आत्मनो मनसो भवति — भू "क्विप्"।" 3. ಪರಮಾತ್ಮ, ಈಶ್ವರ. आत्मनैव भवति। 4. ಹಿರಣ್ಯಗರ್ಭ, ಬ್ರಹ್ಮ. आत्मनो विष्णोः सकाशात् आत्मना स्वयमेव वा भवति। "वचस्यवसिते तस्मिन् ससर्ज गिरमात्मभूः" कुमा० २-५३। (स्त्री०) 5. ಕನ್ಯೆ, ಮಗಳು, 6. ಬುದ್ಧಿ, ಜ್ಞಾನ. (वि०) 7. ಆಕಾಶಾದಿ ಪ್ರಪಂಚ.

आत्मभूत ಆತ್ಮಭೂತ (पुं०) 1. ಪುತ್ರ, ಮಗ. 2. ಕಾಮ, ಮನ್ಮಥ. आत्मनो देहान्मनसो वा भूतः। (वि०) 3. ದೇಹದಿಂದ ಹುಟ್ಟಿದ. 4. ಮನಸ್ಸಿನಿಂದ ಉಂಟಾದ. आत्मनो भूतः। 5. ತನ್ನ ಕರ್ತವ್ಯವನ್ನು ನಿರ್ವಹಿಸುವ, ತನಗೆ ಅನುಕೂಲವಾಗಿ ಕಾರ್ಯವನ್ನು ಮಾಡುವ. अनात्मा आत्मा सम्पद्यमानो भूतः। [ರಾಜನ ಕರ್ತವ್ಯವನ್ನು ನಿರ್ವಹಿಸುವ ಅನುಕೂಲ ಮಂತ್ರಿಯು ರಾಜನ ಆತ್ಮಭೂತನೆಂದು ಲೋಕರೂಢಿ.] (स्त्री०) –भूता –ಭೂತಾ. 1. ಮಗಳು. 2. ಬುದ್ಧಿ, ಜ್ಞಾನ.

आत्मभूय ಆತ್ಮಭೂಯ (नं०) 1. ಬ್ರಹ್ಮಭಾವ, ಬ್ರಹ್ಮನಾಗಿ ಆಗುವಿಕೆ, ಮುಕ್ತಿ. आत्मनो भावः — भू (सत्तायाम्) "क्यप्" (३-१-१०७)। 2. ಬ್ರಹ್ಮಸಾಯುಜ್ಯ, ಆತ್ಮನ ಸಮಾನಗುಣಗಳನ್ನು ಹೊಂದುವಿಕೆ, ಮುಕ್ತಿ.

आत्ममय ಆತ್ಮಮಯ (वि०) ಆತ್ಮಸ್ವರೂಪವನ್ನು ಹೊಂದಿದ, ಬ್ರಹ್ಮಭಾವವನ್ನು ಹೊಂದಿದ. आत्मन् "मयट्" (५-४-२१)।

आत्ममानिन् ಆತ್ಮಮಾನಿನ್ (वि०) 1. ಆತ್ಮಾಭಿಮಾನವುಳ್ಳ, ತಾನೇ ಶ್ರೇಷ್ಠನೆಂಬ ಅಹಂಕಾರವುಳ್ಳ. आत्मानमुत्कर्षेण मन्यते--मन (ज्ञाने) "णिनिः" (३-२-८२)। 2. ಆತ್ಮಗೌರವವುಳ್ಳ. आत्ममानोऽस्यास्ति "इनिः" (५-२-११५)। 3. ಎಲ್ಲರನ್ನೂ ತನ್ನಂತೆಯೇ ತಿಳಿಯುವ. स्त्रियाम् "ङीप्" (४-१-५)। –मानिनी –ಮಾನಿನೀ.

आत्ममूल ಆತ್ಮಮೂಲ (नं०) ಜಗತ್ತು, ವಿಶ್ವ, ಬ್ರಹ್ಮಾಂಡ. आत्मा परमात्मा मूलमस्य।

आत्ममूली ಆತ್ಮಮೂಲೀ (स्त्री०) ತೀಟಕಸಂಧಿ. आत्मैव रक्षणे मूलमस्याः। "ङीष्" (४-१-४१)।

आत्मम्भरि ಆತ್ಮಂಭರಿ (वि०) ತನ್ನ ಹೊಟ್ಟೆಯನ್ನು ಮಾತ್ರ ತುಂಬಿಕೊಳ್ಳುವವನು, ಸ್ವಾರ್ಥಪರ. आत्मानं बिभर्ति — डु भृञ् (धारणपोषणयोः) "इन्" मुमागमश्च (३-२-२६)। "आत्मम्भरिस्त्वं पिशितैर्नराणाम्" भट्टि० २-३३।

आत्मयाजिन् ಆತ್ಮಯಾಜಿನ್ (वि०) 1. ಬ್ರಹ್ಮಾರ್ಪಣಭಾವನೆಯಿಂದ ಜ್ಯೋತಿಷ್ಟೋಮಾದಿಯಾಗಗಳನ್ನು ಮಾಡುವವನು, ಆತ್ಮೈಕನಿಷ್ಠನಾದ ಕರ್ಮಯೋಗಿ. आत्मानं ब्रह्मरूपेण भावयन् यजते — यज (देवपूजादौ) "णिनिः" (३-२-७८)। 2. ಎಲ್ಲಾ ಪ್ರಾಣಿಗಳಲ್ಲಿಯೂ ತನ್ನನ್ನೂ ತನ್ನಲ್ಲಿ ಎಲ್ಲಾ ಪ್ರಾಣಿಗಳನ್ನೂ ಸಮನಾಗಿ ಕಾಣುವವನು. "सर्वभूतेषु चात्मानं सर्वभूतानि चात्मनि। समं पश्यन्नात्मयाजी स्वाराज्यमधिगच्छति" मनु० १२-९१।

आत्मयोनि ಆತ್ಮಯೋನಿ (पुं०) 1. ಬ್ರಹ್ಮ, ಚತುರ್ಮುಖ. 2. ವಿಷ್ಣು. 3. ಈಶ್ವರ, ಶಿವ. 4. ಕಾಮ, ಮನ್ಮಥ. आत्मा योनिरस्य। "ददर्श चक्रीकृतचारुचापं प्रहर्तुमभ्युद्यतमात्मयोनिम्" कुमा० ३-७०।

आत्मराम ಆತ್ಮರಾಮ (पुं०) ಬ್ರಹ್ಮಜ್ಞಾನದಿಂದ ಸಂತೋಷಪಡುವವನು. आत्मनि रामो रमणं यस्य।

आत्मलाभ ಆತ್ಮಲಾಭ (पुं०) 1. ಜನ್ಮ, ಉತ್ಪತ್ತಿ, ಹುಟ್ಟು. आत्मनो लाभः। "रूपादीन् विषयान् निरूप्य करणैर्यैरात्मलाभस्त्वया" मुद्रा० ३-१। 2. ಮುಕ್ತಿ ಪಡೆಯುವಿಕೆ.

आत्मलोमन् ಆತ್ಮಲೋಮನ್ (नं०) 1. ಮೈಗೂದಲು. 2. ಗಡ್ಡ, ದಾಡಿ. आत्मनो लोम।

आत्मवत् ಆತ್ಮವತ್ (पुं०) 1. ವಿಷ್ಣು. आत्मा अस्मिन् (स्वस्मिन्) अस्ति — आत्मन् "मतुप्" (५-२-९४)। "स्वे महिम्नि प्रतिष्ठानात् आत्मवानभिधीयते"। "अनुत्तमो दुराधर्षः कृतज्ञः कृतिरात्मवान्" वि० स०। (वि०) 2. ಚಿತ್ತವನ್ನು ಜಯಿಸಿದ, ಮನೋನಿಗ್ರಹವುಳ್ಳ. आत्मा वश्यतयाऽस्त्यस्य "मतुप्" (५-२-९४)। "अथ वीक्ष्य रघुः प्रतिष्ठितं प्रकृतिष्वात्मजमात्मवत्तया" रघु० ८-१०। 3. ವಿಕಾರಹೊಂದದ ಮನಸ್ಸುಳ್ಳ, ದೃಢಚಿತ್ತನಾದ. 4. ಆತ್ಮಜ್ಞಾನವನ್ನುಂಟುಮಾಡುವ ಶಾಸ್ತ್ರ, ಆತ್ಮನನ್ನು ತೋರಿಸಿಕೊಡುವ ಶಾಸ್ತ್ರ, ಅಧ್ಯಾತ್ಮವಿದ್ಯೆ. आत्मा प्रकाश्यतयास्त्यस्य। "उदये मदवाच्यमुज्झता श्रुतमाविष्कृतमात्मवत्तया" रघु० ८-८४। (अव्य०) 5. ತನ್ನಂತೆ, ತನಗೆ ಸಮಾನವಾಗಿ. आत्मना तुल्यम् "वतिः" (५-१-११५)। "आत्मवत्सर्वभूतानि यः पश्यति स पण्डितः"।

**आत्मविक्रय ಆತ್ಮವಿಕ್ರಯ** (पुं०) ತನ್ನ ದೇಹವನ್ನು ಮಾರಿಕೊಳ್ಳುವಿಕೆ. आत्मनो देहस्य विक्रयः। "गोवधोऽयाज्यसंयाज्यपारदार्यात्मविक्रयाः" मनु० ११-५९।

**आत्मविद् ಆತ್ಮವಿದ್** (वि०) 1. ಆತ್ಮನನ್ನು ಅರಿತಿರುವ, ಆತ್ಮಸ್ವರೂಪವನ್ನು ತಿಳಿದಿರುವ. आत्मानं वेत्ति — विद (ज्ञाने) "क्विप्" (३-२-६१)। 2. ತನ್ನ ಸ್ವರೂಪವನ್ನು ಅರಿತಿರುವ. "य इहात्मविदो विपक्षमध्ये सह संवृद्धियुजोऽपि भूभुजः स्युः" माघ० २-११६।

**आत्मविद्या ಆತ್ಮವಿದ್ಯಾ** (स्त्री०) ಬ್ರಹ್ಮವಿದ್ಯೆ, ಅಧ್ಯಾತ್ಮ ವಿದ್ಯೆ, ವೇದಾಂತ, ಪರಮಾತ್ಮನ ಸ್ವರೂಪವನ್ನು ತಿಳಿಸುವ ವಿದ್ಯೆ. आत्मनो विद्या। "आन्वीक्षिकीं चात्मविद्यां वार्तारम्भांश्च लोकतः" मनु० ७-४३।

**आत्मवीर ಆತ್ಮವೀರ** (पुं०) 1. ಪುತ್ರ, ಮಗ. 2. ಭಾವಮೈದುನ, ಹೆಂಡತಿಯ ಸಹೋದರ. 3. ವಿದೂಷಕ. (वि०) 4. ಹೆಚ್ಚು ಬಲಶಾಲಿ, ಶಕ್ತಿವಂತ. "आत्मवीरः प्राणवति स्यालके च विदूषके" मेदि०।

**आत्मवृत्त ಆತ್ಮವೃತ್ತ** (न०) ಆತ್ಮಕಥೆ. आत्मनो वृत्तं चरितम्।

**आत्मवृत्ति ಆತ್ಮವೃತ್ತಿ** (स्त्री०) 1. ಚಿತ್ತವೃತ್ತಿ, ಮನಸ್ಸಿನ ಸ್ಥಿತಿ, ಅಂತಃಕರಣದ ಅವಸ್ಥೆ. आत्मनो वृत्तिः। "जगच्छरण्यस्य निराशिषः सतः किमेभिराशोपहतात्मवृत्तिभिः" कुमा० ५-७६। 2. ತನ್ನ ವ್ಯಾಪಾರ, ತನ್ನ ಕೆಲಸ. "विस्मापयन् विस्मितमात्मवृत्तौ सिंहोरुसत्त्वं निजगाद सिंहः" रघु० २-३३। 3. ತನ್ನ ಕೆಲಸ, ತನ್ನ ಉದ್ಯೋಗ, — ಕಸಬು.

**आत्मशक्ति ಆತ್ಮಶಕ್ತಿ** (स्त्री०) 1. ಪರಮಾತ್ಮನ ಮಾಯೆ, ಜಗತ್ತನ್ನು ಸೃಷ್ಟಿಸುವ ಶಕ್ತಿ. 2. ಆತ್ಮಬಲ, ದೇಹಬಲ. 3. ಮನೋಬಲ. आत्मनः शक्तिः। "दैवं निहत्य कुरु पौरुषमात्मशक्त्या" पञ्चतं०।

**आत्मशल्या ಆತ್ಮಶಲ್ಯಾ** (स्त्री०) ಶತಾವರೀ ಗಿಡ.

**आत्मशुद्धि ಆತ್ಮಶುದ್ಧಿ** (स्त्री०) 1. ದೇಹಶುದ್ಧಿ. 2. ಮನಃಶುದ್ಧಿ. 3. ಬುದ್ಧಿಶುದ್ಧಿ. आत्मनो देहस्य मनसः बुद्धेर्वा शुद्धिः। ದೇಹವು ನೀರಿನಿಂದಲೂ, ಮನಸ್ಸು ಸತ್ಯ ನುಡಿಯುವುದರಿಂದಲೂ, ಬುದ್ಧಿಯು ಜ್ಞಾನಸಂಪಾದನೆಯಿಂದಲೂ ಶುದ್ಧವಾಗುವುದು. "अद्भिः शुद्ध्यन्ति गात्राणि बुद्धिर्ज्ञानेन शुद्ध्यति। अहिंसया च भूतात्मा मनः सत्येन शुद्ध्यति"। 4. ಆತ್ಮನಲ್ಲಿ ಹಿಂದಿನ ಜನ್ಮಗಳಲ್ಲಿ ಸೇರಿಕೊಂಡಿರುವ ಕರ್ಮಗಳ ನಾಶದಿಂದ ಉಂಟಾಗುವ ಶುದ್ಧಿ. "योगिनः कर्म कुर्वन्ति सङ्गं त्यक्त्वात्मशुद्धये" गीता ५-११।

**आत्मश्लाघा ಆತ್ಮಶ್ಲಾಘಾ** (स्त्री०) **-श्लाघन -ಶ್ಲಾಘನ** (न०) **-स्तुति -ಸ್ತುತಿ** (स्त्री०) ತನ್ನನ್ನು (ತಾನೇ) ಹೊಗಳಿಕೊಳ್ಳುವಿಕೆ. आत्मनः श्लाघा श्लाघनं स्तुतिर्वा।

**आत्मसंयम ಆತ್ಮಸಂಯಮ** (पुं०) ಮನೋನಿಗ್ರಹ, ಮನಸ್ಸನ್ನು ಸ್ವಾಧೀನದಲ್ಲಿಟ್ಟುಕೊಳ್ಳುವುದು. आत्मनो मनसः संयमः। "आत्मसंयमयोगाग्नौ जुह्वति ज्ञानदीपिते" गीता ४-२७।

**आत्मसमुद्भव ಆತ್ಮಸಮುದ್ಭವ** (पुं०) 1. ವಿಷ್ಣು, ಪರಮಾತ್ಮ. 2. ಶಿವ, ಈಶ್ವರ. आत्मना समुद्भवति। 3. ಚತುರ್ಮುಖ, ಬ್ರಹ್ಮ. आत्मा परमात्मा समुद्भवो यस्य। 4. ಪುತ್ರ, ಮಗ. 5. ಮನ್ಮಥ. आत्मा देहः मनो वा समुद्भवो यस्य। (वि०) 6. ಪರಮಾತ್ಮನಿಂದ ಉಂಟಾದ ಆಕಾಶ ಮೊದಲಾದುದು. 7. ಮನಸ್ಸಿನಲ್ಲಿ ಉಂಟಾದ ಸುಖದುಃಖಗಳು. (स्त्री०) **-समुद्भवा -ಸಮುದ್ಭವಾ**. 1. ಕನ್ಯೆ, ಮಗಳು. 2. ಬುದ್ಧಿ.

**आत्मसम्भव ಆತ್ಮಸಂಭವ** (पुं०) "आत्मसमुद्भव" ಪದದ ಅರ್ಥ. "चकार नाम्ना रघुमात्मसम्भवम्" रघु० ३-२१।

**आत्मसंपन्न ಆತ್ಮಸಂಪನ್ನ** (वि०) ಬುದ್ಧಿಶಾಲಿ, ಮೇಧಾವಿ. आत्मना संपन्नः। "तमात्मसंपन्नमनिन्दितात्मा कृत्वा युवानं युवराजमेव" रघु० १८-१८।

**आत्मसात् ಆತ್ಮಸಾತ್** (अव्य०) ತನ್ನ ಅಧೀನವಾಗಿ. आत्मन् "सातिः" (५-४-५४)। कृभ्वस्ति ಮತ್ತು सम् ಪೂರ್ವಕ ಪದ ಧಾತುವಿನ ಯೋಗವಿದ್ದಲ್ಲಿ ಈ ಪ್ರತ್ಯಯ ಬರುವುದು. आत्मसात् करोति। आत्मसाद्भवति। आत्मसात्संपद्यते ಇತ್ಯಾದಿ.

**आत्मसिद्ध ಆತ್ಮಸಿದ್ಧ** (वि०) ತಾನಾಗಿಯೇ ಸಿದ್ಧಿಸಿದ, ಯತ್ನವಿಲ್ಲದೆ ಉಂಟಾದ.

**आत्मसुख ಆತ್ಮಸುಖ** (न०) 1. ಮೋಕ್ಷಸುಖ, ಪರಮಾತ್ಮಪ್ರಾಪ್ತಿರೂಪವಾದ ಸುಖ. (वि०) 2. ಆತ್ಮಲಾಭದಿಂದ ಸುಖವುಳ್ಳ.

**आत्मस्थ ಆತ್ಮಸ್ಥ** (वि०) 1. ಆತ್ಮನಿಷ್ಠನಾದ, ಪರಮಾತ್ಮಧ್ಯಾನದಲ್ಲಿರುವ, ಬ್ರಹ್ಮಜ್ಞಾನಕ್ಕಾಗಿ ಪ್ರಯತ್ನಪಡುವ. आत्मने तिष्ठति — ष्ठा (गतिनिवृत्तौ) "कः" (३-२-४)। 2. ಮನಸ್ಸಿನಲ್ಲಿರುವ. 3. ದೇಹದಲ್ಲಿರುವ.

**आत्महत्या ಆತ್ಮಹತ್ಯಾ** (स्त्री०) ಪ್ರಾಣತ್ಯಾಗ, ಪ್ರಾಣವನ್ನು ಕಳೆದುಕೊಳ್ಳುವುದು. आत्मनो हत्या हननम्।

**आत्महन् ಆತ್ಮಹನ್** (वि०) ಪರಮಾತ್ಮಜ್ಞಾನವನ್ನು ಸಂಪಾದಿಸದೆ ಆತ್ಮನನ್ನು ವ್ಯರ್ಥಪಡಿಸಿಕೊಳ್ಳುವವನು, ಪರಮಾತ್ಮನ ನಿಜವಾದ ಸ್ವರೂಪವನ್ನು ಅರಿಯದವನು, ಯೋಗ್ಯನಾದ ಗುರುವಿನ ಮೂಲಕ ಬ್ರಹ್ಮಜ್ಞಾನ ಪಡೆದು ಸಂಸಾರಸಾಗರವನ್ನು ದಾಟದೆ ಜನ್ಮವನ್ನು ವ್ಯರ್ಥಪಡಿಸಿಕೊಳ್ಳುವವನು. आत्मानं हतवान्—हन (हिंसागत्योः) "क्विप्" (३-२-७६)। "नृदेहमाद्यं सुलभं सुदुर्लभं प्लवं सुकल्पं गुरुकर्णधारम्। मयानुकूलेन नभस्वतेरितं पुमान् भवाब्धिं न तरेत् स आत्महा" भाग० ११-२०-१७।

**आत्माधीन ಆತ್ಮಾಧೀನ** (पु०) 1. ಪುತ್ರ, ಮಗ. 2. ವಿದೂಷಕ. 3. ಭಾವಮೈದುನ, ಹೆಂಡತಿಯ ಸಹೋದರ. (वि०) 4. ಸ್ವತಂತ್ರ. 5. ಶಕ್ತಿವಂತ, ಬಲಶಾಲಿ. आत्माधि "खः" (५-४-७)। "आत्माधीनः सुते प्राणाधारे स्याले विदूषके" हेम०।

**आत्मानुरूप ಆತ್ಮಾನುರೂಪ** (वि०) ತನಗೆ ಯೋಗ್ಯವಾದ, ತನಗೆ ತಕ್ಕುದಾದ. आत्मनोऽनुरूपः। "तस्यामात्मानुरूपायामात्मजन्मसमुत्सुकः" रघु० १-३३।

**आत्मापहारक ಆತ್ಮಾಪಹಾರಕ** (वि०) ತನ್ನ ವಾಸ್ತವ ವಿಷಯವನ್ನು ಮರೆಮಾಚುವವನು. आत्मानमपहरति—अप+हृञ् (हरणे) "ण्वुल्" (३-१-१३३)। "योऽन्यथासन्तमात्मानमन्यथा सत्सु भाषते। स पापकृत्तमो लोके स्तेन आत्मापहारकः" मनु० ४-२५५। "णिनिः" (३-२-७८)। –अपहारिन् –ಅಪಹಾರಿನ್. "किं तेन न कृतं पापं चौरेणात्मापहारिणा"। स्त्रियाम् "ङीप्" (४-१-५)। –अपहारिणी –ಅಪಹಾರಿಣೀ.

**आत्माराम ಆತ್ಮಾರಾಮ** (वि०) 1. ಬ್ರಹ್ಮಜ್ಞಾನಕ್ಕಾಗಿ ಧ್ಯಾನಾಸಕ್ತನಾದ (ಯೋಗಿ). आत्मैवारामो वनं यस्य। आत्मनि आरमन्ते वा। "आत्मारामा विहितरतयो निर्विकल्पे समाधौ" वेणी० १-२३। 2. ಬ್ರಹ್ಮಭಾವದಿಂದ ಆನಂದಪಡುತ್ತಿರುವ. आत्मनि आरामः आनन्दानुभवो यस्य।

**आत्माशिन् ಆತ್ಮಾಶಿನ್** (पु०) ಮತ್ಸ್ಯ, ಮೀನು. आत्मानं स्वकुलमश्नाति – अश (भोजने) "णिनिः" (३-२-७८)। [ಮತ್ಸ್ಯಗಳು ತಮಗಿಂತಲೂ ಚಿಕ್ಕ ಮೀನುಗಳನ್ನು ತಿನ್ನುವುದರಿಂದ ಈ ಹೆಸರು.] "मत्स्या इव जना नित्यं भक्षयन्ति परस्परम्" रामा०।

**आत्माश्रय ಆತ್ಮಾಶ್ರಯ** (पु०) 1. ಆತ್ಮಾವಲಂಬನ, ತನ್ನ ಆಸರೆ. आत्मन आश्रयः। 2. ತನ್ನ ಸಿದ್ಧಿಗಾಗಿ ತನ್ನನ್ನೂ ತನ್ನ ಜ್ಞಾನವನ್ನೂ ಆಶ್ರಯಿಸುವಿಕೆ. ಇದೊಂದು ಶಾಸ್ತ್ರದೋಷ. आत्मा आश्रयो यस्य। (वि०) 3. ಸ್ವತಂತ್ರ. आत्मैवाश्रयो यस्य। 4. ತನ್ನ ಮನಸ್ಸಿನ ಆಶ್ರಯಪಡೆದ, ಮನಸ್ಸಿಗೆ ಅಧೀನವಾದ.

**आत्मीय ಆತ್ಮೀಯ** (वि०) ತನ್ನ ಸಂಬಂಧವಾದ, ತನ್ನದಾದ. आत्मनः अयं "छः" (४-२-११४)। "आत्मीयपर्यङ्कभुजङ्गकल्पो" याद० ४-१००।

**आत्मेश्वर ಆತ್ಮೇಶ್ವರ** (वि०) ಚಿತ್ತವನ್ನು ಸ್ವಾಧೀನದಲ್ಲಿ ಇಟ್ಟಿರುವ, ಮನೋನಿಗ್ರಹವುಳ್ಳ. आत्मनः ईश्वरः। "आत्मेश्वराणां न हि जातु विघ्नाः समाधिभेदप्रभवो भवन्ति" कुमा० ३-४०।

**आत्मोदय ಆತ್ಮೋದಯ** (पु०) ತನ್ನ ಅಭಿವೃದ್ಧಿ, ತನ್ನ ಏಳಿಗೆ. आत्मनः उदयः। "आत्मोदयः परज्यानिः द्वयं नीतिरितीयती" माघ० २-३०।

**आत्मोद्भव ಆತ್ಮೋದ್ಭವ** (पु०) 1. ಪುತ್ರ, ಮಗ. 2. ಕಾಮ, ಮನ್ಮಥ. 3. ದುಃಖ, ಶೋಕ ಮುಂತಾದುದು. आत्मा देहः मनो वा उद्भवो यस्य। (वि०) 4. ದೇಹದಲ್ಲಿ ಹುಟ್ಟಿದ. 5. ಮನಸ್ಸಿನಲ್ಲಿ ಉಂಟಾದ. (स्त्री०) –उद्भवा –ಉದ್ಭವಾ. 1. ಕನ್ಯೆ, ಮಗಳು. 2. ಬುದ್ಧಿ, ಜ್ಞಾನ.

**आत्मोपजीविन् ಆತ್ಮೋಪಜೀವಿನ್** (वि०) ತನ್ನ ಶರೀರಶ್ರಮದಿಂದ (ಕೂಲಿಯಿಂದ) ಜೀವಿಸುವವನು. आत्मना स्वदेहव्यापारेण उपजीवति — उप+जीव (प्राणधारणे) "णिनिः" (३-१-१३४)।

**आत्मोपम ಆತ್ಮೋಪಮ** (पु०) 1. ಮಗ, ಪುತ್ರ. (वि०) 2. ತನಗೆ ಸಮಾನನಾದ, ತನ್ನಂತಿರುವ, आत्मा देहः उपमा यस्य।

**आत्मौपम्य ಆತ್ಮೌಪಮ್ಯ** (न०) ತನ್ನ ಹೋಲಿಕೆ. आत्मन औपम्यम्। "आत्मौपम्येन सर्वत्र समं पश्यति योऽर्जुन" गीता ६-३२।

**आत्यन्तिक ಆತ್ಯಂತಿಕ** (वि०) 1. ಅತ್ಯಂತವಾದ, ಅಧಿಕವಾದ, ಹೆಚ್ಚಾದ. अत्यन्तं "ठक्" (५-४-३४)। "सा विष्णोरिव विष्णुगुप्तहतकस्यात्यन्तिकश्रेयसे" मुद्रा० २-१५। 2. ಅತ್ಯುತ್ತಮವಾದ, ಶ್ರೇಷ್ಠವಾದ, ಅತಿಶಯವಾದ. अन्तमतिक्रान्तमत्यन्तम्। अत्यन्तमेवात्यन्तिकम्। "सुखमात्यन्तिकं यत्तद्बुद्धिग्राह्यमतीन्द्रियम्" गीता ६-२१।

**आत्यन्तिकदुःखनिवृत्ति ಆತ್ಯಂತಿಕದುಃಖನಿವೃತ್ತಿ** (स्त्री०) ಮೋಕ್ಷ, ಮುಕ್ತಿ. आत्यन्तिकी दुःखनिवृत्तिः। ಮುಂದೆ ಎಂದೆಂದಿಗೂ ಯಾವ ವಿಧವಾದ ದುಃಖವೂ ಸಂಭವಿಸ ದಿರುವುದು ಆತ್ಯಂತಿಕದುಃಖನಿವೃತ್ತಿ (ಮೋಕ್ಷ).

**आत्यन्तिकप्रलय ಆತ್ಯಂತಿಕಪ್ರಳಯ** (पु०) ನಾಲ್ಕು ವಿಧ ಪ್ರಳಯಗಳಲ್ಲೊಂದು, ವಿವೇಕಪೂರ್ವಕವಾದ ಪರ ಮಾತ್ಮೋಪಾಸನೆಯೆಂಬ ಶಸ್ತ್ರದಿಂದ ಆತ್ಮಬಂಧನವನ್ನು ಕತ್ತರಿಸಿ ಅಂತರಾತ್ಮನಾದ ಅಚ್ಯುತನನ್ನು ಅನುಭವಿಸು ವುದು. ಜ್ಞಾನಪ್ರತಿಬಂಧವೇ ಸಂಸಾರಬಂಧನ. ಗಾಳಿಯಿಂದ ಮೇಘಗಳು ಚೆದರಿದೊಡನೆ ಸೂರ್ಯನು ಕಣ್ಣಿಗೆ ಕಾಣುವಂತೆ ಜೀವನಿಗೆ ವಿವೇಚನಾಪೂರ್ವಕ ವಾದ ಆತ್ಮೋಪಾಸನೆಯಿಂದ ದೇಹವೆಂಬ ಉಪಾಧಿಯು ತಪ್ಪಿದಾಗ ಪರಮಾತ್ಮನ ಸಾಕ್ಷಾತ್ಕಾರವುಂಟಾಗು ವುದು. ಈ ಉಪಾಸನೆಯೆಂಬ ಶಸ್ತ್ರದಿಂದ, ಪ್ರಕೃತಿ ಮಯವಾಗಿ ಅಹಂಕಾರಪರಿಣಾಮವೆನಿಸಿಕೊಂಡ ದೇಹಸಂಬಂಧರೂಪವಾದ ಆತ್ಮನ ಬಂಧನವನ್ನೂ ಛೇದಿಸಿ ಅಂತರಾತ್ಮನಾದ ಅಚ್ಯುತನನ್ನು ಅನುಭವಿಸು ವುದೇ ಆತ್ಯಂತಿಕಪ್ರಳಯ. "घनो यदार्कप्रभवो विदीर्यते चक्षुः स्वरूपं रविमीक्षते तदा। यदाह्यहङ्कार उपाधिरात्मनो जिज्ञासया नश्यति तर्ह्यनुस्मरेत्। यदैव- मेतेन विवेकहेतिना मायामयाहङ्करणात्मबन्धनम्। छित्वाच्युतात्मानुभवोऽवतिष्ठते तमाहुरात्यन्तिकमङ्ग संप्लवम्" भाग० १२-४-३३, ३४।

**आत्यन्तिकसुख ಆತ್ಯಂತಿಕಸುಖ** (न०) ನಿರತಿಶಯವಾದ ಸುಖ, ಶಾಶ್ವತಸುಖ, ಯಾವ ಸುಖದಲ್ಲಿ ಇತರ ಕಾಮ ಗಳೆಲ್ಲವೂ ಲಯಹೊಂದುವುವೋ ಅಂತಹ ಉತ್ತಮ ಸುಖ, ಆತ್ಮಬುದ್ಧಿಯಿಂದ ಮಾತ್ರ ಪಡೆಯಲು ಯೋಗ್ಯ ವಾದ ಸುಖ. आत्यन्तिकं च तत् सुखं च। "निर्गुणे ब्रह्मणि मयि धारयन् विशदं मनः। परमानन्दमाप्नोति यत्र कामोऽवसीयते" भाग० ११-१५-१७। "सुखमात्यन्तिकं यत्तद्बुद्धिग्राह्यमतीन्द्रियम्" गीता ६-२१।

**आत्ययिक ಆತ್ಯಯಿಕ** (वि०) ನಾಶಕ್ಕೆ ಕಾರಣವಾದ ಕೆಲಸ. अत्ययो नाशः प्रयोजनमस्य "ठक्" (५-१-१०९)। "कच्चिदात्ययिकं श्रुत्वा तदर्थमनुचिन्त्य च। प्रियाण्यनु- भवन् शेषे न त्वमन्तःपुरे नृप" भा० सभा० ५-८८।

**आत्रेय ಆತ್ರೇಯ** (पु०) 1. ಅತ್ರಿಮಹರ್ಷಿಯ ಮಗ— (1) ಚಂದ್ರ. (2) ದುರ್ವಾಸಮುನಿ. (3) ದತ್ತಾತ್ರೇಯ. अत्रेरपत्यम् — अत्रि "ढक्" (४-१-१२२)। 2. ಅತ್ರಿ ವಂಶದಲ್ಲಿ ಹುಟ್ಟಿದವನು. (स्त्री०) -यी -ಯೀ. 1. ಒಂದು ನದಿ. 2. ಅತ್ರಿಮಹರ್ಷಿಯ ಪತ್ನಿ. 3. ಅತ್ರಿಮಹರ್ಷಿಯ ಮಗಳು. 4. ರಜಸ್ವಲೆ, ಋತುಮತಿಯಾದ ಹೆಂಗಸು.

**आथर्वण ಆಥರ್ವಣ** (पु०) 1. ಅಥರ್ವವೇದವನ್ನು ಅಧ್ಯಯನ ಮಾಡಿದವನ ಧರ್ಮ. 2. ಅಥರ್ವವೇದ. अथर्वणा प्रोक्तो वेदः अथर्वा। तमधीते — अथर्वन् "ठक्" (४-२-६३)। आथर्वणिकः। तस्यायमाथर्वणो धर्मः आम्नायो वा — आथर्वणिक "अण्" इकलोपश्च (४-३-१३३)। 3. ಅಥರ್ವಶಾಖೆಯ ಪುರೋಹಿತ. (न०) 4. ಅಥರ್ವವೇದಮಂತ್ರಗಳ ಗುಂಪು. अथर्वणां समूहः "अण्" (४-२-३८)। 5. ಅಥರ್ವವೇದವಿಹಿತ ಕರ್ಮ, ಅಭಿಚಾರಿಕಕೃತ್ಯ. अथर्वण इदम् "अण्" (४-३-१२०)।

**आथर्वणिक ಆಥರ್ವಣಿಕ** (पु०) ಅಥರ್ವ ವೇದಾಧ್ಯಯನ ಮಾಡಿದ ಬ್ರಾಹ್ಮಣ. अथर्वणा प्रोक्तो वेदः अथर्वा। तमधीते — अथर्वन् "ठक्" (४-२-६३)।

**आदंश ಆದಂಶ** (पु०) 1. ಕಚ್ಚುವಿಕೆ. आ+दंश (दशने) भावे "घञ्" (३-३-१८)। 2. ದಂತ, ಹಲ್ಲು. आदश्यतेऽनेन कर० "घञ्" (३-३-१२१)। 3. ಕಚ್ಚಲ್ಪಟ್ಟ ಜಾಗ. आदश्यतेऽत्र अधि० "घञ्" (३-३-१२१)।

**आदर ಆದರ** (पु०) 1. ಉತ್ಸಾಹ, ಕುತೂಹಲ, ಆಸೆ. आ+दृङ् (आदरे) "अप्" (३-३-५८)। "तद्दर्शनादभू- च्छम्भोर्भूयान् दारार्थमादरः" कुमा० ६-१३। 2. ಗೌರವ, ಮನ್ನಣೆ, ಮರ್ಯಾದೆ. "प्रायः प्रत्ययमाधत्ते स्वगुणेषू- त्तमादरः" कुमा० ६-२०। 3. ಯತ್ನ. "गृहयन्त्रपताका- श्रीरपौरादरनिर्मिता" कुमा० ६-४१। 4. ಪ್ರಾರಂಭ, ಉಪಕ್ರಮ. 5. ಪ್ರೀತಿ, ವಿಶ್ವಾಸ. "अमर्षशून्येन जनस्य जन्तुना न जातहार्देन च विद्विषादरः" किरा० १-३३। भावे "ल्युट्" (३-३-११५)। आदरणम् ಆದರಣವು. 1. ಗೌರವ. 2. ಪ್ರೀತಿ.

**आदरणीय ಆದರಣೀಯ** (वि०) 1. ಗೌರವಾರ್ಹ, ಮರ್ಯಾದೆಗೆ ಯೋಗ್ಯನಾದ. 2. ಪ್ರೀತಿಸಲ್ಪಡುವ. आ+दृङ् (आदरे) "अनीयर्" (३-१-९६)। "तव्यः" आदर्तव्यः ಆದರ್ತವ್ಯಃ.

**आदर्श ಆದರ್ಶ** (पु०) 1. ಕನ್ನಡಿ. आदृश्यतेऽत्र रूपम् — आ+दृशिर् (प्रेक्षणे) "घञ्" (३-३-१२१)। "अदृश्यता- दर्शतलामलेषु च्छायेव या स्वर्जलधेर्जलेषु" माघ० ३-३५।

2. ಟೀಕೆ, ಟಿಪ್ಪಣಿ, ವ್ಯಾಖ್ಯಾನ. आदृश्यते सम्यक् ज्ञायते ग्रन्थार्थोऽत्र। 3. ಪುಸ್ತಕದ ಮೂಲ ಪ್ರತಿ. 4. ಮಾದರಿ. 5. ಗ್ರಂಥದ ಪ್ರತಿ. 6. ದೇಶದ ಎಲ್ಲೆ, ಗಡಿ. "आदर्शो दर्पणे टीकाप्रतिपुस्तकयोरपि" मेदि०।

**आ+दाञ्–दाने** (जु० उ० सक० अनि०) "डु दाञ्" ಧಾತುವಿನಲ್ಲಿ ನೋಡಿ.

**आदातृ ಆದಾತೃ** (वि०) ತೆಗೆದುಕೊಳ್ಳುವವನು, ಸ್ವೀಕರಿಸುವವನು. आ+डु दाञ् (दाने) "तृच्" (३-१-१३३)। "आदाननित्याच्चादातुराहरेदप्रयच्छतः" मनु० ११-१५। स्त्रियाम् "ङीप्" (४-१-५)। **–दात्री –ದಾತ್ರೀ.**

**आदान ಆದಾನ** (न०) 1. ತೆಗೆದುಕೊಳ್ಳುವುದು, ಸ್ವೀಕರಿಸುವುದು. आ+डु दाञ् (दाने) "ल्युट्" (३-३-११५)। "आदानं हि विसर्गाय सतां वारिमुचामिव" रघु० ४-८६। 2. ಕುದುರೆಯ ಆಭರಣ. "आदानं ग्रहणेऽपि स्यादलङ्कारे च वाजिनाम्" मेदि०। 3. ಅಂಗೀಕಾರ, ಸಮ್ಮತಿ, ಒಪ್ಪಿಗೆ. 4. ಬಿಲ್ಲಿನಲ್ಲಿ ಬಾಣವನ್ನು ಹೂಡುವುದು. "आदानमिषोर्ज्यायां समूहनम्" वैज०। 5. ಖಾಯಿಲೆಯ ಲಕ್ಷಣ, ಅನಾರೋಗ್ಯದ ಗುರುತು. 6. ಕತ್ತರಿಸುವಿಕೆ. आ+दाप् (लवने) "ल्युट्" (३-३-११५)।

**आदाय ಆದಾಯ** (पुं०) 1. ತೆಗೆದುಕೊಳ್ಳುವುದು, ಸ್ವೀಕರಿಸುವುದು. आ+डु दाञ् (दाने) भावे "घञ्" (३-३-१८)। (अव्य०) 2. ತೆಗೆದುಕೊಂಡು, ಸ್ವೀಕರಿಸಿ. आ+डु दाञ् (दाने) "ल्यप्" (७-१-३७)। "आदाय शालिस्तबकानदूरात् प्राप्ता शुकश्रेणिरसौ विभाति" याद० १८-७६।

**आदायचर ಆದಾಯಚರ** (वि०) ತೆಗೆದುಕೊಂಡು ಹೊರಡುವವನು. आदाय चरति चर (गतौ) "टः" (३-२-१७)। "द्विषन् वनेचराग्र्याणां त्वमादायचरो वने" भट्टि० ५-९७। स्त्रियां "ङीप्" (४-१-१५)। **–चरी –ಚರೀ.**

**आदायिन् ಆದಾಯಿನ್** (वि०) ತೆಗೆದುಕೊಳ್ಳುವ, ಸ್ವೀಕರಿಸುವ. आ+डु दाञ् (दाने) "णिनिः" (३-२-७८)। स्त्रियाम् "ङीप्" (४-१-५)। आदायिनी ಆದಾಯಿನೀ.

**आदि ಆದಿ** (पुं०) 1. ಮೊದಲು, ಪ್ರಾರಂಭ. आ+डु दाञ् (दाने) "किः" (३-३-९२)। "आदौ लक्ष्मीरभजत हरिं रुक्मिणीरूपदृश्या" याद० १४-७८। 2. ಕಾರಣ. "न मे विदुः सुरगणाः प्रभवं न महर्षयः। अहमादिर्हि देवानां महर्षीणां च सर्वशः" गीता १०-२। 3. ಸಾಮೀಪ್ಯ, ಹತ್ತಿರ. 4. ಮೊದಲನೆಯ ಭಾಗ, ಪೂರ್ವಾವಯವ. "आदिरन्त्येन सहेता" पा० सू० १-१-७१। 5. ಆಶ್ರಯ, ಅವಲಂಬನ. "विष्णुरादिः पृथासूनोः भीष्मादिश्च सुयोधनः। ते जयन्ति रणे शत्रून् येषां विष्णुः सदाश्रयः"। (वि०) 6. ಮೊದಲನೆಯ. "जगदादिरनादिस्त्वं जगदन्तो निरन्तकः" कुमा० २-९। 7. ಮುಖ್ಯವಾದ, ಪ್ರಧಾನವಾದ. 8. ಸದೃಶವಾದ, "भूवादयो धातवः" पा० सू० १-३-१।

**आदिकर्तृ ಆದಿಕರ್ತೃ** (पुं०) ಮೊದಲನೆಯದಾಗಿ ಸೃಷ್ಟಿಸುವವನು, ಈಶ್ವರ, ಪರಮಾತ್ಮ. आदिः कर्ता। "गरीयसे ब्रह्मणोऽप्यादिकर्त्रे" गीता ११-३७।

**आदिकर्मन् ಆದಿಕರ್ಮನ್** (न०) 1. ಮೊದಲನೆಯ ಕೆಲಸ, ಕೆಲಸದ ಪ್ರಾರಂಭ, ಕಾರ್ಯದ ಉಪಕ್ರಮ. ಬಹಳ ದೀರ್ಘಕಾಲ ಮಾಡಬೇಕಾದ ಕೆಲಸದ ಪ್ರಾರಂಭ. "आदिकर्मणि क्तः कर्तरि च" पा० सू० ३-४-७१। 2. ಮೊದಲು ನಡೆಸಿದ ಕೆಲಸ.

**आदिकवि ಆದಿಕವಿ** (पुं०) 1. ಬ್ರಹ್ಮ, ಚತುರ್ಮುಖ. [ವೇದಗಳನ್ನು ತಾನು ಮೊದಲು ತಿಳಿದುಕೊಂಡುದುದರಿಂದಲೂ ತಾನೇ ಮೊಟ್ಟಮೊದಲು ಹುಟ್ಟಿದುದರಿಂದಲೂ ಬ್ರಹ್ಮನು ಆದಿಕವಿ.] "जन्माद्यस्य यतोऽन्वयादितरतश्चार्थेष्वभिज्ञः स्वराट् तेने ब्रह्म हृदा य आदिकवये मुह्यन्ति यत्सूरयः" भाग० १-१। 2. ವಾಲ್ಮೀಕಿ ಮಹರ್ಷಿ. [ಜಗತ್ತಿಗೆಲ್ಲಾ ಕಾವ್ಯಪದ್ಧತಿಯನ್ನು ಮೊಟ್ಟಮೊದಲು ತೋರಿಸಿಕೊಟ್ಟವರಿವರು.]

**आदिकारण ಆದಿಕಾರಣ** (न०) 1. ಮೊದಲನೆಯ ಕಾರಣ. 2. ಜಗತ್ತಿನ ಸೃಷ್ಟಿಗೆ ಕಾರಣನಾದ ಪರಮಾತ್ಮ, ಪರಬ್ರಹ್ಮ. 3. (ಸಾಂಖ್ಯಮತದಲ್ಲಿ) ಮೂಲಪ್ರಕೃತಿ, ಪ್ರಧಾನ. 4. (ಜೈನಮತದಲ್ಲಿ) ಪುದ್ಗಲ ರೂಪವಾದ ಪರಮಾಣು. 5. (ನೈಯಾಯಿಕ ಮತ್ತು ವೈಶೇಷಿಕ ಮತಗಳಲ್ಲಿ) ನಿಮಿತ್ತಕಾರಣನಾದ ಈಶ್ವರ ಮತ್ತು ಉಪಾದಾನಕಾರಣವಾದ ಪರಮಾಣು.

**आदिकाव्य ಆದಿಕಾವ್ಯ** (न०) ವಾಲ್ಮೀಕಿರಚಿತವಾದ ಶ್ರೀಮದ್ರಾಮಾಯಣ. [ವಾಲ್ಮೀಕಿಮಹರ್ಷಿಯು ಛಂದೋಬದ್ಧವಾದ (ಶ್ಲೋಕರೂಪವಾದ) ಶ್ರೀಮದ್ರಾಮಾಯಣವನ್ನು ರಚಿಸಿ ಪ್ರಪ್ರಥಮವಾಗಿ ಲೋಕದಲ್ಲಿ ಪ್ರಚಾರಮಾಡಿದುದರಿಂದ ಇದು ಆದಿಕಾವ್ಯವೆನಿಸಿತು.]

**आदितस्** ಆದಿತಸ್ (अव्य०) 1. ಮೊದಲು, ಪ್ರಾರಂಭದಲ್ಲಿ. आदौ — आदि "तसिः" (वा० ५-४-४४)। "पतीन् प्रजानामसृजं महर्षीनादितो दश" मनु० १-३४। 2. ಮೊದಲಿನಿಂದ, ಪ್ರಾರಂಭದಿಂದ.

**आदिता** ಆದಿತಾ (स्त्री०) 1. ಆದ್ಯತೆ, ಕಾರಣತ್ವ. 2. ಮೊದಲನೆಯದಾಗಿರುವಿಕೆ. "आदितामजननाय देहिनामन्ततां च दधतेऽनपायिने" माघ० १४-६५।

**आदिताल** ಆದಿತಾಳ (पु०) ಸಂಗೀತಶಾಸ್ತ್ರೋಕ್ತವಾದ ಒಂದು ತಾಳ. "एक एव लघुर्यत्र आदितालः स उच्यते"।

**आदितेय** ಆದಿತೇಯ (पु०) 1. ದೇವತೆ, ಅದಿತಿಯ ಪುತ್ರ. अदित्या अपत्यम् "ढक्" (४-१-१२०)। 2. ಸೂರ್ಯ.

**आदित्य** ಆದಿತ್ಯ (पु०) 1. ದೇವತೆ, ಅದಿತಿಯ ಪುತ್ರ. 2. ಸೂರ್ಯ. अदित्या अपत्यम् "ण्यः" (४-१-८५)। "जिगीषुरेको दिनकृदादित्येष्विव कल्पते" माघ० २-८१। ದ್ವಾದಶಾದಿತ್ಯರು: "धाता मित्रोऽर्यमा रुद्रः वरुणः सूर्य एव च। भगो विवस्वान् पूषा च सविता दशमः स्मृतः। एकादशस्तथा त्वष्टा विष्णुर्द्वादश उच्यते"। [ಮಾಸಭೇದದಿಂದ ಸೂರ್ಯನಿಗೆ ದ್ವಾದಶನಾಮಗಳು. ಪ್ರಳಯಕಾಲದಲ್ಲಿ ಈ ಹನ್ನೆರಡು ರೂಪಗಳನ್ನೂ ಏಕಕಾಲದಲ್ಲಿ ಸ್ವೀಕರಿಸುವನು.] 3. ವಿಷ್ಣು. "स्वयंभूः शम्भुरादित्यः" वि० स०। "आदित्यानामहं विष्णुः ज्योतिषां रविरंशुमान्" गीता १०-२१। 4. ಆಕಾಶ, ಸೂರ್ಯಲೋಕ. "अग्नौ प्रास्ताहुतिः सम्यगादित्यमुपतिष्ठते। आदित्याज्जायते वृष्टिः वृष्टेरन्नं ततः प्रजाः" मनु० ३-७६। 5. ಎಕ್ಕದ ಗಿಡ. 6. ಭಾನುವಾರ. 7. ಹಸ್ತನಕ್ಷತ್ರ. [ಇದು ಸೂರ್ಯದೇವತಾಕವಾದುದು.]

**आदित्यकेतु** ಆದಿತ್ಯಕೇತು (पु०) 1. ಸೂರ್ಯನ ಸಾರಥಿಯಾದ ಅರುಣ. आदित्यस्य केतुः। 2. ಧೃತರಾಷ್ಟ್ರನ ಒಬ್ಬ ಮಗ.

**आदित्यपत्र** ಆದಿತ್ಯಪತ್ರ (न०) ಎಕ್ಕದೆಲೆ.

**आदित्यपुत्र** ಆದಿತ್ಯಪುತ್ರ -सुत -ಸುತ, -सूनु -ಸೂನು (पु०) ಸೂರ್ಯನ ಮಗ—1. ಶನಿಗ್ರಹ. 2. ಕರ್ಣ. 3. ಸುಗ್ರೀವ. 4. ಯಮ. (पु० द्विव०) 5. ಅಶ್ವಿನೀದೇವತೆಗಳು. -सुता -ಸುತಾ. (स्त्री०) ಸೂರ್ಯನ ಮಗಳು. 1. ಯಮುನಾನದಿ. 2. ತಪತೀನದಿ.

**आदित्सा** ಆದಿತ್ಸಾ (स्त्री०) ತೆಗೆದುಕೊಳ್ಳಲು ಅಪೇಕ್ಷೆ. आदातुमिच्छा — आ + ङु दाञ् (दाने) + सन् "अः" (३-३-१०२)।

**आदित्सु** ಆದಿತ್ಸು (वि०) ತೆಗೆದುಕೊಳ್ಳಲು ಅಪೇಕ್ಷೆಯುಳ್ಳ. आदातुमिच्छुः — आ + ङु दाञ् (दाने) + सन् "उः" (३-२-१६८)। "आदित्सुभिर्नूपुरशिञ्जितानि" कुमा० १-३४।

**आदिदेव** ಆದಿದೇವ (पु०) 1. ವಿಷ್ಣು. आदौ दीव्यति — दिवु (क्रीडादौ) "अच्" (३-१-१३४)। "आदिदेवो महादेवो देवेशः" वि० स०। 2. ಸೂರ್ಯ. 3. ಶಿವ, ಈಶ್ವರ. 4. ಪರಬ್ರಹ್ಮ, ಮೂಲಕಾರಣ. "त्वमादिदेवः पुरुषः पुराणः त्वमस्य विश्वस्य परं निधानम्" गीता ११-३८।

**आदिदैत्य** ಆದಿದೈತ್ಯ (पु०) ಹಿರಣ್ಯಕಶಿಪು. "आदिदैत्यो महावीर्यो हिरण्यकशिपुः पुरा" भा० वन० १०१-२३।

**आदिन्** ಆದಿನ್ (वि०) ಭಕ್ಷಿಸುವ, ತಿನ್ನುವ. अत्ति — अद (भक्षणे) "णिनिः" (३-१-१३४)। स्त्रियाम् "ङीप्" (४-१-५)। आदिनी ಆದಿನೀ. "पुत्रादिनी त्वमसि पापे" सि० कौ०।

**आदिपर्वन्** ಆದಿಪರ್ವನ್ (न०) ಮಹಾಭಾರತದ 18 ಪರ್ವಗಳಲ್ಲಿ ಮೊದಲನೆಯದು.

**आदिपुराण** ಆದಿಪುರಾಣ (न०) ಎಲ್ಲಾ ಪುರಾಣಗಳಿಗೂ ಮೂಲಭೂತವಾದ ಪುರಾಣ, ನಾಲ್ಕು ಲಕ್ಷ ಗ್ರಂಥಗಳಿಂದ ಕೂಡಿದ ಬ್ರಹ್ಮಕೃತವಾದ ಪುರಾಣ. ಇದನ್ನೇ ಮೂಲವಾಗಿಟ್ಟುಕೊಂಡು ಅಷ್ಟಾದಶ ಪುರಾಣಗಳು ವ್ಯಾಸಮಹರ್ಷಿಯಿಂದ ರಚಿತವಾದುವು. "अष्टादशमनौपम्यं सारात्सारतरं द्विज। ब्रह्माण्डं च चतुर्लक्षं पुराणत्वेन पठ्यते। तदेव व्यस्य गदितमत्राष्टादशधा पृथक्। पाराशर्येण मुनिना सर्वेषामपि मानद" नारदपुराणे ब्रह्मवाक्यम्।

**आदिपु (पू) रुष** ಆದಿಪು (ಪೂ) ರುಷ (पु०) 1. ಪರಮಪುರುಷ, ನಾರಾಯಣ. 2. ಹಿರಣ್ಯಗರ್ಭ. "तमर्घ्यमर्घ्यादिकयादिपूरुषः" माघ० १-१४।

**आदिम** ಆದಿಮ (वि०) ಮೊದಲು ಹುಟ್ಟಿದ, ಮೊದಲನೆಯ. आदौ भवः "डिमच्" (वा० ४-३-२३)।

**आदिमत्** ಆದಿಮತ್ (वि०) ಪ್ರಾರಂಭವುಳ್ಳ, ಕಾರಣಸಹಿತವಾದ, ಜನ್ಯ. आदिरस्यास्ति — "मतुप्" (५-२-९४)।

**आदिराज** ಆದಿರಾಜ (पुं०) ಪ್ರಥುಮಹಾರಾಜ. आदिः आद्यो राजा "टच्" (५-४-९१)। ರಾಜರಲ್ಲಿ ಪೃಥುವು ಮೊದಲನೆಯವನು. "अथ तस्य पुनर्विप्रैरपुत्रस्य महीपतेः। बाहुभ्यां मथ्यमानाभ्यां मिथुनं समपद्यत। तद्दृष्ट्वा मिथुनं जातविस्मया ब्रह्मवादिनः। ऊचुः परमसन्तुष्टाः विदित्वा भगवत्कलाम्। एष विष्णोर्भगवतः कला भुवनपालिनी। इयञ्च लक्ष्मीसंभूतिः पुरुषस्यानपायिनी। क्षत्रियः प्रथमो राज्ञां पुमान् प्रथयिता यशः। पृथुर्नाम महाराजो भविष्यति पृथुश्रवाः" भाग० ४-१-४।

**आदिवराह** ಆದಿವರಾಹ (पुं०) ದಶಾವತಾರಗಳಲ್ಲೊಂದಾದ ವಿಷ್ಣುವಿನ ಮೂರನೆಯ ಅವತಾರ.

**आदिशक्ति** ಆದಿಶಕ್ತಿ (स्त्री०) 1. ಪರಮಾತ್ಮನ ಮಾಯಾ ರೂಪವಾದ ಶಕ್ತಿ. 2. ದುರ್ಗಾದೇವಿ.

**आदिशरीर** ಆದಿಶರೀರ (न०) 1. ಲಿಂಗಶರೀರ, ಪಾಪ ಪುಣ್ಯಗಳನ್ನು ಕೂಡಿಡಲು ಯೋಗ್ಯವಾದ ಒಂದು ಶರೀರ. "अयमादिशरीरेण देवसृष्टेन मानवः। शुभानामशुभानां च कुरुते सञ्चयं महत्। आयुषोऽन्ते प्रहायेदं क्षीणप्रायं कलेबरम्। संभवत्येव युगपद्यतो नास्त्यन्तराभवः। तत्रास्य स्वकृतं कर्म छायेवानुगतं तदा। फलत्यथ सुखार्हो वा दुःखार्हो वाऽथ जायते" भा० वन० १८६-२४, २५, २६। 2. ಕಾರಣಶರೀರ, ಸೂಕ್ಷ್ಮಶರೀರ.

**आदिष्ट** ಆದಿಷ್ಟ (न०) 1. ಉಚ್ಛಿಷ್ಟ, ಊಟಮಾಡಿ ಉಳಿದ ಅನ್ನ. (वि०) 2. ಉಪದೇಶಿಸಲ್ಪಟ್ಟ. "अग्रे भवन् गुरुरिव स्वयमानकानामादिष्टसम्पदिव कन्धरया तवैषः" याद० १९-२३। 3. ಅಪ್ಪಣೆ ಮಾಡಲ್ಪಟ್ಟ. आ + दिश (अतिसर्जने) "क्तः" (३-२-१०२)। "आदिष्टोऽस्मि महाराजमहामोहेन। यथा — "वत्स दम्भ, प्रतिज्ञातम् विवेकेन प्रबोधोदयाय। प्रेषितास्त्र तेषु तेषु तीर्थेषु शमदमादयः" प्रबोध० २। 4. (ವ್ಯಾಕರಣದಲ್ಲಿ ಹೇಳಿರುವ) ಆದೇಶಹೊಂದಿದ ವರ್ಣ, ಒಂದು ವರ್ಣದ ಸ್ಥಾನದಲ್ಲಿ ಬರುವ ಮತ್ತೊಂದು ವರ್ಣ. सुधी + उपास्यः = सुध्युपास्यः ಎಂಬಲ್ಲಿ ಈಕಾರದ ಸ್ಥಾನದಲ್ಲಿ (ಆದೇಶವಾಗಿ) ಬಂದಿರುವ "य" ಕಾರವು ಆದಿಷ್ಟ.

**आदिसर्ग** ಆದಿಸರ್ಗ (पुं०) ಜಗತ್ತಿನ ಮೊದಲನೆಯ ಸೃಷ್ಟಿ, ಮಹಾಪ್ರಳಯಾನಂತರ ಪ್ರಪಂಚದ ಆದ್ಯಸೃಷ್ಟಿ.

**आदीनव** ಆದೀನವ (पुं०) 1. ದೋಷ, ತಪ್ಪು. आ+दीङ् (क्षये) "क्तः" (३-३-११४)। आदीनस्य वानं प्राप्तिः— वा (गतिगन्धनयोः) "कः" (वा० ३-३-११४)। 2. ಕ್ಲೇಶ, ಕಷ್ಟ. 3. ದುರಂತ. 4. ರೋಷ, ಕೋಪ. (वि०) 5. ಕಷ್ಟಪಟ್ಟ, ಕ್ಲೇಶಹೊಂದಿದ. कर्त० "क्तः" (३-४-७२)। "आदीनवः पुमान् दोषे परिक्लेशदुरन्तयोः" मेदि०।

**आ + दीपी – दीप्तौ** (दि० आत्म० अक० से०) (1) ಉರಿಸು. (2) ಬೆಂಕಿಯಿಟ್ಟು ಸುಡು. (3) ಪ್ರಕಾಶಗೊಳಿಸು. (4) ಪ್ರೇರಿಸು, ಹುರಿದುಂಬಿಸು.

**आदीपक** ಆದೀಪಕ (वि०) 1. ಪ್ರಕಾಶಗೊಳಿಸುವ, ಬೆಳಗಿಸುವ. 2. ಹುರಿದುಂಬಿಸುವ, ಪ್ರೇರಿಸುವ, ಉತ್ತೇಜನಗೊಳಿಸುವ. आदीपयति — आ+दीपी (दीप्तौ) +णिच् "ण्वुल्" (३-१-१३३)। 3. ಸುಡುವವನು, ದಹಿಸುವವನು, ಇನ್ನೊಬ್ಬರ ಮನೆಗೆ ಬೆಂಕಿ ಹಚ್ಚುವವನು. "राज्ञो वधं चिकीर्षेद्यः तस्य चित्रो वधो भवेत्। आदीपकस्य स्तेनस्य वर्णसङ्करिकस्य च" भा० शान्ति० ८५-२२। 4. ಉರಿಸುವ.

**आदीपन** ಆದೀಪನ (न०) 1. ಪ್ರೇರಣೆ, ಉತ್ತೇಜನಗೊಳಿಸುವಿಕೆ. 2. ಬೆಂಕಿಹಚ್ಚುವಿಕೆ. 3. ಪ್ರಕಾಶಗೊಳಿಸುವಿಕೆ, ಬೆಳಗಿಸುವುದು. 4. ಉರಿಸುವಿಕೆ. आ+दीपी (दीप्तौ)+णिच् "ल्युट्" (३-३-११५)। आ+दीपी+णिच् "ल्युः" (३-१-१३४)।—दीपनः —ದೀಪನಃ. (वि०) "आदीपक" ಪದದ ಅರ್ಥ.

**आदीपित** ಆದೀಪಿತ (वि०) 1. ಪ್ರಕಾಶಗೊಳಿಸಲ್ಪಟ್ಟ, ಬೆಳಗಿಸಲ್ಪಟ್ಟ. 2. ಪ್ರೇರಿಸಲ್ಪಟ್ಟ, ಹುರಿದುಂಬಿಸಲ್ಪಟ್ಟ. आ+दीपी (दीप्तौ) +णिच् "क्तः" (३-२-१०२)। 3. ಬೆಂಕಿಹಚ್ಚಲ್ಪಟ್ಟ. 4. ಉರಿಸಲ್ಪಟ್ಟ.

**आदृत** ಆದೃತ (वि०) 1. ಗೌರವಿಸಲ್ಪಟ್ಟ. 2. ಪೂಜಿಸಲ್ಪಟ್ಟ. 3. ಪ್ರೀತಿಸಲ್ಪಟ್ಟ. आ+दृङ् (आदरे) "क्तः" (३-२-१०२)। "आदृता नखपदैः परिरम्भाश्चुम्बितानि घनदन्तनिपातैः" किरा० ९-४९। 4. ಪ್ರೀತಿಸುವ, ಆದರದಿಂದ ಕಾಣುವ. आ + दृङ् (आदरे) कर्त० "क्तः" (३-४-७२)। "आत्मानमादृतो रक्षेत् प्रमादाद्धि विनश्यति" पञ्चत०।

**आदृत्य** ಆದೃತ್ಯ (वि०) 1. ಆದರಿಸಲ್ಪಡುವ, ಪ್ರೀತಿಸಲ್ಪಡುವ. 2. ಗೌರವಿಸಲ್ಪಡುವ. 3. ಆದರಿಸಲು ಯೋಗ್ಯನಾದ, ಪ್ರೀತಿಸಲು ಅರ್ಹನಾದ. 4. ಗೌರವಿಸಲು ಅರ್ಹನಾದ. आ + दृङ् (आदरे) "क्यप्" (३-१-१२४)।

आदेय ಆದೇಯ (वि०) ತೆಗೆದುಕೊಳ್ಳಲು ಯೋಗ್ಯವಾದ. आदातुं योग्यम्—आ+ङु दाञ्(दाने) "यत्" (३-१-९७)। "ईत्" (३-४-६५)। "अनादेयस्य चादानादादेयस्य च वर्जनात्" मनु० ८-१७१।

आदेश ಆದೇಶ (पु०) 1. ಅಪ್ಪಣೆ, ಆಜ್ಞೆ. आ+दिश (अतिसर्जने) भावे "घञ्" (३-३-१८)। "आदेशं देशकालज्ञः शिष्यः शासितुरानतः" रघु० १-९२। 2. ಉಪದೇಶ, ಸಲಹೆ. 3. ಸೂಚನೆ, ಮುಂದಾಗಿ ತಿಳಿಸುವಿಕೆ. 4. (ವ್ಯಾಕರಣದಲ್ಲಿ) ಒಂದು ವರ್ಣದ ಅಥವಾ ಧಾತುವಿನ ಸ್ಥಾನದಲ್ಲಿ ಮತ್ತೊಂದು ವರ್ಣವು ಅಥವಾ ಧಾತುವು ಬರುವುದು. "धातोः स्थान इवादेशं सुग्रीवं संन्यवेशयत्" रघु० १२-५८। "स्थानिवदादेशोऽनल्विधौ" पा० सू० १-१-५६। "अस्तेर्भूः" (२-४-५२) ಸೂತ್ರದಿಂದ "अस" ಧಾತುವಿನ ಸ್ಥಾನದಲ್ಲಿ "भू" ಧಾತುವಿನ ಆದೇಶವು ಬಂದು बभूव भविता भूयात् ರೂಪಗಳಾಗಿವೆ. सुधी+उपास्यः ಎಂಬಲ್ಲಿ "ई" ಕಾರ ಸ್ಥಾನದಲ್ಲಿ "यण्" ಆದೇಶವು ಬಂದು सुध्युपास्यः ಎಂಬ ರೂಪವಾಗಿದೆ. 5. (ಜ್ಯೋತಿಃಶಾಸ್ತ್ರದಲ್ಲಿ) ಗ್ರಹಗಳ ಯೋಗದಿಂದುಂಟಾಗುವ ಶುಭಾಶುಭ ಫಲಗಳು. 6. ಭವಿಷ್ಯದ ನುಡಿ, ಮುಂದಾಗುವುದನ್ನು ಹೇಳುವಿಕೆ. "अन्यथा क्व सिद्धादेशप्रत्ययप्रार्थितायाः सिंहलेश्वरदुहितुः प्रवहणभङ्गनिमग्नायाः फलकासादनम्" रत्ना० १। 7. ಉಪದೇಶದಿಂದ ಮಾತ್ರ ತಿಳಿಯಲ್ಪಡುವ(ಬ್ರಹ್ಮ). कर्म० "घञ्"।

आदेशक ಆದೇಶಕ (वि०) 1. ಉಪದೇಶಿಸುವವನು, ಸಲಹೆಕೊಡತಕ್ಕವನು. 2. ಅಪ್ಪಣೆಮಾಡುವವನು. आदिशति – आ + दिश (अतिसर्जने) "ण्वुल्" (३-१-१३३)।

आदेशन ಆದೇಶನ (न०) 1. ಅಪ್ಪಣೆ, ಆಜ್ಞೆ. 2. ಉಪದೇಶ, ಸಲಹೆ. आ + दिश (अतिसर्जने) "ल्युट्" (३-३-११५)।

आदेशिन् ಆದೇಶಿನ್ (पु०) 1. ದೈವಜ್ಞ, ಶುಭಾಶುಭ ಫಲವನ್ನು ಹೇಳುವವನು. (वि०) 2. ಸಲಹೆಗಾರ, ಉಪದೇಶಕ. 3. ಅಪ್ಪಣೆಮಾಡುವ, ಆಜ್ಞೆಮಾಡುವ. आ+दिश (अतिसर्जने) "णिनिः" (३-१-१३४)।

आदेश्य ಆದೇಶ್ಯ (वि०) 1. ಅಪ್ಪಣೆ ಮಾಡಲ್ಪಡುವ, ಆಜ್ಞಾಪಿಸಲ್ಪಡುವ. 2. ಉಪದೇಶಿಸಲ್ಪಡುವ. आ + दिश (अतिसर्जने) "ण्यत्" (३-१-१२४)।

आदेष्टृ ಆದೇಷ್ಟೃ (पु०) 1. ಯಾಗಮಾಡುವವನು, ಯಾಗದಲ್ಲಿ ಋತ್ವಿಕ್ಕುಗಳಿಗೆ ಅಪ್ಪಣೆಮಾಡುವವನು, ಯಜಮಾನ. आ + दिश (अतिसर्जने) "तृच्" (३-१-१३३)। (वि) 2. ಆಜ್ಞೆಮಾಡುವ, ಅಪ್ಪಣೆ ಮಾಡುವ. स्त्रियां "ङीप्" (४-१-५)। आदेष्ट्री ಆದೇಷ್ಟ್ರೀ.

आद्य ಆದ್ಯ (न०) 1. ಧಾನ್ಯ. अद (भक्षणे) "ण्यत्" (३-१-१२४)। (वि०) 2. ಮೊದಲನೆಯ. 3. ಮುಖ್ಯ, ಪ್ರಧಾನ, ಶ್ರೇಷ್ಠ. "आसीन्महीक्षितामाद्यः प्रणवश्छन्दसामिव" रघु० १-११। 4. ಪ್ರಾಚೀನವಾದ. आदौ भवः "यत्" (४-३-५३)। "आद्यकोलललितैः प्रकम्पनैः कम्पितां मुहुरनीदृगात्मनि" माघ० १४-४३। 5. ತಿನ್ನಲ್ಪಡುವ. 6. ತಿನ್ನಲು ಯೋಗ್ಯವಾದ.

आद्यकवि ಆದ್ಯಕವಿ (पु०) 1. ಬ್ರಹ್ಮ, ಚತುರ್ಮುಖ. 2. ವಾಲ್ಮೀಕಿಮಹರ್ಷಿ. ["आदिकवि" ಪದದಲ್ಲಿ ನೋಡಿ.]

आद्यमाषक ಆದ್ಯಮಾಷಕ (पु०) ಐದು ಗುಲಗಂಜಿಗಳ ತೂಕ. आद्यः माषकः। "दशार्धगुञ्जं प्रवदन्ति माषकम्"।

आद्यबीज ಆದ್ಯಬೀಜ(न०) ಜಗತ್ತಿನ ಮೂಲಕಾರಣ.— (1) (ಸಾಂಖ್ಯಮತದಲ್ಲಿ) ಮೂಲಪ್ರಕೃತಿ. (2) (ವೇದಾಂತಿಗಳ ಮತದಲ್ಲಿ) ಪರಬ್ರಹ್ಮ, ಪರಮಾತ್ಮ. (3) (ನ್ಯಾಯ ಮತ್ತು ವೈಶೇಷಿಕಮತಗಳಲ್ಲಿ) ಪರಮಾಣು.

आद्या ಆದ್ಯಾ (स्त्री०) 1. ದುರ್ಗಾದೇವಿ. 2. ತಿಂಗಳಿನ ಮೊದಲನೆಯ ದಿವಸ, ಪ್ರತಿಪತ್ತಿಥಿ, ಪಾಡ್ಯ.

आद्यून ಆದ್ಯೂನ (वि०) ಉಂಡಾಡಿ, ಹೊಟ್ಟೆಬಾಕ, ಐಹಿಕಾಮುಷ್ಮಿಕ ಸಾಧಕವಾದ ಕಾರ್ಯವಿಲ್ಲದವನು. आ+दिवु (क्रीडायाम्) "क्तः" (३-४-७२)। अविजिगीषायां नत्वम् (८-२-४९)। "आद्यूनः सद्गृहिण्येव प्रायो यष्टचावलम्बितः" किरा० ११-५।

आद्योपान्त ಆದ್ಯೋಪಾಂತ (वि०) ಮೊದಲಿನಿಂದ ಕೊನೆಯವರೆಗಿನ. आद्यावधि उपान्तः।

आधमर्ण्य ಆಧಮರ್ಣ್ಯ (न०) ಋಣಬದ್ಧತೆ, ಋಣಿತ್ವ, ಸಾಲಗಾರನಾಗಿರುವಿಕೆ. अधमर्णस्य भावः कर्म वा "ष्यञ्" (५-१-१२४)।

आधर्मिक ಆಧರ್ಮಿಕ (वि०) ಅಧರ್ಮಶೀಲ, ಅಧರ್ಮವನ್ನು ಆಚರಿಸತಕ್ಕವನು. अधर्मं चरति "ठक्" (वा० ४-४-४१)।

**आधर्ष** ಆಧರ್ಷ (ಪುಂ) 1. ಬಲಾತ್ಕಾರವಾಗಿ ಹಿಂಸಿಸುವುದು. 2. ತಿರಸ್ಕಾರ. 3. ಅಪಮಾನ, ಅಗೌರವ. आ+धृष (प्रसहने) भावे "घञ्" (३-३-१८)।

**आधर्षण** ಆಧರ್ಷಣ (ನಂ) "आधर्ष" ಪದದ ಅರ್ಥ. आ+धृष (प्रसहने) भावे "ल्युट्" (३-३-११५)।

**आधर्षित** ಆಧರ್ಷಿತ(ವಿಂ) 1. ಬಲಾತ್ಕಾರವಾಗಿ ಪೀಡಿಸಲ್ಪಟ್ಟ. 2. ತಿರಸ್ಕರಿಸಲ್ಪಟ್ಟ. 3. ಅಪಮಾನಗೊಳಿಸಲ್ಪಟ್ಟ. आ+धृष (प्रसहने) "क्तः" (३-२-१०२)। अवैयात्ये इट्।

**आधातृ** ಆಧಾತೃ (ವಿಂ) ಇಡತಕ್ಕವನು. आ+डु धाञ् (धारणपोषणयोः) "तृच्" (३-१-१३३)। "पात्रविशेषे न्यस्तं गुणान्तरं व्रजति शिल्पमाधातुः" माल० १-६।

**आधान** ಆಧಾನ(ನಂ) 1. ಅಗ್ನಿಯನ್ನು ಸಂಸ್ಕಾರಪೂರ್ವಕ ಪ್ರತಿಷ್ಠಿಸುವುದು. 2. ಉಂಟುಮಾಡುವುದು, ಉತ್ಪತ್ತಿ ಮಾಡುವುದು. 3. ಇಡುವುದು, ಇರಿಸುವುದು. 4. ವಸ್ತುವಿನಲ್ಲಿ ಬೇರೆ ಗುಣವನ್ನುಂಟುಮಾಡುವುದು. आ+डु धाञ् (धारणपोषणयोः) "ल्युट्" (३-३-११५)। "प्रजानां विनयाधानाद्रक्षणाद्भरणादपि। स पिता पितरस्तासां केवलं जन्महेतवः" रघु० १-२४। 5. ಗಿರವಿ, ಅಡವು.

**आधाय** ಆಧಾಯ (ಪುಂ) 1. ಆಧಾನ, ಇಡುವುದು. आ+डु धाञ् (धारणपोषणयोः) "घञ्" (३-३-१८)। (अव्य०) 2. ಇಟ್ಟು, ಇರಿಸಿ. आ + धाञ् (धारणे) "ल्यप्" (७-१-३७)।

**आधार** ಆಧಾರ(ಪುಂ) 1. ಬೆಂಬಲ, ಒತ್ತಾಸೆ, ಸಾಹಾಯ್ಯ. आ+धृङ् (अवस्थाने) "घञ्" (३-३-१८)। 2. ಆಶ್ರಯ, ಅಧಿಕರಣ. आ+धृङ् "घञ्" (वा० ३-३-१२२)। "अवृष्टिसंरम्भमिवाम्बुवाहमपामिवाधारमनुत्तरङ्गम्" कुमा० ३-४८। 3. ಗಿಡದ ಪಾತಿ. "आधारबन्धप्रमुखैः प्रयत्नैः संवर्धितानां सुतनिर्विशेषम्" रघु० ५-६। 4. ಪಾತ್ರೆ. 5. ಕಾಲುವೆ. 6. ನೀರಿನ ಮಡು, ಹಳ್ಳ. 7. ಅಣೆಕಟ್ಟು, ಸಾಗುವಳಿಯ ಭೂಮಿಗಾಗಿ ನೀರನ್ನು ಕೂಡಿಡುವ ಸ್ಥಳ. 8. (ವ್ಯಾಕರಣದಲ್ಲಿ ಹೇಳಿರುವ) ಕ್ರಿಯೆಗೆ ಕರ್ತೃಕರ್ಮಗಳ ಮೂಲಕ ಆಶ್ರಯಭೂತವಾದ ಅಧಿಕರಣಕಾರಕ. ಅಧಿಕರಣಕಾರಕವು (1) औपश्लेषिकः, (2) वैषयिकः ಮತ್ತು (3) अभिव्यापकः ಎಂದು ಮೂರು ವಿಧ. ಉದಾ: (1) गङ्गायां घोषः। (2) मोक्षे इच्छास्ति। (3) सर्वस्मिन्नात्मा।

**आधारनिलय** ಆಧಾರನಿಲಯ(ಪುಂ) ವಿಷ್ಣು, ಪರಮಾತ್ಮ. (धार्मिकतया) जगदाधाराणां प्रह्लादविभीषणपाण्डवादीनां निलयः आस्पदम्। "आधारनिलयो धाता पुष्पहासः प्रजागरः" वि० स०।

**आधाराधेयभाव** ಆಧಾರಾಧೇಯಭಾವ (ಪುಂ) (ವಸ್ತುವನ್ನು) ಇಡುವ ಜಾಗ ಮತ್ತು ಇಡಲ್ಪಡುವ ವಸ್ತು ಇವುಗಳಿಗಿರುವ ಸಂಬಂಧ. ಇಡುವ ಜಾಗವು ಆಧಾರ. ಇಡಲ್ಪಡುವ ವಸ್ತುವು ಆಧೇಯ. ಆಧಾರಭೂತವಾದ ಭೂತಲ ಮತ್ತು ಆಧೇಯವಾಗಿರುವ ಘಟಗಳಿಗಿರುವ ಸಂಬಂಧವು ಆಧಾರಾಧೇಯಭಾವವೆನಿಸುವುದು.

**आधि** ಆಧಿ (ಪುಂ) 1. ಮನೋರೋಗ. आधीयतेऽनेन – आ+डु धाञ् (धारणपोषणयोः) "किः" (३-३-९२)। "भूयिष्ठं भव दक्षिणा परिजने भाग्येष्वनुत्सेकिनी यान्त्येवं गृहिणीपदं युवतयो वामाः कुलस्याधयः" शाकु० ४-१७। "रुजन्ति चेतः प्रसभं ममाधयः" किरा० १-३७। 2. ಅಡವು, ಗಿರವಿ. 3. ಸ್ಥಳ, ಜಾಗ, ಆಶ್ರಯ. 4. ವ್ಯಸನ, ದುಃಖ. 5. ಪ್ರತ್ಯಾಶೆ, ನಿರೀಕ್ಷಣೆ. 6. ಜಾಮೀನು, ಈಡು, ಹೊಣೆ. "आधिः पुमांश्चित्तपीडाप्रत्याशावन्धकेषु च। व्यसने चाप्यधिष्ठानेऽपि" मेदि०।

**आधिकरणिक** ಆಧಿಕರಣಿಕ (ಪುಂ) ನ್ಯಾಯಾಧೀಶ. अधिकरणे नियुक्तः "ठक्" (४-४-६९)।

**आधिदैविक** ಆಧಿದೈವಿಕ(ನಂ) ದೇವತೆಗಳಿಂದ ಸಂಭವಿಸಬಹುದಾದ ದುಃಖ. देवेष्वधिदैवम् तत्र भवम् "ठञ्" (४-३-६०)। उभयपदवृद्धिः (७-३-२०)। (1) ಆಧ್ಯಾತ್ಮಿಕ, (2) ಆಧಿದೈವಿಕ ಮತ್ತು (3) ಆಧಿಭೌತಿಕಗಳೆಂದು ದುಃಖವು ಮೂರು ವಿಧ. ಈ ಮೂರುವಿಧ ದುಃಖಗಳೇ ತಾಪತ್ರಯ.

1. ಆಧ್ಯಾತ್ಮಿಕವು ಶರೀರ ಮತ್ತು ಮನಸ್ಸಿನ ಸಂಬಂಧವಾದ ದುಃಖ. (1) ಆದಿಬಲಪ್ರವೃತ್ತ, (2) ಜನ್ಮಬಲಪ್ರವೃತ್ತ ಮತ್ತು (3) ದೋಷಬಲಪ್ರವೃತ್ತಗಳೆಂದು ಇದು ಮೂರು ವಿಧ.

(1) ಶುಕ್ರಶೋಣಿತ ದೋಷದಿಂದುಂಟಾಗುವ ಕುಷ್ಠ ಮೂಲವ್ಯಾಧಿ ಮೊದಲಾದುದು ಆದಿಬಲಪ್ರವೃತ್ತ.

(2) ತಾಯಿಯ ಅತ್ಯಾಚರಣೆ ಮೊದಲಾದ ದೋಷದಿಂದುಂಟಾಗುವ ಶಿಶುವಿನ ಪಂಗುತ್ವ (ಕುಂಟು) ಜಾತ್ಯಂಧತ್ವ (ಹುಟ್ಟು ಕುರುಡು) ಮೊದಲಾದುದು ಜನ್ಮಬಲಪ್ರವೃತ್ತ.

(3) ಭಯ, ದುಷ್ಟಾಹಾರಸೇವನೆ, ದುರಾಚಾರಗಳಿಂದುಂಟಾಗುವ ವ್ಯಾಧಿಗಳು **ದೋಷಬಲಪ್ರವೃತ್ತ.**

2. ಆಧಿದೈವಿಕವು (1) ಕಾಲಬಲಪ್ರವೃತ್ತ, (2) ದೈವಬಲಪ್ರವೃತ್ತ ಮತ್ತು (3) ಸ್ವಭಾವಬಲಪ್ರವೃತ್ತಗಳೆಂದು ಮೂರು ವಿಧ.

(1) ಋತುಧರ್ಮಗಳಿಂದ ಉಂಟಾಗುವ ಶೀತೋಷ್ಣ ವಾಯು ಮೊದಲಾದ ಹವಾಮಾನ ಬದಲಾವಣೆಗಳಿಂದ ಸಂಭವಿಸತಕ್ಕ ವ್ಯಾಧಿಗಳು **ಕಾಲಬಲಪ್ರವೃತ್ತ.**

(2) ಭಗವದಪಚಾರ (ದೈವದ್ರೋಹ) ಮೊದಲಾದುವುಗಳಿಂದಲೂ ಆಭಿಚಾರಿಕ ಕೃತ್ಯದಿಂದಲೂ ಸಂಭವಿಸುವ ಶಿಡಿಲಿನ ಹೊಡೆತ ಪಿಶಾಚಾದ್ಯಾವೇಶ ಮುಂತಾದ ದುಃಖವು **ದೈವಬಲಪ್ರವೃತ್ತ.**

(3) ಹಸಿವು ಬಾಯಾರಿಕೆ ಮುಪ್ಪು ಮೊದಲಾದ ದುಃಖವು **ಸ್ವಭಾವಬಲಪ್ರವೃತ್ತ.**

3. ಆಧಿಭೌತಿಕವು ಸಂಘಾತಬಲಪ್ರವೃತ್ತವಾದ ದುಃಖ, ದುರ್ಬಲನಾದವನಿಗೆ ಪ್ರಬಲನಾದವನೊಡನೆ ಸಂಭವಿಸುವ ಶಸ್ತ್ರಾಘಾತಾದಿಗಳು, ಹುಲಿ ಆನೆ ಸರ್ಪ ಮುಂತಾದ ದುಷ್ಟಪ್ರಾಣಿಗಳಿಂದ ಸಂಭವಿಸುವ ದುಃಖಗಳು. सुश्रुतं सूत्रं २४। [ಇನ್ನೂ ವಿವರಕ್ಕೆ ಸುಶ್ರುತ ಸಂಹಿತೆಯಲ್ಲಿ ನೋಡಿ.]

**आधिपत्य ಆಧಿಪತ್ಯ** (नं) 1. ರಾಜತ್ವ, ಪ್ರಭುತ್ವ, ಸಾರ್ವಭೌಮತ್ವ. अधिपतेर्भावः "यक्" (५-१-१२८)। "प्रजापतिः कल्पितयज्ञभागं शैलाधिपत्यं स्वयमन्वतिष्ठत्" कुमा० १-१७। 2. ಪ್ರಜಾಸಂರಕ್ಷಣಾದಿ ರಾಜನ ಕರ್ತವ್ಯ. अधिपतेः कर्म "यक्" (५-१-१२८)।

**आधिभौतिक ಆಧಿಭೌತಿಕ** (नं) ಶಸ್ತ್ರಾಘಾತಾದಿಗಳಿಂದ ಮತ್ತು ದುಷ್ಟಪ್ರಾಣಿಗಳಿಂದ ಸಂಭವಿಸುವ ದುಃಖ. भूतेष्वधिभूतं, तत्र भवम् "ठञ्" (वा० ४-३-६०)।

**आधिराज्य ಆಧಿರಾಜ್ಯ** (नं) ಆಧಿಪತ್ಯ, ಪ್ರಭುತ್ವ, ರಾಜತ್ವ, ಸಾಮ್ರಾಜ್ಯ. अधिको राजा अधिराजः तस्य भावः कर्म वा "ष्यञ्" (५-१-१२४)। "पितुरनन्तरं ममाधिराज्यपदस्य प्रथममर्धं भवते वितीर्य ततः परमर्धमहमनुभविष्यामीति" चं० भा० २।

**आधिवेदनिक ಆಧಿವೇದನಿಕ** (नं) ದ್ವಿತೀಯಾದಿ ವಿವಾಹ ಮಾಡಿಕೊಳ್ಳಲು ಮೊದಲನೆಯ ಪತ್ನಿಯ ಸಂತೋಷಾರ್ಥವಾಗಿ ಪತಿಯು ಕೊಡುವ ಸ್ತ್ರೀಧನ. अधिवेदने दीयते – "ठक्" (५-१-९६)। "अधिविन्नस्त्रियै दद्यादाधिवेदनिकं समम्" याज्ञ० २-१४८।

**आधुत ಆಧುತ** (वि०) ಅಲ್ಲಾಡಿಸಲ್ಪಟ್ಟ, ಚಲಿಸುವಂತೆ ಮಾಡಲ್ಪಟ್ಟ, ಕೊಡವಲ್ಪಟ್ಟ. आ+धुञ् (कम्पने) "क्तः" (३-२-१०२)।

**आधुनिक ಆಧುನಿಕ** (वि०) 1. ಈ ಕಾಲದ, ಈಗಿನ ಕಾಲದ, ಹೊಸದಾದ, ಹಳೆಯದಲ್ಲದ. 2. ಈಗ ಉಂಟಾದ, ಈಗ ಇರತಕ್ಕ. अधुना भवः "ठञ्" (४-३-११)।

**आधृष्टि ಆಧೃಷ್ಟಿ** (स्त्री०) 1. ತಿರಸ್ಕಾರ. 2. ಅಪಮಾನ. 3. ಮೇಲೆ ಬೀಳುವುದು, ಧಾಳಿ ಮಾಡುವುದು, ಹಿಂಸಿಸುವುದು. आ + धृष (प्रसहने) "क्तिन्" (३-३-९४)।

**आधेय ಆಧೇಯ** (वि०) 1. ಇಡಲು ಯೋಗ್ಯವಾದ, ಒಂದು ಆಧಾರವನ್ನು ಆಶ್ರಯಿಸಿರುವ. आधातुं योग्यम् "यत्" (३-१-९७)। 2. ತಯಾರಿಸಲ್ಪಡುವ, ಸೃಷ್ಟಿಸಲ್ಪಡುವ. आ + धाञ् कर्म० "यत्" (३-२-९७)। 3. ಒಂದು ಸಂಸ್ಕಾರದಿಂದ ಸಂಸ್ಕರಿಸಲ್ಪಟ್ಟ ಅಗ್ನಿ.

**आधोरण ಆಧೋರಣ** (पुं०) ಮಾವಟಿಗ, ಆನೆಯ ಸಾರಥಿ, ಆನೆಯನ್ನು ನಡೆಯಿಸುವ ಚಾತುರ್ಯವುಳ್ಳವನು. आ+धोर (गतिचातुर्ये) "ल्युः" (३-१-१३४)। "आधोरणानां गजसन्निपाते शिरांसि चक्रैर्निशितैः क्षुराग्रैः" रघु० ७-४६।

**आध्मात ಆಧ್ಮಾತ** (पुं०) 1. ಯುದ್ಧ. (वि०) 2. ಶಬ್ದವುಂಟುಮಾಡಲ್ಪಟ್ಟ, ಧ್ವನಿಯುಕ್ತವಾದ. "परेषामुन्नेयो भवति चिरमाध्मातहृदयः" उ० रा० १-२९। 3. ದಹಿಸಲ್ಪಟ್ಟ, ಸುಡಲ್ಪಟ್ಟ. 4. ಊದಲ್ಪಟ್ಟ, ಉರುವಲ್ಪಟ್ಟ. आ+ध्मा (शब्दाग्निसंयोगयोः) "क्तः" (३-२-१०२)। 5. ಉಬ್ಬಿರುವ, ಊದಿರುವ. कर्त० "क्तः" (३-४-७२)। 6. ಹೊಟ್ಟೆಯುಬ್ಬರದ ರೋಗದಿಂದ ಕೂಡಿದ.

**आध्मान ಆಧ್ಮಾನ** (पुं०) 1. ವಾಯುರೋಗ. (नं) 2. ಹೊಟ್ಟೆಯುಬ್ಬರ. 3. ತಿದಿ. आ+ध्मा (शब्दाग्निसंयोगयोः) करं० "ल्युट्" (३-३-११७)। 4. ಬಡಾಯಿ ಕೊಚ್ಚಿಕೊಳ್ಳುವುದು, ಆತ್ಮಶ್ಲಾಘನೆ ಮಾಡಿಕೊಳ್ಳುವುದು. 5. ಉಬ್ಬುವುದು, ಹಿಗ್ಗುವುದು. 6. ಶಬ್ದ ಮಾಡುವುದು. 7. ಜೆಂಕಿಯನ್ನು ಊದುವುದು. भावे "ल्युट्" (३-३-११५)।

**आध्मापन ಆಧ್ಮಾಪನ** (नं) 1. ಶಬ್ದವುಂಟುಮಾಡುವುದು, 2. ಉಬ್ಬಿಸುವುದು. आ+ध्मा (शब्दाग्निसंयोगयोः) +णिच् "ल्युट्" (३-३-११५)।

**आध्यात्मिक** ಆಧ್ಯಾತ್ಮಿಕ (ನಂ) 1. ಮನಸ್ಸು ಮತ್ತು ಶರೀರಗಳ ನಿಮಿತ್ತವಾಗಿ ಸಂಭವಿಸುವ ದುಃಖ. आत्मनि अध्यात्मम्। अध्यात्मं भवम् "ठञ्" (वा० ४-३-६०)। [ವಿವರಕ್ಕೆ "आधिदैविक" ಪದದಲ್ಲಿ ನೋಡಿ.] (वि०) 2. ಆತ್ಮನಿಗೆ ಸಂಬಂಧಿಸಿದ, ಆತ್ಮನನ್ನು ಕುರಿತು ಉಂಟಾದ. 3. ಶರೀರಸಂಬಂಧವಾದ. (स्त्री)–की –ಕೀ. 4. ಸಾಂಖ್ಯಮತದಲ್ಲಿ ಹೇಳಿರುವ ಪ್ರಕೃತಿ, ಉಪಾದಾನ, ಕಾಲ ಮತ್ತು ಭಾಗ್ಯಗಳೆಂಬ ನಾಲ್ಕು ವಿಧ ತುಷ್ಟಿಗಳು. [ವಿವರಕ್ಕೆ "तुष्टि" ಪದದಲ್ಲಿ ನೋಡಿ.]

**आध्यान** ಆಧ್ಯಾನ (ನಂ) 1. ಸ್ಮರಣೆ, ಉತ್ಸಾಹಪೂರ್ವಕ ನೆನೆಯುವುದು. आ + ध्यै (चिन्तायाम्) "ल्युट्" (३-३-११५)। 2. ಚಿಂತೆ.

**आध्यासिक** ಆಧ್ಯಾಸಿಕ (वि०) ಭ್ರಾಂತಿ (ತಪ್ಪು ತಿಳಿವಳಿಕೆ)ಯಿಂದ ಕಲ್ಪಿತವಾದ ವಸ್ತು, ಬ್ರಹ್ಮನಲ್ಲಿ ಅಧ್ಯಾಸದಿಂದ ಕಲ್ಪಿತವಾದ ಜಗತ್ತು. अध्यासेन निर्वृत्तम् "ठक्" (४-४-१९)।

**आनक** ಆನಕ (पु०) 1. ಪಟಹ, ತಮಟೆ. आनयति सोत्साहान् करोति योधान्—अन (प्राणने) + णिच् "ण्वुल्" (३-१-१३३)। "आनकानां च दिव्यानां दुन्दुभीनां च निस्वनैः" याद० १-२८। 2. ಮೃದಂಗ, ಮದ್ದಳೆ. 3. ಗುಡುಗಿನಿಂದ ಕೂಡಿದ ಮೇಘ, ಗರ್ಜಿಸುವ ಮೋಡ. 4. ನಗಾರಿ. (वि०) 5. ಪ್ರೋತ್ಸಾಹಿಸುವ. "आनकः पटहे भेर्यां मृदङ्गे ध्वनदम्बुदे" मेदि०।

**आनकदुन्दुभि** ಆನಕದುಂದುಭಿ (पु०) 1. ವಸುದೇವ, ಶ್ರೀಕೃಷ್ಣನ ತಂದೆ. आनकः प्रोत्साहको दुन्दुभिर्यस्य। [ಇವನ ಜನನಕಾಲದಲ್ಲಿ ದೇವತೆಗಳು ಪ್ರೋತ್ಸಾಹಕವಾದ ದುಂದುಭಿಯನ್ನು ಮೊಳಗಿಸಿದುದರಿಂದ ಈ ಹೆಸರು.] (स्त्री०) 2. ದೊಡ್ಡ ನಗಾರಿ.

**आनडुह** ಆನಡುಹ (वि०) ವೃಷಭಸಂಬಂಧವಾದ ಗೋಮಯ ತೊಗಲು ಮುಂತಾದುದು. अनडुहः इदम् "अण्" (४-३-१२०)। "प्रच्छिद्य प्रच्छिद्य प्रागग्रान्छमीपर्णैः सह मात्रे प्रयच्छति तानानडुहे गोमये निदधाति" आश्व० गृ० अ० १। "विवाहाग्निमुपसमाधाय पश्चादस्यानडुहं चर्मास्तीर्य" आश्व० गृ० अ० १।

**आनत** ಆನತ (वि०) 1. ಗೌರವದಿಂದ ನಮಸ್ಕರಿಸಲ್ಪಟ್ಟ. आ + णम (प्रह्वत्वे शब्दे) "क्तः" (३-२-१०२)। 2. ಅಧೋಮುಖವಾದ, ಬಗ್ಗಿದ ಮುಖವುಳ್ಳ. 3. ಗೌರವದಿಂದ ನಮಸ್ಕಾರ ಮಾಡಿದ. कर्तं "क्तः" (३-४-७२)। "आदेशं देशकालज्ञः शिष्यः शासितुरानतः" रघु० १-९१। 4. ಬಗ್ಗಿರುವ, ವಿಧೇಯತೆಯಿಂದ ನಮ್ರನಾದ. "स्पृशन् करेणानतपूर्वकायं संप्रस्थितो वाचमुवाच कौत्सः" रघु० ५-३२।

**आनति** ಆನತಿ (स्त्री०) 1. ಬಗ್ಗಿರುವಿಕೆ. 2. ನಮಸ್ಕಾರ, ವಂದನೆ. आ + णम (प्रह्वत्वे शब्दे) "क्तिन्" (३-३-९४)। "निवर्त्य सोऽनुव्रजतः कृतानतीनतीन्द्रियज्ञाननिधिर्नभस्सदः" माघ० १-११। "कृतानतिर्व्याहृतसान्त्ववादे" किरा० ३-३१। 3. ವಿಧೇಯತೆ.

**आनद्ध** ಆನದ್ಧ (ನಂ) 1. ತಮಟೆ. 2. ಮೃದಂಗ, ಮದ್ದಳೆ. (वि०) 3. ಗಂಟುಹಾಕಲ್ಪಟ್ಟ. 4. ಕಟ್ಟಲ್ಪಟ್ಟ. आ + णह (बन्धने) "क्तः" (३-२-१०२)।

**आनन** ಆನನ (ನಂ) ಮುಖ. आ + अन (प्राणने) करं "ल्युट्" (३-३-११७)। "आननैर्मधुरसो विकसद्भिर्नासिकाभिरसितोत्पलगन्धः" माघ० १०-८।

**आनन्तर्य** ಆನಂತರ್ಯ (ನಂ) ಅವ್ಯವಧಾನ, ಮಧ್ಯೆ ಅವಕಾಶವಿಲ್ಲದೆ ಸೇರಿಕೊಂಡಿರುವಿಕೆ, ಎಡೆಬಿಡದಿರುವಿಕೆ, ಕಾಲ ಅಥವಾ ದೇಶ ಕೃತವಾದ ಸಾಮೀಪ್ಯ. अनन्तरस्य भावः "ष्यञ्" (५-१-१२४)।

**आनन्त्य** ಆನಂತ್ಯ (ನಂ) 1. ಕೊನೆಯಿಲ್ಲದಿರುವಿಕೆ, ಎಲ್ಲೆಯಿಲ್ಲದಿರುವಿಕೆ, ಅವಧಿಯಿಲ್ಲದಿರುವಿಕೆ. 2. ನಾಶವಿಲ್ಲದಿರುವಿಕೆ. अनन्तस्य भावः "ष्यञ्" (५-१-१२४)। 3. (ಸರ್ವತ್ರವ್ಯಾಪಿಸಿರುವುದರಿಂದ) ದೇಶ ಪರಿಚ್ಛೇದವಿಲ್ಲದಿರುವಿಕೆ. 4. (ಸರ್ವಕಾಲದಲ್ಲಿಯೂ ಇರುವುದರಿಂದ) ಕಾಲ ಪರಿಚ್ಛೇದವಿಲ್ಲದಿರುವಿಕೆ. 5. (ಸಕಲವೂ ಬ್ರಹ್ಮಸ್ವರೂಪ ಅಥವಾ ಬ್ರಹ್ಮನ ಶರೀರವೇ ಆಗಿರುವುದರಿಂದ) ವಸ್ತು ಪರಿಚ್ಛೇದವಿಲ್ಲದಿರುವಿಕೆ.

**आनन्द** ಆನಂದ (पु०) 1. ಸಂತೋಷ, ಹರ್ಷ, ಸುಖ. आ+टु नदि (समृद्धौ) "घञ्" (३-३-१८)। "यदिन्दावानन्दं प्रणयिनि जने वा न भजते" मालती० ३-९। 2. ಪರಬ್ರಹ್ಮ. आनन्दोऽस्यास्ति "अच्" (५-२-१२७)। 3. ಆನಂದ ಸಂವತ್ಸರ. 4. ವಿಷ್ಣು. "आनन्दो नन्दनो नन्दः" वि० स०। 5. ದಂಡಕದ ಒಂದು ಭೇದ. 6. ವಾರ ಮತ್ತು ನಕ್ಷತ್ರಗಳ ಸಂಬಂಧದಿಂದುಂಟಾಗುವ ಒಂದು ಯೋಗ. [ಆದಿತ್ಯಾದಿ ವಾರಗಳಲ್ಲಿ ಅಶ್ವಿನಿ, ಮೃಗಶೀರ್ಷ, ಆಶ್ಲೇಷ, ಹಸ್ತ, ಅನೂರಾಧಾ, ಉತ್ತರಾ

ಷಾಢಾ, ಶತಭಿಷ ಈ ನಕ್ಷತ್ರಗಳು ಯಥಾಕ್ರಮವಾಗಿ ಸೇರಿದರೆ ಈ ಯೋಗವು.] (ನ०) 7. ಮದ್ಯ. (वि०) 8. ಆನಂದವನ್ನುಂಟುಮಾಡುವ. आ + नदि + णिच् "अच्" (३-१-१३४)।

**आनन्दथु** ಆನಂದಥು (पु०) ಆನಂದ, ಸಂತೋಷ, ಸುಖ. आ + टु नदि (समृद्धौ) भावे "अथुच्" (३-३-८९)।

**आनन्दन** ಆನಂದನ (ನ०) 1. ಸಂತೋಷವುಂಟುಮಾಡುವಿಕೆ. आ+टु नदि (समृद्धौ) भावे "ल्युट्" (३-३-११५)। 2. ಮಿತ್ರರ ಭೇಟಿಯ ಕಾಲದಲ್ಲಿ ಮಾಡುವ ಕುಶಲ ಪ್ರಶ್ನೆ. "आनन्दनं संगतं स्यादप्रच्छन्नं सभाजनम्" वैज०। (वि०) 3. ಸಂತೋಷವನ್ನುಂಟುಮಾಡುವ. आ+टु नदि + णिच् "ल्युः" (३-१-१३४)। "आनन्दनानि मदनज्वरदीपनानि" मालती० ९-४८।

**आनन्दभैरव** ಆನಂದಭೈರವ (पु०) ಶಿವ, ಈಶ್ವರ. (स्त्री०)—भैरवी—ಭೈರವೀ. ಪಾರ್ವತಿ.

**आनन्दमय** ಆನಂದಮಯ (पु०) 1. ಪರಮಾತ್ಮ. (वि०) 2. ಆನಂದದಿಂದ ತುಂಬಿದ. (स्त्री०)—मयी—ಮಯೀ. ದುರ್ಗಾದೇವಿಯ ಮೂರ್ತಿ.

**आनन्दि** ಆನಂದಿ (पु०) 1. ಹರ್ಷ, ಸಂತೋಷ. 2. ಕುತೂಹಲ, ಜಿಜ್ಞಾಸೆ. आ + टु नदि (समृद्धौ) "इन्" (उ० ४-११७)।

**आनन्दित** ಆನಂದಿತ (वि०) ಸಂತೋಷಗೊಳಿಸಲ್ಪಟ್ಟ. आ + टु नदि (समृद्धौ) + णिच् "क्तः" (३-२-१०२)। "आनन्दिताशेषजना बभूव सर्वाङ्गसङ्गिन्यपरेव लक्ष्मीः" माघ० ३-१३।

**आनन्दिन्** ಆನಂದಿನ್ (वि०) 1. ಸುಖವುಳ್ಳ, ಸಂತೋಷವುಳ್ಳ. आनन्द "इनिः" (५-२-११५)। 2. ಸಂತೋಷವನ್ನುಂಟುಮಾಡುವ. आ + टु नदि (समृद्धौ) + णिच् "णिनिः" (३-१-१३४)।

**आनमन** ಆನಮನ (ನ०) 1. ಚೆನ್ನಾಗಿ ಬಗ್ಗುವುದು. आ + णम (प्रह्वत्वे शब्दे) भावे "ल्युट्" (३-३-११५)। 2. ನಮಸ್ಕಾರ.

**आनमित** ಆನಮಿತ (वि०) 1. ಬಗ್ಗಿಸಲ್ಪಟ್ಟ. 2. ವಿಧೇಯನಾಗಿ ಮಾಡಲ್ಪಟ್ಟ, ನಮಸ್ಕರಿಸುವಂತೆ ಮಾಡಲ್ಪಟ್ಟ. आ + णम (प्रह्वत्वे शब्दे) + णिच् "क्तः" (३-२-१०२)। "श्रुत्वा विदर्भपतिमानमितं बलैश्च" माल० ५-३।

**आनम्य** ಆನಮ್ಯ (वि०) 1. ನಮಸ್ಕರಿಸಲ್ಪಡುವ. आ+ णम (प्रह्वत्वे शब्दे) "यत्" (३-१-९८) (अव्य०) 2. ನಮಸ್ಕರಿಸಿ. 3. ಬಗ್ಗಿ, ಬಾಗಿ. आ + णम "ल्यप्" (७-१-३७)। ण्यन्तात् "ल्यप्"। आनमय्य ಆನಮಯ್ಯ. ಬಗ್ಗಿಸಿ.

**आनय** ಆನಯ (पु०) ತರುವುದು. आ + णीञ् (प्रापणे) भावे "अच्" (३-३-५६)। भावे "ल्युट्" (३-३-११५)। —नयनम्—ನಯನಮ್.

**आनर्त** ಆನರ್ತ (पु०) 1. ಯುದ್ಧ. 2. ನೃತ್ಯಶಾಲೆ, ನಾಟ್ಯಶಾಲೆ, ರಂಗಸ್ಥಳ. आनृत्यन्त्यत्र आ + नृती (गात्रविक्षेपे) अधि० "घञ्" (३-३-१२१)। 3. ಸೂರ್ಯವಂಶದ ಒಬ್ಬ ದೊರೆ. आनर्तानां राजा। 4. ಆನರ್ತದೇಶನಿವಾಸಿ. आनर्तोऽभिजनोऽस्य। (पु० ब० व०) 5. ಒಂದು ದೇಶ. (ನ०) 6. ಜಲ, ನೀರು. "आनर्तो देशभेदेऽपि नृत्यस्थाने जले रणे" मेदि०। 7. ನರ್ತನ.

**आनर्तपुर** ಆನರ್ತಪುರ (ನ०) ಆನರ್ತದೇಶದ ರಾಜಧಾನಿ, ದ್ವಾರಕಾನಗರ.

**आनर्तित** ಆನರ್ತಿತ (वि०) ಕುಣಿಸಲ್ಪಟ್ಟ, ನರ್ತನ ಮಾಡಿಸಲ್ಪಟ್ಟ. आ + नृती (गात्रविक्षेपे) + णिच् "क्तः" (३-२-१०२)। "मरुद्भिरानर्तितनक्तमाले" रघु० ५-४२।

**आनर्थक्य** ಆನರ್ಥಕ್ಯ (ನ०) ವೈಯರ್ಥ್ಯ, ವ್ಯರ್ಥತೆ, ಪ್ರಯೋಜನವಿಲ್ಲದಿರುವಿಕೆ. अनर्थकस्य भावः "ष्यञ्" (५-१-१२४)।

**आनसूय** ಆನಸೂಯ (वि०) ಅತ್ರಿಪತ್ನಿಯಾದ ಅನಸೂಯಾ ದೇವಿಯಿಂದ ಕೊಡಲ್ಪಟ್ಟ. अनसूयया दत्तम् "अण्" (४-२-९२)।

**आनाथ्य** ಆನಾಥ್ಯ (ನ०) ಯಜಮಾನನಿಲ್ಲದಿರುವಿಕೆ. अनाथस्य भावः "ष्यञ्" (५-१-१२४)।

**आनाय** ಆನಾಯ (पु०) ಬಲೆ. आनीयन्ते मत्स्यादयोऽनेन—आ + णीञ् (प्रापणे) "घञ्" (३-३-१२४)।

**आनायिन्** ಆನಾಯಿನ್ (वि०) ಮೀನು ಹಿಡಿಯುವವನು, ಬೆಸ್ತರವನು. आनायोऽस्यास्ति "इनिः" (५-२-११५)। "स तीरभूमौ विहितोपकार्यमानायिभिस्तामपकृष्टनक्राम्" रघु० १६-५५।

**आनाय्य** ಆನಾಯ್ಯ (पु०) 1. ಆವಹನೀಯಸ್ಥಾನದಿಂದ ತೆಗೆದು ದಕ್ಷಿಣಾಗ್ನಿಯಾಗಿ ಸಂಸ್ಕರಿಸಲ್ಪಡುವ ಅಗ್ನಿ. आनीयते—आ + णीञ् (प्रापणे) "ण्यत्"

(३-१-१२७)। निपा०। (अव्य०) 2. ತರಿಸಿ, ತೆಗೆದು ಕೊಂಡು ಬರುವಂತೆ ಮಾಡಿ. 3. ಕರೆತರುವಂತೆ ಮಾಡಿ. आ + णीञ् + णिच् "ल्यप्" (७-१-३७)।

**आनाह** ಆನಾಹ (पु०) 1. (ಬಟ್ಟೆಯ) ಉದ್ದ, ನೀಳ. 2. 96,000 ಅಂಗುಲಗಳು. 3. ಮಲಬದ್ಧತೆ. आ+णह (बन्धने) "घञ्" (३-३-१८)। "आनाहो मलविष्टम्भः" वैजं०।

**आनिरुद्ध** ಆನಿರುದ್ಧ (पु०) ಅನಿರುದ್ಧನ ಮಗ. अनिरुद्धस्यापत्यम् "अण्" (४-१-११४)। स्त्रियाम् "ङीप्" (४-१-१५)। **आनिरुद्धी** ಆನಿರುದ್ಧೀ.

**आनिरुद्धि** ಆನಿರುದ್ಧಿ (पु०) ತಡೆಯಲ್ಪಡದವನ ಮಗ. अनिरुद्धस्यापत्यम् "इञ्" (४-१-९५)।

**आनिल** ಆನಿಲ (पु०) 1. ವಾಯುಪುತ್ರನಾದ (1) ಆಂಜನೇಯ. (2) ಭೀಮಸೇನ. अनिलस्यायम् "अण्" (४-३-१२०)। (वि०) 2. ಅನಿಲಸಂಬಂಧವಾದ, ವಾಯುಸಂಬಂಧವಾದ. 3. ವಾಯುದೇವತಾಕವಾದ (1) ನಕ್ಷತ್ರ (ಸ್ವಾತಿ). (2) ಮಂತ್ರ. (3) ಹವಿಸ್ಸು ಮುಂತಾದುದು.

**आनिलि** ಆನಿಲಿ (पु०) ವಾಯುಪುತ್ರನಾದ 1. ಆಂಜನೇಯ. 2. ಭೀಮಸೇನ. अनिलस्यापत्यम् "इञ्" (४-१-९५)।

**आनीत** ಆನೀತ (वि०) ತರಲ್ಪಟ್ಟ. आ + णीञ् (प्रापणे) "क्तः" (३-२-१०२)। "आनीतमग्रे निजबन्धनार्थं दामाखिलं संहितमप्यपूर्णम्" यादं० ४-३४।

**आनीति** ಆನೀತಿ (स्त्री०) ತರುವಿಕೆ. आ+णीञ् (प्रापणे) "क्तिन्" (३-३-९४)।

**आनील** ಆನೀಲ (पु०) 1. ಕಪ್ಪು ಅಂಡಕೋಶವುಳ್ಳ ಕುದುರೆ. "आनीलः स्यान्नीलकोशः" वैजं०। (वि०) 2. ಸ್ವಲ್ಪ ಕಪ್ಪಗಿರುವ.

**आनुकल्पिक** ಆನುಕಲ್ಪಿಕ (वि०) 1. ಅನುಕಲ್ಪವನ್ನು ತಿಳಿದಿರುವ, ಮುಖ್ಯವಲ್ಲದ ಎರಡನೆಯ ಪಕ್ಷವನ್ನು ಅರಿತಿರುವ. अनुकल्पं वेत्ति—"ठक्" (४-२-६०)। 2. ಅನುಕಲ್ಪವನ್ನು ತಿಳಿಯಿಸುವ ಗ್ರಂಥವನ್ನು ಅಧ್ಯಯನ ಮಾಡುವ. अनुकल्पं तद्बोधकं ग्रन्थमधीते "ठक्" (४-२-६०)। 3. ಅನುಕಲ್ಪದಿಂದ ಹೊಂದಲ್ಪಡುವ. अनुकल्पेन लभ्यम् "ठञ्" (५-१-९३)।

**आनुकूलिक** ಆನುಕೂಲಿಕ (वि०) ಅನುಕೂಲವಾಗಿರುವ. अनुकूलं वर्तते "ठक्" (४-४-२८)।

**आनुकूल्य** ಆನುಕೂಲ್ಯ (न०) ಅನುಕೂಲವಾಗಿರುವಿಕೆ, ಹೊಂದಿಕೆ, ಅನುರೂಪವಾಗಿರುವಿಕೆ. अनुकूलस्य भावः "ष्यञ्" (५-१-१२४)।

**आनुगतिक** ಆನುಗತಿಕ (वि०) ಹಿಂಬಾಲಿಸುವಿಕೆಯಿಂದುಂಟಾದ, ಅನುಸರಣದಿಂದುಂಟಾದ. अनुगतेन अनुगमनेन निर्वृत्तः "ठक्" (४-४-१९)।

**आनुगत्य** ಆನುಗತ್ಯ (न०) ಹಿಂಬಾಲಿಸುವಿಕೆ, ಅನುಸರಿಸುವಿಕೆ. अनुगतस्य भावः "ष्यञ्" (५-१-१२४)।

**आनुगुणिक** ಆನುಗುಣಿಕ (वि०) 1. ಅನುಗುಣವಾಗಿ ತಿಳಿದಿರುವ. 2. ಅನುಗುಣವಾಗಿ ತಿಳಿಯಿಸುವ ಗ್ರಂಥವನ್ನು ಅಧ್ಯಯನ ಮಾಡುವ. अनुगुणं वेत्त्यधीते वा "ठक्" (४-२-६३)।

**आनुगुण्य** ಆನುಗುಣ್ಯ (न०) ಅನುಗುಣವಾಗಿರುವಿಕೆ, ಅನುರೂಪವಾಗಿರುವಿಕೆ, ಹೊಂದಿಕೆ. अनुगुणस्य भावः "ष्यञ्" (५-१-१२४)।

**आनुग्रामिक** ಆನುಗ್ರಾಮಿಕ (वि०) ಗ್ರಾಮದ ಹಿಂಭಾಗದಲ್ಲಿ ಉಂಟಾದ, ಹಳ್ಳಿಯ ಹಿಂಭಾಗದಲ್ಲಿರುವ ग्रामस्य पश्चात् अनुग्रामम्, अनुग्रामं भवः "ठञ्" (४-३-६३)।

**आनुनाश्य** ಆನುನಾಶ್ಯ (वि०) ನಾಶದ ಅನಂತರ ಉಂಟಾದ. अनुनाशं विनाशस्य पश्चात् भवः "ण्यः" (४-२-८०)।

**आनुनासिक्य** ಆನುನಾಸಿಕ್ಯ (न०) ಅನುನಾಸಿಕದ ಧರ್ಮ. अनुनासिकस्य भावः "ष्यञ्" (५-१-१२४)। "प्रतिज्ञानुनासिक्याः पाणिनीयाः" सिं० कौ०।

**आनुपथ्य** ಆನುಪಥ್ಯ (वि०) ಮಾರ್ಗದ ಹಿಂಭಾಗದಲ್ಲಿರುವ, ದಾರಿಯ ಹಿಂಭಾಗದಲ್ಲಿ ಉಂಟಾದ. अनुपथं भवः "ञ्यः" (वा० ४-३-५९)।

**आनुपदिक** ಆನುಪದಿಕ (वि०) 1. ಹಿಂಬಾಲಿಸಿ ಓಡಿ ಬರುವ. अनुपदं धावति "ठक्" (४-४-३७)। 2. ಪದಪಾಠವನ್ನು ಅಧ್ಯಯನ ಮಾಡುವ. 3. ಪದಪಾಠವನ್ನು ತಿಳಿದಿರುವ. अनुपदं अधीते वेत्ति वा "ठक्" (४-२-६०)। स्त्रियाम् आनुपदिकी ಆನುಪದಿಕೀ.

**आनुपूर्वी** ಆನುಪೂರ್ವೀ (स्त्री०) ಒಂದು ಕ್ರಮ, ಒಂದಾದ ಮೇಲೆ ಒಂದು ಬರುವಿಕೆ. पूर्वमनुक्रम्य अनुपूर्वं अव्ययी० अनुपूर्वं भावः "ष्यञ्" (५-१-१२३)। "ङीप्" (४-१-४१)।

आनुपूर्व्य ಆನುಪೂರ್ವ್ಯ (ನಂ) ಕ್ರಮ, ಪರ್ಯಾಯ. अनुपूर्वं भावः "ष्यञ्" (५-१-१२३)। "वसीरन्नानुपूर्व्येण शाणक्षौमाविकानि च" मनु० २-४१।

आनुमानिक ಆನುಮಾನಿಕ (वि०) 1. ಅನುಮಾನದಿಂದ ಸಿದ್ಧವಾದ, ಊಹೆಯಿಂದ ಉಂಟಾದ. अनुमानेन निर्वृत्तम् "ठक्" (४-४-१९)। 2. ವ್ಯಾಪ್ತಿವಿಶಿಷ್ಟಲಿಂಗಜ್ಞಾನದಿಂದುಂಟಾದ. अनुमानेन व्याप्तिविशिष्टलिङ्गज्ञानेन निर्वृत्तम् "ठक्" (४-४-१९)। ವ್ಯಾಪ್ತಿವಿಶಿಷ್ಟಲಿಂಗಜ್ಞಾನವುಂಟಾಗಿ "पर्वतो वह्निमान्" ಎಂಬ ಅನುಮಿತಿಯುಂಟಾಗುವುದು. (नं) 3. ಪ್ರಧಾನ. "आनुमानिकमप्येकेषामिति चेन्न" ब्र० सू० १-४-१।

आनुयात्रिक ಆನುಯಾತ್ರಿಕ (वि०) ಹಿಂಬಾಲಕ, ಅನುಚರ. अनुयात्रा प्रयोजनमस्य "ठञ्" (५-१-१०९)। "गृहीतविशेषमण्डनः प्रतीक्ष्यतामानुयात्रिको जनः" मालती० ६।

आनुरक्ति ಆನುರಕ್ತಿ (स्त्री०) ಅನುರಾಗ, ಪ್ರೀತಿ. आ + अनु + रञ्ज (रागे) "क्तिन्" (३-३-९४)।

आनुलोमिक ಆನುಲೋಮಿಕ (वि०) ಅನುಕೂಲವಾಗಿರುವ, ಕ್ರಮವಾಗಿರುವ, ಯಥೋಚಿತವಾಗಿರುವ. अनुलोमं वर्तते "ठक्" (४-४-२८)।

आनुलोम्य ಆನುಲೋಮ್ಯ (नं) ಅನುಕೂಲವಾಗಿರುವಿಕೆ, ಕ್ರಮವಾಗಿರುವಿಕೆ. अनुलोमस्य भावः "ष्यञ्" (५-१-१२४)।

आनुवंश्य ಆನುವಂಶ್ಯ (वि०) ವಂಶಕ್ರಮವಾಗಿ ಬಂದಿರುವ, ವಂಶವನ್ನು ಅನುಸರಿಸಿ ಬಂದಿರುವ. अनुवंशं भवः "ञ्यः" (वा० ४-३-५९)।

आनुवेश्य ಆನುವೇಶ್ಯ (वि०) ನೆರೆಮನೆಯ ಪಕ್ಕದ ಮನೆಯಲ್ಲಿ ವಾಸಮಾಡುವ. अनुवेशं भवः "ञ्यः" (वा० ४-३-५९)।

आनुश्रविक ಆನುಶ್ರವಿಕ (वि०) ವೇದವಿಹಿತವಾದ ಕರ್ಮ. अनुश्रूयते गुरुमुखात् इति अनुश्रवो वेदः, तत्र भवः "ठञ्" (वा० ४-३-६०)। "दृष्टवदानुश्रविकः स ह्यविशुद्धिक्षयातिशययुक्तः" सां० का० २।

आनुषङ्गिक ಆನುಷಂಗಿಕ (वि०) ಪ್ರಾಸಂಗಿಕವಾಗಿ ಒದಗಿದ, ಒಂದು ಕಾರ್ಯವನ್ನು ಮಾಡಲು ಹೊರಟಾಗ ಉದ್ದೇಶವಿಲ್ಲದೆ ಕೈಗೂಡುವ ಮತ್ತೊಂದು ಕಾರ್ಯ, ಅಪ್ರಧಾನವಾದ ಕಾರ್ಯ. अनुषङ्गेण लभ्यम् "ठञ्" (५-१-९३)। स्त्रियाम् "ङीप्" (४-१-१५)। आनुषङ्गिकी ಆನುಷಂಗಿಕೀ. "भिक्षामट गाञ्चानय" ಎಂಬಲ್ಲಿ ಭಿಕ್ಷಾಟನವು ಪ್ರಧಾನವಾದ ಕಾರ್ಯ. ಭಿಕ್ಷಾಟನೆಯ ಉದ್ದೇಶದಿಂದ ಹೊರಟವನಿಗೆ ಅಕಸ್ಮಾತ್ತಾಗಿ ದೃಷ್ಟಿಗೆ ಗೋಚರವಾದ ಗೋವಿನ ಆನಯನವು ಆನುಷಂಗಿಕ.

आनुष्टुभ ಆನುಷ್ಟುಭ (नं) 1. ಅನುಷ್ಟುಪ್ ಛಂದಸ್ಸು, ಎಂಟು ಅಕ್ಷರಗಳ ಪಾದವುಳ್ಳ ಛಂದಸ್ಸು. अनुष्टुभ् स्वार्थे "अण्" (५-४-३८)। (वि०) 2. ಅನುಷ್ಟುಪ್ ಸಂಬಂಧವಾದ. अनुष्टुभ इदम् "अण्" (४-३-१२०)। 3. ಅನುಷ್ಟುಪ್ ಛಂದಸ್ಸಿನ ಮಂತ್ರ.

आनृण्य ಆನೃಣ್ಯ (नं) ಋಣಶೂನ್ಯತೆ, ಸಾಲವಿಲ್ಲದಿರುವಿಕೆ. अनृणस्य भावः "ष्यञ्" (५-१-१२४)

आनृशंस्य ಆನೃಶಂಸ್ಯ (नं) ಕಾರುಣ್ಯ, ದಯಾಳುತ್ವ, ಕ್ರೂರನಾಗಿಲ್ಲದಿರುವಿಕೆ. अनृशंसस्य भावः "ष्यञ्" (५-१-१२४)। "आनृशंस्यमथवा न भज्यते तस्य संश्रितजनेषु जातुचित्" याद० १७-६६।

आनेतृ ಆನೇತೃ (वि०) ಕರೆತರುವ, ಬರಮಾಡುವ. आ + णीञ् (प्रापणे) "तृच्" (३-१-१३३)। स्त्रियाम् "ङीप्" (४-१-५)। आनेत्री ಆನೇತ್ರೀ.

आनेय ಆನೇಯ (वि०) ಕರೆತರಲ್ಪಡುವ. आ + णीञ् (प्रापणे) "अच्" (३-३-५६)।

आन्तरतम्य ಆಂತರತಮ್ಯ (नं) ಸಮೀಪಸಂಬಂಧ, ಹೆಚ್ಚು ಹೋಲಿಕೆ. अन्तरतमस्य भावः "ष्यञ्" (५-१-१२४)।

आन्तरागारिक ಆಂತರಾಗಾರಿಕ (वि०) ಅಂತಃಪುರದಲ್ಲಿ ನಿಯುಕ್ತನಾದ ಪುರುಷನ ಧರ್ಮ (ಅಂತಃಪುರದ ರಕ್ಷಣೆ ಮೊದಲಾದುದು). अन्तरागारस्य धर्म्यम् "ठक्" (४-४-४७)।

आन्तरिक्ष ಆಂತರಿಕ್ಷ (वि०) ಅಂತರಿಕ್ಷದಲ್ಲಿ ಉಂಟಾದ, ಆಕಾಶದಲ್ಲಿರುವ. अन्तरिक्षे भवः "अण्" (४-३-५३)।

आन्तर्गेहिक ಆಂತರ್ಗೇಹಿಕ (वि०) ಮನೆಯೊಳಗಿರುವ. अन्तर्गेहं भवः "ठञ्" (४-३-६७)।

आन्तर्य ಆಂತರ್ಯ (नं) 1. ಒಳಗಿನ ಭಾವ, ಹೃದಯದ ಆಶಯ, ಅಭಿಪ್ರಾಯ. अन्तरस्य भावः "ष्यञ्" (५-१-१२४)। 2. ಸಾದೃಶ್ಯ, ಹೋಲಿಕೆ. "यत्रानेकविधमान्तर्यं तत्र स्थानत आन्तर्यं बलीयः" (परि० १४)। 3. ಭೇದ, ವೈಲಕ್ಷಣ್ಯ, ವ್ಯತ್ಯಾಸ.

**आन्तिका** ಆಂತಿಕಾ (स्त्री०) ಜ್ಯೇಷ್ಠ ಸಹೋದರಿ, ಅಕ್ಕ.

**आन्त्र** ಆಂತ್ರ (न०) ಕರುಳು. अमत्यनेन—अम (गतौ) "क्त्र:" (उ० ४-१६४)। "आन्त्रै: कल्पितमङ्गल-प्रतिसरा:" मालती० ५-१८।

**आन्दोल** ಆಂದೋಲ (पु०) 1. ಉಯ್ಯಾಲೆ, ತೂಗು ಮಣೆ. आन्दोलयति अनेन—आन्दोल (दोलने)+णिच् कर० "घञ्" (३-३-१२१)। 2. ತೂಗುವಿಕೆ.

**आन्दोलक** ಆಂದೋಲಕ (वि०) ತೂಗುವವನು.

**आन्दोलन** ಆಂದೋಲನ (न०) 1. ಉಯ್ಯಾಲೆ, ತೂಗುಮಣೆ. आन्दोल (दोलने) + णिच् "ल्युट्" (३-३-११७)। 2. (ಚಾಮರವನ್ನು) ಆಡಿಸುವುದು.

**आन्दोलित** ಆಂದೋಲಿತ (वि०) 1. ಚಂಚಲವಾದ. 2. ತೂಗಲ್ಪಟ್ಟ. आन्दोल (दोलने) + णिच् "क्त:" (३-२-१०२)।

**आन्धसिक** ಆಂಧಸಿಕ (पु०) ಅಡಿಗೆಯವನು. अन्धो भक्तं शिल्पमस्य "ठक्" (४-४-५५)। "आरालिका आन्धसिका सूदा औदनिका गुणा:" अम०।

**आन्ध्य** ಆಂಧ್ಯ (न०) ಕುರುಡು, ಕಣ್ಣು ಕಾಣದಿರುವಿಕೆ. अन्धस्य भाव: "ष्यञ्" (५-१-१२४)।

**आन्ध्र** ಆಂಧ್ರ (पु० ಬ० ವ०) 1. ಆಂಧ್ರದೇಶ, ತೆಲುಗು ದೇಶ. 2. ಆಂಧ್ರದೇಶದ ನಿವಾಸಿಗಳು. (पु०) 3. ಆಂಧ್ರದೇಶದ ದೊರೆ.

**आन्वाहिक** ಆನ್ವಾಹಿಕ (वि०) ಪ್ರತಿದಿನವೂ ಉಂಟಾಗುವ, ನಿತ್ಯವೂ ನಡೆಸಬೇಕಾದ. अहन्यहनि अन्वहम् तत्र भव: "ठञ्" (वा० ४-३-६०)।

**आन्वीक्षिकी** ಆನ್ವೀಕ್ಷಿಕೀ (स्त्री०) 1. ತರ್ಕಶಾಸ್ತ್ರ, ನ್ಯಾಯಶಾಸ್ತ್ರ, ನ್ಯಾಯದರ್ಶನ. अनु श्रवणानन्तरं ईक्षणं परीक्षणम् अन्वीक्षा, सा प्रयोजनमस्या: "ठक्" (५-१-१०९)। 2. ಅಧ್ಯಾತ್ಮವಿದ್ಯೆ. "आन्वीक्षिक्यात्मविद्या स्यादीक्षणात्सुखदु:खयो:। ईक्षमाणस्तया तत्त्वं हर्षशोकौ व्युदस्यति" काम० नी० २-११।

**आप** ಆಪ (पु०) 1. ಅಷ್ಟ ವಸುಗಳಲ್ಲೊಬ್ಬ. "ध्रुवो ध्रुव: सोमनामा तथापोऽप्यनिलोऽनल:। प्रत्यूषश्च प्रभासश्च वसवोऽष्टौ प्रकीर्तिता:" विष्णुध०। (न०) 2. ಜಲರಾಶಿ, ನೀರಿನ ಸಮೂಹ. अपां समूह: "अण्" (४-२-३७)।

**आपक** ಆಪಕ (वि०) ಹೊಂದುವ, ಪಡೆಯುವ. आप्लृ (व्याप्तौ) "ण्वुल्" (३-१-१३३)।

**आपगा** ಆಪಗಾ (स्त्री०) ನದಿ, ಹೊಳೆ. आपेन जलसमूहेन गच्छति—गम्लृ (गतौ) "ड:" (वा० ३-२-४८)। "श्रुतिप्रणयिनीं सोऽयमापगामापगामिव" चं० रा० १।

**आपगेय** ಆಪಗೇಯ (पु०) ಭೀಷ್ಮಾಚಾರ್ಯರು. आपगाया अपत्यम् "ढक्" (४-१-१२०)।

**आपण** ಆಪಣ (पु०) 1. ಅಂಗಡಿ. आसमन्तात् पणन्तेऽत्र—आ+पण (व्यवहारे स्तुतौ च) "घ:" (३-३-११९)। निपा०। "पूर्णापणं विपणिनो विपणीर्विभेजु:" माघ० ५-२४। 2. ಕ್ರಯ ಮತ್ತು ವಿಕ್ರಯಗಳ ವ್ಯವಹಾರ. आ + पण भावे "घञ्" (३-३-१८)।

**आपणिक** ಆಪಣಿಕ (पु०) 1. ವರ್ತಕ, ಕ್ರಯ ಮತ್ತು ವಿಕ್ರಯ ವ್ಯವಹಾರವುಳ್ಳವನು. आपणो व्यवहारोऽस्यास्ति—"ठन्" (५-२-११५)। 2. ವ್ಯಾಪಾರಸ್ಥಳದ ತೆರಿಗೆ, ಅಂಗಡಿಯಲ್ಲಿ ವಸೂಲಾಗುವ ವ್ಯಾಪಾರ ತೆರಿಗೆ. 3. ಪೇಟೆ ಧಾರಣೆ, ಮಾರಾಟದ ಪದಾರ್ಥಗಳ ದರ. (वि०) 4. ಅಂಗಡಿಯಿಂದ ಬಂದ, ವ್ಯಾಪಾರಸ್ಥಳದಿಂದ ಬಂದ(ಸುಂಕ). आपणादागत: "ठक्" (४-३-७५)।

**आपतत्** ಆಪತತ್ (वि०) ಎದುರಿಗೆ ಓಡಿಬರುವ. आ + पत्लृ (गतौ) "शतृ" (३-२-१२४)। "तमापतन्तं नृपतेरवध्यः वन्य: करीति श्रुतवान् कुमार:" रघु० ५-५०।

**आपतन** ಆಪತನ (न०) 1. ಸಂಭವ, ಘಟನೆ, ಆಗುಹೋಗು. 2. ಆಗಮನ, ಬರುವಿಕೆ, ತಲುಪುವುದು. 3. ತಿಳಿವಳಿಕೆ, ಜ್ಞಾನ. "प्राकरणिकादर्थात् अप्राकरणिकार्थस्यापतनम्"। 4. ತಾನಾಗಿ ಬೀಳುವುದು, ಸ್ವಭಾವವಾಗಿ ಕಳಚಿಕೊಳ್ಳುವುದು. आ + पत्लृ (गतौ) भावे "ल्युट्" (३-३-११५)।

**आपतित** ಆಪತಿತ (वि०) 1. ಸಂಭವಿಸಿದ, ಅಕಸ್ಮಾತ್ತಾಗಿ ನಡೆದ. 2. ಕೆಳಕ್ಕೆ ಬಿದ್ದ, ಕಳಚಿಕೊಂಡ. आ + पत्लृ (गतौ) "क्त:" (३-४-७२)। 3. ಅಕಸ್ಮಾತ್ತಾಗಿ ಬಂದ, ಹಠಾತ್ತಾಗಿ ಬಂದು ಸೇರಿದ.

**आपत्कल्प** ಆಪತ್ಕಲ್ಪ (पु०) ಆಪತ್ಕಾಲದಲ್ಲಿ ಮಾಡಬಹುದಾದ ಕಾರ್ಯದ ವಿಧಿ. आपदि उचित: कल्प: विधि:। [ಬ್ರಾಹ್ಮಣನು ಆಪತ್ಕಾಲದಲ್ಲಿ ಕ್ಷತ್ರಿಯ ವೃತ್ತಿಯನ್ನಾಗಲಿ ವೈಶ್ಯವೃತ್ತಿಯನ್ನಾಗಲಿ ಅವಲಂಬಿಸಿ ಜೀವಿಸಬಹುದು.] "अब्राह्मणादध्ययनमापत्काले विधीयते" मनु० २-२४१।

**आपत्काल** ಆಪತ್ಕಾಲ (पु०) ಕಷ್ಟದಿಂದ ಕೂಡಿದ ಕಾಲ, ತೊಂದರೆಯ ಕಾಲ.

आपत्कालिक ಆಪತ್ಕಾಲಿಕ (वि०) ತೊಂದರೆಯ ಕಾಲದಲ್ಲಿ ಉಂಟಾದ. आपत्काले भवः "ठञ्" "ञिठो" वा (ग० ४-२-११६)। स्त्रियाम् ञजि "ङीप्" (४-१-१५)। ञिठे टाप् (४-१-४)।—कालिकी —ಕಾಲಿಕೀ, —कालिका—ಕಾಲಿಕಾ.

आपत्ति ಆಪತ್ತಿ (स्त्री०) 1. ಆಪತ್ತು, ತೊಂದರೆ, ಕಷ್ಟ. आ + पद (गतौ) "क्तिन्" (३-३-९४)। 2. ಪ್ರಾಪ್ತಿ, ಹೊಂದುವಿಕೆ, ಪಡೆಯುವುದು. 3. ಅನಿಷ್ಟಪ್ರಸಂಗ, ಅನಿಷ್ಟಘಟನೆ. 4. ಆಪಾದ್ಯಮಾನ ಅರ್ಥದಿಂದ ಉಪಪಾದಕಕಲ್ಪನೆ. ["अर्थापत्ति" ಪದದಲ್ಲಿ ನೋಡಿ.]

आपद् ಆಪದ್ (स्त्री०) ತೊಂದರೆ, ಕಷ್ಟ. आ + पद (गतौ) "क्विप्" (वा० ३-३-९४)। "सहसा विदधीत न क्रियामविवेकः परमापदां पदम्" किरा० २-३०। "उपपन्नं ननु शिवं सप्तस्वङ्गेषु यस्य मे। दैवीनां मानुषीणां च प्रतिहर्ता त्वमापदाम्" रघु० १-६०।

आपन्न ಆಪನ್ನ (वि०) 1. ವಿಪತ್ತಿಗೆ ಒಳಗಾಗಿರುವವನು, ಕಷ್ಟಕ್ಕೆ ಸಿಕ್ಕಿರುವವನು. आ + पद (गतौ) "क्तः" (३-४-७२)। "आपन्नाभयसत्रेषु दीक्षिताः खलु पौरवाः" शाकु० २-१६। 2. ಹೊಂದಲ್ಪಟ್ಟ, ಪಡೆಯಲ್ಪಟ್ಟ.

आपन्नसत्त्वा ಆಪನ್ನಸತ್ತ್ವಾ (स्त्री०) ಗರ್ಭಿಣಿ, ಬಸುರು ಹೆಂಗಸು. आपन्नं सत्त्वं प्राणी यया। "सममापन्नसत्त्वास्ता रेजुरापाण्डुरत्विषः" रघु० १०-५९।

आपमित्यक ಆಪಮಿತ್ಯಕ (वि०) ಬದಲಾವಣೆಯಿಂದ ಉಂಟಾದ, ಒಂದನ್ನು ಕೊಟ್ಟು ಅದಕ್ಕೆ ಬದಲಾಗಿ ಪಡೆದ. अपमित्य परिवर्त्य निर्वृत्तम् "कक्" (४-४-२१)।

आपराह्णिक ಆಪರಾಹ್ಣಿಕ (वि०) 1. ಅಪರಾಹ್ಣದಲ್ಲಿರುವ, ಅಪರಾಹ್ಣದಲ್ಲಿ ಉಂಟಾದ. अपराह्णे भवः "ठञ्" (४-३-११)। 2. ಅಪರಾಹ್ಣಕಾಲದಲ್ಲಿ ಮಾಡಲ್ಪಟ್ಟ. अपराह्णेन निर्वृत्तं "ठञ्" (५-१-७९)।

आपस् ಆಪಸ್ (न०) ಜಲ, ನೀರು. आप्लृ (व्याप्तौ) "असुन्" (उ० ४-२०७)।

आपस्तम्ब ಆಪಸ್ತಂಬ (पु०) ಆಪಸ್ತಂಬ ಋಷಿ, ಧರ್ಮಶಾಸ್ತ್ರಕಾರರಾದ ಒಬ್ಬ ಋಷಿ. ಇವರಿಂದ ರಚಿತವಾದ ಗ್ರಂಥಗಳು: 1. ಆಪಸ್ತಂಬ ಧರ್ಮಸೂತ್ರ. 2. ಆಪಸ್ತಂಬ ಗೃಹ್ಯಸೂತ್ರ. 3. ಆಪಸ್ತಂಬ ಶ್ರೌತ ಸೂತ್ರ.

आपाक ಆಪಾಕ (पु०) ಆವಿಗೆ ಮನೆ, ಕುಂಬಾರನು ಮಣ್ಣಿನ ಪಾತ್ರೆಗಳನ್ನು ಬೇಯಿಸುವ ಸ್ಥಳ. आसमन्तात् परिवेष्ट्य पच्यतेऽत्र—आ + डु पचष् (पाके) "घञ्" (३-३-१२१)।

आपात ಆಪಾತ (पु०) 1. ಅನಿರೀಕ್ಷಿತವಾದ ಆಗಮನ. आ + पत्लृ (गतौ) "घञ्" (३-३-१८)। "गाङ्डापात विश्लिष्टमेघनादास्त्रबन्धनः" रघु० १२-७६। 2. ವಿವೇಚನೆ ಮಾಡದೆ ಅರ್ಥಮಾಡಿಕೊಳ್ಳುವಿಕೆ. "आपाततो यदर्थस्य पौनरुक्त्येन भासनम्" सा० द० १०-२। 3. ಪ್ರಾರಂಭ, ಉಪಕ್ರಮ. "शक्तः परजने दाता स्वजने दुःखजीविनि। मध्वापातो विषास्वादः स धर्मप्रतिरूपकः" मनु० ११-९। 4. ವರ್ತಮಾನಕಾಲ, ತತ್ಕಾಲ. "आपातरम्या विषयाः पर्यन्तपरितापिनः" किरा० ११-१२। "तदात्वे पात आपातः" वैज०।

आपातलिका ಆಪಾತಲಿಕಾ (स्त्री०) ವೃತ್ತರತ್ನಾಕರದಲ್ಲಿ ಹೇಳಿರುವ ಮಾತ್ರಾವೃತ್ತದ ಒಂದು ಭೇದ. "आपातलिका कथितेयं भाद्गुरुकावथ पूर्ववदन्यत्" वृ० र०।

आपाततस् ಆಪಾತತಸ್ (अव्य०) 1. ಅಕಸ್ಮಾತ್ತಾಗಿ, ಅನಿರೀಕ್ಷಿತವಾಗಿ. 2. ವಿವೇಚನೆ ಮಾಡದೆ, ಸರಿಯಾಗಿ ತಿಳಿದುಕೊಳ್ಳದೆ. "आपाततो यदर्थस्य पौनरुक्त्येन भासनम्" सा० द० १०-२।

आपाद ಆಪಾದ (पु०) 1. ಆಗಮನ. आ + पद (गतौ) "घञ्" (३-३-१८)। 2. ಪ್ರಾಪ್ತಿ. ಹೊಂದುವಿಕೆ. (अव्य०) 3. ಕಾಲಿನವರೆಗೂ. पादमभिव्याप्य। अव्ययी०।

आपादन ಆಪಾದನ (न०) 1. ಸಂಪಾದನೆ. 2. ಆಪಾದನೆ, ತಪ್ಪುಹೊರಿಸುವಿಕೆ, ದೋಷಾರೋಪಣೆ. आ + पद (गतौ) + णिच् "ल्युट्" (३-३-११५)।

आपान ಆಪಾನ (न०) 1. ಪಾನಗೋಷ್ಠಿ, ಮದ್ಯಪಾನಕ್ಕಾಗಿ ಒಟ್ಟಿಗೆ ಕಲೆತು ಕೂಡುವ ಸ್ಥಳ. आ संभूय पिबन्त्यत्र—आ + पा (पाने) अधि० "ल्युट्" (३-३-११७)। 2. ಒಟ್ಟಿಗೆ ಕಲೆತು ಪಾನ ಮಾಡುವುದು. आ + पा भावे "ल्युट्" (३-३-११५)। "ताम्बूलीनां दलैस्तत्र रचितापानभूमयः" रघु० ४-४२।

आपायिन् ಆಪಾಯಿನ್ (वि०) ಪಾನಮಾಡುವ, ಕುಡಿಯುವ. आपिबति—आ + पा (पाने) "णिनिः"

(३-२-७८)। स्त्रियाम् "ङीप्" (४-१-५)। आपायिनी ಆಪಾಯಿನೀ.

आपालि ಆಪಾಲಿ (पुं०) ಹೇನು, ಕೂರೆ. आपार्थं (रक्त) पानार्थं अलति—अल (भूषणादौ) "इन्" (उं० ४-११७)।

आपिञ्जर ಆಪಿಂಜರ (पुं०) 1. ಹೊಂಬಣ್ಣ, ಹಳದಿ ಬಣ್ಣ. (नं०) 2. ಸುವರ್ಣ, ಚಿನ್ನ. आ ईषत् पिञ्जरम्। (वि०) 3. ಹೊಂಬಣ್ಣದ, ಹಳದಿ ಬಣ್ಣದ. "आपिञ्जरा बद्धरजःकणत्वात्" रघु० १६-५१।

आपिशल ಆಪಿಶಲ (पुं०) 1. ಆಪಿಶಲಿಯ ಗ್ರಂಥವನ್ನು ಓದುವ ಶಿಷ್ಯ. आपिशलिना प्रोक्तमधीते "अण्" (४-२-११२)। "अण्" (४-२-५९)। "लुक्" (४-२-६४)।

आपिशलि ಆಪಿಶಲಿ (पुं०) ವ್ಯಾಕರಣಶಾಸ್ತ್ರ ಪ್ರವರ್ತಕರಲ್ಲೊಬ್ಬರು, ಅಷ್ಟ ವೈಯಾಕರಣರಲ್ಲೊಬ್ಬರು. अपिशलस्यापत्यम् "इञ्" (४-१-९५)। "इन्द्रश्चन्द्रः काशकृत्स्नापिशलिः शाकटायनः। पाणिन्यमरजैनेन्द्रा जयन्त्यष्टादिशाब्दिकाः"।

आपी ಆಪೀ (वि०) ದೊಡ್ಡದಾದ, ದಪ್ಪನಾದ, ಸ್ಥೂಲವಾದ. आ+ओप्यायी (वृद्धौ) "क्विप्" (३-२-७६)।

आपीड ಆಪೀಡ (पुं०) 1. ಹಾರ, ಪುಷ್ಪಮಾಲೆ. आपीडयति—आ + पीड (अवगाहने) + णिच् "अच्" (३-१-१३४)। 2. ತಲೆಯ ಆಭರಣ, ಶಿರೋಭೂಷಣ. "चूडापीडकपालसंकुलगलन्मन्दाकिनीवारयो विद्युत्प्रायललाटलोचनशिखिज्वालावमिश्रत्विषः" मालती० १-१। (वि०) 3. ಪೀಡಿಸುವ, ಹಿಂಸಿಸುವ. 4. ಅಮುಕುವ, ಹಿಸುಕುವ.

आपीडन ಆಪೀಡನ (नं०) 1. ಅಮುಕುವುದು, ಹಿಸುಕುವುದು, ಹಿಂಡುವುದು. 2. ನೋಯಿಸುವುದು, ಹಿಂಸಿಸುವುದು. 3. ಆಲಿಂಗನ, ಅಪ್ಪಿಕೊಳ್ಳುವುದು. आ + पीड (अवगाहने) भावे "ल्युट्" (३-३-११५)।

आपीडित ಆಪೀಡಿತ (वि०) 1. ಹಿಸುಕಲ್ಪಟ್ಟ, ಹಿಂಡಲ್ಪಟ್ಟ. 2. ಆಲಿಂಗಿಸಲ್ಪಟ್ಟ, ಅಪ್ಪಿಕೊಳ್ಳಲ್ಪಟ್ಟ. 3. ತಲೆಯ ಆಭರಣದಿಂದ ಅಲಂಕರಿಸಲ್ಪಟ್ಟ. आ + पीड (अवगाहने) "क्तः" (३-२-१०२)। 4. ನೋಯಿಸಲ್ಪಟ್ಟ, ಹಿಂಸಿಸಲ್ಪಟ್ಟ.

आपीत ಆಪೀತ (वि०) 1. ಹೊಂಬಣ್ಣದ, ಹಳದಿ ಬಣ್ಣದ. आसमन्तात् पीतम्। 2. ಸ್ವಲ್ಪ ಕುಡಿಯಲ್ಪಟ್ಟ आ ईषत् पीतम्—आ+पा (पाने) "क्तः" (३-२-१०२)।

आपीन ಆಪೀನ (पुं०) 1. ಕೂಪ, ಬಾವಿ. (नं०) 2. ಹಸು ಮೊದಲಾದ ಪ್ರಾಣಿಗಳ ಕೆಚ್ಚಲು. आ + ओप्यायी (वृद्धौ) "क्तः" (३-४-७२)। पीभावः (वा० ६-१-२८)। आपीनोऽन्धुः। आपीनमूधः। सि० कौ०। "आपीनभारोद्वहनप्रयत्नाद्गृष्टिर्गुरुत्वाद्वपुषो नरेन्द्रः" रघु० २-१८। (वि०) 3. ಚೆನ್ನಾಗಿ ದಪ್ಪನಾಗಿರುವ. 4. ಸ್ವಲ್ಪ ದಪ್ಪನಾಗಿರುವ.

आपूपिक ಆಪೂಪಿಕ (पुं०) 1. ಅಪೂಪಗಳ ರಾಶಿ. अपूपानां समूहः "ठक्" (४-२-४८)। (वि०) 2. ರೊಟ್ಟಿ ಮಾಡುವವನು, ಮಿಠಾಯಿ ತಯಾರಿಸುವವನು, ತಿಂಡಿಮಾಡುವವನು. अपूपः शिल्पमस्य "ठक्" (४-४-५५)। 3. ರೊಟ್ಟಿಯನ್ನು ತಿನ್ನುವ ಸ್ವಭಾವದವನು. अपूपभक्षणं शीलमस्य "ठक्" (४-४-६१)। 4. ರೊಟ್ಟಿಯನ್ನು ಮಾರುವವನು. अपूपः पण्यमस्य "ठक्" (४-४-५१)। 5. ರೊಟ್ಟಿಯನ್ನು ತಿನ್ನಲು ಹಿತವಾದ (ಬೆಲ್ಲ ಮುಂತಾದುದು). अपूपभक्षणे साधु "ठञ्" (४-४-१०३)। 6. ರೊಟ್ಟಿಯನ್ನು ತಿನ್ನುವುದು ಹಿತವಾಗಿರುವ (ಮನುಷ್ಯ). अपूपभक्षणं हितमस्मै "ठक्" (४-४-६५)।

आपूप्य ಆಪೂಪ್ಯ (पुं०) ರೊಟ್ಟಿಯನ್ನು ತಯಾರಿಸುವ ಹಿಟ್ಟು. अपूपाय साधुः "यत्" (४-४-९८)।

आपूर ಆಪೂರ (पुं०) 1. ನೀರಿನ ಪ್ರವಾಹ. आपूरयति —आ+पूरी (आप्यायने)+णिच् "अच्" (३-१-१३४)। "स्वेदापूरो युवतिसरितां व्याप गण्डस्थलानि" माघ० ७-७४। 2. ಚೆನ್ನಾಗಿ ತುಂಬುವುದು. भावे "घञ्" (३-३-१८)।

आपूरण ಆಪೂರಣ (नं०) 1. ಚೆನ್ನಾಗಿ ತುಂಬುವುದು, ಎಲ್ಲಾ ಕಡೆಯಲ್ಲೂ ತುಂಬುವುದು. आ + पूरी (आप्यायने) भावे "ल्युट्" (३-३-११५)। (वि०) 2. ಚೆನ್ನಾಗಿ ತುಂಬುವ. आ + पूरी "ल्युः" (३-१-१३४)।

आपूरित ಆಪೂರಿತ (वि०) 1. ಚೆನ್ನಾಗಿ ತುಂಬಲ್ಪಟ್ಟ (ಪಾತ್ರೆ). 2. ಚೆನ್ನಾಗಿ ಸುತ್ತಲೂ ಹರಡಲ್ಪಟ್ಟ. आ + पूरी (आप्यायने) + णिच् "क्तः" (३-२-१०२)।

आपूर्ण ಆಪೂರ್ಣ (वि०) ಚೆನ್ನಾಗಿ ತುಂಬಲ್ಪಟ್ಟ, ಸಂಪೂರ್ಣವಾಗಿರುವ. आ+पूरी (आप्यायने) "क्तः" (३-२-१०२)।

**आपूर्यमाण** ಆಪೂರ್ಯಮಾಣ (वि०) ಚೆನ್ನಾಗಿ ತುಂಬಲ್ಪಡುವ. आ + पृ (पालनपूरणयोः) कर्म० "शानच्" (३-२-१२४)। "आपूर्यमाणमचलप्रतिष्ठं समुद्रमापः प्रविशन्ति यद्वत्" गीता २-७०।

**आपूष** ಆಪೂಷ (न०) ತವರ. आ + पूष (वृद्धौ) "घञ्" (३-३-१२१)।

**आपृच्छा** ಆಪೃಚ್ಛಾ (स्त्री०) 1. ತಿಳಿದುಕೊಳ್ಳುವ ಅಪೇಕ್ಷೆ, ಜಿಜ್ಞಾಸೆ. 2. ಕುಶಲಪ್ರಶ್ನೆ. 3. ಸಂಭಾಷಣೆ, ಮಾತನಾಡುವುದು, ಆಲಾಪ. आ + प्रच्छ (ज्ञीप्सायाम्) "अः" (३-३-१०३)।

**आपृच्छ्य** ಆಪೃಚ್ಛ್ಯ (अव्य०) ಕೇಳಿ, ಪ್ರಶ್ನೆಮಾಡಿ, ತಿಳಿದುಕೊಳ್ಳಲು ಅಪೇಕ್ಷಿಸಿ. आ+प्रच्छ (ज्ञीप्सायाम्) "ल्यप्" (७-१-३७)।

**आपेक्षिक** ಆಪೇಕ್ಷಿಕ (वि०) ಅಪೇಕ್ಷೆಯಿಂದ ಬಂದ, ಇಷ್ಟದಂತೆ ಲಭಿಸಿದ. अपेक्षया निर्वृत्तम् "ठञ्" (५-१-७९)।

**आपोक्लिम** ಆಪೋಕ್ಲಿಮ (न०) ಲಗ್ನದಿಂದ 3, 6, 9 ಮತ್ತು 12 ನೆಯ ಸ್ಥಾನಗಳು. "तृतीयं षष्ठनवममन्त्यं चापोक्लिमं विदुः"।

**आपोमय** ಆಪೋಮಯ (न०) 1. ಜಲವಿಕಾರ. (वि०) 2. ಜಲಮಯವಾದ, ನೀರಿನಿಂದ ತುಂಬಿದ. आपस् विकारार्थे प्राचुर्ये वा "मयट्" (४-३-१४३)।

**आपोऽशन** ಆಪೋಽಶನ (न०) ಭೋಜನಕ್ಕೆ ಪೂರ್ವದಲ್ಲಿ ಮತ್ತು ಭೋಜನಾನಂತರ ಆಹಾರಕ್ಕೆ ಆಸ್ತರಣ ಮತ್ತು ಪಿಧಾನರೂಪವಾಗಿ ಮಂತ್ರಪೂರ್ವಕವಾಡುವ ಜಲಪ್ರಾಶನ (ನೀರು ಕುಡಿಯುವುದು). आपस् + अश (भोजने) "ल्युट्" (३-३-११५)। ಭೋಜನಕ್ಕೆ ಮೊದಲು ಪೂರ್ವಾಪೋಶನ. ಭೋಜನಾನಂತರ ಉತ್ತರಾಪೋಶನ.

**आप्त** ಆಪ್ತ (वि०) 1. ಹೊಂದಲ್ಪಟ್ಟ, ಪಡೆಯಲ್ಪಟ್ಟ. 2. ನಂಬಲ್ಪಟ್ಟ, ವಿಶ್ವಾಸವಿಡಲ್ಪಟ್ಟ, ಸಭ್ಯ, ಹಿತವನ್ನು ಬಯಸುವ. आप्लृ (व्याप्तौ) "क्तः" (३-२-१०२)। "कुमारभृत्याकुशलैरनुष्ठिते भिषग्भिराप्तैरथ गर्भभर्मणि" रघु० ३-१२। 3. ಪ್ರವೀಣ, ನಿಪುಣ, ಚತುರ. "प्राजकश्चेद्भवेदाप्तः प्राजको दण्डमर्हति" मनु० ८-२९४। 4. ಸಮೀಪಸಂಬಂಧವುಳ್ಳ, ಹೆಚ್ಚು ಲಂಚಯವುಳ್ಳ, ಅಧಿಕ ಸಲಿಗೆಯುಳ್ಳ. "आप्तबन्धुरहितैरहं सुतः" यादं० १७-१२७। 5. ಬಂಧು, ನೆಂಟ. "निग्रहात्स्वसुराप्तानां वधाच्च धनदानुजः" रघु० १२-५२। 6. ಸರಿಯಾದ ಕಾರಣದಿಂದ ಕೂಡಿದ, ಯುಕ್ತಿಯಿಂದ ಕೂಡಿದ. 7. ಧಾರಾಳವಾದ, ವಿಶೇಷವಾದ, ಹೇರಳವಾದ. "यजेत राजा क्रतुभिर्विविधैराप्तदक्षिणैः" मनु० ७-७९।

**आप्तकाम** ಆಪ್ತಕಾಮ (पु०) 1. ಪರಮಾತ್ಮ. (वि०) 2. ಇಷ್ಟಾರ್ಥವನ್ನು ಹೊಂದಿರುವ, ಮನೋರಥವನ್ನು ಪಡೆದ. "आप्तकाम! सृजसि त्रिजगत्किम्" नैष० २१-१०५। 3. ಪ್ರಾಪಂಚಿಕ ಸೌಖ್ಯವನ್ನು ತ್ಯಜಿಸಿದ, ಜಗತ್ತಿನ ಸಂಬಂಧವನ್ನು ಬಿಟ್ಟಿರುವ, ಮುಕ್ತ. आप्तः प्राप्तः कामो येन।

**आप्तवचन** ಆಪ್ತವಚನ—वाक्य—ವಾಕ್ಯ. (न०) ನಂಬಿಕೆಯಾದ ಮಾತು, ಯುಕ್ತಿಯಿಂದ ಕೂಡಿದ ಮಾತು.

**आप्तवाच्** ಆಪ್ತವಾಚ್ (स्त्री०) 1. ವೇದ. 2. ಸ್ಮೃತಿ, ಇತಿಹಾಸಾದಿಗಳು. आप्ता वाक्। "आप्तवागनुमानाभ्यां साध्यं त्वां प्रति का कथा" रघु० १०-२८। 3. ನಂಬಿಕೆಗರ್ಹನಾದವನ ಮಾತು. (वि०) 4. ನಂಬಿಕೆಯಾದ ಮಾತುಳ್ಳ, ಯಥಾರ್ಥವಾದ ಮಾತುಳ್ಳ. आप्ता वाग्यस्य।

**आप्तश्रुति** ಆಪ್ತಶ್ರುತಿ (स्त्री०) 1. ವೇದ. 2. ಸ್ಮೃತಿ, ಇತಿಹಾಸಾದಿಗಳು.

**आप्ति** ಆಪ್ತಿ (स्त्री०) 1. ಹೊಂದುವಿಕೆ, ಪಡೆಯುವಿಕೆ. 2. ಸಂಬಂಧ, ಸಂಯೋಗ. आप्लृ (व्याप्तौ) "क्तिन्" (३-३-९४)। "प्राप्तिसम्बन्धयोराप्तिः" शाश्व०। "आप्तिः संबन्धलाभयोः" हेम०। 3. ಸ್ತ್ರೀಸಂಬಂಧ. "आप्तिः स्त्रीयोगसंप्राप्त्योः" मेदि०। 4. ಸೇರುವುದು, ತಲುಪುವುದು. 5. ಯುಕ್ತತೆ, ಔಚಿತ್ಯ.

**आप्य** ಆಪ್ಯ (न०) 1. ಜಲವಿಕಾರ, ನೀರಿನಿಂದ ಉಂಟಾದ ನೊರೆ ಮುಂತಾದುದು. अपामिदम् "अण्" (४-३-१२०)। ततः स्वार्थे "ष्यञ्" (वा० ७-३-३१)। 2. ಹೊಂದಲು ಯೋಗ್ಯವಾದ, ಪಡೆಯಲು ಅರ್ಹವಾದ. आप्तुं योग्यम्—आप्लृ (व्याप्तौ) "ण्यत्" (३-१-१२४)।

**आप्यान** ಆಪ್ಯಾನ (न०) 1. ಪ್ರೀತಿ, ಅನುರಾಗ. 2. ವೃದ್ಧಿ, ಬೆಳವಣಿಗೆ. (वि०) 3. ಪ್ರೀತಿ ಹೊಂದಿದ. 4. ವೃದಿ ಹೊಂದಿದ. आ + ओप्यायी (वृद्धौ) "क्तः" (३-४-७२)। नत्वम् (८-२-४५)।

**आप्यायन ಆಪ್ಯಾಯನ** (नं०) 1. ಪ್ರೀತಿಸುವುದು. 2. ತೃಪ್ತಿಪಡಿಸುವುದು. 3. ವೃದ್ಧಿಪಡಿಸುವುದು. आ+ प्यायी "ल्युट्" (३-३-११५)। 4. ಪ್ರೀತಿ, ಅನುರಾಗ. 5. ವೃದ್ಧಿ, ಬೆಳವಣಿಗೆ. (वि०) 6. ಬೆಳೆಸುವ, ಅಧಿಕಪಡಿಸುವ, ಅಭಿವೃದ್ಧಿಗೆ ಕಾರಣವಾದ. आ + प्यायी "ल्युः" (३-१-१३४)।

**आप्यायित ಆಪ್ಯಾಯಿತ** (वि०) 1. ತೃಪ್ತಿಪಡಿಸಲ್ಪಟ್ಟ, 2. ಪ್ರೀತಿಸಲ್ಪಟ್ಟ, आ + प्यायी + णिच् "क्तः" (३-२-१०२)। "तदुक्तिभिस्स्वादुतमाभिरासीदाप्यायितो नूनमनाविलाभिः" यादं० १३-३७। 3. ಬೆಳೆಸಲ್ಪಟ್ಟ, ಹೆಚ್ಚಿಸಲ್ಪಟ್ಟ.

**आप्रच्छन ಆಪ್ರಚ್ಛನ** (नं०) 1. ಬಂಧುಗಳ ಭೇಟಿಯ ಕಾಲದಲ್ಲಿ ಮಾಡುವ (ಪರಸ್ಪರ) ಕುಶಲಪ್ರಶ್ನೆ. 2. ಹೊರಡುವಾಗ ಪಡೆಯುವ ಅಪ್ಪಣೆ.

**आप्रच्छन्न ಆಪ್ರಚ್ಛನ್ನ** (वि०) ಬಹಳ ಅಂತರಂಗವಾದ, ಬಹಳ ರಹಸ್ಯವಾದ. आ + प्र + छदिर् (अपवारणे) "क्तः" (३-२-१०२)।

**आप्रपद ಆಪ್ರಪದ** (अव्य०) ಕಾಲಿನ ತುದಿಯವರೆಗೂ, ತುದಿಗಾಲಿನವರೆಗೂ. प्रपदमभिव्याप्य। अव्ययी०।

**आप्रपदीन ಆಪ್ರಪದೀನ** (वि०) ಕಾಲಿನ ತುದಿಯ ವರೆಗೂ ಜೋಲಾಡುವ. आप्रपदं प्राप्नोति—"खः" (५-२-८)।

**आप्लव ಆಪ್ಲವ** (पुं०) 1. ಸ್ನಾನ. 2. ನೀರನ್ನು ಚಿಮುಕಿಸುವುದು. आ + प्लुङ् (गतौ) "अप्" (३-३-५७)। (वि०) 3. ಸ್ನಾನಮಾಡುವ. आप्लवते— आ + प्लुङ् "अच्" (३-१-१३४)।

**आप्लवन ಆಪ್ಲವನ** (नं०) ಸ್ನಾನ. आ + प्लुङ् (गतौ) भावे "ल्युट्" (३-३-११५)।

**आप्लवव्रतिन् ಆಪ್ಲವವ್ರತಿನ್** (पुं०) ಸ್ನಾತಕ, ಸಾಂಗ ವೇದಾಧ್ಯಯನ ಮಾಡಿ ವಿವಾಹಕ್ಕೆ ಮುಂಚಿತವಾಗಿ ವ್ರತಸ್ನಾನ ಮಾಡಿದವನು, ಬ್ರಹ್ಮಚರ್ಯಾಶ್ರಮ ವನ್ನು ಬಿಟ್ಟು (ಮುಂದಿನ) ಗೃಹಸ್ಥಾಶ್ರಮವನ್ನು ಸ್ವೀಕರಿಸದವನು. आप्लवश्चासौ व्रती च। "अलाभे चैव कन्यायाः स्नातकव्रतमाचरेत्"।

**आप्लाव ಆಪ್ಲಾವ** (पुं०) 1. ಸ್ನಾನ. 2. ನೀರನ್ನು ಚಿಮುಕಿಸುವುದು. 3. ನೀರಿನಲ್ಲಿ ಮುಳುಗಿಸುವುದು. 4. ಪ್ರವಾಹ, ತುಂಬಿ ನೀರು ಹರಿಯುವುದು. आ + प्लुङ् (गतौ) "घञ्" (३-३-५०)।

**आप्लावित ಆಪ್ಲಾವಿತ** (वि०) ನೀರಿನ ಪ್ರವಾಹದಲ್ಲಿ ಮುಳುಗಿಸಲ್ಪಟ್ಟ. आ + प्लुङ् (गतौ) + णिच् "क्तः" (३-२-१०२)।

आ + प्लुङ् "प्लुङ्" ಧಾತುವಿನಲ್ಲಿ ನೋಡಿ.

**आप्लुत ಆಪ್ಲುತ** (पुं०) 1. ಸ್ನಾತಕ, ಬ್ರಹ್ಮಚರ್ಯಾ ಶ್ರಮವನ್ನು ಬಿಟ್ಟು ಗೃಹಸ್ಥಾಶ್ರಮವನ್ನು ಸ್ವೀಕರಿಸ ದವನು. आ + प्लुङ् (गतौ) "क्तः" (३-४-७२)। (नं०) 2. ಸ್ನಾನ. भावे "क्तः" (३-३-११४)। (वि०) 3. ಸ್ನಾನಮಾಡಿದ. कर्तं० "क्तः"। "आप्लुतास्तीरमन्दारकुसुमोत्किरवीचिषु" कुमा० ६-५। 4. ನೆನೆದಿರುವ, ಒದ್ದೆಯಾದ, ಚಿಮುಕಿಸಲ್ಪಟ್ಟ. कर्म० "क्तः"। "यावन्नाश्यायते वेदिरभिषेकजलाप्लुता" रघु० १७-३७।

**आप्लुतव्रतिन् ಆಪ್ಲುತವ್ರತಿನ್** (पुं०) "आप्लवव्रतिन्" ಪದದ ಅರ್ಥ. आप्लुतस्य व्रतमस्त्यस्य "इनिः" (५-२-११५)।

**आप्लुत्य ಆಪ್ಲುತ್ಯ** (अव्य०) 1. ಸ್ನಾನಮಾಡಿ. 2. ಮೇಲಕ್ಕೆ ಹಾರಿ, ಮೇಲಕ್ಕೆ ನೆಗೆದು. आ + प्लुङ् (गतौ) "ल्यप्" (७-१-३७)।

**आप्लुष्ट ಆಪ್ಲುಷ್ಟ** (वि०) 1. ಚೆನ್ನಾಗಿ ಸುಡಲ್ಪಟ್ಟ. 2. ಸ್ವಲ್ಪ ಸುಡಲ್ಪಟ್ಟ. आ सम्यक् ईषद् वा प्लुष्टः— आ + प्लुष (दाहे) "क्तः" (३-२-१०२)।

**आबद्ध ಆಬದ್ಧ** (वि०) 1. ಕಟ್ಟಲ್ಪಟ್ಟ. आसमन्तात् बद्धः। "आबद्धप्रचुरपरार्ध्यकिंकिणीकः" माघ० ८-४५। 2. ಇಡಲ್ಪಟ್ಟ, ಸೇರಿಸಲ್ಪಟ್ಟ. आ + बन्ध (बन्धने) "क्तः" (३-२-१०२)। "मृगद्वन्द्वेषु पश्यन्तौ स्यन्दनाबद्धदृष्टिषु" रघु० १-४०। 3. ಮಾಡಲ್ಪಟ್ಟ, ತಯಾರಿಸಲ್ಪಟ್ಟ. 4. ತಡೆಯಲ್ಪಟ್ಟ. "पयोधिमाबद्धचलज्जलाविलं विलङ्घ्य लङ्कां निकषा हनिष्यति" माघ० १-६८। 5. ಹೊಂದಲ್ಪಟ್ಟ, ಪಡೆಯಲ್ಪಟ್ಟ. (नं०) 6. ಆಭರಣ, ಒಡವೆ, ಅಲಂಕಾರ. "अलङ्कारोऽपि चाबद्धः" त्रिकाण्ड०। 7. ನೊಗಕಟ್ಟು, ನೊಗವನ್ನು ಎತ್ತಿನ ಕತ್ತಿಗೆ ಕಟ್ಟುವ ಮಿಣಿ. 8. ಪ್ರೀತಿ.

**आबन्ध ಆಬಂಧ** (पुं०) 1. ನೊಗಕಟ್ಟು. 2. ದೃಢವಾಗಿ ಕಟ್ಟುವುದು. 3. ಪ್ರೀತಿ. आ + बन्ध (बन्धने) भावे करं० अधिं० वा "घञ्" (३-३-१८, १२१)। 4. ಸಂಬಂಧ. "प्रेमाबन्धविवर्धिताधिकरसा प्रीतिस्तु या सा त्वयि" रत्ना० ३-१८। भावे "ल्युट्" (३-३-११५)। आबन्धनम् ಆಬಂಧನವು.

**आबर्हं ಆಬರ್ಹ** (पुं०) 1. ಹಿಂಸಿಸುವುದು. आ + बर्ह (हिंसायाम्) भावे "घञ्" (३-३-१८)। 2. ಕಿತ್ತು ಒಗೆಯುವುದು. भावे "ल्युट्" (३-३-११५)। आबर्हणम् ಆಬರ್ಹಣಮ್.

**आबाध ಆಬಾಧ** (पुं०) 1. ಪೀಡೆ, ತೊಂದರೆ. 2. ತಡೆ, ಅಡ್ಡಿ. आ + बाधृ (विलोडने) भावे "घञ्" (३-३-१८)। "न चैनं पादतः कुर्यान्नप्राणाबाधमाचरेत्" मनु० ४-५५।

**आबाधा ಆಬಾಧಾ** (स्त्री०) 1. ಪೀಡೆ, ತೊಂದರೆ, ಹಿಂಸೆ. 2. ಕ್ಲೇಶ, ಕಷ್ಟ. आ + बाधृ (विलोडने) "अ:" (३-३-१०३)।

**आभरण ಆಭರಣ** (नं०) 1. ಭೂಷಣ, ಒಡವೆ. आ भ्रियतेऽनेन–आ+भृञ् (भरणे) "ल्युट्" (३-३-११७)। "किमित्यपास्याभरणानि यौवने धृतं त्वया वार्धकशोभि वल्कलम्" कुमा० ५-४४। 2. ಚೆನ್ನಾಗಿ ಪೋಷಿಸುವುದು. आ + भृञ् भावे "ल्युट्" (३-३-११५)।

**आभरित ಆಭರಿತ** (वि०) 1. ತುಂಬಲ್ಪಟ್ಟ. 2. ಅಲಂಕರಿಸಲ್ಪಟ್ಟ. आभरोऽस्य सञ्जातः "इतच्" (५-२-३६)।

**आभर्मन् ಆಭರ್ಮನ್** (नं०) ಚೆನ್ನಾಗಿ ಪೋಷಿಸುವಿಕೆ. आ + डु भृञ् (धारणपोषणयोः) "मनिन्" (उ० ४-१४५)।

**आभा ಆಭಾ** (स्त्री०) 1. ಕಾಂತಿ, ಪ್ರಕಾಶ, ಬೆಳಕು. 2. ಸಾದೃಶ್ಯ, ಹೋಲಿಕೆ, ಔಪಮ್ಯ. आ + भा (दीप्तौ) "अङ्" (३-३-१०६)। "मरुत्प्रयुक्ताश्च मरुत्सखाभं तमर्च्यमारादभिवर्तमानम्" रघु० २-१०।

**आभाति ಆಭಾತಿ** (स्त्री०) ಪ್ರತಿಬಿಂಬ, ಛಾಯೆ. आ + भा (दीप्तौ) "क्तिच्" (३-३-१७४)।

**आभाणक ಆಭಾಣಕ** (पुं०) ಲೋಕೋಕ್ತಿ, ಗಾದೆ.

**आभाषण ಆಭಾಷಣ** (नं०) 1. ಪರಸ್ಪರ ಮಾತಾಡುವುದು, ಸಂಭಾಷಣೆ. आ + भाष (व्यक्तायां वाचि) "ल्युट्" (३-३-११५)। "सम्बन्धमाभाषणपूर्वमाहुर्वृत्तः स नौ संगतयोर्वनान्ते" रघु० २-५८। 2. ಸಂಬೋಧನೆ.

**आभाष्य ಆಭಾಷ್ಯ** (वि०) 1. ಮಾತಾಡಲ್ಪಡುವ, ಮಾತಾಡಲು ಯೋಗ್ಯನಾದ. 2. ಸಂಬೋಧಿಸಲು ಯೋಗ್ಯನಾದ. आ+भाष (व्यक्तायां वाचि) "ण्यत्" (३-१-१२४)। (अव्य०) 3. ಸಂಬೋಧಿಸಿ. 4. ಮಾತನಾಡಿಸಿ. आ + भाष "ल्यप्" (७-१-३७)।

**आभास ಆಭಾಸ** (पुं०) 1. ಹೇತುವಿನಂತೆ ತೋರುವ ಮಿಥ್ಯೆಯಾದ ಹೇತು, ನಿಜವಲ್ಲದ ಹೇತು, ದುಷ್ಟ ಹೇತು. (हेतुवत्) आभासन्ते इति हेत्वाभासा: दुष्टहेतवः। ಹೇತ್ವಾಭಾಸವು (1) सव्यभिचारः, (2) विरुद्धः, (3) सत्प्रतिपक्षितः, (4) असिद्धः ಮತ್ತು (5) बाधितः ಎಂದು ಐದು ವಿಧ. ಇಂತಹ ದುಷ್ಟಹೇತುವಿನ ಜ್ಞಾನವು ಅನುಮಿತಿಪ್ರತಿಬಂಧಕವಾಗುವುದು. "अनुमितिप्रतिबन्धकयथार्थज्ञानविषयत्वम् (हेत्वाभासः)" दीपि०। 2. ಹೇತುವಿನ ದೋಷ. (हेतोः) आभासः। ಇದು (1) व्यभिचारः, (2) विरोधः, (3) सत्प्रतिपक्षः, (4) असिद्धिः ಮತ್ತು (5) बाधः ಎಂದು ಐದು ವಿಧ. 3. ಪ್ರತಿಬಿಂಬ, ಸಮಾನವಾಗಿ ತೋರುವ ಛಾಯೆ. आसमन्तात् भासते—आ + भासृ (दीप्तौ) "अच्" (३-१-१३४)। 4. ಸಾದೃಶ್ಯ, ಹೋಲಿಕೆ, ಸಾಮ್ಯ. "नभश्च रुधिराभासम्" रामा०। 5. ಉದ್ದೇಶ, ತಾತ್ಪರ್ಯ. 6. ಭ್ರಾಂತಿ, ತಪ್ಪು ತಿಳುವಳಿಕೆ, ಮಿಥ್ಯಾಜ್ಞಾನ. 7. ಭ್ರಾಂತಿಯ ವಿಷಯ, ತಪ್ಪಾಗಿ ತಿಳಿಯಲ್ಪಡುವ (ವಸ್ತು).

**आभासुर ಆಭಾಸುರ** (वि०) ಚೆನ್ನಾಗಿ ಪ್ರಕಾಶಿಸುವ. आ + भासृ (दीप्तौ) "घुरच्" (३-२-१६१)।

**आभास्वर ಆಭಾಸ್ವರ** (पुं०) 1. 64 ಗಣದೇವತೆಗಳ ಸಮುದಾಯ. (वि०) 2. ಚೆನ್ನಾಗಿ ಪ್ರಕಾಶಿಸುವ. आ + भासृ (दीप्तौ) "वरच्" (३-२-१७५)।

**आभिचरणिक ಆಭಿಚರಣಿಕ** (वि०) 1. ಶತ್ರುನಿಗ್ರಹ ಮತ್ತು ಶತ್ರುವಶೀಕರಣಗಳಿಗಾಗಿ ಮಾಡುವ ಮಾಟ, ಶೂನ್ಯ ಮೊದಲಾದುವುಗಳ ಮಂತ್ರ. 2. ಮಾಟ ಶೂನ್ಯ ಮುಂತಾದುವುಗಳ ಕ್ರಮ. अभिचरणं प्रयोजनमस्य "ठञ्" (५-१-१०९)। स्त्रियाम् "ङीप्" (४-१-१५)। –चरणिकी–ಚರಣಿಕೀ.

**आभिचारिक ಆಭಿಚಾರಿಕ** (वि०) "आभिचरणिक" ಪದದ ಅರ್ಥ. अभिचारः प्रयोजनमस्य "ठञ्" (५-१-१०९)। स्त्रियाम् "ङीप्" (४-१-१५)। –चारिकी–ಚಾರಿಕೀ.

**आभिजन ಆಭಿಜನ** (वि०) ವಂಶದಿಂದ ಬಂದ, ವಂಶಸಂಬಂಧವಾದ. अभिजनादागतः "अण्" (४-३-७४)। "तां पार्वतीमाभिजनेन नाम्ना बन्धुप्रियां बन्धुजनो जुहाव" कुमा० १-२६।

**आभिजात्य ಆಭಿಜಾತ್ಯ** (नं०) 1. ಸತ್ಕುಲಪ್ರಸೂತತ್ವ, ಶ್ರೇಷ್ಠ ಕುಲದಲ್ಲಿ ಹುಟ್ಟುವಿಕೆ. अभिजातस्य भावः "ष्यञ्" (५-१-१२४)। "इत्थं नः सहसाभिजात्यजनिता सेवैव देव्याः परम्" रत्ना० ३-१८। 2. ಪಾಂಡಿತ್ಯ, ವೈದುಷ್ಯ. 3. ನ್ಯಾಯ, ಕ್ರಮ. "न्याय्ये कुलीन-बुधयोरभिजातपदं विदुः" शाश्व०।

**आभिजित ಆಭಿಜಿತ** (वि०) "अभिजित्" ನಕ್ಷತ್ರದಲ್ಲಿ ಹುಟ್ಟಿದ. अभिजिति नक्षत्रे जातः "अण्" (४-३-२५)।

**आभिधा ಆಭಿಧಾ** (स्त्री०) "अभिधा" ಪದದ ಅರ್ಥ. स्वार्थे "अण्"।

**आभिधानिक ಆಭಿಧಾನಿಕ** (पु०) ಕೋಶಕಾರ, ನಿಘಂಟುವಿನ ಲೇಖಕ. अभिधानं वेत्ति "ठक्" (४-२-६३)।

**आभिमुख्य ಆಭಿಮುಖ್ಯ** (नं०) 1. ಎದುರಾಗುವಿಕೆ, ಮುಂಭಾಗದಲ್ಲಿರುವಿಕೆ. अभिमुखस्य भावः "ष्यञ्" (५-१-१२४)। "वैस्तैर्बन्धुवधूजनस्य वचनैर्नीताभिमुख्यं पुनः" रत्ना० १-२। 2. ಅನುಕೂಲವಾಗಿರುವಿಕೆ, ವಿರೋಧವಾಗಿಲ್ಲದಿರುವಿಕೆ. "विशेषादाभिमुख्येन चरणाद्व्यभिचारिणः" सा० द० ३-१४०।

**आभिरूपक ಆಭಿರೂಪಕ** (नं०) ಸೌಂದರ್ಯ. अभिरूपस्य भावः "वुञ्" (५-१-१३३)।

**आभिरूप्य ಆಭಿರೂಪ್ಯ** (नं०) ಸೌಂದರ್ಯ. अभिरूपस्य भावः "ष्यञ्" (५-१-१२४)। "अर्चकस्य तपोयोगा-दर्चनस्यातिशायनात्। आभिरूप्याच्च बिम्बानां देवः सान्निध्यमृच्छति"।

**आभिषिक्त ಆಭಿಷಿಕ್ತ** (वि०) ಅಭಿಷೇಕದಿಂದುಂಟಾದ. अभिषिक्तमभिषेकः, अभिषिक्तेन निर्वृत्तम् "अञ्" (४-२-७५)।

**आभिषेचनिक ಆಭಿಷೇಚನಿಕ** (वि०) 1. ಅಭಿಷೇಕದ ವಸ್ತು, ಅಭಿಷೇಕ ಸಂಬಂಧವಾದ ಪದಾರ್ಥ. अभि-षेचनमभिषेकः प्रयोजनमस्य "ठञ्" (५-१-१०९)। "आभिषेचनिकं यत्ते रामार्थमुपकल्पितम्" रामा०। स्त्रियाम् "ङीप्" (४-१-१५)। आभिषेचनिकी ಆಭಿಷೇಚನಿಕೀ. 2. ಸ್ನಾನಮಾಡುವ ವಿಧಾನ. 3. ಸ್ನಾನದ ಮಂತ್ರ ಮತ್ತು ಸ್ನಾನೋಪಯೋಗಿ ವಸ್ತು. अभिषेचनं स्नानं प्रयोजनमस्य "ठञ्"। ಸ್ನಾನವು ಏಳು ವಿಧ: "मान्त्रं भौमं तथाग्नेयं वायव्यं दिव्यमेव च। वारुणं मानसं चैव सप्त स्नानान्यनुक्रमात्"। (1) "आपोहिष्ठा"ದಿ ಮಂತ್ರಗಳಿಂದ ಮಾಡುವ ಪ್ರೋಕ್ಷಣೆಯು ಮಾಂತ್ರ. (2) ಮೃತ್ತಿಕಾಸ್ನಾನವು ಭೌಮ (ಪಾರ್ಥಿವಸ್ನಾನ). (3) ಭಸ್ಮಲೇಪನದಿಂದ ಮಾಡುವುದು ಆಗ್ನೇಯಸ್ನಾನ. (4) ಧೂಳಿನ ಲೇಪನದಿಂದ ಮಾಡುವುದು ವಾಯವ್ಯ. (5) ಆತಪಸ್ನಾನವು ದಿವ್ಯಸ್ನಾನವೆನಿಸುವುದು. (6) ಅವಗಾಹನ (ನೀರಿನಲ್ಲಿ ಮುಳುಗಿ ಮಾಡುವ) ಸ್ನಾನವು ವಾರುಣವು. (7) ವಿಷ್ಣುಸ್ಮರಣೆಯು ಮಾನಸಸ್ನಾನವು. "आपोहिष्ठादिभिर्मान्त्रं मृदा-लम्भश्च पार्थिवम्। आग्नेयं भस्मना स्नानं वायव्यं रजसा कृतम्। यत्तु सातपवर्षेण स्नानं तद्दिव्यमुच्यते। वारुण-श्चावगाहश्च मानसं विष्णुचिन्तनम्" योगियाज्ञवल्क्यः।

**आभिहारिक ಆಭಿಹಾರಿಕ** (वि०) 1. ಎದುರುಗೊಳ್ಳಲು ಉಪಯುಕ್ತವಾದ ವಸ್ತು, ಸ್ವಾಗತಿಸಲು ಯೋಗ್ಯವಾದ ಬಹುಮಾನ ವಸ್ತು. अभिहारः आभिमुख्येन हरणम् प्रयोजनमस्य "ठञ्" (५-१-१०९)। 2. ಭೇಟಿಯ ಕಾಲದಲ್ಲಿ ಕೊಡುವ ಗೌರವ ಕಾಣಿಕೆ.

**आभीक्ष्ण्य ಆಭೀಕ್ಷ್ಣ್ಯ** (नं०) ಪೌನಃಪುನ್ಯ, ವಿರಾಮವಿಲ್ಲದೆ ಕೆಲಸಮಾಡುವುದು, ಎಡೆಬಿಡದೆ ಮತ್ತೆ ಮತ್ತೆ ಮಾಡುವುದು. अभीक्ष्णस्य भावः "ष्यञ्" (५-१-१२४)।

**आभीर ಆಭೀರ** (पु०) 1. ಗೋಪಾಲಕ, ಗೊಲ್ಲ, ಬ್ರಾಹ್ಮಣನಿಂದ ವೈಶ್ಯ ಹೆಂಗಸಿನಲ್ಲಿ ಹುಟ್ಟಿದ, ಅಂಬಷ್ಠೆಯಲ್ಲಿ ಬ್ರಾಹ್ಮಣನಿಂದ ಜನಿಸಿದ ಬೆರಕೆ ಜಾತಿಯವನು. "ब्राह्मणादुग्रकन्यायामावृतो नाम जायते। आभीरोऽ-म्बष्ठकन्यायामायोगव्यां तु धिग्वणः" मनु० १०-१५। आसमन्तात् भियं राति--रा (दाने) "कः" (३-२-३)। [ಅಲ್ಪವಾದ ಭೀತಿಯ ಕಾರಣದಿಂದ ಹೆಚ್ಚು ಹೆದರುವ ಸ್ವಭಾವದವನು.] (पु० ब० व०) 2. ಆಭೀರದೇಶ. 3. ಆಭೀರದೇಶದ ನಿವಾಸಿ. 4. ಆಭೀರದೇಶದ ದೊರೆ. (स्त्री०)–री–ರೀ. 5. ಗೊಲ್ಲನ ಪತ್ನಿ. आभीरस्य स्त्री "ङीष्" (४-१-४८)। 6. ಗೊಲ್ಲರ ಜಾತಿಯ ಹೆಂಗಸು. जाति० "ङीष्" (४-१-६३)।

**आभील ಆಭೀಲ** (नं०) 1. ಕಷ್ಟ, ತೊಂದರೆ. आसमन्तात् भियं लाति--ला (आदाने) "कः" (३-२-३)। 2. ದುಃಖ, ವ್ಯಸನ. (वि०) 3. ಕಷ್ಟವುಳ್ಳ. 4. ಭಯಂಕರವಾದ. "आभीलानि प्राणिनः प्रत्यवस्यन् कालो नूनं व्याददावाननानि" माघ० १८-७८।

**आभुग्न** ಆಭುಗ್ನ (वि०) ಸ್ವಲ್ಪ ಬಗ್ಗಿಸಲ್ಪಟ್ಟ. आ ईषत् भुग्नम्—भुजो (कौटिल्ये) "क्तः" (३-२-१०२)। नत्वम् (८-२-४५)।

**आभूतसंप्लव** ಆಭೂತಸಂಪ್ಲವ (पु०) ಪ್ರಳಯ ಪರ್ಯಂತ ವಿರತಕ್ಕ ಲೋಕ, ಸತ್ಯಲೋಕ, ಬ್ರಹ್ಮಲೋಕ. "आभूतसंप्लवं स्थानममृतत्वं हि भाष्यते"।

**आभोग** ಆಭೋಗ (पु०) 1. ಪೂರ್ಣವಾಗಿರುವಿಕೆ, ತುಂಬಿರುವಿಕೆ. आभुज्यते—आ + भुज (परिपालनाभ्यवहारयोः) "घञ्" (३-३-१८)। "रुचिरकनककुम्भश्रीमदाभोगतुङ्गस्तनविनिहितहस्तस्वस्तिकाभिर्वधूभिः" मालती० ४-१०। 2. ಪ್ರಯತ್ನ. आभुज्यते फलमनेन कर० "घञ्" (३-३-१२१)। 3. ವರುಣನ ಛತ್ರಿ. 4. ಸುಖಾನುಭವ. "आभोगो वरुणच्छत्रे पूर्णतायत्नयोरपि" मेदि०। 5. ವಿಸ್ತಾರ, ಬಹುದೇಶ ವ್ಯಾಪ್ತಿ. "औज्ज्वल्यं परभागतः प्रकटयत्याभोगभीमं तमः" मालती० ५-११। (अव्य०) 6. ಭೋಗ ಪರ್ಯಂತ, ಅನುಭವಿಸುವವರೆಗೂ. भोगमनुभवमभिव्याप्य। अव्ययी०।

**आभ्यन्तर** ಆಭ್ಯಂತರ (वि०) ಮಧ್ಯದಲ್ಲಿರುವ, ಒಳಗಿರುವ, अभ्यन्तरे भवः "अण्" (४-३-५३)। 2. ಅಕ್ಷರಗಳನ್ನು ಉಚ್ಚರಿಸುವ ಸಮಯದಲ್ಲಿ ವರ್ಣೋತ್ಪತ್ತಿಗೆ ಪೂರ್ವಭಾವಿಯಾದ ಬಹಳ ಹತ್ತಿರದ ಪ್ರಯತ್ನ; ವರ್ಣೋತ್ಪತ್ತಿಗೆ ಆಭ್ಯಂತರ ಮತ್ತು ಬಾಹ್ಯಗಳೆಂದು ಎರಡು ಪ್ರಯತ್ನಗಳು ಕಾರಣವಾಗುವುವು. ಆಭ್ಯಂತರದಲ್ಲಿ (1) ಸ್ಪೃಷ್ಟ, (2) ಈಷತ್ ಸ್ಪೃಷ್ಟ, (3) ವಿವೃತ ಮತ್ತು (4) ಸಂವೃತಗಳೆಂದು ನಾಲ್ಕು ಭೇದಗಳು.

| ಪ್ರಯತ್ನ | ಹುಟ್ಟುವ ವರ್ಣಗಳು |
|---|---|
| (1) ಸ್ಪೃಷ್ಟ | .. ಕಾದಿಮಾಂತ ವರ್ಣಗಳು. (ಪಂಚವರ್ಗೀಯಾಕ್ಷರಗಳು). |
| (2) ಈಷತ್‌ಸ್ಪೃಷ್ಟ | .. ಯ, ರ, ಲ, ವ ವರ್ಣಗಳು. |
| (3) ವಿವೃತ | .. ಸ್ವರಗಳು ಮತ್ತು ಶ, ಷ, ಸ, ಹ ವರ್ಣಗಳು. |
| (4) ಸಂವೃತ | .. ಪ್ರಯೋಗವಶೆಯಲ್ಲಿರುವ ಹ್ರಸ್ವಾಕಾರ. |

**आभ्यवहारिक** ಆಭ್ಯವಹಾರಿಕ (वि०) ಭೋಜನಕ್ಕೆ ಯೋಗ್ಯವಾದ. अभ्यवहारे साधुः "ठक्" (४-४-१०३)।

**आभ्युदयिक** ಆಭ್ಯುದಯಿಕ (न०) 1. ಅಭ್ಯುದಯ ಶ್ರಾದ್ಧ, ನಾಂದೀಶ್ರಾದ್ಧ. अभ्युदयः प्रयोजनमस्य "ठञ्" (५-१-१०९)। [ಜಾತಕರ್ಮ, ಚೌಲ, ಉಪನಯನ, ಪುತ್ರವಿವಾಹ, ನಿಷೇಕ, ಪುಂಸವನಾದಿ ಶುಭಕರ್ಮಗಳಲ್ಲಿ ಪಿತೃತೃಪ್ತಿಗಾಗಿ ನಾಂದೀ ಶ್ರಾದ್ಧ ವನ್ನು ಆಚರಿಸಬೇಕು.] 2. ಕಾಮ್ಯಕರ್ಮ, ಆಸೆ ಹುಟ್ಟಿಸಿ ತನ್ನಲ್ಲಿ ಮನುಷ್ಯನು ಪ್ರವರ್ತಿಸುವಂತೆ ಮಾಡುವ ಕರ್ಮ, ಸ್ವರ್ಗಾಭಿಲಾಷೆಯಿಂದ ಮಾಡುವ ಜ್ಯೋತಿಷ್ಟೋಮಾದಿ ಯಾಗ. अभ्युदयः अभिवृद्धिः प्रयोजनमस्य "ठञ्"।

**आभ्रिक** ಆಭ್ರಿಕ (वि०) ಮರದ ಗುದ್ದಲಿಯಿಂದ ಅಗೆಯುವವನು. अभ्रया खनति—"ठक्" (४-४-२)। स्त्रियाम् "ङीप्" (४-१-१५)। आभ्रिकी ಆಭ್ರಿಕೀ.

**आम्** ಆಮ್ (अव्य०) 1. ನಿಶ್ಚಯಬುದ್ಧಿ. 2. ಅಂಗೀಕಾರ, ಒಪ್ಪಿಗೆ, ಸಮ್ಮತಿ. 3. ಪ್ರತಿವಚನ, ಉತ್ತರ. 4. ನೆನಪು, ಸ್ಮೃತಿ, ಸ್ಮರಣೆ. अम (गत्यादौ) + णिच् "क्विप्" (३-२-१७८)। "आम् ज्ञाननिश्चयस्मृत्योः" मेदि०।

**आम** ಆಮ (पु०) 1. ರೋಗ, ವ್ಯಾಧಿ. 2. ಅಜೀರ್ಣರೋಗ. अम्यतेऽनेन—अम (रोगे) "घञ्" (३-३-१२१)। "आहारस्य रसः सारः यो न पक्वोऽग्निलाघवात्। आमसंज्ञां स लभते बह्व्याधिसमाश्रयः" सुश्रुत०। 3. ಮಲಬದ್ಧತೆ. 4. ಹುರಿಗಾಳು, ಪುರಿ ಮುಂತಾದ ಹುರಿದ ಧಾನ್ಯ. (वि०) 5. ಹಸಿಯಾದ, ಅಪಕ್ವವಾದ (ಅನ್ನ ಮೊದಲಾದುದು). 6. ಸುಡಲ್ಪಡದ, ಬೇಯಿಸಲ್ಪಡದ. (ಹೆಂಚು, ಇಟ್ಟಿಗೆ ಮುಂತಾದುದು.) 7. ಜೀರ್ಣವಾಗದಿರುವ.

**आमगन्धि** ಆಮಗಂಧಿ (वि०) ಬೇಯಿಸಲ್ಪಡದ ಮಾಂಸದ ವಾಸನೆಯುಳ್ಳ. आमस्येव गन्धोऽस्य "इत्" (५-४-१३७)।

**आमज्वर** ಆಮಜ್ವರ (पु०) ಅಜೀರ್ಣಜ್ವರ, ಹೊಸ ಜ್ವರ. आमोऽपक्वः ज्वरः। "स्वेद्यमामज्वरं प्राप्य कोऽम्भसा परिषिञ्चति" माघ० २-५४।

**आमनस्य** ಆಮನಸ್ಯ (न०) ದುಃಖ, ವ್ಯಸನ. अप्रशस्तं मनो यस्य। तस्य भावः "ष्यञ्" (५-१-१२४)।

**आमन्त्र** ಆಮಂತ್ರ (पु०) ಏರಂಡವೃಕ್ಷ, ಹರಳುಗಿಡ. आमात् अजीर्णात् त्रायते स्वतैलेन—त्रैङ् (पालने) "कः" (३-२-३)। पृषो०।

**आमन्त्रण** ಆಮಂತ್ರಣ (नं०) 1. ಅಪ್ಪಣೆ ಪಡೆಯುವಿಕೆ. 2. ಮರ್ಯಾದೆ, ಉಪಚಾರ, ಅಭಿನಂದನೆ. 3. ಸ್ವೇಚ್ಛೆಯಿಂದ ನಡೆದುಕೊಳ್ಳಲು ಅನುಮತಿ. 4. ಸಂಭಾಷಣೆ, ಪರಸ್ಪರ ಮಾತನಾಡುವುದು. आ + मत्रि (गुप्तपरिभाषणे) "ल्युट्" (३-३-११५)। पृषो०। "अन्योन्यामन्त्रणं यत्स्यात्तज्जनान्ते जनान्तिकम्" सा० द०। 5. ಆಹ್ವಾನ, ಕರೆ.

**आमन्त्रयितृ** ಆಮಂತ್ರಯಿತೃ (वि०) 1. ಕರೆಯುವ, ಆಹ್ವಾನಮಾಡುವ. 2. ಅಭಿನಂದಿಸುವ, ಮರ್ಯಾದೆ ತೋರಿಸುವ. 3. ಸಂಭಾಷಣೆಮಾಡುವ, ಪರಸ್ಪರ ಮಾತನಾಡುವ.

**आमन्त्रित** ಆಮಂತ್ರಿತ (नं०) 1. ಸಂಬೋಧನ ಪ್ರಥಮಾವಿಭಕ್ತ್ಯಂತ ಪದ. 2. ಆಹ್ವಾನ, ಕರೆ. 3. ಸಂಬೋಧನೆ. (वि०) 4. ಕರೆಯಲ್ಪಟ್ಟ, ಆಹ್ವಾನ ಮಾಡಲ್ಪಟ್ಟ. 5. ಅನಾವಶ್ಯಕವಾದ ಕಾರ್ಯದಲ್ಲಿ ನಿಯಮಿಸಲ್ಪಟ್ಟ. 6. ಸಂಬೋಧಿಸಲ್ಪಟ್ಟ.

**आमन्त्र्य** ಆಮಂತ್ರ್ಯ (वि०) 1. ಕರೆಯಲ್ಪಡುವ. 2. ನಿಯಮಿಸಲ್ಪಡುವ. (अव्य०) 3. ಕರೆದು, ಆಹ್ವಾನಿಸಿ. 4. ಸಂಬೋಧಿಸಿ. 5. ಅಪ್ಪಣೆಪಡೆದು. आ + मत्रि (गुप्तपरिभाषणे) "ल्यप्" (७-१-३७)।

**आमन्द्र** ಆಮಂದ್ರ (पु०) 1. ಗಂಭೀರವಾದ ಶಬ್ದ, ಮೃದುವಾದ ಧ್ವನಿ. आ ईषत् मन्द्रः। (वि०) 2. ಗಂಭೀರವಾದ ಶಬ್ದವುಳ್ಳ, ಮೃದುವಾದ ಧ್ವನಿಯುಳ್ಳ. "आमन्द्राणां फलमविकलं लप्स्यसे गर्जितानाम्" मेघ० १-३४।

**आमपात्र** ಆಮಪಾತ್ರ (नं०) ಆವಿಗೆಯಲ್ಲಿ ಬೇಯಿಸಲ್ಪಡದ ಮಣ್ಣಿನ ಪಾತ್ರೆ. (ಮಡಕೆ, ಹೂಜಿ ಮುಂತಾದುದು.)

**आमय** ಆಮಯ (पु०) ರೋಗ, ವ್ಯಾಧಿ, ಆಲಸ್ಯ. आमं यात्यनेन—या (प्रापणे) "कः" (वा० ३-३-५८।) "समौ हि शिष्टैराम्नातौ वर्त्स्यन्तावामयः स च" माघ० २-१०।

**आमयाविन्** ಆಮಯಾವಿನ್ (वि०) ರೋಗಿ, ವ್ಯಾಧಿಗ್ರಸ್ತ. आमयोऽस्यास्ति "विनिः" (वा० ५-२-१२१)। "ग्लानग्लास्नू आमयावी विकृतो व्याधितोऽपटुः" अम०।

**आमरक्त** ಆಮರಕ್ತ (नं०) ಆಮಶಂಕೆ, ರಕ್ತಭೇದಿ. आममपक्वं रक्तम्।

**आमरणान्तिक** ಆಮರಣಾಂತಿಕ (वि०) ಮರಣಕಾಲದವರೆಗಿನ, ಕೊನೆಯಕಾಲದವರೆಗಿನ. "अन्योन्यस्याव्यभीचारो भवेदामरणान्तिकः" मनु० ९-१०१।

**आमर्द** ಆಮರ್ದ (पु०) ಬಲಾತ್ಕಾರವಾಗಿ ಎಳೆದು ಹಿಸುಕುವುದು. आ+मृद (क्षोदे) "घञ्" (३-३-१८)। "अर्धपीतस्तनं मातुरामर्दक्लिष्टकेसरम्" शाकु० ७-१४। भावे "ल्युट्" (३-३-११५)। आमर्दनम् ಆಮರ್ದನವು.

**आमर्श** ಆಮರ್ಶ (पु०) ವಿಮರ್ಶೆ, ಪರ್ಯಾಲೋಚನೆ. आ + मृश (आमर्शने) "घञ्" (३-३-१८)। भावे "ल्युट्" (३-३-११५)। आमर्शनम् ಆಮರ್ಶನವು.

**आमलक** ಆಮಲಕ (नं०) ನೆಲ್ಲಿಕಾಯಿ. आमलक्याः फलम् "मयट्" (४-३-१४४)। लुक् (४-३-१६३)।

**आमलकी** ಆಮಲಕೀ (स्त्री०) ನೆಲ್ಲಿಮರ. आमलते—आ + मल (धारणे) "क्वुन्" (उ० २-३२)। जाति० "ङीष्" (४-१-६३)।

**आमाव(वा)स्य** ಆಮಾವ(ವಾ)ಸ್ಯ (वि०) ಅಮಾವಾಸ್ಯೆಯಲ್ಲಿ ಹುಟ್ಟಿದ. अमाव(वा)स्यायां भवः "अण्" (४-३-१६)।

**आमिक्षा** ಆಮಿಕ್ಷಾ (स्त्री०) ಬಿಸಿ ಹಾಲಿನಲ್ಲಿ ಮೊಸರು ಸೇರಿಸಿದ ನಂತರ ಒಡೆದ ಗಟ್ಟಿಯಾದ ಭಾಗ. आमिष्यते सिच्यते—आ + मिषु (सेचने) "सक्" बाहु०।

**आमित्र** ಆಮಿತ್ರ (वि०) 1. ಶತ್ರು ಸಂಬಂಧವಾದ. अमित्रस्यायं "अण्" (४-३-१२०)। (अव्य०) 2. ಮಿತ್ರನವರೆಗೂ. 3. ಸೂರ್ಯನವರೆಗೂ. मित्रमभिव्याप्य। अव्ययी०।

**आमित्रि** ಆಮಿತ್ರಿ (पु०) ಶತ್ರುವಿನ ಮಗ. अमित्रस्यापत्यम् "इञ्" (४-१-९५)।

**आमिष** ಆಮಿಷ (पुंन०) 1. ಮಾಂಸ. आमिष्यते भुज्यते—आ + मिषु (सेचने) "घञ्" (३-३-१९)। "उपानयत् पिण्डमिवामिषस्य" रघु० २-५९। "उत्क्रान्तानामामिषायोपरिष्टात्" माघ० १८-७३। 2. ಭೋಗ್ಯವಸ್ತು, ಸುಖಸಾಮಗ್ರಿ. 3. ಅತ್ಯಾಸೆ, ದುರಾಶೆ. "अध्यात्मरतिरासीनो निरपेक्षो निरामिषः" मनु० ६-४९। 4. ಲಂಚ. 5. ಸುಂದರಾಕಾರ. 6. ಸ್ತ್ರೀ ಸುಖ, ಸಂಭೋಗ. "आमिषं पुंनपुंसकम्। भोग्यवस्तुनि संभोगेऽप्युत्कोचे पललेऽपि च" मेदि०। "आमिषं पलले। सुन्दराकाररूपादौ संभोगे लोभलञ्चयोः" हेम०।

**आमिषप्रिय ಆಮಿಷಪ್ರಿಯ.** 1. ರಣಹದ್ದು. 2. ಹದ್ದು (ಸಾಮಾನ್ಯ). (वि०) 3. ಮಾಂಸದಲ್ಲಿ ಅಭಿರುಚಿಯುಳ್ಳ.

**आमिषाशिन् ಆಮಿಷಾಶಿನ್** (वि०) ಮಾಂಸವನ್ನು ತಿನ್ನುವ ಸ್ವಭಾವದ. आमिषमश्नाति--अश (भोजने) "णिनिः" (३-२-७८)।

**आमिषी ಆಮಿಷೀ** (स्त्री०) ಜಟಾಮಾಂಸಿ.

**आमीलन ಆಮೀಲನ** (न०) ಕಣ್ಣು ಮುಚ್ಚುವುದು. आ + मील (निमेषणे) "ल्युट्" (३-३-११५)।

**आमीलित ಆಮೀಲಿತ** (वि०) 1. ಚೆನ್ನಾಗಿ ಮುಚ್ಚಲ್ಪಟ್ಟ (ಕಣ್ಣು). आ समन्तात् मीलितम्—आ + मील (निमेषणे) "क्तः" (३-२-१०२)। 2. ಸ್ವಲ್ಪ ಮುಚ್ಚಲ್ಪಟ್ಟ. आ ईषत् मीलितम्।

**आमुक्त ಆಮುಕ್ತ** (वि०) 1. ತೊಡಿಸಲ್ಪಟ್ಟ, ಧರಿಸಲ್ಪಟ್ಟ. "तेनोपमीयेत तमालनीलमामुक्तमुक्तालतमस्य वक्षः" माघ० ३-८। 2. ಬಿಡಲ್ಪಟ್ಟ, ಎಸೆಯಲ್ಪಟ್ಟ.

**आमुक्ति ಆಮುಕ್ತಿ** (स्त्री०) 1. ಬಿಡುವಿಕೆ, ಎಸೆಯುವಿಕೆ. 2. ತೊಡುವುದು, ಧರಿಸುವುದು. 3. ಮುಕ್ತಿ, ಮೋಕ್ಷ. (अव्य०) 4. ಮೋಕ್ಷದವರೆಗೂ, ಮುಕ್ತಿ ಪಡೆಯುವವರೆಗೂ. आमुक्ति आमुक्तेर्वा संसारः सि० कौ०।

**आमुख ಆಮುಖ** (न०) 1. ಪ್ರಸ್ತಾವನೆ, ನಾಟಕದ ಒಂದು ಅಂಗ. आमुखयति अभिमुखीकरोति परिषदमनेन। आ + मुख + णिच् "अच्" (३-१-१३४)। ನಟಿಸೂತ್ರಧಾರರು ತಮ್ಮ ಸ್ವಂತ ವ್ಯವಹಾರದಿಂದ ನಾಟಕದ ಕಥಾವಸ್ತುವನ್ನು ಸೂಚಿಸಿ ಮುಂದಿನ ಪಾತ್ರ ಪ್ರವೇಶವನ್ನು ಸೂಚಿಸುವುದು ಆಮುಖ. "सूत्रधारो नटीं ब्रूते मारिषं वा विदूषकम्। स्वकार्यप्रस्तुताक्षेपि चित्रोक्त्या यत्तदामुखम्। प्रस्तावना वा" प्रताप०। 2. ಪ್ರಾರಂಭ, ಉಪಕ್ರಮ.

**आमुष्मिक ಆಮುಷ್ಮಿಕ** (वि०) ಪರಲೋಕಕ್ಕೆ ಸಂಬಂಧಿಸಿದ, ಪರಲೋಕದಲ್ಲಿ ಉಂಟಾದ. अमुष्मिन् भवः "ठञ्" (४-३-६७)। पृषो०। स्त्रियाम् "ङीप्" (४-१-१५)। आमुष्मिकी ಆಮುಷ್ಮಿಕೀ. "नैवालोच्य गरीयसीरपि चिरादामुष्मिकीर्यतनाः" सा० द०।

**आमुष्यकुलिका ಆಮುಷ್ಯಕುಲಿಕಾ** (स्त्री०) ಇವನ ವಂಶದಲ್ಲಿ ಹುಟ್ಟುವಿಕೆ. अमुष्य कुलम् षष्ठ्या अलुक्। अमुष्यकुल "वुञ्" (५-१-१३३)।

**आमुष्यपुत्रिका ಆಮುಷ್ಯಪುತ್ರಿಕಾ** (स्त्री०) ಇವನ ಮಗನಾಗಿರುವಿಕೆ. अमुष्य पुत्रः। षष्ठ्या अलुक् "वुञ्" (५-१-१३३)।

**आमुष्यायण ಆಮುಷ್ಯಾಯಣ** (वि०) ಈ ಕುಲದಲ್ಲಿ ಹುಟ್ಟಿದ, ಈ ಪ್ರಸಿದ್ಧ ವಂಶದಲ್ಲಿ ಹುಟ್ಟಿದ. अमुष्यापत्यम् "फक्" (४-१-९९)। "तदामुष्यायणस्य तत्र भवतो भट्टगोपालस्य पौत्रः.........भवभूतिर्नाम कविः" मालती० १।

**आमृष्ट ಆಮೃಷ್ಟ** (वि०) 1. ಮುಟ್ಟಲ್ಪಟ್ಟ, ಸ್ಪರ್ಶ ಮಾಡಲ್ಪಟ್ಟ. 2. ಬಲಾತ್ಕಾರವಾಗಿ ಹಿಡಿಯಲ್ಪಟ್ಟ, ಆಕ್ರಮಿಸಲ್ಪಟ್ಟ. आ + मृश (आमर्शने) "क्तः" (३-२-१०२)। "आमृष्टं नः परैः पदम्" कुमा० २-३१। 3. ಒರೆಸಲ್ಪಟ್ಟ, ತೊಡೆಯಲ್ಪಟ್ಟ. 4. ಅಳಿಸಲ್ಪಟ್ಟ. "आमृष्टास्तिलकरुचः स्रजो निरस्ताः नीरक्तं वसनमपाकृतोऽङ्गरागः" माघ० ८-६१। 5. ಉಜ್ಜಲ್ಪಟ್ಟ, ತಿಕ್ಕಲ್ಪಟ್ಟ. आ + मृज् (शुद्धौ) कर्म० "क्तः" (३-२-१०२)।

**आमोद ಆಮೋದ** (पु०) 1. ವಾಸನೆ, ಪರಿಮಳ. आ+ मुद (हर्षे) "अच्" (३-१-१३४)। "आमोदमुपजिघ्रन्तौ स्वनिःश्वासानुकारिणम्" रघु० १-४३। 2. ಹರ್ಷ, ಸಂತೋಷ. 3. ಉತ್ತಮ ಜಾತಿಯ ಹೆಂಗಸಿನ ಉಸಿರಿನ ವಾಸನೆ, ಬಾಯಿಯ ಪರಿಮಳ. "आमोदवासितचलाधरपल्लवेषु" किरा० ९-७७। "मुखामोदं मदिरया कृतानुव्याधमुद्वमन्" माघ० २-२०। "प्रमोदगन्धावामोदौ" शाश्व०।

**आमोदन ಆಮೋದನ** (न०) 1. ಸಂತೋಷಪಡಿಸುವುದು, ಆನಂದಪಡಿಸುವುದು. आ +मुद (हर्षे) "ल्युट्" (३-३-११५)। 2. ಸುವಾಸನೆಯುಂಟು ಮಾಡುವಿಕೆ. (वि०)3. ಸಂತೋಷಪಡಿಸುವ, ಆನಂದಗೊಳಿಸುವ. आ + मुद + णिच् "ल्युः"(३-१-१३४)। 4. ಸುವಾಸನೆಯನ್ನುಂಟುಮಾಡುವ.

**आमोदित ಆಮೋದಿತ** (वि०) 1. ಸಂತೋಷಗೊಳಿಸಲ್ಪಟ್ಟ, ಆನಂದವುಂಟುಮಾಡಲ್ಪಟ್ಟ. 2. ಸುವಾಸನೆಯುಂಟುಮಾಡಲ್ಪಟ್ಟ. आ + मुद (हर्षे) + णिच् "क्तः" (३-२-१०२)। 3. ಸಂತೋಷಗೊಂಡ. आ+मुद+स्वार्थे णिच् कर्त० "क्तः"(३-४-७२)। 4. ಸುವಾಸನೆಯುಳ್ಳ, ಪರಿಮಳವುಳ್ಳ. आमोदोऽस्य सञ्जातः "इतच्" (५-२-३६)।

**आमोदितवत्** ಆಮೋದಿತವತ್ (वि०) 1. ಸಂತೋಷ ಗೊಂಡ, ಆನಂದಪಟ್ಟ. 2. ಸುವಾಸನೆಯುಂಟು ಮಾಡಿದ. आ+मुद (हर्षे) "क्तवतु:" (३-२-१०२)।

**आमोदिन्** ಆಮೋದಿನ್ (वि०) 1. ವಾಸನೆಯುಂಟು ಮಾಡುವ ಕೇಸರಿ, ಪಚ್ಚಕರ್ಪೂರ ಮುಂತಾದುದು. आमोदयति सुरभीकरोति—आ + मुद (हर्षे) + णिच् "णिनि:" (३-२-७८)। 2. ಸಂತೋಷವುಳ್ಳ. 3. ಸುವಾಸನೆಯುಳ್ಳ, ಪರಿಮಳವುಳ್ಳ. आमोदोऽस्यास्ति "इनि:" (५-२-११५)।

**आम्नात** ಆಮ್ನಾತ (न०) 1. ಒಳ್ಳೆಯ ಅಭ್ಯಾಸ. 2. ಒಳ್ಳೆಯ ಅಧ್ಯಯನ. आ + म्ना (अभ्यासे) भावे "क्त:" (३-३-११४)। (वि०) 3. ಚೆನ್ನಾಗಿ ಅಭ್ಯಾಸಮಾಡಲ್ಪಟ್ಟ, ಮನನಮಾಡಲ್ಪಟ್ಟ. आ + म्ना (अभ्यासे) "क्त:" (३-२-१०२)। 4. ಚೆನ್ನಾಗಿ ಅಧ್ಯಯನ ಮಾಡಲ್ಪಟ್ಟ. 5. ಹೇಳಲ್ಪಟ್ಟ. "समौ हि शिष्टैराम्नातौ वर्त्स्यन्तावामयः स च" माघ० २-१०।

**आम्नातिन्** ಆಮ್ನಾತಿನ್ (वि०) 1. ವೇದಾಧ್ಯಯನ ಮಾಡಿದವನು. आम्नातमनेन "इनि:" (५-२-८८)। 2. ವೇದಾಭ್ಯಾಸ ಮಾಡಿದ, ವೇದವನ್ನು ಆವೃತ್ತಿ ಮಾಡಿದ.

**आम्नान** ಆಮ್ನಾನ (न०) 1. ಚೆನ್ನಾಗಿ ಅಭ್ಯಾಸ ಮಾಡುವುದು, ಮನನ ಮಾಡುವುದು. 2. ಚೆನ್ನಾಗಿ ಅಧ್ಯಯನ ಮಾಡುವುದು. आ + म्ना (अभ्यासे) "ल्युट्" (३-३-११५)।

**आम्नाय** ಆಮ್ನಾಯ (पु०) 1. ವೇದ. आम्नायते अभ्यस्यते—आ + म्ना (अभ्यासे) "घञ्" (३-३-१९)। "आम्नायगन्धरुचिरस्फुरिताधरोष्ठम्" गोपालविंशतिः। 2. ಚೆನ್ನಾಗಿ ಅಭ್ಯಾಸ ಮಾಡುವುದು, ಆವೃತ್ತಿ ಮಾಡುವುದು, ಮನನ ಮಾಡುವುದು. 3. ಸಂಪ್ರದಾಯ, ಪರಂಪರಾಗತವಾದ ಆಚಾರ, ಪದ್ಧತಿ, ವಾಡಿಕೆ. 4. ಉಪದೇಶ, ಸಲಹೆ. 5. ವಂಶ, ಕುಲ "आम्नायः कुल आगमे। उपदेशे च" हेम०।

**आम्बरीषपुत्रक** ಆಂಬರೀಷಪುತ್ರಕ (पु०) ಅಂಬರೀಷ ಮಹಾರಾಜನ ಮಗನು ವಾಸಮಾಡುವ ದೇಶ. अम्बरीषपुत्रस्य विषयो देशः "वुञ्" (४-२-५३)।

**आम्बिकेय** ಆಂಬಿಕೇಯ (पु०) 1. ಧೃತರಾಷ್ಟ್ರ 2. ಕುಮಾರಸ್ವಾಮಿ, ಸ್ಕಂದ, ಷಣ್ಮುಗ. 3. ಗಣಪತಿ. अम्बिकायाः पार्वत्याः तन्नाम्न्या राजपुत्र्या वा अपत्यम् "ढक्" (४-१-१२०)।

**आम्भसिक** ಆಂಭಸಿಕ (पु०) 1. ಮತ್ಸ್ಯ, ಮೀನು. (वि०) 2. ಜಲಚರ, ನೀರಿನಲ್ಲಿರುವ. अम्भसि भवः "ठक्" (४-३-७२)।

**आम्र** ಆಮ್ರ (पु०) 1. ಮಾವಿನ ಮರ. अम्यते—अम (गत्यादौ) "रक्" दीर्घश्च (उ० २-१६)। (न०) 2. ಮಾವಿನ ಹಣ್ಣು. आम्रस्य फलम् "अण्" (४-३-१३५)। अणो लुक् (४-३-१६३)। "मन्दानलत्वं विषमज्वरं च रक्तामयं बद्धगुदोदरं च। आम्रातियोगो नयनामयं वा करोति तस्मादति तानि नाद्यात्"।

**आम्रकूट** ಆಮ್ರಕೂಟ (पु०) ಒಂದು ಪರ್ವತ. "वक्ष्यत्यध्वश्रमपरिगतं सानुमानाम्रकूट:" मेघ० १-१७।

**आम्रवण** ಆಮ್ರವಣ (न०) ಮಾವಿನ ತೋಪು, ಮಾವಿನ ಮರಗಳ ತೋಟ. आम्रस्य वनम् णत्वम् (८-४-५)। "स्मरहुताशनमुर्मुरचूर्णतां दधुरिवाम्रवणस्य रजःकणाः" माघ० ६-६।

**आम्रातक** ಆಮ್ರಾತಕ (पु०) 1. ಅಮಟೆ ಮರ. आम्रमतति—अत (सातत्यगमने) "वुन्" (उ० ५-३५)। (न०) 2. ಅಮಟೆ ಕಾಯಿ.

**आम्रेडन** ಆಮ್ರೇಡನ (न०) ಪುನರುಕ್ತಿ, ಹೇಳಿದ್ದನ್ನೇ ಪುನಃ ಹೇಳುವುದು, ಎರಡು ಮೂರಾವೃತ್ತಿ ಹೇಳುವುದು. आ + म्रेड् (उन्मादे) "ल्युट्" (३-३-११५)।

**आम्रेडित** ಆಮ್ರೇಡಿತ (न०) 1. ಪುನರುಕ್ತಿ, ಹೇಳಿದ್ದನ್ನೇ ಪುನಃ ಹೇಳುವುದು. आ + म्रेड् (उन्मादे) भावे "क्त:" (३-३-११४)। (वि०) 2. ಎರಡು ಮೂರಾವೃತ್ತಿ ಹೇಳಲ್ಪಟ್ಟ (ಮಾತು) आ + म्रेड् कर्म० "क्त:" (३-२-१०२)। 3. ದ್ವಿಭಾಗವ ಹೊಂದಿದ ಶಬ್ದಸ್ವರೂಪದ ಎರಡನೆಯ ಭಾಗ. कांस्कान् (कान् कान्) ಎಂಬಲ್ಲಿ ದ್ವಿರುಕ್ತಿ ಬಂದು ಎರಡನೆಯ ಭಾಗವು (कान् ಎಂಬುದು) ಆಮ್ರೇಡಿತ ವಾಗುವುದು. (८-१-२)।

**आम्ल** ಆಮ್ಲ (न०) ಹುಳಿ, ಹುಳಿರಸ.

**आम्ला** ಆಮ್ಲಾ (स्त्री०) ಹುಣಿಸೆ ಮರ. आ सम्यक् अम्ला अम्लरसयुक्ता। राजनि०।

**आय** ಆಯ (पु०) 1. ಲಾಭ, ಪ್ರಾಪ್ತಿ, ಹೊಂದುವಿಕೆ. 2. ಆದಾಯ, ಸಂಪಾದನೆ, ದ್ರವ್ಯಲಾಭ.

3. ಜಮೀನಿನಿಂದ ಬರುವ ಕಂದಾಯ, ಭೂಮಿಯ ತೆಂಗೆ. 4. ಲಗ್ನದಿಂದ ಹನ್ನೊಂದನೆಯ ಸ್ಥಾನ, ಲಾಭಸ್ಥಾನ. 5. ಅಂತಃಪುರದ ರಕ್ಷಕ, ರಾಜಸ್ತ್ರೀಯರ ವಾಸಗೃಹವನ್ನು ಕಾಯುವವನು. 6. ತೆಂಗೆ, 7. ಗಮನ, ಹೋಗುವಿಕೆ.

**आयःशूलिक** ಆಯಃಶೂಲಿಕ (वि०) ಕಠಿನೋಪಾಯ ದಿಂದ ದ್ರವ್ಯವನ್ನು ಸಂಪಾದಿಸುವವನು, ನಿರ್ಬಂಧ ದಿಂದ ಹಣ ವಸೂಲು ಮಾಡುವವನು. तीक्ष्णोपायोऽयः-शूलम्, अयःशूलेन अन्विच्छति—"ठक्" (५-२-७६)।

**आयत** ಆಯತ (वि०) 1. ಉದ್ದವಾದ, ದೀರ್ಘವಾದ, ನೀಳವಾದ. आ+यम (उपरमे) "क्तः" (३-२-१०२)। "आयताङ्गुलिरभूदतिरिक्तः सुभ्रुवां कृशिमशालिनि मध्ये" माघ० १०-६५। 2. ಎಳೆಯಲ್ಪಟ್ಟ. "अवेक्षिता-नायतवल्गमग्रे तुरङ्गिभिर्यत्ननिरुद्धवाहैः" माघ० ३-३०। 3. ದೂರವಾಗಿ ಎಳೆಯಲ್ಪಟ್ಟ. 4. ಬಗ್ಗಿಸಲ್ಪಟ್ಟ, ಹತೋಟಿಗೆ ತರಲ್ಪಟ್ಟ. (अव्य०) 5. ಉದ್ದವಾಗಿ, ನೀಳವಾಗಿ.

**आयतच्छदा** ಆಯತಚ್ಛದಾ (स्त्री०) ಬಾಳೆಗಿಡ. आयतः दीर्घः छदोऽस्याः। "कदलीत्वायतच्छदा" त्रिकाण्ड०।

**आयतन** ಆಯತನ (न०) 1. ಯಜ್ಞವೇದಿಕೆ, ಯಾಗದ ಸ್ಥಳ, ಬಲಿಪೀಠ. 2. ಪವಿತ್ರಸ್ಥಳ, ದೇವಾಲಯ, ಯಾತ್ರಾಸ್ಥಳ. आयतन्तेऽत्र—आ + यती (प्रयत्ने) अवि० "ल्युट्" (३-३-११७)। 3. ವಿಶ್ರಾಂತಿ ಸ್ಥಾನ. 4. ಆಶ್ರಯ, ಮನೆ. "सम्बन्धिभिन्नोऽपि गिरेः कुलस्य स्नेहस्तदेकायतनं जगाम" कुमा० ७-५। 5. ಕಣಜ, ಉಗ್ರಾಣ, ಧಾನ್ಯ ಶೇಖರಿಸಿಡುವ ಜಾಗ.

**आयति** ಆಯತಿ (स्त्री०) 1. ಮುಂದಿನಕಾಲ, ಭವಿಷ್ಯತ್ತು. आ+यम (उपरमे) "क्तिन्" (३-३-९४)। "विपदोऽभिभवन्त्यविक्रमं रहयत्यापदुपेतमायतिः" किरा० २-१४। 2. ಪ್ರಭಾವ, ಪ್ರತಾಪ. 3. ದೈರ್ಘ್ಯ, ಉದ್ದ, ನೀಳ. 4. ಫಲವನ್ನು ಕೊಡುವ ಕಾಲ. "नियता लघुता निरायतेरगरीयान्न पदं नृपश्रियः" किरा० २-१४। 5. ಕೆಲಸ, ಕಾರ್ಯ. "यथा मित्रं ध्रुवं लब्ध्वा कृशमप्यायतिक्षमम्" मनु० ७-२०८। 6. ಸಂಬಂಧ, ಸಂಗಮ, ಸೇರುವಿಕೆ. 7. ಅಂಕೆ, ಹತೋಟಿ, ಸಂಯಮನ. "आयतिः स्यात्प्रभावोत्तर कालयोः। दैर्घ्ये सङ्गेऽपि" हेम०।

**आयतीगव** ಆಯತೀಗವ (अव्य०) (ಮೇಯಲು ಹೋಗಿರುವ) ಹಸುಗಳು ಮನೆಗೆ ಬರುವ ಕಾಲ, ಸಾಯಂಕಾಲ. आयत्यो गावो यस्मिन् काले। शत्रादेशः पुंवद्भावाभावः समासान्तश्च निपात्यते (२-१-१७)।

**आयतीसम** ಆಯತೀಸಮ (अव्य०) ಸಂವತ್ಸರಗಳು ಬರುವ ಕಾಲ. आयन्ति समाः यस्मिन् काले। निपा० (२-१-१७)।

**आयत्त** ಆಯತ್ತ (वि०) 1. ಅಧೀನ, ಪರತಂತ್ರ, ಇತರರಿಗೆ ವಶನಾದ. आयतते स्म—आ + यती (प्रयत्ने) "क्तः" (३-४-७२)। "दैवायत्तं कुले जन्म मदायत्तं तु पौरुषम्" वेणी० ३-३७। 2. ಪ್ರಯತ್ನಿಸಿದ, ಯತ್ನ ನಡೆಸಿದ. 3. ವಿಧೇಯ, ಸಾಧು, ನಮ್ರ.

**आयत्ति** ಆಯತ್ತಿ (स्त्री०) 1. ಅಧೀನತೆ, ಪರತಂತ್ರತೆ, ಇತರರಿಗೆ ವಶನಾಗಿರುವಿಕೆ. आ + यती (प्रयत्ने) "क्तिन्" (३-३-९४)। 2. ಸ್ನೇಹ, ವಾತ್ಸಲ್ಯ, ಪ್ರೀತಿ. 3. ಎಲ್ಲೆ, ಗಡಿ. 4. ದಿವಸ. 5. ಬಲ, ಸಾಮರ್ಥ್ಯ. "आयत्तिस्तु स्त्रियाम् स्नेहे वशित्वे वासरे बले" मेदि०। 6. ಉಪಾಯ. 7. ಗೌರವ, ಪೂಜ್ಯತೆ. 8. ಪ್ರಭಾವ, ಪ್ರತಾಪ.

**आयथातथ्य** ಆಯಥಾತಥ್ಯ (न०) 1. ಅನೌಚಿತ್ಯ, ಅಯುಕ್ತತೆ, ಅಕ್ರಮವಾಗಿರುವಿಕೆ. तथात्वमनतिक्रम्य यथातथा निपा० (७-३-३१)। न यथातथा, अयथा-तथा भावः "ष्यञ्" (५-१-१२४)। वा पूर्वपदवृद्धिः (७-३-३१)। उत्तरपदवृद्धौ तु अयाथातथ्यम्। "गुणानामायथातथ्यादर्थं विप्लावयन्ति ये" माघ० २-५६। 2. ಅಸತ್ಯ, ಸುಳ್ಳು.

**आयथापुर्य** ಆಯಥಾಪುರ್ಯ (न०) ಪೂರ್ವದಂತೆ ಇಲ್ಲದಿರುವಿಕೆ, ಬದಲಾವಣೆ ಹೊಂದಿರುವಿಕೆ. न यथापुरम् अयथापुरम्। तस्य भावः "ष्यञ्" (५-१-१२४)। वा पूर्वपदवृद्धिः (७-३-३१)। उत्तरपदवृद्धौ तु अयाथापुर्यम्।

**आयद्वसु** ಆಯದ್ವಸು (वि०) ಐಶ್ವರ್ಯವು ಬರಲಿರುವ, ಸಂಪತ್ತು ಪ್ರಾಪ್ತವಾಗಲಿರುವ. आयत् वसु यस्य।

**आयमन** ಆಯಮನ (न०) 1. ದೈರ್ಘ್ಯ, ಉದ್ದ, ನೀಳ. 2. ಅಂಕೆ, ಹತೋಟಿ. 3. ತುಂಡಾಗಿರುವುದನ್ನು ಎಳೆದು ಉದ್ದವಾಗಿ ಮಾಡುವುದು. आ + यम (उपरमे) "ल्युट्" (३-३-११५)।

**आयस** ಆಯಸ (न०) 1. ಕಬ್ಬಿಣ. अय एव स्वार्थे "अण्" (५-४-३८)। 2. ಕಬ್ಬಿಣದ ಆಯುಧ. (वि०) 3. ಲೋಹಮಯವಾದ, ಕಬ್ಬಿಣದಿಂದ ತಯಾರಾದ. अयसो विकार: "अण्" (४-३-१३४)। "मूढं बुद्धमिवात्मानं हैमीभूतमिवायसम्" कुमा० ६-५५। (स्त्री०)-सी-ಸೀ. ಲೋಹಕವಚ, ಯುದ್ಧ ಕವಚ.

**आयसीय** ಆಯಸೀಯ (पु०) 1. ಕಬ್ಬಿಣಕ್ಕೆ ಹತ್ತಿರದ ಪ್ರದೇಶ. अयस: अदूरभवो देश: "अण्" (४-२-८०)। (वि०) 2. ಕಬ್ಬಿಣದಿಂದ ತಯಾರಿಸಲ್ಪಟ್ಟ. अयसा निर्वृत्तम् "अण्" (४-२-८०)।

**आयस्कार** ಆಯಸ್ಕಾರ (पु०) ಕಮ್ಮಾರ, ಕಬ್ಬಿಣದ ಕೆಲಸದವನು. अयस्कार स्वार्थे "अण्" (५-४-३८)।

**आयस्त** ಆಯಸ್ತ (वि०) 1. ಎಸೆಯಲ್ಪಟ್ಟ, ಬಿಸಾಡಲ್ಪಟ್ಟ. आ + यसु (प्रयत्ने) "क्त:" (३-२-१०२)। "आयस्तभीमभुजमन्दरवेल्लनाभि:" वेणी० ६-९। 2. ಕಷ್ಟಪಡಿಸಲ್ಪಟ್ಟ, ಆಯಾಸಗೊಳಿಸಲ್ಪಟ್ಟ. 3. ಹರಿತವಾಗಿ ಮಾಡಲ್ಪಟ್ಟ, ಮಸೆಯಲ್ಪಟ್ಟ, ಸಾಣೆ ಹಿಡಿಯಲ್ಪಟ್ಟ. आ + यसु (प्रयत्ने) कर्म० "क्त:" (३-२-१०२)। 4. ಆಯಾಸಗೊಂಡ, ಬಳಲಿದ. कर्त० "क्त:" (३-४-७२)। "आयस्तमैक्षत जन: चटुलाग्रपादम्" माघ० ५-६। "आयस्त: सुरसरिदोघरुद्धवर्त्मा" किरा० ७-३२।

**आयस्थान** ಆಯಸ್ಥಾನ (न०) 1. ತೆರಿಗೆ ವಸೂಲಿಯ ಜಾಗ, ಸುಂಕದ ಕಟ್ಟೆ, ಸುಂಕದ ಚಾವಡಿ. 2. ಲಾಭ ಸ್ಥಾನ, ಲಗ್ನದಿಂದ ಹನ್ನೊಂದನೆಯ ಸ್ಥಾನ.

**आयस्य** ಆಯಸ್ಯ (अव्य०) ಹೆಚ್ಚು ಪ್ರಯತ್ನಪಟ್ಟು, ಆಯಾಸಗೊಂಡು. आ + यसु (प्रयत्ने) "ल्यप्" (७-१-३७)।

**आयात** ಆಯಾತ (न०) 1. ಆಧಿಕ್ಯ, ಪುಷ್ಕಳತೆ, ಹೇರಳ. आ + या (प्रापणे) "क्त:" (३-४-७२)। "दिव्यस्त्रीणां सचरणलाक्षारागा: रागायाते निपतितपुष्पापीडा:" किरा० ५-२३। 2. ಆಗಮನ, ಬರುವಿಕೆ. आ + या (प्रापणे) भावे "क्त:" (३-३-११४)। 3. ಆಗಮಿಸಿದ ಸ್ಥಳ, ಬಂದ ಜಾಗ. आ + या अधि० "क्त:" (३-४-७६)। (वि०) 4. ಬಂದಿರುವ, ಆಗಮಿಸಿರುವ, ಒಂದು ಸ್ಥಳದಿಂದ ಬೇರೆ ಸ್ಥಳ ಸೇರಿರುವ.

**आयाति** ಆಯಾತಿ (स्त्री०) ಆಗಮನ, ಬರುವಿಕೆ. आ + या (प्रापणे) "क्तिन्" (३-३-९४)।

**आयाम** ಆಯಾಮ (पु०) 1. ದೈರ್ಘ್ಯ, ಉದ್ದ, ನೀಳ. आ + यम (उपरमे) "घञ्" (३-३-१९)। "तेनोदीचीं दिशमनुसरेस्तिर्यगायामशोभी" मेघ० १-५७। 2. ಹತೋಟಿ, ಅಂಕೆ, ನಿಯಮನ, ತಡೆಯುವಿಕೆ. "प्राणापानगती रुद्ध्वा प्राणायामपरायणा:" गीता ४-२९। 3. ವಿಸ್ತಾರ, ವೈಶಾಲ್ಯ. (अव्य०) 4. ಯಾಮಪರ್ಯಂತವಾಗಿ. याममभिव्याप्य। अव्ययी०।

**आयामवत्** ಆಯಾಮವತ್ (वि०) 1. ವಿಸ್ತಾರವಾದ, ವೈಶಾಲ್ಯವುಳ್ಳ. 2. ಉದ್ದವಾದ, ನೀಳವಾದ. आयामोऽस्यास्ति "मतुप्" (५-२-९४)। "आयामवद्भि: करिणां घटाशतैरध:कृताट्टालकपङ्क्तिरुच्चकै:" माघ० १२-६५।

**आयास** ಆಯಾಸ (पु०) 1. ಬಹಳ ಪ್ರಯತ್ನ. आ + यसु (प्रयत्ने) "घञ्" (३-३-१८)। 2. ಆಯಾಸ, ದಣಿವು, ಬಳಲಿಕೆ, ಶ್ರಮ. स्नेहमूलानि दु:खानि देहजानि भयानि च। शोकहर्षौ तथायास: सर्वं स्नेहात्प्रवर्तते" भा० वन० २००।

**आयासक** ಆಯಾಸಕ (वि०) 1. ಆಯಾಸವನ್ನುಂಟು ಮಾಡುವ. आ+यसु (प्रयत्ने) "ण्वुल्" (३-१-१३३)।

**आयासिन्** ಆಯಾಸಿನ್ (वि०) ಆಯಾಸವುಳ್ಳ, ದಣಿವುಳ್ಳ, ಶ್ರಮದಿಂದ ಕೂಡಿದ, ಬಳಲಿದ. आयास "इनि:" (५-२-११५)। "कामं प्रिया न सुलभा मनस्तु तद्भावदर्शनायासि" शाकु० २-१।

**आयिन्** ಆಯಿನ್ (वि०) 1. ಲಾಭವುಳ್ಳ, ಆದಾಯವುಳ್ಳ. 2. ಸಂಪಾದನೆಯುಳ್ಳ. आयो लाभोऽस्यास्ति "इनि:" (५-२-११५)।

**आयुक्त** ಆಯುಕ್ತ (वि०) 1. ನಿಯಮಿಸಲ್ಪಟ್ಟ, ಅಪ್ಪಣೆಮಾಡಲ್ಪಟ್ಟ. "कुशलोऽन्वेषणस्याहमायुक्तो दूतकर्मणि" भट्टि० ८-११५। 2. ಸಂಬಂಧಪಡಿಸಲ್ಪಟ್ಟ, ಸೇರಿಸಲ್ಪಟ್ಟ, ಒಟ್ಟುಗೂಡಿಸಲ್ಪಟ್ಟ. आ + युजिर् (योगे) कर्म० "क्त:" (३-२-१०२)। 3. ಸ್ವಲ್ಪ ಸೇರಿಸಲ್ಪಟ್ಟ. आ ईषत् युक्त:। "आयुक्त: शकटे गौ:" सि० कौ०। (न०) 4. ನೇಮಕ, ವ್ಯವಸ್ಥೆ. आ + युजिर् भावे "क्त:" (३-३-११४)।

**आयुध** ಆಯುಧ (न०) ಆಯುಧ, ಶಸ್ತ್ರ, ಅಸ್ತ್ರ. आयुध्यतेऽनेन--आ + युध (सम्प्रहारे) घञर्थे "क:"

(वा० ३-३-५०)। "धृतायुधो यावदहं तावदन्यैः किमायुधैः" वेणी० ३-४६। ಆಯುಧವು ಪ್ರಹರಣ, ಹಸ್ತಮುಕ್ತ ಮತ್ತು ಯಂತ್ರಮುಕ್ತಗಳೆಂದು ಮೂರು ವಿಧ. (1) ಖಡ್ಗ ಮುಂತಾದುದು ಪ್ರಹರಣ. (2) ಚಕ್ರ ಮುಂತಾದುದು ಹಸ್ತಮುಕ್ತ. (3) ಬಾಣ ಮುಂತಾದುದು ಯಂತ್ರಮುಕ್ತ.

**आयुधजीविन्** ಆಯುಧಜೀವಿನ್ (वि०) ಆಯುಧದಿಂದ ಜೀವಿಸುವವನು, ಯೋಧ, ಭಟ. आयुधेन जीवति—जीव (प्राणधारणे) "णिनिः" (३-२-७८)।

**आयुधधर्मिणी** ಆಯುಧಧರ್ಮಿಣೀ (स्त्री०) ಜಯಂತೀ ವೃಕ್ಷ, ತಕ್ಕಿಲೆ ಗಿಡ. आयुधस्येव धर्मोऽस्यास्ति "इनिः" (५-२-११५)। "ङीप्" (४-१-५)।

**आयुधागार** ಆಯುಧಾಗಾರ (न०) ಆಯುಧಶಾಲೆ, ಆಯುಧಗಳನ್ನು ಇಡುವ ಮನೆ. आयुधानामगारम्। "आर्य, नेदमायुधागारम्। पाञ्चाल्याश्चतुःशालकमिदम्" वेणी० १।

**आयुधागारिक** ಆಯುಧಾಗಾರಿಕ (वि०) ಆಯುಧಶಾಲೆಯಲ್ಲಿ ನಿಯಮಿಸಲ್ಪಟ್ಟವನು, ಆಯುಧಶಾಲೆಯ ರಕ್ಷಕ. आयुधागारे नियुक्तः "ठञ्" (४-४-७०)।

**आयुधिक** ಆಯುಧಿಕ (वि०) ಆಯುಧದಿಂದ ಜೀವಿಸುವವನು, ಯೋಧ. ಭಟ. आयुधेन जीवति—"ठन्" (४-४-१४)।

**आयुधिन्** ಆಯುಧಿನ್ (वि०) ಶಸ್ತ್ರವನ್ನು ಧರಿಸಿರುವ, ಆಯುಧವನ್ನು ಹೊಂದಿರುವ. आयुधमस्त्यस्य "इनिः" (५-२-११५)।

**आयुधीय** ಆಯುಧೀಯ (वि०) ಆಯುಧದಿಂದ ಜೀವಿಸುವವನು, ಯೋಧ, ಭಟ. आयुधेन जीवति—"छः" (४-४-१४)।

**आयुर्दाय** ಆಯುರ್ದಾಯ (पु०) ಗ್ರಹಗಳು ಬಲವಾದ ಸ್ಥಾನಗಳಲ್ಲಿದ್ದು ಹೆಚ್ಚು ಆಯುಸ್ಸನ್ನು ಕೊಡುವುದು. आयुषो दायः दानम्।

**आयुर्द्रव्य** ಆಯುರ್ದ್ರವ್ಯ (न०) 1. ಔಷಧ. 2. ಘೃತ, ತುಪ್ಪ. आयुःसाधनं द्रव्यम्। "आयुर्वै घृतम्" ಎಂದಿರುವುದರಿಂದ ಆಯುಸ್ಸಿಗೆ ಘೃತವು ಕಾರಣ.

**आयुर्योग** ಆಯುರ್ಯೋಗ (पु०) ಆಯುಸ್ಸನ್ನು ಹೆಚ್ಚಿಸುವ ಗ್ರಹಗಳ ಒಂದು ಯೋಗ. प्रशस्तस्यायुषो ज्ञापको योगः।

**आयुर्वृद्धि** ಆಯುರ್ವೃದ್ಧಿ (स्त्री०) ಆಯುರ್ವೃದ್ಧಿ, ಆಯುಸ್ಸಿನ ಬೆಳವಣಿಗೆ, ಕೆಲವು ದ್ರವ್ಯಗಳ ಸೇವನೆಯಿಂದುಂಟಾಗುವ ಜೀವಿತಕಾಲದ ಅಭಿವೃದ್ಧಿ. आयुषो वृद्धिः। ಕೆಲವು ದ್ರವ್ಯಸೇವನೆಯಿಂದಲೂ, ಪ್ರಾಣಾಯಾಮದಿಂದಲೂ ಆಯುಸ್ಸು ಅಭಿವೃದ್ಧಿಯಾಗುವುದು. ಮನುಷ್ಯನ ಪ್ರಾಣವಾಯುವು (ಶ್ವಾಸೋಚ್ಛ್ವಾಸವು) ಒಂದು ದಿನಕ್ಕೆ 21,600 ಸಲವೂ, ಒಂದು ತಿಂಗಳಿಗೆ 6,48,000 ಸಲವೂ, ಒಂದು ವರ್ಷಕ್ಕೆ 77,76,000 ಸಲವೂ, ಒಂದು ಪುರುಷಾಯುಸ್ಸಿನಲ್ಲಿ (100 ವರ್ಷಗಳಲ್ಲಿ) 77,76,00,000 ಸಲವೂ ಆಡುವುದು. ಈ ಪ್ರಾಣವಾಯುವಿನ ನಿರೋಧ (ಪ್ರಾಣಾಯಾಮ) ದಿಂದ ಮನುಷ್ಯನ ಆಯುಸ್ಸು ಅಭಿವೃದ್ಧಿ ಹೊಂದುವುದು. ಪ್ರಾಣಾಯಾಮ ನಡೆದಷ್ಟು ಕಾಲವೂ ಆಯುರ್ವೃದ್ಧಿಯೆಂದು ತಿಳಿಯಬೇಕು. ಈ ರೀತಿ ಪ್ರಾಣವಾಯುವಿನ ವ್ಯಾಪಾರವು ದೇಹಾರೋಗ್ಯವಿರುವಾಗ ಮಾತ್ರ. ರೋಗಗ್ರಸ್ತರಿಗೂ, ಹೆಚ್ಚು ದಾರಿ ನಡೆಯುವವರಿಗೂ ವೇಗವಾಗಿಯೂ ಅಧಿಕಪ್ರಮಾಣದಲ್ಲಿಯೂ ಶ್ವಾಸೋಚ್ಛ್ವಾಸ ನಡೆಯುವುದರಿಂದ ಅಂತಹವರಿಗೆ ಆಯುಃ ಪ್ರಮಾಣವು ಕಡಿಮೆ. ಮತ್ತು ಮನುಷ್ಯನ ಆಚಾರ ವ್ಯವಹಾರಗಳಿಂದಲೂ ಆಯುಸ್ಸು ವೃದ್ಧಿ ಹೊಂದುವುದು. ಸದಾಚಾರವು ಮನುಷ್ಯನಿಗೆ ಸಕಲ ವಿಧವಾದ ಅಭ್ಯುದಯವನ್ನು ಕೊಡುವುದು. "आचारो भूतिजनन आचारः कीर्तिवर्धनः। आचाराद्वर्धते ह्यायुराचारो हन्त्यलक्षणम्। आगमानां हि सर्वेषामाचारः श्रेष्ठ उच्यते। आचारप्रभवो धर्मो धर्मादायुर्विवर्धते। एतद्यशस्यमायुष्यं स्वर्ग्यं स्वस्त्ययनं महत्" भा० आनु० १६१-१७०, ७१, ७२।

**आयुर्वेद** ಆಯುರ್ವೇದ (पु०) ಆಯುಸ್ಸನ್ನು ಕೊಡತಕ್ಕ ಶಾಸ್ತ್ರ, ಆರೋಗ್ಯವನ್ನು ಕಾಪಾಡುವ ಶಾಸ್ತ್ರ. आयुरस्मिन् विद्यते अस्तीत्यायुर्वेदः, आयुर्विद्यते ज्ञायते अनेनेत्यायुर्वेदः, आयुर्विद्यते विचार्यतेऽनेन, आयुरनेन विन्दति प्राप्नोति इत्यायुर्वेदः इति वा। ಈ ಆಯುರ್ವೇದಕ್ಕೆ ಅಷ್ಟಾಂಗಗಳಿರುವುವು. [ವಿವರಕ್ಕೆ "अष्टाङ्ग" ಪದದಲ್ಲಿ ನೋಡಿ.]

**आयुष्क** ಆಯುಷ್ಕ (वि०) ಉತ್ತಮವಾದ ಆಯುಸ್ಸುಳ್ಳವನು, ದೀರ್ಘಾಯುಸ್ಸುಳ್ಳವನು. आयुषा कायति—कै (शब्दे) "कः" (३-२-३)।

**आयुष्काम** ಆಯುಷ್ಕಾಮ (वि०) ಆಯುಸ್ಸನ್ನು ಅಪೇಕ್ಷಿಸುವವನು, ಹೆಚ್ಚು ಜೀವಿತಕಾಲವನ್ನು ಆಶಿಸುವವನು,

आयु: कामयते—कमु (कान्तौ) + णिङ् "अण्" (३-२-१)। "आयुष्कामेन वप्तव्यं न जातु परयोषिति" मनु० ९-४१।

**आयुष्टोम ಆಯುಷ್ಟೋಮ** (पु०) ಆಯುಷ್ಯ ಹೋಮ, ಆಯುಸ್ಸನ್ನು ಹೆಚ್ಚಿಸುವ ಒಂದು ಯಾಗ. आयु:-साधनं स्तोम:।

**आयुष्मत् ಆಯುಷ್ಮತ್** (पु०) 1. ವಿಷ್ಕಂಭಾದಿ 27 ಯೋಗಗಳಲ್ಲೊಂದು. [ವಿವರಕ್ಕೆ "योग" ಪದದಲ್ಲಿ ನೋಡಿ.] (वि०) 2. ದೀರ್ಘಾಯುಸ್ಸುಳ್ಳವನು. प्रशस्तमायुरस्यास्ति "मतुप्" (५-२-९४)। "यदाज्ञापयत्यायुष्मान्" शाकु० १। "आयुष्मन्तं सुतं सूते यशोमेधासमन्वितम्। धनवन्तं प्रजावन्तं सात्त्विकं धार्मिकं तथा" मनु० ३-२६३। 3. ವೃದ್ಧ, ಹೆಚ್ಚು ವಯಸ್ಸಾದವನು.

**आयुष्य ಆಯುಷ್ಯ** (न०) 1. ಆಯುರ್ವೃದ್ಧಿ, ಆಯುಸ್ಸಿನ ಆಧಿಕ್ಯ. आयुस् स्वार्थे "ष्यञ्" (५-१-१२४)। "आयुष्यं प्राङ्मुखो भुङ्क्ते यशस्यं दक्षिणामुख:। श्रियं प्रत्यङ्मुखो भुङ्क्ते ऋतं भुङ्क्ते ह्युदङ्मुख:" मनु० २-५२। 2. ಜನನವಾದನಂತರ ಮಾಡುವ ಜಾತಕರ್ಮ. (वि०) 3. ಆಯುರ್ವೃದ್ಧಿಗೆ ಕಾರಣವಾದ ಆಯುಷ್ಯಹೋಮ. आयु:प्रयोजनमस्य "यत्" (वा० ५-१-१११)। "धन्यं यशस्यमायुष्यं स्वर्ग्यं वातिथिपूजनम्" मनु० ३-१०६।

**आयुस् ಆಯುಸ್** (न०) 1. ಜೀವಿತದ ಕಾಲ, ಬದುಕಿರುವ ಕಾಲ. एति—इण् (गतौ) "उसि:" (उ० २-११८)। "शृङ्गं सदृप्तविनयाधिकृत: परेषामत्युच्छ्रितं न ममृषे न तु दीर्घमायु:" रघु० ९-६२। 2. ಆಯುಸ್ಸು ಬೆಳೆಯಲು ಮಾಡುವ ಆಯುಷ್ಯಹೋಮ. ಆಯುಸ್ಸು ಅಲ್ಪ, ಮಧ್ಯ ಮತ್ತು ದೀರ್ಘಗಳೆಂದು ಮೂರು ವಿಧ. ಮೂವತ್ತೆರಡು ವರ್ಷಗಳಿಗೆ ಕಡಿಮೆಯಾದುದು ಅಲ್ಪಾಯುಸ್ಸು. ಎಪ್ಪತ್ತು ವರ್ಷಗಳವರೆಗೆ ಮಧ್ಯಾಯುಸ್ಸು. ಅದಕ್ಕೆ ಮೇಲ್ಪಟ್ಟು ಪೂರ್ಣ (ದೀರ್ಘ)ಯುಸ್ಸು. ಆಯುಷ್ಕಾರಕನು ಶನಿ. ಅಷ್ಟಮ ಭಾವಾಧಿಪತಿಯು ಸ್ವಕ್ಷೇತ್ರದಲ್ಲಿಯೇ ಇದ್ದರೆ ದೀರ್ಘಾಯುಸ್ಸು. ದಶಮ ಭಾವಾಧಿಪತಿಯು ತನ್ನ ಉಚ್ಚಕ್ಷೇತ್ರ, ಸ್ವಕ್ಷೇತ್ರ ಅಥವಾ ಮಿತ್ರಕ್ಷೇತ್ರದಲ್ಲಿದ್ದರೂ, ಲಗ್ನಾಧಿಪತಿ, ಅಷ್ಟಮಾಧಿಪತಿ ಮತ್ತು ದಶಮಾಧಿಪತಿಗಳು ಕೇಂದ್ರದಲ್ಲಿದ್ದರೂ (ಸ್ವಕ್ಷೇತ್ರ ಮೂಲತ್ರಿಕೋಣ ಮತ್ತು ಸ್ವೋಚ್ಚ ಕ್ಷೇತ್ರಗಳಲ್ಲಿದ್ದರೆ ಮತ್ತೂ ವಿಶೇಷ), ಲಗ್ನಾಧಿಪತಿಯು ಕೇಂದ್ರದಲ್ಲಿದ್ದು ಗುರುಶುಕ್ರರೊಡನೆ ಕೂಡಿದ್ದರೂ, ಅಥವಾ ನೋಡಲ್ಪಟ್ಟರೂ, ಪಾಪಗ್ರಹಗಳು ಮೂರು, ಆರು ಮತ್ತು ಹನ್ನೊಂದನೆಯ ಸ್ಥಾನಗಳಲ್ಲಿದ್ದರೂ, ಶುಭಗ್ರಹಗಳು ಕೇಂದ್ರ ತ್ರಿಕೋಣಗಳಲ್ಲಿದ್ದರೂ, ಲಗ್ನಾಧಿಪತಿಯು ಬಲಿಷ್ಠನಾಗಿದ್ದರೂ, ಮೂರು ಗ್ರಹಗಳು ಉಚ್ಚವಾಗಿದ್ದು ಲಗ್ನದಲ್ಲಿ ಅಷ್ಟಮಾಧಿಪತಿಯು ಇದ್ದರೂ, ಅಷ್ಟಮ ಸ್ಥಾನದಲ್ಲಿ ಪಾಪಗ್ರಹಗಳಿಲ್ಲದಿದ್ದರೂ ದೀರ್ಘಾಯುಸ್ಸೆಂದು ತಿಳಿಯಬೇಕು. ವೈದ್ಯಶಾಸ್ತ್ರದಲ್ಲಿ ಆಯುರ್ವೃದ್ಧಿಗೆ ಉಕ್ತವಾದ ಗುಣಗಳು: (1) ದಾನ, (2) ಶೀಲ, (3) ದಯೆ, (4) ಸತ್ಯ, (5) ಬ್ರಹ್ಮಚರ್ಯ, (6) ಕೃತಜ್ಞತೆ, (7) ಮೈತ್ರಿ ಮತ್ತು 8. ರಸಾಯನ ಸೇವನೆ.

ಪರಮಾಯುಸ್ಸು:

| | |
|---|---|
| ಮನುಷ್ಯರಿಗೆ ಮತ್ತು ಆನೆಗಳಿಗೆ | 120 ವರ್ಷಗಳು 5 ದಿನಗಳು |
| ಕುದುರೆಗಳಿಗೆ | 32 ವರ್ಷಗಳು |
| ಒಂಟೆ ಮತ್ತು ಕತ್ತೆಗಳಿಗೆ | 25 ,, |
| ದನ ಮತ್ತು ಎಮ್ಮೆಗಳಿಗೆ | 24 ,, |
| ಆಡು, ಸೀಮೆಹಸು ಮತ್ತು ಜಿಂಕೆಗಳಿಗೆ | 16 ,, |
| ನಾಯಿ, ಸಿಂಹ ಮತ್ತು ಮಾರ್ಜಾರಗಳಿಗೆ | 12 ,, |

**आयोधन ಆಯೋಧನ** (न०) 1. ಯುದ್ಧ. आ + युध (सम्प्रहारे) भावे "ल्युट्" (३-३-११५)। "आयोधने कृष्णगतिं सहायम्" रघु० ६-४२। 2. ಯುದ್ಧಕ್ಷೇತ್ರ, ರಣರಂಗ. आयुध्यतेऽत्र — आ + युध अधि० "ल्युट्" (३-३-११७)। 3. ಕೊಲ್ಲುವುದು, ಕೊಲೆಮಾಡುವುದು. "आयोधनं घातनं स्यात् युद्धमायोधनं मतम्" शाश्व०।

**आर ಆರ** (पु०) 1. ಕುಜಗ್ರಹ. 2. ಶನಿಗ್ರಹ. आ-ऋच्छति—ऋ (गतौ) "अच्" (३-१-१३४)। (पुंन०) 3. ಹಿತ್ತಾಳೆ. 4. ಒಂದು ಮೂಲೆ, ಕೋಣ. 5. ದೂರ, ಅಂತರ. (स्त्री०) –रा–ರಾ. 6. ಚರ್ಮವನ್ನು ಕತ್ತರಿಸುವ ಉಳಿ, ಚಮ್ಮಾರನ ಉಳಿ. 7. ಚಾವಟಿ,

"आरा चर्मप्रभेदिन्यां पुंसि भौमे शनैश्चरे" मेदि०। "संक्रीडन्ती तेजिताश्वस्य रागादुद्यम्यारामग्रकायोत्थितस्य" माघ० १८-७।

**आरकूट** ಆರಕೂಟ (पुंन०) ಹಿತ್ತಾಳೆ. आरं कूटयते—कूट (दाहे) "अच्" (३-१-१३४)।

**आरक्ष** ಆರಕ್ಷ (पु०) 1. ಆನೆಯ ಕುಂಭಸ್ಥಳದ ಕೆಳಗಿನ ಪ್ರದೇಶ. आ + रक्ष (पालने) "अच्" (३-१-१३४)। "आरक्षमग्नमवमत्य सृणिं शिताग्रमेकः पलायत जवेन कृतार्तनादः" माघ० ५-५। 2. ಆನೆಯ ತಲೆಯ ಚರ್ಮ. 3. ಸೈನ್ಯ. 4. ರಕ್ಷಣೆ. आ + रक्ष भावे "घञ्" (३-३-१८)। "तेषामारक्षभूतं तु पूर्वं दैवं नियोजयेत्" मनु० ३-२०४। (वि०) 5. ರಕ್ಷಕ, ಕಾಪಾಡುವವನು. "शतसाहस्रमारक्षं मध्यमं रक्षसां कपिः" भट्टि० ८-३७।

**आरक्षक** ಆರಕ್ಷಕ (पु०) 1. ಕಾವಲುಗಾರ, ಪಹರೆಯವನು. 2. ನ್ಯಾಯಾಧೀಶ, ನ್ಯಾಯಾಧ್ಯಕ್ಷ. (Magistrate).

**आरक्षा** ಆರಕ್ಷಾ (स्त्री०) ರಕ್ಷಣೆ. आ+रक्ष (पालने) "अः" (३-३-१०३)।

**आरग्वध** ಆರಗ್ವಧ (पु०) 1. ಕಕ್ಕೆ ಗಿಡ. "आरग्वधे राजवृक्षशम्याकचतुरङ्गुलाः" अम०। (न०) 2. ಕಕ್ಕೆ ಕಾಯಿ.

**आरणि** ಆರಣಿ (पु०) ಸುಳಿಯಿಂದ ಕೂಡಿದ ಜಲಾಶಯ, ಸುಳಿಗುಂಡಿ.

**आरणेय** ಆರಣೇಯ (पु०) 1. ಶುಕಮಹರ್ಷಿ. अरण्या अपत्यम् "ढक्" (४-१-१२०)। ["अरणीसुत" ಪದದಲ್ಲಿ ನೋಡಿ.]

**आरण्य** ಆರಣ್ಯ (पु०) 1. ಅರಣ್ಯ, ಕಾಡು. 2. ಹಸುವಿನ ಸಗಣಿ, ಆಕಳ ತೊಪ್ಪೆ. (वि०) 3. ಅರಣ್ಯದಲ್ಲಿ ಹುಟ್ಟಿದ, ಅರಣ್ಯಕ್ಕೆ ಸಂಬಂಧಿಸಿದ. अरण्ये भवः "णः" (वा० ८-३-१०१)। आरण्याः सुमनसः, आरण्यः पशुः। सि० कौ०। ಅರಣ್ಯ ಪಶುಗಳು ಏಳು ಜಾತಿ—"सरीसृपो रुरुश्चैव महिषो वानरस्तथा। पृषतर्क्षौ मृगश्चैव पशुर्वै सप्तधा मतः"।

**आरण्यक** ಆರಣ್ಯಕ (न०) 1. ಆರಣ್ಯಕ, ಬ್ರಾಹ್ಮಣಕ್ಕೆ ಸಂಬಂಧಿಸಿದ ವೇದದ ಒಂದು ಭಾಗ. तैत्तिरीयारण्यकम्, बृहदारण्यकम् ಇತ್ಯಾದಿ. 2. ಮಹಾಭಾರತದ ವನ ಪರ್ವ. 3. ಶ್ರೀಮದ್ರಾಮಾಯಣದ ಅರಣ್ಯಕಾಂಡ. अरण्य "वुञ्" (४-२-१२९)। 4. ಹಸುವಿನ ಸಗಣಿ, ಆಕಳ ತೊಪ್ಪೆ. अरण्य वा "वुञ्" (वा० ४-२-१२९)। (वि०) 5. ಅರಣ್ಯಕ್ಕೆ ಸಂಬಂಧಿಸಿದ, ಅರಣ್ಯದಲ್ಲಿರುವ— (1) ಮಾರ್ಗ, ದಾರಿ. (2) ಅಧ್ಯಾಯ. "आरण्यकानां प्रभवः फलानाम्" याद० ४-३०। (3) ನ್ಯಾಯ. (4) ವಿಕಾರ. (5) ಮನುಷ್ಯ. "आरण्यकोपात्तफलप्रसूतिः" रघु० ५-१५। "तपःषड्भागमक्षय्यं ददत्यारण्यका हि नः" शाकु० २-१३।

**आरण्यपर्वन्** ಆರಣ್ಯಪರ್ವನ್ (न०) ಮಹಾಭಾರತದ ಅರಣ್ಯಪರ್ವ.

**आरण्यपशु** ಆರಣ್ಯಪಶು (पु०) ಅರಣ್ಯದಲ್ಲಿ ಹುಟ್ಟಿದ ಪಶು. ["आरण्य" ಪದದಲ್ಲಿ ನೋಡಿ.]

**आरत** ಆರತ (वि०) 1. ನಿವೃತ್ತಿಹೊಂದಿದ, ನಿಂತುಹೋದ. 2. ವಿರಾಮ ಹೊಂದಿದ. आ + रमु (क्रीडायाम्) "क्तः" (३-४-७२)। "उदितपक्षमिवारतनिःस्वनैः पृथुनितम्बविलम्बिभिरम्बुदैः" किरा० ५-६।

**आरति** ಆರತಿ (स्त्री०) 1. ನಿವೃತ್ತಿ, ನಿಲ್ಲುವಿಕೆ. 2. ವಿಶ್ರಾಂತಿ, ವಿರಾಮ. आ + रमु (क्रीडायाम्) "क्तिन्" (३-३-९४)।

**आरनाल** ಆರನಾಳ (न०) ಗಂಜಿ, ಅಂಬಲಿ. आरो नालो गन्धो यस्य। वा "कप्" (५-४-१५४)। आरनालकम् ಆರನಾಳಕವೂ.

**आरब्ध** ಆರಬ್ಧ (वि०) ಪ್ರಾರಂಭಿಸಲ್ಪಟ್ಟ, ಉಪಕ್ರಮಿಸಲ್ಪಟ್ಟ. आ+रभ (राभस्ये) "क्तः" (३-२-१०२)। "व्रतयज्ञविवाहेषु श्राद्धे होमेऽर्चने जपे। आरब्धे सूतकं न स्यादनारब्धे तु सूतकम्"।

**आरभट** ಆರಭಟ (पु०) ವೀರ, ಶೂರ, ಸಾಹಸಕೃತ್ಯವೆಸಗುವವನು.

**आरभटी** ಆರಭಟೀ (स्त्री०) 1. ಆರಭಟೀವೃತ್ತಿ, ಒಂದು ವಿಧವಾದ ಭಾಷೆಯ ಶೈಲಿ, ಒಂದು ಬಗೆ ವಾಗ್ಜೋರಣೆ. ಈ ವೃತ್ತಿಯು ರೌದ್ರ ಮತ್ತು ಬೀಭತ್ಸ ರಸಗಳಲ್ಲಿ ಉಪಯೋಗಿಸಲ್ಪಡುವುದು. "आरभटी पुनः। रसे रौद्रे च बीभत्से" सा० द०। ಆರಭಟೀ ಲಕ್ಷಣ "मायेन्द्रजालसङ्ग्रामक्रोधोद्भ्रान्तादिचेष्टितैः। संयुक्ता वधबन्धाद्यैरुद्धतारभटी मता" सा० द०। 2. ನರ್ತನದ ಒಂದು ರೀತಿ.

**आरभ्य** ಆರಭ್ಯ (वि०) 1. ಪ್ರಾರಂಭಿಸಲು ಯೋಗ್ಯವಾದ, ಉಪಕ್ರಮಿಸಲು ಅರ್ಹವಾದ. आ + रभ (राभस्ये) "ण्यत्" (३-१-१२४)। (अव्य०) 2. ಉಪಕ್ರಮಿಸಿ, ಪ್ರಾರಂಭಿಸಿ. आ + रभ "ल्यप्" (७-१-३७)। 3. ಮೊದಲುಗೊಂಡು. "मालत्याः प्रथमावलोकनदिनादारभ्य" मालती० ६-३।

**आरमण** ಆರಮಣ (न०) 1. ವಿಶ್ರಾಂತಿ, ವಿರಾಮ. आ + रमु (क्रीडायाम्) "ल्युट्" (३-३-११५)। 2. ವಿಶ್ರಾಂತಿಸ್ಥಾನ. आरम्यतेऽत्र--अधि० "ल्युट्" (३-३-११७)।

**आरम्भ** ಆರಂಭ (पु०) 1. ಪ್ರಾರಂಭ, ಉಪಕ್ರಮ. आ + रभ (राभस्ये) "घञ्" (३-३-१८)। नुमागमः (७-२-६१)। "चण्डारम्भः समीरो वहति परिदिशं भीरु किं सम्भ्रमेण" वेणी० २-१९। "आरम्भं प्रथमं चक्रुर्देवदुन्दुभयो दिवि" रघु० १०-७६। 2. ಪ್ರಯತ್ನ. "सक्ताङ्गुलिः सायकपुङ्ख एव चित्रार्पितारम्भ इवावतस्थे" रघु० २-३१। 3. ವೇಗ, ತ್ವರೆ, ಶೀಘ್ರತೆ. 4. ಕೆಲಸ, ವ್ಯಾಪಾರ, ಕಾರ್ಯ. "आगमैः सदृशारम्भः प्रारम्भसदृशोदयः" रघु० १-१५। "अयथाबलमारम्भः" माघ० २-९४। 5. ಪ್ರಸ್ತಾವನೆ, ಪೀಠಿಕೆ. 6. ಅಹಂಕಾರ, ದರ್ಪ, ಕೊಬ್ಬು. 7. ವಧೆ, ಕೊಲ್ಲುವಿಕೆ. "आरम्भस्तु त्वरायां स्यादुद्यमे वधदर्पयोः" मेदि०। (वि०) 8. ಪ್ರಾರಂಭಿಸಲ್ಪಟ್ಟ.

**आरम्भण** ಆರಂಭಣ (न०) 1. ಪ್ರಾರಂಭ, ಉಪಕ್ರಮ. 2. ಪ್ರಯತ್ನ. 3. ಪ್ರಸ್ತಾವನೆ, ಪೀಠಿಕೆ. 4. ಅಹಂಕಾರ, ಗರ್ವ. आ + रभ (राभस्ये) "ल्युट्" (३-३-११५)। 5. ಉಪಾದಾನ ಕಾರಣ. आरम्यतेऽनेन कर० "ल्युट्" (३-३-११७)।

**आरम्भणीय** ಆರಂಭಣೀಯ (वि०) ಪ್ರಾರಂಭಿಸಲ್ಪಡಬೇಕಾದ. आ + रभ (राभस्ये) "अनीयर्" (३-१-९६)।

**आरम्भवाद** ಆರಂಭವಾದ (पु०) ನಿತ್ಯವಾದ ಪರಮಾಣುವೇ ಜಗತ್ತಿನ ಉತ್ಪತ್ತಿಗೆ ಕಾರಣವೆಂದು ಹೇಳುವ ತಾರ್ಕಿಕರ ವಾದ. "द्रव्याणि द्रव्यान्तरमारभन्ते गुणाश्च गुणान्तरम्" वै० सू०। "पृथिव्यम्भोऽग्निवायूनां कर्मसंयोजिताणवः। द्वयणुकादिक्रमेणाण्डमारभन्ते इदं महत्"।

**आरव** ಆರವ (पु०) ಶಬ್ದ, ಧ್ವನಿ. आ + रु (शब्दे) "अप्" (३-३-५७)। "ऋज्वीर्दधानैरवमत्य कन्धराश्चलावचूडाः कलघर्घरारवैः" माघ० १२-१८।

**आरा** ಆರಾ (स्त्री०) 1. ಚರ್ಮವನ್ನು ಕತ್ತರಿಸುವ (ಚಮ್ಮಾರನ) ಉಳಿ. "आरा चर्मप्रभेदिन्यां पुंसि भौमे शनैश्चरे" मेदि०। 2. ಚಾವಟಿ.

**आरात्** ಆರಾತ್ (अव्य०) 1. ದೂರದಲ್ಲಿ. 2. ಸಮೀಪದಲ್ಲಿ. आ + रा (दाने) "आतिः" बाहु०। "आराद्दूरसमीपयोः" अम०। "किं तावत्सरसि सरोजमेतदारात्" माघ० ८-२९। "मरुत्प्रयुक्ताश्च मरुत्सखाभं तमर्च्यमारादभिवर्तमानम्" रघु० २-१०।

**आराति** ಆರಾತಿ (पु०) ಶತ್ರು, ವೈರಿ, ಹಗೆ. आ + रा (दाने) "क्तिच्" (३-३-१७४)।

**आरातीय** ಆರಾತೀಯ (वि०) 1. ದೂರದಲ್ಲಿರುವ. 2. ಹತ್ತಿರದಲ್ಲಿರುವ. 3. ದೂರದಲ್ಲಿ ಉಂಟಾದ. 4. ಸಮೀಪದಲ್ಲಿ ಉಂಟಾದ. 5. ದೂರದಿಂದ ಬಂದ. 6. ಸಮೀಪದಿಂದ ಬಂದ. आरात् भवः जातः आगतो वा "छः" (४-२-११४)।

**आरात्रिक** ಆರಾತ್ರಿಕ (न०) ಆರತಿ, ಮಂಗಳಾರತಿ, (ಕರ್ಪೂರ ಮೊದಲಾದುವನ್ನು ತಟ್ಟೆಯಲ್ಲಿಟ್ಟು ಮಾಡುವ) ನೀರಾಜನ.

**आराधक** ಆರಾಧಕ (वि०) ಅರ್ಚಕ, ಪೂಜೆ ಮಾಡುವವನು. आराध्नोति--आ + राध (संसिद्धौ) "ण्वुल्" (३-१-१३३)।

**आराधन** ಆರಾಧನ (न०) 1. ಪೂಜೆ, ಉಪಾಸನೆ. आ + राध (संसिद्धौ) "ल्युट्" (३-३-११५)। "अथोपघातं मघवा विभूत्यै भवोद्भवाराधनमादिदेश" किरा० ११-८०। 2. ಸೇವೆ, ಶುಶ್ರೂಷೆ. "आराधनायास्य सखीसमेतां समादिदेश प्रयतां तनूजाम्" कुमा० १-५८। 3. ಸಂತೋಷಪಡಿಸುವಿಕೆ, ತೃಪ್ತಿಯುಂಟುಮಾಡುವಿಕೆ. "आराधनाय लोकानां मुञ्चतो नास्ति मे व्यथा" उ० रा० १-१२। 4. ಪೂಜಾಸಾಧನ, ಪೂಜೆಯ ಸಲಕರಣೆ. आराध्यतेऽनेन--कर० "ल्युट्" (३-३-११७)। "इदं तु ते भक्तिनम्रं सतामाराधनं वपुः" कुमा० ६-७३। 5. ಪಾಕ, ಅಡಿಗೆ ಮಾಡುವುದು, ಬೇಯಿಸುವುದು. 6. ಸಂಪಾದನೆ, ಪ್ರಾಪ್ತಿ, ಲಾಭ. "आराधनं साधने स्यादवाप्तौ तोषणेऽपि च" अम०। "आराधनं च पचने प्राप्तौ सन्तोषणेऽपि च" मेदि०।

**आराधना** ಆರಾಧನಾ (स्त्री०) 1. ಪೂಜೆ. 2. ಸೇವೆ, ಶುಶ್ರೂಷೆ. आ + राध (संसिद्धौ) + णिच् "युच्" (३-३-१०७)।

**आराधनीय** ಆರಾಧನೀಯ (वि०) ಪೂಜಿಸಲ್ಪಡುವ, ಪೂಜೆಗೆ ಯೋಗ್ಯನಾದ. आ + राध (संसिद्धौ) "अनीयर्" (३-१-९६)। "सोऽहं कथं नाम तवाचरेयमाराधनीयस्य धृतेर्विघातम्" रघु० १६-८२।

**आराधयितृ** ಆರಾಧಯಿತೃ (वि०) 1. ಪೂಜಿಸುವವನು, ಉಪಾಸಕ. 2. ಸೇವಿಸುವವನು, ಶುಶ್ರೂಷೆ ಮಾಡುವವನು. 3. ಪರಿಚಾರಕ. आ+राध (संसिद्धौ) "तृच्" (३-१-१३३)। "नन्वयमाराधयिता जनस्तव समीपे वर्तते" शाकु० ३। स्त्रियाम् "ङीप्" (४-१-५)। आराधयित्री ಆರಾಧಯಿತ್ರೀ.

**आराधित** ಆರಾಧಿತ (वि०) 1. ಪೂಜಿಸಲ್ಪಟ್ಟ. 2. ಸೇವಿಸಲ್ಪಟ್ಟ. आ + राध (संसिद्धौ) "क्तः" (३-२-१०२)। "राधेयमाराधितजामदग्न्यम्" किरा० ३-२१।

**आराध्य** ಆರಾಧ್ಯ (वि०) 1. ಪೂಜಿಸಲ್ಪಡುವ, ಪೂಜೆಗೆ ಯೋಗ್ಯನಾದ. आ + राध (संसिद्धौ) "ण्यत्" (३-१-१२४)। (अव्य०) 2. ಪೂಜಿಸಿ, ಆರಾಧಿಸಿ. आ + राध "ल्यप्" (७-१-३७)। "आराध्य वा सहस्राक्षमयशःशल्यमुद्धरे" किरा० ११-७९।

**आराम** ಆರಾಮ (पु०) 1. ಕೈತೋಟ, ಉಪವನ, ಉದ್ಯಾನ. आरम्यतेऽत्र– आ + रमु (क्रीडायाम्) "घञ्" (३-३-१२१)। "योऽन्तःसुखोऽन्तरारामस्तथान्तर्ज्योतिरेव सः" गीता ५-२४। रा० भा०। 2. ಕ್ರೀಡೆ, ವಿಹಾರ, ಆಟ. गीता ५-२४। शां० भा०। 3. ಸಂತೋಷ. "रामभद्र गुणाराम भ्रातृभिस्त्वं पुरस्कृतः" म० वी० ७-४०।

**आरामिक** ಆರಾಮಿಕ (वि०) ತೋಟದ ಕಾವಲುಗಾರ. आरामे नियुक्तः "ठक्" (४-४-६९)।

**आरालिक** ಆರಾಲಿಕ (पु०) 1. ಅಡಿಗೆಯವನು. (वि०) 2. ವಕ್ರಗತಿಯುಳ್ಳವನು. अरालं कुटिलं चरति– "ठक्" (४-४-८)।

**आराव** ಆರಾವ (पु०) ಶಬ್ದ, ಧ್ವನಿ. आ+रु (शब्दे) "घञ्" (३-३-१८)। "नारावं व्यतनुत मेखलाकलापः कस्मिन् वा सजलगुणे गिरां पटुत्वम्" माघ० ८-४५।

**आराविन्** ಆರಾವಿನ್ (वि०) ಧ್ವನಿಯುಳ್ಳ, ಶಬ್ದದಿಂದ ಕೂಡಿದ. आरावः शब्दोऽस्त्यत्र "इनिः" (५-२-११५)। "अनेन तनुमध्यया मधुरनूपुराराविणा" माल० ३-१७।

**आरित्रिक** ಆರಿತ್ರಿಕ (वि०) 1. ಹಡಗಿನ ಲಂಗರಿನಲ್ಲಿರುವ. 2. ಲಂಗರಿನಲ್ಲಿ ಉಂಟಾದ. अरित्रे भवः जातो वा "ठञ्" "ञितः" च (४-२-११६)। स्त्रियाम् ठञि "ङीप्" (४-१-१५)। आरित्रिकी ಆರಿತ್ರಿಕೀ. ञिठे "टाप्" आरित्रिका ಆರಿತ್ರಿಕಾ.

**आरित्सा** ಆರಿತ್ಸಾ (स्त्री०) ಹಿಂಸಿಸಲು ಅಪೇಕ್ಷೆ. आ+राध (संसिद्धौ) + सन् "अः" (३-३-१०२)।

**आरित्सु** ಆರಿತ್ಸು (वि०) ಹಿಂಸಿಸಲು ಅಪೇಕ್ಷೆಯುಳ್ಳ. आ + राध (संसिद्धौ) + सन् "उः" (३-२-१६८)।

**आरिरात्सा** ಆರಿರಾತ್ಸಾ (स्त्री०) ಪೂಜಿಸಲು ಅಪೇಕ್ಷೆ. आराद्धुमिच्छा—आ + राध (संसिद्धौ) + सन् "अः" (३-३-१०२)।

**आरिरात्सु** ಆರಿರಾತ್ಸು (वि०) ಪೂಜಿಸಲು ಅಪೇಕ್ಷೆಯುಳ್ಳ. आराद्धुमिच्छुः—आ + राध (संसिद्धौ) + सन् "उः" (३-२-१६८)।

**आरिराधयिषा** ಆರಿರಾಧಯಿಷಾ (स्त्री०) ಪೂಜೆ ಮಾಡಿಸಲು ಅಪೇಕ್ಷೆ. आराधयितुमिच्छा—आ + राध (संसिद्धौ) + णिच् + सन् "अः" (३-३-१०२)।

**आरिराधयिषु** ಆರಿರಾಧಯಿಷು (वि०) ಪೂಜೆಮಾಡಿಸಲು ಅಪೇಕ್ಷೆಯುಳ್ಳ. आराधयितुमिच्छुः—आ+राध (संसिद्धौ) + णिच् + सन् "उः" (३-२-१६८)।

**आरोहणक** ಆರೋಹಣಕ (वि०) ಆರೋಹಣ ರಾಜನಿಂದ ಮಾಡಲ್ಪಟ್ಟ. अरोहणेन निर्वृतम् "वुञ्" (४-२-८०)।

**आरुरुक्षा** ಆರುರುಕ್ಷಾ (स्त्री०) ಏರಲು ಇಚ್ಛೆ, ಹತ್ತಲು ಅಪೇಕ್ಷೆ. आरोढुमिच्छा—आ + रुह (बीजजन्मनि प्रादुर्भावे च) + सन् "अः" (३-३-१०२)।

**आरुरुक्षु** ಆರುರುಕ್ಷು (वि०) ಏರಲು ಇಚ್ಛೆಯುಳ್ಳ, ಹತ್ತಲು ಇಷ್ಟವುಳ್ಳ. आरोढुमिच्छुः—आ + रुह (बीजजन्मादौ) +सन् "उः" (३-२-१६८)। "तमारुरुक्षुं तरलाङ्घ्रिपद्मम्" याद० ४-२५। "कैलासगौरं वृषमारुरुक्षोः पादार्पणानुग्रहपूतपृष्ठम्" रघु० २-३५। "आरुरुक्षोर्मुनेर्योगं कर्म कारणमुच्यते" गीता ६-३।

**आरूढ** ಆರೂಢ (न०) 1. ಹತ್ತುವಿಕೆ, ಏರುವಿಕೆ. आ + रुह (बीजजन्मादौ) भावे "क्तः" (३-३-११४)।

"अत्यारूढं रिपोः सोढं चन्दनेनेव भोगिनः" रघु० १०-४२। (वि०) 2. ಮೇಲಕ್ಕೆ ಹತ್ತಿದ, ಏರಿದ. कर्त० "क्तः" (३-४-७२)। "आरूढः पतित इति स्वसंभवोऽपि" माघ० ८-५४। 3. ಉಂಟಾದ, ಉತ್ಪನ್ನವಾದ. "तदागमारूढगुरुप्रहर्षः" रघु० ५-६१। 4. ಹತ್ತಲ್ಪಟ್ಟ, ಏರಲ್ಪಟ್ಟ. आ + रुह (बीजजन्मादौ) कर्म० "क्तः" (३-२-१०२)। "आरूढो वृक्षो भवता" सि० कौ०।

**आरूढि** ಆರೂಢಿ (स्त्री०) ಹತ್ತುವಿಕೆ, ಏರುವಿಕೆ, आ+रुह (बीजजन्मादौ) "क्तिन्" (३-३-९४)।

**आरेक** ಆರೇಕ (पु०) 1. ಆಧಿಕ್ಯ, ಹೆಚ್ಚಿಗೆ. 2. ಸಂಕೋಚಮಾಡಿಕೊಳ್ಳುವುದು, ಚಿಕ್ಕದುಮಾಡಿಕೊಳ್ಳುವುದು. आ + रिच (वियोजनसंपर्चनयोः) "घञ्" (३-३-१८)।

**आरेचित** ಆರೇಚಿತ (वि०) ಸಂಕೋಚಮಾಡಿಕೊಳ್ಳಲ್ಪಟ್ಟ, ಚಿಕ್ಕದುಮಾಡಿಕೊಳ್ಳಲ್ಪಟ್ಟ. आ + रिच (वियोजनसंपर्चनयोः) + णिच् "क्तः" (३-२-१०२)। "आरेचितभ्रूचतुरैः कटाक्षैः" कुमा० ३-५।

**आरेवत** ಆರೇವತ (पु०) 1. ಕಕ್ಕೆಗಿಡ. आरेवयति निःसारयति मलम्—आ + रेवृ (गतौ) +णिच् "विच्" (३-२-७५)। आरेवमतति—अत (सातत्यगमने) "अच्" (३-१-१३४)। (न०) 2. ಕಕ್ಕೆ ಕಾಯಿ.

**आरोग्य** ಆರೋಗ್ಯ (न०) ರೋಗವಿಲ್ಲದಿರುವಿಕೆ. अरोगस्य भावः "ष्यञ्" (५-१-१२४)। "आरोग्यं भास्करादिच्छेत् मोक्षमिच्छेज्जनार्दनात्। ज्ञानं महेश्वरादिच्छेत् श्रियमिच्छेद्धुताशनात्"। "धर्मार्थकाममोक्षाणामारोग्यं साधनं यतः"।

**आरोग्यव्रत** ಆರೋಗ್ಯವ್ರತ (न०) ಆರೋಗ್ಯಕ್ಕಾಗಿ ಆಚರಿಸಲ್ಪಡುವ ವ್ರತ. आरोग्यार्थं व्रतम्। [ಈ ವ್ರತವನ್ನು ಮಾಘ ಶುಕ್ಲ ಸಪ್ತಮಿಯಿಂದ ಒಂದು ವರ್ಷಕಾಲ ಪ್ರತಿ ಶುಕ್ಲ ಸಪ್ತಮೀ ದಿನ ಆಚರಿಸಬೇಕು.] "अतः परं महाराज व्रतमारोग्यसंज्ञितम्। सितायां माघमासस्य सप्तम्यां समुपोषितः। षष्ठ्यां चैव कृताहारः सप्तम्यामुपवासकृत्। अष्टम्यां चैव भुञ्जीत एष एव विधिर्मतः। अनेन वत्सरं पूर्णं विधिना योऽर्चयेद्रविम्। तस्यारोग्यं धनं धान्यमिह जन्मनि जायते" वराहपु०।

**आरोग्यशाला** ಆರೋಗ್ಯಶಾಲಾ (स्त्री०) ಚಿಕಿತ್ಸಾಗೃಹ, ಆಸ್ಪತ್ರೆ. आरोग्यार्था शाला। "आरोग्यशालां कुर्वीत महौषधपरिच्छदाम्। विदग्धवैद्यसंयुक्तां बह्वन्नरससंयुताम्। वैद्यस्तु शास्त्रवित्प्राज्ञः दृष्टौषधपराक्रमः। ओषधीमूलतत्त्वज्ञः समुद्धरणकालवित्। त्यागिवद्देहिनां तद्वदनुकूलप्रियंवदः" ಎಂದು ಆಸ್ಪತ್ರೆಯ ನಿರ್ಮಾಣಕ್ರಮವು ಹೇಳಲ್ಪಟ್ಟಿದೆ.

**आरोग्यस्नान** ಆರೋಗ್ಯಸ್ನಾನ (न०) ಆರೋಗ್ಯಾನಂತರ ಮಾಡುವ ಸ್ನಾನ. आरोग्यनिमित्तं स्नानम्।

**आरोढ़** ಆರೋಢೃ (वि०) ಆನೆ ಕುದುರೆ ಮೊದಲಾದುವುಗಳ ಮೇಲೆ ಹತ್ತುವವನು (ಸವಾರಿ ಮಾಡುವವನು). आ + रुह (बीजजन्मादौ) "तृच्" (३-१-१३३)। "आरोढुः समवनतस्य पीतशेषे" किरा० ७-३३।

**आरोप** ಆರೋಪ (पु०) 1. ಹತ್ತಿಸುವಿಕೆ, ಏರಿಸುವಿಕೆ. आ + रुह (बीजजन्मादौ) +णिच् "घञ्" (३-३-१८)। पादेशः (७-३-४३)। 2. ಒಂದು ವಸ್ತುವಿನಲ್ಲಿ ಮತ್ತೊಂದರ ಜ್ಞಾನ. ಇದು (1) ಕೇವಲಾರೋಪ ಮತ್ತು (2) ಆಹಾರ್ಯಾರೋಪಗಳೆಂದು ಎರಡು ವಿಧ. 1. ಭ್ರಾಂತಿ, ಅದಲ್ಲದ ವಸ್ತುವನ್ನು ಅದನ್ನಾಗಿ ತಿಳಿಯುವುದು ಕೇವಲಾರೋಪ. ಭ್ರಾಂತಿಯೂ ತಾದಾತ್ಮ್ಯಾರೋಪ ಮತ್ತು ಸಂಸರ್ಗಾರೋಪಗಳೆಂದು ಎರಡು ವಿಧ. ಶುಕ್ತಿಯನ್ನು ರಜತವನ್ನಾಗಿ ತಿಳಿಯುವುದು ತಾದಾತ್ಮ್ಯಾರೋಪ. ಜಪಾಕುಸುಮದ ರಕ್ತವರ್ಣವನ್ನು ಸಮೀಪದಲ್ಲಿರುವ ಸ್ಫಟಿಕದಲ್ಲಿ ಹೇಳುವುದು ಸಂಸರ್ಗಾರೋಪ. 2. ಎರಡು ವಸ್ತುಗಳ ಭೇದಜ್ಞಾನವಿದ್ದರೂ ಒಂದರಲ್ಲಿ ಇಲ್ಲದ ಮತ್ತೊಂದರ ಧರ್ಮವನ್ನು ಕಲ್ಪಿಸಿ ಹೇಳುವುದು ಆಹಾರ್ಯಾರೋಪ. "अयं हि धूर्जटिः साक्षाद्येन दग्धाः पुरः क्षणात्" ಎಂಬಲ್ಲಿ ರಾಜ ಮತ್ತು ಧೂರ್ಜಟಿ ಇವರಿಗೆ ಭೇದವು ತೋರಿಬಂದರೂ ರಾಜನಲ್ಲಿಲ್ಲದ ಧೂರ್ಜಟಿತ್ವರೂಪ ಧರ್ಮವನ್ನು ಕಲ್ಪಿಸಿ ಹೇಳುವುದರಿಂದ ಆಹಾರ್ಯಾರೋಪ. 3. ಗುಣದಲ್ಲಿ ದೋಷವನ್ನು ಹೇಳುವುದು. 4. ಗಿಡ ಮುಂತಾದುವನ್ನು ನೆಟ್ಟು ಬೆಳೆಸುವುದು. 5. ಮೇಲೆ ಇಡುವುದು, ಮೇಲೆ ಹಾಕುವುದು. 6. ತಪ್ಪು ಹೊರಿಸುವುದು.

**आरोपक** ಆರೋಪಕ (वि०) 1. ಏರಿಸುವವನು. 2. ಗಿಡಗಳನ್ನು ನೆಟ್ಟು ಬೆಳೆಸುವವನು. आ + रुह (बीजजन्मादौ) + णिच् "ण्वुल्" (३-१-१३३)। 3. ಎತ್ತಿ ಇಡುವವನು, ಮೇಲೆ ಇರಿಸುವವನು.

**आरोपण** ಆರೋಪಣ (ನಂ) ಹತ್ತಿಸುವುದು, ಮೇಲಕ್ಕೆ ಏರಿಸುವುದು. आ + रुह (बीजजन्मादौ) + णिच् "ल्युट्" (३-३-११५)। ಮುಂಚಾಗಿ "आरोप" ಪದದ ಅರ್ಥ. "जायापती लौकिकमेषणीय-मार्द्राक्षतारोपणमन्वभूताम्" कुमा० ೭-೮೮।

**आरोपणीय** ಆರೋಪಣೀಯ (वि०) 1. ಆರೋಪಿಸಲ್ಪಡುವ, ಆಪಾದಿಸಲ್ಪಡುವ, ತಪ್ಪು ಹೊರಿಸಲ್ಪಡುವ. आ + रुह (बीजजन्मादौ) + णिच् "अनीयर्" (३-१-९६)। 2. ಏರಿಸಲ್ಪಡುವ, ಹತ್ತಿಸಲ್ಪಡುವ.

**आरोप्य** ಆರೋಪ್ಯ (वि०) 1. ಆರೋಪಿಸಲ್ಪಡುವ, ಕಲ್ಪಿಸಲ್ಪಡುವ. आ + रुह (बीजजन्मादौ) + णिच् "यत्" (३-१-९७)। मुखं चन्द्रः ಎಂಬಲ್ಲಿ ಮುಖದಲ್ಲಿ ಚಂದ್ರತ್ವವು (ಚಂದ್ರನ ಧರ್ಮವು) ಆರೋಪ್ಯವು. 2. ಏರಿಸಲ್ಪಡುವ, ಹತ್ತಿಸಲ್ಪಡುವ. 3. ಭ್ರಾಂತಿಯಿಂದ ತಿಳಿಯಲ್ಪಡುವ.

**आरोपित** ಆರೋಪಿತ (वि०) 1. ಆರೋಪಿಸಲ್ಪಟ್ಟ, ಕಲ್ಪಿಸಲ್ಪಟ್ಟ. 2. ಏರಿಸಲ್ಪಟ್ಟ, ಹತ್ತಿಸಲ್ಪಟ್ಟ. 3. ನೆಟ್ಟು ಬೆಳೆಸಲ್ಪಟ್ಟ. आ + रुह (बीजजन्मादौ) + णिच् "क्तः" (३-२-१०२)। 4. ಇಡಲ್ಪಟ್ಟ. "अथाभिपश्यन्निव विद्विषः पुरः पुरोधसारोपितहेतिसंहतिः" किरा० ३-५६। 5. ಭ್ರಾಂತಿಯಿಂದ ತಿಳಿಯಲ್ಪಟ್ಟ, ತಪ್ಪಾಗಿ ತಿಳಿಯಲ್ಪಟ್ಟ.

**आरोह** ಆರೋಹ (पु०) 1. ಹತ್ತುವುದು, ಏರುವುದು. 2. ಎತ್ತರ, ಔನ್ನತ್ಯ. 3. ಮೊಳಕೆ. 4. ಅಹಂಕಾರ, ಗರ್ವ, ಸೊಕ್ಕು. 5. ಉದ್ದ, ನೀಳ. 6. (ಸ್ತ್ರೀಯರ) ನಿತಂಬ, ಹೆಂಗಸಿನ ಕಟಿಪ್ರದೇಶ, ಸೊಂಟ. 7. ಇಳಿಯುವುದು, ಕೆಳಕ್ಕೆ ಬರುವುದು. 8. (ಆನೆ ಕುದುರೆ ಮೊದಲಾದುವುಗಳ ಮೇಲೆ) ಸವಾರಿಮಾಡುವವನು. आ + रुह (बीजजन्मादौ) "घञ्" (३-३-१८)। "आरोहस्त्ववरोहे च वरारोहाकटावपि। आरोहणे गजारोहे दीर्घत्वे च समुच्छ्रये" मेदि०।

**आरोहण** ಆರೋಹಣ (नं०) 1. ಮೇಲಕ್ಕೆ ಹತ್ತುವುದು. आ + रुह (बीजजन्मादौ) "ल्युट्" (३-३-११५)। "आरोहणार्थं नवयौवनेन कामस्य सोपानमिव प्रयुक्तम्" कुमा० १-३९। 2. ಬೀಜವು ಅಂಕುರಿಸುವುದು, ಮೊಳಕೆ ಹೊರಡುವುದು. 3. ಸೋಪಾನ, ಮೆಟ್ಟಲು, ಹಂತ. आरुह्यतेऽनेन—आ + रुह कर० "ल्युट्" (३-३-११७)। "आरोहणं स्यात्सोपाने समारोहे प्ररोहणे" मेदि०। 4. ಸಂಗೀತದ ಸ್ವರಗಳ ಏರಿಕೆ.

**आरोहणीय** ಆರೋಹಣೀಯ (वि०) 1. ಹತ್ತಲ್ಪಡುವ, ಹತ್ತಲು ಯೋಗ್ಯವಾದ. आ + रुह (बीजजन्मादौ) "अनीयर्" (३-१-९६)। 2. ಮೇಲಕ್ಕೆ ಹತ್ತಲು ಉಪಯೋಗಿಸಲ್ಪಡುವ ಸಾಧನ. आरोहणं प्रयोजनमस्य "छः" (५-१-१११)।

**आरोहिन्** ಆರೋಹಿನ್ (वि०) ಮೇಲಕ್ಕೆ ಹತ್ತುವವನು, ಏರುವವನು. आ + रुह (बीजजन्मादौ) "णिनिः" (३-१-१३४)। स्त्रियाम् "ङीप्" (४-१-५)। आरोहिणी ಆರೋಹಿಣೀ.

**आरोहिणी** ಆರೋಹಿಣೀ (स्त्री०) (ಜ್ಯೋತಿಷೋಕ್ತವಾದ) ಸೂರ್ಯಾದಿ ಗ್ರಹಗಳ ದಶೆ. ಸೂರ್ಯ ದಶೆಯಿಂದ ಕ್ರಮವಾಗಿ ಮುಂದಿನ ಚಂದ್ರಾದಿ ಗ್ರಹಗಳ ದಶೆಗಳು ಆರೋಹಿದಶೆಗಳು. ಶುಕ್ರದಶೆಯಿಂದ ಪುನಃ ಸೂರ್ಯಾದಿ ದಶೆಗಳು ಬಂದರೆ ಅವರೋಹಿ ದಶೆಗಳು.

**आर्कायण** ಆರ್ಕಾಯಣ (नं०) 1. ಸೂರ್ಯನ ಗತಿ, —ಸಂಚಾರ. (वि०) 2. ಸೂರ್ಯವಂಶದಲ್ಲಿ ಹುಟ್ಟಿದ. अर्कस्य गोत्रापत्यं "फञ्" (४-१-११०)।

**आर्कि** ಆರ್ಕಿ (पु०) ಸೂರ್ಯನ ಪುತ್ರ—(1) ಶನಿದೇವ, (2) ಯಮ, (3) ಕರ್ಣ, (4) ಸುಗ್ರೀವ ಮತ್ತು (5) ವೈವಸ್ವತ ಮನು. (पु० द्वि० व०) (6) ಅಶ್ವಿನೀ ಕುಮಾರರು. अर्कस्यापत्यम् "इञ्" (४-१-९५)।

**आर्क्ष** ಆರ್ಕ್ಷ (वि०) ನಕ್ಷತ್ರ ಸಂಬಂಧವಾದ. ऋक्षस्येदम् "अण्" (४-३-१२०)।

**आर्क्ष्य** ಆರ್ಕ್ಷ್ಯ (वि०) ನಕ್ಷತ್ರದಲ್ಲಿರುವ, ನಕ್ಷತ್ರದಲ್ಲಿ ಉಂಟಾದ. ऋक्षे भवः "यत्" (४-१-१०५)।

**आर्गल** ಆರ್ಗಳ (स्त्री० नं०) ಅಗಳಿ, ಬಾಗಿಲಿಗೆ ಹಾಕುವ ತಡೆಯ ಮರ, ತಾಪಾಳು. अर्गल स्वार्थे "अण्"। स्त्रियाम् "ङीप्" (४-१-१५)। आर्गली ಆರ್ಗಳೀ.

**आर्घा** ಆರ್ಘಾ (स्त्री०) ಚೂಪಾದ ಮೂತಿಯುಳ್ಳ ಹಳದಿಬಣ್ಣದ ಒಂದು ಜಾತಿ ಜೇನುಹುಳ.

**आर्घ्य** ಆರ್ಘ್ಯ (नं०) 1. ಹಳದಿ ಬಣ್ಣದ ಜೇನುಹುಳುವಿನಿಂದ ಉಂಟಾದ ಜೇನುತುಪ್ಪ. 2. ಜರತ್ಕಾರು ಋಷಿಯ ಆಶ್ರಮದ ಹಿಪ್ಪೆಮರದಿಂದ ಹೊರಟ ರಸ (ಹಾಲು). "मधूकवृक्षा निर्यासं जरत्कार्वाश्रमोद्भवाः। स्रवन्त्यार्घ्यं तदाख्यातं श्वेतकं मालवे पुनः। तीक्ष्णतुण्डास्तु याः पीताः मक्षिकाः षट्पदोपमाः। आर्घास्ताः तत्कृतं यत् स्यादार्घ्यमित्यपरे जगुः"।

**आर्च** ಆರ್ಚ (वि०) ಪೂಜಾಕಾರ್ಯವುಳ್ಳ, ಭಕ್ತಿಯುಳ್ಳ. अर्चास्त्यस्य "ण:" (५-२-१०१)।

**आर्चिक** ಆರ್ಚಿಕ (वि०) 1. ಋಗ್ವೇದದಲ್ಲಿ ಉಕ್ತವಾದ, ಋಗ್ವೇದಕ್ಕೆ ಸಂಬಂಧಿಸಿದ. ऋचि भव: "ठक्" (४-३-७२)। 2. ಋಕ್ಕುಗಳ ವ್ಯಾಖ್ಯಾನ. ऋचां व्याख्यानो ग्रन्थ: "ठक्" (४-३-७२)।

**आर्चीक** ಆರ್ಚೀಕ (पु०) 1. ಋಚೀಕಪರ್ವತ. (वि०) 2. ಋಚೀಕಪರ್ವತಕ್ಕೆ ಸಂಬಂಧಿಸಿದ, ಋಚೀಕ ಪರ್ವತದಲ್ಲಿ ಹುಟ್ಟಿದ. ऋचीके भव: "अण्" (४-३-५३)।

**आर्जक** ಆರ್ಜಕ (वि०) ಸಂಪಾದಿಸುವವನು. आ + अर्ज (अर्जने) "ण्वुल्" (३-१-१३३)। "पार्थ एव सहजेष्वखिलेषु प्रायशो युधि बलं श्रुतवत्या:। अन्वभूदधिकमीक्षणवृष्टीरार्जकांशमिव राजसुताया:" चं० भा०।

**आर्जव** ಆರ್ಜವ (न०) 1. ಸರಳತೆ, ನೇರವಾಗಿರುವಿಕೆ. ऋजोर्भाव: "अण्" (५-१-१२२)। "ऋजुता वक्रतां प्राप वक्रता च तथार्जवम्" चं० रा०। 2. ಪ್ರಾಮಾಣಿಕತೆ, ವಂಚನೆಯಿಲ್ಲದಿರುವಿಕೆ. 3. ವಿಧೇಯತೆ, ನಮ್ರತೆ. "ददर्श गोपानुपधेनु पाण्डव: कृतानुकारानिव गोभिरार्जवे" किरा० ४-१३।

**आर्जुनायन** ಆರ್ಜುನಾಯನ (पु०) ಅರ್ಜುನನ ಗೋತ್ರದಲ್ಲಿ ಹುಟ್ಟಿದವನು. अर्जुनस्य गोत्रापत्यम् "फञ्" (४-१-११०)। स्त्रियाम् "टाप्" (४-१-४)। आर्जुनायना ಆರ್ಜುನಾಯನಾ.

**आर्जुनि** ಆರ್ಜುನಿ (पु०) ಅರ್ಜುನನ ಮಗ, ಅಭಿಮನ್ಯು. अर्जुनस्यापत्यम् "इञ्" (४-१-९६)।

**आर्त** ಆರ್ತ (वि०) 1. ಪೀಡಿಸಲ್ಪಟ್ಟ, ನೋಯಿಸಲ್ಪಟ್ಟ, ತೊಂದರೆ ಪಡಿಸಲ್ಪಟ್ಟ. 2. ದುಃಖಗೊಂಡ, ಕಷ್ಟಕ್ಕೆ ಸಿಲುಕಿದ. "तदीयमाक्रन्दितमार्तसाधोर्गुहानिबद्धप्रतिशब्ददीर्घम्" रघु० २-२८। 3. ರೋಗಿ, ವ್ಯಾಧಿಗ್ರಸ್ತ. आ + ऋ (गतौ) "क्त:" (३-२-१०२)। "द्वेष्योऽपि संमत: शिष्टस्तस्यार्तस्य यथौषधम्" रघु० १-२८।

**आर्तगल** ಆರ್ತಗಲ (पु०) ನೀಲಿ ಹೂವಿನ ಗೋರಂಟಿ.

**आर्तपर्ण** ಆರ್ತಪರ್ಣ (पु०) ಋತುಪರ್ಣಮಹಾರಾಜನ ಮಗ. ऋतुपर्णस्यापत्यम् "इञ्" (४-१-९५)।

**आर्तव** ಆರ್ತವ (न०) 1. ಮುಟ್ಟು, ರಜಸ್ಸು, (ಸ್ತ್ರೀಯರ) ಋತುಕಾಲದ ರಕ್ತಸ್ರಾವ. ऋतु "अण्" (५-४-३८)। "नोपगच्छेत्प्रमत्तोऽपि स्त्रियमार्तवदर्शने" मनु० ४-४०। (वि०) 2. (ವಸಂತಾದಿ) ಋತು ಸಂಬಂಧವಾದ, ಕಾಲಕ್ಕೆ ಸಂಬಂಧಿಸಿದ. ऋतुरस्य प्राप्त: "अण्" (५-१-१०५)। "अवधीरितार्तवगुणं सुखतां नयता रुचां निचयमंशुमत:" किरा० ६-२५।

**आर्ति** ಆರ್ತಿ (स्त्री०) 1. ಪೀಡೆ, ತೊಂದರೆ. 2. ನೋವು, ದುಃಖ. 3. ಧನುಸ್ಸಿನ ಅಗ್ರಭಾಗ, ಬಿಲ್ಲಿನ ತುದಿ. 4. ವಿನಾಶ, ಅಳಿವು, ಪ್ರಳಯ. "आ + ऋ (गतौ) "क्तिन्" (३-३-९४)। "आपन्नार्तिप्रशमनफला: सम्पदो ह्युत्तमानाम्" मेघ० १-५३। 5. ರೋಗ, ವ್ಯಾಧಿ.

**आर्त्विज** ಆರ್ತ್ವಿಜ (वि०) ಋತ್ವಿಕ್ಕಿನ ಸಂಬಂಧವಾದ. ऋत्विज इदम् "अण्" (४-३-१२०)।

**आर्त्विजीन** ಆರ್ತ್ವಿಜೀನ (पु०) 1. ಯಜಮಾನ, ಯಾಗಮಾಡುವವನು. ऋत्विजमर्हति। 2. ಋತ್ವಿಕ್ಕು, ಯಾಗಮಾಡಿಸುವವನು. ऋत्विजं तत्कर्मार्हति "खञ्" (वा० ५-१-७१)। "दक्षिण्यदिष्टं कृतमार्त्विजीनैस्तद्यातुधानैश्चिचिते प्रसर्पत्" भट्टि० २-२९।

**आर्त्विज्य** ಆರ್ತ್ವಿಜ್ಯ (न०) ಋತ್ವಿಕ್ಕಿನ ಕಾರ್ಯ, ಯಾಗಮಾಡಿಸುವವನ ಕೆಲಸ. ऋत्विजो भाव: कर्म वा "ष्यञ्" (५-१-१२४)।

**आर्थ** ಆರ್ಥ (वि०) ಉಪಾತ್ತಶಬ್ದದಿಂದ ಉಂಟಾಗದೆ ಅರ್ಥದಿಂದ ಉಂಟಾದ, ಅರ್ಥದಿಂದ ಬಂದ. अर्थादागत: "अण्" (४-३-७४)। स्त्रियाम् "ङीप्" (४-१-१५)। आर्थी उपमा। 2. ಅರ್ಥಲಬ್ಧವಾದ ವ್ಯಂಜನೆ. ವ್ಯಂಜನೆಯು शाब्दी ಮತ್ತು आर्थी ಎಂದು ಎರಡು ವಿಧ. ಕಾಲದೇಶಾನುಸಾರವಾಗಿಯೂ, ಕಾಕು ಅಥವಾ ಇತರ ವ್ಯಾಪಾರಗಳಿಂದಲೂ ಹೇಳತಕ್ಕ ಮಾತಿಗೆ ಬೇರೊಂದು ಅರ್ಥವುಂಟಾಗುವುದಾದರೆ ಅಲ್ಲಿ ವ್ಯಂಜನೆಯು ಅರ್ಥಲಬ್ಧವಾದುದು. "वक्तृबोद्धव्यवाक्यानामन्यसन्निधिवाच्ययो:। प्रस्तावदेशकालानां काकोश्चेष्टादिकस्य च। वैशिष्ट्यादन्यमर्थं या बोधयेत्सार्थसम्भवा" सा० द० २-१६, १७।

**आर्थिक** ಆರ್ಥಿಕ (वि०) 1. ಅರ್ಥದಿಂದುಂಟಾದ, ಅರ್ಥದಿಂದ ಬಂದ. अर्थादागत: "ठक्" (४-३-७४)। 2. ಅರ್ಥವನ್ನು ತೆಗೆದುಕೊಳ್ಳುವ, ದ್ರವ್ಯ (ಧನ)ವನ್ನು ತೆಗೆದುಕೊಳ್ಳುವ. अर्थं गृह्णाति—अर्थं "ठक्" (४-४-४०)।

**आर्द्र** ಆರ್ದ್ರ (वि०) 1. ನೆನೆದಿರುವ, ಒದ್ದೆಯಾದ, ತೇವವಾದ. अर्द्यते स्म—अर्द (गतौ) "रक्" दीर्घश्च

(उ० २-१८)। "प्रत्यंसं विलुलितमूर्धजा चिराय स्नानार्द्रं वपुरुदवापयत्किलैषा" माघ० ८-६८। "आर्द्राक्षतारोपणमन्वभूताम्" रघु० ७-२८। 2. ರಸವತ್ತಾದ, ಹಸಿಯಾದ, ಸಾರವತ್ತಾದ. "आर्द्रं द्रव्यं द्विधा प्रोक्तं सरसं नीरसं तथा। सद्रसं गुप्तरसकं द्विधा नीरसमुच्यते"। 3. ಮೃದುವಾದ, ಕಠಿನವಲ್ಲದ. "प्रेमार्द्राः प्रणयस्पृशः परिचयादुद्गाढरागोदयाः" मालती० ५-७। 4. ಹೊಸದಾದ, ಈಚಿನದಾದ. "ते पुत्रयोर्नैर्ऋतशस्त्रमार्गानार्द्रानिवाङ्गे सदयं स्पृशन्त्यौ" रघु० १४-४।

**आर्द्रक** ಆರ್ದ್ರಕ (वि०) 1. ಆರ್ದ್ರಾ ನಕ್ಷತ್ರದಲ್ಲಿ ಹುಟ್ಟಿದವನು. आर्द्रायां जातः "वुन्" (४-३-२८)। (न०) 2. ಹಸಿಶುಂಠಿ. आर्द्रयति जिह्वाम् "कुन्" (उ० २-३२)। आर्द्रायां भूमौ जातं वा।

**आर्द्रपदी** ಆರ್ದ್ರಪದೀ (स्त्री०) ಒದ್ದೆಯಾದ ಕಾಲುಗಳುಳ್ಳ ಹೆಂಗಸು.

**आर्द्रमाषा** ಆರ್ದ್ರಮಾಷಾ (स्त्री०) ಕಾಡುಉದ್ದಿನ ಗಿಡ.

**आर्द्रशाक** ಆರ್ದ್ರಶಾಕ (न०) ಹಸಿಶುಂಠಿ.

**आर्द्रालुब्धक** ಆರ್ದ್ರಾಲುಬ್ಧಕ (पु०) ಕೇತುಗ್ರಹ.

**आर्द्रा** ಆರ್ದ್ರಾ (स्त्री०) ಆರಿದ್ರಾನಕ್ಷತ್ರ, ಅಶ್ವಿನಿ ಮೊದಲುಗೊಂಡು ಆರನೆಯ ನಕ್ಷತ್ರ. ಇದು ರುದ್ರ ದೇವತಾಕವಾದುದು. ಆರ್ದ್ರಾನಕ್ಷತ್ರದಲ್ಲಿ ಜನಿಸಿದವನು ಮೂರ್ಖನೂ ಗರ್ವಶಾಲಿಯೂ ಕೃತಘ್ನನೂ ಕ್ರೂರನೂ ಪಾಪಕಾರ್ಯನಿರತನೂ ಆಗುತ್ತಾನೆ. "शठगर्वितः कृतघ्नो हिंस्रः पापश्च रौद्रर्क्षे" बृह०। ಈ ನಕ್ಷತ್ರವು ಪ್ರಯಾಣಕ್ಕೆ ನಿಷಿದ್ಧವಾದುದು. ಆದರೆ 21 ಘಳಿಗೆಯ ಮೇಲೆ ತಿಲಪಿಷ್ಟಭಕ್ಷಣಮಾಡಿ ಹೊರಟರೆ ಶುಭವು. ಆರ್ದ್ರಾನಕ್ಷತ್ರದಲ್ಲಿ ಪ್ರಥಮ ರಜಸ್ವಲೆಯಾದರೆ ಕನ್ಯೆಯು ದರಿದ್ರಳಾಗುವಳು. ಸೂರ್ಯನು ಹಗಲಿನಲ್ಲಿ ಆರಿದ್ರಾ ಪ್ರವೇಶಮಾಡಿದರೆ ಜಗತ್ತಿಗೆ ತೊಂದರೆ. ಸಸ್ಯನಾಶ, ಅಲ್ಪವೃಷ್ಟಿ. ರಾತ್ರಿ ಪ್ರವೇಶಿಸಿದರೆ ಕ್ಷೇಮ, ಸುಭಿಕ್ಷ, ಸಸ್ಯವೃದ್ಧಿ ಮತ್ತು ಸುವೃಷ್ಟಿಯುಂಟಾಗುವುದು.

**आर्धधातुक** ಆರ್ಧಧಾತುಕ (न०) (तिङ् ಮತ್ತು श ಕಾರ ಇತ್ಸಂಜ್ಞೆಯುಳ್ಳ ಪ್ರತ್ಯಯಗಳನ್ನು ಬಿಟ್ಟು) ಧಾತುವಿನ ಮುಂದೆ ವಿಧಿಸಲ್ಪಡುವ ಪ್ರತ್ಯಯ. [तिप् ಮೊದಲುಗೊಂಡು महिङ् ವರೆಗಿನ ಹದಿನೆಂಟು ಆಖ್ಯಾತ ಪ್ರತ್ಯಯಗಳು तिङ्]।

**आर्धरात्रिक** ಆರ್ಧರಾತ್ರಿಕ (वि०) ಅರ್ಧರಾತ್ರಿಯಲ್ಲಿ ಉಂಟಾದ. अर्धरात्रे भवः।

**आर्धिक** ಆರ್ಧಿಕ (पु०) 1. ವೈಶ್ಯ ಹೆಂಗಸಿನಲ್ಲಿ ಜನಿಸಿ ಬ್ರಾಹ್ಮಣನ ಮನೆಯಲ್ಲಿ ಬೆಳೆದು ಸುಸಂಸ್ಕೃತನಾದವನು, ಅಂಬಷ್ಠನೆಂಬ ಬೇರೆಕೆ ಜಾತಿಯವನು. स्त्रियाम् जाति० "ङीष्" (४-१-६३)। आर्धिकी ಆರ್ಧಿಕೀ. 2. ಜಮೀನನ್ನು ಸಾಗುವಳಿಮಾಡಿ ಯಜಮಾನನಿಂದ ಅರ್ಧಭಾಗ ಧಾನ್ಯವನ್ನು ಪಡೆಯುವ ಹಕ್ಕುಳ್ಳ ರೈತ. अर्धमर्हति "ठञ्" (५-१-६३)। "आर्धिकः कुलमित्रं च गोपालो दासनापितौ" मनु० ४-२५३।

**आर्य** ಆರ್ಯ (पु०) 1. ಉಪಾಧ್ಯಾಯ, ಗುರು. 2. ಸ್ನೇಹಿತ, ಮಿತ್ರ. 3. ಸ್ವಾಮಿ, ಯಜಮಾನ. ऋ (गतौ) "ण्यत्" (३-१-१२४)। 4. ಶ್ವಶುರ, ಮಾವ. 5. ಕಂಚುಕಿ. (वि०) 6. ಕುಲೀನ, ಶ್ರೇಷ್ಠ ವಂಶದಲ್ಲಿ ಹುಟ್ಟಿದ. 7. ಮಾನ್ಯ, ಪೂಜ್ಯ. 8. ಶ್ರೇಷ್ಠನಾದವನು. 9. ಉದಾರ ಚಿತ್ತವುಳ್ಳವನು. 10. ಸಾಧು, ಶಾಂತಚಿತ್ತ. 11. "आर्यः साधौ सौविदल्लेऽपि" विश्व०। 12. ಸದಾಚಾರಸಂಪನ್ನ, ಕರ್ತವ್ಯವನ್ನು ಬಿಡದೆ ನಿಷಿದ್ಧವಾದುದನ್ನು ಮಾಡದೆ ಇರುವವನು. "कर्तव्यमाचरन् कार्यमकर्तव्यमनाचरन्। तिष्ठति प्रकृताचारे स वा आर्य इति स्मृतः"। "ग्रहीतुमार्यान् परिचर्यया मुहुर्महानुभावा हि नितान्तमर्थिनः" माघ० १-१७। 13. ನ್ಯಾಯವಾದ. 14. ಹೊಂದಲ್ಪಡತಕ್ಕವನು. 15. ನಾಟಕದಲ್ಲಿ ಪೂಜ್ಯನ ಸಂಬೋಧನೆ; ನಟ ಮತ್ತು ಸೂತ್ರಧಾರರು ಪರಸ್ಪರವಾಗಿಯೂ ಹಿರಿಯನನ್ನು ಕಿರಿಯನೂ ಇತರ ಸಾಮಾನ್ಯ ಜನರು ಅಮಾತ್ಯನನ್ನೂ "आर्य" ಪದದಿಂದ ಕರೆಯಬೇಕು. "राजन्नित्यृषिभिर्वाच्य सोऽपत्यप्रत्ययेन च। स्वेच्छया नामभिर्विप्रैः विप्र आर्येति चेतरैः। वाच्यौ नटीसूत्रधारौ आर्यनाम्ना परस्परम्" सा० द० ६-१४५, ४६, ४७। (स्त्री०) आर्या ಆರ್ಯಾ. 1. ಪೂಜ್ಯಳು. "आर्याप्यरुन्धती तत्र व्यापारं कर्तुमर्हति" कुमा० ६-३२। 2. ಶ್ರೇಷ್ಠಚಿತ್ತವೃತ್ತಿಯುಳ್ಳ ಹೆಂಗಸು. 3. ಪಾರ್ವತಿ. "गौर्यामार्या त्रिषुत्वेष कुलीनन्याय्यसाधुषु" नानार्थर०।

**आर्यक** ಆರ್ಯಕ (पु०) 1. ಪಿತಾಮಹ, ತಂದೆಯ ತಂದೆ. 2. ಮಾತಾಮಹ, ತಾಯಿಯ ತಂದೆ.

"आर्यकेण च दृष्टः स पृथाया आर्यकेण च। तदा दौहित्रदौहित्रः परिष्वक्तः सुपीडितम्" भा०। (वि०) 3. ಪೂಜ್ಯ, ಗೌರವಾರ್ಹ. आर्य स्वार्थे "कन्"। ಇತ್ಯಾದಿ "आर्य" ಪದದ ಅರ್ಥ.

**आर्यगृह्य ಆರ್ಯಗೃಹ್ಯ** (वि०) ಆರ್ಯರಿಂದ ಗೌರವಿಸಲ್ಪಡತಕ್ಕವನು, ಪೂಜ್ಯರ ಗುಂಪಿಗೆ ಸೇರಿದವನು. आर्यैर्गृह्यते—ग्रह (उपादाने) "क्यप्" (३-१-११९)। "तमार्यगृह्यं निगृहीतधेनुर्मनुष्यवाचा मनुवंशकेतुम्" रघु० २-३३।

**आर्यधर्म ಆರ್ಯಧರ್ಮ** (पु०) ಹಿರಿಯರ ಸಂಪ್ರದಾಯ, ಸದಾಚಾರ. आर्याणां धर्मः।

**आर्यपुत्र ಆರ್ಯಪುತ್ರ** (पु०) 1. ಪತಿ, ಗಂಡ. आर्यस्य श्वशुरस्य पुत्रः। 2. ಪೂಜ್ಯರ ಮಗ. 3. ಆಚಾರ್ಯರ ಮಗ. ನಾಟಕದಲ್ಲಿ ಈ ಪದವು ವಿಶೇಷವಾಗಿ ಪ್ರಯೋಗಿಸಲ್ಪಡುವುದು. ನಟಿಯು ಸೂತ್ರಧಾರನನ್ನೂ ರಾಣಿಯು ರಾಜನನ್ನೂ ಈ ಪದದಿಂದ ಕರೆಯುವರು. "आर्यपुत्र, इयमस्मि। आज्ञापयत्वार्यपुत्रः को नियोगोऽनुष्ठीयतामिति" रत्ना० १। "जयतु जयत्वार्यपुत्रः" माल० ५।

**आर्यभट्ट ಆರ್ಯಭಟ್ಟ** (पु०) ಒಬ್ಬ ದೊಡ್ಡ (ಹಿರಿಯ) ಜ್ಯೋತಿಃಶಾಸ್ತ್ರಜ್ಞ, ಖಗೋಳಶಾಸ್ತ್ರವನ್ನು ಬಲ್ಲ ಪಂಡಿತ. ಈ ಮಹಾ ಪಂಡಿತನು ಈಗ ನಮ್ಮ ದೇಶದಲ್ಲಿ ಬಳಕೆಯಲ್ಲಿರುವ ಬೀಜಗಣಿತವನ್ನು ಬರೆದು ದೇಶಕ್ಕೆ ಮಹೋಪಕಾರ ಮಾಡಿದನು. ಈತನು ಕಲಿಯುಗದಲ್ಲಿ 3620 ವರ್ಷಗಳ ನಂತರ ಜನಿಸಿದುದಾಗಿ ತನ್ನ ಗ್ರಂಥದಲ್ಲೇ ಹೇಳಿಕೊಂಡಿರುತ್ತಾನೆ. "षष्टयब्दानां षष्टिर्यदा व्यतीतास्त्रयश्च युगपादाः। अधिका विंशतिरब्दाः तदिह मम जन्मनोऽतीताः"।

**आर्यमिश्र ಆರ್ಯಮಿಶ್ರ** (पु०) ಪೂಜ್ಯ, ಗೌರವಾನ್ವಿತ, ಗೌರವಾರ್ಹ. "नन्वार्यमिश्रैः प्रथममेवाज्ञप्तमभिज्ञानशाकुन्तलं नामापूर्वं नाटकं प्रयोगेऽधिक्रियतामिति." शाकु० १।

**आर्या ಆರ್ಯಾ** (स्त्री०) 1. ಪಾರ್ವತಿ, ಗೌರಿ. 2. ಉತ್ತಮ ಹೆಂಗಸು. 3. ಅತ್ತೆ, ಪತಿಯ ತಾಯಿ. 4. ಮಾತ್ರಾ ಛಂದಸ್ಸಿನ ಒಂದು ವೃತ್ತ. ऋ (गतौ) "ण्यत्" (३-१-१२४)। "आर्यः साधौ सौविदल्लेऽप्यार्योमावृत्तभेदयोः" विश्व०। ಆರ್ಯಾವೃತ್ತ ಲಕ್ಷಣ: "लक्ष्मैतत्सप्तगणा गोपेता भवति नेह विषमे जः। षष्ठोऽयं नलघू वा प्रथमेऽर्धे नियतमार्यायाः॥ षष्ठे द्वितीयलान्ले परके मुखलाच्च स यतिपदनियमः। चरमेऽर्धे पञ्चमके तस्मादिह भवति षष्ठो लः" वृ० र०। (१) पथ्या, (२) विपुला, (३) चपला, (४) मुखचपला, (५) जघनचपला, (६) गीतिः, (७) उपगीतिः, (८) उद्गीतिः, (९) आर्यागीतिः ಎಂದು ಆರ್ಯಾ ವೃತ್ತವು ಒಂಭತ್ತು ವಿಧ.

**आर्यागीति ಆರ್ಯಾಗೀತಿ** (स्त्री०) ಮಾತ್ರಾವೃತ್ತಗಳಲ್ಲೊಂದು ಭೇದ, ಆರ್ಯಾ (ವೃತ್ತದ) ಸಾಮಾನ್ಯ ಲಕ್ಷಣದ ಪೂರ್ವಾರ್ಧ ಮತ್ತು ಉತ್ತರಾರ್ಧಗಳಲ್ಲಿ (ಕ್ರಮವಾಗಿ) 30 ಮತ್ತು 27 ಮಾತ್ರೆಗಳ ಜೊತೆಗೆ ಒಂದೊಂದು ಗುರುವು ಅಧಿಕವಾಗಿ ಸೇರಿದರೆ ಆರ್ಯಾಗೀತಿಯಾಗುವುದು. "आर्यापूर्वार्धं यदि, गुरुणैकेनाधिकेन निधने युक्तम्। इतरत्तद्वन्निखिलं, दलं यदीयमुदितेयमार्यागीतिः" वृ० र०।

**आर्यावर्त ಆರ್ಯಾವರ್ತ** (पु०) ವಿಂಧ್ಯ ಮತ್ತು ಹಿಮಾಚಲಗಳ ಮಧ್ಯದ ಪ್ರದೇಶ, ಪೂರ್ವ ಮತ್ತು ಪಶ್ಚಿಮ ಸಮುದ್ರಗಳ ಮಧ್ಯದಲ್ಲಿರುವ ದೇಶ. आर्याः आवर्तन्तेऽत्र—आ+वृतु (वर्तने) "घञ्" (३-३-१२१)। "आर्यावर्तः पुण्यभूमिर्मध्यं विन्ध्यहिमागयोः" अम०। "आ समुद्रात्तु वै पूर्वादा समुद्रात्तु पश्चिमात्। तयोरेवान्तरं गिर्योरार्यावर्तं विदुर्बुधाः" मनु० २-२२।

**आर्ष ಆರ್ಷ** (पु०) 1. ಎಂಟುವಿಧ ವಿವಾಹಗಳಲ್ಲೊಂದು ವಿಧ. ऋषिर्वेदः तस्यायम् "अण्" (४-३-१२०)। "ब्राह्मो दैवस्तथैवार्षः प्राजापत्यस्तथासुरः। गान्धर्वो राक्षसश्चैव पैशाचश्चाष्टमोऽधमः" मनु० ३-२१। ವರನಿಂದ ಒಂದು ಅಥವಾ ಎರಡು ಗೋಮಿಥುನವನ್ನು (ಒಂದು ಹಸು ಒಂದು ಎತ್ತು ಗೋಮಿಥುನ) ಧರ್ಮಾರ್ಥವಾಗಿ (ಶುಲ್ಕರೂಪವಾಗಿ ಕೊಡದು) ತೆಗೆದುಕೊಂಡು [ಇದು ಪ್ರಾಚೀನ ಪದ್ಧತಿ] ಶಾಸ್ತ್ರ ರೀತಿಯಲ್ಲಿ ಕನ್ಯಾದಾನ ಮಾಡುವುದು "ಆರ್ಷ" ವಿವಾಹವೆನಿಸುವುದು. "एकं गोमियुनं द्वे वा वरादादाय धर्मतः। कन्याप्रदानं विधिवदार्षो धर्मः स उच्यते" मनु० ३-२९। (वि०) 2. ಋಷಿಸಂಬಂಧವಾದ. ऋषेरिदम् "अण्" (४-३-१२०)। 3. ಋಷಿಪ್ರಣೀತವಾದ, ಋಷಿಗಳಿಂದ ದೃಷ್ಟವಾಗಿ ಹೇಳಲ್ಪಟ್ಟ. "आर्षं धर्मोपदेशं च वेदशास्त्राविरोधिना। यस्तर्केणानुसन्धत्ते स धर्मं वेद नेतरः" मनु० १२-१०६। 4. ವೇದ ಸಂಬಂಧವಾದ, ವೇದವಿಹಿತವಾದ. ऋषिर्वेदः

तस्येदम् "अण्" (४-३-१२०)। आर्षो धर्मः आर्षः प्रयोगः ಇತ್ಯಾದಿ.

**आर्षधर्म** ಆರ್ಷಧರ್ಮ (पुं०) 1. ಋಷಿಗಳಿಂದ ಹೇಳಲ್ಪಟ್ಟ ಮಾನವಧರ್ಮ, ವೇದವಿಹಿತವಾದ ಧರ್ಮ. 2. ಆರ್ಷವಿವಾಹ, ಎಂಟುವಿಧ ವಿವಾಹ ಗಳಲ್ಲೊಂದು.

**आर्षभ** ಆರ್ಷಭ (वि०) ವೃಷಭಸಂಬಂಧವಾದ. ऋषभस्येदम् "अण्" (४-३-१२०)।

**आर्षभि** ಆರ್ಷಭಿ (पुं०) ಋಷಭದೇವನ ಮಗ. ऋषभस्यापत्यम् "इञ्" (४-१-९५)।

**आर्षभ्य** ಆರ್ಷಭ್ಯ (पुं०) ಗೂಳಿಯಾಗುವ ಹೋರಿ, ಗೂಳಿಯಾಗಲು ಅರ್ಹವಾದ ಕರು, ಷಂಡತ್ವಕ್ಕೆ ಯೋಗ್ಯವಾದ ಹೋರಿ. ऋषभाय अयम् "ञ्यः" (५-१-१४)। "आर्षभ्यः षण्डतायोग्यः" अम०।

**आर्हत** ಆರ್ಹತ (पुं०) 1. ಜೈನ. (न०) 2. ಜೈನ ಮತ. (वि०) 3. ಜೈನಮತಸಂಬಂಧವಾದ. 4. ಜೈನಮತಾನುಯಾಯಿ.

**आर्हन्ती** ಆರ್ಹಂತೀ (स्त्री०) ಯೋಗ್ಯತೆ, ಅರ್ಹತೆ. अर्हतो भावः "ष्यञ्" नुम् च (वा० ५-१-१२४)। "ङीष्" (४-१-४१)। "श्रोत्रार्हन्तीचणंर्गुण्यैः" सि० कौ०।

**आर्हन्त्य** ಆರ್ಹಂತ್ಯ (न०) ಯೋಗ್ಯತೆ, ಅರ್ಹತೆ. अर्हतो भावः "ष्यञ्" नुम् च (वा० ५-१-१२४)।

**आल** ಆಲ (न०) 1. ಹರಿದಳ. (वि०) 2. ಹೆಚ್ಚಾದ, ಅಧಿಕವಾದ. आलति—आ + ला (आदाने) "कः" (३-१-१३६)। "आलं स्यादनल्पहरितालयोः" हेम०। 3. ಶ್ರೇಷ್ಠವಾದ, ಉತ್ತಮವಾದ.

**आलक्षयत्** ಆಲಕ್ಷಯತ್ (वि०) ನೋಡುವವನು. आ + लक्ष (दर्शनाङ्कनयोः) + णिच् "शतृ" (३-२-१२४)। "रामं सलक्ष्मणमालक्षयन्नेवमवोचत" च० रा०।

**आलक्षित** ಆಲಕ್ಷಿತ (वि०) 1. ಚೆನ್ನಾಗಿ ತಿಳಿಯಲ್ಪಟ್ಟ. 2. ಅನುಮಾನದಿಂದ ತಿಳಿಯಲ್ಪಟ್ಟ. आ + लक्ष (दर्शनाङ्कनयोः) + णिच् "क्तः" (३-२-१०२)।

**आलक्ष्य** ಆಲಕ್ಷ್ಯ (वि०) 1. ಚೆನಾಗಿ ತಿಳಿಯಲ್ಪಡುವ. 2. ಚೆನ್ನಾಗಿ ಕಾಣುವ. आ समन्तात् लक्ष्यम्। 3. ಸ್ವಲ್ಪ ಕಾಣುವ, ಸ್ವಲ್ಪ ಮಾತ್ರ ತಿಳಿಯಲ್ಪಡುವ. आ ईषत् लक्ष्यम्। "उपान्तवानीरवनोपगूढान्यालक्ष्यपारिप्लवसारसानि" रघु० १३-३०। "आलक्ष्यदन्तमुकुलाननिमित्तहासैः" शाकुं० ७-१७। (अव्य०) 4. ಚೆನ್ನಾಗಿ ನೋಡಿ. 5. ಚೆನ್ನಾಗಿ ತಿಳಿದುಕೊಂಡು. आ + लक्ष (दर्शनाङ्कनयोः) + णिच् "ल्यप्" (७-१-३७)।

**आलपन** ಆಲಪನ (न०) ಮಾತಾಡುವಿಕೆ, ನುಡಿಯುವಿಕೆ, ಹೇಳುವಿಕೆ. आ + लप (व्यक्तायां वाचि) भावे "ल्युट्" (३-३-११५)।

**आलपनीय** ಆಲಪನೀಯ (वि०) 1. ಅವಶ್ಯವಾಗಿ ಹೇಳಲ್ಪಡುವ, ಹೇಳಬೇಕಾದ. 2. ಹೇಳಲು ಅರ್ಹವಾದ. आ + लप (व्यक्तायां वाचि) "अनीयर्" (३-१-९६)। "तव्यः" (३-१-९६)।—लपितव्यम्—ಲಪಿತವ್ಯವು.

**आलप्य** ಆಲಪ್ಯ (अव्य०) ಹೇಳಿ, ಮಾತನಾಡಿ, ನುಡಿದು. आ + लप (व्यक्तायां वाचि) "ल्यप्" (७-१-३७)। "आलप्यालमिदं बभ्रोर्यत्स दारानपाहरत्। कथापि खलु पापानामलमश्रेयसे यतः" माघ० २-४०।

**आलब्ध** ಆಲಬ್ಧ (वि०) 1. ಬೆರಸಲ್ಪಟ್ಟ, ಮಿಶ್ರಮಾಡಲ್ಪಟ್ಟ. आ + डु लभष् (प्राप्तौ) "क्तः" (३-२-१०२)। 2. ಸೇರಿಸಲ್ಪಟ್ಟ, ಒಟ್ಟುಗೂಡಿಸಲ್ಪಟ್ಟ. 3. ಹಿಂಸಿಸಲ್ಪಟ್ಟ. 4. ಮುಟ್ಟಲ್ಪಟ್ಟ, ಸ್ಪರ್ಶಮಾಡಲ್ಪಟ್ಟ.

**आलब्धि** ಆಲಬ್ಧಿ (स्त्री०) 1. ಸ್ಪರ್ಶ, ಮುಟ್ಟುವಿಕೆ. 2. ಹಿಂಸೆ. आ + डु लभष् (प्राप्तौ) "क्तिन्" (३-३-९४)।

**आलभन** ಆಲಭನ (न०) 1. ಹಿಂಸೆ, ಕೊಲ್ಲುವುದು. 2. ಮರ್ದಿಸುವುದು, ಅರೆಯುವುದು, ಪುಡಿಮಾಡುವುದು. 3. ಸ್ಪರ್ಶ, ಮುಟ್ಟುವಿಕೆ. आ + डु लभष (प्राप्तौ) "ल्युट्" (३-३-११५)।

**आलभनीय** ಆಲಭನೀಯ (वि०) 1. ಮುಟ್ಟಲ್ಪಡುವ. 2. ಮರ್ದಿಸಲ್ಪಡುವ, ಅರೆಯಲ್ಪಡುವ. 3. ಹಿಂಸಿಸಲ್ಪಡುವ. आ + डु लभष् (प्राप्तौ) "अनीयर्" (३-१-९६)।

**आलभ्य** ಆಲಭ್ಯ (वि०) 1. ಮುಟ್ಟಲ್ಪಡುವ, ಮುಟ್ಟಲು ಅರ್ಹವಾದ. 2. ಹಿಂಸಿಸಲ್ಪಡುವ, ಕೊಲ್ಲಲ್ಪಡುವ. आ + डु लभष् (प्राप्तौ) "ण्यत्" (३-१-१२४)। (अव्य०) 3. ಮುಟ್ಟಿ, ಸ್ಪರ್ಶಮಾಡಿ. 4. ಹಿಂಸಿಸಿ, ವಧೆಮಾಡಿ. आ + डु लभष् "ल्यप्" (७-१-३७)।

**आलम्ब ಆಲಂಬ** (ಪುಂ) 1. ಆಶ್ರಯ, ಅವಲಂಬನ, ಒತ್ತಾಸೆ, ಆಧಾರ. 2. ಒತ್ತುಗಂಬ. आ + लबि (अवस्रंसने) "घञ्" (३-३-१८)। 3. ಜೋಲಾಡುವಿಕೆ, ತೂಗಾಡುವಿಕೆ.

**आलम्बन ಆಲಂಬನ** (ನಂ) 1. ಆಶ್ರಯ, ಆಧಾರ, ಒತ್ತಾಸೆ. 2. ಒತ್ತುಗಂಬ. आ + लबि (अवस्रंसने) "ल्युट्" (३-३-११५)। "विनिपातनिवर्तनक्षमं मतमालम्बनमात्मपौरुषम्" किरा० २-१३। 3. ಶೃಂಗಾರಾದಿ ರಸಗಳಿಗೆ ಆಶ್ರಯಭೂತರಾದ ನಾಯಿಕಾನಾಯಕಾದಿಗಳು, ವಿಭಾವದ ಒಂದು ಭೇದ; ರಸೋದಯಕ್ಕೆ ಕಾರಣವಾದ ವಿಭಾವವು ಆಲಂಬನ ಮತ್ತು ಉದ್ದೀಪನಗಳೆಂದು ಎರಡು ವಿಧ. ನಾಯಿಕಾನಾಯಕಾದಿಗಳು ಆಲಂಬನ ವಿಭಾವ. ಸ್ರಕ್‌ಚಂದನಾದಿಗಳು ಉದ್ದೀಪನ ವಿಭಾವ. "आलम्बनोद्दीपनाख्यौ तस्य भेदावुभौ स्मृतौ। आलम्बनो नायकादिस्तमालम्ब्य रसोद्गमात्" सा० द० ३-२९।

ಶೃಂಗಾರಾದಿರಸಗಳಿಗೆ ಆಲಂಬನ ಮತ್ತು ಉದ್ದೀಪನ ವಿಭಾವಗಳು:

(1) ಶೃಂಗಾರರಸ—ಪರಸ್ತ್ರೀ ಮತ್ತು ಅನುರಾಗಶೂನ್ಯರಾದ ವೇಶ್ಯೆಯರನ್ನು ಬಿಟ್ಟು ಉಳಿದ ನಾಯಿಕೆಯರು ಮತ್ತು ದಕ್ಷಿಣ ಧೃಷ್ಟ ಅನುಕೂಲ ಮತ್ತು ಶಠನಾಯಕರು ಆಲಂಬನ ವಿಭಾವ. ಚಂದ್ರ, ಚಂದನ, ಮಲಯಮಾರುತ, ಭ್ರಮರಗಳ ಶಿಂಜಾರವ ಮುಂತಾದುವು ಉದ್ದೀಪನ ವಿಭಾವ. "परोढां वर्जयित्वा तु वेश्यां चाननुरागिणीम्। आलम्बनं नायिकाः स्युः दक्षिणाद्याश्च नायकाः। चन्द्रचन्दनरोलम्बरुताद्युद्दीपनं मतम्" सा० द० ३-१८४, ८५।

(2) ಹಾಸ್ಯರಸ: ವಿಕಾರವಾದ ಆಕಾರ, ಮಾತು, ವೇಷ, ಚೇಷ್ಟೆ ಇವುಗಳುಳ್ಳ ವ್ಯಕ್ತಿಯು ಆಲಂಬನ ವಿಭಾವ. ಆತನ ಚೇಷ್ಟಾದಿಗಳು ಉದ್ದೀಪನ ವಿಭಾವ. "विकृताकारवाक्चेष्टं यमालोक्य हसेज्जनः। तदत्रालम्बनं प्राहुस्तच्चेष्टोद्दीपनं मतम्" सा० द० ३-२१५।

(3) ಕರುಣರಸ: ಶೋಚ್ಯ (ದಯೆ ತೋರಿಸಲು ಅರ್ಹ)ನು ಆಲಂಬನ ವಿಭಾವ. ಆತನ ಅವಸ್ಥೆ ಮತ್ತು ಗುಣಾದಿಗಳು ಉದ್ದೀಪನ ವಿಭಾವ. "शोच्यमालम्बनं मतम्। तस्य दाहादिकावस्था भवेदुद्दीपनं पुनः" सा० द० ३-२२३।

(4) ರೌದ್ರರಸ: ಶತ್ರುವು ಆಲಂಬನ ವಿಭಾವ. ಮುಷ್ಟಿಪ್ರಹಾರ, ಕೆಳಕ್ಕೆ ತಳ್ಳುವಿಕೆ, ಕತ್ತಿಯ ಏಟು, ಶೂಲದಿಂದ ತಿವಿಯುವಿಕೆ ಮುಂತಾದುವು ಉದ್ದೀಪನ ವಿಭಾವ. "आलम्बनमरिस्तत्र तच्चेष्टोद्दीपनं मतम्। मुष्टिप्रहारपातनविकृतच्छेदावदारणैश्चैव। संग्रामसम्भ्रमाद्यैरस्योद्दीप्तिर्भवेत्प्रौढा" सा० द० ३-२२७, २८।

(5) ವೀರರಸ: ಜಯಿಸಲ್ಪಡುವ ಶತ್ರುವು ಆಲಂಬನ ವಿಭಾವ. ಅವನ ಬಾಣಪ್ರಯೋಗ ಖಡ್ಗಪ್ರಹಾರ ಮುಂತಾದ ಚೇಷ್ಟೆಗಳು ಉದ್ದೀಪನ ವಿಭಾವಗಳು. "आलम्बनविभावास्तु विजेतव्यादयो मताः। विजेतव्यादिचेष्टाद्याः तस्योद्दीपनरूपिणः". सा० द० ३-२३३।

(6) ಭಯಾನಕರಸ: ಭಯವನ್ನುಂಟುಮಾಡುವ ವ್ಯಕ್ತಿ ಅಥವಾ ವಸ್ತುವು ಆಲಂಬನ ವಿಭಾವ. ಭಯೋತ್ಪಾದಕ ವ್ಯಾಪಾರಗಳು ಉದ್ದೀಪನ ವಿಭಾವ. "यस्मादुत्पद्यते भीतिस्तदत्रालम्बनं मतम्। चेष्टा घोरतरास्तस्य भवेदुद्दीपनं पुनः" सा० द० ३-२३६।

(7) ಬೀಭತ್ಸರಸ: ಕೊಳೆತು ನಾರುವ ಮಾಂಸ ರಕ್ತ ಮೇದಸ್ಸು ಮುಂತಾದುವು ಆಲಂಬನ ವಿಭಾವ. ಅದರಲ್ಲಿ ಕ್ರಿಮಿಕೀಟಾದಿಗಳು ಹುಟ್ಟಿ ನಳಿಯುವುದರಿಂದ ಜುಗುಪ್ಸೆಯು ಹೆಚ್ಚುವಕಾರಣ ಉದ್ದೀಪನ ವಿಭಾವ. "दुर्गन्धमांसरुधिरमेदांस्यालम्बनं मतम्। तत्रैव कृमिपाताद्यमुद्दीपनमुदाहृतम्" सा० द० ३-२४०।

(8) ಅದ್ಭುತರಸ: ಲೋಕೋತ್ತರವಾದ ಮತ್ತು ಆಶ್ಚರ್ಯಕರವಾದ ಕೆಲಸಮಾಡುವವನು ಆಲಂಬನ ವಿಭಾವ. ಆಶ್ಚರ್ಯಕರವಾದ ಕೆಲಸವು ಉದ್ದೀಪನ ವಿಭಾವ. "पीतवर्णो वस्तु लोकातिगमालम्बनं मतम्। गुणानां तस्य महिमा भवेदुद्दीपनं पुनः" सा० द० ३-२४३।

(9) ಶಾಂತರಸ: ಜಗತ್ತೆಲ್ಲವೂ ಅಶಾಶ್ವತವಾದುದರಿಂದ ಅದರಲ್ಲಿ ಅಸಾರತ್ವಬುದ್ಧಿ ಅಥವಾ ಪರಬ್ರಹ್ಮಸ್ವರೂಪವು ಆಲಂಬನ ವಿಭಾವ. ಪವಿತ್ರವಾದ ಆಶ್ರಮಗಳು, ಪುಣ್ಯಕ್ಷೇತ್ರಗಳು, ಪುಣ್ಯನದಿಗಳು, ವಿವಿಕ್ತವಾದ ಅರಣ್ಯಪ್ರದೇಶ, ಸತ್ಪುರುಷಸಹವಾಸ ಮುಂತಾದುವು ಉದ್ದೀಪನ ವಿಭಾವ. "अनित्यत्वादिनाशेषवस्तुनिःसारता तु या। परमात्मस्वरूपं वा तस्यालम्बनमिष्यते। पुण्याश्रमहरिक्षेत्रतीर्थरम्यवनादयः। महापुरुषसङ्गाद्यास्तस्योद्दीपनरूपिणः" सा० द० ३-२४६, ४७, ४८।

**आलम्बित ಆಲಂಬಿತ** (ವಿ०) 1. ಧರಿಸಲ್ಪಟ್ಟ, ಅವಲಂಬನ ಕೊಡಲ್ಪಟ್ಟ. 2. ತೆಗೆದುಕೊಳ್ಳಲ್ಪಟ್ಟ, ಹಿಡಿದುಕೊಳ್ಳಲ್ಪಟ್ಟ. आ+लबि (अवस्रंसने) "क्तः"

(३-२-१०२)। "आलम्बिता नम्रमुखी भवत्या" यादं० १८-३।

**आलम्बिन्** ಆಲಂಬಿನ್ (वि०) 1. ಜೋಲಾಡುತ್ತಿರುವ, ತೂಗಾಡುತ್ತಿರುವ, ಆಶ್ರಯ ಹೊಂದಿರುವ, ಒತ್ತಾಸೆ ಪಡೆದಿರುವ. आ + लबि (अवस्रंसने) "णिनिः" (३-१-१३४)। "देवसूतभुजालम्बी जैत्रमध्यास्त राघवः" रघु० १२-८५। 2. ಧರಿಸಿರುವ, ಹೊದ್ದಿರುವ. "गजाजिनालम्बि दुकूलधारि वा" कुमा० ५-७८। 3. ಆಶ್ರಯ ಕೊಡುವ, ಒತ್ತಾಸೆಯೀಯುವ. कुलालम्बी पुत्रः।

**आलम्भ** ಆಲಂಭ (पु०) 1. ಸ್ಪರ್ಶ, ಮುಟ್ಟುವಿಕೆ. आ + डु लभष् (प्राप्तौ) "घञ्" (३-३-१८)। "स्त्रीणां च प्रेक्षणालम्भमुपघातं परस्य च। (वर्जयेत्)" मनु० २-१७९। 2. ಹಿಂಸೆ, ಪೀಡಿಸುವಿಕೆ, ಕೊಲ್ಲುವಿಕೆ. "आलम्भसमये तस्मिन् गृहीतेषु पशुष्वथ। महर्षयो महाभाग बभूवुः कृपयान्विताः" भा०।

**आलम्भ्य** ಆಲಂಭ್ಯ (वि०) ಹಿಂಸಿಸಲ್ಪಡುವ, ಕೊಲ್ಲಲ್ಪಡುವ. आ + डु लभष् (प्राप्तौ) "ण्यत्" (३-१-१२४)। नुम् (७-१-६५)। "आलम्भ्यो गौः" सि० कौ०।

**आलय** ಆಲಯ (पु०) 1. ಗೃಹ, ಮನೆ. आलीयन्तेऽत्र—आ + लीङ् (संश्लेषणे) "घः" (३-३-११८)। "न हि दुष्टात्मनामार्या निवसन्त्यालये चिरम्" रामा०। "वियदालयादपरदिक्कणिका" माघ० ९-१०। 2. ಆಶ್ರಯ, ಆಧಾರ. "अस्त्युत्तरस्यां दिशि देवतात्मा हिमालयो नाम नगाधिराजः" कुमा० १-१। 3. ಸಂಬಂಧ, ಸಂಸರ್ಗ. (अव्य०) 4. ಲಯಪರ್ಯಂತ, ಪ್ರಳಯಕಾಲದವರೆಗೆ, ಜಗತ್ತಿನ ನಾಶದವರೆಗೆ. "पिबत भागवतं रसमालयम्" भाग० १-१-३।

**आलयविज्ञान** ಆಲಯವಿಜ್ಞಾನ (न०) (ಬೌದ್ಧಮತದಲ್ಲಿ) ನಾನು ಎಂಬ ಭಾವನೆಯಿಂದ ಆತ್ಮವೆನ್ನಲ್ಪಡುವ ಸೂಕ್ಷ್ಮಚಿತ್ತ. आलयं लयपर्यन्तं स्थायि विज्ञानम्। ವಿಜ್ಞಾನಸಂತತಿಯು ಸೂಕ್ಷ್ಮಚಿತ್ತವೆಂಬ ರೂಪದಲ್ಲಿ ಕರ್ಮವಾಸನೆಯಿಂದ ಮಾತೃಕುಕ್ಷಿಯನ್ನು (ಗರ್ಭಕೋಶವನ್ನು) ಪ್ರವೇಶಿಸುವುದು. ಇದೇ ಬೀಜಸ್ಥಾನದಲ್ಲಿರುವುದು. ಈ ಸೂಕ್ಷ್ಮಚಿತ್ತವು ಅವಿದ್ಯೆ, ಸಂಸ್ಕಾರ, ವಿಜ್ಞಾನ, ನಾಮ, ರೂಪ, ಷಡಾಯತನ, ಸ್ಪರ್ಶ, ವೇದನಾ, ತೃಷ್ಣಾ, ಭವ, ಜಾತಿ, ಮರಣ ವ್ಯಾಧಿರೂಪವಾಗಿ ಕಾರ್ಯಕಾರಣಪ್ರಕ್ರಿಯೆಯನ್ನು ಹೊಂದುವುದು. ಇದೇ ಆಧ್ಯಾತ್ಮಿಕಹೇತುನಿಬಂಧನವು. ಇದು ಚಕ್ರರೂಪದಲ್ಲಿ ತಿರುಗುತ್ತಿರುವುದು. "तत्स्यादालयविज्ञानं यद्भवेदहमास्पदम्" स० द० सं०। ಇವರ ಮತದಲ್ಲಿ ವಿಜ್ಞಾನಾತಿರಿಕ್ತವಾದ ಜೀವಾತ್ಮನಿಲ್ಲ.

**आलर्क** ಆಲರ್ಕ (वि०) ಹುಚ್ಚುನಾಯಿಯ ಸಂಬಂಧವಾದ (ವಿಷ ಮುಂತಾದುದು). अलर्कस्येदम् "अण्" (४-३-१२०)। "आलर्कं विषमिव सर्वतः प्रवृत्तम्" उ० रा० १-४०।

**आलवाल** ಆಲವಾಲ (न०) ಗಿಡದ ಪಾತಿ, ಗಿಡದ ಕೆಳಗೆ ನೀರು ನಿಲ್ಲುವಂತೆ ಮಾಡಿರುವ ಗುಣಿ. आ समन्ताज्जललवमालाति—आ + ला (आदाने) "कः" (वा० ३-२-५)। "विश्वासाय विहंगानामालवालाम्बुपायिनाम्" रघु० १-५१। "आलवालवलयेषु शाखिनाम्" यादं० १७-२३।

**आलस** ಆಲಸ (वि०) ಸೋಮಾರಿ. आ लसति ईषत् व्याप्रियते—आ + लस (श्लेषणे) "अच्" (३-१-१३४)।

**आलस्य** ಆಲಸ್ಯ (न०) 1. ಸೋಮಾರಿತನ, ಕಾರ್ಯದಲ್ಲಿ ಉತ್ಸಾಹವಿಲ್ಲದಿರುವಿಕೆ. अलसस्य भावः "ष्यञ्" (५-१-१२४)। "शक्तस्य चाप्यनुत्साहः कर्मस्वालस्यमुच्यते" सुश्रुत०। (वि०) 2. ಸೋಮಾರಿ, ಕಾರ್ಯದಲ್ಲಿ ಉತ್ಸಾಹವಿಲ್ಲದ. अलस स्वार्थे "ष्यञ्"।

**आलान** ಆಲಾನ (न०) 1. ಆನೆಯನ್ನು ಕಟ್ಟುವ ಕಂಬ. आलीयतेऽत्र—आ + लीङ् (श्लेषणे) "ल्युट्" (३-३-११७)। "अरुन्तुदमिवालानमनिर्वाणस्य दन्तिनः" रघु० १-७१। 2. ಬಂಧನ, ಕಟ್ಟಿಹಾಕುವಿಕೆ. आ + लीङ् भावे "ल्युट्" (३-३-११५)। "गजालानपरिक्लिष्टैरक्षोटैः सार्धमानताः" रघु० ४-६९। 3. ಆನೆಯನ್ನು ಕಟ್ಟಿಹಾಕುವ ಹಗ್ಗ, ಸರಪಣಿ. आ + लीङ् कर० "ल्युट्" (३-३-११७)।

**आलानिक** ಆಲಾನಿಕ (वि०) ಆನೆಯನ್ನು ಕಟ್ಟಿಹಾಕುವ ಕಂಬ ಮೊದಲಾದುದು. आलानं प्रयोजनमस्य "ठक्" (५-१-१०९)। "सोढुं न तत्पूर्वमवर्णमीशे आलानिकं स्थाणुमिव द्विपेन्द्रः" रघु० १४-३८।

**आलाप** ಆಲಾಪ (पु०) 1. ಮಾತಾಡುವುದು. आ + लप (व्यक्तायां वाचि) "घञ्" (३-३-१८)। "प्रकुर्वते वारिदरोधनिर्गताः परस्परालापमिवामला दिशः" किरा० ४-३०। 2. ಸ್ವರಗಳನ್ನು ಸಂಪಾದಿಸಿಕೊಳ್ಳುವ ಸ ರಿ ಗ ಮ ಮೊದಲಾದ ಅಕ್ಷರ, ರಾಗವನ್ನು ವಿಸ್ತಾರ

ಗೊಳಿಸುವ ಸ್ವರಗಳ ಗುಂಪು. आ+लप करं० "घञ्" (३-३-१२१)। "आलापकालसमपल्लविताङ्कवीणा-सौरभ्यपातिमधुपारवसङ्कुलस्य" चं० भा०। 3. ಪರಸ್ಪರ ಮಾತಾಡುವುದು. आ + लप + णिच् "अच्" (३-१-१३४)। "अये, दक्षिणेन वृक्षवाटिकामालाप इव श्रूयते" शाकु० १।

**आलापन ಆಲಾಪನ** (न०) 1. ಪರಸ್ಪರ ಮಾತಾಡುವುದು. आ+लप (व्यक्तायां वाचि) + णिच् "ल्युट्" (३-३-११७)। 2. ಮಾತಾಡುವುದು, ಹೇಳುವುದು. "नाथेति नागशयनेति जगन्निवासेत्यालापनं प्रतिपदं कुरु मे मुकुन्द" मु० मा० १। 3. ಸ್ವಸ್ತಿವಾಚನ. 4. ರಾಗವನ್ನು ವಿಸ್ತರಿಸುವ ಸರಿಗಮಾದಿ ಅಕ್ಷರಗಳ ಗುಂಪು.

**आलाप्य ಆಲಾಪ್ಯ** (वि०) 1. ಹೇಳಲ್ಪಡುವ. 2. ಹೇಳಲು ಯೋಗ್ಯವಾದ. आ+लप (व्यक्तायां वाचि) "ण्यत्" (३-१-९७)। (अव्य०) 3. ಮಾತನಾಡಿಸಿ.

**आलावर्त ಆಲಾವರ್ತ** (न०) ಬಟ್ಟೆಯಿಂದ ತಯಾರಿಸಲ್ಪಟ್ಟ ಬೀಸಣಿಗೆ. आलं पर्याप्तमावर्त्यते—आ + वृतु (वर्तने) + णिच् कर्म० "अच्" (३-३-५६)। "व्यजनं तालवृन्तं तत् धवित्रं मृगचर्मणः। आलावर्तं तु वस्त्रस्य" अभि० चि०।

**आलास्य ಆಲಾಸ್ಯ** (पु०) ಮೊಸಳೆ. आलम् अधिकम् आस्यं यस्य। "नक्रः कुम्भीर आलास्यः" अभि० चि०।

**आलि ಆಲಿ** (पु०) 1. ವೃಶ್ಚಿಕ, ಚೇಳು. आलति दंशे समर्थो भवति—आ + अल (भूषणादौ) "इन्" (उ० ४-११८)। 2. ಭ್ರಮರ, ದುಂಬಿ. "क्षीनालिः सुरकरिणां कपोलकाषः" किरा० ५-२६। 3. ಮದ್ಯ. (स्त्री०)—लिः—ಲಿಃ—ली—ಲೀ. 4. ಸಖಿ, ಗೆಳತಿ. "निवार्यतामालि किमप्ययं वटुः" कुमा० ५-८३। आलयति भूषयति—आ + अल + णिच् "इन्" (उ० ४-११८)। 5. ಸೇತುವೆ, ಅಣೆಕಟ್ಟು. आलयति वारयति जलम्। "सेतौ पाल्यालिसंवाराः" अभि० चि०। 6. ಪಙ್ಕ್ತಿ, ಸಾಲು, ಶ್ರೇಣಿ. "तोयान्तर्भास्करालीव रेजे मुनिपरम्परा" कुमा० ६-४९। 7. ರೇಖೆ, ಗೆರೆ. "विषमहरिचन्दनालिना" माघ०। (वि०) 8. ಶುದ್ಧವಾದ ಮನಸ್ಸುಳ್ಳ.

**आलिखत् ಆಲಿಖತ್** (वि०) 1. ಬರೆಯುವ. 2. ಬಣ್ಣ ಬಳಿಯುವ. आ + लिख (अक्षरविन्यासे) "शतृ" (३-१-१२४)।

**आलिख्यमान ಆಲಿಖ್ಯಮಾನ** (वि०) 1. ಬರೆಯಲ್ಪಡುವ (ಕಾಗದ). 2. ಬಣ್ಣ ಹಾಕಲ್ಪಡುವ (ಚಿತ್ರ). आ + लिख (अक्षरविन्यासे) कर्म० "शानच्" (३-२-१२४)।

**आलिलिखिषा ಆಲಿಲಿಖಿಷಾ** (स्त्री०) 1. ಬರೆಯುವ ಅಪೇಕ್ಷೆ. 2. ಬಣ್ಣ ಹಾಕುವ ಅಪೇಕ್ಷೆ. आलिलिखितुमिच्छा—आ + लिख (अक्षरविन्यासे) + सन् "अः" (३-३-१०२)।

**आलिलिखिषु ಆಲಿಲಿಖಿಷು** (वि०) 1. ಬರೆಯಲು ಅಪೇಕ್ಷೆಯುಳ್ಳ. 2. ಬಣ್ಣ ಹಾಕಲು ಅಪೇಕ್ಷೆಯುಳ್ಳ. आ+लिख (अक्षरविन्यासे) +सन् "उः" (३-२-१६८)।

**आलिङ्गन ಆಲಿಂಗನ** (न०) ಅಪ್ಪಿಕೊಳ್ಳುವುದು, ದೇಹದೊಡನೆ ದೇಹವನ್ನು ಸೇರಿಸುವುದು. आ + लिगि (गतौ) "ल्युट्" (३-३-११५)। "आलिङ्गनान्यधिकृताः स्फुटमापुरेव" माघ० ५-१८। "क्वालिङ्गनं भुजनिपीडितबाहुमूलम्" प्रबोध० २-२२।

**आलिङ्गित ಆಲಿಂಗಿತ** (वि०) ಅಪ್ಪಿಕೊಳ್ಳಲ್ಪಟ್ಟ. आ + लिगि (गतौ) "क्तः" (३-२-१०२)। "इत्यालिङ्गितमालोक्य जयलक्ष्म्या झषध्वजम्" माघ० १९-२४।

**आलिङ्गिन् ಆಲಿಂಗಿನ್** (वि०) ಅಪ್ಪಿಕೊಳ್ಳುವ. आलिङ्गते—आ+लिगि (गतौ) "णिनिः" (३-१-१३४)।

**आलिङ्ग्य ಆಲಿಂಗ್ಯ** (पु०) 1. ಮೃದಂಗ, ಮದ್ದಳೆ. (वि०) 2. ಆಲಿಂಗಿಸಲ್ಪಡುವ, ಅಪ್ಪಿಕೊಳ್ಳಲ್ಪಡುವ. आलिङ्ग्यते-आ+लिगि (गतौ) "ण्यत्" (३-१-१२४)। (अव्य०) 3. ಆಲಿಂಗಿಸಿಕೊಂಡು, ಅಪ್ಪಿಕೊಂಡು. आ + लिगि "ल्यप्" (७-१-३७)। "चतुरङ्गुलहीनोऽङ्घ्र्यान्मुखे चैकाङ्गुलेन यः। यवाकृतिः स आलिङ्ग्य आलिङ्ग्य स हि वाद्यते"।

**आलिञ्जर ಆಲಿಂಜರ** (पु०) ಮಣ್ಣಿನ ದೊಡ್ಡ ಪಾತ್ರೆ, ದೊಡ್ಡಗಡಿಗೆ. अलिञ्जर स्वार्थे "अण्" (५-४-३८)।

**आलिन् ಆಲಿನ್** (पु०) ವೃಶ್ಚಿಕ, ಚೇಳು. आलमस्यास्ति "इनिः" (५-२-११५)।

**आलिन्द ಆಲಿಂದ** (पु०) 1. ಹೊರಬಾಗಿಲಿನ ಸಮೀಪದ ಕೈಸಾಲೆ, ಮನೆಯ ಮುಂದಿನ ಬಾಗಿಲಿನ ಪಡಸಾಲೆ. 2. ಮನೆಯೊಳಗಿನ ಶಯನವೇದಿಕೆ, ಪಡಸಾಲೆ, ಜಗುಲಿ. अलिन्द एव स्वार्थे "अण्"(५-४-३८)।

**आलिम्पन** ಆಲಿಂಪನ (नं०) 1. ಗೋಡೆಗೆ ಸುಣ್ಣ ಬಳಿಯುವುದು. 2. ಅಕ್ಕಿಯ ಹಿಟ್ಟನ್ನು ನೀರಿನಲ್ಲಿ ಕದಡಿ ನೆಲಕ್ಕೆ ರಂಗವಲ್ಲಿ ಹಾಕುವುದು.

**आलीढ** ಆಲೀಢ (नं०) 1. ಸೈನಿಕನು ಯುದ್ಧಮಾಡುವಾಗ ಬಲಗಾಲನ್ನು ಮುಂದಕ್ಕೆ ಇಟ್ಟು ಎಡಮಂಡಿಯನ್ನು ಊರಿಕೊಂಡು ನಿಲ್ಲುವ ರೀತಿ. आ + लिह (आस्वादने) भावे "क्तः" (३-३-११४)। ಯುದ್ಧಕ್ಕಾಗಿ ಸೈನಿಕನು ನಿಲ್ಲುವ ರೀತಿಯು (1) वैशाखम्, (2) मण्डलम्, (3) समपदम्, (4) आलीढम् ಮತ್ತು (5) प्रत्यालीढम् ಎಂದು ಐದು ವಿಧ. "स्थानानि धन्विनां पञ्च तत्र वैशाखमस्त्रियाम्। त्रिवितस्त्यन्तरौ पादौ मण्डलं तोरणाकृति। अन्वर्थं स्यात्समपदमालीढं तु ततोऽग्रतः। दक्षिणे वाममाकुञ्च्य प्रत्यालीढं विपर्ययः"। "अतिष्ठदालीढविशेषशोभिना वपुः-प्रकर्षेण विडम्बितेश्वरः" रघु०३-५२। (वि०) 2. ಚೆನ್ನಾಗಿ ರುಚಿ ನೋಡಲ್ಪಟ್ಟ, ಆಸ್ವಾದನೆ ಮಾಡಲ್ಪಟ್ಟ. आ + लिह कर्म० "क्तः" (३-२-१०२)। 3. ಗಾಯಗೊಳಿಸಲ್ಪಟ್ಟ. "सेनान्यमालीढमिवासुरास्त्रैः" रघु० २-३७।

**आलीढक** ಆಲೀಢಕ (नं०) ಸಣ್ಣ ಕರುಗಳ ಆಟ, ಕರುಗಳ ಹಾರಾಟ.

**आलीन** ಆಲೀನ (नं०) 1. ತಗರ, ತವರ. 2. ಸಂಬಂಧ, ಆಲಿಂಗನ. आ+लीङ् (श्लेषणे) "क्तः" (३-३-११४)। (वि०) 3. ಅಪ್ಪಿಕೊಳ್ಳಲ್ಪಟ್ಟ. 4. ಬಳಿಯಲ್ಪಟ್ಟ, ಲೇಪನೆಮಾಡಲ್ಪಟ್ಟ. 5. ವ್ಯಾಪ್ತವಾದ. "स निविश्य यथाकामं तटेष्वालीनचन्दनौ" रघु० ४-५१।

**आलु** ಆಲು (पुं०) 1. ಗೂಬೆ. (स्त्री०) 2. ಗಿಂಡಿ, ಕೊಳವೆಯಿರುವ ನೀರಿನ ಚೊಂಬು. (नं०) 3. ತೆಪ್ಪ, ಹರಿಗೋಲು. 4. ಆಲೂಗೆಡ್ಡೆ. आ+ला (आदाने) "डुः" (वा० ३-२-१८०)। "आलुर्गलन्तिकायां स्त्री क्लीबं मूले च भेलके" मेदि०।

**आलुक** ಆಲುಕ (पुं०) 1. ಆದಿಶೇಷ. 2. ಕರಿಮರ, ಬಲಾರದಮರ. आलु संज्ञायां "कन्" (५-३-७५)। (नं०) 3. ಆಲೂಗೆಡ್ಡೆ. आलु स्वार्थे "कन्"।

**आलुञ्चन** ಆಲುಂಚನ (नं०) 1. ಹರಿಯುವುದು, ಸೀಳುವುದು, ಸಿಗಿಯುವುದು. 2. ತೆಗೆದುಹಾಕುವುದು, ಕಿತ್ತುಹಾಕುವುದು. आ+लुञ्च (अपनयने) "ल्युट्" (३-३-११५)। 3. ಬಿಚ್ಚುವುದು, ಕೆದರುವುದು.

**आलुञ्चित** ಆಲುಂಚಿತ (वि०) 1. ಕಿತ್ತುಹಾಕಲ್ಪಟ್ಟ, ತೆಗೆದುಹಾಕಲ್ಪಟ್ಟ. 2. ಹರಿಯಲ್ಪಟ್ಟ, ಸಿಗಿಯಲ್ಪಟ್ಟ, ಸೀಳಲ್ಪಟ್ಟ. 3. ಕೆದರಲ್ಪಟ್ಟ, ಗಂಟು ಬಿಚ್ಚಲ್ಪಟ್ಟ (ಕೂದಲು). आ+लुञ्च (अपनयने) "क्तः" (३-२-१०२)।

**आलुण्टन** ಆಲುಂಟನ (नं०) ದೋಚಿಕೊಳ್ಳುವುದು, ಸುಲಿಗೆ ಮಾಡುವುದು, ಬಲಾತ್ಕಾರದಿಂದ ಕಿತ್ತುಕೊಳ್ಳುವುದು. आ + लुटि (स्तेये) "ल्युट्" (३-३-११५)। लुठि इति पाठे आलुण्ठनमपि।

**आलू** ಆಲೂ (पुं०) "आलु" ಪದದ ಅರ್ಥ. आ + लूञ् "क्विप्" (३-२-७६)।

**आलून** ಆಲೂನ (वि०) 1. ಸ್ವಲ್ಪ ಕತ್ತರಿಸಲ್ಪಟ್ಟ. आ ईषत् लूनम्--आ + लूञ् (छेदने) "क्तः" (३-२-१०२)। 2. ಚೆನ್ನಾಗಿ ಕತ್ತರಿಸಲ್ಪಟ್ಟ. आ सम्यक् लूनम्। "तेनामरवधूहस्तसदयालूनपल्लवाः" कुमा० २-४१।

**आलेख** ಆಲೇಖ (पुं०) 1. ಪತ್ರ, ಕಾಗದ. 2. ದಸ್ತೈವೇಜು. आलिख्यतेऽत्र--आ + लिख (अक्षरविन्यासे) "घञ्" (३-३-१२१)। 3. ಬರವಣಿಗೆ, ಬರೆಹ, ಬರೆಯುವುದು. आ + लिख भावे "घञ्" (३-३-१८)।

**आलेखन** ಆಲೇಖನ (नं०) 1. ಚೆನ್ನಾಗಿ ಬರೆಯುವುದು. 2. ಚಿತ್ರಗಳಿಗೆ ಬಣ್ಣ ಹಾಕುವುದು. आ + लिख भावे "ल्युट्" (३-३-११५)। (वि०) 3. ಬರೆಯುವವನು, ಬರಹಗಾರ. 4. ಚಿತ್ರಕ್ಕೆ ಬಣ್ಣ ಹಾಕುವವನು. आलिखति--आ + लिख कर्त० "ल्युः" (३-१-१३४)। (स्त्री०)--लेखनी--ಲೇಖನೀ. 5. ಬರೆಯುವ ಸಾಧನ, ಲೇಖನಿ, ಬರೆಯುವ ಕಡ್ಡಿ. 6. ಚಿತ್ರಗಳಿಗೆ ಬಣ್ಣ ಹಾಕುವ ಕುಂಚ, ವರ್ತಿ. आ + लिख करं० "ल्युट्" (३-३-११७)।

**आलेख्य** ಆಲೇಖ್ಯ (नं०) 1. ಚಿತ್ರ. आ+लिख (अक्षरविन्यासे) "ण्यत्" (३-१-१२४)। "इति संरम्भिणो वाणीर्बलस्यालेख्यदेवताः" माघ० २-६७। (वि०) 2. ಬರೆಯಲ್ಪಡುವ, ಚಿತ್ರಿಸಲ್ಪಡುವ. आ + लिख कर्म० "ण्यत्" (३-१-१२४)।

**आलेख्यशेष** ಆಲೇಖ್ಯಶೇಷ (वि०) ಚಿತ್ರದಲ್ಲಿ ಮಾತ್ರ ಉಳಿದಿರುವ, ಮೃತಿಹೊಂದಿದ. आलेख्यमेव शेषो यस्य। "आलेख्यशेषस्य पितुर्विवेश" रघु० १४-१५।

**आलेप ಆಲೇಪ** (पुं०) 1. ಬಳಿಯುವುದು, ಪೂಸುವುದು. 2. ಅಕ್ಕಿಹಿಟ್ಟನ್ನು ಕದಡಿ ನೆಲಕ್ಕೆ ರಂಗವಲ್ಲಿ ಹಾಕುವುದು. 3. ನೆಲವನ್ನು ಸಗಣಿಯಿಂದ ಸಾರಿಸುವುದು. आ+लिप (उपदेहे) भावे "घञ्" (३-३-१८)। 4. ಮುಲಾಮು, ಲೇಪನತೈಲ ಮುಂತಾದುದು. आ + लिप कर० "घञ्" (३-३-१२१)।

**आलोक ಆಲೋಕ** (पुं०) 1. ಪ್ರಕಾಶ, ಬೆಳಕು. आलोक्यतेऽनेन–आ + लोकृ (दर्शने) कर० "घञ्" (३-३-१२१)। "असारं संसारं परिमुषितरत्नं त्रिभुवनं निरालोकं लोकं मरणशरणं बान्धवजनम्" मालती० ५-३०। 2. ನೋಟ, ದರ್ಶನ, ನೋಡುವುದು. आ + लोकृ भावे "घञ्" (३-३-१८)। "यदालोके सूक्ष्मं व्रजति सहसा तद्विपुलताम्" शाकु० १-९। "प्रस्नवेनाभिवर्षन्ती वत्सालोकप्रवर्तिना" रघु० १-८४। 3. ಜಯಶಬ್ದ, ಹೊಗಳಿಕೆ. "ययावुदीरितालोकः सुधर्मानवमां सभाम्" रघु० १७-२७।

**आलोकन ಆಲೋಕನ** (न०) ನೋಟ, ದರ್ಶನ, ನೋಡುವುದು. आ + लोकृ (दर्शने) "ल्युट्" (३-३-११५)। "ततः स सम्प्रेक्ष्य शरद्गुणश्रियं शरद्गुणालोकनलोलचक्षुषा" किरा० ४-२०। "व्रजति हि सफलत्वं वल्लभालोकनेन" माघ० ११-३३।

**आलोकनीय ಆಲೋಕನೀಯ** (वि०) ನೋಡಲು ಯೋಗ್ಯವಾದ, ಸುಂದರವಾದ. आ+लोकृ (दर्शने) "अनीयर्" (३-१-९६)। भावे "तल्" (५-१-११९)। आलोकनीयता ಆಲೋಕನೀಯತಾ. "चित्रन्यस्ता इव गताः प्रकामालोकनीयताम्" कुमा० २-२४।

**आलोकमान ಆಲೋಕಮಾನ** (वि०) ನೋಡುತ್ತಿರುವ, ದರ್ಶನಮಾಡುತ್ತಿರುವ. आ + लोकृ (दर्शने) "शानच्" (३-२-१२४)। "आलोकमाना वरलोकलक्ष्मीं तात्कालिकीमप्सरसो रसोत्काः" नैष० १०-५५।

**आलोकयत् ಆಲೋಕಯತ್** (वि०) ನೋಡುತ್ತಿರುವ. आ + लोकृ (दर्शने) + णिच् "शतृ" (३-२-१२४)।

**आलोकित ಆಲೋಕಿತ** (न०) 1. ನೋಟ, ದರ್ಶನ. आ + लोकृ (दर्शने) भावे "क्तः" (३-३-११४)। "विविधमहमभूवं पात्रमालोकितानाम्" मालती० १-३०। (वि०) 2. ನೋಡಲ್ಪಟ್ಟ. आ+लोकृ कर्म० "क्तः" (३-३-१०२)।

**आलोकितवत् ಆಲೋಕಿತವತ್** (वि०) ನೋಡಿದ. आ+लोकृ (दर्शने) "क्तवतुः" (३-२-१०२)। स्त्रियाम् "ङीप्" (४-१-६)।—वती–ವತೀ.

**आलोकितृ ಆಲೋಕಿತೃ** (वि०) ನೋಡುವ. आ+लोकृ (दर्शने) "तृच्" (३-१-१३३)। स्त्रियाम् "ङीप्" (४-१-५)।

**आलोक्य ಆಲೋಕ್ಯ** (वि०) 1. ನೋಡಲು ಯೋಗ್ಯವಾದ, ಸುಂದರವಾದ. आ+लोकृ (दर्शने) "ण्यत्" (३-१-१२४)। (अव्य०) 2. ನೋಡಿ, ದರ್ಶನ ಮಾಡಿ. आ + लोकृ "ल्यप्" (७-१-३७)। "आलोक्य व्यवदधतं पुरो मयूरम्" माघ० ८-११।

**आलोक्यमान ಆಲೋಕ್ಯಮಾನ** (वि०) ನೋಡಲ್ಪಡುವ. आ + लोकृ (दर्शने) कर्म० "शानच्" (३-२-१२४)। "अयं कथं स्यादिति बाष्पगर्भमालोक्यमानो वनदेवताभिः" चं० रा०।

**आलोचक ಆಲೋಚಕ** (वि०) ಆಲೋಚನೆ ಮಾಡುವ, ಯೋಚಿಸುವ. आ+लोचृ (दर्शने)+णिच् "ण्वुल्" (३-१-१३३)।

**आलोचन ಆಲೋಚನ** (न०) 1. ಆಲೋಚನೆ, ಯೋಚನೆ, ವಿಚಾರ. 2. ಮನನ, ಧ್ಯಾನ. आ + लोचृ (दर्शने) "ल्युट्" (३-३-११५)। भावे "युच्" (३-३-१०७)। आलोचना ಆಲೋಚನಾ 3. ನೋಟ, ದರ್ಶನ. (अव्य०) 4. ಲೋಚನ ಪರ್ಯಂತ, ಕಣ್ಣಿನವರೆಗೂ. लोचनमभिव्याप्य। अव्ययी०। "आलोचनान्तं श्रवणे वितत्य" कुमा० ७-८४।

**आलोचयत् ಆಲೋಚಯತ್** (वि०) 1. ಯೋಚಿಸುತ್ತಿರುವ, ವಿಚಾರ ಮಾಡುತ್ತಿರುವ. आ + लोचृ (दर्शने)+णिच् "शतृ" (३-२-१२४)। "आलोचयन्तो विस्तारमम्भसां दक्षिणोदधेः" भट्टि० ७-४०।

**आलोचित ಆಲೋಚಿತ** (वि०) ವಿಚಾರಮಾಡಲ್ಪಟ್ಟ, ವಿವೇಚನೆಯಿಂದ ನೋಡಲ್ಪಟ್ಟ. आ+लोचृ (दर्शने) "क्तः" (३-२-१०२)। "असंशयालोचितकार्यनुन्नः" किरा० ३-३३।

**आलोचितवत् ಆಲೋಚಿತವತ್** (वि०) ವಿವೇಚನೆ ಮಾಡಿದ, ವಿಚಾರಮಾಡಿ ನೋಡಿದ. आ + लोचृ (दर्शने) "क्तवतुः" (३-२-१०२)। स्त्रियाम् "ङीप्" (४-१-६)।—वती–ವತೀ.

**आलोचितृ** ಆಲೋಚಿತೃ (वि०) ಆಲೋಚಿಸುವ, ವಿಚಾರಮಾಡಿ ನೋಡುವ. आ + लोचृ (दर्शने) "तृच्" (३-१-१३३)।

**आलोच्य** ಆಲೋಚ್ಯ (वि०) 1. ಆಲೋಚಿಸಲ್ಪಡುವ, ಆಲೋಚಿಸಲು ಯೋಗ್ಯವಾದ. आ+लोचृ (दर्शने) + णिच् "ण्यत्" (३-१-१२४)। (अव्य०) 2. ವಿವೇಚನೆ ಮಾಡಿ, ವಿಚಾರಮಾಡಿ. आ + लोचृ (दर्शने) "ल्यप्" (७-१-३७)।

**आलोडन** ಆಲೋಡನ (न०) 1. ಕಲಕುವುದು, ಕದಡಿಸುವುದು, ಕ್ಷೋಭೆಹೊಂದಿಸುವುದು. आ + लुड (विलोडने) "ल्युट्" (३-३-११५)। 2. ಬೆರಸುವುದು, ಮಿಶ್ರಮಾಡುವುದು.

**आलोडित** ಆಲೋಡಿತ (वि०) 1. ಕಲಕಲ್ಪಟ್ಟ, ಕ್ಷೋಭೆಹೊಂದಿಸಲ್ಪಟ್ಟ. आ + लुड (विलोडने) "क्तः" (३-२-१०२)। "अतिभैरवारवभ्रमितवारिसञ्चयमायतमपि तत्सरः समन्तादालोडितम्" वेणी० ६। 2. ಬೆರಸಲ್ಪಟ್ಟ, ಮಿಶ್ರಮಾಡಲ್ಪಟ್ಟ. "आलोडिताः काञ्चनभूपरागाः" माघ० ३-२७।

**आलोल** ಆಲೋಲ (वि०) ಸ್ವಲ್ಪ ಚಂಚಲವಾದ, ಸ್ವಲ್ಪ ಅಲುಗಾಡುತ್ತಿರುವ. आ + ईषत् लोलः। "आलोलपादपलतान्तरनिर्गतानाम्" किरा० ५-४१।

**आलोलित** ಆಲೋಲಿತ (वि०) ಸ್ವಲ್ಪ ಅಲುಗಾಡಿಸಲ್ಪಟ್ಟ. आ + लुल (विमर्दने) + णिच् "क्तः" (३-२-१०२)।

**आलोलितवत्** ಆಲೋಲಿತವತ್ (वि०) ಸ್ವಲ್ಪ ಅಲುಗಾಡಿಸಿದ. आ + लुल (विमर्दने) + णिच् "क्तवतुः" (३-२-१०२)।

**आवनेय** ಆವನೇಯ (पु०) ಅಂಗಾರಕ, ಕುಜಗ್ರಹ. अवन्याः भूमेरपत्यम् "ढक्" (४-१-१२०)।

**आवपन** ಆವಪನ (न०) 1. ಭೂಮಿಯಲ್ಲಿ ಬೀಜವನ್ನು ಬಿತ್ತುವುದು. आ + डु वप् (बीजसन्ताने) "ल्युट्" (३-३-११५)। 2. ಧಾನ್ಯವನ್ನು ಇಡುವ ಪಾತ್ರೆ. आ + डु वप् अधि० "ल्युट्" (३-३-११७)। 3. ಬಿತ್ತುವ ಕಾಳು, ಬೀಜ. 4. ವಿವಾಹದಲ್ಲಿ ಸಹೋದರನು ಹೋಮಕ್ಕಾಗಿ ವಧುವಿನ ಕೈಯಲ್ಲಿ ಲಾಜವನ್ನು (ಅರಳನ್ನು) ಹಾಕುವುದು. 5. ಗೋಣಿ ಚೀಲ. ओप्यते स्थाप्यते धान्यादिरत्र अधि० "ल्युट्"। 6. ಕೇಶಖಂಡನ, ಕ್ಷೌರ.

**आवरक** ಆವರಕ (न०) 1. ಮುಚ್ಚಳ. 2. ಪರದೆ, ಮುಸುಕು, ಮುಖಪಟ. (वि०) 3. ಮುಚ್ಚುವ, ಮರೆಮಾಡುವ. आ + वृञ् (वरणे) "ण्वुल्" (३-१-१३३)।

**आवरण** ಆವರಣ (न०) 1. ಮುಚ್ಚುವುದು, ಮರೆಮಾಡುವುದು. आ + वृञ् (वरणे) भावे "ल्युट्" (३-३-११५)। "सूर्ये तपत्यावरणाय दृष्टेः कल्पेत लोकस्य कथं तमिस्रा" रघु० ५-१३। 2. ಮುಚ್ಚಳ, ಹೊದಿಕೆ. आ + वृञ् कर० "ल्युट्" (३-३-११७)। "उत्सृज्य कुसुमशयनं नलिनीदलकल्पितस्तनावरणम्" शाकु० ३-१९। 3. ಅಜ್ಞಾನ. [ಇದು ಚೈತನ್ಯವನ್ನು ಮರೆಮಾಡುವುದು.] 4. ಗುರಾಣಿ, ಕತ್ತಿಯ ಏಟಿನಿಂದ ದೇಹವನ್ನು ರಕ್ಷಿಸುವ ಹಲಗೆ. 5. ಬೇಲಿ, ಮರೆ, ಪ್ರಾಕಾರ, ಸುತ್ತುಗೋಡೆ. "इह सिन्धवश्च वरणावरणाः करिणां मुदे सनलदानलदाः" किरा० ५-२५। 6. ಅಡ್ಡಿ, ಅತಂಕ, ತಡೆ. "कालेनावरणात्ययात् परिणते यत्प्रेमसारे स्थितं भद्रं तस्य सुमानुषस्य कथमप्येकं हि तत्प्राप्यते" उ०रा० १-३९।

**आवर्जन** ಆವರ್ಜನ (न०) 1. ಬಗ್ಗಿಸುವುದು. 2. ಕೊಡುವುದು, ದಾನ ಮಾಡುವುದು. 3. ಬಿಡುವುದು, ತ್ಯಜಿಸುವುದು. 4. ವಶಪಡಿಸಿಕೊಳ್ಳುವುದು. 5. ಸಂಪಾದಿಸಿ ಕೂಡಿಡುವುದು,-ಸಂಗ್ರಹಿಸುವುದು. आ + वृजी (वर्जने) "ल्युट्" (३-३-११५)। 6. ಸುರಿಯುವುದು.

**आवर्जित** ಆವರ್ಜಿತ (वि०) 1. ಬಗ್ಗಿಸಲ್ಪಟ್ಟ. आ+वृजी (वर्जने) "क्तः" (३-२-१०२)। "आवर्जिता किञ्चिदिव स्तनाभ्यां वासो वसाना तरुणार्करागम्" कुमा० ३-५४। 2. ಕೊಡಲ್ಪಟ್ಟ, ದಾನಮಾಡಲ್ಪಟ್ಟ. "मत्परं दुर्लभं मत्वा नूनमावर्जितं मया" रघु० १-३७। 3. ತ್ಯಾಗಮಾಡಲ್ಪಟ್ಟ, ಬಿಡಲ್ಪಟ್ಟ. 4. ವಶಪಡಿಸಿಕೊಳ್ಳಲ್ಪಟ್ಟ. 5. ಸಂಪಾದಿಸಲ್ಪಟ್ಟ, ಸಂಗ್ರಹಿಸಲ್ಪಟ್ಟ. "चतुर्दिगावर्जितसंभृतां यो मृत्पात्रशेषामकरोद्विभूतिम्" रघु० ६-७६। 6. ಸುರಿಯಲ್ಪಟ್ಟ, ಎರೆಯಲ್ಪಟ್ಟ. "अपि त्वदावर्जितवारिसंभृतं प्रवालमासामनुबन्धि वीरुधाम्" कुमा० ५-३४।

**आवर्जितवत्** ಆವರ್ಜಿತವತ್ (वि०) 1. ಬಗ್ಗಿಸಿದ. 2. ಕೊಟ್ಟ, ದಾನಮಾಡಿದ. आ + वृजी (वर्जने) कर्तृ० "क्तवतुः" (३-२-१०२)। 3. ತ್ಯಾಗಮಾಡಿದ.

4. ವಶಪಡಿಸಿಕೊಂಡ. 5. ಸಂಪಾದಿಸಿದ. 6. ಸುರಿದ. स्त्रियाम् "ङीप्" (४-१-६)। **आवर्जितवती ಆವರ್ಜಿತವತೀ.** "मरीचिमावर्जितवतीव श्लाघसे" दशकु०।

**आवर्त ಆವರ್ತ** (पु०) 1. ನೀರಿನ ಸುಳಿ. आ + वृतु (वर्तने) भावे "घञ्" (३-३-१८)। "आवर्तगर्तसम्भ्रान्तविमानप्लवविप्लवा" चं० रा०। 2. ಕುದುರೆಯ ಬೆನ್ನಿನ ಮೇಲಿನ ಸುಳಿ. 3. ಪುನರಾಲೋಚನೆ. 4. ಮನುಷ್ಯನ ದೇಹದಲ್ಲಿರುವ ಕೂದಲಿನ ಸುಳಿ. 5. ಸಂಶಯ, ಸಂದೇಹ. आ + वृतु (वर्तने) + णिच् कर्म० "अच्" (३-३-५६)। 6. ಲೋಹವನ್ನು ಕರಗಿಸುವುದು. 7. ಸಂಸಾರ. 8. ಆವರ್ತವೆಂಬ ಒಂದು ಮೇಘ. 9. ತಿರುಗುವಿಕೆ, ಸುತ್ತುವಿಕೆ. "आवर्तश्चिन्तने वारिभ्रमे चावर्तने पुमान्" मेदि०। 10. ದೇಹದೊಳಗಿನ ಸುಳಿಯ ಆಕಾರದ ಒಂದು ನಾಡಿ.

**आवर्तक ಆವರ್ತಕ** (पु०) 1. ಆವರ್ತಕವೆಂಬ ಒಂದು ಮೇಘ. आवर्त एव स्वार्थे "कन्"। "तदीयास्तोयदेष्वद्य पुष्करावर्तकादिषु" कुमा० २-५०। 2. ಕಣ್ಣಿನ ಹುಬ್ಬುಗಳ ಮೇಲಿನ ತಗ್ಗು ಪ್ರದೇಶ. 3. ನೀರಿನ ಸುಳಿ. 4. ಕೂದಲಿನ ಸುಳಿ. 5. ಸುತ್ತುವುದು, ತಿರುಗುವುದು.

**आवर्तन ಆವರ್ತನ** (पु०) 1. ವಿಷ್ಣು. आवर्तयति संसारचक्रम्—आ + वृतु (वर्तने) + णिच् "ल्युः" (३-१-१३४)। "आवर्तनो निवृत्तात्मा" वि० स०। "आवर्तनोऽसौ संसारचक्रस्यावर्तनान्मुहुः"। (न०) 2. ತಿರುಗುವುದು, ಸುತ್ತುವುದು. 3. ಕಡೆಯುವುದು, ಕಲಕುವುದು. 4. ಕರಗಿಸುವಿಕೆ. 5. ಪುನಃ ಪುನಃ ಮಾಡುವಿಕೆ, ಮತ್ತೆ ಮತ್ತೆ ಮಾಡುವುದು. आ + वृतु + णिच् "ल्युट्" (३-३-११५)। 6. ಮಧ್ಯಾಹ್ನ ಕಾಲ, ನೆರಳು ಪಶ್ಚಿಮದಿಂದ ಪೂರ್ವದಿಕ್ಕಿಗೆ ತಿರುಗುವ ಸಮಯ. [ಮಧ್ಯಾಹ್ನದವರೆಗೂ ನಮ್ಮ ನೆರಳು ಪಶ್ಚಿಮದಿಕ್ಕಿಗೆ ಬೀಳುವುದು. ಅನಂತರ ಪೂರ್ವದಿಕ್ಕಿಗೆ ತಿರುಗುವುದು.] आ + वृतु अधि० "ल्युट्" (३-३-११५)। (स्त्री०)—नी—ನೀ. 1. ದರ್ವಿ, ಸೌಟು. 2. ಮೂಷೆ, ಮೂಸಿ, ಕೂವೆ. आवर्त्यतेऽनया—करं० "ल्युट्" (३-३-११७)। "ङीप्" (४-१-१५)।

**आवर्तनीय ಆವರ್ತನೀಯ** (वि०) 1. ಕರಗಿಸಲು ಯೋಗ್ಯವಾದ, ಕರಗಿಸಲ್ಪಡಬಹುದಾದ. आ+वृतु (वर्तने)+णिच् "अनीयर्" (३-१-९६)। 2. ಕಡೆಯಲ್ಪಡುವ. 3. ಹೆಚ್ಚಿಸಲ್ಪಡುವ, ಅಧಿಕಪಡಿಸಲು ಅರ್ಹವಾದ.

**आवर्तित ಆವರ್ತಿತ** (वि०) 1. ಕರಗಿಸಲ್ಪಟ್ಟ. 2. ಹೆಚ್ಚಿಸಲ್ಪಟ್ಟ, ಅಧಿಕಪಡಿಸಲ್ಪಟ್ಟ. 3. ಅಭ್ಯಾಸ ಮಾಡಲ್ಪಟ್ಟ, ಪುನಃ ಪುನಃ ಮಾಡಲ್ಪಟ್ಟ. 4. ಕಡೆಯಲ್ಪಟ್ಟ. आ + वृतु (वर्तने) + णिच् "क्तः" (३-२-१०२)।

**आवर्तिन् ಆವರ್ತಿನ್** (वि०) 1. ಪುನಃ ಪುನಃ ಸುತ್ತುತ್ತಿರುವ, ಸುತ್ತಾಡುತ್ತಿರುವ ಸ್ವಭಾವದ. आ+वृतु (वर्तने) "णिनिः" (३-२-७८)। "आब्रह्मभुवनाल्लोकाः पुनरावर्तिनोऽर्जुन" गीता ८-१६। 2. ಕರಗಿಸುವ. 3. ಕಡೆಯುವ, ಕಲಕುವ. आ+ वृतु+णिच् "णिनिः" (३-१-१३४)। स्त्रियाम् "ङीप्" (४-१-५)। आवर्तिनी ಆವರ್ತಿನೀ.

**आवर्तिनी ಆವರ್ತಿನೀ** (स्त्री०) 1. ಬಲಮುರಿ ಗಿಡ, ಕುರುಟಿಗೆ ಗಿಡ. 2. ಸುಳಿಯ ಮಡು, ಸುಳಿಯಿಂದ ಕೂಡಿದ ಗುಂಡಿ (ಮಡು).

**आवलि ಆವಳಿ** (स्त्री०) 1. ಪಙ್ಕ್ತಿ, ಸಾಲು. आवलते— आ + वल (संवरणे) "इन्" (उ० ४-११८)। "द्विजावलिव्याजनिशाकरांशुभिः" माघ० १-२५। "विदूरतः प्रतिबलकेतनावलिः" माघ० १७-४४। 2. ಪರಂಪರೆ. वा "ङीप्" (ग०४-२-४५)। आवली ಆವಳೀ.

**आवलित ಆವಳಿತ** (वि०) 1. ಸ್ವಲ್ಪ ತಿರುಗಿಸಲ್ಪಟ್ಟ. आ + वल (सञ्चलने) "क्तः" (३-२-१०२)। 2. ಸ್ವಲ್ಪ ಚಲಿಸಿರುವ. 3. ಸಂಪೂರ್ಣವಾಗಿ ಚಲಿಸಿರುವ. आ + वल कर्त० "क्तः" (३-४-७२)।

**आवश्यक ಆವಶ್ಯಕ** (न०) 1. ಅಗತ್ಯ, ಅನಿವಾರ್ಯ ವಿಚಾರ. (वि) 2. ನಿಯತವಾದ, ಅಗತ್ಯವಾಗಿ ಬೇಕಾದ. 3. ಅಗತ್ಯವಾಗಿ ಮಾಡಬೇಕಾದ. अवश्यं भावः "वुञ्" (५-१-१३३)।

**आवश्यपुत्रक ಆವಶ್ಯಪುತ್ರಕ** (न०) ಮಗನು ಅಧೀನದಲ್ಲಿಲ್ಲದಿರುವಿಕೆ. न वश्यः अवश्यः पुत्रः तस्य भावः "वुञ्" (५-१-१३३)।

**आवसति** ಆವಸತಿ (स्त्री०) ಅರ್ಧರಾತ್ರಿ, ಸಮರಾತ್ರಿ. वसत्यत्र गृहे वसतिः रात्रिः—आ सम्यक् वसतिः। [ಅರ್ಧರಾತ್ರಿಯಲ್ಲಿ ಎಲ್ಲರೂ ಮನೆಯಲ್ಲೇ ಇರುವುದರಿಂದ ಈ ಹೆಸರು.]

**आवसथ** ಆವಸಥ (न०) 1. ವಾಸಸ್ಥಾನ, ಮನೆ. आ + वस (निवासे) "अथः" (उ० ३-११६)। "निवसन्नावसथे पुराद्बहिः" रघु० ८-७४। 2. ವಿಶ್ರಾಂತಿಸ್ಥಾನ, ಆಶ್ರಯಸ್ಥಾನ. 3. ಗ್ರಾಮ, ಹಳ್ಳಿ. 4. ಆಶ್ರಮ, ತಪಸ್ವಿಗಳ ವಾಸಸ್ಥಳ. 5. ಯಾಗಾಗ್ನಿಯನ್ನು ರಕ್ಷಿಸಿಡುವ ಸ್ಥಳ.

**आवसथिक** ಆವಸಥಿಕ (पु०) ಮನೆಯಲ್ಲಿ ವಾಸಮಾಡುವವನು, ಗೃಹಸ್ಥ, ಗೃಹಪತಿ. आवसथे गृहे वसति "ष्ठल्" (४-४-७४)। स्त्रियाम् "ङीष्" (४-१-४१)। आवसथिकी ಆವಸಥಿಕೀ.

**आवसथ्य** ಆವಸಥ್ಯ (पु०) 1. ಯಾಗಾಗ್ನಿ. 2. ಲೌಕಿಕಾಗ್ನಿ. 3. ಪಂಚಾಗ್ನಿಗಳಲ್ಲೊಂದು. आवसथस्यायम् "यत्" (४-३-५४)। "आवसथ्याहवनीयौ दक्षिणाग्निस्तथैव च। अन्वाहार्यो गार्हपत्य इत्येते पञ्च वह्नयः"।

**आवसान** ಆವಸಾನ (वि०) ಗ್ರಾಮದ ಹೊರಗೆ ವಾಸಮಾಡುವ, ಊರಿನಿಂದ ಹೊರಗಡೆ ವಾಸಿಸುವ. अवसानमभिजनोऽस्य "अण्" (४-३-९०)।

**आवसित** ಆವಸಿತ (न०) 1. ಕಣದಲ್ಲಿ ರಾಶಿಹಾಕಿ ಸಿದ್ಧಪಡಿಸಿದ (ಒಕ್ಕಿದ) ಧಾನ್ಯ. आवसीयते—षो (अन्तकर्मणि) "क्तः" (३-२-१०२)। "ऋद्धमावसितं धान्यम्" अम०। 2. ಚೆನ್ನಾಗಿ ಹಣ್ಣಾಗಿರುವ ಧಾನ್ಯ. (वि०) 3. ನಿರ್ಣಯಿಸಲ್ಪಟ್ಟ, ನಿಶ್ಚಯಿಸಲ್ಪಟ್ಟ. 4. ಮುಗಿಸಲ್ಪಟ್ಟ, ಸಮಾಪ್ತಿಗೊಳಿಸಲ್ಪಟ್ಟ.

**आवह** ಆವಹ (पु०) 1. ಸಪ್ತ ವಾಯುಗಳಲ್ಲೊಂದು, ಭೂವಾಯು. आवहति आभिमुख्येन गच्छति—आ+वह (प्रापणे) "अच्" (३-१-१३४)। "आवहः प्रवहश्चैव विवहश्च समीरणः। परावहः संवहश्च उद्वहश्च महाबलः। तथा परिवहः श्रीमान्" हरिवं०। (वि०) 2. ಹೊಂದಿಸುವ, ಸೇರಿಸುವ, ಉಂಟುಮಾಡುವ. आवहति प्रापयति—आ+वह (प्रापणे) "अच्" (३-१-१३४)। "क्लेशावहा भर्तुरलक्षणाहम्" रघु० १४-५।

**आवाप** ಆವಾಪ (पु०) 1. ಬೀಜವನ್ನು ಬಿತ್ತುವುದು. आ+डु वप् (बीजसन्ताने) "घञ्" (३-३-१८)। 2. ಗಿಡದ ಪಾತಿ. आवपन्ति जलमत्र—आ + डु वप् "घञ्" (३-३-१२१)। 3. ಧಾನ್ಯವನ್ನು ಇಡುವ ಪಾತ್ರೆ. 4. ಶತ್ರುರಾಷ್ಟ್ರದ ಚಿಂತೆ. "तन्त्रं स्वराष्ट्रचिन्तायामावापः परचिन्तने" वैज०। "तन्त्रावापविदा योगैर्मण्डलान्यधितिष्ठता" माघ० २-८८। 5. ಪ್ರಧಾನ ಹೋಮ. 6. ಬಳೆ, ಕಡಗ, ಕಂಕಣ. "कटको वलयं पारिहार्यावापौ च कङ्कणम्" अभि० चि०। 7. ಆಕ್ಷೇಪಣೆ. 8. ಹಳ್ಳತಿಟ್ಟಾದ ಪ್ರದೇಶ, ಸಮವಲ್ಲದ ಭೂಮಿ. 9. ಪ್ರಕ್ಷೇಪ, ಇಲ್ಲದುದನ್ನು ಸೇರಿಸುವುದು.

**आवापक** ಆವಾಪಕ (पु०) 1. ಬಳೆ, ಕಡಗ, ಕಂಕಣ. आ उप्यते—आ + डु वप् (बीजसन्ताने) "घञ्" (३-३-१९)। संज्ञायां "कन्" (५-३-७५)। (वि०) 2. ಬೀಜವನ್ನು ಬಿತ್ತುವವನು. 3. ನಾಪಿತ.

**आवापन** ಆವಾಪನ (न०) 1. ಮಗ್ಗ. 2. ನೂಲು ಸುತ್ತುವ ಕಂಡಿಕೆ, ರಾಟೆ. आ+डु वप् (बीजसन्ताने) कर० "ल्युट्" (३-३-११७)। 3. ಕೇಶಖಂಡನ, ಕ್ಷೌರ. भावे "ल्युट्" (३-३-११५)।

**आवाल** ಆವಾಲ (न०) ಗಿಡದ ಪಾತಿ. आवलतेऽम्भोऽत्र—आ+वल (सञ्चलने) "घञ्" (३-३-१२१)। "स्यादालवालमावालम्" अम०।

**आवास** ಆವಾಸ (पु०) 1. ಮನೆ, ವಾಸಗೃಹ. आ + वस (निवासे) "घञ्" (३-३-१२१)। "आवासो लयनं मनोहरमभिप्रायानुरूपा वणिङ्नार्यो वाञ्छितकालमिष्टमशनं शय्या मृदुप्रस्तरा:" प्रबोध० ३-९। 2. ಕೋಣೆ, ಕೊಠಡಿ.

**आवाहन** ಆವಾಹನ (न०) 1. ದೇವತೆಗಳು ವಿಗ್ರಹ ಮೊದಲಾದುವುಗಳಲ್ಲಿ ಸನ್ನಿಹಿತರಾಗಲು ಕರೆಯುವುದು, ದೇವತೆಗಳ ಸಾನ್ನಿಧ್ಯಕ್ಕಾಗಿ ಮಾಡುವ ಪ್ರಾರ್ಥನೆ. आ + वह (प्रापणे) + णिच् "ल्युट्" (३-३-११५)। 2. ಹದಿನಾರು ವಿಧ ಉಪಚಾರಗಳಲ್ಲೊಂದು.

**आवाहनी** ಆವಾಹನೀ (स्त्री०) ದೇವತೆಗಳ ಪ್ರಾರ್ಥನೆಗಾಗಿ ಮಾಡುವ ಹಸ್ತಮುದ್ರೆ, ಎರಡು ಕೈಗಳನ್ನೂ ಜೋಡಿಸಿ ಅನಾಮಿಕೆಯ (ಕಿರುಬೆರಳಿನ ಪಕ್ಕದ ಬೆರಳಿನ) ಬುಡದಲ್ಲಿ ಅಂಗುಷ್ಠ (ಹೆಬ್ಬೆರಳು) ಗಳನ್ನು ಇಟ್ಟು ಮಾಡುವ ತಂತ್ರೋಕ್ತವಾದ ಒಂದು ಮುದ್ರೆ. "हस्ताभ्यामञ्जलिबद्ध्वाऽनामिकामूलपर्वणोः। अङ्गुष्ठौ निक्षिपेद्यत्र मुद्रा साऽऽवाहनी स्मृता"।

**आविक** ಆವಿಕ (ನಂ) 1. ಕಂಬಳಿ, ಉಣ್ಣೆಯಿಂದ ಮಾಡಿದ ಬಟ್ಟೆ. अविना तल्लोम्ना निर्वृत्तम् "ठक्" (५-१-७९)। (वि०) 2. ಮೇಷಸಂಬಂಧವಾದ, ಕುರಿಯಸಂಬಂಧವಾದ. अविः स्वार्थे "कः"। अविकस्येदम् "अण्" (४-३-१२०)।

**आविकसौत्रिक** ಆವಿಕಸೌತ್ರಿಕ (वि०) ಉಣ್ಣೆಯ ದಾರದಿಂದ ತಯಾರಾದ. आविकसूत्रेण निर्वृत्तम् "ठक्" (५-१-७९)।

**आविग्न** ಆವಿಗ್ನ (वि०) ಕಷ್ಟಕ್ಕೊಳಗಾದ, ತೊಂದರೆ ಪಟ್ಟ. आ+ओ विजी (भयचलनयोः) "क्तः" (३-४-७२)।

**आविद्ध** ಆವಿದ್ಧ (वि०) 1. ಕುಟಿಲವಾದ, ಸೊಟ್ಟಾದ, ಡೊಂಕಾಗಿರುವ. आविध्यते स्म—आ+व्यध (ताडने) "क्तः" (३-२-१०२)। 2. ಹೊಡೆಯಲ್ಪಟ್ಟ, ಮುರಿಯಲ್ಪಟ್ಟ. "पादपाविद्धपरिघः शिलानिष्पिष्टमुद्गरः" रघु० १२-७३। 3. ಪ್ರೇರಿಸಲ್ಪಟ್ಟ, ನೂಕಲ್ಪಟ್ಟ, ತಳ್ಳಲ್ಪಟ್ಟ. 4. ಕೊರೆಯಲ್ಪಟ್ಟ, ರಂಧ್ರಮಾಡಲ್ಪಟ್ಟ. 5. ಎಸೆಯಲ್ಪಟ್ಟ.

**आविध** ಆವಿಧ (पु०) 1. ಉಳಿ, ರಂಪಿಗೆ. 2. ಬೈರಿಗೆ, ಮರವನ್ನು ಕೊರೆಯುವ ಚೂಪಾದ ಸಲಾಕಿ. आविध्यतेऽनेन—आ + व्यध (ताडने) "कः" (वा० ३-३-५८)।

**आविर्भवत्** ಆವಿರ್ಭವತ್ (वि०) ಹುಟ್ಟುವ, ಮೈದೋರುವ, ಕಾಣಿಸಿಕೊಳ್ಳುವ. आविस् + भू (सत्तायाम्) "शतृ" (३-२-१२४)। स्त्रियाम् "ङीप्" (४-१-६)।—भवन्ती—ಭವನ್ತೀ. "आविर्भवन्ती प्रथमं प्रियायाः सोच्छ्वासमन्तःकरणं करोति" मालती० ३-४।

**आविर्भाव** ಆವಿರ್ಭಾವ (पु०) 1. ಉತ್ಪತ್ತಿ, ಕಾಣಿಸಿಕೊಳ್ಳುವುದು, ತೋರಿಕೆ, ಸಾಕ್ಷಾತ್ಕಾರ. आविस्+भू (सत्तायाम्) "घञ्" (३-३-१८)। 2. ದೇವತೆಗಳು ಮನುಷ್ಯ ರೂಪದಿಂದ ಅವತರಿಸುವಿಕೆ. 3. ಅಭಿವ್ಯಕ್ತಿ, ಅಸ್ಪಷ್ಟವಾಗಿದ್ದುದು ಸ್ಪಷ್ಟವಾಗಿ ಕಾಣಿಸಿಕೊಳ್ಳುವಿಕೆ.

**आविर्भूत** ಆವಿರ್ಭೂತ (वि०) 1. ಕಾಣಿಸಿಕೊಂಡ, ಮೈದೋರಿದ. 2. ಪ್ರಕಾಶಹೊಂದಿದ, ಸ್ಪಷ್ಟವಾದ. आविस्+भू (सत्तायाम्) "क्तः" (३-४-७२)। "आविर्भूतमपां मध्ये पारिजातमिवापरम्" रघु० १-११।

**आविल** ಆವಿಲ (वि०) 1. ಕಲುಷವಾದ, ಬಗ್ಗಡವಾದ, ಕೊಳಕಾದ. आविलति—आ+विल (संवरणे) "कः" (३-१-१३५)। "पङ्कच्छिदः फलस्येव निकषेणाविलं पयः" माल० २-८। 2. ಶುದ್ಧವಲ್ಲದ, ಮಲಿನವಾದ, ದೂಷಿತವಾದ. "स्रजं न काचिद्विजहौ जलाविलाम्" किरा० ८-३७।

**आविष्करण** ಆವಿಷ್ಕರಣ (नं०) 1. ತೋರಿಕೆ, ಕಾಣಿಸಿಕೊಳ್ಳುವುದು, ಪ್ರಕಾಶಪಡಿಸಿಕೊಳ್ಳುವುದು. आविस्+डु कृञ् (करणे) "ल्युट्" (३-३-११५)। (वि०) 2. ಪ್ರಕಾಶಪಡಿಸುವ ಸಾಧನ, ಕಾಣುವಂತೆ ಮಾಡುವ ಉಪಾಯ. आविस् + डु कृञ् (करणे) "ल्युट्" (३-३-११७)। स्त्रियाम् "ङीप्" (४-१-१५)। —करणी—ಕರಣೀ.

**आविष्कर्तृ** ಆವಿಷ್ಕರ್ತೃ (वि०) ಪ್ರಕಾಶಪಡಿಸುವವನು, ಸಾಕ್ಷಾತ್ಕಾರ ಮಾಡುವವನು. आविस् + डु कृञ् (करणे) "तृच्" (३-१-१३३)। स्त्रियाम् "ङीप्" (४-१-५)। आविष्कर्त्री ಆವಿಷ್ಕರ್ತ್ರೀ.

**आविष्कार** ಆವಿಷ್ಕಾರ (पु०) ತೋರಿಕೆ, ಕಾಣಿಸಿಕೊಳ್ಳುವುದು, ಪ್ರಕಾಶಪಡಿಸಿಕೊಳ್ಳುವುದು. आविस् + डु कृञ् (करणे) "घञ्" (३-३-१८)।

**आविष्कृत** ಆವಿಷ್ಕೃತ (वि०) ಪ್ರಕಟಿಸಲ್ಪಟ್ಟ, ಪ್ರಕಾಶಪಡಿಸಲ್ಪಟ್ಟ, ತೋರಿಸಲ್ಪಟ್ಟ. आविस् + डु कृञ् (करणे) "क्तः" (३-२-१०२)। "अथ चेदवधिः प्रतीक्ष्यते कथमाविष्कृतजिह्मवृत्तिना" किरा० २-१६। "वितर्कमाविष्कृतफेनसन्तति" किरा० ४-५।

**आविष्ट** ಆವಿಷ್ಟ (वि०) 1. ಭೂತದ ಆವೇಶವುಳ್ಳ, ಗ್ರಹದಿಂದ ಹಿಡಿಯಲ್ಪಟ್ಟ. 2. ಹೊಂದಲ್ಪಟ್ಟ, ಪ್ರವೇಶಿಸಲ್ಪಟ್ಟ. आ + विश (प्रवेशने) "क्तः" (३-२-१०२)। "आविष्टशङ्खासुरसन्निवेशम्" याद० १८-१०९। 3. ತತ್ಪರನಾದ, ಆಸಕ್ತನಾದ. 4. ವ್ಯಾಪ್ತವಾದ, ಹರಡಲ್ಪಟ್ಟ. आ + विष्लृ (व्याप्तौ) "क्तः" (३-२-१०२)।

**आविस्** ಆವಿಸ್ (अव्य०) ಕಾಣಬರುವುದು, ಪ್ರಕಾಶಪಡುವುದು, ತೋರುವುದು, ಹುಟ್ಟುವುದು. "आविर्मदैरात्रिलयन्ति नागाः" याद० १८-७८। "आचार्यकं विजयि मान्मथमाविरासीत्" मालती० १-२६।

**आवी** ಆವೀ (स्त्री०) 1. ರಜಸ್ವಲೆ, ಋತುಮತಿಯಾದ ಹೆಂಗಸು. अवि स्वार्थे "अण्" (५-४-३८)। "ङीप्" (४-१-१५)। 2. ಗರ್ಭಿಣಿ, ಗರ್ಭಧರಿಸಿದ ಹೆಂಗಸು. "गर्भस्पन्दनमावीनां प्रणीशः श्यावपाण्डुता" सुश्रुत०।

**आवीत** ಆವೀತ (न०) ಪ್ರಾಚೀನಾವೀತ, ಬಲತೋಳಿನ ಮೇಲೂ ಎಡತೋಳಿನ ಕೆಳಗೂ ಇರುವಂತೆ ಧರಿಸಲ್ಪಡುವ ಯಜ್ಞೋಪವೀತ.

**आवीतिन्** ಆವೀತಿನ್ (वि०) ಯಜ್ಞೋಪವೀತವನ್ನು ಎಡತೋಳಿನ ಕೆಳಗೆ ಹಾಕಿಕೊಂಡಿರುವವನು, ಪ್ರಾಚೀನಾವೀತವುಳ್ಳವನು. "उद्धृते दक्षिणे पाणावुपवीत्युच्यते बुधैः। सव्ये प्राचीन आवीती निवीती कण्ठलम्बिते।" मनु० २-६३।

**आवुक** ಆವುಕ (पु०) ತಂದೆ. अवति—अव (रक्षणे) "उकण्" बाहु०। [ನಾಟಕದಲ್ಲಿ ಮಾತ್ರ ಈ ಪ್ರಯೋಗ.]

**आवुत्त** ಆವುತ್ತ (पु०) ಭಾವ, ಸಹೋದರಿಯ ಗಂಡ. [ನಾಟಕದಲ್ಲಿ ಮಾತ್ರ ಪ್ರಯೋಗ.] "भगिनीपतिरावुत्तः" अम०।

**आवृत्** ಆವೃತ್ (स्त्री०) 1. ಒಂದು ಕ್ರಮ, ಪರ್ಯಾಯ. 2. ಪುನಃ ಪುನಃ ಮಾಡುವುದು, ಮಾಡಿದ್ದನ್ನೇ ಮತ್ತೆ ಮಾಡುವುದು. 3. ಸುತ್ತುತ್ತಿರುವುದು. 4. ಮತ್ತೆ ಮತ್ತೆ ಆಡಿಸುವುದು, ಚಾಲನ. 5. ಹಿಂದಿರುಗುವುದು, ಹಿಂದಕ್ಕೆ ಬರುವುದು. 6. ಸಂಸ್ಕಾರ. 7. ಶಬ್ದವಿಲ್ಲದೆ ಸುಮ್ಮನಿರುವಿಕೆ.

**आवृत** ಆವೃತ (वि०) 1. ಮರೆಮಾಡಲ್ಪಟ್ಟ, ಮುಚ್ಚಲ್ಪಟ್ಟ, ಕಣ್ಣಿಗೆ ಕಾಣದಂತೆ ಮಾಡಲ್ಪಟ್ಟ. आ+वृञ् (वरणे) "क्तः" (३-२-१०२)। "आवृतान्यपि निरन्तरमुच्चैर्योषितामुरसिजद्वितयेन" माघ० १०-५६। 2. ಸುತ್ತುವರೆಯಲ್ಪಟ್ಟ, ಬಳಸಲ್ಪಟ್ಟ. 3. ಮಿಶ್ರಜಾತಿಯವನು, ಬೆರಕೆ ಜಾತಿಯವನು. "ब्राह्मणादुग्रकन्यायामावृतो नाम जायते" मनु० १०-१५।

**आवृति** ಆವೃತಿ (स्त्री०) 1. "आवरण" ಪದದ ಅರ್ಥ. आ+वृञ् (वरणे) "क्तिन्" (३-३-९४)। 2. ಬೇಲಿ.

**आवृत्त** ಆವೃತ್ತ (वि०) 1. ತಿರುಗಿಸಲ್ಪಟ್ಟ. आ+वृतु (वर्तने) "क्तः" (३-२-१०२)। "आवृत्तवृन्तशतपत्रनिभं वहन्त्या" मालती० १-३२। 2. ಪುನಃ ಪುನಃ ಅಭ್ಯಾಸಮಾಡಲ್ಪಟ್ಟ, ಮತ್ತೆ ಮತ್ತೆ ಮಾಡಲ್ಪಟ್ಟ. 3. ಪುನಃ ಪುನಃ ಓದಲ್ಪಟ್ಟ. 4. ಹಿಂದಿರುಗಿದ, ಹಿಂದಕ್ಕೆ ಬಂದ.

**आवृत्ति** ಆವೃತ್ತಿ (स्त्री०) 1. ಮಾಡಿದ್ದನ್ನೇ ಮತ್ತೆ ಮಾಡುವುದು. 2. ಓದಿದ್ದನ್ನೇ ಮತ್ತೆ ಓದುವುದು. 3. ಹಿಂದಿರುಗುವಿಕೆ, ಮೊದಲಿನ ಸ್ಥಿತಿಗೆ ಬರುವಿಕೆ. 4. ಸುತ್ತುವಿಕೆ, ತಿರುಗುವಿಕೆ. 5. ತಿರುಗಿ ಬರುವಿಕೆ, ಮತೆ ಬರುವಿಕೆ. आ + वृतु (वर्तने) "क्तिन्" (३-३-९४)। "संस्कारक्वाणदीर्घं पटु रटति कृतावृत्ति खट्वाङ्गघण्टा" मालती० ५-४। "तपोवनावृत्तिपथं गताभ्याम्" रघु० २-१८। "रवेरुदयावृत्तिपथेन नारदः" रघु० ८-३३।

**आवेग** ಆವೇಗ (पु०) 1. ಅವಸರ, ಗಡಿಬಿಡಿ, ತರಾತುರಿ. आ+ओ विजी (भयचलनयोः) "घञ्" (३-३-१८)। "सावेगमग्राङ्गुलिरस्य तूणौ" किरा० १७-३८। 2. ಒಂದು ವ್ಯಭಿಚಾರಿಭಾವ. ಅನರ್ಥದಿಂದುಂಟಾಗುವ ಗಾಬರಿ.

**आवेगी** ಆವೇಗೀ (स्त्री०) 1. ಅನಂತನ ಗೊಂಡೆಸೊಪ್ಪು. आवेगोऽस्यास्ति "अच्" (५-२-१२७)। "ङीष्" (४-१-४१)। (वि०) 2. ಆವೇಗವುಳ್ಳವನು, ಗಾಬರಿಯುಳ್ಳವನು.

**आवेदक** ಆವೇದಕ (वि०) 1. ತಿಳಿಯಿಸುವವನು, ವರದಿಮಾಡುವವನು. आवेदयति—आ + विद (ज्ञाने) + णिच् "ण्वुल्" (३-१-१३३)। 2. ವಾದಿ, ಅರ್ಜಿದಾರ.

**आवेदन** ಆವೇದನ (न०) 1. ತಿಳಿಯಿಸುವುದು, ವರದಿ ಮಾಡುವುದು. 2. ದೂರು, ಮೊರೆ, ಅರ್ಜಿ. 3. ಹೇಳುವುದು, ವಿಜ್ಞಾಪಿಸುವುದು. आ + विद (ज्ञाने) भावे "ल्युट्" (३-३-११५)।

**आवेदनीय** ಆವೇದನೀಯ (वि०) 1. ವಿಜ್ಞಾಪಿಸಲ್ಪಡುವ. 2. ಹೇಳಲು ಅರ್ಹವಾದ. 3. ವರದಿಮಾಡಲ್ಪಡುವ, ತಿಳಿಸಲ್ಪಡುವ. 4. ದೂರು ಹೇಳಲು ಅರ್ಹವಾದ. आ+विद(ज्ञाने)+णिच् "अनीयर्" (३-१-९६)।

**आवेदयत्** ಆವೇದಯತ್ (वि०) 1. ತಿಳಿಸುವ, ವರದಿ ಮಾಡುವ. 2. ವಿಜ್ಞಾಪಿಸುವ. आ + विद (ज्ञाने) + णिच् "शतृ" (३-२-१२४)।

**आवेदित** ಆವೇದಿತ (वि०) 1. ತಿಳಿಸಲ್ಪಟ್ಟ, ವರದಿ ಮಾಡಲ್ಪಟ್ಟ. 2. (1) ವಿಜ್ಞಾಪಿಸಲ್ಪಟ್ಟ (ಮನುಷ್ಯ). (2) ವಿಜ್ಞಾಪಿಸಲ್ಪಟ್ಟ (ವಿಷಯ). 3. ಅರ್ಜಿ

ಮೂಲಕ ತಿಳಿಸಲ್ಪಟ್ಟ. आ + विद (ज्ञाने) "क्तः" (३-२-१०२)।

**आवेदिन् ಆವೇದಿನ್** (वि०) 1. ವಿಜ್ಞಾಪಿಸುವ 2. ತಿಳಿಯಪಡಿಸುವ, ವರದಿಮಾಡುವ. 3. ದೂರು ಹೇಳುವ, ವಾದಿ. आ + विद (ज्ञाने) + णिच् "णिनिः" (३-१-१३४)। 4. ಆಜ್ಞೆಮಾಡುವವನು, ಅಪ್ಪಣೆಕೊಡುವವನು. स्त्रियाम् "ङीप्" (४-१-५)। आवेदिनी ಆವೇದಿನೀ.

**आवेद्य ಆವೇದ್ಯ** (वि०) 1. ವಿಜ್ಞಾಪಿಸಲ್ಪಡುವ. 2. ತಿಳಿಸಲ್ಪಡುವ, ವರದಿಮಾಡಲ್ಪಡುವ. आ + विद (ज्ञाने) + णिच् "यत्" (३-१-९७)। (अव्य०) 3. ವಿಜ್ಞಾಪಿಸಿ, ತಿಳಿಯಪಡಿಸಿ. आ + विद + णिच् "ल्यप्" (७-१-३७)।

**आवेद्यमान ಆವೇದ್ಯಮಾನ** (वि०) 1. ತಿಳಿಯಪಡಿಸಲ್ಪಡುತ್ತಿರುವ, ವರದಿ ಮಾಡಲ್ಪಡುತ್ತಿರುವ, 2. ವಿಜ್ಞಾಪಿಸಲ್ಪಡುತ್ತಿರುವ. आ+विद (ज्ञाने) + णिच् कर्म० "शानच्" (३-२-१२४)।

**आवेध्य ಆವೇಧ್ಯ** (वि०) 1. ಕೊರೆಯಲ್ಪಡುವ, ತೂತು ಮಾಡಲ್ಪಡುವ. आ + व्यध (ताडने) "ण्यत्" (३-१-१२४)। 2. ನೂಕಲ್ಪಡುವ. 3. ಎಸೆಯಲ್ಪಡುವ. 4. ಹೊಡೆಯಲ್ಪಡುವ.

**आवेश ಆವೇಶ** (पु०) 1. ಪ್ರವೇಶ. 2. ಅಹಂಕಾರ, ಗರ್ವ. आ + विश (प्रवेशने) "घञ्" (३-३-१८)। 3. ಗ್ರಹಗಳ ಆವೇಶ, ಗ್ರಹಗಳು ಹಿಡಿಯುವುದು. 4. ಗ್ರಹಗಳ ಭಯ. 5. ಮನೋವಿಕಾರ, ತವಕಪಡುವಿಕೆ. 6. ಅಭಿನಿವೇಶ, ಆಸಕ್ತಿ. 7. ಕೋಪ, ಸಿಟ್ಟು. "ततो यथावद्विदिताध्वराय तस्मै स्मयावेशविवर्जिताय" रघु० ५-१९। 8. ಗೃಹ, ಮನೆ. अधि० "घञ्" (३-३-१२१)।

**आवेशन ಆವೇಶನ** (न०) 1. ಶಿಲ್ಪಶಾಲೆ, ಕೈಗಾರಿಕೆಯ ಮನೆ. 2. ಪ್ರವೇಶ. 3. ಕೋಪ, ಸಿಟ್ಟು. 4. ಭೂತಾದಿಗಳು ಹಿಡಿಯುವಿಕೆ. 5. ಸೂರ್ಯಚಂದ್ರರ ಪರಿಧಿ. आ + विश (प्रवेशने) "ल्युट्" (३-३-११७)। 6. ಗೃಹ, ಮನೆ.

**आवेशिक ಆವೇಶಿಕ** (पु०) 1. ಅತಿಥಿ. आवेशे गृहे भवः "ठञ्" (४-३-६०)। "वेशो वेश्यागृहे गृहे" मेदि०। (वि०) 2. ವಿಶೇಷವಾದ, ಅಸಾಧಾರಣವಾದ. 3. ಮನೆಯಲ್ಲಿರುವ(ಬಂಧುಜನರು). आवेशे गृहे भवः।

**आवेशित ಆವೇಶಿತ** (वि०) ಇಡಲ್ಪಟ್ಟ. आ + विश (प्रवेशने) + णिच् "क्तः" (३-२-१०२)।

**आवेष्टन ಆವೇಷ್ಟನ** (न०) 1. ಸುತ್ತುವರಿಯುವಿಕೆ, ಸುತ್ತುಗಟ್ಟುವಿಕೆ. आ+वेष्ट (वेष्टने) भावे "ल्युट्" (३-३-११५)। 2. ಬೇಲಿ, ಪ್ರಾಕಾರ, ಸುತ್ತುಗೋಡೆ. आ + वेष्ट करं० "ल्युट्" (३-३-११७)। 3. ಬೇಲಿ ಹಾಕುವ ಸಾಧನ (ಮುಳ್ಳು ಮುಂತಾದುದು).

**आश ಆಶ** (पु०) 1. ಭೋಜನ, ಊಟ. अश (भोजने) "घञ्" (३-३-१८)। (वि०) 2. ತಿನ್ನುವ, ಊಟ ಮಾಡುವ. ಕರ್ಮಪದವು ಹಿಂದೆ ಬಂದಾಗ "अण्" (३-२-१) ಪ್ರತ್ಯಯ ಬಂದು ಈ ರೂಪವಾಗುವುದು. हुताशः आमिषाशः पलाशः आश्रयाशः ಇತ್ಯಾದಿ.

**आशंसत् ಆಶಂಸತ್** (वि०) 1. ಅಪೇಕ್ಷಿಸುವ, ಇಚ್ಛಿಸುವ. आ + शसि (इच्छायाम्) "शतृ" (३-१-१२४)। 2. ಹೇಳುವ. "आशंसता बाणगतिं वृषाङ्के कार्यं त्वया नः प्रतिपन्नकल्पम्" कुमा० ३-१४। 3. ಹೊಗಳುವ, ಸ್ತೋತ್ರಮಾಡುವ. आ + शंसु (स्तुतौ) "शतृ" (३-१-१२४)।

**आशंसन ಆಶಂಸನ** (न०) 1. ಇಚ್ಛೆ, ಅಪೇಕ್ಷೆ, ಬಯಕೆ. 2. ಹೇಳುವುದು. 3. ಹೊಗಳಿಕೆ, ಸ್ತೋತ್ರಮಾಡುವುದು. आ + शसि (इच्छायाम्) शंसु (स्तुतौ) वा "ल्युट्" (३-३-११५)।

**आशंसा ಆಶಂಸಾ** (स्त्री०) 1. ಮನೋರಥ, ಅಭಿಲಾಷೆ. आ + शसि (इच्छायाम्) "अः" (३-३-१०३)। "आशंसापरिकल्पितास्वपि भवत्यानन्दसान्द्रो लयः" मालती० ५-७। 2. ಇಚ್ಛೆ, ಬಯಕೆ. "निदधे विजयाशंसां चापे सीतां च लक्ष्मणे" रघु० १२-४४। 3. ಹೇಳುವುದು. 4. ಹೊಗಳಿಕೆ, ಸ್ತೋತ್ರ ಮಾಡುವುದು. आ + शंसु (स्तुतौ) "अः" (३-३-१०३)।

**आशंसित ಆಶಂಸಿತ** (न०) 1. ಇಚ್ಛೆ, ಬಯಕೆ, ಅಪೇಕ್ಷೆ. आ + शसि (इच्छायाम्) भावे "क्तः" (३-३-११४)। 2. ಹೇಳಿಕೆ. 3. ಸ್ತುತಿ, ಹೊಗಳಿಕೆ. आ + शंसु (स्तुतौ) भावे "क्तः"। (वि०) 4. ಅಪೇಕ್ಷಿಸಲ್ಪಟ್ಟ, ಬಯಸಲ್ಪಟ್ಟ. आ + शसि कर्म० "क्तः"। 5. ಹೇಳಲ್ಪಟ್ಟ. 6. ಹೊಗಳಲ್ಪಟ್ಟ. आ + शंसु कर्म० "क्तः"। "आशंसितापचितिचारु पुरः सुराणाम्" किरा० ६-४६।

**आशंसितृ** ಆಶಂಸಿತೃ (वि०) 1. ಅಪೇಕ್ಷಿಸುವ, ಬಯಸುವ. आशंसते—आ + शसि (इच्छायाम्) "तृन्" (३-२-१३५)। 2. ಹೊಗಳುವ. 3. ಹೇಳುವ. आ + शंसु "तृन्"। स्त्रियाम् "ङीप्" (४-१-५)। आशंसित्री ಆಶಂಸಿತ್ರೀ.

**आशंसिन्** ಆಶಂಸಿನ್ (वि०) "आशंसितृ" ಪದದ ಅರ್ಥ. आ + शसि (इच्छायाम्) शंसु (स्तुतौ) वा "णिनिः" (३-१-१३४)। स्त्रियाम् "ङीप्" (४-१-५)। आशंसिनी ಆಶಂಸಿನೀ.

**आशंसु** ಆಶಂಸು (वि०) ಅಪೇಕ್ಷಿಸುವ, ಇಚ್ಛಿಸುವ, ಬಯಸುವ. आशंसते—आ+शसि "उः" (३-२-१६८)। "त्वां हतनामिव राक्षसानामाशंसवः क्रूरगिरो रुवन्तः" भट्टि० १२-७२।

**आशक्त** ಆಶಕ್ತ (वि०) ದಕ್ಷ, ಸಮರ್ಥ, ಶಕ್ತ. आ सम्यक् शक्तः।

**आशक्ति** ಆಶಕ್ತಿ (स्त्री०) ಶಕ್ತಿ, ಸಾಮರ್ಥ್ಯ.

**आशङ्कनीय** ಆಶಂಕನೀಯ (वि०) 1. ಸಂಶಯಪಡಲು ಅರ್ಹವಾದ, ಸಂದೇಹಪಡಬಹುದಾದ. आ + शकि (शङ्कायाम्) "अनीयर्" (३-१-९६)। 2. ಭಯಪಡಲು ಯೋಗ್ಯವಾದ.

**आशङ्कमान** ಆಶಂಕಮಾನ (वि०) 1. ಹೆದರುವ, ಭಯಪಡುವ. 2. ಶಂಕಿಸುವ, ಸಂದೇಹಪಡುವ. आशङ्कते—आ + शकि (शङ्कायाम्) "शानच्" (३-२-१२४)। "आशङ्कमानो वैदेहीं खादितां निहतां मृताम्" भट्टि० ६-६।

**आशङ्का** ಆಶಂಕಾ (स्त्री०) 1. ಭಯ, ಹೆದರಿಕೆ. आ + शकि (शङ्कायाम्) "अः" (३-३-१०३)। 2. ಸಂಶಯ, ಸಂದೇಹ. 3. ಆಸೆ. "भुक्तं मानविवर्जितं परगृहेष्वाशङ्कया काकवत्" भर्तृ० ३-२।

**आशङ्कित** ಆಶಂಕಿತ (न०) 1. ಸಂಶಯ, ಸಂದೇಹ. 2. ಭಯ, ಹೆದರಿಕೆ. 3. ಕೆಡಕಿನ ಚಿಂತೆ. आ + शकि (शङ्कायाम्) "क्तः" (३-३-११४)। (वि०) 4. ಹೆದರಿದ, ಭಯಗೊಂಡ. कर्त० "क्तः" (३-४-७२)। 5. ಸಂದೇಹಿಸಲ್ಪಟ್ಟ. कर्म० "क्तः" (३-२-१०२)।

**आशङ्किन्** ಆಶಂಕಿನ್ (वि०) 1. ಹೆದರುವ, ಭಯಪಡುವ. आ + शकि (शङ्कायाम्) "णिनिः" (३-१-१३४)। "रघोरभिभवाशङ्कि चुक्षुभे द्विषतां मनः" रघु० ४-२१। 2. ಸಂದೇಹಪಡುವ. "कुब्जा नीचतयैव यान्ति शनकैरात्मेक्षणाशङ्किनः" रत्ना० २-३। स्त्रियाम् "ङीप्" (४-१-५)। आशङ्किनी ಆಶಂಕಿನೀ.

**आशङ्क्य** ಆಶಂಕ್ಯ (वि०) 1. ಸಂದೇಹಪಡಬಹುದಾದ, ಸಂಶಯಗೊಳ್ಳಲು ಯೋಗ್ಯವಾದ. आ + शकि (शङ्कायाम्) "ण्यत्" (३-१-१२४)। (अव्य०) 2. ಸಂಶಯಗೊಂಡು. आ+शकि "ल्यप्" (७-१-३७)। "आशङ्क्य दैतेयबलोपयानं दृढार्गलां देवपुरीमकुर्वन्" याद० २०-४४।

**आशन** ಆಶನ (पु०) 1. ವಜ್ರಾಯುಧ. (वि०) 2. ಊಟಮಾಡಿಸುವ.

**आशय** ಆಶಯ (पु०) 1. ಅಭಿಪ್ರಾಯ. आ + शीङ् (स्वप्ने) "अच्" (३-३-५६)। "इदमीदृगनीदृगाशयः" किरा० २-२८। 2. ಆಧಾರ, ಆಸರೆ, ಕೂಡಿಡುವ ಸ್ಥಳ. "विषमोऽपि विगाह्यते नयः कृततीर्थः पयसामिवाशयः" किरा० २-३। 3. ಚಿತ್ತ, ಮನಸ್ಸು, ಹೃದಯ. आ + शीङ् अधि० "अच्" (३-३-५६)। "अहमात्मा गुडाकेश सर्वभूताशयस्थितः" गीता १०-२०। "राम राम नयनाभिरामतामाशयस्य सदृशीं समुद्वहन्" म० वी० २-३७। 4. ಶಯನ, ಹಾಸಿಗೆ. अधि० "अच्"। 5. ಮಲಗುವುದು. भावे "अच्" (३-३-५६)। 6. ಮನೆ, ವಾಸ, ಗೃಹ, ಆಶ್ರಯ. 7. ಕೃಪಣ, ಲೋಭಿ, ಜಿಪುಣ. 8. ಕಣಜ, ಉಗ್ರಾಣ, ಶೇಖರಿಸಿಡುವ ಸ್ಥಳ. 9. ಅದೃಷ್ಟ, ದೈವ, ಹಣೆಬರಹ. 10. ಆಸ್ತಿ, ಸ್ವತ್ತು, ಐಶ್ವರ್ಯ. 11. ಪನಸವೃಕ್ಷ, ಹಲಸಿನಮರ. 12. ಹಳ್ಳ, ಗುಣಿ, ಮೃಗಗಳನ್ನು ಹಿಡಿಯಲು ತಯಾರಿಸಿರುವ ಗುಂಡಿ. "आस्ते परमसन्तप्तो नूनं सिंह इवाशये" भा० वन० ३५-१२। 13. ಮನೋಧರ್ಮ, ಸಂಸ್ಕಾರ, ಜನ್ಮಾಂತರ ವಾಸನೆ. "क्लेशकर्मविपाकाशयैरपरामृष्टः पुरुषविशेष ईश्वरः" पा० यो० सू० १-२४। 14. ಹಳೆಯದಾದ, ಬಾಡಿದ, ಒಣಗಿದ, ಜೀರ್ಣವಾದ. "कोट्टारे कृपणे जीर्णे स्थानेऽभिप्राय आशयः" वैज०। "आशयः स्यादभिप्राये पनसाधारयोरपि" मेदि०। "आशयः स्यादभिप्राये मानसाधारयोरपि" विश्व०।

**आशयाश** ಆಶಯಾಶ (पु०) ಅಗ್ನಿ, ಬೆಂಕಿ. आशयमाश्रयमश्नाति—अश (भोजने) "अण्" (३-२-१)।

आशर ಆಶರ (पुं०) 1. ಅಗ್ನಿ, ಬೆಂಕಿ. 2. ರಾಕ್ಷಸ. आशृणाति—आ+शॄ (हिंसायाम्) "अच्" (३-१-१३४)। "आशरस्तु पुमान् वैश्वानरे च रजनीचरे" मेदि०।

आशा ಆಶಾ (स्त्री०) 1. ದಿಕ್ಕು. आ समन्तात् अश्नुते—आ + अशू (व्याप्तौ) "अच्" (३-१-१३४)। "अनुजगुरथ दिव्यं दुन्दुभिध्वानमाशाः" किरा० ३-६०। 2. ನಿರೀಕ್ಷೆ, ಪ್ರತ್ಯಾಶೆ. "राघवो रथमप्राप्तां तामाशां च सुरद्विषाम्" रघु० १२-९६। 3. ಆಸೆ, ಅಪೇಕ್ಷೆ, ಬೇಕಾದುದನ್ನು ಪಡೆಯುವ ಬಯಕೆ. "महोत्सवमिवाशानामाशाम्यधिकसम्पदम्" याद० १६-४। 4. ಅಸಾಧ್ಯವಾದುದನ್ನು ಪಡೆಯುವ ಬಯಕೆ, ದುರಾಶೆ. "आशा बलवती राजन् पुत्राणां तेऽभवत्तदा" भा० शल्य० ७-१६।

आशागज ಆಶಾಗಜ (पुं०) ದಿಗ್ಗಜ, ದಿಕ್ಕುಗಳನ್ನು ಕಾಯುವ ಆನೆ.

आशातन्तु ಆಶಾತಂತು (पुं०) ಆಸೆಯೆಂಬ ತಂತು, ದುರ್ಬಲವಾದ ಆಸೆ. आशैव तन्तुः। "चिरादाशा-तन्तुस्त्रुटतु बिसिनीसूत्रभिदुरः" मालती० ४-३।

आशापाल ಆಶಾಪಾಲ (पुं०) ದಿಕ್ಪಾಲಕ. आशां दिशं पालयति—पाल (रक्षणे) + णिच् "अण्" (३-२-१)।

आशापिशाचिका ಆಶಾಪಿಶಾಚಿಕಾ (स्त्री०) ಆಸೆಯೆಂಬ ಭೂತ, ಮೋಸಮಾಡುವ ಆಸೆ. आशैव पिशाचिका।

आशाबन्ध ಆಶಾಬಂಧ (पुं०) 1. ಜೇಡರ ಹುಳುವಿನ ಬಲೆ, ಜೇಡರ ಹುಳುವಿನ ಗೂಡು. आशां दिशं बध्नाति—बन्ध (बन्धने) "अच्" (३-१-१३४)। 2. ಆಸೆಯ ಕಟ್ಟು, ಆಸೆಯ ಬಂಧನ, ನಂಬಿಕೆ, ಪ್ರತ್ಯಾಶೆ. "आशाबन्धः कुसुमसदृशं प्रायशोह्यङ्गनानाम्" मेघ० १-१०। 3. ಆಶ್ವಾಸನ, ಸಮಾಧಾನ. "आशा-बन्धं कमपि कुरुते छाययार्थी जनोऽयम्" वेणी० ६-२६। "आशाबन्धः समाश्वासे तथा मर्कटजालके" विश्व०। 4. ದಿಗ್ಬಂಧನ.

आशाभङ्ग ಆಶಾಭಂಗ (पुं०) ನಿರಾಶೆ, ಕಾರ್ಯನಾಶ, ಕಾರ್ಯ ನೆರವೇರದಿರುವಿಕೆ.

आशावह ಆಶಾವಹ (वि०) ಆಸೆಯನ್ನುಂಟುಮಾಡುವ. आशाया आवहः।

आशासत् ಆಶಾಸತ್ (वि०) ಅಪ್ಪಣೆ ಮಾಡುವ, ಆಜ್ಞೆ ಮಾಡುವ. आ + शासु (अनुशिष्टौ) "शतृ" (३-२-१२४)।

आशासान ಆಶಾಸಾನ (वि०) ಅಪೇಕ್ಷಿಸುವ, ಇಚ್ಛಿಸುವ, ಕೋರುವ. आ+शासु (इच्छायाम्) "शानच्" (३-२-१२४)। "आशासानाः कतिचन विभो त्वत्परिष्वङ्गधन्यैरङ्गीकारं क्षणमपि दये हार्दतुङ्गैरपाङ्गैः" दयाश० ४२।

आशास्य ಆಶಾಸ್ಯ (न०) 1. ಆಶೀರ್ವಾದ, ಮಂಗಳಾ ಶಾಸನ. आ+शासु (इच्छायाम्) "ण्यत्" (३-१-१२४)। "आशास्यमन्यत्पुनरुक्तभूतं श्रेयांसि सर्वाण्यधिजग्मुषस्ते" रघु० ५-३४। 2. ಅಪೇಕ್ಷೆ, ಮನೋರಥ, ಬಯಕೆ, ಕೋರಿಕೆ. "आशास्यमीतिविगमप्रभृति प्रजानाम्" माल० ५-२०। (वि०) 3. ಅಪೇಕ್ಷಿಸಲ್ಪಡುವ, ಅಪೇಕ್ಷಿಸಲು ಅರ್ಹವಾದ, ಕೋರಲ್ಪಡುವ. "अगस्त्यचरितामाशा-मनाशास्यजयो ययौ" रघु० ४-४४। 4. ಹಿರಿಯರ ಅನುಗ್ರಹದಿಂದ ಲಭ್ಯವಾಗುವ, ಆಶೀರ್ವಾದದಿಂದ ಉಂಟಾಗುವ. (अव्य०) 5. ಪ್ರಾರ್ಥಿಸಿ, ಬೇಡಿ, ಕೋರಿ. आ + शासु "ल्यप्" (७-१-३७)। "आशास्य लाजाञ्जलिहोमभाजा" याद० १३-८६।

आशित ಆಶಿತ (न०) 1. ತೃಪ್ತಿಕರವಾದ ಭೋಜನ, ಸರಿಯಾದ ಊಟ. आ + अश (भोजने) "क्तः" (३-३-११४)। (वि०) 2. ತಿನ್ನಲ್ಪಟ್ಟ, ಊಟ ಮಾಡಲ್ಪಟ್ಟ. आ + अश "क्तः" (३-२-१०२)। 3. ಸರಿಯಾಗಿ ಊಟಮಾಡಿದ, ಭೋಜನದಿಂದ ತೃಪ್ತಿ ಹೊಂದಿದ. आशितमस्त्यस्य "अच्" (५-२-१२७)।

आशितंगवीन ಆಶಿತಂಗವೀನ (वि०) ಗೋವುಗಳು ಹುಲ್ಲು ಮೇಯ್ದು ತೃಪ್ತಿಹೊಂದಿದ ಪ್ರದೇಶ (ಅರಣ್ಯ ಮೊದಲಾದುದು). आशिता गावोऽस्मिन् "खः" (५-४-७)। मुम् निपा०।

आशितम्भव ಆಶಿತಂಭವ (पुं०) 1. ಆಹಾರದಿಂದ ತೃಪ್ತಿಹೊಂದುವಿಕೆ. आशित + भू (सत्तायाम्) भावे "खच्" (३-२-४५)। मुम् (६-३-६७)। 2. ಆಹಾರ, ಅನ್ನ. आशितो भवत्यनेन—आशित+भू कर० "खच्" (३-२-४५)।

आशितृ ಆಶಿತೃ (वि०) ಚೆನ್ನಾಗಿ ಊಟಮಾಡುವ, ತೃಪ್ತಿಕರವಾಗಿ ಊಟಮಾಡುವ, ಹೊಟ್ಟೆಬಾಕ. आ + अश (भोजने) "तृच्" (३-१-१३३)। स्त्रियाम् "ङीप्" (४-१-५)। आशित्री ಆಶಿತ್ರೀ.

आशिन् ಆಶಿನ್ (वि०) ಊಟಮಾಡುವ, ಚೆನ್ನಾಗಿ ತಿನ್ನುವ ಸ್ವಭಾವದ. आ+अश (भोजने) "णिनिः" (३-२-७८)।

**आशिर** ಆಶಿರ (पु०) 1. ಅಗ್ನಿ, ಬೆಂಕಿ. 2. ಸೂರ್ಯ. 3. ರಾಕ್ಷಸ. 4. ಭೋಜನ, ಊಟ. आ + अश (भोजने) अशू (व्याप्तौ) वा "किरच्" (उ० १-५२)। 5. ಕುದಿಸಲ್ಪಟ್ಟ ಗಟ್ಟಿಯಾದ ಹಾಲು. "आशिरः क्षीरविकृतौ भोजने पावके रवौ" वैज०। "आशिरो वह्निरक्षसोः" सि० कौ०।

**आशिष्ट** ಆಶಿಷ್ಟ (वि०) ಆಶೀರ್ವಾದಮಾಡಲ್ಪಟ್ಟ. आ शासु (इच्छायाम्) "क्तः" (३-२-१०२)।

**आशिस्** ಆಶಿಸ್ (स्त्री०) 1. ಇಷ್ಟವಾದುದನ್ನು ಪ್ರಾರ್ಥಿಸುವ ವಾಕ್ಯ, ಹಿತವನ್ನು ಕೋರುವ ಮಾತು. आ + शासु (इच्छायाम्) "क्विप्" (३-२-७६)। "इष्टावधारकं वाक्यमाशीस्सा परिकीर्तिता"। "आशास्य काजाञ्जलिहोमभाजा क्षेमाशिषा किञ्चिदशेषहृद्यम्" वाद० १३-८६। 2. ಅಭಿಲಾಷೆ, ಅಪೇಕ್ಷೆ, ಆಸೆ. "जगच्छरण्यस्य निराशिषः सतः किमेभिराशोपहतात्मवृत्तिभिः" कुमा० ५-७६। 3. ಹಾವಿನ ಹಲ್ಲು, ಸರ್ಪದ ವಿಷದಂತ. "आशीरुरगदंष्ट्रायां शुभवाक्याभिलापयोः" वैज०।

**आशी** ಆಶೀ (स्त्री०) ಹಾವಿನ ಹಲ್ಲು, ಸರ್ಪದ ವಿಷದಂತ. आशीर्यतेऽनया—आ+शॄ (हिंसायाम्) "क्विप्" (३-२-७६)। पृषो०। "विषमाशीभिरनारतं वमन्तः" माघ०।

**आशीर्वाद** ಆಶೀರ್ವಾದ (पु०) ಇಷ್ಟವಾದುದನ್ನು ಪ್ರಾರ್ಥಿಸುವ ವಾಕ್ಯ, ಶುಭವನ್ನು ಕೋರುವ ಮಾತು, ಹಿತವನ್ನು ಬಯಸುವ ಮಾತು. आशिषो वादः वचनम्। आशीरुक्तिः आशीर्वचनम् ಇತ್ಯಾದಿ. "अवितथफलमाशीर्वादमारोपयन्तः" किरा० १८-४६।

**आशीविष** ಆಶೀವಿಷ (पु०) ಸರ್ಪ, ಹಾವು. आश्यां विषमस्य। "तयोरुपान्तस्थितसिद्धसैनिकं गरुत्मदाशीविषभीमदर्शनैः" रघु० ३-५७।

**आशु** ಆಶು (पु०) 1. ಪಾಟಲಧಾನ್ಯ, ಕೆಂಪು ಬತ್ತ. अशू (व्याप्तौ) "उण्" (उ० १-१)। "आशुर्व्रीहिः पाटलः स्यात्" अम०। (अव्य०) 2. ಜಾಗ್ರತೆಯಾಗಿ, ವೇಗವಾಗಿ, ಶೀಘ್ರವಾಗಿ. "तदाशु कर्तुं त्वयि जिह्ममुद्यते विधीयतां तत्र विधेयमुत्तरम्" किरा० १-२५। "त्यजाशु गर्वं मदगूढ मा स्म गाः" कुमा० १५-३८।

**आशुकारिन्** ಆಶುಕಾರಿನ್ (वि०) ಜಾಗ್ರತೆಯಾಗಿ ಕೆಲಸಮಾಡುವ, ಕುಶಲ, ಚಟುವಟಿಕೆಯುಳ್ಳವನು. आशु करोति—डु कृञ् (करणे) "णिनिः" (३-२-७८)। स्त्रियाम् "ङीप्" (४-१-५)।—कारिणी—ಕಾರಿಣೀ. "क्विप्" (३-२-७६)। आशुकृत् ಆಶುಕೃತ್.

**आशुकोपिन्** ಆಶುಕೋಪಿನ್ (वि०) ಜಾಗ್ರತೆಯಾಗಿ ಕೋಪಬರುವ ಸ್ವಭಾವದವನು, ಮುಂಗೋಪಿ. आशु कुप्यति—कुप (क्रोधे) "णिनिः" (३-२-७८)।

**आशुग** ಆಶುಗ (पु०) 1. ವಾಯು, ಗಾಳಿ. 2. ಬಾಣ. आशु गच्छति—गम्लृ (गतौ) "डः" (वा० ३-२-४८)। "चापैराकर्णमाकृष्टैर्विमुक्ता दूरमाशुगाः" कुमा० १६-१३। 3. ಸೂರ್ಯ. (वि०) 4. ಜಾಗ್ರತೆಯಾಗಿ ನಡೆಯುವ, ವೇಗವಾಗಿ ಹೋಗುವ.

**आशुगामिन्** ಆಶುಗಾಮಿನ್ (पु०) 1. ಸೂರ್ಯ. (वि०) 2. ಜಾಗ್ರತೆಯಾಗಿ ನಡೆಯುವ ಸ್ವಭಾವದ. आशु गच्छति—गम्लृ (गतौ) "णिनिः" (३-२-७८)। स्त्रियाम् "ङीप्" (४-१-५)।—गामिनी—ಗಾಮಿನೀ.

**आशुतोष** ಆಶುತೋಷ (पु०) 1. ಶಿವ, ಈಶ್ವರ. (वि०) 2. ಜಾಗ್ರತೆಯಾಗಿ ಸಂತೋಷಪಡುವ. आशु शीघ्रं तोषो यस्य।

**आशुव्रीहि** ಆಶುವ್ರೀಹಿ (पु०) ಪಾಟಲಧಾನ್ಯ, ಕೆಂಪು ಬತ್ತ.

**आशुशुक्षणि** ಆಶುಶುಕ್ಷಣಿ (पु०) 1. ಅಗ್ನಿ, ಬೆಂಕಿ. आशु शीघ्रं शु क्षणोति—क्षणु (हिंसायाम्) "इन्" (उ० ४-११८)। शु इति पूजार्थमव्ययम्। आशोष्टुमिच्छति—आ + शुष (शोषणे) + सन् "अनिः" (उ० २-१०३) वा। 2. ವಾಯು, ಗಾಳಿ.

**आशौच** ಆಶೌಚ (न०) ಅಶುಚಿ, ಅಶುದ್ಧಿ. अशुचेर्भावः "अण्" (५-१-१३१)। उभयपदवृद्धिः (७-३-३०)।

**आश्चर्य** ಆಶ್ಚರ್ಯ (न०) 1. ಅದ್ಭುತರಸ. आ इति चर्यते—आ + चर (गतौ) "यत्" सुट् (६-१-१४०)। 2. ಅದ್ಭುತ, ವಿಸ್ಮಯ, ಅಚ್ಚರಿ. "आश्चर्यमुत्पलदृशो वदनामलेन्दुसांनिध्यतो मम मुहुर्जडिमानमेत्य" मालती० ३-५। (वि०)3. ಆಶ್ಚರ್ಯದಿಂದ ಕೂಡಿದ. आश्चर्यो गवां दोहोऽगोपेन।

**आश्चोतन** ಆಶ್ಚ್ಯೋತನ (न०) 1. ಚೆನ್ನಾಗಿ ಸುರಿಯುವಿಕೆ. आ+श्चुतिर् (क्षरणे) "ल्युट्" (३-३-११५)। (वि०) 2. ಚೆನ್ನಾಗಿ ಸುರಿಯುವ, ಚೆನ್ನಾಗಿ (ನೀರನ್ನು) ಚಿಮುಕಿಸುವ. आ + श्चुतिर् "ल्युः" (३-१-१३४)।

**आश्म** ಅಶ್ಮ (वि०) 1. ಕಲ್ಲಿನಿಂದ ತಯಾರಿಸಲ್ಪಟ್ಟ ವಸ್ತು. अश्मनो विकारः—अश्मन् "अण्" (४-३-१३४)।

**आश्मिक** ಅಶ್ಮಿಕ (वि०) ಭಾರವಾದ ಕಲ್ಲನ್ನು—(1) ಹೊರುವ. (2) ತೆಗೆದೊಯ್ಯುವ. (3) ತೆಗೆದುಕೊಂಡು ಬರುವ. भारभूतमश्मानं वहति हरत्यावहति च—अश्मन् "ठक्" (५-१-५०)।

**आश्यान** ಆಶ್ಯಾನ (वि०) ಒಣಗಿದ, ಗಟ್ಟಿಯಾದ. आ+श्यैङ् (गतौ) "क्तः" (३-४-७२)। "सरितः कुर्वती गाधाः पथश्चाश्यानकर्दमान्" रघु० ४-२४।

**आश्रम** ಆಶ್ರಮ (पुं०) 1. ವಿಷ್ಣು. आश्रम्यन्ते विश्रान्तिं प्राप्यन्तेऽनेन। "तेषां तु योगभ्रष्टानां हेतु र्वैष्णवसद्मसु। सुभिक्षकरविद्येषु विश्रान्तेराश्रमः स्मृतः" इति निरुक्तिः। (पुंन०) 2. ಪರ್ಣಶಾಲೆ, ತಪಸ್ವಿಗಳ ವಾಸಗೃಹ. आश्राम्यन्त्यत्र—आ+श्रमु (तपसि खेदे च) "घञ्" (३-३-१२१)। "तौ दम्पती वसिष्ठस्य गुरोर्जग्मतु-राश्रमम्" रघु० १-३५। "आश्रमाः प्रविशदग्र्यधेनवः" कुमा० ८-३८। 3. ಬ್ರಹ್ಮಚರ್ಯ ಮೊದಲಾದ ನಾಲ್ಕು ಆಶ್ರಮಗಳು. [ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ ಮತ್ತು ಸಂನ್ಯಾಸವೆಂದು ಆಶ್ರಮಗಳು ನಾಲ್ಕು. ಇವುಗಳಲ್ಲಿ ಬ್ರಾಹ್ಮಣನಿಗೆ ನಾಲ್ಕು ಆಶ್ರಮಗಳೂ, ಕ್ಷತ್ರಿಯನಿಗೆ ಮೊದಲನೆಯ ಮೂರು ಆಶ್ರಮಗಳೂ, ವೈಶ್ಯನಿಗೆ ಮೊದಲನೆಯ ಎರಡು ಆಶ್ರಮಗಳೂ, ಶೂದ್ರನಿಗೆ ಗಾರ್ಹಸ್ಥ್ಯಾಶ್ರಮವೂ ಉಕ್ತವಾಗಿರುವುದು.] "चत्वार आश्रमाश्चैव ब्राह्मणस्य प्रकीर्तिताः। गार्हस्थ्यं ब्रह्मचर्यं च वानप्रस्थं तु भिक्षुकम्। क्षत्रिये चापि कथिता आश्रमास्त्रय एव हि। ब्रह्मचर्यं च गार्हस्थ्यमाश्रम-द्वितयं विशः। गार्हस्थ्यमुचितंत्वेकं शूद्रस्य क्षणमावहेत्"। 4. ವಿದ್ಯಾಶಾಲೆ, ಪಾಠಶಾಲೆ.

**आश्रमगुरु** ಆಶ್ರಮಗುರು (पुं०) ರಾಜ, ದೊರೆ. आश्रमाणां ब्रह्मचर्यादीनां गुरुः नियन्ता। "आतिथेय-मनिवारितातिथिः कर्तुमाश्रमगुरुः स नाश्रमत्" माघ० १४-३८।

**आश्रमधर्म** ಆಶ್ರಮಧರ್ಮ (पुं०) ಬ್ರಹ್ಮಚರ್ಯಾದ್ಯಾಶ್ರಮವಿಹಿತವಾದ ಧರ್ಮ, ಆಯಾ ಆಶ್ರಮಗಳಲ್ಲಿ ಮಾಡಬೇಕಾದ ಕಾರ್ಯ. आश्रमविहितो धर्मः। "वानप्रस्थं भैक्ष्यचर्यं गार्हस्थ्यं च महाश्रमम्। ब्रह्मचर्याश्रमं प्राहुश्चतुर्थं ब्राह्मणैरितम्" भा० शान्ति० ६०-२। ಬ್ರಹ್ಮಚಾರಿಗೆ ವೇದಾಧ್ಯಯನವೂ, ಗೃಹಸ್ಥನಿಗೆ ದಾನ ಯಜ್ಞಯಾಗಾದಿಗಳೂ, ವಾನಪ್ರಸ್ಥನಿಗೆ ತಪಸ್ಸೂ, ಸಂನ್ಯಾಸಿಗೆ ಜ್ಞಾನಸಂಪಾದನೆ ಮತ್ತು ಮೋಕ್ಷೋಪಾಯಗಳೂ ಆಶ್ರಮ ಧರ್ಮಗಳು. "असाधुदर्शी खलु तत्रभवान् काश्यपः, य इमामाश्रमधर्मे नियुङ्क्ते" शाकु० १।

**आश्रमपद** ಆಶ್ರಮಪದ (नं०) ತಪೋವನ, ತಪಸ್ವಿಗಳ ವಾಸಸ್ಥಾನ. "शान्तमिदमाश्रमपदं स्फुरति च बाहुः कुतः फलमिहास्य" शाकु० १-१४।

**आश्रमवास** ಆಶ್ರಮವಾಸ (पुं०) ತಪಸ್ವಿಗಳು ತಪೋವನದಲ್ಲಿ ವಾಸಮಾಡುವುದು.

**आश्रमवासिक** ಆಶ್ರಮವಾಸಿಕ (नं०) ಧೃತರಾಷ್ಟ್ರ ಮೊದಲಾದವರ ಆಶ್ರಮವಾಸವನ್ನು ಹೇಳುವ ಮಹಾಭಾರತದ ಒಂದು ಪರ್ವ. आश्रमवासः प्रतिपाद्यतयाऽस्त्यस्य "ठन्" (५-२-११५)।

**आश्रमवासिन्** ಆಶ್ರಮವಾಸಿನ್ (पुं०) ಮುನಿ, ತಪಸ್ವಿ, ಸಂನ್ಯಾಸಿ. आश्रमे वसति—वस (निवासे) "णिनिः" (३-१-१३४)।

**आश्रमसद्** ಆಶ್ರಮಸದ್ (पुं०) ಮುನಿ, ತಪಸ್ವಿ, ಸಂನ್ಯಾಸಿ. आश्रमे सीदति—षद्लृ (विशरणादौ) "क्विप्" (३-२-६१)।

**आश्रमिक** ಆಶ್ರಮಿಕ (वि०) ಬ್ರಹ್ಮಚರ್ಯಾದ್ಯಾಶ್ರಮವುಳ್ಳ. आश्रमोऽस्त्यस्य "ठन्" (५-२-११५)।

**आश्रमिन्** ಆಶ್ರಮಿನ್ (पुं०) ಆಶ್ರಮವುಳ್ಳವನು, ಆಶ್ರಮವನ್ನು ಸ್ವೀಕರಿಸಿದವನು. आश्रमोऽस्त्यस्य "इनिः" (५-२-११५)।

**आश्रय** ಆಶ್ರಯ (पुं०) 1. ಆಶ್ರಯಿಸುವಿಕೆ. आ+श्रिञ् (सेवायाम्) "अच्" (३-३-५६)। "गुणव-दाश्रयलब्धगुणोदये मलिनिमाऽलिनि माधवयोषिताम्" माघ० ६-४। 2. ದುರ್ಬಲರ ರಕ್ಷಣಾಲಯ, ಅನಾಥರ ಆಲಯ. 3. ವಾಸಗೃಹ, ಮನೆ. 4. ಸಾಹಾಯ್ಯಕ್ಕಾಗಿ ಇತರರನ್ನು ಸೇರುವುದು. "साऽभूद्रामाश्रया भूयः" रघु० १२-३५। 5. ಆಶ್ರಯ, ಆಸರೆ, ಮರೆ. "तदहमाश्रयोन्मूलनेनैव त्वामकामां करोमि" मुद्रा० २। 6. ಆಧಾರ, ಅವಲಂಬನ. "तमाश्रयं दुष्प्रसहस्य तेजसः" रघु० ३-५८। 7. ಬಾಣಗಳ ಚೀಲ, ಬತ್ತಳಿಕೆ. "उन्मुखः सपदि लक्ष्मणाग्रजा बाणमाश्रय-मुखात्समुद्धरन्" रघु० ११-२६। 8. ರಾಜರ ಸಂಧಿ, ವಿಗ್ರಹ ಮೊದಲಾದ ಆರು ಗುಣಗಳಲ್ಲೊಂದು. ಪ್ರಬಲನಾದ ಶತ್ರುವಿನಿಂದ ಪೀಡಿಸಲ್ಪಟ್ಟ ದುರ್ಬಲ

ನಾದವನು ಧಾರ್ಮಿಕನಾದ ಒಬ್ಬ ಬಲಶಾಲಿಯನ್ನು ಮರೆಹೊಕ್ಕುವುದು ಆಶ್ರಯವು. "उच्छिद्यमानो रिपुणा निरुपायप्रतिक्रियः। शक्तिहीनः संश्रयते बलिनं धार्मिकं नृपम्"। 9. ಒತ್ತುಗಂಬ, ಆಧಾರಸ್ತಂಭ. "वृक्षेषु विद्धमिषुभिर्जघनाश्रयेषु" रघु० ९-६०। 10. ಸಾಹಾಯ್ಯ, ನೆರವು, ಒತ್ತಾಸೆ.

**आश्रयण** ಆಶ್ರಯಣ (ನಂ) 1. ಆಶ್ರಯ ಹೊಂದುವಿಕೆ, ಸಾಹಾಯ್ಯಕ್ಕಾಗಿ ಒಬ್ಬನನ್ನು ಸೇರುವುದು. 2. ಅವಲಂಬನ, ಆಶ್ರಯ, ಆಧಾರ. आ+श्रिञ् (सेवायाम्) भावे "ल्युट्" (३-३-११५)। (वि०) 3. ಆಶ್ರಯ ಪಡೆಯುವ, ಸಾಹಾಯ್ಯ ಹೊಂದುವ. आ + श्रिञ् "ल्युः" (३-१-१३४)।

**आश्रयणीय** ಆಶ್ರಯಣೀಯ (वि०) ಆಶ್ರಯ ಹೊಂದಲು ಯೋಗ್ಯನಾದ, ಆಶ್ರಯಿಸಲ್ಪಡುವ. आ+श्रिञ् (सेवायाम्) "अनीयर्" (३-१-९६)।

**आश्रयवत्** ಆಶ್ರಯವತ್ (वि०) ಆಶ್ರಯವುಳ್ಳ, ಸಾಹಾಯ್ಯವುಳ್ಳ, ಆಸರೆಯುಳ್ಳ. आश्रयोऽस्यास्ति "मतुप्" (५-२-९४)।

**आश्रयाश** ಆಶ್ರಯಾಶ (पु०) 1. ಅಗ್ನಿ, ಬೆಂಕಿ. आश्रयमश्नाति — अश (भोजने) "अण्" (३-२-१)। 2. ಕೃತ್ತಿಕಾನಕ್ಷತ್ರ. 3. ಚಿತ್ರಮೂಲದ ಗಿಡ. (वि०) 4. ಆಸರೆಯನ್ನು ನಾಶಗೊಳಿಸುವ, ಸಹಾಯಕನನ್ನು ತಿಂದುಹಾಕುವ.

**आश्रयासिद्ध** ಆಶ್ರಯಾಸಿದ್ಧ (पु०) ನ್ಯಾಯಮತಸಿದ್ಧವಾದ ಐದು ವಿಧ ಹೇತ್ವಾಭಾಸಗಳಲ್ಲೊಂದು, ದುಷ್ಟವಾದ ಹೇತು, ಪಕ್ಷತಾವಚ್ಛೇದಕವಿಲ್ಲದ ಪಕ್ಷವುಳ್ಳ ಹೇತು. आश्रयस्य पक्षस्य असिद्धिः। तद्वान् आश्रयासिद्धः। "गगनारविन्दं सुरभि अरविन्दत्वात् सरोजारविन्दवत्". ಎಂಬಲ್ಲಿ ಸೌರಭ್ಯಕ್ಕೆ ಆಶ್ರಯಭೂತವಾದ ಗಗನಾರವಿಂದವು (ಪಕ್ಷವು) ಅಸಿದ್ಧವಾದುದರಿಂದ ಹೇತುವು ದುಷ್ಟವಾಯಿತು. ಇದು ಆಶ್ರಯಾಸಿದ್ಧರೂಪವಾದ ಹೇತ್ವಾಭಾಸವು.

**आश्रयासिद्धि** ಆಶ್ರಯಾಸಿದ್ಧಿ (स्त्री०) ಅಸಿದ್ಧಿಯೆಂಬ ಹೇತುವಿನ ಒಂದು ದೋಷ. आश्रयस्यासिद्धिः। [ವಿವರಕ್ಕೆ "असिद्धि" ಪದದಲ್ಲಿ ನೋಡಿ.]

**आश्रयिन्** ಆಶ್ರಯಿನ್ (वि०) ಆಶ್ರಯ ಹೊಂದಿರುವ, ಸಾಹಾಯ್ಯ ಪಡೆದಿರುವ, ಆಸರೆಯಿರುವ. आश्रयति— आ + श्रिञ् (सेवायाम्) "णिनिः" (३-१-१३४)।

**आश्रव** ಆಶ್ರವ (पु०) 1. ಅಂಗೀಕಾರ, ಒಪ್ಪಿಗೆ. 2. ಪ್ರತಿಜ್ಞೆ. 3. ಕ್ಲೇಶ, ಕಷ್ಟ. (वि०) 4. ವಿಧೇಯ, ಅಧೀನದಲ್ಲಿರುವವನು, ಮಾತಿನಂತೆ ನಡೆಯುವವನು. आश्रृणोति — आ + श्रु (श्रवणे) "अप्" (३-३-५७)। "आश्रयोऽङ्गीकृतौ क्लेशे नान्यवद्वचनस्थिते" मेदि०। "दृष्टदोषमपि तन्न सोऽत्यजत् सङ्गवस्तु भिषजामनाश्रवः" रघु० १९-४९। "शाधि शासक जगत्त्रयस्य मामाश्रवोऽस्मि भवतः सहानुजः" माघ० १४-११।

**आश्राव** ಆಶ್ರಾವ (पु०) 1. ಪ್ರತಿಜ್ಞೆ ಮಾಡಿಸುವುದು. 2. ಅಂಗೀಕಾರ ಮಾಡಿಸುವುದು. 3. ಕೇಳುವಂತೆ ಮಾಡುವುದು. आ + श्रु (श्रवणे) + णिच् "अच्" (३-१-१३४)।

**आश्रित** ಆಶ್ರಿತ (वि०) 1. ಆಶ್ರಯ ಪಡೆದವನು. 2. ರಕ್ಷಣೆ ಹೊಂದಿದವನು, ಮರೆಹೊಕ್ಕಿದವನು. 3. ಆಧಾರವುಳ್ಳ, ಆಸರೆಯುಳ್ಳ. आ+श्रिञ् (सेवायाम्) "क्तः" (३-४-७२)। 4. ಸೇವಿಸಲ್ಪಟ್ಟ, ಆಶ್ರಯ ಹೊಂದಲ್ಪಟ್ಟವನು. कर्म० "क्तः" (३-२-१०२)। "आश्रितं रत्नपूर्णेन कुम्भेन च महीयसा" याद० १६-११। 5. ನೆಲೆಸಿರುವ, ವಾಸವಾಗಿರುವ, ಕುಳಿತಿರುವ. "इमं स्फटिकशिलास्तम्भमाश्रितो भवामि" माल० ४। 6. ಸೇವಕ, ಆಳು. "प्रायश्चलं गौरवमाश्रितेषु" कुमा० ३-१।

**आश्रित्य** ಆಶ್ರಿತ್ಯ (अव्य०) 1. ಆಶ್ರಯ ಹೊಂದಿ. 2. ರಕ್ಷಣೆ ಪಡೆದು. 3. ಒತ್ತಾಸೆ ಪಡೆದು, ಆಸರೆಪಡೆದು. आ + श्रिञ् (सेवायाम्) "ल्यप्" (७-१-३७)।

**आश्रुत्** ಆಶ್ರುತ್ (स्त्री०) 1. ಅಂಗೀಕಾರ. 2. ಪ್ರತಿಜ್ಞೆ. आ+श्रु (श्रवणे) "क्विप्" (३-३-९४)। 3. ಅಂಗೀಕರಿಸುವ. 4. ಪ್ರತಿಜ್ಞೆಮಾಡುವ. आ शृणोति — आ + श्रु कर्त० "क्विप्"।

**आश्रुत** ಆಶ್ರುತ (वि०) 1. ಅಂಗೀಕರಿಸಲ್ಪಟ್ಟ, ಒಪ್ಪಲ್ಪಟ್ಟ. आ+श्रु (श्रवणे) "क्तः" (३-२-१०२)। 2. ಪ್ರತಿಜ್ಞೆಮಾಡಲ್ಪಟ್ಟ. "आश्रुतस्य विफलत्वमस्ति चेदाः श्रुतस्य रचितोऽयमञ्जलिः चं० रा०। 3. ಕೇಳಲ್ಪಟ್ಟ.

**आश्रुति** ಆಶ್ರುತಿ (स्त्री०) 1. ಪ್ರತಿಜ್ಞೆ. 2. ಅಂಗೀಕಾರ, ಒಪ್ಪಿಗೆ. 3. ಕೇಳುವುದು, ಶ್ರವಣ. आ + श्रु (श्रवणे) "क्तिन्" (३-३-९४)।

**आश्लिष्ट ಆಶ್ಲಿಷ್ಟ** (वि०) 1. ಆಲಿಂಗಿಸಲ್ಪಟ್ಟ, ಅಪ್ಪಿಕೊಳ್ಳಲ್ಪಟ್ಟ. आ + श्लिष (आलिङ्गने) "क्तः" (३-२-१०२)। "आश्लिष्टभूमिं रसितारमुच्चैर्लोलद्भुजाकारबृहत्तरङ्गम्" माघ० ३-७२। 2. ಸೇರಿಕೊಂಡಿರುವ, ಬೆರೆತಿರುವ, ಕಲೆತಿರುವ. "विदिद्युते बाडवजातवेदसः शिखाभिराश्लिष्ट इवाम्भसां निधिः" माघ० १-२०।

**आश्लेष ಆಶ್ಲೇಷ** (पु०) 1. ಆಲಿಂಗನ, ಅಪ್ಪಿಕೊಳ್ಳುವಿಕೆ. आ+श्लिष (आलिङ्गने) "घञ्" (३-३-१८)। "आश्लेषलोलुपवधूस्तनकार्कश्यसाक्षिणीम्" माघ० २-१७। "धाता विश्वविसृष्टिमात्रनिरतो देवोऽपि गौरीभुजाश्लेषानन्दविघूर्णमाननयनो दक्षाध्वरध्वंसनः" प्रबोध० २-२८। 2. ಸ್ವಲ್ಪಸಂಬಂಧ, ಏಕದೇಶದಲ್ಲಿ ಮಾತ್ರ ಸೇರಿಕೊಂಡಿರುವಿಕೆ. आ ईषत् श्लेषः संबन्धः।

**आश्लेषा ಆಶ್ಲೇಷಾ** (स्त्री०) ಆಶ್ಲೇಷಾ ನಕ್ಷತ್ರ, ಸರ್ಪ ದೇವತಾಕವಾದ ನಕ್ಷತ್ರ. "आश्लेषा नक्षत्रं सर्पा देवताः" तैत्ति० सं०। ಆಶ್ಲೇಷಾ ನಕ್ಷತ್ರವು ರಾಕ್ಷಸ ಗಣಕ್ಕೆ ಸೇರಿದುದು. ಮಾರ್ಜಾಲಯೋನಿ. ಅಧೋಮುಖ. ದಾರುಣಸ್ವಭಾವವುಳ್ಳದು. ಆಶ್ಲೇಷಾ ನಕ್ಷತ್ರದಲ್ಲಿ ಪ್ರಯಾಣ ಕೂಡದು. ಪಾಯಸಾನ್ನವು ಇದಕ್ಕೆ ಶಾಂತಿ. ಈ ನಕ್ಷತ್ರದಲ್ಲಿ ಜ್ವರವು ಬಂದರೆ ಒಂದು ತಿಂಗಳಕಾಲ ಪೀಡಿಸುವುದು. ಈ ನಕ್ಷತ್ರದಲ್ಲಿ ಪ್ರಥಮ ಋತುಮತಿಯಾದರೆ ದುರ್ನಡತೆಯುಳ್ಳವಳಾಗುತ್ತಾಳೆ. ಈ ನಕ್ಷತ್ರದಲ್ಲಿ ಹುಟ್ಟಿದ ಕನ್ಯೆಯು ಅತ್ತೆಯಿಲ್ಲದ ಮನೆಗೆ ಮದುವೆಯಾಗಬೇಕು. "मूलजा श्वशुरं हन्ति सर्पजा तु तदङ्गनाम्"। ಈ ನಕ್ಷತ್ರದಲ್ಲಿ ಹುಟ್ಟಿದವರಿಗೆ ಬುಧಮಹಾದಶೆಯು ಪ್ರಾರಂಭವಾಗುವುದು. ಈ ದಶೆಯ ಪ್ರಮಾಣ 17 ವರ್ಷಗಳು.

**आश्व ಆಶ್ವ** (न०) 1. ಕುದುರೆಗಳ ಗುಂಪು. अश्वानां समूहः "अण्" (४-२-३७)। 2. ಕುದುರೆಯ (ಸ್ವ)ಭಾವ. अश्वस्य भावः "अञ्" (५-१-१२९)। (वि०) 3. ಕುದುರೆಯ ಸಂಬಂಧವಾದ. 4. ಕುದುರೆಯಿಂದ ಎಳೆಯಲ್ಪಟ್ಟ (ಗಾಡಿ ರಥ ಮೊದಲಾದುದು). अश्व "अण्" (४-२-९२)।

**आश्वत्थ ಆಶ್ವತ್ಥ** (न०) 1. ಅರಳಿಹಣ್ಣು. अश्वत्थस्य फलम् "अण्" (४-३-१६४)। (स्त्री०)—त्थी—ತ್ಥೀ. ಅಶ್ವತ್ಥ (ಅಶ್ವಿನೀ) ನಕ್ಷತ್ರದಿಂದ ಕೂಡಿದ ರಾತ್ರಿ. (वि०) 2. ಅರಳಿಮರದ ಸಂಬಂಧವಾದ. अश्वत्थस्येदम् "अण्" (४-३-१२०)। स्त्रियाम् "ङीप्" (४-१-४१)।

**आश्वत्थिक ಆಶ್ವತ್ಥಿಕ** (पु०) ಆಶ್ವಯುಜ ಮಾಸ. अश्वत्थ "ठक्" (४-२-२२)। अश्वत्थेन युक्ता पौर्णमास्यस्मिन्।

**आश्वपत ಆಶ್ವಪತ** (पु०) 1. ಅಶ್ವಪತಿಯ ಮಗ. अश्वपतेरपत्यम् "अण्" (४-१-८४)। (वि०) 2. ಅಶ್ವಪತಿಸಂಬಂಧವಾದ. अश्वपतेरिदम् "अण्" (४-३-१२०)।

**आश्वभारिक ಆಶ್ವಭಾರಿಕ** (वि०) ಕುದುರೆಯು ಹೊರುವ ವಸ್ತು ಭಾರವನ್ನು ಒಯ್ಯುವ,—ಹೊರುವ,—ತೆಗೆದುಕೊಂಡು ಬರುವ. अश्वभारं अश्ववाह्यं भारं हरति वहति आवहति वा "ठक्" (५-१-५०)।

**आश्वमेधिक ಆಶ್ವಮೇಧಿಕ** (न०) 1. ಧರ್ಮರಾಜನ ಅಶ್ವಮೇಧಯಾಗದ ವಿಷಯವನ್ನು ತಿಳಿಸುವ ಮಹಾಭಾರತದ ಒಂದು ಪರ್ವ. अश्वमेधः एव "ठक्" (५-४-३४)। (वि०) 2. ಅಶ್ವಮೇಧಯಾಗ ಸಂಬಂಧವಾದ, ಅಶ್ವಮೇಧಯಾಗಕ್ಕೆ ಬೇಕಾದ ವಸ್ತು.

**आश्वयुज ಆಶ್ವಯುಜ** (पु०) ಆಶ್ವಯುಜ ಮಾಸ. आश्वयुजी पौर्णमास्यस्मिन् "अण्" (४-२-२१)।

**आश्वयुजक ಆಶ್ವಯುಜಕ** (पु०) ಆಶ್ವಯುಜ ಮಾಸದ ಹುಣ್ಣಿಮೆಯ ದಿನ ಬಿತ್ತಿದ ಉದ್ದು. आश्वयुज्यामुप्तो माषः "वुञ्" (४-३-४५)। [ಆಶ್ವಯುಜ ಮಾಸದ ಹುಣ್ಣಿಮೆಯ ದಿನ ಬಿತ್ತಿದ ಉದ್ದು ಚೆನ್ನಾಗಿ ಬೆಳೆದು ಫಲಿಸುವುದು.]

**आश्वयुजी ಆಶ್ವಯುಜೀ** (स्त्री०) ಆಶ್ವಯುಜ ಮಾಸದ ಹುಣ್ಣಿಮೆ. अश्वयुजा अश्विनीनक्षत्रेण युक्ता पौर्णमासी "अण्" (४-२-३)।

**आश्वरथ ಆಶ್ವರಥ** (वि०) ಕುದುರೆಯ ಗಾಡಿಯ ಸಂಬಂಧವಾದ. अश्वरथस्येदम् "अञ्" (४-३-१२२)।

**आश्वलक्षणिक ಆಶ್ವಲಕ್ಷಣಿಕ** (वि०) 1. ಕುದುರೆಯ ಲಕ್ಷಣವನ್ನು ತಿಳಿದಿರುವ. 2. ಕುದುರೆಯ ಲಕ್ಷಣವನ್ನು ತಿಳಿಸುವ ಶಾಸ್ತ್ರವನ್ನು ಅಧ್ಯಯನ ಮಾಡುವ. अश्वलक्षणं वेत्ति तद्ग्रन्थमधीते वा "ठक्" (वा० ४-२-६०)।

**आश्वलायन ಆಶ್ವಲಾಯನ** (पु०) ಅಶ್ವಲ ಋಷಿಯ ಮಗ, ಋಗ್ವೇದದ ಶ್ರೌತ ಮತ್ತು ಗೃಹ್ಯ ಸೂತ್ರಗಳನ್ನು ಬರೆದ ಋಷಿ. अश्वलः कश्चन मुनिः तस्यापत्यम् "फक्" (४-१-९९)।

**आश्वास** **ಆಶ್ವಾಸ** (पुं०) 1. ರಕ್ಷಣೆಯ ಭರವಸೆ. 2. ನಿಲ್ಲುವಿಕೆ, ನಿಲುಗಡೆ, ನಿವೃತ್ತಿ. 3. ಸಮಾಧಾನ ಗೊಳ್ಳುವುದು. 4. ಗ್ರಂಥದ ಭಾಗ. 5. ಉಸಿರಾಡುವುದು. आ + श्वस (प्राणने) "घञ्" (३-३-१८, १९, १२१)।

**आश्वासक** **ಆಶ್ವಾಸಕ** (वि०) 1. ಸಮಾಧಾನಪಡಿಸುವ. 2. ಧೈರ್ಯವನ್ನುಂಟುಮಾಡುವ. आ+श्वस (प्राणने) + णिच् "ण्वुल्" (३-१-१३३)।

**आश्वासन** **ಆಶ್ವಾಸನ** (न०) 1. ಸಮಾಧಾನಗೊಳಿಸುವುದು. आ + श्वस (प्राणने) + णिच् "ल्युट्" (३-३-११५)। (वि०) 2. ಸಮಾಧಾನಗೊಳಿಸುವ. आ + श्वस + णिच् "ल्युः" (३-१-१३४)।

**आश्वासिन्** **ಆಶ್ವಾಸಿನ್** (वि०) 1. ಸಮಾಧಾನವುಳ್ಳ, ಧೈರ್ಯವುಳ್ಳ. आश्वासोऽस्यास्ति "इनिः" (५-२-११५)। "कामं प्रिया न सुलभा मनस्तु तद्भावदर्शनाश्वासि" शाकु० २-१।

**आश्वास्य** **ಆಶ್ವಾಸ್ಯ** (वि०) 1. ಸಮಾಧಾನಗೊಳಿಸಲ್ಪಡುವ. आ + श्वस (प्राणने) + णिच् "यत्" (३-१-९७)। (अव्य०) 2. ಸಮಾಧಾನಗೊಳಿಸಿ. आ + श्वस + णिच् "ल्यप्" (७-१-३७)।

**आश्विक** **ಆಶ್ವಿಕ** (वि०) 1. ಭಾರವಾಗಿರುವ ಕುದುರೆಯನ್ನು ಒಯ್ಯುವ,—ಹೊರುವ,—ತೆಗೆದುಕೊಂಡು ಬರುವ. भारभूतमश्वं हरति वहत्यावहति च "ठक्" (५-१-५०)। 2. ಅಶ್ವದ ಲಾಭವನ್ನು ಸೂಚಿಸುವ ಶುಭಶಕುನ, ಕುದುರೆಯ ಲಾಭವನ್ನು ತಿಳಿಸುವ ನಕ್ಷತ್ರಗಳ (1) ಸಂಯೋಗ (ಸಂಬಂಧ), (2) ಉತ್ಪಾತ (ಶುಭಸೂಚನೆ)ಗಳು. अश्वस्य निमित्तं संयोगः उत्पातो वा "ठञ्" (५-१-३८)।

**आश्विन** **ಆಶ್ವಿನ** (पुं०) 1. ಅಶ್ವಯುಜ ಮಾಸ. आश्विनी पौर्णमास्यस्मिन् "अण्" (४-२-२१)। (द्विव०) 2. ಅಶ್ವಿನೀಕುಮಾರರು. (वि०) 3. ಅಶ್ವಿನೀದೇವತೆಯ ಸಂಬಂಧವಾದ.

**आश्विनी** **ಆಶ್ವಿನೀ** (स्त्री०) ಅಶ್ವಯುಜ ಮಾಸದ ಹುಣ್ಣಿಮೆ. अश्विन्या युक्ता पूर्णिमा "अण्" (४-२-३)। "ङीप्" (४-१-१५)।

**आश्विनेय** **ಆಶ್ವಿನೇಯ** (पुं०द्विव०) ಅಶ್ವಿನೀ ದೇವತೆಯ ಕುಮಾರರು, ದೇವವೈದ್ಯರು. अश्विन्या अपत्ये "ढक्" (४-१-१२०)।

**आश्वीन** **ಆಶ್ವೀನ** (पुं०) ಕುದುರೆಯ ಮೇಲೆ ಒಂದು ದಿನ ಪ್ರಯಾಣಮಾಡುವಷ್ಟು ದೂರದ ಮಾರ್ಗ, ಕುದುರೆಯು ಒಂದು ದಿನ ನಡೆಯುವಷ್ಟು ದಾರಿ. अश्वस्य एकाहगमः "खञ्" (५-२-१९)।

**आषाढ** **ಆಷಾಢ** (पुं०) 1. ಆಷಾಢ ಮಾಸ. आषाढी पूर्णिमाऽस्मिन् मासे "अण्" (४-२-२१)। 2. ಪಲಾಶ ದಂಡ, ಬ್ರಹ್ಮಚಾರಿಗಳು ಹಿಡಿಯುವ ದಂಡ. आषाढी पूर्णिमा प्रयोजनमस्य "अण्" (५-१-११०)। "अथाजिनाषाढधरः प्रगल्भवाक्" कुमा० ५-३०। 3. ಮಲಯ ಪರ್ವತ. "आषाढो व्रतिनां दण्डे मासे मलयपर्वते" मेदि०।

**आषाढा** **ಆಷಾಢಾ** (स्त्री०) ಪೂರ್ವಾಷಾಢಾ ಮತ್ತು ಉತ್ತರಾಷಾಢಾ ನಕ್ಷತ್ರಗಳು.

**आषाढाभव** **ಆಷಾಢಾಭವ—भू—ಭೂ** (पुं०) ಕುಜ, ಅಂಗಾರಕ, ಮಂಗಳಗ್ರಹ. आषाढायां भवः—भू (सत्तायाम्) "अच्" (३-१-१३४)। "क्विप्" वा।

**आषाढी** **ಆಷಾಢೀ** (स्त्री०) ಆಷಾಢ ಮಾಸದ ಹುಣ್ಣಿಮೆ. आषाढया नक्षत्रेण युक्ता पौर्णमासी "अण्" (४-२-३)। "ङीप्" (४-१-१५)।

**आषाढीय** **ಆಷಾಢೀಯ** (वि०) 1. ಆಷಾಢಾ ನಕ್ಷತ್ರದಲ್ಲಿ ಹುಟ್ಟಿದ. आषाढायां जातः "छः" (४-२-११४)। 2. ಆಷಾಢಾ ನಕ್ಷತ್ರ ಸಂಬಂಧವಾದ.

**आष्ट्र** **ಆಷ್ಟ್ರ** (न०) ಆಕಾಶ, ಗಗನ. अशू (व्याप्तौ) "ष्ट्रन्" (उ० ४-१५९)।

**आस—उपवेशने** (अदा० आत्म० अक० से०)

| | | | |
|---|---|---|---|
| लट्— | आस्ते | आसाते | आसते। |
| | आस्से | आसाथे | आध्वे। |
| | आसे | आस्वहे | आस्महे। |
| लिट्— | आसाञ्चक्रे-बभूव-आस। | | |
| लुट्— | आसिता | आसितारौ | आसितारः। |
| लृट्— | आसिष्यते | आसिष्येते | आसिष्यन्ते। |
| लोट्— | आस्ताम् | आसाताम् | आसताम्। |
| | आस्व | आसाथाम् | आध्वम्। |
| | आसै | आसावहै | आसामहै। |
| लङ्— | आस्त | आसाताम् | आसत। |
| | आस्थाः | आसाथाम् | आध्वम्। |
| विधिलिङ्— | आसीत | आसीयाताम् | आसीरन्। |
| आशीर्लिङ्— | आसिषीष्ट | आसिषीयास्ताम् | आसिषीरन्। |

लुङ्— आसिष्ट आसिषाताम् आसिषत।
लृङ्— आसिष्यत आसिष्येताम् आसिष्यन्त। ಕುಳಿತುಕೊ, ಕೂಡು, ಕೂರು. "कर्मेन्द्रियाणि संयम्य य आस्ते मनसा स्मरन्" गीता ३-६। "तूष्णींभूय भयादासाञ्चक्रिरे मृगपक्षिणः" भट्टि० ५-९५। "आस्व साकं मया सौधे" भट्टि० ८-७९। "आसीत गुरुणा सार्धं शिलाफलकनौषु च" मनु० २-२०४। "युगान्तकालप्रतिसंहृतात्मनो जगन्ति यस्यां सविकासमासत" माघ० १-२३।

भावे:—आस्यते। आसे। आसिता। आसिष्यते। आस्यताम्। आस्यत। आस्येत। आसिषीष्ट। आसि। आसिष्यत। "आस्यतामिति चोक्तः सन् आसीताभिमुखं गुरोः" मनु० २-१९३।

कृत्सु:—आसितव्यम्। आसनीयम्। आस्यम्। आसीनः। आसितम्। आसितवान्। आसितुम्। आसनम्। "आसीनानां सुरभितशिलं नाभिगन्धैर्मृगाणाम्" मेघ० १-५२।

ಈ ಧಾತುವಿಗೆ ಉಪಸರ್ಗಗಳ ಯೋಗದಿಂದ ಉಂಟಾದ ಅರ್ಥಭೇದಗಳು:

(1) अधि + आस = अध्यासितम्। ಆಶ್ರಯ ಹೊಂದು, ಮೇಲೆ ಕುಳಿತುಕೊ, ಕೂರು. "धेन्वा तदध्यासितकातराक्ष्या" रघु० २-५२।

(2) अनु + आस = अन्वासितम्। ಅನಂತರ ಕುಳಿತುಕೊಳ್ಳುವುದರಿಂದ ಸೇವಿಸು. "अन्वासितमरुन्धत्या स्वाहयेव हविर्भुजम्" रघु० १-५६।

(3) अभि + आस = अभ्यासः। 1. ಎದುರಿಗೆ ಕುಳಿತುಕೊ. 2. ಆವೃತ್ತಿ, ಪುನಃ ಪುನಃ ಮಾಡು, ಮತ್ತೆ ಮತ್ತೆ ಮಾಡು. "अभ्यासेन च कौन्तेय वैराग्येण च गृह्यते" गीता ६-३५। 3. ಸಾಮೀಪ್ಯ. "व्रीडादिवाभ्यासगतैर्विलिल्ये" माघ० ३-४०।

(4) उद्+आस=उदासीनः। ಉದಾಸೀನನಾಗು. "उदासितारं निगृहीतमानसैर्गृहीतमध्यात्मदृशा कथंचन" माघ० १-३३।

(5) उप+आस=उपासनम्। उपास्य। ಉಪಾಸಿಸು, ಸೇವಿಸು. "उद्यानपालसामान्यमृतवस्तमुपासते" कुमा० २-३६।

(6) परि + उप + आस = पर्युपास्ते। ಚೆನ್ನಾಗಿ ಸೇವಿಸು. "स्थिरप्रदीपतामेत्य भुजङ्गाः पर्युपासते" कुमा० २-३८।

(7) सम्+उप+आस = समुपास्ते। "समुपास्यत पुत्रभोग्यया स्नुषयेवाविकृतेन्द्रियः श्रिया" रघु० ८-१४।

(8) सम् + आस = समासीनः। ಕುಳಿತುಕೊ, ಕೂರು. "पश्चिमां तु समासीनो मलं हन्ति दिवाकृतम्"।

**आस्** ಆಸ್ (अव्य०) ಈ ಕೆಳಗಿನ ಅರ್ಥಗಳಿಗೆ ದ್ಯೋತಕವಾಗಿರುವುದು. 1. ಕೋಪ. "आः, क एष मयि स्थिते चन्द्रमभिभवितुमिच्छति बलात्" मुद्रा० १। 2. ಅಣ್ಣೀಪಣೆ. "आः, दुरात्मन् वृथामङ्गलपाठक" वेणी० १। 3. ಸಂತಾಪ. 4. ಖೇದ, ದುಃಖ. "विद्यामातरमाः प्रदर्श्य नृपशून् भिक्षामहे निस्त्रपाः" उद्भ०। "आः सन्तापप्रकोपयोः" हेम०।

**आस** ಆಸ (पु०) 1. ಧನುಸ್ಸು, ಬಿಲ್ಲು. अस्यतेऽनेन — असु (क्षेपणे) "घञ्" (३-३-१९)। "ससासिः सासुसूः सासः" किरा० १५-५। 2. ಆಸನ, ಪೀಠ. आस (उपवेशने) अधि० "घञ्" (३-३-१२१)। 3. ಕುಳಿತುಕೊಳ್ಳುವಿಕೆ, ಕೂರುವಿಕೆ. आस भावे "घञ्" (३-३-१८)। 4. ಆಸನ, ಗುಹ್ಯಪ್ರದೇಶ, ಶರೀರದ ಕೂರುವ ಭಾಗ. आस करं० "घञ्" (३-३-१२१)। "कप्यासं पुण्डरीकमेवमक्षिणी" छान्दोग्य०।

**आसक्त** ಆಸಕ್ತ (वि०) 1. ಚೆನ್ನಾಗಿ ಅಂಟಿಕೊಂಡಿರುವ, ಸುತ್ತಲೂ ಸಂಬಂಧ ಹೊಂದಿರುವ. आ+षञ्ज (सङ्गे) "क्तः" (३-४-७२)। "आसक्तमेतदनपेक्षितहेतु चेतः" मालती० १-२६। 2. ಶ್ರದ್ಧೆಯುಳ್ಳ, ತದೇಕಧ್ಯಾನವುಳ್ಳ, ತತ್ಪರನಾದ. 3. ಕರ್ತೃತ್ವಾಭಿಮಾನವುಳ್ಳ.

**आसक्ति** ಆಸಕ್ತಿ (स्त्री०) 1. ಶ್ರದ್ಧೆ, ತತ್ಪರತೆ, ಒಂದೇ ವಿಷಯದಲ್ಲಿ ಮನಸ್ಸನ್ನಿಟ್ಟಿರುವಿಕೆ. आ+षञ्ज (सङ्गे) "क्तिन्" (३-३-९४)। 2. ಕರ್ತೃತ್ವಾಭಿಮಾನ.

**आसङ्ग** ಆಸಂಗ (पु०) 1. ಶ್ರದ್ಧೆ, ತತ್ಪರತೆ, ಕಾರ್ಯದಲ್ಲಿ ಪ್ರೀತಿ, ಏಕಾಗ್ರತೆ. 2. ಸಂಬಂಧ, ಅಂಟಿಕೊಂಡಿರುವಿಕೆ, ಸೇರಿಕೊಂಡಿರುವಿಕೆ. आ + षञ्ज (सङ्गे) "घञ्" (३-३-१८)। "पादाकृष्टव्रततिवलयासङ्गसञ्जातपाशः" शाकु० १-२९। 3. ಸಹವಾಸ, ಒಟ್ಟುಗೂಡುವಿಕೆ, ಸಂಬಂಧ ಹೊಂದುವಿಕೆ. 4. ನಾನು ಮಾಡಿದೆನೆಂಬ ಅಭಿಮಾನ, ಕರ್ತೃತ್ವಾಭಿಮಾನ. 5. ದೊರೆತ ವಸ್ತುವಿನ ರಕ್ಷಣೆಯಲ್ಲಿ ಅಭಿಲಾಷೆ. (वि०) 6. ವಿರಾಮವಿಲ್ಲದ, ಎಡೆಬಿಡದ, ಸತತ ಸಂಬಂಧವುಳ್ಳ. (अव्य०) 7. ಸತತವಾಗಿ, ವಿರಾಮವಿಲ್ಲದೆ.

**आसङ्गिन्** ಆಸಂಗಿನ್ (वि०) ಸತತವಾದ ಸಂಬಂಧವುಳ್ಳ, ನಿತ್ಯಸಂಬಂಧ ಹೊಂದಿರುವ. आसङ्गोऽस्यास्ति "इनिः" (५-२-११५)। स्त्रियाम् "ङीप्" (४-१-५)। आसङ्गिनी ಆಸಂಗಿನೀ.

**आसङ्गिनी** ಆಸಂಗಿನೀ (स्त्री०) ಸುಂಟರಗಾಳಿ, ಸುಳಿಗಾಳಿ, ಚಕ್ರವಾತ.

**आसञ्जन** ಆಸಂಜನ (नं०) 1. ಅಗಳಿ, ಕೊಂಡಿ, ಚಿಲಕ. 2. ಸಂಬಂಧ, ಸಂಪರ್ಕ. 3. ಶ್ರದ್ಧೆ, ಭಕ್ತಿ, ಕಾರ್ಯದಲ್ಲಿ ಏಕಾಗ್ರತೆ, ತತ್ಪರತೆ. 4. ಸೇರಿಸುವಿಕೆ, ಅಂಟಿಸುವಿಕೆ, ಸಂಬಂಧಪಡಿಸುವಿಕೆ. आ+षञ्ज (सङ्गे) "ल्युट्" (३-३-११५, ११७)।

**आसञ्जित** ಆಸಂಜಿತ (वि०) ಸೇರಿಸಲ್ಪಟ್ಟ, ಸಂಬಂಧಪಡಿಸಲ್ಪಟ್ಟ. आ + षञ्ज (सङ्गे) + णिच् "क्तः" (३-२-१०२)।

**आसत्ति** ಆಸತ್ತಿ (स्त्री०) 1. ಸಮೀಪ ಸಂಬಂಧ. आ+षद्लृ (विशरणगत्यवसादनेषु) "क्तिन्" (३-३-९४)। 2. ಲಾಭ, ಪ್ರಾಪ್ತಿ, ಸಂಪಾದನೆ. 3. (ತಾರ್ಕಿಕ ಮತದಲ್ಲಿ) ಶಾಬ್ದಬೋಧವುಂಟಾಗಲು ಪದಗಳನ್ನು ವಿಳಂಬ (ಕಾಲವಿಚ್ಛೇದ) ವಿಲ್ಲದೆ ಉಚ್ಚರಿಸುವುದು, ವಾಕ್ಯದಲ್ಲಿ ಉಪಯೋಗಿಸುವ ಪದಗಳನ್ನು ವ್ಯವಧಾನವಿಲ್ಲದೆ ಹೇಳುವುದು. [ವ್ಯವಧಾನವು ಕಾಲವಿಳಂಬದಿಂದಲೂ, ಅಪ್ರಕೃತ ಪದಪ್ರಯೋಗದಿಂದಲೂ ಉಂಟಾಗುವುದು. ಇಂತಹ ವ್ಯವಧಾನವಿಲ್ಲದೆ ಪದಗಳನ್ನು ಸೇರಿದಂತೆ ಉಚ್ಚರಿಸುವುದರಿಂದ ಶಾಬ್ದಬೋಧವುಂಟಾಗುವುದು.] "कारणं सन्निधानं तु पदस्यासत्तिरुच्यते" भाषाप०। "वाक्यं स्याद्योग्यताकाङ्क्षासत्तियुक्तः पदोच्चयः" सा० द० २-१। 4. ಸಂಬಂಧ, ಸೇರಿಕೆ.

**आसदन** ಆಸದನ (नं०) 1. ಲಾಭ, ಸಂಪಾದನೆ. 2. ಸಮೀಪ ಸಂಬಂಧ. आ + षद्लृ (विशरणादौ) "ल्युट्" (३-३-११५)।

**आसन** ಆಸನ (पुं०) 1. ಹೊನ್ನೆಮರ. "आसनो जीवकद्रुमे" विश्व०। (नं०) 2. ಪೀಠ, ಕುಳಿತುಕೊಳ್ಳುವ ಮಣೆ, ಕುರ್ಚಿ ಮುಂತಾದುದು. आस्यतेऽत्र—आस (उपवेशने) "ल्युट्" (३-३-११७)। "तदनुमतमलञ्चकार पश्चात्प्रशम इव श्रुतमासनं नरेन्द्रः" किरा० २-५८। "शुभासने हेममये पुरस्तात्" कुमा० १२-३२। 3. ಕುಳಿತುಕೊಳ್ಳುವಿಕೆ. आस भावे "ल्युट्" (३-३-११५)। 4. ಆನೆಯ ಹೆಗಲು. आस अधि० "ल्युट्" (३-३-११७)। 5. ರಾಜನು ಶತ್ರುವಿನೊಡನೆ ಯುದ್ಧ ಮಾಡಲು ಕಾಲವನ್ನು ನಿರೀಕ್ಷಿಸಿಕೊಂಡು ಕುಳಿತುಕೊಳ್ಳುವುದು, ರಾಜನ ಆರು ಗುಣಗಳಲ್ಲೊಂದು. ಇದು (1) विगृह्यासनम्। (2) सन्धायासनम्। (3) संभूयासनम्। (4) प्रसङ्गासनम् ಮತ್ತು (5) उपेक्ष्यासनम् ಎಂದು ಐದು ವಿಧ. (1) ಶತ್ರುವು ಮುತ್ತಿಗೆ ಹಾಕಿದ ನಂತರ ಅಶಕ್ತನಾದ ರಾಜನು ಕೋಟೆಯನ್ನು ಪ್ರವೇಶಿಸಿ ಆತ್ಮರಕ್ಷಣೆ ಮಾಡಿಕೊಂಡು ಕುಳಿತುಕೊಳ್ಳುವುದು ವಿಗೃಹ್ಯಾಸನವು. (2) ಸಮಾನ ಬಲವುಳ್ಳ ರಾಜರು ಯುದ್ಧದಲ್ಲಿ ಶಕ್ತಿಗುಂದಿ ಸಂಧಿಮಾಡಿಕೊಂಡು ಕುಳಿತುಕೊಳ್ಳುವುದು ಸಂಧಾಯಾಸನವು. (3) ಪ್ರಬಲನಾದ ಶತ್ರುವಿನೊಡನೆ ಹೋರಾಡಿ ಪರಾಜಿತನಾದ ರಾಜನು ಶತ್ರು ಅಥವಾ ಮಿತ್ರನೊಡನೆ ಸೇರಿಕೊಂಡು ಕುಳಿತುಕೊಳ್ಳುವುದು ಸಂಭೂಯಾಸನವು. (4) ಶತ್ರುವಿನೊಡನೆ ಯುದ್ಧಕ್ಕೆ ಹೊರಟು ಮಾರ್ಗಮಧ್ಯದಲ್ಲಿ ಮಿತ್ರನಿಗಾಗಿ ನಿರೀಕ್ಷಿಸಿ ಕುಳಿತುಕೊಳ್ಳುವುದು ಪ್ರಸಂಗಾಸನವು. (5) ಶತ್ರುವು ಪ್ರಬಲನಾಗಿದ್ದರೂ ಅವನು ದಿನೇ ದಿನೇ ಕ್ಷೀಣದೆಶೆ ಹೊಂದುತ್ತಿರುವುದನ್ನು ನೋಡಿ ಉಪೇಕ್ಷೆಯಿಂದ ಕುಳಿತಿರುವುದು ಉಪೇಕ್ಷ್ಯಾಸನವೆನಿಸುವುದು. 5. ದೇವರ ಪೂಜಾಕಾಲದಲ್ಲಿ ಪೂಜಾಂಗವಾಗಿ ಸಮರ್ಪಿಸುವ ಆಸನ. 6. ಎಸೆಯುವುದು. 7. ಕಾಮಶಾಸ್ತ್ರದಲ್ಲಿ ಉಕ್ತವಾದ 84 ಆಸನಗಳು. 8. ಯೋಗಶಾಸ್ತ್ರದಲ್ಲಿ ಹೇಳಿರುವ ಪದ್ಮಾಸನ, ವೀರಾಸನ, ಮಯೂರಾಸನ, ಕುಕ್ಕುಟಾಸನ ಮುಂತಾದ ಅಂಗವಿನ್ಯಾಸ.

**आसनबन्ध** ಆಸನಬಂಧ (पुं०) ಕೈಕಾಲು ಕಟ್ಟಿಕೊಂಡು ಕುಳಿತುಕೊಳ್ಳುವುದು. "स्थितः स्थितामुच्चलितः प्रयातां निषेदुषीमासनबन्धधीरः। जलाभिलाषी जलमाददानां छायेव तां भूपतिरन्वगच्छत्" रघु० २-६।

**आसना** ಆಸನಾ (स्त्री०) 1. ಇರುವಿಕೆ, ಸ್ಥಿತಿ. 2. ಕುಳಿತುಕೊಳ್ಳುವಿಕೆ. आस (उपवेशने) "युच्" (३-३-१०७)।

**आसनी** ಆಸನೀ (स्त्री०) 1. ಅಂಗಡಿ. आस्यतेऽत्र—आस (उपवेशने) "ल्युट्" (३-३-११७)। "ङीप्" (४-१-१५)। 2. ಇರುವುದು, ಸ್ಥಿತಿ. 3. ಕುಳಿತುಕೊಳ್ಳುವಿಕೆ. "आसनी विपणौ स्थित्याम्" मेदि०।

**आसन्द** ಆಸಂದ (पुं०) ವಾಸುದೇವ, ವಿಷ್ಣು. आसीदत्यस्मिन्—आ + षद्लृ (विशरणादौ) "दन्" (उ० ४-९८)। निपा०।

**आसन्दी ಆಸಂದೀ** (स्त्री०) 1. ಆಸನ, ಪೀಠ. 2. ಸಣ್ಣ ಮಂಚ, ಶಯ್ಯೆ. 3. ಸಭೆಯ ವೇದಿಕೆ, ಅಧ್ಯಕ್ಷಸ್ಥಾನ, ಎತ್ತರವಾಗಿ ನಿರ್ಮಿಸಿರುವ ಜಗುಲಿ. आ + षद्लृ (विशरणादौ) "दन्" (उ० ४-९८)। निपा०। "ङीप्" (४-१-५)। "आसन्दो वासुदेवे स्यात् खट्वाभेदे च योषिति" मेदि०।

**आसन्न ಆಸನ್ನ** (वि०) 1. ಸಮೀಪದಲ್ಲಿರುವ, ಹತ್ತಿರದಲ್ಲಿರುವ. आ + षद्लृ (विशरणादौ) "क्तः" (३-४-७२)। "उद्धूताः कठिनकुचस्थलाभिघातादासन्नां भृशमपराङ्गनामधाक्षुः" माघ० ८-४०। 2. ಹತ್ತಿರಕ್ಕೆ ಬಂದ. 3. ಪದಗಳ ಸಮೀಪ ಸಂಬಂಧ ಹೊಂದಿದ. 4. ಚೆನ್ನಾಗಿ ಇಡಲ್ಪಟ್ಟ. 5. ಮುಮೂರ್ಷು, ಮರಣಾವಸ್ಥೆಯಲ್ಲಿರುವ.

**आसम्बाध ಆಸಂಬಾಧ** (वि०) ಸುತ್ತಲೂ ತಡೆಯಲ್ಪಟ್ಟ, ಎಲ್ಲಾ ಕಡೆಯಲ್ಲಿಯೂ ಪ್ರತಿಬಂಧಿಸಲ್ಪಟ್ಟ. आसमन्तात् सम्बाधा यत्र।

**आसव ಆಸವ** (पु०) 1. ಮದ್ಯ, ಸುರೆ. आसूयते— आ + षुञ् (अभिषवे) कर्म० "अप्" (३-३-५७)। "नारिकेलासवं योधाः शात्रवं च पपुर्यशः" रघु० ४-४२। 2. ಬಟ್ಟಿ ಇಳಿಸುವಿಕೆ, ಮದ್ಯವನ್ನು ತಯಾರಿಸುವುದು. आ + षुञ् भावे "अप्"। 3. ಬಟ್ಟಿ ಇಳಿಸುವ ಪಾತ್ರೆ. आसूयतेऽत्र — आ + षुञ् अधि० "अप्" (३-३-५७)।

**आसादन ಆಸಾದನ** (न०) 1. ಸಮೀಪಕ್ಕೆ ತರುವುದು. 2. ಕೆಳಗೆ ಇಡುವುದು. 3. ಹೊಂದುವುದು, ಪಡೆಯುವುದು. आ + षद्लृ (विशरणादौ) + णिच् "ल्युट्" (३-३-११५)।

**आसादित ಆಸಾದಿತ** (वि०) 1. ಹೊಂದಲ್ಪಟ್ಟ, ಪಡೆಯಲ್ಪಟ್ಟ. आ + षद्लृ (विशरणादौ) + णिच् "क्तः" (३-२-१०२)। "उपाससादोपजनं जनप्रियः प्रियामिवासादितयौवनां भुवम्" किरा० ४-१। 2. ಹಿಡಿಯಲ್ಪಟ್ಟ, ಆಕ್ರಮಿಸಲ್ಪಟ್ಟ. 3. ಸಮೀಪಕ್ಕೆ ತರಲ್ಪಟ್ಟ. 4. ಸೇರಲ್ಪಟ್ಟ, ತಲುಪಲ್ಪಟ್ಟ.

**आसाद्य ಆಸಾದ್ಯ** (वि०) 1. ಹೊಂದಲ್ಪಡುವ, ಹೊಂದಲು ಯೋಗ್ಯವಾದ. आ+षद्लृ (विशरणादौ) + णिच् "यत्" (३-१-९७)। "न ह्यीष्टमस्य त्रिदिवेऽपि भूपतेरभूदनासाद्यमधिज्यधन्वनः" रघु० ३-६। 2. ಸಮೀಪಕ್ಕೆ ತರಲ್ಪಡುವ. (अव्य०) 3. ಹೊಂದಿ, ಪಡೆದು. आ + षद्लृ (विशरणादौ) + णिच् "ल्यप्" (७-१-३७)। "आसाद्य वाचं स भृशं दिदीपे" किरा० ३-५५।

**आसार ಆಸಾರ** (पु०) 1. ವೇಗವಾದ ಮಳೆ. 2. ನೀರಿನ ಧಾರೆ, ಎಡೆಬಿಡದೆ ನೀರು ಸುರಿಯುವಿಕೆ. आ + सृ (गतौ) "घञ्" (३-३-१८)। "आसारसिक्तक्षितिबाष्पयोगान्मामक्षिणोद्यत्र विभिन्नकोशैः" रघु० १३-२९। "हृताहृतासारकणेन वायुना" किरा० ४-३५। 3. ಹರಡಿಕೊಳ್ಳುವುದು, ಸುತ್ತಲೂ ವ್ಯಾಪಿಸುವುದು. 4. ಸೈನ್ಯವು ಎಲ್ಲಾ ಕಡೆಯಲ್ಲೂ ಹರಡಿಕೊಳ್ಳುವುದು. 5. ಮಿತ್ರ ಸೈನ್ಯ. "स्यादासारः प्रसरणे वेगवृष्टौ सुहृद्बले" मेदि०। 6. ದ್ವಾದಶರಾಜರ ಪೈಕಿ ಒಬ್ಬ.

**आसिक ಆಸಿಕ** (वि०) ಕತ್ತಿಯಿಂದ ಯುದ್ಧಮಾಡುವವನು, ಕತ್ತಿಯೇ ಆಯುಧವಾಗಿ ಉಳ್ಳವನು. असिः प्रहरणमस्य "ठक्" (४-४-५७)।

**आसिका ಆಸಿಕಾ** (स्त्री०) 1. ಕುಳಿತುಕೊಳ್ಳುವಿಕೆ. आस (उपवेशने) "ण्वुच्" (३-३-१११)। "दुरीश्वरद्वारबहिर्वितर्दिकादुरासिकायै रचितोऽयमञ्जलिः" वै० पं०। 2. ಕ್ರಮದಿಂದ ಕುಳಿತುಕೊಳ್ಳುವುದು, ಸರದಿಯಿಂದ ಕುಳಿತುಕೊಳ್ಳುವುದು.

**आसिक्त ಆಸಿಕ್ತ** (वि०) 1. ಚೆನ್ನಾಗಿ ಸಿಂಪಿಸಲ್ಪಟ್ಟ, ಚಿಮುಕಿಸಲ್ಪಟ್ಟ. 2. ಸ್ವಲ್ಪ ಸಿಂಪಿಸಲ್ಪಟ್ಟ. आ+ षिच (क्षरणे) "क्तः" (३-२-१०२)।

**आसिधार ಆಸಿಧಾರ** (न०) ಅಸಿಧಾರೆಯ (ಕತ್ತಿಯ ಅಲುಗಿನ) ಮೇಲೆ ನಿಲ್ಲುವುದಕ್ಕೆ ಸಮಾನವಾದ ವ್ರತ. असिधारेव "अण्" (५-३-१०७)। ಭೋಗಸಾಮಗ್ರಿಯು ಸಂಪೂರ್ಣವಾಗಿ ಸನ್ನಿಹಿತವಾಗಿದ್ದರೂ ಅದರಲ್ಲಿ ಆಸೆಯನ್ನು ತೊರೆದು ದೃಢ ನಿಶ್ಚಯದಿಂದ ಅದನ್ನು ಅನುಭವಿಸದಿರುವಿಕೆಯು ಅಸಿಧಾರಾವ್ರತಕ್ಕೆ ಸಮಾನವಾದುದು. "युवा युवत्या सार्धं यत् मुग्धभर्तृवदाचरेत्। अन्तर्निवृत्तसङ्गः स्यादासिधारमिदं हि तत्"। "इयन्ति वर्षाणि तया सहोग्रमभ्यस्यतीव व्रतमासिधारम्" रघु० १३-६७।

**आसिद्ध ಆಸಿದ್ಧ** (वि०) ಪ್ರತಿವಾದಿ, ವಾದಿಯಿಂದ ತಡೆಯಲ್ಪಟ್ಟವನು, ನ್ಯಾಯಾಧೀಶನ ಅಪ್ಪಣೆಯಂತೆ ವಾದಿಯಿಂದ ಸೆರೆ ಹಿಡಿಯಲ್ಪಟ್ಟವನು. आ+षिध (गत्याम्) "क्तः" (३-२-१०२)। "नासिद्धस्तं विलङ्घयेत्" नारदः।

**आसीन** ಆಸೀನ (वि०) ಕುಳಿತಿರುವ. आस (उपवेशने) "शानच्" (३-२-१२४)। ईत् (७-२-८३)। "आसीना तटभुवि सस्मितेन भर्त्रा रम्भोरूरवतरितुं सरस्यनिच्छुः" माघ० ८-१९।

**आसुत्** ಆಸುತ್ (वि०) ಮದ್ಯವನ್ನು ಇಳಿಸುವ, ರಸವನ್ನು ಹಿಂಡುವವನು. आसुनोति—आ + षुञ् (अभिषवे) "क्विप्" (३-२-७६)।

**आसुति** ಆಸುತಿ (स्त्री०) 1. ಸೋಮಲತೆಯನ್ನು ಹಿಂಡಿ ರಸ ತೆಗೆಯುವಿಕೆ. 2. ಭಟ್ಟಿ ಇಳಿಸುವಿಕೆ, ಮದ್ಯವನ್ನು ತಯಾರಿಸುವಿಕೆ. आ+षुञ् (अभिषवे) "क्तिन्" (३-३-९४)। 3. ಪ್ರಸವ, ಹೆರಿಗೆ, ಹಡೆಯುವುದು. आ + षु (प्रसवे) "क्तिन्" (३-३-९४)।

**आसुतीवल** ಆಸುತೀವಲ (पु०) 1. ಯಾಜ್ಞಿಕ, ಸೋಮಲತೆಯನ್ನು ಹಿಂಡಿ ರಸ ತೆಗೆಯುವವನು. 2. ಮದ್ಯವನ್ನು ತಯಾರಿಸುವವನು, ಭಟ್ಟಿ ಇಳಿಸುವವನು. आसुतिरस्यास्ति "वलच्" (५-२-११२)।

**आसुर** ಆಸುರ (पु०) 1. ಅಸುರಧರ್ಮದಿಂದ ಮಾಡುವ ವಿವಾಹ, ಎಂಟು ವಿಧ ವಿವಾಹಗಳಲ್ಲೊಂದು. ಕನ್ಯೆಯ ಬಂಧುಗಳಿಗೂ ಕನ್ಯೆಗೂ ಧನವನ್ನು ಕೊಟ್ಟು ಇಷ್ಟ ಬಂದಂತೆ ಮಾಡಿಕೊಳ್ಳುವ ವಿವಾಹವು ಆಸುರವು. "ज्ञातिभ्यो द्रविणं दत्वा कन्यायै चैव शक्तितः। कन्याप्रदानं स्वाच्छन्द्यादासुरो धर्म उच्यते" मनु० ३-३१। "पैशाचश्चासुरश्चैव न कर्तव्यौ कदाचन" मनु० ३-२५। 2. ರಾಕ್ಷಸ. (वि०) 3. ಅಸುರ ಸಂಬಂಧವಾದ. असुरस्येदम् "अण्" (४-३-१२०)। "आसुरे लोकवित्रासविधायिनि महाहवे" किरा० १५-२८। 3. ಅಸುರರಂತೆ ಭಯಂಕರ ಕೃತ್ಯವುಳ್ಳ. "द्वौ भूतसर्गौ लोकेऽस्मिन् दैव आसुर एव च। दैवो विस्तरशः प्रोक्त आसुरं पार्थ मे शृणु। प्रवृत्तिं च निवृत्तिं च जना न विदुरासुराः। न शौचं नापि चाचारो न सत्यं तेषु विद्यते। असत्यमप्रतिष्ठं ते जगदाहुरनीश्वरम्।····।" "ईहन्ते कामभोगार्थमन्यायेनार्थसञ्चयान्। असौ मया हतः शत्रुः हनिष्ये चापरानपि। ईश्वरोऽहमहं भोगी सिद्धोऽहं बलवान् सुखी। आढ्योऽभिजनवानस्मि कोऽन्योऽस्ति सदृशो मया। यक्ष्ये दास्यामि मोदिष्य इत्यज्ञानविमोहिताः" गीता १६-६-१५। (स्त्री०) -री-ರೀ. 1. ಆಸುರೀ ಸಂಪತ್ತು, ದುರ್ಗತಿಯನ್ನು ಹೊಂದಲು ಅರ್ಹವಾದ ಸ್ವಭಾವ; ಬೂಟಾಟಿಕೆ, ಜಂಬ, ತನ್ನ ಸ್ವರೂಪಕ್ಕೂ ಹೆಚ್ಚಾದ ಅಭಿಮಾನ, ಕಾಠಿನ್ಯ, ಕೃತ್ಯಾಕೃತ್ಯ ವಿವೇಕ ವಿಲ್ಲದಿರುವಿಕೆ ಇವು ಆಸುರೀ ಸಂಪತ್ತುಗಳು. "दम्भो दर्पोऽभिमानश्च क्रोधः पारुष्यमेव च। अज्ञानं चाभिजातस्य पार्थ संपदमासुरीम्" गीता १६-४। 2. ಶಸ್ತ್ರ ಚಿಕಿತ್ಸೆ. 3. ಕರಿ ಸಾಸುವೆ, ರಾಜಸಾಸುವೆ.

**आसुरस्व** ಆಸುರಸ್ವ (न०) ಯಜ್ಞಯಾಗಾದಿಗಳನ್ನು ಮಾಡದಿರುವವನ ಧನ. आसुरस्य स्वम्। "अयज्वनां तु यद्द्रव्यमासुरस्वं तदुच्यते" मनु० ११-२०।

**आसेक** ಆಸೇಕ (पु०) ನೀರನ್ನು ಚಿಮುಕಿಸುವುದು, ನೀರು ಹುಯ್ಯುವುದು. आ+षिच (क्षरणे) "घञ्" (३-३-१८)। "शीतार्ति बलवदुपेयुषेव नीरैरासेकाच्छिशिरसमीरकम्पितेन" माघ० ८-६२।

**आसेचन** ಆಸೇಚನ (वि०) 1. ಎಷ್ಟು ನೋಡಿದರೂ ಮನಸ್ಸನ್ನು ತೃಪ್ತಿಪಡಿಸದ ವಸ್ತು. सिच्यते मनोऽत्र—षिच (क्षरणे) "ल्युट्" (३-३-११७)। न सेचनम्। स्वार्थे "अण्" (५-४-३८)। 2. ಚಿಮುಕಿಸುವುದು, ಸಿಂಪಿಸುವುದು. भावे "ल्युट्" (३-३-११५)। 3. ನೀರನ್ನು ಚಿಮುಕಿಸುವ ಪಾತ್ರೆ. करः "ल्युट्" (३-३-११७)। स्त्रियाम् "ङीप्" (४-१-१५)। -सेचनी- ಸೇಚನೀ.

**आसेचनक** ಆಸೇಚನಕ (वि०) ಎಷ್ಟು ನೋಡಿದರೂ ತೃಪ್ತಿಯುಂಟುಮಾಡದ ವಸ್ತು. सिच्यते मनोऽत्र "ल्युट्" (३-३-११७)। न सेचनम्। स्वार्थे "अण्" (५-४-३८)। संज्ञायां "कन्" (५-३-७५)। "आत्तदेहमिव स्वर्गमासेचनकदर्शनम्" याद० १६-३।

**आसेदिवस्** ಆಸೇದಿವಸ್ (वि०) 1. ಹೊಂದಿರುವ, ಪಡೆದಿರುವ. आ + षद्लृ (विशरणादौ) "क्वसुः" (३-२-१०८)। 2. ಸಮೀಪಕ್ಕೆ ಬಂದಿರುವ, ಹತ್ತಿರದಲ್ಲಿರುವ. "आसेदुषां गोत्रभिदोऽनुवृत्त्या गोपायकानां भुवनत्रयस्य" किरा० १८-१८। स्त्रियाम् "ङीप्" (४-१-६)। आसेदुषी ಆಸೇದುಷೀ. "आसेदुषीं सादितशत्रुपक्षां बालामबालेन्दुमुखीं बभाषे" रघु० ६-५३।

**आसेद्धृ** ಆಸೇದ್ಧೃ (वि०) ನ್ಯಾಯಾಸ್ಥಾನದ ಅಪ್ಪಣೆಯಂತೆ ಪ್ರತಿವಾದಿಯನ್ನು ತಡೆದು ನಿಲ್ಲಿಸುವವನು. आ+षिध (गत्याम्) "तृच्" (३-१-१३३)।

**आसेध** ಆಸೇಧ (पु०) ಪ್ರತಿವಾದಿಯನ್ನು ತಡೆದು ನಿಲ್ಲಿಸುವಿಕೆ; ಅಡ್ಡಿಪಡಿಸುವಿಕೆ. आ + षिध (गत्याम्) भावे "घञ्" (३-३-१८)।

आसेवन ಆಸೇವನ (ನಂ) 1. ನಿರಂತರವಾದ ಸೇವೆ, ಶ್ರದ್ಧೆಯಿಂದ ಮಾಡುವ ಸೇವೆ. आ+षेवृ (सेवायाम्) "ल्युट्" (३-३-११५)। 2. ಪೌನಃಪುನ್ಯ, ಪುನರಾವೃತ್ತಿ, ಮತ್ತೆ ಮತ್ತೆ ಸಂಭವಿಸುವಿಕೆ. "निसस्तपतावनासेवने" (८-३-१०२)। आसेवनं पौनःपुन्यम् सि० कौ०।

आसेवा ಆಸೇವಾ (स्त्री०) "आसेवन" ಪದದ ಅರ್ಥ. आ + षेवृ (सेवायाम्) "अङ्" (३-३-१०६)। "आयुक्तकुशलाभ्यामासेवायाम्" तात्पर्यर्थे सि० कौ० (२-३-४०)।

आसेवित ಆಸೇವಿತ (वि०) 1. ಚೆನ್ನಾಗಿ ಸೇವಿಸಲ್ಪಟ್ಟ. 2. ಪುನಃ ಪುನಃ ಮಾಡಲ್ಪಟ್ಟ, ಮತ್ತೆ ಮತ್ತೆ ಸೇವಿಸಲ್ಪಟ್ಟ. आ+षेवृ (सेवायाम्) "क्तः" (३-२-१०२)।

आसेवितिन् ಆಸೇವಿತಿನ್ (वि०) 1. ಚೆನ್ನಾಗಿ ಸೇವಿಸುವ. 2. ಮತ್ತೆ ಮತ್ತೆ ಸೇವಿಸುವ. आसेवितमनेन "इनिः" (५-२-८८)। स्त्रियाम् "ङीप्" (४-१-५)। –सेवितिनी –ಸೇವಿತಿನೀ.

आस्कन्द ಆಸ್ಕಂದ (पु०) 1. ಮೇಲಕ್ಕೆ ಹಾರುವುದು. 2. ಮುತ್ತಿಗೆ, ಆಕ್ರಮಣ. आ + स्कन्दिर् (गतिशोषणयोः) "घञ्" (३-३-१८)। 3. ತಿರಸ್ಕಾರ, ಅವಮಾನ. 4. ಒಣಗುವುದು. 5. ಕುದುರೆಯ ಒಂದು ವಿಧ ನಾಗಾಲೋಟ.

आस्कन्दन ಆಸ್ಕಂದನ (नं०) 1. ಯುದ್ಧ, ಕದನ. आ + स्कन्दिर् (गतिशोषणयोः) अधि० "ल्युट्" (३-३-११७)। 2. ತಿರಸ್ಕಾರ. 3. ಒಣಗಿಸುವುದು. भावे "ल्युट्" (३-३-११५)। 4. ಆಕ್ರಮಣ. "विचकर्ष च संहितेषुरुच्चैश्चरणास्कन्दननामिताचलेन्द्रः" किरा० १३-१८। "आस्कन्दनं तिरस्कारे रणे संशोषणेऽपि च" मेदि०।

आस्कन्दित ಆಸ್ಕಂದಿತ (नं०) 1. ಕುದುರೆಯ ಒಂದು ವಿಧ ನಾಗಾಲೋಟ. आ+स्कन्दिर् (गतिशोषणयोः)+णिच् "क्तः" (३-३-११४)। (वि०) 2. ಆಕ್ರಮಿಸಲ್ಪಟ್ಟ, ಮುತ್ತಿಗೆ ಹಾಕಲ್ಪಟ್ಟ. 3. ಒಣಗಿಸಲ್ಪಟ್ಟ. 4. ಅವಮಾನಗೊಳಿಸಲ್ಪಟ್ಟ.

आस्कन्दिन् ಆಸ್ಕಂದಿನ್ (वि०) ಆಕ್ರಮಣ ಮಾಡುವ, ಮುತ್ತಿಗೆ ಹಾಕುವ, ಮೇಲೆ ಬೀಳುವ. आ+स्कन्दिर् (गतिशोषणयोः) "णिनिः" (३-२-७८)। "न हि सिंहो गजास्कन्दी भयाद्गिरिगुहाशयः" रघु० १७-५२।

आस्तर ಆಸ್ತರ (पु०) 1. ಆನೆಯ ಬೆನ್ನಿನ ಮೇಲೆ ಹೊದಿಸುವ ರತ್ನಗಂಬಳಿ, ಕವುದಿ, ದುಪ್ಪಟ. आ+स्तृञ् (आच्छादने) कर्म० "अप्" (३-३-५७)। 2. ರತ್ನಗಂಬಳಿ. 3. ಚಾಪೆ, ಮಂದಲಿಗೆ. 4. ಹರಡುವಿಕೆ. भावे "अप्" (३-३-५७)।

आस्तरण ಆಸ್ತರಣ (नं०) 1. ಚಾಪೆ, ಮಂದಲಿಗೆ. 2. ರತ್ನಗಂಬಳಿ. 3. ಹಾಸಿಗೆ. आस्तीर्यते–आ + स्तृञ् (आच्छादने) "ल्युट्" (३-३-११३)। "तमालपत्रास्तरणासु रन्तुं प्रसीद शश्वन्मलयस्थलीषु" रघु० ६-६४। 4. ಹರಡುವಿಕೆ, ಪಸರಿಸುವಿಕೆ, ಹರವುವುದು, ಹಾಸುವುದು. भावे "ल्युट्" (३-३-११५)। (वि०) 5. ಚಾಪೆ ಮುಂತಾದುವುಗಳ ಮೇಲೆ ಕೊಡಲ್ಪಡುವ. 6. ಚಾಪೆ ಮುಂತಾದುವುಗಳ ಮೇಲೆ ಮಾಡಲ್ಪಡುವ. आस्तरणे दीयते कार्यं वा "अण्" (५-१-९७)। 7. ಯಾಗದಲ್ಲಿ ದರ್ಭೆಯನ್ನು ಸಾಲಾಗಿ ಹರಡುವವನು. आ + स्तृञ् कर्त० "ल्युः" (३-१-१३४)।

आस्तरणिक ಆಸ್ತರಣಿಕ (वि०) ಹಾಸುವುದಕ್ಕೆ ಉಪಯೋಗವಾದ (ಬಟ್ಟೆ ಮೊದಲಾದುದು). आस्तरणं प्रयोजनमस्य "ठञ्" (५-१-१०९)।

आस्तार ಆಸ್ತಾರ (पु०) ಹರಡುವುದು, ಹರವುವುದು, ಹಾಸುವುದು. आस्तीर्यते–आ + स्तृञ् (आच्छादने) भावे "घञ्" (३-३-१८)।

आस्ताव ಆಸ್ತಾವ (पु०) 1. ಯಾಗ, ಯಜ್ಞ. 2. ಯಾಗದಲ್ಲಿ ಮಂತ್ರವನ್ನು ಪಠಿಸುವ ಪ್ರದೇಶ. आस्तुवन्त्यत्र–आ+ष्टुञ् (स्तुतौ) "घञ्" (३-३-१२१)। 3. ಮಂತ್ರಗಳ ಪಠನ, ಸ್ತುತಿ, ಹೊಗಳಿಕೆ. भावे "घञ्" (३-३-१८)।

आस्तिक ಆಸ್ತಿಕ (पु०) 1. ಜರತ್ಕಾರು ಮುನಿಯ ಮಗ ಆಸ್ತಿಕ ಋಷಿ. [ವಿವರಕ್ಕೆ "जरत्कारु" ಪದದಲ್ಲಿ ನೋಡಿ.] (वि०) 2. ದೇವರು ಪರಲೋಕ ಶಾಸ್ತ್ರಗಳು ಇವುಗಳಲ್ಲಿ ನಂಬಿಕೆಯುಳ್ಳವನು. अस्ति परलोक इति मतिर्यस्य "ठक्" (४-४-६०)।

आस्तिक्य ಆಸ್ತಿಕ್ಯ (नं०) ದೇವರಲ್ಲಿ ವಿಶ್ವಾಸ, ಶಾಸ್ತ್ರಗಳಲ್ಲಿ ನಂಬಿಕೆ, ಪರಲೋಕವುಂಟೆಂದು ಒಪ್ಪುವಿಕೆ. आस्तिकस्य भावः "ष्यञ्" (५-१-१२४)। "आस्तिक्यशुद्धमवतः प्रियधर्म धर्मं धर्मात्मजस्य विहितागसि शत्रुवर्गे" किरा० १८-४३।

**आस्तीर्ण** ಆಸ್ತೀರ್ಣ (वि०) ಹರಡಲ್ಪಟ್ಟ, ಹರವಲ್ಪಟ್ಟ. आ + स्तृञ् (आच्छादने) "क्तः" (३-२-१०२)। "आस्तीर्णतल्परचितावसथः क्षणेन वेश्याजनः कृतनवप्रतिकर्मकाम्यः" माघ० ५-२७।

**आस्तृत** ಆಸ್ತೃತ (वि०) ಹರಡಲ್ಪಟ್ಟ, ಹರವಲ್ಪಟ್ಟ. आ + स्तृञ् (आच्छादने) "क्तः" (३-२-१०२)। "आस्तृतेऽभिनवपल्लवपुष्पैरप्यनारतरताभिरताभ्यः" माघ० १०-८१।

**आस्था** ಆಸ್ಥಾ (स्त्री०) 1. ಅಪೇಕ್ಷೆ, ಅಭಿಲಾಷೆ. आ + ष्ठा (गतिनिवृत्तौ) "अङ्" (३-३-१०६)। 2. ಆದರ, ಗೌರವ, ಮರ್ಯಾದೆ. "दैवात्सर्गादिवध्यत्वं मर्त्येष्वास्थापराङ्मुखः" रघु० १०-४३। "अनास्था बाह्यवस्तुषु" कुमा० ६-६३। 3. ಯತ್ನ, ಪ್ರಯತ್ನ. "आस्थामालम्ब्य नीतेषु वशं क्षुद्रेष्वरातिषु" किरा० १५-४। 4. ಅನುರಾಗ, ಪ್ರೀತಿ. 5. ಸಭೆ, ಆಸ್ಥಾನ. 6. ಆಲಂಬನ, ಆಧಾರ, ಆಶ್ರಯ. "आस्थानी यत्नयोरास्था" अम०। "आस्थात्वालम्बनास्थानयत्नापेक्षासु योषिति" मेदि०। 7. ಸ್ಥಿತಿ, ಅವಸ್ಥೆ, ಇರುವಿಕೆ.

**आस्थान** ಆಸ್ಥಾನ (न०) 1. ಸಭೆ. आस्थीयतेऽत्र— आ+ष्ठा (गतिनिवृत्तौ) अधि० "ल्युट्" (३-३-११७) "अनेकराजन्यरथाश्वसंकुलं तदीयमास्थाननिकेतनाजिरम्" किरा० १-१६। 2. ವಿಶ್ರಾಂತಿ ಸ್ಥಾನ, ವಿನೋದಸ್ಥಳ. 3. ಶ್ರದ್ಧೆ, ಆಸಕ್ತಿ. 4. ಆಸ್ಥೆ, ಅಪೇಕ್ಷೆ. आ + ष्ठा भावे "ल्युट्" (३-३-११५)।

**आस्थानी** ಆಸ್ಥಾನೀ (स्त्री०) ಸಭೆ. आतिष्ठन्त्यस्याम्— आ + ष्ठा (गतिनिवृत्तौ) "ल्युट्" (३-३-११७)। "ङीप्" (४-१-१५)।

**आस्थापन** ಆಸ್ಥಾಪನ (न०) 1. ಸರಿಯಾಗಿ ಇಡುವಿಕೆ, ಚೆನ್ನಾಗಿ ಇರಿಸುವಿಕೆ. आ + ष्ठा (गतिनिवृत्तौ) + णिच् "ल्युट्" (३-३-११५)। 2. ಬಸ್ತಿಕ್ರಿಯೆ, ಪಿಚಕಾರಿ ಹೊಡೆಯುವುದು, ದೇಹದೊಳಗಿನ ಶುದ್ಧಿಗಾಗಿ ಮಾಡುವ ಒಂದು ವಿಧ ಚಿಕಿತ್ಸೆ.

**आस्थापित** ಆಸ್ಥಾಪಿತ (वि०) ಚೆನ್ನಾಗಿ ಇಡಲ್ಪಟ್ಟ. आ+ष्ठा (गतिनिवृत्तौ) +णिच "क्तः" (३-२-१०२)।

**आस्थित** ಆಸ್ಥಿತ (वि०) 1. ಹೊಂದಲ್ಪಟ್ಟ. आ + ष्ठा (गतिनिवृत्तौ) "क्तः" (३-२-१०२)। "उपतस्थुरास्थितविषादधियः" किरा० ६-२९। 2. ಆಶ್ರಯಿಸಲ್ಪಟ್ಟ, ಹಿಡಿಯಲ್ಪಟ್ಟ. "इवगणिवागुरिकैः प्रथमास्थितं व्यपगतानलदस्यु विवेश सः" रघु० ९-५३। 3. ವ್ಯಾಪ್ತವಾದ, ಆವರಿಸಲ್ಪಟ್ಟ. "आस्थितः स्थगितवारिदपङ्क्त्या सन्ध्यया गगनपश्चिमभागः" किरा० ९-९। 4. ಹತ್ತಿದ, ಏರಿದ. "स्निग्धगम्भीरनिर्घोषमेकं स्यन्दनमास्थितौ" रघु० १-३६। 5. ಹೊಂದಿದ, ಪಡೆದ. "उपायमस्थितस्यापि नश्यन्त्यर्थाः प्रमाद्यतः" माघ० २-८०। (न०) 6. ಸ್ಥಿತಿ, ಇರುವಿಕೆ. आ+ष्ठा भावे "क्तः"।

**आस्थिति** ಆಸ್ಥಿತಿ (स्त्री०) 1. ಸ್ಥಿತಿ, ಇರುವಿಕೆ. 2. ಆಸ್ಥೆ, ಅಪೇಕ್ಷೆ. आ + ष्ठा (गतिनिवृत्तौ) "क्तिन्" (३-३-९४)।

**आस्पद** ಆಸ್ಪದ (न०) 1. ಸ್ಥಾನ, ಎಡೆ, ಜಾಗ. आपद्यतेऽत्र— "आस्पदं प्रतिष्ठायाम्" (६-१-१४६)। इति साधुः। "नतभ्रुवो मण्डयति स्म विग्रहे बलिक्रिया चातिलकं तदास्पदम्" किरा० ८-५२। 2. ವಾಸಸ್ಥಳ, ನಿವಾಸ. "आस्पदं त्वमसि सर्वसंपदाम्" किरा० १३-३९। 3. ಆಶ್ರಯ, ಅವಲಂಬನ, ಆಧಾರ. 4. ವೃತ್ತಿ, ಉದ್ಯೋಗ, ವ್ಯಾಪಾರ, ಕೆಲಸ. 5. ಪ್ರತಿಷ್ಠೆ, ಗೌರವ. "लब्धास्पदोऽस्मीति विवादभीरोस्तितिक्षमाणस्य परेण निन्दाम्" माल० १-१७। 6. ವಿಷಯ. "उक्तानुक्तास्पदाद्यात्र सिद्धासिद्धास्पदे परे" चन्द्रा०। 7. ಲಗ್ನದಿಂದ 10ನೆಯ ಸ್ಥಾನ.

**आस्फाल** ಆಸ್ಫಾಲ (पु०) 1. ಅಲುಗಾಡಿಸುವಿಕೆ. 2. ಆನೆಯು ಕಿವಿಯನ್ನಾಡಿಸುವಿಕೆ. आ + स्फुल (सञ्चलने) "घञ्" (३-३-१८)। आत्वम् (६-१-४७)।

**आस्फालन** ಆಸ್ಫಾಲನ (न०) 1. ಹೊಡೆಯುವಿಕೆ, ತಟ್ಟುವಿಕೆ. आ+स्फुल (सञ्चलने) +णिच् "ल्युट्" (३-३-११५)। "ऐरावतास्फालनकर्कशेन हस्तेन पस्पर्श तदङ्गमिन्द्रः" कुमा० ३-२२। "अनवरतधनुर्ज्यास्फालनक्रूरपूर्वम्" शाकु० २-४। 2. ಅಲುಗಾಡಿಸುವಿಕೆ, ಚಲಿಸುವಂತೆ ಮಾಡುವುದು. 3. ದರ್ಪ, ಗರ್ವ, ಅಹಂಕಾರ.

**आस्फालित** ಆಸ್ಫಾಲಿತ (वि०) 1. ಹೊಡೆಯಲ್ಪಟ್ಟ 2. ಚಲಿಸುವಂತೆ ಮಾಡಲ್ಪಟ್ಟ. आ+स्फुल (सञ्चलने + णिच् "क्तः" (३-२-१०२)। "अजस्रमास्फालित वल्लकीगुणक्षतोज्ज्वलाङ्गुष्ठनखांशुभिन्नया" माघ १-९।

आस्फोट ಆಸ್ಫೋಟ (पु०) 1. ಎಕ್ಕದ ಗಿಡ. 2. ವೀರ ಪುರುಷರು ತೋಳು ತಟ್ಟುವ ಶಬ್ದ. 3. ಹೊಡೆತ ಏಟು ತಿಕ್ಕಾಟ ಇವುಗಳಿಂದ ಆಗುವ ಶಬ್ದ. आ+स्फुट (विकसने) "घञ्" (३-३-१८)।

आस्फोटन ಆಸ್ಫೋಟನ (न०) 1. ಭುಜಗಳನ್ನು ತಟ್ಟಿ ಶಬ್ದಮಾಡುವಿಕೆ. 2. ಅಲುಗಾಡಿಸುವಿಕೆ. 3. ಹೊಡೆಯುವುದು, ತಟ್ಟುವುದು. 4. (ಮೊರದಿಂದ) ಧಾನ್ಯವನ್ನು ಒನೆಯುವುದು, ಕೇರುವುದು, ತೂರುವುದು. 5. ಪ್ರಕಾಶಪಡಿಸುವುದು, ವ್ಯಕ್ತೀಕರಿಸುವಿಕೆ, ಸ್ಪಷ್ಟಪಡಿಸುವಿಕೆ. 6. ಒಡೆಯುವಿಕೆ, ಸಿಡಿಯುವಿಕೆ. आ+स्फुटिर् (विशरणे) भावे "ल्युट्" (३-३-११५)।

आस्फोटनी ಆಸ್ಫೋಟನೀ (स्त्री०) ಬೈರಿಗೆ, ಮರಕ್ಕೆ ರಂಧ್ರಮಾಡುವ ಸಾಧನ, ತೂತು ಕೊರೆಯುವ ಹಿಡಿಸರಳು. आस्फोटयतेऽनया—आ + स्फुट (भेदने) + णिच् "ल्युट्" (३-३-११७)। "ङीप्" (४-१-१५)।

आस्फोटित ಆಸ್ಫೋಟಿತ (न०) 1. ಪ್ರಕಾಶಪಡಿಸಿಕೊಳ್ಳುವುದು, ಕಾಣಿಸಿಕೊಳ್ಳುವುದು. 2. ತೋಳುಗಳನ್ನು ಅಪ್ಪಳಿಸುವುದು. आ + स्फुट (भेदने) + णिच् भावे "क्तः"। (वि०) 3. ಕೊರೆಯಲ್ಪಟ್ಟ, ಭೇದಿಸಲ್ಪಟ್ಟ, ರಂಧ್ರ ಕೊರೆಯಲ್ಪಟ್ಟ. आ + स्फुट कर्म० "क्तः" (३-२-१०२)।

आस्फोत ಆಸ್ಫೋತ (पु०) 1. ಎಕ್ಕದ ಗಿಡ. 2. ಕೆಂಗಾಂಚಾಳದ ಗಿಡ. 3. ಮುತ್ತುಗದ ಮರ. (स्त्री०) —ता—ತಾ. 1. ವಿಷ್ಣುಕ್ರಾಂತಿ ಗಿಡ. 2. ಸೊಗದೆ ಗಿಡ. 3. ಕಾಡು ಮಲ್ಲಿಗೆ ಗಿಡ.

आस्माक ಆಸ್ಮಾಕ (वि०) ನಮ್ಮ ಸಂಬಂಧವಾದ. अस्माकमिदम्—अस्मद् "अण्" (४-३-१२०)। अस्माकादेशः (४-३-२)। "आस्माकदन्तिसान्निध्याद्वामनीभूतभूरुहः" माघ० २-६३। स्त्रियाम् "ङीप्"। आस्माकी ಆಸ್ಮಾಕೀ. "आस्माकी युवतिदृशामसौ तनोति च्छायैव श्रियमनपायिनीं किमेभिः" माघ० ८-५०।

आस्माकीन ಆಸ್ಮಾಕೀನ (वि०) ನಮ್ಮ ಸಂಬಂಧವಾದ, ನಮ್ಮದಾದ. अस्माकमिदम्—अस्मद् "खञ्" (४-३-१)। अस्माकादेशः (४-३-२)।

आस्य ಆಸ್ಯ (न०) 1. ಮುಖ, ಬಾಯಿ. अस्यन्ते वर्णा अनेन अस्यते ग्रासोऽस्मिन् वा—असु (क्षेपणे) "ण्यत्" (३-३-११३)। "यस्यास्येन सदाऽश्नन्ति हव्यानि त्रिदिवौकसः" मनु० १-९५। 2. ಹಣೆ, ಮುಖದ ಮಧ್ಯಭಾಗ. 3. ದವಡೆ, ತಾಲು ಮೊದಲಾದ ಪ್ರದೇಶ. आस्ये भवम् "यत्" (५-१-६)। ताल्वादिस्थानमिति सि० कौ०। "मुखं मुखान्तरालं च द्वयमास्यमुदाहृतम्" शाश्व०।

आस्यन्धय ಆಸ್ಯಂಧಯ (वि०) ಅಧರಾಮೃತವನ್ನು ಪಾನಮಾಡುವ, ಮುಖವನ್ನು ಚುಂಬಿಸುವ. आस्यं धयति—धेट् (पाने) "शः" (३-१-१३७)।

आस्यलोमन् ಆಸ್ಯಲೋಮನ್ (न०) ದಾಡಿ, ಗಡ್ಡ. आस्यस्य लोम।

आस्या ಆಸ್ಯಾ (स्त्री०) ಸ್ಥಿತಿ, ಇರುವಿಕೆ, ಕುಳಿತಿರುವಿಕೆ. आस (उपवेशने) "ण्यत्" (३-३-११३)। "स्थितावास्या च विश्रुता" विश्व०।

आस्यासव ಆಸ್ಯಾಸವ (पु०) ಜೊಲ್ಲು, ಲಾಲಾಜಲ, ಉಗುಳು. आस्यस्यासव इव।

आस्र ಆಸ್ರ (न०) ರಕ್ತ. अस्रमेव स्वार्थे "अण्" (५-४-३८)।

आस्रप ಆಸ್ರಪ (पु०) 1. ರಾಕ್ಷಸ. आस्रं पिबति—पा (पाने) "कः" (३-२-३)। 2. ರಾಕ್ಷಸ ದೇವತಾಕವಾದ ಮೂಲಾನಕ್ಷತ್ರ.

आस्रव ಆಸ್ರವ (पु०) ಕ್ಲೇಶ, ತೊಂದರೆ, ಕಷ್ಟ. आस्रवति मनोऽनेन—स्रु (गतौ) "अप्" (३-३-५७)।

आस्राव ಆಸ್ರಾವ (पु०) 1. ಗಾಯ, ಹುಣ್ಣು. आ+स्रु (गतौ) अपादाने "घञ्" (३-३-१९)। "जात एष तवास्रावः त्वन्तु मोहान्न बुध्यसे"। 2. ಸ್ರವಿಸುವಿಕೆ, ಸೋರುವಿಕೆ. 3. ಲಾಲಾಜಲ, ಜೊಲ್ಲು. 4. ಕ್ಲೇಶ, ತೊಂದರೆ. (वि०) 5. ಸೋರುವ, ಸ್ರವಿಸುವ. आ + स्रु "णः" (३-१-१४१)।

आस्वाद ಆಸ್ವಾದ (पु०) 1. ರಸವನ್ನು ಕುಡಿಯುವುದು, ರಸಾನುಭವ ಹೊಂದುವುದು. 2. ತಿನ್ನುವುದು, ಸವಿಯುವುದು. आस्वाद्यते—आ + ष्वद (आस्वादने) "घञ्" (३-३-१८)। "चूताङ्कुरास्वादकषायकण्ठः" कुमा० ३-३२। 3. ರುಚಿ, ಸವಿ. "ज्ञातास्वादो विवृतजघनां को विहातुं समर्थः" मेघ० १-४१। 4. ಶೃಂಗಾರಾದಿ ರಸಗಳು. 5. ಸಿಹಿ ಮೊದಲಾದ ಆರು ಭೋಜ್ಯರಸಗಳು. आ + ष्वद कर्म० "घञ्" (३-३-१९)।

आस्वादक ಆಸ್ವಾದಕ (वि०) ರುಚಿನೋಡುವವನು, ರಸದ ಸವಿಯನ್ನು ಅನುಭವಿಸುವವನು, ರಸಾನುಭವ

ಪಡೆಯುವವನು. आ + ष्वद (आस्वादने) "ण्वुल्" (३-१-१३३)।

**आस्वादन ಆಸ್ವಾದನ** (ನಂ) ರುಚಿನೋಡುವುದು, ರಸದ ಸವಿಯನ್ನು ಅನುಭವಿಸುವುದು, ರಸಾನುಭವ ಪಡೆಯುವುದು. आ+ष्वद (आस्वादने) "ल्युट्" (३-३-११५)।

**आस्वादयत् ಆಸ್ವಾದಯತ್** (वि०) 1. ರುಚಿನೋಡುತ್ತಿರುವ, ಸವಿಯುತ್ತಲಿರುವ. 2. (लाक्ष०) ಪಾನ ಮಾಡುತ್ತಲಿರುವ. आ + ष्वद (आस्वादने)+णिच् "शतृ" (३-२-१२४)। स्त्रियाम् "ङीप्" (४-१-५)। आस्वादयन्ती ಆಸ್ವಾದಯಂತೀ. "आस्वादयन्त्यः सुदृशस्तदानीम्" याद० १३-६९।

**आस्वादवत् ಆಸ್ವಾದವತ್** (वि०) ರಸವತ್ತಾದ, ರುಚಿಕರವಾದ, ಸವಿಯಾದ. प्रशस्त आस्वादोऽस्यास्ति "मतुप्" (५-२-९४)। "आस्वादवद्भिः कबलैस्तृणानां कण्डूयनैर्दंशनिवारणैश्च" रघु० २-५।

**आस्वादित ಆಸ್ವಾದಿತ** (वि०) 1. ರುಚಿನೋಡಲ್ಪಟ್ಟ, ಸವಿಯಲ್ಪಟ್ಟ. 2. ತಿನ್ನಲ್ಪಟ್ಟ. आ + ष्वद (आस्वादने) "क्तः" (३-२-१०२)। "आस्वादितार्द्रक्रमुकाः समुद्रादभ्यागतस्य प्रतिपत्तिमीयुः" माघ० ३-८१।

**आस्वाद्य ಆಸ್ವಾದ್ಯ** (वि०) 1. ತಿನ್ನಲು ಯೋಗ್ಯವಾದ. 2. ರುಚಿನೋಡಲು ಅರ್ಹವಾದ, ಕುಡಿಯಲು ಯೋಗ್ಯವಾದ. आ+ष्वद (आस्वादने)+णिच् "यत्" (३-१-९७)। "आस्वाद्यतोयाः प्रवहन्ति नद्यः समुद्रमासाद्य भवन्त्यपेयाः" हितो०। (अव्य०) 3. ರುಚಿನೋಡಿ, ಸವಿದು. 4. ತಿಂದು, ಅನುಭವಿಸಿ. "धृतराष्ट्रसुतेन सुत्यजाश्चिरमास्वाद्य नरेन्द्रसम्पदः" किरा० २-१६।

**आह ಆಹ** (अव्य०) ಹೇಳಿದನು. [ಇದು ತಿಙನ್ತಪ್ರತಿರೂಪಕಾವ್ಯಯ. ब्रूञ् (व्यक्तायां वाचि) ಧಾತುವಿಗೆ "लट्" ಲಕಾರದಲ್ಲಿ ವಿಧಿಸಲ್ಪಡುವ "आह" ಆದೇಶವು (३-४-८४) ವರ್ತಮಾನಕಾಲದ ಅರ್ಥವನ್ನು ಕೊಡುವುದು. ಇದು ಭೂತಾರ್ಥವನ್ನು ಕೊಡುವ ಅವ್ಯಯ.] "अथाह वर्णी विदितो महेश्वरस्तदर्थिनी त्वं पुनरेव वर्तसे" कुमा० ५-६५। "आह दानवरिपुं दिवस्पतिः" याद० १७-१३१।

**आहक ಆಹಕ** (पु०) ಒಂದು ವಿಧವಾದ ಮೂಗಿನ ರೋಗ, ಮೂಗಿನ ಜ್ವರ. "तनुना रक्तशोधेन युक्तो नासापुटान्तरे। गात्रशूलज्वरकरः श्लेष्मणा ह्याहको ज्वरः"।

**आहत ಆಹತ** (पु०) 1. ಢಕ್ಕೆ, ನಗಾರಿ, ಭೇರಿ. आहन्यते—आ+हन (हिंसागत्योः) "क्तः" (३-२-१०२)। (न०) 2. ವ್ಯವಹಾರವಿರುದ್ಧವಾದ ಮಿಥ್ಯಾವಚನ, ಅಸಂಬದ್ಧವಾದ ಹೊಂದಿಕೆಯಿಲ್ಲದ ಮಾತು. "एष वन्ध्यासुतो याति"। 3. ಹಳೆಯ ಬಟ್ಟೆ. 4. ಹೊಸ ಬಟ್ಟೆ, ನೂತನ ವಸ್ತ್ರ. "ईषद्धौतं नवं शुभ्रं सदशं यन्न धारितम्। आहतं तद्विजानीयात् सर्वकर्मसु पावनम्"। 5. ಏಟು, ಹೊಡೆತ. आ + हन भावे "क्तः" (३-३-११४)। "बाहुपीडनकचग्रहणाभ्यामाहतेन नखदन्तनिपातैः" माघ० १०-७२। (वि०) 6. ಹೊಡೆಯಲ್ಪಟ್ಟ. आ + हन कर्म० "क्तः" (३-२-१०२)। "आहतं कुचतटेन तरुण्याः साधु सोढममुनेति पपात" माघ० १०-७४। 7. ತುಳಿಯಲ್ಪಟ್ಟ, ಮರ್ದಿಸಲ್ಪಟ್ಟ. "पादाहतं यदुत्थाय मूर्धानमधिरोहति" माघ० २-४६। "अचेष्टताष्टापदभूमिरेणुः पादाहतो यत्सदृशं गरिम्णः" माघ० ३-२८। 8. ಗುಣಿಸಲ್ಪಟ್ಟ, ಹೆಚ್ಚಿಸಲ್ಪಟ್ಟ. 9. ಪೀಡಿಸಲ್ಪಟ್ಟ, ನೋಯಿಸಲ್ಪಟ್ಟ. "तेनाहतास्त्रिदशसैन्यपदातयोऽपि" कुमा० १७-३२। "आहतं गुणिते चापि ताडिते च मृषार्थके। स्यात् पुरातनवस्त्रेऽपि नववस्त्रे च नाऽऽनके" मेदि०।

**आहतलक्षण ಆಹತಲಕ್ಷಣ** (वि०) ಸದ್ಗುಣಗಳಿಂದ ಪ್ರಸಿದ್ಧನಾದವನು, ಪ್ರಖ್ಯಾತಗುಣವುಳ್ಳವನು. आहतं गुणितं लक्षणं यस्य।

**आहति ಆಹತಿ** (स्त्री०) 1. ಹೊಡೆತ, ಶಬ್ದವಾಗುವಂತೆ ಎರಡು ಪದಾರ್ಥಗಳ ಸಂಬಂಧ. आ + हन (हिंसागत्योः) "क्तिन्" (३-३-९४)। "कृताहतिः कृष्णनिपातवेगादानद्धरूपा विततैस्तरङ्गैः" याद० ४-११३। 2. ಏಟು. 3. ಮರ್ದನ, ತುಳಿತ. 4. ಹಿಸುಕುವಿಕೆ. 5. ಗುಣಾಕಾರ, ಹೆಚ್ಚಿಸುವುದು. 6. ಆಗಮನ, ಬರುವಿಕೆ.

**आहनन ಆಹನನ** (न०) 1. ಕೋಲು, ದೊಣ್ಣೆ, ದಂಡ. आ + हन (हिंसागत्योः) कर० "ल्युट्" (३-३-११७)। 2. ಏಟು, ಹೊಡೆತ. 3. ಗುಣಾಕಾರ, ಹೆಚ್ಚಿಸುವುದು. 4. ಮರ್ದನ, ತುಳಿತ. भावे "ल्युट्" (३-३-११५)।

**आहर ಆಹರ** (वि०) ತರುವ, ತೆಗೆದುಕೊಂಡು ಬರುವ. आ + हृञ् (हरणे) "अच्" (३-२-९)। "वनान्तरादुपावृत्तैः समित्कुशफलाहरैः" रघु० १-४९।

**आहरकरटा** ಆಹರಕರಟಾ (स्त्री०) "ತೆಗೆದುಕೊಂಡು ಬಾ" ಎಂದು ಕರಟಕ್ಕೆ (ಕಾಗೆಗೆ) ಅಪ್ಪಣೆಮಾಡುವ ಕೆಲಸ. आहर करट इत्युच्यते यस्यां निदेशक्रियायाम्। मयूर०।

**आहरचेटा** ಆಹರಚೇಟಾ (स्त्री०) "ತೆಗೆದುಕೊಂಡು ಬಾ" ಎಂದು ಚೇಟ (ಸೇವಕ)ನಿಗೆ ಅಪ್ಪಣೆಮಾಡುವ ಕೆಲಸ. आहर चेट इत्युच्यते यस्यां निदेशक्रियायाम्। मयूर०।

**आहरण** ಆಹರಣ (नं०) 1. ತರುವುದು, ಒಯ್ಯುವುದು. आ + हृञ् (हरणे) भावे "ल्युट्" (३-३-११५)। "राजन्, समिदाहरणाय प्रस्थिता वयम्" शाकु० १। 2. ತೆಗೆದುಕೊಳ್ಳುವುದು, ಕಸಿದುಕೊಳ್ಳುವುದು, ಅಪಹರಿಸುವುದು. "वातोऽपि नास्रंसयदंशुकानि को लम्बयेदाहरणाय हस्तम्" रघु० ६-७५। 3. ಅನುಷ್ಠಾನ, ಆಚರಣೆ. "अश्वमेधस्य कौरव्य चकाराहरणे मतिम्" भा०। 4. ವಿವಾಹಕಾಲದಲ್ಲಿ ಕನ್ಯೆಗೆ ಕೊಡುವ ಬಳುವಳಿ, ಸ್ತ್ರೀಧನ, ಉಡುಗೊರೆ. "सत्त्वानुरूपाहरणीकृतश्रीः" रघु० ७-३२।

**आहव** ಆಹವ (पु०) 1. ಯುದ್ಧ, ಕದನ. आहूयते रिपुरत्र — आ + ह्वेञ् (स्पर्धायां शब्दे च) "अप्" (३-३-७३)। "न च श्रेयोऽनुपश्यामि हत्वा स्वजनमाहवे" गीता १-३१। 2. ಯಜ್ಞ, ಯಾಗ. आ+हु (दानादनयोः) "अप्" (३-३-५७)। "तत्र नाभवदसौ महाहवे शात्रवादिव पराङ्मुखोऽर्थिनः" माघ० १४-४४।

**आहवनीय** ಆಹವನೀಯ (पु०) ಮೂರು ವಿಧ ಅಗ್ನಿಗಳಲ್ಲೊಂದು, ಯಾಗಪರಿಸಮಾಪ್ತಿಪರ್ಯಂತ ಇಡಲ್ಪಡುವ ಅಗ್ನಿ. आहूयते प्रक्षिप्यते हविरत्र — आ + हु (दानादनयोः) "अनीयर्" (३-३-११३)। ಈ ಅಗ್ನಿಯು ಆಚಾರ್ಯಸಮಾನ. "गुरुराहवनीयस्तु साग्नित्रेता गरीयसी" मनु० २-२३१।

**आहार** ಆಹಾರ (पु०) ಭೋಜನ, ಊಟ. आ+हृञ् (हरणे) "घञ्" (३-३-१८)। ಆಹಾರವು (1) भोज्यम्, (2) भक्ष्यम्, (3) चर्व्यम्, (4) लेह्यम्, (5) चूष्यम् ಮತ್ತು (6) पेयम् ಎಂದು ಆರು ವಿಧ. (1) ಅನ್ನ ಮೊದಲಾದುದು ಭೋಜ್ಯ. (2) ರೊಟ್ಟಿ ಕಡುಬು ಮೊದಲಾದುದು ಭಕ್ಷ್ಯ. (3) ಅವಲಕ್ಕಿ ಪುರಿ ಹುರಿಗಾಳು ಮುಂತಾದುದು ಚರ್ವ್ಯ. (4) ಗೊಜ್ಜು ಮುಂತಾದುದು ಲೇಹ್ಯ. (5) ಮಾವಿನಹಣ್ಣು ಕಬ್ಬು ಮೊದಲಾದುದು ಚೂಷ್ಯ. (6) ಹಾಲು ಪಾನಕ ಮುಂತಾದುದು ಪೇಯ. ಈ ಎಲ್ಲ ಆಹಾರಗಳೂ (1) ಸಾತ್ತ್ವಿಕ, (2) ರಾಜಸ ಮತ್ತು (3) ತಾಮಸ ಗಳೆಂದು ಮೂರು ವಿಧ. (1) ಆಯುಸ್ಸು, ಜ್ಞಾನ ಬಲ ಆರೋಗ್ಯ ಸುಖ ಸಂತೋಷ ಇವನ್ನು ಅಧಿಕ ಪಡಿಸುವುದೂ ಆಸ್ವಾದ್ಯವೂ ಸ್ನೇಹ(ಜಿಡ್ಡು)ಯುಕ್ತವೂ ಸ್ಥಿರಪರಿಣಾಮವುಂಟುಮಾಡುವುದೂ ರಮಣೀಯವೂ ಆದ ಆಹಾರವು ಸಾತ್ತ್ವಿಕ. "आयुः सत्त्वबलारोग्यसुखप्रीतिविवर्धनाः। रस्याः स्निग्धाः स्थिरा हृद्या आहाराः सात्त्विकप्रियाः" गीता १७-८। (2) ಕಾರ ಹುಳಿ ಉಪ್ಪು ಮತ್ತು ಬಹಳ ಬಿಸಿಯಾದ ಬಹಳ ತೀಕ್ಷ್ಣವಾದ ಶೋಷಣಕರವಾದ ತಾಪಜನಕವಾದ ದುಃಖ ಮತ್ತು ಶೋಕವನ್ನುಂಟುಮಾಡುವ ಆಹಾರವು ರಾಜಸ. "कट्वम्ललवणात्युष्णतीक्ष्णरूक्षविदाहिनः। आहारा राजसस्येष्टा दुःखशोकामयप्रदाः" गीता १७-९। (3) ಬಹಳ ಹಳೆಯದಾದುದೂ ಸ್ವಾಭಾವಿಕ ರಸವನ್ನು ಕಳೆದುಕೊಂಡುದೂ ದುರ್ಗಂಧವೂ ಪರ್ಯುಷಿತವೂ ಎಂಜಲೂ ಯಾಗಾರ್ಹವಲ್ಲದ್ದೂ ಆದ ಆಹಾರವು ತಾಮಸ. "यातयामं गतरसं पूति पर्युषितं च यत्। उच्छिष्टमपि चामेध्यं भोजनं तामसप्रियम्" गीता १७-१०। [ರಾಜಸಾಹಾರವು ಕಾಮಕ್ರೋಧಗಳನ್ನೂ, ತಾಮಸಾಹಾರವು ತಮೋಗುಣವನ್ನು ಹೆಚ್ಚಿಸಿ ಅಕಾರ್ಯದಲ್ಲಿ ಪ್ರವೃತ್ತಿಯನ್ನೂ ಉಂಟುಮಾಡುವುದರಿಂದ ಸಾತ್ತ್ವಿಕಾಹಾರವನ್ನೇ ಹೆಚ್ಚಾಗಿ ಸೇವಿಸಬೇಕು.]

**आहार्य** ಆಹಾರ್ಯ (पु०) 1. (ನಾಟ್ಯಶಾಸ್ತ್ರದಲ್ಲಿ) ವೇಷಾದಿಗಳಿಂದ ಮಾಡುವ ಅಭಿನಯ. "भवेदभिनयोऽवस्थानुकारः स चतुर्विधः। आङ्गिको वाचिकश्चैवमाहार्यः सात्त्विकस्तथा" ಸಾ೦ದ೦ ६-२। (नं०)2. (ನ್ಯಾಯಶಾಸ್ತ್ರದಲ್ಲಿ) ಬಾಧಕಾಲದಲ್ಲಿ ಉಂಟಾಗುವ ಇಚ್ಛಾಜನ್ಯ ಜ್ಞಾನ. (वि०)3. ತರಲು ಯೋಗ್ಯವಾದ, ತರಲ್ಪಡುವ. आ+हृञ् (हरणे) "ण्यत्" (३-१-१२४)।

**आहाव** ಆಹಾವ (पु०) ಬಾವಿಗಳ ಪಕ್ಕದಲ್ಲಿ ಪಶುಗಳು ನೀರು ಕುಡಿಯಲು ಕಟ್ಟಿರುವ ನೀರಿನ ತೊಟ್ಟಿ. आहूयन्ते पशवोऽत्र — आ + ह्वेञ् (स्पर्धायां शब्दे च) "अप्" वृद्धिश्च (३-३-७४)।

**आहित** ಆಹಿತ (वि०) 1. ಇಡಲ್ಪಟ್ಟ, ಇರಿಸಲ್ಪಟ್ಟ. आ+डु धाञ् (धारणपोषणयोः) "क्तः" (३-२-१०२)। "व्यावर्तनैरहिपतेरयमाहिताङ्कः" किरा० ५-३०। 2. ಸಂಪಾದಿಸಲ್ಪಟ್ಟ, ಉಂಟುಮಾಡಲ್ಪಟ್ಟ. "आहिते नु मधुना मधुरत्वे चेष्टितस्य गमिते नु विकासम्" किरा० ९-६९।

**आहिताग्नि** ಆಹಿತಾಗ್ನಿ (पु०) ಆಧಾನಪೂರ್ವಕ ಸಂಸ್ಕೃತವಾದ ಅಗ್ನಿಯುಳ್ಳವನು. आहितः अग्निः येन।

**आहितुण्डिक** ಆಹಿತುಂಡಿಕ (पु०) ಹಾವಾಡಿಗ. अहितुण्डेन दीव्यति "ठक्" (४-४-२)। "अमात्य, एष खलु आहितुण्डिको विज्ञापयति — न केवलमहं सर्पोपजीवी, प्राकृतकविः खल्वहम्" मुद्रा० २।

**आहुत** ಆಹುತ (वि०) 1. ಹೋಮಮಾಡಲ್ಪಟ್ಟ. आ+हु (दानादनयोः) "क्तः" (३-२-१०२)। 2. ಮನುಷ್ಯಯಜ್ಞ. 3. ಭೂತಯಜ್ಞ.

**आहुति** ಆಹುತಿ (स्त्री०) 1. ದೇವತೆಗಳನ್ನುದ್ದೇಶಿಸಿ ಅಗ್ನಿಯಲ್ಲಿ ಹವಿಸ್ಸನ್ನು ಅರ್ಪಿಸುವುದು, ಹೋಮ. आ + हु (दानादनयोः) भावे "क्तिन्" (३-३-९४)। "अग्नौ प्रास्ताहुतिः सम्यगादित्यमुपतिष्ठते" मनु० ३-७६। 2. ಹೋಮದ್ರವ್ಯ, ಹವಿಸ್ಸು. आ + हु कर्म० "क्तिन्" (३-३-९४)। "पुनानं पवनोद्धूतैर्धूमैराहुतिगन्धिभिः" रघु० १-५३।

**आहूत** ಆಹೂತ (न०) 1. ಆಹ್ವಾನ, ಕರೆ. आ + ह्वेञ् (स्पर्धायां शब्दे च) भावे "क्तः" (३-३-११४)। (वि०) 2. ಕರೆಯಲ್ಪಟ್ಟ, ಆಹ್ವಾನಮಾಡಲ್ಪಟ್ಟ. आ+ह्वेञ् कर्म० "क्तः" (३-२-१०२)। "यियक्षमाणेनाहूतः पार्थेनाथ द्विषन्मुरम्" माघ० २-१। 3. ಹೆಸರಿಡಲ್ಪಟ್ಟ, ಹೆಸರಿನಿಂದ ಕರೆಯಲ್ಪಟ್ಟ.

**आहूतप्रपलायिन्** ಆಹೂತಪ್ರಪಲಾಯಿನ್ (पु०) ವಾದಕ್ಕಾಗಿ ನ್ಯಾಯಾಸ್ಥಾನದಿಂದ ಕರೆಯಲ್ಪಟ್ಟು ಹಾಜರಾಗದಿರುವ ಪ್ರತಿವಾದಿ. आहूतः प्रपलायते। [ತನ್ನಲ್ಲಿ ತಪ್ಪಿತವಿರುವುದರಿಂದ ಪ್ರತಿವಾದಿಯು ವಾದಕ್ಕಾಗಿ ನ್ಯಾಯಾಸ್ಥಾನಕ್ಕೆ ಹೋಗಲು ಹಿಂಜರಿಯುವನು.] ಇಂತಹ ಪ್ರತಿವಾದಿಯು ಐದು ವಿಧ. "अन्यवादी क्रियाद्वेषी नोपस्थाता निरुत्तरः। आहूतप्रपलायी च हीनः पञ्चविधः स्मृतः"।

**आहूतसंप्लव** ಆಹೂತಸಂಪ್ಲವ (पु०) ಪ್ರಳಯಕಾಲ. आहूतस्य नाम्ना कृतव्यवहारस्य जगतः संप्लवो नाशो यस्मिन्। "आहूतसंप्लवं स्थानममृतत्वं हि भाष्यते"।

**आहूति** ಆಹೂತಿ (स्त्री०) ಕರೆ, ಆಹ್ವಾನ. आ + ह्वेञ् (स्पर्धायां शब्दे च) "क्तिन्" (३-३-९४)।

**आहूय** ಆಹೂಯ (अव्य०) ಕರೆದು, ಆಹ್ವಾನಮಾಡಿ. आ + ह्वेञ् (स्पर्धायां शब्दे च) "ल्यप्" (७-१-३७)। "आहूय रामं विनयाभिराममाविःप्रमोदः प्रभुरेवमूचे" चं० रा०।

**आहृत** ಆಹೃತ (वि०) ತರಲ್ಪಟ್ಟ, ಒಯ್ಯಲ್ಪಟ್ಟ. आ+हृञ् (हरणे) "क्तः" (३-२-१०२)।

**आहृति** ಆಹೃತಿ (स्त्री०) ತರುವಿಕೆ, ಒಯ್ಯುವುದು. आ + हृञ् (हरणे) "क्तिन्" (३-३-९४)।

**आहेय** ಆಹೇಯ (वि०) ಸರ್ಪಸಂಬಂಧವಾದ (ವಿಷ, ಮೂಳೆ, ಸೋರೆ ಮುಂತಾದುದು). अहेरिदम् "ढञ्" (४-३-५६)। स्त्रियाम् "ङीप्" (४-१-१५)। आहेयी ಆಹೇಯೀ.

**आहो** ಆಹೋ (अव्य०) 1. ಪ್ರಶ್ನೆ. आ + हन (हिंसागत्योः) "डोः" (बाहु०)। 2. ವಿಕಲ್ಪ, ಹಾಗಲ್ಲದಿದ್ದರೆ, ಅಥವಾ. "आहो निवत्स्यसि समं हरिणाङ्गनाभिः" शाकु० १-२३। 3. ವಿತರ್ಕ, ಸಂದೇಹ. "आहो वितर्के प्रश्ने च" मेदि०।

**आहोपुरुषिका** ಆಹೋಪುರುಷಿಕಾ (स्त्री०) ಅಹಂಕಾರದಿಂದ ತನ್ನ ಶ್ರೇಷ್ಠತೆಯನ್ನು ಭಾವಿಸುವುದು, ತನಗೆ ಸಮಾನರಿಲ್ಲವೆಂದು ತಿಳಿಯುವುದು. अहो (अहमेव) पुरुषः अहोपुरुषः — तस्य भावः "वुञ्" (५-१-१३३)। "आहोपुरुषिकां पश्य मम सद्रत्नकान्तिभिः" भट्टि० ५-२७।

**आहोस्वित्** ಆಹೋಸ್ವಿತ್ (अव्य०) ವಿಕಲ್ಪ. आहो च स्विच्च। "आहोस्वित् प्रसवो ममापचरितैर्विष्टम्भितो वीरुधाम्" शाकु० ५-९।

**आह्न** ಆಹ್ನ (न०) 1. ದಿನಗಳ ಸಮೂಹ. अह्नां समूहः — अहन् "अञ्" (४-२-४५)। (वि०) 2. ಒಂದು ಹಗಲಲ್ಲಿ ಮಾಡಿದ, ಒಂದು ದಿನದಲ್ಲಿ ನೆರವೇರಿಸಿದ. अह्ना निर्वृत्तम् "अञ्" (४-३-७५)। स्त्रियाम् "ङीप्" (४-१-१५)। आह्नी ಆಹ್ನೀ.

**आह्निक ಆಹ್ನಿಕ** (पु०) 1. ದಿನದಲ್ಲಿ ಸತ್ಕರಿಸಿ ಕೆಲಸಕ್ಕೆ ಇರಿಸಲ್ಪಟ್ಟ ಉಪಾಧ್ಯಾಯ, ಗೌರವಪೂರ್ವಕ ಪಾಠ ಪ್ರವಚನಾದಿಗಳಿಗೆ ಏರ್ಪಡಿಸಲ್ಪಟ್ಟ ಉಪಾಧ್ಯಾಯ. अहः अधीष्टः आह्निकोऽध्यापकः "ठञ्" (५-१-८०)। 2. ವ್ಯಾಧಿ, ಜ್ವರ. अहः भूतः आह्निको व्याधिः। 3. ಭೋಜನ, ಊಟ. (न०) 4. ಪ್ರತಿದಿನದ ಕರ್ತವ್ಯ. 5. ನಿತ್ಯವೂ ಮಾಡುವ ಮತಸಂಬಂಧವಾದ ಕಾರ್ಯ, ನಿತ್ಯಕರ್ಮ. 6. ಪಾತಂಜಲ ಮಹಾಭಾಷ್ಯದ ಒಂದೊಂದು ಭಾಗ. "आह्निकं दिननिर्वर्त्ये भोजने नित्यकर्मणि" विश्व०। (वि०) 7. ಹಗಲಲ್ಲಿ ಮಾಡಿದ, ಒಂದು ದಿನದಲ್ಲಿ ನೆರವೇರಿಸಿದ. अह्ना निर्वृत्तम् — अहन् "ठञ्" (५-१-७९)। 8. ಒಂದು ದಿನದಲ್ಲಿ ಉಂಟಾದ. अह्नि भवः — अहन् "ठञ्" (४-३-११)। 9. ದಿನ ಸಂಬಂಧವಾದ, ಹಗಲಿಗೆ ಸಂಬಂಧಿಸಿದ. "स्थानमाह्निकमपास्य दन्तिनः" कुमा० ८-३३।

**आह्लाद ಆಹ್ಲಾದ** (पु०) ಆನಂದ, ಸಂತೋಷ. आ+ह्लादी (सुखे च) "घञ्" (३-३-१८)। "नन्दस्यात्मज उत्पन्ने जाताह्लादो महामनाः" भाग०।

**आह्लादन ಆಹ್ಲಾದನ** (न०) 1. ಸಂತೋಷಪಡಿಸುವಿಕೆ. आ+ह्लादी (सुखे च) + णिच् "ल्युट्" (३-३-११५)। (वि०) 2. ಸಂತೋಷಪಡಿಸುವ, ಸಂತೋಷವುಂಟು ಮಾಡುವ. आ + ह्लादी + णिच् कर्त० "ल्युः" (३-१-१३४)। 3. ಆನಂದಕ್ಕೆ ಕಾರಣವಾದ, ಸಂತೋಷಕ್ಕೆ ಸಾಧನವಾದ. कर० "ल्युट्" (३-३-११७)।

**आह्लादित ಆಹ್ಲಾದಿತ** (वि०) 1. ಸಂತೋಷಪಡಿಸಲ್ಪಟ್ಟ, ಆನಂದಗೊಳಿಸಲ್ಪಟ್ಟ. आ + ह्लादी (सुखे च) + णिच् "क्तः" (३-२-१०२)। 2. ಸಂತೋಷಗೊಂಡ, ಆನಂದವುಂಟಾದ. आह्लादोऽस्य सञ्जातः "इतच्" (५-२-३६)।

**आह्लादिन् ಆಹ್ಲಾದಿನ್** (वि०) 1. ಸಂತೋಷವುಳ್ಳ. आह्लादोऽस्यास्ति "इनिः" (५-२-११५)। 2. ಸಂತೋಷಪಡಿಸುವ, ಆನಂದಗೊಳಿಸುವ. आ+ह्लादी (सुखे च) + णिच् "णिनिः" (३-२-७८)। स्त्रियाम् "ङीप्" (४-१-५)। –ह्लादिनी –ಹ್ಲಾದಿನೀ.

**आह्व ಆಹ್ವ** (वि०) ಕರೆಯುವ, ಆಹ್ವಾನಮಾಡುವ. आह्वयति — आ + ह्वेञ् (स्पर्धायां शब्दे च) "डः" (वा० ३-२-३)।

**आह्वय ಆಹ್ವಯ** (पु०) 1. ಹೆಸರು, ನಾಮಧೇಯ. आह्वेर्यायते प्राप्यते — या (प्रापणे) "कः" (वा० ३-३-५८)। 2. ಆಡು, ಕೋಳಿ ಮೊದಲಾದ ಪ್ರಾಣಿಗಳನ್ನು ಪಣವಾಗಿಟ್ಟು ಆಡುವ ಆಟ. ಈ ಅರ್ಥದಲ್ಲಿ ಇದು सम् ಉಪಸರ್ಗಪೂರ್ವಕವಾಗಿಯೂ ಉಂಟು. "अप्राणिभिर्यत्क्रियते तल्लोके द्यूतमुच्यते। प्राणिभिः क्रियमाणं तु स विज्ञेयः समाह्वयः" मनु० ९-२२३।

**आह्वयन ಆಹ್ವಯನ** (न०) 1. ಹೆಸರು. (वि०) 2. ಕರೆಯುವ, ಆಹ್ವಾನಮಾಡುವ. आह्वयं करोत्यनेन — आह्वय + णिच् "ल्युट्" (३-३-११७)।

**आह्वयितव्य ಆಹ್ವಯಿತವ್ಯ** (वि०) ಕರೆಯಲ್ಪಡುವ, ಕರೆಯಲು ಅರ್ಹನಾದ. आह्वय+णिच् कर्म० "तव्यः" (३-१-९६)।

**आह्वा ಆಹ್ವಾ** (स्त्री०) 1. ಆಹ್ವಾನ, ಕರೆ. आ + ह्वेञ् (स्पर्धायां शब्दे च) "अङ्" (३-३-१०६)। 2. ಹೆಸರು, ನಾಮಧೇಯ. आ + ह्वेञ् कर० "अङ्"।

**आह्वान ಆಹ್ವಾನ** (न०) 1. ಕರೆಯುವುದು. आ+ह्वेञ् (स्पर्धायां शब्दे च) "ल्युट्" (३-३-११५)। 2. ಹೆಸರು. 3. ನ್ಯಾಯಾಸ್ಥಾನದ ಮುಂದೆ ಹಾಜರಾಗಲು ಬರುವ ಆಜ್ಞಾಪತ್ರ, ರಾಯಸ. आ + ह्वेञ् कर० "ल्युट्" (३-३-११७)। 4. ಮೊಕದ್ದಮೆಯ ತೀರ್ಪಿಗಾಗಿ ನ್ಯಾಯಾಸ್ಥಾನದ ಕರೆ.

**आह्वानपत्र ಆಹ್ವಾನಪತ್ರ** (न०) –पत्रिका –ಪತ್ರಿಕಾ (स्त्री०) ವಿವಾಹ ಮುಂತಾದ ಉತ್ಸವಗಳಲ್ಲಿ ಕರೆ ಕೊಡುವ ಪತ್ರಿಕೆ.

इति "आ" कारादिपदार्थनिरूपणम्।

ಜಲ್ಲಿ. 4. ಘನತೆ, ದೊಡ್ಡಸ್ತಿಕೆ. "निनीषुः कुलमुत्कर्षम्" मनु० ४-२४४। 5. ಮೇಲಕ್ಕೆ ಎಳೆಯುವಿಕೆ. (वि०) 6. ಶ್ರೇಷ್ಠವಾದ, ಮೇಲ್ಮೆಪಡೆದ. 7. ಅತಿಶಯವಾದ, ಹೆಚ್ಚಾದ. 8. ಜಂಬದಿಂದ ಕೂಡಿದ, ಬಡಾಯಿ ಕೊಚ್ಚಿಕೊಳ್ಳುವ. उत्+कृष "अच्" (३-१-१३४)। भावे "ल्युट्" (३-३-११५)। उत्कर्षणम् ಉತ್ಕರ್ಷಣಮ್. ಮೇಲಕ್ಕೆ ಎಳೆಯುವಿಕೆ.

उत्कर्षक ಉತ್ಕರ್ಷಕ (वि०) 1. ಶ್ರೇಷ್ಠತೆಯನ್ನುಂಟು ಮಾಡುವ, ಮೇಲ್ಮೆಯನ್ನುಂಟುಮಾಡುವ. 2. ಹೆಚ್ಚಿಸುವ, ಅಧಿಕಪಡಿಸುವ. 3. ಮೇಲಕ್ಕೆ ಎಳೆಯುವ. उत्+कृष (विलेखने)+णिच् "ण्वुल्" (३-१-१३३)।

उत्कर्षित ಉತ್ಕರ್ಷಿತ (वि०) ಶ್ರೇಷ್ಠತೆಯನ್ನು ಪಡೆದ, ಮೇಲ್ಮೆಹೊಂದಿದ. उत्कर्षोऽस्य सञ्जातः "इतच्" (५-२-३६)।

उत्कर्षिन् ಉತ್ಕರ್ಷಿನ್ (वि०) 1. ಮೇಲ್ಮೆಯುಳ್ಳ, ಶ್ರೇಷ್ಠತೆಯುಳ್ಳ. उत्कर्षोऽस्यास्ति "इनिः" (५-२-११५)। 2. ಮೇಲಕ್ಕೆ ಎಳೆಯುವ. उत्+कृष (विलेखने) "णिनिः" (३-१-१३४)।

उत्कल ಉತ್ಕಲ (पु०) 1. ಉತ್ಕಲದೇಶ, ಈಗಿನ ಒರಿಸ್ಸಾ ಪ್ರಾಂತ. (पु० ब० व०) 2. ಉತ್ಕಲದೇಶದ ನಿವಾಸಿಗಳು. 3. ಉತ್ಕಲದೇಶದ ದೊರೆಗಳು. "उत्कलादर्शितपथः कलिङ्गाभिमुखो ययौ" रघु० ४-३८। 4. ಹಕ್ಕಿಯ ಬೇಟೆಗಾರ. 5. ಭಾರವನ್ನು (ಮೂಟೆಯನ್ನು) ಹೊರುವ ಕೂಲಿಯಾಳು.

उत्कलिका ಉತ್ಕಲಿಕಾ (स्त्री०) 1. ಔತ್ಸುಕ್ಯ, ಆಸೆ, ಬಯಕೆ, ಹಂಬಲ. उत्+कल (शब्दसंख्यानयोः) "वुन्" (उ० ५-३५)। 2. ಚಿಂತೆ, ವ್ಯಾಕುಲತೆ, ಕಾಮಸಂಬಂಧವಾದ ಸ್ಮರಣೆ. 3. ತರಂಗ, ಅಲೆ. "क्षुभितमुत्कलिकातरलं मनः" मालती० ३-१०। 4. ಶೃಂಗಾರಚೇಷ್ಟೆ, ಸ್ತ್ರೀಯರ ಹಾವಭಾವಗಳು. "कथितोत्कलिकोत्कण्ठा हेलासलिलवीचिषु" मेदि०। (वि०) 5. ಮೇಲಕ್ಕೆ ಹೊರಟಿರುವ ಮೊಗ್ಗುಗಳು, ಹೊರಕ್ಕೆ ಬಂದಿರುವ ಮೊಗ್ಗುಗಳು. उद्गताः कलिका यस्य। "उद्दामोत्कलिकां विपाण्डुररुचं प्रारब्धजृम्भां क्षणात्" रत्ना० २-४।

उत्कलिकाप्राय ಉತ್ಕಲಿಕಾಪ್ರಾಯ (न०) ಗದ್ಯಕಾವ್ಯದ ಒಂದು ಭೇದ, ಕರ್ಕಶ ವರ್ಣಗಳಿಂದಲೂ, ಸಮಸ್ತ ಪದಗಳಿಂದಲೂ ಕೂಡಿದ ಗದ್ಯಕಾವ್ಯದ ಒಂದು ಭೇದ.

उत्कषण ಉತ್ಕಷಣ (न०) 1. ಎಳೆಯುವುದು. उत्+कष (हिंसायाम्) "ल्युट्" (३-३-११५)। "सद्यः सीरोत्कषणसुरभि क्षेत्रमारुह्य मालम्" मेघ० १-१६। (वि०) 2. ಮೇಲಕ್ಕೆ ಎಳೆಯುವ. उत्+कष "ल्युः" (३-१-१३४)।

उत्कार ಉತ್ಕಾರ (पु०) ಧಾನ್ಯವನ್ನು ತೂರಿ ರಾಶಿಹಾಕುವುದು, ಧಾನ್ಯವನ್ನು ಗುಪ್ಪೆಹಾಕುವಿಕೆ. उत्+कॄ (विक्षेपे) "घञ्" (३-३-३०)।

उत्किर ಉತ್ಕಿರ (वि०) ಎರಚುವ, ಎಸೆಯುವ. उत्+कॄ (विक्षेपे) "कः" (३-१-१३५)। "आप्लुतास्तीरमन्दारकुसुमोत्किरवीचिषु" कुमा० ६-५। "पुष्परेणूत्किरैर्वातैः" रघु० १-३८।

उत्कीर्ण ಉತ್ಕೀರ್ಣ (वि०) 1. ಕೊರೆಯಲ್ಪಟ್ಟ, ರಂಧ್ರ ಮಾಡಲ್ಪಟ್ಟ. उत्+कॄ (विक्षेपे) "क्तः" (३-२-१०२)। "मणौ वज्रसमुत्कीर्णे सूत्रस्येवास्ति मे गतिः" रघु० १-४। 2. ಚಿತ್ರ ಕೊರೆಯಲ್ಪಟ್ಟ, ನಕಾಶೆ ಕೆತ್ತಲ್ಪಟ್ಟ. "लीनेव प्रतिबिम्बितेव लिखितेवोत्कीर्णरूपेव च" मालती० ५-१०। 3. ಮೇಲಕ್ಕೆ ಎಬ್ಬಿಸಲ್ಪಟ್ಟ, ಮೇಲಕ್ಕೆ ಹೊರಡಿಸಲ್ಪಟ್ಟ. "रजोभिस्तुरगोत्कीर्णैरस्पृष्टालकवेष्टनौ" रघु० १-४२। 4. ಕೆತ್ತುಹಾಕಲ್ಪಟ್ಟ. "उत्कीर्णचामीकरपङ्कजानां दिग्दन्तिदानद्रवदूषितानाम्" कुमा० १३-३९।

उत्कीर्तन ಉತ್ಕೀರ್ತನ (न०) 1. ಉಚ್ಚಸ್ವರದಿಂದ ಹೇಳುವುದು, ಗಟ್ಟಿಯಾಗಿ ಹೇಳುವುದು. उच्चैः कीर्तनम्। 2. ಸ್ತೋತ್ರಮಾಡುವುದು, ಕೊಂಡಾಡುವುದು. उत्+कृत (संशब्दने) "ल्युट्" (३-३-११५)।

उत्कीर्तित ಉತ್ಕೀರ್ತಿತ (वि०) 1. ಗಟ್ಟಿಯಾಗಿ ಹೇಳಲ್ಪಟ್ಟ, (ಗಟ್ಟಿಯಾಗಿ) ಸಾರಲ್ಪಟ್ಟ. 2. ಸ್ತುತಿಸಲ್ಪಟ್ಟ, ಕೊಂಡಾಡಲ್ಪಟ್ಟ, ಹೊಗಳಲ್ಪಟ್ಟ. उत्+कृत (संशब्दने) "क्तः" (३-२-१०२)।

उत्कुण ಉತ್ಕುಣ (पु०) ಹೇನು, ಕೂರೆ.

उत्कूट ಉತ್ಕೂಟ (पु०) ಛತ್ರಿ, ಕೊಡೆ. उन्नतं कूटमस्य।

उत्कूल ಉತ್ಕೂಲ (वि०) 1. ದಡವನ್ನು ಮೀರಿರುವ, ತೀರವನ್ನು ಮೀರಿ ಬಂದಿರುವ. उत्क्रान्तः कूलात्। 2. ದಡವನ್ನು ಮುಟ್ಟಿರುವ, ತೀರದವರೆಗೂ ಬಂದಿರುವ. उद्गतः कूलम्।

उत्कूलित ಉತ್ಕೂಲಿತ (वि०) ದಡಮುಟ್ಟಿಸಲ್ಪಟ್ಟ, ತೀರದವರೆಗೂ ಒಯ್ಯಲ್ಪಟ್ಟ. उत्+कूल (आवरणे)+णिच् "क्तः" (३-२-१०२)। "वनावलीरुत्कलिकासहस्रप्रतिक्षणोत्कूलितशैवलाभाः" माघ० ३-७०।

**उत्कृति ಉತ್ಕೃತಿ** (स्त्री०) ವೃತ್ತರತ್ನಾಕರೋಕ್ತವಾದ ಇಪ್ಪತ್ತಾರನೆಯ ಛಂದಸ್ಸು.

**उत्कृत्य ಉತ್ಕೃತ್ಯ** (अव्य०) ಕತ್ತರಿಸಿ, ತುಂಡುಮಾಡಿ. उत्+कृती (छेदने) "ल्यप्" (७-१-३७)। "उत्कृत्योत्कृत्य कृत्तिं प्रथममथ पृथूत्सेधभूयांसि मांसानि" मालती० ५-१६।

**उत्कृष्ट ಉತ್ಕೃಷ್ಟ** (वि०) 1. ಶ್ರೇಷ್ಠವಾದ, ಉತ್ತಮವಾದ, ಪ್ರಶಸ್ತವಾದ. 2. ಅತಿಶಯವಾದ, ಹೆಚ್ಚಾದ. 3. ದೊಡ್ಡದಾದ, ಘನತೆಯನ್ನು ಪಡೆದ, ಮೇಲ್ಮೆ ಪಡೆದ. 4. ಮೇಲಕ್ಕೆ ಎಳೆಯಲ್ಪಟ್ಟ, ಮೇಲಕ್ಕೆ ಎತ್ತಲ್ಪಟ್ಟ. 5. ಕೃಷಿಮಾಡಲ್ಪಟ್ಟ (ಭೂಮಿ), ಸಾಗುವಳಿ ಮಾಡಲ್ಪಟ್ಟ (ಜಮೀನು). उत्+कृष (विलेखने) कर्तं० कर्म० वा "क्तः" (३-४-७२, ३-२-१०२)।

**उत्कोच ಉತ್ಕೋಚ** (पु०) ಲಂಚ, ವ್ಯವಹಾರವನ್ನು ನ್ಯಾಯವಿರುದ್ಧವಾಗಿ ತನ್ನಿಷ್ಟದಂತೆ ನಿರ್ಣಯಿಸಲು ಅಧಿಕಾರಿಗೆ ಕೊಡುವ ಧನ, ತನಗಿರುವ ಆತಂಕವನ್ನು ನಿವಾರಿಸಲು ಅಧಿಕಾರಿಗೆ ಕೊಡುವ ಹಣ.

**उत्कोचक ಉತ್ಕೋಚಕ** (वि०) ಲಂಚ ಪಡೆಯುವ (ಅಧಿಕಾರಿ). उत् + कुच (संपर्चने) "ण्वुल्" (३-१-१३३)।

**उत्क्रम ಉತ್ಕ್ರಮ** (पु०) 1. ವಿರುದ್ಧವಾದ ಕ್ರಮ, ಪ್ರತಿಕೂಲವಾಗಿ ಹೋಗುವುದು, ದಾರಿತಪ್ಪಿ ಹೋಗುವುದು. उत्+क्रमु (पादविक्षेपे) "घञ्" (३-३-१८)। 2. ಮೇಲಕ್ಕೆ ಹೋಗುವುದು, ಊರ್ಧ್ವಗಮನ.

**उत्क्रमण ಉತ್ಕ್ರಮಣ** (न०) 1. ಮೇಲಕ್ಕೆ ಹೋಗುವುದು. 2. ನಿರ್ಗಮನ, ಹೊರಡುವುದು, ಪ್ರಯಾಣ. 3. ಪ್ರಾಣ ಹಾರಿಹೋಗುವುದು. उत्+क्रमु (पादविक्षेपे) "ल्युट्" (३-३-११५)।

**उत्क्रान्त ಉತ್ಕ್ರಾಂತ** (वि०) ಮೇಲಕ್ಕೆ ಹಾರಿಹೋದ. उत्+क्रमु (पादविक्षेपे) "क्तः" (३-४-७२)।

**उत्क्रान्ति ಉತ್ಕ್ರಾಂತಿ** (स्त्री०) ಮೇಲಕ್ಕೆ ಹಾರಿಹೋಗುವುದು. उत्+क्रमु (पादविक्षेपे) "क्तिन्" (३-३-९४)।

**उत्क्रामत् ಉತ್ಕ್ರಾಮತ್** (वि०) ಮೇಲಕ್ಕೆ ಹಾರುತ್ತಿರುವ, ಊರ್ಧ್ವಮುಖವಾಗಿ ಹೋಗುತ್ತಿರುವ. उत्+क्रमु (पादविक्षेपे) "शतृ" (३-२-१२४)। "उत्क्रामन्तं स्थितं वापि भुञ्जानं वा गुणान्वितम्" गीता १५-१०।

**उत्क्रुष्ट ಉತ್ಕ್ರುಷ್ಟ** (न०) 1. ಗಟ್ಟಿಯಾಗಿ ಕೂಗುವುದು. 2. ಗಟ್ಟಿಯಾಗಿ ಮಾತಾಡುವುದು. 3. ಗಟ್ಟಿಯಾಗಿ ಅಳುವುದು. उत् + क्रुश (आह्वाने रोदने च) "क्तः" (३-४-११४)। (वि०) 4. ಗಟ್ಟಿಯಾಗಿ ಕೂಗಲ್ಪಟ್ಟ. 5. ಗಟ್ಟಿಯಾಗಿ ಹೇಳಲ್ಪಟ್ಟ. उत् + क्रुश कर्म० "क्तः" (३-२-१०२)।

**उत्क्रोश ಉತ್ಕ್ರೋಶ** (पु०) 1. ಕುರರವಹಕ್ಕಿ, ನೀರಿನ ಮೇಲೆ ತೇಲಾಡುವ ಸ್ವಭಾವದ ಒಂದು ಜಲಚರ ಪ್ರಾಣಿ. उत्क्रोशति – उत्+क्रुश (आह्वाने) "अच्" (३-१-१३४)। 2. ಗಟ್ಟಿಯಾಗಿ ಕೂಗುವುದು. उत्+क्रुश भावे "घञ्" (३-३-१८)। (वि०) 3. ಗಟ್ಟಿಯಾಗಿ ಕೂಗುವ.

**उत्क्लेश ಉತ್ಕ್ಲೇಶ** (पु०) 1. ಊರ್ಧ್ವಮುಖವಾದ ವಾಯುವಿನಿಂದ ಉಂಟಾಗುವ ತೊಂದರೆ, ವಾಕರಿಕೆ, ಉಬ್ಬಳಿಕೆ. 2. ಶರೀರದೊಳಗಿನ ಧಾತುವಿನ ವ್ಯತ್ಯಾಸ, ರಸದ ಅವ್ಯವಸ್ಥೆ. उत्+क्लिशू (विबाधने) "घञ्" (३-३-१८)।

**उत्क्लेशन ಉತ್ಕ್ಲೇಶನ** (वि०) ಶರೀರದೊಳಗಿನ ರಸವನ್ನು ಅವ್ಯವಸ್ಥೆಗೊಳಿಸುವ, ತ್ರಿದೋಷ (ವಾತ, ಪಿತ್ತ, ಕಫ) ಗಳನ್ನು ತಾರುಮಾರು ಮಾಡುವ. उत्+क्लिशू (विबाधने) "ल्युः" (३-१-१३४)।

**उत्क्षिप्त ಉತ್ಕ್ಷಿಪ್ತ** (वि०) 1. ಮೇಲಕ್ಕೆ ಎಸೆಯಲ್ಪಟ್ಟ, ಮೇಲಕ್ಕೆ ಹಾರಿಸಲ್ಪಟ್ಟ. उत्+क्षिपु (निरसने) "क्तः" (३-२-१०२)। "क्षणं क्षणोत्क्षिप्तगजेन्द्रकृत्तिना" माघ० १-४। 2. ಮೇಲಕ್ಕೆ ಎತ್ತಲ್ಪಟ್ಟ. "उत्क्षिप्तगात्रः स्म विडम्बयन्नभः समुत्पतिष्यन्तमगेन्द्रमुच्चकैः" माघ० १२-५। 3. ಕಿತ್ತುಹಾಕಲ್ಪಟ್ಟ, ನಿರ್ಮೂಲಮಾಡಲ್ಪಟ್ಟ. 4. ತಳ್ಳಿಹಾಕಲ್ಪಟ್ಟ, ನಿರಾಕರಿಸಲ್ಪಟ್ಟ.

**उत्क्षिप्तिका ಉತ್ಕ್ಷಿಪ್ತಿಕಾ** (स्त्री०) ಮೇಲಿನ ಕಿವಿಗೆ ಹಾಕಿಕೊಳ್ಳುವ ಚಂದ್ರಮುರು. "उत्क्षिप्तिका तु कर्णाकः" वैज०।

**उत्क्षेप ಉತ್ಕ್ಷೇಪ** (पु०) 1. ಮೇಲಕ್ಕೆ ಎಸೆಯುವುದು. 2. ಮೇಲಕ್ಕೆ ಹಾರುವುದು. उत् + क्षिपु (निरसने) "घञ्" (३-३-१८)। "बिन्दूत्क्षेपान् पिपासुः परिसरति शिखी भ्रान्तिमद्वारियन्त्रम्" माल० २-१२। 3. ತಳ್ಳಿಹಾಕುವುದು, ನಿರಾಕರಿಸುವುದು.

**उत्क्षेपक ಉತ್ಕ್ಷೇಪಕ** (वि०) 1. ಮೇಲಕ್ಕೆ ಎಸೆಯುವ. उत् + क्षिपु (निरसने) "ण्वुल्" (३-१-१३३)। 2. ಚೋರ, ಕಳ್ಳ, ಬಟ್ಟೆ ಮೊದಲಾದುವನ್ನು ಕದ್ದು ಎತ್ತಿಕೊಂಡು ಹೋಗುವವನು.

**उत्क्षेपण ಉತ್ಕ್ಷೇಪಣ** (नं०) 1. ಮೇಲಕ್ಕೆ ಎಸೆಯುವುದು. उत्+क्षिपु (निरसने) "ल्युट्" (३-३-११५)। उत्क्षेपणम्, अवक्षेपणम्, आकुञ्चनम्, प्रसारणम् ಮತ್ತು गमनम् ಎಂದು ಐದು ಕರ್ಮಗಳು. 2. ಮೇಲಕ್ಕೆ ಎತ್ತುವುದು. "स्रस्तांसावतिमात्रलोहिततलौ बाहू घटोत्क्षेपणात्" शाकुं० १-२६। 3. ಧಾನ್ಯವನ್ನು ಬಡಿಯುವ ಕೋಲು, ಕಣದಲ್ಲಿ ತೆನೆಗಳಿಂದ ಧಾನ್ಯವನ್ನು ಬೇರ್ಪಡಿಸುವ ಕೋಲು. 4. ಧಾನ್ಯವನ್ನು ತೂರುವ ಮೊರ, ಕೊಂಗ. उत्क्षिप्यतेऽनेन—करं० "ल्युट्" (३-३-११७)। 5. ಬೀಸಣಿಗೆ. उत्क्षिप्यते कर्मं० "ल्युट्"। "उत्क्षेपणन्तु व्यजने धान्यमर्दनवस्तुनि" मेदि०।

**उत्खचित ಉತ್ಖಚಿತ** (वि०) 1. ಎತ್ತಿಕಟ್ಟಲ್ಪಟ್ಟ. 2. ಚೆನ್ನಾಗಿ ರಚಿಸಲ್ಪಟ್ಟ. उत्+खच (बन्धने) "क्तः" (३-२-१०२)। "कुसुमोत्खचितान् वलीभृतश्चलयन् भृङ्गरुचस्तवालकान्" रघु० ८-५३।

**उत्खन्यमान ಉತ್ಖನ್ಯಮಾನ** (वि०) ಅಗೆಯಲ್ಪಡುವ. उत्+खनु (अवदारणे) कर्मं० "शानच्" (३-२-१२४)।

**उत्खात ಉತ್ಖಾತ** (नं०) 1. ಹಳ್ಳ ತೋಡುವುದು, ಗುಣಿ ಮಾಡುವುದು, ಅಗೆಯುವುದು. 2. ನಾಶಪಡಿಸುವುದು, ಹಾಳುಮಾಡುವುದು. उत्+खनु (अवदारणे) भावे "क्तः" (३-३-११४)। (वि०) 3. ಕೀಳಲ್ಪಟ್ಟ. उत्+खनु (अवदारणे) "क्तः" (३-२-१०२)। "फलैः संवर्धयामासुरुत्खातप्रतिरोपिताः" रघु० ४-३७। "विधातुमुत्खातविषाणमण्डलः" माघ० १-५७। 4. ಬೇರು ಸಹಿತ ಕಿತ್ತುಹಾಕಲ್ಪಟ್ಟ, ಬುಡಸಹಿತ ತೆಗೆಯಲ್ಪಟ್ಟ. "उत्खातविपुलस्तम्भा नागास्त्रुटितशृङ्खलाः" याद० १६-२०। 5. ಎಳೆಯಲ್ಪಟ್ಟ, ಮೇಲಕ್ಕೆ ತೆಗೆಯಲ್ಪಟ್ಟ. "लीलोत्खातमृणालकाण्डकवलच्छेदेषु संपादिताः" मालती० ९-३४।

**उत्खातकेलि ಉತ್ಖಾತಕೇಳಿ** (पुं०) ವಪ್ರಕ್ರೀಡೆ, ಆನೆ ಗೂಳಿ ಮೊದಲಾದುವು ಕೊಂಬಿನಿಂದ ಮಣ್ಣನ್ನು ಅಗೆಯುವ ಆಟ. उत्खातमेव केलिः।

**उत्खाय ಉತ್ಖಾಯ** (अव्यं०) ಕಿತ್ತುಹಾಕಿ, ನಿರ್ಮೂಲ ಮಾಡಿ, ತೆಗೆದುಹಾಕಿ. उत् + खनु (अवदारणे) "ल्यप्" (७-१-३७)। "वङ्गानुत्खाय तरसा नेता नौसाधनोद्यतान्" रघु० ४-३६।

**उत्त ಉತ್ತ** (वि०) ಒದ್ದೆಯಾದ, ತೇವವಾದ. उन्दी (क्लेदने) "क्तः" (३-४-७२)।

**उत्तंस ಉತ್ತಂಸ** (पुं०) 1. ಕರ್ಣಾಭರಣ, ಕುಂಡಲ, ಓಲೆ. उद्+तसि (अलङ्कारे) "घञ्" (३-३-१२१)। "नोत्तंसं क्षिपति क्षितौ श्रवणतः सा मे स्फुटेऽप्यागसि" सा० द०। 2. ಶಿರೋಭೂಷಣ, ತಲೆಯಲ್ಲಿ ಧರಿಸುವ ಒಡವೆ.

**उत्तप्त ಉತ್ತಪ್ತ** (नं०) 1. ಒಣಗಿಸಲ್ಪಟ್ಟ ಮಾಂಸ. उत्+तप (सन्तापे) "क्तः" (३-२-१०२)। 2. ಹೆಚ್ಚು ತಾಪ, ಹೆಚ್ಚು ಬಿಸಿ. (वि०) 3. ಬಿಸಿಮಾಡಲ್ಪಟ್ಟ, ಕಾಯಿಸಲ್ಪಟ್ಟ. 4. ಸ್ನಾನಮಾಡಿದ, ತಾಪಪರಿಹಾರ ಮಾಡಿಕೊಂಡ. उद्गतं तप्तं तापो यस्य।

**उत्तम ಉತ್ತಮ** (पुं०) 1. ಉತ್ತಾನಪಾದರಾಯನ ಮಗ, ಸುರುಚಿಯ ಪುತ್ರ. (वि०) 2. ಶ್ರೇಷ್ಠವಾದ, ಉತ್ಕೃಷ್ಟವಾದ. उत्+तमप् (५-३-५५)। "विघ्नैः पुनःपुनरपि प्रतिहन्यमानाः प्रारब्धमुत्तमगुणास्त्वमिवोद्वहन्ति" मुद्रा० २-१७। 3. ಶ್ರೇಷ್ಠಗುಣವುಳ್ಳ, ಒಳ್ಳೆಯ ಗುಣವುಳ್ಳ, ಒಳ್ಳೆಯ ಸ್ವಭಾವವುಳ್ಳ. "प्रायःप्रयमादत्ते स्वगुणेषूत्तमादरः" कुमा० ६-२०। 4. ಅಧಿಕವಾದ, ಹೆಚ್ಚಾದ. "द्वैप्यानसावुत्तमलाभभाजः" माघ० ३-७६।

**उत्तमगुण ಉತ್ತಮಗುಣ** (वि०) ಶ್ರೇಷ್ಠಗುಣವುಳ್ಳ. उत्तमा गुणा यस्य। "प्रारब्धमुत्तमगुणास्त्वमिवोद्वहन्ति" मुद्रा० २-१७।

**उत्तमपुरुष ಉತ್ತಮಪುರುಷ** (पुं०) ಪರಮಾತ್ಮ. "उत्तमः पुरुषस्त्वन्यः परमात्मेत्युदाहृतः" गीता १५-१७।

**उत्तमफलिनी ಉತ್ತಮಫಲಿನೀ** (स्त्री०) ಹಾಲುತೊಟ್ಟಿನ ಗಿಡ, ಕೀರಹಾಲೆ ಸೊಪ್ಪಿನಗಿಡ.

**उत्तमसाहस ಉತ್ತಮಸಾಹಸ** (पुं०) 1. ಮೊದಲನೆಯ ದರ್ಜೆಯ ಜುಲ್ಮಾನೆ, ದಂಡಾಧಿಕಾರಿಯಿಂದ ವಿಧಿಸಲ್ಪಟ್ಟ 1000 ರೂಪಾಯಿ ದಂಡ. साहसमधिकृततयाऽस्त्यस्य "अच्" (५-२-१२७)। "पणानां द्वे शते सार्धे प्रथमः साहसः स्मृतः। मध्यमः पञ्च विज्ञेयः सहस्रं त्वेव चोत्तमः" मनु० ८-१३८। (नं०) 2. ಪ್ರಾಣಿಹಿಂಸೆ ಮೊದಲಾದ ಕ್ರೂರವಾದ ಕೆಲಸ, ಜನೋಪಕಾರಕವಾದ ಕೆರೆ ಕಟ್ಟೆ ಮೊದಲಾದುವನ್ನು ಒಡೆದು ಹಾಕುವುದು ಮುಂತಾದ ತೊಂದರೆಯ ಕೆಲಸ.

**उत्तमा ಉತ್ತಮಾ** (स्त्री०) ಉತ್ತಮ ಹೆಂಗಸು, ಶ್ರೇಷ್ಠ ಗುಣವುಳ್ಳ ಹೆಂಗಸು. उद् "तमप्" (५-३-५५)।

**उत्तमाङ्ग** ಉತ್ತಮಾಂಗ (ನಂ) ಶಿರಸ್ಸು, ತಲೆ. उत्तमं च तत् अङ्गं च। "स तद्दुकूलादविदूरमौलिर्बभौ पतद्गङ्ग इवोत्तमाङ्गे" कुमा० ७-४१।

**उत्तम्भ** ಉತ್ತಂಭ (ಪುಂ) ಅವಲಂಬನ, ಒತ್ತುಗಂಬ, ಆಧಾರಸ್ತಂಭ. उद् + स्तन्भु (रोधने) "घञ्" (३-३-१२१)।

**उत्तम्भन** ಉತ್ತಂಭನ (ನಂ) 1. ಅವಲಂಬನ, ಆಧಾರ, ಆಶ್ರಯ. उद् + स्तन्भु (रोधने) भावे "ल्युट्" (३-३-११५)। 2. ಆಧಾರಸ್ತಂಭ, ಒತ್ತುಗಂಬ. उद्+स्तन्भु कर० "ल्युट्" (३-३-११७)। "लब्धायामं दन्तयोर्युग्ममेव स्वं नागस्य प्रापदुत्तम्भनत्वम्" माघ० १८-४६।

**उत्तर** ಉತ್ತರ (ಪುಂ) 1. ಉತ್ತರಕುಮಾರ, ವಿರಾಟ ರಾಯನ ಮಗ. 2. ವಿಷ್ಣು. उत्तीर्यते संसारोऽस्मात् — उद्+तॄ (प्लवनतरणयोः) "अप्" (३-३-५७)। "उत्तरो गोपतिर्गोप्ता" वि० स०। 3. ಶಿವ, ಈಶ್ವರ. 4. ಉತ್ತರದೇಶ. 5. ಉತ್ತರಕಾಲ, ಮುಂದಿನಕಾಲ. 6. ಅಗ್ನಿ, ಬೆಂಕಿ. (स्त्रीन०) 7. ಹನ್ನೆರಡನೆಯ, ಇಪ್ಪತ್ತೊಂದನೆಯ ಮತ್ತು ಇಪ್ಪತ್ತಾರನೆಯ ನಕ್ಷತ್ರಗಳು, ಉತ್ತರಫಲ್ಗುನಿ, ಉತ್ತರಾಷಾಢಾ ಮತ್ತು ಉತ್ತರಾಭಾದ್ರಾ ನಕ್ಷತ್ರಗಳು. 8. ಉತ್ತರ, ಬದಲು ಮಾತು, ಪ್ರತಿವಚನ. "वीक्षितेन परिवीक्ष्य पार्वती मूर्धकम्पमयमुत्तरं ददौ" कुमा० ८-६। 9. ಸಮಸ್ತ ಪದದಲ್ಲಿ ಕೊನೆಯಪದ. 10. ನಿರ್ಣಯ, ಸಿದ್ಧಾಂತ. 11. ಠರಾವು, ನಿರ್ಣಯ, ತೀರ್ಮಾನ. 12. ಮುಕ್ತಾಯ, ಸಮಾಪ್ತಿ. 13. ಶ್ರೇಷ್ಠತೆ, ಮೇಲ್ಮೆ. 14. ಮೀಮಾಂಸಕರ ಅಧಿಕರಣದ ಪಂಚಾವಯವಗಳಲ್ಲೊಂದು. "विषयो विशयश्चैव पूर्वपक्षस्तथोत्तरम्। निर्णयश्चेति सिद्धान्ताः शास्त्रेऽधिकरणं स्मृतम्"। 15. ಮೇಲುಭಾಗ. (वि०) 16. ಮೇಲುಭಾಗದ, ಊರ್ಧ್ವಭಾಗದಲ್ಲಿರುವ. 17. ಎಡಭಾಗದ, ವಾಮಭಾಗದ. 18. ಅಧಿಕವಾದ, ಹೆಚ್ಚಾದ. 19. ಮುಂದಿನ, ಅನಂತರದ. "विधीयतां तत्र विधेयमुत्तरम्" किरा० १-२५। 20. ಮುಂದಿನ ಕಾಲದ. 21. ಪ್ರಧಾನವಾದ, ಮುಖ್ಯವಾದ. "धर्मोत्तरं मध्यममाश्रयन्ते" रघु० १३-७। 22. ಶ್ರೇಷ್ಠವಾದ, ಉತ್ತಮವಾದ. 23. ಉತ್ತರದಿಕ್ಕಿನ. (अव्य०) 24. ಅನಂತರ, ಆಮೇಲೆ. 25. ಮುಂದಕ್ಕೆ. (स्त्री०) –रा –ರಾ. 26. ವಿರಾಟರಾಯನ ಮಗಳು ಉತ್ತರೆ, ಅಭಿಮನ್ಯುವಿನ ಪತ್ನಿ, ಅರ್ಜುನನ ಸೊಸೆ. 27. ಉತ್ತರದಿಕ್ಕು. "अस्त्युत्तरस्यां दिशि देवतात्मा हिमालयो नाम नगाधिराजः" कुमा० १-१। 28. ಧನುಸ್ಸಿನ ಸೌಂದರ್ಯ, ಬಿಲ್ಲಿನ ಸೊಬಗು. "उत्तरं प्रतिवाक्ये स्यादूर्ध्वोदीच्योत्तमेऽन्यवत्। उत्तरस्तु विराटस्य तनये दिशि चोत्तरा" विश्व०। "उत्तरं प्रतिवाक्ये स्यादुदीच्ये प्रवरोर्ध्वयोः। स्त्रीलिङ्गत्वे धनुर्लक्ष्म्यां पुरुषे पावके च ना" वैज०।

**उत्तरकाण्ड** ಉತ್ತರಕಾಂಡ (ಪುಂ) ಶ್ರೀಮದ್ರಾಮಾಯಣದ ಉತ್ತರಕಾಂಡ.

**उत्तरकोसल** ಉತ್ತರಕೋಸಲ (ಪುಂಬಂವ०) 1. ಕೋಸಲದೇಶ. (स्त्री०)–कोसला –ಕೋಸಲಾ. 2. ಅಯೋಧ್ಯಾ ನಗರ.

**उत्तरङ्ग** ಉತ್ತರಂಗ (वि०) ಮೇಲಕ್ಕೆ ಏಳುವ ಅಲೆಗಳುಳ್ಳ. उद्गताः तरङ्गाः यस्य। "अवृष्टिसंरम्भमिवाम्बुवाहमपामिवाधारमनुत्तरङ्गम्" कुमा० ३-४८।

**उत्तरतस्** ಉತ್ತರತಸ್ (अव्य०) 1. ಉತ್ತರ ದಿಕ್ಕಿನಲ್ಲಿ, ಉತ್ತರ ಪ್ರದೇಶದಲ್ಲಿ. 2. ಉತ್ತರದಿಕ್ಕಿನಿಂದ, ಉತ್ತರ ಪ್ರದೇಶದಿಂದ. 3. ಮೇಲುಗಡೆ, ಊರ್ಧ್ವಭಾಗ. 4. ಅನಂತರ. उत्तर "अतसुच्" (५-३-२८)।

**उत्तरत्र** ಉತ್ತರತ್ರ (अव्य०) 1. ಉತ್ತರದಿಕ್ಕಿನಲ್ಲಿ. 2. ಅನಂತರದಲ್ಲಿ. उत्तर "त्रल्" (५-३-१०)।

**उत्तरतस्त्य** ಉತ್ತರತಸ್ತ್ಯ (वि०) ಉತ್ತರ ದಿಕ್ಕಿನಲ್ಲಿರುವ. उत्तरतस् "त्यप्" (४-२-१०४)।

**उत्तरत्रत्य** ಉತ್ತರತ್ರತ್ಯ (वि०) ಉತ್ತರ ದಿಕ್ಕಿನಲ್ಲಿರುವ. उत्तरत्र "त्यप्" (४-२-१०४)।

**उत्तरद** ಉತ್ತರದ (वि०) 1. ಉತ್ತರ ಕೊಡುವ. 2. ಬದಲುಮಾತಾಡುವ, ಎದುರುಮಾತಾಡುವ. उत्तरं ददाति — डु दाञ् (दाने) "कः" (३-२-४)।

**उत्तरदायक** ಉತ್ತರದಾಯಕ (वि०) 1. ಉತ್ತರ ಕೊಡುವ. 2. ಎದುರುಮಾತಾಡುವ, ಅಧಿಕಪ್ರಸಂಗಿ, ಅವಿಧೇಯ. उत्तरं ददाति — डु दाञ् (दाने) "ण्वुल्" (३-१-१३३)।

**उत्तरदिक्पालक** ಉತ್ತರದಿಕ್ಪಾಲಕ (ಪುಂ) ಕುಬೇರ, ಉತ್ತರದಿಕ್ಕನ್ನು ರಕ್ಷಿಸುವವನು.

**उत्तरदिक्पाश** ಉತ್ತರದಿಕ್ಪಾಶ (ಪುಂ) ಉತ್ತರ ದಿಕ್ಕಿನ ಪಾಶಚಕ್ರ, ಬೃಹಸ್ಪತಿವಾರದಲ್ಲಿ ಉತ್ತರದಿಕ್ಕಿನಲ್ಲಿ ಯುದ್ಧಾದಿಗಳನ್ನು ನಿಷೇಧಿಸುವ ಪಾಶ. **ದಿಕ್ಪಾಶಗಳ ವಿವರ:**

| ವಾರ | ದಿಕ್ಕು |
|---|---|
| ಭಾನುವಾರ | ದಕ್ಷಿಣ ದಿಕ್ಕು |
| ಸೋಮವಾರ | ಆಗ್ನೇಯ ,, |
| ಮಂಗಳವಾರ | ಪೂರ್ವ ,, |
| ಬುಧವಾರ | ಈಶಾನ್ಯ ,, |
| ಗುರುವಾರ | ಉತ್ತರ ,, |
| ಶುಕ್ರವಾರ | ವಾಯುವ್ಯ ,, |
| ಶನಿವಾರ | ಪಶ್ಚಿಮ ,, |

"रवौ तु दक्षिणे पाशः सोमे आग्नेयकोणके। भौमे तु पूर्वदिग्भागे बुधे ईशानकोणके। जीवे चोत्तरदिग्भागे शुक्रे वायव्यकोणके। शनौ तु पश्चिमे भागे पाशचक्रं प्रकीर्तितम्" रत्नसा०।

**उत्तरदिक्शूल ಉತ್ತರದಿಕ್‌ಶೂಲ** (पुं०) ಉತ್ತರ ದಿಕ್ಕಿನಲ್ಲಿ ಪ್ರಯಾಣವನ್ನು ನಿಷೇಧಿಸುವ. 1. ಬುಧವಾರ. (स्त्री०) 2. ಉತ್ತರಫಲ್ಗುನೀ ನಕ್ಷತ್ರ. "ज्येष्ठा-पूर्वभाद्रपदा रोहिण्युत्तरफल्गुनी। पूर्वादिषु क्रमाच्छूला यात्रादौ मरणप्रदाः"।

**उत्तरदिगीश ಉತ್ತರದಿಗೀಶ** (पुं०) ಕುಬೇರ.

**उत्तरदिग्द्वार ಉತ್ತರದಿಗ್ದ್ವಾರ** (नं०) ಉತ್ತರ ದಿಕ್ಕಿನಲ್ಲಿ ಪ್ರಯಾಣಕ್ಕೆ ಪ್ರಶಸ್ತವಾದ ನಕ್ಷತ್ರಗಳು; ಧನಿಷ್ಠೆ, ಶತಭಿಷೆ, ಪೂರ್ವಾಭಾದ್ರೆ, ಉತ್ತರಾಭಾದ್ರೆ, ರೇವತಿ, ಅಶ್ವಿನಿ ಮತ್ತು ಭರಣಿ ನಕ್ಷತ್ರಗಳು. उत्तरदिशि द्वारं मुखमस्य। **ಪೂರ್ವ ಮೊದಲಾದ ದಿಕ್ಕುಗಳಲ್ಲಿ ಪ್ರಯಾಣಕ್ಕೆ ಪ್ರಶಸ್ತವಾದ ನಕ್ಷತ್ರಗಳು:**

| ದಿಕ್ಕು | ನಕ್ಷತ್ರ |
|---|---|
| ಪೂರ್ವ | ಕೃತ್ತಿಕೆ, ರೋಹಿಣಿ, ಮೃಗಶಿರೆ, ಆರಿದ್ರೆ, ಪುನರ್ವಸು, ಪುಷ್ಯ ಮತ್ತು ಆಶ್ಲೇಷ. |
| ದಕ್ಷಿಣ | ಮಖೆ, ಪುಬ್ಬೆ, ಉತ್ತರಫಲ್ಗುನಿ, ಹಸ್ತ, ಚಿತ್ತೆ, ಸ್ವಾತಿ ಮತ್ತು ವಿಶಾಖೆ. |
| ಪಶ್ಚಿಮ | ಅನೂರಾಧೆ, ಜ್ಯೇಷ್ಠೆ, ಮೂಲ, ಪೂರ್ವಾಷಾಢ, ಉತ್ತರಾಷಾಢ, ಅಭಿಜಿತ್ ಮತ್ತು ಶ್ರವಣ. |
| ಉತ್ತರ | ಧನಿಷ್ಠೆ, ಶತಭಿಷೆ, ಪೂರ್ವಾಭಾದ್ರೆ, ಉತ್ತರಾಭಾದ್ರೆ, ರೇವತಿ, ಅಶ್ವಿನಿ ಮತ್ತು ಭರಣಿ. |

"प्राच्यादिषु चतुर्दिक्षु सप्तसप्तानलर्क्षतः"।

**उत्तरदिग्बलिन् ಉತ್ತರದಿಗ್ಬಲಿನ್** (पुं०) 1. ಶುಕ್ರ. 2. ಚಂದ್ರ. ಇವರು ಉತ್ತರದಿಕ್ಕಿನಲ್ಲಿ ಬಲಿಷ್ಠರು. "प्राच्यां सौम्यसुराचार्यौ याम्यां भास्करभूमिजौ। प्रत्यक् सौरिरुदीच्यां तु सितेन्दू दिग्बलान्वितौ"।

**उत्तरपक्ष ಉತ್ತರಪಕ್ಷ** (पुं०) 1. ಕೃಷ್ಣಪಕ್ಷ, ತಿಂಗಳಿನ ಎರಡನೆಯ (ಅರ್ಧ) ಭಾಗ. 2. ವಾದದ ಕೊನೆಯ ಭಾಗ, ಸಿದ್ಧಾಂತ, ನಿರ್ಣಯ. 3. ಮೀಮಾಂಸಕರ ಅಧಿಕರಣದ ಪಂಚಾವಯವಗಳಲ್ಲೊಂದು. ["उत्तर" ಪದದಲ್ಲಿ ನೋಡಿ.]

**उत्तरपट ಉತ್ತರಪಟ** (पुं०) 1. ಉತ್ತರೀಯ, ಹೊದೆಯುವ ವಸ್ತ್ರ. 2. ಹಾಸಿಗೆಯ ಮೇಲೆ ಹಾಸುವ ಬಟ್ಟೆ, ಮಗ್ಗಲು ಹಾಸಿಗೆ, ದುಪ್ಪಟಿ.

**उत्तरपथ ಉತ್ತರಪಥ** (पुं०) 1. ಉತ್ತರದಿಕ್ಕಿನ ದಾರಿ, ಉತ್ತರದಿಕ್ಕಿಗೆ ಹೋಗುವ ಮಾರ್ಗ. 2. ದೇವತೆಗಳು ಸಂಚರಿಸುವ ದಾರಿ. 3. ಬ್ರಹ್ಮಜ್ಞಾನಿಗಳು ಬ್ರಹ್ಮಲೋಕಕ್ಕೆ ಹೋಗುವ ಅರ್ಚಿರಾದಿ ಮಾರ್ಗ, ಉತ್ತರಾಯಣ. उत्तरश्चासौ पन्थाश्च "अः" (५-४-७४)। "अग्निर्ज्योतिरहः शुक्लः षण्मासा उत्तरायणम्। तत्र प्रयाता गच्छन्ति ब्रह्म ब्रह्मविदो जनाः" गीता ८-२४।

**उत्तरपथिक ಉತ್ತರಪಥಿಕ** (वि०) ಉತ್ತರ ದೇಶದ ಯಾತ್ರಿಕ, ಉತ್ತರ ದೇಶದಲ್ಲಿ ಸಂಚರಿಸುವವನು. पन्थानं गच्छति "ष्कन्" (५-१-७५)। उत्तरश्चासौ पथिकश्च।

**उत्तरपद ಉತ್ತರಪದ** (नं०) 1. ಸಮಸ್ತಪದದಲ್ಲಿ ಕೊನೆಯ ಪದ. राजपुरुषः ಎಂಬಲ್ಲಿ पुरुष ಪದವು ಉತ್ತರಪದ. 2. ಮುಂದಿನ ಪದ. उत्तरं च तत् पदं च।

**उत्तरपश्चिमा ಉತ್ತರಪಶ್ಚಿಮಾ** (स्त्री०) ಉತ್ತರ ಮತ್ತು ಪಶ್ಚಿಮ ದಿಕ್ಕುಗಳ ಮಧ್ಯದ ದಿಕ್ಕು, ವಾಯುವ್ಯ ದಿಕ್ಕು. उत्तरस्याः पश्चिमायाश्च दिशोऽन्तरालम्।

**उत्तरपाद ಉತ್ತರಪಾದ** (पुं०) ವ್ಯವಹಾರ (ವಿವಾದ) ದ ಎರಡನೆಯ ಹಂತ. "पूर्वपक्षः स्मृतः पादो द्वितीयश्चोत्तरः स्मृतः। क्रियापादः तृतीयः स्याच्चतुर्थो निर्णयः स्मृतः" ಈ ರೀತಿಯಾಗಿ ವ್ಯವಹಾರವು ನಾಲ್ಕು ಭಾಗಗಳಿಂದ ಕೂಡಿದೆ.

**उत्तरपूर्वा ಉತ್ತರಪೂರ್ವಾ** (स्त्री०) ಉತ್ತರ ಮತ್ತು ಪೂರ್ವ ದಿಕ್ಕುಗಳ ಮಧ್ಯದ ದಿಕ್ಕು, ಈಶಾನ್ಯ ದಿಕ್ಕು. उत्तरस्याः पूर्वस्याश्च दिशोऽन्तरालम्।

**उत्तरफल्गुनी ಉತ್ತರಫಲ್ಗುನೀ** (स्त्री०) ಉತ್ತರಫಲ್ಗುನೀ ನಕ್ಷತ್ರ, ಅಶ್ವಿನ್ಯಾದಿ ಇಪ್ಪತ್ತೇಳು ನಕ್ಷತ್ರಗಳಲ್ಲಿ ಹನ್ನೆರಡನೆಯದು. फलति—फल (निष्पत्तौ) "उनन्" गुक् च (उ० ३-५६)। उत्तरा च सा

फल्गुनी च। ಇದು ಅರ್ಯಮ ದೇವತಾಕವಾದುದು. ಮನುಷ್ಯ ಗಣಕ್ಕೂ ಗೋ (ಎತ್ತು) ಯೋನಿಗೂ ಸೇರಿದುದು. ಈ ನಕ್ಷತ್ರದಲ್ಲಿ ಹುಟ್ಟಿದವನು ದಾನಶೀಲನೂ ಸ್ವಜನರಲ್ಲಿ ದಯಾಳುವೂ ಒಳ್ಳೆಯ ಸ್ವಭಾವದವನೂ ಕೀರ್ತಿಶಾಲಿಯೂ ಬುದ್ಧಿಶಾಲಿಯೂ ಧೀರನೂ ಮೃದು ಸ್ವಭಾವದವನೂ ಆಗುತ್ತಾನೆ. "दाता दयालुः स्वजने सुशीलो विशालकीर्तिः सुमतिः प्रधानः। धीरो नरोऽत्यन्तमृदुस्वभावश्चेदुत्तराफल्गुनिकाप्रसूतिः"। ಈ ನಕ್ಷತ್ರದಲ್ಲಿ ಹುಟ್ಟಿದವರಿಗೆ ರವಿ ಮಹಾದಶೆಯು ಪ್ರಾರಂಭವಾಗುವುದು. ಈ ದಶೆಯ ಪ್ರಮಾಣ 6 ವರ್ಷಗಳು.

**उत्तरमीमांसा ಉತ್ತರಮೀಮಾಂಸಾ** (स्त्री०) ವೇದವ್ಯಾಸ ಮಹರ್ಷಿಪ್ರಣೀತವಾದ ನಾಲ್ಕು ಅಧ್ಯಾಯಗಳುಳ್ಳ ಶಾರೀರಕಸೂತ್ರ, ಬ್ರಹ್ಮಸ್ವರೂಪದ ವಿಚಾರಮಾಡುವ ವೇದಾಂತ ಗ್ರಂಥ. उत्तरस्य वेदशेषभागस्य उपनिषद्रूपस्य मीमांसा विचारः।

**उत्तररामचरित ಉತ್ತರರಾಮಚರಿತ** (न०) ಭವಭೂತಿ ಕವಿವಿರಚಿತವಾದ ಒಂದು ನಾಟಕ. उत्तरं रामस्य चरितं यत्र।

**उत्तरवादिन् ಉತ್ತರವಾದಿನ್** (वि०) ಪ್ರತಿವಾದಿ, ವ್ಯವಹಾರದಲ್ಲಿ ಪ್ರತಿಪಕ್ಷದವನು. उत्तरमुत्तरपक्षं सिद्धान्तं वदति—वद (व्यक्तायां वाचि) "णिनिः" (३-१-१३४)।

**उत्तरसाक्षिन् ಉತ್ತರಸಾಕ್ಷಿನ್** (वि०) ತನ್ನ ಪಕ್ಷದ ಇತರ ಸಾಕ್ಷಿಗಳ ವರದಿಯಿಂದ ಯಥಾರ್ಥವನ್ನು ನುಡಿದು ವ್ಯವಹಾರವನ್ನು ಸಾಧಿಸುವ ಸಾಕ್ಷಿ. "साक्षिणामपि यः साक्ष्यं स्वपक्षं परिभाषताम्। श्रवणाच्छ्रावणाद्वापि स साक्ष्युत्तरसंज्ञकः" नारदः।

**उत्तरा ಉತ್ತರಾ** (स्त्री०) 1. ಉತ್ತರದಿಕ್ಕು. 2. ವಿರಾಟರಾಯನ ಮಗಳು, ಅಭಿಮನ್ಯುವಿನ ಹೆಂಡತಿ. (अव्य०) 3. ಉತ್ತರದಿಕ್ಕಿನಲ್ಲಿ. 4. ಉತ್ತರ ದೇಶದಲ್ಲಿ. 5. ಉತ್ತರ ಕಾಲದಲ್ಲಿ, ಮುಂದಿನ ಕಾಲದಲ್ಲಿ. उत्तर "आच्" (५-३-३६)।

**उत्तरात् ಉತ್ತರಾತ್** (अव्य०) 1. ಉತ್ತರ ದಿಕ್ಕು, ಉತ್ತರ ದಿಕ್ಕಿನಿಂದ, ಉತ್ತರ ದಿಕ್ಕಿನಲ್ಲಿ. 2. ಉತ್ತರ ದೇಶ, ಉತ್ತರ ದೇಶದಿಂದ, ಉತ್ತರ ದೇಶದಲ್ಲಿ. 3. ಉತ್ತರ ಕಾಲ, ಉತ್ತರ ಕಾಲದಿಂದ, ಉತ್ತರ ಕಾಲದಲ್ಲಿ; ಮುಂದಿನ ಕಾಲ, ಮುಂದಿನ ಕಾಲದಿಂದ, ಮುಂದಿನ ಕಾಲದಲ್ಲಿ. उत्तर (दिग्देशकालविषये) "आतिः" (५-३-३४)।

**उत्तराधर ಉತ್ತರಾಧರ** (पु०) ಮೇಲಿನ ತುಟಿ. "निवार्यतामालि किमप्ययं वटुः पुनर्विवक्षुः स्फुरितोत्तराधरः" कुमा० ५-८३।

**उत्तराधिकारिन् ಉತ್ತರಾಧಿಕಾರಿನ್** (वि०) ಹಕ್ಕುದಾರ, ವಾರಸುದಾರ, ಯಜಮಾನನ ಕಾಲಾನಂತರ ಆಸ್ತಿಪಾಸ್ತಿಗಳಿಗೆ ಅಧಿಕಾರಿಯಾಗುವವನು. उत्तरं अनन्तरमधिकरोति स्वत्वमाप्नोति — अधि + डु कृञ् (करणे) "णिनिः" (३-१-१३४)। स्त्रियाम् "ङीप्" (४-१-५)। –अधिकारिणी –ಅಧಿಕಾರಿಣೀ.

**उत्तरापरा ಉತ್ತರಾಪರಾ** (स्त्री०) ಉತ್ತರ ಮತ್ತು ಪಶ್ಚಿಮ ದಿಕ್ಕುಗಳ ಮಧ್ಯದ ದಿಕ್ಕು, ವಾಯುವ್ಯ ದಿಕ್ಕು. उत्तरस्याः अपरस्याश्च दिशोऽन्तरालम्।

**उत्तराभाद्रपद् ಉತ್ತರಾಭಾದ್ರಪದ್** (स्त्री०) ಅಶ್ವಿನ್ಯಾದಿ ಇಪ್ಪತ್ತಾರನೆಯ ನಕ್ಷತ್ರ. भद्राय हितः भाद्रः, भाद्रः पत् पादो यस्याः। उत्तरा च सा भाद्रपच्च। पदशब्देन समासे "टाप्" (४-१-४)। –भाद्रपदा –ಭಾದ್ರಪದಾ. ಇದು ಬ್ರಹ್ಮದೇವತಾಕವಾದುದು. ಮನುಷ್ಯಗಣಕ್ಕೂ ಗೋಯೋನಿಗೂ ಸೇರಿದುದು. ಈ ನಕ್ಷತ್ರದಲ್ಲಿ ಜನಿಸಿದವನು ಧನಿಕನೂ ಸತ್ಕುಲಪ್ರಸೂತನೂ ಕಾರ್ಯಚತುರನೂ ರಾಜರಿಂದ ಗೌರವಿಸಲ್ಪಡತಕ್ಕವನೂ ಬಲಶಾಲಿಯೂ ಸತ್ಕರ್ಮಾಚರಣೆಯುಳ್ಳವನೂ ಬಂಧುಪ್ರಿಯನೂ ಆಗುತ್ತಾನೆ. "धनी कुलीनः कुशलः क्रियादौ भूपालमान्यो बलवान् महौजाः। सत्कर्मकर्ता निजबन्धुभक्तो यद्युत्तराभाद्रपदाप्रसूतः"। ಈ ನಕ್ಷತ್ರದಲ್ಲಿ ಹುಟ್ಟಿದವರಿಗೆ ಶನಿ ಮಹಾದಶೆಯು ಪ್ರಾರಂಭವಾಗುವುದು. ಈ ದಶೆಯ ಪ್ರಮಾಣ 19 ವರ್ಷಗಳು.

**उत्तरायण ಉತ್ತರಾಯಣ** (न०) 1. ಉತ್ತರದಿಕ್ಕಿನಲ್ಲಿ ಸೂರ್ಯನ ಸಂಚಾರ. उत्तरा उत्तरस्यामयनं सूर्यस्य सञ्चारः। 2. ಸೂರ್ಯನು ಉತ್ತರ ದಿಕ್ಕಿನಲ್ಲಿ ಸಂಚರಿಸುವ ಕಾಲ, ಮಕರಸಂಕ್ರಾಂತಿಯಿಂದ ಕರ್ಕಾಟಕ ಸಂಕ್ರಾಂತಿವರೆಗಿನ (ಆರು ತಿಂಗಳು) ಕಾಲ. "कर्कटादिस्थिते भानौ दक्षिणायनमुच्यते। उत्तरायणमप्युक्तं मकरस्थे दिवाकरे"।

**उत्तराशा ಉತ್ತರಾಶಾ** (स्त्री०) 1. ಉತ್ತರ ದಿಕ್ಕು. 2. ಮುಂದಿನ ಆಶೆ.

**उत्तराशाधीश ಉತ್ತರಾಶಾಧೀಶ** (पु०) 1. ಬುಧಗ್ರಹ. 2. ಕುಬೇರ.

**उत्तराषाढा** ಉತ್ತರಾಷಾಢಾ (स्त्री०) ಉತ್ತರಾಷಾಢಾ ನಕ್ಷತ್ರ, ಅಶ್ವಿನಿ ಮೊದಲಾಗಿ ಇಪ್ಪತ್ತೊಂದನೆಯ ನಕ್ಷತ್ರ. ಇದು ವಿಶ್ವೇದೇವದೇವತಾಕವಾದುದು. ಮನುಷ್ಯಗಣಕ್ಕೂ ಮುಂಗಿಸಿ ಯೋನಿಗೂ ಸೇರಿದುದು. ಈ ನಕ್ಷತ್ರದಲ್ಲಿ ಹುಟ್ಟಿದವನು ದಾನಶೀಲ, ದಯಾಳು, ಜಯಶಾಲಿ, ವಿನಯಶಾಲಿ, ಸತ್ಕರ್ಮಗಳಲ್ಲಿ ಆಸಕ್ತನು. ಪತ್ನೀಪುತ್ರಾದಿಗಳಿಂದ ಸುಖವುಳ್ಳವನು ಮತ್ತು ಬುದ್ಧಿಶಾಲಿ. "दाता दयावान् विजयी विनीतः सत्कर्मचेता विभवैः समेतः। कान्तासुतावाप्तसुखो नितान्तं वैश्वे सुवेषः पुरुषो मनीषी"। ಈ ನಕ್ಷತ್ರದಲ್ಲಿ ಹುಟ್ಟಿದವರಿಗೆ ರವಿಮಹಾದಶೆಯು ಪ್ರಾರಂಭವಾಗುವುದು. ಈ ದಶೆಯ ಪ್ರಮಾಣ 6 ವರ್ಷಗಳು.

**उत्तरासङ्ग** ಉತ್ತರಾಸಂಗ (पु०) ಉತ್ತರೀಯ, ಹೊದೆಯುವ ಬಟ್ಟೆ. उत्तरे ऊर्ध्वभागे आसज्यते — आ+षञ्ज (सङ्गे) "घञ्" (३-३-१९)। "कृष्णोत्तरासङ्गरुचं विदधच्चौतपल्लवीम्" माघ० २-१९।

**उत्तराह** ಉತ್ತರಾಹ (पु०) ಮುಂದಿನ ದಿನ, ಮಾರನೆಯ ದಿನ. उत्तरमहः "टच्" (५-४-९१)।

**उत्तराहि** ಉತ್ತರಾಹಿ (अव्य०) 1. ಉತ್ತರ ದಿಕ್ಕು, ಉತ್ತರ ದಿಕ್ಕಿನಿಂದ, ಉತ್ತರ ದಿಕ್ಕಿನಲ್ಲಿ. 2. ಉತ್ತರ ದೇಶ, ಉತ್ತರ ದೇಶದಿಂದ, ಉತ್ತರ ದೇಶದಲ್ಲಿ. 3. ಉತ್ತರಕಾಲ, ಉತ್ತರ ಕಾಲದಿಂದ, ಉತ್ತರ ಕಾಲದಲ್ಲಿ. उत्तर "आहि" (५-३-३८)। ಈ ರೀತಿ उत्तर ಶಬ್ದದ ಮೇಲೆ अतसुच्, आच्, आतिः ಮತ್ತು आहि ಈ ನಾಲ್ಕು ಪ್ರತ್ಯಯಗಳು ಬರಲಾಗಿ उत्तरतः, उत्तरा, उत्तरात् ಮತ್ತು उत्तराहि ಎಂದು ದಿಗ್ದೇಶಕಾಲ ವಿಷಯಗಳಲ್ಲಿ ಪ್ರಥಮಾ, ಪಂಚಮೀ ಮತ್ತು ಸಪ್ತಮ್ಯರ್ಥಗಳಲ್ಲಿ ನಾಲ್ಕು ರೂಪಗಳಾಗುವುವು.

**उत्तरीय** ಉತ್ತರೀಯ (न०) ಹೊದೆಯುವ ವಸ್ತ್ರ. उत्तरस्मिन् देहभागे भवम् "छः" (४-२-१३८)। "हृतोत्तरीयां प्रसभं सभायामागतह्रियः" किरा० ११-४९। "धौतोत्तरीयप्रतिमच्छवीनि" माघ० ४-५।

**उत्तरेण** ಉತ್ತರೇಣ (अव्य०) ಉತ್ತರದ ಕಡೆ, ಉತ್ತರ ದಿಕ್ಕಿನಲ್ಲಿ. उत्तर "एनप्" (५-३-३५)। "तत्रागारं धनपतिगृहानुत्तरेणास्मदीयम्" मेघ० २-१२।

**उत्तरेद्युस्** ಉತ್ತರೇದ್ಯುಸ್ (अव्य०) ಮಾರನೆಯ ದಿನ, ಮರುದಿನ, ಮುಂದಿನ ದಿನ. उत्तर "एद्युस्" (५-३-२२)।

**उत्तरोत्तर** ಉತ್ತರೋತ್ತರ (न०) 1. ಉತ್ತರದ ಮೇಲೆ ಉತ್ತರ, ಉತ್ತರಕ್ಕೆ ಬದಲು ಮಾತು. (वि०) 2. ಮುಂದು ಮುಂದಿನ. (अव्य०) 3. ಮೇಲೆ ಮೇಲೆ, ಮುಂದೆ ಮುಂದೆ, ಕ್ರಮವಾಗಿ, ಒಂದಾದ ಮೇಲೆ ಒಂದಾಗಿ. "उत्तरोत्तरमुत्कर्षः सार इत्यभिधीयते" चन्द्रा०। "परनित्यान्तरङ्गापवादानामुत्तरोत्तरं बलीयः" परि०।

**उत्तस्थिवस्** ಉತ್ತಸ್ಥಿವಸ್ (वि०) ಮೇಲಕ್ಕೆ ಎದ್ದಿರುವ. उद् + ष्ठा (गतिनिवृत्तौ) "क्वसुः" (३-२-१०७)।

**उत्तान** ಉತ್ತಾನ (वि०) 1. ಮೇಲುಮುಖವಾದ. "उत्तानपाणिद्वयसन्निवेशात्" कुमा० ३-४५। 2. ಎತ್ತರವಾದ, ಉಬ್ಬಿರುವ. उद्गतस्तानो विस्तारोऽस्मात्। "पत्रावलीप्रसाधनोत्तानवक्षःस्थल०" मालती० ७। 3. ಆಳವಿಲ್ಲದ, ಸ್ವಲ್ಪ ನೀರುಳ್ಳ. 4. ಮೇಲುಮುಖವಾಗಿ ಮಲಗಿರುವ, ಅಂಗಲಾಚಿ ಮಲಗಿರುವ. "उत्तान-मगभीरे स्यादूर्ध्वास्यशयितेऽपि च" मेदि०।

**उत्तानपाद** ಉತ್ತಾನಪಾದ (पु०) 1. ಸ್ವಾಯಂಭುವ (ಮೊದಲನೆಯ) ಮನುವಿನ ಮಗ, ಒಬ್ಬ ದೊರೆ, ಧ್ರುವಕುಮಾರನ ತಂದೆ. 2. ಪರಮಾತ್ಮ. उत्तानः ऊर्ध्वस्थितः पादोऽस्य।

**उत्तानपादज** ಉತ್ತಾನಪಾದಜ (पु०) ಧ್ರುವಕುಮಾರ. उत्तानपादाज्जातः — जनी (प्रादुर्भावे) "डः" (३-२-९८)।

**उत्तानशय** ಉತ್ತಾನಶಯ (पु०) ಶಿಶು, ಅಂಗಲಾಚಿ ಮಲಗುವ ಎಳೆಯ ಮಗು. उत्तानः शेते — शीङ् (स्वप्ने) "अच्" (वा० ३-२-१५)। "णिनिः" (३-२-७८)। -शायिन्-ಶಾಯಿನ್.

**उत्तार** ಉತ್ತಾರ (पु०) 1. ದಾಟುವುದು, ಅಡ್ಡಹಾಯುವುದು. 2. ವಾಂತಿ ಮಾಡುವುದು. उद्+तॄ (प्लवन-तरणयोः) "घञ्" (३-३-१८)। (वि०) 3. ಮೇಲಕ್ಕೆ ಒಯ್ಯುವ. 4. ದಡವನ್ನು ಮುಟ್ಟಿಸುವ, ತೀರಕ್ಕೆ ಒಯ್ಯುವ. उद्+तॄ+णिच् "अच्" (३-१-१३४)। "यत्रासौ संसारसागरोत्तारतरणिकर्णधारो भगवान् हरिः स्वयं प्रतिवसति" प्रबोध० ५।

**उत्तारक** ಉತ್ತಾರಕ (वि०) 1. ದಡವನ್ನು ಮುಟ್ಟಿಸುವ, ತೀರಕ್ಕೆ ಒಯ್ಯುವ. 2. ರಕ್ಷಕ, ವಿಪತ್ತಿನಿಂದ ಪಾರು ಮಾಡುವವನು. उद्+तॄ (प्लवनतरणयोः) + णिच् "ण्वुल्" (३-१-१३३)।

**उत्तारण** ಉತ್ತಾರಣ (पुं०) 1. ವಿಷ್ಣು. उद्+तॄ (प्लवन-तरणयोः) + णिच् "ल्युः" (३-१-१३४)। "सरसस्तं तारितवानित्युत्तारण ईरितः" निरुक्तिः। "उत्तारणो दुष्कृतिहा पुण्यो दुःस्वप्ननाशनः" वि० स०। (न०) 2. ದಡವನ್ನು ಮುಟ್ಟಿಸುವುದು, ತೀರಕ್ಕೆ ಒಯ್ಯುವುದು. उद् + तॄ + णिच् भावे "ल्युट्" (३-३-११५)। (वि०) 3. ದಡವನ್ನು ಮುಟ್ಟಿಸುವ, ತೀರಕ್ಕೆ ಒಯ್ಯುವ. कर्त० "अच्" (३-१-१३४)।

**उत्तारयितृ** ಉತ್ತಾರಯಿತೃ (वि०) 1. ದಾಟಿಸುವ, ದಡವನ್ನು ಮುಟ್ಟಿಸುವ. 2. ಕಾಪಾಡುವ, ರಕ್ಷಿಸುವ, ಕಷ್ಟದಿಂದ ಪಾರುಮಾಡುವ. उद् + तॄ (प्लवन-तरणयोः) + णिच् "तृच्" (३-१-१३३)।

**उत्तारित** ಉತ್ತಾರಿತ (वि०) 1. ದಾಟಿಸಲ್ಪಟ್ಟ, ದಡಕ್ಕೆ ಒಯ್ಯಲ್ಪಟ್ಟ. 2. ರಕ್ಷಿಸಲ್ಪಟ್ಟ, ಕಷ್ಟದಿಂದ ಪಾರು ಮಾಡಲ್ಪಟ್ಟ. उद्+तॄ (प्लवनतरणयोः) + णिच् "क्तः" (३-२-१०२)। "उत्तारितां शत्रुभयादुदीर्णात्" याद० १३-२८।

**उत्तार्य** ಉತ್ತಾರ್ಯ (वि०) 1. ದಾಟಲು ಅರ್ಹವಾದ, ದಾಟಲ್ಪಡುವ. 2. ವಾಂತಿಮಾಡಲ್ಪಡುವ. उद्+तॄ (प्लवनतरणयोः) "यत्" (३-१-९७)। 3. ದಾಟಿಸಲ್ಪಡುವ. उद्+तॄ+णिच् "यत्" (३-१-९७)। (अव्य०) 4. ದಾಟಿಸಿ. 5. ವಾಂತಿಮಾಡಿಸಿ. उद्+तॄ+णिच् "ल्यप्" (७-१-३७)।

**उत्ताल** ಉತ್ತಾಲ (वि०) 1. ದೊಡ್ಡ ಶಬ್ದಮಾಡುವ, ಭೋರ್ರೆಂದು ಧ್ವನಿಮಾಡುವ (ಗಾಳಿ). "उत्तालः किंकिणीनामनवरतरणत्कारहेतुः पताकाम्" मालती० ५-४। 2. ದೊಡ್ಡದಾದ, ಉನ್ನತವಾದ, ಎತ್ತರವಾದ. "उत्तालतालीवनसंप्रवृत्तसमीरसीमन्तितकेतकीकाः" माघ० ३-८०। 3. ಭಯಂಕರವಾದ, ಪ್ರಚಂಡವಾದ. "उत्तालाः कटपूतनाप्रभृतयः सांराविणं कुर्वते" मालती० ५-११। 4. ಸ್ಫುಟವಾದ, ಸ್ಪಷ್ಟವಾಗಿ ತೋರುವ. "तूर्यारावैराहितोत्तालतालैर्गायन्तीभिः काहलं काहलाभिः" माघ० १८-५४।

**उत्तितीर्षा** ಉತ್ತಿತೀರ್ಷಾ (स्त्री०) 1. ದಾಟಲು ಇಚ್ಛೆ, ದಡಮುಟ್ಟಲು ಆಸೆ. उत्तरितुमिच्छा—उद्+तॄ (प्लवन-तरणयोः) + सन् "अः" (३-३-१०२)। 2. ತೇರ್ಗಡೆ ಹೊಂದಲು ಆಸೆ, ವಿದ್ಯಾಭ್ಯಾಸದಲ್ಲಿ ಮುಂದಿನ ಹಂತವನ್ನು ಏರಲು ಆಸೆ.

**उत्तितीर्षु** ಉತ್ತಿತೀರ್ಷು (वि०) 1. ದಡವನ್ನು ಮುಟ್ಟಲು ಆಸೆಯುಳ್ಳ, ದಾಟಲು ಇಚ್ಛೆಯುಳ್ಳ. 2. ಪರೀಕ್ಷೆಯಲ್ಲಿ ತೇರ್ಗಡೆಹೊಂದಲು ಆಸೆಯುಳ್ಳ, ವಿದ್ಯಾಭ್ಯಾಸದಲ್ಲಿ ಮುಂದಿನ ಹಂತವನ್ನು ಮುಟ್ಟಲು ಇಚ್ಛೆಯುಳ್ಳ. उत्तरितुमिच्छुः — उद् + तॄ (प्लवनतरणयोः) + सन् "उः" (३-२-१६८)।

**उत्तिष्ठत्** ಉತ್ತಿಷ್ಠತ್ (वि०) ಮೇಲಕ್ಕೆ ಏಳುತ್ತಿರುವ. उद् + ष्ठा (गतिनिवृत्तौ) "शतृ" (३-२-१२४)। स्त्रियाम् "ङीप्" (४-१-६)। उत्तिष्ठन्ती ಉತ್ತಿಷ್ಠಂತೀ.

**उत्तिष्ठमान** ಉತ್ತಿಷ್ಠಮಾನ (वि०) ಅಭಿವೃದ್ಧಿ ಹೊಂದುತ್ತಿರುವ. उद् + ष्ठा (गतिनिवृत्तौ) अनूर्ध्वकर्मणि "शानच्" (३-२-१२४)। "उत्तिष्ठमानस्तु परो नोपेक्ष्यः पथ्यमिच्छता" माघ० २-१०।

**उत्तिष्ठासा** ಉತ್ತಿಷ್ಠಾಸಾ (स्त्री०) ಮೇಲಕ್ಕೆ ಏಳಲು ಆಸೆ. उत्थातुमिच्छा—उद्+ष्ठा (गतिनिवृत्तौ) + सन् "अः" (३-३-१०२)।

**उत्तिष्ठासु** ಉತ್ತಿಷ್ಠಾಸು (वि०) ಮೇಲಕ್ಕೆ ಏಳಲು ಅಪೇಕ್ಷಿಸುವ, ಮೇಲಕ್ಕೆ ಏಳಲು ಇಚ್ಛಿಸುವ. उत्थातुमिच्छुः—उद्+ष्ठा (गतिनिवृत्तौ) +सन् "उः" (३-२-१६८)।

**उत्तीर्ण** ಉತ್ತೀರ್ಣ (वि०) 1. (ನದಿಯನ್ನು) ದಾಟಿದ, ದಡವನ್ನು ಮುಟ್ಟಿದ. 2. ಕಷ್ಟದಿಂದ ಪಾರಾದ. 3. ವಿದ್ಯಾಭ್ಯಾಸದಲ್ಲಿ ಮೇಲಿನ ಹಂತವನ್ನು ಮುಟ್ಟಿದ, ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ. उद्+तॄ (प्लवन-तरणयोः) कर्त० "क्तः" (३-४-७२)। 4. ದಾಟಲ್ಪಟ್ಟ. 5. ಕಷ್ಟದಿಂದ ಬಿಡಲ್ಪಟ್ಟ. 6. ಕಳೆಯಲ್ಪಟ್ಟ, ಕಳಗಿಳಿಸಲ್ಪಟ್ಟ, ಕಡಿಮೆಮಾಡಲ್ಪಟ್ಟ. उद्+तॄ कर्म० "क्तः" (३-२-१०२)। "उत्तीर्णभारलघुनाप्य-लघूलपोघसौहित्यनिःसहतरेण तरोरधस्तात्" माघ० ५-६२।

**उत्तुङ्ग** ಉತ್ತುಂಗ (वि०) ಉನ್ನತವಾದ, ಎತ್ತರವಾದ. उत्कृष्टस्तुङ्गः। "अध्यासामासुरुत्तुङ्गहेमपीठानि यान्यमी" माघ० २-५। "उत्तुङ्गस्तनभरभङ्गभीरुमध्याम्" माघ० ४-३८।

**उत्तुङ्गता** ಉತ್ತುಂಗತಾ (स्त्री०) ಎತ್ತರ, ಔನ್ನತ್ಯ. उत्तुङ्गस्य भावः "तल्" (५-१-११९)। "यच्छाल-मुत्तुङ्गतया विजेतुं दूरादुदस्थीयत सागरस्य" माघ० ३-४०।

**उत्तुष** ಉತ್ತುಷ (ಪುಂ) ಪುರಿ, ಹುರಿದ ಧಾನ್ಯ. उद्गत-स्तुषोऽस्मात्।

**उत्तेजक** ಉತ್ತೇಜಕ (ವಿಂ) 1. ಉದ್ರೇಕಗೊಳಿಸುವ. 2. ಹುರಿದುಂಬಿಸುವ, ಪ್ರೋತ್ಸಾಹಿಸುವ. 3. ಸಾಣೆ ಕೊಡುವ, ಹರಿತಮಾಡುವ. 4. ಮೆರುಗುಕೊಡುವ, ಬೆಳಗುವ. उद्+तिज (निशाने) "ण्वुल्" (३-१-१३३)।

**उत्तेजन** ಉತ್ತೇಜನ (ನಂ) 1. ಉದ್ರೇಕಗೊಳಿಸುವುದು. 2. ತೀಕ್ಷ್ಣಮಾಡುವುದು, ಸಾಣೆಕೊಡುವುದು. 3. ಹುರಿದುಂಬಿಸುವುದು, ಪ್ರೋತ್ಸಾಹಿಸುವುದು. उद्+तिज (निशाने)+णिच् "ल्युट्" (३-३-११५)। "चन्द्रगुप्त: समुत्तेजनसमर्थै: श्लोकैरुपश्लोकयितव्य:" मुद्रा० ४। (स्त्री०) —ना—ನಾ. ಒಪ್ಪಕೊಡುವುದು, ಮೆರುಗು ಹಾಕುವುದು. उद्+तिज+णिच् "युच्" (३-३-१०७)। "तमङ्गदे मन्दरकूटकोटिव्याघट्टनोत्तेजनया मणीनाम्" माघ० ३-६।

**उत्तेजित** ಉತ್ತೇಜಿತ (ವಿಂ) 1. ಹುರಿದುಂಬಿಸಲ್ಪಟ್ಟ, ಪ್ರೋತ್ಸಾಹಿಸಲ್ಪಟ್ಟ. 2. ತೀಕ್ಷ್ಣಗೊಳಿಸಲ್ಪಟ್ಟ, ಹರಿತಮಾಡಲ್ಪಟ್ಟ. 3. ಉದ್ರೇಕಗೊಳಿಸಲ್ಪಟ್ಟ. 4. ಮೆರುಗುಕೊಡಲ್ಪಟ್ಟ. उद्+तिज (निशाने) "क्त:" (३-२-१०२)। 5. ಅಧಿಕಗೊಳಿಸಲ್ಪಟ್ಟ, ಹೆಚ್ಚಿಸಲ್ಪಟ್ಟ. "उत्तेजितजयोत्साहमायुधैरनघोद्यमै:" याद० १-७०।

**उत्तोरण** ಉತ್ತೋರಣ (ಪುಂ) 1. ಎತ್ತರವಾದ ತೋರಣ. उन्नतं तोरणम्। (ವಿಂ) 2. ಎತ್ತರವಾದ ಹೊರ ಬಾಗಿಲುಳ್ಳ. 3. ಎತ್ತರವಾದ ತೋರಣವುಳ್ಳ, ಉನ್ನತವಾದ ತೋರಣಗಳಿಂದ ಅಲಂಕೃತವಾದ. उन्नतं तोरणं यत्र। "तावत्पताकाकुलमिन्दुमौलिरुत्तोरणं राजपथं प्रपेदे" कुमा० ७-६३।

**उत्तोलन** ಉತ್ತೋಲನ (ನಂ) ಮೇಲಕ್ಕೆ ಎತ್ತುವುದು, ತಕ್ಕಡಿಯಿಂದ ಮೇಲಕ್ಕೆ ಎತ್ತಿ ತೂಗುವುದು. उद्+तुल (उन्माने) भावे "ल्युट्" (३-३-११५)।

**उत्तोलित** ಉತ್ತೋಲಿತ (ವಿಂ) ಮೇಲಕ್ಕೆ ಎತ್ತಲ್ಪಟ್ಟ, ಮೇಲಕ್ಕೆ ಎತ್ತಿ ತೂಗಲ್ಪಟ್ಟ. उद्+तुल (उन्माने) "क्त:" (३-२-१०२)।

**उत्थ** ಉತ್ಥ (ವಿಂ) 1. ಮೇಲಕ್ಕೆ ಎದ್ದಿರುವ. उद्+ष्ठा (गतिनिवृत्तौ) "क:" (३-१-१३६)। 2. ಉಂಟಾದ, ಉತ್ಪನ್ನವಾದ. "भवत्सम्भावनोत्थाय परितोषाय मूर्च्छते" कुमा० ६-५९। "वनं बबाधे विषपावकोत्था विपन्नगानामविपन्नगानाम्" माघ० ४-१५।

**उत्थान** ಉತ್ಥಾನ (ಪುಂನಂ) 1. ಮೇಲಕ್ಕೆ ಏಳುವುದು, ಎದ್ದು ನಿಲ್ಲುವುದು. उद्+ष्ठा (गतिनिवृत्तौ) "ल्युट्" (३-३-११५)। 2. ಉದಯ, ಹುಟ್ಟಿ ಮೇಲಕ್ಕೆ ಬರುವುದು, ಅಭಿವೃದ್ಧಿ ಹೊಂದುವುದು. "निदर्शयामास विशेषदृश्यमिन्दुं नवोत्थानमिवेन्दुमत्यै" रघु० ६-३१। 3. ಪ್ರಯತ್ನ, ಉದ್ಯಮ. "मेदश्छेदकृशोदरं लघु भवत्युत्थानयोग्यं वपु:" शाकु० २-५। 4. ಪುನರುಜ್ಜೀವನ, ಪುನಃ ಚೇತರಿಸಿಕೊಳ್ಳುವಿಕೆ. 5. ಮಲ ವಿಸರ್ಜನೆ, ವಿರೇಚನ. 6. ಪುಸ್ತಕ. 7. ಯುದ್ಧ, ಕದನ. 8. ಅಂಗಳ. 9. ಹರ್ಷ, ಸಂತೋಷ. 10. ಪೌರುಷ, ಶೌರ್ಯ. 11. ತಂತ್ರ, ಸ್ವರಾಷ್ಟ್ರ ಚಿಂತೆ. 12. ಎಚ್ಚರಗೊಳ್ಳುವುದು. उद्+ष्ठा करं० "ल्युट्" (३-३-११७)। "उत्थानमुद्यमे तन्त्रे पौरुषे पुस्तके रणे। प्राङ्गणोद्यमहर्षेषु मलवेगेऽपि न द्वयो:" मेदि०।

**उत्थानैकादशी** ಉತ್ಥಾನೈಕಾದಶೀ (ಸ್ತ್ರೀಂ) ಕಾರ್ತಿಕ ಶುಕ್ಲಪಕ್ಷದ ಏಕಾದಶಿ. [ವಿಷ್ಣುವು ಆಷಾಢ ಶುಕ್ಲ ಏಕಾದಶಿಯ ದಿನ ಮಲಗಿ ಕಾರ್ತಿಕ ಶುಕ್ಲ ಏಕಾದಶಿಯ ದಿನ ಏಳುವುದರಿಂದ ಈ ಹೆಸರು.] "शेते विष्णु: सदाषाढे भाद्रे च परिवर्तते। कार्तिके परिबुध्येत शुक्लपक्षे हरेर्दिने"।

**उत्थापन** ಉತ್ಥಾಪನ (ನಂ) 1. ಮೇಲಕ್ಕೆ ಎಬ್ಬಿಸುವುದು. 2. ನಿದ್ದೆಯಿಂದ ಎಬ್ಬಿಸುವುದು, ಎಚ್ಚರಗೊಳಿಸುವುದು. 3. ವಾಂತಿಮಾಡಿಸುವಿಕೆ. 4. ಕದಲಿಸುವುದು, ಅಲುಗಾಡಿಸುವುದು. 5. ಎಬ್ಬಿಸುವುದು, ಉದ್ರೇಕಗೊಳಿಸುವುದು. 6. ಪ್ರೇರಿಸುವುದು. उद्+ष्ठा (गतिनिवृत्तौ)+णिच् "ल्युट्" (३-३-११५)।

**उत्थापयत्** ಉತ್ಥಾಪಯತ್ (ವಿಂ) 1. ಮೇಲಕ್ಕೆ ಎಬ್ಬಿಸುತ್ತಿರುವ. 2. ಉದ್ರೇಕಗೊಳಿಸುತ್ತಿರುವ. 3. ಕದಲಿಸುತ್ತಿರುವ, ಅಲುಗಾಡಿಸುತ್ತಿರುವ. 4. ನಿದ್ದೆಯಿಂದ ಎಚ್ಚರಗೊಳಿಸುತ್ತಿರುವ. उद्+ष्ठा (गतिनिवृत्तौ)+णिच् "शतृ" (३-२-१२४)।

**उत्थापयितृ** ಉತ್ಥಾಪಯಿತೃ (ವಿಂ) 1. ಮೇಲಕ್ಕೆ ಎಬ್ಬಿಸುವ. 2. ಉದ್ರೇಕಗೊಳಿಸುವ. 3. ಕದಲಿಸುವ, ಅಲುಗಾಡಿಸುವ. 4. ಪ್ರೇರಿಸುವ, ಹುರಿದುಂಬಿಸುವ. उद्+ष्ठा (गतिनिवृत्तौ)+णिच् "तृच्" (३-१-१३३)। स्त्रियाम् "ङीप्" (४-१-५)। उत्थापयित्री ಉತ್ಥಾಪಯಿತ್ರೀ.

**उत्थापित ಉತ್ಥಾಪಿತ** (वि०) 1. ಮೇಲಕ್ಕೆ ಎಬ್ಬಿಸಲ್ಪಟ್ಟ. 2. ಎಚ್ಚರಗೊಳಿಸಲ್ಪಟ್ಟ. 3. ಶಾಂತಿ ಮಾಡಿಸಲ್ಪಟ್ಟ. 4. ಕದಲಿಸಲ್ಪಟ್ಟ, ಅಲುಗಾಡಿಸಲ್ಪಟ್ಟ. 5. ಪ್ರೇರಿಸಲ್ಪಟ್ಟ, ಉದ್ರೇಕಗೊಳಿಸಲ್ಪಟ್ಟ. उद्+ष्ठा (गतिनिवृत्तौ)+ णिच् "क्तः" (३-२-१०२)।

**उत्थाप्य ಉತ್ಥಾಪ್ಯ** (वि०) 1. ಮೇಲಕ್ಕೆ ಎತ್ತಲ್ಪಡುವ, ಎತ್ತಲು ಯೋಗ್ಯವಾದ. 2. ಅಲುಗಾಡಿಸಲ್ಪಡುವ, ಕದಲಿಸಲ್ಪಡುವ. उद् + ष्ठा (गतिनिवृत्तौ) + णिच् "यत्" (३-१-९७)। (अव्य०) 3. ಎಬ್ಬಿಸಿ, ಮೇಲಕ್ಕೆ ಎತ್ತಿನಿಲ್ಲಿಸಿ. उद्+ष्ठा+णिच् "ल्यप्" (७-१-३७)।

**उत्थित ಉತ್ಥಿತ** (वि०) 1. ಅಭಿವೃದ್ಧಿಹೊಂದಿದ, ಬೆಳವಣಿಗೆ ಹೊಂದಿದ. उद्+ष्ठा (गतिनिवृत्तौ) "क्तः" (३-४-७२)। "अन्येभ्यो वनदेवताकरतलैरापर्वभागोत्थितैः" शाकु० ४-४। 2. (ಆಸನದಿಂದ) ಮೇಲಕ್ಕೆ ಎದ್ದಿರುವ. "वचो निशम्योत्थितमुत्थितः सन्" रघु० २-६१। "न यावदेतावुदपश्यदुत्थितौ" माघ० १-१५। 3. ಭೂಮಿಯಿಂದ ಮೇಲಕ್ಕೆ ಎದ್ದ, ಭೂಮಿಯಿಂದ ಮೇಲಕ್ಕೆ ಹೊರಟ. "पांशुदिशां मुखमतुत्थयदुत्थितोऽद्रेः" माघ० ५-११। 4. ಹುಟ್ಟಿದ, ಉತ್ಪನ್ನವಾದ. "वचो निशम्योत्थितमुत्थितः सन्" रघु० २-६१। 5. ಪ್ರಯತ್ನಶಾಲಿ, ಉದ್ಯೋಗಶೀಲ, ವ್ಯವಸಾಯ ಸ್ವಭಾವದವನು. "प्रणमन्त्यनपायमुत्थितं प्रतिपच्चन्द्रमिव प्रजा नृपम्" किरा० २-११।

**उत्थिति ಉತ್ಥಿತಿ** (स्त्री०) 1. ಅಭಿವೃದ್ಧಿ, ಬೆಳವಣಿಗೆ, ಏಳಿಗೆ. 2. ಮೇಲಕ್ಕೆ ಏಳುವುದು. उद्+ष्ठा (गतिनिवृत्तौ) "क्तिन्" (३-३-९४)।

**उत्पचिष्णु ಉತ್ಪಚಿಷ್ಣು** (वि०) 1. ಮೇಲಕ್ಕೆ ಎತ್ತಿ ಬೇಯಿಸುವ ಸ್ವಭಾವದ. 2. ಮೇಲುಭಾಗದಲ್ಲಿ ಹಣ್ಣಾಗುವ ಸ್ವಭಾವದ, ತುದಿಯಲ್ಲಿ ಕಾಳು ಮೊದಲಾದವು ಬಲಿಯುವ ಸ್ವಭಾವದ (ಬತ್ತ, ರಾಗಿ, ಜೋಳ ಮುಂತಾದುದು). उत् + डु पचष् (पाके) "इष्णुच्" (३-२-१३६)।

**उत्पत ಉತ್ಪತ** (पु०) 1. ಪಕ್ಷಿ, ಹಕ್ಕಿ. (वि०) 2. ಮೇಲಕ್ಕೆ ಹಾರುವ. उत् + पत्लृ (गतौ) "अच्" (३-१-१३४)। "स्युः खगोत्पतवारङ्ककण्ठाग्निर्व्योमचारिणः" त्रिकाण्ड०।

**उत्पतत् ಉತ್ಪತತ್** (वि०) ಮೇಲಕ್ಕೆ ಹಾರುತ್ತಿರುವ, ಮೇಲಕ್ಕೆ ಹೋಗುತ್ತಿರುವ. उत्+पत्लृ (गतौ) "शतृ" (३-२-१२४)। "उत्पतन्तमवनम्य माधवम्" याद० १७-३। "कुर्वन्ति द्यामुत्पतन्तः स्मरार्तस्वर्लोकस्त्रीगात्रनिर्वाणमत्र" माघ० ४-२३। स्त्रियाम् "ङीप्" (४-१-६)। **उत्पतन्ती ಉತ್ಪತಂತೀ.**

**उत्पतन ಉತ್ಪತನ** (न०) 1. ಮೇಲಕ್ಕೆ ಹಾರುವಿಕೆ, 2. ಮೇಲಕ್ಕೆ ಹೋಗುವಿಕೆ, ಮೇಲಕ್ಕೆ ಹತ್ತುವಿಕೆ. 3. ಉತ್ಪತ್ತಿ, ಹುಟ್ಟುವಿಕೆ. उत्+पत्लृ (गतौ) "ल्युट्" (३-३-११५)। "स्यादुत्पतनमुत्पत्तौ तथोर्ध्वगमनेऽपि च" मेदि०।

**उत्पतित ಉತ್ಪತಿತ** (वि०) 1. ಮೇಲಕ್ಕೆ ಹಾರಿದ. 2. ಮೇಲಕ್ಕೆ ಹೋದ. उत्+पत्लृ (गतौ) "क्तः" (३-४-७२)। "तस्मिन्नुत्पतिते पुरः सुरमुनाविन्दोः श्रियं बिभ्रति" माघ० १-७५।

**उत्पतितृ ಉತ್ಪತಿತೃ** (वि०) 1. ಮೇಲಕ್ಕೆ ಹಾರುವ ಸ್ವಭಾವದ. 2. ಮೇಲಕ್ಕೆ ಹೋಗುವ ಸ್ವಭಾವದ. उत्पतति—उत्+पत्लृ (गतौ) "तृन्" (३-२-१३५)। स्त्रियाम् "ङीप्" (४-१-५)। **-पतित्री -ಪತಿತ್ರೀ.**

**उत्पतिष्णु ಉತ್ಪತಿಷ್ಣು** (वि०) ಮೇಲಕ್ಕೆ ಹಾರುವ ಸ್ವಭಾವದ, ಮೇಲಕ್ಕೆ ನೆಗೆಯುವ ಸ್ವಭಾವದ. उत्+पत्लृ (गतौ) "इष्णुच्" (३-२-१३६)। "ससञ्जुरश्वक्षुण्णानामेलानामुत्पतिष्णवः" रघु० ४-४७।

**उत्पत्ति ಉತ್ಪತ್ತಿ** (स्त्री०) 1. ಹುಟ್ಟುವಿಕೆ, ಜನ್ಮ, ಜನನ. उत्+पद (गतौ) "क्तिन्" (३-३-९४)। "उत्पत्तिरेव विप्रस्य मूर्तिर्धर्मस्य शाश्वती" मनु० १-९८। 2. ತಯಾರಿಕೆ, ವಸ್ತು ನಿರ್ಮಾಣ, ಸೃಷ್ಟಿ. 3. ಲಾಭ, ಹುಟ್ಟುವಳಿ. 4. ಬೆಳೆ, ಫಸಲು, ಫಲ. 5. ಮೂಲ, ಕಾರಣ. उत्पद्यतेऽस्मात् -- उत्+पद अपा० "क्तिन्" (३-३-९४)।

**उत्पत्तिक्रम ಉತ್ಪತ್ತಿಕ್ರಮ** (पु०) 1. ಜಗತ್ತಿನ ಸೃಷ್ಟಿಕ್ರಮ. 2. ಪ್ರಾಣಿಗಳ ಉತ್ಪತ್ತಿಕ್ರಮ. ["जगत्सृष्टि" ಪದದಲ್ಲಿ ನೋಡಿ.]

**उत्पत्तिमत् ಉತ್ಪತ್ತಿಮತ್** (वि०) ಜನ್ಮವುಳ್ಳ, ಹುಟ್ಟುವ ಸ್ವಭಾವದ, ಸೃಷ್ಟಿಗೆ ಒಳಪಟ್ಟಿರುವ. उत्पत्तिरस्यास्ति "मतुप्" (५-२-९४)। "विपदुत्पत्तिमतामुपस्थिता" रघु० ८-८३।

**उत्पत्य ಉತ್ಪತ್ಯ** (अव्य०) ಮೇಲಕ್ಕೆ ಹಾರಿ, ಮೇಲಕ್ಕೆ ನೆಗೆದು. उत्+पत्लृ (गतौ) "ल्यप्" (७-१-३७)।

**उत्पथ** ಉತ್ಪಥ (पु०) ತಪ್ಪು ದಾರಿ, ನ್ಯಾಯವಲ್ಲದ ಮಾರ್ಗ. उत्क्रान्तः पन्थानम्। "गुरोरप्यवलिप्तस्य कार्याकार्यमजानतः। उत्पथं प्रतिपन्नस्य कार्यं भवति शासनम्" भा०। "क्षिप्तावरोधाङ्गनमुत्पथेन गाम्" माघ० १२-२४।

**उत्पन्न** ಉತ್ಪನ್ನ (वि०) 1. ಹುಟ್ಟಿದ, ಉತ್ಪತ್ತಿ ಹೊಂದಿದ. उत् + पद (गतौ) "क्तः" (३-४-७२)। "स हि धर्मार्थमुत्पन्नो ब्रह्मभूयाय कल्पते" मनु० १-९८। 2. ಮೇಲಕ್ಕೆ ಹೋಗಿರುವ, ಮೇಲಕ್ಕೆ ಹಾರಿರುವ, ಮೇಲಕ್ಕೆ ಎದ್ದಿರುವ.

**उत्पन्नविनाशिन्** ಉತ್ಪನ್ನವಿನಾಶಿನ್ (वि०) ಹುಟ್ಟಿದ ಕೂಡಲೆ ನಾಶಹೊಂದುವ. उत्पन्नः सन् विनश्यति।

**उत्पल** ಉತ್ಪಲ (न०) 1. ನೀಲಕಮಲ, ಕನ್ನೈದಿಲೆ ಹೂವು. उत्पलति — उत् + पल (गतौ) "अच्" (३-१-१३४)। "आददे मृदुविलोलपलाशैरुत्पलैः चपकवीचिषु कम्पः" किरा० ९-५६। 2. ಚಂಗಲು ಕೋಷ್ಠದ ಮರ. (वि०) 3. ಮಾಂಸಖಂಡವಿಲ್ಲದ, ಪುಷ್ಟಿಯಿಲ್ಲದ, ಕೃಶವಾಗಿರುವ. उत्क्रान्तः पलं मांसम्। "उत्पलं कुष्ठभूरुहे। इन्दीवरे मांसशून्ये" हेम०।

**उत्पलपत्र** ಉತ್ಪಲಪತ್ರ (न०) 1. ನೈದಿಲೆಯ ದಳ. 2. ನಖಕ್ಷತ, ಸ್ತ್ರೀಯರ ಸ್ತನಗಳ ಮೇಲಿನ ಉಗುರಿನ ಗಾಯ. "उत्पलपत्रमुत्पलदले स्त्रीणां नखक्षते" हेम०।

**उत्पलशारिवा** ಉತ್ಪಲಶಾರಿವಾ (स्त्री०) ಸೊಗದೆ ಗಿಡ. उत्पला च सा शारिवा च।

**उत्पलिनी** ಉತ್ಪಲಿನೀ (स्त्री०) 1. ಉತ್ಪಲಲತೆ, ಕನ್ನೈದಿಲೆ ಗಿಡ. उत्पलमस्यास्ति" "इनिः" (५-२-११५)। 2. ಕನ್ನೈದಿಲೆಗಳಿಂದ ಕೂಡಿದ ದೇಶ. उत्पलान्यत्र सन्ति "इनिः" (५-२-१३५)। "पुण्याय मन्ये भृतमुत्पलिन्या" नैष० ७-३५।

**उत्पाटक** ಉತ್ಪಾಟಕ (वि०) ಬುಡಸಹಿತ ಕಿತ್ತು ಹಾಕುವ, ನಿರ್ಮೂಲನಮಾಡುವ. उत्+पट (भाषार्थे) + णिच् "ण्वुल्" (३-१-१३३)।

**उत्पाटन** ಉತ್ಪಾಟನ (न०) ಕಿತ್ತುಹಾಕುವಿಕೆ, ಬುಡಸಹಿತ ತೆಗೆದುಹಾಕುವಿಕೆ. उत् + पट (भाषार्थे) + णिच् "ल्युट्" (३-३-११५)।

**उत्पाटित** ಉತ್ಪಾಟಿತ (वि०) ಕಿತ್ತುಹಾಕಲ್ಪಟ್ಟ, ಬುಡಸಹಿತ ತೆಗೆಯಲ್ಪಟ್ಟ. उत्+पट (भाषार्थे) + णिच् "क्तः" (३-२-१०२)।

**उत्पात** ಉತ್ಪಾತ (पु०) 1. ಮೇಲಕ್ಕೆ ಹಾರುವುದು, ಮೇಲಕ್ಕೆ ನೆಗೆಯುವುದು. उत्+पत्लृ (गतौ) "घञ्" (३-३-१८)। "एकोत्पातेन ते लङ्कामेष्यन्ति हरियूथपाः" रामा०। 2. ಶುಭಾಶುಭಸೂಚಕವಾದ ಚಿಹ್ನೆ. "उत्पात इव भूतानामुद्बभूव भयानकः" याद० १६-२७। 3. ದುರ್ಘಟನೆ, ಸಾರ್ವಜನಿಕ ವಿಪತ್ತು, ಅನಾಹುತ (ಭೂಕಂಪ ಮೊದಲಾದುದು).

**उत्पातक** ಉತ್ಪಾತಕ (वि०) 1. ಮೇಲಕ್ಕೆ ಹಾರುವ, ಮೇಲಕ್ಕೆ ನೆಗೆಯುವ. उत्+पत्लृ (गतौ) "ण्वुल्" (३-१-१३३)। 2. ಉತ್ಪಾತವನ್ನುಂಟುಮಾಡುವ, ಅನಾಹುತಕ್ಕೆ ಕಾರಣವಾದ. उत् + पत्लृ (गतौ) + णिच् "ण्वुल्" (३-१-१३३)।

**उत्पातिन्** ಉತ್ಪಾತಿನ್ (वि०) ಹಾರುವ ಸ್ವಭಾವದ, ಮೇಲಕ್ಕೆ ನೆಗೆಯುವ ಸ್ವಭಾವದ. उत् + पत्लृ (गतौ) "णिनिः" (३-२-७८)। "ससम्भ्रमोत्पातिपतत्कुलाकुलं सरः प्रपद्योत्कतयाऽनुकम्पताम्" नैष० १-१२६।

**उत्पाद** ಉತ್ಪಾದ (पु०) 1. ಉತ್ಪತ್ತಿ, ಸೃಷ್ಟಿ, ಜನನ. उत् + पद (गतौ) भावे "घञ्" (३-३-१८)। "दुःखे च शोणितोत्पादे शाखाङ्गच्छेदने तथा" याज्ञ० २-२२५। (वि०) 2. ಮೇಲಕ್ಕೆ ಎತ್ತಿದ ಕಾಲುಳ್ಳ. उन्नतः पादो यस्य।

**उत्पादक** ಉತ್ಪಾದಕ (पु०) 1. ತಂದೆ, ಜನಕ, ಅಪ್ಪ. उत् + पद (गतौ) + णिच् "ण्वुल्" (३-१-१३३)। "उत्पादकब्रह्मदात्रोर्गरीयान् ब्रह्मदः पिता" मनु० २-१४६। 2. ಶರಭಮೃಗ, ಎಂಟುಕಾಲುಗಳುಳ್ಳ ಒಂದು ಜಾತಿ ಮೃಗ. उत् ऊर्ध्वस्थिताः पादा यस्य। (वि०) 3. ಉತ್ಪತ್ತಿಮಾಡುವ, ತಯಾರಿಸುವ. (स्त्री०) उत्पादिका ಉತ್ಪಾದಿಕಾ. 1. ತಾಯಿ, ಜನನಿ. 2. ತಯಾರಿಸುವ ಹೆಂಗಸು. 3. ಗೆದ್ದಲುಹುಳ.

**उत्पादन** ಉತ್ಪಾದನ (न०) ಸೃಷ್ಟಿಸುವಿಕೆ, ತಯಾರಿಸುವಿಕೆ, ನಿರ್ಮಾಣ. उत् + पद (गतौ) + णिच् "ल्युट्" (३-३-११५)।

**उत्पादशय** ಉತ್ಪಾದಶಯ -शयन - ಶಯನ. (पु०) ಶಿಶು, ಮಗು, ಕೂಸು. उत्पादः सन् शेते — शीङ् (स्वप्ने) "अच्" (वा० ३-२-१५)। [ಶಿಶುಗಳು ಕಾಲುಗಳನ್ನು ಮೇಲಕ್ಕೆ ಎತ್ತಿಕೊಂಡು ಮಲಗುವುವು].

**उत्पादित** ಉತ್ಪಾದಿತ (वि०) 1. ಉಂಟುಮಾಡಲ್ಪಟ್ಟ, ಸೃಷ್ಟಿಸಲ್ಪಟ್ಟ. उत् + पद (गतौ) + णिच् "क्तः"

(३-२-१०२)। 2. ಸಂಪಾದಿಸಲ್ಪಟ್ಟ. "अप्यनारभमाणस्य विभोरुत्पादिताः परैः" माघ० २-९१।

**उत्पादिन् ಉತ್ಪಾದಿನ್** (वि०) 1. ಉತ್ಪತ್ತಿಯುಳ್ಳ, ಸೃಷ್ಟಿಗೊಳಪಟ್ಟ. उत्पादोऽस्यास्ति "इनिः" (५-२-११५)। "सर्वमुत्पादि भङ्गुरम्" हितो०। 2. ನಿರ್ಮಿಸುವ, ತಯಾರಿಸುವ. उत्पादयति — उत् + पद (गतौ) + णिच् "णिनिः" (३-१-१३४)।

**उत्पाद्य ಉತ್ಪಾದ್ಯ** (न०) 1. ರೂಪಕದ ಇತಿವೃತ್ತಗಳಲ್ಲೊಂದು ಭೇದ. [ನಾಟಕಾದಿ ರೂಪಕಗಳಲ್ಲಿ ಪ್ರತಿಪಾದ್ಯವಾದ ಕಥಾಂಶವು ಪ್ರಖ್ಯಾತ, ಉತ್ಪಾದ್ಯ, ಮಿಶ್ರಗಳೆಂದು ಮೂರು ವಿಧ. ಪುರಾಣಾದಿಗಳಲ್ಲಿ ಪ್ರಸಿದ್ಧವಾದ ವಿಷಯವು ಪ್ರಖ್ಯಾತ. ಕವಿಗಳು ತಾವಾಗಿ ಕಲ್ಪಿಸಿದ ಕಥೆಯು ಉತ್ಪಾದ್ಯ, ಪ್ರಖ್ಯಾತ ಮತ್ತು ಕಲ್ಪಿತ ಕಥೆ ಎರಡೂ ಸೇರಿರುವುದು ಮಿಶ್ರ.] 2. ಕರ್ಮಸಂಜ್ಞೆಯ ಒಂದು ಭೇದ. ಕರ್ಮವು ಉತ್ಪಾದ್ಯ, ವಿಕಾರ್ಯ ಮತ್ತು ಪ್ರಾಪ್ಯಗಳೆಂದು ಮೂರು ವಿಧ. (1) ಕ್ರಿಯೆಯು ನಡೆಯುವುದಕ್ಕೆ ಮೊದಲಿದ್ದ ಅವಸ್ಥೆಗಿಂತಲೂ ಬೇರೆ ಅವಸ್ಥೆಯನ್ನು ಹೊಂದುವುದು ಉತ್ಪಾದ್ಯ. "घटं करोति" ಎಂಬಲ್ಲಿ ಪೂರ್ವಾವಸ್ಥೆಯಾದ ಮೃತ್ತಿಗಿಂತಲೂ ಘಟಾವಸ್ಥೆಯಲ್ಲಿ ಬೇರೆ ರೂಪವು ಬರುವುದರಿಂದ ಘಟವು ಉತ್ಪಾದ್ಯ. (2) ಪ್ರಕೃತಿಯ ವಿಕಾರ ತೋರಿಬರುವುದು ವಿಕಾರ್ಯ. "सुवर्णं कुण्डलं करोति" ಎಂಬಲ್ಲಿ ಸುವರ್ಣದ ಪ್ರಕೃತಿಗೆ ಕುಂಡಲಾವಸ್ಥೆಯಲ್ಲಿ ವಿಕಾರವು ತೋರಿಬರುವುದರಿಂದ ವಿಕಾರ್ಯ. (3) ಕ್ರಿಯಾಕೃತವಾದ ಯಾವ ವಿಕಾರವೂ ತೋರಿಬರದಿರುವುದು ಪ್ರಾಪ್ಯ. (वि०) 3. ಸೃಷ್ಟಿಸಲ್ಪಡುವ, ಸೃಷ್ಟಿಸಲು ಅರ್ಹವಾದ. उत्+पद (गतौ) + णिच् "यत्" (३-२-९७)। "शेषाङ्गनिर्माणविधौ विधातुर्लावण्य उत्पाद्य इवास यत्नः" कुमा० १-३५। (अव्य०) 4. ಸೃಷ್ಟಿಸಿ, ನಿರ್ಮಿಸಿ, ತಯಾರಿಸಿ. उत्+पद + णिच् "ल्यप्" (७-१-३७)।

**उत्पाद्यमान ಉತ್ಪಾದ್ಯಮಾನ** (वि०) ಸೃಷ್ಟಿಸಲ್ಪಡುತ್ತಿರುವ, ನಿರ್ಮಿಸಲ್ಪಡುತ್ತಿರುವ. उत्+पद (गतौ) + णिच् "शानच्" (३-२-१२४)।

**उत्पित्सा ಉತ್ಪಿತ್ಸಾ** (स्त्री०) ಮೇಲಕ್ಕೆ ಹಾರಲು ಆಸೆ, ಮೇಲಕ್ಕೆ ನೆಗೆಯುವ ಅಪೇಕ್ಷೆ. उत्पतितुमिच्छा—उत् + पत्लृ (गतौ) + सन् "अः" (३-३-१०२)।

**उत्पित्सित ಉತ್ಪಿತ್ಸಿತ** (वि०) ಮೇಲಕ್ಕೆ ಹಾರಲು ಅಪೇಕ್ಷೆಯುಂಟಾಗಿರುವ, ಮೇಲಕ್ಕೆ ನೆಗೆಯುವ ಆಸೆ ಹುಟ್ಟಿರುವ. उत्पित्साऽस्य सञ्जाताः "इतच्" (५-२-३६)।

**उत्पित्सु ಉತ್ಪಿತ್ಸು** (वि०) ಮೇಲಕ್ಕೆ ಹಾರಲು ಅಪೇಕ್ಷಿಸುವ, ಮೇಲಕ್ಕೆ ನೆಗೆಯಲು ಆಸೆಪಡುವ. उत् + पत्लृ (गतौ) + सन् "उः" (३-२-१६८)। "उत्पित्सवोऽन्तर्नदभर्तुरुच्चैः" माघ० ३-७७।

**उत्प्रेक्षण ಉತ್ಪ್ರೇಕ್ಷಣ** (न०) 1. ಊಹೆ, ತರ್ಕ, ಕಲ್ಪನೆ. 2. ಧರ್ಮಸಾಮ್ಯದಿಂದ ಒಂದು ವಸ್ತುವನ್ನು ಮತ್ತೊಂದರಂತೆ ಊಹಿಸುವುದು, ಸಂಭಾವನೆ. 3. ಮೇಲುನೋಟ, ಮೇಲುಗಡೆ ನೋಡುವುದು. उत्+प्र+ईक्ष (दर्शने) "ल्युट्" (३-३-११५)।

**उत्प्रेक्षा ಉತ್ಪ್ರೇಕ್ಷಾ** (स्त्री०) ಸಂಭಾವನೆ, ಉಪಮಾನದ ಧರ್ಮಸಂಬಂಧದಿಂದ ಉಪಮೇಯವಸ್ತುವನ್ನು ಉಪಮಾನವಸ್ತುವನ್ನಾಗಿ ಊಹಿಸುವುದು. उत् + प्र+ईक्ष (दर्शने) "अः" (३-३-१०३)। ಇದು ಉತ್ಪ್ರೇಕ್ಷಾಲಂಕಾರವೆನಿಸುವುದು. "संभावना स्यादुत्प्रेक्षा वस्तुहेतुफलात्मना" चन्द्रा०। "सखीजनं प्रेमगुरूकृतादरं निरीक्षमाणा इव नम्रमूर्तयः" किरा० ८-११। मन्ये, शङ्के, ध्रुवम्, प्रायः, नूनम्, इव ಇತ್ಯಾದಿ ಶಬ್ದಗಳು ಉತ್ಪ್ರೇಕ್ಷಾವ್ಯಂಜಕಗಳು.

**उत्प्लव ಉತ್ಪ್ಲವ** (पु०) ಮೇಲಕ್ಕೆ ಹಾರುವಿಕೆ, ಮೇಲಕ್ಕೆ ನೆಗೆಯುವಿಕೆ. उत्+प्लुङ् (गतौ) "अप्" (३-३-५७)। "तदात्तमात्मानमवेत्य संभ्रमात्पुनःपुनः प्रायसदुत्प्लवाय सः" नैष० (१-१२५)।

**उत्प्लवन ಉತ್ಪ್ಲವನ** (न०) ಮೇಲಕ್ಕೆ ಹಾರುವಿಕೆ, ಮೇಲಕ್ಕೆ ನೆಗೆಯುವಿಕೆ. उत्+प्लुङ् (गतौ) "ल्युट्" (३-३-११५)।

**उत्प्लवा ಉತ್ಪ್ಲವಾ** (स्त्री०) 1. ಹಡಗು. 2. ದೋಣಿ. 3. ತೆಪ್ಪ, ಹರಿಗೋಲು. उत्प्लवते—उत्+प्लुङ् (गतौ) "अच्" (३-१-१३४)।

**उत्फुल्ल ಉತ್ಫುಲ್ಲ** (वि०) 1. ಅರಳಿದ, ವಿಕಾಸಹೊಂದಿದ. उत् + फुल्ल (विकसने) "अच्" (३-१-१३४)। "उत्फुल्लस्थलनलिनीवनादमुष्मादुद्धूतः सरसिजसंभवः परागः" किरा० ५-३९। 2. ಅಗಲವಾದ, ವಿಸ್ತಾರವಾದ.

**उत्स ಉತ್ಸ** (पु०) 1. ಊಟೆ, ಬುಗ್ಗೆ, ನೀರು ಜಿನುಗುವ ಜಾಗ. उनत्ति जलेन—उन्दी (क्लेदने) "सः" नलोपश्च (उ० ३-६८)। 2. ನೀರಿನ ಪ್ರವಾಹ.

**उत्सङ्ग ಉತ್ಸಂಗ** (ಪುಂ) 1. ತೊಡೆ. उत्+षञ्ज (सङ्गे) "घञ्" (३-३-१२१)। "संपूर्णलक्ष्वललनालपनोपमान-मुत्सङ्गसङ्गिहरिणस्य मृगाङ्कमूर्तेः" माघ० ४-२२। 2. ಮಧ್ಯಭಾಗ. "दरीगृहोत्सङ्गनिषक्तभासः" कुमा० १-१०। 3. ಶಿಖರ, ತುದಿ. "उत्सङ्गे समविषमे समं महाद्रेः क्रान्तानां वियदभिपातलाघवेन" किरा० ७-२१। 4. ಮೇಲುಮೈ, ಮೇಲುಭಾಗ. "दृषदो वासितोत्सङ्गा निषण्णमृगनाभिभिः" रघु० ४-७४। 5. ಸಂನ್ಯಾಸಿ. उत्क्रान्तः सङ्गम। 6. ಊರ್ಧ್ವಸಂಸರ್ಗ, ಮೇಲಿನ ಸಂಬಂಧ.

**उत्सङ्गित ಉತ್ಸಂಗಿತ** (ವಿಂ) ಸಂಬಂಧ ಹೊಂದಿಸಲ್ಪಟ್ಟ, ಸಂಬಂಧವುಳ್ಳದ್ದಾಗಿ ಮಾಡಲ್ಪಟ್ಟ. उत्सङ्गी कृतः— उत्सङ्गिन् + णिच् कर्म० "क्तः" (३-२-१०२)। "उत्सङ्गिताम्भःकणको नभस्वानुदन्वतः स्वेदलवान् ममार्ज" माघ० ३-७९।

**उत्सङ्गिन् ಉತ್ಸಂಗಿನ್** (ವಿಂ) ಮೇಲಿನ ಸಂಬಂಧವುಳ್ಳ. उत्सङ्गः ऊर्ध्वसंसर्गः अस्त्यस्य "इनिः" (५-२-११५)।

**उत्सञ्जन ಉತ್ಸಂಜನ** (ನಂ) ಮೇಲುಭಾಗದಲ್ಲಿ ಸೇರಿಸುವಿಕೆ, ಮೇಲಕ್ಕೆ ಎತ್ತಿ ಇಡುವಿಕೆ. उत् + षञ्ज (सङ्गे) "ल्युट्" (३-३-११५)। "सम्माननोत्सञ्जनाचार्य-करणज्ञानभृतिविगणनव्ययेषु नियः" पा० सू० १-३-३६।

**उत्सर्ग ಉತ್ಸರ್ಗ** (ಪುಂ) 1. ಸಾಮಾನ್ಯಶಾಸ್ತ್ರ, (ಅಪವಾದವಿಲ್ಲದ) ಎಲ್ಲಾ ಕಡೆಯಲ್ಲೂ ಪ್ರವರ್ತಿಸುವ ವಿಧಿಶಾಸ್ತ್ರ. उत् + सृज (विसर्गे) कर्म० "घञ्" (३-३-१९)। "अपवादैरिवोत्सर्गाः कृतव्यावर्तयः परैः" कुमा० २-२७। 2. ವ್ಯಯ, ಖರ್ಚು. "वृषल, किमयमस्थाने महानर्थोत्सर्गः क्रियते" मुद्रा० ३। 3. ತ್ಯಾಗ, ದಾನ. "विभज्य मेरुर्नयदर्थिसात्कृतो न सिन्धुरुत्सर्गजलव्ययैर्मरुः" नैष० १-१६। 4. ಪರಿತ್ಯಾಗ, ತ್ಯಜಿಸುವುದು, ಬಿಡುವುದು. "श्रीलक्षणोत्सर्गविनीतवेषाः" कुमा० ७-४५। 5. ಸಮಾಪ್ತಿ, ಕೊನೆಗಾಣಿಸುವಿಕೆ, ಪೂರ್ತಿಗೊಳಿಸುವಿಕೆ. [ಸಂಪೂರ್ಣ ವೇದಾಧ್ಯಯನ ಮಾಡಿ ಬ್ರಹ್ಮಚರ್ಯ ವ್ರತವನ್ನು ಬಿಟ್ಟು ಸ್ನಾತಕನಾಗಬೇಕು. ಇದಕ್ಕೆ ವ್ರತೋತ್ಸರ್ಗವೆಂದು ಹೆಸರು.] 6. ಪ್ರತಿ ಪುಷ್ಯ ಮಾಸದಲ್ಲಿ ಮಾಡುವ ವೇದಾಧ್ಯಯನದ ಉತ್ಸರ್ಜನೆ, ವೇದಾಧ್ಯಯನವನ್ನು ತತ್ಕಾಲದಲ್ಲಿ ನಿಲ್ಲಿಸುವುದು. [ಶ್ರಾವಣ ಮಾಸದಲ್ಲಿ ವೇದಾಧ್ಯಯನವನ್ನು ಪ್ರಾರಂಭಿಸಿ ಪುಷ್ಯಮಾಸದಲ್ಲಿ ನಿಲ್ಲಿಸಬೇಕು. ಶ್ರಾವಣದಲ್ಲಿ ಅನಂತರ ಮೂರು ದಿನಗಳು ಅನಧ್ಯಯನ ಕಳೆದು ಶುಕ್ಲಪಕ್ಷದಲ್ಲಿ ವೇದಾಧ್ಯಯನವನ್ನೂ, ಕೃಷ್ಣಪಕ್ಷದಲ್ಲಿ ಶಾಸ್ತ್ರಾಧ್ಯಯನವನ್ನೂ ಮಾಡಬೇಕು.] "अत ऊर्ध्वं तु छन्दांसि शुक्लेषु नियतः पठेत्। वेदाङ्गानि च सर्वाणि कृष्णपक्षेषु संपठेत्" मनु० ४-९८। 7. ಮಲಮೂತ್ರಾದಿಗಳ ವಿಸರ್ಜನೆ.

**उत्सर्जन ಉತ್ಸರ್ಜನ** (ನಂ) ದಾನ, ಕೊಡುಗೆ ಮೊದಲಾದ "उत्सर्ग" ಪದದ ಅರ್ಥ. उत् + सृज (विसर्गे) भावे "ल्युट्" (३-३-११५)।

**उत्सर्पण ಉತ್ಸರ್ಪಣ** (ನಂ) 1. ಸಮೀಪಕ್ಕೆ ಬರುವುದು, ಹತ್ತಿರಕ್ಕೆ ಬರುವುದು. 2. ಮೇಲಕ್ಕೆ ಬರುವುದು, ಮೇಲಕ್ಕೆ ಹಾರುವುದು. उत् + सृप्लृ (गतौ) भावे "ल्युट्" (३-३-११५)।

**उत्सर्पिणी ಉತ್ಸರ್ಪಿಣೀ** (ಸ್ತ್ರೀಂ) ಜೈನರ ಕಲ್ಪಕಾಲದ ಒಂದು ಭಾಗ. [ಜೈನರ ಕಾಲವು ಉತ್ಸರ್ಪಿಣಿ ಮತ್ತು ಅವಸರ್ಪಿಣಿಗಳೆಂದು ಎರಡು ವಿಧ. ಇವೆರಡೂ ಸೇರಿ ಒಂದು ಕಲ್ಪವೆನಿಸುವುದು. ಅವಸರ್ಪಿಣಿಯಲ್ಲಿ ಕ್ರಮವಾಗಿ ಮನುಷ್ಯರ ಅನುಭವ (ಉಪಭೋಗ) ಆಯುಃ ಪ್ರಮಾಣ, ಶರೀರೋತ್ಸೇಧ ಇವು ಕಡಿಮೆಯಾಗುವಂತೆ ಉತ್ಸರ್ಪಿಣಿಯಲ್ಲಿ ಕ್ರಮವಾಗಿ ವೃದ್ಧಿಹೊಂದುವುವು. ಅವಸರ್ಪಿಣಿಯ ಕೊನೆಯಲ್ಲಿ ಜಗತ್ತಿನ ಪ್ರಳಯವಾದನಂತರ ದಶಕೋಟಿಕೋಟಿ ಸಾಗರೋಪಮ ಪ್ರಮಾಣವುಳ್ಳ ಉತ್ಸರ್ಪಿಣಿಯ ಪ್ರಾರಂಭದಲ್ಲಿ 49 ದಿನಗಳು ರಾತ್ರಿ ಹಗಲು ಕ್ಷೀರಮೇಘಗಳೂ ಬಳಿಕ 49 ದಿನಗಳು ಅಮೃತಮೇಘಗಳೂ ವರ್ಷಿಸುವುದರಿಂದ ಅವಸರ್ಪಿಣಿಯಲ್ಲಿ ಭೂಮಿಯಲ್ಲಿ ಉಂಟಾಗಿದ್ದ ರೂಕ್ಷಗುಣವು ಹೋಗಿ ಓಷಧಿಗಳೂ ಲತಾವೃಕ್ಷಗಳೂ ರಸಪುಷ್ಟಗಳಾಗುವುವು. ಉತ್ಸರ್ಪಿಣಿಯಲ್ಲಿ दुःषमदुःषमा, दुःषमा, दुःषमसुषमा, सुषमदुःषमा, सुषमा ಮತ್ತು सुषमसुषमा ಎಂದು ಆರು ಭಾಗಗಳಿವೆ:

(1) दुःषमदुःषमा ಕಾಲದ ಪ್ರಮಾಣ 21,000 ವರ್ಷಗಳು. ಇದರ ಪ್ರಾರಂಭದಲ್ಲಿ ಮನುಷ್ಯನ ಆಯುಃಪ್ರಮಾಣ 16 ವರ್ಷಗಳು, ಎತ್ತರ 1 ಮೊಳ. ಇದರ ಕೊನೆಯಲ್ಲಿ ಮನುಷ್ಯನ ಆಯುಃಪ್ರಮಾಣ 20 ವರ್ಷಗಳು, ಎತ್ತರ 3½ ಮೊಳ.

(2) दुःषमा ಕಾಲದ ಪ್ರಮಾಣ 21,000 ವರ್ಷಗಳು. ಪ್ರಾರಂಭದಲ್ಲಿ ಆಯುಃಪ್ರಮಾಣ 20 ವರ್ಷಗಳು, ಎತ್ತರ 3½ ಮೊಳ. ಕೊನೆಯಲ್ಲಿ 14 ಮಂದಿ ಕುಲಧರರ ಅವತಾರವಾಗುವುದು.

(3) दुःषमसुषमा ಕಾಲದ ಪ್ರಮಾಣ 1 ಕೋಟಿ ಕೋಟಿಸಾಗರೋಪಮ. ಪ್ರಾರಂಭದಲ್ಲಿ 120 ವರ್ಷಗಳು ಆಯುಸ್ಸು, 7 ಮೊಳ ಎತ್ತರ. ಕೊನೆಯಲ್ಲಿ 525 ಧನುಃಪ್ರಮಾಣದ ಎತ್ತರ.

(4) ಜಘನ್ಯಭೋಗಭೂಮಿಯ ಲಕ್ಷಣವುಳ್ಳ सुषमदुःषमा ಕಾಲದ ಪ್ರಮಾಣ 2 ಕೋಟಿಕೋಟಿ ಸಾಗರೋಪಮ.

(5) ಮಧ್ಯಮಭೋಗಭೂಮಿಯ ಲಕ್ಷಣವುಳ್ಳ सुषमा ಕಾಲದ ಪ್ರಮಾಣ 3 ಕೋಟಿಕೋಟಿಸಾಗರೋಪಮ.

(6) ಉತ್ತಮಭೋಗಭೂಮಿಯ ಲಕ್ಷಣವುಳ್ಳ सुषमसुषमा ಕಾಲದಲ್ಲಿ ರಾತ್ರಿ ಹಗಲು ವಿಭಾಗವಿಲ್ಲ. ಬಿಸಿಲು ಮತ್ತು ಶೀತದ ಬಾಧೆಯಿಲ್ಲ. ಈ ಕಾಲದಲ್ಲಿ ಜನಿಸಿದವರು ಮಧುರಭಾಷಿಗಳು, ಕಲಾವಿದರು, ಸಮಾನ ಭೋಗವುಳ್ಳವರು. ಈರ್ಷ್ಯೆ, ಮಾತ್ಸರ್ಯ, ಅನಾಚಾರ, ಕಾರ್ಪಣ್ಯ, ಕೋಪ, ಭಯ, ವಿಷಾದ, ಕಾಮಜ್ವರ, ಚಿಂತೆ, ದೈನ್ಯ, ನಿದ್ರೆ, ಅನಿಷ್ಟಯೋಗ, ಇಷ್ಟವಿಯೋಗ, ಜರೆ ಇವುಗಳಿಂದ ದೂರವಾಗಿರುವರು.]

**उत्सर्पित** ಉತ್ಸರ್ಪಿತ (वि०) 1. ಮೇಲಕ್ಕೆ ಎಬ್ಬಿಸಲ್ಪಟ್ಟ. 2. ಸಮೀಪಕ್ಕೆ ತರಲ್ಪಟ್ಟ. उत् + सृप्लृ (गतौ) "क्तः" (३-२-१०२)। "उत्सर्पितोर्मिचयलङ्घिततीरदेशमौत्सुक्यनुन्नमिव वारि पुरः प्रतस्थे" किरा० ८-५५।

**उत्सर्पिन्** ಉತ್ಸರ್ಪಿನ್ (वि०) 1. ಮೇಲಕ್ಕೆ ಹರಡುವ ಸ್ವಭಾವದ. उत्+सृप्लृ (गतौ) "णिनिः" (३-२-७८)। "ततः शरच्चन्द्रकराभिरामैरुत्सर्पिभिः प्रांशुमिवांशुजालैः" किरा० ३-१। 2. ಮೇಲಕ್ಕೆ ಹಾರುವ, ಮೇಲಕ್ಕೆ ನೆಗೆಯುವ. "पयोधरोत्सर्पिषु शीर्यमाणः संलक्ष्यते न च्छिदुरोऽपि हारः" रघु० १६-६२। 3. ಅತಿಶಯವಾದ, ಬಹಳ ಶ್ರೇಷ್ಠವಾದ, ಮೇಲ್ಪಟ್ಟದ. स्त्रियां "ङीप्" (४-१-५)। –र्पिणी–ಸರ್ಪಿಣೀ. "उत्सर्पिणी खलु महतां प्रार्थना" शाकु० ७। "उत्सर्पिणी न किल तस्य तरङ्गिणी या" नैष० ११-७७।

**उत्सव** ಉತ್ಸವ (पु०) 1. ಸಂತೋಷವನ್ನುಂಟುಮಾಡುವ ಸಮಾರಂಭ, ಹಬ್ಬ. 2. ಸಂತೋಷ, ಆನಂದ, ಹರ್ಷ. उत् + षु (प्रसवैश्वर्ययोः) "अप्" (३-३-५७)। "श्लाघ्यान्वयेति नयनोत्सवकारिणीति निर्व्यूढसौहृदरसेति गुणोज्ज्वलेति" मालती० ६-१७। "विधुर्विधुन्तुदस्येव पूर्णस्तस्योत्सवाय सः" माघ० २-६१। "पराभवोऽप्युत्सव एव मानिनाम्" किरा० १-४१। 3. ಹೆಚ್ಚು ವಿಕೆ. 4. ಕೋಪ, ಸಿಟ್ಟು. 5. ಆಸೆಯು ಹೆಚ್ಚುವಿಕೆ. "उत्सेकामर्षयोरिच्छाप्रसवे मह उत्सवः" अम०। "उत्सवो मह उत्सेके इच्छाप्रसवकोपयोः" मेदि०।

**उत्सवसङ्केत** ಉತ್ಸವಸಂಕೇತ (पु०ब०) ಹಿಮಾಲಯದಲ್ಲಿ ವಾಸಿಸುವ ಕಾಡುಮನುಷ್ಯರು. उत्सवः आनन्दजनकः सङ्केतः स्त्रीपुंसयोः रत्यर्थमनुरागादाह्वानं येषाम्। [ಈ ಜನರಲ್ಲಿ ಪತಿಪತ್ನೀಭಾವದ ನಿಯಮವಿಲ್ಲದೆ ಎಲ್ಲಾ ಪುರುಷರೂ ಎಲ್ಲಾ ಸ್ತ್ರೀಯರೊಡನೆಯೂ ಸ್ವೇಚ್ಛೆಯಿಂದ ವಿಹರಿಸುವುದರಿಂದ ಈ ಪರ್ವತವಾಸಿಗಳಾದ ಇವರಿಗೆ ಈ ಹೆಸರು.] "पौरवं युधि निर्जित्य दस्यून् पर्वतवासिनः। गणानुत्सवसङ्केतानजयत्सप्त पाण्डवः" भा० सभा० २८-१६। "शरैरुत्सवसङ्केतान् स कृत्वा विरतोत्सवान्" रघु० ४-७८।

**उत्सादन** ಉತ್ಸಾದನ (न०) 1. ಮೈಯನ್ನು ಉಜ್ಜಿ ಶುದ್ಧಿಮಾಡುವ ಪುಡಿ. उत्साद्यतेऽनेन – उद् + षद्लृ (विशरणादौ) + णिच् कर० "ल्युट्" (३-३-११७)। "उत्सादनं च गात्राणां स्नापनोच्छिष्टभोजने। न कुर्याद्गुरुपुत्रस्य पादयोश्चावनेजनम्" मनु० २-२०९। 2. ಮೈಯನ್ನು ಉಜ್ಜಿ ಶುದ್ಧಿಮಾಡುವಿಕೆ. 3. ನಾಶಪಡಿಸುವಿಕೆ. भावे "ल्युट्" (३-३-१८)। "उत्सादनार्थं लोकानां धुन्धुर्नाम महासुरः" भा०।

**उत्सादनीय** ಉತ್ಸಾದನೀಯ (न०) 1. ಮೈಯನ್ನು ಉಜ್ಜಿ ಶುದ್ಧಿಮಾಡುವ ಪುಡಿ. (वि०) 2. ನಾಶಪಡಿಸಲು ಯೋಗ್ಯವಾದ. 3. ನಾಶಪಡಿಸಲ್ಪಡುವ. उद् + षद्लृ (विशरणादौ) + णिच् "अनीयर्" (३-१-९६)।

**उत्सादित** ಉತ್ಸಾದಿತ (वि०) 1. ನಾಶಪಡಿಸಲ್ಪಟ್ಟ. 2. ವಾಸನೆಯ ಪುಡಿಯಿಂದ ಉಜ್ಜಲ್ಪಟ್ಟ. उद्+षद्लृ (विशरणादौ) + णिच् "क्तः" (३-२-१०२)।

**उत्सारक** ಉತ್ಸಾರಕ (पु०) 1. ದ್ವಾರಪಾಲಕ. उत्सारयति जनान् – उत् + सृ (गतौ) + णिच् "ण्वुल्" (३-१-१३३)। 2. ಪೋಲೀಸಿನವನು, ಜನರ ಗುಂಪನ್ನು ಚದರಿಸುವವನು.

**उत्सारण** ಉತ್ಸಾರಣ (न०) 1. ಜನರ ಗುಂಪನ್ನು ಚದರಿಸುವಿಕೆ. 2. ದಾರಿಯನ್ನು ಬಿಡಿಸಿ ಓಡಿಸುವಿಕೆ. उत् + सृ (गतौ) + णिच् "ल्युट्" (३-३-११५)।

**उत्सारित** ಉತ್ಸಾರಿತ (वि०) 1. ಚದರಿಸಲ್ಪಟ್ಟ. 2. ಓಡಿಸಲ್ಪಟ್ಟ. उत् + सृ (गतौ) + णिच् "क्तः" (३-२-१०२)।

**उत्साह ಉತ್ಸಾಹ** (पुं०) 1. ಇಚ್ಛೆ, ಪ್ರವೃತ್ತಿ, ಕ್ರಿಯಾಶಕ್ತಿ, ಉದ್ಯಮ, ಪ್ರಯತ್ನ. उत् + षह (मर्षणे) "घञ्" (३-३-१२१)। "मन्दोत्साहः कृतोऽस्मि मृगयापवादिना माढव्येन" शाकु० २। 2. ರಾಜನ ಮೂರು ವಿಧ ಶಕ್ತಿಗಳಲ್ಲೊಂದು. **ಮೂರು ವಿಧ ಶಕ್ತಿಗಳು:** (1) ಪ್ರಭುಶಕ್ತಿ, (2) ಮಂತ್ರಶಕ್ತಿ ಮತ್ತು (3) ಉತ್ಸಾಹಶಕ್ತಿ. "शक्तयस्तिस्रः प्रभावोत्साहमन्त्रजाः" अम०। "प्रज्ञोत्साहावतः स्वामी यतेताधातुमात्मनि" माघ० २-७६। 3. ಸ್ಥಿರಬುದ್ಧಿಯಿಂದ ನಡೆಸುವ ಸುದೀರ್ಘಪ್ರಯತ್ನ. 4. ಅಧ್ಯವಸಾಯ, ನಿಶ್ಚಯ. 5. ವೀರರಸದ ಸ್ಥಾಯಿಭಾವ. "उत्तमप्रकृतिर्वीर उत्साहस्थायिभावकः" सा० द० ३-२३२। 6. ಸೂತ್ರ, ದಾರ. "उत्साहस्तूद्यमे सूत्रे" मेदि०।

**उत्साहक ಉತ್ಸಾಹಕ** (वि०) ಉತ್ಸಾಹವನ್ನುಂಟುಮಾಡುವ, ಕ್ರಿಯಾಶಕ್ತಿಯನ್ನುಂಟುಮಾಡುವ, ಕಾರ್ಯದಲ್ಲಿ ಪ್ರವರ್ತಿಸುವಂತೆ ಹುರಿದುಂಬಿಸುವ. उत्साहयति—उत्+षह (मर्षणे) "ण्वुल्" (३-१-१३३)।

**उत्साहन ಉತ್ಸಾಹನ** (न०) ಉತ್ಸಾಹವನ್ನುಂಟುಮಾಡುವಿಕೆ, ಹುರಿದುಂಬಿಸುವಿಕೆ, ಉತ್ತೇಜನಕೊಡುವಿಕೆ. उत् + षह (मर्षणे) "ल्युट्" (३-३-११५)।

**उत्साहवर्धन ಉತ್ಸಾಹವರ್ಧನ** (पुं०) 1. ಉತ್ಸಾಹವನ್ನು ಅಧಿಕಗೊಳಿಸುವ ವೀರರಸ. उत्साहं वर्धयति—वृधु (वृद्धौ) + णिच् "ल्युः" (३-१-१३४)। (न०) 2. ಉತ್ಸಾಹದ ವೃದ್ಧಿ, ಉತ್ಸಾಹವು ಹೆಚ್ಚುವಿಕೆ. उत्साहस्य वर्धनम्—वृधु (वृद्धौ) "ल्युट्" (३-३-११५)। (वि०) 3. ಉತ್ಸಾಹವನ್ನು ಹೆಚ್ಚಿಸುವ.

**उत्साहशक्ति ಉತ್ಸಾಹಶಕ್ತಿ** (स्त्री०) ರಾಜನ ಮೂರು ವಿಧ ಶಕ್ತಿಗಳಲ್ಲೊಂದು, ರಾಜನ ಪರಾಕ್ರಮವನ್ನು ಹೆಚ್ಚಿಸುವ ಶಕ್ತಿ. "शक्तयस्तिस्रः प्रभावोत्साहमन्त्रजाः" अम०।

**उत्साहिन् ಉತ್ಸಾಹಿನ್** (वि०) ಉತ್ಸಾಹವುಳ್ಳ, ಕಾರ್ಯಾಸಕ್ತನಾದ, ಪ್ರಯತ್ನಶಾಲಿಯಾದ. उत्साह "इनिः" (५-२-११५)।

**उत्सिक्त ಉತ್ಸಿಕ್ತ** (वि०) 1. ಗರ್ವಗೊಂಡ, ಕೊಬ್ಬಿದ. 2. ಹೆಚ್ಚಿದ, ಅಧಿಕಗೊಂಡ, ವೃದ್ಧಿಹೊಂದಿದ. 3. ಕಲಕಲ್ಪಟ್ಟ, ನೆಮ್ಮದಿಗೆ ಭಂಗ ತರಲ್ಪಟ್ಟ. उत्+षिच (क्षरणे) "क्तः" (३-२-१०२)। "जानीयादस्थिरां वाचमुत्सिक्तमनसां तथा" मनु० ८-७१।

**उत्सुक ಉತ್ಸುಕ** (वि०) 1. ಇಷ್ಟವಾದುದನ್ನು ಪಡೆಯಲು ಪ್ರಯತ್ನವುಳ್ಳ. 2. ಇಷ್ಟವಾದುದನ್ನು ಪಡೆಯಲು ತವಕಪಡುವ. उत्सुवति—उत्+षू (प्रेरणे) "क्तुः" (वा० ३-२-१८०)। "कन्" (५-४-५)। ह्रस्वः (७-४-१३)। "तमुत्सुकाश्चक्रुरवेक्षणोत्सुकं गवां गणाः प्रस्नुतपीवरौधसः" "विहारभूमेरभिघोषमुत्सुकाः" किरा० ४-१०, ३१। "श्रुत्वा रामः प्रियोदन्तं मेने तत्सङ्गमोत्सुकः" रघु० १२-६६।

**उत्सुकता ಉತ್ಸುಕತಾ** (स्त्री०) ಔತ್ಸುಕ್ಯ, ಇಷ್ಟವಾದುದನ್ನು ಪಡೆಯಲು ಆಸೆ, ಇಷ್ಟವಾದುದನ್ನು ಶೀಘ್ರವಾಗಿ ಪಡೆಯಲು ಪ್ರಯತ್ನ. उत्सुकस्य भावः "तल्" (५-१-११९)। "नयति सन्ततमुत्सुकतामयम्" किरा० ५-१९।

**उत्सूत्र ಉತ್ಸೂತ್ರ** (वि०) 1. ದಾರವನ್ನು ಬಿಟ್ಟಿರುವ, ದಾರದಿಂದ ಬೇರೆಯಾಗಿರುವ. (ಹಾರದ ಮಣಿ ಮೊದಲಾದುದು.) उत्क्रान्तः सूत्रम्। "हाराणां मणिभिरुपाश्रितौ समन्तादुत्सूत्रैर्गुणवदुपघ्नकाम्ययेव" माघ० ८-५३। 2. ನಿಯಮವನ್ನು ಮೀರಿದ, ನೀತಿಶಾಸ್ತ್ರವನ್ನು ಅತಿಕ್ರಮಿಸಿದ, ಸೂತ್ರಾರ್ಥಕ್ಕೆ ವಿರುದ್ಧವಾದ. "अनुत्सूत्रपदन्यासा सद्वृत्तिः सन्निबन्धना" माघ० २-११२।

**उत्सृज्य ಉತ್ಸೃಜ್ಯ** (अव्य०) ತ್ಯಜಿಸಿ, ಬಿಟ್ಟು. उत्+सृज (विसर्गे) "ल्यप्" (७-१-३७)। "उत्सृज्य कुसुमशयनं नलिनीदलकल्पितस्तनावरणम्" शाकु० ३-१९।

**उत्सृष्ट ಉತ್ಸೃಷ್ಟ** (वि०) 1. ತ್ಯಜಿಸಲ್ಪಟ್ಟ, ಬಿಡಲ್ಪಟ್ಟ. उत+सृज (विसर्गे) "क्तः" (३-२-१०२)। "भयोत्सृष्टविभूषाणां तेन केरलयोषिताम्" रघु० ४-५४। 2. ಮೇಲಕ್ಕೆ ಎತ್ತಿಹಾಕಲ್ಪಟ್ಟ. "उत्सृष्टध्वजकुथकङ्कटा धरित्रीमानीता विदितनयैः श्रमं विनेतुम्" किरा० ७-३०। 3. ಕೊಡಲ್ಪಟ್ಟ, ದಾನಮಾಡಲ್ಪಟ್ಟ. 4. ಬಿಡಲ್ಪಟ್ಟ, ಪ್ರಯೋಗಿಸಲ್ಪಟ್ಟ (ಬಾಣ). 5. ಬಿಡಲ್ಪಟ್ಟ, (ಹಗ್ಗ) ಬಿಚ್ಚಲ್ಪಟ್ಟ. "तुरङ्गमुत्सृष्टमनर्गलं पुनः" रघु० ३-३९।

**उत्सृष्टि ಉತ್ಸೃಷ್ಟಿ** (स्त्री०) ಪರಿತ್ಯಾಗ, ಬಿಡುವಿಕೆ. उत् + सृज (विसर्गे) "क्तिन्" (३-३-९४)।

**उत्सेक ಉತ್ಸೇಕ** (पुं०) 1. ಗರ್ವ, ಅಹಂಕಾರ. उत्+षिच (क्षरणे) "घञ्" (३-३-१८)। "उपदा विविशुः शश्वन्नोत्सेकाः कोसलेश्वरम्" रघु० ४-७०। 2. ಉದ್ರೇಕ, ಹೆಚ್ಚುವಿಕೆ, ಅಧಿಕವಾಗುವಿಕೆ.

"सौहित्यात्पृथवः क्रथन्ति रुधिरोत्सेकाश्चमत्कारिणः" म० वी० ५-३३। 3. ಮೇಲಕ್ಕೆ ಎತ್ತಿ ಸುರಿಯುವುದು.

**उत्सेकिन् ಉತ್ಸೇಕಿನ್** (वि०) 1. ಹೆಚ್ಚಾದ, ಅಧಿಕವಾದ. "उत्सेकिना बलमदेन विगाहमानम्" मुद्रा० १-२७। 2. ಗರ್ವವುಳ್ಳ, ಅಹಂಕಾರದಿಂದ ಕೂಡಿದ. उत्सेकोऽस्यास्ति "इनिः" (५-२-११५)। स्त्रियां "ङीप्" (४-१-५)। उत्सेकिनी ಉತ್ಸೇಕಿನೀ. "भूयिष्ठं भव दक्षिणा परिजने भाग्येष्वनुत्सेकिनी" शाकु० ४-१७।

**उत्सेचन ಉತ್ಸೇಚನ** (न०) ಮೇಲಕ್ಕೆ ಎತ್ತಿ ಸುರಿಯುವಿಕೆ. उत्+षिच (क्षरणे) "ल्युट्" (३-३-११५)।

**उत्सेध ಉತ್ಸೇಧ** (पुंन०) 1. ಎತ್ತರ, ಔನ್ನತ್ಯ. उत्+षिध (गत्याम्) "घञ्" (३-३-१८)। "बबन्ध बालारुणबभ्रु वल्कलं पयोधरोत्सेधविशीर्णसंहति" कुमा० ५-८। (न०) 2. ದೇಹ, ಶರೀರ. "उत्सेधश्चोच्छ्रये काये" विश्व०। "उत्सेधस्तूच्छ्रये न स्त्री क्लीबं संहननेऽपि च" मेदि०।

**उत्स्वन ಉತ್ಸ್ವನ** (पु०) 1. ಗಟ್ಟಿಯಾದ ಶಬ್ದ. उत् उच्चैः स्वनः। (वि०) 2. ಗಟ್ಟಿಯಾದ ಶಬ್ದವುಳ್ಳ. उच्चैः स्वनो यस्य।

**उत्स्वप्न ಉತ್ಸ್ವಪ್ನ** (वि०) ಕನವರಿಸುವ, ನಿದ್ರೆಯಲ್ಲೂ ಸ್ವಪ್ನವಾಗಿ ಮಾತನಾಡುವ. उत्क्रान्तः अतिक्रान्तः स्वप्नं स्वप्नमर्यादाम्।

**उद् ಉದ್** (अव्य०) ಈ ಕೆಳಗಿನ ಅರ್ಥಗಳಿಗೆ ದ್ಯೋತಕವಾಗಿರುವುದು: 1. ಪ್ರಕಾಶಪಡಿಸುವುದು, ಹೊರಗೆಡಹುವುದು. उद्घोषति। उच्चरति। 2. ಪ್ರತ್ಯೇಕವಾಗುವುದು, ಬೇರ್ಪಡುವುದು. उद्गच्छति। 3. ಊರ್ಧ್ವಕರ್ಮ, ಮೇಲಕ್ಕೆ ಏಳುವುದು. उत्तिष्ठति। 4. ಆಶ್ಚರ್ಯ. 5. ಪ್ರಾಧಾನ್ಯ. 6. ಮೇಲಕ್ಕೆ ಹಾರುವುದು. "तस्मिन्नुत्पतिते पुरः सुरमुनाविन्दोः श्रियं बिभ्रति" माघ० १-७५। 7. ಅಭಾವ. 8. ಮೋಕ್ಷ, ಮುಕ್ತಿ, ಬಿಡುಗಡೆ. 9. ಪ್ರಾಧಾನ್ಯ. 10. ಮೇಲುಮುಖ. "उद्ग्रीवैर्घनरवशङ्कया मयूरैः" किरा० ७-२२। 11. ಊರ್ಧ್ವಮುಖವಾಗಿ ಹೋಗುವುದು, ಮೇಲಕ್ಕೆ ಹೊರಡುವುದು. "उद्गतेन्दुमविभिन्नतमिस्रां पश्यति स्म रजनीमवितृप्तः" किरा० ९-२४। 12. ಲಾಭ, ಸಂಪಾದನೆ. उत्पत्तिः। उत्पन्नम्। 13. ಬಂಧನ. 14. ಶಕ್ತಿ. "उत् प्रकाशे विभागे च प्राबल्यास्वास्थ्यशक्तिषु। प्राधान्ये बन्धनेऽभावे मोक्षे लाभोर्ध्वकर्मणोः" मेदि०।

**उदक ಉದಕ** (न०) ನೀರು, ಜಲ. उन्दी (क्लेदने) "क्वुन्" (उ० २-३९)। "अनीत्वा पङ्कतां धूलिमुदकं नावतिष्ठते" माघ० २-३४।

**उदकान्त ಉದಕಾಂತ** (पु०) ನೀರಿನ ದಡ, ನೀರಿನ ಅಂಚು. "भगवन्, ओदकान्तात् स्निग्धो जनोऽनुगन्तव्य इति श्रूयते" शाकु० ४।

**उदकुम्भ ಉದಕುಂಭ** (पु०) ನೀರಿನ ಕೊಡ, ನೀರಿನ ಬಿಂದಿಗೆ. उदकस्य कुम्भः—उदकस्य उदादेशः (६-३-५७)।

**उदकेचर ಉದಕೇಚರ** (पु०) ಜಲಚರಪ್ರಾಣಿ, ನೀರಿನಲ್ಲಿ ಸಂಚರಿಸುವ ಜಂತು, ಮೀನು, ಹಕ್ಕಿ ಮೊದಲಾದುವು. उदके चरति—चर (गतौ) "टः" (३-२-१६)। सप्तम्या वा अलुक् (६-३-१४)। सप्तम्या लुकि उदकचरः। "णिनिः" (३-२-७८)। –चारिन् –ಚಾರಿನ್. स्त्रियां "ङीप्" (४-१-५)। –चारिणी –ಚಾರಿಣೀ.

**उदक्त ಉದಕ್ತ** (वि०) ಬಾವಿಯಿಂದ ಮೇಲಕ್ಕೆ ಎತ್ತಲ್ಪಟ್ಟ (ನೀರು ಮುಂತಾದುದು). उद्+अञ्चु (गतौ) "क्तः" (३-२-१०२)। "उदक्तमुदकं कूपात्" सि० कौ०।

**उदक्प्रवण ಉದಕ್‌ಪ್ರವಣ** (वि०) ದಕ್ಷಿಣ ದಿಕ್ಕಿನಿಂದ ಉತ್ತರಕ್ಕೆ ತಗ್ಗಾದ, ಉತ್ತರ ದಿಕ್ಕಿನ ಕಡೆಗೆ ಇಳಿಜಾರಾಗಿರುವ.

**उदक्य ಉದಕ್ಯ** (वि०) 1. ನೀರನ್ನು ಅಪೇಕ್ಷಿಸುವ, ನೀರಿನಿಂದ ಬೆಳೆಯಲು ಅರ್ಹವಾದ. उदकमर्हति "यत्" (५-१-६६)। 2. ಅಶುಚಿ, ಮೈಲಿಗೆ. (ಸ್ನಾನದಿಂದ ಮೈಲಿಗೆಯು ನಿವೃತ್ತಿಯಾಗುವುದರಿಂದ ಅದು ನೀರಿನ ಅಪೇಕ್ಷೆಯುಳ್ಳದ್ದು.) (स्त्री०) –क्या –ಕ್ಯಾ. ರಜಸ್ವಲೆ, ಋತುಮತಿಯಾದ ಹೆಂಗಸು. ऋतुमत्यप्युदक्यापि" अम०।

**उदगयन ಉದಗಯನ** (न०) 1. ಉತ್ತರಾಯಣ. उदक् उदीच्यामयनं यत्र। ಸೂರ್ಯನು ಉತ್ತರ ದಿಕ್ಕಿನಲ್ಲಿ ಸಂಚರಿಸುವ (ಮಕರಮಾಸ ಮೊದಲುಗೊಂಡು ಮಿಥುನ ಮಾಸದವರೆಗೆ) ಆರು ತಿಂಗಳ ಕಾಲ. 2. ಉತ್ತರ ದಿಕ್ಕಿನಲ್ಲಿ ಸಂಚಾರ. उदक् उदीच्यामयनम्।

**उदग्दश ಉದಗ್ದಶ** (न०) ಉತ್ತರದಲ್ಲಿ ತುದಿಯುಳ್ಳ ಬಟ್ಟೆ. उदक् उदीच्यां दशा अञ्चलं यस्य।

**उदग्र ಉದಗ್ರ** (वि०) 1. ಉನ್ನತವಾದ, ಎತ್ತರವಾದ. उद्गतमग्रं यस्य। "उदग्रतालध्वजमेतदग्रे सीमान्तरं सीरभृतो गुरोर्नः" याद० १८-१२३। "आक्रम्य संस्थितमुदग्रविशालशृङ्गम्" माघ० ४-१९। 2. ಹೆಚ್ಚಾದ,

(३-३-१२१)। 3. ಭ್ರಾಂತಿ, ತಪ್ಪಾಗಿ ತಿಳಿದುಕೊಳ್ಳುವಿಕೆ. "प्रसूनमाला नलस्योद्भ्रमवीक्षितस्य" नैष० ६-४९। 4. ಸುತ್ತಲೂ ತಿರುಗುವಿಕೆ, ಗರಗರನೆ ತಿರುಗುವಿಕೆ. उद्+भ्रमु भावे "घञ्" (३-३-१८)। भावे "ल्युट्" (३-३-११५)। –भ्रमणम् –ಭ್ರಮಣಮ್.

**उद्भ्रान्त ಉದ್ಭ್ರಾಂತ** (वि०) 1. ಗಾಬರಿಗೊಂಡ, ಕಳವಳಗೊಂಡ. 2. ಹೆದರಿದ, ಭಯಗೊಂಡ. उद् + भ्रमु (चलने) "क्तः" (३-४-७२)। "अथ रामशिरश्छेददर्शनोद्भ्रान्तचेतनाम्" रघु० १२-७४। 3. ಮೇಲಕ್ಕೆಹಾರಿದ, ಮೇಲೆ ಸುತ್ತುತ್ತಿರುವ. "मारीचोद्भ्रान्तहारिता मलयाद्रेरुपत्यकाः" रघु० ४-४६।

**उद्यच्छमान ಉದ್ಯಚ್ಛಮಾನ** (वि०) ಪ್ರಯತ್ನಪಡುತ್ತಿರುವ, ಯತ್ನ ನಡೆಸುತ್ತಿರುವ. उद्+यम (उपरमे) "शानच्" (३-२-१२४)। "उद्यच्छमाना गमनाय पश्चात्पुरो निवेशे पथि च व्रजन्ती" रघु० १६-२९।

**उद्यत् ಉದ್ಯತ್** (वि०) 1. ಮೇಲಕ್ಕೆ ಏಳುವ, ಮೇಲಕ್ಕೆ ಎದ್ದು ನಿಲ್ಲುವ. उद्+इण् (गतौ) "शतृ" (३-२-१२४)। "अथोच्चकैरासनतः परार्ध्यादुद्यन् स धूतारुणवल्कलाग्रः" किरा० २-५७। 2. ಮೇಲಕ್ಕೆ ಹೊರಡುವ, ಮೇಲಕ್ಕೆ ಹೋಗುತ್ತಿರುವ. "उद्यत्कृशानुशकलेषु खुराभिघातात्" माघ० ५-९। 3. ಉದಯಿಸುತ್ತಿರುವ, ಮೇಲಕ್ಕೆ ಎದ್ದು ಬರುತ್ತಿರುವ. "नेक्षेतोद्यन्तमादित्यं नास्तं यन्तं कदाचन" मनु० ४-३७।

**उद्यत ಉದ್ಯತ** (न०) 1. ಉದ್ಯಮ, ಪ್ರಯತ್ನ. उद्+यम (उपरमे) "क्तः" (३-३-११४)। (वि०) 2. ಪ್ರಯತ್ನಗೊಂಡ, ಯತ್ನಿಸಿರುವ. उद् + यम कर्त० "क्तः" (३-४-७२)। "तदाशु कर्तुं त्वयि जिह्ममुद्यते विधीयतां तत्र विधेयमुत्तरम्" किरा० १-२५। "पक्षच्छेदोद्यतं शक्रं शिलावर्षीव पर्वतः" रघु० ४-४०। 3. ಮೇಲಕ್ಕೆ ಎತ್ತಲ್ಪಟ್ಟ, ಎತ್ತಿಹಿಡಿಯಲ್ಪಟ್ಟ. उद् + यम कर्म० "क्तः" (३-२-१०२)। "न तेन सज्यं क्वचिदुद्यतं धनुः" किरा० १-२१। "प्रजार्थसाधने तौ हि पर्यायोद्यतकार्मुकौ" रघु० ४-१६।

**उद्यति ಉದ್ಯತಿ** (स्त्री०) 1. ಪ್ರಯತ್ನ. 2. ಮೇಲಕ್ಕೆ ಎತ್ತುವಿಕೆ. उद्+यम (उपरमे) "क्तिन्" (३-३-९४)।

**उद्यम ಉದ್ಯಮ** (पु०) 1. ಪ್ರಯತ್ನ. उद् + यम (उपरमे) "घञ्" (३-३-१८)। "निशम्य चैनां तपसे कृतोद्यमां सुतां गिरीशप्रतिसक्तमानसाम्" कुमा० ५-३। 2. ಮೇಲಕ್ಕೆ ಎತ್ತಿಹಿಡಿಯುವುದು. भावे "ल्युट्" (३-३-११५)। उद्यमनम् ಉದ್ಯಮನಮ್.

**उद्यमित ಉದ್ಯಮಿತ** (वि०) 1. ಪ್ರೇರಿಸಲ್ಪಟ್ಟ, ಪ್ರಯತ್ನಪಡಿಸಲ್ಪಟ್ಟ. उद् + यम (उपरमे) + णिच् "क्तः" (३-२-१०२)। "भर्तृषूपसखि निक्षिपतीनामात्मनो मधुमदोद्यमितानाम्" किरा० ९-६६। 2. ಮೇಲಕ್ಕೆ ಎತ್ತಿ ಹಿಡಿಸಲ್ಪಟ್ಟ.

**उद्यमिन् ಉದ್ಯಮಿನ್** (वि०) ಪ್ರಯತ್ನವುಳ್ಳ, ಉದ್ಯೋಗಶೀಲ. उद्यम "इनिः" (५-२-११५)।

**उद्यात ಉದ್ಯಾತ** (वि०) ಮೇಲಕ್ಕೆ ಎದ್ದಿರುವ. उद्+या (प्रापणे) "क्तः" (३-४-७२)। "उद्यातमुद्गतमनोकहजालमध्यात्" माघ० ५-२५।

**उद्यान ಉದ್ಯಾನ** (पुन०) 1. ಉಪವನ, ಕೈತೋಟ, ಕ್ರೀಡಾವನ. उद्+या (प्रापणे) अधि० "ल्युट्" (३-३-११७)। "व्यावृत्तगतिरुद्याने कुसुमस्तेयसाध्वसात्" कुमा० २-३५। "बाह्योद्यानस्थितहरशिरश्चन्द्रिकाधौतहर्म्या" मेघ० १-७। 2. ಹೊರಕ್ಕೆ ಹೊರಡುವುದು. 3. ಪ್ರಯೋಜನ. "उद्यानं वनभेदे स्यान्निःसृतौ च प्रयोजने" विश्व०।

**उद्यानपाल ಉದ್ಯಾನಪಾಲ –पालक –ಪಾಲಕ** (पु०) ತೋಟದ ಕಾವಲುಗಾರ, ಮಾಲಿ, ತೋಟದ ರಕ್ಷಕ. उद्यानं पालयति – पाल (रक्षणे) "अण्" (३-२-१)। "उद्यानपालसामान्यमृतवस्तमुपासते" कुमा० २-३६।

**उद्यापन ಉದ್ಯಾಪನ** (न०) ವ್ರತ ಮೊದಲಾದುವನ್ನು ಸಮಾಪ್ತಿಗೊಳಿಸುವುದು, ಪೂರ್ಣಗೊಳಿಸುವಿಕೆ. उद्+या (प्रापणे) + णिच् "ल्युट्" (३-३-११५)।

**उद्यापित ಉದ್ಯಾಪಿತ** (वि०) ಪೂರ್ಣಗೊಳಿಸಲ್ಪಟ್ಟ, ಸಮಾಪ್ತಿಗೊಳಿಸಲ್ಪಟ್ಟ. उद्+या (प्रापणे) + णिच् "क्तः" (३-२-१०२)।

**उद्याम ಉದ್ಯಾಮ** (पु०) ಶಿಕ್ಯ, ಕಾವಡಿಯ ನೇಲವು, ಭಾರಹೊರುವುದಕ್ಕಾಗಿ ಹಗ್ಗದಿಂದ ಮಾಡಿದ ನೇಲವು. उद्+यम (उपरमे) कर० "घञ्" (३-३-१२१)।

**उद्यास ಉದ್ಯಾಸ** (पु०) ಪ್ರಯತ್ನ, ಉದ್ಯಮ. उद्+यसु (प्रयत्ने) "घञ्" (३-३-१८)।

**उद्युक्त ಉದ್ಯುಕ್ತ** (वि०) ಉತ್ಸಾಹಪೂರ್ವಕ ಪ್ರಯತ್ನವುಳ್ಳ, ಉದ್ಯೋಗಶೀಲ, ಸಾಹಸಿ. उद् + युजिर् (योगे) "क्तः" (३-४-७२)।

**उद्योग ಉದ್ಯೋಗ** (पुं०) ಉದ್ಯಮ, ಪ್ರಯತ್ನ. उद्+युजिर् (योगे) "घञ्" (३-३-१९)। "उद्योगादनिवृत्तस्य सुसहायस्य धीमतः। छायेवानुगता तस्य नित्यं श्रीः सहचारिणी"। "तद्दैवमिति संचिन्त्य त्यजेन्नोद्योगमात्मनः" पञ्चतं०।

**उद्योगपर्वन् ಉದ್ಯೋಗಪರ್ವನ್** (नं०) ಮಹಾಭಾರತದ ಉದ್ಯೋಗಪರ್ವ. [ವಿರಾಟಪರ್ವದ ಕೊನೆಯಲ್ಲಿ ಅಭಿಮನ್ಯುವಿನೊಡನೆ ಉತ್ತರೆಯ ವಿವಾಹ ನಡೆದ ನಂತರ ಸಂಧಿಗಾಗಿ ಧೃತರಾಷ್ಟ್ರನಲ್ಲಿಗೆ ದೂತನನ್ನು ಕಳುಹಿಸುವುದು. ಸಂಧಿಯು ಸಫಲವಾಗದೆ ಅರ್ಜುನ ಮತ್ತು ದುರ್ಯೋಧನರು ಯುದ್ಧಸಿದ್ಧತೆ ಮಾಡಿಕೊಳ್ಳುವುದಕ್ಕಾಗಿ ಶ್ರೀಕೃಷ್ಣನಲ್ಲಿಗೆ ಹೋಗಿ ಸಹಾಯವನ್ನು ಅಪೇಕ್ಷಿಸುವುದು. ಅವರ ಅಪೇಕ್ಷೆಯಂತೆ ತಾನು ಪಾಂಡವರ ಕಡೆಗೂ, ತನ್ನ ಅಕ್ಷೋಹಿಣೀ ಸೈನ್ಯವು ಕೌರವರ ಕಡೆಗೂ ಇರುವುದಾಗಿ ಹೇಳುವುದು. ಉಭಯ ಪಕ್ಷದವರೂ ತಮ್ಮ ತಮ್ಮ ಮಿತ್ರರಾಜರ ಸಾಹಾಯ್ಯವನ್ನು ಪಡೆದು ಯುದ್ಧಕ್ಕೆ ಹೊರಡುವುದು ಇತ್ಯಾದಿ ವಿಷಯಗಳು ಈ ಪರ್ವದಲ್ಲಿ ಉಕ್ತವಾಗಿವೆ.]

**उद्योगिन् ಉದ್ಯೋಗಿನ್** (वि०) ಉದ್ಯೋಗಶೀಲ, ಪ್ರಯತ್ನವುಳ್ಳವನು. "उद्योगिनं पुरुषसिंहमुपैति लक्ष्मीर्दैवेन देयमिति कापुरुषा वदन्ति। दैवं निहत्य कुरु पौरुषमात्मशक्त्या यत्ने कृते यदि न सिद्ध्यति कोऽत्र दोषः" हितो० १-३२।

**उद्योजक ಉದ್ಯೋಜಕ** (वि०) ಪ್ರಯತ್ನಪಡಿಸುವ, ಕೆಲಸಮಾಡಿಸುವ. उद् + युजिर् (योगे) + णिच् "ण्वुल्" (३-१-१३३)।

**उद्र ಉದ್ರ** (पुं०) ಒಂದು ಜಾತಿ ಜಲಜಂತು, ಕಡಲ ಹಂದಿ. उनत्ति– उन्दी (क्लेदने) "रक्" (उ० २-१३)। "तद्भेदाः शिशुमारोद्रशंकवो मकरादयः" अम०।

**उद्रथ ಉದ್ರಥ** (पुं०) 1. ಗಾಡಿಯ ಕಡಾಣಿ, ಗಾಡಿಯ ಚಕ್ರದ ತಡೆಗಾಗಿ ಹಾಕುವ ಕೀಲು. उद्गतो रथो यस्मात्। 2. ಕುಕ್ಕುಟ, ಕೋಳಿ. "उद्रथो रथकीले स्यात्ताम्रचूडाख्यपक्षिणि" मेदि०।

**उद्रिक्त ಉದ್ರಿಕ್ತ** (वि०) 1. ಅಧಿಕವಾದ, ಹೆಚ್ಚಾದ. 2. ಸ್ಫುಟವಾದ, ಸ್ಪಷ್ಟವಾದ. उद्+रिचिर् (विरेचने) "क्तः" (३-४-७२)।

**उद्रुत ಉದ್ರುತ** (वि०) ಪಲಾಯನ ಮಾಡಿದ, ಓಡಿ ಹೋದ. उद् + द्रु (गतौ) "क्तः" (३-४-७२)। "उद्रुतमुद्रुतमनोकहजालमध्यादन्यः शशं गुणमनल्पमवन्नवाप" माघ० ५-२५।

**उद्रेक ಉದ್ರೇಕ** (पुं०) 1. ಅತಿಶಯ, ಆಧಿಕ್ಯ. उद्+रिचिर् (विरेचने) "घञ्" (३-३-१८)। "ज्ञानोद्रेकाद्विघटिततमोग्रन्थयः सत्त्वनिष्ठाः" वेणी० १-२३। 2. ವೃದ್ಧಿ, ಬೆಳವಣಿಗೆ.

**उद्वपन ಉದ್ವಪನ** (नं०) 1. ದಾನ, ಧರ್ಮ, ಕೊಡುಗೆ. 2. ಮೇಲಕ್ಕೆ ಎತ್ತಿ ಸುರಿಯುವುದು. 3. ಬುಡಸಹಿತ ಕಿತ್ತು ಹಾಕುವುದು. उद् + डु वप् (बीजसन्ताने) "ल्युट्" (३-३-११५)।

**उद्वमत् ಉದ್ವಮತ್** (वि०) 1. ವಮನಮಾಡುತ್ತಿರುವ, ವಾಂತಿಮಾಡುತ್ತಿರುವ. 2. ಹರಡುತ್ತಿರುವ, ಪಸರಿಸುತ್ತಿರುವ. उद्+टु वमु (उद्गिरणे) "शतृ" (३-२-१२४)। "उद्वमन्नभिरराज समन्तादङ्गराग इव लोहितरागः" किरा० ९-२७।

**उद्वमन ಉದ್ವಮನ** (नं०) ವಮನ, ವಾಂತಿ ಮಾಡುವಿಕೆ. उद्+टु वमु (उद्गिरणे) "ल्युट्" (३-३-११५)।

**उद्वमित ಉದ್ವಮಿತ** (वि०) ವಾಂತಿಮಾಡಿಸಲ್ಪಟ್ಟ. उद्+टु वमु (उद्गिरणे)+णिच् "क्तः" (३-२-१०२)।

**उद्वर्त ಉದ್ವರ್ತ** (पुं०) 1. ಶೇಷ, ಉಳಿಕೆ. 2. ಆಧಿಕ್ಯ, ಹೆಚ್ಚಿಗೆ. उद्+वृतु (वर्तने) "घञ्" (३-३-१८)। (वि०) 3. ಹೆಚ್ಚಾಗಿ ಉಳಿದಿರುವ. 4. ಹೆಚ್ಚಾಗಿರುವ, ಅಧಿಕವಾಗಿರುವ.

**उद्वर्तन ಉದ್ವರ್ತನ** (नं०) 1. ಮೈಯನ್ನು ಶುದ್ಧಿ ಮಾಡುವ ವಾಸನೆಯ ಪುಡಿ, ಮೈಗೆ ಪೂಸುವ ಸುಗಂಧ ದ್ರವ್ಯ. उद्वर्त्यतेऽनेन – उद्+वृतु (वर्तने) + णिच् "ल्युट्" (३-३-११७)। 2. ಮೈಯನ್ನು ವಾಸನೆಯ ಪುಡಿಯಿಂದ ಶುದ್ಧಿಮಾಡುವಿಕೆ. 3. ಮೇಲಕ್ಕೆ ಹಾರುವಿಕೆ. 4. ಹೊರಳಾಡುವಿಕೆ. "चटुलशफरोद्वर्तनप्रोक्षितानि" मेघ० १-४०। 5. ಉಜ್ಜುವಿಕೆ, ತಿಕ್ಕುವಿಕೆ. 6. ಬಳಿಯುವುದು, ಲೇಪನಮಾಡುವುದು. उद्+वृतु (वर्तने) भावे "ल्युट्" (३-३-११५)।

**उद्वर्तयत् ಉದ್ವರ್ತಯತ್** (वि०) 1. ಉಜ್ಜುತ್ತಿರುವ, ತಿಕ್ಕುತ್ತಿರುವ. 2. ಮೇಲಕ್ಕೆ ಎಬ್ಬಿಸುತ್ತಿರುವ, ಮೇಲಕ್ಕೆ ಹೊರಡಿಸುತ್ತಿರುವ. 3. ಮೈಯನ್ನು ವಾಸನೆಪುಡಿಯಿಂದ ಸುಗಂಧವಾಗಿ ಮಾಡುವ. उद्+वृतु (वर्तने)+णिच् "शतृ" (३-२-१२४)। "सफेनहासो जटिलप्रवालैरुद्वर्तयन्नूर्मिभुजैर्भुजङ्गान्" याद० १८-९७।

उद्वर्तित ಉದ್ವರ್ತಿತ (वि०) 1. ಉಜ್ಜಲ್ಪಟ್ಟ, ತಿಕ್ಕಲ್ಪಟ್ಟ. उद्+वृतु (वर्तने) "क्तः" (३-२-१०२)। 2. ಮೇಲಕ್ಕೆ ಎಬ್ಬಿಸಲ್ಪಟ್ಟ, ಮೇಲಕ್ಕೆ ಹೊರಡಿಸಲ್ಪಟ್ಟ. "उद्वर्तितानां महसा मणीनामूर्ध्वं प्रसर्पन्तमिवोर्मिमन्तम्" याद० १८-१०८। 3. ವಾಸನೆಪುಡಿಯಿಂದ ಸುಗಂಧವಾಗಿ ಮಾಡಲ್ಪಟ್ಟ.

उद्वर्धन ಉದ್ವರ್ಧನ (न०) 1. ಅಂತರ್ಹಾಸ, ಮಂದ ಹಾಸ, ಹೊರಗೆ ತಿಳಿಯದಂತೆ ಒಳಗೇ ಮೆಲ್ಲಗೆ ನಗುವುದು. उद्+वृधु (वृद्धौ) "ल्युट्" (३-३-११५)। "स्यादुद्वर्धनमन्तर्हासः" त्रिकाण्ड०। 2. ಅಭಿವೃದ್ಧಿ ಪಡಿಸುವುದು, ಬೆಳೆಸುವುದು, ಅಧಿಕವಾಗಿಸುವಿಕೆ. उद्+वृधु+णिच् "ल्युट्" (३-३-११५)। (वि०) 3. ವೃದ್ಧಿಪಡಿಸುವ, ಅಧಿಕವಾಗಿಸುವ. उद्+वृधु+णिच् "ल्युः" (३-१-१३४)। 4. ಮೇಲಕ್ಕೆ ಎತ್ತಿ ಕತ್ತರಿಸುವ. उद्+वर्ध (छेदने) "ल्युः" (३-१-१३४)।

उद्वह ಉದ್ವಹ (पु०) 1. ಪುತ್ರ, ಮಗ. उद्वहति ऊर्ध्वं नयति—(ऊर्ध्वलोकं नयति पितॄन्) उद्+वह (प्रापणे) "अच्" (३-१-१३४)। 2. ಆವಹ ಮೊದಲಾದ ಸಪ್ತವಾಯುಗಳಲ್ಲೊಂದು. "आवहः प्रवहश्चैव विवहश्च समीरणः। परावहः संवहश्च उद्वहश्च महाबलः। तथा परिवहः श्रीमान् उत्पातभयशंसिनः। इत्येते क्षुभिताः सप्त मारुता गगनेचराः" हरिवं०। 3. ವಿವಾಹ, ಮದುವೆ. उद्+वह "घः" (३-३-११८)। (वि०) 4. ವಂಶವನ್ನು ಮುಂದೆ ಬೆಳೆಸುವವನು, ವಂಶವನ್ನು ಮುಂದಕ್ಕೆ ತರುವವನು. "उदयमस्तमयं च रघूद्वहात्" रघु० ९-९। 5. ಮುಂದಕ್ಕೆ ಒಯ್ಯುವವನು, ಮುಂದಕ್ಕೆ ಸಾಗಿಸುವವನು. 6. ಪ್ರಧಾನ, ಮುಖ್ಯ, ಮುಂದಾಳು. (स्त्री०) –हा –ಹಾ. ಕನ್ಯೆ, ಮಗಳು.

उद्वहत् ಉದ್ವಹತ್ (वि०) ವಹಿಸುತ್ತಿರುವ, ಹೊಂದಿರುವ, ಹೊತ್ತಿರುವ. उद् + वह (प्रापणे) "शतृ" (३-२-१२४)। "कान्ताऽलकान्ता ललनाः सुराणां रक्षोभिरक्षोभितमुद्वहन्तम्" माघ० ४-९।

उद्वहन ಉದ್ವಹನ (न०) 1. ಹೊರುವಿಕೆ. उद् + वह (प्रापणे) "ल्युट्" (३-३-११५)। "आपीनभारोद्वहनप्रयत्नात्" रघु० २-१८। "व्यादिश्यते भूधरतामवेक्ष्य कृष्णेन देहोद्वहनाय शेषः" कुमा० ३-१३। 2. ವಿವಾಹ, ಮದುವೆ. "रसातलादादिभवेन पुंसा भुवः प्रयुक्तोद्वहनक्रियायाः" रघु० १३-८।

उद्वान ಉದ್ವಾನ (पु०) ವಾಂತಿಮಾಡುವಿಕೆ. उद्+वन (संभक्तौ) "घञ्" (३-३-१८)।

उद्वान्त ಉದ್ವಾಂತ (वि०) ವಾಂತಿಮಾಡಿದ. उद्+टु वमु (उद्गिरणे) "क्तः" (३-४-७२)।

उद्वाप ಉದ್ವಾಪ (पु०) 1. ಕಿತ್ತುಹಾಕುವುದು. 2. ಮೇಲಕ್ಕೆ ಎತ್ತುವುದು. 3. ಹೊರಕ್ಕೆ ಹಾಕುವುದು, ಬಹಿಷ್ಕರಿಸುವುದು, ತೆಗೆದುಹಾಕುವುದು. उद् + डु वप् (बीजसन्ताने) "घञ्" (३-३-१८)। 4. ಮುಂಡನ, ಭದ್ರಾಕರಣ. उद् + डु वप् + णिच् "अच्" (३-३-५६)।

उद्वास ಉದ್ವಾಸ (पु०) 1. ಪರಿತ್ಯಾಗ, ಬಿಟ್ಟುಬಿಡುವುದು. 2. ದೇಶದಿಂದ ಹೊರಕ್ಕೆ ಅಟ್ಟುವುದು. 3. ಕೊಲ್ಲುವುದು. उद्+वास (उपसेवायाम्) "घञ्" (३-३-१८)। भावे "ल्युट्" (३-३-११५)। उद्वासनम् ಉದ್ವಾಸನವೂ.

उद्वाह ಉದ್ವಾಹ (पु०) 1. ವಿವಾಹ, ಮದುವೆ, उद्+वह (प्रापणे) "घञ्" (३-३-१८)। ವಿವಾಹವು (1) ಬ್ರಾಹ್ಮ, (2) ದೈವ, (3) ಆರ್ಷ, (4) ಪ್ರಾಜಾಪತ್ಯ, (5) ಆಸುರ, (6) ಗಾಂಧರ್ವ, (7) ರಾಕ್ಷಸ ಮತ್ತು (8) ಪೈಶಾಚ ಎಂದು ಎಂಟು ವಿಧ. "विभावितं शिक्षितनाट्यवेदैरुद्वाहसंगीतमुदारक्लृप्तम्" याद० १३-८१। 2. ಮೇಲಕ್ಕೆ ಎತ್ತುವುದು, ನೀರು ಸೇದುವುದು, ಉದ್ಧರಣ.

उद्वाहन ಉದ್ವಾಹನ (न०) 1. ವಿವಾಹ, ಮದುವೆ. उद्+वह (प्रापणे)+णिच् भावे "ल्युट्" (३-३-११५)। 2. ಎರಡು ಸಲ ಉಳಲ್ಪಟ್ಟ ಭೂಮಿ. उद् उपरि वाहनं कर्षणं यत्र। 3. ಮೇಲಕ್ಕೆ ಎತ್ತುವುದು, ಮೇಲಕ್ಕೆ ಎಳೆಯುವುದು (ನೀರು ಮೊದಲಾದುದನ್ನು ಬಾವಿಯಿಂದ ಸೇದುವುದು). "उद्घाटनं घटीयन्त्रं सलिलोद्वाहनं प्रहेः" अम०।

उद्वाहनी ಉದ್ವಾಹನೀ (स्त्री०) ಕವಡೆ.

उद्वाहिक ಉದ್ವಾಹಿಕ (वि०) ವಿವಾಹ ಸಂಬಂಧವಾದ (ಮಂತ್ರ). उद्वाहः प्रयोजनमस्य "ठञ्" (५-१-१०९)। "नोद्वाहिकेषु मन्त्रेषु नियोगः कीर्त्यते क्वचित्" मनु० ९-६५।

उद्वाहित ಉದ್ವಾಹಿತ (वि०) 1. ಮೇಲಕ್ಕೆ ಎತ್ತಲ್ಪಟ್ಟ. उद् + वह (प्रापणे)+णिच् "क्तः" (३-२-१०२)। 2. ಮದುವೆಯಾದವನು, ಮದುವೆಮಾಡಿಕೊಂಡವನು. उद्वाहोऽस्य सञ्जातः "इतच्" (५-२-३६)।

**उद्वाहिन् ಉದ್ವಾಹಿನ್** (वि०) 1. ಮದುವೆಯಾಗುವವನು. 2. ಬಾವಿಯಿಂದ ನೀರು ಸೇದುವವನು.

**उद्वाहिनी ಉದ್ವಾಹಿನೀ** (स्त्री०) ಬಾವಿಯಿಂದ ನೀರು ಸೇದುವ ಹಗ್ಗ. उद्वाहः उद्धरणं साध्यतयाऽस्त्यस्य "इनिः" (५-२-११५)। "ङीप्" (४-१-५)। "उद्वाहनं द्विसीत्ये स्यात् रज्जावुद्वाहिनी मता" मेदि०।

**उद्विग्न ಉದ್ವಿಗ್ನ** (वि०) 1. ಉದ್ವೇಗವುಳ್ಳ, ಕಳವಳವುಳ್ಳ. 2. ಚಿಂತಾಕ್ರಾಂತನಾದ, ವ್ಯಾಕುಲನಾದ. 3. ಹೆದರಿದ, ಭಯಗೊಂಡ, ಅಂಜಿದ. उद्+ओ विजी (भयचलनयोः) "क्तः" (३-४-७२)। "निमग्नोद्विग्नसंह्रादैः पत्रे दीनैश्च मेदिनी" भट्टि० ४-४२।

**उद्वीक्षण ಉದ್ವೀಕ್ಷಣ** (न०) 1. ಊರ್ಧ್ವದೃಷ್ಟಿ, ಮೇಲು ನೋಟ. उद् + वि + ईक्ष (दर्शने) भावे "ल्युट्" (३-३-११५)। 2. ನೇತ್ರ, ಕಣ್ಣು. उद्+वि+ईक्ष कर० "ल्युट्" (३-३-११७)। "अथेप्सितं भर्तुरुपस्थितोदयं सखीजनोद्वीक्षणकौमुदीमुखम्" रघु० ३-१। 3. ಪ್ರತೀಕ್ಷಿಸುವಿಕೆ, ಕಾದುನೋಡುವಿಕೆ, ಎದುರು ನೋಡುವಿಕೆ. "विवरिष्यसि तच्चिरस्य नः समयोद्वीक्षणरक्षितां क्रुधम्" माघ० १६-३७।

**उद्वीक्षित ಉದ್ವೀಕ್ಷಿತ** (वि०) ಮೇಲುಗಡೆ ನೋಡಲ್ಪಟ್ಟ. उद् + वि + ईक्ष (दर्शने) "क्तः" (३-२-१०२)। "ज्योतिष्पथादवततार सविस्मयाभिरुद्वीक्षितं प्रकृतिभिर्भरतानुगाभिः" रघु० १३-६८।

**उद्वृत्त ಉದ್ವೃತ್ತ** (वि०) 1. ಮೇಲಕ್ಕೆ ಎದ್ದಿರುವ, ಮೇಲಕ್ಕೆ ಏರಿರುವ. उद् + वृतु (वर्तने) "क्तः" (३-४-७२)। 2. ದಾರಿ ಬಿಟ್ಟು ಹೋಗಿರುವ, ತಪ್ಪು ದಾರಿಯಲ್ಲಿ ನಡೆಯುವ, ಕೆಟ್ಟ ನಡತೆಯುಳ್ಳ. वृत्तमुत्क्रान्तः। "विश्लेषं युगमगमद्रथाङ्गनाम्नोरुद्वृत्तः क इव सुखावहः परेषाम्" माघ० ८-१८। "अपामुद्वृत्तानां निजमुपदिशन्त्याः स्थितिपदम्" मुद्रा० ३-८। 3. ಕೊಬ್ಬಿದ, ಅಹಂಕಾರದಿಂದ ಕೂಡಿದ. 4. ಅಸಭ್ಯ, ಅಶಿಕ್ಷಿತ, ತಿಳವಳಿಕೆಯಿಲ್ಲದ. 5. ಕಲಕಲ್ಪಟ್ಟ, ಬುಡಮೇಲು ಮಾಡಲ್ಪಟ್ಟ. "तस्मात्समुद्रादिव मथ्यमानादुद्वृत्तनक्रात्सहसोन्ममज्ज" रघु० १६-७९।

**उद्वेग ಉದ್ವೇಗ** (पु०) 1. ಭಯ, ಹೆದರಿಕೆ. "शान्तोद्वेगस्तिमितनयनं दृष्टभक्तिर्भवान्या" मेघ० १-३६। 2. ಕಳವಳ, ಗಾಬರಿ. "यस्मान्नोद्विजते लोको लोकान्नोद्विजते च यः। हर्षामर्षभयोद्वेगैर्मुक्तो यः स च मे प्रियः" गीता १२-१५। 3. ಚಿಂತೆ, ಇಷ್ಟಜನರ ವಿರಹದಿಂದುಂಟಾದ ದುಃಖ. उद्+ओ विजी (भयचलनयोः) "घञ्" (३-३-१८)। "मनोभिः सोद्वेगैः प्रणयविहतिध्वस्तरुचयः" किरा० १०-६३। 4. ಕಷ್ಟ, ಕ್ಲೇಶ. "यो जिह्वाग्रं बाधते उद्वेगं जनयति शिरो गृह्णीते नासिकाञ्च स्रावयति स कटुकः" सुश्रुत०। 5. ಕಂಪನ, ನಡುಕ. (न०) 6. ಅಡಕೆ ಕಾಯಿ. उद्विजन्तेऽनेन — कर० "घञ्" (३-३-१२१)। "उद्वेगरागादिमृजावदाताः" नैष० ७-४६। (वि०) 7. ವೇಗವಾದ, ಜಾಗ್ರತೆಯಾಗಿ ನಡೆಯುವ. उत्कृष्टो वेगो यस्य। 8. ನಿಶ್ಚಲವಾದ, ಸ್ಥಿರವಾದ. उद्गतो वेगो यस्मात्।

**उद्वेजक ಉದ್ವೇಜಕ** (वि०) 1. ಭಯವುಂಟುಮಾಡುವ ಹೆದರಿಸುವ. 2. ಮನಸ್ಸನ್ನು ಕಲಕುವ, ಕ್ಷೋಭೆಯುಂಟುಮಾಡುವ, ಗಾಬರಿಯುಂಟುಮಾಡುವ. 3. ಕ್ಲೇಶವುಂಟುಮಾಡುವ. उद् + ओ विजी (भयचलनयोः) "ण्वुल्" (३-१-१३३)।

**उद्वेजन ಉದ್ವೇಜನ** (न०) 1. ಉದ್ವೇಗ, ಭಯ. 2. ಕಳವಳ. उद्+ओ विजी (भयचलनयोः) "ल्युट्" (३-३-११५)। 3. ಯಾತನೆ, ಕಷ್ಟ, ಕ್ಲೇಶ. "परदाराभिमर्शेषु प्रवृत्तान् नॄन् महीपतिः। उद्वेजनकरैर्दण्डैश्चिह्नयित्वा प्रवासयेत्" मनु० ८-३५२। 4. ವಿರಹ ದುಃಖ. (वि०) 5. ಭಯವುಂಟುಮಾಡುವ. 6. ಕ್ಲೇಶವುಂಟುಮಾಡುವ. कर्त० "ल्युः" (३-१-१३४)।

**उद्वेजयितृ ಉದ್ವೇಜಯಿತೃ** (वि०) 1. ಭಯವುಂಟುಮಾಡುವ, ಹೆದರಿಸುವ. उद्+ओ विजी (भयचलनयोः) +णिच् "तृच्" (३-१-१३३)। "अत्यर्थमुद्वेजयिता परेषां नाम्नापि तस्यैव स नन्दकोऽभूत्" माघ० ३-१९। 2. ತೊಂದರೆಪಡಿಸುವ, ಕ್ಲೇಶವುಂಟುಮಾಡುವ.

**उद्वेजित ಉದ್ವೇಜಿತ** (वि०) 1. ಭಯಪಡಿಸಲ್ಪಟ್ಟ. 2. ಕಳವಳಗೊಳಿಸಲ್ಪಟ್ಟ. 3. ಕಷ್ಟಪಡಿಸಲ್ಪಟ್ಟ, ತೊಂದರೆಪಡಿಸಲ್ಪಟ್ಟ. उद्+ओ विजी (भयचलनयोः) + णिच् "क्तः" (३-२-१०२)। "उद्वेजिता वृष्टिभिराश्रयन्ते शृङ्गाणि यस्यातपवन्ति सिद्धाः" कुमा० १-५।

**उद्वेप ಉದ್ವೇಪ** (पु०) 1. ಕಂಪನ, ನಡುಕ. उद्+टु वेपृ (कम्पने) "घञ्" (३-३-१८)। (वि०) 2. ಕಂಪಿಸುವ, ನಡುಗುವ. कर्त० "अच्" (३-१-१३४)।

**उद्वेल ಉದ್ವೇಲ** (वि०) 1. ದಡವನ್ನು ಮೀರಿರುವ, ದಡವನ್ನು ದಾಟಿ ಬಂದಿರುವ. उत्क्रान्तो वेलाम्। "भयमप्रलयोद्वेलादाचख्युर्नैर्ऋतोदधेः" रघु० १०-३४। 2. ಎಲ್ಲೆಮೀರಿದ, ಮಿತಿಮೀರಿದ. "उद्वेलवेगांस्तनतो गभीरमौर्वप्रतिच्छन्दविदीप्तदृष्टीन्" याद० २०-१५। 3. ಅಧಿಕವಾದ, ಹೆಚ್ಚಾದ.

**उद्वेल्लत् ಉದ್ವೇಲ್ಲತ್** (वि०) ಮೇಲೆ ಹಾರಾಡುತ್ತಿರುವ, ಮೇಲೆ ಚಲಿಸುತ್ತಿರುವ. उद्+वेल्ल (संचलने) "शतृ" (३-२-१२४)। "उद्वेल्लद्घनरुण्डखण्डनिकराकीर्णस्य संख्योदधेः" मालती० ७-९।

**उद्वेल्लित ಉದ್ವೇಲ್ಲಿತ** (वि०) ಹೆಚ್ಚಾಗಿ ಚಲಿಸಿರುವ, ಸ್ಥಾನಬಿಟ್ಟು ಹೋಗಿರುವ. उद् ऊर्ध्वं वेल्लितः चलितः। "दूरोद्वेल्लितबाडबस्य जलधेरुल्लोलभिन्नाम्भसः" म० वी० ५-२।

**उद्वेष्टन ಉದ್ವೇಷ್ಟನ** (न०) 1. ಸುತ್ತುಗೋಡೆ, ಬೇಲಿ, ಪ್ರಾಕಾರ. उद् + वेष्ट (वेष्टने) करं० "ल्युट्" (३-३-११७)। 2. ಸುತ್ತುಗಟ್ಟುವಿಕೆ, ಸುತ್ತುವರಿಯುವಿಕೆ. उद्+वेष्ट भावे "ल्युट्" (३-३-११५)। (वि०) 3. ಸಡಿಲವಾದ ಗಂಟುಳ್ಳ, ಕಟ್ಟು ಸಡಿಲವಾಗಿರುವ. "आलोकमार्गं सहसा व्रजन्त्या कयाचिदुद्वेष्टनवान्तमाल्यः" रघु० ७-६।

**उद्वेष्टित ಉದ್ವೇಷ್ಟಿತ** (वि०) ಸುತ್ತುವರಿಯಲ್ಪಟ್ಟ, ಸುತ್ತುಗಟ್ಟಲ್ಪಟ್ಟ. उद् + वेष्ट (वेष्टने) "क्तः" (३-२-१०२)।

**उद्वोढृ ಉದ್ವೋಢೃ** (वि०) ಮದುವೆಯಾಗುವವನು, ಪತಿ, ಗಂಡ. उद्+वह (प्रापणे) "तृच्" (३-१-१३३)।

**उन्दुरु ಉಂದುರು** (पुं०) ಮೂಷಿಕ, ಇಲಿ. उनत्ति—उन्दी (क्लेदने) "उरुः" बाहु०। उन्दरुः, उन्दुरः, उन्दूरः ಈ ರೂಪಗಳೂ ಉಂಟು.

**उन्न ಉನ್ನ** (वि०) 1. ಒದ್ದೆಯಾದ, ನೆನೆದಿರುವ, ತೇವವಾದ. 2. ದಯಾಳು, ಕರುಣೆಯುಳ್ಳ. (लाक्ष०)। उन्दी (क्लेदने) "क्तः" (३-२-१०२)। "उन्नं क्लिन्ने दयापरे" हेम०।

**उन्नत ಉನ್ನತ** (वि०) 1. ಎತ್ತರವಾದ. उद् + णम (प्रह्वत्वे शब्दे च) "क्तः" (३-४-७२)। "दधतमुन्नतसानुसमुद्धतां धृतसितव्यजनामिव जाह्नवीम्" किरा० ५-१५। 2. ಮಹತ್ತಾದ, ಹಿರಿದಾದ, ದೊಡ್ಡದಾದ, ಶ್ರೇಷ್ಠವಾದ. "परिमलविषयस्तदुन्नतानामनुगमने खलु संपदोऽग्रतःस्थाः" माघ० ७-२७। 3. ಮುಂದಕ್ಕೆ ಉಬ್ಬಿರುವ. "संक्षिप्तं निबिडोन्नतस्तनमुरः पार्श्वे प्रमृष्टे इव" माल० २-३।

**उन्नतता ಉನ್ನತತಾ** (स्त्री०) ಎತ್ತರ, ಔನ್ನತ್ಯ. उन्नतस्य भावः "तल्" (५-१-११९)। "त्वः"। उन्नतत्वम् ಉನ್ನತತ್ವಮ್.

**उन्नतानत ಉನ್ನತಾನತ** (न०) ಹಳ್ಳತಿಟ್ಟಾದ ಪ್ರದೇಶ, ಎತ್ತರ ಮತ್ತು ತಗ್ಗಾದ ಪ್ರದೇಶ. उन्नतं च तदानतं च।

**उन्नति ಉನ್ನತಿ** (स्त्री०) 1. ಅಭಿವೃದ್ಧಿ, ಅಭ್ಯುದಯ, ಏಳಿಗೆ, ಉತ್ಕರ್ಷ. उद्+णम (प्रह्वत्वे) "क्तिन्" (३-३-९४)। "असतामनिशं तथाप्यहो गुरुहृद्रोगकरी तदुन्नतिः" माघ० १६-२२। 2. ಎತ್ತರ, ಔನ್ನತ್ಯ. 3. ಮೇಲ್ಮೆ, ಗೌರವ, ಪ್ರತಿಷ್ಠೆ. "स्तोकेनोन्नतिमायाति स्तोकेनायात्यधोगतिम्" हितो०। 4. ಗರುಡನ ಪತ್ನಿ. "उन्नतिस्तार्क्ष्यभार्यायां समृद्धावुदयेऽपि च" विश्व०।

**उन्नद्ध ಉನ್ನದ್ಧ** (वि०) 1. ಮೇಲಕ್ಕೆ ಎತ್ತಿ ಕಟ್ಟಲ್ಪಟ್ಟ. उद्+णह (बन्धने) "क्तः" (३-२-१०२)। "व्यूह्य स्थितः किञ्चिदिवोत्तरार्धमुन्नद्धचूडोऽञ्चितसव्यजानुः" रघु० १८-५१। 2. ಹೆಚ್ಚಿದ, ಉಬ್ಬಿದ, ಅಧಿಕವಾದ, ದೊಡ್ಡದಾದ.

**उन्नमत् ಉನ್ನಮತ್** (वि०) 1. ಮೇಲಕ್ಕೆ ಏಳುವ, ಮೇಲಕ್ಕೆ ಹಾರುವ. उद्+णम (प्रह्वत्वे) "शतृ" (३-२-१२४)। "विन्ध्यायमानं दिवसस्य भर्तुर्मार्गं पुना रोद्धुमिवोन्नमद्भिः" माघ० ४-२। 2. ತಲೆಯನ್ನು ಮೇಲಕ್ಕೆ ಎತ್ತುತ್ತಿರುವ.

**उन्नमन ಉನ್ನಮನ** (न०) 1. ಉನ್ನತಿ, ಎತ್ತರ. उद्+णम (प्रह्वत्वे) "ल्युट्" (३-३-११५)। 2. ಮೇಲಕ್ಕೆ ಎತ್ತುವುದು, ಮೇಲಕ್ಕೆ ಏರಿಸುವುದು.

**उन्नमित ಉನ್ನಮಿತ** (वि०) 1. ಮೇಲಕ್ಕೆ ಎತ್ತಲ್ಪಟ್ಟ, ಮೇಲುಮುಖವಾಗಿ ಮಾಡಲ್ಪಟ್ಟ. उद्+णम (प्रह्वत्वे शब्दे च) + णिच् "क्तः" (३-२-१०२)। "सारसैः कलनिर्ह्रादैः क्वचिदुन्नमिताननौ" रघु० १-४१। 2. ಮೇಲಕ್ಕೆ ಮಾಡಲ್ಪಟ್ಟ. "उन्नमितैकभ्रूलतमाननमस्याः पदानि रचयन्त्याः" शाकु० ३-१२। "अयुगपदुन्नमितभ्रु वीक्षितं च" किरा० १०-६१।

**उन्नम्र ಉನ್ನಮ್ರ** (वि०) ಎತ್ತರವಾದ, ಉನ್ನತವಾದ. उद्+णम (प्रह्वत्वे शब्दे च) "रः" (३-२-१६७)।

"उन्नमताभ्रपटमण्डपमण्डितं तदानीलनागकुलसंकुल-माबभासे" माघ० ५-६८।

**उन्नय** ಉನ್ನಯ (पुं०) 1. ಮೇಲಕ್ಕೆ ತರುವುದು, ಮೇಲಕ್ಕೆ ಎತ್ತುವುದು, ಮೇಲಕ್ಕೆ ಎಳೆಯುವುದು. उद्+णीञ् (प्रापणे) "अच्" (३-३-५६)। 2. ತರ್ಕ, ಊಹೆ.

**उन्नयत्** ಉನ್ನಯತ್ (वि०) 1. ಮೇಲಕ್ಕೆ ಎತ್ತುತ್ತಿರುವ. 2. ಊಹಿಸುತ್ತಿರುವ. उद्+णीञ् (प्रापणे) "शतृ" (३-२-१२४)।

**उन्नयन** ಉನ್ನಯನ (नं०) 1. ತರ್ಕ, ಊಹೆ. 2. ಮೇಲಕ್ಕೆ ಎತ್ತುವುದು, ಮೇಲಕ್ಕೆ ಏರಿಸುವುದು. 3. ಬಾವಿಯಿಂದ ಮೇಲಕ್ಕೆ ನೀರನ್ನು ಎಳೆಯುವುದು. उद्+णीञ् (प्रापणे) "ल्युट्" (३-३-११५)। (वि०) 4. ಮೇಲಕ್ಕೆ ಎತ್ತಿದ ಕಣ್ಣುಳ್ಳ, ಮೇಲೆ ನೋಡುವ. उन्नमितं नयनं यस्य।

**उन्नस** ಉನ್ನಸ (वि०) ಎತ್ತರವಾದ ಮೂಗುಳ್ಳ, ಉಬ್ಬಿದ ಮೂಗುಳ್ಳ. उन्नता नासा यस्य। "उन्नसं दधती वक्त्रं शुद्धदल्लोलकुण्डलम्" भट्टि० ४-१८।

**उन्नाद** ಉನ್ನಾದ (पुं०) ಉಚ್ಚಸ್ವರ, ಗಟ್ಟಿಯಾದ ಶಬ್ದ. उद् + णद (अव्यक्ते शब्दे) "घञ्" (३-३-१८)।

**उन्नाय** ಉನ್ನಾಯ (पुं०) 1. ಮೇಲಕ್ಕೆ ಎತ್ತುವುದು, ಮೇಲಕ್ಕೆ ಏರಿಸುವುದು. 2. ತರ್ಕಿಸುವುದು, ಊಹಿಸುವುದು. उद्+णीञ् (प्रापणे) "घञ्" (३-३-२६)।

**उन्नाह** ಉನ್ನಾಹ (पुं०) 1. ಮೇಲಕ್ಕೆ ಎತ್ತಿ ಕಟ್ಟುವುದು. उद्+णह (बन्धने) "घञ्" (३-३-१८)। (नं०) 2. ಗಂಜಿ, ಅಂಬಲಿ. "चुक्रं धातुघ्नमुन्नाहम्" अभि० चि०।

**उन्निद्र** ಉನ್ನಿದ್ರ (वि०) 1. ಅರಳಿದ, ವಿಕಾಸ ಹೊಂದಿದ. उद्गता निद्रा यस्य। "उन्निद्रपुष्पाक्षिसहस्रभाजा" माघ० ४-१३। "उन्निद्रप्रियकमनोरमं रमण्याः" माघ० ८-२८। 2. ನಿದ್ರೆಯಿಲ್ಲದ, ಎಚ್ಚರವಾಗಿರುವ, ನಿದ್ರೆಯನ್ನು ಬಿಟ್ಟಿರುವ. उद्गता निद्रा यस्मात्। "तामुन्निद्रामवनिशयनां सौधवातायनस्थः" मेघ० २-२५। 3. ನಿದ್ರೆಯಿಂದ ಎಚ್ಚರಗೊಂಡ. उद्गता निद्रा यस्य।

**उन्निनीषा** ಉನ್ನಿನೀಷಾ (स्त्री०) ಮೇಲಕ್ಕೆ ಎತ್ತಲು ಅಪೇಕ್ಷೆ. उन्नेतुमिच्छा—उद्+णीञ् (प्रापणे)+सन् "अः" (३-३-१०२)।

**उन्निनीषु** ಉನ್ನಿನೀಷು (वि०) ಮೇಲಕ್ಕೆ ಎತ್ತಲು ಅಪೇಕ್ಷೆಯುಳ್ಳ. उन्नेतुमिच्छुः—उद्+णीञ् (प्रापणे)+सन् "उः" (३-२-१६८)।

**उन्नीत** ಉನ್ನೀತ (वि०) 1. ಮೇಲಕ್ಕೆ ಎತ್ತಲ್ಪಟ್ಟ, ಮೇಲಕ್ಕೆ ಏರಿಸಲ್ಪಟ್ಟ. उद्+णीञ् (प्रापणे) "क्तः" (३-२-१०२)। 2. ಊಹಿಸಲ್ಪಟ್ಟ, ತರ್ಕಿಸಲ್ಪಟ್ಟ.

**उन्नेतृ** ಉನ್ನೇತೃ (वि०) 1. ಮೇಲಕ್ಕೆ ಎತ್ತುವ. 2. ಊಹಿಸುವ. उद्+णीञ् (प्रापणे) "तृच्" (३-१-१३३)। स्त्रियां "ङीप्" (४-१-५)। उन्नेत्री ಉನ್ನೇತ್ರೀ.

**उन्नेय** ಉನ್ನೇಯ (वि०) 1. ಮೇಲಕ್ಕೆ ಎತ್ತಲ್ಪಡುವ. 2. ಮೇಲಕ್ಕೆ ಏರಿಸಲು ಯೋಗ್ಯವಾದ. 3. ಊಹಿಸಲ್ಪಡುವ 4. ಊಹಿಸಲು ಯೋಗ್ಯವಾದ. उद्+णीञ् (प्रापणे) "यत्" (३-१-९७)।

**उन्मज्जक** ಉನ್ಮಜ್ಜಕ (वि०) 1. ಕಂಠದವರೆಗೂ ನೀರಿನಲ್ಲಿ ನಿಂತು ತಪಸ್ಸು ಮಾಡುವವನು, ತಾಪಸ. उद्+टु मस्जो (शुद्धौ) "ण्वुल्" (३-१-१३३)। "कण्ठदघ्ने जले स्थित्वा तपः कुर्वन् प्रवर्तते। उन्मज्जकः स विज्ञेयस्तापसो लोकपूजितः"। 2. ನೀರಿನೊಳಗಿನಿಂದ ಎದ್ದು (ನೀರಿನಲ್ಲಿ) ತೇಲಾಡುವ.

**उन्मज्जत्** ಉನ್ಮಜ್ಜತ್ (वि०) ನೀರಿನಿಂದ ಮೇಲಕ್ಕೆದ್ದು ತೇಲಾಡುತ್ತಿರುವ, ನೀರಿನಲ್ಲಿ ಮುಳುಗಿ ಮೇಲಕ್ಕೆ ಏಳುತ್ತಿರುವ. उद् + टु मस्जो (शुद्धौ) "शतृ" (३-२-१२४)। "उन्मज्जन्मकर इवामरापगाया वेगेन प्रतिमुखमेत्य बाणनद्याः" किरा० १७-६३।

**उन्मज्जन** ಉನ್ಮಜ್ಜನ (नं०) ನೀರಿನೊಳಗಿನಿಂದ ಎದ್ದು (ನೀರಿನಲ್ಲಿ) ತೇಲಾಡುವಿಕೆ. उद्+टु मस्जो (शुद्धौ) "ल्युट्" (३-३-११५)। "सलिलोन्मज्जनमुज्झति स्फुटम्" नैष० २-२७।

**उन्मत्त** ಉನ್ಮತ್ತ (पुं०) 1. ಉಮ್ಮತ್ತಿಗಿಡ. 2. ಮುಚುಕುಂದ ವೃಕ್ಷ. उन्मत्तं करोति—उन्मत्त+णिच् "अच्" (३-१-१३४)। (वि०) 3. ಹುಚ್ಚು ಹಿಡಿದವನು, ಬುದ್ಧಿ ಪಲ್ಲಟವಾದವನು. 4. ಅಮಲೇರಿದವನು, ಮದ್ಯಪಾನ ಮಾಡಿದವನು. उद्+मदी (हर्षग्लेपनयोः) "क्तः" (३-४-७२)। "उन्मत्तं पतितं क्लीबमबीजं पापरोगिणम्" मनु० ९-७९। 5. ಬಹಳ ಕೋಪವುಳ್ಳ, ಕ್ರೂರ, ಉಗ್ರ, ಪ್ರಚಂಡ. 6. ಭೂತಗ್ರಸ್ತ, ಪಿಶಾಚಿ ಹಿಡಿದವನು. 7. ಬಹಳ ಕೊಬ್ಬಿರುವ. "मदोन्मत्तस्य भूपस्य कुञ्जरस्य च गच्छतः" पञ्चतं०।

**उन्मत्तगङ्ग** ಉನ್ಮತ್ತಗಂಗ (अव्यं०) ಗಂಗಾನದಿಯು ಭೋರ್ಗರೆದು ಮೊರೆಯುತ್ತ ಹರಿಯುವ ದೇಶ, ಹೆಚ್ಚು ಪ್ರವಾಹದಿಂದ ಹರಿಯುತ್ತಿರುವ ಪ್ರದೇಶ. उन्मत्ता गङ्गा यस्मिन् देशे। अव्ययी० (२-१-१२)।

**उन्मथन ಉನ್ಮಥನ** (ನಂ) 1. ಹಿಂಸಿಸುವಿಕೆ, ಪೀಡಿಸುವಿಕೆ. 2. ಕೊಲ್ಲುವಿಕೆ, ನಾಶಪಡಿಸುವಿಕೆ. उद्+मथे (विलोडने) "ल्युट्" (३-३-११५)। "अन्योन्यसूतोन्मथनादभूतां तावेव सूतौ रथिनौ च कौचित्" रघु० ७-५२। 3. ತಿಕ್ಕುವಿಕೆ, ಉಜ್ಜುವಿಕೆ. (वि०)4. ಪೀಡಿಸುವ, ಹಿಂಸಿಸುವ, ನೋವುಂಟುಮಾಡುವ. "विपक्षचित्तोन्मथना नखव्रणास्तिरोहिता विभ्रममण्डनेन ये" किरा० ८-३४।

**उन्मथित ಉನ್ಮಥಿತ** (वि०) 1. ತಿಕ್ಕಿ ಕೀಳಲ್ಪಟ್ಟ, ಉಜ್ಜಿ ಎಡೆಯಲ್ಪಟ್ಟ. उद् + मथे (विलोडने) "क्तः" (३-२-१०२)। "कण्डूयमानेन कटं कदाचिद्वन्यद्विपेनोन्मथिता त्वगस्य" रघु० २-३७। 2. ಪೀಡಿಸಲ್ಪಟ್ಟ, ನೋಯಿಸಲ್ಪಟ್ಟ.

**उन्मद ಉನ್ಮದ** (वि०) 1. ಹೆಚ್ಚು ಮದವುಳ್ಳ, ಹೆಚ್ಚು ಅಮಲೇರಿದ. 2. ಹೆಚ್ಚು ಸಂತೋಷವುಳ್ಳ. उद्गतो मदो हर्षो यस्य। "उदीरयामासुरिवोन्मदानामालोकशब्दं वयसां विरावैः" रघु० २-९। 3. ಮದವನ್ನುಂಟುಮಾಡುವ. उन्मदयति—उद्+मदी (हर्षग्लेपनयोः)+णिच् "अच्" (३-१-१३४)। "मधुकराङ्गनया मुहुरुन्मदध्वनिभृता निभृताक्षरमुज्जगे" माघ० ६-२०।

**उन्मदन ಉನ್ಮದನ** (वि०) ಕಾಮೋದ್ರೇಕವುಳ್ಳ, ಹೆಚ್ಚು ಮನ್ಮಥಬಾಧೆಯುಳ್ಳ. उद्गतो मदनोऽस्य। "तदा प्रभृत्युन्मदना पितुर्गृहे ललाटिकाचन्दनधूसरालका" कुमा० ५-५५।

**उन्मदयत् ಉನ್ಮದಯತ್** (वि०) ಹೆಚ್ಚು ಸಂತೋಷಗೊಳಿಸುವ, ಅಧಿಕ ಸಂತೋಷವುಂಟುಮಾಡುವ. उन्मदं करोति—उन्मद+णिच् "शतृ" (३-२-१२४)। "व्रजाजिरेष्वम्बुदनादशङ्किनीः शिखण्डिनामुन्मदयत्सु योषितः" किरा० ४-१६।

**उन्मदिष्णु ಉನ್ಮದಿಷ್ಣು** (वि०) 1. ಅಧಿಕ ಮದವುಳ್ಳ. "सालीकदृष्टे मदनोन्मदिष्णुः" नैष० ८-१८। 2. ಹೆಚ್ಚು ಸಂತೋಷಪಡುವ. उन्मदनशीलः—उद्+मदी (हर्षे) "इष्णुच्" (३-२-१२६)।

**उन्मनस् ಉನ್ಮನಸ್** (वि०) 1. ಉತ್ಕಂಠೆಯುಳ್ಳ, ಪ್ರಿಯವಾದ ವಸ್ತುವನ್ನು ಹೊಂದುವುದರಲ್ಲಿ ತವಕಪಡುವ. उद् उद्गतं मनो यस्य। 2. ಉತ್ಸುಕನಾದ, ಪ್ರಿಯವಸ್ತುವಿಗಾಗಿ ಆಸೆಪಡುವ, ತ್ವರೆಪಡುವ. "उन्मनाः प्रथमजन्मचेष्टितान्यस्मरन्नपि बभूव राघवः" रघु० ११-२२। 3. ಕಳವಳಗೊಂಡ. 4. ಹೆದರಿದ. "महावनादुन्मनसः खगा इव प्रवृत्तपत्रध्वनयः शिलीमुखाः" किरा० १४-४५। वा "कप्" (५-४-१५४)। —मनस्कः—ಮನಸ್ಕ.

**उन्मनायमान ಉನ್ಮನಾಯಮಾನ**(वि०) ಉತ್ಸುಕನಂತೆ ಆಚರಿಸುವ, ಉತ್ಸಾಹಿಯಂತೆ ನಡೆಯುವ. उन्मना इवाचरति — उन्मनस्+क्यङ् "शानच्" (३-२-१२४)।

**उन्मन्थ ಉನ್ಮಂಥ** (पु०) ಹಿಂಸಿಸುವಿಕೆ, ಪೀಡಿಸುವಿಕೆ, ನೋಯಿಸುವಿಕೆ. उद्+मन्थ (विलोडने) भावे "घञ्" (३-३-१८)।

**उन्मन्थन ಉನ್ಮಂಥನ** (नं०) 1. ಮೇಲಿನಿಂದ ಕೋಲು ಮೊದಲಾದುವುಗಳಿಂದ ಕಲಕುವುದು. उद् + मन्थ (विलोडने) भावे "ल्युट्" (३-३-११५)। 2. ಕಲಕುವ ಕೋಲು, ದಂಡ, ಮಂತು. उन्मथ्यतेऽनेन — कर० "ल्युट्" (३-३-११७)।

**उन्मर्दन ಉನ್ಮರ್ದನ** (नं०) 1. ಹಿಸುಕುವುದು, ಮರ್ದಿಸುವುದು. 2. ತಿಕ್ಕುವುದು, ಉಜ್ಜುವುದು. उद्+मृद (क्षोदे) "ल्युट्" (३-३-११५)। 3. ವಾತವನ್ನು ಶುದ್ಧಿಗೊಳಿಸುವ ಕಾರ್ಯ. 4. ಮೈಗೆ ಉಜ್ಜುವ ವಸ್ತು. उद्+मृद कर० "ल्युट्" (३-३-११७)।

**उन्माथ ಉನ್ಮಾಥ** (पु०) 1. ವಧೆ, ಕೊಲ್ಲುವುದು. उद्+मथि (हिंसायाम्) "घञ्" (३-३-१८)। 2. ಮೃಗಗಳನ್ನು ಹಿಡಿಯುವ ಬೋನು. उन्मथ्यतेऽनेन — उद्+मथि कर० "घञ्" (३-३-१२१)। 3. ಕಲಕಿ ಮೇಲಕ್ಕೆ ಎಬ್ಬಿಸುವುದು. मथे (विलोडने) भावे "घञ्" (३-३-१८)।

**उन्माद ಉನ್ಮಾದ** (पु०) 1. ಹುಚ್ಚು, ಚಿತ್ತಪಲ್ಲಟ. उद्+मदी (हर्षे) "घञ्" (३-३-१८)। 2. ನಾಟಕಲಕ್ಷಣೋಕ್ತವಾದ ಒಂದು ವ್ಯಭಿಚಾರಿಭಾವ. "चित्तसंमोह उन्माद कामशोकभयादिभिः" सा० द० ३-१६०।

**उन्मादक ಉನ್ಮಾದಕ** (वि०) ಚಿತ್ತಪಲ್ಲಟವನ್ನುಂಟುಮಾಡುವ, ಹುಚ್ಚುಹಿಡಿಸುವ. उद्+मदी (हर्षे)+णिच् "ण्वुल्" (३-१-१३३)।

**उन्मादन ಉನ್ಮಾದನ** (नं०) 1. ಹುಚ್ಚುಹಿಡಿಸುವುದು, ಬುದ್ಧಿಭ್ರಮೆಯನ್ನು ಉಂಟುಮಾಡುವುದು. उद्+मदी (हर्षे)+णिच् "ल्युट्" (३-३-११५)। (वि०)2. ಹುಚ್ಚುಹಿಡಿಸುವ, ಬುದ್ಧಿಭ್ರಮೆಯನ್ನುಂಟುಮಾಡುವ. उद्+मदी (हर्षे)+णिच् "ल्युः" (३-१-१३४)।

**उन्मादवत् ಉನ್ಮಾದವತ್** (वि०) ಹುಚ್ಚುಹಿಡಿದಿರುವ, ಬುದ್ಧಿಭ್ರಮೆ ಹೊಂದಿರುವ. उन्मादोऽस्यास्ति "मतुप्" (५-२-९४)। स्त्रियां "ङीप्" (४-१-६)। -वती -ವತೀ.

**उन्मादिन् ಉನ್ಮಾದಿನ್** (वि०) ಮತ್ತನಾದ, ಚಿತ್ತ ಪಲ್ಲಟವುಳ್ಳ, ಹುಚ್ಚುಹಿಡಿದ. उन्मादोऽस्यास्ति "इनिः" (५-२-११५)। स्त्रियां "ङीप्" (४-१-५)। उन्मादिनी ಉನ್ಮಾದಿನೀ.

**उन्मान ಉನ್ಮಾನ** (न०) 1. ಮೇಲಕ್ಕೆ ಎತ್ತಿ ತೂಗುವುದು, ತೂಕದ ಕಲ್ಲು ಬಟ್ಟುಗಳಿಟ್ಟು ತೂಗುವುದು. उद् + मा (माने) ,भावे "ल्युट्" (३-३-११५)। 2. ಮೇಲಿನಿಂದ ಅಳತೆಮಾಡುವಿಕೆ. 3. ತ್ರಾಸು, ತಕ್ಕಡಿ. उद्+मा कर० "ल्युट्" (३-३-११७)।

**उन्मार्ग ಉನ್ಮಾರ್ಗ** (पु०) 1. ತಪ್ಪುದಾರಿ, ಕೆಟ್ಟನಡತೆ. उद्गतश्चासौ मार्गश्च। (वि०) 2. ದಾರಿಬಿಟ್ಟು ನಡೆಯುವ, ತಪ್ಪುದಾರಿಯಲ್ಲಿ ನಡೆಯುವ, ಕೆಟ್ಟ ನಡತೆಯುಳ್ಳ. उत्क्रान्तो मार्गात्।

**उन्मिष ಉನ್ಮಿಷ** (वि०) 1. ವಿಕಾಸಹೊಂದಿದ, ಅರಳಿದ. उद् + मिष (स्पर्धायाम्) "कः" (३-१-१३५)। 2. ಕಣ್ಣು ತೆರೆದಿರುವ. 3. ಪ್ರಕಾಶವಾದ.

**उन्मिषत् ಉನ್ಮಿಷತ್** (वि०) 1. ವಿಕಾಸಹೊಂದುತ್ತಿರುವ, ಅರಳುತ್ತಿರುವ. 2. ಪ್ರಕಾಶಿಸುತ್ತಿರುವ, ಹೊಳೆಯುತ್ತಿರುವ. 3. ಕಣ್ಣು ತೆರೆಯುತ್ತಿರುವ. उद्+मिष (स्पर्धायाम्) "शतृ" (३-२-१२४)।

**उन्मिषित ಉನ್ಮಿಷಿತ** (न०) 1. ನೋಟ, ವೀಕ್ಷಣ, ಅವಲೋಕನ. उद्+मिष (स्पर्धायाम्) भावे "क्तः" (३-३-११४)। "व्यलोकयन्नुन्मिषितैस्तटिन्मयैर्महातपःसाक्ष्य इव स्थिताः क्षपाः" कुमा० ५-२५। 2. (ಕಣ್ಣು) ತೆರೆದಿರುವಿಕೆ, ಬಿಟ್ಟಿರುವಿಕೆ. "तद्वल्गुना युगपदुन्मिषितेन तावत्सद्यः परस्परतुलामधिरोहतां द्वे" रघु० ५-६८। (वि०) 3. ಅರಳಿದ, ವಿಕಾಸಹೊಂದಿದ. उद् + मिष कर्त० "क्तः" (३-४-७२)।

**उन्मीलत् ಉನ್ಮೀಲತ್** (वि०) 1. ಅರಳುತ್ತಿರುವ, ವಿಕಾಸ ಹೊಂದುತ್ತಿರುವ. उद् + मील (निमेषणे) "शतृ" (३-२-१२४)। "उन्मीलन्मुकुलकरालकुन्दकोशप्रच्योतद्घनमकरन्दगन्धबन्धो" मालती० १-४१। 2. (ಕಣ್ಣು) ತೆರೆಯುತ್ತಿರುವ.

**उन्मीलन ಉನ್ಮೀಲನ** (न०) 1. ವಿಕಾಸ, ಅರಳುವಿಕೆ. 2. (ಕಣ್ಣು) ತೆರೆಯುವಿಕೆ. उद् + मील (निमेषणे) "ल्युट्" (३-३-११५)। "ज्ञानाञ्जनशलाकाभिर्नेत्रोन्मीलनकारकः" भा०।

**उन्मीलित ಉನ್ಮೀಲಿತ** (न०) 1. ವಿಕಾಸ, ಅರಳುವಿಕೆ. 2. (ಕಣ್ಣು) ತೆರೆದಿರುವಿಕೆ, —ಬಿಟ್ಟಿರುವಿಕೆ. उद्+मील भावे "क्तः" (३-३-११४)। (वि०) 3. ವಿಕಾಸಹೊಂದಿದ, ಅರಳಿದ. उद्+मील (निमेषणे) "क्तः" (३-४-७२)। "निरीक्ष्यमाणा इव विस्मयाकुलैः पयोभिरुन्मीलितपद्मलोचनैः" किरा० ४-३। "ते चोन्मीलितमालतीसुरभयः प्रौढाः कदम्बानिलाः" सा० द०। 4. ತೆರೆದಿರುವ, ಬಿಚ್ಚಿರುವ. 5. ತೆರೆಯಲ್ಪಟ್ಟ, ಬಿಚ್ಚಲ್ಪಟ್ಟ. उद्+मील कर्म० "क्तः" (३-२-१०२)। "अज्ञानतिमिरान्धस्य ज्ञानाञ्जनशलाकया। चक्षुरुन्मीलितं येन तस्मै श्रीगुरवे नमः"। 6. ಬಣ್ಣಹಾಕಿ ಪ್ರಕಾಶ ಗೊಳಿಸಲ್ಪಟ್ಟ. "उन्मीलितं तूलिकयेव चित्रं सूर्यांशुभिर्भिन्नमिवारविन्दम्" कुमा० १-३२।

**उन्मुक्त ಉನ್ಮುಕ್ತ** (वि०) ಬಿಡಲ್ಪಟ್ಟ, ಬಂಧನದಿಂದ ಬಿಡುಗಡೆಮಾಡಲ್ಪಟ್ಟ. उद्+मुच्लृ (मोक्षणे) "क्तः" (३-२-१०२)।

**उन्मुख ಉನ್ಮುಖ** (वि०) 1. ಮೇಲುಮುಖವಾದ, ಮುಖವನ್ನು ಮೇಲಕ್ಕೆ ಮಾಡಿರುವ, ಮೇಲೆ ನೋಡುವ. उद् ऊर्ध्वं मुखमस्य। "मनोऽभिरामाः शृण्वन्तौ रथनेमिस्वनोन्मुखैः" रघु० १-३९। "ते सद्मनि गिरेर्वेगादुन्मुखद्वाःस्थवीक्षिताः" कुमा० ६-४८। 2. ಉದ್ಯುಕ್ತನಾದ, ಪ್ರಯತ್ನಶೀಲ, ತತ್ಪರ. 3. ಉತ್ಸುಕನಾದ, ತವಕಪಡುವ. "तस्मिन् संयमिनामाद्ये जाते परिणयोन्मुखे" कुमा० ६-३४। 4. ಸಿದ್ಧನಾಗಿರುವ, ಅಣಿಯಾಗಿರುವ. "पतिः प्रतीतः प्रसवोन्मुखीं प्रियां ददर्श काले दिवमभ्रितामिव" रघु० ३-१२।

**उन्मुद्र ಉನ್ಮುದ್ರ** (वि०) 1. ಅರಳಿದ, ವಿಕಾಸಹೊಂದಿದ. 2. ತೆರೆದಿರುವ, ಬಿಟ್ಟಿರುವ (ಕಣ್ಣು). उद्गता मुद्रा यस्य।

**उन्मूलन ಉನ್ಮೂಲನ** (न०) ಬೇರುಸಹಿತ ಕಿತ್ತುಹಾಕುವುದು. उन्मूल (नामधा०)+णिच् "ल्युट्" (३-३-११५)। "न पादपोन्मूलनशक्ति रंहः शिलोच्चये मूर्च्छति मारुतस्य" रघु० २-३४।

**उन्मूलित ಉನ್ಮೂಲಿತ** (वि०) ಬೇರುಸಹಿತ ಕಿತ್ತುಹಾಕಲ್ಪಟ್ಟ. उन्मूल (नामधा०) + णिच् "क्तः" (३-२-१०२)। "उन्मूलितालानबिलाभनाभिः" नैष० ७-८५।

**उन्मेय ಉನ್ಮೇಯ** (वि०) 1. ತಿಳಿಯಲ್ಪಡುವ. 2. ಅಳೆಯಲು ಅರ್ಹವಾದ. उद्+माङ् (माने) "यत्" (३-१-९७)। "आचितः शाकटोन्मेये" मेदि०।

**उन्मेष ಉನ್ಮೇಷ** (पु०) 1. ಕಣ್ಣು ಮೊದಲಾದುವನ್ನು ತೆರೆಯುವುದು. 2. ಅರಳುವುದು, ವಿಕಾಸಹೊಂದುವುದು. उद्+मिष (स्पर्धायाम्) "घञ्" (३-३-१८)। "प्रत्यग्रोन्मेषजिह्मा क्षणमनभिमुखी रत्नदीपप्रभाणाम्" मुद्रा० ३-२१। "दीर्घिकाकमलोन्मेषो यावन्मात्रेण साध्यते" कुमा० २-३३। 3. ಪ್ರಕಾಶ, ಬೆಳಕು. "खद्योतालीविलसितनिभां विद्युदुन्मेषदृष्टिम्" मेघ० २-१८। भावे "ल्युट्" (३-३-११५)। **उन्मेषणम् ಉನ್ಮೇಷಣಮ್.**

**उन्मेषिन् ಉನ್ಮೇಷಿನ್** (वि०) 1. ಪ್ರಕಾಶಿಸುವ, ಉಜ್ಜ್ವಲವಾದ. उन्मिषति—उद्+मिष (स्पर्धायाम्) "णिनिः" (३-२-७८)। 2. ಹರಡುವ ಸ್ವಭಾವದ. "प्रेङ्खद्भूरिमयूरमेचकचयैरुन्मेषिचाषच्छदच्छायासंवलितैर्विवर्तिभिरिव प्रान्तेषु पर्यावृताः" मालती० ६-५। 3. ಅರಳಿಸುವ, ವಿಕಾಸಪಡಿಸುವ. उद्+मिष+णिच् "णिनिः"। स्त्रियां "ङीप्" (४-२-५)। **उन्मेषिणी ಉನ್ಮೇಷಿಣೀ.** "उन्मेषिणी सुमनसामुदिता पुरस्ताच्चक्रप्रभामनुकरोति मरीचिमाला" याद० १९-३०।

**उप ಉಪ** (अव्य०) ಇದು ಈ ಕೆಳಗಿನ ಅರ್ಥಗಳಿಗೆ ದ್ಯೋತಕವಾಗುವುದು: 1. ಅಧಿಕ, ಹೆಚ್ಚು. उपपरार्धे हरेर्गुणाः। 2. ಕಡಿಮೆ, ಹೀನ. उपगुरुः, उपपुराणम्, उपरूपकम्। 3. ಸಾಮೀಪ್ಯ, ಹತ್ತಿರ. उपमेखलम्। 4. ಶಕ್ತಿ, ಸಾಮರ್ಥ್ಯ. उपकरोति। 5. ಆಚಾರ್ಯನನ್ನಾಗಿ ಮಾಡುವುದು, ಗುರುವನ್ನಾಗಿ ಮಾಡುವಿಕೆ. उपनयते। 6. ದಾನ, ಕೊಡುಗೆ. उपहरति। 7. ಪ್ರತಿಯತ್ನ, ಗುಣಾಧಾನ. उपस्करणम्। एधोदकस्योपस्कुरुते। 8. ವ್ಯಾಪ್ತಿ, ಹರಡುವಿಕೆ. उपकीर्णम्। 9. ಪೂಜೆ. उपचारः। 10. ಅತ್ಯಯ, ನಾಶ. उपरतिः। 11. ದೋಷ, ಶಕ್ತಿ ಕಳೆದುಕೊಳ್ಳುವಿಕೆ. उपहतेन्द्रियः। 12. ಪ್ರಾರಂಭ. उपक्रमते। 13. ಭೂಷಣ, ಅಲಂಕಾರ. उपस्कृता कन्या। 14. ಗುಂಪುಕಟ್ಟುವುದು, ಒಟ್ಟಿಗೆ ಸೇರುವುದು. उपस्कृता देवाः। 15. ವಿಕಾರಹೊಂದುವುದು, ಬದಲಾವಣೆ ಹೊಂದುವುದು. उपस्कृतं भुङ्क्ते। 16. ವಾಕ್ಯಾಧ್ಯಾಹಾರ. उपस्कृतं ब्रूते। 17. ಸಾದೃಶ್ಯ, ಹೋಲಿಕೆ. उपमा, उपमितिः। 18. ಹೊಂದುವ ಅಪೇಕ್ಷೆ. 19. ದಾಕ್ಷಿಣ್ಯ. 20. ಸಮಾಧಾನ. भृत्यानुपवदते। समाधत्त इत्यर्थः। 21. ಪ್ರಾರ್ಥನೆ. उपवदते। प्रार्थयते इत्यर्थः। 22. ಭರಣ, ಪೋಷಣೆ. "उप सामर्थ्यदाक्षिण्यदोषाख्यानात्ययेषु च। आचार्यकरणे दाने व्याप्तावारम्भपूजयोः। तद्योगेऽपि च लिप्सायां भरणार्थोपमार्थयोः। उप हीनेऽधिके प्रोक्तोऽप्यासन्नेऽप्युपकीर्तितः" विश्व०।

**उपकण्ठ ಉಪಕಂಠ** (पु०) 1. ಹತ್ತಿರ, ಸಮೀಪ. "प्राप तालीवनश्याममुपकण्ठं महोदधेः" रघु० ४-३४। "जगत्प्रसूतिर्जगदेकपावनी व्रजोपकण्ठं तनयैरुपेयुषी" किरा० ४-३२। (न०) 2. ಗ್ರಾಮದ ಕೊನೆಯ ಪ್ರದೇಶ. 3. ಕುದುರೆಯ ಒಂದು ವಿಧ ನಡೆ, ಅಶ್ವಗತಿಯ ಒಂದು ಭೇದ. "उत्तेरितमुपकण्ठमास्कन्दितकमित्यपि" अभि० चिं०। (वि०) 4. ಹತ್ತಿರದ, ಸಮೀಪದ. उपगतः कण्ठः सामीप्यमस्य। (अव्य०) 5. ಕಂಠದಲ್ಲಿ, ಕುತ್ತಿಗೆಯಲ್ಲಿ. "श्लिष्यतः प्रियवधूरुपकण्ठम्" किरा० ९-२७। 6. ಸಮೀಪದಲ್ಲಿ. "निमीलदाकेकरलोलचक्षुषां प्रियोपकण्ठं कृतगात्रवेपथुः" किरा० ८-५३। "प्रेम्णोपकण्ठं मुहुरङ्कभाजः" माघ० ३-३६। 7. ಕುತ್ತಿಗೆಯ ಸಮೀಪದಲ್ಲಿ.

**उपकनिष्ठिका ಉಪಕನಿಷ್ಠಿಕಾ** (स्त्री०) ಅನಾಮಿಕೆ, ಕಿರುಬೆರಳಿನ ಪಕ್ಕದ ಬೆರಳು. उपगता कनिष्ठिकाम्।

**उपकरण ಉಪಕರಣ** (न०) 1. ಸಾಹಾಯ್ಯ, ಒತ್ತಾಸೆ. 2. ಸಲಕರಣೆ, ಸಾಧನ, ಸಹಾಯವಸ್ತು, ಕೆಲಸದ ಸಾಮಾನುಗಳು. [ಊಟಕ್ಕೆ ವ್ಯಂಜನ, ಮಲಗಲು ಹಾಸಿಗೆ, ಸ್ನಾನಕ್ಕೆ ಸಾಬೂನು ಇತ್ಯಾದಿ.] "परोपकारोपकरणं शरीरम्" काद०। 3. ರಾಜರ ಮರ್ಯಾದೆಯ ವಸ್ತು. [ಛತ್ರಿ, ಚಾಮರ, ಶಂಖ, ಚಕ್ರ, ಮತ್ಸ್ಯ, ಭೇರುಂಡ ಇತ್ಯಾದಿ.] 4. ಜೀವನೋಪಾಯ. (वि०) 5. ಇಂದ್ರಿಯವನ್ನು ಅನುಸರಿಸಿರುವ. करणमुपगतः। (अव्य०) 6. ಇಂದ್ರಿಯದಲ್ಲಿ. करणे उपकरणम्। विभ० अव्ययी०। 7. ಇಂದ್ರಿಯದ ಸಮೀಪ. करणस्य समीपम्। सामीप्ये अव्ययी०।

**उपकर्ण ಉಪಕರ್ಣ** (अव्य०) 1. ಕಿವಿಯಲ್ಲಿ. कर्णे उपकर्णम्। विभ० अव्ययी०। 2. ಕಿವಿಯ ಸಮೀಪ. कर्णस्य समीपम्। सामीप्ये अव्ययी०।

**उपकर्तृ ಉಪಕರ್ತೃ** (वि०) ಉಪಕಾರಮಾಡುವ, ಸಾಹಾಯ್ಯಮಾಡುವ. उपकरोति — उप + डु कृञ्

(करणे) "तृच्" (३-१-१३३)। "उपकर्त्रारिणा सन्धिर्न मित्रेणापकारिणा" माघ० २-३७। स्त्रियां "ङीप्" (४-१-५)। -कर्त्री-ಕರ್ತ್ರೀ.

**उपकल्पन ಉಪಕಲ್ಪನ** (नं०) 1. ನಿರ್ಮಾಣ, ತಯಾರಿಕೆ. 2. ಸಿದ್ಧತೆ, ಸನ್ನಾಹ. उप + क्लृप् (सामर्थ्ये) + णिच् "ल्युट्" (३-३-११५)।

**उपकार ಉಪಕಾರ** (पुं०) ಸಾಹಾಯ್ಯ, ಒತ್ತಾಸೆ, ನೆರವು. उप+डु कृञ् (करणे) "घञ्" (३-३-१८)। "उपकारापकारौ हि लक्ष्यं लक्षणमेतयोः" माघ० २-३७। "शाम्येत्प्रत्यपकारेण नोपकारेण दुर्जनः" कुमा० २-४०।

**उपकारक ಉಪಕಾರಕ** (वि०) ಉಪಕಾರಮಾಡುವ, ನೆರವಾಗುವ, ಸಾಹಾಯ್ಯಮಾಡುವ. उप + डु कृञ् (करणे) "ण्वुल्" (३-१-१३३)। "आगन्तवोऽपि कदाचिदुपकारका दृश्यन्ते" हितो०। "उपकारकमायतेर्भृशं प्रसवः कर्मफलस्य भूरिणः" किरा० २-४३। स्त्रियां "टाप्" (४-१-४)। **उपकारिका ಉಪಕಾರಿಕಾ.**

**उपकारवत् ಉಪಕಾರವತ್** (वि०) ಉಪಕಾರವುಳ್ಳ, ಉಪಕಾರಮಾಡುವ, ಸಾಹಾಯ್ಯಮಾಡುವ. उपकारोऽस्त्यस्य "मतुप्" (५-२-९४)। "युक्ताः स्वशक्त्या मुनयः प्रजानां हितोपदेशैरुपकारवन्तः" किरा० १८-२९।

**उपकारिका ಉಪಕಾರಿಕಾ** (स्त्री०) ಅರಮನೆ, ರಾಜಗೃಹ. उपकरोति—उप + डु कृञ् (करणे) "ण्वुल्" (३-१-१३३)। "टाप्" (४-१-४)। "भ्रमन्नमुष्यामुपकारिकायामायस्य भैमीविरहात्क्रशीयान्" नैष० ६-३६।

**उपकारिन् ಉಪಕಾರಿನ್** (वि०) ಉಪಕಾರಮಾಡುವ, ಸಾಹಾಯ್ಯಮಾಡುವ. उपकरोति — उप + डु कृञ् (करणे) "णिनिः" (३-१-१३४)। "हिमऋतावपि ताः स्म भृशस्विदो युवतयः सुतरामुपकारिणि" माघ० ६-६१। "मन्मथेन परिलुप्तमतीनां प्रायशः स्खलितमप्युपकारि" किरा० ९-३७। स्त्रियां "ङीप्" (४-१-५)। उपकारिणी ಉಪಕಾರಿಣೀ.

**उपकार्य ಉಪಕಾರ್ಯ** (वि०) ಉಪಕಾರಕ್ಕೆ ಅರ್ಹನಾದ, ಸಾಹಾಯ್ಯ ಹೊಂದಲು ಯೋಗ್ಯನಾದ. उप+डु कृञ् (करणे) "ण्यत्" (३-१-१२४)।

**उपकार्या ಉಪಕಾರ್ಯಾ** (स्त्री०) 1. ರಾಜಗೃಹ, ಅರಮನೆ. "रम्यां रघुप्रतिनिधिः स नवोपकार्यां बाल्यात्परामिव दशां मदनोऽध्युवास" रघु० ५-४३। 2. ಪಟಗೃಹ, ಡೇರೆ, ಬಟ್ಟೆಯಿಂದ ನಿರ್ಮಿತವಾದ ಮನೆ. "स तीरभूमौ विहितोपकार्यमानायिभिस्तामपकृष्टनक्राम्" रघु० १६-५५।

**उपकुञ्चिका ಉಪಕುಂಚಿಕಾ** (स्त्री०) 1. ಕರಿಜೀರಿಗೆ. 2. ಸಣ್ಣ ಯಾಲಕ್ಕಿ. 3. ರಸಾಂಜನ. उपकुञ्चति—उप+कुञ्च (कौटिल्ये) "ण्वुल्" (३-१-१३३)।

**उपकुर्वत् ಉಪಕುರ್ವತ್** (वि०) ಉಪಕಾರಮಾಡುತ್ತಿರುವ. उप+डु कृञ् (करणे) "शतृ" (३-२-१२४)।

**उपकुर्वाण ಉಪಕುರ್ವಾಣ** (पुं०) 1. ಸಂಪೂರ್ಣ ವೇದಾಧ್ಯಯನಮಾಡಿ ಗೃಹಸ್ಥನಾಗಲು ಸಿದ್ಧನಾಗಿರುವ ಬ್ರಹ್ಮಚಾರಿ. उप+डु कृञ् (करणे) "शानच्" (३-२-१२४)। ಬ್ರಹ್ಮಚಾರಿಯು ನೈಷ್ಠಿಕ ಮತ್ತು ಉಪಕುರ್ವಾಣನೆಂದು ಎರಡು ವಿಧ. ಉಪನಯನಾನಂತರ ಯಾವಜ್ಜೀವವೂ ಗುರುಕುಲದಲ್ಲಿಯೇ ವಾಸಮಾಡುವವನು ನೈಷ್ಠಿಕ ಬ್ರಹ್ಮಚಾರಿ. ವಿದ್ಯಾಭ್ಯಾಸ ಮುಗಿಸಿಕೊಂಡು ಗುರುವಿನ ಅನುಮತಿಪಡೆದು ಗುರುದಕ್ಷಿಣೆ ಸಮರ್ಪಿಸಿ ಸ್ನಾತಕನಾಗಿ ಬಳಿಕ ಗೃಹಸ್ಥಾಶ್ರಮವನ್ನು ಸ್ವೀಕರಿಸುವವನು ಉಪಕುರ್ವಾಣನು. "न पूर्वं गुरवे किंचिदुपकुर्वीत धर्मवित्। स्नास्यंस्तु गुरुणाज्ञप्तः शक्त्या गुर्वर्थमाहरेत्" मनु० २-२४५। 2. ಉಪಕಾರದ ಸ್ವಭಾವದವನು. उप+कृञ् ताच्छील्ये "चानश्" (३-२-१२९)।

**उपकुल्या ಉಪಕುಲ್ಯಾ** (स्त्री०) ಹಿಪ್ಪಲಿಗಿಡ. उप+कुल (संस्त्याने बन्धुषु च) निपा० (उ० ४-११२)।

**उपकूप ಉಪಕೂಪ** (अव्य०) 1. ಬಾವಿಯಲ್ಲಿ. कूपे उपकूपम्। विभ० अव्ययी०। 2. ಬಾವಿಯ ಹತ್ತಿರ. कूपस्य समीपम्। सामीप्ये अव्ययी०।

**उपकूल ಉಪಕೂಲ** (अव्य०) 1. ತೀರದಲ್ಲಿ, ದಡದಲ್ಲಿ. कूले उपकूलम्। विभ० अव्ययी०। 2. ದಡದ ಹತ್ತಿರ, ತೀರದ ಸಮೀಪ. कूलस्य समीपम्। सामीप्ये अव्ययी०। ಈ ರೀತಿಯಾಗಿ उपगङ्गम् उपमेखलम् ಇತ್ಯಾದಿ.

**उपकृत ಉಪಕೃತ** (नं०) 1. ಉಪಕಾರ, ಸಾಹಾಯ್ಯ. उप + डु कृञ् (करणे) "क्तः" (३-३-११४)। 2. ಉಪಕಾರಮಾಡಲ್ಪಟ್ಟ, ಸಾಹಾಯ್ಯಮಾಡಲ್ಪಟ್ಟ. उप + कृञ् "क्तः" (३-२-१०२)।

**उपकृति ಉಪಕೃತಿ** (स्त्री०) ಉಪಕಾರ, ಸಾಹಾಯ್ಯ. उप+डु कृञ् (करणे) "क्तिन्" (३-३-९४)। "पतगेन मया जगत्पतेरुपकृत्यै तव किं प्रभूयते" नैष० २-१३।

**उपकृतिन् ಉಪಕೃತಿನ್** (वि०) ಉಪಕಾರಮಾಡಿದವನು. ಸಾಹಾಯ್ಯ ನೀಡಿದವನು. उपकृतमनेन "इनिः" (५-२-८८)।

**उपक्लृप्त ಉಪಕ್ಲೃಪ್ತ** (वि०) 1. ಸಿದ್ಧವಾದ. 2. ತಯಾರಾದ. उप्+क्लृपू (सामर्थ्ये) "क्तः" (३-४-७२)। ऋकारस्य लः (८-२-१८)। 3. ಹತ್ತಿರ ಇಡಲ್ಪಟ್ಟ, ಸಮೀಪಕ್ಕೆ ತರಲ್ಪಟ್ಟ. कर्म० "क्तः" (३-२-१०२)।

**उपक्रम ಉಪಕ್ರಮ** (पु०) 1. ಪ್ರಾರಂಭಿಸುವಿಕೆ, ಮೊದಲುಮಾಡುವಿಕೆ. उप+क्रमु (पादविक्षेपे) "घञ्" (३-३-१८)। "रामोपक्रममाचख्यौ रक्षःपरिभवं नवम्" रघु० १२-४२। 2. ಪ್ರಾರಂಭ, ಮೊದಲು. 3. ಸಾಮ ಮೊದಲಾದ ಉಪಾಯ. "उपक्रमैरस्खलितैश्चतुर्भिश्चतुर्दिगीशश्चतुरो बभूव" रघु० १८-१५। 4. ಪ್ರಥಮಪ್ರವೇಶ, ಮೊದಲು ಸಮೀಪಕ್ಕೆ ಹೋಗುವುದು. "कुसुमधर्माणो हि योषितः सुकुमारोपक्रमाः" मालती० ७। 5. ಚಿಕಿತ್ಸೆ, ವೈದ್ಯೋಪಚಾರ. उप+क्रमु कर० "घञ्" (३-३-१२१)।

**उपक्रमण ಉಪಕ್ರಮಣ** (न०) 1. ಪ್ರಾರಂಭಿಸುವಿಕೆ, ಮೊದಲುಮಾಡುವಿಕೆ. उप+क्रमु (पादविक्षेपे) भावे "ल्युट्" (३-३-११५)। 2. ರೋಗಿಯ ಆಯುಸ್ಸನ್ನು ತಿಳಿದು ಮಾಡುವ ವೈದ್ಯ ಚಿಕಿತ್ಸೆ, ಔಷಧೋಪಚಾರ. कर० "ल्युट्" (३-३-११७। 3. ಸಮೀಪಕ್ಕೆ ಬರುವುದು, ಹತ್ತಿರಕ್ಕೆ ಬರುವುದು. स्त्रियां "ङीप्" (४-१-५)। स्वार्थे "कन्"। **उपक्रमणिका ಉಪಕ್ರಮಣಿಕಾ.** ಗ್ರಂಥದ ಪ್ರಸ್ತಾವನೆ, ಉಪೋದ್ಘಾತ.

**उपक्रमणीय ಉಪಕ್ರಮಣೀಯ** (वि०) 1. ಆರಂಭಿಸಲ್ಪಡುವ. उप+क्रमु (पादविक्षेपे) "अनीयर्" (३-१-९६)। 2. ಚಿಕಿತ್ಸೆಗೆ ಬೇಕಾದ ದೀರ್ಘಾಯುಷ್ಯವನ್ನು ತಿಳಿಸುವ ಲಕ್ಷಣ. उपक्रमणे साधु। 3. ರೋಗಿಯ ಚಿಕಿತ್ಸೆಗೆ ಸಂಬಂಧಿಸಿದ ಗ್ರಂಥ. ಚಿಕಿತ್ಸೆಗೆ ಪ್ರಾರಂಭಿಸುವ ಮೊದಲು ವೈದ್ಯನು ರೋಗಿಯ ಆಯುಃಪ್ರಮಾಣವನ್ನು ಪರೀಕ್ಷಿಸಬೇಕು. ಸರಿಯಾದ ಆಯುಃಪ್ರಮಾಣವಿದ್ದರೆ ಮಾತ್ರ ವ್ಯಾಧಿಯ ಸ್ವರೂಪ, ಋತು, ಅಗ್ನಿ, ವಯಸ್ಸು, ದೇಹಬಲ, ಪ್ರಕೃತಿ, ದೇಶ ಮೊದಲಾದುವನ್ನು ಚೆನ್ನಾಗಿ ಪರೀಕ್ಷಿಸಿ ಚಿಕಿತ್ಸೆಯನ್ನು ನಡೆಸಬೇಕು. सुश्रुत०।

**उपक्रान्त ಉಪಕ್ರಾಂತ** (वि०) ಪ್ರಾರಂಭಿಸಲ್ಪಟ್ಟ, ಉಪಕ್ರಮಿಸಲ್ಪಟ್ಟ. उप+क्रमु (पादविक्षेपे) "क्तः" (३-२-१०२)।

**उपक्रिया ಉಪಕ್ರಿಯಾ** (स्त्री०) ಉಪಕಾರ, ಸಾಹಾಯ್ಯ, ನೆರವು. उप+डु कृञ् (करणे) भावे "शः" (३-३-१००)। "अचिरादुपकर्तुराचरेदथ वात्मौपयिकीमुपक्रियाम्" नैष० २-१४।

**उपक्रोश ಉಪಕ್ರೋಶ** (पु०) ನಿಂದೆ, ದೂಷಣೆ. उप+क्रुश (आह्वाने रोदने च) "घञ्" (३-३-१८)। "राज्येन किं तद्विपरीतवृत्तेः प्राणैरुपक्रोशमलीमसैर्वा" रघु० २-५३।

**उपक्रोष्टृ ಉಪಕ್ರೋಷ್ಟೃ** (पु०) 1. ಗರ್ದಭ, ಕತ್ತೆ. उप+क्रुश (आह्वाने रोदने च) "तृच्" (३-१-१३३)। (वि०) 2. ನಿಂದಕ, ದೂಷಿಸುವವನು.

**उपक्वण ಉಪಕ್ವಣ** (पु०) ವೀಣಾನಾದ. उप + क्वण (शब्दे) वा "अप्" (३-३-५६)। पक्षे "घञ्" (३-३-१८)। **उपक्वाणः ಉಪಕ್ವಾಣ.**

**उपक्षय ಉಪಕ್ಷಯ** (पु०) 1. ನಾಶ, ಕಡಿಮೆಯಾಗುವಿಕೆ, ಹಾನಿ. उप+क्षि (क्षये) "अच्" (३-३-५६)। (वि०) 2. ನಾಶಹೊಂದಿದ, ಕ್ಷೀಣವಾದ. उपगतः क्षयम्। (अव्य०) 3. ಮನೆಯ ಪಕ್ಕ, ಮನೆಯ ಸಮೀಪ. क्षयस्य गृहस्य समीपम्। सामीप्ये अव्ययी०।

**उपक्षिपत् ಉಪಕ್ಷಿಪತ್** (वि०) 1. ಇಡುವ, ಹಾಕುವ, ಪ್ರಯೋಗಿಸುವ, ಎಸೆಯುವ. उप+क्षिपु (निरसने) "शतृ" (३-२-१२४)। "वपुषि वधाय तत्र तव शस्त्रमुपक्षिपतः पततु शिरस्यकाण्डयमदण्ड इवैष भुजः" मालती० ५-३१। 2. ನಿಂದಿಸುವ, ಆಕ್ಷೇಪಿಸುವ. 3. ಪ್ರಾರಂಭಿಸುವ, ಉಪಕ್ರಮಿಸುವ.

**उपक्षिप्त ಉಪಕ್ಷಿಪ್ತ** (वि०) 1. ಪ್ರಾರಂಭಿಸಲ್ಪಟ್ಟ, ಉಪಕ್ರಮಿಸಲ್ಪಟ್ಟ. "उपक्षिप्तमनेन किमपि" मुद्रा० १। उप + क्षिपु (निरसने) "क्तः" (३-२-१०२)। 2. ರಚಿಸಲ್ಪಟ್ಟ, ಮಾಡಲ್ಪಟ್ಟ, ತಯಾರಿಸಲ್ಪಟ್ಟ. "उपक्षिप्तो मया तपनीयाशोकस्य वेदिकाबन्धः। यावदनुष्ठितनियोगमात्मानं देव्यै निवेदयामि" माल० ५। 3. ಎಸೆಯಲ್ಪಟ್ಟ, ಬಿಸಾಡಲ್ಪಟ್ಟ. 4. ಹತ್ತಿರದಲ್ಲಿ ಇಡಲ್ಪಟ್ಟ.

**उपक्षीण ಉಪಕ್ಷೀಣ** (वि०) ಕ್ಷಯಹೊಂದಿದ, ಕಡಿಮೆಯಾದ. उप+क्षि (क्षये) "क्तः" (३-४-७२)। दीर्घः (६-४-४०)। निष्ठातस्य नत्वम् (८-२-४६)।

**उपक्षेप ಉಪಕ್ಷೇಪ** (पुं०) 1. ಸಮೀಪದಲ್ಲಿ ಇಡುವಿಕೆ, ಹತ್ತಿರದಲ್ಲಿರಿಸುವಿಕೆ. उप + क्षिपु (निरसने) भावे "घञ्" (३-३-१८)। 2. ಎಸೆಯುವಿಕೆ, ಬಿಸಾಡುವಿಕೆ. 3. ಸೂಚನೆ, ತಿಳಿಸುವಿಕೆ, ಉಲ್ಲೇಖ. "दारुणः खल्पक्षेपः पापस्य" वेणी० ५। 4. ಬೆದರಿಕೆ, ಭಯ ಸೂಚನೆ. "कर्णनासाच्छेदोपक्षेपभीषिताभ्याम्" दशकु०। 5. (ರೂಪಕಗಳಲ್ಲಿ) ಮುಖಸಂಧಿಯ ಒಂದು ಅಂಗ. "उपक्षेपः परिकरः परिन्यासो विलोभनम्" ಇತ್ಯಾದಿ. सा० द० ६-८१। ಪ್ರಧಾನಫಲಕ್ಕೆ ಮುಖ್ಯ ಕಾರಣವಾದುದು ಬೀಜ. ಕಾವ್ಯಾರ್ಥ ಸೂಚಕವಾದ ಆ ಬೀಜವನ್ನು ಸಂಕ್ಷೇಪವಾಗಿ ಹೇಳುವುದು ಉಪಕ್ಷೇಪ. ಈ ಬೀಜವು ಪ್ರಾರಂಭದಲ್ಲಿ ಸ್ವಲ್ಪ ಮಾತ್ರ ಸೂಚಿಸಲ್ಪಟ್ಟು ಕ್ರಮೇಣ ವೃದ್ಧಿಹೊಂದಿ ಪ್ರಧಾನಫಲ ಪ್ರಾಪ್ತಿಗೆ ಹೇತುವಾಗುವುದು. "अल्पमात्रं समुद्दिष्टं बहुधा यद्विसर्पति। फलस्य प्रथमो हेतुर्बीजं तदभिधीयते" सा० द० ६-६५। "काव्यार्थस्य समुत्पत्तिरुपक्षेप इति स्मृतः" सा० द० ६-८३। "बीजन्यास उपक्षेपः" प्र० र०। ರತ್ನಾವಳಿಯಲ್ಲಿ ಯೌಗಂಧರಾಯಣನ ವ್ಯಾಪಾರವು ವತ್ಸರಾಜನಿಗೆ ರತ್ನಾವಳಿಯ ಪ್ರಾಪ್ತಿಗೂ, ವೇಣೀಸಂಹಾರದಲ್ಲಿ ಭೀಮಸೇನನ ಕೋಪದಿಂದ ವೃದ್ಧಿ ಹೊಂದಿದ ಧರ್ಮರಾಜನ ಉತ್ಸಾಹವು ದ್ರೌಪದಿಯ ವೇಣೀಸಂಯಮನಕ್ಕೂ ಬೀಜರೂಪವಾಗಿರುವುವು. ಇದೇ 'ಉಪಕ್ಷೇಪ'ವೆಂಬ ಮುಖ ಸಂಧಿಯ ಅಂಗ. 6. ರಾಜನು ಶತ್ರುಜಯ ಮೊದಲಾದ ಕಾರ್ಯಕ್ಕೆ ಪ್ರಯೋಗಿಸುವ ಸಾಮಾದ್ಯುಪಾಯ. उपक्षिप्यते आरभ्यतेऽनेन — उप + क्षिपु कर० "घञ्" (३-३-१२१)। "कार्योपक्षेपमादौ तनुमपि रचयंस्तस्य विस्तारमिच्छन् बीजानां गर्भितानां फलमतिगहनं गूढमुद्भेदयंश्च" मुद्रा० ४-३।

**उपक्षेपण ಉಪಕ್ಷೇಪಣ** (नं०) 1. ಎಸೆಯುವುದು, ಬಿಸಾಡುವುದು. 2. ಸಮರ್ಪಿಸುವುದು, ಒಪ್ಪಿಸುವುದು. 3. ಸಮೀಪದಲ್ಲಿಡುವುದು. उप + क्षिपु (निरसने) "ल्युट्" (३-३-११५)।

**उपग ಉಪಗ** (वि०) 1. ಸಮೀಪದಲ್ಲಿ ಹೋಗುವ, ಅನುಸರಿಸಿ ಹೋಗುವ. उपगच्छति—उप+गम्लृ (गतौ) "डः" (वा० ३-२-४८)। 2. ಹೊಂದಿರುವ, ಕೂಡಿಕೊಂಡಿರುವ. "ओषध्यः फलपाकान्ता बहुपुष्पफलोपगाः" मनु० १-४६।

**उपगण ಉಪಗಣ** (वि०) ಗುಂಪನ್ನು ಸೇರಿರುವ, ಗುಂಪಿನೊಡನೆ ಕಲೆತಿರುವ. उपगतो गणो येन।

**उपगत ಉಪಗತ** (नं०) 1. ಹಣಸಂದ ರಶೀದಿ, ಹಣವು ಸಂದ ಬಗ್ಗೆ ಸ್ವಹಸ್ತಾಂಕನ (ರುಜು) ಮಾಡಿ ಕೊಡುವ ರಶೀದಿ. "धनी वोपगतं दद्यात्स्वहस्तपरिचिह्नितम्" याज्ञ० २-९३। (वि०) 2. ಸಮೀಪಕ್ಕೆ ಬಂದಿರುವ, ಹತ್ತಿರ ಸೇರಿರುವ. उप+गम्लृ (गतौ) "क्तः" (३-४-७२)। 3. ಸ್ವೀಕರಿಸಿದ, ಅಂಗೀಕರಿಸಿದ. "उपगतोऽपि च मण्डलनाभितामनुदितान्यसितातपवारणः" रघु० ९-१५। 4. ತಿಳಿದಿರುವ. 5. ಬಂದಿರುವ, ಕೈಸೇರಿರುವ, ಪ್ರಾಪ್ತವಾದ. "सर्वो हि नोपगतमप्यपचीयमानं वर्धिष्णुमाश्रयमनागतमभ्युपैति" माघ० ५-१४। "उपगतमवधीरयन्त्यभव्याः" किरा० १०-५१। 6. ಆಗಮಿಸಿರುವ, ಬಂದಿರುವ. "सहसोपगतः सविस्मयं तपसां सूतिरसूतिरापदाम्" किरा० २-५६। "उपगते वसुदेवसुतेऽन्तिकम्" याद० ३-४६। 7. ಪಡೆದಿರುವ, ಹೊಂದಿರುವ. "उच्चावचैरुपगतेषु सहस्रसंख्याम्" माघ० ४-४६।

**उपगति ಉಪಗತಿ** (स्त्री०) 1. ಪ್ರಾಪ್ತಿ, ಪಡೆಯುವಿಕೆ. उप + गम्लृ (गतौ) "क्तिन्" (३-३-९४)। 2. ಜ್ಞಾನ, ತಿಳುವಳಿಕೆ. 3. ಸ್ವೀಕಾರ, ಅಂಗೀಕಾರ, ಒಪ್ಪಿಗೆ. 4. ಸಮೀಪಕ್ಕೆ ಬರುವುದು; ಹತ್ತಿರ ಸೇರುವುದು.

**उपगन्तृ ಉಪಗಂತೃ** (वि०) 1. ಸಮೀಪಕ್ಕೆ ಹೋಗುವ, ಹತ್ತಿರಕ್ಕೆ ಹೋಗುವ. 2. ತಿಳಿಯುವ. 3. ಹೊಂದುವ, ಪಡೆಯುವ. 4. ಸ್ವೀಕರಿಸುವ, ಅಂಗೀಕರಿಸುವ, ಒಪ್ಪುವ. उप+गम्लृ (गतौ) "तृच्" (३-१-१३३)। स्त्रियां "ङीप्" (४-१-५)। —गन्त्री —ಗಂತ್ರೀ.

**उपगम ಉಪಗಮ** (पुं०) 1. ಸಮೀಪಕ್ಕೆ ಹೋಗುವಿಕೆ, ಹತ್ತಿರಕ್ಕೆ ಹೋಗುವಿಕೆ. उप + गम्लृ (गतौ) भावे "अप्" (३-३-५८)। "तं प्राप्य सर्वावयवानवद्यं व्यावर्ततान्योपगमात्कुमारी" रघु० ६-६९। 2. ಅಂಗೀಕಾರ, ಒಪ್ಪಿಗೆ. 3. ಜ್ಞಾನ, ತಿಳುವಳಿಕೆ. 4. ಪ್ರಾಪ್ತಿ, ಹೊಂದುವಿಕೆ, ಪಡೆಯುವಿಕೆ. "विश्वासोपगमादभिन्नगतयः शब्दं सहन्ते मृगाः" शाकु० १-१३। 5. ಸಹವಾಸ, ಸಾಹಚರ್ಯ, ಸಂಸರ್ಗ. "न पुनरधमानामुपगमः" हितो०। भावे "ल्युट्" (३-३-११५)। —गमनम् —ಗಮನವ್.

**उपगम्य ಉಪಗಮ್ಯ** (वि०) 1. ಸಮೀಪಕ್ಕೆ ಹೋಗಲು ಅರ್ಹನಾದ, ಹತ್ತಿರ ಸೇರಲು ಅರ್ಹನಾದ. 2. ಹೊಂದಲು ಅರ್ಹವಾದ, ಪಡೆಯಲು ಯೋಗ್ಯವಾದ. 3. ಅಂಗೀಕರಿಸಲ್ಪಡಬಹುದಾದ, ಒಪ್ಪಲು ಯೋಗ್ಯವಾದ. उप+गम्लृ (गतौ) "यत्" (३-१-९८)। (अव्य०) 4. ಹೊಂದಿ, ಸಮೀಪಕ್ಕೆ ಬಂದು. उप+गम्लृ "ल्यप्" (७-१-३७)। "उपगम्य ततः क्षिप्रं राक्षसी धान्यमालिनी" रामा०।

**उपगामिन् ಉಪಗಾಮಿನ್** (वि०) 1. ಸಮೀಪಕ್ಕೆ ಹೋಗುವವನು. 2. ಅಂಗೀಕರಿಸುವವನು, ಸಮ್ಮತಿಸುವವನು. उप+गम्लृ (गतौ) "णिनिः" (३-१-१३४)। 3. ತಿಳಿಯುವವನು, ಮನವರಿಕೆಮಾಡಿಕೊಳ್ಳುವವನು.

**उपगिरम् ಉಪಗಿರಮ್** (अव्य०) 1. ಗಿರಿಯ ಸಮೀಪ, ಬೆಟ್ಟದ ಹತ್ತಿರ. गिरेः समीपम्। सामीप्ये अव्ययी०। वा "टच्" (५-४-११२)। टजभावे उपगिरि ಉಪಗಿರಿ. 2. ಬೆಟ್ಟದಲ್ಲಿ, ಪರ್ವತದಲ್ಲಿ. गिरौ उपगिरि। विभ० अव्ययी०।

**उपगीत ಉಪಗೀತ** (वि०) 1. ಸಮೀಪದಲ್ಲಿ ಗಾನ ಮಾಡಲ್ಪಟ್ಟ, ಹತ್ತಿರದಲ್ಲಿ ಹಾಡಲ್ಪಟ್ಟ. उप+गै (शब्दे) "क्तः" (३-२-१०२)। "इतीष्टगन्धाढ्यमटग्रसौ वनं पिकोपगीतोऽपि शुकस्तुतोऽपि च" नैष० १-१०४। 2. ಸಮೀಪದಲ್ಲಿ ಹಾಡುತ್ತಿರುವ, ಹತ್ತಿರದಲ್ಲಿ ಗಾನಮಾಡುತ್ತಿರುವ. उप+गै (शब्दे) "क्तः" (३-४-७२)। "नात्र कान्तमुपगीतया तया स्वानमा नमति कार्ऽलिमालया" माघ० ४-५७।

**उपगीति ಉಪಗೀತಿ** (स्त्री०) ಪಥ್ಯಾರ್ಯಾವೃತ್ತದ ಉತ್ತರಾರ್ಧದ ಲಕ್ಷಣವು ಪೂರ್ವಾರ್ಧ ಮತ್ತು ಉತ್ತರಾರ್ಧಗಳೆರಡರಲ್ಲೂ ಇರುವ ಒಂದು ಮಾತ್ರಾವೃತ್ತ. "आर्याद्वितीयकेऽर्धे यद्गदितं लक्षणं तत्स्यात्। यद्युभयोरपि दलयोरुपगीतिं तां मुनिर्ब्रूते" वृ० र०।

**उपगु ಉಪಗು** (वि०) 1. ಗೋಪಾಲಕ, ದನ ಕಾಯುವವನು. उपगतो गौरस्य। (अव्य०) 2. ಗೋವಿನ ಸಮೀಪ, ಹಸುವಿನ ಹತ್ತಿರ. गोः समीपम्। सामीप्ये अव्ययी०।

**उपगुरु ಉಪಗುರು** (पु०) ಸಹಾಯಾಧ್ಯಾಪಕ, ಸಹಾಯೋಪಾಧ್ಯಾಯ. उपगतः सादृश्येन गुरुम्।

**उपगूढ ಉಪಗೂಢ** (न०) 1. ಆಲಿಂಗನ, ಅಪ್ಪಿಕೊಳ್ಳುವಿಕೆ. उप+गुहू (संवरणे) "क्तः" (३-३-११४)। "विश्रमार्थमुपगूढमजस्रं यत्प्रियैः प्रथमरत्यवसाने" माघ० १०-८८। "उपगूढानि सवेपथूनि च" कुमा० ४-१७। (वि०) 2. ಆಲಿಂಗಿಸಲ್ಪಟ್ಟ, ಅಪ್ಪಿಕೊಳ್ಳಲ್ಪಟ್ಟ. उप+गुहू कर्म० "क्तः" (३-२-१०२)। "उपगूढवेलमलघूर्मिभुजैः" माघ० ९-३८। 3. ಹಿಡಿದುಕೊಳ್ಳಲ್ಪಟ್ಟ, ಆಶ್ರಯಹೊಂದಲ್ಪಟ್ಟ. "कश्चित्कराभ्यामुपगूढनालमालोलपत्राभिहतद्विरेफम्" रघु० ६-१३। 4. ಮರೆಮಾಡಲ್ಪಟ್ಟ, ಮುಚ್ಚಲ್ಪಟ್ಟ. "उपान्तवानीरवनोपगूढान्यालक्ष्य पारिप्लवसारसानि" रघु० १३-३०।

**उपगूहन ಉಪಗೂಹನ** (न०) ಆಲಿಂಗನ, ಅಪ್ಪಿಕೊಳ್ಳುವಿಕೆ. उप+गुहू (संवरणे) भावे "ल्युट्" (३-३-११५)। "स्मरन्मुकुन्दाङ्घ्र्युपगूहनं पुनर्विहातुमिच्छेन्न रसग्रहो यतः" भाग० स्कं० १ अ० ५-१९। "परिरम्भः परिष्वङ्ग आश्लेष उपगूहनम्" वैज०।

**उपग्रह ಉಪಗ್ರಹ** (पु०) 1. ವ್ಯಾಘಾತ, ಪ್ರತಿಕ್ರಿಯೆ, ವ್ಯರ್ಥಪಡಿಸುವ ಯತ್ನ. उप+ग्रह (उपादाने) भावे "अप्" (३-३-५८)। "अथ च विहिते मत्कृत्यानां निकाममुपग्रहे कथमिदमिहेत्युन्निद्रस्य प्रयान्त्यनिशं निशाः" मुद्रा० ४-२। 2. ಉಪಯೋಗ. 3. ಅನುಕೂಲ್ಯ, ಅನುಕೂಲವಾಗಿರುವಿಕೆ, ಸಹಾಯವಾಗಿರುವಿಕೆ. 4. ಕೈಸೆರೆ, ಬಂಧನ. 5. ರಾಹು ಕೇತು ಮೊದಲಾದ ಉಪಗ್ರಹ. (वि०) 6. ಸೆರೆಹಿಡಿಯಲ್ಪಟ್ಟವನು, ಬಂಧಿಸಲ್ಪಟ್ಟವನು. उपगृह्यते स्म — उप+ग्रह कर्म० "अप्" (३-३-५८)। "उपग्रहः पुमान् बन्द्यामुपयोगेऽनुकूलने" मेदि०।

**उपग्रहण ಉಪಗ್ರಹಣ** (न०) 1. ಸಮೀಪದಿಂದ ತೆಗೆದುಕೊಳ್ಳುವುದು. 2. ಸ್ವೀಕಾರ, ತೆಗೆದುಕೊಳ್ಳುವುದು. उप+ग्रह (उपादाने) भावे "ल्युट्" (३-३-११५)। "वेदोपग्रहणार्थाय तावग्राहयत प्रभुः" रामा०।

**उपग्राह्य ಉಪಗ್ರಾಹ್ಯ** (न०) 1. ಉಪಹಾರ, ಕಾಣಿಕೆ. उपगृह्यते—उप+ग्रह (उपादाने) "ण्यत्" (३-२-१२४)। (वि०) 2. ಕಾಣಿಕೆಯಾಗಿ ಕೊಡಲ್ಪಡುವ ವಸ್ತು. 3. ಗೌರವಿಸಲ್ಪಡುವವನು, ಬಹುಮಾನಿಸಲ್ಪಡುವವನು, ಬಹುಮಾನ ಹೊಂದಲು ಅರ್ಹನಾದವನು. उप+ग्रह+णिच् "यत्" (३-१-९७)।

**उपघात ಉಪಘಾತ** (ಪುಂ) 1. ವಿನಾಶ, ಅಳಿವು, ಹಾಳು. उप + हन (हिंसागत्योः) "घञ्" (३-३-१८)। 2. ಕಾರ್ಯದಲ್ಲಿ ಅಸಾಮರ್ಥ್ಯ ಸಂಪಾದನೆ, ಕಾರ್ಯ ವುಂಟುಮಾಡುವುದರಲ್ಲಿ ಶಕ್ತಿ ಕುಂದುವುದು. "तथात्वं चेदिन्द्रियाणामुपघाते कथं स्मृतिः" भाषापं। 3. ರೋಗ, ವ್ಯಾಧಿ. उपहन्यतेऽनेन — उप + हन करं "घञ्" (३-३-१२१)। 4. ಏಟು, ಪೆಟ್ಟು, ಹೊಡೆತ. 5. ಅಪಕಾರ. "स्त्रीणां च प्रेक्षणालम्भमुपघातं परस्य च" मनुं २-१७९।

**उपघातक ಉಪಘಾತಕ** (विं) 1. ನಾಶಪಡಿಸುವವನು, ಹಾಳುಮಾಡುವವನು. उप+हन (हिंसागत्योः) "ण्वुल्" (३-१-१३३)। 2. ಪೀಡಿಸುವವನು, ಹಿಂಸಿಸುವವನು. "कथं सक्तून् ग्रहीष्यामि भूत्वा धर्मोपघातकः" भां आश्वं ९२-५१। 3. ಹೊಡೆಯುವ. 4. ಶಕ್ತಿ ಕುಂದಿಸುವ.

**उपघातिन् ಉಪಘಾತಿನ್** (विं) "उपघातक" ಪದದ ಅರ್ಥ. उप+हन (हिंसागत्योः) "णिनिः" (३-१-१३४)। "शस्त्रं पातयेत् मर्मसिरास्नायुसन्धीनामनुपघाति" सुश्रुतं सूत्रं १४-२६। स्त्रियां "ङीप्" (४-१-५)। –घातिनी –ಘಾತಿನೀ.

**उपघ्न ಉಪಘ್ನ** (विं) ಹತ್ತಿರದ ಆಸರೆ, ಸಮೀಪದಲ್ಲಿರುವ ಆಶ್ರಯ. उपहन्यते सामीप्येन गम्यते—उप + हन (हिंसागत्योः) "अप्" उपधालोपश्च (३-३-५९)। निपां। "अपश्यतां दाशरथी जनन्यौ छेदादिवोपघ्नतरोर्व्रतत्यौ" रघुं १४-१।

**उपचक्षुस् ಉಪಚಕ್ಷುಸ್** (नं) ಕನ್ನಡಕ, ಸುಲೋಚನ. उपगतं चक्षुः।

**उपचय ಉಪಚಯ** (पुं) 1. ವೃದ್ಧಿ, ಬೆಳವಣಿಗೆ. उप+चिञ् (चयने) "अच्" (३-३-५६)। "स्वशक्त्युपचये केचित्परस्य व्यसनेऽपरे। यानमाहुरुदासीनं त्वामुत्थापयति द्वयम्" माघं २-५७। 2. ರಾಶಿ, ಗುಪ್ಪೆ. 3. ಏಳಿಗೆ, ಅಭಿವೃದ್ಧಿ, ಅಭ್ಯುದಯ, ಉತ್ಕರ್ಷ. 4. ಲಗ್ನದಿಂದ ಮೂರು, ಆರು, ಹತ್ತು ಮತ್ತು ಹನ್ನೊಂದನೆಯ ಸ್ಥಾನ. "षष्ठत्रिदशलाभाश्च लग्नादुपचयाः स्मृताः"। 5. ಸಂಗ್ರಹ, ಶೇಖರಣೆ, ಕೂಡಿಡುವಿಕೆ. "अनाप्तपुण्योपचयैर्दुरापा फलस्य निर्धूतरजाः सवित्री" किरां ३-५।

**उपचरित ಉಪಚರಿತ** (विं) 1. ಉಪಚರಿಸಲ್ಪಟ್ಟ, ಸೇವಿಸಲ್ಪಟ್ಟ. 2. ಪೂಜಿಸಲ್ಪಟ್ಟ. उप+चर (गतौ) "क्तः" (३-२-१०२)। 3. ಲಕ್ಷಣಾವೃತ್ತಿಯಿಂದ ತಿಳಿಸಲ್ಪಟ್ಟ. "सिंहो माणवकः" ಎಂಬಲ್ಲಿ ಸಿಂಹಪದಕ್ಕೆ ಮಾಣವಕಪದದಲ್ಲಿ ಮುಖ್ಯವೃತ್ತಿಯಿಂದ ಅನ್ವಯವಿಲ್ಲದೆ ಮಾಣವಕನಲ್ಲಿ ಸಿಂಹದ ಗುಣವಿರುವುದರಿಂದ ಗೌಣಲಕ್ಷಣೆಯಿಂದ (ಮಾಣವಕನಲ್ಲಿ) ಸಿಂಹತ್ವವು ಉಪಚರಿತ (ಲಕ್ಷಣಾವೃತ್ತಿಯಿಂದ ತಿಳಿಸಲ್ಪಟ್ಟಿದೆ).

**उपचर्य ಉಪಚರ್ಯ** (विं) ಸೇವಿಸಲ್ಪಡುವ, ಸೇವಿಸಲು ಅರ್ಹನಾದ. उप (सूत्य) + चर (गतौ) कर्मं "यत्" (३-१-१००)। उपशब्देन सह समासः। सोपसर्गात्तु "ण्यत्" एव। अनुपसर्गे इत्युक्तत्वात्। "उपचर्यः स्त्रिया साध्व्या सततं देववत्पतिः" मनुं ५-१५४।

**उपचर्या ಉಪಚರ್ಯಾ** (स्त्रीं) 1. ಸೇವೆ, ಶುಶ್ರೂಷೆ. उप + चर (गतौ) भावे "यत्" (३-१-१००)। 2. ಚಿಕಿತ್ಸೆ, ರೋಗನಿವಾರಣೆಗಾಗಿ ಮಾಡುವ ಔಷಧೋಪಚಾರ.

**उपचायिन् ಉಪಚಾಯಿನ್** (विं) 1. ಅಭಿವೃದ್ಧಿಯುಂಟುಮಾಡುವ, ಹೆಚ್ಚಿಸುವ. 2. ಉತ್ಕರ್ಷವುಂಟುಮಾಡುವ. उप+चिञ् (चयने) "णिनिः" (३-१-१३४)। स्त्रियां "ङीप्" (४-१-५)। –चायिनी –ಚಾಯಿನೀ.

**उपचाय्य ಉಪಚಾಯ್ಯ** (पुं) ಯಜ್ಞವೇದಿಕೆ, ಯಾಗಾಗ್ನಿಯನ್ನು ಪ್ರತಿಷ್ಠಿಸಲು ಇಟ್ಟಿಗೆಯಿಂದ ನಿರ್ಮಿತವಾದ ಜಗುಲಿ. उप+चिञ् (चयने) "ण्यत्" आयादेशश्च (३-१-१३१)। "ಅಗ್ನಿ" (ವೇದಿಕೆ) ಎಂಬ ಅರ್ಥವು ತೋರುವಲ್ಲಿ ನಿಪಾತ. "अग्निशब्दः इष्टकारचितस्थण्डिलविशेषे वर्तते"। "इष्टकाभिरग्निं चिनोति" इति श्रुतेः। इष्टकाकृतचयनेन अग्न्याख्यं स्थण्डिलं निष्पादयेदित्यर्थः।" इति बालमनोरमायाम्।

**उपचार ಉಪಚಾರ** (पुं) 1. ಸೇವೆ, ಶುಶ್ರೂಷೆ. उप+चर (गतौ) "घञ्" (३-३-१८)। "स मे चिरायास्खलितोपचारां तां भक्तिमेवागणयत्पुरस्तात्" रघुं ५-२०। 2. ಚಿಕಿತ್ಸೆ, ಔಷಧೋಪಚಾರ. 3. ಮರ್ಯಾದೆ, ಗೌರವ, ಆದರ. "उपचारविधिर्मनस्विनीनां न तु पूर्वाभ्यधिकोऽपि भावशून्यः" मालं ३-३। 4. ಪೂಜೆ, ಸತ್ಕಾರ. "प्राप्ताः कृच्छ्रादृष्यशृङ्गोपचारैः पुण्यश्रीकाः कोसलेन्द्रेण पुत्राः" मं वीं १-२४। 5. ಸೇವೆಯ ಸಲಕರಣೆ, ಉಪಚಾರಕ್ಕೆ ಬೇಕಾದ ಪದಾರ್ಥ. "तस्योपकार्यारचितोपचारा वन्येतरा जानपदोपदाभिः" रघुं ५-४१। 6. ಪೂಜೆಯ ಸಲಕರಣೆ, ಪೂಜಾ

ದ್ರವ್ಯ, ಪೂಜೆಗೆ ಬೇಕಾದ ಪದಾರ್ಥ, ಪೂಜೋಪಕರಣ. ಉಪಚಾರಗಳು ಕಲ್ಪ, ಕಾಲ, ದೇವತಾಭೇದದಿಂದ पञ्च (5), दश (10), षोडश (16), अष्टादश (18), चतुर्विंशतिः (24) ಮತ್ತು चतुःषष्टिः (64) ಎಂದು ನಾನಾವಿಧ. [ವಿವರಕ್ಕೆ ಆಯಾ ಪದಗಳಲ್ಲಿ ನೋಡಿ.] "क्लृप्तोपचारां चतुरस्रवेदीं तावेत्य पश्चात् कनकासनस्थौ" ಕುಮಾ० ७-८८। 7. ಲಕ್ಷಣಾವೃತ್ತಿಯಿಂದ (ಮುಖ್ಯಾರ್ಥವನ್ನು ಬಿಟ್ಟು) ಬೇರೊಂದು ಅರ್ಥವನ್ನು ತಿಳಿಸುವಿಕೆ. "कूलं पिपतिषति" ಎಂಬಲ್ಲಿ ಅಚೇತನವಾದ ಕೂಲದಲ್ಲಿ ಲಕ್ಷಣೆಯಿಂದ ಚೇತನತ್ವವು ಹೇಳಲ್ಪಟ್ಟಿದೆ. 8. ಅಸತ್ಯ ವಚನ, ಇತರರನ್ನು ಸಂತೋಷಪಡಿಸಲು ಆಡುವ ಸುಳ್ಳುಮಾತು, ಇತರರ ಮನರಂಜನೆಗಾಗಿ ಅಸತ್ಯ ನುಡಿಯುವುದು, ಕೇವಲ ಗೌರವದ ಮಾತು. "उपचारपदं न चेदिदं त्वमनङ्गः कथमक्षता रतिः" कुमा० ४-९। 9. ಉತ್ಕೋಚ, ಲಂಚ. 10. ಪ್ರಾರ್ಥನೆ, ಯಾಚನೆ, ಬೇಡಿಕೆ. "सोपचारमुपशान्तविचारं सानुतर्षमनुतर्षपदेन" माघ० १०-२। 11. ವ್ಯವಹಾರ, ನಡತೆ, ನಡವಳಿಕೆ. 12. ಕರ್ಮಾಚರಣೆ, ಕರ್ಮಾನುಷ್ಠಾನ. "इत्थं विधिज्ञेन पुरोहितेन प्रयुक्तपाणिग्रहणोपचारौ" कुमा० ७-८६। "उपचारस्तु लञ्चायां व्यवहारोपचर्ययोः" हेम०।

**उपचार्य** ಉಪಚಾರ್ಯ (न०) 1. ಸೇವೆ, ಶುಶ್ರೂಷೆ. 2. ಚಿಕಿತ್ಸೆ. उप+चर (गतौ) "ण्यत्" (३-१-१२४)। (वि०) 3. ಸೇವಿಸಲ್ಪಡುವ, ಉಪಚರಿಸಲ್ಪಡುವ. 4. ಚಿಕಿತ್ಸೆಗೆ ಅರ್ಹನಾದ, ಉಪಚಾರ ಹೊಂದಲು ತಕ್ಕವನಾದ. उप+चर कर्म० "ण्यत्" (३-१-१२४)।

**उपचिकीर्षा** ಉಪಚಿಕೀರ್ಷಾ (स्त्री०) ಉಪಕಾರ ಮಾಡಲು ಅಪೇಕ್ಷೆ. उपकर्तुमिच्छा — उप डु कृञ् (करणे) +सन् "अः" (३-३-१०२)।

**उपचिकीर्षु** ಉಪಚಿಕೀರ್ಷು (वि०) ಉಪಕಾರ ಮಾಡಲು ಅಪೇಕ್ಷೆಯುಳ್ಳ, ಸಾಹಾಯ್ಯಮಾಡಲು ಇಷ್ಟವುಳ್ಳ. उप+डु कृञ् (करणे) + सन् "उः" (३-२-१६८)।

**उपचि(की)चीषा** ಉಪಚಿ(ಕೀ)ಚೀಷಾ (स्त्री०) ವೃದ್ಧಿಪಡಿಸುವ ಅಪೇಕ್ಷೆ. उप+चिञ् (चयने)+सन् "अः" (३-३-१०२)। कुत्वविकल्पः (७-३-५८)।

**उपचि(की)चीषु** ಉಪಚಿ(ಕೀ)ಚೀಷು (वि०) ವೃದ್ಧಿಪಡಿಸಲು ಅಪೇಕ್ಷಿಸುವ, ಅಧಿಕಪಡಿಸಲು ಇಷ್ಟಪಡುವ. उप + चिञ् (चयने) + सन् "उः" (३-२-१६८)।

**उपचिञ्** (स्वा० उभ० अनि०) 1. ವೃದ್ಧಿಹೊಂದು. 2. ಬಲಗೊಳ್ಳು. 3. ಒಟ್ಟಿಗೆ ಸೇರಿಸು.

**उपचित** ಉಪಚಿತ (वि०) 1. ವೃದ್ಧಿಹೊಂದಿದ, ಅಧಿಕವಾದ. उप + चिञ् (चयने) "क्तः" (३-४-७२)। "नयगुणोपचितामिव भूपतेः सदुपकारफलां श्रियमर्थिनः" रघु० ९-२७। 2. ತುಂಬಿರುವ, ಪುಷ್ಕಳವಾದ, ನೆರೆದಿರುವ. "स्थिरतुरङ्गमभूमि निपानवन्मृगवयोगवयोपचितं वनम्" रघु० ९-५३। 3. ಬಲಗೊಂಡ, ಶಕ್ತಿಹೊಂದಿದ. "उपचितेषु परेष्वसमर्थतां व्रजति कालवशाद्बलवानपि" माघ० ६-६३। "विवेकप्रध्वंसादुपचितमहामोहगहनः" मालती० १-३३। 4. ವೃದ್ಧಿಹೊಂದಿಸಲ್ಪಟ್ಟ, ಬೆಳೆಸಲ್ಪಟ್ಟ, ಅಧಿಕಗೊಳಿಸಲ್ಪಟ್ಟ. उप+चिञ् (चयने) "क्तः" (३-२-१०२)। "मुदे मुरारेरमरैः सुमेरोरानीय यस्योपचितस्य शृङ्गैः" माघ० ४-१०। 5. ಲೇಪನಮಾಡಲ್ಪಟ್ಟ, ಬಳಿಯಲ್ಪಟ್ಟ. "भवेदुपचितं दिग्धे समृद्धे चान्यलिङ्गकम्" मेदि०। 6. ಶೇಖರಿಸಲ್ಪಟ್ಟ, ಕೂಡಿಸಿಡಲಟ್ಟ, ರಾಶಿಹಾಕಲ್ಪಟ್ಟ.

**उपचिति** ಉಪಚಿತಿ (स्त्री०) 1. ಅಭಿವೃದ್ಧಿ, ಬೆಳವಣಿಗೆ. 2. ಏಳಿಗೆ, ಅಭ್ಯುದಯ, ಉತ್ಕರ್ಷ. 3. ವೃದ್ಧಿ, ಹೆಚ್ಚುವಿಕೆ, ಅಧಿಕವಾಗುವಿಕೆ. उप+चिञ् (चयने) "क्तिन्" (३-३-९४)।

**उपचित्रा** ಉಪಚಿತ್ರಾ (स्त्री०) 1. ಹಸ್ತ ನಕ್ಷತ್ರ. 2. ಸ್ವಾತೀ ನಕ್ಷತ್ರ. 3. ಇಲಿಯಾಲದ ಮರ.

**उपचिन्वत्** ಉಪಚಿನ್ವತ್ (वि०) ವೃದ್ಧಿಪಡಿಸುತ್ತಿರುವ, ಅಧಿಕಗೊಳಿಸುತ್ತಿರುವ, ಹೆಚ್ಚಿಸುತ್ತಿರುವ. उप+चिञ् (चयने) "शतृ" (३-२-१२४)। "उपचिन्वन् प्रभां तन्वीं प्रत्याह परमेश्वरः" कुमा० ६-२५।

**उपचीयमान** ಉಪಚೀಯಮಾನ (वि०) ವೃದ್ಧಿಹೊಂದುತ್ತಿರುವ, ಅಧಿಕವಾಗುತ್ತಿರುವ. उप+चिञ् (चयने) कर्मकर्त० "शानच्" (३-२-१२४)। "अथकदाचिदुपचीयमानमनोभववैभवः" चं० रा०।

**उपच्छन्दन** ಉಪಚ್ಛಂದನ (न०) 1. ಸವಿಮಾತಿನಿಂದ ಬೇಡುವುದು, ಒಳ್ಳೆಯ ಮಾತಿನಿಂದ ಮನವೊಲಿಸುವುದು. ಮೃದುವಚನದಿಂದ ಪುಸಲಾಯಿಸುವುದು. उप+छदि (संवरणे) भावे "ल्युट्" (३-३-११५)। "उपच्छन्दनैरेव स्वं ते दापयितुं प्रयतिष्ये" दशकु०। 2. ವಿವಾಹ ಮತ್ತು ಇತರ ಸಂತೋಷ ಕೂಟಗಳಿಗೆ ಕೊಡುವ ಆಹ್ವಾನ. "उपमन्त्रणमुपच्छन्दनम्" सि० कौ०।

**उपच्छन्दित** ಉಪಚ್ಛಂದಿತ (वि०) 1. ಮನವೊಲಿಸಲ್ಪಟ್ಟ, ಒಳ್ಳೆಯ ಮಾತಿನಿಂದ ಪುಸಲಾಯಿಸಲ್ಪಟ್ಟ. उप + छदि (संवरणे) "क्तः" (३-२-१०२)। 2. ಆಹ್ವಾನಕೊಡಲ್ಪಟ್ಟ, ಕರೆಯಲ್ಪಟ್ಟ.

**उपजन** ಉಪಜನ (पुं०) 1. ಸ್ತ್ರೀ ಪುರುಷರ ಸಮಾಗಮದಿಂದ ಉಂಟಾಗುವ ದೇಹ. उप+जनी (प्रादुर्भावे) "अच्" (३-१-१३४)। 2. ಉತ್ಪತ್ತಿ, ಹುಟ್ಟು. 3. ಅಭಿವೃದ್ಧಿ, ಹೆಚ್ಚುವಿಕೆ. उप+जनी भावे "घञ्" (३-३-१८)।

**उपजाति** ಉಪಜಾತಿ (स्त्री०) ಇಂದ್ರವಜ್ರಾ ಉಪೇಂದ್ರವಜ್ರಾ ವೃತ್ತಗಳ ಪಾದಗಳು ಮತ್ತು ಇತರ ಬೇರೆ ಬೇರೆ ವೃತ್ತಗಳ ಪಾದಗಳು ಸೇರುವುದರಿಂದುಂಟಾಗುವ ವೃತ್ತ. ಇಂದ್ರವಜ್ರಾ ಮತ್ತು ಉಪೇಂದ್ರವಜ್ರಾ ಇವುಗಳ (ಪಾದ) ಯೋಗದಿಂದ ಹದಿನಾಲ್ಕು ಭೇದಗಳಾಗುವುವು.

[इ ಇಂದ್ರವಜ್ರಾ. उ ಉಪೇಂದ್ರವಜ್ರಾ]

(1) इउउउ। (2) उइउउ।
(3) उउइउ। (4) उउउइ।
(5) उइइइ। (6) इउइइ।
(7) इइउइ। (8) इइइउ।
(9) इइउउ। (10) इउइउ।
(11) उइइउ। (12) उउइइ।
(13) उइउइ। (14) इउउइ।

ಇದೇರೀತಿ ಇತರ ವೃತ್ತಗಳ (ಪಾದ) ಯೋಗದಿಂದಲೂ ಉಪಜಾತಿಯೆನಿಸುವುದು.

ı∪ ı∪∪ıı∪ ı∪∪
"अथ प्रजानामधिपः प्रभाते
∪∪ı∪∪ıı∪ı∪∪
जायाप्रतिग्राहितगन्धमाल्याम्।
ı∪ı ∪∪ıı∪ı∪∪
वनाय पीतप्रतिबद्धवत्सां
ı∪ı∪ ∪ıı∪ı∪∪
यशोधनो धेनुमृषेर्मुमोच" रघु० २-१।

ಇದರಲ್ಲಿ 1, 3 ಮತ್ತು 4 ನೆಯ ಪಾದಗಳು ಉಪೇಂದ್ರವಜ್ರಾ. 2 ನೆಯ ಪಾದ ಇಂದ್ರವಜ್ರಾ.

"अनन्तरोदीरितलक्ष्मभाजौ पादौ यदीयावुपजातयस्ताः। इत्थं किलान्यास्वपि मिश्रितासु वदन्ति जातिष्विदमेव नाम" वृ० र०।

**उपजप्य** ಉಪಜಪ್ಯ (वि०) ಭೇದೋಪಾಯದಿಂದ ಬೇರ್ಪಡಿಸಲು ಅರ್ಹನಾದವನು. उप+जप (व्यक्तायां वाचि) "ण्यत्" (३-१-१२४)। "उपजप्यानुपजपेत् बुध्येतैव च तत्कृतम्" मनु० ७-१९७।

**उपजाप** ಉಪಜಾಪ (पुं०) 1. ಭೇದೋಪಾಯ, ಒಳಜಗಳವುಂಟುಮಾಡುವಿಕೆ, ಅಂತಃಕಲಹ ತಂದೊಡ್ಡುವುದು. उपांशु जपनम्—उप+जप (व्यक्तायां वाचि) "घञ्" (३-३-१८)। "उपजापसहान् विलङ्घयन् स विधाता नृपतीन् मदोद्धतः" किरा० २-४७। "उपजापः कृतस्तेन तानाकोपवतस्त्वयि" माघ० २-९९। 2. ರಹಸ್ಯವಾಗಿ ಕಿವಿಯಲ್ಲಿ ಹೇಳುವುದು, ಕಿವಿಯಲ್ಲಿ ಪಿಸುಮಾತಾಡುವುದು.

**उपजापक** ಉಪಜಾಪಕ (वि०) ಭೇದೋಪಾಯ ಪ್ರಯೋಗಿಸುವವನು, ಶತ್ರುಗಳಲ್ಲಿ ಪರಸ್ಪರ ಜಗಳ ಹುಟ್ಟಿಸಿ ಒಡಕುಂಟುಮಾಡುವವನು. उप + जप (व्यक्तायां वाचि) "ण्वुल्" (३-१-१३३)। "राज्ञः कोशापहर्तॄंश्च प्रतिकूलेषु च स्थितान्। घातयेद्विविधैर्दण्डैररीणां चोपजापकान्" मनु० ९-२७५।

**उपजिह्वा** ಉಪಜಿಹ್ವಾ (स्त्री०) 1. ಕಿರುನಾಲಿಗೆ. 2. ನಾಲಿಗೆಯ ಬುಡದಲ್ಲಿ ಮಾಂಸದ ಗಂಟು ಊದುವುದರಿಂದ ಉಂಟಾಗುವ ಒಂದು ರೋಗ. "जिह्वाग्ररूपः श्वयथुर्हि जिह्वामुन्नम्य जातः कफरक्तयोनिः। प्रसेककण्डूपरिदाहयुक्ता प्रकथ्यतेऽसावुपजिह्विकेति" सुश्रुत० निदान० १६-३९।

**उपजिह्विका** ಉಪಜಿಹ್ವಿಕಾ (स्त्री०) ಗೆದ್ದಲು ಹುಳ. उपजिह्वा स्वार्थे "कन्"। "वम्रो वम्र्युपदीपिकोपजिह्विका चोपदेहिका" वैज०।

**उपजीवक** ಉಪಜೀವಕ (वि०) 1. ಸೇವಕ, ಆಳು. 2. ಆಶ್ರಿತ, ಒಬ್ಬನ ಆಸರೆಯಿಂದ ಜೀವಿಸುವವನು. 3. ಉಪವೃತ್ತಿಯಿಂದ ಜೀವಿಸುವವನು, ಮುಖ್ಯ ಜೀವನೋಪಾಯವಿಲ್ಲದೆ ಬೇರೆ ಕೈಕಸಬಿನಿಂದ ಜೀವಿಸುವವನು. उप+जीव (प्राणधारणे) "ण्वुल्" (३-१-१३३)। "णिनिः" (३-१-१३४)। –जीविन्–ಜೀವಿನ್. "भीमकान्तैर्नृपगुणैः स बभूवोपजीविनाम्" रघु० १-१६। स्त्रियां "ङीप्" (४-१-५)। –जीविनी –ಜೀವಿನೀ.

**उपजीवत्** ಉಪಜೀವತ್ (वि०) 1. ಒಬ್ಬನನ್ನು ಆಶ್ರಯಿಸಿ ಜೀವಿಸುವ. 2. ಕೈಕಸಬಿನಿಂದ ಜೀವಿಸುವ. उप+जीव (प्राणधारणे) "शतृ" (३-२-१२४)।

**उपजीवन** ಉಪಜೀವನ (न०) 1. ಜೀವಿಕೆಗಾಗಿ ಆಶ್ರಯಿಸುವುದು, ಜೀವನಕ್ಕಾಗಿ ಒಬ್ಬನ ಆಸರೆ

ಪಡೆಯುವುದು. उप+जीव (प्राणधारणे) भावे "ल्युट्" (३-३-११५)। "स्त्रीशूद्रविट्क्षत्रवधो निन्दितार्थोपजीवनम्" याज्ञ० ३-२३६। 2. ಜೀವಿಕೆ, ಜೀವನೋಪಾಯ. उप + जीव कर० "ल्युट्" (३-३-११७) "क्षत्रियस्यैतदेवाहुर्धर्मं कष्टोपजीवनम्" भा०।

**उपजीविका ಉಪಜೀವಿಕಾ** (स्त्री०) ಜೀವನಕ್ಕಾಗಿ ಮಾಡುವ ಕೈಕಸಬು. उपजीव्यतेऽनया — उप + जीव (प्राणधारणे) "अः" (३-३-१०३)। "कन्" (५-३-७५)।

**उपजीव्य ಉಪಜೀವ್ಯ** (वि०) 1. ಜೀವಿಕೆಯನ್ನು ಕಲ್ಪಿಸುವವನು, ಹೊಟ್ಟೆಪಾಡಿಗಾಗಿ ಕೊಡುವವನು. 2. ಆಶ್ರಯ ಕೊಡುವವನು, ಭೃತ್ಯನಿಗೆ ನೀಡುವವನು. उप+जीव (प्राणधारणे) "ण्यत्" (३-१-१२४)।

**उपज्ञा ಉಪಜ್ಞಾ** (स्त्री०) 1. ಆದ್ಯಜ್ಞಾನ, ಉಪದೇಶವಿಲ್ಲದೆ ತಾನಾಗಿ ತಿಳಿದುಕೊಂಡುದು, ಮೊದಲನೆಯ ತಿಳುವಳಿಕೆ. उप + ज्ञा (अवबोधने) भावे "अङ्" (३-३-१०६)। "तिर्यञ्चमप्यञ्च मृषानभिज्ञरसज्ञतोपज्ञसमज्ञमज्ञम्" नैष० ३-६४। 2. ಉಪದೇಶವಿಲ್ಲದೆ ತಾನಾಗಿ ತಿಳಿಯಲ್ಪಟ್ಟ ಆದ್ಯಜ್ಞಾನಕ್ಕೆ ವಿಷಯವಾದುದು. उप+ज्ञा कर्म० "अङ्" (३-३-१०६)। "अथ प्राचेतसोपज्ञं रामायणमितस्ततः" रघु० १५-६३। ಇದು ತತ್ಪುರುಷದಲ್ಲಿ ಉತ್ತರಪದವಾಗಿರುವಾಗ ನಪುಂಸಕವಾಗುವುದು. पाणिनेरुपज्ञा पाणिन्युपज्ञं व्याकरणम्।

**उपज्ञात ಉಪಜ್ಞಾತ** (वि०) ಉಪದೇಶವಿಲ್ಲದೆ ತಿಳಿಯಲ್ಪಟ್ಟ, ತನ್ನ ಶಕ್ತಿಯಿಂದಲೇ ಮೊದಲು ತಿಳಿಯಲ್ಪಟ್ಟ. उप+ज्ञा (अवबोधने) "क्तः" (३-२-१०२)।

**उपढौकन ಉಪಢೌಕನ** (न०) 1. ರಾಜ, ಗುರು ಮೊದಲಾದವರಿಗೆ ಸಂತೋಷಕಾಲದಲ್ಲಿ ವಸ್ತುಗಳನ್ನು ಕೊಡುವಿಕೆ. उप + ढौकृ (गतौ) भावे "ल्युट्" (३-३-११५)। 2. ರಾಜ, ಗುರು ಮೊದಲಾದವರಿಗೆ ಸಮರ್ಪಿಸಲ್ಪಡುವ ವಸ್ತು (ಕಾಣಿಕೆ). उप + ढौकृ कर्म० "ल्युट्" (३-३-११३)।

**उपतपन ಉಪತಪನ** (न०) 1. ಸಂತಾಪವುಂಟುಮಾಡುವಿಕೆ, ನೋವುಂಟುಮಾಡುವಿಕೆ, ತೊಂದರೆ ಕೊಡುವಿಕೆ. उप+तप (सन्तापे) "ल्युट्" (३-३-११५)। (वि०) 2. ಸಂತಾಪವುಂಟುಮಾಡುವ, ನೋವುಂಟುಮಾಡುವ, ತೊಂದರೆ ಕೊಡುವ. उप+तप कर० "ल्युट्" (३-३-११७)। "वपुरिन्द्रियोपतपनेषु सततमसुखेषु पाण्डवः" किरा० १२-३।

**उपतप्त ಉಪತಪ್ತ** (वि०) 1. ತೊಂದರೆಪಡಿಸಲ್ಪಟ್ಟ, ನೋವುಂಟುಮಾಡಲ್ಪಟ್ಟ, ಪೀಡಿಸಲ್ಪಟ್ಟ. उप+तप (सन्तापे) कर्म० "क्तः" (३-२-१०२)। "स्मरोपतप्तोऽपि भृशं न स प्रभुर्विदर्भराजं तनयामयाचत" नैष० १-५०। 2. ಕಾಯಿಸಲ್ಪಟ್ಟ, ಬಿಸಿಮಾಡಲ್ಪಟ್ಟ.

**उपतप्तृ ಉಪತಪ್ತೃ** (वि०) ಕಾಯಿಸುವ, ಬಿಸಿಮಾಡುವ. उप+तप (सन्तापे) "तृच्" (३-१-१३३)।

**उपताप ಉಪತಾಪ** (पु०) 1. ಬಿಸಿ, ಕಾವು. उप+तप (सन्तापे) "घञ्" (३-३-१८)। 2. ನೋವು, ಬೇನೆ, ತೊಂದರೆ. उप + तप कर० "घञ्" (३-३-१२१)। "सर्वथा न कश्चन न स्पृशन्त्युपतापाः" काद०। "स खलु दुर्मनायमानः परवानिव शरीरोपतापेन" मालती० ३। 3. ರೋಗ, ವ್ಯಾಧಿ. उपतापयति— उप+तप+णिच् "अच्" (३-१-१३४)। "उपतापो गदे तापे" हेम०।

**उपतापक ಉಪತಾಪಕ** (वि०) 1. ಸಂತಾಪವುಂಟುಮಾಡುವ. 2. ಬಿಸಿಮಾಡುವ, ಕಾಯಿಸುವ. उप+तप (सन्तापे) + णिच् "ण्वुल्" (३-१-१३३)।

**उपतापन ಉಪತಾಪನ** (न०) 1. ಕಾಯಿಸುವಿಕೆ, ಬಿಸಿಮಾಡುವಿಕೆ. 2. ತೊಂದರೆಪಡಿಸುವಿಕೆ, ನೋವುಂಟುಮಾಡುವಿಕೆ. उप + तप (सन्तापे) + णिच् "ल्युट्" (३-३-११५)। (वि०) 3. ತೊಂದರೆಪಡಿಸುವ, ನೋವುಂಟುಮಾಡುವ, ಪೀಡಿಸುವ. 4. ಕಾಯಿಸುವ, ಬಿಸಿಮಾಡುವ. उप + तप + णिच् "ल्युः" (३-१-१३४)।

**उपतापिन् ಉಪತಾಪಿನ್** (वि०) 1. ರೋಗಿ, ವ್ಯಾಧಿಗ್ರಸ್ತ. 2. ಸಂತಾಪವುಳ್ಳವನು. उपतापोऽस्यास्ति— "इनिः" (५-२-११५)। "गुर्वर्थं पितृमात्रर्थं स्वाध्यायार्थ्युपतापिनः" मनु० ११-१। 3. ಸಂತಾಪವುಂಟುಮಾಡುವ. 4. ಕಾಯಿಸುವ, ಬಿಸಿಮಾಡುವ. उप+तप+णिच् "णिनिः" (३-१-१३४)।

**उपतिष्य ಉಪತಿಷ್ಯ** (न०) ಪುನರ್ವಸು ನಕ್ಷತ್ರ. उपगतं तिष्यम्।

**उपत्यका ಉಪತ್ಯಕಾ** (स्त्री०) ಬೆಟ್ಟದ ಸಮೀಪದ ಭೂಮಿ, ಪರ್ವತದ ಹತ್ತಿರದ ಪ್ರದೇಶ. उप आसन्ना (भूमिः) "त्यकन्" (५-२-३४)। "तमतनुवनराजिश्यामितो-

पत्यकान्तं नगमुपरि हिमानीगौरमासाद्य जिष्णुः" किरा० ४-३८।

**उपदंश** ಉಪದಂಶ (पुं०) 1. ಉಪ್ಪಿನಕಾಯಿ, ಚಟ್ನಿ ಮುಂತಾದ ವ್ಯಂಜನ, ಮಸಾಲೆ, ಸಂಬಾರ. उपदश्यते—उप + दंश (दशने) कर्म० "घञ्" (३-३-१९)। "तथानुष्ठिते च तया द्वित्रानुपदंशानुपपाद्य" दशकु०। 2. ಸ್ತ್ರೀಸಂಬಂಧವಾದ ಒಂದು ರೋಗ, ಗರಮಿರೋಗ, ರತಿರೋಗ, ಸ್ತ್ರೀಸಂಭೋಗದಿಂದುಂಟಾಗುವ ಒಂದು ರೋಗ. 3. ನುಗ್ಗೆಮರ. 4. ಮಂಗರವಳ್ಳಿ. 5. ಕಚ್ಚುವುದು, ಕಡಿಯುವುದು. उप + दंश भावे "घञ" (३-३-१८)।

**उपदर्शक** ಉಪದರ್ಶಕ (पुं०) 1. ದ್ವಾರಪಾಲಕ, ಬಾಗಿಲ ಕಾವಲುಗಾರ. (वि०) 2. ದಾರಿ ತೋರಿಸುವವನು, ಮಾರ್ಗದರ್ಶಿ. उप+दृशिर् (प्रेक्षणे) + णिच् "ण्वुल्" (३-१-१३३)। 3. ಸಾಕ್ಷಿ, ಸಮೀಪದಲ್ಲಿ ನಿಂತು ನೋಡುವವನು. उप+दृशिर् "ण्वुल्" (३-१-१३३)।

**उपदर्शित** ಉಪದರ್ಶಿತ (वि०) ಪ್ರದರ್ಶಿಸಲ್ಪಟ್ಟ, ತೋರಿಸಲ್ಪಟ್ಟ. उप+दृशिर् (प्रेक्षणे) "क्तः" (३-२-१०२)। "नयविद्भिर्नवे राज्ञि सदसच्चोपदर्शितम्" रघु० ४-१०।

**उपदश** ಉಪದಶ (वि०) ಹತ್ತಕ್ಕೆ ಹತ್ತಿರದ, ಹತ್ತರ ಸಮೀಪದ (ಒಂಭತ್ತು ಮತ್ತು ಹನ್ನೊಂದು).

**उपदा** ಉಪದಾ (स्त्री०) 1. ಕಾಣಿಕೆ, ನಜರು. उपदीयते—उप+डु दाञ् (दाने) "अङ्" (३-३-१०६)। "उपदा विविशुः शश्वन्नोत्सेकाः कोसलेश्वरम्" रघु० ४-७०। 2. ಉತ್ಕೋಚ, ಲಂಚ.

**उपदिदिक्षा** ಉಪದಿದಿಕ್ಷಾ (स्त्री०) ಉಪದೇಶಮಾಡಲು ಅಪೇಕ್ಷೆ, ಬೋಧನೆಮಾಡಲು ಆಸೆ. उपदेष्टुमिच्छा—उप+दिश (अतिसर्जने) + सन् "अः" (३-३-१०२)।

**उपदिदिक्षु** ಉಪದಿದಿಕ್ಷು (वि०) ಉಪದೇಶಿಸಲು ಅಪೇಕ್ಷಿಸುವ, ಬೋಧಿಸಲು ಆಸೆಪಡುವ. उपदेष्टुमिच्छुः—उप+दिश (अतिसर्जने) + सन् "उः" (३-२-१६८)।

**उपदिदृक्षा** ಉಪದಿದೃಕ್ಷಾ (स्त्री०) ಹತ್ತಿರದಲ್ಲಿ ನೋಡಲು ಅಪೇಕ್ಷೆ, ಸಮೀಪದಲ್ಲಿ ನೋಡಲು ಆಸೆ. उपद्रष्टुमिच्छा उप + दृशिर् (प्रेक्षणे) + सन् "अः" (३-३-१०२)।

**उपदिदृक्षु** ಉಪದಿದೃಕ್ಷು (वि०) ಹತ್ತಿರದಲ್ಲಿ ನೋಡಲು ಅಪೇಕ್ಷೆಯುಳ್ಳ, ಸಮೀಪದಲ್ಲಿ ನೋಡಲು ಆಸೆಯುಳ್ಳ. उप+दृशिर् (प्रेक्षणे) + सन् "उः" (३-२-१६८)।

**उपदिश्** ಉಪದಿಶ್ (स्त्री०) ಉಪದಿಕ್ಕು, ವಿದಿಕ್ಕು, ಎರಡು ದಿಕ್ಕುಗಳ ಮಧ್ಯದ ಮೂಲೆದಿಕ್ಕು; ಆಗ್ನೇಯ, ನೈಋತ್ಯ, ವಾಯವ್ಯ ಮತ್ತು ಈಶಾನ್ಯಗಳೆಂದು ಉಪದಿಕ್ಕುಗಳು ನಾಲ್ಕು. वा "आप्"। –दिशा – ದಿಶಾ. "आपं चैव हलन्तानां यथा वाचा निशा दिशा"।

**उपदिश्य** ಉಪದಿಶ್ಯ (वि०) 1. ಉಪದಿಕ್ಕಿನಲ್ಲಿರುವ, ವಿದಿಕ್ಕಿನಲ್ಲಿ ಉಂಟಾದ. उपदिशि भवः "यत्" (४-३-५४)। (अव्य०) 2. ಉಪದೇಶಮಾಡಿ, ಬೋಧನೆಮಾಡಿ. उप+दिश (अतिसर्जने) "ल्यप्" (७-१-३७)।

**उपदिष्ट** ಉಪದಿಷ್ಟ (न०) 1. ಉಪದೇಶ, ಶಿಕ್ಷಣ, ಬೋಧನೆ. उप + दिश (अतिसर्जने) "क्तः" (३-३-११४)। (वि०) 2. ಉಪದೇಶಿಸಲ್ಪಟ್ಟ, ಬೋಧಿಸಲ್ಪಟ್ಟ (ಮನುಷ್ಯ). 3. ಉಪದೇಶಿಸಲ್ಪಟ್ಟ, ಬೋಧಿಸಲ್ಪಟ್ಟ (ವಿಷಯ). उप+दिश कर्म० "क्तः" (३-२-१०२)। "अवहितहृदयो विधाय सोऽर्हमृषिवदृषिप्रवरे गुरूपदिष्टाम्" किरा० २-५८।

**उपदीका** ಉಪದೀಕಾ (स्त्री०) ಗೆದ್ದಲು ಹುಳ. उपेत्य दीयते कण्डूयते—उप+दो (अवखण्डने) "कः" (वा० ३-३-५८)। "ङीष्"। स्वार्थे "कः" "वम्रो वम्र्युपदीकोपजिह्विका चोपदेहिका" वैज०।

**उपदेव** ಉಪದೇವ (पुं०) 1. ದೇವಕರಾಜನ ಒಬ್ಬ ಮಗ. (1) ದೇವವಂತ, (2) ಸುದೇವ ಮತ್ತು (3) ದೇವವರ್ಧನ ಇವರು ಇವನ ಸಹೋದರರು. "चत्वारो देवकात्मजाः। देववानुपदेवश्च सुदेवो देववर्धनः" भाग० ९-२४-२२। 2. ಅಕ್ರೂರನ ಒಬ್ಬ ಮಗ. 3. (1) ಯಕ್ಷ. (2) ಗಂಧರ್ವ. (3) ಅಪ್ಸರಸ್ಸು. (अव्य०) 4. ದೇವತೆಗಳ ಸಮೀಪ. सामीप्ये अव्ययी०।

**उपदेवा** ಉಪದೇವಾ (स्त्री०) ವಸುದೇವನ ಹದಿನಾಲ್ಕು ಮಂದಿ ಪತ್ನಿಯರಲ್ಲೊಬ್ಬಳು. (1) ರೋಹಿಣೀ. (2) ಇಂದಿರಾ. (3) ವೈಶಾಖೀ. (4) ಭದ್ರಾ. (5) ಸುನಾಮ್ನಾ. (6) ಸಹದೇವಾ. (7) ಶಾಂತಿದೇವಾ. (8) ಶ್ರೀದೇವಾ. (9) ದೇವರಕ್ಷಿತಾ. (10) ವೃಕದೇವೀ. (11) ದೇವಕೀ. (12) ಉಪದೇವಾ. (13) ಸುತನು ಮತ್ತು (14) ವಡವಾ. ಇವರು ವಸುದೇವನ 14 ಮಂದಿ ಪತ್ನಿಯರು.

**उपदेश** ಉಪದೇಶ (पुं०) 1. ಬೋಧನೆ, ಶಿಕ್ಷಣ, ಕಲಿಸುವುದು, ಪಾಠ ಹೇಳುವುದು. उप+दिश (अतिसर्जने) "घञ्" (३-३-१८)। "उपदेशं विदुः शुद्धं सन्तस्त-

मुपदेशिनः। श्यामायते न विद्वत्सु यः काञ्चनमिवाग्निषु" मालं० २-९। 2. ಹಿತವನ್ನು ಹೇಳುವುದು, ಸಲಹೆ ಕೊಡುವುದು. 3. ಸೂರ್ಯಚಂದ್ರರ ಗ್ರಹಣ ಮೊದಲಾದ ಪುಣ್ಯ ಕಾಲಗಳಲ್ಲಿ ಪುಣ್ಯಕ್ಷೇತ್ರಗಳಲ್ಲಿ ಮಂತ್ರಗಳನ್ನು ಹೇಳಿಕೊಡುವುದು. "चन्द्रसूर्यग्रहे तीर्थे सिद्धक्षेत्रे शिवालये। मन्त्रमात्रप्रकथनमुपदेशः स उच्यते"। 4. ವ್ಯಾಕರಣ ಶಾಸ್ತ್ರ ಪ್ರವರ್ತಕಾಚಾರ್ಯರು ಪ್ರಥಮವಾಗಿ ಉಚ್ಚರಿಸಿದ ಪದಗಳು. "धातुसूत्रगणोणादिवाक्यलिङ्गानुशासनम्। आगमप्रत्ययादेशा उपदेशाः प्रकीर्तिताः"।

**उपदेशक ಉಪದೇಶಕ** (पुं०) 1. ಉಪಾಧ್ಯಾಯ, ವಿದ್ಯೆ ಕಲಿಸುವವನು, ಪಾಠ ಹೇಳುವವನು. उप + दिश (अतिसर्जने) "ण्वुल्" (३-१-१३३)। 2. ಮಂತ್ರೋಪದೇಶ ಮಾಡುವ ಗುರು. (वि०) 3. ಸಲಹೆಗಾರ.

**उपदेशन ಉಪದೇಶನ** (नं०) 1. ಬೋಧನೆ, ಕಲಿಸುವಿಕೆ, ಶಿಕ್ಷಣ. 2. ಸಲಹೆ, ಹಿತ ಹೇಳುವುದು. उप+दिश (अतिसर्जने) "ल्युट्" (३-३-११५)। 3. ಮಂತ್ರೋಪದೇಶ ಮಾಡುವುದು.

**उपदेशितृ ಉಪದೇಶಿತೃ** (वि०) "उपदेशक" ಪದದ ಅರ್ಥ. उप+दिश (अतिसर्जने) "तृच्" (३-१-१३३)। स्त्रियां "ङीप्" (४-१-५)। उपदेशित्री ಉಪದೇಶಿತ್ರೀ.

**उपदेशिन् ಉಪದೇಶಿನ್** (वि०) "उपदेशक" ಪದದ ಅರ್ಥ. उप + दिश (अतिसर्जने) "णिनिः" (३-१-१३४)। "उपदेशं विदुः शुद्धं सन्तस्तमुपदेशिनः" मालं० २-९। स्त्रियां "ङीप्" (४-१-५)। –देशिनी –ದೇಶಿನೀ.

**उपदेश्य ಉಪದೇಶ್ಯ** (वि०) 1. ಬೋಧಿಸಲ್ಪಡುವವನು, ಕಲಿಸಲ್ಪಡುವವನು, ಪಾಠ ಹೇಳಿಸಿಕೊಳ್ಳುವವನು. उपदिश्यते—उप+दिश (अतिसर्जने) कर्मं० "ण्यत्" (३-१-१२४)। 2. ಉಪದೇಶಕ್ಕೆ ಅರ್ಹನಾದವನು. 3. ಉಪದೇಶಕ್ಕೆ ಅರ್ಹವಾದ ವಿಷಯ.

**उपदेष्टृ ಉಪದೇಷ್ಟೃ** (वि०) 1. ವಿದ್ಯೆ ಕಲಿಸುವ ಗುರು. 2. ಮಂತ್ರೋಪದೇಶ ಮಾಡುವ ಗುರು. 3. ಅಧ್ಯಾತ್ಮ ವಿದ್ಯೆ ಕಲಿಸುವ ಆಚಾರ್ಯ. "चत्वारो वयमृत्विजः स भगवान् कर्मोपदेष्टा हरिः" वेणी० १-२५। 4. ಸಲಹೆಗಾರ, ಹಿತವನ್ನು ಬೋಧಿಸುವವನು. उप + दिश (अतिसर्जने) "तृच्" (३-१-१३३)। स्त्रियां "ङीप्" (४-१-५)। –देष्ट्री –ದೇಷ್ಟ್ರೀ.

**उपदेह ಉಪದೇಹ** (पुं०) ದೇಹವು ದೊಡ್ಡದಾಗುವಿಕೆ, ಗಂಡಮಾಲೆ ಬಾವು ಮೊದಲಾದುವುಗಳಿಂದ ಮೈ ಊದುವಿಕೆ. उपदिह्यतेऽनेन—उप + दिह (उपचये) करं० "घञ्" (३-३-१२१)। "कण्डूर्गुरुत्वं सुप्तत्वमुपदेहोऽल्पवेदनं स्तम्भः शैत्यं च यत्र तं श्लैष्मिकमिति विद्यात्" सुश्रुत०।

**उपदेहिका ಉಪದೇಹಿಕಾ** (स्त्री०) ಗೆದ್ದಲು ಹುಳ. "वम्री वम्रचुपदीकोपदेहिका चोपजिह्विका" वैजं०।

**उपदोह ಉಪದೋಹ** (पुं०) 1. ಹಾಲು ಕರೆಯುವ ಪಾತ್ರೆ. उपदुह्यतेऽत्र—उप+दुह (प्रपूरणे) "घञ्" (३-३-१२१)। 2. ಹಸುವಿನ ಮೊಲೆಯ ತುದಿ. उपदुह्यतेऽनेन—उप+दुह करं० "घञ्" (३-३-१२१)।

**उपद्रव ಉಪದ್ರವ** (पुं०) 1. ತೊಂದರೆ, ಪೀಡೆ. उप+द्रु (गतौ) भावे "घञ्" (३-३-१८)। "पुंसामसमर्थानामुपद्रवायात्मनो भवेत्कोपः" पञ्चतं०। 2. ಪ್ರಪಂಚದ ಮಹಾಪ್ರಳಯ. 3. ರೋಗ, ವ್ಯಾಧಿ, ಖಾಯಿಲೆ. 4. ರೋಗಕ್ಕೆ ಕಾರಣವಾದ ತ್ರಿದೋಷ (ವಾತ, ಪಿತ್ತ, ಕಫ) ಗಳ ಏರುಪೇರು. 5. ಉಪವ್ಯಾಧಿ, ಒಂದು ವ್ಯಾಧಿಯಿರುವಾಗ ಮಧ್ಯೆ ಸಂಭವಿಸುವ ಇತರ ವ್ಯಾಧಿಗಳು. "यो व्याधिस्तस्य यो हेतुः दोषस्तस्य प्रकोपतः। योऽन्यो विकारो भवति स उपद्रव उच्यते"।

**उपद्रविन् ಉಪದ್ರವಿನ್** (वि०) ತೊಂದರೆ ಕೊಡುವವನು, ಹಿಂಸಿಸುವವನು, ಪೀಡಿಸುವವನು.

**उपद्रष्टृ ಉಪದ್ರಷ್ಟೃ** (पुं०) 1. (ಯಜ್ಞದಲ್ಲಿ) ಒಬ್ಬ ಋತ್ವಿಕ್ಕು. ಇವನು ಯಜ್ಞದಲ್ಲಿ ಇತರ ಋತ್ವಿಕ್ಕುಗಳಲ್ಲಿರುವ ನ್ಯೂನಾತಿರೇಕಗಳನ್ನು ತಿಳಿಸುವ ಮೇಲ್ವಿಚಾರಕ. (वि०) 2. ಸಾಕ್ಷಿ, ಸಮೀಪದಲ್ಲಿ ನಿಂತು ನೋಡುವವನು. उप+दृशिर् (प्रेक्षणे) "तृच्" (३-१-१३३)। "उपद्रष्टाऽनुमन्ता च भर्ता भोक्ता महेश्वरः" गीता १३-२२। स्त्रियां "ङीप्" (४-१-५)। –द्रष्ट्री –ದ್ರಷ್ಟ್ರೀ.

**उपद्रुत ಉಪದ್ರುತ** (वि०) ಪೀಡಿಸಲ್ಪಟ್ಟ, ತೊಂದರೆ ಪಡಿಸಲ್ಪಟ್ಟ. उप+द्रु (गतौ) "क्तः" (३-२-१०२)। "समीरसङ्गादिव नीरभङ्ग्या मया तटस्थस्त्वमुपद्रुतोऽसि" नैष० ३-५५।

**उपधर्म ಉಪಧರ್ಮ** (पुं०) ಮುಖ್ಯವಲ್ಲದ ಧರ್ಮ, ಅಪ್ರಧಾನ ಧರ್ಮ. उपमितो धर्मेण। "वेदमेवाभ्यसेन्नित्यं यथाकालमतन्द्रितः। तं ह्यस्याहुः परं धर्ममुपधर्मोऽन्य उच्यते" मनु० ४-१४७।

**उपधा ಉಪಧಾ** (स्त्री०) 1. ರಾಜನು ಮಂತ್ರಿಗಳ ಗುಣಗಳನ್ನು ಪರೀಕ್ಷಿಸುವುದು. उपधीयते सत्यज्ञानमत्र—उप+डु धाञ् (धारणपोषणयोः) "अङ्" (३-३-१०६)। "धर्मार्थकाममोक्षैश्च प्रत्येकं परिशोधने। उपेत्य धीयते यस्मादुपधा तेन कीर्तिता"। "चिन्तावन्तः कथां चक्रुरुपधाभेदभीरवः" भट्टि० ७-७२। 2. ಮೋಸ, ಕಪಟ, ವಂಚನೆ. "उपधाभिश्च यः कश्चित्परद्रव्यं हरेन्नरः। ससहायः स हन्तव्यः प्रकाशं विविधैर्वधैः" मनु० ८-१९३। 3. ಉಪಾಯ. "अयशोभिदुरालोके कोपधा मरणादृते" माघ० १९-५८। 4. (ವ್ಯಾಕರಣ ಶಾಸ್ತ್ರದಲ್ಲಿ) ಉಪಾಂತ್ಯವರ್ಣ, ಕೊನೆಯ ಅಕ್ಷರಕ್ಕೆ ಹಿಂದಿನ ಅಕ್ಷರ. "अलोऽन्त्यात् पूर्व उपधा" पा० सू० १-१-६५।

**उपधातु ಉಪಧಾತು**(पु०)1. (ಚಿನ್ನ, ಬೆಳ್ಳಿ ಮುಂತಾದ ಪ್ರಧಾನ ಧಾತುಗಳಂತಿರುವ) ಏಳು ಉಪ ಧಾತುಗಳು, ಇತರ ಲೋಹಗಳು. **ಏಳು ಉಪಧಾತುಗಳು:** (1) ಸ್ವರ್ಣಮಾಕ್ಷಿಕ. (2) ತಾರಮಾಕ್ಷಿಕ. (3) ತುತ್ಥ. (4) ಕಂಚು. (5) ಹಿತ್ತಾಳೆ. (6) ಸಿಂದೂರ ಮತ್ತು (7) ಶಿಲಾಜತು. ಈ ಉಪಧಾತುಗಳಲ್ಲಿ ಚಿನ್ನ, ಬೆಳ್ಳಿ ಮೊದಲಾದ ಪ್ರಧಾನ ಧಾತುಗಳ ಗುಣವಿರುವುದರಿಂದ ಆಯಾ ಪ್ರಧಾನ ಧಾತುಗಳಿಗೆ ಇವು ಉಪಧಾತುಗಳು. 2. (ಮೈಯೊಳಗಿನ ರಸಾದಿ ಧಾತುಗಳಿಂದ ಉಂಟಾಗುವ) ಏಳು ಉಪಧಾತುಗಳು:

| ಧಾತುಗಳು | ಉಪಧಾತುಗಳು |
|---|---|
| (1) ರಸದಿಂದ | ಸ್ತನ್ಯ (ಮೊಲೆಹಾಲು) |
| (2) ರಕ್ತದಿಂದ | ಹೆಂಗಸರ ರಜಸ್ಸು |
| (3) ಮಾಂಸದಿಂದ | ವಸೆ (ಕೊಬ್ಬು) |
| (4) ಮೇದಸ್ಸಿನಿಂದ | ಸ್ವೇದ (ಬೆವರು) |
| (5) ಅಸ್ಥಿ (ಮೂಳೆ) ಯಿಂದ | ದಂತ (ಹಲ್ಲು) |
| (6) ಮಜ್ಜೆ (ದೇಹಸಾರ)ದಿಂದ | ಕೂದಲು |
| ಮತ್ತು | |
| (7) ಶುಕ್ರ (ವೀರ್ಯ) ದಿಂದ | ಓಜಸ್ಸು. |

**उपधान ಉಪಧಾನ** (न०) 1. ತಲೆದಿಂಬು. उपधीयते शिरोऽत्र—उप + डु धाञ् (धारणपोषणयोः) अधि० "ल्युट्" (३-३-११७)। 2. ವಿಶೇಷ, ಅತಿಶಯ, ಉತ್ತಮದರ್ಜೆ. उप + डु धाञ् कर्म० "ल्युट्" (३-१-११३)। "सोपधानां धियं धीराः स्थेयसीं खट्वयन्ति ये" माघ० २-७७। 3. ಪ್ರಣಯ, ಪ್ರೀತಿ. 4. ವಿಷ, ನಂಜು. "उपधानं विषे गण्डौ प्रणयेऽपि नपुंसकम्" मेदि०। 5. ಸಮೀಪದಲ್ಲಿಡುವುದು, ಹತ್ತಿರದಲ್ಲಿರಿಸುವುದು. उप + डु धाञ् भावे "ल्युट्" (३-३-११५)।

**उपधानीय ಉಪಧಾನೀಯ** (न०) 1. ತಲೆದಿಂಬು. उपधीयते शिरोऽत्र—उप+डु धाञ् (धारणपोषणयोः) "अनीयर्" (३-१-९६)। (वि०)2. ಸಮೀಪದಲ್ಲಿಡಲ್ಪಡುವ.

**उपधायिन् ಉಪಧಾಯಿನ್**(वि०)ತಲೆದಿಂಬಾಗಿ ಉಳ್ಳ, ತಲೆದಿಂಬಾಗಿ ಮಾಡಿಕೊಂಡಿರುವ. उपदधाति—उप+डु धाञ् (धारणपोषणयोः) "णिनिः" (३-१-१३४)। स्त्रियां "ङीप्" (४-१-५)। **—धायिनी —ಧಾಯಿನೀ.** "अशेत सा बाहुलतोपधायिनी निषेदुषी स्थण्डिल एव केवले" कुमा० ५-१२।

**उपधारण ಉಪಧಾರಣ** (न०)1. ಮೇಲಿರುವ (ಹಣ್ಣು ಮೊದಲಾದ) ವಸ್ತುವನ್ನು ಕೊಕ್ಕೆಯಿಂದ ಎಳೆದು ಕೊಳ್ಳುವುದು. उप + धृञ् (धारणे) + णिच् "ल्युट्" (३-३-११५)। 2. ಚೆನ್ನಾಗಿ ಯೋಚಿಸುವುದು, ಪರ್ಯಾಲೋಚಿಸುವುದು. (स्त्री०) **—धारणा —ಧಾರಣಾ.** 3. ಎಂಟು ವಿಧ ಯೋಗಾಂಗಗಳಲ್ಲೊಂದು, ನಾಭಿ ಚಕ್ರ ಹೃದಯ ಭ್ರೂಮಧ್ಯ ಮುಂತಾದ ಸ್ಥಾನಗಳಲ್ಲಿ ಮನಸ್ಸು ಸ್ಥಿರವಾಗಿ ನಿಲ್ಲುವಿಕೆ. उप + धृञ् + णिच् "युच्" (३-३-१०७)।

**उपधावन ಉಪಧಾವನ** (न०) 1. ಸಮೀಪಕ್ಕೆ ಓಡುವುದು, ಹತ್ತಿರಕ್ಕೆ ಓಡುವುದು. उप+धावु (गतिशुद्ध्योः) भावे "ल्युट्" (३-३-११५)। 2. ಯೋಚಿಸುವುದು, ಚಿಂತಿಸುವುದು.

**उपधि ಉಪಧಿ** (पु०) 1. ಛಲ, ಕಪಟ, ವ್ಯಾಜ, ನೆಪ. उपधीयतेऽनेन—उप + डु धाञ् (धारणपोषणयोः) "किः" (३-३-९२)। "अरिषु हि विजयार्थिनः क्षितीशाः विदधति सोपधि सन्धिदूषणानि" किरा० १-४५। 2. ನಿಜವನ್ನು ಮುಚ್ಚುವಿಕೆ, ಒಂದು ರೀತಿಯಲ್ಲಿರುವ ವಸ್ತುವನ್ನು ಮತ್ತೊಂದು ರೀತಿಯಲ್ಲಿ ತೋರಿಸುವಿಕೆ. "योगाधमनविक्रीतं योगदानप्रतिग्रहम्। यत्र वाप्युपधिं पश्येत्तत्सर्वं विनिवर्तयेत्" मनु० ८-१६५। 3. ರಥದ ಚಕ್ರ, ಬಂಡಿಯ ಗಾಲಿ. "उपधिः पुंसि व्याजरथाङ्गयोः" मेदि०।

**उपधूपित ಉಪಧೂಪಿತ**(वि०) ಕಾಯಿಸಲ್ಪಟ್ಟ, ಒಣಗಿಸಲ್ಪಟ್ಟ. उप+धूप (सन्तापे) "क्तः" (३-२-१०२)।

**उपधृति ಉಪಧೃತಿ** (स्त्री०) 1. ಕಿರಣ. उप + धृञ् (धारणे) "क्तिन्" (३-३-९४)। "ज्योतिर्रचिरुपधृत्यभीषवः" अभि० चि०। 2. ಹಿಡಿದುಕೊಳ್ಳುವಿಕೆ.

**उपध्मान ಉಪಧ್ಮಾನ** (न०) ಓಷ್ಠ, ತುಟಿ. उ: उकार: परश्च ध्मायतेऽनेन — उप + ध्मा (शब्दाग्निसंयोगयोः) कर० "ल्युट्" (३-३-११७)।

**उपध्मानीय ಉಪಧ್ಮಾನೀಯ** (पु०) ಪಫಕಾರಗಳ ಹಿಂದೆ ಉಚ್ಚರಿಸಲ್ಪಡುವ ಅರ್ಧವಿಸರ್ಗ (ᳶ). "ᳶक ᳶप इति कपाभ्यां प्रागर्धविसर्गसदृशौ जिह्वामूलीयोपध्मानीयौ" सि० कौ०। ಉಪಧ್ಮಾನೀಯವು ಓಷ್ಠಸ್ಥಾನದಲ್ಲಿ ಉಚ್ಚರಿಸಲ್ಪಡುವುದು. "उपूपध्मानीयानामोष्ठौ" सि० कौ०।

**उपनक्षत्र ಉಪನಕ್ಷತ್ರ** (न०) ಅಶ್ವಿನಿ ಮೊದಲಾದ 27 ನಕ್ಷತ್ರಗಳನ್ನು ಅನುಸರಿಸುವ ಉಪನಕ್ಷತ್ರಗಳು. ಒಂದೊಂದು ನಕ್ಷತ್ರಕ್ಕೂ 27 ಉಪನಕ್ಷತ್ರಗಳಂತೆ 27 ನಕ್ಷತ್ರಗಳಿಗೂ 729 ಉಪನಕ್ಷತ್ರಗಳಿರುವುವು. "तानि वा एतानि सप्तविंशतिः, नक्षत्राणि सप्तविंशतिः, सप्तविंशतिर्होपनक्षत्राणि एकैकं नक्षत्रमनूपतिष्ठन्ते तानि च सप्तशतानि विंशतिश्चाधि" शत० ब्रा०।

**उपनख ಉಪನಖ** (न०) ಉಗುರುಸುತ್ತು, ಒಂದು ವಿಧ ಬೆರಳುಕುರು. उपगतं नखं नखमांसम्। "नखमांसमधिष्ठाय पित्तं वातश्च वेदनाम्। करोति दाहपाकौ च तं व्याधिं चिप्पमादिशेत्। तदेवाक्षतरोगाख्यं तथोपनखमित्यपि" सुश्रुत०।

**उपनगर ಉಪನಗರ** (न०) ಶಾಖಾನಗರ, ನಗರದ ಬಡಾವಣೆ. उपमितं नगरेण।

**उपनत ಉಪನತ** (वि०) 1. ಸಮೀಪಕ್ಕೆ ಬಂದ, ಹತ್ತಿರಕ್ಕೆ ಬಂದು ಸೇರಿದ. उप+णम (प्रह्वत्वे शब्दे) "क्तः" (३-४-७२)। "इदमुपनतमेवं रूपमक्लिष्टकान्ति प्रथमपरिगृहीतं स्यान्नवेति व्यवस्यन्" शाकु० ५-१९। 2. ನಮ್ರ, ವಿಧೇಯ, ತಲೆಬಾಗಿ ನಮಸ್ಕರಿಸಿದ. "तस्मिन् दण्डोपनतचरितं भेजिरे लोकपालाः" रघु० १७-८१। 3. ಹೊಂದಲ್ಪಟ್ಟ, ಪಡೆಯಲ್ಪಟ್ಟ. उप+णम कर्म० "क्तः" (३-२-१०२)। "अथ प्रभावोपनतैः कुमारं कल्पद्रुमोत्थैरवकीर्य पुष्पैः" रघु० ५-५२।

**उपनति ಉಪನತಿ** (स्त्री०) 1. ಸಮೀಪಕ್ಕೆ ಹೋಗುವಿಕೆ, ಹತ್ತಿರ ಸೇರುವಿಕೆ. उप+णम (प्रह्वत्वे शब्दे) "क्तिन्" (३-३-९४)। 2. ತಲೆಬಾಗಿ ನಮಸ್ಕರಿಸುವಿಕೆ.

**उपनद ಉಪನದ** —नदि –नदि (अव्य०) ನದಿಯ ಸಮೀಪ, ಹೊಳೆಯ ಹತ್ತಿರ. नद्याः समीपम् वा "टच्" (५-४-११०)।

**उपनदी ಉಪನದೀ** (स्त्री०) (ಸಮುದ್ರಕ್ಕೆ ಸೇರುವ) ದೊಡ್ಡ ನದಿಯ ಉಪನದಿ, ಸಣ್ಣ ನದಿ. उपगता नदी।

**उपनम्र ಉಪನಮ್ರ** (वि०) ಉಪಸ್ಥಿತವಾದ, ಸಮೀಪಕ್ಕೆ ಬಂದಿರುವ, ಹತ್ತಿರಕ್ಕೆ ಬಂದಿರುವ. उप+णम (प्रह्वत्वे) "रक्" (३-२-१६७)। "उपनम्रमयाचितं हितं परिहर्तुं न तवापि साम्प्रतम्" नैष० २-१२।

**उपनय ಉಪನಯ** (पु०) 1. ಹತ್ತಿರಕ್ಕೆ ತರುವುದು, ಸಮೀಪಕ್ಕೆ ಒಯ್ಯುವುದು. उप + णीञ् (प्रापणे) "अच्" (३-३-५६)। 2. ಉಪನಯನ, ಮುಂಜಿ, ವೇದಾಭ್ಯಾಸಕ್ಕಾಗಿ ಬಾಲಕನನ್ನು ಗುರುವಿನಲ್ಲಿಗೆ ಕಳುಹಿಸಿಕೊಡುವ ಒಂದು ಸಂಸ್ಕಾರ. उप + णीञ् कर० "अच्" [ವಿವರಕ್ಕೆ "उपनयन" ಪದದಲ್ಲಿ ನೋಡಿ.] "गृह्योक्तकर्मणा येन समीपं नीयते गुरोः। बालो वेदाय तद्योगाद्बालस्योपनयं विदुः"। 3. (ತಾರ್ಕಿಕ ಮತದಲ್ಲಿ) ನ್ಯಾಯದ ಐದು ಅವಯವಗಳಲ್ಲೊಂದು. ಪ್ರತಿಜ್ಞಾ, ಹೇತು, ಉದಾಹರಣ, ಉಪನಯ ಮತ್ತು ನಿಗಮನಗಳೆಂದು ನ್ಯಾಯದ ಅವಯವಗಳು ಐದು. "यो यो धूमवान् स वह्निमान् यथा महानसम्। तथा चायम्" ಎಂಬಲ್ಲಿ ಧೂಮವಿರುವ ಕಡೆಯೆಲ್ಲಾ ವಹ್ನಿಯಿರುವುದರಿಂದ ಈ ಪರ್ವತದಲ್ಲಿಯೂ ಹೊಗೆಯಿರುವ ಕಾರಣ ವಹ್ನಿಯಿರುವುದೆಂಬ ಪಕ್ಷದಲ್ಲಿ ಹೇತುಮತ್ತ್ವ ಪ್ರದರ್ಶನವು ಉಪನಯ.

**उपनयत् ಉಪನಯತ್** (वि०) 1. ಸಮೀಪಕ್ಕೆ ತರುತ್ತಿರುವ, ಹತ್ತಿರಕ್ಕೆ ಒಯ್ಯುತ್ತಿರುವ. उप + णीञ् (प्रापणे) "शतृ" (३-२-१२४)। 2. ಉಂಟುಮಾಡುತ್ತಿರುವ, ಹುಟ್ಟಿಸುತ್ತಿರುವ. "न व्यहन्यत कदापि मुदं यः स्वःसदामुपनयन्नभिलाषः" नैष० ५-१२३।

**उपनयन ಉಪನಯನ** (न०) 1. ಸಮೀಪಕ್ಕೆ ಒಯ್ಯುವುದು, ಹತ್ತಿರಕ್ಕೆ ತರುವುದು. उप + णीञ् (प्रापणे) "ल्युट्" (३-३-११५)। 2. ವೇದಾಭ್ಯಾಸಕ್ಕಾಗಿ ಬಾಲಕನನ್ನು ಗುರುವಿನಲ್ಲಿಗೆ ಕಳುಹಿಸಿಕೊಡಲು ಮಾಡುವ ಒಂದು ಸಂಸ್ಕಾರ, (ಬ್ರಾಹ್ಮಣಾದಿ ವರ್ಣತ್ರಯಕ್ಕೆ ಹೇಳಿರುವ) ಹದಿನಾರು ಸಂಸ್ಕಾರಗಳಲ್ಲೊಂದು. उप+णीञ् कर० "ल्युट्" (३-३-११७)। [ಹದಿನಾರು ಸಂಸ್ಕಾರಗಳಿಗೆ "संस्कार" ಪದದಲ್ಲಿ ನೋಡಿ.]

ಈ ಸಂಸ್ಕಾರವು ನಿತ್ಯ, ಕಾಮ್ಯ ಮತ್ತು ನೈಮಿತ್ತಿಕ ಗಳೆಂದು ಮೂರು ವಿಧ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯರಿಗೆ ಕ್ರಮವಾಗಿ ಜನ್ಮಕಾಲ ಅಥವಾ ಗರ್ಭ ಕಾಲದಿಂದ. 8, 11 ಮತ್ತು 12ನೆಯ ವಯಸ್ಸು ಗಳಲ್ಲಿ ಮಾಡುವ ಉಪನಯನವು ನಿತ್ಯವೆನಿಸುವುದು. ಬ್ರಹ್ಮವರ್ಚಸ್ಸಿಗಾಗಿ ಬ್ರಾಹ್ಮಣನೂ, ಬಲಾಧಿಕ್ಯ ಕ್ಕಾಗಿ ಕ್ಷತ್ರಿಯನೂ, ಇಷ್ಟಸಿದ್ಧಿಗಾಗಿ ವೈಶ್ಯನೂ ಕ್ರಮ ವಾಗಿ 5, 6 ಮತ್ತು 8ನೆಯ ವಯಸ್ಸುಗಳಲ್ಲಿ ಉಪನಯನ ಮಾಡಿಕೊಳ್ಳುವುದು ಕಾಮ್ಯವು. "ब्रह्मवर्चसकामस्य कुर्याद्विप्रस्य पञ्चमे। राज्ञो बलार्थिनः षष्ठे वैश्यस्येहार्थिनोऽष्टमे" ಮನು० ೨-೩೭। ಪ್ರಾಯಶ್ಚಿತ್ತ ರೂಪವಾಗಿ ಮಾಡಿಕೊಳ್ಳುವುದು ನೈಮಿತ್ತಿಕವು. ನಿತ್ಯವು ಮುಖ್ಯ ಮತ್ತು ಗೌಣ ಎಂದು ಎರಡು ವಿಧ. "गर्भाष्टमेऽब्दे कुर्वीत ब्राह्मणस्योपनायनम्। गर्भादेकादशे राज्ञो गर्भात्तु द्वादशे विशः" ಮನು० ೨-೩೬। ಈ ರೀತಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರಿಗೆ ಕ್ರಮವಾಗಿ 8, 11 ಮತ್ತು 12ನೆಯ ವರ್ಷಗಳಲ್ಲಿ ಮಾಡುವುದು ಮುಖ್ಯ. ಗೌಣವೂ ಮಧ್ಯಮ, ಅಧಮಗಳೆಂದು ಎರಡು ವಿಧ. 12, 16 ಮತ್ತು 20ನೆಯ ವಯಸ್ಸುಗಳನ್ನು ಮೀರಿ ಮಾಡುವ ಉಪ ನಯನವು ಮಧ್ಯಮಗೌಣವು. "द्वादश षोडश विंशतिरचेदतीता अवरुद्धकाला भवन्ति"। 16, 22 ಮತ್ತು 24ನೆಯ ವಯಸ್ಸುಗಳಲ್ಲಿ ಮಾಡುವುದು ಅಧಮ. "आषोडशाद्ब्राह्मणस्य सावित्री नातिवर्तते। आद्वाविंशात्क्षत्रबन्धोराचतुर्विंशतेर्विशः" ಮನು० ೨-೩೮। ಈ ವಯಸ್ಸುಗಳನ್ನು ಮೀರಿ ಮಾಡುವ ಉಪನಯನವು ಪ್ರಾಯಶ್ಚಿತ್ತಪೂರ್ವಕ ನಡೆಯಬೇಕು. "अत ऊर्ध्वं त्रयोऽप्येते यथाकालमसंस्कृताः। सावित्रीपतिता व्रात्याः भवन्त्यार्यविगर्हिताः" ಮನು० ೨-೩೯। **ಉಪನಯನಕ್ಕೆ ಪ್ರಶಸ್ತವಾದ ಕಾಲ—ಋತು ಮಾಸಾದಿಗಳು:** ಬ್ರಾಹ್ಮಣನಿಗೆ ವಸಂತಋತು, ಕ್ಷತ್ರಿಯನಿಗೆ ಗ್ರೀಷ್ಮರ್ತು ಮತ್ತು ವೈಶ್ಯನಿಗೆ ಶರದೃತುವೂ ಮಾಘಾದಿ ಐದು ಮಾಸಗಳೂ ಪ್ರಶಸ್ತ ಗಳು. "ब्रह्मक्षत्रविशामथोपनयनं वक्ष्ये वसन्ते क्रमाद्-ग्रीष्मर्तौ शरदीह वर्णनियते तत्रापि साधारणाः। मासा माघमुखास्तु पञ्च जननाद्वा गर्भतोऽब्देऽष्टमे नित्ये विप्रशिशोः क्रमान्नृपविशोरेकादशे द्वादशे" ಕಾಲಾ० ೨೫। **ವಾರ ನಕ್ಷತ್ರ ಲಗ್ನಗಳು:** ಬುಧ, ಬೃಹಸ್ಪತಿ ಮತ್ತು ಶುಕ್ರವಾರಗಳು ಪ್ರಶಸ್ತ. ಭಾನು ಮತ್ತು ಸೋಮ ವಾರಗಳು ಮಧ್ಯಮ. ಅಶ್ವಿನಿ, ರೋಹಿಣಿ, ಮೃಗ ಶೀರ್ಷ, ಪುನರ್ವಸು, ಪುಷ್ಯ, ಉತ್ತರಫಲ್ಗುನಿ, ಹಸ್ತ, ಚಿತ್ತಿ, ಸ್ವಾತಿ, ಅನೂರಾಧೆ, ಶ್ರವಣ, ಧನಿಷ್ಠೆ, ಶತಭಿಷೆ, ಉತ್ತರಾಷಾಢ, ಉತ್ತರಾಭಾದ್ರೆ ಮತ್ತು ರೇವತೀ ನಕ್ಷತ್ರಗಳೂ ಅಷ್ಟಮಶುದ್ಧಿಯಿರುವ ಮತ್ತು ಚಂದ್ರನಿಲ್ಲದ ಲಗ್ನವೂ ಪ್ರಶಸ್ತ. ಕಾಲಾ० ೨೭।

**उपनयनीय ಉಪನಯನೀಯ** (ವಿ०) ವಿದ್ಯಾಭ್ಯಾಸ ಕ್ಕಾಗಿ ಗುರುವಿನಲ್ಲಿಗೆ ಕಳುಹಿಸಲ್ಪಡುವ ಶಿಷ್ಯ. उप+णीञ् (प्रापणे) ಕರ್ಮ० "अनीयर्" (३-१-९६)।

**उपनहन ಉಪನಹನ** (ನ०) 1. ಬಂಧನ, ಕಟ್ಟುವಿಕೆ. उप+णह (बन्धने) "ल्युट्" (३-३-११५)। 2. ಗಂಟು ಕಟ್ಟುವ ಬಟ್ಟೆ (ಮೊದಲಾದುದು). उपनह्यतेऽनेन— उप+णह ಕರ० "ल्युट्" (३-३-११७)।

**उपनाय ಉಪನಾಯ** (ಪು०) ಉಪನಯನ ಸಂಸ್ಕಾರ, ವಿದ್ಯಾಭ್ಯಾಸಕ್ಕಾಗಿ ಗುರುವಿನಲ್ಲಿಗೆ ಕಳುಹಿಸಿಕೊಡಲು ಬಾಲಕನಿಗೆ ಮಾಡುವ ಒಂದು ಸಂಸ್ಕಾರ. उपनाययति —उप+णीञ् (प्रापणे)+णिच् "अच्" (३-३-५६)।

**उपनायक ಉಪನಾಯಕ** (ಪು०) 1. (ನಾಟಕ ಮೊದ ಲಾದುವುಗಳಲ್ಲಿ ಪ್ರಧಾನ ನಾಯಕನಿಗೆ ಸಹಾಯಕ ನಾಗಿರುವವನು, ಪ್ರಧಾನ ನಾಯಕನ ಕೆಲಸಕ್ಕೆ ಅನುಕೂಲನಾಗಿರುವ ಸ್ನೇಹಿತ. उपगतो नायकम्। ರಾಮಾಯಣದಲ್ಲಿ ಲಕ್ಷ್ಮಣನೂ, ಮಾಲತೀಮಾಧವ ದಲ್ಲಿ ಮಕರಂದನೂ ಉಪನಾಯಕರು. 2. ಉಪ ನಯನ ಸಂಸ್ಕಾರ ಮಾಡುವ ಗುರು. उप+णीञ् (प्रापणे)+णिच् "ण्वुल्" (३-१-१३३)। 3. ಉಪಪತಿ, ಮಿಂಡ. (ವಿ०)4. ಸಮೀಪಕ್ಕೆ ಒಯ್ಯುವ, ಹತ್ತಿರಕ್ಕೆ ತರುವ.

**उपनायन ಉಪನಾಯನ** (ನ०) ಉಪನಯನ ಸಂಸ್ಕಾರ, ವಿದ್ಯಾಭ್ಯಾಸಕ್ಕಾಗಿ ಗುರುವಿನ ಬಳಿಗೆ (ಬಾಲಕನನ್ನು) ಕಳುಹಿಸಿಕೊಡಲು ಮಾಡುವ ಒಂದು ಸಂಸ್ಕಾರ. उप+णीञ् (प्रापणे)+णिच् "ल्युट्" (३-३-११५)। "गर्भाष्टमेऽब्दे कुर्वीत ब्राह्मणस्योपनायनम्" ಮನು० ೨-೩೬।

**उपनाह ಉಪನಾಹ** (ಪು०) 1. ವೀಣೆಯ ತಂತಿಯನ್ನು ಎಳೆದು ಕಟ್ಟುವ ಬಾಯಿ ಮತ್ತು ಬಿರಡೆ. उपनह्यतेऽस्मिन्—उप+णह (बन्धने) "घञ्" (३-३-१२१)। 2. ಹುಣ್ಣು ಗಾಯ ಮೊದಲಾದುವುಗಳಿಗೆ ಕಟ್ಟುವ ಮುಲಾಮು ಹಿಟ್ಟು (ಪೋಲ್ಟೀಸ್) ಮೊದಲಾದುದು.

**उपनाहन** ಉಪನಾಹನ (नं०) ಹುಣ್ಣು ಗಾಯ ಮೊದಲಾದುವುಗಳಿಗೆ ಮುಲಾಮು ಹಿಟ್ಟು (ಪೋಲ್ಟೀಸ್) ಮೊದಲಾದುವನ್ನು ಕಟ್ಟುವಿಕೆ. उप+णह (बन्धने)+णिच् "ल्युट्" (३-३-११५)। "वेशवारैः सकृशरैः सुस्निग्धैश्चोपनाहनम्" सुश्रुत० चिकित्सा० २-२५।

**उपनिक्षेप** ಉಪನಿಕ್ಷೇಪ (पुं०) 1. ರಕ್ಷಣೆಗಾಗಿ ಮತ್ತೊಬ್ಬರ ವಶದಲ್ಲಿ (ವಿವರದೊಡನೆ) ಅಮಾನತ್ತಿನಲ್ಲಿಡುವ ವಸ್ತು ಅಥವಾ ಧನ. उपनिक्षिप्यते—उप+नि+क्षिपु (निरसने) "घञ्" (३-३-१९)। उपनिक्षेपो नाम रूपसङ्ख्याप्रदर्शनेन रक्षणार्थं निहितं द्रव्यम्। 2. ವಸ್ತು ಅಥವಾ ಧನವನ್ನು ರಕ್ಷಣೆಗಾಗಿ ಮತ್ತೊಬ್ಬರ ವಶದಲ್ಲಿ (ವಿವರದೊಡನೆ) ಅಮಾನತ್ತಿನಲ್ಲಿಡುವುದು. उप+नि+क्षिपु भावे "घञ्" (३-३-१८)। 3. ಹತ್ತಿರದಲ್ಲಿ ಇಡುವಿಕೆ. भावे "ल्युट्" (३-३-११५)। **-निक्षेपणम् -ನಿಕ್ಷೇಪಣವುಶ್.**

**उपनिधातृ** ಉಪನಿಧಾತೃ (वि०) 1. ರಕ್ಷಣೆಗಾಗಿ ದ್ರವ್ಯವನ್ನು ಮತ್ತೊಬ್ಬನಲ್ಲಿಡುವ. 2. ಹತ್ತಿರದಲ್ಲಿಡುವ, ಸಮೀಪದಲ್ಲಿರಿಸುವ. उप+नि+डु धाञ् (धारणपोषणयोः) "तृच्" (३-१-१३३)। स्त्रियां "ङीप्" (४-१-५)। **-निधात्री -ನಿಧಾತ್ರೀ.** "ण्वुल्" (३-१-१३३)। **-निधायक -ನಿಧಾಯಕ.**

**उपनिधान** ಉಪನಿಧಾನ (नं०) 1. ವಸ್ತು ಅಥವಾ ದ್ರವ್ಯವನ್ನು ರಕ್ಷಣೆಗಾಗಿ ಮತ್ತೊಬ್ಬರಲ್ಲಿ (ವಿವರದೊಡನೆ) ಅಮಾನತ್ತಿನಲ್ಲಿಡುವುದು. उप+नि+डु धाञ् (धारणपोषणयोः) भावे "ल्युट्" (३-३-११५)। 2. ಹತ್ತಿರದಲ್ಲಿಡುವುದು, ಸಮೀಪದಲ್ಲಿರಿಸುವುದು. 3. ಠೇವಣಿ (Deposit).

**उपनिधि** ಉಪನಿಧಿ (पुं०) 1. ರಕ್ಷಣೆಗಾಗಿ ಮತ್ತೊಬ್ಬರ ವಶದಲ್ಲಿ ಅಮಾನತ್ತಿನಲ್ಲಿಡುವ ದ್ರವ್ಯ. उप+नि+डु धाञ् (धारणपोषणयोः) "किः" (३-३-९२)। 2. ರಕ್ಷಣೆಗಾಗಿ ಮತ್ತೊಬ್ಬರಲ್ಲಿ ದ್ರವ್ಯವನ್ನು ಇಡುವುದು.

**उपनिनीषा** ಉಪನಿನೀಷಾ (स्त्री०) ಸಮೀಪಕ್ಕೆ ತರಲು ಅಪೇಕ್ಷೆ. उपनेतुमिच्छा — उप+णीञ् (प्रापणे)+सन् "अः" (३-३-१०२)।

**उपनिनीषु** ಉಪನಿನೀಷು (वि०) ಸಮೀಪಕ್ಕೆ ತರಲು ಅಪೇಕ್ಷಿಸುವ. उपनेतुमिच्छुः—उप+णीञ् (प्रापणे)+सन् "उः" (३-२-१६८)।

**उपनिपात** ಉಪನಿಪಾತ (पुं०) 1. ಸಮೀಪಕ್ಕೆ ಬರುವಿಕೆ, ಹತ್ತಿರಕ್ಕೆ ಬಂದು ಸೇರುವಿಕೆ. 2. ಹಠಾತ್ತಾಗಿ ಬರುವುದು, ಆಕಸ್ಮಿಕವಾಗಿ ಬಂದು ಸೇರುವುದು, ಅನಿರೀಕ್ಷಿತವಾಗಿ ಒದಗುವುದು. उप+नि+पत्लृ (गतौ) "घञ्" (३-३-१८)। "व्रजतोऽस्य बृहत्पतत्रजन्मा कृतताक्ष्योपनिपातवेगशङ्कः" किरा० १३-२१।

**उपनिपातिन्** ಉಪನಿಪಾತಿನ್ (वि०) 1. ಸಮೀಪಕ್ಕೆ ಬರುವ, ಹತ್ತಿರಕ್ಕೆ ಬಂದು ಸೇರುವ. 2. ಆಕಸ್ಮಾತ್ತಾಗಿ ಬಂದು ಸೇರುವ, ಅನಿರೀಕ್ಷಿತವಾಗಿ ಬಂದೊದಗುವ. उप+नि+पत्लृ (गतौ) "णिनिः" (३-१-१३४)। "रन्ध्रोपनिपातिनोऽनर्था इति यदुच्यते तदव्यभिचारि वचः" शाकु० ६।

**उपनिबद्ध** ಉಪನಿಬದ್ಧ (वि०) 1. ರಚಿಸಲ್ಪಟ್ಟ (ಗ್ರಂಥ). 2. ಜೋಡಿಸಲ್ಪಟ್ಟ (ವಿಷಯ). 3. ಕಟ್ಟಲ್ಪಟ್ಟ (ಪುಷ್ಪಮಾಲೆ). उप+नि+बन्ध (बन्धने) "क्तः" (३-२-१०२)। "यदिदमस्माभिरार्पेण चक्षुषा समुद्वीक्ष्य पावनं वचनामृतं करुणाद्भुतरसं च किञ्चिदुपनिबद्धम्" उ० रा० ७।

**उपनिबन्ध** ಉಪನಿಬಂಧ (पुं०) 1. ಶಪಥ, ಪ್ರತಿಜ್ಞೆ. उप+नि+बन्ध (बन्धने) "घञ्" (३-३-१९)। 2. ನಿಯಮ, ಕಟ್ಟಳೆ.

**उपनिबन्धन** ಉಪನಿಬಂಧನ (नं०) 1. ಗ್ರಂಥರಚನೆ. 2. (ವಿಷಯಗಳ) ಜೋಡಣೆ. 3. (ಪುಷ್ಪಮಾಲೆಯ) ರಚನೆ. उप+नि+बन्ध (बन्धने) भावे "ल्युट्" (३-३-११५)। 4. ಸಂಪಾದನೆಯ ಸಾಧನ, ಕಾರ್ಯದ ಸಲಕರಣೆ. उप+नि+बन्ध कर० "ल्युट्" (३-३-११७)। 5. ನಿಯಮ, ಕಟ್ಟಳೆ.

**उपनिमन्त्रण** ಉಪನಿಮಂತ್ರಣ (नं०) ಆಹ್ವಾನ, ಕರೆ. उप+नि+मत्रि (गुप्तभाषणे) "ल्युट्" (३-३-११५)।

**उपनिविष्ट** ಉಪನಿವಿಷ್ಟ (वि०) ಒಳಗೆ ಪ್ರವೇಶಿಸಿದ, ಒಳಗೆ ವಾಸಿಸುವ. उप+नि+विश (प्रवेशने) "क्तः" (३-४-७२)।

**उपनिवेश** ಉಪನಿವೇಶ (पुं०) 1. ಸಮೀಪದಲ್ಲಿಡುವಿಕೆ, ಹತ್ತಿರದಲ್ಲಿರಿಸುವಿಕೆ. उप+नि+विश (प्रवेशने) "घञ्" (३-३-१८)। 2. ಉಪನಗರ, ಶಾಖಾನಗರ, ನಗರದ ಬಡಾವಣೆ. उपनिविशन्त्यत्र — उप+नि+विश अधि० "घञ्" (३-३-१२१)। 3. ನೆರೆಮನೆ, ಪಕ್ಕದಮನೆ. भावे "ल्युट्" (३-३-११५)। **-निवेशनम् -ನಿವೇಶನವುಶ್.**

**उपनिवेशनीय** ಉಪನಿವೇಶನೀಯ (वि०) 1. ಸಮೀಪದಲ್ಲಿರಿಸಲು ಯೋಗ್ಯವಾದ. 2. ಸಮೀಪದಲ್ಲಿ ಇಡಲ್ಪಡುವ. उप + नि + विश (प्रवेशने) अर्हादौ "अनीयर्". (३-१-९६)।

**उपनिवेशित** ಉಪನಿವೇಶಿತ (वि०) 1. (ಗೃಹರೂಪದಿಂದ) ಇಡಲ್ಪಟ್ಟ, (ಮನೆಯ ರೂಪದಿಂದ) ಇರಿಸಲ್ಪಟ್ಟ. उप+नि+विश (प्रवेशने) + णिच् "क्तः" (३-२-१०२)। "स्वर्गाभिष्यन्दवमनं कृत्वेवोपनिवेशितम्" कुमा० ६-३७। 2. ವಾಸಮಾಡಿಸಲ್ಪಟ್ಟ. 3. ಸಮೀಪದಲ್ಲಿ ಇಡಲ್ಪಟ್ಟ,—ಇರಿಸಲ್ಪಟ್ಟ.

**उपनिषद्** ಉಪನಿಷದ್ (स्त्री०) 1. ಬ್ರಹ್ಮವಿದ್ಯೆ, ರಹಸ್ಯವಿದ್ಯೆ, ಬ್ರಹ್ಮಪ್ರಾಪಕ ವಿದ್ಯೆ. उपनिषादयति नाशयति गर्भजन्मजरात्मकं संसारम्, उपगमयति प्रापयति ब्रह्म, उपनिषण्णं वा परं श्रेयोऽस्याम् — उप + नि + षद्लृ (विशरणगत्यवसादनेषु) + णिच् "क्विप्" (३-२-६१)। ಅವಿದ್ಯಾನಿವೃತ್ತಿಪೂರ್ವಕ, ಅನಾದಿಕಾಲದ ಕರ್ಮಪರಂಪರೆಯಿಂದ ಪ್ರಾಪ್ತವಾದ ಜನ್ಮಜರಾಮರಣರೂಪವಾದ ಸಂಸಾರವನ್ನು ನಾಶಗೊಳಿಸುವುದರಿಂದಲೂ, ಪರಬ್ರಹ್ಮವನ್ನು ದೊರಕಿಸಿಕೊಡುವುದರಿಂದಲೂ, ಬ್ರಹ್ಮವೆಂಬ ಪರಮಶ್ರೇಯಸ್ಸು ಇದರಲ್ಲಿರುವುದರಿಂದಲೂ ಇದಕ್ಕೆ "उपनिषत्" ಎಂದು ಹೆಸರು. ಇಂತಹ ಬ್ರಹ್ಮಜ್ಞಾನಪ್ರತಿಪಾದಕವಾದುದರಿಂದ ಗ್ರಂಥಕ್ಕೂ "उपनिषत्" ಎಂದು ಹೆಸರು. 2. ಉಪನಿಷತ್ತಿನಿಂದ ಉಂಟಾದ ಬ್ರಹ್ಮಾತ್ಮೈಕತ್ವಜ್ಞಾನ. "उपनिषज्जन्यं ब्रह्मात्मकत्वज्ञानम्" छान्दोग्य०। 3. ಬ್ರಹ್ಮದ ಸಮೀಪದಲ್ಲಿಯೇ ಇರುವುದು. ब्रह्मण्युपनिषण्णा। "उपनिषण्णत्वाद्वा उपनिषत्" श्रुतप्र०। 4. ರಹಸ್ಯೋಪದೇಶ. ಗುರುವಿನ ಸಮೀಪದಲ್ಲಿ ಕುಳಿತು ತಿಳಿಯಬೇಕಾದ ರಹಸ್ಯ ವಿದ್ಯೆಯೇ ಉಪನಿಷತ್ತು. ಮಾನವನು ಅನಾದಿಯಾದ ಕರ್ಮಪರಂಪರೆಯಿಂದ ಜನ್ಮಜರಾಮರಣಗಳಿಗೆ ತುತ್ತಾಗಿ ಈ ಜಗತ್ತಿನ ಬಾಳಿನಿಂದ ಜುಗುಪ್ಸೆ ಹೊಂದಿ ಇದರಿಂದ ಪಾರಾಗಲು ಉಪಾಯವನ್ನರಿಯದೆ ಬ್ರಹ್ಮಜ್ಞಾನಸಂಪನ್ನನಾದ ಗುರುವನ್ನು ಆಶ್ರಯಿಸಿ ರಹಸ್ಯೋಪದೇಶದಿಂದ ಅಜ್ಞಾನವನ್ನು ಕಳೆದುಕೊಂಡು ಬ್ರಹ್ಮಜ್ಞಾನವನ್ನು ಪಡೆದು ಸಂಸಾರಪಾಶಧಿಂದ ಮುಕ್ತನಾಗುವುದರಿಂದ ಇದಕ್ಕೆ ಉಪನಿಷತ್ತೆಂದು ಹೆಸರು. "उपनीय तमात्मानं ब्रह्मापास्तद्वयं यतः। निहन्त्यविद्यां तज्जं च तस्मादुपनिषद्भवेत्"। ಈ ಉಪನಿಷತ್ತು ವೇದಭಾಗವಾದ ಬ್ರಾಹ್ಮಣಗಳ ಕೊನೆಯ ಭಾಗವಾದುದರಿಂದ ಇದಕ್ಕೆ "ವೇದಾಂತ"ವೆಂದು ಹೆಸರಾಯಿತು. ಉಪನಿಷತ್ತು, ಬ್ರಾಹ್ಮಣಗಳಲ್ಲಿ ಪ್ರತಿಪಾದಿಸುವ ಯಾಗಾದಿಗಳು ಕಾಮ್ಯಕರ್ಮಗಳಾದುದರಿಂದ ಅವುಗಳ ಫಲವಾದ ಸ್ವರ್ಗಾದಿಗಳು ಅಸ್ಥಿರವೆಂದೂ, ಇವು ಸಂಸಾರಪಾಶದಿಂದ ಎಂದೆಂದಿಗೂ ಬಿಡುಗಡೆ ಮಾಡುವುದಿಲ್ಲವೆಂದೂ ಪ್ರತಿಪಾದಿಸಿ ಬ್ರಹ್ಮಜ್ಞಾನವೊಂದರಿಂದಲೇ ಮುಕ್ತಿಯೆಂದು ಉಪದೇಶಿಸುವುದು. ಈ ರೀತಿ ಬ್ರಹ್ಮಜ್ಞಾನಪ್ರತಿಪಾದಕವಾದ ಉಪನಿಷತ್ತು 1180 ಎಂದು ಕೆಲವರೂ, 200ಕ್ಕೂ ಹೆಚ್ಚೆಂದು ಕೆಲವರೂ, 108 ಎಂದು ಮತ್ತೆ ಕೆಲವರೂ ಪರಿಗಣಿಸಿರುವರು. ಇವುಗಳಲ್ಲಿ ಮುಖ್ಯವಾದ ಹದಿನಾಲ್ಕು ಉಪನಿಷತ್ತುಗಳಲ್ಲಿ (1) ಈಶ, (2) ಕೇನ, (3) ಕಠ, (4) ಪ್ರಶ್ನ, (5) ಮುಂಡಕ, (6) ಮಾಂಡೂಕ್ಯ, (7) ತೈತ್ತಿರೀಯ, (8) ಐತರೇಯ, (9) ಛಾಂದೋಗ್ಯ ಮತ್ತು (10) ಬೃಹದಾರಣ್ಯಕಗಳೆಂಬ ಹತ್ತು ಉಪನಿಷತ್ತುಗಳು ಪ್ರಸಿದ್ಧವಾಗಿವೆ. 5. ಯೋಗ, ಉಪಾಸನೆ. "यदेव विद्यया करोति श्रद्धयोपनिषदा तदेव वीर्यवत्तरम्" छान्दोग्य०। 6. ನಿರ್ಜನ ಪ್ರದೇಶ. 7. ಧರ್ಮ. "भवेदुपनिषद्धर्मे वेदान्ते विजने स्त्रियाम्" मेदि०। 8. ಸಮೀಪಕ್ಕೆ ಹೋಗುವುದು. 9. ದ್ವಿಜರು ಗೋದಾನವೆಂಬ ಕೇಶಖಂಡನಕ್ಕೆ ಮೊದಲು ಮಾಡಬೇಕಾದ ಒಂದು ವ್ರತ. "प्रथमं स्यान्महानाम्नी द्वितीयं च महाव्रतम्। तृतीयं स्यादुपनिषद्गोदानं च ततः परम्" आश्व० गृ० का०।

**उपनिषादिन्** ಉಪನಿಷಾದಿನ್ (वि०) ಸಮೀಪದಲ್ಲಿ ಕೂಡುವ, ಹತ್ತಿರದಲ್ಲಿ ಕುಳಿತುಕೊಳ್ಳುವ. उप+नि+षद्लृ (विशरणादौ) "णिनिः" (३-१-१३४)। स्त्रियां "ङीप्" (४-१-५)। –निषादिनी –ನಿಷಾದಿನೀ.

**उपनिषिषत्सा** ಉಪನಿಷಿಷತ್ಸಾ (स्त्री०) ಸಮೀಪದಲ್ಲಿ ಕೂಡಲು ಆಸೆ, ಹತ್ತಿರದಲ್ಲಿ ಕುಳಿತುಕೊಳ್ಳಲು ಅಪೇಕ್ಷೆ. उप+नि+षद्लृ (विशरणादौ) + सन् "अः" (३-३-१०२)।

**उपनिषिषत्सु** ಉಪನಿಷಿಷತ್ಸು (वि०) ಸಮೀಪದಲ್ಲಿ ಕೂಡಲು ಆಸೆಪಡುವ, ಹತ್ತಿರದಲ್ಲಿ ಕುಳಿತುಕೊಳ್ಳಲು ಅಪೇಕ್ಷಿಸುವ. उपनिषत्तुमिच्छुः — उप + नि + षद्लृ (विशरणादौ) + सन् "उः" (३-२-१६८)।

**उपनिषीदत्** ಉಪನಿಷೀದತ್ (वि०) ಸಮೀಪದಲ್ಲಿ ಕುಳಿತುಕೊಳ್ಳುವ. उप + नि + षद्लृ (विशरणादौ) "शतृ" (३-२-१२४)। स्त्रियां "ङीप्" (४-१-६)। **-निषीदन्ती** -ನಿಷೀದಂತೀ.

**उपनिषेदिवस्** ಉಪನಿಷೇದಿವಸ್ (वि०) ಸಮೀಪದಲ್ಲಿ ಕುಳಿತಿರುವ. उप+नि+षद्लृ (विशरणादौ) "क्वसुः" (३-२-१०८)। स्त्रियां "ङीप्" (४-१-६)। **-निषेदुषी** -ನಿಷೇದುಷೀ.

**उपनिष्कर** ಉಪನಿಷ್ಕರ (न०) ಪಟ್ಟಣದ ರಸ್ತೆ, ನಗರದ ಮುಖ್ಯ ರಸ್ತೆ. उपनिष्कीर्यतेऽत्र सैन्यम् — उप+नि+कृ (विक्षेपे) "अप्" (३-३-५७)।

**उप+निस्+क्रमु—पादविक्षेपे** (भ्वा० पर० सक० से०) उपनिष्क्रामति — निष्क्राम्यति। ಹೊರಗಡೆಗೆ ಹೊರಡು.

**उपनिष्क्रमण** ಉಪನಿಷ್ಕ್ರಮಣ (न०) 1. ಪಟ್ಟಣದ ರಸ್ತೆ, ನಗರದ ಮುಖ್ಯ ರಸ್ತೆ. उप + निस् + क्रमु (पादविक्षेपे) "ल्युट्" (३-३-११७)। 2. ಹೊರಗಡೆಗೆ ಹೊರಡುವುದು. 3. ಮಗು (ಶಿಶು) ವನ್ನು ನಾಲ್ಕನೆಯ ತಿಂಗಳಲ್ಲಿ ಮೊದಲನೆಯದಾಗಿ ಮನೆಯಿಂದ ಹೊರಗಡೆಗೆ ಕರೆತರುವುದು. उप+निस्+क्रमु भावे "ल्युट्" (३-३-११५)। "चतुर्थे मासि कर्तव्यं शिशोर्निष्क्रमणं गृहात्" मनु० २-३४।

**उपनिष्क्रान्त** ಉಪನಿಷ್ಕ್ರಾಂತ (वि०) ಹೊರಗಡೆಗೆ ಹೊರಟಿರುವ. उप+निस्+क्रमु (पादविक्षेपे) "क्तः" (३-४-७२)।

**उपनिष्क्रामत्** ಉಪನಿಷ್ಕ್ರಾಮತ್ (वि०) ಹೊರಗಡೆಗೆ ಹೊರಡುತ್ತಿರುವ. उप + निस् + क्रमु (पादविक्षेपे) "शतृ" (३-२-१२४)। वा "श्यन्" (३-१-७०)। **-निष्क्राम्यत्** -ನಿಷ್ಕ್ರಾಮ್ಯತ್. स्त्रियां "ङीप्" (४-१-६)। **-निष्क्रामन्ती** -ನಿಷ್ಕ್ರಾಮಂತೀ. **-निष्क्राम्यन्ती** -ನಿಷ್ಕ್ರಾಮ್ಯಂತೀ.

**उपनिहित** ಉಪನಿಹಿತ (वि०) 1. ಸಮೀಪದಲ್ಲಿಡಲ್ಪಟ್ಟ, ಹತ್ತಿರದಲ್ಲಿರಿಸಲ್ಪಟ್ಟ. 2. (ರಕ್ಷಣೆಗಾಗಿ) ಮತ್ತೊಬ್ಬನಲ್ಲಿಡಲ್ಪಟ್ಟ (ದ್ರವ್ಯ). उप+नि+डु धाञ् (धारण-पोषणयोः) "क्तः" (३-२-१०२)। "विद्वांस्तु ब्राह्मणो दृष्ट्वा पूर्वोपनिहितं निधिम्" मनु० ८-३७।

**उपनीत** ಉಪನೀತ (पु०) 1. ವೇದಾಭ್ಯಾಸಕ್ಕಾಗಿ ಗುರುವಿನ ಬಳಿಗೆ ಕಳುಹಿಸಲು ಉಪನಯನಸಂಸ್ಕಾರ ಮಾಡಲ್ಪಟ್ಟ ಬಾಲಕ. उप+णीञ् (प्रापणे) "क्तः" (३-२-१०२)। "अथोपनीतं विधिवद्विपश्चितो विनिन्युरेनं गुरवो गुरुप्रियम्" रघु० ३-२९। 2. ವೇದಾಭ್ಯಾಸಕ್ಕಾಗಿ ಗುರುವಿನ ಬಳಿಗೆ ಕಳುಹಿಸಲ್ಪಟ್ಟ ಬಾಲಕ. (वि०) 3. ಹತ್ತಿರಕ್ಕೆ ತರಲ್ಪಟ್ಟ, ಸಮೀಪಕ್ಕೆ ಒಯ್ಯಲ್ಪಟ್ಟ. "तस्याः करं शैलगुरूपनीतं जग्राह ताम्राङ्गुलिमष्टमूर्तिः" कुमा० ७-७६। 4. ತಿಳಿಯಲ್ಪಟ್ಟ, ಅರಿಯಲ್ಪಟ್ಟ.

**उपनीयमान** ಉಪನೀಯಮಾನ (वि०) ಸಮೀಪಕ್ಕೆ ತರಲ್ಪಡುತ್ತಿರುವ, ಹತ್ತಿರಕ್ಕೆ ಒಯ್ಯಲ್ಪಡುತ್ತಿರುವ. उप+णीञ् (प्रापणे) णिच् कर्म० "शानच्" (३-२-१२४)।

**उपनुन्न** ಉಪನುನ್ನ (वि०) ಪ್ರೇರಿಸಲ್ಪಟ್ಟ, ಮುಂದಕ್ಕೆ ತಳ್ಳಲ್ಪಟ್ಟ, ನೂಕಲ್ಪಟ್ಟ. उप+णुद (प्रेरणे) "क्तः" (३-२-१०२)। "द्रुतमरुदुपनुन्नैरुन्नमद्भिः सहेलम्" माघ० ४-६८।

**उपनेतव्य** ಉಪನೇತವ್ಯ (पु०) 1. ಉಪನಯನ ಸಂಸ್ಕಾರ ಮಾಡಲ್ಪಡುವ ಬಾಲಕ, ಉಪನಯನ ನಡೆಸಲು ಅರ್ಹನಾದ ಬಾಲಕ. 2. ಸಮೀಪಕ್ಕೆ ತರಲ್ಪಡುವ, ಹತ್ತಿರಕ್ಕೆ ಒಯ್ಯಲು ಯೋಗ್ಯವಾದ. उप + णीञ् (प्रापणे) "तव्यः" (३-१-९६)। "एष स चिरदृष्टः कथं पुनरुपनेतव्यः" माल० २-४। 3. ಉಪನಯನಕ್ಕೆ ಅರ್ಹನಾದವನು, ವೇದಾಭ್ಯಾಸಕ್ಕೆ ಯೋಗ್ಯನಾದವನು.

**उपनेतृ** ಉಪನೇತೃ (पु०) 1. ಆಚಾರ್ಯ, ಗುರು, ಉಪನಯನ ಸಂಸ್ಕಾರ ನಡೆಸುವವನು. उप+णीञ् (प्रापणे) "तृच्" (३-१-१३३)। "जनिता चोपनेता च यश्च विद्यां प्रयच्छति। अन्नदाता भयत्राता पञ्चैते पितरः स्मृताः"। (वि०) 2. ಸಮೀಪಕ್ಕೆ ತರುವ, ಹತ್ತಿರಕ್ಕೆ ತಂದುಕೊಡುವ. स्त्रियां "ङीप्" (४-१-५)। **-नेत्री** -ನೇತ್ರೀ. "नियमविधिजलानां बर्हिषां चोपनेत्री" कुमा० १-६०।

**उपनेत्र** ಉಪನೇತ್ರ (न०) ಉಪಲೋಚನ, ಸುಲೋಚನ, ಕನ್ನಡಕ. उपगतं नेत्रम्।

**उपन्यस्त** ಉಪನ್ಯಸ್ತ (वि०) 1. ವಿವರಿಸಿ ಹೇಳಲ್ಪಟ್ಟ, ವ್ಯಾಖ್ಯಾನ ಮಾಡಲ್ಪಟ್ಟ. उप + नि + असु (क्षेपणे) "क्तः" (३-२-१०२)। 2. ಹೇಳಲ್ಪಟ್ಟ. "इत्युभयलोकाविरुद्धं वचनमुपन्यस्तम्" मालती० २। 3. ಹತ್ತಿರದಲ್ಲಿ ಇಡಲ್ಪಟ್ಟ, ಸಮೀಪದಲ್ಲಿ ಇರಿಸಲ್ಪಟ್ಟ. 4. ರಕ್ಷಣೆಗಾಗಿ ಇಡಲ್ಪಟ್ಟ. 5. ಸೂಚಿಸಲ್ಪಟ್ಟ, ಸಲಹೆ ಕೊಡಲ್ಪಟ್ಟ.

**उपन्यास ಉಪನ್ಯಾಸ** (ಪುಂ) 1. ವಚನದ ಉಪಕ್ರಮ, ಮಾತಿನ ಪ್ರಾರಂಭ. उप+नि+असु (क्षेपणे) "घञ्" (३-३-१८)। "निर्यातः शनकैरलीकवचनोपन्यासमालीजनः" अमरु० २७। 2. ಸೂಚನೆ, ಸಲಹೆ. "ममापि युष्मद्वचनात्तेन तेनोपन्यासेन भूरिवसुमन्दिरासन्नराजमार्गेण माधवः सञ्चार्यते" मालती० १। 3. ವ್ಯಾಖ್ಯಾನ, ಅರ್ಥವಿವರಣೆ, ಭಾಷಣ. 4. ವಿಚಾರ, ವಿಮರ್ಶೆ. "विश्वजन्यमिमं पुण्यमुपन्यासं निबोधत" मनु० ९-३१। 5. ಸಮೀಪದಲ್ಲಿಡುವಿಕೆ, ಹತ್ತಿರದಲ್ಲಿರಿಸುವಿಕೆ. उप समीपे न्यासः। 6. ನಂಬಿಕೆಯಿಂದ ಒಬ್ಬನಲ್ಲಿ ರಕ್ಷಣೆಗಾಗಿ ದ್ರವ್ಯವನ್ನು ಇಡುವುದು, ಉಪನಿಧಿ. 7. ಪ್ರತಿಮುಖಸಂಧಿಯ ಒಂದು ಅಂಗ. "उपन्यासस्तु कार्याणां ग्रथनम्" सा० द० ६-११०।

**उपपति ಉಪಪತಿ** (ಪುಂ) ಜಾರಪುರುಷ, ಮಿಂಡ, ವ್ಯಭಿಚಾರಿ. उपमितः पत्या (२-२-१८)। अवा० समासः। "द्रुततरमुपयाति स्रंसमानांशुकोसावुपपतिरिव नीचैः पश्चिमान्तेन चन्द्रः" माघ० ११-६५।

**उपपत्ति ಉಪಪತ್ತಿ** (ಸ್ತ್ರೀ०) 1. ಯುಕ್ತಿ, ವಿವೇಚನಾಪೂರ್ವಕವಾದ ಮಾತು. उपपद्यते—उप+पद (गतौ) "क्तिन्" (३-३-९४)। "उपपत्तिरुदाहृता बलादनुमानेन नचागमः क्षतः" किरा० २-२८। 2. ಸಾಮಂಜಸ್ಯ, ಹೊಂದಿಕೆ, ಯುಕ್ತತೆ. 3. ಕಾರಣ, ಹೇತು. "प्रियेषु यैः पार्थ विनोपपत्तेर्विचिन्त्यमानैः क्रममेति चेतः" किरा० ३-५२। 4. ಉಪಾಯ, ಯುಕ್ತಿ. "अथोपपत्तिं छलनापरोऽपरामवाप्य शैलूष इवैष भूमिकाम्" माघ० १-६९। 5. ಪ್ರಾಪ್ತಿ, ಪಡೆಯುವಿಕೆ, ಲಾಭ. "असंशयं प्राक्तनयोपपत्तेः स्तनन्धयप्रीतिमवाप्स्यसि त्वम्" रघु० १४-७८। 6. ತಾತ್ಪರ್ಯನಿರ್ಣಯಕ್ಕೆ ಕಾರಣವಾದ ಒಂದು ಲಿಂಗ. 7. ಸಿದ್ಧಿ, ಈಡೇರುವಿಕೆ, ಕೈಗೂಡುವಿಕೆ. "स्वार्थोपपत्तिं प्रति दुर्बलाशस्तमित्यवोचद्वरतन्तुशिष्यः" रघु० ५-१२। 8. ಸಾಹಾಯ್ಯ, ಅವಲಂಬನ. "अपेक्षितान्योन्यबलोपपत्तिभिः" किरा० १४-४४।

**उपपत्तिमत् ಉಪಪತ್ತಿಮತ್** (ವಿ०) ಯುಕ್ತಿಯಿಂದ ಕೂಡಿದ. उपपत्तिरस्यास्ति "मतुप्" (५-२-९४)। "उपमत्तिमदूर्जिताश्रयं नृपमूचे वचनं वृकोदरः" किरा० २-१।

**उपपद ಉಪಪದ** (ನಂ) 1. ಪದದ ಹಿಂದೆ ಸೇರಿಸಲ್ಪಡುವ ಪದ, ಪದದ ಹಿಂದೆ ಉಚ್ಚರಿಸಲ್ಪಡುವ ಪದ. उपोच्चारितं पदम्। "धनुरुपपदमस्मै वेदमभ्यादिदेश" किरा० १८-४४। 2. ಹೆಸರಿನ ಜೊತೆಗೆ ಸೇರಿಸಲ್ಪಡುವ ಪದ, ಬಿರುದು, ಗೌರವದ ಪದ. "कथं निरुपपदमेव चाणक्यमिति ? न आर्यचाणक्यमिति" मुद्रा० ३। 3. "कर्मण्यण्" ಇತ್ಯಾದಿ ಸೂತ್ರಗಳಲ್ಲಿ ಸಪ್ತಮ್ಯಂತ ಪದದಿಂದ ವಾಚ್ಯವಾಗುವ ಅರ್ಥವನ್ನು ಬೋಧಿಸುವ (ಉಪಪದಸಂಜ್ಞೆಯುಳ್ಳ) ಪದ. कुम्भं करोति ಎಂಬಲ್ಲಿ "कर्मण्यण्" ಸೂತ್ರದ ಸಪ್ತಮ್ಯಂತ ಪದವಾಚ್ಯವಾದ ಕರ್ಮವನ್ನು ಬೋಧಿಸುವ कुम्भ ಪದವು ಉಪಪದ ಸಂಜ್ಞೆಯುಳ್ಳದ್ದು. ಇದರ ಯೋಗದಿಂದ ಧಾತುವಿನ ಮೇಲೆ "अण्" ಪ್ರತ್ಯಯ ಬರುವುದು.

**उपपदविभक्ति ಉಪಪದವಿಭಕ್ತಿ** (ಸ್ತ್ರೀ०) ಉಪಪದ ಯೋಗದಿಂದ ಬರುವ ವಿಭಕ್ತಿ, ಸಮೀಪದಲ್ಲಿರುವ ಪದದ ಯೋಗದಿಂದ ಬರುವ ವಿಭಕ್ತಿ. हरये नमः ಎಂಬಲ್ಲಿ नमः ಪದದ ಯೋಗದಿಂದ हरि ಪದಕ್ಕೆ ಬಂದಿರುವ ಚತುರ್ಥೀ ವಿಭಕ್ತಿಯು ಉಪಪದವಿಭಕ್ತಿ. "उपपदविभक्तेः कारकविभक्तिर्बलीयसी" परि० २-३-१६।

**उपपदसमास ಉಪಪದಸಮಾಸ** (ಪುಂ) "उपपद" ಪದದಲ್ಲಿ 3ನೆಯ ಅರ್ಥದಲ್ಲಿ ಹೇಳಿರುವ ಉಪಪದಗಳಿಗೆ ಕೃದಂತದೊಡನೆ ಹೇಳುವ ಸಮಾಸ. [ಕೃದಂತ ಪದಗಳಿಗೆ "सुप्" ಪ್ರತ್ಯಯ ಸೇರಿಸುವ ಮೊದಲೇ ಈ ಸಮಾಸ ಬರುವುದು]. कुम्भकारः ಎಂಬಲ್ಲಿ कुम्भ ಪದಕ್ಕೆ "अण्" ಪ್ರತ್ಯಯಾಂತ कार ಪದದೊಡನೆ ಮೊದಲು ಸಮಾಸ ಬಂದು ಅನಂತರ "सुप्" ಪ್ರತ್ಯಯ ಬಂದಿರುವುದು. "गतिकारकोपपदानां कृद्भिः सह समासवचनं प्राक् सुबुत्पत्तेः" परि० २-२-१९।

**उपपन्न ಉಪಪನ್ನ** (ವಿ०) 1. ಹೊಂದಲ್ಪಟ್ಟ, ಪಡೆಯಲ್ಪಟ್ಟ. उप + पद (गतौ) "क्तः" (३-२-१०२)। "अतीन्द्रियेष्वप्युपपन्नदर्शनो बभूव भावेषु दिलीपनन्दनः" रघु० ३-४१। 2. ಕೂಡಿಕೊಂಡಿರುವ, ಒಡಗೂಡಿರುವ, ಜೊತೆಯಲ್ಲಿ ಸೇರಿರುವ. "बभौ च सा तेन सतां मतेन श्रद्धेव साक्षाद्विधिनोपपन्ना" रघु० २-१६। 3. ಸ್ವಭಾವಸಿದ್ಧವಾದ, ಸಹಜವಾದ. "सर्वं सखे त्वय्युपपन्नमेतदुभे ममास्त्रे कुलिशं भवांश्च। वज्रं तपोवीर्यमहत्सु कुण्ठं त्वं सर्वतोगामि च साधकं च" कुमा० ३-१२। 4. ಯೋಗ್ಯವಾದ, ಯುಕ್ತವಾದ, ಅರ್ಹವಾದ.

"उपपन्नमिदमस्मिन् राजनि" शाकुं० २। 5. ಕೂಡಿರುವ, ತುಂಬಿರುವ, ಪೂರ್ಣವಾಗಿರುವ. "उपपन्नो गुणैः सर्वैः पुत्रो यस्य तु दत्रिमः। सह तैरेव तद्रिक्थं संप्राप्तोऽप्यन्यगोत्रतः" मनु० ९-१४१।

**उपपात ಉಪಪಾತ** (पुं०) 1. ಅಕಸ್ಮಾತ್ತಾಗಿ ಬರುವುದು, ಅನಿರೀಕ್ಷಿತವಾಗಿ ಬರುವುದು. 2. ನಾಶ, ಪ್ರಳಯ. 3. ತೊಂದರೆ, ಉಪದ್ರವ, ವಿಪತ್ತು. उप + पत्लृ (गतौ) "घञ्" (३-३-१८)।

**उपपातक ಉಪಪಾತಕ** (न०) ಮಹಾಪಾತಕಕ್ಕೆ ಸಮವಾದ ಪಾಪ, ಮಹಾಪಾತಕಕ್ಕಿಂತಲೂ ಕಡಿಮೆ ಶಿಕ್ಷೆಯುಳ್ಳ ಪಾಪ. पातयति नरके—पत्लृ (गतौ) + णिच् "ण्वुल्" (३-१-१३३)। "महापातकतुल्यानि पापान्युक्तानि यानि वै। तानि पातकसंज्ञानि तन्न्यूनमुपपातकम्"। **ಉಪಪಾತಕಗಳು 49:** 1. ಗೋವಧೆ. 2. ಅಯಾಜ್ಯಯಾಜನ. [ಅನರ್ಹನಿಂದ ಯಾಗ ಮಾಡಿಸುವುದು.] 3. ಪರಸ್ತ್ರೀಗಮನ. 4. ಆತ್ಮವಿಕ್ರಯ. 5. ಗುರುತ್ಯಾಗ. 6. ಮಾತೃತ್ಯಾಗ. 7. ಪಿತೃತ್ಯಾಗ. [ಇವರಿಗೆ ಶುಶ್ರೂಷೆ ಮಾಡದಿರುವುದು ತ್ಯಾಗ.] 8. ಸ್ವಾಧ್ಯಾಯತ್ಯಾಗ. [ಬ್ರಹ್ಮಚರ್ಯದಿಂದಿಲ್ಲದಿರುವುದು ಮತ್ತು ವೇದವನ್ನೂ ಮರೆಯುವುದು.] 9. ಅಗ್ನಿತ್ಯಾಗ. [ಅಗ್ನಿಕಾರ್ಯ ಮಾಡದಿರುವುದು.] 10. ಸುತತ್ಯಾಗ. [ಮಕ್ಕಳ ಯೋಗಕ್ಷೇಮಾದಿಗಳನ್ನು ನೋಡಿಕೊಳ್ಳದಿರುವುದು.] 11. ಅಣ್ಣನಿಗಿಂತ ಮುಂಚೆ ಮದುವೆಮಾಡಿಕೊಳ್ಳುವುದು. 12. ತಮ್ಮನ ಮದುವೆಯ ನಂತರ ಅಣ್ಣನು ಮದುವೆಯಾಗುವುದು. 13. ಅಂತಹವರಿಬ್ಬರಿಗೂ ಕನ್ಯೆಯನ್ನು ಕೊಡುವುದು. 14. ಅಂತಹವರಿಗೆ ಮದುವೆಮಾಡಿಸುವುದು. 15. ಬಾಹ್ಯಸುರತದಿಂದ ಕನ್ಯೆಯನ್ನು ಕೆಡಿಸುವುದು. 16. ಅನ್ಯಾಯಬಡ್ಡಿಯಿಂದ ಜೀವಿಸುವುದು. 17. ಬ್ರಹ್ಮಚರ್ಯದ ಲೋಪ. 18. ಕೆರೆ ಕಟ್ಟೆ ಇವುಗಳ ವಿಕ್ರಯ. 19. ಆರಾಮ(ತೋಟ)ದ ವಿಕ್ರಯ. 20. ಪತ್ನಿಯ ವಿಕ್ರಯ. 21. ಅಪತ್ಯ (ಪುತ್ರ) ವಿಕ್ರಯ. 22. ಸಕಾಲದಲ್ಲಿ ಉಪನಯನಾದಿ ಸಂಸ್ಕಾರವಿಲ್ಲದಿರುವುದು. 23. ಬಂಧುಗಳ ತ್ಯಾಗ. 24. ಸಂಬಳ ತೆಗೆದುಕೊಂಡು ವೇದಾಧ್ಯಯನ ಮಾಡಿಸುವುದು. 25. ಸಂಬಳ ಕೊಟ್ಟು ಪಾಠ ಹೇಳಿಸಿಕೊಳ್ಳುವುದು. 26. ನಿಷಿದ್ಧವಾದ ವಸ್ತುಗಳನ್ನು ವಿಕ್ರಯಿಸುವುದು. [ತಿಲ, ಅರಗು, ಹಾಲು, ಮೊಸರು ಮೊದಲಾದುವುಗಳ ವಿಕ್ರಯವು ಬ್ರಾಹ್ಮಣನಿಗೆ ನಿಷಿದ್ಧವು.] 27. ಗಣಿಗಳಲ್ಲಿ ಅಧಿಕಾರ. 28. ದೊಡ್ಡ ಯಂತ್ರಗಳನ್ನು ನಡೆಸುವುದು. 29. ಧಾನ್ಯಾದಿಗಳನ್ನು ನಾಶಪಡಿಸುವುದು. 30. ಹೆಂಗಸರನ್ನು ಅಕಾರ್ಯದಲ್ಲಿ ನಿಲ್ಲಿಸಿ ಅದರಿಂದ ಜೀವಿಸುವುದು. 31. ಮಾಟ ಶೂನ್ಯಗಳನ್ನು ಮಾಡಿಸುವುದು. 32. ಮಂತ್ರಗಳಿಂದ ವಶಪಡಿಸಿಕೊಳ್ಳುವುದು. 33. ಸೌದೆಗಾಗಿ ಹಸಿಮರವನ್ನು ಕಡಿಯುವುದು. 34. ರೋಗರುಜನಾದಿಗಳಿಲ್ಲದೆ ಇರುವಾಗ ದೇವರು ಅತಿಥಿಗಳನ್ನು ಬಿಟ್ಟು ತನಗಾಗಿ ಪಾಕಾದಿಗಳನ್ನು ಮಾಡುವುದು. 35. ಧಾರಾಗ್ನಿಯನ್ನು ರಕ್ಷಿಸಿಡದಿರುವುದು. 36. ಕಳ್ಳತನ. 37. ಸಾಲ ತೀರಿಸದಿರುವುದು. [ಸಾಲವು ಲೌಕಿಕ ಮತ್ತು ಅಲೌಕಿಕಗಳೆಂದು ಎರಡು ವಿಧ. ವಿವರಕ್ಕೆ "ऋण" ಪದದಲ್ಲಿ ನೋಡಿ.] 38. ನಿಷಿದ್ಧವಾದ ಆಹಾರ ಸೇವನೆ. 39. ಯಾವಾಗಲೂ ಸಂಗೀತ ನೃತ್ಯ ಇವುಗಳಲ್ಲಿ ಕಾಲ ಕಳೆಯುವುದು. 40. ಶ್ರುತಿಸ್ಮೃತಿವಿರುದ್ಧವಾದ ಶಾಸ್ತ್ರಾಧ್ಯಯನ. 41. ಧಾನ್ಯವನ್ನು ಕದಿಯುವುದು. 42. ಪಶುಗಳನ್ನು ಕದಿಯುವುದು. 43. ಚಿನ್ನಬೆಳ್ಳಿಗಳ ಚೌರ್ಯ. 44. ಸ್ತ್ರೀವಧೆ. 45. ಶೂದ್ರವಧೆ. 46. ವೈಶ್ಯವಧೆ 47. ಕ್ಷತ್ರಿಯವಧೆ. 48. ಹೆಂಡಕುಡುಕನ ಪತ್ನಿಯ ಸೇವನೆ. ಮತ್ತು 49. ನಾಸ್ತಿಕತೆ. [ದೇವರು, ಪರಲೋಕಗಳಿಲ್ಲವೆಂಬ ಬುದ್ಧಿ.] ಇವೆಲ್ಲವೂ ಮಹಾಪಾತಕಕ್ಕೆ ಸಮವಾದುವು. मनु० ११-५९-६६।

**उपपातकिन् ಉಪಪಾತಕಿನ್** (वि०) ಮಹಾಪಾತಕಕ್ಕೆ ಸಮವಾದ ಪಾಪವುಳ್ಳವನು. उपपातकमस्यास्ति — "इनिः" (५-२-११५)।

**उपपातिन् ಉಪಪಾತಿನ್** (वि०) ಅಕಸ್ಮಾತ್ತಾಗಿ ಬಂದ, ಅನಿರೀಕ್ಷಿತವಾಗಿ ಒದಗಿದ, ಹಠಾತ್ತಾಗಿ ಆಗಮಿಸಿದ. उप+पत्लृ (गतौ) "णिनिः" (३-१-१३४)।

**उपपादक ಉಪಪಾದಕ** (वि०) 1. ಯುಕ್ತಿಯಿಂದ ಸಮರ್ಥಿಸುವ, ಉಪಪತ್ತಿಯಿಂದ ಕೂಡಿದ, ಯುಕ್ತಿಯಿಂದ ಕೂಡಿದ. 2. ಉಂಟುಮಾಡುವ, ಸೃಷ್ಟಿಸುವ, ಉತ್ಪತ್ತಿಮಾಡುವ. उप+पद (गतौ) + णिच् "ण्वुल्" (३-१-१३३)।

**उपपादन ಉಪಪಾದನ** (न०) 1. ಯುಕ್ತಿಯಿಂದ ಸಮರ್ಥನೆ ಮಾಡುವುದು, ಕಾರಣ ತೋರಿಸಿ ಸಾಧನೆ ಮಾಡುವುದು. 2. ವಿಷಯವನ್ನು ವಿವರಿಸಿ ನಿರ್ಣಯಿಸುವುದು. उप+पद (गतौ) + णिच् "ल्युट्" (३-३-११५)। स्त्रियां "युच्" (३-३-१०७)। –पादना –ಪಾದನಾ.

**उपपादित ಉಪಪಾದಿತ** (ವಿಂ) 1. ಯುಕ್ತಿಯಿಂದ ಸಮರ್ಥಿಸಲ್ಪಟ್ಟ. 2. ವಿವರಿಸಿ ನಿರ್ಣಯಿಸಲ್ಪಟ್ಟ. उप + पद (गतौ) + णिच् "क्तः" (३-२-१०२)। 3. ಕಲ್ಪಿಸಲ್ಪಟ್ಟ, ಸೃಷ್ಟಿಸಲ್ಪಟ್ಟ. "दिष्टया त्वमसि मे धात्रा भीतेनेवोपपादितः" रघुं १५-१८।

**उपपादुक ಉಪಪಾದುಕ** (ಪುಂ) ದೇವತೆಗಳು, ದೃಷ್ಟ ಕಾರಣಗಳಿಲ್ಲದೆ ಅದೃಷ್ಟಕಾರಣಗಳಿಂದ ಹುಟ್ಟಿದವರು. उपपद्यन्ते — उप + पद (गतौ) + णिच् "उकञ्" (३-२-१५५)। ಜನಕರಾದ ತಾಯಿತಂದೆಗಳಿಲ್ಲದೆ ಕೇವಲ ಅದೃಷ್ಟಕಾರಣದಿಂದಲೇ ಹುಟ್ಟುವವರಾದುದರಿಂದ ದೇವತೆಗಳಿಗೆ ಈ ಹೆಸರು. "दिव्योपपादुका देवाः" अमं।

**उपपाद्य ಉಪಪಾದ್ಯ** (ವಿಂ) 1. ಉಪಪಾದಿಸಲ್ಪಡುವ, ಯುಕ್ತಿಯಿಂದ ಸಮರ್ಥಿಸಲ್ಪಡುವ. उप+पद(गतौ)+णिच् "यत्" (३-१-९७)। 2. ವಿವರಿಸಿ ನಿರ್ಣಯಿಸಲ್ಪಡುವ. 3. ನಿರ್ವಹಿಸಲ್ಪಡಬೇಕಾದ, ಮಾಡಲ್ಪಡಬೇಕಾದ. "कार्श्यं येन त्यजति विधिना स त्वयैवोपाद्यः" मेघं १-२९। (अव्यं)4. ಯುಕ್ತಿಯಿಂದ ಸಮರ್ಥಿಸಿ, ಕಾರಣ ತೋರಿಸಿ ಸಾಧನೆಮಾಡಿ. 5. ನಿರ್ಣಯ ಮಾಡಿ. उप + पद + णिच् "ल्यप्" (७-१-३७)।

**उपपुर ಉಪಪುರ** (ನಂ) ಶಾಖಾನಗರ, ನಗರದ ಬಡಾವಣೆ. उप समीपस्थं पुरम्।

**उपपुराण ಉಪಪುರಾಣ**(ನಂ) (ವ್ಯಾಸಮಹರ್ಷಿಪ್ರಣೀತವಾದ) ಹದಿನೆಂಟು ಪುರಾಣಗಳಿಗೆ ಸದೃಶವಾದ (ಇತರ ಋಷಿಗಳಿಂದ ರಚಿತವಾದ) ಹದಿನೆಂಟು ಉಪಪುರಾಣಗಳು. (1) ಸನತ್ಕುಮಾರ ಪುರಾಣ. (2) ನಾರಸಿಂಹ ಪುರಾಣ. (3) ವಾಯು ಪುರಾಣ. (4) ಶಿವಧರ್ಮ ಪುರಾಣ. (5) ಆಶ್ಚರ್ಯ ಪುರಾಣ. (6) ನಾರದೀಯ ಪುರಾಣ. (7) ನಂದಿಕೇಶ್ವರ ಪುರಾಣ. (8) ಔಶನಸ ಪುರಾಣ. (9) ಕಾಪಿಲ ಪುರಾಣ. (10) ವಾರುಣ ಪುರಾಣ. (11) ಕಾಲಿಕಾ ಪುರಾಣ. (12) ಪಾದ್ಮ ಪುರಾಣ. (13) ದೈವ ಪುರಾಣ. (14) ಸೌರ ಪುರಾಣ. (15) ಮಾಹೇಶ್ವರ ಪುರಾಣ. (16) ಶಾಂಬ ಪುರಾಣ. (17) ಪಾರಾಶರ ಪುರಾಣ. (18) ಮಾರೀಚ ಪುರಾಣ. ಇವು ಅಷ್ಟಾದಶ ಉಪಪುರಾಣಗಳು. *

**उपपुष्पिका ಉಪಪುಷ್ಪಿಕಾ** (ಸ್ತ್ರೀಂ) ಆಕಳಿಕೆ, ಆವಳಿಕೆ. उपगता पुष्पमिव विकासभावम्। संज्ञायां "कन्"। "हाफिकाचोपपुष्पिका" हारां।

**उपप्रदान ಉಪಪ್ರದಾನ** (ನಂ) 1. ಉತ್ಕೋಚ, ಲಂಚ, ತನ್ನ ಕಾರ್ಯ ಸಾಧಿಸಿಕೊಳ್ಳಲು ಕೊಡುವ ಹಣ ಮೊದಲಾದುದು. "उपप्रदानैर्मार्जारोऽहितकृत् प्रार्थ्यते जनैः" पञ्चतं १-९५। 2. ಕಪ್ಪ, ಕಾಣಿಕೆ. 3. ತೆರಿಗೆ, ವಸ್ತುಗಳ ಮಾರಾಟ ಮೊದಲಾದುವುಗಳ ಮೇಲೆ ವಿಧಿಸುವ ಸುಂಕ. 4. ಸಮೀಪದಲ್ಲಿ ಕೊಡುವಿಕೆ.

**उपप्रलोभन ಉಪಪ್ರಲೋಭನ** (ನಂ) 1. ಆಸೆ ಹುಟ್ಟಿಸುವುದು, ಮರುಳು ಮಾಡುವುದು. उप+प्र+लुभ (विमोहने) "ल्युट्" (३-३-११५)। 2. ಮರುಳುಮಾಡಿ ಸ್ವಾಧೀನಪಡಿಸಿಕೊಳ್ಳಲು ಕೊಡುವ ಧನ, ಪುಸಲಾವಣೆಗಾಗಿ ಕೊಡುವ ಲಂಚ. उपप्रलोभ्यते-ऽनेन — उप+प्र+लुभ करं "ल्युट्" (३-३-११७)।

**उपप्लव ಉಪಪ್ಲವ** (ಪುಂ) 1. ರಾಹು. उप+प्लुङ् (गतौ) "अच्" (३-१-१३४)। "केतूपप्लवभौममन्दगतयः षष्ठे तृतीये शुभाः"। 2. ಸೂರ್ಯಚಂದ್ರರ ಗ್ರಹಣ. "चन्द्रमिवोपप्लवान्मुक्तम्" विक्रं १-११। 3. ತೊಂದರೆ, ಪೀಡೆ, ಹಿಂಸೆ. "उपप्लवाय लोकानां धूमकेतुरिवोत्थितः" कुमां २-३२। 4. ಅನಿಷ್ಟವನ್ನು ಸೂಚಿಸುವ ಬಿರುಗಾಳಿ, ಕಾಳ್ಗಿಚ್ಚು, ಧೂಮಕೇತು ಮೊದಲಾದುದು. "कच्चिन्न वाय्वादिरुपप्लवो वः श्रमच्छिदामाश्रमपादपानाम्" रघुं ५-६। 5. ಅಡ್ಡಿ, ವಿಘ್ನ, ಆತಂಕ. "तौ (अर्थकामौ) हि तत्त्वावबोधस्य दुरुच्छेदावुपप्लवौ" किरां ११-२०। 6. ಕಷ್ಟ, ವಿಪತ್ತು, ತೊಂದರೆ. "जीवन् पुनः शश्वदुपप्लवेभ्यः प्रजाः प्रजानाथ पितेव पासि" रघुं २-४८।

* ಈ ಪುರಾಣಗಳು ಮತ್ತು ಉಪಪುರಾಣಗಳ ಮತ್ತು ಅವುಗಳಲ್ಲಿನ ಗ್ರಂಥಸಂಖ್ಯೆಯ ವಿಷಯದಲ್ಲಿ ಒಂದೊಂದು ಗ್ರಂಥದಲ್ಲಿಯೂ ಒಂದೊಂದು ರೀತಿ ಇರುವುದರಿಂದ ಹೀಗೆಂದು ನಿರ್ಣಯಿಸಿ ಹೇಳಲು ಸಾಧ್ಯವಾಗುವುದಿಲ್ಲ. ದೇವೀಭಾಗವತದಲ್ಲಿ (ಸ್ಕಂಧ 1 ಅಧ್ಯಾಯ 3) मद्वयम् — (i) ಮತ್ಸ್ಯ (1) ಮತ್ತು (ii) ಮಾರ್ಕಂಡೇಯ (2), भद्वयम्—(i) ಭವಿಷ್ಯ (3) ಮತ್ತು (ii) ಭಾಗವತ (4), ब्रत्रयम्—(i) ಬ್ರಹ್ಮಾಂಡ (5), (ii) ಬ್ರಹ್ಮವೈವರ್ತ (6) ಮತ್ತು (iii) ಬ್ರಾಹ್ಮ (7), वचतुष्टयम्—(i) ವಿಷ್ಣು ಪುರಾಣ (8), (ii) ವಾಮನ (9), (iii) ವಾಯು (10) ಮತ್ತು (iv) ವಾರಾಹಪುರಾಣಗಳು (11), ಆಗ್ನೇಯ (12), ನಾರದೀಯ (13), ಪಾದ್ಮ (14), ಲೈಂಗ (15), ಕೂರ್ಮ (16), ಸ್ಕಾಂದ (17), ಗಾರುಡ (18) ಗಳೆಂದು ಉಕ್ತವಾಗಿದೆ. ಶ್ರೀಮದ್ಭಾಗವತದಲ್ಲಿ (ಸ್ಕಂಧ 12 ಅಧ್ಯಾಯ 13) ಉಕ್ತವಾಗಿರುವ ಈ 18 ಪುರಾಣಗಳಲ್ಲಿ ವಾಯು ಪುರಾಣಕ್ಕೆ ಬದಲಾಗಿ ಶೈವಪುರಾಣವು ಸೇರಿಸಲ್ಪಟ್ಟಿದೆ. ಹೀಗೆಯೇ ಗ್ರಂಥ (ಶ್ಲೋಕ) ಸಂಖ್ಯೆಯೂ ವಿಭಿನ್ನವಾಗಿದೆ.

"उपप्लवः सैंहिकेये विप्लवोत्पातयोरपि" मेदि०। 7. ಭಯ, ಹೆದರಿಕೆ. "नृपा इवोपप्लविनः परेभ्यो धर्मोत्तरं मध्यममाश्रयन्ते" रघु० १३-७। 8. ಕೇತು. "उपप्लवः कचः केतुराश्लेषाभव आहिकः" हारा०।

**उपप्लविन् ಉಪಪ್ಲವಿನ್** (वि०) ಭಯದಿಂದ ಕೂಡಿದ, ಹೆದರಿರುವ. उपप्लवोऽस्यास्ति–"इनिः" (५-२-११५)। "नृपा इवोपप्लविनः परेभ्यो धर्मोत्तरं मध्यममाश्रयन्ते" रघु० १३-७।

**उपप्लाव्य ಉಪಪ್ಲಾವ್ಯ** (नं०) 1. ಪಾಂಡವರು ಅಜ್ಞಾತ ವಾಸಾನಂತರ ವಾಸಮಾಡಿದ ಒಂದು ನಗರ. "राज्ञस्तु वचनं श्रुत्वा धृतराष्ट्रस्य सञ्जयः। उपप्लाव्यं ययौ द्रष्टुं पाण्डवानमितौजसः" भा० उद्योग० २३-१। (वि०) 2. ಅವಶ್ಯವಾಗಿ ತೊಂದರೆಪಡಿಸಬೇಕಾದ, ಅವಶ್ಯವಾಗಿ ಪೀಡಿಸಲ್ಪಡುವ. उप+प्लुङ् (गतौ) "ण्यत्" (३-१-१२५)।

**उपप्लुत ಉಪಪ್ಲುತ** (वि०) ತೊಂದರೆಪಡಿಸಲ್ಪಟ್ಟ, ಪೀಡಿಸಲ್ಪಟ್ಟ, ಹಿಂಸಿಸಲ್ಪಟ್ಟ. उप+प्लुङ् (गतौ) "क्तः" (३-२-१०२)। "उपप्लुतं पातुमदो मदोद्धतैस्त्वमेव विश्वम्भर विश्वमीशिषे" माघ० १-३८।

**उपबन्ध ಉಪಬಂಧ** (पुं०) 1. ಕೂಡಿಸುವುದು, ಹೆಚ್ಚಿಗೆ ಸೇರಿಸುವುದು. उप+बन्ध (बन्धने) "घञ्" (३-३-१८)। 2. ಪಕ್ಕದ ಗಂಟು, ಒಂದು ಗಂಟು ಭದ್ರವಾಗಿ ನಿಲ್ಲಲು ಅದರ ಪಕ್ಕದಲ್ಲಿ ಹಾಕುವ ಮತ್ತೊಂದು ಸಣ್ಣ ಗಂಟು. उप समीपे बन्धः।

**उपबर्ह ಉಪಬರ್ಹ** (पुं०) 1. ತಲೆದಿಂಬು. उपबर्ह्यते – बृह (वृद्धौ) "घञ्" (३-३-१९)। 2. ಕೆಳಕ್ಕೆ ಅದುಮುವುದು, ಪೀಡಿಸುವುದು, ಜುಲುಮು ಮಾಡುವುದು, ಹಿಂಡುವುದು. उप+बर्ह (हिंसायाम्) "घञ्" (३-३-१८)। भावे "ल्युट्" (३-३-११५)। –बर्हणम् –ಬರ್ಹಣಮ್. "उच्छीर्षमुपबर्हणम्" वैज०।

**उपबृंहण ಉಪಬೃಂಹಣ** (नं०) ಹೆಚ್ಚುವುದು, ಅಧಿಕವಾಗುವುದು. उप+बृहि (वृद्धौ) "ल्युट्" (३-३-११५)।

**उपबृंहित ಉಪಬೃಂಹಿತ** (वि०) ಹೆಚ್ಚಾದ, ಅಧಿಕವಾದ. उप+बृहि (वृद्धौ) "क्तः" (३-४-७२)।

**उपभुक्त ಉಪಭುಕ್ತ** (वि०) 1. ಅನುಭವಿಸಲ್ಪಟ್ಟ, ಉಪಯೋಗಿಸಲ್ಪಟ್ಟ. उप+भुज (पालनाभ्यवहारयोः) "क्तः" (३-२-१०२)। "साफल्यं ययुरमराङ्गनोपभुक्ताः" किरा० ७-२८। 2. ತಿನ್ನಲ್ಪಟ್ಟ. "अर्धोपभुक्तेन बिसेन जायां संभावयामास रथाङ्गनामा" कुमा० ३-३७।

**उपभुक्ति ಉಪಭುಕ್ತಿ** (स्त्री०) 1. ಅನುಭವಿಸುವಿಕೆ, ಉಪಯೋಗಿಸುವಿಕೆ. 2. ತಿನ್ನುವಿಕೆ, ಊಟ ಮಾಡುವುದು. उप + भुज (पालनाभ्यवहारयोः) "क्तिन्" (३-३-९४)।

**उपभुञ्जान ಉಪಭುಂಜಾನ** (वि०) ಅನುಭವಿಸುತ್ತಿರುವ. उप+भुज (पालनाभ्यवहारयोः) "शानच्" (३-२-१२४)। "तपसामुपभुञ्जाना फलान्यपि तपस्विनः" कुमा० ६-१०।

**उपभूषण ಉಪಭೂಷಣ** (नं०) ಒಡವೆಗೆ ಸಮಾನವಾದ ಘಂಟೆ, ಚಾಮರ, ಛತ್ರಿ ಮುಂತಾದುದು. उपमितं भूषणेन। "घण्टाचामरकुम्भादिपात्रोपकरणादिकम्। तद्भूषणान्तरे दद्याद्यस्मात्तदुपभूषणम्"।

**उपभृत् ಉಪಭೃತ್** (स्त्री०) ಅರಳೀಮರದ ಒಂದು ಯಜ್ಞಪಾತ್ರೆ, ಯಾಗದಲ್ಲಿ ಹೋಮದ ತುಪ್ಪವನ್ನು ಇಟ್ಟುಕೊಳ್ಳುವ ಪಾತ್ರೆ, ಆಜ್ಯಪಾತ್ರೆ. उपबिभर्ति – उप+डु भृञ् (धारणपोषणयोः) "क्विप्" (३-२-७६)।

**उपभोग ಉಪಭೋಗ** (पुं०) 1. ವಿಷಯಾನುಭವ, ಸುಖಪಡುವಿಕೆ. उप+भुज (पालनाभ्यवहारयोः) "घञ्" (३-३-१८)। "न जातु कामः कामानामुपभोगेन शाम्यति" मनु० २-९४। 2. ಉಪಯೋಗಿಸುವಿಕೆ. "निष्ठ्यूतश्चरणोपभोगसुलभो लाक्षारसः केनचित्" शाकु० ४-४। 3. ಸ್ತ್ರೀಸಂಗಮ, ಸಂಭೋಗ. "उपस्थितश्चारुवपुस्तदीयं कृत्वोपभोगोत्सुकयेव लक्ष्म्या" रघु० १४-२४।

**उपभोगिन् ಉಪಭೋಗಿನ್** (वि०) ವಿಷಯಾನುಭವವುಳ್ಳ, ಸುಖವನ್ನು ಅನುಭವಿಸುವ. उपभोगोऽस्यास्ति -"इनिः" (५-२-११५)।

**उपभोग्य ಉಪಭೋಗ್ಯ** (वि०) ಅನುಭವಿಸಲು ಯೋಗ್ಯವಾದ. उप + भुज (पालनाभ्यवहारयोः) "ण्यत्" (३-१-१२४)। "असूत सा नागवधूपभोग्यं मैनाकमम्भोनिधिबद्धसख्यम्" कुमा० १-२०।

**उपभोजिन् ಉಪಭೋಜಿನ್** (वि०) ತಿನ್ನುವ, ಊಟ ಮಾಡುವ. उप+भुज (पालनाभ्यवहारयोः) "णिनिः" (३-२-७८)। "उच्छिन्नबलिभिक्षेषु भिन्नकांस्योपभोजिषु" सुश्रुत०।

**उपभोज्य ಉಪಭೋಜ್ಯ** (नं०) ತಿನ್ನಲು ಯೋಗ್ಯವಾದ, ಊಟಮಾಡಲು ಅರ್ಹವಾದ. उप+भुज (पालनाभ्यवहारयोः) "ण्यत्" (३-१-१२४)।

**उपमन्त्रण** ಉಪಮಂತ್ರಣ (ನಂ) 1. ಆಹ್ವಾನ, ಕರೆ. उप+मन्त्रि (गुप्तभाषणे) "ल्युट्" (३-३-११५)। 2. ಸವಿನಾತಿನಿಂದ ಬೇಡುವುದು, ಮೃದುವಚನದಿಂದ ಮನವೊಲಿಸುವುದು. "भासनोपसंभाषाज्ञानविमत्युपमन्त्रणेषु वदः" पा० सू० १-३-४७। 3. ಸಮೀಪದಲ್ಲಿ ರಹಸ್ಯವಾಗಿ ಮಾತನಾಡುವುದು.

**उपमन्यु** ಉಪಮನ್ಯು (पुं०) ಧೌಮ್ಯಮಹರ್ಷಿಯ ಒಬ್ಬ ಶಿಷ್ಯ. [ಈ ಋಷಿಯು ತನ್ನನ್ನು ಪರೀಕ್ಷಿಸಲು ಧೌಮ್ಯರ್ಷಿಯು ಕೊಟ್ಟ ಕಷ್ಟಗಳನ್ನೆಲ್ಲಾ ಸಹಿಸಿಕೊಂಡು ಅವರ ಮೆಚ್ಚಿಗೆಗೆ ಪಾತ್ರನಾಗಿ ವಿದ್ಯಾಭ್ಯಾಸ ಮಾಡಿದನು.]

**उपमर्द** ಉಪಮರ್ದ (पुं०) 1. ಉಜ್ಜುವುದು, ತಿಕ್ಕುವುದು. उप+मृद (क्षोदे) "घञ्" (३-३-१८)। 2. ಹಿಂಡುವುದು, ಹಿಸುಕುವುದು. "अन्यासु तावदुपमर्दसहासु भृङ्ग लोलं विनोदय मनः सुमनोलतासु" सा० द०। 3. ಧಾನ್ಯಗಳ ಹೊಟ್ಟು ಬಿಡಿಸುವುದು. भावे "ल्युट्" (३-३-११५)। -मर्दनम् -ಮರ್ದನಮ್.

**उपमा** ಉಪಮಾ (स्त्री०) 1. ಸಾದೃಶ್ಯ, ಹೋಲಿಕೆ. उपमीयते—उप+मा (माने) भावे "अङ्" (३-३-१०६)। "उपमां ययावरुणदीधितिभिः परिमृष्टमूर्धनि तमालतरौ" किरा० ६-२३। 2. (ಉಪಮಾನೋಪಮೇಯಗಳ) ಸಾಧಾರಣ ಧರ್ಮ. उपमीयतेऽनया—उप+मा कर० "अङ्" (३-३-१०६)। 3. ಅರ್ಥಾಲಂಕಾರದ ಒಂದು ಭೇದ; ಪ್ರಸಿದ್ಧೋಪಮಾನೋಪಮೇಯಗಳಿಗೆ ಚಮತ್ಕಾರಜನಕವಾದ ಸಾದೃಶ್ಯವಿರುವಕಡೆ ಉಪಮಾಲಂಕಾರವಾಗುವುದು. "उपमा यत्र सादृश्यलक्ष्मीरुल्लसति द्वयोः। हंसीव कृष्ण ते कीर्तिः स्वर्गं गामवगाहते" चन्द्रा०। 4. ಉಪಮಾನ, ಹೋಲಿಕೆಯ ವಸ್ತು. "यथा दीपो निवातस्थो नेङ्गते सोपमा स्मृता" गीता ६-१९। "अपि लङ्घितमध्वानं बुबुधे न बुधोपमः" रघु० १-४७।

**उपमातृ** ಉಪಮಾತೃ (स्त्री०) 1. ಧಾತ್ರಿ, ದಾದಿ, ಸಾಕುತಾಯಿ. उपमिता मात्रा। [ತಾಯಿಗೆ ಸಮಾನವಾಗಿ ಸಾಕುವುದರಿಂದ ಈ ಹೆಸರು]. 2. ತಾಯಿಗೆ ಸಮಾನರಾದ—(1) ತಾಯಿಯ ಸಹೋದರಿಯರು. (2) ತಂದೆಯ ಸಹೋದರಿಯರು. (3) ಚಿಕ್ಕಪ್ಪ ದೊಡ್ಡಪ್ಪಂದಿರ ಹೆಂಡತಿಯರು. (4) ಸೋದರ ಮಾವನ ಹೆಂಡತಿ. (5) ಹೆಂಡತಿಯ ತಾಯಿ ಮತ್ತು (6) ಹಿರಿಯಣ್ಣನ ಹೆಂಡತಿ. "मातृष्वसा मातुलानी पितृव्यस्त्री पितृष्वसा। श्वश्रूः पूर्वजपत्नी च मातृतुल्याः प्रकीर्तिताः"। (वि०) 3. ಹೋಲಿಸುವವನು, ಸಾದೃಶ್ಯಕೊಡುವವನು. उपमाति—उप+मा (माने) "तृच्" (३-१-१३३)। "अस्याधिकस्योपमयोपमाता" नैष० ७-१६। स्त्रियां "ङीप्" (४-१-५)। -मात्री -ಮಾತ್ರೀ.

**उपमान** ಉಪಮಾನ (ನಂ) 1. ಸಾದೃಶ್ಯ, ಹೋಲಿಕೆ, ಸಾಮ್ಯ. उप+मा (माने) भावे "ल्युट्" (३-३-११५)। (वि०) 2. ಹೋಲಿಕೆಯ ವಸ್ತು, (ಉಪಮೇಯಕ್ಕೆ) ಯಾವುದರ ಹೋಲಿಕೆ ಕೊಡಲ್ಪಡುವುದೋ ಅದು. उपमीयतेऽनेन—उप+मा कर० "ल्युट्" (३-३-११७)। चन्द्र इव मुखम् ಎಂಬಲ್ಲಿ ಮುಖಕ್ಕೆ ಚಂದ್ರನ ಸಾದೃಶ್ಯವನ್ನು ಕೊಡುವುದರಿಂದ ಚಂದ್ರನು ಉಪಮಾನ. "उपमानस्यापि सखे प्रत्युपमानं वपुस्तस्याः" विक्र० २-३। 3. ಸಾದೃಶ್ಯಜ್ಞಾನ, ಹೋಲಿಕೆಯಿರುವುದೆಂಬ ತಿಳವಳಿಕೆ, ಉಪಮಿತಿಗೆ ಸಾಧನವಾದ ಜ್ಞಾನ, ಪ್ರತ್ಯಕ್ಷಾದಿ ಪ್ರಮಾಣಗಳಲ್ಲೊಂದು; ಗವಯಪದವಾಚ್ಯವಾದ ಪ್ರಾಣಿ ಯಾವುದೆಂದು ತಿಳಿಯದವನು "गोसदृशो गवयः" ಎಂಬ ವಾಕ್ಯವನ್ನು ಕೇಳಿದಾಗ ಗವಯದಲ್ಲಿ ಗೋಸಾದೃಶ್ಯಜ್ಞಾನವುಂಟಾಗಿ ಅದರ (ಗವಯ ಪದದ) ಅರ್ಥವನ್ನು ತಿಳಿದುಕೊಳ್ಳುವುದರಿಂದ ಈ ಸಾದೃಶ್ಯಜ್ಞಾನವು ಉಪಮಾನ. ಇದು ಉಪಮಿತಿಗೆ ಸಾಧನ (ಕರಣ)ವಾಗುವುದು. संज्ञासंज्ञिसंबन्धप्रतीतिरुपमितिः। उपमितिकरणमुपमानम्।

**उपमित** ಉಪಮಿತ (वि०) 1. ಹೋಲಿಸಲ್ಪಟ್ಟ, ಹೋಲಿಕೆಕೊಡಲ್ಪಟ್ಟ (ಉಪಮೇಯ). उप+मा (माने) "क्तः" (३-२-१०२)। पुरुषो व्याघ्र इव ಎಂಬಲ್ಲಿ ಪುರುಷನಿಗೆ ವ್ಯಾಘ್ರದ ಹೋಲಿಕೆ ಕೊಟ್ಟಿರುವುದರಿಂದ ಪುರುಷನು ಉಪಮಿತ (ಉಪಮೇಯ). "उपमितं व्याघ्रादिभिः सामान्याप्रयोगे" पा० सू० २-१-५६। 2. ಉಪಮಾನಪ್ರಮಾಣದಿಂದ ತಿಳಿಯಲ್ಪಟ್ಟ. "गोसदृशो गवयः" ಎಂಬ ವಾಕ್ಯದಿಂದ ಗವಯದಲ್ಲಿ ಗೋಸಾದೃಶ್ಯಜ್ಞಾನವುಂಟಾಗಿ गवयो गोपदवाच्यः ಎಂದು ಗವಯಪದಾರ್ಥವು ಉಪಮಾನಪ್ರಮಾಣದಿಂದ ತಿಳಿಯಲ್ಪಡುವುದರಿಂದ ಗವಯವು ಉಪಮಿತ.

**उपमिति** ಉಪಮಿತಿ (स्त्री०) 1. ಸಾದೃಶ್ಯ, ಸಾಮ್ಯ, ಹೋಲಿಕೆ. उप+मा (माने) भावे "क्तिन्" (३-३-९४)। "कुतः परं भव्यमहो महीयसी तदाननस्योप-

मितौ दरिद्रता" नैष० १-२४। 2. ಸಾಧಾರಣ ಧರ್ಮ. उप + मा ಕರಂ "क्तिन्"। 3. ಉಪಮಾಲಂಕಾರ. 4. ಸಾದೃಶ್ಯಜ್ಞಾನದ ಫಲ; ಸಾದೃಶ್ಯಜ್ಞಾನದಿಂದುಂಟಾಗುವ ಗವಯಾದಿ ಪದಾರ್ಥಜ್ಞಾನ. ಗವಯದಲ್ಲಿ ಗೋಸಾದೃಶ್ಯ ಜ್ಞಾನವುಂಟಾಗಿ ಗವಯ ಪದವಾಚ್ಯವು ಯಾವುದೆಂದು ತಿಳಿಯುವುದೇ ಉಪಮಿತಿ.

**उपमेय ಉಪಮೇಯ** (न०) ಪ್ರಕೃತ, ವರ್ಣ್ಯ, ಪ್ರಸಿದ್ಧವಾದ ಒಂದು ವಸ್ತುವಿನೊಡನೆ ಹೋಲಿಸಲ್ಪಡುವ ವಸ್ತು. चन्द्र इव मुखम् ಎಂಬಲ್ಲಿ ಮುಖಕ್ಕೆ ಚಂದ್ರನ ಹೋಲಿಕೆ ಕೊಡುವುದರಿಂದ ಮುಖವು ಉಪಮೇಯ. उपमीयतेऽसौ—उप+मा (माने) "यत्" (३-१-९७)। "भूयिष्ठमासीदुपमेयकान्तिर्मयूरपृष्ठाश्रयिणा गुहेन" रघु० ६-४।

**उपमेयोपमा ಉಪಮೇಯೋಪಮಾ** (स्त्री०) ಅರ್ಥಾಲಂಕಾರದ ಒಂದು ಭೇದ; ಒಂದು ವಾಕ್ಯದಲ್ಲಿ ವರ್ಣಿತವಾದ ಪ್ರಸಿದ್ಧೋಪಮಾನ ಮತ್ತು ಉಪಮೇಯಗಳನ್ನು ವಾಕ್ಯಾಂತರದಲ್ಲಿ ಪರ್ಯಾಯವಾಗಿ ಉಪಮಾನವನ್ನು ಉಪಮೇಯವನ್ನಾಗಿಯೂ, ಉಪಮೇಯವನ್ನು ಉಪಮಾನವನ್ನಾಗಿಯೂ ವರ್ಣಿಸುವುದು ಉಪಮೇಯೋಪಮಾಲಂಕಾರವಾಗುವುದು. "पर्ययेण द्वयोस्तच्चेदुपमेयोपमा मता। धर्मोऽर्थ इव पूर्णश्रीरर्थो धर्म इव त्वयि" चन्द्रा०। ಇಲ್ಲಿ ಮೊದಲನೆಯ ವಾಕ್ಯದಲ್ಲಿ ಧರ್ಮವು ಉಪಮೇಯವಾಗಿಯೂ, ಅರ್ಥವು ಉಪಮಾನವಾಗಿಯೂ ವರ್ಣಿಸಲ್ಪಟ್ಟು ಎರಡನೆಯ ವಾಕ್ಯದಲ್ಲಿ ಅರ್ಥವು ಉಪಮೇಯವಾಗಿಯೂ, ಧರ್ಮವು ಉಪಮಾನವಾಗಿಯೂ ವರ್ಣಿತವಾಗಿರುವುದರಿಂದ ಉಪಮೇಯೋಪಮಾಲಂಕಾರ.

**उपयत् ಉಪಯತ್** (वि०) ಸಮೀಪಕ್ಕೆ ಬಂದು ಸೇರುವ, ಹತ್ತಿರಕ್ಕೆ ಬರುವ. उप + इण् (गतौ) "शतृ" (३-२-१२४)। स्त्रियां "ङीप्" (४-१-६)। –यती –ಯತೀ. "ललिताः सखीरिव बृहज्जघनाः सुरनिम्नगामुपयतीः सरितः" किरा० ६-१६।

**उपयन्तृ ಉಪಯಂತೃ** (पु०) (ವಿವಾಹ ಮಾಡಿಕೊಳ್ಳುವ) ಪತಿ, ಮದುವಣಿಗ, ವರ. उप+यम (उपरमे) "तृच्" (३-१-१३३)। "अथोपयन्तारमलं समाधिना न रत्नमन्विष्यति मृग्यते हि तत्" कुमा० ५-४५।

**उपयम ಉಪಯಮ** (पु०) 1. ವಿವಾಹ, ಮದುವೆ. उप+यम (उपरमे) "अप्" (३-३-६३)। "कन्यात्वजातोपयमा सलज्जा नवयौवना" सा० द०। [ವಿವರಕ್ಕೆ "उद्वाह" ಪದದಲ್ಲಿ ನೋಡಿ.] 2. ಅಂಕೆ, ಹತೋಟಿ, ನಿರ್ಬಂಧ. (अव्य०)3. ಯಮುನ ಸಮೀಪ. "उपयमं नयतीति मन्ये" चं० रा०।

**उपयमन ಉಪಯಮನ** (न०) 1. ವಿವಾಹ, ಮದುವೆ. उप + यम (उपरमे) "ल्युट्" (३-३-११५)। 2. ಹತೋಟಿಗೆ ತರುವುದು, ನಿರ್ಬಂಧದಲ್ಲಿಡುವುದು.

**उपयाचक ಉಪಯಾಚಕ** (वि०) ಹತ್ತಿರಕ್ಕೆ ಬಂದು ಬೇಡುವ, ಸಮೀಪಕ್ಕೆ ಬಂದು ಯಾಚಿಸುವ. उप+टु याचृ (याच्ञायाम्) "ण्वुल्" (३-१-१३३)।

**उपयाचन ಉಪಯಾಚನ** (न०) ಹತ್ತಿರಕ್ಕೆ ಬಂದು ಯಾಚಿಸುವುದು, ಸಮೀಪಕ್ಕೆ ಬಂದು ಬೇಡುವುದು. उप+टु याचृ (याच्ञायाम्) "ल्युट्" (३-३-११५)।

**उपयाचित ಉಪಯಾಚಿತ** (न०) 1. ಹತ್ತಿರಕ್ಕೆ ಬಂದು ಬೇಡುವುದು. उप+टु याचृ (याच्ञायाम्) "क्तः" (३-३-११४)। 2. ದೇವರ ಸನ್ನಿಧಿಗೆ ಬಂದು ಪ್ರಾರ್ಥಿಸಿಕೊಳ್ಳುವುದು, ಹರಕೆ. (वि०) 3. ಹತ್ತಿರಕ್ಕೆ ಬಂದು ಯಾಚಿಸಲ್ಪಟ್ಟ, ಸಮೀಪದಲ್ಲಿ ಪ್ರಾರ್ಥಿಸಲ್ಪಟ್ಟ. कर्म० "क्तः" (३-२-१०२)। "त्वया पुरस्तादुपयाचितो यः सोऽयं वटः श्याम इति प्रतीतः" रघु० १३-५३। 4. ಇಷ್ಟಸಿದ್ಧಿಗಾಗಿ ದೇವತೆಗಳಿಗೆ ಕೊಡುವ ಬಲಿ, ದೇವತೆಗಳಿಗೆ ಅರ್ಪಿಸುವುದಾಗಿ ಹೇಳಿಕೊಂಡ ಪಶು ಮೊದಲಾದುದು. "उपयाचितदानेन यतो देवा अभीष्टदाः" पञ्चतं०। "अद्य मया भगवत्याः करालायाः प्रागुपयाचितं स्त्रीरत्नमुपहर्तव्यम्" मालती० ५।

**उपयाचितक ಉಪಯಾಚಿತಕ** (न०) "उपयाचित" ಪದದ ಅರ್ಥ. "कृतविविधदेवतोपयाचितकानि सिद्धायतनानि" काद०। "यद्दीयते तु देवेभ्यो मनोराज्यस्य सिद्धये। उपयाचितकं दिव्यदोहदं तद्विदुर्बुधाः" हारा०।

**उपयात ಉಪಯಾತ** (वि०) ಹತ್ತಿರಕ್ಕೆ ಬಂದ. उप+या (प्रापणे) "क्तः" (३-४-७२)।

**उपयान ಉಪಯಾನ** (न०) ಸಮೀಪಕ್ಕೆ ಬರುವುದು, ಹತ್ತಿರಕ್ಕೆ ಬರುವುದು. उप + या (प्रापणे) "ल्युट्" (३-३-११५)। "हरोपयाने त्वरिता बभूव स्त्रीणां प्रियालोकफलो हि वेषः" कुमा० ७-२२।

**उपयाम ಉಪಯಾಮ** (पु०) 1. ವಿವಾಹ, ಮದುವೆ. उप+यम (उपरमे) "घञ्" (३-३-१८)। 2. ಯಜ್ಞದ ಒಂದು ಮರದ ಪಾತ್ರೆ.

**उपयायिन् ಉಪಯಾಯಿನ್** (वि०) ಸಮೀಪಿಸುವ, ಹತ್ತಿರಕ್ಕೆ ಬರುವ. उप+या (प्रापणे) "णिनिः" (३-१-१३४)।

**उपयुक्त ಉಪಯುಕ್ತ** (वि०) 1. ಉಪಯೋಗಿಸಲ್ಪಟ್ಟ, ಅನುಭವಿಸಲ್ಪಟ್ಟ. उप + युजिर् (योगे) "क्तः" (३-२-१०२)। 2. ಉಪಯೋಗಕ್ಕೆ ಬರುವ, ಕೆಲಸಕ್ಕೆ ಬರಬಹುದಾದ. 3. ನ್ಯಾಯವಾದ, ಯೋಗ್ಯವಾದ.

**उपयुज्यमान ಉಪಯುಜ್ಯಮಾನ** (वि०) ಉಪಯೋಗಿಸಲ್ಪಡುತ್ತಿರುವ. उप+युजिर् (योगे) कर्म० "शानच्" (३-२-१२४)।

**उपयोग ಉಪಯೋಗ** (पु०) 1. ಉಪಕಾರ, ಕಾರ್ಯಸಿದ್ಧಿಗೆ ಅನುಕೂಲವಾಗಿರುವಿಕೆ. उप+युजिर् (योगे) "घञ्" (३-३-१८)। "व्रजन्ति विद्याधरसुन्दरीणामनङ्गलेखक्रिययोपयोगम्" कुमा० १-७। 2. ಆಚರಣೆ, ಕಾರ್ಯಸಿದ್ಧಿಗೆ ಅನುಕೂಲವಾದ ಕೆಲಸ. 3. ಭೋಜನ. "औषधान्नविहाराणामुपयोगं सुखावहम्"। 4. ನಿಯಮಪೂರ್ವಕವಾದ ವಿದ್ಯಾ ಸ್ವೀಕಾರ. "आख्यातोपयोगे" पा० सू० १-४-२९।

**उपयोगिन् ಉಪಯೋಗಿನ್** (वि०) 1. ಕಾರ್ಯಸಾಧನೆಗೆ ಅನುಕೂಲವಾದ. उप + युजिर् (योगे) "घिनुण्" (३-२-१४२)। 2. ಪ್ರಯೋಜನಕರವಾದ, ಉಪಯುಕ್ತವಾದ, ಕೆಲಸಕ್ಕೆ ಬರುವ. 3. ನ್ಯಾಯವಾದ, ಯೋಗ್ಯವಾದ. उपयोगोऽस्यास्ति "इनिः" (५-२-११५)। 4. ಸುಖಸಾಧನವಾದ ವಸ್ತು. "अस्ति कन्यारत्नं मे गृह्यतामुपयोगि चेत्"।

**उपरक्त ಉಪರಕ್ತ** (पु०) ರಾಹುವಿನಿಂದ ಹಿಡಿಯಲ್ಪಟ್ಟ— 1. ಸೂರ್ಯ. 2. ಚಂದ್ರ. उप + रञ्ज (रागे) "क्तः" (३-२-१०२)। 3. ರಾಹು. 4. ಬಣ್ಣದಿಂದ ಬಳಿಯಲ್ಪಟ್ಟ, ಬಣ್ಣದಲ್ಲಿ ಅದ್ದಲ್ಪಟ್ಟ. 5. ವ್ಯಸನದಿಂದ ಪೀಡಿತನಾದ, ದುಃಖಾಕ್ರಾಂತನಾದ. "उपरक्तस्तु स्वर्भानौ व्यसनातुरे। राहुग्रस्तार्कशशिनोः" हेम०। 6. ಕೆಂಪಗೆಮಾಡಲ್ಪಟ್ಟ. "द्विपदङ्गेपोपरक्ताङ्गसङ्गिनीः स्वेदविप्रुषः" माघ० २-१८। 7. ಸಂಬಂಧಹೊಂದಿದ. "स्वोपरक्तबुद्धिविषयीकरणम्"।

**उपरक्ष ಉಪರಕ್ಷ** (पु०) ಅಂಗರಕ್ಷಕ, ಸಮೀಪದಲ್ಲಿದ್ದು ಕಾಪಾಡುವವನು, ಮೈಗಾವಲು. (Body-Guard). उपरक्षति—उप+रक्ष (पालने) "अच्" (३-१-१३४)।

**उपरक्षण ಉಪರಕ್ಷಣ** (न०) ರಕ್ಷಣೆಗಾಗಿ ಸೈನ್ಯವನ್ನು ನೇಮಿಸುವಿಕೆ, ಪಹರೆ, ಕಾವಲು. उप+रक्ष (पालने) "ल्युट्" (३-३-११५)।

**उपरत ಉಪರತ** (वि०) 1. ಕೆಲಸದಿಂದ ವಿಶ್ರಾಂತಿ ಹೊಂದಿದ, ವಿರಾಮಹೊಂದಿದ. उप+रमु (क्रीडायाम्) "क्तः" (३-४-७२)। "भयाद्रणादुपरतं मंस्यन्ते त्वां महारथाः" गीता २-३५। 2. ಮೃತಿಹೊಂದಿದ. 3. ನಿಂತುಹೋದ, ಬಿಡುವುಹೊಂದಿದ. "रजस्युपरते साध्वी स्नानेन स्त्री रजस्वला" मनु० ५-६६। 4. ಪ್ರಪಂಚದಲ್ಲಿ ಬೇಸರಹೊಂದಿದ, ಇಹಲೋಕದಲ್ಲಿ ಅಸಹ್ಯ ಬುದ್ಧಿ ಹುಟ್ಟಿದ, ವಿರಕ್ತನಾದ (ಸಂನ್ಯಾಸಿ).

**उपरति ಉಪರತಿ** (स्त्री०) 1. ಕೆಲಸದಿಂದ ವಿಶ್ರಾಂತಿ ಹೊಂದುವುದು, ವಿರಾಮ ಹೊಂದುವುದು. उप+रमु (क्रीडायाम्) "क्तिन्" (३-३-९४)। 2. ವಿಷಯಗಳಿಂದ ಮನಸ್ಸನ್ನು ತಡೆಯುವುದು. 3. ಮೃತಿ ಹೊಂದುವುದು. 4. ಆಸೆಯನ್ನು ತೊರೆಯುವುದು, ವೈರಾಗ್ಯಹೊಂದುವುದು.

**उपरत्न ಉಪರತ್ನ** (न०) ಕೆಳದರ್ಜೆಯ ರತ್ನ, ರತ್ನಕ್ಕೆ ಸಮಾನವಾದ ರಂಗೂನ್ ವಜ್ರ ಮೊದಲಾದುದು. "उपरत्नानि काचश्च कर्पूरोऽश्मा तथैव च। मुक्ता शुक्तिस्तथा शङ्ख इत्यादीनि बहून्यपि। गुणा यथैव रत्नानामुपरत्नेषु ते तथा। किन्तु किञ्चित्ततो हीना विशेषोऽयमुदाहृतः"।

**उपरथ्या ಉಪರಥ್ಯಾ** (स्त्री०) ಚಿಕ್ಕರಸ್ತೆ, ಕಡಿದಾದ ದಾರಿ.

**उपरम ಉಪರಮ** (पु०) "उपरति" ಪದದ ಅರ್ಥ. उप+रमु (क्रीडायाम्) "घञ्" (३-३-१८)।

**उपरमण ಉಪರಮಣ** (न०) 1. ವಿಶ್ರಾಂತಿ, ವಿರಾಮ. 2. ನಿಂತುಹೋಗುವುದು, ಬಿಡುವು. 3. ವೈರಾಗ್ಯ ಹೊಂದುವುದು, ಪ್ರಾಪಂಚಿಕ ಸುಖದಿಂದ ನಿವೃತ್ತಿ ಹೊಂದುವುದು. उप + रमु (क्रीडायाम्) "ल्युट्" (३-३-११५)।

**उपरस ಉಪರಸ** (पु०) ಪಾದರಸದಂತಿರುವ ಗಂಧಕ ಮೊದಲಾದುದು. उपमितो रसेन।

**उपराग ಉಪರಾಗ** (पु०) 1. ಸೂರ್ಯ-ಚಂದ್ರರ ಗ್ರಹಣ, ರಾಹುವು ಸೂರ್ಯ ಚಂದ್ರರನ್ನು ಆಕ್ರಮಿಸುವುದು. उप + रञ्ज (रागे) "घञ्" (३-३-१८)। "चन्द्रोपरागं प्रति तु केनापि विप्रलब्धासि" मुद्रा० १।

"उपरागान्ते शशिनः समुपगता रोहिणी योगम्" शाकुं० ७-२२। 2. ಅರುಣ್ಯ, ಕೆಂಪು. "कोपोपरागजनितां तु मुखेन्दुबिम्बे हर्तुं क्षमो यदि परं करुणा मयि स्यात्" रत्ना० ३-१४। 3. ರಾಹು. 4. ಅವಿನಯ, ಅವಿಧೇಯತೆ. 5. ನಿಂದೆ, ದೂಷಣೆ, ಬೈಗಳು. 6. ವ್ಯಸನ, ದುಃಖ. 7. ಉಪದ್ರವ, ತೊಂದರೆ, ದುರ್ಘಟನೆ, ವಿಪತ್ತು. "बिभर्षि चाकारमनिर्वृतानां मृणालिनी हैममिवोपरागम्" रघु० १६-७। "उपरागस्तु पुंसि स्यात् राहुग्रासेऽर्कचन्द्रयोः। दुर्नये ग्रहकल्लोले व्यसनेऽपि निगद्यते" मेदि०। 8. ಒಂದು ವಸ್ತುವಿನ ಗುಣವು ಅದರ ಹತ್ತಿರವಿರುವ ವಸ್ತುವಿನಲ್ಲಿ ಸೇರುವುದು; ರತ್ನದ ಕೆಂಪುಬಣ್ಣವು ಅದರ ಹತ್ತಿರವಿರುವ ಸ್ಫಟಿಕದಲ್ಲಿ ಸಂಕ್ರಾಂತವಾಗುವುದು ಉಪರಾಗವು.

**उपराम ಉಪರಾಮ** (पुं०) 1. ವಿಶ್ರಾಂತಿ, ವಿರಾಮ. उप + रमु (क्रीडायाम्) "घञ्" (३-३-१८)। 2. ಬಿಡುವು, ನಿಲುಗಡೆ, ನಿಲ್ಲಿಸುವುದು.

**उपराव ಉಪರಾವ** (पुं०) ಹತ್ತಿರದ ಶಬ್ದ, ಸಮೀಪದಲ್ಲಾದ ಸದ್ದು. उप समीपे रावः।

**उपरि ಉಪರಿ** (अव्य०) 1. ಮೇಲುಗಡೆ, ಮೇಲುಭಾಗ. 2. ಮೇಲುಗಡೆಯಿಂದ, ಮೇಲುಭಾಗದಿಂದ. 3. ಮೇಲುಗಡೆಯಲ್ಲಿ, ಮೇಲುಭಾಗದಲ್ಲಿ. ऊर्ध्व "रिल्" उपादेशश्च (५-३-३१)। ऊर्ध्व ಶಬ್ದದ ಪ್ರಥಮಾ, ಪಂಚಮೀ ಮತ್ತು ಸಪ್ತಮೀ ವಿಭಕ್ತಿಗಳ ಎಲ್ಲಾ ಅರ್ಥವನ್ನೂ "उपरि" ಪದವು ಕೊಡುವುದು. ऊर्ध्वं नगरम्। ऊर्ध्वा वसतिः। ऊर्ध्वात् पुरात् ऊर्ध्वाया वा वसतेरागतः। ऊर्ध्वे नगरे ऊर्ध्वायां वा वसतौ वसति ಈ ಎಲ್ಲಾ ಅರ್ಥಗಳಲ್ಲೂ "उपरि" ಪದವು ಪ್ರಯೋಗಿಸಲ್ಪಡುವುದು. "त्वय्यासन्ने नयनमुपरिस्पन्दि शङ्के मृगाक्ष्या मीनक्षोभाच्चलकुवलयश्रीतुलामेष्यतीति" मेघ० २-३२। "अवाङ्मुखस्योपरि पुष्पवृष्टिः पपात विद्याधरहस्तमुक्ता" रघु० २-६०। "उपर्युपरि पश्यन्तः सर्व एव दरिद्रति" हितो० २-२। "रामाणामुपरि विवस्वतः स्थितानां नासेदे चरितगुणत्वमातपत्रैः" किरा० ७-२। 4. ಇದಲ್ಲದೆ, ಇನ್ನೂ ಅಧಿಕವಾಗಿ, ಇನ್ನೂ ಮುಂದೆ. "शतान्युपरिचैवाष्टौ तथा भूयश्च सप्ततिः" भा०। 5. ಅನಂತರ, ಬಳಿಕ, ತರುವಾಯ. "सर्पिः पीत्वोपरि पयः पिबेत्" सुश्रुत०। "मुहूर्तादुपरि उपाध्यायश्चेदागच्छेत्" सि० कौ०।

**उपरिचर ಉಪರಿಚರ** (पुं०) 1. ಚೇದಿದೇಶದ ವಸು ವೆಂಬ ಒಬ್ಬ ರಾಜ. [ಇವನು ಇಂದ್ರನೊಡನೆ ಸ್ನೇಹ ಬೆಳೆಸಿಕೊಂಡು ಅವನಿಂದ ವಿಮಾನವನ್ನು ಸಂಪಾದಿಸಿ ಸದಾ ಅದರಲ್ಲೇ ಸಂಚರಿಸುತ್ತಿದ್ದುದರಿಂದ ಇವನಿಗೆ ಉಪರಿಚರನೆಂಬ ಹೆಸರಾಯಿತು. ಒಂದು ದಿನ ಇವನು ಇಂದ್ರಧ್ವಜವನ್ನು ಪೂಜಿಸುತ್ತಿದ್ದುದನ್ನು ಕಂಡು ಇಂದ್ರನು ಬಹಳ ಸಂತೋಷಗೊಂಡು ಇದೇ ರೀತಿ ನನ್ನ ಪೂಜೆಯನ್ನು ನಡೆಯಿಸುವ ಪ್ರತಿಯೊಬ್ಬ ರಾಜನ ರಾಜ್ಯದಲ್ಲೂ ಐಶ್ವರ್ಯ, ವಿಜಯ ಮುಂತಾದುದು ಸದಾ ನೆಲೆಸಲೆಂದು ಅನುಗ್ರಹಿಸಿದನು. ಈ ರಾಜನೇ ಇಂದ್ರಧ್ವಜದ ಪೂಜೆಯನ್ನು ಆರಂಭಿಸಿದುದು. ಉಪರಿಚರವಸುವು ಒಮ್ಮೆ ಋತುಕಾಲದಲ್ಲಿದ್ದ ತನ್ನ ಪತ್ನಿಯನ್ನು ಸ್ಮರಿಸಿಕೊಂಡಾಗ ಆತನ ವೀರ್ಯವು ಸ್ಖಲಿತವಾಗುವುದು. ಅದನ್ನು ನುಂಗಿದ ಒಂದು ಮೀನಿನ ಗರ್ಭದಲ್ಲಿ ಮತ್ಸ್ಯರಾಜನೆಂಬ ಒಬ್ಬ ಮಗನೂ, ಮತ್ಸ್ಯಗಂಧಿಯೆಂಬ ಒಬ್ಬ ಮಗಳೂ ಹುಟ್ಟಿದರು. ಈ ಮತ್ಸ್ಯಗಂಧಿಯೇ ಕನ್ಯಾವಸ್ಥೆಯಲ್ಲಿ ಪರಾಶರರಿಂದ ವೇದವ್ಯಾಸರನ್ನು ಪಡೆದ ಮತ್ತು ಶಂತನು ಮಹಾರಾಜನನ್ನು ಮದುವೆಯಾದ ಸತ್ಯವತಿ.] "स तां पूजां महेन्द्रस्तु दृष्ट्वा देवः कृतां शुभाम्। वसुना राजमुख्येन प्रीतिमानब्रवीत्प्रभुः। ये पूजयिष्यन्ति नरा राजानश्च महं मम। कारयिष्यन्ति च मुदा यथा चेदिपतिर्नृपः। तेषां श्रीविजयश्चैव सराष्ट्राणां भविष्यति। तेषां स्फीतो जनपदो मुदितश्च भविष्यति। एवं महात्मना तेन महेन्द्रेण नराधिपः। वसुः प्रीत्या मघवता महाराजोऽभिसत्कृतः" भा० आदि० ६४। (वि०)2. ಮೇಲುಗಡೆ ಸಂಚರಿಸುವ. उपरि चरति—चर (गतौ) "टः" (३-२-१६)।

**उपरितन ಉಪರಿತನ** (वि०) ಮೇಲುಭಾಗದಲ್ಲಿರುವ, ಮೇಲುಗಡೆಯಲ್ಲಿರುವ. उपरि भवः "ट्युल्" तुट् च (४-३-२३)।

**उपरिष्टात् ಉಪರಿಷ್ಟಾತ್** (अव्य०) "उपरि" ಪದದ ಅರ್ಥ. ऊर्ध्व "रिष्टातिल्" उपादेशश्च (५-३-३१)। "स्फुटतरमुपरिष्टादल्पमूर्तेर्ध्रुवस्य स्फुरति सुरमुनीनां मण्डलं व्यस्तमेतत्" माघ० ११-३।

**उपरीतक ಉಪರೀತಕ** (पुं०) ಸಂಭೋಗಕಾಲದ ಒಂದು ವಿಧ ಬಂಧ. "ऊरावेकपदं कृत्वा द्वितीयं स्कन्धसंस्थितम्। नारीं कामयते कामी बन्धः स्यादुपरीतकः" रतिमं०।

**उपरुद्ध ಉಪರುದ್ಧ** (वि०) 1. ತಡೆಯಲ್ಪಟ್ಟ, ಪ್ರತಿಬಂಧಿಸಲ್ಪಟ್ಟ. उप + रुधिर् (आवरणे) "क्तः" (३-२-१०२)। "अयमतिजरठाः प्रकामगुर्वीरलघुविलम्बिपयोधरोपरुद्धाः" माघं० ४-२९। 2. ಆಕ್ರಮಿಸಲ್ಪಟ್ಟ, ಮುತ್ತಿಗೆ ಹಾಕಲ್ಪಟ್ಟ. "ततः समन्तादुपरुद्धं कुसुमपुरमवलोक्य....." मुद्रा० २। 3. ಮುಚ್ಚಲ್ಪಟ್ಟ, ಹೊದ್ದಿಸಲ್ಪಟ್ಟ.

**उपरूपक ಉಪರೂಪಕ** (न०) ದೃಶ್ಯಕಾವ್ಯಗಳಲ್ಲಿ ಒಂದು ಭೇದ, ದೃಶ್ಯಕಾವ್ಯದ ಹತ್ತು ವಿಧ ರೂಪಕಗಳಲ್ಲಿ ನಾಟಕಕ್ಕೆ ಸಮಾನವಾದ ಕೆಳದರ್ಜೆಯ ರೂಪಕ. उपगतं रूपकं दृश्यकाव्यम् सादृश्येन। **ಉಪರೂಪಕಗಳು:** (1) ನಾಟಿಕಾ, (2) ತ್ರೋಟಕ, (3) ಗೋಷ್ಠೀ, (4) ಸಟ್ಟಕ, (5) ನಾಟ್ಯರಾಸಕ, (6) ಪ್ರಸ್ಥಾನ, (7) ಉಲ್ಲಾಪ್ಯ, (8) ಕಾವ್ಯ, (9) ಪ್ರೇಂಖಣ, (10) ರಾಸಕ, (11) ಸಂಲಾಪಕ, (12) ಶ್ರೀಗದಿತ, (13) ಶಿಲ್ಪಕ, (14) ವಿಲಾಸಿಕಾ, (15) ದುರ್ಮಲ್ಲಿಕಾ, (16) ಪ್ರಕರಣೀ, (17) ಹಲ್ಲೀಶ ಮತ್ತು (18) ಭಾಣಿಕಾ ಎಂದು ಹದಿನೆಂಟು ವಿಧ. सा० द० ६-४-६। [ಲಕ್ಷಣಗಳಿಗೆ ಆಯಾ ಪದಗಳಲ್ಲಿ ನೋಡಿ].

**उपरोध ಉಪರೋಧ** (पु०) 1. ತಡೆ, ಅಡ್ಡಿ, ಪ್ರತಿಬಂಧಕ, ವಿಘ್ನ. उप + रुधिर् (आवरणे) "घञ्" (३-३-१८)। "तपोवननिवासिनामुपरोधो माभूत्। एतावत्येव रथं स्थापय यावदवतरामि" शाकुं० १। 2. ತೊಂದರೆ, ಉಪದ್ರವ, ಪೀಡೆ, ತ್ರಾಸ. 3. ಮುಚ್ಚುವಿಕೆ, ಮರೆಮಾಡುವಿಕೆ. "शरत्प्रमृष्टाम्बुधरोपरोधः शशीव पर्याप्तकलो नलिन्याः" रघु० ६-४४। 4. ಆಕ್ರಮಿಸುವಿಕೆ, ಮುತ್ತಿಗೆಹಾಕುವಿಕೆ.

**उपरोधक ಉಪರೋಧಕ**(न०) 1. ಒಳಗಡೆಯ ಕೋಣೆ, ಒಳಭಾಗದ ಕೊಠಡಿ. (वि०) 2. ಅಡ್ಡಿಪಡಿಸುವ, ತಡೆಯುವ, ವಿಘ್ನವುಂಟುಮಾಡುವ. उप + रुधिर् (आवरणे) "ण्वुल्" (३-१-१३३)। 3. ಮುಚ್ಚುವ, ಮರೆಮಾಡುವ. 4. ತೊಂದರೆಪಡಿಸುವ, ಪೀಡಿಸುವ. स्त्रियां "टाप्" (४-१-४)। **–रोधिका –ರೋಧಿಕಾ.**

**उपरोधन ಉಪರೋಧನ** (न०) 1. "उपरोध" ಪದದ ಅರ್ಥ. उप+रुधिर् (आवरणे) "ल्युट्" (३-३-११५)। (वि०)2. "उपरोधक" ಪದದ ಅರ್ಥ. कर्तं० "ल्युः" (३-१-१३४)।

**उपरोधिन् ಉಪರೋಧಿನ್** (वि०) "उपरोधक" ಪದದ ಅರ್ಥ. उप+रुधिर् (आवरणे) "णिनिः" (३-१-१३४)। "सुखानि सोऽभुङ्क्त सुखोपरोधि वृत्तं हि राज्ञामुपरुद्धवृत्तम्" रघु० १८-१८।

**उपल ಉಪಲ** (पु०) 1. ಕಲ್ಲು, ಶಿಲೆ, ಬಂಡೆ. उप लाति—ला (आदाने) "कः" (३-१-१३६)। "विततशीकरराशिभिरुच्छ्रितैरुपलरोधविवर्तिभिरम्बुभिः" किरा० ५-१५। "उपलशकलमेतद्भेदकं गोमयानाम्" मुद्रा० ३-१५। 2. ಬೆಲೆಬಾಳುವ ಶಿಲೆ, ರತ್ನ, ಮಣಿ. "दन्तोज्ज्वलासु विमलोपलमेखलान्ताः सद्रत्नचित्रकटकासु बृहन्नितम्बाः" माघ० ४-४०। 3. ಮರಳು. (स्त्री०) –ला –ಲಾ. 4. ಬೆಣಚುಕಲ್ಲು. 5. ಸಕ್ಕರೆ. "उपलो ग्रावरत्नयोः। उपला तु शर्करायाम्" हेम०।

**उपलक्षक ಉಪಲಕ್ಷಕ** (वि०) 1. ಸೂಚಿಸುವ, ತಿಳಿಸುವ, ತೋರಿಸುವ. उप + लक्ष (दर्शनाङ्कनयोः) "ण्वुल्" (३-१-१३३)। 2. ತಿಳಿಯುವ, ಲಕ್ಷ್ಯವಿಟ್ಟು ನೋಡುವ. "मेधावी वाक्पटुः प्राज्ञः परचित्तोपलक्षकः। धीरो यथोक्तवादी च एष दूतो विधीयते"।

**उपलक्षण ಉಪಲಕ್ಷಣ** (न०)1. ನೋಡುವಿಕೆ, ನೋಡಿ ತಿಳಿದುಕೊಳ್ಳುವಿಕೆ, ಅರಿಯುವಿಕೆ. उप+लक्ष (दर्शनाङ्कनयोः) "ल्युट्" (३-३-११५)। "वेलोपलक्षणार्थमादिष्टोऽस्मि तत्रभवता प्रवासादुपावृत्तेन काश्यपेन" शाकु० ४। 2. ಸೂಚಿಸುವಿಕೆ, ತೋರಿಸುವಿಕೆ, ತಿಳಿಸುವಿಕೆ. 3. (ಅಜಹತ್ ಸ್ವಾರ್ಥಲಕ್ಷಣೆಯಿಂದ) ತನ್ನ ಮತ್ತು ಬೇರೆ ಅರ್ಥಗಳನ್ನು ತಿಳಿಸುವಿಕೆ. "काकेभ्यो दधि रक्ष्यताम्" ಎಂಬಲ್ಲಿ काक ಪದವು ಅಜಹತ್ ಸ್ವಾರ್ಥಲಕ್ಷಣೆಯಿಂದ ಕಾಗೆಗಳನ್ನೂ, ಇತರ ನಾಯಿ ಮೊದಲಾದ ಪ್ರಾಣಿಗಳನ್ನೂ ಬೋಧಿಸುವುದು. "स्वार्थप्रतिपादकत्वे सति स्वार्थसदृशेतरार्थप्रतिपादकत्वमुपलक्षणत्वम्"। 4. ಒಂದು ವಿಶೇಷ್ಯ (ವಸ್ತು) ವನ್ನು ಕಂಡುಹಿಡಿಯಲು ಬೇಕಾದ ಗುರುತು, ತತ್ಕಾಲದಲ್ಲಿ ಆ ವಿಶೇಷ್ಯದಲ್ಲಿಲ್ಲದಿದ್ದರೂ ಹಿಂದೆ ಒಂದು ಕಾಲದಲ್ಲಿದ್ದ ಅದರ ಸ್ಮರಣೆಯಿಂದ ವಿಶೇಷ್ಯ (ವಸ್ತು) ವನ್ನು ಕಂಡುಹಿಡಿಯಬಹುದಾದ ಗುರುತು. "काकवत् देवदत्तगृहम्" ಎಂಬಲ್ಲಿ ಮೊದಲು ಕಾಗೆಯಿಂದ ಗುರ್ತಿಸಲ್ಪಟ್ಟ ದೇವದತ್ತನ ಮನೆಯು (ವಿಶೇಷ್ಯವು) ಕಾಗೆಯು ಹಾರಿಹೋದ ನಂತರವೂ ಅದರ ಸ್ಮರಣೆಯಿಂದ ಅದೇ ಮನೆಯೆಂದು ಗುರ್ತಿಸಲ್ಪಡುವುದರಿಂದ ಕಾಗೆಯು ಉಪಲಕ್ಷಣ.

**उपलधिप्रिय ಉಪಲಧಿಪ್ರಿಯ** (पुं०) ಚಮರೀಮೃಗ. वालधिःप्रियोऽस्य। पृषो०।

**उपलब्ध ಉಪಲಬ್ಧ** (वि०) 1. ಹೊಂದಲ್ಪಟ್ಟ, ಪಡೆಯಲ್ಪಟ್ಟ. उप+डु लभष् (प्राप्तौ) "क्तः" (३-२-१०२)। "तस्मिन् गते द्यां सुकृतोपलब्धां तत्संभवं शङ्खणमर्णवान्ता" रघु० १८-२२। 2. ತಿಳಿಯಲ್ಪಟ್ಟ, ಅರಿಯಲ್ಪಟ್ಟ. "प्रवृत्तावुपलब्धायां तस्याः संपातिदर्शनात्" रघु० १२-६०।

**उपलब्धवत् ಉಪಲಬ್ಧವತ್** (वि०) 1. ಹೊಂದಿರುವ, ಪಡೆದಿರುವ. उप + डु लभष् (प्राप्तौ) "क्तवतुः" (३-२-१०२)। 2. ತಿಳಿದಿರುವ, ಅರಿತಿರುವ. स्त्रियां "ङीप्" (४-१-६)। **-वती -ವತೀ.**

**उपलब्धार्थ ಉಪಲಬ್ಧಾರ್ಥ** (वि०) 1. ತಿಳಿಯಲ್ಪಟ್ಟ ಅರ್ಥವುಳ್ಳ. उपलब्धोऽर्थो येन। स्त्रियां **-लब्धार्था -ಲಬ್ಧಾರ್ಥಾ.** 2. ಪಡೆದ ವಿಷಯವನ್ನು ತಿಳಿಸುವ ಕಥೆ. "आख्यायिकोपलब्धार्था" अम०।

**उपलब्धि ಉಪಲಬ್ಧಿ** (स्त्री०) 1. ಪ್ರಾಪ್ತಿ, ಪಡೆಯುವಿಕೆ. 2. ಜ್ಞಾನ, ತಿಳಿವಳಿಕೆ. उप + डु लभष् (प्राप्तौ) "क्तिन्" (३-३-९४)।

**उपलब्धृ ಉಪಲಬ್ಧೃ** (पुं०) 1. ಆತ್ಮ, ಜೀವ. (वि०) 2. ಹೊಂದುವ, ಪಡೆಯುವ. उप + डु लभष् (प्राप्तौ) "तृच्" (३-१-१३३)। 3. ತಿಳಿಯುವ, ಅರಿಯುವ. स्त्रियां "ङीप्" (४-१-५)। **-लब्ध्री -ಲಬ್ಧ್ರೀ.**

**उपलभ्य ಉಪಲಭ್ಯ** (वि०) 1. ಹೊಂದಲು ಯೋಗ್ಯವಾದ, ಪಡೆಯಲು ಅರ್ಹವಾದ. उप + डु लभष् (प्राप्तौ) "ण्यत्" (३-१-१२४)। 2. ತಿಳಿಯಲು ಶಕ್ಯವಾದ, ಅರಿಯಬಹುದಾದ. (अव्य०) 3. ಹೊಂದಿ, ಪಡೆದು. 4. ಅರಿತು, ತಿಳಿದು. उप + डु लभष् "ल्यप्" (७-१-३७)।

**उपलम्भ ಉಪಲಂಭ** (पुं०) 1. ಲಾಭ, ಪ್ರಾಪ್ತಿ, ಪಡೆಯುವಿಕೆ. उप+डु लभष् (प्राप्तौ) "घञ्" (३-३-१८)। नुम् (७-१-६७)। 2. ಹಿಂದಿನ ಜ್ಞಾನ, ಅರಿವು, ಅನುಭವ. "मम हि संप्रति प्राक्तनोपलम्भसंभावितात्मनः संस्कारस्य" मालती० ५। 3. ತಿಳಿದುಕೊಳ್ಳುವುದು, ಅರಿತುಕೊಳ್ಳುವುದು. भावे "ल्युट्" (३-३-११५)। **-लम्भनम् -ಲಂಭನವು.** ಉತ್ಪತ್ತಿ. "चन्द्रं विना तदुपलम्भनहेतुभूतं क्षीरोदमाश्रयति किं तृषितश्चकोरः" चं० रा०।

**उपलालन ಉಪಲಾಲನ** (नं०) ಪ್ರೀತಿಸುವುದು, ಮುದ್ದಾಡುವುದು. उप+लल (ईप्सायाम्) "ल्युट्" (३-३-११५)।

**उपलालित ಉಪಲಾಲಿತ** (वि०) ಪ್ರೀತಿಸಲ್ಪಟ್ಟ, ಮುದ್ದಾಡಲ್ಪಟ್ಟ. उप + लल (ईप्सायाम्) "क्तः" (३-२-१०२)।

**उपलिङ्ग ಉಪಲಿಂಗ** (नं०) ಭವಿಷ್ಯದ ಅನಿಷ್ಟದ ಸೂಚನೆ, ಅಪಶಕುನ, ಭೂಕಂಪ ಮೊದಲಾದ ಉಪದ್ರವ. "उपलिङ्गं त्वरिष्टं स्यादजन्यं डिम्बविप्लवौ" वैज०।

**उपलेप ಉಪಲೇಪ** (पुं०) 1. ಬಳಿಯುವುದು, ಪೂಸುವುದು. उप+लिप (उपदेहे) "घञ्" (३-३-१८)। 2. ಸಗಣಿ ಮೊದಲಾದುವುಗಳಿಂದ ಸಾರಿಸುವುದು.

**उपलेपन ಉಪಲೇಪನ** (नं०) 1. ಬಳಿಯುವುದು, ಪೂಸುವುದು. उप+लिप (उपदेहे) "ल्युट्" (३-३-११५)। 2. ಸಗಣಿಯಿಂದ ಸಾರಿಸುವುದು. "तत्रैव देवायतने संमार्जनोपलेपनमण्डनादिकं कर्म समाज्ञापयति" पञ्चतं०।

**उपलेपिन् ಉಪಲೇಪಿನ್** (वि०) 1. ಬಳಿಯುವ, ಪೂಸುವ. उप+लिप (उपदेहे) "णिनिः" (३-२-७८)। 2. ಸಗಣಿ ಮೊದಲಾದುವುಗಳಿಂದ ಸಾರಿಸುವ. स्त्रियां "ङीप्" (४-१-५)। **-लेपिनी -ಲೇಪಿನೀ.**

**उपवक्तृ ಉಪವಕ್ತೃ** (वि०) 1. ಯಾಗದಲ್ಲಿ ಮೇಲ್ವಿಚಾರಣೆಯಲ್ಲಿರುವ (ನ್ಯೂನಾತಿರೇಕಗಳನ್ನು ನೋಡಿಕೊಳ್ಳುವ) ಋತ್ವಿಕ್ಕು, ಬ್ರಹ್ಮ. उपवक्ति उपदिशति उपपश्यति वा — उप + वच (परिभाषणे) "तृच्" (३-१-१३३)। 2. ಯಾಗದಲ್ಲಿ ಸಭೆಯಲ್ಲಿ ಕುಳಿತು ನ್ಯೂನಾತಿರೇಕದ ವಿಷಯದಲ್ಲಿ ಸಲಹೆಕೊಡುವವನು, ಸದಸ್ಯ. "उपवक्ताऽध्वर्युप्रभृतीनां सर्वेषां कर्मणामनुज्ञार्थमित्थं प्रणयेत्यादिरूपस्य वाक्यस्य वक्ता सन् ब्रह्मासि सर्वेषां कर्मणामवैकल्यार्थमुपद्रष्टा सदस्यो वासि" भा०।

**उपवन ಉಪವನ** (नं०) 1. ಉದ್ಯಾನ, ಕೈತೋಟ. उपमितं वनेन। "पाण्डुच्छायोपवनवृतयः केतकैः सूचिभिन्नैः" मेघ० १-२३। (अव्य०) 2. ಅರಣ್ಯದ ಸಮೀಪ.

**उपवर्णन ಉಪವರ್ಣನ** (नं०) 1. ವಿವರವಾಗಿ ಹೇಳುವುದು, ಕೂಲಂಕಷವಾಗಿ ಸ್ವರೂಪ ಮತ್ತು ಗುಣಗಳನ್ನು ಹೇಳುವುದು. उप + वर्ण (वर्णक्रियाविस्तारगुणवचनेषु) "ल्युट्" (३-३-११५)। 2. ಬಣ್ಣಬಳಿಯುವುದು, ಬಣ್ಣಹಾಕುವುದು.

**उपवर्तन** ಉಪವರ್ತನ (ನಂ) 1. ದೇಶ, ಜನಪದ. 2. ಒಂದು ಜಿಲೆ, ಗ್ರಾಮಗಳ ಸಮುದಾಯ. 3. ಒಂದು ಮಂಡಲ, ರಾಷ್ಟ್ರ, ನೂರಕ್ಕಿಂತಲೂ ಹೆಚ್ಚಾದ ಗ್ರಾಮಗಳ ಸಮೂಹ. "उपवर्तनमप्यस्मिन् मण्डलं तैः शताधिकैः" वैजं। 4. ತಾಲ್ಲೂಕು, ತಹಶೀಲು. उपेत्य वर्तन्तेऽत्र — वृतु (वर्तने) "ल्युट्" (३-३-११७)। "तस्योपवर्तनेऽप्येको न श्रुतो गोत्रभित् क्वचित्" काशीखं। 5. ಕುದುರೆಯು ಹೊರಳಾಡುವ ಜಾಗ. "कर्तनं धूलिलुठितं वर्तनं तूपवर्तनम्" वैजं।

**उपवसथ** ಉಪವಸಥ (ಪುಂ) ಗ್ರಾಮ, ಹಳ್ಳಿ. उपेत्य वसत्यत्र — वस (निवासे) "अथः" (उं ३-११६)।

**उपवस्त** ಉಪವಸ್ತ (ನಂ) ಉಪವಾಸ, ಊಟಮಾಡದಿರುವಿಕೆ. उप+वसु (स्तम्भे) भावे "क्तः" (३-३-११४)।

**उपवस्ति** ಉಪವಸ್ತಿ (ಸ್ತ್ರೀಂ) ಆಶ್ರಯ, ಆಲಂಬನ, ಆಧಾರ. उप+वसु (स्तम्भे) "क्तिन्" (३-३-९४)।

**उपवाक** ಉಪವಾಕ (ಪುಂ) ಪರಸ್ಪರ ಸಂಭಾಷಣೆ. उपेत्य वक्ति — वच (परिभाषणे) "घञ्" (३-३-१८)।

**उपवसत्** ಉಪವಸತ್ (ವಿಂ) 1. ಊಟಮಾಡದಿರುವ. उप+वस (निवासे) "शतृ" (३-२-१२४)। 2. ಹತ್ತಿರದಲ್ಲಿ ವಾಸಮಾಡುತ್ತಿರುವ. स्त्रियां "ङीप्" (४-१-६)। –वसन्ती –ವಸಂತೀ.

**उपवास** ಉಪವಾಸ (ಪುಂ) 1. ಊಟಮಾಡದಿರುವುದು. उप+वस (निवासे) "घञ्" (३-३-१८)। "समाचराचारमुपात्तशस्त्रो जपोपवासाभिषवैर्मुनीनाम्" किरा० ३-२८। ಉಪವಾಸವು ನಿತ್ಯ, ನೈಮಿತ್ತಿಕ ಮತ್ತು ಕಾಮ್ಯಗಳೆಂದು ಮೂರು ವಿಧ. ಏಕಾದಶಿ, ಶಿವರಾತ್ರಿ ಮುಂತಾದ ದಿನಗಳಲ್ಲಿ ಮಾಡುವ ಉಪವಾಸವು, "दशम्यां नियताहारो मांसमैथुनवर्जितः। एकादश्यां न भुञ्जीत पक्षयोरुभयोरपि" ಎಂದು ಭೋಜನವು ನಿಷೇಧಿಸಲ್ಪಟ್ಟಿರುವುದರಿಂದ ನಿತ್ಯವಾದುದು. ಪಾಪ ಪರಿಹಾರಕ್ಕಾಗಿ ಪ್ರಾಯಶ್ಚಿತ್ತರೂಪವಾಗಿ "त्र्यहं प्रातस्त्र्यहं सायं त्र्यहमद्यादयाचितम्। त्र्यहं परञ्च नाश्नीयात् प्राजापत्यं चरन् द्विजः" मनु० ११-२११। ಎಂಬ ಶ್ಲೋಕದಂತೆ ಮಾಡುವ ಉಪವಾಸವು ನೈಮಿತ್ತಿಕ. "अमावास्या द्वादशी च संक्रान्तिश्च विशेषतः। एताः प्रशस्तास्तिथयः भानुवारस्तथैव च। अत्र स्नानं जपो होमो देवतानां च पूजनम्। उपवासस्तथा दानमेकैकं पावनं स्मृतम्" ಎಂಬಂತೆ ಈ ದಿನಗಳಲ್ಲಿ ಮಾಡುವ ಉಪವಾಸವು ಕಾಮ್ಯ. ಪಾಪಕಾರ್ಯಗಳನ್ನು ಬಿಟ್ಟು, ಪ್ರಾಣಿದಯೆ, ಸಹನೆ, ದ್ವೇಷಾಸೂಯೆಗಳ ಪರಿತ್ಯಾಗ, ಅಕಾರ್ಪಣ್ಯ, ನಿಃಸ್ಪೃಹತೆ ಇತ್ಯಾದಿ ಗುಣಗಳೊಡನೆ ಶಾಸ್ತ್ರನಿಷಿದ್ಧವಾದ ಸಂಗೀತ ನೃತ್ಯ ಮೊದಲಾದ ಸುಖದಲ್ಲಿ ಆಸೆ ತೊರೆದಿರುವುದೂ ಉಪವಾಸ. "उपावृत्तस्य पापेभ्यो यश्च वासो गुणैः सह। उपवासः स विज्ञेयः सर्वभोगविवर्जितः" भविष्य०। 2. ಸಮೀಪದಲ್ಲಿ ವಾಸಮಾಡುವಿಕೆ. उप समीपे वासः।

**उपवासक** ಉಪವಾಸಕ (ವಿಂ) ಉಪವಾಸಮಾಡುವ, ಆಹಾರವನ್ನು ತೆಗೆದುಕೊಳ್ಳದಿರುವ, ಊಟಮಾಡದಿರುವ. उप+वस (निवासे) "ण्वुल्" (३-१-१३३)।

**उपवासिन्** ಉಪವಾಸಿನ್ (ವಿಂ) ಉಪವಾಸಮಾಡುವ, ಆಹಾರವನ್ನು ತೆಗೆದುಕೊಳ್ಳದಿರುವ, ಊಟಮಾಡದಿರುವ. उप+वस (निवासे) "णिनिः" (३-२-७८)। "विमानैर्हंससंयुक्तैर्यान्ति मासोपवासिनः" भा०।

**उपवाहन** ಉಪವಾಹನ (ನಂ) ಸಮೀಪಕ್ಕೆ ಒಯ್ಯುವುದು, ಹತ್ತಿರಕ್ಕೆ ತರುವುದು. उप+वह (प्रापणे)+णिच् "ल्युट्" (३-३-११५)।

**उपवाह्य** ಉಪವಾಹ್ಯ (ಪುಂ) ರಾಜನು ಸವಾರಿಮಾಡುವ ಆನೆ, ಕುದುರೆ ಮೊದಲಾದುವು. उप उत्कर्षो वाह्यः। "राजवाह्यस्तूपवाह्यः" कल्पद्रु०। "चन्द्रगुप्तोपवाह्यां चन्द्रलेखाभिधानां नागवशामारुह्य" मुद्रा० २।

**उपविद्** ಉಪವಿದ್ (ಸ್ತ್ರೀಂ) 1. ಲಾಭ, ಪ್ರಾಪ್ತಿ, ಸಂಪಾದನೆ. उप + विद्लृ (लाभे) "क्विप्" (वा० ३-३-९४)। 2. ಜ್ಞಾನ, ತಿಳಿವಳಿಕೆ, ಅರಿವು. (ವಿಂ) 3. ಹೊಂದುವ, ಪಡೆಯುವ. 4. ತಿಳಿಯುವ, ಅರಿಯುವ.

**उपविष** ಉಪವಿಷ (ಪುಂ) 1. ಎಕ್ಕದ ಹಾಲು. 2. ಕಳ್ಳಿ ಹಾಲು. 3. ದತ್ತೂರಿ ಹಾಲು. 4. ಗಣಿಗಿಲೆ. 5. ತಪಸಿಗಿಡ. "अर्कक्षीरं स्नुहीक्षीरं तथैव कलिहारिका। धुत्तूरः करवीरश्च पञ्च चोपविषाः स्मृताः"। (ಸ್ತ್ರೀಂ) –विषा –ವಿಷಾ. ಅತಿಬಜೆ.

**उपविष्ट** ಉಪವಿಷ್ಟ (ವಿಂ) ಕುಳಿತುಕೊಂಡಿರುವ. उप+विश (प्रवेशने) "क्तः" (३-४-७२)। "हेतुं तदभ्यागमने परीप्सुः सुखोपविष्टं मुनिमाबभाषे" किरा० ३-४।

**उपवीणक** ಉಪವೀಣಕ (ವಿಂ) ವೀಣೆಯನ್ನು ನುಡಿಸುವವನು. वीणया उपगायति — उप + वीणा + णिच् "ण्वुल्" (३-१-१३३)।

उपवीणित ಉಪವೀಣಿತ (वि०) ವೀಣೆಯಿಂದ ಗಾನ ಮಾಡಲ್ಪಟ್ಟ, ವೀಣೆಯಿಂದ ಹಾಡಲ್ಪಟ್ಟ. उप+वीणा+णिच् "क्तः" (३-२-१०२)। "अथ स्मराज्ञामवधीर्य धैर्याद्रूचे स तद्वागुपवीणितोऽपि" नैष० ८-५४।

उपवीत ಉಪವೀತ (न०) ಯಜ್ಞೋಪವೀತ, ಎಡಗಡೆ ಭುಜದ ಮೇಲೂ ಬಲಗಡೆಯ ತೋಳಿನ ಕೆಳಗೂ ಇರುವಂತೆ (ಪ್ರಥಮ ವರ್ಣತ್ರಯದವರು) ಧರಿಸುವ ಯಜ್ಞಸೂತ್ರ. उपवीयते स्म—उप+अज (गतिक्षेपणयोः) "क्तः" (३-२-१०२)। वी आदेशः (२-४-५६)। "कृतोपवीतं हिमशुभ्रमुच्चकैर्घनं घनान्ते तडितां गणैरिव" माघ० १-७।

उपवीतिन् ಉಪವೀತಿನ್ (वि०) ಯಜ್ಞಸೂತ್ರ ಧರಿಸಿರುವ. उपवीतमस्यास्ति—उपवीत "इनिः" (५-२-११५)। "उपवीतिनमूर्ध्वपुण्ड्रवन्तं त्रिजगत्पुण्यफलं त्रिदण्डहस्तम्"।

उपवेद ಉಪವೇದ (पु०) ವೇದಕ್ಕೆ ಸಮಾನವಾದ— 1. ಆಯುರ್ವೇದ. 2. ಧನುರ್ವೇದ. 3. ಗಾಂಧರ್ವವೇದ. 4. ಶಸ್ತ್ರಶಾಸ್ತ್ರ. ಋಗ್ವೇದಕ್ಕೆ ಆಯುರ್ವೇದವೂ, ಯಜುರ್ವೇದಕ್ಕೆ ಧನುರ್ವೇದವೂ, ಸಾಮವೇದಕ್ಕೆ ಗಾಂಧರ್ವವೇದವೂ, ಅಥರ್ವವೇದಕ್ಕೆ ಶಸ್ತ್ರಶಾಸ್ತ್ರವೂ ಉಪವೇದಗಳು. ಕೆಲವರು ಆಯುರ್ವೇದವು ಅಥರ್ವವೇದದ ಉಪವೇದವೆಂದು ಹೇಳುತ್ತಾರೆ. "विधाताथर्वसर्वस्वमायुर्वेदं प्रकाशयन्" भावप्र०।

उपवेश ಉಪವೇಶ (पु०) 1. ಕುಳಿತುಕೊಳ್ಳುವುದು. उप + विश (प्रवेशने) भावे "घञ्" (३-३-१८)। भावे "ल्युट्" (३-३-११५)। –वेशनम्–ವೇಶನವೂ. "प्रायोपवेशनमतिर्नृपतिर्बभूव" रघु० ८-९४।

उपवेशिन् ಉಪವೇಶಿನ್ (वि०) ಕುಳಿತಿರುವ. उपविशति —उप + विश (प्रवेशने) "णिनिः" (३-१-१३४)।

उपवैणव ಉಪವೈಣವ (न०) ತ್ರಿಸಂಧ್ಯಾಕಾಲ, ಹಗಲಿನ ಮೂರು (ಸಂಧ್ಯಾ) ಕಾಲಗಳು. "पुण्याहमह्नि पुण्योंशस्त्रिसन्ध्यन्तूपवैणवम्" वैज०।

उपव्याघ्र ಉಪವ್ಯಾಘ್ರ (पु०) 1. ಹುಲಿಯಂತಿರುವ ಒಂದು ಮೃಗ, ಚಿರತೆ. उपमितो व्याघ्रेण। (अव्य०) 2. ಹುಲಿಯ ಹತ್ತಿರ, ಹುಲಿಯ ಸಮೀಪ. व्याघ्रस्य समीपम्। सामीप्ये अव्ययी०।

उपशम ಉಪಶಮ (पु०) 1. ಇಂದ್ರಿಯನಿಗ್ರಹ. उप+शमु (उपशमे) "घञ्" (३-३-१८)। 2. ಕಡಿಮೆಯಾಗುವಿಕೆ, ಇಳಿಮುಖವಾಗುವಿಕೆ. "मन्युर्दुःसह एव यात्युपशमं नो सान्त्ववादैः स्फुटम्" अमरु० ६। 3. ಸಹನೆ, ತಾಳ್ಮೆ, ಶಾಂತತೆ. 4. ಆಸೆಯು ಕಡಿಮೆಯಾಗುವಿಕೆ. भावे "ल्युट्" (३-३-११५)। –शमनम् –ಶಮನವೂ.

उपशय ಉಪಶಯ (पु०) 1. (ಕಾಡಿನಲ್ಲಿ) ಮೃಗಗಳು ಬರುವ ದಾರಿಯಲ್ಲಿ ಬೇಡನು ಮರೆಯಾಗಿ ಕುಳಿತುಕೊಳ್ಳುವ ಹಳ್ಳ. उपशेतेऽस्मिन्—उप+शीङ् (स्वप्ने) "अच्" (३-३-५६)। "हन्ति नोपशयस्थोऽपि शयालुर्मृगयुर्मृगान्" माघ० २-८०। 2. ಸಮೀಪದಲ್ಲಿ ಮಲಗುವಿಕೆ. 3. ಹಸ್ತ, ಕೈ. (अव्य०)4. ಕೈಯ ಹತ್ತಿರ, ಹಸ್ತದ ಸಮೀಪ. सामीप्ये अव्ययी०। 5. ಔಷಧ ಸೇವನೆಯಿಂದ ವ್ಯಾಧಿಯು ಗುಣಮುಖವಾಗಲು ಕಂಡುಬರುವ ಲಕ್ಷಣ.

उपशरद ಉಪಶರದ (अव्य०)1. ಶರತ್ಕಾಲದಲ್ಲಿ. शरदि उपशरदम्। विभ० अव्ययी०। 2. ಶರತ್ಕಾಲದ ಸಮೀಪದಲ್ಲಿ. शरदः समीपे। सामीप्ये अव्ययी०।

उपशल्य ಉಪಶಲ್ಯ (न०) ಗ್ರಾಮದ ಸಮೀಪ ಪ್ರದೇಶ, ಗ್ರಾಮದ ಕೊನೆಯ ಪ್ರದೇಶ. शल्यमुपगतम्। "ग्रामान्तमुपशल्यं स्यात् सीमसीमे स्त्रियामुभे" अम०। "उपशल्यनिविष्टैस्तैश्चतुर्द्वारमुखी बभौ" रघु० १५-६०।

उपशान्ति ಉಪಶಾಂತಿ (स्त्री०) ಶಾಂತತೆ, ಸಹನೆ, ತಾಳ್ಮೆ. उप+शमु (उपशमे) "क्तिन्" (३-३-९४)।

उपशाय ಉಪಶಾಯ (पु०) ಸರದಿಯಿಂದ ನಿದ್ದೆ ಮಾಡುವುದು, ಪಹರೆಯವನು ಸರದಿಯಂತೆ (ಮತ್ತೊಬ್ಬನಿಂದ) ಬಿಡುಗಡೆಹೊಂದಿ ನಿದ್ದೆ ಮಾಡುವಿಕೆ. उप+शीङ् (स्वप्ने) "घञ्" (३-३-१८)।

उपशायिन् ಉಪಶಾಯಿನ್ (वि०) ಹತ್ತಿರದಲ್ಲಿ ಮಲಗುವ. उप+शीङ्(स्वप्ने)"णिनिः"(३-१-१३४)।

उपशिष्य ಉಪಶಿಷ್ಯ (पु०) ಪ್ರಶಿಷ್ಯ, ಶಿಷ್ಯನ ಶಿಷ್ಯ. शिष्यमुपगतः। "स्वतः प्रमाणं परतः प्रमाणं शुकाङ्गना यत्र समुद्गिरन्ति। शिष्योपशिष्यैरुपगीयमानमवेहि तन्मण्डनमिश्रधाम" उद्भ०।

उपशुन ಉಪಶುನ (न०)1. ನಾಯಿಯ ಹತ್ತಿರದ ಸ್ಥಳ. "स्याच्छुनः सविधं यत्तत्स्थलं ह्युपशुनं पुनः" कल्पद्रु०। (अव्य०)2. ನಾಯಿಯಲ್ಲಿ. शुनि उपशुनम्। सप्तम्यर्थे अव्ययी०। 3. ನಾಯಿಯ ಹತ್ತಿರದಲ್ಲಿ. शुनः समीपे। सामीप्ये अव्ययी०।

**उपशुष्यत्** ಉಪಶುಷ್ಯತ್ (वि०) ಒಣಗುತ್ತಿರುವ, ಶುಷ್ಕವಾಗುತ್ತಿರುವ. उप+शुष (शोषणे) "शतृ" (३-२-१२४)। "नवीकरिष्यत्युपशुष्यदार्द्रः स त्वद्विना मे हृदयं निकारः" किरा० ३-४४।

**उपशोभा** ಉಪಶೋಭಾ (स्त्री०) ಅಲಂಕರಣ, ಶೃಂಗಾರ. उपगता शोभाम्। "विहितोपशोभमुपयाति माधवे नगरं व्यरोचत पताकयेव तत्" माघ० १३-३६। भावे "ल्युट्" (३-३-११५)। –शोभनम्–ಶೋಭನಮ್.

**उपशोषण** ಉಪಶೋಷಣ (न०) 1. ಒಣಗಿಸುವಿಕೆ. उप+शुष (शोषणे)+णिच् "ल्युट्" (३-३-११५)। (वि०) 2. ಒಣಗಿಸುವ, ತೇವವನ್ನು ಹೋಗಲಾಡಿಸುವ. उप+शुष+णिच् "ल्युः" (३-१-१३४)। 3. ಒಣಗಿಸುವ ಸಾಧನ. कर० "ल्युट्" (३-३-११७)।

**उपशोषयत्** ಉಪಶೋಷಯತ್ (वि०) ಒಣಗಿಸುತ್ತಿರುವ, ತೇವವನ್ನು ಹೋಗಲಾಡಿಸುತ್ತಿರುವ. उप+शुष (शोषणे)+णिच् "शतृ" (३-२-१२४)।

**उपश्रुत्** ಉಪಶ್ರುತ್ (पु०) ಯಜ್ಞ. श्रु (श्रवणे) "क्विप्" (वा० ३-३-९४)। उपगता श्रुत् यस्मिन्।

**उपश्रुत** ಉಪಶ್ರುತ (न०) 1. ವಾಗ್ದಾನ, ಭರವಸೆಯ ಮಾತು. (वि०) 2. ವಾಗ್ದಾನ ಮಾಡಲ್ಪಟ್ಟ, ಭರವಸೆ ಕೊಡಲ್ಪಟ್ಟ. 3. ಅಂಗೀಕರಿಸಲ್ಪಟ್ಟ, ಒಪ್ಪಲ್ಪಟ್ಟ, ಸಮ್ಮತಿಸಲ್ಪಟ್ಟ. उप+श्रु (श्रवणे) कर्म० "क्तः" (३-२-१०२)। "वर्णितगीर्णौ च तथा संगीर्णोपश्रुतौ प्रतिज्ञाते" वैज०।

**उपश्रुति** ಉಪಶ್ರುತಿ (स्त्री०) 1. ಸಮೀಪದಲ್ಲಿ ಕೇಳುವಿಕೆ, ಹತ್ತಿರದಲ್ಲಿ ಕಿವಿಗೊಟ್ಟು ಆಲೈಸುವಿಕೆ. उप+श्रु (श्रवणे) "क्तिन्" (३-३-९४)। 2. ರಾತ್ರಿವೇಳೆಯಲ್ಲಿ ಹೊರಕ್ಕೆ ಬಂದು ಕೇಳುವ ಶುಭಾಶುಭ ಸೂಚಕವಾದ ದೇವ (ಅಲೌಕಿಕ) ವಾಣಿ. "नक्तं निर्गत्य यत्किञ्चिच्छुभाशुभकरं वचः। श्रूयते तद्विदुर्धीराः देवप्रश्नमुपश्रुतिम्" हारा०। "परिजनोऽपि सततमुपश्रुत्यै निर्जगाम" काद०। 3. ವಾಗ್ದಾನ, ಭರವಸೆಯ ಮಾತು. (अव्य०) 4. ಕಿವಿಯ ಸಮೀಪದಲ್ಲಿ; ಕಿವಿಯ ಹತ್ತಿರ. सामीप्ये अव्ययी०।

**उपश्लिष्ट** ಉಪಶ್ಲಿಷ್ಟ (वि०) 1. ಆಲಿಂಗಿಸಲ್ಪಟ್ಟ, ಅಪ್ಪಿಕೊಳ್ಳಲ್ಪಟ್ಟ. 2. ಸಮೀಪ ಸಂಬಂಧ ಹೊಂದಲ್ಪಟ್ಟ. उप+श्लिष (आलिङ्गने) "क्तः" (३-२-१०२)।

**उपश्लेष** ಉಪಶ್ಲೇಷ (पु०) ಸಮೀಪ ಸಂಬಂಧ, ಸಾನ್ನಿಧ್ಯ, ಅಕ್ಕಪಕ್ಕದಲ್ಲಿರುವುದು. उप+श्लिष (आलिङ्गने) "घञ्" (३-३-१८)। भावे "ल्युट्" (३-३-११५)। –श्लेषणम्–ಶ್ಲೇಷಣಮ್. ಆಲಿಂಗನ, ತೆಕ್ಕೆ, ಅಪ್ಪಿಕೊಳ್ಳುವಿಕೆ.

**उपश्लोकन** ಉಪಶ್ಲೋಕನ (न०) ಸ್ತೋತ್ರಮಾಡುವುದು, ಕೊಂಡಾಡುವುದು, ಹೊಗಳುವುದು. श्लोकैरुपस्तौति — उप+श्लोक+णिच् उपश्लोकि (नामधा०) "ल्युट्" (३-३-११५)।

**उपश्लोकयत्** ಉಪಶ್ಲೋಕಯತ್ (वि०) ಹೊಗಳುವ, ಸ್ತೋತ್ರಮಾಡುವ, ಕೊಂಡಾಡುವ. उपश्लोकि (नामधा०) "शतृ" (३-२-१२४)।

**उपश्लोकयितव्य** ಉಪಶ್ಲೋಕಯಿತವ್ಯ (वि०) ಹೊಗಳಲ್ಪಡುವ, ಕೊಂಡಾಡಲ್ಪಡುವ. उपश्लोकि (नामधा०) "तव्यः" (३-१-९६)। "चन्द्रगुप्तः त्वया समुत्तेजनसमर्थैः श्लोकैरुपश्लोकयितव्यः" मुद्रा० २।

**उपश्लोकित** ಉಪಶ್ಲೋಕಿತ (वि०) ಸ್ತೋತ್ರಮಾಡಲ್ಪಟ್ಟ, ಹೊಗಳಲ್ಪಟ್ಟ, ಕೊಂಡಾಡಲ್ಪಟ್ಟ.

**उपष्टम्भ** ಉಪಷ್ಟಂಭ (पु०) 1. ಆಲಂಬನ, ಆಶ್ರಯ, ಆಸರೆ. उप+स्तन्भु (रोधने) "घञ्" (३-३-१८)। 2. ಆಧಾರ, ಊರುಗೋಲು. 3. ಸಹಾಯ, ಒತ್ತಾಸೆ. 4. ಪ್ರೋತ್ಸಾಹ.

**उपष्टम्भक** ಉಪಷ್ಟಂಭಕ (पु०) 1. "उपष्टम्भ" ಪದದ ಅರ್ಥ. स्वार्थे "कन्"। 2. ಆಧಿಕ್ಯ, ಅತಿಶಯ, ಹೆಚ್ಚಿಗೆ. (न०) 3. ಆಧಾರ, ಆಸರೆ. (वि०) 4. ಆಸರೆಯಾಗಿರುವ, ಒತ್ತಾಸೆಯಾಗಿರುವ, ಆಶ್ರಯ ಕೊಡುವ. उप+स्तन्भु (रोधने) "ण्वुल्" (३-१-१३३)।

**उपसंयम** ಉಪಸಂಯಮ (पु०) 1. ಜಗತ್ತಿನ ಮಹಾ ಪ್ರಳಯ, ಪ್ರಪಂಚದ ಕೊನೆ. 2. ನಿಯಂತ್ರಣ, ನಿಯಮನ, ಅಂಕೆಯಲ್ಲಿಡುವಿಕೆ, ಹತೋಟಿಯಲ್ಲಿಡುವಿಕೆ. 3. ಬಂಧನ, ಚೆನ್ನಾಗಿ ಕಟ್ಟುವುದು. 4. ಉಪಸಂಹಾರ, ಹಿಂದಕ್ಕೆ ತೆಗೆದುಕೊಳ್ಳುವುದು.

**उपसंव्यान** ಉಪಸಂವ್ಯಾನ (न०) ಉಡುವ ಬಟ್ಟೆ, ಕೆಳಗಿನ ವಸ್ತ್ರ. उपसंवीयते — उप + सम् + व्येञ् (तन्तुसन्ताने) कर० "ल्युट्" (३-३-११७)। "अन्तरीयोपसंव्यानपरिधानान्यधोंऽशुके" अम०।

**उपसंहार** ಉಪಸಂಹಾರ (पु०) 1. ಸಮಾಪ್ತಿಗೊಳಿಸುವುದು, ಕೊನೆಮುಟ್ಟಿಸುವುದು. उपसंह्रियते — उप+

सम्+हृञ् (हरणे) "घञ्" (३-३-१८)। "उपक्रमोप-संहारौ हेतुस्तात्पर्यनिर्णये"। [ಏಕವಿಷಯಕವಾದ ಪ್ರಾರಂಭ ಮತ್ತು ಸಮಾಪ್ತಿ ಇವೆರಡೂ ಇದ್ದರೆ ಗ್ರಂಥದ ಆ ವಿಷಯದ ತಾತ್ಪರ್ಯನಿರ್ಣಯವಾಗುವುದು.] 2. ಹಿಂದಕ್ಕೆ ಎಳೆದುಕೊಳ್ಳುವುದು, ಸಂಕೋಚ ಮಾಡಿಕೊಳ್ಳುವುದು. 3. (ಬಿಟ್ಟ ಬಾಣವನ್ನು) ಹಿಂದಕ್ಕೆ ಎಳೆದುಕೊಳ್ಳುವುದು. 4. ಸಂಗ್ರಹಿಸುವುದು, ಸಂಕ್ಷೇಪಗೊಳಿಸುವುದು. 5. ಸಮೂಹ, ಗುಂಪು, ಸಮುದಾಯ. "समास उपसंहारस्समाहारस्समुच्चयः" वैज०। 6. ಜಗತ್ತಿನ ನಾಶ, ಪ್ರಳಯ.

**उपसंहारिन् ಉಪಸಂಹಾರಿನ್** (वि०) ಉಪಸಂಹಾರಗೊಳಿಸುವ, ಕೊನೆಗಾಣಿಸುವ. उपसंहरति — उप + सम् + हृञ् (हरणे) "णिनिः" (३-१-१३४)।

**उपसंहित ಉಪಸಂಹಿತ** (वि०) ಒಟ್ಟಿಗೆ ಸೇರಿಕೊಂಡಿರುವ, ಸಂಬಂಧಿಸಿಕೊಂಡಿರುವ. उप+सम्+डु धाञ् (धारण-पोषणयोः) "क्तः" (३-४-७२)।

**उपसंहृत ಉಪಸಂಹೃತ** (वि०) 1. ಹಿಂದಕ್ಕೆ ಎಳೆದುಕೊಳ್ಳಲ್ಪಟ್ಟ, ಉಪಸಂಹರಿಸಲ್ಪಟ್ಟ. उप+सम्+हृञ् (हरणे) "क्तः" (३-२-१०२)। 2. ಸಮಾಪ್ತಿಗೊಳಿಸಲ್ಪಟ್ಟ, ಕೊನೆಗಾಣಿಸಲ್ಪಟ್ಟ.

**उपसङ्क्रमण ಉಪಸಂಕ್ರಮಣ** (न०) ಸೇರಿಸುವಿಕೆ, ಸಂಬಂಧಕಲ್ಪಿಸುವಿಕೆ. उप+सम्+क्रमु (पादविक्षेपे) "ल्युट्" (३-३-११५)।

**उपसङ्ख्यान ಉಪಸಂಖ್ಯಾನ** (न०) 1. ಅಧಿಕವಾಗಿ ಸೇರಿಸುವುದು, ಹಿಂದೆ ಹೇಳಿದುದಕ್ಕಿಂತಲೂ ಹೆಚ್ಚಾಗಿ ಕೂಡಿಸುವುದು. ಪಾಣಿನಿ ಸೂತ್ರಗಳಲ್ಲಿ ಹೇಳಿರುವುದಕ್ಕಿಂತಲೂ ಹೆಚ್ಚಿಗೆ ಅಂಶಗಳನ್ನು ಸೇರಿಸಬೇಕೆಂಬ ವಾರ್ತಿಕಾಚಾರ್ಯ (ಕಾತ್ಯಾಯನ)ರ ವಾಕ್ಯ. "आत्मन्विश्वजनभोगोत्तरपदात् खः" (५-१-९) ಎಂಬ ಸೂತ್ರದಲ್ಲಿ ವಿಹಿತವಾದ "ख" ಪ್ರತ್ಯಯವು "पञ्चजन" ಪದಕ್ಕೂ ಬರಬೇಕೆಂದು "पञ्चजनादुपसङ्ख्यानम्" (वा० ५-१-९) ಎಂಬ ವಾರ್ತಿಕದಿಂದ ಹೇಳಿರುವರು. ಹೀಗೆಯೇ "गम्यादीनामुपसङ्ख्यानम्" "आद्यादिभ्य उपसङ्ख्यानम्" ಇತ್ಯಾದಿ.

**उपसङ्ग्रह ಉಪಸಂಗ್ರಹ** (पु०) 1. ಕಾಲುಹಿಡಿದುಕೊಂಡು ಮಾಡುವ ನಮಸ್ಕಾರ. उपसङ्गृह्यते पादावत्र —उप+सम्+ग्रह (उपादाने) "अप्" (३-३-५८)। अधि० "ल्युट्" (३-३-११७)। –सङ्ग्रहणम् –ಸಂಗ್ರಹಣವು. "अभिनवधनुर्विद्यादर्पक्षमाय च कर्मणे स्फुरति रभसात्पाणिः पादोपसङ्ग्रहणाय च" म० वी० २-३०। "व्यत्यस्तपाणिना कार्यमुपसङ्ग्रहणं गुरोः। सव्येन सव्यः स्प्रष्टव्यो दक्षिणेन च दक्षिणः" मनु० २-७२। 2. ಚೆನ್ನಾಗಿ ಒಲಿಸಿಕೊಳ್ಳುವಿಕೆ, ತನ್ನ ಕಡೆ ಸೇರಿಸಿಕೊಳ್ಳುವಿಕೆ.

**उपसङ्ग्राह्य ಉಪಸಂಗ್ರಾಹ್ಯ** (वि०) 1. ಕಾಲುಹಿಡಿದು ನಮಸ್ಕರಿಸಲ್ಪಡುವ, ಗೌರವದಿಂದ ನಮಸ್ಕರಿಸಲು ಯೋಗ್ಯನಾದ. उपसङ्गृह्यते — उप + सम् + ग्रह (उपादाने) "ण्यत्" (३-१-१२४)। "भ्रातुर्भार्योपसङ्ग्राह्या सवर्णाहन्यहन्यपि। विप्रोष्य तूपसङ्ग्राह्या ज्ञातिसम्बन्धयोषितः" मनु० २-१३२। 2. ತನ್ನ ಕಡೆಗೆ ಸೇರಿಸಿಕೊಳ್ಳಲು ಯೋಗ್ಯನಾದ, ಒಲಿಸಿಕೊಳ್ಳಲು ಅರ್ಹನಾದ.

**उपसत्ति ಉಪಸತ್ತಿ** (स्त्री०) 1. ಸಂಗ, ಸಮೀಪ ಸಂಬಂಧ. उप + षद्लृ (विशरणादौ) "क्तिन्" (३-३-९४)। 2. ದಾನ, ಕೊಡುಗೆ. 3. ಸೇವೆ, ಶುಶ್ರೂಷೆ. "उपसत्तिः सङ्गमात्रे प्रतिपादनसेवयोः" हेम०।

**उपसद् ಉಪಸದ್** (स्त्री०) 1. ಒಂದು ಯಾಗ. 2. ದಕ್ಷಿಣಾಗ್ನಿ, ಗಾರ್ಹಪತ್ಯ ಮತ್ತು ಆಹವನೀಯಗಳಿಗಿಂತಲೂ ಬೇರೆಯಾದ ಅಗ್ನಿ. "गार्हपत्यो दक्षिणाग्निस्तथैवाहवनीयकः। एतेऽग्नयस्त्रयो मुख्याः शेषाश्चोपसदस्त्रयः" अग्निपु०। (वि०) 3. ಸಮೀಪದಲ್ಲಿರುವ, ಹತ್ತಿರವಿರುವ. उप + षद्लृ (विशरणादौ) "क्विप्" (३-२-७६)।

**उपसदन ಉಪಸದನ** (न०) 1. ಸಮೀಪಕ್ಕೆ ಹೋಗುವುದು, ಹತ್ತಿರ ಸೇರುವುದು. उप+षद्लृ (विशरणादौ) "ल्युट्" (३-३-११५)। "तत्रोपसदनं चक्रे द्रोणस्येष्वस्त्रकर्मणि" भा०। 2. ಆಚಾರ್ಯನ ಸನ್ನಿಧಿಯಲ್ಲಿ ಶಿಷ್ಯನಾಗಿ ಹೋಗಿ ಸೇರುವಿಕೆ. 3. ಸೇವೆ, ಶುಶ್ರೂಷೆ. 4. ಪ್ರಾಪ್ತಿ, ಹೊಂದುವಿಕೆ. (अव्य०) 5. ಗೃಹದ ಸಮೀಪ, ಮನೆಯ ಹತ್ತಿರ. "यज्ञोपसदनं ब्रह्मन् प्राप्तोऽसि मुनिभिः सह" रामा०।

**उपसन्धान ಉಪಸಂಧಾನ** (न०) ಒಟ್ಟಿಗೆ ಸೇರಿಸುವಿಕೆ, ಒಟ್ಟುಗೂಡಿಸುವಿಕೆ. उप+सम्+डु धाञ् (धारण-पोषणयोः) "ल्युट्" (३-३-११५)।

**उपसन्न ಉಪಸನ್ನ** (वि०) 1. ಸಮೀಪಕ್ಕೆ ಬಂದಿರುವ. 2. ಹತ್ತಿರವಿರುವ. उप+षद्लृ (विशरणादौ) "क्तः" (३-४-७२)। 3. ಪೂಜಿಸಲ್ಪಟ್ಟ, ಸೇವಿಸಲ್ಪಟ್ಟ.

**उपसमाधान ಉಪಸಮಾಧಾನ** (न०) 1. ರಾಶಿಹಾಕುವುದು, ಗುಪ್ಪೆಹಾಕುವುದು. उप+सम्+आ+डु धाञ् (धारणपोषणयोः) "ल्युट्" (३-३-११५)। "उपसमाधानं राशीकरणम्" सि० कौ०। 2. ಜ್ವಲಿಸುವಂತೆ ಮಾಡುವುದು, ಉರಿಯಿಸುವುದು.

**उपसम्पत्ति ಉಪಸಂಪತ್ತಿ** (स्त्री०) ಹೊಸದಾಗಿ ಪ್ರವೇಶಿಸುವುದು, ಮೊದಲಾಗಿ ಕೈಹಾಕುವುದು. प्रथमवैयाकरणः। सम्प्रति व्याकरणमध्येतुं प्रवृत्त इत्यर्थः। "प्रथमोऽचिरोपसम्पत्तौ" पा० सू० ६-२-५६।

**उपसम्पन्न ಉಪಸಂಪನ್ನ** (वि०) 1. ಸೇರಿಕೊಂಡಿರುವ, ಕೂಡಿರುವ. 2. ಪರಿಕರಗಳಿಂದ ತಯಾರಿಸಲ್ಪಟ್ಟ. 3. ಸಾಕಾದಷ್ಟು ಪ್ರಮಾಣವುಳ್ಳ. 4. ಪ್ರಾಪ್ತವಾದ, ಹೊಂದಲ್ಪಟ್ಟ. 5. ಮರಣಹೊಂದಿದ. उप+सम्+पद (गतौ) कर्त० कर्म० वा "क्तः" (३-४-७२, ३-२-१०२)। "उपसम्पन्नं पर्याप्ते संस्कृतप्राप्तयोर्मृते" हेम०।

**उपसम्भाषा ಉಪಸಂಭಾಷಾ** (स्त्री०) 1. ಪರಸ್ಪರ ಮಾತನಾಡುವುದು, ಕೂಡುಮಾತು, ಸಂಭಾಷಣೆ. उप+सम्+भाष (व्यक्तायां वाचि) "अः" (३-३-१०३)। "माधुर्यविस्रम्भविशेषभाजा कृतोपसम्भाषमिवेक्षितेन" किरा० ३-३। 2. ಮನವೊಲಿಸುವುದು, ಸಮಾಧಾನಪಡಿಸುವಿಕೆ. उपसम्भाषा उपसान्त्वनम्। "भासनोपसम्भाषाज्ञानयत्नविमत्युपमन्त्रणेषु वदः" पा० सू० १-३-४७।

**उपसर ಉಪಸರ** (पु०) 1. ಹಸುಗಳಿಗೆ ಹೋರಿಬಿಡುವುದು, ಹಸುವು ಮೊದಲನೆಯ ಬಾರಿ ಗರ್ಭ ಧರಿಸುವುದು. उप+सृ (गतौ) "अप्" (३-३-७१)। प्रजनं प्रथमगर्भग्रहणम्। गवामुपसरः। सि० कौ०। 2. ಎಡೆಬಿಡದೆ ಹೊರಡುವುದು, ನಿರಂತರವಾಗಿ ಹೊರಕ್ಕೆ ಬರುತ್ತಿರುವುದು. "वीनामुपसरं दृष्ट्वा तेऽन्योन्योपहवा गुहाम्" भट्टि० ७-६०।

**उपसरण ಉಪಸರಣ** (न०) 1. ಹಸುಗಳಿಗೆ ಮೊದಲನೆಯ ಸಲ ಹೋರಿಬಿಡುವುದು, ಹಸುವು ಮೊದಲನೆಯ ಬಾರಿ ಗರ್ಭಧರಿಸುವುದು. उप+सृ (गतौ) "ल्युट्" (३-३-११५)। 2. ಸಮೀಪಕ್ಕೆ ಹೋಗುವುದು, ಹತ್ತಿರ ಸೇರುವುದು.

**उपसर्ग ಉಪಸರ್ಗ** (पु०) 1. ರೋಗದ ಬದಲಾವಣೆ. उप+सृज (विसर्गे) "घञ्" (३-३-१८)। 2. ಉಪದ್ರವ, ಪೀಡೆ, ತೊಂದರೆ. "सम्यक्पालनलालिताः प्रशमिताशेषोपसर्गाः प्रजाः" रत्ना० १-१०। 3. ಉತ್ಪಾತ, ಶುಭಾಶುಭ ಫಲಗಳನ್ನು ಸೂಚಿಸುವ ಚಿಹ್ನೆ. "अजन्यं क्लीबमुत्पात उपसर्गः समं त्रयम्" अम०। 4. (ವ್ಯಾಕರಣ ಶಾಸ್ತ್ರದಲ್ಲಿ) ಕ್ರಿಯಾಪದಗಳ ಸಂಬಂಧ ಹೊಂದಿ ಆಯಾ ಅರ್ಥಗಳಿಗೆ ದ್ಯೋತಕವಾಗುವ प्र, परा ಮೊದಲಾದುವು. **ಪ್ರಾದಿಗಳು 22 :** (1) प्र, (2) परा, (3) अप, (4) सम्, (5) अनु, (6) अव, (7) निस्, (8) निर्, (9) दुस्, (10) दुर्, (11) वि, (12) आङ्, (13) नि, (14) अधि, (15) अपि, (16) अति, (17) सु, (18) उत्, (19) अभि, (20) प्रति, (21) परि ಮತ್ತು (22) उप। [ಇವುಗಳ ಅರ್ಥಗಳನ್ನು ಆಯಾ ಪದಗಳಲ್ಲಿ ನೋಡಿ.] ಉಪಸರ್ಗಗಳು ಮೂರು ವಿಧ. ಕೆಲವು ಉಪಸರ್ಗಗಳು ಧಾತುವಿನ ಅರ್ಥವನ್ನು ಬಾಧಿಸಿ ಬೇರೊಂದು ಅರ್ಥವನ್ನು ಕೊಡುವುವು. ದಾನವೆಂಬ ಅರ್ಥವುಳ್ಳ दाञ् ಧಾತುವಿಗೆ आङ् ಸೇರಿದರೆ ಸ್ವೀಕಾರವೆಂಬ ಅರ್ಥವನ್ನು ಕೊಡುವುದು. आदत्ते। ಕೆಲವು, ಧಾತುವಿನ ಅರ್ಥವನ್ನು ಅನುಸರಿಸಿ ಅದೇ ಅರ್ಥವನ್ನು ಕೊಡುವುವು. षूङ् ಧಾತುವಿಗೆ प्र ಸೇರಿದಾಗ ಅದೇ ಧಾತುವಿನ ಅರ್ಥವನ್ನು ಕೊಡುವುದು. प्रसूते। ಮತ್ತೆ ಕೆಲವುಕಡೆ ಧಾತುವಿನ ಅರ್ಥವನ್ನು ವಿಶೇಷರೂಪದಿಂದ ತಿಳಿಸುವುವು. णम ಧಾತುವಿಗೆ प्र ಸೇರಿದಾಗ ಪ್ರಕರ್ಷವೆಂಬ ಅರ್ಥವನ್ನು ಕೊಡುವುವು. प्रणमति। "धात्वर्थं बाधते कश्चित् कश्चित्तमनुवर्तते। तमेव विशिनष्टयन्यः उपसर्गगतिस्त्रिधा"। उदा: (1) "प्रबभूव नालमवलोकयितुम्" किरा० ६-६। (2) पराजयते। (3) "अपयाति सरोषया निरस्ते" माघ० ९-८३। (4) "संपत्स्यते वः कामोऽयं कालः कश्चित्प्रतीक्ष्यताम्" कुमा० २-५४। (5) "अनुजगुरथ दिव्यं दुन्दुभिध्वानमाशाः" किरा० ३-६०। (6) "अवजानासि मां यस्मादतस्ते न भविष्यति" रघु० १-७७। (7) "निष्कासयन्त्यनेके सागरसरिदम्बुपूरपरिपतितम्"। (8) "निरचायि यदा मेदो नौषधीनां हनूमता" भट्टि० १५-१०७। (9) "दुष्पानः पुनरेतेन कपिना भृङ्गसंभृतः" भट्टि० ९-१०८। (10) "दुर्दान्तमुत्कृत्य निरस्तसादिनम्" माघ० १२-२२। (11) "व्यचलन्विशङ्कटकटीरकस्थली..." माघ० १३-३४। (12) "आरभन्तेऽल्पमेवाज्ञाः कामं व्यग्रा भवन्ति च"

माघ० २-७९। (13) "निजघ्निरे तस्य हरेषुजालैः" किरा० १७-२६। (14) "अध्यासामासुरुत्तुङ्गहेमपीठानि यान्यमी" माघ० २-५। (15) अपिधेहि। (16) "नरपतिरतिवाहयांबभूव क्वचिदसमेतपरिच्छदस्त्रियामाम्" रघु० ९-७०। (17) सुषुषुपतुः। (18) "उदमज्जि कैटभजितः शयनात्" माघ० ९-३०। (19) "अभियाति नः सतृष एष चक्षुषः" माघ० १३-४६। (20) "प्रत्यूचे मारुती राममस्ति वालीति वानरः" भट्टि० ६-९९। (21) "पर्यशाप्सीत् दिविष्ठासौ सन्दर्श्य भयदं वपुः" भट्टि० ४-३३। (22) "उपाददे तस्य सहस्ररश्मिः त्वष्ट्रा नवं निर्मितमातपत्रम्" कुमा० ७-४१।

**उपसर्जन ಉಪಸರ್ಜನ** (न०) 1. ಅಪ್ರಧಾನ, ಗೌಣ, ಮುಖ್ಯವಲ್ಲದ. उप+सृज (विसर्गे) "ल्युट्" (३-३-११३)। "अप्राग्र्यं द्वयहीने द्वे अप्रधानोपसर्जने" अम०। "उपसर्जनं प्रधानस्य धर्मतो नोपपद्यते" मनु० ९-१२१। 2. ಉತ್ಪಾತ, ಶುಭಾಶುಭಸೂಚಕ ಚಿಹ್ನೆ. "निघति भूमिचलने ज्योतिषां चोपसर्जने" मनु० ४-१०५। 3. (ವ್ಯಾಕರಣ ಶಾಸ್ತ್ರದಲ್ಲಿ) ಗುಣೀಭೂತವಾದ ಪದ, ವಿಶೇಷಣ ಪದ. "राजपुरुषः" ಎಂಬಲ್ಲಿ राजन् ಪದವು ವಿಶೇಷಣವಾದುದರಿಂದ ಉಪಸರ್ಜನವಾಯಿತು. 4. ಸಮಾಸವಿಧಾಯಕಶಾಸ್ತ್ರದಲ್ಲಿರುವ ಪ್ರಥಮಾ ವಿಭಕ್ತ್ಯಂತ ಪದದಿಂದ ಬೋಧಿಸಲ್ಪಡುವ ಅರ್ಥ. "प्रथमानिर्दिष्टं समास उपसर्जनम्" पा० सू० १-२-४३। "द्वितीया श्रिते" त्यादि ಸೂತ್ರದಲ್ಲಿ ಪ್ರಥಮಾ ವಿಭಕ್ತ್ಯಂತವಾದ द्वितीया ಪದದ ಅರ್ಥವಾದ ದ್ವಿತೀಯಾ ವಿಭಕ್ತ್ಯಂತ ಪದವು ಉಪಸರ್ಜನವಾಗುವುದು. कृष्णं श्रितः कृष्णश्रितः। 5. ವಿಗ್ರಹವಾಕ್ಯದಲ್ಲಿ ತೋರಿಸಲ್ಪಟ್ಟ ನಿಯತ (ಬದಲಾವಣೆಯಿಲ್ಲದ) ವಿಭಕ್ತಿಯುಳ್ಳ ಶಬ್ದ. "एकविभक्तिचापूर्वनिपाते" पा० सू० १-२-४४। मालामतिक्रान्तः ಎಂಬಲ್ಲಿ अतिक्रान्त ಪದದಲ್ಲಿ ವಿಭಕ್ತಿ ಬದಲಾವಣೆಯಾದರೂ माला ಪದದ ವಿಭಕಿ ಬದಲಾವಣೆಯಿಲ್ಲ. मालामतिक्रान्तः, मालामतिक्रान्तम्, मालामतिक्रान्तेन ಇತ್ಯಾದಿ.

**उपसर्पण ಉಪಸರ್ಪಣ** (न०) 1. ಹತ್ತಿರಕ್ಕೆ ಹೋಗುವುದು, ಸಮೀಪಿಸಿ ಹೋಗುವುದು. 2. ಒಲಿಸಿಕೊಳ್ಳಲು ಅನುಸರಿಸುವುದು. उप + सृप्लृ (गतौ) "ल्युट्" (३-३-११५)।

**उपसर्पिन् ಉಪಸರ್ಪಿನ್** (वि०) ಹತ್ತಿರಕ್ಕೆ ಹೋಗುವ, ಸಮೀಪಿಸುವ. उप + सृप्लृ (गतौ) "णिनिः" (३-१-१३४)।

**उपसर्या ಉಪಸರ್ಯಾ** (स्त्री०) ಗರ್ಭಗ್ರಹಣಕ್ಕೆ ಯೋಗ್ಯವಾದ ಹಸು, ಹೋರಿಯನ್ನು ಅಪೇಕ್ಷಿಸುವ ಹಸು. उप + सृ (गतौ) "यत्" (३-१-१०४)।

**उपसार्य ಉಪಸಾರ್ಯ** (वि०) ಹೊಂದಲ್ಪಡುವ, ಹೊಂದಲು ಯೋಗ್ಯವಾದ. उप+सृ (गतौ) "ण्यत्" (३-१-१२४)। स्त्रियां –सार्या –ಸಾರ್ಯಾ. उपसार्या काशी।

**उपसिक्त ಉಪಸಿಕ್ತ** (वि०) ನೀರು ಚಿಮುಕಿಸಲ್ಪಟ್ಟ, ಸಿಂಪಡಿಸಲ್ಪಟ್ಟ. उप + षिच (क्षरणे) "क्तः" (३-२-१०२)।

**उपसिञ्चत् ಉಪಸಿಂಚತ್** (वि०) ಚಿಮುಕಿಸುತ್ತಿರುವ, ಸಿಂಪಡಿಸುತ್ತಿರುವ. उप + षिच (क्षरणे) "शतृ" (३-२-१२४)।

**उपसिञ्चमान ಉಪಸಿಂಚಮಾನ** (वि०) ಚಿಮುಕಿಸುತ್ತಿರುವ, ಸಿಂಪಡಿಸುತ್ತಿರುವ, उप + षिच (क्षरणे) "शानच्" (३-२-१२४)।

**उपसीर ಉಪಸೀರ** (अव्य०) 1. ನೇಗಿಲಿನ ಹತ್ತಿರದಲ್ಲಿ. सीरस्य समीपे। सामीप्ये अव्ययी०। 2. ನೇಗಿಲಿನಲ್ಲಿ. सीरे उपसीरम्। सप्तम्यर्थे अव्ययी०।

**उपसुन्द ಉಪಸುಂದ** (पु०) ಸುಂದನ ತಮ್ಮ, ನಿಕುಂಭನೆಂಬ ರಾಕ್ಷಸನ ಮಗ. [ಸುಂದ ಮತ್ತು ಉಪಸುಂದರಿಬ್ಬರೂ ತಮಗೆ ಪರಸ್ಪರ ತಮ್ಮಿಬ್ಬರಿಂದಲೇ ಮರಣ ಸಂಭವಿಸಬೇಕೆಂಬ ವರವನ್ನು ಬ್ರಹ್ಮನಿಂದ ಪಡೆದು ಲೋಕವನ್ನು ಹಿಂಸಿಸತೊಡಗಿದಾಗ ಬ್ರಹ್ಮನು ವಿಶ್ವಕರ್ಮನ ಮೂಲಕ ತಿಲೋತ್ತಮೆಯನ್ನು ಸೃಷ್ಟಿಮಾಡಿಸಿ ಇವರಲ್ಲಿಗೆ ಕಳುಹಿಸಿದನು. ಇವರಿಬ್ಬರೂ ಅವಳಲ್ಲಿ ಮೋಹಗೊಂಡು ಪರಸ್ಪರ ಕಾದಾಡಿ ಹತರಾದರು. ಭಾ० ಆದಿ० २२९-२३२।] "सुन्दोपसुन्दौ सहजावभीकौ सुरेष्विव क्वापि सुराङ्गनायाम्। अन्योन्यमाहत्य पुरा यमस्य मनोभवेषोरिव लक्ष्यमास्ताम्" चं० भा०।

**उपसूर्यक ಉಪಸೂರ್ಯಕ** (न०) ಸೂರ್ಯ ಚಂದ್ರರ ಪರಿಧಿ, ಸೂರ್ಯಚಂದ್ರರ ಸುತ್ತಲೂ ಕಟ್ಟುವ ಮಂಡಲ. उपगतं सूर्यम्–"कन्" (५-३-९७)।

**उपसृष्ट ಉಪಸೃಷ್ಟ** (पु०) 1. ರಾಹು ಕೇತುಗಳಿಂದ ಹಿಡಿಯಲ್ಪಟ್ಟ ಸೂರ್ಯ ಮತ್ತು ಚಂದ್ರ. उप+सृज

(विसर्गे) "क्तः" (३-२-१०२)। "नेक्षेतोद्यन्तमादित्यं नास्तं यन्तं कदाचन। नोपसृष्टं न वारिस्थं न मध्यं नभसो गतम्" मनु० ४-३७। 2. ಮೈಥುನ, ಸ್ತ್ರೀಪುರುಷರ ಸಂಬಂಧ. "उपसृष्टं त्रिभद्रं च क्रीडारत्नं महासुखम्" त्रिकाण्ड०। (वि०) 3. ಕಾಮುಕ, ಸ್ತ್ರೀಲೋಲ. "उपसृष्टा इव क्षुद्राधिष्ठितभवना" काद०। 4. ವ್ಯಾಪ್ತವಾದ, ಕೂಡಿರುವ, ಸಹಿತವಾದ. "रोगोपसृष्टतनुदुर्वसतिं मुमुक्षुः" रघु० ८-९४। 5. ಪೀಡಿಸಲ್ಪಟ್ಟ, ತೊಂದರೆಪಡಿಸಲ್ಪಟ್ಟ. 6. प्र, परा ಮೊದಲಾದ ಉಪಸರ್ಗಗಳಿಂದ ಕೂಡಿದ (ಕ್ರಿಯಾಪದ).

**उपसेक ಉಪಸೇಕ** (पु०) ನೀರು ಚಿಮುಕಿಸುವುದು, ಸಿಂಪಡಿಸುವುದು. उप + षिच (क्षरणे) भावे "घञ्" (३-३-१८)।

**उपसेक्तृ ಉಪಸೇಕ್ತೃ** (वि०) ನೀರು ಚಿಮುಕಿಸುವ, ಸಿಂಪಡಿಸುವ. उप+षिच(क्षरणे)"तृच्"(३-१-१३३)। स्त्रियां "ङीप्" (४-१-५)। –सेक्त्री –ಸೇಕ್ತ್ರೀ.

**उपसेचक ಉಪಸೇಚಕ** (वि०) ನೀರು ಚಿಮುಕಿಸುವ, ಸಿಂಪಡಿಸುವ. उप+षिच(क्षरणे)"ण्वुल्"(३-१-१३३)।

**उपसेचन ಉಪಸೇಚನ** (न०) 1. ನೀರು ಚಿಮುಕಿಸುವಿಕೆ, ಸಿಂಪಡಿಸುವಿಕೆ. उप + षिच (क्षरणे) "ल्युट्" (३-३-११५)। (वि०) 2. ಚಿಮುಕಿಸುವ, ಸಿಂಪಡಿಸುವ. कर्त० "ल्युः" (३-१-१३४)। 3. ಸೇಚನ ಸಾಧನ, ನೀರು ಸುರಿಯುವ ಬಿಂದಿಗೆ ಮೊದಲಾದುದು. उप + षिच कर० "ल्युट्" (३-३-११७)।

**उपसेदिवस् ಉಪಸೇದಿವಸ್** (वि०) ಬಂದಿರುವ, ಆಗಮಿಸಿರುವ. उप + षद्लृ (विशरणादौ) "क्वसुः" (३-२-१०८)। "अथावदातं तदहो विडम्बना तथा कथा प्रेष्यतयोपसेदुषः" नैष० ९-१०। स्त्रियां "ङीप्" (४-१-६)। –सेदुषी –ಸೇದುಷೀ.

**उपसेवक ಉಪಸೇವಕ** (वि०) 1. ಸೇವೆಯಲ್ಲಿ ಆಸಕ್ತನಾದ, ಶುಶ್ರೂಷೆಯಲ್ಲಿ ನಿರತನಾದ. 2. ಸುಖಾಭಿಲಾಷೆಯುಳ್ಳ, ಸುಖಾನುಭವದಲ್ಲಿ ನಿರತನಾದ. उप+सेवृ (सेवायाम्) "ण्वुल्" (३-१-१३३)। "अदत्तादाननिरतः परदारोपसेवकः" याज्ञ० ३-१३६। 3. ಹತ್ತಿರದಲ್ಲಿ ಸೇವಿಸುವ.

**उपसेवन ಉಪಸೇವನ** (न०) 1. ವ್ಯಭಿಚಾರ, ಪರಸ್ತ್ರೀಸಂಗಮ. उप+सेवृ (सेवायाम्) "ल्युट्" (३-३-११५)। "नहीदृशमनायुष्यं लोके किञ्चन विद्यते। यादृशं पुरुषस्येह परदारोपसेवनम्" मनु० ४-१३४। 2. ಹತ್ತಿರದಲ್ಲಿ ಸೇವಿಸುವಿಕೆ. "निरताहं सदा सत्ये भर्तॄणामुपसेवने" भा० वन०। 3. ಆಯಾ ಕೆಲಸಗಳಲ್ಲಿ ಹೆಚ್ಚು ಆಸಕ್ತಿ, ಚಟ. "अजीर्णाध्ययनायासविरुद्धाग्न्योपसेवनात्" सुश्रुत०।

**उपसेवा ಉಪಸೇವಾ** (स्त्री०) "उपसेवन" ಪದದ ಅರ್ಥ. उप + सेवृ (सेवायाम्) भावे "अः" (३-३-१०३)। "गोभिरश्वैश्च यानैश्च कृष्या राजोपसेवया" मनु० ३-६४। "अदत्तानामुपादानं हिंसा चैवाविधानतः। परदारोपसेवा च शारीरं त्रिविधं स्मृतम्" मनु० १२-७।

**उपसेविन् ಉಪಸೇವಿನ್** (वि०) ಸೇವಿಸುವ, ಶುಶ್ರೂಷೆ ಮಾಡುವ. उप+सेवृ (सेवायाम्)"णिनिः"(३-१-१३४)। "अभिवादनशीलस्य नित्यं वृद्धोपसेविनः। चत्वारि संप्रवर्धन्ते आयुर्विद्या यशो बलम्" मनु० २-१२१। स्त्रियां "ङीप्" (४-१-५)। –सेविनी –ಸೇವಿನೀ.

**उपस्कर ಉಪಸ್ಕರ** (पु०) 1. ಗೃಹೋಪಕರಣ, ಮನೆಗೆ ಬೇಕಾದ ಅಗತ್ಯ ಪದಾರ್ಥಗಳು. उप+डु कृञ् (करणे) "अच्" (३-१-१३४)। सुट् (६-१-१३९)। "पञ्च सूना गृहस्थस्य चुल्लीपेषण्युपस्करः। कण्डिनी चोपकुम्भश्च बध्यते यास्तु वाहयन्" मनु० ३-६८। 2. ವ್ಯಂಜನ, ಸಾಂಬಾರ್ ಪುಡಿ, ಚಟ್ನಿ, ಉಪ್ಪಿನಕಾಯಿ ಮುಂತಾದುದು. 3. ಭೂಷಣ, ಒಡವೆ, ಅಲಂಕಾರ.

**उपस्करण ಉಪಸ್ಕರಣ** (न०) 1. ಅಲಂಕರಿಸುವುದು, ಶೃಂಗರಿಸುವುದು. उप + डु कृञ् (करणे) "ल्युट्" (३-३-११५)। 2. ವಿಕಾರ, ಬದಲಾವಣೆ. 3. ಪದಗಳ ಅಧ್ಯಾಹಾರ, ಬಿಟ್ಟುಹೋಗಿರುವ ಪದಗಳನ್ನು (ಅರ್ಥಪೂರ್ತಿಗಾಗಿ) ಸೇರಿಸಿಕೊಳ್ಳುವುದು. 4. ಸಮೂಹ, ಸಮುದಾಯ, ಗುಂಪು. 5. ಹಿಂಸಿಸುವಿಕೆ, ನೋಯಿಸುವಿಕೆ. हिंसने सुट् (६-१-१४१) 6. ಹಿಂಸಿಸುವ ಸಾಧನ. 7. ಅಲಂಕರಿಸುವ ಒಡವೆ. उप+डु कृञ् कर० "ल्युट्" (३-३-११७)।

**उपस्कार ಉಪಸ್ಕಾರ** (पु०) 1. ಭೂಷಣ, ಒಡವೆ. उप + डु कृञ् (करणे) "घञ्" (३-३-१८)। 2. ಸಮೂಹ, ಗುಂಪು, ಸಮುದಾಯ. 3. ಅಧ್ಯಾಹಾರ, ಅವಶ್ಯವಾದ ಪದಗಳನ್ನು (ಅರ್ಥಪೂರ್ತಿಗಾಗಿ) ಸೇರಿಸಿಕೊಳ್ಳುವುದು. "साकाङ्क्षमनुपस्कारं विष्वगति निराकुलम्" किरा० ११-३८। 4. ವಿಕಾರ, ಬದಲಾವಣೆ. 5. ಹೆಚ್ಚು ವಸ್ತುಗಳನ್ನು ಸೇರಿಸಿ ಗುಣವನ್ನು ಹೆಚ್ಚಿಸುವುದು.

**उपस्कृत ಉಪಸ್ಕೃತ** (वि०) 1. ಅಲಂಕರಿಸಲ್ಪಟ್ಟ, ಶೃಂಗರಿಸಲ್ಪಟ್ಟ. उप + डु कृञ् (करणे) "क्तः" (३-२-१०२)। उपस्कृता कन्या। 2. ಗುಂಪಾಗಿ ಸೇರಿಸಲ್ಪಟ್ಟ, ಒಟ್ಟುಗೂಡಿಸಲ್ಪಟ್ಟ. उपस्कृता राजानः। 3. ಬದಲಾವಣೆ ಹೊಂದಿದ, ವಿಕಾರಹೊಂದಿದ. उपस्कृतं भुङ्क्ते। 4. ಅಧ್ಯಾಹಾರಮಾಡಲ್ಪಟ್ಟ, ಹೊಸದಾಗಿ ಸೇರಿಸಲ್ಪಟ್ಟ. उपस्कृतं ब्रूते। 5. ಬೇರೆ ಗುಣ ಹೊಂದಿಸಲ್ಪಟ್ಟ.

**उपस्तरण ಉಪಸ್ತರಣ** (नं०) 1. ಹರಡುವುದು, ಹಾಸುವುದು. 2. ಹೊದಿಸುವುದು, ಮುಚ್ಚುವುದು. 3. ನೆಲವನ್ನು ಸಮನಾಗಿ ಮಾಡುವುದು, ಹಳ್ಳತಿಟ್ಟನ್ನು ಸರಿಪಡಿಸುವುದು. उप + स्तृञ् (आच्छादने) "ल्युट्" (३-३-११५)। "पुनर्नवीकृत्य लेपनोपस्तरणैः" आश्व०गृ०। 4. ಹಾಸುವ ವಸ್ತು, ಆಧಾರಭೂತವಾದ ಹರಡುವ ಪದಾರ್ಥ. "अमृतोपस्तरणमसि"। ಇದು ಭೋಜನದ ಪ್ರಾರಂಭದಲ್ಲಿ ಜಲಪಾನ ಮಂತ್ರ.

**उपस्तुत ಉಪಸ್ತುತ** (वि०) ಹತ್ತಿರದಲ್ಲಿ ಸ್ತೋತ್ರ ಮಾಡಲ್ಪಟ್ಟ, ಹೊಗಳಲ್ಪಟ್ಟ, ಸಮೀಪದಲ್ಲಿ ಕೊಂಡಾಡಲ್ಪಟ್ಟ. उप+ष्टुञ् (स्तुतौ) "क्तः" (३-२-१०२)।

**उपस्तुति ಉಪಸ್ತುತಿ** (स्त्री०) ಹತ್ತಿರದಲ್ಲಿ ಮಾಡುವ ಸ್ತೋತ್ರ, ಸಮೀಪದ ಹೊಗಳಿಕೆ. उप समीपे स्तुतिः।

**उपस्थ ಉಪಸ್ಥ** (पुंन०) 1. ಪುರುಷನ ಜನನೇಂದ್ರಿಯ, ಲಿಂಗ. उप समीपे तिष्ठति—ष्ठा (गतिनिवृत्तौ) "कः" (३-२-४)। "स्नानं मौनोपवासेज्या स्वाध्यायोपस्थनिग्रहः" याज्ञ० ३-३१३। 2. ಯೋನಿ, ಸ್ತ್ರೀಯರ ಜನನೇಂದ್ರಿಯ. "उपस्थमुदरं जिह्वा हस्तौ पादौ च पञ्चमम्। चक्षुर्नासा च कर्णौ च धनं देहस्तथैव च" मनु० ८-१२५। 3. ಉತ್ಸಂಗ, ತೊಡೆ, 4. ಅಪಾನದ್ವಾರ, ಮಲದ್ವಾರ, ಗುದ. "उपस्थः शेफसि क्रोडे तथा मदनमन्दिरे" मेदि०। "उपस्थो योनिलिङ्गयोः। उत्सङ्गगुदयोश्चापि" हेम०। (वि०) 5. ಹತ್ತಿರದಲ್ಲಿರುವ, ಸಮೀಪದಲ್ಲಿರುವ.

**उपस्थातृ ಉಪಸ್ಥಾತೃ** (पुं०) 1. ಋತ್ವಿಕ್ಕು. (वि०) 2. ಸೇವಕ, ಆಳು. उप+ष्ठा (गतिनिवृत्तौ) "तृच्" (३-२-१३५)। 3. ವಿನೀತ, ವಿಧೇಯ. 4. ಸಕಾಲದಲ್ಲಿ ಹತ್ತಿರಕ್ಕೆ ಬಂದಿರುವ. उप + ष्ठा "तृच्" (३-१-१३३)। "अन्यवादी क्रियाद्वेषी नोपस्थाता निरुत्तरः। आहूतप्रपलायी च हीनः पञ्चविधः स्मृतः"। 5. ಉಪಾಸನೆಮಾಡುವ, ಪೂಜಿಸುವ.

**उपस्थान ಉಪಸ್ಥಾನ** (नं०) 1. ಸಮೀಪಕ್ಕೆ ಬಂದಿರುವಿಕೆ. उप+ष्ठा (गतिनिवृत्तौ) "ल्युट्" (३-३-११५)। "किमिदं शिष्योपदेशकाले युगपदाचार्ययोरत्रोपस्थानम् ?" माल० १। 2. ಧ್ಯಾನ, ಸ್ಮರಣೆ, ಅನುಸಂಧಾನ. "तत्त्वस्मृतेरुपस्थानात्सत्त्वयोगात्परिक्षयात्" याज्ञ० ३-१६०। 3. ಪೂಜೆ, ಉಪಾಸನೆ. "सूर्योपस्थानं कुर्वः"। 4. ಹತ್ತಿರದ ಜಾಗ, ಸಮೀಪಸ್ಥಳ. 5. ಸೇರುವಿಕೆ, ಕಲೆಯುವಿಕೆ. "उपस्थानं तु सङ्गतिः" वैज०। 6. ಪ್ರಾಪ್ತಿ, ಹೊಂದುವಿಕೆ. 7. ತಲುಪುವಿಕೆ, ಸೇರುವಿಕೆ.

**उपस्थानीय ಉಪಸ್ಥಾನೀಯ** (वि०) 1. ಸೇವಿಸಲ್ಪಡುವ, ಸೇವಿಸಲು ಯೋಗ್ಯನಾದ. उप + ष्ठा (गतिनिवृत्तौ) "अनीयर्" (३-१-९६)। 2. ಸೇವಿಸುವವನು, ಉಪಾಸಕ, ಪೂಜಿಸುವವನು. कर्तं० "अनीयर्" (३-४-६८)। निपा०।

**उपस्थापक ಉಪಸ್ಥಾಪಕ** (वि०) 1. ಹತ್ತಿರಕ್ಕೆ ತರುವ, ಸಮೀಪದಲ್ಲಿಡುವ. उप+ष्ठा (गतिनिवृत्तौ) + णिच् "ण्वुल्" (३-१-१३३)। 2. ಹಿಂದೆ ಅನುಭವಿಸಿದ ಅಥವಾ ನೋಡಿದ ವಿಷಯವನ್ನು ನೆನಪಿಗೆ ತರುವ.

**उपस्थापन ಉಪಸ್ಥಾಪನ** (नं०) 1. ಹತ್ತಿರಕ್ಕೆ ತಂದಿಡುವುದು, ಸಮೀಪಕ್ಕೆ ತಲುಪಿಸುವುದು. उप + ष्ठा (गतिनिवृत्तौ) "ल्युट्" (३-३-११५)। 2. ಹಿಂದಿನದನ್ನು ನೆನಪಿಗೆ ತರುವುದು.

**उपस्थापनीय ಉಪಸ್ಥಾಪನೀಯ** (वि०) 1. ಹತ್ತಿರಕ್ಕೆ ತಂದಿಡಲ್ಪಡುವ, 2. ಸಮೀಪಕ್ಕೆ ತಂದಿಡಲು ಅರ್ಹವಾದ. 3. ಸ್ಮರಣೆಗೆ ತರಲು ಅರ್ಹವಾದ. 4. ನೆನಪಿಗೆ ತರಲ್ಪಡುವ. उप+ष्ठा (गतिनिवृत्तौ) + णिच् "अनीयर्" (३-१-९६)।

**उपस्थित ಉಪಸ್ಥಿತ** (नं०) 1. ಉಪಸ್ಥಾನ, ಸೇವನೆ, ಪೂಜೆ. उप + ष्ठा (गतिनिवृत्तौ) भावे "क्तः" (३-३-११४)। (वि०) 2. ಸನ್ನಿಹಿತವಾದ, ಹತ್ತಿರಕ್ಕೆ ಬಂದಿರುವ, ಕೊಂಚ ಕಾಲದಲ್ಲೇ ಒದಗಬಹುದಾದ. कर्तं० "क्तः" (३-४-७२)। "अथेप्सितं भर्तुरुपस्थितोदयं सखीजनोद्वीक्षणकौमुदीमुखम्" रघु० ३-१। 3. ತಲುಪಿರುವ, ಸೇರಿರುವ. "अयमपरः कार्यान्तरसचिवोऽस्मानुपस्थितः" माल० १। 4. ಹತ್ತಿರಕ್ಕೆ ಬಂದಿರುವ, ಸಮೀಪದಲ್ಲಿರುವ. "हय्यङ्गवीनमादाय घोषवृद्धानुपास्थितान्" रघु०.१-४५। 5. ಒದಗಿರುವ, ಲಬ್ಧವಾದ, ಪ್ರಾಪ್ತವಾದ. "अयाचितोपस्थितमम्बु केवलम्"

कुमा० ५-२२। 6. ಜ್ಞಾಪಿಸಿಕೊಳ್ಳಲ್ಪಟ್ಟ, ನೆನಸಿಕೊಳ್ಳಲ್ಪಟ್ಟ, ಬುದ್ಧಿಗೆ ಗೋಚರವಾದ. "उपस्थितपरित्यागे मानाभावः"। 7. ಸೇವಿಸಲ್ಪಟ್ಟ, ಪೂಜಿಸಲ್ಪಟ್ಟ. (स्त्री०) –स्थिता –ಸ್ಥಿತಾ. 8. ಹನ್ನೊಂದನೆಯ ಛಂದಸ್ಸಿನ ಒಂದು ವೃತ್ತ. ಇದರ ಲಕ್ಷಣ: "त्जौज्गौ गुरुणेयमुपस्थिता स्यात्" वृ० ८०। ಇದರ **ಗಣವಿನ್ಯಾಸ:**

त ज ज ग ग
UU। ।U। ।U। UU

**उपस्थिति ಉಪಸ್ಥಿತಿ** (स्त्री०) 1. ಸ್ಮೃತಿ, ನೆನಪು. उप + ष्ठा (गतिनिवृत्तौ) "क्तिन्" (३-३-९४)। 2. ಸಮೀಪಿಸುವುದು, ಹತ್ತಿರ ಸೇರುವುದು. 3. ತಲುಪುವುದು, ಸೇರುವುದು. 4. ಸೇವೆ, ಶುಶ್ರೂಷೆ. 5. ಸನ್ನಿಹಿತವಾಗಿರುವಿಕೆ, ಹತ್ತಿರದಲ್ಲೇ ಒದಗುವಿಕೆ.

**उपस्थेय ಉಪಸ್ಥೇಯ** (वि०) 1. ಸೇವಿಸಲ್ಪಡುವ, ಪೂಜಿಸಲ್ಪಡುವ. 2. ಸೇವಿಸಲು ಯೋಗ್ಯವಾದ. उप+ष्ठा (गतिनिवृत्तौ) "यत्" (३-१-९७)।

**उपस्पर्श ಉಪಸ್ಪರ್ಶ** (पु०) 1. ಆಚಮನ, ಮಂತ್ರಪೂರ್ವಕ ನೀರನ್ನು ಪ್ರಾಶನಮಾಡಿ (ಕುಡಿದು) ಮುಖ, ಮೂಗು, ಕಣ್ಣು, ಕಿವಿ, ಹೊಕ್ಕಳು, ಎದೆ, ತಲೆ, ಭುಜಗಳು ಇವುಗಳನ್ನು ಮುಟ್ಟುವುದು. "त्रिः प्राश्यापोद्विरुन्मृज्य मुखमेतानुपस्पृशेत्। आस्यनासाक्षिकर्णांश्च नाभिवक्षःशिरोंसकान्"। 2. ಸ್ಪರ್ಶ, ಮುಟ್ಟುವಿಕೆ. 3. ಸ್ನಾನ. उप+स्पृश (संस्पर्शने) "घञ्" (३-३-१८)। "उपस्पर्शः स्पर्शमात्रे स्नानाचमनयोरपि" मेदि०।

**उपस्पर्शन ಉಪಸ್ಪರ್ಶನ** (न०) "उपस्पर्श" ಪದದ ಅರ್ಥ. उप+स्पृश (संस्पर्शने) "ल्युट्" (३-३-११५)।

**उपहत ಉಪಹತ** (वि०) 1. ತಿರಸ್ಕರಿಸಲ್ಪಟ್ಟ. उप+हन (हिंसागत्योः) "क्तः" (३-२-१०२)। 2. ತಡೆದು ನಿಲ್ಲಿಸಲ್ಪಟ್ಟ, ಹೊಡೆದು ಹಿಂದಕ್ಕೆ ತಳ್ಳಲ್ಪಟ್ಟ. "जलदजालघनैरसिताश्मनामुपहतप्रचयेह मरीचिभिः" किरा० ५-४८। 3. ದೂಷಿಸಲ್ಪಟ್ಟ, ಕೆಡಿಸಲ್ಪಟ್ಟ. "किमेभिराशोपहतात्मवृत्तिभिः" कुमा० ५-७६। "मात्सर्यरागोपहतात्मनां हि" किरा० ३-५३। 4. ಹೊಡೆಯಲ್ಪಟ್ಟ, ಪೀಡಿಸಲ್ಪಟ್ಟ, ನೋಯಿಸಲ್ಪಟ್ಟ. 5. ನಾಶಪಡಿಸಲ್ಪಟ್ಟ. "दैवेनोपहतस्य बुद्धिरथवा पूर्वं विपर्यस्यति" मुद्रा० ६-८।

**उपहति ಉಪಹತಿ** (स्त्री०) 1. ಹೊಡೆತ, ಏಟು. उप+हन (हिंसागत्योः) "क्तिन्" (३-३-९४)। 2. ಅಡ್ಡಿ, ವಿಘ್ನ, ತಡೆ. 3. ಕೊಲ್ಲುವಿಕೆ, ನಾಶಪಡಿಸುವಿಕೆ. 4. ಕೆಡಿಸುವಿಕೆ.

**उपहरण ಉಪಹರಣ** (न०) 1. ಹತ್ತಿರಕ್ಕೆ ತರುವುದು, ಸಮೀಪಕ್ಕೆ ಒಯ್ಯುವುದು. उप+हृञ् (हरणे) "ल्युट्" (३-३-११५)। 2. ಕಾಣಿಕೆಯನ್ನು ಒಪ್ಪಿಸುವುದು, ಮರ್ಯಾದೆ ಸಲ್ಲಿಸುವುದು. 3. ದೇವತೆಗಳಿಗೆ ಪೂಜೆ ಸಲ್ಲಿಸುವುದು. 4. ಊಟಕ್ಕೆ ಬಡಿಸುವುದು.

**उपहर्तृ ಉಪಹರ್ತೃ** (वि०) 1. ಊಟಕ್ಕೆ ಬಡಿಸುವವನು. उप+हृञ् (हरणे) "तृच्" (३-१-१३३)। "अनुमन्ता विशसिता निहन्ता क्रयविक्रयी। संस्कर्ता चोपहर्ता च खादकश्चेति घातकाः" मनु० ५-५१। 2. ಕಾಣಿಕೆಯನ್ನು ಒಪ್ಪಿಸುವವನು, ಮರ್ಯಾದೆ ಸಲ್ಲಿಸುವವನು. 3. ಹತ್ತಿರಕ್ಕೆ ತರುವವನು, ಸಮೀಪಕ್ಕೆ ಒಯ್ಯುವವನು. 4. ಪೂಜೆ ಸಲ್ಲಿಸುವವನು.

**उपहव ಉಪಹವ** (पु०) ಆಹ್ವಾನ, ಕರೆಯುವಿಕೆ. उप+ह्वेञ् (स्पर्धायां शब्दे च) "अप्" (३-३-७२)। "वीनामुपसरं दृष्ट्वा तेऽन्योन्योपहवा गुहाम्" भट्टि० ७-६०।

**उपहसत् ಉಪಹಸತ್** (वि०) ಹಾಸ್ಯಮಾಡುತ್ತಿರುವ, ನೋಡಿ ನಗುತ್ತಿರುವ. उप+हसे (हसने) "शतृ" (३-२-१२४)। "हंसोऽप्यसौ हंसगतेः सुदत्याः पुरः पुरश्चारु चलन् बभासे। वैलक्ष्यहेतोर्गतिमेतदीयामग्रेऽनुकृत्योपहसन्निवोच्चैः" नैष० ३-१०।

**उपहसित ಉಪಹಸಿತ** (न०) 1. ಉಪಹಾಸ್ಯ, ಕಾರಣವಿಲ್ಲದ ನಗುವಿನಿಂದ ಮಾಡುವ ಗೇಲಿ. उप+हसे (हसने) भावे "क्तः" (३-३-११४)। (वि०) 2. ಕಾರಣವಿಲ್ಲದೆ ನಕ್ಕು ಗೇಲಿಮಾಡಲ್ಪಟ್ಟ. उप + हसे कर्म० "क्तः" (३-२-१०२)।

**उपहस्त ಉಪಹಸ್ತ** (पु०) ಕೈಯಿಂದ ತೆಗೆದುಕೊಳ್ಳುವುದು.

**उपहस्तिका ಉಪಹಸ್ತಿಕಾ** (स्त्री०) ತಾಂಬೂಲದ ಚೀಲ, ಎಲೆ, ಅಡಿಕೆ, ಸುಣ್ಣ ಮುಂತಾದುವನ್ನು ಇಟ್ಟುಕೊಳ್ಳುವ ಬಟ್ಟೆಯ ಚೀಲ,—ಬಿದಿರಿನಿಂದ ಮಾಡಿದ ಸಂಬಳಿಗೆ,—ಹಿತ್ತಾಳೆಯ ಅಥವಾ ಬೆಳ್ಳಿಯ ಕೈಪೆಟ್ಟಿಗೆ. उपगता हस्तम्। संज्ञायां "कन्"। "उपहस्तिकायाः ताम्बूलं कर्पूरसहितमुद्धृत्य मह्यं दत्वा" दशकु०।

**उपहार ಉಪಹಾರ** (पुं०) 1. ಕಾಣಿಕೆಯು ಅರ್ಪಣೆ. उप+हृञ् (हरणे) "घञ्" (३-३-१९)। "रत्नपुष्पोपहारेण छायामानर्च पादयोः" रघु० ४-८४। 2. ದೇವತೆಗಳಿಗೆ ಕೊಡುವ ಬಲಿ, ದೇವತೆಗಳ ನೈವೇದ್ಯ. "ततः सपर्यां सपशूपहाराम्" रघु० १६-३९। 3. (ಹೂವು ಮೊದಲಾದುವುಗಳಿಂದ ಮಾಡುವ) ಪೂಜೆ. "भवति विरलभक्तिर्म्लानपुष्पोपहारः" रघु० ५-७४। "विदधति न गृहेषूत्फुल्लपुष्पोपहारम्" माघ० ११-३६। (वि०) 4. ಸಮೀಪದಲ್ಲಿ ಹಾರವುಳ್ಳ. उपगतः हारो यस्य। "उरोभुवा कुम्भयुगेन जृम्भितं नवोपहारेण वयस्कृतेन" नैष० १-४८।

**उपहास ಉಪಹಾಸ** (पुं०) ಗೇಲಿ, ನಿಂದೆಯನ್ನು ಸೂಚಿಸುವ ನಗು. उप + हसे (हसने) भावे "घञ्" (३-३-१८)। "फलमस्योपहासस्य सद्यः प्राप्स्यसि पश्य माम्" रघु० १२-३७।

**उपहास्य ಉಪಹಾಸ್ಯ** (वि०) ಗೇಲಿಮಾಡಲ್ಪಡುವ, ನಕ್ಕು ಅಣಕಿಸಲ್ಪಡುವ. उप + हसे (हसने) कर्म० "ण्यत्" (३-१-१२४)।

**उपहित ಉಪಹಿತ** (वि०) 1. ಹತ್ತಿರದಲ್ಲಿಡಲ್ಪಟ್ಟ. 2. ಸೇರಿಸಲ್ಪಟ್ಟ. उप + डु धाञ् (धारणपोषणयोः) "क्तः" (३-२-१०२)। "निह्लादिन्युपहितमध्यमस्वरोत्था" माल० १-२१। 3. ಕೂಡಿರುವ, ಸೇರಿಕೊಂಡಿರುವ. "विनयोपहितस्त्वया कुतः सदृशोऽन्यो गुणवानविस्मयः" माघ० १६-७। 4. ಇಡಲ್ಪಟ್ಟ. "पुष्पं प्रवालोपहितं यदि स्यान्मुक्ताफलं वा यदि विद्रुमस्थम्" कुमा० १-४४।

**उपहूत ಉಪಹೂತ** (वि०) ಕರೆಯಲ್ಪಟ್ಟ. उप + ह्वेञ् (स्पर्धायां शब्दे च) "क्तः" (३-२-१०३)।

**उपहूति ಉಪಹೂತಿ** (स्त्री०) ಆಹ್ವಾನ, ಕರೆಯುವುದು. उप+ह्वेञ् (स्पर्धायां शब्दे च) "क्तिन्" (३-३-९४)। "तत्र नित्यविहितोपहूतिषु प्रोषितेषु पतिषु द्युयोषिताम्" माघ० १४-३०।

**उपहृत ಉಪಹೃತ** (वि०) 1. ಹತ್ತಿರಕ್ಕೆ ತರಲ್ಪಟ್ಟ, ಕರೆತರಲ್ಪಟ್ಟ. उप+हृञ् (हरणे) "क्तः" (३-२-१०२)। "प्रियां विकल्पोपहृतां स यावद्दिगीशसंदेशमजल्पदल्पम्" नैष० ६-१७। 2. ಕಾಣಿಕೆಯಾಗಿ ಕೊಡಲ್ಪಟ್ಟ. 3. ಅರ್ಪಿಸಲ್ಪಟ್ಟ, ಕೊಡಲ್ಪಟ್ಟ, ಇಡಲ್ಪಟ್ಟ. "तेनाभिलिख्योपहृतस्वहारा" नैष० ६-३७। 4. ಬಲಿ ಕೊಡಲ್ಪಟ್ಟ.

**उपह्वर ಉಪಹ್ವರ** (पुं०) 1. ರಹಸ್ಯ ಪ್ರದೇಶ, ಗುಪ್ತವಾದ ಸ್ಥಳ. उप+ह्वृ (कौटिल्ये) "घः" (३-३-११८)। "उपह्वरे पुनरित्यशिक्षयं धनमित्रम्" दशकु०। 2. ಸಮೀಪ, ಹತ್ತಿರ. "रहोऽन्तिकमुपह्वरे" अम०।

**उपह्वान ಉಪಹ್ವಾನ** (न०) 1. ಆಹ್ವಾನ, ಕರೆಯುವುದು. उप + ह्वेञ् (स्पर्धायां शब्दे च) "ल्युट्" (३-३-११५)। 2. ಮಂತ್ರಪೂರ್ವಕ ದೇವತೆಗಳನ್ನು ಕರೆಯುವುದು.

**उपांशु ಉಪಾಂಶು** (पुं०) 1. ಮೆಲ್ಲಗೆ ಮಾಡುವ ಜಪ, ಉಪಾಸ್ಯ ದೇವತೆಯನ್ನು ಮನಸ್ಸಿನಲ್ಲಿ ಧ್ಯಾನಮಾಡುತ್ತ ನಾಲಿಗೆ ತುಟಿಗಳನ್ನು ಮಾತ್ರ ಆಡಿಸುತ್ತಾ ತನಗೆ ಮಾತ್ರ ಕೇಳಿಸುವಂತೆ ಮಾಡುವ ಮಂತ್ರಜಪ. "जिह्वोष्ठौ चालयेत्किंचित् देवतागतमानसः। निजश्रवणयोग्यः स्यादुपांशुः स जपः स्मृतः"। "विधियज्ञाज्जपयज्ञो विशिष्टो दशभिर्गुणैः। उपांशुः स्याच्छतगुणः साहस्रो मानसः स्मृतः" मनु० २-८५। 2. ಮೌನ, ಮಾತನಾಡದಿರುವಿಕೆ. (अव्य०) 3. ರಹಸ್ಯದಲ್ಲಿ, ಅಂತರಂಗವಾಗಿ, ಗುಟ್ಟಾಗಿ. "मुहुरत्रसद्भिरपि यत्र गौरवात् शशलाञ्छनांशव उपांशु जघ्निरे" माघ० १३-५४।

**उपाकरण ಉಪಾಕರಣ** (न०) 1. ಸಂಸ್ಕಾರಪೂರ್ವಕ ವೇದಾಧ್ಯಯನ ಮಾಡುವುದು, ಸಂಸ್ಕಾರಪೂರ್ವಕ ಮಾಡುವ ವೇದಸ್ವೀಕಾರ. उप+आ+डु कृञ् (करणे) "ल्युट्" (३-३-११५)। "अथातोऽध्यायोपाकरणम्" आश्व० गृ०। 2. ಯಾಗದಲ್ಲಿ ಮಂತ್ರದಿಂದ ಪಶುವನ್ನು ಪ್ರೋಕ್ಷಿಸುವುದು.

**उपाकर्मन् ಉಪಾಕರ್ಮನ್** (न०) 1. ಪ್ರಾರಂಭ, ಉಪಕ್ರಮ. 2. ಶ್ರಾವಣಮಾಸದಲ್ಲಿ ಹೋಮಪೂರ್ವಕ ಮಾಡುವ ವೇದಸ್ವೀಕಾರ. उप+आ+डु कृञ् (करणे) कर० "मनिन्" (उ० ४-१८४)। "अध्यायानामुपाकर्म श्रावण्यां श्रवणेन वा। हस्तेनौषधिभावे वा पञ्चम्यां श्रावणस्य तु" याज्ञ० १-१४२।

**उपाकृत ಉಪಾಕೃತ** (पुं०) 1. ಯಾಗದಲ್ಲಿ ಮಂತ್ರಗಳಿಂದ ಅಭಿಮಂತ್ರಿಸಿ ಕೊಲ್ಲಲ್ಪಟ್ಟ ಪಶು. उप+आ+डु कृञ् (करणे) कर्म० "क्तः" (३-२-१०२)। (न०) 2. ಪ್ರಾರಂಭ, ಉಪಕ್ರಮ. 3. ಯಾಗದ ಪಶುವಿನ ಸಂಸ್ಕಾರ. 4. (ವೇದಾಧ್ಯಯನದ) ಪ್ರಾರಂಭ. (वि०) 5. ತೊಂದರೆಪಡಿಸಲ್ಪಟ್ಟ, ಪೀಡಿಸಲ್ಪಟ್ಟ. "उपाकृत उपद्रुते। मन्त्रेण प्रोक्षितपशौ" हेम०। 6. ಪ್ರಾರಂಭಿಸಲ್ಪಟ್ಟ.

**उपाकृतिन् ಉಪಾಕೃತಿನ್** (वि०) 1. ಪ್ರಾರಂಭಿಸು ವವನು, ಉಪಕ್ರಮಿಸುವವನು. 2. (ವೇದಾಧ್ಯಯನ) ಪ್ರಾರಂಭಿಸುವವನು. उपाकृत "इनिः" (५-२-८८)। स्त्रियां "ङीप्" (४-१-५)। –कृतिनी –ಕೃತಿನೀ.

**उपाक्ष ಉಪಾಕ್ಷ** (अव्य०) ಪ್ರತ್ಯಕ್ಷವಾಗಿ, ಕಣ್ಣಿನ ಎದುರಿಗೆ, ಕಣ್ಣಿನ ಸಮೀಪದಲ್ಲಿ. अक्ष्णः समीपम्। सामीप्ये अव्ययी०। "प्रत्यक्षोपाक्षमव्यक्षम्" त्रिकाण्ड०।

**उपाख्या ಉಪಾಖ್ಯಾ** (स्त्री०) 1. ಪ್ರತ್ಯಕ್ಷವಾಗಿರುವಿಕೆ, ಕಣ್ಣಿಗೆ ಗೋಚರವಾಗುವಿಕೆ. उपाख्यायते उपलभ्यते— उप + आ + ख्या (प्रकथने) "अङ्" (३-३-१०६)। "द्वितीयेचानुपाख्ये" पा० सू० ६-३-८०। 2. ಮಾತು ಗಳಿಂದ ವಿವರಿಸುವಿಕೆ.

**उपाख्यान ಉಪಾಖ್ಯಾನ** (न०) 1. ಹಿಂದೆ ನಡೆದ ವಿಷಯ ವನ್ನು ತಿಳಿಸುವಿಕೆ, ಪೂರ್ವಕಥೆಯನ್ನು ಹೇಳುವುದು. उप+आ+ख्या (प्रकथने) "ल्युट्" (३-३-११५)। "इदं शतसहस्रं तु श्लोकानां पुण्यकर्मणाम्। उपाख्यानैः सह ज्ञेयं श्राव्यं भारतमुत्तमम्" भा० आदि० १-७७। 2. ಇತರರಿಂದ ಕೇಳಿದ ಕಥೆಯನ್ನು ಮತ್ತೆ ಹೇಳುವುದು.

**उपागत ಉಪಾಗತ** (वि०) 1. ಹತ್ತಿರಕ್ಕೆ ಬಂದಿರುವ, ತಲುಪಿರುವ, ಆಗಮಿಸಿರುವ. उप+आ+गम्लृ (गतौ) "क्तः" (३-४-७२)। "दातुं प्रदानोचित भूरिधाम्नीमुपागतः सिद्धिमिवास्मि विद्याम्" किरा० ३-२३। 2. ಸಂಭವಿಸಿದ, ಒದಗಿದ, ಉಂಟಾದ. 3. ಒಪ್ಪಿದ, ಸಂಮತಿಸಿದ. 4. ಹೊಂದಿರುವ, ಪ್ರಾಪ್ತವಾದ. "संरंभवेगोज्झितवेदनेषु गात्रेषु बाधिर्यमुपागतेषु" किरा० १७-४९।

**उपागम ಉಪಾಗಮ** (पु०) 1. ತಲುಪುವುದು, ಬಂದು ಸೇರುವುದು. उप+आ+गम्लृ (गतौ) "अप्" (३-३-५८)। 2. ಒದಗುವುದು, ಸಂಭವಿಸುವುದು. "उपागमे दुश्चरिता इवापदां गतिं न निश्चेतुमलं शिलीमुखाः" किरा० ४-३५। 3. ಒಪ್ಪಿಗೆ, ಸಂಮತಿ.

**उपाग्र ಉಪಾಗ್ರ** (वि०) 1. ಅಪ್ರಧಾನ, ಮುಖ್ಯವಲ್ಲದ. उपमितोऽग्रेण। 2. ಕೊನೆಯದಕ್ಕೆ ಹಿಂದಿನದಾದ.

**उपाग्रहण ಉಪಾಗ್ರಹಣ** (न०) ಸಂಸ್ಕಾರಪೂರ್ವಕ ವೇದವನ್ನು ಸ್ವೀಕರಿಸುವಿಕೆ. उप+आ+ग्रह (उपादाने) "ल्युट्" (३-३-११५)।

**उपाङ्ग ಉಪಾಂಗ** (पु०) 1. ತಿಲಕ, ಹಣೆಯ ಬೊಟ್ಟು. (न०) 2. ಪ್ರತ್ಯಂಗ, ದೇಹದಲ್ಲಿರುವ ಸಣ್ಣ ಸಣ್ಣ ಅವಯವಗಳು. अङ्गं देहः। अङ्गोपयोगि उपाङ्गम्। **ಉಪಾಂಗಗಳು:** ತಲೆ, ಹೊಟ್ಟೆ, ಬೆನ್ನು, ನಾಭಿ (ಹೊಕ್ಕಳು), ಹಣೆ, ಮೂಗು, ಗಡ್ಡ, ಹೊಕ್ಕಳಿನ ಕೆಳ ಭಾಗ (ಬಸ್ತಿ), ಕಂಠ (ಕತ್ತು), ಕಿವಿಗಳು, ಕಣ್ಣುಗಳು, ಹುಬ್ಬುಗಳು, ಶಂಖಗಳು (ಕಿವಿ ಮತ್ತು ಹುಬ್ಬುಗಳ ಮಧ್ಯ), ಹೆಗಲುಗಳು, ಕೆನ್ನೆಗಳು, ಕಕ್ಷಗಳು, ಸ್ತನ ಗಳು, ವೃಷಣಗಳು, ಪಕ್ಕೆಗಳು, ತೊಡೆಗಳು, ಪಿರ್ರೆ ಗಳು, ಮಂಡಿಗಳು, ತೋಳುಗಳು ಮತ್ತು ಬೆರಳುಗಳು ಮೊದಲಾದುವು. सुश्रुत०। 3. ವೇದಾಂಗಗಳಿಗೆ ಸಮಾನವಾದ— ಪುರಾಣಗಳು, ನ್ಯಾಯಶಾಸ್ತ್ರ, ಮೀಮಾಂಸಾ ಮತ್ತು ಧರ್ಮಶಾಸ್ತ್ರಗಳು. 4. ಪ್ರಧಾನ ಕಾರ್ಯದ ಅಂಗಕಾರ್ಯಗಳಿಗೆ ಉಪಯುಕ್ತ ಕಾರ್ಯ. उपमितमङ्गेन।

**उपाजे ಉಪಾಜೇ** (अव्य०) ಬಲವಿಲ್ಲದವನಿಗೆ ಬಲ ಗೂಡಿಸುವಿಕೆ. ಇದಕ್ಕೆ कृञ् ಧಾತುವು ಪರವಾದಾಗ ವಿಕಲ್ಪವಾಗಿ ಗತಿಸಂಜ್ಞೆ ಬರುವುದು. ಗತಿಸಂಜ್ಞೆ ಬಂದಾಗ ಸಮಾಸ ಬಂದು उपाजेकृत्य ಎಂದೂ, ಗತಿ ಸಂಜ್ಞೆಯಿಲ್ಲದಾಗ उपाजे कृत्वा ಎಂದೂ ಆಗುವುದು. ಬಲವಿಲ್ಲದವನಿಗೆ ಬಲಗೂಡಿಸಿ ಎಂದರ್ಥ. सि० कौ० (१-४-७३)।

**उपाञ्जन ಉಪಾಂಜನ** (न०) 1. ಲೇಪನ, ಸುಣ್ಣ ಮೊದಲಾದುವನ್ನು ಬಳಿಯುವುದು. उप + अञ्जू (व्यक्त्यादौ) "ल्युट्" (३-३-११५)। "मार्जनोपाञ्जनैर्वेश्म पुनः पाकेन मृण्मयम्" मनु० ५-१२२। 2. ಸಗಣಿಯಿಂದ ನೆಲವನ್ನು ಸಾರಿಸುವುದು. "संमार्जनोपाञ्जनेन सेकेनोल्लेखनेन च। गवां च परिवासेन भूमिः शुद्ध्यति पञ्चभिः" मनु० ५-१२४।

**उपात्त ಉಪಾತ್ತ** (पु०) 1. ಮದವಿಲ್ಲದ ಆನೆ. (वि०) 2. ಸ್ವೀಕರಿಸಲ್ಪಟ್ಟ, ತೆಗೆದುಕೊಳ್ಳಲ್ಪಟ್ಟ. उप+आ+डुदाञ् (दाने) "क्तः" (३-२-१०२)। 3. ಪ್ರಾರಂಭಿಸ ಲ್ಪಟ್ಟ, ಉಪಕ್ರಮಿಸಲ್ಪಟ್ಟ. "उपात्तवर्णे चरिते पिनाकिनः सबाष्पकण्ठस्खलितैः पदैरियम्" कुमा० ५-५६। 4. ಪಡೆಯಲ್ಪಟ್ಟ, ಹೊಂದಲ್ಪಟ್ಟ. "उपात्तविद्यो गुरुदक्षिणार्थी कौत्सः प्रपेदे वरतन्तुशिष्यः" रघु० ५-१। 5. ಉಪಯೋಗಿಸಲ್ಪಟ್ಟ. "न चक्षुषोः कान्तिविशेषबुद्ध्या कालाञ्जनं मङ्गलमित्युपात्तम्" कुमा० ७-२०। 6. ಹಿಡಿಯಲ್ಪಟ್ಟ, ತೆಗೆದುಕೊಳ್ಳಲ್ಪಟ್ಟ. "समाचराचारमुपात्तशस्त्रो जपोपवासाभिषवैर्मुनीनाम्" किरा० ३-२८।

**उपात्यय ಉಪಾತ್ಯಯ** (ಪುಂ) 1. ಶಾಸ್ತ್ರ ಮತ್ತು ಲೋಕ ಮರ್ಯಾದೆಯನ್ನು ಮೀರಿ ನಡೆಯುವುದು. उपगतस्यात्ययः—उप+अति+इण् (गतौ) "अच्" (३-३-५६)। 2. ಕ್ರಮ ಬಿಟ್ಟು ನಡೆಯುವುದು. "परावनुपात्यय इणः" ಪಾಂ ಸೂಂ ३-३-३८। "क्रमप्राप्तस्यानतिपातोऽनुपात्ययः" ಸಿಂ ಕೌಂ। 3. ಅತಿಕ್ರಮಿಸುವುದು, ಉಲ್ಲಂಘಿಸುವುದು, ಮೀರುವುದು. "अतिक्रम उपात्ययः" वैजं। 4. ನಾಶ, ಪ್ರಳಯ.

**उपादान ಉಪಾದಾನ** (ನಂ) 1. ಗ್ರಹಣ, ಸ್ವೀಕಾರ, ತೆಗೆದುಕೊಳ್ಳುವುದು. उप+आ+डु दाञ् (दाने) भावे "ल्युट्" (३-३-११५)। "विस्रब्धं ब्राह्मणः शूद्रात् द्रव्योपादानमाचरेत्" मनुं ८-४१७। 2. ಪ್ರತ್ಯಾಹಾರ, ಇಂದ್ರಿಯಗಳನ್ನು ಆಯಾ ವಿಷಯಗಳಲ್ಲಿ ಬಿಡದಂತೆ ತಡೆಯುವುದು. 3. ಮೂಲಕಾರಣ, ಕಾರ್ಯೋತ್ಪತ್ತಿಗಾಗಿ ಅವಶ್ಯವಾಗಿರಬೇಕಾದ ಕಾರಣ, ಯಾವಾಗಲೂ ಕಾರ್ಯದೊಡನೆ ಸಂಬಂಧಹೊಂದಿರುವ ಕಾರಣ; ಘಟೋತ್ಪತ್ತಿಗಾಗಿ ಉಪಯೋಗಿಸುವ ಮಣ್ಣು ಯಾವಾಗಲೂ ಕಾರ್ಯರೂಪವಾದ ಘಟದೊಡನೆಯೇ ಸಂಬಂಧ ಹೊಂದಿರುವುದರಿಂದ ಮೃತ್ತು (ಮಣ್ಣು) ಘಟಕ್ಕೆ ಉಪಾದಾನಕಾರಣ. उपादीयते — उप+आ+डु दाञ् कर्मं "ल्युट्" (३-३-११३)। ಹೀಗೆಯೇ ಪಟಕ್ಕೆ ತಂತುವೂ, ಕುಂಡಲಕ್ಕೆ ಚಿನ್ನವೂ ಉಪಾದಾನಕಾರಣಗಳು. ನೈಯಾಯಿಕರು ಇದನ್ನು ಸಮವಾಯಿಕಾರಣವೆನ್ನುತ್ತಾರೆ. ದ್ವೈತಿಗಳ ಮತದಲ್ಲಿ ಮೂಲಕಾರಣವು ಉಪಾದಾನಕಾರಣ. ಯಾವುದು ಪರಿಣಾಮ ಹೊಂದಿ ಕಾರ್ಯವಾಗುವುದೋ ಅದು ಆ ಕಾರ್ಯವಸ್ತುವಿಗೆ ಪರಿಣಾಮಕಾರಣ. ಅಂದರೆ ಉಪಾದಾನ ಕಾರಣ. ಮೃತ್ತಿಕೆಯೂ, ತಂತುವೂ ಪರಿಣಾಮಹೊಂದಿ ಘಟ ಮತ್ತು ಪಟರೂಪವಾಗುವುದರಿಂದ ಪರಿಣಾಮ ಕಾರಣ. ಅದ್ವೈತಿಗಳ ಮತದಲ್ಲಿ ಉಪಾದಾನವು (1) ಪರಿಣಾಮಿ ಮತ್ತು (2) ವಿವರ್ತಗಳೆಂದು ಎರಡು ವಿಧ. (1) ಕಾರಣಸ್ವರೂಪವು ಬದಲಾವಣೆಹೊಂದಿ ಕಾರ್ಯವಾಗಿ ಪರಿಣಮಿಸುವುದು ಪರಿಣಾಮ್ಯುಪಾದಾನ. ಘಟಕ್ಕೆ ಕಾರಣವಾದ ಮೃತ್ತು ಸ್ವರೂಪ ಬದಲಾವಣೆಹೊಂದಿ ಘಟವಾಗಿ ಪರಿಣಮಿಸುವುದರಿಂದ ಪರಿಣಾಮ್ಯುಪಾದಾನ. (2) ಕಾರಣ ಸ್ವರೂಪವು ಬದಲಾವಣೆಹೊಂದದೆ ಕಾರ್ಯರೂಪವಾಗಿ ತೋರುವುದು ವಿವರ್ತೋಪಾದಾನ. ಬ್ರಹ್ಮ ಸ್ವರೂಪವು ಬದಲಾವಣೆಹೊಂದದೆ ಪ್ರಪಂಚರೂಪವಾದ ಕಾರ್ಯವಾಗಿ ತೋರುವುದರಿಂದ ವಿವರ್ತೋಪಾದಾನ. ಪ್ರಪಂಚಕ್ಕೆ ಬ್ರಹ್ಮವು ಉಪಾದಾನಕಾರಣ. **ವಿಶಿಷ್ಟಾದ್ವೈತಿಗಳ ಮತದಲ್ಲಿ** ಕಾರ್ಯರೂಪವಾಗಿ ಪರಿಣಾಮಯೋಗ್ಯವಾದ ವಸ್ತುವು ಉಪಾದಾನ ಕಾರಣ. ಅಥವಾ ಕಾರ್ಯದ ಮುಂದು ಮುಂದಿನ ಅವಸ್ಥೆಗಳಿಂದ ಕೂಡಿದ ಸ್ವರೂಪಕ್ಕಿಂತಲೂ ಬೇರೆಯಾದ ಆಯಾ ಕಾರ್ಯಗಳಿಗನುಗುಣವಾದ ಮೊದಲಿನ (ಪೂರ್ವಭಾವಿ) ಅವಸ್ಥಾವಿಶಿಷ್ಟವಾದ ದ್ರವ್ಯವು ಉಪಾದಾನಕಾರಣ. ಕಾರ್ಯವಾದ ಘಟಕ್ಕೆ ಕಪಾಲತ್ವ ಮತ್ತು ಘಟತ್ವ ಮೊದಲಾದ ಅವಸ್ಥಾವಿಶಿಷ್ಟ ಸ್ವರೂಪಕ್ಕಿಂತಲೂ ಬೇರೆಯಾದ ಮೊದಲಿನ ಪಿಂಡತ್ವಾವಸ್ಥಾ ವಿಶಿಷ್ಟವಾದ ಮೃತ್ತು ಉಪಾದಾನಕಾರಣ. ಹೀಗೆಯೇ ಸೂಕ್ಷ್ಮಚಿದಚಿದ್ವಿಶಿಷ್ಟರೂಪದಿಂದ ಈಶ್ವರನು ಜಗತ್ತಿಗೆ ಉಪಾದಾನಕಾರಣನು. 4. ಸಾಂಖ್ಯರು ಹೇಳುವ ಒಂಭತ್ತು ವಿಧ ಆಧ್ಯಾತ್ಮಿಕ ತುಷ್ಟಿಗಳಲ್ಲೊಂದು. ["तुष्टि" ಪದದಲ್ಲಿ ನೋಡಿ.] 5. ಉಪಾದಾನ, ಉಂಛವೃತ್ತಿ, ಭಿಕ್ಷೆಯೆತ್ತುವುದು.

**उपादानलक्षणा ಉಪಾದಾನಲಕ್ಷಣಾ** (ಸ್ತ್ರೀಂ) ವಾಕ್ಯಾರ್ಥದಲ್ಲಿ ಮುಖ್ಯಾರ್ಥದ ಅನ್ವಯಸಿದ್ಧಿಗಾಗಿ ತನ್ನ (ಮುಖ್ಯ) ಅರ್ಥವನ್ನು ಬಿಡದೆ ಮುಖ್ಯಾರ್ಥಕ್ಕಿಂತಲೂ ಬೇರೆಯಾದ ಮತ್ತೊಂದು ಅರ್ಥದ ಪ್ರತೀತಿಯುಂಟಾಗುವಿಕೆ. ಮುಖ್ಯಾರ್ಥವನ್ನು ಬಿಡದೆ ಲಕ್ಷಣೆಯಿಂದ ಬೇರೊಂದು ಅರ್ಥವು ತೋರುವುದರಿಂದ ಇದಕ್ಕೆ "उपादानलक्षणा" ಎಂದು ಹೆಸರು. "उपादीयते स्वार्थोऽनेनेत्युपादानम् — उप + आ + डु दाञ् (दाने) "ल्युट्" (३-३-११७)। उपादानात् लक्षणा। "कुन्ताः प्रविशन्ति" ಎಂಬಲ್ಲಿ ಅಚೇತನವಾದ ಕುಂತಗಳಿಗೆ ಪ್ರವೇಶಕರ್ತೃತ್ವವು ಅಸಂಭವವಾದುದರಿಂದ ಲಕ್ಷಣೆಯಿಂದ ವಾಚ್ಯಾರ್ಥಕ್ಕಿಂತಲೂ ಅತಿರಿಕ್ತವಾದ ಕುಂತಧಾರಿಗಳಾದ ಪುರುಷರೂಪವಾದ ಒಂದು ಅರ್ಥಕ್ಕೆ ಪ್ರತೀತಿಯಿರುವುದರಿಂದಲೂ, ಕುಂತರೂಪವಾದ ಮುಖ್ಯಾರ್ಥಕ್ಕೂ ಉಪಾದಾನವಿರುವುದರಿಂದಲೂ "उपादानलक्षणा"। ಇದಕ್ಕೆ "अजहत्स्वार्था" ಎಂದೂ ಹೆಸರು. "मुख्यार्थस्येतराक्षेपो वाक्यार्थेऽन्वयसिद्धये। स्यादात्मनोऽप्युपादानादेषोपादानलक्षणा" सां दं २-६।

**उपादेय ಉಪಾದೇಯ** (ವಿಂ) 1. ತೆಗೆದುಕೊಳ್ಳಲು ಯೋಗ್ಯವಾದ, ಸ್ವೀಕರಿಸಲು ಅರ್ಹವಾದ. उपादातुं योग्यम्—उप+आ+डु दाञ् (दाने) "यत्" (३-१-९७)। "वयस्य मकरन्द संप्रत्युपादेयो माधवस्य जीवलोकः"

ಮಾಲತೀ० १०। 2. ಅಂಗೀಕರಿಸಲು ಯೋಗ್ಯವಾದ, ಒಪ್ಪಿಕೊಳ್ಳಬಹುದಾದ. 3. ಶ್ರೇಷ್ಠವಾದ, ಉತ್ಕೃಷ್ಟವಾದ.

**उपाधि ಉಪಾಧಿ** (पुं०) 1. ಧರ್ಮದ ವಿಷಯವಾಗಿ ಮಾಡುವ ಚಿಂತೆ. उपाधीयते — उप+आ+डु धाञ् (धारणपोषणयोः) भावे "कि:" (३-३-९२)। 2. ವಿಶೇಷಣ, ಗುಣ, ಧರ್ಮ. "नीलो घट:" ಎಂಬಲ್ಲಿ ನೀಲತ್ವರೂಪವಾದ ಧರ್ಮವು ಉಪಾಧಿ. 3. ಬಿರುದು. 4. ಪ್ರಕಾರ, ವಿಧ. "अधीतिबोधाचरणप्रचारणैर्दशाश्चतस्रः प्रणयन्नुपाधिभिः" नैष० १-४। (वि०) 5. ಕುಟುಂಬಪೋಷಣೆಯಲ್ಲಿ ನಿರತನಾದವನು. उपगतः आधिम्। 6. ಸಾಧ್ಯವಿರುವೆಡೆಯಲ್ಲೆಲ್ಲಾ ಇದ್ದು ಸಾಧನ (ಹೇತು) ವಿರುವ ಕಡೆ ಇಲ್ಲದಿರುವ ವಸ್ತು. "धूमवान् वह्नेः" ಎಂಬಲ್ಲಿ ಸಾಧ್ಯ (ಹೊಗೆ) ಇರುವ ಕಡೆಯಲ್ಲಿ ಇದ್ದು ಸಾಧನ (ಹೇತುವಾದ ವಹ್ನಿ) ವಿರುವ ಅಯೋಗೋಳಕ (ಕಾದ ಕಬ್ಬಿಣ) ದಲ್ಲಿ ಇಲ್ಲದಿರುವ ಆರ್ದ್ರೇಂಧನಸಂಯೋಗವು (ಹಸಿ ಕಟ್ಟಿಗೆಯ ಸಂಬಂಧ) ಉಪಾಧಿ. "साध्यव्यापकत्वे सति साधनाव्यापक: उपाधि:"। 7. ತನ್ನ ಸಂಬಂಧವುಳ್ಳ ಒಂದು ವಸ್ತುವನ್ನು ತನ್ನ ಸಂಬಂಧವಿಲ್ಲದ ಅದೇ ವಸ್ತುವಿಗಿಂತಲೂ ಬೇರೆಯೆಂದು ತಿಳಿಸುವ (ಬೇರ್ಪಡಿಸುವ) ಒಂದು ವಸ್ತು. ಘಟದಲ್ಲಿರುವ ಆಕಾಶವು ಹೊರಗಿನ ಆಕಾಶಕ್ಕಿಂತಲೂ ಬೇರೆಯೆಂಬ ಬುದ್ಧಿಯನ್ನುಂಟುಮಾಡುವುದರಿಂದ ಘಟವು ಉಪಾಧಿ. 8. ಕಪಟ, ಮೋಸ, ವಂಚನೆ. "उपाधिर्धर्मचिन्तायां कुटुम्बव्यापृते छले" मेदि०। 9. ಹೇತು, ಕಾರಣ. "व्यतिषजति पदार्थानान्तर: कोऽपिहेतुर्न खलु बहिरुपाधीन् प्रीतयः संश्रयन्ते" ಉ०रा० ६-१२।

**उपाधेय ಉಪಾಧೇಯ** (वि०) ಸಮೀಪದಲ್ಲಿಡಲು ಯೋಗ್ಯವಾದ, ಹತ್ತಿರದಲ್ಲಿರಿಸಲ್ಪಡುವ. उप+आ+डु धाञ् (धारणपोषणयोः) "यत्" (३-१-९७)।

**उपाध्याय ಉಪಾಧ್ಯಾಯ** (पुं०) ಗುರು, ಜೀವನಕ್ಕಾಗಿ ವೇದವೇದಾಂಗಗಳನ್ನು ಕಲಿಸುವವನು. उपेत्याधीयतेऽस्मात्—उप+अधि+इङ् (अध्ययने) "घञ्" (३-३-२१)। स्त्रियां वा "ङीष्" (वा० ३-३-२१)। **उपाध्याया ಉಪಾಧ್ಯಾಯಾ. उपाध्यायी ಉಪಾಧ್ಯಾಯೀ.** "एकदेशन्तु वेदस्य वेदाङ्गान्यपि वा पुनः। योऽध्यापयति वृत्त्यर्थमुपाध्यायः स उच्यते" मनु० २-१४१। उपाध्यायस्य स्त्री **उपाध्यायानी ಉಪಾಧ್ಯಾಯಾನೀ.** पक्षे **उपाध्यायी ಉಪಾಧ್ಯಾಯೀ.** पुंयोगे तु वा आनुक् "ङीष्" च (वा० ४-१-४९)।

**उपानह् ಉಪಾನಹ್** (स्त्री०) ಚರ್ಮದ ಚಪ್ಪಲಿ, ತೊಗಲಿನ ಪಾದರಕ್ಷೆ. पादमुपनह्यति — उप + णह (बन्धने) "क्विप्" (वा० ३-३-१०८)। "श्वा यदि क्रियते राजा स किं नाश्नात्युपानहम्" हितो० ३-५८।

**उपान्त ಉಪಾಂತ** (पुं०) 1. ಕೊನೆಯ ಭಾಗದ ಸಮೀಪ ಪ್ರದೇಶ. उपमितोऽन्तेन। "स एष कैलास उपान्तसर्पिणः करोत्यकालास्तमयं विवस्वत:" किरा० ५-३५। 2. ಸಮೀಪಪ್ರದೇಶ, ಬಹಳ ಹತ್ತಿರ. "मेरोरुपान्तेष्विव वर्तमानमन्योन्यसंसक्तमहस्त्रियामा" रघु० ७-२४। (वि०) 3. ಹತ್ತಿರದ, ಸಮೀಪದ. (अव्य०) 4. ಕೊನೆಯದರ ಸಮೀಪ. अन्तस्य समीपम्। सामीप्ये अव्ययी०।

**उपान्तिक ಉಪಾಂತಿಕ** (न०) 1. ಬಹಳ ಸಮೀಪ, ಬಹಳ ಹತ್ತಿರ. "सरजसमपहाय केतकीनां प्रसवमुपान्तिकनीपरेणुकीर्णम्" किरा० १०-२६। (वि०) 2. ಬಹಳ ಸಮೀಪದಲ್ಲಿರುವ, ಬಹಳ ಹತ್ತಿರದಲ್ಲಿರುವ.

**उपान्तिम ಉಪಾಂತಿಮ** (वि०) 1. ಕೊನೆಯದಕ್ಕೆ ಸಮೀಪದ, ಉಪಾಂತ್ಯ. उपगतमन्तिमम्। (अव्य०) 2. ಕೊನೆಯದರ ಸಮೀಪ.

**उपान्त्य ಉಪಾಂತ್ಯ** (वि०) ಕೊನೆಯದರ ಸಮೀಪದಲ್ಲಿರುವ. उपान्ते भवम् "यत्" (४-३-५४)। "उत्तमग्रहणमुपान्त्यस्यापि संग्रहार्थम्" सि० कौ० (५-४-९०)।

**उपाय ಉಪಾಯ** (पुं०) 1. ಹತ್ತಿರಕ್ಕೆ ಬರುವುದು. उप + अय (गतौ) भावे "घञ्" (३-३-१८)। 2. ಉಪಾಯ, ಯುಕ್ತಿ. "उपायेन हि यच्छक्यं न तच्छक्यं पराक्रमैः" हितो०। 3. ಕಾರ್ಯದ ಯೋಜನೆ, ಕಾರ್ಯಸಾಧನೆಯ ವ್ಯಾಪಾರ. "गुणवत्युपायनिलये स्थितिहेतो साधिके त्रिवर्गस्य" मुद्रा० १-५। 4. (ಕ) ರಾಜನು ಸಂಪತ್ತನ್ನು ಹೆಚ್ಚಿಸಲು ಮತ್ತು ಶತ್ರುವನ್ನು ಜಯಿಸಲು ಉಪಯೋಗಿಸುವ ಸಾಧನ; ಇದು (1) ಸಾಮ, (2) ದಾನ, (3) ಭೇದ ಮತ್ತು (4) ದಂಡಗಳೆಂದು ನಾಲ್ಕು ಬಗೆ. (1) ಸಂಧಾನ (ಒಳ್ಳೆಯತನದಿಂದ ಒಪ್ಪಂದದ ಮಾತುಕತೆ) ಮತ್ತು ನಾನು ನಿನ್ನವನೆಂದು ಒಳ್ಳೆಯ ಮಾತಿನಿಂದ ಸ್ವಾಧೀನ ಪಡಿಸಿಕೊಳ್ಳುವುದು "ಸಾಮ" ಉಪಾಯ. (2) ತನ್ನಲ್ಲಿರುವ ಧನ ಕೊಡುವುದು, ಅಪೂರ್ವವಸ್ತು

ಗಳನ್ನು ಕೊಟ್ಟು ತೃಪ್ತಿಪಡಿಸುವುದು ಇವು "ದಾನ" ಉಪಾಯ. (3) ತನ್ನ ಮೇಲೆ ಇಬ್ಬರು ಶತ್ರುಗಳು ಕಲೆತು ಬಂದಾಗ ಯುಕ್ತಿಯಿಂದ ಅವರ ಸ್ನೇಹ ಕೆಡಿಸಿ ಒಬ್ಬೊಬ್ಬರನ್ನು ಬೇರೆ ಬೇರೆ ಮಾಡುವುದು "ಭೇದ" ಉಪಾಯ. (4) ಸಂಹರಿಸುವುದು, ಪೀಡಿಸುವುದು, ರಾಜ್ಯದಲ್ಲಿ ಕೊಳ್ಳೆ ಹೊಡೆಯುವುದು ಇತ್ಯಾದಿ "ದಂಡ" ಉಪಾಯ. "साम दानञ्च भेदश्च दण्डश्चैव चतुष्टयम्। उपायाः कथिता राज्ञां स्वार्थसंपत्तये ध्रुवम्"। ಕೆಲವರು ಮಾಯೆ, ಉಪೇಕ್ಷೆ ಮತ್ತು ಇಂದ್ರಜಾಲಗಳನ್ನೂ ಸೇರಿಸಿ ಉಪಾಯಗಳು ಏಳು ಎಂದು ಹೇಳುವರು. "साम दानञ्च भेदश्च दण्डश्चेति चतुष्टयम्। मायोपेक्षेन्द्रजालं च सप्तोपायाः प्रकीर्तिताः"। "उपायमास्थितस्यापि नश्यन्त्यर्थाः प्रमाद्यतः। हन्ति नोपशयस्थोऽपि शयालुर्मृगयुर्मृगान्" माघ० २-८०। (ಖ) ರಸಿಕರು ಕಾಂತಾಜನರಲ್ಲಿ ಉಪಯೋಗಿಸಬೇಕಾದ ಉಪಾಯಗಳು: ಸಾಮ ಮತ್ತು ದಾನ ಇವೆರಡು ಮಾತ್ರ. ಭೇದೋಪಾಯ ದಿಂದ ರಸಾಭಾಸವೂ, ದಂಡೋಪಾಯದಿಂದ ರಸ ಭಂಗವೂ ಆಗುವುದು. "उपायौ द्वौ प्रयोक्तव्यौ कान्तासु सुविचक्षणैः। सामदाने इति प्राहुः शृङ्गाररसकोविदाः। भेदे प्रयुज्यमाने हि रसाभासस्तु जायते। निग्रहे रसभङ्गः स्यात्तस्मात्तौ परिवर्जयेत्"। 5. ಉತ್ತಮರ್ಣನು (ಸಾಲಕೊಟ್ಟವನು) ತನ್ನ ಹಣವನು ಹಿಂದಕ್ಕೆ ಪಡೆಯಲು ಮಾಡುವ ಪ್ರಯತ್ನ. "यैर्यैरुपायैरर्थं स्वं प्राप्नुयादुत्तमर्णिकः। तैस्तैरुपायैः संगृह्य दापयेदधमर्णिकम्" मनु० ८-४८। ಈ ಉಪಾಯವು (1) ಧರ್ಮ, (2) ವ್ಯವಹಾರ, (3) ಛಲ, (4) ಆಚರಿತ ಮತ್ತು (5) ಬಲಾತ್ಕಾರಗಳೆಂದು ಐದು ವಿಧ. "धर्मेण व्यवहारेण छलेनाचरितेन च। प्रयुक्तं साधयेदर्थं पञ्चमेन बलेन च" मनु० ८-४९। (1) ಸ್ನೇಹಿತರು, ಬಂಧುಗಳು ಮುಂತಾದವರಿಂದ ಒಳ್ಳೆಯ ಮಾತು ಹೇಳಿಸಿ ಕೊಟ್ಟ ಹಣವನ್ನು ಹಿಂದಕ್ಕೆ ಪಡೆಯುವುದು ಧರ್ಮೋಪಾಯ. "सुहृत्संबन्धिसन्दिष्टैः साम्ना चानुगमेन च। प्रायेण वा ऋणी दाप्यो धर्म एष सनातनः"। (2) ಸಾಲಗಾರನು ಸಾಲ ತೀರಿಸಲು ಅಸಮರ್ಥನಾದಾಗ ಅವನಿಗೆ ವಾಣಿಜ್ಯ, ವ್ಯವಸಾಯ ಮುಂತಾದುದಕ್ಕೆ ಹಣವನ್ನು ಕೊಟ್ಟು ಅವನು ಗಳಿಸಿದ ಲಾಭದಿಂದ ಕೊಟ್ಟ ಹಣವನ್ನು ಹಿಂದಕ್ಕೆ ಪಡೆಯುವುದು ವ್ಯವಹಾರೋಪಾಯ. (3) ಕಪಟದಿಂದ ಸಾಲಗಾರ (ಋಣಿ)ನನ್ನು ಯಾಚಿಸಿ ಹಣ ಪಡೆದು ಮತ್ತೊಬ್ಬನಿಂದ ತಂದಂತೆ ಮಾಡಿ ಅದನ್ನು ಸಾಲಕೊಟ್ಟವನ (ಸಾಹುಕಾರ)ನಿಗೆ ಕೊಡಿಸುವುದು ಛಲೋಪಾಯವು. "छद्मना याचितं चार्थमानीय ऋणिकाद्बली। अन्याहृतादिवाहृत्य दाप्यते यत्र सोपधिः"। (4) ಸಾಲಕೊಂಡವನು ಸಾಲ ತೀರಿಸ ದಿದ್ದಲ್ಲಿ ಅವನ ಹೆಂಡತಿ, ದನಕರುಗಳನ್ನು ಹೊಡೆದು ಹಿಂಸಿಸಿ ಮನೆಯ ಬಾಗಿಲಲ್ಲಿ ಕುಳಿತು ವಸೂಲು ಮಾಡಿ ಕೊಡಿಸುವುದು ಆಚರಿತೋಪಾಯ. (5) ಸಾಲ ತೀರಿಸದ ಸಾಲಗಾರನನ್ನು ಮನೆಗೆ ಕರೆತಂದು ಹೊಡೆದು ಬಡಿದು ಸಾಹುಕಾರನಿಗೆ ಹಣ ಕೊಡಿಸುವುದು ಬಲಾತ್ಕಾರೋಪಾಯ. "दारपुत्रपशून् हत्वा कृत्वा द्वारोपवेशनम्। यत्रार्थी दाप्यतेऽर्थं स्वं तदाचरितमुच्यते। बद्ध्वा स्वगृहमानीय ताडनाद्यैरुपक्रमैः। ऋणिको दाप्यते यत्र बलात्कारः प्रकीर्तितः" बृहस्पतिः। 6. ಪ್ರಯತ್ನ. "असंयतात्मना योगो दुष्प्राप इति मे मतिः। वश्यात्मना तु यतता शक्योऽवाप्तुमुपायतः" गीता ६-३६। 7. ಉಪಕ್ರಮ, ಪ್ರಾರಂಭ. 8. ಸಾಧನ, ಸಲಕರಣೆ.

**उपायन ಉಪಾಯನ** (नं०) 1. ರಾಜದರ್ಶನಕ್ಕಾಗಿ ತರುವ ಕಾಣಿಕೆ. उपाय्यते — उप+अय (गतौ) कर्म० "ल्युट्" (३-३-११३)। "नयत्ययुग्मच्छदगन्धिरार्द्रतां भृशं नृपोपायनदन्तिनां मदः" किरा० १-१६। 2. ಕಾಣಿಕೆಗಾಗಿ ತರುವ ವಸ್ತು. "परस्परेण विज्ञातस्तेषूपायनपाणिषु" रघु० ४-७९। 3. ಸಮೀಪವನ್ನು ಹೊಂದುವುದು, ಹತ್ತಿರಕ್ಕೆ ಹೋಗುವುದು. उप+अय भावे "ल्युट्" (३-३-११५)।

**उपायिन् ಉಪಾಯಿನ್** (वि०) 1. ಸಾಧನವುಳ್ಳ, ಸಲಕರಣೆಯುಳ್ಳ. उपायोऽस्यास्ति "इनिः" (५-२-११५)। 2. ಸಮೀಪಕ್ಕೆ ಬರುವ. उपायते — उप+अय (गतौ) "णिनिः" (३-१-१३४)। स्त्रियां "ङीप्" (४-१-५)। उपायिनी ಉಪಾಯಿನೀ.

**उपारत ಉಪಾರತ** (वि०) ಹಿಂತಿರುಗಿದ. उप+आ+रमु (क्रीडायाम्) "क्तः" (३-४-७२)। "उपारताः पश्चिमरात्रिगोचरादपारयन्त्यः पतितुं जवेन गाम्" किरा० ४-१०।

**उपारूढ ಉಪಾರೂಢ** (वि०) 1. ಬೆಳೆದಿರುವ, ಹೆಚ್ಚಿರುವ, ಅಭಿವೃದ್ಧಿಹೊಂದಿದ. उप+आ+रुह (बीजजन्मादौ) "क्तः" (३-४-७२)। 2. ಉಂಟಾದ, ಹುಟ್ಟಿದ, ಉತ್ಪನ್ನವಾದ. "कुतोऽयमित्युपारूढकुतूहला चाहं मुकुलितलोचना तेन कुसुमगन्धेन मधुकरीवाकृष्यमाणा" काद०।

**उपार्जन ಉಪಾರ್ಜನ** (न०) ಸಂಪಾದನೆ. उप+अर्ज (प्रतियत्ने) "ल्युट्" (३-३-११५)। "शस्त्राणां स रथानां च कृत्वा सम्यगुपार्जनम्" रामा०।

**उपालब्ध ಉಪಾಲಬ್ಧ** (वि०) ನಿಂದಿಸಲ್ಪಟ್ಟ, ಬೈಯಲ್ಪಟ್ಟ. उप+आ+डु लभष् (प्राप्तौ) "क्तः" (३-२-१०२)।

**उपालम्भ ಉಪಾಲಂಭ** (पु०) ನಿಂದೆ, ಬೈಗಳು. उप+आ+डु लभष् (प्राप्तौ) "घञ्" (३-३-१८)। "तवोपालम्भे पतितास्मि" माल० १। भावे "ल्युट्" (३-३-११५)। -आलम्भनम् -ಆಲಂಭನವು.

**उपावर्तन ಉಪಾವರ್ತನ** (न०) 1. ಹಿಂತಿರುಗಿ ಬರುವಿಕೆ, ಮತ್ತೆ ಬರುವಿಕೆ. उप+आ+वृतु (वर्तने) "ल्युट्" (३-३-११५)। 2. ಭೂಮಿಯಲ್ಲಿ ಹೊರಳಾಡುವಿಕೆ.

**उपावृत्त ಉಪಾವೃತ್ತ** (त्रि०) 1. ದಣಿವಾರಿಸಿಕೊಳ್ಳಲು ನೆಲದ ಮೇಲೆ ಹೊರಳಾಡಿದ ಕುದುರೆ. उप+आ+वृतु (वर्तने) "क्तः" (३-४-७२)। "त्रिषूपावृत्तलुठितौ" अम०। (वि०) 2. ಹಿಂತಿರುಗಿ ಬಂದ, ಮತ್ತೆ ಬಂದ. 3. ಪೂರ್ವ (ಹಿಂದಿನ) ಸ್ಥಿತಿಗೆ ಬಂದಿರುವ. "उपावृत्तस्य पापेभ्यो यश्च वासो गुणैः सह" भविष्य०।

**उपाश्रय ಉಪಾಶ್ರಯ** (पु०) 1. ಆಶ್ರಯ, ಆಸರೆ, ಅವಲಂಬನ. उप+आ+श्रिञ् (सेवायाम्) भावे "अच्" (३-३-५६)। "ईप्सितस्य न भवेदुपाश्रयः कस्य निर्जितरजस्तमोगुणः" किरा० १३-४०। (वि०) 2. ಆಶ್ರಯಿಸಲು ಯೋಗ್ಯನಾದ, ಆಶ್ರಯಿಸಲ್ಪಡುವ. "त्वं हि नस्तात सर्वेषां दुःखितानामुपाश्रयः" भा० वन०।

**उपाश्रित ಉಪಾಶ್ರಿತ** (वि०) 1. ಆಶ್ರಯಿಸಲ್ಪಟ್ಟವನು, ಆಸರೆಕೊಟ್ಟವನು. उप+आ+श्रिञ् (सेवायाम्) कर्म० "क्तः" (३-२-१०२)। 2. ಆಶ್ರಯ ಪಡೆದವನು, ಆಸರೆ ಹೊಂದಿದವನು. कर्त० "क्तः" (३-४-७२)।

**उपासक ಉಪಾಸಕ** (वि०) 1. ಸೇವಕ, ಆಳು. उप+आस (उपवेशने) "ण्वुल्" (३-१-१३३)। 2. ಪೂಜಿಸುವವನು, ಆರಾಧಿಸುವವನು. 3. ಬೌದ್ಧಭಿಕ್ಷು. "उपासकानां साम्प्रतमेतस्मिन् मलयकेतुकटके अनुकूलेन अननुकूलेन वा अगृहीतमुद्रेण न गम्यते" मुद्रा० ५।

**उपासङ्ग ಉಪಾಸಂಗ** (पु०) 1. ಬತ್ತಳಿಕೆ, ಬಾಣಗಳ ಚೀಲ. उपासज्यन्तेऽत्र शराः—षञ्ज (सङ्गे) "घञ्" (३-३-१२१)। "कस्येमे क्षुरनाराचाः सहस्रं लोमवापिनः। प्रक्षिप्तास्तीक्ष्णतुण्डाग्रा उपासङ्गे हिरण्मये" भा० विरा० ४१-११। 2. ಬಹಳ ಹತ್ತಿರ, ಅತ್ಯಂತ ಸಮೀಪ. भावे "घञ्" (३-३-१८)।

**उपासन ಉಪಾಸನ** (न०) 1. ಬಾಣಪ್ರಯೋಗದ ಅಭ್ಯಾಸ, ಬಾಣಬಿಡುವುದನ್ನು ಕಲಿಯುವುದು. उप+असु (क्षेपणे) आस (उपवेशने) वा भावे "ल्युट्" (३-३-११५)। "शराभ्यास उपासनम्" अम०। 2. ಶುಶ್ರೂಷೆ, ಸೇವೆ. "आचार्योपासनं शौचं स्थैर्यमात्मविनिग्रहः" गीता १३-७। 3. ಪೂಜೆ, ಆರಾಧನೆ. 4. ಧ್ಯಾನ, ಚಿಂತನೆ. 5. ಆಸನ, ಪೀಠ. "उपासनं शराभ्यासेऽप्युपास्तावासनेऽपि च" मेदि०। 6. ಹಿಂಸಿಸುವುದು, ಪೀಡಿಸುವುದು. "उपासनं शराभ्यासे शुश्रूषायां च हिंसने" विश्व०। भावे "युच्" (३-३-१०७)। -आसना -ಆಸನಾ. "स्वर्णवितीर्णैः करवाम वामनेत्रे भक्त्या किमुपासनासु" नैष० ८-९८।

**उपासादित ಉಪಾಸಾದಿತ** (न०) 1. ಪ್ರಾಪ್ತಿ, ಲಾಭ, ಸಂಪಾದನೆ. उप+आ+षद्लृ (विशरणादौ) भावे "क्तः" (३-३-११४)। (वि०) 2. ಪ್ರಾಪ್ತವಾದ, ಪಡೆಯಲ್ಪಟ್ಟ, ಸಂಪಾದಿಸಲ್ಪಟ್ಟ. कर्म० "क्तः" (३-२-१०२)।

**उपासित ಉಪಾಸಿತ** (वि०) 1. ಪೂಜಿಸಲ್ಪಟ್ಟ, ಆರಾಧಿಸಲ್ಪಟ್ಟ. उप+आस (उपवेशने) "क्तः" (३-२-१०२)। 2. ಸೇವಿಸಲ್ಪಟ್ಟ, ಶುಶ್ರೂಷೆಮಾಡಲ್ಪಟ್ಟ. "नभसः कलभैरुपासितम्" नैष० २-६७। 3. ಧ್ಯಾನಿಸಲ್ಪಟ್ಟ.

**उपासितृ ಉಪಾಸಿತೃ** (वि०) 1. ಪೂಜಿಸುವವನು, ಆರಾಧಿಸುವವನು. उप+आस (उपवेशने) "तृच्" (३-१-१३३)। 2. ಸೇವಕ, ಶುಶ್ರೂಷೆಮಾಡುವವನು. "उपासिता च वृद्धानां जिततन्द्रिरलोलुपः" भा० शान्ति० ५६-२०। 3. ಧ್ಯಾನಿಸುವವನು.

**उपास्ति ಉಪಾಸ್ತಿ** (स्त्री०) 1. ಪೂಜೆ, ಆರಾಧನೆ, ಉಪಾಸನೆ. उप+आस (उपवेशने) "क्तिन्" (३-३-९४)। 2. ಸೇವೆ, ಶುಶ್ರೂಷೆ. 3. ಧ್ಯಾನ, ಚಿಂತನೆ.

**उपास्य ಉಪಾಸ್ಯ** (वि०) 1. ಸೇವಿಸಲ್ಪಡುವ, ಶುಶ್ರೂಷಿಸಲು ಯೋಗ್ಯನಾದ. 2. ಧ್ಯಾನಿಸಲ್ಪಡುವ. 3. ಪೂಜಿಸಲ್ಪಡುವ. उप+आस (उपवेशने) कर्म० "ण्यत्" (३-१-१२४)। "पुत्रवच्चैव ते रक्ष्या उपास्या गुरुवच्च ते" भा० अनु० १३-२५। (अव्य०) 4. ಪೂಜಿಸಿ, ಆರಾಧಿಸಿ. 5. ಧ್ಯಾನಿಸಿ, ಚಿಂತಿಸಿ. 6. ಸೇವಿಸಿ, ಶುಶ್ರೂಷೆಮಾಡಿ. उप+आस (उपवेशने) "ल्यप्" (७-१-३७)। "उपास्य पश्चिमां सन्ध्याम्"।

**उपास्यमान** ಉಪಾಸ್ಯಮಾನ (वि०) 1. ಸೇವಿಸಲ್ಪಡುತ್ತಿರುವ. 2. ಪೂಜಿಸಲ್ಪಡುತ್ತಿರುವ. 3. ಧ್ಯಾನಿಸಲ್ಪಡುತ್ತಿರುವ. उप + आस (उपवेशने) + कर्म० यक् "शानच्" (३-२-१२४)। "उपास्यमानो विबुधैर्दिवि देवपतिर्यथा" रामा०। "सनन्दनाद्यैर्महासिद्धैः शान्तैः संशान्तविग्रहम्। उपास्यमानं सख्या च भर्त्रा गुह्यकरक्षसाम्" भाग० ४-६-३४।

**उपाहार** ಉಪಾಹಾರ (पु०) ಊಟವಾದನಂತರ ಮಧ್ಯಾಹ್ನದ ಮೇಲೆ ತೆಗೆದುಕೊಳ್ಳುವ ಲಘುವಾದ ಆಹಾರ, ತಿಂಡಿ, ಹಣ್ಣು ಮುಂತಾದ ಆಹಾರ. उप+आ+हृञ् (हरणे) "घञ्" (३-३-१८)।

**उपाहित** ಉಪಾಹಿತ (पु०) 1. (ಅನಿಷ್ಟ ಸೂಚಕವಾದ) ಅಗ್ನಿಯಿಂದುಂಟಾಗುವ ತೊಂದರೆ, ಬೆಂಕಿಯ ಉತ್ಪಾತ. उप आसन्नं आहितं फलं यस्मात्। 2. ಏರಿಸಲ್ಪಟ್ಟ, ಹತ್ತಿಸಲ್ಪಟ್ಟ. "उपाहितोऽनलोत्पाते पुमानारोपिते त्रिषु" मेदि०। 3. ಸಮೀಪದಲ್ಲಿ ಇಡಲ್ಪಟ್ಟ, ಹತ್ತಿರದಲ್ಲಿ ಇರಿಸಲ್ಪಟ್ಟ. उप समीपे आहितः।

**उपेक्षक** ಉಪೇಕ್ಷಕ (वि०) 1. ಉಪೇಕ್ಷೆಮಾಡುವ, ಉದಾಸೀನನಾಗಿರುವ (ಯೋಗಿ). उप+ईक्ष (दर्शने) "ण्वुल्" (३-१-१३३)। 2. ಅನಾದರದಿಂದ ಕಾಣುವ.

**उपेक्षण** ಉಪೇಕ್ಷಣ (न०) 1. ಉಪೇಕ್ಷೆ, ಉದಾಸೀನತೆ, ಅಲಕ್ಷ್ಯ, ಅನಾದರ. उप + ईक्ष (दर्शने) "ल्युट्" (३-३-११५)। 2. ರಾಜನ ಏಳು ವಿಧ ಉಪಾಯಗಳಲ್ಲೊಂದು. "साम्ना दानेन भेदेन दण्डेनोपेक्षणेन च" भा० वन०। 3. ತ್ಯಾಗ, ಬಿಡುವುದು. 4. ಅನಾದರ, ಅವಮರ್ಯಾದೆ, ತಿರಸ್ಕಾರ.

**उपेक्षणीय** ಉಪೇಕ್ಷಣೀಯ (वि०) 1. ಉಪೇಕ್ಷಿಸಲು ಅರ್ಹವಾದ, ಬಿಡಲು ಯೋಗ್ಯವಾದ. "गुरोरपीदं धनमाहिताग्नेर्नश्यत्पुरस्तादनुपेक्षणीयम्" रघु० २-४४। 2. ಉಪೇಕ್ಷಿಸಲು ಶಕ್ಯವಾದ. 3. ಉಪೇಕ್ಷಿಸಲ್ಪಡುವ. उप+ईक्ष (दर्शने) अर्हादौ "अनीयर्" (३-१-९६)। 4. ಪ್ರತಿಕ್ರಿಯೆಗೂ ಅರ್ಹವಲ್ಲದ, ತ್ಯಜಿಸಲು ಯೋಗ್ಯವಾದ.

**उपेक्षमाण** ಉಪೇಕ್ಷಮಾಣ (वि०) 1. ಅಲಕ್ಷ್ಯಮಾಡುವ, ಉದಾಸೀನತೆಯಿಂದ ಕಾಣುವ. उप+ईक्ष (दर्शने) कर्त० "शानच्" (३-२-१२४)। 2. ಅನಾದರದಿಂದ ಕಾಣುವ. 3. ತಿರಸ್ಕಾರದಿಂದ ಕಾಣುವ.

**उपेक्षा** ಉಪೇಕ್ಷಾ (स्त्री०) 1. ಉದಾಸೀನತೆ, ಅಲಕ್ಷ್ಯ. "उपेक्षा सर्वकार्येषु कर्मणां करणेषु च। अनिष्टानां समुत्थेन त्रिवर्गो नश्यते यया" भा० शान्ति० ५८-४४। 2. ಅನಾದರ, ಪ್ರೀತಿಯಿಲ್ಲದಿರುವಿಕೆ. उप + ईक्ष (दर्शने) "अः" (३-३-१०३)। "किं वा तवात्यन्तवियोगमोघे कुर्यामुपेक्षां हतजीवितेऽस्मिन्" रघु० १४-६५। 3. ಬಿಡುವುದು, ತ್ಯಜಿಸುವುದು. 4. ತಿರಸ್ಕಾರ, ಅಗೌರವ, ಅವಮರ್ಯಾದೆ. "यथा यथेह त्वदुपेक्षयानया निमेषमप्येष जनो विलम्बते" नैष० ९-२०।

**उपेक्षित** ಉಪೇಕ್ಷಿತ (वि०) 1. ಉಪೇಕ್ಷಿಸಲ್ಪಟ್ಟ, ಅಲಕ್ಷ್ಯದಿಂದ ಕಾಣಲ್ಪಟ್ಟ. 2. ತಿರಸ್ಕರಿಸಲ್ಪಟ್ಟ. 3. ಅವಮಾನಗೊಳಿಸಲ್ಪಟ್ಟ. 4. ತ್ಯಜಿಸಲ್ಪಟ್ಟ, ಬಿಡಲ್ಪಟ್ಟ. उप+ईक्ष (दर्शने) "क्तः" (३-२-१०२)। "उपेक्षितेक्षोः करभाच्छमीरतात्" नैष० ९-४३।

**उपेक्षितव्य** ಉಪೇಕ್ಷಿತವ್ಯ (वि०) "उपेक्षणीय" ಪದದ ಅರ್ಥ. उप+ईक्ष (दर्शने) अर्हादौ "तव्यः" (३-१-९६)।

**उपेक्ष्य** ಉಪೇಕ್ಷ್ಯ (वि०) 1. ಉಪೇಕ್ಷಿಸಲು ಯೋಗ್ಯವಾದ. 2. ಉಪೇಕ್ಷಿಸಲು ಶಕ್ಯವಾದ. 3. ಉಪೇಕ್ಷಿಸಲ್ಪಡುವ. उप + ईक्ष (दर्शने) अर्हादौ "ण्यत्" (३-१-१२४)। (अव्य०) 4. ಉಪೇಕ್ಷಿಸಿ, ಉದಾಸೀನತೆಯಿಂದ ಕಂಡು. 5. ತಿರಸ್ಕರಿಸಿ, ಅನಾದರದಿಂದ ಕಂಡು.

**उपेक्ष्यमाण** ಉಪೇಕ್ಷ್ಯಮಾಣ (वि०) 1. ಉದಾಸೀನತೆಯಿಂದ ಕಾಣಲ್ಪಡುವ. 2. ತಿರಸ್ಕರಿಸಲ್ಪಡುವ, ಅನಾದರದಿಂದ ಕಾಣಲ್ಪಡುವ. उप + ईक्ष (दर्शने) कर्म० "शानच्" (३-२-१२४)। "उपेक्ष्यमाणो विज्ञातो हृदयेनापराजितः" भा० शान्ति० १०३-१४।

**उपेत** ಉಪೇತ (वि०) 1. ಕೂಡಿರುವ, ಸೇರಿಕೊಂಡಿರುವ, ಸಹಿತವಾದ. उप+इण् (गतौ) "क्तः" (३-४-७२)। "विपदोऽभिभवन्त्यविक्रमं रहयत्यापदुपेतमायतिः" किरा० २-१४। "पुत्रमेवंगुणोपेतं चक्रवर्तिनमाप्नुहि" शाकु० १-१२। 2. ಹತ್ತಿರಕ್ಕೆ ಬಂದಿರುವ, ಸಮೀಪಕ್ಕೆ ಬಂದಿರುವ. 3. ಆಗಮಿಸಿರುವ, ಬಂದಿರುವ. "उपेतपार्श्वश्चरणेन मौनिना" नैष० १-१२४। 4. ಉಪನಯನ ಸಂಸ್ಕಾರ ಹೊಂದಿದವನು. "न स्त्री जुहुयान्नानुपेतः" स्मृतिः।

**उपेतृ** ಉಪೇತೃ (वि०) ಸಮೀಪಕ್ಕೆ ಬಂದಿರುವ. उप+इण् (गतौ) "तृच्" (३-१-१३३)। स्त्रियां "ङीप्" (४-१-५)। उपेत्री ಉಪೇತ್ರೀ. "उपेतारमुपेयं च सर्वोपायांश्च कृत्स्नशः" मनु० ७-२१५।

**उपेन्द्र ಉಪೇಂದ್ರ** (पुं०) 1. ವಿಷ್ಣು. इन्द्रमुपगतोऽनुजत्वेन। [ಬಲಿಚಕ್ರವರ್ತಿಯನ್ನು ನಿಗ್ರಹಿಸಲು ಕಶ್ಯಪಮುನಿಯಿಂದ ಅದಿತಿದೇವಿಯಲ್ಲಿ ಇಂದ್ರನಿಗೆ ತಮ್ಮನಾಗಿ ವಾಮನರೂಪದಿಂದ ಹುಟ್ಟಿದ ಕಾರಣ ವಿಷ್ಣುವಿಗೆ ಈ ಹೆಸರು.] "इन्द्रस्याप्यनुजत्वे जातश्चोपेन्द्र उच्यते" इति निरुक्तिः। "उपेन्द्रो वामनः प्रांशुः" वि० स०।

**उपेन्द्रवज्रा ಉಪೇಂದ್ರವಜ್ರಾ** (स्त्री०) ಹನ್ನೊಂದನೆಯ ಛಂದಸ್ಸಿನ ಒಂದು ವೃತ್ತ. ಇದರ ಗಣಗಳು: ज त ज गु गु। ಗಣವಿನ್ಯಾಸ: ।U।UU।।U।UU "उपेन्द्रवज्रा जतजास्ततो गौ" वृ० र०।

**उपेय ಉಪೇಯ** (वि०) 1. ಉಪಾಯದಿಂದ ಸಾಧಿಸಲ್ಪಡುವ. उप + इण् (गतौ) "यत्" (३-१-९७)। 2. ಉಪಾಯದಿಂದ ಸಾಧಿಸಲು ಅರ್ಹವಾದ. 3. ಉಪಾಯದಿಂದ ಸಾಧಿಸಲು ಶಕ್ಯವಾದ (ಫಲ). "भवत्युपायं प्रति हि प्रवृत्तावुपेयमाधुर्यमधैर्यसर्जि" नैष० ६-९३। 4. ಹೊಂದಲು ಯೋಗ್ಯವಾದ. 5. ಹೊಂದಲು ಶಕ್ಯವಾದ. 6. ಹೊಂದಲ್ಪಡುವ. "उपेतारमुपेयं च सर्वोपायांश्च कृत्स्नशः" मनु० ७-२१५। 7. ಸಮೀಪಕ್ಕೆ ಹೋಗಲು ಯೋಗ್ಯವಾದ. 8. ಸಮೀಪಕ್ಕೆ ಹೋಗಲು ಶಕ್ಯವಾದ.

**उपेयिवस् ಉಪೇಯಿವಸ್** (वि०) 1. ಹೊಂದಿರುವ, ಪಡೆದಿರುವ. उप+इण् (गतौ) "क्वसुः" (३-२-१०९)। "समत्सरेणासुर इत्युपेयुषा चिराय नाम्नः प्रथमाभिधेयताम्" माघ० १-४३। 2. ಹೊಂದಿರುವ, ತಲುಪಿರುವ, ಸೇರಿರುವ. "तत उदग्र इव द्विरदे मुनौ रणमुपेयुषि भीमभुजायुधे" किरा० १८-१। स्त्रियां "ङीप्" (४-१-६)। –ईयुषी – ಈಯುಷೀ. "उपेयुषी कल्पलताभिशङ्कया कथंन्वितस्त्रस्यति षट्पदावलिः" किरा० ८-७।

**उपोढ ಉಪೋಢ** (वि०) 1. ಸಮೀಪಕ್ಕೆ ಆಗಮಿಸಿರುವ, ಹತ್ತಿರಕ್ಕೆ ಬಂದಿರುವ. उप + वह (प्रापणे) "क्तः" (३-४-७२)। "युगपद्दृशे विशन्वराहं तदुपोढैश्च नभश्चरैः पृषत्कैः" किरा० १३-२३। 2. ಮದುವೆಯಾಗಿರುವ, ವಿವಾಹಮಾಡಿಕೊಂಡಿರುವ. 3. ವಹಿಸಿರುವ, ಎತ್ತಿಕೊಂಡಿರುವ. "उपोढ ऊढे निकटेऽपि" हेम०।

**उपोत्तम ಉಪೋತ್ತಮ** (वि०) ಕೊನೆಯದಕ್ಕೆ ಹಿಂದಿನದಾದ, ಕೊನೆಯದಕ್ಕೆ ಪೂರ್ವದಲ್ಲಿರುವ. उपगतमुत्तमम्। "योपधाद्गुरूपोत्तमाद्वुञ्" पा० सू०। ५-१-१३२।

**उपोदक ಉಪೋದಕ** (पुं०) 1. ನೀರಿನ ಸಮೀಪ ಪ್ರದೇಶ. उपगत उदकम्। प्रा० स०। (वि०) 2. ನೀರಿನ ಹತ್ತಿರದಲ್ಲಿರುವ. (अव्य०) 3. ನೀರಿನ ಹತ್ತಿರದಲ್ಲಿ. उदकस्य समीपम्। सामीप्ये अव्ययी०।

**उपोदिका ಉಪೋದಿಕಾ** (स्त्री०) ತಪಸಿಗಿಡ. उपाधिकमुदकं यत्र, उदकस्योदादेशः, संज्ञायां कन्। अत इत्त्वम्।

**उपोद्घात ಉಪೋದ್ಘಾತ** (पुं०) 1. ಪ್ರಾರಂಭ, ಉಪಕ್ರಮ. 2. ಪೀಠಿಕೆ, ಪ್ರಸ್ತಾವನೆ, ಮುಂದೆ ಪ್ರತಿಪಾದಿಸಲ್ಪಡುವ ವಿಷಯದ ಸಂಕ್ಷಿಪ್ತ ಸೂಚನೆ. उप समीपे प्रकृतस्य उद्घातः उद्धननं ज्ञापनम्। 3. ಪ್ರಕೃತಕಾರ್ಯಸಿದ್ಧಿಸಲು ಕಾರಣವಾದ ಪ್ರಯೋಜನ. "तदनेन तीर्थेन तत्प्रतिच्छन्दकमुपोद्घाताय माधवान्तिकमुपेयादित्यभिप्रायः" मालती० १। 4. ಉದಾಹರಣೆ. "उपोद्घात उदाहारः" अम०। 5. ವಿಷಯನಿರೂಪಣೆಯ ಸಮಯದಲ್ಲಿರಬೇಕಾದ ಆರು ವಿಧ ಸಂಗತಿಗಳಲ್ಲೊಂದು.

**उपोद्बलक ಉಪೋದ್ಬಲಕ** (वि०) 1. ಸಮರ್ಥಿಸುವ, ಸ್ಥಿರಪಡಿಸುವ. 2. ಉತ್ತೇಜನ ಕೊಡುವ, ಪ್ರೋತ್ಸಾಹಿಸುವ. उप + उद् + बल (प्राणने) "ण्वुल्" (३-१-१३३)।

**उपोद्बलन ಉಪೋದ್ಬಲನ** (न०) 1. ಉತ್ತೇಜನ, ಪ್ರೋತ್ಸಾಹ. 2. ಸಮರ್ಥನೆ, ಸ್ಥಿರಪಡಿಸುವಿಕೆ. उप+उद्+बल (प्राणने) "ल्युट्" (३-३-११५)।

**उपोषण ಉಪೋಷಣ** (न०) ಉಪವಾಸ, ಊಟಮಾಡದಿರುವಿಕೆ. उप+उष (दाहे) भावे "ल्युट्" (३-३-११५)। "प्राप्ते श्रीरामनवमीदिने मर्त्यो विमूढधीः। उपोषणं न कुरुते कुम्भीपाके महीयते"।

**उपोषित ಉಪೋಷಿತ** (न०) 1. ಉಪವಾಸ, ಊಟಮಾಡದಿರುವಿಕೆ. उप + वस (निवासे) भावे "क्तः" (३-३-११४)। "नास्ति स्त्रीणां पृथग्यज्ञो न व्रतं नाप्युपोषितम्। पतिं शुश्रूषते येन तेन स्वर्गे महीयते" मनु० ५-१५५। 2. ಉಪವಾಸಮಾಡಿದ, ಊಟಮಾಡದಿರುವ. उप+वस कर्तृ० "क्तः" (३-४-७२)। "उपोषितो द्वितीयेऽह्नि पूजयेत् पुनरेव ताम्"। "पपौ निमेषालसपक्ष्मपङ्क्तिरुपोषिताभ्यामिव लोचनाभ्याम्" रघु० २-१९।

**उपोष्य ಉಪೋಷ್ಯ** (वि०) 1. ಉಪವಾಸವಮಾಡಲ್ಪಡುವ (ಕಾಲ). उप+वस (निवासे) कर्म० "क्यप्" बाहु०। (अव्य०) 2. ಉಪವಾಸವಮಾಡಿ. उप+वस "ल्यप्" (७-१-३७)।

**उप्त ಉಪ್ತ** (वि०) 1. ಬಿತ್ತಲ್ಪಟ್ಟ (ಬೀಜ). 2. ಬಿತ್ತನೆ ಮಾಡಲ್ಪಟ್ಟ (ಭೂಮಿ). डु वप् (बीजसन्ताने) "क्तः" (३-२-१०२)। 3. ಕ್ಷೌರವಮಾಡಲ್ಪಟ್ಟ.

**उप्तकृष्ट ಉಪ್ತಕೃಷ್ಟ** (वि०) ಬೀಜ ಬಿತ್ತಿದನಂತರ ಉಳಲ್ಪಟ್ಟ (ಭೂಮಿ). उप्तं च तत् कृष्टं च।

**उप्ति ಉಪ್ತಿ** (स्त्री०) 1. ಬೀಜ ಬಿತ್ತುವಿಕೆ. डु वप् (बीजसन्ताने) "क्तिन्" (३-३-९४)। "बीजानामुप्तिविच्च स्यात्क्षेत्रदोषगुणस्य च" मनु० ९-३३०। 2. ಕ್ಷೌರ ಮಾಡುವಿಕೆ.

**उप्त्रिम ಉಪ್ತ್ರಿಮ** (वि०) ಬಿತ್ತನೆಯಿಂದ ಉಂಟಾದ, ಬಿತ್ತನೆಯಿಂದ ಹುಟ್ಟಿದ. वपनेन निर्वृत्तम्—डु वप् (बीजसन्ताने) "क्त्रिः" (३-३-८८)। "मप्" (४-४-२०)।

**उप्य ಉಪ್ಯ** (वि०) ಬಿತ್ತನೆಗೆ ಯೋಗ್ಯವಾದ ಬೀಜ. डु वप् (बीजसन्ताने) कर्म० "क्यप्" बाहु०।

**उभ ಉಭ** (वि० द्विव०) 1. ಎರಡು. 2. ಇಬ್ಬರು. उभ (पूरणे) "कः" (३-१-१३५)। ಮೂರು ಲಿಂಗ ಗಳಲ್ಲಿಯೂ ಇದರ ರೂಪಗಳು: (पु०) उभौ उभौ उभाभ्याम् उभाभ्याम् उभाभ्याम् उभयोः उभयोः। "उभौ यदि व्योम्नि पृथक्प्रवाहावाकाशगङ्गापयसः पतेताम्" माघ० ३-८। (स्त्री०) ಮತ್ತು (न०) उभे उभे ಮುಂದಕ್ಕೆ ಪುಲ್ಲಿಂಗದಂತೆ ರೂಪಗಳು. "उभे एव क्षमे वोढुमुभयोर्बीजमाहितम्। सा वा शम्भोस्तदीया वा मूर्तिर्जलमयी मम" कुमा० २-६०।

**उभय ಉಭಯ** (वि०) ಎರಡು ಅವಯವಗಳಿಂದ ಕೂಡಿದ. उभ "अयच्" (५-२-४४)। ಇದಕ್ಕೆ ದ್ವಿವಚನರೂಪವಿಲ್ಲ. ಏಕ ಮತ್ತು ಬಹುವಚನ ರೂಪ ಗಳು ಮಾತ್ರ. (पु०) उभयः उभये। उभयम् उभयान्। उभयेन उभयैः। उभयस्मै उभयेभ्यः। उभयस्मात् उभयेभ्यः। उभयस्य उभयेषाम्। उभयस्मिन् उभयेषु। (स्त्री०) उभयी उभय्यः। (न०) उभयम् उभयानि। "अलङ्घनीयताहेतुरुभयं तन्मनस्विनि" माघ० २-४८। "तस्य मित्राण्यमित्रास्ते ये च ये चोभये नृपाः" माघ० २-१०१। "किं कथ्यते श्रीरुभयस्य तस्य" कुमा० ७-७८।

**उभयतस् ಉಭಯತಸ್** (अव्य०) 1. ಎರಡು ಕಡೆ ಗಳಿಂದಲೂ. उभय "तसिल्" (५-३-७)। "उद्धतैरिव परस्परसङ्गादीरितान्युभयतः कुचकुम्भैः" माघ० १०-३२। 2. ಎರಡು ಕಡೆಗಳಲ್ಲಿಯೂ. "तज्जः पुनात्युभयतः पुरुषानेकविंशतिम्" याज्ञ० १-५८। 3. ಎರಡು ಕಡೆಗಳಿಗೂ. "शक्तिं चोभयतस्तीक्ष्णामायसं दण्डमेव वा" मनु० ८-३१५।

**उभयतोमुख ಉಭಯತೋಮುಖ** (वि०) 1. ಎರಡು ಕಡೆಯೂ ಮುಖವುಳ್ಳ. 2. ಎರಡು ಕಡೆಯೂ ನೋಡುವ. (स्त्री०) –मुखी–ಮುಖೀ. ಆಕಳು, ಹಸು. "सवत्सारोमतुल्यानि युगान्युभयतोमुखीम्" याज्ञ० १-२०६।

**उभयत्र ಉಭಯತ್ರ** (अव्य०) 1. ಎರಡು ಕಡೆಗಳಲ್ಲಿಯೂ. 2. ಎರಡು ವಿಷಯಗಳಲ್ಲಿಯೂ. उभय "त्रल्" (५-३-१०)। "द्वौ दैवे पितृकार्ये त्रीनेकैकमुभयत्र वा" मनु० ३-१२५।

**उभयथा ಉಭಯಥಾ** (अव्य०) ಎರಡು ರೀತಿಯಲ್ಲಿಯೂ, ಎರಡು ವಿಧದಲ್ಲಿಯೂ. उभ "अयच्" "थाल्" (५-३-२३)।

**उभयद्युस् ಉಭಯದ್ಯುಸ್** (अव्य०) ಎರಡು ದಿನ ಗಳಲ್ಲಿಯೂ. उभय "द्युस्" (वा० ५-३-२२)।

**उभयवेतन ಉಭಯವೇತನ** (पु०) ಎರಡುಕಡೆಗಳ ಲ್ಲಿಯೂ ಸಂಬಳ ಪಡೆಯುವ ದೂತ. उभयोः वेतनं यस्य। [ಒಬ್ಬ ರಾಜನಲ್ಲಿ ರಹಸ್ಯವಾಗಿ ಸಂಬಳ ಪಡೆದು ಅವನ ಶತ್ರುರಾಜನಲ್ಲಿ ಸೇವಕನಂತೆ ನಟಿಸಿ ಅವ ನಿಂದಲೂ ಸಂಬಳ ಪಡೆಯುತ್ತಾ ಆ ರಾಜನಿಗೂ, ಅವನ ಮಂತ್ರಿಗಳಿಗೂ ಭೇದವನ್ನು ಕಲ್ಪಿಸುವವನು ಉಭಯ ವೇತನ ದೂತ.]

**उभयेद्युस् ಉಭಯೇದ್ಯುಸ್** (अव्य०) "उभयद्युस्" ಪದದ ಅರ್ಥ. उभय "एद्युस्" (५-३-२२)।

**उम् ಉಮ್** (अव्य०) 1. ರೋಷ, ಕೋಪ. 2. ಪ್ರಶ್ನೆ. 3. ಅಂಗೀಕಾರ, ಸಂಮತಿ, ಒಪ್ಪಿಗೆ. "उम् रोषेऽङ्गीकृतावपि। प्रश्नेऽपि स्यात्" मेदि०।

**उमा ಉಮಾ** (स्त्री०) 1. ಪಾರ್ವತಿ, ಗೌರಿ, ಶಿವನ ಪತ್ನಿ. ओः शिवस्य मा लक्ष्मीरिव, उं शिवं माति इति वा। उ, मा इति मात्रा तपसे निषिद्धत्वाद्वा। [ತಾಯಿಯು ಪಾರ್ವತಿಯನ್ನು ಉ ಎಂದು ಸಂಬೋಧಿಸಿ ಮಾ ಎಂದು ತಪಸ್ಸಿನಿಂದ ತಡೆದ ಕಾರಣ ಪಾರ್ವತಿಗೆ

"उमा" ಎಂಬ ಹೆಸರಾಯಿತು.] "उमेति मात्रा तपसो निषिद्धा पश्चादुमाख्यां सुमुखी जगाम" कुमा० १-२६। "उमापि नीलालकमध्यशोभि विस्रंसयन्ती नवकर्णिकारम्" कुमा० ३-६२। 2. ಅಗಸೆಗಿಡ. 3. ಅರಿಶಿನ. 4. ಕೀರ್ತಿ, ಯಶಸ್ಸು. 5. ಪ್ರಕಾಶ, ಬೆಳಕು. "उमातसीहैमवतीहरिद्राकीर्तिकान्तिषु" मेदि०।

**उमाकट ಉಮಾಕಟ** (पु०) 1. ಅರಿಶಿನದ ಪುಡಿ. 2. ಅಗಸೆ ಹೂವಿನ ಪುಡಿ. उमाया हरिद्राया अतस्या वा रजः "कटच्" (वा० ५-२-२९)।

**उमातनय ಉಮಾತನಯ–सुत–ಸುತ** (पु०) 1. ಸ್ಕಂದ, ಕುಮಾರಸ್ವಾಮಿ, ಷಣ್ಮುಖ. ["कार्तिकेय" ಪದದಲ್ಲಿ ನೋಡಿ.] 2. ಗಣಪತಿ, ವಿನಾಯಕ.

**उमापति ಉಮಾಪತಿ** (पु०) ಪರಮೇಶ್ವರ, ಶಿವ, ಮಹಾದೇವ. उमायाः पतिः। "अभिनवौषसरागभृता बभौ जलधरेण समानमुमापतिः" किरा० १८-४।

**उमावन ಉಮಾವನ** (न०) ಶೋಣಿತಪುರ. ಈ ಶೋಣಿತಪುರವು ಉಖಾಮಠಕ್ಕೆ ಆರುಮೈಲಿ ದೂರದಲ್ಲಿ ಕೇದಾರ ಗಂಗೆಯ ತೀರದಲ್ಲಿರುವುದು. ಇದಕ್ಕೆ ದೇವೀಕೋಟಿ, ಕೋಟಿವರ್ಷ, ಬಾಣಪುರಗಳೆಂಬ ಹೆಸರೂ ಉಂಟು. "देवीकोट उमावनम्। कोटिवर्षं बाणपुरं स्याच्छोणितपुरं च तत्" अभि० चि०।

**उमासहचर ಉಮಾಸಹಚರ**<br>**उमासहाय ಉಮಾಸಹಾಯ** } (पु०) ಪರಮೇಶ್ವರ, ಮಹಾದೇವ. उमायाः सहचरः सहायो वा।

**उम्बर ಉಂಬರ**<br>**उम्बुर ಉಂಬುರ** } (पु०) ಬಾಗಿಲಿನ ಕೆಳಗಿನ ಮರದ ಪಟ್ಟಿ. "गृहावग्रहणी देहल्युम्बरोदुम्बरोम्बुराः" अभि० चि०।

**उम्य ಉಮ್ಯ** (न०) ಅಗಸೆಗಿಡ ಬೆಳೆಯಲು ಯೋಗ್ಯವಾದ ಭೂಮಿ. उमानां भवनं क्षेत्रम्—उमा "यत्" (५-२-४)। "भङ्ग्यं भङ्गीनमौमीनमुम्यं यव्यं यवक्यवत्" अभि० चि०।

**उरःसूत्रिका ಉರಃಸೂತ್ರಿಕಾ** (स्त्री०) ಮುಕ್ತಾಹಾರ, ಮುತ್ತುಗಳಿಂದ ರಚಿತವಾದ ಸರ. उरसः सूत्रमिव। "अथोरःसूत्रिका मौक्तिकैः कृता" अम०।

**उरःस्थल ಉರಃಸ್ಥಲ** (न०) ಎದೆ, ಗುಂಡಿಗೆ. उरसः स्थलम्। "शिलाघनैर्नाकसदामुरःस्थलैर्बृहन्निवेशैश्च वधूपयोधरैः" किरा० ८-३२।

**उरग ಉರಗ** (पु०) 1. ಸರ್ಪ, ಹಾವು. उरसा गच्छति—गम्लृ (गतौ) "डः" (वा० ३-२-४८)। "तवाभिधानाद्व्यथते नताननः सुदुःसहान्मन्त्रपदादिवोरगः" किरा० १-२४। स्त्रियां जाति० "ङीष्" (४-१-६३)। **–गी –ಗೀ.** ಹೆಣ್ಣು ಹಾವು. 2. ಸೀಸಲೋಹ. 3. ಆಶ್ಲೇಷಾನಕ್ಷತ್ರ. [ಇದು ಸರ್ಪದೇವತಾಕ ನಕ್ಷತ್ರ].

**उरगभूषण ಉರಗಭೂಷಣ** (पु०) ಪರಮೇಶ್ವರ, ಶಿವ. उरगो भूषणमस्य।

**उरगराज ಉರಗರಾಜ** (पु०) ಸರ್ಪರಾಜ, ವಾಸುಕಿ, ಆದಿಶೇಷ. उरगाणां सर्पाणां राजा "टच्" (५-४-९१)। "प्रहर्तुरेवोरगराजरज्जवो जवेन कण्ठं सभयाः प्रपेदिरे" माघ० १-५६।

**उरगाशन ಉರಗಾಶನ** (पु०) 1. ಗರುಡ. 2. ನವಿಲು, ಮಯೂರ. उरगानश्नाति—अश (भोजने) "ल्युः" (३-१-१३४)। "चञ्च्वग्रदष्टचटुलाहिपताकयान्ये स्वावासभागमुरगाशनकेतुयष्ट्या" माघ० ५-१३।

**उरण ಉರಣ** (पु०) ಗಂಡುಕುರಿ, ಟಗರು. ऋच्छति—ऋ (गतौ) "क्युन्" "उत्" च (उ० ५-१७)। "वृकीवोरणमासाद्य मृत्युरादाय गच्छति" भा०। स्त्रियां "ङीप्" (४-१-६३)। **–णी –ಣೀ.** ಹೆಣ್ಣು ಕುರಿ.

**उरणाक्ष ಉರಣಾಕ್ಷ** (पु०) ತಗಸಿಗೆ ಗಿಡ. "दद्रुघ्नश्चक्रमर्दकः। पद्माट उरणाक्षश्च" अम०।

**उरभ्र ಉರಭ್ರ** (पु०) 1. ಗಂಡುಕುರಿ, ಟಗರು. उरु भ्रमति—भ्रमु (चलने) "डः" (वा० ३-२-१०१)। पृषो०। स्त्रियां जाति० "ङीष्" (४-१-६३)। **–भ्री –ಭ್ರೀ.** ಹೆಣ್ಣು ಕುರಿ. 2. ತಗಸಿಗೆ ಗಿಡ.

**उररी ಉರರೀ** (अव्य०) 1. ಅಂಗೀಕಾರ, ಒಪ್ಪಿಗೆ. 2. ವಿಸ್ತಾರ. ऊयी (तन्तुसन्ताने) "ररीक्" बाहु०। ಇದಕ್ಕೆ कृञ् ಧಾತುವು ಪರವಾದಾಗ ಗತಿಸಂಜ್ಞೆ ಬಂದು ಸಮಾಸ ಬರುವುದು. उररी + कृञ् भावे "घञ्" (३-३-१८)। **–कारः –ಕಾರಃ.** भावे "ल्युट्" (३-३-११५)। **–करणम् –ಕರಣವ್.** ಅಂಗೀಕಾರ, ಒಪ್ಪಿಗೆ. उररी+कृञ् "ल्यप्"(७-१-३७)। **उररीकृत्य ಉರರೀಕೃತ್ಯ.** ಅಂಗೀಕರಿಸಿ, ಸಂಮತಿಸಿ. "काल्पनिकं भेदमुररीकृत्य कर्मकर्तरि वा प्रयोगः" सा० द०।

**उररीकृत ಉರರೀಕೃತ** (वि०) 1. ಒಪ್ಪಲ್ಪಟ್ಟ, ಸಂಮತಿಸಲ್ಪಟ್ಟ. उररी+कृञ् "क्तः" (३-२-१०२)।

"कुण्डिनेन्द्रसुतया किल पूर्वं मां वरीतुमुररीकृतमास्ते" नैष० ५-११४।

**उरस् ಉರಸ್** (न०) 1. ವಕ್ಷಃಸ್ಥಳ, ಎದೆ. इयर्ति—ऋ (गतौ) "असुन्" उरादेशश्च (उ० ४-१५५)। "उरसि शूलभृतः प्रहिता मुहुः प्रतिहतिं ययुरर्जुनमुष्टयः" किरा० १५-५। (वि०) 2. ಮುಖ್ಯವಾದ, ಪ್ರಧಾನವಾದ, ಶ್ರೇಷ್ಠವಾದ. "उरो वक्षसि मुख्ये च" हेम०।

**उरसिज ಉರಸಿಜ** (पु०) 1. ಸ್ತನ, ಹೆಂಗಸರ ಮೊಲೆ. उरसि वक्षसि जायते—जनी (प्रादुर्भावे) "ड:" (३-२-९७)। "परिपस्पृशिरे चैनं पीनैरुरसिजैर्मुहुः" रामा०। (वि०) 2. ಎದೆಯಲ್ಲಿ ಹುಟ್ಟಿದ.

**उरसिरुह ಉರಸಿರುಹ** (पु०) 1. ಸ್ತನ, ಹೆಂಗಸರ ಮೊಲೆ. उरसि रोहति—रुह (बीजजन्मनि प्रादुर्भावे च) "क:" (३-१-१३५)। "फेनानामुरसिरुहेषु हारलीलाचेलश्रीर्जघनतलेषु शैवलानाम्" माघ० ८-५९। (वि०) 2. ಎದೆಯಲ್ಲಿ ಹುಟ್ಟಿದ.

**उरसिल ಉರಸಿಲ** (वि०) ಶ್ರೇಷ್ಠವಾದ ಎದೆಯುಳ್ಳ, ವಿಶಾಲವಾದ ಎದೆಯುಳ್ಳ. प्रशस्तमुरो यस्य "इलच्" (५-२-१००)।

**उरस्वत् ಉರಸ್ವತ್** (वि०) ಶ್ರೇಷ್ಠವಾದ ಎದೆಯುಳ್ಳ, ವಿಶಾಲವಾದ ಎದೆಯುಳ್ಳ. प्रशस्तमुरो यस्य "मतुप्" (५-२-९४)।

**उरस्त्र ಉರಸ್ತ್ರ** (न०) ಕವಚ, ಅಂಗಿ. उरस्त्रायते—त्रैङ् (पालने) "क:" (३-२-३)।

**उरस्य ಉರಸ್ಯ** (पु०) 1. ಪುತ್ರ, ಮಗ. उरसा निर्मितः "यत्" (४-४-९४)। (वि०) 2. ಎದೆಯಲ್ಲಿರುವ. उरसि भवः "यत्" (४-३-५५)।

**उरी ಉರೀ** (अव्य०) 1. ಅಂಗೀಕಾರ, ಒಪ್ಪಿಗೆ, ಸಂಮತಿ. उर (गतौ) "रीक्" बाहु०। 2. ವಿಸ್ತಾರ.

**उरीकरण ಉರೀಕರಣ** (न०) 1. ಅಂಗೀಕಾರ, ಒಪ್ಪಿಗೆ, ಸಂಮತಿ. उरी+डु कृञ् (करणे) "ल्युट्" (३-३-११५)। 2. ವಿಸ್ತರಿಸುವಿಕೆ. भावे "घञ्" (३-३-१८)। –कार: –ಕಾರಃ.

**उरीकृत ಉರೀಕೃತ** (वि०) 1. ಅಂಗೀಕರಿಸಲ್ಪಟ್ಟ, ಒಪ್ಪಲ್ಪಟ್ಟ, ಸಂಮತಿಸಲ್ಪಟ್ಟ. उरी + डु कृञ् (करणे) "क्त:" (३-२-१०२)। 2. ವಿಸ್ತರಿಸಲ್ಪಟ್ಟ. 3. ಸ್ವೀಕರಿಸಲ್ಪಟ್ಟ. "न खलु मुष्टिरुरीकृतबन्धनः" नैष० ४-८४।

**उरु ಉರು** (वि०) 1. ದೊಡ್ಡದಾದ. ऊर्णोति—ऊर्णुञ् (आच्छादने) "कु:" ह्रस्वश्च (उ० १-३१)। "शुक्लैर्मयूखनिचयैः परिवीतमूर्तिर्वप्राभिघातपरिमण्डलितोरुदेहः" किरा० ५-४२। 2. ವಿಸ್ತಾರವಾದ, ಅಗಲವಾದ. 3. ಅಧಿಕವಾದ, ಹೆಚ್ಚಾದ, ಹೇರಳವಾದ. "स पिशङ्गजटावलिः किरन्नुरु तेजः परमेण मन्युना" किरा० १५-४७। 4. ಶ್ರೇಷ್ಠವಾದ. स्त्रियां "ङीप्" (४-१-४४)। उर्वी ಉರ್ವೀ. "शरवृष्टिं विधूयोर्वीं स्रग्विणो रक्तवाससः" मनु० ८-२५६।

**उरुक्रम ಉರುಕ್ರಮ** (पु०) ವಾಮನಾವತಾರವೆತ್ತಿದ ಮಹಾವಿಷ್ಣು. उरवः बहवः क्रमाः पादविक्षेपाः अस्य। "यस्योरुषु त्रिषु विक्रमणेषु। अधिक्षियन्ति भुवनानि विश्वा" श्रुतिः।

**उरुगाय ಉರುಗಾಯ** (पु०) 1. ವಿಷ್ಣು. उरुभिः श्रेष्ठैर्गीयते—गै (शब्दे) "घञ्" (३-३-१९)। 2. ಹೆಚ್ಚು ಹೊಗಳಿಕೆ, ಅಧಿಕವಾಗಿ ಸ್ತೋತ್ರ ಮಾಡುವಿಕೆ. 3. ವಿಸ್ತಾರವಾದ ಪ್ರದೇಶದಲ್ಲಿ ಸಂಚಾರ. उरुषु गानम्—गाङ् (गतौ) भावे "घञ्" (३-३-१८)। "युक्" (७-३-३३)।

**उरुबूक ಉರುಬೂಕ** (पु०) ಹರಳುಗಿಡ. उरुं महान्तं वायुं वायति—ओ वै (शोषणे) "ऊक:" (उ० ४-४१)। "एरण्ड उरुबूकश्च रुचकश्चित्रकश्च सः" अम०।

**उरोज ಉರೋಜ** (पु०) 1. ಸ್ತನ, ಹೆಂಗಸರ ಮೊಲೆ. उरसि जायते—जनी (प्रादुर्भावे) "ड:" (३-२-९८)। "स्नान्तीनां बृहदमलोदबिन्दुचित्रौ रेजाते रुचिरदृशामुरोजकुम्भौ" माघ० ८-५३। (वि०) 2. ಎದೆಯಲ್ಲಿ ಹುಟ್ಟಿದ.

**उरोभू ಉರೋಭೂ** (वि०) ಎದೆಯಲ್ಲಿ ಹುಟ್ಟಿದ. उरसि भवति—भू (सत्तायाम्) "क्विप्" (३-२-१७९)। "उरोभुवा कुम्भयुगेन जृम्भितम्" नैष० १-४८।

**उरोभूषण ಉರೋಭೂಷಣ** (न०) 1. ಹಾರ, ಸರ. उरो भूष्यतेऽनेन—भूष (अलङ्कारे) कर० "ल्युट्" (३-३-११७)। (वि०) 2. ಎದೆಯನ್ನು ಅಲಂಕರಿಸುವ. उरो भूषयति—भूष (अलङ्कारे) + णिच् "ल्यु:" (३-१-१३४)।

**उर्वट ಉರ್ವಟ** (पु०) ಸಂವತ್ಸರ. उरु यथातथाऽटति—अट (गतौ) "अच्" (३-१-१३४)। "ऋतुवृत्तिर्मसमानः स्यात्कालग्रन्थिरुर्वटः" त्रिकाण्ड०।

**उर्वरा ಉರ್ವರಾ** (स्त्री०) 1. ಸಕಲ ಪೈರು ಪಚ್ಚೆಗಳಿಂದ ಕೂಡಿದ ಭೂಮಿ, ಫಲವತ್ತಾದ ಜಮೀನು. उरु प्रभूतं शस्यादिकं ऋच्छति—ऋ (गतौ) "अच्" (३-१-१३४)। उर्वी (हिंसायाम्) "घः" (३-३-१२५) उर्वं राति—रा (दाने) "क्विप्" (वा० ३-३-१०८)। वा। "तीक्ष्ण-विशिखमुखपीतमसृक्पततां गणैः पिबतु सार्धमुर्वरा" माघ० १५-६६। 2. ಜಮೀನು, ಭೂಮಿ. "उर्वरा तु भूमात्रे सर्वसस्याढ्यभुव्यपि" हेम०।

**उर्वशी ಉರ್ವಶೀ** (स्त्री०) ದೇವಲೋಕದ ಒಬ್ಬ ವೇಶ್ಯೆ, ಪ್ರಖ್ಯಾತಳಾದ ಒಬ್ಬ ಅಪ್ಸರಸ್ಸು. उरून् महतोऽपि अश्नुते वशीकरोति—अशू (व्याप्तौ) "क:" (३-२-४)। गौरा० "ङीष्" (४-१-४१)। [ಬದರಿಕಾಶ್ರಮದಲ್ಲಿ ನರನಾರಾಯಣರು ತಪಸ್ಸು ಮಾಡುತ್ತಿದ್ದಾಗ ಕೆಲವು ದೇವವನಿತೆಯರು ತಪೋಭಂಗಕ್ಕಾಗಿ ಬರಲು ನಾರಾಯಣನು ತನ್ನ ತೊಡೆಯನ್ನು ಕೆರೆದು ಲೋಕೋತ್ತರ ಸೌಂದರ್ಯವುಳ್ಳ ಒಬ್ಬ ಯುವತಿಯನ್ನು ಸೃಷ್ಟಿಸಿದನು. ತೊಡೆಯಲ್ಲಿ ಹುಟ್ಟಿದುದರಿಂದ ಇವಳಿಗೆ "ಉರ್ವಶಿ" ಎಂದು ಹೆಸರಾಯಿತು.] ದೇ० ಭಾ०। ऊरुं नारायणोरुं कारणत्वेनाश्नुते—अशू (व्याप्तौ) "क:" (३-२-४)। "ङीष्" (४-१-४१)। पृषो०। [ಮಿತ್ರಾವರುಣರ ಶಾಪದಿಂದ ಈಕೆಯು ಭೂಮಿಗೆ ಬಂದು ಚಂದ್ರವಂಶದವನಾದ ಪುರೂರವಸ್ ಎಂಬ ಒಬ್ಬ ರಾಜನನ್ನು ಮದುವೆಯಾಗಿ ಆಯು, ಧೀಮಂತ, ಅಮಾವಸು, ದೃಢಾಯು, ವನಾಯು ಮತ್ತು ಶತಾಯುಗಳೆಂಬ ಆರು ಮಂದಿ ಮಕ್ಕಳನ್ನು ಪಡೆಯುವಳು. ಈಕೆಯು ಪುರೂರುವಸ್ಸನ್ನು ಮದುವೆಯಾಗುವಾಗ, ಸಮಾಗಮ ಕಾಲದ ಹೊರತು ಮತ್ತಾವಾಗಲೂ ತನಗೆ ನಗ್ನನಾಗಿ ಕಾಣಿಸಿಕೊಳ್ಳಕೂಡದೆಂದೂ ತಾನು ಅಪೇಕ್ಷಿಸಿದಾಗ ಮಾತ್ರ ಸಮಾಗಮವಾಗಬೇಕೆಂದೂ ತನ್ನ ಹಾಸಿಗೆಯ ಪಕ್ಕದಲ್ಲಿ ಯಾವಾಗಲೂ ಎರಡು ಟಗರುಗಳನ್ನು ಕಟ್ಟಿರಬೇಕೆಂದೂ ಮುಂತಾಗಿ ಕೆಲವು ನಿಬಂಧನೆಗಳನ್ನು ಹಾಕಿ ಅದಕ್ಕೆ ವಿರುದ್ಧವಾಗಿ ನಡೆದಾಗ ತಾನು ಅವನನ್ನು ಬಿಟ್ಟು ಹೋಗುವುದಾಗಿ ಹೇಳಿ ಆ ನಿಬಂಧನೆಗಳಿಗೆ ಅವನನ್ನು ಒಪ್ಪಿಸಿದಳು. ಒಂದು ದಿನ ವಿಶ್ವಾವಸುವೆಂಬ ಗಂಧರ್ವನೊಬ್ಬನು ಉರ್ವಶಿಯನ್ನು ದೇವಲೋಕಕ್ಕೆ ಕರೆದೊಯ್ಯಲು ಉಪಾಯ ಯೋಚಿಸಿ ಉರ್ವಶಿಯ ಹಾಸಿಗೆಯ ಪಕ್ಕದಲ್ಲಿ ಕಟ್ಟಿದ್ದ ಟಗರುಗಳನ್ನು ಕದ್ದೊಯ್ಯಲಾಗಿ ಪುರೂರುವಸ್ಸು ನಗ್ನನಾಗಿಯೇ ಹಾಸಿಗೆಯಿಂದೆದ್ದು ಅಟ್ಟಿಕೊಂಡು ಓಡಿಹೋದನು. ಆಗ ಪ್ರತಿಜ್ಞಾಭಂಗವಾಯಿತೆಂದು ಉರ್ವಶಿಯು ಅವನನ್ನು ಬಿಟ್ಟು ದೇವಲೋಕಕ್ಕೆ ತೆರಳಿದಳು.] ಭಾಗ० ९-१४, १५। ಉರ್ವಶಿಯು ಒಂದು ದಿನ ಇಂದ್ರನ ಸಭೆಯಲ್ಲಿ ಅರ್ಜುನನನ್ನು ಮೋಹಿಸಿ ಅವನಿಂದ ತಿರಸ್ಕೃತಳಾಗಿ ಅವನನ್ನು ಷಂಡ (ನಪುಂಸಕ) ನಾಗುವಂತೆ ಶಪಿಸಿದಳು. "तव पित्राभ्यनुज्ञातां स्वयञ्च गृहमागताम्। यस्मान्मां नाभिनन्देथाः कामबाणवशंगताम्। तस्मात्त्वं नर्तनः पार्थ स्त्रीमध्ये मानवर्जितः। अपुमानिति विख्यातः षण्डवद्विचरिष्यसि" भा० वन० अ० ४६। "उर्वशी गुणवशीकृतविश्वा" नैष० ५-५२।

**उर्वारु ಉರ್ವಾರು** (पु०) ಸೌತೆಗಿಡ. उरु यथातथा ऋच्छति—ऋ (गतौ) "उण्" बाहु०।

**उर्वी ಉರ್ವೀ** (स्त्री०) ಭೂಮಿ, ನೆಲ, ಪೃಥಿವಿ. ऊर्णोति—ऊर्णुञ् (आच्छादने) "उः" ह्रस्वः नुलोपश्च (उ० १-३१)। "ङीष्" (४-१-४४)। "पश्योदग्रप्लुतत्वाद्वियति बहुतरं स्तोकमुर्व्यां प्रयाति" शाकु० १-७।

**उर्वीतल ಉರ್ವೀತಲ** (न०) ಭೂಮಿಯ ಮೇಲುಭಾಗ, ನೆಲದ ಮೇಲು ಮೈ. उर्व्यास्तलम्। "नीतो विक्रमबाहुरात्मसमतां प्राप्तेयमुर्वीतले सारं सागरिका तथा च भुवनप्राप्त्येकहेतुः प्रिया" रत्ना० ४-२०।

**उर्वीधर ಉರ್ವೀಧರ** (पु०) ಪರ್ವತ, ಬೆಟ್ಟ. धरति—धृञ् (धारणे) "अच्" (३-१-१३४)। उर्व्याः धरः। "अलकाधिपभृत्यदर्शितं शिवमुर्वीधरवर्त्म संप्रयान्" किरा० ३-५९।

**उर्वीधव ಉರ್ವೀಧವ —नाथ—ನಾಥ —पति—ಪತಿ** (पु०) ರಾಜ, ದೊರೆ. उर्व्याः धवः नाथः पतिर्वा।

**उर्वीभुज् ಉರ್ವೀಭುಜ್** (पु०) ರಾಜ, ದೊರೆ. उर्वीं भुङ्क्ते—भुज (पालनाभ्यवहारयोः) "क्विप्" (३-२-६१)।

**उर्वीभृत् ಉರ್ವೀಭೃತ್** (पु०) 1. ರಾಜ, ದೊರೆ. 2. ಪರ್ವತ, ಬೆಟ್ಟ. उर्वीं बिभर्ति—डु भृञ् (धारणपोषणयोः) "क्विप्" (३-२-७६)।

**उर्वीरुह ಉರ್ವೀರುಹ** (पु०) 1. ವೃಕ್ಷ, ಮರ, ಗಿಡ, ಬಳ್ಳಿ. उर्व्यां रोहति—रुह (बीजजन्मनि प्रादुर्भावे च) "कः" (३-१-१३५)। "बलाक्रान्तः क्रीडद्द्विरदमथितोर्वीरुहरवैः" माघ० ५-६९। (वि०) 2. ಭೂಮಿಯಲ್ಲಿ ಹುಟ್ಟಿದ. "विहङ्गराजाङ्गरुहैरिवायतैर्हिरण्मयोर्वीरुहवल्लितन्तुभिः" माघ० १-७।

**उलप ಉಲಪ** (पुं०) 1. ಲತೆ, ಹಬ್ಬಿರುವ ಬಳ್ಳಿ. वलति—वल (संवरणे) "कपन्" संप्रसारणं च (उ० ३-१४५)। 2. ಮೃದುವಾದ ಒಂದು ಜಾತಿಹುಲ್ಲು. "अविरलवितेव शक्रगोपैररुणितनीलतृणोलपा धरित्री" क्रिरा० १०-३।

**उलूक ಉಲೂಕ** (पुं०) 1. ಗೂಬೆ. वल (संवरणे) "ऊकः" संप्रसारणं च निपा० (उ० ४-४१)। "कुमुदवनमपश्रि श्रीमदम्भोजषण्डं त्यजति मुदमुलूकः प्रीतिमांश्चक्रवाकः" माघ० ११-६४। 2. ಇಂದ್ರ. 3. ದುರ್ಯೋಧನನ ಒಬ್ಬ ದೂತ, ಮಹಾಭಾರತಯುದ್ಧದ ಒಬ್ಬ ಯೋಧ. "स्यादुलूकः काकशत्राविन्द्रे भारतयोधिनि" हेम०। (पुं० ब० व०) 4. ಒಂದು ದೇಶ ಮತ್ತು ಆ ದೇಶದ ಜನರು. "उलूकवासिनं राजन् बृहन्तमुपजग्मिवान्" भा० सभा० २८-५। "उलूकानुत्तरांश्चैव तांश्च राज्ञः समानयत्" भा० सभा० २८-११।

**उलूखल ಉಲೂಖಲ** (नं०) ಒರಳು, ಕುಟ್ಟಲು ಧಾನ್ಯವನ್ನು ಹಾಕುವ ಕಲ್ಲಿನ ಅಥವಾ ಮರದ ಪಾತ್ರೆ. ऊर्ध्वं खं उलखं। पृषो०। उलूखं लाति ला (आदाने) "कः" (३-२-३)। "वनस्पतिभ्य इत्येवं मुसलोलूखले हरेत्" मनु० ३-८८।

**उलूखलक ಉಲೂಖಲಕ**(नं०)1. ಒರಳು. 2. ಕಲ್ಪತ್ತು. 3. ಗುಗ್ಗುಳದ ಮರ. "कुम्भोलूखलके क्लीबे कौशिको गुग्गुलः पुरः" अम०।

**उलूपिन् ಉಲೂಪಿನ್** (पुं०) ಸಮುದ್ರದ ಒಂದು ಜಾತಿ ಮೀನು, ತಿಮಿಂಗಿಲ ಜಾತಿಯ ಪ್ರಾಣಿ. उ विस्मयकारकं रूपमस्यास्ति "इनिः" (५-२-११५)। रलयोरभेदः।

**उलूपी ಉಲೂಪೀ** (स्त्री०) ಒಬ್ಬ ನಾಗಕನ್ಯೆ, ಕೌರವ್ಯನೆಂಬ ಸರ್ಪರಾಜನ ಮಗಳು. [ಒಂದು ದಿನ ಉಲೂಪಿಯು ಗಂಗಾನದಿಯಲ್ಲಿ ಸ್ನಾನಮಾಡುತ್ತಿದ್ದಾಗ ತೀರ್ಥಯಾತ್ರೆಗಾಗಿ ಹೋಗಿದ್ದ ಅರ್ಜುನನನ್ನು ಕಂಡು ಮೋಹಗೊಂಡು ಅವನನ್ನು ಮದುವೆಯಾಗಿ ಇರಾವಂತನೆಂಬ ಮಗನನ್ನು ಪಡೆದಳು.] भा० आदि० २३४। [ಬಭ್ರುವಾಹನನ ಬಾಣಕ್ಕೆ ತುತ್ತಾಗಿದ್ದ ಅರ್ಜುನನನ್ನು ಇವಳು ಸಂಜೀವನಮಣಿಯಿಂದ ಬದುಕಿಸಿದಳು.] भा० आश्व० ८१।

**उल्का ಉಲ್ಕಾ** (स्त्री०) 1. ಆಕಾಶದಲ್ಲಿ ಕಾಣಿಸಿಕೊಳ್ಳುವ ಒಂದು ತೇಜಸ್ಸಿನ ರಾಶಿ, ಬಾಲಚುಕ್ಕಿ. उष (दाहे) "कक्" षस्य लश्च (उ० ३-४२)। "परमास्त्रपरिग्रहोरुतेजः स्फुरदुल्काकृति विक्षिपन्वनेषु" किरा० १३-२६। 2. ದೀವಟಿಗೆ, ಇಲಾಲು, ಪಂಜು. 3. ಬೆಂಕಿ, ಉರಿ. "बाधेतोल्काक्षपितचमरीबालभारो दवाग्निः" मेघ० १-५३।

**उल्कापात ಉಲ್ಕಾಪಾತ** (पुं०) ಆಕಾಶದಿಂದ ಬೆಂಕಿ ಬೀಳುವುದು. उल्कायाः पातः। ष० त०।

**उल्कामुख ಉಲ್ಕಾಮುಖ**(पुं०) ಕೊಳ್ಳಿದೆವ್ವ, ಬಾಯಿಂದ ಬೆಂಕಿಯನ್ನು ಉಗುಳುವ ಪಿಶಾಚಿ. उल्का मुखे यस्य। "विद्युत्पुञ्जनिकाशकेशनयनभ्रूश्मश्रुजालैर्नभो लक्ष्यालक्ष्यविशुष्कदीर्घवपुषामुल्कामुखानां मुखैः" मालती० ५-१३।

**उल्ब ಉಲ್ಬ** (नं०) ಗರ್ಭಕೋಶ, ಗರ್ಭಾಶಯ, ಗರ್ಭದ ಮೇಲಿನ ಹೊದಿಕೆಯ ಚೀಲ. उच (समवाये) "बन्" (उ० ४-९५)। "यथोल्वेनावृतो गर्भस्तथा तेनेदमावृतम्" गीता ३-३८।

**उल्बण ಉಲ್ಬಣ** (वि०) 1. ಉತ್ಕಟವಾದ, ಅಧಿಕವಾದ, ಹೆಚ್ಚಾದ, ಮಿತಿಮೀರಿದ. उत् बणति—बण (शब्दे) "अच्" (३-१-१३४)। पृषो०। "केनचिन्मधुरमुल्बणरागं बाष्पतप्तमधिकं विरहेषु" माघ० १०-५४। 2. ದೊಡ್ಡದಾದ, ಹಿರಿದಾದ. "रिपुरुल्बणभीमभोगभाजां भुजगानां जननीं जजाप विद्याम्" माघ० २०-४१। 3. ತೊಂದರೆಯಿಲ್ಲದ, ಅಡ್ಡಿ ಆತಂಕಗಳಿಲ್ಲದ, ಪ್ರಕಾಶವಾದ. "त्याजितैः फलमुत्खातैर्भग्नैश्च बहुधा नृपैः। तस्यासीदुल्बणो मार्गः पादपैरिव दन्तिनः" रघु० ४-३३।

**उल्मुक ಉಲ್ಮುಕ** (पुं०) 1. ಯದುವಂಶದ ಒಬ್ಬ ದೊರೆ. (नं०) 2. ಬೆಂಕಿಯ ಕೆಂಡ, ಅಂಗಾರ. उष (दाहे) "मुकः" षस्य लश्च (उ० ३-८४)। "उल्मुकेन द्रुमं प्राप्य संकुचत्पत्रसम्पदम्। तेजः प्रकिरता दिक्षु सप्रतापमदीप्यत" माघ० १९-८। 3. ಅರ್ಧಬೆಂದಿರುವ ಕಟ್ಟಿಗೆ, ಕೊಳ್ಳಿ.

**उल्लङ्घन ಉಲ್ಲಂಘನ** (नं०) 1. ಮೀರುವುದು, ಅತಿಕ್ರಮಿಸುವುದು. उद् + लघि (गतौ) भावे "ल्युट्" (३-३-११५)। "वेलोल्लङ्घनमेतेषां शोकोदन्वति तन्वति" चं० रा०। 2. ಮೇಲಕ್ಕೆ ಹಾರುವುದು, ಮೇಲಕ್ಕೆ ನೆಗೆಯುವುದು. 3. ದಾಟುವುದು.

**उल्लङ्घनीय ಉಲ್ಲಂಘನೀಯ** (वि०)1. ಅತಿಕ್ರಮಿಸಲು ಯೋಗ್ಯವಾದ. 2. ಅತಿಕ್ರಮಿಸಲು ಶಕ್ಯವಾದ. 3. ಅತಿಕ್ರಮಿಸಲ್ಪಡುವ. 4. ದಾಟಲು ಯೋಗ್ಯವಾದ. 5. ದಾಟಲು ಶಕ್ಯವಾದ. 6. ದಾಟಲ್ಪಡುವ. उद्+लघि (गतौ) अर्हादौ "अनीयर्" (३-१-९६)।

**उल्लङ्घयत्** ಉಲ್ಲಂಘಯತ್ (वि०) 1. ಅತಿಕ್ರಮಿಸುತ್ತಿರುವ, ಮೀರುತ್ತಿರುವ. उद्+लघि (गतौ)+णिच् "शतृ" (३-२-१२४)। "उल्लङ्घयन् मम समुज्ज्वलतः प्रतापं कोपस्य नन्दकुलकाननधूमकेतोः" मुद्रा० १-१०। 2. ಮೇಲಕ್ಕೆ ಹಾರುತ್ತಿರುವ, ಮೇಲಕ್ಕೆ ನೆಗೆಯುತ್ತಿರುವ. 3. ದಾಟುತ್ತಿರುವ. 4. ಅತಿಕ್ರಮಿಸುವಂತೆ ಮಾಡುತ್ತಿರುವ. 5. ಮೇಲಕ್ಕೆ ಹಾರಿಸುತ್ತಿರುವ. 6. ದಾಟಿಸುತ್ತಿರುವ.

**उल्लङ्घित** ಉಲ್ಲಂಘಿತ (वि०) 1. ಅತಿಕ್ರಮಿಸಲ್ಪಟ್ಟ, ಮೀರಲ್ಪಟ್ಟ. उद्+लघि (गतौ) "क्तः" (३-२-१०२)। "अम्भोभिरुल्लङ्घिततुङ्गरोधसः प्रतीपनाम्नीः कुरुते स्म निम्नगाः" माघ० १२-५७। 2. ಹಾರಲ್ಪಟ್ಟ, ನೆಗೆಯಲ್ಪಟ್ಟ. 3. ದಾಟಲ್ಪಟ್ಟ.

**उल्लङ्घितव्य** ಉಲ್ಲಂಘಿತವ್ಯ (वि०) "उल्लङ्घनीय" ಪದದ ಅರ್ಥ. उद्+लघि (गतौ) "तव्यः" (३-१-९६)।

**उल्लङ्घितशासन** ಉಲ್ಲಂಘಿತಶಾಸನ (वि०) ಆಜ್ಞೆಯನ್ನು ಮೀರಿದ, ಅಪ್ಪಣೆಯನ್ನು ಮುರಿದ. उल्लङ्घितं शासनं येन।

**उल्लल** ಉಲ್ಲಲ (वि०) 1. ಚಲಿಸುವ, ಹೊರಟಿರುವ, ಚಲನೆಯುಳ್ಳ. 2. ಮೇಲಕ್ಕೆ ಹಾರಾಡುತ್ತಿರುವ, ನೆಗೆಯುತ್ತಿರುವ. उद् + लल (विलासे) "अच्" (३-१-१३४)। "शतृ" (३-२-१२४)। **-ललत्** -ಲಲತ್. "निर्धूतवीतमपि बालकमुल्ललन्तं यन्ता क्रमेण परिसान्त्वनतर्जनाभिः" माघ० ५-४७। स्त्रियां "ङीप्" (४-१-६)। **-ललन्ती** -ಲಲಂತೀ.

**उल्ललित** ಉಲ್ಲಲಿತ (वि०) 1. ಹೊರಟಿರುವ, ಚಲಿಸುವ. उद्+लल (विलासे) कर्त० "क्तः" (३-४-७२)। 2. ಅಲುಗಾಡುವ. (न०) 3. ಅಲುಗಾಡುವಿಕೆ, ತೂಗಾಡುವಿಕೆ. उद्+लल भावे "क्तः" (३-३-११४)।

**उल्लसत्** ಉಲ್ಲಸತ್ (वि०) 1. ಸಂತೋಷಪಡುತ್ತಿರುವ, ಹರ್ಷಿಸುತ್ತಿರುವ. उद्+लस (श्लेषणक्रीडनयोः) "शतृ" (३-२-१२४)। "ईषद्वक्रितकन्धरः सपुलकः प्रेमोल्लसन्मानसाम्" अमरु० १९। 2. ಸ್ಪಷ್ಟವಾಗಿ ತೋರುತ್ತಿರುವ, ಮೇಲಕ್ಕೆ ಹೊರಟುಬರುತ್ತಿರುವ. "शेषेण तेजस इवोल्लसता रराज" माघ० ५-५५। 3. ಪ್ರಕಾಶಿಸುತ್ತಿರುವ, ಹೊಳೆಯುತ್ತಿರುವ. "प्रोल्लसत्कुण्डलप्रोतपद्मरागदलत्विषा" माघ० २-१९। 4. ಪ್ರತಿಫಲಿಸುತ್ತಿರುವ. स्त्रियां "ङीप्" (४-१-६)। **-लसन्ती** -ಲಸಂತೀ. "निनाय तेषां द्रुतमुल्लसन्ती विनिद्रतां लोचनपङ्कजानि" किरा० १६-३३। "प्रणयिनि विदधाने योपितामुल्लसन्त्यः" माघ० ११-५४।

**उल्लसन** ಉಲ್ಲಸನ (न०) 1. ಉಲ್ಲಾಸ, ಹರ್ಷ. उद्+लस (श्लेषणक्रीडनयोः) "ल्युट्" (३-३-११५)। 2. ರೋಮಾಂಚ, ಮೈಮುಳ್ಳೇಳುವುದು, ನಿಲುಗೂದಲು.

**उल्लसमान** ಉಲ್ಲಸಮಾನ (वि०) ಹೊಳೆಯುತ್ತಿರುವ, ಪ್ರಕಾಶಿಸುತ್ತಿರುವ. उद् + लस (श्लेषणक्रीडनयोः) "शानच्" (३-२-१२४)। "रुचमुल्लसमानवैनतेयद्युतिभिन्नाः फणभारिणो मणीनाम्" माघ० २०-५६।

**उल्लसयत्** ಉಲ್ಲಸಯತ್ (वि०) 1. ಸಂತೋಷಗೊಳಿಸುತ್ತಿರುವ, ಹರ್ಷಗೊಳಿಸುತ್ತಿರುವ. 2. ಕಾಂತಿಗೊಳಿಸುತ್ತಿರುವ, ಪ್ರಕಾಶಗೊಳಿಸುತ್ತಿರುವ, ಸ್ಪಷ್ಟವಾಗಿ ತೋರ್ಪಡಿಸುತ್ತಿರುವ. उद्+लस (श्लेषणादौ) + णिच् "शतृ" (३-२-१२४)। 3. ಚಲಿಸುವಂತೆ ಮಾಡುತ್ತಿರುವ, ಅಲುಗಾಡಿಸುತ್ತಿರುವ. स्त्रियां "ङीप्" (४-१-६)। **-लसयन्ती**-ಲಸಯಂತೀ. "जिह्वाशतान्युल्लसयन्त्यजस्रं लसत्तडिल्लोलविषानलानि" किरा० १६-३७।

**उल्लसित** ಉಲ್ಲಸಿತ (वि०) 1. ಸಂತೋಷಗೊಂಡ, ಹರ್ಷಹೊಂದಿದ. उद्+लस (श्लेषणक्रीडनयोः) "क्तः" (३-४-७२)। 2. ಹೊಳೆಯುವ, ಪ್ರಕಾಶಮಾನವಾದ. "याच्यमानमुखमुल्लसितश्रि" नैष० ५-९३। 3. ಹೊರಕ್ಕೆ ಹೊರಟಿರುವ, ಸ್ಪಷ್ಟವಾಗಿ ತೋರುವ. "नासाविरोकपवनोल्लसितं तनीयः" माघ० ५-५४।

**उल्लाघ** ಉಲ್ಲಾಘ (वि०) 1. ರೋಗದಿಂದ ಬಿಡಲ್ಪಟ್ಟವನು, ರೋಗ ವಾಸಿಯಾದವನು. उल्लाघते स्म—उद्+लाघृ (सामर्थ्ये) "क्तः" (८-२-५५)। निपा०। "उल्लाघो निर्गतो गदात्" अम०। 2. ನಿಪುಣ, ಬುದ್ಧಿವಂತ. 3. ಸಂತೋಷಗೊಂಡವನು. 4. ಶುಚಿಯಾದ, ಶುದ್ಧವಾದ. "उल्लाघो निपुणे हृष्टे शुचिनीरोगयोस्त्रिषु" हेम०।

**उल्लाघयत्** ಉಲ್ಲಾಘಯತ್ (वि०) 1. ವ್ಯಾಧಿಯಿಂದ ಬಿಡಿಸುವವನು, ರೋಗ ವಾಸಿಮಾಡುವವನು. उद्+लाघृ (सामर्थ्ये) + णिच् "शतृ" (३-२-१२४)। 2. ಸಂತೋಷಪಡಿಸುವವನು. 3. ನಿರ್ಮಲವಾಗಿ ಮಾಡುವವನು, ಶುದ್ಧಿಮಾಡುವವನು.

**उल्लाघित** ಉಲ್ಲಾಘಿತ (वि०) ವ್ಯಾಧಿಯಿಂದ ಬಿಡಿಸಲ್ಪಟ್ಟ, ರೋಗವಾಸಿಮಾಡಲ್ಪಟ್ಟ. उद्+लाघृ (सामर्थ्ये)

+ णिच् कर्मं० "क्तः" (३-२-१०२)। "सतां पतिः सत्त्वसमृद्धिरोगात् उल्लाधितामातनुतेव पृथ्वीम्" याद० २३-५१।

**उल्लाप ಉಲ್ಲಾಪ** (पुं०) 1. ಮಾತು. उद् + लप (व्यक्तायां वाचि) "घञ्" (३-३-१८)। "श्रुता मया आनन्दनिष्यन्दिन आर्यपुत्रस्योल्लापाः" उ० रा० ३। 2. ದೂಷಣೆ, ನಿಂದೆಯ ಮಾತು. "खलोल्लापाः सोढाः कथमपि तदाराधनपरैर्निगृह्यान्तर्बाष्पं हसितमपि शून्येन मनसा" भर्तृ० ३-४। 3. ವ್ಯಾಧಿ, ಭಯ ಮತ್ತು ದುಃಖದಿಂದ ಆಡುವ ಮಾತು. 4. ಸೂಚನೆ, ಸಲಹೆ. 5. ಉಚ್ಚಸ್ವರದಿಂದ ಕೂಗಿ ಕರೆಯುವುದು.

**उल्लापिन् ಉಲ್ಲಾಪಿನ್** (वि०) 1. ಸೂಚನೆ ಕೊಡುವ, ಸಲಹೆ ಕೊಡುವ. उद्+लप (व्यक्तायां वाचि) "णिनिः" (३-१-१३४)। 2. ಗಟ್ಟಿಯಾಗಿ ಕೂಗಿ ಕರೆಯುವ. स्त्रियां "ङीप्" (४-१-५)। –लापिनी –ಲಾಪಿನೀ. "मा मा मानद माति मामलमिति क्षामाक्षरोल्लापिनी" अमरु० ४०।

**उल्लाप्य ಉಲ್ಲಾಪ್ಯ** (न०) ದೃಶ್ಯಕಾವ್ಯದ ಹದಿನೆಂಟು ವಿಧ ಉಪರೂಪಕಗಳಲ್ಲೊಂದು ವಿಧ. ಉಲ್ಲಾಪ್ಯವು ಉದಾತ್ತನಾಯಕ, ದಿವ್ಯನಾಯಕನ ಚರಿತ್ರೆ, ಏಕಾಂಕ, ಹಾಸ್ಯ, ಶೃಂಗಾರ ಮತ್ತು ಕರುಣರಸಗಳು, ಅನೇಕ ಯುದ್ಧಸನ್ನಿವೇಶಗಳು, ನಾಲ್ಕು ಮಂದಿ ನಾಯಿಕೆಯರು ಇವುಗಳಿಂದ ಅಲಂಕೃತವಾಗಿರಬೇಕು. सा० द० ६-२८२-८३।

**उल्लास ಉಲ್ಲಾಸ** (पुं०) 1. ಸಂತೋಷ, ಹರ್ಷ. उद्+लस (श्लेषणक्रीडनयोः) "घञ्" (३-३-१८)। "उल्लासहेतुरभवद्यदुवीरभास्वान् वैमानिकप्रणयिनीवदनाम्बुजानाम्" याद० १६-१४७। "उल्लासः फुल्लपङ्केरुहपटलपतन्मत्तपुष्पन्धयानाम्"। 2. ಗ್ರಂಥದ ಒಂದು ಭಾಗ, ಅಧ್ಯಾಯ, ಪರಿಚ್ಛೇದ. 3. ಅರ್ಥಾಲಂಕಾರದ ಒಂದು ಭೇದ. ಒಂದು ವಸ್ತುವಿನ ಗುಣ ಅಥವಾ ದೋಷವರ್ಣನೆಯಿಂದ ಮತ್ತೊಂದರ ಗುಣ ಅಥವಾ ದೋಷವು ವರ್ಣಿತವಾದಲ್ಲಿ ಉಲ್ಲಾಸಾಲಂಕಾರವು. ಇದು (1) ಒಬ್ಬನ ಗುಣವರ್ಣನೆಯಿಂದ ಮತ್ತೊಬ್ಬನ ಗುಣೋತ್ಪತ್ತಿವರ್ಣನೆ. (2) ಒಬ್ಬನ ದೋಷವರ್ಣನೆಯಿಂದ ಮತ್ತೊಬ್ಬನ ದೋಷವರ್ಣನೆ. (3) ಒಬ್ಬನ ಗುಣವರ್ಣನೆಯಿಂದ ಮತ್ತೊಬ್ಬನ ದೋಷವರ್ಣನೆ. (4) ಒಬ್ಬನ ದೋಷವರ್ಣನೆಯಿಂದ ಮತ್ತೊಬ್ಬನ ಗುಣವರ್ಣನೆ ಈ ರೀತಿ ನಾಲ್ಕು ವಿಧ. ಕ್ರಮವಾಗಿ ಉದಾ: (1) ಗುಣದಿಂದ ಗುಣವರ್ಣನೆ. "अपि मां पावयेत्साध्वी स्नात्वेतीच्छति जाह्नवी"। (2) ದೋಷದಿಂದ ದೋಷವರ್ಣನೆ. "काठिन्यं कुचयोः सृष्ठं वाञ्छन्त्यः पादपद्मयोः। निन्दन्ति विश्वधातारं तद्वाटीष्वरियोषितः। (3) ಗುಣದಿಂದ ದೋಷವರ್ಣನೆ. "तदभाग्यं धनस्यैव यन्नाश्रयति सज्जनम्" (4) ದೋಷದಿಂದ ಗುಣವರ್ಣನೆ. "लाभोऽयमेव भूपाल सेवकानां न चेद्वधः" चन्द्रा०। 4. ಪ್ರಾರಂಭ, ಉಪಕ್ರಮ. 5. ಪ್ರಕಾಶ, ಪ್ರಭೆ, ಕಾಂತಿ, ಬೆಳಕು.

**उल्लासन ಉಲ್ಲಾಸನ** (न०) 1. ಹರ್ಷಗೊಳಿಸುವಿಕೆ, ಸಂತೋಷಪಡಿಸುವಿಕೆ. उद्+लस (श्लेषणक्रीडनयोः) + णिच् "ल्युट्" (३-३-११५)। 2. ಪ್ರಕಾಶಗೊಳಿಸುವಿಕೆ, ಕಾಂತಿಯುಂಟುಮಾಡುವಿಕೆ.

**उल्लासित ಉಲ್ಲಾಸಿತ** (वि०) 1. ಹರ್ಷಗೊಳಿಸಲ್ಪಟ್ಟ, ಸಂತೋಷಗೊಳಿಸಲ್ಪಟ್ಟ. 2. ಪ್ರಕಾಶಗೊಳಿಸಲ್ಪಟ್ಟ, ಸ್ಪಷ್ಟವಾಗಿ ತೋರ್ಪಡಿಸಲ್ಪಟ್ಟ. उद्+लस (श्लेषणक्रीडनयोः) + णिच् "क्तः" (३-२-१०२)।

**उल्लासिन् ಉಲ್ಲಾಸಿನ್** (वि०) 1. ಹರ್ಷದಿಂದ ಕೂಡಿದ. 2. ಪ್ರಕಾಶಯುಕ್ತವಾದ. उल्लासोऽस्यास्ति "इनिः" (५-२-११५)। 3. ಆಹ್ಲಾದಗೊಳಿಸುವ, ಸಂತೋಷವುಂಟುಮಾಡುವ. उद्+लस "णिनिः" (३-१-१३४)। स्त्रियां "ङीप्" (४-१-५)। –लासिनी –ಲಾಸಿನೀ.

**उल्लिखित ಉಲ್ಲಿಖಿತ** (वि०) 1. ಉಜ್ಜಲ್ಪಟ್ಟ, ತಿಕ್ಕಲ್ಪಟ್ಟ. 2. ಸಾಣೆಹಿಡಿಯಲ್ಪಟ್ಟ. उद्+लिख (अक्षरविन्यासे) "क्तः" (३-२-१०२)। "चिन्ताजागरणप्रतान्तनयनस्तेजोगुणादात्मनः संस्कारोल्लिखितो महामणिरिव क्षीणोऽपि नालक्ष्यते" शाकु० ६-६। 3. ಕೆತ್ತಲ್ಪಟ್ಟ, ಚಿತ್ರ ಕೊರೆಯಲ್ಪಟ್ಟ. 4. ಮೇಲೆ ಬರೆಯಲ್ಪಟ್ಟ. उद् ऊर्ध्वं लिखितम्। 5. ಚಿತ್ರ ಬರೆಯಲ್ಪಟ್ಟ. "आरोप्य चक्रभ्रममुष्णतेजास्त्वष्ट्रेव यत्नोल्लिखितो विभाति" रघु० ६-३२। 6. ಸೂಚಿಸಲ್ಪಟ್ಟ, ಪ್ರಸ್ತಾಪಿಸಲ್ಪಟ್ಟ. 7. ಊಹಿಸಿ ತಿಳಿಯಲ್ಪಟ್ಟ. 8. ಗೆರೆ ಎಳೆಯಲ್ಪಟ್ಟ.

**उल्लिखत् ಉಲ್ಲಿಖತ್** (वि०) 1. ಉಜ್ಜುತ್ತಿರುವ, ತಿಕ್ಕುತ್ತಿರುವ. 2. ಸಾಣೆಹಿಡಿಯುತ್ತಿರುವ. 3. ಚಿತ್ರ ಕೊರೆಯುತ್ತಿರುವ. उद् + लिख (अक्षरविन्यासे) "शतृ" (३-२-१२४)। 4. ಚಿತ್ರ ಬರೆಯುತ್ತಿರುವ. 5. ಕೊರೆಯುತ್ತಿರುವ, ಗೀರುತ್ತಿರುವ, ಗಾಯಮಾಡುತ್ತಿರುವ. "रोचिष्णुकाञ्चनचयांशुपिशंगिताशा वंशध्वजै-

जलदसंहतिमुल्लिखन्त्यः" माघ० ५-२०। 6. ಊಹಿಸುತ್ತಿರುವ, ತರ್ಕಿಸುತ್ತಿರುವ. 7. ಮೇಲೆ ಬರೆಯುತ್ತಿರುವ. 8. ಸೂಚಿಸುತ್ತಿರುವ, ಪ್ರಸ್ತಾಪಿಸುತ್ತಿರುವ.

**उल्लिख्यमान ಉಲ್ಲಿಖ್ಯಮಾನ** (वि०) 1. ಉಜ್ಜಲ್ಪಡುತ್ತಿರುವ, ತಿಕ್ಕಲ್ಪಡುತ್ತಿರುವ. उद् + लिख (अक्षरविन्यासे) कर्म० "शानच्" (३-२-१२४)। 2. ಸಾಣೆ ಕೊಡಲ್ಪಡುತ್ತಿರುವ. 3. ಚಿತ್ರ(ದಲ್ಲಿ) ಬರೆಯಲ್ಪಡುತ್ತಿರುವ. 4. ಕೆತ್ತಲ್ಪಡುತ್ತಿರುವ, ಚಿತ್ರ ಕೊರೆಯಲ್ಪಡುತ್ತಿರುವ. 5. ಊಹಿಸಿ ತಿಳಿಯಲ್ಪಡುತ್ತಿರುವ, ತರ್ಕಿಸಲ್ಪಡುತ್ತಿರುವ. 6. ಗೆರೆ ಎಳೆಯಲ್ಪಡುತ್ತಿರುವ. 7. ಸೂಚಿಸಲ್ಪಡುತ್ತಿರುವ, ಪ್ರಸ್ತಾಪಿಸಲ್ಪಡುತ್ತಿರುವ.

**उल्लिलङ्घिषा ಉಲ್ಲಿಲಂಘಿಷಾ** (स्त्री०) 1. ಅತಿಕ್ರಮಿಸಲು ಅಪೇಕ್ಷೆ, ಮೀರಲು ಆಸೆ. उल्लङ्घितुमिच्छा— उद् + लघि (गतौ) + सन् "अ:" (३-३-१०२)। 2. ದಾಟಲು ಅಪೇಕ್ಷೆ. 3. ಹಾರಲು ಅಪೇಕ್ಷೆ.

**उल्लिलङ्घिषु ಉಲ್ಲಿಲಂಘಿಷು** (वि०) 1. ಅತಿಕ್ರಮಿಸಲು ಅಪೇಕ್ಷಿಸುವ, ಮೀರಲು ಆಸೆಪಡುವ. 2. ದಾಟಲು ಅಪೇಕ್ಷೆಪಡುವ. 3. ಮೇಲಕ್ಕೆ ಹಾರಲು ಆಸೆಪಡುವ. उल्लङ्घितुमिच्छुः — उद्+लघि (गतौ) + सन् "उ:" (३-२-१६८)।

**उल्लीढ ಉಲ್ಲೀಢ** (वि०) ಸಾಣೆಹಿಡಿಯಲ್ಪಟ್ಟ, ಹರಿತ ಮಾಡಲ್ಪಟ್ಟ, ಹೊಳಪುಕೊಡಲ್ಪಟ್ಟ. उद् + लिह (आस्वादने) "क्तः" (३-२-१०२)। "मणिः शाणोल्लीढः समरविजयी हेतिदलितः मदक्षीणो नागः शरदि सरितः श्यानपुलिनाः" कुव०।

**उल्लु ಉಲ್ಲು** (पु०) ಸೂರಣಗೆಡ್ಡೆ. उद्+लूञ् (छेदने) "डुः" (वा० ३-२-१८०)। "कन्दं त्वस्त्री चित्रदण्ड उल्लुः कण्डूरसूरणौ" वैजं०।

**उल्लू ಉಲ್ಲೂ** (वि०) ಕತ್ತರಿಸುವ. उद्+लूञ् (छेदने) "क्विप्" (३-२-७६)।

**उल्लुञ्चन ಉಲ್ಲುಂಚನ** (नं०) 1. ಕೂದಲನ್ನು ಎಳೆದು (ಬುಡಸಹಿತ) ಕೀಳುವುದು. उद् + लुञ्च (अपनयने) भावे "ल्युट्" (३-३-११५)। 2. ಎಳೆಯುವುದು. "पादकेशांशुककरोल्लुञ्चनेषु पणान् दश" याज्ञ० २-२१७।

**उल्लुञ्चित ಉಲ್ಲುಂಚಿತ** (वि०) 1. ಕೀಳಲ್ಪಟ್ಟ, ಬುಡಸಹಿತ ಕಿತ್ತುಹಾಕಲ್ಪಟ್ಟ, ಕಿತ್ತೊಗೆಯಲ್ಪಟ್ಟ. उद्+ लुञ्च (अपनयने) "क्तः" (३-२-१०२)। "उल्लुञ्चितचिकुरमुक्तवसनदुर्दर्शनः" प्रबोध० ३। 2. ಎಳೆಯಲ್ಪಟ್ಟ.

**उल्लुण्ठन ಉಲ್ಲುಂಠನ** (नं०) ವಕ್ರೋಕ್ತಿ, ಮನನೋಯಿಸುವ ಮಾತು, ಪ್ರಿಯವಾಗಿ ತೋರುವ ಅಪ್ರಿಯ ವಚನ. उद्+लुठि (स्तेये) "ल्युट्" (३-३-११५)। भावे "अ:" (३-३-१०३)। (स्त्री०) उल्लुण्ठा ಉಲ್ಲುಂಠಾ. "धीराधीरा तु सोल्लुण्ठभाषितैः खेदयत्यमुम्" सा० द० ३-६३।

**उल्लूक ಉಲ್ಲೂಕ** (पु०) ದರ್ಭೆಹುಲ್ಲು. "उल्लूकस्तूलपो दर्भः ऊर्ध्वमूलः खरच्छदः" वैजं०।

**उल्लेख ಉಲ್ಲೇಖ** (पु०) 1. ಸೂಚನೆ, ಪ್ರಸ್ತಾವ. उद् + लिख (अक्षरविन्यासे) "घञ्" (३-३-१८)। 2. ವರ್ಣನೆ, ಊಹಿಸಿ ವರ್ಣಿಸುವಿಕೆ, ಅರ್ಥಾಲಂಕಾರದ ಒಂದು ಭೇದ; "बहुभिर्बहुधोल्लेखादेकस्योल्लेख इष्यते" चन्द्रा०। ಇದು ಎರಡು ವಿಧ: (1) ಒಂದು ವಸ್ತುವು ಅನೇಕರಿಂದ ಅನೇಕ ವಿಧವಾಗಿ ಊಹಿಸಿ ವರ್ಣಿಸಲ್ಪಡುವುದು (ತಿಳಿಯಲ್ಪಡುವುದು) ಒಂದು ವಿಧ ಉಲ್ಲೇಖಾಲಂಕಾರ. ಉದಾ: "स्त्रीभिः कामोऽर्थिभिः स्वर्द्रुः कालः शत्रुभिरैक्षि सः" चन्द्रा०। (2) ಒಂದು ವಸ್ತುವು ಒಬ್ಬನಿಂದ ಅನೇಕ ವಿಧವಾಗಿ (ತಿಳಿದು) ವರ್ಣಿಸಲ್ಪಡುವುದು ಮತ್ತೊಂದು ವಿಧ. ಉದಾ: "गुरुर्वचस्यर्जुनोऽयं कीर्तौ भीष्मः शरासने" चन्द्रा०। 3. ಉಜ್ಜುವಿಕೆ, ತಿಕ್ಕುವಿಕೆ. "असकृन्निशितशस्त्रोल्लेखविषमितशिखरेण" काद०। 4. ಅಗೆಯುವುದು, ತೋಡುವುದು. 5. ಚಿತ್ರಬರೆಯುವುದು.

**उल्लेखक ಉಲ್ಲೇಖಕ** (वि०) 1. ಉಜ್ಜುವ, ತಿಕ್ಕುವ. 2. ಸೂಚಿಸುವ, ಪ್ರಸ್ತಾಪಿಸುವ. 3. ಸಾಣೆಹಿಡಿಯುವ. 4. ವರ್ಣಿಸುವ. 5. ಚಿತ್ರ ಬರೆಯುವ. 6. ಅಗೆಯುವ, ತೋಡುವ. उद् + लिख (अक्षरविन्यासे) "ण्वुल्" (३-१-१३३)।

**उल्लेखन ಉಲ್ಲೇಖನ** (नं०) 1. ಉಜ್ಜುವಿಕೆ, ತಿಕ್ಕುವಿಕೆ. उद् + लिख (अक्षरविन्यासे)। 2. ಅಗೆಯುವುದು, ತೋಡುವುದು. "संमार्जनोपाञ्जनेन सेकेनोल्लेखनेन च" मनु० ५-१२४। 3. ಸೂಚನೆ, ಪ್ರಸ್ತಾವ. 4. ವಾಂತಿ ಮಾಡುವುದು. 5. ವರ್ಣನೆ. 6. ಚಿತ್ರ ಬರೆಯುವುದು. 7. ಗುರುತುಮಾಡುವುದು, ಗೆರೆ ಹಾಕುವುದು.

**उल्लेखिन् ಉಲ್ಲೇಖಿನ್** (वि०) "उल्लेखक" ಪದದ ಅರ್ಥ. उद् + लिख (अक्षरविन्यासे) "णिनिः" (३-१-१३४)।

**उल्लेखनीय ಉಲ್ಲೇಖನೀಯ** (वि०) 1. ವರ್ಣಿಸಲು ಅರ್ಹವಾದ, —ಯೋಗ್ಯವಾದ. 2. ವರ್ಣಿಸಲು

ಶಕ್ಯವಾದ. 3. ವರ್ಣಿಸಲ್ಪಡುವ. उद्+लिख (अक्षरविन्यासे) अर्हार्दो "अनीयर्" (३-१-९६)। 4. ಅಗೆಯಲ್ಪಡುವ. 5. ಅಗೆಯಲು ಶಕ್ಯವಾದ. 6. ಅಗೆಯಲು ಯೋಗ್ಯವಾದ. 7. ಗುರುತುಮಾಡಲ್ಪಡುವ. 8. ಗುರುತುಮಾಡಲು ಶಕ್ಯವಾದ. 9. ಗುರುತು ಮಾಡಲು ಯೋಗ್ಯವಾದ. 10. ಚಿತ್ರ ಕೊರೆಯಲ್ಪಡುವ. 11. ಚಿತ್ರ ಕೊರೆಯಲು ಶಕ್ಯವಾದ. 12. ಚಿತ್ರ ಕೆತ್ತಲು ಯೋಗ್ಯವಾದ.

**उल्लोच ಉಲ್ಲೋಚ** (ಪುಂ) ವಿತಾನ, ಗವಸಣಿಗೆ, ಬಟ್ಟೆಯ ಚಪ್ಪರ. उपरि लोच्यते – लोचृ (दर्शने) "घञ्" (३-३-१९)। "अस्त्री वितानमुल्लोचः" अम०।

**उल्लोल ಉಲ್ಲೋಲ** (ಪುಂ) 1. ದೊಡ್ಡ ಅಲೆ. उल्लोडयति – उद्+लोडृ (उन्मादे) "अच्" (३-१-१३४)। लडयोरभेदः। (ವಿಂ) 2. ಬಹಳ ಚಂಚಲವಾದ, ಅತಿಯಾಗಿ ಅಲುಗಾಡುವ. "दूरोद्वेलितबाडवस्य जलधेरुल्लोलभिन्नाम्भसो रन्ध्रैरापतितेन वेगमरुता पातालमाध्मायते" म० वी० ५-२।

**उशनस् ಉಶನಸ್** (ಪುಂ) 1. ಶುಕ್ರಾಚಾರ್ಯರು, ಅಸುರರ ಗುರು. वश (कान्तौ) "कनसिः" (उ० ४-२३८)। संप्र०। [ಭೃಗುಮಹರ್ಷಿಯು ಶುಕ್ರಾಚಾರ್ಯರ ತಂದೆ. ಪುಲೋಮೆಯು ತಾಯಿ. ಊರ್ಜಸ್ವತಿಯೆಂಬುವಳು ಪತ್ನಿ. ದೇವಯಾನಿಯು ಮಗಳು. ಜಗತ್ತಿನ ಸಂಪತ್ತಿಗಾಗಿ ದೇವಾಸುರರಲ್ಲಿ ಪರಸ್ಪರ ಕಾದಾಟ ಪ್ರಾಪ್ತವಾಗಲಾಗಿ ದೇವತೆಗಳು ಅಸುರರನ್ನು ಜಯಿಸಲು ಬೃಹಸ್ಪತ್ಯಾಚಾರ್ಯರನ್ನೂ, ಅಸುರರು ಶುಕ್ರಾಚಾರ್ಯರನ್ನೂ ತಮ್ಮ ತಮ್ಮ ಆಚಾರ್ಯರನ್ನಾಗಿ ಮಾಡಿಕೊಂಡರು. ವಿವರಕ್ಕೆ "शुक्र" ಪದದಲ್ಲಿ ನೋಡಿ.] "सुराणामसुराणां च समजायत वै मिथः। ऐश्वर्यं प्रति संघर्षस्त्रैलोक्ये सचराचरे। जिगीषया ततो देवा: वव्रिरेऽङ्गिरसं मुनिम्। पौरोहित्येन याज्यत्वे काव्यं तूशनसं परे। ब्राह्मणौ तावुभौ नित्यमन्योन्यस्पर्धिनौ नृप" भा० आदि० ७०। 2. ಒಬ್ಬ ಸ್ಮೃತಿಕಾರರು.

**उशिज् ಉಶಿಜ್** (ಪುಂ) 1. ಅಗ್ನಿ, ಬೆಂಕಿ. 2. ಘೃತ, ತುಪ್ಪ. वष्टि उश्यते वा – वश (कान्तौ) "इजिः" संप्र० (उ० २-७१)। "उशिगग्नौ घृतेऽपि च" सि० कौ०।

**उशीनर ಉಶೀನರ** (ಪುಂ) 1. ಯಾದವವಂಶದ ಒಬ್ಬ ದೊರೆ. "उशीनरश्च विक्रान्तो वृष्णयस्ते प्रकीर्तिताः" भा०। 2. ಚಂದ್ರವಂಶದ ಒಬ್ಬ ದೊರೆ. [ಈತನು ಭೋಜದೇಶದ ದೊರೆ. ಯಯಾತಿಯ ಮಗಳಾದ ಮಾಧವಿಯು ಈತನ ಪತ್ನಿ. ಶಿಬಿ ಚಕ್ರವರ್ತಿಯು ಈತನ ಮಗ.] भा० वन० १३२। (ಪುಂ ಬಂ ವಂ) 3. ಉಶೀನರವೆಂಬ ಒಂದು ದೇಶ. 4. ಉಶೀನರ ದೇಶವಾಸಿಗಳು.

**उशीर ಉಶೀರ** (ಪುಂನಂ) ಲಾಮಂಚದ ಬೇರು. उश्यते – वश (कान्तौ) "ईरन्" (उ० ४-३१)। "स्तनन्यस्तोशीरं शिथिलितमृणालैकवलयम्" शाकु० ३-६।

**उशीरबीज ಉಶೀರಬೀಜ** (ಪುಂ) ಉತ್ತರದಿಕ್ಕಿನಲ್ಲಿರುವ ಒಂದು ಪರ್ವತ. उशीरस्य वीरणमूलस्य बीजं योनिरत्र। "उशीरबीजं मैनाकं गिरिं श्वेतं च भारत। समतीतोऽसि कौन्तेय नीलशैलं च पार्थिव" भा० वन० १४१-१।

**उष – दाहे** (भ्वा० पर० सक० से०) ओषति। ओषाञ्चकार, –बभूव, –आस। पक्षे उवोष ऊषतुः ऊषुः। ओषिता। ओषतु। औषत्। औषीत्। औषिष्यत्। कर्मणि – उष्यते। ऊषे। उष्यताम्। उष्येत। औषि। औषिष्यत्। ಇತ್ಯಾದಿ.

**उष ಉಷ** (ಪುಂ) 1. ಕಾಮುಕ, ಕಾಮಾತುರ, ಕಾಮಾಸಕ್ತ. उष (दाहे) "कः" (३-१-१३५)। 2. ಗುಗ್ಗುಳ. 3. ರಾತ್ರಿಯ ಶೇಷ, ಉಷಃಕಾಲ, ಬೆಳಗಿನಜಾವ, ಅರುಣೋದಯಕಾಲ. 4. ಪ್ರಾತಃಕಾಲ. 5. ಚೌಳು ಮಣ್ಣು. "उषः कामिनि गुग्गुलौ। रात्रिशेषे उषायां तु केचिदाहुस्तदव्ययम्। उषः क्षारमृत्तिकायां प्रभातेऽपि पुमानयम्" मेदि०। 6. ದಿವಸ, ಹಗಲು. (ವಿಂ) 7. ದಹಿಸುವ, ಸುಡುವ. (स्त्री०) –षा – ಷಾ. 8. ಉಷಾದೇವಿ, ಬಾಣಾಸುರನ ಮಗಳು. [ವಿವರಕ್ಕೆ "उषा" ಪದದಲ್ಲಿ ನೋಡಿ.] 9. ರಾತ್ರಿ. "उषा बाणसुतारात्र्योः" मेदि०।

**उषण ಉಷಣ** (ನಂ) 1. ಮೆಣಸು. 2. ಹಿಪ್ಪಲಿ. उष (दाहे) "क्युन्" (उ० २-७८)। (स्त्री०) –णा – ಣಾ. 3. ಶುಂಠಿ. 4. ಚವ್ಯ. 5. ಹಿಪ್ಪಲಿ.

**उषप ಉಷಪ** (ಪುಂ) 1. ಸೂರ್ಯ. उष (दाहे) "कपन्" (उ० ३-१४२)। 2. ಅಗ್ನಿ, ಬೆಂಕಿ. "उषपो वह्निसूर्ययोः" सि० कौ०। 3. ಚಿತ್ರಮೂಲದ ಗಿಡ.

उषर्बुध ಉಷರ್ಬುಧ (ಪುಂ) 1. ಅಗ್ನಿ, ಬೆಂಕಿ. 2. ಚಿತ್ರ ಮೂಲದ ಗಿಡ. (ವಿಂ) 3. ಉಷಃಕಾಲದಲ್ಲಿ ಎಚ್ಚರಗೊಳ್ಳುವ, ಅಗ್ನಿಹೋತ್ರಸಮಯದಲ್ಲಿ ಎಚ್ಚರಗೊಳ್ಳುವ. उषसि बुध्यते — बुध (अवगमने) "कः" (३-१-१३५)।

उषस् ಉಷಸ್ (ನಂ) 1. ಬೆಳಗಿನಜಾವ, ಅರುಣೋದಯ ಕಾಲ, ರಾತ್ರಿಯ ಶೇಷ, ಉಷಃಕಾಲ. ओषति अन्धकारम् — उष (दाहे) "असिः" (उं ४-२३३)। "इह सनियमयोः सुरापगायामुषसि सयावकसव्यपादरेखा" किरा० ५-४०। (स्त्री०) 2. ಸಂಧ್ಯಾಕಾಲ. उषा उषसौ उषसः। "उषः सन्ध्याप्रभातयोः" हेम०। 3. ಸಂಧ್ಯಾಭಿಮಾನಿ ದೇವತೆ. –ಸೀ –ಸಿ. 4. ಸಾಯಂಕಾಲ, ಹಗಲಿನ ಕೊನೆಯ ಭಾಗ. उषं दिवसं स्यति। "उषः प्रत्युषसि क्लीबं पितृप्रस्वां च योषिति" मेदि०।

उषा ಉಷಾ (स्त्री०) 1. ಉಷಾದೇವಿ, ಬಾಣಾಸುರನ ಮಗಳು, ಅನಿರುದ್ಧನ ಪತ್ನಿ. [ಬಾಣಾಸುರನ ಮಗಳಾದ ಉಷೆಯು ಒಂದು ದಿನ ಸ್ವಪ್ನದಲ್ಲಿ ಅನಿರುದ್ಧನೊಡನೆ ರಮಿಸಿ ನಿದ್ದೆಯಿಂದ ಎಚ್ಚರವಾದಾಗ ಅನಿರುದ್ಧನನ್ನು ಕಾಣದೆ ಅವನನ್ನೇ ಕೂಗುತ್ತ ಸಖಿಯರ ಮಧ್ಯದಲ್ಲಿ ಹಾಸಿಗೆಯಿಂದೆದ್ದು ನಾಚಿಕೆಗೊಂಡಳು. ಬಾಣಾಸುರನ ಮಂತ್ರಿಯಾದ ಕುಂಭಾಂಡನ ಮಗಳಾದ ಚಿತ್ರಲೇಖೆಯು ಸ್ವಪ್ನವೃತ್ತಾಂತವನ್ನು ತಿಳಿದು ಅವಳ ಪತಿಯನ್ನು ಹೇಗಾದರೂಮಾಡಿ ಕರೆತರುವುದಾಗಿ ಆಶ್ವಾಸನೆ ಕೊಟ್ಟು ದೇವಗಂಧರ್ವಾದಿಗಳ ಮತ್ತು ರಾಮಕೃಷ್ಣರಾದಿಯಾಗಿ ಯದುವಂಶದವರ ಒಬ್ಬೊಬ್ಬರ ಚಿತ್ರವನ್ನೂ ಬರೆಯುತ್ತಿರಲು ಅನಿರುದ್ಧನ ಚಿತ್ರವನ್ನು ಕಂಡು ಲಜ್ಜೆಯಿಂದ ತಲೆಬಗ್ಗಿಸುತ್ತಾಳೆ. ಯೋಗಿನಿಯಾದ ಚಿತ್ರಲೇಖೆಯು ತನ್ನ ಯೋಗಮಹಿಮೆಯಿಂದ ದ್ವಾರಕೆಯಲ್ಲಿ ಸುಖವಾಗಿ ಮಲಗಿದ್ದ ಅನಿರುದ್ಧನನ್ನು ಶೋಣಿತಪುರಕ್ಕೆ ಕರೆತಂದು ಉಷೆಗೆ ತೋರಿಸಲು ಅವಳು ಅನಿರುದ್ಧನೊಡನೆ ಬಹುಕಾಲ ಸುಖದಿಂದಿರುತ್ತಾಳೆ. ಇನ್ನೂ ವಿವರಕ್ಕೆ ಭಾಗ० १०-६२, ६३ ನೋಡಿ.] 2. ತ್ರಿಸಂಧ್ಯಾಕಾಲ; ಪ್ರಾತಃಕಾಲ, ಮಧ್ಯಾಹ್ನ ಮತ್ತು ಸಾಯಂಕಾಲಗಳು. 3. ಅರುಣೋದಯ ಕಾಲ, ಬೆಳಕು ಹರಿಯುವ ಕಾಲ, ಐವತ್ತೈದು ಘಳಿಗೆಯ ನಂತರ ಸೂರ್ಯೋದಯದವರೆಗಿನ ಕಾಲ, ಉಷಃಕಾಲ. ಪ್ರಯಾಣಕ್ಕೆ ಲಗ್ನಾದಿಗಳು ಪ್ರಶಸ್ತವಾಗಿ ದೊರಕದಿದ್ದರೂ ಉಷಃಕಾಲವು ಪ್ರಶಸ್ತವು. "प्रत्युष्ट्यतितारका स्फुटतटी प्राची भवेन्निर्मलातीवपद्रक्त-विलोहितान्तशबला देवैः सदा वाञ्छिता। नो वारं न तिथि न योगकरणं लग्नं च नोपेक्षते हत्वा दोष-सहस्रमश्वयमुषा नूनं करोत्युन्नतिम्"। "तिथ्यादिषु निषिद्धेषु चन्द्रताराविलोमतः। उषां गोधूलियोगं वा स्वीकृत्य गमनं चरेत्"। ಅದರೆ "प्राच्यामुषां प्रतीच्यां च गोधूलिं वर्जयेन्नृप। दक्षिणेऽभिजितं चैव-मुत्तरे च निशां तथा" ಎಂದು ಹೇಳಿರುವುದರಿಂದ ಪೂರ್ವ ದಿಕ್ಕಿಗೆ ಉಷಃಕಾಲವನ್ನೂ, ಪಶ್ಚಿಮ ದಿಕ್ಕಿಗೆ ಗೋಧೂಳಿ ಲಗ್ನವನ್ನೂ, ದಕ್ಷಿಣಕ್ಕೆ ಅಭಿಜಿನ್ಮುಹೂರ್ತವನ್ನೂ, ಉತ್ತರ ದಿಕ್ಕಿನ ಪ್ರಯಾಣಕ್ಕೆ ರಾತ್ರಿಯನ್ನೂ ಬಿಡಬೇಕು. 4. ರಾತ್ರಿ. "उषा बाणसुतारात्र्योः" मेदि०। ರಾತ್ರಿ ವಾಚಕವಾದಾಗ ಇದು ಅವ್ಯಯವೆಂದು ಕೆಲವರ ಅಭಿಪ್ರಾಯ. "उषायां तु केचिदाहुस्त-दव्ययम्" मेदि०। 5. ಆಕಳು, ಹಸು. "गौः सौरभेयी माहेयी माहा सुरभिरर्जुनी। उस्राघ्न्या रोहिणी शृङ्गिण्यनड्वाह्यनडुह्युषा" अभि० चि०।

उषाकाल ಉಷಾಕಾಲ (ಪುಂ) ಕುಕ್ಕುಟ, ಕೋಳಿ. उषायां कालो यस्य।

उषापति ಉಷಾಪತಿ (ಪುಂ) 1. ಅನಿರುದ್ಧ, ಉಷಾದೇವಿಯ ಗಂಡ, ಶ್ರೀಕೃಷ್ಣನ ಮೊಮ್ಮಗ. उषायाः पतिः। "अनिरुद्ध उषापतिः" अम०।

उषित ಉಷಿತ (ನಂ) 1. ವಾಸಮಾಡುವುದು, ಇರವು, ಬೀಡು. वस (निवासे) भावे "क्तः" (३-३-११४)। (ವಿಂ) 2. ವಾಸಮಾಡಲ್ಪಟ್ಟ. 3. ಹಳೆಯದಾದ, ಪರ್ಯುಷಿತವಾದ. वस कर्म० "क्तः" (३-२-१०२)। 4. ದಗ್ಧವಾದ, ಸುಡಲ್ಪಟ್ಟ. उष (दाहे) "क्तः" (३-२-१०२)। "उषितं व्युषिते दग्धे" मेदि०।

उष्ट्र ಉಷ್ಟ್ರ (ಪುಂ) 1. ಒಂಟೆ. ओषति—उष (दाहे) "ष्ट्रन्" (उं ४-१६१)। "अन्यः पुनर्मुहुरुदप्लवतास्तभार-मन्योन्यतः पथि बताविभितामिभोष्ट्रौ" माघ० ५-५। स्त्रियां "ङीप्" (४-१-६३)। उष्ट्री ಉಷ್ಟ್ರೀ. 2. ಹೆಣ್ಣು ಒಂಟೆ. 3. ಮಣ್ಣಿನ ಪಾತ್ರೆ. "उष्ट्री मृद्भाण्डे करभस्त्रियाम्" हेम०।

उष्ट्रक्रोशिन् ಉಷ್ಟ್ರಕ್ರೋಶಿನ್ (वि०) ಒಂಟೆಯಂತೆ ಕೂಗಿಕೊಳ್ಳುವ, ಒಂಟೆಯಂತೆ ಶಬ್ದಮಾಡುವ. उष्ट्र इव क्रोशति — क्रुश (आह्वाने रोदने च) "णिनिः" (३-२-७८)। स्त्रियां "ङीप्" (४-१-५)। –क्रोशिनी ಕ್ರೋಶಿನೀ.

**उष्ट्रग्रीवक** ಉಷ್ಟ್ರಗ್ರೀವಕ (पुं०) ಪಿತ್ತವಿಕಾರದಿಂದ ಉಂಟಾದ ನಾಡೀವ್ರಣ, ಭಗಂದರ. उष्ट्रग्रीवा आकारत्वेनास्त्यस्याः "अच्" (५-२-१२७)। स्वार्थे "कन्"। "भगन्दरः। शम्बूकावर्त एष स्यात्त्रिदोषोत्थोऽथ पित्तजः। स्यादुष्ट्रग्रीवकः" वैज०।

**उष्ट्रासिका** ಉಷ್ಟ್ರಾಸಿಕಾ (स्त्री०) ಒಂಟೆಯಂತೆ ಕುಳಿತು ಕೊಳ್ಳುವಿಕೆ. उष्ट्रस्येवासिका आसनम्।

**उष्ट्रिका** ಉಷ್ಟ್ರಿಕಾ (स्त्री०) 1. ಹೆಣ್ಣು ಒಂಟೆ. 2. ಒಂಟೆಯಂತಿರುವ ಒಂದು ಮಣ್ಣಿನ ಹೆಂಡದ ಪಾತ್ರೆ. "उष्ट्रिका मृत्तिका भाण्डभेदे करभयोषिति" विश्व०। "धूभंङ्गसंक्षोभविदारितोष्ट्रिकागलन्मधुप्लावितदूरवर्त्मनि" माघ० १२-२६।

**उष्ण** ಉಷ್ಣ (पुं०) 1. ಗ್ರೀಷ್ಮಋತು, ಬೇಸಿಗೆಯಕಾಲ. ओषति—उष (दाहे) "नक्" (उ० ३-२)। 2. ಅಗ್ನಿ. 3. ಸೂರ್ಯ. "उष्णे वर्षति शीते वा मारुते वाति वा भृशम्" मनु० ११-११३। 4. ಬಿಸಿ, ಕಾವು. "मानिनीजनविलोचनपातानुष्णवाष्पकलुषान् प्रतिगृह्णन्" किरा० ९-२६। 5. ಬಿಸಿಲು. 6. ನುಗ್ಗೆಮರ. "उष्णो मुरङ्गी रक्तेऽस्मिन्" वैज०। (वि०) 7. ಜಾಣ, ಬುದ್ಧಿವಂತ. "उष्णो ग्रीष्मे पुमान् दक्षाशीतयोरन्यलिङ्गकः" मेदि०। "उष्णं दक्षेऽपि नातपे" त्रिकाण्ड०। 8. ಬಿಸಿಯಾದ. "उष्णस्त्वातपोष्मणोः। वह्नौ तु पुंसि चतुरतिग्मयोस्त्वेष वाच्यवत्" नानार्थर०।

**उष्णक** ಉಷ್ಣಕ (पुं०) 1. ಗ್ರೀಷ್ಮಋತು, ಬೇಸಿಗೆಯ ಕಾಲ. 2. ಜ್ವರ. उष्णं कार्यमस्य "कन्" (५-२-८१)। (वि०) 3. ಚುರುಕಾಗಿರುವ, ಚತುರನಾದ, ಸಮರ್ಥನಾದ, ಜಾಣ, ಬುದ್ಧಿವಂತ. उष्णं करोति—उष्ण "कन्" (५-२-७२)। "चतुरः पेशलो दक्षः सूत्थानः पटुरुष्णकः" वैज०। 4. ಜ್ವರಪೀಡಿತನಾದ. "उष्णको घर्म उद्युक्तातुरयोः" हेम०।

**उष्णकर** ಉಷ್ಣಕರ —किरण—ಕಿರಣ, —रश्मि—ರಶ್ಮಿ (पुं०) 1. ಸೂರ್ಯ. उष्णाः कराः किरणाः रश्मयो वाऽस्य। "कुबेरगुप्तां दिशमुष्णरश्मौ गन्तुं प्रवृत्ते समयं विलङ्घ्य" कुमा० ३-२५। (वि०) 2. ಬಿಸಿಯಾದ ಕಿರಣವುಳ್ಳ. 3. ಬಿಸಿಯುಂಟುಮಾಡುವ. उष्णस्य करः—डु कृञ् (करणे) "अच्" (३-१-१३४)।

**उष्णकाल** ಉಷ್ಣಕಾಲ (पुं०) ಗ್ರೀಷ್ಮಋತು, ಬೇಸಿಗೆಯ ಕಾಲ. उष्णश्चासौ कालश्च। "तक्रं नैव क्षते दद्यात् नोष्णकाले न दुर्बले" सुश्रु०।

**उष्णग** ಉಷ್ಣಗ (पुं०) ಗ್ರೀಷ್ಮಋತು, ಬೇಸಿಗೆಯ ಕಾಲ. उष्णं गच्छति—गम्लृ (गतौ) "डः" (वा० ३-२-४८)।

**उष्णगु** ಉಷ್ಣಗು (पुं०) ಸೂರ್ಯ. उष्णाः गावः किरणा अस्य।

**उष्णवारण** ಉಷ್ಣವಾರಣ (नं०) ಕೊಡೆ, ಛತ್ರಿ. उष्णं वारयति—वृञ् (वरणे)+णिच् "ल्युः" (३-१-१३४)। "यदर्थमम्भोजमिवोष्णवारणं कृतं तपःसाधनमेतया वपुः" कुमा० ५-५२।

**उष्णवीर्य** ಉಷ್ಣವೀರ್ಯ (पुं०) 1. ಶಿಶುಮಾರವೆಂಬ ಒಂದು ಜಲಚರಪ್ರಾಣಿ. (वि०) 2. ತೀಕ್ಷ್ಣವಾದ ವೀರ್ಯವುಳ್ಳ. उष्णं वीर्यं यस्य। "शिशुमारस्त्वम्बुकूर्म उष्णवीर्यो महावसः" अभि० चि०।

**उष्णांशु** ಉಷ್ಣಾಂಶು (पुं०) ಸೂರ್ಯ. उष्णाः अंशवोऽस्य। "आनिन्ये मदजनितां श्रियं वधूनामुष्णांशुद्युतिजनितः कपोलरागः" किरा० ७-३।

**उष्णागम** ಉಷ್ಣಾಗಮ (पुं०) ಗ್ರೀಷ್ಮಋತು, ಬೇಸಿಗೆಯ ಕಾಲ. उष्णस्यागमोऽत्र।

**उष्णालु** ಉಷ್ಣಾಲು (वि०) ಉಷ್ಣವನ್ನು ಸಹಿಸದಿರುವ. उष्णं न सहते "आलुः" (वा० ५-२-१२१)। "उष्णालुः शिशिरे निषीदति तरोर्मूलालवाले शिखी" विक्र० २-२२।

**उष्णिका** ಉಷ್ಣಿಕಾ (स्त्री०) ಗಂಜಿ, ಅಂಬಲಿ. अल्पमन्नं यस्यां सा "कन्" (५-२-७१)। अल्पान्नशब्दस्योष्णादेशः निपा०।

**उष्णिह्** ಉಷ್ಣಿಹ್ (स्त्री०) ಏಳು ಅಕ್ಷರಗಳ ಪಾದಗಳುಳ್ಳ ಒಂದು ಛಂದಸ್ಸು. "गायत्र्युष्णिगनुष्टुप्च बृहती पङ्क्तिरेव च" वृ० र०।

**उष्णीगङ्ग** ಉಷ್ಣೀಗಂಗ (नं०) ಭೃಗುತುಂಗ ಪರ್ವತದಲ್ಲಿರುವ ಒಂದು ತೀರ್ಥ. उष्णीभूता गङ्गा नदीभेदो यत्र। "अपां ह्रदं च पुण्याख्यं भृगुतुङ्गं च पर्वतम्। उष्णीगङ्गे च कौन्तेय सामात्यः समुपस्पृश" भा० वन० १३५।

**उष्णीष** ಉಷ್ಣೀಷ (नं०) 1. ರುಮಾಲು. 2. ಕಿರೀಟ. उष्णमीषते हिनस्ति—ईष (गतिहिंसादर्शनेषु) "कः" (३-१-१३५)। शक० पररू०। "त्रासार्ता ऋत्विजोऽधश्चपलगणहृतोष्णीषपट्टाः पतन्ति" रत्ना० १-३। 3. ಒಂದು ವಿಧ ತಲೆಯ ಅಲಂಕಾರ. "उष्णीषं तु शिरोवेष्टे किरीटे लक्षणान्तरे" हेम०। 4. ಶಿರಸ್ಸು, ತಲೆ. "उष्णीषं शीर्षमक्षत्रं पुंसि मूर्धा च मस्तकः" वैज०।

**उष्णीषपट्ट** ಉಷ್ಣೀಷಪಟ್ಟ (पु०) ರುಮಾಲಿನ ಬಟ್ಟೆ, ರುಮಾಲುಸುತ್ತುವ ವಸ್ತ್ರ. उष्णीषार्थं पट्टः। "चपलगणहृतोष्णीषपट्टाः पतन्ति" रत्ना० १-३।

**उष्णीषिन्** ಉಷ್ಣೀಷಿನ್ (पु०) 1. ಈಶ್ವರ, ಮಹಾದೇವ. (वि०) 2. ರುಮಾಲು ಧರಿಸಿರುವ. "उष्णीषमस्यास्ति "इनिः" (५-२-११५)।

**उष्णोदक** ಉಷ್ಣೋದಕ (न०) ಬಿಸಿನೀರು, ಕಾಯಿಸಲ್ಪಟ್ಟ ನೀರು. उष्णमुदकम्। ನೀರು ಎಂಟನೆಯ ಒಂದು ಭಾಗ, ನಾಲ್ಕನೆಯ ಒಂದು ಭಾಗ ಅಥವಾ ಅರ್ಧಭಾಗ ಇಳಿಯುವಂತೆ ಇಂಗಿಸಲ್ಪಟ್ಟರೆ ಅಥವಾ ಕುದಿಯಿಸಲ್ಪಟ್ಟರೆ ಉಷ್ಣೋದಕವೆನಿಸುವುದು. "अष्टमेनांशशोषेण चतुर्थेनार्धकेन वा। अथवा क्वथनेनैव सिद्धमुष्णोदकं वदेत्" भावप्र०। ಉಷ್ಣೋದಕದ ಗುಣಗಳು: "श्लेष्मामवातमेदोघ्नं बस्तिशोधनदीपनम्। कासश्वासज्वरान् हन्ति पीतमुष्णोदकं निशि। क्वाथ्यमानं तु निर्वेगं निष्फेनं निर्मलं तथा। अर्धावशिष्टं यत्तोयं तदुष्णोदकमुच्यते" भावप्र०। "तत्पादहीनं पित्तघ्नमर्धहीनं तु वातनुत्। त्रिपादहीनं श्लेष्मघ्नं संग्राह्याग्निकरं लघु" ಇತ್ಯಾದಿ. ರಾತ್ರಿ ಕುಡಿಯಲ್ಪಟ್ಟ ಉಷ್ಣೋದಕವು ಕಫ, ಆಮ ಮತ್ತು ವಾತಗಳನ್ನು ಹೋಗಲಾಡಿಸುವುದು. ವಸ್ತಿಯನ್ನು ಶುದ್ಧಿಮಾಡಿ ಅಗ್ನಿವೃದ್ಧಿಯನ್ನುಂಟುಮಾಡುವುದು. ಮತ್ತು ಕಾಸ ಶ್ವಾಸ ಮತ್ತು ಜ್ವರವನ್ನು ವಾಸಿಮಾಡುವುದು.

**उष्णोपगम** ಉಷ್ಣೋಪಗಮ (पु०) ಗ್ರೀಷ್ಮಋತು, ಬೇಸಿಗೆಯ ಕಾಲ. उष्णस्य उपगमोऽत्र।

**उष्म** ಉಷ್ಮ (पु०) 1. ಗ್ರೀಷ್ಮಋತು, ಬೇಸಿಗೆಯ ಕಾಲ. उष (दाहे) "मक्" बाहु०। 2. ಕೋಪ, ಸಿಟ್ಟು. 3. ಔತ್ಸುಕ್ಯ, ಕುತೂಹಲ.

**उष्मक** ಉಷ್ಮಕ (पु०) ಗ್ರೀಷ್ಮಋತು, ಬೇಸಿಗೆಯ ಕಾಲ. उष्म स्वार्थे "कन्"।

**उष्मन्** ಉಷ್ಮನ್ (पु०) 1. ಬಿಸಿ, ಶಾಖ. उष (दाहे) "मनिन्" (उ० ४-१४४)। "निवेदितं निश्वसितेन सोष्मणा मनस्तु मे संशयमेव गाहते" कुमा० ५-४६। 2. ಹಬೆ, ಆವಿ. "तपात्यये वारिभिरुक्षिता नवैर्भुवा सहोष्माणममुचदूर्ध्वगम्" कुमा० ५-२३। 3. ಗ್ರೀಷ್ಮಋತು, ಬೇಸಿಗೆಯ ಕಾಲ. "उष्मा पित्तादृते नास्ति ज्वरो नास्त्युष्मणा विना। तस्मात्पित्तविरुद्धानि त्यजेत् पित्ताधिकेऽधिकम्" वाग्भ० चिकित्सा०। 4. श, ष, स, ह ವರ್ಣಗಳು. "शषसहा" ऊष्माणः" सि० कौ०।

**उष्मागम** ಉಷ್ಮಾಗಮ (पु०) ಗ್ರೀಷ್ಮಋತು, ಬೇಸಿಗೆಯ ಕಾಲ. उष्मा आगमोऽत्र।

**उस्र** ಉಸ್ರ (पु०) 1. ರಶ್ಮಿ, ಕಿರಣ. वस (निवासे) "रक्" (उ० २-१३)। "उस्राणां व्यभिचरतीव सप्तसप्तेः पर्यस्यन्निव निचयः सहस्रसंख्याम्" किरा० ५-३४। 2. ಪ್ರವಾಹ, ನೀರು ಹರಿಯುವಿಕೆ. "उस्रः स्रवः प्रस्रवणम्" अभि० चि०। 3. ಎತ್ತು, ವೃಷಭ. (स्त्री०) -स्रा -ಸ್ರಾ. 1. ಆಕಳು, ಹಸು. 2. ಇಲಿಯಾಲದ ಮರ. "उस्रा गव्युपचित्रायामुस्रस्तु किरणे स्मृतः" विश्व०। "उस्रो वृषे च किरणेऽप्युस्रार्जुन्युपचित्रयोः" मेदि०।

**उस्रिक** ಉಸ್ರಿಕ (पु०) 1. ಚಿಕ್ಕ ಎತ್ತು. 2. ಮುದಿ ಎತ್ತು. (स्त्री०) -का -ಕಾ. ಸ್ವಲ್ಪ ಹಾಲುಕೊಡುವ ಆಕಳು.

**उस्रिय** ಉಸ್ರಿಯ (पु०) ಮುದಿ ಎತ್ತು. (स्त्री०) -या -ಯಾ. ಆಕಳು, ಹಸು. "उस्रियाणां क्षीरमुत्सारयन्तीम्"।

**उह** ಉಹ (अव्य०) 1. ಸಂಬೋಧನೆ. 2. ಕರೆ, ಆಹ್ವಾನ. 3. ಅವಧಾರಣೆ, ನಿಶ್ಚಯ.

**उहू** ಉಹೂ (स्त्री०) ಭಯ ಮತ್ತು ದುಃಖಸೂಚಕವಾದ ಒಂದು ಶಬ್ದ. उहिर् (अर्दने) "कूः" बाहु०। "नखानि विधुशङ्कया करतलेन तद्वयावृणोत् ततः किसलयभ्रमात् करमथाक्षिपद्दूरतः। ततो वलयशिञ्जिते भ्रमरगुञ्जिता शङ्कया उहूरिति कुहूरवध्वनिभियाऽपतन्मूर्च्छिता"।

**उह्यमान** ಉಹ್ಯಮಾನ (वि०) ವಹಿಸಲ್ಪಡುವ, ಹೊರಲ್ಪಡುವ. वह (प्रापणे) कर्म० "शानच्" (३-२-१२४)। "यथोह्यमानः खलु भोगभोजिना प्रसह्य वैरोचनिजस्य पत्तनम्" नैष० १-३२।

**उह्र** ಉಹ್ರ (पु०) ವೃಷಭ, ಎತ್ತು. उहिर् (अर्दने) "रक्" बाहु०।

इति "उ" कारादिपदार्थनिरूपणम्

श्रीः

# शब्दार्थकौस्तुभः

(प्रायौगिक संस्कृत—कर्णाटक शब्दकोशः)

# ಸಂಸ್ಕೃತ – ಕನ್ನಡ ಶಬ್ದಕೋಶ

ಸಂಪುಟ ೨

ಪದಗಳು : ऊ - ग्लौ


ಸಾಹಿತ್ಯ ವಿದ್ವಾನ್

ಚಕ್ರವರ್ತಿ ಶ್ರೀನಿವಾಸ ಗೋಪಾಲಾಚಾರ್ಯ



ಬಾಪ್ಕೊ ಪ್ರಕಾಶನ

ಬೆಂಗಳೂರು ಪ್ರೆಸ್, ಬೆಂಗಳೂರು

॥ श्रीः ॥

श्रीमते हयग्रीवाय नमः।

# शब्दार्थकौस्तुभः।

## (संस्कृत-कर्णाटक शब्दकोशः)

## ಸಂಸ್ಕೃತ-ಕನ್ನಡ ಶಬ್ದಕೋಶ

### ದ್ವಿತೀಯ ಭಾಗ

लक्ष्मीं तनोतु व्यवधूय चित्ते वितर्कडोलां विविधार्थराशेः।
लक्ष्मीहयास्यः स्फुरिताक्षमालो लक्ष्मीलसद्वत्सतलः सदा नः॥

नत्वा लक्ष्मीहयग्रीवौ शब्दव्युत्पत्तिसिद्धये।
विलिखामि विशुद्धार्थमिमं शब्दार्थकौस्तुभम्॥

---

# ऊ

**ऊ ಊ** ಇದು ವರ್ಣಮಾಲೆಯಲ್ಲಿ ಓಷ್ಠದಲ್ಲಿ ಹುಟ್ಟುವ ಆರನೆಯ ಸ್ವರವರ್ಣ. ಉದಾತ್ತ, ಅನುದಾತ್ತ ಮತ್ತು ಸ್ವರಿತ ಗಳೆಂಬ ಮೂರು ಭೇದಗಳುಳ್ಳ ಇದು ಪುನಃ ಅನುನಾಸಿಕ ಮತ್ತು ಅನನುನಾಸಿಕಗಳೆಂಬ ಭೇದದಿಂದ ಒಟ್ಟು ಆರು ವಿಧವಾಗುವುದು.

**ऊ ಊ** (पुं०) 1. ಪುರುಷ. 2. ಚಂದ್ರ. 3. ರಾಜಕುಮಾರ. 4. ಕಂಠ, ಕುತ್ತಿಗೆ. 5. ದೇವತೆ. 6. ಅಂಗಳ. 7. ಸಾದೃಶ್ಯ, ಉಪಮಾನ. 8. ಪೂರ್ಣಕುಂಭ. 9. ವರ್ತಕ, ವ್ಯಾಪಾರಿ. 10. ರಕ್ಷಣೆ, ಕಾಪಾಡುವಿಕೆ. अवति — अव (रक्षणे) "क्विप्" (३-२-७६)। "ऊठ्" (६-४-२०)। "ऊकारः पुरुषे चन्द्रे राजपुत्रे गले सुरे। प्राङ्गणोपमयोः पूर्णकुम्भे वणिजि रक्षणे" नानार्थर०। 11. ಲಕ್ಷಣ. 12. ಬ್ರಹ್ಮ. "ऊकारश्चापि लक्षणे। रक्षणे चापि ऊकारः ऊकारो ब्रह्मणि स्मृतः" एका०। 13. ಸೂಜಿ. 14. ಹೊಲಿಗೆ. 15. ದಯೆ, ಕರುಣೆ. 16. ಕರೆ, ಆಹ್ವಾನ. (वि०) 17. ರಕ್ಷಕ, ಕಾಪಾಡುವವನು. (अव्य०) 18. ವಾಕ್ಯಾರಂಭ. "ऊ रक्षणे रक्षके च सूच्यां स्यूतावनव्ययम्" हेम०। "ऊ वाक्यारम्भेऽनुकम्पारक्षाहूतिष्वनव्ययम्" विश्व०।

**ऊक ಊಕ** (पु०) ಪಕ್ಷಿ, ಹಕ್ಕಿ. "ऊकः शकुन्तिः शकुनिः शकुन्तः शकुनः खगः" वैज०।

**ऊख ಊಖ** (पु०) ಪೃಷ್ಠ, ಪಿರ್ರೆ, ಅಂಡು. "ऊखौ पुंसि कटिप्रोथौ पूलकौ च स्फिचौ स्त्रियौ" वैज०।

**ऊढ ಊಢ** (वि०) 1. ಮದುವೆಯಾದವನು, ವಿವಾಹ ಮಾಡಿ ಕೊಂಡವನು. वह (प्रापणे) कर्त० "क्तः" (३-४-७२)। स्त्रियाम् **ऊढा ಊಢಾ.** ಮದುವೆಯಾದ ಹೆಂಗಸು, ಒಬ್ಬ (ಪತಿ) ನಿಂದ ವಹಿಸಲ್ಪಟ್ಟವಳು. कर्म० "क्तः" (३-२-१०२)। "इयं च तेऽन्या पुरतो विडम्बना यदूढया वारणराजिहार्यया" कुमा० ५-७०। "भार्योढं तमवज्ञाय तस्थे सौमित्रयेऽसकौ" भट्टि० ४-१५। 2. ವಹಿಸಲ್ಪಟ್ಟಿರುವ, ಹೊರಲ್ಪಟ್ಟಿರುವ, ಒಯ್ಯಲ್ಪಟ್ಟ.

**ऊढि ಊಢಿ** (स्त्री०) 1. ವಿವಾಹ, ಮದುವೆ. वह (प्रापणे) "क्तिन्" (३-३-९४)। 2. ವಹಿಸುವುದು, ಹೊರುವುದು, ಒಯ್ಯುವುದು.

**ऊत ಊತ** (ನಂ) 1. ಕೊಳಕು ನೀರು, ಸ್ವಚ್ಛವಲ್ಲದ ನೀರು. "काचिमं स्यादतिस्वच्छमूतं कलुषमाविलम्" वैजं। (ವಿಂ) 2. ನೇಯಲ್ಪಟ್ಟ. 3. ಹೊಲಿಯಲ್ಪಟ್ಟ. ऊयी (तन्तुसन्ताने) कर्मं "क्तः" (३-२-१०२)। 4. ರಕ್ಷಿಸಲ್ಪಟ್ಟ, ಕಾಪಾಡಲ್ಪಟ್ಟ. अव (रक्षणे) "क्तः" (३-२-१०२)। ऊठ् (६-४-२०)।

**ऊति ಊತಿ** (स्त्रीं) 1. ರಕ್ಷಣೆ, ಕಾಪಾಡುವಿಕೆ. अव (रक्षणे) "क्तिन्" (३-३-९७)। ऊठ् (६-४-२०)। 2. ನೇಯುವುದು. 3. ಹೊಲಿಯುವುದು. ऊयी (तन्तुसन्ताने) "क्तिन्" (३-३-९७)। "स्यादूतिः स्यूतिरक्षयोः" हेमं।

**ऊधस् ಊಧಸ್** (ನಂ) ಹಸುವಿನ ಕೆಚ್ಚಲು. उन्दी (क्लेदने) "असुन्" (उं ४-१८८)। पृषों। ಬಹುವ್ರೀಹಿ ಸಮಾಸಾಂತ್ಯದಲ್ಲಿ "अनङ्" (५-४-१३)। स्त्रियां "ङीष्" (४-१-२५)। **कुण्डोघ्नी ಕುಂಡೋಧ್ನೀ.** "भुवं कोष्णेन कुण्डोघ्नी मेध्येनावभृथादपि" रघुं १-८४। अस्त्रियां तु "कुण्डोधो धेनुकम्" सिं कौं।

**ऊधस्य ಊಧಸ್ಯ** (ನಂ) 1. ಹಾಲು, ಕ್ಷೀರ. (ವಿಂ) 2. ಆಕಳಿನ ಕೆಚ್ಚಲಿನಲ್ಲಿರುವ, ಕೆಚ್ಚಲಿನಲ್ಲಿ ಉಂಟಾದ. ऊधसि भवम् "यत्" (५-१-६)। "ऊधस्यमिच्छामि तवोपभोक्तुं षष्ठांशमुर्व्या इव रक्षितायाः" रघुं २-६६।

**ऊन ಊನ** (ವಿಂ) 1. ಹೀನವಾದ, ಕಡಿಮೆಯಾದ. ऊन (परिहाणे) "घञ्" (३-३-१९)। "किञ्चिदूनमनूनर्धेः शरदामयुतं ययौ" रघुं १०-१। 2. ಅಸಂಪೂರ್ಣವಾದ, ಕೊರತೆಯುಳ್ಳ. "ऊनं वाप्यधिकं वापि लिखेद्यो राजशासनम्" याज्ञं २-२९५। एकोनविंशतिः। एकोनत्रिंशत्। एकोनचत्वारिंशत्।

**ऊम् ಊಮ್** (ಅವ್ಯಂ) 1. ಪ್ರಶ್ನೆ, ಕೇಳಿಕೆ. ऊय्यते—ऊयी (तन्तुसन्ताने) "मुक्" बाहुं। 2. ಕೋಪದ ಮಾತು. "ऊम् रुषोक्तौ पृच्छायाम्" मेदिं।

**ऊम ಊಮ** (ವಿಂ) ರಕ್ಷಿಸುವ, ಕಾಪಾಡುವ. अव (रक्षणे) "मन्" ऊठ् च।

**ऊररी ಊರರೀ** (ಅವ್ಯಂ) 1. ಅಂಗೀಕಾರ, ಒಪ್ಪಿಗೆ, ಸಮ್ಮತಿ. ऊयी (तन्तुसन्ताने) "ररीक्" बाहुं। 2. ವಿಸ್ತಾರ.

**ऊररीकार ಊರರೀಕಾರ** (ಪುಂ) 1. ಅಂಗೀಕಾರ, ಒಪ್ಪಿಗೆ. ऊररी+डु कृञ् (करणे) "घञ्" (३-३-१८)। 2. ವಿಸ್ತಾರಪಡಿಸುವಿಕೆ.

**ऊररीकृत ಊರರೀಕೃತ** (ವಿಂ) 1. ಅಂಗೀಕರಿಸಲ್ಪಟ್ಟ, ಒಪ್ಪಲ್ಪಟ್ಟ. ऊररी + डु कृञ् (करणे) "क्तः" (३-२-१०२)। 2. ವಿಸ್ತರಿಸಲ್ಪಟ್ಟ.

**ऊरव्य ಊರವ್ಯ** (ಪುಂ) 1. ವೈಶ್ಯ, ಮೂರನೆಯ ವರ್ಣದವನು. ऊरौ भवः "यत्" (५-१-६)। [ವೈಶ್ಯನು ಪರಮಾತ್ಮನ ತೊಡೆಯಲ್ಲಿ ಹುಟ್ಟಿದವನು.] "ब्राह्मणोऽस्य मुखमासीत्। बाहू राजन्यः कृतः। ऊरू तदस्य यद्वैश्यः" श्रुतिः। स्त्रियां "टाप्" **ऊरव्या ಊರವ್ಯಾ.** (ವಿಂ) 2. ತೊಡೆಯಲ್ಲಿರುವ. ತೊಡೆಯಲ್ಲುಂಟಾದ.

**ऊरी ಊರೀ** (ಅವ್ಯಂ) ಅಂಗೀಕಾರ, ಒಪ್ಪಿಗೆ. ऊयी (तन्तुसन्ताने) "रीक्" बाहुं। ऊरी + डु कृञ् (करणे) "ल्यप्" (७-१-३७)। **ऊरीकृत्य ಊರೀಕೃತ್ಯ.** "तदूरीकृत्य कृतिभिः वाचस्पत्यं प्रतायते" माघं २-३०।

**ऊरीकृत ಊರೀಕೃತ** (ವಿಂ) ಅಂಗೀಕರಿಸಲ್ಪಟ್ಟ, ಒಪ್ಪಲ್ಪಟ್ಟ, ಸಮ್ಮತಿಸಲ್ಪಟ್ಟ. ऊरी+डु कृञ् (करणे) "क्तः" (३-२-१०२)। "ऊरीकृतमुररीकृतमङ्गीकृतमाश्रुतं प्रतिज्ञातम्" अमं।

**ऊरु ಊರು** (ಪುಂ) ತೊಡೆ. ऊर्णुञ् (आच्छादने) "कुः" नुलोपश्च (उं १-३०)। "शीतांशुर्मुखमुत्पले तव दृशौ पद्मानुकारी करौ रम्भागर्भयुगं तवोरुयुगलं बाहू मृणालोपमौ" रत्नां ३-११। ಉಪಮಾನವಾಚಕ ಪೂರ್ವಪದವಿರುವಾಗ ಸ್ತ್ರೀಲಿಂಗದ ಸಮಾಸಾಂತ್ಯದಲ್ಲಿ "ऊङ्" (४-१-६९) ಬಂದು **करभोरूः ಕರಭೋರೂಃ, रम्भोरूः ರಂಭೋರೂಃ** ಎಂದಾಗುವುದು.

**ऊरुग्राह ಊರುಗ್ರಾಹ** (ಪುಂ) ಸಂಧಿವಾತ, ಮಂಡಿಯು ಚಲಿಸದಂತೆ ಮಾಡುವ ಒಂದು ವಾತರೋಗ. ऊरू गृह्णाति—ग्रह (उपादाने) "अण्" (३-२-१)। "ऊरुग्राहगृहीताश्च केचित्तत्राभवन् भुवि" भां द्रोणं १४६।

**ऊरुज ಊರುಜ** (ಪುಂ) 1. ವೈಶ್ಯ, ಮೂರನೆಯ ವರ್ಣದವನು. ऊरोर्जायते—जनी (प्रादुर्भावे) "डः" (३-२-१०१)। स्त्रियां "ङीष्" (४-१-६३)। **ऊरुजी ಊರುಜೀ.** 2. ಭೃಗುವಂಶದ ಒಬ್ಬ ಋಷಿ. [ಕೃತವೀರ್ಯರಾಜನು ಭೃಗುವಂಶದ ಋಷಿಗಳ ಸಾಹಾಯ್ಯದಿಂದ ಯಜ್ಞಯಾಗಾದಿಗಳನ್ನು ನಡೆಸುತ್ತಾ ಅವರಿಗೆ ಪುಷ್ಕಳವಾಗಿ ಧನಧಾನ್ಯಾದಿಗಳನ್ನು ಕೊಡುತ್ತಿದ್ದನು. ಅವನ ಮುಂದಿನ ರಾಜರು ಧನದ ಆಸೆಯಿಂದ ಆ ಋಷಿ

ಗಳನ್ನು ಪೀಡಿಸತೊಡಗಿದಾಗ ಕೆಲವರು ಧನವನ್ನು ಭೂಮಿಯಲ್ಲಿ ಹೂತಿಟ್ಟರು. ಕೆಲವರು ಬ್ರಾಹ್ಮಣರಿಗೆ ದಾನ ಮಾಡಿದರು. ಕೆಲವರು ಇವರಿಗೂ ಹೇರಳವಾಗಿ ಕೊಟ್ಟರು. ಇದರಿಂದ ಕುಪಿತರಾದ ರಾಜರೆಲ್ಲರೂ ಋಷಿಗಳನ್ನು ಕೊಲ್ಲುತ್ತಾ ಬರಲು ಒಬ್ಬ ಋಷಿಪತ್ನಿಯು ಹೆದರಿ ತನ್ನ ತೊಡೆಯಲ್ಲಿ ಗರ್ಭವನ್ನು ನೂರು ವರ್ಷಗಳಕಾಲ ಧರಿಸಿದ್ದಳು. ಈ ರಾಜರ ಹಿಂಸೆಯನ್ನು ಅನುಭವಿಸುತ್ತಿದ್ದ ಆಕೆಯ ಗರ್ಭವು ತೊಡೆಯಿಂದ ಹೊರಬಿದ್ದು ಕ್ರೂರ ದೃಷ್ಟಿಯಿಂದ ನೋಡಿದಾಗ ಆ ರಾಜರೆಲ್ಲರೂ ಕುರುಡರಾಗಲಾಗಿ ಅವರು ಆ ಶಿಶುವನ್ನು ಸ್ತೋತ್ರಮಾಡಿ ಅದರ ಅನುಗ್ರಹದಿಂದ ಪುನಃ ದೃಷ್ಟಿಯನ್ನು ಪಡೆದರು. ಇದರಿಂದ ಈ ಋಷಿಯು ಊರುಜನೆಂದೂ ಔರ್ವನೆಂದೂ ಪ್ರಸಿದ್ಧನಾದನು]. भा० आदि० १९४। ಇದೇ ಅರ್ಥದಲ್ಲಿ ऊरुजन्मन्, ऊरुसम्भवः ಇತ್ಯಾದಿ. (वि०) 3. ತೊಡೆಯಲ್ಲಿ ಹುಟ್ಟಿದ, ತೊಡೆಯಲ್ಲಿ ಉಂಟಾದ.

**ऊरुदघ्न ಊರುದಘ್ನ, –द्वयस –ದ್ವಯುಸ, –मात्र –ಮಾತ್ರ** (वि०) ತೊಡೆಯನ್ನು ಮುಟ್ಟುವಷ್ಟು ಎತ್ತರವಾದ, ತೊಡೆಯ ಪ್ರಮಾಣವುಳ್ಳ, ತೊಡೆಯ ಅಳತೆಯುಳ್ಳ, ತೊಡೆಯಷ್ಟು ಆಳವಾದ. ऊरू प्रमाणमस्य क्रमेण "दघ्नच्" "द्वयसच्" "मात्रच्" (५-२-३७)। स्त्रियां "ङीप्" (४-१-१५)। **–दघ्नी –ದಘ್ನೀ, –द्वयसी –ದ್ವಯುಸೀ, –मात्री –ಮಾತ್ರೀ.**

**ऊरुपर्वन् ಊರುಪರ್ವನ್** (पु०) ಮಂಡಿ, ತೊಡೆ ಮತ್ತು ಮೊಣಕಾಲುಗಳ ಸಂಧಿ. ऊरोः पर्व।

**ऊरुस्तम्भ ಊರುಸ್ತಂಭ** (पु०) ಸಂಧಿವಾತ, ಮಂಡಿಯು ಚಲಿಸದಂತೆ ಮಾಡುವ ಒಂದು ವಾತರೋಗ. ऊरू स्तम्नाति—स्तन्भु "अण्" (३-२-१)।

**ऊर्क् (र्ज्) ಊರ್ಕ್ (ರ್ಜ್)** (स्त्री०) 1. ಬಲ, ಶಕ್ತಿ. ऊर्ज (बलप्राणनयोः) भावे "क्विप्" (३-२-१७७)। (न०) 2. ಅನ್ನ. 3. ಸಸ್ಯರಸ, ಅಂತಸ್ಸಾರ. ऊर्ज कर० "क्विप्"।

**ऊर्ज ಊರ್ಜ** (पु०) 1. ಕಾರ್ತಿಕಮಾಸ. ऊर्जयति उत्साहयति जिगीषून्—ऊर्ज (बलप्राणनयोः) + णिच् "अच्" (३-१-१३४)। [ಕಾರ್ತಿಕಮಾಸವು ಜೈತ್ರಯಾತ್ರೆಗೆ ಶಕ್ತಿಯನ್ನೂ, ಉತ್ಸಾಹವನ್ನೂ ಕೊಡುವುದರಿಂದ ಈ ಹೆಸರು.] "कृतमदं निगदन्त इवाकुलीकृतजगत्रय-मूर्जमतङ्गजम्" माघ० ६-५०। 2. ಉತ್ಸಾಹ. 3. ಬಲ, ಶಕ್ತಿ. 4. ಜೀವನ, ಬದುಕು. ऊर्ज भावे "अच्"। (न०) 5. ಜಲ, ನೀರು. कर० "घञ्" (३-३-१२१)। (वि०) 6. ಶಕ್ತಿವಂತ, ಬಲಶಾಲಿ. ऊर्ज "अच्" (५-२-१२७)। "मासोत्साहबलेषूर्जः" नानार्थर०। "ऊर्जः कार्तिके बले" हेम०। "ऊर्जस्तु कार्तिकोत्साहबलेषु प्राणनेऽपि च" मेदि०। 7. ಉತ್ಸಾಹಶಾಲಿ.

**ऊर्जस् ಊರ್ಜಸ್** (न०) 1. ಉತ್ಸಾಹ. 2. ಆಹಾರ, ಅನ್ನ. 3. ಬಲ, ಶಕ್ತಿ. ऊर्ज (बलप्राणनयोः) "असुन्" (उं० ४-१८८)। 4. ರಸ, ಧಾತು, ಸಾರ.

**ऊर्जस्वत् ಊರ್ಜಸ್ವತ್** (वि०) 1. ಶಕ್ತಿವಂತ, ಬಲಶಾಲಿ. 2. ರಸವುಳ್ಳ. अतिशयितम् ऊर्जोऽस्यास्ति "मतुप्" (५-२-९४)। स्त्रियां "ङीप्" (४-१-६)। **ऊर्जस्वती ಊರ್ಜಸ್ವತೀ.**

**ऊर्जस्वल ಊರ್ಜಸ್ವಲ** (वि०) 1. ಬಲಶಾಲಿ, ಶಕ್ತಿವಂತ. अतिशयितम् ऊर्जोऽस्यास्ति "वलच्" (५-२-११४)। "तद्रक्ष कल्याणपरम्पराणां भोक्तारमूर्जस्वलमात्मदेहम्" रघु० २-५०। "स्वकृतविलसितानां स्थानमूर्जस्वलानाम्" मालती० २-९। 2. ಶ್ರೇಷ್ಠವಾದ, ಉತ್ತಮವಾದ. "अश्वमेध इति नाम विश्वविजयिनां क्षत्रियाणामूर्जस्वलः सर्वक्षत्रपरिभावी महानुत्कर्षनिकषः" उ० रा० ४।

**ऊर्जस्विन् ಊರ್ಜಸ್ವಿನ್** (वि०) ಶಕ್ತಿವಂತ, ಬಲಶಾಲಿ, ಪರಾಕ್ರಮಿ. अतिशयितम् ऊर्जोऽस्यास्ति "विनिः" (५-२-११४)। स्त्रियां "ङीप्" (४-१-५)। **ऊर्जस्विनी ಊರ್ಜಸ್ವಿನೀ.**

**ऊर्जा ಊರ್ಜಾ** (स्त्री०) 1. ಬಲ, ಶಕ್ತಿ. 2. ಉತ್ಸಾಹ. 3. ಆಧಿಕ್ಯ, ಅಭಿವೃದ್ಧಿ, ಬೆಳವಣಿಗೆ. 4. ಆಹಾರ, ಅನ್ನ ऊर्ज (बलप्राणनयोः) "अः" (३-३-१०३)।

**ऊर्जित ಊರ್ಜಿತ** (न०) 1. ಬಲ, ಶಕ್ತಿ. 2. ಉತ್ಸಾಹ. 3. ಸಾಮರ್ಥ್ಯ. ऊर्ज (बलप्राणनयोः) भावे "क्तः" (३-३-११४)। (वि०) 4. ಬಲಶಾಲಿ, ಶಕ್ತಿವಂತ. ऊर्ज "क्तः" (३-४-७२)। "पित्र्यमंशमुपवीतलक्षणं मातृकं च धनुरूर्जितं दधत्" रघु० ११-६४। 5. ಸಾರವತ್ತಾದ, ಅರ್ಥಗರ್ಭಿತವಾದ. "उपपत्तिमदूर्जिताश्रयं नृपमूचे वचनं वृकोदरः" किरा० २-१। "निशमय्य तदूर्जितं शिनेर्वचनं नप्तुरनाप्तुरेनसाम्" माघ० १६-३८। 6. ಅತಿಶಯವಾದ, ದೊಡ್ಡದಾದ. 7. ಹೆಚ್ಚಾದ, ಅಧಿಕವಾದ. "विनिहत्य भवन्तमूर्जितश्रीर्युधि सद्यः शिशुपालतां यथार्थम्" माघ० १६-८५।

8. ಉತ್ತಮವಾದ, ಶ್ರೇಷ್ಠವಾದ. 9. ಸುಂದರವಾದ, ಪ್ರಕಾಶಮಾನವಾದ. "कुसुमचापमतेजयदंशुभिर्हिमकरो मकरोर्जितकेतनम्" रघु० ९-३९। 10. ಗಂಭೀರವಾದ, ಘನವಾದ, ಭವ್ಯವಾದ. "अलङ्घयत्वाज्जनैरन्यैः क्षुभितोदन्वदूर्जितम्" किरा० ११-४०।

**ऊर्ण ಊರ್ಣ** (न०) 1. ಉಣ್ಣೆ. 2. ಉಣ್ಣೆಬಟ್ಟೆ. ऊर्णास्त्यस्य कारणत्वेन "अच्" (५-२-१२७)। (स्त्री०) **-र्णा - ರ್ಣಾ.** ಉಣ್ಣೆ. "मङ्गल्योर्णावलयिनि पुरः पावकस्योच्छ्रितस्य" रघु० १६-८७।

**ऊर्णनाभ ಊರ್ಣನಾಭ** (पु०) ಜೇಡರ ಹುಳ. ऊर्णेव तन्तुर्नाभावस्य "अच्" (५-४-७५)।

**ऊर्णा ಊರ್ಣಾ** (स्त्री०) 1. ಉಣ್ಣೆ, ತುಪ್ಪಟ. 2. ಹುಬ್ಬುಗಳ ನಡುವೆ ಇರುವ ಕೂದಲಿನ ಸುಳಿ. "ललाटपट्टे नवनलिननालभङ्गतन्वीयमूर्णा परिस्फुरति" काद०। ಇದು ಚಕ್ರವರ್ತಿಲಕ್ಷಣ. ["नरलक्षण" ಪದದಲ್ಲಿ ನೋಡಿ.] 3. ಸ್ವಾಯಂಭುವ ಮನ್ವಂತರದ ಮರೀಚಿ ಮುನಿಯ ಪತ್ನಿ.

**ऊर्णायु ಊರ್ಣಾಯು** (पु०) 1. ಕುರಿಯ ತುಪ್ಪಟದಿಂದ ನೇಯ್ದ ಕಂಬಳಿ. 2. ಕುರಿ, ಟಗರು. 3. ಜೇಡರ ಹುಳ. "ऊर्णायुरविकम्बले। ऊर्णनाभे च मेषे च" हेम०।

**ऊर्णासूत्र ಊರ್ಣಾಸೂತ್ರ** (न०) ಉಣ್ಣೆ ದಾರ, ಕಂಬಳಿ ದಾರ. ऊर्णायाः सूत्रम्।

**ऊर्द ಊರ್ದ** (वि०) 1. ಆಟವಾಡುವ. 2. ಅಳೆಯುವ. उर्द (माने क्रीडायां च) "अच्" (३-१-१३४)।

**ऊर्दर ಊರ್ದರ** (पु०) 1. ಶೂರ, ಬಲಶಾಲಿ, ಶಕ್ತಿವಂತ. 2. ರಾಕ್ಷಸ. ऊर्क् + दृ (विदारणे) "अच्" (उ० ५-४०)। "ऊर्दरः शूररक्षसोः" सि० कौ०। (न०) 3. ಧಾನ್ಯವನ್ನು ಅಳೆಯುವ ಒಂದು ಪಾತ್ರೆ. 4. ಧಾನ್ಯವನ್ನು ಕೂಡಿಡುವ ಸ್ಥಳ, ಕಣಜ.

**ऊर्ध्व ಊರ್ಧ್ವ** (न०) 1. ಎತ್ತರ, ಔನ್ನತ್ಯ. (वि०) 2. ಮೇಲುಮುಖವಾದ. "प्रबोधयत्यूर्ध्वमुखैर्मयूखैः" कुमा० १-१६। 3. ಮೇಲಕ್ಕೆ ಎತ್ತಲ್ಪಟ್ಟ, ಮೇಲುಮುಖವಾಗಿ ನೀಡಲ್ಪಟ್ಟ. 4. ಮೇಲುಗಡೆಯಿರುವ, ಮೇಲುಭಾಗದಲ್ಲಿರುವ. 5. ಎತ್ತರವಾದ, ಉನ್ನತವಾದ. (अव्य०) 6. ಮೇಲುಗಡೆ, ಮೇಲುಭಾಗದಲ್ಲಿ. 7. ಅನಂತರ, ಬಳಿಕ, ತರುವಾಯ. "साहं तपः सूर्यनिविष्टदृष्टिरूर्ध्वं प्रसूतेश्चरितुं यतिष्ये" रघु० १४-६६।

**ऊर्ध्वक ಊರ್ಧ್ವಕ** (पु०) ಒಂದು ವಿಧ ಮದ್ದಳೆ, ಮೃದಂಗದ ಒಂದು ಭೇದ. ऊर्ध्वः कायति—कै (शब्दे) "कः" (३-२-४)।

**ऊर्ध्वकच—केश ಊರ್ಧ್ವಕಚ—ಕೇಶ** (वि०) ನೆಟ್ಟ ಕೂದಲುಳ್ಳ, ಮೇಲುಮುಖವಾದ ಕೂದಲುಳ್ಳ. ऊर्ध्वाः कचाः केशा वा यस्य।

**ऊर्ध्वकण्ठ ಊರ್ಧ್ವಕಂಠ** (वि०) 1. ಎತ್ತರವಾದ ಕುತ್ತಿಗೆಯುಳ್ಳ, ಉದ್ದವಾದ ಕಂಠವುಳ್ಳ. ऊर्ध्वः कण्ठो यस्य। स्त्रियां "ङीष्" (वा० ४-१-५५)। **-कण्ठी - ಕಂಠೀ.** 2. ಮಹಾಶತಾವರೀ.

**ऊर्ध्वकर ಊರ್ಧ್ವಕರ** (वि०) 1. ಮೇಲಕ್ಕೆ ಎತ್ತಲ್ಪಟ್ಟ ಕೈಯುಳ್ಳ. 2. ಮೇಲುಮುಖವಾದ ಕಿರಣವುಳ್ಳ. ऊर्ध्वाः करा हस्ताः किरणा वा यस्य।

**ऊर्ध्वकर्ण ಊರ್ಧ್ವಕರ್ಣ** (वि०) ನೆಟ್ಟ ಕಿವಿಯುಳ್ಳ, ಅಲುಗಾಡದೆ ಧ್ವನಿಯನ್ನು ಕೇಳುವ ಕಿವಿಯುಳ್ಳ. ऊर्ध्वौ कर्णौ यस्य। "मुक्तेषु रश्मिषु निरायतपूर्वकाया निष्कम्पचामरशिखा निभृतोर्ध्वकर्णाः" शाकु० १-८।

**ऊर्ध्वकर्मन् ಊರ್ಧ್ವಕರ್ಮನ್** (न०) 1. ಮೇಲಕ್ಕೆ ಏಳುವುದು, ಮೇಲುಗಡೆಗೆ ಚಲಿಸುವುದು. ऊर्ध्वं ऊर्ध्वदेशप्राप्त्यर्थं कर्म क्रिया। "उदोऽनूर्ध्वकर्मणि" पा० सू० १-३-२४। (वि०) 2. ಮೇಲಕ್ಕೆ ಏಳುವ. ऊर्ध्वं कर्म यस्य।

**ऊर्ध्वकाय ಊರ್ಧ್ವಕಾಯ** (पुंन०) ಶರೀರದ ಮೇಲುಭಾಗ, ಮೇಲುಮೈ. ऊर्ध्वं कायः।

**ऊर्ध्वकेतु ಊರ್ಧ್ವಕೇತು** (पु०) 1. ಜನಕ ಮಹಾರಾಜನ ವಂಶದ ಒಬ್ಬ ದೊರೆ. (वि०) 2. ಮೇಲಕ್ಕೆ ಏರಿಸಲ್ಪಟ್ಟ ಧ್ವಜ (ಬಾವುಟ)ವುಳ್ಳ (ದೊರೆ). ऊर्ध्वः उच्छ्रितः केतुः ध्वजो यस्य। 3. ಬಾವುಟವು ಮೇಲಕ್ಕೆ ಏರಿಸಲ್ಪಟ್ಟ (ಪಟ್ಟಣ), ಮೇಲಕ್ಕೆ ಏರಿಸಲ್ಪಟ್ಟ ಬಾವುಟವುಳ್ಳ (ನಗರ). ऊर्ध्वः केतुः यत्र।

**ऊर्ध्वग ಊರ್ಧ್ವಗ** (पु०) 1. ಪರಮಾತ್ಮ, ಮಹಾವಿಷ್ಣು. ऊर्ध्वमुपरि गच्छति—गम्लृ (गतौ) "डः" (वा० ३-२-४८)। महान् स्वभावतुङ्गो भवतीत्यर्थः। "योऽसौ स्वभावतस्तुङ्ग ऊर्ध्वगः परिकीर्तितः" निरुक्तिः। "ऊर्ध्वगः सत्पथाचारः प्राणदः प्रणवः पणः" वि० स०। 2. ದೇಹದಲ್ಲಿ ಮೇಲುಮುಖವಾದ ವಾತದಿಂದುಂಟಾಗುವ ಒಂದು ರೋಗ. "ऊर्ध्वगे रक्तपित्ते च शीतमम्भः प्रशस्यते" सुश्रुत०। (वि०) 3. ಮೇಲುಮುಖವಾಗಿ

ಹೋಗುವ. "तपात्यये वारिभिरुक्षिता नवैर्भुवा सहोष्माणममुञ्चदूर्ध्वगम्" कुमा० ५-२३। 4. ಸದಾಚಾರ ಸಂಪನ್ನ, ಧಾರ್ಮಿಕ. "धर्मेण गमनमूर्ध्वं गमनमधस्ताद्भवत्यधर्मेण" सां० का० ४४। 5. ಮೇಲಕ್ಕೆ ಏಳುವ, ಮೇಲಕ್ಕೆ ಚಲಿಸುವ. गम्लृ "णिनिः" (३-१-१३४)। **-गामिन् -ಗಾಮಿನ್.** स्त्रियां "ङीप्" (४-१-५)। **-गामिनी -ಗಾಮಿನೀ.**

**ऊर्ध्वगति ಊರ್ಧ್ವಗತಿ** (स्त्री०) 1. ಮೇಲಕ್ಕೆ ಏಳುವುದು. 2. ಮೇಲಕ್ಕೆ ಹೋಗುವುದು, ಮೇಲಕ್ಕೆ ಹಾರುವುದು. ऊर्ध्वं गतिः। 3. ಧರ್ಮಕಾರ್ಯಗಳಿಂದ ಊರ್ಧ್ವಲೋಕಕ್ಕೆ (ಸ್ವರ್ಗಕ್ಕೆ) ಹೋಗುವುದು. "ऊर्ध्वं गच्छन्ति सत्त्वस्थाः मध्ये तिष्ठन्ति राजसाः। जघन्यगुणवृत्तिस्थाः अधो गच्छन्ति तामसाः" गीता १४-१८। (वि०) 4. ಮೇಲು ಮುಖವಾದ ಗಮನವುಳ್ಳ, ಮೇಲಕ್ಕೆ ಹೋಗುವ. ऊर्ध्वं गतिर्यस्य।

**ऊर्ध्वगपुर ಊರ್ಧ್ವಗಪುರ** (न०) ತ್ರಿಪುರಾಸುರನ ಪಟ್ಟಣ. "समुद्धतपताकं तदसिभिश्च विराजितम्। रराज त्रिपुरं राजन् महाविद्युदिवाम्बरे" हरिवं०।

**ऊर्ध्वगम ಊರ್ಧ್ವಗಮ** (पु०) ಮೇಲಕ್ಕೆ ಹೋಗುವಿಕೆ, ಮೇಲಕ್ಕೆ ಹಾರುವಿಕೆ. ऊर्ध्वं + गम्लृ (गतौ) भावे "अप्" (३-३-५८)। भावे "ल्युट्" (३-३-११५)। **-गमनम् -ಗಮನಮ್.**

**ऊर्ध्वचरण–पाद ಊರ್ಧ್ವಚರಣ–ಪಾದ** (पु०) ಶರಭ ಮೃಗ. ऊर्ध्वाः चरणाः पादा वाऽस्य। [ಶರಭಮೃಗದ ಎಂಟು ಕಾಲುಗಳ ಪೈಕಿ ನಾಲ್ಕು ಕಾಲುಗಳು ಮೇಲು ಮುಖವಾಗಿವೆ.]

**ऊर्ध्वजानु ಊರ್ಧ್ವಜಾನು** (वि०) ಉದ್ದವಾದ ಮೊಣಕಾಲುಳ್ಳವನು, ನೆಟ್ಟಗೆ ನಿಂತ ಮೊಣಕಾಲುಳ್ಳವನು. ऊर्ध्वे जानुनी यस्य। वा "कप्" (५-४-१५४)। **-जानुकः -ಜಾನುಕಃ.** जानुनो वा "ज्ञुः" (५-४-१३०)। **ऊर्ध्वज्ञुः ಊರ್ಧ್ವಜ್ಞುः.** "परिशिथिलितकर्णग्रीवमामीलिताक्षः क्षणमयमनुभूय स्वप्नमूर्ध्वज्ञुरेव" माघ० ११-११।

**ऊर्ध्वज्वलन ಊರ್ಧ್ವಜ್ವಲನ** (पु०) 1. ಮೇಲು ಮುಖವಾದ ಜ್ವಾಲೆಯುಳ್ಳ ಅಗ್ನಿ. ऊर्ध्वं ज्वलनं यस्य। (न०) 2. ಮೇಲುಮುಖವಾದ ಜ್ವಾಲೆ,–ಉರಿ. ऊर्ध्वं ज्वलनम्। "प्रसिद्धमूर्ध्वज्वलनं हविर्भुजः" माघ० १-२।

**ऊर्ध्वतस् ಊರ್ಧ್ವತಸ್** (अव्य०) ಮೇಲಕ್ಕೆ, ಮೇಲಿಂದ, ಮೇಲುಗಡೆ. ऊर्ध्व "तसिः" (वा० ५-४-४४)।

**ऊर्ध्वदिश् ಊರ್ಧ್ವದಿಶ್** (स्त्री०) ಮೇಲಿನ ದಿಕ್ಕು, ತಲೆಗೆ ಮೇಲುಭಾಗದ ದಿಕ್ಕು. ऊर्ध्वा दिक्।

**ऊर्ध्वदृश् ಊರ್ಧ್ವದೃಶ್** (वि०) ಮೇಲುದೃಷ್ಟಿಯುಳ್ಳ, ಮೇಲುಗಡೆ ನೋಡುವ. ऊर्ध्वा दृग्यस्य।

**ऊर्ध्वदृष्टि ಊರ್ಧ್ವದೃಷ್ಟಿ** (स्त्री०) 1. ಮೇಲುನೋಟ. 2. ಯೋಗಾಭ್ಯಾಸ ಸಮಯದಲ್ಲಿ ಹುಬ್ಬುಗಳ ನಡುವೆ ಇಡುವ ದೃಷ್ಟಿ. ऊर्ध्वा दृष्टिः। (वि०) 3. ಮೇಲು ನೋಟವುಳ್ಳ. ऊर्ध्वा दृष्टिर्यस्य।

**ऊर्ध्वधन्वन् ಊರ್ಧ್ವಧನ್ವನ್** (पु०) ಇಂದ್ರ, ದೇವತೆಗಳ ಒಡೆಯ. ऊर्ध्वं धनुर्यस्य। "पुलोमशत्रुर्हरिवानूर्ध्वधन्वा शचीपतिः" वैज०।

**ऊर्ध्वनापित ಊರ್ಧ್ವನಾಪಿತ** (पु०) ಸೂತಕಾದಿ ಸಮಯದಲ್ಲಿ ಹೊಕ್ಕಳಿಗೆ ಮೇಲುಭಾಗದ ಮೈಯ ಕ್ಷೌರ ಮಾಡುವವನು. "कुम्भकारो भाण्डवृत्तिरेष स्यादूर्ध्वनापितः। नाभेरूर्ध्वं वपन् पुंसां सूतकप्रेतकादिषु" वैज०।

**ऊर्ध्वपुण्ड्र ಊರ್ಧ್ವಪುಂಡ್ರ** (पु०) ಹಣೆಯಲ್ಲಿ ಬರೆಯುವ ಮೇಲುಮುಖವಾದ ತಿಲಕ, ಕಬ್ಬಿನಂತೆ ನೆಟ್ಟಗಿರುವ ತಿಲಕ. ऊर्ध्वः ऊर्ध्वमुखः पुण्ड्रः इक्षुरिव। ಊರ್ಧ್ವಪುಂಡ್ರ ಲಕ್ಷಣ:– "द्व्यङ्गुलं त्र्यङ्गुलं वापि सान्तरालं प्रकल्पयेत्। पार्श्वाङ्गुलिमात्रौ तु ऊर्ध्वपुण्ड्रस्य लक्षणम्" सच्चरित्र०। ಪುಂಡ್ರವು ಮತದ ಒಂದು ಚಿಹ್ನೆ. ಊರ್ಧ್ವಪುಂಡ್ರವು ವೈಷ್ಣವಮತದ ಚಿಹ್ನೆ.

**ऊर्ध्वपूरम् ಊರ್ಧ್ವಪೂರಮ್** (अव्य०) ಮೇಲುಮುಖವಾಗಿ ತುಂಬಿ. ಬಿಂದಿಗೆ ಮೊದಲಾದ ಪಾತ್ರೆಗಳು ಮೇಲು ಮುಖವಾಗಿದ್ದು ಮಳೆಯ ನೀರಿನಿಂದ ತುಂಬುವುವು. ऊर्ध्वपूरं पूर्यते "णमुल्"।

**ऊर्ध्वपृश्नि ಊರ್ಧ್ವಪೃಶ್ನಿ** (पु०) ಯಜ್ಞದ ಪಶು.

**ऊर्ध्वबाहु ಊರ್ಧ್ವಬಾಹು** (वि०) ಮೇಲಕ್ಕೆ ಎತ್ತಲ್ಪಟ್ಟ ತೋಳುಗಳುಳ್ಳ. ऊर्ध्वः उत्तोलितो बाहुर्यस्य। "ऊर्ध्वबाहुर्विरौम्येषः न च कश्चिच्छृणोति मे। धर्मादर्थश्च कामश्च स किमर्थं न सेव्यते" भा० स्वर्गा० ५-७५।

**ऊर्ध्वबुध्न ಊರ್ಧ್ವಬುಧ್ನ** (पु०) ಬುಡ ಮೇಲು ಮಾಡಲ್ಪಟ್ಟ, ತಲೆಕೆಳಗೆ ಮಾಡಲ್ಪಟ್ಟ, ಮೊಗಚಿ ಇರಿಸಲ್ಪಟ್ಟ.

**ऊर्ध्वभाग ಊರ್ಧ್ವಭಾಗ** (पु०) 1. ಮೇಲುಭಾಗ. 2. ಮುಂದಿನ ಭಾಗ. ऊर्ध्वः उपरिस्थो भागः।

**ಊರ್ಧ್ವಮ್ ಊರ್ಧ್ವಮ್** (ಅವ್ಯಂ) "ಊರ್ಧ್ವ" ಪದದ ಅರ್ಥ.

**ಊರ್ಧ್ವಮನ್ಥಿನ್ ಊರ್ಧ್ವಮಂಥಿನ್** (ಪುಂ) ನೈಷ್ಠಿಕ ಬ್ರಹ್ಮಚಾರಿ, ಗೃಹಸ್ಥಾಶ್ರಮವನ್ನು ಸ್ವೀಕರಿಸದೆ ಶಾಶ್ವತವಾಗಿ ಬ್ರಹ್ಮಚರ್ಯಾಶ್ರಮದಲ್ಲಿರುವವನು. ऊर्ध्वं ब्रह्मचर्यादुत्तराश्रमं गार्हस्थ्यादि मथ्नाति—मन्थ (विलोडने) "णिनिः" (३-२-७८)।

**ಊರ್ಧ್ವಮಾನ ಊರ್ಧ್ವಮಾನ** (ನಂ) 1. ಚಿನ್ನ ಬೆಳ್ಳಿ ಮೊದಲಾದುವನ್ನು ತೂಗಲು ತಕ್ಕಡಿಯಲ್ಲಿರುವ ತೊಲ, ಪಾವು, ಸೇರು ಮುಂತಾದ ಬೊಟ್ಟು, ತೂಕ ಮಾಡುವ ಕಲ್ಲು ಮೊದಲಾದುದು. ऊर्ध्वमारोप्य मीयते येन—माङ् (माने) ಕರಂ "ल्युट्" (३-३-११७)। 2. ಎತ್ತರವನ್ನು ಅಳೆಯುವ ಕೋಲು ಮುಂತಾದುದು. 3. ಎತ್ತರವನ್ನು ಕಂಡುಹಿಡಿಯುವ ಅಳತೆ. 4. ಮೇಲಕ್ಕೆ ಎತ್ತಿ ಅಳೆಯುವಿಕೆ.

**ಊರ್ಧ್ವಮುಖ ಊರ್ಧ್ವಮುಖ** (ವಿಂ) ಮೇಲುಮುಖವಾದ, ಮೇಲಕ್ಕೆ ಪಸರಿಸುತ್ತಿರುವ. ऊर्ध्वं मुखं यस्य। "पद्मानि यस्याग्रसरोरुहाणि प्रबोधयत्यूर्ध्वमुखैर्मयूखैः" ಕುಮಾಂ १-१६।

**ಊರ್ಧ್ವಮೂಲ ಊರ್ಧ್ವಮೂಲ** (ಪುಂ) ಸಂಸಾರವೃಕ್ಷ. ऊर्ध्वः उत्कृष्टः पुरुषो मूलमस्य। ಸಂಸಾರವೆಂಬ ಅಶ್ವತ್ಥ ವೃಕ್ಷಕ್ಕೆ ಪರಬ್ರಹ್ಮನು ಮೂಲಕಾರಣನು. ಸಕಲ ಲೋಕಗಳಿಗೂ ಮೇಲಿರುವ ಬ್ರಹ್ಮನನ್ನು ಕಾರಣವಾಗಿ ಉಳ್ಳುದುದರಿಂದ ಈ ಅಶ್ವತ್ಥವು ಊರ್ಧ್ವಮೂಲವಾಯಿತು. ಭೂಮಿಯಲ್ಲಿರುವ ಸಕಲ ಮನುಷ್ಯ, ಪಶುಪಕ್ಷಿ, ಸ್ಥಾವರಾದಿಗಳು ಈ ಸಂಸಾರಕ್ಕೆ ಅಂತವಾಗಿರುವುದರಿಂದ ಅಧಃಶಾಖವಾಯಿತು. ಅಸಂಗಹೇತುಭೂತವಾದ ಸಮ್ಯಕ್ ಜ್ಞಾನೋದಯವಾಗುವವರೆಗೂ ಪ್ರವಾಹರೂಪವಾಗಿ ಅಚ್ಛೇದ್ಯವಾದುದರಿಂದ ಅವ್ಯಯವಾಯಿತು. ಕಾಮ್ಯ ಕರ್ಮಗಳಿಂದ ವೃದ್ಧಿಹೊಂದುತ್ತಿರುವುದರಿಂದ ಈ ಸಂಸಾರ ವೃಕ್ಷಕ್ಕೆ ವೇದಗಳೇ ಎಲೆಗಳಾಗಿವೆ. ವೇದವು ಈ ಸಂಸಾರ ವೃಕ್ಷದ ಛೇದೋಪಾಯವನ್ನು ಹೇಳುವುದರಿಂದ ಈ ಅಶ್ವತ್ಥ ವೃಕ್ಷದ ಸ್ವರೂಪವನ್ನು ತಿಳಿದವನೇ ವೇದವನ್ನು ತಿಳಿದವನಾಗುವನು. "ऊर्ध्वमूलमधःशाखमश्वत्थं प्राहुरव्ययम्। छन्दांसि यस्य पर्णानि यस्तं वेद स वेदवित्" ಗೀತಾ १५-१।

**ಊರ್ಧ್ವಮೌಹೂರ್ತಿಕ ಊರ್ಧ್ವಮೌಹೂರ್ತಿಕ** (ವಿಂ) ಒಂದು ಮುಹೂರ್ತದ ನಂತರ ಸಂಭವಿಸುವ, ಅತ್ಯಲ್ಪಕಾಲದ ನಂತರ ಉಂಟಾಗುವ. ऊर्ध्वं मुहूर्ताद्भवः "ठञ्" (४-३-११)। "लिङ् चोर्ध्वमौहूर्तिके" ಪಾಂ ಸೂಂ ३-३-९।

**ಊರ್ಧ್ವರೇತಸ್ ಊರ್ಧ್ವರೇತಸ್** (ಪುಂ) 1. ಪರಮೇಶ್ವರ, ಮಹಾದೇವ. ऊर्ध्वमूर्ध्वमुखं रेतोऽस्य। 2. ಸನಕಾದಿ ಮುನಿಗಳು. "ऊर्ध्वरेताः प्रजा हित्वा गच्छत्यक्षरसात्मताम्। एतान्येव निमित्तानि मुनीनामूर्ध्वरेतसाम्" ಭಾಂ ಶಾನ್ತಿಂ ६०-६। 3. ಭೀಷ್ಮಾಚಾರ್ಯರು. [ರೇತಸ್ಸು ಸಾಮಾನ್ಯವಾಗಿ ಎಲ್ಲರಿಗೂ ಜನನೇಂದ್ರಿಯದ ಮೂಲಕ ಕೆಳಮುಖವಾಗಿ ಹೊರಡುವುದು. ಇದನ್ನು ತಡೆದು ಮೇಲುಮುಖವಾಗಿಸುವ ಶಕ್ತಿಯುಳ್ಳವನು ಊರ್ಧ್ವರೇತಸ್ಸು.]

**ಊರ್ಧ್ವರೋಮನ್ ಊರ್ಧ್ವರೋಮನ್** (ಪುಂ) 1. ಕುಶದ್ವೀಪದೊಳಗಿನ ಒಂದು ಪರ್ವತ. ಇದರ ಗಡಿಯಲ್ಲಿರುವ ಪರ್ವತಗಳು:—"चक्रश्च चतुःशृङ्गः कपिलश्चित्रकूटो देवानीक ऊर्ध्वरोमा द्रविणः" ಭಾಗಂ ५-२०-१६। (ವಿಂ) 2. ಮೇಲುಮುಖವಾದ ಕೂದಲುಳ್ಳ. ऊर्ध्वानि रोमाणि यस्य। "स पाशहस्तांस्त्रीन् दृष्ट्वा पुरुषान् भृशदारुणान्। वक्रतुण्डानूर्ध्वरोमणः आत्मानं नेतुमागतान्" ಭಾಗಂ ६-१-२८।

**ಊರ್ಧ್ವಲಿಙ್ಗ ಊರ್ಧ್ವಲಿಂಗ** (ಪುಂ) ಮಹಾದೇವ, ಪರಮೇಶ್ವರ. ऊर्ध्वमुत्कृष्टं लिङ्गमस्य। "ऊर्ध्वरेता ऊर्ध्वलिंग ऊर्ध्वशायी नभःस्थलः। त्रिजटश्चीरवासाश्च रुद्रः सेनापतिर्विभुः" ಭಾಂ ಅನುಂ ४८-४६।

**ಊರ್ಧ್ವಲೋಕ ಊರ್ಧ್ವಲೋಕ** (ಪುಂ) ಮೇಲಿನ ಲೋಕ, ಸ್ವರ್ಗ, ದೇವಲೋಕ. ऊर्ध्वो लोकः।

**ಊರ್ಧ್ವವಾತ ಊರ್ಧ್ವವಾತ** (ಪುಂ) 1. ಮೇಲುಮುಖವಾದ ವಾತ, ದೇಹದಲ್ಲಿ ಸ್ವಭಾವವಾದ ಗತಿಯನ್ನು ತಡೆದು ಮೇಲುಮುಖವಾಗಿ ಹೊರಡುವ ವಾಯು; ಮಲ ಮೂತ್ರಾದಿಗಳನ್ನು ತಡೆಯುವುದರಿಂದ ವಾಯುವು ಅದರ ಮಾರ್ಗವನ್ನು ಬಿಟ್ಟು ಮೇಲುಮುಖವಾಗಿ ಹೊರಡುವುದು. "अधश्चोर्ध्वं च भावानां प्रवृत्तानां स्वभावतः। न वेगान् धारयेद्धीमान् वातादीनां जिजीविषुः" ಸುಶ್ರುತಂ। 2. ಸಪ್ತವಾಯುಗಳಲ್ಲಿ ಪರೀವಾಹವೆಂಬ ಒಂದು ವಾಯು.

**ಊರ್ಧ್ವಶಾಯಿನ್ ಊರ್ಧ್ವಶಾಯಿನ್** (ಪುಂ) 1. ಪರಮೇಶ್ವರ, ಮಹಾದೇವ. "ऊर्ध्वरेता ऊर्ध्वलिङ्ग ऊर्ध्वशायी नभःस्थलः। त्रिजटश्चीरवासाश्च रुद्रः सेनापतिर्विभुः" ಭಾಂ ಅನುಂ ४८-४६। (ವಿಂ) 2. ಮೇಲುಮುಖವಾಗಿ ಮಲಗುವ, ಅಂಗಲಾಚಿಕೊಂಡು ಮಲಗುವ (ಶಿಶು). ऊर्ध्वः शेते—शीङ् (स्वप्ने) "णिनिः" (३-२-७८)।

**ಊರ್ಧ್ವಸ್ರೋತಸ್ ಊರ್ಧ್ವಸ್ರೋತಸ್** (ಪುಂ) 1. ರೇತಸ್ಸಿನ ಪ್ರವಾಹವನ್ನು ಕೆಳಮುಖವಾಗಿ ಬಿಡದೆ ಮೇಲುಮುಖ

ವಾಗಿ ತಡೆದು ನಿಲ್ಲಿಸುವ ಯೋಗಿ. ऊर्ध्वम् ऊर्ध्वगतं स्रोतः रेतःप्रवाहो यस्य। 2. ಮೇಲುಮುಖವಾಗಿ ಆಹಾರರಸವು ಸಂಚರಿಸುವ ಗಿಡ ಮರ ಬಳ್ಳಿಗಳು.

**ऊर्ध्वायन ಊರ್ಧ್ವಾಯನ** (पुं०) 1. ವೈಶ್ಯ ಜಾತಿಯ ಒಂದು ಹಕ್ಕಿ [ಪ್ಲಕ್ಷದ್ವೀಪದಲ್ಲಿರುವ ಪಕ್ಷಿಗಳಲ್ಲಿ ಕೆಲವು ಬ್ರಾಹ್ಮಣ ಜಾತಿಯವು. ಕೆಲವು ಕ್ಷತ್ರಿಯ ಜಾತಿಯವು. ಕೆಲವು ವೈಶ್ಯ ಜಾತಿಯವು. ಮತ್ತೆ ಕೆಲವು ಶೂದ್ರ ಜಾತಿಯವು. ಈ ಪಕ್ಷಿಗಳಿಗೆ ಹಂಸ, ಪತಂಗ, ಊರ್ಧ್ವಾಯನ ಮತ್ತು ಸತ್ಯಾಂಗಗಳೆಂದು ಸಂಜ್ಞೆ. ಇವು ಅರುಣಾ, ಅನೃಮ್ಣಾ, ಆಂಗಿರಸೀ, ಸಾವಿತ್ರೀ, ಸುಪ್ರಭಾತಾ, ಋತಂಭರಾ ಮತ್ತು ಸತ್ಯಂಭರಾ ಎಂಬ ಪ್ಲಕ್ಷದ್ವೀಪದ ಏಳು ನದಿಗಳ ಜಲಸೇವನೆಯಿಂದ ರಜಸ್ತಮೋಗುಣಗಳನ್ನು ಕಳೆದುಕೊಂಡು ಸಾವಿರ ವರ್ಷಗಳ ಆಯುಸ್ಸನ್ನೂ, ದೇವತೆಗಳಂತೆ ಅತಿ ಸುಂದರವಾದ ಪ್ರಜೆಗಳನ್ನೂ ಪಡೆದು ಸೂರ್ಯನನ್ನು ಪೂಜಿಸುವುವು.] "अरुणानृम्णाऽऽङ्गिरसी सावित्री सुप्रभाता ऋतम्भरा सत्यम्भरा इति महानद्यः। यासां जलोपस्पर्शनविधूतरजस्तमसो हंसपतङ्गोर्ध्वायनसत्याङ्गसंज्ञाश्चत्वारो वर्णाः सहस्रायुषो विबुधोपमसन्दर्शनप्रजननाः स्वर्गद्वारं त्रय्या विद्यया त्रयीमयं सूर्यमात्मानं यजन्ते" भाग० ५-२०-४। (न०) 2. ಮೇಲುಗಡೆಗೆ ಹೋಗುವುದು, ಮೇಲುಮುಖವಾದ ಗಮನ. ऊर्ध्वमयनम्। (वि०) 3. ಮೇಲುಮುಖವಾಗಿ ಹೋಗುವ. ऊर्ध्वमयनं यस्य।

**ऊर्ध्वावर्त ಊರ್ಧ್ವಾವರ್ತ** (पुं०) ಕುದುರೆಯ ಬೆನ್ನು.

**ऊर्ध्वासित ಊರ್ಧ್ವಾಸಿತ** (पुं०) 1. ಹಾಗಲದ ಗಿಡ. (न०) 2. ಮೇಲುಗಡೆ ಕುಳಿತುಕೊಳ್ಳುವುದು. (वि०) 3. ಮೇಲುಗಡೆ ಕುಳಿತಿರುವ. ऊर्ध्वमासितः।

**ऊर्मि ಊರ್ಮಿ** (पुंस्त्री०) 1. ತರಂಗ, ಅಲೆ, ತೆರೆ. ऋच्छति—ऋ (गतौ) "मिः" ऊकारश्च (उ० ४-४४)। "तमाधूतध्वजपटं व्योमगङ्गोर्मिवायुभिः। देवसूतभुजालम्बी जैत्रमध्यास्त राघवः" रामा०। "ऊर्मी महत्यभिमुखापतितं निरीक्ष्य" माघ० ५-३२। 2. ವೇಗ, ತ್ವರೆ. 3. ಬಟ್ಟೆಯ ಮಡಿಕೆಯ ಗೆರೆ. 4. ಪೀಡೆ. 5. ಪ್ರಕಾಶ, ಬೆಳಕು. 6. ಉತ್ಕಂಠೆ, ಪ್ರಿಯವಸ್ತುವನ್ನು ಹೊಂದುವ ಆಸೆ. "ऊर्मिः पीडाजवोत्कण्ठालेखाप्रकाशवीचिषु। वस्त्रसङ्कोचलेखायाम्" हेम०। 7. ಮನುಷ್ಯನ ಶರೀರ, ಮನಸ್ಸು ಮತ್ತು ಪ್ರಾಣಗಳ ಆರುವಿಧ ಧರ್ಮಗಳು. ಮುಪ್ಪು ಮತ್ತು ಮೃತ್ಯು ಇವು ಶರೀರ ಧರ್ಮಗಳು. ಶೋಕಮೋಹಗಳು ಮನೋಧರ್ಮಗಳು. ಹಸಿವು ಮತ್ತು ಬಾಯಾರಿಕೆಗಳು ಪ್ರಾಣಧರ್ಮಗಳು. (स्त्री०) 8. ಸಾಲುಸಾಲಾಗಿ ನಿಲ್ಲಿಸಲ್ಪಟ್ಟ ಕುದುರೆಗಳ ಬಹಳ ವೇಗವಾದ ನಡಗೆ. "पङ्क्तीकृतानामश्वानां नमनोन्नमनाकृतिः। अतिवेगसमायुक्ता गतिरूर्मिरुदाहृता" वैज०। "अश्वाः पृथुर्वसुमतीमतिरोचमानास्तूर्णं पयोधग इवोर्मिभिरापतन्तः" माघ० ५-४।

**ऊर्मिका ಊರ್ಮಿಕಾ** (स्त्री०) 1. ತರಂಗ, ಅಲೆ. ऊर्मि स्वार्थे "कन्"। 2. ಉತ್ಕಂಠೆ, ಪ್ರಿಯವಸ್ತುವನ್ನು ಹೊಂದುವ ಆಸೆ. 3. ಶಿಂಜಾರವ, ದುಂಬಿಯ ಝೇಂಕಾರ. 4. ಬಟ್ಟೆಯ ಮಡಿಕೆ. 5. ಉಂಗುರ. ऊर्मिरिव कायति—कै (शब्दे) "कः" (३-२-४)। "ऊर्मिका पुनः। उत्कण्ठायां भृङ्गनादे वस्त्रभङ्गेऽङ्गुलीयके। वीच्यां च" हेम०। "यास्यामीत्युदिते तन्व्या वलयोऽभवदूर्मिका" चन्द्रा०।

**ऊर्मिन् ಊರ್ಮಿನ್** (पुं०) 1. ಸಮುದ್ರ. (वि०) 2. ಅಲೆಗಳಿಂದ ಕೂಡಿದ. ऊर्मिरस्त्यस्य "इनिः" (५-२-११६)।

**ऊर्मिमत् ಊರ್ಮಿಮತ್** (वि०) 1. ಸಮುದ್ರ. 2. ಅಲೆಗಳಿಂದ ಕೂಡಿದ. ऊर्मयः सन्त्यस्य "मतुप्" (५-२-९४)। "उद्वतितानां महसा मणीनामूर्ध्वं प्रसर्पन्तमिवोर्मिमन्तम्" याद० १८-१०८। 3. ವಕ್ರವಾದ, ಡೊಂಕಾದ. 4. ಮಡಿಕೆಯಿಂದ ಕೂಡಿದ (ಬಟ್ಟೆ). 5. ಗುಂಗುರು ಗುಂಗುರಾಗಿರುವ (ಕೂದಲು). ऊर्मिरिव वक्रतास्त्यस्य "मतुप्" (५-२-९४)।

**ऊर्मिमाला ಊರ್ಮಿಮಾಲಾ** (स्त्री०) ಅಲೆಗಳ ಸಾಲು, ತರಂಗಗಳ ಪಙ್ಕ್ತಿ. ऊर्मीणां माला।

**ऊर्मिमालिन् ಊರ್ಮಿಮಾಲಿನ್** (पुं०) ಸಮುದ್ರ, ಕಡಲು. ऊर्मिमालाऽस्त्यस्य "इनिः" (५-२-११६)। "प्रत्युज्जगाम क्रथकैशिकेन्द्रश्चन्द्रं प्रवृद्धोर्मिरिवोर्मिमाली" रघु० ५-६१।

**ऊर्मिला ಊರ್ಮಿಳಾ** (स्त्री०) 1. ಜನಕ ಮಹಾರಾಜನ ಮಗಳು, ಲಕ್ಷ್ಮಣನ ಪತ್ನಿ. "पार्थिवीमुदवहद्रघूद्वहो लक्ष्मणस्तदनुजामथोर्मिलाम्" रघु० ११-५४। 2. ಗಂಡನನ್ನು ಬಿಟ್ಟ ಹೆಂಗಸು. "पुनरूढा पुनर्भूः स्यादूर्मिला त्यक्तभर्तृका" वैज०।

**ऊर्व ಊರ್ವ** (पुं०) 1. ಔರ್ವನೆಂಬ ಮಹರ್ಷಿ. 2 ಬಡಬಾಗ್ನಿ. ["और्व" ಪದದಲ್ಲಿ ನೋಡಿ.] 3. ಹೋಫ,

ಮೋಡ. 4. ದನಗಳ ಕೊಟ್ಟಿಗೆ. 5. ಸಮುದ್ರ. 6. ನೀರಿನ ಪಾತ್ರೆ. (वि०) 7. ದೊಡ್ಡದಾದ, ಮಹತ್ತಾದ. 8. ವಿಸ್ತಾರವಾದ, ಅಗಲವಾದ.

**ऊर्वङ्ग ಊರ್ವಂಗ** (न०) ಶಿಲೀಂಧ್ರ, ನಾಯಿ ಕೊಡೆ, ಅಣಬೆ. ऊरुरिवाङ्गमस्य।

**ऊर्वशी ಊರ್ವಶೀ** (स्त्री०) ಊರ್ವಶಿಯೆಂಬ ದೇವ ಲೋಕದ ವೇಶ್ಯೆ, ಪ್ರಸಿದ್ಧಳಾದ ಒಬ್ಬ ಅಪ್ಸರಸ್ಸು. ऊरुं नारायणोरुं कारणत्वेनाश्नुते व्याप्नोति–अशू (व्याप्तौ) "अच्" (३-१-१३४)। "ङीष्" (४-१-४१)। [ವಿವರಕ್ಕೆ "उर्वशी" ಪದದಲ್ಲಿ ನೋಡಿ.]

**ऊष ಊಷ** (पु०) 1. ಚೌಳುಮಣ್ಣು, ಕರಳುಮಣ್ಣು. ऊष (रुजायाम्) "क:" (३-१-१३५)। "कौशेयाविकयोरूषैः कुतपानामरिष्टकैः" मनु० ५-१२०। 2. ಕಿವಿಯ ರಂಧ್ರ. 3. ಮಲಯ ಪರ್ವತ. 4. ಪ್ರಾತಃ ಕಾಲ. 5. ರಂಧ್ರ, ಬಿಲ. "ऊषः क्षारमृत्तिकायां प्रभातेऽपि पुमानयम्। तत्सन्धायाश्च रन्ध्रे च चन्दनाद्रौ श्रवोबिले" मेदि०। (स्त्री०) –षा –ಷಾ. 6. ಊಷರ ಭೂಮಿ, ಚೌಳುಭೂಮಿ.

**ऊषक ಊಷಕ** (न०) ಪ್ರಾತಃಕಾಲ. ऊषति अन्धकारम् ऊष (दाहे) "ण्वुल्"।

**ऊषण ಊಷಣ** (पु०) 1. ಚಿತ್ರಮೂಲದ ಗಿಡ, ಚಿತ್ರಕ ವೃಕ್ಷ. (न०) 2. ಮೆಣಸು. 3. ಹಿಪ್ಪಲಿಯ ಬೇರು. 4. ಶುಂಠಿ. ऊष (दाहे) "ल्युट्" (३-३-११३)। (स्त्री०) –णा –ಣಾ. 5. ಹಿಪ್ಪಲಿ. 6. ಚವ್ಯ. 7. ಜೀರಿಗೆ. (वि०) 8. ಕಾರವಾದ, ತೀಕ್ಷ್ಣವಾದ. "ऊषणं मरिचे क्लीबं कणायामूषणा स्मृता" मेदि०। "स्त्री शुण्ठिरूषणं विश्वभेषजं सिंहलं कटम्" वैज०।

**ऊषर ಊಷರ** (न०) 1. ಕರಳುಮಣ್ಣು, ಚೌಳುಮಣ್ಣು. (वि०) 2. ಚೌಳುಮಣ್ಣಿನಿಂದ ಕೂಡಿದ, ಕರಳು ಮಣ್ಣಿನಿಂದ ಕೂಡಿದ. ऊषं क्षारमृत्तिकां राति–रा (दाने) "क:" (३-१-१३६)। ऊषः क्षारमृत्तिकास्यास्ति "र:" (५-२-१०७) वा। "ऊषवानूषरो द्वावप्यन्यलिङ्गौ" अम०। ऊषरो देशः ऊषरा भूमिः ऊषरं क्षेत्रम्। "वर्षुकस्य किमपः कृतोन्नतेरम्बुदस्य परिहार्यमूषरम्" माघ० १४-४६।

**ऊषरज ಊಷರಜ** (न०) ಚೌಳುಉಪ್ಪು, ಚೌಳು ಮಣ್ಣಿನಿಂದ ತಯಾರಿಸಲ್ಪಟ್ಟ ಉಪ್ಪು. ऊषराज्जायते–जनी (प्रादुर्भावे) "ड:" (३-२-९७)।

**ऊषवत् ಊಷವತ್** (वि०) "ऊषर" ಪದದ ಅರ್ಥ. ऊषोऽस्यास्ति "मतुप्" (५-२-९४)। स्त्रियां "ङीप्" (४-१-६)। –वती –ವತೀ.

**ऊषा ಊಷಾ** (स्त्री०) ಉಷಾದೇವಿ, ಬಾಣಾಸುರನ ಮಗಳು. [ವಿವರಕ್ಕೆ "उषा" ಪದದಲ್ಲಿ ನೋಡಿ.] "उषाप्यूषा ननन्दा च ननान्दापि प्रकीर्तिता" शब्दभेद०।

**ऊष्म ಊಷ್ಮ** (पु०) 1. ಶಾಖ, ಬಿಸಿ, ಕಾವು. 2. ಬೇಸಿಗೆ ಕಾಲ. ऊष (दाहे) "म:" बाहु०। (वि०) 3. ಶಾಖವಾದ, ಬಿಸಿಯಾದ. ऊष्मोऽस्यास्ति "अच्" (५-२-१२७)।

**ऊष्मक ಊಷ್ಮಕ** (पु०) ಗ್ರೀಷ್ಮಋತು, ಬೇಸಿಗೆಕಾಲ. ऊष्मन् "कन्" (५-४-२९)। "ग्रीष्म ऊष्मकः। निदाघ उष्णोपगमः" अम०।

**ऊष्मण ಊಷ್ಮಣ** (वि०) ಶಾಖವಾದ, ಬಿಸಿಯಾದ. ऊष्मास्यास्ति–ऊष्मन् "न:" (५-२-१००)।

**ऊष्मन् ಊಷ್ಮನ್** (पु०) 1. ಬೇಸಿಗೆಕಾಲ, ಗ್ರೀಷ್ಮಋತು. 2. ಶಾಖ, ಬಿಸಿ, ಕಾವು. ऊष (रुजायाम्) "मनिन्" (३-२-७५)। "रविकान्तमयेन सेतुना सकलाहं ज्वलनाहितोष्मणा" नैष० २-९३। 3. ಬಾಷ್ಪ, ಆವಿ, ಹಬೆ. "तपात्यये वारिभिरुक्षिता नवैर्भुवा सहोष्माणममुञ्चदूर्ध्वगम्" कुमा० ५-२३। 4. श ष स ह ವರ್ಣಗಳು, ಹಬೆಯೊಡನೆ ಕೂಡಿದ ಗಾಳಿಯಿಂದ ಉಚ್ಚರಿಸಲ್ಪಡುವ ವರ್ಣ. "शषसहा ऊष्माणः" सि० कौ०। "स्पर्शास्तस्याभवज्जीवः स्वरो देह उदाहृतः। ऊष्माणमिन्द्रियाण्याहुः अन्तस्था बलमात्मनः। स्वराः सप्त विहारेण भवन्ति स्म प्रजापतेः" भाग० ३-१२-४६, ४७।

**ऊष्मागम ಊಷ್ಮಾಗಮ** (पु०) ಗ್ರೀಷ್ಮಋತು, ಬೇಸಿಗೆ ಕಾಲ. ऊष्मण आगमोऽत्र।

**ऊह–वितर्के** (भ्वा० आत्म० सक० से०) ऊहते ऊहेते ऊहन्ते। ऊहाञ्चक्रे, –बभूव, –आस। ऊहिता। ऊहिष्यते। ऊहताम्। औहत। ऊहेत। ऊहिषीष्ट। औहिष्ट। औहिष्यत। ಊಹಿಸು, ಯುಕ್ತಿಯಿಂದ ಅರ್ಥವನ್ನು ನಿರ್ಣಯಿಸು.

**कर्मणि** :–ऊह्यते। ऊह्यताम्। औह्यत। ऊह्येत। औहि। ಇತ್ಯಾದಿ.

**णिचि** :–ऊहयति, –ते। ऊहयाञ्चकार, –चक्रे, –बभूव, –आस। ऊहयिता। ऊहयिष्यति, –ते। ऊहयतु, –ताम्। ऊह्यात्। ऊहयिषीष्ट ಇತ್ಯಾದಿ.

कृत्सु :—ऊहितव्यम्। ऊहनीयम्। ऊह्यम्। ऊहितः। ऊहितवान्। ऊहमानः। ऊहिष्यमाणः। ऊहितुम्। ऊहितम्। ऊहनम्, ऊहा। ऊहित्वा। समुह्य। ऊहमूहम्। ऊहित्वोहित्वा।

ಈ ಧಾತುವಿಗೆ ಉಪಸರ್ಗಗಳ ಯೋಗದಿಂದುಂಟಾಗುವ ಅರ್ಥಭೇದಗಳು:—

(1) अप + ऊह = अपोहति। ತಳ್ಳಿಹಾಕು, ತ್ಯಜಿಸು. अपोहः। "सर्वान् रसानपोहेत कृतान्नं च तिलैः सह" मनु० १०-८६। "अपोह्य रामं कस्माद्धि दारचौर्यं त्वया कृतम्" रामा०। "अपोहद्बाणवर्षं तद्भल्ले रामो निराकुलः" भट्टि० १७-८३।

(2) प्र+ऊह=ಬೇರೆ ಕಡೆಗೆ ಒಯ್ಯು, ಸ್ಥಳಾಂತರಕ್ಕೆ ಸಾಗಿಸು. प्रोहः।

(3) प्रति+ऊह=प्रत्यूहति। प्रत्यूहः। प्रत्युह्य। 1. ಮೇಲುಗಡೆ ಇಡು, ಮೇಲೆ ಇರಿಸು. 2. ಅಡ್ಡಿಮಾಡು, ತಡೆಹಾಕು.

(4) वि + ऊह = व्यूहति। व्यूहः। व्यूह्य। 1. ಒಟ್ಟುಗೂಡಿಸು, ಸೇರಿಸು, ಗುಂಪುಕಟ್ಟು. 2. ಸೇನೆಗಳನ್ನು ಒಂದು ವ್ಯವಸ್ಥಿತ ರೀತಿಯಲ್ಲಿ ನಿಲ್ಲಿಸು. 3. ವಿಭಜಿಸು, ಪ್ರತ್ಯೇಕಿಸು. "ऊर्ध्वं सीमन्तं व्यूहति"। "संहतान् योधयेदल्पान् कामं विस्तारयेद्बहून्। सूच्या वज्रेण चैवैतान् व्यूह्य व्यूहेन योधयेत्" मनु० ७-१९१। "व्यूहः स्याद्बलविन्यासे बृन्देऽपि" नानार्थर०।

(5) सम् + ऊह = समूहति। समूहः। समुह्य। ಒಟ್ಟುಗೂಡಿಸು, ಒಟ್ಟಿಗೆ ಸೇರಿಸು, ಗುಂಪುಕಟ್ಟು.

(6) परि + सम् + ऊह = परिसमूहति। परिसमुह्य। ತಾರಿಸು, ಒರಿಸು, ಸುತ್ತಲೂ ಶುದ್ಧಿಮಾಡು. "वेदिं परिसमुह्य"।

**ऊह ಊಹ** (पु०) 1. ಯುಕ್ತಿಯಿಂದ ಅರ್ಥವನ್ನು ನಿರ್ಣಯಿಸುವಿಕೆ, ವಿಮರ್ಶಿಸಿ ಹೇಳುವಿಕೆ, ಊಹೆ, ಕಲ್ಪನೆ, ಉತ್ಪ್ರೇಕ್ಷೆ. ऊह (वितर्के) भावे "घञ्" (३-३-१८)। 2. ಇದು ಈ ರೀತಿಯದೇ ಅಥವಾ ಬೇರೆ ರೀತಿಯದೇ ಎಂಬ ಸಂದೇಹ, ಎಂಟುವಿಧ ಬುದ್ಧಿಯ ಗುಣಗಳಲ್ಲೊಂದು.

**ಬುದ್ಧಿಯ ಎಂಟು ಗುಣಗಳು:—** (1) शुश्रूषा ಜನ್ಮಾಂತರ ವಾಸನೆಯಿಂದ ವಿದ್ಯೆಯನ್ನು ಕೇಳಬೇಕೆಂಬ ಅಪೇಕ್ಷೆ. (2) श्रवणम् ಶಾಸ್ತ್ರವನ್ನು ಕೇಳುವಿಕೆ. (3) ग्रहणम् ಕೇಳಿದುದನ್ನು ಸರಿಯಾಗಿ ಗ್ರಹಿಸಿ ತಿಳಿದುಕೊಳ್ಳುವಿಕೆ. (4) धारणम् ತಿಳಿದುಕೊಂಡುದನ್ನು ಮನದಟ್ಟು ಮಾಡಿಕೊಳ್ಳುವಿಕೆ. (5) ऊहः ಇದು ಹೀಗೆಯೇ ಅಥವಾ ಬೇರೆ ರೀತಿಯದೇ ಎಂಬ ಸಂದೇಹ. (6) अपोहः ವಿಮರ್ಶಿಸಿ ಕೆಟ್ಟುದನ್ನು ಬಿಡುವುದು. (7) अर्थविज्ञानम् ಅರ್ಥಗಳಲ್ಲಿ ಒಳ್ಳೆಯದು ಕೆಟ್ಟದ್ದು ಎಂಬ ನಾನಾವಿಧ ಜ್ಞಾನ, ಮತ್ತು (8) तत्त्वज्ञानम् ಪರಮಾರ್ಥ ಜ್ಞಾನ. काम० नी० ४-२२। भावे "घञ्" (३-३-१८)। 3. ಅರ್ಥಪೂರ್ತಿಗಾಗಿ ಬೇಕಾದ ಅಧಿಕವಾದ ಪದವನ್ನು ಸೇರಿಸುವಿಕೆ, ಅಧ್ಯಾಹಾರ. "अध्याहारस्तर्क ऊहः" अम०। 4. ಒಟ್ಟುಗೂಡಿಸುವಿಕೆ, ಒಟ್ಟಿಗೆ ಸೇರಿಸುವಿಕೆ. 5. (ಮೀಮಾಂಸಕರ ಮತದಲ್ಲಿ) "प्रकृतिवद्विकृतिः कर्तव्या" ಎಂಬ ಒಂದು ನ್ಯಾಯ, ಪ್ರಕೃತಿಯಾಗದಂತೆ ವಿಕೃತಿಯಾಗವನ್ನೂ ನಡೆಸಬೇಕೆಂಬ ಒಂದು ನ್ಯಾಯ. ಹೋಮಮಂತ್ರದಲ್ಲಿ ಅನನ್ವಿತವಾದ ವಿಭಕ್ತಿ ಮೊದಲಾದುವನ್ನು ತ್ಯಜಿಸಿ ಅನ್ವಯ ಯೋಗ್ಯವಾದ ವಿಭಕ್ತಿ ಮೊದಲಾದುವನ್ನು ಬದಲಾಯಿಸಿಕೊಳ್ಳುವುದು ಊಹವೆನಿಸುವುದು. "अग्नये त्वा जुष्टं निर्वपामि" ಎಂಬಂತೆ "सौर्यं चरुं निर्वपेत् ब्रह्मवर्चसकामः" ಎಂಬಲ್ಲಿ "सूर्याय त्वा जुष्टं निर्वपामि" ಎಂದು ಅನ್ವಯ ಯೋಗ್ಯವಾದ ವಿಭಕ್ತಿಯ ಬದಲಾವಣೆಯು ಊಹವು.

**ऊहन ಊಹನ** (न०) ಊಹಿಸುವಿಕೆ, ಅನುಮಾನಪಡುವಿಕೆ, ಉತ್ಪ್ರೇಕ್ಷಿಸುವಿಕೆ, ಕಲ್ಪನೆ. ऊह (वितर्के) "ल्युट्" (३-३-११५)।

**ऊहनीय ಊಹನೀಯ** (वि०) 1. ತರ್ಕಿಸಲು ಅರ್ಹವಾದ, ಉತ್ಪ್ರೇಕ್ಷಿಸಲ್ಪಡುವ, ವಿಮರ್ಶಿಸಲ್ಪಡುವ, ಕಲ್ಪಿಸಲ್ಪಡುವ. 2. ಅಧ್ಯಾಹಾರಮಾಡಲ್ಪಡುವ, ಅರ್ಥಪೂರ್ತಿಗಾಗಿ ಹೊಸದಾಗಿ ಸೇರಿಸಲ್ಪಡುವ (ಪದ). ऊह (वितर्के) अर्हार्थे "अनीयर्" (३-१-९६)।

**ऊहमान ಊಹಮಾನ** (वि०) ಊಹಿಸುತ್ತಿರುವ, ತರ್ಕಿಸುತ್ತಿರುವ, ಉತ್ಪ್ರೇಕ್ಷಿಸುತ್ತಿರುವ, ಕಲ್ಪಿಸುತ್ತಿರುವ. ऊह (वितर्के) "शानच्" (३-२-१२४)।

**ऊहा ಊಹಾ** (स्त्री०) 1. ಊಹೆ, ಕಲ್ಪನೆ. 2. ಅನುಮಾನ. 3. ಉತ್ಪ್ರೇಕ್ಷೆ. 4. ವಿಮರ್ಶೆ. ऊह (वितर्के) "अः" (३-३-१०३)।

**ऊहित ಊಹಿತ** (न०) 1. ಊಹೆ, ಕಲ್ಪನೆ, ತರ್ಕ. ऊह (वितर्के) भावे "क्तः" (३-३-११४)। 2. ಊಹಿಸಲ್ಪಟ್ಟ, ಯುಕ್ತಿಯಿಂದ ನಿರ್ಣಯಿಸಲ್ಪಟ್ಟ, ಕಲ್ಪಿಸಲ್ಪಟ್ಟ, ವಿಮರ್ಶಿಸಲ್ಪಟ್ಟ. ऊह कर्म० "क्तः" (३-२-१०२)।

**ऊहितवत् ಊಹಿತವತ್** (वि०) ಊಹಿಸಿರುವ, ತರ್ಕಿಸಿರುವ, ಕಲ್ಪಿಸಿರುವ. ऊह (वितर्के) "क्तवतुः" (३-२-१०२)।

**ऊहितव्य ಊಹಿತವ್ಯ** (वि०) "ऊहनीय" ಪದದ ಅರ್ಥ. ऊह (वितर्के) "तव्यः" (३-१-९६)।

**ऊहिनी ಊಹಿನೀ** (स्त्री०) ಪೊರಕೆ, ಬರಲು, ಕಸಬರಿಕೆ. ऊह (वितर्के) "णिनिः" (३-१-१३४)। "ङीप्" (४-१-५)।

**ऊह्य ಊಹ್ಯ** (वि०) 1. ತರ್ಕಿಸಲು ಅರ್ಹವಾದ, ವಿಮರ್ಶಿಸಲು ಯೋಗ್ಯವಾದ, ಉತ್ಪ್ರೇಕ್ಷಿಸಲ್ಪಡುವ. 2. ಅಧ್ಯಾಹಾರಮಾಡಲು ಅರ್ಹವಾದ, ಅರ್ಥಪೂರ್ತಿಗಾಗಿ ಹೊಸದಾಗಿ ಸೇರಿಸಲ್ಪಡುವ. ऊह (वितर्के) "ण्यत्" (३-१-१२४)।

इति "ऊ" कारादिपदार्थनिरूपणम्।

---

# ऋ

**ऋ ಋ** ಇದು ವರ್ಣಮಾಲೆಯಲ್ಲಿ ಏಳನೆಯ ವರ್ಣ (ಅಕ್ಷರ). ಇದು ಅಭ್ಯಂತರ ವಿವೃತ ಪ್ರಯತ್ನದಿಂದ ಮೂರ್ಧ ಸ್ಥಾನದಲ್ಲಿ ಹುಟ್ಟುವ ಒಂದು ಸ್ವರ ವರ್ಣ. ಉದಾತ್ತ, ಅನುದಾತ್ತ ಮತ್ತು ಸ್ವರಿತಗಳೆಂಬ ಮೂರು ಭೇದಗಳುಳ್ಳ ಈ ಹ್ರಸ್ವ "ऋ" ಕಾರವು ಪುನಃ ಅನುನಾಸಿಕ ಮತ್ತು ಅನನುನಾಸಿಕಗಳೆಂಬ ಭೇದದಿಂದ ಒಟ್ಟು ಆರು ವಿಧವಾಗುವುದು. विवृतमूष्मणां स्वराणां च। ऋटुरषाणां मूर्धा। सि० कौ०।

**ऋ ಋ** (पु०) 1. ಗಜ, ಆನೆ. 2. ಶೈಲ, ಬೆಟ್ಟ. 3. ಬುದ್ಧಿಯ ಭೇದ. 4. ಸ್ವಭಾವ. 5. ಭಾವಮೈದುನ, ಪತಿಯ ಸಹೋದರ, ಗಂಡನ ಒಡಹುಟ್ಟಿದವನು. 6. ಸ್ವರ್ಗಲೋಕ. 7. ದೇವತೆಗಳ ಶತ್ರು. (स्त्री०) 8. ನದಿ, ಹೊಳೆ. 9. ಅದಿತಿ, ದೇವತೆಗಳ ತಾಯಿ. 10. ಮದ್ಯ, ಹೆಂಡ. "ऋकारः कुञ्जरे शैले धीभेदे देवमातरि। भावे देवरिपौ नद्यां सुरायां देवरे दिवि" नानार्थर०। (अव्य०) 11. ನಿಂದೆ, ದೂಷಣೆ. 12. ವಾಕ್ಯ. "ऋ कुत्सायां च वाक्ये च देवमातर्यनव्ययम्" हेम०। 13. ಪರಿಹಾಸ್ಯ, ನೋಡಿ ನಗುವಿಕೆ, ಅಣಕಿಸುವಿಕೆ. 14. ಸಂಬೋಧನೆ.

**ऋ-गतौ प्रापणे च** (भ्वा० पर० सक० अनि०) १. ऋच्छति ऋच्छतः ऋच्छन्ति। २. आर आरतुः आरुः। ३. अर्ता अर्तारौ अर्तारः। ४. अरिष्यति। ५. ऋच्छतु। ६. आर्च्छत्। ७. ऋच्छेत्। ८. अर्यात्। ९. आर्षीत्। १०. आरिष्यत्। 1. ಹೋಗು, ಹೊಂದು, ತಲುಪು. "आर्च्छन् वामं मृगाः कृष्णाः शस्त्राणां व्यस्मरन् भटाः" भट्टि० १७-१०। 2. ಪಡೆ, ಹೊಂದು, ಸಂಪಾದಿಸು. "शस्त्रीश्यामैरंशुभिराशु द्रुतमम्भश्छायामच्छामृच्छति नीलीसलिलस्य" माघ० ४-४४।

**कर्मणि:**—अर्यते। आरे। आरिता, अर्ता। आरिष्यते, अरिष्यते। अर्यताम्। आर्यत। अर्येत। आरिषीष्ट, ऋषीष्ट। आरि। आरिष्यत।

**णिचि:**—अर्पयति, –ते। अर्पयांचकार, –चक्रे –बभूव, –आस। अर्पयिता। अर्पयिष्यति, –ते। अर्पयतु, –ताम्। अर्प्यात्, अर्पयिषीष्ट।

**सनि:**—अरिरिषति। अरिरिषांचकार, –बभूव –आस। अरिरिषिता। अरिरिषतु।

**कृत्सु:**—अर्तव्यम्। अरणीयम्। अर्यः स्वामी वैश्यो वा। (ಯಜಮಾನ ಅಥವಾ ವೈಶ್ಯ). आर्यः प्राप्तव्यो ब्राह्मणः। ऋणम् (ಸಾಲ), ऋतम् (ಸತ್ಯ). ऋतवान्। ऋच्छन्। ऋच्छन्ती। समृच्छमानः "समो गम्यृच्छिभ्याम्"। अर्तुम्। ऋतम्। अरणम्। ऋत्वा। समृत्य। आरम् आरम्। ऋत्वाऋत्वा। "ऋ" ಧಾತುವಿಗೆ "सम्" ಉಪಸರ್ಗವು ಸೇರಿದರೆ ಆತ್ಮನೇಪದಿಯಾಗುವುದು. समृच्छते। समारे। समर्ता ಇತ್ಯಾದಿ.

**ऋ-गतौ** (जुहो० पर० सक० अनि०) इयर्ति। आर। अर्ता। इयर्तु। इयृयात्। अर्यात्। ಇತ್ಯಾದಿ. 1. ಹೋಗು, ಚಲಿಸು. 2. ತಲುಪು. कर्मणि णिचि कृत्सु च भ्वादि "ऋ" ಧಾತುವಿನಂತೆ ರೂಪಗಳಾಗುವುವು.

**ऋक्थ ಋಕ್ಥ** (न०) ಧನ. ಹಣ. ऋच (स्तुतौ) "थक्" बाहु०। "द्रव्यं वित्तं स्वापतेयं रिक्थमृक्थं धनं वसु" अम०।

**ऋक्थग्राह ಋಕ್ಥಗ್ರಾಹ** (वि०) ದಾಯಾದ. ದಾಯವನ್ನು ಹೊಂದತಕ್ಕವನು, ಭಾಗ ಪಡೆಯಲು ಹಕ್ಕುದಾರ. ऋक्थं गृह्णाति—ग्रह (उपादाने) "अण्" (३-२-१)। "ण्वुल्" (३-१-१३३)। **-ग्राहकः -ಗ್ರಾಹಕಃ.** ऋक्थस्य ग्राहकः।

**ऋक्थग्राहिन् ಋಕ್ಥಗ್ರಾಹಿನ್** (वि०) ದಾಯಾದ, ದಾಯವನ್ನು ಹೊಂದತಕ್ಕವನು, ಭಾಗ ಪಡೆಯಲು ಹಕ್ಕುದಾರ. ऋक्थं गृह्णाति—ग्रह (उपादाने) "णिनिः" (३-२-७८)। स्त्रियां "ङीप्" (४-१-५)। **-ग्राहिणी -ಗ್ರಾಹಿಣೀ.**

**ऋक्थिन् ಋಕ್ಥಿನ್** (वि०) ಹಣವಂತ, ಐಶ್ವರ್ಯವಂತ, ಧನಿಕ. ऋक्थमस्यास्ति "इनिः" (५-२-११५)। स्त्रियां "ङीप्" (४-१-५)। **ऋक्थिनी ಋಕ್ಥಿನೀ.**

**ऋक्ष ಋಕ್ಷ** (पु०) 1. ಭಲ್ಲೂಕ, ಕರಡಿ. ऋक्षिणोति—ऋक्षि (हिसायाम्) "अच्" (३-१-१३४)। ऋष्यते गहनमनेन—ऋषी (गतौ) "सः" (उ० ३-६६) वा। "वृको मृगेभं व्याघ्रोऽश्वं फलमूलं तु मर्कटः। स्त्रीमृक्षः स्तोकको वारि यानान्युष्ट्रः पशूनजः" मनु० १२-६७। 2. ಒಂದು ಪರ್ವತ. ಸಪ್ತಕುಲಪರ್ವತಗಳಲ್ಲೊಂದು. "महेन्द्रो मलयः सह्यः शुक्तिमान् ऋक्षपर्वतः। विन्ध्यश्च पारियात्रश्च सप्तैते कुलपर्वताः"। 3. ಶೋಣಕ ವೃಕ್ಷ, ಹೆಮ್ಮರ. "श्योनाकशुकनासर्क्षदीर्घवृन्तकुटन्नटाः" अम०। 4. ಅಜಮೀಢರಾಜನ ಮಗ. "धूमिन्या स तया देव्या त्वजमीढः समीयिवान्। ऋक्षं सञ्जनयामास धूम्रवर्णं सुदर्शनम्। ऋक्षात् संवरणो जज्ञे कुरुः संवरणात्तथा" हरिवं०। 5. ಚಂದ್ರವಂಶದ ದೇವಾತಿಥಿರಾಜನ ಮಗ. (न०) 6. ತಾರೆ, ಚುಕ್ಕಿ, ನಕ್ಷತ್ರ. "पूर्वां सन्ध्यां जपंस्तिष्ठेत् सावित्रीमार्कदर्शनात्। पश्चिमं तु समासीनः सम्यगृक्षविभावनात्" मनु० २-१०१। 7. ರಾಶಿ. [ನಕ್ಷತ್ರಗಳು ಸಂಚರಿಸುವುದರಿಂದ ರಾಶಿಗೂ ಋಕ್ಷವೆಂದು ಹೆಸರು.] ಮೇಷ ವೃಷಭ ಮೊದಲಾಗಿ ರಾಶಿಗಳು ಹನ್ನೆರಡು. [ವಿವರಕ್ಕೆ "राशि" ಪದದಲ್ಲಿ ನೋಡಿ.] "प्रययावातिथेयेषु वसन् ऋषिकुलेषु सः। दक्षिणां दिशमृक्षेषु वार्षिकेष्विव भास्करः" रघु० १२-२५। 8. ನಕ್ಷತ್ರ, ಅಶ್ವಿನಿ ಭರಣಿ ಮೊದಲಾದ ಇಪ್ಪತ್ತೇಳು (27 ಅಭಿಜಿತ್ ಸೇರಿ 28) ನಕ್ಷತ್ರಗಳು. [ವಿವರಕ್ಕೆ "नक्षत्र" ಪದದಲ್ಲಿ ನೋಡಿ.] (स्त्री०) **-क्षा -ಕ್ಷಾ.** 1. ಹೆಣ್ಣು ಕರಡಿ. 2. ಉತ್ತರ ದಿಕ್ಕು. निरु०।

**ऋक्षगन्धा ಋಕ್ಷಗಂಧಾ** (स्त्री०) 1. ಹಾಲುಗುಂಬಳ. 2. ಅನಂತನಗೊಂಡೆಸೊಪ್ಪು. ऋक्षान् ऋक्षसदृशान् हिंस्रान् गन्धयते अर्दयति—गन्ध (अर्दने) "कः" (वा० ३-२-५)। "कन्" (५-३-७५)। **-गन्धिका -ಗಂಧಿಕಾ.**

**ऋक्षचक्र ಋಕ್ಷಚಕ್ರ** (न०) ನಕ್ಷತ್ರಗಳ ಗುಂಪು, ಚಕ್ರಾಕಾರವಾದ ನಕ್ಷತ್ರಗಳ ಸಮೂಹ. ऋक्षाणां चक्रम्।

**ऋक्षर ಋಕ್ಷರ** (पु०) 1. ಋತ್ವಿಕ್ಕು. ऋषी (गतौ) "क्सरन्" (उ० ३-७५)। 2. ಕಂಟಕ, ಮುಳ್ಳು. 3. ಜಲಾಶಯ, ನೀರು ನಿಲ್ಲುವ ಸ್ಥಳ. "जलस्थानेत्वृक्षर ऋत्विजि" वैज०। (न०) 4. ನೀರಿನ ಧಾರೆ, ಮಳೆಯ ಹನಿ. "ऋक्षरं वारिधारायामृक्षरश्चर्त्विजि स्मृतः" मेदि०।

**ऋक्षराज् ಋಕ್ಷರಾಜ್, -राज -ರಾಜ.** (पु०) 1. ಚಂದ್ರ, ನಕ್ಷತ್ರಗಳ ಒಡೆಯ. ऋक्षाणां राट्। ऋक्षाणां राजा वा "टच्" (५-४-९१)। 2. ಜಾಂಬವಂತ.

**ऋक्षवत् ಋಕ್ಷವತ್** (पु०) ನರ್ಮದಾ ನದಿಯ ತೀರದಲ್ಲಿ ಇರುವ ಒಂದು ಬೆಟ್ಟ. ऋक्षाः बाहुल्येन सन्त्यत्र "मतुप्" (५-२-९४)। ಈ ಬೆಟ್ಟದಲ್ಲಿ ಕರಡಿಗಳು ಹೇರಳವಾಗಿ ಇರುವುದರಿಂದ ಈ ಹೆಸರು. "निःशेषविक्षालितधातुनापि वप्रक्रियामृक्षवतस्तटेषु" रघु० ५-४४।

**ऋक्संहिता ಋಕ್‌ಸಂಹಿತಾ** (स्त्री०) ಋಗ್ವೇದ ಸಂಹಿತೆ. [ವೇದವು ಮಂತ್ರ ಮತ್ತು ಬ್ರಾಹ್ಮಣ ಎಂದು ಎರಡು ಭಾಗ. ಮಂತ್ರಾತ್ಮಕ ಭಾಗವು ಸಂಹಿತೆ. ಉಳಿದ ಭಾಗವು ಬ್ರಾಹ್ಮಣ.]

**ऋक्साम ಋಕ್‌ಸಾಮ** (न० द्विव०) ಋಗ್ವೇದ ಮತ್ತು ಸಾಮವೇದ. ऋक् च साम च "अच्" (५-४-७७)। निपा०।

**ऋग्विधान ಋಗ್ವಿಧಾನ** (न०) ಋಗ್ವೇದ ಮಂತ್ರಗಳಿಂದ ಕರ್ಮಾಚರಣೆಯನ್ನು ವಿಧಿಸುವ ಗ್ರಂಥ. ऋचा ऋग्वेदेन कर्मणो विधानं यत्र।

**ऋग्वेद ಋಗ್ವೇದ** (पु०) ನಾಲ್ಕು ವೇದಗಳಲ್ಲೊಂದು; ಋಗ್ವೇದವು ದೇವತೆಗಳ ಸ್ತೋತ್ರರೂಪವಾದುದು. ಇದು ಸಂಹಿತೆ (ಮಂತ್ರ) ಮತ್ತು ಬ್ರಾಹ್ಮಣಗಳೆಂದು ಎರಡು ಭಾಗಗಳನ್ನೊಳಗೊಂಡಿರುವುದು. ಮಂತ್ರಾತ್ಮಕ ಭಾಗವು

ಸಂಹಿತೆ. ಉಳಿದ ಭಾಗವು ಬ್ರಾಹ್ಮಣ. ಋಗ್ವೇದವು ಅಗ್ನಿಯಿಂದ ಉತ್ಪನ್ನವಾದುದು. "अग्निवायुरविभ्यस्तु त्रयं ब्रह्म सनातनम्। दुदोह यज्ञसिद्ध्यर्थमृग्यजुःसामलक्षणम्" मनु० १-२३। "अग्नेर्ऋग्वेदो वायोर्यजुर्वेद आदित्यात्सामवेदः" श्रुतिः। ಋಗ್ವೇದವು ಹತ್ತು ಮಂಡಲಗಳಾಗಿ ಅಥವಾ ಎಂಟು ಅಷ್ಟಕಗಳಾಗಿ ಭಾಗಿಸಲ್ಪಟ್ಟಿದೆ. **ಈ ಹತ್ತು ಮಂಡಲಗಳಲ್ಲಿರುವ ಅನುವಾಕ ಮತ್ತು ಸೂಕ್ತಗಳ ಸಂಖ್ಯೆ :—**

| ಮಂಡಲ | ಯಾವ ಋಷಿದೃಷ್ಟ | ಅನುವಾಕಗಳು | ಸೂಕ್ತಗಳು |
|---|---|---|---|
| 1. | ಶತರ್ಚನ ಋಷಿ | 24 | 191 |
| 2. | ಶೌನಕ-ಗೃತ್ಸಮದ ಋಷಿ | 4 | 43 |
| 3. | ವಿಶ್ವಾಮಿತ್ರ ಋಷಿ | 5 | 62 |
| 4. | ವಾಮದೇವ ಋಷಿ | 5 | 58 |
| 5. | ಆತ್ರೇಯಾದಿ ಋಷಿ | 6 | 87 |
| 6. | ಭರದ್ವಾಜ ಋಷಿ | 6 | 75 |
| 7. | ವಸಿಷ್ಠ ಋಷಿ | 6 | 104 |
| 8. | ಮೇಧಾತಿಥ್ಯಾದಿ ಋಷಿ | 10 | 103 |
| 9. | ವೈಶ್ವಾಮಿತ್ರಾದಿ ಋಷಿ | 7 | 114 |
| 10. | ಆಪ್ತ್ಯತ್ರಿತಾದಿ ಋಷಿ | 12 | 191 |
| | | | 1028 |

ಈ ರೀತಿ ಋಗ್ವೇದದಲ್ಲಿ ಒಟ್ಟು 1028 ಸೂಕ್ತಗಳು ಇರುವುವು. ಅಷ್ಟಕಗಳ ವಿಭಾಗಕ್ರಮದಲ್ಲಿ ಒಂದೊಂದು ಅಷ್ಟಕಕ್ಕೂ 8 ಅಧ್ಯಾಯಗಳಂತೆ 64 ಅಧ್ಯಾಯಗಳಿರುವುವು. ಈ ವೇದಭಾಗವು ಯಜ್ಞದಲ್ಲಿ ದೇವತೆಗಳ ಆಹ್ವಾನಕ್ಕಾಗಿ ಉಪಯುಕ್ತವಾಗಿದೆ. ಯಾಗದಲ್ಲಿ ಋಗ್ವೇದ ಮಂತ್ರಗಳನ್ನು ಪಠಿಸುವವರಿಗೆ "ಹೋತೃ" ಎಂದು ಹೆಸರು. ಆಯುರ್ವೇದವು ಈ ವೇದದ ಉಪವೇದ.

**ऋच् ಋಚ್** (स्त्री०) 1. ಋಗ್ವೇದ ಮಂತ್ರ. ऋच्यन्ते स्तूयन्ते देवा अनया—ऋच (स्तुतौ) "क्विप्"। 2. ಛಂದೋಬದ್ಧವಾದ ಮಂತ್ರ, ವೃತ್ತನಿಯಮಕ್ಕೊಳಪಟ್ಟು ಪಾದವ್ಯವಸ್ಥೆಯಿರುವ ಮಂತ್ರ. तुभ्यमग्रे पर्यवहन्सूर्यां वहतुना सह। पुनः पतिभ्यो जायां दा अग्ने प्रजया सह। 3. ಸ್ತೋತ್ರ. 4. ಪೂಜೆ.

**ऋचीक ಋಚೀಕ** (पु०) ಭೃಗುವಂಶದ ಜಮದಗ್ನಿಯ ತಂದೆ, ಪರಶುರಾಮನ ತಾತ; ಋಚೀಕನು ತನ್ನ ಪತ್ನಿಯಾದ ಸತ್ಯವತಿಯ ಪತಿಭಕ್ತಿಗೆ ಮೆಚ್ಚಿ ಅವಳಿಗೆ ಪುತ್ರನು ಜನಿಸುವಂತೆ ಅನುಗ್ರಹಿಸಲಾಗಿ ಅವಳಲ್ಲಿ ಜಮದಗ್ನಿಯು ಜನಿಸುವನು.

**ऋचीष ಋಚೀಷ** (न०) ಹಿಟ್ಟು ಬೇಯಿಸುವ ಪಾತ್ರೆ. ऋच (स्तुतौ) "ईषन्" बाहु०। "ऋचीषं पिष्टपचनम्" वैज०।

**ऋच्छरा ಋಚ್ಛರಾ** (स्त्री०) ವೇಶ್ಯೆ, ಸೂಳೆ. ऋच्छति परपुरुषं प्राप्नोति—ऋच्छ (गतौ) "अरः" (उ० ३-१३१)। "ऋच्छरा वेश्या" सि० कौ०।

**ऋजीक ಋಜೀಕ** (पु०) 1. ಇಂದ್ರ. 2. ಧೂಮ, ಹೊಗೆ. ऋज (गतौ) "ईकन्" (उ० ४-२२)।

**ऋजीष ಋಜೀಷ** (पु०) 1. ಒಂದು ನರಕ. "लोहशङ्कुमृजीषं च पन्थानं शाल्मलीं नदीम्" मनु० ४-९०। 2. ಸೋಮಲತೆಯ ರಸ. (न०) 3. ಹಿಟ್ಟು ಬೇಯಿಸುವ ಪಾತ್ರೆ. अर्ज (अर्जने) "ईषन्" (उ०३-२८)। "ऋजीषं पिष्टपचनम्" अम०।

**ऋजु ಋಜು** (वि०) 1. ಸರಳವಾದ, ವಕ್ರವಲ್ಲದ, ಕುಟಿಲವಲ್ಲದ, ನೆಟ್ಟಗಿರುವ. अर्जयति गुणान्—अर्ज (अर्जने) "कुः" धातोः "ऋज" आदेशश्च (उ० १-२७)। "ऋजवस्ते तु सर्वे स्युरव्रणाः सौम्यदर्शनाः" मनु० २-४७। 2. ಪ್ರಾಮಾಣಿಕವಾದ, ಕಪಟವಿಲ್ಲದ, ಸರಳಸ್ವಭಾವದ, ನೀತಿವಂತ. "ऋजूंश्च विश्वासकृतः स्वभावान् गोपाङ्गनानां मुमुदे विलोक्य" भट्टि० २-१५। "उमां स पश्यन् ऋजुनैव चक्षुषा" कुमा० ५-३२। 3. ಉತ್ಪತ್ತಿಯಿಲ್ಲದ, ಹುಟ್ಟಿಲ್ಲದ. "आद्यमादिभवे भक्ष्येप्युत्पत्तिरहितेऽप्यृजुः" वैज०। स्त्रियां वा "ङीष्" (४-१-४४)। **–ज्वी –जुः –ಜ್ವೀ –ಜು।** "ऋज्वीर्दधानैरवतत्य कन्धराश्चलावचूडाः कलघर्घरारवैः" माघ० १२-१८।

**ऋजुकाय ಋಜುಕಾಯ** (वि०) ನೇರವಾದ ಮೈಯುಳ್ಳ, ವಕ್ರವಲ್ಲದ ದೇಹವುಳ್ಳ, ಬಗ್ಗಿಲ್ಲದ ಮೈಯುಳ್ಳ. ऋजुः कायो यस्य। "तस्मिन् स्वस्ति समासीनः ऋजुकायः समभ्यसेत्" भाग० ३-२८-९।

**ऋजुग ಋಜುಗ** (पु०) 1. ಬಾಣ. ऋजु यथा तथा गच्छति—गम्लृ (गतौ) "डः" (वा० ३-२-४८)। (वि०) 2. ಪ್ರಾಮಾಣಿಕ, ಸರಳ ಸ್ವಭಾವದ, ನೀತಿವಂತ.

**ऋजुगामिन् ಋಜುಗಾಮಿನ್** (वि०) 1. ಪ್ರಾಮಾಣಿಕವಾಗಿ ನಡೆಯುವ, ಸರಳತೆಯಿಂದ ವರ್ತಿಸುವ. 2. ನೆಟ್ಟಗೆ ಹೋಗುವ. ऋजु यथा तथा गच्छति—गम्लृ (गतौ)

"णिनिः" (३-२-७८)। स्त्रियां "ङीप्" (४-१-५)। –गामिनी –ಗಾಮಿನೀ.

**ऋजुता ಋಜುತಾ** (ಸ್ತ್ರೀ०) 1. ಸರಳತೆ, ಪ್ರಾಮಾಣಿಕತೆ. ऋजोर्भावः "तल्" (५-१-११९)। 2. ನೇರವಾಗಿ ಇರುವಿಕೆ, ಡೊಂಕಿಲ್ಲದಿರುವಿಕೆ. "ऋजुता वक्रतां प्राप वक्रता च तथार्जवम्" चं० रा०। "ऋजुताफलशुद्धि-योगभाजाम्" माघ० २०-९। भावे "त्वः" (५-१-११९)। ऋजुत्वम् ಋಜುತ್ವಮ್.

**ऋजूकरण ಋಜೂಕರಣ** (ನ०) 1. ನೆಟ್ಟಗೆ ಮಾಡುವುದು, ಡೊಂಕಾಗಿರುವುದನ್ನು ನೇರವಾಗಿ ಮಾಡುವಿಕೆ. (ವಿ०) 2. ಡೊಂಕಾಗಿರುವುದನ್ನು ನೆಟ್ಟಗೆ ಮಾಡುವ ಒಂದು ಸಾಧನ. अनृजुः ऋजुः क्रियतेऽनेन—ऋजु अभूतत० "च्विः" (५-४-५०)। दीर्घः (७-४-२६)।

**ऋज्र ಋಜ್ರ** (ಪು०) 1. ನಾಯಕ, ಯಜಮಾನ. ऋज (गतिस्थानार्जनेषु) "रन्" (उ० २-२८)। (ವಿ०) 2. ಪ್ರಾಮಾಣಿಕ, ಸರಳತೆಯಿಂದ ವರ್ತಿಸುವವನು, ಕಪಟವಿಲ್ಲದವನು.

**ऋज्वी ಋಜ್ವೀ** (ಸ್ತ್ರೀ०) 1. ಸರಳ ಸ್ವಭಾವದ ಹೆಂಗಸು, ಕಪಟವಿಲ್ಲದ ಹೆಂಗಸು. 2. ನೇರವಾದ ಗತಿ, ವಕ್ರವಲ್ಲದ ಗಮನ.

**ऋण ಋಣ** (ನ०) ಸಾಲ, ಕಡ. अर्यते—ऋ (गतौ) "क्तः" (३-२-१०२)। नत्वम् (८-२-६०)। निपा०। ಋಣವು ಲೌಕಿಕ ಮತ್ತು ಅಲೌಕಿಕವೆಂದು ಎರಡು ವಿಧ. ಮನುಷ್ಯನು ತನ್ನ ಕುಟುಂಬದ ಆವಶ್ಯಕತೆಯ ಪೂರ್ತಿಗಾಗಿ ಅಥವಾ ವಾಣಿಜ್ಯಾದಿ ನಿಮಿತ್ತವಾಗಿ ಧನಿಕನಿಂದ ಹಣವನ್ನು ಪಡೆಯುವುದೂ, ಧನಿಕನು ತಾನು ಕೊಡಿಟ್ಟಿರುವ ಹಣವು ವೃದ್ಧಿಹೊಂದಲು ಬಡ್ಡಿಯ ಮೇಲೆ ಹಣವನ್ನು ಸಾಲವಾಗಿ ಕೊಡುವುದೂ ಲೌಕಿಕ ಋಣವೆನಿಸುವುದು. ಇಂತಹ ಋಣವನ್ನು ಹಿಂತಿರುಗಿಸುವುದರಿಂದಾಗಲೀ ಅದಕ್ಕೆ ಶಕ್ತಿಯಿಲ್ಲದಿದ್ದಲ್ಲಿ ಸಾಲಕೊಟ್ಟವನಲ್ಲಿ ಕೆಲಸಮಾಡಿಯಾಗಲೀ ತೀರಿಸಬೇಕು. "कर्मणापि समं कुर्याद्धनिकायाधमर्णिकः। समोऽवकृष्टजातिस्तु दद्या-च्छ्रेयांस्तु तच्छनैः" मनु० ८-१७७। ಇಂತಹ ಋಣವನ್ನು ಪಡೆದಿದ್ದಲ್ಲಿ ಅವನ ಮಗ ಮತ್ತು ಮೊಮ್ಮಗ ಇವರು ಮಾತ್ರ ತೀರಿಸಬೇಕು. "ऋणं लेख्यकृतं देयं पुरुषैस्त्रिभिरेव तु" याज्ञ० २-९२। ಇದಲ್ಲದೆ ಮನುಷ್ಯನು ದೇವತೆಗಳು, ಋಷಿಗಳು ಮತ್ತು ಪಿತೃಗಳಿಗೂ ಋಣಿಯಾಗಿರುತ್ತಾನೆ. ಈ ಋಣಗಳನ್ನು ತೀರಿಸಿದ ಹೊರತು ಮೋಕ್ಷವಿಲ್ಲ. "देवानां च पितॄणां च ऋषीणां च तथा नरः। ऋणवान् जायते यस्मात्तन्मोक्षे प्रयतेन्नरः" वि० ध०। ದೇವಋಣವನ್ನು ಯಜ್ಞದಿಂದಾಗಲಿ ಅದಕ್ಕೆ ಅಶಕ್ತನಾಗಿದ್ದಲ್ಲಿ ಪೂಜೆ ಉಪವಾಸಾದಿಗಳಿಂದಾಗಲಿ ತೀರಿಸಬೇಕು. "देवाना-मनृणो जन्तुर्यज्ञैर्भवति मानवः। अल्पवित्तश्च पूजाभि-रुपवासव्रतैस्तथा" वि० ध०। ಬ್ರಹ್ಮಚರ್ಯ (ನಿಯಮ ವೇದಾಧ್ಯಯನ), ಶಾಸ್ತ್ರಾಭ್ಯಾಸ, ತಪಸ್ಸುಗಳಿಂದ ಋಷಿ ಋಣವನ್ನೂ, ಶ್ರಾದ್ಧಾಚರಣೆ ಮತ್ತು ಸಂತಾನದಿಂದ ಪಿತೃ ಋಣವನ್ನೂ ತೀರಿಸಬೇಕು. "श्राद्धेन प्रजया चैव पितॄणा-मनृणो भवेत्। ऋषीणां ब्रह्मचर्येण श्रुतेन तपसा तथा" वि० ध०। "जायमानो वै ब्राह्मणस्त्रिभिर्ऋणैः ऋणी भवति ब्रह्मचर्येण ऋषिभ्यो यज्ञेन देवेभ्यः प्रजया पितृभ्यः" श्रुतिः।

**ऋणग्राहिन् ಋಣಗ್ರಾಹಿನ್** (ವಿ०) ಸಾಲ ಮಾಡುವವನು, ಸಾಲ ಕೊಳ್ಳುವವನು. ऋणं गृह्णाति—ग्रह (उपादाने) "णिनिः" (३-१-१३४)।

**ऋणदातृ ಋಣದಾತೃ** (ವಿ०) ಸಾಲ ಕೊಡುವವನು. ऋणस्य दाता। स्त्रियां –दात्री –ದಾತ್ರೀ.

**ऋणदास ಋಣದಾಸ** (ಪು०) ತಾನು ಮಾಡಿದ ಸಾಲ ತೀರಿಸಲು ಸಾಧ್ಯವಾಗದೆ ಸಾಲ ತೀರ್ವೆಗಾಗಿ ಸೇವೆ ಮಾಡುವ ಸೇವಕ. ऋणात् मोचनेन कृतो दासः। ऋणमोचनाय दासत्वमभ्युपगतः।

**ऋणमत्कुण ಋಣಮತ್ಕುಣ** (ಪು०) ಜಾಮೀನುದಾರ, ಮತ್ತೊಬ್ಬನ ಸಾಲಕ್ಕೆ ಹೊಣೆಯಾಗಿರುವವನು. परकृतं ऋणं ममैवेति कुणति—कुण (शब्दोपकरणयोः) "कः" (३-१-१३५)।

**ऋणमुक्त ಋಣಮುಕ್ತ** (ವಿ०) ಸಾಲ ತೀರಿಸಿದವನು, ಸಾಲದಿಂದ ಬಿಡುಗಡೆ ಹೊಂದಿದವನು. ऋणान्मुक्तः।

**ऋणमुक्ति ಋಣಮುಕ್ತಿ** (ಸ್ತ್ರೀ०) ಸಾಲದಿಂದ ಬಿಡುಗಡೆ ಹೊಂದುವಿಕೆ, ಸಾಲ ತೀರಿಸುವಿಕೆ. ऋणान्मुक्तिः।

**ऋणमोचन ಋಣಮೋಚನ** (ನ०) 1. ಸಾಲದಿಂದ ಬಿಡುಗಡೆ ಮಾಡುವಿಕೆ. ऋणान्मोचनम्। (ವಿ०) 2. ಸಾಲದಿಂದ ಬಿಡುಗಡೆ ಮಾಡುವ. ऋणान्मोचयति—मुच्लृ (मोक्षणे) + णिच् "ल्युः" (३-१-१३४)।

**ऋणलेख्य ಋಣಲೇಖ್ಯ** (ನ०) ಸಾಲದ ಪತ್ರ, ಸಾಲ ತೆಗೆದುಕೊಂಡ ಬಗ್ಗೆ ಬರೆದುಕೊಡುವ ದಸ್ತೈವೇಜು. ऋणसूचकं लेख्यम्।

**ऋणादान ಋಣಾದಾನ** (ನ०) ಸಾಲ ಕೊಟ್ಟು ಬಡ್ಡಿ ಸಮೇತ ತೆಗೆದುಕೊಳ್ಳುವಿಕೆ. ऋणस्य आदानम् ग्रहणम्। ಋಣಾ

ದಾನವು ಹದಿನೆಂಟು ವಿಧ ವಿವಾದಗಳಲ್ಲಿ ಮೊದಲನೆಯದು. ಸಾಲವನ್ನು (1) ಎಂತಹವನಿಗೆ ಕೊಡಬೇಕು. (2) ಎಂತಹವನಿಗೆ ಕೊಡಬಾರದು, (3) ಎಂತಹವನಿಂದ ಪಡೆಯಬೇಕು. (4) ಎಂತಹ ಸಮಯದಲ್ಲಿ ಕೊಡಬೇಕು. (5) ಯಾವ ರೀತಿಯಲ್ಲಿ ಕೊಡಬೇಕು, (6) ಕೊಡುವುದು ಮತ್ತು (7) ಕೊಟ್ಟ ಸಾಲವನ್ನು ಹಿಂದಕ್ಕೆ ಪಡೆಯುವುದು. ಈ ರೀತಿ **ಋಣಾದಾನವು** ಏಳುವಿಧ. "ऋणं देयमदेयञ्च येन यत्र यथा भवेत्। दानग्रहणधर्मश्च ऋणादानमिति स्मृतम्"। ಹೆಂಗಸರು, ಮಕ್ಕಳು, ಸೇವಕರಿಗೆ ಕೊಟ್ಟ ಸಾಲವು ಬರುವುದಿಲ್ಲವಾದುದರಿಂದ ಅವರಿಗೆ ಸಾಲ ಕೊಡಕೂಡದು. "न स्त्रीभ्यो दासबालेभ्यः प्रदद्यात् किञ्चिदुद्धृतम्। दाता न लभते तत्तु तेभ्यो दत्तं तु यद्वसु"।

**ऋणान्तक ಋಣಾಂತಕ** (पुं०) ಕುಜ, ಅಂಗಾರಕಗ್ರಹ. ऋणमन्तयति नाशयति—अन्ति (नामधातुः) "ण्वुल्" (३-१-१३३)। [ಮಂಗಳ ಗ್ರಹದ ಪೂಜೆಯಿಂದ ಸಾಲ ತೀರುವುದೆಂದು ಶಾಸ್ತ್ರವಚನವಿರುವುದು.]

**ऋणापकरण ಋಣಾಪಕರಣ** (न०) ಸಾಲದ ತೀರ್ವೆ, ಸಾಲ ತೀರಿಸುವಿಕೆ.

**ऋणापनोदन ಋಣಾಪನೋದನ** (न०) ಸಾಲ ತೀರಿಸುವಿಕೆ, ಕೊಂಡ ಸಾಲವನ್ನು ಹಿಂದಕ್ಕೆ ಕೊಡುವುದು. ऋणस्यापनोदनम्।

**ऋणिक ಋಣಿಕ** (वि०) ಸಾಲಕೊಂಡವನು, ಕಡ ಪಡೆದವನು. ऋणमस्त्यस्य "ठन्" (५-२-११५)।

**ऋणिन् ಋಣಿನ್** (वि०) ಸಾಲ ತೆಗೆದುಕೊಂಡವನು, ಸಾಲ ಪಡೆದವನು. ऋणमस्यास्ति "इनिः" (५-२-११५)। "जायमानो वै ब्राह्मणः त्रिभिर्ऋणैर्ऋणी भवति ब्रह्मचर्येण ऋषिभ्यो यज्ञेन देवेभ्यः प्रजया पितृभ्यः" श्रुतिः। स्त्रियां "ङीप्" (४-१-५)। **ऋणिनी ಋಣಿನೀ.**

**ऋणोद्ग्राहण ಋಣೋದ್ಗ್ರಾಹಣ** (न०) ಸಾಲ ಕೊಟ್ಟವನು ಸಾಲ ಕೊಂಡವನಿಂದ ಹಣವನ್ನು ಹಿಂದಕ್ಕೆ ಪಡೆಯುವುದು. ऋणस्योद्ग्राहणम्। ಸಾಲಗಾರನು ತಾನು ಪಡೆದ ಸಾಲವನ್ನು ವಾಯಿದೆ ಮೀರಿದರೂ ಹಿಂತಿರುಗಿಸದಿದ್ದರೆ ಅದನ್ನು ಈ ಐದು ಉಪಾಯಗಳಿಂದ ಪಡೆಯಬಹುದು. "यैर्यैरुपायैरर्थं स्वं प्राप्नुयादुत्तमर्णिकः। तैस्तैरुपायैः संगृह्य साधयेदधमर्णिकम्। धर्मेण व्यवहारेण छलेनाचरितेन च। प्रयुक्तं साधयेदर्थं पञ्चमेन बलेन च" मनु ८-४८, ४९।

(1) ಒಳ್ಳೆಯ ಮಾತಿನಿಂದಲೂ ಸ್ನೇಹಿತರು ಮತ್ತು ಬಂಧುಗಳ ಮೂಲಕ ಹೇಳಿಸುವುದರಿಂದಲೂ ಸಾಲವನ್ನು ಹಿಂದಕ್ಕೆ ಪಡೆಯುವುದು ಧರ್ಮದ ಉಪಾಯ.

(2) ಋಣಿಯು ಹಣ ಕೊಡುವವರೆಗೂ ಪಂಚಾಯತಿದಾರರ ಮುಂದೆ ಹಿಡಿದು ನಿಲ್ಲಿಸಿ ಹಣವನ್ನು ಪಡೆಯುವುದು ವ್ಯವಹಾರದ ಮಾರ್ಗ.

(3) ಉಪಾಯದಿಂದ ಸಾಲಗಾರನ (ಋಣಿಯ) ಚರ ಆಸ್ತಿಗಳನ್ನು ತರಿಸಿಕೊಂಡು ಹಣವನ್ನು ಪಡೆಯುವುದು ಛಲದ ಉಪಾಯ.

(4) ಸಾಲಗಾರನ ಮಕ್ಕಳು, ಹೆಂಡತಿ, ದನಕರುಗಳನ್ನು ತಡೆದು ನಿಲ್ಲಿಸಿ ಮನೆಯ ಬಾಗಿಲಲ್ಲಿ ಕುಳಿತುಕೊಂಡು ಹಣವನ್ನು ವಸೂಲು ಮಾಡುವುದು ಆಚರಿತದ ಉಪಾಯ.

(5) ಸಾಲಗಾರನನ್ನು ಮನೆಗೆ ಎಳೆದುಕೊಂಡು ಬಂದು ಕಟ್ಟಿಹಾಕಿ ಹೊಡೆದು ಬಡಿದು ಹಣವನ್ನು ವಸೂಲು ಮಾಡುವುದು ಬಲಾತ್ಕಾರದ ಉಪಾಯ.

**ऋत ಋತ** (पुं०) 1. ಸೂರ್ಯ. 2. ಯಾಗ, ಯಜ್ಞ. (न०) 3. ಸತ್ಯ, ನಿಜ. ऋ (गतौ) "क्तः" (३-२-१०२)। "आयुष्यं प्राङ्मुखो भुङ्क्ते यशस्यं दक्षिणामुखः। श्रियं प्रत्यङ्मुखो भुङ्क्ते ऋतं भुङ्क्ते ह्युदङ्मुखः" मनु० २-५२। 4. (ಜೀವನಕ್ಕಾಗಿ) ಗದ್ದೆಗಳಲ್ಲಿ ನೆಲದಲ್ಲಿ ಬಿದ್ದಿರುವ ಕಾಳುಗಳನ್ನಾಗಲಿ ಧಾನ್ಯದ ತೆನೆಗಳನ್ನಾಗಲಿ ಆರಿಸುವುದು. "ऋतामृताभ्यां जीवेत्तु मृतेन प्रमृतेन वा। सत्यानृताभ्यामपि वा न श्ववृत्त्या कदाचन" मनु० ४-४। "ऋतमुञ्छशिलं ज्ञेयममृतं स्यादयाचितम्" मनु० ४-५। 5. ಜಲ, ನೀರು. 6. ಕರ್ಮದ ಫಲ, ಪಾಪಪುಣ್ಯಕಾರ್ಯಗಳ ಫಲ. "ऋतं पिबन्तौ सुकृतस्य लोके" श्रुतिः। 7. ವಿಷ್ಣು. "भगवान् वासुदेवश्च कीर्त्यतेऽत्र सनातनः। स हि सत्यमृतं चैव पवित्रं पुण्यमेव च" भा०। 8. ಪರಬ್ರಹ್ಮ. "ऋतमेकाक्षरं ब्रह्म" श्रुतिः। (पुंन०) 9. ಒಳ್ಳೆಯ ಸ್ವಭಾವ. (वि०) 10. ಪ್ರಕಾಶಮಾನವಾದ, ಹೊಳೆಯುವ. 11. ಪೂಜಿಸಲ್ಪಟ್ಟ. 12. ಸತ್ಯವಾದ, ನಿಜವಾದ. "सर्वमेतदृतं मन्ये यन्मां वदसि केशव" गीता १०-१४। "ऋतं शिलोञ्छे पानीये पूजिते दीप्तसत्ययोः" हेम०। 13. ಹೊಂದಿಸಲ್ಪಟ್ಟ. (अव्य०) 14. ನಿಜವಾಗಿ, ಸತ್ಯವಾಗಿ. "प्रापिते तु भवेदृतम्। शिलोञ्छसत्यसलिलसुशीलेषु तु न द्वयोः" नानार्थर०।

**ऋतधामन् ಋತಧಾಮನ್** (पुं०) 1. ವಿಷ್ಣು, ಪರಮಾತ್ಮ. ऋतं धामास्य। "नरकजिदृतधामा केशवो

जन्मकील: ऋतुपुरुषनृसिंहश्रन्यजह्णुश्च देवा:" त्रिकाण्ड०। 2. ಹದಿನಾಲ್ಕು ಮನುಗಳಲ್ಲೊಬ್ಬ ಮನು. 3. ಹನ್ನೆರಡನೆಯ (ರುದ್ರಸಾವರ್ಣಿ) ಮನ್ವಂತರದ ಇಂದ್ರ. [ವಿವರಕ್ಕೆ इन्द्र" ಪದದಲ್ಲಿ ನೋಡಿ.] 4. ಯದುವಂಶದ ಒಬ್ಬ ದೊರೆ. "कङ्कश्च कर्णिकायां वै ऋतधामजयावपि" ಭಾಗ० ९-२४-४४। (ವಿ०) 5. ಸತ್ಯಕ್ಕೆ ವಾಸಸ್ಥಾನವಾಗಿರುವ.

**ऋतध्वज ಋತಧ್ವಜ** (ಪು०) 1. ಒಬ್ಬ ಬ್ರಹ್ಮಋಷಿ. "हिरण्यनाभ: कौसल्य: श्रुतदेव ऋतध्वज:। एते परे च सिद्धेशाश्चरन्ति ज्ञानहेतव:" ಭಾಗ० ६-१५-१५। 2. ಶಿವ, ಮಹಾದೇವ.

**ऋतपेय ಋತಪೇಯ** (ಪು०) ಒಂದು ದಿವಸದಲ್ಲಿ ನಡೆಸಬಹುದಾದ ಒಂದು ಯಾಗ. ऋतं स्वर्गादिफलं पेयं भोग्यं यस्मात्।

**ऋतम् ಋತಮ್** (ಅವ್ಯ०) ಸತ್ಯವಾಗಿ, ನಿಜವಾಗಿ.

**ऋतम्भर ಋತಂಭರ** (ಪು०) 1. ಸತ್ಯವನ್ನು ಕಾಪಾಡುವ ಪರಮಾತ್ಮ. ऋतं बिभर्ति—डु भृञ् (धारणपोषणयो:) "खच्" (३-२-४६)। "ततो गतो ब्रह्मगिरोपहूत ऋतम्भरध्याननिवारिताघ:" ಭಾಗ० ६-१३-१७। (ಸ್ತ್ರೀ०) -भरा -ಭರಾ. 2. ಪ್ಲಕ್ಷದ್ವೀಪದ ಒಂದು ನದಿ. [ವಿವರಕ್ಕೆ "ऊर्ध्वायन" ಪದದಲ್ಲಿ ನೋಡಿ.] 3. ಪಾತಂಜಲ ಯೋಗದಲ್ಲಿ ಹೇಳಿರುವ ಸಮಾಧಿಕಾಲದ ಪ್ರಜ್ಞೆ. ऋतं सत्यमात्मानं बिभर्ति प्रकाशयति। "ऋतम्भरा तत्र प्रज्ञा" पा० यो० सू० १-४८।

**ऋति ಋತಿ** (ಸ್ತ್ರೀ०) 1. ಕಲ್ಯಾಣ, ಮಂಗಳ. ऋ (गतौ) "क्तिन्" (३-३-९४)। 2. ಮಾರ್ಗ, ರಸ್ತೆ, ದಾರಿ. 3. ಜುಗುಪ್ಸೆ, ಅಸಹ್ಯ. 4. ಗಮನ, ಚಲನ. 5. ನಿಂದೆ, ದೂಷಣೆ. 6. ಸ್ಪರ್ಧೆ, ಹೋರಾಟ. "ऋति: कल्याण-वर्त्मनो:। जुगुप्सास्पर्धयो: स्त्री स्यात्" मेदि०। "ऋतिर्जुगुप्साकल्याणगतिस्पर्धासु" हेम०। 7. ಸ್ಮೃತಿ, ನೆನಪು. 8. ರಕ್ಷಣೆ, ಕಾಪಾಡುವಿಕೆ. "स्यादृति: स्मृति-रक्षयो:" त्रिकाण्ड०।

**ऋतिङ्कर ಋತಿಂಕರ** (ವಿ०) 1. ಶುಭಕರವಾದ, ಮಂಗಳವನ್ನುಂಟುಮಾಡುವ. ऋतिं करोति—डु कृञ् (करणे) "खच्" (३-२-४३)। मुमागम: (६-३-६७)। 2. ಪೀಡಿಸುವ, ತೊಂದರೆ ಕೊಡುವ.

**ऋतीया ಋತೀಯಾ** (ಸ್ತ್ರೀ०) 1. ಜುಗುಪ್ಸೆ, ಅಸಹ್ಯ. 2. ತಿರಸ್ಕಾರ, ತೃಣೀಕರಿಸುವಿಕೆ, ಕಡೆಗಣಿಸುವಿಕೆ. ऋति (सौत्रधातु:) "ईयङ्" (३-१-२९)।

**ऋतु ಋತು** (ಪು०) 1. ವರ್ಷದ ಆರನೆಯ ಒಂದು ಭಾಗ, ಎರಡು ತಿಂಗಳ ಕಾಲ. ऋच्छति—ऋ (गतौ) "तु:" (उ० १-७१)। ಒಂದು ವರ್ಷಕ್ಕೆ ಆರು ಋತುಗಳು. ಮಾಘ ಮೊದಲಾಗಿ ಆಷಾಢ ಮಾಸದವರೆಗೂ ಸೂರ್ಯನು ಉತ್ತರದಲ್ಲಿ ಸಂಚರಿಸುವುದರಿಂದ ಈ ಮೂರು ಋತುಗಳು ಉತ್ತರಾಯಣ. ಶ್ರಾವಣ ಮೊದಲಾಗಿ ಪುಷ್ಯಮಾಸದವರೆಗೂ (ಸೂರ್ಯನು) ದಕ್ಷಿಣದಲ್ಲಿ ಸಂಚರಿಸುವುದರಿಂದ ಈ ಮೂರು ಋತುಗಳು ದಕ್ಷಿಣಾಯನ. "द्वौ द्वौ माघादिमासौ स्यादृतुस्तैरयनं त्रिभि:" अम०।

(1) मधुश्च माधवश्च वासन्तिकावृतू।
(2) शुक्रश्च शुचिश्च ग्रैष्मावृतू।
(3) नभश्च नभस्यश्च वार्षिकावृतू।
(4) इषश्चोर्जश्च शारदावृतू।
(5) सहश्च सहस्यश्च हैमन्तिकावृतू।
(6) तपश्च तपस्यश्च शिशिरावृतू।

(1) ಚೈತ್ರ-ವೈಶಾಖ—ವಸಂತಋತು.
(2) ಜ್ಯೇಷ್ಠ-ಆಷಾಢ—ಗ್ರೀಷ್ಮಋತು.
(3) ಶ್ರಾವಣ-ಭಾದ್ರಪದ—ವರ್ಷಋತು.
(4) ಆಶ್ವಯುಜ-ಕಾರ್ತಿಕ—ಶರದೃತು.
(5) ಮಾರ್ಗಶಿರ-ಪುಷ್ಯ—ಹೇಮಂತಋತು.
(6) ಮಾಘ-ಫಾಲ್ಗುಣ—ಶಿಶಿರಋತು.

ವರ್ಷಾದಿಯಿಂದ ಹೇಳಿರುವ ಕ್ರಮವಿದು. ಮಾಘಾದಿ ಮಾಸದಿಂದ ಋತುಗಳನ್ನು ಹೇಳಿದ್ದರೂ ಬ್ರಹ್ಮನು ಜಗತ್ತನ್ನು ಚೈತ್ರಮಾಸದಲ್ಲಿ ಸೃಷ್ಟಿಸಿದುದರಿಂದ ಚೈತ್ರ ಮಾಸದಿಂದ ವರ್ಷಾರಂಭವಾಯಿತು. ಆದುದರಿಂದಲೇ "ऋतूनां कुसुमाकर:" गीता १०-३५ ಎಂದು ಋತುಗಳಲ್ಲಿ ವಸಂತಋತುವೇ (ಮೊದಲನೆಯದಾಗಿ) ಪ್ರಧಾನವಾಗಿ ಹೇಳಲ್ಪಟ್ಟಿರುವುದು. "चैत्रे मासि जगद्ब्रह्मा ससर्ज प्रथमेऽहनि। शुक्लपक्षे समग्रं तु तदा सूर्योदये सति। प्रवर्तयामास तदा कालस्य गणनामपि। ग्रहान् राशीन् ऋतून् मासान् वत्सरान् वत्सराधिपान्"। ಸುಶ್ರುತ ಸಂಹಿತೆಯಲ್ಲಿ ಮಾಘಮಾಸ ಮೊದಲು ಋತುವು ಪರಿಗಣಿಸಲ್ಪಟ್ಟಿರುವುದು. "ऋतुगणेन निषेवितुमादधे भुवि पदं विपदन्तकृतं सताम्" माघ० ६-१। 2. ಮಾಸ, ತಿಂಗಳು. "ऋतुर्वर्षादिषट्सु च। आर्तवे मासि च पुमान्" मेदि०। 3. ಸ್ತ್ರೀಯರ ರಜಸ್ಸು, ಹೆಂಗಸರ ಮುಟ್ಟು. 4. ಹೆಂಗಸರು ಗರ್ಭ ಧರಿಸಲು ಯೋಗ್ಯವಾದ ಕಾಲ, ಹೆಂಗಸರು ಮುಟ್ಟಾದ ಬಳಿಕ ಹದಿನಾರು ದಿನಗಳ ಕಾಲ. "ऋतु: स्वाभाविक: स्त्रीणां रात्रय: षोडश

स्मृताः। चतुर्भिरितरैः सार्धमहोभिः सद्भिर्गर्हितैः" मनु० ३-४६। "ऋतुकालाभिगामी स्यात्स्वदारनिरतः सदा" मनु० ३-४५। 5. ವಿಷ್ಣು. सर्वोल्लासकरैर्गुणैः ऋच्छति। "ऋच्छतीति ऋतुः प्रोक्तः सर्वोल्लासकरैर्गुणैः" निरुक्तिः। "ऋतुः सुदर्शनः कालः परमेष्ठी परिग्रहः" वि० स०। 6. ಶಿವ, ಪರಮೇಶ್ವರ. "ऋतुः संवत्सरो मासः पक्षः संख्या समापनः" भा०।

**ऋतुकाल ಋತುಕಾಲ** (ಪು०) "ऋतु" ಪದದ 4ನೆಯ ಅರ್ಥ. [ವಿವರಕ್ಕೆ "ऋतु" ಪದದಲ್ಲಿ ನೋಡಿ.]

**ऋतुगण ಋತುಗಣ** (ಪು०) ಒಟ್ಟಿಗೆ ಕಲೆತ ಎಲ್ಲಾ ಋತುಗಳು. ऋतूनां गणः। "ऋतुगणेन निषेवितुमादधे भुवि पदं विपदन्तकृतं सताम्" माघ० ६-१।

**ऋतुगामिन् ಋತುಗಾಮಿನ್** (ಪು०) ಋತುಕಾಲದಲ್ಲಿ ಮಾತ್ರ (ಹೆಂಗಸಿನೊಡನೆ) ಸಂಭೋಗ ಮಾಡುವವನು. ऋतौ गच्छति—गम्लृ (गतौ) "णिनिः" (३-२-७८)।

**ऋतुनाथ ಋತುನಾಥ -पति - ಪತಿ** (ಪು०) ಋತುಗಳ ರಾಜ, ವಸಂತಋತು. ऋतूनां नाथः पतिर्वा। "ऋतूनां कुसुमाकरः" ಎಂದು ಭಗವದ್ಗೀತೆಯಲ್ಲಿ ಪ್ರಾಧಾನ್ಯ ಹೇಳಲ್ಪಟ್ಟಿದೆ.

**ऋतुपर्ण ಋತುಪರ್ಣ** (ಪು०) ಇಕ್ಷ್ವಾಕುವಂಶದ ಒಬ್ಬ ದೊರೆ, ಅಯುತಾಯುವಿನ ಮಗ. [ನಳ ಚಕ್ರವರ್ತಿಯು ರಾಜ್ಯವನ್ನು ಕಳೆದುಕೊಂಡು ಅನೇಕ ಕಷ್ಟಗಳನ್ನು ಅನುಭವಿಸಿದ ನಂತರ ಋತುಪರ್ಣನ ನಗರಕ್ಕೆ ಬಂದು ಅವನ ಅಶ್ವಾಲಯದಲ್ಲಿ ಕೆಲಸಕ್ಕೆ ಸೇರಿ ಅವನಿಗೆ ಅಶ್ವಹೃದಯವನ್ನು ಹೇಳಿಕೊಟ್ಟು ಅವನಿಂದ ತಾನು ಅಕ್ಷವಿದ್ಯೆಯನ್ನು ತಿಳಿದುಕೊಳ್ಳುವನು. ಇದರಿಂದ ಸಂತುಷ್ಟನಾದ ಋತುಪರ್ಣನು, ದಮಯಂತಿಯ ದ್ವಿತೀಯಸ್ವಯಂವರ ವೃತ್ತಾಂತವನ್ನು ತಿಳಿದು ನಳನನ್ನೇ ರಥದ ಸಾರಥಿಯನ್ನಾಗಿ ಮಾಡಿಕೊಂಡು ಹೊರಟು ಅವ(ನಳ)ನನ್ನು ಕುಂಡಿನಪುರಕ್ಕೆ ಕರೆತರುವನು. ಅಲ್ಲಿ ದಮಯಂತಿಯು ನಳನನ್ನು ಗುರುತಿಸಿ ಅವನೊಡನೆ ಸೇರಲು ಅನುಕೂಲವಾಗುವುದು.]

**ऋतुपर्यय ಋತುಪರ್ಯಯ** (ಪು०) ಋತುಗಳು ಕ್ರಮವಾಗಿ ಬರುವಿಕೆ, ಋತುಗಳು ಒಂದಾದ ಮೇಲೊಂದು ಬರುವಿಕೆ. ऋतूनां पर्ययः। "यथर्तुलिङ्गान्यृतवः स्वयमेवर्तुपर्यये। स्वानि स्वान्यभिपद्यन्ते तथा कर्माणि देहिनः" मनु० १-३०।

**ऋतुप्राप्त ಋತುಪ್ರಾಪ್ತ** (ಪು०) ಫಲಿಸಿದ ವೃಕ್ಷ, ಆಯಾ ಋತುಗಳಿಗೆ ಯೋಗ್ಯವಾದ ಫಲಪುಷ್ಪಾದಿಗಳಿಂದ ಕೂಡಿದ ಮರ. ऋतुयोग्यः पुष्पादिः प्राप्तोऽनेन।

**ऋतुमती ಋತುಮತೀ** (ಸ್ತ್ರೀ०) ಪುಷ್ಪವತಿಯಾದ ಹೆಂಗಸು, ಮೈನೆರೆದ ಹೆಂಗಸು, ರಜಸ್ವಲೆ. ऋतुरस्त्यस्याः "मतुप्" (५-२-९४)। ಕನ್ಯೆಯು ಋತುಮತಿಯಾದರೂ ತಂದೆಯು ಅನುರೂಪನಾದ ವರನಿಗೆ ಕೊಟ್ಟು ಮದುವೆ ಮಾಡದಿದ್ದಲ್ಲಿ ಮೂರು ವರ್ಷಗಳವರೆಗೂ ನಿರೀಕ್ಷಿಸಿ ಅನಂತರ ತಾನೇ ಯೋಗ್ಯ ವರನನ್ನು ಮದುವೆಯಾಗಬಹುದು. ಇದರಿಂದ ದೋಷವಿಲ್ಲ. "त्रीणि वर्षाण्युदीक्षेत कुमार्यृतुमती सती। ऊर्ध्वं तु कालादेतस्माद्विन्देत सदृशं पतिम्" मनु० ९-९०।

**ऋतुमुख ಋತುಮುಖ** (ನ०) ಋತುವಿನ ಪ್ರಾರಂಭದ ದಿನ, ಚಾಂದ್ರಮಾಸದ ಶುಕ್ಲ ಪ್ರಥಮಾ ತಿಥಿ. ऋतोर्मुखं प्रारम्भः।

**ऋतुराज ಋತುರಾಜ** (ಪು०) ಋತುಗಳಿಗೆಲ್ಲಾ ಪ್ರಧಾನವಾದ ಋತು, ವಸಂತಋತು. ऋतूनां राजा "टच्" (५-४-९१)।

**ऋतुलिङ्ग ಋತುಲಿಂಗ** (ನ०) 1. ವಸಂತಾದಿ ಋತುಗಳ ಗುರುತು, ಆಯಾ ಋತುಗಳು ಹುಟ್ಟುವ ಸೂಚನೆ. ऋतोः लिङ्गम्। "यथर्तुलिङ्गान्यृतवः स्वयमेवर्तुपर्यये। स्वानि स्वान्यभिपद्यन्ते तथा कर्माणि देहिनः" मनु० १-३०। 2. ಹೆಂಗಸರು ಋತುಮತಿಯಾಗುವ ಸೂಚನೆ, ಹೆಣ್ಣು ಮಕ್ಕಳು ಪುಷ್ಪವತಿಯರಾಗುವ ಲಕ್ಷಣಗಳು.

**ऋतुसंहार ಋತುಸಂಹಾರ** (ಪು०) ಕಾಳಿದಾಸ ಕವಿಯು ಆರು ಋತುಗಳನ್ನು ವರ್ಣಿಸಿರುವ ಒಂದು ಕಾವ್ಯ. ऋतूनां संहारो वर्ण्यत्वेनास्त्यस्य।

**ऋतुसन्धि ಋತುಸಂಧಿ** (ಸ್ತ್ರೀ०) ಎರಡು ಋತುಗಳು (ಮಾಸಗಳು) ಸೇರುವ ಕಾಲ, ಅಮಾವಾಸ್ಯೆ. ऋत्वोः मासयोः सन्धिः।

**ऋतुसेव्य ಋತುಸೇವ್ಯ** (ವಿ०) ಆಯಾ ಋತುಗಳಲ್ಲಿ ಸೇವಿಸಲು ಯೋಗ್ಯವಾದ ಹಿತವಾದ ಆಹಾರ. ऋतुभेदे सेव्यम्। ಆಯಾ ಋತುಗಳಲ್ಲಿ ಆರೋಗ್ಯಕರವಾದ ಮತ್ತು ಹಿತವಾದ ಆಹಾರವನ್ನು ಸೇವಿಸಬೇಕು. "यस्मिन् यस्मिन् ऋतौ ये ये दोषाः कुप्यन्ति देहिनाम्। तेषु तेषु प्रदातव्याः रसास्त्वेते विजानता" सुश्रुत० उत्तर० ६४-५। ವರ್ಷ ಋತುವಿನಲ್ಲಿ ಶೀತವಾತಾವರಣದಲ್ಲಿ ದೇಹವೆಲ್ಲ ತಣ್ಣಗಾಗುವುದರಿಂದ ಅಗ್ನಿಶಕ್ತಿಯು ಕಡಿಮೆಯಾಗಿ ವಾಯು ಪ್ರಕೋಪವಾಗುವುದು. ಆ ದೋಷ ನಿವಾರಣೆಗಾಗಿ ಕಷಾಯ (ಒಗರು), ತಿಕ್ತ (ಕಹಿ), ಕಟು (ಕಾರ) ರಸಗಳಿಂದ ಕೂಡಿದ ಮತ್ತು ದ್ರವವಲ್ಲದ ಆಹಾರವನ್ನು ಸೇವಿಸಬೇಕು.

ವರ್ಷರ್ತುವಿನಲ್ಲಿ ವ್ಯಾಯಾಮ ಮಾಡಕೂಡದು. ನೆಲದ ಮೇಲೆ ಮಲಗಕೂಡದು ಇತ್ಯಾದಿ. ಉಳಿದ ಋತುಗಳಿಗೆ ಸುಶ್ರುತಸಂಹಿತೆಯಲ್ಲಿ ನೋಡಿ.

**ऋद्ध ಋದ್ಧ** (पुं०) 1. ವಿಷ್ಣು. ऋधु (वृद्धौ) कर्तं० "क्तः" (३-४-७२)। "पार्वणो जलधिर्यद्वत् वृद्धिमान् ऋद्ध उच्यते" निरुक्तिः। "ऋद्धः स्पष्टाक्षरो मन्त्रः चन्द्रांशुर्भास्करद्युतिः" वि० स०। (न०) 2. ಒಕ್ಕಿದ ಧಾನ್ಯ, ಬಡಿದು ತೆನೆಯಿಂದ ಬೇರ್ಪಡಿಸಲ್ಪಟ್ಟ ಧಾನ್ಯ. 3. ಸಿದ್ಧವಾದ ಅನ್ನ. ऋधु कर्म० "क्तः" (३-२-१०२)। 4. ಅಭಿವೃದ್ಧಿ, ಬೆಳವಣಿಗೆ. ऋधु (वृद्धौ) भावे "क्तः" (३-३-११४)। (वि०) 5. ವೃದ್ಧಿಹೊಂದಿದ, ಅಧಿಕವಾದ, ಬೆಳವಣಿಗೆ ಹೊಂದಿದ. ऋधु कर्तं० "क्तः" (३-४-७२)। "ऋद्धसर्वऋतुवृक्षवाटिकाकीरकृत्तसहकारशीकरैः" नैष० १८-१०। 6. ಸಂಪನ್ನವಾದ, ಸಂಪೂರ್ಣವಾದ, ತುಂಬಿರುವ. "इयमृद्धधना वृथावनी स्ववनी संप्रवदत्पिकापि का" नैष० २-४५। "अवाप्य भूमावसपत्नमृद्धं राज्यं सुराणामपि चाधिपत्यम्" गीता २-८। 7. ಧನಿಕ, ಐಶ್ವರ್ಯವಂತ.

**ऋद्धि ಋದ್ಧಿ** (स्त्री०) 1. ಸಮೃದ್ಧಿ, ಹೇರಳ, ಅತಿಶಯ. ऋधु (वृद्धौ) "क्तिन्" (३-३-९४)। "परिच्छिन्नप्रभावर्द्धिर्न मया न च विष्णुना" कुमा० २-५८। 2. ಬೆಳವಣಿಗೆ, ಅಭಿವೃದ್ಧಿ. 3. ಸಿದ್ಧಿ, ಕೈಗೂಡುವಿಕೆ. 4. ಒಂದು ಮೂಲಿಕೆ. 5. ಲಕ್ಷ್ಮಿ. 6. ಪಾರ್ವತಿ. 7. ಸಂಪತ್ತು, ಐಶ್ವರ್ಯ. ऋधु "क्तिच्" (३-३-१७४)। 8. ಅದೃಷ್ಟ. 9. ಕುಬೇರನ ಪತ್ನಿ.

**ऋद्धिकाम ಋದ್ಧಿಕಾಮ** (वि०) 1. ಅಭಿವೃದ್ಧಿಯನ್ನು ಅಪೇಕ್ಷಿಸುವ. ऋद्धिं कामयते–कमु (कान्तौ) "णिङ्" (३-१-३०) "अच्" (३-१-१३४)। 2. ಐಶ್ವರ್ಯವನ್ನು ಅಪೇಕ್ಷಿಸುವ.

**ऋद्धिमत् ಋದ್ಧಿಮತ್** (वि०) 1. ಅಭಿವೃದ್ಧಿಯಿಂದ ಕೂಡಿದ, ಏಳಿಗೆ ಹೊಂದಿದ. ऋद्धिरस्यास्ति–"मतुप्" (५-२-९४)। 2. ಸಮೃದ್ಧಿಯುಳ್ಳ, ಪರಿಪೂರ್ಣವಾದ, ತುಂಬಿರುವ. "तमृद्धिमद्बन्धुजनाधिरूढैर्वृन्दैर्गजानां गिरिचक्रवर्ती" कुमा० ७-५२। 3. ಸಂಪತ್ತಿನಿಂದ ಕೂಡಿದ, ಐಶ್ವರ್ಯಸಂಪನ್ನನಾದ. "ऋद्धिमन्तमधिकर्द्धिरुत्तरः पूर्वमुत्सवमपोहदुत्सवः" रघु० १९-५।

**ऋधु–वृद्धौ** (दिवा० पर० अक० से०) ऋध्यति ऋध्यतः ऋध्यन्ति। आनर्ध आनृधतुः आनृधुः। अर्धिता। अर्धिष्यति। ऋध्यतु। आर्ध्यत्। ऋध्येत्। ऋध्यात्। आर्धत्। आर्धिष्यत्। 1. ಅಭಿವೃದ್ಧಿ ಹೊಂದು. 2. ಸಿದ್ಧಿ ಪಡೆ.

**भावे :** ऋध्यते। आनृधे। अर्धिता। ऋध्यताम्। ಇತ್ಯಾದಿ.

**सनि :** ईर्त्सति। ईर्त्साञ्चकार, –बभूव, –आस। ईर्त्सिता। ईर्त्सिष्यति। ಇತ್ಯಾದಿ.

**कृत्सु :** अर्धितव्यम्। अर्धनीयम्। ऋध्यम्। ऋद्धः, ऋद्धवान्। ऋध्यन्। ऋद्धम्। अर्धनम्। अर्धित्वा। समृध्य।

**स्वादि "ऋधु"** ಧಾತುರೂಪಗಳು. ऋध्नोति। ऋध्नोतु। ऋध्नुहि। आर्ध्नोत्। ऋध्नुयात्। ಉಳಿದೆಲ್ಲ ರೂಪಗಳೂ ದಿವಾದಿ "ऋधु" ಧಾತುವಿನ ರೂಪಗಳಂತೆ ಆಗುವುವು. 1. ಅಭಿವೃದ್ಧಿಹೊಂದು, ಬೆಳವಣಿಗೆ ಹೊಂದು. "नाब्रह्म क्षत्रमृध्नोति नाक्षत्रं ब्रह्म वर्धते" मनु० ९-३२२। 2. ತೃಪ್ತಿಪಡಿಸು, ಸಂತೋಷಪಡಿಸು. "सोऽहं प्राग्भवतैव भूतजननीमृध्नोमि खड्गाहतिव्यस्तस्कन्धकबन्धरन्ध्ररुधिरप्राग्भारनिष्यन्दिना" मालती० ५-२९।

**सम्+ऋधु=समृद्धिः।** ಹೆಚ್ಚು ಬೆಳವಣಿಗೆ ಹೊಂದು, ಅತಿಶಯವಾದ ಅಭಿವೃದ್ಧಿ ಹೊಂದು. "शत्रुपक्षं समृध्यन्तं यो मोहात् समुपेक्षते" भा०। "लोकानन्यान्सृजेयुर्ये लोकपालांश्च कोपिताः। देवान् कुर्युरदेवांश्च कः क्षिण्वंस्तान् समृध्नुयात्" मनु० ९-३१५।

**ऋधक् ಋಧಕ್** (अव्य०) 1. ಸತ್ಯವಾಗಿ, ನಿಜವಾಗಿ. 2. ಶೀಘ್ರವಾಗಿ, ಬೇಗ. 3. ಬೇರೆಯಾಗಿ, ಪ್ರತ್ಯೇಕವಾಗಿ. 4. ಸಾಮೀಪ್ಯ. 5. ಲಾಘವ. "ऋधग्यतो अनिमिषं रक्षमाणाः" ऋधग्यतः सत्येन गच्छतः।

**ऋभु ಋಭು** (पुं०) 1. ದೇವತೆ. अरि स्वर्गे अदित्यां वा भवति–ऋ + भू (सत्तायाम्) "डुः" (वा० ३-२-१८०)। "आदित्या ऋभवोऽस्वप्ना अमर्त्या अमृतान्धसः" अम०। 2. ದೇವತೆಗಳಿಂದಲೂ ಪೂಜಿಸಲ್ಪಡುವ ದೇವತೆ. "ऋभवो नाम तत्रान्ये देवानामपि देवताः। तेषां लोकाः परतरे यान् यजन्तीह देवताः" भा० वन०। 3. ಚಾಕ್ಷುಷ ಮನ್ವಂತರದ ಒಂದು ದೇವಗಣ. "चाक्षुषस्यान्तरे तात मनोर्देवानिमान् शृणु। आप्याः प्रभूता ऋभवः पृथुकाश्च दिवौकसः। लेखा नाम महाराज पञ्च देवगणाः स्मृताः" हरिवं० ७-३२।

**ऋभुक्ष ಋಭುಕ್ಷ** (पुं०) 1. ಸ್ವರ್ಗ. 2. ವಜ್ರಾಯುಧ. ऋभवो देवाः क्षियन्त्यत्र–क्षि (निवासगत्योः) "डः" (वा० ३-२-१०१)। "ऋभुक्षः स्वर्गवज्रयोः" विश्व०।

**ऋभुक्षिन् ಋಭುಕ್ಷಿನ್** (ಪುಂ) ಇಂದ್ರ. ऋभवो देवाः क्षियन्त्यत्र–क्षि (निवासगत्योः) "डः"(वा० ३-२-१०१)। "ऋभुक्षः स्वर्गवज्रयोः" विश्व०। सोऽस्यास्ति "इनिः" (५-२-११५)। पथिवत्।

**ऋश्य(ष्य) ಋಶ್ಯ(ಷ್ಯ)** (ಪುಂ) ಮೈಮೇಲೆ ಬಿಳಿ ಚುಕ್ಕಿಗಳುಳ್ಳ ಜಿಂಕೆ. ऋच्छति–ऋ (गतौ) "श्यन्" बाहु०। ऋषी (गतौ) "यक्" (उ० ४-१११)। निपा०।

**ऋश्य(ष्य)मूक ಋಶ್ಯ(ಷ್ಯ) ಮೂಕ** (ಪುಂ) ಋಶ್ಯಮೂಕಪರ್ವತ, ವಾಲಿಯ ಭಯದಿಂದ ಸುಗ್ರೀವನು ಬಂದು ಅವಿತುಕೊಂಡಿದ್ದ ಒಂದು ಪರ್ವತ. [ವಿವರಕ್ಕೆ "ऋष्यमूक" ಪದದಲ್ಲಿ ನೋಡಿ.]

**ऋषभ ಋಷಭ** (ಪುಂ) 1. ವೃಷಭ, ಎತ್ತು. ऋषति–ऋषी (गतौ) "अभच्" (उ० ३-१२३)। "ऋषभैकसहस्रा गा दद्यात् क्षत्रवधे पुमान्" याज्ञ० ३-२६६। 2. ಹೆರಿಗೆ ಹಾಲೆಯೆಂಬ ಒಂದು ಮೂಲಿಕೆ. "शृङ्गी तु ऋषभो वृषः" अम०। 3. ಆದಿಜಿನದೇವ. 4. ವರಾಹ ಪುಚ್ಛ, ಹಂದಿಯ ಬಾಲ. 5. ಮೊಸಳೆಯ ಬಾಲ. 6. ಕಿವಿಯ ರಂಧ್ರ, ಕರ್ಣಕುಹರ, ಕಿವಿಯೊಳಗಿನ ಪೊಳ್ಳು. 7. ವೀಣೆ ಕಂಠ ಮೊದಲಾದುವುಗಳಲ್ಲಿ ಹೊರಡುವ ಸಪ್ತ(ಏಳು)ಸ್ವರಗಳಲ್ಲೊಂದು. ऋषति हृदयं प्रविशति–ऋषी (गतौ) "अभच्" (उ० ३-१२३)।

**ಸಪ್ತಸ್ವರಗಳು:** (1) ನಿಷಾದ, (2) ಋಷಭ, (3) ಗಾಂಧಾರ, (4) ಷಡ್ಜ, (5) ಮಧ್ಯಮ, (6) ಧೈವತ ಮತ್ತು (7) ಪಂಚಮ. "निषादर्षभगान्धारषड्जमध्यमधैवताः। पञ्चमश्चेत्यमी सप्त तन्त्रीकण्ठोत्थिताः स्वराः" अम०। ವೃಷಭದ ಸ್ವರದಂತೆ ಕಂಠದಲ್ಲಿ ಹೊರಡುವುದರಿಂದ ಈ ಹೆಸರು. "षड्जं मयूरो वदति गावस्त्वृषभभाषिणः" अम०। "नाभिमूलात् यदा वर्ण उत्थितः कुरुते ध्वनिम्। वृषभस्येव निर्याति हेलया ऋषभः स्मृतः" सं० दा०। ಈ ಋಷಭಸ್ವರವು ಋಗ್ವೇದದಿಂದ ಉತ್ಪನ್ನವಾದುದು. "ऋग्वेदात् षड्ज-ऋषभौ यजुषो मध्यधैवतौ। सामवेदात् समुद्भूतौ तथा गान्धारपञ्चमौ"। ಪ್ರಾತಃಕಾಲದಲ್ಲಿ ಈ ಋಷಭ ಸ್ವರವು ನಿಷಿದ್ಧ. "श्रुतिसमधिकमुच्चैः पञ्चमं पीडयन्तः सततमृषभहीनं भिन्नकीकृत्य षड्जम्। प्रणिजगदुरकाकुश्रावकस्निग्धकण्ठाः परिणतिमिति रात्रेर्मागधा माधवाय" माघ० ११-१। 7. (ಸಮಾಸಾಂತ್ಯದಲ್ಲಿ) ಶ್ರೇಷ್ಠ, ಉತ್ತಮ. पुरुषर्षभः ಪುರುಷಶ್ರೇಷ್ಠನು. नरर्षभः, भरतर्षभः ಇತ್ಯಾದಿ. "स्युरुत्तरपदे व्याघ्रपुङ्गवर्षभकुञ्जराः। सिंहशार्दूलनागाद्याः पुंसि श्रेष्ठार्थगोचराः" अम०। "स कुरुष्व महोत्साहः कृपां मयि नरर्षभ" रामा०। ಕೆಲವೆಡೆ ವ್ಯಸ್ತವಾಗಿದ್ದರೂ ಶ್ರೇಷ್ಠಾರ್ಥವಾಚಕವಾಗುವುದು. "स्वलक्षणा प्रादुरभूत् किलास्यतः स मे ऋषीणामृषभः प्रसीदतु" भाग० २-४-२२। "ऋषभः स्यादादिजिने वृषभे भेषजे स्वरे। कर्णरन्ध्रे कोलपुच्छे श्रेष्ठे चाप्युत्तरस्थितः" हेम०। "ऋषभस्त्वौषधान्तरे। स्वरभिद्वृषयोः कर्णरन्ध्रकुम्भीरपुच्छयोः। उत्तरस्थः स्मृतः श्रेष्ठे" मेदि०। 8. ಮಹಾವಿಷ್ಣುವಿನ ಒಂದು ಅವತಾರ. [ಅಗ್ನೀಧ್ರನ ಪುತ್ರನಾದ ನಾಭಿರಾಜನ ಯಾಗದಿಂದ ಪ್ರಸನ್ನನಾದ ಪರಮಾತ್ಮನು ಅವನ ಪುತ್ರನಾಗಿ ಹುಟ್ಟಿದನು.] "नाभिरपत्यकामोऽप्रजया मेरुदेव्या भगवन्तं यज्ञपुरुषमवहितात्मायजत। तस्य हवाव श्रद्धया यजतः प्रवर्ग्येषु प्रचरत्सु भगवान् भागवतवात्सल्यतया सुप्रतीक आत्मानं मनोनयनानन्दनावयवाभिराममाविश्चकार" भाग० ५-३-१, २। "तस्य ह वा इत्थं वर्ष्मणा वरीयसा बृहच्छ्लोकेन चौजसा बलेन श्रिया यशसा वीर्यशौर्याभ्यां च पिता ऋषभ इतीदं नाम चकार" भाग० ५-४-२। 9. ಒಂದು ಪರ್ವತ. 10. ಮದಿಸಿದ ಆನೆ. "ऋषभोऽद्रौ कर्णरन्ध्रे वृषे मत्तगजेश्वरे। वराहस्यापि पुच्छे" नानार्थर०।

**ऋषभकूट ಋಷಭಕೂಟ** (ಪುಂ) ಹೇಮಕೂಟ ಪರ್ವತ. [ಈ ಪರ್ವತದಲ್ಲಿ ಋಷಭನೆಂಬ ತಾಪಸನಿದ್ದುದರಿಂದ ಈ ಹೆಸರುಂಟಾಯಿತು. ವಿವರಕ್ಕೆ भा० वन० ११० ಅಧ್ಯಾಯ ನೋಡಿ.]

**ऋषभगतिविलसित ಋಷಭಗತಿವಿಲಸಿತ** (न०) ಹದಿನಾರನೆಯ ಛಂದಸ್ಸಿನ ಒಂದು ವೃತ್ತ; ಭಗಣ ರಗಣ ಮೂರು ನಗಣಗಳು ಮತ್ತು ಒಂದು ಗುರುವಿರುವ ವೃತ್ತ. "भ्रौ त्रिनगाः स्वराः खमृषभगतिविलसितम्" वृ० र०।

**ऋषभध्वज ಋಷಭಧ್ವಜ** (ಪುಂ) 1. ಪರಮೇಶ್ವರ, ಮಹಾದೇವ. ऋषभो ध्वजोऽस्य। 2. ಒಬ್ಬ ಜೈನ ಭಿಕ್ಷು. "ऋषभध्वज एषोऽपि शङ्करे चार्हदन्तरे" मेदि०।

**ऋषभी ಋಷಭೀ** (स्त्री०) 1. ಪುರುಷನ ಆಕಾರವುಳ್ಳ ಹೆಂಗಸು, ಗಡ್ಡ ಮೀಸೆಗಳಿಂದ ಕೂಡಿದ ಹೆಂಗಸು. 2. ನಸುಗುನ್ನಿ ಗಿಡ. 3. ವಿತಂತು. 4. ಸಿರಾಲೆ ಗಿಡ. ऋषभ गौरा० जाति० वा "ङीष्"। "ऋषभी तु शूकशिम्ब्यां पुरुषाकारयोषिति। विधवायां शिरालायाम्" हेम०।

**ऋषि ಋಷಿ** (पुं०) 1. ಋಷಿ, ಜ್ಞಾನದಿಂದ ಸಂಸಾರದ ಕೊನೆಯನ್ನು ಮುಟ್ಟಿದವನು. ऋषति ज्ञानेन संसारपारम्–ऋषी (गतौ) "इनि:" (उ० ४-११९)। ತಪಸ್ಸಿನಿಂದ ಸಕಲಪಾಪಗಳನ್ನೂ ಕಳೆದುಕೊಂಡವನೂ ಸತ್ಯಸಂಧನೂ ವೇದ ಮತ್ತು ವೇದಾಂಗಗಳ ತತ್ತ್ವವನ್ನು ಚೆನ್ನಾಗಿ ತಿಳಿದವನೂ ಋಷಿಯೆನಿಸುವನು. "तपोनिर्धूतपाप्मानो याथातथ्याभिधायिन:। वेदवेदाङ्गतत्त्वज्ञा: ऋषय: परिकीर्तिता:"। "अशेषतीर्थोपहृता: कमण्डलो: निधाय पाणावृषिणाभ्युदीरिता:" माघ० १-१८। ಈ ಋಷಿಗಳು (1) ಬ್ರಹ್ಮರ್ಷಿ, (2) ದೇವರ್ಷಿ, (3) ಮಹರ್ಷಿ, (4) ಪರಮರ್ಷಿ, (5) ಕಾಂಡರ್ಷಿ, (6) ಶ್ರುತರ್ಷಿ ಮತ್ತು (7) ರಾಜರ್ಷಿಗಳೆಂದು ಏಳು ವಿಧ. "सप्त ब्रह्मर्षिदेवर्षिमहर्षिपरमर्षय:। काण्डर्षिश्च श्रुतर्षिश्च राजर्षिश्च क्रमावरा:" रत्न०। "व्यासाद्यास्तु महर्षय:। परमर्षयस्तु भेलाद्या: देवर्षय: कणादय:। ब्रह्मर्षयो वसिष्ठाद्या: सुश्रुताद्या: श्रुतर्षय:। ऋतुपर्णादयो राजर्षय: काण्डर्षयस्त्वमी। जैमिन्याद्या:" त्रिकाण्ड०। [ಸ್ವಾಯಂಭುವಾದಿಮನ್ವಂತರಭೇದದಿಂದ ಸಪ್ತರ್ಷಿಗಳ ವಿವರಕ್ಕೆ "सप्तर्षि" ಪದದಲ್ಲಿ ನೋಡಿ.] 2. ವೇದ. 3. ಕಿರಣ.

**ऋषिकुल्या ಋಷಿಕುಲ್ಯಾ** (स्त्री०) 1. ಒಂದು ನದಿ, ಒಂದು ಹೊಳೆ. ऋषीणां कुल्येव। "ऋषिकुल्यां समासाद्य नर: स्नात्वा विकल्मष:। देवान् पितृंश्चार्चयित्वा ऋषिलोकं प्रपद्यते" भा० वन० ८२-४९। 2. ಋಷಿಕುಲಕ್ಕೆ ಹಿತವಾದ. ऋषिकुले साधु: "यत्" (५-१-५)। "अथ तस्योशतीं देवीमृषिकुल्यां सरस्वतीम्। नास्वाद्य मन्युदष्टानां तेषामात्माप्यतृप्यत" भाग० ३-१६-१३।

**ऋषिजाङ्गलिकी ಋಷಿಜಾಂಗಲಿಕೀ** (स्त्री०) ಋಷ್ಯಗಂಧೆಯೆಂಬ ಗಿಡ, ಅನಂತನ ಗೊಂಡೆಸೊಪ್ಪು.

**ऋषिप्रोक्त ಋಷಿಪ್ರೋಕ್ತ** (वि०) 1. ಋಷಿಗಳಿಂದ ಹೇಳಲ್ಪಟ್ಟ. (स्त्री०) **–प्रोक्ता –ಪ್ರೋಕ್ತಾ.** 2. ಶತಾವರೀ ಗಿಡ. 3. ನಸುಗುನ್ನಿ ಗಿಡ. 4. ಅತಿಬಲೆ, ಮಹಾಶತಾವರೀ

**ऋषियज्ञ ಋಷಿಯಜ್ಞ** (पुं०) ಗೃಹಸ್ಥನು ಪ್ರತಿದಿನವೂ ಮಾಡಬೇಕಾದ ಪಂಚಮಹಾಯಜ್ಞಗಳಲ್ಲೊಂದು. ऋष्युद्देश्यको यज्ञ: ऋषिर्वेद: तदध्ययनरूपो यज्ञो वा। (1) ದೇವಯಜ್ಞ, (2) ಋಷಿಯಜ್ಞ, (3) ಭೂತಯಜ್ಞ, (4) ಪಿತೃಯಜ್ಞ ಮತ್ತು (5) ಮನುಷ್ಯಯಜ್ಞಗಳೆಂದು ಗೃಹಸ್ಥನು ಪ್ರತಿದಿನವೂ ಆಚರಿಸಬೇಕಾದ ಪಂಚಮಹಾಯಜ್ಞಗಳು. "स्वाध्यायेनार्चयेतर्षीन् होमैर्देवान् यथाविधि। पितॄन् श्राद्धैश्च नॄनन्नैर्भूतानि बलिकर्मणा" मनु० ३-८१।

**ऋष्यकेतु ಋಷ್ಯಕೇತು** (पुं०) ಅನಿರುದ್ಧ.

**ऋष्यगन्धा ಋಷ್ಯಗಂಧಾ** (स्त्री०) 1. ಅನಂತನ ಗೊಂಡೆಸೊಪ್ಪು. ऋष्यस्य मृगभेदस्य गन्ध इव गन्धो यस्या:। 2. ಕರಿ ನೆಲಗುಂಬಳ. **–गन्धिका –ಗಂಧಿಕಾ.** स्वार्थे "क:"। "टाप्"।

**ऋष्यप्रोक्ता ಋಷ್ಯಪ್ರೋಕ್ತಾ** (स्त्री०) 1. ಶತಾವರೀ ಗಿಡ. 2. ಅತಿಬಲೆ, ಮಹಾಶತಾವರಿ. 3. ನಸುಗುನ್ನಿ ಗಿಡ.

**ऋष्यमूक ಋಷ್ಯಮೂಕ** (पुं०) ಋಷ್ಯಮೂಕ ಪರ್ವತ, ಸುಗ್ರೀವನು ವಾಲಿಗೆ ಹೆದರಿ ಬಂದು ಸೇರಿಕೊಂಡಿದ್ದ ಒಂದು ಪರ್ವತ, ಪಂಪಾಸರಸ್ಸಿನ ಹತ್ತಿರದ ಒಂದು ಪರ್ವತ. ऋष्यो मृगो मूको यत्र। [ವಾಲಿಯು ಒಮ್ಮೆ ದುಂದುಭಿಯೊಡನೆ ಕಾದಾಡಿ ಅವನನ್ನು ಕೊಂದು ಅವನ ಶರೀರವನ್ನು ಬಿಸಾಡಿದನು. ಅದು ಮತಂಗಮಹರ್ಷಿಯ ಆಶ್ರಮದಲ್ಲಿ ಬಿದ್ದು ಆಶ್ರಮವು ರಕ್ತಮಾಂಸಗಳಿಂದ ದೂಷಿತವಾಗಲು ಆ ಋಷಿಯು ಇದು ವಾಲಿಯ ಕೃತ್ಯವೆಂದು ತಿಳಿದು ವಾಲಿಯು ಇಲ್ಲಿಗೆ ಬಂದರೆ ಅವನ ತಲೆಯು ಒಡೆಯಲೆಂದು ಶಾಪವಿತ್ತುದರಿಂದ ವಾಲಿಯಿಂದ ಮನಸ್ತಾಪಗೊಂಡ ಸುಗ್ರೀವನು ಹನುಮಂತನೊಡನೆ ಅವನ ಪ್ರವೇಶವಿಲ್ಲದ ಈ ಪರ್ವತಕ್ಕೆ ಬಂದು ಸೇರಿದನು. ಸೀತೆಯನ್ನು ಹುಡುಕಿಕೊಂಡು ಬಂದ ಶ್ರೀರಾಮನಿಗೆ ಸುಗ್ರೀವನೊಡನೆ ಸಖ್ಯವೇರ್ಪಟ್ಟಿದ್ದು ಈ ಪರ್ವತದಲ್ಲಿ.]

**ऋष्यशृङ्ग ಋಷ್ಯಶೃಂಗ** (पुं०) 1. ಋಷ್ಯಶೃಂಗ ಮಹರ್ಷಿ, ವಿಭಾಂಡಕ ಮಹರ್ಷಿಯ ಪುತ್ರ, ರೋಮಪಾದಮಹಾರಾಜನ ಮಗಳಾದ ಶಾಂತಾದೇವಿಯ ಪತಿ. ऋष्यस्य मृगस्य शृङ्गमिव शृङ्गमस्य। [ವಿಭಾಂಡಕ ಮಹರ್ಷಿಯು ಒಂದು ಮಡುವಿನಲ್ಲಿ ಇಳಿದು ಅಲ್ಲಿ ತಪಸ್ಸಿನಲ್ಲಿದ್ದಾಗ ಊರ್ವಶಿಯನ್ನು ನೋಡಿ ಚಿತ್ತಚಾಂಚಲ್ಯದಿಂದ ವೀರ್ಯವು ಸ್ಖಲಿತವಾಗಲು ಅದನ್ನು ಕುಡಿದ ಒಂದು ಹೆಣ್ಣು ಜಿಂಕೆಯಿಂದ ಋಷ್ಯಶೃಂಗನು ಜನಿಸಿದನು. भा० वन० १११।

ಒಮ್ಮೆ ಅಂಗದೇಶದಲ್ಲಿ ಅನಾವೃಷ್ಟಿಯುಂಟಾಗಲು ರೋಮಪಾದರಾಜನು ಈ ಮಹರ್ಷಿಯನ್ನು ಕರೆಯಿಸಿ ಸುವೃಷ್ಟಿಯನ್ನು ಪಡೆದು ತನ್ನ ಮಗಳಾದ ಶಾಂತಾದೇವಿಯನ್ನು ಕೊಟ್ಟು ಮದುವೆ ಮಾಡಿದನು. भा० वन० ११४।

ದಶರಥಮಹಾರಾಜನು ಪುತ್ರಕಾಮೇಷ್ಟಿಯನ್ನು ಮಾಡಿದ ಸಮಯದಲ್ಲಿ ಈ ಮಹರ್ಷಿಯನ್ನು ಕರೆಯಿಸಿದ್ದನು. रामा० बाल०। 2. ಸಾವರ್ಣಿಕಮನ್ವಂತರದಲ್ಲಿದ್ದ ಸಪ್ತರ್ಷಿಗಳಲ್ಲೊಬ್ಬ ಋಷಿ. "रामो व्यासो गालवश्च दीप्तिमान् कृप एव च। ऋष्यशृङ्गस्तथा द्रोणिस्तत्र सप्तर्षयोऽभवन्" मार्क० ८०-४।

**ऋक्षरजस् ಋಕ್ಷರಜಸ್** (पु०) ವಾನರವಂಶದ ಒಬ್ಬ ಮೂಲಪುರುಷ. ಬ್ರಹ್ಮನು ಮೇರುಪರ್ವತದಲ್ಲಿ ತಪಸ್ಸು ಮಾಡುತ್ತಿದ್ದಾಗ ಆತನ ಕಣ್ಣೀರಿನಿಂದ ವಾನರರೂಪದ ಪುರುಷನೊಬ್ಬನು ಹುಟ್ಟಿದನು. ಬ್ರಹ್ಮನ ಮಾತಿನಂತೆ ಅವನು ಅರಣ್ಯದಲ್ಲಿ ಸಂಚರಿಸುತ್ತಿದ್ದಾಗ ಒಂದು ಕೊಳದಲ್ಲಿ ಇಣಿಕಿ ನೋಡಲಾಗಿ ಅದರೊಳಗೆ ತನ್ನ ಪ್ರತಿಬಿಂಬವನ್ನು ಕಂಡು ಅದರೊಡನೆ ಕಾದಾಡಲು ಕೊಳದೊಳಕ್ಕೆ ಧುಮುಕಿದನು. ಕೊಳದೊಳಗೆ ಯಾರೂ ಇರಲಿಲ್ಲವಾಗಿ ಮೇಲಕ್ಕೆ ಬರುವಷ್ಟರಲ್ಲಿ ಹೆಂಗಸಾದನು. ಆಗ ಅಸ್ತಂಗತನಾಗುತ್ತಿದ್ದ ಸೂರ್ಯನೂ ಬ್ರಹ್ಮನನ್ನು ಕಾಣಲು ಹೋಗುತ್ತಿದ್ದ ಇಂದ್ರನೂ ಈಕೆಯನ್ನು ನೋಡಿ ಮೋಹಗೊಳ್ಳಲಾಗಿ ಸೂರ್ಯನ ತೇಜಸ್ಸು ಕುತ್ತಿಗೆಯ ಮೇಲೆಯೂ ಇಂದ್ರನ ತೇಜಸ್ಸು ಬಾಲದ ಮೇಲೆಯೂ ಬಿದ್ದಿತು. ಅದರಿಂದ ವಾಲಿಸುಗ್ರೀವರು ಜನಿಸಿದರು. ಮಾರನೆಯ ದಿನ ಬೆಳಗಾಗುವಷ್ಟರಲ್ಲಿ ಋಕ್ಷರಜಸ್ಸು ಪುನಃ ಗಂಡಸಾಗಲು ಈ ವಿಷಯವನ್ನು ಬ್ರಹ್ಮನಿಗೆ ತಿಳಿಸಿದನು. ಕಿಷ್ಕಿಂಧೆಗೆ ಹೋಗಿ ರಾಜ್ಯವಾಳುವಂತೆ ಬ್ರಹ್ಮನ ಆಜ್ಞೆಯಾಯಿತು. ಅದರಂತೆ ಕಿಷ್ಕಿಂಧೆಯಲ್ಲಿ ಕೆಲವುಕಾಲ ರಾಜ್ಯವಾಳಿ ವಾಲಿಗೆ ಪಟ್ಟಕಟ್ಟಿ ಸುಗ್ರೀವನಿಗೆ ಯುವರಾಜ ಪದವಿಯನ್ನು ಕೊಟ್ಟು ತಾನು ತಪಸ್ಸಿಗೆ ಹೋದನು,

इति "ऋ" कारादिपदार्थनिरूपणम्

---

# ॠ

**ॠ ೠ** ಇದು ವರ್ಣಮಾಲೆಯಲ್ಲಿ ಮೂರ್ಧಸ್ಥಾನದಲ್ಲಿ ಹುಟ್ಟುವ ಎಂಟನೆಯ ಸ್ವರವರ್ಣ. "ॠटुरषाणां मूर्धा" सि० कौ०। ಉದಾತ್ತ, ಅನುದಾತ್ತ ಮತ್ತು ಸ್ವರಿತಗಳೆಂಬ ಮೂರು ಭೇದಗಳುಳ್ಳ ಈ ದೀರ್ಘ "ॠ" ಕಾರವು ಪುನಃ ಅನುನಾಸಿಕ ಮತ್ತು ಅನನುನಾಸಿಕಗಳೆಂಬ ಭೇದದಿಂದ ಒಟ್ಟು ಆರು ವಿಧವಾಗುವುದು.

**ॠ ೠ** (पु०) 1. ಭೈರವ. 2. ದನುಜ, ದಾನವ. (न०) 3. ಸ್ಮೃತಿ, ನೆನಪು. 4. ವಕ್ಷಸ್ಸು, ಎದೆ. (स्त्री०) 5. ದೇವತೆಗಳ ತಾಯಿ, ಅದಿತಿ. 6. ದಾನವರ ತಾಯಿ, ದನು. 7. ಗತಿ, ಗಮನ. (अव्य०) 8. ವಾಕ್ಯಾರಂಭ. 9. ರಕ್ಷಣೆ. "ॠ वाक्यारम्भे रक्षायां वक्षःस्मृत्योरनव्ययम्। देवाम्बायां दनौ चापि भैरवे दनुजे गतौ" मेदि०।

**ॠ–गतौ** (क्र्या० पर० सक० से०) ॠणाति। ॠणातु। ॠणीयात्। आरीत्। ಹೋಗು, ಚಲಿಸು, ನಡೆ.

इति "ॠ" कारादिपदार्थनिरूपणम्

# ऌ

ऌ ದಂತಸ್ಥಾನದಲ್ಲಿ ಹುಟ್ಟುವ ಈ ಹ್ರಸ್ವಸ್ವರವರ್ಣವು ಉದಾತ್ತ, ಅನುದಾತ್ತ ಮತ್ತು ಸ್ವರಿತಗಳೆಂಬ ಮೂರು ಭೇದಗಳುಳ್ಳದಾಗಿ ಪುನಃ ಅನುನಾಸಿಕ ಮತ್ತು ಅನನುನಾಸಿಕ ಭೇದಗಳಿಂದ ಒಟ್ಟು ಆರು ವಿಧವಾಗುವುದು. ಇದು ಒಂಭತ್ತನೆಯ ಸ್ವರವರ್ಣ.

ऌ (अव्य०) 1. ಅದಿತಿದೇವಿ, ದೇವತೆಗಳ ತಾಯಿ. 2. ಭೂಮಿ. 3. ಪರ್ವತ, ಬೆಟ್ಟ. "ऌकारो देवताम्बायां भुवि कुध्रे च कीर्तितः" मेदि०। 4. ನಿಂದೆ. 5. ವಿಸ್ಮಯ, ಆಶ್ಚರ್ಯ. "ऌ कुत्सायां विस्मये च" हेम०।

ॡ ಇದೊಂದು ದಂತ್ಯ ದೀರ್ಘಸ್ವರವರ್ಣ. "ऌ" ಕಾರ ದಂತೆಯೇ ಇದೂ ಆರು ವಿಧವಾಗುವುದು. ಇದು ಹತ್ತನೆಯ ಸ್ವರವರ್ಣ. ಪಾಣಿನಿಯ ವ್ಯಾಕರಣರೀತ್ಯಾ ಈ ವರ್ಣವಿಲ್ಲ. ಆದರೆ ಕೋಶಗಳಲ್ಲಿ ಮಾತ್ರ ಕಂಡುಬರುವುದು.

ॡ (पु०) 1. ಓತಿಕೇತ. 2. ಮೇರುಪರ್ವತ. 3. ಚಂದ್ರ. 4. ದೇವತೆ. 5. ಲೀಲೆಯಿಂದ ನಡೆಯುವಿಕೆ. 6. ಕಣ್ಣಿನ ಎಲುಬು. 7. ನಾಗಮಾತೆ. 8. ತಾಯಿ. "ॡकारः कृकलासेन्द्रे मेरौ हिमकरे सुरे। लीलागतौ लोचनास्थ्नि नागमातरि मातरि" नानार्थर०। ಮತ್ತು ಮಂತ್ರ ಶಾಸ್ತ್ರದಲ್ಲಿ ಮಾತೃಕಾನ್ಯಾಸದಲ್ಲಿ ಇದರ ಪ್ರಯೋಗವುಂಟು.

इति "ऌ" कारादिपदार्थनिरूपणम्

---

# ए

ए ಏ ಇದು ವರ್ಣಮಾಲೆಯಲ್ಲಿ ಕಂಠ ಮತ್ತು ತಾಲು ಸ್ಥಾನಗಳಲ್ಲಿ ಹುಟ್ಟುವ ಹನ್ನೊಂದನೆಯ ಸ್ವರವರ್ಣ. ಉದಾತ್ತ, ಅನುದಾತ್ತ ಮತ್ತು ಸ್ವರಿತಗಳೆಂಬ ಮೂರು ಭೇದಗಳುಳ್ಳ ಈ ದೀರ್ಘಸ್ವರವು ಅನುನಾಸಿಕ ಮತ್ತು ಅನನುನಾಸಿಕ ಭೇದದಿಂದ ಎರಡು ವಿಧವಾಗಿ ಒಟ್ಟು ಆರು ವಿಧವಾಗುವುದು.

ए ಏ (पु०) 1. ತೇಜಸ್ಸು. 2. ಜಲ, ನೀರು. 3. ರಾತ್ರಿ. 4. ಮಹಡಿಯ ಒಳಭಾಗ. 5. ವಿಷ್ಣು. 6. ಆಕಾಶ. 7. ಹನ್ನೊಂದು ಸಂಖ್ಯೆ. 8. ಪ್ರಾತಃಕಾಲ. 9. ರತ್ನ ಜಗುಲಿ. "एकारस्तेजसि जले रात्रौ हर्म्योदरे हरौ। व्योम्न्येकादशसंख्यायां दिनादौ मणिकुट्टिमे" नानार्थर०। (अव्य०) 10. ಸ್ಮೃತಿ, ನೆನಪು. 11. ಅಸೂಯೆ, ಹೊಟ್ಟೆಕಿಚ್ಚು. 12. ದಯೆ, ಕನಿಕರ. 13. ಸಂಬೋಧನೆ. 14. ಆಹ್ವಾನ. "ए स्मृतावप्यसूयानुकम्पामन्त्रणहूतिषु" मेदि०।

एक ಏಕ (पु०) 1. ವಿಷ್ಣು. एति महिम्नि अतुल्यकक्ष्यतया सजातीयसंख्येयाभावात् अद्वैतं गच्छति—इण् (गतौ) "कन्" (उ० ३-४३)। "द्वितीयस्य सजातीयराहित्यादेक उच्यते" इति निरुक्तिः। "एको नैकः सवः कः किम्" वि० स०। (वि०) 2. ಒಂದು, ಒಬ್ಬ. "एको रागिषु राजते प्रियतमादेहार्धहारी हरो नीरागेषु जनो विमुक्तललनासङ्गो न यस्मात्परः" भर्तृ० ३-१७। 3. ಒಂಟಿಯಾದ, ಅಸಹಾಯನಾದ. "एकः संप्रति नाशितप्रियतमस्तामेव रामः कथम्" उ० रा० २-२८। 4. ಕೇವಲ, ಒಂದು ಮಾತ್ರ, ಒಬ್ಬ ಮಾತ್ರ. "स च त्वदेकेषुनिपातसाध्यो ब्रह्माङ्गभूर्ब्रह्मणि योजितात्मा" कुमा० ३-१५। 5. ಮುಖ್ಯ, ಪ್ರಧಾನ, ಶ್ರೇಷ್ಠ. "एकैश्वर्ये स्थितोऽपि प्रणतबहुफले यः स्वयं कृत्तिवासाः" माल० १-१। 6. ಒಂದೇ ಆದ, ಸಮಾನವಾದ, ಭಿನ್ನವಲ್ಲದ. "कथमेकान्वयो मम" शाकु० ७। 7. ಎರಡರಲ್ಲಿ ಅಥವಾ ಬಹು ವಸ್ತುಗಳಲ್ಲಿ ಒಂದು, ಒಂದಕ್ಕಿಂತಲೂ ಬೇರೆಯಾದ ಇನ್ನೊಂದು, ಇತರ, ಬೇರೆ. "एकः सख्यास्तव सह मया वामपादाभिलाषी काङ्क्षत्यन्यो वदनमदिरां दोहदच्छद्मनास्याः" मेघ० २-१५। 8. ಅನಿರ್ದಿಷ್ಟ,

ಯಾವುದೋ ಒಂದು. "स्त्रीसंस्थानं चाप्सरस्तीर्थमारादुत्क्षिप्यैनां ज्योतिरेकं जगाम" शाकु० ५-३०। 9. ಒಂದೇ ರೀತಿಯಾದ, ಬದಲಾವಣೆ ಹೊಂದದ, ಸಮಾನವಾದ. "मनस्येकं वचस्येकं कर्मण्येकं महात्मनाम्" हितो० १-१०१। (ಬಂವಂ) 10. ಕೆಲವರು, (ತಮಗಿಂತಲೂ) ಇತರರು, ಬೇರೆಯವರು. "एके समूहुर्बलरेणुसंहतिं शिरोभिराज्ञामपरे महीभृतः" माघ० १२-४५।

**एकक ಏಕಕ** (वि०) ಅಸಹಾಯ, ಒಂಟಿಯಾಗಿರುವ. एक "कन्" (५-३-५२)। "विधिरेककचक्रचारिणं किमु निर्मित्सति मान्मथं रथम्" नैष० २-३६। स्त्रियां "टाप्" (४-१-४)। **एकिका ಏಕಿಕಾ.** "निखिलाम्निशि पूर्णिमा तीथीनुपतस्थेऽतिथिरेकिका तिथिः" नैष० २-७६।

**एककण्ठ ಏಕಕಂಠ** (वि०) ಒಂದೇ ಕಾಲದಲ್ಲಿ ಒಂದೇ ಕಂಠದಿಂದ ಹೇಳಲ್ಪಡುವ, ಏಕಕಾಲದಲ್ಲಿ ಅನೇಕರ (ಬೇರೆಬೇರೆಯಲ್ಲದ) ಒಂದೇ ಅಭಿಪ್ರಾಯದ (ಮಾತು).

**एककर ಏಕಕರ** (वि०) 1. ಒಂದು ಕಾರ್ಯವನ್ನು ಮಾಡುವ. एकं करोति—डु कृञ् (करणे) "टः" (३-२-२१)। स्त्रियां "ङीप्" (४-१-१५)। **–करी –ಕರೀ.** 2. ಒಂದು ಕೈಯುಳ್ಳವನು. स्त्रियां "टाप्" (४-१-४)। **–करा –ಕರಾ.**

**एककर्तृ ಏಕಕರ್ತೃ** (वि०) ಒಂದೇ ಕರ್ತೃವಿನಲ್ಲಿರುವ ಅನೇಕ ಕ್ರಿಯೆಗಳು. वा "कप्" (५-४-१५४)। **–कर्तृक –ಕರ್ತೃಕ.**

**एककल्प ಏಕಕಲ್ಪ** (पुं०) 1. ಮುಖ್ಯಕಲ್ಪ, ಪ್ರಥಮ ಕಲ್ಪ. 2. ಶಾಸ್ತ್ರೋಕ್ತವಾದ ಒಂದು ವಿಧಾನ, ಶಾಸ್ತ್ರ ವಿಹಿತವಾದ ಒಂದು ಕ್ರಮ. एकः कल्पः। (वि०) 3. ಮುಖ್ಯ ಕಲ್ಪವನ್ನು ಅನುಸರಿಸಿ ನಡೆಸಲ್ಪಡುವ (ಕಾರ್ಯ). 4. ಒಂದೇ ಕ್ರಮವನ್ನು ಅನುಸರಿಸಿ ನಡೆಸಲ್ಪಡುವ, ಒಂದೇ ಕಲ್ಪದ ಅನುಸಾರವಾಗಿ ನಡೆಸಲ್ಪಡುವ (ಯಾಗಾದಿಗಳು). एकः कल्पो यस्य।

**एककार्य ಏಕಕಾರ್ಯ** (न०) 1. ಒಂದು ಕಾರ್ಯ. 2. ಒಂದೇ ಕಾರ್ಯ, ಸಮಾನವಾದ ಕೆಲಸ. एकं समानं कार्यम्। 3. ಅನೇಕ ಕಾರಣಗಳಿಂದ ನಿರ್ವಹಿಸಲ್ಪಡುವ ಒಂದು ಕಾರ್ಯ, ಅನೇಕ ಕಾರಣಗಳಿಂದ ಸಾಧಿಸಲ್ಪಡುವ ಒಂದು ಕಾರ್ಯ. (वि०) 4. ಒಂದೇ ವಿಧ ಉದ್ಯೋಗವುಳ್ಳ, ಸಮಾನವಾದ ವೃತ್ತಿಯುಳ್ಳ. एकं समानं कार्यं यस्य।

**एककार्यत्व ಏಕಕಾರ್ಯತ್ವ** (न०) ಏಕಕಾರ್ಯಾನುಕೂಲತ್ವ, (ಎರಡು ಕಾರಣಗಳು) ಒಂದು ಕೆಲಸಕ್ಕೆ ಅನುಕೂಲವಾಗಿರುವಿಕೆ. एकं कार्यं ययोः कारणयोः, तयोर्भावः "त्वः" (५-१-११९)। ಇದು ಆರು ವಿಧ ಸಂಗತಿಗಳಲ್ಲೊಂದು. (1) प्रसङ्गः, (2) उपोद्घातः, (3) हेतुत्वम्, (4) अवसरः, (5) निर्वाहकत्वम् ಮತ್ತು (6) एककार्यत्वम् ಎಂದು ಸಂಗತಿಗಳು ಆರು ವಿಧ.

**एककाल ಏಕಕಾಲ** (पुं०) 1. ಒಂದು ಕಾಲ, ಒಂದು ವೇಳೆ, ಒಂದು ಸಮಯ. एकः कालः। 2. ಒಂದೇ ಸಮಯ, ಸಮಾನವಾದ ಕಾಲ. एकः समानः कालः। (अव्य०) **–कालम् –ಕಾಲಮ್.** 3. ಒಂದೇ ವೇಳೆ, ಒಂದೇ ಸಲ. "एककालं चरेद्भैक्षं न प्रसज्जेत विस्तरे" मनु० ६-५५। 4. ಒಂದೇ ಸಮಯದಲ್ಲಿ, ಸಮಾನ ಕಾಲದಲ್ಲಿ.

**एककालिक ಏಕಕಾಲಿಕ** (वि०) ಒಂದು ವೇಳೆಯಲ್ಲಿ ಉಂಟಾದ, ಒಂದು ಕಾಲದಲ್ಲಿ ಹುಟ್ಟಿದ. एककालो जनकतयाऽस्त्यस्य "ठन्" (५-२-११५)। "तेभ्यो लब्धेन भैक्षेण वर्तयन्नेककालिकम्" मनु० ११-१२३।

**एककुण्डल ಏಕಕುಂಡಲ** (पुं०) 1. ಬಲರಾಮ. 2. ಕುಬೇರ. एकं कुण्डलं यस्य। "एककुण्डल आख्यातो बलभद्रे धनाधिपे" मेदि०। 3. ಆದಿಶೇಷ. "अथानन्ते कुबेरे चैककुण्डलः" वैज०।

**एकगुरु ಏಕಗುರು** (पुं०) ಒಬ್ಬನೇ ಗುರುವಿನ ಶಿಷ್ಯ, ಒಬ್ಬನೇ (ಸಮಾನ) ಆಚಾರ್ಯನಲ್ಲಿ ಅಧ್ಯಯನ ಮಾಡುವ ಸಹಪಾಠಿ. एकः अभिन्नो गुरुर्यस्य।

**एकग्राम ಏಕಗ್ರಾಮ** (पुं०) 1. ಒಂದೇ ಗ್ರಾಮ, ಸಮಾನವಾದ ಗ್ರಾಮ. एकः समानो ग्रामः। (वि०) 2. ಒಂದೇ ಹಳ್ಳಿಯುಳ್ಳ, (ವಾಸಕ್ಕೆ) ಸಮಾನಗ್ರಾಮವುಳ್ಳ, (ಒಂದೇ ಹಳ್ಳಿಯಲ್ಲಿ ವಾಸಮಾಡುವ). एकः समानो ग्रामो यस्य।

**एकग्रामीण ಏಕಗ್ರಾಮೀಣ** (वि०) ಒಂದೇ ಗ್ರಾಮದಲ್ಲಿ (ನಿರಂತರವಾಗಿ) ವಾಸಮಾಡುವ, ಒಂದೇ ಊರಿನಲ್ಲಿರುವ. एकग्रामे भवः "खञ्" (४-२-९४)। "नैकग्रामीणमतिथिं विप्रं साङ्गतिकं तथा। उपस्थितं गृहे विद्यात् भार्या यत्राग्नयोऽपि वा" मनु० ३-१०३।

**एकग्रामीय ಏಕಗ್ರಾಮೀಯ** (वि०) ಒಂದೇ ಹಳ್ಳಿಗೆ ಸೇರಿದ, ಸಮಾನವಾದ ಹಳ್ಳಿಯಲ್ಲಿ ವಾಸಮಾಡುವ. एकग्रामे भवः "छः" (४-२-१३८)।

**एकग्राम्य ಏಕಗ್ರಾಮ್ಯ** (वि०) ಒಂದೇ ಹಳ್ಳಿಯಲ್ಲಿ ವಾಸಿಸುವ, (ನಿರಂತರವಾಗಿ) ಒಂದೇ ಊರಿನಲ್ಲಿರುವ. एकग्रामे भवः "यः" (४-२-९४)।

**एकचक्र ಏಕಚಕ್ರ** (पु०) 1. ಸೂರ್ಯನ ರಥ. एकं चक्रं यस्य। सप्त युञ्जन्ति रथमेकचक्रमेकोऽश्वो वहति सप्तनामा। त्रिनाभिचक्रमजरमनर्वं यत्रेमा विश्वा भुवनाधितस्थुः" ऋ०। ಸೂರ್ಯರಥಕ್ಕೆ ಮೂರು ಚಕ್ರಗಳಿದ್ದರೂ ಅವೆಲ್ಲಾ ಒಂದು ರೂಪದಲ್ಲಿರುವುದರಿಂದ ಏಕಚಕ್ರವಾಯಿತು. ಒಂದೇ ಕುದುರೆ. ಅದಕ್ಕೆ "ಸಪ್ತ" ಎಂದು ಹೆಸರು. ಅಥವಾ ಸಪ್ತಸಂಖ್ಯಾಕವಾದ ರಶ್ಮಿಗಳು. ಅಥವಾ ಮಾಸದ್ವಯಾತ್ಮಕವಾದ ಆರು ಋತುಗಳು ಮತ್ತು ಒಂದು ಅಧಿಕಮಾಸ ಈ ರೀತಿ ಏಳು ಋತುಗಳು ಸೂರ್ಯನ ಈ ಸಂಚಾರ ಕಾರ್ಯವನ್ನು ನಿರ್ವಹಿಸುವುವು. ಅಥವಾ ಸಪ್ತರ್ಷಿಗಳಿಂದ ಸ್ತುತಿಸಲ್ಪಟ್ಟ ಸೂರ್ಯನು ಸಂಚರಿಸುತ್ತಾನೆ. ಅಥವಾ ಭೂತಭವಿಷ್ಯದ್ವರ್ತಮಾನ ರೂಪವಾದ ಮೂರು ನಾಭಿಗಳುಳ್ಳ ಸಂವತ್ಸರರೂಪವಾದ ಚಕ್ರ. ನಾನಾ ಕಾಲಾವಯವೋಪೇತವಾದ ಈ ಚಕ್ರವನ್ನು ಸೂರ್ಯನು ತಿರುಗಿಸುತ್ತಿರುವನು. ಇತ್ಯಾದಿ, ಇತ್ಯಾದಿ. ऋ० भा०। (वि०) 2. ಒಂದು ಚಕ್ರವುಳ್ಳ. "अध्वानं नैकचक्रः प्रभवति भुवनभ्रान्तिदीर्घं विलङ्घ्य प्रातः प्राप्तुं रथो मे पुनरिति मनसि न्यस्तचिन्तातिभारः" रत्ना० ३-५। 3. ಒಬ್ಬ ರಾಜನುಳ್ಳ, ಒಬ್ಬ ರಾಜನಿಂದ ಕೂಡಿದ. "इत्थं व्रजन् भारतमेव वर्षं कालेन यावत् गतवान् प्रभासम्। तावच्छशास क्षितिमेकचक्रामेकातपत्रामजितेन पार्थः" भाग० ३-१-२०। (स्त्री०) **–चक्रा –ಚಕ್ರಾ.** 4. ಏಕಚಕ್ರನಗರ, ಪಾಂಡವರು ಅರಗಿನ ಮನೆಯಿಂದ ಪ್ರಾಣ ರಕ್ಷಿಸಿಕೊಂಡು ಹೋಗಿ ಕೆಲವುಕಾಲ ವಾಸಮಾಡುತ್ತಿದ್ದ ಒಂದು ಪಟ್ಟಣ. [ಪಾಂಡವರು ಇಲ್ಲಿ ವಾಸಿಸುತ್ತಿದ್ದಾಗ ಈ ಊರಿನ ಜನರಿಗೆ ಅನೇಕ ವಿಧ ಚಿತ್ರಹಿಂಸೆ ಕೊಡುತ್ತಿದ್ದ ಬಕಾಸುರನನ್ನು ಭೀಮನು ಸಂಹರಿಸಿ ಆ ಜನರ ಪ್ರಾಣಗಳನ್ನು ರಕ್ಷಿಸಿದನು.] "तत्र ते नियता कालं कञ्चिद्दूषुर्नरर्षभाः। मात्रा सहैकचक्रायां ब्राह्मणस्य निवेशने। तत्राससाद क्षुधितं पुरुषादं वृकोदरः। भीमसेनो महाबाहुः बकं नाम महाबलम्। तं चापि पुरुषव्याघ्रो बाहुवीर्येण पाण्डवः। निहत्य तरसा वीरो नागरान् पर्यसान्त्वयत्" भा० आदि० ६१।

**एकचक्षुस् ಏಕಚಕ್ಷುಸ್** (पु०) 1. ಕಾಗೆ, ವಾಯಸ. (वि०) 2 ಒಂದು ಕಣ್ಣುಳ್ಳ (ಪ್ರಾಣಿ). 3. ಒಂದು ಕಣ್ಣುಳ್ಳ (ಸೂಜಿ). एकं चक्षुर्यस्य। 4. ಒಂದೇ ವಿಷಯದಲ್ಲಿ ಜ್ಞಾನವುಳ್ಳ, ಸ್ಥಿರಚಿತ್ತನಾದ.

**एकचत्वारिंश ಏಕಚತ್ವಾರಿಂಶ** (वि०) ನಲವತ್ತೊಂದನೆಯ. एकचत्वारिंशतः पूरणः "डट्" (५-२-४८)। स्त्रियां "ङीप्" (४-१-१५)। **–चत्वारिंशी –ಚತ್ವಾರಿಂಶೀ.**

**एकचत्वारिंशत् ಏಕಚತ್ವಾರಿಂಶತ್** (स्त्री०) 1. ನಲವತ್ತೊಂದು. एकेनाधिका चत्वारिंशत्। (वि०) 2. ನಲವತ್ತೊಂದು ಸಂಖ್ಯೆಯುಳ್ಳ.

**एकचर ಏಕಚರ** (पु०) 1. ಗಂಡಕಮೃಗ, ಖಡ್ಗಮೃಗ. एकः चरति—चर (गतौ) "अच्" (३-१-१३४)। 2. ಒಂಟಿಯಾಗಿ ಸಂಚರಿಸುವ ಹಾವು ಮೊದಲಾದುದು. "न भक्षयेदेकचरानज्ञातांश्च मृगद्विजान्" मनु० ५-१७। (वि०) 3. ಒಂಟಿಯಾಗಿ ಸಂಚರಿಸುವ, ಅಸಹಾಯನಾಗಿ ತಿರುಗಾಡುವ. "मागाश्चिरायैकचरः प्रमादं वसन्नसंबाधशिवेऽपि देशे" किरा० ३-५३। 4. ಒಂಟಿಯಾದ, ಗುಂಪಿನಿಂದ ತಪ್ಪಿಸಿಕೊಂಡಿರುವ. "अयमेकचरोऽभिवर्तते मां समरायेव समाजुहूषमाणः" किरा० १३-३।

**एकचर्या ಏಕಚರ್ಯಾ** (स्त्री०) ಒಂಟಿಯಾಗಿ ಸಂಚರಿಸುವಿಕೆ, ಅಸಹಾಯನಾಗಿ ತಿರುಗಾಡುವಿಕೆ. एकस्य चर्या।

**एकचारिन् ಏಕಚಾರಿನ್** (वि०) ಅಸಹಾಯನಾಗಿ ಸಂಚರಿಸುವ, ಒಂಟಿಯಾಗಿ ತಿರುಗುವ. एकः चरति—चर (गतौ) "णिनिः" (३-२-७८)। स्त्रियां "ङीप्" (४-१-५)। **–चारिणी –ಚಾರಿಣೀ.**

**एकचित्त ಏಕಚಿತ್ತ** (न०) 1. ಒಂದೇ ವಿಷಯದಲ್ಲಿರುವ ಮನಸ್ಸು. 2. ಒಂದೇ ಅಭಿಪ್ರಾಯ, ಸಮಾನಾಭಿಪ್ರಾಯ. (वि०) 3. ಒಂದೇ ಮನಸ್ಸುಳ್ಳ, ಒಮ್ಮನಸ್ಸುಳ್ಳ, ಸಮಾನವಾದ ಅಭಿಪ್ರಾಯವುಳ್ಳ. एकं समानं चित्तं यस्य। ಒಂದೇ ವಿಷಯದಲ್ಲಿ ಮನಸ್ಸುಳ್ಳ, ಒಂದೇ ವಿಷಯವನ್ನು ಕುರಿತು ಆಲೋಚನೆಯುಳ್ಳ. एकस्मिन् चित्तं यस्य।

**एकचित्तता ಏಕಚಿತ್ತತಾ** (स्त्री०) 1. ಒಂದೇ ವಿಷಯದಲ್ಲಿ ಮನಸ್ಸು ಇಟ್ಟಿರುವಿಕೆ. 2. ಏಕಾಭಿಪ್ರಾಯದಿಂದಿರುವಿಕೆ. एकचित्तस्य भावः "तल्" (५-१-११९)।

**एकच्छत्र ಏಕಚ್ಛತ್ರ** (वि०) ಒಂದೇ ಛತ್ರಿಯುಳ್ಳ (ದೇಶ), (ಚಕ್ರವರ್ತಿಯಾದವನಿಗೆ ಹಿಡಿಯಬೇಕಾದ) ಸಾಮ್ರಾಜ್ಯಸೂಚಕವಾದ ಒಂದೇ ಛತ್ರಿಯು ಹಿಡಿಯಲ್ಪಡುವ (ದೇಶ), ಒಬ್ಬನೇ ಚಕ್ರವರ್ತಿಯಿಂದ ಆಳಲ್ಪಡುವ (ದೇಶ). एकं (साम्राज्यसूचकमसाधारणं) छत्रं यस्मिन्।

**एकज ಏಕಜ** (वि०) 1. ಒಂಟಿಯಾಗಿ ಹುಟ್ಟಿದ, ಅಸಹಾಯನಾಗಿ ಹುಟ್ಟಿದ. एकः जायते। 2. ಒಬ್ಬನಿಂದ ಹುಟ್ಟಿದ (ಸೋದರಭಿನ್ನೋದರರು). एकस्माज्जायते। (स्त्री०) **–जा –ಜಾ.** ಸಹೋದರಿಯರು, ಅಕ್ಕತಂಗಿಯರು.

**एकजन्मन् ಏಕಜನ್ಮನ್** (पु०) 1. ಒಂದು ಸಲ ಜನ್ಮ ಪಡೆದ ಶೂದ್ರ. एकं जन्म न द्वितीयं यस्य। ಶೂದ್ರನಿಗೆ ಗರ್ಭದಲ್ಲಿ ಮಾತ್ರ ಜನ್ಮ. ಬ್ರಾಹ್ಮಣನಿಗೆ ಉಪನಯನದಲ್ಲಿ ಎರಡನೆಯ ಜನ್ಮವುಂಟು. ಆದುದರಿಂದ ಶೂದ್ರನು ಏಕಜನ್ಮಾ ಎಂದೂ, ಬ್ರಾಹ್ಮಣನು ದ್ವಿಜನ್ಮಾ ಎಂದೂ ಕರೆಯಲ್ಪಡುವನು. 2. ರಾಜ, ದೊರೆ. एकेभ्यः प्रधानेभ्यो लोकपालांशेभ्यो जन्म यस्य। "अष्टानां लोकपालानां वपुर्धारयते नृपः" मनु० ५-९६।

**एकजाति ಏಕಜಾತಿ** (स्त्री०) 1. ಒಂದು ಜಾತಿ. ಒಂದು ವಿಧ. (वि०) 2. ಒಂದು ಜಾತಿಯ, ಒಂದು ವಿಧವಾದ, ಒಂದು ತೆರನಾದ. 3. ಒಂದು ಜನ್ಮವುಳ್ಳ, ಒಂದು ಸಲ ಉತ್ಪತ್ತಿಯುಳ್ಳ, (ಶೂದ್ರ). एका जातिर्जन्म यस्य। "चतुर्थ एकजातिस्तु शूद्रो नास्ति तु पञ्चमः" मनु० १०-४। 4. ಒಂದೇ ವಂಶ ಅಥವಾ ಜಾತಿಗೆ ಸೇರಿದ.

**एकजातीय ಏಕಜಾತೀಯ** (वि०) ಒಂದೇ ವಿಧವಾದ, ಒಂದೇ ತೆರನಾದ, ಒಂದೇ ರೀತಿಯಾದ. एकप्रकारः–एक "जातीयर्" (५-३-६९)। "एवमेकजातीयानां महाशरीरेभ्यः कृशशरीराः प्रधानतमाः" सुश्रुत०।

**एकजीववाद ಏಕಜೀವವಾದ** (पु०) ಒಬ್ಬನೇ ಜೀವನು ಅವಿದ್ಯೆಯಿಂದ ಸಂಸಾರಪಾಶಬದ್ಧನಾಗಿ ಕೊನೆಗೆ ಬ್ರಹ್ಮಜ್ಞಾನದಿಂದ ಮುಕ್ತಿಹೊಂದುವನೆಂಬ (ಅದ್ವೈತಿಗಳ) ವಾದ. एक एव जीवः इति वादः।

**एकतम ಏಕತಮ** (वि०) ಬಹುಮಂದಿಗಳಲ್ಲಿ ಒಬ್ಬ, ಅನೇಕ ವಸ್ತುಗಳಲ್ಲಿ ಒಂದು. एषामेकः "डतमच्" (५-३-९४)।

**एकतर ಏಕತರ** (वि०) ಇಬ್ಬರಲ್ಲಿ ಒಬ್ಬ, ಎರಡು ವಸ್ತುಗಳಲ್ಲಿ ಒಂದು. अनयोरेकः "डतरच्" (५-३-९४)।

**एकतस् ಏಕತಸ್** (अव्य०) 1. ಒಂದರಿಂದ, ಒಬ್ಬನಿಂದ. एक "तसिः" (वा० ५-४-४४)। 2. ಒಂದು ಕಡೆಯಲ್ಲಿ. 3. ಒಂದು ಕಡೆಯಿಂದ. "यात्येकतोऽस्तशिखरं पतिरोषधीनामाविष्कृतोऽरुणपुरःसर एकतोऽर्कः" शाकु० ४-२।

**एकता ಏಕತಾ** (स्त्री०) ಏಕತ್ವ, ಒಂದಾಗಿರುವಿಕೆ, ಅಭಿನ್ನವಾಗಿರುವಿಕೆ. एकस्य भावः "तल्" (५-१-११९)। "एकतामिव गतस्य विवेकः कस्यचिन्न महतोऽप्युपलेभे" किरा० ९-१२। "त्वः" (५-१-११९)। **एकत्वम् ಏಕತ್ವಮ್.**

**एकतान ಏಕತಾನ** (पु०) 1. ಒಂದೇ ವಿಷಯದಲ್ಲಿಟ್ಟಿರುವ ಗಮನ, ಒಂದೇ ವಿಷಯದಲ್ಲಿರುವ ಜ್ಞಾನ. 2. (ಸಂಗೀತದಲ್ಲಿ) ಬೇರೊಂದು ಸ್ವರವು ಹೊರಡಲು ಕಾರಣವಾದ ವೇಣುವಾದ್ಯ(ಕೊಳಲು)ಸಾಧ್ಯವಾದ ಪ್ರಧಾನವಾದ ಒಂದು ಅಂಶಸ್ವರ. एकस्तानो विस्तारो गीतिभेदो यस्य। (वि०) 3. ಒಂದೇ ವಿಷಯದಲ್ಲಿ ನೆಟ್ಟ ಮನಸ್ಸುಳ್ಳ, ಒಂದೇ ಕಡೆ ಗಮನವಿಟ್ಟಿರುವ, ಒಂದೇ ವಿಷಯದಲ್ಲಿ ಜ್ಞಾನವುಳ್ಳ. एकस्मिन् विषये तानो बुद्धिविस्तारो यस्य। "ब्रह्मैकतानमनसो हि वसिष्ठमिश्रास्त्वं ब्रूहि वीरचरितेषु गुरुः पुराणः" म० वी० ३-११।

**एकताल ಏಕತಾಳ** (पु०) 1. ಸಮಾನಕಾಲಕ್ರಿಯಾಮಾನವುಳ್ಳ ತಾಳ, ಲಯವು ಚೆನ್ನಾಗಿ ಕೂಡುವ ತಾಳ. एकः समानः तालः कालक्रियामानं यस्य। 2. ಒಂದು ತಾಳವೃಕ್ಷ, ಒಂದು ತಾಟೀಮರ. (वि०) 3. ಒಂದು ತಾಳವೃಕ್ಷವುಳ್ಳ, ಒಂದು ತಾಟೀಮರವುಳ್ಳ, "एकताल इवोत्पातपवनप्रेरितो गिरिः" रघु० १५-२३।

**एकत्र ಏಕತ್ರ** (अव्य०) ಒಂದು ಕಡೆಯಲ್ಲಿ, ಒಂದು ಸ್ಥಳದಲ್ಲಿ. एक "त्रल्" (५-३-१०)। "एकत्र स्फटिकतटांशुभिन्ननीरा नीलाश्मद्युतिभिदुराम्भसोऽपरत्र" माघ० ४-२६।

**एकत्रिंश ಏಕತ್ರಿಂಶ** (वि०) ಮೂವತ್ತೊಂದನೆಯ. एकत्रिंशतः पूरणः "डट्" (५-२-४८)। स्त्रियां "ङीप्" (४-१-१५)। **–त्रिंशी –ತ್ರಿಂಶೀ.**

**एकत्रिंशत् ಏಕತ್ರಿಂಶತ್** (स्त्री०) 1. ಮೂವತ್ತೊಂದು. एकाधिका त्रिंशत्। (वि०) 2. ಮೂವತ್ತೊಂದು ಸಂಖ್ಯೆಯುಳ್ಳ.

**एकदंष्ट्र ಏಕದಂಷ್ಟ್ರ** (पु०) ವಿನಾಯಕ, ಗಣಪತಿ. एका दंष्ट्रा यस्य। [ಒಂದು ದಿನ ಪಾರ್ವತೀಪರಮೇಶ್ವರರು ಅಂತಃಪುರದಲ್ಲಿದ್ದಾಗ ಅವರ ದರ್ಶನಕ್ಕಾಗಿ ಬಂದ ಪರಶುರಾಮನನ್ನು ಬಾಗಿಲಲ್ಲಿದ್ದ ಗಣಪತಿಯು ತಡೆಯಲು ಪರಶುರಾಮನು ಕೋಪಗೊಂಡು ತನ್ನ ಕೊಡಲಿಯನ್ನು ಎಸೆದಾಗ ಗಣಪತಿಯು ಒಂದು ಕೊಂಬು ಮುರಿದುದರಿಂದ ಗಣಪತಿಗೆ ಈ ಹೆಸರಾಯಿತು.] "निपत्य पर्शुवेगेन छित्वा दन्तं समूलकम्। जगाम रामहस्तं तु महादेववरेण च" ब्रह्मवै०। [ತನ್ನನ್ನು ಹಾಸ್ಯಮಾಡಿದ ಚಂದ್ರನ ಮೇಲಿನ

ಕೋಪದಿಂದ ತನ್ನ ಒಂದು ಕೊಂಬನ್ನು ಕಿತ್ತು, ಚಂದ್ರನನ್ನು ಹೊಡಮದರಿಂದ ಗಣಪತಿಯು ಏಕದಂಷ್ಟ್ರನಾದನೆಂಬ ಒಂದು ಕಥೆಯೂ ಉಂಟು.]

**एकदण्डिन् ಏಕದಂಡಿನ್** (पु०) ಶಿಖಾಯಜ್ಞೋಪವೀತಗಳನ್ನು ತ್ಯಜಿಸಿ ಒಂದು ದಂಡವನ್ನು ಮಾತ್ರ ಧರಿಸಿರುವ ಸನ್ಯಾಸಿ. एक: केवल: शिखायज्ञोपवीतशून्य: दण्डोऽस्यास्ति "इनि:" (५-२-११५)। "यदा हृदाध्यवसितं परं ब्रह्म सनातनम्। तदैकदण्डं संगृह्य सोपवीतां शिखां त्यजेत्"। ಸನ್ಯಾಸಿಯು (1) कुटीचक:, (2) बहूदक:, (3) हंस: ಮತ್ತು (4) परमहंस: ಎಂದು ನಾಲ್ಕು ವಿಧ.

**ಕುಟೀಚಕನು** ಕಾಷಾಯ ಮತ್ತು ತ್ರಿದಂಡವನ್ನು ಧರಿಸಿ ತನ್ನ ಪುತ್ರನಿಂದ ನಿರ್ಮಿಸಲ್ಪಟ್ಟ ಒಂದು ಕುಟೀರದಲ್ಲಿ ವಾಸಿಸುತ್ತಾ, ತನ್ನ ಅಥವಾ ಬಂಧುಗಳ ಮನೆಯಲ್ಲಿ ಊಟ ಮಾಡುತ್ತಾ, ಆತ್ಮಧ್ಯಾನಪರನಾಗಿರಬೇಕು.

**ಬಹೂದಕನು** ಇದೇ ವೇಷದಿಂದ ಏಳು ಮನೆಗಳಲ್ಲಿ ಭಿಕ್ಷೆ ಬೇಡಿ ಜೀವಿಸುತ್ತಿರಬೇಕು.

**ಹಂಸನು** ಇದೇ ವೇಷದಿಂದ ಏಕದಂಡಧಾರಿಯಾಗಿರುವನು.

**ಪರಮಹಂಸನೂ** ಶಿಖಾಯಜ್ಞೋಪವೀತ ಹೀನನಾಗಿ ಏಕದಂಡಧಾರಿಯಾಗಿರುವನು,

**एकदन्त ಏಕದಂತ** (पु०) ವಿನಾಯಕ, ಗಣಪತಿ. एको दन्तो यस्य। ["एकदंष्ट्र" ಪದದಲ್ಲಿ ನೋಡಿ.] "अनेकदं तं भक्तानामेकदन्तमुपास्महे"।

**एकदा ಏಕದಾ** (अव्य०) 1. ಒಂದು ಸಲ, ಒಂದು ಕಾಲದಲ್ಲಿ, ಒಂದು ಸಮಯದಲ್ಲಿ. एकस्मिन् काले—एक "दा" (५-३-१५)। "सचैकदा पिपासाकुलित: पानीयं पातुं यमुनाकच्छमगच्छत्" हितो०२। 2. ಒಂದೇ ಕಾಲದಲ್ಲಿ, ಅದೇ ಸಮಯದಲ್ಲಿ, ಸಮಕಾಲದಲ್ಲಿ. "एकदा न विगृह्णीयाद्बहून् राजा विरोधिन:" हितो०४-९३। 3. ಕೂಡಲೆ, ತತ್‌ಕ್ಷಣದಲ್ಲಿ.

**एकदिश् ಏಕದಿಶ್** (वि०) ಒಂದೇ ದಿಕ್ಕುಳ್ಳ, ಸಮಾನವಾದ ದಿಕ್ಕಿನಲ್ಲಿರುವ. एका दिक् अधिकरणात्मिका यस्य। "तेनैकदिक्" पा० सू० ४-३-११२।

**एकदु:ख ಏಕದುಃಖ** (वि०) ಒಂದೇ ವಿಧ ದುಃಖವುಳ್ಳ, ಸಮಾನವಾದ ದುಃಖವುಳ್ಳ. एकं समानं दु:खं यस्य।

**एकदृश् ಏಕದೃಶ್** (पु०) 1. ವಾಯಸ, ಕಾಗೆ. एका दृक् यस्य। अभि० चि० ४-२८८। 2. ಈಶ್ವರ, ಪರಮಾತ್ಮ. एकं सर्वमभिन्नं पश्यति—दृशिर् (प्रेक्षणे) "क्विन्" (३-२-६१)। अभि० चि० २-११०। (वि०) 3. ಒಂದು ಕಣ್ಣುಳ್ಳವನು, ಕುರುಡ. अभि० चि० ३-११७।

**एकदृष्टि ಏಕದೃಷ್ಟಿ** (पु०) 1. ವಾಯಸ, ಕಾಗೆ. एका दृष्टिर्यस्य। (स्त्री०) 2. ಒಂದೇ ವಿಷಯದಲ್ಲಿಟ್ಟಿರುವ ಗಮನ, ಒಂದೇ ಕಡೆ ಜ್ಞಾನ. एकस्मिन् दृष्टि:। (वि०) 3. ಒಂದೇ ವಿಷಯದಲ್ಲಿ ಜ್ಞಾನವುಳ್ಳ. एकस्मिन् दृष्टिर्यस्य।

**एकदे(दै)वत ಏಕದೇ(ದೈ)ವತ** (वि०) ಒಂದೇ ದೇವತೆಯುಳ್ಳ ಅಗ್ನಿಹೋತ್ರ ಮುಂತಾದುದು, ಏಕದೇವತಾಕವಾದ (ಹೋಮ). एका देवता एकं दैवतं वा अस्य।

**एकदेवत्य ಏಕದೇವತ್ಯ** (वि०) ಒಂದು ದೇವತೆಗಾಗಿರುವುದು. एकदेवतायै इदम् "यत्" (५-४-२४)।

**एकदेश ಏಕದೇಶ** (पु०) 1. ಅವಯವ, ಅಂಗ, ಒಂದು ಭಾಗ. एको देश:। "एकदेशमुपाध्याय: ऋत्विग्यज्ञकृदुच्यते" याज्ञ० १-३५। 2. ಒಂದು ಸ್ಥಳ, ಒಂದು ಜಾಗ. 3. ಪೂರ್ವಪಕ್ಷ, ಕೆಲವಂಶಗಳನ್ನು ಮಾತ್ರ ತಿಳಿದು ಶಂಕಿಸುವ ಪಕ್ಷ. 4. ಒಂದು ಪಕ್ಕ, ಒಂದು ಪಾರ್ಶ್ವ. "तान्येकदेशान्निभृतं पयोधे: सोऽम्भांसि मेघान् पिबतो ददर्श" माघ० ३-७४। (वि०) 5. ಒಂದೇ ಜಾಗವುಳ್ಳ, ಸಮಾನವಾದ ಜಾಗವುಳ್ಳ. एक: समानो देशो यस्य।

**एकदेशविकार ಏಕದೇಶವಿಕಾರ** (पु०) 1. ಒಂದು ಭಾಗದ ಬದಲಾವಣೆ, ಒಂದು ಕಡೆ ವಿಕಾರ ಹೊಂದುವಿಕೆ. एकदेशस्य विकार:। (वि०) 2. ಒಂದು ಭಾಗದಲ್ಲಿ ಬದಲಾವಣೆಯುಳ್ಳ. एकदेशे विकारो यस्य।

**एकदेशविकृत ಏಕದೇಶವಿಕೃತ** (वि०) ಒಂದು ಭಾಗದಲ್ಲಿ ಬದಲಾವಣೆ ಹೊಂದಿರುವ. एकदेशे विकृतम्। "एकदेशविकृतमनन्यवत्" परि० ३७।

**एकदेशविभावित ಏಕದೇಶವಿಭಾವಿತ** (वि०) ಒಂದು ಭಾಗ ಮಾತ್ರ ಒಪ್ಪಿಸಲ್ಪಟ್ಟ (ವ್ಯವಹಾರ), ಪ್ರತಿವಾದಿಯು ಏನೂ ಕೊಡಬೇಕಾಗಿಲ್ಲವೆನ್ನುವಾಗ ವಾದಿಯು ಕೆಲವು ಪ್ರಮಾಣ (ರುಜುವಾತು) ಗಳಿಂದ ಕೆಲವು ಭಾಗಗಳನ್ನು ಮಾತ್ರ ಪ್ರತಿವಾದಿಯಿಂದ ಒಪ್ಪಿಸಲ್ಪಟ್ಟ. (ಕೊಡುವ ಅಥವಾ ಕೊಳ್ಳುವ ವ್ಯವಹಾರ). एकदेशे विभावित: प्रमाणादिना विभावित: अङ्गीकारित:। "निह्नुते लिखितं नैकमेकदेशे विभावित:। दाप्य: सर्वं नृपेणाथ न ग्राह्यस्त्वनिवारित:" याज्ञ० २-२०।

**एकदेशिन् ಏಕದೇಶಿನ್** (वि०) 1. ಏಕದೇಶವುಳ್ಳ, ಒಂದು ಪ್ರದೇಶವುಳ್ಳ. 2. ಒಂದು ಭಾಗದಿಂದ ಕೂಡಿರುವ, ಒಂದು ಅವಯವದಿಂದ ಕೂಡಿದ. - एकदेशोऽस्यास्ति "इनिः" (५-२-११५)। "पूर्वपराधरोत्तरमेकदेशिनैकाधिकरणे" पा० सू० २-२-१। 3. ಪೂರ್ವಪಕ್ಷಿ.

**एकदेह ಏಕದೇಹ** (पु०) 1. ಒಂದು ಶರೀರ. एको देहः। 2. ಬುಧಗ್ರಹ. एकः श्रेष्ठो देहो यस्य। "बुधो हेमा राजपुत्रः एकदेहः प्रहर्षणः" त्रिकाण्ड०। 3. ವಂಶ, ಕುಲ, ಗೋತ್ರ. एकस्माद्देहो यत्र। (द्विव०) 4. ಪತಿ ಪತ್ನಿಯರು, ಗಂಡಹೆಂಡಿರು. ವಿವಾಹಾನಂತರ ಪತಿಪತ್ನಿಯರು ಏಕದೇಹವಾಗುವುದರಿಂದ ಪತ್ನಿಯು ಅರ್ಧಾಂಗಿಯಾಗುವಳು. "अस्थिभिरस्थीनि मांसैर्मांसानि त्वचा त्वच" मिति श्रुतिः। (वि०) 5. ಸಮಾನವಾದ ಶರೀರವುಳ್ಳ, ಒಂದೇ ಶರೀರವುಳ್ಳ, ಒಬ್ಬನ ವಂಶದಲ್ಲೇ ಹುಟ್ಟಿದ. एकस्माद्देहो यस्य।

**एकधर्मन् ಏಕಧರ್ಮನ್** (वि०) ಸಮಾನ ಧರ್ಮವುಳ್ಳ. एकः समानो धर्मो यस्य। "अनिच्" (५-४-१२४)। स्त्रियां "डाप्" (४-१-१३)। **-धर्मा -ಧರ್ಮಾ.**

**एकधा ಏಕಧಾ** (अव्य०) ಒಂದು ರೀತಿಯಲ್ಲಿ, ಒಂದು ಪ್ರಕಾರವಾಗಿ. एक "धा" (५-३-४४)। "अधुनीत खगः स नैकधा तनुमुत्फुल्लतनूरुहीकृताम्" नैष० २-२।

**एकधारा ಏಕಧಾರಾ** (स्त्री०) ನೀರು ಅವಿಚ್ಛಿನ್ನವಾಗಿ ಸುರಿಯುವಿಕೆ,—ಎಡೆಬಿಡದೆ ಬೀಳುತ್ತಿರುವಿಕೆ,—ಒಂದೇ ರೀತಿ ಪ್ರವಹಿಸುವಿಕೆ.

**एकधुर ಏಕಧುರ** (वि०) ಒಂದು ಬಂಡಿ ಭಾರ ಹೊರುವ, ಒಂದು ಗಾಡಿ ಹೊರೆಯಷ್ಟು ಹೊರುವ (ಎತ್ತು ಮೊದಲಾದುದು). एकधुरां वहति "खः" लुक् च (४-४-७९)। लगभावे **-धुरीणः -ಧುರೀಣಃ.**

**एकधुरा ಏಕಧುರಾ** (स्त्री०) ಒಂದು ಭಾರ, ಒಂದು ಹೊರೆ. एका धूः "अः" (५-४-७४)।

**एकधुरावह ಏಕಧುರಾವಹ** (वि०) 1. ಒಂದು ಬಂಡಿ ಹೊರೆ ಹೊರುವ (ಎತ್ತು ಮೊದಲಾದುದು). एकधुराया वहः। 2. ಮುಖ್ಯವಾಗಿ ಭಾರ (ಹೊರೆ) ಹೊತ್ತಿರುವವನು.

**एकनक्षत्र ಏಕನಕ್ಷತ್ರ** (न०) 1, ಒಂದೇ ಚುಕ್ಕಿಯುಳ್ಳ ನಕ್ಷತ್ರ. एकं नक्षत्रं यत्र। ಆರಿದ್ರೆ, ಚಿತ್ತೆ ಮತ್ತು ಸ್ವಾತಿ ನಕ್ಷತ್ರಗಳು ಏಕನಕ್ಷತ್ರಗಳು. (वि०) 2. ಒಂದೇ ನಕ್ಷತ್ರದಲ್ಲಿ ಹುಟ್ಟಿದ. एकं समानं नक्षत्रं यस्य। ತಾಯಿ, ತಂದೆ, ಸಹೋದರ ಮತ್ತು ಸಹೋದರಿಯರು ಇವರ ನಕ್ಷತ್ರದಲ್ಲಿ ಜನಿಸಿದ ಶಿಶುವಿಗೆ ಶಾಂತಿ ನಡೆಯಬೇಕು.

**एकनक्षत्रविवाह ಏಕನಕ್ಷತ್ರವಿವಾಹ** (पु०) ಒಂದೇ ನಕ್ಷತ್ರದಲ್ಲಿ ಹುಟ್ಟಿದ ಸ್ತ್ರೀಪುರುಷರ ವಿವಾಹ. एकनक्षत्रे जातयोः विवाहः। ಒಂದೇ ನಕ್ಷತ್ರದಲ್ಲಿ ಹುಟ್ಟಿದ ಸ್ತ್ರೀ ಪುರುಷರ ವಿವಾಹವಿಷಯದಲ್ಲಿ ಕೆಲವು ನಕ್ಷತ್ರಗಳು ಪ್ರಶಸ್ತ. ಕೆಲವು ಮಧ್ಯಮ. ಕೆಲವು ನಿಷಿದ್ಧ. "रोहिण्यार्द्रामखेन्द्राग्नितिष्यश्रवणपौष्णभम्। अहिर्बुध्न्यस्तथाष्टौ च नक्षत्रैक्ये शुभावहः"। ರೋಹಿಣಿ, ಆರಿದ್ರೆ, ಮಖೆ, ವಿಶಾಖೆ, ಪುಷ್ಯ, ಶ್ರವಣ, ರೇವತಿ ಮತ್ತು ಉತ್ತರಾಭಾದ್ರೆ ಈ ಎಂಟು ಪ್ರಶಸ್ತ ನಕ್ಷತ್ರಗಳು. "अश्विनी च यमस्वातीसार्पफाल्गुनमेव च। मैत्रवारुणमूलाख्यं नक्षत्रैक्येऽपि मध्यमा"। ಅಶ್ವಿನಿ, ಭರಣಿ, ಸ್ವಾತಿ, ಆಶ್ಲೇಷೆ, ಪೂರ್ವ ಫಲ್ಗುನಿ, ಅನೂರಾಧೆ, ಶತಭಿಷ ಮತ್ತು ಮೂಲ ಈ ಎಂಟು ನಕ್ಷತ್ರಗಳು ಮಧ್ಯಮ. "अजैकपाच्छ्रविष्ठा च पुनर्वस्वथ कृत्तिका। मृगशीर्षं च चित्ता च सवितोत्तरफल्गुनी। ज्येष्ठा च विश्वतोयं च नक्षत्रैक्ये विनश्यति"। ಪೂರ್ವಾಭಾದ್ರೆ, ಧನಿಷ್ಠೆ, ಪುನರ್ವಸು, ಕೃತ್ತಿಕೆ, ಮೃಗಶೀರ್ಷ, ಚಿತ್ತೆ, ಹಸ್ತ, ಉತ್ತರಫಲ್ಗುನಿ, ಜ್ಯೇಷ್ಠೆ, ಪೂರ್ವಾಷಾಢ ಮತ್ತು ಉತ್ತರಾಷಾಢ ಇವು ಹನ್ನೊಂದು ನಿಷಿದ್ಧ ನಕ್ಷತ್ರಗಳು. ಅದರಲ್ಲಿಯೂ ಏಕನಕ್ಷತ್ರದಲ್ಲಿ ಏಕ (ಸಮಾನ) ಪಾದವಾಗಿದ್ದಲ್ಲಿ ಸರ್ವಥಾ ಕೂಡದು. ಭಿನ್ನಪಾದವಾಗಿದ್ದಲ್ಲಿ ಶುಭವು. "एकर्क्षैकपादे तु विवाहः प्राणहानिदः। दम्पत्योरेकनक्षत्रे भिन्नपादः शुभावहः" मुहू० द०।

**एकनट ಏಕನಟ** (पु०) 1. ಪ್ರಧಾನ ನಟ, ನಾಟಕದಲ್ಲಿ ಮುಖ್ಯಪಾತ್ರ ವಹಿಸುವವನು, ಸೂತ್ರಧಾರ. एको मुख्यो नटः। 2. ಕಥಕ, ಕಥೆ ಹೇಳುವವನು. "कथकैकनटौ समौ" त्रिकाण्ड०।

**एकनयन ಏಕನಯನ, -नेत्र -ನೇತ್ರ** (पु०) 1. ವಾಯಸ, ಕಾಗೆ. एकं नयनं नेत्रं वाऽस्य। (वि०) 2. ಒಂದು ಕಣ್ಣುಳ್ಳವನು, ಕುರುಡ.

**एकनवत ಏಕನವತ** (वि०) ತೊಂಭತ್ತೊಂದನೆಯ, एकनवतेः पूरणः "डट्" (५-२-४८)। स्त्रियां "ङीप्" (४-१-१५)। **-नवती -ನವತೀ.**

**एकनवति ಏಕನವತಿ** (स्त्री०) 1. ತೊಂಭತ್ತೊಂದು. एकाधिका नवतिः। (वि०) 2. ತೊಂಭತ್ತೊಂದು ಸಂಖ್ಯೆಯುಳ್ಳ.

**एकनवतितम ಏಕನವತಿತಮ** (वि०) ತೊಂಭತ್ತೊಂದನೆಯ. एकनवतेः पूरणः "तमट्" (५-२-५६)।

**एकनिश्चय ಏಕನಿಶ್ಚಯ** (पु०) 1. ಒಂದೇ ನಿಶ್ಚಯ, ಒಂದೇ ನಿರ್ಧಾರ, ಅಚಲವಾದ ನಿರ್ಣಯ, ಬದಲಾಗದ ನಿರ್ಧಾರ. एकः निश्चयः। 2. ಏಕಾಭಿಪ್ರಾಯ, ಒಮ್ಮತ. (वि०) 3. ಒಂದೇ ನಿರ್ಧಾರವುಳ್ಳ, ದೃಢ ನಿರ್ಣಯವುಳ್ಳ, ಒಂದೇ (ಬದಲಾಗದ) ನಿಶ್ಚಯವುಳ್ಳ, ದೃಢಚಿತ್ತನಾದ. एकः स्थिरो निश्चयो यस्य। 4. ಒಮ್ಮತವುಳ್ಳ, ಏಕಾಭಿಪ್ರಾಯವುಳ್ಳ.

**एकपक्ष ಏಕಪಕ್ಷ** (पु०) 1. ಒಂದು ಪಕ್ಷ, ಒಂದು ಕಕ್ಷಿ, ಒಂದು ಪಂಗಡ. एकः पक्षः। "शब्दो नित्यः शब्दत्वात्" ಎಂಬಲ್ಲಿ ಶಬ್ದವು ನಿತ್ಯವೆಂದು ವಾದಿಯ ಅಭಿಪ್ರಾಯ. "शब्दोऽनित्यः कार्यत्वात् घटवत्" ಎಂದು ಪ್ರತಿವಾದಿಯ ಅಭಿಪ್ರಾಯ. ಒಂದೊಂದೂ ಒಂದೊಂದು ಪಕ್ಷ. "किमात्मनिर्वादकथामुपेक्षे जायामदोषामुत संत्यजामि। इत्येकपक्षाश्रयविक्लवत्वादासीत् स दोलाचलचित्तवृत्तिः" रघु० १४-३४। (वि०) 2. ಒಂದು ಪಕ್ಷದ, ಒಂದು ಕಡೆಯ, ಒಂದು ಪಂಗಡದ.

**एकपञ्चाश ಏಕಪಂಚಾಶ** (वि०) ಐವತ್ತೊಂದನೆಯ. एकपञ्चाशतः पूरणः "डट्" (५-२-४८)। स्त्रियां "ङीप्" (४-१-१५)। **-पञ्चाशी -ಪಂಚಾಶೀ.**

**एकपञ्चाशत् ಏಕಪಂಚಾಶತ್** (स्त्री०) 1. ಐವತ್ತೊಂದು. एकाधिका पञ्चाशत्। (वि०) 2. ಐವತ್ತೊಂದು ಸಂಖ್ಯೆಯುಳ್ಳ.

**एकपञ्चाशत्तम ಏಕಪಂಚಾಶತ್ತಮ** (वि०) ಐವತ್ತೊಂದನೆಯ. एकपञ्चाशतः पूरणः "तमट्" (५-२-५६)। स्त्रियां "ङीप्" (४-१-१५)। **-पञ्चाशत्तमी - ಪಂಚಾಶತ್ತಮೀ.**

**एकपतिक ಏಕಪತಿಕ** (वि०) ಒಬ್ಬ ಯಜಮಾನನುಳ್ಳವನು. एकः पतिः स्वामी यस्य। यज्ञसंबन्धाभावात् नादेशो न।

**एकपत्नी ಏಕಪತ್ನೀ** (स्त्री०) 1. ಒಬ್ಬನೇ ಗಂಡನುಳ್ಳ ಹೆಂಗಸು, ಸಮಾನಪತಿಯುಳ್ಳ ಹೆಂಗಸು, ಸಪತ್ನಿ, ಸವತಿ. एकः समानः पतिर्यस्याः "नः" (४-१-३५)। "सर्वासामेकपत्नीनामेका चेत्पुत्रिणी भवेत्। सर्वास्तास्तेन पुत्रेण प्राह पुत्रवतीर्मनुः" मनु० ९-१८३। 2. ಪತಿವ್ರತೆ, ಪತಿಗೆ ಅನುಕೂಲಳಾದ ಪತ್ನಿ, ಪತಿಯ ಸೇವೆಯಲ್ಲಿ ನಿರತಳಾದ ಪತ್ನಿ. एकः पतिर्यस्याः। "तां चावश्यं दिवसगणनातत्परामेकपत्नीमव्यापन्नामविहतगतिर्द्रक्ष्यसि भ्रातृजायाम्" मेघ० १-१०। 3. ಏಕಮಾತ್ರಪತ್ನಿ, ಸವತಿಯರಿಲ್ಲದ (ಒಬ್ಬನ) ಹೆಂಡತಿ. एका पत्नी। "यो धर्म एकपत्नीनां काङ्क्षन्ती तमनुत्तमम्" मनु० ५-१५८।

**एकपत्नीव्रत ಏಕಪತ್ನೀವ್ರತ** (न०) ಪಾತಿವ್ರತ್ಯ, ಪತಿವ್ರತೆಯ ನಿಯಮ. एकः पतिर्यस्याः सा एकपत्नी, तस्याः व्रतम्। "कामेकपत्नीव्रतदुःखशीलां लोलं मनश्चारुतया प्रविष्टाम्" कुमा० ३-७।

**एकपद ಏಕಪದ** (पु०) 1. ಸುರತ ಕಾಲದ ಒಂದು ವಿಧ ಬಂಧ. "पादमेकं हृदि स्थाप्य द्वितीयं स्कन्धसंश्रितम्। स्तनौ धृत्वा रमेत्कामी बन्धस्त्वेकपदः स्मृतः"। 2. ಒಂದು ಕಾಲುಳ್ಳ ಮನುಷ್ಯ. (न०) 3. ತತ್ಕಾಲ, ಒಂದು ಪದವನ್ನು ಉಚ್ಚರಿಸುವಷ್ಟು ಕಾಲ. एकं पदं पदोच्चारणयोग्यकालो यत्र। 4. ಒಂದು ಸ್ಥಾನ, ಒಂದು ಜಾಗ. 5. ಒಂದು ಹೆಜ್ಜೆಯಿಡುವಿಕೆ. 6. ಸುಬಂತ ಮತ್ತು ತಿಙಂತರೂಪವಾದ ಪದ. एकं पदं स्थानं सुप्तिङन्तरूपं वा। "तदीशितारं चेदीनां भवांस्तमवमंस्त मा। निहन्त्यरीनेकपदे य उदात्तः स्वरानिव" माघ० २-९५। (वि०) 7. ಸುಬಂತ ಅಥವಾ ತಿಙಂತರೂಪವಾದ ಒಂದು ಪದವುಳ್ಳ. 8. ಒಂದೇ ಪದದಿಂದ ಹೇಳಲ್ಪಡುವ. "किंस्विदेकपदं धर्म्यं किंस्विदेकपदं यशः। किंस्विदेकपदं स्वर्ग्यं किंस्विदेकपदं सुखम्"। "दाक्ष्यमेकपदं धर्म्यं दानमेकपदं यशः। सत्यमेकपदं स्वर्ग्यं शीलमेकपदं सुखम्" भा० वन० ३१४-७१, ७२। (अव्य०) **-पदे -ಪದೇ.** 9. ಆ ಕೂಡಲೆ, ತತ್‌ಕ್ಷಣದಲ್ಲಿ. "अयमेकपदे तया वियोगः प्रिययाचोपनतः सुदुःसहो मे" विक्र० ४-१०।

**एकपदा ಏಕಪದಾ** (स्त्री०) 1. ಒಂದು ಪಾದವುಳ್ಳ ಶ್ಲೋಕ. **-पदी -ಪದೀ.** 2. ಒಂದು ವೃತ್ತದ ನಾಲ್ಕನೆಯ ಒಂದು ಭಾಗ (ಪದ) ದಿಂದ ಕೂಡಿದ ಋಕ್ಕು. "गायत्र्यस्यैकपदी द्विपदी त्रिपदी" श्रुतिः। 3. ಒಂದು ಕಾಲುಳ್ಳ ಹೆಂಗಸು. एकः पादो यस्याः, पादस्य लोपः "ङीप्" पद्भावश्च निपा० (५-४-१३९)। 4. ಸಣ್ಣ ಮಾರ್ಗ, ಕಾಲುದಾರಿ, ಕಿರುದಾರಿ. "एकपदी तु वर्त्मनि" [illegible] "अवाप्यते वा किमियद्भवत्या चित्तैकपद्याम[illegible] [illegible]वद्यते यः" नैष० ३-६३।

**एकपदि ಏಕಪದಿ** (अव्य०) ಒಂದು ಕಾಲಿ[illegible] ಒದೆಯುವಿಕೆ. एकः पादः साधनं यस्मिन् प्रहरणे समासान्तः "इच्" (५-४-१२८)।

**एकपरि ಏಕಪರಿ** (अव्य०) ಪಗಡೆಯಾಟದಲ್ಲಿ ಒಂದು ಗರ ವ್ಯತ್ಯಾಸ(ಹೆಚ್ಚುಕಡಿಮೆ)ವಾಗಿ ಬೀಳುವುದರಿಂದ ಉಂಟಾಗುವ ಪರಾಜಯ (ಸೋಲು). एकेन विपरीतं वृत्तम्। अव्ययी० (२-१-१०)। ಯಾವುದೊಂದು ಗರ ಬಿದ್ದರೆ

ಜಯವೋ ಅದಕ್ಕೆ ಬದಲಾಗಿ ಬೇರೆ ಗರ ಬೀಳುವುದರಿಂದುಂಟಾಗುವ ಸೋಲು. ಜೂಜಾಟದಲ್ಲಿ ಮಾತ್ರ ಇದರ ಪ್ರಯೋಗ.

**एकपर्णा ಏಕಪರ್ಣಾ** (स्त्री०) 1. ಹಿಮವಂತನಿಗೆ ಮೇನಕೆಯಲ್ಲಿ ಹುಟ್ಟಿದ ಮೂವರು ಕನ್ಯೆಯರಲ್ಲಿ ಒಬ್ಬಳು. एकं पर्णं तपःसाधनतया आहारो यस्याः। "तिस्रः कन्यास्तु मेनायां जनयामास शैलराट्। अपर्णामेकपर्णां च तृतीयामेकपाटलाम्"। "आहारमेकपर्णेन एकपर्णा समाचरत्" हरिवं० १८। 2. ಒಂದೆಲಗನ ಗಿಡ.

**एकपाटला ಏಕಪಾಟಲಾ** (स्त्री०) ಹಿಮವಂತನಿಗೆ ಮೇನಕೆಯಲ್ಲಿ ಹುಟ್ಟಿದ ಮೂವರು ಕನ್ಯೆಯರಲ್ಲಿ ಒಬ್ಬಳು. एकं पाटलं पुष्पं तपःसाधनतया आहारो यस्याः। ತಪಸ್ಸಿನ ಕಾಲದಲ್ಲಿ ಇವಳು ಒಂದು ಹಸುರು ಪಾದರಿ ಹೂವನ್ನು ಆಹಾರವಾಗಿ ಉಪಯೋಗಿಸುತ್ತಿದ್ದುದರಿಂದ ಈ ಹೆಸರು.

**एकपात ಏಕಪಾತ** (पु०) 1. ಅಕಸ್ಮಾತ್ತಾಗಿ ಸಂಭವಿಸುವಿಕೆ, ಅನಿರೀಕ್ಷಿತವಾಗಿ ಒದಗುವಿಕೆ.

**एकपातिन् ಏಕಪಾತಿನ್** (वि०) ಅಕಸ್ಮಾತ್ತಾಗಿ ಒದಗುವ, ಅನಿರೀಕ್ಷಿತವಾಗಿ ಸಂಭವಿಸುವ. एकः सन् पतति—पत्लृ (गतौ) "णिनिः" (३-१-१३४)।

**एकपाद् ಏಕಪಾದ್** (पु०) 1. ವಿಷ್ಣು. एकः पादः एतद्विभूतिलक्षणः तुर्यांशोऽस्य। "एकांशेनावतीर्णत्वादेकपादिति कथ्यते" इति निरुक्तिः। पादस्यान्त्यलोपः समासान्तः (५-४-१४०)। "चतुरात्मा चतुर्भावश्चतुर्वेदविदेकपात्" वि० स०। "विष्टभ्याहमिदं कृत्स्नमेकांशेन स्थितो जगत्" गीता १०-४२। 2. ಶಿವ, ಈಶ್ವರ, ಮಹಾದೇವ. 3. ಒಬ್ಬ ದಾನವ. (वि०) 4. ಒಂದು ಕಾಲುಳ್ಳ. स्त्रियां "ङीप्" (५-४-१३९)। पद्भावश्च। **-पदी -ಪದೀ.**

**एकपाद ಏಕಪಾದ** (पु०) 1. ಒಂದು ಕಾಲು. एकः पादः। 2. ಪರಮಾತ್ಮ. एकः पादोऽस्य। "पादोऽस्य विश्वा भूतानि" श्रुतिः। 3. ಒಬ್ಬ ಅಸುರ. (वि०) 4. ಒಂದು ಪಾದವುಳ್ಳ, ಒಂದು ಕಾಲುಳ್ಳ. स्त्रियां "ङीष्" (४-१-५४)। 5. ಒಂದು ಕಾಲನ್ನು ಅವಲಂಬಿಸಿ ನಿಂತಿರುವ, ಒಂದು ಕಾಲಿನ ಮೇಲೆ ನಿಂತಿರುವ. एकपादोऽवलम्बनत्वेनास्त्यस्य "अच्" (५-२-१२७)। "पर्वतारोहणं कृत्वा एकपादो विभावसुम्। निरीक्षेत निराहारः ऊर्ध्वबाहुः कृताञ्जलिः" भा०।

**एकपादिका ಏಕಪಾದಿಕಾ** (स्त्री०) ಹಕ್ಕಿಗಳು ಒಂದು ಕಾಲಿನ ಮೇಲೆ ನಿಂತುಕೊಳ್ಳುವಿಕೆ. एकः पादोऽवलम्बनत्वेनास्त्यस्याः "ठन्" (५-२-११५)। "अथावलम्ब्य क्षणमेकपादिकां तदा निदद्रावुपपल्वलं खगः" नैष० १-१२१।

**एकपार्थिव ಏಕಪಾರ್ಥಿವ** (पु०) 1. ಕೇವಲ ರಾಜ, ದೊರೆಯು ಮಾತ್ರ. एकः केवलः पार्थिवो राजा। "न केवलं तद्गुरुरेकपार्थिवः क्षितावभूदेकधनुर्धरोऽपि सः" रघु० ३-३१। 2. ಒಬ್ಬನೇ ರಾಜ, ಚಕ್ರವರ್ತಿ. (वि०) 3. ಒಬ್ಬ ರಾಜನುಳ್ಳ ದೇಶ.

**एकपिङ्ग ಏಕಪಿಂಗ** (पु०) ಕುಬೇರ, ಧನಾಧಿಪತಿ. एकं पिङ्गं पिङ्गलं नेत्रमस्य। [ಒಂದು ಸಲ ಕುಬೇರನು ಪಾರ್ವತಿಯನ್ನು ಕ್ರೂರದೃಷ್ಟಿಯಿಂದ ನೋಡಿದಾಗ ಅವನ ಎಡಗಣ್ಣು ಒಡೆಯಿತು. ಆಗ ಪರಮೇಶ್ವರನ ಮಾತಿನಿಂದ ಪ್ರಸನ್ನಳಾದ ದೇವಿಯ ವರದಿಂದ ಕುಬೇರನಿಗೆ ಹಳದಿ ಬಣ್ಣದ ಕಣ್ಣು ಬಂದಿತು. ಇದರಿಂದ ಏಕಪಿಂಗನೆಂಬ ಹೆಸರಾಯಿತು.] काशीखं० १३।

**एकपिण्ड ಏಕಪಿಂಡ** (वि०) ಜ್ಞಾತಿ, ದಾಯಾದ, ಸಪಿಂಡ. एकः समानः पिण्डो देहो यस्य। [ಒಂದು ವಂಶದವರಲ್ಲಿ ಹುಟ್ಟಿದವರ ದೇಹವು ಒಬ್ಬ ಮೂಲಪುರುಷನಿಂದ ಆರಂಭವಾದುವರಿಂದ ಏಕಪಿಂಡ(ದೇಹ)ವಾಯಿತು.]

**एकपुरुष ಏಕಪುರುಷ** (पु०) 1. ಶ್ರೇಷ್ಠಪುರುಷ, ಪುರುಷೋತ್ತಮ, ವಿಷ್ಣು. एकः श्रेष्ठः पुरुषः। "यस्मात्क्षरमतीतोऽहमक्षरादपि चोत्तमः। अतोऽस्मि लोके वेदे च प्रथितः पुरुषोत्तमः" गीता १५-१८ ಎಂದು ಶ್ರೇಷ್ಠತ್ವವು ಹೇಳಲ್ಪಟ್ಟಿರುವುದು. ಪರಮಾತ್ಮನು ಎಲ್ಲರ ದೇಹದಲ್ಲಿಯೂ ಅಂತರ್ಯಾಮಿಯಾಗಿರುವುದರಿಂದ ಪುರುಷತ್ವವು ಹೇಳಲ್ಪಟ್ಟಿರುವುದು. 2. ಮುಖ್ಯಪುರುಷ, ಪ್ರಧಾನನಾದವನು. 3. ಒಬ್ಬ ಮನುಷ್ಯ.

**एकपुत्र ಏಕಪುತ್ರ** (पु०) 1. ಏಕಮಾತ್ರ ಪುತ್ರ, ಒಬ್ಬನೇ ಮಗ. एकः पुत्रः। (वि०) 2. ಒಬ್ಬ ಮಾತ್ರ ಮಗನುಳ್ಳ, ಏಕಮಾತ್ರ ಪುತ್ರನುಳ್ಳ. एकः केवलः पुत्रो यस्य। ಒಬ್ಬನೇ ಮಗನಿರುವವನು ಅವನನ್ನು ಇತರರಿಗೆ ದತ್ತು ಕೊಡಕೂಡದು. "नत्वेवैकं पुत्रं दद्यात्प्रतिगृह्णीयाद्वा" वसिष्ठः।

**एकपुष्कर(ल) ಏಕಪುಷ್ಕರ(ಳ)** (पु०) ಒಂದು ವಾದ್ಯ, ಕಹಳೆ.

**एकप्रकार ಏಕಪ್ರಕಾರ** (वि०) 1. ಒಂದೇ ರೀತಿಯ, ಒಂದೇ ವಿಧದ. 2. ಅದೇ ರೀತಿಯ, ಅದೇ ವಿಧದ.

**एकप्रख्य ಏಕಪ್ರಖ್ಯ** (वि०) ಸದೃಶವಾದ, ಸಮಾನವಾದ.

**एकप्रभु ಏಕಪ್ರಭು** (पु०) 1. ಒಬ್ಬ ದೊರೆ, ಒಬ್ಬ ರಾಜ. एक: प्रभु:। (वि०) 2. ಒಬ್ಬನೇ ರಾಜನುಳ್ಳ, ಒಬ್ಬನೇ ಅಧಿಪತಿಯುಳ್ಳ. एक: प्रभु: यत्र।

**एकप्रभुत्व ಏಕಪ್ರಭುತ್ವ** (नं०) 1. ಒಬ್ಬನ ಆಳ್ವಿಕೆ, ಒಬ್ಬನ ಆಧಿಪತ್ಯ. (वि०) 2. ಒಬ್ಬ ರಾಜನ ಆಳ್ವಿಕೆಯುಳ್ಳ, ಏಕಾಧಿಪತ್ಯವುಳ್ಳ. एकस्यैव प्रभुत्वं यत्र।

**एकप्रस्थ ಏಕಪ್ರಸ್ಥ** (पु०) 1. ಒಂದೇ ತಪ್ಪಲುಳ್ಳ ಪರ್ವತ. एक: प्रस्थ: सानुर्यस्य। 2. ಒಂದು ಸೇರು (ಧಾನ್ಯದ) ಅಳತೆ. एक: प्रस्थ:। 3. ಒಂದು ಸೇರು ಅಳತೆಯ ಧಾನ್ಯ.

**एकबुद्धि ಏಕಬುದ್ಧಿ** (वि०) ಒಂದೇ ಮನಸ್ಸುಳ್ಳ, ಒಂದೇ ಅಭಿಪ್ರಾಯವುಳ್ಳ. एका समाना बुद्धिर्यस्य।

**एकभक्त ಏಕಭಕ್ತ** (पु०) 1. ಒಂದು ದಿನದಲ್ಲಿ ಒಂದು ವೇಳೆ ಮಾತ್ರ ಊಟಮಾಡುವವನು. एकम् एकवारं भक्तं भोजनं यस्य। (वि०) 2. ಒಬ್ಬನಿಗೇ ವಿಧೇಯನಾಗಿರುವ, ಒಬ್ಬನಿಗೇ ಭಕ್ತನಾಗಿರುವ, ಸೇವಕ, ಅಶನ ವಸತಿ ಮೊದಲಾಗಿ ಎಲ್ಲಕ್ಕೂ ಒಬ್ಬನನ್ನೇ ಆಶ್ರಯಿಸಿ ಅವನ ಸೇವಕನಾಗಿರುವವನು. 3. ಒಬ್ಬನನ್ನೇ ಆಶ್ರಯಿಸಿರುವ, ಬೇರಾರಲ್ಲಿಯೂ ಆಸಕ್ತಿಯಿಲ್ಲದಿರುವ. "प्रेष्यासु चैकभक्तासु रह:प्रव्रजितासु च" मनु० ८-३६३।

**एकभक्ति ಏಕಭಕ್ತಿ** (स्त्री०) 1. ನಿರಂತರವಾದ ಭಕ್ತಿ, ನಿರತಿಶಯವಾದ ಭಕ್ತಿ. 2. ಅನನ್ಯವಾದ ಭಕ್ತಿ, ಒಬ್ಬನಲ್ಲಿಯೇ ಇಟ್ಟಿರುವ ಭಕ್ತಿ. एकस्मिन् भक्ति:। (वि०) 3. ಒಬ್ಬನಲ್ಲಿಯೇ ಭಕ್ತಿಯುಳ್ಳ. एकस्मिन् भक्तिर्यस्य। "तेषां ज्ञानी नित्ययुक्त: एकभक्तिर्विशिष्यते" गीता ७-१७।

**एकभार्या ಏಕಭಾರ್ಯಾ** (स्त्री०) ಒಬ್ಬನ ಪತ್ನಿ, ಸಾಧ್ವಿ, ಪತಿವ್ರತೆ. एकस्यैव भार्या। "तामेकभार्यां परिवादभीरो: साध्वीमपि त्यक्तवतो नृपस्य" रघु० १५-८६।

**एकभाव ಏಕಭಾವ** (पु०) 1. ಒಂದಾಗಿರುವಿಕೆ, ಅಭೇದ. एकस्य भाव:। "स्वतेजसा सत्त्वगुणप्रवाहमात्मैकभावेन भजध्वमद्धा" भाग० ४-३१-१८। 2. (ಬೇರೆ ಯಾರಲ್ಲಿಯೂ ಇಲ್ಲದ) ಒಬ್ಬನಲ್ಲಿಯೇ ಇಟ್ಟಿರುವ ಪ್ರೀತಿ. एक: अनन्यो भाव: राग:। 3. ಒಂದೇ ಸ್ವಭಾವ, ಬದಲಾವಣೆ ಹೊಂದದ ಸ್ವಭಾವ. 4. ಒಂದೇ ಅಭಿಪ್ರಾಯ, ಬದಲಾವಣೆ ಹೊಂದದ ಅಭಿಪ್ರಾಯ. "स्त्रीणां शत्रो: कुमित्रस्य पण्यस्त्रीणां विशेषत:। यो भवेदेकभावेन न स जीवति मानव:" पञ्चतं०। 5. (ಎಲ್ಲರ) ಒಂದೇ ಅಭಿಪ್ರಾಯ, ಐಕಮತ್ಯ, (ಅನೇಕರ) ಬೇರೆಬೇರೆಯಲ್ಲದ ಅಭಿಪ್ರಾಯ. (वि०) 6. ಒಂದೇ ಸ್ವಭಾವವುಳ್ಳ. 7. ಒಂದೇ ಅಭಿಪ್ರಾಯವುಳ್ಳ, ಸಮಾನಾಭಿಪ್ರಾಯವುಳ್ಳ. एक: समानो भावो यस्य।

**एकभूत ಏಕಭೂತ** (वि०) ಒಂದಾಗಿರುವ. (ಪೂರ್ವದಲ್ಲಿ) ಅನೇಕವಾಗಿದ್ದು (ಈಗ) ಒಂದಾಗಿರುವ. अनेक: एको भूत:।

**एकभूमिक ಏಕಭೂಮಿಕ** (वि०) ಒಂದೇ ಉಪ್ಪರಿಗೆಯುಳ್ಳ. एका भूमिर्यस्य। "कप्"।

**एकमति ಏಕಮತಿ** (स्त्री०) 1. ಒಂದೇ ಬುದ್ಧಿ. एका मति:। 2. ಸಮಾನವಾದ ಬುದ್ಧಿ, ಒಂದೇ ವಿಧವಾದ ಬುದ್ಧಿ. एका समाना बुद्धि:। (वि०) 3. ಸಮಾನ ಬುದ್ಧಿಯುಳ್ಳ, ಒಂದೇ ವಿಧ ಬುದ್ಧಿಯುಳ್ಳ. एका समाना बुद्धिर्यस्य। 4. ಸಮಾನಾಭಿಪ್ರಾಯವುಳ್ಳ.

**एकमनस् ಏಕಮನಸ್** (वि०) 1. ಒಂದೇ ವಿಷಯದಲ್ಲಿ ನೆಟ್ಟಮನಸ್ಸುಳ್ಳ. एकस्मिन् मनो यस्य। 2. ಒಂದೇ ಮನಸ್ಸುಳ್ಳ, ಒಂದೇ ಅಭಿಪ್ರಾಯವುಳ್ಳ. 3. ಸಮಾನವಾದ ಬುದ್ಧಿಯುಳ್ಳ. एकं समानं मनो यस्य। 4. ಒಂದೇ ಮನಸ್ಸುಳ್ಳ, ಬದಲಾವಣೆ ಹೊಂದದ ಮನಸ್ಸುಳ್ಳ. "ते निर्यान्तु मया सहैकमनसो येषामभीष्टं यश:" मुद्रा० २-१३।

**एकमात्र ಏಕಮಾತ್ರ** (वि०) ಒಂದು ಮಾತ್ರಾಕಾಲವುಳ್ಳ, ಒಂದು ಹ್ರಸ್ವವರ್ಣವನ್ನು ಉಚ್ಚರಿಸುವ ಕಾಲವುಳ್ಳ. एका मात्रा उकारोच्चारणसदृश: कालो यस्य। "एकमात्रो भवेद् ह्रस्व: द्विमात्रो दीर्घ उच्यते। त्रिमात्रस्तु प्लुतो ज्ञेय: व्यञ्जनंत्वर्धमात्रकम्"।

**एकमात्रा ಏಕಮಾತ್ರಾ** (स्त्री०) ಒಂದು ಹ್ರಸ್ವವರ್ಣವನ್ನು ಉಚ್ಚರಿಸುವಷ್ಟು ಕಾಲ. एका मात्रा ह्रस्ववर्णोच्चारणकाल:।

**एकमुख ಏಕಮುಖ** (नं०) 1. ಒಂದು ಮುಖ, ಒಂದು ಬಾಯಿ. एकं मुखम्। 2. ಒಂದು ಬಾಗಿಲುಳ್ಳ ಮಂಟಪ. (वि०) 3. ಒಂದು ಮುಖವುಳ್ಳ. एकं मुखं यस्य। 4. ಒಂದು ಕಡೆ ತಿರುಗಿಸಲ್ಪಟ್ಟ ಮುಖವುಳ್ಳ. 5. ಒಬ್ಬ ಅಧ್ಯಕ್ಷನಾಗಿರುವ (ದ್ಯೂತ), ಒಬ್ಬ ಮೇಲ್ವಿಚಾರಕನುಳ್ಳ (ಜೂಜು). एकं मुखं प्रधानं यत्र। "द्यूतमेकमुखं कार्यं तस्करज्ञानकारणात्" याज्ञ० २-२०३। [ಪ್ರಾಯಶಃ ಕಳ್ಳತನದಿಂದ ಹಣವನ್ನು ಸಂಪಾದಿಸಿದವರೇ ಜೂಜಾಡುವವರಾದುದರಿಂದ ಅವರನ್ನು ಕಂಡುಹಿಡಿಯಲು ಯಾವನಾದರೊಬ್ಬನು ಅಧ್ಯಕ್ಷನಾಗಿದ್ದು ಅವನೆದುರಿಗೆ ಜೂಜು ನಡೆಯಬೇಕು.]

**एकमूला ಏಕಮೂಲಾ** (स्त्री०) 1. ಮೂರೆಲೆ ಹೊನ್ನೆ ಗಿಡ. 2. ಅತಸೀಗಿಡ, ಅಗಸೆ ಗಿಡ.

**एकयष्टिका ಏಕಯಷ್ಟಿಕಾ** (स्त्री०) ಒಂದೆಳೆಯ ಹಾರ, ಏಕಾವಳಿಯೆಂಬ ಸರ. एका यष्टिरिवावली यस्याः। "एकावल्येकयष्टिका" अम०।

**एकयोनि ಏಕಯೋನಿ** (स्त्री०) 1. ಸಮಾನವಾದ ಉತ್ಪತ್ತಿಸ್ಥಾನ, ಒಂದೇ ಗರ್ಭಾಶಯ. एका समाना योनिरुत्पत्तिस्थानम्। (वि०) 2. ಸಮಾನವಾದ ಉತ್ಪತ್ತಿ ಸ್ಥಾನವುಳ್ಳ, ಒಂದೇ ಗರ್ಭಾಶಯವುಳ್ಳ, ಒಬ್ಬಳೇ ತಾಯಿಯುಳ್ಳ. एका समाना योनिरुत्पत्तिस्थानं यस्य। 3. ಸಮಾನಜಾತಿಯವನಾದ, ಒಂದೇ ಜಾತಿಗೆ ಸೇರಿದ. एका समाना योनिः कारणं यस्य। "एतद्विधानं विज्ञेयं विभागस्यैकयोनिषु" मनु० ९-१४८।

**एकरस ಏಕರಸ** (पु०) 1. ಕೇವಲ ಸಂತೋಷ, ಕೇವಲ ಆನಂದ. एकः केवलो रसः। 2. ಒಂದೇ ವಿಧವಾದ ಪ್ರೀತಿ, ಬದಲಾವಣೆ ಹೊಂದದ ಪ್ರೀತಿ. (वि०) 3. ಒಂದೇ ಅಭಿಪ್ರಾಯವುಳ್ಳ, ಸಮಾನಾಭಿಪ್ರಾಯವುಳ್ಳ. 4. ಒಂದೇ ವಿಧವಾದ ಪ್ರೀತಿಯುಳ್ಳ, ಸಮಾನಾನುರಾಗವುಳ್ಳ. 5. ಒಂದೇ ಕಡೆ ಪ್ರೀತಿಯುಳ್ಳ, ಅನನ್ಯವಿಷಯವಾದ ಪ್ರೀತಿಯುಳ್ಳ. 6. ಒಂದೇ ವಿಧವಾದ ಸ್ವಭಾವವುಳ್ಳ, ಸಮಾನ ಸ್ವಭಾವವುಳ್ಳ. एकः समानो रसः अभिप्रायः रागो वा यस्य। एकः अनन्यविषयो रसो रागः यस्य। एकः अभिन्नः रसः स्वभावो यस्य वा।

**एकराज् ಏಕರಾಜ್** (पु०) 1. ಸಾರ್ವಭೌಮ, ಚಕ್ರವರ್ತಿ. एको राजते—राजृ (दीप्तौ) "क्विप्" (३-२-७६)। "हिरण्यकशिपू राजन् अजेयमजरामरम्। आत्मानमप्रतिद्वन्द्वमेकराजं व्यधित्सत" भाग० ७-३-१। 2. ಪರಮಾತ್ಮ. एक एव राजते — राजृ "क्विप्" (३-२-७६)। "यदादित्यगतं तेजो जगद्भासयतेऽखिलम्। यच्चन्द्रमसि यच्चाग्नौ तत्तेजो विद्धि मामकम्" गीता १५-१२। "तमेव भान्तमनुभाति सर्वं तस्य भासा सर्वमिदं विभाति" श्रुतिः। (वि०) 3. ಸ್ವಯಂಪ್ರಕಾಶಿಸುವ, ತಾನಾಗಿಯೇ ಪ್ರಕಾಶಮಾನವಾದ. "स वा एष तदा द्रष्टा नापश्यद्दृश्यमेकराट्" भाग० ३-५-२४।

**एकराज ಏಕರಾಜ** (पु०) 1. ಒಬ್ಬ ರಾಜ, ಒಬ್ಬನೇ ಆದ ದೊರೆ, ಚಕ್ರವರ್ತಿ. 2. ಶ್ರೇಷ್ಠನಾದ ದೊರೆ, ಉತ್ತಮನಾದ ರಾಜ. एको राजा "टच्" (५-४-९१)।

**एकरात्र ಏಕರಾತ್ರ** (न०) ಒಂದು ರಾತ್ರಿ, ಒಂದು ರಾತ್ರಿಯ ಕಾಲ. एका रात्रिः "अच्" (५-४-८७)। "संख्यापूर्वं रात्रं क्लीबम्" (लिङ्गा० १३१) इति नपुंसकत्वम्। "एकरात्रं तु निवसन्नतिथिर्ब्राह्मणः स्मृतः" मनु० ३-१०२।

**एकरात्रिक ಏಕರಾತ್ರಿಕ** (वि०) ಒಂದು ರಾತ್ರಿಯಲ್ಲಿ ಮುಗಿಯಬಹುದಾದ, ಒಂದು ದಿನಕ್ಕೆ ಮಾತ್ರ ಬೇಕಾಗುವ. "नाद्याच्छूद्रस्य पक्वान्नं विद्वानश्राद्धिनो द्विजः। आददीताममेवास्मादवृत्तावेकरात्रिकम्" मनु० ४-२२३।

**एकरात्रीण ಏಕರಾತ್ರೀಣ** (वि०) 1. ಒಂದು ರಾತ್ರಿಯಲ್ಲಿ ನಡೆದ. 2. ಒಂದು ರಾತ್ರಿಯಲ್ಲಿ ಸತ್ಕರಿಸಿ ಕೆಲಸ ಮಾಡಿಸಲ್ಪಟ್ಟ. 3. ಒಂದು ರಾತ್ರಿ ಕೂಲಿ ಕೊಟ್ಟು ಕೊಳ್ಳಲ್ಪಟ್ಟ. 4. ಒಂದು ರಾತ್ರಿಯಲ್ಲಿ ಉಂಟಾಗುವ. एकां रात्रिमधीष्टो भृतो भूतो भावी वा "खः" (५-१-८७)।

**एकराशि ಏಕರಾಶಿ** (पु०) 1. ಒಂದು ರಾಶಿ, ಒಂದು ಗುಪ್ಪೆ. एको राशिः। 2. ಒಂದೇ ರಾಶಿ, ಮೇಷ ವೃಷಭ ಮೊದಲಾದ ಸಮಾನ ರಾಶಿ. एकः समानो राशिः। "एकराशिगतौ स्यातामेकर्क्षविषये यदा"।

**एकराशिभूत ಏಕರಾಶಿಭೂತ** (वि०) ಒಂದೇ ರಾಶಿಯಾಗಿರುವ, ಒಂದೇ ಗುಪ್ಪೆಯಾಗಿರುವ, ಒಟ್ಟಿಗೆ ಸೇರಿರುವ.

**एकरिक्थिन् ಏಕರಿಕ್ಥಿನ್** (वि०) ಪಿತ್ರಾರ್ಜಿತವಾದ ಆಸ್ತಿಯಲ್ಲಿ ಸಮಭಾಗವುಳ್ಳ, ಒಂದು ಆಸ್ತಿಯಲ್ಲಿ ಸಮವಾದ ಹಕ್ಕುಳ್ಳ, ತಂದೆಯ ಧನದಲ್ಲಿ ಭಾಗಹೊಂದಲು ಅರ್ಹನಾದ. एकस्य पितुः रिक्थमस्यास्ति "इनिः" (५-२-११५)। "यद्येकरिक्थिनौ स्यातामौरसक्षेत्रजौ सुतौ। यस्य यत्पैतृकं रिक्थं स तद् गृह्णीत नेतरः" मनु० ९-१६२।

**एकरूप ಏಕರೂಪ** (न०) 1. ಒಂದು ಆಕಾರ. एकं रूपम्। (वि०) 2. ಒಂದೇ ರೂಪವುಳ್ಳ, ಸಮಾನ ರೂಪವುಳ್ಳ, ಒಂದೇ ವಿಧವಾದ. एकं समानं रूपं यस्य।

**एकरूपतस् ಏಕರೂಪತಸ್** (अव्य०) 1. ಒಂದೇ ರೂಪದಿಂದ, ಸಮಾನ ರೂಪದಿಂದ. 2. ಒಂದೇ ರೂಪದಲ್ಲಿ, ಸಮಾನ ಆಕೃತಿಯಲ್ಲಿ. एकरूप "तसिः" (वा० ५-४-४४)। 3. ಒಂದೇ ರೀತಿಯಲ್ಲಿ, ಬದಲಾವಣೆಯಿಲ್ಲದೆ.

**एकरूपता ಏಕರೂಪತಾ** (स्त्री०) ಒಂದೇ ರೂಪದಲ್ಲಿರುವಿಕೆ, ಏಕರೀತಿಯಲ್ಲಿರುವಿಕೆ, ಸಮಾನ ಆಕಾರದಿಂದಿರುವಿಕೆ. एकरूपस्य भावः "तल्" (५-१-११९)। "सम्पत्तौ च विपत्तौ च महतामेकरूपता"।

**एकरूप्य ಏಕರೂಪ್ಯ** (ನಂ) 1. ಕೇವಲ ಬೆಳ್ಳಿ, ಬರಿ ಬೆಳ್ಳಿ. एकं केवलं रूप्यम्। (वि०) 2. ಒಬ್ಬನಿಂದ ಬಂದ, ಒಂದೇ ಸಂತತಿಯಲ್ಲಿ ಹುಟ್ಟಿದ, ಒಬ್ಬ ತಾಯಿ ಅಥವಾ ತಂದೆ ಯಿಂದ ಅನುಗತವಾಗಿ ಬೆಳೆದುಬಂದ. एकत: एकस्मात् एकस्या वा आगतः—एक "रूप्यः" (४-३-८१)।

**एकल ಏಕಲ** (वि०) ಅಸಹಾಯ, ಏಕಾಕಿ, ಒಬ್ಬಂಟಿಗ. एकः सन् लाति—ला (आदाने) "कः" (३-२-३)। "तस्मिन् वाव किल स एकलः" भाग० ५-७-१२।

**एकलव्य ಏಕಲವ್ಯ** (ಪುಂ) ಹಿರಣ್ಯಧನುಸ್ಸೆಂಬ ಒಬ್ಬ ಬೇಡನ ಮಗ. [ಏಕಲವ್ಯನು ಧನುರ್ವಿದ್ಯೆಯನ್ನು ಕಲಿ ಯಲು ಬಹಳ ಉತ್ಸಾಹದಿಂದ ದ್ರೋಣಾಚಾರ್ಯರನ್ನು ಬೇಡಲಾಗಿ ಅವರು ಇವನಿಗೆ ಕಲಿಸಲು ಇಷ್ಟವಿಲ್ಲದೆ ತಿರಸ್ಕರಿಸಿದರು. ಆಗ ಮಣ್ಣಿನಿಂದ ಅವರ ಪ್ರತಿಮೆಯನ್ನು ತಯಾರಿಸಿ ಅದನ್ನೇ ಆಚಾರ್ಯರೆಂದು ಭಾವಿಸಿ ಅಸ್ತ್ರಪ್ರಯೋಗ ಮತ್ತು ಉಪಸಂಹಾರ ಮಾಡುತ್ತಾ ಲೋಕೋತ್ತರ ನೈಪುಣ್ಯ ಪಡೆದನು. ಅರಣ್ಯಕ್ಕೆ ಬೇಟೆಗಾಗಿ ಹೋಗಿದ್ದ ಪಾಂಡವರ ಮೂಲಕ ಈ ವಿಷಯವನ್ನು ತಿಳಿದ ದ್ರೋಣಾಚಾರ್ಯರು ಬಂದು ಕೇಳಲಾಗಿ ಏಕಲವ್ಯನು ಎಲ್ಲವನ್ನೂ ತಿಳಿಸಿದನು. ಆಗ ದ್ರೋಣಾಚಾರ್ಯರು ಗುರುದಕ್ಷಿಣೆಗಾಗಿ ಇವನ ಬಲಗೈ ಹೆಬ್ಬೆರಳನ್ನು ತೆಗೆದುಕೊಂಡರು.] "ततो निषादराजस्य हिरण्यधनुषः सुतः। एकलव्यो महाराज द्रोणमभ्याजगाम ह॥ न स तं प्रतिजग्राह नैषादिरिति चिन्तयन्। शिष्यं धनुषि धर्मज्ञस्तेषामेवान्ववेक्षया॥ स तु द्रोणस्य शिरसा पादौ गृह्य परन्तपः। अरण्यमनुसंप्राप्य कृत्वा द्रोणं महीमयीम्" ಇತ್ಯಾದಿ. भा० आदि० १४२।

**एकलिङ्ग ಏಕಲಿಂಗ** (ಪುಂ) 1. ಕುಬೇರ. एकं लिङ्गमिन्द्रियं चक्षुरस्य। 2. ನಿಯತ ಲಿಂಗವುಳ್ಳ ಶಬ್ದ. एकं नियतं लिङ्गं पुंस्त्वादि यस्य। (ನಂ) 3. ಸಿದ್ಧಿಗೆ ಸಾಧನವಾದ ಒಂದು ಕ್ಷೇತ್ರ, ಐದು ಕ್ರೋಶಗಳವರೆಗೂ ಬೇರೊಂದು ಶಿವಲಿಂಗವಿಲ್ಲದಿರುವ ಒಂದು ಪ್ರದೇಶ. "पञ्चक्रोशान्तरे यत्र न लिङ्गान्तरमीक्ष्यते। तदेकलिङ्गमाख्यातं तत्र सिद्धिरनुत्तमा" आगमः। (वि०) 4. ಒಂದು ಶಿವಲಿಂಗವುಳ್ಳ. 5. ಒಂದು ಗುರುತುಳ್ಳ, ಒಂದು ಚಿಹ್ನೆಯುಳ್ಳ.

**एकवचन ಏಕವಚನ** (ನಂ) 1. ಒಂದು ಸಂಖ್ಯೆ ಅಥವಾ ಒಂದು ವಸ್ತುವಿನ ಏಕತ್ವವನ್ನು ಹೇಳುವ ಸ್ವಾದಿ ಮತ್ತು ತಿಙಾದಿ ಪ್ರತ್ಯಯ. एकमेकत्वमुच्यतेऽनेन—वच (परिभाषणे) करं० "ल्युट्" (३-३-११७)।

ಏಕತ್ವವನ್ನು ಹೇಳುವ ಪ್ರತ್ಯಯಗಳು:

सु अम् टा ङे ङसि ङस् ङि ಮತ್ತು तिप् सिप् मिप्, त (ते) थास् (से) इट्। "त्वमावेकवचने" पा० सू० ७-२-९७। "द्व्येकयोर्द्विवचनैकवचने" पा०सू० १-४-२२। 2. ಒಂದು ವಸ್ತುವನ್ನು ಹೇಳುವ ಶಬ್ದ. एकं वस्तु उच्यतेऽनेन।

**एकवत् ಏಕವತ್** (अव्य०) 1. ಒಂದರಂತೆ. एकस्येव "वतिः" (५-१-११६)। "नपुंसकमनपुंसकेनैकवच्चास्यातरस्याम्" पा० सू० १-२-६९। शुक्लः पटः शुक्ला शाटी शुक्लं वस्त्रम् तदिदं शुक्लम् तानीमानि शुक्लानि ಎಂದು ವಿಕಲ್ಪವಾಗಿ ಏಕವದ್ಭಾವ ಬಂದಿರುವುದು. 2. (ಕ್ರಿಯೆಯು ತೋರುವಲ್ಲಿ) ಒಂದರೊಡನೆ ಸಮಾನವಾಗಿ, ಒಂದಕ್ಕೆ ಸದೃಶವಾಗಿ. एकेन तुल्यम् "वतिः" (५-१-११५)।

**एकवद्भाव ಏಕವದ್ಭಾವ** (ಪುಂ) ಒಂದಾಗಿರುವಿಕೆ, ಒಂದರಂತಿರುವಿಕೆ. एकेन तुल्यो भावः भवनम्।

**एकवर्ण ಏಕವರ್ಣ** (ಪುಂ) 1. ಒಂದು ವರ್ಣ, ಒಂದು ಬಣ್ಣ. एको वर्णः। 2. ಒಂದು ವರ್ಣ, ಒಂದು ಅಕ್ಷರ. (वि०) 3. ಒಂದು ಬಣ್ಣದ. 4. ಒಂದೇ ಬಣ್ಣದ, ಅದೇ ಬಣ್ಣದ, ಸಮಾನ ವರ್ಣದ. एकः एक एव वा वर्णो यस्य। 5. ಒಂದು ಜಾತಿಯ. 6. ಒಂದೇ ಜಾತಿಯ, ಸಮಾನ ಜಾತಿಯ. 7. ಒಂದು ವರ್ಣದ, ಒಂದು ಅಕ್ಷರವುಳ್ಳ.

**एकवर्णी ಏಕವರ್ಣೀ** (स्त्री०) ಯಾವುದೊಂದರ ಸಹಾಯವೂ ಇಲ್ಲದೆ ಕೇವಲ ಕೈಯಿಂದ ಬಾರಿಸಲ್ಪಡುವ ವಾದ್ಯ, ತಾಳ. एक एव वर्णयति—वर्ण (वर्णक्रियाविस्तारगुणवचनेषु) "अच्" (३-१-१३४)। गौरा० "ङीष्" (४-१-४१)।

**एकवर्त्मन् ಏಕವರ್ತ್ಮನ್** (ನಂ) ಏಕಮುಖವಾದ ಮಾರ್ಗ, ಒಂದೇ ಕಡೆಗೆ (ದಿಕ್ಕಿಗೆ) ಹೋಗುವ ಮಾರ್ಗ, ಹೋಗುವುದಕ್ಕೆ ಮಾತ್ರ ಏರ್ಪಟ್ಟ ದಾರಿ.

**एकवर्षिका ಏಕವರ್ಷಿಕಾ** (स्त्री०) ಒಂದು ವರ್ಷ ವಯಸ್ಸಿನ ಕರು. एको वर्षो वयःकालो यस्याः "कप्" (५-४-१५४)। टाप्। अत इत्वम् (७-३-४४)।

**एकवाक्य ಏಕವಾಕ್ಯ** (ನಂ) 1. ಒಂದು ಮಾತು. एकं वाक्यम्। 2. ಸಮಾನವಾದ ವಾಕ್ಯ, ಒಂದೇ ರೀತಿಯ ವಾಕ್ಯ. 3. ಒಂದೇ ಅಭಿಪ್ರಾಯ, (ಎಲ್ಲರ) ಒಂದೇ ರೀತಿಯಾದ ಮಾತು, ಒಮ್ಮತದ ವಾಕ್ಯ, ಸರ್ವಾನುಮತದ

ವಾಕ್ಯ. एकम् अभिन्नम् अविसंवादि वाक्यम्। "इति समगुणयोगप्रीतयस्तत्र पौराः श्रवणकटु नृपाणामेकवाक्यं विवव्रुः" रघु० ६-८५।

**एकवाक्यता ಏಕವಾಕ್ಯತಾ** (स्त्री०) 1. ಒಂದು ವಾಕ್ಯವಾಗಿರುವಿಕೆ. एकवाक्यस्य भावः "तल्" (५-१-११९)। 2. ಒಮ್ಮತವಾಗಿರುವಿಕೆ, ಏಕಾಭಿಪ್ರಾಯವಾಗಿರುವಿಕೆ. 3. ವಿಶಿಷ್ಟವಾದ ಒಂದು ಅರ್ಥವನ್ನು ಕೊಡುವಿಕೆ. ಇದು (1) पदैकवाक्यता ಮತ್ತು (2) वाक्यैकवाक्यता ಎಂದು ಎರಡು ವಿಧ. (1) ಒಂದು ವಾಕ್ಯದಲ್ಲಿರುವ ಪದವನ್ನು ಸಾಕಾಂಕ್ಷವಾದ ಮತ್ತೊಂದು ವಾಕ್ಯದಲ್ಲಿ ಅನ್ವಯಿಸಿ ಅರ್ಥ ಹೇಳುವುದು **ಪದೈಕವಾಕ್ಯತಾ.** "इको गुणवृद्धी" ಸೂತ್ರದಲ್ಲಿನ इकः ಪದವನ್ನು "सार्वधातुकार्धधातुकयोः" ಸೂತ್ರದೊಡನೆ ಸೇರಿಸಿ ಅರ್ಥ ಹೇಳುವುದು ಪದೈಕವಾಕ್ಯತಾ. (2) ಪರಸ್ಪರ ನಿರಪೇಕ್ಷವಾದ ಎರಡು (ಅವಾಂತರ) ವಾಕ್ಯಗಳು ತಮ್ಮ ಅರ್ಥಗಳನ್ನು ಪ್ರತ್ಯೇಕವಾಗಿ ಬೋಧಿಸಿದ ಮೇಲೆ ಅಂಗಾಂಗಿಭಾವ ಹೊಂದಿ ಎರಡೂ ಸೇರಿ ಒಂದು ವಿಶಿಷ್ಟಾರ್ಥವನ್ನು ಕೊಡುವುದು **ವಾಕ್ಯೈಕವಾಕ್ಯತಾ.** "समिधो यजति" "दर्शपौर्णमासाभ्यां यजेत" ಈ ಎರಡು ವಾಕ್ಯಗಳು ಪ್ರಯಾಜ ಮತ್ತು ದರ್ಶಪೌರ್ಣಮಾಸೇಷ್ಟಿಗಳನ್ನು ಬೋಧಿಸಿ ಅನಂತರ ಪ್ರಯಾಜಾದಿ ಅಂಗಕಲಾಪಗಳಿಂದ ಕೂಡಿದ ದರ್ಶಪೌರ್ಣಮಾಸರೂಪವಾದ ಒಂದು ವಿಶಿಷ್ಟಾರ್ಥವನ್ನು ಬೋಧಿಸುವುದರಿಂದ ಇಲ್ಲಿ ವಾಕ್ಯೈಕವಾಕ್ಯತಾ.

**एकवाचक ಏಕವಾಚಕ** (वि०) ಒಂದೇ ವಿಷಯವನ್ನು ತಿಳಿಸುವ, ಒಂದೇ ವಸ್ತುವನ್ನು ಬೋಧಿಸುವ. वच (परिभाषणे) "ण्वुल्" (३-१-१३३)। एकस्य वाचकः।

**एकवाद ಏಕವಾದ** (पु०) 1. (ಒಂದು ಕೈಯಿಂದ ಬಾರಿಸಲ್ಪಡುವ) ಡಿಂಡಿಮವಾದ್ಯ, ಝೂಯಿಯೆಂಬ ಒಂದು ವಾದ್ಯ. एकेन हस्तेन वाद्यते — वद (व्यक्तायां वाचि) + णिच् कर्म० "घञ्" (३-३-१९)। 2. ದೇವರು ಒಬ್ಬನೇ ಎಂದು ವಾದಿಸುವವರ ಮಾತು. 3. ಬ್ರಹ್ಮವೊಂದೇ (ಬೇರೊಂದಿಲ್ಲ) ಎಂದು ಹೇಳುವ ಅದ್ವೈತ ವಾದ. एकस्य ब्रह्माभिन्नत्वस्य वादः कथनम्।

**एकवारम् ಏಕವಾರಮ್** (अव्य०) ಒಂದು ಸಲ, ಒಂದಾವೃತ್ತಿ.

**एकविंश ಏಕವಿಂಶ** (वि०) ಇಪ್ಪತ್ತೊಂದನೆಯ. एकविंशतेः पूरणः "डट्" (५-२-४८)। स्वार्थे "कः"। **–विंशकः –ವಿಂಶಕಃ.** "दश पूर्वान् परान् वंश्यान् आत्मानं चैकविंशकम्। ब्राह्मीपुत्रः सुकृतकृन्मोचयत्येनसः पितृन्" मनु० ३-३७।

**एकविंशति ಏಕವಿಂಶತಿ** (स्त्री०) 1. ಇಪ್ಪತ್ತೊಂದು. एकाधिका विंशतिः। 2. ಇಪ್ಪತ್ತೊಂದರ ಒಂದು ಗುಂಪು.

**एकविंशतितम ಏಕವಿಂಶತಿತಮ** (वि०) ಇಪ್ಪತ್ತೊಂದನೆಯ. एकविंशतेः पूरणः "डट्" (५-२-४८)। डटः वा "तमट्" (५-२-५६)। पक्षे **–विंशः –ವಿಂಶಃ.**

**एकविंशतिधा ಏಕವಿಂಶತಿಧಾ** (अव्य०) ಇಪ್ಪತ್ತೊಂದು ಭಾಗವಾಗಿ, ಇಪ್ಪತ್ತೊಂದು ರೀತಿಯಾಗಿ, ಇಪ್ಪತ್ತೊಂದು ವಿಧವಾಗಿ. एकविंशति "धा" (५-३-४२)।

**एकविध ಏಕವಿಧ** (त्रि०) 1. ಒಂದೇ ಪ್ರಕಾರವಾದ, ಒಂದೇ ರೀತಿಯಾದ. एका विधा प्रकारो यस्य। 2. ಒಂದು ರೀತಿಯ, ಒಂದು ಪ್ರಕಾರದ.

**एकविभक्ति ಏಕವಿಭಕ್ತಿ** (वि०) ಒಂದೇ ವಿಭಕ್ತಿಯುಳ್ಳ (ಶಬ್ದ), ವಿಗ್ರಹ ವಾಕ್ಯದಲ್ಲಿ ಬದಲಾವಣೆ ಹೊಂದದೆ ನಿಯತವಾದ ವಿಭಕ್ತಿಯುಳ್ಳ (ಪದ). निष्कौशाम्बिः ಎಂಬಲ್ಲಿ कौशाम्ब्याः निष्क्रान्तः, —निष्क्रान्तम्, —निष्क्रान्तेन, —निष्क्रान्ताय, —निष्क्रान्तात्, —निष्क्रान्तस्य ಮತ್ತು —निष्क्रान्ते ಎಂದು ಎಲ್ಲಾ ವಾಕ್ಯಗಳಲ್ಲಿಯೂ ಬದಲಾವಣೆ ಹೊಂದದೆ कौशाम्ब्याः ಎಂದೇ ನಿಲ್ಲುವುದರಿಂದ ನಿಯತ ವಿಭಕ್ತಿಯಾಯಿತು.

**एकविलोचन ಏಕವಿಲೋಚನ** (पु०) 1. ಕುಬೇರ. एकं विलोचनं नेत्रं यस्य। [ವಿವರಕ್ಕೆ "एकपिङ्ग" ಪದದಲ್ಲಿ ನೋಡಿ.] 2. ಕಾಗೆ, ವಾಯಸ. ಕಾಗೆಗೆ ಎರಡು ಕಣ್ಣುಗಳಿದ್ದರೂ ಒಂದೇ ನೇತ್ರೇಂದ್ರಿಯವು ಎರಡು ಗುಡ್ಡೆಗಳಲ್ಲಿಯೂ ಚಲಿಸುವುದರಿಂದ ಈ ಹೆಸರು. (न०) 3. ಒಂದು ಕಣ್ಣು. एकं विलोचनम्। (वि०) 4. ಒಂದು ಕಣ್ಣುಳ್ಳ. एकं विलोचनं यस्य।

**एकविषयिन् ಏಕವಿಷಯಿನ್** (वि०) 1. ಒಂದೇ ವಿಷಯವುಳ್ಳ, ಸಮಾನವಾದ ಉದ್ದೇಶವುಳ್ಳ. एकः समानो विषयोऽस्यास्ति "इनिः" (५-२-११५)। 2. ಒಂದೇ ದೇಶದಲ್ಲಿ ವಾಸಮಾಡುವ.

**एकवीर ಏಕವೀರ** (पु०) ಸಮರ್ಥನಾದ ಯೋಧ, ಲೋಕೋತ್ತರ ಪರಾಕ್ರಮಿ, ಅಸಹಾಯಶೂರ. एकः श्रेष्ठः असहायो वा वीरः।

**एकवीर्य ಏಕವೀರ್ಯ** (न०) 1. ಸಮಾನವಾದ ಪರಾಕ್ರಮ, ಒಂದೇ ರೀತಿಯ ಪರಾಕ್ರಮ. एकं समानं वीर्यम्। (वि०) 2. ಸಮಾನ ಬಲವುಳ್ಳ, ಒಂದೇ ವಿಧ ಪರಾಕ್ರಮವುಳ್ಳ. एकं समानं वीर्यं यस्य।

**एकवृन्द ಏಕವೃಂದ** (पुं०) 1. ಒಂದು ವಿಧ ಗಂಟಲು ರೋಗ, 65 ವಿಧ ಮುಖರೋಗಗಳಲ್ಲೊಂದು. "वृत्तोन्नतो यः श्वयथुः सदाहः कण्ड्वान्वितोऽपाक्यमृदुर्गुरुश्च। नाम्नैकवृन्दः परिकीर्तितोऽसौ" सुश्रुत० निदान० ५५। 2. ಒಂದು ರಾಶಿ, ಒಂದು ಗುಂಪು.

**एकवृष ಏಕವೃಷ** (पुं०) 1. ಒಂದು ಎತ್ತು. एको वृषः। ಒಂದು ಎತ್ತನ್ನು ಸಾಕುವುದು ಯಜಮಾನನಿಗೆ ಹಾನಿಕರ. "एको वृषस्त्रयो गावः सप्ताश्वाः नव दन्तिनः। सिंहप्रसूतिका गावः कथिताः स्वामिघातकाः"। 2. ಶ್ರೇಷ್ಠವಾದ ಎತ್ತು. (वि०) 3. ಒಂದು ಎತ್ತುಳ್ಳವನು. एको वृषो यस्य।

**एकव्यवसायिन् ಏಕವ್ಯವಸಾಯಿನ್** (वि०) 1. ಒಂದು ಕಾರ್ಯವನ್ನಿಟ್ಟುಕೊಂಡಿರುವ. 2. ಒಂದೇ ಉದ್ಯೋಗವುಳ್ಳ, ಸಮಾನವಾದ ಕೆಲಸವುಳ್ಳ. एकः समानो व्यवसायोऽस्यास्ति "इनिः" (५-२-११५)।

**एकव्रत ಏಕವ್ರತ** (वि०) 1. ಒಬ್ಬನಿಗೇ ವಿಧೇಯನಾಗಿರುವ, ಒಬ್ಬನನ್ನೇ ಆಶ್ರಯಿಸಿರುವ. एकस्मिन् व्रतं यस्य। 2. ಒಂದು ವೇಳೆ ಮಾತ್ರ ಭೋಜನ ಮಾಡುತ್ತ (ಉಪವಾಸ) ವ್ರತವನ್ನಾಚರಿಸುತ್ತಿರುವ.

**एकशत ಏಕಶತ** (न०) 1. ಒಂದು ನೂರ ಒಂದು. एकाधिकं शतम्। 2. ಒಂದು ನೂರು. एकं शतम्। (वि०) 3. ಒಂದು ನೂರುಳ್ಳ, ಒಂದು ನೂರು ಎಣಿಕೆಯುಳ್ಳ. "विश्वामित्रस्य चैवासन् पुत्रा एकशतं नृप"।

**एकशततम ಏಕಶತತಮ** (वि०) ಒಂದು ನೂರ ಒಂದನೆಯ. एकशतस्य पूरणः "डट्" (५-२-४८)। तमडागमः (५-२-५७)। स्त्रियां "ङीप्" (४-१-१५)। **–तमी –ತಮೀ.**

**एकशतधा ಏಕಶತಧಾ** (अव्य०) ನೂರೊಂದು ಪ್ರಕಾರವಾಗಿ, ನೂರೊಂದು ವಿಧವಾಗಿ. एकशत "धा" (५-३-४२)।

**एकशफ ಏಕಶಫ** (पुं०) ಒಂದೇ ಗೊರಸುಳ್ಳ (ಕುದುರೆ, ಕತ್ತೆ ಮೊದಲಾದ) ಪ್ರಾಣಿ. एकं शफं यस्य। ಕುದುರೆ, ಕತ್ತೆ, ಹೇಸರಗತ್ತೆ, ಶರಭಮೃಗ, ಚಮರೀಮೃಗ ಇವು ಒಂದುಗೊರಸುಳ್ಳ ಪ್ರಾಣಿಗಳು. "खरोऽश्वोऽश्वतरो गौरः शरभश्चमरी तथा। एते चैकशफाः क्षत्तः शृणु पञ्चनखान् पशून्" भा० वन० १०-२२। "अजाविकं चैकशफं न जातु विषमं भजेत्" मनु० ९-११९।

**एकशरीर ಏಕಶರೀರ** (वि०) ಒಂದೇ ದೇಹದಿಂದ ಹುಟ್ಟಿದ, ಒಂದೇ ವಂಶದಲ್ಲಿ ಹುಟ್ಟಿದ, ಒಂದೇ ಗೋತ್ರದವನಾದ. एकं समानं शरीरं यस्य।

**एकशस् ಏಕಶಸ್** (अव्य०) ಒಂದೊಂದಾಗಿ, ಒಬ್ಬೊಬ್ಬನಾಗಿ. एकमेकम् "शस्" (५-४-४३)।

**एकशाख ಏಕಶಾಖ** (वि०) ಒಂದೇ (ವೇದ) ಶಾಖೆಗೆ ಸೇರಿದ, ಸಮಾನ (ವೇದ) ಶಾಖೆಗೆ ಸೇರಿದ. एका समाना शाखा यस्य।

**एकशालिक ಏಕಶಾಲಿಕ** (वि०) ಒಂದು ಶಾಲೆಯಂತಿರುವ, ಒಂದು ಮನೆಯಂತಿರುವ. एकशालेव वा "ठच्" (५-३-१०९)। पक्षे "ठक्"। **एकशालिकः ಏಕಶಾಲಿಕಃ.**

**एकशुल्क ಏಕಶುಲ್ಕ** (न०) ಒಂದೇ ಕ್ರಯದ ಮೌಲ್ಯ, ವಸ್ತುವನ್ನು ಕೊಂಡುಕೊಳ್ಳಲು ಗೊತ್ತಾದ ಒಂದೇ ಮೊತ್ತದ ಹಣ. एकं समानं शुल्कम्। "अन्यां चेद्दर्शयित्वान्या वोढुः कन्या प्रदीयते। उभे त एकशुल्केन वहेदित्यब्रवीन्मनुः" मनु० ८-२०४।

**एकशूर ಏಕಶೂರ** (पुं०) "एकवीर" ಪದದ ಅರ್ಥ. एकः श्रेष्ठः असहायो वा शूरः।

**एकशृङ्ग ಏಕಶೃಂಗ** (पुं०) 1. ವಿಷ್ಣು, ಮತ್ಸ್ಯಾವತಾರವೆತ್ತಿದ ಪರಮಾತ್ಮ. एकं शृङ्गं यस्य। [ಸ್ವಾಯಂಭುವ ಮನ್ವಂತರದಲ್ಲಿ ಅಕಾಲಪ್ರಳಯವುಂಟಾಗಲು ಮತ್ಸ್ಯರೂಪವೆತ್ತಿದ ವಿಷ್ಣುವಿನ ಕೊಂಬಿನಲ್ಲಿ ಮನುವಿನ ಹಡಗು ಕಟ್ಟಲ್ಪಟ್ಟಿತ್ತು.] "स्वायंभुवस्तदा मत्स्यं हरिं सस्मार वै तदा। तदा जलानामुपरि सशृङ्ग इव पर्वतः। उद्दीप्तश्चैकशृङ्गेण विष्णुर्मत्स्यस्वरूपधृक्। आगतस्तत्र न चिरायत्रास्ते स मुनिर्हरिः" कालिकापु० ३२। 2. ಒಂದು ಕೊಂಬುಳ್ಳ ಪಶು. 3. ಒಂದು ಶಿಖರವುಳ್ಳ ಪರ್ವತ. (पुं० ब० व०) 4. ಪಿತೃಗಳ ಒಂದು ಗಣ. (स्त्री०) **–शृङ्गा –ಶೃಂಗಾ.** ಶುಕಮಹರ್ಷಿಯ ಹೆಂಡತಿ.

**एकशेष ಏಕಶೇಷ** (पुं०) 1. ವ್ಯಾಕರಣದಲ್ಲಿ ಹೇಳಿರುವ ಐದು ವೃತ್ತಿಗಳಲ್ಲೊಂದು, ಒಂದು ಪದ ಮಾತ್ರ ಉಳಿಯುವ ಒಂದು ವೃತ್ತಿ. एकः शिष्यते (अन्यो लुप्यते) यत्र। ಒಂದೇ ವಿಭಕ್ತಿಯಲ್ಲಿ ಸಮಾನ ರೂಪವುಳ್ಳ ಎರಡು ಅಥವಾ ಇನ್ನೂ ಹೆಚ್ಚು ಪದಗಳ ದ್ವಂದ್ವವಿಷಯದಲ್ಲಿ ಒಂದು ಪದ ಮಾತ್ರ ಉಳಿದು ಮಿಕ್ಕೆಲ್ಲ ಪದಗಳಿಗೂ ಲೋಪ ಬರುವುದು. ಇದಕ್ಕೆ **ಏಕಶೇಷ**ವೆಂದು ಹೆಸರು. 2. ಎರಡರಲ್ಲಿ ಯಾವುದಾದರೂ ಒಂದು ಮಾತ್ರ ಉಳಿಯುವಿಕೆ. एकश्चासौ शेषश्च एकस्य शेषो वा। "ममाद्य तत्प्राप्तिरसुव्ययो वा हस्ते तवास्ते द्वयमेकशेषः" नैष० ३-८२।

**एकश्रुतधर ಏಕಶ್ರುತಧರ** (वि०) ಒಂದು ಸಲ ಶ್ರವಣ ಮಾಡಿದುದನ್ನು ನೆನಪಿನಲ್ಲಿಡುವವನು, ಒಂದು ಸಲ ಕೇಳಿದುದನ್ನು ಮನಸ್ಸಿನಲ್ಲಿಟ್ಟುಕೊಳ್ಳುವವನು.

**एकश्रुति ಏಕಶ್ರುತಿ** (स्त्री०) 1. ಉದಾತ್ತಾನುದಾತ್ತಾದಿ ಸ್ವರಗಳು ಒಂದೇ ಸ್ವರದಂತೆ ಕೇಳಿಸುವಿಕೆ. ಇದು ಮೂರು ಸ್ವರಗಳಿಗೂ ಅಪವಾದಭೂತವಾದುದು. ದೂರದಿಂದ ಸಂಬೋಧಿಸುವ ಸಂದರ್ಭದಲ್ಲಿ ವಾಕ್ಯವು ಏಕಶ್ರುತಿಯಾಗುವುದು. "एकश्रुति दूरात् सम्बुद्धौ" पा० सू० १-२-३३। (वि०) 2. ಉದಾತ್ತಾನುದಾತ್ತಸ್ವರಿತಗಳ ಭೇದವಿಲ್ಲದೆ ಉಚ್ಚರಿಸಲ್ಪಡುವ ಶಬ್ದ. एका श्रुतिर्यस्य।

**एकषष्ट ಏಕಷಷ್ಟ** (वि०) ಅರವತ್ತೊಂದನೆಯ. एकषष्टेः पूरणः "डट्" (५-२-४८)। तस्य वा तमडागमः (५-२-५६)। **–षष्टितमः –ಷಷ್ಟಿತಮಃ.** स्त्रियां "ङीप्" (४-१-१५)। **–तमी –ತಮೀ.**

**एकषष्टि ಏಕಷಷ್ಟಿ** (स्त्री०) ಅರವತ್ತೊಂದು. एकाधिका षष्टिः।

**एकसप्तत ಏಕಸಪ್ತತ** (वि०) ಎಪ್ಪತ್ತೊಂದನೆಯ. एकसप्ततेः पूरणः "डट्" (५-२-४८)। तस्य वा तमडागमः (५-२-५६)। **–सप्ततितमः –ಸಪ್ತತಿತಮಃ.** स्त्रियां "ङीप्" (४-१-१५)। **–तमी –ತಮೀ.**

**एकसप्तति ಏಕಸಪ್ತತಿ** (स्त्री०) ಎಪ್ಪತ್ತೊಂದು. एकाधिका सप्ततिः।

**एकसर्ग ಏಕಸರ್ಗ** (वि०) ಏಕಾಗ್ರತೆಯುಳ್ಳ, ಒಂದೇ ವಿಷಯದಲ್ಲಿ ನೆಟ್ಟಮನಸ್ಸುಳ್ಳ. एकस्मिन्नेव सर्गो निश्चयो यस्य।

**एकसहस्र ಏಕಸಹಸ್ರ** (न०) 1. ಒಂದು ಸಾವಿರದ ಒಂದು. एकाधिकं सहस्रम्। 2. ಒಂದು ಸಾವಿರ. एकं सहस्रम्।

**एकसहस्रतम ಏಕಸಹಸ್ರತಮ** (वि०) ಒಂದು ಸಾವಿರದ ಒಂದನೆಯ. एकसहस्रस्य पूरणः "तमट्" (५-२-५७)।

**एकसाक्षिक ಏಕಸಾಕ್ಷಿಕ** (वि०) ಒಬ್ಬ ಸಾಕ್ಷಿಯುಳ್ಳ, ಒಬ್ಬನಿಂದ ನೋಡಲ್ಪಟ್ಟ. एकः साक्षी यत्र। "कप्" (५-४-१५४)।

**एकसूत्र ಏಕಸೂತ್ರ** (न०) ಡಮರು, ಬುಡಬುಡಿಕೆ. एकं सूत्रं वादनसाधनं यस्य।

**एकस्थ ಏಕಸ್ಥ** (वि०) ಒಂದು ಕಡೆಯಿರುವ, ಒಂದೇ ವಿಷಯದಲ್ಲಿರುವ. एकस्मिन् तिष्ठति—ष्ठा (गतिनिवृत्तौ) "कः" (३-२-४)। "सा निर्मिता विश्वसृजा प्रयत्नात् एकस्थसौन्दर्यदिदृक्षयेव" कुमा० १-४९। "एकस्थहृदया नूनं राममेवानुपश्यति" रामा०।

**एकस्थान ಏಕಸ್ಥಾನ** (न०) 1. ಒಂದು ಜಾಗ. 2. ಸಮಾನವಾದ ಜಾಗ, ಅದೇ ಜಾಗ. एकं समानं स्थानम्। (वि०) 3. ಒಂದೇ ಸ್ಥಾನವುಳ್ಳ, ಸಮಾನ ಸ್ಥಾನದಲ್ಲಿ ಹುಟ್ಟುವ. एकं समानं स्थानं यस्य।

**एकहस्त ಏಕಹಸ್ತ** (पु०) 1. ಒಂದು ಮೊಳ. एको हस्तः। "प्रकोष्ठे विस्तृतकरे हस्तः" अम०। (वि०) 2. ಒಂದು ಮೊಳದ ಅಳತೆಯುಳ್ಳ. 3. ಒಂದು ಹಸ್ತ (ಕೈ)ವುಳ್ಳ. एको हस्तो यस्य।

**एकहायन ಏಕಹಾಯನ** (न०) 1. ಒಂದು ವರ್ಷ, ಒಂದು ಸಂವತ್ಸರ. एकं हायनम्। (वि०) 2. ಒಂದು ವರ್ಷದ, ಒಂದು ವರ್ಷ ವಯಸ್ಸುಳ್ಳ. एकं हायनं वयोमानं यस्य। "त्रस्तैकहायनकुरङ्गविलोलदृष्टिराश्लिष्टवत्यमृतसंवलितैरिवाङ्गैः" मालती० ४-८। (स्त्री०) **–हायनी –ಹಾಯನೀ.** 3. ಒಂದು ವರ್ಷದ ಕರು. एकं हायनं यस्याः। "ङीप्" (४-१-२७)।

**एकाकिन् ಏಕಾಕಿನ್** (वि०) ಅಸಹಾಯ, ಒಬ್ಬಂಟಿಗ, ಜೊತೆಗಾರನಿಲ್ಲದ, ಸಜಾತೀಯರಹಿತವಾದ. एक "आकिनच्" (५-३-५२)। "एकाकिनोऽपि परितः पौरुषेयवृता इव" माघ० २-४।

**एकाक्ष ಏಕಾಕ್ಷ** (पु०) 1. ವಾಯಸ, ಕಾಗೆ. (वि०) 2. ಒಂದು ಕಣ್ಣುಳ್ಳವನು. एकम् अक्षि यस्य "षच्" (५-४-११३)। 3. ಒಂದು ದೂರಿಯುಳ್ಳ, ಒಂದು ಅಚ್ಚುಳ್ಳ (ಗಾಡಿ). एकोऽक्षो रथावयवो यस्य।

**एकाक्षर ಏಕಾಕ್ಷರ** (न०) 1. ಒಂದು ಅಕ್ಷರ, ಒಂದು ವರ್ಣ. एकमक्षरम्। 2. ಒಂದು ಸ್ವರವರ್ಣ, ಓಂಕಾರ, ಪರಬ್ರಹ್ಮ. ಓಂಕಾರದ ಜಪವು ಪರಬ್ರಹ್ಮಪ್ರಾಪ್ತಿಗೆ ಕಾರಣವಾದುದರಿಂದ ಓಂಕಾರವು ಪರಬ್ರಹ್ಮ. "एकाक्षरं परं ब्रह्म प्राणायामाः परं तपः" मनु० २-८३। "ओङ्कारपूर्विकास्तिस्रो महाव्याहृतयोऽव्ययाः। त्रिपदा चैव सावित्री विज्ञेयं ब्रह्मणो मुखम्" मनु० २-८१। 3. ಒಂದು ಅಕ್ಷರದ ಪದ. (वि०) 4. ಒಂದು ಅಕ್ಷರದಿಂದ ಕೂಡಿದ.

**एकाक्षरकोश ಏಕಾಕ್ಷರಕೋಶ** (पु०) ಒಂದು ಅಕ್ಷರದ ಪದಗಳ ಕೋಶ (ನಿಘಂಟು).

**एकागार ಏಕಾಗಾರ** (न०) 1. ಕೇವಲ ಮನೆ, ಯಾರೂ ಇಲ್ಲದ ಮನೆ. 2. ಒಂದೇ ಮನೆ, ಅಕ್ಕಪಕ್ಕಗಳಲ್ಲಿ ಯಾವ

ಮನೆಯೂ ಇಲ್ಲದ ಏಕಮಾತ್ರ ಗೃಹ. एकमसहायमगारम्। 3. ಮುಖ್ಯವಾದ ಮನೆ. "एके मुख्यान्यकेवला:" अम०।

**एकाग्नि ಏಕಾಗ್ನಿ** (पु०) 1. ಒಂದು ಅಗ್ನಿ, ಮೂರು ಅಗ್ನಿಗಳಲ್ಲೊಂದು. एकोऽग्नि:। (वि०) 2. ಮೂರು ಅಗ್ನಿಗಳಲ್ಲಿ ಒಂದು ಅಗ್ನಿಯನ್ನು ಹೊಂದಿರುವ (ಅಗ್ನಿ ಹೋತ್ರಿ). एकोऽग्निर्धार्यत्वेन यस्य।

**एकाग्निकाण्ड ಏಕಾಗ್ನಿಕಾಂಡ** (पु०) ಷೋಡಶಕರ್ಮ ಸಂಬಂಧವಾದ ವೇದಮಂತ್ರಗಳ ಒಂದು ಭಾಗ, ಮಂತ್ರಪ್ರಶ್ನೆ.

**एकाग्र ಏಕಾಗ್ರ** (वि०) 1. ಒಂದು ಅಗ್ರವುಳ್ಳ, ಒಂದು ತುದಿಯುಳ್ಳ. एकमग्रम् अग्रभागो यस्य। 2. ಒಂದೇ ವಿಷಯದಲ್ಲಿ ಆಸಕ್ತವಾದ. एकमग्रं विषयप्रवणता यस्य। "तद्गीतश्रवणैकाग्रा संसदश्रुमुखी बभौ" रघु० १५-६६। 3. ಸ್ಥಿರಮನಸ್ಸುಳ್ಳ, ಬೇರೆ ಯಾವ ವಿಷಯದಲ್ಲಿಯೂ ಆಸಕ್ತವಲ್ಲದ ಮನಸ್ಸುಳ್ಳ. "मनुमेकाग्रमासीनमभिगम्य महर्षय:" मनु० १-१।

**एकाग्रचित्त ಏಕಾಗ್ರಚಿತ್ತ** (वि०) ಒಂದೇ ವಿಷಯದಲ್ಲಿ ನೆಟ್ಟಮನಸ್ಸುಳ್ಳ, ಸ್ಥಿರಮನಸ್ಸುಳ್ಳ. एकाग्रं चित्तं यस्य।

**एकाग्रतस् ಏಕಾಗ್ರತಸ್** (अव्य०) ಚಿತ್ತಸ್ಥೈರ್ಯದಿಂದ, ನೆಟ್ಟಮನಸ್ಸಿನಿಂದ. एकाग्र "तसि:" (वा० ५-४-४४)।

**एकाग्रता ಏಕಾಗ್ರತಾ** (स्त्री०) ಒಂದೇ ವಿಷಯದಲ್ಲಿ ಆಸಕ್ತವಾಗಿರುವಿಕೆ, ಒಂದೇ ವಿಷಯದಲ್ಲಿ ಮನಸ್ಸನ್ನಿಟ್ಟಿರುವಿಕೆ. एकाग्रस्य भाव: "तल्" (५-१-११९)। "त्व:" (५-१-११९)। **-त्वम् -ತ್ವಮ್.**

**एकाग्रदृष्टि ಏಕಾಗ್ರದೃಷ್ಟಿ** (वि०) ನೆಟ್ಟಮನಸ್ಸಿನಿಂದ ಒಂದೇ ವಿಷಯವನ್ನು ನೋಡುವ. एकाग्रा दृष्टिर्यस्य।

**एकाग्रधी ಏಕಾಗ್ರಧೀ -मनस् -ಮನಸ್** (वि०) ಒಂದೇ ವಿಷಯದಲ್ಲಿ ನೆಟ್ಟಮನಸ್ಸುಳ್ಳ, ಒಂದೇ ವಿಷಯದಲ್ಲಿ ಆಸಕ್ತವಾದ ಮನಸ್ಸುಳ್ಳ. एकाग्रा धी: एकाग्रं मनो वा यस्य। "स भूभृदष्टावपि लोकपालास्तैर्मे तदेकाग्रधिय: प्रसेदे" नैष० ३-८९।

**एकाङ्ग ಏಕಾಂಗ** (पु०) 1. ಬುಧಗ್ರಹ. एकं (सुन्दरत्वेन) प्रधानम् अङ्गं यस्य। "बुधो हेमा राजपुत्र एकदेह: प्रहर्षण:। स्यात्पञ्चार्चिश्रविष्ठाजश्यामाङ्गैकाङ्गरोधना:" त्रिकाण्ड०। (न०) 2. ಒಂದು ಅವಯವ, ಒಂದು ಭಾಗ. 3. ಶ್ರೇಷ್ಠವಾದ ಅಂಗ, ಶಿರಸ್ಸು, ತಲೆ. एकं श्रेष्ठमङ्गम्। 4. ಚಂದನವೃಕ್ಷ, ಗಂಧದ ಮರ. (द्वि०) 5. ದಂಪತಿಗಳು, ಏಕದೇಹಭಾವವನ್ನು ಹೊಂದಿರುವ ಪತಿಪತ್ನಿಯರು.

**एकाण्ड ಏಕಾಂಡ** (पु०) ಒಂದು ವೃಷಣವನ್ನು ಹೊಂದಿರುವ ಒಂದು ಜಾತಿಯ ಕುದುರೆ. एकमण्डं वृषणमस्य।

**एकातपत्र ಏಕಾತಪತ್ರ** (त्रि०) 1. ಒಂದೇ ಛತ್ರಿಯುಳ್ಳ, ಸಾರ್ವಭೌಮತ್ವಸೂಚಕವಾದ ಒಂದು ಛತ್ರಿಯನ್ನು ಹೊಂದಿರುವ. एकम् अद्वितीयम् सार्वभौमत्वसूचकम् आतपत्रं यस्य। "एकातपत्रं जगत: प्रभुत्वं नवं वय: कान्तमिदं वपुश्च" रघु० २-४८। 2. ಕೇವಲ ಛತ್ರಿಮಯವಾದ, ಛತ್ರಿಪ್ರಚುರವಾದ. एकानि केवलानि आतपत्राणि यस्य। स्त्रियाम् **-आतपत्रा -ಆತಪತ್ರಾ.** "एकातपत्रा पृथिवीभृतां गणैरभूद्बहुच्छत्रतया पताकिनी" माघ० १२-३३।

**एकात्मन् ಏಕಾತ್ಮನ್** (पु०) 1. ಒಂದು ಆತ್ಮ, ಒಂದು ಜೀವ. (वि०) 2. ಒಂದೇ ಸ್ವರೂಪವುಳ್ಳ, ಸಮಾನ ಸ್ವರೂಪವುಳ್ಳ. 3. ಸಮಾನಸ್ವಭಾವವುಳ್ಳ, ಒಂದೇ ಸ್ವಭಾವವುಳ್ಳ. एक आत्मा स्वरूपं स्वभावो वा यस्य। 4. ಏಕಾಕಿ, ಅಸಹಾಯ, ಒಬ್ಬಂಟಿಗ.

**एकादश ಏಕಾದಶ** (वि०) ಹನ್ನೊಂದನೆಯ. एकादशानां पूरण: "डट्" (५-२-४८)। स्त्रियां "ङीप्" (४-१-१५)। **-दशी -ದಶೀ.**

**एकादशगुरु ಏಕಾದಶಗುರು** (पु०) 1. ಹನ್ನೊಂದು ಮಂದಿ ಗುರುಗಳು : (1) ಆಚಾರ್ಯ, (2) ತಂದೆ, (3) ಜ್ಯೇಷ್ಠ ಸಹೋದರ, (4) ರಾಜ, (5) ಸೋದರಮಾವ, (6) ಶ್ವಶುರ (ಹೆಂಡತಿಯ ಅಥವಾ ಗಂಡನ ತಂದೆ), (7) ರಕ್ಷಣೆ ಕೊಡುವವನು, (8) ಮಾತಾಮಹ (ತಾಯಿಯ ತಂದೆ), (9) ಪಿತಾಮಹ (ತಂದೆಯ ತಂದೆ), (10) ವರ್ಣಜ್ಯೇಷ್ಠ ಮತ್ತು (11) ಪಿತೃವ್ಯ (ತಂದೆಯ ಸಹೋದರ) ಈ ಹನ್ನೊಂದು ಜನರೂ ಗುರುಗಳು. ಗುರುವಿನಂತೆ ಪೂಜ್ಯರು. "आचार्यश्च पिता ज्येष्ठभ्राता महीपति:। मातुल: श्वशुरस्त्राता मातामहपितामहौ। वर्णज्येष्ठ: पितृव्यश्च पुंस्येते गुरवो मता:" देवल:। 2. ಜನ್ಮರಾಶಿಯಿಂದ ಹನ್ನೊಂದನೆಯ ಸ್ಥಾನದಲ್ಲಿರುವ ಗುರು.

**एकादशन् ಏಕಾದಶನ್** (त्रि०) 1. ಹನ್ನೊಂದು ಸಂಖ್ಯೆ. 2. ಹನ್ನೊಂದು ಸಂಖ್ಯೆಯಿಂದ ಕೂಡಿದ, ಹನ್ನೊಂದು ಸಂಖ್ಯೆಯುಳ್ಳ. एकाधिका दश एकाधिका दश यत्र वा।

**एकादशरुद्र ಏಕಾದಶರುದ್ರ** (पु०) ಹನ್ನೊಂದು ಮಂದಿ ರುದ್ರರು. ಇವರ ಹೆಸರು ಒಂದೊಂದು ಕಲ್ಪದಲ್ಲಿಯೂ ಬೇರೆ ಬೇರೆಯಾಗಿವೆ.

| भा० आदि० ६७ | भाग० ६-६ |
|---|---|
| 1. मृगव्याध: | 1. अजैकपाद: |
| 2. सर्प: | 2. अहिर्बुध्न्य: |
| 3. निर्ऋति: | 3. पिनाकी |
| 4. अजैकपाद: | 4. ऋत: |
| 5. अहिर्बुध्न्य: | 5. पितृरूप: |
| 6. पिनाकी | 6. त्र्यम्बक: |
| 7. दहन: | 7. महेश्वर: |
| 8. ईश्वर: | 8. वृषाकपि: |
| 9. कपाली | 9. शम्भु: |
| 10. स्थाणु: | 10. हवन: |
| 11. भग: | 11. ईश्वर: |

**एकादशी ಏಕಾದಶೀ** (स्त्री०) ಶುಕ್ಲ ಮತ್ತು ಕೃಷ್ಣ (ಉಭಯ) ಪಕ್ಷಗಳ ಹನ್ನೊಂದನೆಯ ತಿಥಿ, ಹರಿದಿನ. एकादशानां पूरण: "डट्" (५-२-४८)। "ङीप" (४-१-१५)। ಏಕಾದಶಿಯ ದಿನ ಭೋಜನವು ನಿಷಿದ್ಧ. ಉಪವಾಸವ್ರತವನ್ನಾಚರಿಸಬೇಕು. "एकादशी सदोपोष्या पक्षयो: शुक्लकृष्णयो:" सनत्कु० सं०। ಏಕಾದಶಿಯ ದಿನ ಮಾಡಿದ ಭೋಜನವು ಬ್ರಹ್ಮಹತ್ಯೆಯನ್ನು ಭುಜಿಸಿದಂತೆ. "पापानि कानिचित् यानि ब्रह्महत्यासमानि च। अन्नमाश्रित्य तिष्ठन्ति संप्राप्ते हरिवासरे। तानि पापान्युपाश्नाति भुञ्जानो हरिवासरे" नारदीयसं०। ವಿಷ್ಣು ಸಾಯುಜ್ಯ, ಸಂತಾನ ಮತ್ತು ಸಂಪತ್ತುಗಳನ್ನು ಅಪೇಕ್ಷಿಸುವವನು ಏಕಾದಶೀವ್ರತವನ್ನಾಚರಿಸಬೇಕು. "यदीच्छेद्विष्णुसायुज्यं सुतान् संपदमात्मन:। एकादश्यां न भुञ्जीत पक्षयोरुभयोरपि" विष्णुर०।

**एकादि ಏಕಾದಿ** (वि०) ಒಂದು ಮೊದಲುಗೊಂಡು (ಪರದವರೆಗಿನ) ಸಂಖ್ಯೆ. ಅಂಕಿಗಳು ಒಂಬತ್ತೇ ಆದರೂ ಅವುಗಳ ಜೋಡಣೆಯ ಕ್ರಮದಲ್ಲಿ ಅನೇಕ ಸಂಖ್ಯೆಗಳಾಗುವುವು. 1, 2, 3, 4, 5, 6, 7, 8, 9 ಮತ್ತು 0 ಈ ಅಂಕಿಗಳಲ್ಲೇ ಒಂದರೊಡನೆ ಉಳಿದ ಅಂಕಿಗಳ ಜೋಡಣೆಯಿಂದ 10, 11, 12, 13, 14, 15, 16, 17, 18 ಮತ್ತು 19 ಎಂದೂ ಎರಡರೊಡನೆ ಉಳಿದ ಅಂಕಿಗಳ ಜೋಡಣೆಯಿಂದ 20, 21, 22, 23, 24, 25, 26, 27, 28 ಮತ್ತು 29 ಎಂದೂ ಹೀಗೆಯೇ 30, 40, 50 ಅಂಕಿಗಳು ಮೊದಲುಗೊಂಡು ಪರದವರೆಗೂ 30, 40, 50, 60, 70, 80, 90, 100, 1000, 10,000, 1,00,000, 10,00,000, 1,00,00,000, ಈ ರೀತಿ ಪರದವರೆಗೂ ಸಂಖ್ಯೆಯು ಏರುತ್ತ ಹೋಗುವುದು. [ವಿವರಕ್ಕೆ "पर" "परार्ध" ಪದಗಳಲ್ಲಿ ನೋಡಿ.]

**0 ಮೊದಲುಗೊಂಡು 1, 2, 3, 4 ಇತ್ಯಾದಿ ಸಂಖ್ಯೆಗಳ ವಾಚಕಶಬ್ದಗಳು ಅಥವಾ ಸಂಕೇತಶಬ್ದಗಳು :**

0 ಸೊನ್ನೆ—ಶೂನ್ಯ, ಖ, ಗಗನ, ಆಕಾಶ.
1. ಬ್ರಹ್ಮ, ಇಂದ್ರ, ಸೂರ್ಯ, ಚಂದ್ರ, ಇತ್ಯಾದಿ.
2. ನೇತ್ರ, ಪಕ್ಷ, ನದಿಯತೀರ, ಅಯನ, ಇತ್ಯಾದಿ.
3. ಕಾಲ, ಅಗ್ನಿ, ಭುವನ, ಸತ್ತ್ವಾದಿ ಗುಣಗಳು, ರಾಜರ ಶಕ್ತಿಗಳು, ಇತ್ಯಾದಿ.
4. ವೇದಗಳು, ವರ್ಣಗಳು, ಆಶ್ರಮಗಳು, ಸಾಗರಗಳು, ಉಪಾಯಗಳು ಇತ್ಯಾದಿ.
5. (ಪಂಚ)ಮಹಾಭೂತಗಳು, (ಪಂಚ) ಪಾಂಡವರು, (ಪಂಚ) ಇಂದ್ರಿಯಗಳು, (ಪಂಚ) ಪ್ರಾಣಗಳು, (ಪಂಚ) ಮಹಾಯಜ್ಞಗಳು, (ಪಂಚ) ಲೋಹಗಳು ಇತ್ಯಾದಿ.
6. ವೇದಾಂಗಗಳು, ಭೋಜ್ಯರಸಗಳು, ರಾಜನ ಗುಣಗಳು, ಋತುಗಳು ಇತ್ಯಾದಿ.
7. ಲೋಕಗಳು, ಪಾತಾಳಗಳು, ಋಷಿಗಳು, ಸ್ವರಗಳು, ಪರ್ವತಗಳು, ದ್ವೀಪಗಳು, ರಾಜ್ಯಾಂಗಗಳು ಇತ್ಯಾದಿ.
8. ವಸುಗಳು, ಯೋಗಾಂಗಗಳು, ಈಶ್ವರನ ಮೂರ್ತಿಗಳು, ದಿಗ್ಗಜಗಳು, ಸಿದ್ಧಿಗಳು.
9. ದೇಹದ ದ್ವಾರಗಳು, ಭೂಖಂಡಗಳು, ನಿಧಿಗಳು, ರಸಗಳು, ಗ್ರಹಗಳು, ಧಾನ್ಯಗಳು, (ನವ)ರತ್ನಗಳು.
10. (ಮಹಾವಿಷ್ಣುವಿನ) ಅವತಾರಗಳು, ರಾವಣನ ತಲೆಗಳು, (ದಶ) ದಿಕ್ಕುಗಳು, (ದಶ) ರೂಪಕಗಳು.
11. ರುದ್ರರು.
12. ಆದಿತ್ಯರು, ರಾಶಿಗಳು, ರಾಜರು.
13. ತಾಂಬೂಲಗುಣಗಳು.
14. ವಿದ್ಯೆಗಳು, ಭುವನಗಳು, ಮನುಗಳು, ಇಂದ್ರರು.
15. (ಉಭಯ ಪಕ್ಷಗಳ) ತಿಥಿಗಳು.
16. ಚಂದ್ರನ ಕಲೆಗಳು.
17. ಲಿಂಗದೇಹಾವಯವಗಳು.
18. ಅಷ್ಟಾದಶವಿದ್ಯೆಗಳು, —ಪುರಾಣಗಳು, —ಸ್ಮೃತಿಗಳು, —ಧಾನ್ಯಗಳು,—ವಿವಾದಸ್ಥಾನಗಳು.
19. ಮೂಲಾನಕ್ಷತ್ರ.
20. ರಾವಣನ ಭುಜಗಳು, ಹಸ್ತ ಮತ್ತು ಪಾದಗಳ ಬೆರಳುಗಳು.
21. ಪರಶುರಾಮನ ಜಯ.
22. ಶ್ರವಣನಕ್ಷತ್ರ.

23. ಧನಿಷ್ಠಾ ನಕ್ಷತ್ರ.
24. ಪ್ರಕೃತಿಗಳು.
25. ಸಾಂಖ್ಯತತ್ತ್ವಗಳು.
26. ಜೀವೇಶ್ವರಸಹಿತವಾದ ತತ್ತ್ವಗಳು.
27. ಅಶ್ವಿನೀ ಮೊದಲಾದ ನಕ್ಷತ್ರಗಳು.
28. ಅಭಿಜಿತ್ ಸಹಿತ ನಕ್ಷತ್ರಗಳು.
32. ದಂತ(ಹಲ್ಲು)ಗಳು, ಮಹಾಪುರುಷಲಕ್ಷಣಗಳು, ಭಗವದಪರಾಧಗಳು.
33. ನಾಟ್ಯಾಲಂಕಾರಗಳು.
35. ತಾಳಗಳು.
40. ತಾನಗಳು.
49. ನಲವತ್ತೊಂಬತ್ತು ಮರುತ್ತುಗಳು.
50. (ತಂತ್ರ ಮತದಲ್ಲಿ) ಮಾತೃಕಾಲಿಪಿಗಳು.
56. ದೇಶಗಳು.
64. ಕಲೆ(ವಿದ್ಯೆ)ಗಳು, ನಾಟಕೀಯಾಂಗಗಳು.
100. ಪುರುಷಾಯುಸ್ಸು, ತಾವರೆಯ ದಳಗಳು. "शतायुर्वै पुरुषः"।
1000. ಆದಿಶೇಷನ ತಲೆಗಳು, ವಿರಾಟ್‌ಪುರುಷನ ತಲೆಗಳು, —ಕಣ್ಣುಗಳು, —ಕಾಲುಗಳು, ಕಾರ್ತವೀರ್ಯನ ಬಾಹುಗಳು.

**एकादेश ಏಕಾದೇಶ** (ಪುಂ) (ವ್ಯಾಕರಣದಲ್ಲಿ) ಸಂಧಿ ವಿಧಿಸುವಾಗ ಎರಡು ವರ್ಣಗಳ ಸ್ಥಾನದಲ್ಲಿ ಬರುವ (ವಿಧಿಸಲ್ಪಡುವ) ಒಂದು ವರ್ಣ; ಒಂದು (ಪೂರ್ವ) ಪದದ ಅಂತ್ಯವರ್ಣ, ಮತ್ತೊಂದು (ಉತ್ತರ) ಪದದ ಆದಿ (ಮೊದಲನೆಯ) ವರ್ಣ ಇವುಗಳಿಗೆ ಸಂಧಿ ಹೇಳುವಾಗ ಇವೆರಡರ ಸ್ಥಾನದಲ್ಲಿ (ಆಯಾ ವರ್ಣಗಳ ಸ್ಥಾನ ಪ್ರಯತ್ನಗಳಿಗನುಗುಣವಾದ) ಮತ್ತೊಂದು ವರ್ಣವು ಆದೇಶವಾಗಿ ಬರುವುದು. दैत्य + अरिः ಎಂಬಲ್ಲಿ ಪೂರ್ವ ಪದದ ಕೊನೆಯ ವರ್ಣ "अ"ಕಾರ ಮತ್ತು ಉತ್ತರ ಪದದ ಮೊದಲನೆಯ ವರ್ಣ "अ"ಕಾರ ಇವೆರಡರ ಸ್ಥಾನದಲ್ಲಿ ಒಂದು ದೀರ್ಘ "आ"ಕಾರವು ಏಕಾದೇಶವಾಗಿ ಬಂದು दैत्यारिः ಎಂದಾಗುವುದು. उप + इन्द्रः ಎಂಬಲ್ಲಿ ಪೂರ್ವಪದದ ಕೊನೆಯ "अ"ಕಾರ ಉತ್ತರ ಪದದ ಆದಿಯ "इ"ಕಾರ ಇವೆರಡರ ಸ್ಥಾನದಲ್ಲಿ "ए"ಕಾರವು ಏಕಾದೇಶವಾಗಿ ಬಂದು उपेन्द्रः ಎಂದಾಗುವುದು.

**एकादृनविंशति ಏಕಾದ್ನವಿಂಶತಿ** (ಸ್ತ್ರೀಂ) ಹತ್ತೊಂಬತ್ತು, ಒಂದು ಕಡಿಮೆ ಇಪ್ಪತ್ತು. एकेन न विंशतिः—एक + न + विंशतिः एकस्य "आदुक्" आगमः (६-३-७६)। "द"ಕಾರಕ್ಕೆ ಅನುನಾಸಿಕಪಕ್ಷದಲ್ಲಿ **एकान्नविंशतिः ಏಕಾನ್ನವಿಂಶತಿಃ.**

**एकाधिपति ಏಕಾಧಿಪತಿ** (ಪುಂ) 1. ಚಕ್ರವರ್ತಿ, ಸಾರ್ವಭೌಮ, ದೇಶಕ್ಕೆ ಒಬ್ಬನೇ ದೊರೆಯಾಗಿರುವವನು. एकः केवलः अद्वितीयः अधिपतिः। 2. ಎರಡು ರಾಶಿಗಳಿಗೂ ಅಧಿಪತಿಯಾಗಿರುವ ಒಂದು ಗ್ರಹ.

**एकानंशा ಏಕಾನಂಶಾ** (ಸ್ತ್ರೀಂ) ದುರ್ಗಾದೇವಿ. एको न अंशो यस्याः। "विद्धि चैनामथोत्पन्नामंशाद्देवीं प्रजापतेः। एकानंशां योगकलां रक्षार्थं केशवस्य तु" हरिवं० ५९-१४-४७।

**एकान्त ಏಕಾಂತ** (ಪುಂ) 1. ನಿರ್ಜನಪ್ರದೇಶ, ರಹಸ್ಯ ಪ್ರದೇಶ, ಯಾರೂ ಇಲ್ಲದ ಪ್ರದೇಶ. एक एव अन्तो यत्र। "व्योमैकान्तविहारिणोऽपि विहगाः संप्राप्नुवन्त्यापदं बध्यन्ते निपुणैरगाधसलिलान्मत्स्याः समुद्रादपि" हितो० २-५२। (ನಂ) 2. ಅತಿಶಯ, ಹೆಚ್ಚಿಗೆ, ಆಧಿಕ್ಯ. एकस्मिन्नेवान्तो यस्य। 3. ನಿಯಮ, ಕಟ್ಟಲೆ. "तेजः क्षमा वा नैकान्तं कालज्ञस्य महीपतेः" माघ० २-८३। (ವಿಂ) 4. ಅತಿಶಯವಾದ. "स्वायत्तमेकान्तहितं विधात्रा विनिर्मितं छादनमज्ञतायाः" भर्तृ० १-७। 5. ನಿಯತವಾದ, ಶಾಶ್ವತವಾದ, ನಿತ್ಯವಾದ. "नागेन्द्रहस्तास्त्वचि कर्कशत्वादेकान्तशैत्यात्कदलीविशेषाः" कुमा० १-३६।

**एकान्ततस् ಏಕಾಂತತಸ್** (ಅವ್ಯಂ) 1. ರಹಸ್ಯದಲ್ಲಿ. एकान्त "तसिः" (वा० ५-४-४४)। (ಕ್ರಿಂವಿಂ) 2. ಏಕಾಂತವಾಗಿ, ರಹಸ್ಯವಾಗಿ. 3. ನಿಯತವಾಗಿ, ಕ್ಲೃಪ್ತವಾಗಿ, ಶಾಶ್ವತವಾಗಿ. "कस्यात्यन्तं सुखमुपनतं दुःखमेकान्ततो वा" मेघ० २-४६। 4. ಅತ್ಯಂತವಾಗಿ, ಅತಿಶಯವಾಗಿ. "यद्यस्मासु पराङ्मुखोऽसि वयमप्येकान्ततो निःस्पृहाः" भर्तृ० ३-५१।

**एकान्तदुःषमा ಏಕಾಂತದುಃಷಮಾ** (ಸ್ತ್ರೀಂ) ಜೈನಮತ ಕಲ್ಪಿತವಾದ ಬಹಳ ಕಷ್ಟವಾದ ಒಂದು ಕಾಲ. दुष्टा समा वर्षो दुःषमा। एकान्तं दुःषमा। [ವಿವರಕ್ಕೆ "दुःषमा" ಪದದಲ್ಲಿ ನೋಡಿ.]

**एकान्तर ಏಕಾಂತರ** (ಪುಂ) 1. ದಿನಬಿಟ್ಟು ದಿನ ಬರುವ ಜ್ವರ, ಮೂರನೆಯ (ವಾಯಿದೆ) ಜ್ವರ. (ನಂ) 2. ದಿನ ಬಿಟ್ಟು ದಿನ ಊಟ ಮಾಡುವ ಒಂದು ವ್ರತ, ಮಧ್ಯೆ ಮಧ್ಯೆ ಒಂದು ದಿನ ಬಿಟ್ಟು ಊಟ ಮಾಡುವ ಒಂದು ವ್ರತ. (ವಿಂ) 3. ಒಂದು ಮಧ್ಯದಲ್ಲಿರುವ, ಮಧ್ಯೆ ಒಂದು ವಸ್ತುವಿನಿಂದ ವ್ಯವಹಿತವಾಗಿರುವ. एकमन्तरं व्यवधानं यस्य। "आम एकान्तरमामन्त्रितमनन्तिके" पा० सू० ८-१-५५।

**एकान्तसुषमा ಏಕಾಂತಸುಷಮಾ** (स्त्री०) ಜೈನಮತ ಸಿದ್ಧವಾದ ಬಹಳ ಸುಖವಾದ ಒಂದು ಕಾಲ. एकान्तं सुषमा। [ವಿವರಕ್ಕೆ "सुषमा" ಪದದಲ್ಲಿ ನೋಡಿ.]

**एकान्तिन् ಏಕಾಂತಿನ್** (वि०) 1. ಏಕಾಂತವಾಸವುಳ್ಳ, ಯಾರ ಸಂಪರ್ಕವೂ ಇಲ್ಲದ ನಿರ್ಜನ ಪ್ರದೇಶದಲ್ಲಿ ವಾಸಿಸುವ. एकान्तमस्त्यस्य "इनिः" (५-२-११५)। 2. ಭಗವದ್ಭಕ್ತ, ಪರಮಾತ್ಮನೊಬ್ಬನಲ್ಲೇ ಭಕ್ತಿಯಿಟ್ಟಿರುವ. एकान्तः उपास्यत्वेनास्त्यस्य "इनिः" (५-२-११५)।

**एकान्न ಏಕಾನ್ನ** (न०) 1. ಒಂದು ಊಟ, ಒಂದು ವೇಳೆ ಮಾಡುವ ಊಟ. 2. ಅದೇ ಊಟ, ಸಮಾನವಾದ ಊಟ. एकं समानम् अन्नम्। 3. ಒಂದು ಮನೆಯ ಊಟ, ಒಂದೇ ಮನೆಯ ಅನ್ನ. एकस्यान्नम्। "भैक्षेण वर्तयेन्नित्यं नैकान्नादी भवेद्व्रती" मनु० २-१८८। (वि०) 4. ದಿನವೂ ಒಂದು ವೇಳೆ ಮಾತ್ರ ಊಟ ಮಾಡುವ, ಏಕಕಾಲಮಾತ್ರ ಭೋಜನಮಾಡುವ. एककालमेवान्नं भोजनं यस्य। 5. ಅದೇ ಆಹಾರ ಊಟ ಮಾಡುವ, ಸಮಾನವಾದ ಆಹಾರವನ್ನು ಊಟಮಾಡುವ. 6. ಒಂದು ಮನೆಯ ಅನ್ನವನ್ನೇ ಊಟಮಾಡುವ. एकं समानम् अन्नं एकस्यैवान्नं वा यस्य।

**एकान्नविंशति ಏಕಾನ್ನವಿಂಶತಿ** (स्त्री०) ಹತ್ತೊಂಬತ್ತು, ಒಂದು ಕಡಿಮೆ ಇಪ್ಪತ್ತು. एकेन न विंशतिः—एक + न विंशतिः, एकस्य "आदुक्" आगमः (६-३-७६)। अनुनासिकपक्षे रूपमिदम्। अनुनासिकाभावपक्षे **एकादन-विंशतिः ಏಕಾದ್ನವಿಂಶತಿಃ.**

**एकान्नादिन् ಏಕಾನ್ನಾದಿನ್** (वि०) ಒಂದು ಮನೆಯಲ್ಲಿ ಊಟಮಾಡುವ, ಒಂದು ಮನೆಯ ಅನ್ನವನ್ನು ತಿನ್ನುವ. एकान्नमत्ति—अद (भक्षणे) "णिनिः" (३-१-१३४)। "भैक्षेण वर्तयेन्नित्यं नैकान्नादी भवेद्व्रती" मनु० २-१८८।

**एकान्वय ಏಕಾನ್ವಯ** (पु०) 1. ಒಂದೇ ವಂಶ, ಸಮಾನವಾದ ವಂಶ. (वि०) 2. ಒಂದೇ ವಂಶದ, ಒಂದೇ ವಂಶದಲ್ಲಿ ಹುಟ್ಟಿದ. एकोऽन्वयो यस्य।

**एकापचय ಏಕಾಪಚಯ** (पु०) ಆಹಾರವನ್ನು ಒಂದೊಂದು ಗ್ರಾಸವಾಗಿ ಕಡಿಮೆ ಮಾಡುವಿಕೆ, ಪೂರ್ಣಿಮೆಯ ದಿನ ಊಟಮಾಡಿ ಕೃಷ್ಣಪ್ರತಿಪತ್ ಮೊದಲುಗೊಂಡು ಪ್ರತಿದಿನವೂ ಒಂದೊಂದು ಗ್ರಾಸ ಕಡಿಮೆ ಮಾಡಿಕೊಂಡು (ಕೃಷ್ಣ ಪಕ್ಷದಲ್ಲಿ) ಊಟಮಾಡುವಿಕೆ. ಇದು ಚಾಂದ್ರಾಯಣ ವ್ರತಕ್ಕೆ ಸಂಬಂಧಿಸಿದುದು. "पौर्णमास्यां पञ्चदश ग्रासान् भुक्त्वा एकापचयेनापरपक्षमश्नीयात्" गौतमध० २७-१३।

**एकाब्दा ಏಕಾಬ್ದಾ** (स्त्री०) ಒಂದು ವರ್ಷ ವಯಸ್ಸಿನ ಕರು, ಒಂದು ವರ್ಷ ತುಂಬಿದ ಕರು. एकोऽब्दोऽस्याः।

**एकाम्रनाथ ಏಕಾಮ್ರನಾಥ** (पु०) ಕಾಂಚೀಪುರದಲ್ಲಿ ನೆಲಸಿರುವ ಏಕಾಮ್ರೇಶ್ವರ.

**एकाम्रवन ಏಕಾಮ್ರವನ** (न०) ಏಕಾಮ್ರೇಶ್ವರನು ನೆಲಸಿರುವ ಒಂದು ವನ.

**एकायन ಏಕಾಯನ** (न०) 1. ಒಬ್ಬನು ಮಾತ್ರ ಹೋಗಲು ಸಾಧ್ಯವಾಗುವ ದಾರಿ, ಕಿರುದಾರಿ, ಕಾಲುದಾರಿ. (वि०) 2. ಒಬ್ಬನು ಮಾತ್ರ ನಡೆಯಲು ಸಾಧ್ಯವಾದ. "आस्त एकायने मार्गे कदलीखण्डमण्डिते। भ्रातुर्भीमस्य रक्षार्थं तं मार्गमवरुध्य वै" भा० वन० १४८-७२। 3. ಏಕಾಗ್ರತೆಯುಳ್ಳ, ಒಂದೇ ವಿಷಯದಲ್ಲಿ ನೆಟ್ಟಮನಸ್ಸುಳ್ಳ. एकमयनं ज्ञानं यस्य।

**एकायनगत ಏಕಾಯನಗತ** (वि०) ಒಂದೇ ವಿಷಯದಲ್ಲಿ ನೆಟ್ಟಮನಸ್ಸುಳ್ಳ. एकस्मिन्नयने गतं ज्ञानं यस्य।

**एकार्थ ಏಕಾರ್ಥ** (पु०) 1. ಒಂದು ಅರ್ಥ. 2. ಒಂದೇ ಅರ್ಥ, ಸಮಾನವಾದ ಅರ್ಥ, ಅದೇ ಅರ್ಥ. 3. ಒಂದು ಕಾರ್ಯ. 4. ಒಂದೇ ಕಾರ್ಯ, ಸಮಾನವಾದ ಕಾರ್ಯ. 5. ಒಂದು ಪ್ರಯೋಜನ. 6. ಒಂದೇ ಪ್ರಯೋಜನ, ಸಮಾನವಾದ ಪ್ರಯೋಜನ. 7. ಒಂದು ವಸ್ತು, ಒಂದು ಪದಾರ್ಥ. एकोऽर्थः अभिधेयं उद्देशः प्रयोजनं पदार्थो वा। "वर्णाः पदं प्रयोगार्हानन्वितैकार्थबोधकाः" सा० द० २-२। (वि०) 8. ಒಂದು ಅರ್ಥವುಳ್ಳ (ಶಬ್ದ). 9. ಸಮಾನವಾದ ಅರ್ಥವುಳ್ಳ. 10. ಒಂದು ಪ್ರಯೋಜನವುಳ್ಳ. 11. ಸಮಾನವಾದ ಪ್ರಯೋಜನವುಳ್ಳ. 12. ಒಂದೇ ಕಾರ್ಯವುಳ್ಳ, ಸಮಾನವಾದ ಕಾರ್ಯವುಳ್ಳ.

**एकार्थता ಏಕಾರ್ಥತಾ** (स्त्री०) 1. ಒಂದೇ ಪ್ರಯೋಜನ ಹೊಂದಿರುವಿಕೆ. 2. ಒಂದೇ ಕಾರ್ಯವಿರುವಿಕೆ. एकार्थस्य भावः "तल्" (५-१-११९)। "त्वः"। **एकार्थत्वम् ಏಕಾರ್ಥತ್ವಮ್.**

**एकार्थीभाव ಏಕಾರ್ಥೀಭಾವ** (पु०) ಪ್ರತ್ಯೇಕವಾದ ಅರ್ಥವುಳ್ಳ ಶಬ್ದಗಳಿಗೆ ಸಮಾಸ ಬಂದಾಗ ಸಮುದಾಯಶಕ್ತಿಯಿಂದ ವಿಶಿಷ್ಟವಾದ ಒಂದು ಅರ್ಥವುಂಟಾಗುವಿಕೆ, ಪ್ರಕ್ರಿಯಾದಶೆಯಲ್ಲಿ ಪ್ರತ್ಯೇಕವಾದ ಅರ್ಥವುಳ್ಳ ಶಬ್ದಗಳು ಸಮಾಸದಲ್ಲಿ ವಿಶಿಷ್ಟವಾದ ಒಂದು ಅರ್ಥವನ್ನು ಹೊಂದುವಿಕೆ. राज्ञः पुरुषः ಎಂಬಲ್ಲಿ राजन् ಮತ್ತು पुरुष ಶಬ್ದಗಳಿಗೆ ಪ್ರಕ್ರಿಯಾದಶೆಯಲ್ಲಿ ಪ್ರತ್ಯೇಕವಾದ ಅರ್ಥವಿದ್ದರೂ ಸಮಾಸ ಬಂದಾಗ ಏಕಾರ್ಥೀಭಾವಲಕ್ಷಣಸಾಮರ್ಥ್ಯದಿಂದ ರಾಜ

ಪುರುಷನೆಂಬ ವಿಶಿಷ್ಟವಾದ ಒಂದು ಅರ್ಥವು ಉಂಟಾಗುವುದು.

**एकार्थीभावसामर्थ्य ಏಕಾರ್ಥೀಭಾವಸಾಮರ್ಥ್ಯ** (नं०) ಪದಗಳಿಗೆ ಸಮಾಸ ಬರಲು ಅವಶ್ಯವಾಗಿರುವ ಒಂದು ಸಾಮರ್ಥ್ಯ, ಪ್ರಕ್ರಿಯಾದಶೆಯಲ್ಲಿ ಪ್ರತ್ಯೇಕವಾದ ಅರ್ಥವುಳ್ಳ ಪದಗಳಿಗೆ ಸಮುದಾಯಶಕ್ತಿಯಿಂದ ವಿಶಿಷ್ಟವಾದ ಒಂದು ಅರ್ಥವನ್ನುಂಟುಮಾಡುವ ಒಂದು ಶಕ್ತಿ. ಇದೇ ಏಕಾರ್ಥೀಭಾವಲಕ್ಷಣಸಾಮರ್ಥ್ಯ. राज्ञः पुरुषः ಎಂಬಲ್ಲಿ राजन् ಪದಕ್ಕೂ पुरुष ಪದಕ್ಕೂ ಪ್ರತ್ಯೇಕವಾದ ಅರ್ಥವಿದ್ದರೂ ಸಮಾಸ ಬಂದಾಗ ಏಕಾರ್ಥೀಭಾವಲಕ್ಷಣಸಾಮರ್ಥ್ಯದಿಂದ ವಿಶಿಷ್ಟಾರ್ಥವೊಂದುಂಟಾಗಿ "ರಾಜಪುರುಷ" ಎಂಬ ಅರ್ಥವು ತೋರುವುದು.

**एकार्थीभूत ಏಕಾರ್ಥೀಭೂತ** (वि०) ಪ್ರಕ್ರಿಯಾದಶೆಯಲ್ಲಿ ಪ್ರತ್ಯೇಕವಾಗಿದ್ದು ಸಮಾಸದಲ್ಲಿ ಸಮುದಾಯ ಶಕ್ತಿಯಿಂದ ವಿಶಿಷ್ಟವಾದ ಒಂದೇ ಅರ್ಥವಾಗಿರುವ. एकार्थ + भू (सत्तायाम्) कर्तं० "क्तः" (३-४-७२)। अभूतत० "च्विः" (वा० ५-४-५०)।

**एकावलि, –ली ಏಕಾವಳಿ, –ಳೀ** (स्त्री०) 1. ಒಂದು ಶ್ರೇಣಿ, ಒಂದು ಪಙ್ಕ್ತಿ, ಒಂದು ಸಾಲು. एका आवलिः। 2. ಒಂದೆಳೆಯ ಹೂವಿನ ಅಥವಾ ಮುತ್ತಿನ ಸರ. 3. ಅರ್ಥಾಲಂಕಾರದ ಒಂದು ಭೇದ; ಹಿಂದು ಹಿಂದಿನ ಪದಗಳಿಗೆ ಮುಂದು ಮುಂದಿನ ಪದಗಳು ವಿಶೇಷಣವಾಗಿರುವಿಕೆ ಅಥವಾ ಮುಂದು ಮುಂದಿನ ಪದಗಳಿಗೆ ಹಿಂದು ಹಿಂದಿನ ಪದಗಳು ವಿಶೇಷಣವಾಗಿರುವಿಕೆ ಈ ರೀತಿ ಸಾಲುಸಾಲಾಗಿ ಅರ್ಥವರ್ಣನೆಯು **"ಏಕಾವಳಿ"** ಅಲಂಕಾರವಾಗುವುದು. "गृहीतमुक्तरीत्यार्थश्रेणिरेकावली मता" चन्द्रा०। उदा० "नेत्रे कर्णान्तविश्रान्ते कर्णौ दोःस्तम्भदोलिनौ। दोःस्तम्भौ जानुपर्यन्तप्रलम्बनमनोहरौ। जानुनी रत्नमुकुराकारे तस्य महीभुजः" ಇಲ್ಲಿ ಕರ್ಣಗಳು ನೇತ್ರಗಳಿಗೆ ವಿಶೇಷಣ. ಕರ್ಣಗಳಿಗೆ ದೋಃಸ್ತಂಭಗಳು ವಿಶೇಷಣ. ದೋಃಸ್ತಂಭಗಳಿಗೆ ಜಾನುಗಳು ವಿಶೇಷಣ. ಜಾನುಗಳಿಗೆ ರತ್ನಮುಕುರಗಳು ವಿಶೇಷಣ. ಈ ರೀತಿ ಪೂರ್ವ ಪೂರ್ವ ಪದಗಳಿಗೆ ಉತ್ತರೋತ್ತರ ಪದಗಳು ವಿಶೇಷಣವಾಗಿರುವಂತೆ ಶ್ರೇಣಿಯಾಗಿ ಅರ್ಥ ವರ್ಣಿತವಾಗಿರುವುದರಿಂದ **"ಏಕಾವಳಿ"** ಅಲಂಕಾರವಾಗಿರುವುದು. "न तज्जलं यन्न सुचारुपङ्कजं न पङ्कजं तद्यदलीनषट्पदम्। न षट्पदोऽसौ न जुगुञ्ज यः कलं न गुञ्जितं तन्न जहार यन्मनः" भट्टि० २-१९।

**एकाशिन् ಏಕಾಶಿನ್** (वि०) ಒಂಟಿಯಾಗಿ ಊಟಮಾಡುವ, ಒಬ್ಬನೇ ಕುಳಿತು ಊಟಮಾಡುವ. एक एवाश्नाति—अश (भोजने) "णिनिः" (३-१-१३४)।

**एकाशीत ಏಕಾಶೀತ** (वि०) ಎಂಬತ್ತೊಂದನೆಯ. एकाशीतेः पूरणः "डट्" (५-२-४८)।

**एकाशीति ಏಕಾಶೀತಿ** (स्त्री०) ಎಂಬತ್ತೊಂದು. एकाधिका अशीतिः।

**एकाशीतितम ಏಕಾಶೀತಿತಮ** (वि०) ಎಂಬತ್ತೊಂದನೆಯ. एकाशीतेः पूरणः डटो वा "तमट्" (५-२-५६)। तमडभावे **एकाशीतः ಏಕಾಶೀತಃ**. स्त्रियां "ङीप्" (४-१-१५)। **–तमी –ತಮೀ.**

**एकाशीतिपद ಏಕಾಶೀತಿಪದ** (नं०) ಗೃಹನಿರ್ಮಾಣ ಕಾಲದಲ್ಲಿ ಮೊದಲು ವಾಸ್ತುಪೂಜೆಗಾಗಿ ಮಾಡುವ ಎಂಬತ್ತೊಂದು ಸ್ಥಾನಗಳುಳ್ಳ ಒಂದು ಮಂಡಲ. "प्रासादे च चतुःषष्टिरेकाशीतिपदं गृहे" देवीपु०।

**एकाश्रय ಏಕಾಶ್ರಯ** (पुं०) 1. ಒಂದು ಆಧಾರ, ಒಂದು ಅವಲಂಬನ, ಒಂದು ಊರುಗಂಬ. 2. ಒಂದು ಒತ್ತಾಸೆ, ಒಂದು ಸಹಾಯತೆ, ಅವಲಂಬನ. एकः आश्रयः आधारः अवलम्बनं वा। (वि०) 3. ಒಂದು ಆಧಾರವುಳ್ಳ. 4. ಒಬ್ಬನ ಒತ್ತಾಸೆಯುಳ್ಳ, ಒಬ್ಬನ ಸಾಹಾಯ್ಯವುಳ್ಳ. एकः आधार अवलम्बनं वा यस्य।

**एकाष्टका ಏಕಾಷ್ಟಕಾ** (स्त्री०) 1. ಮಾಘ ಬಹುಳ ಅಷ್ಟಮಿ. 2. ಮಾಘ ಬಹುಳ ಅಷ್ಟಮಿಯ ದಿನ ಮಾಡಬೇಕಾದ ಶ್ರಾದ್ಧ. एका अष्टका।

**एकाष्ठील ಏಕಾಷ್ಠೀಲ** (पुं०) ಬಕಪುಷ್ಪದ ಗಿಡ, ಕೊಕ್ಕರೆ ಹೂವಿನ ಗಿಡ. एकोऽष्ठीलो मज्जा यस्य।

**एकाष्ठीला ಏಕಾಷ್ಠೀಲಾ** (स्त्री०) ಅಗುರು ಶುಂಠಿ. एकः अष्ठीलो मज्जा यस्याः।

**एकाह ಏಕಾಹ** (पुं०) 1. ಒಂದು ದಿವಸ. एकमहः। 2. ಒಂದು ದಿವಸದಲ್ಲಿ ಮಾಡಬಹುದಾದ ಯಾಗ.

**एकाहगम ಏಕಾಹಗಮ** (पुं०) ಒಂದು ದಿನದಲ್ಲಿ ಹೋಗಿ ಸೇರಬಹುದಾದ ದೇಶ. एकाहेन गम्यते—गम्लृ (गतौ) कर्म० "अप्" निपा० (५-२-१९)।

**एकाहार ಏಕಾಹಾರ** (पुं०) 1. ಒಂದು ದಿನದಲ್ಲಿ ಮಾಡುವ ಒಂದು ಊಟ. एकस्मिन् दिने एक आहारो भोजनम्। (वि०) 2. ಒಂದು ದಿನದಲ್ಲಿ ಒಂದು ವೇಳೆ ಊಟಮಾಡುವ. एक आहारो यस्य।

**एकीकरण ಏಕೀಕರಣ** (नं०) ಒಂದಾಗಿ ಮಾಡುವಿಕೆ, ಚೆದರಿರುವುದನ್ನು ಒಟ್ಟಾಗಿ ಕೂಡಿಸುವಿಕೆ, ರಾಶಿ ಹಾಕುವಿಕೆ, ಗುಪ್ಪೆಮಾಡುವಿಕೆ.

**एकीय ಏಕೀಯ** (वि०) ಒಂದು ಪಕ್ಷದಲ್ಲಿರುವ, ಒಂದು ಪಕ್ಷಕ್ಕೆ ಸೇರಿದ. एक "छ:" (४-२-११४)।

**एकेक्षण ಏಕೇಕ್ಷಣ** (पुं०) 1. ವಾಯಸ, ಕಾಗೆ. एकमीक्षणं यस्य। 2. ಶುಕ್ರಾಚಾರ್ಯರು. [ಬಲಿಚಕ್ರವರ್ತಿಯು ವಾಮನಮೂರ್ತಿಗೆ ಮೂರು ಅಡಿ ಭೂಮಿಯನ್ನು ಧಾರೆ ಯೆರೆಯಲು ಯತ್ನಿಸಿದಾಗ ಶುಕ್ರಾಚಾರ್ಯರು ಸೂಕ್ಷ್ಮ ರೂಪದಿಂದ ಗಿಂಡಿಯ ಕಂಡಿಯಲ್ಲಿ ಪ್ರವೇಶಿಸಿ ತಡೆಯಲು ಅದನ್ನು ಸರಿಪಡಿಸುವ ವ್ಯಾಜದಿಂದ ವಾಮನಮೂರ್ತಿಯು ದರ್ಭೆಯ ತುದಿಯಿಂದ ಶುಕ್ರಾಚಾರ್ಯರ ಕಣ್ಣನ್ನು ಚುಚ್ಚಿ ದುದರಿಂದ ಇವರು ಏಕೇಕ್ಷಣರಾದರು.] (वि०)3. ಒಂದು ಕಣ್ಣುಳ್ಳವನು.

**एकैक ಏಕೈಕ** (वि०) ಪ್ರತ್ಯೇಕವಾದ ಒಂದೊಂದು. एक वीप्सायां द्विर्भावः (८-१-९)। "यौवनं धनसम्पत्तिः प्रभुत्वमविवेकिता। एकैकमप्यनर्थाय किमु यत्र चतुष्टयम्" सुभा०। "एकैकमत्र दिवसे दिवसे मदीयं नामाक्षरं गणय गच्छति यावदन्तम्" शाकु० ६-१२।

**एकैकशस् ಏಕೈಕಶಸ್** (अव्य०) ಒಂದೊಂದಾಗಿ. एक-मेकमावेदयति "शस्" (५-४-४३)। "एकैकशश्च प्रतिनामग्राहमावेद्यमाना बलाहकेन" काद०।

**एकोक्ति ಏಕೋಕ್ತಿ** (स्त्री०) ಒಂದೇ ಪದದಿಂದ ಹೇಳು ವುದು, ಒಂದೇ ಪದದಲ್ಲಿ ಎರಡು ಅರ್ಥಗಳನ್ನು ಕೊಡತಕ್ಕ ಅಭಿಧಾಶಕ್ತಿ. एका उक्तिः अभिधाशक्तिः। "पुष्पवन्तौ" ಎಂಬ ಒಂದೇ ಪದವು ಸೂರ್ಯ ಮತ್ತು' ಚಂದ್ರರೆಂಬ ಎರಡು ಅರ್ಥಗಳನ್ನು ಕೊಡುವ ಶಕ್ತಿಯುಳ್ಳದ್ದಾಗಿರು ವುದು. "एकयोक्त्या पुष्पवन्तौ दिवाकरनिशाकरौ" अम०।

**एकोच्चय ಏಕೋಚ್ಚಯ** (पुं०) ಒಂದೊಂದು ಹೆಚ್ಚಿಸು ವುದು, ಒಂದೊಂದು ಗ್ರಾಸವಾಗಿ (ಆಹಾರವನ್ನು) ಹೆಚ್ಚಿಸು ವಿಕೆ, ಅಮಾವಾಸ್ಯೆಯ ದಿನ ಉಪವಾಸವಿದ್ದು ಪ್ರತಿಪತ್ ಮೊದಲುಗೊಂಡು ಒಂದೊಂದು ಕಬಳವನ್ನು ಹೆಚ್ಚಿಸಿ (ಶುಕ್ಲ ಪಕ್ಷದಲ್ಲಿ) ಊಟಮಾಡುವಿಕೆ. ಇದು ಚಾಂದ್ರಾಯಣ ವ್ರತವನ್ನು ಆಚರಿಸುವ ಕ್ರಮ. "अमावास्यायामुपोष्य एकोच्चयेन पूर्वपक्षम्" गौतमध० २७-१४।

**एकोत्तर ಏಕೋತ್ತರ** (वि०) ಒಂದೊಂದು ಹೆಚ್ಚುವ, ಒಂದೊಂದು ಅಧಿಕವಾಗುವ. एकैकमुत्तरं यत्र।

**एकोदक ಏಕೋದಕ** (वि०) ದಾಯಾದ, ಏಳನೆಯ ತಲೆ ಯಿಂದ ಮುಂದೆ ಹದಿನಾಲ್ಕನೆಯ ತಲೆಯವರೆಗಿನ ಜ್ಞಾತಿ. एकं समानमुदकं यस्य।

**एकोदर ಏಕೋದರ** (पुं०) 1. ಒಂದೇ ಗರ್ಭದಲ್ಲಿ ಹುಟ್ಟಿದ ಸಹೋದರ, ಒಬ್ಬ ತಾಯಿಯ ಹೊಟ್ಟೆಯಲ್ಲಿ ಹುಟ್ಟಿದ ಅಣ್ಣತಮ್ಮಂದಿರು. एकं समानमुदरं गर्भस्थानं यस्य। (नं०) 2. ಸಮಾನವಾದ ಉದರ. एकं समानमुदरम्।

**एकोन ಏಕೋನ** (वि०) ಒಂದು ಕಡಿಮೆಯಾದ. एकेन ऊनः।

**एकोनचत्वारिंश ಏಕೋನಚತ್ವಾರಿಂಶ** (वि०) ಮೂವ ತ್ತೊಂಬತ್ತನೆಯ, ಒಂದು ಕಮ್ಮಿ ನಲವತ್ತನೆಯ. एकोन-चत्वारिंशतः पूरणः "डट्" (५-२-८०)। स्त्रियां "ङीप्" (४-१-१५)। **-चत्वारिंशी -ಚತ್ವಾರಿಂಶೀ.** ಹೀಗೆಯೇ **एकोनत्रिंशः ಏಕೋನತ್ರಿಂಶಃ, एकोनपञ्चाशः ಏಕೋನ ಪಂಚಾಶಃ, एकोनविंशः ಏಕೋನವಿಂಶಃ** ಇತ್ಯಾದಿ.

**एकोनचत्वारिंशत् ಏಕೋನಚತ್ವಾರಿಂಶತ್** (स्त्री०) ಮೂವತ್ತೊಂಬತ್ತು, ಒಂದು ಕಮ್ಮಿ ನಲವತ್ತು. एकेन ऊना चत्वारिंशत्। ಹೀಗೆಯೇ **एकोनत्रिंशत् ಏಕೋನತ್ರಿಂಶತ್, एकोनपञ्चाशत् ಏಕೋನಪಂಚಾಶತ್, एकोनविंशतिः ಏಕೋನವಿಂಶತಿಃ** ಇತ್ಯಾದಿ.

**एकौघ ಏಕೌಘ** (पुं०) 1. ಅವಿಚ್ಛಿನ್ನವಾಗಿ ಹರಿಯುವ ಪ್ರವಾಹ, ಒಂದೇ ಸಮನೆ ಹರಿಯುವ ಹೊನಲು. एकः अविच्छिन्नः ओघः प्रवाहः। "एकौघेन स्वर्णपुङ्खैर्द्विषन्तः" माघ० १८-५५। 2. ಒಂದು ರಾಶಿ, ಒಂದು ಗುಂಪು. "एकौघभूतं तदशर्म कृष्णाम्" किरा० ३-३५।

**एजक ಏಜಕ** (वि०) 1. ಕದಲುವ, ಅಲುಗಾಡುವ. एजृ (कम्पने) "ण्वुल्" (३-१-१३३)। 2. ನಡುಗುವ. 3. ಕದಲಿಸುವ, ಅಲುಗಾಡಿಸುವ. 4. ನಡುಗಿಸುವ. एजृ + णिच् "ण्वुल्" (३-१-१३३)। 5. ಪ್ರಕಾಶಿಸುವ, ಹೊಳೆಯುವ. एजृ (दीप्तौ) "ण्वुल्" (३-१-१३३)। 6. ಪ್ರಕಾಶಪಡಿಸುವ. एजृ + णिच् "ण्वुल्"।

**एजत् ಏಜತ್** (वि०) 1. ಕದಲುತ್ತಿರುವ, ಅಲುಗಾಡು ತ್ತಿರುವ. 2. ನಡುಗುತ್ತಿರುವ. एजृ (कम्पने) "शतृ" (३-१-१२४)। स्त्रियां "ङीप्" (४-१-६)। **एजन्ती ಏಜನ್ತೀ.**

**एजन ಏಜನ** (नं०) 1. ಕದಲುವಿಕೆ, ಅಲುಗಾಡುವಿಕೆ. 2. ನಡುಗುವಿಕೆ. 3. ಪ್ರಕಾಶಿಸುವಿಕೆ, ಹೊಳೆಯುವಿಕೆ. एजृ (कम्पने दीप्तौ च) "ल्युट्" (३-३-११५)।

4. ಕದಲಿಸುವಿಕೆ, ಅಲುಗಾಡಿಸುವಿಕೆ. 5. ನಡುಗಿಸುವಿಕೆ. 6. ಪ್ರಕಾಶಪಡಿಸುವಿಕೆ. एजृ+णिच् "ल्युट्" (३-३-११५)।

**एजनीय ಏಜನೀಯ** (वि०) 1. ಅಲುಗಾಡಿಸಲ್ಪಡುವ, ಕದಲಿಸಲ್ಪಡಬೇಕಾದ. 2. ಪ್ರಕಾಶಪಡಿಸಲ್ಪಡಬೇಕಾದ. एजृ (कम्पने दीप्तौ च)+णिच् "अनीयर्" (३-१-९६)।

**एजमान ಏಜಮಾನ** (वि०) 1. ಪ್ರಕಾಶಿಸುತ್ತಿರುವ, ಹೊಳೆಯುತ್ತಿರುವ. एजृ (दीप्तौ) "शानच्" (३-१-१२४)। 2. ನಡುಗುತ್ತಿರುವ. एजृ (कम्पने) "शानच्"।

**एजयत् ಏಜಯತ್** (वि०) 1. ಅಲುಗಾಡಿಸುತ್ತಿರುವ, ಕದಲಿಸುತ್ತಿರುವ. 2. ನಡುಗಿಸುತ್ತಿರುವ. 3. ಪ್ರಕಾಶಗೊಳಿಸುತ್ತಿರುವ. एजृ (कम्पने दीप्तौ च)+णिच् "शतृ" (३-१-१२४)। स्त्रियां "ङीप्" (४-१-६)। **एजयन्ती ಏಜಯನ್ತೀ.** "शानच्" (३-१-१२४)। **एजयमानः ಏಜಯಮಾನಃ.**

**एजयितव्य ಏಜಯಿತವ್ಯ** (वि०) 1. ಕದಲಿಸಲ್ಪಡಬೇಕಾದ. 2. ನಡುಗಿಸಲ್ಪಡಬೇಕಾದ. 3. ಪ್ರಕಾಶಪಡಿಸಲ್ಪಡಬೇಕಾದ. 4. ಕದಲಿಸಲ್ಪಡಬಹುದಾದ. 5. ನಡುಗಿಸಲ್ಪಡಲು ಶಕ್ಯವಾದ. 6. ಪ್ರಕಾಶಪಡಿಸಲ್ಪಡಬಹುದಾದ. एजृ (कम्पने) + णिच् अर्हादौ "तव्यः" (३-१-९६)।

**एजयितृ ಏಜಯಿತೃ** (वि०) 1. ನಡುಗಿಸುವ. 2. ಕದಲಿಸುವ. 3. ಪ್ರಕಾಶಗೊಳಿಸುವ. एजृ (कम्पने दीप्तौ च) + णिच् "तृच्" (३-१-१२४)।

**एजित ಏಜಿತ** (न०) 1. ಅಲುಗಾಡುವಿಕೆ. 2. ನಡುಗುವಿಕೆ. एजृ (कम्पने) भावे "क्तः" (३-३-११४)। (वि०) 3. ನಡುಗಿಸಲ್ಪಟ್ಟ. 4. ಅಲುಗಾಡಿಸಲ್ಪಟ್ಟ, ಕದಲಿಸಲ್ಪಟ್ಟ. 5. ಪ್ರಕಾಶಗೊಳಿಸಲ್ಪಟ್ಟ. एजृ (कम्पने दीप्तौ च)+णिच् "क्तः" (३-२-१०२)।

**एजितवत् ಏಜಿತವತ್** (वि०) 1. ನಡುಗಿದವನು, ಕಂಪನವುಳ್ಳವನು. 2. ಪ್ರಕಾಶಿಸಿದವನು, ಹೊಳೆದವನು. एजृ (कम्पने दीप्तौ च) "क्तवतुः" (३-२-१०२)। 3. ನಡುಗಿಸಿದವನು. 4. ಪ್ರಕಾಶಪಡಿಸಿದವನು. एजृ + णिच् "क्तवतुः" (३-२-१०२)।

**एजितव्य ಏಜಿತವ್ಯ** (वि०) 1. ಅಲುಗಾಡಬೇಕಾದ, ಕದಲಬೇಕಾದ. 2. ಪ್ರಕಾಶಿಸಬೇಕಾದ. एजृ (कम्पने दीप्तौ च) "तव्यः" (३-१-९६)।

**एजितृ ಏಜಿತೃ** (वि०) 1. ಅಲುಗಾಡುವ. 2. ನಡುಗುವ. 3. ಪ್ರಕಾಶಿಸುವ. एजृ (कम्पने दीप्तौ च) "तृच्" (३-१-१३३)। स्त्रियां "ङीप्" (४-१-५)। **एजित्री ಏಜಿತ್ರೀ.**

**एजृ-कम्पने** (भ्वा० पर० अक० से०) एजति। एजां चकार, -बभूव, -आस। ऐजीत्। 1. ಅಲುಗು, ಕದಲು. 2. ನಡುಗು, ಕಂಪಿಸು.

**णिचि:** एजयति, -ते। एजयाञ्चकार, -बभूव, -आस, -चक्रे। 1. ಅಲುಗಿಸು. 2. ನಡುಗಿಸು, ಕಂಪಿಸುವಂತೆ ಮಾಡು.

**सनि:** एजिजिषति। एजिजिषाञ्चकार। ಇತ್ಯಾದಿ.

**एजृ-दीप्तौ** (भ्वा० आत्म० अक० से०) एजाञ्चक्रे। एजिता। एजिष्यते। ಇತ್ಯಾದಿ.

**एड ಏಡ** (पु०) 1. ಮೇಷ, ಟಗರು. आ + इलति+इल (स्वप्ने) "घः" (३-३-११८)। डलयोरभेदः। (वि०) 2. ಕಿವುಡ, ಕಿವಿ ಕೇಳಿಸದವನು, ಶ್ರವಣೇಂದ್ರಿಯಶಕ್ತಿಯಿಲ್ಲದವನು. आ + ईट्टे—ईड (स्तुतौ) "अच्" (३-१-१३४)।

**एडक ಏಡಕ** (पु०) ಮೇಷ, ಟಗರು. इलति — इल (स्वप्नक्षेपणयोः) "ण्वुल्" (३-१-१३३)। स्त्रियां "टाप्" (४-१-४)। **एडका ಏಡಕಾ.** ಕುರಿ.

**एडगज ಏಡಗಜ** (पु०) ತಗಸಿಗೆಗಿಡ.

**एडमूक ಏಡಮೂಕ** (वि०) 1. ಕಿವುಡ ಮತ್ತು ಮೂಗ, ಕಿವಿಯಿಂದ ಕೇಳಲೂ ಮಾತನಾಡಲೂ ಶಕ್ತಿಯಿಲ್ಲದವನು. एडश्चासौ मूकश्च। 2. ಕೆಟ್ಟವನು, ದುಷ್ಟ, ದುರುಳ. मेदि०।

**एडूक ಏಡೂಕ** (पुंन०) 1. ಎಲುಬುಗಳನ್ನಿಟ್ಟು ನಿರ್ಮಿಸಲ್ಪಟ್ಟ ಗೋಡೆ. 2. ಎಲುಬುಗಳಂತೆ ಕಠಿನವಾದ ವಸ್ತುಗಳಿಂದ ನಿರ್ಮಿತವಾದ ಕಟ್ಟಡ. ईड (स्तुतौ) "ऊकः" (उ० ४-४१)। "कुड्यं भित्तिस्तदेडूकमन्तर्निहितकीकसम्" अभि० चि०। वैज०।

**एण ಏಣ** (पुंस्त्री०) ಕೃಷ್ಣಮೃಗ, ಹುಲ್ಲೆ, ಜಿಂಕೆ, ಚಿಗರಿ. एति—इण् (गतौ) "णः" बाहु०। "एणः स्मरेणाङ्कमयः सपत्राकृतो भवद्भ्रूयुगधन्वना यः" नैष० २२-२४। "अष्टावेणस्य मांसेन रौरवेण नवैव तु" मनु० ३-२६९। स्त्रियां जाति० "ङीष्" (४-१-६३)। **एणी ಏಣೀ.**

**एणतिलक ಏಣತಿಲಕ** (पु०) ತಿಲಕದಂತಿರುವ ಜಿಂಕೆಯುಳ್ಳ ಚಂದ್ರ. एणस्तिलकमिव यस्य। "मा ग्लौरिन्दुरेणतिलको हरिरोहिणीशौ" हारा०।

**एणजङ्घ ಏಣಜಂಘ** (पु०) ಜಿಂ[illegible] ಮೊಣಕಾಲುಳ್ಳವನು, ಓಡುವ ದೂತ, ಓಡಾಳು, ಓಲೆಕಾರ. ಸುದ್ದಿ ಒಯ್ಯುವವನು. एणस्य जङ्घे इव जङ्घे यस्य।

**एणभृत् ಏಣಭೃತ್** (पु०) ಮೃಗಾಂಕ, ಚಂದ್ರ. एणं बिभर्ति—डु भृञ् (धारणपोषणयोः) "क्विप्" (३-२-६१)।

**एणाक्षी ಏಣಾಕ್ಷೀ** (स्त्री०) ಜಿಂಕೆಯಂತೆ ಕಣ್ಣುಳ್ಳ ಹೆಂಗಸು. एणस्येवाक्षिणी यस्याः "षच्" (५-४-११३)। "ङीष्" (४-१-४१)।

**एणाङ्क ಏಣಾಂಕ** (पु०) ಜಿಂಕೆಯ ಗುರುತುಳ್ಳ, ಚಂದ್ರ. एणोऽङ्को यस्य।

**एणाङ्कमणि ಏಣಾಂಕಮಣಿ** (पु०) ಚಂದ್ರಕಾಂತಮಣಿ. ष० त०।

**एणाजिन ಏಣಾಜಿನ** (न०) ಕೃಷ್ಣಾಜಿನ, ಜಿಂಕೆಯ ಚರ್ಮ. एणस्य अजिनम्। "पिशङ्गमौञ्जीयुजमर्जुनच्छवि वसानमेणाजिनमञ्जनद्युति" माघ० १-६।

**एणी ಏಣೀ** (स्त्री०) ಹೆಣ್ಣು ಜಿಂಕೆ. एणस्य स्त्री "ङीष्" (४-१-६३)।

**एणीदृश् ಏಣೀದೃಶ್** (स्त्री०) ಜಿಂಕೆಯಂತೆ ಕಣ್ಣುಳ್ಳ ಹೆಂಗಸು. एण्याः दृगिव दगयस्याः। ಹೀಗೆಯೇ **एणीनयना,** एणीनेत्रा, एणीलोचना ಇತ್ಯಾದಿ.

**एणीपचन ಏಣೀಪಚನ** (पुं० ब० व०) 1. ಜಿಂಕೆಯನ್ನು ಬೇಯಿಸುವ ಒಂದುದೇಶದ ಜನರು. एणी पच्यते एभिः — डु पचष् (पाके) "ल्युट्" (३-३-११३)। (न०) 2. ಜಿಂಕೆಯನ್ನು ಬೇಯಿಸುವ ದೇಶ. एणी पच्यतेऽत्र—डु पचष् अधि० "ल्युट्" (३-३-११७)।

**एणीपचनीय ಏಣೀಪಚನೀಯ** (वि०) ಜಿಂಕೆಯನ್ನು ಬೇಯಿಸುವವರ ದೇಶ. एणीपचनानां देशः "छः" (१-१-७५)।

**एणीपद ಏಣೀಪದ** (वि०) ಜಿಂಕೆಯ ಕಾಲಿನಂತೆ ಕಾಲುಳ್ಳ. एण्या इव पादौ यस्य। निपा० (५-४-१२०)।

**एत ಏತ** (पु०) 1. ಚಿತ್ರವರ್ಣ, ನಾನಾ ಬಣ್ಣ. एति वर्णान्— इण् (गतौ) "तन्" (उ० ३-८६)। (वि०) 2. ಚಿತ್ರವರ್ಣವುಳ್ಳ, ನಾನಾಬಣ್ಣಗಳಿಂದ ಕೂಡಿದ. स्त्रियां वा "ङीप्" तस्य नश्च (४-१-३९)। **एनी ಏನೀ.** पक्षे **एता ಏತಾ.** 3. ಬಂದಿರುವ, ಆಗಮಿಸಿರುವ. "एतः कर्बुर आगते" मेदि०। आ + इण् (गतौ) "क्तः" (३-४-७२)।

**एतद् ಏತದ್** (त्रि०) (ಬಹಳ ಸಮೀಪದಲ್ಲಿರುವ) ಇವನು, ಇವಳು, ಇದು. इण् (गतौ) "अदिः" तुडागमश्च (उ० १-१३०)। ಇದೊಂದು ಸರ್ವನಾಮಪದ. "इदमस्तु सन्निकृष्टं समीपतरवर्तिचैतदो रूपम्। अदसस्तु विप्रकृष्टं तदिति परोक्षे विजानीयात्"। (पु०) एषः एतौ एते। "एष दाशरथिभूयमेत्य च ध्वंसितोद्धतदशाननामपि। राक्षसीमकृत रक्षितप्रजस्तेजसाधिकविभीषणां पुरीम्" माघ० १४-८१। "एते वयममी दाराः कन्येयं कुलजीवितम्" कुमा० ६-६३। (स्त्री०) एषा एते एताः। "हला, एषा द्वयोर्युवयोर्नु हस्ते निक्षेपः" शाकु० ४। "एताः सुतनु मुखं ते सख्यः पश्यन्ति हेमकूटगताः" विक्र० १-१२। (न०) एतत् एते एतानि। "एतदुच्छ्वसितपीतमैन्दवं वोढुमक्षममिव प्रभारसम्" कुमा० ८-७०।

**एतदन्त ಏತದಂತ** (वि०) ಇಲ್ಲಿಯವರೆಗಿನ, ಇದೇ ಕೊನೆಯಾಗಿ ಉಳ್ಳ. एतत् अन्तो यस्य। "एतदन्तास्तु गतयो ब्रह्माद्याः समुदाहृताः" मनु० १-५०।

**एतदर्थम् ಏತದರ್ಥಮ್** (अव्य०) ಇದಕ್ಕಾಗಿ, ಇದಕ್ಕೋಸ್ಕರ, ಇವನಿಗಾಗಿ, ಇವಳಿಗಾಗಿ. एतस्मै एतस्यै वा।

**एतदवधि ಏತದವಧಿ** (अव्य०) ಇಲ್ಲಿಯವರೆಗೆ, ಇಲ್ಲಿಯತನಕ.

**एतदवस्थ ಏತದವಸ್ಥ** (वि०) ಈ ಸ್ಥಿತಿಯಲ್ಲಿರುವ, ಈ ನೆಲೆಯಲ್ಲಿರುವ, ಈ ರೀತಿಯಲ್ಲಿರುವ. एषाऽवस्था परिस्थितिर्यस्य। "सा त्वमिहैतदवस्थं कथं सहेयाश्चिरवियोगम्" विक्र० ४-७१।

**एतदादि ಏತದಾದಿ** (वि०) ಇದೇ ಮೊದಲಾದ, ಇದರಿಂದ ಪ್ರಾರಂಭವಾದ. एतत् आदिर्यस्य।

**एतदीय ಏತದೀಯ** (वि०) ಇವನ—, ಇವಳ—, ಇದರ ಸಂಬಂಧವಾದ. एतस्य एतस्या वा इदम् "छः" (४-२-११४)। "वैलक्ष्यहेतोर्गतिमेतदीयामग्रेऽनुकृत्योपहसन्निवोच्चैः" नैष० ३-१०।

**एतद्योनि ಏತದ್ಯೋನಿ** (वि०) ಇದೇ ಮೂಲವಾಗಿ ಉಳ್ಳ, ಇದೇ ಕಾರಣವಾಗಿರುವ. एषा योनिर्यस्य। "एतद्योनीनि भूतानि सर्वाणीत्युपधारय" गीता ७-६।

**एतर्हि ಏತರ್ಹಿ** (अव्य०) ಈಗ, ಈ ಕಾಲದಲ್ಲಿ, ಈ ಸಮಯದಲ್ಲಿ. अस्मिन् काले—इदम् "र्हिल्" (५-३-१६)। एतादेशः (५-३-४)। "भवन्तमेतर्हि मनस्विगर्हिते विवर्तमानं नरदेव वर्त्मनि" किरा० १-३२।

**एतश ಏತಶ** (पु०) ಬ್ರಾಹ್ಮಣ. इण् (गतौ) "तशन्" (उ० ३-१४९)।

**एतशस् ಏತಶಸ್** (पु०) ಬ್ರಾಹ್ಮಣ. इण् (गतौ) "तशसुन्" (उ० ३-१४९)।

**एतादृक्ष ಏತಾದೃಕ್ಷ** (वि०) ಇವನಂತಿರುವ, ಇವಳಂತಿರುವ, ಇದರಂತಿರುವ. एष इव एषेव एतदिव वा पश्यति— एतद् + दृशिर् (प्रेक्षणे) "क्सः" (वा० ३-२-५७)। आत्वम् (६-३-९१)। "क्विन्" (३-२-६०)। **एतादृश् ಏತಾದೃಶ್.** स्त्रियां "ङीप्" (४-१-५)। **एतादृशी ಏತಾದೃಶೀ.** "कञ्"(३-२-६०)। **एतादृशः ಏತಾದೃಶಃ.**

**एतावत् ಏತಾವತ್** (वि०) ಇಷ್ಟು, ಇಷ್ಟು ಪರಿಮಾಣದ, ಇಷ್ಟು ದೊಡ್ಡದಾದ, ಇಷ್ಟು ಗಾತ್ರದ. एतत् परिमाणमस्य "वतुप्" (५-२-३९)। "एतावता नन्वनुमेयशोभि काञ्चीगुणस्थानमनिन्दितायाः" कुमा० १-३७। "एतावज्जन्मसाफल्यं यदनायत्तवृत्तिता" हितो० २-२२। स्त्रियाम् "ङीप्" (४-१-६)। **-वती -ವತೀ.**

**एदिधिषण ಏದಿಧಿಷಣ** (न०) ಅಭಿವೃದ್ಧಿ ಹೊಂದುವ ಅಪೇಕ್ಷೆ, ಅಭಿವೃದ್ಧಿ ಹೊಂದಲು ಆಸೆ. एध (वृद्धौ) + सन् भावे "ल्युट्" (३-३-११५)।

**एदिधिषमाण ಏದಿಧಿಷಮಾಣ** (वि०) ಅಭಿವೃದ್ಧಿ ಹೊಂದಲು ಅಪೇಕ್ಷಿಸುತ್ತಿರುವ. एध (वृद्धौ) + सन् "शानच्" (३-२-१२४)।

**एदिधिषा ಏದಿಧಿಷಾ** (स्त्री०) ಅಭಿವೃದ್ಧಿ ಹೊಂದಲು ಅಪೇಕ್ಷೆ. एधितुमिच्छा — एध (वृद्धौ) + सन् "अः" (३-३-१०३)।

**एदिधिषित ಏದಿಧಿಷಿತ** (न०) 1. ಅಭಿವೃದ್ಧಿ ಹೊಂದುವ ಅಪೇಕ್ಷೆ. एध (वृद्धौ) + सन् भावे "क्तः"(३-३-११४)। (वि०) 2. ಅಭಿವೃದ್ಧಿ ಹೊಂದಲು ಅಪೇಕ್ಷಿಸುವ. कर्त० "क्तः" (३-४-७२)।

**एदिधिषितवत् ಏದಿಧಿಷಿತವತ್** (वि०) ಅಭಿವೃದ್ಧಿ ಹೊಂದಲು ಅಪೇಕ್ಷಿಸಿದ. एध (वृद्धौ) + सन् "क्तवतुः" (३-२-१०२)। स्त्रियां "ङीप्" (४-१-६)। **-वती -ವತೀ.**

**एदिधिषितृ ಏದಿಧಿಷಿತೃ** (वि०) ಅಭಿವೃದ್ಧಿ ಹೊಂದಲು ಅಪೇಕ್ಷಿಸುವ. एध (वृद्धौ) + सन् "तृच्" (३-१-१३३)। स्त्रियां "ङीप्" (४-१-५)। **एदिधिषित्री ಏದಿಧಿಷಿತ್ರೀ.**

**एदिधिषु ಏದಿಧಿಷು** (वि०) ಅಭಿವೃದ್ಧಿ ಹೊಂದಲು ಅಪೇಕ್ಷಿಸುವ. एध (वृद्धौ) + सन् "उः" (३-२-१६८)।

**एध-वृद्धौ** (भ्वा० आत्म० अक० से०) एधते एधेते एधन्ते। एधाञ्चक्रे, -बभूव, -आस। एधिता। एधिष्यते। एधताम्। ऐधत। एधेत। ऐधिषीष्ट। ऐधिष्ट। ऐधिष्यत। ಅಭಿವೃದ್ಧಿ ಹೊಂದು.

**भावे:** एध्यते। एध्यताम्। ऐध्यत। ऐध्येत। ऐधि।

**णिचि:** एधयति, -ते। एधयाञ्चकार, -चक्रे, -बभूव, -आस। एधयिता। एधयतु, -ताम्। एध्यात्, एधयिषीष्ट। ಇತ್ಯಾದಿ.

**कर्मणि:** एध्यते। एधयाञ्चक्रे, -बभूवे, -आसे। एध्यताम्। ऐध्यत ಇತ್ಯಾದಿ.

**सनि:** एदिधिषते। एदिधिषिता। एदिधिषताम्। ऐदिधिषिष्ट। ಇತ್ಯಾದಿ.

**कृत्सु:** एधितव्यम्। एधनीयम्। एध्यम्। एधितः। एधितवान्। एधमानः। एधितुम्। एधितम्। एधनम्। एधित्वा। प्रैध्य। एधमेधम्। ಇತ್ಯಾದಿ.

**एध ಏಧ** (पु०) ಸೌದೆ, ಕಟ್ಟಿಗೆ. इध्यतेऽनेन — ञि इन्धी (दीप्तौ) कर० "घञ्" (३-३-१२१)। "स्फुलिङ्गावस्थया वह्निरेधापेक्ष इव स्थितः" शाकु० ७-१५।

**एधतु ಏಧತು** (पु०) 1. ಪುರುಷ, ಮನುಷ್ಯ. 2. ಅಗ್ನಿ, ಬೆಂಕಿ. एध (वृद्धौ) "चतुः" (उ० १-७८)। "एधतुः पुरुषेऽग्नौ ना" मेदि०। (वि०) 3. ಅಭಿವೃದ್ಧಿ ಹೊಂದಿದ.

**एधन ಏಧನ** (न०) 1. ವೃದ್ಧಿಯಾಗುವಿಕೆ, ಬೆಳೆಯುವಿಕೆ, ಹೆಚ್ಚಾಗುವಿಕೆ, एध (वृद्धौ) भावे "ल्युट्" (३-३-११५)। 2. ವೃದ್ಧಿಪಡಿಸುವಿಕೆ, ಹೆಚ್ಚಿಸುವಿಕೆ. एध + णिच् भावे "ल्युट्" (३-३-११५)।

**एधनीय ಏಧನೀಯ** (वि०) 1. ಅಭಿವೃದ್ಧಿ ಹೊಂದಬೇಕಾದ. ಹೆಚ್ಚಬೇಕಾದ, ಬೆಳೆಯಬೇಕಾದ. एध (वृद्धौ) "अनीयर्" (३-१-९६)। 2. ವೃದ್ಧಿಪಡಿಸಲ್ಪಡಬೇಕಾದ, ಹೆಚ್ಚಿಸಲ್ಪಡಬೇಕಾದ. एध + णिच् "अनीयर्"।

**एधमान ಏಧಮಾನ** (वि०) ಅಭಿವೃದ್ಧಿ ಹೊಂದುತ್ತಿರುವ, ಬೆಳೆಯುತ್ತಿರುವ, ಹೆಚ್ಚುತ್ತಿರುವ. एध (वृद्धौ) "शानच्" (३-२-१२४)।

**एधयत् ಏಧಯತ್** (वि०) ಅಭಿವೃದ್ಧಿ ಹೊಂದಿಸುತ್ತಿರುವ, ಬೆಳೆಸುತ್ತಿರುವ, ಹೆಚ್ಚಿಸುತ್ತಿರುವ. एध (वृद्धौ) + णिच् "शतृ" (३-२-१२४)। स्त्रियां "ङीप्" (४-१-६)। **एधयन्ती ಏಧಯಂತೀ.** "शानच्" (३-२-१२४)। **एधयमानः ಏಧಯಮಾನಃ.** स्त्रियां "टाप्" (४-१-४)। **-माना -ಮಾನಾ.**

**एधयितव्य ಏಧಯಿತವ್ಯ** (वि०) ಅಭಿವೃದ್ಧಿಪಡಿಸಲ್ಪಡಬೇಕಾದ, ಹೆಚ್ಚಿಸಲ್ಪಡಬೇಕಾದ. एध (वृद्धौ) + णिच् "तव्यः" (३-१-९६)।

**एधयितृ ಏಧಯಿತೃ** (वि०) ಅಭಿವೃದ್ಧಿಪಡಿಸುವ, ಹೆಚ್ಚಿಸುವ. एध (वृद्धौ)+णिच् "तृच्" (३-१-१३३)। स्त्रियां "ङीप्" (४-१-५)। **एधयित्री ಏಧಯಿತ್ರೀ.**

**एधस् ಏಧಸ್** (न०) ಸೌದೆ, ಕಟ್ಟಿಗೆ. इध्यतेऽग्निरनेन—ञि इन्धी (दीप्तौ) "असुन्" (उ० ४-१८८)। "यथैधांसि समिद्धोऽग्निर्भस्मसात् कुरुतेऽर्जुन" गीता ४-३७।

**एधित ಏಧಿತ**(न०) 1. ಅಭಿವೃದ್ಧಿಹೊಂದುವಿಕೆ, ಹೆಚ್ಚುವಿಕೆ. एध (वृद्धौ) भावे "क्तः" (३-३-११४)। (वि०)2. ಅಭಿವೃದ್ಧಿಹೊಂದಿದ, ಹೆಚ್ಚಾದ. एध कर्त० "क्तः" (३-४-७२)। 3. ಅಭಿವೃದ್ಧಿಹೊಂದಿಸಲ್ಪಟ್ಟ, ಹೆಚ್ಚಿಸಲ್ಪಟ್ಟ. एध+णिच् कर्म० "क्तः" (३-२-१०२)।

**एधितवत् ಏಧಿತವತ್** (वि०) 1. ಅಭಿವೃದ್ಧಿಹೊಂದಿದ, ಬೆಳೆದ, ಹೆಚ್ಚಾದ. एध (वृद्धौ) कर्त० "क्तवतुः" (३-२-१०२)। 2. ಹೆಚ್ಚಿಸಿದ, ಅಭಿವೃದ್ಧಿಹೊಂದಿಸಿದ. एध+णिच् "क्तवतुः" (३-२-१०२)। स्त्रियां "ङीप्" (४-१-६)। **-वती -ವತೀ.**

**एधितव्य ಏಧಿತವ್ಯ** (वि०) ಅಭಿವೃದ್ಧಿಹೊಂದಬೇಕಾದ, ಬೆಳೆಯಬೇಕಾದ. एध (वृद्धौ) "तव्यः" (३-१-९६)।

**एधितृ ಏಧಿತೃ** (वि०) ಅಭಿವೃದ್ಧಿಹೊಂದುವ, ಬೆಳೆಯುವ. एध (वृद्धौ) "तृच्" (३-१-१३३)। स्त्रियां "ङीप्" (४-१-५)। **एधित्री ಏಧಿತ್ರೀ.**

**एनस् ಏನಸ್** (न०) 1. ಪಾಪ. एति गच्छति प्रायश्चित्तेन—इण् (गतौ) "असुन्" (उ० ४-१८८)। "प्रतिपत्तिरधःकृतैनसो जनताभिस्तव साधु वर्ण्यते" माघ० १६-८। 2. ಅಪರಾಧ, ತಪ್ಪು.

**एनस्वत् ಏನಸ್ವತ್** (वि०) 1. ಪಾಪಾತ್ಮ, ಪಾಪದಿಂದ ಕೂಡಿದ. 2. ಅಪರಾಧಿ, ತಪ್ಪುಮಾಡಿದವನು. एनोऽस्यास्ति "मतुप्" (५-२-९४)। मस्य वः (८-२-९)। "विनिः" (५-२-१२१)। **एनस्विन् ಏನಸ್ವಿನ್.** स्त्रियां "ङीप्" (४-१-५)। **एनस्विनी ಏನಸ್ವಿನೀ.**

**एरङ्ग ಏರಂಗ** (पु०) ಒಂದು ಜಾತಿಯ ಮೀನು. आ+ईर (गतौ) "अङ्गच्" (उ० १-११७)।

**एरण्ड ಏರಂಡ** (पु०) ಹರಳುಗಿಡ. ईरयति वायुं मलं वाऽधः—ईर (गतौ)+णिच् "अण्डच्" बाहु०। "निरस्तपादपे देशे एरण्डोऽपि द्रुमायते"।

**एर्वारु ಏರ್ವಾರು** (पु०) ಸೌತೆಗಿಡ. आ+ईर (गतौ) "क्विप्" (वा० ३-३-१०८)। ईरं वारयति—वृञ् (वरणे) "उण्" बाहु०। "एर्वारुबीजं तोयेन पिबेद्वा लवणीकृतम्" सुश्रुत०।

**एल (ला) वालु ಏಲ (ಲಾ) ವಾಲು** (न०) ಸುರಸುರಿಕೆ ಗಿಡ. एलेव वलते—वल (सञ्चलने) "उण्" बाहु०। स्वार्थे "कन्" (५-३-७५)। **-वालुकम् -ವಾಲುಕಮ್.**

**एला ಏಲಾ** (स्त्री०) ಯಾಲಕ್ಕಿಗಿಡ. एलयति—इल (प्रेरणे) + णिच् "अच्" (३-१-१३४)। "ससञ्जुरश्वक्षुण्णानामेलानामुत्पतिष्णवः" रघु० ४-४७।

**एलापर्णी ಏಲಾಪರ್ಣೀ** (स्त्री०) ಸಣ್ಣ ರಾಶ್ಮೆ. एलायाः पर्णमिव पर्णमस्याः। "एलापर्णी तु सुवहा रास्ना युक्तरसा च सा" अम०।

**एव ಏವ** (अव्य०) ಇದು ಕೆಳಗಿನ ಈ ಅರ್ಥಗಳನ್ನು ಸೂಚಿಸುವುದು. 1. ಅವಧಾರಣ, ನಿಶ್ಚಯ. ಈ ಅವಧಾರಣವು (1) अन्ययोगव्यवच्छेदः, (2) अयोगव्यवच्छेदः, (3) अत्यन्तायोगव्यवच्छेदः ಎಂದು ಮೂರು ವಿಧ.

ಉದಾ : (1) "पार्थ एव धनुर्धरः" ಎಂಬಲ್ಲಿ एव ವು ಪಾರ್ಥೇತರನಲ್ಲಿ ಪ್ರಶಸ್ತಧನುರ್ಧರತ್ವವನ್ನು ವ್ಯವಚ್ಛೇದ ಮಾಡುವುದು. (2) "शङ्खः पाण्डुर एव" ಎಂಬಲ್ಲಿ एव ವು ಶಂಖಸಾಮಾನ್ಯದಲ್ಲೂ ಪಾಂಡುರತ್ವಾಯೋಗವ್ಯವಚ್ಛೇದವನ್ನು ಮಾಡುವುದು. (3) "नीलं सरोजं भवत्येव" ಎಂಬಲ್ಲಿ ಕ್ರಿಯೆಯೊಡನೆ ಸೇರಿರುವ एव ವು ಸರೋಜದಲ್ಲಿ ನೀಲತ್ವಾತ್ಯಂತಾಯೋಗವ್ಯವಚ್ಛೇದವನ್ನು ತಿಳಿಸುವುದು. 2. ಸಾದೃಶ್ಯ, ಹೋಲಿಕೆ, ಸಾಮ್ಯ. 3. ಅದು ಮಾತ್ರ, ಅವನು ಮಾತ್ರ, ಅವಳು ಮಾತ್ರ (ಕೇವಲ). "एक एव वसु यद्ददौ नृपस्तत्समापकमतर्क्यत क्रतोः" माघ० १४-४०। 4. ಆ ಕೂಡಲೆ, ಆ ಸಮಯದಲ್ಲೇ. "उपस्थितेयं कल्याणी नाम्नि कीर्तित एव यत्" रघु० १-८७। 5. ಅದೇ, ನಿಜವಾಗಿಯೂ ಹಾಗೆಯೇ. 6. ಅಸಂಭವ, ಸಾಧ್ಯವಾಗದಿರುವಿಕೆ. "क्वेव भोक्ष्यसे"। ಭೋಜನವು ಅಸಂಭವ ಎಂದರ್ಥ.

**एवंगुण ಏವಂಗುಣ** (पु०) 1. ಈ ರೀತಿಯಾದ ಗುಣ. "पुत्रमेवंगुणोपेतं चक्रवर्तिनमाप्नुहि" शाकु० १-१२। (वि०)2. ಈ ರೀತಿಯಾದ ಗುಣವುಳ್ಳ. एवं गुणाः यस्य।

**एवंप्रकार ಏವಂಪ್ರಕಾರ, -प्राय -ಪ್ರಾಯ** (वि०) ಈ ತೆರನಾದ, ಈ ರೀತಿಯಾದ, ಈ ವಿಧವಾದ. "प्रबलतमसामेवंप्रायाः शुभेषु प्रवृत्तयः स्रजमपि शिरस्यन्धः क्षिप्तं धुनोत्यहिशङ्कया" शाकु० ७-२४।

**एवंरूप ಏವಂರೂಪ** (वि०) ಈ ರೂಪವುಳ್ಳ, ಈ ಆಕೃತಿಯುಳ್ಳ. एवं रूपं यस्य। "न वेदयज्ञाध्ययनैर्न दानैर्न च क्रियाभिर्न तपोभिरुग्रैः। एवंरूपः शक्य अहं नृलोके द्रष्टुं त्वदन्येन कुरुप्रवीर" गीता ११-४८।

**एवंविध ಏವಂವಿಧ** (वि०) ಈ ವಿಧವಾದ, ಈ ತೆರನಾದ, ಹೀಗಿರುವ. एवं विधा प्रकारो यस्य। "भक्त्यात्वनन्यया शक्य अहमेवंविधोऽर्जुन। ज्ञातुं द्रष्टुं च तत्त्वेन प्रवेष्टुं च परन्तप" गीता ११-५४।

**एवम् ಏವಮ್** (अव्य०) 1. ಈ ರೀತಿಯಾಗಿ, ಈ ಪ್ರಕಾರವಾಗಿ. "एवं मया नियमितश्च्यवनादिवाक्यैः कोपानलश्च परशुश्च पुनर्यथैतौ" म० वी० ३-१५। 2. ಅಹುದು, ಹಾಗೆಯೇ, ಅದೇ ಸರಿ. "एवं यदात्थ भगवन्नामृष्टं नः परैः पदम्" कुमा० २-३१। 3. ನಿಶ್ಚಯ. "एवमेतत्, कः सन्देहः"। 4. ಅಂಗೀಕಾರ, ಒಪ್ಪಿಗೆ, ಸಮ್ಮತಿ. "एवं कुर्मः"। 5. ಸಾದೃಶ್ಯ, ಹೋಲಿಕೆ. "अग्निरेवं विप्रः"। 6. ವಾಕ್ಯಪೂರಣ. 7. ನಿಜವಾಗಿಯೂ, ವಾಸ್ತವವಾಗಿಯೂ.

**एष ಏಷ** (पु०) 1. ಸರಿಯುವಿಕೆ, ಚಲಿಸುವಿಕೆ, 2. ಗಮನ, ಹೋಗುವಿಕೆ. 3. ಅಪೇಕ್ಷೆ, ಇಚ್ಛೆ. इष (गतौ) इषु (इच्छायाम्) वा "घञ्" (३-३-१८)।

**एषक ಏಷಕ** (वि०) 1. ಸರಿಯುವ, ಚಲಿಸುವ. 2. ಹೋಗುವವನು. इष (गतौ) "ण्वुल्" (३-१-१३३)। 3. ಅಪೇಕ್ಷಿಸುವ, ಇಚ್ಛಿಸುವ. इषु (इच्छायाम्) "ण्वुल्"।

**एषण ಏಷಣ** (पु०) 1. ಲೋಹದ ಬಾಣ. एषते शत्रुहृदयम्। "एषणश्चायसे शरे" वैज०। (न०) 2. ಅಪೇಕ್ಷಿಸುವಿಕೆ, ಬಯಸುವಿಕೆ. इषु (इच्छायाम्) "ल्युट्" (३-३-११५)। 3. ಹೋಗುವಿಕೆ, ನಡೆಯುವಿಕೆ. इष (गतौ) "ल्युट्" (३-३-११५)। (स्त्री०) **-णा - ಣಾ.** 4. ಅನ್ವೇಷಣೆ, ಹುಡುಕುವಿಕೆ. भावे "युच्" (वा० ३-३-१०७)। 5. ಕೊತ್ತುಂಬರಿ. "कुमारी मुसली वंश्या गडूची कटुकैषणा" वैज०। **-णी- ಣೀ.** 6. ಅಕ್ಕಸಾಲಿಗನ ತಕ್ಕಡಿ.

**एषणिका ಏಷಣಿಕಾ** (स्त्री०) ಅಕ್ಕಸಾಲಿಗನ ತಕ್ಕಡಿ.

**एषणीय ಏಷಣೀಯ** (वि०) 1. ಅಪೇಕ್ಷಿಸಲ್ಪಡಬಹುದಾದ, ಆಸೆಪಡಬಹುದಾದ. इषु (इच्छायाम्) कर्म० "अनीयर्" (३-१-९६)। "जायापती लौकिकमेषणीयमार्द्राक्षतारोपणमन्वभूताम्" कुमा० ७-८८। 2. ಹೋಗಬೇಕಾದ, ಸೇರಬೇಕಾದ, ತಲುಪಬೇಕಾದ. इष (गतौ) "अनीयर्"। "तव्यः" (३-१-९६)। **एषितव्यम् ಏಷಿತವ್ಯಮ್.**

**एषितृ ಏಷಿತೃ** (वि०) "एषक" ಪದದ ಅರ್ಥ. इष (गतौ) इषु (इच्छायाम्) वा "तृच्" (३-१-१३३)।

**एषिन् ಏಷಿನ್** (वि०) 1. "एषक" ಪದದ ಅರ್ಥ. इषु (इच्छायाम् गतौ वा) "णिनिः" (३-१-१३४)। "शैशवेऽभ्यस्तविद्यानां यौवने विषयैषिणाम्" रघु० १-६। 2. ತಲುಪುವ, ಹೊಂದುವ, ಸೇರುವ. इष (गतौ) "णिनिः" (३-१-१३४)।

**एषिषिषा ಏಷಿಷಿಷಾ** (स्त्री०) 1. ಹೋಗಲು ಅಪೇಕ್ಷೆ. 2. ಹೊಂದಲು ಅಪೇಕ್ಷೆ, ತಲುಪಲು ಅಪೇಕ್ಷೆ. इष (गतौ)+सन् "अः" (३-३-१०२)।

**एषिषिषु ಏಷಿಷಿಷು** (वि०) 1. ಹೋಗಲು ಅಪೇಕ್ಷಿಸುವ. 2. ಹೊಂದಲು ಅಪೇಕ್ಷೆಯುಳ್ಳ, ತಲುಪಲು ಇಚ್ಛೆಯುಳ್ಳ. इष (गतौ)+ सन् "उः" (३-२-१६८)।

**एष्टव्य ಏಷ್ಟವ್ಯ** (वि०) ಅಪೇಕ್ಷಿಸಲ್ಪಡುವ, ಅಪೇಕ್ಷಿಸಬೇಕಾದ. इषु (इच्छायाम्) कर्म० "तव्यः" (३-१-९६)। "एष्टव्या बहवः पुत्राः यद्येकोऽपि गयां व्रजेत्" मत्स्यपु०।

**एष्टि ಏಷ್ಟಿ** (स्त्री०) ಇಚ್ಛೆ, ಅಪೇಕ್ಷೆ. आ+इषु (इच्छायाम्) "क्तिन्" (३-३-९४)।

**एष्य ಏಷ್ಯ** (न०) 1. ಒಂದು ವಿಧ ಶಸ್ತ್ರಚಿಕಿತ್ಸೆ. (वि०) 2. ಅಪೇಕ್ಷಿಸಲ್ಪಡುವ. इषु (इच्छायाम्) "ण्यत्" (३-१-१२४)। 3. ತಲುಪಲ್ಪಡುವ, ಸೇರಲ್ಪಡುವ. 4. ವೈದ್ಯಪರೀಕ್ಷೆ ಮಾಡಲ್ಪಡುವ. 5. ಮುಂದೆ ಬರಬಹುದಾದ, ಮುಂದೆ ಒದಗಬಹುದಾದ, ಭವಿಷ್ಯತ್ಕಾಲದ.

**एष्यत् ಏಷ್ಯತ್** (वि०) ಮುಂದಿನ ಕಾಲದ, ಭವಿಷ್ಯತ್ತಿನ, ಮುಂದೆ ಒದಗಬಹುದಾದ. इष (गतौ) "शतृ" (३-२-१२४)। "हरत्यघं सम्प्रति हेतुरेष्यतः" माघ० १-२६। स्त्रियां "ङीप्" (४-१-६)। **एष्यन्ती ಏಷ್ಯಂತೀ.**

इति "ए" कारादिपदार्थनिरूपणम्।

# ऐ

**ऐ ಐ** ಇದು ಕಂಠ ಮತ್ತು ತಾಲುಸ್ಥಾನಗಳಲ್ಲಿ ವಿವೃತ ಪ್ರಯತ್ನದಿಂದ ಹುಟ್ಟುವ ಒಂದು ಸ್ವರವರ್ಣ. ಉದಾತ್ತ, ಅನುದಾತ್ತ ಮತ್ತು ಸ್ವರಿತಗಳೆಂಬ ಮೂರು ಭೇದಗಳುಳ್ಳ. ಈ ವರ್ಣವು ಅನುನಾಸಿಕ ಮತ್ತು ಅನನುನಾಸಿಕಗಳೆಂಬ ಭೇದದಿಂದ ಒಟ್ಟು ಆರು ವಿಧವಾಗುವುದು.

**ऐ ಐ** (ಪುಂ) 1. ದಿಕ್ಕು. 2. ಹಸ್ತ, ಕೈ. 3. ಶಿವ, ಈಶ್ವರ. 4. ಪರ್ವತದ ಶಿಖರ, ಬೆಟ್ಟದ ತುದಿ. 5. ಚರ್ಮ, ತೊಗಲು. "ऐकारो दिङमुखे हस्ते हरेऽद्रिशिखरे त्वचि" नानार्थर०। (अव्य०) 6. ಆಹ್ವಾನ, ಕರೆ. 7. ಸ್ಮೃತಿ, ನೆನಪು. 8. ಸಂಬೋಧನೆ. "ऐ शब्दो दृश्यते हूतौ स्मृत्यामन्त्रणयोरपि" मेदि०।

**ऐककण्ठ्य ಐಕಕಂಠ್ಯ** (न०) ಸಮಾನಾಭಿಪ್ರಾಯ, ವಿರೋಧವಿಲ್ಲದ (ಒಂದೇ ವಿಧ) ಅಭಿಪ್ರಾಯ.

**ऐकध्यम् ಐಕಧ್ಯಮ್** (अव्य०) ಒಂದು ವಿಧವಾಗಿ, ಒಂದು ಪ್ರಕಾರವಾಗಿ. एक+धा "ध्यमुञ्" (५-३-४४)।

**ऐकपत्य ಐಕಪತ್ಯ** (न०) 1. ಸಾರ್ವಭೌಮತ್ವ, ದೇಶಕ್ಕೆಲ್ಲಾ ಒಬ್ಬನೇ ರಾಜನಾಗಿರುವಿಕೆ. एकपतेर्भावः "ष्यञ्" (५-१-१२४)। "अप्रतिद्वन्द्वतां युद्धे ऐकपत्यं च देहिनाम्" भाग० ७-३-३७। (वि०) 2. ಒಬ್ಬ ಯಜಮಾನನಲ್ಲಿರುವ. एकपतौ भवम् — एकपति "ण्यः" (४-१-८५)।

**ऐकपदिक ಐಕಪದಿಕ** (वि०) 1. ಒಂದು ಪದಕ್ಕೆ ಸಂಬಂಧಿಸಿದ, ಒಂದು ಪದದಲ್ಲಿರುವ. एकस्मिन् पदे भवः। 2. ಒಂದು ಸ್ಥಾನದಲ್ಲಿರುವ. एकस्मिन् पदे स्थाने भवः। 3. ಒಂದು ಪದಕ್ಕೆ ಅಥವಾ ಸ್ಥಾನಕ್ಕೆ ಸಮರ್ಥವಾ(ನಾ)ದ. एकपद "ठञ्" (५-१-१०१)।

**ऐकपद्य ಐಕಪದ್ಯ** (न०) ಒಂದೇ ಪದವಾಗಿರುವಿಕೆ, ಅನೇಕ ಪದಗಳು ಸಮಾಸಹೊಂದಿರುವಿಕೆ. एकपदस्य भावः "ष्यञ्" (५-१-१२४)।

**ऐकमत्य ಐಕಮತ್ಯ** (न०) ಸಮಾನವಾದ ಒಪ್ಪಿಗೆ, ಏಕವಿಧವಾದ ಸಮ್ಮತಿ, ಭಿನ್ನಾಭಿಪ್ರಾಯವಿಲ್ಲದಿರುವಿಕೆ. एकं समानं मतमभिप्रायः, तस्य भावः "ष्यञ्" (५-१-१२४)। "ऐकमत्यं हि नो राजन् सर्वेषामेव लक्षये" भा० वन० ७-१२।

**ऐकराज्य ಐಕರಾಜ್ಯ** (न०) ಸಾರ್ವಭೌಮತ್ವ, ಏಕಚಕ್ರಾಧಿಪತ್ಯ, ರಾಷ್ಟ್ರಕ್ಕೆಲ್ಲಾ ಒಬ್ಬನೇ ರಾಜನಾಗಿರುವಿಕೆ. एको राट्, एकराजो भावः "ष्यञ्" (५-१-१२४)।

**ऐकरूप्य ಐಕರೂಪ್ಯ** (न०) ಒಂದೇ ವಿಧವಾಗಿರುವಿಕೆ, ಒಂದೇ ಪ್ರಕಾರವಾಗಿರುವಿಕೆ.

**ऐकशतिक ಐಕಶತಿಕ** (वि०) ಒಂದು ಶತಮಾನವಿರುವ, ಒಂದು ನೂರನ್ನು ಹೊಂದಿರುವ. एकशतमस्यास्ति— "ठञ्" (५-२-११८)।

**ऐकशफ ಐಕಶಫ** (वि०) ಒಂದು ಗೊರಸುಳ್ಳ (ಕುದುರೆ ಮೊದಲಾದ) ಪ್ರಾಣಿಯ ಸಂಬಂಧವಾದ (ಕ್ಷೀರ ಮೊದಲಾದುದು). एकशफस्येदम् "अण्" (४-३-१२०)। "अनिर्दशाया गोःक्षीरमौष्ट्रमैकशफं तथा" मनु० ५-८।

**ऐकश्रुत्य ಐಕಶ್ರುತ್ಯ** (न०) 1. ಒಂದೇ ಸ್ವರ, ಉದಾತ್ತಾನುದಾತ್ತಸ್ವರಿತಗಳ ಸಮೀಪಸಂಬಂಧ, ಎಲ್ಲಾ ಸ್ವರಗಳೂ ಒಂದೇ ಶ್ರುತಿಯಂತೆ ಕೂಡಿಕೊಂಡಿರುವಿಕೆ. "उदात्तानुदात्तस्वरितानां परः सन्निकर्षः ऐकश्रुत्यम्" आश्व० श्रौ० सू० १-२-९। 2. ವೈವಿಧ್ಯವಿಲ್ಲದ ಒಂದೇ ರಾಗ, ಒಂದೇ ಧ್ವನಿ. एका श्रुतिर्यत्र, तस्य भावः "ष्यञ्" (वा० ५-१-१२४)।

**ऐकसहस्रिक ಐಕಸಹಸ್ರಿಕ** (वि०) ಒಂದು ಸಾವಿರವುಳ್ಳ. एकसहस्रमस्यास्ति "ठञ्" (५-२-११८)।

**ऐकागारिक ಐಕಾಗಾರಿಕ** (वि०) ಚೋರ, ಕಳ್ಳ. एकमसहायमगारं प्रयोजनमस्य "इकट्" (५-१-११३)। निपा०। ಕಳ್ಳನು ತನ್ನ ಕಳ್ಳತನವು ಮತ್ತಾರಿಗೂ ತಿಳಿಯದಿರಲು (ಸಮೀಪದಲ್ಲಿ ಮನೆಗಳಿಲ್ಲದ) ಪ್ರತ್ಯೇಕವಾದ ಮತ್ತು ಅಸಹಾಯವಾದ ಮನೆಯನ್ನು ಮಾತ್ರ ಅಪೇಕ್ಷಿಸುವುದರಿಂದ ಈ ಹೆಸರು. "ऐकागारिकवद्भूमौ दूराज्जग्मुरदर्शनम्" माघ० १९-१११।

**ऐकाग्र्य ಐಕಾಗ್ರ್ಯ** (न०) ಏಕಾಗ್ರತೆ, ಚಿತ್ತವನ್ನು ಒಂದೇ ವಿಷಯದಲ್ಲಿಟ್ಟಿರುವಿಕೆ. एकाग्रस्य भावः "ष्यञ्" (५-१-१२४)।

**ऐकात्म्य ಐಕಾತ್ಮ್ಯ** (न०) 1. ಐಕ್ಯ, ಒಂದಾಗಿರುವಿಕೆ. एक एवात्मा यस्य, तस्य भावः "ष्यञ्" (५-१-१२४)। 2. ಜೀವಾತ್ಮನು ಪರಮಾತ್ಮನೊಡನೆ ಒಂದಾಗಿರುವಿಕೆ, ಜೀವಬ್ರಹ್ಮರು ಒಂದೇ ಆಗಿರುವಿಕೆ. "तथैकात्म्यानुभावानां विकल्परहितः स्वयम्" भाग० ६-८-३२। 3. ಅಭೇದ. "ऐकात्म्यं वासुदेवस्य प्रोक्तवानर्जुनस्य च" भा० आदि० २-२३१।

**ऐकाधिकरण्य ಐಕಾಧಿಕರಣ್ಯ** (न०) 1. ಒಂದೇ ಅಧಿಕರಣದಲ್ಲಿರುವಿಕೆ, ಸಮಾನವಾದ (ಒಂದೇ) ಆಧಾರದಲ್ಲಿರುವುದು.

2. ಒಂದೇ ವಿಷಯದಲ್ಲಿ ಸೇರಿಕೊಂಡಿರುವಿಕೆ. एकं समानमधिकरणं यस्य। एकाधिकरणस्य भावः "ष्यञ्" (५-१-१२४)। "साध्येन हेतोरैकाधिकरण्यं व्याप्तिरुच्यते" भाषाप०।

**ऐकान्तिक ಐಕಾಂತಿಕ** (वि०) 1. ಅವಶ್ಯವಾಗಿ ಆಗಬೇಕಾದ. अवश्यं भावी "ठञ्" (५-१-८०)। 2. ನಿಶ್ಚಿತವಾದ, ನಿರ್ದಿಷ್ಟವಾದ, ಭರವಸೆಯಾದ. स्त्रियां "ङीप्" (४-१-१५)। **–की –ಕೀ.** "बहुषु अभियोगकारणेषु सत्सु सचिवव्यसनमभियुञ्जानस्य शत्रुमभियोक्तुः नैकान्तिकी सिद्धिर्भवति" मुद्रा० ४।

**ऐकान्त्य ಐಕಾಂತ್ಯ** (न०) 1. ಪರಿಪೂರ್ಣವಾಗಿರುವಿಕೆ. 2. ಏಕಾಂತವಾಗಿರುವಿಕೆ. 3. ನಿಶ್ಚಯವಾಗಿರುವಿಕೆ. एकान्तस्य भावः "ष्यञ्" (५-१-१२४)।

**ऐकार्थ्य ಐಕಾರ್ಥ್ಯ** (न०) 1. ಒಂದು ಪ್ರಯೋಜನವಾಗಿರುವಿಕೆ, ಒಂದು ಕಾರ್ಯವಾಗಿರುವಿಕೆ. एकार्थस्य भावः "ष्यञ्" (५-१-१२४)। "बीजवन्तो मुखाद्यर्था विप्रकीर्णा यथायथम्। ऐकार्थ्यमुपनीयन्ते यत्र निर्वहणं हि तत्" दशरू०। 2. ಒಂದೇ ಅರ್ಥವಾಗಿರುವಿಕೆ.

**ऐकाहिक ಐಕಾಹಿಕ** (पु०) 1. ಒಂದು ದಿವಸ ಸತ್ಕರಿಸಿ ಪ್ರೇರಿಸಲ್ಪಟ್ಟ ಉಪಾಧ್ಯಾಯ. एकाहमधीष्टः सत्कृत्य व्यापारितः "ठञ्" (५-१-८०)। 2. ಒಂದು ದಿವಸ ಸಾಕಲ್ಪಟ್ಟ ಸೇವಕ. एकाहं भृतः "ठञ्" (५-१-८०)। 3. ಒಂದು ದಿವಸ ಬಂದ ಜ್ವರ. एकाहं भूतः "ठञ्" (५-१-८०)। 4. ಒಂದು ದಿವಸ ನಡೆಯಲಿರುವ ಉತ್ಸವ (ಮೊದಲಾದುದು). एकाहं भावी "ठञ्" (५-१-८०)।

**ऐकाहिकी ಐಕಾಹಿಕೀ** (स्त्री०) ಒಂದು ದಿನದಲ್ಲಿ ಸಾಧ್ಯವಾದ ಯಾಗದ ದಕ್ಷಿಣೆ. एकाहसाध्ययागः एकाहः तस्य दक्षिणा "ठञ्" (५-१-९५)। "ङीप्" (४-१-१५)।

**ऐक्य ಐಕ್ಯ** (न०) 1. ಏಕತ್ವ, ಒಂದಾಗಿರುವಿಕೆ. एकस्य भावः "ष्यञ्" (५-१-१२४)। 2. ಅಭೇದ, ಬೇರೆ ಬೇರೆಯಲ್ಲದಿರುವಿಕೆ. "अन्यावतारपरिकल्पनकेलिलोभादैक्यं निनाय निजमंशमिवान्यनिष्ठम्" याद० २३-६०। 3. ಐಕಮತ್ಯ, ಸೌಹಾರ್ದ, ಸ್ನೇಹ. "तेषां द्वयोर्द्वयोरैक्यं बिभिदे न कदाचन। यथा वायुविभावस्वोर्यथा चन्द्रसमुद्रयोः" रघु० १०-८२।

**ऐक्यस्थल ಐಕ್ಯಸ್ಥಲ** (न०) (ವೀರಶೈವಮತದಲ್ಲಿ) ಜೀವಶಿವರ ಐಕ್ಯವನ್ನು ಸಾಧಿಸುವ ಕಡೆಯ ಸ್ಥಲ, ಸಾಧನೆಯ ಷಟ್‌ಸೋಪಾನಮಾರ್ಗದಲ್ಲಿ ಆರನೆಯದಾದ ಸೋಪಾನ. ऐक्यस्य शिवजीवयोः सायुज्यस्य स्थलम्। ಈ ಮತದಲ್ಲಿ ಶಿವನೇ ಸರ್ವೋತ್ತಮನು. ಶಿವೈಕ್ಯವೇ ಪರಮೋಚ್ಚ ಧ್ಯೇಯವು. ಲಿಂಗವು ಪರಶಿವನ ಪ್ರತೀಕ. ಈ ಸಂಪ್ರದಾಯದಲ್ಲಿ ಜೀವನಿಗೆ "ಅಂಗ" ವೆಂದೂ ಶಿವನಿಗೆ "ಲಿಂಗ" ವೆಂದೂ ಹೆಸರು. ಶಿವ-ಜೀವಸಾಯುಜ್ಯಕ್ಕೆ ಲಿಂಗಾಂಗಯೋಗವೆನ್ನುವರು.

ವೀರಶೈವ ಸಂಪ್ರದಾಯದಲ್ಲಿ ಮೋಕ್ಷಸಾಧನೆಗಾಗಿ ಆರು ಹಂತಗಳನ್ನು ಹೇಳಿರುತ್ತಾರೆ. ಇವಕ್ಕೆ ಷಟ್‌ಸ್ಥಲಗಳೆಂದು ಹೆಸರು. (1) भक्तस्थलम्, (2) महेशस्थलम्, (3) प्रसादिस्थलम्, (4) प्राणलिङ्गिस्थलम्, (5) शरणस्थलम् ಮತ್ತು (6) ऐक्यस्थलम् ಇವು ಷಟ್‌ಸ್ಥಲಗಳು. ಸಾಧಕನು ಕ್ರಮವಾಗಿ ಸ್ಥಲಗಳನ್ನು ಸಾಧಿಸಿಕೊಂಡು ಕೊನೆಯದಾದ ಈ ಸೋಪಾನದಲ್ಲಿ ಶಿವೈಕ್ಯವನ್ನು ಸಾಧಿಸುವುದರಿಂದ ಇದಕ್ಕೆ "**ऐक्यस्थलम्**" ಎಂದು ಹೆಸರು. ಇದೇ ಲಿಂಗಾಂಗ ಸಾಮರಸ್ಯವು.

**ऐक्षव ಐಕ್ಷವ** (वि०) ಇಕ್ಷುವಿನ (ಕಬ್ಬಿನ) ವಿಕಾರವಾದ ಬೆಲ್ಲ ಮೊದಲಾದುದು, ಕಬ್ಬಿನಿಂದ ತಯಾರಾದ ಕಾಕಂಬಿ ಬೆಲ್ಲ ಸಕ್ಕರೆ ಕಲ್ಲುಸಕ್ಕರೆ ಬೂರಾಸಕ್ಕರೆ ಮುಂತಾದುವು. इक्षोर्विकारः "अण्" (४-३-१३६)।

**ऐक्षुक ಐಕ್ಷುಕ** (वि०) ಕಬ್ಬಿಗೆ ಯೋಗ್ಯವಾದ, ಕಬ್ಬಿಗೆ ತಕ್ಕುದಾದ (ಭೂಮಿ). इक्षौ साधुः "ठञ्" (४-४-१०३)।

**ऐक्षुभारिक ಐಕ್ಷುಭಾರಿಕ** (वि०) 1. ಕಬ್ಬಿನ ಹೊರೆಯನ್ನು ಒಯ್ಯುವವನು. 2. –ಹೊರುವವನು. 3. –ಹೊತ್ತು ತರುವವನು. इक्षुभारं हरति वहति आवहति वा "ठञ्" (५-१-५०)।

**ऐक्ष्वाक ಐಕ್ಷ್ವಾಕ** (पु०) 1. ಇಕ್ಷ್ವಾಕುವಂಶದಲ್ಲಿ ಹುಟ್ಟಿದ ದೊರೆ. इक्ष्वाकोर्गोत्रापत्यम् "अञ्" (४-१-१६६)। बहुषु "लुक्" (२-४-६२)। "इक्ष्वाकूणां दुरापेऽर्थे त्वदधीना हि सिद्धयः" रघु० १-७२। 2. ಇಕ್ಷ್ವಾಕು ದೇಶದ ದೊರೆ. इक्ष्वाकूणां राजा "अञ्" (४-१-१६६)। (वि०) 3. ಇಕ್ಷ್ವಾಕುರಾಜನಿಗೆ ಸಂಬಂಧಿಸಿದ.

**ऐङ्गुद ಐಂಗುದ** (न०) ಇಂಗುದೀಫಲ, ಓಪ್ಪೆಕಾಯಿ. इङ्गुद्याः फलम् "अण्" (४-३-१६४)।

**ऐच्छिक ಐಚ್ಛಿಕ** (वि०) ಇಚ್ಛೆಯಿಂದ ಉಂಟಾದ, ಇತರರ ನಿರ್ಬಂಧಕ್ಕೆ ಒಳಪಡದೆ ತನ್ನ ಇಷ್ಟಕ್ಕೆ ಅನುಸಾರವಾದ. इच्छया निर्वृत्तः "ठञ्" (५-१-७९)।

**ऐड(ल)विड(ल) ಐಡ(ಲ)ವಿಡ(ಲ)** (पु०) ಇಡವಿಡೆಯ ಮಗ, ಕುಬೇರ. इड(ल)विडा(ला) या अपत्यम् "अण्" (४-१-११३)। डलयोरभेदः।

**ऐण ಐಣ** (वि०) ಜಿಂಕೆಯ ಸಂಬಂಧವಾದ, ಜಿಂಕೆಯ ಚರ್ಮ ಮಾಂಸ ಮೊದಲಾದುದು. एणस्य अवयवो विकारो वा "अञ्" (४-३-१५४)। "ऐणरौरववाराहशाशैर्मांसैर्यथाक्रमम्" याज्ञ० १-२५९।

**ऐणेय ಐಣೇಯ** (वि०) ಹೆಣ್ಣು ಜಿಂಕೆಯ ಸಂಬಂಧವಾದ (ಚರ್ಮ, ಮಾಂಸ ಮುಂತಾದುದು). एण्या अवयवो विकारो वा "ढञ्" (४-३-१५९)।

**ऐतरेय ಐತರೇಯ** (पु०) ಇತರನೆಂಬ ಒಬ್ಬ ಋಷಿಯ ಮಗ. इतरस्यर्षेरपत्यम् "ढक्" (४-१-१२३)।

**ऐतरेयब्राह्मण ಐತರೇಯಬ್ರಾಹ್ಮಣ** (न०) ಋಗ್ವೇದಕ್ಕೆ ಸಂಬಂಧಿಸಿದ ಎರಡು ಬ್ರಾಹ್ಮಣಗಳಲ್ಲಿ ಮುಖ್ಯವಾದ ಒಂದು ಬ್ರಾಹ್ಮಣ, ಐತರೇಯಋಷಿಯಿಂದ ಪ್ರೋಕ್ತವಾದ ಯಾಗದಲ್ಲಿ ಹೋತೃವಿನ ಕಾರ್ಯವನ್ನು ವಿವರಿಸುವ ಒಂದು ಬ್ರಾಹ್ಮಣ. ಈ ಬ್ರಾಹ್ಮಣದಲ್ಲಿ 40 ಅಧ್ಯಾಯಗಳಿವೆ. ಇವು ಎಂಟು ಪಂಚಿಕೆಗಳಾಗಿ ಭಾಗಿಸಲ್ಪಟ್ಟಿವೆ. ಈ ಬ್ರಾಹ್ಮಣದ ಮುಖ್ಯವಾದ ಭಾಗವು ಸೋಮಯಾಗವಿಷಯಕವಾದುದು. ಮೊದಲನೆಯ 16 ಅಧ್ಯಾಯಗಳಲ್ಲಿ ಒಂದು ದಿನದಲ್ಲಿ ಮಾಡಬಹುದಾದ ಅಗ್ನಿಷ್ಟೋಮವೆಂಬ ಸೋಮಯಾಗವೂ, ಮುಂದಿನ 2 ಅಧ್ಯಾಯಗಳಲ್ಲಿ 360 ದಿನಗಳಲ್ಲಿ ಮಾಡಬಹುದಾದ ಗವಾಮಯನವೂ, ಅನಂತರದ 6 ಅಧ್ಯಾಯಗಳಲ್ಲಿ 12 ದಿನಗಳಲ್ಲಿ ಮಾಡಬಹುದಾದ ಯಾಗವೂ, ಆಮೇಲೆ 8 ಅಧ್ಯಾಯಗಳಲ್ಲಿ ಅಗ್ನಿಹೋತ್ರಾದಿಗಳೂ, ಉಳಿದ 8 ಅಧ್ಯಾಯಗಳಲ್ಲಿ ರಾಜನ ಪಟ್ಟಾಭಿಷೇಕಮಹೋತ್ಸವ ಮತ್ತು ರಾಜಪುರೋಹಿತನ ಅಧಿಕಾರಗಳೂ ಪ್ರತಿಪಾದಿಸಲ್ಪಟ್ಟಿವೆ.

**ऐतरेयारण्यक ಐತರೇಯಾರಣ್ಯಕ** (न०) ಅರಣ್ಯದಲ್ಲಿ ಅಧ್ಯಯನ ಮಾಡಬೇಕಾದ ಋಗ್ವೇದದ ಒಂದು (ಆರಣ್ಯಕ) ಭಾಗ.

**ऐतरेयोपनिषद् ಐತರೇಯೋಪನಿಷದ್** (स्त्री०) ಐತರೇಯಮಹರ್ಷಿಪ್ರೋಕ್ತವಾದ ಒಂದು ಉಪನಿಷತ್ತು. **–भाष्यम् –ಭಾಷ್ಯಮ್.** ಐತರೇಯೋಪನಿಷತ್ತಿಗೆ ಭಾಷ್ಯರೂಪವಾದ ವ್ಯಾಖ್ಯಾನ.

**ऐतरेयिन् ಐತರೇಯಿನ್** (पु०) ಐತರೇಯಬ್ರಾಹ್ಮಣವನ್ನು ಅಧ್ಯಯನ ಮಾಡುವವನು.

**ऐतिहासिक ಐತಿಹಾಸಿಕ** (वि०) ಇತಿಹಾಸದಿಂದ ಬಂದ, ಚಾರಿತ್ರವಾದ, ಪೂರ್ವಕಾಲದಲ್ಲಿ ನಡೆದ ಕಥೆಯ ಸಂಬಂಧವಾದ, ಮಹಾಪುರುಷರ ಜೀವನ ಚರಿತ್ರೆಯಿಂದ ಬಂದಿರುವ. इतिहासः पुरावृत्तम्, तत आगतः "ठक्" (५-३-७४)।

**ऐतिह्य ಐತಿಹ್ಯ** (न०) ಪೂರ್ವದಿಂದ ಪರಂಪರೆಯಾಗಿ ಬಂದಿರುವ ಉಪದೇಶ. इति ह पारम्पर्योपदेशः स्वार्थे "ष्यञ्" (वा० ५-१-१२४)। "ಈ ಕ್ಷೇತ್ರದಲ್ಲಿ ಮಹಾಮಹಿಮರಾದ ತಪಸ್ವಿಯೊಬ್ಬರು ಅದೃಶ್ಯರಾಗಿ ವಾಸಿಸುತ್ತಿರುವರು" ಇತ್ಯಾದಿ ಪೂರ್ವದಿಂದಲೂ ಕಿವಿಯಿಂದ ಕಿವಿಗೆ ಬಂದ ಮಾತು ಐತಿಹ್ಯವೆನಿಸುವುದು.

**ऐदम्पर्य ಐದಂಪರ್ಯ** (न०) ಉದ್ದೇಶ, ತಾತ್ಪರ್ಯ, ಮುಖ್ಯವಿಷಯವಾಗಿರುವಿಕೆ. इदम्परस्य भावः "ष्यञ्" (५-१-१२४)। "इदं त्वैदम्पर्यं यदुत नृपतेर्नर्मसचिवः सुतादानान्मित्रं भवतु स भवान्नन्दन इति" मालती० २-७।

**ऐदंयुगीन ಐದಂಯುಗೀನ** (वि०) ಈ ಯುಗಕ್ಕೆ ಒಳ್ಳೆಯದಾಗಿರುವ, ಈ ಯುಗಕ್ಕೆ ತಕ್ಕುದಾಗಿರುವ. इदंयुगे साधु "खञ्" (४-४-९९)।

**ऐन्दव ಐಂದವ** (पु०) 1. ಚಾಂದ್ರಮಾಸ. इन्दोरयम् "अण्" (४-३-१२०)। "ऐन्दवास्तिथयस्तद्वत् संक्रान्त्या सौर उच्यते" सू० सि०। 2. ಚಂದ್ರದೇವತಾಕವಾದ ಮೃಗಶೀರ್ಷನಕ್ಷತ್ರ. इन्दुर्देवता अस्य। (न०) 3. ಚಾಂದ್ರಾಯಣ ವ್ರತ. "संकरापात्रकृत्यासु मासं शोधनमैन्दवम्" मनु० ११-१२५। 4. ಇಂದುದೇವತಾಕವಾದ ಹವಿಸ್ಸು. (वि०) 5. ಚಂದ್ರಸಂಬಂಧವಾದ. "दलयति परिशुष्यत्प्रौढतालीविपाण्डुस्तिमिरनिकरमुद्यन्नैन्दवः प्राक्प्रकाशः" मालती० ८-१। स्त्रियां "ङीप्" (४-१-१५)। **–वी –ವೀ.**

**ऐन्द्र ಐಂದ್ರ** (पु०) 1. ಇಂದ್ರನ ಮಗ — (1) ಅರ್ಜುನ. (2) ವಾಲಿ. (3) ಜಯಂತ. इन्द्रस्यायम् "अण्" (४-३-१२०)। (न०) 2. ಇಂದ್ರದೇವತಾಕವಾದ ಹವಿಸ್ಸು. 3. ಇಂದ್ರದೇವತಾಕವಾದ ಜ್ಯೇಷ್ಠಾನಕ್ಷತ್ರ. इन्द्रो देवताऽस्य "अण्" (४-२-२४)। (वि०) 4. ಇಂದ್ರಸಂಬಂಧವಾದ. इन्द्रस्येदम् "अण्" (४-३-१२०)। "महीतलस्पर्शनमात्रभिन्नमृद्धं हि राज्यं पदमैन्द्रमाहुः" रघु० २-५०। स्त्रियां "ङीप्" (४-१-१५)। **ऐन्द्री ಐಂದ್ರೀ.** 1. ಇಂದ್ರಸಂಬಂಧವಾದ ದಿಕ್ಕು, ಪೂರ್ವದಿಕ್ಕು. "अयमैन्द्रीमुखं पश्य रक्तश्चुम्बति चन्द्रमाः" चन्द्रा०। 2. ಶಚೀದೇವಿ. 3. ದುರ್ಗಾದೇವಿ. 4. ಯಾಲಕ್ಕಿ.

**ऐन्द्रजालिक ಐಂದ್ರಜಾಲಿಕ** (वि०) ಮಾಯಾವಿ, ಇಂದ್ರಜಾಲವಿದ್ಯೆಯನ್ನು ಬಲ್ಲವನು, ಯಕ್ಷಿಣಿಯಿಂದ ಜೀವಿಸುವವನು. इन्द्रजालेन जीवति "ठक्" (४-४-१२)। "काञ्चनमाले, उज्जयिनीतः आगत इत्यस्ति मे तस्मिन्नैन्द्रजालिके पक्षपातः" रत्ना० ४।

**ऐन्द्रनील** ಐಂದ್ರನೀಲ (वि०) ಇಂದ್ರನೀಲಸಂಬಂಧವಾದ, ಇಂದ್ರನೀಲಮಣಿಯಿಂದ ನಿರ್ಮಿತವಾದ.

**ऐन्द्रलुप्तिक** ಐಂದ್ರಲುಪ್ತಿಕ (न०) 1. ಬಟ್ಟತಲೆ. (वि०) 2. ಖಲ್ವಾಟ, ಬಟ್ಟತಲೆಯವನು. इन्द्रलुप्तेन निर्वृत्तम् "ठञ्" (५-१-७९)। तदस्यास्ति "अच्" (५-२-१२७)।

**ऐन्द्राग्न** ಐಂದ್ರಾಗ್ನ (वि०) ಇಂದ್ರ ಮತ್ತು ಅಗ್ನಿದೇವತಾಕವಾದ ಹವಿಸ್ಸು ಮೊದಲಾದುದು. इन्द्राग्नी देवतेऽस्य "अण्" (४-२-२४)।

**ऐन्द्रापौष्ण** ಐಂದ್ರಾಪೌಷ್ಣ (वि०) ಇಂದ್ರ ಮತ್ತು ಪೂಷದೇವತಾಕವಾದ ಹವಿಸ್ಸು ಮೊದಲಾದುದು. इन्द्रश्च पूषा च देवतेऽस्य "अण्" (४-२-२४)। "आनङ्" (६-३-२६)।

**ऐन्द्रामारुत** ಐಂದ್ರಾಮಾರುತ (वि०) ಇಂದ್ರ ಮತ್ತು ಮರುತ್ ದೇವತಾಕವಾದ ಹವಿಸ್ಸು ಮೊದಲಾದುದು. इन्द्रश्च मरुतश्च देवता अस्य "अण्" (४-२-२४)। "आनङ्" (६-३-२६)।

**ऐन्द्रि** ಐಂದ್ರಿ (पु०) 1. ಇಂದ್ರನ ಮಗ — (1) ಜಯಂತ, (2) ಅರ್ಜುನ, (3) ವಾಲಿ. 2. ವಾಯಸ, ಕಾಗೆ. इन्द्रस्यापत्यम् "इञ्" (४-१-९५)। "ऐन्द्रिः किल नखैस्तस्या विददार स्तनौ द्विजः" रघु० १२-२२।

**ऐन्द्रियक** ಐಂದ್ರಿಯಕ (वि०) ಪ್ರತ್ಯಕ್ಷವಾದ, ಇಂದ್ರಿಯಗಳಿಂದ ತಿಳಿಯಲ್ಪಡುವ. इन्द्रियेण निर्वृत्तम् "वुञ्" (४-२-८०)। "प्रत्यक्षं स्यादैन्द्रियकमप्रत्यक्षमतीन्द्रियम्" अम०।

**ऐर** ಐರ (वि०) 1. ಭೂಮಿಯಲ್ಲಿ ಉಂಟಾದ. 2. ಜಲದಲ್ಲಿ ಉಂಟಾದ. इरायां भूमौ जले वा भवः "अण्" (४-३-५३)।

**ऐरावण** ಐರಾವಣ (पु०) 1. ಐರಾವತ, ಇಂದ್ರನ ಆನೆ. इरा सुरा वनमुदकं यत्र इरावणम्। तत्र भवः "अण्" (४-३-५३)। इरया वणते शब्दायते इति इरावणः समुद्रः। तत्र भवः "अण्" (४-३-५३) इति वा। 2. ಒಂದು ಸರ್ಪ.

**ऐरावत** ಐರಾವತ (पु०) 1. ಇಂದ್ರನ ಆನೆ. इरा जलं भूम्नाऽस्त्यत्र "मतुप्" (५-२-९४)। इरावान् समुद्रः। तत्र भवः "अण्" (४-३-५३)। "प्रावृषेण्यं पयोवाहं विद्युदैरावताविव" रघु० १-३६। 2. ಒಂದು ದಿಗ್ಗಜ, ಪೂರ್ವದಿಕ್ಕನ್ನು ಹೊತ್ತಿರುವ ಒಂದು ಆನೆ. 3. ಒಂದು ಸರ್ಪ. 4. ಇರಾವಂತನ ಮಗ. 5. ಗಜನಿಂಬೆ ಗಿಡ. 6. ಹೇರಿಳೆ ಗಿಡ. (न०) 7. ನೆಟ್ಟಗೂ ಉದ್ದಕ್ಕೂ ಇರುವ ಇಂದ್ರನ ಧನುಸ್ಸು. इरावति मेघे भवः "अण्" (४-३-५३)। मेदि० (स्त्री०) **–वती –ವತೀ.** 1. ವಿದ್ಯುತ್ತು, ಮಿಂಚು. 2. ಐರಾವತ ದಿಗ್ಗಜದ ಪತ್ನಿ. 3. ಪಂಜಾಬಿನಲ್ಲಿರುವ "ರಾವಿ" ಯೆಂಬ ಒಂದು ನದಿ.

**ऐरेय** ಐರೇಯ (न०) ಮದ್ಯ, ಸುರೆ, ಹೆಂಡ.

**ऐल** ಐಲ (पु०) ಇಳೆಯ ಮಗ, ಪುರೂರವಸ್ಸು. इलाया अपत्यम् "अण्" (४-१-११३)।

**ऐलबिल** ಐಲಬಿಲ (पु०) ಕುಬೇರ, ಇಲಬಿಲೆಯ ಮಗ. इलबिलाया अपत्यम् "अण्" (४-१-११३)। "अवलम्बितैलबिलपाणिपल्लवः श्रयति स्म मेघमिव मेघवाहनः" माघ० १३-१८।

**ऐलेय** ಐಲೇಯ (पु०) ಕುಜಗ್ರಹ, ಇಳೆಯ ಮಗ, ಭೂಮಿಯ ಮಗ. इलाया अपत्यम् "ढक्" (४-१-१२०)।

**ऐश** ಐಶ (वि०) 1. ಶಿವಸಂಬಂಧವಾದ. ईशस्येदम् "अण्" (४-३-१२०)। "अथ नयनसमुत्थं ज्योतिरत्रेरिव द्यौः सुरसरिदिव तेजो वह्निनिष्ठ्यूतमैशम्" रघु० २-७५। 2, ರಾಜನ ಸಂಬಂಧವಾದ. स्त्रियां "ङीप्" (४-१-१५)। **ऐशी ಐಶೀ.**

**ऐशान** ಐಶಾನ (वि०) 1. ಶಿವನ ಸಂಬಂಧವಾದ. ईशानस्येदम् "अण्" (४-३-१२०)। 2. ಈಶಾನದಿಕ್ ಸಂಬಂಧವಾದ, ಉತ್ತರಪೂರ್ವದಿಕ್ಕಿಗೆ ಸಂಬಂಧಿಸಿದ. स्त्रियां "ङीप्" (४-१-१५)। **ऐशानी ಐಶಾನೀ.**

**ऐशि** ಐಶಿ (पु०) 1. ಈಶ್ವರನ ಮಗ, ಷಣ್ಮುಖ. ईशस्यापत्यम् "इञ्" (४-१-९५)। "महेशकण्ठोरगदन्तपङ्क्ति तदङ्कगः शैशवमौग्ध्यमैशिः" कुमा० ११-४५। 2. ಗಣಪತಿ, ವಿನಾಯಕ.

**ऐश्वर** ಐಶ್ವರ (वि०) 1. ಈಶ್ವರಸಂಬಂಧವಾದ. ईश्वरस्येदम् "अण्" (४-३-१२०)। "विद्धि चात्तबलमोजसा हरेरैश्वरं धनुरभाजि यत्त्वया" रघु० ११-७६। 2. ಈಶ್ವರನಿಂದ ಬಂದ, ಈಶ್ವರನಿಂದ ಉಂಟಾದ. 3. ಯಜಮಾನನಿಂದ ಬಂದ, ಯಜಮಾನನಿಂದ ಉಂಟಾದ. ईश्वरागतः "अण्" (४-३-७४)। 4. ಯಜಮಾನನ ಸಂಬಂಧವಾದ. स्त्रियां "ङीप्" (४-१-१५)। **–री –ರೀ.** (स्त्री०) ದುರ್ಗಾದೇವಿ.

**ऐश्वर्य** ಐಶ್ವರ್ಯ (न०) 1. ಶ್ರೇಷ್ಠತೆ, ಪಾರಮ್ಯ. 2. ಪ್ರಭುತ್ವ, ಪರಮಾಧಿಕಾರ. ईश्वरस्य भावः "ष्यञ्" (५-१-१२४)। "एकैश्वर्ये स्थितोऽपि प्रणतबहुफले यः

स्वयं कृत्तिवासाः" माल० १-१। 2. ಸಂಪತ್ತು, ಭಾಗ್ಯ, ಧನ, ಹಣ. "मूर्च्छन्त्यमी विकाराः प्रायेणैश्वर्यमत्तेषु" शाकु० ५-१८। 3. ಅಣಿಮಾದಿ ಎಂಟು ವಿಧ ಸಿದ್ಧಿಗಳು, ಅಮಾನುಷ ಶಕ್ತಿ.

**ऐश्वर्यवत् ಐಶ್ವರ್ಯವತ್** (वि०) 1. ಸಂಪದ್ಯುಕ್ತ, ಹಣವಂತ, ಧನಿಕ. ऐश्वर्यमस्यास्ति "मतुप्" (५-२-९४)। 2. ಪರಮಾಧಿಕಾರವುಳ್ಳ. 3. ಅಣಿಮಾದಿ ಅಷ್ಟಸಿದ್ಧಿಗಳಿಂದ ಕೂಡಿದ. स्त्रियां "ङीप्" (४-१-६)। **–वती – ವತೀ.**

**ऐषमस् ಐಷಮಸ್** (अव्य०) ಈ ವರ್ಷ, ವರ್ತಮಾನ ವರ್ಷ, ಈಗ ನಡೆಯುತ್ತಿರುವ ವರ್ಷ. इदम् "समसण्" (५-३-२२)।

**ऐषमस्तन ಐಷಮಸ್ತನ** (वि०) ಈ ವರ್ಷದಲ್ಲಿರುವ, ಈ ವರ್ಷದಲ್ಲಿ ಉಂಟಾದ. ऐषमस् भवः वा "ट्युः" (४-२-१०५)। पक्षे "त्यप्" (४-२-१०४)। **ऐषमस्त्यः ಐಷಮಸ್ತ್ಯಃ.**

**ऐषीक ಐಷೀಕ** (न०) 1. ಜೊಂಡಿನಿಂದ ತಯಾರಿಸಲ್ಪಟ್ಟ ಒಂದು ಅಸ್ತ್ರ. 2. ಮಹಾಭಾರತದ ಸೌಪ್ತಿಕಪರ್ವದ ಒಂದು ಅವಾಂತರಪರ್ವ.

**ऐषुकारि ಐಷುಕಾರಿ** (पु०) ಇಷುಕಾರನ ಮಗ, ಬಾಣಗಳನ್ನು ತಯಾರಿಸುವವನ ಮಗ. इषुकारस्य अपत्यम् "इञ्" (४-१-९५)।

**ऐषुकारिभक्त ಐಷುಕಾರಿಭಕ್ತ** (पु०) ಐಷುಕಾರಿಗಳು ವಾಸಮಾಡುವ ದೇಶ. ऐषुकारिणां विषयो देशः "भक्तल्" (४-२-५४)।

**ऐष्टिक ಐಷ್ಟಿಕ** (वि०) 1. ಇಷ್ಟಿಸಂಬಂಧವಾದ, ಯಾಗಕ್ಕೆ ಸಂಬಂಧಿಸಿದ (ವ್ಯಾಖ್ಯಾನ). इष्टेर्व्याख्यानो ग्रन्थः "ठञ्" (४-३-६८)। 2. ಯಾಗಕ್ಕೆ ಯೋಗ್ಯವಾದ. इष्टौ साधुः "ठक्" (४-४-१०२)। 3. ಯಾಗಕ್ಕೆ ಸಮರ್ಥನಾದ. इष्ट्यै प्रभवति "ठञ्" (५-१-१०१)।

**ऐहलौकिक ಐಹಲೌಕಿಕ** (वि०) 1. ಇಹಲೋಕದಲ್ಲಿ ಉಂಟಾದ, ಈ ಲೋಕಕ್ಕೆ ಸಂಬಂಧಿಸಿದ. इहलोके भवः "ठञ्" (वा० ४-३-६०)। उभयपदवृद्धिः (७-३-२०)।

**ऐहिक ಐಹಿಕ** (वि०) ಇಲ್ಲಿ ಉಂಟಾದ, ಈ ಸ್ಥಳದಲ್ಲಿರುವ, ಈ ಲೋಕದಲ್ಲಿರುವ. इह भवः "ठञ्" (वा० ४-३-६०)। "क्वचिद्द्रुमवदैहिकार्थेषु गृहेषु रंस्यन् यथा वानरः सुतदारवत्सलो व्यवायक्षणः" भाग० ५-१४-३२।

इति "ऐ" कारादिपदार्थनिरूपणम्।

---

# ओ

**ओ ಓ** ವರ್ಣಮಾಲೆಯಲ್ಲಿ ಇದು ಕಂಠ ಮತ್ತು ಓಷ್ಠ ಸ್ಥಾನಗಳಲ್ಲಿ ಅಭ್ಯಂತರ ವಿವೃತ ಪ್ರಯತ್ನದಿಂದ ಹುಟ್ಟುವ ಒಂದು ದೀರ್ಘಸ್ವರವರ್ಣ. ಉದಾತ್ತಾನುದಾತ್ತಸ್ವರಿತಗಳೆಂಬ ಭೇದಗಳಿಂದ ಮೂರು ವಿಧವಾದ ಇದು ಅನುನಾಸಿಕ ಮತ್ತು ಅನನುನಾಸಿಕಗಳೆಂಬ ಭೇದಗಳಿಂದ ಒಟ್ಟು ಆರು ವಿಧವಾಗುವುದು. ಇದರಂತೆಯೇ ಪ್ಲುತಸ್ವರವೂ ಆರು ವಿಧ.

**ओ ಓ** (पु०) 1. ಬ್ರಹ್ಮ. "ओकारस्तु भवेद्ब्रह्मा" एका०। 2. ಸಂಬೋಧನೆ. 3. ಆಹ್ವಾನ, ಕರೆ. 4. ಸ್ಮರಣೆ, ಸ್ಮೃತಿ, ನೆನಪು. 5. ದಯೆ ತೋರಿಸುವಿಕೆ. "ओ सम्बोधन आह्वाने स्मरणे चानुकम्पने" मेदि०।

**ओक ಓಕ** (पु०) 1. ಮನೆ, ಗೃಹ. 2. ಆಶ್ರಯಸ್ಥಾನ, ರಕ್ಷಣೆಯ ಜಾಗ. 3. ಪಕ್ಷಿ, ಹಕ್ಕಿ. 4. ಶೂದ್ರ, ವೃಷಲ. उच (समवाये) "कः" (३-१-१३५)। निपा० (७-३-६४)। "ओकः शकुन्तवृषलौ" सि० कौ०।

**ओकस् ಓಕಸ್** (न०) 1. ಗೃಹ, ಮನೆ. 2. ಆಶ್ರಯಸ್ಥಾನ, ರಕ್ಷಣೆಯ ಜಾಗ. उच (समवाये) "असुन्" (उ० ४-१८८)।

**ओकण (णि) ಓಕಣ (ಣಿ)** (पु०) 1. ತಿಗಣೆ. 2. ಹೇನು, ಕೂರೆ.

**ओकुल ಓಕುಲ** (पु०) ಅರ್ಧ ಹುರಿಯಲ್ಪಟ್ಟ ಗೋಧಿ. "ओकुलस्तु गुरुर्वृष्यो मधुरो बलकारकः। रक्तपित्तापहः स्निग्धो हृद्यो मदविवर्धनः" राजनि०।

**ओकोदनी ಓಕೋದನೀ** (स्त्री०) 1. ಹೇನು, ಕೂರೆ. 2. ತಿಗಣೆ. ओकः आश्रयस्थानमदनं भक्ष्यं यस्याः।

**ओघ ಓಘ** (पुं०) 1. ಸಮೂಹ, ಗುಂಪು, ರಾಶಿ. आ+उह्यतेऽनेन—वह (प्रापणे) "घञ्" (३-३-१२१)। "अघौघविध्वंसविधौ पटीयसीर्नतेन मूर्ध्ना हरिरग्रहीदपः" माघ० १-१८। 2. ಜಲಪ್ರವಾಹ, ನೀರಿನ ವೇಗ. "पुनरोघेन हि युज्यते नदी" कुमा० ४-४४। 3. ಪರಂಪರೆ. 4. ದ್ರುತನೃತ್ಯ. 5. ಉಪದೇಶ, ಬೋಧನೆ. "ओघो वेगे जलस्य च। वृन्दे परम्परायां च द्रुतनृत्योपदेशयोः" मेदि०।

**ओङ्कार ಓಂಕಾರ** (पुं०) 1. "ಓಮ್" ಎಂಬ ಅಕ್ಷರ, ಪ್ರಣವ. [ಪ್ರಣವವು ವೇದಾಧ್ಯಯನದ ಪ್ರಾರಂಭದಲ್ಲಿ ಮತ್ತು ಕೊನೆಯಲ್ಲಿ, ಮಂತ್ರಗಳ ಪ್ರಾರಂಭದಲ್ಲಿ ಮತ್ತು ಗ್ರಂಥಗಳ ಪ್ರಾರಂಭದಲ್ಲಿ ಉಚ್ಚರಿಸಲ್ಪಡುವುದು.] "ओङ्कारं पूर्वमुच्चार्य पश्चाद्वेदमधीयते" स्मृतिः। 2. ಪರಬ್ರಹ್ಮ. [ಪ್ರಣವದ ಜಪದಿಂದ ತದ್ವಾಚ್ಯವಾದ ಪರಬ್ರಹ್ಮಭಾವನೆಯುಂಟಾಗಿ ಬ್ರಹ್ಮಸಾಕ್ಷಾತ್ಕಾರವಾಗುವುದರಿಂದ "ಓಂ"ಕಾರವು ಪರಬ್ರಹ್ಮ.] ಮತ್ತು ಈ ಕೆಳಗಿನ ಅರ್ಥಗಳಲ್ಲಿ ಇದರ ಪ್ರಯೋಗ. 3. ಪ್ರಾರಂಭ, ಉಪಕ್ರಮ. 4. ಅಂಗೀಕಾರ, ಸಮ್ಮತಿ, ಒಪ್ಪಿಗೆ. "ओमित्युक्तवतोऽथ शार्ङ्गिण इति व्याहृत्य वाचं नभः" माघ० १-७५। 5. ಅನುಮತಿ, ಅಪ್ಪಣೆ. 6. ಅಪಾಕೃತಿ, ನಿರಾಕರಣೆ. मेदि०।

**ओज ಓಜ** (पुं०) 1. ಅಯುಗ್ಮ, ವಿಷಮ, ಬೆಸ; 1, 3, 5, 7, 9 ಇತ್ಯಾದಿ. 2. ಮೇಷಾದಿ ಹನ್ನೆರಡು ರಾಶಿಗಳಲ್ಲಿ 1, 3, 5, 7, 9, 11 ಈ ಬೆಸರಾಶಿಗಳು.

**ओजस् ಓಜಸ್** (न०) 1. ದೀಪ್ತಿ, ಪ್ರಕಾಶ, ಬೆಳಕು. उब्ज (आर्जवे) "असुन्" बलोपश्च (उ० ४-१९२)। 2. ಶರೀರ ಬಲ, ಶಕ್ತಿ, ಸಾಮರ್ಥ್ಯ. "ओजसापि खलु नूनमनूनं नासहायमुपयाति जयश्रीः" किरा० ९-३३। 3. ಚೈತನ್ಯ, ಪ್ರಾಣಬಲ, ಧಾತುವಿನ ತೇಜಸ್ಸು. 4. ಆಶ್ರಯ, ಆಧಾರ, ಒತ್ತಾಸೆ. "ओजो दीप्तावष्टम्भे प्रकाशबलयोरपि" मेदि०। 5. (ಅಲಂಕಾರ ಶಾಸ್ತ್ರದಲ್ಲಿ) ಸಮಾಸಬಾಹುಳ್ಯ, ದೊಡ್ಡ ಸಮಾಸಗಳಿಂದ ಕೂಡಿರುವಿಕೆ; ಇದೊಂದು ಕಾವ್ಯಗುಣ. "ओजः समासभूयस्त्वमेतद्गद्यस्य जीवितम्" काव्या० १-८०। 6. (ಜ್ಯೋತಿಃಶಾಸ್ತ್ರದಲ್ಲಿ) 1, 3, 5, 7, 9, 11 ಈ ಬೆಸರಾಶಿಗಳು. 7. ವೀರ್ಯವತ್ತಾದ ಪದಗಳ ಜೋಡಣೆ, ಜೋರಾದ ವಾಕ್ಸರಣಿ, ಸಂಯುಕ್ತಾಕ್ಷರಗಳಿಂದಲೂ ನಿರಂತರವಾದ ರೇಫಸಹಿತ ವರ್ಣಗಳಿಂದಲೂ ವರ್ಗಗಳ 1, 2 ನೆಯ, 3, 4 ನೆಯ, 1, 3 ನೆಯ ಅಕ್ಷರಗಳ ನಿರಂತರವಾದ ಜೋಡಣೆಯಿಂದಲೂ ಕೂಡಿರುವಿಕೆ. 8. ಜಲ, ನೀರು.

**ओजसीन ಓಜಸೀನ** (वि०) ಬಲಿಷ್ಠವಾದ, ಬಲಶಾಲಿಯಾದ, ಶಕ್ತಿಯಿಂದ ಕೂಡಿದ. ओजस् "खः" (४-४-१३०)। "यत्" (४-४-१३०)। **ओजस्यम् ಓಜಸ್ಯಮ್.**

**ओजस्वत् ಓಜಸ್ವತ್** (वि०) ಬಲಶಾಲಿ, ಶಕ್ತಿವಂತ, ಪರಾಕ್ರಮಿ. ओजोऽस्यास्ति "मतुप्" (५-२-९४)।

**ओजस्विन् ಓಜಸ್ವಿನ್** (वि०) 1. ಬಲಶಾಲಿ, ಶಕ್ತಿವಂತ, ಪರಾಕ್ರಮಿ. ओजोऽस्यास्ति "विनिः" (५-२-१२१)। "आकृष्टदेवासुरसांपरायैरोजस्विनां शस्त्रभृतामुदन्तैः" याद० २३-४६। 2. ಸಮಾಸಭೂಯಿಷ್ಠವಾದ, ದೀರ್ಘಸಮಾಸಗಳಿಂದ ಕೂಡಿದ. "ओजस्विवर्णोज्ज्वलवृत्तशालिनः प्रसादिनोऽनुज्झितगोत्रसंविदः" माघ० १२-३५। 3. ಪ್ರಕಾಶವುಳ್ಳ, ಹೊಳೆಯುವ.

**ओजिष्ठ ಓಜಿಷ್ಠ** (वि०) 1. ಬಹಳ ಬಲಶಾಲಿಯಾದ, ಬಹಳ ಶಕ್ತಿವಂತನಾದ. अतिशयेन ओजस्वी "इष्ठन्" (५-३-५५)।

**ओड्र ಓಡ್ರ** (पुं०) 1. ದಾಸವಾಳದ ಗಿಡ. 2. ಉತ್ಕಲ ದೇಶ, ಈಗಿನ ಒರಿಸ್ಸಾ ದೇಶ. (पुं०ब०व०) 3. ಉತ್ಕಲ ದೇಶನಿವಾಸಿಗಳು. "पौण्ड्रकाश्चौड्रद्रविडाः काम्बोजा यवनाः शकाः" मनु० १०-४४। (न०) 4. ಜಪಾಕುಸುಮ, ದಾಸವಾಳದ ಹೂವು. "ओड्राः पुंभूम्नि नीवृति। ओड्रस्तु तरुभेदे स्यात्" मेदि०।

**ओड्रदेश ಓಡ್ರದೇಶ** (पुं०) ಒರಿಸ್ಸಾ ದೇಶ.

**ओड्रपुष्प ಓಡ್ರಪುಷ್ಪ** (न०) ಜಪಾಕುಸುಮ, ದಾಸವಾಳದ ಹೂವು.

**ओणृ—अपनयने** (भ्वा० पर० सक० से०) ओणति। ओणाञ्चकार। ओणिता। औणीत्। 1. ಸಾಗಿಸು, ಬೇರೆ ಸ್ಥಳಕ್ಕೆ ಒಯ್ಯಿ. 2. ತೆಗೆದು ಹಾಕು, ತೆಗೆದು ಬಿಡು. 3. ಹೋಗಲಾಡಿಸು, ತೀರಿಸು. 4. ಸರಿಸು, ದೂರ ಮಾಡು.

**ओणि ಓಣಿ** (स्त्री० द्विव०) 1. ಭೂಮಿ ಮತ್ತು ಸ್ವರ್ಗ. ओणृ (अपनयने) "इन्" (उ० ४-११७)। (वि०) 2. ಸಾಗಿಸುವ, ಒಯ್ಯುವ. 3. ತೆಗೆದುಹಾಕುವ. 4. ನಿವಾರಿಸುವ, ಹೋಗಲಾಡಿಸುವ.

**ओत ಓತ** (न०) 1. ಹಾಸುದಾರ, ಬಟ್ಟೆ ನೇಯಲು ಹಾಕುವ ಉದ್ದದ ದಾರ. (वि०) 2. ಚೆನ್ನಾಗಿ ಪೋಣಿಸಲ್ಪಟ್ಟ. 3. ಚೆನ್ನಾಗಿ ನೇಯಲ್ಪಟ್ಟ. 4. ದಾರದಿಂದ ಹೊಲಿಯಲ್ಪಟ್ಟ. आ + वेञ् (तन्तुसन्ताने) "क्तः" (३-२-१०२)।

**ओतप्रोत ಓತಪ್ರೋತ** (वि०) 1. ಹಾಸುಹೊಕ್ಕು ಹಾಕಿ ನೇಯಲ್ಪಟ್ಟ, ಉದ್ದವಾಗಿ ಮತ್ತು ಅಡ್ಡಲಾಗಿ ದಾರ ಎಳೆದು ನೇಯಲ್ಪಟ್ಟ. (अव्य०) 2. ಹಾಸುಹೊಕ್ಕಾಗಿ, ಉದ್ದಕ್ಕೆ ಮತ್ತು ಅಡ್ಡಲಾಗಿ ಸರ್ವತ್ರ ವ್ಯಾಪಿಸಿ.

**ओतु ಓತು** (पुंस्त्री०) 1. ಬಿಡಾಲ, ಮಾರ್ಜಾರ, ಬೆಕ್ಕು. अवति गृहमाखुभ्यः—अव (रक्षणे) "तुन्" (उ० १-६९)। "ऊठ्" (६-४-२०)। 2. ನೇಯ್ಗೆಯ ಹಾಸುದಾರ. आ + वेञ् (तन्तुसन्ताने) "तुन्"।

**ओदन ಓದನ** (पुंन०) 1. ಅನ್ನ. उनत्ति—उन्दी (क्लेदने) "युच्" (उ० २-७७)। दध्योदनम्, गुडौदनम्। "गुडौदनं पायसं च हविष्यं क्षीरषाष्टिकम्। दध्योदनं हविश्चूर्णं मांसं चित्रान्नमेव च" याज्ञ० १-३०४। 2. ಮೇಘ, ಮೋಡ. (स्त्री०) **ओदनी ಓದನೀ.** 3. ಕಳ್ಳಂಗಡಲೆ.

**ओदनपाकी ಓದನಪಾಕೀ** (स्त्री०) ನೀಲಿಹೂವಿನ ಗೋರಂಟಿ ಗಿಡ. ओदनस्य पाक इव पाको यस्याः "ङीष्" (४-१-६४)।

**ओदनपाणिनीय ಓದನಪಾಣಿನೀಯ** (पु०) ಅನ್ನ (ಊಟ)ಕ್ಕಾಗಿಯೇ ಪಾಣಿನಿಯ ಗ್ರಂಥಗಳನ್ನು ಅಧ್ಯಯನ ಮಾಡುವವನು, ಊಟದ ಆಸೆಯಿಂದ ವ್ಯಾಕರಣವನ್ನು ಅಭ್ಯಾಸ ಮಾಡುವವನು. ओदनार्थं पाणिनीयः।

**ओदनीय ಓದನೀಯ** (वि०) ಅನ್ನಕ್ಕೆ ಸಂಬಂಧಿಸಿದ, ಅನ್ನಕ್ಕೆ ಹಿತವಾದ. ओदन वा "छः" (५-१-४)। पक्षे "यत्"। **ओदन्यः ಓದನ್ಯಃ.**

**ओद्म ಓದ್ಮ** (पु०) ನೆನೆಸುವುದು, ಒದ್ದೆಮಾಡುವುದು. उन्दी (क्लेदने) "मनिन्" (उ० ४-१४४)। नलोपो गुणश्च निपा० (६-४-२९)।

**ओम् ಓಮ್** (न०) 1. ಪರಬ್ರಹ್ಮ, ಪರಮಾತ್ಮ. ಅ ಕಾರ ಉ ಕಾರ ಮ ಕಾರಗಳು ಸಾಕ್ಷಾತ್ ಪರಬ್ರಹ್ಮವಾಚಕ. "तत्ते पदं संग्रहेण ब्रवीमि ओमित्येतत्" कठ०। "ओमित्येकाक्षरं ब्रह्म व्याहरन् मामनुस्मरन्। यः प्रयाति त्यजन् देहं स याति परमां गतिम्" गीता ८-१३। मद्वाचकं व्याहरन् वाच्यं मामनुस्मरन् इति श्रीरामानुजभाष्यम्। ब्रह्मणः अभिधानभूतं ओंकारं व्याहरन् तदर्थभूतं मां ईश्वरम् अनुस्मरन् इति श्रीशङ्करभाष्यम्। (अव्य०) 2. ಪ್ರಣವ. अवति—अव (रक्षणे) "मन्" (उ० १-१३९)। टिलोपश्च। "ऊठ्" (६-४-२०)। ಈ ಪ್ರಣವಾಕ್ಷರವು (अकारोकारमकारवर्णत्रयात्मकः) ಅ ಕಾರ ಉ ಕಾರ ಮತ್ತು ಮ ಕಾರ ಈ ಮೂರು ವರ್ಣಗಳಿಂದ ಕೂಡಿರುವುದು. "अकारो विष्णुरुद्दिष्टः उकारस्तु महेश्वरः। मकारेणोच्यते ब्रह्मा प्रणवेन त्रयो मताः" ಈ ರೀತಿ ಬ್ರಹ್ಮವಿಷ್ಣುಮಹೇಶ್ವರರು ಪ್ರಣವಾಕ್ಷರವಾಚ್ಯರೆಂದು ಉಕ್ತವಾಗಿದೆ. "अकारं चाप्युकारं च मकारं च प्रजापतिः। वेदत्रयान्निरदुहत् भूर्भुवःस्वरिति त्रिधा" मनु० २-७६। ಎಂಬ ವಚನದಿಂದ ಪ್ರಣವವು ಮೂರು ವೇದಗಳಿಂದಲೂ ಉದ್ಧೃತವಾಗಿದೆಯೆಂದು ತಿಳಿಯಬಹುದಾಗಿದೆ. ಈ ಪ್ರಣವಾಕ್ಷರವು ವೇದಾಧ್ಯಯನದ ಪ್ರಾರಂಭದಲ್ಲೂ ಕೊನೆಯಲ್ಲೂ ಹೇಳಲ್ಪಡುವುದು. ವಿಶಿಷ್ಟಾದ್ವೈತಿಗಳು "अकारार्थो विष्णुर्जगदुदयरक्षाप्रलयकृन्मकारार्थो जीवस्तदुपकरणं वैष्णवमिदम्। उकारोऽनन्यार्हं नियमयति संबन्धमनयोः त्रयीसारस्त्र्यात्मा प्रणव इममर्थं समदिशत्"। "अकारो विष्णुरुद्दिष्टो मकारो जीववाचकः। तयोस्तु नित्यसंबन्ध उकारेण प्रकीर्तितः" ಎಂಬ ವಚನಗಳಿಂದ ವೇದತ್ರಯಸಾರಭೂತವಾದ ಪ್ರಣವವು ಶೇಷನಾದ ಜೀವನಿಗೂ ಶೇಷಿಯಾದ ಪರಮಾತ್ಮನಿಗೂ ಇರುವ ನಿತ್ಯ ಸಂಬಂಧವನ್ನು ಹೇಳುವುದು ಎಂದು ಅಭಿಪ್ರಾಯ ಪಡುತ್ತಾರೆ. 3. ಮತ್ತು ಈ ಓಮ್ ಕಾರವು ಈ ಕೆಳಗಿನ ಅರ್ಥಗಳಿಗೆ ಸೂಚಕವಾಗುವುದು. (1) ಸ್ವೀಕಾರ, ಅಂಗೀಕಾರ, ಹಾಗೆಯೇ ಆಗಲಿ. "ओमित्युक्तवतोऽथ शार्ङ्गिण इति व्याहृत्य वाचं नभः" माघ० १-७५। (2) ಅನುಮತಿ. (3) ಪ್ರಾರಂಭ. "एष तावदोंकारः सकलराक्षससंहारनिगमाध्ययनस्य" म० वी० १। (4) ಶುಭ, ಮಂಗಳ. 5. ಅಪಾಕೃತಿ, ತಳ್ಳಿಹಾಕುವಿಕೆ, ತೆಗೆದುಹಾಕುವಿಕೆ. "ओमुपक्रमे। प्रणवे चाम्युपगमे चापाकृतौ च मङ्गले" मेदि०। "ओंकारः स्यादनुमतौ परमात्मन्युपक्रमे" नानार्थर०।

**ओमन् ಓಮನ್** (पु०) 1. ರಕ್ಷಣೆ, ಕಾಪಾಡುವುದು, ಸಾಹಾಯ್ಯಮಾಡುವುದು. 2. ದಯೆ, ಕರುಣೆ. अव (रक्षणे) "मनिन्" (उ० ४-१८४)। 3. ಮಿತ್ರ, ಸ್ನೇಹಿತ, ಗೆಳೆಯ.

**ओमन्वत् ಓಮನ್ವತ್** (वि०) 1. ರಕ್ಷಣೆಯುಳ್ಳ, ಸಾಹಾಯ್ಯವುಳ್ಳ. ओमा विद्यतेऽस्य "मतुप्" (५-२-९४)।

**ओल ಓಲ** (पु०) 1. ಸೂರಣಗೆಡ್ಡೆ. ओनत्ति— आ+उन्दी (क्लेदने) "कः" (३-१-१३५)। पृषो०। (वि०) 2. ತೇವವಾದ, ಒದ್ದೆಯಾದ. "आर्द्रसूरणयोरोलः" त्रिकाण्ड०।

**ओलडि—उत्क्षेपे** (वा चुरा० उभ० सक० से०) ओलण्डयति, –ते। औललण्डत्, –त। पक्षे ओलण्डति ಇತ್ಯಾದಿ. ಎಸೆ, ಬಿಸಾಡು.

**ओलण्डित ಓಲಂಡಿತ** (वि०) ಮೇಲಕ್ಕೆ ಎಸೆಯಲ್ಪಟ್ಟ, ಬಿಸಾಡಲ್ಪಟ್ಟ. ओलडि (उत्क्षेपे) + णिच् "क्तः" (३-२-१०२)। "प्रभुस्तं दैत्यसिद्धीनां प्रसूतकिलकिञ्चितम्। ओलण्डितमिवापश्यदुग्रं समरताण्डवम्" याद० १६-६४।

**ओल्ल ಓಲ್ಲ** (पु०) 1. ಸೂರಣಗೆಡ್ಡೆ. (वि०) 2. ತೇವವಾದ, ಒದ್ದೆಯಾದ. "ओल्लस्तु शूरणे पुंसि स्यादार्द्रे वाच्यलिङ्गकः" मेदि०।

**ओष ಓಷ** (पु०) 1. ದಹಿಸುವಿಕೆ, ಸುಡುವುದು. उष (दाहे) भावे "घञ्" (३-३-१८)। 2. ಉರಿತ, ಉರಿಯುವುದು. 3. (ಗಾಯ ಮೊದಲಾದುವುಗಳ) ಉರಿತ. 4. ಸೀದುಹೋಗುವಿಕೆ.

**ओषण ಓಷಣ** (पु०) 1. ಕಟುರಸ, ಕಾರ. उष (दाहे) कर्त० "ल्युः" (३-१-१३४)। (न०) 2. "ओष" ಪದದ ಅರ್ಥ. उष भावे "ल्युट्" (३-३-११५)। (वि०) 3. ಸುಡುವ, ದಹಿಸುವ. उष कर्त० "ल्युः" (३-१-१३४)। 4. ಉರಿಯಿಸುವ. 5. ಸುಡಿಸುವ, ದಹಿಸುವಂತೆ ಮಾಡುವ. उष+णिच् कर्त० "ल्युः"। 6. ಸೀಯಿಸುವ. स्त्रियां "टाप्" (४-१-४)। **–णा – ಣಾ.** (स्त्री०) **–णी – ಣೀ.** 7. ಕೀರೆಸೊಪ್ಪು.

**ओषणीय ಓಷಣೀಯ** (वि०) 1. ಸುಡಲು ಅರ್ಹವಾದ. 2. ಸುಡಲು ಶಕ್ಯವಾದ. 3. ಅವಶ್ಯವಾಗಿ ಸುಡಬೇಕಾದ. उष (दाहे) "अनीयर्" (३-१-९६)। "तव्यः"। **ओषितव्यम् ಓಷಿತವ್ಯಮ್.**

**ओषत् ಓಷತ್** (वि०) 1. ಸುಡುತ್ತಿರುವ, ದಹಿಸುತ್ತಿರುವ. 2. ಉರಿಯುತ್ತಿರುವ. उष (दाहे) "शतृ" (३-२-१२४)। स्त्रियाम् "ङीप्" (४-१-६)। **ओषन्ती ಓಷಂತೀ.**

**ओषधि (धी) ಓಷಧಿ(ಧೀ)** (स्त्री०) ಫಲಬಿಟ್ಟ ಮೇಲೆ ಒಣಗುವ ಗಿಡ ಬಳ್ಳಿ ಮೊದಲಾದುವು. ओषः धीयतेऽत्र—डुधाञ् (धारणपोषणयोः) "किः" (३-३-९३)। वा "ङीष्" (ग० ४-१-४५)। "अथौषधीनामधिपस्य वृद्धौ तिथौ च जामित्रगुणान्वितायाम्" कुमा० ७-१। ಓಷಧಿಯು ಸ್ಥಾವರದ ಒಂದು ಭೇದ. ಸ್ಥಾವರವು (1) ವನಸ್ಪತಿ, (2) ವೃಕ್ಷ, (3) ಲತೆ ಮತ್ತು (4) ಓಷಧಿಗಳೆಂದು ನಾಲ್ಕು ವಿಧ: (1) ಪುಷ್ಪಿಸದೆ ಫಲಿಸುವುದು ವನಸ್ಪತಿ. ಆಲ, ಅರಳಿ, ಅತ್ತಿ ಮುಂತಾದುವು. (2) ಪುಷ್ಪಿಸಿ ಫಲಿಸುವುದು ವೃಕ್ಷ. ಮಾವು, ಬೇಲ, ತೆಂಗು, ಬೇವು, ಹುಣಸೆ ಮುಂತಾದುವು. (3) ಹಬ್ಬುವ ಕುಡಿಗಳಿಂದ ಕೂಡಿದುದು ಲತೆ. ದ್ರಾಕ್ಷಿ, ಮಲ್ಲಿಗೆ, ಜಾಜಿ ಮುಂತಾದುವು. (4) ಫಲಿಸಿ ಫಲ ಕೊಟ್ಟೊಡನೆ ಒಣಗುವುದು ಓಷಧಿಗಳು. ಕುಂಬಳ, ಪಡವಲ, ಸೌತೆ, ಬತ್ತದ ಪೈರು ಮುಂತಾದುವು. "ओषध्यः फलपाकान्ताः बहुपुष्पफलोपगाः। अपुष्पाः फलवन्तो ये ते वनस्पतयः स्मृताः। पुष्पिणः फलिनश्चैव वृक्षास्तूभयतः स्मृताः। गुच्छगुल्मं तु विविधं तथैव तृणजातयः। बीजकाण्डरुहाण्येव प्रताना वल्लय एव च" मनु० १-४६-४८।

**ओषधिगर्भ ಓಷಧಿಗರ್ಭ, –नाथ–ನಾಥ** (पु०) 1. ಚಂದ್ರ. ओषधीनां गर्भः उत्पत्तिर्यस्मात् ओषधीनां नाथो वा। ಬಾಳೆ, ಬತ್ತದ ಪೈರು ಮೊದಲಾದ ಓಷಧಿಗಳು ಚಂದ್ರಕಿರಣ ಸಂಪರ್ಕದಿಂದ ಹುಟ್ಟುವುವಾದುದರಿಂದ ಈ ಹೆಸರು. 2. ಸೂರ್ಯ. ಮಳೆಯ ಮೂಲಕ ಸೂರ್ಯನ ಕಿರಣ ಪ್ರವೇಶದಿಂದ ಓಷಧಿಗಳು ಉತ್ಪತ್ತಿ ಹೊಂದುವುದರಿಂದ ಈ ಹೆಸರು.

**ओषधिज ಓಷಧಿಜ** (पु०) 1. ಅಗ್ನಿ, ಬೆಂಕಿ. ओषधिभ्यो जायते – जनी (प्रादुर्भावे) "डः" (३-२-९८)। (वि०) 2. ಓಷಧಿಗಳಿಂದ ಹುಟ್ಟಿದ. "ज्वलयतौषधिजेन कृशानुना" किरा० ५-१४।

**ओषधिपति ಓಷಧಿಪತಿ** (पु०) 1. ಚಂದ್ರ. ओषधीनां पतिः। ಚಂದ್ರಕಿರಣಸ್ಪರ್ಶದಿಂದ ಓಷಧಿಗಳು ಪುಷ್ಟಿ ಹೊಂದುವುದರಿಂದ ಈ ಹೆಸರು. 2. ಕರ್ಪೂರ. 3. ಸೋಮಲತೆ. 4. ವೈದ್ಯ. "अमृतद्रवैर्विदधदब्जदृशामपमार्गमोषधिपतिः स्म करैः" माघ० ९-३६।

**ओषधिप्रस्थ ಓಷಧಿಪ್ರಸ್ಥ** (पु०) ಹಿಮವತ್ಪರ್ವತ. ओषधियुक्तं प्रस्थमत्र। "इत्योषधिप्रस्थविलासिनीनां शृण्वन् कथाः श्रोत्रसुखास्त्रिनेत्रः" कुमा० ७-६९।

**ओषधीश ಓಷಧೀಶ** (पु०) ಚಂದ್ರ. ओषधीनामीशः। ["ओषधिनाथ" ಪದದಲ್ಲಿ ನೋಡಿ.]

**ओषयत् ಓಷಯತ್** (वि०) 1. ಸುಡಿಸುತ್ತಿರುವ. उष (दाहे) + णिच् "शतृ" (३-२-१२४)। 2. ಉರಿಯಿಸುತ್ತಿರುವ. स्त्रियां "ङीप्" (४-१-६)। **–यन्ती – ಯಂತೀ.**

**ओषयितव्य ಓಷಯಿತವ್ಯ** (वि०) 1. ಅವಶ್ಯವಾಗಿ ಸುಡಿಸಲ್ಪಡಬೇಕಾದ. 2. ಸುಡಿಸಲು ಅರ್ಹವಾದ. 3. ಸುಡಿಸಲು ಶಕ್ಯವಾದ. उष (दाहे) + णिच् "तव्यः" (३-१-९६)।

**ओषित ಓಷಿತ** (न०) 1. ಸುಡಿಸುವುದು. 2. ಉರಿಯಿಸುವುದು. उष (दाहे) + णिच् भावे "क्तः" (३-३-११४)।

(वि०) 3. ಸುಡಿಸಲ್ಪಟ್ಟ. 4. ಉರಿಯಿಸಲ್ಪಟ್ಟ. उष+णिच् कर्मं० "क्तः" (३-२-१०२)।

**ओषिषिषा** ಓಷಿಷಿಷಾ (स्त्री०) ಸುಡಲು ಇಚ್ಛೆ. ದಹಿಸಲು ಅಪೇಕ್ಷೆ. उष (दाहे) + सन् "अः" (३-३-१०२)।

**ओषिषिषु** ಓಷಿಷಿಷು (वि०) ಸುಡಲು ಇಚ್ಛೆಯುಳ್ಳ, ದಹಿಸಲು ಅಪೇಕ್ಷೆಯುಳ್ಳ. उष (दाहे) + सन् "उः" (३-२-१६८)।

**ओष्ठ** ಓಷ್ಠ (पु०) ತುಟಿ. उष्यते उष्णाहारेण — उष (दाहे) "थन्" (उ० २-४)। "ततोऽनुकुर्याद्विशदस्य तस्य ताम्रौष्ठपर्यस्तरुचः स्मितस्य" कुमा०१-४४। अधरोष्ठः उत्तरोष्ठः ಇತ್ಯಾದಿ. —ष्ठी—ಸ್ತ್ರೀ. ತೊಂಡೆಗಿಡ. ತೊಂಡೆಹಣ್ಣನ್ನು ತುಟಿಗಳಿಗೆ ಉಪಮಾನವಾಗಿ ವರ್ಣಿಸುವುದು ವಾಡಿಕೆ.

**ओष्ठक** ಓಷ್ಠಕ (पु०) 1. ತುಟಿ. ओष्ठ स्वार्थे "कः"। (वि०) 2. ತುಟಿಯ ರಕ್ಷಣೆ ಶೃಂಗಾರ ಮೊದಲಾದುವುಗಳಲ್ಲಿ ಆಸಕ್ತನಾದ. ओष्ठ "कन्" (५-२-६६)।

**ओष्ठ्य** ಓಷ್ಠ್ಯ (पु०) 1. ತುಟಿಯಲ್ಲಿ ಹುಟ್ಟುವ ವರ್ಣ, ತುಟಿಯ ಸಾಹಾಯ್ಯದಿಂದ ಉಚ್ಚರಿಸಲ್ಪಡುವ ಅಕ್ಷರ. ओष्ठे भवः "यत्" (५-१-६)। उ, प, फ, ब, भ, म ಮತ್ತು ಉಪಧ್ಮಾನೀಯ (ᳶप) ಗಳು ಓಷ್ಠಸ್ಥಾನಗಳಲ್ಲಿ ಹುಟ್ಟುವುವು. "उपूपध्मानीयानामोष्ठौ"।

**ओष्ण** ಓಷ್ಣ (वि०) ಸ್ವಲ್ಪ ಬಿಸಿಯಾಗಿರುವ, ಬೆಚ್ಚಗಿರುವ. आ ईषदुष्णम्।

**ओहार** ಓಹಾರ (पु०) ಕೂರ್ಮ, ಆಮೆ. "कूर्मः कच्छप ओहारः पञ्चगूढश्चतुर्गतिः" वैज०।

इति "ओ" कारादिपदार्थनिरूपणम्।

---

# औ

**औ** ಔ ಇದು ವರ್ಣಮಾಲೆಯಲ್ಲಿ ವಿವೃತ ಪ್ರಯತ್ನದಿಂದ ಕಂಠ ಮತ್ತು ಓಷ್ಠಸ್ಥಾನಗಳಲ್ಲಿ ಹುಟ್ಟುವ ಒಂದು ಸ್ವರವರ್ಣ. ಉದಾತ್ತ, ಅನುದಾತ್ತ ಮತ್ತು ಸ್ವರಿತಗಳೆಂದು ಮೂರು ಭೇದಗಳುಳ್ಳ ಇದು ಪುನಃ ಅನುನಾಸಿಕ ಮತ್ತು ಅನನುನಾಸಿಕ ಭೇದಗಳಿಂದ ಒಟ್ಟು ಆರು ವಿಧವಾಗುವುದು.

**औ** ಔ (पु०)1. ವಿಷ್ಣು. 2. ಅನಂತ, ಆದಿಶೇಷ. 3. ಧ್ವನಿ, ಶಬ್ದ. (स्त्री०) 4. ಭೂಮಿ. "ओऔशब्दौ तु होहीव सम्बुद्धयाह्वानयोर्मतौ। विधातरि क्रमाद्विष्णावोऔ शब्दावनव्ययौ" हेम०। (अव्य०) 5. ಆಹ್ವಾನ, ಕರೆ. 6. ಸಂಬೋಧನೆ. "ओशब्दः कथितो हूतौ तथा सम्बोधनेऽपि च। स्त्री तु विश्वम्भरायां स्यात्पुमांस्तु निस्वने स्मृतः" मेदि०।

**औक्थिक** ಔಕ್ಥಿಕ (वि०) ಉಕ್ಥವೆಂಬ ಸಾಮದ ಭಾಗವನ್ನು ಅಧ್ಯಯನ ಮಾಡುವ ಅಥವಾ ತಿಳಿದಿರುವ. उक्थमधीते वेद वा "ठक्" (४-२-६०)।

**औक्थिक्य** ಔಕ್ಥಿಕ್ಯ (न०) ಔಕ್ಥಿಕರ ಸಂಪ್ರದಾಯ, ಔಕ್ಥಿಕರ ಧರ್ಮ ಮತ್ತು ಆಮ್ನಾಯ. औक्थिकानां धर्मः आम्नायो वा "ञ्यः" (४-३-१२९)।

**औक्ष** ಔಕ್ಷ (वि०) ವೃಷಭಸಂಬಂಧವಾದ, ಎತ್ತುಗಳಿಂದ ಉಂಟಾದ. उक्ष्णामिदम् "अण्" (४-३-१२०)। अनपत्ये निपा० (६-४-१७३)।

**औक्षक** ಔಕ್ಷಕ (न०) ವೃಷಭಗಳ ಸಮೂಹ, ಎತ್ತುಗಳ ಗುಂಪು. उक्ष्णां समूहः "वुञ्" (४-२-३९)। "रोमन्थमन्थरचलद्गुरुसास्नमासांचक्रे निमीलदलसेक्षणमौक्षकेण" माघ० ५-६२।

**औक्षण** ಔಕ್ಷ್ಣ (पु०) ಎತ್ತಿನ ಸಂತತಿ, ವೃಷಭದ ವಂಶದಲ್ಲಿ ಹುಟ್ಟಿದ ಕರು. उक्ष्णोऽपत्यम् "अण्" (४-१-९२)।

**औग्रसेनि** ಔಗ್ರಸೇನಿ (पु०) ಉಗ್ರಸೇನನ ಮಗ, ಕಂಸ. उग्रसेनस्यापत्यम् "इञ्" (४-१-९५)।

**औग्रय ಔಗ್ರ್ಯ** (न०) ಕ್ರೂರತನ, ಕ್ರೌರ್ಯ, ದಯೆಯಿಲ್ಲದಿರುವಿಕೆ. उग्रस्य भावः "ष्यञ्" (५-१-१२४)। ಇದು 32 ವಿಧ ವ್ಯಭಿಚಾರಿಭಾವಗಳಲ್ಲೊಂದು. "निर्वेदावेग-दैन्यश्रममदजडता औग्रयमोहो विबोधः............" सा० द० ३-१४१।

**औचित्य ಔಚಿತ್ಯ** (न०) ಪ್ರಕೃತಕ್ಕೆ ಯೋಗ್ಯವಾಗಿರುವಿಕೆ, ಪ್ರಕೃತಕ್ಕೆ ಅನುರೂಪವಾಗಿರುವಿಕೆ, ಪ್ರಕೃತಕ್ಕೆ ಉಪಯೋಗಕರವಾಗಿರುವಿಕೆ. उचितस्य भावः "ष्यञ्" (५-१-१२४)। स्त्रियां "ङीष्" (४-१-४१)। यलोपः (६-४-१५०)। **औचिती ಔಚಿತೀ.** "सामर्थ्यमौचिती देशः कालो व्यक्तिः स्वरादयः" वाक्यप०।

**औजसिक ಔಜಸಿಕ** (वि०) ಶೂರ, ಪರಾಕ್ರಮಿ, ಶಕ್ತಿವಂತ. ओजसा वर्तते "ठक्" (४-४-२७)।

**औजस्य ಔಜಸ್ಯ** (न०) 1. ಓಜಸ್ಸು, ತೇಜಸ್ಸು. ओजस् स्वार्थे "ष्यञ्" (वा० ५-१-१२४)। 2. ಶಕ್ತಿ, ಬಲ. "दौर्गत्यादेरनौजस्यं दैन्यं मलिनतादिकृत्" सा० द० ३-१४५।

**औज्ज्वल्य ಔಜ್ಜ್ವಲ್ಯ** (न०) ಪ್ರಕಾಶ, ಕಾಂತಿ, ಹೊಳಪು. उज्ज्वलस्य भावः "ष्यञ्" (५-१-१२४)।

**औडव ಔಡವ** (वि०) ನಕ್ಷತ್ರಸಂಬಂಧವಾದ. उडूनामिदम् "अण्" (४-३-१२०)।

**औडुप ಔಡುಪ** (वि०) 1. ಚಂದ್ರನಿಂದ ಉಂಟಾದ. 2. ದೋಣಿಯ ಸಂಬಂಧವಾದ. उडुपेन चन्द्रेण प्लवेन वा निर्वृत्तम् "अञ्" (४-२-७५)।

**औडुपिक ಔಡುಪಿಕ** (वि०) 1. ದೋಣಿಯಿಂದ (ನದಿಯನ್ನು) ದಾಟುವ. उडुपेन तरति "ठक्" (४-४-५)। 2. ದೋಣಿಯ ಮೂಲಕ ಒಯ್ಯುವ, ದೋಣಿಯಿಂದ ಸಾಗಿಸುವ. उडुपेन हरति "ठक्" (४-४-१५)।

**औत्कण्ठ्य ಔತ್ಕಂಠ್ಯ** (न०) 1. ಅಪೇಕ್ಷೆ, ಅಭಿಲಾಷೆ. 2. ಉತ್ಸುಕತೆ, ಉತ್ಸಾಹದಿಂದ ಎದುರುನೋಡುವಿಕೆ, ತವಕಪಡುವಿಕೆ. उत्कण्ठस्य भावः "ष्यञ्" (५-१-१२४)।

**औत्कर्ष्य ಔತ್ಕರ್ಷ್ಯ** (न०) ಉತ್ಕರ್ಷ, ಶ್ರೇಷ್ಠತೆ, ಮೇಲ್ಮೆ. उत्कर्ष स्वार्थे "ष्यञ्" (वा० ५-१-१२४)।

**औत्कृष्ट्य ಔತ್ಕೃಷ್ಟ್ಯ** (न०) ಉತ್ಕರ್ಷವಾಗಿರುವಿಕೆ, ಶ್ರೇಷ್ಠತೆ, ಮೇಲ್ಮೆ. उत्कृष्टस्य भावः "ष्यञ्" (५-१-१२४)।

**औत्तर ಔತ್ತರ** (वि०) 1. ಉತ್ತರದಿಕ್ಕಿನಲ್ಲಿ ವಾಸಿಸುವ. 2. ಉತ್ತರದಿಕ್ಕಿನಲ್ಲಿರುವ, ಉತ್ತರದಿಕ್ಕಿಗೆ ಸಂಬಂಧಿಸಿದ. उत्तर "अण्" (४-३-१२०)।

**औत्तरपथिक ಔತ್ತರಪಥಿಕ** (वि०) 1. ಉತ್ತರದಿಕ್ಕಿನ ಮಾರ್ಗದಿಂದ ತರಲ್ಪಟ್ಟ. 2. ಉತ್ತರದಿಕ್ಕಿನ ಮಾರ್ಗದಿಂದ ಹೋಗುವ. उत्तरपथेनाहृतं गच्छति वा "ठञ्" (५-१-७७)।

**औत्तराधर्य ಔತ್ತರಾಧರ್ಯ** (न०) ಮೇಲು ಕೀಳುಭಾವ, ಮೇಲೆ ಮತ್ತು ಕೆಳಗಡೆ ಇರುವಿಕೆ. उत्तराधरयोर्भावः "ष्यञ्" (५-१-१२४)। "संघे चानौत्तराधर्ये" (३-३-४२)।

**औत्तराह ಔತ್ತರಾಹ** (वि०) 1. ಮುಂದಿನ ದಿವಸಕ್ಕೆ ಸಂಬಂಧಿಸಿದ, ಮುಂದಿನ ದಿವಸದ. उत्तराह "अण्" (४-३-१२०)। 2. ಉತ್ತರದಿಕ್ಕಿನಿಂದ ಬಂದ, ಉತ್ತರದಿಕ್ಕಿನಲ್ಲಿರುವ. उत्तर "आहञ्" (वा० ८-३-१०१)।

**औत्तरेय ಔತ್ತರೇಯ** (पु०) ಉತ್ತರೆಯ ಮಗ ಪರಿಕ್ಷಿತ್ತು. उत्तराया अपत्यम् "ढक्" (४-१-१२०)।

**औत्तानपादि ಔತ್ತಾನಪಾದಿ** (पु०) ಉತ್ತಾನಪಾದರಾಯನ ಮಗ, ಧ್ರುವಕುಮಾರ. उत्तानपादस्यापत्यम् "इञ्" (४-१-९५)। [ವಿವರಕ್ಕೆ "ध्रुव" ಪದದಲ್ಲಿ ನೋಡಿ.]

**औत्पत्तिक ಔತ್ಪತ್ತಿಕ** (वि०) ಹುಟ್ಟಿನಿಂದ ಬಂದ, ಹುಟ್ಟಿನಿಂದ ಉಂಟಾದ, ಸಹಜವಾದ, ಸ್ವಾಭಾವಿಕ. उत्पत्त्या निर्वृत्तः "ठक्" (४-२-८०)।

**औत्पात ಔತ್ಪಾತ** (वि०) ಉತ್ಪಾತವನ್ನು ಸೂಚಿಸುವ ಗ್ರಂಥದ ವ್ಯಾಖ್ಯಾನ ಗ್ರಂಥ. उत्पातस्य व्याख्यानः औत्पातो ग्रन्थः "अण्" (४-३-६६)।

**औत्पातिक ಔತ್ಪಾತಿಕ** (वि०) ಉತ್ಪಾತದಿಂದ ಉಂಟಾದ, ಧೂಮಕೇತು ಕಾಳ್ಗಿಚ್ಚು ಮುಂತಾದುವುಗಳಿಂದ ಉಂಟಾದ (ಶುಭಾಶುಭಫಲಗಳು). उत्पाते भवम् "ठक्" (४-३-६७)। "औत्पातिकं मेघ इवाश्मवर्षं महीपतेः शासनमुज्जगार" रघु० १४-५३।

**औत्पाद ಔತ್ಪಾದ** (वि०) ಹುಟ್ಟು ಅಥವಾ ಉತ್ಪತ್ತಿಗೆ ಸಂಬಂಧಿಸಿದ ಗ್ರಂಥವನ್ನು ತಿಳಿದಿರುವ ಅಥವಾ ಅಧ್ಯಯನ ಮಾಡುವ. उत्पादं वेत्त्यधीते वा "अण्" (४-२-५९)।

**औत्स ಔತ್ಸ** (वि०) ನೀರಿನ ಚಿಲುಮೆಯಲ್ಲಿರುವ, ನೀರಿನ ಬುಗ್ಗೆಯಲ್ಲಿರುವ, ಊಟೆಯಲ್ಲಿರುವ. उत्से भवः "अञ्" (४-१-८६)।

**औत्सङ्गिक ಔತ್ಸಂಗಿಕ** (वि०) ತೊಡೆಯಿಂದ ಸಾಗಿಸುವ, ಮಡಿಲಿನಿಂದ ಒಯ್ಯುವ. उत्सङ्गेन हरति "ठक्" (४-४-१५)।

**औत्सर्गिक ಔತ್ಸರ್ಗಿಕ** (वि०) ಸಾಮಾನ್ಯಶಾಸ್ತ್ರಕ್ಕೆ ಸಂಬಂಧಿಸಿದ, ಸಾಮಾನ್ಯ ನಿಯಮಕ್ಕೆ ಒಳಪಟ್ಟ, ಸಾಮಾನ್ಯ ಶಾಸ್ತ್ರ

ದಿಂದ ಸಿದ್ಧವಾದ. उत्सर्गं सामान्यविधिमर्हति "ठञ्" (५-१-६३)। स्त्रियां "ङीप्" (४-१-१५)। **औत्सर्गिकी ಔತ್ಸರ್ಗಿಕೀ.**

**औत्सुक्य ಔತ್ಸುಕ್ಯ** (नं०) 1. ಉತ್ಸಾಹ, ಪ್ರಿಯವಾದುದನ್ನು ಬೇಗ ಹೊಂದುವುದರಲ್ಲಿ ಅಪೇಕ್ಷೆ, ಕುತೂಹಲ. उत्सुकस्य भावः "ष्यञ्" (५-१-१२४)। "औत्सुक्येन कृतत्वरा सहभुवा व्यावर्तमाना ह्रिया तैस्तैर्बन्धुवधूजनस्य वचनैर्नीताभिमुख्यं पुनः" रत्ना० १-२। ಇದೊಂದು ವ್ಯಭಿಚಾರಿ ಭಾವ. "औत्सुक्योन्मादशङ्काः स्मृतिमतिसहिता व्याधिसन्त्रासलज्जाः" सा० द० ३-१४१। "इष्टानवाप्तेरौत्सुक्यं कालक्षेपासहिष्णुता" सा० द० ३-१५९। 2. ಇಚ್ಛೆ, ಅಪೇಕ್ಷೆ, ಆಸೆ. "औत्सुक्यनिवृत्त्यर्थं यथा क्रियासु प्रवर्तते लोकः। पुरुषस्य विमोक्षार्थं प्रवर्तते तद्वदव्यक्तम्" सां० का० ५८।

**औदञ्चन ಔದಂಚನ** (वि०) ಪೀಪಾಯಿನಲ್ಲಿರುವ, ನೀರು ಸೇದಲು ಅಥವಾ ನೀರನ್ನು ಒಯ್ಯಲು ಉಪಯೋಗಿಸುವ ಮರದ ಅಥವಾ ಲೋಹದ ಪಾತ್ರೆಯಲ್ಲಿರುವ. उदच्यते उत्क्षिप्य ध्रियतेऽस्मिन् उदञ्चनो जलपात्रम्, तस्येदम् "अण्" (४-३-१२०)।

**औदनिक ಔದನಿಕ** (पुं०) 1. ಅನ್ನದ ರಾಶಿ. ओदनानां समूहः "ठक्" (४-२-४७)। (वि०) 2. ಅನ್ನವನ್ನು ಮಾಡುವವನು, ಅನ್ನ ಬೇಯಿಸುವವನು, ಅಡಿಗೆಯವನು. ओदनं शिल्पमस्य "ठक्" (४-४-५५)। 3. ಅನ್ನವನ್ನು ತಿನ್ನುವ ಸ್ವಭಾವದವನು. ओदनभोजनं शीलमस्य "ठक्" (४-४-६१)। 4. ಅನ್ನವನ್ನು ಮಾರುವವನು. ओदनं पण्यमस्य "ठक्" (४-४-५१)। 5. ಅನ್ನವನ್ನು ತಿನ್ನಲು ಹಿತವಾದ (ವ್ಯಂಜನ). ओदनभोजने साधु "ठञ्" (४-४-१०३)। 6. ಅನ್ನವನ್ನು ತಿನ್ನುವುದು ಹಿತವಾಗಿರುವ (ಮನುಷ್ಯ). ओदनभोजनं हितमस्मै "ठक्" (४-४-६५)।

**औदन्वत ಔದನ್ವತ** (वि०) ಸಮುದ್ರಸಂಬಂಧವಾದ. उदन्वत इदम् "अण्" (४-३-१२०)। स्त्रियां "ङीप्" (४-१-१५)। **औदन्वती ಔದನ್ವತೀ.** "अन्तस्तन्वदिवारविन्दगहनान्यौदन्वतीनामपाम्" दशा०।

**औदपान ಔದಪಾನ** (वि०) 1. ನೀರಿನ ಬಾವಿ ಅಥವಾ ನೀರಿನ ಊಟೆ ಮೊದಲಾದುವುಗಳಿಂದ ಬಂದ (ತೆರಿಗೆ). उदपानादागतः "अण्" (४-३-७६)। 2. ಬಾವಿಯಲ್ಲಿರುವ, ಜಲಾಶಯದಲ್ಲಿರುವ. उदपान "अञ्"(४-१-८६)। स्त्रियां "ङीप्" (४-१-१५)। **–पानी–ಪಾನೀ.**

**औदयिक ಔದಯಿಕ** (वि०) 1. ಉದಯಕಾಲದಲ್ಲಿರುವ. 2. ರಾಶಿಗಳ ಉದಯ (ಲಗ್ನ) ಕಾಲದಲ್ಲಿ ಉಂಟಾದ. उदये लग्नकाले भवः "ठञ्" (४-३-११)। स्त्रियां "ङीप्" (४-१-१५)। **औदयिकी ಔದಯಿಕೀ.**

**औदर ಔದರ** (वि०) ಉದರಸಂಬಂಧವಾದ, ಹೊಟ್ಟೆಯಲ್ಲಿರುವ. उदरस्यायम् "अण्" (४-३-१२०)। "सिलं किमनलं भवेदनलमौदरं बाधितुं पयः प्रसृतिपूरकं किमु न धारकं सारसम्" वैराग्यपं०।

**औदरिक ಔದರಿಕ** (वि०) ಹೊಟ್ಟೆಬಾಕ, ತಿಂಡಿಪೋತ, ಹೊಟ್ಟೆ ತುಂಬುವುದರಲ್ಲಿ ಮಾತ್ರ ಉದ್ಯುಕ್ತನಾದವನು. उदरे प्रसितः "ठक्" (५-२-६७)। "सर्वत्रौदरिकस्याभ्यावहार्यमेव विषयः" विक्र० ३।

**औदर्य ಔದರ್ಯ** (वि०) 1. ಹೊಟ್ಟೆಯಲ್ಲಿರುವ. उदरे भवः "यत्" (५-१-६)। स्वार्थे "अण्" (५-४-३८)। 2. ಗರ್ಭವನ್ನು ಪ್ರವೇಶಿಸಿರುವ, ಗರ್ಭದಲ್ಲಿರುವ. "स त्वयाराधितः शुक्लो वितन्वन्मामकं यशः। छेत्ता ते हृदयग्रन्थिमौदर्यो ब्रह्मभावनः" भाग० ३-२४-४।

**औदश्वित ಔದಶ್ವಿತ** (वि०) ಅರ್ಧಭಾಗ ನೀರು ಬೆರಸಿದ ಮೊಸರಿನಲ್ಲಿ ಸಂಸ್ಕೃತವಾದ, ಮಜ್ಜಿಗೆಯಲ್ಲಿ ತಯಾರಿಸಲ್ಪಟ್ಟ. उदश्विति संस्कृतः "अण्" (४-२-१६)। वा "ठक्" (४-२-१९)। ठस्य "कः" (७-३-५१)। **औदश्वित्कः ಔದಶ್ವಿತ್ಕಃ.**

**औदात्त्य ಔದಾತ್ತ್ಯ** (नं०) 1. ಸರ್ವೋತ್ಕೃಷ್ಟನಾಗಿರುವಿಕೆ, ಎಲ್ಲರಿಗಿಂತಲೂ ಮಿಗಿಲಾಗಿರುವಿಕೆ. उदात्तस्य भावः "ष्यञ्" (५-१-१२४)। "औदात्त्यं हि सर्वोत्कर्षेण वर्तनम्" दशरू०। 2. ಉದಾತ್ತಸ್ವರದಿಂದ ಕೂಡಿರುವಿಕೆ.

**औदार्य ಔದಾರ್ಯ** (नं०) 1. ಉದಾರತೆ, ದೊಡ್ಡ ಮನಸ್ಸು, ಧಾರಾಳವಾದ ಮನಸ್ಸು. उदारस्य भावः "ष्यञ्" (५-१-१२४)। 2. ವಿನಯ, ಉತ್ತಮವಾದ ಶೀಲ, ಗಂಭೀರವಾದ ರೀತಿ. ಇದೊಂದು ನಾಯಿಕೆಯ ಸ್ವಾಭಾವಿಕ ಗುಣ. "औदार्यं विनयः सदा" सा० द० ३-९७। 3. ನಾಯಕನ ಸಾತ್ತ್ವಿಕಗುಣಗಳಲ್ಲೊಂದು. "शोभा विलासो माधुर्यं गाम्भीर्यं स्थैर्यतेजसी। ललितौदार्यमित्यष्टौ सत्त्वजाः पौरुषा गुणाः" सा० द० ३-५०। 4. ವಾಕ್ಯದಲ್ಲಿರುವ ಅರ್ಥಸಂಪತ್ತು, ಮಾತಿನಲ್ಲಿರುವ ಅರ್ಥಪುಷ್ಟಿ. "स सौष्ठवौदार्यविशेषशालिनीं विनिश्चितार्थामिति वाचमाददे" किरा० १-३।

**औदासीन्य ಔದಾಸೀನ್ಯ** (न०) 1. ಉದಾಸೀನತೆ, ಉಪೇಕ್ಷೆ, ತಾಟಸ್ಥ್ಯ. उदासीनस्य भावः "ष्यञ्" (५-१-१२४)। "पर्याप्तोऽसि प्रजाः पातुमौदासीन्येन वर्तितुम्" रघु० १०-२५। 2. ಅಗೌರವ, ಅವಮರ್ಯಾದೆ, ತಾತ್ಸಾರ. 3. ನಿರುತ್ಸಾಹ, ಜಡತೆ, ನಿರಾಸಕ್ತಿ.

**औदास्य ಔದಾಸ್ಯ** (न०) "औदासीन्य" ಪದದ ಅರ್ಥ. उदास्ते — उद्+आस (उपवेशने) "अच्" (३-१-१३४) उदासः। तस्य भावः "ष्यञ्" (५-१-१२४)। "औदास्यसंविदवलम्बितशून्यमुद्रामस्मिन् दृशोर्निपतितामवगम्य भैम्याः" नैष० ११-१०१।

**औदीच्य ಔದೀಚ್ಯ** (वि०) 1. ಉತ್ತರದೇಶದಿಂದ ಬಂದ. 2. ಉತ್ತರದೇಶದ ಸಂಬಂಧವಾದ. 3. ಉತ್ತರದಿಕ್ಕಿನಲ್ಲಿರುವ.

**औदुम्बर ಔದುಂಬರ** (पु०) 1. ಯಮ. "औदुम्बरः श्राद्धदेवे रोगभेदे नपुंसकम्" मेदि०। 2. ಒಂದು ದೇಶ. ಪಾಂಡವರ ಕಾಲದಲ್ಲಿ ಇದರ ರಾಜಧಾನಿ ಕಚ್ಛೇಶ್ವರ. ಈಗ ಇದು ಕಚ್ಛ (Cutch) ದೇಶವೆಂದು ಪ್ರಸಿದ್ಧವಾಗಿದೆ. (पु० ब० व०) 3. ಉದುಂಬರ ವಂಶದಲ್ಲಿ ಹುಟ್ಟಿದವರು. (न०) 4. ಒಂದು ವಿಧ ಕುಷ್ಠರೋಗ. 5. ಅತ್ತಿಮರದ ತುಂಡು. 6. ಅತ್ತಿಮರದ ರೆಂಬೆ, ಎಲೆ, ಹಣ್ಣು, ಅತ್ತಿಮರದ ಸಾಮಾನು ಮುಂತಾದುದು. उदुम्बरस्य विकारोऽवयवो वा "अण्" (४-३-१३५)। "औदुम्बराणि पुष्पाणि श्वेतवर्णं च वायसम्। मत्स्यपादं जले पश्येन्न नारीहृदयस्थितम्"।

**औद्धत्य ಔದ್ಧತ್ಯ** (न०) ಅವಿನಯ, ಉದ್ಧಟತನ, ಸೊಕ್ಕು, ಕೊಬ್ಬು. उद्धतस्य भावः "ष्यञ्" (५-१-१२४)। "असूयान्यगुणादीनामौद्धत्यादसहिष्णुता" सा० द० ३-१६६।

**औद्वाहिक ಔದ್ವಾಹಿಕ** (न०) ವಿವಾಹಕಾಲದಲ್ಲಿ ಕನ್ಯೆಗೆ ಕೊಡಲ್ಪಟ್ಟ ಉಡುಗೊರೆ. उद्वाहे उद्वाहकाले दीयते "ठक्" (५-१-९६)। "मैत्र्यमौद्वाहिकं चैव माधुपर्किकमेव च" मनु० ९-२०६।

**औधस ಔಧಸ** (वि०) ಕೆಚ್ಚಲಿನ ಸಂಬಂಧವಾದ. ऊधस इदम् "अण्" (४-३-१२०)।

**औधस्य ಔಧಸ್ಯ** (न०) ಕೆಚ್ಚಲಿನಲ್ಲಿರುವ ಹಾಲು. ऊधसि भवम् "यत्" (४-३-५५)। "औधस्यमिच्छामि तवोपभोक्तुं षष्ठांशमुर्व्या इव रक्षितायाः" रघु० २-६६।

**औन्नत्य ಔನ್ನತ್ಯ** (न०) 1. ಎತ್ತರ. 2. ಭೂಮಟ್ಟದಿಂದ ಅಥವಾ ಸಮುದ್ರಮಟ್ಟದಿಂದ ಇರುವ ಎತ್ತರ. उन्नतस्य भावः "ष्यञ्" (५-१-१२४)।

**औन्मुख्य ಔನ್ಮುಖ್ಯ** (न०) 1. ಎದುರು ನೋಡುವಿಕೆ, ನಿರೀಕ್ಷಿಸುವಿಕೆ, ಆಸೆಯಿಂದಿರುವಿಕೆ. 2. ತತ್ಪರನಾಗಿರುವಿಕೆ, ಆಸಕ್ತಿಯಿಂದಿರುವಿಕೆ. 3. ಮುಖವನ್ನು ಮೇಲಕ್ಕೆ ಎತ್ತಿಕೊಂಡಿರುವಿಕೆ, ಮೇಲುಮುಖವಾಗಿರುವಿಕೆ. 4. ಅನುಕೂಲವಾಗಿರುವಿಕೆ. उन्मुखस्य भावः "ष्यञ्" (५-१-१२४)।

**औपकर्णिक ಔಪಕರ್ಣಿಕ** (वि०) ಪ್ರಾಯಃ ಕಿವಿಯಮೇಲೆ ಅಥವಾ ಕಿವಿಯ ಹತ್ತಿರವಿರುವ. कर्णस्य समीपमुपकर्णम्। सामीप्येऽव्ययी०। उपकर्णं प्रायभवः "ठक्" (४-३-४०)। "यः स्वामी मम कान्तावानौपकर्णिकलोचनः" भट्टि० ४-२४।

**औपगव ಔಪಗವ** (पु०) 1. ಗೋಪಾಲಕನ ಪುತ್ರ, ಗೊಲ್ಲನ ಮಗ. उपगतो गौरस्य उपगुर्गोपः। तस्यापत्यम् "अण्" (४-१-९२)। स्त्रियां "ङीप्" (४-१-१५)। **–गवी –ಗವೀ.**

**औपगवि ಔಪಗವಿ** (पु०) 1. ಉದ್ಧವ, ಬೃಹಸ್ಪತಿಯ ಶಿಷ್ಯ. 2. ಬೃಹಸ್ಪತಿಯ ಮಗ. उपगतो गां गिरमित्युपगवो गीष्पतिः, तस्यापत्यम् "इञ्" (४-१-९५)। "क्षणमिव पुलिने यमस्वसुस्तां समुषित औपगविर्निशां ततोऽगात्" भाग० ३-४-२७।

**औपग्रस्तिक ಔಪಗ್ರಸ್ತಿಕ** (पु०) ಗ್ರಹಣಕ್ಕೆ ಸಿಕ್ಕಿದ ಸೂರ್ಯ ಅಥವಾ ಚಂದ್ರ, ರಾಹು ಕೇತುಗಳಿಂದ ಹಿಡಿಯಲ್ಪಟ್ಟಿದ್ದ ಸೂರ್ಯಚಂದ್ರರು. उपग्रस्तं ग्रासकालं भूतः "ठञ्" (५-१-८०)।

**औपचारिक ಔಪಚಾರಿಕ** (पु०) 1. ಉಪಚಾರ, ಸೇವೆ, ಶುಶ್ರೂಷೆ. उपचार स्वार्थे "ठक्" (५-४-३४)। (वि०) 2. ಲಾಕ್ಷಣಿಕ, ಮುಖ್ಯವಲ್ಲದ ಅರ್ಥದಲ್ಲಿ ಮುಖ್ಯಾರ್ಥದ ಸಾದೃಶ್ಯದಿಂದ ಪ್ರಯೋಗಿಸಲ್ಪಡುವ (ಪದ). उपचारः प्रयोजनमस्य "ठञ्" (५-१-१०९)। स्त्रियां "ङीप्" (४-१-१५)। **–चारिकी –ಚಾರಿಕೀ.**

**औपच्छन्दसिक ಔಪಚ್ಛಂದಸಿಕ** (न०) ವೈತಾಳೀಯ ಪ್ರಕರಣದಲ್ಲಿ ಮಾತ್ರಾವೃತ್ತದ ಒಂದು ಭೇದ. **ಇದರ ಲಕ್ಷಣಃ** ವಿಷಮ (1, 3 ನೆಯ) ಪಾದಗಳಲ್ಲಿ 6 ಮಾತ್ರೆಗಳೂ, ಸಮ (2, 4 ನೆಯ) ಪಾದಗಳಲ್ಲಿ 8 ಮಾತ್ರೆಗಳೂ ಎಲ್ಲಾ ಪಾದಗಳ ಕೊನೆಯಲ್ಲಿ ರ ಗಣ ಯ ಗಣಗಳೂ ಇರಬೇಕು. ಸಮಪಾದಗಳಲ್ಲಿ ಮಾತ್ರೆಗಳು ಕೇವಲ ಲಘುರೂಪವಾಗಿಲ್ಲದೆ ಮಧ್ಯೆ ಮಧ್ಯೆ ಗುರುವರ್ಣಗಳಿಂದ

ವ್ಯವಹಿತವಾಗಿರಬೇಕು. ಎಲ್ಲಾ ಪಾದಗಳಲ್ಲೂ ಸಮಸ್ಥಾನದ (2, 4, 6 ನೆಯ) ಮಾತ್ರೆಗಳು ಪರಾಶ್ರಿತವಾಗಿ (3, 5, 7 ನೆಯ ಮಾತ್ರೆಗಳೊಡನೆ ಸೇರಿ) ಇರಕೂಡದು. "षड्विषमेऽष्टौ समे कलास्ताश्च समे स्युर्नो निरन्तराः। न समाऽत्र पराश्रिता कला वैतालीयेऽन्ते रलौ गुरुः। पर्यन्त्यौ तथैव शेषमौपच्छन्दसिकं सुधीभिरुक्तम्" वृ० १०।

**औपजानुक ಔಪಜಾನುಕ** (ವಿ०) ಪ್ರಾಯಃ ಮಂಡಿಯಲ್ಲಿ ಅಥವಾ ಮಂಡಿಯ ಸಮೀಪದಲ್ಲಿರುವ. जानुनोः समीपमुपजानु। सामीप्येऽव्ययी०। उपजानु प्रायभवः "ठक्" (४-३-४०)। "सङ्ग्रामे सर्वकर्मीणौ पाणी यस्योपजानुकौ" भट्टि० ४-२५।

**औपदेशिक ಔಪದೇಶಿಕ** (ವಿ०) 1. ಉಪದೇಶದಿಂದ ಜೀವಿಸುವ, ಉಪಾಧ್ಯಾಯವೃತ್ತಿಯಿಂದ ಜೀವಿಸುವ. उपदेशेन जीवति — "ठक्" (४-४-१२)। 2. ಉಪದೇಶಕ್ಕೆ ಸಂಬಂಧಿಸಿದ, ಆದ್ಯೋಚ್ಚಾರಣಕ್ಕೆ ಸಂಬಂಧಪಟ್ಟ.

**औपधिक ಔಪಧಿಕ** (पु०) ವಂಚಕ, ಮೋಸಗಾರ, ಕಪಟಿ, ವೇಷಧಾರಿ, ಠಕ್ಕ. उपधिना जीवति "ठक्" (४-४-१२)।

**औपधेय ಔಪಧೇಯ** (न०) ಬಂಡಿಯ ಗಾಲಿ, ಚಕ್ರ. उपधीयते इत्युपधिः रथाङ्गम्, तदेव औपधेयम्—उपधि "ढञ्" (५-१-१३)।

**औपनायनिक ಔಪನಾಯನಿಕ** (वि०) ಉಪನಯನಕ್ಕೆ ಸಂಬಂಧಿಸಿದ, ಉಪನಯನಕ್ಕೆ ಅರ್ಹವಾದ, ಉಪನಯನವೇ ಪ್ರಯೋಜನವಾಗಿ ಉಳ್ಳ. उपनयनं प्रयोजनमस्य "ठक्" (५-१-१०९)। "एष प्रोक्तो द्विजातीनामौपनायनिको विधिः" मनु० २-६८।

**औपनिषत्क ಔಪನಿಷತ್ಕ** (वि०) ಉಪನಿಷತ್ತಿನ ಪ್ರವಚನದಿಂದ ಜೀವಿಸುವ. उपनिषदा जीवति "ठक्" (४-४-१२)।

**औपनिषद ಔಪನಿಷದ** (पु०) 1. ಪರಮಾತ್ಮ. 2. ಉಪನಿಷತ್ತಿನ ವ್ಯಾಖ್ಯಾನ. उपनिषदि भवः उपनिषदो व्याख्यानो वा "अण्" (४-३-७३)। (वि०) 3. ಉಪನಿಷತ್ತಿನ ಸಂಬಂಧವಾದ, ವೇದಾಂತಸಂಬಂಧವಾದ. उपनिषत् ब्रह्मविद्या तस्या इदम् "अण्" (४-३-१२०)। स्त्रियां "ङीप्" **औपनिषदी ಔಪನಿಷದೀ.** "एताश्चान्यांश्च सेवेत दीक्षा विप्रो वने वसन्। विविधाश्चौपनिषदीरात्मसंसिद्धये श्रुतीः" मनु० ६-२९। 4. ಉಪನಿಷತ್ತಿನ ಅನುಯಾಯಿ, ವೇದಾಂತಿ. उपनिषदमधीते वेत्ति वा "अण्" (४-२-५९)।

**औपनीविक ಔಪನೀವಿಕ** (वि०) 1. ಪ್ರಾಯಃ ನೀವಿಯ ಸಮೀಪದಲ್ಲಿರುವ, ನಡುಕಟ್ಟಿನ ಹತ್ತಿರವಿರುವ. उपनीवि नीवीसमीपे प्रायभवः "ठक्" (४-३-४०)। "बद्धो दुर्बलरक्षार्थमसिर्येनौपनीविकः" भट्टि० ४-२६। 2. ನೀವಿಯ ಸಮೀಪದಲ್ಲಿರುವ, ಹೆಂಗಸರ (ಸೊಂಟದ) ಸೀರೆಯಗಂಟಿನ ಹತ್ತಿರವಿರುವ. "औपनीविकमरुन्ध किल स्त्री वल्लभस्य करमात्मकराभ्याम्" माघ० १०-६०।

**औपपत्तिक ಔಪಪತ್ತಿಕ** (वि०) 1. ಯುಕ್ತಿಯಿಂದ ಕಲ್ಪಿಸಲ್ಪಟ್ಟ. उपपत्त्या निर्वृत्तम् "ठञ्" (५-१-७९)। 2. ಯುಕ್ತವಾದ, ಯೋಗ್ಯವಾದ. 3. ಸಿದ್ಧವಾದ. "औपपत्तिकमाहारं प्रयच्छस्वेति भारत" भा० अनु० ८७-२७।

**औपपत्य ಔಪಪತ್ಯ** (न०) ಉಪಪತಿಯೊಡನೆ ಸಂಭೋಗ. "जुगुप्सितं हि सर्वत्र औपपत्यं कुलस्त्रियाः" भाग० १०-२९-२६।

**औपम्य ಔಪಮ್ಯ** (न०) ಸಾದೃಶ್ಯ, ಹೋಲಿಕೆ. उपमा स्वार्थे "ष्यञ्" (वा० ७-३-३१)। "प्राणा यथात्मनोऽभीष्टा भूतानामपि ते तथा। आत्मौपम्येन भूतेषु दयां कुर्वन्ति साधवः" हितो० १-१२। "आत्मौपम्येन सर्वत्र समं पश्यति योऽर्जुन। सुखं वा यदि वा दुःखं स योगी परमो मतः" गीता ६-३२।

**औपयिक ಔಪಯಿಕ** (पुं०) 1. ಉಪಾಯ, ಯುಕ್ತಿ. उपाय स्वार्थे "ठक्" (५-४-३४)। "शिवमौपयिकं गरीयसीं फलनिष्पत्तिमदूषितायतिम्" किरा० २-३५। (वि०) 2. ಯೋಗ್ಯವಾದ, ಯುಕ್ತವಾದ. 3. ಉಪಾಯದಿಂದ ಬಂದ, ಪ್ರಯತ್ನದಿಂದ ಲಬ್ಧವಾದ. "वृत्तमौपयिकं मन्ये भीष्मेण सह भारत" भा० आदि० २२३-१२। स्त्रियां "ङीप्" (४-१-१५)। **औपयिकी ಔಪಯಿಕೀ.** "अचिरादुपकर्तुराचरेदथ वात्मौपयिकीमुपक्रियाम्" नैष० २-१४।

**औपयौगिक ಔಪಯೌಗಿಕ** (वि०) ಉಪಯೋಗಕ್ಕೆ ಬರುವ, ಉಪಯೋಗಕ್ಕೆ ಸಂಬಂಧಿಸಿದ, ಉಪಯೋಗವೇ ಪ್ರಯೋಜನವಾಗಿ ಉಳ್ಳ. उपयोगः प्रयोजनं कारणमस्य "ठक्" (५-१-१०९)। "अथातः स्नेहौपयोगिकं चिकित्सितं व्याख्यास्यामः" सुश्रुत०। स्त्रियां "ङीप्" (४-१-१५)। **–यौगिकी – ಯೌಗಿಕೀ.**

**औपरिष्ट ಔಪರಿಷ್ಟ** (वि०) ಮೇಲುಗಡೆ ಇರುವ, ಮೇಲುಭಾಗದಲ್ಲಿರುವ. उपरिष्टाद्भवः "अण्" (४-३-५३)।

**औपरोधिक ಔಪರೋಧಿಕ** (वि०) ತಡೆಗೆ ಸಂಬಂಧಿಸಿದ, ಪ್ರತಿಬಂಧಕಸಂಬಂಧವಾದ, ತಡೆಯೇ ಪ್ರಯೋಜನವಾಗಿ ಉಳ್ಳ. उपरोधः प्रयोजनमस्य "ठक्" (५-१-१०९)।

**औपल ಔಪಲ** (वि०) 1. ಶಿಲಾಮಯವಾದ, ಶಿಲೆಯಿಂದ ತಯಾರಿಸಲ್ಪಟ್ಟ. उपलस्य विकारः "अण्" (४-३-१३४)। "यथा प्लवेनौपलेन निमज्जत्युदके तरन्। तथा निमज्जतोऽधस्तादज्ञौ दातृप्रतीच्छकौ" मनु० ४-१९४। 2. ಶಿಲಾಸಂಬಂಧವಾದ. शिलाया इदम् "अण्" (४-३-१२०)। 3. ಕಲ್ಲುಗಳಿಂದ ಬಂದ ತೆರಿಗೆ, ಕಲ್ಲುಗಳ ಮಾರಾಟದಿಂದ ಬಂದ ಸುಂಕ. उपलादागतः "अण्" (४-३-७६)।

**औपवस्त ಔಪವಸ್ತ** (न०) ಉಪವಾಸ, ಊಟಮಾಡದಿರುವಿಕೆ. उप+वसु (स्तम्भे) भावे "क्तः" (३-३-११४)। स्वार्थे "अण्" (५-४-३८)। अनेकार्थत्वादभोजने वृत्तिः। "औपवस्तमेव कालान्तरे भोजनम्" आप० ध० २-१-५। "औपवस्तं तूपवासः" अम०।

**औपवस्त्र ಔಪವಸ್ತ್ರ** (न०) ಉಪವಾಸ. उपवसति—उप+वसु (स्तम्भे) "तृच्" (३-१-१३३)। उपवस्तुरिदं कर्म "अण्" (४-३-१२०)।

**औपवास ಔಪವಾಸ** (वि०) ಉಪವಾಸಕ್ಕೆ ಸಂಬಂಧಿಸಿದ, ಉಪವಾಸ ಕಾಲದಲ್ಲಿ ಕೊಡಲ್ಪಡುವ. उपवासे उपवासकाले दीयते – उपवास "अण्" (५-१-९७)।

**औपवासिक ಔಪವಾಸಿಕ** (वि०) 1. ಉಪವಾಸಕ್ಕೆ ಅರ್ಹವಾದ, ಉಪವಾಸಕ್ಕೆ ಯೋಗ್ಯವಾದ. उपवासे साधुः "ठञ्" (४-४-१०३)। 2. ಉಪವಾಸಕ್ಕೆ ಶಕ್ತನಾದ, ಉಪವಾಸ ಮಾಡುವುದರಲ್ಲಿ ಸಮರ್ಥನಾದ. उपवासाय प्रभवति "ठञ्" (५-१-१०१)।

**औपवास्य ಔಪವಾಸ್ಯ** (न०) ಉಪವಾಸ. उपवास स्वार्थे "ष्यञ्" (वा० ५-१-१२४)।

**औपवाह्य ಔಪವಾಹ್ಯ** (पु०) ರಾಜನ ವಾಹನ (ಆನೆ, ಕುದುರೆ, ರಥ ಮೊದಲಾದುದು). उपवाह्य स्वार्थे "अण्" (५-४-३८)। "औपवाह्यमसौ मत्कमारुरुक्षति साम्प्रतम्" याद० १६-४२।

**औपवेशिक ಔಪವೇಶಿಕ** (वि०) ಕುಳಿತುಕೊಳ್ಳುವುದರಿಂದ ಜೀವನ ನಡೆಸುವವನು, ಒಬ್ಬನಿಂದ ನಿಯುಕ್ತನಾಗಿ ಅವನಿಗಾಗಿ ಕುಳಿತು ತನ್ನ ಸೇವೆಯನ್ನು ಸಲ್ಲಿಸುವುದರಿಂದ ಜೀವಿಸುವವನು. उपवेशेन जीवति "ठक्" (४-४-१२)।

**औपश्लेषिक ಔಪಶ್ಲೇಷಿಕ** (वि०) 1. ಏಕದೇಶದಲ್ಲಿ ಸಂಬಂಧಹೊಂದಿರುವ, ಒಂದು ಭಾಗದಲ್ಲಿ ಮಾತ್ರ ಸಂಬಂಧ ಹೊಂದಿರುವ. उपश्लेषेण निर्वृत्तम् "ठक्" (४-२-८०)। कटे आस्ते। 2. ಸಮೀಪ ಸಂಬಂಧಹೊಂದಿರುವ. गङ्गायां घोषः। ಇದೊಂದು ಆಧಾರದ ಭೇದ. ["आधार" ಪದದಲ್ಲಿ ನೋಡಿ.] स्त्रियां "ङीप्" **औपश्लेषिकी ಔಪಶ್ಲೇಷಿಕೀ.**

**औपसर्गिक ಔಪಸರ್ಗಿಕ** (पु०) 1. ಸನ್ನಿಪಾತವ್ಯಾಧಿ. "कफोऽनुलोमवातेन यदि पित्तानुगो भवेत्। स्वेदशैत्यादिभिर्जुष्टस्तदा भवति मानवः। प्रतिलोमः पुनस्तेन स्वास्थ्यमायाति तत्क्षणात्। औपसर्गिक एवान्यः सन्निपात उदाहृतः"। (वि०) 2. ಉಪಸರ್ಗಸಂಬಂಧವಾದ, ಪೂರ್ವೋತ್ಪನ್ನವ್ಯಾಧಿಯನ್ನು ಅನುಸರಿಸಿ ಬರುವ ವ್ಯಾಧಿ ಸಂಬಂಧವಾದ, ಉಪದ್ರವಸಂಬಂಧವಾದ. ಪದೇ ಪದೇ ಪರಸ್ಪರ ಅಂಗಸ್ಪರ್ಶ, ಒಬ್ಬನ ಉಸಿರನ್ನು ಇನ್ನೊಬ್ಬನು ಎಳೆದುಕೊಳ್ಳುವುದು, ಒಟ್ಟಿಗೆ ಕುಳಿತು ಊಟಮಾಡುವುದು, ಒಂದೇ ಹಾಸಿಗೆಯಲ್ಲಿ ಮಲಗುವುದು, ಒಂದೇ ಆಸನದಲ್ಲಿ ಕೂಡುವುದು, ಒಬ್ಬ ಧರಿಸಿದ ಬಟ್ಟೆಯನ್ನು ಉಡುವುದು, ಇವೇ ಮುಂತಾದುವುಗಳಿಂದ ಕುಷ್ಠ, ಜ್ವರ, ಶೋಫ (ಊತ) ಮುಂತಾದ ಔಪಸರ್ಗಿಕವ್ಯಾಧಿ (ಅಂಟುಜಾಡ್ಯ) ಗಳು ಬರುವುವು. प्रसङ्गाद्गात्रसंस्पर्शात् निःश्वासात् सहभोजनात्। सहशय्यासनाच्चापि वस्त्रमाल्यानुलेपनात्। कुष्ठं ज्वरश्च शोषश्च नेत्राभिष्यन्द एव च। औपसर्गिक रोगाश्च संक्रामन्ति नरान्नरम्" सुश्रुत० निदान० ५-३३, ३४। 3. प्र परा ಮುಂತಾದ ಉಪಸರ್ಗಗಳಿಗೆ ಸಂಬಂಧಿಸಿದ.

**औपस्थान ಔಪಸ್ಥಾನ** (वि०) ಉಪಾಸಕ, ಉಪಾಸನೆಯ ಸ್ವಭಾವದವನು. उपस्थानं शीलमस्य "णः" (४-४-६२)।

**औपस्थानिक ಔಪಸ್ಥಾನಿಕ** (वि०) ಸೇವೆಯಿಂದ ಅಥವಾ ಪೂಜೆಯಿಂದ ಜೀವಿಸುವವನು. उपस्थानेन जीवति "ठक्" (४-४-१२)। स्त्रियां "ङीप्" (४-१-१५)। **–स्थानिकी –ಸ್ಥಾನಿಕೀ.**

**औपस्थिक ಔಪಸ್ಥಿಕ** (वि०) ವ್ಯಭಿಚಾರದಿಂದ ಜೀವಿಸುವ, ಲೈಂಗಿಕವ್ಯಾಪಾರದಿಂದ ಜೀವನ ಮಾಡುವ. उपस्थेन उपस्थव्यापारेण जीवति "ठक्" (४-४-१२)।

**औपस्थ्य ಔಪಸ್ಥ್ಯ** (न०) ರತಿಸುಖ, ಸ್ತ್ರೀಸಂಭೋಗದ ಸೌಖ್ಯ. उपस्थस्य भावः "ष्यञ्" (५-१-१२४)। "औपस्थ्यजैह्वचकार्पण्यात् गृहपालायते जनः" भाग० ७-१५-१८।

**औपहस्तिक ಔಪಹಸ್ತಿಕ** (वि०) ಪ್ರತಿಗ್ರಹದಿಂದ ಜೀವಿಸುವ. उपहस्तेन जीवति "ठक्" (४-४-१२)।

**औपहारिक ಔಪಹಾರಿಕ** (वि०) ಉಪಹಾರಕ್ಕೆ ಯೋಗ್ಯವಾದ ವಸ್ತು. उपहारे साधु "ठक्" (४-४-१०२)।

**औपाकरण ಔಪಾಕರಣ** (वि०) 1. ಉಪಾಕರ್ಮಸಂಬಂಧವಾದ, ಸಂಸ್ಕಾರಪೂರ್ವಕ ವೇದಾಧ್ಯಯನದ ಪ್ರಾರಂಭಕ್ಕೆ ಸಂಬಂಧಿಸಿದ. उपाकरणस्येदम् "अण्" (४-३-१२०)। (न०) 2. ಉಪಾಕರ್ಮ. उपाकरणमेव स्वार्थे "अण्" (५-४-३८)। "वैरमणो गुरुष्वष्टाक्य औपाकरण इति श्यहाः" आप० ध० १-३-१०-२।

**औपाधिक ಔಪಾಧಿಕ** (वि०) 1. ವಿಶೇಷಗುಣನಿಮಿತ್ತವಾದ, ವಿಶೇಷಗುಣದಿಂದುಂಟಾದ. उपाधिना निर्वृत्तः "ठक्" (४-२-८०)।

**औपाधिकी ಔಪಾಧಿಕೀ** (स्त्री०) ಅನುಗತವಾದ ಉಪಾಧಿಯಿಂದ ಕೂಡಿದ ಸಂಕೇತವುಳ್ಳ ಸಂಜ್ಞೆ. ವಾರ್ತಾಹಾರಕತ್ವ ರೂಪವಾದ ಅನುಗತೋಪಾಧಿಯಿಂದ ದೂತನಲ್ಲಿ ವಾರ್ತಾಹಾರಕ ಸಂಜ್ಞೆಯು ಔಪಾಧಿಕ.

**औपाध्यायक ಔಪಾಧ್ಯಾಯಕ** (वि०) ಉಪಾಧ್ಯಾಯನಿಂದ ಬಂದ. उपाध्यायादागतः "वुञ्" (४-३-७७)।

**औपानह्य ಔಪಾನಹ್ಯ** (वि०) ಪಾದರಕ್ಷೆಗೆ ಬೇಕಾದ ಸಲಕರಣೆ. उपानहे अयम् "ञ्यः" (५-१-१४)। औपानह्यो मुञ्जः। औपानह्यं चर्म।

**औपासन ಔಪಾಸನ** (पु०) 1. ಗೃಹಸ್ಥನು ಪ್ರಾತಃಕಾಲ ಮತ್ತು ಸಾಯಂಕಾಲಗಳಲ್ಲಿ ಹೋಮಕ್ಕಾಗಿ ಉಪಯೋಗಿಸುವ ಅಗ್ನಿ. उपास्यते प्रतिदिनमित्युपासनोऽग्निः स्वार्थे "अण्" (५-४-३८)। (न०) 2. ಗೃಹ್ಯಾಗ್ನಿಯಲ್ಲಿ ಪ್ರಾತಃಕಾಲ ಮತ್ತು ಸಾಯಂಕಾಲಗಳಲ್ಲಿ ಮಾಡುವ ಹೋಮ, ಅಗ್ನಿಕಾರ್ಯ. 3. ಹವಿಸ್ಸು, ದೇವತೆಗಳಿಗೆ ಅರ್ಪಿಸುವ ಹೋಮದ್ರವ್ಯ. (वि०) 4. ಔಪಾಸನಾಗ್ನಿಗೆ ಸಂಬಂಧಿಸಿದ. 5. ಅಗ್ನಿಕಾರ್ಯಕ್ಕೆ ಸಂಬಂಧಿಸಿದ. "वैतानौपासनाः कार्याः क्रियाश्च श्रुतिचोदनात्" याज्ञ० ३-१७।

**औम ಔಮ औमक ಔಮಕ** (वि०) 1. ಅಗಸೆಸೊಪ್ಪಿನಿಂದ ತಯಾರಿಸಲ್ಪಟ್ಟ. 2. ಅಗಸೆಗಿಡದ ಸಂಬಂಧವಾದ. उमाया विकारोऽवयवो वा — उमा वा "वुञ्" (४-३-१५८)। पक्षे "अण्" (४-३-१३४)। **औमम् ಔಮಮ್.**

**औमिक ಔಮಿಕ** (वि०) ಅಗಸೆಯ ಪ್ರಾಪ್ತಿಯನ್ನು ಸೂಚಿಸುವ ಸಂಯೋಗ ಅಥವಾ ಉತ್ಪಾತ. उमाया निमित्तं संयोगः उत्पातो वा "ठक्" (५-१-३८)।

**औमीन ಔಮೀನ** (न०) ಅಗಸೆಗಿಡವನ್ನು ಬೆಳೆಯಲು ಯೋಗ್ಯವಾದ ಭೂಮಿ. उमानां भवनं क्षेत्रम् वा "खञ्" (५-२-१)। पक्षे "यत्" (५-२-४)। **उम्यम् ಉಮ್ಯಮ್.**

**औरग ಔರಗ** (न०) 1. ಸರ್ಪದೇವತಾಕವಾದ ಆಶ್ಲೇಷಾ ನಕ್ಷತ್ರ. उरगो देवताऽस्य "अण्" (४-२-२४)। (वि०) 2. ಸರ್ಪಸಂಬಂಧವಾದ. उरगस्येदम् "अण्" (४-३-१२०)।

**औरभ्र ಔರಭ್ರ** (न०) 1. ಕುರಿಯ ತುಪ್ಪಟದಿಂದ ತಯಾರಾದ ಕಂಬಳಿ. 2. ಕುರಿಯ ಮಾಂಸ. (वि०) 3. ಕುರಿಯ ಸಂಬಂಧವಾದ. उरभ्रस्येदम् "अण्" (४-३-१२०)। "औरभ्रेणाथ चतुरः शाकुनेनाथ पञ्च वै" मनु० ३-२६८।

**औरभ्रक ಔರಭ್ರಕ** (वि०) ಕುರಿಗಳ ಗುಂಪು, ಕುರಿಗಳ ಮಂದೆ. उरभ्राणां समूहः "वुञ्" (४-२-३९)।

**औरभ्रिक ಔರಭ್ರಿಕ** (वि०) ಕುರಿಯನ್ನು ಮಾರಿ ಜೀವಿಸುವವನು, ಕುರಿಯನ್ನು ಸಾಕಿ ಮಾರುವುದರಿಂದ ಜೀವನ ಮಾಡುವವನು. उरभ्रः पण्यमस्य "ठञ्" (४-४-५१)। "औरभ्रिको माहिषिकः परपूर्वापतिस्तथा" मनु० ३-१६६।

**औरस ಔರಸ** (पु०) 1. ಹೊಟ್ಟೆಯಲ್ಲಿ ಹುಟ್ಟಿದ ಮಗ, ಮದುವೆಯಾದ ಸವರ್ಣಹೆಂಗಸಿನಲ್ಲಿ ಹುಟ್ಟಿದ ಮಗ. उरसा निर्मितः "अण्" (४-४-९४)। "स्वक्षेत्रे संस्कृतायां तु स्वयमुत्पादयेद्धि यम्। तमौरसं विजानीयात्पुत्रं प्रथमकल्पितम्" मनु० ९-१६६। ಪುತ್ರರು (1) औरसः, (2) क्षेत्रजः, (3) दत्तः, (4) कृत्रिमः, (5) गूढोत्पन्नः, (6) अपविद्धः, (7) कानीनः, (8) सहोढः, (9) क्रीतः, (10) पौनर्भवः, (11) स्वयंदत्तः ಮತ್ತು (12) शौद्रः ಎಂದು ಹನ್ನೆರಡು ವಿಧ. ಮೊದಲನೆಯ ಆರು ಮಂದಿ ಆಸ್ತಿಯಲ್ಲಿ ಭಾಗ (ಪಾಲು) ಹೊಂದಲು ಅರ್ಹರಾದ ಬಾಂಧವರು. ಉಳಿದ ಆರು ಮಂದಿ ಪುತ್ರರು ಭಾಗ ಹೊಂದಲು ಅನರ್ಹರಾದ ಬಾಂಧವರು. "औरसः क्षेत्रजश्चैव दत्तः कृत्रिम एव च। गूढोत्पन्नोऽपविद्धश्च दायादा बान्धवाश्च षट्। कानीनश्च सहोढश्च क्रीतः पौनर्भवस्तथा। स्वयंदत्तश्च शौद्रश्च षडदायादबान्धवाः" मनु० ९-१५९, ६०। "इत्थं नागस्त्रिभुवनगुरोरौरसं मैथिलेयं लब्ध्वा बन्धुं तमपि च कुशः पञ्चमं तक्षकस्य" रघु० १६-८८। ಅಸವರ್ಣ ಹೆಂಗಸಿನಲ್ಲಿ ಜನಿಸಿದವನಲ್ಲಿಯೂ ಈ ಪ್ರಯೋಗವುಂಟು. "अजानन्नर्जुनश्चापि निहतं पुत्रमौरसम्"

भा० भीष्म० ९०-८५। स्त्रियां "ङीप्" (४-१-१५)। **औरसी ಔರಸೀ.** (वि०) 2. ತನ್ನ ಎದೆಯಲ್ಲಿ ಹುಟ್ಟಿದ, ಎದೆಯಿಂದ ಉತ್ಪನ್ನವಾದ.

**औरसिक ಔರಸಿಕ** (वि०) ವಕ್ಷಸ್ಸಿನಂತಿರುವ, ಎದೆಯ ಹಾಗಿರುವ. उर इव "ठक्" (५-३-१०८)।

**औरस्य ಔರಸ್ಯ** (वि०) ವಕ್ಷಸ್ಸಿಗೆ ಹಿತವಾದ, ಎದೆಗೆ ಹಿತ ವಾದ. उरसे हितम् "यत्" (५-१-६)। स्वार्थे "अण्"।

**और्ण ಔರ್ಣ** (वि०) ಕುರಿಯ ತುಪ್ಪಟದಿಂದ ತಯಾರಾದ ಕಂಬಳಿ ಮೊದಲಾದುದು. ऊर्णाया विकारः "अण्" (४-३-१३४)। वा "वुञ्" (४-३-१५८)। **और्णकम् ಔರ್ಣಕವ್.**

**और्णिक ಔರ್ಣಿಕ** (वि०) ಉಣ್ಣೆಯ ಪ್ರಾಪ್ತಿಯನ್ನು ಸೂಚಿ ಸುವ ಸಂಯೋಗ ಅಥವಾ ಉತ್ಪಾತ. ऊर्णाया निमित्तं संयोगः उत्पातो वा "ठक्" (५-१-३८)।

**और्ध्वकालिक ಔರ್ಧ್ವಕಾಲಿಕ** (वि०) ಮುಂದಿನ ಕಾಲದ, ಮುಂದಿನ ಕಾಲದ ಸಂಬಂಧವಾದ.

**और्ध्वदेह ಔರ್ಧ್ವದೇಹ** (वि०) ಊರ್ಧ್ವದೇಹಸಂಬಂಧ ವಾದ. ऊर्ध्वदेहस्येदम् "अण्" (४-३-१२०)।

**और्ध्वदेहिक ಔರ್ಧ್ವದೈಹಿಕ** (वि०) ಊರ್ಧ್ವದೇಹವನ್ನು ಹೊಂದಿಸಲು ನಡೆಸುವ ಶಾಸ್ತ್ರೋಕ್ತವಾದ ಕ್ರಿಯೆ, ಅಪರ ಕ್ರಿಯೆ. ऊर्ध्वदेहः प्रयोजनमस्य "ठक्" (५-१-१०९)।

**और्व ಔರ್ವ** (पु०) 1. ಭೃಗುವಂಶದ ಒಬ್ಬ ಋಷಿ. ऊरौ जातः "अण्" (४-३-२५)। ಚ್ಯವನಮಹರ್ಷಿಯ ಪತ್ನಿಯ ತೊಡೆಯಿಂದ (ಹೊರಬಂದು) ಹುಟ್ಟಿದುದರಿಂದ ಈ ಹೆಸರಾಯಿತು. "अनेनैव हि विख्यातो नाम्ना लोकेषु सत्तमः। स और्व इति विप्रर्षिरूरुं भित्त्वा व्यजायत" भा० आदि० १९५-८। [ವಿವರಕ್ಕೆ "ऊरुज" ಪದದಲ್ಲಿ ನೋಡಿ.] 2. ಬಡಬಾಗ್ನಿ. [ಔರ್ವನು ತನ್ನ ವಂಶದವ ರನ್ನು ಹಿಂಸಿಸಿದ ರಾಜರನ್ನು ನಾಶಪಡಿಸಲು ಕುಪಿತನಾಗಿ ಹೊರಟಾಗ ಪಿತೃದೇವತೆಗಳ ಸೂಚನೆಯಂತೆ ತನ್ನ ಕೋಪ ವನ್ನು ಸಮುದ್ರದಲ್ಲಿ ಬಿಡಲಾಗಿ ಅದು ಕುದುರೆಯ ರೂಪ ದಿಂದ ಸಮುದ್ರವನ್ನು ಪ್ರವೇಶಿಸಿ ಬಡಬಾಗ್ನಿಯೆಂದು ಪ್ರಸಿದ್ಧಿ ಪಡೆಯಿತು.] भा० आदि० १९६। (वि०) 3. ಭೂಮಿಯ ಸಂಬಂಧವಾದ. 4. ತೊಡೆಯಿಂದ ಉತ್ಪನ್ನ ವಾದ.

**और्वर ಔರ್ವರ** (वि०) ಭೂಮಿಯ ಸಂಬಂಧವಾದ. उर्वराया अयम् "अण्" (४-३-१२०)। "किमपैति रजोभिरौर्वरैरवकीर्णस्य मणेर्महार्घता" माघ० १६-२७।

**और्वशेय ಔರ್ವಶೇಯ** (पु०) 1. ಊರ್ವಶಿಯ ಮಗ. 2. ಅಗಸ್ತ್ಯಮಹರ್ಷಿ. ऊर्वश्या अपत्यम् — "ढक्" (४-१-१२०)। [ಊರ್ವಶಿಯನ್ನು ಕಂಡು ಮೋಹಿಸಿದ ಮಿತ್ರಾವರುಣರ ವೀರ್ಯದಿಂದ ಅಗಸ್ತ್ಯರು ಹುಟ್ಟಿದುದ ರಿಂದ ಈ ಹೆಸರು.]

**औलूक ಔಲೂಕ** (न०) ಉಲೂಕಗಳ ಸಮೂಹ, ಗೂಬೆಗಳ ಗುಂಪು. उलूकानां समूहः "अञ्" (४-२-४५)।

**औलूक्य ಔಲೂಕ್ಯ** (पु०) 1. ಉಲೂಕನ ವಂಶದಲ್ಲಿ ಹುಟ್ಟಿದ ವನು, ಕಣಾದ ಮಹರ್ಷಿ. उलूकस्य गोत्रापत्यं पुमान् "यञ्" (४-१-१०५)। 2. ವೈಶೇಷಿಕದರ್ಶನದ ಅನುಯಾಯಿ.

**औलूक्यदर्शन ಔಲೂಕ್ಯದರ್ಶನ** (न०) ವೈಶೇಷಿಕ ದರ್ಶನ.

**औलूखल ಔಲೂಖಲ** (वि०) ಒರಳಿನಿಂದ ಬಂದ, ಒರಳಿ ನಲ್ಲಿ ಅರೆಯಲ್ಪಟ್ಟ ಅಥವಾ ಪುಡಿಮಾಡಲ್ಪಟ್ಟ.

**औशनस ಔಶನಸ** (पु०) 1. ಉಶನಸ್ಸಿನ ಮಗ, ಶುಕ್ರಾ ಚಾರ್ಯರ ಮಗ. 2. ಉಶನಸ್ಸಿನ ವಂಶದಲ್ಲಿ ಹುಟ್ಟಿ ದವನು. (न०) 3. ಉಶನಸ್ಸಿನಿಂದ ರಚಿತವಾದ ಒಂದು ಉಪಪುರಾಣ. 4. ಉಶನಸ್ಸಿನಿಂದ ರಚಿತವಾದ ಒಂದು ಸ್ಮೃತಿ. (वि०) 5. ಉಶನಸ್ಸಿಗೆ ಸಂಬಂಧಿಸಿದ.

**औशीनर ಔಶೀನರ** (पु०) ಉಶೀನರನಿಗೆ ಯಯಾತಿಯ ಮಗಳಾದ ಮಾಧವಿಯಲ್ಲಿ ಜನಿಸಿದ ಒಬ್ಬ ಮಗ, ಶಿಬಿ ಚಕ್ರವರ್ತಿ. उशीनरस्यापत्यम् "अञ्" (४-१-८६)। (स्त्री०) **–री –ರೀ.** ಪುರೂರವಸ್ಸಿನ ಪತ್ನಿ. विक्र० २।

**औशीर ಔಶೀರ** (न०) 1. ಶಯನ, ಹಾಸಿಗೆ. 2. ಆಸನ. 3. ಚಾಮರದಂಡ, ಚಾಮರದ ಹಿಡಿ. 4. ಚಾಮರ. 5. ದಂಡ, ಕೋಲು. (वि०) 6. ಲಾಮಂಚದ ಬೇರಿ ನಿಂದ ತಯಾರಾದ, ಲಾಮಂಚದ ಬೇರಿನ ಸಂಬಂಧವಾದ. उशीर "अण्" (४-३-१२०)। "औशीरं शयनासन-चामरदण्डेऽप्युशीरजे प्रोक्तम्" मेदि०। "उशीरजे चामरे च दण्डे च" हेम०।

**औषध ಔಷಧ** (न०) 1. ಔಷಧ, ಮೂಲಿಕೆಗಳು ಶುಂಠಿ ಮೆಣಸು ಮೊದಲಾದ ವಸ್ತುಗಳಿಂದ ತಯಾರಿಸಲ್ಪಟ್ಟ ಮದ್ದು. ओषधि "अण्" (५-४-३७)। 2. ಔಷಧ ದ್ರವ್ಯ, ಔಷಧಕ್ಕಾಗಿ ಉಪಯೋಗಿಸುವ ಮೂಲಿಕೆಗಳು. ओषधि स्वार्थे "अण्" (५-४-३७)। "द्वेष्योऽपि संमतः शिष्टः तस्यार्तस्य यथौषधम्" रघु० १-२८।

**औषधि(धी) ಔಷಧಿ(ಧೀ)** (स्त्री०) "ओषधि" ಪದದ ಅರ್ಥ. "नयशालिनि श्रिय इवाधिपतौ विरमन्ति न ज्वलितुमौषधयः" किरा० ५-२४।

**औषधीय** **ಔಷಧೀಯು** (वि०) ಔಷಧಿಸಂಬಂಧವಾದ ಮೂಲಿಕೆ ಮೊದಲಾದುದು. औषध "छः" (४-२-११४)।

**औषर** **ಔಷರ** (न०) ಚೌಳು ಭೂಮಿಯ ಮಣ್ಣಿನಿಂದ ತೆಗೆದ ಉಪ್ಪು. ऊषरे भवम् "अण्" (४-३-५३)।

**औषस** **ಔಷಸ** (वि०) 1. ಉಷಃಕಾಲದಲ್ಲಿ ಉಂಟಾದ, ಉಷಃಕಾಲದಲ್ಲಿರುವ. उषसि भवः "अण्" (४-३-१६)। 2. ಉಷಃಕಾಲಸಂಬಂಧವಾದ. उषस इदम् "अण्" (४-३-१२०)। "औषसातपभयादपलीनं वानरच्छविविरामपटीयः" किरा० ९-११। स्त्रियां "ङीप्" (४-१-१५)। –सी–ಸೀ.

**औषसिक** **ಔಷಸಿಕ** (वि०) 1. ಪ್ರಾತಃಕಾಲದಲ್ಲಿ ಸಂಚರಿಸುವ, ಬೆಳಿಗ್ಗೆ ಓಡಾಡುವ. उषसा चरति—उषस् "ठक्" (४-४-८)। 2. ಪ್ರಾತಃಕಾಲದಲ್ಲಿ ಹುಟ್ಟಿದ, ಬೆಳಿಗ್ಗೆ ಉಂಟಾದ. उषसि भवः "ठञ्" (४-३-११)। स्त्रियां "ङीप्" (४-१-१५)। औषसिकी ಔಷಸಿಕೀ.

**औष्ट्र** **ಔಷ್ಟ್ರ** (वि०) ಉಷ್ಟ್ರಸಂಬಂಧವಾದ, ಒಂಟೆಯಿಂದ ಉಂಟಾದ, ಒಂಟೆಯಿಂದ ಉತ್ಪನ್ನವಾದ (ಹಾಲು, ಚರ್ಮ ಮುಂತಾದುದು) उष्ट्रस्येदम् "अण्" (४-३-१२०)। "अनिर्दशाया गोःक्षीरमौष्ट्रमेकशफं तथा" मनु० ५-८।

**औष्ट्रक** **ಔಷ್ಟ್ರಕ** (न०) 1. ಒಂಟೆಗಳ ಸಮೂಹ, ಒಂಟೆಗಳ ಗುಂಪು. उष्ट्राणां समूहः "वुञ्" (४-२-३९)। (वि०) 2. ಒಂಟೆಯಿಂದ ಉಂಟಾದ, ಒಂಟೆಯಿಂದ ಉತ್ಪನ್ನವಾದ. उष्ट्रस्य विकारोऽवयवो वा "वुञ्" (४-३-१५७)।

**औष्ट्ररथ** **ಔಷ್ಟ್ರರಥ** (वि०) ಉಷ್ಟ್ರರಥಸಂಬಂಧವಾದ, ಒಂಟೆಯಿಂದ ಎಳೆಯಲ್ಪಡುವ ರಥದ ಸಂಬಂಧವಾದ. उष्ट्ररथस्येदम् "अञ्" (४-३-१२२)।

**औष्ट्रायण** **ಔಷ್ಟ್ರಾಯಣ** (पु०) ಉಷ್ಟ್ರಶಿಶು, ಒಂಟೆಯ ಮರಿ. उष्ट्रस्यापत्यम् "इञ्" "फक्" (४-१-१०१)।

**औष्ट्रायणक** **ಔಷ್ಟ್ರಾಯಣಕ** (वि०) 1. ಒಂಟೆಮರಿಗೆ ಸಂಬಂಧಿಸಿದ. 2. ಒಂಟೆಮರಿಗೆ ಸಮೀಪದ ದೇಶ. 3. ಒಂಟೆಮರಿಯು ವಾಸಮಾಡುವ ದೇಶ. 4. ಒಂಟೆಮರಿಯಿಂದ ಉಂಟಾದ. उष्ट्रायण चतुरर्थ्यां "वुञ्" (४-२-८०)।

**औष्ट्रिक** **ಔಷ್ಟ್ರಿಕ** (वि०) ಒಂಟೆಯಲ್ಲಿ ಉಂಟಾದ, ಒಂಟೆಯಲ್ಲಿರುವ, ಒಂಟೆಯಿಂದ ಉತ್ಪನ್ನವಾದ. उष्ट्रेण निर्वृत्तम् "ठक्" (४-२-८०)। "विपाको कटु सक्षारं गुरु भेद्यौष्ट्रिकं वधि" सुश्रुत० सूत्र० ४५-७०।

**औष्ठ्य** **ಔಷ್ಠ್ಯ** (वि०) ಓಷ್ಠಸ್ಥಾನದಲ್ಲಿ ಹುಟ್ಟುವ ವರ್ಣ, ತುಟಿಯಲ್ಲಿ ಹುಟ್ಟುವ ವರ್ಣ, उ, ऊ, प्, फ्, ब्, भ्, म्, ಈ ಅಕ್ಷರಗಳು. ओष्ठे भवः "यत्" (४-३-५५)। स्वार्थे "अण्" (५-४-३८)। "तालव्या ओष्ठजावुपू" पा० शि०।

**औष्ण्य** **ಔಷ್ಣ್ಯ** (न०) ಉಷ್ಣತೆ, ಕಾವು, ಬಿಸಿ, ಸಂತಾಪ. उष्णस्य भावः "ष्यञ्" (५-१-१२४)।

**औष्म्य** **ಔಷ್ಮ್ಯ** (न०) ಉಷ್ಣತೆ, ಕಾವು, ಬಿಸಿ, ಸಂತಾಪ. उष्मणो भावः "ष्यञ्" (५-१-१२४)। "पूर्वराजवियोगौष्म्यं कृत्स्नस्य जगतो हृतम्" रघु० १७-३१।

इति "औ" कारादिपदार्थनिरूपणम्।

# क

**क ಕ** ಇದು ವ್ಯಂಜನಾಕ್ಷರಗಳಲ್ಲಿ ಮೊದಲನೆಯ ಮತ್ತು ಆಭ್ಯಂತರಸ್ಪೃಷ್ಟಪ್ರಯತ್ನದಿಂದ ಕಂಠದಲ್ಲಿ ಹುಟ್ಟುವ ಅಕ್ಷರ. "कादयो मावसाना: स्पर्शा:"। "स्पृष्टं प्रयतनं स्पर्शानाम्" सिं० कौ०। ವಿವಾರ, ಶ್ವಾಸ, ಅಘೋಷ ಮತ್ತು ಅಲ್ಪಪ್ರಾಣ ಇವು ಇದರ ಬಾಹ್ಯಪ್ರಯತ್ನಗಳು.

**क ಕ** (ಪುಂ) 1. ಬ್ರಹ್ಮ. 2. ವಿಷ್ಣು. 3. ಮಹೇಶ್ವರ. 4. ಮನ್ಮಥ. 5. ಅಗ್ನಿ. 6. ವಾಯು. 7. ಯಮ. 8. ಸೂರ್ಯ. 9. ಆತ್ಮ. 10. ದಕ್ಷಬ್ರಹ್ಮ. 11. ಮಯೂರ, ನವಿಲು. 12. ಚಿತ್ತ, ಮನಸ್ಸು. 13. ಬುದ್ಧಿ. 14. ಹೊಡೆತದ ಶಬ್ದ, ಏಟಿನ ಸದ್ದು. 15. ಕಡಲು, ಸಮುದ್ರ. 16. ಬಿಳಿಬಣ್ಣ. 17. ವಸು. 18. ದ್ಯುತಿ, ಪ್ರಕಾಶ. (ನಂ) 19. ಶಿರಸ್ಸು, ತಲೆ. 20. ನೀರು, ಜಲ. 21. ಸುಖ. ಈ ಕೊನೆಯ ಮೂರು ಅರ್ಥಗಳಲ್ಲಿ ಅವ್ಯಯವೂ ಉಂಟು. क (शब्दे) "ड:" (३-२-१०१)। "को ब्रह्मात्मानिलाकाग्निचित्तथीयमकेकिषु। विष्णावाहतशब्देऽब्धौ सितवर्णे वसौ द्युतौ। कं शिरोऽम्बुसुखे क्लीबं तत्रैव च कमव्ययम्" नानार्थर०। "मारुते वेधसि बध्ने पुंसि 'क:' कं शिरोऽम्बुनो:" अम०। 22. ಒಂದು ತದ್ಧಿತಪ್ರತ್ಯಯ. पुत्रक:, वृक्षक: ಇತ್ಯಾದಿ.

**कंस ಕಂಸ** (ಪುನಂ) 1. ಪಾನಪಾತ್ರೆ, ಕುಡಿಯುವ ಪಾತ್ರೆ, ಲೋಟ, ಬಟ್ಟಲು ಮುಂತಾದುವು. कम्यते—कमु (कान्तौ) "स:" (उ० ३-६२)। "कंसोऽस्त्री पानभाजनम्" अम०। 2. ಕಾಂಸ್ಯಲೋಹ, ಕಂಚು. 3. "ಆಢಕ" ವೆಂಬ ಒಂದು ಅಳತೆ, ಒಂದು ಕೊಳಗ. (ಪುಂ) 4. ಉಗ್ರಸೇನರಾಜನ ಮಗ ಕಂಸ, ದೇವಕಿಯ ದೊಡ್ಡಪ್ಪನ ಮಗ. [ಇವನು ಕಾಲನೇಮಿಯ ಅಂಶದಿಂದ ಹುಟ್ಟಿದವನು. ಜರಾಸಂಧನ ಪುತ್ರಿಯರಾದ ಅಸ್ತಿ ಮತ್ತು ಪ್ರಾಸ್ತಿ ಎಂಬಿಬ್ಬರನ್ನು ಮದುವೆಯಾಗಿದ್ದನು. ಉಗ್ರಸೇನನ ಪತ್ನಿಯು ರಜಸ್ವಲೆಯಾಗಿದ್ದಾಗ ಒಂದು ದಿನ ಸಖಿಯರೊಡನೆ ಬೆಟ್ಟದ ತಪ್ಪಲಿಗೆ ವಿಹಾರಾರ್ಥವಾಗಿ ಹೋಗಿರಲು ದ್ರುಮಿಲನೆಂಬ ದಾನವರಾಜನೊಬ್ಬನು ಉಗ್ರಸೇನನ ವೇಷದಿಂದ ಬಂದು ಇವಳನ್ನು ಮೋಹಿಸಿದನು. ಬಳಿಕ ಇವನ ನಿಜಸ್ಥಿತಿಯನ್ನರಿತು "ನಿನ್ನ ಈ ದುಷ್ಕೃತ್ಯದಿಂದ ಹುಟ್ಟುವ ಮಗನು ಯದುವಂಶದವರಿಂದಲೇ ಹತನಾಗಲಿ" ಎಂದು ಕೋಪದಿಂದ ಶಪಿಸಿದಳು. ಅವಳಲ್ಲಿ ಹುಟ್ಟಿದ ಕಂಸನು ಪ್ರಾಪ್ತವಯಸ್ಕನಾದಾಗ ಉಗ್ರಸೇನನನ್ನು ಬಂಧನದಲ್ಲಿಟ್ಟು ತಾನೇ ರಾಜ್ಯಭಾರ ಮಾಡಲಾರಂಭಿಸಿದನು. ತನ್ನ ಚಿಕ್ಕಪ್ಪನಾದ ದೇವಕನ ಮಗಳು ದೇವಕಿಯನ್ನು ವಸುದೇವನಿಗೆ ಕೊಟ್ಟು ವೈಭವದಿಂದ ಮದುವೆಮಾಡಿಕೊಟ್ಟಾಗ "ಇವರ ಎಂಟನೆಯ ಗರ್ಭದಲ್ಲಿ ಹುಟ್ಟುವ ಮಗುವಿನಿಂದಲೇ ನೀನು ಹತನಾಗುವೆ" ಎಂಬ ಆಕಾಶವಾಣಿಯನ್ನು ಕೇಳಿ ಹೆದರಿ ಅವರಿಬ್ಬರನ್ನೂ ಸೆರೆಯಲ್ಲಿಟ್ಟು ಅವಳಲ್ಲಿ ಹುಟ್ಟಿದ ಏಳು ಮಕ್ಕಳನ್ನೂ ಸಂಹರಿಸುತ್ತಾ ಬಂದನು. ಎಂಟನೆಯ ಗರ್ಭದಲ್ಲಿ ಜನಿಸಿದ ಶ್ರೀಕೃಷ್ಣನ ಮಾತಿನಂತೆ ವಸುದೇವನು ಶಿಶುವನ್ನು ನಂದಗೋಪನ ಪತ್ನಿ ಯಶೋದೆಯ ಬಳಿಯಿಟ್ಟು ಅವಳು ಪ್ರಸವಿಸಿದ್ದ ಸ್ತ್ರೀಶಿಶುವನ್ನು ದೇವಕಿಯ ಬಳಿ ತಂದಿಟ್ಟನು. [ಇವಳೇ ದುರ್ಗಾದೇವಿ.] ಶ್ರೀಕೃಷ್ಣನು ನಂದಗೋಕುಲದಲ್ಲಿ ಬೆಳೆಯುತ್ತಾ ಕಂಸನ ಪ್ರೇರಣೆಯಂತೆ ತನ್ನನ್ನು ಕೊಲ್ಲಲು ಬಂದ ಪೂತನೆ, ಶಕಟಾಸುರ, ಧೇನುಕಾಸುರ ಮೊದಲಾದವರನ್ನು ಸಂಹರಿಸುತ್ತಾ ಬರಲು ಕಂಸನು ಕೊನೆಗೆ ಕಪಟಪ್ರೇಮದಿಂದ ಕೃಷ್ಣನನ್ನು ತನ್ನಲ್ಲಿಗೆ ಕರೆಸಿಕೊಂಡು ಅವನಿಂದ ಹತನಾದನು.]

**कंसक ಕಂಸಕ** (ಪುಂ) 1. ಕಾಂಸ್ಯ, ಕಂಚು. कंसमेव स्वार्थे "कन्" (५-४-२९)। 2. ಕಂಚಿನ ಪಾತ್ರೆ, ಲೋಟ ಬಟ್ಟಲು ಮುಂತಾದುದು.

**कंसकार ಕಂಸಕಾರ** (ಪುಂ) ಕಂಚುಗಾರ, ಕಂಚಿನ ಪಾತ್ರೆಯನ್ನು ತಯಾರಿಸುವವನು. कंसं तन्मयपात्रं करोति—डु कृञ् (करणे) "अण्" (३-२-१)। ಇವನೊಬ್ಬ ಮಿಶ್ರಜಾತಿಯವನು.

**कंसकृष् ಕಂಸಕೃಷ್** (ಪುಂ) ಶ್ರೀಕೃಷ್ಣ. कंसं कृष्टवान्—कृष (विलेखने) "क्विप्" (३-२-७६)। "महामहानीलशिलारुच: पुरो निषेदिवान् कंसकृष: स विष्टरे" माघ० १-१६।

**कंसजित् ಕಂಸಜಿತ್** (ಪುಂ) ಶ್ರೀಕೃಷ್ಣ. कंसं जितवान्—जि (जये) "क्विप्" (३-२-६१)

**कंसनिषूदन ಕಂಸನಿಷೂದನ** (ಪುಂ) ಶ್ರೀಕೃಷ್ಣ. कंसं निषूदयति — नि+षूद (क्षरणे) + णिच् "ल्यु:" (३-१-१३४)।

**कंसरिपु ಕಂಸರಿಪು** (ಪುಂ) ಶ್ರೀಕೃಷ್ಣ. कंसस्य रिपु:। ಇದೇ ರೀತಿ कंसाराति:, कंसारि: ಇತ್ಯಾದಿ.

**कंसवती ಕಂಸವತೀ** (ಸ್ತ್ರೀಂ) ಉಗ್ರಸೇನನ ಮಗಳು, ಕಂಸನ ತಂಗಿ, ವಸುದೇವನ ತಮ್ಮ ದೇವಶ್ರವಸ್ಸಿನ ಪತ್ನಿ.

**कंसा ಕಂಸಾ** (स्त्री०) ಕಂಸನ ತಂಗಿ, ವಸುದೇವನ ತಮ್ಮನಾದ ದೇವಭಾಗನ ಪತ್ನಿ, ಉಗ್ರಸೇನನ ಮಗಳು. "कंसा कंसवती कङ्का शूरभू राष्ट्रपालिका। उग्रसेनदुहितरो वसुदेवानुजस्त्रियः" भाग० ९-२४।

**कंसिक ಕಂಸಿಕ** (वि०) ಕಂಚಿನ ಸಂಬಂಧವಾದ, ಕಂಚಿನಿಂದ ಕ್ರಯಕ್ಕೆ ಕೊಳ್ಳಲ್ಪಟ್ಟ. कंसेन क्रीतम् "टिठन्" (५-१-२५)।

**कंसीय ಕಂಸೀಯ** (वि०) ಕಂಚಿಗೆ ಹಿತವಾದ, ಕಂಚಿಗೆ ಅನುಕೂಲವಾದ. कंसाय हितम् "छः" (५-१-५)।

**कंसोद्भवा ಕಂಸೋದ್ಭವಾ** (स्त्री०) ಸೌರಾಷ್ಟ್ರದೇಶದ ಒಂದು ಸುವಾಸನೆಯ ಮೃತ್ತಿಕೆ.

**ककन्द ಕಕಂದ** (पु०) ಸ್ವರ್ಣ, ಚಿನ್ನ. कक (लौल्ये) "अन्दच्"।

**ककुत्स्थ ಕಕುತ್ಸ್ಥ** (पु०) 1. ಇಕ್ಷ್ವಾಕು ವಂಶದ ಒಬ್ಬ ದೊರೆ, ಇಕ್ಷ್ವಾಕುರಾಜನ ಮಗನಾದ ಶಶಾದನ ಮಗ, ಪುರಂಜಯ. ककुदि तिष्ठति—ष्ठा (गतिनिवृत्तौ) "कः" (३-२-४)। ದೇವಾಸುರಯುದ್ಧದಲ್ಲಿ ವೃಷಭರೂಪಿಯಾದ ಇಂದ್ರನ ಹೆಗಲಿನ ಮೇಲೆ ನಿಂತು ಯುದ್ಧಮಾಡಿದುದರಿಂದ ಈತನಿಗೆ ಈ ಹೆಸರು. (वि०) 2. ವೃಷಭದ ಹಿಣಲಿನಲ್ಲಿರುವ.

**ककुद् ಕಕುದ್** (स्त्री०) 1. ಎತ್ತಿನ ಹೆಗಲಿನ ಮೇಲಿರುವ ಹಿಣಲು. कं सुखं कौति—कु (शब्दे) "क्विप्" (३-२-६१)। 2. ಪರ್ವತದ ಶಿಖರ, ಬೆಟ್ಟದ ತುದಿ. 3. ರಾಜನ ಛತ್ರ, ಚಾಮರ, ಧ್ವಜ ಮೊದಲಾದ ಚಿಹ್ನೆ. (वि०) 4. ಪ್ರಧಾನ, ಮುಖ್ಯ.

**ककुद ಕಕುದ** (पुन०) 1. "ककुत्" ಪದದ ಅರ್ಥ. कस्य सुखस्य कुं भूमिं ददाति—डु दाञ् (दाने) "कः" (३-२-४)। "प्रधाने राजचिह्ने च वृषाङ्गे ककुदोऽस्त्रियाम्" अम०। 2. ಆನೆಯ ಮೇಢ್ರ, –ಶಿಶ್ನ, –ಜನನೇಂದ್ರಿಯ. "अत्यूहः ककुदं मेढ्रे" वैज०।

**ककुद्मत् ಕಕುದ್ಮತ್** (पु०) 1. ವೃಷಭ, ಎತ್ತು. ककुदस्त्यस्य "मतुप्" (५-२-९४)। "मदोदग्राः ककुद्मन्तः सरितां कूलमुद्रुजाः" रघु० ४-२२। 2. ಹಿಮವತ್ಪರ್ವತದ ಒಂದು ಶಿಖರ, ನಂದಿಕೇಶ್ವರನ ಉತ್ಪತ್ತಿಸ್ಥಾನ.

**ककुद्मती ಕಕುದ್ಮತೀ** (स्त्री०) ಕಟಿಪ್ರದೇಶ, ಪಿರ್ರೆ. ककुदिव मांसपिण्डोऽस्त्यस्याः "मतुप्" (५-२-९४)। "ङीप्" (४-१-६)।

**ककुद्मिन् ಕಕುದ್ಮಿನ್** (पु०) 1. ದಪ್ಪ ಹಿಣಿಲುಳ್ಳ ವೃಷಭ, ಎತ್ತು. ककुदस्यास्ति "मिनिः"। 2. ರೈವತನೆಂಬ ಒಬ್ಬ ದೊರೆ, ಬಲರಾಮನ ಪತ್ನಿ ರೇವತಿಯ ತಂದೆ. [ಈತನು ಸೂರ್ಯವಂಶದ ಒಬ್ಬ ದೊರೆ. ಈತನಿಗೆ ರೈವತನೆಂದೂ ಹೆಸರು. ಈ ದೊರೆಯು ತನ್ನ ಮಗಳಾದ ರೇವತಿಗೆ ಅನುರೂಪನಾದ ವರನನ್ನು ಭೂಲೋಕದಲ್ಲೆಲ್ಲಿಯೂ ಕಾಣದೆ ಬ್ರಹ್ಮನನ್ನು ಕೇಳಬರಲು ಮಗಳನ್ನು ಕರೆದುಕೊಂಡು ಬ್ರಹ್ಮಲೋಕಕ್ಕೆ ತೆರಳಿದನು. ಅಲ್ಲಿ ಬ್ರಹ್ಮರ್ಷಿಗಳೆಲ್ಲರೂ ಶಾಸ್ತ್ರವಾದವಿವಾದದಲ್ಲಿ ತೊಡಗಿರಲು ಅದೆಲ್ಲವೂ ಮುಗಿಯುವವರೆಗೂ ಕಾದಿದ್ದು ಅನಂತರ ತನ್ನ ಮಗಳಿಗೆ ಯೋಗ್ಯನಾದ ವರನಾರೆಂದು ಕೇಳಿದನು. ಆಗ ಬ್ರಹ್ಮನು "ನೀನು ಈ ಲೋಕಕ್ಕೆ ಬಂದನಂತರ ಭೂಲೋಕದಲ್ಲಿ ಎಷ್ಟೋ ಯುಗಗಳು ಕಳೆದುಹೋಗಿರುವುದರಿಂದ ನೀನು ಇಲ್ಲಿಗೆ ಬಂದಾಗ ಅಲ್ಲಿದ್ದವರಾರೂ ಈಗ ಇಲ್ಲ. ನೀನು ಈ ಲೋಕದಲ್ಲಿದ್ದುದರಿಂದ ನಿನಗದು ಗೊತ್ತಾಗಲಿಲ್ಲ. ಈಗ ಭೂಲೋಕದಲ್ಲಿ ವಸುದೇವನ ಮಗನಾದ ಬಲರಾಮನು ನಿನ್ನ ಮಗಳಿಗೆ ಅನುರೂಪನಾಗಿರುವುದರಿಂದ ಅವನಿಗೆ ಕೊಟ್ಟು ವಿವಾಹವನ್ನು ನಡೆಸು" ಎಂದು ಹೇಳಿದನು. ರೈವತನು ಭೂಲೋಕಕ್ಕೆ ಬರುವುದರೊಳಗಾಗಿ ಇವನು ಹಿಂದೆ ನೋಡಿದವರಾರೂ ಇರಲಿಲ್ಲ. ಆಗ ರೇವತಿಯನ್ನು ಬಲರಾಮನಿಗೆ ಕೊಟ್ಟು ವಿವಾಹ ಮಾಡಿದನು.] भाग० ९-३। 3. ಪರ್ವತ, ಬೆಟ್ಟ.

**ककुद्मिकन्या ಕಕುದ್ಮಿಕನ್ಯಾ –सुता –ಸುತಾ** (स्त्री०) ರೈವತನ ಮಗಳು ರೇವತಿ, ಬಲರಾಮನ ಪತ್ನಿ. ककुद्मिनः कन्या सुता वा। "ककुद्मिकन्यावक्त्रान्तर्वासलब्धाधिवासया" माघ० २-२०।

**ककुन्दर ಕಕುಂದರ** (न०) ಪಿರ್ರೆಯ ಮೇಲಿನ ಗುಣಿಗಳು. कुं भूमिं दारयति—दृ (हिंसायाम्) + णिच् "अण्" (३-२-१)। कुन्दरम्, कुत्सितं कुन्दरम्। पृषो०। "कनीनिके चाक्षिकूटे शष्कुलीकर्णपत्रकौ। कर्णौ शङ्खौ भ्रुवौ दन्तवेष्टावोष्ठौ ककुन्दरे" याज्ञ० ३-९६।

**ककुभ् ಕಕುಭ್** (स्त्री०) 1. ದಿಕ್ಕು, ದಿಶೆ. कं वायुं स्कुम्नाति विस्तारयति—स्कुन्भु "क्विप्" (३-२-१७८)। पृषो०। "मध्येसमुद्रं ककुभः पिशङ्गीर्या कुर्वती काञ्चनवप्रभासा" माघ० ३-३३। 2. ಕಾಂತಿ, ಶೋಭೆ. 3. ವೇಣಿ, ಜಡೆ. 4. ಸಂಪಿಗೆ ಹೂವಿನ ಮಾಲೆ. "ककुप् स्त्रियां प्रवेणीदिक्शोभासु चम्पकस्रजि" मेदि०। 5. ದಕ್ಷಬ್ರಹ್ಮನ ಒಬ್ಬ ಮಗಳು, ಧರ್ಮದೇವತೆಯ ಪತ್ನಿ. 6. ಶಾಸ್ತ್ರ.

**ककुभ ಕಕುಭ** (पु०) 1. ಅರ್ಜುನವೃಕ್ಷ, ಕೆಂಪುಮತ್ತಿಮರ. ककुभो दिशः सन्त्यस्य "अच्" (५-२-१२७)।

2. ವೀಣೆಯ ಗಂಭೀರನಾದಕ್ಕಾಗಿ ಕಟ್ಟುವ ಚರ್ಮದ ಚೀಲ ದಿಂದ ಮುಚ್ಚಲ್ಪಟ್ಟ ಸೋರೆಬುರುಡೆ. 3. (ಸಂಗೀತದಲ್ಲಿ) ಒಂದು ರಾಗ. 4. ಒಂದು ರೋಗ. (स्त्री०) -भा -ಭಾ. ದಿಕ್ಕು, ದಿಶೆ. (वि०) 5. ಮಹತ್ತಾದ, ದೊಡ್ಡದಾದ.

**कक्कोल ಕಕ್ಕೋಲ** (पु०) ಗಂಧದ್ರವ್ಯವನ್ನು ತೆಗೆಯುವ ತಕ್ಕೋಲವೃಕ್ಷ.

**कक्कोलक ಕಕ್ಕೋಲಕ** (न०) ತಕ್ಕೋಲವೃಕ್ಷದಿಂದ ತೆಗೆದ ಒಂದು ಗಂಧದ್ರವ್ಯ.

**कक्ष ಕಕ್ಷ** (पु०) 1. ಉಡುವ ಪಂಚೆಯ ಸೆರಗು, ಉಡುವ ಪಂಚೆಯ ತುದಿಯ ಭಾಗ. कष्यते—कष (हिंसायाम्) "सः" (उ० ३-६२)। 2. ದೇಹದ ಗುಹ್ಯಸ್ಥಾನವನ್ನು ಮುಚ್ಚುವ ವಸ್ತ್ರ, ಕೌಪೀನ. 3. ಕಚ್ಚೆ. "कक्षः कच्छो गुह्यबन्धः" वैज०। 4. ಗುಲ್ಮ, ಪೊದರು, ಕುರುಚಲು ಗಿಡ. "प्रक्षिप्योर्दाचिषं कक्षे शेरते तेऽभिमारुतम्" माघ० २-४२। 5. ಒಣಮರಗಳ ಕಾಡು, ಜೀರ್ಣವಾದ ಅರಣ್ಯ. 6. ಒಣಹುಲ್ಲು. "यथोद्धरति निर्दाता कक्षं धान्यं च रक्षति" मनु० ७-११०। 7. ಪಕ್ಕ, ಪಾರ್ಶ್ವ ಭಾಗ. "कक्षान्तरगतो वायुर्जीमूत इव गर्जति" रामा०। 8. ಬಳ್ಳಿ, ಲತೆ. 9. ಬಾಹುಮೂಲ, ತೋಳಿನ ಕೆಳಭಾಗ, ಕಂಕಳು. 10. ಪಾಪ. (स्त्री०) -क्षा -ಕ್ಷಾ. 11. ಆನೆಯನ್ನು ಕಟ್ಟುವ ಹಗ್ಗ. 12. ಭಿತ್ತಿ, ಗೋಡೆ. 13. ಡಾಬು, ಒಡ್ಯಾಣ. "युधे परैः सह दृढबद्धकक्षया कलक्वणन्मधुपकुलोपगीतया" माघ० १७-२४। 14. ಕೊಠಡಿ, ಕೋಣೆ. "अथोपकार्यामिमरेन्द्रकार्यात्कक्षासु रक्षाधिकृतैरदृष्टः" नैष० ६-११। 15. ಸ್ಪರ್ಧೆ, ಹೋರಾಟ, ಮೇಲಾಟ. 16. ಸಾಮ್ಯ, ಹೋಲಿಕೆ. 17. ರಥದ ಒಂದು ಅವಯವ. 18. ಕಂಕಳಿನ ಒಂದು ರೋಗ. "बाहुपार्श्वांसकक्षासु कृष्णस्फोटां सवेदनाम्। पित्तप्रकोपसंभूतां कक्षामिति विनिर्दिशेत्" सुश्रुत० निदान० १३-१६। 19. ಉಡುವ ಪಂಚೆಯ ಸೆರಗು, ಕಚ್ಚೆ. "कक्षो वीरुधि दोर्मूले कच्छे शुष्कवने तृणे। पापे, कक्षात्विभरज्जौ काञ्च्यां गेह-प्रकोष्ठके। भित्तौ साम्ये रथभागेऽन्तरीयपश्चिमाञ्चले" हेम०।

**कक्षक ಕಕ್ಷಕ** (पु०) ವಾಸುಕಿಯ ವಂಶದ ಒಂದು ಸರ್ಪ. "हिरण्यबाहुः शरणः कक्षकः कालदन्तकः" भा० आदि० ५७-६।

**कक्षधर ಕಕ್ಷಧರ** (न०) ಎದೆ ಮತ್ತು ಕಂಕಳುಗಳ ಮಧ್ಯ (ಭಾಗ) ದಲ್ಲಿರುವ ಮರ್ಮಸ್ಥಾನ. "विशेषतस्तु यानि सक्थिगुल्मजानुविटपानि तानि बाह्वोर्मणिबन्धकर्पूरकक्षधराणि" सुश्रुत०।

**कक्षप ಕಕ್ಷಪ** (पु०) ಕೂರ್ಮ, ಆಮೆ. कक्षे कच्छे पिबति—पा (पाने) "कः" (३-२-४)।

**कक्षरुहा ಕಕ್ಷರುಹಾ** (स्त्री०) ಒಂದು ಜಾತಿಯ ಕೊನ್ನಾರಿ ಗೆಡ್ಡೆ. कक्षे जलप्राये रोहति—रुह (बीजजन्मादौ) "कः" (३-१-१३५)।

**कक्षलोमन् ಕಕ್ಷಲೋಮನ್** (न०) ಕಂಕಳಿನ ಕೂದಲು.

**कक्षसेन ಕಕ್ಷಸೇನ** (पु०) 1. ಧರ್ಮರಾಜನ ಸಭೆಯಲ್ಲಿದ್ದ ಒಬ್ಬ ಕ್ಷತ್ರಿಯ, ಅವಿಕ್ಷಿತನ ಮಗನಾದ ಪರಿಕ್ಷಿತ್ತಿನ ಮಗ. "कक्षसेनः क्षितिपतिः क्षेमकश्चापराजितः" भा० सभा० ४-२८। 2. ಯಮನ ಸಭೆಯಲ್ಲಿದ್ದ ಒಬ್ಬ ಕ್ಷತ್ರಿಯ. "अलर्कः कक्षसेनश्च गयो गौराश्व एव च" भा० सभा० ८-१८। 3. ಒಬ್ಬ ರಾಜರ್ಷಿ.

**कक्षापट ಕಕ್ಷಾಪಟ** (पु०) ಕೌಪೀನ, ಅಂತರಾಚ್ಛಾದನ. कक्षाकारः पटः।

**कक्षा (क्ष्या) वेक्षक ಕಕ್ಷಾ (ಕ್ಷ್ಯಾ) ವೇಕ್ಷಕ** 1. ರಾಜನ ಅಂತಃಪುರದ ಕಾವಲುಗಾರ. 2. ಉದ್ಯಾನಪಾಲಕ, ಕೈತೋಟದ ಕಾವಲುಗಾರ. 3. ದ್ವಾರಪಾಲಕ. 4. ವಿಟ, ಕಾಮುಕ, ವಿಷಯಾಸಕ್ತ. 5. ನಟ, ನರ್ತಕ, ಅಭಿನಯಕಾರ. 6. ಕವಿ. 7. ಖಡ್ಗ, ಕತ್ತಿ. कक्षं वनं स्त्रीबाहुमूलं वा कक्षां साम्यं राजान्तःपुरं वा अवेक्षते—अव+ईक्ष (दर्शने) "ण्वुल्" (३-१-१३३)। "कक्ष्यावेक्षक इत्येष शुद्धान्तोद्यानपालयोः। रङ्गाजीवे कवौ खड्गे द्वाःस्थे" मेदि०। "कक्षावेक्षकः शुद्धान्तपालकोद्यानपालयोः। द्वाःस्थे षिद्गे कवौ रङ्गाजीवे" हेम०।

**कक्षिन् ಕಕ್ಷಿನ್** (वि०) ಪಾಪಾತ್ಮ, ಪಾಪದಿಂದ ಕೂಡಿದವನು. कक्षः पापमस्त्यस्य "इनिः" (५-२-१३१)।

**कक्षीवत् ಕಕ್ಷೀವತ್** (पु०) ಸ್ವೋಟಾಯನಮಹರ್ಷಿ.

**कक्ष्य ಕಕ್ಷ್ಯ** (वि०) 1. ಲತೆಯಲ್ಲಿರುವ. 2. ಬಾಹುಮೂಲದ (ಕಂಕಳಿನ)ಲ್ಲಿರುವ. 3. ಜೀರ್ಣವನದಲ್ಲಿರುವ, 4. ಹುಲ್ಲಿನಲ್ಲಿರುವ. कक्षे भवः "यत्" (४-३-५३, ५५)। (स्त्री०) -क्ष्या-ಕ್ಷ್ಯಾ. 5. ಉತ್ತರೀಯ, ಹೊದೆಯುವ ವಸ್ತ್ರ. 6. ಕೊಠಡಿ, ಕೋಣೆ. 7. ಡಾಬು, ಒಡ್ಯಾಣ. 8. ಆನೆಯ ನಡುವಿಗೆ ಕಟ್ಟುವ ಹಗ್ಗ. "कक्ष्या बृहतिकायां स्यात् काञ्च्यां मध्येभबन्धने। हर्म्यादीनां प्रकोष्ठेऽपि" मेदि०। 9. ಉದ್ಯೋಗ. 10. ನಡುಕಟ್ಟು. कक्ष स्वार्थे "यत्"। 11, ಅವಸ್ಥೆ, ಹಂತ, ಘಟ್ಟ.

**कक्ष्यावत् ಕಕ್ಷ್ಯಾವತ್** (पु०) ಗಜ, ಆನೆ. कक्ष्यास्त्यस्य "मतुप्" (५-२-९४)। स्त्रियां "ङीप्" (४-१-६)। **-वती - ವತೀ.**

**कक्ष्यावेक्षक ಕಕ್ಷ್ಯಾವೇಕ್ಷಕ** (पु०) "कक्षावेक्षक" ಪದದ ಅರ್ಥ.

**कङ्क ಕಂಕ** (पु०) 1. ಒಂದು ಜಾತಿಯ ಹದ್ದು. कङ्कते — ककि (गतौ) "अच्" (३-१-१३४)। 2. ವೇಷಧಾರಿ ಬ್ರಾಹ್ಮಣ. 3. ಪಾಂಡವರ ಅಜ್ಞಾತವಾಸದ ಕಾಲದಲ್ಲಿ ಧರ್ಮರಾಜನ ಹೆಸರು. [ಪಾಂಡವರ ವನವಾಸಾನಂತರ ಅಜ್ಞಾತವಾಸಕಾಲದಲ್ಲಿ ಧರ್ಮರಾಜನು ಬ್ರಾಹ್ಮಣವೇಷ ಧರಿಸಿದ್ದುದರಿಂದ ಈ ಹೆಸರು.] "विराटं समनुप्राप्य राजानं मात्स्यनन्दनम्। सभास्तारो भविष्यामि विराटस्येति मे मतिः। कङ्को नाम ब्रुवाणोऽहं मताक्षः साधुदेविता" भा० विरा० २-२३। 4. ಯಮ. "कङ्कश्छद्मद्विजे ख्यातो लोहपृष्ठकृतान्तयोः" मेदि०। (स्त्री०) **कङ्का ಕಂಕಾ.** 5. ಉಗ್ರಸೇನನ ಒಬ್ಬ ಮಗಳು, ಕಂಸನ ತಂಗಿ. "तेषां स्वसारः पञ्चासन् कंसा कंसवती तथा। सुतनू राष्ट्रपाली च कङ्का चैव वराङ्गना" हरिवं०।

**कङ्कट ಕಂಕಟ** (पु०) 1. ಕವಚ, ಅಂಗಿ. ककि (गतौ) "अटन्" (उ० ४-८१)। "शल्यानि व्यपनीय कङ्कवदनैरुन्मोचिते कङ्कटे बद्धेषु व्रणपट्टकेषु शनकैः कर्णे कृतापाश्रयः" वेणी० ५-१, माघ० १७-२०। 2. ಅಂಕುಶ, ಆನೆಯನ್ನು ಶಿಕ್ಷಿಸುವ ಕಬ್ಬಿಣದ ಮುಳ್ಳುಕೋಲು. स्वार्थे "कन्"। **कङ्कटकः ಕಂಕಟಕಃ.**

**कङ्कटिक ಕಂಕಟಿಕ** (वि०) ಯುದ್ಧಕವಚಸಂಬಂಧವಾದ. कङ्कट "ठच्" (४-२-८०)।

**कङ्कटिन् ಕಂಕಟಿನ್** (वि०) ಯುದ್ಧಕವಚವನ್ನು ತೊಟ್ಟಿರುವ. कङ्कट "इनिः" (४-२-८०)।

**कङ्कटिल ಕಂಕಟಿಲ** (वि०) ಯುದ್ಧಕವಚವನ್ನು ತೊಟ್ಟಿರುವ. कङ्कट "इलः" (४-२-८०)।

**कङ्कटीक ಕಂಕಟೀಕ** (पु०) ಶಿವ, ಪರಮೇಶ್ವರ. कृशानुरेता जोटिंगः कङ्कटीक उमापतिः" वैज०।

**कङ्कण ಕಂಕಣ** (पु०) 1. ಜಲಕಣ, ನೀರಿನ ಬಿಂದು. कमित्यव्ययं जलार्थकम्. तस्य कणः। "नितम्बो पत्राली नयनयुगले कङ्कणभरम्" उद्भ०। (न०) 2. ಹಸ್ತಾಭರಣ, ಮಣಿಕಟ್ಟಿನ ಒಂದು ಆಭರಣ, ಬಳೆ. कं शुभं कणति—कण (शब्दे) "अच्" (३-१-१३४)। "श्रोत्रं श्रुतेनैव न कुण्डलेन दानेन पाणिर्न तु कङ्कणेन" भर्तृ० १-६२। 3. ವಿವಾಹಸಮಯದಲ್ಲಿ ವಧೂವರರ ಕೈಗೆ ಕಟ್ಟುವ ಮಂಗಳಸೂತ್ರ. "अयमागृहीतकमनीयकङ्कणस्तव मूर्तिमानिव महोत्सवः करः" उ० रा० १-१८। 4. ಆಭರಣ, ಒಡವೆ. 5. ಶೇಖರ, ತಲೆಯಲ್ಲಿ ಧರಿಸುವ ಹೂವಿನ ಮಾಲೆ ಮೊದಲಾದುದು. "कङ्कणं करभूषायां हस्तसूत्रे च शेखरे" हेम०।

**कङ्कणिन् ಕಂಕಣಿನ್** (वि०) 1. ಹಸ್ತಾಭರಣವನ್ನು ಧರಿಸಿರುವ, ಬಳೆಯನ್ನು ತೊಟ್ಟಿರುವ. 2. ನೀರಿನ ಹನಿಗಳಿಂದ ಕೂಡಿದ. कङ्कण "इनिः" (५-२-११५)।

**कङ्कणीका ಕಂಕಣೀಕಾ** (स्त्री०) 1. ಕಿರುಗೆಜ್ಜೆ, पुनः पुनः काणयति — कण (निमीलने) + णिच् + यङ् तस्य लुक् "ईकन्" (उ० ४-१८)। धातोः कङ्कणादेशश्च। 2. ಕಂಕಣ, ಹಸ್ತಸೂತ್ರ. "घण्टिकायां कङ्कणीका सैव प्रतिसरापि च"।

**कङ्कत ಕಂಕತ** (पु०) 1. ಹೀರೆಗಿಡ. ककि (गतौ) "अतच्" बाहु०। (न०) 2. ಬಾಚಣಿಗೆ. "हासकरमघटते नितरां शिरसीव कङ्कतमपेतमूर्धजे" माघ० १५-३३। गौरा० "ङीष्" (४-१-४१)। स्वार्थे "कन्" (५-४-५)। **कङ्कतिका ಕಂಕತಿಕಾ.**

**कङ्कती ಕಂಕತೀ** (स्त्री०) ಬಾಚಣಿಗೆ.

**कङ्कतीय ಕಂಕತೀಯ** (वि०) ಕೇಶಸಂಸ್ಕಾರ ಮಾಡುವ, ತಲೆಗೆ ಅಲಂಕಾರ ಮಾಡುವ. कङ्कतं तत्संस्कारः प्रयोजनमस्य "छः" (५-१-१११)।

**कङ्कपत्र ಕಂಕಪತ್ರ** (पु०) 1. ಹದ್ದಿನ ರೆಕ್ಕೆಗಳಿಂದ ಕೂಡಿದ ಬಾಣ, ಶರ. कङ्कस्य पत्रं यस्य। [ಬಾಣಕ್ಕೆ ಹದ್ದಿನ ರೆಕ್ಕೆಗಳನ್ನು ಕಟ್ಟುವುದರಿಂದ ಈ ಹೆಸರು.] "हयांश्च रजतप्रख्यान् कङ्कपत्रैः शिलाशतैः" भा०। (न०) 2. ರಣಹದ್ದಿನ ರೆಕ್ಕೆ, -ಗರಿ. कङ्कस्य पत्रम्। (वि०) 3. ಹದ್ದಿನ ಗರಿಗಳಿಂದ ಕೂಡಿದ. "वामेतरस्तस्य करः प्रहर्तुः नखप्रभाभूषितकङ्कपत्रे" रघु० २-३१।

**कङ्कपत्रिन् ಕಂಕಪತ್ರಿನ್** (पु०) ಹದ್ದಿನ ಗರಿಗಳಿಂದ ಕೂಡಿದ ಬಾಣ. कङ्कपत्रमस्त्यस्य "इनिः" (५-२-११५)। "पुनरेवाहनत् पार्थं हृदये कङ्कपत्रिभिः" भा० विरा०।

**कङ्कमुख ಕಂಕಮುಖ** (पु०) ಶಸ್ತ್ರಚಿಕಿತ್ಸೆಯ ಒಂದು ಚಿಮುಟ, ಶ್ರವಣ. कङ्कमुखमिव मुखमस्य। ಶಸ್ತ್ರಚಿಕಿತ್ಸೆಯ ಯಂತ್ರಗಳು ಆರು ವಿಧ. ಅವುಗಳಲ್ಲಿ ಸ್ವಸ್ತಿಕ ಯಂತ್ರವು ಹದಿನೆಂಟು ಅಂಗುಲಗಳಷ್ಟು ಉದ್ದವಿದ್ದು ಸಿಂಹ, ಹುಲಿ, ತೋಳ, ಕಿರುಬ, ಕರಡಿ, ಬೆಕ್ಕು, ನರಿ, ಜಿಂಕೆ, ಕಾಗೆ,

ಹದ್ದು ಮುಂತಾದ ಅನೇಕ ಪ್ರಾಣಿಗಳ ಮುಖದಂತೆ ಮುಖವನ್ನು (ತುದಿಯನ್ನು) ಪೊಂದಿರುವುದು. सुश्रुत० सूत्र० ७-१०। [ವಿವರಕ್ಕೆ "यन्त्र" ಪದದಲ್ಲಿ ನೋಡಿ.] कङ्कवदन कङ्कानन कङ्कास्य ಮೊದಲಾದ ಪದಗಳಿಗೂ ಇದೇ ಅರ್ಥ. "शल्यानि व्यपनीय कङ्कवदनैरुन्मोचिते कङ्कटे" वेणी० ५-१।

**कङ्काल ಕಂಕಾಲ** (पु०) ಚರ್ಮ ಮಾಂಸಗಳಿಲ್ಲದ ಎಲುಬಿನ ಗೂಡು,–ಅಸ್ಥಿಪಂಜರ. कं सुखं कालयति—कल (क्षेपे) + णिच् "अच्" (३-१-१३४)। "खर्जूरद्रुमदघ्नजङ्गमसितत्वङ्नद्धविष्वक्ततस्नायुग्रन्थिघनास्थिपञ्जररजत्कङ्कालमालोक्यते" मालती० ५-१४।

**कङ्कालमालिन् ಕಂಕಾಲಮಾಲಿನ್** (पु०) ಈಶ್ವರ, ಮಹಾದೇವ. कङ्कालानां मालास्त्यस्य "इनिः" (५-२-११६)।

**कङ्कु ಕಂಕು** (पु०) ಉಗ್ರಸೇನನ ಒಬ್ಬ ಮಗ, ಕಂಸನ ಸಹೋದರ. "कंसः सुनामा न्यग्रोधः कङ्कुः शङ्कुः सुहुस्तथा। राष्ट्रपालश्च सृष्टिश्च तुष्टिमानुग्रसेनजाः" भाग० ९-२४-२४।

**कङ्गु ಕಂಗು** (स्त्री०) ನವಣೆಯೆಂಬ ಒಂದು ಧಾನ್ಯ. कं सुखम् अङ्गति — अगि (गतौ) "कुः" (उ० १-३७)। "स्त्रियौ कङ्गुप्रियङ्गू द्वे" अम०।

**कच ಕಚ** (पु०) 1. ಕೇಶ, ಕೂದಲು. कच्यते बध्यते — कच (बन्धने) "घः" (३-३-११८)। "दोर्मूलमालोक्य कचं रुषत्सोस्ततः कुचौ तावनुलेपयन्त्याः" नैष० ६-२०। 2. ಒಣಗಿದ ಹುಣ್ಣು. 3. ಬಂಧ, ಕಟ್ಟು. 4. ಮೇಘ, ಮೋಡ. 5. ಪ್ರಕಾಶ, ಕಾಂತಿ, ಹೊಳಪು. 6. ಬೃಹಸ್ಪತ್ಯಾಚಾರ್ಯರ ಮಗ. [ದೇವತೆಗಳು ರಾಕ್ಷಸರೊಡನೆ ಯುದ್ಧ ಮಾಡಿ ಪರಾಜಯ ಹೊಂದುತ್ತಿರಲು ಗುರುಪುತ್ರನಾದ ಕಚನನ್ನು ಮೃತಸಂಜೀವಿನೀವಿದ್ಯೆ ಕಲಿಯುವುದಕ್ಕಾಗಿ ಶುಕ್ರಾಚಾರ್ಯರಲ್ಲಿಗೆ ಕಳುಹಿಸಿಕೊಟ್ಟರು. ಗುರುಕುಲದಲ್ಲಿ ಕಚನಿಗೂ ಶುಕ್ರಾಚಾರ್ಯರ ಮಗಳಾದ ದೇವಯಾನಿಗೂ ಪರಸ್ಪರ ಪ್ರೀತಿಯು ಬೆಳೆಯಿತು. ಕಚನಿಗೆ ಈ ವಿದ್ಯೆ ಕಲಿಸುವುದು ರಾಕ್ಷಸರಿಗೆ ಸಹನೆಯಿಲ್ಲದೆ ಅವನನ್ನು ಕೊಂದು ಹಾಕಿದರೂ ಶುಕ್ರಾಚಾರ್ಯರು ಮಂತ್ರಶಕ್ತಿಯಿಂದ ಬದುಕಿಸಿದುದನ್ನು ಕಂಡು ರಾಕ್ಷಸರು ಪುನಃ ಅವನನ್ನು ಸುಟ್ಟು ಅವನ ಬೂದಿಯನ್ನು ಮದ್ಯದಲ್ಲಿ ಸೇರಿಸಿ ಶುಕ್ರಾಚಾರ್ಯರಿಗೆ ಕುಡಿಸಿದರು. ದೇವಯಾನಿಯ ಪ್ರಾರ್ಥನೆಯಂತೆ ಶುಕ್ರಾಚಾರ್ಯರು ತಮ್ಮ ಹೊಟ್ಟೆಯಲ್ಲಿದ್ದ ಕಚನನ್ನು ಬದುಕಿಸಿ ಅಲ್ಲಿರುವಾಗಲೇ ಅವನಿಗೆ ಮೃತಸಂಜೀವಿನೀ ವಿದ್ಯೆಯನ್ನು ಉಪದೇಶಿಸಿದರು. ಆಗ ಕಚನು ಶುಕ್ರಾಚಾರ್ಯರ ಹೊಟ್ಟೆಯನ್ನು ಭೇದಿಸಿಕೊಂಡು ಹೊರಕ್ಕೆ ಬಂದು ತನ್ನ ವಿದ್ಯಾಬಲದಿಂದ ಅವರನ್ನು ಬದುಕಿಸಿದನು. ದೇವಯಾನಿಯು ತನ್ನನ್ನು ಮದುವೆಯಾಗಬೇಕೆಂದು ಕಚನನ್ನು ನಿರ್ಬಂಧಿಸಿದಾಗ ಗುರುಪುತ್ರಿಯಾದಕಾರಣ ಅದಕ್ಕೆ ಇವನು ಒಪ್ಪದಿರಲು "ಈ ವಿದ್ಯೆಯು ನಿನಗೆ ಫಲಿಸದಿರಲಿ" ಎಂದು ಶಾಪಕೊಟ್ಟಳು. ಆಗ ಕಚನೂ ಇವಳು ವೇದ ಶಾಸ್ತ್ರಸಂಪನ್ನನಾದ ಬ್ರಾಹ್ಮಣನ ಮಗಳಾಗಿದ್ದರೂ ಧರ್ಮ ವಿರುದ್ಧವಾದ ಕಾರ್ಯದಲ್ಲಿ ಬಲಾತ್ಕಾರಮಾಡಿದುದರಿಂದ "ಯಾವ ಬ್ರಾಹ್ಮಣನೂ ನಿನ್ನನ್ನು ಮದುವೆಯಾಗದಿರಲಿ" ಎಂದು ಪ್ರತಿಶಾಪವಿತ್ತನು. ಈ ಕಾರಣದಿಂದ ದೇವಯಾನಿಯು ಯಯಾತಿಯನ್ನು ಮದುವೆಯಾದಳು.] भा० आदि० ७०।

**कचग्रह ಕಚಗ್ರಹ** (पु०) ಕೂದಲನ್ನು ಎಳೆದು ಹಿಡಿದುಕೊಳ್ಳುವುದು. कचस्य ग्रहः ग्रहणम्। "शापयन्त्रितपौलस्त्यबलात्कारकचग्रहैः" रघु० १०-४७।

**कचङ्गल ಕಚಂಗಲ** (पु०) 1. ಕಡಲು, ಸಮುದ್ರ. कच (शब्दे) "अङ्गलच्" बाहु०। 2. ತೆರಿಗೆಯಿಲ್ಲದ ಮಾರುಕಟ್ಟೆ, ಸುಂಕವಿಲ್ಲದ ವ್ಯಾಪಾರದ ಕಟ್ಟೆ. (स्त्री०)–ला–ಲಾ. 3. ಅನೇಕ ಕ್ರಿಮಿಗಳಿಂದ ಕೂಡಿದ ಪ್ರದೇಶ, ನಾನಾ ಜಂತುಗಳಿಂದ ಕೂಡಿದ ಭೂಮಿ. "कचङ्गला तु नीलिगी भूर्नानाजन्तुसंयुता" वैज०।

**कचपक्ष ಕಚಪಕ್ಷ, –पाश –ಪಾಶ, –हस्त –ಹಸ್ತ** (पु०) ಕೇಶಪಾಶ, ಕೂದಲಿನ ಸಮೂಹ. कचानां पक्षः पाशः हस्तो वा।

**कचा ಕಚಾ** (स्त्री०) ಹೆಣ್ಣಾನೆ. कच (शब्दे) "घः" (३-३-११८)। "कचा करेण्वाम्" हेम०।

**कचाकचि ಕಚಾಕಚಿ** (अव्य०) ಪರಸ್ಪರ ಕೂದಲನ್ನು ಹಿಡಿದುಕೊಂಡು ಮಾಡುವ ಯುದ್ಧ. कचेषु कचेषु गृहीत्वा प्रवृत्तं युद्धम् "इच्" (५-४-१२७)। पूर्वपदान्तदीर्घश्च (६-३-१३७)।

**कचाकु ಕಚಾಕು** (पु०) 1. ಸರ್ಪ, ಹಾವು. कच इव अकति वक्रं गच्छति — अक (कुटिलायां गतौ) "उण्" बाहु०। (वि०) 2. ಹಿಡಿಯಲು ಸಾಧ್ಯವಿಲ್ಲದ, ತಡೆಯಲು ಅಶಕ್ಯವಾದ. 3. ದುಃಸ್ವಭಾವದವನು, ಕೆಟ್ಟ ಶೀಲವುಳ್ಳವನು. "कचाकुस्तु दुराधर्षे दुःशीले ना विलेशये" मेदि०।

**कचाग्र ಕಚಾಗ್ರ** (न०) 1. ಕೂದಲಿನ ತುದಿ. 2. ಕೂದಲಿನ ತುದಿಯಲ್ಲಿರುವ ತ್ರಸರೇಣುವಿನ ಎಂಟನೆಯ ಒಂದು ಭಾಗ.

**कचाचित ಕಚಾಚಿತ** (वि०) ಕೆದರಿದ ಕೂದಲುಳ್ಳ, ಕೆದರಿದ ಕೂದಲಿನಿಂದ ವ್ಯಾಪ್ತವಾದ. कचैराचितः। "वनान्तशय्याकठिनीकृताकृती कचाचितौ विष्वगिवागजौ गजौ" किरा० १-३६।

**कचाटुर ಕಚಾಟುರ** (पु०) ನೀರುಕೋಳಿ. कच इवाटति—अट (गतौ) "उरच्" (उ० १-४१)। स्त्रियां जाति० "ङीष्" (४-१-६३)। **कचाटुरी ಕಚಾಟುರೀ.**

**कचेल ಕಚೇಲ** (न०) ಬರೆದ ಕಾಗದ (ಹಸ್ತಪ್ರತಿ)ಗಳನ್ನು ಒಟ್ಟುಗೂಡಿಸಿ ಕಟ್ಟುವ ದಾರ ಅಥವಾ ಅವನ್ನು ರಕ್ಷಿಸಿಡುವ ಚೀಲ. कच्यते बध्यतेऽनेन — कच (बन्धने) "एलच्" बाहु०। "लेखो वाचिकहारकः। वर्णदूतः स्वस्तिमुखः कचेलं तन्निबन्धनम्" त्रिकाण्ड०।

**कच्चट ಕಚ್ಚಟ** (वि०) ಕೆಟ್ಟದಾಗಿರುವ ವಸ್ತು. कुत्सितं चटति—चटे (वर्षावरणयोः) "अच्" (३-१-१३४)। कोः कत् (६-३-१०२)।

**कच्चर ಕಚ್ಚರ** (वि०) 1. ಕೊಳೆಯಾಗಿರುವ, ಮಲಿನವಾಗಿರುವ, ಕಶ್ಮಲದಿಂದ ಕೂಡಿದ. कुत्सितं चरति — चर (गतौ) "अच्" (३-१-१३४)। कोः कत् (६-३-१०२)। "कच्चरं मलदूषितम्" अम०। 2. ಅಸಭ್ಯ, ದುರ್ಜನ. (न०) 3. ತಕ್ರ, ನೀರು ಬೆರಸಿದ ಮೊಸರು, ಮಜ್ಜಿಗೆ. "कच्चरं कुत्सिते तक्रे" हेम०।

**कच्चित् ಕಚ್ಚಿತ್** (अव्य०) 1. ಪ್ರಶ್ನೆ. "कच्चिन्न वाय्वादिरुपप्लवो वः श्रमच्छिदामाश्रमपादपानाम्" रघु० ५-६। 2. ತನಗೆ ಇಷ್ಟವಾದುದನ್ನು ತಿಳಿಯುವುದಕ್ಕಾಗಿ ಮಾಡುವ ಪ್ರಶ್ನೆ. "कच्चित्सौम्य प्रियसहचरी विद्युदालिङ्गति त्वाम्" मालती० ९-२५। 3. ಹರ್ಷ, ಸಂತೋಷ. 4. ಮಂಗಳ. कत् चित् अनयोः समाहारः।

**कच्चिदध्याय ಕಚ್ಚಿದಧ್ಯಾಯ** (पु०) ಮಹಾಭಾರತದ ಸಭಾಪರ್ವದ 5 ನೆಯ ಅಧ್ಯಾಯ. [ಈ ಅಧ್ಯಾಯದಲ್ಲಿ ನಾರದಮಹರ್ಷಿಯು ಧರ್ಮರಾಜನ ಕುಶಲಪ್ರಶ್ನೆಯನ್ನು ಮಾಡುವ ವ್ಯಾಜದಿಂದ ರಾಜನೀತಿಯನ್ನು ಹೇಳುವುದರಿಂದ ಇದಕ್ಕೆ ಈ ಹೆಸರು.] "कच्चिदर्थश्च कल्पन्ते धर्मे च रमते मनः। सुखानि चानुभूयन्ते मनश्च न विहन्यते॥ कच्चिदर्थं च धर्मं च कामं च भरतर्षभ। विभज्य काले कालज्ञः सदा वरद सेवसे॥ कच्चिद्राजगुणैः षड्भिः सप्तोपायांस्तथाऽनघ। बलाबलं तथा सम्यक् चतुर्दश परीक्षसे॥ कच्चिदात्मसमा वृद्धाः शुद्धाः सम्बोधनक्षमाः। कुलीनाश्चानुरक्ताश्च कृतास्ते वीरमन्त्रिणः"॥ ಈ ರೀತಿ ಈ ಅಧ್ಯಾಯದ 132 ಶ್ಲೋಕಗಳಲ್ಲಿ "कच्चित्" ಪದ ಪ್ರಯೋಗಪೂರ್ವಕ ಕುಶಲಪ್ರಶ್ನೆಯ ವ್ಯಾಜದಿಂದ ನೀತಿಯು ವಿವರಿಸಲ್ಪಟ್ಟಿರುವುದು.

**कच्छ ಕಚ್ಛ** (पु०) 1. ನೀರು ಹೆಚ್ಚಾಗಿರುವ ನದಿ ಕೆರೆ ಕೊಳಗಳ ಸಮೀಪಪ್ರದೇಶ, ಜೌಗುಭೂಮಿ. कं जलं छ्यति परिच्छिनत्ति — छो (छेदने) "कः" (३-२-३)। "आसेदिरे लावणसैन्धवीनां चमूचरैः कच्छभुवां प्रदेशाः" माघ० ३-८०। 2. ತಟ, ತೀರ, ದಡ. "दाशरथी भागीरथीकच्छमगच्छताम्" चं० रा०। 3. ನಂದಿಮರ. 4. ಆಮೆಯ ಚಿಪ್ಪು. 5. ಕಚ್ಚೆ, ನಡುಕಟ್ಟಿಗೆ ಸಿಕ್ಕಿಸುವ ಉಡುವ ಪಂಚೆಯ ತುದಿ. 6. ಹಡಗಿನ ಒಂದು ಭಾಗ. 7. ಮುಖಸಂಪುಟ. (स्त्री०) **–च्छा – ಚ್ಛಾ.** 8. ವಾರಾಹಿ ಗಿಡ, ಹಂದಿಗೆಡ್ಡೆ. 9. ಜೀರುಂಡೆ. "कच्छः स्यादनूपे तुन्नकद्रुमे। नौकाङ्गे पुंसि वाराह्यां चीरिकायां च योषिति" मेदि०।

**कच्छप ಕಚ್ಛಪ** (पु०) 1. ಕೂರ್ಮ, ಆಮೆ. कच्छेन कर्परेण पाति इतराङ्गानि — पा (रक्षणे) "कः" (३-२-४)। कच्छमात्मनो मुखसंपुटं पाति वा। ಆಮೆಯು ತನ್ನ ಮುಖವನ್ನು ಚಿಪ್ಪಿನೊಳಕ್ಕೆ ಸೇರಿಸಿ ರಕ್ಷಿಸಿಕೊಳ್ಳುವುದರಿಂದ ಈ ಹೆಸರು. 2. ಕುಬೇರನ ನವನಿಧಿಗಳಲ್ಲೊಂದು. 3. ಜಟ್ಟಿಯ ಬಾಹುಯುದ್ಧದ ಒಂದು ಭೇದ. (स्त्री०) **–पी – ಪೀ.** 4. ಹೆಣ್ಣು ಆಮೆ. 5. ಒಂದು ಕೆಟ್ಟರೋಗ. 6. ಸರಸ್ವತಿಯ ವೀಣೆ. "कच्छपी वल्लकीभेदे दुलौ क्षुद्रगदान्तरे। पुंसि निध्यन्तरे कूर्मे मल्लबन्धान्तरेऽपि च" मेदि०।

**कच्छभू ಕಚ್ಛಭೂ** (स्त्री०) ನೀರು ಹೆಚ್ಚಾಗಿರುವ ಕೆರೆ ಕೊಳಗಳ ಸಮೀಪ ಪ್ರದೇಶ, ಜೌಗುಭೂಮಿ. "आसेदिरे लावणसैन्धवीनां चमूचरैः कच्छभुवां प्रदेशाः" माघ० ३-८०।

**कच्छरुह ಕಚ್ಛರುಹ** (वि०) 1. ದಡದಲ್ಲಿ ಬೆಳೆಯುವ, ತೀರದಲ್ಲಿ ಹುಟ್ಟುವ. कच्छे तटे रोहति — रुह (बीजजन्मादौ) "कः" (३-१-१३५)। (स्त्री०) **–रुहा – ರುಹಾ.** 2. ಗರಿಕೆ ಹುಲ್ಲು. "विष्टरं तटकुशालिभिरद्भिः पाद्यमर्घ्यमथ कच्छरुहाभिः" नैष० ५-७।

**कच्छुर ಕಚ್ಛುರ** (वि०) 1. ಕಜ್ಜಿರೋಗವುಳ್ಳವನು. कच्छूरस्यास्ति "रः" ह्रस्वश्च (वा० ५-२-१०७)। 2. ಕಾಮುಕ, ಸ್ತ್ರೀಲಂಪಟ. (स्त्री०) **–रा – ರಾ.** 3. ನಸುಗುನ್ನಿಗಿಡ.

4. ಕಚೋರ. 5. ತೀಟಕಸಂಧಿ. 6. ವ್ಯಭಿಚಾರಿಣಿ. "कच्छुरा शूकशिम्ब्यां च शटीदुस्पर्शयोरपि। कच्छुरः पुंश्चले कच्छुयुक्ते च" मेदि०।

**कच्छुराक्षस ಕಚ್ಛುರಾಕ್ಷಸ** (न०) ಒಂದು ತೈಲ; ಇದರ ಅಭ್ಯಂಗಸ್ನಾನದಿಂದ ಕಜ್ಜಿ, ನವೆ, ಇತರ ಚರ್ಮವ್ಯಾಧಿಗಳು ಮತ್ತು ಕಿವುಡು ಈ ರೋಗಗಳು ವಾಸಿಯಾಗುವುವು. "दन्ती निम्बदलञ्चैभिः पृथक्कर्षमितैः पृथक्। कल्कीकृतैः पचेत्तैलं कटुप्रस्थहयोन्मितैः। अर्कसीहुण्डदुग्धेन पृथक्पलमितेन च। गोमूत्रस्याढकेनापि शनैर्मृद्वग्निना पचेत्। अभ्यङ्गेन हरेदेतत् कच्छुदुःसाध्यतामपि। पामानं च तथा कण्डूं त्वग्व्याधिबधिरानपि" भावप्र०।

**कच्छू ಕಚ್ಛೂ** (स्त्री०) ಕಜ್ಜಿ. कषति – कष (हिंसायाम्) "ऊः" छ च (उ० १-८४)।

**कच्छूरक ಕಚ್ಛೂರಕ** (पु०) ಕಚೋರ.

**कज्जल ಕಜ್ಜಲ** (न०) ಅಂಜನ, ಕಣ್ಣುಕಪ್ಪು, ಕಾಡಿಗೆ. कुत्सितं जलम् – कोः कत् (६-३-१०२)। कज्जलमस्यास्ति "अच्" (५-२-१२७)। "लाक्षालक्ष्म ललाटपट्टमभितः केयूरमुद्रा गले वक्त्रे कज्जलकालिमा नयनयोस्ताम्बूलरागोऽपरः" अमरु० ६०।

**कज्जलकेतु ಕಜ್ಜಲಕೇತು –ध्वज –ಧ್ವಜ** (पु०) ದೀಪ. कज्जलं केतुरिव ध्वज इव वास्य। "दीपस्तु स्नेहाशः कज्जलध्वजः" त्रिकाण्ड०।

**कञ्चुक ಕಂಚುಕ** (पु०) 1. ಕವಚ, ಅಂಗಿ. कञ्च्यते बध्यते – कचि (दीप्तिबन्धनयोः) "उकः" बाहु०। "महीभृतां महिमभृतां न संममुर्मुदोऽन्तरा वपुषि बहिश्च कञ्चुकाः" माघ० १७-२२। 2. ಲೋಹಮಯವಾದ ಯುದ್ಧಕವಚ. "पुराणि दुर्गाणि निशातमायुधं बलानि शूराणि घनाश्च कञ्चुकाः" माघ० १-४५। 3. ಹಾವಿನ ಸೋಲೆ, ಸರ್ಪದ ಮೈಮೇಲಿನ ಪೊರೆ. कञ्चते – कचि "उकः"। 4. ಪುತ್ರೋತ್ಸವಾದಿಸಂತೋಷಕಾಲದಲ್ಲಿ ಯಜಮಾನನ ಮೈಯಿಂದ ಭೃತ್ಯರು ಬಲಾತ್ಕಾರದಿಂದ ತೆಗೆದುಕೊಳ್ಳುವ ವಸ್ತ್ರ. 5. ಹೆಂಗಸರ ರವಿಕೆ. "कञ्चुकश्चोलवर्मणोः। वर्धापकगृहीताङ्गवसने वारवाणके। निर्मोके" हेम०।

**कञ्चुकित ಕಂಚುಕಿತ** (वि०) 1. ಕವಚತೊಟ್ಟಿರುವ. कञ्चुकोऽस्य सञ्जातः "इतच्" (५-२-३६)। 2. ಮುಚ್ಚಲ್ಪಟ್ಟ, ಮರೆಸಲ್ಪಟ್ಟ. "कोसलसुताकुमारभावकञ्चुकितकारणाकार" रघु० ग०।

**कञ्चुकिन् ಕಂಚುಕಿನ್** (पु०) 1. ರಾಜನ ಅಂತಃಪುರದ ಅಧಿಕಾರಿ, ಅಂತಃಪುರದ ರಕ್ಷಕ. कञ्चुकोऽस्यास्ति "इनिः" (५-२-११५)। ಕಂಚುಕಿಯು ಬ್ರಾಹ್ಮಣನಾಗಿದ್ದು ಅಂತಃಪುರದಲ್ಲಿ ಧಾರಾಳವಾಗಿ ಸಂಚರಿಸುವವನೂ ಸಕಲ ಸದ್ಗುಣಗಳಿಂದ ಕೂಡಿದವನೂ ಸಕಲಕಾರ್ಯಗಳಲ್ಲೂ ಸಮರ್ಥನೂ ಆಗಿರಬೇಕು. "अन्तःपुरचरो वृद्धो विप्रो गुणगणान्वितः। सर्वकार्यार्थकुशलः कञ्चुकीत्यभिधीयते"। "अन्तः कञ्चुकिकञ्चुकस्य विशति त्रासादयं वामनः" रत्ना० २-३। 2. ದ್ವಾರಪಾಲಕ. 3. ಸರ್ಪ, ಹಾವು. 4. ಜಾರ, ವಿಟ, ವ್ಯಭಿಚಾರಿ. "कञ्चुकी भुजगे षिद्गे मल्ले जाङ्गलिकद्रुमे" विश्व०। 5. ಬಾರ್ಲಿ ಅಕ್ಕಿ. 6. ಅಗುರುವೃಕ್ಷ. 7. ಚಣಕ, ಕಡಲೆ. राजनि०। 8. ಜಟ್ಟಿ, (वि०) 9. ಕಂಚುಕವನ್ನು ಧರಿಸಿರುವವನು, ಅಂಗಿಯನ್ನು ತೊಟ್ಟಿರುವವನು.

**कञ्चुकीय ಕಂಚುಕೀಯ** (पु०) ಕಂಚುಕಿ, ರಾಜನ ಅಂತಃಪುರದ ರಕ್ಷಕ.

**कञ्चुलिका ಕಂಚುಲಿಕಾ** (स्त्री०) ರವಿಕೆ, ಚೋಳ. कञ्च्यते बध्यतेऽनया—कचि (दीप्तिबन्धनयोः) "उलच्" बाहु०। "त्वं मुग्धाक्षि विनैव कञ्चुलिकया धत्से मनोहारिणीं लक्ष्मीमित्यभिधायिनि प्रियतमे तद्वीटिकासंस्पृशि" अमरु० २७।

**कञ्ज ಕಂಜ** (पु०) 1. ಬ್ರಹ್ಮ, ಚತುರ್ಮುಖ. कम् जले जायते – जनी (प्रादुर्भावे) "डः" (३-२-१०१)। "अप एव ससर्जादौ तासु वीर्यमवासृजत्। तदण्डमभवद्धैमं सहस्रांशुसमप्रभम्। तस्मिन् जज्ञे स्वयं ब्रह्मा सर्वलोकपितामहः" मनु० १-९। 2. ಕೇಶ, ಕೂದಲು. कम् शिरसि जायते। (न०) 3. ಪದ್ಮ, ಕಮಲ, ತಾವರೆ. 4. ಅಮೃತ. "कञ्जः केशे विरिञ्चे च कञ्जं पीयूषपद्मयोः" मेदि०।

**कञ्जज ಕಂಜಜ** (पु०) ಬ್ರಹ್ಮ, ಚತುರ್ಮುಖ. कञ्जात् विष्णोर्नाभिकमलात् जायते – जनी (प्रादुर्भावे) "डः" (३-२-९८)।

**कञ्जन ಕಂಜನ** (पु०) ಕಾಮ, ಮನ್ಮಥ. कं सुखं जनयति—जनी (प्रादुर्भावे) + णिच् "अण्" (३-२-१)।

**कञ्जनाभ ಕಂಜನಾಭ** (पु०) ವಿಷ್ಣು, ನಾರಾಯಣ. कञ्जं नाभौ यस्य। "तस्मा एवं जगत्स्रष्ट्रे प्रधानपुरुषेश्वरः। व्यज्येदं स्वेन रूपेण कञ्जनाभस्तिरोदधे" भाग० ३-९-४४।

**कञ्जर ಕಂಜರ** –जार –ಜಾರ (पुं०) 1. ಜಠರ, ಹೊಟ್ಟೆ. 2. ಸೂರ್ಯ. 3. ಬ್ರಹ್ಮ, ಚತುರ್ಮುಖ. 4. ಗಜ, ಆನೆ. 5. ಎಕ್ಕದಗಿಡ. 6. ಮುನಿ, ತಪಸ್ವಿ. कं जलं जृणाति – जॄ (वयोहानौ) "अच्" (३-१-१३४)। "अण्" वा। "कञ्जरो जठरे सूर्ये विरिञ्चौ वारणे मुनौ" मेदि०। 7. ಮಯೂರ, ನವಿಲು. कञ्ज "आरन्" "कञ्जारो मयूरः" (उ० ३-१३८)।

**कटि-गतौ** (भ्वा० पर० सक० से०) कण्टति। चकण्ट। अकण्टीत्। ಹೋಗು, ನಡೆ.

**कटी-गतौ** (भ्वा० पर० सक० से०) कटति। चकाट। अकटीत्, अकाटीत्। ಹೋಗು, ನಡೆ.

**कट ಕಟ** (पुं०) 1. ಹುಲ್ಲು ಬಿದಿರು ಮುಂತಾದುವುಗಳಿಂದ ತಯಾರಾಗಿರುವ ಚಾಪೆ. कटे (वर्षावरणयोः) "अच्" (३-१-१३४)। "वर्षासु विलग्नकटवत् तिष्ठन्नेवावसीदति" भा० सभा० १९-३। 2. ಆನೆಯ ಗಂಡಸ್ಥಳ, –ಕಪೋಲ. "कण्डूयमानेन कटं कदाचिद्वन्यद्विपेनोन्मथिता त्वगस्य" रघु० २-३७। 3. ಗಂಡಸ್ಥಳ, ಕಪೋಲ, ಕೆನ್ನೆ. 4. ಶರ, ಬಾಣ. 5. ಧನುಸ್ಸು, ಬಿಲ್ಲು. 6. ಸಮಯ, ಆಚಾರ. (पुंन०) 7. ಕಟಿಪ್ರದೇಶ, ಸೊಂಟ. 8. ಸಸ್ಯ, ಪೈರು, ಓಷಧಿವಿಶೇಷ. 9. ಶವ, ಮೃತಶರೀರ. 10. ಶವರಥ, ಶವವನ್ನು ಸಾಗಿಸುವ ಗಾಡಿ. (वि०)11. ಅತಿಶಯವಾದ, ಹೆಚ್ಚಾದ. (स्त्री०) –टी –ಟೀ. 12. ಹಿಪ್ಪಲಿ. "कटः श्रोणौ द्वयोः पुंसि किलिञ्जेऽतिशये शरे। समये गजगण्डे च पिप्पल्यां तु कटी मता" मेदि०।

**कटक ಕಟಕ** (पुंन०)1. ವಲಯ, ಬಳೆ, ಹಸ್ತಾಭರಣ. कटे (वर्षावरणयोः) "क्वुन्" (उ० २-३३)। "कटकानि भजन्ति चारुभिर्नवमुक्ताफलभूषणैर्भुजैः" माघ० १६-७७। 2. ಪರ್ವತದ ನಿತಂಬಪ್ರದೇಶ, ಬೆಟ್ಟದ ತಪ್ಪಲು ಪ್ರದೇಶ. ಬೆಟ್ಟದ ಮಧ್ಯಭಾಗ. "दन्तोज्ज्वलासु विमलोपलमेखलान्ताः सद्रत्नचित्रकटकासु बृहन्नितम्बाः" माघ० ४-४०। 3. ಸೇನೆಯ ಶಿಬಿರ. "आकुल्यकारि कटकस्तुरगेण तूर्णमश्वेति विद्रुतमनुद्रवताऽश्वमन्यम्" माघ० ५-५९, ६१। 4. ರಾಜಧಾನಿ. 5. ಆನೆಯ ಕೊಂಬಿನ ಆಭರಣ. 6. ಸೈನ್ಯ. 7. ಸಮುದ್ರದ ಉಪ್ಪು. 8. ಒರಿಸ್ಸಾ ಪ್ರಾಂತದ ರಾಜಧಾನಿ, –ಮುಖ್ಯಪಟ್ಟಣ. "कटकोऽस्त्री नितम्बोऽद्रेः दन्तिनां दन्तभूषणे। सामुद्रलवणे राजधानीवलययोरपि" मेदि०। "कटकस्त्वद्रिनितम्बे बाहुभूषणे। सेनायां राजधान्यां च" हेम०। 9. ಸೇನಾಸಮೂಹ. "स च दिग्विजयव्यापारक्रमेणागत्य चन्द्रभागानदीतीरे समावेशितकटको वर्तते" हितो०। 10. ಪರ್ವತದ ಪ್ರಸ್ಥಭೂಮಿ, ಬೆಟ್ಟದ ಸಮಭೂಮಿ. "नवनगवनलेखाश्याममध्याभिराभिः स्फटिककटकभूमिर्नाटयत्येष शैलः" माघ० ४-६५। "कटकं वलये सानौ राजधानीनितम्बयोः" विश्व०। 11. ಚಾಪೆ. 12. ಕಟಿಬಂಧ, ನಡುಕಟ್ಟು, ಡಾಬು. 13. ಚಕ್ರ, ಗಾಲಿ. 14. ಮಧ್ಯಭಾಗ. "स्वप्राणेश्वरनर्महर्म्यकटकातिथ्यग्रहायोत्सुकं पाथोदं निजकेलिसौधशिखरादारुह्य यत्कामिनी" नैष० २-१०४।

**कटकट ಕಟಕಟ** (पुं०) 1. ಮಹಾದೇವ, ಮಹೇಶ್ವರ. "नमो नाभाय नाभ्याय नमः कटकटाय च" भा० शान्ति० २९०-९०। 2. ಸಮುದ್ರದ ಉಪ್ಪು. वैज०।

**कटकर ಕಟಕರ –कर्मन् –ಕರ್ಮನ್** (पुं०)1. ಶೂದ್ರ ಸ್ತ್ರೀಯಲ್ಲಿ ಜಾರವೈಶ್ಯನಿಂದ ಹುಟ್ಟಿದ ಬೆರಕೆ ಜಾತಿಯವನು. "वैश्याद्वैदेहकं विप्रा क्षत्रकन्या तु मागधम्। शूद्रा तु करणं सैव जारात्कटकरं ततः" वैज०। 2. ಚಾಪೆಯನ್ನು ತಯಾರಿಸುವವನು. "उग्रः पारशवो दुर्गधनान्तः पुरपालनात्। अन्वर्थः स्यात् कटकरो द्वादशैतेऽनुलोमजाः" वैज०।

**कटकिन् ಕಟಕಿನ್** (पुं०)1. ಪರ್ವತ, ಬೆಟ್ಟ. (वि०)2. ಬಳೆಯನ್ನು ತೊಟ್ಟಿರುವ. कटकोऽस्यास्ति "इनिः" (५-२-११५)।

**कटकी ಕಟಕೀ** (स्त्री०) ಎಣ್ಣೆಯ ಕಾರ್ಖಾನೆ. "तैलिशाला यन्त्रगृहं पोटकी कटकी च सा" वैज०।

**कटकीय ಕಟಕೀಯ** (वि०) ಬಳೆಯನ್ನು ತಯಾರಿಸಲು ಉಪಯೋಗಿಸುವ ಚಿನ್ನ ಬೆಳ್ಳಿ ಮೊದಲಾದುದು. कटकाय हितम्–वा "छः" (५-१-४)। पक्षे "यत्" (५-१-२)। **कटक्यम् ಕಟಕ್ಯಮ್.**

**कटकृत् ಕಟಕೃತ್** (वि०) ಚಾಪೆಯನ್ನು ತಯಾರಿಸುವವನು. कटं करोति – डु कृञ् (करणे) "क्विप्" (३-२-६१)।

**कटकोल ಕಟಕೋಲ** (पुं०) ಪಡಿಗ, ಪೀಕದಾನಿ, ತಾಂಬೂಲ ರಸಾದಿಗಳನ್ನು ಉಗುಳುವ ಪಾತ್ರೆ. कटति वर्षति स्रवति– कटे (वर्षावरणयोः) "अच्" (३-१-१३४)। कटस्य निष्ठीवनजलस्य कोलो घनीभावो यत्र। "कटकोलः पतद्ग्रहः। पूगपीठं च" त्रिकाण्ड०।

**कटखादक ಕಟಖಾದಕ** (पुं०) 1. ಜಂಬುಕ, ನರಿ. 2. ವಾಯಸ, ಕಾಗೆ. 3. ಗಾಜಿನ ಪಾತ್ರೆ. (वि०) 4. ಸರ್ವಭಕ್ಷಕ, ಸಿಕ್ಕಿದುದೆಲ್ಲವನ್ನೂ ತಿನ್ನುವವನು. कटमपि

खादति — खाद् (भक्षणे) "ण्वुल्" (३-१-१३३)। "अथ कटखादकः। खादके काचकलशे बलिपुष्टे च जम्बुके" मेदि०।

**कटघोष ಕಟಘೋಷ** (पु०) ಪೂರ್ವದೇಶದಲ್ಲಿರುವ ಒಂದು ಗ್ರಾಮ, ಒಂದು ಗೊಲ್ಲರ ಹಳ್ಳಿ. कटप्रधानो घोषः। **कटनगरम् कटपल्ली कटपल्वलम्** ಇತ್ಯಾದಿ.

**कटघोषीय ಕಟಘೋಷೀಯ** (वि०) ಕಟಘೋಷ ಗ್ರಾಮಕ್ಕೆ ಸಂಬಂಧಿಸಿದ, ಕಟಘೋಷಗ್ರಾಮದಲ್ಲಿರುವ. कटघोष "छः" (४-२-१३९)। ಹೀಗೆಯೇ **कटनगरीयम् कटपल्लीयम् कटपल्वलीयम्** ಇತ್ಯಾದಿ.

**कटङ्कट ಕಟಂಕಟ** (पु०) 1. ಅಗ್ನಿ, ಬೆಂಕಿ. कटं कटति ज्वालया आवृणोति — कटे (वर्षावरणयोः) "खच्" बाहु०। मुमागमः (६-३-६७)। 2. ಶಿವ, ಈಶ್ವರ. 3. ಅಗ್ನಿಯಿಂದ ಹುಟ್ಟಿದ ಸುವರ್ಣ, ಚಿನ್ನ. 4. ಚಿತ್ರ ಮೂಲದಗಿಡ. 5. ಗಣಪತಿ.

**कटङ्कटेरी ಕಟಂಕಟೇರೀ** (स्त्री०) 1. ಹರಿದ್ರ, ಅರಶಿನ. कटङ्कटं वह्निजं सुवर्णं तत्कान्तिमीरयति — ईर (गतौ) "अण्" (३-२-१)। "ङीप्" (४-१-१५)। "कटङ्कटेरी हरिद्रा" त्रिकाण्ड०। 2. ಮರದರಿಶಿನ. "नीलोत्पलोशीरकटङ्कटेरी" सुश्रुत०।

**कटपूतन ಕಟಪೂತನ** (पुंस्त्री) ಪಿಶಾಚಿಗಳಲ್ಲೊಂದು ಭೇದ; ತನ್ನ ಕರ್ತವ್ಯವನ್ನು ಪಾಲಿಸದ ಕ್ಷತ್ರಿಯನು ಮೃತನಾದ ಮೇಲೆ ಹೊಂದುವ ಒಂದು ಜನ್ಮ. "वान्ताश्युल्कामुखः प्रेतो विप्रो धर्मात्स्वकाच्च्युतः। अमेध्यकुणपाशी च क्षत्रियः कटपूतनः" मनु० १२-७१। स्त्रियां **-पूतना -ಪೂತನಾ.** "संसक्ताकुलकेलयः किलकिलाकोलाहलैः संमदादुत्तालाः कटपूतनाप्रभृतयः सांराविणं कुर्वते" मालती० ५-११।

**कटप्रू ಕಟಪ್ರೂ** (पु०) 1. ಒಂದು ಜಾತಿಯ ಹುಳ. 2. ಶಿವ, ಈಶ್ವರ. 3. ರಾಕ್ಷಸ. कटे श्मशाने प्रवते — प्रुङ् (गतौ) "क्विप्"। 4. ವಿದ್ಯಾಧರ. (वि०) 5. ಪಗಡೆಯಾಟ ವಾಡುವವನು. "कटप्रूः पुंसि राक्षसे। विद्याधरे महादेवे तथा स्यादक्षदेवके" मेदि०।

**कट (टि) प्रोथ ಕಟ (ಟಿ) ಪ್ರೋಥ** (पु०) ಪಿರ್‍ರಗಳಮೇಲೆ ಎತ್ತರವಾಗಿರುವ ಮಾಂಸಪಿಂಡ. कटस्य कट्या वा प्रोथो मांसपिण्डः।

**कटभङ्ग ಕಟಭಂಗ** (पु०) 1. ಕೈಯಿಂದ ಧಾನ್ಯದ ತೆನೆಗಳನ್ನು ಕೊಯ್ಯುವುದು. कटानामोषधीनां भङ्गः छेदनम्। 2. ರಾಜನ ವಿನಾಶ. कटानां सैन्यानां भङ्गो नाशो यस्मात्।

**कटभी ಕಟಭೀ** (स्त्री०) 1. ಜ್ಯೋತಿಷ್ಮತೀಲತೆ, ಕಂಗೊಂಗೆಗಿಡ. कट इव भाति — भा (दीप्तौ) "कः" (३-२-१०१)। 2. ಸಿಡಿಲೊಲ್ಲದಗಿಡ, ಹರಿದ್ರಾಂಜನ ವೃಕ್ಷ. "कटभी वृक्षभेदेऽपि ज्योतिष्मत्यामपि स्त्रियाम्" मेदि०।

**कटभू ಕಟಭೂ** (स्त्री०) ಆನೆಯ ಕುಂಭಸ್ಥಳ ಅಥವಾ ಗಂಡಸ್ಥಳ. कटस्य भूः।

**कटम्ब ಕಟಂಬ** (पु०) 1. ವಾದಿತ್ರವೆಂಬ ಒಂದು ವಾದ್ಯ. कटे (वर्षावरणयोः) "अम्बच्" (उ० ४-८२)। 2. ಶರ, ಬಾಣ.

**कटम्भर ಕಟಂಭರ** (पु०) 1. ಸಿಡಿಲೊಲ್ಲದ ಗಿಡ, ಹರಿದ್ರಾಂಜನ ವೃಕ್ಷ. 2. ಹೆಮ್ಮರ, ತಿಗಡುಮರ. (स्त्री०) **-भरा -ಭರಾ.** 3. ಸಾರಣಿಗಿಡ, ಮುಳ್ಳು ಅಗಸೆಗಿಡ. 4. ಹೀರೆಗಿಡ. 5. ಕಟುಕರೋಹಿಣಿ. 6. ಹೆಣ್ಣಾನೆ. 7. ಕುರಟಗೆಗಿಡ. 8. ಹೆಣ್ಣಾಮೆ. 9. ಹೆಣ್ಣುಗುಬ್ಬಚ್ಚಿ.

**कटव्रण ಕಟವ್ರಣ** (पु०) ಭೀಮಸೇನ. कटः उत्कृष्टः व्रणो यस्य।

**कटाक्ष ಕಟಾಕ್ಷ** (पु०) ಕಡೆಗಣ್ಣಿನ ನೋಟ. कटं गण्डस्थलम् अक्षति — अक्षू (व्याप्तौ) "अच्" (३-१-१३४)। "निःशङ्कमन्याः सममाहितेर्ष्याः तत्रान्तरे जघ्नुरमुं कटाक्षैः" माघ० ३-१६।

**कटाक्षण ಕಟಾಕ್ಷಣ** (न०) ಕಡೆಗಣ್ಣಿನ ನೋಟದಿಂದ ಮಾಡುವ ಸಂಜ್ಞೆ. "कटाक्षणाज्जन्यजनैर्निजप्रजाः क्वचित्परीहासमचीकरत्तमाम्" नैष० १६-४८।

**कटायन ಕಟಾಯನ** (न०) ಲಾಮಂಚದ ಬೇರು. कटस्यायनमुत्पत्तिस्थानम्।

**कटार ಕಟಾರ** (पु०) ಕಾಮುಕ, ಸ್ತ್ರೀಲಂಪಟ. कटे (वर्षावरणयोः) "आरन्" बाहु०।

**कटाह ಕಟಾಹ** (पु०) 1. ಹುರಿಯುವ ಬಾಣಲಿ. कटमाहन्ति — आ+हन (हिंसागत्योः) "डः" (३-२-१०१)। 2. ತಲೆಯೆಲುಬಿನ ಚಿಪ್ಪು. "यद्दन्तिनः कटकटाहतटान्मिमङ्क्षोर्मङ्क्षूदपाति परितः पटलैरलीनाम्" माघ० ५-३७। 3. ಆಮೆಯ ಬೆನ್ನು, ಆಮೆಯ ಚಿಪ್ಪು. 4. ಒಂದು ದ್ವೀಪ. 5. ಎಣ್ಣೆ ಮೊದಲಾದುವನ್ನು ಕಾಯಿಸುವ ಕೊಪ್ಪರಿಗೆ. 6. ಅಗತಾನೆ ಕೊಂಬು ಹುಟ್ಟುತ್ತಿರುವ ಎಮ್ಮೆಯ ಹೆಂಗರು. "कटाहः कूर्मकर्परे। द्वीपस्य च प्रभेदे स्यात्तैलादेः पाकभाजने। जायमानविषाणाग्रमहिषी-

शावकेऽपि च" मेदि०। "कटाहः स्यात् कूर्मपृष्ठे कर्परे महिषीशिशौ" हेम०। 7. ಅಡಿಗೆಯ ಪಾತ್ರೆ. 8. ಸೂಪ, ತೊವ್ವೆ. "सूपे च पाकपात्रे च कटाहो महिषीशिशौ" त्रिकाण्ड०।

**कटि ಕಟಿ** (स्त्री०) 1. ಪಿರ್ರೆಯ ಮೇಲುಭಾಗ, ಕುಂಡಿಯ ಎತ್ತರವಾದ ಭಾಗ, ಸೊಂಟ. कटयते—कटे (वर्षावरणयोः) "इन्" (उ० ४-११७)। वा "ङीष्" (ग० ४-१-४५)। **-कटी -ಕಟೀ.** 2. ಹಿಪ್ಪಲಿ. "पिप्पल्यां तु कटी मता" मेदि०।

**कटितल ಕಟಿತಲ** (न०) ಸೊಂಟ, ನಡು.

**कटित्र ಕಟಿತ್ರ** (न०) 1. ಡಾಬು, ವಡ್ಯಾಣ, ನಡುಕಟ್ಟು. कटिं त्रायते—त्रैङ् (पालने) "कः" (३-२-४)। 2. ನಡುವಿನ ಸುತ್ತಲೂ ಕಟ್ಟುವ ಬಟ್ಟೆ. 3. ನಡುವಿಗೆ ಕಟ್ಟುವ ಗೆಜ್ಜೆಯ ಸರ, ಗೆಜ್ಜೆಯ ಉಡುದಾರ. "मृणालगौरं शितिवाससं स्फुरत्किरीटकेयूरकटित्रकङ्कणम्" भाग० ६-१६-३०।

**कटिदेश ಕಟಿದೇಶ** (पु०) ಸೊಂಟ, ನಡು.

**कटिन् ಕಟಿನ್** (पु०) ಪ್ರಶಸ್ತವಾದ ಗಂಡಪ್ರದೇಶವುಳ್ಳ ಆನೆ. प्रशस्तः कटोऽस्त्यस्य "इनिः" (५-२-११५)।

**कटिबन्ध ಕಟಿಬಂಧ** (पु०) ಡಾಬು, ವಡ್ಯಾಣ. कटिर्बध्यतेऽनेन — बन्ध (बन्धने) "घञ्" (३-३-१२१)।

**कटिमालिका ಕಟಿಮಾಲಿಕಾ** (स्त्री०) ಡಾಬು, ವಡ್ಯಾಣ. कटौ मालेव।

**कटिल्ल ಕಟಿಲ್ಲ** (पु०) ಹಾಗಲದ ಗಿಡ. कटे (वर्षावरणयोः) "इल्लः" बाहु०। स्वार्थे "कन्" (५-३-७५)। **कटिल्लकः ಕಟಿಲ್ಲಕಃ.**

**कटिशूल ಕಟಿಶೂಲ** (पु०) ಕಫ ಮತ್ತು ವಾತಗಳಿಂದ ಉಂಟಾದ ಸೊಂಟದ ನೋವು. कटिस्थं शूलम्। "कुष्टस्य भागमेकं तु पथ्याभागद्वयं तथा। उष्णोदकेन संपीत्वा कटिशूलविनाशनम्"।

**कटिशृङ्खला ಕಟಿಶೃಂಖಲಾ** (स्त्री०) ಗೆಜ್ಜೆಯ ನಡುಕಟ್ಟು, –ನಡುಪಟ್ಟಿ, ಡಾಬು, ವಡ್ಯಾಣ. "चित्तिका कटिशृङ्खला" हारा०।

**कटिसूत्र ಕಟಿಸೂತ್ರ** (न०) ಉಡುದಾರ, ನೂಲಿನ ಅಥವಾ ಚಿನ್ನ ಬೆಳ್ಳಿಯ ನಡುದಾರ. कटौ धार्यं सूत्रम्।

**कटीतल ಕಟೀತಲ** (पु०) 1. ಬಗ್ಗಿರುವ ಖಡ್ಗ, ಕತ್ತಿ. कटयां तलमास्पदं यस्य। "न्युब्जखङ्गः कटीतलः" त्रिकाण्ड०। (न०) 2. ಸೊಂಟ, ನಡು. कटयास्तलम्।

**कटीर ಕಟೀರ** (पु०) 1. ಗುಹೆ, ಗವಿ. कटे (वर्षावरणयोः) "ईरन्" (उ० ४-३०)। 2. ಕಟಿಪ್ರದೇಶದಲ್ಲಿರುವ ಗುಣಿ. 3. ನಿತಂಬ, ಕಟಿಪಶ್ಚಾದ್ಭಾಗ, ಸೊಂಟದ ಹಿಂಭಾಗ. स्वार्थे "कन्" (५-३-७५)। **-रकः -ರಕಃ.** "व्यचलन् विशङ्कटकटीरकस्थलीशिखरस्खलन्मुखरमेखलाकुलाः" माघ० १३-३७। "नितम्बः स्यात् कटीरकः" त्रिकाण्ड०।

**कटु ಕಟು** (पु०) 1. ಕಾರವೆಂಬ ಒಂದು ರಸ, ಆರು ವಿಧ ಭೋಜ್ಯರಸಗಳಲ್ಲೊಂದು. कटति आवृणोति रसनां मुखं च — कटे (वर्षावरणयोः) "उः" (उ० १-८)। (1) ಮಧುರ (ಸಿಹಿ), (2) ಲವಣ (ಉಪ್ಪು), (3) ಕಷಾಯ (ಒಗರು), (4) ಕಟು (ಕಾರ), (5) ಅಮ್ಲ (ಹುಳಿ) ಮತ್ತು (6) ತಿಕ್ತ (ಕಹಿ) ಇವು ಆರು ಭೋಜ್ಯರಸಗಳು. **ಕಟು (ಕಾರ) ರಸದ ಗುಣಗಳು, ಅದರ ಸೇವನೆಯಿಂದ ಉಂಟಾಗುವ ಕಾರ್ಯಗಳು:** ಕಟುರಸವು ಬಾಯನ್ನು ಶುದ್ಧಿ ಮಾಡುವುದು. ಅಗ್ನಿಶಕ್ತಿಯನ್ನುಂಟು ಮಾಡುವುದು. ಆಹಾರವನ್ನು ಶುದ್ಧಿ ಮಾಡುವುದು. ಮೂಗಿನಲ್ಲಿ ನೀರು ಸುರಿಸುವುದು. ಕಣ್ಣುಗಳನ್ನು ಕೆರಳಿಸುವುದು. ಇಂದ್ರಿಯಗಳಿಗೆ ಪಾಟವವುಂಟುಮಾಡುವುದು. ಊಟದಲ್ಲಿ ರುಚಿ ಹುಟ್ಟಿಸುವುದು. ನವೆಯನ್ನು ಹೋಗಲಾಡಿಸುವುದು. ವ್ರಣಗಳನ್ನು ಆರಿಸುವುದು. ಕ್ರಿಮಿಗಳನ್ನು ನಾಶಗೊಳಿಸುವುದು. ರಕ್ತವನ್ನು ಭೇದಿಸುವುದು. ಕಫವನ್ನು ಅಡಗಿಸುವುದು. ಇಷ್ಟು ಗುಣಗಳಿದ್ದರೂ ಕಾರವನ್ನು ಅತಿಯಾಗಿ ಉಪಯೋಗಿಸುವುದರಿಂದ ಮುಖವು ಬಾಡುವುದು. ಕಂಠವು ಒಣಗುವುದು. ಶರೀರದಲ್ಲಿ ಉರಿಯುಂಟಾಗುವುದು. ಬಲವು ಕುಂದುವುದು. ಬಾಯಾರುವುದು. ವಾತ ಮತ್ತು ಅಗ್ನಿಯು ಅಧಿಕವಾಗುವುದರಿಂದ ಭ್ರಮ, ಮದ, ನಡುಕಗಳು ಉಂಟಾಗಿ ಭುಜ ಪಕ್ಕೆಗಳು ಬೆನ್ನು ಇವುಗಳಲ್ಲಿ ವಾತವಿಕಾರವುಂಟಾಗುವುದು. चरक० सूत्र० २६-४४। 2. ಚೀಣದ ಕರ್ಪೂರ. 3. ಬೆಳ್ಳುಳ್ಳಿ. (न०) 4. ಅಕಾರ್ಯ, ಮಾಡಬಾರದ ಕಾರ್ಯ. 5. ದೂಷಣೆ, ನಿಂದೆ. कटति सदाचारमावृणोति। 6. ತ್ರಿಕಟು; ಶುಂಠಿ ಹಿಪ್ಪಲಿ ಮತ್ತು ಮೆಣಸು. (स्त्री०) 7. ಕಟುಕರೋಹಿಣಿ. 8. ಮೆಣಸು. 9. ಕರಿಸಾಸುವೆ. 10. ಪ್ರೇಂಕಣಗಿಡ. (वि०) 11. ಕಾರವಾದ. "कट्वम्ललवणात्युष्णतीक्ष्णरूक्षविदाहिनः। आहारा राजसस्येष्टाः दुःखशोकामयप्रदाः" गीता १७-९। 12. ಕ್ರೂರವಾದ. "वियोगभाजां हृदि कण्टकैः कटुनिधीयसे कर्णिशिरः स्मरेण यत्" नैष० १-७९। 13. ಸುವಾಸನೆಯುಳ್ಳ, ಸುಗಂಧವುಳ್ಳ. "सप्तच्छदक्षीरकटुप्रवाहमसह्यमाघ्राय मदं तदीयम्" रघु० ५-४८।

14. ಕಠಿನವಾದ, ಪರುಷವಾದ. "इति समगुणयोगप्रीतयस्तत्र पौराः श्रवणकटु नृपाणामेकवाक्यं विवव्रुः" रघु० ६-८५। 15. ಮಾತ್ಸರ್ಯವುಳ್ಳ, ಅಸೂಯೆಯುಳ್ಳ. 16. ತೀಕ್ಷ್ಣವಾದ, ಹರಿತವಾದ. "कटुः सुगन्धे तीक्ष्णे स्यादकार्ये मत्सरे रसे। कटुः प्रियङ्गुकटुकाराजिकास्वथ दूषणे। कटु प्रोक्तम्" विश्व०। स्त्रियां वा "ङीष्" (४-१-४४)। -टृवी -ಟ್ವೀ.

**कटुक ಕಟುಕ** (पु०) 1. ಕಾರ, ಕಟುರಸ. कटुरेव स्वार्थे "कन्" (५-३-७५)। "यो जिह्वाग्रं बाधते उद्वेगं जनयति शिरो गृह्णीते नासिकां च स्रावयति स कटुको रसः" सुश्रुत०। 2. ಪಡವಲಗಿಡ. 3. ಎಕ್ಕದಗಿಡ. 4. ಕುಟಜವೃಕ್ಷ, ಬೆಟ್ಟಮಲ್ಲಿಗೆ. (न०) 5. ಕರಿಸಾಸುವೆ. 6. ತ್ರಿಕಟುಕ; ಶುಂಠಿ ಮೆಣಸು ಮತ್ತು ಹಿಪ್ಪಲಿ. 7. ಅಪ್ರಿಯವಾದ ಮಾತು. "दुर्योधनश्च कर्णश्च कटुकान्यभ्यभाषताम्। इति सर्वमिदं राजन् आकुलं प्रतिभाति मे" भा० सभा० १०३-१८। (स्त्री०) **कटुका** ಕಟುಕಾ. ಕಟುಕರೋಹಿಣಿ. कटु संज्ञायां "कन्" (५-३-७५)।

**कटुकत्रय ಕಟುಕತ್ರಯ** (न०) ಕಾರ (ರಸ)ದ ಶುಂಠಿ ಹಿಪ್ಪಲಿ ಮತ್ತು ಮೆಣಸು ಈ ಮೂರು (ವಸ್ತುಗಳು).

**कटुकन्द ಕಟುಕಂದ** (पु०) 1. ನುಗ್ಗೆಮರ. कटुः कन्दो मूलमस्य। 2. ಹಸಿಶುಂಠಿ.

**कटुकालाबु (बू) ಕಟುಕಾಲಾಬು (ಬೂ)** (स्त्री०) ಕಹಿ ಸೋರೆಗಿಡ. कटुका अलाबुः (बूः)।

**कटुकीटक ಕಟುಕೀಟಕ** (पु०) ಸೊಳ್ಳೆ. कटुः तीक्ष्णः कीटकः।

**कटुक्वाण ಕಟುಕ್ವಾಣ** (पु०) ಟಿಟ್ಟಿಭಪಕ್ಷಿ. कटुः कर्कशः क्वाणः शब्दो यस्य।

**कटुग्रन्थि ಕಟುಗ್ರಂಥಿ** (न०) 1. ಹಿಪ್ಪಲಿಯ ಬೇರು. 2. ಶುಂಠಿ. कटुस्तीव्रो ग्रन्थिर्यस्य।

**कटुचातुर्जातक ಕಟುಚಾತುರ್ಜಾತಕ** (न०) ಯಾಲಕ್ಕಿ ಲವಂಗಪಟ್ಟೆ ಲವಂಗಪತ್ರೆ ಮತ್ತು ಮೆಣಸು ಈ ನಾಲ್ಕರ ಸಮುದಯ.

**कटुतिक्तक ಕಟುತಿಕ್ತಕ** (पु०) ಭೂನಿಂಬವೃಕ್ಷ, ನೆಲ ಬೇವಿನ ಮರ. कटुश्चासौ तिक्तश्च। अल्पार्थे "कन्" (५-३-८५)।

**कटुतिक्ता ಕಟುತಿಕ್ತಾ** (स्त्री०) ಕಹಿ ಸೋರೆಗಿಡ.

**कटुतुम्बी ಕಟುತುಂಬೀ** (स्त्री०) ಕಹಿ ಸೋರೆಗಿಡ. कटुश्चासौ तुम्बी च।

**कटुत्रय ಕಟುತ್ರಯ** (न०) ಕಾರವಾದ ಶುಂಠಿ ಹಿಪ್ಪಲಿ ಮತ್ತು ಮೆಣಸು. कटूनां त्रयम्।

**कटुत्रिक ಕಟುತ್ರಿಕ** (न०) ಶುಂಠಿ ಹಿಪ್ಪಲಿ ಮತ್ತು ಮೆಣಸು. कटूनां त्रिकम्।

**कटुत्व ಕಟುತ್ವ** (न०) 1. ಕಾರ. 2. ಚುರುಕಾಗಿರುವಿಕೆ. कटोर्भावः "त्वः" (५-१-११९)। "तल्" -ता -ತಾ.

**कटुपाक ಕಟುಪಾಕ** (पु०) ಕಾರವಾಗುವಂತೆ ಇಳಿಸುವ ಪಾಕ.

**कटुभङ्ग ಕಟುಭಂಗ** (पु०) ಶುಂಠಿ. कटुः भङ्गः एकैकदेशो यस्य।

**कटुभद्र ಕಟುಭದ್ರ** (पु०) ಶುಂಠಿ. कटुरपि भद्रः हितकारी।

**कटुमञ्जरिका ಕಟುಮಂಜರಿಕಾ** (स्त्री०) ಉತ್ತರಣೆ ಗಿಡ. कटुः मञ्जरी अस्त्यस्याः।

**कटुमोद ಕಟುಮೋದ** (पु०) ದವನ. कटुः सुरभिः मोदोऽस्य।

**कटुर ಕಟುರ** (न०) ತಕ್ರ, ಮಜ್ಜಿಗೆ, ನೀರುಬೆರಸಿದ ಮೊಸರು. कटति गुणान्तरं वर्षति — कटे (वर्षावरणयोः) "उरच्" (उ० १-४१)।

**कटुरव ಕಟುರವ** (पु०) 1. ಕಠಿನವಾದ ಶಬ್ದ, ಕರ್ಕಶ ಧ್ವನಿ. कटुः परुषः रवः शब्दः। 2. ಮಂಡೂಕ, ಕಪ್ಪೆ. कटुः परुषः रवो यस्य। स्त्रियां जाति० "ङीष्" (४-१-६३)। -रवी -ರವೀ. (वि०) 3. ಕಠಿನವಾದ ಶಬ್ದವುಳ್ಳ, ಕರ್ಕಶ ಧ್ವನಿಯುಳ್ಳ.

**कटुरोहिणी ಕಟುರೋಹಿಣೀ** (स्त्री०) ಕಟುಕ ರೋಹಿಣಿ. कटुश्चासौ रोहिणी च। "कटुः कटम्भराऽशोका रोहिणी कटुरोहिणी" अम०।

**कटुवर्ग ಕಟುವರ್ಗ** (पु०) ಕಟು (ಕಾರ) ರಸವುಳ್ಳ ವಸ್ತುಗಳ ಸಮುದಾಯ, ಕಟುವಸ್ತುಗಳ ಪಂಗಡ. **ಕಟುವರ್ಗಕ್ಕೆ ಸೇರಿದ ವಸ್ತುಗಳು:** ಹಿಪ್ಪಲಿಗಿಡ, ಹಿಪ್ಪಲಿಬೇರು, ಚವ್ಯ, ಚಿತ್ರಮೂಲ, ಹಸಿಶುಂಠಿ, ಮೆಣಸು, ಗಜಹಿಪ್ಪಲಿ, ಹರೇಣು (ರೇಣುಕ), ಯಾಲಕ್ಕಿ, ಅಜವಾನ (ಓಮ), ಕೊಡಸಿಗೆ ಹಣ್ಣು, ಅಗುರು ಶುಂಠಿ, ಜೀರಿಗೆ, ಸಾಸುವೆ, ಇಂಗು, ಭಾರಂಗಿ, ಅತಿಬಜೆ, ಬಜೆ, ವಾಯಿವಿಳಂಗ, ಕಟುಕ ರೋಹಿಣಿ, ಈಶ್ವರಿಹಂಬು, ಬಿಳಿಯಹೂವಿನ ಲಕ್ಕಳಿ, ಮರುಗ, ಬಿಳಿಯ ಗಗ್ಗರ, ಮಾರವಳಿ ಹುಲ್ಲು, ಸುರಸುರಕೆ, ನಾರಂಬೇಳೆ, ಕಿರಿಯ ಶಿವನಿ, ಲಕ್ಕಿ, ಉಂದುರು (ಮೂಷಕ), ಕರ್ಣಿಕಾ (ತಾವರೆಯ ಬೀಜಕೋಶ), ನುಗ್ಗೆ, ಕೆಂಪುಹೂವಿನ ನುಗ್ಗೆ, ಮೂಲಂಗಿ, ಬೆಳ್ಳುಳ್ಳಿ, ಕಲ್ಲುಹೂವು, ಚಂಗಲು

ಕೋಷ್ಠ, ದೇವದಾರು, ಬಾಹುಜಿಗೆ, ಕರಿಕಚೋರ, ಗುಗ್ಗುಳ, ಕೊನ್ನಾರಿ, ನೀರುಹಿಪ್ಪಲಿ ಇತ್ಯಾದಿ ಕಟುವರ್ಗಕ್ಕೆ ಸೇರಿದುವು.

**कट्वस्नेह ಕಟುಸ್ನೇಹ** (पुं०) ಬಿಳಿಸಾಸುವೆ. कटुः स्नेहोऽस्य।

**कटूत्कट ಕಟೂತ್ಕಟ** (नं०) ಹಸಿಶುಂಠಿ. कटुषु वस्तुषु उत्कटम्।

**कटोल ಕಟೋಲ** (पुं०) 1. ಚಂಡಾಲ, ನಿಮ್ನಜಾತಿಯವನು. कटे (वर्षावरणयोः) "कोलच्" (उ० १-६६)। 2. ಕಟು (ಕಾರ) ರಸ. (वि०) 3. ಕಾರವಾಗಿರುವ.

**कटोलवीणा ಕಟೋಲವೀಣಾ** (स्त्री०) ಚಂಡಾಲನು ಬಾರಿಸುವ ವೀಣೆ.

**कट्टार ಕಟ್ಟಾರ** (पुं०) ಕತ್ತಿ, ಖಡ್ಗ.

**कट्फल ಕಟ್ಫಲ** (पुं०) ಶಿವನಿಯ ಮರ ಅಥವಾ ತೇಗದ ಮರ. कटूनि फलानि अस्य।

**कट्वङ्ग ಕಟ್ವಂಗ** (पुं०) ಹೆಮ್ಮರ, ತಿಗಡು ಮರ. कटु अङ्गमस्य।

**कट्वर ಕಟ್ವರ** (नं०) 1. ವ್ಯಂಜನ. कटे (वर्षावरणयोः) "ष्वरच्" (उ० ३-१)। "कट्वरं व्यञ्जनम्" सि० कौ०। 2. ಮಜ್ಜಿಗೆ, ನೀರುಬೆರಸಿದ ಮೊಸರು. 3. ಮೊಸರಿನ ರಸ, ಮೊಸರಿನ ಸಾರ.

**कठ-कृच्छ्रजीवने** (भ्वा० पर० अक० से०) ಕಷ್ಟದಿಂದ ಜೀವಿಸು. कठति। अकठीत्, अकाठीत्। कठिनम्। कठोरः।

**कठ ಕಠ** (पुं०) 1. ಒಬ್ಬ ಋಷಿ, ವೈಶಂಪಾಯನರ ಶಿಷ್ಯ. ಕೃಷ್ಣದ್ವೈಪಾಯನರು (ವೇದವ್ಯಾಸರು) ಸಮಷ್ಟಿರೂಪ ದಿಂದಿದ್ದ ವೇದವನ್ನು ಋಗ್ಯಜುಃಸಾಮಾಥರ್ವಗಳೆಂಬ ನಾಲ್ಕು ಭಾಗಗಳಾಗಿ ಮಾಡಿದನಂತರ ಯಜುರ್ವೇದ ವನ್ನು ವೈಶಂಪಾಯನಋಷಿಗೆ ಉಪದೇಶಿಸಿದರು. ಮುಂದೆ ವೈಶಂಪಾಯನರು ಅವರ ಶಿಷ್ಯರಿಗೆ ಉಪದೇಶಿಸಿದರು. (पु० ब० व०) 2. ವೈಶಂಪಾಯನಋಷಿಯ ಒಂಬತ್ತು ಮಂದಿ ಶಿಷ್ಯರಲ್ಲಿ ಒಬ್ಬರಾದ ಕಠಮಹರ್ಷಿಯಿಂದ ಪ್ರೋಕ್ತ ವಾದ ಯಜುರ್ವೇದದ ಭಾಗವನ್ನು ಅಧ್ಯಯನ ಮಾಡು ವವರು. कठन प्रोक्तमधीयते — कठ "णिनिः" (४-३-१०४)। "अण्" (४-२-५९)। तयोर्लुक् (४-२-६४)। (४-३-१०७)। ವೈಶಂಪಾಯನಋಷಿಯ ಒಂಬತ್ತು ಮಂದಿ ಶಿಷ್ಯರು: (1) आलम्बिः, (2) कलिङ्गः, (3) कमलः, (4) ऋचाभः, (5) आरुणिः, (6) ताण्ड्यः, (7) श्यामायनः, (8) कठः, (9) कलापी।

**कठमर्द ಕಠಮರ್ದ** (पुं०) ಶಿವ, ಈಶ್ವರ. कठं कष्टजीवनं मृद्नाति — मृद (क्षोदे) "अण्" (३-२-१)।

**कठर ಕಠರ** (वि०) ಕಠಿನವಾದ, ಗಟ್ಟಿಯಾದ. कठ "अरः" बाहु०।

**कठिका ಕಠಿಕಾ** (स्त्री०) ಲೇಖನಿ, ಬರೆಯುವಕಡ್ಡಿ.

**कठिञ्जर ಕಠಿಂಜರ** (पुं०) ತುಲಸಿ. कठिनं जरयति—जृ (वयोहानौ) + णिच् "खच्" मुम् च। बाहु०। पृषो०।

**कठिन ಕಠಿನ** (वि०) 1. ಕರ್ಕಶವಾದ, ಗಟ್ಟಿಯಾದ. कठ (कृच्छ्रजीवने) "इनच्" (उ० २-५०)। "उद्धृताः कठिनकुचस्थलाभिघातात्" माघ० ८-४०। 2. ಕ್ರೂರ ನಾದ, ದಯೆಯಿಲ್ಲದ. "परित्यक्तं सर्वं हसितपठितं पञ्जरशुकैः तवावस्था चेयं विसृज कठिने मानमधुना" अमरु० ७। 3. ಮನಸ್ಸಿಗೆ ನೋವುಂಟುಮಾಡುವ. 4. ನಿಶ್ಚಲನಾದ, ಸ್ತಬ್ಧನಾದ, 5. ತೀವ್ರವಾದ, ತೀಕ್ಷ್ಣ ವಾದ, ಸಹಿಸಲಶಕ್ಯವಾದ. "नितान्तकठिनां रुजं मम न वेद सा मानसीं प्रभावविदितानुरागमवमन्यतेवापि माम्" विक्र० २-११। (नं०) 6. ಸ್ಥಾಲಿ, ಅಡಿಗೆ ಮಾಡುವ ಪಾತ್ರೆ. (स्त्री०) —ना —ನಾ. 7. ಶುದ್ಧಿಮಾಡಲ್ಪಟ್ಟ ಗಟ್ಟಿಯಾದ ಸಕ್ಕರೆ, ಬತ್ತಾಸು. —नी —ನೀ. 8. ಲೇಖನಿ, ಬರೆಯುವಕಡ್ಡಿ, ಸೀಸದಕಡ್ಡಿ ಮೊದಲಾದುದು. "कठिनमपि निष्ठुरे स्यात्स्तब्धेऽपि त्रिषु नपुंसकं स्थाल्याम्" मेदि०। "गुणिगणगणनारम्भे न पतति कठिनी ससंभ्रमा यस्य" हितो०।

**कठिनक ಕಠಿನಕ** (पुं०) ಧಾನ್ಯ ಸಕ್ಕರೆ ಮೊದಲಾದುವನ್ನು ತೋಡಿ ಮತ್ತೊಂದಕ್ಕೆ ಹಾಕಲು ಅನುಕೂಲವಾದ ಮೋಟು ಹಿಡಿಯ ತೋಡುಕೈ, ಸೌಟಿನ ಆಕಾರದ ಅದ್ದುಪಾತ್ರೆ.

**कठिनचित्त ಕಠಿನಚಿತ್ತ, —हृदय —ಹೃದಯ** (नं०) 1. ಕಲ್ಲುಮನಸ್ಸು, ಗಟ್ಟಿಮನಸ್ಸು, ದಯೆಯಿಲ್ಲದ ಮನಸ್ಸು. (वि०) 2. ಕಲ್ಲುಮನಸ್ಸುಳ್ಳ, ಗಟ್ಟಿಮನಸ್ಸುಳ್ಳ, ದಯೆ ಯಿಲ್ಲದ. कठिनं चित्तं हृदयं वा यस्य।

**कठिनता ಕಠಿನತಾ** (स्त्री०) 1. ಕರ್ಕಶವಾಗಿರುವಿಕೆ, ಗಟ್ಟಿ ಯಾಗಿರುವಿಕೆ. 2. ಕ್ರೂರನಾಗಿರುವಿಕೆ, ನಿರ್ದಯನಾಗಿರು ವಿಕೆ. 3. ನಿಶ್ಚಲವಾಗಿರುವಿಕೆ, ಧೃಢವಾಗಿರುವಿಕೆ. 4. ತೀಕ್ಷ್ಣ ವಾಗಿರುವಿಕೆ, ತೀವ್ರವಾಗಿರುವಿಕೆ. कठिनस्य भावः "तल्" (५-१-११९)। "त्वः" (५-१-११९)। **कठिनत्वम् ಕಠಿನತ್ವಮ್.** "वक्रतां न ययतुः कुचकुम्भौ सुभ्रुवः कठिनतातिशयेन" माघ० १०-४७।

**कठिनपृष्ठ ಕಠಿನಪೃಷ್ಠ** (पुं०) ಕೂರ್ಮ, ಆಮೆ. कठिनं पृष्ठमस्य।

**कठिनिका ಕಠಿನಿಕಾ** (स्त्री०) ಲೇಖನಿ, ಬರೆಯುವಕಡ್ಡಿ, ಸೀಸದಕಡ್ಡಿ ಮೊದಲಾದುದು. कठिनी स्वार्थे "कन्"।

**कठिनी ಕಠಿನೀ** (स्त्री०) "कठिन" ಪದದಲ್ಲಿ ನೋಡಿ.

**कठिनीकृत ಕಠಿನೀಕೃತ** (वि०) ಗಟ್ಟಿಯಾಗಿಮಾಡಲ್ಪಟ್ಟ. अकठिनं कठिनं सम्पद्यमानं कृतम् — कठिन "च्विः" (५-४-५०)। अस्य "ईत्" (७-४-३२)।

**कठिनीभूत ಕಠಿನೀಭೂತ** (वि०) 1. ಗಟ್ಟಿಯಾಗಿ ಆಗಿರುವ. अकठिनं कठिनं सम्पद्यमानं भूतम् — कठिन "च्विः" (५-४-५०)। अस्य "ईत्" (७-४-३२)। 2. ಕ್ರೂರನಾಗಿ ಆಗಿರುವ, ದಯೆಯಿಲ್ಲದವನಾಗಿರುವ.

**कठिल्लक ಕಠಿಲ್ಲಕ** (पु०) 1. ಹಾಗಲಗಿಡ. 2. ಕರ್ಗೋಲೆ ಗಿಡ. 3. ಕೊಮ್ಮೆಗಿಡ. कठ (शोके) "इल्लः" बाहु०। स्वार्थे "कन्" (५-३-७५)। "कठिल्लकस्तु पर्णाशे वर्षाभूकारवेल्लयोः" मेदि०।

**कठेर ಕಠೇರ** (वि०) ದರಿದ್ರ, ಕಷ್ಟಜೀವಿ, ಜೀವನಕ್ಕಿಲ್ಲದೆ ತೊಂದರಪಡುತ್ತಿರುವವನು. कठ (कृच्छ्रजीवने) "एरक्" (उ० १-५८)।

**कठेरु ಕಠೇರು** (पु०) ಚಾಮರದ ಗಾಳಿ. कठ (कृच्छ्रजीवने) "एरङ्" उरुच बाहु०।

**कठोर ಕಠೋರ** (वि०) 1. ಕಠಿನವಾದ, ಗಟ್ಟಿಯಾದ. कठ (कृच्छ्रजीवने) "ओरन्" (उ० १-६४)। "कठोरास्थिग्रन्थिव्यतिकरघणात्कारमुखरः खरस्नायुच्छेदक्षणविहितवेगव्युपरमः" मालती० ५-३४। 2. ಕ್ರೂರವಾದ, ದಯೆಯಿಲ್ಲದ, ಕಲ್ಲುಎದೆಯ. "अयि कठोर यशः किल ते प्रियं किमयशो ननु घोरमतः परम्" उ० रा० ३-२७। 3. ಪೂರ್ಣವಾದ, ತುಂಬಿದ, ಸಮಗ್ರವಾದ. "आतङ्कस्फुरितकठोरगर्भगुर्वीं क्रव्याद्भ्यो बलिमिव दारुणः क्षिपामि" उ० रा० १-४९। 4. ಚುರುಕಾದ, ತೀಕ್ಷ್ಣವಾದ. "अखिलकलाकलापालोचनकठोरमतिभिः" काद०। 5, ಪರಿಪಕ್ವವಾದ, ಚೆನ್ನಾಗಿ ಬಲಿತಿರುವ, ಪೂರ್ತಿಯಾಗಿ ಬೆಳೆದಿರುವ. "स तप्तकार्तस्वरभास्वराम्बरः कठोरताराधिपलाञ्छनच्छविः" माघ० १-२०, १७-११।

**कठोरचित्त ಕಠೋರಚಿತ್ತ —हृदय —ಹೃದಯ** (वि०) 1. ಕ್ರೂರವಾದ ಮನಸ್ಸುಳ್ಳ. 2. ದಯೆಯಿಲ್ಲದ, ಕಲ್ಲುಮನಸ್ಸುಳ್ಳ, ಗಟ್ಟಿಮನಸ್ಸಿನ. कठोरं कठिनं चित्तं हृदयं वा यस्य। "वत्सं कठोरहृदये नयनाभिरामं रामं विना न खलु तिष्ठति जीवितं मे" चं०रा०।

**कठोरता ಕಠೋರತಾ** (स्त्री०) 1. ಕಠಿನವಾಗಿರುವಿಕೆ, ಗಟ್ಟಿಯಾಗಿರುವಿಕೆ. 2. ಕ್ರೂರನಾಗಿರುವಿಕೆ. 3. ದಯೆಯಿಲ್ಲದಿರುವಿಕೆ. 4. ದೃಢವಾಗಿರುವಿಕೆ. 5. ಉಗ್ರವಾಗಿರುವಿಕೆ, ಭಯಂಕರವಾಗಿರುವಿಕೆ. कठोरस्य भावः "तल्" (५-१-११९)। "त्वः" (५-१-११९)। **कठोरत्वम् ಕಠೋರತ್ವಮ್.**

**कठोरित ಕಠೋರಿತ** (वि०) 1. ಕ್ರೂರವಾಗಿ ಆಗಿರುವ. 2. ಭಯಂಕರವಾಗಿ ಆಗಿರುವ. कठोरोऽस्य संजातः "इतच्" (५-२-३६)। "क्रूरमजनि कुटिलभ्रु गुरुभ्रुकुटीकठोरितललाटमाननम्" माघ० १५-८।

**कड-मदे** (भ्वा० पर० अक० से०) 1. ಮದಹೊಂದು. 2. ವ್ಯಾಕುಲನಾಗು. कडति। अकडीत्, अकाडीत्।

**कड ಕಡ** (पु०) 1. ಮದ. कड (मदे) घनर्थे "कः" (वा० ३-३-५८)। (वि०) 2. ಮೂಗ, ಮೂಕ, ಮಾತಾಡದವನು. कड (मदे) "अच्" (३-१-१३४)। 3. ಮೂರ್ಖ, ಮೂಢ, ಮಂಕ, ವಿವೇಕವಿಲ್ಲದವನು.

**कडक ಕಡಕ** (न०) ಒಂದು ವಿಧ ಉಪ್ಪು. कड (मदे) "अच्" (३-१-१३४)। "कन्" (५-३-७५)।

**कडङ्कर ಕಡಂಕರ —ङ्गर —ಗರ** (न०) ಧಾನ್ಯವಿಲ್ಲದ ಹೊಟ್ಟು, ಜಳ್ಳು, ಮತ್ತು ಉದ್ದು, ಹೆಸರು ಇವುಗಳ ಕಡ್ಡಿ. कडति माद्यति—कड (मदे) घनर्थे "कः" (वा० ३-३-५८)। कडं करोति — डु कृञ् (करणे) "खच्" निपा० (५-१-६९)। ,मुमागमः (६-३-६७)। गिरति — गॄ (निगरणे) "अच्" (३-१-१३४)। कडस्य गरः।

**कडङ्करीय ಕಡಂಕರೀಯ —ङ्गरीय —ಗರೀಯ** (पु०) ಧಾನ್ಯದ ಹೊಟ್ಟು ಕಡ್ಡಿಗಳನ್ನು ತಿನ್ನುವ ವೃಷಭ ಮೊದಲಾದುವು. कडङ्कर (ङ्गर) मर्हति "छः" (५-१-६९)। कडस्य गरो वा तमर्हति "छः"। "कडङ्करीयरोधो हि कलमोत्सेधकारणम्" याद० २२-९। "नीवारपाकादि कडङ्गरीयैः" रघु० ५-९।

**कडम्ब ಕಡಂಬ** (पु०) 1. ಅಗ್ರಭಾಗ, ಕೊನೆಯ ಭಾಗ. कडि "अम्बच्" (उ० ४-८२)। 2. ತರಕಾರಿಯ ಕಾವು.

**कडार ಕಡಾರ** (पु०) 1. ದಾಸ, ಸೇವಕ. 2. ಪಿಂಗಳ ವರ್ಣ, ಕಂದುಹಳದಿ ಬಣ್ಣ, ಗೊರೋಚನದ ಬಣ್ಣ. गड (सेचने) "आरन्" कडादेशश्च (उ० ३-१३५)। (वि०) 3. ಪಿಂಗಳ ವರ್ಣದ, ಕೆಂಪುಬೆರೆತ ಹಳದಿ ಬಣ್ಣದ, ಕಂದುಹಳದಿ ಬಣ್ಣದ. "लीनाम्भोदतडित्कडारकुहरैर्विन्ध्याद्रिकूटैरिव"

उ० रा० ५-१४। "संविव्युरम्वरविकाशि चमूसमुत्थं पृथ्वीरजः करभकण्ठकडारमाशाः" माघ० ५-३। "कडारः पिङ्गले दासे" मेदि०। 4. ಗರ್ವಹೊಂದಿದ, ಕೊಬ್ಬಿದ. कड (मदे) "आरन्" बाहु०।

**कडि-मदे** (भ्वा० आत्म० अक० से०) कण्डते। अकण्डिष्ट। ಮದಹೊಂದು, ಗರ್ವಹೊಂದು.

**कडि-हर्षे तुषापकरणे च** (भ्वा० आत्म० सक० से०) कण्डते। अकण्डिष्ट। 1. ಹರ್ಷಿಸು, ಸಂತೋಷಪಡಿಸು. 2. ಧಾನ್ಯದ ಹೊಟ್ಟನ್ನು ಬೇರ್ಪಡಿಸು.

**कडि-भेदने** (चुरा० उभ० सक० से०) कण्डयति–ते। अचकण्डत्–त। ಕತ್ತರಿಸಿ ಪ್ರತ್ಯೇಕಿಸು, ಒಡೆದು ಬೇರ್ಪಡಿಸು.

**कडु-कार्कश्ये** (भ्वा० पर० अक० से०) ಕೃಶನಾಗು, ತೆಳ್ಳನಾಗು. कडुति। चकडु। अकड्डीत्।

**कण-शब्दे** (भ्वा० पर० सक० से०) 1. ಶಬ್ದಮಾಡು, ಧ್ವನಿಯುಂಟುಮಾಡು. 2. ಕೂಗಿಕೊಳ್ಳು, ಆರ್ತನಾದ ಮಾಡು.

**कण-गतौ** (भ्वा० पर० सक० से०) ಹೋಗು, ಹೊಂದು, ತಲುಪು. कणति। चकाण। अकणीत्, अकाणीत्।

**कण-निमीलने** (चुरा० उभ० अक० से०) ಕಣ್ಣುಮುಚ್ಚು. काणयति, –ते। काणयां बभूव, –आस, –चकार, चक्रे। अचीकणत्, –त। काणः। पक्षे कणति। चकाण। अकणीत्, अकाणीत्।

**कण ಕಣ** (पु०) 1. ಧಾನ್ಯದ ಒಂದು ಅಂಶ, ಕಾಳಿನ ಕಿರುನುಚ್ಚು. कण (निमीलने) "अच्" (३-१-१३४)। "कणान्वा भक्षयेदब्दं पिण्याकं वा सकृन्निशि। सुरापानापनुत्त्यर्थं वालवासा जटी ध्वजी" मनु० ११-९२। 2. ಬಹಳ ಸೂಕ್ಷ್ಮಾಂಶ, ಪರಮಾಣು. "रजःकणैः खुरोद्धूतैः स्पृशद्भिर्गात्रमन्तिकात्" रघु० १-८५। 3. ಲೇಶ, ಚೂರು, ಸೂಕ್ಷ್ಮಾಂಶ. "स चन्दनाम्भःकणकोमलैस्तथा वपुर्जलार्द्रापवनैर्न निर्ववौ" माघ० १-६५। 4. ನಿಷಾದನಿಂದ ದ್ರಾಮಿಡಿಯಲ್ಲಿ ಹುಟ್ಟಿದವನು. "निषादाद्ब्राह्मणी भेकं........घोली घर्घरं द्रमिडी कणम्" वैज०। 5. ಅಕ್ಕಿ ಒಡೆದ ನುಚ್ಚು. "चक्षुष्याः सक्तवः कणाः" वैज०। (स्त्री०) –णा –ಣಾ. 6. ಜೀರಿಗೆ. 7. ಹಿಪ್ಪಲಿ. "कणाजीरकपिप्पल्योः" हेम०। 8. ಕಾಡುನೊಣ, ಮೊಸಳೆಯಾಕಾರದ ನೊಣ. "कणा जीरककुम्भीरमक्षिकापिप्पलीषु च" मेदि०।

**कणजीर ಕಣಜೀರ** (पु०) ಬಿಳಿ ಜೀರಿಗೆ.

**कणजीरक ಕಣಜೀರಕ** (पु०) ಸಣ್ಣ ಜೀರಿಗೆ. अल्पार्थे "कन्"।

**कणप ಕಣಪ** (पु०) ಬಂದೂಕ, ನಾಳಿಕಾಸ್ತ್ರ. कणान् लोहकणान् पिबति—पा (पाने) "कः" (३-२-४)। "चापचक्रकणपकर्पणप्रासपट्टिशमुसलतोमरादिप्रहरणजालम्" दशकु०।

**कणभक्ष ಕಣಭಕ್ಷ –भक्षक –ಭಕ್ಷಕ** (पु०) 1. ಕಣಾದ ಮಹರ್ಷಿ. ["कणाद" ಪದದಲ್ಲಿ ನೋಡಿ.] 2. ಗುಬ್ಬಚ್ಚಿ.

**कणलाभ ಕಣಲಾಭ** (पु०) 1. ಬೀಸುವ ಕಲ್ಲು, ಹಿಟ್ಟು ಮಾಡುವ ಕಲ್ಲು. कणानां लाभो यस्मात्। 2. ಆವರ್ತ, ನೀರಿನ ಸುಳಿ, ಬೀಸುವ ಕಲ್ಲಿನಂತೆ ಸುಳಿಯು ಸುತ್ತುವುದರಿಂದ ಈ ಹೆಸರು. "अथाम्भसां भ्रमः। तानूरो वायुगुल्मश्च कणलाभः कलंकुरः" त्रिकाण्ड०।

**कणशस् ಕಣಶಸ್** (अव्य०) ಕೊಂಚಕೊಂಚವಾಗಿ, (ಧಾನ್ಯದ) ಒಂದೊಂದು ಕಾಳಾಗಿ, (ನೀರಿನ) ಒಂದೊಂದು ಹನಿಯಾಗಿ, ಚೂರು ಚೂರಾಗಿ. कण वीप्सायां "शस्" (५-४-४२)। "क्षणशः कणशश्चैव विद्यामर्थं च साधयेत्"।

**कणाद ಕಣಾದ** (पु०) ವೈಶೇಷಿಕ ದರ್ಶನಕಾರರಾದ ಕಣಾದ ಮಹರ್ಷಿ, ಕಶ್ಯಪಗೋತ್ರದ ಉಲೂಕ ಮಹರ್ಷಿಯ ಮಗ. ಇವರ ದರ್ಶನಕ್ಕೆ "ಔಲೂಕ್ಯದರ್ಶನ" ವೆಂದು ಹೆಸರು. ಕಾಪೋತವೃತ್ತಿಯನ್ನು ಆಚರಿಸುತ್ತ ಇವರು ರಸ್ತೆಯಲ್ಲಿ ಬಿದ್ದಿದ್ದ ಅಕ್ಕಿಯ ಕಾಳುಗಳನ್ನು ಆರಿಸಿ ಜೀವಿಸುತ್ತಿದ್ದುದರಿಂದ ಇವರಿಗೆ ಈ ಹೆಸರಾಯಿತು. कणान् रथ्यानिपतितांस्तण्डुलकणानादाय अत्ति — अद (भक्षणे) "अण्" (३-२-१)। ಇವರು ಹತ್ತು ಅಧ್ಯಾಯಗಳುಳ್ಳ ಸೂತ್ರರೂಪವಾದ ವೈಶೇಷಿಕದರ್ಶನವೆಂಬ ತರ್ಕಶಾಸ್ತ್ರವನ್ನು ರಚಿಸಿರುತ್ತಾರೆ. [ವಿವರಕ್ಕೆ "वैशेषिक" ಪದದಲ್ಲಿ ನೋಡಿ.]

**कणिक ಕಣಿಕ** (पु०) 1. ಗೋಧಿಹಿಟ್ಟು. 2. ಮೈದಾಹಿಟ್ಟು. कणोऽस्यास्ति "ठन्" (५-२-११५)। 3. ಪರಮಾಣು. 4. ಧಾನ್ಯದ ಕಾಳು. 5. ಶತ್ರು, ವೈರಿ. 6. ಧೃತರಾಷ್ಟ್ರನ ಒಬ್ಬ ಮಗ. (स्त्री०) –का –ಕಾ. 7. ಬಹಳ ಸೂಕ್ಷ್ಮ ವಸ್ತು, ವಸ್ತುವಿನ ಅತಿ ಸೂಕ್ಷ್ಮಭಾಗ. 8. ಅಗ್ನಿಮಂಥ ವೃಕ್ಷ, ನೆಲ್ಲಿಮರದ ಒಂದು ಭೇದ. 9. ನೀರಿನ ಬಿಂದು. 10. ಪರಮಾಣು. "कणिका कथ्यतेऽत्यन्तसूक्ष्मवस्त्वग्निमन्थयोः" मेदि०।

**कणित ಕಣಿತ** (न०) 1. ನೋವಿನಿಂದ ಕೂಗಿಕೊಳ್ಳುವಿಕೆ. कण (शब्दे) भावे "क्तः" (३-३-११४)। (वि०) 2.

ನೋವಿನಿಂದ ಕೂಗಿಕೊಳ್ಳುವ. कण (शब्दे) कर्तं "क्तः" (३-४-७२)।

**कणिश ಕಣಿಶ** (नं०) ಧಾನ್ಯದ ತೆನೆ. कणो विद्यतेऽस्य "इनिः" (५-२-११५)। तं श्यति — शो (तनूकरणे) "कः" (३-२-४)। "कणिशं सस्यमञ्जरी" अम०।

**कणीक ಕಣೀಕ** (वि०) 1. ಸಣ್ಣದಾದ, ಚಿಕ್ಕದಾದ, ಅಲ್ಪವಾದ. (स्त्री०) **–का –ಕಾ.** 2. ಒಂದು ಕಾಳು.

**कणीची ಕಣೀಚೀ** (स्त्री०) 1. ಶಬ್ದ, ಇಂಪಾದ ಧ್ವನಿ. 2. ಪುಷ್ಪಿಸಿರುವ ಲತೆ, ಹೂಬಿಟ್ಟಿರುವ ಬಳ್ಳಿ. 3. ಶಕಟ, ಗಾಡಿ, ಬಂಡಿ. कण (शब्दे) "ईचिः" (उ० ४-७०)। "कणीची पुष्पितलतागुञ्जयोः शकटे स्त्रियाम्" मेदि०।

**कणीयस् ಕಣೀಯಸ್** (वि०) ಬಹಳ ಚಿಕ್ಕದಾದ, ಬಹಳ ಸ್ವಲ್ಪವಾದ, ಚಿಕ್ಕವನಾದ, ಕಿರಿಯನಾದ. कण "ईयसुन्" (५-३-५७)। स्त्रियां "ङीप्" (४-१-६)। **–यसी –ಯಸೀ.**

**कणे ಕಣೇ** (अव्य०) ಇಚ್ಛಾಪೂರ್ತಿ, ಅಭಿಲಾಷೆಯ ನಿವೃತ್ತಿ. ಇದು ಸಪ್ತಮೀವಿಭಕ್ತಿಪ್ರತಿರೂಪಕಾವ್ಯಯ. "कणेमनसी श्रद्धाप्रतीघाते" पा० सू० १-४-६६। कणेहत्य पयः पिबति।

**कणेर ಕಣೇರ** (पु०) 1. ಬೆಟ್ಟಕಣಗಿಲೆ. कण "एरक्" बाहु०। (स्त्री०) **–रा –ರಾ.** 2. ಹೆಣ್ಣಾನೆ. 3. ವೇಶ್ಯೆ, ಸೂಳೆ.

**कणेरु ಕಣೇರು** (पु०) 1. ಬೆಟ್ಟಕಣಗಿಲೆ. (स्त्री०) 2. ಹೆಣ್ಣಾನೆ. 3. ವೇಶ್ಯೆ, ಸೂಳೆ. "कणेरुः कर्णिकारे च करिणीवेश्ययोः स्त्रियाम्" मेदि०।

**कण्ट ಕಂಟ** (पु०) ಕಂಟಕ, ಮುಳ್ಳು. कण्टति — कटि (गतौ) "अच्" (३-१-१३४)।

**कण्टक ಕಂಟಕ** (पुंन०) 1. ಮುಳ್ಳು. कण्टति — कटि (गतौ) "ण्वुल्" (३-१-१३३)। "वियोगभाजां हृदि कण्टकैः कटुर्निधीयसे कर्णिशरः स्मरेण यत्" नैष० १-७९। 2. ಸೂಜಿಯ ತುದಿ. नैष० ९-५३। 3. ನೀಚನಾದ ವೈರಿ, ಪೀಡಿಸುವ ಶತ್ರು. "उत्खातलोकत्रयकण्टकेऽपि" रघु० १४-७३। 4. ಮೀನು ಮೊದಲಾದವುಗಳ ಎಲುಬು. "अन्धो मत्स्यानिवाश्नाति स नरः कण्टकैः सह" मनु० ८-९५। 5. ಪುಲಕ, ರೋಮಾಂಚ, ಮೈಮೇಲೆ ಮುಳ್ಳೇಳುವುದು. "पुलोमजालोचनतीक्ष्णकण्टकैस्तनुं घनामातनुतां स कण्टकैः" नैष० ९-५३। 6. ಕೇಂದ್ರಸ್ಥಾನ, 1, 4, 7 ಮತ್ತು 10 ನೆಯ ಸ್ಥಾನ (ರಾಶಿ) ಗಳು. 7. ನಖ, ಉಗುರು. "मरुल्ललत्पल्लवकण्टकैः क्षतं समुच्छलच्चन्दनसारसौरभम्" नैष० १-९४। 8. ಬಿದಿರು. 9. ವಾದದ ಒಂದು ದೋಷ. "कण्टको न स्त्रियां क्षुद्रशत्रौ मत्स्यादिकीकसे। नैयायिकादिदोषोक्तौ स्याद्रोमाञ्चद्रुमाङ्गयोः" मेदि०। "कण्टकः क्षुद्रवैरिणि। वेणौ द्रुमाङ्गे रोमाञ्चे" हेम०। 10. ಕಾಗೆ, ವಾಯಸ. "आत्मघोषो महानेमिः कण्टको मौकलिः कुणः। बलिपुष्ट उलूकारिः" वैज०।

**कण्टकद्रुम ಕಂಟಕದ್ರುಮ** (पु०) 1. ಮುಳ್ಳಿನಗಿಡ, ಮುಳ್ಳಿನಿಂದ ಕೂಡಿದ ವೃಕ್ಷ. कण्टकप्रधानो द्रुमः। "भवन्ति नितरां स्फीताः सुक्षेत्रे कण्टकद्रुमाः" मृच्छ० ९-७। 2. ಶಾಲ್ಮಲಿವೃಕ್ಷ, ಬೂರುಗದಮರ. 3. ಹೆಗ್ಗುಳ್ಳದಗಿಡ. 4. ಗುಲಾಬಿಯಗಿಡ ಮುಂತಾದುವು.

**कण्टकफल ಕಂಟಕಫಲ** (पु०) ಮುಳ್ಳಿನಿಂದ ಕೂಡಿದ ಹಣ್ಣು ಕಾಯಿಗಳ ಗಿಡ. 1. ಪನಸವೃಕ್ಷ, ಹಲಸಿನಮರ. 2. ನೆಗ್ಗಿಲುಗಿಡ. 3. ದತ್ತೂರಿಗಿಡ. 4. ಉಮ್ಮತ್ತಿಗಿಡ. कण्टकाचितं फलमस्य। (नं०) 5. ಹಲಸಿನ ಹಣ್ಣು. 6. ನೆಗ್ಗಿಲು ಬೀಜ. 7. ದತ್ತೂರಿಕಾಯಿ. 8. ಉಮ್ಮತ್ತಿಕಾಯಿ ಮುಂತಾದುವು.

**कण्टकवत् ಕಂಟಕವತ್** (वि०) ಮುಳ್ಳಿನಿಂದ ಕೂಡಿದ. कण्टकान्यस्य सन्ति "मतुप्" (५-२-९४)। मस्य वः (८-२-१०)।

**कण्टकवृन्ताकी ಕಂಟಕವೃಂತಾಕೀ** (स्त्री०) ಮುಳ್ಳುಬದನೆಗಿಡ.

**कण्टकाढ्य ಕಂಟಕಾಢ್ಯ** (वि०) ಮುಳ್ಳುಗಳಿಂದ ತುಂಬಿದ. कण्टकैराढ्यः।

**कण्टकार ಕಂಟಕಾರ** (पु०) 1. ಹಲುಮಾಣಿಕಗಿಡ, ಹುಳಿಬೇಲದಗಿಡ. 2. ಬೂರುಗದ ಮರ. कण्टकमृच्छति—ऋ (गतौ) "अण्" (३-२-१)।

**कण्टकारिका ಕಂಟಕಾರಿಕಾ** (स्त्री०) ಹೆಗ್ಗುಳ್ಳದಗಿಡ.

**कण्टकाशन ಕಂಟಕಾಶನ** (पु०) ಉಷ್ಟ್ರ, ಒಂಟೆ, ಮುಳ್ಳುಗಿಡಗಳನ್ನು ತಿಂದು ಜೀವಿಸುವ ಪ್ರಾಣಿ. कण्टकमश्नाति— अश (भोजने) "ल्युः" (३-१-१३४)। "स्यादुष्ट्रः कण्टकाशनः" त्रिकाण्ड०।

**कण्टकाष्ठील ಕಂಟಕಾಷ್ಠೀಲ** (पु०) ಚೂಪಾದ ಎಲುಬುಗಳುಳ್ಳ ಮೀನು. "कुलिशं कण्टकाष्ठील इत्यपि" त्रिकाण्ड०।

**कण्टकित ಕಂಟಕಿತ** (वि०) 1. ಮುಳ್ಳಿನಿಂದ ಕೂಡಿದ. 2. ರೋಮಾಂಚವೆದ್ದಿರುವ, ಮೈ ಮುಳ್ಳಿನಿಂದ ಕೂಡಿದ. कण्टकोऽस्य सञ्जातः "इतच्" (५-२-३६)। "इदमूचुरनूचानाः प्रीतिकण्टकितत्वचः" कुमा० ६-१५। "आसीद्वरः कण्टकितप्रकोष्ठः स्विन्नाङ्गुलिः संववृते कुमारी" रघु० ७-२२।

**कण्टकिन् ಕಂಟಕಿನ್** (पु०) 1. ಮತ್ಸ್ಯ, ಮೀನು. कण्टकान्यस्य सन्ति "इनिः" (५-२-११५)। स्त्रियां "ङीप्" (४-१-५)। **-किनी -ಕಿನೀ.** 2. ನೆಗ್ಗಿಲುಗಿಡ. 3. ಬಿದಿರು. 4. ಎಲಚಿಗಿಡ, ಬೋರೆಗಿಡ. 5. ಕಗ್ಗಲಿ ಮರ. 6. ಗೊಬ್ಬಳಿಮರ ಮುಂತಾದುವು. (वि०) 7. ಮುಳ್ಳಿನಿಂದ ಕೂಡಿದ.

**कण्टकिफल ಕಂಟಕಿಫಲ** (पु०) 1. ಪನಸವೃಕ್ಷ, ಹಲಸಿನ ಮರ. 2. ಮುಳ್ಳುಬದನೆಗಿಡ. 3. ದತ್ತೂರಿಗಿಡ. 4. ನೆಗ್ಗಿಲುಗಿಡ. 5. ಹರಳುಗಿಡ ಮುಂತಾದ ಮುಳ್ಳಿನಿಂದ ಕೂಡಿದ ಫಲಬಿಡುವ ಮರಗಳು. कण्टकि फलमस्य। (न०) 6. ಹಲಸಿನಹಣ್ಣು. 7. ಮುಳ್ಳುಬದನೆಕಾಯಿ. 8. ದತ್ತೂರಿಕಾಯಿ ಮುಂತಾದುವು.

**कण्टकिल ಕಂಟಕಿಲ** (पु०) ಬಿದಿರುಗಿಡ. कण्टक "इलच्" (५-२-१००)।

**कण्टदला ಕಂಟದಳಾ** (स्त्री०) ತಾಳೆಗಿಡ. कण्टं कण्टकावृतं दलमस्याः।

**कण्टपत्र ಕಂಟಪತ್ರ** (पु०) ಹುಳಿಬೇಲ.

**कण्टफल ಕಂಟಫಲ** (पु०) 1. ಪನಸವೃಕ್ಷ, ಹಲಸಿನಮರ. 2. ನೆಗ್ಗಿಲುಗಿಡ. 3. ದತ್ತೂರಿಗಿಡ. 4. ಹರಳುಗಿಡ. (स्त्री०) **-फला -ಫಲಾ.** ದೇವತಾಳೆಗಿಡ. कण्टकाचितं फलमस्य।

**कण्टल ಕಂಟಲ** (पु०) ಭಾರಂಗಿಗಿಡ. कण्टोऽस्त्यस्य "लच्" (५-२-९७)।

**कण्टालु ಕಂಟಾಲು** (पु०) 1. ಮುಳ್ಳುಬದನೆ. 2. ಬಿದಿರು. 3. ನೆಗ್ಗಿಲುಗಿಡ. 4. ಹೆಗ್ಗುಳ್ಳದಗಿಡ. 5. ಭಾರಂಗಿಗಿಡ. 6. ಉತ್ತರಣೆಗಿಡ. कण्टाय अलति — अल (भूषणादौ) "उण्" (उ० १-१)।

**कण्टिन् ಕಂಟಿನ್** (पु०) 1. ಕಗ್ಗಲಿಮರ. 2. ಉತ್ತರಣೆಗಿಡ. 3. ನೆಗ್ಗಿಲುಗಿಡ. (वि०) 4. ಮುಳ್ಳಿನಿಂದ ಕೂಡಿದ.

**कण्ठ ಕಂಠ** (पु०) 1. ಕುತ್ತಿಗೆ, ಕತ್ತು. कण (निमीलने) "ठः" (उ० १-१०३)। "मेघालोके भवति सुखिनोऽप्यन्यथावृत्ति चेतः कण्ठाश्लेषप्रणयिनि जने किं पुनर्दूरसंस्थे" मेघ० १-३। 2. ಕಂಠಧ್ವನಿ, ಕತ್ತಿನ ಒಳಭಾಗ (ಗಂಟಲು) ದಿಂದ ಹೊರಡುವ ಶಬ್ದ. "यास्यत्यद्य शकुन्तलेति हृदयं संस्पृष्टमुत्कण्ठया कण्ठः स्तम्भितबाष्पवृत्तिकलुषश्चिन्ताजडं दर्शनम्" शाकु० ४-५। 3. ಧ್ವನಿ, ಶಬ್ದ, ಸದ್ದು. "सा मुक्तकण्ठं व्यसनातिभारात् चक्रन्द विग्ना कुररीव भूयः" रघु० १४-६८। 4. ಬಿಂದಿಗೆಯ ಅಥವಾ ತಪ್ಪಲೆಯ ಕತ್ತು. 5. ಗರ್ಭಾಶಯದ ಬಹಳ ಕಿರಿದಾದ ಭಾಗ. 6. ಸಮೀಪ, ಸಂನಿಧಾನ. 7. ಮದನ ವೃಕ್ಷ, ಮಂಗಾರೆಗಿಡ. 8. ಕಂಠಾಲಂಕಾರ, ಕತ್ತಿನ ಆಭರಣ. "कण्ठो ध्वनौ संनिधाने ग्रीवायां मदनद्रुमे" मेदि०। 9. ವಾಚಕಶಬ್ದ, ಅರ್ಥವನ್ನು ಕೊಡುವ ಶಬ್ದ, "कण्ठो वाचकशब्दे स्यात् संनिधाने गले ध्वनौ" नानार्थर०। 10. ದತ್ತೂರಿಗಿಡ. "कण्ठो गले संनिधाने ध्वनौ धत्तूरपादपे" विश्व०।

**कण्ठकूणिका ಕಂಠಕೂಣಿಕಾ** (स्त्री०) ವೀಣೆ. कण्ठ इव तद्ध्वनिरिव कूणयति — कूण (संकोचे) + णिच् "ण्वुल्" (३-१-१३३)। "वीणा पुनर्घोषवती विपञ्ची कण्ठकूणिका" अभि० चि०।

**कण्ठकूप ಕಂಠಕೂಪ** (पु०) ಗಂಟಲಿನ ವಿವರ, ಕಂಠಕುಹರ.

**कण्ठग ಕಂಠಗ** (वि०) ಕಂಠದವರೆಗೂ ವ್ಯಾಪಿಸಿರುವ, ಗಂಟಲಿನವರೆಗೂ ಹೋಗಿರುವ. कण्ठं गलं गच्छति—गम्लृ (गतौ) "डः" (वा० ३-२-४८)। "हृद्गाभिः पूयते विप्रः कण्ठगाभिस्तु भूमिपः" मनु० २-६२।

**कण्ठगत ಕಂಠಗತ** (वि०) ಕಂಠದವರೆಗೂ ಬಂದಿರುವ, ಕುತ್ತಿಗೆಯಲ್ಲಿರುವ. कण्ठं गतः। "मम कण्ठगताः प्राणाः पाशे कण्ठस्थिते तव" रत्ना० ३-१६।

**कण्ठग्रह ಕಂಠಗ್ರಹ** (पु०) ಆಲಿಂಗನ, ಕುತ್ತಿಗೆಯನ್ನು ಹಿಡಿದುಕೊಂಡು ಅಪ್ಪಿಕೊಳ್ಳುವುದು. कण्ठस्य ग्रहः। "अम्भोजगर्भसुकुमारतनुस्तदासौ कण्ठग्रहे प्रथमरागघने विलीय" रत्ना० ४-२। भावे "ल्युट्" (३-३-११५)। **-ग्रहणम् -ಗ್ರಹಣಮ್.**

**कण्ठतलासिका ಕಂಠತಲಾಸಿಕಾ** (स्त्री०) ಕುದುರೆಯ ಕತ್ತಿನ ಹಗ್ಗ ಅಥವಾ ಚರ್ಮದ ಬಾರು.

**कण्ठतस् ಕಂಠತಸ್** (अव्य०) 1. ಕತ್ತಿನಿಂದ, ಕುತ್ತಿಗೆಯಿಂದ. 2. ಗಂಟಲಿನಿಂದ. कण्ठ "तसिः" (वा० ५-४-४४)।

**कण्ठदघ्न ಕಂಠದಘ್ನ** (वि०) ಕತ್ತಿನಷ್ಟು ಎತ್ತರವುಳ್ಳ, ಕತ್ತಿನವರೆಗೂ ಹೋಗಿ ನಿಲ್ಲುವ, ಕುತ್ತಿಗೆಯ ಪ್ರಮಾಣವುಳ್ಳ.

कण्ठः परिमाणमस्य "दघ्नच्" (५-२-३७)। स्त्रियां "ङीप्" (४-१-१५)। **-दघ्नी -ದಘ್ನೀ.**

**कण्ठद्वयस ಕಂಠದ್ವಯಸ** (वि०) "कण्ठदघ्न" ಪದದ ಅರ್ಥ. कण्ठ "द्वयसच्" (५-२-३७)। स्त्रियां "ङीप्" (४-१-१५)। **-द्वयसी -ದ್ವಯಸೀ.**

**कण्ठनाल ಕಂಠನಾಳ** (पुंन०) 1. ತಾವರೆಯ ದಂಟಿನಂತಿರುವ ಕತ್ತು, ತಾವರೆಯ ದಂಟಿನಂತೆ ಒಳಗೆ ಟೊಳ್ಳಾಗಿರುವ ಗಂಟಲಿನ ಕೊಳವೆ. कण्ठो नाल इव। 2. ಕಂಠವೆಂಬ ಕೊಳವೆ. कण्ठ एव नालः। "ज्योतिष्कणाहतश्मश्रु कण्ठनालादपातयत्" रघु० १५-५२। 3. ಕತ್ತಿನ ಕೊಳವೆ, ಕತ್ತಿನ ಕಾಂಡ. कण्ठस्य नालः। "एतत्करालकरवालनिकृत्तकण्ठनालोच्चलद्बहुलफेनिलबुद्बुदौघैः" प्रबोध० ३-१५।

**कण्ठपाश ಕಂಠಪಾಶ** (पुं०) 1. ಕತ್ತಿಗೆ ಕಟ್ಟುವ ಹಗ್ಗ. 2. ಆನೆಯ ಕತ್ತಿನ ಹಗ್ಗ. कण्ठे पाशः।

**कण्ठबन्ध ಕಂಠಬಂಧ** (पुं०) 1. ಆನೆಯ ಕತ್ತಿನ ಹಗ್ಗ. 2. ಕತ್ತಿನಲ್ಲಿ ಕಟ್ಟುವಿಕೆ, ಕತ್ತಿಗೆ ಹಗ್ಗಹಾಕಿ ಕಟ್ಟುವಿಕೆ. कण्ठस्य कण्ठे वा बन्धः।

**कण्ठभङ्ग ಕಂಠಭಂಗ** (पुं०) ಬಿಕ್ಕುತ್ತ ಮಾತಾಡುವಿಕೆ, ತಡೆದು ಮಾತಾಡುವಿಕೆ.

**कण्ठभूषण ಕಂಠಭೂಷಣ** (न०) **-भूषा -ಭೂಷಾ** (स्त्री०) ಕಂಠಾಭರಣ, ಕುತ್ತಿಗೆಗೆ ತೊಡಿಸುವ ಒಡವೆ, ಅಡ್ಡಿಗೆ. कण्ठस्य भूषणम् भूषा वा।

**कण्ठमूल ಕಂಠಮೂಲ** (न०) ಕಂಠದ ತಳಭಾಗ, ಗಂಟಲಿನ ಆಳವಾದ ಕೆಳಪ್ರದೇಶ. कण्ठस्य मूलम्।

**कण्ठलग्न ಕಂಠಲಗ್ನ** (वि०) 1. ಕತ್ತಿನಲ್ಲಿ ಸೇರಿಕೊಂಡಿರುವ. 2. ಅಪ್ಪಿಕೊಂಡಿರುವ, ಆಲಿಂಗಿಸಿಕೊಂಡಿರುವ. कण्ठे लग्नः।

**कण्ठलता ಕಂಠಲತಾ** (स्त्री०) 1. ಅಂಗಿಯ ಕೊರಳ ಪಟ್ಟಿ, ಕತ್ತಿನ ಪಟ್ಟಿ. 2. ಮುಕ್ತಾಹಾರ, ಮುತ್ತಿನ ಸರ, ಅಡ್ಡಿಗೆ ಮುಂತಾದುವು.

**कण्ठवर्तिन् ಕಂಠವರ್ತಿನ್** (वि०) 1. ಗಂಟಲಲ್ಲಿರುವ. 2. ಕುತ್ತಿಗೆಯಲ್ಲಿರುವ. कण्ठे वर्तते – वृतु (वर्तने) "णिनिः" (३-२-७८)। "प्राणैर्दशरथप्रीतेरनृणं कण्ठवर्तिभिः" रघु० १२-५४। स्त्रियां "ङीप्" (४-१-५)। **-वर्तिनी -ವರ್ತಿನೀ.**

**कण्ठशालूक ಕಂಠಶಾಲೂಕ** (न०) ಗಂಟಲೊಳಗಿನ ವ್ರಣ, ಕಂಠದೊಳಗೆ ಬರುವ ಒಂದು ಹುಣ್ಣು, ಒಂದು ವಿಧ ಮುಖರೋಗ. "कोलास्थिमात्रः कफसंभवो यो ग्रन्थिर्गले कण्ठकशूकभूतः। खरः स्थिरः शस्त्रनिपातसाध्यस्तं कण्ठशालूकमिति ब्रुवन्ति" सुश्रुत० निदान० १६-५१।

**कण्ठशुण्ठी ಕಂಠಶುಂಠೀ** (स्त्री०) ದವಡೆಯೊಳಗಿನ ವ್ರಣ, ಒಂದು ವಿಧ ಮುಖರೋಗ. "श्लेष्मासृग्भ्यां तालुमूलात् प्रवृद्धो दीर्घः शोफो ध्मातबस्तिप्रकाशः। तृष्णाकासश्वासकृत् संप्रदिष्टो व्याधिर्वैद्यैः कण्ठशुण्ठीति नाम्ना" सुश्रुत० निदान० १६-४१।

**कण्ठशोष ಕಂಠಶೋಷ** (पुं०) 1. ಗಂಟಲು ಒಣಗುವಿಕೆ, ಗಂಟಲು ಆರಿಹೋಗುವಿಕೆ. (लाक्ष०) 2. ಪ್ರಯೋಜನವಿಲ್ಲದ ಉಪದೇಶ. कण्ठस्य शोषः। भावे "ल्युट्" (३-३-११५)। **-शोषणम् -ಶೋಷಣಮ್.**

**कण्ठसूत्र ಕಂಠಸೂತ್ರ** (न०) ಸುರತಕಾಲದ ಆಲಿಂಗನದ ಒಂದು ಭೇದ; ರತಿಕ್ರೀಡೆಯ ವೇಗದಿಂದ ಬಹಳವಾಗಿ ಬಳಲಿದ ಸ್ತ್ರೀಯರು ಪತಿಯ ಎದೆಯಮೇಲೆ ತಮ್ಮ ಪೀವರಸ್ತನಗಳನ್ನಿಟ್ಟು ಗಾಢಾಲಿಂಗನ ಮಾಡಿಕೊಂಡು ಮಲಗುವರು. "यत्कुर्वते वक्षसि वल्लभस्य स्तनाभिघातं निबिडोपगूहम्। परिश्रमार्थं शनकैर्विदग्धाः तत्कण्ठसूत्रं प्रवदन्ति सन्तः" वात्स्या० सू०। "तस्य निर्दयरतिश्रमालसाः कण्ठसूत्रमपदिश्य योषितः" रघु० १९-३२।

**कण्ठस्थ ಕಂಠಸ್ಥ** (वि०) 1. ಗಂಟಲಲ್ಲಿರುವ. 2. ಕುತ್ತಿಗೆಯಲ್ಲಿರುವ. कण्ठे तिष्ठति – ष्ठा (गतिनिवृत्तौ) "कः" (३-२-४)। 3. ಬಾಯಲ್ಲಿರುವ ಮತ್ತು ಉಚ್ಚರಿಸಲು ಸಿದ್ಧವಾಗಿರುವ. 4. ಉರುಹಾಕಿರುವ, ಬಾಯಿಪಾಠಮಾಡಿರುವ.

**कण्ठाग्नि ಕಂಠಾಗ್ನಿ** (पुं०) ಪಕ್ಷಿ, ಹಕ್ಕಿ. कण्ठे अग्निः पाकाग्निः यस्य। ಕತ್ತನ್ನು ಬಗ್ಗಿಸಿದ ಮಾತ್ರದಿಂದ ಹಕ್ಕಿಗಳು ತಿಂದ ಆಹಾರವು ಜೀರ್ಣವಾಗುವುದರಿಂದ ಈ ಹೆಸರು.

**कण्ठाभरण ಕಂಠಾಭರಣ** (न०) 1. ಕತ್ತಿಗೆ ತೊಡಿಸುವ ಆಭರಣ, ಹಾರ, ಸರ, ಅಡ್ಡಿಗೆ. कण्ठस्याभरणम्। 2. "ಸರಸ್ವತೀಕಂಠಾಭರಣ"ವೆಂಬ ಒಂದು ಗ್ರಂಥದ ಸಣ್ಣ ಹೆಸರು.

**कण्ठाल ಕಂಠಾಲ** (पुंस्त्री०) 1. ಯುದ್ಧ, ಕದನ. 2. ಶೂರಣಗೆಡ್ಡೆ. 3. ಗುದ್ದಲಿ. 4. ಗೋಣಿಚೀಲ. 5. ದೋಣಿ. 6. ಕಡೆಯುವ ಪಾತ್ರೆ. (पुं०) 7. ಉಷ್ಟ್ರ, ಒಂಟೆ "कण्ठाला तु द्वयोर्द्रोणीप्रभेदे ना क्रमेलके" मेदि०। कठि (शोके) "आलच्" बाहु०।

**कण्ठिका ಕಂಠಿಕಾ** (स्त्री०) ಕಂಠಾಭರಣ, ಕತ್ತಿಗೆ ತೊಡಿಸುವ ಒಡವೆ, ಹಾರ. कण्ठो भूष्यतयास्त्यस्य "ठन्" (५-२-११५)।

**कण्ठी ಕಂಠೀ** (स्त्री०) 1. ಕುದುರೆ ಕಟ್ಟುವ ಹಗ್ಗ. 2. ಕತ್ತು. 3. ಕತ್ತಿನ ಪಟ್ಟಿ.

**कण्ठीरव ಕಂಠೀರವ** (पु०) ಕಂಠದಿಂದ ಗರ್ಜಿಸುವ 1. ಸಿಂಹ. 2. ಮದಿಸಿದ ಆನೆ. कण्ठयां रवो यस्य। 3. ಕಪೋತ, ಪಾರಿವಾಳದ ಹಕ್ಕಿ.

**कण्ठेकाल ಕಂಠೇಕಾಲ** (पु०) ಶಿವ, ಮಹಾದೇವ, ನೀಲಕಂಠ. कण्ठे कालोऽस्य अलुक् (६-३-१२)।

**कण्ठ्य ಕಂಠ್ಯ** (वि०) 1. ಕಂಠದಲ್ಲಿರುವ, ಗಂಟಲಲ್ಲಿರುವ. कण्ठे भवः "यत्" (४-३-५५)। 2. ಕಂಠದಲ್ಲಿ ಹುಟ್ಟುವ अः, कुः (ಕವರ್ಗ) हः ಮತ್ತು विसर्जनीयः (ವಿಸರ್ಗ) ವರ್ಣಗಳು. "अकुहविसर्जनीयानां कण्ठः"। 3. ಕಂಠಸ್ವರಕ್ಕೆ ಹಿತವಾದ (ಶಾಕಾದಿಗಳು). "सर्वदोषहरा लघ्वी कण्ठ्या मूलकपोतिका" सुश्रुत० सूत्र० ४६-२४०। "यवकोलकुलत्थानां यूषः कण्ठ्योऽनिलापहः" सुश्रुत० सूत्र० ४६-३७५।

**कण्डन ಕಂಡನ** (न०) 1. ಒನಕೆಯಿಂದ ಧಾನ್ಯವನ್ನು ಕುಟ್ಟಿ ಹೊಟ್ಟನ್ನು ಬೇರ್ಪಡಿಸುವಿಕೆ. कडि (भेदने) भावे "ल्युट्" (३-३-११५)। "न हि व्रीह्यादिलवनकण्डन पेषणादौ च सविज्ञानानाम्" छान्दोग्य०। (स्त्री०) –नी –ನೀ. 2. ಕುಟ್ಟುವ ಸಾಧನ, ಒನಕೆ. कण्ड्यतेऽनेन— कडि कर० "ल्युट्" (३-३-११७)। "ङीप्" (४-१-१५)। 3. ಒರಳು. कण्ड्यतेऽत्र — कडि अधि० "ल्युट्" (३-३-११७)। "पञ्च सूना गृहस्थस्य चुल्ली पेषण्युपस्करः। कण्डनी चोदकुम्भश्च बध्यते यास्तु वाहयन्" मनु० ३-६८।

**कण्डरा ಕಂಡರಾ** (स्त्री०) ಮಹಾನಾಡಿ, ಮಹಾಸ್ನಾಯು. ದೇಹದಲ್ಲಿ ಈ ಮಹಾನಾಡಿಗಳು ಹದಿನಾರಿರುವುವು:

| | | |
|---|---|---|
| ಎರಡು ಹಸ್ತಗಳಲ್ಲಿ | ... | 4 |
| ಎರಡು ಪಾದಗಳಲ್ಲಿ | ... | 4 |
| ಕುತ್ತಿಗೆಯಲ್ಲಿ | ... | 4 |
| ಬೆನ್ನಿನಲ್ಲಿ | ... | 4 |
| | | 16 |

ಇವು ಅವಯವಗಳನ್ನು ನೀಡುವ ಮತ್ತು ಮಡಿಸಿಕೊಳ್ಳುವ ಕಾರ್ಯ ಮಾಡುವುವು. "महत्यः स्नायवः प्रोक्ताः कण्डरास्तास्तु षोडश। प्रसारणाकुञ्चनयोर्दृष्टं तासां प्रयोजनम्। चतस्रो हस्तयोस्तासां तावत्यः पादयोः स्मृताः। ग्रीवायामपि तावत्यः तावत्यः पृष्ठसंगताः" भावप्र०। ಅವುಗಳಲ್ಲಿ ಹಸ್ತ ಮತ್ತು ಪಾದಗಳ ನಾಡಿಗಳು ನಖ (ಉಗುರು) ಗಳಾಗಿಯೂ ಕುತ್ತಿಗೆಯ ನಾಡಿಗಳು ಮೇಢ್ರ (ಜನನೇಂದ್ರಿಯ) ವಾಗಿಯೂ ಪೃಷ್ಠ (ಬೆನ್ನು)ನಾಡಿಗಳು ನಿತಂಬ, ಮೇಲಿನ ತೊಡೆಗಳು, ವಕ್ಷಸ್ಸು (ಎದೆ) ಮತ್ತು ಸ್ತನಪಿಂಡಗಳಾಗಿಯೂ ಬೆಳೆದುಬಂದಿವೆ.

**कण्डु ಕಂಡು** (स्त्री०) 1. ನವೆ, ತುರಿ. कण्डूञ् (गात्रविघर्षणे) "डुः" बाहु०। 2. ಮೈ ಕೆರೆಯುವಿಕೆ.

**कण्डूञ्-गात्रविघर्षणे** (कण्ड्वा० उभ० सक० से०)। कण्डूयति, –ते। कण्डूयां बभूव, –चकार, –आस, –चक्रे। ಮೈ ಕೆರೆ, ನವೆ ಹೋಗಲಾಡಿಸು. कण्डूयनम्, कण्डूयितः, कण्डूः, कण्डूया, कण्डूयन्, कण्डूतिः, कण्डूयमानः ಇತ್ಯಾದಿ.

**कण्डू ಕಂಡೂ** (स्त्री०) 1. ಮೈ ಕೆರೆಯುವುದು. 2. ತುರಿ ಗಜ್ಜಿ. कण्डूञ् (गात्रविघर्षणे) "क्विप्" (वा० ३-३-९४)। "कपोलकण्डूः करिभिर्विनेतुं विघट्टितानां सरलद्रुमाणाम्" कुमा० १-९।

**कण्डूकरी ಕಂಡೂಕರೀ** (स्त्री०) ನಸುಗುನ್ನಿಗಿಡ. कण्डूं करोति — डु कृञ् (करणे) "टः" (३-२-२०)।

**कण्डूघ्न ಕಂಡೂಘ್ನ** (पु०) 1. ಕಕ್ಕೆಗಿಡ. 2. ಬಿಳಿಸಾಸುವೆ. कण्डूं हन्ति — हन (हिंसागत्योः) "टक्" (३-२-५३)।

**कण्डूति ಕಂಡೂತಿ** (स्त्री०) ಮೈ ಕೆರೆಯುವಿಕೆ. कण्डूञ् (गात्रविघर्षणे) "क्तिन्" (३-३-९४)। "सुभग त्वत्कथारम्भे कर्णे कण्डूतिलालसा" सा० द०।

**कण्डूयत् ಕಂಡೂಯತ್** (वि०) ಮೈ ಕೆರೆಯುತ್ತಿರುವ. कण्डूञ् (गात्रविघर्षणे) + यक् "शतृ" (३-२-१२४)। "कण्डूयतः कटभुवं करिणो मदेन स्कन्धं सुगन्धिमनुलीनवता नगस्य" माघ० ५-४६।

**कण्डूयन ಕಂಡೂಯನ** (न०) 1. ಮೈ ಕೆರೆಯುವುದು, ನವೆ ಹೋಗಲಾಡಿಸುವುದು. कण्डूञ् (गात्रविघर्षणे) + यक् "ल्युट्" (३-३-११५)। "आस्वादवद्भिः कवलैस्तृणानां कण्डूयनैर्दंशनिवारणैश्च" रघु० २-५। 2. ಮೈ ಕೆರೆದುಕೊಳ್ಳುವ ಸಾಧನ. कण्डूय कर० "ल्युट्" (३-३-११७)।

**कण्डूयमान ಕಂಡೂಯಮಾನ** (वि०) ಮೈ ಕೆರೆದುಕೊಳ್ಳುತ್ತಲಿರುವ, ನವೆ ಹೋಗಲಾಡಿಸಿಕೊಳ್ಳುತ್ತಲಿರುವ. कण्डूय "शानच्" (३-२-१२४)। "कण्डूयमानेन कटं कदाचिद्वन्यद्विपेनोन्मथिता त्वगस्य" रघु० २-३७।

**कण्डूया ಕಂಡೂಯಾ** (स्त्री०) ನವೆ, ತುರಿ. कण्डूञ् (गात्रविघर्षणे) + यक् "अः" (३-३-१०२)। "टाप्" (४-१-४)।

**कण्डूयित ಕಂಡೂಯಿತ**(ವಿಂ)ಕೆರೆಯಲ್ಪಟ್ಟ, ನವೆ ಹೋಗಲಾಡಿಸಲ್ಪಟ್ಟ. कण्डूञ्+यक् "क्तः" (३-२-१०२)। "स्खलनक्षण एव शिश्रिये द्रुतकण्डूयितमौलिरालयम्" नैष० २-३।

**कण्डूरा ಕಂಡೂರಾ**(स्त्री०)ನಸುಗುನ್ನಿಗಿಡ. कण्डू राति—रा (दाने) "कः" (३-२-३)। "आत्मगुप्ताजहाव्यण्डा कण्डूरा प्रावृषायणी" अम०।

**कण्डूल ಕಂಡೂಲ** (पुं०) 1. ಸೂರಣಗೆಡ್ಡೆ. कण्डूरस्त्यस्य "लच्" (५-२-९७)। (वि०)2. ನವೆಯಿಂದ ಕೂಡಿದ. "कण्डूलद्विपगण्डपिण्डकषणाकम्पेन संपातिभिः" उ० रा० २-९। 3. ನವೆಯುಂಟುಮಾಡುವ.

**कण्डोल ಕಂಡೋಲ** (पुं०) 1. ಬಿದಿರಿನ ಮಂಕರಿ, ಕುಕ್ಕೆ, ಗೂಡೆ, ಬುಟ್ಟಿ. कडि (भेदने) "ओलच्" (उ० १-६६)। 2. ಉಗ್ರಾಣ, ಸಾಮಾನುಗಳನ್ನು ರಕ್ಷಿಸಿಡುವ ಜಾಗ. 3. ಉಷ್ಟ್ರ, ಒಂಟೆ. स्त्रियां "ङीष्" (४-१-६३)। —ली —ಲೀ.

**कण्डोलवीणा ಕಂಡೋಲವೀಣಾ** (स्त्री०) ಚಂಡಾಲನ ವೀಣೆ.

**कण्डोली ಕಂಡೋಲೀ** (स्त्री०) ಚಂಡಾಲನ ವೀಣೆ.

**कण्व ಕಣ್ವ** (पुं०) 1. ಕಶ್ಯಪಗೋತ್ರದ ಒಬ್ಬ ಮಹರ್ಷಿ. ಶಕುಂತಲೆಯ ಸಾಕುತಂದೆ. ವಿಶ್ವಾಮಿತ್ರ-ಮೇನಕೆ ಇವರಲ್ಲಿ ಜನಿಸಿದ ಶಿಶುವು ಅರಣ್ಯದಲ್ಲಿ ಪಕ್ಷಿಗಳಿಂದ ರಕ್ಷಿಸಲ್ಪಡುತ್ತಿದ್ದಾಗ ದಯಾಳುವಾದ ಕಣ್ವಮಹರ್ಷಿಯು ಅದನ್ನು ತಮ್ಮ ಆಶ್ರಮಕ್ಕೆ ತಂದು ಪುತ್ರೀನಿರ್ವಿಶೇಷವಾಗಿ ಸಾಕುತ್ತಿದ್ದರು. ಶಕುಂತಲೆಯು ಪ್ರಾಪ್ತವಯಸ್ಕಳಾದಾಗ ಅವಳಿಗೆ ಅನುರೂಪನಾದ ಪತಿಯು ದೊರಕಬೇಕೆಂದು ಕಣ್ವಮಹರ್ಷಿಯು ಸೋಮತೀರ್ಥ ತೀರದಲ್ಲಿ ತಪಸ್ಸಿಗೆ ಹೋಗಿರಲು ದುಷ್ಯಂತನು ಬೇಟೆಯವ್ಯಾಜದಿಂದ ಕಣ್ವಮಹರ್ಷಿಯ ಆಶ್ರಮಕ್ಕೆ ಹೋಗಿ ಶಕುಂತಲೆಯನ್ನು ಗಾಂಧರ್ವರೀತಿಯಿಂದ ಮದುವೆಯಾಗಿ ನಗರಕ್ಕೆ ತೆರಳಿದನು. ತಪಸ್ಸಿನಿಂದ ಹಿಂತಿರುಗಿದ ಕಣ್ವರು ಶಕುಂತಲೆಗೆ ಅನುರೂಪ ವರನು ದೊರೆತದ್ದಕ್ಕಾಗಿ ಸಂತೋಷಿಸಿ ಶಿಷ್ಯರೊಡನೆ ಅವಳನ್ನು ಆಶೀರ್ವದಿಸಿ ಪತಿಗೃಹಕ್ಕೆ ಕಳುಹಿಸಿಕೊಡುವರು. ಇವರೊಬ್ಬರು ಗೋತ್ರಪ್ರವರ್ತಕರು. (न०) 2. ಪಾಪ, ದೋಷ. कण (निमीलने) "क्वन्" (उ० १-१४९)। "कण्वं पापे मुनौ पुंसि" मेदि०।

**कण्वसुता ಕಣ್ವಸುತಾ** (स्त्री०)ಕಣ್ವಮಹರ್ಷಿಯ ಮಗಳು, ಶಕುಂತಲೆ. ["कण्व" ಪದದಲ್ಲಿ ನೋಡಿ.]

**कत ಕತ** (पुं०) 1. ಕತಕವೃಕ್ಷ, ಚಿಲ್ಲದಗಿಡ. कं जलं शुद्धं तनोति—तनु (विस्तारे) "डः" (३-२-१०१)। 2. ಒಬ್ಬ ಋಷಿ. ["कात्य", "कात्यायन" ಪದಗಳಲ್ಲಿ ನೋಡಿ.] (न०) 3. ಚಿಲ್ಲದ ಬೀಜ.

**कतक ಕತಕ** (पुं०) 1. ಚಿಲ್ಲದಗಿಡ. कस्य जलस्य तको हासो यस्मात्। (न०) 2. ಚಿಲ್ಲದ ಬೀಜ. ಚಿಲ್ಲದ ಬೀಜದ ಸಂಪರ್ಕದಿಂದ ನೀರು ನಿರ್ಮಲವಾಗುವುದು. "फलं कतकवृक्षस्य यद्यप्यम्बुप्रसादनम्। न नामग्रहणादेव तस्य वारि प्रसीदति" मनु० ६-६७।

**कतफल ಕತಫಲ** (पुं०)1. ಚಿಲ್ಲದಗಿಡ. (न०)2. ಚಿಲ್ಲದ ಬೀಜ.

**कतम ಕತಮ** (वि०) 1. ಬಹುಮಂದಿಗಳಲ್ಲಿ ಯಾವನು?, ಅನೇಕ ವಸ್ತುಗಳಲ್ಲಿ ಯಾವುದು? किम् "डतमच्" (५-३-९३)। "कतमो भवतां देवदत्तः?"। "अपि ज्ञायते कतमेन दिग्विभागेन गतः स जाल्मः?" विक्र० १। स्त्रियां —मा —ಮಾ. (न०) **कतमत् ಕತಮತ್**. 2. ಅನೇಕ ವಸ್ತುಗಳಲ್ಲಿ ಯಾವುದುಂಟಾನೆ. "न पुष्पिताऽत्र स्थगितार्करश्मावनन्तताने कतमा लताऽलम्" माघ० ४-३९। "अहं भ्रमादालपमङ्ग मृष्यतां विना ममोरः कतमत्तवासनम्" नैष० ९-११४।

**कतर ಕತರ** (वि०) ಇಬ್ಬರಲ್ಲಿ ಯಾವನು?, ಎರಡು ವಸ್ತುಗಳಲ್ಲಿ ಯಾವುದು? किम् "डतरच्" (५-३-९२)। "अनयोः कतरो देवदत्तः?"। (न०) **कतरत् ಕತರತ್**. "न चैतद्विद्मः कतरन्नो गरीयो यद्वा जयेम यदि वा नो जयेयुः" गीता २-६।

**कति ಕತಿ** (वि० ब० व०) ಎಷ್ಟು?, ಎಷ್ಟು ಪರಿಮಾಣವುಳ್ಳದ್ದು?, ಎಷ್ಟು ಸಂಖ್ಯೆಯುಳ್ಳದ್ದು. कि परिमाणमेतेषाम्—किम् "डतिः" (५-२-४१)। "निजपदपरिचारकाङ्क्षिणीभिः कतिषु भवेषु समर्चिताङ्घ्रिपद्मः" याद० २४-५४। "कति"ಗೆ चित्, चन ಅಥವಾ अपि ಸೇರಿದರೆ ಅದರ ಸ್ವಂತ ಅರ್ಥವು ಸಂಕೋಚಹೊಂದಿ ಕೆಲವರು, ಕೆಲವು, ಬಹಳ ಎಂಬ ಅನಿರ್ದಿಷ್ಟ ಸಂಖ್ಯೆಯ ಅರ್ಥ ಕೊಡುವುದು. "दर्भाङ्कुरेण चरणः क्षत इत्यकाण्डे तन्वी स्थिता कतिचिदेव पदानि गत्वा" शाकु० २-१२। "कतिभिरचन कामचारशक्तैरुपसञ्जातमदैरुदग्रभृङ्गैः" याद० १५-११०।

**कतिकृत्वस् ಕತಿಕೃತ್ವಸ್** (अव्य०) ಎಷ್ಟು ಸಲ?, ಎಷ್ಟಾವೃತ್ತಿ? कति "कृत्वसुच्" (५-४-१७)।

**कतिथ ಕತಿಥ** (वि०) ಎಷ್ಟನೆಯದು? कति "डट्" (५-२-४८)। युगागमः (५-२-५१)। "तस्य कतिथ इति तत्प्रथमं मनसा लमाख्यदपराधमच्युतः" माघ० १५-४२।

**कतिधा ಕತಿಧಾ** (अव्य०) ಎಷ್ಟು ವಿಧ? ಎಷ್ಟು ಪ್ರಕಾರ? कति "धा" (५-३-४२)।

**कतिपय ಕತಿಪಯ** (वि० ब० व०) 1. ಕೆಲವು. "संपत्स्यन्ते कतिपयदिनस्थायिहंसा दशार्णाः" मेघ० १-२३। 2. ಪರಿಮಿತವಾದ. "वर्णैः कतिपयैरेव ग्रथितस्य स्वरैरिव" माघ० २-७२। 3. ಕೆಲವು, ಸ್ವಲ್ಪ. 4. ಬಹಳ. कतिपये कतिपयाः। "परिष्कुर्वन्त्यर्थान् सहृदयधुरीणाः कतिपये" रसगं०।

**कतिविध ಕತಿವಿಧ** (वि०) ಎಷ್ಟು ವಿಧ?, ಎಷ್ಟು ಬಗೆ? कति विधा प्रकारो यस्य।

**कत्तृण ಕತ್ತೃಣ** (न०) 1. ಕಾಚಿಹುಲ್ಲು. 2. ಕಾಚಿಕಡ್ಡಿ. 3. ಹಂಚಿಕಡ್ಡಿ. 4. ಬರಗುಕಡ್ಡಿ. कुत्सितं तृणम्–कोः कदादेशः (६-३-१०३)। ಹಸು ಮೊದಲಾದುವು ಇವನ್ನು ತಿನ್ನಲಾಗುವುದಿಲ್ಲವಾದುದರಿಂದ ಈ ಹೆಸರು.

**कत्रि ಕತ್ರಿ** (वि० ब० व०) ಕೆಟ್ಟ ಮೂವರು, ಕೆಟ್ಟ ಮೂರು ವಸ್ತುಗಳು. कुत्सितास्त्रयः—कोः कत् (वा० ६-३-१०१)।

**कत्थ-श्लाघायाम्** (भ्वा० आत्म० सक० से०) ಶ್ಲಾಘಿಸು, ಪ್ರಶಂಸೆಮಾಡು, ಹೊಗಳು, ಜಂಬಹೊಡೆ. कत्थते। चकत्थे। कत्थिता। कत्थिष्यते। कत्थताम्। अकत्थत। अकत्थिष्ट। अकत्थिष्यत। कत्थनम्। कत्था। कत्थितम्। "गर्जितेन वृथा किं ते कत्थितेन च मानुष। कृत्वैतत् कर्मणा सत्रं कत्थेथा मा चिरं कृथाः" भा० आदि० १६५-३७।

**कत्थक ಕತ್ಥಕ** (वि०) ಶ್ಲಾಘನೆಮಾಡುವ, ಹೊಗಳುವ, ಜಂಬ ಹೊಡೆಯುವ. कत्थ (श्लाघायाम्) "ण्वुल्" (३-१-१३३)।

**कत्थन ಕತ್ಥನ** (न०) ಶ್ಲಾಘಿಸುವುದು, ಹೊಗಳುವುದು, ಜಂಬ ಹೊಡೆಯುವುದು. कत्थ (श्लाघायाम्) भावे "ल्युट्" (३-३-११५)।

**कत्थनीय ಕತ್ಥನೀಯ** (वि०) 1. ಅವಶ್ಯಕವಾಗಿ ಶ್ಲಾಘಿಸಲ್ಪಡುವ. 2. ಶ್ಲಾಘಿಸಲು ಯೋಗ್ಯವಾದ, ಹೊಗಳಲು ಅರ್ಹವಾದ. 3. ಹೊಗಳಲು ಶಕ್ಯವಾದ. कत्थ (श्लाघायाम्) अर्हादौ "अनीयर्" (३-१-९६)।

**कत्थमान ಕತ್ಥಮಾನ** (वि०) ಶ್ಲಾಘಿಸುತ್ತಿರುವ, ಹೊಗಳುತ್ತಿರುವ. कत्थ (श्लाघायाम्) "शानच्" (३-२-१२४)।

**कत्थित ಕತ್ಥಿತ** (न०) 1. ಶ್ಲಾಘನೆ, ಹೊಗಳಿಕೆ. कत्थ (श्लाघायाम्) भावे "क्तः" (३-३-११४)। (वि०) 2. ಶ್ಲಾಘಿಸಲ್ಪಟ್ಟ, ಹೊಗಳಲ್ಪಟ್ಟ. कत्थ "क्तः" (३-२-१०२)।

**कत्थितव्य ಕತ್ಥಿತವ್ಯ** (वि०) 1. ಅವಶ್ಯವಾಗಿ ಹೊಗಳಲ್ಪಡುವ. 2. ಹೊಗಳಲು ಅರ್ಹವಾದ. 3. ಹೊಗಳಲು ಶಕ್ಯವಾದ. कत्थ (श्लाघायाम्) "तव्यः" (३-१-९६)।

**कत्र-शैथिल्ये** (चुरा० उभ० अक० से०) कथयति, –ते। कत्रति। अचकत्रत्, –त। ಸಡಿಲವಾಗು.

**कथ-वाक्यप्रबन्धे** (चुरा० उभ० सक० से०) कथयति, –ते। कथयांबभूव, –आस, –चकार, –चक्रे। कथिता। कथयेत्, –त। अचीकथत्, –त। अचकथत्, –त।

**कर्मणि:**—कथ्यते। चकथे।

**सनि:**—चिकथयिषति, –ते। ಇತ್ಯಾದಿ.

1. ಹೇಳು, ತಿಳಿಸು, ನಿರೂಪಿಸು, ವರ್ಣಿಸು. "कार्तवीर्यजलक्रीडां कथयन्ति स्म तापसाः" याद० २२-२२०। "राममिष्वसनदर्शनोत्सुकं मैथिलाय कथयांबभूव सः" रघु० ११-३७। "कथ्यते चिदचिदन्तरात्मनः शास्त्रशुद्धहृदयैर्मनीषिभिः" याद० १७-१०८। 2. ಸೂಚಿಸು, ತಿಳಿಸು. "गात्रैस्ते कथयन्त्यसारभिदुरान् प्रायेण संसारिणः" मालतीं० ८-१०। 3. ತೋರಿಸಿಹೇಳು, ನಿರ್ದೇಶಿಸು. "भक्षयन्तीं न कथयेत्पिबन्तं चैव वत्सकम्" मनु० ११-११४।

**कथक ಕಥಕ** (वि०) 1. ಹೇಳುವವನು, ನಿರೂಪಿಸುವವನು, ವರ್ಣಿಸುವವನು. कथ (वाक्यप्रबन्धे) "ण्वुल्" (३-१-१३३)। 2. ಅನುವಾದಮಾಡುವವನು. 3. ಪುರಾಣ ಹೇಳುವವನು, ಕಥೆ ಹೇಳಿ ಜೀವಿಸುವವನು. 4. ತತ್ತ್ವನಿರ್ಣಯಕ್ಕಾಗಿ ವಾದಮಾಡುವವನು. "कथादर्पक्षुभ्यत्कथककुलकोलाहलभवं हरत्वन्तर्ध्वान्तं हयवदनहेषाहलहलः" हयग्री०।

**कथङ्कारम् ಕಥಂಕಾರಮ್** (अव्य०) ಹೇಗೆ?, ಹೇಗೆ ಮಾಡಿ? कथं कृत्वा। कथम्+डु कृञ् (करणे) "णमुल्" (३-४-२७)। "कथङ्कारमनालम्बा कीर्तिर्द्यामधिरोहति" माघ० २-५२। "धार्यः कथङ्कारमहं भवत्या वियद्विहारी वसुधैकगत्या" नैष० ३-१५।

**कथञ्चन ಕಥಂಚನ** (अव्य०) 1. ಹೇಗಾದರೂ. 2. ಬಹಳ ಕಷ್ಟದಿಂದ. कथं + चित्। ಇದು ಅಸಾಕಲ್ಯಾರ್ಥ (ಅಸಂಪೂರ್ಣಾರ್ಥ) ವನ್ನು ಕೊಡುವುದು. "असाकल्ये तु चिच्चन" ಎಂದು ಅಮರಕೋಶದಲ್ಲಿ चित् ।

ಪ್ರತ್ಯೇಕ ಪದಗಳಾಗಿ ಹೇಳಲ್ಪಟ್ಟಿದ್ದರೂ ಈ ಪದಗಳಿಗೆ ಪ್ರತ್ಯೇಕವಾಗಿ ಪ್ರಯೋಗವಿಲ್ಲದಿರುವುದರಿಂದ कतिचित् कतिचन कथञ्चित् कथञ्चन कश्चन कश्चित् ಇತ್ಯಾದಿ ಇತರ ಪದಗಳೊಡನೆ ಸೇರಿಸಿ ಪ್ರಯೋಗಿಸಲ್ಪಡುವುವು. "या कथञ्चन सखीवचनेन प्रागभिप्रियतमं प्रजगल्भे" माघ० १०-१८। "अथ प्रयत्नोन्नमितानमत्फणैर्धृते कथञ्चित्फणिनां गणैरधः" माघ० १-१३।

**कथन ಕಥನ** (न०) 1. ಹೇಳುವಿಕೆ, ನಿರೂಪಿಸುವಿಕೆ, ವರ್ಣಿಸುವಿಕೆ. कथ (वाक्यप्रबन्धे) + णिच् "ल्युट्" (३-३-११५)। 2. ಸೂಚಿಸುವಿಕೆ. 3. ತೋರಿಸುವಿಕೆ, ನಿರ್ದೇಶಿಸುವಿಕೆ.

**कथनीय ಕಥನೀಯ** (वि०) 1. ಅವಶ್ಯವಾಗಿ ಹೇಳಲ್ಪಡುವ. 2. ಹೇಳಲು ಯೋಗ್ಯವಾದ, ಹೇಳಲು ಅರ್ಹವಾದ. 3. ಹೇಳಲು ಶಕ್ಯವಾದ. कथ (वाक्यप्रबन्धे) + णिच् "अनीयर्" (३-१-९६)।

**कथम् ಕಥಮ್** (अव्य०) 1. ಹೇಗೆ? ಯಾವ ರೀತಿಯಿಂದ? ಯಾವ ಪ್ರಕಾರದಿಂದ? किम् प्रकारे "थमु:" (५-३-२५)। "अवाप्यते वा कथमन्यथा द्वयं तथाविधं प्रेम पतिश्च तादृश:" कुमा० ५-२। 2. ಪ್ರಶ್ನೆ. "कथमिदानीमात्मानं निवेदयामि?। कथं वात्मापहारं करोमि?" शाकु० १। 3. ಸಂಭ್ರಮ, ಗಡಿಬಿಡಿ, ಆಕಸ್ಮಿಕದಿಂದುಂಟಾದ ಕಳವಳ. "कथमुपहारीकृतास्मि राज्ञस्तातेन? राजाराधनं पुनर्गुरुकं न पुनर्मालती" मालती० २। 4. ನಿಂದೆ, ದೂಷಣೆ, 5. ಆಶ್ಚರ್ಯ, ವಿಸ್ಮಯ. 6. ಸಂಭಾವನೆ, ಊಹೆ. 7. ಹರ್ಷ, ಸಂತೋಷ. "कथं हर्षे च गर्हायां प्रकारार्थे च सम्भ्रमे। प्रश्ने सम्भावनायां च" मेदि०।

**कथमपि ಕಥಮಪಿ** (अव्य०) 1. ಬಹಳ ಕಷ್ಟದಿಂದ, ಬಹಳ ಪ್ರಯತ್ನದಿಂದ. कथं च अपि च। "मुखमंसविवर्ति पक्ष्मलाक्ष्या: कथमप्युन्नमितं न चुम्बितं तु" शाकु० ३-२२। 2. ಹೇಗಾದರೂ, ಎಷ್ಟೋ ಕಷ್ಟದಿಂದಾದರೂ, ಎಷ್ಟೋ ಪ್ರಯತ್ನದಿಂದಾದರೂ. "तस्य स्थित्वा कथमपि पुर: कौतुकाधानहेतो:" मेघ० २-३। 3. ಯಾವ ರೀತಿಯಿಂದಾದರೂ, ಯಾವ ಪ್ರಕಾರದಿಂದಾದರೂ. "शुक्लापाङ्गै: सजलनयनै: स्वागतीकृत्य केका: प्रत्युद्यात: कथमपि भवान् गन्तुमाशु व्यवस्येत्" मेघ० १-२२। 4. ಬಹಳ ವಿರಳವಾಗಿ, ಅಪೂರ್ವವಾಗಿ. "कथमपि भुवनेऽस्मिंस्तादृशा: सम्भवन्ति" मालती० २-६। ಎರಡು ಪದಗಳೆಂದು ಕೆಲವರ ಅಭಿಪ್ರಾಯ.

**कथमिव ಕಥಮಿವ** (अव्य०) "कथङ्कारम्" ಪದದ ಅರ್ಥ.

**कथम्भाव ಕಥಂಭಾವ** (पु०) ಹೇಗೆ? ಯಾವ ರೀತಿ? ಯಾವ ಪ್ರಕಾರ? ಯಾವ ಬಗೆ? कथमित्यस्य भाव: स्थिति:।

**कथम्भावाकाङ्क्षा ಕಥಂಭಾವಾಕಾಂಕ್ಷಾ** (स्त्री०) ಯಾವ ರೀತಿ ಮಾಡಬೇಕೆಂದು ತಿಳಿಯುವ ಇಚ್ಛೆ. "यजेत" ಇತ್ಯಾದಿ ವಿಧಿವಾಚಕಶಬ್ದಪ್ರಯೋಗದಿಂದ ಉಂಟಾಗುವ ಮೂರು ವಿಧ ಆಕಾಂಕ್ಷೆಗಳಲ್ಲೊಂದು. "यजेत" ಎಂದ ಕೂಡಲೆ किम्, केन ಮತ್ತು कथम् ಎಂಬ ಮೂರು ಆಕಾಂಕ್ಷೆಗಳು ಉಂಟಾಗುವುವು. ಅವುಗಳಲ್ಲಿ ಅಂಗಭೂತವಾದ ಕ್ರಿಯೆಗಳ ಆಕಾಂಕ್ಷೆಯು कथम्भावाकाङ्क्षा।

**कथम्भूत ಕಥಂಭೂತ** (वि०) 1. ಎಂತಹ, ಯಾವ ರೀತಿಯ, 2. ಯಾವ ರೀತಿಯಾಗಿರುವ, ಯಾವ ಪ್ರಕಾರವಾಗಿರುವ. कथं किं प्रकारं भूत: प्राप्त:।

**कथयत् ಕಥಯತ್** (वि०) 1. ಹೇಳುತ್ತಿರುವ, ನಿರೂಪಿಸುತ್ತಿರುವ, ವರ್ಣಿಸುತ್ತಿರುವ. कथ (वाक्यप्रबन्धे) + णिच् "शतृ" (३-२-१२४)। 2. ಸೂಚಿಸುತ್ತಿರುವ, ತಿಳಿಸುತ್ತಿರುವ. "अस्तित्वं कार्यसिद्धे: स्फुटमथ कथयन् पक्षते: कम्पभेदै:" नैष० ६-१३२। 3. ತೋರಿಸಿ ಹೇಳುತ್ತಿರುವ, ನಿರ್ದೇಶಿಸಿ ತಿಳಿಸುತ್ತಿರುವ. स्त्रियां "ङीप्" (४-१-६)। -यन्ती -ಯಂತೀ.

**कथंजातीय ಕಥಂಜಾತೀಯ** (वि०) ಯಾವ ವಿಧದ? ಯಾವ ಬಗೆಯ? कथंप्रकार: "जातीयर्" (५-३-९६)। स्वार्थे "कन्"। -जातीयक: -ಜಾತೀಯಕಃ.

**कथंतराम् ಕಥಂತರಾಮ್** (अव्य०) ಹೇಗೆ? ಯಾವ ರೀತಿ? कथम् "तरप्" (५-३-५७)। "आमु:" (५-४-११)। "तमप्" (५-३-५५)। "आमु:" (५-४-११)। -तमाम् -ತಮಾಮ್.

**कथा ಕಥಾ** (स्त्री०) 1. ಹೇಳುವುದು, ನಿರೂಪಿಸುವುದು. कथ (वाक्यप्रबन्धे) "अङ्" (३-३-१०५)। "कथापि खलु पापानामलमश्रेयसे यत:" माघ० २-४०। 2. ಪರಸ್ಪರ ಮಾತಾಡುವುದು, ಸಂಭಾಷಣೆ. "कथाप्रसङ्गेषु मिथ: सखीमुखात्तृणेऽपि तन्व्या नलनामनि श्रुते" नैष० १-३५। 3. ಕಥೆ, ಕಲ್ಪಿತ ಕಥೆ, ಕಟ್ಟು ಕಥೆ. "कथाच्छलेन बालानां नीतिस्तदिह कथ्यते" हितो०। 4. ತತ್ತ್ವನಿರ್ಣಯ ಅಥವಾ ವಾದಿವಿಜಯಕ್ಕಾಗಿ ಅನೇಕ ವಾದಿಪ್ರತಿವಾದಿಗಳು ಪೂರ್ವಪಕ್ಷಸಿದ್ಧಾಂತರೂಪವಾಗಿ ಯುಕ್ತಿಗಳಿಂದ ಆಡುವ ಮಾತು. ಇದು ವಾದ, ಜಲ್ಪ ಮತ್ತು

ವಿತಂಡಾ ಎಂದು ಮೂರು ವಿಧ. ತತ್ತ್ವನಿರ್ಣಯವೇ ಪ್ರಧಾನವಾದ ಮಾತು "ವಾದ". ಪರಸ್ಪರ ಜಯಾಪೇಕ್ಷೆಯಿಂದ ಆಡುವ ಮಾತು "ಜಲ್ಪ". ಸ್ವಮತ ಸ್ಥಾಪನೆಯಿಲ್ಲದೆ ಕೇವಲ ಪರಮತದೂಷಣೆ ಮಾಡುವುದು "ವಿತಂಡಾ" ಎನಿಸುವುದು.

**कथानक ಕಥಾನಕ** (न०) ಉಪಕಥೆಗಳಿಂದ ಕೂಡಿದ ದೊಡ್ಡ ಕಥೆ. कथयत्यत्र "आनक:" बाहु०।

**कथान्तर ಕಥಾಂತರ** (न०) 1. ಕಥೆಯ ಮಧ್ಯ, ಮಾತಿನ ಮಧ್ಯ. कथाया अन्तरम्। (अव्य०) 2. ಬೇರೆ ಕಥೆ, ಬದಲಾಯಿಸಲ್ಪಟ್ಟ ಕಥೆ. अन्या कथा।

**कथाप्रसङ्ग ಕಥಾಪ್ರಸಂಗ** (पु०) 1. ಮಾತನಾಡುವ ಪ್ರಸಂಗ, ಮಾತಿನ ಸಂದರ್ಭ. कथाया: प्रसङ्ग:। "कथाप्रसङ्गेषु मिथ: सखीजनात्तृणोऽपि तन्व्या नलनामनि श्रुते" नैष० १-३५। 2. ವಿಷವೈದ್ಯ, ಹಾವಾಡಿಗ. "कथाप्रसङ्गेनजनैरुदाहृतादनुस्मृताखण्डलसूनुविक्रम:" किरा० १-२४।

**कथामुख ಕಥಾಮುಖ** (न०) ಕಥೆಯ ಪ್ರಾರಂಭ, ಪೀಠಿಕಾ ಪ್ರಕರಣ, ಪ್ರಸ್ತಾವನೆ. कथाया आमुखम्।

**कथारम्भ ಕಥಾರಂಭ** (पु०) ಕಥೆಯ ಉಪಕ್ರಮ, ಕಥೆಯನ್ನು ಪ್ರಾರಂಭಿಸುವಿಕೆ. कथाया आरम्भ:।

**कथालाप ಕಥಾಲಾಪ** (पु०) 1. ಭಾಷಣ, ಮಾತಾಡುವಿಕೆ, 2. ಸಂಭಾಷಣೆ. कथाया आलाप:।

**कथावतार ಕಥಾವತಾರ** (पु०) 1. ಪೀಠಿಕೆ, ಉಪೋದ್ಘಾತ, ಪ್ರಸ್ತಾವನೆ. कथाया अवतार: यत्र। 2. ಒಂದು ರೂಪದಿಂದ ಕಥೆಯು ಹುಟ್ಟುವಿಕೆ, ಕಥೆಯ ಸೃಷ್ಟಿ. कथाया अवतार:।

**कथावलि ಕಥಾವಳಿ** (स्त्री०) ಕಥೆಗಳ ಸಂಗ್ರಹ, ಕಥೆಗಳ ಮಾಲೆ, ಅನೇಕ ಕಥೆಗಳ ಗುಂಪು. कथानामावलि:। **–सङ्ग्रह: –ಸಂಗ್ರಹಃ.**

**कथित ಕಥಿತ** (न०) 1. ಕಥನ, ಹೇಳುವಿಕೆ. कथ (वाक्यप्रबन्धे) + णिच् भावे "क्त:" (३-३-११४)। "पूर्ववृत्तकथितै: पुराविद: सानुज: पितृसखस्य राघव:। उह्यमान इव वाहनोचित: पादचारमपि न व्यभावयत्" रघु० ११-१०। (वि०) 2. ಹೇಳಲ್ಪಟ್ಟ (ಮನುಷ್ಯ). कथ + णिच् "क्त:" (३-२-१०२)। "अथ किल कथिते सखीभिरत्र क्षणमपरेव ससंभ्रमा भवन्ती" माघ० ७-३६। 3. ಹೇಳಲ್ಪಟ್ಟ (ವಿಷಯ). "कथितमपि नरेन्द्र: शंसयामास हंसम्" नैष० ३-१३५।

**कथितपद ಕಥಿತಪದ** (न०) ಪುನಃ ಹೇಳಲ್ಪಟ್ಟ ಪದವುಳ್ಳ ವಾಕ್ಯ, ಪುನರುಕ್ತವಾದ ಪದವುಳ್ಳ ವಾಕ್ಯ. कथितं पदं यत्र। **–पदता –ಪದತಾ, –पदत्वम् –ಪದತ್ವಮ್.** ಪುನರುಕ್ತಿ ರೂಪವಾದ ವಾಕ್ಯದೋಷ. ಇದೊಂದು ಕಾವ್ಯದೋಷ. ಏಕಾರ್ಥಬೋಧಕಶಬ್ದವನ್ನು ಒಂದೇ ವಾಕ್ಯದಲ್ಲಿ ಪುನಃ ಹೇಳುವುದು (ಒಂದೇ ಅರ್ಥವನ್ನು ಅದೇ ಪದದಿಂದ ಮತ್ತೆ ಹೇಳುವುದು) ಪುನರುಕ್ತಿರೂಪವಾದ ದೋಷವಾಗುವುದು. ಇಂತಹ ಕಡೆ "**कथितपदता**" ರೂಪವಾದ ಕಾವ್ಯದೋಷ ವುಂಟಾಗುವುದು. "अधिकन्यूनकथितपदताहतवृत्तता:" सा० द० ७-५। "रतिलीलाश्रमं भिन्ते सलीलमनिलो वहन्" ಎಂಬಲ್ಲಿ "लीला" ಪದವು ಪುನರುಕ್ತವಾಗಿರುವುದರಿಂದ ಇದು ವಾಕ್ಯದೋಷ.

**कथितवत् ಕಥಿತವತ್** (वि०) ಹೇಳಿದವನು, ಮಾತಾಡಿದವನು, ನಿರೂಪಿಸಿದವನು. कथ (वाक्यप्रबन्धे) + णिच् कर्त० "क्तवतु:" (३-२-१०२)। स्त्रियां "ङीप्" (४-१-६)। **–वती –ವತೀ.**

**कथोद्घात ಕಥೋದ್ಘಾತ** (पु०) 1. ಕಥೆಯ ಪ್ರಾರಂಭ. कथाया उद्घात:। "आकुमारकथोद्घातं शालिगोप्यो जगुर्यश:" रघु० ४-२०। 2. (ನಾಟಕದಲ್ಲಿ) ಆಮುಖದ ಒಂದು ಅಂಗ, ಪ್ರಸ್ತಾವನೆಯ ಮೂರು ವಿಧ ಅಂಗಗಳಲ್ಲೊಂದು. ಆಮುಖಕ್ಕೆ **कथोद्घात:, प्रवर्तकम्** ಮತ್ತು **प्रयोगातिशय:** ಎಂದು ಮೂರು ಅಂಗಗಳು. ತನ್ನ ಕಥಾ ಸಂದರ್ಭಕ್ಕೆ ಸಂಬಂಧಿಸಿದಂತೆ ಅದಕ್ಕೆ ಸಮಾನವಾದ ಸೂತ್ರಧಾರನ ವಾಕ್ಯವನ್ನು ಅಥವಾ ಅದರ ಅರ್ಥವನ್ನು ಮುಂದಿಟ್ಟುಕೊಂಡು ಪಾತ್ರವು ಪ್ರವೇಶಿಸುವ ಕಡೆ "**कथोद्घात:**" ಎಂಬ ಆಮುಖಾಂಗ. "स्वेतिवृत्तसमं वाक्यमर्थं वा यत्र सूत्रिण:। गृहीत्वा प्रविशेत्पात्रं कथोद्घात: स उच्यते" दशरू०। सूत्रधार:—"क्रूरग्रह: सकेतुश्चन्द्रमसंपूर्णमण्डलमिदानीम्। अभिभवितुमिच्छति बलात्...... ............" (इत्यर्धोक्ते) (नेपथ्ये) "आ:, क एष मयि स्थिते चन्द्रमभिभवितुमिच्छति बलात्?" सूत्रधार:– "..............रक्षत्येनं तु बुधयोग:" मुद्रा० १।

**कथ्य ಕಥ್ಯ** (वि०) 1. ಹೇಳಬಹುದಾದ. 2. ಹೇಳಲು ಶಕ್ಯವಾದ. 3. ಹೇಳಲು ಅರ್ಹವಾದ. 4. ಹೇಳಲ್ಪಡುವ. कथ (वाक्यप्रबन्धे) + णिच "यत्" (३-१-९७)।

**कथ्यमान ಕಥ್ಯಮಾನ** (वि०) ಹೇಳಲ್ಪಡುತ್ತಿರುವ, ನಿರೂಪಿಸಲ್ಪಡುತ್ತಿರುವ. कथ (वाक्यप्रबन्धे) + णिच् कर्म० "शानच्" (३-२-१२४)।

**कद ಕದ** (पुं०) 1. ಮೇಘ, ಮೋಡ. कं वारि ददाति— डु दाञ् (दाने) "कः" (३-२-४)। (वि०)2. ನೀರನ್ನು ಕೊಡುವ. 3. ಸುಖವನ್ನು ಕೊಡುವ. कं जलं सुखं वा ददाति।

**कदग्नि ಕದಗ್ನಿ** (पुं०) ಮಂದವಾದ ಅಗ್ನಿ, ಶಕ್ತಿಕುಂದಿದ ಅಗ್ನಿ. कुत्सितश्चासावग्निश्च। कोः "कत्" आदेशः (६-३-१०१)।

**कदध्वन् ಕದಧ್ವನ್** (पुं०) ಕೆಟ್ಟದಾರಿ, ಸರಿಯಲ್ಲದ ಮಾರ್ಗ. कुत्सितोऽध्वा — कोः "कत्" (६-३-१०१)।

**कदन ಕದನ** (नं०)1. ವಧೆ, ಸಂಹಾರ, ಕೊಲ್ಲುವಿಕೆ. कद (वैक्लव्ये) भावे "ल्युट्" (३-३-११५)। "व्यापादनञ्च हिंसा च कदनं संकुलो वधः" वैज०। "निर्ग्रन्थनं प्रमथनं कदनं निबर्हणम्" अभि० चि०। 2. ಪಾಪ. 3. ಪೀಡಿಸುವಿಕೆ, ಹಿಂಸಿಸುವಿಕೆ. कद कर० "ल्युट्"। "कदनं मर्दपापयोः" मेदि०। 4. ಯುದ್ಧ. अधि० "ल्युट्" (३-३-११७)। "इति ते भर्तृनिर्देशमादाय शिरसाऽऽदृताः। तथा प्रजानां कदनं विदधुः कदनप्रियाः" भाग० ७-२-१३।

**कदन्न ಕದನ್ನ** (नं०) 1. ಕೆಟ್ಟ ಅನ್ನ, ಕೆಟ್ಟ ಆಹಾರ. कुत्सितमन्नम्—कोः "कत्" (६-३-१०१)। (वि०)2. ಕೆಟ್ಟ ಆಹಾರ ತಿನ್ನುವ. कदन्नमस्त्यस्य "अच्" (५-३-१२७)। ಹೀಗೆಯೇ **कदश्वः ಕದಶ್ವ, कद्रथः ಕದ್ರಥ** ಇತ್ಯಾದಿ.

**कदपत्य ಕದಪತ್ಯ** (नं०) ಕೆಟ್ಟ ಮಗ, ದುಷ್ಟನಾದ ಮಗ, ದುರಾಚಾರದ ಮಗ. कुत्सितमपत्यम् — कोः "कत्" (६-३-१०१)।

**कदम्ब ಕದಂಬ** (पुं०) 1. ನೀಪವೃಕ್ಷ, ಉತ್ತಮ ಜಾತಿಯ ಈಚಲುಮರ. 2. ಸಾಸುವೆ. कद (वैक्लव्ये) "अम्बच्" (उ० ४-८२)। "त्वत्सम्पर्कात्पुलकितमिव प्रौढपुष्पैः कदम्बैः" मेघ० १-२७। (नं०)3. ಸಮೂಹ, ಗುಂಪು. "अस्याः खलु ग्रन्थिनिबद्धकेशमल्लीकदम्बप्रतिबिम्बवेषात्" नैष० ७-८८। "कदम्बं निकुरम्बे स्यान्नीपसर्षपयोरपि" मेदि०: संज्ञायां स्वार्थे वा "कः"। **कदम्बकः ಕದಂಬಕಃ.** 1. ನೀಪವೃಕ್ಷ. 2. ಸಮೂಹ. "पृथुकदम्बकदम्बकराजितम्" किरा० ५-९। 3. ಸಾಸುವೆ.

**कदर ಕದರ** (पुं०) 1. ಬಿಳಿಕಗ್ಗಲಿಮರ. 2. ಗರಗಸ. 3. ಕದರುರೋಗ. दृणाति "अच्" (३-१-१३४)। कस्य दरः। 4. ವಸ್ತ್ರದ ಛಾವಣಿ, ಬಣ್ಣಬಣ್ಣದ ಬಟ್ಟೆಗಳಿಂದ ಕಟ್ಟಿದ ವಿತಾನ. "चन्द्रोदय उल्लोचः कदरश्चन्द्रातपो वितानोऽस्त्री" वैज०।

**कदर्थ ಕದರ್ಥ** (पुं०)1. ಕೆಟ್ಟ ಅರ್ಥ, ದುಷ್ಟವಾದ ಅರ್ಥ. 2. ಕೆಟ್ಟ ವಸ್ತು, ಕೆಟ್ಟ ಪದಾರ್ಥ. 3. ಕೆಟ್ಟ ಪ್ರಯೋಜನ, ಕೆಟ್ಟ ಫಲ. कुत्सितोऽर्थः — कोः "कत्" (६-३-१०१)।

**कदर्थन ಕದರ್ಥನ** (स्त्री०) 1. ಕೆಡಿಸುವಿಕೆ, ಪ್ರಯೋಜನವಿಲ್ಲದಂತೆ ಮಾಡುವಿಕೆ. स्त्रियां –ना –ನಾ. 2. ಪೀಡೆ ಹಿಂಸೆ, ತೊಂದರೆ. "ददेऽपि तुभ्यं कियतीः कदर्थनाः सुरेषु रागप्रसवावकेशिनी" नैष० ९-१३१।

**कदर्थनीय ಕದರ್ಥನೀಯ** (वि०) 1. ಪೀಡಿಸಲು ಅರ್ಹವಾದ. 2. ಪೀಡಿಸಲು ಶಕ್ಯವಾದ. 3. ಪೀಡಿಸಲ್ಪಡುವ. "दिगीश्वरार्थं न कथंचन त्वया कदर्थनीयास्मि कृतोऽयमञ्जलिः" नैष० ९-६९। 4. ಕೆಡಿಸಲು ಶಕ್ಯವಾದ. 5. ಕೆಡಿಸಲು ಅರ್ಹವಾದ. 6. ಕೆಡಿಸಲ್ಪಡುವ.

**कदर्थित ಕದರ್ಥಿತ** (वि०) 1. ಕೆಡಿಸಲ್ಪಟ್ಟ, ಪ್ರಯೋಜನವಿಲ್ಲದಂತೆ ಮಾಡಲ್ಪಟ್ಟ. कुत्सितोऽर्थः कदर्थः। कदर्थः कृतः — तत्करोति तदाचष्टे (ग० २०४)। कदर्थ+णिच् "क्तः" (३-२-१०२)। "मृष्टचन्दनविशेषकभक्तिर्भ्रष्टभूषणकदर्थितमाल्यः" माघ० १०-८४। 2. ಪೀಡಿಸಲ್ಪಟ್ಟ, ಹಿಂಸಿಸಲ್ಪಟ್ಟ. "निमीलनस्पष्टविलोकनाभ्यां कदर्थितस्ताः कलयन् कटाक्षैः" नैष० ६-२२।

**कदर्थीकृत ಕದರ್ಥೀಕೃತ** (वि०) ವ್ಯರ್ಥಪಡಿಸಲ್ಪಟ್ಟ, ಪ್ರಯೋಜನವಿಲ್ಲದಂತೆ ಮಾಡಲ್ಪಟ್ಟ. कुत्सितोऽर्थः कदर्थः — अकदर्थः कदर्थः कृतः "च्विः" (वा० ५-४-५०)। दीर्घः (७-४-३२)। "केशैः कदर्थीकृतवीर्यसारः कच्चित्स एवासि धनञ्जयस्त्वम्" किरा० ३-४७।

**कदर्थ्यमान ಕದರ್ಥ್ಯಮಾನ** (वि०) 1. ಕೆಡಿಸಲ್ಪಡುತ್ತಿರುವ, ವ್ಯರ್ಥಪಡಿಸಲ್ಪಡುತ್ತಿರುವ. 2. ಪೀಡಿಸಲ್ಪಡುತ್ತಿರುವ, ಹಿಂಸಿಸಲ್ಪಡುತ್ತಿರುವ. कदर्थः क्रियमाणः– कदर्थ+णिच् कर्म० "शानच्" (३-२-१२४)। "शरैरजस्रं कुसुमायुधस्य कदर्थ्यमानस्तरुणि त्वदर्थे" नैष० ८-७५।

**कदर्य ಕದರ್ಯ** (वि०) 1. ಕೃಪಣ, ಜಿಪುಣ, ಲೋಭಿ. कुत्सितः अर्यः स्वामी — कोः "कत्" (६-३-१०१)। "स्तेनगायनयोश्चान्नं तक्ष्णो वार्धुषिकस्य च। दीक्षितस्य कदर्यस्य बद्धस्य निगडस्य च" मनु० ४-२१०। 2. ನೀಚ, ಕೀಳುತನದ, ತುಚ್ಛ, ನಿಕೃಷ್ಟ.

**कदल ಕದಳ** (पुंस्त्री०) 1. ಬಾಳೆಯಗಿಡ. कद (वैक्लव्ये) "कलः" (उ० १-१०६)। "ऊरुद्वयं मृगदृशो कदलस्य

काण्डो " अमरु० १३६। (ನ०) 2. ಬಾಳೆಯ ಹಣ್ಣು. स्वार्थे "कन्"। **कवलक: ಕದಳಕः.** गौरा० "ङीष्" (४-१-४१)। **कवली ಕದಳೀ.**

**कवला ಕದಳಾ** (स्त्री०) ಶಾಲ್ಮಲೀವೃಕ್ಷ, ಭೂರುಗದಮರ.

**कदलिका ಕದಳಿಕಾ** (स्त्री०) 1. ಪತಾಕೆ ಧ್ವಜ. 2. ಬಾಳೆಯಗಿಡ. कदल्येव स्वार्थे "कन्"। "तं स द्विपेन्द्रतुलितातुलतुङ्गशृङ्गमभ्युल्लसत्कदलिकावनराजिमुच्चैः" माघ० ५-२।

**कवली ಕದಳೀ** (स्त्री०) 1. ಒಂದು ಜಾತಿಯ ಜಿಂಕೆ, ಶ್ರೇಷ್ಠವಾದ ಚರ್ಮವುಳ್ಳ ಚಿಗರಿ. ಆಸನಕ್ಕೆ ಉಪಯೋಗಿಸಲು ಯೋಗ್ಯವಾದ ಕಪ್ಪುಚುಕ್ಕಿಯ ಚರ್ಮವುಳ್ಳ ಜಿಂಕೆ. 2. ಬಾಳೆಯ ಗಿಡ. केन वायुना दल्यते—दल (विशरणे) "घः" (३-३-१२४)। "इत्यस्य तेने कदलीमृगश्रीः प्रभावनी केतनवैजयन्तीः" माघ० ६-६१। 3. ಧ್ವಜ, ಪತಾಕೆ. "कदलो हरिणान्तरे। रम्भायां वैजयन्त्यां च" हेम०।

**कदा ಕದಾ** (अव्य०) ಯಾವಾಗ ?, ಯಾವ ಕಾಲದಲ್ಲಿ ? ಯಾವ ಸಮಯದಲ್ಲಿ ? किम् "दा" (५-३-१५)। किमः "कः" (७-२-१०३)। "कदा कर्हि वा भुङ्क्ते भोक्ष्यसे भोक्ता वा" सि० कौ०। "जातिद्रव्यगुणानां च साम्यमेषां मया सह। मत्प्रभुत्वफलं ब्रूहि कदा किं तद्भविष्यति" हितो० १-४७। ಈ ಪದದೊಡನೆ चन, चित्, अपि ಇವುಗಳು ಸೇರಿ ಅನಿಶ್ಚಿತಾರ್ಥವನ್ನು ಕೊಡುವುವು. **कदाचन ಕದಾಚನ.** ಯಾವಾಗಲೂ, ಯಾವ ಸಮಯದಲ್ಲೂ. "ब्राह्मण विप्रस्तीर्थेन नित्यकालमुपस्पृशेत्। कायत्रैदशिकाभ्यां वा न पित्र्येण कदाचन" मनु० २-५८। **कदाचित् ಕದಾಚಿತ್.** ಯಾವುದೋ ಒಂದು ಸಮಯದಲ್ಲಿ, ಯಾವುದೋ ಒಂದು ಕಾಲದಲ್ಲಿ. "कण्डूयमानेन कटं कदाचिद्वन्यद्विपेनोन्मथिता त्वगस्य" रघु० २-३७।

**कवुष्ण ಕದುಷ್ಣ** (न०) 1. ಸ್ವಲ್ಪ ಬಿಸಿ, ಸ್ವಲ್ಪ ಬೆಚ್ಚಗಿರುವಿಕೆ, ಉಗುರುಬೆಚ್ಚಗಿರುವಿಕೆ. ईषदुष्णम् कोः "कत्" (६-३-१०७)। (वि०) 2. ಸ್ವಲ್ಪ ಬಿಸಿಯಾಗಿರುವ, ಉಗುರುಬೆಚ್ಚಗಿರುವ. "त्वया विधेया न गिरो मदर्थाः क्रुधा कदुष्णे हृदि नैषधस्य" नैष० ३-९४। 3. ಬಿರುಸಾದ, ಚುರುಕಾದ, ಮನನೋಯಿಸುವ (ಮಾತು). "निरस्य दूतः स तया विसर्जितः प्रियोक्तिरप्याह कदुष्णमक्षरम्" नैष० ९-३८।

**कद्रु ಕದ್ರು** (पु०) 1. ಹೊಂಬಣ್ಣ, ಹಳದಿಬಣ್ಣ. कदि (आह्वाने रोदने च) "कु" (उ० १-३७)। 2. ಚಿತ್ರವರ್ಣ. (वि०) 3. ಹೊಂಬಣ್ಣದ. 4. ಚಿತ್ರವರ್ಣದ.

**कद्रुण ಕದ್ರುಣ** (वि०) ಹೊಂಬಣ್ಣವುಳ್ಳ, ಹಳದಿಬಣ್ಣವುಳ್ಳ. कद्रुरस्त्यस्य "नः" (५-२-१००)।

**कद्रू ಕದ್ರೂ** (स्त्री०) ದಕ್ಷಬ್ರಹ್ಮನ ಮಗಳು, ಕಶ್ಯಪನ ಪತ್ನಿ, ನಾಗಮಾತೆ, ಸರ್ಪಗಳ ತಾಯಿ. कद्रु "ऊङ्" (४-१-७२)। "कद्रूश्च मनुजव्याघ्र दक्षकन्यैव भारत" भा० आदि० ६६-१३। "शेषोऽनन्तो वासुकिश्च तक्षकश्च भुजङ्गमः। कूर्मश्च कुलिकश्चैव काद्रवेयाः प्रकीर्तिताः" भा० आदि० ६६-४१। [ಗರುಡನ ತಾಯಿ ವಿನತೆಯೂ ಕದ್ರುವೂ ಸವತಿಯರಾದುದರಿಂದ ತಮ್ಮ ತಮ್ಮ ಸೌಂದರ್ಯದ ವಿಷಯದಲ್ಲಿ ಇಬ್ಬರಿಗೂ ಹೋರಾಟವಿದ್ದಿತು. ಇವರಿಬ್ಬರ ಸೌಂದರ್ಯದಿಂದ ಸಂತುಷ್ಟನಾದ ಕಶ್ಯಪನು ಇಬ್ಬರಿಗೂ ವರವನ್ನು ಕೊಡುವುದಾಗಿ ಹೇಳಿದಾಗ ಕದ್ರುವು ಬಲಶಾಲಿಗಳಾದ ಸಾವಿರ ಸರ್ಪಗಳು ಮಕ್ಕಳಾಗಬೇಕೆಂದೂ ವಿನತೆಯು ಅವಳ ಮಕ್ಕಳಿಗಿಂತಲೂ ಬಲಿಷ್ಠರಾದ ಇಬ್ಬರು ಮಕ್ಕಳಾಗಬೇಕೆಂದೂ ವರಗಳನ್ನು ಕೇಳಿಕೊಳ್ಳುವರು. भा० आदि० १६। ಕದ್ರುವಿಗೆ ಶೇಷ ಅನಂತ ವಾಸುಕಿ ತಕ್ಷಕ ಮುಂತಾದ ಸಾವಿರ ಮಕ್ಕಳಾಗುವರು. ವಿನತೆಗೆ ಅರುಣ ಮತ್ತು ಗರುಡ ಇವರಿಬ್ಬರು ಮಕ್ಕಳು ಹುಟ್ಟುವರು. ಕದ್ರು ಮತ್ತು ವಿನತೆಯರಿಗೆ ಒಂದು ದಿನ ಉಚ್ಚೈಃಶ್ರವಸ್ಸಿನ ವಿಷಯದಲ್ಲಿ ಪಂದ್ಯವುಂಟಾಗಿ ವಿನತೆಯು ಸೋತು ಕದ್ರುವಿಗೆ ದಾಸಿಯಾಗುವಳು. ವಿನತೆಯ ಮಗನಾದ ಗರುಡನು ಕದ್ರುವಿನ ಮಾತಿನಂತೆ ದೇವಲೋಕದಿಂದ ಅಮೃತವನ್ನು ತಂದು ಸರ್ಪಗಳಿಗೆ ಕೊಟ್ಟು ವಿನತೆಯನ್ನು ದಾಸ್ಯದಿಂದ ಬಿಡಿಸುವನು.] भा० आदि० ३४।

**कद्रूपुत्र ಕದ್ರೂಪುತ್ರ, –सुत –ಸುತ** (पु०) ಸರ್ಪಗಳು, ಕದ್ರುವಿನ ಮಕ್ಕಳು.

**कद्वद ಕದ್ವದ** (वि०) ನಿಂದ್ಯವಾದ ಮಾತುಗಳನ್ನಾಡುವವನು, ಕೆಟ್ಟ ಮಾತುಗಳನ್ನಾಡುವವನು. कुत्सितं वदति — कोः "कत्" (६-३-१०२)। "गर्ह्यवादी तु कद्वदः" अम०। "येन जातं प्रियापाये कद्वदं हंसकोकिलम्" भट्टि० ६-७५।

**कनक ಕನಕ** (पु०) 1. ಮುತ್ತುಗದ ಗಿಡ. कनति—कनी (दीप्तिकान्तिगतिषु) "वुन्" (उ० ५-३५)। 2. ಪಕುಳ ವೃಕ್ಷ, ಪವಳದ ಗಿಡ. 3. ದತ್ತೂರಿ ಗಿಡ. 4. ಸಂಪಿಗೆ ಮರ. 5. ಒಂದು ಸುಗಂಧದ್ರವ್ಯ. 6. ಕೆಂಗಾಂಚಾಳ ಗಿಡ. (न०) 7. ಸುವರ್ಣ, ಚಿನ್ನ. "वरणः कनकस्य

मानिनीं दिवमङ्कादमराद्रिरागताम्" नैष० २-८६। "कनकं हेम्नि पुंसि स्यात् किंशुके नागकेसरे। धत्तूरे काञ्चनारे च कालीये चम्पकेऽपि च" मेदि०।

**कनककार ಕನಕಕಾರ** (पु०) ಚಿನ್ನದ ಕೆಲಸಮಾಡುವವನು, ಅಕ್ಕಸಾಲಿಗ. कनकं करोति — डु कृञ् (करणे) "अण्" (३-२-१)।

**कनकक्षार ಕನಕಕ್ಷಾರ** (पु०) ಟಂಕಣ, ಬಿಳಿಗಾರ. कनकस्य द्रावणाय क्षारः।

**कनकदण्ड ಕನಕದಂಡ** (न०) ರಾಜನ ಛತ್ರಿ. कनकस्य दण्डोऽस्य।

**कनकध्वज ಕನಕಧ್ವಜ** (पु०) ಧೃತರಾಷ್ಟ್ರನ ಒಬ್ಬ ಮಗ. "दीर्घबाहुर्महाबाहुर्व्यूढोरा: कनकध्वजः" भा० आदि० १३१-१४।

**कनकपत्र ಕನಕಪತ್ರ** (न०) ಪತ್ರಾಕಾರದ ಒಂದು ಚಿನ್ನದ ಕರ್ಣಾಭರಣ, ಚಿನ್ನದ ಲೋಲಾಕು. कनकनिर्मितं पत्रम्।

**कनकमय ಕನಕಮಯ** (वि०) ಸುವರ್ಣಮಯವಾದ, ಚಿನ್ನದಿಂದ ನಿರ್ಮಿತವಾದ. कनकस्य विकारः "मयट्" (४-३-१४३)। "वात्याभिर्वियति विवर्तितः समन्तादाधत्ते कनकमयातपत्रलक्ष्मीम्" किरा० ५-३१।

**कनकसूत्र ಕನಕಸೂತ್ರ** (न०) 1. ಚಿನ್ನದ ತಂತಿ. कनकनिर्मितं सूत्रम्। 2. ಚಿನ್ನದ ಉಡುದಾರ, ಚಿನ್ನದ ಸರ. "काक्या कनकसूत्रेण कृष्णसर्पो निपातितः" हितो० २-१२०।

**कनकाचल ಕನಕಾಚಲ** (पु०) 1. ಸುಮೇರುಪರ್ವತ, ಹೇಮಾದ್ರಿ, ಚಿನ್ನದಬೆಟ್ಟ. कनकमयोऽचलः। 2. ದಾನವಾಗಿ ಕೊಡಲ್ಪಡುವ ಪರ್ವತಾಕಾರದ ದ್ರವ್ಯ, ದಾನವಾಗಿ ಕೊಡಲ್ಪಡುವ ಹತ್ತು ಪರ್ವತಗಳಲ್ಲಿ ಒಂದು. ದ್ರವ್ಯಗಳನ್ನು ಪರ್ವತದಂತೆ ಮಾಡಿ ಕಾಲವಿಶೇಷಗಳಲ್ಲಿ ಅವುಗಳನ್ನು ದಾನವಾಗಿ ಕೊಡುವ ಪದ್ಧತಿಯುಂಟು. **ಈ ಪರ್ವತಗಳು ಹತ್ತು ವಿಧ:** (1) धान्यशैलः, (2) लवणाचलः, (3) गुडाचलः, (4) हेमपर्वतः, (5) तिलशैलः, (6) कार्पासपर्वतः, (7) घृतशैलः, (8) रत्नशैलः, (9) राजतशैलः ಮತ್ತು (10) शर्कराचलः। मत्स्यपु०। **ಈ ದಾನಗಳನ್ನು ಮಾಡುವ ಕಾಲ:** ಅಯನ (ದಕ್ಷಿಣಾಯನ ಮತ್ತು ಉತ್ತರಾಯಣ ಪುಣ್ಯಕಾಲಗಳು), ವಿಷು ಪುಣ್ಯಕಾಲ (ಚಿತ್ರವಿಷು ಮತ್ತು ತುಲಾವಿಷು), ವ್ಯತೀಪಾತ, ಸಾಯಂಕಾಲ, ಶುಕ್ಲಪಕ್ಷದ ತೃತೀಯೆ. ಗ್ರಹಣಕಾಲ, ವಿವಾಹ, ಯಜ್ಞ, ದ್ವಾದಶಿ, ಹುಣ್ಣಿಮೆ, ಅಮಾವಾಸ್ಯೆ, ಮತ್ತು ಪುಣ್ಯನಕ್ಷತ್ರಗಳಲ್ಲಿ ಈ ದಾನಗಳನ್ನು ಮಾಡಬೇಕು. [ವಿವರಕ್ಕೆ ಮತ್ಸ್ಯಪುರಾಣದಲ್ಲಿ ನೋಡಿ.]

**कनकाध्यक्ष ಕನಕಾಧ್ಯಕ್ಷ** (पु०) ಸುವರ್ಣದ ರಕ್ಷಣಾಧಿಕಾರಿ, ಖಜಾನೆಯ ಅಧಿಕಾರಿ.

**कनकायु ಕನಕಾಯು** (पु०) ಧೃತರಾಷ್ಟ್ರನ ಒಬ್ಬ ಮಗ. "उग्रायुधो भीमशरः कनकायुर्दृढायुधः" भा० आदि० ६८-९९।

**कनकालुका ಕನಕಾಲುಕಾ** (स्त्री०) ಚಿನ್ನದ ಪಾತ್ರೆ, ಚಿನ್ನದ ಗಿಂಡಿ, ಸುವರ್ಣದ ಕಲಶ. कनकस्यालुः संज्ञायां "कन्" (५-३-७५)।

**कनकाह्व ಕನಕಾಹ್ವ** (पु०) ದತ್ತೂರಿ ಗಿಡ. कनकम् आह्वा यस्य।

**कनकाह्वय ಕನಕಾಹ್ವಯ** (पु०) ದತ್ತೂರಿ ಗಿಡ. कनकम् आह्वयो यस्य।

**कनत् ಕನತ್** (वि०) ಪ್ರಕಾಶಿಸುತ್ತಿರುವ, ಹೊಳೆಯುತ್ತಿರುವ. कनी (दीप्तिकान्तिगतिषु) "शतृ" (३-२-१२४)। "यूथैर्द्विरदशैलानां कनत्कदलिकावनैः" याद० २२-२२८।

**कनिष्ठ ಕನಿಷ್ಠ** (वि०) 1. ಕಿರಿಯವನು, ಕೊನೆಯ ತಮ್ಮ. 2. ಕೊನೆಯದು, ಕಿರಿಯದು, ಎಲ್ಲಕ್ಕಿಂತಲೂ ಚಿಕ್ಕದಾದ. 3. ಅಲ್ಪವಾದ, ಬಹಳ ಕೊಂಚವಾದ. अयमतिशयेन युवा अल्पो वा "इष्ठन्" (५-३-५५)। स्त्रियां **कनिष्ठा ಕನಿಷ್ಠಾ.** 1. ಕಿರಿಯವಳು, ತಂಗಿ. 2, ಕಿರಿಯ ಹೆಂಡತಿ. "पुत्रः कनिष्ठो ज्येष्ठायां कनिष्ठायां च पूर्वजः। कथं तत्र विभागः स्यादिति चेत् संशयो भवेत्" मनु० ९-१२२।

**कनिष्ठा ಕನಿಷ್ಠಾ** (स्त्री०) 1. ಕಿರುಬೆರಳು. 2. ತಂಗಿ. 3. ಕಿರಿಯ ಹೆಂಡತಿ. 4. ಕನಿಷ್ಠನಾಯಿಕೆ. ನಾಯಕನು ನಾಯಿಕೆಯರಲ್ಲಿ ತೋರಿಸುವ ಪ್ರಣಯದ ತಾರತಮ್ಯದಿಂದ ಜ್ಯೇಷ್ಠಾ ಕನಿಷ್ಠಾ ಎಂಬ ಭೇದದಿಂದ ನಾಯಿಕೆಯು ಎರಡು ವಿಧ. "प्रत्येकं ता अपि द्विधा। कनिष्ठज्येष्ठरूपत्वान्नायकप्रणयं प्रति" सा० द० ३-६४। "दृष्ट्वैकासनसंस्थिते प्रियतमे पश्चादुपेत्यादरादेकस्या नयने पिधाय विहितक्रीडानुबन्धच्छलः। ईषद्वक्रितकन्धरः सपुलकः प्रेमोल्लसन्मानसामन्तर्हासलसत्कपोलफलकां धूर्तोऽपरां चुम्बति" सा० द०। स्वार्थे "कन्"। **कनिष्ठिका ಕನಿಷ್ಠಿಕಾ.** "पुरा कवीनां गणनाप्रसङ्गे कनिष्ठिकाधिष्ठितकालिदासा"।

**कनी ಕನೀ** (स्त्री०) 1. ಮಗಳು. 2. ಕನ್ಯೆ, ಹೆಣ್ಣುಮಗು. कनति—कनी (दीप्तिकान्तिगतिषु) "अच्" (३-१-१३४)। "कन्या कनी कुमारी च" अभि० चि०।

**कनीनिका ಕನೀನಿಕಾ** (स्त्री०) 1. ಕಣ್ಣಿನ ಕಪ್ಪು ಗುಡ್ಡೆ. कनति प्रकाशयति — कनी (दीप्तौ) "ईनः" बाहु०। स्वार्थे "कन्"। "टाप्" (४-१-४)। 2. ಕಿರುಬೆರಳು. "अनामिका तु सावित्री कनिष्ठा तु कनीनिका" वैज०। "कनीनिका तारकोऽक्ष्णः स्यात्कनिष्ठाङ्गुलावपि" मेदि०।

**कनीयस् ಕನೀಯಸ್** (वि०) 1. (ಇಬ್ಬರಲ್ಲಿ) ಕಿರಿಯವನು, ತಮ್ಮ. 2. ಚಿಕ್ಕ, ಕಿರಿಯ. 3. ಅಲ್ಪವಾದ, ಕೊಂಚವಾದ. अयमनयोरतिशयेन युवा अल्पो वा "ईयसुन्" (५-३-५७)। "वृद्धोरसां राज्यधुरां प्रवोढुं कथं कनीयानहमुत्सहेय" भट्टि० ३-५४। स्त्रियां "ङीप्" (४-१-६)। **कनीयसी ಕನೀಯಸೀ.**

**कन्त ಕಂತ** (वि०) ಸುಖವುಳ್ಳ. कम् सुखमस्त्यस्य — कम् "तः" (५-२-१३८)।

**कन्ति ಕಂತಿ** (वि०) ಸುಖವುಳ್ಳ, कम् सुखमस्त्यस्य — कम् "तिः" (५-२-१३८)।

**कन्तु ಕಂತು** (पु०) 1. ಕಂದರ್ಪ, ಕಾಮ, ಮನ್ಮಥ. कमु (कान्तौ) "तुः" (उ० १-७२)। 2. ಚಿತ್ತ, ಮನಸ್ಸು. "कन्तुः कन्दर्पचित्तयोः" सि० कौ०। 3. ಉಗ್ರಾಣ, ಕಣಜ. "कन्तू कुसूलकन्दर्पौ" वैज०। (वि०)4. ಸುಖವುಳ್ಳ. कम् सुखमस्त्यस्य — कम् "तुः" (५-२-१३८)।

**कन्तुजनक ಕಂತುಜನಕ** (पु०) ಶ್ರೀಕೃಷ್ಣ, ವಾಸುದೇವ. कन्तोः कामस्य जनकः।

**कन्था ಕಂಥಾ** (स्त्री०) 1. ಛಿಂದಿಬಟ್ಟೆ, ಹರಕುಬಟ್ಟೆ, ತೇಪೆ ಹಾಕಿದ ಬಟ್ಟೆ. कमु (कान्तौ) "थन्" बाहु०। "भिक्षा प्राणस्य रक्षार्थं कन्था शीतनिवारिणी। अचला केशवे भक्तिः विभवैः किं प्रयोजनम्"। 2. ಮಣ್ಣಿನ ಗೋಡೆ. "कन्था मृण्मयभित्तौ च तथा प्रावरणान्तरे" मेदि०।

**कन्द ಕಂದ** (पु०)1. ಮೇಘ, ಮೋಡ. कं जलं ददाति—डुदाञ् (दाने) "कः" (३-२-४)। (पुंन०)2. ಸೂರಣಗೆಡ್ಡೆ, 3. ಗೆಣಸು. 4. ಬೆಳ್ಳುಳ್ಳಿ, 5. ಗೆಡ್ಡೆ, ಗಿಡಗಳ ಬುಡದ ದಪ್ಪ ಬೇರು. कन्दति कन्दयति कन्द्यते वा—कदि (आह्वाने रोदने च) "अच्" (३-१-१३४)। "घञ्" (३-३-१९) वा। "कन्दोऽस्त्री सूरणे सस्यमूले जलधरे पुमान्" मेदि०। "दन्ताः शोभामापुरम्भोनिधीनां कन्दोद्भेदा वैद्रुमा वारिणीव" माघ० १८-३६।

**कन्दगुडूची ಕಂದಗುಡೂಚೀ** (स्त्री०) ಅಮೃತಬಳ್ಳಿ. कन्दोद्भवा गुडूची।

**कन्दमूल ಕಂದಮೂಲ**(न०)1. ಮೂಲಂಗಿ. 2. ಗೆಣಸು. कन्दरूपं मूलमस्य।

**कन्दर ಕಂದರ** (पुंस्त्री०) 1. ಗುಹೆ, ಗವಿ, ಬೆಟ್ಟದ ಬಿಲ. केन जलेन दीर्यते—दृ (विदारणे) "अप्" (३-३-५७)। "निर्ह्लादस्ते मुरज इव चेत्कन्दरेषु ध्वनिः स्यात्" मेघ० १-५६। "दरी तु कन्दरो वा स्त्री" अम०। (न०) मेदि०। (पु०)2. ಅಂಕುಶ. कं गजशिरो दीर्यतेऽनेन "अप्" (३-३-५७)। "कन्दरस्त्वङ्कुशे पुंसि गुहायां च नपुंसकम्" मेदि०। 3. ಹಸಿಶುಂಠಿ. 4. ಮೊಳಕೆ.

**कन्दराल ಕಂದರಾಳ** (पु०) 1. ಬಸುರಿ ಮರ. कन्दरां लाति—ला (आदाने) "कः" (३-२-३)। 2. ಬೆಟ್ಟಗೋನು ಮರ.

**कन्दर्प ಕಂದರ್ಪ** (पु०) ಕಾಮ, ಮನ್ಮಥ. कम् इति मान्तमव्ययम्। "कम् शिरःसुखवारिषु" विश्व०। कम् सुखं, तेन दृप्यति — दृप (हर्षमोहनयोः) "अच्" (३-१-१३४)। "तत्र निश्चित्य कन्दर्पमगमत्पाकशासनः" कुमा० २-६३। "कन्दर्पप्रवणमनाः सखीसिसिक्षालक्ष्येण प्रतियुवमञ्जलिं चकार" माघ० ८-३५।

**कन्दर्पकूप ಕಂದರ್ಪಕೂಪ** (पु०) ಹೆಂಗಸರ ಗುಹ್ಯಸ್ಥಳ, ಸ್ತ್ರೀಯರ ಚಿಹ್ನೆ. ಯೋನಿ. कन्दर्पस्य कूप इव।

**कन्दर्पकेतु ಕಂದರ್ಪಕೇತು** (पु०) ಒಬ್ಬ ರಾಜಕುಮಾರ.

**कन्दर्पमथन ಕಂದರ್ಪಮಥನ** (पु०) ಮಹಾದೇವ, ಈಶ್ವರ, ಶಿವ. कन्दर्पं मथ्नाति — मन्थ (विलोडने) "ल्युः" (३-१-१३४)।

**कन्दल ಕಂದಳ** (त्रि०) 1. ಕಪಾಲ, ತಲೆಯಚಿಪ್ಪಿನ ಎಲುಬು. 2.ಉಪರಾಗ, ಉತ್ಪಾತ ಮೊದಲಾದ ಕುಲಕ್ಷಣ. 3. ಹೊಸ ಚಿಗುರು, ಆಗತಾನೆ ಹೊರಟಿರುವ ಮೊಳಕೆ. 4. ಕಲರವ, ಇಂಪಾದ ಧ್ವನಿ. कदि (आह्वाने) "कलः" (उ० १-१०६)। "कन्दलं त्रिषु कपालेऽप्युपरागे नवाङ्कुरे। कलध्वनौ" मेदि०। (पु०) 5. ಅಪವಾದ, ನಿಂದೆ, ದೂಷಣೆ. 6. ಕಲಾಪ, ಸಮೂಹ. 7. ಜಗಳ, ವಾಗ್ಯುದ್ಧ. (स्त्री०)—ली—ಳೀ. 8. ಶ್ರೇಷ್ಠವಾದ ಚರ್ಮವುಳ್ಳ ಜಿಂಕೆ. कन्दे सस्यमूले लीयते — लीङ् (श्लेषणे) "डः" (वा ३-२-१०२)। 9. ಬಾಳೆಯಗಿಡ. केन वायुना दल्यते—दल (विशरणे) "घः" (३-३-१२५)। "आरक्त-

राजिभिरियं कुसुमैर्नवकन्दलीगर्भः" विक्र० ४-१५। 10. ಪೊದರು. 11. ಪತಾಕೆ, ಧ್ವಜ. 12. ಅಣಬೆ, ನಾಯಿಕೊಡೆ. 13. ತಾವರೆಯಬೀಜ. (न०) 14. ಬಾಳೆಯಹೂವು. "द्विदलकन्दलकम्पनलालितः" माघ० ६-३०।

**कन्दलित ಕಂದಳಿತ** (वि०) 1. ಚಿಗುರಿದ, ಮೊಳಕೆ ಹೊರಟಿರುವ. 2. ವೃದ್ಧಿಹೊಂದಿದ, ಹೆಚ್ಚಾಗಿರುವ, ಬೆಳೆದಿರುವ. कन्दलः सञ्जातोऽस्य "इतच्" (५-२-३६)।

**कन्दु ಕಂದು** (पुंस्त्री०) 1. ಕಾವಲಿ, ದೋಸೆಯ ಕಲ್ಲು, ಹೋಳಿಗೆಯ ಕಾವಲಿ. स्कन्दति—स्कन्दिर् (गतिशोषणयोः) "उः" सलोपश्च (उ० १-१४)। "कन्दुर्वा स्वेदनी स्त्रियाम्" अम०। 2. ಹುರಿಯುವ ಓಡು, ಬಾಣಲಿ.

**कन्दुक ಕಂದುಕ** (पु०) 1. ರಬ್ಬರು ಬಟ್ಟೆ ಮೊದಲಾದುವುಗಳಿಂದ ನಿರ್ಮಿತವಾದ ಚೆಂಡು. कम् सुखं ददाति—डु दाञ् (दाने) "डुः" (वा० ३-२-१८०)। स्वार्थे "कन्" (५-४-५)। "मन्दाकिनीसैकतवेदिकाभिः सा कन्दुकैः कृत्रिमपुत्रिकैश्च" कुमा० १-२९। 2. ಕಾವಲಿ, ದೋಸೆಯಕಲ್ಲು.

**कन्दोट ಕಂದೋಟ** (पु०) 1. ಕನ್ನೈದಿಲೆ. 2. ಬಿಳಿನೈದಿಲೆ. कदि (आह्वाने) "ओटः" बाहु०।

**कन्ध ಕಂಧ** (पु०) 1. ಮೇಘ, ಮೋಡ. 2. ಕೊನ್ನಾರಿಗೆಡ್ಡೆ, ಭದ್ರಮುಸ್ತೆ. कं जलं दधाति—डु धाञ् (धारणपोषणयोः) "कः" (३-२-३)।

**कन्धर ಕಂಧರ** (पु०) 1. ಮೇಘ, ಮೋಡ. कं जलं धारयति—धृ धारणे+णिच् "खच्" (३-२-४६)। मुमागमः (६-३-६७)। ह्रस्वः (६-४-९४)। (स्त्री०) -र -रा. ಕುತ್ತಿಗೆ, ಕತ್ತು. कं शिरो धारयति—धृ + णिच् "खच्" (३-२-४६)। ह्रस्वः (६-४-९४)। "अथोच्चकैर्जरठकपोतकन्धरातनूरुहप्रकरविपाण्डुरद्युति" माघ० १७-५२। "कपाटवक्षाः परिणद्धकन्धरः" रघु० ३-३४। "कन्धरो वारिवाहे स्याद्ग्रीवायां कन्धरा मता" विश्व०।

**कन्धि ಕಂಧಿ** (पु०) 1. ಸಮುದ್ರ, ಕಡಲು. (स्त्री०) 2. ಕುತ್ತಿಗೆ, ಕತ್ತು. कं जलं शिरो वा धीयतेऽत्र डु धाञ् (धारणपोषणयोः) "किः" (३-३-९३)।

**कन्न ಕನ್ನ** (न०) 1. ಪಾತಕ, ಪಾಪ. 2. ಮೂರ್ಛೆ. (पु०) 3. ಒಬ್ಬ ಋಷಿ.

**कन्यका ಕನ್ಯಕಾ** (स्त्री०) ಕನ್ಯೆ, ಕುಮಾರಿ, ಹತ್ತುವರ್ಷವಯಸ್ಸಿನ ಹುಡುಗಿ, ಮದುವೆಯಾಗದಿರುವ ಬಾಲೆ. अज्ञाता कन्या—"कः" (५-३-७३)। "अष्टवर्षा भवेद्गौरी नववर्षा च रोहिणी। दशमे कन्यका प्रोक्ता अत ऊर्ध्वं रजस्वला"। "कन्यकातनयकौतुकक्रियां स्वप्रभावसदृशीं वितेनतुः" रघु० ११-५३।

**कन्यकाजात ಕನ್ಯಕಾಜಾತ** (पु०) ಕಾನೀನ, ಮದುವೆಯಾಗದ ಕನ್ಯಕೆಯಲ್ಲಿ ಹುಟ್ಟಿದವನು. कन्यकायां जातः। ವ್ಯಾಸಮಹರ್ಷಿ, ಕರ್ಣ ಇತ್ಯಾದಿ.

**कन्या ಕನ್ಯಾ** (स्त्री०) 1. ಕನ್ಯೆ, ಮದುವೆಯಾಗದಿರುವ ಬಾಲೆ. 2. ಕುಮಾರಿ, ಮದುವೆಯಾಗದಿರುವ ಮಗಳು. कनति—कनी (दीप्तौ) "यक्" (उ० ४-१११)। निपा०। "अकृतोपयमा कन्या"। "आच्छाद्य चार्चयित्वा च श्रुतिशीलवते स्वयम्। आहूय दानं कन्याया ब्राह्मो धर्मः प्रकीर्तितः" मनु० ३-२७। "सर्वान् कामयते यस्मात् कनेर्धातोश्च भामिनि। तस्मात् कन्येह सुश्रोणी स्वतन्त्रा वरवर्णिनि" भा० वन० ३०८-१३। 3. ಕನ್ಯಾ ರಾಶಿ. 4. ಹೆಂಗಸು. "अवाकिरन् बाललताः प्रसूनैराचारलाजैरिव पौरकन्याः" रघु० २-१०। "अहल्या द्रौपदी तारा तारा मण्डोदरी तथा। पञ्चकन्याः स्मरेन्नित्यं महापातकनाशनम्"।

**कन्याकुब्ज ಕನ್ಯಾಕುಬ್ಜ** (न०) ಕನ್ಯಾಕುಬ್ಜ. ಚಂದ್ರವಂಶದ ರಾಜನಾದ ಕುಶನಾಭನ ನೂರು ಮಂದಿ ಕನ್ಯೆಯರು ಉದ್ಯಾನವನಕ್ಕೆ ವಿಹಾರಕ್ಕಾಗಿ ಹೋಗಿದ್ದಾಗ ವಾಯುದೇವನು ಇವರನ್ನು ಮೋಹಿಸಿ ಇವರು ಸಮ್ಮತಿಸದಿರಲು ವಾಯುವು ಕುಪಿತನಾಗಿ ದೇಹದೊಳಗೆ ಪ್ರವೇಶಿಸಿ ಇವರನ್ನು ಕುಬ್ಜೆಯರನ್ನಾಗಿ ಮಾಡಿದನು. ಅನಂತರ ಬ್ರಹ್ಮದತ್ತನೆಂಬ ಮುನಿಯು ಇವರನ್ನು ಮದುವೆಯಾಗಿ ತನ್ನ ತಪೋಮಹಿಮೆಯಿಂದ ಇವರ ಕುಬ್ಜತ್ವವನ್ನು ಹೋಗಲಾಡಿಸಿದನು. ಇದರಿಂದ ಈ ಕನ್ಯೆಯರು ಕುಬ್ಜರಾದ ಪ್ರದೇಶಕ್ಕೆ "ಕನ್ಯಾಕುಬ್ಜ"ವೆಂದು ಹೆಸರಾಯಿತು.

**कन्याग्रहण ಕನ್ಯಾಗ್ರಹಣ** (न०) ಕನ್ಯಾಸ್ವೀಕಾರ, ವಿವಾಹದಲ್ಲಿ ಕನ್ಯೆಯನ್ನು ಸ್ವೀಕರಿಸುವುದು. कन्याया ग्रहणम्।

**कन्यातीर्थ ಕನ್ಯಾತೀರ್ಥ** (न०) 1. ಕುರುಕ್ಷೇತ್ರದಲ್ಲಿರುವ ಒಂದು ಪುಣ್ಯತೀರ್ಥ. 2. ಸಮುದ್ರ ಮತ್ತು ಕಾವೇರೀ ಸಂಗಮಸ್ಥಳಕ್ಕೆ ಸಮೀಪದಲ್ಲಿರುವ ಒಂದು ತೀರ್ಥ. अप्सरोरूपकन्यावृतत्वेन तस्य कन्यातीर्थत्वम्।

**कन्यादातृ ಕನ್ಯಾದಾತೃ** (पु०) (ವಿವಾಹದಲ್ಲಿ) ಕನ್ಯೆಯನ್ನು ದಾನಮಾಡುವವನು, ತಂದೆ.

**कन्यादान ಕನ್ಯಾದಾನ** (नं०) (ವಿವಾಹದಲ್ಲಿ) ಶಾಸ್ತ್ರೋಕ್ತವಾಗಿ ದಾರೆಯೆರೆದು ಕನ್ಯೆಯನ್ನು ದಾನಮಾಡುವುದು. कन्याया दानम्। "अद्भिरेव द्विजाग्र्याणां कन्यादानं विशिष्यते। इतरेषां तु वर्णानामितरेतरकाम्यया" मनु० ३-३५।

**कन्यादूषक ಕನ್ಯಾದೂಷಕ** (वि०) 1. ಕನ್ಯೆಯನ್ನು ಕೆಡಿಸುವವನು, ವಿವಾಹವಾಗದ ಕನ್ಯೆಯಲ್ಲಿ ಅತ್ಯಾಚಾರ ನಡೆಸುವವನು. कन्याया दूषकः। 2. ಕನ್ಯೆಯನ್ನು ನಿಂದಿಸುವವನು. कन्यां दूषयति—दुष (वैकृत्ये) + णिच् "ण्वुल्" (३-१-१३३)। "......वर्ज्याः स्युः हव्यकव्ययोः। श्वक्रीडी श्येनजीवी च कन्यादूषक एव च। हिंस्रो वृषलवृत्तिश्च गणानां चैव याजकः" मनु० ३-१३४।

**कन्यादूषण ಕನ್ಯಾದೂಷಣ** (नं०) 1. ಕನ್ಯೆಯನ್ನು ಕೆಡಿಸುವಿಕೆ, ಕನ್ಯೆಯಲ್ಲಿ ಅತ್ಯಾಚಾರ ನಡೆಸುವಿಕೆ. कन्याया दूषणम्। 2. ಕನ್ಯೆಯನ್ನು ನಿಂದಿಸುವಿಕೆ.

**कन्यादूषयितृ ಕನ್ಯಾದೂಷಯಿತೃ** (वि०) "कन्यादूषक" ಪದದ ಅರ್ಥ. कन्याया दूषयिता—दुष (वैकृत्ये) + णिच् "तृच्" (३-१-१३३)। दुष + णिच् "णिनिः" (३-१-१३४)। **–दूषिन् –ದೂಷಿನ್.** "भृतकाध्यापकः क्लीबः कन्यादूष्यभिशस्तकः। मित्रध्रुक् पिशुनः सोमविक्रयी परिविन्दकः" याज्ञ० १-२२३।

**कन्याधन ಕನ್ಯಾಧನ** (नं०) ಸ್ತ್ರೀಧನ, ವಿವಾಹಕ್ಕೆ ಮುಂಚೆ ಕನ್ಯೆಗೆ ಕೊಟ್ಟಿದ್ದ ಧನ. कन्यया लब्धं धनम्।

**कन्यानिरीक्षण ಕನ್ಯಾನಿರೀಕ್ಷಣ** (नं०) ವಿವಾಹಕಾಲದಲ್ಲಿ ನಿಶ್ಚಿತಾರ್ಥ ಮಧುಪರ್ಕಗಳ ನಂತರ ಶುಭಲಗ್ನದಲ್ಲಿ ವರನು ಕನ್ಯೆಯನ್ನು ನೋಡುವಿಕೆ.

**कन्यापति ಕನ್ಯಾಪತಿ** (पुं०) ಅಳಿಯ, ಮಗಳ ಗಂಡ. कन्यायाः पतिः।

**कन्यापुत्र ಕನ್ಯಾಪುತ್ರ** (पुं०) ವಿವಾಹವಾಗದ ಕನ್ಯೆಯಲ್ಲಿ ಹುಟ್ಟಿದ ಮಗ. कन्यायाः पुत्रः। ವ್ಯಾಸಮಹರ್ಷಿ, ಕರ್ಣ ಮೊದಲಾದವರು.

**कन्याभर्तृ ಕನ್ಯಾಭರ್ತೃ** (पुं०) 1. ಅಳಿಯ, ಮಗಳ ಗಂಡ. कन्याया भर्ता। 2. ಷಣ್ಮುಖ, ಕಾರ್ತಿಕೇಯ. कन्याभिः प्रार्थनीयो भर्ता। "आग्नेयश्चैव स्कन्दश्च........। कन्याभर्ता विभक्तश्च स्वाहेयो रेवतीसुतः" भा० वन० २३३।

**कन्यारत्न ಕನ್ಯಾರತ್ನ** (नं०) ಶ್ರೇಷ್ಠಳಾದ ಕನ್ಯೆ, ಉತ್ತಮ ತರಗತಿಗೆ ಸೇರಿದ ಕನ್ಯೆ. कन्यासु रत्नम्।

**कन्याराशि ಕನ್ಯಾರಾಶಿ** (पुं०) ಮೇಷ ಮೊದಲಾದ ಹನ್ನೆರಡು ರಾಶಿಗಳಲ್ಲಿ ಆರನೆಯದು, ಉತ್ತರಫಲ್ಗುನಿಯ 2, 3, 4 ನೆಯ ಪಾದಗಳು, ಹಸ್ತನಕ್ಷತ್ರ ಮತ್ತು ಚಿತ್ತಾನಕ್ಷತ್ರದ 1, 2 ನೆಯ ಪಾದಗಳು ಇವು ಸೇರಿದ ಒಂದು ರಾಶಿ. उत्तरा त्रयः पादाः हस्तचित्तार्धं कन्या।

**कन्यार्थिन् ಕನ್ಯಾರ್ಥಿನ್** (वि०) ಮದುವೆಗಾಗಿ ಕನ್ಯೆಯನ್ನು ಅಪೇಕ್ಷಿಸುವವನು. कन्यामर्थयते—अर्थ (उपयाच्ञायाम्) + णिच् "णिनिः" (३-१-१३४)।

**कन्यावत् ಕನ್ಯಾವತ್** (वि०) ಹೆಣ್ಣುಮಕ್ಕಳುಳ್ಳವನು. कन्या अस्य सन्ति "मतुप्" (५-२-९४)। मस्य "वः" (८-२-९)।

**कन्यावरण ಕನ್ಯಾವರಣ** (नं०) ವರನ ಕಡೆಯ ಹಿರಿಯರು ಗೋತ್ರಪ್ರವರಗಳ ಉಚ್ಚಾರಣಪೂರ್ವಕ ಕನ್ಯೆಯನ್ನು ಚುನಾಯಿಸುವಿಕೆ. कन्याया वरणम्।

**कन्यावेदिन् ಕನ್ಯಾವೇದಿನ್** (पुं०) ಕನ್ಯೆಯನ್ನು ಪಡೆಯುವವನು. कन्यां विन्दते — विद्लृ (लाभे) "णिनिः" (३-१-१३४)। "कन्यां कन्यावेदिनश्च पशून् वै सत्सुतानपि" याज्ञ० १-२६२।

**कन्याशुल्क ಕನ್ಯಾಶುಲ್ಕ** (नं०) ಮದುವೆಗಾಗಿ ಕನ್ಯೆಯನ್ನು ಕೊಳ್ಳಲು ಕನ್ಯೆಯ ತಂದೆಗೆ ಕೊಡುವ ಧನ, ವಿವಾಹ ಧನ. [ಕೆಲವು ಕಡೆ ಈ ಪದ್ಧತಿ ಇರುವುದು. ಇನ್ನೂ ಕೆಲವು ಕಡೆ ಕನ್ಯೆಯ ತಂದೆಯು ಕನ್ಯೆಗೆ ಕೊಡುವ ಧನವು ಕನ್ಯಾಶುಲ್ಕ (ಧನ) ವೆನಿಸಿಕೊಳ್ಳುವುದು.]

**कन्यास्वयंवर ಕನ್ಯಾಸ್ವಯಂವರ** (पुं०) ಕನ್ಯೆಯು ತನ್ನಿಚ್ಛೆಯಂತೆ ಪತಿಯನ್ನು ವರಿಸುವಿಕೆ. ಕನ್ಯೆಯು ತನಗೆ ಇಷ್ಟನಾದ ಪತಿಯನ್ನು ಆರಿಸಿಕೊಳ್ಳುವಿಕೆ.

**कन्याहरण ಕನ್ಯಾಹರಣ** (नं०) ಕನ್ಯೆಯನ್ನು ಬಲಾತ್ಕಾರದಿಂದ ಒಯ್ಯುವಿಕೆ. कन्याया हरणम्।

**कप ಕಪ** (पुं०) 1. ವರುಣ. 2. ಸೂರ್ಯ. (वि०) 3. ನೀರು ಕುಡಿಯುವವನು. कं जलं पाति पिबति वा पा (रक्षणे, पाने वा) "कः" (३-२-४)। 4. ಅಸುರರ ಒಂದು ಗುಂಪು. [ಕಪರೆಂಬ ಈ ಅಸುರರು ಒಮ್ಮೆ ಸ್ವರ್ಗವೆಲ್ಲವನ್ನೂ ಆಕ್ರಮಿಸಿಕೊಂಡಾಗ ಬ್ರಹ್ಮನ ಮಾತಿನಂತೆ ಇಂದ್ರಾದಿ ದೇವತೆಗಳೆಲ್ಲರೂ ಬ್ರಾಹ್ಮಣರನ್ನು ಶರಣ ಹೊಂದಿ ಕಪರನ್ನು ನಿಗ್ರಹಿಸಬೇಕೆಂದು ಕೇಳಿಕೊಳ್ಳಲು (ಅದಕ್ಕಾಗಿ) ದ್ವಿಜರೆಲ್ಲರೂ ಸೇರಿ ಕಪನಾಶನವಾದ ಕಾರ್ಯವನ್ನು ಕೈಗೊಳ್ಳುವರು. ಇದನ್ನು ಕೇಳಿದ ಕಪರು ಬ್ರಾಹ್ಮಣರು ಈ ಕಾರ್ಯವನ್ನು ಕೈಬಿಡಬೇಕೆಂದು ಪ್ರಾರ್ಥಿಸಿ

ಧನಿಯೆಂಬ ದೂತನೊಬ್ಬನನ್ನು ಕಳುಹಿಸುವರು. ಧನಿಯು ಎಷ್ಟೇ ಬೇಡಿದರೂ ಬ್ರಾಹ್ಮಣರು ತಮ್ಮ ಕೆಲಸವನ್ನೇ ನಡೆಸುತ್ತಿರಲು ಕಪರೆಲ್ಲರೂ ಅಸ್ತ್ರಪಾಣಿಗಳಾಗಿ ಬ್ರಾಹ್ಮಣರ ಮೇಲೆ ಧಾಳಿಮಾಡುವರು. ಆಗ ಬ್ರಾಹ್ಮಣರು ಕಪರನ್ನು ನಾಶಪಡಿಸಲು ಉಗ್ರವಾಗಿ ಉರಿಯುತ್ತಿರುವ ಅಗ್ನಿಯನ್ನು ಸೃಷ್ಟಿಸಲು ಕಪರೆಲ್ಲರೂ ಆ ಅಗ್ನಿಗೆ ಆಹುತಿಯಾಗುವರು.] भा० अनु० १५७।

**कपट ಕಪಟ** (पुंन०) 1. ವಂಚನೆ, ಮೋಸ, ಠಕ್ಕು. के मूर्ध्नि पट इवाच्छादकः। "विधाय मूर्ति कपटेन वामनीं स्वयं बलिध्वंसिविडम्बिनीमयम्" नैष० १-१२४। 2. ವ್ಯಾಜ, ನೆಪ. "किमस्य लोम्नां कपटेन कोटिभिर्विधिर्न लेखाभिरजीगणद्गुणान्" नैष० १-२१। (पु०) 3. ಕಶ್ಯಪನ ಪತ್ನಿಯಾದ ದನುವಿನ ಮಗ ಒಬ್ಬ ರಾಕ್ಷಸ.

**कपटतापस ಕಪಟತಾಪಸ** (पु०) ವೇಷಧಾರಿ ಸಂನ್ಯಾಸಿ, ತಾಪಸನಂತೆ ವೇಷಹಾಕಿ ನಟಿಸುವವನು. कपटेन तापसः।

**कपटलेख्य ಕಪಟಲೇಖ್ಯ** (न०) ಕೃತ್ರಿಮವಾದ ಕಾಗದ, ಮೋಸದ ದಸ್ತೈವೇಜು, ಅಸಲಿನಂತೆಯೇ ಕಾಣುವ ಹಾಗೆ ತಯಾರಿಸಲ್ಪಟ್ಟ ಸುಳ್ಳುಪತ್ರ.

**कपटवेष ಕಪಟವೇಷ** (पु०) ಮೋಸಕ್ಕಾಗಿ ಧರಿಸಲ್ಪಟ್ಟ ವೇಷ, ವಂಚಿಸಲು ತಾಳಿದ ವೇಷ.

**कपटवेषधारिन् ಕಪಟವೇಷಧಾರಿನ್** (वि०) ಮೋಸದ ವೇಷವನ್ನು ಧರಿಸಿರುವ, ವಂಚಿಸಲು ಬೇರೆ ವೇಷವನ್ನು ತಾಳಿದ.

**कपर्द ಕಪರ್ದ** (पु०) 1. ಕವಡೆ. ಇದು ಹಿಂದೂಸಾಗರದಲ್ಲಿ ದೊರಕುವ ಒಂದು ಪ್ರಾಣಿಯ ಚಿಪ್ಪು. ಪೂರ್ವಕಾಲದಲ್ಲಿ ಇದು ನಾಣ್ಯವಾಗಿ ಉಪಯೋಗಿಸಲ್ಪಡುತ್ತಿತ್ತು. 2. ಪರಮೇಶ್ವರನ ಜಟೆಗಳ ಸಮೂಹ. पर्व (पूरणे) "क्विप्" (वा० ३-३-१०८)। केन सुखेन परं पूर्ति ददाति डु दाञ् (दाने) "कः" (३-२-४)। "कपर्दमुद्बद्धमहीनमूर्धरत्नांशुभिर्भासुरमुल्लसद्भिः" कुमा० १२-९। "कपर्दः खण्डपरशोर्जटाजूटे वराटके" विश्व०।

**कपर्दक ಕಪರ್ದಕ** (पुंस्त्री०) 1. ಈಶ್ವರನ ಜಟಾಸಮೂಹ. कपर्द स्वार्थे "कः"। 2. ಸಣ್ಣ ಕವಡೆ. अल्पः कपर्दः "कन्" (५-३-८५)। "यद्यहमिमं सक्तुशरावं विक्रीय दश कपर्दकान् प्राप्नोमि" हितो० ४। कपर्दको वराटे स्याज्जटाजूटे च धूर्जटेः" मेदि०। स्त्रियां "टाप्"। कपर्दिका ಕಪರ್ದಿಕಾ. ಸುವರ್ಣದ ಛಾಯೆಯುಳ್ಳ ಕಪರ್ದವು ಸಿಂಹಿಯೆಂದೂ ಧೂಮ್ರವರ್ಣದ ಕಪರ್ದವು ವ್ಯಾಘ್ರಿಯೆಂದೂ ಬೆನ್ನಿನ ಮೇಲೆ ಹಳದಿಯಾಗಿರುವುದು ಮೃಗಿಯೆಂದೂ ಬಿಳುಪಾಗಿರುವುದು ಹಂಸಿಯೆಂದೂ ಹೆಚ್ಚು ಉದ್ದವಾಗಿರದ ಕಪರ್ದವು ವಿದಂತಪೆಂದೂ ಕಪರ್ದವು ಐದು ವಿಧ.

**कपर्दिन् ಕಪರ್ದಿನ್** (पु०) 1. ಶಿವ, ಪರಮೇಶ್ವರ. कपर्दोऽस्यास्ति "इनिः" (५-२-११५)। "कपर्दिकण्ठान्तकपालदाम्नोऽङ्गुलि प्रवेश्याननकोटरेषु" कुमा० ११-४६।

**कपाट ಕಪಾಟ** (पुंन०) ಬಾಗಿಲು, ಬಾಗಿಲಿನ ಕದ. कं वातं पाटयति — पट (भाषार्थे) + णिच् "अण्" (३-२-१)। "कपाटविस्तीर्णमनोरमोरःस्थलस्थितश्रीरमणस्य तस्य" माघ० ३-१३।

**कपाटघ्न ಕಪಾಟಘ್ನ** (पु०) ಚೋರ, ಕಳ್ಳ, ಬಾಗಿಲನ್ನು ಒಡೆಯುವವನು. कपाटं हन्ति — हन (हिंसागत्योः) "टक्" (३-२-५४)।

**कपाटवक्षस् ಕಪಾಟವಕ್ಷಸ್** (वि०) ಬಾಗಿಲಿನಂತೆ ವಿಶಾಲ ವಕ್ಷಸ್ಥಳವುಳ್ಳವನು,— ಅಗಲವಾದ ಎದೆಯುಳ್ಳವನು. कपाट इव (विशालं) वक्षः यस्य। "युवा युगव्यायतबाहुरंसलः कपाटवक्षाः परिणद्धकन्धरः" रघु० ३-३४।

**कपाटसन्धि ಕಪಾಟಸಂಧಿ** (पु०) ಬಾಗಿಲಿನ ಕದಗಳು ಕೂಡುವ ಸ್ಥಳ, ಕದಗಳ ಸೇರಿಕೆಯ ಜಾಗ. कपाटं सन्धीयतेऽत्र— सम्+धाञ् अधि० "किः" (३-३-९२)।

**कपाटिका ಕಪಾಟಿಕಾ** (स्त्री०) ಚಿಕ್ಕ ಕದ, ಸಣ್ಣ ಬಾಗಿಲುಗಳ ಕದ. अल्पः कपाटः "कन्" (५-३-८५)।

**कपाल ಕಪಾಲ** (पुंन०) 1. ತಲೆಯ ಎಲುಬಿನ ಚಿಪ್ಪು. कपि (चलने) "कालन्" (उ० १-११५)। "कपालनेत्रान्तरलब्धमार्गैर्ज्योतिःप्ररोहैरुदितैः शिरस्तः" कुमा० ३-४९। 2. ಕಲಶದ ಅವಯವ, ಘಟದ ಅರ್ಧಭಾಗ. "घटादीनां कपालादौ द्रव्येषु गुणकर्मणोः। तेषु जातेश्च संबन्धः समवायः प्रकीर्तितः" भाषाप०। 3. ಭಿಕ್ಷುಕರ ಭಿಕ್ಷಾಪಾತ್ರೆ. "नग्नो मुण्डः कपालेन भिक्षार्थी क्षुत्पिपासितः" मनु० ८-९३। 4. ಸಮೂಹ, ಗುಂಪು. "कपालोऽस्त्री शिरोऽस्थ्नि स्यात् घटादेः शकले व्रजे" मेदि०। 5. ಮೊಟ್ಟೆಗಳ ಅವಯವ, ತತ್ತಿಗಳ ಒಂದು ಭಾಗ. "कुक्कुटाण्डकपालानि कनक मधुकं समम्" सुश्रुत०। 6. ಪುರೋಡಾಶವನ್ನು ಸಂಸ್ಕರಿಸುವ ಯಾಗದ ಒಂದು ಪಾತ್ರೆ. "कपालानि वोपदधाति पुरोडाशं चाधिश्रपयति" तै० सं०। 7. ಹುರಿಯುವ ಓಡು. "कपालभ्रष्टान् सक्तून् कारयित्वा" सुश्रुत०।

**कपालनालिका ಕಪಾಲನಾಳಿಕಾ** (स्त्री०) ಚರಕದಲ್ಲಿ ನೂಲನ್ನು ತಿರುಚುವ ಮತ್ತು ಸುತ್ತುವ ಕದಿರು, ನೂಲುವ ಯಂತ್ರದಲ್ಲಿ ದಾರ ಸುತ್ತುವ ಕದಿರುಕಂಬಿ. "कपालनालिका तर्कुः" त्रिकाण्ड०।

**कपालभृत् ಕಪಾಲಭೃತ್** (पु०) 1. ಬ್ರಹ್ಮಕಪಾಲವನ್ನು ಧರಿಸಿರುವ ಶಿವ. ತಲೆಬುರುಡೆಯನ್ನು ಧರಿಸಿರುವ ಪರಮೇಶ್ವರ. कपालं ब्रह्मणः शिरोऽस्थिमयं पात्रं बिभर्ति —डु भृञ् (धारणे) "क्विप्" (३-२-७६)। (वि०) 2. ಕಪಾಲವನ್ನು ಹಿಡಿದಿರುವ ಭಿಕ್ಷುಕ.

**कपालमालिन् ಕಪಾಲಮಾಲಿನ್** (पु०) ತಲೆಬುರುಡೆಗಳ ಮಾಲೆಯನ್ನು ಧರಿಸಿರುವ ಪರಮೇಶ್ವರ. कपालानां मालाऽस्त्यस्य "इनिः" (५-२-११६)। (स्त्री०) **—मालिनी — ಮಾಲಿನೀ.** ದುರ್ಗಾದೇವಿ.

**कपालमोचन ಕಪಾಲಮೋಚನ** (न०) ಔಶನಸವೆಂಬ ಒಂದು ಪುಣ್ಯತೀರ್ಥ, ಸಕಲ ಪಾಪಗಳನ್ನೂ ಪರಿಹರಿಸುವ ಒಂದು ತೀರ್ಥ. ಇದು ಸರಸ್ವತೀನದಿಯ ತೀರದಲ್ಲಿರುವುದು. [ಶ್ರೀರಾಮನು ಸಂಹರಿಸಿದ ಒಬ್ಬ ರಾಕ್ಷಸನ ತಲೆಯು ಅರಣ್ಯದಲ್ಲಿದ್ದ ಮಹೋದರನೆಂಬ ಒಬ್ಬ ಮುನಿಯ ತೊಡೆಗೆ ಬಂದು ಅಂಟಿಕೊಂಡು ಅದು ಬಹಳವಾಗಿ ಪೀಡಿಸುತ್ತಿರಲು ಆ ಋಷಿಯು ಇತರ ಋಷಿಗಳ ಮಾತಿನಂತೆ ಔಶನಸತೀರ್ಥದಲ್ಲಿ ಬಂದು ಸ್ನಾನಮಾಡಿದ ಕೂಡಲೆ ಆ ಕಪಾಲವು ಕಳಚಿಕೊಂಡಿತು. ಮಹೋದರನು ಬಹಳ ಸಂತೋಷದಿಂದ ಈ ವಿಷಯವನ್ನು ಋಷಿಗಳೆಲ್ಲರಿಗೂ ತಿಳಿಸಲಾಗಿ ಆ ತೀರ್ಥಕ್ಕೆ "कपालमोचन"ವೆಂದು ಹೆಸರಿಟ್ಟರು.] भा० शल्य० ४०।

**कपालशिरस् ಕಪಾಲಶಿರಸ್** (पु०) ಶಿವ, ಈಶ್ವರ, ಮಹಾದೇವ. कपालं शिरसि यस्य।

**कपालिन् ಕಪಾಲಿನ್** (पु०) 1. ಕಪಾಲವನ್ನು ಧರಿಸಿರುವ ಈಶ್ವರ, ಶಿವ. कपालमस्यास्ति "इनिः" (५-२-११५)। "कपालिकोपानलभस्मनः कृते तदेव भस्म स्वकुले स्तृतं तया" नैष० ९-७१। (वि०) 2. ಕಪಾಲವುಳ್ಳ, ಕಪಾಲವನ್ನು ಹಿಡಿದಿರುವ. "कपालि वा स्यादथवेन्दुशेखरं न विश्वमूर्तेरवधार्यते वपुः" कुमा० ५-७८। 3. ಭಿಕ್ಷುಕ, ತಿರುಕ.

**कपालिनी ಕಪಾಲಿನೀ** (स्त्री०) ದುರ್ಗಾದೇವಿ. कपालमस्यास्ति "इनिः" (५-२-११५)। "ङीप्" (४-१-५)।

**कपि ಕಪಿ** (पुं०) 1. ವಾನರ, ಕೋತಿ. कम्पते — कपि (चलने) "इन्" (उ० ४-१४४)। "कपयोऽविभयुस्तस्मिन्नभञ्जंश्च महाद्रुमान्। प्रोदखायन् गिरींस्तूर्णमगृह्णंश्च महाशिलाः" भट्टि० १७-५८। 2. ವಿಷ್ಣು, ನಾರಾಯಣ. कम् सुखम् — तदनुभवसुखनिर्वृतिं पाति— पा (रक्षणे) "इन्" (उ० ४-१४४)। "कपिलः कपिरव्ययः" वि० स०। कपिरव्ययः इति सविशेषणमेकं नाम। 3. ಸಿಲ್ಹಕವೆಂಬ ಗಂಧದ್ರವ್ಯ. कपिर्ना सिह्लके शाखामृगे च मधुसूदने" मेदि०। 4. ಸೂರ್ಯ. 5. ಆನೆ, ಗಜ. "कपयोऽर्कभवानराः" वैज०। 6. ವರಾಹ. कादुदकात् भूमिं पाति — पा (रक्षणे) "इन्"।

**कपिकच्छुरा ಕಪಿಕಚ್ಛುರಾ** (स्त्री०) ನಸುಗುನ್ನಿಗಿಡ.

**कपिकच्छू ಕಪಿಕಚ್ಛೂ** (स्त्री०) ನಸುಗುನ್ನಿಗಿಡ. कपीनां कच्छूः यस्याः। ಕಪಿಗಳಿಗೂ ನವೆಯನ್ನುಂಟುಮಾಡುವಗಿಡ.

**कपिकेतन ಕಪಿಕೇತನ** (पु०) ಕಪಿಯೇ ಧ್ವಜವಾಗಿ ಉಳ್ಳ ಅರ್ಜುನ. कपिः केतनं ध्वजो यस्य। "सान्त्वपूर्वमिदं वाक्यमब्रवीत् कपिकेतनः" भा० ।

**कपिकेतु ಕಪಿಕೇತು** (पु०) ಕಪಿಯೇ ಧ್ವಜವಾಗಿ ಉಳ್ಳ ಅರ್ಜುನ. कपिः केतुः ध्वजो यस्य। "अधिरुह्यतामिति महीभृतोदितः कपिकेतुनार्पितकरो रथं हरिः" माघ० १३-१८।

**कपिचूडा ಕಪಿಚೂಡಾ** (स्त्री०) ಅಮಟೆಮರ. कपीनां चूडेव।

**कपिचूत ಕಪಿಚೂತ** (पु) ಅಮಟೆಮರ. कपीनां चूत इव प्रियः। ಕಪಿಗಳಿಗೆ ಮಾವಿನಮರದಂತೆ ಅಮಟೆಮರವೂ ಪ್ರಿಯವಾದುದು.

**कपिञ्जल ಕಪಿಂಜಲ** (पु०) 1. ಚಾತಕಪಕ್ಷಿ. 2. ತಿತ್ತಿರಿ ಪಕ್ಷಿ. "चित्रपक्षस्तु तित्तिरिः स्यात्कपिञ्जलः" त्रिकाण्ड०।

**कपित्थ ಕಪಿತ್ಥ** (पु०) 1. ಬೇಲದ ಮರ. कपयस्तिष्ठन्त्यत्र। पृषो०। (न०) 2. ಬೇಲದಹಣ್ಣು. कपित्थस्य फलम् "अण्" (४-३-१३४)। तस्य लुक् (४-३-१६३)।

**कपित्थक ಕಪಿತ್ಥಕ** (पु०) 1. ಬೇಲದಮರ. (न०) 2. ಬೇಲದಹಣ್ಣು.

**कपित्थास्य ಕಪಿತ್ಥಾಸ್ಯ** (पु०) ಬೇಲದಹಣ್ಣಿನಂತೆ ಮುಖವುಳ್ಳ ಒಂದು ಜಾತಿಯ ಕಪಿ, ಗೋಲಾಂಗೂಲ. कपित्थवदास्यमस्य। "गोलाङ्गूले कपित्थास्यदधिशोणनगाटनाः" त्रिकाण्ड०।

**कपित्थिन् ಕಪಿತ್ಥಿನ್** (वि०) ಬೇಲದಮರಕ್ಕೆ ಸಮೀಪದಲ್ಲಿರುವ ಪ್ರದೇಶ ಮೊದಲಾದುದು. कपित्थोऽस्त्यत्र देशे "इनिः" (४-२-८०)।

**कपित्थिनी ಕಪಿತ್ಥಿನೀ** (स्त्री०) ಕಪಿತ್ಥವೃಕ್ಷಗಳಿಂದ ಕೂಡಿದ ದೇಶ. कपित्थोऽस्त्यत्र देशे "इनि" (५-२-१३५)। "ङीप्" (४-१-५)।

**कपिध्वज ಕಪಿಧ್ವಜ** (पुं०) ಕಪಿಯೇ ಧ್ವಜವಾಗಿ ಉಳ್ಳ ಅರ್ಜುನ. कपिः ध्वजोऽस्य। "कपिध्वजस्तस्य विभोरपश्यत्तदर्पितं चक्षुरवाप्य दिव्यम्" यादं० २३-३३।

**कपिप्रभु ಕಪಿಪ್ರಭು** (पुं०) 1. ಶ್ರೀರಾಮ. 2. ಕಪಿಗಳಿಗೆ ಒಡೆಯನಾದ ಸುಗ್ರೀವ. कपीनां प्रभुः स्वामी।

**कपिप्रिय ಕಪಿಪ್ರಿಯ** (पुं०) 1. ಅಮಟೆಮರ. कपिनां प्रियः। 2. ಬೇಲದಮರ, ಕಪಿತ್ಥವೃಕ್ಷ.

**कपिरथ ಕಪಿರಥ** (पुं०) 1. ಶ್ರೀರಾಮ. कपिः रथ इव वाहनमस्य। 2. ಕಪಿಯೇ ರಥದಲ್ಲಿ ಉಳ್ಳ ಅರ್ಜುನ. कपिः हनूमान् रथेऽस्य।

**कपिल ಕಪಿಲ** (त्रिं०) 1. ಗೋರೋಚನದಂತೆ ಕೆಂಪುಬೆರೆತ ಹಳದಿಬಣ್ಣ, ಕಂದುಹಳದಿಬಣ್ಣ कमु (कान्तौ) "इलच्" (उ० १-५५)। (पुं०) 2. ನಾಯಿ. 3. ಅಗ್ನಿ, ಬೆಂಕಿ. 4. ವಾಸುದೇವ, ನಾರಾಯಣ. ಮಿಂಚಿನ ಮಧ್ಯದಲ್ಲಿರುವ ನೀಲಮೇಘದಂತೆ ಪ್ರಕಾಶಮಾನವಾಗಿರುವುದರಿಂದ ಈ ಹೆಸರು. "विद्युन्मण्डलमध्यस्थनीलमेघवदुज्ज्वलः। कपिलः स समाख्यातः सप्तवर्णो महामनुः" इति निरुक्तिः। "सनात्सनातनतमः कपिलः कपिरव्ययः" वि० स०। 5. ಸಾಂಖ್ಯಶಾಸ್ತ್ರಪ್ರವರ್ತಕರಾದ ಒಬ್ಬ ಮುನಿ, ಪರಮಾತ್ಮನ ಇಪ್ಪತ್ತನಾಲ್ಕು ಅವತಾರಗಳಲ್ಲಿ ಐದನೆಯ ಒಂದು ಅಂಶಾವತಾರ. "पञ्चमः कपिलो नाम सिद्धेशः कालविप्लुतम्। प्रोवाचासुरये सांख्यं तत्त्वग्रामविनिर्णयम्" भाग० १-३-१०। ಕರ್ದಮಋಷಿಯ ಪತ್ನಿಯೂ ಸ್ವಾಯಂಭುವಮನುವಿನ ಮಗಳೂ ಆದ ದೇವಹೂತಿಯು ಈ ಮಹರ್ಷಿಯ ತಾಯಿ. (1) अरुन्धती, (2) श्रद्धा, (3) हविर्भुक्, (4) गतिः, (5) क्रिया, (6) ख्यातिः, (7) शान्ता, (8) अनसूया ಮತ್ತು (9) कला ಈ ಒಂಬತ್ತು ಮಂದಿ ಈತನ ಸಹೋದರಿಯರು. भाग० ३-२४। "ರಜೋಗುಣಪರಿಣಾಮರೂಪವಾದ ಈ ಜಗತ್ತಿನಲ್ಲಿ ಪ್ರತಿಯೊಂದು ಪ್ರಾಣಿಯೂ ದುಃಖಸಾಗರದಲ್ಲಿ ಮುಳುಗಿ ಕ್ಲೇಶಪಡುತ್ತಿರುವುದನ್ನು ಕಂಡು ಕೃಪಾಸಾಗರನಾದ ಪರಮಾತ್ಮನು ಕಪಿಲರೂಪದಿಂದ ಅವತರಿಸಿ ಆಧ್ಯಾತ್ಮಿಕ, ಆಧಿದೈವಿಕ ಮತ್ತು ಅಧಿಭೌತಿಕಗಳೆಂಬ ದುಃಖತ್ರಯದಿಂದ ಈ ಜೀವರಾಶಿಯು ಪಾರಾಗಲು ದುಃಖ, ದುಃಖಕಾರಣ, ದುಃಖನಾಶ, ಅದರ ಉಪಾಯಜ್ಞಾನಗಳೆಂಬ ನಾಲ್ಕು ಭಾಗಗಳಿಂದ ಕೂಡಿದ ಸಾಂಖ್ಯಶಾಸ್ತ್ರವನ್ನು ರಚಿಸಿದನು. [ವಿವರಕ್ಕೆ "सांख्य" ಪದದಲ್ಲಿ ನೋಡಿ.] ಈ ಕಪಿಲಮಹರ್ಷಿಯ ಕೋಪಾಗ್ನಿಯಿಂದ, ಯಜ್ಞಾಶ್ವವನ್ನು ಹುಡುಕಲು ಭೂಮಿಯನ್ನು ಪಾತಾಳದವರೆಗೂ ಭೇದಿಸಿದ ಸಗರ ಚಕ್ರವರ್ತಿಯ ಅರವತ್ತುಸಾವಿರ ಮಂದಿ ಮಕ್ಕಳು ದಗ್ಧರಾದರು. ಸಗರಪುತ್ರರು ಯಜ್ಞಾಶ್ವವನ್ನು ಹುಡುಕಲು ಭೂಮಿಯೆಲ್ಲವನ್ನೂ ಭೇದಿಸುತ್ತಿರುವಾಗ ಅಲ್ಲಿ ಕಪಿಲರೂಪದಿಂದ ಅವತರಿಸಿದ್ದ ಮಹಾವಿಷ್ಣುವನ್ನೂ ಸಮೀಪದಲ್ಲಿ ಮೇಯುತ್ತಿದ್ದ ಯಜ್ಞಾಶ್ವವನ್ನೂ ಕಂಡು ಈ ಮಹರ್ಷಿಯೇ ಯಜ್ಞಾಶ್ವವನ್ನು ಕದ್ದನೆಂದು ತಿಳಿದು ಎಲ್ಲರೂ ಬಹಳವಾಗಿ ನಿಂದಿಸುತ್ತಿರಲು ಮಹರ್ಷಿಯ ಕೋಪಾಗ್ನಿಯಿಂದ ಅರವತ್ತುಸಹಸ್ರ ಮಂದಿ ಸಗರಪುತ್ರರೂ ಭಸ್ಮೀಭೂತರಾದರು. "ततः प्रागुत्तरां गत्वा सागराः पश्चिमां दिशम्। रोषादत्यखदन् सर्वे पृथिवीं सगरात्मजाः। ददृशुः कपिलं तत्र वासुदेवं सनातनम्। हयं च तस्य देवस्य चरन्तमविदूरतः। ते तं यज्ञहनं ज्ञात्वा क्रोधपर्याकुलेक्षणाः। अभ्यधावन्त संक्रुद्धास्तिस्ठ तिष्ठेति चाब्रुवन्। अस्माकं त्वं हि तुरगं यज्ञियं हृतवानसि। पुर्मेधस्त्वं हि संप्राप्तान् विद्धि नः सगरात्मजान्। श्रुत्वा तद्वचनं तेषां कपिलो रघुनन्दन। रोषेण महताविष्टो हुङ्कारमकरोन्मुनिः। ततस्तेनाप्रमेयेण कपिलेन महात्मना। भस्मराशीकृताः सर्वे काकुत्स्थ सगरात्मजाः" रामा०। "कपिला रेणुकायां च शिशपागोविशेषयोः। पुण्डरीककरिण्यां स्त्री वर्णभेदे त्रिलिङ्गकम्। नानले वासुदेवे च मुनिभेदे च कुक्कुरे" मेदि०।

**कपिलद्युति ಕಪಿಲದ್ಯುತಿ** (पुं०) 1. ಸೂರ್ಯ. कपिला पिङ्गला द्युतिरस्य। (स्त्री०) 2. ಹೊಂಬಣ್ಣ. (वि०) 3. ಹೊಂಬಣ್ಣದ.

**कपिलधारा ಕಪಿಲಧಾರಾ** (स्त्री०) ಗಂಗಾನದಿ.

**कपिलस्मृति ಕಪಿಲಸ್ಮೃತಿ** (स्त्री०) ಕಪಿಲಮಹರ್ಷಿಪ್ರಣೀತವಾದ ಸ್ಮೃತಿ, ಸಾಂಖ್ಯಶಾಸ್ತ್ರ. ವೇದಾರ್ಥಗಳ ಅನುಭವಪೂರ್ವಕ ಮಹರ್ಷಿಪ್ರಣೀತವಾದುದರಿಂದ ಸಾಂಖ್ಯಶಾಸ್ತ್ರವು ಸ್ಮೃತಿಯೆನಿಸಿಕೊಳ್ಳುವುದು.

**कपिला ಕಪಿಲಾ** (स्त्री०) 1. ಪುಂಡರೀಕದಿಗ್ಗಜದ ಪತ್ನಿ. 2. ಹೊಂಬಣ್ಣದ ಅಗುರುಗಿಡ. 3. ರೇಣುಕವೆಂಬ ವನಸಾರಿ ವಸ್ತು. 4. ಗೋವು, ಹಸು. "कपिला रेणुकायां च शिशपागोविशेषयोः। पुण्डरीककरिण्यां स्त्री वर्णभेदे त्रिलिङ्गकम्" मेदि०।

**कपिलाचार्य ಕಪಿಲಾಚಾರ್ಯ** (पुं०) ವಿಷ್ಣು, ಸಾಂಖ್ಯ ತತ್ತ್ವವನ್ನು ಉಪದೇಶಿಸಿದ ಕಪಿಲಮಹರ್ಷಿ. कपिलश्चासावाचार्यश्च। "तत्त्वप्रवचनादेव कपिलाचार्य उच्यते" इति निरुक्तिः। "महर्षिः कपिलाचार्यः कृतज्ञो मेदिनीपतिः" वि० स०।

**कपिलाश्व ಕಪಿಲಾಶ್ವ**(पुं०) ಇಂದ್ರ. कपिलवर्णोऽश्वोऽस्य। "प्राचीनबर्हिः खदिरः कपिलाश्वो वरक्रतुः" त्रिकाण्ड०।

**कपिलावट ಕಪಿಲಾವಟ** (पुं०) ಗಂಗಾನದಿಯ ಸಮೀಪದಲ್ಲಿರುವ ಒಂದು ಪುಣ್ಯತೀರ್ಥ. कपिलया कृतोऽवटः।

**कपिलिका ಕಪಿಲಿಕಾ** (स्त्री०) ಒಂದು ಜಾತಿಯ ಜರಿ. कपिला संज्ञायां "कन्" (५-३-७५)। ಜರಿಯು (1) परुषा, (2) कृष्णा, (3) चित्रा, (4) कपिलिका, (5) पोतिका, (6) रक्ता, (7) श्वेता ಮತ್ತು (8) अग्निप्रभा ಎಂದು ಎಂಟು ವಿಧ. सुश्रुत०।

**कपिलेश ಕಪಿಲೇಶ** (न०) ಕಪಿಲಮಹರ್ಷಿಯಿಂದ ಪ್ರತಿಷ್ಠಿಸಲ್ಪಟ್ಟ ಒಂದು ಈಶ್ವರಲಿಂಗ. कपिलेन प्रतिष्ठापितमीशलिङ्गम्। "कपिलेशं महालिङ्गं कपिलेन प्रतिष्ठितम्। मुच्यन्ते कपयोऽप्यस्य दर्शनात् किमु मानवाः" काशीखं०।

**कपिवल्ली ಕಪಿವಲ್ಲೀ** (स्त्री०) ಗಜಪಿಪ್ಪಲಿ. कपिरिव वल्ली।

**कपिश ಕಪಿಶ** (पुं०) 1. ಗೋರೋಚನದಂತೆ ಕೆಂಪುಬೆರೆತ ಹೊಂಬಣ್ಣ, ಕಂದುಹಳದಿಬಣ್ಣ. 2. ಕಪ್ಪುಬೆರೆತ ಹಳದಿ ಬಣ್ಣ. कपिर्मर्कटः, तद्वर्णत्वात् कपिशः। 3. ಲೋಬಾನ, ಒಂದು ವಾಸನೆಯ ದ್ರವ್ಯ. (न०) 4. ಮದ್ಯ, ಹೆಂಡ. "कश्यं मद्यं च मैरेयं कपिशं कापिशायनम्" हला०। "ग्राम्यानपश्यत्कपिशं पिपासतः स्वगोत्रसंकीर्तनभावितात्मनः" माघ० १२-३८। (वि०) 5. ಕಂದುಬಣ್ಣದ, ಕೆಂಪುಬೆರೆತ ಹಳದಿಬಣ್ಣದ, "छायाश्चरन्ति बहुधा भयमादधानाः सन्ध्यापयोदकपिशाः पिशिताशनानाम्" शाकु० ३-२४। 6. ಕಪ್ಪುಬೆರೆತ ಹಳದಿಬಣ್ಣದ. (स्त्री०) **–शा –ಶಾ.** 1. ಮದ್ಯ, ಹೆಂಡ. 2. ಮಾಧವೀಲತೆ. "कपिशौ सिह्लकश्यावौ कपिशा माधवी सुरा" हेम०। 3. ಉತ್ಕಲದೇಶದ ಸಮೀಪದಲ್ಲಿರುವ ಒಂದು ನದಿ. "स तीर्त्वा कपिशां सैन्यैर्बद्धद्विरदसेतुभिः। उत्कलादर्शितपथः कलिङ्गाभिमुखो ययौ" रघु० ४-३८।

**कपिशित ಕಪಿಶಿತ** (वि०) ಹೊಂಬಣ್ಣದ್ದಾಗಿ ಆಗಿರುವ, ಕೆಂಪುಬೆರೆತ ಹಳದಿಬಣ್ಣದ್ದಾಗಿ ಆಗಿರುವ. कपिशोऽस्य सञ्जातः "इतच्" (५-२-३६)।

**कपिशीर्ष ಕಪಿಶೀರ್ಷ** (न०) ಪ್ರಾಕಾರದ ಮೇಲುಭಾಗ, ಸುತ್ತುಗೋಡೆಯ ತುದಿಯಭಾಗ.

**कपिष्ठल ಕಪಿಷ್ಠಲ** (पुं०) ಗೋತ್ರಪ್ರವರ್ತಕರಾದ ಒಬ್ಬ ಋಷಿ. "कपिष्ठलो गोत्रे" पा० सू० ८-३-९१। निपा०। गोत्रादन्यत्र न षत्वम्। कपिस्थलम्। (न०) ಕಪಿಗಳ ಜಾಗ. ಕಪಿಗಳು ವಾಸಿಸುವ ಸ್ಥಳ.

**कपीज्य ಕಪೀಜ್ಯ**(पुं०) 1. ಶ್ರೀರಾಮಚಂದ್ರ. 2. ಸುಗ್ರೀವ. कपिभिरिज्यते पूज्यते—यज (देवपूजायाम्) "क्यप्" संप्र०।

**कपीतन ಕಪೀತನ** (पुं०) 1. ಅಮಟೆಮರ. 2. ಬಾಗೆಮರ. 3. ಬಸುರಿಮರ. 4. ಅರಳಿಮರ. कपीनाम् ईं लक्ष्मीं तनोति—तनु (विस्तारे) "अच्" (३-१-१३४)। "कपीतनो गर्दभाण्डशिरीषाम्रातकेषु च। अश्वत्थे च" मेदि०।

**कपीन्द्र ಕಪೀಂದ್ರ** (पुं०) 1. ಕಪಿಗಳ ರಾಜ, ಸುಗ್ರೀವ. कपीनामिन्द्रः। 2. ಕಪಿಶ್ರೇಷ್ಠ, ಹನೂಮಂತ, ಆಂಜನೇಯ. 3. ವಿಷ್ಣು. 4. ಶ್ರೀರಾಮ. "कपिरूपं प्रपन्नानां देवानामीश्वरत्वतः। कपीन्द्र इति विख्यातः सप्तार्णो मनुनायकः" इति निरुक्तिः। "शरीरभूतकृत् भोक्ता कपीन्द्रो भूरिदक्षिणः" वि० स०।

**कपीवत् ಕಪೀವತ್** (पुं०) ವಸಿಷ್ಠಮಹರ್ಷಿಯ ಏಳು ಮಂದಿ ಮಕ್ಕಳಲ್ಲೊಬ್ಬ. "और्वो वसिष्ठपुत्रश्च स्तम्बः कश्यप एव च। कपीवानकपीवांश्च दन्तोलिश्च्यवनस्तथा। वसिष्ठपुत्राः सप्तासन्" हरिवं०।

**कपीश ಕಪೀಶ** (पुं०) 1. ಸುಗ್ರೀವ. 2. ಕಪಿಶ್ರೇಷ್ಠ, ಹನೂಮಂತ. कपीनामीशः। "कपीशमक्षहन्तारं वन्दे लङ्काभयङ्करम्"।

**कपुच्छल ಕಪುಚ್ಛಲ** (न०) 1. ಜಡೆ, ವೇಣಿ, ಬಾಲದಂತೆ ತೂಗಾಡುತ್ತಿರುವ ಹೆಣೆಯಲ್ಪಟ್ಟ ತಲೆಯ ಕೂದಲು. कस्य शिरसः पुच्छमिव लाति—ला (आदाने) "कः" (३-४-२)। 2. ಯಾಗದಲ್ಲಿ ಹೋಮಕ್ಕಾಗಿ ಆಜ್ಯವನ್ನು ತೆಗೆದುಕೊಳ್ಳುವ ಸ್ರುಕ್ಕಿನ ಅಗ್ರಭಾಗ, ಹೋಮದ ಸವಟಿನ ತುದಿಯ ಭಾಗ.

**कपुष्टिका ಕಪುಷ್ಟಿಕಾ** (स्त्री०) ಜುಟ್ಟು, ಜಡೆ, ಹೆಣೆಯಲ್ಪಟ್ಟ ಕೇಶಪಾಶ. कस्य शिरसः पुष्टचै पोषणाय कायति—कै (शब्दे) "कः" (३-२-४)।

**कपूय ಕಪೂಯ** (वि०) 1. ನೀಚ, ಕೆಟ್ಟ, ಕುತ್ಸಿತ, ಅಯೋಗ್ಯ. कुत्सितं पूयते—पूयी (विशरणे दुर्गन्धे च) "अच्" (३-१-१३४)। पृषो०। 2. ಕೆಟ್ಟವಾಸನೆಯುಳ್ಳ.

**कपोत ಕಪೋತ**(ಪುಂ) 1. ಪಾರಿವಾಳದ ಪಕ್ಷಿ. कस्य वायोः पोत इव को वायुः पोत इव यस्य वा। "अथोच्चकैर्जरठकपोतकन्धरातनूरुहप्रकरविपाण्डुरद्युति" माघ० १७-५२। 2. ಚಿತ್ರವರ್ಣದ ಕಂಠವುಳ್ಳ ಕಾಡುಪಾರಿವಾಳದ ಹಕ್ಕಿ. "कपोतः स्याच्चित्रकण्ठपारावतविहङ्गयोः" मेदि०। ಕಪೋತವು गृहकपोतः, वनकपोतः ಮತ್ತು चित्रकपोतः ಎಂದು ಮೂರು ವಿಧ. ಕಪೋತವು ಹಗಲಲ್ಲಿ ಮಾತ್ರ ಸಂಚರಿಸುವ ಪ್ರಾಣಿಗಳ ಗುಂಪಿಗೆ ಸೇರಿದುದು. "श्यामा श्येनशशघ्नवञ्जुलशिखिश्रीकर्णचक्राह्वयाश्चाषाण्डीरकखञ्जरीटकशुकध्वाङ्क्षाः कपोतास्त्रयः। भारद्वाजकुलालकुक्कुटखरा हारीतगृध्रौ कपिः फेण्टः कुक्कुट पूर्णकूटचटकाश्चोक्ता दिवासञ्चराः"।

**कपोतक ಕಪೋತಕ** (ನಂ) ಸೌವೀರಾಂಜನ. कपोत इव कायति — कै (शब्दे) "कः" (३-२-४)।

**कपोतनालिका ಕಪೋತನಾಳಿಕಾ** (ಸ್ತ್ರೀ०) ಹತ್ತಿಯಿಂದ ದಾರವನ್ನು ತೆಗೆಯುವ (ನೂಲುವ) ಚರಖ, ಕದಿರು.

**कपोतपालिका ಕಪೋತಪಾಲಿಕಾ** (ಸ್ತ್ರೀ०) ಪಾರಿವಾಳದ ಮನೆ, ಪಾರಿವಾಳದ ಗೂಡು, ಪಾರಿವಾಳಹಕ್ಕಿಗಳ ಗೂಡಿಟ್ಟಿರುವ ಸ್ಥಳ. कपोतान् पालयति—पाल (रक्षणे) + णिच् "अण्" (३-२-१)। "ङीप्" (४-१-१५)। संज्ञायां "कन्" (५-३-७५)। पालयति — पाल+णिच् "ण्वुल्" (३-१-१३३)। कपोतानां पालिका इति वा।

**कपोतपाली ಕಪೋತಪಾಲೀ** (ಸ್ತ್ರೀ०) ಕಪೋತದ ಗೃಹ, ಪಾರಿವಾಳ ಹಕ್ಕಿಯ ಗೂಡು. कपोतान् पालयति—पाल (रक्षणे) + णिच् "अण्" (३-२-१)। "ङीप्" (४-१-१५)। "चित्रसंसया कृत्रिमपत्त्रिपङ्क्तेः कपोतपालीषु निकेतनानाम्" माघ० ३-५१।

**कपोतरोमन् ಕಪೋತರೋಮನ್** (ಪುಂ) 1. ಒಬ್ಬ ರಾಜ, ಕಪೋತವೇಷವನ್ನು ತಾಳಿದ ಅಗ್ನಿಯ ವರದಿಂದ ಜನಿಸಿದ ಶಿಬಿಚಕ್ರವರ್ತಿಯ ಒಬ್ಬ ಮಗ. "वैश्वानरोऽहं ज्वलनो धूमकेतुरथैव श्येनो वज्रहस्तः शचीपतिः। साधु ज्ञातुं त्वां ऋषभं सौरभेय नौ जिज्ञासया त्वत्सकाशं प्रपन्नौ। यामेतां पेशीं मम निष्क्रयाय प्रादाद्भवानसिनोत्कृत्य राजन्। एतासां प्रजानां पालयिता यशस्वी सुरर्षीणामथ संमतो भृशम्। एतस्मात्पार्श्वात् पुरुषो जनिष्यति कपोतरोमेति च तस्य नाम" भा० वन० २००। 2. ಯದುವಂಶದ ಕುಕುರರಾಜನ ಮೊಮ್ಮಗನಾದ ಒಬ್ಬ ರಾಜ.

**कपोतलुब्धकीय ಕಪೋತಲುಬ್ಧಕೀಯ**(ನಂ) ಗೃಹಸ್ಥನು ಪ್ರಾಣವನ್ನಾದರೂ ಒಪ್ಪಿಸಿ ಅತಿಥಿಸತ್ಕಾರ ಮಾಡಬೇಕೆಂದು ತಿಳಿಸುವ ಮಹಾಭಾರತದ ಒಂದು ಕಥೆ. कपोतं लुब्धकं चाधिकृत्य कृतो ग्रन्थः "छः" (४-२-६)। [ಒಂದು ಮರದಲ್ಲಿ ವಾಸಿಸುತ್ತಿದ್ದ ಕಪೋತವೊಂದು ಆಹಾರಕ್ಕಾಗಿ ಹೊರಗೆ ಹೋಗಿದ್ದ ತನ್ನ ಮಡದಿಯು ವ್ಯಾಧನೊಬ್ಬನಿಂದ ಹಿಡಿಯಲ್ಪಟ್ಟು ಬಹಳ ಹೊತ್ತಾದರೂ ಬಾರದಿರಲು ಗಟ್ಟಿಯಾಗಿ ಅಳತೊಡಗಿತು. ವ್ಯಾಧನ ಪಂಜರದೊಳಗಿದ್ದ ಪತ್ನಿಯು ತನ್ನ ಪತಿಯು ಅಳುತ್ತಿರುವುದನ್ನು ಕೇಳಿ ಪತಿಗೆ ಧರ್ಮೋಪದೇಶಮಾಡಿ ಹೇಗಾದರೂ ಮಾಡಿ ವ್ಯಾಧನನ್ನು ಸತ್ಕರಿಸಬೇಕೆಂದು ಹೇಳಿತು. ಛಳಿಯಿಂದ ನಡುಗುತ್ತಿದ್ದ ವ್ಯಾಧನು ಮೊದಲು ಬೆಂಕಿಯ ಕಾವನ್ನು ಅಪೇಕ್ಷಿಸಲು ಕಪೋತವು ತರಗೆಲೆಗಳನ್ನು ಕೂಡಿಸಿ ಬೆಂಕಿಕಾಯಲು ಅಣಿ ಮಾಡಿಕೊಟ್ಟಿತು. ಅನಂತರ ಹಣ್ಣುಹಂಪಲುಗಳನ್ನು ತಂದು ಕೊಡಲು ಅಶಕ್ತವಾಗಿದ್ದ ಕಪೋತವು ವ್ಯಾಧನ ಆಹಾರಾರ್ಥವಾಗಿ ತಾನೇ ಬೆಂಕಿಯೊಳಗೆ ಬಿದ್ದಿತು. ಕಪೋತದ ಈ ಧರ್ಮಬುದ್ಧಿಯನ್ನು ನೋಡಿ ತನ್ನ ಘಾತುಕಕೃತ್ಯವನ್ನು ಬಹಳವಾಗಿ ನಿಂದಿಸಿ ತಾನೂ ಉಪವಾಸಾದಿಗಳಿಂದ ಪಾರಲೌಕಿಕವನ್ನು ಆಚರಿಸಿ ಸದ್ಗತಿಯನ್ನು ಹೊಂದಬೇಕೆಂದು ನಿಶ್ಚಯಿಸಿ ಹೆಣ್ಣುಕಪೋತವನ್ನೂ ಪಂಜರದಿಂದ ಹೊರಕ್ಕೆ ಬಿಟ್ಟು, ಧರ್ಮಾಚರಣೆಗಾಗಿ ಹೊರಟುಹೋದನು. ಇತ್ತ ಕಪೋತಿಯೂ ಪತಿಯ ಅವಸ್ಥೆಯನ್ನು ನೋಡಿ ದುಃಖಿಸಿ ತಾನೂ ಬೆಂಕಿಯೊಳಗೆ ಬಿದ್ದು ಪ್ರಾಣಬಿಟ್ಟಿತು. ಆ ಕೂಡಲೇ ವಿಮಾನಾರೂಢವಾಗಿದ್ದ ತನ್ನ ಪತಿಯೊಡನೆ ಸ್ವರ್ಗವನ್ನು ಸೇರಿ ಸುಖವಾಗಿ ವಿಹರಿಸುತ್ತಿದ್ದಿತು. ಇದೇ "ಕಪೋತಲುಬ್ಧಕೀಯ".] भा० शान्ति० अध्यायाः १४३-१४८।

**कपोतवङ्का ಕಪೋತವಂಕಾ** (ಸ್ತ್ರೀ०) ಬ್ರಾಹ್ಮೀವೃಕ್ಷ, ಹೊನಗೊನೆಗಿಡ. कपोतो वञ्च्यतेऽनया—वञ्चु (प्रलम्भने) + णिच् "घञ्" (३-३-१२१)। ಇದು ಅಶ್ಮರೀ ವ್ಯಾಧಿಯ (ಮೂತ್ರರೋಗದ) ಚಿಕಿತ್ಸೆಗಾಗಿ ಉಪಯೋಗಿಸಲ್ಪಡುವುದು. "कपोतवङ्कामूलं वा पिबेदम्लैः सुरादिभिः। तत्सिद्धं वा पिबेत् क्षीरं वेदनाभिरुपद्रुतः" सुश्रुत० चिकित्सा० ७-२५।

**कपोतवर्णी ಕಪೋತವರ್ಣೀ** (ಸ್ತ್ರೀ०) ಸಣ್ಣಯಾಲಕ್ಕಿಗಿಡ. कपोतस्य वर्ण इव वर्णोऽस्याः। गौरा० "ङीष्" (४-१-४१)।

**कपोतवृत्ति ಕಪೋತವೃತ್ತಿ** (ಸ್ತ್ರೀ०) 1. ಕಪೋತದಂತೆ ನಡೆಸುವ ಜೀವನ, ಪಾರಿವಾಳ ಪಕ್ಷಿಯಂತೆ ಆಹಾರವಸ್ತು

ವನ್ನು ಶೇಖರಿಸಿಡದ ನಡೆಸುವ ಜೀವನ. ಪಾರಿವಾಳ ಹಕ್ಕಿಗಳು ಕೂಡಿಸಿಟ್ಟುಕೊಳ್ಳದೆ ಆಗತಾನೆ ದೊರಕುವ ಆಹಾರದಿಂದ ಜೀವಿಸುವುವು. कपोतस्येव वृत्तिः। (वि०) 2. ಕಪೋತದಂತೆ ಜೀವಿಕೆಯುಳ್ಳವನು. कपोतस्येव वृत्तिर्यस्य।

**कपोताञ्जन ಕಪೋತಾಂಜನ** (न०) ಸೌವೀರಾಂಜನ. कपोतवर्णमञ्जनम्।

**कपोतारि ಕಪೋತಾರಿ** (पु०) ಶ್ಯೇನಪಕ್ಷಿ, ಗಿಡುಗದ ಹಕ್ಕಿ. कपोतस्यारिः।

**कपोतिन् ಕಪೋತಿನ್** (वि०) ಪಾರಿವಾಳದ ಹಕ್ಕಿಯನ್ನು ಹೊಂದಿರುವ. कपोतोऽस्यास्ति "इनिः" (५-२-११५)।

**कपोती ಕಪೋತೀ** (स्त्री०) ಹೆಣ್ಣು ಪಾರಿವಾಳದಹಕ್ಕಿ. कपोतस्य स्त्री। जाति० "ङीष्" (४-१-६३)।

**कपोल ಕಪೋಲ** (पु०) ಕೆನ್ನೆ, ಗಂಡಸ್ಥಳ. कम्पते भोजनसमये — कपि (चलने) "कोलच्" (उ०१-६६)। "प्राप्यते स्म गतिचित्रकचित्रैश्चित्रमार्द्रनखलक्ष्म कपोलैः" माघ० १०-७८। "कपोलकण्डूः करिभिर्विनेतुं विघट्टितानां सरलद्रुमाणाम्" कुमा० १-९।

**कपोलकाष ಕಪೋಲಕಾಷ** (पु०) ಕೆನ್ನೆ ತಿಕ್ಕಲ್ಪಡುವ ಒಂದು ಜಾಗ ಅಥವಾ ಒಂದು ವಸ್ತು; ಮರ, ಬಂಡೆ ಮೊದಲಾದುದು. कपोलः कष्यतेऽनेन—कष (हिंसायाम्) कर० "घञ्" (३-३-१२१)। "एतस्मिन् मदयति कोकिलानकाले लीनालिः सुरकरिणां कपोलकाषः" किरा० ५-२६।

**कपोलताडन ಕಪೋಲತಾಡನ** (न०) ಕೆನ್ನೆಗೆ ಹೊಡೆಯುವಿಕೆ, ಅಪರಾಧ (ತಪ್ಪು) ಮಾಡಿದುದಕ್ಕಾಗಿ ಕೆನ್ನೆಗೆ ಏಟು ಕೊಡುವಿಕೆ. कपोले ताडनम्।

**कपोलपत्र ಕಪೋಲಪತ್ರ** (न०) ಕೆನ್ನೆಯಮೇಲೆ ಬರೆಯುವ ಎಲೆಯ ಆಕಾರದ ಚಿತ್ರ. कपोले पत्रमिव। "कपोलपत्रान्मकरात्सकेतुर्भ्रूभ्यां जिगीषुर्धनुषा जगन्ति" नैष० ७-६०।

**कपोलफलक ಕಪೋಲಫಲಕ** (पु०) ಹಲಗೆಯಂತೆ ವಿಸ್ತಾರವಾದ ಕೆನ್ನೆ. कपोलः फलक इव। "ईषद्वक्रितकन्धरः सपुलकः प्रेमोल्लसन्मानसामन्तर्हासलसत्कपोलफलकां धूर्तोऽपरां चुम्बति" अमरु० १९।

**कपोलभित्ति ಕಪೋಲಭಿತ್ತಿ** (स्त्री०) ಗೋಡೆಯಂತೆ ಅಗಲವಾದ ಕೆನ್ನೆ. कपोलो भित्तिरिव। "कोपात्ताम्रकपोलभित्तिनि मुखे दृष्ट्या गतः पादयोः" अमरु० ८३।

**कपोली ಕಪೋಲೀ** (स्त्री०) ಮಂಡಿಚಿಪ್ಪು, ಮಂಡಿಕೀಲಿನ ಹೊರಭಾಗದ ಎಲುಬು.

**कफ ಕಫ** (पु०) ಶ್ಲೇಷ್ಮ, ಕಫ, ದೇಹದೊಳಗಿನ ಮಂದವೂ ಜಿಗುಟೂ ಆದ ಲೋಳೆ, ದೇಹದೊಳಗಿನ ವಾತ ಪಿತ್ತ ಮತ್ತು ಕಫಗಳೆಂಬ ಮೂರು ದೋಷಗಳಲ್ಲೊಂದು ["त्रिदोष" ಪದದಲ್ಲಿ ನೋಡಿ.], ಶರೀರದೊಳಗಿನ ಸಪ್ತ ಧಾತುಗಳಲ್ಲೊಂದಾದ ರಸಧಾತುವಿನ ಮಲ. केन जलेन फलति — फल (निष्पत्तौ) "ड:" (३-२-१०१)। "कफः पित्तं मलः खेषु स्वेदः स्यान्नखरोम च। नेत्रविट् त्वक्षु च स्नेहो धातूनां क्रमशो मलाः" सुश्रुत० सूत्र० ४६-५२९। ಆಕಾಶವು ಮೇಘಾವೃತವಾಗಿಯೂ ಭೂಮಿಯು ಶೀತವಾಗಿಯೂ ಇರುವ ವರ್ಷರ್ತುವಿನಲ್ಲಿ ಎಳೆಯದಾಗಿಯೂ ಅಲ್ಪವೀರ್ಯವುಳ್ಳದ್ದಾಗಿಯೂ ಇರುವ ಗೋಧಿ, ಬತ್ತ, ಕಡಲೆ ಮೊದಲಾದ ಧಾನ್ಯಗಳನ್ನೂ ಕಲುಷಿತವಾಗಿರುವ ನೀರನ್ನೂ ಉಪಯೋಗಿಸುವುದರಿಂದ ಇವು ಶೀತಪ್ರಕೃತಿಯವರಿಗೆ ಪಿತ್ತವನ್ನುಂಟುಮಾಡುವುವು. ಈ ಪಿತ್ತವು ಭೂಮಿಯೆಲ್ಲವೂ ಚೆನ್ನಾಗಿ ಒಣಗಿರುವ ಶರದೃತುವಿನಲ್ಲಿ ಸೂರ್ಯಕಿರಣಸಂಪರ್ಕದಿಂದ ದ್ರವೀಭೂತವಾಗಿ ಪಿತ್ತಸಂಬಂಧವ್ಯಾಧಿಗಳನ್ನು ಉಂಟುಮಾಡುವುದು. "वर्षास्वोषधयस्तरुण्योऽल्पवीर्या आपश्चाप्रशान्ताः क्षितिमलप्रायाः, ता उपयुज्यमाना नभसि मेघावतते जलप्रक्लिन्नायां भूमौ क्लिन्नदेहानां प्राणिनां शीतवातविष्टम्भिताग्नीनां विदह्यन्ते, विदाहात् पित्तसञ्चयमापादयन्ति; स च सञ्चयः शरदि प्रविरलमेघे वियत्युपशुष्यति पङ्के अर्ककिरणप्रविलायितः पैत्तिकान् व्याधीन् जनयति" सुश्रुत० सूत्र० ६-११। ಸೂರ್ಯಕಿರಣಗಳು ಮಂದವಾಗಿರುವ ಹೇಮಂತರ್ತುವಿನಲ್ಲಿ ಚೆನ್ನಾಗಿ ಬಲಿತು ವೀರ್ಯವತ್ತಾಗಿರುವ ಈ ಧಾನ್ಯಗಳನ್ನೂ ಗುರುವಾಗಿಯೂ ಪ್ರಶಾಂತವಾಗಿಯೂ ಇರುವ ನೀರನ್ನೂ ಉಪಯೋಗಿಸುವುದರಿಂದ ಹಿಮಸಹಿತವಾದ ಗಾಳಿಯಿಂದ ಶಕ್ತಿಕುಂದಿ ಕುಗ್ಗಿದ ಶರೀರವುಳ್ಳವರಿಗೆ ಕಫವು ಸೇರುವುದು. ಈ ಕಫವು ವಸಂತರ್ತುವಿನಲ್ಲಿ ತೀವ್ರವಾಗಿರುವ ಸೂರ್ಯಕಿರಣದಿಂದ ಕರಗಿಸಲ್ಪಟ್ಟು ಸ್ವಲ್ಪ ಆಲಸವಾದ ದೇಹವುಳ್ಳವರಿಗೆ ಶ್ಲೇಷ್ಮಸಂಬಂಧವಾದ ವ್ಯಾಧಿಗಳನ್ನು ಉಂಟುಮಾಡುವುದು. "ता एवौषधयः कालपरिणामात् परिणतवीर्या बलवत्यो हेमन्ते भवन्त्यापश्च प्रशान्ता स्निग्धा अत्यर्थं गुर्व्यश्च, ता उपयुज्यमानाः मन्दकिरणत्वाद्भानोः सतुषारपवनोपस्तम्भितदेहानां देहिनां श्लेष्मसञ्चयमापादयन्ति, स च सञ्चयः वसन्तेऽर्करश्मिप्रविलायित ईषत्स्तब्धदेहानां देहिनां श्लैष्मिकान् व्याधीन् जनयति" सुश्रुत० सूत्र० ६-११। ಗ್ರೀಷ್ಮರ್ತುವಿನಲ್ಲಿ ಒಣಗಿಹೋಗಿರುವ

ಆ ಕಡಲೆ ಗೋಧಿ ಮೊದಲಾದ ಧಾನ್ಯಗಳನ್ನೂ ಬಹಳ ಲಘುವಾಗಿರುವ ನೀರನ್ನೂ ಉಪಯೋಗಿಸಿದಲ್ಲಿ ತೀಕ್ಷ್ಣವಾದ ಸೂರ್ಯಕಿರಣದಿಂದ ಶುಷ್ಕವಾದ ಶರೀರವುಳ್ಳವರಿಗೆ ದೇಹದಲ್ಲಿ ವಾತವು ಸೇರಲುಪಕ್ರಮಿಸುವುದು. ಆ ವಾತವು, ಭೂಮಿಯೆಲ್ಲವೂ ತೇವವಾಗಿರುವ ವರ್ಷರ್ತುವಿನಲ್ಲಿ ಶೀತವಾಯುಸಹಿತವಾದ ಮಳೆಯಿಂದ ಕೆರಳಿಸಲ್ಪಟ್ಟು ಶೀತಪ್ರಕೃತಿಯವರಿಗೆ ವಾತರೋಗಗಳನ್ನು ಉಂಟುಮಾಡುವುದು. ಈ ಪಿತ್ತಸಂಬಂಧವಾದ ವ್ಯಾಧಿಗಳು ಹೇಮಂತರ್ತುವಿನಲ್ಲಿಯೂ ಶ್ಲೇಷ್ಮಸಂಬಂಧವ್ಯಾಧಿಗಳು ಗ್ರೀಷ್ಮರ್ತುವಿನಲ್ಲಿಯೂ ವಾತಸಂಬಂಧವ್ಯಾಧಿಗಳು ಶರದೃತುವಿನಲ್ಲಿಯೂ ಕಡಮೆಯಾಗುವುವು. "ता एवौषधयो निदाघे निःसाराः अतिमात्रं लघ्व्यो भवन्त्यापश्च। ता उपयुज्यमानाः सूर्यप्रतापोपशोषितदेहानां देहिनां वायोः सञ्चयमापादयन्ति; स च सञ्चयः प्रावृषि चात्यर्थं जलोपक्लिन्नायां भूमौ क्लिन्नदेहानां देहिनां शीतवातवर्षेरितः वातिकान् व्याधीञ्जनयति। सुश्रुत० सूत्र० ६-११। "तत्र पैत्तिकानां व्याधीनामुपशमो हेमन्ते, श्लैष्मिकाणां निदाघे, वातिकानां शरदि स्वभावत एव" सुश्रुत० सूत्र० ६-१३।

**कफकर ಕಫಕರ** (वि०) ಕಫವಿಕಾರವನ್ನುಂಟುಮಾಡುವ. ಶ್ಲೇಷ್ಮವನ್ನುಂಟುಮಾಡುವ. करोति—डु कृञ् (करणे) "अच्" (३-१-१३४)। कफस्य करः। **ಕಫವನ್ನು ಉಂಟುಮಾಡುವ ವಸ್ತುಗಳು :**

| | |
|---|---|
| काकोली | ... ಬೊಕ್ಕಣಿಗಿಡ |
| क्षीरकाकोली | ... ಹಾಲು ಬೊಕ್ಕಣಿಗಿಡ |
| जीवकः | ... ಹಕ್ಕಿಸಿಳ್ಳೆಗಿಡ |
| ऋषभः | ... ಹೆರಿಗೆ ಹಾಲೆ |
| मुद्गपर्णी | ... ಕಾಡುಹೆಸರು |
| माषपर्णी | ... ಕಾಡು ಉದ್ದು |
| मेदा | ... |
| महामेदा | ... |
| छिन्नरुहा | ... ಅಮೃತಬಳ್ಳಿ |
| कर्कटः | ... ಸೌತೆ |
| भृङ्गी | ... ಅತಿಬಜೆ |
| तुगाक्षीरी | ... ಬಿದಿರು ಉಪ್ಪು |
| पद्मकम् | ... ಪದ್ಮಕಾಷ್ಠ |
| प्रपौण्डरीकम् | ... ಬಿಳಿನೈದಿಲೆಗೆಡ್ಡೆ |
| ऋद्धिः (वृद्धिः) | ... ವುದ್ಧಿ |
| मृद्वीका | ... ದ್ರಾಕ್ಷಿ |
| जीवन्ती | ... ಸಿಹಿಹಾಲೆ |
| मधुकम् | ... ಅತಿಮಧುರ. |

सुश्रुत० सूत्र० ३८-३५।

**कफकूर्चिका ಕಫಕೂರ್ಚಿಕಾ** (स्त्री०) ಲಾಲಾಜಲ, ಜೊಲ್ಲು. कफं कूर्चति विकरोति। "सृणिका स्यन्दिनी लालाऽऽस्यासवः कफकूर्चिका" अभि० चि०।

**कफघ्न ಕಫಘ್ನ** (वि०) ಕಫವನ್ನು ನಾಶಪಡಿಸುವ. ಶ್ಲೇಷ್ಮವನ್ನು ಕರಗಿಸುವ. कफं हन्ति — हन हिंसागत्योः "टक्" (३-२-५३)। **ಕಫವನ್ನು ನಾಶಪಡಿಸುವ ವಸ್ತುಗಳು :**

| | |
|---|---|
| आरग्वधः | ... ಕಕ್ಕೆಗಿಡ |
| मदनः | ... ಮಂಗಾರೆಗಿಡ |
| गोपघोण्टा | ... ಎಲಚಿ, ಬೋರೆ |
| कण्टकी | ... ಹುಳಿಬೇಲ |
| कुटजः | ... ಬೆಟ್ಟಮಲ್ಲಿಗೆ |
| पाठा | ... ಅಗಳುಶುಂಠಿ |
| पाटला | ... ಹಸುರುಪಾದರಿ |
| मूर्वा | ... ಕುರಟಗೆ |
| इन्द्रयवः | ... ಕೊಡಸಿಗೆ ಬೀಜ |
| सप्तपर्णः | ... ಏಳೆಲೆಬಾಳೆ |
| निम्बः | ... ಬೇವು |
| कुरण्टकः | ... ಹಳದಿ ಗೋರಂಟಿ |
| दासीकुरण्टकः | ... ನೀಲಿಗೋರಂಟಿ |
| गुडूची | ... ಅಮೃತಬಳ್ಳಿ |
| चित्रकः | ... ಚಿತ್ರಮೂಲ |
| शार्ङ्गेष्टा | ... ಕಾಚಿ, ಗಣಿಕೆ |
| करञ्जद्वय | ... (1) ಮುಳ್ಳುಮುತ್ತುಗ (2) ಹೊಂಗೆ |
| पटोलः | ... ಪಡವಲ |
| किराततिक्तः | ... ನೆಲಬೇವು |
| सुषवी | ... ಹಾಗಲ |

सुश्रुत० सूत्र० ३८-६। "आरग्वधादिरित्येष गणः श्लेष्मविषापहः" सुश्रुत० सूत्र० ३८-७।

**कफज्वर ಕಫಜ್ವರ** (पु०) ಕಫವು ಅಧಿಕವಾಗುವುದರಿಂದ ಬರುವ ಜ್ವರ. कफनिमित्तो ज्वरः।

**कफणि ಕಫಣಿ** (पु०) ಮೊಳಕೈ, ತೋಳಿನ ಮಧ್ಯಭಾಗ. केन जलेन फणति स्फुरति — फण (गतौ) "इन्" (उ० ४-११७)। "कफोणिस्तु भुजामध्यं कफणिः कूर्परश्च सः" अभि० चि०।

**कफद ಕಫದ** (वि०) ಕಫವನ್ನು ಉಂಟುಮಾಡುವ. कफं ददाति — डु दाञ् (दाने) "कः" (३-२-४)।

**कफनाशक ಕಫನಾಶಕ, —नाशन —ನಾಶನ** (वि०) ಕಫವನ್ನು ನಾಶಪಡಿಸುವ, ಶ್ಲೇಷ್ಮವನ್ನು ಹೋಗಲಾಡಿಸುವ. कफं नाशयति—णश (अदर्शने) + णिच् "ण्वुल्" (३-१-१३३)। "ल्युः" (३-१-१३४) वा। **—नाशन —ನಾಶನ** (न०) ಕಫವನ್ನು ನಾಶಪಡಿಸುವಿಕೆ. णश+णिच् भावे "ल्युट्" (३-३-११५)।

**कफल ಕಫಲ** (वि०) 1. ಕಫವನ್ನು ಉಂಟುಮಾಡುವ. कफं लाति—ला (आदाने) "कः" (३-२-४)। "वेणोः करीराः कफला मधुरा रसपाकतः" सुश्रुत० सूत्र० ४६-२९२। 2. ಕಫರೋಗವುಳ್ಳ, ಶ್ಲೇಷ್ಮವ್ಯಾಧಿಯುಳ್ಳ. कफोऽस्त्यस्य "लच्" (५-२-९७)।

**कफवर्धक ಕಫವರ್ಧಕ, —वर्धन —ವರ್ಧನ** (वि०) ಕಫವನ್ನು ಹೆಚ್ಚಿಸುವ, ಶ್ಲೇಷ್ಮವನ್ನು ಅಭಿವೃದ್ಧಿಪಡಿಸುವ. कफं वर्धयति—वृधु (वृद्धौ) णिच् "ण्वुल्" (३-१-१३३)। "ल्युः" (३-१-१३४) वा। **—वर्धन —ವರ್ಧನ.** (न०) ಕಫವನ್ನು ಹೆಚ್ಚಿಸುವಿಕೆ. वृधु — णिच् "ल्युट्" (३-३-११५)।

**कफविरोधिन् ಕಫವಿರೋಧಿನ್** (पु०) 1. ಕಫವನ್ನು ನಾಶಪಡಿಸುವ (1) ಮೆಣಸು. (2) ಲವಂಗ. (3) ಜೇನುತುಪ್ಪ. (4) ಶುಂಠಿ. (वि०) 2. ಕಫವನ್ನು ನಾಶಪಡಿಸುವ. कफं विरुणद्धि — वि + रुधिर् (आवरणे) "णिनिः" (३-२-७८)।

**कफान्तक ಕಫಾಂತಕ** (वि०) ಕಫವನ್ನು ಹೋಗಲಾಡಿಸುವ. कफमन्तयति अन्तं करोति — अन्त+णिच् "ण्वुल्" (३-१-१३३)।

**कफारि ಕಫಾರಿ** (पु०) ಕಫದ ಶತ್ರು: (1) ಶುಂಠಿ. (2) ಜೇನುತುಪ್ಪ. (3) ಲವಂಗ. (4) ಮೆಣಸು. कफस्यारिः।

**कफिन् ಕಫಿನ್** (वि०) ಕಫರೋಗವುಳ್ಳವನು, ಶ್ಲೇಷ್ಮವ್ಯಾಧಿಯುಳ್ಳವನು. कफोऽस्त्यस्य "इनिः" (५-२-११५)। "श्लेष्मणः श्लेष्मलः कफी" अम०।

**कफिल ಕಫಿಲ** (पु०) ಕಫದಿಂದ ಅಸ್ಪಷ್ಟವಾದ ಧ್ವನಿ. "कफिलो घर्घरः कफात्" वैज०।

**कफेलू ಕಫೇಲೂ** (पु०) ಚಳ್ಳೆಮರ. कफं लाति — ला (आदाने) "कूः" (उ० १-९३)। निपा०।

**कफोणि ಕಫೋಣಿ** (पु०) ಮೊಳಕೈ, ತೋಳಿನ ಮಧ್ಯಭಾಗ. केन जलेन फणति — फण (गतौ), केन सुखेन स्फुरति—स्फुर (सञ्चलने) वा "इन्" (उ० ४-११७)। पृषो०।

**कबन्ध ಕಬಂಧ** (पु०) 1. ಉದರ, ಹೊಟ್ಟೆ. कं जलं बध्नाति — बन्ध (बन्धने) "अण्" (३-२-१)। ಕುಡಿದ ನೀರನ್ನು ತಡೆದು ನಿಲ್ಲಿಸುವುದರಿಂದ ಈ ಹೆಸರು. 2. ಒಬ್ಬ ರಾಕ್ಷಸ. [ಈತನು ಪೂರ್ವಜನ್ಮದಲ್ಲಿ ವಿಶ್ವಾವಸುವೆಂಬ ಒಬ್ಬ ಗಂಧರ್ವ. ಸ್ಥೂಲಶಿರಸ್ಸೆಂಬ ಒಬ್ಬ ಮಹರ್ಷಿಯನ್ನು ಅಪಮಾನಗೊಳಿಸಿದುದರಿಂದ ಇವನಿಗೆ ರಾಕ್ಷಸಜನ್ಮವು ಬಂದಿತು. ಇವನು ಬ್ರಹ್ಮನಿಂದ ದೀರ್ಘಾಯುಷ್ಯವನ್ನು ಪಡೆದು ಒಮ್ಮೆ ಇಂದ್ರನನ್ನು ಎದುರಿಸಲಾಗಿ ಇಂದ್ರನ ವಜ್ರಾಯುಧಪ್ರಹಾರದಿಂದ ಇವನ ತಲೆ ಮತ್ತು ಕಾಲುಗಳು ಹೊಟ್ಟೆಯೊಳಗೆ ಹುದುಗಿ ಸೇರಿಕೊಂಡುವು. ಇಂದ್ರನ ವರದಿಂದ ಇವನ ತೋಳುಗಳು ಯೋಜನದಷ್ಟು ಉದ್ದವಾಗಿದ್ದುವು. ದಂಡಕಾರಣ್ಯದಲ್ಲಿ ಸೀತೆಯನ್ನು ಹುಡುಕುತ್ತಾ ಬರುತ್ತಿದ್ದ ರಾಮಲಕ್ಷ್ಮಣರನ್ನು ಇವನು ತನ್ನ ತೋಳುಗಳ ಮಧ್ಯೆ ಸಿಕ್ಕಿಸಿಕೊಂಡಾಗ ಅವರು ಇವನ ತೋಳುಗಳನ್ನು ಕತ್ತರಿಸಿದರು. ಕಬಂಧನು ರಾಮಲಕ್ಷ್ಮಣರ ವಿಚಾರವನ್ನು ತಿಳಿದು ತನ್ನ ಪೂರ್ವಜನ್ಮದ ವೃತ್ತಾಂತವನ್ನು ತಿಳಿಸಿ ಶ್ರೀರಾಮನಿಂದಲೇ ತನ್ನ ದೇಹಸಂಸ್ಕಾರವಾಗಬೇಕೆಂದು ಪ್ರಾರ್ಥಿಸಿ ಅಸುವನ್ನು ನೀಗಿದನು. ಬಳಿಕ ಕಬಂಧನು ನಿಜರೂಪವನ್ನು ತಾಳಿ ರಾವಣನಿಂದ ಅಪಹರಿಸಲ್ಪಟ್ಟ ಸೀತೆಯನ್ನು ಸುಗ್ರೀವಸಖ್ಯದಿಂದ ಸಂಪಾದಿಸಬಹುದೆಂದು ಹೇಳಿ ವಿಮಾನವನ್ನೇರಿ ತೆರಳಿದನು.] रामा० अरण्य०। "वधनिर्धूतशापस्य कबन्धस्योपदेशतः। मुमूर्च्छ सख्यं रामस्य समानव्यसने हरौ" रघु० १२-५७। 3. ರಾಹು. "कबन्धस्तूदरे रक्षोविशेषेऽपि विधुन्तुदे" विश्व०। (पुंन०) 4. ಕುತ್ತಿಗೆ ಕತ್ತರಿಸಲ್ಪಟ್ಟ ದೇಹ, ತಲೆಯಿಂದ ಬೇರ್ಪಡಿಸಲ್ಪಟ್ಟು ಚಲಿಸುತ್ತಿರುವ ಶರೀರ, ಮುಂಡ. कं शिरो बध्यतेऽस्मात् — बन्ध "घञ्" (३-३-१९)। "सैन्यैः कण्ठच्छेदलीने कबन्धाद्भूयो बिभ्ये वल्गतः सासिपाणेः" माघ० १८-५३। (न०) 5. ಜಲ, ನೀರು. कः प्राणवायुः बध्यतेऽनेन।

**कबन्धिन् ಕಬಂಧಿನ್** (पु०) 1. ಒಬ್ಬ ಋಷಿ. "अथ कबन्धी कात्यायन उपेत्य पप्रच्छ" प्रश्नोप०। (वि०) 2. ಜಲವುಳ್ಳ, ನೀರಿನಿಂದ ಕೂಡಿದ. कबन्ध "इनिः" (५-२-११५)।

**कबर ಕಬರ** (पु०) 1. ಪಾಠಕ, ಅಧ್ಯಾಪಕ, ಉಪನ್ಯಾಸಕ. कु (शब्दे) "अरन्" (उ० ४-१५४)। वबयोरभेदः।

2. ಕರ್ಬುರವರ್ಣ, ಚಿತ್ರವರ್ಣ. "दृष्ट्वेव निर्जितकलापभरामधस्ताद्व्याकीर्णमाल्यकबरां कबरीं तरुण्याः" माघ० ५-१९। (न०) 3. ಉಪ್ಪು. 4. ಹುಳಿ. कं जलं वृणोति — वृञ् (वरणे) "अच्" (३-१-१३४)। "कबरं लवणाम्लयोः" मेदि०।

**कबरी ಕಬರೀ** (स्त्री०) 1. ಹೆಂಗಸರ ತುರುಬು, ಹೆರಳು, ಜಡೆ. कं शिरः वृणोति आच्छादयति — वृञ् (वरणे) "अच्" (३-१-१३४)। "ङीप्" (४-१-४२)। "व्याकीर्णमाल्यकबरां कबरीं तरुण्याः" माघ० ५-१९। 2. ಅಗಸೆಗಿಡ. "कबरी केशविन्यासशाकयोः" हेम०। 3. ನಾರಂಬೇಳಗಿಡ. 4. ಹಿಂಗಿನ ಮರ. "कबरी पुनः। पृथ्वीतुङ्गयोः केशवेशे कबरं लवणाम्लयोः। कबर्युमायाम्" मेदि०।

**कबरीभार ಕಬರೀಭಾರ** (पु०) ಕೇಶಪಾಶ, ಕೂದಲಿನ ಸಮೂಹ. कबर्या भारः। "अमरीकबरीभारभ्रमरीमुखरीकृतम्। दूरीकरोतु दुरितं गौरीचरणपङ्कजम्" कुव०।

**कबल ಕಬಲ** (पु०) 1. ಗ್ರಾಸ, ತುತ್ತು. केन जलेन वलति चलति — वल (सञ्चलने) "अच्" (३-१-१३४)। वबयोरभेदः। "त्रिकटुकमजमोदा सैन्धवं जीरके द्वे समधरणधृतानामष्टमो हिङ्गुभागः। प्रथमकबलभुक्तं सर्पिषा चूर्णमेतज्जनयति जठराग्निं वातपित्तं निहन्ति"। "गम्भीरवेदिनि पुरः कबलं करीन्द्रे मन्दोऽपि नाम न महानवगृह्य साध्यः" माघ० ५-४९। 2. ಒಂದು ಜಾತಿ ಮೀನು.

**कबलन ಕಬಳನ** (न०) ತಿನ್ನುವುದು, ನುಂಗುವುದು.

**कबलित ಕಬಳಿತ** (वि०) ತಿನ್ನಲ್ಪಟ್ಟ, ನುಂಗಲ್ಪಟ್ಟ. कबलः कृतः — कबल+णिच् "क्तः" (३-२-१०२)।

**कबलीकृत ಕಬಳೀಕೃತ** (वि०) ಕಬಳವಾಗಿ ಮಾಡಲ್ಪಟ್ಟ, ತುತ್ತಾಗಿ ಮಾಡಲ್ಪಟ್ಟ. अकबलः कबलः कृतः "च्विः" (५-४-५०)। दीर्घः (७-४-३२)।

**कबित्थ ಕಬಿತ್ಥ** (पु०) 1. ಬೇಲದಮರ. कपयस्तिष्ठन्त्यत्र — ष्ठा (गतिनिवृत्तौ) "कः"। पृषो०। ಕಪಿಗಳಿಗೆ ಬೇಲದಹಣ್ಣು ಪ್ರಿಯವಾದುದರಿಂದ ಈ ಹೆಸರು. (न०) 2. ಬೇಲದಹಣ್ಣು.

**कम् ಕಮ್** (अव्य०) 1. ಸುಖ. कम्यते — कमु (कान्तौ) णिङभावे "विच्" (३-३-७५)। कंतः कंतिः कंतुः। 2. ಜಲ, ನೀರು. 3. ಶಿರಸ್ಸು, ತಲೆ. 4. ಪಾದಪೂರಣ. "कं पादपूरणे तोये मस्तके च सुखेऽपि च" मेदि०।

**कमु-कान्तौ** (भ्वा० आत्म० सक० से०) 1. ಇಚ್ಛಿಸು, ಅಪೇಕ್ಷಿಸು. 2. ಪ್ರೀತಿಸು. कामयते। कामयाञ्चक्रे, -बभूव-, -आस। णिङभावपक्षे चकमे चकमाते चकमिरे। कामयिता, कमिता। कामयिष्यते, कमिष्यते। कामयताम्। अचीकमत, अचकमत। अकामयिष्यत, अकमिष्यत। "माधवानुचरः कलहंसो नाम विहारदासीं मन्दारिकां कामयते" मालती० १। "अकम्पनस्ततो योद्धुं चकमे रावणाज्ञया" भट्टि० १४-८२।

**कर्मणि** :—काम्यते, कम्यते। कामयाञ्चक्रे, -बभूवे, -आसे। चकमे। कामयिता, कामिता, कमिता। कामयिष्यते, कामिष्यते, कमिष्यते। काम्यताम्, कम्यताम्। अकाम्यत, अकम्यत। काम्येत, कम्येत। ಇತ್ಯಾದಿ.

**णिचि** :—कामयति, -ते। कामयाञ्चकार, -चक्रे, -बभूव, -आस। कामयिता। कामयतु, -ताम्। अकामयत्, -त। कामयेत्, -त। ಇತ್ಯಾದಿ.

**सनि** :—चिकामयिषते। चिकामयिषाञ्चक्रे, -बभूव, -आस ಇತ್ಯಾದಿ.

**णिङभावपक्षे**-चिकमिषते। चिकमिषाञ्चक्रे, -बभूव, -आस। ಇತ್ಯಾದಿ.

**कृत्सु** :—कामयितव्यः, कमितव्यः। कामनीयः, कमनीयः। काम्यः, कम्यः। कामितः, कान्तः। कमितवान्, कान्तवान्। कामयमानः। कामयितुम्, कमितुम्। कामितम्, कान्तम्। कामना, कामनम्। कामयित्वा, कमित्वा, कान्त्वा। अभिकाम्य, अभिकम्य।

**ಈ ಧಾತುವಿಗೆ ಉಪಸರ್ಗಗಳ ಯೋಗದಿಂದ ಉಂಟಾಗುವ ಅರ್ಥಭೇದಗಳು :**

**(1)** अनु+कमु=अनुकामयते। 1. ಅನುರೂಪವಾದ ಪ್ರೀತಿ. अनुकामना। 2. ಅನುಗುಣವಾದ ಅಪೇಕ್ಷೆ.

**(2)** अभि+कमु=अभिकामयते। ಅಭಿಮುಖ್ಯದಿಂದ ಪ್ರೀತಿಸು. "दासीं कन्यासहस्रेण शर्मिष्ठामभिकामये" भा० आदि० ७४-२२।

**(3)** नि+कमु = निकामयते। 1. ಸಂಪೂರ್ಣವಾಗಿ ಪ್ರೀತಿಸು. "या तस्य ते पादसरोरुहार्हणं निकामयेत् साखिलकामलम्पटा" भाग० ५-१८-२१। 2. ಅತಿಶಯವಾಗಿ. "निकामतप्ता विविधेन वह्निना नभश्चरेणेन्धनसंभृतेन सा" कुमा० ५-२३।

**कमक ಕಮಕ** (पु०) 1. ಗೋತ್ರ ಪ್ರವರ್ತಕರಾದ ಒಬ್ಬ ಋಷಿ. (वि०) 2. ಕಾಮುಕ.

**कमठ ಕಮಠ** (ಪು०) 1. ಕೂರ್ಮ, ಆಮೆ. के जले मठति —मठ (मदनिवासयोः) "अच्" (३-१-१३४)। 2. ಈಗಿನ ಶ್ವೇತವರಾಹಕಲ್ಪದ ಚಾಕ್ಷುಷಮನ್ವಂತರದಲ್ಲಿ ನಡೆದ ಮಹಾವಿಷ್ಣುವಿನ ಒಂದು ಅವತಾರ. [ಒಮ್ಮೆ ದೇವತೆಗಳಿಗೂ ದಾನವರಿಗೂ ಪ್ರಬಲ ವಿರೋಧವುಂಟಾಗಲು ದೇವತೆಗಳು ಮಹಾವಿಷ್ಣುವಿನಲ್ಲಿ ಮೊರೆಯಿಟ್ಟರು. ಮಹಾವಿಷ್ಣುವು "ರಾಕ್ಷಸರೊಡನೆ ಸ್ನೇಹ ಬೆಳಸಿಕೊಂಡು ಅಮೃತಕ್ಕಾಗಿ ಅವರೊಡನೆ ಕ್ಷೀರಸಮುದ್ರವನ್ನು ಕಡೆದರೆ ಅದರಿಂದ ನಿಮಗೆ ಕ್ಷೇಮವಾಗುವುದು" ಎಂದು ಹೇಳಲಾಗಿ ದೇವತೆಗಳು ರಾಕ್ಷಸರೊಡನೆ ಸ್ನೇಹಗಳಿಸಿಕೊಂಡು ಅವರನ್ನು ನಂಬಿಸಿ ಮಂದರಪರ್ವತವನ್ನು ಕಡೆಗೋಲನ್ನಾಗಿಯೂ ವಾಸುಕಿಯನ್ನು ಕಡೆಯುವ ಹಗ್ಗವನ್ನಾಗಿಯೂ ಏರ್ಪಡಿಸಿಕೊಂಡು ಸಮುದ್ರವನ್ನು ಕಡೆಯುತ್ತಿರುವಾಗ ಭಾರವಾಗಿದ್ದ ಮಂದರಪರ್ವತವು ಸಮುದ್ರದ ಅಡಿಯಲ್ಲಿ ಕುಳಿತುಕೊಂಡಿತು. ಆಗ ದೇವದಾನವರ ಪ್ರಾರ್ಥನೆಯಂತೆ ಮಹಾವಿಷ್ಣುವು ಕೂರ್ಮರೂಪವನ್ನು ತಾಳಿ ಮಂದರ ಪರ್ವತವನ್ನು ತನ್ನ ಬೆನ್ನಿನ ಮೇಲೆ ಹೊತ್ತು ಅಮೃತ ಮಥನಕ್ಕೆ ಸಹಾಯಕನಾದನು.] भाग० ८-६, ७। "सुरासुराणामुदधिं मथ्नतां मन्दराचलम्। दध्रे कमठरूपेण पृष्ठे एकादशे विभुः" भाग० १-३-१६। (न०) 3. ಋಷಿಗಳ ನೀರಿನ ಪಾತ್ರೆ. "कमठः कच्छपे पुंसि भाण्डभेदे नपुंसकम्" मेदि०। 4. ಭಿಕ್ಷಾಪಾತ್ರೆ. (वि०) 5. ವಾಮನ, ಕುಳ್ಳ. "भिक्षापात्रे तु कमठं कमठी खर्वकच्छपौ" वैज०। (स्त्री०) **कमठी ಕಮಠೀ.** ಹೆಣ್ಣುಆಮೆ.

**कमण्डलु ಕಮಂಡಲು** (पुंन०) 1. ಸಂನ್ಯಾಸಿಗಳ ಮತ್ತು ಬ್ರಹ್ಮಚಾರಿಗಳ ಮರದ ಅಥವಾ ಮಣ್ಣಿನ ನೀರಿನ ಪಾತ್ರೆ. कस्य प्रजापतेर्जलस्य वा मण्डं सारं लाति—ला (आदाने) "डुः" (वा० ३-२-१८०)। "अशेषतीर्थोपहृताः कमण्डलोः निधाय पाणावृषिणाभ्युदीरिताः" माघ० १-१८। (पु०) 2. ಬಸುರಿ ಮರ. 3. ಒಂದು ಜಾತಿಯ ಮೃಗ. स्त्रियां "ऊङ्" (४-१-७२)। **कमण्डलूः ಕಮಂಡಲೂಃ.** "कमण्डलुः स्यात्करके न स्त्री ना प्लक्षपादपे" मेदि०।

**कमन ಕಮನ** (पु०) 1. ಕಾಮ, ಮನ್ಮಥ. 2. ಅಶೋಕ ವೃಕ್ಷ. कमु (कान्तौ) "युच्" (३-२-१४९)। 3. ಬ್ರಹ್ಮ. (वि०) 4. ಸುಂದರವಾದ, ಮನೋಹರವಾದ, ರಮಣೀಯವಾದ. स्त्रियां **कमना ಕಮನಾ.** 5. ಕಾಮುಕ. कमु कर्त० "ल्युट्"। स्त्रियां "ङीप्" (४-१-१५)। **कमनी ಕಮನೀ.** ಕಾಮುಕಿ. "अभीष्टमासाद्य चिराय काले समुद्धृताशं कमनी चकाशे" माघ० ६-७४। "कमनः कामुके कामेऽभिरूपेऽशोकपादपे" मेदि०। "कमनः कविः सात्त्विकवेदगर्भौ स्थविरः शतानन्दपितामहौ" अभि० चि०।

**कमनच्छद ಕಮನಚ್ಛದ** (पु०) ಸುಂದರವಾದ ರೆಕ್ಕೆಗಳುಳ್ಳ ಕಂಕಪಕ್ಷಿ, ರಣಹದ್ದು. कमनः कान्तः छदोऽस्य। "कङ्कस्तु कमनच्छदः" अभि० चि०।

**कमनीय ಕಮನೀಯ** (वि०) 1. ಸುಂದರವಾದ, ರಮಣೀಯವಾದ, ಮನೋಹರವಾದ. कमु (कान्तौ) णिङभावे "अनीयर्" (३-१-९६)। "मध्यं तनूकृत्य यदीदमीयं वेधा न दध्यात्कमनीयमंशम्" नैष० ७-८२। 2. ಸ್ಪೃಹಣೀಯವಾದ, ಅಪೇಕ್ಷಿಸಲು ಯೋಗ್ಯವಾದ. "आरोपितं यद्गिरिशेन पश्चादनन्यनारीकमनीयमङ्कम्" कुमा० १-३७।

**कमनीयतम ಕಮನೀಯತಮ कमनीयतर ಕಮನೀಯತರ** (वि०) ಹೆಚ್ಚು ರಮಣೀಯವಾದ, ಅತಿ ಮನೋಹರವಾದ. अतिशयेन कमनीयः "तमप्" (५-३-५५)। "तरप्" (५-३-५७) वा। "वपुरम्बुविहारहिमं शुचिना रुधिरं कमनीयतरा गमिता" माघ० ६-७१।

**कमनीयता ಕಮನೀಯತಾ** (स्त्री०) ಸೌಂದರ್ಯ, ಸೊಬಗು, ರಮಣೀಯವಾಗಿರುವಿಕೆ. कमनीयस्य भावः "तल्" (५-१-११९)। "भुवनत्रयसुभ्रुवामसौ दमयन्ती कमनीयतामदम्" नैष० २-१८।

**कमर ಕಮರ** (वि०) ಕಾಮುಕ. कमु (कान्तौ) "अरः" (उ० ३-१३२)।

**कमल ಕಮಲ** (न०) 1. ಪದ್ಮ, ತಾವರೆಹೂವು. कं जलमलति—अल (भूषणादौ) "कः" (वा० ३-२-५)। "धृतनवातपमुत्सुकतामतो न कमलं कमलम्भयदम्भसि" माघ० ६-४८। 2. ರಕ್ತಕಮಲ, ಕೆಂದಾವರೆ. 3. ನೀರು, ಜಲ. कमु (कान्तौ) "कलः" (उ० १-१०६)। "कुररीगणः कृतरवस्तरवः कुसुमानताः सकमलं कमलम्" किरा० ५-२५। 4. ಚಿನ್ನ ಮೊದಲಾದುವುಗಳಿಂದ ಚಿತ್ರಿಸಲ್ಪಟ್ಟ ಸಣ್ಣ ಕತ್ತಿಯ ಒರೆ. "कमलं छुरिकादीनां हेमाद्यैश्चित्रिताजिने। रक्ताब्जेऽब्जेऽप्सु च" वैज०। 5. ತಾಮ್ರ. 6. ಮೂತ್ರಕೋಶ. 7. ಔಷಧ. (पु०) 8. ಒಂದು ಜಾತಿಯ ಜಿಂಕೆ. "कमलं सलिले ताम्रे जलजे क्लोम्नि भेषजे। मृगभेदे तु कमलः" मेदि०। स्त्रियां "ङीष्" (४-१-६३)। **कमली ಕಮಲೀ.**

**कमलज ಕಮಲಜ** (पु०) 1. ಬ್ರಹ್ಮ, ಚತುರ್ಮುಖ. विष्णोः नाभिकमलात् जायते — जनी (प्रादुर्भावे) "डः" (३-२-९८)। 2. ರೋಹಿಣೀನಕ್ಷತ್ರ. (वि०) 3. ಕಮಲದಲ್ಲಿ ಹುಟ್ಟಿದ, ಕಮಲದಲ್ಲಿ ಉಂಟಾದ, ಕಮಲದಿಂದ ಉತ್ಪನ್ನವಾದ.

**कमलनयन ಕಮಲನಯನ** (पु०) 1. ವಿಷ್ಣು, ಕಮಲದಂತೆ ಕಣ್ಣುಗಳುಳ್ಳ ನಾರಾಯಣ. कमले इव नयनेऽस्य। (वि०) 2. ಕಮಲದಂತೆ ಕಣ್ಣುಗಳುಳ್ಳ. स्त्रियां **–नयना –ನಯನಾ.**

**कमलनाभ ಕಮಲನಾಭ** (पु०) ನಾಭಿಯಲ್ಲಿ ಕಮಲವುಳ್ಳ ವಿಷ್ಣು. कमलं नाभौ यस्य।

**कमलबन्धु ಕಮಲಬಂಧು** (पु०) ಕಮಲದಬಂಧು, ಸೂರ್ಯ. कमलस्य बन्धुः। **–बान्धवः –ಬಾಂಧವಃ.**

**कमलभव ಕಮಲಭವ** (पु०) ಕಮಲದಿಂದ ಹುಟ್ಟಿದ ಬ್ರಹ್ಮ. कमलाद्भवति—भू (सत्तायाम्) "अप्" (३-३-५७)। "क्विप्" (३-२-१७९)। **–भूः –ಭೂಃ.**

**कमलयोनि ಕಮಲಯೋನಿ** (पु०) ಕಮಲವೇ ಉತ್ಪತ್ತಿ ಸ್ಥಾನವಾಗಿ ಉಳ್ಳ ಬ್ರಹ್ಮ, ಚತುರ್ಮುಖ. कमलं योनिरुत्पत्तिस्थानमस्य।

**कमललोचन ಕಮಲಲೋಚನ** (पु०) 1. ತಾವರೆಹೂವಿನಂತೆ ಕಣ್ಣುಗಳುಳ್ಳ ವಿಷ್ಣು. (वि०) 2. ತಾವರೆಹೂವಿನಂತೆ ಕಣ್ಣುಗಳುಳ್ಳ. कमले इव लोचने यस्य। स्त्रियां **–लोचना –ಲೋಚನಾ.**

**कमलवदन ಕಮಲವದನ** (वि०) ಕಮಲದಂತೆ ಮುಖವುಳ್ಳ. कमलमिव वदनं यस्य। स्त्रियां **–वदना –ವದನಾ.**

**कमलवन ಕಮಲವನ** (न०) ತಾವರೆಹೂವಿನ ಕಾಡು, ತಾವರೆಹೂವುಗಳ ಗುಂಪು. "मधुन इव दयायाः सामरस्यं दधानैः कमलवनमनन्यां कान्तिमध्यापयद्भिः" याद० १९-८१।

**कमलसंभव ಕಮಲಸಂಭವ** (पु०) ಬ್ರಹ್ಮ, ಚತುರ್ಮುಖ. कमलात्संभवति —सम् + भू (सत्तायाम्) "अप्" (३-३-५७)।

**कमला ಕಮಲಾ** (स्त्री०) 1. ಲಕ್ಷ್ಮಿ. कमलमस्या अस्ति "अच्" (५-२-१२७)। "कमलोल्लसितेन दर्शनीयं दिनमाद्यन्तविवर्जितं दिदृक्षे" याद० १५-४। 2. ಶ್ರೇಷ್ಠ ಹೆಂಗಸು. "कमला श्रीवरस्त्रियोः" मेदि०।

**कमलाकर ಕಮಲಾಕರ** (पु०) 1. ತಾವರೆಹೂವುಗಳ ಉತ್ಪತ್ತಿಸ್ಥಾನ, ಸರೋವರ. 2. ತಾವರೆಹೂವುಗಳ ಸಮೂಹ. कमलानामाकरः उत्पत्तिस्थानं समूहो वा। "प्रविघाटयिता समुत्पतन् हरिदश्वः कमलाकरानिव" किरा० २-४६।

**कमलाक्ष ಕಮಲಾಕ್ಷ** (पु०) 1. ವಿಷ್ಣು. (वि०) 2. ಕಮಲದಂತೆ ಕಣ್ಣುಗಳುಳ್ಳವನು. कमले इव अक्षिणी यस्य। "षच्" (५-४-११३)। स्त्रियां "ङीष्" (४-१-४१)। **–क्षी –ಕ್ಷೀ.**

**कमलाग्रजा ಕಮಲಾಗ್ರಜಾ** (स्त्री०) ಲಕ್ಷ್ಮಿಯ ಅಕ್ಕ, ಜ್ಯೇಷ್ಠಾದೇವಿ, ದಾರಿದ್ರ್ಯದೇವತೆ. कमलाया अग्रजा।

**कमलाकान्त ಕಮಲಾಕಾಂತ, –पति –ಪತಿ** (पु०) ಶ್ರೀಮಹಾವಿಷ್ಣು, ನಾರಾಯಣ. कमलायाः कान्तः पतिर्वा।

**कमलालया ಕಮಲಾಲಯಾ** (स्त्री०) ಕಮಲವೇ ವಾಸಸ್ಥಾನವಾಗಿ ಉಳ್ಳ ಲಕ್ಷ್ಮಿ. कमलमालयो यस्याः।

**कमलासन ಕಮಲಾಸನ** (पु०) 1. ಬ್ರಹ್ಮ, ಚತುರ್ಮುಖ. कमलमासनमस्य। "क्रान्तानि पूर्वं कमलासनेन कक्ष्यान्तराण्यद्रिपतेर्विवेश" कुमा० ७-७०। (न०) 2. ಕಮಲರೂಪವಾದ ಆಸನ. 3. ಯೋಗಶಾಸ್ತ್ರೋಕ್ತವಾದ ಪದ್ಮಾಸನ. (स्त्री०) **–आसना –ಆಸನಾ.**

**कमलासनस्थ ಕಮಲಾಸನಸ್ಥ** (पु०) ಕಮಲರೂಪವಾದ ಆಸನದಲ್ಲಿ ಕುಳಿತಿರುವ ಬ್ರಹ್ಮ, ಚತುರ್ಮುಖ. कमलासने तिष्ठति — ष्ठा (गतिनिवृत्तौ) "कः" (३-२-४)।

**कमलिनी ಕಮಲಿನೀ** (स्त्री०) 1. ಕಮಲಲತೆ, ತಾವರೆಯಬಳ್ಳಿ. कमलान्यस्याः सन्ति "इनिः" (५-२-११५)। "ङीप्" (४-१-५)। "विरहतप्ततदङ्गनिवेशिता कमलिनी निमिषद्दलमुष्टिभिः" नैष० ४-३२। 2. ಕಮಲಗಳಿಂದ ಕೂಡಿದ ಸರೋವರ, —ಕೊಳ. 3. ಕಮಲಗಳಿಂದ ಕೂಡಿದ ಪ್ರದೇಶ. कमलान्यत्र देशे "इनिः" (५-२-१३५)।

**कमा ಕಮಾ** (स्त्री०) 1. ಕಾಂತಿ, ಹೊಳಪು. 2. ಸೌಂದರ್ಯ, ಸೊಬಗು. कमु (कान्तौ) "अङ्" (३-३-१०४)।

**कमितृ ಕಮಿತೃ** (वि०) 1. ಕಾಮುಕ, ಸ್ತ್ರೀಲೋಲ. कमु (कान्तौ) णिङभावे "तृच्" (३-१-१३३)। "अन्वयुर्युतिपथःपितृनाथास्तं मुदाय हरितां कमितारः" नैष० ५-५५। 2. ಅಪೇಕ್ಷಿಸುವ, ಬಯಸುವ. "इत्यमी वसुमतीकमितारः सादरास्त्वदतिथीभवितुं न" नैष० ५-३४। स्त्रियां "ङीप्" (४-१-५)।

**कम्प ಕಂಪ** (पुं०) 1. ನಡುಕ, ಕಂಪನ, ತತ್ತರ, ಅದಿರುವಿಕೆ. कपि (चलने) "घञ्" (३-३-१८)। "भ्रेमुर्वात्या इवान्याः प्रतिपदमपरा भूमिवत्कम्पमापुः" माघ० १५-९६। नैष० ७-९१। 2. ಚಲನ, ಅಲುಗಾಡುವಿಕೆ. "अस्तित्वं कार्यसिद्धेः स्फुटमथ कथयन् पक्षतेः कम्पमेदैः" नैष० ३-१३२। "कम्पेन मूर्ध्नः शतपत्रयोनिं वाचा हरिं वृत्रहणं स्मितेन" कुमा० ७-४६। 3. ಉಗ್ರತಾಖ್ಯ ವ್ಯಭಿಚಾರಿಭಾವದಿಂದ ಉಂಟಾದ ಒಂದು ಅನುಭಾವ. "तत्र स्वेदशिरःकम्पतर्जनाताडनादयः" सा०द० ३-१४९। "अनुभावोऽत्र वैवर्ण्यगद्‌गदस्वरभाषणम्। प्रलयस्वेदरोमाञ्चकम्पदिक्प्रेक्षणादयः" सा०द० ३-२३७।

**कम्पन ಕಂಪನ** (पुं०) 1. ಒಂದುವಿಧ ಅಸ್ತ್ರ. "प्रासस्तथा गदाभिश्च परिघैः कम्पनैस्तथा" भा०। 2. ಶಿಶಿರಋತು, ಛಳಿಗಾಲ. 3. ಒಬ್ಬ ರಾಜ. कपि (चलने) कर्त० "युच्" (३-२-१४८)। "काम्बोजराजः कमठः कम्पनश्च महाबलः। सततं कम्पयामास यवनानेक एव यः" भा०सभा० ४-२८। 4. ಸನ್ನಿಪಾತಜ್ವರ, ಛಳಿಜ್ವರ. (न०) 5. ನಡುಕ, ಅದಿರುವಿಕೆ. कपि (चलने) भावे "ल्युट्" (३-३-११५)। "अधरकम्पनमुन्नय मेनके किमपि जल्पति कल्पलते शृणु" नैष० ४-११३। 6. ನಡುಗಿಸುವಿಕೆ, ಅಲುಗಾಡಿಸುವಿಕೆ. "प्रवसतः सुतरामुदकम्पयत् विदलकन्दलकम्पनलालितः" माघ० ६-३०। (वि०) 7. ನಡುಗಿಸುವ, ಅಲುಗಾಡಿಸುವ. कपि "युच्" (३-२-१४८)। 8. ನಡುಕವುಳ್ಳ, ಅಲುಗಾಡುವ.

**कम्पनीय ಕಂಪನೀಯ** (वि०) 1. ನಡುಗಿಸಲ್ಪಡುವ. 2. ನಡುಗಿಸಲ್ಪಡಲು ಅರ್ಹವಾದ. 3. ನಡುಗಿಸಲ್ಪಡಲು ಶಕ್ಯವಾದ. कपि (चलने) कर्मादौ "अनीयर्" (३-१-९६)।

**कम्पमान ಕಂಪಮಾನ** (वि०) ನಡುಗುತ್ತಿರುವ, ಅಲುಗಾಡುತ್ತಿರುವ. कपि (चलने) "शानच्" (३-२-१२४)। "महती मेदिनी दीनं कम्पमानान्वकम्पत" याद० १६-१०९।

**कम्पयत् ಕಂಪಯತ್** (वि०) 1. ನಡುಗಿಸುತ್ತಿರುವ. 2. ಅಲುಗಾಡಿಸುತ್ತಿರುವ. कपि (चलने) + णिच् "शतृ" (३-२-१२४)। स्त्रियां "ङीप्" (४-१-६)। **–यन्ती –ಯಂತೀ.** "शानच्" (३-२-१२४)। **कम्पयमानः ಕಂಪಯಮಾನಃ** (वि०) स्त्रियां "टाप्" **–माना –ಮಾನಾ.**

**कम्पयितृ ಕಂಪಯಿತೃ** (वि०) 1. ನಡುಗಿಸುವ, ಅದಿರಿಸುವ. कपि (चलने) + णिच् "तृच्" (३-१-१३३)। 2. ಅಲುಗಾಡಿಸುವ. स्त्रियां "ङीप्" (४-१-५)। **–यित्री –ಯಿತ್ರೀ.**

**कम्पलक्ष्मन् ಕಂಪಲಕ್ಷ್ಮನ್** (पुं०) ವಾಯು, ಗಾಳಿ. कम्पः लक्ष्म यस्य। "वातस्तु नभःप्राणो जगद्बलः। भोगिकान्तः कम्पलक्ष्मा पञ्चधारावनिश्च सः" त्रिकाण्ड०।

**कम्पा ಕಂಪಾ** (स्त्री०) ಚಲನೆ, ನಡುಕ. कपि (चलने) भावे "अः" (३-३-१०३)।

**कम्पित ಕಂಪಿತ** (न०) 1. ಕಂಪನ, ನಡುಕ. कपि (चलने) भावे "क्तः" (३-३-११४)। 2. ಅಲುಗಾಡಿಸುವಿಕೆ. ಅಲ್ಲಾಡಿಸುವಿಕೆ. कपि + णिच् भावे "क्तः"। (वि०) 3. ಅಲುಗಾಡಿಸಲ್ಪಟ್ಟ, ಅಲ್ಲಾಡಿಸಲ್ಪಟ್ಟ. कपि + णिच् कर्म० "क्तः" (३-२-१०२)। "आद्यकोलतुलितां प्रकम्पनैः कम्पितां मुहुरनीदृगात्मनि" माघ० १४-४३। 4. ನಡುಕವುಳ್ಳ, ಅಲುಗಾಡುವ. "पृक्तस्तुषारैर्गिरिनिर्झराणामनोकहाकम्पितपुष्पगन्धी" रघु० २-१३।

**कम्पिन् ಕಂಪಿನ್** (वि०) 1. ಕಂಪವುಳ್ಳ, ನಡುಕವುಳ್ಳ. 2. ಚಲಿಸುವ, ಅಲುಗಾಡುವ. "गीती शीघ्री शिरःकम्पी तथा लिखितपाठकः। अनर्थज्ञोऽल्पकण्ठश्च षडेते पाठकाधमाः" पा०शि०। 3. ನಡುಗಿಸುವ. 4. ಅಲುಗಾಡಿಸುವ. कपि + णिच् "णिनिः"।

**कम्पिल्ल ಕಂಪಿಲ್ಲ** (पुं०) ಕಪಿಲೆಹಿಟ್ಟು ಎಂಬ ಒಂದು ಔಷಧ.

**कम्प्य ಕಂಪ್ಯ** (वि०) 1. ಅಲುಗಾಡಿಸಲ್ಪಡುವ. 2. ಅಲುಗಾಡಿಸಲ್ಪಡಲು ಶಕ್ಯವಾದ. 3. ಅಲುಗಾಡಿಸಲ್ಪಡಲು ಅರ್ಹವಾದ. कपि (चलने) + णिच् "यत्" (३-१-९७)।

**कम्प्यमान ಕಂಪ್ಯಮಾನ** (वि०) 1. ನಡುಗಿಸಲ್ಪಡುತ್ತಿರುವ. 2. ಅಲುಗಾಡಿಸಲ್ಪಡುತ್ತಿರುವ. कपि (चलने) कर्म० "शानच्" (३-२-१२४)।

**कम्प्र ಕಂಪ್ರ** (वि०) ಚಂಚಲವಾದ, ನಡುಕದಸ್ವಭಾವವುಳ್ಳ. कपि (चलने) "रः" (३-२-१६७)। "सुताः कमाहूय चिराय चूत्कृतैर्विधाय कम्प्राणि मुखानि कं प्रति" नैष० १-१४२।

**कम्बर ಕಂಬರ** (पुं०) 1. ಚಿತ್ರವರ್ಣ. (वि०) 2. ಚಿತ್ರವರ್ಣವುಳ್ಳ. कम्ब (गतौ) "अरः" बाहु०।

**कम्बल ಕಂಬಲ** (पुं०) 1. ಶಾಲು, ಉಣ್ಣೆಯಿಂದ ತಯಾರಿಸಲ್ಪಟ್ಟ ಬಟ್ಟೆ, ಕಂಬಳಿ. कमु (कान्तौ) "कल:" बुक् च (उ० १-१०६)। "न तथा सुखयत्यग्निर्न प्रावारा न कम्बला:। शीतवातार्दितं लोकं यथा तव मरीचय:" भा० वन० ३-३२। 2. ಉತ್ತರೀಯ, ಹೊದೆಯುವ ವಸ್ತ್ರ. 3. ಹಸುವಿನ ಗಂಗೆದೊಗಲು. 4. ಕ್ರಿಮಿ, ಹುಳ. 5. ಒಂದು ಜಾತಿಯ ಸರ್ಪ. (न०) 6. ಜಲ, ನೀರು. (पुंस्त्री०) 7. ಜಿಂಕೆ, ಚಿಗರಿ. 8. ಪ್ರಯಾಗದಲ್ಲಿರುವ ಒಂದು ತೀರ್ಥ. "कम्बलोऽहि: क्रिमि: सास्ना प्रावार: कम्बलं जले" नानार्थर०।

**कम्बलिका ಕಂಬಳಿಕಾ** (स्त्री०) 1. ಸಣ್ಣಕಂಬಳಿ. क्षुद्र: कम्बल: कम्बली—स्वार्थे "कन्"। 2. ಹೆಣ್ಣುಜಿಂಕೆ.

**कम्बलिन् ಕಂಬಲಿನ್** (पुं०) 1. ವೃಷಭ, ಎತ್ತು. कम्बल: गलकम्बल: अस्यास्ति "इनि:" (५-२-११५)। (वि०) 2. ಕಂಬಳಿಯನ್ನು ಧರಿಸಿರುವವನು.

**कम्बलिवाह्यक ಕಂಬಳಿವಾಹ್ಯಕ** (न०) ಎತ್ತುಗಳಿಂದ ಎಳೆಯಲ್ಪಡುವ ಗಾಡಿ, कम्बलिभि: वृषभैरुह्यते—वह (प्रापणे) "ण्यत्" (३-१-१२४)। स्वार्थे "कन्" (५-४-५)।

**कम्बलीया ಕಂಬಳೀಯಾ** (वि०) ಕಂಬಳಿಗೆ ಅನುಕೂಲವಾದ (ಉಣ್ಣೆ). कम्बलाय हितम् "छ:" (५-१-५)।

**कम्बल्य ಕಂಬಲ್ಯ** (न०) ಒಂದು ಶಾಲುವನ್ನು ತಯಾರಿಸಲು ಬೇಕಾಗುವ ನೂರು ಪಲಗಳ ಉಣ್ಣೆ. कम्बलं संज्ञायां "यत्" (५-१-३)।

**कम्बि ಕಂಬಿ** (स्त्री०) 1. ಸೌಟು, ಮಿಳ್ಳೆ. कम्ब (गतौ) "इन्" (उ० ४-११७)। 2. ಬಿದಿರಿನ ಮೊಳಕೆ ಅಥವಾ ಗಿಣ್ಣು. "कम्बिरंशे च वंशस्य खजाकायामपि स्त्रियाम्" मेदि०।

**कम्बु ಕಂಬು** (पुंन०) 1. ಶಂಖ. कमु (कान्तौ) "कु:" बुक् च (उ० १-३७)। "नृत्ते चक्षु:शून्यहस्तप्रयोगं काये कूजन् कम्बुरुच्चैर्जहास" माघ० १८-५४। 2. ಕಡಗ, ಬಳೆ. 3. ಶಂಖದಬಳೆ. 4. ಕತ್ತಿನಲ್ಲಿ ಶಂಖದಂತೆ ಇರುವ ಮೂರು ರೇಖೆಗಳು. (ಇವು ಅದೃಷ್ಟ ಸೂಚಕ). 5. ಕಪ್ಪೆ ಚಿಪ್ಪು. 6. ಗಜ, ಆನೆ. "मदवृन्द: कुषी कम्बु: शुण्डाल: षष्टिहायन:" वैज०। 7. ಧಾನ್ಯದ ನುಚ್ಚು, ಧಾನ್ಯದ ಒಂದು ಭಾಗ. 8. ಒಂದು ಸಂಖ್ಯೆ, 1,000,000,000,000ರ ಹೆಸರು. "कम्ब्वस्त्री वलये शंखे शम्बूके कणसंख्ययो:" वैज०। 9. ಟೊಳ್ಳಾಗಿರುವ ಮೂಳೆ, ಒಳಗೆ ಕೊಳವೆಯಂತಿರುವ ಎಲುಬು. 10. ಕತ್ತು, ಕುತ್ತಿಗೆ. 11. ಕಠೋರ. "कम्बुर्वलयशंखयो:। गजे शम्बूके कर्चूरे ग्रीवायां नलकेऽपि च" हेम०।

**कम्बुक ಕಂಬುಕ** (पुं०) ಶಂಖ. कम्बु स्वार्थे "कन्" (५-३-७५)।

**कम्बुकण्ठ ಕಂಬುಕಂಠ** (वि०) ಶಂಖದಂತೆ (ಮೂರು ಗೆರೆಗಳುಳ್ಳ) ಕತ್ತುಳ್ಳವನು. कम्बुरिव कण्ठो यस्य। स्त्रियां "ङीष्" (४-१-५५)। —कण्ठी —ಕಂಠೀ.

**कम्बुकन्धर ಕಂಬುಕಂಧರ** (वि०) ಶಂಖದಂತೆ ಕತ್ತುಳ್ಳವನು. कम्बुरिव कन्धरा यस्य। स्त्रियां —कन्धरा—ಕಂಧರಾ.

**कम्बुग्रीवा ಕಂಬುಗ್ರೀವಾ** (स्त्री०) 1. ಶಂಖದಂತೆ ಮೂರು ರೇಖೆಗಳುಳ್ಳ ಕತ್ತು. कम्बुरिव ग्रीवा। (वि०) 2. ಶಂಖದಂತೆ ಮೂರು ರೇಖೆಗಳುಳ್ಳ ಕತ್ತುಳ್ಳವನು. कम्बुरिव ग्रीवा यस्य।

**कम्बू ಕಂಬೂ** (पुं०) 1. ಚೋರ, ಕಳ್ಳ. कमु (कान्तौ) "कू:" बुक् च (उ० १-९३)। (स्त्री०) 2. ಕಂಕಣ, ವಲಯ, ಬಳೆ ಮೊದಲಾದ "कम्बु" ಪದದ ಅರ್ಥ.

**कम्बोज ಕಂಬೋಜ** (पुं०ब०व०) 1. ಕಂಬೋಜದೇಶ. (पुं०) 2. ಕಂಬೋಜ ದೇಶದ ದೊರೆ, ಕಂಬೋಜ ದೇಶದ ರಾಜ. कम्बोजानां राजा—कम्बोजा "अञ्" (४-१-१६६)। अञो लुक् (४-१-१७३)। "कम्बोजा: समरे सोढुं तस्य वीर्यमनीश्वरा:" रघु० ४-६९। 3. ಗಜ, ಆನೆ. 4. ಶಂಖ. "कम्बोजो हस्तिभेदेऽपि शंखदेशविशेषयो:" मेदि०।

**कम्र ಕಮ್ರ** (वि०) ಕಾಮುಕ, ಸ್ತ್ರೀಲೋಲ, ಮೈಥುನೇಚ್ಛೆಯುಳ್ಳವನು. कमु (कान्तौ) "र:" (३-२-१६७)।

**कयाधु ಕಯಾಧು** (स्त्री०) ಹಿರಣ್ಯಕಶಿಪುವಿನ ಪತ್ನಿ, ಜಂಭಾಸುರನ ಮಗಳು, ಪ್ರಹ್ಲಾದನ ತಾಯಿ. [ಹಿರಣ್ಯಕಶಿಪುವು ಒಮ್ಮೆ ತಪಸ್ಸಿಗೆ ಹೋಗಿದ್ದಾಗ ಇಂದ್ರನು ಗರ್ಭಿಣಿಯಾಗಿದ್ದ ಕಯಾಧುವನ್ನು ಸೆರೆ ಹಿಡಿದು ನಾರದರ ಸಲಹೆಯಂತೆ ಅವಳನ್ನು ಹಿಂಸಿಸದೆ ಅವರ ಬಳಿ ಬಿಡುವನು. ನಾರದರು ಗಂಗಾತೀರದಲ್ಲಿ ಒಂದು ಆಶ್ರಮವನ್ನು ನಿರ್ಮಿಸಿ ಅಲ್ಲಿ ಕಯಾಧುವಿಗೆ ಮಂತ್ರೋಪದೇಶ ಮಾಡಲು ಅವಳು ಮಹಾವಿಷ್ಣುವಿನ ಧ್ಯಾನದಲ್ಲೇ ಇರುತ್ತಿದ್ದಳು. ಅಷ್ಟರಲ್ಲಿ ತಪಸ್ಸಿನಿಂದ ಹಿಂತಿರುಗಿದ ಹಿರಣ್ಯಕಶಿಪುವಿಗೆ ನಾರದರು ಅವಳನ್ನು ಒಪ್ಪಿಸಿದರು. ಈ ಮಂತ್ರೋಪದೇಶಬಲದಿಂದ ಕಯಾಧುಪುತ್ರನಾದ ಪ್ರಹ್ಲಾದನು ಪರಮವಿಷ್ಣುಭಕ್ತನಾದನು.] भाग० ६-१८।

**कर ಕರ** (पु०) 1. ಹಸ್ತ, ಕೈ. कीर्यतेऽनेन—कॄ (विक्षेपे) कर० "अप्" (३-३-५७)। "श्रियास्य योग्याहमिति स्वमीक्षितुं करे तमालोक्य सुरूपया धृतः" नैष० १-३१। 2. ಬಲಿ, ಪೂಜಾದ್ರವ್ಯ. "करप्रचेयामुत्तुङ्गः प्रभुशक्तिं प्रथीयसीम्। प्रज्ञाबलबृहन्मूलः फलत्युत्साहपादपः" माघ० २-८९। 3. ಕಿರಣ. कृ कर्म० "अप्" (३-३-५७)। "जगतीरिह स्फुरितचारुचामीकराः सवितुः क्वचित् कपिशयन्ति चामी कराः" माघ० ४-२४। 4. ರಾಜಾದಾಯ, ರಾಜನಿಗೆ ಕೊಡಬೇಕಾದ ತೆರಿಗೆ, ಕಂದಾಯ. कं सुखं राति ददाति—रा (दाने) "कः" (३-२-४)। "तव तन्वि कुचावेतौ नियतं चक्रवर्तिनौ। आसमुद्रक्षितीशोऽपि भवान् यत्र करप्रदः" उद्भ०। 5. ಆನೆಯಸೊಂಡಿಲು. "सेकः शीकरिणा करेण विहितः कामं विरामे पुनः यत्स्नेहादनरालनालनलिनीपत्रातपत्रं धृतम्" उ० रा० ३-१६। 6. ವರ್ಷೋಪಲ, ಆಲಿಕಲ್ಲು. 7. ನಿಕ್ಷೇಪ, ಇಡುವಿಕೆ. 8. ಹಸ್ತನಕ್ಷತ್ರ. "रेवत्युत्तररोहिणीकरपितृस्वातीन्दुमित्रासुरे पापानन्वितपापवेधरहिते पाणिग्रहः शोभनः" काला० ५४। 9. ಎರಡು ಸಂಖ್ಯೆಯ ಸಂಕೇತ. 10. ಸೆರೆಮನೆ, ಕಾರಾಗಾರ. किरति क्षिपति दण्डचानत्र—कॄ "अप्" (३-३-५७)। (वि०) 11. ಸುಖವನ್ನು ಕೊಡುವ, ಸುಖವನ್ನುಂಟು ಮಾಡುವ. कं सुखं राति — रा (दाने) "कः" (३-२-४)।

**करक ಕರಕ** (पु०) 1. ಹಸ್ತ, ಕೈ. कर स्वार्थे "कन्"। 2. ಒಂದು ಜಾತಿಯ ಪಕ್ಷಿ. 3. ದಾಡಿಮ ವೃಕ್ಷ, ದಾಳಿಂಬೆ ಗಿಡ. (पुन०) 4. ಕಮಂಡಲು, ವಿದ್ಯಾರ್ಥಿಗಳ ಮತ್ತು ಸಂನ್ಯಾಸಿಗಳ ಜಲಪಾತ್ರೆ. 5. ಒಳಗಿನ ತಿರುಳು ತೆಗೆದು ಪಾತ್ರೆಯ ಆಕಾರದಂತೆ ಮಾಡಿದ ತೆಂಗಿನಕಾಯಿನ ಚಿಪ್ಪು. किरति जलमत्र—कॄ (विक्षेपे) संज्ञायां "वुन्" (उ० ५-३५)। "उपानहौ च वासश्च धृतमन्यैर्न धारयेत्। उपवीतमलंकारं स्रजं करकमेव च" मनु० ४-६६। 6. ತಲೆಬುರುಡೆ. 7. ವರ್ಷೋಪಲ, ಆಲಿಕಲ್ಲು. (न०) 8. ನಾಯಿಕೊಡೆ. "करकस्तु पुमान् पक्षिविशेषे दाडिमेऽपि च। द्वयोर्वर्षोपले न स्त्री करङ्के च कमण्डलौ" मेदि०।

**करकच ಕರಕಚ** (पु०) ಜ್ಯೋತಿಷೋಕ್ತವಾದ ತಿಥಿವಾರಗಳ ಒಂದು ಯೋಗ ; ಶನಿವಾರ ಷಷ್ಠಿ, ಶುಕ್ರವಾರ ಸಪ್ತಮಿ, ಗುರುವಾರ ಅಷ್ಟಮಿ, ಬುಧವಾರ ನವಮಿ, ಕುಜವಾರ ದಶಮಿ, ಸೋಮವಾರ ಏಕಾದಶಿ, ಭಾನುವಾರ ದ್ವಾದಶೀ ತಿಥಿಗಳು ಸೇರಿದರೆ "ಕರಕಚ" ಯೋಗವು.

**करकच्छपिका ಕರಕಚ್ಛಪಿಕಾ** (स्त्री०) ಕೂರ್ಮಮುದ್ರೆ, ಪೂಜಾಕಾಲದಲ್ಲಿ ಕೂರ್ಮದಂತೆ ಅಂಗುಳಿನ್ಯಾಸದಿಂದ ಮಾಡುವ ಒಂದು ಮುದ್ರೆ. करे स्थिता कच्छपिका कच्छपाकारोऽङ्गुलिविन्यासः। "करकच्छपिकां कुर्यात् कूर्ममन्त्रेण साधकः। तत्र संस्कृतपुष्पेण पूजयेदात्मनो वपुः" कालिकापु०।

**करकण्टक ಕರಕಂಟಕ** (पुन०) ನಖ, ಉಗುರು. करस्य कण्टक इव। "नखः पुनर्भवः कामांशुकः स्यात्करकण्टकः" त्रिकाण्ड०।

**करकमल ಕರಕಮಲ** (न०) ಕಮಲದಂತೆ ಕೋಮಲವಾದ ಕೈ. करौ कमले इव। "करकमलनिदर्शितात्ममुद्रः परिकलितोन्नतबर्हिबर्हचूडः"। "करकमलवितीर्णैरम्बुनीवारशष्पैः" उ० रा० ३-२५।

**करका ಕರಕಾ** (स्त्री०) ವರ್ಷೋಪಲ, ಆಲಿಕಲ್ಲು. "करका स्यात् घनकुको बीजोदकमिरावरम्" त्रिकाण्ड०।

**करकाम्भस् ಕರಕಾಂಭಸ್** (पु०) ತೆಂಗಿನ ಮರ. करकाया इव शीतलमम्भोऽस्य।

**करकासार ಕರಕಾಸಾರ** (पु०) ಆಲಿಕಲ್ಲಿನ ಮಳೆ. करकाया आसारः।

**करकिसलय ಕರಕಿಸಲಯ** (पुन०) ಚಿಗುರಿನಂತೆ ಕೋಮಲವಾದ ಕೈ. करौ किसलयाविव। "करकिसलयतालैर्मुग्धया नर्त्यमानं सुतमिव मनसा त्वां वत्सलेन स्मरामि" उ० रा० ३-१९।

**करकुड्मल ಕರಕುಡ್ಮಲ** (पुन०) ಮೊಗ್ಗಿನಂತಿರುವ ಕೈ, ಮೊಗ್ಗಿನ ಆಕಾರದಂತೆ ಜೋಡಿಸಲ್ಪಟ್ಟ ಕೈ. करः कुड्मलमिव। "करकुड्मलेन निजमूरुमुरुतरनगाश्मकर्कशम्" माघ० १५-१०।

**करगत ಕರಗತ** (वि०) ಕೈಸೇರಿದ, ಕೈಗೆ ದೊರೆತಿರುವ. करं गतः। "असमये मतिरुन्मिषति ध्रुवं करगतैव गता यदियं कुहूः" नैष० ४-५७।

**करग्रह ಕರಗ್ರಹ** (पु०) 1. ಪಾಣಿಗ್ರಹಣ, ವಿವಾಹ, ಮದುವೆ. करो गृह्यतेऽत्र—ग्रह (उपादाने) अधि० "अप्" (३-३-५८)। 2. ಕೈಹಿಡಿಯುಕೊಳ್ಳುವಿಕೆ. 3. ಪ್ರಜೆಗಳಿಂದ ಕಂದಾಯ ತೆಗೆದುಕೊಳ್ಳುವಿಕೆ. करस्य ग्रहः। भावे "ल्युट्" (३-३-११५)। **-ग्रहणम् -ಗ್ರಹಣವ್.**

**करग्राह ಕರಗ್ರಾಹ** (पु०) 1. ಪತಿ, ಗಂಡ. (वि०) 2. ಕೈಹಿಡಿದುಕೊಳ್ಳುವವನು. 3. ಕಂದಾಯ ತೆಗೆದುಕೊಳ್ಳು

ಪವನು. करं गृह्णाति—ग्रह (उपादाने) "अण्" (३-२-१)।

**करग्राहक ಕರಗ್ರಾಹಕ** (वि०) "करग्राह" ಪದದ ಅರ್ಥ. कर + ग्रह (उपादाने) "ण्वुल्" (३-१-१३३)। "णिनि:" (३-१-१३४)। **–ग्राहिन् –ಗ್ರಾಹಿನ್.** "तृच्" (३-१-१३३)। **–ग्रहीतृ –ಗ್ರಹೀತೃ.**

**करघर्षण ಕರಘರ್ಷಣ** (पु०) 1. ಕಡೆಗೋಲು, ಮೊಸರನ್ನು ಕಡೆಯುವ ಕೋಲು, ಮಂತು. कराभ्यां घृष्यते—घृषु (संघर्षे) कर्म० "ल्युट्" (३-३-११३)। (न०) 2. ಕೈಯನ್ನು ಉಜ್ಜುವಿಕೆ. करयो: घर्षणम्।

**करङ्क ಕರಂಕ** (पु०) 1. ತೆಂಗಿನಕಾಯಿಯ ಚಿಪ್ಪು. 2. ಕಮಂಡಲು, ಸನ್ಯಾಸಿಯ ಜಲಪಾತ್ರೆ. 3. ಮರದ ಅಥವಾ ಲೋಹದ ಪಾತ್ರೆ. कीर्यते जलमत्र—कॄ (विक्षेपे) "अप्" (३-३-५७)। करमङ्कयति-अङ्क (पदे) "अण्" (३-२-१)। 4. ತಾಂಬೂಲ ಮುಂತಾದುವುಗಳ ಬುಟ್ಟಿ ಅಥವಾ ಪೆಟ್ಟಿಗೆ. 5. ತಲೆಬುರುಡೆ, ತಲೆಯೋಡು, ಕಪಾಲ, ತಲೆಯ ಚಿಪ್ಪು. "आत्तस्नाय्वान्त्रनेत्र: प्रकटितदशन: प्रेतरङ्क: करङ्कादङ्कस्थादस्थिसंस्थं स्थपुटगतमपि क्रव्यमव्यग्रमत्ति" मालती० ५-१६।

**करज ಕರಜ** (पु०) 1. ಉಗುರು, ನಖ. करे जायते—जनी (प्रादुर्भावे) "ड:" (३-२-९७)। "करजदशनचिह्नं नैशमङ्गेऽन्यनारीजनितमिति सरोषामीर्ष्ययाशङ्कमानाम्" माघ० ११-३७। 2. ಹೊಂಗೆಮರ. कं शिर: जलं वा रञ्जयति—रञ्ज (रागे) + णिच् "अण्" (३-२-१)। (न०) 3. ವ್ಯಾಘ್ರನಖವೃಕ್ಷ. ಹುಲಿಯುಗುರುಗಿಡ. करजो नखं तदिव। "करजं स्याद्व्याघ्रनखे करञ्जनखयो: पुमान्" मेदि०। (वि०) 4. ಕೈಯಲ್ಲಿ ಹುಟ್ಟಿದ.

**करञ्ज ಕರಂಜ** (पु०) ಹೊಂಗೆಮರ. कं शिर: जलं वा रञ्जयति—रञ्ज (रागे) + णिच् "अण्" (३-२-१)। स्वार्थे "कन्" (५-३-७५)। **करञ्जक: ಕರಂಜಕ:.**

**करट ಕರಟ** (पु०) 1. ಆನೆಯ ಕಪೋಲ,—ಗಂಡಸ್ಥಳ, —ಕೆನ್ನೆ. किरति मदम्—कॄ (विक्षेपे) "अटन्" (उ० ४-८१)। "कल्याणं वो विधत्तां करटमदधुनीलोलकल्लोलमालाखेलल्लोलम्बकोलाहलमुखरितदिक्चक्रवालान्तरालम्" चं० भा०। 2. ವಾಯಸ, ಕಾಗೆ. "क" इति रटति—रट (शब्दे) "अच्" (३-१-१३४)। 3. ಕುಸುಬೆಗಿಡ. 4. ನಗಾರಿ. 5. ನವಶ್ರಾದ್ಧ. (वि०) 6. ಬಹಳ ಕಷ್ಟದಿಂದ ಜೀವಿಸುವ ಮನುಷ್ಯ. 7. ಯಾವುದರಲ್ಲೂ ನಂಬಿಕೆಯಿಲ್ಲದವನು, ನಾಸ್ತಿಕ, ವೇದದೂಷಕ. (स्त्री०) **–टा –ಟಾ.** 8. ಕಷ್ಟದಿಂದ ಹಾಲು ಕರೆಯಿಸಿಕೊಳ್ಳುವ ಹಸು. स्वार्थे "कन्"। **करटक: ಕರಟಕ:.** 1. ಕಾಗೆ, ವಾಯಸ. 2. ಕರ್ಣೀಸುತ. ಚೌರ್ಯಶಾಸ್ತ್ರಪ್ರವರ್ತಕ. "कर्णीसुत: करटक: स्तेयशास्त्रप्रवर्तक:। तस्याख्यातौ सखायौ द्वौ विपुलाचलसंज्ञकौ" कादम्बरीव्याख्यानम्। "करट: करिगण्डे स्यात्कुसुम्भे निन्द्यजीविनि। काके वाद्ये दुर्दुरूटे नवश्राद्धे" हेम०। 3. ಹಿತೋಪದೇಶದಲ್ಲಿ ಬರುವ ಒಂದು ನರಿಯ ಹೆಸರು.

**करटिन् ಕರಟಿನ್** (पु०) ಗಜ, ಆನೆ. करटोऽस्यास्ति—करट "इनि:" (५-२-११५)। "दिगन्ते श्रूयन्ते मदमलिनगण्डा: करटिन:" रसगं०।

**करण ಕರಣ** (पु०) 1. ಕಾಯಸ್ಥ, ಲೇಖಕ, ಗುಮಾಸ್ತೆ. 2. ಶೂದ್ರಸ್ತ್ರೀಯಲ್ಲಿ ವೈಶ್ಯನಿಗೆ ಜನಿಸಿದ ಒಬ್ಬ ಮಿಶ್ರ ಜಾತಿಯವನು. **ಇವನ ವೃತ್ತಿ:**—"घनधान्याध्यक्षता च राजसेवा तथैव च। द्विजाते: परिचर्या च दुर्गान्त:पुररक्षणम्। एषा पारशवस्योक्ता उग्रस्य करणस्य च" परा०। (न०) 3. ವಿಷ್ಣು, ಪರಮಾತ್ಮ. डु कृञ् (करणे) कर० "ल्युट्" (३-३-११७)। ಜೀವರು ತನ್ನನ್ನು ಸೇರಲು ಪರಮಸಾಧನನಾದುದರಿಂದ ಪರಮಾತ್ಮನು ಕರಣನು. "स्वप्राप्तौ साधकतमं जीवानां करणं विदु:" इति निरुक्ति:। "करणं कारणं कर्ता विकर्ता गहनो गुह:" वि० स०। 4. ಸಾಧನ, ಸಲಕರಣೆ. 5. ಕ್ರಿಯಾನಿಷ್ಪತ್ತಿಪರ್ಯಂತ ಕಾರ್ಯಸಿದ್ಧಿಗೆ ಪರಮೋಪಕಾರಕವಾಗುವ ಕಾರಕ. डु कृञ् कर० "ल्युट्" (३-३-११७)। "दात्रेण धान्यं लुनाति" ಎಂಬಲ್ಲಿ ಧಾನ್ಯವನ್ನು ಕೊಯ್ಯಲು ಹಸ್ತಗಳು ಕಾರಣವಾದರೂ ಸಾಕ್ಷಾತ್ಕಾರಣವಾದ ದಾತ್ರವೇ (ಕುಡುಗೋಲೇ) ಕರಣವಾಗುವುದು. "साधकतमं करणम्" पा० सू० १-४-४२। "कर्तृकरणयोस्तृतीया" पा०सू० २-३-१८। "करणं कर्म कर्तेति त्रिविध: कर्मसंग्रह:" गीता १८-१८। "क्रियाया: परिनिष्पत्तिर्यद्व्यापारादनन्तरम्। विवक्ष्यते यदा यत्र करणं तत् तदा स्मृतम्"। 6. ವ್ಯಾಪಾರವುಳ್ಳ ಅಸಾಧಾರಣ ಕಾರಣ, ಹೇತು. उदा: ಘಟಕ್ಕೆ ದಂಡವು ಅಸಾಧಾರಣ ಕಾರಣ. ದಂಡದಿಂದ ಉಂಟಾಗುವ ಭ್ರಮಣರೂಪ ವ್ಯಾಪಾರದಿಂದ ಘಟೋತ್ಪತ್ತಿಯಾಗುವುದರಿಂದ ದಂಡವು ಕರಣವಾಯಿತು. 7. ತಾಳಬದ್ಧರಚನೆ, ತಾಳಬದ್ಧವಾದ ವಾದ್ಯಗಳ ತಾಡನ. ತಾಳಗಳ ನಿಯಮಕ್ಕೆ ಒಳಪಟ್ಟು ವಾದ್ಯ ತಾಡನ. "नृत्यवादित्रगीतानां प्रयोगवशभेदिनाम्।

संस्थानं ताडनं रोधः करणानि प्रचक्षते"। "शिखरासक्त-मेघानां व्यज्यन्ते यत्र वेश्मनाम्। अनुगर्जितसंदिग्धाः करणैर्मुरजस्वनाः" कुमा० ६-४०। 8. ದೇಹ, ಶರೀರ. "यस्मिन् दृष्टे करणविगमादूर्ध्वमुद्धूतपापाः संकल्पन्ते स्थिरगणपदप्राप्तये श्रद्दधानाः" मेघ० ५५। 9. ಇಂದ್ರಿಯ. ಇಂದ್ರಿಯಗಳು ಜ್ಞಾನೇಂದ್ರಿಯಗಳು ಮತ್ತು ಕರ್ಮೇಂದ್ರಿಯಗಳೆಂದು ಎರಡು ವಿಧ. [ವಿವರಕ್ಕೆ "इन्द्रिय" ಪದದಲ್ಲಿ ನೋಡಿ.] "अधिष्ठानं तथा कर्ता करणं च पृथग्विधम्" गीता १८-१४। "करणकलेबरयोगं वितरसि वृषशैलनाथ करुणे त्वम्" दयाश० १७। "नासाश्वासाधिवासेऽवरमधुनि रसज्ञा चरित्रेषु चित्तं तन्नस्तन्वङ्गि कैश्चिन्न करणहरिणैर्वागुरालङ्घितासि" नैष० ८-१०६। 10. ಲೇಖ್ಯ, ಆಧಾರ ಪತ್ರ, ದಸ್ತೈವೇಜು, ಪ್ರಮಾಣಪತ್ರ. "अर्थेऽपव्ययमानं तु करणेन विभावितम्। दापयेद्धनिकस्यार्थं दण्डलेशं च शक्तितः" मनु० ८-५१। 11. ಕ್ಷೇತ್ರ, ಭೂಮಿ, ಜಮೀನು. 12. ಚಿತ್ತ, ಮನಸ್ಸು, ಅಂತಃಕರಣ, ಬುದ್ಧಿ. "कर्तृता तदुपलम्भतोऽभवद्वृत्तिभाजि करणे यथर्त्विजि" माघ० १४-१९। 13. (ಜ್ಯೋತಿಷದಲ್ಲಿ) ತಿಥಿಯ ಅರ್ಧಭಾಗವನ್ನು ವ್ಯಾಪಿಸಿರುವ ಕಾಲವಿಶೇಷ, ಬವ, ಬಾಲವ ಮೊದಲಾದ ಹನ್ನೊಂದು ಕರಣಗಳು. (1) बवः, (2) बालवः, (3) कौलवः, (4) तैतिलः, (5) गरः, (6) वणिक्, (7) भद्रा, (8) शकुनिः, (9) चतुष्पादः, (10) नागवान् ಮತ್ತು (11) किंस्तुघ्नम् ಇವು ಹನ್ನೊಂದು ಕರಣಗಳು. ಇವುಗಳಿಗೆ ಕ್ರಮವಾಗಿ (1) इन्द्रः, (2) कमलजः, (3) मित्रः, (4) अर्यमा, (5) भूः, (6) श्रीः, (7) यमः, (8) कलिः, (9) वृषः, (10) मारुतः ಮತ್ತು (11) फणी ಇವು ಅಧಿಷ್ಠಾತೃ ದೇವತೆಗಳು. ಈ ಕರಣಗಳು ಧ್ರುವ ಮತ್ತು ಚರ ಗಳೆಂದು ಎರಡು ವಿಧ. शकुनिः, नागवान्, चतुष्पादः ಮತ್ತು किंस्तुघ्नम् ಈ ನಾಲ್ಕೂ ಧ್ರುವ ಕರಣಗಳು. बवः, बालवः, कौलवः, तैतिलः, गरः, वणिक् ಮತ್ತು भद्रा ಈ ಏಳೂ ಚರಕರಣಗಳು. ಶಕುನಿ ಮೊದಲಾದ ನಾಲ್ಕು ಧ್ರುವ ಕರಣಗಳು ಕೃಷ್ಣಚತುರ್ದಶಿಯ ಉತ್ತರಾರ್ಧದಿಂದ ಶುಕ್ಲಪ್ರತಿಪತ್ತಿನ ಪೂರ್ವಾರ್ಧದವರೆಗೂ ತಿಥಿಯೊಂದಕ್ಕೆ ಎರಡರಂತೆ ಬರುವುವು. "ध्रुवाणि शकुनिर्नागं तृतीयं तु चतुष्पदम्। किंस्तुघ्नं तु चतुर्दश्याः कृष्णायाश्चापरार्धतः" सू० सि० २-६७। ಬವ ಮೊದಲಾದ ಏಳು ಚರಕರಣಗಳು ಶುಕ್ಲಪ್ರತಿಪತ್ತಿನ ಉತ್ತರಾರ್ಧದಿಂದ ಪ್ರಾರಂಭವಾಗಿ ಕೃಷ್ಣಚತುರ್ದಶಿಯ ಪೂರ್ವಾರ್ಧದ ವರೆಗೂ ಒಂದು ತಿಥಿಯಲ್ಲಿ ಎರಡು ಕರಣಗಳಂತೆ ಒಂದು ತಿಂಗಳಲ್ಲಿ ಎಂಟೆಂಟು ಸಲ ಬರುವುವು. "भवादीनि ततः सप्त चराख्यकरणानि च। मासेऽष्टकृत्वः एकैकं करणानां प्रवर्तते" सू० सि० २-६८। (न०) 14. ಕೃತಿ, ಮಾಡುವಿಕೆ. कृतस्य करणं नास्ति। 15. ತಯಾರಿಸುವಿಕೆ, ನಿರ್ಮಾಣ. "हलस्य करणे चापि व्यादिष्टाः सर्वशिल्पिनः" भा० वन० २५६-२६। 16. ಯೋಗದ ಒಂದು ಅಂಗ; ಪದ್ಮಾಸನ ಮೊದಲಾದುದು. "आसनं करणं तस्य भेदाः पद्मासनादयः" वैज०। 17. ನೃತ್ಯದಲ್ಲಿ ಅಭಿನಯಕ್ಕಾಗಿ ಬಳಸುವ ಅಂಗಚೇಷ್ಟೆ, ಭಾವಾಭಿನಯ. "करणान्यङ्गचेष्टाः स्युः हरणं करणं समे" वैज०। 18. ಹಸ್ತಲೇಪ, ಕೈಗೆ ಬಳಿಯುವುದು, ಕೈಗೆ ಮುಲಾಮು ಮೊದಲಾದುವನ್ನು ಹಚ್ಚುವುದು. 19. ಕರಣೆಯಿಂದ ಗಾರೆ ಮೊದಲಾದುವನ್ನು ಬಳಿಯುವುದು. 20. ಸ್ಪೃಷ್ಟ ಮೊದಲಾದ ವರ್ಣೋಚ್ಚಾರಣೆಯ ಪ್ರಯತ್ನ. 21. ಧ್ಯಾನ, 22. ರತಿಕ್ರೀಡೆಯಲ್ಲಿ ಒಂದು ವಿಧವಾದ ಬಂಧ. 23. ಗಾನ, ಹಾಡುವಿಕೆ. 24. ವ್ಯಾಪಾರ, ಕಾರ್ಯ, ಕೆಲಸ. "करणं कारणे काये साधने बवकादिषु। स्पृष्टाद्युच्चारणा भेदध्यानपद्मासनादिषु। रतिबन्धे नाटचभेदे गीतके कर्मणीन्द्रिये" वैज०। "स्वराणामूष्मणां चैव विवृतं करणं स्मृतम्" पा० शि०। 25. ಮುಖಸಂಧಿಯ ಒಂದು ಅಂಗ. "उद्भेदः करणं भेदः एतान्यङ्गानि वै मुखे" सा० द० ६-८२। "करणं पुनः। प्रकृतार्थसमारम्भः" सा० द० ६-८६। (वि०) 26. ಮಾಡುವ. 27. ತಯಾರಿಸುವ, ನಿರ್ಮಾಣಮಾಡುವ.

**करणकुतूहल ಕರಣಕುತೂಹಲ** (न०) ಭಾಸ್ಕರಾಚಾರ್ಯರಿಂದ ರಚಿತವಾದ ಒಂದು ಜ್ಯೋತಿಷ ಗ್ರಂಥ.

**करणत्राण ಕರಣತ್ರಾಣ** (न०) 1. ಎಲ್ಲಾ ಇಂದ್ರಿಯಗಳಿಂದಲೂ ರಕ್ಷಿಸಲ್ಪಡುವ ಅಥವಾ ಎಲ್ಲಾ ಇಂದ್ರಿಯಗಳನ್ನೂ ರಕ್ಷಿಸುವ ಶಿರಸ್ಸು, ತಲೆ. करणैः करचरणादिभिः त्रायते—त्रैङ् (पालने) कर्म० "ल्युट्" (३-३-११३)। करणानि ज्ञानकर्मेन्द्रियाणि त्रायन्तेऽनेन — त्रैङ् कर० "ल्युट्" (३-३-११७) वा।

**करणव्यापार ಕರಣವ್ಯಾಪಾರ** (पु०) ಇಂದ್ರಿಯಗಳ ವ್ಯಾಪಾರ, ಇಂದ್ರಿಯಗಳು ಮಾಡುವ ಕೆಲಸ. करणानां व्यापारः।

**करणाधिप ಕರಣಾಧಿಪ** (पु०) 1. ಇಂದ್ರಿಯಗಳಿಗೆ ಒಡೆಯನಾದ ಜೀವ, ಜೀವಾತ್ಮ. 2. ಇಂದ್ರಿಯಗಳ ಅಧಿಷ್ಠಾತೃ ದೇವತೆ. "इन्द्रियाधिष्ठातृ" ಪದದಲ್ಲಿ ನೋಡಿ.

**करणिन् ಕರಣಿನ್** (पुं०) 1. ಇಂದ್ರಿಯಗಳಿಂದ ಕೂಡಿದ ಜೀವ. करणान्यस्य सन्ति "इनिः" (५-२-११५)। 2. ಸಾಧನಗಳನ್ನು ಹೊಂದಿರುವ, ಸಲಕರಣೆಗಳಿಂದ ಕೂಡಿದ.

**करणीय ಕರಣೀಯ** (वि०) ಅವಶ್ಯವಾಗಿ ಮಾಡಲ್ಪಡಬೇಕಾದ. ಅವಶ್ಯವಾಗಿ ಮಾಡಬೇಕಾದ. डु कृञ् (करणे) कर्म० "अनीयर्" (३-१-९६)। "आत्मनैव गुणदोषकोविदः किं न वेत्ति करणीयवस्तुषु" माघ० १४-५४।

**करण्ड ಕರಂಡ** (पुं०) 1. ಜೇನುಗೂಡು. डु कृञ् (करणे) कर्म० "अण्डन्" (उ० १-१२६)। 2. ಖಡ್ಗ, ಕತ್ತಿ. 3. ಹಂಸದ ಒಂದು ಭೇದ. 4. ಬುಟ್ಟಿ, ಪೆಟ್ಟಿಗೆ. "मन्नाशस्य करण्डपिण्डिततनोः म्लानेन्द्रियस्य क्षुधा" भर्तृ० १-८२। 5. ಬಿದಿರು ಬೆತ್ತ ಮೊದಲಾದುವುಗಳಿಂದ ನಿರ್ಮಿತವಾದ ಬುಟ್ಟಿ. ಹೂವು ವೀಳ್ಯದೆಲೆ ಮುಂತಾದುವನ್ನು ಇಡುವ ಬುಟ್ಟಿ. स्वार्थे "कन्"। **करण्डकः ಕರಂಡಕಃ** "शुष्कवनलतानिर्मितमहाकुसुमकरण्डकेन" काद०। 6. ಭರಣಿ, ಡಬ್ಬಿ. "दीपभाजनभ्रमरकरण्डकप्रभृत्यनेकोपकरणयुक्तः" दशकु०।

**करण्डिन् ಕರಂಡಿನ್** (पुं०) ಮತ್ಸ್ಯ, ಮೀನು. करण्डस्तदाकारोऽस्यास्ति "इनिः" (५-२-११५)। "करण्डी तु जलेशयः। आतमाशी शम्बरो मूकः" त्रिकाण्ड०।

**करतल ಕರತಲ** (न०) ಹಸ್ತದ ಒಳಭಾಗ, ಅಂಗೈ. करस्य तलम्। "वर्म करतलयुगेन महत्तनुचूर्णपेषमपिबद्गृषापरः" माघ० १५-७६।

**करतलामलक ಕರತಲಾಮಲಕ** (न०) 1. ಅಂಗೈಯಲ್ಲಿರುವ ನೆಲ್ಲಿಕಾಯಿ. करतले आमलकम्। (वि०) 2. ಅಂಗೈಯಲ್ಲಿರುವ ನೆಲ್ಲಿಕಾಯಿಯಂತೆ ಸ್ಪಷ್ಟವಾಗಿ ಕಾಣುವ.

**करताल ಕರತಾಳ** (पुं०) 1. ಚಪ್ಪಾಳೆ, ಎರಡು ಕೈಗಳನ್ನು ತಟ್ಟುವಿಕೆ. (न०) 2. ಝುಲ್ಲರಿಯೆಂಬ ಒಂದು ವಾದ್ಯ. करेण तालो यस्य। "शिवागारे झल्लकं च सूर्यागारे च शङ्खकम्। दुर्गागारे वंशवाद्यं मधुरीं च न वादयेत्"।

**करताली ಕರತಾಳೀ** (स्त्री०) ಝುಲ್ಲರಿಯೆಂಬ ಒಂದು ವಾದ್ಯ. करेण तालो यस्याः। गौरा० "ङीष्" (४-१-४१)। "कर्यिः करताली स्यात्" त्रिकाण्ड०।

**करतोया ಕರತೋಯಾ** (स्त्री०) ಯಾವಾಗಲೂ ನೀರು ಹರಿಯುತ್ತಿರುವ ಒಂದು ನದಿ, ಒಂದು ಜೀವನದಿ. करतोयं हरपार्वतीविवाहच्युतजलमस्त्यस्याः "अच्" (५-२-१२७)। ಪಾರ್ವತೀಪರಮೇಶ್ವರರ ವಿವಾಹಸಮಯದಲ್ಲಿ ಧಾರೆಯೆರೆದ ನೀರು ಪರಮೇಶ್ವರನ ಕೈಯಿಂದ ಬಿದ್ದು ಈ ನದಿಯಾಗಿ ಹೊರಟಿರುವುದರಿಂದ ಈ ಹೆಸರು. ಈ ನದಿಯು ವಂಗ ಮತ್ತು ಕಾಮರೂಪದೇಶಗಳ ಮಧ್ಯೆ ಹರಿಯುವುದು. "प्रथमं कर्कटे देवी त्र्यहं गङ्गा रजस्वला। सर्वा रक्तवहा नद्यः करतोयाम्बुवाहिनी"। ಎಂದು ಸ್ಮೃತಿಯಲ್ಲಿ ಉಕ್ತವಾಗಿರುವುದರಿಂದ ಇತರ ನದಿಗಳಂತೆ ಆ ಕಾಲದಲ್ಲಿ ರಜಸ್ವಲಾದೋಷವಿಲ್ಲದಿರುವುದರಿಂದಲೂ ಯಾವಾಗಲೂ ನೀರು ಹರಿಯುತ್ತಿರುವುದರಿಂದಲೂ ಈ ನದಿಗೆ ಈ ಹೆಸರು. "करतोयां समासाद्य त्रिरात्रोपोषितो नरः। अश्वमेधमवाप्नोति प्रजापतिकृतो विधिः" भा० वन० ८३-३।

**करद ಕರದ** (वि०) 1. ಕೈಯನ್ನು ಕೊಡುವವನು, ರಕ್ಷಣೆಗಾಗಿ ಕೈನೀಡುವವನು. 2. ಕಂದಾಯ ಕೊಡುವವನು, ತೆರಿಗೆಯನ್ನು ಕೊಡುವವನು. करं हस्तं राजस्वं वा ददाति — डु दाञ् (दाने) "कः" (३-२-४)। "य इमे पृथिवीपालाः करदास्तव पार्थिव" भा० वन० २५६-१७।

**करद्रुम ಕರದ್ರುಮ** (पुं०) ಕಾರೆಗಿಡ. किरति समन्तात् शाखाः। करश्चासौ द्रुमश्च।

**करधृत ಕರಧೃತ** (वि०) ಕೈಯಿಂದ ಹಿಡಿಯಲ್ಪಟ್ಟ. करेण धृतः। "तस्याः किञ्चित्करधृतमिव प्राप्तवानीरशाखं नीत्वा नीलं सलिलवसनं मुक्तरोधोनितम्बम्" मेघ० १-४१।

**करनिहित ಕರನಿಹಿತ** (वि०) ಕೈಯಲ್ಲಿ ಇಡಲ್ಪಟ್ಟ. करे निहितः।

**करन्धम ಕರಂಧಮ** (पुं०) ಇಕ್ಷ್ವಾಕುವಂಶದ ಒಬ್ಬ ದೊರೆ, ಖನೀನೇತ್ರನೆಂಬ ಒಬ್ಬ ರಾಜನ ಮಗ. "विविंशतिसुतो राजा खनीनेत्रोऽस्य धार्मिकः। करन्धमो महाराज तस्यासीदात्मजो नृप" भाग० ९-२-२५। ಇವನಿಗೆ "ಸುವರ್ಚಸ್ಸು" ಎಂಬ ಹೆಸರು. ಒಂದು ಸಲ ಇವನು ಶತ್ರುಗಳನ್ನು ಜಯಿಸಲು ತನ್ನ ಕೈಯನ್ನು ಕೊಡವಿ ಸೈನ್ಯವನ್ನು ಸೃಷ್ಟಿಸಿದುದರಿಂದ ಇವನಿಗೆ "ಕರಂಧಮ"ನೆಂಬ ಹೆಸರು ಬಂದಿತು. ವೀರೆಯೆಂಬುವಳು ಇವನ ಪತ್ನಿ. ಅವಿಕ್ಷಿತನೆಂಬುವನು ಇವನ ಮಗ.

**करन्यास ಕರನ್ಯಾಸ** (पुं०) ತಂತ್ರದಲ್ಲಿ ಹೇಳಿರುವಂತೆ ಆಯಾ ಮಂತ್ರಪೂರ್ವಕ ಅಂಗುಷ್ಠ ಮೊದಲಾದ ಬೆರಳುಗಳನ್ನು ಸ್ಪರ್ಶಿಸುವುದು. करे करावयवे न्यासः।

**करपत्र ಕರಪತ್ರ** (न०) 1. ಮರವನ್ನು ಕೊಯ್ಯುವ ಗರಗಸ, ರಂಪ. करात् पतति — पत्लृ (गतौ) "ष्ट्रन्" (उ० ४-१५८)। "स्फुटं स पत्त्रैः करपत्त्रमूर्तिभिः वियोगिहृद्दारुणि दारुणायते" नैष० १-८०। 2. ಜಲಕ್ರೀಡೆ. करावेव पत्त्रं वाहनं यत्र। ಜಲಕ್ರೀಡೆಯಲ್ಲಿ ಕೈಗಳಿಂದಲೇ ನೀರನ್ನೆರಚುವುದರಿಂದ ಈ ಹೆಸರು.

**करपत्रवत् ಕರಪತ್ರವತ್** (पुं०) ತಾಳೆಗಿಡ. करपत्रं तदाकारः पत्रवृन्तोऽस्त्यस्य "मतुप्" (५-२-९४)। मस्य वः (८-२-९)।

**करपत्रिका ಕರಪತ್ರಿಕಾ** (स्त्री०) ಜಲಕ್ರೀಡೆ. करौ पत्र (वाहन) मिव अस्याः "कप्"। अत इत्वम्।

**करपल्लव ಕರಪಲ್ಲವ** (पुं०) 1. ಬೆರಳು. करस्य पल्लव इव। 2. ಚಿಗುರಿನಂತಿರುವ ಕೈ. करः पल्लव इव। "हरिवीक्षणाक्षणिकचक्षुषान्यया करपल्लवेन गलदम्बरं दधे" माघ० १३-४४।

**करपात्र ಕರಪಾತ್ರ** (नं०) 1. ಜಲಕ್ರೀಡೆ. करः पात्रमिव यत्र। "करपात्रं जलक्रीडा व्यात्युक्षिः करपत्रिका" हारा०। 2. ಹಸ್ತರೂಪವಾದ ಪಾತ್ರೆ, ಹಸ್ತವೆಂಬ ಪಾತ್ರೆ. "करपात्रे स्थिते तोये कृत्वा मूत्रपुरीषके। आसुरं तद्भवेत्तोयं पीत्वा चान्द्रायणं चरेत्"।

**करपाल ಕರಪಾಲ** (पुं०) 1. ಕೈಯನ್ನು ರಕ್ಷಿಸುವ ಖಡ್ಗ. करं पालयति—पाल (रक्षणे) + णिच् "अण्" (३-२-१)। 2. ತೆರಿಗೆ ಇಲಾಖೆಯ ಮುಖ್ಯಾಧಿಕಾರಿ. "ण्वुल्" (३-१-१३३)। **-पालकः -ಪಾಲಕಃ.** स्त्रियां "टाप्" (४-१-४)। अत इत्वम् (७-३-४४)। **-पालिका -ಪಾಲಿಕಾ.** 1. ಈಳಿಗೆ ಮಣೆಯ ಕತ್ತಿ, ಒಂದೇ ಕಡೆ ಅಲುಗುಳ್ಳ ಸಣ್ಣಕತ್ತಿ. 2. ಚಿಕ್ಕ ಗದೆಯಂತಿರುವ ಮರದ ಕೋಲು ಅಥವಾ ಮರದ ಕತ್ತಿ.

**करपीडन ಕರಪೀಡನ** (नं०) ವಿವಾಹ, ಮದುವೆ. करस्य वधूहस्तस्य पीडनं ग्रहणं यत्र। "सुतपरिणयात्षण्मासान्तः सुताकरपीडनं न च निजकुले तद्वद्वा मण्डनादपि मुण्डनम्" मु० चि०।

**करपुट ಕರಪುಟ** (पुं०) ಕೈಮುಗಿಯಲು ಜೋಡಿಸಲ್ಪಟ್ಟ ಹಸ್ತಗಳು. **-अञ्जलिः -ಅಂಜಲಿಃ.** ಕೈಮುಗಿಯಲು ಜೋಡಿಸಲ್ಪಟ್ಟ ಎರಡು ಕೈಗಳ ಬೊಗಸೆ.

**करपुटी ಕರಪುಟೀ** (स्त्री०) ಬೊಗಸೆ, ಜೋಡಿಸಲ್ಪಟ್ಟ ಹಸ್ತಗಳು.

**करपृष्ठ ಕರಪೃಷ್ಠ** (नं०) ಕೈಯ ಹಿಂಭಾಗ. करस्य पृष्ठम्।

**करप्रचेय ಕರಪ್ರಚೇಯ** (वि०) 1. ಕೈಯಿಂದ ತೆಗೆದುಕೊಳ್ಳಲು ಅರ್ಹವಾದ. करेण प्रचेया। "करप्रचेयामुत्तुङ्गः प्रभुशक्तिं प्रथीयसीम्" माघ० २-८९। 2. ತೆರಿಗೆಯಿಂದ ಹೆಚ್ಚಿಸಲ್ಪಡುವ, ಕಂದಾಯದಿಂದ ಅಭಿವೃದ್ಧಿಪಡಿಸಲ್ಪಡುವ.

**करप्रद ಕರಪ್ರದ** (वि०) 1. ಕೈಯನ್ನು ಕೊಡುವ. 2. ತೆರಿಗೆಯನ್ನು ಕೊಡುವ. करं प्रददाति—प्र + डु दाञ् (दाने) "कः" (३-२-४)।

**करबदर ಕರಬದರ** (नं०) 1. ಕೈಯಲ್ಲಿರುವ ಎಲಚಿ (ಬೋರೆ) ಹಣ್ಣು. करे बदरम्। "करबदरसमानं प्रेक्ष्य दृष्ट्या प्रतीच्या" चं० रा०। (वि०) 2. ಕೈಯಲ್ಲಿರುವ ಬೋರೆ ಹಣ್ಣಿನಂತೆ (ಎಲ್ಲಾ ಭಾಗಗಳಲ್ಲೂ) ಸ್ಪಷ್ಟವಾಗಿ ಕಾಣುವ. करे बदरमिव।

**करभ ಕರಭ** (पुं०) 1. ಮಣಿಕಟ್ಟಿನಿಂದ ಕಿರುಬೆರಳವರೆಗಿನ ಹಸ್ತದ ಹೊರಭಾಗ, ಮುಂಗೈ ಮೊದಲುಗೊಂಡು ಕಿರುಬೆರಳವರೆಗಿನ ಕೈಯ ಹೊರಭಾಗ. किरत्यनेन — कॄ (विक्षेपे) "अभच्" (उ० ३-१२२)। "सा चूर्णगौरं रघुनन्दनस्य धात्रीकराभ्यां करभोपमोरूः" रघु० ६-८३। 2. ಆನೆಯ ಮರಿ. 3. ಉಷ್ಟ್ರ, ಒಂಟೆ. 4. ಒಂಟೆಯ ಮರಿ. "संविव्युरम्बरविकाशि चमूसमुत्थं पृथ्वीरजः करभकण्ठकडारमाशाः" माघ० ५-३। स्त्रियां "ङीष्" (४-१-६३)। **करभी ಕರಭೀ.** 5. ಖರ, ಗರ್ದಭ, ಕತ್ತೆ. "करभोऽपि खरोष्ट्रयोः" वैज०। "करभो मणिबन्धादिकनिष्ठान्तोष्ट्रतत्सुते" मेदि०। 6. ಹೇಸರಗತ್ತೆ. स्त्रियां "ङीष्"। **करभी ಕರಭೀ.** "क्षिप्तावरोधाङ्गनमुत्पथेन गां विलङ्घ्य लघ्वीं करभी बभञ्जतुः" माघ० १२-२४। (नं०) 7. ನಖಿಯೆಂಬ ಒಂದು ಗಂದಿಗರ ವಸ್ತು, ಒಂದು ಸುಗಂಧವಸ್ತು. 8. ಹಸ್ತನಕ್ಷತ್ರ. स्वार्थे "कन्"। **करभकः ಕರಭಕಃ.** स्त्रियां "टाप्" (४-१-४)। **करभिका ಕರಭಿಕಾ.**

**करभकाण्डिका ಕರಭಕಾಂಡಿಕಾ** (स्त्री०) ಒಂಟೆಗೆ ಪ್ರಿಯವಾದ ಉಷ್ಟ್ರಕಾಂತಿಯೆಂಬ ಗಿಡ.

**करभवल्लभ ಕರಭವಲ್ಲಭ** (पुं०) 1. ಗೋನು ಮರ. 2. ಬೇಲದ ಮರ. करभस्य गजपोतस्य वल्लभः।

**करभिन् ಕರಭಿನ್** (पुं०) ಗಜ, ಆನೆ. करभः करावयवः, तदाकारा शुण्डास्त्यस्य "इनिः" (५-२-११५)।

**करभीर ಕರಭೀರ** (पुं०) ಸಿಂಹ. करभिणमीरयति पलायनाय प्रेरयति — ईर (गतौ कम्पने च) + णिच् "अण्" (३-२-१)।

**करभूषण ಕರಭೂಷಣ** (नं०) ಹಸ್ತಾಭರಣ, ಕಂಕಣ, ಬಳೆ. करस्य भूषणम्।

**करभोरू ಕರಭೋರೂ** (स्त्री०) ಕರಭದಂತೆ ಸುಂದರವಾದ ತೊಡೆಯುಳ್ಳ, ಉತ್ತಮಜಾತಿಯ ಹೆಂಗಸು. "करभाविव

ऊरू यस्याः "ऊङ्" (४-१-६९)। "उपेक्षितेक्षोः करभाच्छमीरतादुरुं वदे त्वां करभोरु भोरिति" नैष० ९-४३। अमरु० ७१।

**करमट्ट ಕರಮಟ್ಟ** (पु०) ಗುವಾಕವೃಕ್ಷ, ಅಡಕೆಮರ. करं हस्तिशुण्डां अट्टति—अट्ट (अनादरे) बाहु० "खच्" मुमागमः। "करमट्टस्तन्तुसारो गुवाकः कोट इत्यपि" त्रिकाण्ड०।

**करमरिन् ಕರಮರಿನ್** (पु०) ಕೈದಿ, ಸೆರೆಹಿಡಿಯಲ್ಪಟ್ಟ ಅಪರಾಧಿ, ಬಂದಿ, ಸೆರೆಯಾಳು. करः कारागारः, तस्मिन् मरः मरणवत् यातनास्त्यस्य "इनिः" (५-२-११५)। "उपग्रहस्तु ग्राहः स्यात् बन्दी करमरीत्यपि" त्रिकाण्ड०।

**करमर्द ಕರಮರ್ದ** (पु०) ಕಮರಿಕೆ ಗಿಡ. करं मृद्नाति—मृद (क्षोदे) "अण्" (३-२-१)। स्वार्थे "कन्" (५-३-७५)। **-मर्दकः -ಮರ್ದಕಃ.** "णिनिः" (३-२-७८)। **-मर्दिन् -ಮರ್ದಿನ್.**

**करमाल ಕರಮಾಲ** (पु०) ಧೂಮ, ಹೊಗೆ. करः हस्तिशुण्डादण्ड इव मालाऽस्य।

**करमाला ಕರಮಾಲಾ** (स्त्री०) ಜಪಮಾಡುವಾಗ ಎಣಿಕೆಗಾಗಿ ಉಪಯೋಗಿಸುವ ಕೈಬೆರಳ ಗಿಣ್ಣುಗಳ ಮಾಲೆ. (ಮಾಲೆಯಂತಿರುವ ಕೈಬೆರಳುಗಳ ಗಿಣ್ಣುಗಳು). करः कराङ्गुलिपर्व मालेव। "आरभ्यानामिकामध्यं दक्षिणावर्तयोगतः (कनिष्ठादित एव च)। तर्जनीमूलपर्यन्तं करमाला प्रकीर्तिता (दशपर्वसु संजपेत्)"। ಅನಾಮಿಕೆಯ ಮಧ್ಯದ ಗಿಣ್ಣಿನಿಂದ ಪ್ರಾರಂಭಿಸಿ ಪ್ರದಕ್ಷಿಣವಾಗಿ ತರ್ಜನೀಬೆರಳ ಕೆಳಗಿನ ಗಿಣ್ಣಿನವರೆಗೆ ಎಣಿಸುವುದರಿಂದ ಕರಮಾಲೆಯಾಯಿತು. ಜಪಮಾಡುವಾಗ ಬೆರಳುಗಳಲ್ಲಿ ಮಾಲಾಕಾರವಾಗಿ ಎಣಿಸುವ ಪದ್ಧತಿ.

**करमुक्त ಕರಮುಕ್ತ** (न०) ಕೈಯಲ್ಲಿ ಹಿಡಿದು ವೇಗವಾಗಿ ಎಸೆಯಲ್ಪಡುವ ಒಂದು ಆಯುಧ. करे धृत्वा मुच्यते—मुच्लृ (मोक्षणे) "क्तः" (३-२-१०२)।

**करम्ब ಕರಂಬ** (पु०) 1. ಮಿಶ್ರಣ, ಬೆರಕೆ. डु कृञ् (करणे) भावे "अम्बच्" (उ० ४-८२)। 2. ಮೊಸರಿನಲ್ಲಿ ಕಲಸಿದ ಅನ್ನ. "करम्बः सेकमिश्रान्ने" वैज०। (वि०) 3. ಮಿಶ್ರಿತವಾದ, ಬೆರಸಲ್ಪಟ್ಟ. कर्म० "अम्बच्"।

**करम्बित ಕರಂಬಿತ** (वि०) ಮಿಶ್ರವಾದ, ಬೆರಕೆಯುಂಟಾಗಿರುವ. करम्बोऽस्य सञ्जातः "इतच्" (५-२-३६)। "क्रियाः प्रियाया ललितैः करम्बिता वितर्कयन्नित्यमलीकमालपत्" नैष० ९-१०२।

**करम्भ ಕರಂಭ** (पु०) 1. ಮೊಸರಿನಲ್ಲಿ ಕಲಸಿದ ಹುರಿಹಿಟ್ಟು. केन जलेन रम्यते—रभ (राभस्ये) "घञ्" (३-३-१९) "करम्भा दधिसक्तवः" अम०। 2. ಹುರಿಯಲ್ಪಟ್ಟ ಧಾನ್ಯ. "करम्भवालुकातापान् कुम्भीपाकांश्च दारुणान्" मनु० १२-७६। 3. ಬೆರಕೆ ವಾಸನೆ. "करम्भपूतिसौरस्य शान्तोग्राम्लादिभिः पृथक्" भाग० ३-२६-४५। स्वा "कन्"। **करम्भकः ಕರಂಭಕಃ.**

**करम्भा ಕರಂಭಾ** (स्त्री०) 1. ಶತಾವರಿ ಗಿಡ. 2. ಪ್ರೇಂಕ ಗಿಡ. राजनि०। 3. ಪುರುವಂಶದ ಅಕ್ರೋಧನನ ಪತ್ನಿ

**करम्भि ಕರಂಭಿ** (पु०) ಯದುವಂಶದ ಒಬ್ಬ ದೊರೆ "करम्भिः शकुनेः पुत्रः देवरातस्तदात्मजः" भाग० ९-२४-५।

**करुह ಕರರುಹ** (पु०) 1. ನಖ, ಉಗುರು. करे रोहति—रुह (बीजजन्मादौ) "कः" (३-१-१३५)। "अनाघ्रातं पुष्पं किसलयमलूनं कररुहैरनाविद्धं रत्नं मधु नवमनास्वादितरसम्" शाकु० २-१०। (वि०) 2. ಕೈಯಲ್ಲಿ ಬೆಳೆದಿರುವ.

**करर्द्धि ಕರರ್ದ್ಧಿ** (स्त्री०) 1. ಕಂಚಿನ ಕೈತಾಳ, ಕೈಯಿಂದ ಕುಟ್ಟುವ ತಾಳ, ಝಲ್ಲರಿ. करे ऋद्धिर्यत्र। 2. ಹಸ್ತ ಸಂಪತ್ತು. "करर्द्धिः करताली स्यात्" त्रिकाण्ड०।

**करवाल ಕರವಾಳ** (पु०) ಖಡ್ಗ, ಕತ್ತಿ. करं वलति—वल (संवरणे) "अण्" (३-२-१)। "हसितुं परेण परित परिस्फुरत्करवालकोमलरुचावुपेक्षितैः" माघ० १३-६०

**करवी ಕರವೀ** (स्त्री०) ಹಿಂಗುಪತ್ರ, ಹಿಂಗಿನ ಎಲೆ. करः वायोः रवोऽत्र। गौरा० "ङीष्" (४-१-४१)। "जतुक हिंगुरामठम्। पत्रेऽस्य करवी बाष्पी" वैज०।

**करवीर ಕರವೀರ** (पु०) 1. ಖಡ್ಗ, ಕತ್ತಿ. करं वीरयति—वीर (विक्रान्तौ) + णिच् "अण्" (३-२-१) 2. ಗನ್ನೇರಳೆ ಗಿಡ. 3. ಒಬ್ಬ ದೈತ್ಯ. "करवीरः कृपाणे स्याद्दैत्यभेदाश्वमारयोः" मेदि०। 4. ಒಂದು ಸರ್ಪ "करवीरः पुष्पदंष्ट्रो बिल्वाको बिल्वपाण्डुरः। मूषकाद शंखशिराः पूर्णभद्रो हरिद्रकः" भा० आदि० २५-१२ 5. ದೃಷದ್ವತೀನದಿಯ ತೀರದಲ್ಲಿರುವ ಒಂದು ಪಟ್ಟಣ ಚಂದ್ರಶೇಖರ ರಾಜನ ರಾಜಧಾನಿ. 6. ಮೇರು ಪರ್ವತದ ದಕ್ಷಿಣದಲ್ಲಿರುವ ಒಂದು ಪರ್ವತ. "एवमपरेण पवनपारियात्रौ दक्षिणेन कैलासकरवीरौ प्रागायतावेवमुत्तरत त्रिश्रृङ्गमकरावष्टभिरेतैः परिसृतोऽग्निरिव परितश्च कास्ति काञ्चनगिरिः" भाग० ५-१६-२७। स्वा

"कन्"। **–वीरक: –ವೀರಕಃ.** "करवीर" ಪದದ ಅರ್ಥ. ಮತ್ತು 1. ಮತ್ತಿ ಮರ. करवीर इव कायति। 2. ಖಡ್ಗ, ಕತ್ತಿ. करं वीरयति – वीर "ण्वुल्" (३-१-१३३)। (स्त्री०) **–वीरा –ವೀರಾ.** ಕೆಂಪು ಮಣಶಿಲೆ. **–वीरिका –ವೀರಿಕಾ.** ತೊಗರಿ. "आढकी तुवरी वल्ला सौराष्ट्री करवीरिका" वैज०।

**करवीरपुर ಕರವೀರಪುರ** (न०) ಮಹಾಲಕ್ಷ್ಮಿಯ ವಾಸಸ್ಥಾನವಾದ ಕೊಲ್ಲಾಪುರ.

**करवीरी ಕರವೀರೀ** (स्त्री०) 1. ಅದಿತಿ. 2. ಶ್ರೇಷ್ಠವಾದ ಹಸು. 3. ಪುತ್ರವತಿಯಾದ ಹೆಂಗಸು. करः सुखप्रदः वीरः पुत्रो यस्याः। "करवीर्यदितिश्रेष्ठगवीपुत्रवतीषु च" मेदि०।

**करवीर्य ಕರವೀರ್ಯ** (पु०) ಆಯುರ್ವೇದಜ್ಞಾನ ಸಂಪಾದನೆಗಾಗಿ ಧನ್ವಂತರಿಯನ್ನು ಪ್ರಶ್ನಿಸಿದ ಒಬ್ಬ ಋಷಿ. "काशिराजं दिवोदासं धन्वन्तरिमौपधेनववैतरणौरभ्रपौष्कलावतकरवीर्यगोपुररक्षितसुश्रुतप्रभृतयः ऊचुः" सुश्रुत० सूत्र० १-३।

**करशाखा ಕರಶಾಖಾ** (स्त्री०) ಬೆರಳು. करस्य शाखेव।

**करशीकर ಕರಶೀಕರ** (पु०) ಆನೆಯ ಸೊಂಡಿಲಿನಿಂದ ಹೊರಟ ನೀರಿನ ತುಂತುರು. करस्य शीकरः। "उद्यन्तमग्निं शमयाम्बभूवुर्गजा विविग्नाः करशीकरेण" रघु० ७-४८।

**करशुद्धि ಕರಶುದ್ಧಿ** (स्त्री०) "फट्" ಮಂತ್ರ, ಮತ್ತು ಪುಷ್ಪಗಳಿಂದ ಮಾಡುವ ಹಸ್ತಶುದ್ಧಿ. करस्य शुद्धिः शोधनम्। "आदावृष्यादिकन्यासः करशुद्धिस्ततःपरम्" तन्त्रसा०।

**करशूक ಕರಶೂಕ** (पु०) ನಖ, ಉಗುರು. करस्य शूकः सूचीव। "नखः पुनर्भवः कामांकुशः करकण्टकः। करेटुः करशूकश्च" त्रिकाण्ड०।

**करस्थ ಕರಸ್ಥ** (वि०) 1. ಕೈಯಲ್ಲಿರುವ. 2. ಸ್ವಾಧೀನವಾಗಿರುವ. करे तिष्ठति – ष्ठा (गतिनिवृत्तौ) "कः" (३-२-४)।

**करसूत्र ಕರಸೂತ್ರ** (न०) ಕಂಕಣ, ವಿವಾಹ ಮುಂತಾದ ಶುಭಕಾರ್ಯಗಳಲ್ಲಿ ಕೈಗೆ ಕಟ್ಟುವ ಮಂಗಳ ಸೂತ್ರ. करस्य सूत्रम्।

**करहाट ಕರಹಾಟ** (पु०) 1. ತಾವರೆಯ ಗೆಡ್ಡೆ. करं हाटयति – हट (दीप्तौ) + णिच् "अण्" (३-२-१)। 2. ಪದ್ಮ ಮೊದಲಾದ ಪುಷ್ಪ. करैः सूर्यकिरणैः हाट्यते हट कर्म० "घञ्" (३-३-१९)। 3. ಮಂಗಾರೆ ಗಿಡ.

**करहाटक ಕರಹಾಟಕ** (पु०) 1. ಮಂಗಾರೆ ಗಿಡ. करं हाटयति–हट (दीप्तौ) + णिच् "ण्वुल्" (३-१-१३३)। 2. ಒಂದು ದೇಶ. "नगरीं संजयन्तीं च पाषण्डं करहाटकम्" भा० सभा० ३२-७२।

**कराङ्गण ಕರಾಂಗಣ** (न०) 1. ತೆರಿಗೆಯನ್ನು ತೆಗೆದುಕೊಳ್ಳುವ ಜಾಗ. करस्य राजस्वादानस्याङ्गणम्। 2. ಮಾರುಕಟ್ಟೆ. ಅನೇಕ ಜನರಿಂದ ನಿಬಿಡವಾದ (ತುಂಬಿದ) ಅಂಗಡಿಬೀದಿ. "बहुमानुषसंकीर्णं निर्घटं च कराङ्गणम्" हारा०।

**करामर्द ಕರಾಮರ್ದ** (पु०) ಕರಮಂಡಿಗೆ ಗಿಡ. करमामृद्नाति – आ + मृद (क्षोदे) "अण्" (३-२-१)।

**कराम्बुक ಕರಾಂಬುಕ** (पु०) ಕರಮಂಡಿಗೆ ಗಿಡ. करं कीर्यमाणमम्बु यस्मात्। "कप्" (५-४-१५४)।

**करारोट ಕರಾರೋಟ** (पु०) ಅಂಗುಳೀಯಕ, ಉಂಗುರ. करे आरोटते – आ + रुट (प्रतिघाते) "अच्" (३-१-१३४)। "करारोटोऽङ्गुलीटः स्यात्" त्रिकाण्ड०।

**कराल ಕರಾಳ** (पु०) 1. ಸರ್ಜರಸಯುಕ್ತವಾದ ತೈಲ, ಮತ್ತಿ ಹಾಲಿನೊಡನೆ ಬೆರೆತ ಎಣ್ಣೆ. कराय विक्षेपाय अलति पर्याप्नोति – अल (भूषणादौ) "अच्" (३-१-१३४)। 2. ಎಣ್ಣೆ ಅಥವಾ ತುಪ್ಪದಲ್ಲಿ ಪಕ್ವವಾದ ಸಂಬಾರ. "तप्तस्नेहे पचेत् पूर्वं वेशवारकसंज्ञकम्। पाकप्रापितसौरभ्यं करालं सूदकर्मतम्"। 3. ಜನಕ ಮಹಾರಾಜನ ವಂಶದ ಒಬ್ಬ ದೊರೆ; [ಮಹಾಜ್ಞಾನಿಯಾದ ಈತನು ವಸಿಷ್ಠ ಮಹರ್ಷಿಯೊಡನೆ ಕ್ಷರಾಕ್ಷರ ವಿಚಾರವಾಗಿ ಸಂವಾದ ಮಾಡಿದನು]. 4. ಒಬ್ಬ ದೈತ್ಯ. "ससृमः कालवदनः करालः कौशिकः शरः" हरिवं०। 5. ಕಸ್ತೂರಿ ಮೃಗ. "एणहरिणर्क्षकुरङ्गकरालकृतमालशरभश्वदंष्ट्रा पृषतचारुष्क मृगमातृकाप्रभृतयो जङ्घालाः मृगाः कषाया मधुराः लघवः वातपित्तहराः तीक्ष्णाः हृद्याः बस्तिविशोधनाश्च" सुश्रुत० सूत्र० ४६-५४। 6. ಒಂದು ದಂತರೋಗ. "शनैः शनैर्विकुरुते वायुर्दन्तसमाश्रितः। करालान् विकृतान् दन्तान् करालो न स सिध्यति"। 7. ಕೃಷ್ಣತುಲಸಿ. (वि०) 8. ಉನ್ನತವಾದ, ಎತ್ತರವಾದ. 9. ಉನ್ನತವಾದ ಹಲ್ಲುಗಳುಳ್ಳವನು, ಉಬ್ಬಿದ ಹಲ್ಲುಗಳುಳ್ಳವನು. 10. ಭಯಂಕರವಾದ. "वपुर्महोरगस्येव करालफणमण्डलम्" रघु० १२-९८। स्वार्थे "कन्"। **करालकः ಕರಾಳಕಃ.**

**करालकर ಕರಾಳಕರ** (वि०) 1. ಭಯಂಕರವಾದ ತೋಳುಗಳುಳ್ಳವನು. 2. ಭಯಂಕರವಾದ (ಉದ್ದವಾದ) ಸೊಂಡಿಲುಳ್ಳ (ಆನೆ).

**करालभैरव ಕರಾಳಭೈರವ** (न०) ಒಂದು ತಂತ್ರದ ಹೆಸರು. "करालभैरवं चापि यामलं वाममाश्रितम्। एवंविधानि चान्यानि मोहनार्थानि यानि तु। मया सृष्टानि चान्यानि मोहायैषां भवार्णवे" कूर्मपु०।

**करालम्ब ಕರಾಲಂಬ** (पु०) 1. ಕೈನೀಡುವಿಕೆ, ಆಸರೆ, ಸಾಹಾಯ್ಯ, ಆಶ್ರಯ, ಒತ್ತಾಸೆ. करस्यालम्बः। "स्खलतो हि करालम्बः सुहृत्सचिवचेष्टितम्" हितो० ३-१३४। **-आलम्बनम् -ಆಲಂಬನವ್, -अवलम्बः -ಅವಲಂಬಃ, -अवलम्बनम् -ಅವಲಂಬನವ್.** 2. ಕೈ ನೀಡಿ ಒತ್ತಾಸೆ ಕೊಡುವಿಕೆ, ಆಶ್ರಯ ಕೊಡುವಿಕೆ, ಸಾಹಾಯ್ಯ ಮಾಡುವಿಕೆ. करस्य आलम्बनम् अवलम्बः अवलम्बनं वा।

**कराला ಕರಾಳಾ** (स्त्री०) 1. ದುರ್ಗಾದೇವಿ. "करालायतनाच्चायमुच्चरन् करुणध्वनिः। विभाव्यते ननु स्थानमनिष्टानां तदीदृशाम्" मालती० ५-२१। 2. ಸೊಗದೆಗಿಡ.

**करालास्य ಕರಾಳಾಸ್ಯ** (वि०) ಭಯಂಕರವಾದ ಮುಖವುಳ್ಳ. करालमास्यं यस्य।

**करालिक ಕರಾಳಿಕ** (पु०) 1. ವೃಕ್ಷ, ಮರ. करालमुच्चं शिखरमस्त्यस्य "ठन्" (५-२-११५)। कराणां करतुल्यशाखानामालिर्यत्र "कप्" वा। "नन्द्यावर्तकरालिकौ तरुवसू पर्णी पुलाकयंह्रिपः" अभि० चि०। 2. ಖಡ್ಗಧಾರಿ, ಕತ್ತಿ ಹಿಡಿದವನು. 3. ಖಡ್ಗ, ಕತ್ತಿ. "खड्गिखड्गौ करालिकौ" वैज०। (स्त्री०) **-का -ಕಾ.** 4. ಪಾರ್ವತಿ. "एकपर्णा भद्रकाली महाकाली करालिका" वैज०।

**करालित ಕರಾಳಿತ** (वि०) ಭಯಪಡಿಸಲ್ಪಟ್ಟ, ಹೆದರಿಸಲ್ಪಟ್ಟ. "एकस्यास्तपनकरैः करालिताया बिभ्राणः सपदि सितोष्णवारणत्वम्" माघ० ८-४।

**कराली ಕರಾಳೀ** (स्त्री०) ಅಗ್ನಿಯ ಏಳು ಜಿಹ್ವೆಗಳಲ್ಲೊಂದು. कराल "ङीप्" (४-१-१५)। "काली कराली च मनोजवा च सुलोहिता या च सुधूम्रवर्णा। स्फुलिङ्गिनी विश्वरूपी च देवी लेलायमाना इति सप्त जिह्वाः" मुण्डक० १-२-४।

**करास्फोट ಕರಾಸ್ಫೋಟ** (पु०) 1. ಕೈ ಹೊಡೆತ, ಕೈ ಏಟು. 2. ತೋಳು ತಟ್ಟುವಿಕೆ, ಒಂದು ತೋಳನ್ನು ಮಡಿಸಿಕೊಂಡು ಎದೆಯ ಮೇಲಿಟ್ಟು ಇನ್ನೊಂದು ಕೈಯಿಂದ ಹೊಡೆಯುವುದು. करस्य आस्फोटः शब्दो यत्र।

**करिक ಕರಿಕ** (पु०) ದುರ್ಗಂಧವುಳ್ಳ ಕಗ್ಗಲಿಮರ.

**करिका ಕರಿಕಾ** (स्त्री०) 1. ನಖಕ್ಷತ, ಉಗುರಿನ ಗಾಯ. करो विलेखनमस्त्यस्याम् "अच्" (५-२-१२७)। स्वार्थे "कः" (५-४-५)। "सततमसुमतामगम्यरूपाः परिणतदिक्करिकास्तटीर्बिभर्ति" माघ० ४-२९। "दिग्दष्टे वर्तुलाकारे करिका नखरेखिका" वैज०।

**करिगर्जित ಕರಿಗರ್ಜಿತ** (न०) ಆನೆಯ ಗರ್ಜನೆ, ಆನೆಯ ಕೂಗು. करिणो गर्जितम्।

**करिणी ಕರಿಣೀ** (स्त्री०) 1. ಹೆಣ್ಣಾನೆ. करोऽस्त्यस्याः "इनिः" (५-२-११५)। "ङीप्" (४-१-५)। "रथवाजिपत्तिकरिणीसमाकुलं तदनीकयोः समगत द्वयं मिथः" माघ० १३-१७। 2. ಹದಿನೆಂಟನೆಯ ಛಂದಸ್ಸಿನ ಒಂದು ವೃತ್ತ. "सनजा अपि नभसाश्शरयतिभिर्यदि करिणी" वृ० र०। **ಈ ವೃತ್ತದ ಗಣವಿನ್ಯಾಸ:**

स न ज न भ स

IIU III IUI III UII IIU

**करिदारक ಕರಿದಾರಕ** (पु०) (ಆನೆಯನ್ನು ಸೀಳುವ) ಸಿಂಹ. करिणं दारयति– दृ (विदारणे) + णिच् "ण्वुल्" (३-१-१३४)। स्त्रियाम् "टाप्"। **-दारिका-ದಾರಿಕಾ.**

**करिन् ಕರಿನ್** (पु०) 1. ಗಜ, ಆನೆ. करोऽस्यास्ति "इनिः" (५-२-११५)। "आक्षिप्याभिदिवं नीताः पत्तयः करिभिः करैः" कुमा० १६-३६। स्त्रियाम् "ङीप्" (४-१-५)। **करिणी ಕರಿಣೀ.** 2. ಹೆಣ್ಣಾನೆ. 3. ಎಂಟು ಸಂಖ್ಯೆ. "म्सौजोजो भरसंयुतः करिबाणकैर्हरिणप्लुतम्" वृ०र०।

**करिप ಕರಿಪ** (पु०) ಮಾವಟಿಗ, ಆನೆಯ ರಕ್ಷಕ. करिणं पाति – पा (रक्षणे) "कः" (३-२-४)।

**करिपत्र ಕರಿಪತ್ರ** (न०) ತಾಳೀಸಪತ್ರೆ.

**करिपिप्पली ಕರಿಪಿಪ್ಪಲೀ** (स्त्री०) ಗಜಹಿಪ್ಪಲಿ.

**करिपोत ಕರಿಪೋತ -शावक -ಶಾವಕ** (पु०) ಆನೆಯ ಮರಿ. करिणः पोतः शावको वा।

**करिबन्ध ಕರಿಬಂಧ** (पु०) 1. ಆನೆಯನ್ನು ಕಟ್ಟುವ ಕಂಬ. करिणं बध्नात्यत्र – बन्ध (बन्धने) अधि० "घञ्" (३-३-१२१)। "प्रारब्धिः करिबन्धः स्यात्" हारा०। 2. ಆನೆಯನ್ನು ಕಟ್ಟುವಿಕೆ. भावे "घञ्" (३-३-१८)।

**करिमुख ಕರಿಮುಖ** (पु०) 1. ಗಜಾನನ, ಗಣಪತಿ. करिणो मुखं यस्य। (न०) 2. ಆನೆಯ ಮುಖ. करिणो मुखम्।

**करिरत ಕರಿರತ** (न०) 1. ಆನೆಯ ರತಿಕ್ರೀಡೆ. 2. ರತಿಬಂಧದ ಒಂದು ಭೇದ. "भूगतस्तनभुजास्यमस्तकामुन्नतां स्वयमधोमुखीं स्त्रियम्। क्रामति स्वकरकृष्टमेहने वल्लभे करिरतं तदुच्यते"।

**करिष्यत् ಕರಿಷ್ಯತ್** (वि०) ಮುಂದೆ ಕೆಲಸಮಾಡುವ. डु कृञ् (करणे) कर्त० "लृट्" "शतृ" (३-३-१४)। स्त्रियां "ङीप्" (४-१-६)। **करिष्यन्ती ಕರಿಷ್ಯಂತೀ.**

**करिष्यमाण ಕರಿಷ್ಯಮಾಣ** (वि०) 1. ಮುಂದೆ (ಕೆಲಸ) ಮಾಡುವವನು. 2. ಮುಂದೆ ಮಾಡಲ್ಪಡುವ (ಕೆಲಸ). डु कृञ् (करणे) भविष्यति कर्त० कर्म० वा "शानच्" (३-३-१४)।

**करिस्कन्ध ಕರಿಸ್ಕಂಧ** (पु०) 1. ಆನೆಗಳ ಗುಂಪು, ಗಜಸಮೂಹ. करिणां स्कन्धः समूहः। 2. ಆನೆಯ ಹೆಗಲು.

**करीर ಕರೀರ** (पुं न०) 1. ಬಿದಿರಿನ ಮೊಳಕೆ. किरति—कॄ (विक्षेपे) "ईरन्" (उ० ४-३०)। "वेणोः करीरा गुरवः कफमारुतकोपनाः" सुश्रुत० सूत्र० ४६-३०५। 2. ಮೊಳಕೆ. "हिमांशुवंशस्य करीरमेव मां निशम्य किं नासि फलेग्रहिग्रहा" नैष० ९-१२। (पु०) 3. ಘಟ, ಹೂಜಿ, ಗಡಿಗೆ. 4. ಮರಳುಭೂಮಿಯಲ್ಲಿ ಬೆಳೆಯುವ ಒಂಟೆಗೆ ಪ್ರಿಯವಾದ ಒಂದು ಮುಳ್ಳು ಗಿಡ. (वि०) 5. ಆನೆಯನ್ನು ತಳ್ಳುವ, ಆನೆಯನ್ನು ಹೊಡೆದೋಡಿಸುವ. करिणो गजानीरयति—ईर (गतौ) "अण्" (३-२-१)। "कोरकाकारकरकः करीरः कर्करोऽर्करुक्" माघ० १९-१०४।

**करीरिका ಕರೀರಿಕಾ** (स्त्री०) ಗಜದಂತಮೂಲ, ಆನೆಯ ಕೊಂಬಿನ ಬುಡ. "नासापूर्वं स्थूलहस्तं दन्तमूले करीरिका" त्रिकाण्ड०।

**करीरी ಕರೀರೀ** (स्त्री०) 1. ಗಜದಂತಮೂಲ, ಆನೆಯ ಕೊಂಬಿನ ಬುಡ. 2. ಜೀರುಂಡೆಹುಳ. "करीरो वंशाङ्कुरेऽस्त्री वृक्षभिद्घटयोः पुमान्। करीरी चीरिकायां च दन्तमूले च दन्तिनाम्" मेदि०।

**करीष ಕರೀಷ** (पुं न०) 1. ಪಸುವಿನ ಒಣಗಿದ ಸಗಣಿ, ಬೆರಣಿ. कृ (विक्षेपे) "ईषन्" (उ० ४-२६)। "करीषोऽस्त्री शुष्कगोमये" सि० कौ०। "तृणे तृणेढि ज्वलनः खलु ज्वलन् क्रमात् करीषद्रुमकाण्डमण्डलम्" नैष० ९-१५२। 2. ಪಶುಗಳ ಮಲ, ಮೃಗಗಳ ಪುರೀಷ. "ददर्श च वने तस्मिन् महतः सञ्चयान् कृतान्। मृगाणां महिषाणां च करीषैः शीतकारणात्" रामा०।

**करीषङ्कष ಕರೀಷಂಕಷ** (वि०) ಗಾಳಿ. ಸಗಣಿಯನ್ನು ಒಣಗಿಸುವುದರಿಂದ ಗಾಳಿಗೆ ಈ ಹೆಸರು. करीषं कषति—कष (हिंसायाम्) "खच्" (३-२-४२)।

**करीषाग्नि ಕರೀಷಾಗ್ನಿ** (पु०) ಒಣಗಿದ ಸಗಣಿಯ ಬೆಂಕಿ. करीषे अग्निः। "छागणस्तु करीषाग्निः" त्रिकाण्ड०।

**करीषिन् ಕರೀಷಿನ್** (वि०) ಬೆರಣಿಯಿಂದ ಕೂಡಿದ ದೇಶ. करीषोऽत्रास्ति "इनिः" (५-२-१३५)। स्त्रियाम् "ङीप्" (४-१-५)। **करीषिणी ಕರೀಷಿಣೀ.**

**करुण ಕರುಣ** (पु०) 1. ಕಾವ್ಯದ ಒಂದು ರಸ, ಶೃಂಗಾರಾದಿ ರಸಗಳಲ್ಲೊಂದು, ಕರುಣರಸ.—कृ (विक्षेपे) "उनन्" (उ० ३-५३)। करुणास्यास्ति "अच्" (५-२-१२७)। ಇಷ್ಟವಸ್ತುವಿನ ನಾಶವಾಗಿ ಅನಿಷ್ಟಪ್ರಾಪ್ತಿಯ ವರ್ಣನೆಯಿಂದ ಕರುಣರಸವು ಉತ್ಪನ್ನವಾಗುವುದು. ಇದಕ್ಕೆ ಶೋಕವು ಸ್ಥಾಯಿಭಾವ. ಇದು ಕಪೋತದಂತೆ ಧೂಮ್ರವರ್ಣವುಳ್ಳದ್ದು. ಯಮದೇವತಾಕವಾದುದು ಈ ರಸ. ಶೋಕಕ್ಕೆ ವಿಷಯವಾದ ವಸ್ತುವು ಆಲಂಬನವಿಭಾವ. ಆ ವಸ್ತುವಿನ ದುರವಸ್ಥೆಯು ಉದ್ದೀಪನವಿಭಾವ. ರೋದನ ಅಶ್ರುಪಾತ ವಿಧಿಯ ನಿಂದೆ ಮುಂತಾದುವು ಅನುಭಾವಗಳು. ಉಚ್ಛ್ವಾಸ ನಿಃಶ್ವಾಸಗಳು, ನಿರ್ವೇದ, ಗ್ಲಾನಿ, ವಿಷಾದ, ಚಿಂತೆ ಮುಂತಾದುವು ವ್ಯಭಿಚಾರಿಭಾವಗಳು. "इष्टनाशादनिष्टाप्तेः करुणाख्यो रसो भवेत्। धीरैः कपोतवर्णोऽयं कथितो यमदैवतः। शोकोऽत्र स्थायिभावः स्यात् शोच्यमालम्बनं मतम्। तस्य दाहादिकावस्था भवेदुद्दीपनं पुनः। अनुभावा दैवनिन्दा भूपातक्रन्दितादयः। वैवर्ण्योच्छ्वासनिःश्वासस्तम्भप्रलयनानि च। निर्वेदमोहापस्मारव्याधिग्लानिस्मृतिश्रमाः। विषादजडतोन्मादचिन्ताद्या व्यभिचारिणः" सा० द० ३-२२२-२५। "विपिने क्व जटानिबन्धनं तव चेदं क्व मनोहरं वपुः। अनयोर्घटना विधेः स्फुटं ननु खड्गेन शिरीषकृन्तनम्" राघववि०। "पुटपाकप्रतीकाशो रामस्य करुणो रसः" उ० रा० ३-१। ಪುನಃ ಸಂಭೋಗ ಸೂಚನೆಯುಳ್ಳ, ಮತ್ತು ರತಿಸ್ಥಾಯಿಭಾವವುಳ್ಳ ಕರುಣವಿಪ್ರಲಂಭ ಶೃಂಗಾರರಸಕ್ಕಿಂತಲೂ ಶೋಕಸ್ಥಾಯಿಭಾವವುಳ್ಳ ಈ ಕರುಣರಸವು ಭಿನ್ನವಾದುದು. "शोकस्थायितया भिन्नो विप्रलम्भादयं रसः। विप्रलम्भे रतिः स्थायी पुनः सम्भोग-

हेतुकः" सा० द० ३-२२६। 2. ಒಂದು ವೃಕ್ಷದ ಹೆಸರು. "तदार्पितैस्तां करुणस्य कुड्मलैर्जहास तस्याः कुटिला कचच्छटा" नैष० १५-३१। (वि०) 3. ದುಃಖಿತ, ಖಿನ್ನ, ದೀನ. "करुणमपि समर्थं मानिनां मानभेदे रुदितमुदितमस्त्रं योषितां विग्रहेषु" माघ० ११-३५।

**करुणविप्रलम्भ ಕರುಣವಿಪ್ರಲಂಭ** (पु०) ಶೃಂಗಾರ ರಸದ ಒಂದು ಭೇದ. ಶೃಂಗಾರರಸವು ವಿಪ್ರಲಂಭ ಶೃಂಗಾರ ಮತ್ತು ಸಂಭೋಗಶೃಂಗಾರಗಳೆಂದು ಎರಡು ವಿಧ. ನಾಯಿಕಾನಾಯಕರಲ್ಲಿ ಪರಿಪುಷ್ಟವಾದ ರತಿಯುಂಟಾಗಿ ಪರಸ್ಪರಸಮಾಗಮವುಂಟಾಗದಿರುವಲ್ಲಿ ಅಂತಹ ರಸವು ವಿಪ್ರಲಂಭವೆನಿಸುವುದು. ಇದು ಪೂರ್ವರಾಗ, ಮಾನ, ಪ್ರವಾಸ ಮತ್ತು ಕರುಣಗಳೆಂದು ನಾಲ್ಕು ವಿಧ. "यत्र तु रतिः प्रकृष्टा नाभीष्टमुपैति विप्रलम्भोऽसौ। स च पूर्वरागमानप्रवासकरुणात्मकश्चतुर्धा" सा० द० ३-१८७। ನಾಯಿಕಾನಾಯಕರಲ್ಲಿ ಪ್ರಕೃಷ್ಟವಾದ ಪ್ರೇಮವು ಬೆಳೆದು ಸಂಭೋಗವೇರ್ಪಡದೆ ಯಾರಾದರೊಬ್ಬರು ಲೋಕಾಂತರವನ್ನು ಹೊಂದಿ ಪರಸ್ಪರ ವಿಯೋಗವೇರ್ಪಟ್ಟರೂ ದೈವಾನುಗ್ರಹದಿಂದ ಪುನಃ ಸಮಾಗಮವೇರ್ಪಡುವವರೆಗೂ ದುಃಖಿಸುತ್ತಿರುವಲ್ಲಿ **"ಕರುಣವಿಪ್ರಲಂಭ ಶೃಂಗಾರ"**. "यूनोरेकतरस्मिन् गतवति लोकान्तरं पुनर्लभ्ये। विमनायते यदेकस्तदा भवेत्करुणविप्रलम्भाख्यः" सा० द० ३-२०९।

**करुणा ಕರುಣಾ** (स्त्री०) ದಯೆ, ಕನಿಕರ, ಇತರರ ದುಃಖವನ್ನು ಪರಿಹರಿಸುವ ಇಚ್ಛೆ. कॄ (विक्षेपे) "उनन्" (उ० ३-५३)। "प्रायः सर्वो भवति करुणावृत्तिरार्द्रान्तरात्मा" मेघ० २-३०। "न च मेऽवगच्छति यथा लघुतां करुणां यथा च कुरुते स मयि" माघ० ९-५६।

**करुणात्मन् ಕರುಣಾತ್ಮನ್** (वि०) ದಯೆಯಿಂದ ಕೂಡಿದ ಮನಸ್ಸುಳ್ಳ, ಮೃದು ಹೃದಯವುಳ್ಳ, ಕನಿಕರವುಳ್ಳ. करुणः आत्मा यस्य।

**करुणानिधि ಕರುಣಾನಿಧಿ** (वि०) ದಯೆಗೆ ಆಧಾರವಾದ, ಕನಿಕರದಿಂದ ತುಂಬಿದ. करुणा निधीयतेऽत्र—नि+डु धाञ् (धारणपोषणयोः) "किः" (३-३-९३)।

**करुणामय ಕರುಣಾಮಯ** (वि०) ದಯೆಯಿಂದ ತುಂಬಿದ, ಕನಿಕರದಿಂದ ಕೂಡಿದ. करुणा "मयट्" (५-४-२१)। "काकुत्स्थं करुणामयं गुणनिधिं विप्रप्रियं धार्मिकम्" हनु० ना०।

**करुणाविमुख ಕರುಣಾವಿಮುಖ—शून्य—ಶೂನ್ಯ** (वि०) ನಿರ್ಘೃಣ, ದಯಾಶೂನ್ಯ, ಕ್ರೂರ, ಕನಿಕರವಿಲ್ಲದ.

**करूष ಕರೂಷ** (पु०ब०व०) 1. ಕರೂಷದೇಶ. ಇಂದ್ರನು ವೃತ್ರವಧೆಯನ್ನು ಮಾಡಿದಾಗ ಬ್ರಹ್ಮಹತ್ಯೆಯು ಅವನ ದೇಹವನ್ನು ಪ್ರವೇಶಿಸಲು ಋಷಿಗಳೆಲ್ಲರೂ ಆ ಪಾತಕವನ್ನು ದೇಹದಿಂದ ಹೊರಕ್ಕೆ ತಳ್ಳಿದರು. ಆ ಪಾತಕವು ಬಿದ್ದ ದೇಶಕ್ಕೆ "करूष" ವೆಂದು ಹೆಸರಾಯಿತು. रामा०। ಈ ಪ್ರದೇಶವು ಈಗಿನ ಬಿಹಾರಸಂಸ್ಥಾನಕ್ಕೆ ಸೇರಿದೆ. "एष मद्रान् वशे कृत्वा कुरूंश्च सह सोमकैः। चेदिकाशिककरूषांश्च कुरुलक्ष्मीं वहिष्यति" भा० आदि०। 2. ಕರೂಷದೇಶದ ರಾಜರು. करूषाणां राजानः "अण्" बहुषु लुक्।

**करूषक ಕರೂಷಕ** (पु०) ವೈವಸ್ವತಮನುವಿನ ಒಬ್ಬ ಮಗ. "इक्ष्वाकुनृगशर्यातिदिष्टधृष्टकरूषकान्" भाग० ९-१-१२।

**करूषज ಕರೂಷಜ** (पु०) ದಂತವಕ್ತ್ರ. "ताविहाथ पुनर्जातौ शिशुपालकरूषजौ" भाग० ७-१०-३८।

**करूषाधिपति ಕರೂಷಾಧಿಪತಿ** (पु०) ಕರೂಷ ದೇಶದ ದೊರೆ, ದಂತವಕ್ತ್ರ. "शिशुपालः सहसुतः करूषाधिपतिस्तथा" भा० सभा० ४-३५।

**करेट ಕರೇಟ** (पु०) ನಖ, ಉಗುರು. करे अटति—अट (गतौ) "अच्" (३-१-१३४)।

**करेटु ಕರೇಟು** (पु०) ದೊಡ್ಡ ಜಾತಿಯ ಕೊಕ್ಕರೆ. के जले रेटति—रेटृ (परिभाषणे) "कुः" (उ० १-३७)।

**करेणु ಕರೇಣು** (पु०) 1. ಗಜ, ಆನೆ. डु कृञ् (करणे) "एणुः" (उ० २-१)। "आकुञ्चितप्रोहनिरूपितक्रमं करेणुरारोहयते निषादिनम्" माघ० १२-५। 2. ಬೆಟ್ಟಗಣಿಗಲೆ. (स्त्री०) 3. ಹೆಣ್ಣು ಆನೆ. "त्रस्तः समस्तजनहासकरः करेणोस्तावत्करः प्रखरमुल्ललयांचकार" माघ० ५-७। "करेणुर्गजयोषायां स्त्रियाम् पुंसि मतङ्गजे" मेदि०। "करेणुर्गजहस्तिन्योः कर्णिकारेऽपि च क्वचित्" विश्व०।

**करेणुभू ಕರೇಣುಭೂ—सुत—ಸುತ** (पु०) ಗಜಶಾಸ್ತ್ರ ಪ್ರವರ್ತಕನಾದ ಪಾಲಕಾಪ್ಯಮುನಿ. "पालकाप्ये करेणुभूः" अभि० चि०।

**करेणुमती ಕರೇಣುಮತೀ** (स्त्री०) ನಕುಲನ ಪತ್ನಿ, ಚೇದಿ ರಾಜನ ಮಗಳು. "नकुलस्तु चैद्यां करेणुमतीं भार्यामुदावहत्। तस्यां पुत्रं निरमित्रं नामाजनयत्" भा० आदि० ६३।

**करोटि ಕರೋಟಿ** (स्त्री०) ತಲೆಯ ಎಲುಬು. कं वायुं रोटते—रुट (प्रतिघाते) "इन्" (उ० ४-११७)।

**कर्क ಕರ್ಕ** (ಪುಂ) 1. ಅಗ್ನಿ, ಬೆಂಕಿ. डु कृञ् (करणे) "क:" (उ० ३-४०)। 2. ಬಿಳಿ ಕುದುರೆ. करोति आदिष्टं पालयति। 3. ದರ್ಪಣ, ಕನ್ನಡಿ. 4. ಘಟ, ಮಡಿಕೆ. 5. ಕರ್ಕಾಟಕರಾಶಿ. 6. ಏಡಿ, ನಳ್ಳಿ. 7. ಕಿರುನೆಲ್ಲಿ ಗಿಡ. (ವಿಂ) 8. ಉತ್ತಮವಾದ, ಉತ್ಕೃಷ್ಟವಾದ. 9. ಬಿಳುಪಾದ. "कर्क: कर्कटनिले वह्नौ शुक्लाश्वे दर्पणे घटे" मेदि०।

**कर्कखण्ड ಕರ್ಕಖಂಡ** (ಪುಂವಂವಂ) 1. ಬಿಳಿ ಕುದುರೆಗಳಿಂದ ತುಂಬಿದ ದೇಶ. कर्क: श्वेताश्वयुक्त: खण्ड: भूमिभागो यत्र। 2. ಆ ದೇಶದ ಜನರು. "मागधान् कर्कखण्डांश्च निवेश्य विषयेऽऽत्मन:" भा० वन० २५४-८।

**कर्कचिर्भटा ಕರ್ಕಚಿರ್ಭಟಾ** (स्त्री०) ಬಿಳಿ ಸೌತೆಕಾಯಿ.

**कर्कट ಕರ್ಕಟ** (ಪುಂ) 1. ಕರ್ಕಾಟಕ ರಾಶಿ. कृ (विक्षेपे) "विच्" (३-२-७५)। कटति—कटे (वर्षावरणयो:) "अच्" (३-१-१३४)। कर् चासौ कटश्च। "मेषे भद्रमवाप्नुयाद्गवि सुखं युग्मे मृति कर्कटे लाभम्" काला०। "कर्कटे प्रथमं देवी त्र्यहं गङ्गा रजस्वला"। 2. ಭೂರುಗದ ಮರ. 3. ಏಡಿ, ನಳ್ಳಿ. "बहुकम्बुमणिर्वराटिका-गणनाटत्करकर्कटोत्कर:" नैष० २-८८। 4. ತಾವರೆಯ ಗಡ್ಡೆ. 5. ಸಿಹಿ ಸೋರೆಗಿಡ. 6. ತ್ರಾಸಿನ ದಂಡಿಗೆ (ತುಲಾ ದಂಡದ) ಕೊನೆಗಳಲ್ಲಿ ಎರಡು ಕಡೆಯ ತಟ್ಟೆಗಳ ದಾರಗಳನ್ನೂ ಕಟ್ಟಲು ಇರುವ ಬಗ್ಗಿದ ಕೊಂಡಿ. 7. ಕಂಟಕ, ಮುಳ್ಳು. (स्त्री०) **–टी – ಟೀ.** 8. ಹೆಣ್ಣುನಳ್ಳಿ. 9. ಸೌತೆ ಗಿಡ. "यथा च कर्कटी गर्भमाधत्ते मृत्युमात्मन:" भा० विरा०।

**कर्कटक ಕರ್ಕಟಕ** (ಪುಂ) 1. ಒಂದು ಯಂತ್ರ, ವೃತ್ತರೇಖೆಯನ್ನು ಎಳೆಯುವ ಒಂದು ಸಲಕರಣೆ. कर्कट इव कायति। 2. ಇಕ್ಕುಳ. 3. ತಂಡಸ. 4. ಚಿಮುಟ. "फणिमुखकाकलीसंदंशकपुरुषशीर्षकयोगचूर्णयोगवर्तिकामानसूत्र कर्कटकरज्जुदीपभाजनभ्रमरकरण्डकप्रभृत्यनेकोपकरणयुक्त:" दशकु०। 5. ಕರ್ಕಾಟಕ ರಾಶಿ. 6. ಏಡಿ, ನಳ್ಳಿ. 7. ಕಿರುನೆಲ್ಲಿಗಿಡ. 8. ಒಂದು ಜಾತಿಯ ಕಬ್ಬು.

**कर्कटि ಕರ್ಕಟಿ** (स्त्री०) 1. ಸೌತೆಗಿಡ. 2. ಭೂರುಗದ ಮರ. कर्कं कण्टकमटति—अट (गतौ) "इन्" (उ० ४-११७)। शक०।

**कर्कन्धू ಕರ್ಕಂಧೂ** (स्त्री०) ಬದರೀ ವೃಕ್ಷ, ಎಲಚಿಮರ. कर्कं कण्टकं दधाति—डु धाञ् (धारणपोषणयो:) "कू:" (उ० १-९३)। निपा०।

**कर्कफल ಕರ್ಕಫಲ** (ನಂ) ಕಿರುನೆಲ್ಲಿಕಾಯಿ.

**कर्कर ಕರ್ಕರ** (ಪುಂ) 1. ದರ್ಪಣ, ಕನ್ನಡಿ. कर्क (हसने) (सौत्र:) "घञ्" (३-३-१८)। कर्कं राति—रा (दाने) "क:" (३-२-३)। 2. ಪುಡಿಮಾಡುವ ಕಲ್ಲು, ಅರೆಯುವ ಕಲ್ಲು, ಗುಂಡುಕಲ್ಲು. 3. ಕೊಡತಿ, ಸುತ್ತಿಗೆ. 4. ಎಲುಬು, ಮೂಳೆ. "भारद्वाजं श्वदयितं सारसंघातकर्करा:" वैज०। (ನಂ) 5. ಹಸಿ ಸುಣ್ಣಕಲ್ಲು. (ವಿಂ) 6. ದೃಢವಾದ, ಗಟ್ಟಿಯಾದ, ಕಠಿನವಾದ. "कोरकाकारकरक: करीर: कर्करोऽर्करुक्" माघ० १९-१०४।

**कर्कराक्ष ಕರ್ಕರಾಕ್ಷ** (ಪುಂ) ಕಾಡಿಗೆ ಸೊಗಸಿನ ಹಕ್ಕಿ, ಕೆಂಬೂತದ ಹಕ್ಕಿ.

**कर्कराङ्ग ಕರ್ಕರಾಂಗ** (ಪುಂ) ಕಾಡಿಗೆ ಸೊಗಸಿನ ಹಕ್ಕಿ, ಕೆಂಬೂತದ ಹಕ್ಕಿ, ದಾಸರಿ ಹಕ್ಕಿ.

**कर्कराटु ಕರ್ಕರಾಟು** (ಪುಂ) ಕಟಾಕ್ಷ, ಕಡೆಗಣ್ಣಿನ ನೋಟ. कर्कं हासं रटति—रट (परिभाषणे) "उण्" बाहु०।

**कर्करान्धुक ಕರ್ಕರಾಂಧುಕ** (ಪುಂ) ಬಹಳ ಕತ್ತಲೆಯಿಂದ ಕೂಡಿದ ಬಾವಿ. कर्कर: अतिशयितान्धकारवत्त्वात् कठोर: अन्धु: कूप:। संज्ञायां "कन्" (५-३-७५)।

**कर्कराल ಕರ್ಕರಾಳ** (ಪುಂ) ಗುಂಗುರು ಕೂದಲು. कर्कर: सन् अलति—अल (भूषणादौ) "अच्" (३-१-१३४)। "अलकस्तु कर्कराल: खंखरश्चूर्णकुन्तल:" अभि० चि०।

**कर्करी ಕರ್ಕರೀ** (स्त्री०) 1. ಗಿಂಡಿ, ಕೊಳವೆಯಿರುವ ಹೂಜಿ. कर्कं हासं राति—रा (दाने) "क:" (३-२-३)। "कर्करी भाण्डभेदे ना दर्पणे कठिने त्रिषु" विश्व०।

**कर्करीका ಕರ್ಕರೀಕಾ** (स्त्री०) ಗಿಂಡಿ, ಕೊಳವೆಯಿರುವ ಹೂಜಿ. डु कृञ् (करणे) "ईकन्" धातोर्द्वित्वम् अभ्यासस्य रुक् च निपा० (उ०४-२०)।

**कर्करेट ಕರ್ಕರೇಟ** (ಪುಂ) ಅರ್ಧಚಂದ್ರಪ್ರಯೋಗ, ಕತ್ತು ಹಿಡಿದು ತಳ್ಳಲು ಅರ್ಧಚಂದ್ರಾಕಾರವಾಗಿ ಮಾಡುವ ಹಸ್ತ. कर्कं कर्केति शब्दं रेटति यत्र—रेट् (परिभाषणे) "घञ्" (३-३-१२१)।

**कर्करेटु ಕರ್ಕರೇಟು** (ಪುಂ) ದೊಡ್ಡ ಕೊಕ್ಕರೆ. कर्क इति रेटति—रेट् (परिभाषणे) "कु:" (उ० १-३७)।

**कर्कश ಕರ್ಕಶ** (ಪುಂ) 1. ಕಂಪಿಲ್ಲ ಅಥವಾ ರೋಚನಿಯೆಂಬ ಓಷಧಿ. 2. ಕಾಸಮರ್ದವೃಕ್ಷ. 3. ಕಬ್ಬಿನ ಜಲ್ಲೆ. 4. ಖಡ್ಗ, ಕತ್ತಿ. करे कशति—कश (गतिशासनयो:) "अच्" (३-१-१३४)। (ವಿಂ) 5. ಸಾಹಸಿಕ, ಸಾಹಸಗಾರ.

6. ಕ್ರೂರ, ಭಯಂಕರ. 7. ದೃಢವಾದ, ಗಟ್ಟಿಯಾದ. ಕಠಿನವಾದ, ಕಠೋರವಾದ. "ऐरावतास्फालनकर्कशेन हस्तेन पस्पर्श तदङ्गमिन्द्रः" कुमा० ३-२२। 8. ದಯೆಯಿಲ್ಲದ, ಕರುಣೆಯಿಲ್ಲದ. 9. ಒರಟಾದ, ನುಣುಪಿಲ್ಲದ. 10. ಕೃಪಣ, ಜಿಪುಣ. 11. ಕಠಿನವಾದ, ದುರ್ಬೋಧವಾದ, ತಿಳಿಯಲಾಗದ. "येषां कोमलकाव्यकौशलकलालीलावती भारती तेषां कर्कशतर्कवक्रभणितोद्गारेषु किं हीयते" प्र०रा० १-१८। 12. ಬಹಳ ಕಷ್ಟವಾದ. 13. ಅತಿಯಾದ, ಹೆಚ್ಚಾದ. "तस्य कर्कशविहारसंभवं स्वेदमाननविलग्नजालकम्" रघु० ९-६८। "कर्कशः कासमर्देक्षुकाम्पिल्येष्वप्यसौ पुमान्। त्रिषु साहसिके क्रूरे दृढामसृणनिर्दये" मेदि०।

**कर्कशच्छद ಕರ್ಕಶಚ್ಛದ** (पु०) ಕಾರೆಗಿಡ. कर्कशः छदः पत्रमस्य।

**कर्कशता ಕರ್ಕಶತಾ** (स्त्री०) 1. ಕಠಿನವಾಗಿರುವಿಕೆ, ದುರ್ಬೋಧವಾಗಿರುವಿಕೆ. 2. ಒರಟಾಗಿರುವಿಕೆ. 3. ದೃಢವಾಗಿರುವಿಕೆ. 4. ಭಯಂಕರವಾಗಿರುವಿಕೆ. 5. ದಯೆಯಿಲ್ಲದಿರುವಿಕೆ. कर्कशस्य भावः "तल्" (५-१-११९)। "त्वः"। —त्वम् —ತ್ವಮ್. "नागेन्द्रहस्तास्त्वचि कर्कशत्वादेकान्तशैत्यात्कदलीविशेषाः" कुमा० १–३६।

**कर्काटक ಕರ್ಕಾಟಕ** (पुं०) ಕರ್ಕಾಟಕ ರಾಶಿ.

**कर्कारु ಕರ್ಕಾರು** (पु०) 1. ಬೂದು ಕುಂಬಳದ ಗಿಡ. कर्कं हासं स्वेततामृच्छति—ऋ (गतौ) "उण्" बाहु०। "कूष्माण्डकस्तु कर्कारुः" अम०। (न०) 2. ಬೂದು ಕುಂಬಳಕಾಯಿ.

**कर्कि ಕರ್ಕಿ** (पु०) ಕರ್ಕಾಟಕರಾಶಿ. कर्कं "इन्" (उ० ४-११७)। "कर्किमीनधनुर्म्यां च हरिः कीटघटेन च"।

**कर्केतन ಕರ್ಕೇತನ** (पुन०) ಮಣಿ, ರತ್ನ.

**कर्कोट(क) ಕರ್ಕೋಟ(ಕ)** (पु०) 1. ಒಬ್ಬ ಸರ್ಪರಾಜ, ಎಂಟು ಸರ್ಪರಾಜರಲ್ಲೊಬ್ಬ. "अनन्तो वासुकिः पद्मो महापद्मोऽपि तक्षकः। कर्कोटः कुलिकः शङ्खः इत्यष्टौ नागनायकाः" त्रिकाण्ड०। "प्राग्भूय कर्कोटक आचकर्ष सकम्बलं नागबलं यदुच्चैः" नैष० १०-८। [ನಿಷಧಾಧಿಪತಿಯಾದ ನಳಚಕ್ರವರ್ತಿಯು ಪುಷ್ಕರನೊಡನೆ ಜೂಜಾಡಿ ರಾಜ್ಯಭ್ರಷ್ಟನಾಗಿ ಅರಣ್ಯದಲ್ಲಿ ತನ್ನ ಪತ್ನಿಯನ್ನೂ ಬಿಟ್ಟು ಹೋಗುತ್ತಿದ್ದ ಸಮಯದಲ್ಲಿ ನಾರದ ಮಹರ್ಷಿಯ ಶಾಪದಿಂದ ದಾವಾಗ್ನಿಯಲ್ಲಿ ಬಿದ್ದು ಸುಟ್ಟು ಹೋಗುತ್ತಿದ್ದ ಕರ್ಕೋಟಕನು ತನ್ನನ್ನು ದಾವಾಗ್ನಿಯಿಂದ ತಪ್ಪಿಸಿದರೆ ಪರಮೋಪಕಾರಮಾಡುವುದಾಗಿ ತಿಳಿಸಿದನು. ಆಗ ನಳನು ಬಹಳ ಕನಿಕರದಿಂದ ಕರ್ಕೋಟಕನನ್ನು ಜ್ವಾಲೆಯಿಂದ ಹೊರಕ್ಕೆ ತರಲು ಆ ಕೂಡಲೇ ನಳನನ್ನು ಕರ್ಕೋಟಕನು ಕಚ್ಚಿದನು. ಆಗ ನಳನಿಗೆ ವಿಕಾರರೂಪವುಂಟಾಗಲು "ಇದೇ ನಾನು ನಿನಗೆ ಮಾಡಿದ ಪರಮೋಪಕಾರ. ಇದರಿಂದ ನಿನ್ನನ್ನು ಯಾರೂ ಗುರುತಿಸಲಾರರು. ನೀನು ಬಾಹುಕನೆಂಬ ಹೆಸರಿನಿಂದ ಋತುಪರ್ಣರಾಜನ ಸಾರಥಿಯಾಗಿದ್ದು ಅನಂತರ ನಿನ್ನ ಪತ್ನಿಯನ್ನೂ ರಾಜ್ಯವನ್ನೂ ಪಡೆಯುವೆ. ನೀನು ಅಪೇಕ್ಷಿಸಿದಾಗ ನನ್ನನ್ನು ಸ್ಮರಿಸಿಕೊಂಡು ಈ ವಸ್ತ್ರಗಳನ್ನು ಧರಿಸಿಕೊಂಡರೆ ನಿನಗೆ ನಿಜರೂಪ ಬರುವುದು" ಎಂದು ಹೇಳಿ ಎರಡು ವಸ್ತ್ರಗಳನ್ನೂ ಕೊಟ್ಟು ಅಲ್ಲೇ ಅಂತರ್ಧಾನಹೊಂದಿದನು.] भा० वन० ६३। 2. ಬಿಲ್ವದ ಮರ. "कर्कोटकः स्यान्मालूरकाद्रवेयप्रभेदयोः" मेदि०।

**कर्चूर ಕರ್ಚೂರ** (पु०) 1. ಕಚೋರ. कर्ज (व्यथने) "ऊरः" (उ० ४-९०)। पृषो०। (न०) 2. ಸುವರ್ಣ, ಚಿನ್ನ. 3. ಹರಿದಳ. 4. ಚಿತ್ರವರ್ಣ. "स इन्द्रनीलस्थलनीलमूर्ती रराज कर्चूरपिशङ्गवासाः" माघ० ३-११। (वि०) 5. ಚಿತ್ರವರ್ಣವುಳ್ಳ.

**कर्चूरक ಕರ್ಚೂರಕ** (पु०) 1. ಅರಿಶಿನ. 2. ಕಚೋರ. कर्चूर "कन्" (५-३-७५)।

**कर्ण-भेदने** (चुरा०उभ०सक०से०) कर्णयति, –ते। अचकर्णत्, –त। 1. ಭೇದಿಸು, ಒಡೆ, ಕತ್ತರಿಸು. कर्णनम्। कर्णः। 2. ರಂಧ್ರಮಾಡು, ತೂತು ಕೊರೆ, ವಜ್ಜ ಮಾಡು. आङ् ಪೂರ್ವಕವಾದರೆ आकर्णयति, –ते। ಶ್ರವಣಮಾಡು, ಕೇಳು. आकर्णनम्।

**कर्ण ಕರ್ಣ** (पु०) 1. ಕಿವಿ, ಶ್ರೋತ್ರ. कीर्यते शब्दोऽनेन—कॄ (विक्षेपे) "नः" (उ० ३-१०)। "कर्णेभ्यश्च्युतमसितोत्पलं वधूनां वीचीभिस्तटमनु यन्निरासुरापः" माघ० ८-५४। 2. ಶ್ರವಣೇಂದ್ರಿಯ, ಶಬ್ದವನ್ನು ಗ್ರಹಿಸುವ ಒಂದು ಇಂದ್ರಿಯ, ಕರ್ಣಶಷ್ಕುಲಿಯೊಳಗಿನ ಕುಹರ, ಆಕಾಶರೂಪವಾದ ವಿವರ. "तद्गुणैः कर्णमागत्य चापलाय प्रचोदितः" रघु० १-९। "मुदा तदाकर्णनसज्जकर्णया" नैष० १-३५। 3. ಹಡಗಿನ ಲಂಗರು, ಚುಕ್ಕಾಣಿ ಚಕ್ರ. "हतकर्णेव नौर्जले" रामा०। 4. ಕರ್ಣ, ಕುಂತಿಯ ಮಗ, ರಾಧೇಯ, ಅಂಗರಾಜ. [ಯದುವಂಶದ ಶೂರರಾಜನ ಮಗಳೂ ವಸುದೇವನ ತಂಗಿಯೂ ಆದ ಕುಂತಿಯ ಮಗನು. ಕುಂತಿಯು ಮದುವೆಗೆ ಮುಂಚೆ ಕನ್ಯಾವಸ್ಥೆಯಲ್ಲಿದ್ದಾಗಲೇ ಇವನನ್ನು ಸೂರ್ಯನಿಂದ ಪಡೆದಳು. [ವಿವರಕ್ಕೆ

"ಕ್ರಾನ್ತೀ" ಪದದಲ್ಲಿ ನೋಡಿ] ಇವನಿಗೆ ಹುಟ್ಟುವಾಗಲೇ ಕವಚವೂ ಕುಂಡಲಗಳೂ ಜನ್ಮಸಿದ್ಧವಾಗಿದ್ದುವು. "एवमुक्ता च सा बाला तदा कौतूहलान्विता। कन्या सती देवमर्कमाजुहाव यशस्विनी। प्रकाशकर्ता भगवांस्तस्यां गर्भं दधौ तदा। अजीजनत्सुतं चास्यां सर्वशस्त्रभृतां वरम्। सकुण्डलं सकवचं देवगर्भं श्रियान्वितम्" ಭಾ० ಆದಿ० ೬೪-೧೩೬, ೭। ಅಪವಾದದ ಭಯದಿಂದ ಕುಂತಿಯು ಈ ಶಿಶುವನ್ನು ಅಶ್ವನದಿಯಲ್ಲಿ ಬಿಡಲಾಗಿ ದುರ್ಯೋಧನನ ಸಾರಥಿಯಾದ ಅಧಿರಥನೆಂಬುವನು ಅದನ್ನು ತಂದು ತನ್ನ ಹೆಂಡತಿಯಾದ ರಾಧೆಗೆ ಕೊಟ್ಟು ವಸುಷೇಣನೆಂದು ಹೆಸರಿಟ್ಟನು. ಇದರಿಂದ ಇವನಿಗೆ ಸೂತಪುತ್ರ ರಾಧೇಯ ಇತ್ಯಾದಿ ಹೆಸರುಗಳಾದುವು. ಇವನು ಮಹಾದಾನಶೀಲನಾದುದರಿಂದ ದಾನಶೂರನೆಂದು ಪ್ರಸಿದ್ಧನಾಗಿದ್ದನು. ತನ್ನಲ್ಲಿದ್ದ ವಸ್ತುಗಳನ್ನು ಯಾರು ಕೇಳಿದರೂ ಇಲ್ಲವೆನ್ನುತ್ತಿರಲಿಲ್ಲ. ಇಂದ್ರನು ಬ್ರಾಹ್ಮಣ ವೇಷದಿಂದ ಬಂದು ಇವನ ಕವಚ-ಕುಂಡಲಗಳನ್ನು ಯಾಚಿಸಲಾಗಿ ಅವನ್ನು ತನ್ನ ದೇಹದಿಂದ ಕತ್ತರಿಸಿ ಇಂದ್ರನಿಗೆ ದಾನಮಾಡಿ ಅವನಿಂದ ಶಕ್ತ್ಯಾಯುಧವನ್ನು ಪಡೆದನು. ಕರ್ಣನ ಮೇಲಿನ ಪ್ರೀತಿಯಿಂದ ದುರ್ಯೋಧನನು ಇವನನ್ನು ಅಂಗರಾಜ್ಯಾಧಿಪತಿಯನ್ನಾಗಿ ಅಭಿಷೇಕ ಮಾಡುವನು. ಕರ್ಣನು ತಾನು ಬ್ರಾಹ್ಮಣನೆಂದು ಹೇಳಿಕೊಂಡು ಪರಶುರಾಮನಲ್ಲಿ ಅಸ್ತ್ರವಿದ್ಯೆಯನ್ನು ಕಲಿತು ನಿಪುಣನಾಗಿದ್ದರೂ ಸುಳ್ಳು ಹೇಳಿ ವಿದ್ಯಾಭ್ಯಾಸ ಮಾಡಿದುದರಿಂದ "ಯುದ್ಧದಲ್ಲಿ ಇವನ ಅಸ್ತ್ರಗಳೆಲ್ಲವೂ ವಿಫಲವಾಗಲಿ" ಎಂದು ಪರಶುರಾಮನು ಶಾಪಕೊಟ್ಟನು. ಇವನು ತಿಳಿಯದೆ ಒಂದುಸಲ ಒಬ್ಬ ಬ್ರಾಹ್ಮಣನ ಹಸುವನ್ನು ಕೊಲ್ಲಲಾಗಿ ಅವನ ರಥವು ಯುದ್ಧಭೂಮಿಯಲ್ಲಿ ಹೂತುಹೋಗಲೆಂದು ಸಿಟ್ಟುಗೊಂಡ ಬ್ರಾಹ್ಮಣನಿಂದ ಶಾಪಹೊಂದಿದನು. ಇವನಿಗೆ ಸುದಾಮ, ಸುಷೇಣ, ಸತ್ಯಸೇನ, ಚಿತ್ರಸೇನ, ಸುಶರ್ಮ ಮತ್ತು ವೃಷಸೇನರೆಂಬ ಮಕ್ಕಳಿದ್ದರು. ಕರ್ಣನು ಅಸ್ತ್ರವಿದ್ಯಾಪಾರಂಗತನಾಗಿ ಮಹಾವೀರನೆನಿಸಿಕೊಂಡಿದ್ದನು. ಇಂದ್ರನು ಕೊಟ್ಟ ಶಕ್ತ್ಯಾಯುಧದಿಂದ ಘಟೋತ್ಕಚನನ್ನು ಕೊಂದನು. ದುರ್ಯೋಧನನ ಘೋಷಯಾತ್ರೆಯಲ್ಲಿ ಚಿತ್ರಸೇನನೆಂಬ ಗಂಧರ್ವನಿಂದ ಪರಾಜಯ ಹೊಂದಿದನು. ದ್ರೋಣಾಚಾರ್ಯರ ನಂತರ ದುರ್ಯೋಧನನು ಇವನನ್ನು ಸೇನಾಪತಿಯನ್ನಾಗಿ ಮಾಡುವನು. ಪಾಂಡವರ ಅಜ್ಞಾತವಾಸವು ಪೂರೈಸುವುದರೊಳಗಾಗಿ ಅವರನ್ನು ಕಂಡುಹಿಡಿದು ಕೊಂದುಬಿಡಬೇಕೆಂದು ಕರ್ಣನು ದುರ್ಯೋಧನನಿಗೆ ಬೋಧನೆ ಮಾಡುವನು. ಶ್ರೀಕೃಷ್ಣನು ದುರ್ಯೋಧನನಲ್ಲಿಗೆ ರಾಯಭಾರಿಯಾಗಿ ಹೋಗಿದ್ದಾಗ ಕರ್ಣನನ್ನು ರಹಸ್ಯವಾಗಿ ಕರೆದು ಅವನು ಕುಂತಿಯ ಮಗನೆಂದೂ ಪಾಂಡವರ ಪಕ್ಷವನ್ನು ಸೇರಬೇಕೆಂದೂ ಎಷ್ಟು ಹೇಳಿದರೂ ತಿರಸ್ಕರಿಸಿಬಿಡುವನು. ಭೀಷ್ಮನು ಕರ್ಣನನ್ನು ಅರ್ಧರಥನೆಂದು ಹೇಳಿದುದರಿಂದ ಅವನನ್ನು ನಿಂದಿಸಿ ಅವನು ಬದುಕಿರುವವರೆಗೂ ತಾನು ಯುದ್ಧ ಮಾಡುವುದಿಲ್ಲವೆಂದು ಪ್ರತಿಜ್ಞೆ ಮಾಡಿದ್ದು ಭೀಷ್ಮನು ಶರತಲ್ಪದಲ್ಲಿ ಮಲಗಿದ್ದಾಗ (ಕರ್ಣನು) ಏಕಾಂತವಾಗಿ ಅವನಲ್ಲಿಗೆ ಹೋಗಿ ಕ್ಷಮೆ ಬೇಡಲು ಪಾಂಡವರೊಡನೆ ಸೇರಬೇಕೆಂದು ಪ್ರೋತ್ಸಾಹಿಸಿದರೂ ಉಪಾಯದಿಂದ ತಪ್ಪಿಸಿಕೊಳ್ಳುವನು. ಕರ್ಣಾರ್ಜುನರು ಯುದ್ಧ ಮಾಡುತ್ತಿದ್ದಾಗ ಬ್ರಾಹ್ಮಣನ ಶಾಪದಿಂದ ಕರ್ಣನ ರಥವು ಭೂಮಿಯಲ್ಲಿ ಹೂತುಹೋಗಲು ರಥದ ಚಕ್ರವನ್ನು ಮೇಲಕ್ಕೆತ್ತಲು ಕರ್ಣನು ಭೂಮಿಗೆ ಇಳಿದು ಯತ್ನಿಸುತ್ತಿದ್ದಾಗ ಅದೇ ಸಮಯವೆಂದು ಹೇಳಿ ಅರ್ಜುನನಿಂದ ಶ್ರೀಕೃಷ್ಣನು ಕರ್ಣನನ್ನು ಕೊಲ್ಲಿಸಿದನು]. ಭಾ० ಕರ್ಣ० ೯೭।

**कर्णक ಕರ್ಣಕ** (ಪು०) 1. ಪಾತ್ರೆಯ ತುದಿಯಲ್ಲಿ ಮುಂದಕ್ಕೆ ಚಾಚಿಕೊಂಡಿರುವ ಅಂಚು. 2. ಮರದ ರೆಂಬೆ ಮತ್ತು ಎಲೆ. कर्णयति विभिद्य जायते—कर्ण (भेदने) "ण्वुल्" (३-१-१३३)।

**कर्णकण्डू ಕರ್ಣಕಂಡೂ** (ಸ್ತ್ರೀ०) ಕಿವಿಯ ನವೆ, ಕಿವಿಯ ತುರಿ. ಕಿವಿಯೊಳಗಿನ ಶ್ಲೇಷ್ಮದಿಂದ ಕಿವಿಯಲ್ಲಿ ನವೆಯುಂಟಾಗುವುದು. "कफेन कण्डूः प्रचितेन कर्णयोः भृशं भवेत् स्रोतसि कर्णसंज्ञिते" ಸುಶ್ರುತ० ಉತ್ತರ० ೨೦-೧೧।

**कर्णकषाय ಕರ್ಣಕಷಾಯ** (ಪು०) ಕಿವಿಯ ಮಲ, ಕಿವಿಯ ಕೀವು. "आपीयतां कर्णकषायशोषाननुक्रमिष्ये त इमान् सुपेशान्" ಭಾಗ० ೨-೬-೪೫।

**कर्णकिट्ट ಕರ್ಣಕಿಟ್ಟ** (ನ०) ಕಿವಿಯ ಮಲ, ಗುಗ್ಗೆ.

**कर्णकूप ಕರ್ಣಕೂಪ** (ಪು०) ಬಾವಿಯಂತೆ ಆಳವಾಗಿರುವ ಕಿವಿಯ ರಂಧ್ರ, ಕಿವಿಯ ಒಳಭಾಗ. कर्णस्य कूप इव। "सुधारसोद्वेलनकेलिमक्षरस्रजासृजान्तर्मम कर्णकूपयोः" नैष० ९-११३।

**कर्णगतरोग ಕರ್ಣಗತರೋಗ** (ಪು०) ಕಿವಿಯೊಳಗಿನ ರೋಗ, ಕಿವಿಯನ್ನು ಆಶ್ರಯಿಸಿ ಬರುವ ವ್ಯಾಧಿ. ಈ ಕಿವಿಯ ವ್ಯಾಧಿಯು ಇಪ್ಪತ್ತೆಂಟು (28) ವಿಧ. (1) कर्णशूलम्, (2) प्रणादः, (3) बाधिर्यम्, (4) क्ष्वेडः, (5) कर्णस्रावः, (6) कर्णकण्डूः, (7) कर्णगूथः, (8) कृमिकर्णकः, (9) कर्णप्रतिनाहः, (10) क्षतविद्रधिः, (11) दोषविद्रधिः, (12) कर्णपाकः, (13) पूतिकर्णः, (14–17) चतुर्विधम्

(ನಾಲ್ಕು ವಿಧ) अर्श: (18-24) सप्तविधं कर्णार्बुदम्, (25-28) चतुर्विध: शोफ: ಇವು ಕರ್ಣವ್ಯಾಧಿಗಳು. सुश्रुत० उत्तर० २०-३-५। [ವಿವರಕ್ಕೆ ಆಯಾ ಪದಗಳಲ್ಲಿ ನೋಡಿ]

**कर्णगूथ(क) ಕರ್ಣಗೂಥ(ಕ)** (पुंन०) 1. ಕಿವಿಯ ಮಲ, ಕಿವಿಯ ಗುಗ್ಗೆ. (पु०) 2. ಪಿತ್ತದ ತೇಜಸ್ಸಿನಿಂದ ಶ್ಲೇಷ್ಮವು ಒಣಗುವಿಕೆ. ಇದೊಂದು ಕರ್ಣರೋಗ. "विशोषिते श्लेष्मणि पित्ततेजसा नृणां भवेत् स्रोतसि कर्णगूथक:" सुश्रुत० उत्तर० २०-११।

**कर्णगोचर ಕರ್ಣಗೋಚರ** (वि०) ಶ್ರಾವ್ಯವಾದ, ಕಿವಿಗೆ ಕೇಳಿಸುವ, ಕೇಳಬಹುದಾದ. कर्णस्य गोचर:।

**कर्णगोलक ಕರ್ಣಗೋಳಕ** (न०) ಗೋಳಕಾಕಾರವಾದ ಕರ್ಣಕುಹರ, ಕಿವಿಯೊಳಗೆ ಶಬ್ದವು ಪ್ರವೇಶಿಸುವ ದಾರಿ.

**कर्णग्राह ಕರ್ಣಗ್ರಾಹ** (पु०) ನಾವಿಕ, ಕರ್ಣಧಾರ, ಅಂಬಿಗ. कर्णमरित्रं गृह्णाति—ग्रह (उपादाने) "अण्" (३-२-१)।

**कर्णच्छिद्र ಕರ್ಣಚ್ಛಿದ್ರ** (न०) ಕರ್ಣಕುಹರ, ಕಿವಿಯ ರಂಧ್ರ.

**कर्णज ಕರ್ಣಜ** (पु०) 1. ಕಿವಿಯ ಮಲ, ಗುಗ್ಗೆ. 2. ಕರ್ಣನ ಮಗ—(1) ಸುಷೇಣ, (2) ಸುದಾಮ, (3) ಸುಶರ್ಮ, (4) ಸತ್ಯಸೇನ, (5) ಚಿತ್ರಸೇನ ಮತ್ತು (6) ವೃಷಸೇನ.

**कर्ण(र्णे)जप ಕರ್ಣ(ರ್ಣೇ)ಜಪ** (वि०) ಚಾಡಿಕೋರ, ಚಾಡಿ ಹೇಳುವವನು. कर्णे जपति—जप (व्यक्तायां वाचि) "अच्" (३-२-१३)। सप्तम्या अलुक् (६-३-१४)। "कर्णेजपैराहितराज्यलोभा स्त्रैणेन नीता विकृति लघिम्ना" भट्टि० ३-७।

**कर्णजलूका ಕರ್ಣಜಲೂಕಾ** (स्त्री०) ಜರಿ, ಲಕ್ಷ್ಮೀ ಚೇಳು. कर्णे जलूकेव। -जलौका -ಜಲೌಕಾ ಎಂದೂ -जलौकस् -ಜಲೌಕಸ್ ಎಂದೂ ಸಕಾರಾಂತ ಪ್ರಯೋಗವೂ ಉಂಟು.

**कर्णजाह ಕರ್ಣಜಾಹ** (न०) ಕರ್ಣಮೂಲ, ಕಿವಿಯ ತಳಭಾಗ. कर्णस्य मूलम् "जाहच्" (५-२-२४)। "दधाना वलिभं मध्यं कर्णजाहविलोचना" भट्टि० ४-१६।

**कर्णजित् ಕರ್ಣಜಿತ್** (पु०) ಅರ್ಜುನ. कर्णं जितवान्—जि (जये) "क्विप्" (३-२-६१)।

**कर्णताल ಕರ್ಣತಾಳ** (पु०) 1. ಕರ್ಣತಾಡನ, ಆನೆಯ ಕಿವಿಯ ಹೊಡೆತ. कर्णस्य ताल:। "विस्तारित: कुंजरकर्णतालैर्नेत्रक्रमेणोपरुरोध सूर्यम्" रघु० ७-३९। 2. ತಾಳದಂತೆ ವಿಸ್ತಾರವಾದ ಕರ್ಣ. "कर्णतालप्ररोहद्वाताकराजिहीर्षा..." चं०भा० १-१।

**कर्णदर्पण ಕರ್ಣದರ್ಪಣ** (पु०) ಕಿವಿಯ ಓಲೆ. कर्णस्य दर्पण इव। "करारोटोऽङ्गुलीट: स्यात्ताडङ्क: कर्णदर्पण:" त्रिकाण्ड०।

**कर्णधार ಕರ್ಣಧಾರ** (पु०) 1. ನಾವಿಕ, ಅಂಬಿಗ, ಹಡಗು ನಡೆಸುವವನು. कर्णमरित्रं धरति—धृञ् (धारणे) "अण्" (३-२-१)। "यदि न स्यान्नरपति: सम्यङ्नेता तत: प्रजा। अकर्णधारा जलधौ विप्लवेतेह नौरिव" हितो० ३-२। (वि०) 2. ಕಷ್ಟದಿಂದ ಪಾರು ಮಾಡುವವನು, ದುಃಖವನ್ನು ಪರಿಹರಿಸುವವನು. "अकर्णधारा पृथिवी शून्येव प्रतिभाति मे। गते दशरथे स्वर्गं रामे चारण्यमाश्रिते" रामा०।

**कर्णधारक ಕರ್ಣಧಾರಕ** (पु०) "कर्णधार" ಪದದ ಅರ್ಥ.

**कर्णनाद ಕರ್ಣನಾದ** (पु०) ಕಿವಿಯನ್ನು ಬೆರಳಿನಿಂದ ಮುಚ್ಚಿದಾಗ ಉಂಟಾಗುವ "ಜೊಯ್" ಎಂಬ ಶಬ್ದ. कर्णे नाद:।

**कर्णपत्रक ಕರ್ಣಪತ್ರಕ** (पु०) ಹೊರಕಿವಿಯ ಮೆದುವಾದ ತಳಭಾಗ, ಕಿವಿಯ ಹಾಲೆ, ಕರ್ಣಪಾಲಿ. "कनीनिके चाक्षिकूटे शष्कुली कर्णपत्रकौ। कर्णौ शङ्खौ भ्रुवौ दन्तवेष्टावोष्ठौ ककुन्दरे" याज्ञ० ३-९६।

**कर्णपथ ಕರ್ಣಪಥ** (पु०) ಕಿವಿಯೊಳಗೆ ಶಬ್ದವು ಪ್ರವೇಶಿಸುವ ದಾರಿ, ಕಿವಿಯೊಳಗಿನ ರಂಧ್ರ.

**कर्णपरम्परा ಕರ್ಣಪರಂಪರಾ** (स्त्री०) ಶ್ರವಣಪರಂಪರೆ, ಯಾವುದಾದರೊಂದು ವಿಷಯವು ಒಂದು ಕಿವಿಯಿಂದ ಮತ್ತೊಂದು ಕಿವಿಗೆ ಹೋಗುವಿಕೆ, ಒಬ್ಬನು ಕಿವಿಯಿಂದ ಕೇಳಿದ ಸಮಾಚಾರವನ್ನು ಇನ್ನೊಬ್ಬನ ಕಿವಿಗೆ ಹಾಕುವುದು ಅವನಿಂದ ಮತ್ತೊಬ್ಬನ ಕಿವಿಗೆ ಹೋಗುವುದು ಈ ರೀತಿಯ ಪರಂಪರೆ. कर्णस्य परम्परा। "तेनैव च क्रमेणैष गत: कर्णपरम्पराम्। प्रवादो बहुलीभावं सर्वत्रापि पुरे ययौ" कथास०।

**कर्णपर्वन् ಕರ್ಣಪರ್ವನ್** (न०) ಮಹಾಭಾರತದ ಎಂಟನೆಯ ಪರ್ವ, ಕರ್ಣನ ಪರಾಕ್ರಮವನ್ನೂ ಸಾಹಸಕೃತ್ಯಗಳನ್ನೂ ವರ್ಣಿಸುವ ಮಹಾಭಾರತದ ಒಂದು ಭಾಗ.

**कर्णपाक ಕರ್ಣಪಾಕ** (पु०) ಕಿವಿಯ ಹೊರಭಾಗದ ಉರಿಯೂತ, ಕಿವಿಯ ಹೊರಭಾಗದಲ್ಲಿ ರಕ್ತ ಕಟ್ಟಿಕೊಳ್ಳುವುದರಿಂದ ಉಂಟಾಗುವ ನೋವು, ಕಿವಿಯ ರೋಗದಲ್ಲಿ ಒಂದು ಭೇದ. "भवेत् प्रपाक: खलु पित्तकोपत: विकोथविक्लेदकरश्च कर्णयो:" सुश्रुत० उत्तर० २०-१५।

**कर्णपालि ಕರ್ಣಪಾಲಿ** (स्त्री०) ಹೊರಕಿವಿಯ ಮೆದುವಾದ ತಳಭಾಗ. ಕಿವಿಯ ಹಾಲೆ. कर्णस्य पालिः। **–पाली –ಪಾಲೀ.** ಕಿವಿಯ ಒಂದು ಆಭರಣ. कर्णं पालयति— पाल (रक्षणे) + णिच् "अण्" (३-२-१)। गौरा० "ङीष्" (४-१-४१)।

**कर्णपिशाची ಕರ್ಣಪಿಶಾಚೀ** (स्त्री०) ಒಂದು ದೇವತೆ. ಉಪಾಸನೆಯಿಂದ ಪ್ರಸನ್ನವಾದ ಈ ದೇವತೆಯು ಅಪೇಕ್ಷಿಸಿದ ಯಾವ ವಿಷಯವನ್ನಾದರೂ ಕಿವಿಯಲ್ಲಿ ರಹಸ್ಯವಾಗಿ ಹೇಳುವುದು.

**कर्णपुर ಕರ್ಣಪುರ** (न०) ಕರ್ಣನ ರಾಜಧಾನಿ, ಚಂಪಾನಗರ. ಈಗ ಈ ನಗರಕ್ಕೆ "ಭಾಗಲ್ಪುರ"ವೆಂದು ಹೆಸರಾಗಿದೆ. ["चम्पा" ಪದದಲ್ಲಿ ನೋಡಿ]

**कर्णपुरी ಕರ್ಣಪುರೀ** (स्त्री०) ಕರ್ಣನ ರಾಜಧಾನಿ, ಚಂಪಾನಗರ.

**कर्णपुष्प ಕರ್ಣಪುಷ್ಪ** (पु०) ಕುರಟಿಗೆ ಗಿಡ.

**कर्णपूर ಕರ್ಣಪೂರ** (पु०) 1. ಕರ್ಣಾಭರಣ, ಕಿವಿಯ ಒಡವೆ. 2. ಕಿವಿಗೆ ಅಲಂಕಾರವಾಗಿ ಧರಿಸಲ್ಪಡುವ ಪುಷ್ಪ. 3. ನೀಲೋತ್ಪಲ, ಕನ್ನೈದಿಲೆ. 4. ಶಿರೀಷಪುಷ್ಪ, ಬಾಗೆ ಹೂವು. 5. ಅಶೋಕಕುಸುಮ ಮುಂತಾದುವು. कर्णं पूरयति – पूरी (आप्यायने) "अण्" (३-२-१)। "यस्याश्चोरश्चिकुरनिकरः कर्णपूरो मयूरः भासो हासः कविकुलगुरुः कालिदासो विलासः" प्र०रा० १-२२। "त्वां पातु मञ्जरितपल्लवकर्णपूरलोभभ्रमद्भ्रमरविभ्रमभृत्कटाक्षः" अमरु० ११।

**कर्णपूरक ಕರ್ಣಪೂರಕ** (पु०) 1. ಕದಂಬವೃಕ್ಷ. ಕಡವಲು ಮರ. कर्णं पूरयति – पूरी (आप्यायने) "ण्वुल्" (३-१-१३३)। 2. ಕರ್ಣಾಭರಣ. 3. ಶಿರೀಷಪುಷ್ಪ, ಬಾಗೆ ಹೂವು. 4. ನೀಲೋತ್ಪಲ, ಕನ್ನೈದಿಲೆ. 5. ಅಶೋಕ ಕುಸುಮ. ಹೆಂಗಸರು ಈ ವೃಕ್ಷಗಳ ಪುಷ್ಪಗಳನ್ನು ಕರ್ಣಾಭರಣವನ್ನಾಗಿ ಉಪಯೋಗಿಸುವುದರಿಂದ ಈ ಹೆಸರು.

**कर्णपूरण ಕರ್ಣಪೂರಣ** (न०) ತೈಲ ಮುಂತಾದುವನ್ನು ಕಿವಿಯಲ್ಲಿ ತುಂಬುವುದು, ಕಿವಿಯ ರಂಧ್ರವನ್ನು ತೈಲದಿಂದ ತುಂಬುವುದು. कर्णयोः पूरणम्। ಮನುಷ್ಯನ ಶರೀರವು ಸ್ನೇಹದಿಂದ ಕೂಡಿದುದು. ಪ್ರಾಣಗಳೂ ಸ್ನೇಹಪ್ರಚುರವಾದುವು. ಈ ಕಾರಣದಿಂದ ಸ್ನೇಹವನ್ನು ಪಾನ. ಅನುವಾಸನ (ಪಿಚಕಾರಿ ಪ್ರಯೋಗ), ಮಸ್ತಿಷ್ಕ, ಶಿರೋಬಸ್ತಿ, ಉತ್ತರಬಸ್ತಿ, ನಸ್ಯ, ಕರ್ಣಪೂರಣ, ಅಭ್ಯಂಗ ಮತ್ತು ಭೋಜನ ಈ ಕಾರ್ಯಗಳಲ್ಲಿ ಉಪಯೋಗಿಸಬೇಕು. "स्नेहसारोऽयं पुरुषः। प्राणाश्च स्नेहभयिष्ठाः स्नेहसाध्याश्च भवन्ति। स्नेहो हि पानानुवासनमस्तिष्कशिरोबस्त्युत्तरबस्तिनस्यकर्णपूरणगात्राभ्यङ्गभोजनेषूपयोज्यः" सुश्रुत० चिकित्सा० ३१-३।

**कर्णप्रणाद ಕರ್ಣಪ್ರಣಾದ** (पु०) ಕಿವಿಯ ರೋಗದ ಒಂದು ಭೇದ. ವಾಯುವು ನಾಡಿಯಲ್ಲಿ ತನ್ನ ದಾರಿಯನ್ನು ಬಿಟ್ಟು ತಲೆಯಲ್ಲಿ ಅಡ್ಡದಾರಿಯಲ್ಲಿ ಸಂಚರಿಸುವುದರಿಂದುಂಟಾಗುವ ನಾನಾವಿಧ ಶಬ್ದಗಳು. ಈ ರೀತಿ ತಲೆಯಲ್ಲಿ ವಾಯುವಿನ ತಿರ್ಯಕ್ ಸಂಚಾರದಿಂದ ಕಿವಿಯಲ್ಲಿ ನಾನಾ ವಿಧ ಶಬ್ದಗಳು ಕೇಳಿಸುತ್ತವೆ. "यदा तु नाडीषु विमार्गमागतः स एव शब्दाभिवहासु तिष्ठति। शृणोति शब्दान् विविधान् तदा नरः प्रणादमेनं कथयन्ति चामयम्" सुश्रुत० उत्तर० २०-७।

**कर्णप्रतिनाह ಕರ್ಣಪ್ರತಿನಾಹ** (पु०) ಕಿವಿಯ ರೋಗದ ಒಂದು ಭೇದ. ಕರ್ಣಮಲವು ಕಫವಾಯುಗಳ ಸಂಬಂಧದಿಂದ ಕರಗಿ ಹೋಗಿ ಅದು ಮೂಗು ಮತ್ತು ಬಾಯಿ ಮೂಲಕ ಹೊರಕ್ಕೆ ಬರುವುದು "ಕರ್ಣಪ್ರತಿನಾಹ" ವೆಂಬ ಒಂದು ರೋಗ. ಇದು ತಲೆಗೆ ಬಹಳ ತೊಂದರೆ ಕೊಡುವುದು. "स कर्णविट्को द्रवतां यदा गतो विलायितो घ्राणमुखं प्रपद्यते। तदा स कर्णप्रतिनाहसंज्ञितो भवेद्विकारः शिरसोऽभितापनः" सुश्रुत० उत्तर० २०-१२।

**कर्णभूषण ಕರ್ಣಭೂಷಣ** (न०) 1. ಕಿವಿಯ ಒಡವೆ, ಕರ್ಣಾಭರಣ. कर्णं भूषयति—भूष (अलङ्कारे) "ल्युः" (३-१-१३४)। 2. ಕಿವಿಯನ್ನು ಅಲಂಕರಿಸುವಿಕೆ. भावे "ल्युट्" (३-३-११५)।

**कर्णभूषा ಕರ್ಣಭೂಷಾ** (स्त्री०) 1. ಕರ್ಣಾಭರಣ, ಕಿವಿಯ ಒಡವೆ. कर्णस्य भूषा। 2. ಕಿವಿಯನ್ನು ಅಲಂಕರಿಸುವಿಕೆ.

**कर्णमल ಕರ್ಣಮಲ** (न०) ಕಿವಿಯ ಮಲ, ಗುಗ್ಗೆ. कर्णस्य मलं गूथम्। "कर्णगूथं कर्णमलम्" हारा०।

**कर्णमुकुर ಕರ್ಣಮುಕುರ** (पु०) ತಾಟಂಕ, ಓಲೆ. कर्णस्य मुकुर इव।

**कर्णमूल ಕರ್ಣಮೂಲ** (न०) ಕಿವಿಯ ತಳಭಾಗ, ಕಿವಿಯ ಹಾಲೆ.

**कर्णमोटि(टी) ಕರ್ಣಮೋಟಿ(ಟೀ)** (स्त्री०) ಚಾಮುಂಡಾಂಬಿಕೆ, ದುರ್ಗಾದೇವಿ. कर्णं मोटयति—मुट (संचूर्णने) "इन्" (उ० ४-११७)। वा "ङीष्" (ग० ४-१-४५)।

**कर्णयोनि ಕರ್ಣಯೋನಿ** (वि०) ಕಿವಿಯೇ ಮೂಲವಾಗಿ ಉಳ್ಳ, ಕಿವಿಯೇ ಆಶ್ರಯಸ್ಥಾನವಾಗಿ ಉಳ್ಳ ಶಬ್ದ, ಬಾಣ ಮೊದಲಾದುದು. कर्णः योनिः स्थानमस्य। ಬಾಣವನ್ನು ಪ್ರಯೋಗಿಸುವಾಗ ಬಿಲ್ಲಿನ ಹೆದೆಯೊಡನೆ ಬಾಣವನ್ನು ಕಿವಿಯವರೆಗೂ ಎಳೆಯುವುದರಿಂದ ಈ ಹೆಸರು.

**कर्णरन्ध्र ಕರ್ಣರಂಧ್ರ** (न०) ಕಿವಿಯೊಳಗಿನ ವಿವರ, ಕಿವಿಯೊಳಗೆ ಶಬ್ದವು ಪ್ರವೇಶಿಸುವ ದಾರಿ, ಶ್ರೋತ್ರೇಂದ್ರಿಯದ ದ್ವಾರ.

**कर्णरोग ಕರ್ಣರೋಗ** (पु०) ಕಿವಿಯ ರೋಗ, ಕಿವಿಯಲ್ಲಿ ಉಂಟಾಗುವ ವ್ಯಾಧಿ. ["कर्णगतरोग" ಪದದಲ್ಲಿ ನೋಡಿ.]

**कर्णरोगविज्ञान ಕರ್ಣರೋಗವಿಜ್ಞಾನ** (न०) 1. ಕಿವಿಯ ರೋಗಗಳ ವಿಷಯವನ್ನು ತಿಳಿಯುವಿಕೆ. 2. ಕಿವಿಯ ರೋಗಗಳ ನಿರೂಪಣೆ.

**कर्णलता ಕರ್ಣಲತಾ** (स्त्री०) ಹೊರಕಿವಿಯ ಮೆದುವಾದ ತಳಭಾಗ, ಕಿವಿಯ ಹಾಲೆ. कर्णयोर्लतेव। "तच्चापयोः कर्णलते भ्रुवोर्ज्ये वंशत्वगंशौ चिपिटे किमस्याः" नैष० ७-६५। **-मय -ಮಯ.** ಕಿವಿಯ ಹಾಲೆ ರೂಪವಾದ. "मन्येऽमुना कर्णलतामयेन पाशद्वयेन च्छिदुरेतरेण" नैष० ७-६४।

**कर्णवत् ಕರ್ಣವತ್** (वि०) 1. ಕಿವಿಯುಳ್ಳವನು, ಕಿವಿಯಿಂದ ಕೂಡಿದವನು. कर्णोऽस्यास्ति "मतुप्" (५-२-९४)। 2. ಉದ್ದವಾದ ಕಿವಿಯುಳ್ಳ, ಜೋಲು ಕಿವಿಯುಳ್ಳ. विवृद्धौ कर्णौ यस्य (ग० ५-२-११७)।

**कर्णवर्जित-हीन ಕರ್ಣವರ್ಜಿತ-ಹೀನ** (पु०) 1. ಸರ್ಪ, ಹಾವು. कर्णेन श्रोत्रेण श्रोत्रेन्द्रियेण वा वर्जितः हीनो वा। ಸರ್ಪಕ್ಕೆ ಕಿವಿಯಿಲ್ಲ. ಕಿವುಡನಿಗೆ ಶಬ್ದವನ್ನು ಕೇಳುವ ಶಕ್ತಿಯಿಲ್ಲ. (वि०) 2. ಕಿವಿಯಿಲ್ಲದವನು, ಶ್ರೋತ್ರೇಂದ್ರಿಯವಿಲ್ಲದವನು, ಕಿವುಡ.

**कर्णविट्(ष्) ಕರ್ಣವಿಟ್(ಷ್)** (स्त्री०) ಕರ್ಣಮಲ, ಕಿವಿಯ ಗುಗ್ಗೆ. कर्णस्य विट्। "वसाशुक्रमसृङ्मज्जा मूत्रविट्घ्राणकर्णविट्। श्लेष्माश्रु दूषिका स्वेदो द्वादशैते नृणां मलाः" मनु० ५-१३५। **-विट्कम् -ವಿಟ್ಕಮ್.** "शोधयेत् कर्णविट्कं तु भिषक् सम्यक् शलाकया" सुश्रुत० उत्तर० २१-५५।

**कर्णवेध ಕರ್ಣವೇಧ** (पु०) ಕಿವಿಯನ್ನು ಚುಚ್ಚುವಿಕೆ, ಶಾಸ್ತ್ರದಂತೆ ಕಿವಿ ಚುಚ್ಚುವುದು. कर्णयोर्वेधः। "ल्युट्" **-वेधनम् -ವೇಧನಮ್.** ಕಿವಿ ಚುಚ್ಚುವುದಕ್ಕೆ ಮುಹೂರ್ತ: ಚೈತ್ರ ಮತ್ತು ಪುಷ್ಯ ಮಾಸಗಳು, ಅವಮದಿನ (ಮೂರು ತಿಥಿಗಳಿರುವ ದಿನ) ವಿಷ್ಣುವು ಮಲಗಿರುವ ಮಾಸಗಳು, ಜನ್ಮಮಾಸ, ರಿಕ್ತ (ಚತುರ್ಥಿ, ನವಮಿ ಮತ್ತು ಚತುರ್ದಶಿ) ತಿಥಿಗಳು, ಸಮವರ್ಷ, ಜನ್ಮನಕ್ಷತ್ರ ಇವನ್ನು ಬಿಟ್ಟು 6, 7, 8ನೆಯ ಮಾಸಗಳಲ್ಲಿ, ಜನ್ಮದಿನದಿಂದ 12, 16ನೆಯ ದಿನಗಳಲ್ಲಿ, ವಿಷಮ (1, 3, 5 ಇತ್ಯಾದಿ) ಸಂವತ್ಸರಗಳಲ್ಲಿ ಸೋಮ, ಬುಧ, ಗುರು, ಶುಕ್ರವಾರಗಳಲ್ಲಿ ಪುನರ್ವಸು, ಶ್ರವಣ, ಧನಿಷ್ಠೆ, ಮೃದು ಮತ್ತು ಕ್ಷಿಪ್ರ ನಕ್ಷತ್ರಗಳಲ್ಲಿ ಅಷ್ಟಮಶುದ್ಧಿಯಿರುವ ಲಗ್ನದಲ್ಲಿ ಕೇಂದ್ರ ತ್ರಿಕೋಣಗಳಲ್ಲಿ ಶುಭಗ್ರಹಗಳೂ 3, 6, 11ರಲ್ಲಿ ಪಾಪಗ್ರಹಗಳೂ ಲಗ್ನದಲ್ಲಿ ಗುರುವೂ ಇರುವಾಗ ಗುರು ಶುಕ್ರರ ಲಗ್ನದಲ್ಲಿ ಮಕ್ಕಳಿಗೆ ಕಿವಿಯನ್ನು ಚುಚ್ಚಬೇಕು. "हित्वैतांश्चैत्रपौषावमहरिशयनं जन्ममासं च रिक्तां युग्माब्दं जन्मतारामृतुमुनिवसुभिः सम्मिते मास्यथो वा। जन्माहात्सूर्यभूपैः परिमितदिवसे ज्ञेज्यशुक्रेन्दुवारेऽथोजाब्दे विष्णुयुग्मादिति मृदुलघुभैः कर्णवेधः प्रशस्तः। संशुद्धे मृतिभवने त्रिकोणकेन्द्रत्र्यायस्थैः शुभखचरैः कवीज्यलग्ने। पापाख्यैररिसहजायगेहसुस्थैर्लग्नस्थे त्रिदशगुरौ शुभावहः स्यात्" मु० चि०।

**कर्णवेधनी ಕರ್ಣವೇಧನೀ** (स्त्री०) ಕಿವಿಚುಚ್ಚುವ ಸೂಜಿ. कर्णौ विध्यतेऽनया-व्यध (ताडने) कर० "ल्युट्" (३-३-११७)। "ङीप्" (४-१-१५)। "सौवर्णी राजपुत्रस्य राजती विप्रवैश्ययोः। शूद्रस्य चायसी सूची मध्यमाष्टाङ्गुलात्मिका"।

**कर्णवेष्ट ಕರ್ಣವೇಷ್ಟ** (पु०) 1. ಕರ್ಣಕುಂಡಲ, ಹತ್ತ ಕಡಕು. कर्णौ वेष्टयेते अनेन "घः" (३-३-११८)। 2. ಕ್ರೋಧವಶನ ವಂಶದ ಒಬ್ಬ ದೊರೆ. "गणः क्रोधवशो नाम यस्ते राजन् प्रकीर्तितः। ततः संजज्ञिरे वीराः क्षिताविह नराधिपाः। मर्दकः कर्णवेष्टश्च सिद्धार्थः कीटकस्तथा" भा० आदि० ६७। कर्त० "ण्वुल्" (३-१-१३३)। **-वेष्टकः -ವೇಷ್ಟಕಃ.** कर० "ल्युट्" (३-३-११७)। **-वेष्टनम् -ವೇಷ್ಟನಮ್.** 1. ಕರ್ಣಕುಂಡಲ, ಹತ್ತ ಕಡಕು. 2. ಕಿವಿಯನ್ನು ಅಲಂಕರಿಸುವಿಕೆ. भावे "ल्युट्" (३-३-११५)।

**कर्णव्यध ಕರ್ಣವ್ಯಧ** (पु०) ಕಿವಿಚುಚ್ಚುವಿಕೆ.

**कर्णव्यधविधि ಕರ್ಣವ್ಯಧವಿಧಿ** (पु०) ಕಿವಿಚುಚ್ಚುವ ಕ್ರಮ. [ವಿವರಕ್ಕೆ "कर्णवेध" ಪದದಲ್ಲಿ ನೋಡಿ.]

**कर्णशष्कुली ಕರ್ಣಶಷ್ಕುಲೀ** (स्त्री०) ಕಿವಿಯೊಳಗೆ ಶಬ್ದವು ಪ್ರವೇಶಿಸುವ ದಾರಿ, ಕರ್ಣಗೋಳಕ, ಕಿವಿಯೊಳಗಿನ

ರಂಧ್ರ. कर्णयोः शष्कुलीव। "अवलम्बितकर्णशष्कुलीकलसीकं रचयन्नवोचत" नैष० २-८।

**कर्णशूल ಕರ್ಣಶೂಲ** (ಪುಂ०) ಒಂದು ವಿಧ ಕಿವಿಯ ರೋಗ. कर्णस्य शूलम्। ಕಿವಿಯೊಳಗೆ ವಾತವು ತನ್ನ ದಾರಿಯನ್ನು ಬಿಟ್ಟು ಬೇರೆ ಕಡೆಗೆ ಸಂಚರಿಸಿದರೆ ಶ್ಲೇಷ್ಮ ಪಿತ್ತಗಳ ಮಧ್ಯೆ ಸೇರಿಕೊಂಡು ಕಿವಿಯೊಳಗೆ ಬಹಳ ವೇದನೆಯನ್ನು ಉಂಟುಮಾಡುವುದು. ಇದೇ "ಕರ್ಣಶೂಲ" ವೆನಿಸುವುದು. "समीरणः श्रोत्रगतोऽन्यथाचरः समन्ततः शूलमतीव कर्णयोः। करोति दोषैश्च यथास्वमावृतः स कर्णशूलः कथितो दुराचरः" सुश्रुत० उत्तर० २०-६।

**कर्णशोभन ಕರ್ಣಶೋಭನ** (वि०) ಕಿವಿಯನ್ನು ಅಲಂಕರಿಸುವ ಒಡವೆ, ಕರ್ಣಾಭರಣ, ಪತ್ತಕಡಕು ತಾಟಂಕ (ಓಲೆ) ಮೊದಲಾದುವು. कर्णं शोभयति—शुभ (दीप्तौ) + णिच् "ल्युः" (३-१-१३४)।

**कर्णश्रव ಕರ್ಣಶ್ರವ** (वि०) ಕಿವಿಯಿಂದ ಕೇಳಲು ಯೋಗ್ಯವಾದ ಶಬ್ದವುಳ್ಳ, (ಶಬ್ದಕ್ಕೆ ಆಶ್ರಯವಾದ) ವಾಯು ಮೊದಲಾದುದು. श्रूयते इति श्रवः शब्दः—कर्णेन श्रवः श्रवणयोग्यः शब्दो यत्र। "कर्णश्रवेऽनिले रात्रौ दिवा पांसुसमूहने। एतौ वर्षास्वनध्यायावध्यायज्ञाः प्रचक्षते" मनु० ४-१०२। [ವರ್ಷರ್ತುವಿನಲ್ಲಿ ರಾತ್ರಿ ಕಾಲದಲ್ಲಿ ಕಿವಿಗೆ ಕೇಳಿಸುವಷ್ಟು ಶಬ್ದವನ್ನುಂಟುಮಾಡುವ ಮತ್ತು ಹಗಲಲ್ಲಿ ಧೂಳನ್ನು ಮೇಲಕ್ಕೆಬ್ಬಿಸುವಷ್ಟು ವೇಗವಾದ ಗಾಳಿಯು ಬೀಸಿದರೆ ಅಂದು ಅನಧ್ಯಯನವೆಂದು ತಿಳಿಯಬೇಕು.]

**कर्णसंस्राव ಕರ್ಣಸಂಸ್ರಾವ** (पुं०) ಕಿವಿಯಿಂದ ಕೀವು ಸುರಿಯುವಿಕೆ. ತಲೆಗೆ ಏಟು ಬೀಳುವುದರಿಂದ ಅಥವಾ ನೀರಿನಲ್ಲಿ ಮುಳುಗುವುದರಿಂದ ಅಥವಾ ಕಿವಿಯೊಳಗೆ ಕಟ್ಟಿದ ಗೆಡ್ಡೆಯು ಮಾಗಿ ಒಡೆಯುವುದರಿಂದ ಕಿವಿಯಿಂದ ಕೀವು ಸುರಿಯುವುದು. ಇದು "ಕರ್ಣಸಂಸ್ರಾವ" ವೆಂಬ ಒಂದು ಕಿವಿಯ ರೋಗ. "शिरोऽभिघातादथवा निमज्जतो जले प्रपाकादथवाऽपि विद्रधेः। स्रवेत्तु पूयं श्रवणोऽनिलावृतः स कर्णसंस्राव इति प्रकीर्तितः" सुश्रुत० उत्तर० २०-१०।

**कर्णसुभग ಕರ್ಣಸುಭಗ** (वि०) ಕಿವಿಗೆ ಇಂಪಾದ, ಕೇಳಲು ಸಂತೋಷಕರವಾದ.

**कर्णस्रोतोभव ಕರ್ಣಸ್ರೋತೋಭವ** (पुं०) ಮಹಾವಿಷ್ಣುವಿನ ಕರ್ಣಮಲದಿಂದ ಹುಟ್ಟಿದ ಮಧುಕೈಟಭರೆಂಬ ರಾಕ್ಷಸರು. [ಕಲ್ಪಾದಿಯಲ್ಲಿ ಮಹಾವಿಷ್ಣುವು ವಟಪತ್ರಶಾಯಿಯಾಗಿ ಮಲಗಿದ್ದಾಗ ನಾಭಿಕಮಲದಿಂದ ಚತುರ್ಮುಖನು ಆವಿರ್ಭವಿಸುವನು. ಕೆಲವು ಕಾಲದ ಬಳಿಕ ಮಧು ಮತ್ತು ಕೈಟಭರೆಂಬ ರಾಕ್ಷಸರಿಬ್ಬರು ಮಹಾವಿಷ್ಣುವನ್ನು ಕಂಡು ವಿಸ್ಮಿತರಾಗಿ ಚತುರ್ಮುಖನನ್ನು ಪೀಡಿಸತೊಡಗಿದರು. ಬ್ರಹ್ಮನು ಭಯದಿಂದ ನಾಭಿಕಮಲದ ನಾಳವನ್ನು ಅಲುಗಾಡಿಸಲಾಗಿ ವಿಷ್ಣುವು ಯೋಗನಿದ್ರೆಯಿಂದ ಎಚ್ಚೆತ್ತು ರಾಕ್ಷಸರನ್ನು ಕಂಡು "ನಿಮಗೆ ಬೇಕಾದ ವರವನ್ನು ಕೇಳಬಹುದೆಂದು ಹೇಳಲು ರಾಕ್ಷಸರು ನಕ್ಕು "ನಾವೇ ನಿನಗೆ ಬೇಕಾದ ವರಗಳನ್ನು ಕೊಡುವೆವು. ಕೇಳಬಹುದು" ಎಂದು ಹೇಳಿದರು. ಆಗ ಲೋಕಕಂಟಕರಾದ ಅವರ ನಿಗ್ರಹಕ್ಕಾಗಿ ವಿಷ್ಣುವು "ನೀವೇ ನನ್ನಿಂದ ಹತರಾಗಬೇಕು" ಎಂದು ವರವನ್ನು ಕೇಳಲು ಅದಕ್ಕೆ ಅವರು ಸಮ್ಮತಿಸಿದರು. ಬಳಿಕ ವಿಷ್ಣುವು ತನ್ನ ಚಕ್ರದಿಂದ ಅವರ ಶಿರಸ್ಸನ್ನು ಕತ್ತರಿಸಿದನು.] भा० वन० २०६।

**कर्णस्रोतस् ಕರ್ಣಸ್ರೋತಸ್** (न०) ಕರ್ಣಮಲ, ಕಿವಿಯ ಗುಗ್ಗೆ. कर्णस्य स्रोत इव।

**कर्णहीन ಕರ್ಣಹೀನ** (वि०) ಕಿವಿಯಿಲ್ಲದ, ಶ್ರೋತ್ರೇಂದ್ರಿಯವಿಲ್ಲದ, ಶಬ್ದ ಕೇಳುವ ಶಕ್ತಿಯಿಲ್ಲದ, ಕಿವುಡ. कर्णेन हीनः।

**कर्णाकर्णि ಕರ್ಣಾಕರ್ಣಿ** (अव्य०) ಕರ್ಣಪರಂಪರೆಯಿಂದ (ಕಿವಿಯಿಂದ ಕಿವಿಗೆ) ಕೇಳಿ ಹರಡಿದ ಮಾತು. कर्णे कर्णे गृहीत्वा प्रवृत्तं कथनम्। कर्मव्य० "इच्" (५-४-१२७)। "कर्णाकर्णि हि कपयः कथयन्ति च तत्कथाम्" रामा०।

**कर्णाट ಕರ್ಣಾಟ** (पुं०ब०व०) ಕರ್ಣಾಟಕ ದೇಶ, ಕನ್ನಡನಾಡು. ಕನ್ನಡಿಗರ ದೇಶ. कर्णेषु अटति—प्रथितयशसां एतद्देशस्थभूपालानां गुणकीर्तनेन सर्वेषां कर्णेषु भ्रमति—कर्ण + अट (गतौ) "अच्" (३-१-१३४)। ಈ ದೇಶದ ರಾಜರ ಗುಣಕೀರ್ತನದಿಂದ ಈ ದೇಶದ ಹೆಸರು ಎಲ್ಲರ ಕಿವಿಯಲ್ಲೂ ಬೀಳುವುದರಿಂದ ಇದಕ್ಕೆ "ಕರ್ಣಾಟ" ವೆಂಬ ಹೆಸರಾಯಿತು. ಮೊಗಲರ ಆಡಳಿತದನಂತರ ಇಂಗ್ಲೀಷರ ರಾಜ್ಯಭಾರ ಕಾಲದಲ್ಲಿ ಕರ್ಣಾಟಕದೇಶದ ಅನೇಕ ಭಾಗಗಳು ಮದ್ರಾಸು ಆಧಿಪತ್ಯದ ದಕ್ಷಿಣ ಕನ್ನಡ ಜಿಲ್ಲೆ, ಅನಂತಪುರ, ಸೇಲಂ, ಕೊಯಮತ್ತೂರು, ಬಳ್ಳಾರಿ ಜಿಲ್ಲೆಗಳಲ್ಲೂ ಮುಂಬಯಿ ರಾಜ್ಯದ ಧಾರವಾಡ, ಬಿಜಾಪುರ, ಬೆಳಗಾವಿ, ಉತ್ತರಕನ್ನಡ ಜಿಲ್ಲೆಗಳಲ್ಲೂ ಸೋಲಾಪುರ ಹೈದರಾಬಾದು ರಾಜ್ಯಗಳಲ್ಲೂ ಹಂಚಿಹೋಗಿದ್ದು ನಮ್ಮ ದೇಶದ ಧುರೀಣರ ಅನೇಕ ವರ್ಷಗಳ ಹೋರಾಟದ ಫಲವಾಗಿ ಈಗ ಏಕೀಕೃತವಾಗಿ ಈ ದೇಶವು "ಅಖಂಡ ಕರ್ಣಾಟಕ"

ಅಥವಾ "ವಿಶಾಲ ಮೈಸೂರು" ಎಂಬ ಅಭಿಧಾನದಿಂದ ಪರಿಶೋಭಿಸುತ್ತಿದೆ. 2. ಕರ್ಣಾಟಕ ದೇಶದ ಜನರು. (ಪುಂ) 3. ಕರ್ಣಾಟಕದೇಶದ ದೊರೆ. "रामनाथं समारभ्य श्रीरङ्गान्तं किलेश्वरि। कर्णाटदेश इत्युक्तो राज्यसाम्राज्यदायकः"। "कर्णाटाः कांस्यकुट्टाश्च पद्मजालाः सतीनराः। दाक्षिणात्याः पुलिन्दाश्च शेबेरास्तङ्कणाः खषाः" भा० सभा० ७८-९८। "तेषां मूर्ध्नि ददाति वामचरणं कर्णाटसजप्रिया" उद्धृ०।

**कर्णाटक ಕರ್ಣಾಟಕ** (ಪುಂಬಂವಂ) "कर्णाट" ಪದದ ಅರ್ಥ. "कोङ्कवेङ्ककुटकान् दक्षिणकर्णाटकान् देशान् यदृच्छयोपगतः........." भाग० ५-६-८।

**कर्णाटकदेश ಕರ್ಣಾಟಕದೇಶ** (ಪುಂ) ಕನ್ನಡನಾಡು.

**कर्णाटकभाषा ಕರ್ಣಾಟಕಭಾಷಾ** (स्त्री०) ಕನ್ನಡನುಡಿ.

**कर्णानुज ಕರ್ಣಾನುಜ** (ಪುಂ) ಕರ್ಣನ ತಮ್ಮ, ಯುಧಿಷ್ಠಿರ, ಧರ್ಮರಾಜ. कर्णस्य अनुजः।

**कर्णान्तिक ಕರ್ಣಾಂತಿಕ** (ನಂ) ಕಿವಿಯ ಸಮೀಪ, ಕಿವಿಯ ಹತ್ತಿರದ ಜಾಗ. "न नीतमन्येन नतिं कदाचित्कर्णान्तिकप्राप्तगुणं क्रियासु" माघ० ३-२०।

**कर्णान्दु ಕರ್ಣಾಂದು** (स्त्री०) 1. ಕರ್ಣಪಾಲಿ, ಹೊರಕಿವಿಯ ಮೃದುವಾದ ತಳಭಾಗ, ಕಿವಿಯ ಹಾಲೆ. कर्णस्यान्दुरिव। 2. ಮೇಲಿನ ಕಿವಿಗೆ ಹಾಕುವ ಚಂದ್ರಮುರುವೆಂಬ ಒಂದು ಆಭರಣ. "उत्क्षिप्तिका तु कर्णान्दुः" अभि० चि०।

**कर्णाभरण ಕರ್ಣಾಭರಣ** (न०) ಕಿವಿಯ ಒಡವೆ, ತಾಟಂಕ, ಓಲೆ, ಹತ್ತುಕಡಕು. कर्णस्याभरणम्। "एतत्पट्टांशुकयुगलं कर्णाभरणं च दत्तम्" रत्ना० ४।

**कर्णामृत ಕರ್ಣಾಮೃತ** (ನಂ) ಕಿವಿಗೆ ಅಮೃತದಂತಿರುವ ಮಾತು, ಕಿವಿಗೆ ಇಂಪಾದ ಮಾತು. कर्णस्यामृतमिव।

**कर्णारि ಕರ್ಣಾರಿ** (ಪುಂ) 1. ಕರ್ಣನ ವೈರಿ, ಅರ್ಜುನ. कर्णस्यारिः। 2. ನದೀಸರ್ಜವೃಕ್ಷ.

**कर्णालङ्करण ಕರ್ಣಾಲಂಕರಣ** (ನಂ) ಕಿವಿಯನ್ನು ಅಲಂಕರಿಸುವಿಕೆ, ಕಿವಿಯನ್ನು ಒಡವೆಗಳಿಂದ ಶೃಂಗರಿಸುವಿಕೆ. कर्णस्यालङ्करणम्।

**कर्णालङ्कृति ಕರ್ಣಾಲಂಕೃತಿ** (स्त्री०) ಕಿವಿಯನ್ನು ಒಡವೆಗಳಿಂದ ಅಲಂಕರಿಸುವಿಕೆ. कर्णस्यालङ्कृतिः।

**कर्णास्फाल ಕರ್ಣಾಸ್ಫಾಲ** (ಪುಂ) ಆನೆಯ ಕಿವಿಯ ಹೊಡೆತ. कर्णस्यास्फालः।

**कर्णि ಕರ್ಣಿ** (ಪುಂ) 1. ತುದಿಯಲ್ಲಿ ಕಿವಿಯ ಆಕಾರವುಳ್ಳ ಬಾಣ. कर्ण (भेदने) कर० "इन्" (उ० ४-११७)। 2. ಭೇದನ, ಒಡೆಯುವುದು. भावे "इन्"।

**कर्णिक ಕರ್ಣಿಕ** (वि०) ಉದ್ದವಾದ ಕಿವಿಯುಳ್ಳ, ಜೋಲು ಕಿವಿಯುಳ್ಳ. विवृद्धौ कर्णौ यस्य — कर्ण "ठन्" (ग० ५-२-११७)।

**कर्णिका ಕರ್ಣಿಕಾ** (स्त्री०) 1. ಹೆಂಗಸರ ಕಿವಿಯ ಆಭರಣ, ಓಲೆ. कर्ण "कन्" (४-३-६५)। "टाप्" (४-१-४)। "कर्णिका तालपत्रं स्यात्कुण्डलं कर्णवेष्टनम्" अम०। 2. ಒಣಹುಲ್ಲು. "पलालोऽस्त्री कर्णिका स्त्री पूलोऽस्त्री तृणपञ्चिका" वैज०। 3. ಆನೆಯ ಸೊಂಡಲಿನ ತುದಿಯ ಭಾಗ. 4. ತಾವರೆಯ ಬೀಜಕೋಶ. 5. ಕೈಮಧ್ಯದ ಬೆರಳು. "कर्णिका करिहस्ताग्रे करमध्याङ्गुलावपि" मेदि०। 6. ಅಗ್ನಿಮಂಥವೃಕ್ಷ. 7. ಬಲಮುರಿಗಿಡ. 8. ಹಣ್ಣಿನ ಕಾವು, -ತೊಟ್ಟು. 9. (ಎಳೆದರೆ ಬಿಗಿಯುವಂತಹ) ಹಗ್ಗದ ಸರಿಗಂಟುಳ್ಳ ಕುಣಿಕೆ. "रज्जुः सा बन्धनी तन्त्री त्वल्पा पाशस्तु कर्णिका" वैज०।

**कर्णिकाचल ಕರ್ಣಿಕಾಚಲ** (ಪುಂ) ಸುಮೇರುಪರ್ವತ. कर्णिकायां स्थितोऽचलः। "एषां मध्ये इलावृतं नामाभ्यन्तरवर्षं यस्य नाभ्यामवस्थितः सर्वतः सौवर्णः कुलगिरिराजो मेरुर्द्वीपायामसमुन्नाहः कर्णिकाभूतः कुवलयकमलस्य मूर्धनि द्वात्रिंशत्सहस्रयोजनविततः मूले षोडशसहस्रं तावतान्तर्भूम्यां प्रविष्टः" भाग० ५-१६-७।

**कर्णिकार ಕರ್ಣಿಕಾರ** (ಪುಂ) 1. ಬೆಟ್ಟಗಣಿಗಿಲೆ ಗಿಡ. 2. ಕಕ್ಕೆ ಗಿಡ. कर्णि भेदनं करोति — डु कृञ् (करणे) "अण्" (३-२-१)। कर्णिकामियर्ति — ऋ (गतौ "अण्" वा। "कर्णिकारः पुमानारग्वधद्रौ च द्रुमोत्पले" मेदि०। (ನಂ) 3. ಗಣಿಗಿಲೆ ಹೂವು. "वर्णप्रकर्षे सति कर्णिकारं दुनोति निर्गन्धतया स्म चेतः" कुमा० ३-२८।

**कर्णिकिका ಕರ್ಣಿಕಿಕಾ** (स्त्री) ಕರುಹಾಕಿದ ಎಳೆಯ ಹಸು, ಕಡಸು.

**कर्णिन् ಕರ್ಣಿನ್** (ಪುಂ) 1. ಕುಟಿಲವಾದ ಬಾಣ, ಡೊಂಕಾಗಿರುವ ಬಾಣ. कर्णोऽस्यास्ति "इनिः" (५-२-११७)। 2. ಸಪ್ತಕುಲಪರ್ವತಗಳಲ್ಲೊಂದು. (वि०) 3. ಉದ್ದದ ಕಿವಿಯುಳ್ಳ, ಜೋಲು ಕಿವಿಯುಳ್ಳ. विवृद्धौ कर्णौ यस्य "इनि" (ग० ५-२-११७)। "करोति कर्णिनो यस्तु यस्तु खड्गादिकृन्नरः। प्रयातस्तौ विशसने नरके भृशदारुणे" विष्णुपु० १-६-१७।

**कर्णिल ಕರ್ಣಿಲ** (ವಿ०) ಉದ್ದವ ಕಿವಿಯುಳ್ಳ, ಜೋಲು ಕಿವಿಯುಳ್ಳ, कर्ण "इलच्" (ग० ५-२-११७)।

**कर्णी ಕರ್ಣೀ** (स्त्री०) 1. "कर्णिन्" ಪದದ 1ನೆಯ ಅರ್ಥ. 2. ಮೂಲದೇವನ ತಾಯಿ.

**कर्णीरथ ಕರ್ಣೀರಥ** (पु०) ಪಲ್ಲಕ್ಕಿ, ಹೆಗಲಮೇಲೆ ಹೊರ ಬಹುದಾದ ಒಂದು ವಾಹನ, ಮೇನಾ. कर्णी स्कन्धवाह्यः, कर्णी चासौ रथश्च। दीर्घः (६-३-१३७)। "श्वश्रूजनानुष्ठितचारुवेषां कर्णीरथस्थां रघुवीरपत्नीम्" रघु० १४-१३।

**कर्णीसुत ಕರ್ಣೀಸುತ** (पु०) ಚೌರ್ಯಶಾಸ್ತ್ರಪ್ರವರ್ತಕನಾದ ಮೂಲದೇವ. "कर्णीसुतः करटकः स्तेयशास्त्रप्रवर्तकः। तस्य ख्यातौ सखायौ द्वौ विपुलाचलसंज्ञकौ"। "कर्णीसुतकथेव सन्निहितविपुलाचला" काद०। "कर्णीसुतप्रहिते च पथि मतिमकरवम्" दशकु०।

**कर्णेचुरुचुरा ಕರ್ಣೇಚುರುಚುರಾ** (स्त्री०) ಕಿವಿಯಲ್ಲಿ ಮಾತಾಡುವಿಕೆ. पात्रे समितादिः (२-१-४८)। एवं कर्णेटिरिटिरा।

**कर्णेजप ಕರ್ಣೇಜಪ** (पु०) 1. ಚಾಡಿಕೋರ. ಚಾಡಿಮಾತು ಹೇಳುವವನು. कर्णे जपति — जप (व्यक्तायां वाचि) "अच्" (३-२-१३)। सप्तम्या अलुक् (६-३-९)। "कर्णेजपैराहितराज्यलोभा" भट्टि० ३-७। 2. ಕಿವಿಯಲ್ಲಿ ಮಾತಾಡುವವನು.

**कर्णेन्दु ಕರ್ಣೇಂದು** (पु०) ಅರ್ಧಚಂದ್ರಾಕಾರದ ಒಂದು ಕರ್ಣಾಭರಣ, "ಚಂದ್ರಮುರು" ಎಂಬ ಒಂದು ಕಿವಿಯ ಒಡವೆ. कर्णे इन्दुरिव।

**कर्णोपकर्णिका ಕರ್ಣೋಪಕರ್ಣಿಕಾ** (स्त्री०) ಕಿವಿಯಿಂದ ಕಿವಿಗೆ ಪ್ರವಾದ ಹೋಗುವಿಕೆ, ಒಬ್ಬನ ಕಿವಿಯಿಂದ ಕೇಳಿದ ವಿಷಯವು ಮತ್ತೊಬ್ಬನ ಕಿವಿಗೆ ಹೋಗುವಿಕೆ. कर्णादुपकर्णोऽस्त्यस्याः "ठन्" (५-२-११५)। "प्रागेव कर्णोपकर्णिकया श्रुतापवादक्षुभितहृदयः" पञ्चतं०।

**कर्णोर्ण ಕರ್ಣೋರ್ಣ** (पु०) ಕಿವಿಯಲ್ಲಿ ಹೆಚ್ಚು ಉಣ್ಣೆಯುಳ್ಳ ಒಂದು ಮೃಗ. / कर्णे ऊर्णा यस्य। "कर्णोर्णैकपदश्वास्यैर्निर्जुष्टं वृकनाभिभिः" भाग० ४-६-२१।

**कर्ण्य ಕರ್ಣ್ಯ** (ವಿ०) ಕಿವಿಯಲ್ಲಿರುವ. ಕಿವಿಯಲ್ಲುಂಟಾದ. कर्णे भवः "यत्" (४-३-५५)।

**कर्त ಕರ್ತ** (पु०) 1. ಬಾವಿ. कर्त (शैथिल्ये) "अच्" (३-१-१३४)। 2. ಕತ್ತರಿಸುವಿಕೆ. कृती (छेदने) भावे "घञ्" (३-३-१८)। (ವಿ०) 3. ಸಡಿಲಿಸುವವನು. 4. ಕತ್ತರಿಸುವವನು. कृती "अच्" (३-१-१३४)।

**कर्तन ಕರ್ತನ** (न०) 1. ಕತ್ತರಿಸುವಿಕೆ, ಛೇದಿಸುವಿಕೆ, ಒಡೆಯುವಿಕೆ. कृती (छेदने) भावे "ल्युट्" (३-३-११५)। "गुल्मगुच्छक्षुपलताप्रतानौषधिवीरुधाम्। पूर्वस्मृतादर्धदण्डः स्थानेषूक्तेषु कर्तने" याज्ञ० २-२२९। 2. ಸಡಿಲಿಸುವಿಕೆ. कर्त (शैथिल्ये) भावे "ल्युट्" (३-३-११५)। (ವಿ०) 3. ಕತ್ತರಿಸುವವನು. 4. ಸಡಿಲಿಸುವವನು. कृती कर्त वा कर्त० "ल्युः" (३-१-१३४)। 5. ಕತ್ತರಿಸುವ ಸಾಧನ, ಕತ್ತರಿ. कृती कर० "ल्युट्" (३-३-११७)। स्त्रियां "ङीप्" (४-१-१५)। **कर्तनी ಕರ್ತನೀ.**

**कर्तयत् ಕರ್ತಯತ್** (ವಿ०) ಕತ್ತರಿಸುವಂತೆ ಮಾಡುತ್ತಿರುವ. कृती (छेदने) + णिच् "शतृ" (३-२-१२४)। स्त्रियां "ङीप्" (४-१-६)। **-यन्ती -ಯಂತೀ.**

**कर्तरी ಕರ್ತರೀ** (स्त्री०) 1. ಕತ್ತರಿ. कृती (छेदने) भावे "घञ्" (३-३-१८)। कर्तं राति — रा (दाने) "कः" (३-२-४)। गौरा० "ङीष्" (४-१-४१)। 2. ಕತ್ತಿ. 3. ಚಾಕು, ಚೂರಿ. 4. (ಜ್ಯೋತಿಷದಲ್ಲಿ ಹೇಳಿರುವ) ಕರ್ತರೀಯೋಗ; ವಿವಾಹಾದಿಲಗ್ನಕ್ಕೆ ದ್ವಾದಶ ಮತ್ತು ದ್ವಿತೀಯಸ್ಥಾನಗಳಲ್ಲಿ ಪಾಪಗ್ರಹಗಳು ಋಜು ಮತ್ತು ವಕ್ರಗತಿಗಳಲ್ಲಿದ್ದರೆ ಕರ್ತರಿಯೆಂಬ ದೋಷವುಂಟಾಗುವುದು. ಈ ಕರ್ತರೀಯೋಗದಲ್ಲಿ ವಿವಾಹಾದಿಕಾರ್ಯಗಳನ್ನು ಮಾಡಿದರೆ ಮೃತ್ಯು ದಾರಿದ್ರ್ಯ ಶೋಕಗಳುಂಟಾಗುವುವು. "लग्नात्पापावृज्वनृज्व्ययार्थस्थौ यदा तदा। कर्तरी नाम सा ज्ञेया मृत्युदारिद्र्यशोकदा" मु० चि०। स्वार्थे "कन्" **कर्तरिका ಕರ್ತರಿಕಾ.**

**कर्तव्य ಕರ್ತವ್ಯ** (ವಿ०) 1. ಕಾರ್ಯ, ಕೆಲಸ. डु कृञ् (करणे) "तव्यः" (३-१-९६)। "कर्तव्यं वो न पश्यामि स्याच्चेत्किं नोपपद्यते" कुमा० ६-६१। 2. ಅವಶ್ಯವಾಗಿ ಮಾಡಲ್ಪಡಬೇಕಾದ. "आदानस्य प्रदानस्य कर्तव्यस्य च कर्मणः। क्षिप्रमक्रियमाणस्य कालः पिबति तद्रसम्" हितो० ४-९५। 3. ಮಾಡಲ್ಪಡಲು ಯೋಗ್ಯವಾದ. "हीनसेवा न कर्तव्या कर्तव्यो महदाश्रयः" हितो० ३-११। 4. ಮಾಡಲ್ಪಡಲು ಶಕ್ಯವಾದ. 5. ಮಾಡಲ್ಪಡುವ. डु कृञ् कर्म० अर्हे शक्तौ वा "तव्यः"।

**कर्तव्यता ಕರ್ತವ್ಯತಾ** (स्त्री०) ಅವಶ್ಯವಾಗಿ ಮಾಡಲ್ಪಡಬೇಕಾಗಿರುವಿಕೆ. कर्तव्यस्य भावः "तल्" (५-१-११९)। "संविशेत्तूर्यघोषेण प्रतिबुध्येत्तथैव च। शास्त्राणि

चिन्तयेद्बुद्धया सर्वकर्तव्यतास्तथा" याज्ञ० १-३३१। "त्वः" कर्तव्यत्वम् ಕರ್ತವ್ಯತ್ವಮ್.

**कर्तित ಕರ್ತಿತ** (ನ०) 1. ಕತ್ತರಿಸುವಂತೆ ಮಾಡುವುದು. कृती (छेदने) + णिच् भावे "क्तः" (३-३-११४)। (वि०) 2. ಕತ್ತರಿಸಲ್ಪಡುವಂತೆ ಮಾಡಲ್ಪಡುವ. कृती+णिच् कर्म० "क्तः" (३-२-१०२)।

**कर्तितवत् ಕರ್ತಿತವತ್** (वि०) ಕತ್ತರಿಸುವಂತೆ ಮಾಡಿದ. कृती (छेदने) + णिच् "क्तवतुः" (३-२-१०२)। स्त्रियां "ङीप्" (४-१-६)। **-वती -ವತೀ.**

**कर्तितुकाम ಕರ್ತಿತುಕಾಮ, -मनस् -ಮನಸ್** ಕತ್ತರಿಸಲು ಅಪೇಕ್ಷೆಯುಳ್ಳ. ಕತ್ತರಿಸಲು ಮನಸ್ಸುಳ್ಳ. कर्तितुं कामो मनो वा यस्य।

**कर्तितृ ಕರ್ತಿತೃ** (वि०) ಕತ್ತರಿಸುವ. कृती (छेदने) "तृच्" (३-१-१३३)। स्त्रियां "ङीप्" (४-१-५)। **कर्तित्री ಕರ್ತಿತ್ರೀ.**

**कर्तुकाम ಕರ್ತುಕಾಮ -मनस् -ಮನಸ್** (वि०) ಮಾಡಲು ಅಪೇಕ್ಷೆಯುಳ್ಳ, ಮಾಡಲು ಮನಸ್ಸುಳ್ಳ. कर्तुं कामो मनो वा यस्य।

**कर्तृ ಕರ್ತೃ** (पु०) 1. ಜಗತ್ಸೃಷ್ಟಿಕರ್ತನಾದ ವಿಷ್ಣು. ಪರಮಾತ್ಮ. डु कृञ् (करणे) "तृच्" (३-१-१३३)। 2. ಕಾರ್ತವೀರ್ಯ ಮುಂತಾದವರನ್ನು ಕತ್ತರಿಸಿದ ವಿಷ್ಣು. (ಪರಶುರಾಮಾವತಾರದಲ್ಲಿ). कृती (छेदने) "तृच्"। (उ० २-९३)। "क्रुद्धेतोः कार्तवीर्यस्य च्छेत्ता कर्तेति शब्द्यते" इति निरुक्तिः। "करणं कारणं कर्ता विकर्ता गहनो गुहः"। "क्रोधहा क्रोधकृत् कर्ता" वि० स०। (वि०) 3. ಕಾರ್ಯ ಮಾಡುವವನು. ಈ ಕರ್ತೃವು ಸಾತ್ವಿಕ. ರಾಜಸ ಮತ್ತು ತಾಮಸಗಳೆಂದು ಮೂರು ವಿಧ. (1) ಫಲಾಪೇಕ್ಷೆಯಿಲ್ಲದೆ ಅಭಿಮಾನಶೂನ್ಯನಾಗಿ ಧೈರ್ಯ ಮತ್ತು ಉತ್ಸಾಹಗಳಿಂದ ಕೂಡಿ ಫಲಸಿದ್ಧಿ ಅಸಿದ್ಧಿಗಳಿಂದ (ಕಾರ್ಯಕೈಗೂಡುವಿಕೆ ಅಥವಾ ಕೈಗೂಡದಿರುವಿಕೆಯಿಂದ) ಉಬ್ಬು ತಗ್ಗುಗಳಿಲ್ಲದೆ ಇರುವವನು **"ಸಾತ್ವಿಕ"**. "मुक्तसङ्गोऽनहंवादी धृत्युत्साहसमन्वितः। सिद्ध्यसिद्ध्योर्निर्विकारः कर्ता सात्त्विक उच्यते" गीता० १८-२६। (2) ಕೀರ್ತಿಕಾಮನಾಗಿ ಫಲಾಪೇಕ್ಷೆಯಿಂದ ದುರಾಶಾಪರನಾಗಿ ಇತರರನ್ನು ಪೀಡಿಸುವವನಾಗಿ ಕರ್ಮಾರ್ಹತೆಯಿಲ್ಲದೆ ಸಿದ್ಧಿ ಅಸಿದ್ಧಿಗಳಲ್ಲಿ ಹರ್ಷ ಶೋಕಗಳಿಂದ ಕೂಡಿದವನು **"ರಾಜಸನು"**. "रागी कर्मफलप्रेप्सुर्लुब्धो हिंसात्मकोऽशुचिः। हर्षशोकान्वितः कर्ता राजसः परिकीर्तितः" गीता १८-२७। (3) ಶಾಸ್ತ್ರೀಯ ಕರ್ಮಾನರ್ಹನೂ ತಿಳಿವಳಿಕೆಯಿಲ್ಲದೆ ಅಹಂಕಾರಿಯಾಗಿಯೂ ವಂಚಕನಾಗಿಯೂ ಪರಪೀಡಾಭಿರುಚಿಯುಳ್ಳವನಾಗಿಯೂ ಕರ್ತವ್ಯದಲ್ಲಿ ಸೋಮಾರಿಯಾಗಿಯೂ ಸದಾ ದುಃಖಪಡುವ ಸ್ವಭಾವದವನಾಗಿಯೂ ಇತರರಿಗೆ ದೀರ್ಘ ಕಾಲ ಅನರ್ಥವನ್ನು ಚಿಂತಿಸುವವನಾಗಿಯೂ ಇರುವವನು **"ತಾಮಸನು"**. "अयुक्तः प्राकृतः स्तब्धः शठो नैष्कृतिकोऽलसः। विषादी दीर्घसूत्री च कर्ता तामस उच्यते" गीता १८-२८। 4. ತಯಾರಿಸುವವನು. 5. ಸೃಷ್ಟಿಸುವವನು. 6. ರಚಿಸುವವನು, ನಿರ್ಮಿಸುವವನು. डु कृञ् (करणे) तच्छीलादिषु "तृन्" (३-२-१३५)। 7. ವ್ಯಾಕರಣ ಶಾಸ್ತ್ರದಲ್ಲಿ ಉಕ್ತವಾದ ಕರ್ತೃ ಸಂಜ್ಞೆಯುಳ್ಳವನು. ಇತರ ಕಾರಕಗಳಿಗೆ ಅಧೀನನಲ್ಲದೆ ಅವುಗಳ ಮೂಲಕ ಕ್ರಿಯೆಯನ್ನು ನಡೆಸುವವನು ಈ "कर्तृ" ಪದವಾಚ್ಯನು. "स्वतन्त्रः कर्ता"। क्रियायां स्वातन्त्र्येण विवक्षितोऽर्थः कर्ता स्यात्। ನೈಯಾಯಿಕ ರೀತ್ಯಾ "क्रियानुकूलकृतिमान् कर्ता" ಕಾರ್ಯೋತ್ಪಾದನೆಗೆ ಅನುಕೂಲವಾದ ಕೃತಿಯುಳ್ಳವನು ಎಂದು ಈ "कर्तृ" ಪದದ ಅರ್ಥ. "चैत्रः तण्डुलं पचति" ಎಂಬಲ್ಲಿ ಧಾತ್ವರ್ಥವಾದ ತಂಡುಲಪಚನಾನುಕೂಲಕೃತಿಗೆ ಆಶ್ರಯನಾದ ಚೈತ್ರನು "कर्तृ" ಪದವಾಚ್ಯನು. "कर्ता द्यूतच्छलानां जतुमयशरणोद्दीपनः सोऽभिमानी कृष्णाकेशोत्तरीयव्यपनयनमरुत् पाण्डवा यस्य दासाः" वेणी० ५-२६। स्त्रियाम् "ङीप्" (४-१-५)। **कर्त्री ಕರ್ತ್ರೀ.**

**कर्तृग ಕರ್ತೃಗ** (वि०) ಕಾರ್ಯ ಮಾಡುವವನನ್ನು ಸೇರುವ, ಯಜಮಾನನನ್ನು ಸೇರುವ. कर्तारं गच्छति — गम्लृ (गतौ) "डः" (वा० ३-२-४७)।

**कर्तृगामिन् ಕರ್ತೃಗಾಮಿನ್** (वि०) "कर्तृग" ಪದದ ಅರ್ಥ. कर्तारं गच्छति — गम्लृ (गतौ) "णिनिः" (३-२-७८)। स्त्रियाम् "ङीप्" (४-१-५)। **-गामिनी -ಗಾಮಿನೀ.**

**कर्तृगुप्त ಕರ್ತೃಗುಪ್ತ** (ನ०) ಕರ್ತೃಪದವು ಗುಪ್ತವಾಗಿರುವ (ಸ್ಪಷ್ಟವಾಗಿ ತೋರದಿರುವ) ವಾಕ್ಯ. "व्यामोहं तव भिन्दन्तु छिन्दन्तु दुरितानि च। कर्तृगुप्तमिमं श्लोकं ये जानन्ति विचक्षणाः" ಎಂಬಲ್ಲಿ उः (शिवः) इः (ब्रह्मा) अः (विष्णुः) ಇವು ಮೂರೂ ಸೇರಿ व्याः ಎಂದಾಗಿರುವುದು. ಇದು ಬಹುವಚನದಲ್ಲಿ व्याः ಎಂದು ಶಿವ ಬ್ರಹ್ಮ ಮತ್ತು ವಿಷ್ಣು ವಾಚಕವಾಗಿ ಇವರು ಮೂವರೂ ಮೋಹಾದಿಗಳನ್ನು ನಾಶಪಡಿಸಲಿ ಎಂದು ಅರ್ಥಕೊಡುವುದರಿಂದ ಇಲ್ಲಿ "व्याः" ಎಂಬ ಕರ್ತೃಪದವು ಗುಪ್ತವಾಗಿರುವುದು.

**कर्तृता ಕರ್ತೃತಾ** (स्त्री०) ಯಜಮಾನತನ, ಕಾರ್ಯ ಮಾಡುವವನ ದೆಸೆ. कर्तुः भावः "तल्" (५-१-११९)। "कर्तृता तदुपलम्भतोऽभवद्वृत्तिभाजि करणे यथर्त्विजि" माघ० १४-१९। "त्वः" **कर्तृत्वम् ಕರ್ತೃತ್ವಮ್.**

**कर्त्रभिप्राय ಕರ್ತ್ರಭಿಪ್ರಾಯ** (पु०) 1. ಕರ್ತೃವಿನ ಆಶಯ. कर्तुः अभिप्रायः। (वि०) 2. ಕಾರ್ಯಮಾಡುವವನನ್ನು ಸೇರುವ. कर्तारमभिप्रैति गच्छति — अभि + प्र + इण् (गतौ) "अण्" (३-२-१)। "स्वरितञितः कर्त्रभिप्राये क्रियाफले" सि० कौ० (१-३-७२)।

**कर्द—कुत्सिते शब्दे** (भ्वा० पर० अक० से०) कर्दति। चकर्द। अकर्दीत्। ಕರ್ಕಶಶಬ್ದ ಮಾಡು, ಕಾಗೆಯಂತೆ ಒರಟಾಗಿ ಕೂಗು.

**कर्द ಕರ್ದ** (पु०) ಕೆಸರು, ಒದ್ದೆಯ ಮಣ್ಣು, ತೇವದ ಮಣ್ಣು. कर्द (कुत्सिते शब्दे) "अच्" (३-१-१३४)।

**कर्दट ಕರ್ದಟ** (पु०) 1. ಕೆಸರು, ತೇವದ ಮಣ್ಣು. 2. ತಾವರೆಯ ಗೆಡ್ಡೆ. 3. ನೀರಿನಲ್ಲಿ ಬೆಳೆಯುವ ಹುಲ್ಲು ಜೊಂಡು ಮುಂತಾದುವು.

**कर्दन ಕರ್ದನ** (न०) ಹೊಟ್ಟೆಯೊಳಗಿನ ಶಬ್ದ. कर्द (कुत्सिते शब्दे) भावे "ल्युट्" (३-३-११५)।

**कर्दम ಕರ್ದಮ** (पु०) 1. ಕೆಸರು, ತೇವದ ಮಣ್ಣು, ಒದ್ದೆ ಮಣ್ಣು. कर्द (कुत्सिते शब्दे) "अमः" (उ० ४-८४)। "सरितः कुर्वती गाधाः पथश्चाश्यानकर्दमान्" रघु० ४-२४। 2. ಪಾಪ. कर्द कर० "अमः"। 3. ಬ್ರಹ್ಮನು ಪ್ರಜಾಸೃಷ್ಟಿಗಾಗಿ ಸೃಷ್ಟಿಸಿದ ಪ್ರಜಾಪತಿಗಳಲ್ಲೊಬ್ಬ, ದೇವಹೂತಿಯ ಪತಿ. "प्रजाः सृजेति भगवान् कर्दमो ब्रह्मणोदितः। सरस्वत्यां तपस्तेपे सहस्राणां समा दश" भाग० ३-२१-६। "वेदेषु कर्दमः शब्दः छायायां वर्तते स्फुटम्। बभूव कर्दमाद्बालः कर्दमस्तेन कीर्तितः" ब्रह्मवै०। 4. ಛಾಯೆ, ನೆರಳು. (न०) 5. ಮಾಂಸ. ಇದನ್ನು ತಿನ್ನುವುದರಿಂದ ಹೊಟ್ಟೆಯಲ್ಲಿ ಶಬ್ದವಾಗುವುದರಿಂದ ಈ ಹೆಸರು. (वि०) 6. ಕೆಸರಿನಿಂದ ಕೂಡಿದ. कर्दमोऽस्यास्ति "अच्" (५-२-१२७)।

**कर्दमक ಕರ್ದಮಕ** (पु०) ಕೆಸರಿನ ಗದ್ದೆಯಲ್ಲಿ ಬೆಳೆಯುವ ಬತ್ತ. कर्दमे कायति — कै (शब्दे) "कः" (३-२-४)। "लोहितशालिकलमकर्दमकपाण्डुकसुगन्धकशकुनाहृतपुष्पाण्डकपुण्डरीकमहाशालिशीतभीरुकरोध्रपुष्पकदीर्घशूक..... ......................प्रभृतयः शालयः" सुश्रुत० सूत्र० ४६-४।

**कर्दमाटक ಕರ್ದಮಾಟಕ** (पु०) ಕಸದ ಗುಂಡಿ, ತಿಪ್ಪೆ ಗುಂಡಿ. कर्दम इव आटो गतिरत्र "कप्" (५-४-१५४)।

**कर्दमित ಕರ್ದಮಿತ** (वि०) ಕೆಸರಾಗಿ[illegible]. ತೇವದ ಮಣ್ಣಿನಿಂದ ಕೂಡಿದ. कर्दमोऽस्य सञ्जातः "इतच्" (५-२-३६)।

**कर्दमिनी ಕರ್ದಮಿನೀ** (स्त्री०) ಕೆಸರಿನ ಪ್ರದೇಶ, ತೇವದ ಮಣ್ಣಿನಿಂದ ಕೂಡಿದ ದೇಶ. कर्दमानां देशः "इनिः" (५-२-१३५)। "ङीप्" (४-१-५)।

**कर्पट ಕರ್ಪಟ** (पुंन०) 1. ಜೂಲುಬಟ್ಟೆ, ಚಿಂದಿ ಬಟ್ಟೆ, ಹರುಕಲು ಬಟ್ಟೆ. कॄ (विक्षेपे) "विच्" (३-२-७५)। कर् चासौ पटश्च। 2. ಮಲಿನವಸ್ತ್ರ, ಕೊಳೆಬಟ್ಟೆ. 3. ಕರವಸ್ತ್ರ, ಮುಖದ ಬೆವರು ಮುಂತಾದುವನ್ನು ಒರಸಿಕೊಳ್ಳುವ ಸಣ್ಣ ಚೌಕ. करस्य पटः। पृषो०।

**कर्पटिक ಕರ್ಪಟಿಕ** (वि०) ಹರುಕಲು ಬಟ್ಟೆಯನ್ನು ಉಟ್ಟಿರುವ ತಿರುಕ ಮೊದಲಾದವರು. कर्पटोऽस्यास्ति "ठन्" (५-२-११५)।

**कर्पटिन् ಕರ್ಪಟಿನ್** (वि०) ಹರುಕಲು ಬಟ್ಟೆಯನ್ನು ಉಟ್ಟಿರುವ ತಿರುಕ ಮೊದಲಾದವರು. कर्पटोऽस्यास्ति "इनिः" (५-२-११५)।

**कर्पण ಕರ್ಪಣ** (पु०) ಕಬ್ಬಿಣದ ಒಂದು ಆಯುಧ, ಉದ್ದದ ಹಿಡಿಯ ಈಟಿ, ಭರ್ಜಿ. कृपू (सामर्थ्ये) "ल्युट्" (३-३-११७)। "चापचक्रकणपकर्पणप्रासपट्टिशमुसलतोमरादिप्रहरणजालमुपयुञ्जानः" दशकु०।

**कर्पर ಕರ್ಪರ** (पु०) 1. ಕಪಾಲ, ತಲೆಬುರುಡೆ, ತಲೆಯೆಲುಬಿನ ಚಿಪ್ಪು. कृपू (सामर्थ्ये) "अरः" बाहु० लत्वाभावश्च। 2. ಆಮೆಯ ಚಿಪ್ಪು. "न्यञ्चत्कर्परकूर्मकम्पविगलद्ब्रह्माण्डखण्डस्थिति" मालती० ५-२२। 3. ಕಪಾಲ, ಘಟದ ಅರ್ಧಭಾಗ. 4. ಒಂದು ಆಯುಧ. "कर्परः स्यात्कपाले च शस्त्रभेदकटाहयोः" मेदि०। 5. ಅತ್ತಿಮರ, ಉದುಂಬರ ವೃಕ್ಷ. 6. ತೈಲವನ್ನು ಕುದಿಯಿಸುವ ಪಾತ್ರೆ. 7. ಬಾಣಲೆ. 8. ಹುರಿಯುವ ಓಡು. 9. ಅಗ್ನಿ, ಬೆಂಕಿ. "कर्परोऽग्नौ कपालेऽपि" वैज०।

**कर्परांश ಕರ್ಪರಾಂಶ** (पु०) ಕಪಾಲದ ಒಂದು ಭಾಗ, ಮಡಕೆಯ ಒಂದುಚೂರು, ಬಕ್ಕರೆ.

**कर्पराल ಕರ್ಪರಾಳ** (पु०) ಬೆಟ್ಟಗೋಣಿಮರ. कर्परमलति — अल (भूषणादौ) "अण्" (३-२-१)।

**कर्परी ಕರ್ಪರೀ** (स्त्री०) ಮೈಲುತುತ್ತ.

**कर्पास ಕರ್ಪಾಸ** (त्रि०) ಹತ್ತಿಯ ಗಿಡ. डु कृञ् (करणे) "पासः" (उ० ५-५५)। कर्पासम्। कर्पासी।

**कर्पूर ಕರ್ಪೂರ** (पुंन०) ಕರ್ಪೂರ, ಒಂದು ಸುಗಂಧ ವಸ್ತು. कृपू (सामर्थ्ये) "ऊरः" (उ० ४-९०)। "सखीमुखायोत्सृजतीमपाङ्गात्कर्पूरकस्तूरिकयोः प्रवाहम्" नैष० १०-१०२।

**कर्पूरक ಕರ್ಪೂರಕ** (पु०) ಕಚೋರ. कर्पूर इव कायति।

**कर्पूरतैल ಕರ್ಪೂರತೈಲ** (न०) ಕರ್ಪೂರದ ಎಣ್ಣೆ, ಹಿಮತೈಲ.

**कर्पूरद्वीप ಕರ್ಪೂರದ್ವೀಪ** (पु०) ಜಂಬೂದ್ವೀಪಾಂತರ್ಗತವಾದ ಒಂದು ಚಿಕ್ಕ ದ್ವೀಪ. "कर्पूरद्वीपस्य राजचक्रवर्तिनो हिरण्यगर्भस्य राजहंसस्यानुचरोऽहम्" हितो०।

**कर्पूरमञ्जरी ಕರ್ಪೂರಮಂಜರೀ** (स्त्री०) 1. ಕರ್ಪೂರಸೇನನ ಮಗಳು. 2. ಕರ್ಪೂರಕೇಳಿಯೆಂಬ ಒಂದು ಹಂಸಪಕ್ಷಿಯ ಮಗಳು. "अहं पुरा शूद्रकस्य राज्ञः क्रीडासरसि कर्पूरकेलिनाम्नो राजहंसस्य पुत्र्या कर्पूरमञ्जर्या सहानुरागवानभवम्" हितो० ३। 3. ರಾಜಶೇಖರಕೃತವಾದ ಒಂದು ರೂಪಕ.

**कर्ब-गतौ** (भ्वा० पर० अक० से०)। कर्बति। चकर्ब। अकर्बीत्। ಹೋಗು, ಚಲಿಸು, ನಡೆ.

**कर्बु ಕರ್ಬು** (पु०) 1. ಚಿತ್ರವರ್ಣ. कर्ब (गतौ) "उः" बाहु०। (वि०) 2. ಚಿತ್ರವರ್ಣವುಳ್ಳ, ನಾನಾಬಣ್ಣಗಳುಳ್ಳ. "अनन्ता रश्मयस्तस्य दीपवद्यः स्थितो हृदि। सितासिताः कर्बुनीलाः कपिलाः पीतलोहिताः" याज्ञ० ३-१६६।

**कर्बुदार ಕರ್ಬುದಾರ** (पु०) 1. ಕೋವಿದಾರ ವೃಕ್ಷ, ಕೆಂಗಾಂಚಾಳದ ಗಿಡ. 2. ನಾಗಸಂಪಿಗೆ ಗಿಡ. कर्बुः सन् दारयति मलम्। "प्रियालकर्बुदारसूर्यवल्लीत्रपुसैर्वारुककर्कारुकूष्माण्डप्रभृतीनां तैलानि मधुराणि" सुश्रुत० सूत्र० ४५-१२०। 3. ಕರಿಯ ಹೂವಿನ ಗೋರಂಟಿ.

**कर्बुदारक ಕರ್ಬುದಾರಕ** (पु०) ಶ್ಲೇಷ್ಮಾತಕವೃಕ್ಷ, ಚಳ್ಳೆ ಮರ. कर्बुः सन् दारयति कफम्—दॄ (विदारणे) "ण्वुल्" (३-१-१३३)।

**कर्बुर ಕರ್ಬುರ** (पु०) 1. ಚಿತ್ರವರ್ಣ. कर्ब (गतौ) "उरच्" (उ० १-४१)। 2. ಪಾಪ. 3. ರಾಕ್ಷಸ. 4. ದತ್ತೂರಿ ಗಿಡ. (न०) 5. ಸುವರ್ಣ, ಚಿನ್ನ. 6. ಜಲ, ನೀರು. "कर्बुरं काञ्चने जले। कर्बुरो राक्षसे पापे शबले" हेम०। (वि०) 7. ಚಿತ್ರವರ್ಣದ, ನಾನಾ ಬಣ್ಣದ. "तदिदं कणशो विकीर्यते पवनैर्भस्म कपोतकर्बुरम्" कुमा० ४-२७।

**कर्बुरक ಕರ್ಬುರಕ** (वि०) ಚಿತ್ರವರ್ಣದ, ನಾನಾ ಬಣ್ಣದ.

**कर्बुरित ಕರ್ಬುರಿತ** (वि०) ನಾನಾ ವರ್ಣವಾಗಿರುವ, ಚಿತ್ರವರ್ಣವಾಗಿರುವ. कर्बुरोऽस्य सञ्जातः "इतच्" (५-२-३६)।

**कर्बुरी ಕರ್ಬುರೀ** (स्त्री०) 1. ದುರ್ಗಾದೇವಿ, ಪಾರ್ವತಿ. 2. ನಾರಂಜೀಳೆ ಗಿಡ.

**कर्मकर ಕರ್ಮಕರ** (पु०) 1. ಯಮಧರ್ಮರಾಯ. (स्त्री०) 2. ತೊಂಡೆಗಿಡ. 3. ಕುರಟಗೆ ಗಿಡ. "अथ कर्मकरो भृत्ये वेतनाजीविनि त्रिषु। कीनाशे पुंसि मूर्वायां बिम्बकायामपि स्त्रियाम्" मेदि०। (वि०) 4. ಕೂಲಿಗಾಗಿ ಕೆಲಸ ಮಾಡುವವನು, ಕೂಲಿ ಕೆಲಸದವನು. कर्म करोति—डु कृञ् (करणे) "टः" (३-२-२२)। 5. ಕೆಲಸ ಮಾಡುವ ಸ್ವಭಾವದವನು, ಸೇವಕ, ಆಳು. ताच्छील्ये "टः" (३-२-२०)। "यस्तवेह सवने न भूपतिः कर्म कर्मकरवत् करिष्यति" माघ० १४-१६। स्त्रियाम् "ङीप्" (४-१-१५)। **—करी - ಕರೀ.** ದಾಸಿ, ಸೇವಕಿ.

**कर्मकर्तृ ಕರ್ಮಕರ್ತೃ** (पु०) ಸೌಕರ್ಯಾತಿಶಯ ತೋರಿಸಲು ಕರ್ತೃಭಾವ ಹೊಂದಿದ ಕರ್ಮ. कर्मैव कर्ता। ಕ್ರಿಯಾಸೌಕರ್ಯಾತಿಶಯ ಹೇಳಲು ಧಾತೂಪಾತ್ತವ್ಯಾಪಾರಕ್ಕೆ ಆಶ್ರಯನಾದ ಕರ್ತೃವಿನ ವ್ಯಾಪಾರವನ್ನು ಹೇಳದೆಯೇ ಕರ್ಮನಿಷ್ಠವ್ಯಾಪಾರವೇ ಫಲಾನುಕೂಲವ್ಯಾಪಾರವಾಗಿ ಹೇಳಲ್ಪಟ್ಟಲ್ಲಿ ಕರ್ಮಕಾರಕವೂ ಕರ್ತೃಸಂಜ್ಞೆ ಹೊಂದುವುದು. "क्रियमाणं तु यत्कर्म स्वयमेव प्रसिध्यति। सुकरैः स्वगुणैः कर्तुः कर्मकर्तेति तद्विदुः"। "ओदनः पच्यते" ಎಂಬಲ್ಲಿ ಸೌಕರ್ಯಾತಿಶಯ ಸೂಚಿಸಲು ಕರ್ತೃವ್ಯಾಪಾರವಿವಕ್ಷೆಯಿಲ್ಲದೆ ಓದನವು ತಾನಾಗಿಯೇ ಬೇಯುವುದು ಎಂದರ್ಥವು. "भिद्यते काष्ठम्" ಎಂಬಲ್ಲಿ ಪುರುಷನ (ಕೊಡಲಿಯ ಏಟು ಮುಂತಾದ) ವ್ಯಾಪಾರ ವಿವಕ್ಷೆಯಿಲ್ಲದೆ ಕಾಷ್ಠವು ತಾನಾಗಿಯೇ ತುಂಡಾಗುವುದು ಎಂದರ್ಥವು. ಇಲ್ಲಿ ಕರ್ಮಗಳಿಗೇ ಕರ್ತೃತ್ವವನ್ನು ಹೇಳಿರುವುದರಿಂದ **कर्मकर्तरि** ಪ್ರಯೋಗ.

**कर्मकाण्ड ಕರ್ಮಕಾಂಡ** (न०) ಯಜ್ಞಯಾಗಾದಿಗಳನ್ನು ಅವಶ್ಯವಾಗಿ ಅನುಷ್ಠಿಸಬೇಕೆಂದು ಹೇಳುವ ವೇದದ ಒಂದು ಭಾಗ, ಕರ್ಮಗಳನ್ನು ಪ್ರತಿಪಾದಿಸುವ ವೇದಭಾಗ. कर्मणां कर्तव्यता प्रतिपादकं काण्डम्। "ततः कर्मकाण्डसहचरी मीमांसा मया दृष्टा" प्रबोध० ६।

**कर्मकार ಕರ್ಮಕಾರ** (पु०) 1. ಕಮ್ಮಾರ, ಕಬ್ಬಿಣದ ಕೆಲಸ ಮಾಡುವವನು, ಒಬ್ಬ ಮಿಶ್ರಜಾತಿಯವನು. (वि०) 2.

ಕೂಲಿಯಿಲ್ಲದೆ ಕೆಲಸ ಮಾಡುವವನು, ಅದೇ ಕಸಬಿನವನು. कर्म करोति वेतनेन विना — डु कृञ् (करणे) "अण्" (३-२-१)। "कर्मकारस्तु तत्क्रियः" अम०। "ण्वुल्" (३-१-१३३)। **–कारकः –ಕಾರಕಃ.**

**कर्मकारक ಕರ್ಮಕಾರಕ** (न०) "कर्मन्" ಪದದ 8 ನೆಯ ಅರ್ಥ.

**कर्मकारिन् ಕರ್ಮಕಾರಿನ್** (वि०) ಕೆಲಸ ಮಾಡುವ ಸ್ವಭಾವದ. कर्म करोति — डु कृञ् (करणे) "णिनिः" (३-२-७८)। "तान्विदित्वा सुचरितैर्गूढैस्तत्कर्मकारिभिः" मनु० ९-२६१। स्त्रियाम् "ङीप्" (४-१-५)। **–कारिणी –ಕಾರಿಣೀ.**

**कर्मकाल ಕರ್ಮಕಾಲ** (पु०) 1. ಕೆಲಸದ ಸಮಯ, ಕೆಲಸ ಮಾಡಲು ಕ್ಲೃಪ್ತವಾದ ಕಾಲ. 2. ಯಾಗಾದಿ ಕರ್ಮಗಳನ್ನು ಆಚರಿಸಬೇಕಾದ ಕಾಲ.

**कर्मकीलक ಕರ್ಮಕೀಲಕ** (पु०) ರಜಕ, ಅಗಸರವನು. कर्मणा कीलक इव। "चन्द्रिलो नखकुट्टश्च रजकः कर्मकीलकः" त्रिकाण्ड०।

**कर्मक्षम ಕರ್ಮಕ್ಷಮ** (वि०) ಕಾರ್ಯದಲ್ಲಿ ಸಮರ್ಥನಾದವನು, ಕೆಲಸದಲ್ಲಿ ಚತುರನಾದವನು, ಕೆಲಸ ಮಾಡಬಲ್ಲವನು. कर्मणि क्षमः। "आत्मकर्मक्षमं देहं क्षात्रो धर्म इवाश्रितः" रघु० १-१३।

**कर्मक्षेत्र ಕರ್ಮಕ್ಷೇತ್ರ** (न०) 1. ಕಾರ್ಯಕ್ಷೇತ್ರ, ಕೆಲಸ ಮಾಡಬೇಕಾದ ಜಾಗ. 2. ಯಾಗಾದಿ ಕರ್ಮಾಚರಣೆಗೆ ಯೋಗ್ಯವಾದ ಭೂಮಿ, ಭಾರತವರ್ಷ. कर्मणां क्रियानुष्ठानानां क्षेत्रम्। "भारतमेव वर्षं कर्मक्षेत्रमन्यान्यष्ट वर्षाणि स्वर्गिणां पुण्यशेषभोगस्थानानि भौमानि स्वर्गपदानि" भाग० ५-१७-११।

**कर्मगुप्त ಕರ್ಮಗುಪ್ತ** (न०) ಕರ್ಮಪದವು ಗುಪ್ತವಾಗಿರುವ (ಸ್ಪಷ್ಟವಾಗಿ ತೋರದಿರುವ) ವಾಕ್ಯ. "एहि हे रमणि पश्य कौतुकं धूलिधूसरतनुं दिगम्बरम्। सापि तद्वदनपङ्कजं पपौ भ्रातरुक्तमपि किं न बुध्यते" ಎಂಬಲ್ಲಿ कौतुकं बालकं पश्य ಎಂದು ಅನ್ವಯ. कौतुक ಪದದಲ್ಲಿ ಕರ್ಮಪದವು ಗುಪ್ತವಾಗಿರುವುದು.

**कर्मग्रन्थि ಕರ್ಮಗ್ರಂಥಿ** (पु०) ಸಂಸಾರ ಬಂಧನಕ್ಕೆ ಕಾರಣವಾದ ಪುಣ್ಯಪಾಪ ರೂಪವಾದ ಕರ್ಮವನ್ನುಂಟುಮಾಡುವ ಪೂರ್ವವಾಸನೆ. कर्मणां ग्रन्थिः बन्धनमस्मात्।

**कर्मचण्डाल ಕರ್ಮಚಂಡಾಲ** (पु०) 1. ಕಾರ್ಯದಿಂದ ಚಂಡಾಲನಂತಿರುವವನು, ಚಂಡಾಲ ಜನ್ಮ ಪಡೆಯದಿದ್ದರೂ ಮಾಡುವ ಕ್ರೂರಕರ್ಮಗಳಿಂದ ಚಂಡಾಲನಂತಾಗಿರುವವನು. कर्मणा चण्डाल इव। "अपूर्वकर्मचण्डालमयि मुग्धे विमुञ्च माम्" उ० रा० १-४६। "असूयकः पिशुनश्च कृतघ्नो दीर्घरोषकः। चत्वारः कर्मचण्डालाः जन्मतश्चापि पञ्चमः" ಎಂದು ಕರ್ಮಚಂಡಾಲರು ನಾಲ್ಕು ಬಗೆ. 2. ರಾಹು. "उत्तिष्ठ गम्यतां राहो त्यज्यतां चन्द्रसङ्गमः। कर्मचण्डाल योगोत्थं मम पापक्षयं कुरु"।

**कर्मचारिन् ಕರ್ಮಚಾರಿನ್** (वि०) ಕಾರ್ಯದಲ್ಲಿ ನಿರತನಾಗಿರುವವನು, ಕೆಲಸ ಮಾಡುತ್ತಿರುವವನು. कर्मणि चरति — चर (गतौ) "णिनिः" (३-२-७८)। स्त्रियाम् "ङीप्" (४-१-५)। **–चारिणी –ಚಾರಿಣೀ.**

**कर्मचेष्टा ಕರ್ಮಚೇಷ್ಟಾ** (स्त्री०) ಕರ್ಮಾನುಷ್ಠಾನಕ್ಕಾಗಿ ಮಾಡುವ ವ್ಯಾಪಾರ, ಕರ್ಮಾಚರಣೆಗಾಗಿ ಮಾಡುವ ಕೆಲಸ. कर्मणे चेष्टा। ಒಂದು ಕಾರ್ಯವಾಗಬೇಕಾದರೆ ನಾಲ್ಕು ಹಂತಗಳುಂಟು. (1) ಆತ್ಮನಿಗೆ ಕೆಲಸ ಮಾಡಬೇಕೆಂಬ ಇಚ್ಛೆ. (2) ಇಚ್ಛೆಯಿಂದ ಕೃತಿ. (3) ಕೃತಿಯಿಂದ ಚೇಷ್ಟೆ. (4) ಚೇಷ್ಟೆಯಿಂದ ಕ್ರಿಯೆ. "कर्मचेष्टास्वहः कृष्णः शुक्लः स्वप्नाय शर्वरी" मनु० १-६६।

**कर्मचोदना ಕರ್ಮಚೋದನಾ** (स्त्री०) 1. ಕರ್ಮಾಚರಣೆಗಾಗಿ ಪ್ರೇರಿಸುವ ವಿಧಿವಾಕ್ಯ. कर्मणि कर्माचरणे चोदना विधिः प्रवर्तक वचनम्। 2. ಕರ್ಮಪ್ರವೃತ್ತಿಗೆ ಕಾರಣವಾದ ಜ್ಞಾನ ಜ್ಞೇಯ ಪರಿಜ್ಞಾತೃಗಳೆಂಬ ಮೂರರಿಂದ ಕೂಡಿದ ಜ್ಯೋತಿಷ್ಟೋಮಾದಿ ಕರ್ಮವಿಧಿ. ಕರ್ತವ್ಯ ಕರ್ಮವಿಷಯಜ್ಞಾನ, ಕರ್ತವ್ಯಕರ್ಮ (ಜ್ಞೇಯ), ಆ ಜ್ಞಾನಕ್ಕೆ ಆಶ್ರಯ (ಪರಿಜ್ಞಾತಾ) ಈ ಮೂರೂ ಕರ್ಮಪ್ರವೃತ್ತಿಗೆ ಕಾರಣ. "ज्ञानं ज्ञेयं परिज्ञाता त्रिविधा कर्मचोदना" गीता १८-१८।

**कर्मज ಕರ್ಮಜ** (पु०) 1. ಸ್ವರ್ಗ. 2. ನರಕ. ಪುಣ್ಯಪಾಪಗಳಿಂದ ಸ್ವರ್ಗ ಮತ್ತು ನರಕಪ್ರಾಪ್ತಿಯಾಗುವುದು. 3. ವಟವೃಕ್ಷ, ಆಲದಮರ. 4. ಕಲಿಯುಗ. 5. ಕ್ರಿಯೆಯಿಂದ ಉಂಟಾಗುವ ಸಂಯೋಗ ಮತ್ತು ವಿಭಾಗ. (वि०) 6. ಪುಣ್ಯಪಾಪ ಕರ್ಮಗಳಿಂದ ಉಂಟಾದ (ಸುಖದುಃಖಾದಿಗಳಿಗೆ ಕಾರಣವಾದ) ಜನ್ಮಾಂತರ ಪ್ರಾಪ್ತಿ. कर्मणो जायते — जनी (प्रादुर्भावे) "डः" (३-२-९८)। ಮನೋವಾಕ್ಕಾಯಗಳೆಂಬ ತ್ರಿಕರಣಗಳಿಂದ ಮಾಡಲ್ಪಟ್ಟ ಪುಣ್ಯಪಾಪಕರ್ಮಗಳಿಂದ ಮನುಷ್ಯನಿಗೆ ಉತ್ತಮ, ಮಧ್ಯಮ ಮತ್ತು ಅಧಮರೂಪವಾದ ಮೂರು ಜನ್ಮಾಂತರ ಪ್ರಾಪ್ತಿಯಾಗುವುದು. "शुभाशुभफलं कर्म मनोवाग्देह-

सम्भवम्। कर्मजा गतयो नृणामुत्तमाधममध्यमाः" मनु० १२-३। ದೇವತ್ವವು ಉತ್ತಮಗತಿ. ಮನುಷ್ಯತ್ವವು ಮಧ್ಯಮಗತಿ. ಸ್ಥಾವರತ್ವ ಮತ್ತು ತಿರ್ಯಕ್ತ್ವಗಳು ಅಧಮ ಗತಿ. ಈ ಮೂರು ವಿಧ ಜನ್ಮಾಂತರ ಪ್ರಾಪ್ತಿಗೂ ಹತ್ತು ವಿಧ ಮಾನಸ ವಾಚಿಕ ಮತ್ತು ಶಾರೀರ ಕರ್ಮಗಳೇ ಕಾರಣ. **ಹತ್ತುವಿಧ ಪಾಪಕರ್ಮಗಳು:** (1) ಪರ ದ್ರವ್ಯವನ್ನು ಅನ್ಯಾಯದಿಂದ ಕಸಿದುಕೊಳ್ಳುವ ಯೋಚನೆ. (2) ಬ್ರಹ್ಮಹತ್ಯಾದಿ ನಿಷಿದ್ಧಕಾರ್ಯದಲ್ಲಿ ಚಿಂತೆ. (3) ನಾಸ್ತಿಕತ್ವ ಬುದ್ಧಿ ಈ ಮೂರೂ **ಮಾನಸಕರ್ಮಗಳು.** "परद्रव्येष्वभिध्यानं मनसानिष्टचिन्तनम्। वितथाभिनिवेशश्च त्रिविधं कर्म मानसम्" मनु० १२-५। (4) ಅಪ್ರಿಯವಾದ ಮಾತಾಡುವುದು. (5) ಸುಳ್ಳು ಹೇಳುವುದು. (6) ಚಾಡಿ ಹೇಳುವುದು. (7) ಅಸಂಗತವಾಗಿ ಮಾತಾಡುವುದು. ಈ ನಾಲ್ಕೂ **ವಾಚಿಕಕರ್ಮಗಳು.** "पारुष्यमनृतं चैव पैशुन्यं चापि सर्वशः। असंबद्धप्रलापश्च वाङ्मयं स्याच्चतुर्विधम्" मनु० १२-६। (8) ತನಗೆ ಕೊಡದಿರುವುದನ್ನು ತೆಗೆದುಕೊಳ್ಳುವುದು. (9) ವಿಹಿತವಲ್ಲದೆ ಹಿಂಸಿಸುವುದು. ಮತ್ತು (10) ಪರಸ್ತ್ರೀಗಮನ ಈ ಮೂರೂ **ಶಾರೀರಕರ್ಮಗಳು.** "अदत्तानामुपादानं हिंसा चैवाविधानतः। परदारोपसेवा च शारीरं त्रिविधं स्मृतम्" मनु० १२-७। ಈ ಹತ್ತುವಿಧಪಾಪಕರ್ಮಗಳಿಂದ ಜನ್ಮಾಂತರಪ್ರಾಪ್ತಿಯೂ ಅವಕ್ಕನುಗುಣವಾದ ದುಃಖಾದಿಗಳೂ ಏರ್ಪಡುತ್ತವೆ. 7. ಜನ್ಮಾಂತರದ ದುಷ್ಟಕರ್ಮಗಳಿಂದ ಉತ್ಪನ್ನವಾಗುವ ವ್ಯಾಧಿಗಳು. ಇವು ಕೇವಲ ಅನುಭವ ಅಥವಾ ಪ್ರಾಯಶ್ಚಿತ್ತದಿಂದ ನಾಶವಾಗಬೇಕು. "कर्मजाः कथिताः केचित् दोषजाः सन्ति चापरे। कर्मदोषोद्भवाश्चान्ये व्याधयः त्रिविधाः स्मृताः" भावप्र०। तत्र कर्मजा व्याधयः यत् प्राक्तनं दुष्टकर्मभवं केवलभोगनाश्यं प्रायश्चित्तनाश्यं वा। 8. ನಿಷಿದ್ಧ ಕಾರ್ಯಾಚರಣೆಯಿಂದ ಉಂಟಾದ (ದೋಷ). "यथा जातफलो वह्निर्दहत्यार्द्रानपि द्रुमान्। तथा दहति वेदज्ञः कर्मजं दोषमात्मनः" मनु० १२-१०१। 9. ನಿತ್ಯ ನೈಮಿತ್ತಿಕಾದಿ ಕರ್ಮಗಳಿಂದ ಉಂಟಾದ (ಯಜ್ಞಗಳು). "कर्मजान् विद्धि तान् सर्वान् एवं ज्ञात्वा विमोक्ष्यसे" गीता ४-३२।

**कर्मजित् ಕರ್ಮಜಿತ್** (पु०) 1. ಜರಾಸಂಧನ ವಂಶದ ಒಬ್ಬ ದೊರೆ. "सुनक्षत्रः सुनक्षत्रात् बृहत्सेनोऽथ कर्मजित्" भाग० ९-२२-४७। (वि०) 2. ಕರ್ಮದ ಫಲವಾದ ಪಾಪಪುಣ್ಯಗಳನ್ನು ಜಯಿಸಿದವನು (ಜ್ಞಾನಿ). कर्माणि कर्मफलानि जितवान्।

**कर्मठ ಕರ್ಮಠ** (वि०) ಕೆಲಸದಲ್ಲಿ ನಿರತನಾದವನು, ಆರಂಭಿಸಿದ ಕಾರ್ಯವನ್ನು ಸಮಾಪ್ತಿಗೊಳಿಸುವುದರಲ್ಲಿ ಶೂರನಾದವನು. कर्मणि घटते–"अठच्" (५-२-३५)।

**कर्मण्य ಕರ್ಮಣ್ಯ** (वि०) 1. ಕಾರ್ಯದಲ್ಲಿ ಕುಶಲ, ಕೆಲಸದಲ್ಲಿ ಪ್ರವೀಣ. कर्मणि साधुः "यत्" (४-४-९८)। (वि०) 2. ಕಾರ್ಯದಿಂದ ಶೋಭಿಸುವ (ಶೌರ್ಯ). सम्पादः सम्पत्तिः शोभा–साऽस्यास्ति, कर्मणा सम्पादि "यत्" (५-१-१००)। (स्त्री०) **–ण्या –ಣ್ಯಾ.** ವೇತನ, ಕೂಲಿ, ಬಾಡಿಗೆ. "कर्मण्या तु विधाभृत्याभृतयो भर्म वेतनम्" अम०।

**कर्मण्यता ಕರ್ಮಣ್ಯತಾ** (स्त्री०) ಕಾರ್ಯದಲ್ಲಿ ನಿಪುಣತನ, ಕಾರ್ಯ ಮಾಡುವುದರಲ್ಲಿ ಜಾಣತನ. कर्मण्यस्य भावः "तल्" (५-१-११९। "त्वः" **–त्वम् –ತ್ವಮ್.**

**कर्मण्यभुज् ಕರ್ಮಣ್ಯಭುಜ್** (वि०) ಕೂಲಿಯಿಂದ ಜೀವಿಸುವವನು, ಕೂಲಿ ಕೆಲಸಮಾಡುವವನು. कर्मण्यां वेतनं भुङ्क्ते –भुज (परिपालनाभ्यवहारयोः) "क्विप्" (३-२-७६)।

**कर्मत्याग ಕರ್ಮತ್ಯಾಗ** (पु०) 1. ಕರ್ಮ ಸಂನ್ಯಾಸ, ಕರ್ಮಗಳನ್ನು ಆಚರಿಸದಿರುವಿಕೆ, ಪ್ರಾಪಂಚಿಕ ವ್ಯವಹಾರಗಳನ್ನು ಬಿಟ್ಟಿರುವಿಕೆ. कर्मणां त्यागः। 2. ಫಲಾಪೇಕ್ಷೆಯಿಲ್ಲದ ಕರ್ಮಾಚರಣೆ. ಈ ತ್ಯಾಗವು ತಾಮಸ, ರಾಜಸ ಮತ್ತು ಸಾತ್ತ್ವಿಕಗಳೆಂದು ಮೂರು ವಿಧ. (1) ಅವಶ್ಯ ಕರ್ತವ್ಯವಾದ ನಿತ್ಯ ನೈಮಿತ್ತಿಕ ಕರ್ಮಗಳನ್ನು ಅಜ್ಞಾನದಿಂದ ಬಿಟ್ಟುಬಿಡುವುದು **ತಾಮಸತ್ಯಾಗವು.** "नियतस्य तु संन्यासः कर्मणो नोपपद्यते। मोहात्तस्य परित्यागः तामसः परिकीर्तितः" गीता १८-७। (2) ಅವಶ್ಯ ಕರ್ತವ್ಯವೆಂದು ತಿಳಿದೂ ತನ್ನ ದೇಹಕ್ಕೆ ಶ್ರಮವುಂಟಾಗುವುದೆಂಬ ಭಯದಿಂದ ಕರ್ಮಗಳನ್ನು ಬಿಟ್ಟುಬಿಡುವುದು **ರಾಜಸತ್ಯಾಗವು.** ಈ ತ್ಯಾಗದಿಂದ ಯಾವ ಫಲವೂ ಲಭಿಸಲಾರದು. "दुःखमित्येव यत्कर्म कायक्लेशभयात्त्यजेत्। स कृत्वा राजसं त्यागं नैव त्यागफलं लभेत्" गीता १८-८। (3) ಅವಶ್ಯಕರ್ತವ್ಯವೆಂದು ತಿಳಿದು ನಿತ್ಯನೈಮಿತ್ತಿಕಕರ್ಮಗಳನ್ನು ಕರ್ತೃತ್ವಾಭಿಮಾನವನ್ನು ತೊರೆದು ಫಲಾಪೇಕ್ಷೆಯಿಲ್ಲದೆ ಆಚರಿಸಿದರೆ ಅಂತಹ ತ್ಯಾಗವು **ಸಾತ್ತ್ವಿಕವೆನಿಸುವುದು.** "कार्यमित्येव यत्कर्म नियतं क्रियतेऽर्जुन। संगं त्यक्त्वा फलं चैव स त्यागः सात्त्विको मतः" गीता १८-९।

**कर्मदुष्ट ಕರ್ಮದುಷ್ಟ** (वि०) ಮಾಡುವ ಕೆಲಸದಿಂದ ಕೆಟ್ಟಿರುವ, ನಡತೆಯಿಂದ ಕೆಟ್ಟಿರುವ, ನೀತಿಬಾಹಿರ. कर्मणा दुष्टः।

**कर्मदेव ಕರ್ಮದೇವ** (ಪು೦) ಕರ್ಮದಿಂದ ದೇವತ್ವವನ್ನು ಹೊಂದಿದ ದೇವತೆ. कर्मणा देवः। ಅಗ್ನಿಹೋತ್ರಾದಿ ಶ್ರೌತ ಕರ್ಮಗಳಿಂದ ದೇವಲೋಕವನ್ನು ಹೊಂದಿದವರು ಕರ್ಮ ದೇವತೆಗಳು. "स एकः कर्मदेवनां देवानामानन्दः। ये कर्मणा देवानपियन्ति। श्रोत्रियस्य चाकामहतस्य। ते ये शतं कर्मदेवनां देवानामानन्दाः। स एको देवा-नामानन्दः" ತೈ೦ಉ೦।

**कर्मदोष ಕರ್ಮದೋಷ** (ಪು೦) 1. ಹಿಂಸಾಕೃತ್ಯರೂಪವಾದ ಪಾಪ, ಶರೀರ ಕರ್ಮದಿಂದುಂಟಾದ ದೋಷ. कर्मणा दोषः। "संन्यस्य सर्वकर्माणि कर्मदोषानपानुदन्। नियतो वेद-मभ्यस्य पुत्रैश्वर्ये सुखं वसेत्" मनु० ६-९५। 2. ಕರ್ತವ್ಯ ಕಾರ್ಯದಲ್ಲಿ ಉಂಟಾಗುವ ದೋಷ. कर्मणि दोषः। 3. ವಿಹಿತ ಕಾರ್ಯದ ಅನಾಚರಣೆ ನಿಷಿದ್ಧ ಕಾರ್ಯಾಚರಣೆ ಗಳಿಂದ ಉಂಟಾದ ದೋಷ. "अवेक्षेत गतीर्नृणां कर्मदोष-समुद्भवाः। निरये चैव पतनं यातनाश्च यमक्षये" मनु० ६-६१। 4. ಸಕಲ ಕರ್ಮಗಳಿಗೂ ಕಾರಣವಾದ ಅಜ್ಞಾನ ರೂಪವಾದ ದೋಷ. कर्महेतुः दोषः।

**कर्मधारय ಕರ್ಮಧಾರಯ** (ಪು೦) ಸಮಾನಾರ್ಥವುಳ್ಳ ಎರಡು ಪದಗಳಿಂದ ಕೂಡಿದ ತತ್ಪುರುಷ ಸಮಾಸದ ಒಂದು ಭೇದ, ಒಂದೇ ಅರ್ಥವನ್ನು ಬೋಧಿಸುವ ಎರಡು ಪದಗಳ ತತ್ಪುರುಷಸಮಾಸ. "तत्पुरुषः समानाधिकरणः कर्मधारयः" (१-२-४२)। "नीलोत्पलम्" ಎಂಬಲ್ಲಿ ನೀಲ ಮತ್ತು ಉತ್ಪಲ ಪದಗಳೆರಡೂ ನೈದಿಲೆಯೊಂದನ್ನೇ ಬೋಧಿಸುವುದರಿಂದ ಸಮಾನಾರ್ಥಕವಾದ ಈ ಎರಡು ಪದಗಳಿಗೂ ಬರುವ ತತ್ಪುರುಷ ಸಮಾಸವು ಕರ್ಮ ಧಾರಯವು. ನೀಲವೂ ನೈದಿಲೆಯೂ ಒಂದೇ ಆಗಿದ್ದು ಎರಡು ಪದಗಳೂ ಇದನ್ನು ಬೋಧಿಸುವುದರಿಂದ ಇಲ್ಲಿ ಕರ್ಮಧಾರಯ.

**कर्मन् ಕರ್ಮನ್** (ನ೦) 1. ಕಾರ್ಯ. ಕೆಲಸ, 2. ಉದ್ಯೋಗ, ಕಸಬು. क्रियते—डु कृञ् (करणे) कर्म० "मनिन्" (उ० ४-१४४)। "अप्यप्रसिद्धं यशसे हि पुंसामनन्यसाधारणमेव कर्म" कुमा० ३-१९। "तीक्ष्णा नारुन्तुदा बुद्धिः कर्म शान्तं प्रतापवत्। नोपतापि मनः सोष्म वागेका वाग्मिनः सतः" माघ० २-१०९। 3. ಮಾಡುವಿಕೆ, ಆಚರಿಸುವಿಕೆ. डु कृञ् भावे "मनिन्" (उ० ४-१४४)। 4. ಕರ್ತವ್ಯ, ಅವಶ್ಯ ವಾಗಿ ಮಾಡಬೇಕಾದ ಕಾರ್ಯ. 5. ಮನುಷ್ಯನು ಮಾಡುವ ಪುಣ್ಯಪಾಪಹೇತುವಾದ ಕಾರ್ಯ, ಸಂಸಾರಬಂಧನಕ್ಕೆ ಕಾರಣವಾದ ಕರ್ಮ. "पर्यभूत् खलु करीद्विजराजः कर्म कः स्वकृतमत्र न भुङ्क्ते" नैष०५-६। "ये मे मतमिदं नित्यमनुतिष्ठन्ति मानवाः। श्रद्धावन्तोऽनसूयन्तो मुच्यन्ते तेऽपि कर्मभिः" गीता ३-३१। ಈ ಕರ್ಮವು ಮಾನಸ, ವಾಚಿಕ ಮತ್ತು ಶಾರೀರಗಳೆಂದು ಮೂರು ವಿಧ. [ವಿವರಕ್ಕೆ "कर्मज" ಪದದ 6ನೆಯ ಅರ್ಥ ನೋಡಿ.] ಇದು ಸಂಚಿತ, ಪ್ರಾರಬ್ಧ ಮತ್ತು ಆಗಾಮಿಗಳೆಂದು ಮತ್ತೆ ಮೂರು ವಿಧ. (1) ಅನೇಕ ಜನ್ಮಗಳಲ್ಲಿ ಮಾಡಿದ ಪುಣ್ಯಪಾಪ ಕರ್ಮಗಳ ರಾಶಿಯು ಸಂಚಿತವು. (2) ಹಾಗೆ ಸಂಚಿತವಾಗಿರುವ ಕರ್ಮ ಗಳಲ್ಲಿ ಈಗ ಅನುಭವಿಸಲು ಪ್ರಾರಂಭಿಸಿರುವ ಕರ್ಮವು ಪ್ರಾರಬ್ಧ ಕರ್ಮ. (3) ಮುಂದೆ ಮಾಡಬಹುದಾದ ಕರ್ಮ ಗಳು ಆಗಾಮಿ. "नमस्यामो देवान्ननु हतविधेस्तेऽपि वशगा विधिर्वन्द्यः सोऽपि प्रतिनियतकर्मैकफलदः। फलं कर्मायत्तं यदि किमपरैः किंच विधिना नमस्तत्कर्मभ्यो विधिरपि न येभ्यः प्रभवति" भर्तृ० १-९१। 6. ಶಾಸ್ತ್ರ ವಿಹಿತವಾದ ಅಗ್ನಿಹೋತ್ರಾದಿ ಕರ್ಮ. ಈ ಕರ್ಮವು ನಿತ್ಯ, ನೈಮಿತ್ತಿಕ ಮತ್ತು ಕಾಮ್ಯಗಳೆಂದು ಮೂರು ವಿಧ. (1) ಪ್ರತಿ ದಿನವೂ ಆಚರಿಸದಿದ್ದರೆ ದೋಷವೆನಿಸಲ್ಪಡುವ "ಸಂಧ್ಯಾ ವಂದನ" ಮೊದಲಾದುದು **ನಿತ್ಯಕರ್ಮ.** (2) "जातेष्टि" ಮುಂತಾದ ಯಾಗಗಳು **ನೈಮಿತ್ತಿಕ ಕರ್ಮ.** (3) ಫಲಾಪೇಕ್ಷೆಯಿಂದ ಆಚರಿಸಲ್ಪಡುವ "ಪುತ್ರ ಕಾಮೇಷ್ಟಿ" ಮುಂತಾದುದು **ಕಾಮ್ಯಕರ್ಮ.** ಈ ಕರ್ಮವು ಸಾತ್ತ್ವಿಕ, ರಾಜಸ ಮತ್ತು ತಾಮಸಗಳೆಂದು ಮತ್ತೆ ಮೂರು ವಿಧ. (1) ಅಭಿಮಾನ, ರಾಗ, ದ್ವೇಷಗಳನ್ನು ಬಿಟ್ಟು ಫಲಾಪೇಕ್ಷೆಯಿಲ್ಲದೆ ಮಾಡುವ ಕರ್ಮವು **ಸಾತ್ತ್ವಿಕ.** "नियतं संगरहितमरागद्वेषतः कृतम्। अफलप्रेप्सुना कर्म यत्तत्सात्त्विकमुच्यते" गीता १८-२३। (2) ಬಹಳ ಆಯಾಸಕರವಾದ, ಫಲಾಪೇಕ್ಷೆ ಮತ್ತು ಅಭಿಮಾನದಿಂದ ಕೂಡಿ ಮಾಡುವ ಕರ್ಮವು **"ರಾಜಸ"** ವೆನಿಸುವುದು. "यत्तु कामेप्सुना कर्म साहङ्कारेण वा पुनः। क्रियते बहुलायासं तद्राजसमुदाहृतम्" गीता १८-२४। (3) ಮುಂದೆ ಸಂಭವಿಸಬಹುದಾದ ಕಷ್ಟಗಳು. ನಾಶ, ಹಿಂಸೆ, ತನ್ನ ಶಕ್ತಿ ಸಾಮರ್ಥ್ಯ ಯಾವುದನ್ನೂ ಲಕ್ಷಿಸದೆ ತಾನೇ ಕರ್ತೃ ವೆಂಬ ಅಜ್ಞಾನದಿಂದ ಆರಂಭಿಸಲ್ಪಡುವ ಕರ್ಮವು **"ತಾಮಸ"** ವೆನಿಸುವುದು. "अनुबन्धं क्षयं हिंसा-मनवेक्ष्य च पौरुषम्। मोहादारभ्यते कर्म यत्तत्तामस-मुच्यते" गीता १८-२५। 7. ವೈಶೇಷಿಕ ಮತದಲ್ಲಿ ಉಕ್ತ ವಾದ ಕ್ರಿಯಾರೂಪವಾದ ಪದಾರ್ಥ. ಇದು (1) उत्क्षे-पणम्, (2) अवक्षेपणम्, (3) आकुञ्चनम्, (4) प्रसा-रणम् ಮತ್ತು (5) गमनम् ಎಂದು ಐದು ವಿಧ. "उत्क्षे-पणं तथावक्षेपणमाकुञ्चनं तथा। प्रसारणं च गमनं

कर्माण्येतानि पञ्च च" माषाप०। 8. ವ್ಯಾಕರಣದಲ್ಲಿ ಉಕ್ತವಾದ ಆರು ವಿಧ ಕಾರಕಗಳಲ್ಲೊಂದು, ಕರ್ತೃವಿನ (ಮಾಡುವವನ) ವ್ಯಾಪಾರದಿಂದ ಹೊಂದುವ ಫಲಕ್ಕೆ ಆಶ್ರಯಭೂತವಾದ ಒಂದು ಕಾರಕ. ಇದು निर्वर्त्यम् विकार्यम् प्राप्यम् ಮತ್ತು अनीप्सितम् ಎಂದು ನಾಲ್ಕು ವಿಧ. (1) "घटं करोति" ಎಂಬಲ್ಲಿ ಘಟವು **ನಿರ್ವರ್ತ್ಯ ಕರ್ಮ.** (2) **ವಿಕಾರ್ಯವು** प्रकृत्युच्छेदकम् ಮತ್ತು प्रकृतेर्गुणान्तराधायकम् ಎಂದು ಎರಡು ವಿಧ. (1) "काष्ठं भस्म करोति" ಎಂಬಲ್ಲಿ ಪ್ರಕೃತ್ಯುಚ್ಛೇದಕಕರ್ಮ. (2) "सुवर्णं कुण्डलं करोति" ಎಂಬಲ್ಲಿ ಗುಣಾಂತರಾಧಾಯಕ ಕರ್ಮ. (3) "देवदत्तः शालां गच्छति" ಎಂಬಲ್ಲಿ ಶಾಲೆಯು **ಪ್ರಾಪ್ಯಕರ್ಮವು.** (4) **ಅನೀಪ್ಸಿತವು** द्वेष्यम् ಮತ್ತು उदासीनम् ಎಂದು ಎರಡು ವಿಧ. (1) "विषं भुङ्क्ते". (2) "ग्रामं गच्छन् तृणं स्पृशति"। 9. ವರ್ಣಾಶ್ರಮಾನುಗುಣವಾಗಿ ಆಯಾ ವರ್ಣದವರ ಸ್ವಭಾವಜನ್ಯಗುಣಗಳಿಂದ ಭಿನ್ನವಾದ ಅಪರವರ ಕರ್ಮಗಳು. "ब्राह्मणक्षत्रियविशां शूद्राणां च परन्तप। कर्माणि प्रविभक्तानि स्वभावप्रभवैर्गुणैः" गीता १८-४१। (1) ಬಾಹ್ಯ ಮತ್ತು ಅಂತರಿಂದ್ರಿಯನಿಗ್ರಹ, ತಪಸ್ಸು (ಕಾಯಕ್ಲೇಶ), ಶಾಸ್ತ್ರೀಯಕರ್ಮಯೋಗ್ಯವಾದ ಶೌಚ, ಇತರರಿಂದ ತೊಂದರೆಯೇರ್ಪಟ್ಟರೂ ಸಹಿಷ್ಣುತೆ, ಆರ್ಜವ (ಕಪಟವಿಲ್ಲದಿರುವಿಕೆ), ಜ್ಞಾನ, ವಿಜ್ಞಾನ (ಪರತತ್ತ್ವ ವಿಷಯಕ ವಿಶೇಷಜ್ಞಾನ), ವೇದೋಕ್ತವಾದ ವಿಷಯ ಗಳಲ್ಲಿ ಸತ್ಯವೆಂಬ ನಿಶ್ಚಯ, ಇವೆಲ್ಲವೂ ಸ್ವಭಾವಜನ್ಯವಾದ ಬ್ರಾಹ್ಮಣನ ಕರ್ಮಗಳು. "शमो दमस्तपश्शौचं क्षान्तिराजवमेव च। ज्ञानं विज्ञानमास्तिक्यं ब्राह्मं कर्म स्वभावजम्" गीता १८-४२। (2) ಪರಾಕ್ರಮ (ಯುದ್ಧದಲ್ಲಿ ಹೆದರದೆ ಪ್ರವೇಶಿಸುವ ಸಾಮರ್ಥ್ಯ), ಇತರರಿಂದ ಅವಮಾನಗೊಳಿಸಲ್ಪಡದಿರುವಿಕೆ, ಧೈರ್ಯ, ಸಕಲ ಕಾರ್ಯಗಳನ್ನೂ ಸಾಧಿಸುವ ಸಾಮರ್ಥ್ಯ, ಯುದ್ಧದಲ್ಲಿ ಹಿಂದಕ್ಕೆ ಸರಿಯದಿರುವುದು, ದಾನ, ಸಕಲರನ್ನೂ ಅಡಗಿಸುವ ಶಕ್ತಿ ಇವೆಲ್ಲವೂ ಕ್ಷತ್ರಿಯನಿಗೆ ಸ್ವಭಾವಜನ್ಯವಾದ ಕರ್ಮಗಳು. "शौर्यं तेजो धृतिर्दाक्ष्यं युद्धे चाप्यपलायनम्। दानमीश्वरभावश्च क्षात्रं कर्म स्वभावजम्" गीता १८-४३। (3) ಬೇಸಾಯ, ಗೋಸಂರಕ್ಷಣೆ, ಕ್ರಯವಿಕ್ರಯರೂಪವಾದ ವ್ಯಾಪಾರ ಇವೆಲ್ಲವೂ ವೈಶ್ಯನಿಗೆ ಸ್ವಭಾವಸಿದ್ಧವಾದ ಕರ್ಮಗಳು. "कृषिगोरक्ष्यवाणिज्यं वैश्यं कर्म स्वभावजम्" गीता १८-४४। (4) ಈ ಮೂರು ವರ್ಣದವರ ಪರಿಚರ್ಯೆಯು ಶೂದ್ರನ ಸ್ವಭಾವಜನ್ಯ ಕರ್ಮವು. "परिचर्यात्मकं कर्म शूद्रस्यापि स्वभावजम्" गीता १८-४४। "स्वे स्वे कर्मण्यभिरतः संसिद्धिं लभते नरः" गीता १८-४५। 10. (ಜ್ಯೋತಿಷದಲ್ಲಿ) ಜನ್ಮಲಗ್ನದಿಂದ ಹತ್ತನೆಯ ಸ್ಥಾನ. "दशमो मान आज्ञापि करस्थानमिति स्मृतः। वृद्धिः कर्माभिधानं च वच्मी संक्षय उच्यते" मु० दी०। 11. ಮನುಷ್ಯನಿಗೆ ನಡೆಯಬೇಕಾದ ಷೋಡಶ (ಹದಿನಾರು) ಕರ್ಮಗಳು. (1) ಗರ್ಭಾಧಾನ, (2) ಪುಂಸವನ, (3) ಸೀಮಂತ, (4) ಜಾತಕರ್ಮ, (5) ನಾಮಕರಣ, (6) ನಿಷ್ಕ್ರಮಣ, (7) ಅನ್ನಪ್ರಾಶನ, (8) ಚೌಲ, (9) ಉಪನಯನ, (10-13) ವ್ರತಚತುಷ್ಟಯ (ಪ್ರಾಜಾಪತ್ಯ, ಸೌಮ್ಯ, ಆಗ್ನೇಯ ಮತ್ತು ವೈಶ್ವದೇವ), (14) ಸ್ನಾನ, (15) ಉದ್ವಾಹ ಮತ್ತು (16) ಅಂತ್ಯೇಷ್ಟಿ.

**कर्मनिर्हरण ಕರ್ಮನಿರ್ಹರಣ** (ನ०) ಕರ್ಮಗಳನ್ನು ನಾಶಪಡಿಸುವಿಕೆ, ಪಾಪಕರ್ಮಗಳನ್ನು ಪ್ರಾಯಶ್ಚಿತ್ತಾದಿಗಳಿಂದ ಕಡಮೆ ಮಾಡಿಕೊಳ್ಳುವಿಕೆ. कर्मणां निर्हरणम्—भावे "ल्युट्" (३-३-११५)। **–निर्हारः –ನಿರ್ಹಾರಃ.** भावे "घञ्" (३-३-१८)।

**कर्मनिष्ठ ಕರ್ಮನಿಷ್ಠ** (ವಿ०) 1. ಯಾಗಾದಿ ಕರ್ಮಗಳಲ್ಲಿ ಆಸಕ್ತನಾದ, ಯಾಗಾದಿ ಕರ್ಮಾನುಷ್ಠಾನದಲ್ಲಿ ನಿರತನಾದ. कर्मणि निष्ठा यस्य। "ज्ञाननिष्ठा द्विजाः केचित्तपोनिष्ठास्तथापरे। तपःस्वाध्यायनिष्ठाश्च कर्मनिष्ठास्तथापरे" मनु० ३-१३४। (स्त्री०) **–निष्ठा –ನಿಷ್ಠಾ.** ಕರ್ಮಾನುಷ್ಠಾನದಲ್ಲಿ ಆಸಕ್ತಿ, ಯಾಗಾದಿಕರ್ಮಗಳಲ್ಲಿ ನಿರತನಾಗಿರುವಿಕೆ. कर्मसु निष्ठा।

**कर्मन्द ಕರ್ಮಂದ** (ಪು०) ಭಿಕ್ಷುಸೂತ್ರಗಳನ್ನು ರಚಿಸಿದ ಒಬ್ಬ ಋಷಿ.

**कर्मन्दिन् ಕರ್ಮಂದಿನ್** (ಪು०) ಭಿಕ್ಷು, ಸಂನ್ಯಾಸಿ. कर्मन्देन प्रोक्तमधीते "इनिः" (४-३-११२)।

**कर्मन्यास ಕರ್ಮನ್ಯಾಸ** (ಪು०) 1. ಕರ್ಮಗಳನ್ನು ಆಚರಿಸದೆ ಬಿಡುವಿಕೆ. ಕರ್ಮಸಂನ್ಯಾಸ. 2. ಕರ್ಮಫಲತ್ಯಾಗ, ಫಲಾಪೇಕ್ಷೆಯಿಲ್ಲದೆ ಈಶ್ವರಾರ್ಪಣಬುದ್ಧಿಯಿಂದ ಮಾಡುವ ಕರ್ಮಗಳ ಫಲತ್ಯಾಗ.

**कर्मपथ ಕರ್ಮಪಥ** (ಪು०) 1. ಪುಣ್ಯ ಮತ್ತು ಪಾಪ ಕರ್ಮಗಳ ಮಾರ್ಗ. कर्मणां मानसादीनां पन्थाः "अः" (५-४-७४)। ಈ ಕರ್ಮಮಾರ್ಗಗಳು ಹತ್ತು ವಿಧ. [ವಿವರಕ್ಕೆ "कर्मज" ಪದದಲ್ಲಿ ನೋಡಿ.] 2. ಕರ್ಮಲಬ್ಧವಾದ (1) ಅರ್ಚಿರಾದಿ ಮತ್ತು (2) ಧೂಮಾದಿ ಮಾರ್ಗಗಳು. (1) "अग्निर्ज्योतिरहः शुक्लः षण्मासा उत्तरायणम्।

तत्र प्रयाता गच्छन्ति ब्रह्म ब्रह्मविदो जनाः"। (2) धूमो रात्रिस्तथा कृष्णः षण्मासा दक्षिणायनम्। तत्र चान्द्रमसं ज्योतिर्योगी प्राप्य निवर्तते" गीता ८-२४, २५।

**कर्मप्रवचनीय ಕರ್ಮಪ್ರವಚನೀಯ** (ಪುಂ) (ವ್ಯಾಕರಣ ಶಾಸ್ತ್ರದಲ್ಲಿ) ನಿಪಾತಗಳಿಗೆ ಹೇಳಿರುವ ಒಂದು ಸಂಜ್ಞೆ. ಇವುಗಳ ಯೋಗವಿದ್ದಲ್ಲಿ ದ್ವಿತೀಯಾ ಪಂಚಮೀ ಮತ್ತು ಸಪ್ತಮೀ ವಿಭಕ್ತಿಗಳು ಬರುವುವು.

ಈ ಕೆಳಗಿನ ನಿಪಾತಗಳು, ಎದುರಿಗೆ ನಿರ್ದಿಷ್ಟವಾದ ಅರ್ಥಗಳಲ್ಲಿ "**ಕರ್ಮಪ್ರವಚನೀಯ**" ಸಂಜ್ಞೆಯನ್ನು ಹೊಂದಿ ಆಯಾ ಕಾರ್ಯಗಳನ್ನು ಉಂಟುಮಾಡುವುವು:

| ನಿಪಾತ | ಅರ್ಥವಿಶೇಷಗಳಲ್ಲಿ | ಕಾರ್ಯ | ಉದಾಹರಣೆ |
|---|---|---|---|
| (1) अनु | ಲಕ್ಷ್ಯಲಕ್ಷಣ (ಹೇತುಹೇತುಮತ್) ಭಾವ | ದ್ವಿತೀಯಾ ವಿಭಕ್ತಿ | जपमनु प्रावर्षत्। |
| " | ತೃತೀಯಾರ್ಥ (ಸಹಾರ್ಥ) | " | नदीमन्ववसिता सेना। |
| " | ಅಪಕರ್ಷ | " | अनु हरिं सुराः। |
| (2) उप | ಉತ್ಕರ್ಷ | ಸಪ್ತಮೀ | उप परार्धे हरेर्गुणाः। |
| " | ಅಪಕರ್ಷ | ದ್ವಿತೀಯಾ | उप हरिं सुराः। |
| (3) प्रति (4) परि (5) अनु | (1) ಜ್ಞಾಪ್ಯಜ್ಞಾಪಕಭಾವ ಸಂಬಂಧ. | ದ್ವಿತೀಯಾ | वृक्षं प्रति परि अनु वा विद्योतते विद्युत्। |
| | (2) ಪ್ರಕಾರವಿಶೇಷವನ್ನು ಹೊಂದಿರುವಿಕೆ | " | भक्तो विष्णुं प्रति परि अनु वा। |
| | (3) ಭಾಗ (ಸ್ವಸ್ವಾಮಿಭಾವ) | " | लक्ष्मीर्हरिं प्रति परि अनु वा। |
| | (4) ವೀಪ್ಸಾ | ಷತ್ವಾಭಾವ | वृक्षं वृक्षं प्रति परि अनु वा सिञ्चति। |
| (6) अभि | ಭಾಗ ಹೊರತು | ದ್ವಿತೀಯಾ | हरिमभिवर्तते। |
| | ಮೇಲಿನ | " | भक्तो हरिमभि। |
| | (ಮೂರು) ಅರ್ಥಗಳಲ್ಲಿ | ಷತ್ವಾಭಾವ | देवं देवमभिसिञ्चति। |
| (7) अधि (8) परि | ಯಾವ ಅರ್ಥವಿಶೇಷವೂ ಇಲ್ಲದಿದ್ದಲ್ಲಿ. | ಅನುದಾತ್ತಾಭಾವ | कुतोऽध्यागच्छति। कुतःपर्यागच्छति। |
| (9) सु | ಪೂಜಾರ್ಥ | ಷತ್ವಾಭಾವ | सुसिक्तम्। |
| (10) अति | (1) ಅತಿಕ್ರಮಣ | ದ್ವಿತೀಯಾ | अति देवान् कृष्णः। |
| | (2) ಪೂಜಾರ್ಥ | " | " |
| (11) अपि | (1) ಪದಾರ್ಥ | ಷತ್ವಾಭಾವ | सर्पिषोऽपि स्यात्। |
| " | (2) ಸಂಭಾವನೆ (ಅತ್ಯುಕ್ತಿ) | " | अपि स्तुयाद्विष्णुम्। |
| " | (3) ಅನ್ವವಸರ್ಗ (ಕಾಮಚಾರಾನುಜ್ಞೆ) | " | अपि स्तुहि। |
| " | (4) ನಿಂದೆ | " | अपि स्तुयाद्वृषलम्। |
| " | (5) ಸಮುಚ್ಚಯ | " | अपि सिञ्च अपि स्तुहि। |
| (12) अप | ವರ್ಜನ | ಪಂಚಮೀ | अप हरेः संसारः |
| (13) परि | " | | परि हरेः संसारः |
| (14) आङ् | (1) ಮರ್ಯಾದೆ | " | आ मुक्तेः संसारः |
| | (2) ಅಭಿವಿಧಿ | " | आ बालाद् हरिभक्तिः। |
| (15) प्रति | (1) ಪ್ರಾತಿನಿಧ್ಯ | " | प्रद्युम्नः कृष्णात् प्रति। |
| | (2) ಪ್ರತಿದಾನ | " | तिलेभ्यः प्रतियच्छति माषान्। |
| (16) अधि | ಸ್ವಸ್ವಾಮಿಭಾವ ಸಂಬಂಧ | ಸಪ್ತಮೀ | अधि भुवि रामः। ಇತ್ಯಾದಿ |

ಕೆಲವುಕಡೆ ಈ ಕರ್ಮಪ್ರವಚನೀಯಸಂಜ್ಞಕಪದಗಳ ಯೋಗದಿಂದ ಉಪಸರ್ಗನಿಮಿತ್ತವಾದ ಷತ್ವವೂ ಗತಿಸಂಜ್ಞಾನಿಮಿತ್ತವಾದ ಅನುದಾತ್ತಸ್ವರವೂ ಬರುವುದಿಲ್ಲ.

**कर्मफल ಕರ್ಮಫಲ** (ನಂ) ಶಾಸ್ತ್ರವಿಹಿತವಾದ ಪುಣ್ಯ ಮತ್ತು ನಿಷಿದ್ಧವಾದ ಪಾಪಕರ್ಮಗಳ ಪರಿಣಾಮವಾದ ಸುಖದುಃಖಗಳು, ಜನ್ಮಾಂತರದ ಕರ್ಮಗಳ ಫಲ. कर्मणां विहितानां निषिद्धानां वा फलम्। ಶಾಸ್ತ್ರವಿಹಿತ ಕರ್ಮ

ಗಳನ್ನು ಫಲಾಪೇಕ್ಷೆಯಿಂದ ಮಾಡಿದರೆ ಅವಕ್ಕನುಗುಣವಾದ ಫಲಪ್ರಾಪ್ತಿ. ಫಲಾಭಿಸಂಧಿಯಿಲ್ಲದೆ ಕೇವಲ ಆತ್ಮಶುದ್ಧಿಗಾಗಿ ಕರ್ಮಾನುಷ್ಠಾನಮಾಡಿ ಸ್ಥಿರವಾದ ಆತ್ಮಾನುಭವ ರೂಪವಾದ ಸೌಖ್ಯವನ್ನು ಹೊಂದಬಹುದು. "युक्तः कर्मफलं त्यक्त्वा शान्तिमाप्नोति नैष्ठिकीम्। अयुक्तः कामकारेण फले सक्तो निबध्यते" गीता ५-१२।

**कर्मबन्ध ಕರ್ಮಬಂಧ** (पु०) ಕರ್ಮದಿಂದುಂಟಾಗುವ ಶರೀರ ಸಂಬಂಧ, ಸಂಸಾರ ಬಂಧನ. कर्मणा बन्धः। "एषा तेऽभिहिता सांख्ये बुद्धिर्योगे त्विमां शृणु। बुद्ध्या युक्तो यया पार्थ कर्मबन्धं प्रहास्यसि" गीता २-४०।

**कर्मबन्धन ಕರ್ಮಬಂಧನ** (न०) 1. ಕರ್ಮದಿಂದ ಉಂಟಾದ ಶರೀರಸಂಬಂಧ, ಸಂಸಾರಬಂಧನ. (वि०) ಕರ್ಮವೆಂಬ ಬಂಧನಸಾಧನದಿಂದ ಕೂಡಿದ. ಪರಮ ಪುರುಷಪ್ರೀತ್ಯರ್ಥವಾದ ಕರ್ಮಕ್ಕಿಂತಲೂ ಬೇರೆಯಾದ ಕರ್ಮವನ್ನು ಆಚರಿಸುವವನು ಸಂಸಾರಬಂಧನಕ್ಕೆ ಒಳಗಾಗುವನು. कर्मैव कर्मणा वा बन्धनं यस्य। "यज्ञार्थात्कर्मणोऽन्यत्र लोकोऽयं कर्मबन्धनः। तदर्थं कर्म कौन्तेय मुक्तसङ्गः समाचर" गीता ३-९।

**कर्मभू ಕರ್ಮಭೂ** (स्त्री०) 1. ವ್ಯವಸಾಯ ಮಾಡಲ್ಪಟ್ಟ ಭೂಮಿ. कर्मणः कृषिकर्मणो भूः। 2. ಭಾರತ ವರ್ಷ.

**कर्मभूमि ಕರ್ಮಭೂಮಿ** (स्त्री०) ಕರ್ಮಗಳು ಆಚರಿಸಲ್ಪಡುವ ಭಾರತವರ್ಷ. कर्मणः यज्ञादिकर्मणः भूमिः। "उत्तरं यत्समुद्रस्य हिमाद्रेश्चैव दक्षिणम्। वर्षं तद्भारतं नाम भारती यत्र सन्ततिः। नवयोजनसाहस्रो विस्तारोऽस्य महामुने। कर्मभूमिरियं स्वर्गमपवर्गं च गच्छताम्" विष्णुपु० २-३-१, २।

**कर्मभोग ಕರ್ಮಭೋಗ** (पु०) ಮಾಡಿದ ಕರ್ಮದಿಂದ ಉಂಟಾಗುವ ಸುಖದುಃಖಗಳ ಅನುಭವ.

**कर्ममीमांसा ಕರ್ಮಮೀಮಾಂಸಾ** (स्त्री०) ಕರ್ಮಕಾಂಡದ ಅರ್ಥವನ್ನು ನಿರ್ಣಯಿಸುವ ಮೀಮಾಂಸಾ ಶಾಸ್ತ್ರ. कर्मणः कर्मप्रतिपादकवेदभागस्य मीमांसा विचारः। [ವಿವರಕ್ಕೆ "मीमांसा" ಪದದಲ್ಲಿ ನೋಡಿ.]

**कर्मवासना ಕರ್ಮವಾಸನಾ** (स्त्री०) ಮುಂದು ಮುಂದಿನ ಜನ್ಮಗಳಲ್ಲಿ ಪುಣ್ಯಪಾಪಕಾರ್ಯಗಳನ್ನು ಮಾಡಿಸುವ ಹಿಂದಿನ ಜನ್ಮಗಳಲ್ಲಿನ ಅನುಭವದ ಒಂದು ಸಂಸ್ಕಾರ.

**कर्मयुग ಕರ್ಮಯುಗ** (न०) ಹಿಂಸೆಯೇ ಪ್ರಧಾನವಾದ ಕಲಿಯುಗ. कृणाति हिनस्ति परस्परं यस्मिन्—कृञ् (हिंसायाम्) "मनिन्" (उ० ४-१४४)। कर्म च तद्युगं च।

**कर्मयोग ಕರ್ಮಯೋಗ** (पु०) ಫಲಾಪೇಕ್ಷೆಯಿಲ್ಲದ ಕರ್ಮಾನುಷ್ಠಾನ, ಉಪದೇಶದಿಂದ ಜೀವಾತ್ಮ ಪರಮಾತ್ಮ ವಿಷಯಕ ಯಥಾರ್ಥಜ್ಞಾನವುಳ್ಳವನಿಂದ ಶಕ್ತಿಗನುಗುಣವಾಗಿ ಫಲಾಭಿಸಂಧಿಯಿಲ್ಲದೆ ಆಚರಿಸಲ್ಪಡುವ ಜಪತಪೋರೂಪವಾದ ಕರ್ಮಗಳು, ಫಲಾಭಿಸಂಧಿಯಿಲ್ಲದ ಕರ್ಮ ಕೌಶಲ.

**कर्मवत् ಕರ್ಮವತ್** (वि०)1. ಕಾರ್ಯವಂತ, ಯಾವುದಾದರೂ ಕಾರ್ಯವುಳ್ಳವನು. कर्मास्यास्ति "मतुप्" (५-२-९४)। स्त्रियाम् "ङीप्" (४-१-६)। **—वती —ವತೀ.** (अव्य०) 2. ಕರ್ಮದಂತೆ. कर्मणा तुल्यम् "वतिः" (५-१-११५)।

**कर्मविपर्यय ಕರ್ಮವಿಪರ್ಯಯ** (पु०) ಕಾರ್ಯದ ವ್ಯತ್ಯಾಸ, ಕಾರ್ಯವು ತಪ್ಪಾಗಿ ಆಗುವಿಕೆ, ಕಾರ್ಯವು ವಿರೋಧವಾಗಿ ಆಗುವಿಕೆ. कर्मणो विपर्ययः।

**कर्मविपाक ಕರ್ಮವಿಪಾಕ** (पु०)1. ಪುಣ್ಯಪಾಪ ಕಾರ್ಯಗಳ ಪರಿಣಾಮ, ಜನ್ಮಾಂತರದ ಪುಣ್ಯಪಾಪಕಾರ್ಯಗಳ ಶುಭಾಶುಭ ಫಲ. कर्मणः पुण्यापुण्यरूपस्य विपाकः फलविशेषः। ಶಾತಾತಪಸ್ಮೃತಿಯಲ್ಲಿ 84 ವಿಧ ಪಾಪಕರ್ಮ ಫಲಗಳು ಉಕ್ತವಾಗಿವೆ. 2. ಅನುಭವಿಸುತ್ತಿರುವ ನಾನಾ ವಿಧ ದುಃಖಗಳಿಗೆ ಕಾರಣ ಮತ್ತು ಅದರ ನಿವೃತ್ತ್ಯುಪಾಯಗಳನ್ನು ತಿಳಿಸುವ ಒಂದು ಗ್ರಂಥ.

**कर्मव्यति(ती)हार ಕರ್ಮವ್ಯತಿ(ತೀ)ಹಾರ** (पु०) ಪರಸ್ಪರ ಏಕಜಾತೀಯ ಕಾರ್ಯಗಳ ವಿನಿಮಯ, ಸಮಾನ ಕಾರ್ಯಗಳ ಅನ್ಯೋನ್ಯ ಬದಲಾವಣೆ. कर्मणः व्यति(ती)-हारः अन्योन्यं क्रियाविनिमयः। केशाकेशि। दण्डादण्डि।

**कर्मशाला ಕರ್ಮಶಾಲಾ** (स्त्री०) ಕೈಗಾರಿಕೆಯ ಪ್ರಯೋಗಶಾಲೆ, ಕಾರಖಾನೆ.

**कर्मशील ಕರ್ಮಶೀಲ** (वि०) ಕೆಲಸ ಮಾಡುವ ಸ್ವಭಾವದವನು. कर्म शीलं यस्य।

**कर्मशूर ಕರ್ಮಶೂರ** (वि०) ಹಿಡಿದ ಕಾರ್ಯವನ್ನು ಸಮಾಪ್ತಿಗೊಳಿಸುವವನು. कर्मणि शूरः।

**कर्मश्रेष्ठ ಕರ್ಮಶ್ರೇಷ್ಠ** (पु०) 1. ಪುಲಹನ ಮಗ; [ಪುಲಹನು ಚತುರ್ಮುಖನ ನಾಭಿಯಿಂದ ಹುಟ್ಟಿದ ಒಬ್ಬ ಬ್ರಹ್ಮರ್ಷಿ. ಕರ್ದಮಬ್ರಹ್ಮನ ಮಗಳಾದ ಗತಿಯು ಈ ಋಷಿಯ ಪತ್ನಿ. ಇವಳಲ್ಲಿ ಕರ್ಮಶ್ರೇಷ್ಠ, ವರೀಯಸ್ಸು ಮತ್ತು ಸಹಿಷ್ಣುಗಳೆಂಬ ಮೂವರು ಪುತ್ರರು ಜನಿಸಿದರು.] (वि०) ಕರ್ಮಾಚರಣೆಯಿಂದ ಶ್ರೇಷ್ಠನಾದವನು. कर्मणा श्रेष्ठः।

**कर्मसंन्यास ಕರ್ಮಸಂನ್ಯಾಸ** (पुं०) 1. ಕರ್ಮತ್ಯಾಗ, ಕರ್ಮಗಳನ್ನು ಆಚರಿಸದೆ ಬಿಡುವಿಕೆ. कर्मण: संन्यास: त्याग:। "तयोस्तु कर्मसंन्यासात्कर्मयोगो विशिष्यते" गीता ५-२। 2. ಕರ್ಮಫಲತ್ಯಾಗ; ಫಲವನ್ನು ಅಪೇಕ್ಷಿಸದೆ ಕರ್ಮವನ್ನಾಚರಿಸುವುದು ಫಲತ್ಯಾಗವೆನಿಸುವುದು. ಫಲಾಪೇಕ್ಷೆಯಿಲ್ಲದೆ ಕರ್ಮವನ್ನಾಚರಿಸುವವನಿಗೆ ಸಿದ್ಧಿಯುಂಟಾಗುವುದು. ಆತ್ಮಾವಲೋಕನದಲ್ಲಿ ಪ್ರವೃತ್ತವಾದ ಮನಸ್ಸಿನಿಂದ ಇಂದ್ರಿಯಗಳನ್ನು ಕಾರ್ಯದಲ್ಲಿ ಪ್ರೇರಿಸಿ ಕರ್ಮ ಮಾಡುವುದೇ ಸ್ವಭಾವವಾದ ಇಂದ್ರಿಯ (ಕರ್ಮೇಂದ್ರಿಯ) ಗಳಿಂದ ಫಲಾಪೇಕ್ಷೆಯಿಲ್ಲದೆ ಕರ್ಮವನ್ನು ಆಚರಿಸುವವನು (ಕರ್ಮಯೋಗಿಯು) ಜ್ಞಾನಯೋಗಿಗಳಿಗಿಂತಲೂ ಶ್ರೇಷ್ಠನು. "यस्त्विन्द्रियाणि मनसा नियम्यारभतेऽर्जुन। कर्मेन्द्रियैः कर्मयोगमसक्तः स विशिष्यते" गीता ३-७।

**कर्मसंन्यासिक ಕರ್ಮಸಂನ್ಯಾಸಿಕ** (पुं०) 1. ಕರ್ಮಸಂನ್ಯಾಸವುಳ್ಳವನು, ಕರ್ಮಗಳನ್ನು ತ್ಯಜಿಸಿರುವ ಸಂನ್ಯಾಸಿ, ಯತಿ. कर्मणां संन्यासोऽस्यास्ति "ठन्" (५-२-११५)। 2. ಕರ್ಮಫಲವನ್ನು ತ್ಯಾಗಮಾಡಿದವನು. "इनि:" (५-२-११५)। **–संन्यासिन् –ಸಂನ್ಯಾಸಿನ್.** ಜ್ಞಾನಿಯಾದವನು ಮೋಕ್ಷಕ್ಕಾಗಿಯೂ ಜ್ಞಾನಾಪೇಕ್ಷೆಯು ಜ್ಞಾನಕ್ಕಾಗಿಯೂ ಕರ್ಮಫಲತ್ಯಾಗ ಮಾಡುವನು. ಈ ರೀತಿ ಕರ್ಮಫಲತ್ಯಾಗವು ಎರಡು ವಿಧ. "द्विविध: कर्मणस्त्याग: फलसाधनभेदत:। फलाय ज्ञानिनस्त्यागो जिज्ञासोर्ज्ञानसिद्धये"।

**कर्मसङ्ग ಕರ್ಮಸಂಗ** (पुं०) ಕರ್ಮದಲ್ಲಿ ಆಸಕ್ತಿ, ಫಲಾಪೇಕ್ಷೆಯಿಂದ ಕರ್ಮಾಚರಣೆಯಲ್ಲಿ ಅಭಿನಿವೇಶ. कर्मणि सङ्ग: आसक्ति:।

**कर्मसंग्रह ಕರ್ಮಸಂಗ್ರಹ** (पुं०) ಮೂರು ವಿಧವಾದ ಕರ್ಮ. (1) ಕರ್ಮಸಾಧನವಾದ ದ್ರವ್ಯ, (2) ಯಾಗಾದಿ ಕರ್ಮ. (3) ಕರ್ಮವನ್ನು ಆಚರಿಸುವವನು ಎಂದು ಕರ್ಮವು ಮೂರು ವಿಧ. "करणं कर्म कर्तेति त्रिविध: कर्मसंग्रह:" गीता १८-१८।

**कर्मसचिव ಕರ್ಮಸಚಿವ** (पुं०) ರಾಜನ ಕಾರ್ಯಗಳಲ್ಲಿ ಸಹಾಯಕನಾಗಿರುವವನು. कर्मसु सचिव:।

**कर्मसाक्षिन् ಕರ್ಮಸಾಕ್ಷಿನ್** (पुं०) ಈ ಲೋಕದಲ್ಲಿ ನಡೆಯುವ (ಮಾನವನ) ಕರ್ಮಗಳನ್ನೆಲ್ಲಾ ನೋಡುವ ಸೂರ್ಯ, ಚಂದ್ರ ಮೊದಲಾದವರು. साक्षात् (पश्यति) "इनि:" (५-२-९१)। कर्मण: साक्षी। "कर्मसाक्षी जगच्चक्षुरंशुमाली त्रयीतनु:" अम०। "सूर्य: सोमो यम: कालो महाभूतानि पञ्च च। एते शुभाशुभस्येह कर्मणो नव साक्षिण:"। (वि०) 2. (ನಡೆಯುತ್ತಿರುವ) ಕಾರ್ಯವನ್ನು ಎದುರಿಗೆ ನೋಡುವವನು. "यो यस्तत्कर्मसाक्षी चरति मयि रणे यश्च यश्च प्रतीप: क्रोधान्धस्तस्य तस्य स्वयमपि जगतामन्तकस्यान्तकोऽहम्" वेणी० ३-३२।

**कर्मसाधन ಕರ್ಮಸಾಧನ** (न०) ಕರ್ಮಾಚರಣೆಗೆ ಬೇಕಾದ ದ್ರವ್ಯ. ಕರ್ಮಾಚರಣೆಗೆ ಇಂದ್ರಿಯಗಳು ಮತ್ತು ಶರೀರ ಇವು ಮುಖ್ಯ ಸಾಧನ. "शरीरवाङ्मनोभिर्यत् कर्म प्रारभते नर:" गीता १८-१५।

**कर्मसिद्धि ಕರ್ಮಸಿದ್ಧಿ** (स्त्री०) ಕಾರ್ಯಸಿದ್ಧಿ, ಕಾರ್ಯವು ಕೈಗೂಡುವಿಕೆ, ಕಾರ್ಯದಫಲ ದೊರಕುವಿಕೆ. कर्मण: सिद्धि:। "जितेन्द्रिये शूलिनि पुष्पचाप: स्वकर्मसिद्धिं पुनराशशंसे" कुमा० ३-५७।

**कर्मस्थ ಕರ್ಮಸ್ಥ** (वि०) ಕಾರ್ಯದಲ್ಲಿರುವವನು, ಕೆಲಸದಲ್ಲಿ ನಿರತನಾದವನು. कर्मणि तिष्ठति—ष्ठा (गति-निवृत्तौ) "क:" (३-२-४)।

**कर्मस्थान ಕರ್ಮಸ್ಥಾನ** (न०) 1. ಕಾರ್ಯಾಲಯ, ಸಾರ್ವಜನಿಕ ಕಾರ್ಯಕ್ಷೇತ್ರ. 2. ಉದ್ಯೋಗಸ್ಥಾನ, ಕಾರಖಾನೆ. कर्मण: स्थानम्। 3. (ಜ್ಯೋತಿಷೋಕ್ತವಾದ) ಲಗ್ನದಿಂದ ಹತ್ತನೆಯ ಸ್ಥಾನ. "दशमो मान आज्ञापि करस्थानमिति स्मृत:। वृद्धि: कर्माभिधानं च वज्री संक्षय उच्यते।" मु० दी०।

**कर्माङ्ग ಕರ್ಮಾಂಗ** (न०) 1. ಕಾರ್ಯದ ಒಂದು ಭಾಗ. 2. ಯಾಗಾದಿ ಕರ್ಮದ ಒಂದು ಭಾಗ. कर्मण: अङ्गम्।

**कर्माजीव ಕರ್ಮಾಜೀವ** (पुं०) 1. ಕೆಲಸದಿಂದ ಸಂಪಾದಿಸಲ್ಪಟ್ಟ ಜೀವನೋಪಾಯ, ಕೃಗಾರಿಕೆ ಮುಂತಾದ ಕಸಬಿನಿಂದ ಸಂಪಾದಿಸಲ್ಪಟ್ಟ ಜೀವನಾಧಾರ,—ಹೊಟ್ಟೆಪಾಡು. कर्मणा आजीवो जीवनम्। (वि०) 2. ಕಸಬಿನಿಂದ ಜೀವಿಸುವವನು, ಉದ್ಯೋಗದಿಂದ ಜೀವನೋಪಾಯವುಳ್ಳವನು. कर्मणा आजीवो यस्य।

**कर्मात्मन् ಕರ್ಮಾತ್ಮನ್** (पुं०) 1. ಮಾಡಿದ ಪುಣ್ಯಪಾಪ ಕಾರ್ಯಗಳಿಂದ ಹೊಂದಲ್ಪಟ್ಟ ಶರೀರವುಳ್ಳ ಜೀವ. कर्मणा आत्मा शरीरं यस्य। "तस्मिन् स्वपिति सुस्थे तु कर्मात्मान: शरीरिण:। स्वकर्मभ्यो निवर्तन्ते मनश्च ग्लानिमृच्छति" मनु० १-५३। (वि०) 2. ಕೆಲಸ ಮಾಡುವ ಸ್ವಭಾವದ. "कर्मात्मनां च देवानां सोऽसृजत् प्राणिनां प्रभु:। साध्यानां च गणं सूक्ष्मं यज्ञं चैव सनातनम्" मनु० १-२२। 3. ಕೆಲಸದಲ್ಲಿ ನಿರತನಾದವನು.

**कर्माधिकार ಕರ್ಮಾಧಿಕಾರ** (पुं०) ಕೆಲಸ ಮಾಡುವ ಹಕ್ಕು. ಲೌಕಿಕ ಮತ್ತು ವೈದಿಕ ಕರ್ಮಫಲಾಪೇಕ್ಷೆ, ಕರ್ಮಾಚರಣೆಯ ಸಾಮರ್ಥ್ಯ, ಶರೀರ ದಾರ್ಢ್ಯ, ಅರ್ಥಸಂಪತ್ತಿ, ಜನಸಂಪತ್ತಿ, ಕರ್ಮೋಪಯೋಗಿ ಶಾಸ್ತ್ರಾರ್ಥಜ್ಞಾನ, ವೇದಾಧ್ಯಯನ ಇವೆಲ್ಲವೂ ಇರುವುದಾದರೆ ಕರ್ಮಾಚರಣೆಯಲ್ಲಿ ಅಧಿಕಾರ.

**कर्माधिकारिन् ಕರ್ಮಾಧಿಕಾರಿನ್** (वि०) 1. ಕೆಲಸ ಮಾಡುವ ಹಕ್ಕುಳ್ಳವನು. 2. ಕರ್ಮಾಚರಣೆಯಲ್ಲಿ ಸಾಮರ್ಥ್ಯವುಳ್ಳವನು. कर्मणि अधिकारी।

**कर्माध्यक्ष ಕರ್ಮಾಧ್ಯಕ್ಷ** (पुं०) ಕೆಲಸವನ್ನು ಪ್ರತ್ಯಕ್ಷವಾಗಿ ನೋಡುವವನು, ಕಾರ್ಯದ ಮೇಲ್ವಿಚಾರಕ. कर्मणि अध्यक्षः।

**कर्मान्त ಕರ್ಮಾಂತ** (पुं०) 1. ಯಾಗಾದಿ ಕೆಲಸದ ಕೊನೆ, ಕರ್ಮದ ಸಮಾಪ್ತಿ. कर्मणोऽन्तः। "कर्मान्ते दक्षिणां दद्यात्"। 2. ಕಾರ್ಯದ ಪೂರಯಿಕೆ, ಕಾರ್ಯದ ನೆರವೇರಿಕೆ. "अहन्यहन्यवेक्षेत कर्मान्तान् वाहनानि च" मनु० ८-४१९। 3. ಚೆನ್ನಾಗಿ ಉಳಲ್ಪಟ್ಟ ಭೂಮಿ. 4. ಧಾನ್ಯವನ್ನು ಸಂಗ್ರಹಿಸಿಡುವ ಸ್ಥಾನ, ಉಗ್ರಾಣ. "तेषामर्थे नियुञ्जीत शूरान् दक्षान् कुलोद्‌गतान्। शुचीनाकरकर्मान्ते भीरूनन्तर्निवेशने" मनु० ७-६२।

**कर्मार ಕರ್ಮಾರ** (पुं०) 1. ಕಮ್ಮಾರ, ಕಬ್ಬಿಣದ ಕೆಲಸ ಮಾಡುವ ಒಂದು ಜಾತಿಯವನು. कर्म ऋच्छति—ऋ (गतौ) "अण्" (३-२-१)। "कर्मारस्य निषादस्य रङ्गावतरकस्य च। सुवर्णकर्तुर्वेणस्य शस्त्रविक्रयिणस्तथा" मनु० ४-२१५। 2. ಕೈಗೆಲಸಗಾರ, ಶಿಲ್ಪಿ.

**कर्मार्ह ಕರ್ಮಾರ್ಹ** (पुं०) 1. ಪುರುಷ, ಮನುಷ್ಯ. कर्म अर्हति—अर्ह (पूजायाम्) "अण्" (३-२-१)। (वि०) 2. ಕೆಲಸ ಮಾಡಲು ಸಮರ್ಥನಾದವನು, ಕೆಲಸಕ್ಕೆ ಯೋಗ್ಯನಾದವನು. 3. ಯಾಗಾದಿಕರ್ಮಗಳಿಗೆ ಯೋಗ್ಯನಾದವನು.

**कर्माशय ಕರ್ಮಾಶಯ** (पुं०) ಜನ್ಮಾಂತರಗಳಲ್ಲಿ ಮಾಡಿದ ಪುಣ್ಯ ಮತ್ತು ಪಾಪ ಕರ್ಮಗಳಿಗೆ ಆಶ್ರಯವಾದ ಶರೀರ ಮನಸ್ಸು ಮುಂತಾದುವು.

**कर्मिक ಕರ್ಮಿಕ** (वि०) 1. ಕೆಲಸಗಾರ, ಕಾರ್ಯನಿರತ, ಉದ್ಯೋಗವುಳ್ಳವನು. कर्मास्यास्ति "ठन्" (५-२-११६)। 2. ಕೂಲಿಯವನು, ಕೆಲಸದವನು.

**कर्मिन् ಕರ್ಮಿನ್** (वि०) 1. ಕೆಲಸಗಾರ, ಉದ್ಯೋಗಶೀಲ, ಕಾರ್ಯನಿರತ. कर्मास्यास्ति "इनिः" (५-२-११६)। 2. ಯಾಗಾದಿಕರ್ಮಗಳನ್ನು ಆಚರಿಸುವವನು. "तपस्विभ्यः अधिको योगी ज्ञानिभ्योऽपि मतोऽधिकः। कर्मिभ्यश्चाधिको योगी तस्माद्योगी भवार्जुन" गीता ६-४६। 3. ಕೂಲಿಯವನು, ಕೆಲಸಗಾರ.

**कर्मिष्ठ ಕರ್ಮಿಷ್ಠ** (त्रि०) ಉದ್ಯಮಶೀಲ, ಹೆಚ್ಚಾಗಿ ಕೆಲಸದಲ್ಲಿ ಆಸಕ್ತಿಯುಳ್ಳವನು. अतिशयेन कर्मी "इष्ठन्" (५-३-५५)।

**कर्मेन्द्रिय ಕರ್ಮೇಂದ್ರಿಯ** (न०) ವಾಕ್ಕು, ಪಾಣಿ, ಪಾದ, ಪಾಯು, ಉಪಸ್ಥಗಳೆಂಬ ಐದು ಇಂದ್ರಿಯಗಳು. कर्मणां वचनादीनां निमित्तमिन्द्रियम्। [ವಿವರಕ್ಕೆ "इन्द्रिय" "इन्द्रियव्यापार" "इन्द्रियाधिष्ठातृ" "इन्द्रियायतन" "इन्द्रियार्थ" ಪದಗಳಲ್ಲಿ ನೋಡಿ.]

**कर्मोद्युक्त ಕರ್ಮೋದ್ಯುಕ್ತ** (वि०) ಕಾರ್ಯದಲ್ಲಿ ನಿರತನಾದವನು, ಕೆಲಸದಲ್ಲಿ ತೊಡಗಿರುವವನು, कर्मणि उद्युक्तः।

**कर्व-दर्पे** (भ्वा० पर० अक० से०) कर्वति। चकर्व। अकर्वीत्। ಗರ್ವಹೊಂದು, ಕೊಬ್ಬಿದವನಾಗು.

**कर्व ಕರ್ವ** (पुं०) 1. ಕಾಮ, ಮನ್ಮಥ. किरति विषयेषु चित्तम्—कॄ (विक्षेपे) "वः" (उ० १-१५३)। 2. ಮೂಷಕ, ಇಲಿ. "कर्वः कामः आखुश्च" सि० कौ०।

**कर्वट ಕರ್ವಟ** (पुंन०) 1. ಒಂದು ಜಿಲ್ಲೆಯ ಮುಖ್ಯ ಪಟ್ಟಣ. 2. ಇನ್ನೂರು ಹಳ್ಳಿಗಳ ಮಧ್ಯದಲ್ಲಿ ಸುಂದರವಾದ ಒಂದು ಪಟ್ಟಣ. "कर्वटोऽस्त्री द्रोणमुखं पट्टणं पुटभेदनम्" वैज०। "कर्वटं द्विशतग्राममध्ये ग्राममनोहरम्" हारा०। 3. ಹೆಚ್ಚು ಕಂಟಕದಿಂದ ಕೂಡಿದ ಗ್ರಾಮ. "द्वे शते कर्वटस्य स्यात् नगरस्य चतुःशतम्" याज्ञ० २-१६७। (पुं०) 4. ಎಂಟುನೂರ ನಾಲ್ಕು ಗ್ರಾಮಗಳ ಮಧ್ಯದ ಒಂದು ಮುಖ್ಯಗ್ರಾಮ. "चतुरष्टशतग्रामान्तः द्रोणमुखकर्वटौ" त्रिकाण्ड०।

**कर्वर ಕರ್ವರ** (पुं०) 1. ವ್ಯಾಘ್ರ, ಹುಲಿ. 2. ರಾಕ್ಷಸ. 3. ಪಾಪ. कॄ (विक्षेपे) "ष्वरच्" (उ० २-१२२)। "कर्वरो व्याघ्ररक्षसोः" सि० कौ०। स्त्रियाम् "ङीष्" (४-१-४१)। **कर्वरी ಕರ್ವರೀ.** 1. ದುರ್ಗಾದೇವಿ. 2. ರಾತ್ರಿ. 3. ರಾಕ್ಷಸಿ. 4. ಹಿಂಗುಪತ್ರ.

**कर्शन ಕರ್ಶನ** (न०) 1. ಕೃಶವಾಗುವಿಕೆ, ತೆಳ್ಳಗೆ ಆಗುವಿಕೆ. कृश (तनूकरणे) भावे "ल्युट्" (३-३-११५)। (वि०) 2. ಕೃಶವಾಗಿ ಮಾಡುವ, ತೆಳ್ಳಗೆ ಮಾಡುವ. कृश + णिच् कर्तं० "ल्युः" (३-१-१३४)। 3. ತೊಂದರೆ ಕೊಡುವ, ಹಿಂಸಿಸುವ, ಪೀಡಿಸುವ.

**कर्शनीय ಕರ್ಶನೀಯ** (वि०) 1. ತೆಳ್ಳಗೆ ಮಾಡಲು ಅರ್ಹವಾದ, 2. ತೆಳ್ಳಗೆ ಮಾಡಲು ಶಕ್ಯವಾದ. 3. ತೆಳ್ಳಗೆ ಮಾಡಲ್ಪಡುವ. कृश (तनूकरणे) "अनीयर्" (३-१-९६)।

**कर्शयत् ಕರ್ಶಯತ್** (वि०) ತೆಳ್ಳಗೆ ಮಾಡುತ್ತಿರುವ. कृश (तनूकरणे) + णिच् "शतृ" (३-२-१२४)। स्त्रियाम् "ङीप्" (४-१-६)। **–यन्ती –ಯಂತೀ.**

**कर्शित ಕರ್ಶಿತ** (वि०) ತೆಳ್ಳಗೆ ಮಾಡಲ್ಪಟ್ಟ, ಕೃಶವಾಗಿ ಮಾಡಲ್ಪಟ್ಟ. कृश (तनूकरणे) + णिच् "क्तः" (३-२-१०२)।

**कर्ष ಕರ್ಷ** (पुंन०) 1. ಚಿನ್ನ ಬೆಳ್ಳಿಗಳ ಒಂದು ತೂಕ, ಹದಿನಾರು ಆದ್ಯಮಾಷಕಗಳ ತೂಕ. 80 ರಕ್ತಿಗಳು, 1/4 ಪಲ, 1/400 ತುಲೆ, 176 ಗುಲಗಂಜಿಗಳ ತೂಕ. कृष (विलेखने) "अच्" (३-१-१३४)। 2. ಹದಿನಾರು ಆದ್ಯಮಾಷಕಗಳ ತೂಕದ ಚಿನ್ನ. (पु०) 3. ವಿಭೀತಕ ವೃಕ್ಷ, ತಾರೆಗಿಡ. 4. ಆಕರ್ಷಣ, ಎಳೆಯುವಿಕೆ. 5. ಬರೆಯುವಿಕೆ. कृष (विलेखने) भावे "घञ्" (३-३-१८)। 6. ಉಳುಮೆ, ವ್ಯವಸಾಯ. 7. ನೇಗಿಲು. 8. ಗಾಲಿ (ಚಕ್ರ)ಯ ಜಾಡು. 9. ಉಳುವವನು, 10. ಎಳೆಯುವವನು.

**कर्षक ಕರ್ಷಕ** (पु०) 1. ಕುಜ, ಅಂಗಾರಕ. "कर्षको रुधिरो भौमः" वैज०। (वि०) 2. ಎಳೆಯುವವನು. 3. ಲೇಖಕ, ಬರಯುವವನು. 4. ರೈತ, ಬೇಸಾಯಗಾರ. कृष (विलेखने) "ण्वुल्" (३-१-१३३)। "कच्चिच्च बीजं भक्तं च कर्षकस्यावसीदति" भा० सभा० ५-८२। "त्वं समीरण इव प्रतोक्षितः कर्षकेण वलजान् पुपूषता" माघ० १४-७।

**कर्षण ಕರ್ಷಣ** (न०) 1. ಎಳೆಯುವಿಕೆ. "भज्यमानमतिमात्रकर्षणात् तेन वज्रपरुषस्वनं धनुः" रघु० ११-४६। 2. ನೇಗಿಲಿನಿಂದ ಉಳುವಿಕೆ. कृष (विलेखने) भावे "ल्युट्" (३-३-११५)। "मृतं तु याचितं भैक्षं प्रमृतं कर्षणं स्मृतम्" मनु० ४-५। 3. ಶೋಷಣ, ಒಣಗಿಸುವಿಕೆ. 4. ಪೀಡಿಸುವಿಕೆ, ಹಿಂಸಿಸುವಿಕೆ. "शरीरकर्षणात् प्राणाः क्षीयन्ते प्राणिनां यथा। तथा राज्ञामपि प्राणाः क्षीयन्ते राष्ट्रकर्षणात्" मनु० ७-११२। (वि०) 5. ಎಳೆಯುವ, ಆಕರ್ಷಿಸುವ, 6. ನೇಗಿಲಿನಿಂದ ಉಳುವ. कृष (विलेखने) "ल्युः" (३-१-१३४)। (स्त्री०) **कर्षणी ಕರ್ಷಣೀ.** ಹಾಲೆಗಿಡ, गौरा० "ङीष्" (४-१-४१)।

**कर्षणीय ಕರ್ಷಣೀಯ** (वि०) 1. ಎಳೆಯಲು ಅರ್ಹವಾದ. 2. ಎಳೆಯಲು ಶಕ್ಯವಾದ. 3. ಉಳಲು ಯೋಗ್ಯವಾದ. 4. ಉಳಲು ಶಕ್ಯವಾದ. कृष (विलेखने) 'अनीयर्' (३-१-९६)। 5. ಎಳೆಯಲ್ಪಡುವ. 6. ಉಳಲ್ಪಡುವ.

**कर्षत् ಕರ್ಷತ್** (वि०) 1. ಉಳುತ್ತಿರುವ. 2. ಎಳೆಯುತ್ತಿರುವ, ಆಕರ್ಷಿಸುತ್ತಿರುವ. कृष (विलेखने) "शतृ" (३-२-१२४)। "धनुः स कर्षन् रहितमायासेनाऽऽससार ताम्" माघ० १९-१५। स्त्रियाम् "ङीप्" (४-१-६)। **कर्षन्ती ಕರ್ಷಂತೀ.**

**कर्षफल ಕರ್ಷಫಲ** (पु०) 1. ತಾರೆಗಿಡ. (स्त्री०) 2. ನೆಲ್ಲಿಗಿಡ. (न०) 3. ತಾರೆಕಾಯಿ. 4. ನೆಲ್ಲಿಕಾಯಿ.

**कर्षित ಕರ್ಷಿತ** (वि०) 1. ಎಳೆಯಿಸಲ್ಪಟ್ಟ. कृष (विलेखने) + णिच् "क्तः" (३-२-१०२)। 2. ಉಳಿಸಲ್ಪಟ್ಟ, ಬೇಸಾಯ ಮಾಡಿಸಲ್ಪಟ್ಟ.

**कर्षिन् ಕರ್ಷಿನ್** (वि०) 1. ಎಳೆಯುವ, ಆಕರ್ಷಿಸುವ. कृष (विलेखने) "णिनिः" (३-१-१३४)। "स्तम्बेरमा मुखरशृङ्खलकर्षिणस्ते" रघु० ५-७२। स्त्रियाम् "ङीप्" (४-१-५)। **कर्षिणी ಕರ್ಷಿಣೀ.** "घ्राणकान्तमधुगन्धकर्षिणीः पानभूमिरचनाः प्रियासखः" रघु० १९-११। (स्त्री०) 2. ಕುದುರೆಯ ಕಡಿವಾಣದಲ್ಲಿರುವ ಕಬ್ಬಿಣದ ತುಂಡು. 3. ಹಾಲೆ ಗಿಡ.

**कर्षू ಕರ್ಷೂ** (पु०) 1. ಒಣ ಬೆರಣಿಯಿಂದ ತಯಾರಿಸಲ್ಪಟ್ಟ ಬೆಂಕಿ. कृष (विलेखने) "ऊः" (उ० १-८१)। 2. ಜೀವಿಕೆ, ಜೀವನೋಪಾಯ. (स्त्री०) 3. ಕಿರಿಯ ನದಿ, ಕಾಲುವೆ. "कर्षूर्वार्ता करीषाग्निः कर्षूः कुल्याभिधायिनी" अम०। 4. ಕೃಷಿ, ಬೇಸಾಯ. "कर्षूस्तु तुषाग्नौ कृषिकुल्ययोः" हेम०। 5. ಇಷ್ಟಿಖಾತ, ಯಾಗಕ್ಕಾಗಿ ನೇಗಿಲಿನಿಂದ ಉತ್ತು ತೋಡಲ್ಪಟ್ಟ ಹಳ್ಳ. ನಾಲ್ಕು ಅಂಗುಲಗಳ ಅಗಲ ನಾಲ್ಕು ಅಂಗುಲಗಳ ಆಳ ಹನ್ನೆರಡು ಅಂಗುಲಗಳ ಉದ್ದವುಳ್ಳ ಒಂದು ಹಳ್ಳಕ್ಕೆ ಇಷ್ಟಿಖಾತವೆಂದು ಹೆಸರು. "चतुरङ्गुलपृथ्वीस्तावदन्तरास्तथाधःखाताः वितस्त्यायतास्तिस्रः कर्षूः कुर्यात्। कर्षूसमीपे अग्नित्रयमुपसमाधाय परिस्तीर्य तत्रैकैकस्मिन् आहुतित्रयं जुहुयात्" विष्णुसू०। "कर्षूः पुमान् करीषाग्नौ स्त्रियाम् कुल्येष्टिखातयोः" मेदि०। 6. ಗರ್ತ, ಹಳ್ಳ. 7. ಧಾನ್ಯದ ಹೊಟ್ಟು. "कर्षूः स्त्री तुषकोष्ठे कुल्यायां ना च ना करीषाग्नौ" वैज०।

**कर्हि ಕರ್ಹಿ** (अव्य०) ಯಾವಾಗ, ಯಾವಕಾಲದಲ್ಲಿ. किम् "र्हिल्" (५-३-२१)।

**कर्हिचित् ಕರ್ಹಿಚಿತ್** (अव्य०) 1. ಒಂದು ಕಾಲದಲ್ಲಿ, ಒಂದು ಸಮಯದಲ್ಲಿ. 2. ಯಾವಾಗಲೂ, ಯಾವ ಕಾಲದಲ್ಲೂ. "अकामस्य क्रिया काचित् दृश्यते नेह कर्हिचित्" मनु० २-४।

**कल–शब्दसंख्यानयोः** (भ्वा० आत्म० शब्दे अकर्मकः संख्याने सकर्मकः से०)। कलते। चकले। कलिता। कलिष्यति। अकलिष्ट। 1. ಶಬ್ದ ಮಾಡು, ಸದ್ದುಮಾಡು. 2. ಎಣಿಸು, ಲೆಕ್ಕ ಮಾಡು.

**कल–गतौ संख्याने च** (चुरा० उभ० सक० से०)। कलयति, –ते। कलयां बभूव, –आस, –चकार, –चक्रे। 1. ಹೊಂದು, ಪಡೆ. 2. ಎಣಿಸು, ಲೆಕ್ಕಮಾಡು. "प्रह्लादश्चास्मि दैत्यानां कालः कलयतामहम्" गीता १०-३०। 3. ಉಚ್ಚರಿಸು, ಹೇಳು, ಮಾತಾಡು. "विहगाः कदम्बसुरभाविह गाः कलयन्त्यनुक्षणमनेकलयम्" माघ० ४-३६। 4. ಗ್ರಹಿಸು, ಹಿಡಿದುಕೊ, ಧರಿಸು. "कलय वलयश्रेणीं पाणौ पदे कुरु नूपुरौ"। "कलयति हिमांशोर्निष्कलङ्कस्य लक्ष्मीम्" मालती० १-२५। 5. ಗ್ರಹಿಸು, ತಿಳಿದುಕೊ. "क्रियतेऽनुवृत्तिरुचितैव ततः कलयेदमानमनसं सखि माम्" माघ० ९-५८। 6. ಹೋಗು, ನಡೆ, ಮುಂದೆಸಾಗು, ದಾರಿಹಿಡಿದು ನಡೆ. "साक्षादप्सरसो विमानकलितव्योमान एवाभवत्" नैष० २-१०४।

**ಈ ಧಾತುವಿಗೆ ಉಪಸರ್ಗಯೋಗದಿಂದುಂಟಾಗುವ ಅರ್ಥಭೇದಗಳು:**

**(1)** आ + कल = आकलितः। 1. ಕಟ್ಟಿಹಾಕು, ಬಂಧಿಸು, ಬಿಗಿ. "सुवर्णसूत्राकलिताधराम्बरां विडम्बयन्तं शितिवाससस्तनुम्" माघ० १-६। 2. ತಿಳಿದುಕೊ, ಮನದಟ್ಟು ಮಾಡಿಕೊ, ಗ್ರಹಿಸು. "क्षिप्ता इवेन्दोः सरुचोऽम्बिवेलं मुक्तावलीराकलयांचकार" माघ० ३-७३।

**(2)** उद् + कल = उत्कलितः। ಮೇಲಕ್ಕೆ ಎತ್ತಿ ಹಿಡಿದುಕೊ. "स तस्य हस्तोत्कलितस्तदासुरो विक्रीडतो यद्वदहिर्गरुत्मतः" भाग० ७-८-२६।

**(3)** प्रति + आ + कल = प्रत्याकलनम्। ಅರಿತುಕೊ, ತಿಳಿದುಕೊ. "प्रत्याकलितस्वदुर्नयः" दशकु०।

**(4)** वि + अव + कल = व्यवकलनम्। ಕಳೆದು ಹಾಕು, ತೆಗೆದು ಹಾಕು. "यदि व्यक्ते युक्तिव्यवकलनमार्गेऽसि कुशला" लीला०।

**(5)** सम् + कल = सङ्कलनम्। ಅಂಕೆಗಳನ್ನು ಕೂಡು, –ಸೇರಿಸು. "अथ सङ्कलनव्यवकलनयोः करणसूत्रम्" लीला०।

**कल–क्षेपे** (चुरा० उभ० सक० से०)। कालयति, –ते। कालयां बभूव, –आस, –चकार, –चक्रे। 1. ಪ್ರೇರಿಸು, ಮುಂದಕ್ಕೆ ತಳ್ಳು. 2. ಅಟ್ಟು, ಓಡಿಸು. "षष्टिं गवां सहस्राणि त्रिगर्ताः कालयन्ति ते" भा० विरा० ३३-१५। 3. ಎಸೆ, ಬಿಸಾಡು.

**कल ಕಲ** (पु०) 1. ಕಾಮ, ಮನ್ಮಥ. 2. ಇಂಪಾದ ಮತ್ತು ಅಸ್ಪಷ್ಟವಾದ ಶಬ್ದ. कल (शब्दे) "अच्" (३-१-१३४)। "प्रगीयते सिद्धगणैश्च योषितामुदारमन्ते कलभाविकस्वरैः" माघ० ४-३३। 3. ಸಾಲವೃಕ್ಷ, ಮತ್ತಿಮರ. 4. ಬದರೀವೃಕ್ಷ, ಬೋರೆಗಿಡ. 5. ಅಂಗುಷ್ಠದಿಂದ ವೀಣೆಯ ತಂತಿಗಳನ್ನು ಮುಟ್ಟುವಿಕೆ. "तन्त्रीष्वङ्गुष्ठसंस्पर्शः कलः" वैज०। (न०) 6. ಶುಕ್ರಧಾತು, ವೀರ್ಯ. "कलं शुक्रे त्रिष्वजीर्णे चाव्यक्तमधुरध्वनौ" मेदि०। (वि०) 7. ಜೀರ್ಣವಾಗದಿರುವ. 8. ಮೂಗ, ಮಾತಾಡುವ ಶಕ್ತಿಯಿಲ್ಲದವನು. 9. ಕಲಾನ್ವಿತ, ಕುಶಲವಿದ್ಯೆಯಿಂದ ಕೂಡಿದವನು. कलाऽस्त्यस्य "अच्" (५-२-१२७)। 10. ಮನೋಹರವಾದ. 11. ಮಧುರವಾದ, ಇಂಪಾದ. "कलमन्यभृतासु भाषितं कलहंसीषु मदालसं गतम्" रघु० ८-५९। (क्रि० वि०) ಗಂಭೀರವಾಗಿ. "कलं चलद्भिः सुरसैन्यसिन्धुरैः" कुमा० १४-२४।

**कलक ಕಲಕ** (पु०) 1. ಮತ್ಸ್ಯ, ಮೀನು. कल (गतौ) "ण्वुल्" (३-१-१३३)। (वि०) 2. ಎಣಿಸುವ, ಲೆಕ್ಕ ಮಾಡುವ.

**कलकण्ठ ಕಲಕಂಠ** (पु०) 1. ಕೋಗಿಲೆ. 2. ಹಂಸಪಕ್ಷಿ. 3. ಕಪೋತ, ಪಾರಿವಾಳದ ಹಕ್ಕಿ. कलः अव्यक्तमधुरः कण्ठोऽस्य। स्त्रियाम् "ङीप्" (४-१-५५)। **–कण्ठी –ಕಂಠೀ.** (वि०) 4. ಅವ್ಯಕ್ತವೂ ಮಧುರವೂ ಆದ ಧ್ವನಿಯುಳ್ಳ.

**कलकल ಕಲಕಲ** (पु०) 1. ಕೋಲಾಹಲ ಧ್ವನಿ, ಗಡಿಬಿಡಿಯ ಶಬ್ದ, ಗುಂಪಿನಗಲಭೆ. कलप्रकारः – प्रकारे द्वित्वम् (८-१-१२)। "रणसंमदोदयविकासिबलकलकलाकुलीकृते" माघ० १५-७७। 2. ಮತ್ತಿಮರದ ರಸ. "कलकल उक्तः कोलाहले तथा सालनिर्यासे" मेदि०।

**कलघोष ಕಲಘೋಷ** (पु०) ಕೋಗಿಲೆ. कलो घोषोऽस्य।

**कलङ्क ಕಳಂಕ** (पु०) 1. ಚಿಹ್ನೆ, ಗುರುತು. 2. ಮಾಲಿನ್ಯ, ಕೊಳೆ. कं ब्रह्माणं लङ्कयति हीनतां गमयति—लकि (गतौ) + णिच् "अण्" (३-२-१)। "बहुरूपकसालभञ्जिका मुखचन्द्रेषु कलङ्करङ्कवः" नैष० २-८३। "आभाति

वेला लवणाम्बुराशेः धारानिबद्धेव कलङ्करेखा" रघु० १३-१५। 3. ಅಪವಾದ, ಅಪಯಶಸ್ಸು, ಅಕೀರ್ತಿ. "त्वादृशस्य सकलः स कलङ्कः शीतभासि शशकः परमङ्कः" नैष० ५-१२०। 4. ತಾಮ್ರ ಮೊದಲಾದ ಧಾತುಗಳ ಮಲ. "शशिकृपाणकवचेषु कलङ्काः" काद०। 5. ಪಾಪ, ಪಾತಕ.

**कलङ्कित ಕಳಂಕಿತ** (वि०) 1. ಗುರುತು ಮಾಡಲ್ಪಟ್ಟಿರುವ, ಚಿಹ್ನೆಯಿಂದ ಕೂಡಿದ. 2. ಅಪಕೀರ್ತಿಯುಳ್ಳ, ಅಪಯಶಸ್ಸನ್ನು ಸಂಪಾದಿಸಿರುವ, ಅಪವಾದವುಳ್ಳ. कलङ्कोऽस्य सञ्जातः "इतच्" (५-२-३६)। "कुङ्कुमपङ्ककलङ्कितदेहा गौरपयोधरकम्पितहारा" भर्तृ० २-९। 3. ಕೊಳೆಯಾಗಿರುವ. 4. ಪಾಪವುಳ್ಳ.

**कलङ्कुर ಕಲಂಕುರ** (पु०) ಜಲಾವರ್ತ, ನೀರಿನ ಸುಳಿ. कं जलं लङ्कयति — लकि (गतौ) + णिच् "उरच्" बाहु०। "अथाम्भसां भ्रमः। तानूरो वायुगुल्मश्च कणलाभः कलङ्कुरः" त्रिकाण्ड०।

**कलञ्ज ಕಳಂಜ** (पु०) 1. ವಿಷಬಳಿದ ಬಾಣದಿಂದ ಕೊಲ್ಲಲ್ಪಟ್ಟ ಮೃಗ. ಮತ್ತು 2. ಪಕ್ಷಿ. (न०) 3. ಇಂತಹ ಮೃಗ ಪಕ್ಷಿಗಳ ಮಾಂಸ. "न कलञ्जं भक्षयेत्" श्रुतिः। 4. ಹೊಗೆಸೊಪ್ಪು. "कलञ्जसंवेष्टनधूमपानात्स्याद्दन्तशुद्धिर्मुखरोगहानिः"।

**कलट ಕಲಟ** (न०) ಮನೆಗೆ ಹೊದಿಸುವ ಹುಲ್ಲು ಮೊದಲಾದುದು, ಮನೆಯ ಹುಲ್ಲಿನ ಮೇಲ್ಛಾವಣಿ. कं जलं लटति—लट (बाल्ये) "अच्" (३-१-१३४)।

**कलतूलिका ಕಲತೂಲಿಕಾ** (स्त्री०) ಕಾಮುಕ ಹೆಂಗಸು, ವ್ಯಭಿಚಾರಿಣಿ. कं सुखं लाति — ला (आदाने) "कः" (३-२-४)। कलः कामः तं तूलयति निष्कर्षति पूरयति वा — तूल (निष्कर्षे) + णिच् "ण्वुल्" (३-१-१३३)। "वाञ्छिनी तु स्याल्लञ्जिका कलतूलिका" त्रिकाण्ड०।

**कलत्र ಕಳತ್ರ** (न०) 1. ಪತ್ನಿ, ಹೆಂಡತಿ. गडयते — गड (सेचने) "अत्रन्" आदेः कश्च (उ० ३-१०६)। डलयोरभेदः। "यः प्रीणयेत् सुचरितैः पितरं स पुत्रो यद्भर्तुरेव हितमिच्छति तत्कलत्रम्" भर्तृ० १-५९। 2. ನಿತಂಬ ಪ್ರದೇಶ, ಹೆಂಗಸರ ಪಿರ್ರೆ. "कलत्रभारेण विलोलनीविना गलद्दुकूलस्तनशालिनोरसा" किरा० ८-१७। 3. ಕಳತ್ರಸ್ಥಾನ, ಲಗ್ನದಿಂದ ಏಳನೆಯಸ್ಥಾನ. "कलत्रसौख्यवैवाहं भोगस्थानं मनोहरम्। अलंङ्कृतिश्च सर्वेषां भावोऽयं सप्तमः स्मृतः" मु० दी०। 4. ದುರ್ಗ, ಕೋಟೆ.

**कलत्रता ಕಳತ್ರತಾ** (स्त्री०) ಪತ್ನೀತ್ವ, ಹೆಂಡತಿಯಾಗಿರುವಿಕೆ. कलत्रस्य भावः "तल्" (५-१-११९)।

**कलत्रवत् ಕಳತ್ರವತ್** (वि०) 1. ಸಪತ್ನೀಕ, ಪತ್ನೀಸಮೇತನಾದ, ಪತ್ನಿಯನ್ನು ಹೊಂದಿರುವ. कलत्रमस्यास्ति "मतुप्" (५-२-९४)। मस्य वः (७-२-९)। "कलत्रवन्तमात्मानमवरोधे महत्यपि" रघु० १-३२। (अव्य०) 2. ಪತ್ನಿಯಂತೆ, ಹೆಂಡತಿಯಂತೆ. कलत्रेण तुल्यम् "वतिः" (५-१-११५)।

**कलत्रिन् ಕಳತ್ರಿನ್** (वि०) ಕಳತ್ರವುಳ್ಳವನು, ಪತ್ನೀಸಮೇತನಾದವನು, ಪತ್ನಿಯನ್ನು ಹೊಂದಿರುವವನು. कलत्र "इनिः" (५-२-११५)। "वसुधेयमवेक्ष्यतां त्वया वसुमत्या हि नृपाः कलत्रिणः" रघु० ८-८३।

**कलधूत ಕಲಧೂತ** (न०) ರಜತ, ಬೆಳ್ಳಿ.

**कलधौत ಕಲಧೌತ** (न०) 1. ಸುವರ್ಣ, ಚಿನ್ನ. 2. ಬೆಳ್ಳಿ, ರಜತ. कलः मलो धौतोऽस्य। "यस्यां कपोलैः कलधौतधामस्तम्भेषु भेजे मणिदर्पणश्रीः" माघ० ३-४७। "अधिरात्रि यत्र निपतन्नभोलिहां कलधौतधौतशिलवेश्मनां रुचौ" माघ० १३-५१। 3. ಕಲಧ್ವನಿ, ಇಂಪಾದ ಕಂಠ. "कलधौतं रूप्यहेम्नोः कलधौतं कलध्वनौ" विश्व०।

**कलध्वनि ಕಲಧ್ವನಿ** (पु०) 1. ಅಸ್ಪಷ್ಟ ಮತ್ತು ಮಧುರವಾದ ಶಬ್ದ, ಇಂಪಾದ ತಗ್ಗು ದನಿ. कलो ध्वनिः। 2. ಕಪೋತ, ಪಾರಿವಾಳದ ಹಕ್ಕಿ. कलो ध्वनिरस्य। 3. ಕೋಗಿಲೆ. 4. ಮಯೂರ, ನವಿಲು. (वि०) 5. ಮಧುರವಾದ ಮತ್ತು ಅಸ್ಪಷ್ಟವಾದ ಶಬ್ದವುಳ್ಳ. कलो ध्वनिरस्य। "कलध्वनिः परभृते पारावतकलापिनोः" हेम०।

**कलन ಕಲನ** (न०) 1. ಚಿಹ್ನೆ, ಗುರುತು. 2. ಅಪರಾಧ, ತಪ್ಪು. 3. ಗ್ರಹಣ, ಸ್ವೀಕಾರ, ತೆಗೆದುಕೊಳ್ಳುವಿಕೆ. कल (गतौ) "ल्युट्" (३-३-११५)। 4. ಗ್ರಾಸ, ನುಂಗುವಿಕೆ. "कलनात्सर्वभूतानां स कालः परिकीर्तितः"। 5. ಜ್ಞಾನ, ಅರಿವು, ತಿಳಿವಳಿಕೆ. कल कर० "ल्युट्" (३-३-११७)। "लोकानामन्तकृत्कालः कालोऽन्यः कलनात्मकः" सू० सि०। 6. ಸದ್ದು ಮಾಡುವಿಕೆ, ಶಬ್ದ ಮಾಡುವಿಕೆ. कल (गतौ शब्दे च) भावे "ल्युट्" (३-३-११५)।

**कलना ಕಲನಾ** (स्त्री०) 1. ಜ್ಞಾನ, ತಿಳಿಯುವಿಕೆ, ಅರಿಯುವಿಕೆ. कल (गतौ) +णिच् भावे "युच्" (३-३-१०७)। 2. ಗ್ರಹಣ, ಹಿಡಿದುಕೊಳ್ಳುವಿಕೆ, 3. ಸ್ವೀಕಾರ, ತೆಗೆದುಕೊಳ್ಳುವಿಕೆ. 4. ಧರಿಸುವಿಕೆ, ತೊಡುವಿಕೆ. 5. ತೆಗೆದು

ಹಾಕುವಿಕೆ. "अवाप बाल्योचितनीलकण्ठपिच्छावचूडाकलनामिवोर:" माघ० ३-५।

**कलनाद ಕಲನಾದ** (पु०) 1. ಮಧುರ ಮತ್ತು ತಗ್ಗು ದನಿ. कलो नादः। "पयोधिलक्ष्मीमुषि केलिपल्वले रिरंसुहंसीकलनादसादरम्" नैष० १-११७। 2. ಹಂಸ. कलो नादोऽस्य। (वि०) 3. ಅಸ್ಫುಟ ಮತ್ತು ಮಧುರವಾದ ಧ್ವನಿಯುಳ್ಳ. कलो नादो यस्य।

**कलभ ಕಲಭ** (पु०) 1. ಮೂವತ್ತು ವರ್ಷ ವಯಸ್ಸಿನ ಆನೆ. कल (शब्दे) "अभच्" (उ० ३-१२२)। "कुशेशयैरत्र जलाशयोषिता मुदा रमन्ते कलभा विकस्वरैः" माघ० ४-३३। 2. ಆನೆಯ ಮರಿ. "इह मुहुर्मुदितैः कलभैरवः प्रतिदिशं क्रियते कलभैरवः" माघ० ४-६०। "ननु कलभेन यूथपतेरनुकृतम्" माल० ५। 3. ದತ್ತೂರಿ ಗಿಡ. कं वातं लभते—डु लभष् (प्राप्तौ) "अच्" (३-१-१३४)।

**कलम ಕಲಮ** (पु०) 1. ಬತ್ತ. कलते—कल (संख्याने) "अमः" (उ० ४-८४)। "आपादपद्मप्रणताः कलमा इव ते रघुम्" रघु० ४-३७। "गीतानि गोप्याः कलमं मृगव्रजो न नूनमत्तीति हरिर्व्यलोकयत्" माघ० १२-४३। 2. ಲೇಖನಿ. 3. ಚೋರ, ಕಳ್ಳ. "कलमः पुंसि लेखन्यां शालौ पाटच्चरेऽपि च" मेदि०। 4. ಅಂಕುರ. ಮೊಳಕೆ. "कलमोऽङ्कुरलेखन्योः" वैज०।

**कलम्ब ಕಲಂಬ** (पु०) 1. ಶರ, ಬಾಣ. कल (क्षेपे) "अम्बच्" (उ० ४-८२)। ಶತ್ರುಗಳ ಮೇಲೆ ಎಸೆದು ಪ್ರಯೋಗಿಸುವುದರಿಂದ ಈ ಹೆಸರು. 2. ಕದಂಬ ವೃಕ್ಷ. कड (मदे) "अम्बच्" (उ० ४-८२)। डलयोरभेदः। ವಿರಹಿಗಳಿಗೆ ಮದವನ್ನುಂಟುಮಾಡುವುದರಿಂದ ಈ ಹೆಸರು. 3. ಅಂಕುರ, ಮೊಳಕೆ. "त्वद्भ्रूयुगं यस्य खलु द्विपत्री तवाधरो रज्यति यत्कलम्बः" नैष० ३-१२०। (स्त्री०) **कलम्बी ಕಲಂಬೀ.** ಹಂಬು ಬಸಳೆ. "कलम्बी शाकभेदे स्यात् कदम्बशरयोः पुमान्" मेदि०।

**कलम्बुट ಕಲಂಬುಟ** (न०) ನವನೀತ, ಹೊಸದಾದ ಬೆಣ್ಣೆ. के जले लम्बते—लबि (अवस्रंसने) "उटः" बाहु०। "हैयङ्गवीनं सरजं मन्थजं च कलम्बुटम्" हारा०।

**कलयत् ಕಲಯತ್** (वि०) 1. ತಿಳಿಯುವ, ಅರಿತುಕೊಳ್ಳುವ. कल (गतौ)+णिच् "शतृ" (३-२-१२४)। "कलयन्नपि सव्यथोऽवतस्थेऽशकुनेन स्खलितः किलेतरोऽपि" माघ० ९-८३। 2. ನೋಡುತ್ತಿರುವ, ವೀಕ್ಷಿಸುತ್ತಿರುವ. "निमीलनस्पष्टविलोकनाभ्यां कदर्थितस्ताः कलयन् कटाक्षैः" नैष० ६-२२। 3. ಎಸೆಯುತ್ತಿರುವ. 4. ಬಿಸಾಡುತ್ತಿರುವ. 5. ಎಣಿಸುತ್ತಿರುವ. "प्रह्लादश्चास्मि दैत्यानां कालः कलयतामहम्" गीता १०-३०। 6. ಧರಿಸುತ್ತಿರುವ, ಹಿಡಿಯುತ್ತಿರುವ. "राज्ञामस्य शतेन किं कलयतो हेति शतघ्नीं कृतं लक्षैर्लक्षभिदो दृशैव जयतः पद्मानि पद्मैरलम्" नैष० १२-५८। 7. ಸ್ವೀಕರಿಸುತ್ತಿರುವ, ಅಂಗೀಕರಿಸುತ್ತಿರುವ. "अस्य क्षोणिपतेः परार्धपरया लक्षीकृताः संख्यया प्रज्ञाचक्षुरवेक्ष्यमाणतिमिरप्रख्याः किलाकीर्तयः। गीयन्ते स्वरमष्टमं कलयता जातेन वन्ध्योदरान्मूकानां प्रकरेण कूर्मरमणीदुग्धोदधे रोधसि" नैष० १२-१०६। स्त्रियाम् "ङीप्" (४-१-६)। **कलयन्ती ಕಲಯಂತೀ.** "कोपितं विरहखेदितचित्ता कान्तमेव कलयन्त्यनुनिन्ये" माघ० १०-२९।

**कलरव ಕಲರವ** (पु०) 1. ಕಪೋತ, ಪಾರಿವಾಳದ ಪಕ್ಷಿ. 2. ಕೋಗಿಲೆ. कलो रवोऽस्य। 3. ಅಸ್ಪಷ್ಟ ಮಧುರಧ್ವನಿ, ಇಂಪಾದ ತಗ್ಗು ದನಿ. कलो रवः। (वि०) 4. ಅಸ್ಪಷ್ಟವಾದ ಮಧುರ ಧ್ವನಿಯುಳ್ಳ. "कलरवमुपगीते षट्पदौघेन धत्तः कुमुदकमलखण्डे तुल्यरूपामवस्थाम्" माघ० ११-१५। स्त्रियाम् जाति० "ङीष्" (४-१-६३)। **-रवी -ರವೀ.**

**कलल ಕಲಲ** (न०) 1. ಗರ್ಭದ ಮೊದಲನೆಯ ಅವಸ್ಥೆ, ಸ್ತ್ರೀಯರ ಗರ್ಭಕೋಶವನ್ನು ಪ್ರವೇಶಿಸಿದ ಮೊದಲನೆಯ ರಾತ್ರಿಯಲ್ಲಿ ಉಂಟಾಗುವ ರೇತಸ್ಸಿನ ವಿಕಾರ. "कर्मणा दैवनेत्रेण जन्तुर्देहोपपत्तये। स्त्रियां प्रविष्ट उदरं पुंसो रेतःकणाश्रयः। कललं त्वेकरात्रेण पञ्चरात्रेण बुद्बुदम्" भाग० ३-३१-१, २। 2. ಚರ್ಮದ ಚೀಲ. "चर्मकोशं तु कललम्" वैज०। 3. ಎಲುಬು. ಮೂಳೆ. "अथास्थि कीकसं विड्डं कललं कूरमाढिकम्" वैज०।

**कलविङ्क ಕಲವಿಂಕ** (पु०) 1. ಗುಬ್ಬಚ್ಚಿ. कलं वङ्कते—वकि (गतौ) "अच्" (३-१-१३४)। पृषो०। "कलविङ्कप्लवं हंसं चक्राह्वं ग्रामकुक्कुटम्" मनु० ५-१२। 2. ಹಳದಿ ತಲೆಯ ಗುಬ್ಬಚ್ಚಿ. "मार्जारभक्षिते दुःखं यादृशं गृहकुक्कुटे। न तादृङ्ममताशून्ये कलविङ्केऽथ मूषके" प्रबोध० ५-२०। "कलविङ्कस्त्वसौ पीतमुण्डः" वैज०।

**कलश ಕಲಶ** (त्रि०) 1. ಘಟ, ಕೊಡ, ಬಿಂದಿಗೆ, ಹರವೆ. केन जलेन लसति—लस (श्लेषणे) "अच्" (३-१-१३४)। तालव्यान्तः प्रामाणिकप्रयोगः। "कलश इव गरीयान् दिग्भिराकृष्यमाणः" माघ० ११-४४। 2. ಹದಿನಾರು

ಅದ್ಯಮಾಷಕಗಳ ತೂಕ, ಎಂಬತ್ತು (80) ರತ್ತಿಗಳು, 1/4 ಪಲ, 1/400 ತುಲೆ, 176 ಗುಲಗಂಜಿತೂಕ. स्त्रियाम् जाति० "ङीष्" (४-१-६३)। **–शी –ಶೀ.**

**कलशजन्मन् ಕಲಶಜನ್ಮನ್, –न्मा –ನ್ಮಾ** (पु०) ಕುಂಭ ದಿಂದ ಹುಟ್ಟಿದ 1. ಅಗಸ್ತ್ಯಮಹರ್ಷಿ. 2. ವಸಿಷ್ಠಮಹರ್ಷಿ.

**कलशयोनि ಕಲಶಯೋನಿ** (पु०) 1. ಅಗಸ್ತ್ಯಮಹರ್ಷಿ. 2. ವಸಿಷ್ಠಮಹರ್ಷಿ. कलशं योनिरस्य।

**कलशि ಕಲಶಿ** (स्त्री०) 1. ಕುಂಭ, ಕೊಡ, ಬಿಂದಿಗೆ, ಘಟ. 2. ಕಡೆಯುವ ದೊಡ್ಡ ಮೊಸರಿನ ಪಾತ್ರೆ. 3. ನರಿಬಾಲದ ಹುಲ್ಲು. कलं श्यति अजीर्णं नाशयति — शो (तनूकरणे) "इन्" (उ० ४-११७)। बहु० आकारलोपः। "शशिनमिव सुरौघाः सारमुद्धर्तुमेते कलशिमुदधिगुर्वीं वल्लवा लोडयन्ति" माघ०११-८। स्त्रियाम् वा "ङीष्" (ग० ४-१-४५)। **–शी –ಶೀ.**

**कलशीपदी ಕಲಶೀಪದೀ** (स्त्री०) ಬಿಂದಿಗೆಯಂತೆ ಕಾಲುಗಳುಳ್ಳ ಹೆಂಗಸು. कलशी इव पादौ यस्याः। पादस्य पदादेशः (६-४-१३०)। "ङीप्" (५-४-१३९)।

**कलशीसुत ಕಲಶೀಸುತ** (पु०) 1. ಅಗಸ್ತ್ಯಮಹರ್ಷಿ. 2. ವಸಿಷ್ಠಮಹರ್ಷಿ. कलश्याः सुत इव। ["अगस्त्य" ಪದದಲ್ಲಿ ನೋಡಿ.]

**कलशोदधि ಕಲಶೋದಧಿ** (पु०) ಕ್ಷೀರ ಸಮುದ್ರ.

**कलस ಕಲಸ** (त्रि०) ಘಟ, ಬಿಂದಿಗೆ, ಕೊಡ. केन जलेन लसति—लस (श्लेषणक्रीडनयोः) "अच्" (३-१-१३४)। ದೇವಶಿಲ್ಪಿಯಾದ ವಿಶ್ವಕರ್ಮನು ಸಮುದ್ರಮಥನ ಕಾಲದಲ್ಲಿ ಅಮೃತವನ್ನು ತುಂಬಿಡಲು ದೇವತೆಗಳ ಕಲೆ ಗಳಿಂದ ಕಲಶವನ್ನು ನಿರ್ಮಿಸಿದನಾದುದರಿಂದ ಈ ಹೆಸ ರಾಯಿತು ಎಂದೂ ಪುರಾಣದಲ್ಲಿದೆ. "सागरे मथ्यमाने तु पीयूषार्थं सुरासुरैः। पीयूषधारणार्थाय निर्मितो विश्वकर्मणा। कलाः कलास्तु देवानामपि तास्ताः पृथक् पृथक्। यतः कृतास्तु कलसाः ततस्ते परिकीर्तिताः" कालिकापु०। "कलसे निजहेतुदण्डजः किमु चक्रभ्रम कारितागुणः" नैष० २-३२।

**कलसी ಕಲಸೀ** (स्त्री०) ಘಟ, ಬಿಂದಿಗೆ, ಕೊಡ, ಹರವೆ. केन जलेन लसति — लस (श्लेषणे) "इन्" (उ० ४-११७)। जाति० "ङीष्" (४-१-६३)। "अवलम्बित-कर्णशष्कुलीकलसीकं रचयन्नवोचत" नैष० २-८।

**कलह ಕಲಹ** (पु०) 1. ಜಗಳ, ವಾಗ್ವಿವಾದ. कलो मधुरध्वनिः तं हन्ति — हन (हिंसागत्योः) "ड:" (वा० ३-२-४८)। "कलहान्न घनाद्यदुत्थितादधुनाप्युज्झति घर्घरस्वरः" नैष० २-८५। 2. ಯುದ್ಧ, ಕದನ. "विलम्बितुं न खलु सहा मनस्विनो विधित्सतः कलह-मवेक्ष्य विद्विषः" माघ० १७-५०। ಮೇದಿನೀಕೋಶದಲ್ಲಿ ನಪುಂಸಕಲಿಂಗವಾಗಿ ಉಕ್ತವಾಗಿದೆ. 3. ಕತ್ತಿಯ ಒರೆ. 4. ಮಾರ್ಗ, ದಾರಿ, ರಸ್ತೆ. 5. ತಾಡನ, ಹೊಡೆತ. "कलहं युधि वाटे ना खड्गकोशे च भण्डने" मेदि०।

**कलहंस ಕಲಹಂಸ** (पु०) 1. ದೊಡ್ಡ ಜಾತಿಯ ಹಂಸ ಪಕ್ಷಿ. कलो मधुरवचनो हंसः। "अविशद्वनवेश्म विस्मितः स्मृति-लग्नैः कलहंसशंसितैः" नैष० २-६३। 2. ರಾಜಹಂಸ, ಕೆಂಪು ಕಾಲು ಮತ್ತು ಕೊಕ್ಕುಳ್ಳ ಹಂಸಪಕ್ಷಿ. "वधूदुकूलं कलहंसलक्षणं गजाजिनं शोणितबिन्दुवर्षि च" कुमा० ५-६७। 3. ಶ್ರೇಷ್ಠನಾದ ದೊರೆ, ಉತ್ತಮನಾದ ರಾಜ. 4. ಪರಮಾತ್ಮ, ಪರಬ್ರಹ್ಮ. "कलहंसस्तु कादम्बे राजहंसे नृपोत्तमे" मेदि०। स्त्रियाम् जाति० "ङीष्" (४-१-६३)। **–हंसी –ಹಂಸೀ.** "कलमन्यभृतासु भाषितं कलहंसीषु मदालसं गतम्" रघु० ८-५९।

**कलहकार ಕಲಹಕಾರ** (पु०) 1. ನಾರದಮಹರ್ಷಿ. 2. ಜಗಳವಾಡುವವನು. कलहं करोति — डु कृञ् (करणे) "अण्" (३-२-१)। "हन्तुं कलहकारोऽसौ शब्दकारः पपात खम्" भट्टि० ५-१००।

**कलहप्रिय ಕಲಹಪ್ರಿಯ** (पु०) 1. ನಾರದಮಹರ್ಷಿ. कलहः प्रियोऽस्य। (वि०) 2. ಜಗಳವೇ ಪ್ರಿಯವಾಗಿ ಉಳ್ಳವನು. (स्त्री०) **–प्रिया –ಪ್ರಿಯಾ.** ಸಾರಸಪಕ್ಷಿ.

**कलहान्तरिता ಕಲಹಾಂತರಿತಾ** (स्त्री०) ಎಂಟುವಿಧ ಅವಸ್ಥೆಗಳುಳ್ಳ ನಾಯಿಕೆಯರಲ್ಲಿ ಒಂದು ಭೇದ, ಪ್ರಿಯ ವಾದ ಮಾತುಗಳನ್ನಾಡುತ್ತಿರುವ ಪತಿಯನ್ನು ಕೋಪ ದಿಂದ ನಿರಾಕರಿಸಿ ಬಳಿಕ ಪಶ್ಚಾತ್ತಾಪ ಪಡುವ ಒಬ್ಬ ನಾಯಿಕೆ. "चाटुकारमपि प्राणनाथं दोषादपास्य या। पश्चात्तापमवाप्नोति कलहान्तरिता तु सा" सा० द० ३-८२। "नो चाटुश्रवणं कृतं न च दृशा हारोऽन्तिके वीक्षितः कान्तस्य प्रियहेतवो निजसखीवाचोऽपि दूरी-कृताः। पादान्ते विनिपत्य तत्क्षणमसौ गच्छन् मया मूढया पाणिभ्यामवरुध्य हन्त सहसा कण्ठे कथं नार्पितः" सा० द०।

**कला ಕಲಾ** (स्त्री०) 1. ಚಂದ್ರನ (ಚಂದ್ರಬಿಂಬದ) ಹದಿನಾ ರನೆಯ ಒಂದು ಭಾಗ. कलयति — कल (संख्याने) + णिच् "अच्" (३-१-१३४)। "आननेन शशिनः कलां

दधद्दर्शनक्षयितकामविग्रहः" माघ० १४-१८। "व्यवधावपि वा विधोः कलां मृडचूडानिलयां न वेद कः" नैष० २-१९। **ಚಂದ್ರನ ಹದಿನಾರು ಕಲೆಗಳು:** (1) अमृता, (2) मानदा, (3) पूषा, (4) तुष्टिः, (5) पुष्टिः, (6) रतिः, (7) धृतिः, (8) शशिनी, (9) चन्द्रिका, (10) कान्तिः, (11) ज्योत्स्ना, (12) श्रीः, (13) प्रीतिः, (14) अङ्गदा, (15) पूर्णा, (16) पूर्णामृता। 2. ಸೂರ್ಯಮಂಡಲದ ಹನ್ನೆರಡನೆಯ ಒಂದು ಭಾಗ. **ಸೂರ್ಯನ ಹನ್ನೆರಡು ಕಲೆಗಳು:** (1) तपिनी, (2) तापिनी, (3) धूम्रा, (4) मरीचिः, (5) ज्वालिनी, (6) रुचिः, (7) सुषुम्णा, (8) भोगदा, (9) विश्वा, (10) बोधिनी, (11) धारिणी, (12) क्षमा। 3. ಅಗ್ನಿಮಂಡಲದ ಹತ್ತನೆಯ ಒಂದು ಭಾಗ. **ಅಗ್ನಿಮಂಡಲದ ಹತ್ತು ಕಲೆಗಳು:** (1) धूम्रार्चिः, (2) ऊष्मा, (3) ज्वलिनी, (4) ज्वालिनी, (5) विस्फुलिङ्गिनी, (6) सुश्रीः, (7) सुरूपा, (8) कपिला, (9) हव्यम्, (10) कव्यम्। 4. ಬಡ್ಡಿ, ಮೂಲಧನದ ವೃದ್ಧ್ಯಂಶ. "घनवीथि वीथिमवतीर्णवतो निधिरम्भसामुपचयाय कलाः" माघ० ९-३२। 5. ಶಿಲ್ಪ, ಕುಶಲ ವಿದ್ಯೆ. **ಅರವತ್ತನಾಲ್ಕು (64) ವಿಧ ಕುಶಲ ವಿದ್ಯೆಗಳು:**

(1) गीतम् — ಹಾಡುಗಾರಿಕೆ.
(2) वाद्यम् — ವೀಣೆ, ವೇಣು, ಮೃದಂಗ ಮುಂತಾದುವು.
(3) नृत्यम् — ಭರತನಾಟ್ಯ, ಕುಣಿತ.
(4) आलेख्यम् — ಚಿತ್ರರಚನೆ.
(5) विशेषकच्छेद्यम् — ಹಣೆಯಲ್ಲಿ ಬರೆಯುವ ತಿಲಕವನ್ನು ಅನೇಕ ರೀತಿಯಲ್ಲಿ ತಿದ್ದಿ ಕೊರೆಯುವುದು.
(6) तण्डुलकुसुमबलिविकाराः — ಬಣ್ಣ ಬಣ್ಣದ ಅಕ್ಕಿ ಮತ್ತು ಹೂವುಗಳಿಂದ ದೇವರ ಮುಂದೆ ಪದ್ಮಾದಿರೂಪಗಳನ್ನು ರಚಿಸುವುದು.
(7) पुष्पास्तरणम् — ಹೂವುಗಳನ್ನು ಹರಡಿ ಅಲಂಕರಿಸುವುದು.
(8) दशनवसनाङ्गरागः — ಮೈ, ಹಲ್ಲು ಮತ್ತು ಬಟ್ಟೆಗಳಿಗೆ ಬಣ್ಣ ಹಾಕುವುದು.
(9) मणिभूमिकाकर्म — ರತ್ನಾಲಂಕಾರ ಕಾರ್ಯ.
(10) शयनरचनम् — ಹಾಸಿಗೆಯನ್ನು ಹಾಸಿ ಶೃಂಗರಿಸುವುದು.
(11) उदकवाद्यम् — ಜಲತರಂಗ ವಾದ್ಯ.
(12) उदकाघातः — ಕೊಳವೆಯಿಂದ ನೀರನ್ನು ಹೊಡೆಯುವುದು.
(13) चित्राश्च योगाः — ಅನೇಕ ಕಷ್ಟಗಳನ್ನು ಕೊಡುವುದರ ಮೂಲಕ ಇಂದ್ರಿಯಗಳನ್ನು ನಿಃಸತ್ತ್ವವನ್ನಾಗಿ ಮಾಡುವುದು.
(14) माल्यग्रथनविकल्पाः — ಬಗೆಬಗೆಯ ಹಾರಗಳನ್ನು ರಚಿಸುವಿಕೆ.
(15) शेखरकापीडयोजनम् — ತಲೆ ಗಂಟುಹಾಕಿ ಅಲಂಕರಿಸುವಿಕೆ.
(16) नेपथ्यप्रयोगः — ವೇಷ ಹಾಕುವುದು.
(17) कर्णपत्रभङ्गाः — ರತ್ನಖಚಿತವಾದ ಪತ್ರಾಕಾರದ ಆಭರಣಗಳಿಂದ ಕಿವಿಯನ್ನು ಅಲಂಕರಿಸುವುದು.
(18) गन्धयुक्तिः — ಪರಿಮಳದ್ರವ್ಯಗಳನ್ನು ಸೇರಿಸಿ ಸಿದ್ಧಪಡಿಸುವುದು.
(19) भूषणयोजनम् — ಅವಯವಗಳಿಗೆ ತಕ್ಕಂತೆ ಒಡವೆಗಳನ್ನು ತೊಡಿಸುವುದು.
(20) ऐन्द्रजालाः कौचुमाराश्च योगाः — ಯಕ್ಷಿಣಿ ಮತ್ತು ಶರೀರ ಸಂಬಂಧವಾದ ನಷ್ಟಗಳನ್ನು ಹೋಗಲಾಡಿಸಿ ಸೌಭಾಗ್ಯವನ್ನುಂಟುಮಾಡುವ ಯೋಗಗಳು.
(21) हस्तलाघवम् — ಕೈಚಳಕ, ಜಾಣತನ, ಚುರುಕು.
(22) विचित्रशाकयूषभक्ष्यविकारक्रिया — ಬಗೆ ಬಗೆಯ ಹಸುರುವಾಣಿಗಳಿಂದ ಊಟದ ಪದಾರ್ಥಗಳನ್ನು ತಯಾರಿಸುವುದು. (ಚಿತ್ರಾನ್ನ, ಹುಳಿ, ತಿಂಡಿ ಮುಂತಾದುವು).
(23) पानकरसरागासवयोजनम् — ಪಾನಕ ಮೊದಲಾದ ಪಾನೀಯಗಳನ್ನು ಸಿದ್ಧಗೊಳಿಸುವುದು.
(24) सूचीवानकर्माणि — ಕಸೂತಿ ಕೆಲಸಗಳು, ಹೊಲಿಗೆ ಕೆಲಸಗಳು.
(25) सूत्रक्रीडा — ನೂಲಿನ ಆಟ, ನೂಲನ್ನು ಕತ್ತರಿಸಿ ಪುನಃ ಅಖಂಡವಾಗಿ ತೋರಿಸುವುದು. ನೂಲನ್ನು

ಸುಟ್ಟು ಪುನಃ ಮೊದಲಿನಂತೆಯೇ ನೂಲನ್ನು ತೋರಿಸುವುದು.

(26) वीणाडमरुकवाद्यानि — ವೀಣೆ ಡಮರು (ಬುಡುಬುಡಿಕೆ) ಮೊದಲಾದ ವಾದ್ಯಗಳು.

(27) प्रहेलिका — ಒಗಟು, ಗೂಢಾರ್ಥವಾಕ್ಯ ಪ್ರಯೋಗ.

(28) प्रतिमाला — ಅಂತ್ಯಾಕ್ಷರೀಪಠನ. (ಒಂದು ಶ್ಲೋಕದ ಕೊನೆಯ ಅಕ್ಷರವನ್ನು ಪ್ರಾರಂಭಿಸಿ ಮತ್ತೊಂದು ಶ್ಲೋಕವನ್ನು ಹೇಳುವುದು).

(29) दुर्वाचकयोगा: — ವಾದಕ್ಕಾಗಿಯೂ ವಿನೋದಕ್ಕಾಗಿಯೂ ಉಚ್ಚರಿಸಲಾಗದ ಅಕ್ಷರಗಳಿಂದ ಕೂಡಿದ ಶಬ್ದಗಳ ಪ್ರಯೋಗ.

(30) पुस्तकवाचनम् — ಪುಸ್ತಕಗಳನ್ನು ಓದುವುದು.

(31) नाटकाख्यायिकादर्शनम् — ನಾಟಕ ಕಥೆ ಮೊದಲಾದುವುಗಳನ್ನು ಅಭಿನಯಿಸಿ ತೋರಿಸುವುದು.

(32) काव्यसमस्यापूरणम् — ಪದ್ಯರೂಪದಿಂದ ಸಮಸ್ಯೆಗಳನ್ನು ಪೂರ್ತಿಗೊಳಿಸುವುದು.

(33) पट्टिकावेत्रवानविकल्पा: — ಬೆತ್ತದಿಂದ ಬುಟ್ಟಿ, ತಟ್ಟೆ ಮುಂತಾದುವನ್ನು ಹೆಣೆಯುವುದು.

(34) तक्षकर्माणि — ಮರಗೆಲಸ.

(35) तक्षणम् — ಗುಡಿಗಾರಿಕೆ, ಮರಗಳನ್ನು ಕೆತ್ತಿ ಮಂಚ, ಆಸನ, ಬೊಂಬೆ ಮೊದಲಾದುವನ್ನು ತಯಾರಿಸುವುದು.

(36) वास्तुविद्या — ಗೃಹನಿರ್ಮಾಣ ಮುಂತಾದ ಶಿಲ್ಪವಿದ್ಯೆ.

(37) रूप्यरत्नपरीक्षा — ಬೆಳ್ಳಿ, ರತ್ನ ಮೊದಲಾದುವನ್ನು ಪರೀಕ್ಷಿಸುವುದು.

(38) धातुवाद: — ಕಲ್ಲು, ಮಣ್ಣು, ಲೋಹ, ರತ್ನ ಮೊದಲಾದ ಧಾತುಗಳ ಶೋಧನ ಮೇಳನ ಮುಂತಾದ ಜ್ಞಾನಕ್ಕಾಗಿ ಲೋಹ ವಿದ್ಯೆ.

(39) मणिरागाकारज्ञानम् — ರತ್ನಗಳ ಬಣ್ಣ ಮತ್ತು ಆಕಾರಗಳನ್ನು ತಿಳಿಯುವುದು.

(40) वृक्षायुर्वेदयोगा: — ಸಸಿ ಮರಗಳನ್ನು ಬೆಳೆಯಿಸಿ ತೋಟಗಳನ್ನು ನಿರ್ಮಾಣ ಮಾಡುವುದು.

(41) मेषकुक्कुटलावकयुद्धविधि: — ಟಗರು, ಕೋಳಿ, ತಿತ್ತಿರಿಪಕ್ಷಿ ಇವುಗಳ ಕಾಳಗವನ್ನು ಮಾಡಿಸುವುದು.

(42) शुकशारिकाप्रलापनम् — ಗಿಳಿ ಮೊದಲಾದ ಪಕ್ಷಿಗಳಿಂದ ಮಾತನಾಡಿಸುವುದು.

(43) उत्सादने संवाहने केशमर्दने च कौशलम् — ಕಾಲಿನಿಂದ ತುಳಿಯುವುದು, ಮೈಯನ್ನು ಒತ್ತುವುದು, ತಲೆಗೆ ಎಣ್ಣೆ ಒತ್ತುವುದು ಇವುಗಳಲ್ಲಿ ನೈಪುಣ್ಯ.

(44) अक्षरमुष्टिकाकथनम् — ಗುಟ್ಟಾದ ವಿಷಯಗಳನ್ನು ಕುರಿತು ಮಾತಾಡುವುದಕ್ಕೂ ಗ್ರಂಥಗಳನ್ನು ಸಂಗ್ರಹಿಸಿ ಹೇಳುವುದಕ್ಕೂ ಬೆರಳುಗಳಿಂದ ಮುದ್ರೆಗಳ ಮೂಲಕ ಅಕ್ಷರಗಳನ್ನು ಸೂಚಿಸಿ ವಿಷಯಗಳನ್ನು ತಿಳಿಸುವುದು.

(45) म्लेच्छितविकल्पा: — ಗುಟ್ಟಾದ ವಿಷಯಗಳನ್ನು ತಿಳಿಸಲು ಸರಿಯಾದ ಶಬ್ದಗಳನ್ನು ಉಪಯೋಗಿಸಿದರೂ ಇತರರಿಗೆ ಸ್ಪಷ್ಟವಾಗಿ ತಿಳಿಯದಿರಲು ಅಕ್ಷರಗಳನ್ನು ಬದಲಾಯಿಸಿ ಹೇಳುವುದು.

(46) देशभाषाविज्ञानम् — ಆಯಾ ದೇಶಭಾಷೆಗಳನ್ನು ತಿಳಿಯುವುದು.

(47) पुष्पशकटिका — ಹೂವಿನ ಬಂಡಿಯನ್ನು ತಯಾರಿಸುವುದು.

(48) निमित्तज्ञानम् — ಶಕುನಗಳನ್ನು ತಿಳಿಯುವುದು.

(49) यन्त्रमातृका — ಸಜೀವ ಮತ್ತು ನಿರ್ಜೀವ ಯಂತ್ರಗಳನ್ನು ಪ್ರಯಾಣ ಮತ್ತು ಜಲಯುದ್ಧಕ್ಕಾಗಿ ಜೋಡಿಸುವ ಶಾಸ್ತ್ರ.

(50) धारणमातृका — ಓದಿದ ಶಾಸ್ತ್ರವನ್ನು ಗ್ರಹಿಸಿ ದೃಢವಾಗಿಟ್ಟುಕೊಳ್ಳಲು ಅವಶ್ಯವಾದ ಶಾಸ್ತ್ರ.

| | | |
|---|---|---|
| (51) | संपाठ्यम् | ಚೆನ್ನಾಗಿ ಓದುವುದು. |
| (52) | मानसी | ಕಣ್ಣಿಗೆ ಕಾಣುವ ಮತ್ತು ಕಾಣಿಸದಿರುವ ವಸ್ತುಗಳ ಭೇದವಿಷಯವಾದ ಚಿಂತೆ. |
| (53) | काव्यक्रिया | ಕಾವ್ಯಗಳ ರಚನೆ. |
| (54) | अभिधानकोशः | ನಿಘಂಟು. |
| (55) | छन्दोज्ञानम् | ವೃತ್ತಗಳ ಜ್ಞಾನ. |
| (56) | क्रियाकल्पः | ಕಾರ್ಯವಿಧಾನದ ತಿಳಿವಳಿಕೆ. |
| (57) | छलितकयोगाः | ಜೂಜು ಮೊದಲಾದುವುಗಳಲ್ಲಿ ಇತರರನ್ನು ಮರುಳು ಮಾಡುವುದು. |
| (58) | वस्त्रगोपनानि | ವಸ್ತ್ರಗಳ ರಕ್ಷಣೆ. |
| (59) | द्यूतविशेषाः | ಬಗೆಬಗೆಯ ಜೂಜುಗಳು. |
| (60) | आकर्षक्रीडा | ಪಗಡೆಯಾಟ. |
| (61) | बालक्रीडनकानि | ಮಕ್ಕಳ ಆಟಗಳು. |
| (62) | वैनयिकीनाम् | ವಿನಯವನ್ನು ಬೋಧಿಸುವ. |
| (63) | वैजयिकीनाम् | ವಿಜಯದ ವಿಧಾನವನ್ನು ಬೋಧಿಸುವ ಮತ್ತು |
| (64) | व्यायामिकीनां च विद्यानां ज्ञानम् | ವ್ಯಾಯಾಮಕ್ರಮವನ್ನು ಬೋಧಿಸುವ ವಿದ್ಯೆಯ ಜ್ಞಾನ. |

"कलाः चतुःषष्टिरपेतु वासं तस्यां कथं सुभ्रुवि नाम नास्याम्" नैष० ७-१०७। "कलासु तस्याः सकलासु पण्डिताः" नैष० १५-२६। 6. ಒಂದು ವಸ್ತುವಿನ ಒಂದು ಸಣ್ಣ ಭಾಗ, ಅಂಶ. "सर्वे ते जपयज्ञस्य कलां नार्हन्ति षोडशीम्" मनु० २-७६। 7. ಕಾಲದ ಒಂದು ಭಾಗ, ಮೂವತ್ತು (30) ಕಾಷ್ಠೆಗಳ ಕಾಲ; ಒಂದು ಹ್ರಸ್ವಾಕ್ಷರವನ್ನು ಉಚ್ಚರಿಸುವಷ್ಟು ಕಾಲವು ಒಂದು (ಅಕ್ಷಿ) ನಿಮೇಷ. ಹದಿನೈದು (15) ಸಲ ರೆಪ್ಪೆಯಾಡಿಸುವಷ್ಟು ಕಾಲವು ಒಂದು ಕಾಷ್ಠೆ. ಮೂವತ್ತು (30) ಕಾಷ್ಠೆಗಳ ಕಾಲವು ಒಂದು ಕಲೆ. "लघ्वक्षरोच्चारणमात्रोऽक्षिनिमेषः, पञ्चदशाक्षिनिमेषाः काष्ठा, त्रिंशत् काष्ठाः कला, विंशतिकलो मुहूर्तः, त्रिंशन्मुहूर्तमहोरात्रम्" सुश्रुत० सूत्र० ६-५। 8. ಮನುಷ್ಯನ ಶರೀರದ ಒಂದು ಭಾಗ: ಮನುಷ್ಯನ ಶರೀರದಲ್ಲಿ ಏಳು ಕಲೆಗಳಿರುವುವು. (1) मांसधरा, (2) रक्तधरा, (3) मेदोधरा, (4) श्लेष्मधरा, (5) मलधरा, (6) पित्तधरा, ಮತ್ತು (7) रेतोधरा ಇವು ಸಪ್ತ (ಏಳು) ಕಲೆಗಳು. ಇವು ಮಾಂಸ ರಕ್ತ ಮೊದಲಾದ ಸಪ್ತಧಾತುಗಳಿಗೂ ಸ್ಥಾನಗಳಾಗಿರುವುವು. "कलाः खल्वपि सप्त भवन्ति धात्वाशयान्तरमर्यादाः" सुश्रुत० शारीर० ४-५।

**(1) "ಮಾಂಸಧರ"** ಕಲೆಯಲ್ಲಿ ನರ, ಸ್ನಾಯು (ಮಾಂಸಖಂಡ) ಮುಂತಾದುವು ವೃದ್ಧಿಹೊಂದುವುವು. "यथा बिसमृणालानि विवर्धन्ते समन्ततः। भूमौ पङ्कोदकस्थानि तथा मांसे सिरादयः" सुश्रुत० शारीर० ४-९।

**(2)** ಮಾಂಸದ ಮಧ್ಯದಲ್ಲಿ **"ರಕ್ತಧರ"** ಕಲೆಯಿರುವುದು. ವೃಕ್ಷವನ್ನು ಗಾಯಗೊಳಿಸಿದರೆ ಅದರ ಒಳಗಿನಿಂದ ಹಾಲು ಹೊರಡುವಂತೆ ಮಾಂಸಕ್ಕೆ ಏಟು ತಗುಲಿದರೆ ಒಳಗಿನಿಂದ ರಕ್ತವು ಸ್ರವಿಸುವುದು. "वृक्षाद्यथाभिप्रहतात् क्षीरिणः क्षीरमास्रवेत्। मांसादेव क्षतात् क्षिप्रं शोणितं संप्रसिच्यते" सुश्रुत० शारीर० ४-११।

**(3)** ಸಕಲ ಪ್ರಾಣಿಗಳಿಗೂ ಉದರದಲ್ಲಿ ದೊಡ್ಡ ಎಲುಬುಗಳಲ್ಲಿ ಮಜ್ಜೆಯೂ ಸಣ್ಣ ಎಲುಬುಗಳಲ್ಲಿ ಮೇದಸ್ಸೂ (ಕೊಬ್ಬು) ಇರುವುದು. ಇದೇ **"ಮೇದೋಧರ"**. "स्थूलास्थिषु विशेषेण मज्जा त्वभ्यन्तराश्रितः। अथेतरेषु सर्वेषु सरक्तं मेद उच्यते" सुश्रुत० शारीर० ४-१३।

**(4) "ಶ್ಲೇಷ್ಮಧರೆ"**ಯು ಪ್ರಾಣಿಗಳ ದೇಹದ ಎಲ್ಲಾ ಸಂಧಿ (ಕೀಲು) ಗಳಲ್ಲಿಯೂ ಇರುವುದು. ಚಕ್ರದೊಳಗಿರುವ ದೂರಿಗೆ ಎಣ್ಣೆಯನ್ನು ಹಾಕಿದರೆ ಚಕ್ರವು ಸುಖವಾಗಿ ತಿರುಗುವಂತೆ ಶರೀರದಲ್ಲಿ ಎಲುಬುಗಳ ಸಂಧಿಗಳು ಶ್ಲೇಷ್ಮದಿಂದ ಚೆನ್ನಾಗಿ ಕೆಲಸ ಮಾಡುವುವು. "स्नेहाभ्यक्ते यथा ह्यक्षे चक्रं साधु प्रवर्तते। सन्धयः साधु वर्तन्ते संश्लिष्टाः श्लेष्मणा तथा" सुश्रुत० शारीर० ४-१५।

**(5)** ಒಳಹೊಟ್ಟೆಯಲ್ಲಿ ಪಕ್ವಾಶಯದಲ್ಲಿರುವ **"ಮಲಧರೆ"**ಯು ಮಲಮೂತ್ರಗಳನ್ನು ಪ್ರತ್ಯೇಕಿಸುವುದು. "पञ्चमी पुरीष (मल) धरा नाम, याऽन्तःकोष्ठे मलमभिविभजते पक्वाशयस्था" सुश्रुत० शारीर० ४-१६।

**(6)** ಜಠರಾಗ್ನಿಯೆಂಬ **"ಪಿತ್ತಧರೆ"**ಯು ಆಮಾಶಯದಿಂದ ಕೆಳಗೆ ಜಾರಿಕೊಂಡು ಪಕ್ವಾಶಯಕ್ಕೆ ಹೊರಟಿರುವ ನಾಲ್ಕು ವಿಧ ಅನ್ನ (ಅಶಿತ, ಖಾದಿತ, ಪೀತ, ಲೀಢ) ಗಳನ್ನು ಜೀರ್ಣವಾಗಿಸಲು ವಹಿಸಿಕೊಳ್ಳುವುದು "षष्ठी पित्तधरा, या चतुर्विधमन्नपानमामाशयात्प्रच्युतं पक्वाशयोपस्थितं धारयति" सुश्रुत० शारीर० ४-१७।

**(7) "ರೇತೋಧರೆ"**ಯು ಸಕಲ ಪ್ರಾಣಿಗಳ ದೇಹದಲ್ಲಿಯೂ, ಹಾಲಿನಲ್ಲಿ ತುಪ್ಪವೂ ಕಬ್ಬಿನೊಳಗೆ ರಸವೂ ಸೇರಿಕೊಂಡಿರುವಂತೆ ಸರ್ವಾವಯವಗಳಲ್ಲಿಯೂ ಸೇರಿಕೊಂಡಿರುವುದು. "सप्तमी शुक्रधरा, या सर्वप्राणिनां सर्वशरीरव्यापिनी"। "यथा पयसि सर्पिस्तु गूढश्चेक्षौ रसो

यथा। शरीरेषु तथा शुक्रं नृणां विद्यात् भिषग्वरः" सुश्रुत० शारीर० ४-२०, २१। 9. (ಜ್ಯೋತಿಷದಲ್ಲಿ) ಅಂಶದ ಅರವತ್ತನೆಯ ಒಂದು ಭಾಗ. ರಾಶಿಯ ಮೂವತ್ತನೆಯ ಒಂದು ಭಾಗವು ಅಂಶ. "विकलानां कला षष्टचा तत्षष्टचा भाग उच्यते। तत्रिंशता भवेद्राशिः भगणो द्वादशैव ते" सू० सि० १-७। 10. ಕೂಡುವುದು. ಒಟ್ಟು, ಸೇರಿಸುವುದು, ಲೆಕ್ಕ ಹಾಕುವುದು. 11. ಬಹಳ ಸೂಕ್ಷ್ಮಾಂಶ, ಪರಮಾಣು. 12. ಜ್ಞಾನ, ತಿಳಿವಳಿಕೆ. 13. ಹೆಂಗಸರ ರಜಸ್ಸು. 14. ನೌಕೆ, ಹಡಗು, ನಾವೆ. 15. ಕೌಶಲ, ಜಾಣತನ. "कलांशमात्रे शिल्पादौ कलना कालभेदयोः। इन्दोश्च षोडशे भागे स्यान्मूलधनवर्धने" नानार्थर०। 16. ಪಂಚಮಹಾಭೂತಗಳು. 17. ಅಂಗ, ಅವಯವ. 18. ಇಂದ್ರಿಯ. "कालशिल्पे वित्तवृद्धौ चन्द्रांशे कलने कला। महाभूतेष्विन्द्रियेषु ज्ञानावयवयोरपि" वैज०। 19. ಮನುಷ್ಯನ ಶರೀರ ರಚನೆಗೆ ಬೇಕಾದ ಹದಿನಾರು (16) ಉಪಾಧಿಗಳು. (1) प्राणः, (2) श्रद्धा, (3) आकाशः, (4) वायुः, (5) तेजः, (6) जलम्, (7) पृथ्वी, (8) इन्द्रियम्, (9) मनः, (10) अन्नम्, (11) वीर्यम्, (12) तपः, (13) मन्त्रः, (14) कर्म, (15) लोकः ಮತ್ತು (16) नाम ಇವು ಉಪಾಧಿಗಳು. "तस्मै स होवाच इहैवान्तःशरीरे सोम्य। स पुरुषो यस्मिन्नेताः षोडश कलाः प्रभवन्ति इति" प्रश्नोप०।

**कलाकुल ಕಲಾಕುಲ** (न०) ಹಾಲಾಹಲವಿಷ. कलया मात्रयापि आकुलयति — आकुलि नामधा० "अच्" (३-१-१३४)।

**कलाकुशल ಕಲಾಕುಶಲ** (वि०) ಕುಶಲ ವಿದ್ಯೆಯಲ್ಲಿ ನಿಪುಣನಾದವನು. कलायां कुशलः।

**कलाकेलि ಕಲಾಕೇಳಿ** (पु०) ಕಾಮ, ಮನ್ಮಥ. कलया केलिरस्य। "रागरज्जुः कलाकेलिमधुदीपरवीषुरः" त्रिकाण्ड०।

**कलाक्षय ಕಲಾಕ್ಷಯ** (पु०) ಚಂದ್ರನ ಕಲೆಗಳು ಕಡಮೆಯಾಗುವಿಕೆ. कलानां षोडशकलानां क्षयो नाशः। "पर्यायपीतस्य सुरैर्हिमांशोः कलाक्षयः श्लाघ्यतरो हि वृद्धेः" रघु० ५-१६। ಕೃಷ್ಣಪಕ್ಷದ ಪಾಡ್ಯ ಮೊದಲುಗೊಂಡು ಹದಿನೈದು ದಿನಗಳಲ್ಲಿ ಅಗ್ನಿ ಮೊದಲಾದ ಹದಿನೈದು ದೇವತೆಗಳು ಪಾನಮಾಡುವುದರಿಂದ ಚಂದ್ರನ ಕಲೆಗಳು ಕ್ರಮೇಣ ಕಡಮೆಯಾಗುತ್ತ ಬಂದು ಪುನಃ ಪಕ್ಷಾಂತ್ಯದಲ್ಲಿ ಯಾಗಗಳಲ್ಲಿ ಹುತವಾದ ಹವಿಸ್ಸುಗಳು ಅಮೃತರೂಪದಿಂದ ಕ್ರಮೇಣ ಆ ಕಲೆಗಳಾಗಿ ಚಂದ್ರನನ್ನು ಸೇರುವುವು. ಹೀಗೆ ಅಮಾವಾಸ್ಯೆವರೆಗೂ ಕಲೆಗಳು ಕ್ಷಯ ಹೊಂದಿ ಪುನಃ ಪೂರ್ಣಿಮೆಯ ವೇಳೆಗೆ ತುಂಬಿಕೊಂಡು ಚಂದ್ರಬಿಂಬವು ಪೂರ್ಣವಾಗುವುದು. ಇದೇ ಪೂರ್ಣಿಮೆ. "प्रथमां पिबते वह्निर्द्वितीयां पिबते रविः। विश्वेदेवास्तृतीयां तु चतुर्थीं सलिलाधिपः। पञ्चमीं तु वषट्कारः षष्ठीं पिबति वासवः। सप्तमीं ऋषयो दिव्याः अष्टमीमज एकपात्। नवमीं कृष्णपक्षेऽस्य यमः प्राश्नाति वै कलाम्। दशमीं पिबते वायुः पिबत्येकादशीमुमा। द्वादशीं पितरः सर्वे समं प्राश्नन्ति भागशः। त्रयोदशीं धनाध्यक्षः कुबेरः पिबते कलाम्। चतुर्दशीं पशुपतिः पञ्चदशीं प्रजापतिः। निष्पीतः कलया शेषश्चन्द्रमा न प्रकाशते। कला षोडशिका या सात्वपः प्रविशते सदा। अमायां तु सदा सोम ओषधीः प्रतिपद्यते। तमोषधिगतं गावः पिबत्यम्बुगतं च यत्। तत् क्षीरममृतं भूत्वा मन्त्रपूतं द्विजातिभिः। हुतमग्निषु यज्ञेषु पुनराप्यायते शशी। दिने दिने कलावृद्धिः पौर्णमास्यां तु पूर्णता"।

**कलाङ्कुर ಕಲಾಂಕುರ** (पु०) 1. ಸಾರಸ ಪಕ್ಷಿ. कलस्याङ्कुरो यत्र। 2. ಚೌರ್ಯಶಾಸ್ತ್ರಪ್ರವರ್ತಕನಾದ ಮೂಲದೇವ. कलानामङ्कुरो यत्र। "कर्णीसुतो मूलदेवो मूलभद्रः कलाङ्कुरः" त्रिकाण्ड०।

**कलाची ಕಲಾಚೀ** (स्त्री०) ಮೊಳಕೈ ಮತ್ತು ಮಣಿಕಟ್ಟುಗಳ ಮಧ್ಯಭಾಗ, ಮುಂಗೈ. कलामञ्चति — अञ्चु (गतौ) "अण्" (३-२-१)। गौरा० "ङीष्" (४-१-४१)। स्वार्थे "कन्"। **कलाचिका ಕಲಾಚಿಕಾ.**

**कलाद ಕಲಾದ** (पु०) ಅಕ್ಕಸಾಲೆ, ಚಿನ್ನ ಬೆಳ್ಳಿ ಕೆಲಸಗಾರ. कलामंशमादत्ते—आ डु दाञ् (दाने) "कः" (३-२-४)। "वयं कलादा इव दुर्विदग्धं त्वद्गौरिमस्पर्धि दहेम हेम" नैष० ८-९१।

**कलादक ಕಲಾದಕ** (पु०) ಸ್ವರ್ಣಕಾರ, ಅಕ್ಕಸಾಲೆ, ಚಿನ್ನ ಬೆಳ್ಳಿ ಕೆಲಸಗಾರ. कलामंशमत्ति—अद (भक्षणे) "ण्वुल्" (३-१-१३३)।

**कलाधर ಕಲಾಧರ** (पु०) 1. ಚಂದ್ರ. धरति — धृञ् (धारणे) "अच्" (३-१-१३४)। कलानां धरः। 2. ಶಿವ, ಪರಮೇಶ್ವರ. (वि०) 3. ಅರವತ್ತನಾಲ್ಕು ಕಲೆಗಳನ್ನು ಬಲ್ಲವನು.

**कलानिधि ಕಲಾನಿಧಿ** (पु०) ಚಂದ್ರ. कला निधीयन्तेऽस्मिन् — नि + डु धाञ् (धारणपोषणयोः) "किः"

(३-३-९२)। "अहो महत्त्वं महतामपूर्वं विपत्तिकालेऽपि परोपकारः। यथाऽऽस्यमध्ये पतितोऽपि राहोः कलानिधिः पुण्यचयं ददाति" उद्भ०।

**कलान्तर ಕಲಾಂತರ** (पु०) 1. ಬಡ್ಡಿ, ಮೂಲಧನದ ವೃದ್ಧ್ಯಂಶ. अन्या कला अंशः। 2. ಚಂದ್ರನ ಮತ್ತೊಂದು ಕಲೆ. "पुपोष लावण्यमयान् विशेषान् ज्योत्स्नान्तराणीव कलान्तराणि" कुमा० १-२५। "मासे शतस्य यदि पञ्च कलान्तरं स्यात्" लीला०।

**कलाप ಕಲಾಪ** (पु०) 1. ಸಮೂಹ, ಗುಂಪು, ರಾಶಿ. कलां मात्रामाप्नोति — आप्लृ (व्याप्तौ) "अण्" (३-१-२)। "क्रियाकलापैरिदमेव योगिनः श्रद्धान्विताः साधु यजन्ति सिद्धये" भाग० ४-२४-६२। 2. ನವಿಲಿನ ಪುಕ್ಕ. "पक्षस्य- तावद्बहुचन्द्रकोऽपि कलापिनां येन जितः कलापः" नैष० ७-२०। 3. ಭೂಷಣ, ಒಡವೆ. "कण्ठस्य तस्याः स्तन- बन्धुरस्य मुक्ताकलापस्य च निस्तलस्य" कुमा० १-४२। 4. ಡಾಬು, ಒಡ್ಯಾಣ. 5. ಚಂದ್ರ. 6. ಜಾಣ, ಬುದ್ಧಿ ವಂತ. 7. ಕಾತಂತ್ರವೆಂಬ ಒಂದು ವ್ಯಾಕರಣ. 8. ಬತ್ತಳಿಕೆ, ಬಾಣಗಳನ್ನಿಡುವ ಚರ್ಮದ ಚೀಲ. "कलापः संहतौ बर्हे काञ्च्यां भूषणतूणयोः। चन्द्रे विदग्धे व्याकरणभेदेऽपि कथ्यते बुधैः" मेदि०। 9. ಒಂದು ಗ್ರಾಮ, ಒಂದು ಹಳ್ಳಿ. "देवापिर्योगमास्थाय कलापग्राममास्थितः। सोम- वंशे कलौ नष्टे कृतादौ स्थापयिष्यति" भाग० ९-१२-१३। 10. ಧನುಸ್ಸು, ಬಿಲ್ಲು, ಅಂಬು. 11. ಬಾಣ, ಶರ. 12. ಆನೆಯ ಕತ್ತಿನ ಹಗ್ಗ.

**कलापक ಕಲಾಪಕ** (पु०) 1. "कलाप" ಪದದ ಅರ್ಥ. कलाप स्वार्थे "कन्"। 2. ಏಕಕರ್ತೃಕ್ರಿಯಾತ್ಮಕವಾಗಿ ಒಂದೇ (ಅನ್ವಯವುಳ್ಳ) ವಾಕ್ಯವಾಗಿರುವ ನಾಲ್ಕು ಶ್ಲೋಕ ಗಳು. "द्वाभ्यां युग्ममिति प्रोक्तं त्रिभिः श्लोकैर्विशेषकम्। कलापकं चतुर्भिः स्यात् तदूर्ध्वं कुलकं मतम्"। 3. ನವಿಲುಗಳು ಪುಕ್ಕವನ್ನು ಬಿಚ್ಚುವ ಕಾಲದಲ್ಲಿ ಕೊಡ ಬೇಕಾದ ಸಾಲ. यस्मिन् काले मयूराः कलापिनो भवन्ति स कलापी तत्र देयं ऋणम् "वुन्" (४-३-४८)।

**कलापद्वीप ಕಲಾಪದ್ವೀಪ** (पु०) "ಕಲಾಪ" ವೆಂಬ ಒಂದು ಗ್ರಾಮ. ಇದು ಹಿಮವತ್ಪರ್ವತಕ್ಕಿಂತಲೂ ಉತ್ತರ ದಲ್ಲಿರುವುದು. "सत्यभामा तथैवान्या देव्यः कृष्णस्य संमताः। वनं प्रविविशू राजन् तपसे कृतनिश्चयाः। फलमूलादिभोजिन्यो हरिध्यानैकतत्पराः। हिमवन्तम- तिक्रम्य कलापग्राममाविशन्" भा० मौसल० ७।

**कलापिन् ಕಲಾಪಿನ್** (पु०) 1. ಮಯೂರ, ನವಿಲು. कलापोऽस्यास्ति "इनिः" (५-२-११५)। "ननुतुश्च वारिधरधीरवारणध्वनिहृष्टकूजितकलाः कलापिनः" माघ० १३-५। 2. ಆಲದಮರ. 3. ಕೋಗಿಲೆ. कलस्यापी — आप्लृ (व्याप्तौ) "णिनिः" (३-१-१३४)। 4. ನವಿಲುಗಳು ಪುಕ್ಕವನ್ನು ಬಿಚ್ಚುವಕಾಲ. (वि०) 5. ಬಾಣಗಳಿಂದ ತುಂಬಿದ ಬತ್ತಳಿಕೆಯನ್ನು ಧರಿಸಿರುವ. स्त्रियाम् "ङीप्" (४-१-५)। **कलापिनी ಕಲಾಪಿನೀ.**

**कलापिनी ಕಲಾಪಿನೀ** (स्त्री०) 1. ರಾತ್ರಿ. कलापः चन्द्रोऽस्त्यस्याम् "इनिः" (५-२-११५)। "ङीप्" (४-१-५)। 2. ನಾಗರಮುಸ್ತೆ. 3. ಹೆಣ್ಣು ನವಿಲು.

**कलापूर्ण ಕಲಾಪೂರ್ಣ** (पु०) 1. ಹುಣ್ಣಿಮೆಯ ಚಂದ್ರ. कलाभिः षोडशकलाभिः पूर्णः। (वि०) 2. ಕುಶಲ ವಿದ್ಯೆಯಿಂದ ತುಂಬಿದ, ಸಕಲ ಕಲೆಗಳಲ್ಲಿಯೂ ನಿಪುಣನಾದ. "सदा भवान् फाल्गुनस्य गुणानस्मासु कत्थसे। न चार्जुनः कलापूर्णः मम दुर्योधनस्य वा" भा० विरा० ४०-२९।

**कलाभृत् ಕಲಾಭೃತ್** (पु०) 1. ಚಂದ್ರ. 2. ಶಿಲ್ಪಿ, ಕಲೆಗಾರ, ಕಲಾವಿದ, ಕಲಾಭಿಜ್ಞ. कलां बिभर्ति—डु भृञ् (धारणपोषणयोः) "क्विप्" (३-२-६१)। "दशाब्दाख्यं पौरसख्यं पञ्चाब्दाख्यं कलाभृताम्" मनु० २-१३४।

**कलाय ಕಲಾಯ** (पु०) ನೆಲಗಡಲೆ ಗಿಡ. कलामयते — अय (गतौ) "अण्" (३-२-१)। "विकसत्कलाय- कुसुमासितद्युतेरलघूडुपाण्डु जगतामधीशितुः" माघ० १३-२१।

**कलालाप ಕಲಾಲಾಪ** (पु०) ಭ್ರಮರ, ದುಂಬಿ. कलमाल- पति—आ+लप (व्यक्तायां वाचि) "अण्" (३-२-१)।

**कलावत् ಕಲಾವತ್** (पु०) 1. ಚಂದ್ರ. कलाः सन्त्यस्मिन् "मतुप्" (५-२-९४)। "कला च सा कान्तिमती कलावतः त्वमस्य लोकस्य च नेत्रकौमुदी" कुमा० ५-७१। (वि०) 2. ಕಲಾವಿದ, ಗೀತ ನೃತ್ಯ ಮುಂತಾದ ಕಲೆಗಳನ್ನು ಬಲ್ಲವನು. स्त्रियाम् "ङीप्" (४-१-६)। **-वती -ವತೀ.**

**कलावती ಕಲಾವತೀ** (स्त्री०) 1. ತುಂಬುರುವಿನ ವೀಣೆ. कलाः गीतरागादयः सन्त्यस्याम्" "मतुप्" (५-२-९४)। "ङीप्" (४-१-६)। "विश्वावसोस्तु बृहती तुम्बुरोस्तु कलावती। महती नारदस्य स्यात् सरस्वत्यास्तु कच्छपी"। 2. ದ್ರುಮಿಲರಾಜನ ಮಗಳು. 3. ರಾಧೆಯ ತಾಯಿ, ವೃಷಭಾನುವಿನ ಪತ್ನಿ. 4. ಗಂಗೆ.

**कलाविक ಕಲಾವಿಕ** (पुं०) ಕುಕ್ಕುಟ, ಕೋಳಿ. कलेन सम्यक् विकायति—आ+वि+कै (शब्दे) "कः" (३-१-१३६)। "कुक्कुटस्तु विवृत्ताक्षो रात्रिवेदी कलाविकः" त्रिकाण्ड०। स्त्रियाम् जाति० "ङीष्" (४-१-६३)। **कलाविकी ಕಲಾವಿಕೀ.**

**कलाविद् ಕಲಾವಿದ್** (वि०) ಕಲೆಗಳನ್ನು ಅರಿತವನು, ಶಿಲ್ಪವಿದ್ಯೆಗಳನ್ನು ಬಲ್ಲವನು. कलाः वेत्ति—विद (ज्ञाने) "क्विप्" (३-२-६१)।

**कलाहक ಕಲಾಹಕ** (पुं०) ಕಹಳೆಯೆಂಬ ಒಂದು ವಾದ್ಯ. कलमाहन्ति — आ + हन (हिंसागत्योः) "क्विप्"। संज्ञायां "कन्"।

**कलि ಕಲಿ** (पुं०) 1. ಕಲಿಯುಗ, ಚತುರ್ಯುಗಗಳಲ್ಲಿ ನಾಲ್ಕನೆಯ ಯುಗ. कलयति पापेन जडयति कलुषितं करोति — कल (गतौ संख्याने च) "इः" (उ० ४-१३८)।

**ಕಲಿಯುಗಮಾನ:** ಕೃತ ತ್ರೇತಾ ದ್ವಾಪರ ಮತ್ತು ಕಲಿಗಳೆಂಬ ನಾಲ್ಕುಯುಗಗಳ ಮಾನವು :

| ದೇವವರ್ಷಗಳು | | | ಮಾನುಷವರ್ಷಗಳು |
|---|---|---|---|
| 12,000 | | | 43,20,000 |
| 4,800 | ಕೃತಯುಗ | ... | 17,28,000 |
| 3,600 | ತ್ರೇತಾಯುಗ | ... | 12,96,000 |
| 2,400 | ದ್ವಾಪರಯುಗ | ... | 8,64,000 |
| 1,200 | ಕಲಿಯುಗ | ... | 4,32,000 |
| 12,000 | | | 43,20,000 |

ಈ ಯುಗಮಾನಗಳ ಆರನೆಯ ಒಂದು ಭಾಗವು (ಯುಗಗಳ ಆದ್ಯಂತಗಳಲ್ಲಿ) ಸಂಧ್ಯಾ ಸಂಧ್ಯಾಂಶಗಳು. ಈ ಆರನೆಯ ಒಂದು ಭಾಗವನ್ನು ಕಳೆದರೆ ಕೃತಯುಗ 4,000; ತ್ರೇತಾಯುಗ 3,000 ; ದ್ವಾಪರಯುಗ 2,000 ; ಕಲಿಯುಗ 1,000 ದೇವ ವರ್ಷಗಳು ಈ ರೀತಿ ಚತುರ್ಯುಗಮಾನವಾಗುವುದು.

ಕೃತಯುಗದಲ್ಲಿ ಧರ್ಮವು ಸಂಪೂರ್ಣವಾಗಿರುವುದರಿಂದ ಧರ್ಮಪುರುಷನ ನಾಲ್ಕು ಪಾದಗಳೂ ಭೂಮಿಯ ಮೇಲಿರುವುವು. ತ್ರೇತಾಯುಗದಲ್ಲಿ ಮೂರು ಭಾಗ ಧರ್ಮ ಒಂದು ಭಾಗ ಅಧರ್ಮವಿರುವುದರಿಂದ ಧರ್ಮಪುರುಷನ ಒಂದು ಪಾದವು ಮೇಲಕ್ಕೆ ಏಳುವುದು. ದ್ವಾಪರಯುಗದಲ್ಲಿ ಎರಡು ಭಾಗ ಅಧರ್ಮವಿರುವುದರಿಂದ ಎರಡು ಪಾದಗಳು ಮೇಲಕ್ಕೆ ಏಳುವುವು. ಕಲಿಯುಗದಲ್ಲಿ ಮೂರು ಭಾಗ ಅಧರ್ಮ ಒಂದು ಭಾಗ ಧರ್ಮ. ಇದರಿಂದ ಮೂರು ಪಾದಗಳು ಮೇಲಕ್ಕೆ ಹೋಗುವುವು. ಕಲಿಯುಗದ ಕೊನೆಯಲ್ಲಿ ಅಧರ್ಮಭೂಯಿಷ್ಠವಾಗುವುದರಿಂದ ಕೊನೆಗೆ ಆ ಒಂದು ಪಾದವೂ ಮೇಲಕ್ಕೆ ಹೋಗುವುದು. ಇದರಿಂದ ಯುಗಮಾನವು ಒಂದೊಂದು ಯುಗಕ್ಕೂ ನಾಲ್ಕನೆಯ ಒಂದು ಭಾಗದಷ್ಟು ಕಡಮೆಯಾಗುವುದು. "तद्द्वादशसहस्राणि चतुर्युगमुदाहृतम्। सूर्याब्दसंख्यया द्वित्रिसागरैरयुताहतैः। सन्ध्यासन्ध्यांशसहितं विज्ञेयं तच्चतुर्युगम्। कृतादीनां व्यवस्थेयं धर्मपादव्यवस्थया" सू०सि० १-१५, १६। ಇಂತಹ ಅಧರ್ಮಭೂಯಿಷ್ಠವಾದ ಈ ಕಲಿಯುಗದಲ್ಲಿ ಧರ್ಮಹ್ರಾಸ, ಜನರ ದುಃಸ್ವಭಾವ, ಹಿಂಸಾಕೃತ್ಯ ಮುಂತಾದುವು ಶ್ರೀಮದ್ಭಾಗವತ, ಮಹಾಭಾರತ ಮುಂತಾದುವುಗಳಲ್ಲಿ ಈ ರೀತಿ ಹೇಳಲ್ಪಟ್ಟಿವೆ:—ಕಲಿಯುಗದ ಪ್ರಾರಂಭದಲ್ಲಿಯೇ ದಿನ ದಿನಕ್ಕೂ ಧರ್ಮವು ಕಡಮೆಯಾಗಿ ಅಧರ್ಮವು ಬೆಳೆಯುತ್ತಾ ಬಂದಂತೆಲ್ಲಾ ಭೂಮಿಯಲ್ಲಿ ಊರಿದ್ದ ಧರ್ಮಪುರುಷನ ಒಂದು ಕಾಲೂ ಮೇಲಕ್ಕೆ ಹೋಗುತ್ತಾ ಒಂದು ಯುಗಾಂತ್ಯದಲ್ಲಿ ಅಧರ್ಮವೂ ಹಿಂಸಾಕೃತ್ಯಗಳೂ, ಅನ್ಯಾಯವೂ ಅಧಿಕವಾಗುತ್ತ ಬರುವುವು. ಕಲಿಮಹಿಮೆಯಿಂದ ಜನರಲ್ಲಿ ಧರ್ಮ, ಸತ್ಯ, ಕ್ಷಮೆ, ದಯೆ, ಶೌಚ, ಆಚಾರವ್ಯವಹಾರಗಳು, ಆಯುಃಪ್ರಮಾಣ, ದೈಹಿಕಶಕ್ತಿ, ಸ್ಮೃತಿಶಕ್ತಿ ಇವೆಲ್ಲಾ ನಶಿಸುತ್ತಾ ಬರುವುವು. ಧನವೊಂದೇ ಪ್ರಧಾನವಾಗಿ ಅದರಿಂದಲೇ ಮನುಷ್ಯನಿಗೆ ವಂಶ, ಆಚಾರ, ಗುಣ, ಶೀಲ ಮುಂತಾದುವುಗಳ ಮೇಲ್ಮೆಯುಂಟಾಗುವುದು. ಧರ್ಮ ಮತ್ತು ನ್ಯಾಯಗಳ ವ್ಯವಸ್ಥೆಗೆ ಧನಬಲವೇ ಪ್ರಧಾನವಾಗುವುದು. ದಾಂಪತ್ಯಸಿದ್ಧಿಗೆ ಪರಸ್ಪರ ಪ್ರೀತಿಯೇ ಕಾರಣವೇ ಹೊರತು ವಂಶ, ವರ್ತನೆ ಮುಂತಾದುವುಗಳ ವಿಮರ್ಶೆಯಿರುವುದಿಲ್ಲ. ಸುರತ (ಸಂಭೋಗ) ವೊಂದೇ ಸ್ತ್ರೀತ್ವ ಮತ್ತು ಪುರುಷತ್ವ ಪ್ರಕಾಶಕವಾಗುವುದು. ದೇಹದಲ್ಲಿ ದಾರವೊಂದು ಮಾತ್ರ ಬ್ರಾಹ್ಮಣತ್ವಕ್ಕೆ ಗುರುತಾಗಿ ಉಳಿಯುವುದು. ಮತ್ತಾವ ಬ್ರಾಹ್ಮಣಧರ್ಮವೂ ಇರಲಾರದು. ಆಶ್ರಮಧರ್ಮಗಳಾವುವೂ ಇಲ್ಲದೆ ತ್ರಿದಂಡ ಮುಂತಾದುವು ಮಾತ್ರ ಆಶ್ರಮಲಕ್ಷಣವಾಗಿ ಉಳಿಯುವುವು. ವ್ಯಾಪಾರದಲ್ಲಿ ದ್ರೋಹವೇ ಮುಖ್ಯವಾಗುವುದು. ದಾರಿದ್ರ್ಯದೋಷದಿಂದ ಬಡವನ ವಿಷಯದಲ್ಲಿ ನ್ಯಾಯವೂ ದುರ್ಬಲವಾಗುವುದು. ಜ್ಞಾನವು ಮಾಯವಾಗಿ ಬಾಯಿಗೆ ಬಂದಂತೆ ಮಾತನಾಡುವುದೇ ಪಾಂಡಿತ್ಯಪ್ರದರ್ಶನವಾಗುವುದು. ಮನುಷ್ಯನು ದಾರಿದ್ರ್ಯದೋಷದಿಂದ ದುರ್ಜನನೆನಿಸಿಕೊಳ್ಳುವನೇ ಹೊರತು ಅವನ ದುರ್ಗುಣದಿಂದಲ್ಲ. ಶಾಸ್ತ್ರವಿಧಿಗಳಾವುವೂ ಇಲ್ಲದೆ ಕೇವಲ ಸ್ವೀಕಾರದಿಂದ ವಿವಾಹಸಿದ್ಧಿಯಾಗುವುದು. ಮೈಯ ಕೊಳೆ

ಹೋಗಲು ಮಾತ್ರ ಸ್ನಾನವೇ ಹೊರತು ಪುಣ್ಯತೀರ್ಥಗಳಲ್ಲಿ
ಸ್ನಾನವಿಲ್ಲ. ಕುಟುಂಬಭರಣವೊಂದೇ ಮನುಷ್ಯನಿಗೆ ದೊಡ್ಡ
ಸಾಧನೆಯೇ ಹೊರತು ಮತ್ತಾವ ಪುರುಷಾರ್ಥಸಾಧನೆ
ಯಿಲ್ಲ. ಕೀರ್ತಿಗಳಿಸಲು ದಾನ ಧರ್ಮಗಳೇ ಹೊರತು ಪಾರ
ಲೌಕಿಕ ಸಾಧನೆಗಲ್ಲ. ಈ ರೀತಿ ಭೂಮಂಡಲವೆಲ್ಲಾ ದುಷ್ಪ್ರಜೆ
ಗಳಿಂದ ತುಂಬಿ ವರ್ಣನಿಯಮವೆಲ್ಲಾ ನಶಿಸಿಹೋಗಿ ಬಲ
ಶಾಲಿಯಾದವನೇ ರಾಜನಾಗುವನು. ಈ ರೀತಿ ರಾಜನಾದ
ವನು ಲುಬ್ಧನೂ, ನಿರ್ದಯನೂ, ಚೌರ್ಯಧರ್ಮವುಳ್ಳ
ವನೂ ಆಗಿದ್ದು ಜನರ ಧನಕನಕಾದಿಗಳನ್ನು ಬಲಾತ್ಕಾರದಿಂದ
ಅಪಹರಿಸುವುದರಿಂದ ಪ್ರಜೆಗಳೆಲ್ಲರೂ ಈ ದುಷ್ಟರಾಜರ
ಬಾಧೆಯನ್ನು ತಡೆಯಲಾರದೆ ಸರ್ವಸ್ವವನ್ನೂ ಬಿಟ್ಟು
ಕೊಟ್ಟು ದೇಶಭ್ರಷ್ಟರಾಗಿ ಓಡಿಹೋಗಿ ಕಾಡುಪಾಲಾಗಿ
ಸಕಾಲದಲ್ಲಿ ಆಹಾರಕ್ಕೆ ಗತಿಯಿಲ್ಲದೆ ಕಾಡಿನಲ್ಲಿ ಗೆಡ್ಡೆ ಗೆಣಸು
ಗಳನ್ನು ತಿಂದು ನಾನಾರೋಗಪೀಡಿತರಾಗಿ ಸಾಯುವರು.
ಅನಾವೃಷ್ಟಿಯಿಂದ ಕೆಲವು ವೇಳೆ ಈ ಆಹಾರಗಳೂ ದೊರ
ಕದೆ ಹಸಿವುಬಾಯಾರಿಕೆಗಳಿಂದಲೂ ಬಿಸಿಲಿನ ಬಾಧೆ
ಯಿಂದಲೂ ಪ್ರಾಣಬಿಡುವರು. ಕಲಿಯುಗಾಂತ್ಯದಲ್ಲಿ
ಮನುಷ್ಯನ ಆಯುಃಪ್ರಮಾಣವು ಪರಮಾವಧಿ ಹದಿನಾರು,
ಇಪ್ಪತ್ತು ಅಥವಾ ಮೂವತ್ತು ವರ್ಷಗಳು. ದಸ್ಯುಧರ್ಮ
ವುಳ್ಳ ಈ ರಾಜರಿಗೆ ತಕ್ಕಂತೆಯೇ ಪ್ರಜೆಗಳೂ ಚೌರ್ಯ,
ಅನೃತ, ದ್ರೋಹ, ಹಿಂಸೆ ಮುಂತಾದುವುಗಳಲ್ಲಿ ನಿರತರಾಗಿ
ಜೀವಿಸುವರು. ವರ್ಣಾಶ್ರಮಧರ್ಮಗಳೆಲ್ಲವೂ ನಾಶವಾಗಿ
ಭೂಮಿಯೆಲ್ಲಾ ಮ್ಲೇಚ್ಛಪ್ರಾಯವಾಗುವುದು. ಮೈಥುನ
ಮಾತ್ರಸುಖವುಳ್ಳ ಗೃಹಸ್ಥಾಶ್ರಮವೇ ಪ್ರಧಾನವಾದ
ಆಶ್ರಮವಾಗುವುದು. ಧಾನ್ಯವೆಲ್ಲಾ ಅಣುಪ್ರಾಯವಾಗು
ವುದು. ಸಸ್ಯವೆಲ್ಲವೂ ಪ್ರಮಾಣದಲ್ಲಿಯೂ ಅತ್ಯಲ್ಪವಾಗಿ
ಅಲ್ಪಫಲವನ್ನು ಕೊಡುವುವು. ಮೇಘದಲ್ಲಿ ಮಿಂಚಿನ
ಹೊರಳಾಟವೇ ಹೊರತು ಮಳೆಯೇ ಇಲ್ಲವಾಗುವುದು.
ಈ ರೀತಿ ಧರ್ಮಕ್ಕೆ ಸಂಪೂರ್ಣ ಚ್ಯುತಿಯುಂಟಾಗಿ
ಅಧರ್ಮವು ಅತ್ಯುಚ್ಚದಶೆಯನ್ನು ಮುಟ್ಟಿದಾಗ ಪರಮಾ
ತ್ಮನು ಧರ್ಮರಕ್ಷಣೆಗಾಗಿ ಶಂಭಳವೆಂಬ ಒಂದು ಗ್ರಾಮದಲ್ಲಿ
ವಿಷ್ಣುಯಶನೆಂಬ ಬ್ರಾಹ್ಮಣನೊಬ್ಬನ ಮನೆಯಲ್ಲಿ ಕಲ್ಕಿ
ಯೆಂಬ ಅಭಿಧಾನದಿಂದ ಅವತರಿಸಿ ಶೌರ್ಯವೀರ್ಯ
ಸ್ಥೈರ್ಯಗಳಿಂದ ಪರಿಶೋಭಿಸುತ್ತ ಅತಿ ವೇಗಶಾಲಿಯಾದ
"ದೇವದತ್ತ" ವೆಂಬ ಅಶ್ವವನ್ನೇರಿ ದುಷ್ಟನಿಗ್ರಹ ಶಿಷ್ಟ
ಪರಿಪಾಲನೆಗಾಗಿ ಖಡ್ಗವೊಂದನ್ನು ಧರಿಸಿ ರಾಜವೇಷದಿಂದ
ದಸ್ಯುಧರ್ಮಿಗಳಾದ ದುಷ್ಟರನ್ನೆಲ್ಲಾ ಕೋಟಿಗಟ್ಟಲೆ ಸಂಹರಿ
ಸುತ್ತಾ ಬಂದಾಗ ಪ್ರಜೆಗಳ ಮನಸ್ಸಿನಲ್ಲಿ ನೆಮ್ಮದಿ ಮೂಡಲು
ಆರಂಭವಾಗುವುದು. ಕಲ್ಕಿರೂಪಿಯಾದ ಆ ಪರಮಾತ್ಮನ
ದೇಹದ ಗಂಧದ ವಾಸನೆಯಿಂದ ಎಲ್ಲರ ಮನಸ್ಸಿನಲ್ಲಿಯೂ
ಕಲಿದೋಷವು ನಿವೃತ್ತಿಯಾಗಿ ಜನರಿಗೆ ವೈರಾಗ್ಯವು ಹುಟ್ಟಿ
(ಕಲ್ಕಿಯ ಅವತಾರವಾದಕೂಡಲೆ) ಕೃತಯುಗವಾಗಿ ಬದ
ಲಾವಣೆ ಹೊಂದುವುದು. ಪ್ರಜೆಗಳೆಲ್ಲರೂ ಸತ್ತ್ವಗುಣ
ಪ್ರಚುರರಾಗುವರು. ಸೂರ್ಯಚಂದ್ರಬೃಹಸ್ಪತಿಗಳು ಪುಷ್ಯ
ನಕ್ಷತ್ರದಲ್ಲಿ ಏಕರಾಶಿಯಲ್ಲಿ ಸೇರಿದಾಗ ಕೃತಯುಗಾರಂಭ
ವಾಗುವುದು. "ततश्चानुदिनं धर्मः सत्यं शौचं क्षमा
दया। कालेन बलिना राजन् नङ्क्ष्यत्यायुर्बलं स्मृतिः।
वित्तमेव कलौ नृणां जन्माचारगुणोदयः। धर्मन्याय-
व्यवस्थायां कारणं बलमेव हि। दाम्पत्येऽभिरुचिर्हेतु-
र्मायैव व्यावहारिके। ..............................

..............................

वासुदेवे भगवति सत्त्वमूर्तौ हृदि स्थिते। यदावतीर्णो
भगवान् कल्किर्धर्मपतिर्हरिः। कृतं भविष्यति तदा
प्रजासूतिश्च सात्त्विकी। यदा चन्द्रश्च सूर्यश्च तथा तिष्य-
बृहस्पती। एकराशौ समेष्यन्ति तदा भवति तत्कृतम्"
भाग० १२-२। "कृते चतुष्पात्सकलो निर्व्याजोपाधि-
वर्जितः। वृषः प्रतिष्ठितो धर्मः मनुष्ये भरतर्षभ। अधर्म-
पादविद्धस्तु त्रिभिरंशैः प्रतिष्ठितः। त्रेतायां द्वापरेऽर्धेन
व्यामिश्रो धर्म उच्यते। त्रिभिरंशैरधर्मस्तु लोकानाक्रम्य
तिष्ठति। तामसं युगमाश्रित्य तदा भरतसत्तम। चतुर्थां-
शेन धर्मस्तु मनुष्यानुपतिष्ठति। आयुर्वीर्यं मनो बुद्धिर्बलं
तेजश्च पाण्डव। मनुष्याणामनुयुगं ह्रसन्तीति निबोध मे।
ब्राह्मणाः क्षत्रिया वैश्याः शूद्राश्चैव युधिष्ठिर। व्याजैर्धर्मं
चरिष्यन्ति धर्मवैतंसिका नराः। सत्यं संक्षेप्स्यते लोके
नरैः पण्डितमानिभिः। सत्यहान्या ततस्तेषामायुरल्पं
भविष्यति। ..............................

..................। ईदृशो भविता लोको युगान्ते
पर्युपस्थिते। वस्त्राणां प्रवरा शाणी धान्यानां कोरदूषकाः।
..............................

..................। पिता पुत्रस्य भोक्ता च पितुः
पुत्रस्तथैव च। अतिक्रान्तानि भोज्यानि भविष्यन्ति
युगक्षये। परमायुश्च भविता तदा वर्षाणि षोडश। ततः
प्राणान् विमोक्ष्यन्ति युगान्ते समुपस्थिते। पञ्चमे वाऽथ
षष्ठे वा वर्षे कन्या प्रसूयते। सप्तवर्षाष्टवर्षाश्च प्रजा-
स्यन्ति नरास्तथा। ..............................

..................। अकालवर्षी भगवान् भविष्यति
सहस्रदृक्। सस्यानि च न रोक्ष्यन्ति युगान्ते पर्युपस्थिते।
पुत्राश्च मातापितरौ हनिष्यन्ति युगक्षये। सूदयिष्यन्ति

च पतीन् स्त्रियः पुत्रानपाश्रिताः। पानीयं भोजनं चापि याचमानास्तदाध्वगाः। न लप्स्यन्ते निवासान् वा निरस्ताः पथि शेरते।.......................................................................। ततः कालान्तरेऽन्यस्मिन् पुनर्लोकविवृद्धये। भविष्यन्ति पुनर्दैवमनुकूलं यदृच्छया। कल्की विष्णुयशा नाम द्विजः कालप्रचोदितः। संभूतः शम्भलग्रामे ब्राह्मणावसथे शुभे। मनसा तस्य सर्वाणि वाहनान्यायुधानि च। उपस्थास्यन्ति योधाश्च शस्त्राणि कवचानि च। स धर्मविजयी राजा चक्रवर्ती भविष्यति। उत्सादयिष्यति तदा सर्वम्लेच्छगणान् द्विजः" भा० वन० १९३।

**ಕಲಿಯುಗದಲ್ಲಿ ಸಾಮಾನ್ಯವಾಗಿ ಸೇವಿಸಲ್ಪಡಬೇಕಾದ ಧರ್ಮಗಳು:**

ಯುಗಪ್ರಮಾಣವು ಕಡಮೆಯಾದಂತೆಲ್ಲಾ ಧರ್ಮಗಳು ಒಂದೊಂದು ಯುಗಕ್ಕೂ ಬೇರೆ ಬೇರೆಯಾಗುವುವು. ಕೃತಯುಗದಲ್ಲಿ ತಪಸ್ಸು, ತ್ರೇತಾಯುಗದಲ್ಲಿ ಆತ್ಮಜ್ಞಾನ, ದ್ವಾಪರಯುಗದಲ್ಲಿ ಯಜ್ಞ, ಕಲಿಯುಗದಲ್ಲಿ ದಾನ ಇವು ಮುಖ್ಯವಾದ ಧರ್ಮಗಳು. "अन्ये कृतयुगे धर्मास्त्रेतायां द्वापरे परे। अन्ये कलियुगे नृणां युगह्रासानुरूपतः। तपः परं कृतयुगे त्रेतायां ज्ञानमुच्यते। द्वापरे यज्ञमेवाहुः दानमेकं कलौ युगे" मनु० १-८५, ८६। ಕೃತಯುಗದಲ್ಲಿ ಪ್ರಾಣಗಳು ಅಸ್ಥಿಗತವಾಗಿರುವುವು. ತ್ರೇತಾಯುಗದಲ್ಲಿ ಮಾಂಸವನ್ನಾಶ್ರಯಿಸಿರುವುವು. ಮಾಂಸವಿರುವವರೆಗೂ ಬದುಕಿರುವನು. ದ್ವಾಪರಯುಗದಲ್ಲಿ ಪ್ರಾಣಗಳು ರಕ್ತಗತವಾಗಿರುವುವು. ಕಲಿಯುಗದಲ್ಲಿ ಅನ್ನಗತವಾಗಿರುವುವು. ಕೇವಲ ಅನ್ನಾಹಾರದಿಂದಲೇ ಮನುಷ್ಯನು ಬದುಕಿರಬೇಕಾಗುವುದು. "कृते चास्थिगताः प्राणाः त्रेतायां मांसमास्थिताः। द्वापरे रुधिरं यावत् कलावन्नादिषु स्थिताः" परा०।

ಕಲಿಯುಗದಲ್ಲಿ ಅಧರ್ಮದಿಂದ ಧರ್ಮಕ್ಕೂ ಅನೃತದಿಂದ ಸತ್ಯಕ್ಕೂ ಭೃತ್ಯರಿಂದ ರಾಜರಿಗೂ ಸ್ತ್ರೀಯರಿಂದ ಪುರುಷರಿಗೂ ಅಪಜಯವುಂಟಾಗುವುದು. "धर्मो जितो ह्यधर्मेण जितः सत्योऽनृतेन तु। जिता भृत्यैस्तु राजानः स्त्रीभिश्च पुरुषा जिताः" परा०।

**ಕಲಿಯುಗದಲ್ಲಿ ಉಂಟಾಗುವ ಧರ್ಮಹ್ರಾಸಗಳು:** "सीदन्ति चाग्निहोत्राणि गुरुपूजा प्रणश्यति। कुमार्यश्च प्रसूयन्ते तस्मिन् कलियुगे सदा" परा०।

**ಕಲಿಯುಗದಲ್ಲಿ ವರ್ಜ್ಯ (ತ್ಯಜಿಸಬೇಕಾದ) ಧರ್ಮಗಳು:** ಸಮುದ್ರಯಾನ, ಕಮಂಡಲುಗ್ರಹಣ (ಸಂನ್ಯಾಸ), ದ್ವಿಜರಿಗೆ ಅಸವರ್ಣಸ್ತ್ರೀಯೊಡನೆ ವಿವಾಹ, ದೇವರ (ಭಾವಮೈದುನ) ನಿಂದ ಸುತೋತ್ಪತ್ತಿ, ಮಧುಪರ್ಕದಲ್ಲಿ ಪಶುಮಾಂಸ, ಶ್ರಾದ್ಧದಲ್ಲಿ ಮಾಂಸಭಕ್ಷಣ, ವಾನಪ್ರಸ್ಥಾಶ್ರಮ, ಅಕ್ಷತಕನ್ಯೆಯ ಪುನರ್ವಿವಾಹ, ಬಹಳ ಕಾಲದವರೆಗೂ ಬ್ರಹ್ಮಚರ್ಯೆ, ಮನುಷ್ಯಮೇಧ, ಅಶ್ವಮೇಧ, ಗೋಮೇಧ, ಮಹಾಪ್ರಸ್ಥಾನ ಇವಲ್ಲವೂ ಕಲಿಯುಗದಲ್ಲಿ ವರ್ಜ್ಯಗಳು. "समुद्रयात्रास्वीकारः कमण्डलुविधारणम्। द्विजानामसवर्णासु कन्यासूपयमस्तथा। देवराच्च सुतोत्पत्तिर्मधुपर्के पशोर्वधः।...................................................। इमान् धर्मान् कलियुगे वर्ज्यानाहुर्मनीषिणः" निर्णयसि०। "अग्निहोत्रं गवालम्भं संन्यासं पलपैतृकम्। देवराच्च सुतोत्पत्तिं कलौ पञ्च विवर्जयेत्"।

ಕೃತಯುಗದಲ್ಲಿ ಧ್ಯಾನದಿಂದಲೂ ತ್ರೇತಾಯುಗದಲ್ಲಿ ಯಜ್ಞದಿಂದಲೂ ದ್ವಾಪರಯುಗದಲ್ಲಿ ಅರ್ಚನೆಯಿಂದಲೂ ಹೊಂದಬಹುದಾದ ಫಲವನ್ನು ಕಲಿಯುಗದಲ್ಲಿ ಕೇಶವ ನಾಮಸಂಕೀರ್ತನದಿಂದ ಹೊಂದಬಹುದು. "ध्यायन् कृते यजन् यज्ञैस्त्रेतायां द्वापरेऽर्चयन्। यदाप्नोति तदाप्नोति कलौ संकीर्त्य केशवम्" विष्णुपु०। ಅಲ್ಪೋಪಾಯದಿಂದ ಮುಕ್ತಿಯನ್ನು ಅಪೇಕ್ಷಿಸುವುದಾದರೆ ಕಲಿಯುಗದಲ್ಲಿ ಗಂಗಾನದಿಯನ್ನಾಶ್ರಯಿಸಬೇಕು. "भक्तिमुक्तिफलप्रेप्सुरल्पोपायेन चेन्नरः। तीर्थान्येवाश्रयेद्विद्वान् कलौ गङ्गां विशेषतः" स्कान्द०। 2. ಕಲಿಯುಗದ ಅಭಿಮಾನಿದೇವತೆ.

**ಈ ದೇವತೆಯ ಉತ್ಪತ್ತಿ ಮೊದಲಾದ ವಿವರ:** ಚತುರ್ಮುಖನು ಪ್ರಳಯಕಾಲದ ಕೊನೆಯಲ್ಲಿ ತನ್ನ ಪೃಷ್ಠದೇಶದಿಂದ ಮಲಿನವಾಗಿಯೂ ಘೋರರೂಪಿಯಾಗಿಯೂ ಇರುವ ಒಂದು ಪಾತಕವನ್ನು ಸೃಷ್ಟಿಸಿದನು. ಅದೇ ಅಧರ್ಮ. ಈ ಅಧರ್ಮದ ಹೆಂಡತಿ ಮಿಥ್ಯೆ. ಮಿಥ್ಯೆಯ ಮಗ ದಂಭ. ದಂಭನು ತನ್ನ ತಂಗಿಯಾದ ಮಾಯೆಯಲ್ಲಿ ಲೋಭನೆಂಬ ಪುತ್ರನನ್ನೂ ನಿಕೃತಿಯೆಂಬ ಪುತ್ರಿಯನ್ನೂ ಪಡೆಯುವನು. ಇವರಿಬ್ಬರಲ್ಲಿ ಕ್ರೋಧನು ಜನಿಸುವನು. ಕ್ರೋಧನು ತಂಗಿಯಾದ ಹಿಂಸೆಯಲ್ಲಿ ಕಲಿಯೆಂಬ ಮಗನನ್ನು ಪಡೆಯುವನು. ಈ ಕಲಿಯ ಅವತಾರಕ್ರಮವು ಈ ರೀತಿಯಿರುವುದರಿಂದ ಜಗತ್ತಿನಲ್ಲಿ ನಡೆಯುತ್ತಿರುವ ಮತ್ತು ಮುಂದೆ ನಡೆಯಬಹುದಾದ ಅಧರ್ಮ, ಅನ್ಯಾಯ, ಪಾಪಕೃತ್ಯ ಹಿಂಸಾಕೃತ್ಯಗಳಿಗೆಲ್ಲಾ ಈ ಕಲಿಯೇ ಕಾರಣನೆಂದು ಹೇಳಬೇಕಾಗಿಯೇ ಇಲ್ಲ. "प्रलयान्ते जगत्स्रष्टा ब्रह्मा लोकपितामहः। ससर्ज घोरं मलिनं पृष्ठदेशात्स पातकम्।

स चाधर्म इति ख्यातस्तस्य वंशानुकीर्तनात्। श्रवणात्स्मरणाल्लोकः सर्वपापैः प्रमुच्यते। अधर्मस्य प्रिया भार्या मिथ्या मार्जारलोचना। तस्याः पुत्रोऽतितेजस्वी दम्भः परमकोपनः। स मायायां भगिन्यां तु लोभं पुत्रं च कन्यकाम्। निकृतिं जनयामास तयोः क्रोधः सुतोऽभवत्। स हिंसायां भगिन्यां तु जनयामास तं कलिम्" कल्किपु०। ಕಲಿ ಪುರುಷನು ದಮಯಂತಿಯ ಸ್ವಯಂವರಕ್ಕೆಂದು ಹೋಗುತ್ತಿದ್ದಾಗ ಇಂದ್ರನಿಂದ ನಳದಮಯಂತಿಯರ ಸ್ವಯಂವರ ವಿಷಯವನ್ನು ತಿಳಿದು ದೇವತೆಗಳು ಎಷ್ಟು ಹೇಳಿದರೂ ಕೇಳದೆ ನಳನು ದಮಯಂತಿಯೊಡನೆ ಸುಖವಾಗಿರದಂತೆ ಮಾಡುವೆನೆಂದು ಪ್ರತಿಜ್ಞೆ ಮಾಡಿ ನಳಚಕ್ರವರ್ತಿಯ ಶರೀರವನ್ನು ಪ್ರವೇಶಿಸಲು ಸಮಯ ಕಾಯುತ್ತಿದ್ದನು. ಒಂದು ದಿನ ನಳನು ಕಾಲುಗಳನ್ನು ಸರಿಯಾಗಿ ತೊಳೆದುಕೊಳ್ಳದೆ ಸಂಧ್ಯಾವಂದನೆಗೆ ಕುಳಿತಿರಲು ಇವನು ಆ ಕೂಡಲೇ ಅವನ ಶರೀರವನ್ನು ಪ್ರವೇಶಿಸಿ ಪುಷ್ಕರನಲ್ಲಿಗೆ ಹೋಗಿ ನಳನೊಡನೆ ಜೂಜಾಡಿದರೆ ತಾನು ಗೆಲ್ಲಿಸುವೆನೆಂದು ಹೇಳಿ ನಳನನ್ನು ಜೂಜಿನಲ್ಲಿ ಸೋಲಿಸಿದನು. ಸೋತ ನಳನು ರಾಜ್ಯಭ್ರಷ್ಟನಾಗಿ ಪತ್ನಿಯೊಡನೆ ಅರಣ್ಯಕ್ಕೆ ಹೋಗಿ ಅನೇಕ ಕಷ್ಟಗಳನ್ನೂ ಅನುಭವಿಸಬೇಕಾಯಿತು. भा० वन० ५८, ५९।

ಶ್ರೀಕೃಷ್ಣನ ನಿರ್ಯಾಣಾನಂತರ ಧರ್ಮವೆಲ್ಲಾ ಕ್ಷಯಿಸಿ ಹೋಗುತ್ತಿರಲು ಭೂದೇವಿಯು ಬಹಳ ದುಃಖಾಕ್ರಾಂತೆಯಾಗಿದ್ದಳು. ಇದೇ ಸಮಯ ನೋಡಿ ಕಲಿಪುರುಷನು ಧರ್ಮಪುರುಷನನ್ನು ಕಾಲಿನಿಂದ ಒದೆಯುತ್ತಿರುವಲ್ಲಿ ಪರೀಕ್ಷಿದ್ರಾಜನು ಕಲಿಯನ್ನು ನಿಗ್ರಹಿಸಲು ಆಯುಧವನ್ನು ಎತ್ತಲು ಕಲಿಯು ಹೆದರಿ ಪರೀಕ್ಷಿತ್ತಿನ ಕ್ಷಮೆ ಬೇಡಿ ಆ ದೇಶದಿಂದ ಓಡಿಹೋದನು. भाग० १-१७।

ಇವನ ಹಾವಳಿಯನ್ನು ತಡೆಯಲಾರದೆ ಭೂದೇವಿಯು ಶ್ರೀಮನ್ನಾರಾಯಣನಲ್ಲಿ ಮೊರೆಯಿಡಲು ನಾರಾಯಣನು ಕಲ್ಕಿರೂಪದಿಂದ ಅವತರಿಸಿ ಕಲಿಯನ್ನು ನಿಗ್ರಹಿಸುವನು. भा० वन० १५१। 3. ವಿಭೀತಕವೃಕ್ಷ, ತಾರೆಗಿಡ. ನಳನ ಶರೀರವನ್ನು ಪ್ರವೇಶಿಸಲು ಸಮಯ ಕಾಯುತ್ತಿದ್ದ ಕಲಿಗೆ ಈ ಮರವು ಆಶ್ರಯವಾಗಿದ್ದುದರಿಂದ ಈ ಹೆಸರು. "विभीतकमधिष्ठाय तथाभूतेन तिष्ठता। तेन भीमभुवोऽभीकः स राजर्षिरधर्षि न। तमालम्बनमासाद्य वैदर्भीनिषधेशयोः। कलुषं कलिरन्विष्यन् अवात्सीद्वत्सरान् बहून्" नैष० १७-२१६, १७। 4. ಕಲಹ, ಜಗಳ. "वसतिमुपगतेन धाम्नि तस्याः शठ कलिरेष महांस्त्वयाद्य दत्तः" माघ० ७-५५। 5. ಶೂರ, ಪರಾಕ್ರಮಿ. 6. ಯುದ್ಧ. 7. ಶರ, ಬಾಣ. (स्त्री०) 8. ಮೊಗ್ಗು, ಅರಳದ ಹೂವು.

"कलिः स्त्री कलिकायां ना शराजिकलहे युगे" मेदि०। "कलिर्विभीतके शूरे विवादेऽन्त्ययुगे युधि" हेम०।

**कलिका ಕಲಿಕಾ** (स्त्री०) 1. ಕೋರಕ, ಮೊಗ್ಗು, ಅರಳದ ಹೂವು. कलिरेव स्वार्थे "कन्"। "मुहुरुपहसितामिवालिनादैर्वितरसि नः कलिकां किमर्थमेनाम्" माघ० ७-५५। "चूतानां चिरनिर्गतापि कलिका बध्नाति न स्वं रजः" शाकु० ६-४। 2. ವೀಣೆಯ ಮೂಲಭಾಗ.

**कलिकार ಕಲಿಕಾರ** (पु०) 1. ನಾರದಮಹರ್ಷಿ. कलिं कलहं करोति—डु कृञ् (करणे) "अण्" (३-२-१)। 2. ನದಿಯಲ್ಲಾಡುವ ಕುಕ್ಕುಟಿಯೆಂಬ ಒಂದು ಪಕ್ಷಿ. कलिकामृच्छति—ऋ (गतौ) "अण्" (३-२-१)। स्त्रियाम् जाति० "ङीष्" (४-१-६३)। **–कारी –ಕಾರೀ.** 3. ತಪಸಿಗಿಡ. (वि०) 4. ಕಲಹವನ್ನುಂಟುಮಾಡುವ. 5. ಮೊಗ್ಗನ್ನು ಪಡೆಯುವ. कलिं करोति कलिकां ऋच्छति वा। "ण्वुल्" (३-१-१३३)। **–कारकः –ಕಾರಕಃ.**

**कलिकाल ಕಲಿಕಾಲ** (पु०) ಕಲಿಪುರುಷನ ಕಾಲ, ಕಲಿಯುಗದ ಕಾಲ.

**कलिकुञ्चिका ಕಲಿಕುಂಚಿಕಾ** (स्त्री०) ಗಂಡನ ಕಿರಿಯ ಸಹೋದರಿ, ಗಂಡನ ತಂಗಿ, ನಾದಿನಿ.

**कलिङ्ग ಕಲಿಂಗ** (पु० ಬ० ವ०) 1. ಕಳಿಂಗ ದೇಶ. 2. ಕಳಿಂಗ ದೇಶದ ಜನರು. "जगन्नाथात् समारभ्य कृष्णातीरान्तगं प्रिये। कलिङ्गदेशः संप्रोक्तो वाममार्गपरायणः"। "उत्कलादर्शितपथः कलिङ्गाभिमुखो ययौ" रघु० ४-३८। (पु०) 3. ಕೆರೆ ನದಿಗಳ ನೀರಿನೊಳಗೆ ಆಟವಾಡುವ ಕುಕ್ಕುಟಿಯೆಂಬ ಒಂದು ಹಕ್ಕಿ. के मूर्ध्नि लिङ्गमस्य। ಈ ಹಕ್ಕಿಯ ತಲೆಯಮೇಲೆ ಮೊಗ್ಗಿನ ಆಕಾರದ ಪಳದಿಯ ಗುರುತೊಂದಿರುವುದರಿಂದ ಈ ಹೆಸರಾಯಿತು. 4. ತಪಸಿಗಿಡ. (पुन०) 5. ಕೊಡಸಿಗೆಯ ಹಣ್ಣು. (स्त्री०) **कलिङ्गा ಕಲಿಂಗಾ.** 6. ಉತ್ತಮ ಹೆಂಗುಸು. "कलिङ्गः पूतिकरजे धूम्याटे भूम्नि नीवृति। न द्वयोः कौटजफले महिलायां तु योषिति" मेदि०।

**कलित ಕಲಿತ** (वि०) 1. ತಿಳಿಯಲ್ಪಟ್ಟ. कल (गतौ) "क्तः" (३-२-१०२)। 2. ಅಂಗೀಕರಿಸಲ್ಪಟ್ಟ. "स्वरभेदमुपैतु या कथं कलितानल्पमुखारवा न वा" नैष० २-९८। 3. ಹೇಳಲ್ಪಟ್ಟ. 4. ಮಾಡಲ್ಪಟ್ಟ. "लवङ्गमालाकलितावतंसास्ते नारिकेलान्तरपः पिबन्तः" माघ० ३-८१। 5. ಎಣಿಸಲ್ಪಟ್ಟ. कल (संख्याने) "क्तः"

(३-२-१०२)। 6. ಹೊಂದಲ್ಪಟ್ಟ, ಪಡೆಯಲ್ಪಟ್ಟ. 7. ಒಡೆಯಲ್ಪಟ್ಟ, ಬೇರ್ಪಡಿಸಲ್ಪಟ್ಟ. 8. ಕಟ್ಟಲ್ಪಟ್ಟ.

**कलिद्रुम ಕಲಿದ್ರುಮ** (पुं०) ವಿಭೀತಕವೃಕ್ಷ, ತಾರೆಗಿಡ. कलेराश्रयः द्रुमः। ನಳಚಕ್ರವರ್ತಿಯ ಶರೀರವನ್ನು ಪ್ರವೇಶಿಸಲು ಸಮಯ ಕಾಯುತ್ತ ಈ ಮರದಲ್ಲಿ ಕಲಿಯು ಕುಳಿತಿದ್ದರಿಂದ ಈ ಹೆಸರು. "कलिद्रुमः परं नासीदासीत्कल्पद्रुमोऽपि सः" नैष० १७-२१३।

**कलिन्द ಕಳಿಂದ** (पुं०) 1. ಒಂದು ಬೆಟ್ಟ. कलिं द्यति— दो (अवखण्डने) "खच्"। मुमागमः। "कलिन्दगिरिनन्दिनीतटसुरद्रुमालम्बिनी मदीयमतिचुम्बिनी भवतु कापि कादम्बिनी" रसगं०। 2. ತಾರೆಗಿಡ.

**कलिन्दकन्या ಕಳಿಂದಕನ್ಯಾ** (स्त्री०) ಕಳಿಂದಗಿರಿಯ ಮಗಳು, ಯಮುನಾ ನದಿ. कलिन्दस्य कन्या। "कलिन्दकन्या मधुरां गतापि गङ्गोर्मिसंसक्तजलेव भाति" रघु० ६-४८। ಇದೇ ಅರ್ಥದಲ್ಲಿ **कलिन्दजा ಕಳಿಂದಜಾ, –तनया –ತನಯಾ, –नन्दिनी ನಂದಿನೀ, –सुता –ಸುತಾ** ಇತ್ಯಾದಿ.

**कलिप्रिय ಕಲಿಪ್ರಿಯ** (पुं०) ಕಲಹವೇ ಪ್ರಿಯವಾಗುಳ್ಳ ನಾರದಮಹರ್ಷಿ. कलिः कलहः प्रियोऽस्य।

**कलिमारक ಕಲಿಮಾರಕ** (पुं०) ತಪಸಿಗಿಡ. कलिं मारयति—मृङ् (प्राणत्यागे) "ण्वुल्" (३-१-१३३)।

**कलियुग ಕಲಿಯುಗ** (नं०) ಕಲಿರೂಪವಾದ ಒಂದು ಯುಗ, ಕಲಿಪುರುಷನ ಕಾಲ. कलेर्युगम्। [ಕಲಿಯುಗದ ಪ್ರಮಾಣ ಮುಂತಾದುವುಗಳಿಗೆ "अब्द" ಮತ್ತು "कलि" ಪದಗಳಲ್ಲಿ ನೋಡಿ]. "अन्ये कृतयुगे धर्मास्त्रेतायां द्वापरेऽपरे। अन्ये कलियुगे नृणां युगह्रासानुसारतः" मनु० १-८५।

**कलिल ಕಲಿಲ** (नं०) 1. ಕಾಲುಷ್ಯ. कल (गतौ संख्याने च) "इलच्" (उ० १-५४)। "यदा ते मोहकलिलं बुद्धिर्व्यतितरिष्यति" गीता २-५२। 2. ದೊಡ್ಡ ರಾಶಿ. (वि०) 3. ಮಿಶ್ರವಾದ, ಬೆರೆತಿರುವ. "लोकालोकी कलोऽकल्ककलिलौऽलिकुलालकः" माघ० १९-९८।

**कलिहारी ಕಲಿಹಾರೀ** (स्त्री०) ನೀರುಹಿಪ್ಪಲಿ. कलिं हरति — हृञ् (हरणे) "अण्" (३-२-१)। "ङीष्" (४-१-४१)।

**कलुष ಕಲುಷ** (पुंस्त्री०) 1. ಮಹಿಷ, ಎಮ್ಮೆ. लुष (हिंसायाम्) "कः" (३-१-१३५)। कस्य जलस्य लुषः घातकः। स्त्रियाम् "ङीष्" (४-१-६३)। **–षी –ಷೀ.** 2. ಶ್ವಪಾಕಿಯಲ್ಲಿ ಕ್ಷತ್ರಿಯನಿಗೆ ಜನಿಸಿದ ಮಗ. "जरन्तः कलुषः पोत्री वीरस्कन्धो रजस्वलः" "श्वपाकी कलुषं सूता कीलुषं घर्घरी मिषम्" वैज०। (नं०) 3. ಪಾಪ. 4. ಕೊಳೆ, ಮಲ. 5. ಕೆಸರು. 6. ಬಗ್ಗಡ, ಕಶ್ಮಲದ ನೀರು. कल (संख्याने शब्दे च) "उषच्" (उ० ४-७५)। "ऊतं कलुषमाविलम्" वैज०। 7. ಕೋಪ. (वि०)8. ಪಾಪವುಳ್ಳ. 9. ಸ್ವಚ್ಛವಲ್ಲದ, ಬಗ್ಗಡವಾದ. "लोलत्वादपहरतां तदङ्गरागं संजज्ञे स कलुष आशयो जलानाम्" माघ० ८-४७। 10. ಕೊಳೆಯಿಂದ ಕೂಡಿದ. 11. ಅಸಮಾಧಾನದಿಂದ ಕೂಡಿದ. 12. ಅಸಮರ್ಥವಾದ. "भावावबोधकलुषा दयितेव रात्रौ निद्रा चिरेण नयनाभिमुखी बभूव" रघु० ५-६४। 13. ನಿಂದಿತವಾದ, ದುಷ್ಟವಾದ. "त्वां प्रत्यकस्मात्कलुषप्रवृत्तावस्त्येव मन्युर्भरताग्रजे मे" रघु० १४-७३।

**कलुषता ಕಲುಷತಾ** (स्त्री०) 1. ಪಾಪದಿಂದ ಕೂಡಿರುವಿಕೆ. 2. ಕೆಸರಾಗಿರುವಿಕೆ. 3. ಸ್ವಚ್ಛವಾಗಿಲ್ಲದಿರುವಿಕೆ. कलुषस्य भावः "तल्" (५-१-११९)। "त्वः" **कलुषत्वम् ಕಲುಷತ್ವಮ್.**

**कलुषमति ಕಲುಷಮತಿ** (वि०) 1. ಕೆಟ್ಟ ಮನಸ್ಸುಳ್ಳ, ನೀಚಬುದ್ಧಿಯುಳ್ಳ. 2. ಅಸಮಾಧಾನಗೊಂಡ ಮನಸ್ಸುಳ್ಳ. कलुषा मतिर्यस्य।

**कलुषात्मन् ಕಲುಷಾತ್ಮನ್** (वि०) 1. ಕೆಟ್ಟ ಹೃದಯವುಳ್ಳ, ನೀಚ ಮನಸ್ಸುಳ್ಳ. कलुष आत्मा यस्य। 2. ಅಸಮಾಧಾನ ಹೊಂದಿದ, ಕಲಕಿದ ಹೃದಯವುಳ್ಳ.

**कलुषित ಕಲುಷಿತ** (वि०) 1. ಅಸಮಾಧಾನಗೊಂಡಿರುವ. 2. ಸ್ವಚ್ಛವಾಗಿಲ್ಲದ, ಬಗ್ಗಡವಾಗಿರುವ. 3. ನಿಂದಿತ, ದೂಷಿತ. कलुषोऽस्य सञ्जातः "इतच्" (५-२-३६)।

**कलुषीकृत ಕಲುಷೀಕೃತ** (वि०) 1. ಕಲಕಲ್ಪಟ್ಟ, ಕೆರಳಿಸಲ್ಪಟ್ಟ. 2. ಅಸಮಾಧಾನಗೊಳಿಸಲ್ಪಟ್ಟ, ಸಿಟ್ಟುಗೊಳಿಸಲ್ಪಟ್ಟ. 3. ಬಗ್ಗಡವಾಗಿ ಮಾಡಲ್ಪಟ್ಟ. अकलुषः कलुषः कृतः "च्विः" (५-४-५०)। दीर्घः (७-४-२६)। "विवर्तयन् मदकलुषीकृते दृशौ कराहतक्षितिकृतभैरवारवः" माघ० १७-१३।

**कलेबर ಕಳೇಬರ** (नं०) 1. ದೇಹ, ಶರೀರ, ಮೈ. कले शुक्रधातौ वरं श्रेष्ठम्। सप्तम्या "अलुक्" (६-३-९)। "यं यं वापि स्मरन् भावं त्यजत्यन्ते कलेबरम्" गीता। "शरीरे जर्जरीभूते व्याधिग्रस्ते

कलेबरे। औषधं जाह्नवीतोयं वैद्यो नारायणो हरिः"। 2. ಗುಗ್ಗುಳ, ಲೋಬಾನ, ಧೂಪದ ವಾಸನೆಯ ಪುಡಿ.

**कल्क ಕಲ್ಕ** (ಪುಂನಂ) 1. ಕಪಟ, ಛಲ, ಠಕ್ಕು, ಬೂಟಾಟಿಕೆ. 2. ತಾರೆಗಿಡ. 3. ಎಣ್ಣೆ ತುಪ್ಪ ಇವುಗಳ ಗಷ್ಟು. 4. ಕಿವಿಯ ಮಲ, ಗುಗ್ಗೆ. 5. ಪಾಪ. कल (शब्दसंख्यानयोः) "कः" (ಉಂ ೩-೪೦)। 6. ವಿಷ್ಠೆ, ಮಲ, ಪುರೀಷ, ಅಮೇಧ್ಯ. 7. ಚೂರ್ಣ, ಪುಡಿ. "तां लोध्रकल्केन हृताङ्गतैलामाश्यानकालेयकृताङ्गरागाम्" ಕುಮಾಂ ೭-೯। (ವಿಂ) 8. ಪಾಪಾತ್ಮ, ಪಾಪಿಷ್ಠ. "कल्कोऽस्त्री घृततैलादिशेषे दम्भे विभीतके। विट्किट्टयोश्च पापे च त्रिषु पापाशये पुनः" मेदि॰।

**कल्कन ಕಲ್ಕನ** (ನಂ) ವಂಚನೆ, ಮೋಸ. कल्क + णिच् भावे "ल्युट्" (೩-೩-೧೧೫)।

**कल्कफल ಕಲ್ಕಫಲ** (ನಂ) ದಾಳಿಂಬೆ ಹಣ್ಣು. कल्कस्य विभीतकस्य फलमिव फलमस्य।

**कल्किन् ಕಲ್ಕಿನ್** (ಪುಂ) ಮಹಾವಿಷ್ಣುವಿನ ಹತ್ತನೆಯ ಅವತಾರ, ಕಲ್ಕ್ಯವತಾರ. कल्कोऽस्त्यस्य हार्यतया "इनिः" (೫-೨-೧೧೫)। [ಕಲಿಯುಗದ ಕೊನೆಯಲ್ಲಿ ಅಧರ್ಮವು ಹೆಚ್ಚಿದಂತೆಲ್ಲಾ ಕಲಿಮಹಾಪುರುಷನ ಅನುಯಾಯಿಗಳಾದವರು ತಾಯಿತಂದೆಗಳನ್ನೂ ಪೀಡಿಸುವರು. ದ್ವಿಜರು ವೇದಶೂನ್ಯರಾಗುವರು. ಜನರೆಲ್ಲರೂ ಕ್ರೂರವೃತ್ತಿಯುಳ್ಳವರಾಗುವರು. ಪರಸ್ತ್ರೀಲೋಲುಪರಾಗಿ ಕೇವಲ ಕಾಮಾಸಕ್ತರಾಗಿಯೂ, ಉದರಂಭರಣಪರಾಯಣರಾಗಿಯೂ, ಮಾಂಸಭೋಜಿಗಳಾಗಿಯೂ, ಪ್ರಜಾವಿಧ್ವಂಸಕರಾಗಿಯೂ, ಇತರರ ಸ್ವತ್ತನ್ನು ಅಪಹರಿಸುವವರಾಗಿಯೂ, ಸ್ತ್ರೀಯರೆಲ್ಲರೂ ತಮ್ಮ ಪತಿಗಳನ್ನು ತಿರಸ್ಕರಿಸಿ ಪರಪುರುಷರೊಡನೆ ವಿಹರಿಸುವವರಾಗಿಯೂ ಆಗುವರು. ರಾಜರೆಲ್ಲರೂ ಪ್ರಜೆಗಳ ಕಷ್ಟಸುಖಗಳನ್ನು ಲಕ್ಷಿಸದೆ ನಾನಾ ರೀತಿಯಲ್ಲಿ ಓಡಿಸುವವರಲ್ಲದೆ ಅವರ ರಕ್ತವೆಲ್ಲವನ್ನೂ ಹಿಂಡುವರು. ದುಷ್ಟರಾಜರ ಹಿಂಸೆಯಿಂದ ಜನರೆಲ್ಲರೂ ದೇಶಭ್ರಷ್ಟರಾಗಿ ಓಡಿಹೋಗುವರು. ಕಲಿಯುಗದ ಪ್ರಥಮಪಾದದಲ್ಲಿ ಪ್ರಜೆಗಳು ದೇವರನ್ನು ನಿಂದಿಸುವರು. ದ್ವಿತೀಯಪಾದದಲ್ಲಿ ದೇವರ ಹೆಸರನ್ನೇ ಮರೆತುಬಿಡುವರು. ತೃತೀಯಪಾದದಲ್ಲಿ ವರ್ಣಸಂಕರವಾಗುವುದು. ನಾಲ್ಕನೆಯ ಪಾದದಲ್ಲಿ ಜಾತಿಭೇದವೆಲ್ಲಾ ಅಳಿದುಹೋಗಿ ಒಂದೇ ಜಾತಿಯಾಗುವುದು. ವೇದವೆಲ್ಲಾ ನಶಿಸಿಹೋಗಿ ಹವ್ಯಕವ್ಯಗಳೂ ಯಜ್ಞಯಾಗಗಳೂ ಸಂಪೂರ್ಣವಾಗಿ ನಿಂತು ಹೋದಮೇಲೆ ದೇವತೆಗಳೆಲ್ಲರೂ ಹವಿಸ್ಸೇ ಇಲ್ಲದವರಾಗುವರು. ಈ ರೀತಿ ಲೋಕವೆಲ್ಲಾ ಅಧರ್ಮಭೂಯಿಷ್ಠವಾಗಿ ಮ್ಲೇಚ್ಛಮಯವಾಗುವುದರಿಂದ ದುಷ್ಟರಾಜರ ಹಾವಳಿಯನ್ನು ತಡೆಯಲಾರದೆ ಜನರೆಲ್ಲರೂ ತಡೆಯಲಶಕ್ಯವಾದ ನಾನಾ ವಿಧವಾದ ತೊಂದರೆಗಳನ್ನನುಭವಿಸುತ್ತಿರುವಾಗ ಚತುರ್ಮುಖ ಮತ್ತು ದೇವತೆಗಳೊಡನೆ ಭೂದೇವಿಯು ಈ ಅಧರ್ಮ ರಾಜ್ಯಭಾರವನ್ನು ಕೊನೆಗಾಣಿಸಬೇಕೆಂದು ಮಹಾವಿಷ್ಣುವಿನಲ್ಲಿ ಮೊರೆಯಿಡಲು ವಿಷ್ಣುವು ಶಂಭಳ ಗ್ರಾಮದಲ್ಲಿ ವಿಷ್ಣುಯಶನೆಂಬ ಬ್ರಾಹ್ಮಣನೊಬ್ಬನ ಮನೆಯಲ್ಲಿ "ಕಲ್ಕಿ"ಯೆಂಬ ಅಭಿಧಾನದಿಂದ ಅವತರಿಸಿ ಶೌರ್ಯ ಧೈರ್ಯ ಸ್ಥೈರ್ಯಾದಿಗಳಿಂದ ಪರಿಶೋಭಿಸುತ್ತಾ ಖಡ್ಗಧಾರಿಯಾಗಿ ಅಶ್ವಾರೂಢನಾಗಿ ಹೊರಟು ಕೋಟಿಗಟ್ಟಲೆ ದುಷ್ಟ ಮ್ಲೇಚ್ಛ ಸಮೂಹವನ್ನು ಸಂಹರಿಸಿ ಧರ್ಮಸಂರಕ್ಷಣೆಮಾಡಿ ಜಗತ್ತಿನಲ್ಲಿ ಶಾಂತಿ ಸೌಖ್ಯಗಳನ್ನುಂಟುಮಾಡಿ ಪ್ರಜೆಗಳನ್ನು ಸಂರಕ್ಷಿಸುವನು.]

**कल्किपुराण ಕಲ್ಕಿಪುರಾಣ** (ನಂ) ಒಂದು ಉಪಪುರಾಣ. [ಈ ಪುರಾಣದಲ್ಲಿ ಪ್ರತಿಪಾದ್ಯವಿಷಯ : ಕಲಿಯುಗದಲ್ಲಿ ಆಚಾರವ್ಯವಹಾರಗಳ ಅಳಿವು, ದೇವತೆಗಳು ಭೂದೇವಿಯೊಡನೆ ಬ್ರಹ್ಮಲೋಕಕ್ಕೆ ಹೋಗುವುದು, ಬ್ರಹ್ಮಲೋಕ ವರ್ಣನೆ, ಬ್ರಹ್ಮನಲ್ಲಿ ಕಲಿಯ ದೋಷಗಳನ್ನು ತಿಳಿಸುವುದು, ಬ್ರಹ್ಮನೊಡನೆ ದೇವತೆಗಳು ಗೋಲೋಕಕ್ಕೆ ತೆರಳುವುದು, ಮಹಾವಿಷ್ಣುವು ಇವರ ಮೊರೆಯನ್ನು ಕೇಳಿ ಶಂಭಳ ಗ್ರಾಮದಲ್ಲಿ ಕಲ್ಕಿರೂಪದಿಂದ ಅವತರಿಸುವುದಾಗಿಯೂ, ದುಷ್ಟನಿಗ್ರಹ ಶಿಷ್ಟಪರಿಪಾಲನೆ ಮಾಡುವುದಾಗಿಯೂ ಆಶ್ವಾಸನೆ ಕೊಡುವುದು, ಕಲ್ಕಿಯ ಅವತಾರ, ಕಲ್ಕಿಯ ಉಪನಯನ, ಗುರುವಿನಿಂದ ಧರ್ಮೋಪದೇಶ, ಸಿಂಹಳದಲ್ಲಿ ಪದ್ಮಾವತೀ ರೂಪದಿಂದ ಜನಿಸಿದ ಲಕ್ಷ್ಮಿಯೊಡನೆ ಕಲ್ಕಿಯ ವಿವಾಹ, ಶಂಕರನಿಂದ ಕಲ್ಕಿಗೆ ಖಡ್ಗ, ಬಾಣ, ಕುದುರೆಗಳ ಪ್ರಾಪ್ತಿ, ಕಲಿಪುರುಷನ ದೌಷ್ಟ್ಯವನ್ನು ಕಂಡು ಕ್ರೋಧಾವಿಷ್ಟನಾದ ಕಲ್ಕಿಯು ಅಶ್ವವನ್ನೇರಿ ಖಡ್ಗವನ್ನು ಹಿಡಿದು ದುಷ್ಟರಾದ ಮ್ಲೇಚ್ಛಯವನರೆಲ್ಲರನ್ನೂ ಯುದ್ಧದಲ್ಲಿ ಸಂಹರಿಸಿ ಜನರ ಕಷ್ಟಗಳನ್ನು ಪರಿಹರಿಸಿ ಜನರಿಗೆ ಶಾಂತಿಸೌಖ್ಯಗಳನ್ನು ಕಲ್ಪಿಸುವುದು, ಬಳಿಕ ಕೃತಯುಗಾರಂಭ, ಇತ್ಯಾದಿ.]

**कल्प ಕಲ್ಪ** (ಪುಂ) 1. ಜಗತ್ತಿನ ಸೃಷ್ಟಿಕಾಲ, ಬ್ರಹ್ಮನು ಜಗತ್ತನ್ನು ಸೃಷ್ಟಿಸುವ ಕಾಲ, ಬ್ರಹ್ಮನ ಹಗಲು. 2. ಬ್ರಹ್ಮನ ರಾತ್ರಿ, ಜಗತ್ತಿನ ವ್ಯಾಪಾರವಿಲ್ಲದ ಪ್ರಳಯಕಾಲ. कल्पते स्वक्रियायै समर्थः असमर्थश्च भवति— कृपू (सामर्थ्ये) अधि॰ "घञ्" (೩-೩-೧೨೧)। "यदा स देवो जागर्ति तदेदं चेष्टते जगत्। यदा स्वपिति शान्तात्मा तदा सर्वं निमीलति" मनु॰ १-५२।

"कल्पस्यान्ते मारुतेनोपनुन्नाश्चेलुश्चण्डं गण्डशैला इवेभाः" माघ० १८-६।

ಚತುರ್ಮುಖನ ಒಂದು ಹಗಲಿಗೂ ಅದೇ ಪ್ರಮಾಣವುಳ್ಳ ಒಂದು ರಾತ್ರಿಗೂ ಕಲ್ಪವೆಂದು ಹೆಸರು. ಚಾಂದ್ರಮಾನದಲ್ಲಿ ಮನುಷ್ಯರ ಒಂದು ತಿಂಗಳು ಪಿತೃ ದೇವತೆಗಳಿಗೆ ಒಂದು ದಿವಸ. ಸೌರಮಾನದಲ್ಲಿ ಮನುಷ್ಯರ ಒಂದು ವರ್ಷವು ದೇವತೆಗಳಿಗೆ ಒಂದು ದಿವಸ. ಈ ರೀತಿ 43,20,000 ಮಾನುಷ ವರ್ಷಗಳು ಅಥವಾ 12.000 ದೇವತೆಗಳ ವರ್ಷಗಳು ಕಳೆದರೆ ಒಂದು ಚತುರ್ಯುಗವಾಗುವುದು. [ಯುಗಮಾನಕ್ಕೆ "अब्द" ಮತ್ತು "कलि" ಪದಗಳಲ್ಲಿ ನೋಡಿ.] ಈ ರೀತಿ ಒಂದು ಸಾವಿರ ಚತುರ್ಯುಗಗಳು (1,20,00.000 ದೇವ ವರ್ಷಗಳು ಅಥವಾ 4,32,00,00,000 ಮಾನುಷ ವರ್ಷಗಳು) ಕಳೆದರೆ ಬ್ರಹ್ಮನಿಗೆ ಒಂದು ಹಗಲಾಗುವುದು. ಮತ್ತು ಇಷ್ಟೇ ಕಾಲದಲ್ಲಿ ಒಂದು ರಾತ್ರಿಯಾಗುವುದು. ಬ್ರಹ್ಮನ ಈ ಹಗಲಿನಲ್ಲಿ ಜಗತ್ತಿನ ಸೃಷ್ಟಿಕಾರ್ಯವೂ ರಾತ್ರಿಯಲ್ಲಿ ಪ್ರಳಯವೂ ನಡೆಯುವುವು. ಈ ಹಗಲು ಮತ್ತು ರಾತ್ರಿಗಳಿಗೆ "**ಕಲ್ಪ**"ವೆಂದು ಹೆಸರು. 8,64,00,00,000 ಸೌರ ವರ್ಷಗಳು ಕಳೆದರೆ ಬ್ರಹ್ಮನಿಗೆ ಒಂದು ಹಗಲೂ ಒಂದು ರಾತ್ರಿಯೂ ಆಗುವುದು. ಬ್ರಹ್ಮನ ಒಂದು ಹಗಲಿನಲ್ಲಿ ಸ್ವರ್ಗಲೋಕದಲ್ಲಿ ಹದಿನಾಲ್ಕು ಮಂದಿ ಇಂದ್ರರೂ ಹದಿನಾಲ್ಕು ಮಂದಿ ಮನುಗಳೂ ರಾಜ್ಯವಾಳುವರು. ರಾತ್ರಿಯ ಕಾಲದಲ್ಲಿ ಪ್ರಳಯವಾಗುವುದು. [ವಿವರಕ್ಕೆ "प्रलय" ಪದದಲ್ಲಿ ನೋಡಿ] ಇಂತಹ 30 ದಿನಗಳಿಗೆ ಬ್ರಹ್ಮನ ಒಂದು ತಿಂಗಳು.

**ಬ್ರಹ್ಮನ ತಿಂಗಳ ಮೂವತ್ತು ದಿನಗಳು:** (1) ಶ್ವೇತ. (2) ನೀಲಲೋಹಿತ, (3) ವಾಸುದೇವ. (4) ರಥಂತರ, (5) ರೌರವ, (6) ಪ್ರಾಣ, (7) ಬೃಹತ್, (8) ಕಂದರ್ಪ, (9) ಸದ್ಯ. (10) ಈಶಾನ, (11) ವ್ಯಾನ, (12) ಸಾರಸ್ವತ, (13) ಉದಾನ, (14) ಗಾರುಡ, (15) ಕೌರ್ಮ, (16) ನಾರಸಿಂಹ, (17) ಸಮಾನ, (18) ಆಗ್ನೇಯ, (19) ಸೋಮ, (20) ಮಾನವ. (21) ತತ್ಪುರುಷ. (22) ವೈಕುಂಠ, (23) ಲಕ್ಷ್ಮಿ. (24) ಸಾವಿತ್ರಿ, (25) ಘೋರ, (26) ವಾರಾಹ, (27) ವೈರಾಜ, (28) ಗೌರಿ (ಈಗಿನ ಶ್ವೇತವರಾಹಕಲ್ಪ), (29) ಮಾಹೇಶ್ವರ ಮತ್ತು (30) ಪಿತೃ ಇವುಗಳಲ್ಲಿ ಕೌರ್ಮಕಲ್ಪವು ಪೂರ್ಣಿಮೆ. ಪಿತೃಕಲ್ಪವು ಅಮಾವಾಸ್ಯೆ. ಈ ಮೂವತ್ತು ಕಲ್ಪಗಳಿಗೆ ಬ್ರಹ್ಮನ ಒಂದು ತಿಂಗಳು. ಇಂತಹ ಹನ್ನೆರಡು ತಿಂಗಳಿಗೆ ಒಂದು ವರ್ಷ. ಇಂತಹ ಒಂದು ನೂರು ವರ್ಷಗಳು ಬ್ರಹ್ಮನ ಆಯುಸ್ಸು. ಬ್ರಹ್ಮನ ಈ ಆಯುಃಪ್ರಮಾಣಕ್ಕೆ ಒಂದು "**ಪರ**" ವೆಂದು ಹೆಸರು. [ಬ್ರಹ್ಮನ ಆಯುಃಪ್ರಮಾಣಕ್ಕೆ "अब्द" ಪದದಲ್ಲಿ ನೋಡಿ.] ಬ್ರಹ್ಮನಿಗೆ ಈಗ ಮೊದಲನೆಯ ಪರಾರ್ಧವು (50 ವರ್ಷಗಳು) ಕಳೆದು ದ್ವಿತೀಯ ಪರಾರ್ಧವು ನಡೆಯುತ್ತಿದೆ. ಈಗ ಬ್ರಹ್ಮನ ಆಯುಸ್ಸಿನಲ್ಲಿ ಐವತ್ತೊಂದನೆಯ ವರ್ಷದ ಮೊದಲನೆಯ ತಿಂಗಳ ಇಪ್ಪತ್ತೈದು ದಿನಗಳು ಕಳೆದು ಇಪ್ಪತ್ತಾರನೆಯ ಹಗಲಿನ ಮೊದಲನೆಯ ಯಾಮವು ನಡೆಯುತ್ತಿರುವುದು. ನಾವು ಈಗ ಶ್ವೇತವರಾಹಕಲ್ಪದಲ್ಲಿದ್ದೇವೆ. 3. ವೈದಿಕ ಕರ್ಮಾನುಷ್ಠಾನದ ವಿಧಿ. ನಿಯಮ. ಕಟ್ಟಳೆ. कल्पते विधीयतेऽसौ —क्लृप् कर्म० "घञ्" (३-३-१९)। "एष वै प्रथमः कल्पः प्रदाने हव्यकव्ययोः। अनुकल्पस्त्वयं ज्ञेयः सदा सद्भिरनुष्ठितः" मनु० ३-१४७। 4. ಶಾಸ್ತ್ರ. "कल्पवित् कल्पयामास वन्यामेवास्य संविधाम्" रघु० १-९४। 5. ನ್ಯಾಯ. "कल्पः शास्त्रे विधौ न्याये संवर्ते ब्रह्मणो दिने" मेदि०। 6. ವಿಕಲ್ಪ, ಎರಡು ವಿಷಯಗಳಲ್ಲಿ ಯಾವುದಾದರೊಂದಕ್ಕೆ ಅವಕಾಶ, ಪಕ್ಷಾಂತರ. 7. ಕಲ್ಪವೃಕ್ಷ. "कल्पो विकल्पे कल्पद्रौ संवर्ते ब्रह्मवासरे। शास्त्रे न्याये विधौ" हेम०। 8. (ವ್ಯಾಕರಣದಲ್ಲಿ) ಸಮಾನಾರ್ಥಕವಾದ ಒಂದು ಪ್ರತ್ಯಯ. "कल्पप्"। विद्वत्कल्पः, ब्राह्मणकल्पः, रात्रिकल्पः, मित्रकल्पः ಇತ್ಯಾದಿ. 9. ಆರು ವೇದಾಂಗಗಳಲ್ಲಿ ಒಂದು. (1) शिक्षा, (2) व्याकरणम्, (3) छन्दः, (4) निरुक्तम्, (5) ज्योतिषम् ಮತ್ತು (6) कल्पः ಇವು ಆರು ವೇದಾಂಗಗಳು. ವೇದಕ್ಕೆ ಛಂದಸ್ಸು ಪಾದಗಳು. ಕಲ್ಪವು ಹಸ್ತಗಳು. ಜ್ಯೋತಿಷವು ಕಣ್ಣುಗಳು. ನಿರುಕ್ತವು ಕಿವಿಗಳು. ಶಿಕ್ಷೆಯು ಮೂಗು. ವ್ಯಾಕರಣವು ಮುಖ. ಆದುದರಿಂದ ಇವು ಆರು ಅಂಗಗಳನ್ನೂ ಅಧ್ಯಯನ ಮಾಡಿದರೆ ವೇದಾಧ್ಯಯನವು ಪೂರ್ಣವಾಗುವುದು. "छन्दः पादौ तु वेदस्य हस्तौ कल्पोऽथ पठ्यते। ज्योतिषामयनं चक्षुः निरुक्तं श्रोत्रमुच्यते। शिक्षा घ्राणं तु वेदस्य मुखं व्याकरणं स्मृतम्। तस्मात्साङ्गमधीत्यैव ब्रह्मलोके महीयते"।

**कल्पक ಕಲ್ಪಕ** (पु०) 1. "कल्प" ಪದದ ಅರ್ಥ. कल्प स्वार्थे "कन्"। 2. ನಾಪಿತ. ಕ್ಷೌರಿಕ. कल्पयति क्षौरादिना वेशं रचयति—क्लृप् (सामर्थ्ये) + णिच् "ण्वुल्" (३-१-१३३)। (वि०) 3. ರಚಿಸುವವನು, ನಿರ್ಮಿಸುವವನು, ತಯಾರಿಸುವವನು. कल्पयति

रचयति—क्लृप् + णिच् "ण्वुल्"। 4. ಕಟುರ್ಗ, ಕಟೋರ.

**कल्पकार ಕಲ್ಪಕಾರ** (पुं०) 1. ಕಲ್ಪಸೂತ್ರಕಾರರು, ಮತ ಧರ್ಮಾಚರಣೆಯ ಸಂಬಂಧವಾದ ವಿಧಿಸೂತ್ರಕಾರರು; ಆಶ್ವಲಾಯನ, ಆಪಸ್ತಂಬ ಮೊದಲಾದವರು. कल्पं कल्पसूत्रं करोति—डु कृञ् (करणे) "अण्" (३-२-१)। 2. ನಾಪಿತ, ಕ್ಷೌರಿಕ. (वि०) 3. ವೇಷಗಳನ್ನು ಹಾಕುವವನು. कल्पं वेशं करोति—डु कृञ् (करणे) "अण्" (३-२-१)। "ण्वुल्" (३-१-१३३)। **-कारकः -ಕಾರಕಃ.**

**कल्पक्षय ಕಲ್ಪಕ್ಷಯ** (पुं०) ಕಲ್ಪಕಾಲದ ಕೊನೆ, ಜಗತ್ತಿನ ಪ್ರಳಯಕಾಲ. कल्पस्य सृष्टिविशेषस्य क्षयो यत्र। "कल्पक्षये पुनस्ते तु प्रविशन्ति परं पदम्" विष्णुपु०।

**कल्पतरु ಕಲ್ಪತರು** (पुं०) 1. ಸಕಲ ಇಷ್ಟಾರ್ಥಪ್ರದವಾದ ಐದು ದೇವವೃಕ್ಷಗಳಲ್ಲೊಂದು. "आसीत्कल्पतरुच्छाया-माश्रिता सुरभिः पथि" रघु० १-७५। 2. ಉದಾರ, ಕೊಡುಗೈಯುಳ್ಳವನು. ಇಷ್ಟಾರ್ಥವನ್ನು ಕೊಡುವುದರಿಂದ ದಾತೃವೂ ಕಲ್ಪತರು. (लाक्ष०)।

**कल्पद्रु ಕಲ್ಪದ್ರು** (पुं०) 1. ಸಕಲ ಇಷ್ಟಾರ್ಥಪ್ರದವಾದ ಕಲ್ಪವೃಕ್ಷ, ಐದು ದೇವತರುಗಳಲ್ಲೊಂದು. 2. ಕೇಶವಕವಿ ರಚಿತವಾದ ಒಂದು ನಿಘಂಟು, ಒಂದು ಶಬ್ದಕೋಶ. ಇದೇ ಅರ್ಥದಲ್ಲಿ **-द्रुमः -ದ್ರುಮಃ.** "अनुकूलयतीन्द्रोऽपि कल्पद्रुमविभूषणैः" कुमा० २-३९। **-पादपः -ಪಾದಪಃ.** "मृषा न चक्रेऽल्पितकल्पपादपः" नैष० १-१५। **-वृक्षः -ವೃಕ್ಷಃ, -शाखी -ಶಾಖೀ** ಇತ್ಯಾದಿ.

**कल्पन ಕಲ್ಪನ** (न०) 1. ರಚನೆ. ನಿರ್ಮಾಣ. 2. ಮಾಡುವಿಕೆ. ಸಿದ್ಧಪಡಿಸುವಿಕೆ, ಏರ್ಪಡಿಸುವಿಕೆ. क्लृप् (सामर्थ्ये) + णिच् भावे "ल्युट्" (३-३-११५)। 3. ಛೇದನ, ಕತ್ತರಿಸುವಿಕೆ. 4. ಊಹಿಸುವಿಕೆ, ಶಂಕಿಸುವಿಕೆ. 5. ಕಲ್ಪಿಸಿ ಹೇಳುವಿಕೆ, ಇಲ್ಲದುದನ್ನು ಸೃಷ್ಟಿಸಿ ಹೇಳುವಿಕೆ. ಆರೋಪಣೆ. 6. ಕಲ್ಪಿತಕಥೆ, ಕಟ್ಟುಕಥೆ. 7. ಅನುಮಾನ ಅಥವಾ ಅರ್ಥಾಪತ್ತಿಪ್ರಮಾಣದಿಂದ ಊಹಿಸಿ ವಿಷಯವನ್ನು ತೀರ್ಮಾನಿಸುವಿಕೆ.

**कल्पना ಕಲ್ಪನಾ** (स्त्री०) 1. ರಚನೆ, ನಿರ್ಮಾಣ. 2. ಮಾಡುವಿಕೆ. क्लृप् (सामर्थ्ये) +णिच् भावे "युच्" (३-३-१०७)। "प्रस्थानकालक्षमवेषकल्पनाकृतक्षण-क्षेपमुदैक्षताच्युतम्" माघ० १२-१। 3. ಊಹಿಸುವಿಕೆ, ಶಂಕಿಸುವಿಕೆ. "मदन्यदानं प्रति कल्पना या वेदस्त्वदीये हृदि तावदेषा" नैष० ३-७५। 4. ಆನೆಯನ್ನು ಅಲಂಕರಿಸುವಿಕೆ, ಆನೆಯ ಬೆನ್ನಿನಮೇಲೆ ಗವುಸನ್ನು ಹೊದ್ದಿಸಿ ಶೃಂಗರಿಸುವಿಕೆ. "सकल्पनं द्विरदगणं वरूथिन-स्तुरङ्गिणो जयनयुजश्च वाजिनः" माघ० १७-२३। 5. ಒಂದು ವಿಷಯದ ನಿಜಾಂಶವು ಹೀಗಿರಬಹುದೆಂದು ಮಾಡುವ ಊಹೆ; ಇದನ್ನು ನೈಯಾಯಿಕರು ಅನುಮಾನವೆನ್ನುವರು. ಮೀಮಾಂಸಕರು ಅರ್ಥಾಪತ್ತಿಪ್ರಮಾಣವೆನ್ನುವರು. 6. ಸಿದ್ಧಿ, ಕೈಗೂಡುವಿಕೆ. "श्रद्धालुसंकल्पित-कल्पनायां कल्पद्रुमस्याथ रथाङ्गपाणेः" नैष १०-६९।

**कल्पनी ಕಲ್ಪನೀ** (स्त्री०) ಕತ್ತರಿ.

**कल्पनीय ಕಲ್ಪನೀಯ** (वि०) 1. ರಚಿಸಲ್ಪಡಬೇಕಾದ. 2. ರಚಿಸಲು ಶಕ್ಯವಾದ. 3. ರಚಿಸಲು ಅರ್ಹವಾದ. क्लृप् (सामर्थ्ये) + णिच् "अनीयर्" (३-२-९६)। 4. ನಿಜಾಂಶವು ಹೀಗಿರಬಹುದೆಂದು ಊಹಿಸಲ್ಪಡುವ. 5. ಊಹಿಸಲು ಶಕ್ಯವಾದ. 6. ಊಹಿಸಲು ಅರ್ಹವಾದ. "तव्यः" **कल्पितव्यः ಕಲ್ಪಿತವ್ಯಃ.** (णिजभावे)।

**कल्पमान ಕಲ್ಪಮಾನ** (वि०) 1. ರಚನೆಯಾಗುತ್ತಿರುವ, ನಿರ್ಮಾಣವಾಗುತ್ತಿರುವ. 2. ಸಮರ್ಥವಾಗುತ್ತಿರುವ. क्लृप् (सामर्थ्ये) "शानच्" (३-२-१२४)। 3. ಸಿದ್ಧವಾಗುತ್ತಿರುವ. "कालपाशनिगृहीतमराति कल्पमान-मभवाय विवेद" याद० २१-५५।

**कल्पयत् ಕಲ್ಪಯತ್** (वि०) 1. ಸೃಷ್ಟಿಸುತ್ತಿರುವ, ನಿರ್ಮಿಸುತ್ತಿರುವ. 2. ರಚಿಸುತ್ತಿರುವ, ಮಾಡುತ್ತಿರುವ. 3. ಚಿಂತಿಸುತ್ತಿರುವ, ಊಹಿಸುತ್ತಿರುವ, ಶಂಕಿಸುತ್ತಿರುವ. क्लृप् (सामर्थ्ये) + णिच् "शतृ" (३-२-१२४)। "क्षणशयितविबुद्धाः कल्पयन्तः प्रयोगानुदधिमहति राज्ये काव्यवद्दुर्विगाहे" माघ० ११-६। 4. ಏರ್ಪಡಿಸುತ್ತಿರುವ, ಸಿದ್ಧಗೊಳಿಸುತ್ತಿರುವ. स्त्रियाम् "ङीप्" (४-१-६)। **-यन्ती -ಯಂತೀ.** "शानच्" (३-२-१२४)। **कल्पयमानः ಕಲ್ಪಯಮಾನಃ.**

**कल्पयितव्य ಕಲ್ಪಯಿತವ್ಯ** (वि०) "कल्पनीय" ಪದದ ಅರ್ಥ. क्लृप् (सामथ्य) +णिच् "तव्यः" (३-२-९६)।

**कल्पलता ಕಲ್ಪಲತಾ -वल्ली -ವಲ್ಲೀ.** (स्त्री०) "कल्पतरु" ಪದದ ಅರ್ಥ. कल्पस्य संकल्पविषयस्य साधनं लता। "क्व याचतां कल्पलतासि मां प्रति क्व दृष्टिदाने तव बद्धमुष्टिता" नैष० ९-१०९।

**कल्पविद् ಕಲ್ಪವಿದ್** (वि०) ಯಜ್ಞಸಂಬಂಧವಾದ ವಿಧಿಗಳನ್ನು ಅರಿತಿರುವ, ವ್ರತಪ್ರಯೋಗಗಳನ್ನು ತಿಳಿದಿರುವ,

ಶಾಸ್ತ್ರನಿಯಮಗಳನ್ನು ಅರಿತಿರುವ. कल्पं वेत्ति—विद (ज्ञाने) "क्विप्" (३-२-६१)। "कल्पवित् कल्पयामास नियमापेक्षया मुनिः" रघु० १-९४।

**कल्पसूत्र ಕಲ್ಪಸೂತ್ರ** (न०) ವೈದಿಕ ಕರ್ಮಾಚರಣೆಯನ್ನು ಹೇಳುವ ಸೂತ್ರ. कल्पस्य वैदिककर्मानुष्ठानस्य प्रतिपादकं सूत्रम्। ಆಶ್ವಲಾಯನ ಆಪಸ್ತಂಬ ಮುಂತಾದವರಿಂದ ರಚಿತವಾದ ಧರ್ಮಸೂತ್ರ, ಗೃಹ್ಯಸೂತ್ರ, ಶ್ರೌತಸೂತ್ರ ಗ್ರಂಥಗಳು.

**कल्पात्यय ಕಲ್ಪಾತ್ಯಯ** (पु०) ಕಲ್ಪಕಾಲದ ಕೊನೆ, ಪ್ರಳಯಕಾಲ. कल्पस्यात्ययः। "रथादिषोर्षैरथ शार्ङ्गपाणेः कल्पात्ययैकार्णवनादकल्पैः" याद० २०-९।

**कल्पान्त ಕಲ್ಪಾಂತ** (पु) ಕಲ್ಪದ ಕೊನೆ, ಪ್ರಳಯಕಾಲ, ಬ್ರಹ್ಮನ ಹಗಲಿನ ಕೊನೆ. कल्पस्यान्तः। [ವಿವರಕ್ಕೆ "प्रलय" ಪದದಲ್ಲಿ ನೋಡಿ.]

**कल्पित ಕಲ್ಪಿತ** (वि०) 1. ರಚಿಸಲ್ಪಟ್ಟ, ನಿರ್ಮಿಸಲ್ಪಟ್ಟ. कृपू (सामर्थ्ये) + णिच् "क्तः" (३-२-१०२)। "भैमीविनोदाय मुदा सखीभिस्तदाकृतीनां भुवि कल्पितानाम्" नैष० ६-७४। 2. ಏರ್ಪಡಿಸಲ್ಪಟ್ಟ. "मुदितयुवमनस्कास्तुल्यमेव प्रदोपे रुचमदधुरुभय्यः कल्पिता भूषिताश्च" माघ० ११-२७। 3. ಮಾಡಲ್ಪಟ್ಟ. "आक्रीडपर्वतास्तेन कल्पिताः स्वेषु वेश्मसु" कुमा० २-४३। 4. ಸಿದ್ಧಪಡಿಸಲ್ಪಟ್ಟ, ಸಜ್ಜುಗೊಳಿಸಲ್ಪಟ್ಟ. "प्रजापतिः कल्पितयज्ञभागं शैलाधिपत्यं स्वयमन्वतिष्ठत्" कुमा० १-१७। "स्पर्शभाजि विशदच्छविचारौ कल्पिते मृगदृशां सुरताय" माघ० १०-३९। 5. ಊಹಿಸಲ್ಪಟ್ಟ, ತರ್ಕಿಸಲ್ಪಟ್ಟ. 6. ಆಚರಿಸಲ್ಪಟ್ಟ, ಅನುಷ್ಠಿಸಲ್ಪಟ್ಟ. 7. ಪರಿಗಣಿಸಲ್ಪಟ್ಟ, ಭಾವಿಸಲ್ಪಟ್ಟ. "स्वक्षेत्रे संस्कृतायां तु स्वयमुत्पादयेद्धि यम्। तमौरसं विजानीयात्पुत्रं प्रथमकल्पितम्" मनु० ९-१६६। 8. ಕೃತ್ರಿಮವಾದ, ಸೃಷ್ಟವಾದ. ವಾಸ್ತವವಲ್ಲದ,

**कल्पिन् ಕಲ್ಪಿನ್** (पु०) 1. ನಾಪಿತ, ಕ್ಷೌರಿಕ, ನಾಯಿಂದ. कल्पयति — कृपू (सामर्थ्ये) + णिच् "णिनिः" (३-१-१३४)। (वि०) 2. ನಿರ್ಮಿಸುವ. 3. ಮಾಡುವ. 4. ಮೇಲಕ್ಕೆ ಹತ್ತಿಸುವ, ಏರಿಸುವ. 5. ವೇಷ ಹಾಕುವ.

**कल्प्य ಕಲ್ಪ್ಯ** (वि०) 1. ರಚಿಸಲ್ಪಡುವ, ನಿರ್ಮಿಸಲ್ಪಡುವ. कृपू (सामर्थ्ये) + णिच् "यत्" (३-१-९७)। 2. ಮೇಲಕ್ಕೆ ಏರಿಸಲ್ಪಡುವ, ಹತ್ತಿಸಲ್ಪಡುವ. 3. ಸೃಷ್ಟಿಸಲ್ಪಡುವ, ಹೊಸದಾಗಿ ಮಾಡಲ್ಪಡುವ. 4. ಏರ್ಪಡಿಸಲ್ಪಡುವ. 5. ಸಿದ್ಧಪಡಿಸಲ್ಪಡುವ, ಸಜ್ಜುಗೊಳಿಸಲ್ಪಡುವ. "आनन्दबाष्पैरपि कल्प्यमम्भः पृच्छा विधेया मधुभिर्वचोभिः" नैष० ७-२१। "कालोपपन्नातिथिकल्प्यभागं वन्यं शरीरस्थितिसाधनं वः" रघु० ५-९। 6. ಅನುಷ್ಠಿಸಲ್ಪಡುವ, ಆಚರಿಸಲ್ಪಡುವ. 7. ಊಹಿಸಲ್ಪಡುವ, ಶಂಕಿಸಲ್ಪಡುವ. 8. ಪರಿಗಣಿಸಲ್ಪಡುವ, ಭಾವಿಸಲ್ಪಡುವ.

**कल्प्यमान ಕಲ್ಪ್ಯಮಾನ** (वि०) 1. ರಚಿಸಲ್ಪಡುತ್ತಿರುವ, ನಿರ್ಮಿಸಲ್ಪಡುತ್ತಿರುವ. कृपू (सामर्थ्ये) + कर्म० "यक्" (३-१-६७)। "शानच्" (३-२-१२४)। 2. ಮಾಡಲ್ಪಡುತ್ತಿರುವ. 3. ಏರ್ಪಡಿಸಲ್ಪಡುತ್ತಿರುವ. 4. ಊಹಿಸಲ್ಪಡುತ್ತಿರುವ. 5. ಸಜ್ಜುಗೊಳಿಸಲ್ಪಡುತ್ತಿರುವ. "कल्प्यमानममुनाचमनार्थं गाङ्गमम्बु चुलकोदरचुम्बि" नैष० २१-१०।

**कल्मष ಕಲ್ಮಷ** (पु०) 1. ಒಂದು ನರಕ. कर्म शुभकर्म स्यति — षो (अन्तकर्मणि) "कः" (३-२-३)। पृषो० लत्वषत्वे। (न०) 2. ಪಾಪ. "कलमषं किल्बिषे क्लीबं पुंसि स्यान्नरकान्तरे" मेदि०। "स हि गगनविहारी कल्मषध्वंसकारी दशशतकरधारी ज्योतिषां मध्यचारी" हितो० २-२१। 3. ಕಶ್ಮಲ, ಕೊಳೆ. 4. ಗಸಿ, ಗಪ್ಪು, ಮಲ. 5. ಧೂಳು. 6. ಅಪವಾದ, ಅಪಕೀರ್ತಿ. 7. ಕಲ್ಮಷಮಾಸ, ಮಲಮಾಸ. (वि०) 8. ಕೊಳೆಯಿಂದ ಕೂಡಿದ, ಮಲಿನವಾದ. 9. ಪಾಪಿಷ್ಠ. 10. ಅಪವಾದದಿಂದ ಕೂಡಿದವನು.

**कल्माष ಕಲ್ಮಾಷ** (पु०) 1. ಚಿತ್ರವರ್ಣ. कलयति — कल (संख्याने) "क्विप्" (३-२-१७२)। माषयति हिंसयति वर्णान्—मष (हिंसायाम्) + णिच् "अच्" (३-१-१३४)। कल् चासौ माषश्च। 2. ಕೃಷ್ಣವರ್ಣ, ಕಪ್ಪುಬಣ್ಣ. 3. ಕಪ್ಪು ಬಿಳುಪು ಬೆರೆತ ಬಣ್ಣ. 4. ರಾಕ್ಷಸ. "कल्माषो राक्षसे कृष्णे शबलेऽपि" हेम०। 5. ಅಗ್ನಿಯ ಒಂದು ರೂಪ. "अग्नीनां वासुदेवेन संसक्तानां महामृधे। ते जातवेदसः सर्वे कल्माषः कुसुमस्तथा। दहनः शोषणश्चैव तपनश्च महालयः" हरिवं०। (वि०) 6. ಚಿತ್ರವರ್ಣದ. 7. ಕಪ್ಪು ಬಿಳುಪು ಬೆರೆತ ಬಣ್ಣದಿಂದ ಕೂಡಿದ. (स्त्री०) **–षी –ಷೀ.** ಜಮದಗ್ನಿಯ ಹಸು.

**कल्माषकण्ठ ಕಲ್ಮಾಷಕಂಠ** (पु०) ಶಿವ, ಈಶ್ವರ, ನೀಲಕಂಠ. कल्माषः कृष्णः कण्ठो यस्य। **–ग्रीवः –ಗ್ರೀವಃ.**

**कल्माषपाद ಕಲ್ಮಾಷಪಾದ** (पु०) ಸೂರ್ಯವಂಶದ ಒಬ್ಬ ದೊರೆ; ಇವನಿಗೆ ಮಿತ್ರಸಹ, ಸೌದಾಸ ಎಂಬ ಹೆಸರೂ

ಇವೆ. [ಈ ರಾಜನು ಒಮ್ಮೆ ಬೇಟೆಗಾಗಿ ಕಾಡಿಗೆ ಹೋಗಿದ್ದಾಗ ಒಬ್ಬ ರಾಕ್ಷಸನನ್ನು ಕೊಂದು ಅವನ ಸಹೋದರನಾದ ಮತ್ತೊಬ್ಬ ರಾಕ್ಷಸನನ್ನು ಅಲಕ್ಷ್ಯದಿಂದ ಕೊಲ್ಲದೆ ಬಿಟ್ಟು ಬಂದನು. ಆ ರಾಕ್ಷಸನು ಅದೇ ದ್ವೇಷದಿಂದ ಪ್ರತೀಕಾರ ಮಾಡಲೆಣಿಸಿ ಆ ರಾಜನ ಅರಮನೆಯಲ್ಲಿ ವೇಷಧಾರಿಯಾಗಿ ಅಡಿಗೆಯವನಾಗಿ ಸೇರಿಕೊಂಡು ಒಂದು ದಿನ ಅರಮನೆಗೆ ಭೋಜನಾರ್ಥಿಯಾಗಿ ಬಂದ ರಾಜನ ಕುಲಗುರುವಾದ ವಸಿಷ್ಠಮಹರ್ಷಿಗೆ ನರಮಾಂಸವನ್ನು ಪಾಕಮಾಡಿ ಬಡಿಸಲಾಗಿ ಇದರಿಂದ ಕುಪಿತರಾದ ವಸಿಷ್ಠರು ಸ್ವಲ್ಪವೂ ಯೋಚಿಸದೆ "ನೀನು ನರಮಾಂಸಭಕ್ಷಕನಾದ ರಾಕ್ಷಸನಾಗು" ಎಂದು ರಾಜನನ್ನು ಶಪಿಸಿದರು. ಅನಂತರ ಇದು ರಾಕ್ಷಸನ ಕೃತ್ಯವೆಂದು ತಿಳಿದು ಶಾಪಕ್ಕೆ ಹನ್ನೆರಡು ವರ್ಷಗಳು ಮಾತ್ರ ಅವಧಿಯನ್ನು ಕೊಟ್ಟರು. ರಾಜನೂ ವಸಿಷ್ಠರಿಗೆ ಪ್ರತಿಶಾಪವನ್ನು ಕೊಡಲು ಕೈಯಲ್ಲಿ ನೀರನ್ನು ತೆಗೆದುಕೊಂಡಾಗ ಅವನ ಪತ್ನಿಯಾದ ಮದಯಂತಿಯು ತಡೆಯಲು ಆ ಶಾಪಜಲವನ್ನು ತನ್ನ ಕಾಲಿನ ಮೇಲೆಯೇ ಬಿಟ್ಟುಕೊಂಡನು. ಅದರಿಂದ ಅವನ ಕಾಲುಗಳು ಸುಟ್ಟು ಕಪ್ಪಾದುದರಿಂದ ಆ ರಾಜನಿಗೆ **"ಕಲ್ಮಾಷಪಾದ"** ನೆಂಬ ಹೆಸರಾಯಿತು. ಅಂದಿನಿಂದ ಅವನು ರಾಕ್ಷಸ ರೂಪದಿಂದ ಅರಣ್ಯದಲ್ಲಿ ಸಂಚರಿಸುತ್ತಾ ಒಂದು ಕಡೆ ಮುನಿದಂಪತಿಗಳು ಕಾಮಾರ್ತರಾಗಿ ವಿಹರಿಸುತ್ತಿದ್ದಾಗ ಆ ಮುನಿಯನ್ನು ಹಿಡಿದು ಭಕ್ಷಿಸಿದನು. ಮುನಿಪತ್ನಿಯು ದುಃಖಿತಳಾಗಿ "ನೀನು ಪತ್ನಿಯೊಡನೆ ಸಂಗಮಿಸಿದೆಯಾದರೆ ಅದೇ ನಿನಗೆ ಮೃತ್ಯುವಾಗಲಿ" ಎಂದು ರಾಜನನ್ನು ಶಪಿಸಿದಳು. ಹನ್ನೆರಡು ವರ್ಷಗಳನಂತರ ವಸಿಷ್ಠರ ಶಾಪದಿಂದ ವಿಮೋಚನೆ ಹೊಂದಿ ಮುನಿಪತ್ನಿಯ ಶಾಪದಿಂದ ಸ್ತ್ರೀಸೌಖ್ಯವನ್ನು ತೊರೆದು ವಸಿಷ್ಠರ ಅನುಗ್ರಹದಿಂದ ಅಶ್ಮಕನೆಂಬ ಪುತ್ರನನ್ನು ಪಡೆದನು.] भाग० ९-९।

**कल्माषी ಕಲ್ಮಾಷೀ** (स्त्री०) 1. ಚಿತ್ರವರ್ಣದ ಹಸು. 2. ಯಮುನಾನದಿ. कल्माष "ङीष्" (४-१-४०)। "प्रतिकर्तुं नृपश्रेष्ठो यतमानोऽपि भारत। अभितः सोऽथ कल्माषीं गङ्गाकूले परिभ्रमन्" भा० आदि०।

**कल्य ಕಲ್ಯ** (न०) 1. ಪ್ರಾತಃಕಾಲ. कलयति चेष्टामत्र— कल (गतौ संख्याने च) "यक्" (उ० ४-१११)। "अनुनयमगृहीत्वा व्याजसुप्ता पराची रुतमथ कृकवाकोस्तारमाकर्ण्य कल्ये" माघ० ११-९। 2. ಜೇನುತುಪ್ಪ. (वि०) 3. ಕಿವುಡ ಮತ್ತು ಮೂಗ, ಶ್ರೋತ್ರೇಂದ್ರಿಯ ಮತ್ತು ವಾಗಿಂದ್ರಿಯಗಳಿಲ್ಲದವನು, ಕೇಳುವ (ಶ್ರವಣ) ಮತ್ತು ಮಾತಾಡುವ ಶಕ್ತಿಯಿಲ್ಲದವನು. 4. ಸಮರ್ಥನಾದ, ದಕ್ಷನಾದ. "कल्याणि कल्यानि तवाङ्गकानि कच्चित्तमां चित्तमनाविलं ते" नैष० ८-५७। 5. ಸಿದ್ಧವಾಗಿರುವ. "कथयस्व कथामेतां कल्याः स्म श्रवणे तव" भा० आदि० ५-३। 6. ರೋಗವಿಲ್ಲದವನು, ಆರೋಗ್ಯದಿಂದಿರುವವನು. 7. ಮಂಗಳವಚನ ವನ್ನಾಡುವ, ಒಳ್ಳೆಯ ಮಾತನ್ನಾಡುವ. 8. ಉಪಾಯದ ಮಾತನ್ನಾಡುವ. (स्त्री०) **–ल्या –ಲ್ಯಾ.** 9. ಮದ್ಯ, ಹೆಂಡ. 10. ಶುಭವಚನ, ಮಂಗಳವಚನ. "कल्यं प्रभाते मधुनि सज्जे दक्षे निरामये। कल्या कल्याणवाचि स्यात्" हेम०। "कल्यं प्रभाते क्लीबं स्यात् कल्यो वाक्श्रुतिवर्जिते। सज्जनीरोगदक्षेषु कल्याणवचनेऽपि च। उपायवचनेऽपि स्यात् त्रिषु मद्ये तु योषिति" मेदि०। "स्यात् कल्या तु शुभात्मिका" अम०।

**कल्यजग्धि ಕಲ್ಯಜಗ್ಧಿ** (स्त्री०) ಪ್ರಾತಃಕಾಲದ ಊಟ.

**कल्यता ಕಲ್ಯತಾ** (स्त्री०) ಆರೋಗ್ಯಪಡೆಯುವಿಕೆ, ರೋಗದಿಂದ ಚೇತರಿಸಿಕೊಳ್ಳುವಿಕೆ. कल्यस्य भावः "तल्" (५-१-११९)। "त्वः"। **–त्वम् –ತ್ವಮ್.**

**कल्यवर्त ಕಲ್ಯವರ್ತ** (पु०) ಪ್ರಾತಃಕಾಲದ ಊಟ. कल्ये प्रातर्वर्त्यते – वृतु (वर्तने) + णिच् "अच्" (३-१-१३४)।

**कल्याण ಕಲ್ಯಾಣ** (न०) 1. ಶುಭ, ಮಂಗಳ. कल्ये प्रातःकाले अण्यते – अण (शब्दे) "घञ्" (३-३-१९)। "कल्याणानां त्वमसि महसां भाजनं विश्वमूर्ते धुर्यां लक्ष्मीमिह मयि भृशं धेहि देव प्रसीद" मालती० १-५। "सन्तुष्टो भार्यया भर्ता भर्त्रा भार्या तथैव च। यस्मिन्नेव कुले नित्यं कल्याणं तत्र वै ध्रुवम्" मनु० ३-६०। 2. ಸುವರ್ಣ, ಚಿನ್ನ. 3. ಹಬ್ಬ, ಉತ್ಸವ. 4. ಸಂತೋಷ. 5. ಸ್ವರ್ಗ. 6. ಒಳ್ಳೆಯ ಅದೃಷ್ಟ. (वि०) 7. ಮಂಗಳಕರವಾದ, ಶುಭವಾದ. 8. ಒಳ್ಳೆಯ ಅದೃಷ್ಟಶಾಲಿಯಾದ. 9. ಸಂತೋಷವುಳ್ಳ. 10. ಗುಣಶಾಲಿಯಾದ. स्त्रियाम् "ङीष्" (४-१-४५)। **–णी –ಣೀ.** "कल्याणी बत गाथेयं लौकिकी प्रतिभाति मे। एति जीवन्तमानन्दो नरं वर्षशतादपि" रामा०। "त्वमेव कल्याणि तयोस्तृतीया" रघु० ६-२९। "उपोपविष्टः कल्याणीः कथाश्चक्रे मनोरमाः" भा० वन० १२५-३। (स्त्री०) **–णी –ಣೀ.** 11. ಮಾಷಪರ್ಣಿ, ಕಾಡುದ್ದಿನ ಗಿಡ, 12. ಗೋವು, ಹಸು.

**कल्याणकर ಕಲ್ಯಾಣಕರ** (वि०) 1. ಶುಭಕರವಾದ, ಮಂಗಳವನ್ನುಂಟುಮಾಡುವ. 2. ಶುಭಕಾರ್ಯವನ್ನು

ಮಾಡುವ. करोति — डु कृञ् (करणे) "अच्" (३-१-१३४)। कल्याणस्य करः। कल्याणं करोति — डु कृञ् "अण्" (३-२-१)। **-कारः -ಕಾರಃ.** "ण्वुल्" (३-१-१३३)। **-कारकः -ಕಾರಕಃ.** "न निषेध्योऽल्पबाधस्तु सेतुः कल्याणकारकः" याज्ञ० २-१५६। "क्विप्" (३-२-६१)। **-कृत् -ಕೃತ್.** ಒಳ್ಳೆಯ ಕಾರ್ಯವನ್ನು ಮಾಡುವ, ಶುಭಕಾರ್ಯವನ್ನು ನಡೆಸುವ. "न हि कल्याणकृत् कश्चित् दुर्गतिं तात गच्छति" गीता ६-४०।

**कल्याणधर्मन् ಕಲ್ಯಾಣಧರ್ಮನ್** (वि०) ಒಳ್ಳೆಯ ಗುಣಶಾಲಿಯಾದ, ಧರ್ಮಶೀಲನಾದ. कल्याणो धर्मोऽस्यास्ति "अनिच्" (५-४-१२४)।

**कल्याणनगर ಕಲ್ಯಾಣನಗರ** (न०) ಬೆಂಗಳೂರು ನಗರ.

**कल्याणमय ಕಲ್ಯಾಣಮಯ** (वि०) ಮಂಗಳಪ್ರಚುರವಾದ, ಶುಭವಿಷಯಗಳಿಂದ ತುಂಬಿದ.

**कल्याणमित्र ಕಲ್ಯಾಣಮಿತ್ರ** (न०) ಒಳ್ಳೆಯ ಸ್ನೇಹಿತ, ಗುಣಶಾಲಿಯಾದ ಗೆಳೆಯ.

**कल्याणयोग ಕಲ್ಯಾಣಯೋಗ** (पु०) (ಜ್ಯೋತಿಷದಲ್ಲಿ) ಯಾತ್ರಾಲಗ್ನದಿಂದ ಶುಭಸ್ಥಾನಗಳಲ್ಲಿ ಗ್ರಹಗಳು ಸೇರುವ ಒಂದು ಯೋಗ; ಯಾತ್ರಾಲಗ್ನದಿಂದ ಕೇಂದ್ರ (1, 4. 7 ಮತ್ತು 10 ನೆಯ) ಸ್ಥಾನಗಳಲ್ಲಿ ಅಥವಾ ತ್ರಿಕೋಣದಲ್ಲಿ ಗುರುವೂ ಲಾಭ (11ನೆಯ) ಅಥವಾ ಕರ್ಮ (10ನೆಯ) ಸ್ಥಾನದಲ್ಲಿ ರವಿಯೂ ಇದ್ದರೆ ಕಲ್ಯಾಣಯೋಗವೆನಿಸುವುದು. ಈ ಯೋಗವು ರಾಜನಿಗೆ ಮಂಗಳಪ್ರದವಾದುದು. "गुरौ केन्द्रे त्रिकोणे वा रविर्लाभे च कर्मणि। कल्याणयोगो भूपस्य यातुः कल्याणकृद्भवेत्"।

**कल्याणवत् ಕಲ್ಯಾಣವತ್** (वि०) 1. ಶುಭವುಳ್ಳ, ಮಂಗಳವುಳ್ಳ. कल्याणमस्यास्ति "मतुप्" (५-२-९४)। 2. ಭಾಗ್ಯಶಾಲಿ. 3. ಸಂತೋಷವುಳ್ಳವನು. स्त्रियाम् "ङीप्" (४-१-६)। **-वती -ವತೀ.**

**कल्याणवचन ಕಲ್ಯಾಣವಚನ** (न०) ಶುಭವಾಕ್ಯ, ಮಂಗಳಕರವಾದ ಮಾತು.

**कल्याणवाचन ಕಲ್ಯಾಣವಾಚನ** (न०) ಬ್ರಾಹ್ಮಣರಿಂದ ಮಂಗಳಕರವಾದ ಮಂತ್ರಗಳನ್ನು ಹೇಳಿಸುವುದು, ಶುಭಕಾರ್ಯವನ್ನು ಪ್ರಾರಂಭಿಸುವ ಮೊದಲು ಬ್ರಾಹ್ಮಣರ ಮೂಲಕ ಮಾಡಿಸುವ ಸ್ವಸ್ತಿವಾಚನ.

**कल्याणिका ಕಲ್ಯಾಣಿಕಾ** (स्त्री०) ಮಣಶಿಲೆ. कल्याण संज्ञायां "कन्"। अत इत्वम्।

**कल्याणिन् ಕಲ್ಯಾಣಿನ್** (वि०) 1. ಸಂತೋಷವುಳ್ಳ. 2. ಶುಭವುಳ್ಳ, ಮಂಗಳವುಳ್ಳ. 3. ಭಾಗ್ಯವುಳ್ಳವನು, ಅದೃಷ್ಟಶಾಲಿ. कल्याणमस्यास्ति "इनिः" (५-२-११५)। स्त्रियाम् "ङीप्" (४-१-५)। **-णिनी -ಣಿನೀ.**

**कल्याणी ಕಲ್ಯಾಣೀ** (स्त्री०) "कल्याण" ಪದದಲ್ಲಿ ನೋಡಿ.

**कल्यापाल ಕಲ್ಯಾಪಾಲ** (वि०) ಮದ್ಯವನ್ನು ತಯಾರಿಸುವವನು, ಭಟ್ಟಿ ಇಳಿಸುವವನು. कल्यां सुरां पालयति — पाल (रक्षणे) "अण्" (३-२-१)। "ण्वुल्" (३-१-१३३)। **-पालकः -ಪಾಲಕಃ.**

**कल्ल ಕಲ್ಲ** (वि०) ಬಧಿರ, ಕಿವುಡ. कल्ल (अव्यक्ते शब्दे) "अच्" (३-१-१३४)। "कल्लो बधिरः खोरखञ्जकौ" त्रिकाण्ड०।

**कल्लता ಕಲ್ಲತಾ** (स्त्री०) ಕಿವುಡು, ಶಬ್ದ ಕೇಳಿಸದಿರುವಿಕೆ. कल्लस्य भावः "तल्" (५-१-११९)। "त्वः"। **-त्वम् -ತ್ವಮ್.**

**कल्लमूक ಕಲ್ಲಮೂಕ** (वि०) ಕಿವುಡ ಮತ್ತು ಮೂಗ, ಶಬ್ದ ಕೇಳಿಸದಿರುವವನು ಮತ್ತು ಮಾತಾಡುವ ಶಕ್ತಿಯಿಲ್ಲದವನು. कल्लश्चासौ मूकश्च।

**कल्लोल ಕಲ್ಲೋಲ** (पु०) 1. ಅಲೆ, ತರಂಗ, ತೆರೆ. कल्लन्तेऽनेन नद्यः — कल्ल (अव्यक्ते शब्दे) बाहु० "कोलच्"। "आयुः कल्लोललोलं कतिपयदिवसस्थायिनी यौवनश्रीः" भर्तृ० ३-३६। 2. ಹರ್ಷ, ಸಂತೋಷ. 3. ಶತ್ರು, ವೈರಿ, ಹಗೆ. "कल्लोलः पुंसि हर्षे स्यात् उल्लोलवैरिणोरपि" मेदि०।

**कल्लोलित ಕಲ್ಲೋಲಿತ** (वि०) ಅಲೆಯುಂಟಾಗಿರುವ, ತೆರೆಯೆದ್ದಿರುವ. कल्लोलोऽस्य सञ्जातः "इतच्" (५-२-३६)।

**कल्लोलिनी ಕಲ್ಲೋಲಿನೀ** (स्त्री०) ಅಲೆಗಳಿಂದ ಕೂಡಿದ ಪ್ರದೇಶ, ನದಿ, ಹೊಳೆ. कल्लोलाः सन्त्यस्याम् "इनिः" (५-२-१३५)।

**कव ಕವ** (पु०) ಶಬ್ದ, ಧ್ವನಿ. कु (शब्दे) भावे "अप्" (३-३-५७)।

**कवक ಕವಕ** (न०) 1. ಗ್ರಾಸ, ಕಬಳ, ತುತ್ತು. 2. ನಾಯಿಕೊಡೆ. "लशुनं गृञ्जनं चैव पलाण्डुं कवकानि च। अभक्ष्याणि द्विजातीनाममेध्यप्रभवाणि च" मनु० ५-५।

**कवच ಕವಚ** (पुंन०) 1. ಕವಚ, ಅಂಗಿ. कं वातं वञ्चति — वञ्चु (प्रलम्भने) "कः" (वा० ३-२-५)।

"निर्दयं खड्गभिन्नेभ्यः कवचेभ्यः समुत्थितः। आसन् व्योम दिशस्तूलैः पलितैरिव पाण्डुराः" कुमा० १६-६। 2. ಪಟಹ, ತಮಟೆ. 3. ಬಸುರಿಮರ. "कवचो गर्दभाण्डे च सन्नाहे पटहेऽपि च" मेदि०।

**कवचहर ಕವಚಹರ** (वि०) ಕವಚವನ್ನು ಧರಿಸುವ ಮತ್ತು ಒಯ್ಯುವ ವಯಸ್ಸುಳ್ಳ ಹುಡುಗ. कवचं हरति — हृञ् (हरणे) "अच्" (३-२-१०)। "कवचहरः कुमारः" सि० कौ०।

**कवचित ಕವಚಿತ** (वि०) 1. ಅಂಗಿಯಿಂದ ಆವೃತವಾದ. ಅಂಗಿ ತೊಟ್ಟಿರುವ. कवचोऽस्य सञ्जातः "इतच्" (५-२-३६)। 2. ಮುಚ್ಚಲ್ಪಟ್ಟ. (लाक्ष०)।

**कवचिन् ಕವಚಿನ್** (वि०) ಕವಚವನ್ನು ಧರಿಸಿರುವ. कवचमस्यास्ति "इनिः" (५-२-११५)। स्त्रियाम् "ङीप्" (४-१-५)। **कवचिनी ಕವಚಿನೀ.**

**कवटी ಕವಟೀ** (स्त्री०) ಕವಾಟ, ಕದ, ಬಾಗಿಲು. कौति शब्दायते — कु (शब्दे) "अटन्" (उ० ४-७१)। गौरा० "ङीष्" (४-१-४१)।

**कवयितृ ಕವಯಿತೃ** (पु०) 1. ಕವಿ, ಕಾವ್ಯ ರಚಿಸುವವನು, ವರ್ಣಿಸುವವನು. कवृ (वर्णने) + णिच् "तृच्" (३-१-१३३)। 2. ಕವಿಯಂತೆ ನಟಿಸುವವನು. कवि + क्विप् "तृच्" (३-१-१३३)। स्त्रियाम् "ङीप्" (४-१-५)। **कवयित्री ಕವಯಿತ್ರೀ.**

**कवर ಕವರ** (पु०) 1. ಉಪಾಧ್ಯಾಯ, ಪಾಠ ಹೇಳುವವನು. कु (शब्दे) "अरन्" (उ० ४-१५४)। (न०) 2. ಲವಣ, ಉಪ್ಪು. 3. ಹುಳಿ. (वि०) 4. ಚಿತ್ರವರ್ಣದ, ನಾನಾಬಣ್ಣದ. स्त्रियाम् **कबरा ಕಬರಾ.** वबयोरभेदः। "व्याकीर्णमाल्यकबरां कबरीं तरुण्याः" माघ० ५-१९। (स्त्री०) **-री -ರೀ.** ಕೇಶಪಾಶ, ಹೆಂಗಸರ ಜಡೆ. कबरी केशानां सन्निवेशश्चेत्। कबरान्या। सि० कौ०। "व्याकीर्णमाल्यकबरां कबरीं तरुण्याः" माघ० ५-१९। **-भारः -ಭಾರಃ.** ಉತ್ತಮವಾದ ಜಡೆ, ಚೆನ್ನಾಗಿ ಬೆಳೆದು ಉದ್ದವಾಗಿರುವ ಹೆಂಗಸರ ವೇಣಿ. "अमरीकबरीभारभ्रमरीमुखरीकृतम्। दूरीकरोतु दुरितं गौरीचरणपङ्कजम्" कुव०।

**कवर्ग ಕವರ್ಗ** (पु०) क ख ग घ ङ ವರ್ಣಗಳ ಗುಂಪು. ಈ ಐದು ವರ್ಣಗಳೂ ಒಂದೇ ಸ್ಥಾನ (ಕಂಠ) ದಲ್ಲಿ ಹುಟ್ಟುವುದರಿಂದ ಒಂದೇ ಗುಂಪಿಗೆ ಸೇರಿದುವು. अ-कवर्ग-हविसर्गाणां कण्ठः।

**कवल ಕವಳ** (पु०) 1. ಗ್ರಾಸ, ತುತ್ತು, ಬಾಯಿ ತುಂಬುವಷ್ಟು ಆಹಾರ. केन जलेन वलते — वल (सञ्चलने) "अच्" (३-१-१३४)। "आस्वादवद्भिः कबलैस्तृणानां कण्डूयनैर्दंशनिवारणैश्च" रघु० २-५। 2. ಮತ್ಸ್ಯ, ಮೀನು. के जले वलते — वल "अच्"। स्त्रियाम् जाति० "ङीष्" (४-१-६३)। 3. ನಾಲಿಗೆ ಮತ್ತು ಹಲ್ಲುಗಳ ಮಲನಿವಾರಣೆಯಾಗಿ ಬಾಯಿ ಶುದ್ಧವಾಗಲು ಮಾಡುವ ಗಂಡೂಷ, ಬಾಯಿ ಮುಕ್ಕಳಿಸುವ ದ್ರವವಸ್ತು. "दोषप्रच्यवनार्थाय रुजादाहक्षयाय च। जिह्वादन्तसमुत्थस्य हरणार्थं मलस्य च। शोधनो रोपणश्चैव व्रणस्य मुखजस्य वै। उष्णो वा यदि वा शीतः कवलग्राह इष्यते" सुश्रुत० चिकित्सा० १-१२७, २८।

**कवलन ಕವಳನ** (न०) ನುಂಗುವಿಕೆ, ಕಬಳಿಸುವಿಕೆ. कवल तत्करोति "णिच्" (ग० ७-४-९७) भावे "ल्युट्" (३-३-११५)।

**कवलिका ಕವಳಿಕಾ** (स्त्री०) ವ್ರಣಚಿಕಿತ್ಸೆಗಾಗಿ ಹಾಕುವ ಬಟ್ಟೆಯ ಕಟ್ಟು, ಪಕ್ಕೆಗಳ ಎಲುಬು ಮುರಿದರೆ ಕಟ್ಟುವ ಬಟ್ಟೆಯ ಕಟ್ಟು; ಎಡಭಾಗದ ಅಥವಾ ಬಲಭಾಗದ ಎಲುಬು (ಪಾರ್ಶ್ವಾಸ್ಥಿ) ಗಳು ಮುರಿದರೆ ಅವನ್ನು ನಿಲ್ಲಿಸಿ ಆ ಜಾಗಕ್ಕೆ ತುಪ್ಪವನ್ನು ಬಳಿದು ಕೈಗೆ ತುಪ್ಪವನ್ನು ಸವರಿಕೊಂಡು ಚೆನ್ನಾಗಿ ಉಜ್ಜಿಕೊಟ್ಟು ಅನಂತರ ಬಟ್ಟೆಯ ಪಟ್ಟಿಯನ್ನು ಕಟ್ಟಬೇಕು. ಇದಕ್ಕೆ "**ಕವಳಿಕೆ**" ಯೆಂದು ಹೆಸರು. ಅಥವಾ ಎಣ್ಣೆಯ ಕೊಪ್ಪರಿಗೆಯಲ್ಲಾಗಲಿ ತೊಟ್ಟಿಯಲ್ಲಾಗಲಿ ಮಲಗಿಸಬೇಕು. "पर्शुकास्वथ भग्नासु घृताभ्यक्तस्य तिष्ठतः। दक्षिणास्वथवा वामास्वनुमृज्य निबन्धनीः। ततः कवलिकां दत्त्वा वेष्टयेत्सुसमाहितः। तैलपूर्णे कटाहे वा द्रोण्यां वा शाययेन्नरम्" सुश्रुत० चिकित्सा० ३-२९, ३०।

**कवलित ಕವಳಿತ** (वि०) ತಿನ್ನಲ್ಪಟ್ಟ, ನುಂಗಲ್ಪಟ್ಟ. कवलं करोति—कवल+तत्करोति णिच्+"क्तः" (३-२-१०२)।

**कवाट ಕವಾಟ** (न०) ಬಾಗಿಲಿನ ಕದ, ದ್ವಾರದ ಗರಿ. कु (शब्दे) भावे "अप्" (३-३-५७)। कवं शब्दमटति "अण्" (३-२-१)। "उरःश्रिया तत्र च गोपुरस्फुरत्-कवाटदुर्धर्षतिरःप्रसारिता" नैष० १-२२। ಮನೆಯ ಕವಾಟ ಮೊದಲಾದುವನ್ನು ತಯಾರಿಸಲು ಕ್ಷೀರವೃಕ್ಷ (ಹಾಲು ಬರುವ ಮರ), ಪಕ್ಷಿಗಳು ವಾಸಿಸುವ ಮರ, ಗಾಳಿಯಿಂದ ಮುರಿದು ಬಿದ್ದ, ಬೆಂಕಿ ತಗುಲಿ ಸುಟ್ಟುಹೋದ, ಆನೆಯಿಂದ ಮುರಿಯಲ್ಪಟ್ಟ, ಸಿಡಿಲಿನಿಂದ ಬಿದ್ದುಹೋದ,

ಮತ್ತು ದೇವಾಲಯಗಳಲ್ಲಿ ಹುಟ್ಟಿ ಬೆಳೆದ ಮರಗಳನ್ನೂ ಬೇವು, ವಿಭೀತಕ (ತಾರೆ), ಅಶ್ವತ್ಥ, ಆಲದ ಮರಗಳನ್ನೂ, ಮುಳ್ಳುಗಿಡಗಳು, ಶಾಲ್ಮಲಿ, ಪಲಾಶ (ಮುತ್ತುಗ) ಗಳನ್ನೂ ಉಪಯೋಗಿಸಕೂಡದು.

**कवाटघ्न ಕವಾಟಘ್ನ** (वि०) ಚೋರ, ತಸ್ಕರ, ಕಳ್ಳ. कवाटं हन्ति — हन (हिंसागत्योः) "टक्" (३-२-५४)। कवाटघ्नश्चोरः। सि० कौ०।

**कवार ಕವಾರ** (न०) ಪದ್ಮ, ಕಮಲ. कं जलं वृणोति — वृञ् (वरणे) "अण्" (३-२-१)। "पद्मे कवारं पङ्केजम्" त्रिकाण्ड०।

**कवि ಕವಿ** (पु०) 1. ಬ್ರಹ್ಮ, ಕ್ರಾಂತದರ್ಶಿ, ಅತೀಂದ್ರಿಯ ವಸ್ತುಗಳನ್ನು ನೋಡುವ ಶಕ್ತಿಯುಳ್ಳ ಪರಬ್ರಹ್ಮ; ಬ್ರಹ್ಮನು ಸರ್ವಗತನಾಗಿಯೂ ಸರ್ವಜ್ಞನಾಗಿಯೂ, ಕ್ರಾಂತದರ್ಶಿಯಾಗಿಯೂ ಇರುವುದರಿಂದ ಈ ಹೆಸರು. "कविं पुराणमनुशासितारमणोरणीयांसमनुस्मरेद्यः। सर्वस्य धातारमचिन्त्यरूपमादित्यवर्णं तमसः परस्तात्" गीता ८-९। 2. ಬ್ರಹ್ಮನ ಹೃದಯದಿಂದ ಜನಿಸಿದ ಭೃಗು ಋಷಿಯ ಮಗ, ಶುಕ್ರಾಚಾರ್ಯರ ತಂದೆ. 3. ಕವಿಯ ಮಗನಾದ ಶುಕ್ರಾಚಾರ್ಯ, ಅಸುರರ ಗುರು. कु (शब्दे) "इः" (उ० ४-१३८)। "ब्रह्मणो हृदयं भित्त्वा निःसृतो भगवान् भृगुः। भृगोः पुत्रः कविर्विद्वान् शुक्रः कविसुतो ग्रहः" भा० आदि० ६७। [ವಿವರಕ್ಕೆ "शुक्र" ಪದದಲ್ಲಿ ನೋಡಿ.] 4. ಕಾವ್ಯವನ್ನು ರಚಿಸುವವನು, ಕವಿತೆ ಮಾಡುವವನು, ವರ್ಣಿಸುವವನು. कबृ (वर्णने) "इः" (उ० ४-१३८)। "तेजः क्षमा वा नैकान्तं कालज्ञस्य महीपतेः। नैकमोजः प्रसादो वा रसभावविदः कवेः" माघ० २-८३। "मन्दः कवियशःप्रार्थी गमिष्याम्यपहास्यताम्" रघु० १-३। 5. ವಿದ್ವಾಂಸ, ಪಂಡಿತ, ಬುದ್ಧಿವಂತ. "अध्यापयामास पितॄन् शिशुराङ्गिरसः कविः" मनु० २-१५१। 6. ವಾಲ್ಮೀಕಿ ಮಹರ್ಷಿ. "कविर्वाल्मीकिशुक्रयोः। सूरौ काव्यकरे पुंसि स्यात्खलीने तु योषिति" मेदि०। (वि०) 7. ಸ್ತೋತ್ರ ಮಾಡುವವನು. 8, ಸ್ತುತಿಸಲ್ಪಡುವವನು. (स्त्री०) वा "ङीष्" (ग० ४-१-४५)। **कविः ಕವಿಃ, कवी ಕವೀ.** ಲಗಾಮು, ಕಡಿವಾಣ. मेदि०।

**कविक ಕವಿಕ** (पु०) ಲಗಾಮು, ಕಡಿವಾಣ. कवि स्वार्थे "कन्"।

**कविका ಕವಿಕಾ** (स्त्री०) ಲಗಾಮು, ಕಡಿವಾಣ. कवते — कु (शब्दे) "इः" (उ० ४-१३८)। स्वार्थे "कन्"। "सोत्सेधैः स्कन्धदेशैः खरतरकविकाकर्षणात्यर्थभुग्नैः" मुद्रा० ४-७।

**कविज्येष्ठ ಕವಿಜ್ಯೇಷ್ಠ** (पु०) ವಾಲ್ಮೀಕಿ. "प्राचेतसस्तु वाल्मीकिः कविज्येष्ठः कुशीवशः" त्रिकाण्ड०।

**कवितर ಕವಿತರ** (वि०) ಇಬ್ಬರು ಕವಿಗಳಲ್ಲಿ ಶ್ರೇಷ್ಠನಾದ ಒಬ್ಬ ಕವಿ. अनयोः अतिशयेन कविः "तरप्" (५-३-५७)। **-तमः -ತಮಃ.** ಅನೇಕ ಕವಿಗಳಲ್ಲಿ ಶ್ರೇಷ್ಠನಾದ ಒಬ್ಬ ಕವಿ. एतेषामतिशयेन कविः "तमप्" (५-३-५५)।

**कविता ಕವಿತಾ** (स्त्री०) ಕವಿಯ ವ್ಯಾಪಾರ, ಗದ್ಯ ಅಥವಾ ಪದ್ಯರೂಪವಾದ ಕಾವ್ಯ ರಚಿಸುವಿಕೆ. कवेर्भावः कर्म वा "तल्" (५-१-११९)। "व्रीडा चेत् किमु भूषणैः सुकविता यद्यस्ति राज्येन किम्" भर्तृ० १-१७। "त्वः" (५-१-११९)। **-त्वम् -ತ್ವಮ್.** "कवित्वगानप्रियवादसत्यान्यस्या विधाता व्यधिताधिकण्ठम्" नैष० ७-६७।

**कवितार्किकसिंह ಕವಿತಾರ್ಕಿಕಸಿಂಹ** (पु०) ಕವಿ ಮತ್ತು ತಾರ್ಕಿಕರಲ್ಲಿ ಶ್ರೇಷ್ಠರಾದ ಶ್ರೀನಿಗಮಾಂತದೇಶಿಕರು, ಶ್ರೀವೇಂಕಟನಾಥರು. कविषु तार्किकेषु च सिंहः।

**कविनन्दन ಕವಿನಂದನ -पुत्र -ಪುತ್ರ, -सुत -ಸುತ** (पु०) ಭೃಗುಪುತ್ರನಾದ ಕವಿಯ ಮಗ, ಶುಕ್ರಾಚಾರ್ಯ. कवेः नन्दनः पुत्रः सुतो वा। "भृगोः पुत्रः कविर्विद्वान् शुक्रः कविसुतो ग्रहः" भा० आदि० ६७।

**कविय ಕವಿಯ** (न०) ಕಡಿವಾಣ, ಲಗಾಮು. कुङ् (शब्दे) बाहु० "इयः"। "कवियं कविकोच्यते" त्रिकाण्ड०।

**कविराज ಕವಿರಾಜ** (पु०) ಕವಿಶ್ರೇಷ್ಠ, ಉತ್ತಮನಾದ ಕವಿ. कवीनां राजा "टच्" (५-४-९१)। "श्रीहर्षं कविराजराजिमुकुटालङ्कारहीरः सुतम्" नैष० १-१४५।

**कवोष्ण ಕವೋಷ್ಣ** (न०) 1. ಬೆಚ್ಚಗಿರುವಿಕೆ, ಸ್ವಲ್ಪ ಬಿಸಿ. ईषदुष्णम् कोः वा कवादेशः (६-३-१०७)। पक्षे कादेशः (६-३-१०४)। **कोष्णम् ಕೋಷ್ಣಮ್.** उभयाभावे "कत्" (६-३-१०१)। **कदुष्णम् ಕದುಷ್ಣಮ್.** (वि०) 2. ಸ್ವಲ್ಪ ಬಿಸಿಯಾಗಿರುವ, ಬೆಚ್ಚಗಿರುವ. "पयः पूर्वैः स्वनिःश्वासैः कवोष्णमुपभुज्यते" रघु० १-६७।

**कव्य ಕವ್ಯ** (न०) ಪಿತೃದೇವತೆಗಳಿಗೆ ಯೋಗ್ಯವಾದ ಅನ್ನ, ಪಿತೃಗಳನ್ನು ಉದ್ದೇಶಿಸಿ ಕೊಡುವ ಅನ್ನ. कूयते पितृभ्यः—

कु (शब्दे) "यत्" (३-१-९७)। "श्रोत्रियायैव देयानि हव्यकव्यानि दातृभिः। अर्हत्तमाय विप्राय तस्मै दत्तं महाफलम्" मनु० ३-१२७। ಪಿತೃಗಳನ್ನು ಉದ್ದೇಶಿಸಿ ಕೊಡಲ್ಪಡುವ ಅನ್ನ (ಕವ್ಯ) ವನ್ನು ಜ್ಞಾನಿಗೆ ಕೊಡಬೇಕು. "ज्ञानोत्कृष्टाय देयानि कव्यानि च हवींषि च। न हि हस्तावसृग्दिग्धौ रुधिरेणैव शुध्यतः" मनु० ३-१३२।

**कव्यभुज् ಕವ್ಯಭುಜ್** (पु०) ಪಿತೃಗಳು ಅಥವಾ ಪಿತೃ ದೇವತೆಗಳ ಗಣ. कव्यं भुङ्क्ते — भुज (पालनाभ्यवहारयोः) "क्विप्" (३-२-७६)।

**कव्यवाह ಕವ್ಯವಾಹ** (पु०) ದೇವತೆಗಳಿಗೆ ಹವಿಸ್ಸನ್ನು ತಲುಪಿಸುವ ಅಗ್ನಿದೇವತೆ. कव्यं वहति — वह (प्रापणे) "अण्" (३-२-१)। "ञ्युट्" (३-२-६५)। **–वाहनः –ವಾಹನಃ.**

**कशा ಕಶಾ** (स्त्री०) ಎತ್ತು, ಕುದುರೆ ಮೊದಲಾದುವುಗಳನ್ನು ಹೊಡೆಯುವ ಚಾವಟಿ, ಬಾರುಗೋಲು. कशति — कश (गतिशासनयोः) "अच्" (३-१-१३४)। "तेजोनिरोधसमताऽवहितेन यन्त्रा सम्यक्कशात्रयविचारवता नियुक्तः" माघ० ५-१०। ಉತ್ತಮ, ಮಧ್ಯಮ ಮತ್ತು ಅಧಮರೂಪವಾದ ಅಶ್ವಗಳಲ್ಲಿ ಮೃದು, ಸಮ ಮತ್ತು ನಿಷ್ಠುರರೂಪವಾದ ಮೂರು ರೀತಿಯಾದ ತಾಡನವನ್ನು ಸಂದರ್ಭಾನುಸಾರ ಪ್ರಯೋಗಿಸಬೇಕು.

**कशार्ह ಕಶಾರ್ಹ** (पु०) ಚಾವಟಿಯಿಂದ ಹೊಡೆಯಿಸಿ ಕೊಳ್ಳಲ್ಪಡುವ ದುಷ್ಟಕುದುರೆ, ಚಾವಟಿಯ ಏಟಿಗೆ ಅರ್ಹವಾದ ಕುದುರೆ. कशामर्हति — अर्ह (पूजायाम्) "अण्" (३-२-१)।

**कशिक ಕಶಿಕ** (पु०) ನಕುಲ, ಮುಂಗುಸಿ. कशति हिनस्ति सर्पम् — बाहु० "इकः"।

**कशिपु ಕಶಿಪು** (पु०) 1. ಅನ್ನ. 2. ವಸ್ತ್ರ, ಬಟ್ಟೆ. कशति दुःखम् — कश (गतिशासनयोः) "कुः" (उ० १-३७)। निपा०। 3. ಅನ್ನ ಮತ್ತು ವಸ್ತ್ರ. "कशिपुर्भक्ताच्छादनयोरेकोक्तया पृथक् तयोः पुंसि" मेदि०। (पुंन०) 4. ಶಯ್ಯೆ, ಹಾಸಿಗೆ. "क्लृप्तैः कशिपुभिः कान्तं पर्यङ्कव्यजनासनैः" भाग० ३-२३-१६। "अस्त्री कशिपुशय्यायां वस्त्रेऽन्ने तद्द्वयेऽपि च" नानार्थर०।

**कशेरुक ಕಶೇರುಕ** (न०) ಬೆನ್ನಿನ ಎಲುಬು, ಬೆನ್ನುಮೂಳೆ.

**कशेरु (रू) ಕಶೇರು (ರೂ)** (स्त्री०) ಬೆನ್ನಿನ ಎಲುಬು, ಬೆನ್ನುಮೂಳೆ. कं वायुं शृणाति — शृ (हिंसायाम्) "ऊः" एरश्चादेशश्च (उ०१-८८)। बाहु० वा "उः"। **कशेरुः ಕಶೇರುಃ.** स्वार्थे "कन्" (५-४-५)। **कशेरुका ಕಶೇರುಕಾ.**

**कश्चन ಕಶ್ಚನ** (अव्य०) ಯಾವನೋ ಒಬ್ಬ, ಒಬ್ಬ ಅನಿರ್ದಿಷ್ಟ ವ್ಯಕ್ತಿ. ಅಸಾಕಲ್ಯಾ (ಅಸಂಪೂರ್ಣಾ)ರ್ಥದಲ್ಲಿ ಇದು ಒಂದು ಪದವೆಂದು ಕೆಲವರ ಮತ. ಪಾಣಿನಿ ಮತ್ತು ಅಮರಕಾರರ ಮತದಲ್ಲಿ कः चन ಎಂದು ಎರಡು ಪದಗಳು. "दमघोषसुतेन कश्चन प्रतिशिष्टः प्रतिभानवानथ" माघ० १६-१। ಹೀಗೆಯೇ कःचित् कश्चित्, कश्चित्, केनचित्, कस्मैचित् ಇತ್ಯಾದಿ.

**कश्मल ಕಶ್ಮಲ** (न०) 1. ಕೊಳೆ. 2. ಪಾಪ. 3. ಸಂಮೋಹ, ಬುದ್ಧಿಭ್ರಂಶ. कश (गतिशासनयोः) "कलः" मुट् च (उ० १-१०६)। "कुतस्त्वा कश्मलमिदं विषमे समुपस्थितम्" गीता २-२। (वि०) 4. ಮಲಿನವಾದ, ಕೊಳೆಯಾದ.

**कश्मीर ಕಶ್ಮೀರ** (पु० ब० व०) 1. ಕಾಶ್ಮೀರ ದೇಶ. कश (गतिशासनयोः) "ईरन्" मुट् च (उ० ४-३२)। 2. ಕಾಶ್ಮೀರದೇಶನಿವಾಸಿಗಳು. 3. ಕಾಶ್ಮೀರದೇಶದ ದೊರೆಗಳು. कश्मीराणां राजा "अञ्" (वा० ४-१-१६६)। अञो "लुक्" (२-४-६२)। "शारदामठमारभ्य कुङ्कुमाद्रितटान्तकः। तावत् कश्मीरदेशः स्यात् पञ्चाशद्योजनात्मकः"।

**कश्मीरज ಕಶ್ಮೀರಜ** (पु०) 1. ಕೇಸರಿ. (वि०) 2. ಕಾಶ್ಮೀರ ದೇಶದಲ್ಲಿ ಹುಟ್ಟಿದವನು. कश्मीरे जायते।

**कश्मीरजन्मा ಕಶ್ಮೀರಜನ್ಮಾ** (पु०) ಕುಂಕುಮ ಕೇಸರಿ. कश्मीरे जन्म यस्य।

**कश्य ಕಶ್ಯ** (न०) 1. ಮದ್ಯ, ಹೆಂಡ. कशत्यनेन — कश (गतिशासनयोः) बाहु० "यः"। 2. ಅಶ್ವದ ಮಧ್ಯ ಭಾಗ, ಕುದುರೆಯ ಬೆನ್ನು. कशामर्हति — "यः" (५-१-६६)। (वि०) 3. ಚಾವಟಿಯ ಏಟಿಗೆ ಅರ್ಹವಾದ, ಚಾವಟಿಯಿಂದ ಹೊಡೆಯಲು ಅರ್ಹವಾದ. "कश्यं त्रिषु कशार्हे स्यात् क्लीबं मद्याश्वमध्ययोः" मेदि०।

**कश्यप ಕಶ್ಯಪ** (पु०) 1. ಬ್ರಹ್ಮನ ಮಾನಸಪುತ್ರನಾದ ಮರೀಚಿ ಮಹರ್ಷಿಯ ಮಗ. कश्यं पिबति — पा (पाने) "कः" (३-२-४)। "ब्रह्मणस्तनयो योऽभूत् मरीचिरिति विश्रुतः। कश्यपस्तस्य पुत्रोऽभूत् कश्यपानात् कश्यपः" मार्क०। [ಕಶ್ಯಪಮಹರ್ಷಿಯು ಬ್ರಹ್ಮನ ಮಾನಸಪುತ್ರನಾದ ಮರೀಚಿಮಹರ್ಷಿಯ ಮಗ. ಕರ್ದಮಪುತ್ರಿಯಾದ

ಕಲೆಯು ಈ ಋಷಿಯ ತಾಯಿ. ಈ ಮಹರ್ಷಿಯು ದಕ್ಷ ಪ್ರಜಾಪತಿಯ ಮಕ್ಕಳಾದ ಅದಿತಿ ದಿತಿ ಮೊದಲಾದ ಹದಿಮೂರು ಮಂದಿ ಕನ್ಯೆಯರನ್ನು ಮದುವೆಯಾಗಿ ಅನೇಕ ಮಂದಿ ಪ್ರಜೆಗಳನ್ನು ಪಡೆದನು. ದೈತ್ಯರು, ದೇವತೆಗಳು, ದಾನವರು, ಸಿದ್ಧರು, ಗಂಧರ್ವರು, ಅಪ್ಸರಸಿಯರು, ಯಕ್ಷರು, ಲತಾವೃಕ್ಷಗಳು ಮೊದಲಾದುವು, ಮಾಂಸಾಹಾರಿಗಳಾದ ದುಷ್ಟಮೃಗಗಳು, ಅಶ್ವ, ಅಶ್ವತರ, ಗರ್ದಭ, ಶ್ಯೇನ, ಗೃಧ್ರ, ಗೋವುಗಳು, ಅರುಣ, ಗರುಡ ಮತ್ತು ಸರ್ಪಗಳು ಕಶ್ಯಪನ ಸಂತಾನಗಳು.

ಕಶ್ಯಪನು ತಪಸ್ಸು ಮಾಡಿ ಬ್ರಹ್ಮನಿಂದ ವಿಷಹರವಿದ್ಯೆಯನ್ನು ಕಲಿತನು. ವರುಣನ ಗೋವನ್ನು ಯಜ್ಞಕ್ಕಾಗಿ ತಂದು ಅದನ್ನು ಹಿಂತಿರುಗಿಸದೆ ಭೂಮಿಯಲ್ಲಿ ಹುಟ್ಟುವಂತೆ ಶಾಪ ಹೊಂದಿದನು. ಶೃಂಗಿಯ ಶಾಪದಿಂದ ಸರ್ಪಗಳಿಗೆ ಹೆದರಿದ ಪರೀಕ್ಷಿತನು ಸಮುದ್ರಮಧ್ಯದಲ್ಲಿ ವಾಸಮಾಡುತ್ತಿದ್ದಾಗ ಅವನನ್ನು ಕಚ್ಚಲು ತಕ್ಷಕನು ಬ್ರಾಹ್ಮಣವೇಷದಿಂದ ಹೋಗುತ್ತಿರಲು ತನ್ನ ಮಂತ್ರಶಕ್ತಿಯಿಂದ ಪರೀಕ್ಷಿತನನ್ನು ಬದುಕಿಸಲು ಕಶ್ಯಪನೂ ಅಲ್ಲಿಗೆ ಹೊರಟನು. ಕಶ್ಯಪನ ಮಂತ್ರಶಕ್ತಿಯನ್ನು ಅನೇಕ ರೀತಿಯಲ್ಲಿ ಪರೀಕ್ಷಿಸಿದ ತಕ್ಷಕನು ಕಶ್ಯಪನನ್ನು ಉಪಾಯದಿಂದ ಹಿಂದಕ್ಕೆ ಕಳುಹಿಸಿಬಿಡುವನು.

ಗೋತ್ರಪ್ರವರ್ತಕರಾದ ಮಹರ್ಷಿಗಳಲ್ಲಿ ಕಶ್ಯಪ ಋಷಿಯೂ ಒಬ್ಬನು.] भा० आदि० २०, ३१, ४२, ६६ अध्यायाः। 2. ಒಂದು ಜಾತಿಯ ಮೃಗ. 3. ಮತ್ಸ್ಯ, ಮೀನು. 4. ಕಮಠ, ಆಮೆ.

**कष-हिसायाम्** (भ्वा० पर० सक० से०)। कषति। चकाष। अकषीत्, अकाषीत्। ಹಿಂಸಿಸು, ಪೀಡಿಸು.

**कष ಕಷ** (पु०) 1. ಸಾಣೆಕಲ್ಲು. 2. ಚಿನ್ನದ ಬಣ್ಣವನ್ನು ಪರೀಕ್ಷಿಸಲು ಉಪಯೋಗಿಸುವ ಒಂದು ಜಾತಿಯ ಕಲ್ಲು, ಒರೆಗಲ್ಲು. कषति — कष (हिसायाम्) "अच्" (३-१-१३४)। (वि०) 3. ಉಜ್ಜುವ. 4. ಒರೆಹಚ್ಚುವ. 5. ಅಳಿಸುವ. "छदहेम कषन्निवालसत् कषपाषाणनिभे नभस्तले" नैष० २-६९।

**कषण ಕಷಣ** (न०) 1. ಒರೆಹಚ್ಚುವುದು. 2. ಉಜ್ಜುವುದು, ತಿಕ್ಕುವುದು. कष (हिसायाम्) "ल्युट्" (३-३-११५)। "कषणकम्पनिरस्तमहाहिभिः क्षणविमत्त-मतङ्गजवर्जितैः" किरा० ५-४७।

**कषत् ಕಷತ್** (वि०) ಉಜ್ಜುತ್ತಿರುವ, ತಿಕ್ಕುತ್ತಿರುವ. कष (हिसायाम्) "शतृ" (३-२-१२४)। "छदहेम कषन्निवालसत्" नैष० २-६९।

**कषा ಕಷಾ** (स्त्री०) ಚಾವಟಿ, ಎತ್ತು ಕುದುರೆ ಮುಂತಾದುವನ್ನು ಹೊಡೆಯುವ ಬಾರುಗೋಲು. कष्यतेऽनया — कष (हिसायाम्) कर० "अच्" बाहु०।

**कषाकु ಕಷಾಕು** (पु०) 1. ಅಗ್ನಿ. 2. ಸೂರ್ಯ. कष (हिसायाम्) "काकुः" (उ० ३-७७)।

**कषाय ಕಷಾಯ** (पुंन०) 1. ಕಷಾಯರಸ, ಒಗರು ರಸ, ಆರು ಭೋಜ್ಯರಸಗಳಲ್ಲೊಂದು. कषति कण्ठम् — कष (हिसायाम्) "आयः" बाहु०। "तुवरस्तु कषायोऽस्त्री" अम०। (1) मधुरः, (2) अम्लः, (3) लवणः, (4) कटुः, (5) तिक्तः ಮತ್ತು (6) कषायः ಇವು ಆರು ಭೋಜ್ಯರಸಗಳು. ಅಪ್ಪು (ಜಲದಿಂದುಂಟಾದ) ರಸವು ಉಳಿದ ಭೂತಗಳ ಸಂಸರ್ಗದಿಂದ ಈ ಆರು ರಸಗಳಾಗಿ ಪರಿಣಮಿಸುವುದು. (1) ಪೃಥ್ವಿ ಮತ್ತು ಜಲಗುಣಬಾಹುಳ್ಯದಿಂದ ಮಧುರರಸ, (2) ಪೃಥ್ವಿ ಮತ್ತು ಅಗ್ನಿಗುಣಬಾಹುಳ್ಯದಿಂದ ಆಮ್ಲರಸ, (3) ಜಲ ಮತ್ತು ಅಗ್ನಿಗುಣಬಾಹುಳ್ಯದಿಂದ ಲವಣರಸ, (4) ವಾಯು ಮತ್ತು ಅಗ್ನಿಗುಣಬಾಹುಳ್ಯದಿಂದ ಕಟುರಸ, (5) ವಾಯು ಮತ್ತು ಆಕಾಶಗುಣಬಾಹುಳ್ಯದಿಂದ ತಿಕ್ತರಸ ಮತ್ತು (6) ಪೃಥ್ವಿ ಮತ್ತು ವಾಯುಗುಣಬಾಹುಳ್ಯದಿಂದ ಕಷಾಯ ರಸ. सुश्रुत० सूत्र० ४२-३। "यो वक्त्रं परिशोषयति जिह्वां स्तम्भयति कण्ठं बध्नाति हृदयं कर्षति पीडयति च स कषायः" सुश्रुत० सूत्र० ४२-९। ಪಂಚಭೂತಗಳು ಪರಸ್ಪರಸಂಸರ್ಗ,–ಉಪಕಾರ, –ಅನುಪ್ರವೇಶ (ಏಕಾತ್ಮೀಭಾವ)ಗಳಿಂದ ಎಲ್ಲಾ ಭೂತಗಳಲ್ಲೂ ಎಲ್ಲವೂ ಇದ್ದರೂ ಅವುಗಳ ಪ್ರಾಧಾನ್ಯದಿಂದ ಆಯಾ ಭೂತಗಳೆನಿಸಿಕೊಳ್ಳುವುವು. सुश्रुत० सूत्र० ४२-३। 2. ನಿರ್ಯಾಸ, ಮರದ ರಸ. "घृष्टो वटकषायेण अनुलिप्तः प्रियङ्गुणा। क्षीरेण षष्टिकान् भुक्त्वा सर्वपापैः प्रमुच्यते" भा० अनु०। 3. ವಿಲೇಪನ. "कर्णार्पितो लोध्रकषायरूक्षे गोरोचनाक्षेपनितान्तगौरे" कुमा० ७-१७। 4. ಅಂಗರಾಗ, ಮೈಗೆ ಸುವಾಸನೆಯ ಪುಡಿಯನ್ನು ಹಾಕುವಿಕೆ. 5. ಪರಿಮಳ, ಸುವಾಸನೆ. 6. ಅನುರಾಗ, ಪ್ರೇಮ. 7. ಕ್ವಾಥ, ಕಷಾಯ, ಔಷಧ ವಸ್ತುವಿನೊಡನೆ ಕುದಿಯಿಸಿ ಇಂಗಿಸಿದ ರಸ. 8. ಚಿತ್ತವಿಕ್ಷೋಭ, ಮನಸ್ಸಿನ ಅಶಾಂತಿ. "रागे क्वाथे कषायोऽस्त्री निर्यासे सौरभे रसे" वैज०। 9. ಕೆಂಪು. (पु०) 10. ರಾಗ ದ್ವೇಷ ಮೊದಲಾದ ದೋಷ. "आहारशुद्धौ सत्त्वशुद्धिः सत्त्वशुद्धौ ध्रुवा स्मृतिः। स्मृतिलम्भे

सर्वग्रन्थीनां विप्रमोक्षस्तस्मै मृदितकषायाय तमसः पारं दर्शयति" छान्दोग्य०। 11. ಶ್ಯೋನಾಕವೃಕ್ಷ, ಹಮ್ಮರ. 12. ಕಲಿಯುಗ. 13. ಕೆಂಪು ಮತ್ತು ಹಳದಿ ಮಿಶ್ರವಾದ ಬಣ್ಣ. (वि०) 14. ಸುವಾಸನೆಯಾಗಿರುವ, ಪರಿಮಳದಿಂದ ಕೂಡಿದ. "प्रत्यूषेषु स्फुटितकमलामोदमैत्रीकषायः" मेघ० १-३१। 15. ಕೆಂಪಗಿರುವ. "चूताङ्कुरास्वाद-कषायकण्ठः पुंस्कोकिलो यन्मधुरं चुकूज" कुमा० ३-३२। 16. ಪಟುವಾಗಿಲ್ಲದ, ಚುರುಕಾಗಿಲ್ಲದ. 17. ಕಷಾಯ ರಸದಿಂದ ಕೂಡಿದ. 18. ಚಿತ್ತವಿಕ್ಷೋಭವುಳ್ಳ, ಅಶಾಂತಿಯುಳ್ಳ. 19. ಅನುರಾಗದಿಂದ ಕೂಡಿದ.

**कषायवर्ग ಕಷಾಯವರ್ಗ** (पु०) ಕಷಾಯರಸವುಳ್ಳ ವಸ್ತುಗಳ ಗುಂಪು. न्यग्रोधादिः अम्बष्ठादिः प्रियङ्ग्वादिः रोध्रादिः [ವಿವರಕ್ಕೆ सुश्रुत० सूत्र० ३८ ನೋಡಿ] त्रिफला (ಅಳಲೆಕಾಯಿ, ತಾರೆಕಾಯಿ ಮತ್ತು ನೆಲ್ಲಿಕಾಯಿ), शल्लकी (ಆನೆಪೇಲ), जम्बु (ನೇರಳೆ), आम्रः (ಮಾವು), वकुलः (ಪವಳ), तिन्दुकः (ತೂಬರೆ) ಮುಂತಾದುವು ಕಷಾಯ ವರ್ಗಕ್ಕೆ ಸೇರಿದುವು.

**कषायित ಕಷಾಯಿತ** (वि०) 1. ಬಣ್ಣ ಹಾಕಿರುವ. 2. ಕೆಂಪಾಗಿರುವ, ಕೆಂಪಗೆ ಮಾಡಲ್ಪಟ್ಟಿರುವ. कषायोऽस्य सञ्जातः "इतच्" (५-२-३६)। "प्रियमिति वनिता नितान्तमागःस्मरणसरोषकषायितायताक्षी" माघ० ७-११। 3. ಕ್ಷೋಭೆಹೊಂದಿದ, ಅಶಾಂತವಾದ. "घुसृणैर्यत्र कषायिताशया" नैष० २-७७।

**कषायिन् ಕಷಾಯಿನ್** (पु०) 1. ಶಾಲವೃಕ್ಷ, ಮತ್ತಿಮರ. 2. ಖರ್ಜೂರದ ಮರ. कषायो निर्यासोऽस्त्यस्य "इनिः" (५-२-११५)। (वि०) 3. ಕೆಂಪುಬಣ್ಣದಿಂದ ಕೂಡಿದ.

**कषि ಕಷಿ** (वि०) 1. ಹಿಂಸಿಸುವ, ಪೀಡಿಸುವ. कष (हिंसायाम्) "इन्" (उ० ४-११७)।

**कषीका ಕಷೀಕಾ** (स्त्री०) ಒಂದು ಜಾತಿಯ ಪಕ್ಷಿ. कष (हिंसायाम्) "ईकन्" (उ० ४-१६)।

**कष्ट ಕಷ್ಟ** (न०) 1. ಪೀಡೆ, ಹಿಂಸೆ. 2. ವ್ಯಥೆ, ದುಃಖ. कष (हिंसायाम्) "क्तः" (३-२-१७४)। "इन्दुरादि-रजनिष्ट कलङ्की कष्टमत्र स भवानपि मा भूत्" नैष० ५-११९। (वि०) 3. ದುಃಖಕರವಾದ, ವ್ಯಥೆಯನ್ನು ಉಂಟುಮಾಡುವ. कष्टो मोहः। 4. ಹಿಂಸೆಯನ್ನು ಕೊಡುವ, ಪೀಡಿಸುವ. "बन्धनानि च कष्टानि परप्रेष्यत्वमेव च" मनु० १२-७८। 5. ಕಷ್ಟಸಾಧ್ಯವಾದ. 6. ತಿಳಿಯಲು ಕಷ್ಟವಾದ. कष्टं शास्त्रम्।

**कष्टकर ಕಷ್ಟಕರ** (वि०) 1. ಪೀಡಾಕರವಾದ, ಹಿಂಸೆಯನ್ನು ಉಂಟುಮಾಡುವ. कष्ट + डु कृञ् (करणे) "टः" (३-२-२०)। 2. ವ್ಯಥೆಯನ್ನುಂಟುಮಾಡುವ, ದುಃಖಕರವಾದ.

**कष्टकार ಕಷ್ಟಕಾರ** (वि०) "कष्टकर" ಪದದ ಅರ್ಥ. कष्टं करोति — डु कृञ् (करणे) "अण्" (३-२-१)।

**कष्टतर ಕಷ್ಟತರ** (वि०) ಎರಡರಲ್ಲಿ ಹೆಚ್ಚು ಕಷ್ಟವಾದ. अतिशयेन कष्टम्। "तरप्" (५-३-५७)। "तमप्" (५-३-५५)। –तमः –ತಮಃ.

**कष्टरिपु ಕಷ್ಟರಿಪು** (पु०) ಕಷ್ಟಸಾಧ್ಯನಾದ ಶತ್ರು, ಜಯಿಸಲು ಕಷ್ಟವಾದ ಶತ್ರು. कष्टो रिपुः। "प्राज्ञं कुलीनं शूरं च दक्षं दातारमेव च। कृतज्ञं धृतिमन्तं च कष्टमाहुररिं बुधाः" मनु० ७-२१०।

**कस-गतौ** (भ्वा० पर० सक० से०)। कसति। चकास। अकसीत्, अकासीत्। ಹೋಗು, ಚಲಿಸು, ನಡೆ.

**ಈ ಧಾತುವಿಗೆ ಉಪಸರ್ಗಗಳ ಯೋಗದಿಂದ ಉಂಟಾಗುವ ಅರ್ಥಭೇದಗಳು:—**

(1) निर्, निस् + कस = निष्कासः। निष्कासितः। ಹೊರಕ್ಕೆ ಅಟ್ಟು.

(2) वि + कस = विकसति। विकासः। 1. ಪ್ರಕಾಶಿಸು. 2. ಅರಳು. "विकसति हि पतङ्गस्योदये पुण्डरीकं द्रवति च हिमरश्मावुद्गते चन्द्रकान्तः" मालती० १-२७।

(3) प्र + वि + कस = प्रविकासः। ಹೆಚ್ಚು ಪ್ರಕಾಶಿಸು. "प्रविकसति चिराय द्योतिताशेषलोके दशशतकरमूर्ता-वक्षिणीव द्वितीये" माघ० ११-६३।

**कस-शातने** (अदा० आत्म० सक० से०)। कस्ते कसाते कसते। अकसिष्ट। ಉಜ್ಜು, ತಿಕ್ಕು.

**कस ಕಸ** (पु०) ಸಾಣೆಕಲ್ಲು. कस्ते — कस (शातने) "अच्" (३-१-१३४)।

**कसन ಕಸನ** (न०) 1. ಕಾಸರೋಗ. (स्त्री०) –ना –ನಾ. 2. ಜೇಡರ ಹುಳು. कस्ते हिनस्ति — कस (शातने) "ल्युः" (३-१-१३४)। "पिच्छिला कसनादंशात् रुधिरं शीतलं भवेत्" सुश्रुत०।

**कस्तूरिका ಕಸ್ತೂರಿಕಾ** (स्त्री०) ಕಸ್ತೂರಿ, ಒಂದು ಮೃಗದ ಮದ, ಕಸ್ತೂರೀಮೃಗದ ಹೊಕ್ಕುಳಿನಲ್ಲಿ ಸಿಕ್ಕುವ ಒಂದು ಸುಗಂಧದ್ರವ್ಯ. "सखीमुखायोत्सृजतीमपाङ्गात् कर्पूरकस्तूरिकयोः प्रवाहम्" नैष० १०-१०२।

**कस्तूरिकामृग ಕಸ್ತೂರಿಕಾಮೃಗ** (पु०) ಕಸ್ತೂರೀ ಮೃಗ. "कस्तूरिकामृगविमर्दसुगन्धिरेति रागीव सक्तिमधिकां विषयेषु वायुः" माघ० ४-६१।

**कस्तूरी ಕಸ್ತೂರೀ** (स्त्री०) ಒಂದು ಮೃಗದ ಮದ, ಕಸ್ತೂರೀಮೃಗದ ಹೊಕ್ಕುಳಿನಲ್ಲಿ ಸಿಕ್ಕುವ ಒಂದು ಸುಗಂಧ ದ್ರವ್ಯ. कसति गन्धोऽस्याः दूरतः — कस (गतौ) "ऊरः" (उ० ४-९०)। पृषो०। ಕಸ್ತೂರಿಯು ಕಾಮರೂಪೋದ್ಭವಾ, ನೈಪಾಳೀ ಮತ್ತು ಕಾಶ್ಮೀರಜಾ ಎಂದು ಮೂರು ವಿಧ. "कस्तूरी त्रिविधा स्मृता। कामरूपोद्भवा श्रेष्ठा नैपाली मध्यमा स्मृता। कामरूपोद्भवा कृष्णा नैपाली नीलवर्णयुक्। काश्मीरदेशसंभूता कस्तूरीत्वधमा मता" भावप्र०।

**कस्तूरीमृग ಕಸ್ತೂರೀಮೃಗ** (पु०) ಕಸ್ತೂರಿಯನ್ನು ಕೊಡುವ ಒಂದು ಮೃಗ.

**कस्मल ಕಸ್ಮಲ** (न०) 1. ಕಶ್ಮಲ, ಕೊಳೆ. 2. ಪಾಪ. 3. ಸಂಮೋಹ. कस (गतौ) "कलः" मुट् च (उ० १-१०६)।

**कस्वर ಕಸ್ವರ** (वि०) 1. ಹೋಗುವವನು, ನಡೆಯುವವನು. 2. ಪೀಡಿಸುವವನು. कस (गतौ शातने च) "वरच्" (३-२-१७५)।

**कहय ಕಹಯ** (पु०) ಸೂರ್ಯನ ಕುದುರೆ. कस्य सूर्यस्य हयः।

**कहोड ಕಹೋಡ** (पु०) ಒಬ್ಬ ಋಷಿ, ಉದ್ದಾಲಕ ಋಷಿಯ ಶಿಷ್ಯ, ಅಷ್ಟಾವಕ್ರನ ತಂದೆ. "उद्दालकस्य नियतः शिष्य एको नाम्ना कहोडेति बभव राजन्" भा० वन० १३४-८। [ವಿವರಕ್ಕೆ "अष्टावक्र" ಪದದಲ್ಲಿ ನೋಡಿ.] डस्य वा "लः" **कहोलः** ಎಂದೂ ಪ್ರಯೋಗವುಂಟು.

**कह्लार ಕಹ್ಲಾರ** (न०) ಎಳೆಗೆಂಪಿನ ಬಿಳಿನೈದಿಲೆ. के जले ह्लादते — ह्लादी (सुखे च) "अच्" (३-१-१३४)। पृषो०। "आह्लादिकह्लारसमीरणाहते पुरः पपाताम्भसि यामुने रजः" माघ० १२-६६।

**कह्व ಕಹ್ವ** (पुंस्त्री०) ಬಕಪಕ್ಷಿ. के जले ह्वयति — ह्वेञ् (स्पर्धायां शब्दे च) "कः" (वा० ३-२-५)।

**कांस ಕಾಂಸ** (वि०) ಕಂಸದೇಶದ ಜನರು, ಕಂಸದೇಶದಲ್ಲಿರುವ, ಕಂಸದೇಶದಲ್ಲಿ ಹುಟ್ಟಿದ. कंसो देशः अभिजनोऽस्य "अञ्" (४-३-९३)।

**कांसीकृत ಕಾಂಸೀಕೃತ** (वि०) ಕಂಚಿನ ಪಾತ್ರೆಯಾಗಿ ಮಾಡಲ್ಪಟ್ಟ. अकांस्यं कांस्यं कृतम् — कंसाय हितम् "छः" (५-१-५)। कंसीयम्। तस्य विकारः "यञ्" छस्य "लुक्" (४-३-१६८)। कांस्यम्। अकांस्यं कांस्यं कृतम् "च्विः" (५-४-५०)। यलोपः (६-४-१५२)। दीर्घः (७-४-२६)।

**कांस्य ಕಾಂಸ್ಯ** (न०) 1. ಕಂಚು, ತಾಮ್ರತವರಗಳಿಂದ ತಯಾರಾದ ಒಂದು ಲೋಹ. कंसाय पानपात्राय हितम् "छः" (५-१-५)। कंसीयम्। तस्य किकारः "यञ्" छलोपश्च (४-३-१६८)। "ताम्रायःकांस्यरैत्यानां त्रपुणः सीसकस्य च। शौचं यथार्हं कर्तव्यं क्षाराम्लोदकवारिभिः" मनु० ५-११४। 2. ಕಂಚಿನ ಜಾಗಟೆ. (पुंन०) 3. ಕಂಚಿನ ಕುಡಿಯುವ ಪಾತ್ರೆ. "कांस्यमुपहितसरोजपतद्भ्रमरौघभारगुरु राजयोषितः" माघ० १५-८१। "न पादौ धावयेत् कांस्ये कदाचिदपि भाजने" मनु० ४-६५।

**कांस्यकार ಕಾಂಸ್ಯಕಾರ** (पु०) ಕಂಚುಗಾರ, ಕಂಚಿನ ಪಾತ್ರೆ ತಯಾರಿಸುವವನು. कांस्यं तत्पात्रं करोति — डु कृञ् (करणे) "अण्" (३-२-१)।

**कांस्यताल ಕಾಂಸ್ಯತಾಳ** (पु०) ಕಂಚಿನ ಕೈತಾಳ, ಝಲ್ಲರಿ.

**कांस्यभाजन ಕಾಂಸ್ಯಭಾಜನ** (न०) ಕಂಚಿನ ಪಾತ್ರೆ.

**कांस्यमल ಕಾಂಸ್ಯಮಲ** (न०) ಕಿಲುಬು, ಕಂಚಿನ ಮೇಲಿನ ಕೊಳೆ.

**काक ಕಾಕ** (पु०) 1. ವಾಯಸ, ಕಾಗೆ. कायति — कै (शब्दे) "कन्" (उ० ३-४३)। "वसन्तकाले संप्राप्ते काकः काकः पिकः पिकः"। "यदेष सौधाग्रनटे पटाञ्चले चलेऽपि काकस्य पदार्पणग्रहः" नैष० १२-२१। "काकोऽपि जीवति चिराय बलिं च भुङ्क्ते" पञ्चतं०। ನಿಂದ್ಯಾರ್ಥದಲ್ಲಿ ಮತ್ತು ಹೀನಾರ್ಥದಲ್ಲಿ ಇದರ ಸಾಮ್ಯ ಕೊಡುವುದುಂಟು. "न त्वां काकमहं मन्ये" ನಿನ್ನನ್ನು ಕಾಗೆಗಿಂತಲೂ ಕಡೆಯಾಗಿ ಭಾವಿಸುತ್ತೇನೆ. 2. ಕಾಕದ್ವೀಪ, ಕಾಗೆಗಳೇ ಪ್ರಧಾನವಾಗಿರುವ ಒಂದು ಭೂಭಾಗ. (न०) 3. ಕಾಕಸ್ನಾನ, ತಲೆಯನ್ನು ಮಾತ್ರ ತೊಳೆದುಕೊಳ್ಳುವುದು. ನೀರಿನಲ್ಲಿ ಮುಳುಗಿ ಸ್ನಾನ ಮಾಡಲು ಹೆದರಿ ತಲೆಯನ್ನು ಮಾತ್ರ ನೀರಿನಲ್ಲಿ ಅದ್ದಿ ಮಾಡುವ ಸ್ನಾನವನ್ನು "काकस्नानम्" ಎಂದು ಹೇಳುವರು. 4. ಕಾಗೆಗಳ ಸಮೂಹ. काकानां समूहः "अण्" (४-२-३७)। 5. ಒಂದು ವಿಧ ಸುರತಬಂಧ. ["काकपद" ಪದದಲ್ಲಿ ನೋಡಿ] 6. ಸ್ವಲ್ಪ ನೀರು. ईषत् कम् ईषज्जलम् — "कादेशः" (६-३-१०५)।

**काककङ्गु ಕಾಕಕಂಗು** (पुं०) ಕಾಗೆಗೆ ಪ್ರಿಯವಾದ ನವಣೆ. काकप्रियः कङ्गुः।

**काकगवेषण ಕಾಕಗವೇಷಣ** (नं०) ವ್ಯರ್ಥವಾದ ಮತ್ತು ಅಪ್ರಯೋಜಕವಾದ ಕೆಲಸ.

**काकचिञ्चा ಕಾಕಚಿಂಚಾ** (स्त्री०) ಗುಲಗಂಜಿಯ ಬಳ್ಳಿ. काकवर्णा चिञ्चा।

**काकच्छद ಕಾಕಚ್ಛದ** (पुं०) ಕಾಡಿಗೆ ಸೊಗಟಿನ ಹಕ್ಕಿ. काकस्य छद इव छदो यस्य।

**काकण ಕಾಕಣ** (नं०) ಒಂದು ವಿಧ ಮಹಾಕುಷ್ಠರೋಗ. स्वार्थे "कन्"। **काकणकम् ಕಾಕಣಕಮ್.** ಮಹಾ ಕುಷ್ಠವು (1) ಅರುಣ, (2) ಉದುಂಬರ, (3) ಋಷ್ಯಜಿಹ್ವ, (4) ಕಪಾಲ, (5) ಕಾಕಣಕ, (6) ಪುಂಡರೀಕ ಮತ್ತು (7) ದದ್ರುಗಳೆಂದು ಏಳು ವಿಧ. सुश्रुत० निदान० ५-५।

**काकतालीय ಕಾಕತಾಳೀಯ** (नं०) 1. ಅನಿರೀಕ್ಷಿತವಾಗಿ ಸಂಭವಿಸಬಹುದಾದ ಕಾರ್ಯದ ಒಂದು ನ್ಯಾಯ, ಎದುರು ನೋಡದೆ ಅಕಸ್ಮಾತ್ತಾಗಿ ನಡೆಯುವ (ಉಂಟಾಗುವ) ಕಾರ್ಯದ ಬಗ್ಗೆ ಒಂದು ನ್ಯಾಯ. ಇದು ಕಾಕತಾಳೀಯ ವಾದುದು. काकागमनमिव तालपतनमिव काकतालम्। ದೇವದತ್ತನ ಆಗಮನ ಮತ್ತು ಆ ವೇಳೆಗೆ ಸರಿಯಾಗಿ ಯುವತಿಯ ಸಮಾಗಮ ಇವೆರಡೂ (ಅನಿರೀಕ್ಷಿತವಾಗಿ ಒದಗಿದುದರಿಂದ) ಕಾಗೆಯು ಬರುವ ವೇಳೆಯಲ್ಲಿ ಅನಿರೀಕ್ಷಿತವಾಗಿ ಒದಗಿದ ತಾಳಫಲಪತನದಂತಾದುವು. ದೇವದತ್ತ ಮತ್ತು ಯುವತಿಯ ಸಂಭೋಗವು, ಕಾಗೆಯು ಅನಿರೀಕ್ಷಿತವಾಗಿ ಬಿದ್ದ ಹಣ್ಣನ್ನು ಭುಜಿಸಿದಂತಾಯಿತು. ಆದುದರಿಂದ ಇವರಿಬ್ಬರ ಸಮಾಗಮ ಮತ್ತು ಸಂಭೋಗ ಗಳು ಕಾಕತಾಳೀಯವಾದುವು. काकतालमिव काकतालीयम्। ಸಮಾಸಾರ್ಥದಲ್ಲಿ ಕಾಕ ತಾಲ ಪದಗಳು ಕಾಕಾ ಗಮನ ಮತ್ತು ತಾಳಫಲಪತನರೂಪವಾದ ಕ್ರಿಯಾ ವಾಚಕಗಳು. ಕಾಕಾಗಮನ ಮತ್ತು ತಾಳಪತನಗಳು ದೇವದತ್ತನ ಮತ್ತು ಯುವತಿಯ ಸಮಾಗಮಗಳಿಗೆ ಉಪಮಾನ. ಕಾಕಕೃತ ತಾಳ ಫಲೋಪಭೋಗವು ಯುವತಿ ಯೊಡನೆ ದೇವದತ್ತನ ಸಂಭೋಗಕ್ಕೆ ಉಪಮಾನ. ಇಲ್ಲಿ (1) ದೇವದತ್ತ-ಯುವತಿಯರ ಸಮಾಗಮವೂ, (2) ಯುವತಿಯೊಡನೆ ದೇವದತ್ತಕೃತಸಂಭೋಗವೂ ಅವಿತರ್ಕಿತವಾಗಿ (ಅನಿರೀಕ್ಷಿತವಾಗಿ) ಸಂಭವಿಸಿದುದರಿಂದ "ಕಾಕತಾಳೀಯ" ನ್ಯಾಯದಂತಾಯಿತು. ಮೊದಲ ನೆಯದು ಸಮಾಸಾರ್ಥ. ಎರಡನೆಯದು "छ" ಪ್ರತ್ಯಯಾರ್ಥ. [ಇನ್ನೂ ವಿವರಕ್ಕೆ "लुप्तोपमा" ಪದದಲ್ಲಿ ನೋಡಿ.] "यत्तया मेलनं तत्र लाभो मे यश्च तद्रतेः। तदेतत्काकतालीयमवितर्कितसंभवम्" चन्द्रा०। (अव्य०) 2. ಅಕಸ್ಮಾತ್ತಾಗಿ, ಅನಿರೀಕ್ಷಿತವಾಗಿ. "काकतालीयवत्प्राप्तं दृष्ट्वापि निधिमग्रतः। न स्वयं दैवमादत्ते पुरुषार्थमपेक्षते" हितो०।

**काकतालुकिन् ಕಾಕತಾಲುಕಿನ್** (वि०) ಅಧಮ, ನೀಚ.

**काकतिन्दुक ಕಾಕತಿಂದುಕ** (पुं०) ಕಾಗೆ ತೂಬರೆ ಗಿಡ. काकप्रियः तिन्दुकः।

**काकतुण्ड ಕಾಕತುಂಡ** (पुं०) ಕಾಲಾಗುರು, ಕೃಷ್ಣಾಗುರು.

**काकध्वज ಕಾಕಧ್ವಜ** (पुं०) ಬಡಬಾಗ್ನಿ. काकमीषज्जलं बाष्पं ध्वज इवास्य।

**काकनासिका ಕಾಕನಾಸಿಕಾ** (स्त्री०) ಕಾಗೆ ತೊಂಡೆಗಿಡ. काकस्य नासिकेव फलमस्याः।

**काकनिद्रा ಕಾಕನಿದ್ರಾ** (स्त्री०) ಅಲ್ಪ ನಿದ್ರೆ, ತೂಕಡಿಕೆ.

**काकपक्ष ಕಾಕಪಕ್ಷ** (पुं०) 1. ಜುಲ್ಪಿಕೂದಲು. काकस्य पक्षः तदाकारोऽस्त्यस्य। 2. ಬಾಲಕರ ಕಿವಿಯ ಪಕ್ಕದ ಜುಟ್ಟು, ತಲೆಯ ಪಕ್ಕದ ಕೂದಲು. "काकपक्षधरमेत्य याचितस्तेजसां हि न वयः समीक्ष्यते" रघु० ११-१।

**काकपद ಕಾಕಪದ** (पुं०) 1. ಒಂದು ವಿಧ ಸುರತಬಂಧ, ರತಿಕ್ರೀಡೆಯ ಬಂಧದ ಒಂದು ಭೇದ. "पादौ द्वौ स्कन्धमूलस्थौ क्षिप्त्वा लिङ्गं भगे लघु। कामयेत्कामुकीं कामी बन्धः काकपदो मतः" रतिम०। (नं०) 2. ಕಾಗೆಯ ಕಾಲಿನ ಹೆಜ್ಜೆಗೆ ಸಮಾನವಾದ ಅಳತೆ, ಕಾಗೆಯ ಕಾಲಿನಷ್ಟು ವಿಸ್ತಾರ.

**काकपीलुक ಕಾಕಪೀಲುಕ** (पुं०) ಕಾಗೆ ತೂಬರೆ ಗಿಡ.

**काकपुष्ट ಕಾಕಪುಷ್ಟ** (पुं०) ಕೋಗಿಲೆ, ಕಾಗೆಯಿಂದ ಸಾಕಲ್ಪಟ್ಟ ಒಂದು ಹಕ್ಕಿ. काकेन पुष्टः। ಕೋಗಿಲೆಯು ಕಾಗೆಯ ಗೂಡಿನಲ್ಲಿ ಮೊಟ್ಟೆಯಿಡುವುದು. ಕಾಗೆಯು ಅದು ತನ್ನ ಮೊಟ್ಟೆಯೆಂದು ತಿಳಿದು ಮೊಟ್ಟೆಯು ಒಡೆದು ರೆಕ್ಕೆ ಬರುವವರೆಗೂ ಅದನ್ನು ಸಾಕುವುದು. ಮೊಟ್ಟೆಯು ಒಡೆದ ಮೇಲೆ ಮರಿಗೆ ಹಾರುವ ಶಕ್ತಿ ಬಂದಕೂಡಲೆ ಹಾರಿ ಹೋಗಿ ಕೋಗಿಲೆಯ ಗುಂಪಿಗೆ ಸೇರಿಕೊಳ್ಳುವುದು. ಅದರಿಂದಲೇ "वसन्तकाले संप्राप्ते काकः काकः पिकः पिकः" ಎಂಬ ವಚನವಿರುವುದು.

**काकपेय ಕಾಕಪೇಯ** (वि०) ಕಾಗೆಯು ಕುಡಿಯಬಹುದಾದಷ್ಟು ನೀರುಳ್ಳ, ಸ್ವಲ್ಪ ಅಥವಾ ತುಂಬಿದ ನೀರುಳ್ಳ. काकेन पीयते—पा (पाने) "यत्" (३-१-९७)।

"काकपेया नदी" सि० कौ०। ಕಾಗೆಯು ಕುಡಿಯಬೇಕಾದರೆ ನೀರು ತುಂಬಿರಬೇಕು. ಇದರಿಂದ ಸ್ತುತಿಯೂ, ಕೇವಲ ಕಾಗೆಯು ಕುಡಿಯುವಷ್ಟು ನೀರು ಎಂದು ನಿಂದೆಯೂ ತೋರುವುದು.

**काकफल ಕಾಕಫಲ** (पु०) 1. ಬೇವಿನಮರ. काकप्रियं फलमस्य। ಬೇವಿನ ಹಣ್ಣು ಕಹಿಯಾಗಿದ್ದರೂ ಕಾಗೆಗೆ ಪ್ರಿಯವಾದುದು. (न०) 2. ಬೇವಿನ ಹಣ್ಣು. काकप्रियं फलम्।

**काकभीरु ಕಾಕಭೀರು** (पु०) ಕಾಗೆಗೆ ಹೆದರುವ ಒಂದು ಹಕ್ಕಿ, ಗೂಬೆ.

**काकमाची ಕಾಕಮಾಚೀ** (स्त्री०) ಕಾಚಿಗಿಡ, ಗಣಿಕೆಗಿಡ. काकान् मचते — मचि (धारणोच्छ्रायपूजनेषु) "अण्" (३-२-१)। पृषो०। गौरा० "ङीष्"।

**काकमुख ಕಾಕಮುಖ** (न०) 1. ಇಕ್ಕುಳ. काकस्य मुखमिव मुखं यस्य। (वि०) 2. ಕಾಗೆಯಂತೆ ಮುಖವುಳ್ಳವನು.

**काकमुद्गा ಕಾಕಮುದ್ಗಾ** (स्त्री०) ಕಾಡು ಹೆಸರುಗಿಡ. काकेन ईषज्जलेन मुदं गच्छति — गम्लृ (गतौ) "डः" (३-२-४८)।

**काकरुत ಕಾಕರುತ** (न०) ಕಾಗೆಯ ಶಬ್ದ, ಕಾಗೆಯ ಕೂಗು. काकस्य रुतम्। "दिवा काकरुताद्भीता रात्रौ तरति नर्मदाम्"।

**काकल ಕಾಕಲ** (न०) 1. ಕಂಠದ ಉಬ್ಬಿದ ಪ್ರದೇಶ. 2. ಕಂಠಮಣಿ. ईषत् कलो यस्मात्। "स्यात् काकलं कण्ठमणिः" त्रिकाण्ड०। 3. ದ್ರೋಣಕಾಕ, ದೊಡ್ಡ ಜಾತಿಯ ಕಾಗೆ.

**काकली ಕಾಕಲೀ** (स्त्री०) ಸೂಕ್ಷ್ಮವಾದ ಮತ್ತು ಅಸ್ಫುಟವಾದ ಮಧುರ ಧ್ವನಿ. ईषत्कलः काकालः गौरा० "ङीष्" (४-१-४१)। "काकली तु कले सूक्ष्मे" अम०। "सहकारकिसलयमकरन्दास्वादनरक्तकण्ठानां मधुकरकलकण्ठानां काकलीकलकलेन" दशकु०।

**काकस्वर ಕಾಕಸ್ವರ** (पु०) 1. ಕರ್ಕಶಧ್ವನಿ. (वि०) 2. ಕರ್ಕಶಧ್ವನಿಯುಳ್ಳ.

**काका ಕಾಕಾ** (स्त्री०) 1. ಕಾಗೆ ತೊಂಡೆಗಿಡ. 2. ಕಾಕೋಲಿಯೆಂಬ ಒಂದು ಔಷಧದ ಗಿಡ. 3. ಕಾಚಿಗಿಡ, ಗಣಿಕೆಗಿಡ. 4. ಕಲ್ಹತ್ತಿಗಿಡ, ಬ್ರಹ್ಮದಂಡಿ. 5. ಗುಲಗಂಜಿಗಿಡ. "काका स्यात्काकजङ्घायां काकोलीकाकनासयोः। रक्तिकायां मलप्वां च काकमाच्यां च योषिति" मेदि०।

**काकाक्षिगोलकन्याय ಕಾಕಾಕ್ಷಿಗೋಳಕನ್ಯಾಯ** (पु०) ಕಾಗೆಯ ಕಣ್ಣುಗುಡ್ಡೆಯಂತಿರುವ ಒಂದು ನ್ಯಾಯ. काकस्य अक्षिगोलकमिव न्यायः। ಕಾಗೆಗೆ ಇರುವುದು ಒಂದೇ ಕಣ್ಣು. ಈ ಒಂದೇ ನೇತ್ರೇಂದ್ರಿಯವು ಸಮಯ ಬಂದಂತೆಲ್ಲಾ ಎರಡು ಕಣ್ಣುಗುಡ್ಡೆಗಳಲ್ಲೂ ಚಲಿಸುತ್ತ ಎರಡು ಕಣ್ಣುಗಳಿಗೂ ಉಪಕಾರಕವಾಗಿರುವಂತೆ ಒಂದು ವಾಕ್ಯದಲ್ಲಿ ಪ್ರಯುಕ್ತವಾದ ಒಂದೇ ಪದವು ವಾಕ್ಯದ ಎರಡು ಭಾಗಗಳಿಗೂ ಅನ್ವಯಿಸಿ ಪ್ರಕೃತಾರ್ಥವನ್ನು ಪೂರೈಸುವುದು ಎಂಬಲ್ಲಿ ಇದರ ಅನ್ವಯ.

**काकाङ्गी ಕಾಕಾಂಗೀ** (स्त्री०) ಕಾಕಜಂಘಾವೃಕ್ಷ, ಕಾಗೆ ತೊಂಡೆಗಿಡ. काकस्याङ्गं जङ्घेवाकारोऽस्याः।

**काकादनी ಕಾಕಾದನೀ** (स्त्री०) 1. ಗುಲಗಂಜಿಗಿಡ. 2. ಬಿಳಿ ಗುಲಗಂಜಿಗಿಡ. काकैरद्यते–अद (भक्षणे) "ल्युट्" बाहु०।

**काकार ಕಾಕಾರ** (वि०) ನೀರನ್ನು ಎರಚುವ, ನೀರನ್ನು ಚೆಲ್ಲುವ. कं आकिरति–आ + कृ "अण्" (३-२-१)।

**काकाराति ಕಾಕಾರಾತಿ** (पु०) ಕಾಗೆಯ ಶತ್ರು, ಗೂಬೆ. काकस्यारातिः।

**काकारि ಕಾಕಾರಿ** (पु०) ಕಾಗೆಯ ಶತ್ರು, ಗೂಬೆ. काकस्यारिः।

**काकि ಕಾಕಿ** (पु०) ಕಾಗೆಯ ಮರಿ. काकस्यापत्यम् "इञ्" (४-१-९५)।

**काकिणी ಕಾಕಿಣೀ** (स्त्री०) 1. ಕವಡೆ, ಕವಡೆಯ ನಾಣ್ಯ. 2. ಇಪ್ಪತ್ತು ಕವಡೆಗಳ ಬೆಲೆ ಬಾಳುವ ನಾಣ್ಯ. 3, ಒಂದು ಪಣದ ನಾಲ್ಕನೆಯ ಒಂದು ಭಾಗ. 4. ಒಂದು ಮೊಳ, 18 ಅಂಗುಲಗಳ ಅಳತೆಯ ಕೋಲು. 5. ಗುಲಗಂಜಿ. काकम् अणति — अण (शब्दे) "अण्" (३-२-१)। पृषो०। "काकिणी पणतुर्यांशे मानदण्डे च दृश्यते। कृष्णलैकवराटयोः स्यादुन्मानस्यांशकेऽपि च" मेदि०।

**काकिनी ಕಾಕಿನೀ** (स्त्री०) 1. ಪಣದ ನಾಲ್ಕನೆಯ ಒಂದು ಭಾಗ. 2' ಮಾಷಕದ ನಾಲ್ಕನೆಯ ಒಂದು ಭಾಗ. (5 ಗುಲಗಂಜಿಗಳ ತೂಕ ಒಂದು ಮಾಷಕ). 3. ಕವಡೆ. 4. ಗುಲಗಂಜಿ. काकम् अनति—अन (प्राणने) "अण्" (३-२-१)। पृषो०। "काकिनी पणपादेऽपि माषपादे वराटके" मेदि०। "यः काकिनीमप्यपथप्रपन्नां समुद्धरेन्निष्कसहस्रतुल्यम्" हितो० ३-१२३।

**काकिल ಕಾಕಿಲ** (पु०) ಕಂಠದ ಉನ್ನತ ಪ್ರದೇಶ, ಕುತ್ತಿಗೆಯ ಮೇಲು ಭಾಗ.

**काकी ಕಾಕೀ** (पु०) 1. ಕಂಠದ ದೋಷ, ಕಂಠದಲ್ಲಿ ಹೊರಡುವ ಒಂದು ಕೆಟ್ಟ ಸ್ವರ, ಬಹಳ ತಗ್ಗಿದ ಸ್ವರ. "काकीत्याद्याः कण्ठदोषास्तत्र नृलिङ्गकः। अगम्भीरस्वरः" वैज०। (स्त्री०) 2. ಹೆಣ್ಣು ಕಾಗೆ. काक जाति० "ङीष्" (४-१-६३)। "काक्या कनकसूत्रेण कृष्णसर्पो निपातितः" हितो० २-१२०। 3. ಕಶ್ಯಪನ ಪತ್ನಿಯಾದ ತಾಮ್ರೆಯ ಮಗಳು, ಗೂಬೆಗಳ ತಾಯಿ. "काकीं श्येनीं तथा भासीं धृतराष्ट्रीं तथा शुकीम्। ताम्रा तु सुषुवे देवी पञ्चैता लोकविश्रुताः। उलूकान् सुषुवे काकी" भा० आदि० ६६-५६, ५७। 4. ಗಣಿಕೆಗಿಡ.

**काकु ಕಾಕು** (स्त्री०) 1. ಕೋಪ ದುಃಖ ಭಯ ಇವುಗಳಿಂದ ವಿಕಾರ ಹೊಂದಿದ ಧ್ವನಿ. कक (लौल्योपतापयोः) "उण्" बाहु०। "काकुः स्त्रियाम् विकारो यः शोकभीत्यादिभिर्ध्वनेः" अम०। "भिन्नकण्ठध्वनिर्धीरैः काकुरित्यभिधीयते" सा० द०। "जातप्रीतिर्या मधुरेणानुवनान्तं कामे कान्ते सारसिकाकाकुरुतेन" माघ० ६-७६। 2. ವಿರುದ್ಧಾರ್ಥವನ್ನುಂಟುಮಾಡುವ नञ् ಮೊದಲಾದುದು. 3. ಶೋಕಧ್ವನಿ, ವಿಲಾಪ.

**काकुत्स्थ ಕಾಕುತ್ಸ್ಥ** (पु०) 1. ಕಕುತ್ಸ್ಥ ವಂಶದಲ್ಲಿ ಹುಟ್ಟಿದವನು, ಕಕುತ್ಸ್ಥರಾಜನ ವಂಶದವನು. ककुत्स्थस्य अपत्यम् "अण्" (४-१-११२)। "इक्ष्वाकुवंश्यः ककुदं नृपाणां ककुत्स्थ इत्याहितलक्षणोऽभूत्। काकुत्स्थशब्दं यत उन्नतेच्छाः श्लाघ्यं दधत्युत्तरकोसलेन्द्राः" रघु० ६-७१। 2. ಅಜ, ದಶರಥ, ಶ್ರೀರಾಮ, ಲಕ್ಷ್ಮಣ ಮುಂತಾದವರು. "काकुत्स्थमालोकयतां नृपाणां मनो बभूवेन्दुमतीनिराशम्" रघु० ६-२। "असज्जनेन काकुत्स्थः प्रयुक्तमथ दूषणम्। न चक्षमे शुभाचारः स दूषणमिवात्मनः" रघु० १२-४६। (पु० द्विव०) 3. ಶ್ರೀರಾಮ ಮತ್ತು ಲಕ್ಷ್ಮಣ. "तं विनिष्पिष्य काकुत्स्थौ पुरा दूषयति स्थलीम्। गन्धेनाशुचिना चेति वसुधायां निचख्नतुः" रघु० १२-३०।

**काकुद ಕಾಕುದ** (न०) ತಾಲುಪ್ರದೇಶ, ದವಡೆ. काकुं ददाति — डु दाञ् (दाने) "कः" (३-२-४)।

**काकोदुम्बर ಕಾಕೋದುಂಬರ** (पु०) ಕಲ್ಲತ್ತಿಗಿಡ, ಬ್ರಹ್ಮಮೇಡಿ. काकप्रियः उदुम्बरः। स्वार्थे "कन्"। –उदुम्बरिका –ಉದುಂಬರಿಕಾ.

**काकोदर ಕಾಕೋದರ** (पु०) ಸರ್ಪ, ಹಾವು. कुत्सितं कुटिलं अकति — अक (कुटिलायां गतौ) "अच्" (३-१-१३४)। कोः कादेशः। काकमुदरं यस्य। स्त्रियाम् जाति० "ङीष्" (४-१-४१)। **काकोदरी ಕಾಕೋದರೀ.**

**काकोल ಕಾಕೋಲ** (पु०) 1. ದೊಡ್ಡಜಾತಿಯ ಕಾಗೆ, ಮಂಡಕಾಗೆ. कक (लौल्ये) + णिच् "ओलच्" बाहु०। 2. ಕುಂಬಾರ. कं जलमाकोलति—आ + कुल (संस्त्याने) "अण्" (३-२-१)। (न०) 3. ಒಂದು ನರಕ. (पुंन०) 4. ವಿಷ. "काकोलं नरकान्तरे। ना कुलाले द्रोणकाके विषभेदे तु न स्त्रियाम्" मेदि०।

**काकोलूक ಕಾಕೋಲೂಕ** (न०) ಕಾಗೆ ಮತ್ತು ಗೂಬೆ. काकश्च उलूकश्च अनयोः समाहारः। "येषां च विरोधः शाश्वतिकः" (२-४-९)।

**काकोलूकिका ಕಾಕೋಲೂಕಿಕಾ** (स्त्री०) ಕಾಗೆ ಗೂಬೆಗಳ ವೈರ. काकोलूक "वुन्" (४-३-१२५)।

**काकोलूकीय ಕಾಕೋಲೂಕೀಯ** (न०) ಕಾಗೆ ಮತ್ತು ಗೂಬೆ ಇವುಗಳನ್ನು ಕುರಿತ ಗ್ರಂಥ (ಕಥೆ). काकोलूकमधिकृत्य कृतो ग्रन्थः "छः" (४-२-११४)।

**काक्ष ಕಾಕ್ಷ** (पु०) ಕಟಾಕ್ಷ, ಕಡೆಗಣ್ಣಿನ ನೋಟ. कुत्सितम् अक्षि यस्य "षच्" (५-४-११३)। कोः कादेशः (६-३-१०४)। "आज्ञालाभोन्मुखो दूरात् काक्षेणानादरेक्षितः" भट्टि० ५-२४।

**काक्षि-काङ्क्षायाम्** (भ्वा० पर० सक० से०) काङ्क्षति। चकाङ्क्ष। अकाङ्क्षीत्। ಅಪೇಕ್ಷಿಸು, ಬಯಸು. "वृक्षान्तरं काङ्क्षति षट्पदाली" रघु० ६-६९। "यो न हृष्यति न द्वेष्टि न शोचति न काङ्क्षति" गीता १२-१७।

**कर्मणि:** काङ्क्ष्यते। चकाङ्क्षे। काङ्क्षिता। काङ्क्ष्यताम्। अकाङ्क्षि। अकाङ्क्षिष्यत।

**णिचि:** काङ्क्षयति, — ते। काङ्क्षयाञ्चकार, — चक्रे, — बभूव, — आस। काङ्क्षयिता। काङ्क्षयतु, — ताम्। अकाङ्क्षयत्, — त। अचकाङ्क्षत्, — त।

**सनि:** चिकाङ्क्षति। चिकाङ्क्षिषांचकार,—बभूव,—आस। चिकाङ्क्षिषिता। चिकाङ्क्षिषतु। अचिकाङ्क्षिषत्। अचिकाङ्क्षिषीत्।

**कृत्सु:** काङ्क्षितव्यः। काङ्क्षणीयः। काङ्क्ष्यः। काङ्क्षितः। काङ्क्षितवान्। काङ्क्षन्, काङ्क्षन्ती। काङ्क्षितुम्। कङ्क्षितम्। काङ्क्षणम्। काङ्क्षित्वा। आकाङ्क्ष्य। काङ्क्षंकाङ्क्षम्। काङ्क्षित्वा काङ्क्षित्वा।

**ण्यन्तात् कृत्सु:** काङ्क्षयितव्य:। काङ्क्षणीय:। काङ्क्ष्य:। काङ्क्षित:। काङ्क्षितवान्। काङ्क्षयन्, काङ्क्षयन्ती। काङ्क्षयमाण:। काङ्क्षयितुम्। काङ्क्षितम्। काङ्क्षणम्। काङ्क्षयित्वा। आकाङ्क्ष्य। काङ्क्षंकाङ्क्षम्। काङ्क्षयित्वा काङ्क्षयित्वा।

**ಈ ಧಾತುವಿಗೆ ಉಪಸರ್ಗಗಳ ಯೋಗದಿಂದ ಉಂಟಾಗುವ ಅರ್ಥಭೇದಗಳು:**

(1) अभि + काक्षि = अभिकाङ्क्षति। ಎದುರಾಗಿ ನಿಂತು ಅಪೇಕ್ಷಿಸು. "अत्यर्थमभिकाङ्क्षामि मृगयां सरयूवने" रामा०।

(2) आ + काक्षि = आकाङ्क्षति। आचकाङ्क्ष। ಚೆನ್ನಾಗಿ ಅಪೇಕ್ಷಿಸು. "श्री: साभिलाषापि गुरोरनुज्ञां धीरेव कन्या पितुराचकाङ्क्ष" रघु० ५-३८।

(3) प्रति + काक्षि = प्रतिकाङ्क्षति। ಎದುರು ನೋಡು. "त्वामेव प्रतिकाङ्क्षन्ति पर्जन्यमिव कर्षका:" रामा०।

**काक्षी ಕಾಕ್ಷೀ** (स्त्री०) 1. ತೊಗರಿಗಿಡ. कक्षे भवा "अण्" (४-३-५३)। "काक्षी मृत्स्ना तुवरिका" अम०। 2. ಸೌರಾಷ್ಟ್ರದೇಶದ ಮಣ್ಣು. "काक्षी तुवरिकायां च सौराष्ट्रमृद्यपि स्त्रियाम्" मेदि०।

**काक्षीव ಕಾಕ್ಷೀವ** (पु०) 1. ನುಗ್ಗೆ ಗಿಡ. ईषत् क्षीबयति—क्षीबृ (मदे)+णिच् "अच्" (३-१-१३४)। 2. ಗೌತಮನಿಂದ ಔಶೀನರಿಯಲ್ಲಿ ಜನಿಸಿದ ಮಗ. "शूद्रायां गौतमो यत्र महात्मा संशितव्रत:। औशीनर्यामजनयत् काक्षीवाद्यान् सुतान् मुनि:" भा० सभा० २१-५।

**काक्षीवत् ಕಾಕ್ಷೀವತ್** (पु०) 1. ದೀರ್ಘತಮಸ್ಸೆಂಬ ಋಷಿಯಿಂದ ಶೂದ್ರಸ್ತ್ರೀಯಲ್ಲಿ ಜನಿಸಿದ ಒಬ್ಬ ಮಗ. [ವಿವರಕ್ಕೆ "दीर्घतमस्" ಪದದಲ್ಲಿ ನೋಡಿ] भा० आदि० ११३। 2. ಚಂಡಕೌಶಿಕನ ತಂದೆಯಾದ ಗೌತಮಋಷಿ. "अथ कक्षीवत: पुत्रं गौतमस्य महात्मन:। शुश्राव तपसि श्रेष्ठमुदारं चण्डकौशिकम्" भा० सभा० १७।

**काग ಕಾಗ** (पु०) ಕಾಗೆ, ವಾಯುಸ. केति शब्दं गायति—गै (शब्दे) "क:" (३-२-४)।

**कागद ಕಾಗದ** (न०) ಕಾಗದ, ಲೇಖನದ ಆಧಾರ, ಬರವಣಿಗೆಯ ಪತ್ರ. काग: कागवर्णो मस्यादिर्दीयतेऽत्र + डु दाञ् (दाने) "क:" (वा०३-३-५८)। "भूर्जे वा वसने रक्ते क्षौमे वा तालपत्रके। कागदे वाष्टगन्धेन पञ्चगन्धेन वा पुन:। त्रिगन्धेनैकगन्धेन विलिख्य धारयेन्नर:" इति मन्त्रकल्पद्रुम:।

**काग्नि ಕಾಗ್ನಿ** (पु०) 1. ಸ್ವಲ್ಪವಾದ ಅಗ್ನಿ. ईषदग्नि:—को: कादेश: (६-३-१०५)।

**काङ्क्षण ಕಾಂಕ್ಷಣ** (न०) ಅಪೇಕ್ಷಿಸುವಿಕೆ. काक्षि (काङ्क्षायाम्) भावे "ल्युट्" (३-३-११५)।

**काङ्क्षणीय ಕಾಂಕ್ಷಣೀಯ** (वि०) 1. ಅಪೇಕ್ಷಿಸಲ್ಪಡುವ. 2. ಅಪೇಕ್ಷಿಸಲು ಯೋಗ್ಯವಾದ. 3. ಅಪೇಕ್ಷಿಸಲು ಶಕ್ಯವಾದ. काक्षि (काङ्क्षायाम्) कर्म० अर्हादौ च "अनीयर्" (३-१-९६)।

**काङ्क्षत् ಕಾಂಕ್ಷತ್** (वि०) ಅಪೇಕ್ಷಿಸುತ್ತಿರುವ. काक्षि (काङ्क्षायाम्) "शतृ" (३-२-१२४)। "काङ्क्षन्त: कर्मणां सिद्धिं यजन्त इह देवता:" गीता ४-१२। स्त्रियां "ङीप्" (४-१-६)। **काङ्क्षन्ती ಕಾಂಕ್ಷಂತೀ.** "यो धर्म एकपत्नीनां काङ्क्षन्ती तमनुत्तमम्" मनु० ५-१५८।

**काङ्क्षा ಕಾಂಕ್ಷಾ** (स्त्री०) ಅಪೇಕ್ಷೆ, ಅಭಿಲಾಷೆ, ಬಯಕೆ. काक्षि (काङ्क्षायाम्) भावे "अ:" (३-३-१०३)। "उद्गारशुद्धावपि भक्तकाङ्क्षा न जायते हृद्गुरुता च यस्य" सुश्रुत०।

**काङ्क्षित ಕಾಂಕ್ಷಿತ** (न०) 1. ಅಪೇಕ್ಷೆ, ಬಯಕೆ, ಅಭಿಲಾಷೆ, ಮನೋರಥ. काक्षि(काङ्क्षायाम्) भावे "क्त:" (३-३-११४)। "सद्य एव सुकृतां हि पच्यते कल्पवृक्षफलधर्मि काङ्क्षितम्" रघु० ११-५०। "न तावता लभ्यममंस्त काङ्क्षितम्" कुमा० ५-१८। (वि०) 2. ಅಪೇಕ್ಷಿಸಲ್ಪಟ್ಟ. काक्षि कर्म० "क्त:" (३-२-१०२)।

**काङ्क्षितवत् ಕಾಂಕ್ಷಿತವತ್** (वि०) ಅಪೇಕ್ಷಿಸಿದವನು, ಬಯಸಿದವನು. काक्षि (काङ्क्षायाम्) कर्तं० "क्तवतु:" (३-२-१०२)।

**काङ्क्षितव्य ಕಾಂಕ್ಷಿತವ್ಯ** (वि०) ಅವಶ್ಯವಾಗಿ ಅಪೇಕ್ಷಿಸಲ್ಪಡುವ, ಅಪೇಕ್ಷಿಸಬೇಕಾದ. काक्षि (काङ्क्षायाम्) "तव्य:" (३-१-९६)।

**काङ्क्षिन् ಕಾಂಕ್ಷಿನ್** (वि०) ಅಭಿಲಾಷೆಯುಳ್ಳ, ಅಪೇಕ್ಷಿಸುವ. काङ्क्षते—काक्षि (काङ्क्षायाम्) "णिनि:" (३-१-१३४)। "देवा अप्यस्य रूपस्य नित्यं दर्शनकाङ्क्षिण:" गीता ११-५२।

**काङ्क्ष्य ಕಾಂಕ್ಷ್ಯ** (वि०) ಅಪೇಕ್ಷಿಸಲು ಯೋಗ್ಯವಾದ. काक्षि (काङ्क्षायाम्) "ण्यत्" (३-१-१२४)।

**काङ्क्षचमाण ಕಾಂಕ್ಷ್ಯಮಾಣ** (वि०) ಅಪೇಕ್ಷಿಸಲ್ಪಡುವ. काक्षि (काङ्क्षायाम्) कर्म० "शानच्" (३-२-१२४)।

**काङ्गा ಕಾಂಗಾ** (स्त्री०) ಕವಡೆ. कुत्सितमङ्गमस्याः।

**काच ಕಾಚ** (पु०) 1. ಗಾಜು. कच (बन्धने) + णिच् "अच्" (३-१-१३४)। "काचः काञ्चनसंसर्गाद्धत्ते मारकतीं द्युतिम्" हितो० ४२। 2. ಶಿಕ್ಯ, ಕಾವಡಿಯ ನಿಲುವು. कच्यतेऽत्र – कच (बन्धने) "घञ्" (३-३-१२१)। 3. ಒಂದು ವಿಧ ನೇತ್ರರೋಗ. "चन्द्रादित्यौ सनक्षत्रौ अन्तरिक्षे च विद्युतः। निर्मलानि च तेजांसि भ्राजिष्णूनि च पश्यति। स एव लिङ्गनाशस्तु नीलिका काचसंज्ञितः" सुश्रुत० उत्तरतं० ७। 4. ಗಾಜಿನ ಮಣಿ. 5. ಉಪ್ಪುಮಣ್ಣು, ಚೌಳುಮಣ್ಣು. "काचोऽक्षिरोगे मणौ मृदि" हेम०। स्वार्थे "कन्"। **–कः –ಕಃ.**

**काचन ಕಾಚನ** (न०) 1. ಪುಸ್ತಕ ಹಸ್ತಲಿಖಿತ ಪತ್ರಗಳು ಮುಂತಾದವನ್ನು ಕಟ್ಟುವ ದಾರ, ಕಿರಿಯಗಲದ ಬಟ್ಟೆಯ ಪಟ್ಟಿ. कच (बन्धने) + णिच् कर० "ल्युट्" (३-३-११७)। 2. ಪುಸ್ತಕಗಳನ್ನು ಸೇರಿಸಿ ಕಟ್ಟಿಸುವಿಕೆ. कच + णिच् भावे "ल्युट्" (३-३-११५)। (अव्य०) 3. ಯಾವಳೋ ಒಬ್ಬ ಹೆಂಗಸು, ಒಬ್ಬ ಅನಿರ್ದಿಷ್ಟ ಮಹಿಳೆ. का + चन। "पुनः पुनः काचन कुर्वती कचच्छटाधिया धूपजधूपसंयमम्" नैष० १५-३०। स्वार्थे "कन्"। **–नकम् –ನಕಮ್.** "लेखो निबध्यते येन तत्र काचनकाभिधा" हारा०।

**काचनकिन् ಕಾಚನಕಿನ್** (पु०) ಬರೆಯುವ ಕಾಗದ, ಲೇಖಪತ್ರ. काचनकमस्त्यस्य "इनिः" (५-२-११५)।

**काचभाजन ಕಾಚಭಾಜನ** (न०) ಗಾಜಿನ ಪಾತ್ರೆ. काचमयं भाजनम्।

**काचमणि ಕಾಚಮಣಿ** (पु०) ಗಾಜಿನ ಮಣಿ. काचस्य मणिः। "आकरे पद्मरागाणां जन्म काचमणेः कुतः" हितो० ४५।

**काचमल ಕಾಚಮಲ** (न०) ಸೌವರ್ಚಲ ಲವಣ, ಚೌಳು ಮಣ್ಣಿನಿಂದ ತಯಾರಿಸಲ್ಪಟ್ಟ ಉಪ್ಪು. काचस्य क्षारमृत्तिकाया मल इव।

**काचलवण ಕಾಚಲವಣ** (न०) ಸೌವರ್ಚಲ ಲವಣ, ಕ್ಷಾರಮೃತ್ತಿಕೆಯ ಲವಣ.

**काचस्थाली ಕಾಚಸ್ಥಾಲೀ** (स्त्री०) 1. ಗಾಜಿನ ಪಾತ್ರೆ. काचस्य स्थाली। 2. ಹಸುರುಪಾದರಿ ಗಿಡ. "पाटलिः पाटलामोघा काचस्थाली फलेरुहा" अम०।

**काचाक्ष ಕಾಚಾಕ್ಷ** (पु०) ಒಂದು ಜಾತಿಯ ಬಕಪಕ್ಷಿ. काच इवाक्षि यस्य "षच्" (५-४-११३)। स्त्रियाम् "ङीष्" (४-१-४१)। **–क्षी –ಕ್ಷೀ.**

**काचि-दीप्तौ** (भ्वा० आत्म० अक० से०) काञ्चते। चकाञ्चे। अकाञ्चिष्ट। ಇತ್ಯಾದಿ. ಪ್ರಕಾಶಿಸು. ಹೊಳೆ.

**काचिघ ಕಾಚಿಘ** (पु०) 1. ಸುವರ್ಣ, ಚಿನ್ನ. 2. ಮೂಷಕ, ಇಲಿ. 3. ದ್ವಿದಳ ಧಾನ್ಯದ ಕಾಯಿ, ಬೀಜಕೋಶ, ಅವರೆ, ತೊಗರಿ, ಬಟಾಣಿ ಮೊದಲಾದುವುಗಳ ಕಾಯಿ. "काचिघः काञ्चनेऽपि स्याच्छ्लेमण्डे मूषकेऽपि च" मेदि०।

**काचित् ಕಾಚಿತ್** (अव्य०) ಯಾವಳೋ ಒಬ್ಬಳು, ಒಬ್ಬ ಅನಿರ್ದಿಷ್ಟ ಹೆಂಗುಸು. का + चित्। "अधिविटपि सलीलमग्रपुष्पग्रहणपदेन चिरं विलम्ब्य काचित्" माघ० ७-३५।

**काचित ಕಾಚಿತ** (वि०) ಶಿಕ್ಯದಲ್ಲಿ ಏರಿಸಲ್ಪಟ್ಟ, ಕಾವಡಿಯ ನಿಲುವಿನಲ್ಲಿ ಇಡಲ್ಪಟ್ಟ. कच (बन्धने) अधि० "घञ्" (३-३-१२१)। काचे, धृतम् + णिच् (चुरा० ग०. २०३) "क्तः" (३-२-१०२)।

**काचिम ಕಾಚಿಮ** (पु०) ದೇವಾಲಯದ ಸಮೀಪದಲ್ಲಿ ಹುಟ್ಟುವ ಮರ.

**काचूक ಕಾಚೂಕ** (पु०) 1. ಕುಕ್ಕುಟ, ಕೋಳಿ. 2. ಚಕ್ರವಾಕ ಪಕ್ಷಿ. कच (बन्धने) "ऊकः" (उ० ४-४१)। निपा०। स्त्रियाम् जाति० "ङीष्" (४-१-६३)। **–की –ಕೀ.**

**काञ्चन ಕಾಂಚನ** (पु०) 1. ಚಂಪಕವೃಕ್ಷ, ಸಂಪಿಗೆಮರ. 2. ದತ್ತೂರಿ ಗಿಡ. 3. ಉದುಂಬರವೃಕ್ಷ, ಅತ್ತಿಮರ. काचि (दीप्तौ) "ल्युः" (३-१-१३४)। 4. ಕೋವಿದಾರವೃಕ್ಷ, ಕೆಂಗಾಂಚಾಳದ ಗಿಡ. 5. ನಾಗಕೇಸರ ವೃಕ್ಷ. 6. ಪುನ್ನಾಗವೃಕ್ಷ, ಸುರಗಿ ಗಿಡ. (न०) 7. ಸುವರ್ಣ, ಚಿನ್ನ. "तस्योल्लसत्काञ्चनकुण्डलाग्रप्रत्युप्तगारुत्मतरत्नभासा" माघ० ३-५। 8. ದೀಪ್ತಿ, ಕಾಂತಿ. भावे "ल्युट्" (३-३-११५)। 9. ಧನ, ಸಂಪತ್ತು. (वि०) 10. ಸುವರ್ಣದಿಂದ ಮಾಡಲ್ಪಟ್ಟ, ಚಿನ್ನದಿಂದ ತಯಾರಿಸಲ್ಪಟ್ಟ. "स काञ्चने यत्र मुनेरनुज्ञया नवाम्बुदश्यामवपुर्न्यविक्षत" माघ० १-१९। 11. ಕಮಲದ ಕೇಸರ. (स्त्री०) **–नी –ನೀ.** 12. ಹರಿದ್ರೆ, ಅರಿಶಿನ 13. ಗೋರೋಚನ. 14. ಅರಿದಳ. "काञ्चनं हेम्नि

किञ्जल्के काञ्चनो नागकेसरे। उदुम्बरे काञ्चनारे पुन्नागे चम्पकेऽपि च। काञ्चनी तु हरिद्रायाम्" हेम०। "काञ्चनः काञ्चनारे स्याच्चम्पके नागकेसरे। उदुम्बरे च धत्तूरे हरिद्रायां च काञ्चनी। क्लीबेऽब्जकेसरे हेम्नि" मेदि०। स्वार्थे "कन्"। **काञ्चनकः ಕಾಂಚನಕಃ.**

**काञ्चनकदली ಕಾಂಚನಕದಳೀ** (स्त्री०) ಒಂದು ಜಾತಿಯ ಬಾಳೆಗಿಡ.

**काञ्चनकन्दर ಕಾಂಚನಕಂದರ** (पुंन०) ಚಿನ್ನದ ಗಣಿ. काञ्चनस्य कन्दरः।

**काञ्चनकारिणी ಕಾಂಚನಕಾರಿಣೀ** (स्त्री०) ಶತಮೂಲೀ ಗಿಡ, ಶತಾವರೀ ಗಿಡ. काञ्चनं दीप्ति करोति – डु कृञ् (करणे) "णिनिः" (३-१-१३४)।

**काञ्चनगिरि ಕಾಂಚನಗಿರಿ** (पु०) ಸುಮೇರು ಪರ್ವತ. काञ्चनप्रधानो गिरिः।

**काञ्चनप्रभ ಕಾಂಚನಪ್ರಭ** (पु०) 1. ಐಲರಾಜನ ವಂಶದ ಒಬ್ಬ ದೊರೆ. (वि०) 2. ಚಿನ್ನದಂತೆ ಪ್ರಕಾಶವುಳ್ಳ. काञ्चनस्येव प्रभा यस्य।

**काञ्चनाक्ष ಕಾಂಚನಾಕ್ಷ** (पु०) ಒಬ್ಬ ದಾನವ. "काञ्चनाक्षः कपिस्कन्धो व्याघ्राक्षः क्षितिकल्पनः" हरिवं०।

**काञ्चनार ಕಾಂಚನಾರ** (पु०) ಕೆಂಗಾಂಚಾಳದ ಗಿಡ, ಕೋವಿದಾರ ವೃಕ್ಷ.

**काञ्चनी ಕಾಂಚನೀ** (स्त्री०) 1. ಅರಿಶಿನ. 2. ಅರಿದಳ. 3. ಗೋರೋಚನ. काञ्चतेऽनया – काचि (दीप्तौ) कर० "ल्युट्" (३-३-११७)। "ङीप्" (४-१-१५)।

**काञ्चिक ಕಾಂಚಿಕ** (न०) ಅಂಬಲಿ, ಗಂಜಿ.

**काञ्चिधामन् ಕಾಂಚಿಧಾಮನ್** (न०) ಜಘನ, ಹೆಂಗಸರ ಸೊಂಟದ ಮುಂಭಾಗ. काञ्च्याः धाम। "काञ्चिधाम्नि पिहितैकतरोरु" माघ० १०-८३।

**काञ्ची ಕಾಂಚೀ** (स्त्री०) 1. ಡಾಬು, ಒಡ್ಯಾಣ. काचि (दीप्तिबन्धनयोः) "इन्" (उ० ४-११७)। वा "ङीष्" (ग० ४-१-४५)। पक्षे **काञ्चि ಕಾಂಚಿ.** "विधायिका शब्दपरम्पराणां किं चारचि व्याकरणेन काञ्ची" नैष० १०-७८। 2. ಕಾಂಚೀನಗರ, ಮೋಕ್ಷಪ್ರದವಾದ ಏಳು ಪಟ್ಟಣಗಳಲ್ಲೊಂದು. "अयोध्या मथुरा माया काशी काञ्चिरवन्तिका। पुरी द्वारवती चैव सप्तैता मोक्षदायिकाः"।

**काञ्चीनगर ಕಾಂಚೀನಗರ -पुर -ಪುರ** (न०) ಕಾಂಚಿಯೆಂಬ ಒಂದು ಪಟ್ಟಣ. "प्रसह्य काञ्चीपुरभूपुरन्दरः" नैष० १२-३३।

**काञ्चीपद ಕಾಂಚೀಪದ** (न०) ಡಾಬಿನ ಜಾಗ, ಒಡ್ಯಾಣ ಹಾಕುವ ಸ್ಥಾನ, ಸ್ತ್ರೀಯರ ಸೊಂಟದ ಮುಂಭಾಗ. काञ्च्याः पदम्।

**काञ्चिक ಕಾಂಚಿಕ** (न०) 1. ಅಂಬಲಿ, ಗಂಜಿ. अञ्जू (व्यक्त्यादौ) "ण्वुल्" (वा० ३-३-१०८)। के अञ्जिकास्य। (स्त्री०) 2. ಸೀಹಾಲೆ ಗಿಡ.

**काट ಕಾಟ** (पु०) 1. ಕೂಪ, ಬಾವಿ. कं जलमटघते प्राप्यतेऽत्र अट (गतौ) "घञ्" (३-३-१२१)। 2. ಇಕ್ಕಟ್ಟಾದ ದಾರಿ.

**काटव ಕಾಟವ** (न०) ತೀಕ್ಷ್ಣತೆ. कटोर्भावः "अण्" (५-१-१२२)।

**काट्य ಕಾಟ್ಯ** (वि०) 1. ಬಾವಿಯಲ್ಲಿರುವ. 2. ಇಕ್ಕಟ್ಟಾದ ದಾರಿಯಲ್ಲಿರುವ. काटे भवः "यत्"।

**काठ ಕಾಠ** (पु०) 1. ಬಂಡೆ, ದೊಡ್ಡ ಕಲ್ಲು. (वि०) 2. ಕಠಸಂಬಂಧವಾದ. कठस्येदम् "अण्" (४-३-१२०)।

**काठक ಕಾಠಕ** (न०) 1. ಕಠಶಾಖಾಧ್ಯಾಯಿಯ ಧರ್ಮ. 2. ಕಠಶಾಖಾಧ್ಯಾಯಿಯ ವೇದಾಭ್ಯಾಸ. कठानां धर्मः आम्नायो वा "वुञ्" (वा० ४-३-१२६)। 3. ಬ್ರಾಹ್ಮಣದ ಒಂದು ಭಾಗ.

**काठिन्य ಕಾಠಿನ್ಯ** (न०) 1. ಕಠಿನವಾಗಿರುವಿಕೆ, ಗಟ್ಟಿಯಾಗಿರುವಿಕೆ. 2. ದೃಢವಾಗಿರುವಿಕೆ. 3. ಕಷ್ಟವಾಗಿರುವಿಕೆ. कठिनस्य भावः "ष्यञ्" (५-१-१२४)।

**काठिन्यफल ಕಾಠಿನ್ಯಫಲ** (पु०) ಬೇಲದ ಮರ. काठिन्यं फलेऽस्य।

**काण ಕಾಣ** (पु०) 1. ಕಾಗೆ, ವಾಯಸ. कण (निमीलने) "घञ्" (३-३-१२१)। काणमस्यास्ति "अच्" (५-२-१२७)। स्त्रियाम् जाति० "ङीष्" (४-१-६३)। **–णी –ಣೀ.** (न०) 2. ಕುರುಡಾದ ಒಂದು ಕಣ್ಣು. (वि०) 3. ಒಂದು ನೇತ್ರವುಳ್ಳವನು, ಒಕ್ಕಣ್ಣುಳ್ಳವನು. अक्ष्णा काणः। "खञ्जो वा यदि वा काणो दातुः प्रेष्योऽपि वा भवेत्। हीनातिरिक्तगात्रो वा तमप्यपनयेत्पुनः" मनु० ३-२४२। स्त्रियाम् **–णा– ಣಾ.** "काणः काकैकचक्षुषोः" मेदि०।

**काणभूति ಕಾಣಭೂತಿ** (पु०) ಕುಬೇರನ ಶಾಪದಿಂದ ಪಿಶಾಚತ್ವವನ್ನು ಹೊಂದಿದ ಒಬ್ಬ ಯಕ್ಷ. "विन्ध्याटव्यां कुबेरस्य शापात् प्रप्तः पिशाचताम्। सुप्रतीकाभिधो यक्षः काणभूत्याख्यया स्थितः" बृहत्०।

**काणाद ಕಾಣಾದ** (वि०) 1. ಕಣಾದ ಮಹರ್ಷಿಗೆ ಸಂಬಂಧಿಸಿದ, ಕಣಾದ ಮಹರ್ಷಿಯಿಂದ ಪ್ರೋಕ್ತವಾದ. 2, ಕಣಾದ ಮಹರ್ಷಿಯಿಂದ ಪ್ರೋಕ್ತವಾದುದನ್ನು ಅಧ್ಯಯನ ಮಾಡುವವನು. कणादेन प्रोक्तम् तदधीते वा।

**काणूक ಕಾಣೂಕ** (पु०) 1. ಕಾಗೆ, ವಾಯಸ. 2. ಗೀಜಗದ ಹಕ್ಕಿ. कण (निमीलने) "ऊकण्" (उ० ४-३९)।

**काणेय ಕಾಣೇಯ** (पु०) ಕುರುಡಿಯ ಮಗ, ಒಂದು ಕಣ್ಣುಳ್ಳವಳ ಮಗ. काणाया अपत्यम् "ढक्" (४-१-१२०)। वा "ढ्रक्" (४-१-१३१)। **काणेरः ಕಾಣೇರಃ.**

**काणेली ಕಾಣೇಲೀ** (स्त्री०) 1. ಮದುವೆಯಾಗದ ಕನ್ಯೆ, ವಿವಾಹವಿಲ್ಲದ ಹೆಂಗುಸು. 2. ಜಾರಸ್ತ್ರೀ.

**काण्ड ಕಾಂಡ** (पुन०) 1. ಮಾನದಂಡ, ಅಳತೆಕೋಲು. कमु (कान्तौ) "ड:" (उ० १-१११)। दीर्घः (६-४-११५)। 2. ಬಾಣ, ಅಂಬು, ಶರ. 3. ಮರದ ದೂಲ, ಮರದ ರೆಂಬೆಯಿಲ್ಲದ ಕೆಳಭಾಗ. 4. ಗ್ರಂಥದ ಒಂದು ಭಾಗ, ಅಧ್ಯಾಯ. ರಾಮಾಯಣದ ಬಾಲಕಾಂಡ, ಅಯೋಧ್ಯಾಕಾಂಡ ಮುಂತಾದುದು. 5. ಮರದಶಾಖೆ, ರೆಂಬೆ. "उद्भिज्जाः स्थावराः सर्वे बीजकाण्डप्ररोहिणः" मनु० १-४६। 6. ಅವಸರ, ಸಮಯ. "अकाण्डे प्रथनं छेदश्च रसदोषौ" सा० द०। 7. ಜಲ, ನೀರು. 8. ಸಮುದಾಯ, ಗುಂಪು, ರಾಶಿ. "ऋते रवेः क्षालयितुं क्षमेत कः क्षपातमस्काण्डमलीमसं नभः" माघ० १-३८। 9. ಬಿದಿರು ಕಬ್ಬು ಮೊದಲಾದುವುಗಳ ಗೆಣ್ಣು, ಪರ್ವ. 10. ಕುತ್ಸಿತವರ್ಗ, ನೀಚಸಮೂಹ. 11. ಹುಲ್ಲು ಗಿಡ ಮೊದಲಾದುವುಗಳ ಪೊದರು. 12. ನಾಡಿಗಳ ಸಮೂಹ. 13. ಗ್ರಂಥದ ಬೇರೆ ಬೇರೆ ಭಾಗ, ಬೇರೆ ಬೇರೆ ಪ್ರಕರಣ, ವಿಷಯಗಳ ವಿಭಾಗ. आचारकाण्डः व्यवहार-काण्डः ಇತ್ಯಾದಿ. 14. ರಹಸ್ಯಸ್ಥಾನ, ಗುಟ್ಟಾದ ಜಾಗ. "काण्डः स्तम्बे तरुस्कन्धे बाणेऽवसरनीरयोः। कुत्सिते वृक्षभिन्नाडीवृन्दे रहसि न स्त्रियाम्" मेदि०। 15. ಸ್ತಂಭ, ಕಂಬ. 16. ಅಶ್ವ, ಕುದುರೆ. 17. ಗರ್ವ, ಅಹಂಕಾರ. 18. ಬಲ, ಶಕ್ತಿ. "बाणावसरग्रन्थिस्तम्भरहोवाजिवारि-वर्गेषु। स्कन्धे च भूरुहाणां गर्वे नाले बले च काण्डोऽस्त्री" नानार्थर०। 19. ಶ್ಲಾಘನೆ, ಪ್ರಶಂಸೆ. "काण्डो नालेऽधमे वर्गे द्रुस्कन्धेऽवसरे शरे। रहःश्लाघाम्बुषु स्तम्बे" हेम०।

**काण्डकटुक ಕಾಂಡಕಟುಕ** (पु०) ಹಾಗಲಗಿಡ. काण्डे स्तम्बेऽपि कटुकः।

**काण्डकार ಕಾಂಡಕಾರ** (पु०) 1. ಅಡಕೆ ಮರ. काण्डं किरति – कॄ (विक्षेपे) "अण्" (३-२-१)। (वि०) 2. ಬಾಣವನ್ನು ತಯಾರಿಸುವವನು. काण्डं करोति – डु कृञ् (करणे) "अण्"।

**काण्डपट ಕಾಂಡಪಟ** (पु०) ಡೇರೆಯ ಸುತ್ತಲೂ ಇರುವ ಪರದೆ, ವಸ್ತ್ರಗೃಹದ ತಳಭಾಗದಲ್ಲಿರುವ ತೆರೆ. काण्ड इव पटः। स्वार्थे "कन्"। **–पटकः –ಪಟಕಃ.** "उत्क्षिप्तकाण्डपटकान्तरलीयमानमन्दानिलप्रशमित–श्रमघर्मतोयैः" माघ० ५-२२।

**काण्डपृष्ठ ಕಾಂಡಪೃಷ್ಠ** (पु०) 1. ಶಸ್ತ್ರಾಸ್ತ್ರಗಳನ್ನು ತಯಾರಿಸಿ ಜೀವಿಸುವವನು. 2. ಯೋಧ, ಸೈನಿಕ, ಭಟ. काण्डः पृष्ठेऽस्य। 3. ಔರಸಪುತ್ರನಿಗಿಂತ ಬೇರೆಯವನಾದ ಒಬ್ಬ ಪುತ್ರ, ಕ್ರೀತಪುತ್ರ, ಕ್ರಯಕ್ಕೆ ಕೊಳ್ಳಲ್ಪಟ್ಟ ಪುತ್ರ. 4. ಸ್ವೀಕೃತಪುತ್ರ, ದತ್ತುಮಗ. 5. ಜಲ, ನೀರು. 6. ತನ್ನ ಮನೆಯನ್ನು ಬಿಟ್ಟು ಬೇರೆಯವರ ಮನೆಯನ್ನು ಸೇರಿರುವವನು. 7. ಶೂದ್ರಹೆಂಗಸಿನ ಮಗ. "काण्डपृष्ठः क्रीतसुते दत्ते शूद्रासुताम्भसोः। शस्त्राजीवे च यश्चान्यकुलं याति स्वकं विना" वैज०। (न०) 8. ಧನುಸ್ಸು, ಬಿಲ್ಲು. काण्डं तरुस्कन्ध इव स्थूलं पृष्ठमस्य। 9. ಕರ್ಣನ ಧನುಸ್ಸು. 10. ಕಾಮನ ಬಿಲ್ಲು.

**काण्डर्षि ಕಾಂಡರ್ಷಿ** (पु०) ವೇದಭಾಗದ ವಿಚಾರ ಮಾಡುವ ಋಷಿ, ಕರ್ಮಕಾಂಡದ ವಿಚಾರ ಮಾಡುವ ಜೈಮಿನಿ ಮೊದಲಾದ ಋಷಿಗಳು. काण्डस्य वेदभागस्य ऋषिः तदधिकारेण विचारकः। "अथातो धर्मजिज्ञासा" ಎಂದು ಪ್ರಾರಂಭಿಸಿ ಕರ್ಮಕಾಂಡ ವಿಚಾರಮಾಡುವ ಋಷಿ ಜೈಮಿನಿ ಋಷಿ. "अथातो ब्रह्मजिज्ञासा" ಎಂದು ಪ್ರಾರಂಭಿಸಿ ಬ್ರಹ್ಮಕಾಂಡವಿಚಾರಮಾಡುವ ಋಷಿ ವೇದವ್ಯಾಸರು.

**काण्डवत् ಕಾಂಡವತ್** (पु०) 1. ವೃಕ್ಷ, ಮರ. (वि०) 2. ಬಾಣಗಳೇ ಆಯುಧವಾಗಿ ಉಳ್ಳವನು. काण्डोऽस्यास्ति "मतुप्" (५-२-९४)। मस्य वः (८-२-११)।

**काण्डवीणा ಕಾಂಡವೀಣಾ** (स्त्री०) ಚಂಡಾಲನ ವೀಣೆ. काण्ड इव स्थूला वीणा।

**काण्डसन्धि ಕಾಂಡಸಂಧಿ** (पु०) 1. ಕಬ್ಬು ಮೊದಲಾದುವುಗಳ ಗೆಣ್ಣು. 2. ಗಿಡಮರಗಳ ರೆಂಬೆ ಹೊರಡುವ ಜಾಗ.

**काण्डस्पृष्ट ಕಾಂಡಸ್ಪೃಷ್ಟ** (वि०) ಶಸ್ತ್ರಾಸ್ತ್ರಗಳಿಂದ ಜೀವಿಸುವವನು. स्पृष्टं गृहीतं काण्डं येन। परनिपातः (वा० २-२-३६)।

**काण्डहीन ಕಾಂಡಹೀನ** (न०) ಕೊನ್ನಾರಿ ಗೆಡ್ಡೆ. काण्डेन हीनम्।

**काण्डीर ಕಾಂಡೀರ** (पु०) ಬಾಣಗಳೇ ಆಯುಧವಾಗಿ ಉಳ್ಳವನು. काण्डो बाणोऽस्यास्ति "ईरन्" (५-२-१११)। "स्यात् काण्डवांस्तु काण्डीरः" अम०। "काण्डीरः खाड्गिकः शार्ङ्गी रक्षन् विप्रांस्तनुत्रवान्" भट्टि० ४-१०।

**काण्डेक्षु ಕಾಂಡೇಕ್ಷು** (पु०) ಕೊಳವಳಿಕೆ ಗಿಡ. काण्डे इक्षुरिव।

**काण्व ಕಾಣ್ವ** (पु०) 1. ಕಣ್ವಮಹರ್ಷಿಯ ಗೋತ್ರದವರ ಶಿಷ್ಯ. काण्व्यस्य कण्वगोत्रापत्यस्य छात्रः "अण्" (४-२-१११)। 2. ಕಣ್ವ ಮಹರ್ಷಿಯ ಮಗ. "कण्वस्यापत्यम् "अण्" (४-१-११२)। स्त्रियाम् "ङीप्" (४-१-१५)। **काण्वी ಕಾಣ್ವೀ.** (1) ಕಣ್ವ ಮಹರ್ಷಿಯ ಮಗಳು. (2) ಕಣ್ವ ಮಹರ್ಷಿಯ ಶಿಷ್ಯರು ಅಧ್ಯಯನ ಮಾಡಿದ ಶಾಖೆ. (वि०) 3. ಕಣ್ವ ಮಹರ್ಷಿಯ ಸಂಬಂಧವಾದ. कण्वस्येदम् "अण्" (४-३-१२०)।

**काण्वशाखा ಕಾಣ್ವಶಾಖಾ** (स्त्री०) ಶುಕ್ಲ ಯಜುರ್ವೇದದ ಕಣ್ವಶಾಖೆ.

**काण्व्य ಕಾಣ್ವ್ಯ** (पु०) ಕಣ್ವ ಮಹರ್ಷಿಯ ಗೋತ್ರದಲ್ಲಿ ಹುಟ್ಟಿದವನು. कण्वस्य गोत्रापत्यम् "यञ्" (४-१-१०५)। स्त्रियाम् "ङीप्" (४-१-१६) यलोपः (६-४-१५०)। **काण्वी ಕಾಣ್ವೀ.**

**काण्व्यायन ಕಾಣ್ವ್ಯಾಯನ** (पु०) ಕಣ್ವ ಮಹರ್ಷಿಯ ವಂಶದಲ್ಲಿ ಹುಟ್ಟಿದವನು. कण्वस्य गोत्रापत्यम् "यञ्" (४-१-१०५)। काण्व्यस्य युवापत्यम् "फक्" (४-१-१०१)।

**कात् ಕಾತ್** (अव्य०) (ಸಮಸ್ತಪದದಲ್ಲಿ) ತಿರಸ್ಕಾರ. कुत्सितमतत्यनेन – अत (सातत्यगमने) "क्विप्" (३-२-७६)। "यन्मयैश्वर्यमत्तेन गुरुः सदसि कात्कृतः" भाग० ६-७-९।

**कातन्त्र ಕಾತಂತ್ರ** (न०) ಕಾಲಾಪಕ ವ್ಯಾಕರಣ. ईषत्तन्त्रमस्य कोः कादेशः। ಈ ವ್ಯಾಕರಣವು ಸರ್ವವರ್ಮಕೃತವಾದುದು. ಇದು ಸ್ಕಂದನ ವರಪ್ರಸಾದದಿಂದ ರಚಿತವಾದುದು. ಇದಕ್ಕೆ "ಕೌಮಾರವ್ಯಾಕರಣ" ವೆಂದೂ ಪ್ರಸಿದ್ಧಿಯುಂಟು.

**कातर ಕಾತರ** (वि०) 1. ಅಧೀರ, ಧೈರ್ಯವಿಲ್ಲದವನು. 2. ಭಯದ ಸ್ವಭಾವದವನು, ಅಂಜುಬುರುಕ. ईषत्तरति तॄ (प्लवनतरणयोः) "अच्" (३-१-१३४)। कोः कादेशः। 3. ಹೆದರಿದ. "मद्गेहिन्याः प्रिय इति सखे चेतसा कातरेण" मेघ० २-१४। 4. ಚಂಚಲವಾದ. "धेन्वा तदध्यासितकातराक्ष्या" रघु० २-५२। 5. ದೋಣಿ. के जले आतरति प्लवते—आ+तॄ "अच्"। 6. ಒಂದು ಜಾತಿಯ ದೊಡ್ಡ ಮೀನು. स्त्रियाम् जाति० "ङीष्" (४-१-६३)। **-री -ರೀ.**

**कातरता ಕಾತರತಾ** (स्त्री०) 1. ಹೇಡಿತನ, ಅಂಜುಬುರುಕುತನ, ಪುಕ್ಕಲು. 2. ಭಯ, ಹೆದರಿಕೆ. कातरस्य भावः "तल्" (५-१-११९)। "त्वः"। **कातरत्वम् ಕಾತರತ್ವಮ್.** "इति चेतो मा स्म गाः कातरत्वम्" मु० मा०।

**कातराक्ष ಕಾತರಾಕ್ಷ** (वि०) ಭಯದಿಂದ ಚಂಚಲವಾದ ನೇತ್ರವುಳ್ಳ. कातरे अक्षिणी यस्य "षच्" (५-४-११३)। स्त्रियाम् "ङीष्" (४-१-४१)। **-क्षी -ಕ್ಷೀ.** "यां यां प्रियः प्रैक्षत कातराक्षी सा सा ह्रिया नम्रमुखी बभूव" माघ० ३-१६।

**कातर्य ಕಾತರ್ಯ** (न०) 1. ಅಂಜುಬುರುಕುತನ, ಪುಕ್ಕಲು, ಹೇಡಿತನ. कातरस्य भावः कर्म वा "ष्यञ्" (५-१-१२४)। "कातर्यं केवला नीतिः शौर्यं श्वापदचेष्टितम्" रघु० १७-४७। 2. ಭಯ, ಹೆದರಿಕೆ.

**कातल ಕಾತಲ** (पु०) 1. ಒಂದು ಜಾತಿಯ ದೊಡ್ಡ ಮೀನು. स्त्रियाम् जाति० "ङीष्" (४-१-६३)। **-ली -ಲೀ.** 2. ಒಬ್ಬ ಋಷಿ. तस्य गोत्रापत्यं "फक्" (४-१-९९)। **-लायनः -ಲಾಯನಃ** स्त्रियाम् "ङीष्" (४-१-६३)। **-यनी -ಯನೀ.**

**कातीय ಕಾತೀಯ** (पु०) 1. ಕಾತ್ಯಾಯನ ಋಷಿಯ ಶಿಷ್ಯ. कात्यायनस्य छात्रः "छः" (४-२-११४)। फको वा लुक् (४-१-९१)। पक्षे **कात्यायनीयः ಕಾತ್ಯಾಯನೀಯಃ.** (वि०) 2. ಕಾತ್ಯಾಯನಸಂಬಂಧವಾದ.

**कात्य ಕಾತ್ಯ** (पु०) ಕತ ಗೋತ್ರದಲ್ಲಿ ಹುಟ್ಟಿದವನು. कतस्य गोत्रापत्यं पुमान् "यञ्" (४-१-१०५)।

**कात्यायन ಕಾತ್ಯಾಯನ** (पु०) ಕತ ಗೋತ್ರದಲ್ಲಿ ಹುಟ್ಟಿದ ಒಬ್ಬ ಋಷಿ. कतस्य गोत्रापत्यम् "यञ्" (४-१-१०५)। कात्यस्यापत्यं युवा "फक्" (४-१-१०१)।

ಕಾತ್ಯಾಯನರು ಮೂವರು: (1) ವಿಶ್ವಾಮಿತ್ರರ ವಂಶದಲ್ಲಿ ಹುಟ್ಟಿದವರು. "विश्वामित्रस्य च सुता देवरातादयः स्मृताः। विख्यातास्त्रिषु लोकेषु तेषां शीलानि मे शृणु। देवश्रवाः कतश्चैव यतः कात्यायनाः स्मृताः" ಹರಿವಂ। (2) ಕರ್ಮಪ್ರದೀಪವೆಂಬ ಗ್ರಂಥವನ್ನು ಬರೆದವರು ಗೋಭಿಲಪುತ್ರರು. ಇವರು ಧರ್ಮಶಾಸ್ತ್ರ ಪ್ರವರ್ತಕರಲ್ಲೊಬ್ಬರು. "मन्वत्रिविष्णुहारीतयाज्ञवल्क्योशनोऽङ्गिराः। यमापस्तम्बसंवर्ताः कात्यायनबृहस्पती। पराशरव्यासशङ्खलिखिता दक्षगौतमौ। शातातपो वसिष्ठश्च धर्मशास्त्रप्रवर्तकाः" याज्ञ० १-४, ५। (3) ಪುಷ್ಪದಂತನ ಅವತಾರವಾದ **"ವರರುಚಿ"** ಯೆಂಬುವರು ಮೂರನೆಯವರು. ಇವರ ತಂದೆ ಸೋಮದತ್ತ. ತಾಯಿ ವಸುದತ್ತೆ. ಕುಬೇರನ ಶಾಪದಿಂದ ಪಿಶಾಚತ್ವವನ್ನು ಹೊಂದಿದ ಸುಪ್ರತೀಕನೆಂಬ ಯಕ್ಷನಿಗೆ (ಕಾಣಭೂತಿಗೆ) ಬೃಹತ್ಕಥೆಯನ್ನು ಹೇಳಿದ ಋಷಿ. ಈ ಕಾತ್ಯಾಯನರೇ ಪಾಣಿನಿಸೂತ್ರಗಳಿಗೆ ಪರಿಶಿಷ್ಟವಾದ ವಾರ್ತಿಕಗಳನ್ನು ಬರೆದವರು. ಅಲ್ಲದೆ ಯಜುರ್ವೇದ ಶ್ರೌತಸೂತ್ರಗಳನ್ನೂ ಇವರು ಬರೆದಿರುತ್ತಾರೆ.

**कात्यायनी ಕಾತ್ಯಾಯನೀ** (स्त्री०) 1. ಕತ ಗೋತ್ರದಲ್ಲಿ ಹುಟ್ಟಿದ ಹೆಂಗುಸು. कतस्य गोत्रापत्यं स्त्री "यञ्" (४-१-१०५)। "ष्फः" (४-१-१८)। "ङीष्" (४-१-४१)। 2. ಕಾತ್ಯಾಯನ ಋಷಿಯ ಪತ್ನಿ. 3. ಯಾಜ್ಞವಲ್ಕ್ಯ ಋಷಿಯ ಒಬ್ಬ ಪತ್ನಿ. "याज्ञवल्क्यस्य द्वे भार्ये बभूवतुः मैत्रेयी कात्यायनी च तयोर्ह मैत्रेयी ब्रह्मवादिनी बभूव स्त्रीप्रज्ञैव तर्हि कात्यायनी"। 4. ದುರ್ಗಾದೇವಿ, ಪಾರ್ವತಿ. ಕಲ್ಪಾಂತರದಲ್ಲಿ ಕತ ವಂಶದಲ್ಲಿ ಜನಿಸಿದುದರಿಂದ ಈ ಹೆಸರು.

**कात्यायनीतन्त्र ಕಾತ್ಯಾಯನೀತಂತ್ರ** (न०) ಕಾತ್ಯಾಯನಿ (ದುರ್ಗಾದೇವಿ) ಯ ಪೂಜಾಕ್ರಮವನ್ನು ಹೇಳುವ ಒಂದು ತಂತ್ರಗ್ರಂಥ.

**कात्यायनीतनय ಕಾತ್ಯಾಯನೀತನಯ, -पुत्र -ಪುತ್ರ, -सुत -ಸುತ.** (पु०) ಕಾರ್ತಿಕೇಯ. ಷಣ್ಮುಖ.

**काथक्य ಕಾಥಕ್ಯ** (पु०) ಕಥಕ ಋಷಿಯ ಗೋತ್ರದಲ್ಲಿ ಹುಟ್ಟಿದವನು. कथकस्य गोत्रपत्यं पुमान् "यञ्" (४-१-१०५)। ततः "फक्" (४-१-१०१)। **काथक्यायनः ಕಾಥಕ್ಯಾಯನಃ.**

**काथञ्चित्क ಕಾಥಂಚಿತ್ಕ** (वि०) ಬಹಳ ಕಷ್ಟದಿಂದ ಉಂಟಾದ, ಹೆಚ್ಚು ಶ್ರಮದಿಂದ ನೆರವೇರಿದ. कथञ्चित् "ठक्" (५-४-३४)।

**काथिक ಕಾಥಿಕ** (वि०) ಕಥೆಯನ್ನು ಬರೆಯುವುದರಲ್ಲಿ ಸಮರ್ಥ, ಕಥೆಯನ್ನು ರಚಿಸುವುದರಲ್ಲಿ ನಿಪುಣ, ಕಥೆಯನ್ನು ಹೇಳುವುದರಲ್ಲಿ ಶಕ್ತ. कथायां साधुः "ठक्" (४-४-१०२)।

**कादम्ब ಕಾದಂಬ** (पु०) 1. ಕಲಹಂಸ, ಒಂದು ಜಾತಿಯ ಹಂಸಪಕ್ಷಿ. कदि (आह्वाने) + णिच् "अम्बच्" (उ० ४-८३)। "क्वचित् खगानां प्रियमानसानां कादम्बसंसर्गवतीव पङ्क्तिः" रघु०१३-५५। स्त्रियाम् "टाप्" (४-१-४)। **कादम्बा ಕಾದಂಬಾ.** 2. ಕಬ್ಬು. 3. ಬಾಣ. "कादम्बः स्यात् पुमान् पक्षिविशेषे सायकेऽपि च" मेदि०। "तावत् पूगैरन्यनागाधिरूढः कादम्बानामेकपातैरसीव्यत्" माघ० १८-२९। 4. ಕದಂಬ ವೃಕ್ಷ, ಈಚಲು ಮರ. कदम्ब स्वार्थे "अण्" (५-४-३८)। (वि०) 5. ಗುಂಪಿನಲ್ಲಿ ಉಂಟಾದ, ಸಮೂಹದಲ್ಲಿರುವ. कदम्बे भवः "अण्" (४-३-५३)। 6. ಈಚಲು ಮರದ ಸಂಬಂಧವಾದ. कदम्बस्येदम् "अण्" (४-३-१२०)। (न०) 7. ಈಚಲು ಹೂವು. "गन्धश्च धाराहतपल्वलानां कादम्बमर्धोद्गतकेसरं च" रघु० १३-२७।

**कादम्बक ಕಾದಂಬಕ** (पु०) ಬಾಣ. कादम्ब स्वार्थे "कन्"। "विपाठकादम्बकपत्रवाहाः पत्री खगो वीरतरोऽस्त्रकण्टकः" हारा०।

**कादम्बर ಕಾದಂಬರ** (पु०) 1. ಮೊಸರಿನ ಕೆನೆ. (न०) 2. ಬೆಲ್ಲ ಮೊದಲಾದುದು. कादम्बं लाति प्रकृतित्वेन—ला (आदाने) "कः" (३-२-३)। लस्य रः। 3. ಬೆಲ್ಲದಿಂದ ತಯಾರಾದ ಮದ್ಯ. 4. ಈಚಲು ಮರದ ಮದ್ಯ. "निषेव्य मधु माधवाः सरसमत्र कादम्बरं हरन्ति रतये रहः प्रियतमाङ्गकादम्बरम्" माघ० ४-६६। "कादम्बरस्तु दध्यग्रे मद्यभेदे नपुंसकम्" मेदि०।

**कादम्बरी ಕಾದಂಬರೀ** (स्त्री०) 1. ಮದ್ಯ, ಹೆಂಡ. कु कृष्णवर्णमम्बरम् कदम्बरम् कोः कादेशः — तदस्यास्ति "अच्" (५-२-१२७)। बलभद्रः तस्येदम् "अण्" (४-३-१२०)। "ङीप्" (४-१-१५)। "कादम्बरीसाक्षिकमस्माकं प्रथमशोऽभिमतमिष्यते" शाकु० ६। 2. ಸರಸ್ವತಿ. 3. ಕೋಗಿಲೆ. 4. ಸಾರಿಕಾಪಕ್ಷಿ. 5. ಬಾಣಕವಿ ರಚಿತವಾದ "कादम्बरी" ಕಥೆ. "कादम्बरस्तु दध्यग्रे मद्यभेदे नपुंसकम्। स्त्री वारुणीपरभृताभारतीशारिकासु च" मेदि०।

**कादम्बिनी ಕಾದಂಬಿನೀ** (स्त्री०) ಮೇಘಗಳ ಪಙ್ಕ್ತಿ, ಮೋಡಗಳ ಸಾಲು. कादम्बाः कलहंसाः अनुधावकत्वेन

अस्त्यस्याः "इनिः" (५-२-११५)। "कादम्बिनी मेघमाला" अम०। "मदीयमतिंचुम्बिनी भवतु कापि कादम्बिनी" रसगं०।

**कादाचित्क ಕಾದಾಚಿತ್ಕ** (वि०) ಯಾವಾಗಲಾದರೂ ಒಂದು ಸಲ ಉಂಟಾಗುವ, ಆಕಸ್ಮಿಕವಾದ, ಆಗಾಗ್ಗೆ ಸಂಭವಿಸುವ. कदाचित् भवः "ठञ्" (४-३-११)।

**कादाचित्कता ಕಾದಾಚಿತ್ಕತಾ** (स्त्री०) ಯಾವಾಗಲಾದರೂ ಒಂದು ಸಲ ಸಂಭವಿಸುವಿಕೆ. कादाचित्क "तल्" (५-१-११९)। "त्वः"। **कादाचित्कत्वम् ಕಾದಾಚಿತ್ಕತ್ವಮ್.**

**काद्रवेय ಕಾದ್ರವೇಯ** (पु०) ಕದ್ರುವಿನ ಮಗ, ಹೆಡೆ ಮತ್ತು ಬಾಲವುಳ್ಳ ನರಾಕಾರದ ಸರ್ಪ. कद्र्वा अपत्यं पुमान् "ढक्" (४-१-१२०)। "काद्रवेयाश्च बलिनः सहस्रममितौजसः। सुपर्णवशगा नागाः जज्ञिरे नैकमस्तकाः" हरिवं०। "अमृताग्रभुवः पुरेव पुच्छं बडवाभर्तुरवारि काद्रवेयाः" माघ० २०-४३।

**कानक ಕಾನಕ** (वि०) ಕನಕಸಂಬಂಧವಾದ, ಚಿನ್ನದ ಸಂಬಂಧವಾದ. कनकस्येदम् "अण्" (४-३-१२०)।

**कानन ಕಾನನ** (न०) 1. ಅಡವಿ, ಕಾಡು, ಅರಣ್ಯ. कानयति दीपयति स्मरादि — कनी (दीप्तिकान्तिगतिषु) + णिच् "ल्युः" (३-१-१३४)। "शीतो वायुः परिणमयिता काननौदुम्बराणाम्" मेघ० १-४२। 2. ಗೃಹ, ಮನೆ. 3. ಬ್ರಹ್ಮನ ಮುಖ. कस्य ब्रह्मणः आननम्। "काननं विपिने गेहे परमेष्ठिमुखेऽपि च" मेदि०।

**काननारि ಕಾನನಾರಿ** (पु०) 1. ಶಮೀವೃಕ್ಷ, ಬನ್ನಿಮರ. 2. ಬಿದಿರು. 3. ದಾವಾಗ್ನಿ, ಕಾಡುಕಿಚ್ಚು.

**काननौकस् ಕಾನನೌಕಸ್** (पु०) 1. ಕಾಡಿನಲ್ಲಿ ವಾಸಿಸುವ ಋಷಿ, ತಪಸ್ವಿ. 2. ವಾನರ, ಕಪಿ. (वि०) 3. ಅರಣ್ಯದಲ್ಲಿ ವಾಸಮಾಡುತ್ತಿರುವ. काननमोको यस्य।

**कानिष्ठिक ಕಾನಿಷ್ಠಿಕ** (न०) ಕಿರು ಬೆರಳು. कनिष्ठिकैव स्वार्थे "अण्" (५-४-३८)।

**कानिष्ठिनेय ಕಾನಿಷ್ಠಿನೇಯ** (पु०) ಕಿರಿಯ ಹೆಂಡತಿಯ ಮಗ. कनिष्ठाया अपत्यम् "ढक्" (४-१-१२०)। "कृते कानिष्ठिनेयस्य ज्यैष्ठिनेयं विवासितम्" भट्टि० ५-८४।

**कानीन ಕಾನೀನ** (पु०) (ಸ್ತ್ರೀಯರ) ವಿವಾಹಕ್ಕೆ ಮುಂಚೆ ಕನ್ಯಕಾವಸ್ಥೆಯಲ್ಲಿ ಹುಟ್ಟಿದವನು. कन्याया अनूढाया अपत्यम् "अण्" कनीनादेशश्च (४-१-११६)। "कानीनः कन्यकाजातः" अम०। "कानीनः कन्यकाजातो मातामहसुतो मतः" याज्ञ० २-१२९। (1) ವ್ಯಾಸ ಮಹರ್ಷಿ. (2) ಕರ್ಣ. कानीनो व्यासः कर्णश्च सि० कौ०।

**कान्त ಕಾಂತ** (पु०) 1. ಪತಿ, ಗಂಡ. कम्यते — कमु (कान्तौ) "क्तः" (३-२-१०२)। "नात्र कान्तमुपगीतया तया स्वानमा नमति कालिमालया" माघ० ४-५७। "लभेत कान्तं कथमात्मतुल्यम्" रघु० ७-१३। 2. ಶಿಲೆ, ಕಲ್ಲು. (ಚಂದ್ರಕಾಂತ, ಸೂರ್ಯಕಾಂತ) 3. ಚಂದ್ರ. 4. ವಸಂತಋತು. 5. ವಿಷ್ಣು. "सौन्दर्यादिगुणैः कान्तः मनोहरतया भृशम्" इति निरुक्तिः। "कामहा कामकृत् कान्तः" वि० स०। (न०) 6. ಕುಂಕುಮ. (वि०) 7. ರಮ್ಯವಾದ, ಮನೋಹರವಾದ, ಸುಂದರವಾದ. "देवानामिदमामनन्ति मुनयः कान्तं क्रतुं चाक्षुषं रुद्रेणेदमुमाकृतव्यतिकरे स्वाङ्गे विभक्तं द्विधा" माल० १-४। "कान्तेन्दुकान्तोपलकुट्टिमेषु" माघ० ३-४४। 8. ಇಷ್ಟವಾದ, ಅಪೇಕ್ಷಿಸಲ್ಪಡುವ. "भीमकान्तैर्नृपगुणैः स बभूवोपजीविनाम्" रघु० १-१६।

**कान्तपक्षिन् ಕಾಂತಪಕ್ಷಿನ್** (पु०) ಮಯೂರ, ನವಿಲು. कान्तो रम्यः पक्षोऽस्यास्ति "इनिः" (५-२-११५)।

**कान्तपाषाण ಕಾಂತಪಾಷಾಣ** (पु०) ಅಯಸ್ಕಾಂತಶಿಲೆ, ಸೂಜಿಗಲ್ಲು.

**कान्तलोह ಕಾಂತಲೋಹ** (पु०) ಅಯಸ್ಕಾಂತ, ಸೂಜಿಗಲ್ಲು.

**कान्ता ಕಾಂತಾ** (स्त्री०) 1. ಹೆಂಗುಸು. कम्यते — कमु (कान्तौ) "क्तः" (३-२-१०२)। "कान्तानां कुवलयमप्यपास्तमक्ष्णोः शोभाभिर्न मुखरुचाऽह्नमेकमेव" माघ० ८-२३। 2. ಪತ್ನಿ, ಹೆಂಡತಿ. "कान्तया सपदि कोऽप्युपगूढः प्रौढपाणिरपनेतुमियेष" माघ० १०-७३। 3. ಪ್ರಿಯಂಗುವೃಕ್ಷ, ಪ್ರೇಂಕಣಗಿಡ. "कान्तो रम्ये प्रिये प्राण्णि कान्ता प्रियङ्गुयोषितोः" हेम०।

**कान्ताङ्घ्रि(चरण)दोहद ಕಾಂತಾಂಘ್ರಿ (ಚರಣ) ದೋಹದ** (पु०) ಅಶೋಕವೃಕ್ಷ.

**कान्तार ಕಾಂತಾರ** (पुंन०) 1. ಅಡವಿ, ಅರಣ್ಯ, ಕಾಡು. कस्य सुखस्य अन्तं ऋच्छति गच्छति — ऋ (गतौ) "अण्" (३-२-१)। "कान्तारकन्दखननं रचयेति नूनमाबद्धवान्

प्रतिसरं भगवान् वसिष्ठः" चं० रा०। 2. ಮಹಾವನ, ದೊಡ್ಡ ಕಾಡು. "घर्मे निदाघकिरणस्य करैः कठोरैः कान्तारमध्यपदवीषु नखम्पचासु" चं० रा०। 3. ದುರ್ಗಮವಾದ ಮಾರ್ಗ, ಕಷ್ಟವಾದ ದಾರಿ. "कान्तारे निर्गतासि प्रियसखि पदवी विस्मृता किं नु मुग्धे" नैष० ३-१३२। 4. ಬಿಲ. (पु०) 5. ಕೋವಿದಾರ ವೃಕ್ಷ, ಕೆಂಗಾಂಚಾಳದಗಿಡ. 6. ಕೆಂಪುಜಾತಿಯ ಕಬ್ಬು. "कान्तारस्तापसेक्षुश्च काष्ठक्षुः सूचिपत्रकः" सुश्रुत० सूत्र० ४५-१४९। "कान्तारोऽस्त्री महारण्ये बिले दुर्गमवर्त्मनि। पुंसि स्यादिक्षुभेदे" मेदि०। स्वार्थे "कन्"। **कान्तारकः ಕಾಂತಾರಕಃ** : ಕೆಂಪು ಕಬ್ಬು.

**कान्तारग ಕಾಂತಾರಗ -गामिन् -ಗಾಮಿನ್.** (वि०) ಅರಣ್ಯದಲ್ಲಿ ಸಂಚರಿಸುವ, ಕಾಡಿನಲ್ಲಿ ನಡೆಯುವ, ಹೋಗುವ. कान्तारे गच्छति — गम्लृ (गतौ) "ड:" (वा० ३-२-४८)। "णिनिः" (३-१-१३४)। वा।

**कान्तारपथ ಕಾಂತಾರಪಥ** (पु०) ಅರಣ್ಯದ ಮಾರ್ಗ, ಕಾಡು ದಾರಿ.

**कान्तारपथिक ಕಾಂತಾರಪಥಿಕ** (वि०) 1. ಅರಣ್ಯ ಮಾರ್ಗದಿಂದ ತರಲ್ಪಟ್ಟ. 2. ಅರಣ್ಯ ಮಾರ್ಗದಿಂದ ಹೋಗುವ. कान्तारपथेनाहृतं गच्छति वा "ठक्" (वा० ५-१-७७)।

**कान्ति ಕಾಂತಿ** (स्त्री०) 1. ಅಪೇಕ್ಷೆ, ಬಯಕೆ. कमु (कान्तौ) भावे "क्तिन्" (३-३-९४)। 2. ಪ್ರಕಾಶ, ಬೆಳಕು. 3. ಪ್ರಭೆ, ತೇಜಸ್ಸು. "स्फुटमिवोज्ज्वलकाञ्चनकान्तिभिर्युतमशोकमशोभत चम्पकैः" माघ० ६-५। 4. ಹೆಂಗಸರ ಸೌಂದರ್ಯ, ಲಾವಣ್ಯ. "तस्याः शलाकाञ्जननिर्मितेव कान्तिर्भ्रुवोरायतलेखयोर्या" कुमा० १-४७। "स्वकान्तिकीर्तिव्रजमौक्तिकस्रजः श्रयन्तमन्तर्घटनागुणश्रियम्" नैष० १-४२। 5. ಶೋಭೆ, ಹೊಳಪು. 6. ಚಂದ್ರನ ಪತ್ನಿ. "मदिरा रूपिणी भूत्वा कान्तिश्च शशिनः प्रिया"। 7. ದುರ್ಗಾದೇವಿ, ಪಾರ್ವತಿ. "स्तुतिः सिद्धिरिति ख्याता श्रिया संश्रयणाच्च या। लक्ष्मीर्वा ललना वापि कामात् सा कान्तिरुच्यते" देवीपु० ४५। 8. ಗಂಗಾನದಿ. 9. ಚಂದ್ರನ ಕಲೆ. "शशिनी चन्द्रिका कान्तिर्ज्योत्स्ना"।

**कान्तिकर ಕಾಂತಿಕರ** (वि०) 1. ಪ್ರಕಾಶವನ್ನುಂಟು ಮಾಡುವ. 2. ಸೌಂದರ್ಯವನ್ನುಂಟುಮಾಡುವ.

**कान्तिद ಕಾಂತಿದ** (न०) 1. ಪಿತ್ತಧಾತು. कान्तिं ददाति — डु दाञ् (दाने) "कः" (३-२-४)। 2. ಘೃತ, ತುಪ್ಪ. (वि०) 3. ಕಾಂತಿಯನ್ನುಂಟುಮಾಡುವ, ಸೌಂದರ್ಯವನ್ನುಂಟುಮಾಡುವ. (स्त्री०) **-दा -ದಾ.** 4. ಬಾಹುಜಿಗೆ ಗಿಡ.

**कान्तिदायक ಕಾಂತಿದಾಯಕ** (न०) 1. ಒಂದು ಸುಗಂಧ ದ್ರವ್ಯ. 2. ಮರದರಿಶಿನ. (वि०) 3. ಕಾಂತಿಯನ್ನುಂಟು ಮಾಡುವ, ಸೌಂದರ್ಯವನ್ನು ಕೊಡುವ. कान्तिं ददाति — डु दाञ् (दाने) "ण्वुल्" (३-१-१३३)। स्त्रियाम् "टाप्" (४-१-४)। **-दायिका -ದಾಯಿಕಾ.**

**कान्तिनगरी ಕಾಂತಿನಗರೀ** (स्त्री०) ಕಾಂಚೀಪುರ.

**कान्तिभृत् ಕಾಂತಿಭೃತ್** (पु०) ಚಂದ್ರ. कान्तिं बिभर्ति — डु भृञ् (धारणपोषणयोः) "क्विप्" (३-२-७६)।

**कान्तिमत् ಕಾಂತಿಮತ್** (पु०) 1. ಚಂದ್ರ. (वि०) 2. ಕಾಂತಿಯಿಂದ ಕೂಡಿದ, ಪ್ರಕಾಶಮಾನವಾದ. कान्तिरस्यास्ति "मतुप्" (५-२-९४)। स्त्रियाम् "ङीप्" (४-१-६)। **-मती -ಮತೀ.** "कला च सा कान्तिमती कलावतस्त्वमस्य लोकस्य च नेत्रकौमुदी" कुमा० ५-७१।

**कान्तिमत्ता ಕಾಂತಿಮತ್ತಾ** (स्त्री०) ಕಾಂತಿಯಿಂದ ಕೂಡಿರುವಿಕೆ, ಸೌಂದರ್ಯ. कान्तिमतो भावः "तल्" (५-१-११९)। "उपमानमभूद्विलासिनां करणं यत्तव कान्तिमत्तया" कुमा० ४-५।

**कान्तिहर ಕಾಂತಿಹರ** (वि०) ಕಾಂತಿಯನ್ನು ಹೋಗಲಾಡಿಸುವ, ಸೌಂದರ್ಯವನ್ನು ಕೆಡಿಸುವ. कान्तिं हरति— हृञ् (हरणे) "अच्" (३-२-९)।

**कान्थिक ಕಾಂಥಿಕ** (वि०) 1. ಕಂಥಾದೇಶದಿಂದ ಬಂದಿರುವ. 2. ಕಂಥಾದೇಶದಲ್ಲಿರುವ. 3. ಕಂಥಾದೇಶದಲ್ಲಿ ಹುಟ್ಟಿದ. कन्थाया आगतः कन्थायां भवः जातो वा "ठक्" (४-२-१०२)।

**कान्दर्प ಕಾಂದರ್ಪ** (वि०) ಮನ್ಮಥನ ಸಂಬಂಧವಾದ. कन्दर्पस्येदम् "अण्" (४-३-१२०)।

**कान्दव ಕಾಂದವ** (न०) ಕಾವಲಿಯಲ್ಲಿ ತಯಾರಿಸಲ್ಪಟ್ಟ ತಿಂಡಿ. कन्दौ संस्कृतम् "अण्" (४-२-१६)।

**कान्दविक ಕಾಂದವಿಕ** (पु०) ಬಾಣಲೆಯಲ್ಲಿ ಕರಿದ ತಿಂಡಿಗಳನ್ನು ಮಾರುವವನು. कान्दवं पण्यमस्य "ठक्" (४-४-५१)।

**कान्दिग्भूत ಕಾಂದಿಗ್ಭೂತ** (वि०) ಭಯದಿಂದ ಓಡಿಹೋಗುತ್ತಿರುವವನು. कां दिशं गच्छामीति आकुलीभूतः —

भू (प्राप्तौ) "क्तः" (३-४-७२)। "स कथञ्चित् भयात्तस्माद्विमुक्तो ब्राह्मणस्तया। कान्दिग्भूतो जीवितार्थी प्रदुद्रावोत्तरां दिशम्" भा० शान्ति० १६९-४।

**कान्दिशीक ಕಾಂದಿಶೀಕ** (वि०) ಭಯದಿಂದ ಓಡಿ ಹೋದವನು. कां दिशम् गच्छामीत्याह "ठक्" (वा० ४-४-१)। पृषो०। "कान्दिशीकजितकाशिनोरिमां व्यापृतिं विबुधवृष्णिवीरयोः" याद० १७-७८।

**कान्यकुब्ज ಕಾನ್ಯಕುಬ್ಜ** (पु०) ಕನ್ಯಾಕುಬ್ಜದೇಶ. "कान्यकुब्जे महानासीत् पार्थिवो भरतर्षभ। गाधीति विश्रुतो लोके कुशिकस्यात्मसंभवः" भा० वन० १८४।

**कापटिक ಕಾಪಟಿಕ** (पु०) 1. ರಾಜನ ಐದು ವಿಧ ಗೂಢಚಾರರಲ್ಲೊಬ್ಬ. ಇವನು ಕಪಟವ್ಯವಹಾರದಿಂದ ಜೀವಿಸುತ್ತಾ ಇತರರ ಮರ್ಮವನ್ನು ತಿಳಿದು ರಾಜನಿಗೆ ವರದಿ ಮಾಡುವವನು. ["उदास्थित" ಪದದಲ್ಲಿ ನೋಡಿ.] 2. ಶಿಷ್ಯ, ವಿದ್ಯಾರ್ಥಿ. "कापटिकोऽन्यमर्मज्ञे छात्रे पुंसि शठे त्रिषु" मेदि०। (वि०) 3. ವಂಚಕ, ಮೋಸಗಾರ, ಅಪ್ರಾಮಾಣಿಕ. कपटेन चरति – "ठक्" (४-४-८)।

**कापट्य ಕಾಪಟ್ಯ** (न०) ಕಪಟ, ವಂಚನೆ, ಮೋಸ, ಅಪ್ರಾಮಾಣಿಕತೆ. कपटिनो भावः "ष्यञ्" (५-१-१२४)।

**कापथ ಕಾಪಥ** (न०) 1. ದುರ್ಮಾರ್ಗ, ಕೆಟ್ಟದಾರಿ, ಕಲ್ಲು ಮುಳ್ಳುಗಳಿಂದ ಕೂಡಿದ ದಾರಿ. कुत्सितः पन्थाः "अः" (५-४-७४)। नपुंसकत्वम् (वा० २-४-१७)। "वाटः पथश्च मार्गश्च" ಎಂಬ ತ್ರಿಕಾಂಡಶೇಷದ ಪಾಠದಂತೆ ಪಥ ಶಬ್ದದೊಡನೆ ಸಮಾಸ ಮಾಡಿ ಪುಲ್ಲಿಂಗ ಹೇಳಬೇಕೆಂದು ಅಮರ ಸುಧಾವ್ಯಾಖ್ಯಾನ. ಆದರೆ "कु" ವಿಗೆ "का" ಆದೇಶವು "का पथ्यक्षयोः" (६-३-१०४) ಸೂತ್ರದಿಂದ "पथिन्" ಶಬ್ದವು ಪರವಾದರೆ ಮಾತ್ರ ಬರುವುದೇ ಹೊರತು "पथ" ಶಬ್ದವು ಪರವಾದರೆ ಬರಲು ಅವಕಾಶ ವಿಲ್ಲ. ನಿಘಂಟುಕಾರರೂ ಪುಲ್ಲಿಂಗದಲ್ಲೇ ಹೇಳಿರುತ್ತಾರೆ. "कदध्वा कापथः पुमान्" अम०। "कापथः कुत्सितपथे उशीरे क्लीबमिष्यते" मेदि०। "विपथः कापथो व्यध्वो दुरध्वश्च कदध्वनि" वैज०। "सत्पथस्तु सुपन्थाः स्यात् व्यध्वो विपथकापथौ" रभसः। 2. ಉಶೀರ, ಲಾಮಂಚದ ಬೇರು.

**कापा ಕಾಪಾ** (स्त्री०) ಪ್ರಾತಃಕಾಲದಲ್ಲಿ ಎಚ್ಚರಗೊಳಿಸುವ ಹೊಗಳಭಟನ ಮಾತು, ಸ್ತುತಿಪಾಠಕನ ಮಾತು. कं सुखमाप्यतेऽनया – आप्लृ (व्याप्तौ) कर० "घञ्" (३-३-१२१)।

**कापाटिक ಕಾಪಾಟಿಕ** (न०) ಚಿಕ್ಕ ಕದ, ಚಿಕ್ಕ ಬಾಗಿಲು. कपाटिकेव – स्वार्थे "अण्" (५-३-१०७)।

**कापाल ಕಾಪಾಲ** (पु०) 1. ಸೌತೆಗಿಡ. (न०) 2. ಏಳು ಮಹಾ ಕುಷ್ಠರೋಗಗಳಲ್ಲೊಂದು ವಿಧ. कपालमेव–स्वार्थे "अण्" (५-४-३८)। "अरुणोदुम्बरर्ष्यजिह्वकपाल-काकणकपुण्डरीकदद्रुकुष्ठानीति महाकुष्ठानि" सुश्रुत० निदान० ५-५। (वि०) 2. ಕಪಾಲಸಂಬಂಧವಾದ, ಕಪಾಲದಿಂದ ತಯಾರಿಸಲ್ಪಟ್ಟ ಆಭರಣ ಮುಂತಾದುವು. कपालस्येदम् "अण्" (४-३-१२०)। "त्रिशूलमस्त्रं घोरं च कापालमथ कङ्कणम्" विक्र०।

**कापालिक ಕಾಪಾಲಿಕ** (पु०) 1. ಶೈವಮತಾನುಯಾಯಿಯಾದ ಸಂನ್ಯಾಸಿ, ಭಿಕ್ಷೆಗಾಗಿ ಕಪಾಲವನ್ನು ಹಿಡಿದು ಸಂಚರಿಸುವ ಮತ್ತು ಅದರಲ್ಲಿ ಊಟಮಾಡುವ ಶೈವಭಿಕ್ಷು. कपालेन नरकपालेन चरति अभ्यवहारादिकं करोति – कपाल "ठक्" (४-४-८)। "केचित्पञ्चशिखी-कृताश्च जटिलाः कापालिकाश्चापरे" भर्तृ० १-७९। 2. ಒಬ್ಬ ಮಿಶ್ರಜಾತಿಯವನು. स्त्रियाम् "ङीष्" (४-१-६३)। –की –ಕೀ.

**कापालिन् ಕಾಪಾಲಿನ್** (पु०) 1. ವ್ರತಕ್ಕಾಗಿ ಬ್ರಹ್ಮ ಕಪಾಲವನ್ನು ಹಿಡಿದಿರುವ ಶಿವ. कपालं ब्रह्मकपालं व्रते धार्यत्वेनास्त्यस्य "इनिः" (५-२-११५)। "अजैकपाच्च कापाली त्रिशङ्कुरजितः शिवः" भा० अनु० १७। 2. ಒಬ್ಬ ಮಿಶ್ರಜಾತಿಯವನು.

**कापिक ಕಾಪಿಕ** (वि०) ಕಪಿಯಂತಿರುವ, ಕಪಿಯಂತೆ ಆಕಾರ ಅಥವಾ ಚೇಷ್ಟೆಯುಳ್ಳ. कपिरिव "ठक्" (५-३-१०८)।

**कापिञ्जल ಕಾಪಿಂಜಲ** (पु०) ಕಪಿಂಜಲನ ಮಗ. कपिञ्जलस्यापत्यम् कपिञ्जल "अण्" (४-१-११२)।

**कापित्थ ಕಾಪಿತ್ಥ** (वि०) ಕಪಿತ್ಥಸಂಬಂಧವಾದ, ಬೇಲದ ಸಂಬಂಧವಾದ. कपित्थस्यावयवो विकारो वा "अञ्" (४-३-१४०)।

**कापिल ಕಾಪಿಲ** (पु०) 1. ಕಪಿಲವರ್ಣ, ಕಂದು ಹೊಂಬಣ್ಣ. कपिल स्वार्थे "अण्" (५-४-३८)। 2. ಕಪಿಲಮತಾನುಯಾಯಿ, ಸಾಂಖ್ಯಮತಾನುಯಾಯಿ. 3. ಕಪಿಲಮಹರ್ಷಿಪ್ರೋಕ್ತವಾದ ಶಾಸ್ತ್ರವನ್ನು ತಿಳಿದವನು ಮತ್ತು ಅಧ್ಯಯನ ಮಾಡಿದವನು. कापिलं कपिलोक्तं

शास्त्रं वेत्त्यधीते वा "अण्" (४-२-५९)। (न०) 4. ಕಪಿಲಮಹರ್ಷಿಪ್ರೋಕ್ತವಾದ ಸಾಂಖ್ಯಶಾಸ್ತ್ರ. 5. ಕಪಿಲ ಮಹರ್ಷಿಯು ತಪಸ್ಸು ಮಾಡುತ್ತಿದ್ದ ಒಂದು ತೀರ್ಥ. 6. ಕಪಿಲಮಹರ್ಷಿರಚಿತವಾದ ಒಂದು ಉಪಪುರಾಣ. (वि) 7. ಕಪಿಲಮಹರ್ಷಿಸಂಬಂಧವಾದ. कपिल "अण्" (४-३-१२०)। 8. ಕಂದುಹೊಂಬಣ್ಣದ.

**कापिलिक ಕಾಪಿಲಿಕ** (पुं०) ಕಪಿಲ ವರ್ಣದ ಹೆಂಗಸಿನ ಮಗ. कपिलिकाया अपत्यम् "अण्" (४-१-११२)।

**कापिल्य ಕಾಪಿಲ್ಯ** (वि०) 1. ಕಪಿಲಮಹರ್ಷಿಯು ವಾಸಮಾಡುವ ದೇಶ. कपिलः अस्त्यस्मिन् देशे। 2. ಕಪಿಲಮಹರ್ಷಿಯಿಂದ ಉಂಟಾದ. कपिलेन निर्वृत्तम्। 3. ಕಪಿಲಮಹರ್ಷಿಯು ವಾಸಮಾಡುವ ಜಾಗ. कपिलस्य निवासः। 4. ಕಪಿಲಮಹರ್ಷಿಗೆ ಸಮೀಪದಲ್ಲಿರುವ ದೇಶ ಅಥವಾ ಗ್ರಾಮ. कपिलस्य अदूरभवः। सर्वत्र सङ्काशादित्वात् चतुरर्थ्याम् "ण्यः" (४-२-८०)।

**कापिश ಕಾಪಿಶ** (न०) ಸುರೆ, ಒಂದು ವಿಧ ಮದ್ಯ. कपिशा माधवीलता तत्पुष्पं साधनत्वेनास्त्यस्य "अण्" (५-२-१०३)।

**कापिशायन ಕಾಪಿಶಾಯನ** (न०) 1. ಮಧು, ಜೇನುತುಪ್ಪ. कापिश्यां देशविशेषे जातम्—कापिशी "ष्फक्" (४-२-९९)। 2. ಮದ್ಯ, ಹೆಂಡ. "कापिशायन-सुगन्धि विघूर्णन्नुन्मदोऽधिशयितुं समशेत" माघ० १०-४। (स्त्री) **-यनी -ಯನೀ.** "ङीष्" (४-१-४१)। 3. ದ್ರಾಕ್ಷಿ. "कापिशायनी द्राक्षा" सि० कौ०। 4. ಒಂದು ದೇವತೆ.

**कापिशी ಕಾಪಿಶೀ** (स्त्री०) ಒಂದು ದೇಶ.

**कापिशेय ಕಾಪಿಶೇಯ** (पुं०) ಪಿಶಾಚ, ಭೂತ, ದೆವ್ವ. कपिशाया अपत्यम् "ढक्" (४-१-१२०)।

**कापुरुष ಕಾಪುರುಷ** (पुं०) 1. ನೀಚಮನುಷ್ಯ, ತುಚ್ಛ, ನಿಕೃಷ್ಟನಾದವನು. 2. ಹೇಡಿ, ಅಂಜುಪುರುಕ. कुत्सितः पुरुषः—कोः वा कादेशः (६-३-१०६)। पक्षे कुपुरुषः ಕುಪುರುಷಃ. "शत्रोर्विख्यातवीर्यस्य व्यञ्जनीयस्य विक्रमैः। पश्यतो युद्धलुब्धोऽहं कृतः कापुरुषस्त्वया" रामा०। ಈಪದರ್ಥದಲ್ಲಿ ಕಾದೇಶ ನಿತ್ಯ. कापुरुषः। (वि०) 2. ಹೇಡಿಯ ಸಂಬಂಧವಾದ, ಅಂಜುಕುಳಿಯ ಸಂಬಂಧವಾದ. कापुरुषस्येदम् "अण्" (४-३-१२०)। "स्त्रीषु शौर्यमनाथासु परदारप्रधर्षक। कृत्वा कापुरुषं कर्म शूरोऽहमिति मन्यसे" रामा०। स्त्रियाम् "ङीप्" (४-१-१५)। **-पुरुषी -ಪುರುಷೀ.**

**कापुरुष्य ಕಾಪುರುಷ್ಯ** (न०) 1. ಅಂಜುಬುರುಕತನ, ಹೇಡಿತನ. कापुरुषस्य भावः कर्म वा "ष्यञ्" (५-१-१२४)। 2. ನೀಚತನ, ತುಚ್ಛತನ.

**कापेय ಕಾಪೇಯ** (पुं०) 1. ಕಪಿಯ ಗೋತ್ರದಲ್ಲಿ ಹುಟ್ಟಿದವನು. कपेर्गोत्रापत्यं पुमान् "ढक्" (४-१-१२२)। स्त्रियाम् "ङीष्" (४-१-१५)। **-यी -ಯೀ.** "कच्चिन्नु खलु कापेयी सेव ते चलचित्तता" रामा०। (न०) 2. ಕಪಿಯ ಭಾವ ಮತ್ತು ಕರ್ಮ, ಕಪಿತ್ವ, ಕಪಿಯ ಚೇಷ್ಟೆ. कपेर्भावः कर्म वा "ढक्" (५-१-१२७)।

**कापोत ಕಾಪೋತ** (पुं०) 1. ಕಪೋತ ವರ್ಣ, ಪಾರಿವಾಳ ಹಕ್ಕಿಯ ಬಣ್ಣ, ನರೆಬಣ್ಣ, ಬೂದುಬಣ್ಣ. (न०) 2. ಕಪೋತಗಳ ಸಮೂಹ, ಪಾರಿವಾಳ ಹಕ್ಕಿಗಳ ಗುಂಪು. कपोतानां समूहः "अण्" (४-२-३७)। 3. ಸೌವೀರಾಂಜನ. 4. ಸದ್ಯಕ್ಷಾರ. (वि०) 5. ಕಪೋತ ಸಂಬಂಧವಾದ. कपोतस्येदम् "अण्" (४-३-१२०)। "कापोतो रुचके क्लीबे कपोताघेऽञ्जनान्तरे" मेदि०। स्त्रियाम् "ङीप्" (४-१-१५)। **-ती -ತೀ.** ಕಪೋತದ ವೃತ್ತಿ, ಉಂಛವೃತ್ತಿ; ಕಪೋತಗಳು ಹೊಲಗದ್ದೆಗಳಲ್ಲಿ ಬಿದ್ದಿರುವ ಕಾಳುಗಳನ್ನು ಆರಿಸಿ ತಿನ್ನುವುವು ಮತ್ತು ಸ್ವಲ್ಪ ಮಾತ್ರಕೂಡಿಸಿ ಇಟ್ಟುಕೊಳ್ಳುವುವು. ಇದರಂತೆ ಮನುಷ್ಯನೂ ನಡೆದರೆ ಅದು ಕಾಪೋತವೃತ್ತಿಯೆನಿಸುವುದು. "दुर्मना भगवान् काव्यः पौरोहित्यं विगर्हयन्। स्तुवन् वृत्तिं च कापोतीं दुहित्रा च ययौ पुरात्" भाग० ९-१८-२५।

**कापोतपाक्य ಕಾಪೋತಪಾಕ್ಯ** (पुं०) ಪಾರಿವಾಳ (ಹಕ್ಕಿಯ) ಮರಿಗಳ ಗುಂಪು. कपोतानां पाकाः डिम्भाः तेषां व्रातः "ञ्यः" (५-३-११३)।

**कापोताञ्जन ಕಾಪೋತಾಂಜನ** (न०) ಸೌವೀರಾಂಜನ, ಕಪೋತ ವರ್ಣದ ಒಂದು ಅಂಜನ. कपोतस्येदम् "अण्" (४-३-१२०)। कापोतं च तत् अञ्जनं च।

**काप्य ಕಾಪ್ಯ** (पुं०) ಕಪಿಗೋತ್ರೋತ್ಪನ್ನನಾದ ಆಂಗಿರಸ. कपेर्गोत्रापत्यम् "यञ्" (४-१-१०७)।

**काप्यकर ಕಾಪ್ಯಕರ** (वि०) ತಾನು ಮಾಡಿದ ಪಾಪಕೃತ್ಯವನ್ನು ಇತರರಿಗೆ ತಿಳಿಸುವವನು, ಪಶ್ಚಾತ್ತಾಪ ಪಡುವ ಸ್ವಭಾವದವನು. कुत्सितमाप्यं काप्यं पापं करोति कथयति

(धातूनामनेकार्थत्वात्)—डु कृञ् (करणे) "ट:" (३-२-२०)।

**काप्यकार ಕಾಪ್ಯಕಾರ** (वि०) ತನ್ನ ಪಾಪಕೃತ್ಯವನ್ನು ಇತರರಿಗೆ ತಿಳಿಸುವವನು. ಪಶ್ಚಾತ್ತಾಪಪಡುವವನು. काप्यं करोति — डु कृञ् (करणे) "अण्" (३-२-१)।

**काफल ಕಾಫಲ** (पु०) ತೇಗದ ಮರ. कुत्सितं फलमस्य।

**काम ಕಾಮ** (पु०) 1. ಮನ್ಮಥ. काम्यतेऽनेन — कमु (कान्तौ) "घ:" (३-३-११८)। "काम: कौसुमचापदुर्जयममुं जेतुं नृपं त्वां धनुर्वल्लीमव्रणवंशजामधिगुणामासाद्य माद्यत्यसौ" नैष० ३-१२६। "श्रीमाञ्जगन्ति मदयन्नयनाभिराम: कामोऽयमेति मदघूर्णितनेत्रपद्म:" प्रबोध० १-१०। ಕಾಮನ ಉತ್ಪತ್ತಿಯ ಕಥೆಯು ಅನೇಕ ವಿಧವಾಗಿರುವುದು. (1) ಕಾಮನು ಧರ್ಮಪುರುಷನ ಮೂವರು ಮಕ್ಕಳಲ್ಲಿ ಒಬ್ಬ. ಇವನ ಪತ್ನಿ ರತಿ. "स्तनं तु दक्षिणं भित्त्वा ब्रह्मणो निरवग्रह:। नि:सृतो भगवान् धर्म: सर्वलोकसुखावह:। त्रयस्तत्र वरा: पुत्रा: सर्वभूतमनोहरा:। शम: कामश्च हर्षश्च तेजसा लोकधारिण:। कामस्य तु रतिर्भार्या शमस्य प्राप्तिरङ्गना। नन्दा तु भार्या हर्षस्य यासु लोका: प्रतिष्ठिता:" भा० आदि० ६६-३१-३३। (2) ಬ್ರಹ್ಮನ ಮಗ. ಸಂಧ್ಯೆಯೂ ಕಾಮನೂ ಬ್ರಹ್ಮನಿಂದ ಜನಿಸಿದರು. ಬ್ರಹ್ಮನು ಮನ್ಮಥನಿಗೆ ಸಕಲ ಜಗತ್ತನ್ನೂ ಮೋಹಗೊಳಿಸುವ ಶಕ್ತಿಯನ್ನು ಕೊಟ್ಟನು. ಅದನ್ನು ಪರೀಕ್ಷಿಸಲು ಅವನು ಮೊದಲು ಬ್ರಹ್ಮನ ಮೇಲೆಯೇ ತನ್ನ ಪ್ರಭಾವವನ್ನು ತೋರಿಸಲಾಗಿ ಬ್ರಹ್ಮನು ಮಗಳಾದ ಸಂಧ್ಯೆಯನ್ನೇ ಮೋಹಿಸಿದನು. ಶಿವನು ಬಂದು ಬ್ರಹ್ಮನಿಗೆ ವಿವೇಕ ಹೇಳಲಾಗಿ ಶಿವನ ಫಾಲನೇತ್ರಾಗ್ನಿಯಿಂದ ದಗ್ಧನಾಗುವಂತೆ ಬ್ರಹ್ಮನು ಕಾಮನಿಗೆ ಶಾಪ ಕೊಟ್ಟನು. ಇದರಿಂದ ನಾಚಿಕೆಗೊಂಡ ಸಂಧ್ಯೆಯು ವಿಷ್ಣುವನ್ನು ತಪಸ್ಸಿನಿಂದ ಪ್ರಸನ್ನಗೊಳಿಸಿ ಪ್ರಾಣಿಮಾತ್ರಕ್ಕೂ ಹುಟ್ಟಿದಂದಿನಿಂದಲೇ ಕಾಮವಿಕಾರವು ಉಂಟಾಗಕೂಡದೆಂದೂ ಕಾಲಕ್ರಮದಲ್ಲಿ ಕಾಮವು ಬೆಳೆಯಬೇಕೆಂದೂ ವರವನ್ನು ಕೇಳಲಾಗಿ "ಬಾಲ್ಯ ಮತ್ತು ಕೌಮಾರ ಅವಸ್ಥೆಗಳನ್ನು ದಾಟಿ ಯೌವನ ಪ್ರಾದುರ್ಭಾವವಾದನಂತರ ಕಾಮೋತ್ಪತ್ತಿಯಾಗಲಿ" ಎಂದು ವಿಷ್ಣುವು ವರವಿತ್ತನು. ಆದುದರಿಂದ ಸಕಲ ಪ್ರಾಣಿಗಳಿಗೂ ಬಾಲ್ಯದಲ್ಲೂ ಶುಕ್ರಧಾತುವಿದ್ದರೂ ಮೊದಲು ಸೂಕ್ಷ್ಮವಾಗಿದ್ದು ತಾರುಣ್ಯದಲ್ಲಿ ಮಾತ್ರ ಪುಷ್ಟಿಹೊಂದಿ ಪ್ರಕಾಶವಾಗುವುದು. "बालानां शुक्रमस्त्येव किं तु सौक्ष्म्यान्न दृश्यते। पुष्पाणां मुकुले गन्धो यथा सन्नपि नाप्यते। तेषां तदेव तारुण्ये पुष्टत्वाद्व्यक्तिमेति हि। कुसुमानां प्रफुल्लानां गन्ध: प्रादेर्भवेद्यथा" भावप्र०।

ತಾರಕಾಸುರನ ಬಾಧೆಯನ್ನು ತಡೆಯಲಾರದೆ ದೇವತೆಗಳು ತಮ್ಮ ಸೈನ್ಯಕ್ಕೆ ಶಕ್ತನಾದ ಸೇನಾಧಿಪತಿಯೊಬ್ಬನನ್ನು ಪಡೆಯಲು ಬ್ರಹ್ಮನ ಮಾತಿನಂತೆ ಸತಿಯ ವಿಯೋಗದಿಂದ ಧ್ಯಾನಾಸಕ್ತನಾಗಿದ್ದ ಪರಮೇಶ್ವರನ ಮೇಲೆ ತನ್ನ ಪ್ರಭಾವವನ್ನು ಬೀರಿ ಪಾರ್ವತಿಯನ್ನು ಮದುವೆಯಾಗುವಂತೆ ಮಾಡಬೇಕೆಂದು ಮನ್ಮಥನನ್ನು ಪ್ರಾರ್ಥಿಸಿದರು. ಇವನು ಸಮಾಧಿಯಲ್ಲಿದ್ದ ಶಿವನ ಮೇಲೆ ತನ್ನ ಶಕ್ತಿಯನ್ನು ತೋರಿಸಲು ಹೋಗಿ ಅವನ ಫಾಲಾಗ್ನಿಯಿಂದ ದಗ್ಧನಾದನು. ದೇವತೆಗಳ ಪ್ರಾರ್ಥನೆಯಿಂದ ಶಿವನು ಮನ್ಮಥನನ್ನು ಬದುಕಿಸಿ ಅನಂಗನನ್ನಾಗಿ ಮಾಡಿದನು. शिवपु० सतीखं०। ಬಳಿಕ ಮನ್ಮಥನು ಶ್ರೀಕೃಷ್ಣನ ಪತ್ನಿಯಾದ ರುಕ್ಮಿಣಿಯಲ್ಲಿ ಪ್ರದ್ಯುಮ್ನನಾಗಿ ಜನಿಸಿ ಮಾಯಾವತಿಯಾಗಿ ಜನಿಸಿದ ರತಿಯನ್ನು ಮದುವೆಯಾದನು. भाग० १०-५५। [ವಿವರಕ್ಕೆ "प्रद्युम्न" ಪದದಲ್ಲಿ ನೋಡಿ.] 2. ಅಪೇಕ್ಷೆ, ಬಯಕೆ, ಇಚ್ಛೆ. "कामो मे भुञ्जीत भवान्" सि० कौ०। "प्रासादजालैर्जलवेणिरम्यां रेवां यदि प्रेक्षितुमस्ति काम:" रघु० ६-४३। 3. ಫಲಾಪೇಕ್ಷೆ. "स्वयं विधाता तपस: फलानां केनापि कामेन तपश्चचार" कुमा० १-५७। 4. ಅಭೀಷ್ಟ, ಮನೋರಥ, ಕೋರಿಕೆ. "संपत्स्यते व: कामोऽयं काल: कश्चित् प्रतीक्ष्यताम्" कुमा० २-५४। 5. ಸ್ವೇಚ್ಛಾಚಾರ, ಇಷ್ಟಬಂದಂತೆ ನಡೆಯುವಿಕೆ. ಮನಸ್ಸಿಗೆ ತೋರಿದಂತೆ ವರ್ತಿಸುವಿಕೆ. "दिगीशवृन्दांशविभूतिरीशिता दिशा स कामप्रसरावरोधिनीम्" नैष० १-६। 6. ಪ್ರೀತಿ, ಸ್ತ್ರೀಪುರುಷರ ಪರಸ್ಪರ ಆಲಿಂಗನಾದಿಗಳಿಗೆ ಕಾರಣವಾದ ಅನುರಾಗ. ಈ ಅನುರಾಗವು ಒಂದೊಂದು ತಿಥಿಯಲ್ಲಿಯೂ ಸ್ತ್ರೀಪುರುಷರ ಒಂದೊಂದು ಅಂಗದಲ್ಲಿ ನಖಕ್ಷತ ದಂತಕ್ಷತ ಚುಂಬನಾದಿಗಳಿಂದ ಹುಟ್ಟುವುದು. (1) पादाङ्गुष्ठे प्रतिपदि, (2) द्वितीयायां च गुल्फके। (3) ऊरुदेशे तृतीयायां, (4) चतुर्थ्यां भगदेशत:। (5) नाभिस्थाने च पञ्चम्यां, (6) षष्ठयां तु कुचमण्डले। (7) सप्तम्यां हृदये चैव (8) अष्टम्यां कक्षदेशत:। (9) नवम्यां कण्ठदेशे च, (10) दशम्यां चोष्ठदेशत:। (11) एकादश्यां गण्डदेशे, (12) द्वादश्यां नयने तथा। (13) श्रवणे च त्रयोदश्यां, (14) चतुर्दश्यां ललाटके। (15) पौर्णमास्यां शिखायां च ज्ञातव्यश्च इति क्रमात्। दक्षे पुंसां स्त्रिया वामे शुक्ले कृष्णे विपर्यय:" स्मरदी०। 7. ವಿಷಯಾಭಿಲಾಷೆ, ವಿಷಯಾಸಕ್ತಿ. "काम एष क्रोध एष रजोगुणसमुद्भव:"

गीता ३-३७। 8. ವರ. ದೇವತಾನುಗ್ರಹದಿಂದ ದೊರೆತ ಇಷ್ಟಾರ್ಥ. काम्यते — कमु कर्म० "घञ्" (३-३-१९)। 9. ವಿಷ್ಣು, ಪರಮಾತ್ಮ. "कामः स काम्यते मोक्षकाङ्क्षिभिः प्रार्थ्यते यतः" इति निरुक्तिः। "कामहा कामकृत् कान्तः कामः कामप्रदः प्रभुः" वि० स०। 10. ಬಲರಾಮ. 11. ಸುರತಾಭಿಲಾಷೆ, ಸಂಭೋಗದ ಅಪೇಕ್ಷೆ. 12. ಆಶಯ, ಅಭಿಪ್ರಾಯ. "एव विद्वन् पितुः कामान् पान्तावल्पंपचान् मुनीन्" भट्टि० ६-९६। 13. ನಾಲ್ಕು ವಿಧ ಪುರುಷಾರ್ಥಗಳಲ್ಲೊಂದು, ಸುಖಾನುಭವ, ಇಂದ್ರಿಯಸುಖ. (1) धर्मः ಧರ್ಮ, (2) अर्थः ಅರ್ಥ, (3) कामः ಕಾಮ ಮತ್ತು (4) मोक्षः ಮೋಕ್ಷ— ಇವು ನಾಲ್ಕು ವಿಧ ಪುರುಷಾರ್ಥಗಳು. 14. ಅನುರಾಗದ ಅಧಿಷ್ಠಾತೃದೇವತೆ. 15. ಕಾಮನಾವಿಷಯ, ಇಚ್ಛೆಗೆ ವಿಷಯವಾದ ಸ್ರಕ್‌ಚಂದನಾದಿಗಳು. "न जातु कामः कामानामुपभोगेन शाम्यति। हविषा कृष्णवर्त्मेव भूय एवाभिवर्धते" मनु० २-९४। "तद्वत् कामा यं प्रविशन्ति सर्वे स शान्तिमाप्नोति न कामकामी" गीता २-७०। 16. ಒಂದು ಜಾತಿಯ ಮಾವಿನಮರ. (न०) 17. ಕಾಮ್ಯ, ಇಚ್ಛೆಗೆ ವಿಷಯವಾದ ಫಲ. 18. ರೇತಸ್ಸು, ವೀರ್ಯ. (अव्य०) **-मम्-ಮಮ್.** 19. ಅನುಮತಿ. "काममामरणात्तिष्ठेद्‌गृहे कन्यर्तुमत्यपि" मनु० ९-८९। 20. ಇಷ್ಟಾನುಸಾರವಾಗಿ, ಅಡ್ಡಿ ಆತಂಕಗಳಿಲ್ಲದೆ. "भूयस्ततो रघुपतिर्विलसत्पताकमध्यास्त कामगति सावरजो विमानम्" रघु० १३-७६। 21. ಅತ್ಯಂತವಾಗಿ, ಹೆಚ್ಚಾಗಿ, ಬಹಳವಾಗಿ. "कामं प्रिया न सुलभा मनस्तु तद्भावदर्शनायासि" शाकु० २-१। 22. ಅತ್ಯಂತವಾಗಿ, ಸಂಪೂರ್ಣವಾಗಿ, ಅತಿಶಯವಾಗಿ. "कामं प्रत्यादिष्टां स्मरामि न परिग्रहं मुनेस्तनयाम्" शाकु० ५-३१। 23. ಇಷ್ಟವಿಲ್ಲದೆ ಅಂಗೀಕಾರ, ಅರ್ಧಾಂಗೀಕಾರ. "मनागनभ्यावृत्त्या वा कामं क्षाम्यतु यः क्षमी" माघ० २-४३। 24. ನಿಜವಾಗಿಯೂ, ಸತ್ಯವಾಗಿಯೂ. "संरुद्धचेष्टस्य मृगेन्द्र कामं हास्यं वचस्तद्यदहं विवक्षुः" रघु० २-४२।

**कामकला ಕಾಮಕಲಾ** (स्त्री०) ರತಿ, ಮನ್ಮಥನ ಪತ್ನಿ. कामस्य कला।

**कामकाम ಕಾಮಕಾಮ** (वि०) ಇಷ್ಟವಾದುದನ್ನು ಅಪೇಕ್ಷಿಸುವ, ಬೇಕಾದುದನ್ನು ಬಯಸುವ. कामं काम्यं कामयते — कमु (कान्तौ) + णिङ् "अण्" (३-२-१)। "एवं त्रयीधर्ममनुप्रपन्ना गतागतं कामकामा लभन्ते" गीता ९-२१। "णिनिः" (३-२-७८)। **-कामी -ಕಾಮೀ.** ಸ್ರಕ್‌ಚಂದನಾದಿ ವಿಷಯಗಳನ್ನು ಅಪೇಕ್ಷಿಸುವವನು. ವಿಷಯಾಸಕ್ತ. "आपूर्यमाणमचलप्रतिष्ठं समुद्रमापः प्रविशन्ति यद्वत्। तद्वत् कामा यं प्रविशन्ति सर्वे स शान्तिमाप्नोति न कामकामी" गीता २-७०। स्त्रियाम् "ङीप्" (४-१-५)। **-कामिनी -ಕಾಮಿನೀ.**

**कामकार ಕಾಮಕಾರ** (पु०) 1. ಫಲಾಭಿಸಂಧಿಯಿಂದ ಕೆಲಸಮಾಡುವುದು. कामेन फलकामनया कारः करणम्— डु कृञ् (करणे) भावे "घञ्" (३-३-१८)। "अयुक्तः कामकारेण फले सक्तो निबध्यते" गीता ५-१२। 2. ಸ್ವೇಚ್ಛೆಯಿಂದ ಕೆಲಸಮಾಡುವುದು, ಇಷ್ಟಬಂದಂತೆ ಕೆಲಸಮಾಡುವಿಕೆ, ಬುದ್ಧಿಪೂರ್ವಕ ಮಾಡುವಿಕೆ. "कामकारकृतेऽप्याहुरेके श्रुतिनिदर्शनात्" मनु० ११-४५। (वि०) 3. ಕಾಮ್ಯಕರ್ಮವನ್ನು ಆಚರಿಸುವವನು. कामं काम्यं करोति — डु कृञ् (करणे) "अण्" (३-२-१)।

**कामकूट ಕಾಮಕೂಟ**(पु०) 1. ವೇಶ್ಯಾಪತಿ, ವಿಟಪುರುಷ, ಜಾರ, ವ್ಯಭಿಚಾರಿ. कामः कूटं शृङ्गं प्रधानमस्य। 2. ವೇಶ್ಯೆಯ ವಿಲಾಸ, ಸೂಳೆಯ ಹಾವಭಾವಾದಿಗಳು. "कामकूटस्तु वेश्यायाः प्रियविभ्रमयोः पुमान्" मेदि०।

**कामकृत् ಕಾಮಕೃತ್** (पु०) 1. ವಿಷ್ಣು. कामं मोक्षादिकाम्यं करोति — डु कृञ् (करणे) "क्विप्" (३-२-७६)। "स्वपादपद्मे रागादिकरणात् कामकृत् स्मृतः" इति निरुक्तिः। "कामहा कामकृत् कान्तः कामः कामप्रदः प्रभुः" वि० स०। (वि०) 2. ಇಷ್ಟಾರ್ಥವನ್ನು ಕೊಡುವವನು. 2. ಇಷ್ಟಬಂದಂತೆ ಕೆಲಸಮಾಡುವವನು. कामेन कृष्टानुसारेण करोति — डु कृञ् "क्विप्" (३-२-७६)।

**कामकृत ಕಾಮಕೃತ** (वि०) 1. ಇಷ್ಟಬಂದಂತೆ ಮಾಡಲ್ಪಟ್ಟ, ಇಚ್ಛಾನುಸಾರ ಮಾಡಲ್ಪಟ್ಟ. कामेन कृतः। 2. ಫಲೋದ್ದೇಶದಿಂದ ಮಾಡಲ್ಪಟ್ಟ, ಫಲಾಭಿಸಂಧಿಯಿಂದ ಮಾಡಲ್ಪಟ್ಟ. कामेन कामनया कृतः।

**कामकेलि ಕಾಮಕೇಳಿ** (पु०) 1. ಕಾಮಕ್ರೀಡೆ, ಸಂಭೋಗ, ಸ್ತ್ರೀಪುರುಷರ ಸಂಗಮ. कामनिमित्ता केलिः। (वि०) 2. ಜಾರ, ವಿಟಪುರುಷ, ವ್ಯಭಿಚಾರಿ. कामे केलिर्यस्य।

**कामक्रीडा ಕಾಮಕ್ರೀಡಾ** (स्त्री०) ಸುರತಕ್ರೀಡೆ, ಸಂಭೋಗ, ರತಿಕ್ರೀಡೆ. कामनिमित्ता क्रीडा।

**कामग ಕಾಮಗ** (पु०) 1. ಪ್ರೀತಿಯಿಂದ ಅಥವಾ ಸ್ವೇಚ್ಛೆಯಿಂದ ಸ್ತ್ರೀಸಂಭೋಗ ಮಾಡುವ ಪುರುಷ. कामेन अनुरागेण इच्छया वा गच्छति — गम्लृ (गतौ) "डः"

(वा० ३-२-४८)। स्त्रियाम् -गा -ಗಾ. (1) ಪ್ರೀತಿಯಿಂದ ಪುರುಷನೊಡನೆ ಸಂಗಮಿಸುವ ಹೆಂಗಸು. (2) ಸ್ವೈರಿಣಿ, ವ್ಯಭಿಚಾರಿಣಿ. "पाषण्डानाश्रिताः स्तेना भर्तृघ्न्यः कामगादिकाः" याज्ञ० ३-६। (वि०) 2. ಇಷ್ಟಬಂದಂತೆ ನಡೆಯುವ, ಸ್ವೇಚ್ಛೆಯಿಂದ ಹೋಗುವ. "विमानं पुष्पकं नाम कामगं च ददौ प्रभुः" भा० वन० २७५-१७।

**कामगति ಕಾಮಗತಿ** (स्त्री०) 1. ಇಷ್ಟಾನುಸಾರ ನಡೆಯುವುದು, ಸ್ವೇಚ್ಛೆಯಿಂದ ಹೋಗುವಿಕೆ. कामेन गतिः। (वि०) 2. ಇಷ್ಟಾನುಸಾರವಾಗಿ ನಡೆಯುವ, ತನ್ನ ಇಚ್ಛೆಯಂತೆ ಗಮನವುಳ್ಳ. कामेन इच्छानुसारेण गतिः गमनं यस्य। "भयस्ततो रघुपतिर्विलसत्पताकमध्यास्त कामगति सावरजो विमानम्" रघु० १३-७६।

**कामगवी ಕಾಮಗವೀ** (स्त्री०) ಕಾಮಧೇನು. कामप्रदा गौः "टच्" (५-४-९२)। "अनेन सर्वार्थिकृतार्थता-कृताहृतार्थिनौ कामगवीसुरद्रुमौ" नैष० १२-७९।

**कामगामिन् ಕಾಮಗಾಮಿನ್** (वि०) 1. ಸ್ವೇಚ್ಛೆಯಿಂದ ನಡೆಯುವ. कामेन गच्छति — गम्लृ (गतौ) "णिनिः" (६-२-७८)। 2. ಇಷ್ಟಬಂದಂತೆ ಸ್ತ್ರೀಗಮನ ಮಾಡುವವನು. ಇಲ್ಲಿ कामम ಎಂದು ಮಾಂತವಾದ ಅವ್ಯಯ. **कामंगामी ಕಾಮಂಗಾಮೀ** ಎಂದಾಗುವುದು. स्त्रियाम् **कामगामिनी ಕಾಮಗಾಮಿನೀ** ಮತ್ತು **कामंगामिनी ಕಾಮಂಗಾಮಿನೀ**. "कामंगाम्यनुकामीनः" अम०।

**कामगिरि ಕಾಮಗಿರಿ** (पु०) ಕಾಮರೂಪ ದೇಶದಲ್ಲಿರುವ ಒಂದು ಪರ್ವತ. "इन्द्रकीलः कामगिरिरिति चान्ये च शतसहस्रशः शैलाः" भाग० ५-१९-१७।

**कामगुण ಕಾಮಗುಣ** (पु०) 1. ಪ್ರೀತಿ, ಅನುರಾಗ. कामस्य कामकृतो वा गुणः। 2. ಸ್ರಕ್‌ಚಂದನಾದಿ ವಿಷಯಗಳು. 3. ಪರಿಪೂರ್ಣತೆ, ತುಂಬಿರುವಿಕೆ. "अथ कामगुणो रागे विषयाभोगयोरपि" मेदि०।

**कामचर ಕಾಮಚರ** (वि०) 1. ಸ್ವೇಚ್ಛೆಯಿಂದ ಸಂಚರಿಸುವ. कामेन चरति—चर (गतौ) "टः" (३-२-१६)। "तां नारदः कामचरः कदाचित् कन्यां किल प्रेक्ष्य पितुः समीपे" कुमा० १-५०। स्त्रियाम् "ङीप्" (४-१-१५)। -चरी -ಚರೀ.

**कामचार ಕಾಮಚಾರ** (पु०) 1. ಸ್ವೇಚ್ಛೆಯಿಂದ ಸಂಚರಿಸುವುದು. कामेन चारः। 2. ಕಟ್ಟಳೆಗಳಿಗೆ ಒಳಪಡದೆ ಸ್ವೇಚ್ಛೆಯಿಂದ ನಿಷಿದ್ಧಕಾರ್ಯ ಮಾಡುವಿಕೆ, ಇಷ್ಟಬಂದಂತೆ ನಡೆಯುವುದು. "कल्याणबुद्धेरतवा तवायं न कामचारो मयि शङ्कनीयः" रघु० १४-६२। 3. ಇಷ್ಟಬಂದಂತೆ ಗೋವುಗಳನ್ನು ಮೇಯಿಸುವುದು. "पथि ग्रामविवीतान्ते क्षेत्रे दोषो न विद्यते। अकामतः कामचारे चौरवद्दण्ड-मर्हति" याज्ञ० २-१६२।

**कामचारिन् ಕಾಮಚಾರಿನ್** (पु०) 1. ಗರುಡ. 2. ಗುಬ್ಬಚ್ಚಿ. कामेन चरति — चर (गतौ) "णिनिः" (३-२-७८)। (वि०) 3. ಸ್ವೇಚ್ಛೆಯಾಗಿ ಸಂಚರಿಸುವ, ಇಷ್ಟಬಂದಂತೆ ಹೋಗುವ. "तस्योत्सङ्गे प्रणयिन इव स्रस्तगङ्गादुकूलां न त्वं दृष्ट्वा न पुनरलकां ज्ञास्यसे कामचारिन्" मेघ० १-६३।

**कामज ಕಾಮಜ** (पु०) 1. ಕಾಮನ ಮಗ, ಅನಿರುದ್ಧ. कामात् जायते — जनी (प्रादुर्भावे) "डः" (३-२-९८)। 2. ಕಾಮತೃಪ್ತಿಗಾಗಿ ನಡೆಯುವ ಸಂಭೋಗದಿಂದ ಹುಟ್ಟುವ ಮಗ. ಜ್ಯೇಷ್ಠಪುತ್ರನು ಜನಿಸಿ ಪಿತೃಋಣವನ್ನು ತೀರಿಸುವುದರಿಂದ ಅನಂತರ ಹುಟ್ಟುವ ಮಕ್ಕಳೆಲ್ಲರೂ ಕಾಮಜರು. "ज्येष्ठेन जातमात्रेण पुत्री भवति मानवः। पितॄणामनृणश्चैव स तस्मात्सर्वमर्हति। यस्मिन् ऋणं संनयति येन चानन्त्यमश्नुते। स एव धर्मजः पुत्रः कामजानितरान् विदुः" मनु० ९-१०६, १०७। 3. ಸುಖಾಪೇಕ್ಷೆಯಿಂದ ಉಂಟಾಗುವ ಹತ್ತು ವ್ಯಸನಗಳು.

| | | |
|---|---|---|
| (1) | मृगया | ಬೇಟೆ. |
| (2) | अक्षः | ಜೂಜಾಟ. |
| (3) | दिवास्वापः | ಹಗಲು ನಿದ್ರೆ. |
| (4) | परीवादः | ಇತರರ ದೂಷಣೆ. |
| (5) | स्त्रियः | ಹೆಂಗಸರೊಡನೆ ವಿಹಾರ. |
| (6) | मदः | ಮದ್ಯಪಾನದಿಂದುಂಟಾಗುವ ಅಮಲು. |
| (7–9) | तौर्यत्रिकम् | ನೃತ್ಯ ಗೀತ ವಾದ್ಯಗಳು. |
| (10) | वृथाटाट्या | ವ್ಯರ್ಥವಾದ ಸಂಚಾರ. |

**ಇವು ಹತ್ತು ಕಾಮಜವ್ಯಸನಗಳು.**

"मृगयाक्षो दिवास्वापः परिवादः स्त्रियो मदः। तौर्यत्रिकं वृथाटाट्या कामजो दशको गणः" मनु० ७-४७। "कामजेषु प्रसक्तो हि व्यसनेषु महीपतिः। वियुज्यतेऽर्थधर्माभ्यां क्रोधजेष्वात्मनैव तु" मनु० ७-४६।

**कामजनि ಕಾಮಜನಿ** (पु०) ಕೋಗಿಲೆ. कामस्य जनिरस्मात्।

**कामजित् ಕಾಮಜಿತ್** (पु०) 1. ಮಹಾದೇವ, ಪರಮೇಶ್ವರ. काम जयति — जि (जये) "क्विप्"

(३-२-६१)। 2. ಕಾರ್ತಿಕೇಯ, ಷಣ್ಮುಖ. कामं रूपेण जयति। 3. ಜಿನದೇವ. कामं कामव्यापारं जयति।

**कामण्डलेय ಕಾಮಂಡಲೇಯ** (पु०) ಕಮಂಡಲುವಿನ ಮಗ (ಮರಿ). कमण्डलोरपत्यम् "ढक्" (४-१-१३५)। ಕಮಂಡಲುವೆಂಬುದು ಒಂದು ಚತುಷ್ಪಾಜ್ಜಂತು.

**कामतस् ಕಾಮತಸ್** (अव्य०) ಸ್ವೇಚ್ಛೆಯಾಗಿ, ಇಷ್ಟ ಬಂದಂತೆ. "कृत्यवस्तुषु नियुङ्क्ष्व कामतः" माघ० १४-१५।

**कामताल ಕಾಮತಾಲ** (पु०) ಕೋಗಿಲೆ. कामं तालयति — ताल (प्रतिष्ठायाम्) + णिच् "अच्" (३-१-१३४)। "मधुकण्ठो घोषयित्नुः कामतालः सुतर्दनः" त्रिकाण्ड०।

**कामतिथि ಕಾಮತಿಥಿ** (पु०) 1. ಕಾಮನ ಪೂಜೆಗೆ ಯೋಗ್ಯವಾದ ತಿಥಿ. 2. ಕಾಮದೇವತಾಕವಾದ ತಿಥಿ, ತ್ರಯೋದಶೀತಿಥಿ. कामपूजार्हा तिथिः कामदेवताकः तिथिर्वा।

**कामद ಕಾಮದ** (पु०) 1. ಈಶ್ವರ, ಪರಮಾತ್ಮ. (वि०) 2. ಇಷ್ಟಾರ್ಥವನ್ನು ಕೊಡತಕ್ಕವನು. काममभीष्टं ददाति — डु दाञ् (दाने) "कः" (३-२-३)। (स्त्री०) —दा —ದಾ. ಕಾಮಧೇನು. "कामदा कामधेनौ स्त्री कामदातरि वाच्यवत्" मेदि०।

**कामदुघ ಕಾಮದುಘ** (वि०) 1. ಇಷ್ಟಾರ್ಥವನ್ನು ಕೊಡುವ, ಬೇಡಿದುದನ್ನು ನೀಡುವ. कामान् दोग्धि — दुह (प्रपूरणे) "कप्" घादेशश्च (३-२-७०)। स्त्रियाम् —दुघा —ದುಘಾ. "आराधय सपत्नीकः प्रीता कामदुघा हि सा" रघु० १-८१। (स्त्री०) 2. ಕಾಮಧೇನು.

**कामदुह् ಕಾಮದುಹ್** (वि०) ಇಷ್ಟಾರ್ಥವನ್ನು ಕೊಡುವ, ಬೇಡಿದುದನ್ನು ನೀಡುವ. कामान् दोग्धि—दुह (प्रपूरणे) "क्विप्" (३-२-६१)। "एकः शब्दः सुष्ठु प्रयुक्तः सम्यक् ज्ञातः स्वर्गे लोके कामधुक् भवति" श्रुतिः। "सह यज्ञैः प्रजाः सृष्ट्वा पुरोवाच प्रजापतिः। अनेन प्रसविष्यध्वमेष वोऽस्त्विष्टकामधुक्" गीता ३-१०।

**कामदूती ಕಾಮದೂತೀ** (स्त्री०) ಹೆಣ್ಣು ಕೋಗಿಲೆ.

**कामदेव ಕಾಮದೇವ** (पु०) 1. ವಿಷ್ಣು, ಪರಮಾತ್ಮ. काम्यते मोक्षकाङ्क्षिभिः इति कामः — तथाभूतः सन् दीव्यति — दिवु (क्रीडादौ) "अच्" (३-१-१३४)। "कामदेवः कामपालः कामी कान्तः कृतागमः" वि० स०। 2. ಮನ್ಮಥ.

**ಮನ್ಮಥನ ಧ್ಯೇಯರೂಪ:**

"कामदेवस्तु कर्तव्यः शङ्खपद्मविभूषणः। चापबाण-करश्चैव मदाकुञ्चितलोचनः। रतिः प्रीतिस्तथा शक्ति-र्मयश्चितास्तथोज्ज्वलाः। चतस्रस्तस्य कर्तव्याः पत्न्यो रूपमनोहराः। चत्वारश्च करास्तस्य कार्या भार्या-स्तनोपगाः। केतुश्च मकरः कार्यः पञ्चबाणमुखो महान्"। "कामदेवविशिखैः खलु नेशं मार्पयज्जनकजामिति रक्षः" नैष० २१-७२।

**कामधर ಕಾಮಧರ** (पु०) ಕಾಮರೂಪದೇಶದಲ್ಲಿರುವ ಒಂದು ಸರೋವರ.

**कामधेनु ಕಾಮಧೇನು** (स्त्री०) 1. ಸಕಲ ಇಷ್ಟಾರ್ಥ ಗಳನ್ನೂ ಕೊಡುವ ಸ್ವರ್ಗಲೋಕದ ಧೇನು, ಇಂದ್ರನ ಆಕಳು. कामदा धेनुः। "रोहणः किमपि यः कठिनानां कामधेनुरपि या पशुरेव" नैष० ५-१२५। 2. ದಕ್ಷನ ಪುತ್ರಿಯಾದ ಸುರಭಿಯ ಮಗಳು ರೋಹಿಣಿಯಲ್ಲಿ ಜನಿಸಿದ ಒಂದು ಧೇನು. "दक्षस्य तनया याऽभूत् सुरभिर्नाम नामतः। गवां माता महाभागा सर्वलोकोपकारिणी। तस्यां तु तनया जज्ञे कश्यपात्तु प्रजापतेः। नाम्ना सा रोहिणी शुभ्रा सर्वकामदुघा नृणाम्। तस्या जज्ञे शूरसेना-द्वसोरतितमोज्ज्वलात्। कामधेनुरिति ख्याता सर्वलक्षण-संयुता। सा सिताभ्रप्रतीकाशा चतुर्वेदचतुष्पदा। स्तनैश्चतुर्भिर्धर्मार्थकामप्रसवकारिणी" कालिकापु०। 3. ಕಾಮಧೇನುವಿನ ವಂಶದಲ್ಲಿ ಹುಟ್ಟಿದ (ವಸಿಷ್ಠ ಮಹರ್ಷಿಯ ಹೋಮಧೇನುವಾದ) ನಂದಿನೀಧೇನು. ಇದಕ್ಕೆ "ಶಬಲಾ" ಎಂದೂ ಹೆಸರು.

[ವಿಶ್ವಾಮಿತ್ರನು ಒಮ್ಮೆ ವಸಿಷ್ಠಮಹರ್ಷಿಯ ಆಶ್ರಮಕ್ಕೆ ಬಂದಾಗ ತನ್ನ ಆತಿಥ್ಯಕ್ಕೆ ಬೇಕಾದ ಸಕಲ ಸಾಮಗ್ರಿ ಗಳನ್ನೂ ಈ ಧೇನುವು ಒಂದು ಕ್ಷಣಮಾತ್ರದಲ್ಲಿ ಸಿದ್ಧ ಗೊಳಿಸಿದುದನ್ನು ಕಂಡು ಸತ್ಕಾರದಿಂದ ಸಂತೋಷ ಗೊಂಡವನಾಗಿ ಈ ಧೇನುವನ್ನು ತನಗೆ ಕೊಡಬೇಕೆಂದೂ ಇದಕ್ಕೆ ಪ್ರತಿಯಾಗಿ ಲಕ್ಷಾಂತರ ಗೋವುಗಳನ್ನು ತಾನು ಕೊಡುವುದಾಗಿಯೂ ಹೇಳಲು ವಸಿಷ್ಠರು ಸಕಲ ಹವ್ಯ ಕವ್ಯಾದಿಕಾರ್ಯಗಳಿಗೂ ಆಧಾರವಾಗಿರುವ ಈ ನಂದಿನಿ ಯನ್ನು ಬಿಟ್ಟುಕೊಡಲು ಸಮ್ಮತಿಸಲಿಲ್ಲ. ವಿಶ್ವಾಮಿತ್ರನು ಬಲಾತ್ಕಾರದಿಂದ ನಂದಿನೀಧೇನುವನ್ನು ಎಳೆದುಕೊಂಡು ಹೋಗಲು ಯತ್ನಿಸಿದಾಗ ವಸಿಷ್ಠರನ್ನು ಬಿಟ್ಟು ಹೋಗಲು

ಇಷ್ಟವಿಲ್ಲದೆ ನಂದಿನಿಯು ಮಹರ್ಷಿಯ ಆಜ್ಞೆಯಂತೆ ತನ್ನ ಶರೀರದಿಂದ ಮ್ಲೇಚ್ಛಶಕಯವನಾದಿಗಳನ್ನು ಸೃಷ್ಟಿಸಿ ವಿಶ್ವಾಮಿತ್ರನ ಸಕಲ ಸೈನ್ಯಗಳನ್ನೂ ನಾಶಗೊಳಿಸಿತು.] रामा०।

**कामध्वंसिन् ಕಾಮಧ್ವಂಸಿನ್** (पु०) ಮಹಾದೇವ, ಪರಮೇಶ್ವರ. कामं ध्वंसयति — ध्वंसु (अवस्रंसने) + णिच् "णिनि:" (३-१-१३४)।

**कामन ಕಾಮನ** (वि०) 1. ಕಾಮುಕ. कामयते — कमु (कान्तौ) + णिङ् "युच्" (उ० २-७९)। (न०) 2. ಅಭಿಲಾಷೆ, ಬಯಕೆ, ಇಚ್ಛೆ. कमु भावे "ल्युट्" (३-३-११५)।

**कामना ಕಾಮನಾ** (स्त्री०) ಅಭಿಲಾಷೆ, ಬಯಕೆ, ಇಚ್ಛೆ. कमु (कान्तौ) + णिङ् "युच्" (३-३-१०७)। "शिखी विधाय त्वदवाप्तिकामनां स्वयंहुतस्वांशहविः स्वमूर्तिषु" नैष० ९-७५।

**कामनीयक ಕಾಮನೀಯಕ** (न०) ರಮಣೀಯತೆ, ಮನೋಹರವಾಗಿರುವಿಕೆ, ಸೌಂದರ್ಯ. कमनीयस्य भावः "वुञ्" (५-१-१३२)। "निवेद्यमानं वनपालपाणिना व्यलोकयत् काननकामनीयकम्" नैष० १-७६।

**कामन्दकि ಕಾಮಂದಕಿ** (पु०) ಕಮಂದಕಋಷಿಯ ಮಗ. कमन्दकस्यापत्यम् "इञ्" (४-१-९५)। ಕಾಮಂದಕೀಯ ನೀತಿಶಾಸ್ತ್ರವು ಈತನಿಂದ ರಚಿತವಾದುದು. (स्त्री०) -की -ಕೀ. ಮಾಲತೀಮಾಧವದಲ್ಲಿ ಬರುವ ಒಬ್ಬ ಪರಿವ್ರಾಜಿಕೆ.

**कामन्दकीय ಕಾಮಂದಕೀಯ** (न०) ಕಾಮಂದಕಿನೀತಿ ಶಾಸ್ತ್ರ, ಕಾಮಂದಕಿಯಿಂದ ರಚಿತವಾದ ಒಂದು ನೀತಿಶಾಸ್ತ್ರ ಗ್ರಂಥ. कामन्दकेः इदम् "छः" (४-२-११४)।

**कामपत्नी ಕಾಮಪತ್ನೀ** (स्त्री०) ಮನ್ಮಥನ ಪತ್ನಿ, ರತಿ. कामस्य पत्नी।

**कामपाल ಕಾಮಪಾಲ** (पु०) 1. ಬಲರಾಮ. कामान् पालयति — पाल (रक्षणे) + णिच् "अण्" (३-२-१)। "तौ परस्परगवेषितरन्ध्रौ कामपालकपिसैनिकपालौ" याद० २१-५४। 2. ಶ್ರೀವಾಸುದೇವ, ಶ್ರೀಕೃಷ್ಣ. "दत्वा तु पालनकरः कामपालः प्रकीर्तितः" इति निरुक्तिः। "कामदेवः कामपालः कामी कान्तः कृतागमः" वि० स०। 3. ಶಿವ, ಮಹಾದೇವ, ಪರಮೇಶ್ವರ. (वि०) 4. ಇಷ್ಟಾರ್ಥಗಳನ್ನು ಕೊಟ್ಟು ಸಂತೋಷ ಪಡಿಸುವ.

**कामपूर ಕಾಮಪೂರ** (पु०) 1. ಪರಮಾತ್ಮ, ಪರಮೇಶ್ವರ. कामान् पूरयति — पूरी (आप्यायने) + णिच् "अण्" (३-२-१)। (वि०) 2. ಇಷ್ಟಾರ್ಥಗಳನ್ನು ಪೂರಯಿಸು ವವನು.

**कामप्रद ಕಾಮಪ್ರದ** (पु०) 1. ವಿಷ್ಣು, ಪರಮಾತ್ಮ. कामान् प्रकर्षेण ददाति — डु दाञ् (दाने) "कः" (३-२-६)। "कामप्रदः प्रकर्षेण भक्तानां कामदायकः" इति निरुक्तिः। "कामहा कामकृत् कान्तः कामः कामप्रदः प्रभुः" वि० स०। 2. ಸುರತಬಂಧದ ಒಂದು ಭೇದ. "द्वौ पादौ स्कन्धसंलग्नौ क्षिप्त्वा लिङ्गं भगे तथा। कामयेत् कामुकः प्रीत्या बन्धः कामप्रदो हि सः" स्मरदी०। (वि०) 3. ಇಷ್ಟಾರ್ಥವನ್ನು ಕೊಡುವ.

**कामप्रवेदन ಕಾಮಪ್ರವೇದನ** (न०) ಅಪೇಕ್ಷೆಯನ್ನು ತಿಳಿಸುವಿಕೆ, ಅಭಿಪ್ರಾಯವನ್ನು ತಿಳಿಸುವಿಕೆ, ತನಗೆ ಬೇಕಾ ದುದನ್ನು ತಿಳಿಸುವುದು. कामस्य अभिलाषस्य प्रवेदनम्। "कामप्रवेदनेऽकच्चिति" पा० सू० ३-३-१५३।

**कामप्रश्न ಕಾಮಪ್ರಶ್ನ** (पु०) ಬೇಕಾದಹಾಗೆ ಪ್ರಶ್ನಿಸು ವುದು, ಇಷ್ಟಬಂದಂತೆ ಕೇಳುವುದು. कामं यथेष्टं प्रश्नः।

**कामबाधा ಕಾಮಬಾಧಾ** (स्त्री०) ಮನ್ಮಥನ ಪೀಡೆ.

**कामम् ಕಾಮಮ್** (अव्य०) ಅನುಮತಿ, ಅನುಜ್ಞೆ ಮುಂತಾದ ಅರ್ಥಗಳಿಗೆ "काम" ಪದದಲ್ಲಿ ನೋಡಿ.

**काममह ಕಾಮಮಹ** (पु०) ಚೈತ್ರಮಾಸದಲ್ಲಿ ನಡೆಸುವ ವಸಂತೋತ್ಸವ, ಮದನೋತ್ಸವ. कामस्य महः। "चैत्रा-वल्यां मधूत्सवः। सुवसन्तः काममहः वासन्ती कार्दमी स्त्रियौ" त्रिकाण्ड०।

**काममुद्रा ಕಾಮಮುದ್ರಾ** (स्त्री०) ತಂತ್ರೋಕ್ತವಾದ ಒಂದು ಮುದ್ರೆ. "हस्तौ तु संपुटौ कृत्वा प्रसृताङ्गुलिकौ तथा। तर्जन्यौ मध्यमापृष्ठे अङ्गुष्ठौ मध्यमाश्रितौ। काममुद्रेयमुदिता सर्वदेवप्रियङ्करी"।

**कामयमान ಕಾಮಯಮಾನ** (वि०) 1. ಕಾಮಿಸುತ್ತಿರು ವವನು, ಪ್ರೀತಿಸುತ್ತಿರುವವನು. कामयते—कमु (कान्तौ) + णिङ् "शानच्" (३-२-१२४)। मुगागमः (७-२-८२)। 2. ಕಾಮುಕ.

**कामयान ಕಾಮಯಾನ** (वि०) 1. ಅಪೇಕ್ಷಿಸುವವನು, ಬಯಸುವವನು. कमु (कान्तौ) + णिङ् "शानच्" (३-२-१२४)। 2. ಕಾಮುಕ. "राजयक्ष्मपरिहानिराययौ कामयानसमवस्थया तुलाम्" रघु० १९-५०।

**कामयितृ ಕಾಮಯಿತೃ** (वि०) 1. ಕಾಮುಕ. कमु (कान्तौ) + णिङ् "तृच्" (३-१-१३३)। 2. ಅಪೇಕ್ಷಿಸುವ, ಇಚ್ಛಿಸುವ, ಬಯಸುವ. स्त्रियाम् "ङीप्" (४-१-५)। **-यित्री -ಯಿತ್ರೀ.**

**कामरूप ಕಾಮರೂಪ** (पु० ब० व०) 1. ಕಾಮರೂಪ ದೇಶ. ಇದು "कालेश्वरं श्वेतगिरिं त्रैपुरं नीलपर्वतम्। (यावत्) कामरूपाभिधो देशः गणेशगिरिमूर्धनि" ಎಂಬ ನಾಲ್ಕು ಪರ್ವತಗಳ ಮಧ್ಯದಲ್ಲಿ (ಬಂಗಾಳದ ಪೂರ್ವ ಮತ್ತು ಅಸ್ಸಾಮಿನ ಪಶ್ಚಿಮದಲ್ಲಿ) ಗಣೇಶಗಿರಿಯ ಮೇಲಿರುವ ಪ್ರಾಗ್ಜ್ಯೋತಿಷವೆಂಬ ಒಂದು ದೇಶ. "तमीशः कामरूपाणामत्याखण्डलविक्रमम्" रघु० ४-८३। 2. ಕಾಮರೂಪದೇಶದ ಜನರು. (न०) 3. ಮನ್ಮಥನ ಆಕಾರ. (वि०) 4. ಸುಂದರವಾದ ರೂಪವುಳ್ಳ. 5. ಇಷ್ಟಬಂದಂತೆ ರೂಪವನ್ನು ತಾಳುವ. "जानामि त्वां प्रकृतिपुरुषं कामरूपं मघोनः" मेघ० १-६। कामं काम्यं सुन्दरं रूपं यस्य।

**कामरूपिन् ಕಾಮರೂಪಿನ್** (पु०) 1. ವಿದ್ಯಾಧರ. (वि०) 2. ಇಷ್ಟಬಂದಂತೆ ರೂಪವನ್ನು ತಾಳುವ. कामेन इष्टानुसारेण रूपमस्त्यस्य "इनिः" (५-२-११५)। "सर्वमाशु निचेतव्यं हरिभिः कामरूपिभिः" रामा०। 3. ಸುಂದರವಾದ ರೂಪವುಳ್ಳ.

**कामरेखा ಕಾಮರೇಖಾ** (स्त्री०) ವೇಶ್ಯೆ, ಸೂಳೆ. कामानां कामव्यापाराणां रेखा पङ्क्तिर्यत्र।

**कामल ಕಾಮಲ** (पु०) 1. ವಸಂತಕಾಲ. कमु (कान्तौ) + णिङ् "कलः" (उ० १-१०६)। 2. ಮರುದೇಶ, ನಿರ್ಜಲಪ್ರದೇಶ. (वि०) 3. ಕಾಮುಕ, ವಿಷಯಲಂಪಟ. (पुंस्त्री०) **-लः -ಲಃ -ला -ಲಾ.** 4. ಕಾಮಾಲೆ ರೋಗ, ಅರಿಶಿನ ಮುಂಡಿಗೆ ರೋಗ. ಕಾಮಾಲೆ ರೋಗವು ಪಾಂಡು ರೋಗದ ಒಂದು ಪ್ರಭೇದ. ಇದು (1) ವಾತಿಕ, (2) ಪೈತ್ತಿಕ ಮತ್ತು (3) ಶ್ಲೈಷ್ಮಿಕಗಳೆಂದು ಮೂರು ಬಗೆ. ಈ ಮೂರು ಲಕ್ಷಣಗಳೂ ಸೇರಿದರೆ ಸಾನ್ನಿಪಾತಿಕ ವೆನಿಸುವುದು.

(1) **"ವಾತಿಕಕಾಮಾಲೆ"** ಯಲ್ಲಿ ಮುಖ, ಕಣ್ಣುಗಳು, ಉಗುರುಗಳು, ನರಗಳು, ಮಲಮೂತ್ರಗಳೆಲ್ಲವೂ ಕಪ್ಪು ಬಣ್ಣಕ್ಕೆ ತಿರುಗುವುವು. "कृष्णेक्षणं कृष्णसिरावनद्धं तद्वर्णविण्मूत्रनखाननं च। वातेन पाण्डुं मनुजं व्यवस्येत् युक्तं तथाऽन्यैस्तदुपद्रवैश्च" सुश्रुत० उत्तरतं० ४४-७।

(2) **"ಪೈತ್ತಿಕಕಾಮಾಲೆ"** ಯಲ್ಲಿ ಎಲ್ಲವೂ ಹಳದಿ ಬಣ್ಣಕ್ಕೆ ತಿರುಗುವುವು. "पीतेक्षणं पीतसिरावनद्धं तद्वर्णविण्मूत्रनखाननं च। पित्तेन पाण्डुं मनुजं व्यवस्येद्युक्तं तथान्यैस्तदुपद्रवैश्च" सुश्रुत० उत्तरतं० ४४-८।

(3) **"ಶ್ಲೈಷ್ಮಿಕಕಾಮಾಲೆ"** ಯಲ್ಲಿ ಎಲ್ಲವೂ ಶುಕ್ಲ ವರ್ಣಕ್ಕೆ ತಿರುಗುವುವು. ಮತ್ತು ಕಫದ ಬಾಧೆಯು ಹೆಚ್ಚಾಗುವುದು. "शुक्लेक्षणं शुक्लसिरावनद्धं तद्वर्णविण्मूत्रनखाननं च। कफेन पाण्डुं मनुजं व्यवस्येद्युक्तं तथान्यैस्तदुपद्रवैश्च" सुश्रुत० उत्तरतं० ४४-९।

**कामलता ಕಾಮಲತಾ** (स्त्री०) ಪುರುಷನ ಚಿಹ್ನೆ, ಲಿಂಗ, ಶಿಶ್ನ. कामस्य लतेव।

**कामलिन् ಕಾಮಲಿನ್** (वि०) ಕಾಮಾಲೆರೋಗವುಳ್ಳವನು. कामलाऽस्यास्ति "इनिः" (५-२-११५)।

**कामवत् ಕಾಮವತ್** (वि०) 1. ಅಭಿಲಾಷೆಯುಳ್ಳವನು, ಅಪೇಕ್ಷೆಯುಳ್ಳವನು, ಬಯಕೆಯುಳ್ಳವನು. कामोऽस्त्यस्य "मतुप्" (५-२-९४)। 2. ಸ್ತ್ರೀಸಂಭೋಗದಲ್ಲಿ ಪ್ರೀತಿಯುಳ್ಳವನು, ಕಾಮುಕ. स्त्रियाम् "ङीप्" (४-१-६)। **-वती -ವತೀ.**

**कामवल्लभ ಕಾಮವಲ್ಲಭ** (पु०) 1. ವಸಂತಕಾಲ. 2. ಮಾವಿನಮರ. कामस्य वल्लभः प्रियः। (स्त्री०) **-भा -ಭಾ.** 3. ಚಂದ್ರಿಕೆ, ಬೆಳದಿಂಗಳು.

**कामवृत्त ಕಾಮವೃತ್ತ** (वि०) 1. ಕಾಮವ್ಯಾಪಾರವುಳ್ಳ, ಹೆಂಗಸರಲ್ಲಿ ಅನುರಾಗವುಳ್ಳ. कामस्य वृत्तं यस्य। "विशीलः कामवृत्तो वा गुणैर्वा परिवर्जितः। उपचर्यः स्त्रिया साध्व्या सततं देववत्पतिः" मनु० ५-१५४। 2. ಸ್ವೇಚ್ಛಾಚಾರವುಳ್ಳ, ಇಷ್ಟಬಂದಂತೆ ನಡೆಯುವ, ತೋರಿದಂತೆ ಕೆಲಸಮಾಡುವ. कामं यथेष्टं वृत्तं व्यापारो यस्य। "यस्तु स्यात् क्षत्रियः पार्थ कामवृत्तः परन्तप" भा० आदि० १५९-६२।

**कामवृत्ति ಕಾಮವೃತ್ತಿ** (स्त्री०) 1. ಕಾಮಚೇಷ್ಟೆ, ಮನ್ಮಥವ್ಯಾಪಾರ. कामस्य वृत्तिः। 2. ಸ್ವೇಚ್ಛಾವ್ಯಾಪಾರ, ಇಷ್ಟಬಂದಂತೆ ಕೆಲಸಮಾಡುವುದು. कामेन इच्छानुसारेण वृत्तिः। (वि०) 3. ಸ್ವೇಚ್ಛಾವ್ಯಾಪಾರವುಳ್ಳ, ತನ್ನ ಇಷ್ಟದಂತೆ ವ್ಯವಹರಿಸುವ. कामेन स्वेच्छया वृत्तिर्यस्य। "ममात्र भावैकरसं मनःस्थितं न कामवृत्तिर्वचनीयमीक्षते" कुमा० ५-८२।

**कामशर ಕಾಮಶರ** (पु०) 1. ಮನ್ಮಥನ ಬಾಣ. 2. ಮಾವಿನಮರ. कामस्य शर इव।

**कामशासन ಕಾಮಶಾಸನ** (पु०) 1. ಪರಮೇಶ್ವರ, ಶಿವ. कामं शास्ति—शासु (अनुशिष्टौ) "ल्युः" (३-१-१३४)।

**कामशास्त्र ಕಾಮಶಾಸ್ತ್ರ** (न०) 1. ಸ್ತ್ರೀಪುರುಷರ ಅನುರಾಗ ವಿಷಯವನ್ನು ತಿಳಿಸುವ ಒಂದು ಶಾಸ್ತ್ರ. कामस्य कामव्यापारस्य प्रतिपादकं शास्त्रम्। 2. ಕಾಮ್ಯ ವಿಷಯಗಳನ್ನು ಪ್ರತಿಪಾದಿಸುವ ಶಾಸ್ತ್ರ. कामस्य काम्यस्य स्वर्गादेः प्रतिपादकं शास्त्रम्। "अर्थशास्त्रमिदं प्रोक्तं धर्मशास्त्रमिदं महत्। कामशास्त्रमिदं प्रोक्तं व्यासेनामितबुद्धिना" भा० आदि० २-३८३।

**कामसख ಕಾಮಸಖ** (पु०) 1. ವಸಂತಕಾಲ. 2. ಮಾವಿನ ಮರ. 3. ಚೈತ್ರಮಾಸ. कामस्य सखा "टच्" (५-४-९१)।

**कामसुत ಕಾಮಸುತ** (पु०) ಮನ್ಮಥನ ಮಗ, ಅನಿರುದ್ಧ. कामस्य सुतः।

**कामसू ಕಾಮಸೂ** (पु०) 1. ಶ್ರೀಕೃಷ್ಣ, ವಾಸುದೇವ. (स्त्री०) 2. ರುಕ್ಮಿಣಿ. (वि०) 3. ಅಭೀಷ್ಟವಾದುದನ್ನು ಕೊಡುವ, ಇಷ್ಟಾರ್ಥವನ್ನು ಉಂಟುಮಾಡುವ. कामं सूते — षूङ् (प्राणिगर्भविमोचने) "क्विप्" (३-२-६१)।

**कामसूत्र ಕಾಮಸೂತ್ರ** (न०) ಕಾಮವ್ಯಾಪಾರಗಳನ್ನು ಹೇಳುವ ಸೂತ್ರ, ಸ್ತ್ರೀಪುರುಷರ ಶೃಂಗಾರ ಚೇಷ್ಟೆಗಳನ್ನು ತಿಳಿಸುವ ವಾತ್ಸ್ಯಾಯನಕೃತವಾದ ಒಂದು ಗ್ರಂಥ. कामस्य मन्मथव्यापारस्य प्रतिपादकं सूत्रम्। "हासभूषणरवाश्च रमण्याः कामसूत्रपदतामुपजग्मुः" माघ० १०-७५।

**कामस्तुति ಕಾಮಸ್ತುತಿ** (स्त्री०) ಕಾಮವನ್ನು ಸ್ತೋತ್ರ ಮಾಡುವ ಒಂದು ಮಂತ್ರ, ದಾನಿಯು ಕೊಟ್ಟ ದಾನವನ್ನು ಪ್ರತಿಗ್ರಹಿಸುವ (ತೆಗೆದುಕೊಳ್ಳುವ) ದೋಷಪರಿಹಾರಕ್ಕಾಗಿ ಹೇಳುವ ಯಜುರ್ವೇದದ ಒಂದು ಮಂತ್ರ. कामस्य स्तुतिः। "कोऽदात्? कस्मा अदात्? कामोऽदात्। कामायादात्। कामो दाता। कामः प्रतिग्रहीता। कामैतत्ते"।

**कामहन् ಕಾಮಹನ್** (पु०) 1. ವಿಷ್ಣು, ಪರಮಾತ್ಮ. कामं हतवान्—हन (हिंसागत्योः) "क्विप्" (३-२-८७)। "पुंसां स्वदर्शिनां योऽसौ स्पृहां च विषयान्तरे। हतवान् कामहा प्रोक्तः सर्वाशापूरको मनुः" इति निरुक्तिः। "कामहा कामकृत् कान्तः कामः कामप्रदः प्रभुः" वि० स०। 2. ಪರಮೇಶ್ವರ, ಮಹಾದೇವ.

**कामाक्षी ಕಾಮಾಕ್ಷೀ** (स्त्री०) ದುರ್ಗಾದೇವಿಯ ಒಂದು ಮೂರ್ತಿ. कामं सुन्दरमक्षि यस्याः "षच्" (५-४-११३)।

**कामाग्नि ಕಾಮಾಗ್ನಿ** (पु०) ಕಾಮಾತುರತೆ, ಕಾಮೋದ್ರೇಕ, ಮನೋವಿಕಾರ, ಬೆದೆ, ಸಂಭೋಗದ ಆಸೆ.

**कामाङ्कुश ಕಾಮಾಂಕುಶ** (पु०) 1. ನಖ, ಉಗುರು. कामे अङ्कुश इव उद्दीपकत्वात्। ಚುಂಬನ ಆಲಿಂಗನ ನಖ ವ್ಯಾಪಾರಾದಿಗಳಿಂದ ಒಂದೊಂದು ಅಂಗದಲ್ಲೂ ಒಂದೊಂದು ತಿಥಿಯಲ್ಲಿ ಕಾಮೋದ್ರೇಕವಾಗುವುದು. ["काम" ಪದದಲ್ಲಿ ನೋಡಿ.] 2. ಪುರುಷನ ಲಿಂಗ, ಶಿಶ್ನ. कामस्याङ्कुश इव।

**कामातुर ಕಾಮಾತುರ** (वि०) ಮನ್ಮಥನಿಂದ ಪೀಡಿತನಾದ, ಕಾಮೋದ್ರೇಕವುಳ್ಳ, ಕಾಮರೋಗದಿಂದ ಕೂಡಿದ. कामेन आतुरः। "कामातुराणां न भयं न लज्जा"।

**कामात्मज ಕಾಮಾತ್ಮಜ** (पु०) ಕಾಮನ ಮಗ, ಅನಿರುದ್ಧ. कामस्यात्मजः।

**कामात्मता ಕಾಮಾತ್ಮತಾ** (स्त्री०) 1. ಫಲಾಪೇಕ್ಷೆಯಿಂದ ಕೂಡಿದ ಸ್ವಭಾವ. कामप्रधानः इच्छाप्रधानः आत्मा यस्य तस्य भावः। 2. ಅನುರಾಗದಿಂದ ಕೂಡಿರುವಿಕೆ. कामप्रधानः अनुरागप्रधानः आत्मा यस्य तस्य भावः "तल्" (५-१-११९)। "कामात्मता न प्रशस्ता न चैवेहास्त्यकामता" मनु० २-२।

**कामात्मन् ಕಾಮಾತ್ಮನ್** (वि०) 1. ಅನುರಾಗಪ್ರಧಾನವಾದ ಆತ್ಮವುಳ್ಳ. 2. ವಿಷಯಾಸಕ್ತಿಯಿಂದ ತುಂಬಿದ ಚಿತ್ತವುಳ್ಳ. कामप्रधानः आत्मा यस्य। 3. ಫಲಾಪೇಕ್ಷೆಯಿಂದ ಕೂಡಿದ ಮನಸ್ಸುಳ್ಳ, ಫಲವನ್ನು ಅಪೇಕ್ಷಿಸಿ ಕರ್ಮ ಮಾಡುವ ಸ್ವಭಾವವುಳ್ಳ. "कामेषु काम्येषु कर्मसु आत्मा यस्य। "कामात्मानः स्वर्गपराः जन्मकर्मफलप्रदाम्" गीता २-४३।

**कामाधिष्ठान ಕಾಮಾಧಿಷ್ಠಾನ** (न०) ಇಂದ್ರಿಯ, ಮನಸ್ಸು ಮತ್ತು ಬುದ್ಧಿ. कामस्याधिष्ठानम्। "इन्द्रियाणि मनो बुद्धिरस्याधिष्ठानमुच्यते" गीता ३-४०।

**कामान्ध ಕಾಮಾಂಧ** (पु०) 1. ಕೋಗಿಲೆ. कामेन कामोद्दीपनेन अन्धयति — अन्ध + णिच् नामधा० "अच्" (३-१-१३४)। (वि०) 2. ಕಾಮೋದ್ರೇಕದಿಂದ ಜ್ಞಾನಶೂನ್ಯನಾದ. कामेन रागेण अन्धः विवेकशून्यः। स्त्रियां "टाप्" (४-१-४)। **कामान्धा ಕಾಮಾಂಧಾ.** "कामान्धा राक्षसी सा पतिमतिमतनोत् मैथिलीप्राणनाथे" चं० रा०।

**कामान्धा ಕಾಮಾಂಧಾ** (स्त्री०) 1. ಕಸ್ತೂರಿ, ಮೃಗಮದ. कामं यथेष्टमन्धयति — अन्ध + णिच् नामधा० "अच्" (३-१-१३४)। 2. ಶ್ಯೇನ, ಗಿಡಗಹಕ್ಕಿ.

**कामायुध ಕಾಮಾಯುಧ** (पुं०) 1. ಮಾವಿನಮರ. कामस्यायुधमिव मुकुले आकारोऽस्त्यस्य। (न०) 2. ಮನ್ಮಥನ ಆಯುಧ.

**कामायुस् ಕಾಮಾಯುಸ್** (पुं०) ಯಥೇಷ್ಟವಾದ ಆಯುಸ್ಸುಳ್ಳ ಗರುಡ. कामं यथेष्टमायुर्यस्य।

**कामारि ಕಾಮಾರಿ** (पुं०) ಶಿವ, ಈಶ್ವರ, ಮಹಾದೇವ. कामस्यारिः।

**कामार्त ಕಾಮಾರ್ತ** (वि०) ಕಾಮಪೀಡಿತನಾದ, ಕಾಮ ಬಾಧೆಯನ್ನು ಅನುಭವಿಸುತ್ತಿರುವ, ಕಾಮರೋಗವುಳ್ಳ. कामेनार्तः। "कामार्ता हि प्रकृतिकृपणाश्चेतनाचेतनेषु" मेघ० १-५।

**कामालिका ಕಾಮಾಲಿಕಾ** (स्त्री०) ಸುರೆ, ಮದ್ಯ. काममलति — अल (भूषणादौ) "ण्वुल्" (३-१-१३३)।

**कामावशाय ಕಾಮಾವಶಾಯ** (पुं०) ಸ್ವೇಚ್ಛೆಯಿಂದ ವಿಷಯಗಳನ್ನು ಅಥವಾ ಅಪೇಕ್ಷೆಗಳನ್ನು ಮನಸ್ಸಿನಲ್ಲೇ ಅಡಗಿಸಿಕೊಳ್ಳುವುದು, ಅನುರಾಗವನ್ನು ನಿಗ್ರಹಿಸುವಿಕೆ. कामेन अवशय्यते — अव + शीङ् (स्वप्ने) "घञ्" (३-३-१८)।

**कामावशायिता ಕಾಮಾವಶಾಯಿತಾ** (स्त्री०) ಸ್ವೇಚ್ಛೆಯಿಂದ ವಿಷಯಗಳನ್ನು ಅಥವಾ ಅನುರಾಗವನ್ನು ಮನಸ್ಸಿನಲ್ಲೇ ಅಡಗಿಸಿಕೊಳ್ಳುವುದು, ಸತ್ಯಸಂಕಲ್ಪತ್ವರೂಪವಾದ ಯೋಗಿಗಳ ಒಂದು ಐಶ್ವರ್ಯ. कामेन इच्छया अवशाययति — अव + शीङ् (स्वप्ने) + णिच् "णिनिः" (३-१-१३४)। –शायिन्। तस्य भावः "तल्" (५-१-११९)। "त्वः" (५-१-११९)। **–अवशायित्वम् –ಅವಶಾಯಿತ್ವಮ್.**

**कामावशायिन् ಕಾಮಾವಶಾಯಿನ್** (पुं०) ಸ್ವೇಚ್ಛೆಯಿಂದ ಎಲ್ಲಾ ವಿಧ ಕಾಮಗಳನ್ನೂ ನಿಗ್ರಹಿಸಿಕೊಳ್ಳುವ ಯೋಗಿ. कामेन इच्छया अवशाययति — अव + शीङ् (स्वप्ने) + णिच् "णिनिः" (३-१-१३४)।

**कामावसायिता ಕಾಮಾವಸಾಯಿತಾ** (स्त्री०) "कामावशायिता" ಪದದ ಅರ್ಥ. कामेन स्वेच्छया अवस्यति सर्वाणि वस्तूनि — अव + षो (अन्तकर्मणि) "णिनिः" (३-१-१३४)। तस्य भावः "तल्" (५-१-११९)। "अणिमा लघिमा प्राप्तिः प्राकाम्यं च तथेशिता। व्यापित्वं च वशित्वं च तथा कामावसायिता"। "त्वः" (५-१-११९)। **–सायित्वम् –ಸಾಯಿತ್ವಮ್.**

**कामावसायिन् ಕಾಮಾವಸಾಯಿನ್** (वि०) "कामावशायिन्" ಪದದ ಅರ್ಥ. कामान् अवस्यति — अव + षो (अन्तकर्मणि) "णिनिः" (३-१-१३४)।

**कामासक्त ಕಾಮಾಸಕ್ತ** (वि०) 1. ಅಪೇಕ್ಷೆಗಳನ್ನು ಪೂರಯಿಸುವ ಆಶಯವುಳ್ಳ. 2. ಕಾಮದಲ್ಲಿ ಆಸಕ್ತಿಯುಳ್ಳವನು, ಸ್ರಕ್‌ಚಂದನಾದಿ ವಿಷಯಗಳಲ್ಲಿ ಅಭಿರುಚಿಯುಳ್ಳವನು. 3. ಕಾಮುಕ. कामेषु आसक्तः।

**कामि ಕಾಮಿ** (पुं०) 1. ಕಾಮುಕ, ಕಾಮವುಳ್ಳವನು, ಸಂಭೋಗದಲ್ಲಿ ಆಸೆಯುಳ್ಳವನು. (स्त्री०) 2. ರತಿ, ಮನ್ಮಥನ ಪತ್ನಿ. "कामिर्ना कामुके रत्यां स्त्री" मेदि०।

**कामिक ಕಾಮಿಕ** (पुं०) 1. ಕಾಡುಕೋಳಿ, ಬಾತುಕೋಳಿ. कामोऽस्त्यस्य "ठन्" (५-२-११५)। स्त्रियाम् जाति० "ङीष्" (४-१-६३)। **–की –ಕೀ.** 2. ಶೈವಾಗಮದ 28 ಗ್ರಂಥಗಳಲ್ಲಿ ಒಂದು ಆಗಮಗ್ರಂಥ. (वि०) 3. ಕಾಮ್ಯ, ಅಪೇಕ್ಷಿಸಲ್ಪಟ್ಟ. "देवतास्तस्य तुष्यन्ति कामिकं तस्य सिध्यति" भा० अनु०। 4. ಕಾಮದಿಂದ ನಡೆಸಲ್ಪಟ್ಟ. कामेन निर्वृत्तम् "ठञ्" (४-२-६८)।

**कामित ಕಾಮಿತ** (न०) 1. ಇಚ್ಛೆ, ಅಪೇಕ್ಷೆ, ಬಯಕೆ. कमु (कान्तौ) + णिङ् भावे "क्तः" (३-३-११४)। 2. ಅನುರಾಗ, ಪ್ರೀತಿ. "स्फुटमभिलषितं बभूव वध्वा वदति हि संवृतिरेव कामितानि" किरा० १०-४४। (वि०) 3. ಅಪೇಕ್ಷಿಸಲ್ಪಟ್ಟ, ಬಯಸಲ್ಪಟ್ಟ. कमु+णिङ् "क्तः" (३-२-१०२)।

**कामिन् ಕಾಮಿನ್** (पुं०) 1. ಪತಿ, ಗಂಡ. कामोऽस्यास्ति "इनिः" (५-२-११५)। "हृतायाः प्रतिसखि कामिनान्यनाम्ना ह्रीमत्याः सरसि गलन्मुखेन्दुकान्तेः" माघ० ८-४२। 2. ವಿಷ್ಣು, ಪರಮಾತ್ಮ. "प्रदेयातिशयात् कामी" इति निरुक्तिः। "कामदेवः कामपालः कामी कान्तः कृतागमः" वि० स०। 3. ಚಕ್ರವಾಕಪಕ್ಷಿ. 4. ಪಾರಿವಾಳದ ಹಕ್ಕಿ. "कामी तु कामुके चक्रवाके पारावतेऽपि च" मेदि०। 5. ಚಂದ್ರ. 6. ಗುಬ್ಬಚ್ಚಿ. 7. ಸಾರಸ ಪಕ್ಷಿ, ಒಂದು ಜಾತಿಯ ಹಂಸ ಪಕ್ಷಿ. स्त्रियाम् जाति० "ङीष्" (४-१-६३)। (वि०) 8. ಅನುರಾಗವುಳ್ಳವನು, ಪ್ರೀತಿಯುಳ್ಳವನು. "त्वदग्रसूचीसचिवेन कामिनोर्मनोभवः सीव्यति दुर्यशःपटौ" नैष० १-८०। 9. ಕಾಮುಕ, ಕಾಮಪೀಡಿತ, ಸಂಭೋಗಾಪೇಕ್ಷೆಯುಳ್ಳವನು. कामयते—कमु (कान्तौ) + णिङ् "णिनिः" (३-१-१३४)। "कामिनो कृतरतोत्सवकालक्षेपमाकुलवधूकरसङ्गि"

माघ० १०-६१। 10. ಅಪೇಕ್ಷಿಸುವ, ಬಯಸುವ. स्त्रियाम् "ङीप्" (४-१-५)। **कामिनी ಕಾಮಿನೀ.**

**कामिनी ಕಾಮಿನೀ** (स्त्री०) 1. ಪ್ರೀತಿಸುವ ಹೆಂಗಸು, ಅನುರಕ್ತಳಾದ ಹೆಂಗಸು, ಕಾಮಾತುರವುಳ್ಳ ಹೆಂಗಸು. कामोऽस्त्यस्याः "इनिः" (५-२-११५)। "ङीप्" (४-१-५)। "परिमलितमपि प्रियैः प्रकामं कुचयुगमुज्ज्वलमेव कामिनीनाम्" माघ० ७-७०। "कामिनीषु विवाहेषु गवां भक्ष्ये तथेन्धने। ब्राह्मणाभ्युपपत्तौ च शपथे नास्ति पातकम्" मनु० ८-११२। 2. ಹೆಂಗಸು. "परिवृद्धरागमनुबन्धसेवया मृगया जहार चतुरेव कामिनी" रघु० ९-६९। 3. ಸುಂದರಿ, ರೂಪವತಿಯಾದ ಹೆಂಗಸು. "मधूनि वक्त्राणि च कामिनीनामामोदकर्मव्यतिहारमीयुः" माघ० ३-५४। 4. ಭೀರು, ಭಯವುಳ್ಳವಳು. 6. ಬದನಿಕೆ ಗಿಡ. 7. ಮರದರಿಶಿನ. 8. ಒಂದು ಮದ್ಯ.

**कामुक ಕಾಮುಕ** (पु०) 1. ಅಡಕೆಮರ. कमु (कान्तौ) "उकञ्" (३-२-१५४)। 2. ಅಶೋಕವೃಕ್ಷ. 3. ಕಾಡಿರುವಂತಿಗೆ. "कामुकास्तु काम्यशोकातिमुक्तकाः" हेम०। (वि०)4. ಕಾಮಪೀಡಿತನಾದ, ಹೆಚ್ಚು ಕಾಮವೇಗವುಳ್ಳ, ಸಂಭೋಗದ ಅಪೇಕ್ಷೆಯುಳ್ಳ. कामयितुं शीलमस्य "उकञ्" (३-२-१५४)। "वञ्चयिष्यसि कुतस्तमोवृतः कामुकेति चकुषुस्तमङ्गनाः" रघु० १९-३३। 5. ಅತಿಯಾಗಿ ಅಪೇಕ್ಷಿಸುವ, ಹೆಚ್ಚು ಆಸೆಪಡುವ. "इत्याकर्ण्य क्षितीशस्त्रिदशपरिषदस्ता गिरश्चाटुगर्भाः वैदर्भीकामुकोऽपि प्रसभविनिहितं दूत्यभारं बभार" नैष० ५-१३७। (स्त्री०) **–का –ಕಾ.** 6. ಧನ ಮೊದಲಾದುವನ್ನು ಅಪೇಕ್ಷಿಸುವ ಹೆಂಗಸು. **–की –ಕೀ.** ಸಂಭೋಗದ ಅಪೇಕ್ಷೆಯುಳ್ಳ ಹೆಂಗಸು. "कामुकी मैथुनेच्छा चेत् कामुकान्या" सि० कौ० (४-१-४२)।

**कामुकत्व ಕಾಮುಕತ್ವ** (न०) ಕಾಮುಕತನ, ವಿಲಾಸದಿಂದ ಕೂಡಿರುವಿಕೆ. कामुकस्य भावः "त्वः" (५-१-११९)। "तेषां दिक्षु प्रथितविदिशालक्षणां राजधानीं गत्वा सद्यः फलमविकलं कामुकत्वस्य लब्धा" मेघ० १-२४। "तल्" **–कता –ಕತಾ.**

**कामुकायन ಕಾಮುಕಾಯನ** (पु०) ಕಾಮುಕನ ಮಗ. कामुकस्यापत्यम् "फक्" (४-१-९९)।

**कामेप्सु ಕಾಮೇಪ್ಸು** (वि०) 1. ಇಷ್ಟಾರ್ಥವನ್ನು ಹೊಂದಲು ಅಪೇಕ್ಷಿಸುವ. काममाप्तुमिच्छुः — आप्लृ (व्याप्तौ) + सन् "उः" (३-२-१६७)। 2. ಸಂಭೋಗವನ್ನು ಅಪೇಕ್ಷಿಸುವ.

**कामेश्वर ಕಾಮೇಶ್ವರ** (पु०) 1. ಪರಮೇಶ್ವರ. कामानामीश्वरः। (स्त्री०) **–री –ರೀ.** ದೇವಿಯ ಒಂದು ಮೂರ್ತಿ. "कामाख्या त्रिपुरा चैव तथा कामेश्वरी शिवा। सारदाऽथ महोत्साहा कामरूपगुणैर्युता" कालिकापु०।

**कामोपहत ಕಾಮೋಪಹತ** (पु०) 1. ಮನ್ಮಥನಿಂದ ಪೀಡಿತನಾದ. 2. ಆಸೆಯಿಂದ ಪೀಡಿತನಾದ. कामेन उपहतः।

**काम्पिल्य ಕಾಂಪಿಲ್ಯ** (पु०) 1. ಕಾಂಪಿಲ್ಯದೇಶ. 2. ಕಾಂಪಿಲ್ಯಪುರ, ದ್ರುಪದರಾಜನ ರಾಜಧಾನಿ. [ಈ ಪಟ್ಟಣವು ಫರಾಕಾಬಾದ್ ಜಿಲ್ಲೆಯ ಫಟೇ ನಗರಕ್ಕೆ ಈಶಾನ್ಯದಲ್ಲಿರುವುದು.] "माकन्दीमथ गङ्गायास्तीरे जनपदायुताम्। सोऽध्यवात्सीत् दीनमनाः काम्पिल्यं च पुरोत्तमम्। दक्षिणांश्चापि पाञ्चालान् यावत् चर्मण्वतीं नदीम्। द्रोणेन चैवं द्रुपदः परिभूयाथ पालितः" भा०। 3. ಕಪಿಲೆಹಿಟ್ಟು ಎಂಬ ಓಷಧಿ. "काम्पिल्यः कर्कशश्चन्द्रो रक्ताङ्गो रोचनीत्यपि" अम०।

**काम्पिल्यक ಕಾಂಪಿಲ್ಯಕ** (वि०) ಕಾಂಪಿಲ್ಯದೇಶದಲ್ಲಿ ಹುಟ್ಟಿದ, ಕಾಂಪಿಲ್ಯದೇಶದಲ್ಲಿರುವ. काम्पिल्य "वुञ्" (४-२-१२१)।

**काम्बल ಕಾಂಬಲ** (पु०) ಕಂಬಳಿಯಿಂದ ಹೊದ್ದಿಸಲ್ಪಟ್ಟ ರಥ. कम्बलेन परिवृतो रथः "अण्" (४-२-१०)। "रथे काम्बलवास्त्राद्याः कम्बलादिभिरावृते" अम०।

**काम्बविक ಕಾಂಬವಿಕ** (पु०) ಶಂಖದಿಂದ ಒಡವೆಗಳನ್ನು ತಯಾರಿಸುವವನು. कम्बुः शङ्खभूषणं शिल्पमस्य "ठक्" (४-४-५५)। स्त्रियाम् जाति० "ङीष्" (४-१-१५)। **–विकी –ವಿಕೀ.**

**काम्बोज ಕಾಂಬೋಜ** (पु० ब० व०) 1. ಕಂಬೋಜದೇಶ. 2. ಕಂಬೋಜ ದೇಶದ ದೊರೆಗಳು. कम्बोजानां राजानः "अञ्" (४-१-१६६)। "काम्बोजाः समरे सोढुं तस्य वीर्यमनीश्वराः" रघु० ४-६९। ಆದರೆ "कम्बोजाल्लुक्" (४-१-१७३) ಸೂತ್ರದಿಂದ "अञ्" ಪ್ರತ್ಯಯಕ್ಕೆ ಲೋಪ ಬಂದು "कम्बोजाः" ಎಂದಾಗುವುದು. "कम्बोजाः समरे सोढुम्" इति पाठः सुगमः ಎಂದು ಸಿದ್ಧಾಂತಕೌಮುದಿಯಲ್ಲಿ ಉಕ್ತವಾಗಿದೆ. "शका यवनकाम्बोजास्तास्ताः क्षत्रियजातयः" भा० अनु० ३३-२१

ಎಂದು "अञ्" ಪ್ರತ್ಯಯಕ್ಕೆ ಲೋಪವಿಲ್ಲದ ಪ್ರಯೋಗವೂ ಇರುವುದು. 3. ಕಂಬೋಜದೇಶದ ನಿವಾಸಿಗಳು. कम्बोजोऽभिजनो येषाम् "अण्" (४-३-९३)। (पुं०) 4. ಪುನ್ನಾಗವೃಕ್ಷ, ಸುರಗಿಗಿಡ. 5. ಕಂಬೋಜದೇಶದ ಕುದುರೆ. कम्बोजदेशे भवः "अण्" (४-२-१३३)। 6. ಬಿಳಿ ಕಗ್ಗಲಿಮರ. (स्त्री०) -जी -ಜೀ. 1. ಕಾಡುದ್ದಿನಗಿಡ. 2. ಬಿಳಿಕಗ್ಗಲಿಮರ. "काम्बोजः पुनरश्वानां भेदे पुन्नागपादपे। वलक्षखदिरे चापि काम्बोजी माषपर्णिका" हेम०।

**काम्बोजक ಕಾಂಬೋಜಕ** (वि०) 1. ಕಂಬೋಜದೇಶದಲ್ಲಿರುವ (ಮನುಷ್ಯ). 2. ಕಂಬೋಜದೇಶದಲ್ಲಿ ಹುಟ್ಟಿದವನು. कम्बोज "वुञ्" (४-२-१३३)।

**काम्बोजी ಕಾಂಬೋಜೀ** (स्त्री०) 1. ಮಾಷಪರ್ಣೀಗಿಡ, ಕಾಡುದ್ದಿನಗಿಡ. 2. ಬಿಳಿ ಕಗ್ಗಲಿಗಿಡ. "काम्बोजी माषपर्ण्यां च वलक्षखदिरे स्त्रियाम्" मेदि०।

**काम्भोज ಕಾಂಭೋಜ** (पुं०) ಕಾಂಬೋಜದೇಶ. "काम्भोजवाजिनियुतानि च सत्रिसप्तानि" याद० १६-१४६।

**काम्य ಕಾಮ್ಯ** (न०) 1. ಇಚ್ಛೆ, ಅಪೇಕ್ಷೆ. (वि०) 2. ಸುಂದರವಾದ, ಸುಂದರನಾದ, ರಮಣೀಯವಾದ. काम्यते — कमु (कान्तौ) + णिङ् कर्म० "यत्" (३-१-९७)। "नासौ न काम्यो न च वेद सम्यक् द्रष्टुं न सा भिन्नरुचिर्हि लोकः" रघु० ६-३०। 3. ಅಪೇಕ್ಷಿಸಲ್ಪಡುವ ವಿಷಯ, ಕಾಮನಾವಿಷಯ. 4. ಫಲಾಭಿಲಾಷೆಯಿಂದ ಮಾಡುವ ಕರ್ಮ. "यत्किञ्चित्फलमुद्दिश्य यज्ञदानजपादिकम्। क्रियते कायिकं यच्च तत् काम्यं परिकीर्तितम्"। "काम्यो हि वेदाधिगमः कर्मयोगश्च वैदिकः" मनु० २-२। "अथ तस्य विशां पत्युरन्ते काम्यस्य कर्मणः" रघु० १०-५०। ಕಾಮ್ಯಕರ್ಮವಾದರೂ ಫಲಾಭಿಲಾಷೆಯಿಲ್ಲದೆ ಈಶ್ವರಾರ್ಪಣಬುದ್ಧಿಯಿಂದ ಮಾಡುವುದು ಸಿದ್ಧಿಪ್ರದವು. "युक्तः कर्मफलं त्यक्त्वा शान्तिमाप्नोति नैष्ठिकीम्। अयुक्तः कामकारेण फले सक्तो निबध्यते" गीता ५-१२। "यत् करोषि यदश्नासि यज्जुहोषि ददासि यत्। यत्तपस्यसि कौन्तेय तत्कुरुष्व मदर्पणम्" गीता ९-२७।

**काम्यक ಕಾಮ್ಯಕ** (न०) ಇಂದ್ರಪ್ರಸ್ಥಕ್ಕೆ ಪಶ್ಚಿಮದಲ್ಲಿರುವ ಒಂದು ವನ, ಪಾಂಡವರು ವನವಾಸಕ್ಕೆ ಹೊರಟಾಗ ಕೆಲವು ಕಾಲ ತಂಗಿದ್ದ ಒಂದು ವನ. "सरस्वतीदृषद्वत्यौ यमुनां च निषेव्य ते। ययुर्वनेनैव वनं सततं दक्षिणां दिशम्। ततः सरस्वतीकूले समेषु मरुधन्वसु। काम्यकं नाम ददृशुर्वनं मुनिजनप्रियम्" भा० वन० ५-२, ३।

**काम्यकर्मन् ಕಾಮ್ಯಕರ್ಮನ್** (न०) 1. ಫಲಾಪೇಕ್ಷೆಯಿಂದ ಮಾಡುವ ಕರ್ಮ, ಜ್ಯೋತಿಷ್ಟೋಮಾದಿ ಯಾಗ. "काम्यानां कर्मणां न्यासं संन्यासं कवयो विदुः। सर्वकर्मफलत्यागं प्राहुस्त्यागं विचक्षणाः" गीता १८-२। (वि०) 2. ಕಾಮ್ಯಕರ್ಮವನ್ನು ಆಚರಿಸುವವನು. काम्यं कर्म यस्य।

**काम्यदान ಕಾಮ್ಯದಾನ** (न०) ಫಲಾಪೇಕ್ಷೆಯಿಂದ ಮಾಡುವ ದಾನ, ಫಲವನ್ನು ಅಪೇಕ್ಷಿಸಿ ಕೊಡುವ ಕೊಡುಗೆ. काम्येन फलेच्छया दानम्।

**काम्यफल ಕಾಮ್ಯಫಲ** (न०) ಕರ್ಮದಿಂದ ಅಪೇಕ್ಷಿಸಲ್ಪಡುವ ಫಲ, ಕಾಮ್ಯಕರ್ಮದ ಫಲ.

**काम्यमान ಕಾಮ್ಯಮಾನ** ಅಪೇಕ್ಷಿಸಲ್ಪಡುತ್ತಿರುವ. कमु (कान्तौ) + णिङ् कर्म० "यक्" "शानच्" (३-२-१२४)।

**काम्ल ಕಾಮ್ಲ** (न०) 1. ಸ್ವಲ್ಪ ಹುಳಿ. कु ईषदम्लम्— कोः कादेशः (६-३-१०५)। (वि०) 2. ಸ್ವಲ್ಪ ಹುಳಿಯುಳ್ಳ. काम्लमस्त्यस्य "अच्" (५-२-१२७)।

**काय ಕಾಯ** (पुं०) 1. ದೇಹ, ಶರೀರ, ಮೈ. चीयतेऽस्थ्यादिकमत्र— चिञ् (चयने) "घञ्" कश्च (३-३-४१)। "कैश्यं मषीणां स्मितभा कठिन्याः काये यदीये निरमायि सारैः" नैष० १०-८७। 2. ಸಂಘ, ಸಮೂಹ, ರಾಶಿ, ಗುಂಪು. चिञ् भावे "घञ्" (३-३-१८)। 3. ಸ್ವಭಾವ. 4. ಎಂಟು ವಿಧ ವಿವಾಹಗಳಲ್ಲಿ ಪ್ರಜಾಪತಿದೇವತಾಕವಾದ ಒಂದು ವಿವಾಹ. "देवोढाजः सुतश्चैव सप्त सप्त परावरान्। आर्षोढाजः सुतस्त्रींस्त्रीन् षट्षट् कायोढजः सुतः" मनु० ३-३८। 5. ಮೂಲಧನ, ಬಂಡವಾಳ. 6. ಲಕ್ಷ್ಯ, ಗುರಿ, ಉದ್ದೇಶ. (न०) 7. ಪ್ರಜಾಪತಿದೇವತಾಕವಾದ ತೀರ್ಥ (ಅಂಗುಷ್ಠಮೂಲದಿಂದ ಬಿಡುವ ತೀರ್ಥ). 8. ಮನುಷ್ಯ ತೀರ್ಥ. "कायः कदैवते मूर्तौ सङ्घे लक्ष्यस्वभावयोः। कायं मनुष्यतीर्थे च" हेम०। "ब्राह्मेण विप्रस्तीर्थेन नित्यकालमुपस्पृशेत्। कायत्रैदशिकाभ्यां वा न पित्र्येण कदाचन। अङ्गुष्ठमूलस्य तले ब्राह्मं तीर्थं प्रचक्षते। कायमङ्गुष्ठमूलेऽग्रे दैवं पित्र्यं तयोरधः" मनु० २-५८, ५९। 9. ಪ್ರಜಾಪತಿದೇವತಾಕವಾದ ಹವಿಸ್ಸು ಮುಂತಾದುದು. कः प्रजापति-

दैवताऽस्य "अण्" (४-२-२४)। कस्य इत् (४-२-२५)। को ब्रह्मा देवता अस्य कायं हविः सि० कौ०।

**कायक्लेश ಕಾಯಕ್ಲೇಶ** (पु०) ಶರೀರದ ಶ್ರಮ, ದುಡಿತದಿಂದ ಉಂಟಾದ ನೋವು. कायस्य क्लेशः। "दुःखमित्येव यत्कर्म कायक्लेशभयात्त्यजेत्। स कृत्वा राजसं त्यागं नैव त्यागफलं लभेत्" गीता १८-८।

**कायचिकित्सा ಕಾಯಚಿಕಿತ್ಸಾ** (स्त्री०) (ವೈದ್ಯದಲ್ಲಿ ಹೇಳಿರುವ) ಎಂಟು ವಿಧ ಆಯುರ್ವೇದಾಂಗಗಳಲ್ಲಿ ಒಂದು, ದೇಹದಲ್ಲಿ ಸಂಭವಿಸುವ ರೋಗಗಳ ನಿವಾರಣೆಗಾಗಿ ಮಾಡುವ ಉಪಚಾರ. ["अष्टाङ्ग" ಪದದಲ್ಲಿ ನೋಡಿ.]

**कायदण्ड ಕಾಯದಂಡ** (पु०) ಮೈಯ ನಿಗ್ರಹ, ಶರೀರವನ್ನು ಹತೋಟಿಯಲ್ಲಿಟ್ಟುಕೊಳ್ಳಲು ದಂಡಿಸುವುದು.

**कायबन्धन ಕಾಯಬಂಧನ** (न०) ಚೇತನನನ್ನು ಶರೀರದೊಳಗೆ ಸೇರಿಸುವುದು.

**कायवत् ಕಾಯವತ್** (वि०) 1. ಶರೀರವುಳ್ಳ, ದೇಹವನ್ನು ಹೊಂದಿರುವ. कायोऽस्यास्ति "मतुप्" (५-२-९४)। स्त्रियाम् "ङीप्" (४-१-६)। **–वती –ವತೀ.** (अव्य०) 2. ಶರೀರದಂತೆ, ದೇಹದಂತೆ. कायेन तुल्यम् "वतिः" (५-१-११५)।

**कायवलन ಕಾಯವಲನ** (न०) ಕವಚ, ಅಂಗಿ.

**कायमान ಕಾಯಮಾನ** (न०) 1. ಕುಟೀರ, ಹುಲ್ಲಿನ ಗುಡಿಸಲು. "कायमानं तृणकुटी" त्रिकाण्ड०। 2. ವೇಶ್ಯಾಗೃಹ. 3. ಆಟದ ಮನೆ, ನರ್ತನಶಾಲೆ. "वेश्यागृहे कायमानं तथेदं केलिमण्डपे" वैज०।

**कायव्य ಕಾಯವ್ಯ** (पु०) ಕಳ್ಳರ ಗುಂಪಿಗೆ ಒಡೆಯನಾದ ಒಬ್ಬ ಬೇಡ. ಇವನಿಗೆ ಕಾಪಟ್ಯನೆಂಬುದು ಮತ್ತೊಂದು ಹೆಸರು. [ಇವನು ಪರಮಧಾರ್ಮಿಕನಾಗಿದ್ದುದರಿಂದ ಒಂದು ದಿನ ಇವನ ಗುಂಪಿನವರೆಲ್ಲರೂ ಸೇರಿ "ನಾವು ಹೇಗೆ ನಡೆದುಕೊಂಡರೆ ನಮಗೆ ಸದ್ಗತಿಯುಂಟಾಗುವುದು" ಎಂದು ಇವನನ್ನು ಕೇಳಿದರು. "ನೀವು ಯಾವಾಗಲೂ ಬ್ರಾಹ್ಮಣರನ್ನು ದ್ವೇಷಿಸಕೂಡದು. ಬ್ರಹ್ಮದ್ವೇಷಿಗಳನ್ನು ಹಿಡಿದು ನೀವು ಕೊಲ್ಲಬೇಕು. ಹೆಂಗಸರು, ಶಿಶುಗಳು, ತಪಸ್ವಿಗಳು ಇವರನ್ನು ಕೊಲ್ಲಕೂಡದು. ಈ ರೀತಿ ನಡೆದುಕೊಂಡರೆ ನಿಮಗೆ ಸದ್ಗತಿಯುಂಟು" ಎಂದು ಹೇಳಿದನು.] भा० शान्ति० १३५।

**कायसम्पद् ಕಾಯಸಂಪದ್** (स्त्री०) ರೂಪ, ಲಾವಣ್ಯ, ಶರೀರ ಸೌಂದರ್ಯ ಮುಂತಾದುವು. कायस्य सम्पत्। "रूपलावण्यबलवज्रसंहननत्वानि कायसम्पदः" पा० यो० सू०।

**कायस्थ ಕಾಯಸ್ಥ** (पु०) 1. ಪರಮಾತ್ಮ, ಪರಮೇಶ್ವರ. कायेषु सर्वभूतानां देहेषु अन्तर्यामितया तिष्ठति – काय + ष्ठा (गतिनिवृत्तौ) "कः" (३-२-३)। "कायस्थोऽपि न कायस्थः कायस्थोऽपि न जायते। कायस्थोऽपि न भुञ्जानः कायस्थोऽपि न बध्यते" उत्तरगी०। 2. ಒಬ್ಬ ಮಿಶ್ರಜಾತಿಯವನು, ಕ್ಷತ್ರಿಯನಿಂದ ಶೂದ್ರಸ್ತ್ರೀಯಲ್ಲಿ ಹುಟ್ಟಿದವನು. ಲೇಖನವು ಈತನ ವೃತ್ತಿ. "दृग्गोचरोऽभूदथ चित्रगुप्तः कायस्थ उच्चैर्गुण एतदीयः" नैष० १४-६६। **ಕಾಯಸ್ಥನ ಉತ್ಪತ್ತಿ ಮತ್ತು ಶಬ್ದ ನಿರ್ವಚನ :**

[(1) ಪರಶುರಾಮನು ಕಾರ್ತವೀರ್ಯಾರ್ಜುನನನ್ನು ಸಂಹರಿಸಿ ಉಳಿದೆಲ್ಲಾ ಕ್ಷತ್ರಿಯರನ್ನೂ ನಾಶಪಡಿಸಲು ಹೊರಟಾಗ ಕೆಲವರು ಕಾಡಿಗೆ ಓಡಿಹೋದರು. ಕೆಲವರು ಪಾತಾಳವನ್ನು ಪ್ರವೇಶಿಸಿದರು. ಗರ್ಭಿಣಿಯಾಗಿದ್ದ ಚಂದ್ರಸೇನರಾಜನ ಪತ್ನಿಯು ದಾಲ್ಭ್ಯಮಹರ್ಷಿಯ ಆಶ್ರಮಕ್ಕೆ ಓಡಿಹೋಗಿ ಆಶ್ರಯ ಪಡೆದಳು. ಪರಶುರಾಮನು ಅಲ್ಲಿಗೆ ಹೋಗಿ ಮಹರ್ಷಿಯಿಂದ ಸತ್ಕೃತನಾಗಿ ತಾನು ಒಂದು ಯಾಚನೆಗಾಗಿ ಬಂದಿರುವುದಾಗಿ ತಿಳಿಸಿದನು. ಮಹರ್ಷಿಯೂ ಪರಶುರಾಮನಿಂದ ಒಂದು ವಿಷಯವನ್ನು ಯಾಚಿಸಿದನು. ಚಂದ್ರಸೇನನ ಪತ್ನಿಯನ್ನು ಬಿಟ್ಟುಕೊಡಬೇಕೆಂದು ಪರಶುರಾಮನು ಕೇಳಿದಾಗ ಋಷಿಯೂ ಆಕೆಯ ಗರ್ಭದಲ್ಲಿರುವ ಶಿಶುವನ್ನು ತನಗೆ ಕೊಡಬೇಕೆಂದು ಯಾಚಿಸಿದನು. ಆಗ "ನಾನು ಯಾವ ವಸ್ತುವಿಗಾಗಿ ಬಂದಿರುವೆನೋ ಅದನ್ನೇ ನೀನೂ ಕೇಳುವೆ. ಆಗಲಿ. ಆಕೆಯ ಗರ್ಭದಲ್ಲಿರುವ ಶಿಶುವನ್ನು ನೀನು ಬೇಡುವುದರಿಂದ ಅದಕ್ಕೆ "**ಕಾಯಸ್ಥ**" ನೆಂಬ ಹೆಸರಾಗಲಿ. ಆದರೆ ಈ ಶಿಶುವು ಕ್ಷತ್ರಧರ್ಮವನ್ನಿಟ್ಟುಕೊಳ್ಳಕೂಡದು" ಎಂದು ಹೇಳಿ ಪರಶುರಾಮನು ಹೊರಟುಹೋದನು. ಆಗ ಋಷಿಯು ಆ ಶಿಶುವಿಗೆ ಚಿತ್ರಗುಪ್ತನ ಧರ್ಮವಾದ ಕಾಯಸ್ಥನ ಕಾರ್ಯವನ್ನೇ ಕೊಟ್ಟನು. ಆದುದರಿಂದ ಆತನ ವಂಶದವರೆಲ್ಲಾ ಕಾಯಸ್ಥರಾದರು. "एवं हत्वार्ज्जुनं रामः सन्धाय निशितान् शरान्। एक एव ययौ हन्तुं सर्वनिवातुरान् नृपान्। केचिद्गहनमाश्रित्य केचित्पातालमाविशन्। सगर्भा चन्द्रसेनस्य भार्या दाल्भ्याश्रमं ययौ। ......... .................................। ततो रामोऽब्रवीद्दाल्भ्यं यदर्थमहमागतः। क्षत्रियान्तकरश्चाहं तत्त्वं याचितवानसि। प्रार्थितश्च त्वया विप्र कायस्थो गर्भ

उत्तमः। तस्मात्कायस्थ इत्याख्या भविष्यति शिशोः शुभा। ............................। कायस्थ एव उत्पन्नः क्षत्रायां क्षत्रियात्ततः। रामाज्ञया स दाल्भ्येन क्षत्रधर्माद्बहिष्कृतः। कायस्थधर्मो दत्तो वै चित्रगुप्तस्य यः स्मृतः" स्कान्द०।

(೨) ಬ್ರಹ್ಮನು ಚರಾಚರಾತ್ಮಕವಾದ ಸಕಲ ಜಗತ್ತನ್ನೂ ಸೃಷ್ಟಿಸಿ ಅದರ ಪಾಲನೆಯ ಕಾರ್ಯವನ್ನು ಕಶ್ಯಪನಿಗೆ ವಹಿಸಿ ತಾನು ಅನೇಕ ಸಹಸ್ರವರ್ಷಗಳ ಕಾಲ ತಪಸ್ಸಿನಲ್ಲಿದ್ದನು. ಸಮಾಧಿಸ್ಥನಾಗಿದ್ದ ಬ್ರಹ್ಮನ ಶರೀರದಿಂದ ಲೇಖನಿ ಮತ್ತು ಮಸಿಯಕುಡಿಕೆ ಹಿಡಿದ ಒಬ್ಬ ಸುಂದರ ಪುರುಷನು ಉದ್ಭವಿಸಿ ಮುಂದೆ ನಿಂತನು. ಸಮಾಧಿಯಿಂದ ಎದ್ದ ಬ್ರಹ್ಮನು ನೋಡಿದಾಗ ತನ್ನ ಹೆಸರನ್ನೂ ತನ್ನ ಕೆಲಸವೇನೆಂಬುದನ್ನೂ ತಿಳಿಸಬೇಕೆಂದು ಪುರುಷನು ಕೇಳಲು "ನನ್ನ ಶರೀರದಿಂದ ನೀನು ಜನಿಸಿದೆಯಾದುದರಿಂದ ನಿನ್ನ ಹೆಸರು **"ಕಾಯಸ್ಥ"** ನೆಂದು ಆಗಲಿ. ಚಿತ್ರಗುಪ್ತನ ಹೆಸರಿನಿಂದ ಧರ್ಮರಾಜನ ನಗರಿಯಲ್ಲಿ ಇದ್ದುಕೊಂಡು ಜಗತ್ತಿನ ಧರ್ಮಾಧರ್ಮಕಾರ್ಯಗಳನ್ನು ಬರೆಯುವ ಕಾರ್ಯದಲ್ಲಿ ನೀನಿರಬೇಕು" ಎಂದು ಹೇಳಿ ಅಂತರ್ಧಾನ ಹೊಂದಿದನು.] पद्मपु०। (स्त्री०) **–स्था –ಸ್ಥಾ.** 1. ಅಳಲೆ ಗಿಡ. कायस्तिष्ठत्यनया — घञर्थे "कः" (वा० ३-३-५८)। 2. ನೆಲ್ಲಿಗಿಡ. 3. ಯಾಲಕ್ಕಿ ಗಿಡ. "कायस्थोऽपि नृजातेः स्यात् प्रभेदे परमात्मनि। कायस्था तु हरीतक्यामामलक्यां च दर्शिता" विश्व०। "कायस्थोऽक्षरजीवकः। परमात्मा च कायस्था हरीतक्यामलक्यपि" हेम०। 4. ಕಾಯಸ್ಥ ಜಾತಿಯ ಹೆಂಗಸು. **–स्थी –ಸ್ಥೀ.** 5. ಕಾಯಸ್ಥನ ಹೆಂಡತಿ.

**कायिक ಕಾಯಿಕ** (वि०) 1. ಕಾಯದಿಂದ ನಡೆಸಲ್ಪಟ್ಟ, ದೇಹದಿಂದ ಮಾಡಲ್ಪಟ್ಟ, ಶರೀರವ್ಯಾಪಾರದಿಂದ ಉಂಟಾದ (ಪುಣ್ಯ ಪಾಪ ಕರ್ಮಗಳು). कायेन निर्वृत्तम् "ठक्" (५-१-७९)। "अदत्तानामुपादानं हिंसा चेवाविधानतः। परदारोपसेवा च कायिकं त्रिविधं स्मृतम्। वाचा वाचा कृतं कर्म कायेनैव च कायिकम्" मनु १२-७,८। (स्त्री०) **–का –ಕಾ.** 2. ಬಡ್ಡಿ, ಮೂಲಧನದ ವೃದ್ಧ್ಯಂಶ. "नातिसांवत्सरीं वृद्धिं न चादष्टां पुनर्हरेत्। चक्रवृद्धिः कालवृद्धिः कारिता कायिका च सा" मनु० ८-१५३। 3. ಹಸು ಎತ್ತು ಮೊದಲಾದುವುಗಳ ವ್ಯಾಪಾರದಿಂದ ಕೊಡುವ ಬಡ್ಡಿ. "दोह्यवाह्यकर्मयुता कायिका समुदाहृता"।

**कार ಕಾರ** (पु०) 1. ಕಾರ್ಯ, ಕೆಲಸ. 2. ಯತ್ನ. डु कृञ् (करणे) भावे "घञ्" (३-३-१८)। "सकार-नानारकासकायसाददसायका" माघ० १९-२७। 3. ಅ ಆ ಇ ಈ ಮುಂತಾದ ವರ್ಣಗಳನ್ನು ನಿರ್ದೇಶಿಸಲು ಅವುಗಳ ಮುಂದೆ ಹಚ್ಚುವ ಒಂದು ಪ್ರತ್ಯಯ. (वा० ३-३-१०८)। अकारः आकारः इकारः ईकारः ककारः टकारः पकारः मकारः ಇತ್ಯಾದಿ. 4. ಬಲ. कृञ् करं० "घञ्" (३-३-१२१)। 5. ರತಿ, ಸುರತ. कस्य सुखस्यारः प्राप्तिर्यत्र। 6. ಪತಿ, ಗಂಡ. कं सुखं ऋच्छति — ऋ (गतौ) "अण्" (३-२-१)। 7. ವಧೆ. 8. ನಿಶ್ಚಯ. कॄ (हिंसायाम्) भावे "घञ्"। कं निष्यन्दजलं ऋच्छति। 9. ಬಲಿ, ಪೂಜಾದ್ರವ್ಯ. 10. ಹಿಮಾಚಲ. 11. ಯತಿ, ಸಂನ್ಯಾಸಿ. 12. ಹಸ್ತ, ಕೈ. "कारो बले वधे यत्ने हिमाद्रौ निश्चये यतौ" हेम०। "कारा बन्धनगेहे स्त्री करे ना" वैज०। 13. ಕರ, ರಾಜನಿಗೆ ಕೊಡಬೇಕಾದ ತೆರಿಗೆ. "कारनाम्नि च प्राचां हलादेः" पा० सू० ६-३-१०। कृञ् ಧಾತುವಿಗೆ ಕರ್ಮಪದವು ಉಪಪದವಾದಾಗ "अण्" (३-२-१) ಪ್ರತ್ಯಯ ಬಂದು कारः ಎಂದು ರೂಪವಾಗಿ ಮಾಡುವವನು, ಆಯಾ ಕಾರ್ಯ ಮಾಡುವವನು ಎಂಬ ಅರ್ಥ ಕೊಡುವುದು. कुम्भकारः, ग्रन्थकारः, सूपकारः, स्वर्णकारः ಇತ್ಯಾದಿ.

**कारक ಕಾರಕ** (न०) 1. ಕರ್ತೃತ್ವಾದಿ ಸಂಜ್ಞಾ ಪ್ರಯೋಜಕವಾದ ಒಂದು ಕಾರ್ಯ. करोति कर्तृत्वादिव्यपदेशम् — डु कृञ् (करणे) "ण्वुल्" (३-१-१३३)। 2. ಕ್ರಿಯಾ ನಿಷ್ಪಾದಕವಾದ (ಕಾರ್ಯವನ್ನುಂಟುಮಾಡುವ) ಕರ್ತೃ ಕರ್ಮಾದಿಗಳು. करोति क्रियां निर्वर्तयति — डु कृञ् "ण्वुल्"। ಕಾರಕವು ಕರ್ತೃ, ಕರ್ಮ, ಕರಣ, ಸಂಪ್ರದಾನ, ಅಪಾದಾನ ಮತ್ತು ಅಧಿಕರಣಗಳೆಂದು ಆರುವಿಧ. ಕ್ರಿಯಾನಿಷ್ಪಾದಕತ್ವರೂಪವ್ಯಾಪಾರವು ಇರುವುದರಿಂದ ಎಲ್ಲಾ ಕಾರಕಗಳಲ್ಲೂ ಕರ್ತೃತ್ವವಿದ್ದರೂ ಆಯಾ ಕಾರಕಗಳ ಅವಾಂತರವ್ಯಾಪಾರವಿವಕ್ಷೆಯಿಂದ ಕರ್ಮತ್ವಾದಿ ಸಂಜ್ಞೆಯು ಬರುವುದು.

| कारकम् | व्यापारः |
|---|---|
| (1) कर्तृकारकम् | कारकान्तरप्रवर्तनम् |
| (2) कर्मकारकम् | क्रियाफलोद्देश्यत्वम् |
| (3) करणकारकम् | क्रियानियतपूर्ववृत्तित्वम् |
| (4) संप्रदानकारकम् | प्रेरणानुमत्यादि |
| (5) अपादानकारकम् | अवधिभावोपगमत्वम् |
| (6) अधिकरणकारकम् | कर्तृकर्मव्यवहितक्रियाधारणम् |

"निष्पत्तिमात्रे कर्तृत्वं सर्वत्रैवास्ति कारके। व्यापार-भेदापेक्षायां करणत्वादिसंभवः"। (न०) 3. ಹಿಮದ

ಗಡ್ಡೆಯಿಂದ ಹೊರಟ ನೀರು. (वि०) 4. ಕರಕ ಸಂಬಂಧವಾದ. करकस्येदम् "अण्" (४-३-१२०)। 5. ಮಾಡುವವನು, ಕೆಲಸಮಾಡುವವನು, ರಚಿಸುವವನು, ನಿರ್ಮಾಣ ಮಾಡುವವನು. "दोषैरेतैः कुलघ्नानां वर्णसंकरकारकैः" गीता १-४३। स्त्रियाम् **कारिका ಕಾರಿಕಾ.** "यत्र पुष्पशरशास्त्रकारिकासारिकाध्युषितनागदन्तिका" नैष० १८-१५।

**कारकदीपक ಕಾರಕದೀಪಕ** (न०) ಅರ್ಥಾಲಂಕಾರದ ಒಂದು ಭೇದ; ಏಕಕಾರಕಗತವಾದ ಕ್ರಮಪ್ರಾಪ್ತವಾದ ಕ್ರಿಯೆಗಳ ಜೋಡಣೆಯು ಕಾರಕದೀಪಕಾಲಂಕಾರವಾಗುವುದು. "क्रमिकैकगतानां तु गुम्भः कारकदीपकम्। गच्छत्यागच्छति पुनः पान्थः पश्यति पृच्छति" चन्द्रा०। ಇಲ್ಲಿ ಕ್ರಮಪ್ರಾಪ್ತವಾದ ಗಮನಾದಿಕ್ರಿಯೆಗಳಿಗೆ ಪಾಂಥರೂಪ ಏಕಕರ್ತೃಕಾರಕಾನ್ವಯವಿರುವುದರಿಂದ ಕಾರಕದೀಪಕಾಲಂಕಾರ. ಒಂದು ಕರ್ತೃಕಾರಕಕ್ಕೆ ಅನೇಕ ಕ್ರಿಯಾನ್ವಯವಿದ್ದು ದೀಪಕಚ್ಛಾಯೆಯಿರುವುದರಿಂದ **ಕಾರಕದೀಪಕಾಲಂಕಾರ.**

**कारकविभक्ति ಕಾರಕವಿಭಕ್ತಿ** (स्त्री०) ಕಾರಕಗಳನ್ನು ತಿಳಿಸುವ ವಿಭಕ್ತಿ; ದ್ವಿತೀಯಾವಿಭಕ್ತಿಯಿಂದ ಕರ್ಮಕಾರಕ. ತೃತೀಯಾವಿಭಕ್ತಿಯಿಂದ ಕರಣಕಾರಕ. ಚತುರ್ಥೀವಿಭಕ್ತಿಯಿಂದ ಸಂಪ್ರದಾನಕಾರಕ. ಪಂಚಮೀವಿಭಕ್ತಿಯಿಂದ ಅಪಾದಾನಕಾರಕ. ಸಪ್ತಮೀವಿಭಕ್ತಿಯಿಂದ ಅಧಿಕರಣ ಕಾರಕ ಬೋಧಿತವಾಗುವುದು. "उपपदविभक्तेः कारकविभक्तिर्बलीयसी" परि० २-३-१६।

**कारकर ಕಾರಕರ** (वि०) ಕೆಲಸಮಾಡುವವನು. कारं कार्यं करोति—डु कृञ् (करणे) "टः" (३-२-२१)।

**कारज ಕಾರಜ** (वि०) 1. ಕಾರ್ಯದಿಂದ ಉಂಟಾದ. कारात् जायते—जनी (प्रादुर्भावे) "डः" (३-२-९८)। 2. ನಖಸಂಬಂಧವಾದ. करजस्येदम् "अण्" (४-३-१२०)। 3. ನಖದಲ್ಲಿ ಉಂಟಾದ. करजे भवम् "अण्" (४-३-५३)।

**कारञ्ज ಕಾರಂಜ** (वि०) ಕರಂಜವೃಕ್ಷದ ಕಾಯಿ ಅದರ ತೈಲ ಮುಂತಾದುವು. करञ्जस्य तत्फलस्येदम् "अण्" (४-३-१२०)।

**कारण ಕಾರಣ** (पु०) 1. ಕಾಯಸ್ಥ. करण एव स्वार्थे "अण्"। (न०) 2. ಕಾರ್ಯವನ್ನುಂಟುಮಾಡುವ ಹೇತು, ಯಾವುದೊಂದು ಇಲ್ಲದಿದ್ದರೆ ಕಾರ್ಯವು ಆಗುವುದಿಲ್ಲವೋ ಅದು. डुकृञ् (करणे) + णिच् "ल्युट्" (३-३-११७)। "तच्च कारणमभूद्धिरण्मयं ब्रह्मणोऽसृजदसाविदं जगत्" माघ० १४-६७। ಕಾರಣವು ಸಮವಾಯಿಕಾರಣ, ಅಸಮವಾಯಿಕಾರಣ ಮತ್ತು ನಿಮಿತ್ತಕಾರಣಗಳೆಂದು ಮೂರು ವಿಧ. [ವಿವರಕ್ಕೆ ಆಯಾ ಪದಗಳಲ್ಲಿ ನೋಡಿ]. 3. ಉದ್ದೇಶ. "हित्वा तनुं कारणमानुषीं तां यथा गुरुस्ते परमात्ममूर्तिम्" रघु० १६-२२। 4. ಶರೀರ, ದೇಹ, ಮೈ. 5. ವಿಷ್ಣು. "जीवानां चक्षुरादीन् यो हेतून् कारयतीति सः। प्रोच्यते कारणम्" इति निरुक्तिः। "करणं कारणं कर्ता" वि० स०। 6. ಇಂದ್ರಿಯ. "कार्यकारणकर्तृत्वे हेतुः प्रकृतिरुच्यते" गीता १३-२०। 7. ಶಿವ, ಪರಮೇಶ್ವರ. "अजं शाश्वतं कारणं कारणानां शिवं केवलं भासकं भासकानाम्"। 8. ಪ್ರಮಾಣವಚನ, ಆಧಾರ, ಅಧಿಕಾರಯುತವಾದ ಮಾತು. "संभोगो दृश्यते यत्र न दृश्येतागमः क्वचित्। आगमः कारणं तत्र न संभोग इति स्थितिः" मनु० ८-२००। 9. ಸಾಧನೆ, ಸಲಕರಣೆ. 10. ಕಾರ್ಯ, ಕೆಲಸ. "न कश्चित् कस्यचिन्मित्रं न कश्चित् कस्यचिद्रिपुः। कारणेन च जानाति मित्राणि च रिपूंस्तथा"। 11. ವಧೆ, ಸಂಹಾರ. कृ (हिंसायाम्) + णिच् भावे "ल्युट्" (३-३-११५)। 12. ಮೂಲ, ಆದಿಕಾರಣ. "ब्राह्मणः संभवेनैव देवानामपि दैवतम्। प्रमाणं चैव लोकस्य ब्रह्मात्रैव हि कारणम्" मनु० ११-८४। 13. ಜನಕ, ತಂದೆ, ಉತ್ಪಾದಕ. "यमामनन्त्यात्मभुवोऽपि कारणं कथं स लक्ष्यप्रभवो भविष्यति" कुमा० ५-८१। (स्त्री०) **–णा –ಣಾ.** 14. ಯಾತನೆ, ನೋವು. "कारणं करणे हेतुवधयोश्च नपुंसकम्। स्त्री यातनायाम्" मेदि०।

**कारणकारण ಕಾರಣಕಾರಣ** (न०) ಕಾರಣದ ಕಾರಣ. कारणस्य कारणम्।

**कारणगत ಕಾರಣಗತ** (वि०) ಕಾರಣದಲ್ಲಿರುವ, ಉಪಾದಾನಕಾರಣದಲ್ಲಿರುವ.

**कारणगुण ಕಾರಣಗುಣ** (पु०) ಉಪಾದಾನಕಾರಣದ ಗುಣ. "कारणगुणाः कार्ये संक्रामन्ति"।

**कारणगुणोद्भव ಕಾರಣಗುಣೋದ್ಭವ** (पु०) ಉಪಾದಾನಕಾರಣಗುಣದಿಂದ ಉಂಟಾದ ಗುಣ. कारणगुणादुद्भवति।

**कारणता ಕಾರಣತಾ** (स्त्री०) ಕಾರಣವಾಗಿರುವಿಕೆ, ಹೇತುವಾಗಿರುವುದು. कारणस्य भावः "तल्" (५-१-११९)। "प्रलयस्थितिसर्गाणामेकः कारणतां गतः" कुमा० २-६। "त्वः" (५-१-११९)। **–णत्वम् –ಣತ್ವಂ.**

**कारणध्वंस ಕಾರಣಧ್ವಂಸ** (पु०) ಕಾರಣದ ನಾಶ.

**कारणध्वंसक ಕಾರಣಧ್ವಂಸಕ** (वि०) ಕಾರಣವನ್ನು ನಾಶಪಡಿಸುವ. कारणं ध्वंसयति – ध्वंसु (अवस्रंसने) + णिच् "ण्वुल्" (३-१-१३३)। "णिनिः" (३-१-१३४)। **–ध्वंसिन् –ಧ್ವಂಸಿನ್.** स्त्रियाम् "ङीप्" (४-१-५)। **–ध्वंसिनी –ಧ್ವಂಸಿನೀ.**

**कारणमाला ಕಾರಣಮಾಲಾ** (स्त्री०) ಅರ್ಥಾಲಂಕಾರದ ಒಂದು ಭೇದ ; ಮುಂದು ಮುಂದಿನ ವಸ್ತುಗಳಿಗೆ ಕಾರಣ ಭೂತವಾದ ಹಿಂದು ಹಿಂದಿನ ವಸ್ತುಗಳ ಅಥವಾ ಹಿಂದು ಹಿಂದಿನ ವಸ್ತುಗಳಿಗೆ ಕಾರಣವಾದ ಮುಂದು ಮುಂದಿನ ವಸ್ತುಗಳ ಗುಂಭವು (ಜೋಡಣೆಯು) **"ಕಾರಣ ಮಾಲಾ"** ಅಲಂಕಾರವಾಗುವುದು. "नयेन श्रीः श्रिया त्यागः त्यागेन विपुलं यशः" ಇಲ್ಲಿ ನೀತಿಯಿಂದ ಸಂಪತ್ತೂ, ಸಂಪತ್ತಿನಿಂದ ತ್ಯಾಗವೂ, ತ್ಯಾಗದಿಂದ ಕೀರ್ತಿಯೂ ಉಂಟಾ ಗುವುದರಿಂದ ನೀತಿಯು ಸಂಪತ್ತಿಗೂ, ಸಂಪತ್ತು ತ್ಯಾಗಕ್ಕೂ, ತ್ಯಾಗವು ಯಶಸ್ಸಿಗೂ ಕಾರಣವಾಗಿ ವರ್ಣಿತವಾಗಿರುವುದ ರಿಂದಲೂ "भवन्ति नरकाः पापात् पापं दारिद्र्य-संभवम्। दारिद्र्यमप्रदानेन तस्माद्दानपरो भव" ಇಲ್ಲಿ ಉತ್ತರೋತ್ತರವಾದ ಪಾಪ, ದಾರಿದ್ರ್ಯ ಮತ್ತು ಅಪ್ರದಾನ ಗಳು ಪೂರ್ವ ಪೂರ್ವಗಳಾದ ನರಕ, ಪಾಪ ಮತ್ತು ದಾರಿದ್ರ್ಯ ಗಳಿಗೆ ಕಾರಣವಾಗಿ ವರ್ಣಿತವಾಗಿರುವುದರಿಂದಲೂ "ಕಾರಣ ಮಾಲಾ" ಅಲಂಕಾರವು.

**कारणा ಕಾರಣಾ** (स्त्री०) 1. ಯಾತನೆ, ಅತಿಯಾದ ನೋವು. कृ (हिंसायाम्) + णिच् "युच्" (३-३-१०७)। 2. ಪ್ರೇರಣೆ, ಒತ್ತಾಯ.

**कारणिक ಕಾರಣಿಕ** (वि०) ಪರೀಕ್ಷೆಮಾಡುವವನು, ಕಾರಣಗಳಿಂದ ವಿಚಾರ ಮಾಡುವವನು. कारणैः चरति "ठक्" (४-४-८)। "परीक्षकः कारणिकः" अम०।

**कारणोत्तर ಕಾರಣೋತ್ತರ** (न०) ಕಾರಣವನ್ನು ಹೇಳಿದ ನಂತರ ಕೊಡುವ ಉತ್ತರ, ವಾದಿಯು ತನ್ನ ವ್ಯವಹಾರ ವನ್ನು ಸ್ಥಿರಪಡಿಸಲು ಹೇಳಿದ ಕಾರಣವನ್ನು ಅಂಗೀಕರಿಸಿ ಅದನ್ನು ತಳ್ಳಿಹಾಕಲು ಕೊಡುವ ಉತ್ತರ. कारणेन उत्तरम्।

**कारण्डव ಕಾರಂಡವ** (पु०) ಒಂದು ಜಾತಿಯ ಪಕ್ಷಿ, ಹಂಸದ ಒಂದು ಭೇದ. रमते – रमु (क्रीडायाम्) "डः" (उ० १-१११)। ईषत् रण्डः कारण्डः कारण्डं वाति – वा (गतिगन्धनयोः) "कः" (३-२-३)। स्त्रियाम् जाति० "ङीष्" (४-१-६३)। **–वी –ವೀ.**

**कारन्धम ಕಾರಂಧಮ** (पु०) ಕರಂಧಮ ರಾಜನ ಮಗ. ಅವಿಕ್ಷಿತನೆಂಬ ದೊರೆ. करन्धमस्यापत्यम् "अण्" (४-१-११२)। [ಈ ರಾಜನು ಒಮ್ಮೆ ವಿಶಾಲತನಯೆಯ ಸ್ವಯಂವರಕ್ಕೆ (ವಿವಾಹಕ್ಕೆ) ಹೋಗಿದ್ದಾಗ ಅಲ್ಲಿ ಸೇರಿದ್ದ ರಾಜರೆಲ್ಲರೂ ಇವನನ್ನು ಸೆರೆಹಿಡಿದು ಹಾಕಲಾಗಿ ಕರಂಧಮನು ಅವರೆಲ್ಲರನ್ನೂ ಸೋಲಿಸಿ ಅವಿಕ್ಷಿತನನ್ನು ಬಿಡಿಸಿ ಕೊಂಡು ಬಂದನು. ಬಳಿಕ ಅವಿಕ್ಷಿತನು ತಾಯಿತಂದೆಗಳು ಎಷ್ಟು ಹೇಳಿದರೂ ಮದುವೆಯಾಗದೆ ಬ್ರಹ್ಮಚರ್ಯವನ್ನು ಹಿಡಿಯುತ್ತಾನೆ. ಇವನ ತಾಯಿಯು ಯಾರು ಏನು ಕೇಳಿದರೂ ಕೊಡುವುದಾಗಿ ವ್ರತವೊಂದನ್ನು ಕೈಗೊಳ್ಳಲಾಗಿ ಅವಿಕ್ಷಿತನು ಅದನ್ನು ಡಂಗುರ ಹೊಡೆಯಿಸಿ ಸಾರಿಸಿದನು. ಕರಂಧಮನು "ನನಗೆ ಮೊಮ್ಮಗನನ್ನು ಕೊಡಬೇಕು" ಎಂದು ಕೇಳಲಾಗಿ ವಿಧಿಯಿಲ್ಲದೆ ಅವಿಕ್ಷಿತನು ವಿಶಾಲತನಯೆ ಯನ್ನು ಮದುವೆಯಾಗಿ ಮರುತ್ತನೆಂಬ ಮಗನನ್ನು ಪಡೆದನು.]

**कारन्धमिन् ಕಾರಂಧಮಿನ್** (पु०) 1. ಕಂಚುಗಾರ, ಮಿಶ್ರಲೋಹದ ಕೆಲಸ ಮಾಡುವವನು. कर एव कारः, कारं धमति – ध्मा (शब्दाग्निसंयोगयोः) "णिनिः" (३-२-७८)। पृषो०। स्त्रियाम् "ङीप्" (४-१-५)। **–धमिनी –ಧಮಿನೀ.** 2. ಲೋಹಮಿಶ್ರಣದಲ್ಲಿರುವ ಒಂದು ಲೋಹದ ಮೊತ್ತವನ್ನು ನಿರ್ಣಯಿಸುವವನು. "कारन्धमी कांस्यकारे धातुवादरतेऽपि च" मेदि०।

**कारभ ಕಾರಭ** (वि०) ಕರಭಸಂಬಂಧವಾದ, ಒಂಟೆಯ ಸಂಬಂಧವಾದ. करभस्येदम् "अण्" (४-३-१२०)। "अर्शोघ्नं कारभं मूत्रं मानुषं तु विषापहम्" सुश्रुत०।

**कारभू ಕಾರಭೂ** (स्त्री०) ತೆರಿಗೆಯನ್ನು ವಸೂಲುಮಾಡುವ ಜಾಗ. कर एव कारः—तस्य भूः। **–भूमिः –ಭೂಮಿಃ.**

**कारम्भा ಕಾರಂಭಾ** (स्त्री०) ಪ್ರಿಯಂಗುವೃಕ್ಷ, ಪ್ರೇಂಕಣ ಗಿಡ.

**कारयत् ಕಾರಯತ್** (वि०) (ಕೆಲಸ) ಮಾಡಿಸುತ್ತಿರು ವವನು. डु कृञ् (करणे) + णिच् "शतृ" (३-२-१२४)। "प्रकाशमुन्माद्य यदद्य कारयन्मयात्मनस्त्वामनु कम्पते स्म सः" नैष० ९-१३३। स्त्रियाम् "ङीप्" (४-१-६)। **–यन्ती –ಯಂತೀ.**

**कारयितृ ಕಾರಯಿತೃ** (वि०) (ಕೆಲಸ) ಮಾಡಿಸುವವನು. डु कृञ् (करणे) + णिच् "तृच्" (३-१-१३३)। स्त्रियाम् "ङीप्" (४-१-५)। **–यित्री –ಯಿತ್ರೀ.**

**कारयिष्णु ಕಾರಯಿಷ್ಣು** (वि०) ಕೆಲಸ ಮಾಡಿಸುವ ಸ್ವಭಾವದವನು. डु कृञ् (करणे) + णिच् "इष्णुच्" (३-२-१३८)।

**कारव ಕಾರವ** (पु०) ಕಾಗೆ, ವಾಯಸ. केति रवोऽस्य। स्त्रियाम् "ङीष्" (४-१-६३)। **–वी –ವೀ.**

**कारवी ಕಾರವೀ** (स्त्री०) 1. ಕಾಡುಸಬ್ಬಸಿಗೆ. 2. ಕರಿ ಜೀರಿಗೆ. 3. ಓಮ, ವಾದಕ್ಕಿ. 4. ಹಿಂಗಿನ ಮರ. 5. ಹೆಣ್ಣು ಕಾಗೆ. "कारवी मधुरादीप्यत्वक्पत्री कृष्णजीरके" मेदि०।

**कारवेल्ल ಕಾರವೇಲ್ಲ** (पु०) 1. ಹಾಗಲದ ಗಿಡ. (न०) 2. ಹಾಗಲದ ಕಾಯಿ. 3. ಹಾಗಲದ ಹೂವು. कारं वेल्लति—वेल्ल (चलने) "अण्" (३-२-१)। स्वार्थे "कः"। **–वेल्लकः –ವೇಲ್ಲಕಃ.**

**कारस्कर ಕಾರಸ್ಕರ** (पु०) ವಿಷವೃಕ್ಷ. कारं वधं करोति—डु कृञ् (करणे) "टः" (३-२-२०)। "कारस्करो वृक्षः" पा० सू० ६-१-१५६।

**कारा ಕಾರಾ** (स्त्री०) 1. ಬಂಧನ, ಸೆರೆ, ಬೇಡಿ. कीर्यतेऽत्र—कृ (विक्षेपे) "अङ्" दीर्घश्च (३-३-१०४)। 2. ಬಂಧನಾಗಾರ, ಸೆರೆಮನೆ. 3. ಚಿನ್ನದ ಕೆಲಸ ಮಾಡುವ ಹೆಂಗಸು. 4. ದೂತಿ. 5. ವೀಣೆಯ ಬುರುಡೆ, ವೀಣೆಯ ಹೆರಳು. "कारा बन्धनशालायां बन्धे दूत्यां प्रसेवके। स्याद्धेमकारिकायां च" हेम०। 6. ಪೀಡೆ, ಹಿಂಸೆ. "कारा पीडा बन्धशाले" त्रिकाण्ड०।

**कारागार ಕಾರಾಗಾರ** (न०) ಸೆರೆಮನೆ. काराया अगारम्। "किं न मुक्ताः कुतः सन्ति कारागारे मनोभुवः" नैष० १७-७६।

**कारागुप्त ಕಾರಾಗುಪ್ತ** (वि०) ಸೆರೆಹಿಡಿಯಲ್ಪಟ್ಟ, ಸೆರೆಮನೆಯಲ್ಲಿ ಇಡಲ್ಪಟ್ಟ.

**कारागृह ಕಾರಾಗೃಹ** (न०) ಸೆರೆಮನೆ. काराया गृहम्। "कारागृहे निर्जितवासवेन लङ्केश्वरेणोषितमाप्रसादात्" रघु० ६-४०।

**कारावास ಕಾರಾವಾಸ** (पु०) 1. ಸೆರೆಮನೆ. 2. ಸೆರೆ ಮನೆಯ ವಾಸ.

**कारापथ ಕಾರಾಪಥ** (पु०) ಒಂದು ದೇಶ. "शासनाद्रघुनाथस्य चक्रे कारापथेश्वरौ" रघु० १५-९०।

**कारायिका ಕಾರಾಯಿಕಾ** (स्त्री०) ಒಂದು ಜಾತಿಯ ಬಾತು, ಬೆಳ್ಳಕ್ಕಿ.

**कारावर ಕಾರಾವರ** (पु०) ನಿಷಾದನಿಂದ ವೈದೇಹಿಯಲ್ಲಿ ಹುಟ್ಟಿದ ಒಬ್ಬ ಮಿಶ್ರಜಾತಿಯವನು. ಚರ್ಮದ ಕೆಲಸ ಮಾಡುವವನು. "कारावरो निषादात्तु चर्मकारः प्रसूयते" मनु० १०-३६।

**कारि ಕಾರಿ** (स्त्री०) 1. ಕೆಲಸ, ಪ್ರಶ್ನೆ ಮತ್ತು ಉತ್ತರ ಕಥನರೂಪವಾದ ಕಾರ್ಯ. डु कृञ् (करणे) "इञ्" (३-३-११०)। "कां त्वं कारिमकार्षीः सर्वां कारिमहमकार्षम्"। (वि०) 2. ಶಿಲ್ಪಿ. "कारिः स्त्रियाम् क्रियायां स्याद्वाच्यलिङ्गस्तु शिल्पिनि" मेदि०।

**कारिका ಕಾರಿಕಾ** (स्त्री०) 1. ಕೆಲಸ, ಕಾರ್ಯ. डु कृञ् (करणे) "ण्वुल्" (वा० ३-३-१०८)। क्रियायोगे अस्य गतित्वम् तत्र कारिका क्रिया कारिकाकृत्य सि० कौ०। 2. ನಟಿ, ನರ್ತಕಿ. 3. ವಿವರಣ ಶ್ಲೋಕ, ಸ್ವಲ್ಪ ಪದಗಳಿಂದ ಬಹಳ ಅರ್ಥಗಳನ್ನು ತಿಳಿಸುವ ಶ್ಲೋಕ. सांख्यकारिका, कारिकावलिः ಇತ್ಯಾದಿ. 4. ತೀವ್ರವಾದ ವೇದನೆ, ಕ್ರೂರವಾದ ಯಾತನೆ, ಅತಿಯಾದ ನೋವು. 5. ಶಿಲ್ಪ. "क्रूरारिकारी कोरेककारकः कारिकाकरः" माघ० १९-१०४। "कारिका नटयोषिति। कृतौ विवरणश्लोके शिल्पयातनयोरपि। नपुंसकं तु कर्मादौ कारकं कर्तरि त्रिषु" मेदि०। 6. ಬಡ್ಡಿ, ವೃದ್ಧ್ಯಂಶ.

**कारित ಕಾರಿತ** (वि०) 1. ಮಾಡಿಸಲ್ಪಟ್ಟ. डु कृञ् (करणे) + णिच् "क्तः" (३-२-१०२)। 2. ಮಾಡಲ್ಪಟ್ಟ. डु कृञ् + स्वार्थे णिच् "क्तः" (३-२-१०२)। "कारितारिवधा सेनाऽनासेधा वरितारिका" माघ० १९-४४। (स्त्री०) **–ता –ತಾ.** 3. ನ್ಯಾಯವಾದುದಕ್ಕಿಂತ ಹೆಚ್ಚಾದ ಬಡ್ಡಿ, ಉತ್ತಮರ್ಣ (ಸಾಲಕೊಟ್ಟವ)ನು ಬಲಾತ್ಕಾರವಾಗಿ ಹೇರಿದ ಬಡ್ಡಿ. "चक्रवृद्धिः कालवृद्धिः कारिता कायिका च या" मनु० ८-१५३।

**कारी ಕಾರೀ** (स्त्री०) ಹೆಗ್ಗುಳ್ಳದ ಗಿಡ. कृ (हिंसायाम्) "इञ्" (३-३-११०)। "ङीष्" (ग० ४-१-४५)।

**कारीर ಕಾರೀರ** (न०) ಬಿದಿರಿನ ಕಾಂಡ, ಬಿದಿರಿನ ಜಲ್ಲೆ. करीरस्यावयवः काण्डम् "अञ्" (४-३-१४१)।

**कारीरी ಕಾರೀರೀ** (स्त्री०) ಮಳೆಗೋಸ್ಕರ ಮಾಡುವ ಒಂದು ಯಾಗ.

**कारीष ಕಾರೀಷ** (न०) 1. ಒಣಗಿದ ಸಗಣಿಯ ರಾಶಿ. करीषाणां समूहः "अण्" (४-२-३८)। (वि०) 2. ಒಣಗಿದ ಸಗಣಿಯಿಂದ ಉಂಟಾದ,

**कारु ಕಾರು** (पुं०) 1. ದೇವಶಿಲ್ಪಿ, ವಿಶ್ವಕರ್ಮ. 2. ಶಿಲ್ಪಿ, ವಾಸ್ತುಶಿಲ್ಪಿ, ಶಿಲ್ಪಶಾಸ್ತ್ರಜ್ಞ. करोति—डु कृञ् (करणे) "उण्" (उ० १-१)। "इति स्म सा कारुवरेण लेखितं नलस्य च स्वस्य च सख्यमीक्षते" नैष० १-३८। 3. ಕವಿ, ಹೊಗಳುವವನು, ಸ್ತೋತ್ರ ಮಾಡುವವನು. 4. ಇಂದ್ರ. "कारुर्जम्भरिपुर्जिष्णुः" वैज०। 5. ವ್ರಾತ್ಯನಾದ ವೈಶ್ಯನಿಂದ ಅವಿವಾಹಿತ ವೈಶ್ಯ ಹೆಂಗಸಿನಲ್ಲಿ ಹುಟ್ಟಿದವನು. 6. ಬಡಗಿ, ಮರಗೆಲಸದವನು. (न०) 7. ಕಾರ್ಯ, ಕೆಲಸ. 8. ಶಿಲ್ಪ, ಕೈಗಾರಿಕೆ. (वि०) 9. ಕೈಕೆಲಸದವನು, ಚಿತ್ರಕಾರ್ಯ ಮಾಲಾರಚನೆ ಮುಂತಾದುವನ್ನು ಮಾಡುವವನು. "नित्यं शुद्धः कारुहस्तः पण्यं यच्च प्रसारितम्" मनु० ५-१२९। 10. ಸೂಪಕಾರ, ಅಡಿಗೆಯವನು. "कर्मोपकरणाः शूद्राः कारवः शिल्पिनस्तथा" मनु० १०-१२०। 11. ಮಾಡುವವನು. "राघवस्य ततः कार्यं कारुर्वानरपुङ्गवः" भट्टि ० ७-२८। "कारुस्तु कारके शिल्पे विश्वकर्मणि शिल्पिनि" हेम०।

**कारुक ಕಾರುಕ** (पुं०) 1. ಶಿಲ್ಪಿ, ಶಿಲ್ಪಶಾಸ್ತ್ರವನ್ನು ತಿಳಿದವನು. कारु स्वार्थे "कः"। 2. ಬಡಗಿ, ಮರಗೆಲಸದವನು. 3. ಕೈಕೆಲಸದವನು, ಚಿತ್ರಕಾರ. 4. ಕವಿ, ಹೊಗಳುವವನು. ಸ್ತೋತ್ರಮಾಡುವವನು. 5. ಸೂಪಕಾರ, ಅಡಿಗೆಯವನು. "न साक्षी नृपतिः कार्यो न कारुककुशीलवौ" मनु० ८-६५।

**कारुचौर ಕಾರುಚೌರ** (पुं०) ಗೋಡೆಯಲ್ಲಿ ಕನ್ನ ಕೊರೆದು ಕದಿಯುವವನು. कारुणा शिल्पेन चौरः।

**कारुज ಕಾರುಜ** (पुं०) 1. ಗಜಶಿಶು, ಆನೆಯ ಮರಿ. 2. ಸ್ವರ್ಗ. "कारुजः कलभे नाके" वैज०। 3. ವಲ್ಮೀಕ, ಹುತ್ತ. 4. ಫೇನ, ನೊರೆ. 5. ನಾಗಕೇಸರವೃಕ್ಷ, ನಾಗಸಂಪಿಗೆಮರ. 6. ಮೈಯಲ್ಲಿ ತಾನಾಗಿ ಹುಟ್ಟುವ ಎಳ್ಳಿನ ಆಕಾರದ ಕಪ್ಪು ಮಚ್ಚೆ, ಸಂಗಾತಿ. 7. ಗೈರಿಕ ಧಾತು. 8. ಶಿಲ್ಪಿಯ ಕುಶಲಕಾರ್ಯ, ಶಿಲ್ಪಿಯು ತಯಾರಿಸಿದ ಯಾವುದಾದರೊಂದು ವಸ್ತು. "कारुजः कलभे फेने वल्मीके नागकेसरे। गैरिके शिल्पिनां चित्रे स्वयंजाततिलेऽपि च" हेम०।

**कारुण ಕಾರುಣ** (वि०) 1. ಅನುಕಂಪಾರ್ಹ, ದಯೆತೋರಿಸಲು ಯೋಗ್ಯನಾದವನು. "दयालुः स्यात् कारुणिकोऽनुकम्प्यः कारुणः समौ" वैज०। 2. ಸ್ವಲ್ಪ ಕೆಂಪಾದ.

**कारुणिक ಕಾರುಣಿಕ** (वि०) ದಯಾಳು, ದಯೆತೋರಿಸುವವನು, ಕನಿಕರವುಳ್ಳವನು. करुणा शीलमस्य "ठक्" (४-४-६१)। "सम्यक्कारुणिकस्येदं वत्स ते विचिकित्सितम्" भाग० २-५-९।

**कारुण्डिका ಕಾರುಂಡಿಕಾ** (स्त्री०) ಜಲೌಕೆ, ಜಿಗಣೆ.

**कारुण्य ಕಾರುಣ್ಯ** (न०) ಕರುಣೆ, ದಯೆ, ಕನಿಕರ. करुणस्य दयालोः भावः "ष्यञ्" (५-१-१२४)। ಇತರರ ಕಷ್ಟವನ್ನು ಪರಿಹರಿಸುವ ಇಚ್ಛೆ, ಇತರರ ಅನಿಷ್ಟವನ್ನು ನಿವಾರಿಸುವ ಇಚ್ಛೆ, ಸ್ವಾರ್ಥವಿಲ್ಲದೆ ಇತರರ ದುಃಖವನ್ನು ಹೋಗಲಾಡಿಸುವ ಇಚ್ಛೆ, ಇತರರ ದುಃಖವನ್ನು ಕಂಡು ಮರುಕಗೊಳ್ಳುವುದು. करुणा स्वार्थे "ष्यञ्" वा। "कारुण्यं निरवधि यत्तव प्रसिद्धं शीतांशोः सहजमिवार्तिहारि शैत्यम्" चं० रा०। "कारुण्यं संविभागश्च यस्य भृत्येषु सर्वदा। संभवेत् स महीपालस्त्रैलोक्यस्यापि रक्षणे"।

**कारुविन्द ಕಾರುವಿಂದ** (पुं०) ಬ್ರಾಹ್ಮಣನಿಂದ ವೈದೇಹಕಿಯಲ್ಲಿ ಹುಟ್ಟಿದ ಮಗ. (ಬ್ರಾಹ್ಮಣ ಹೆಂಗಸಿನಲ್ಲಿ ವೈಶ್ಯನಿಗೆ ಹುಟ್ಟಿದವಳು ವೈದೇಹಕಿ.) "वैश्याद्वैदेहकं विप्रा क्षत्रकन्या तु मागधम्" वैज०। "वैदेहकी कारुविन्दम्" वैज०।

**कारूष ಕಾರೂಷ** (पुं०) 1. ಕರೂಷ ದೇಶದ ರಾಜನಾದ ದಂತವಕ್ತ್ರ. करूषाणां राजा "अञ्" (४-१-१६६)। (पुं० ब० व०) 2. ಕರೂಷದೇಶದ ಜನರು.

**कारेणव ಕಾರೇಣವ** (वि०) ಆನೆಯ ಸಂಬಂಧವಾದ, ಆನೆಯಿಂದ ಕರೆಯಲ್ಪಟ್ಟ ಹಾಲು ಮುಂತಾದುದು. करेणोरिदम् "अण्" (४-३-१२०)।

**कारोत्तर ಕಾರೋತ್ತರ** (पुं०) 1. ಹೆಂಡದ ಮೇಲಿನ ಕೆನೆ. कारेण गलनक्रियया उत्तरति—उद्+तॄ (प्लवनतरणयोः) "अच्" (३-१-१३४)। "कारोत्तरः सुरामण्डः" अम०। 2. ಕೂಪ, ಬಾವಿ. कारेण उत्तीर्यते — उद् + तॄ कर्म० "अप्" (३-३-५८)। 3. ಹೆಂಡವನ್ನು ಶುದ್ಧಿ ಮಾಡುವ ಜಲ್ಲಡಿ, ಒಂದರಿ.

**कार्कन्धव ಕಾರ್ಕಂಧವ** (वि०) ಎಲಚಿಮರದ ಸಂಬಂಧವಾದ, ಬೋರೆ ಗಿಡದಿಂದ ಉಂಟಾದ. कर्कन्धोरिदम् "अण्" (४-३-१२०)।

**कार्कलासेय ಕಾರ್ಕಲಾಸೇಯ** (पुं०) ಕೃಕಲಾಸದ ಅಪತ್ಯ, ಓತಿಕೇತದ ಮರಿ. कृकलासस्य अपत्यम् "ढक्" (४-१-१२३)।

**कार्कवाकव ಕಾರ್ಕವಾಕವ** (वि०) ಕೃಕವಾಕು ಸಂಬಂಧವಾದ, ಕೋಳಿಯ ಸಂಬಂಧವಾದ. कृकवाकोरिदम् "अण्" (४-३-१२०)।

**कार्कश्य ಕಾರ್ಕಶ್ಯ** (नं०) 1. ಕಠೋರವಾಗಿರುವಿಕೆ, ಕಠಿನವಾಗಿರುವಿಕೆ. कर्कशस्य भावः "ष्यञ्" (५-१-१२४)। "कान्तारभाजि मयि केकयराजपुत्र्याः कार्कश्यकन्दलितया दलितस्य वाचा" चं० रा०। 2. ಒರಟಾಗಿರುವಿಕೆ. 3. ದೃಢವಾಗಿರುವಿಕೆ, ಗಟ್ಟಿಯಾಗಿರುವಿಕೆ. "आश्लेषलोलुपवधूस्तनकार्कश्यसाक्षिणीम्" माघ० २-१७।

**कार्कीक ಕಾರ್ಕೀಕ** (वि०) ಬಿಳಿಯ ಕುದುರೆಯಂತಿರುವ, ಬಿಳಿಯ ಕುದುರೆಯನ್ನು ಹೋಲುವ. कर्कः शुक्लोऽश्वः स इव "ईकक्" (५-३-११०)।

**कार्ण ಕಾರ್ಣ** (पु०) 1. ಕರ್ಣನ ಮಗ ವೃಷಕೇತು. कर्णस्य अपत्यम् "अण्" (४-१-११२)। (नं०) 2. ಹತ್ತುಕಡಕು, ಓಲೆ, ತಾಟಂಕ. (वि०) 3. ಕಿವಿಯ ಸಂಬಂಧವಾದ (ಗುಗ್ಗೆ ಮೊದಲಾದುದು). कर्णस्येदम् "अण्" (४-३-१२०)।

**कार्त ಕಾರ್ತ** (पु०) 1. ಕೃತ್ ಪ್ರತ್ಯಯಗಳ ವ್ಯಾಖ್ಯಾನ ಗ್ರಂಥ, ಕೃತ್ ಪ್ರತ್ಯಯಗಳ ಅರ್ಥ ವಿವರಿಸುವ ಗ್ರಂಥ. कृतां कृत् प्रत्ययानां व्याख्यानो ग्रन्थः "अण्" (४-३-६६)। (नं०) 2. ಕೃತಯುಗ. कृतमेव स्वार्थे "अण्" (५-४-३८) (वि०) 3. ಕೃತಯುಗಸಂಬಂಧವಾದ. कृतस्येदम् "अण्" (४-३-१२०)।

**कार्तयुग ಕಾರ್ತಯುಗ** (वि०) ಕೃತಯುಗ ಸಂಬಂಧವಾದ. कृतयुगस्येदम् "अण्" (४-३-१२०)। "त्रेतायुगप्रवर्तितकार्तयुगवृत्तान्त" रघु० ग०।

**कार्तवीर्य ಕಾರ್ತವೀರ್ಯ** (पु०) ಕೃತವೀರ್ಯನ ಮಗ, ಕಾರ್ತವೀರ್ಯಾರ್ಜುನ, ಹೈಹಯದೇಶದ ದೊರೆ. कृतवीर्यस्य अपत्यम् "अण्" (४-१-११२)। ಕಾರ್ತವೀರ್ಯಾರ್ಜುನನು 85,000 ವರ್ಷಗಳ ಕಾಲ ಧರ್ಮದಿಂದ ರಾಜ್ಯವಾಳಿದನು. ಇವನು ರಾವಣನ ಸಮಕಾಲಿಕನು ಮತ್ತು ಬಹಳ ಪರಾಕ್ರಮಿ. ಇವನಿಗೆ ಸಹಸ್ರ ತೋಳುಗಳಿದ್ದುವು. ಇವನ ಮಹಿಮೆಯೆಲ್ಲವೂ ದತ್ತಾತ್ರೇಯನ ವರಪ್ರಸಾದಲಬ್ಧವಾದುವು. [ವಿವರಕ್ಕೆ "अर्जुन" ಪದದಲ್ಲಿ ನೋಡಿ.] "अर्जुनः कृतवीर्यस्य सप्तद्वीपेश्वरोऽभवत्। दत्तात्रेयाद्धरेरंशात् प्राप्तयोगमहागुणः। न नूनं कार्तवीर्यस्य गतिं यास्यन्ति पार्थिवाः। यज्ञदानतपोयोगश्रुतवीर्यजयादिभिः" भाग० ९-२३। "अनन्यसाधारणराजशब्दो बभूव योगी किल कार्तवीर्यः" रघु० ६-३८।

**कार्तस्वर ಕಾರ್ತಸ್ವರ** (नं०) 1. ಸುವರ್ಣ, ಚಿನ್ನ. कृतस्वरे आकरविशेषे भवम् "अण्" (४-३-५३)। "स तप्तकार्तस्वरभास्वराम्बरः कठोरताराधिपलाञ्छनच्छविः" माघ० १-२०। "जलदास्तटित्तुलितकान्तकार्तस्वराः" माघ० ४-२४। 2. ದತ್ತೂರಿ ಕಾಯಿ.

**कार्तस्वरभूधर ಕಾರ್ತಸ್ವರಭೂಧರ** (पु०) ಮೇರು ಪರ್ವತ. "अशोभि कार्तस्वरभूधरस्य" नैष० १०-६७।

**कार्तान्तिक ಕಾರ್ತಾಂತಿಕ** (पु०) ಮೌಹೂರ್ತಿಕ, ಜೋಯಿಸ, ಭವಿಷ್ಯವನ್ನು ತಿಳಿದು ಹೇಳುವವನು. कृतान्तं वेत्ति "ठक्" (४-२-६०)।

**कार्तिक ಕಾರ್ತಿಕ** (पु०) 1. ಕಾರ್ತಿಕಮಾಸ, ಕೃತ್ತಿಕಾ ನಕ್ಷತ್ರದಿಂದ ಕೂಡಿದ ಹುಣ್ಣಿಮೆಯ ಮಾಸ. कृत्तिकानक्षत्रेण युक्ता पौर्णमासी—कृत्तिका "अण्" (४-२-३)। "ङीप्" (४-१-१५)। कार्तिकी—सास्मिन् मासे "अण्" (४-२-२१)। "नक्षत्रनाम्ना मासास्तु ज्ञेयाः पर्वान्तयोगतः" सू० सि० १४-१५। ಒಂದು ಚಾಂದ್ರಮಾಸದ ಅಮಾವಾಸ್ಯೆಯೊಳಗಿನ ಪೂರ್ಣಿಮೆಯ ದಿನ ಬರುವ ಚಂದ್ರ ನಕ್ಷತ್ರದ ಹೆಸರಿನಿಂದ ಆ ತಿಂಗಳ ಹೆಸರಾಗುವುದು. ಚಿತ್ತಾ ಸಂಬಂಧದಿಂದ ಚೈತ್ರಮಾಸ, ವಿಶಾಖಾಸಂಬಂಧದಿಂದ ವೈಶಾಖಮಾಸ ಇತ್ಯಾದಿ. ಪರ್ವಾಂತದಲ್ಲಿ (ಹುಣ್ಣಿಮೆಯ ಕೊನೆಯಲ್ಲಿ) ಆಯಾ ನಕ್ಷತ್ರಸಂಬಂಧವಿಲ್ಲದಿದ್ದರೂ ಕಾರ್ತಿಕ್ಯಾದಿಹುಣ್ಣಿಮೆಗೆ ಕೃತ್ತಿಕಾನಕ್ಷತ್ರಮೊದಲುಗೊಂಡು ಎರಡೆರಡು ನಕ್ಷತ್ರಗಳ ಸಂಬಂಧದಿಂದ ಕಾರ್ತಿಕಾದಿಮಾಸಗಳ ವ್ಯವಹಾರವು. ಕಾರ್ತಿಕಮಾಸಕ್ಕೆ ಅಂತ್ಯೋಪಾಂತ್ಯ ಮತ್ತು ಪಂಚಮಮಾಸ (ಆಶ್ವಯುಜ, ಭಾದ್ರಪದ ಮತ್ತು ಫಾಲ್ಗುನ) ಗಳಿಗೆ ಮೂರು ಮೂರು ನಕ್ಷತ್ರಗಳ ಸಂಬಂಧವಿರುವುದು.

| ನಕ್ಷತ್ರಗಳು | | ಮಾಸಗಳು |
|---|---|---|
| (1) ಕೃತ್ತಿಕಾ-ರೋಹಿಣೀ | ಸಂಬಂಧದಿಂದ | ಕಾರ್ತಿಕ. |
| (2) ಮೃಗಶೀರ್ಷ-ಆರಿದ್ರಾ | ,, | ಮಾರ್ಗಶೀರ್ಷ. |
| (3) ಪುನರ್ವಸು-ಪುಷ್ಯ | ,, | ಪೌಷ. |
| (4) ಆಶ್ಲೇಷಾ-ಮಖಾ | ,, | ಮಾಘ. |
| (5) ಪೂ.ಫ-ಉ.ಫ-ಹಸ್ತ | ,, | ಫಾಲ್ಗುನ. |
| (6) ಚಿತ್ತಾ-ಸ್ವಾತೀ | ,, | ಚೈತ್ರ. |
| (7) ವಿಶಾಖಾ-ಅನೂರಾಧಾ | ,, | ವೈಶಾಖ. |
| (8) ಜ್ಯೇಷ್ಠಾ-ಮೂಲಾ | ,, | ಜ್ಯೇಷ್ಠ. |
| (9) ಪೂರ್ವಾಷಾಢಾ-ಉತ್ತರಾಷಾಢಾ | ,, | ಆಷಾಢ. |
| (10) ಶ್ರವಣ-ಧನಿಷ್ಠಾ | ,, | ಶ್ರಾವಣ. |
| (11) ಶತಭಿಷ-ಪೂರ್ವಾಭಾದ್ರಾ-ಉತ್ತರಾಭಾದ್ರಾ | ,, | ಭಾದ್ರಪದ. |
| (12) ರೇವತೀ-ಅಶ್ವಿನೀ-ಭರಣೀ | ,, | ಆಶ್ವಯುಜ. |

"कार्तिक्यादिषु संयोगे कृत्तिकादि द्वयंद्वयम्। अन्त्योपान्त्यौ पञ्चमश्च त्रिधा मासत्रयं स्मृतम्" सू० सि० १४-१६। 2. ತುಲಾರಾಶಿಯಲ್ಲಿ ಸೂರ್ಯನಿರುವ ಒಂದು ಸೌರಮಾಸ. ತುಲಾಮಾಸ. 3. ಕೃತ್ತಿಕಾನಕ್ಷತ್ರದಿಂದ ಕೂಡಿದ ಪೌರ್ಣಮಾಸಿಯುಳ್ಳ ಅರ್ಧಮಾಸ, ಒಂದು ಪಕ್ಷ. 4. ಸ್ಕಂದ, ಷಣ್ಮುಖ. कृत्तिकाणामयं पोष्यत्वेन "अण्" (४-३-१२०)। ಕೃತ್ತಿಕಾನಕ್ಷತ್ರಗಳಿಂದ ಪೋಷಿಸಲ್ಪಟ್ಟದ್ದರಿಂದ ಈ ಹೆಸರು. [ವಿವರಕ್ಕೆ "कार्तिकेय" ಪದದಲ್ಲಿ ನೋಡಿ]. (स्त्री०) **–की –ಕೀ.** 5. ಕಾರ್ತಿಕಮಾಸದ ಹುಣ್ಣಿಮೆ, ಕೃತ್ತಿಕಾನಕ್ಷತ್ರದಿಂದ ಕೂಡಿದ ಹುಣ್ಣಿಮೆ. कृत्तिकानक्षत्रेण युक्ता पौर्णमासी "अण्" (४-२-३)। "ङीप्" (४-१-१५)।

**कार्तिकिक ಕಾರ್ತಿಕಿಕ** (पुं०) 1. ಕಾರ್ತಿಕಮಾಸ, ಕೃತ್ತಿಕಾನಕ್ಷತ್ರದಿಂದ ಕೂಡಿದ ಹುಣ್ಣಿಮೆಯುಳ್ಳ ತಿಂಗಳು. कार्तिकी पौर्णमासी अस्मिन् मासे "ठक्" (४-२-२३)। 2. ಬೃಹಸ್ಪತಿಯ ಒಂದು ವರ್ಷ.

**कार्तिकी ಕಾರ್ತಿಕೀ** (स्त्री०) ಕಾರ್ತಿಕಮಾಸದ ಹುಣ್ಣಿಮೆ, ಕೃತ್ತಿಕಾನಕ್ಷತ್ರದಿಂದ ಕೂಡಿದ ಹುಣ್ಣಿಮೆ. कृत्तिकानक्षत्रेण युक्ता पौर्णमासी "अण्" (४-२-३)। "ङीप्" (४-१-१५)।

**कार्तिकेय ಕಾರ್ತಿಕೇಯ** (पुं०) ಷಣ್ಮುಖ, ಸ್ಕಂದ. कृत्तिकानामपत्यम् "ढक्" (४-१-१२०)। [ತಾರಕನೆಂಬ ಅಸುರನೊಬ್ಬನು ದೇವತೆಗಳನ್ನು ಬಹಳವಾಗಿ ಪೀಡಿಸುತ್ತಾ ಲೋಕಕಂಟಕನಾಗಿದ್ದನು. ದೇವತೆಗಳು ಅವನನ್ನು ಜಯಿಸಲಾರದೆ ತಮಗೆ ತಕ್ಕ ಸೇನಾಪತಿಯೊಬ್ಬನನ್ನು ಸೃಷ್ಟಿಸಬೇಕೆಂದು ಬ್ರಹ್ಮನಲ್ಲಿ ಮೊರೆಯಿಟ್ಟರು. ತಾನೇ ಅವನಿಗೆ ವರವನ್ನು ಕೊಟ್ಟು ಅವನ ಸಂಹಾರಕ್ಕೆ ಯತ್ನಿಸುವುದು ಸರಿಯಲ್ಲವೆಂದೂ ಪರಮೇಶ್ವರನು ಮಾತ್ರ ಅಂತಹ ಸೇನಾನಿಯೊಬ್ಬನನ್ನು ಒದಗಿಸಿಕೊಡಬಲ್ಲನೆಂದೂ ಸತಿಯ ವಿಯೋಗದಿಂದ ಧ್ಯಾನಾಸಕ್ತನಾಗಿರುವ ಪರಮೇಶ್ವರನು ಪಾರ್ವತಿಯನ್ನು ಮದುವೆಯಾಗುವಂತೆ ದೇವತೆಗಳು ಯತ್ನಿಸಿದರೆ ಸರಿಯಾದ ಸೇನಾಪತಿಯೊಬ್ಬನು ಜನಿಸುವನೆಂದೂ ಹೇಳಿ ಬ್ರಹ್ಮನು ಅಂತರ್ಧಾನ ಹೊಂದಿದನು. ಬ್ರಹ್ಮನ ಮಾತಿನಂತೆ ದೇವತೆಗಳು ಮನ್ಮಥನ ಸಾಹಾಯ್ಯದಿಂದ ಪಾರ್ವತೀಪರಮೇಶ್ವರರಲ್ಲಿ ಪರಸ್ಪರ ಅನುರಾಗ ಹುಟ್ಟಿಸಲು ಯತ್ನಿಸಿದರು. ಆದರೆ ಅದು ವಿಫಲವಾಗಿ ಕೊನೆಗೆ ಇವರೀರ್ವರ ಪರಸ್ಪರತಪಃಫಲವಾಗಿ ಮದುವೆಯಾಗಿ ಷಣ್ಮುಖನೆಂಬ ಕುಮಾರನು ಜನಿಸಿ ಯುದ್ಧದಲ್ಲಿ ಆ ಕುಮಾರನು ತಾರಕಾಸುರನನ್ನು ಸಂಹರಿಸಿದನು. ಪರಮೇಶ್ವರನ ವೀರ್ಯವು ಮೊದಲು ಅಗ್ನಿಯಿಂದ ವಹಿಸಲ್ಪಟ್ಟು ಅಗ್ನಿಯು ಅದನ್ನು ಗಂಗೆಯಲ್ಲಿ ಬಿಟ್ಟನು. ಗಂಗೆಯೂ ಅದರ ತೇಜಸ್ಸನ್ನು ತಡೆಯಲಾರದೆ ಶರವಣವೊಂದರಲ್ಲಿ ಬಿಟ್ಟಳು. ಅದು ಕ್ರಮೇಣ ಶಿಶುವಾಗಿ ಬೆಳೆಯಲಾರಂಭಿಸಿದಾಗ ಅದಕ್ಕೆ ಸ್ತನ್ಯಪಾನಕ್ಕಾಗಿ ದೇವತೆಗಳು ಕೃತ್ತಿಕಾ ದೇವತೆಗಳನ್ನು ಕಳುಹಿಸಿಕೊಟ್ಟರು. ಇದರಿಂದ "**ಕಾರ್ತಿಕೇಯ**"ನೆಂದೂ ವೀರ್ಯವು ಸ್ಕನ್ನವಾದುದರಿಂದ "**ಸ್ಕಂದ**"ನೆಂದೂ ಆರುಮಂದಿ ಸ್ತನ್ಯಪಾನ ಮಾಡಿಸಿದುದರಿಂದ "**ಷಾಣ್ಮಾತುರ**"ನೆಂದೂ ಮುಂತಾಗಿ ಈ ಶಿಶುವಿಗೆ ಹೆಸರಾಯಿತು.]

**कार्त्स्न्य ಕಾರ್ತ್ಸ್ನ್ಯ** (न०) ಸಾಕಲ್ಯ, ಸಂಪೂರ್ಣತೆ, ಒಟ್ಟು. कृत्स्नस्य भावः "ष्यञ्" (५-१-१२४)। "कार्त्स्न्येन निर्वर्णयितुं च रूपमिच्छन्ति तत्पूर्वसमागतानाम्"।

**कार्पट ಕಾರ್ಪಟ** (पुं०) 1. ಛಿಂದಿಬಟ್ಟೆ, ಹರಕುಬಟ್ಟೆ. कर्पट एव स्वार्थे "अण्"। 2. ಜತು, ಅರಗು. (वि०) 3. ಛಿಂದಿಬಟ್ಟೆಯನ್ನು ಉಟ್ಟಿರುವ ಭಿಕ್ಷುಕ. 4. ಕಾರ್ಯಾರ್ಥಿ, ಅರ್ಜಿದಾರ, ಉಮೇದುವಾರ. "कार्पटो जतुकार्यिणोः" मेदि०।

**कार्पटिक ಕಾರ್ಪಟಿಕ** (वि०) 1. ಯಾತ್ರಾರ್ಥಿ, ತೀರ್ಥಯಾತ್ರೆ ಮಾಡುವವನು. कर्पटेन चरति "ठक्" (४-४-८)। "विश्रान्तकार्पटिकप्रस्फुटितचरणधूलिधूसरकिसलयलाञ्छितोपकण्ठैः" काद०। 2. ಮರ್ಮವನ್ನು ಅರಿತವನು. "कार्पटिकः स मर्मवित्" त्रिकाण्ड०। 3. ವಂಚಕ, ಮೋಸಗಾರ. 4. ಯಾತ್ರಾರ್ಥಿಗಳ ಗುಂಪು.

**कार्पण्य ಕಾರ್ಪಣ್ಯ** (न०) 1. ದಾರಿದ್ರ್ಯ, ಬಡತನ, ಕಷ್ಟದಶೆ. 2. ಜಿಪುಣತನ, ಲೋಭಿತನ. कृपणस्य भावः। "ष्यञ्" (५-१-१२४)। 3. ತ್ಯಾಗಬುದ್ಧಿಯಿಲ್ಲದಿರುವಿಕೆ. 4. ಕರ್ತವ್ಯಜ್ಞಾನವಿಲ್ಲದೆ ಕಷ್ಟದ ನಿವೃತ್ತ್ಯುಪಾಯವನ್ನು ಅರಿಯದಿರುವಿಕೆ, ದೀನತೆ. "कार्पण्यदोषोपहतस्वभावः पृच्छामि त्वां धर्मसंमूढचेताः" गीता २-७।

**कार्पास ಕಾರ್ಪಾಸ** (न०) 1. ಹತ್ತಿ. 2. ಹತ್ತಿಯಿಂದ ತಯಾರಿಸಲ್ಪಟ್ಟ ಬಟ್ಟೆ. 3. ಕಾಗದ. कार्पास्याः अवयवः विकारो वा "अण्" (४-३-१३६)। "कार्पासकृतकूर्पासशतैरपि न शाम्यति। शीतं शातोदरीपीनवक्षोजालिङ्गनं विना"। (वि०) 4. ಹತ್ತಿಯ ಸಂಬಂಧವಾದ, ಹತ್ತಿಯ ದಾರದಿಂದ ತಯಾರಾದ.

**कार्पासक ಕಾರ್ಪಾಸಕ** (पुं०) ಹತ್ತಿಯ ಬಟ್ಟೆ. कार्पास एव — स्वार्थे "कः"।

**कार्पासतन्तु ಕಾರ್ಪಾಸತಂತು** (पु०) ಹತ್ತಿಯದಾರ, ಹತ್ತಿಯನೂಲು. कार्पासस्य तन्तुः।

**कार्पासतान्तव ಕಾರ್ಪಾಸತಾಂತವ** (वि०) ಹತ್ತಿಯ ದಾರದಿಂದ ನಿರ್ಮಿತವಾದ, ಹತ್ತಿಯ ನೂಲಿನ ಸಂಬಂಧ ವಾದ. कार्पासतन्तोरिदम् "अण्" (४-३-१२०)। "कार्पासतान्तवं क्रौञ्चो गोधा गां वाग्गुदो गुडम्" मनु० १२-६४।

**कार्पाससौत्रिक ಕಾರ್ಪಾಸಸೌತ್ರಿಕ** (वि०) ಹತ್ತಿಯ ದಾರದಿಂದ ನಿರ್ಮಿತವಾದ ಬಟ್ಟೆ ಮುಂತಾದುದು. कार्पाससूत्रेण निर्वृत्तः "ठक्" (७-३-२०)। "शते दशपला वृद्धिरौर्णे कार्पाससौत्रिके" याज्ञ० २-१७९।

**कार्पासिक ಕಾರ್ಪಾಸಿಕ** (वि०) ಹತ್ತಿಯ ದಾರದಿಂದ ನಿರ್ಮಿತವಾದ ಬಟ್ಟೆ ಮೊದಲಾದುದು. कापसिन निर्वृत्तः "ठञ्" (५-१-७९)। "शतं दासीसहस्राणां कार्पासिकनिवासिनाम्" भा० सभा० ५१-८।

**कार्पासिका ಕಾರ್ಪಾಸಿಕಾ** (स्त्री०) ಹತ್ತಿಯ ಗಿಡ. कार्पास्येव — कार्पासी स्वार्थे "कः"।

**कार्पासी ಕಾರ್ಪಾಸೀ** (स्त्री०) ಹತ್ತಿಯ ಗಿಡ.

**कार्म ಕಾರ್ಮ** (वि०) ಫಲವನ್ನು ಅಪೇಕ್ಷಿಸದೆ ಕರ್ಮವನ್ನು ಮಾಡುವ ಸ್ವಭಾವದವನು. कर्म शीलमस्य "णः" (६-४-१७२)। निपा०।

**कार्मण ಕಾರ್ಮಣ** (न०) 1. ಯಕ್ಷಿಣಿ, ಗಾರುಡಿ. 2. ಮಂತ್ರ, ಓಷಧಿ ಮೊದಲಾದುವುಗಳಿಂದ ಮಾಡುವ ವಶೀಕರಣಕಾರ್ಯ, ಮೂಲಿಕೆ ಮೊದಲಾದುವುಗಳಿಂದ ಮಾಡುವ ಸ್ತಂಭನಕಾರ್ಯ, ಮಾಟ, ಶೂನ್ಯ. कर्मैव "अण्" (५-४-३६)। "चाटु चाकृतकसंभ्रममासां कार्मणत्वमगमन् रमणेषु" माघ० १०-३७। 3. ಬಾಯಿ ಮಾತನ್ನು ಕೇಳಿ ಅದರಂತೆ ಮಾಡುವ ಕಾರ್ಯ. वाचिकं श्रुत्वा क्रियमाणं कर्मेत्यर्थः सि० कौ०। (वि०) 4. ಕಾರ್ಯವನ್ನು ಚೆನ್ನಾಗಿ ಮಾಡುವವನು, ಕಾರ್ಯವನ್ನು ಪೂರ್ಣವಾಗಿ ಮಾಡುವವನು, ಕೆಲಸದಲ್ಲಿ ಚತುರನಾದವನು. "कार्मणं मन्त्रतन्त्रादियोजने कर्मठेऽपि च" मेदि०।

**कार्मार ಕಾರ್ಮಾರ** (पु०) 1. ಕಮ್ಮಾರ, ಕಬ್ಬಿಣದ ಕೆಲಸ ಮಾಡುವವನು. कर्मार एव — स्वार्थे "अण्" (५-४-३८)। 2. ಕಮ್ಮಾರನ ಮಗ. कर्मारस्य अपत्यम् "अण्" (४-१-११२)। स्त्रियाम् "ङीप्" (४-१-१५)। –री –ರೀ.

**कार्मारक ಕಾರ್ಮಾರಕ** (वि०) ಕಮ್ಮಾರನಿಂದ ಮಾಡಲ್ಪಟ್ಟ, ಕಬ್ಬಿಣದ ಕೆಲಸದವನಿಂದ ಮಾಡಲ್ಪಟ್ಟ. कमरिण कृतम् "वुञ्" (४-३-११८)।

**कार्मिक ಕಾರ್ಮಿಕ** (वि०) ಚಿತ್ರಕಾರನ ಕುಶಲತೆಯಿಂದ ನಿರ್ಮಿತವಾದ, ಕಸೂತಿ ಮೊದಲಾದ ಚಿತ್ರಕಾರ್ಯದಿಂದ ನಿರ್ಮಿತವಾದ. कर्मणा चित्रकर्मणा निर्वृत्तम् "ठञ्" (४-४-१९)। "कार्मिके रोमबद्धे च त्रिंशद्भागः क्षयो मतः" याज्ञ० २-१८०।

**कार्मिक्य ಕಾರ್ಮಿಕ್ಯ** (न०) ಕುಶಲ ಕಾರ್ಯ ಮಾಡುವಿಕೆ. ಉದ್ಯೋಗಶೀಲತೆ, ಕೈಗಾರಿಕೆ. कार्मिकस्य भावः "यक्" (५-१-१२८)।

**कार्मुक ಕಾರ್ಮುಕ** (पु०) 1. ವಂಶ, ವೇಣು, ಬಿದಿರು. कार्मुकं साध्यत्वेनास्त्यस्य "अच्" (५-२-१२७)। 2. ನೀರು ಹಲಸಿನ ಗಿಡ. 3. ಬಿಳಿಯ ಕಗ್ಗಲಿಮರ. 4. ಅಶೋಕವೃಕ್ಷ. 5. ಕಾಡಿರುವಂತಿಗೆ ಗಿಡ. (न०) 6. ಧನುಸ್ಸು, ಬಿಲ್ಲು. कर्मणे प्रभवति — कर्मन् "उकञ्" (५-१-१०३)। "कार्मुकेणैव गुणिना बाणः सन्धानमेष्यति" माघ० २-९७। 7. ಧನೂರಾಶಿ, ಮೇಷದಿಂದ ಒಂಬತ್ತನೆಯ ರಾಶಿ. "कार्मुकं तु परित्यज्य झषं संक्रमते रविः"। (वि०) 8. ಕರ್ಮಕ್ಷಮನಾದ, ಕಾರ್ಯದಲ್ಲಿ ಸಮರ್ಥನಾದ. "कार्मुकं वंशधनुषोः कर्मशक्ते तु वाच्यवत्" मेदि०। "अथ कार्मुकः। वंशे कार्मुकमिष्वासे कर्मठे" हेम०।

**कार्मुकिन् ಕಾರ್ಮುಕಿನ್** (वि०) ಧನುಸ್ಸನ್ನು ಹೊಂದಿರುವ, ಬಿಲ್ಲನ್ನು ಹಿಡಿದಿರುವ. कार्मुक "इनिः" (५-२-११५)।

**कार्य ಕಾರ್ಯ** (न०) 1. ಕೆಲಸ. क्रियते — डु कृञ् (करणे) कर्म० "ण्यत्" (३-१-१२४)। "गुरुद्वयाय गुरुणोरुभयोरथ कार्ययोः" माघ० २-६। 2. ಆಚರಣೆ, ಅನುಷ್ಠಾನ, ನಡೆಸುವಿಕೆ, ಮಾಡುವಿಕೆ. 3. ಪ್ರಯೋಜನ, ಫಲ. "उपसर्पति कार्यार्थी कृतार्थो नोपसर्पति" हितो०। 4. ಉದ್ದೇಶ, ಗುರಿ. 5. ಉದ್ಯೋಗ, ವೃತ್ತಿ. 6. ಆರೋಗ್ಯ. "भिषक् कर्ताऽथ करणं रसाः दोषास्तु कारणम्। कार्यमारोग्यमेवैकम्" सुश्रुत०। 7. ಹೇತು, ಕಾರಣ. "कार्यं हेतौ प्रयोजने" मेदि०। 8. ಉದ್ಯಮ, ವ್ಯವಸಾಯ. 9. (ವ್ಯಾಕರಣ ಶಾಸ್ತ್ರದಲ್ಲಿ) ವಿಧಿಸಲ್ಪಡುವ ವರ್ಣ ಪ್ರತ್ಯಯ ಮೊದಲಾದುವು. "कार्यमनुभवन् हि कार्यी निमित्ततया नाश्रीयते" परि०। 10. ಕಾರ್ಯ

ವನ್ನು ವಿಧಿಸುವ ಶಾಸ್ತ್ರ. 11. ಜನ್ಮಲಗ್ನದಿಂದ ಹತ್ತನೆಯ ಸ್ಥಾನ. "कार्याधीशः स्वगेहे बुधगुरुकविभिः संयुतो वेक्षितो वा"। 12. ನ್ಯಾಯಸ್ಥಾನದಲ್ಲಿ ಹೂಡುವ ಮೊಕದ್ದಮೆ, ಋಣಾದಿ ವಿವಾದ, ವ್ಯಾಜ್ಯ. "नोत्पादयेत्स्वयं कार्यं राजा नाप्यस्य पूरुषः" मनु० ८-४३। (वि०) 13. ಕರ್ತವ್ಯ, ಅವಶ್ಯವಾಗಿ ಮಾಡಬೇಕಾದ. "कार्यमित्येव यत्कर्म नियतं क्रियतेऽर्जुन। सङ्गं त्यक्त्वा फलं चैव स त्यागः सात्त्विको मतः" गीता १८-९। "तस्माच्छास्त्रं प्रमाणं ते कार्याकार्यव्यवस्थितौ" गीता १६-२४। 14. ಉತ್ಪತ್ತಿಹೊಂದಲು ಯೋಗ್ಯವಾದ, ಉತ್ಪಾದನೆಗೆ ವಿಷಯವಾದ, ಜನ್ಯ. 15. ಮಾಡಲು ಯೋಗ್ಯವಾದ, ಆಚರಿಸಲು ಅರ್ಹವಾದ. 16. ಆಚರಿಸಲ್ಪಡುವ, ಮಾಡಲ್ಪಡುವ.

**कार्यकर ಕಾರ್ಯಕರ** (वि०) ಕಾರ್ಯವನ್ನು ಮಾಡುವ ಸ್ವಭಾವದವನು, ಕೆಲಸದಲ್ಲಿ ಸಮರ್ಥನಾದವನು. कार्यं करोति — डु कृञ् (करणे) "टः" (३-२-२०)।

**कार्यकारण ಕಾರ್ಯಕಾರಣ** (न०) ಒಂದು ಕಾರ್ಯಕ್ಕೆ ನಿರ್ದಿಷ್ಟವಾದ ಒಂದು ಕಾರಣ. कार्यस्य कारणम्।

**कार्यकारणभाव ಕಾರ್ಯಕಾರಣಭಾವ** (पु०) ಒಂದು ಕಾರ್ಯ ಮತ್ತೊಂದು ಕಾರಣವಾಗಿರುವಾಗ ಅವುಗಳಿಗಿರುವ ಪರಸ್ಪರ ಸಂಬಂಧ. ಹೇತುಹೇತುಮದ್ಭಾವ. कार्यकारणयोर्भावः।

**कार्यकारिन् ಕಾರ್ಯಕಾರಿನ್** (वि०) ಕೆಲಸವನ್ನು ಮಾಡುವ ಸ್ವಭಾವದವನು. कार्यं करोति — डु कृञ् (करणे) "णिनिः" (३-२-७८)। स्त्रियाम् "ङीप्" (४-१-५)। **—कारिणी — ಕಾರಿಣೀ.**

**कार्यकाल ಕಾರ್ಯಕಾಲ** (पु०) 1. ಕಾರ್ಯಕಾಲಪಕ್ಷ, ವ್ಯಾಕರಣದಲ್ಲಿ ಉಕ್ತವಾಗಿರುವ (ಯಥೋದ್ದೇಶಪಕ್ಷಕ್ಕೆ ವಿರುದ್ಧವಾದ) ಒಂದು ಪಕ್ಷ. ಈ ಪಕ್ಷದಲ್ಲಿ ಸಂಜ್ಞಾ, ಪರಿಭಾಷಾಸೂತ್ರಗಳು ವಿಧಿಶಾಸ್ತ್ರದೊಡನೆ ಸೇರಿ ವಾಕ್ಯಾರ್ಥ ಬೋಧವನ್ನು ಮಾಡಿಕೊಡುವುವು. **उदा**: "वृद्धिरादैच्" (१-१-१) ಎಂಬ ಸಂಜ್ಞಾಶಾಸ್ತ್ರವು "वृद्धिरेचि" (६-१-८८) ಎಂಬ ವೃದ್ಧಿವಿಧಾಯಕ ಸೂತ್ರದೊಡನೆ ಸೇರಿ ವೃದ್ಧಿಸಂಜ್ಞೆಯನ್ನೂ, ಏಚ್ ಪರಕ ಅಕಾರಕ್ಕೆ ವೃದ್ಧಿಯನ್ನೂ ವಿಧಿಸುವುದು. 2. ಕೆಲಸಕ್ಕೆ ಗೊತ್ತಾದ ಕಾಲ, ಕೆಲಸದ ಸಮಯ. "याचते कार्यकाले यः स किं भृत्यः स किं सुहृत्" हितो० २-३२।

**कार्यकालात्यय ಕಾರ್ಯಕಾಲಾತ್ಯಯ** (पु०) ಕಾರ್ಯದ ವೇಳೆಯ ಅತಿಕ್ರಮ, ಕೆಲಸದ ಸಮಯವು ಮೀರಿ ಹೋಗುವಿಕೆ. कार्यकालस्य अत्ययोऽतिक्रमः। "आपद्युन्मार्गगमने कार्यकालात्ययेषु च। कल्याणवचनं ब्रूयादपृष्टोऽपि हितो नरः" हितो० २-१२४।

**कार्यकुशल ಕಾರ್ಯಕುಶಲ** (वि०) ಕೆಲಸದಲ್ಲಿ ಸಮರ್ಥನಾದವನು, ಕಾರ್ಯದಲ್ಲಿ ಚತುರನಾದವನು. कार्येषु कुशलः।

**कार्यकौशल ಕಾರ್ಯಕೌಶಲ** (न०) ಕೆಲಸ ಮಾಡುವುದರಲ್ಲಿ ಜಾಣತನ, ಕಾರ್ಯದಲ್ಲಿ ನಿಪುಣತೆ, ಸಾಮರ್ಥ್ಯ.

**कार्यक्षम ಕಾರ್ಯಕ್ಷಮ** (वि०) ಕೆಲಸದಲ್ಲಿ ಸಮರ್ಥನಾದ, ಕಾರ್ಯ ಮಾಡುವುದರಲ್ಲಿ ಶಕ್ತನಾದ. कार्येषु क्षमः।

**कार्यगौरव ಕಾರ್ಯಗೌರವ** (न०) 1. ಕಾರ್ಯದ ಗುರುತ್ವ, ಕೆಲಸದ ಮಹತ್ತ್ವ, ಕೆಲಸಕ್ಕಿರುವ ಪ್ರಾಮುಖ್ಯ, —ಪ್ರಾಧಾನ್ಯ. कार्यस्य गौरवम्। 2. ಹೆಚ್ಚು ಕಾರ್ಯವಿರುವಿಕೆ, ಕೆಲಸಗಳು ಬಹಳವಾಗಿರುವುದು.

**कार्यचिन्तक ಕಾರ್ಯಚಿಂತಕ** (वि०) ಕೆಲಸವನ್ನು ಯೋಚಿಸಿ ಮಾಡುವ, ಮಾಡಿದ ಮತ್ತು ಮಾಡಬೇಕಾದ ಕಾರ್ಯವನ್ನು ಕುರಿತು ಯೋಚಿಸುವ, ವಿವೇಕದಿಂದ ಕಾರ್ಯಮಾಡುವ. कार्यं चिन्तयति — चिती (संज्ञाने) "ण्वुल्" (३-१-१३३)। "धर्मज्ञाः शुचयोऽलुब्धाः भवेयुः कार्यचिन्तकाः। कर्तव्यं वचनं तेषां समूहहितवादिनाम्" याज्ञ० २-१९१।

**कार्यचिन्ता ಕಾರ್ಯಚಿಂತಾ** (स्त्री०) ಕೆಲಸ ಮಾಡುವುದರಲ್ಲಿ ವಿವೇಚನೆ, ಕಾರ್ಯದಲ್ಲಿ ಎಚ್ಚರಿಕೆಯಿಂದ ವಿಚಾರ ಮಾಡುವುದು, ಕಾರ್ಯದಲ್ಲಿ ಯುಕ್ತಾಯುಕ್ತಪರಿಜ್ಞಾನ. कार्येषु चिन्ता।

**कार्यच्युत ಕಾರ್ಯಚ್ಯುತ** (वि०) ಕೆಲಸದಿಂದ ತಳ್ಳಲ್ಪಟ್ಟವನು, ಕೆಲಸದಿಂದ ತೆಗೆದುಹಾಕಲ್ಪಟ್ಟವನು. कार्यात् च्युतः।

**कार्यतस् ಕಾರ್ಯತಸ್** (अव्य०) ಕಾರ್ಯದಿಂದ, ಕೆಲಸದ ಮೂಲಕ. कार्य "तसिः" (५-४-४४)। "सखा गरीयान् शत्रुश्च कृत्रिमस्तौ हि कार्यतः" माघ० २-३६।

**कार्यता ಕಾರ್ಯತಾ** (स्त्री०) ಕಾರ್ಯದ ಭಾವ, ಕಾರ್ಯವಾಗಿರುವಿಕೆ. कार्यस्य भावः "तल्" (५-१-११९)। "त्वः"। **कार्यत्वम् ಕಾರ್ಯತ್ವಮ್.**

**कार्यदर्शन ಕಾರ್ಯದರ್ಶನ** (ನಂ) ಕಾರ್ಯವನ್ನು ನೋಡಿಕೊಳ್ಳುವುದು, ಕೆಲಸದ ಮೇಲ್ವಿಚಾರಣೆ. कार्यस्य दर्शनम्। "यदा स्वयं न कुर्यात्तु नृपतिः कार्यदर्शनम्। तदा नियुञ्ज्याद्विद्वांसं ब्राह्मणं कार्यदर्शने" मनु० ८-९।

**कार्यदर्शिन् ಕಾರ್ಯದರ್ಶಿನ್** (ಪುಂ) ಕಾರ್ಯದರ್ಶಿ, ಕೆಲಸವನ್ನು ನೋಡಿಕೊಳ್ಳುವವನು, ಕಾರ್ಯದ ಮೇಲ್ವಿಚಾರಣೆ ಮಾಡುವವನು. कार्यं पश्यति – दृशिर् (प्रेक्षणे) "णिनिः" (३-२-७८)। स्त्रियाम् "ङीप्" (४-१-५)। **–दर्शिनी –ದರ್ಶಿನೀ.**

**कार्यनिर्णय ಕಾರ್ಯನಿರ್ಣಯ** (ಪುಂ) 1. ಕೆಲಸದ ನಿರ್ಧಾರ, ಕಾರ್ಯದ ತೀರ್ಮಾನ. 2. ಕಾರ್ಯದ ಫಲ, ನಿರ್ಣಯದ ಫಲ. निर्णयस्य कार्यम्। पूर्वनिपातः (३-२-३७)। "उभयोः प्रतिभूर्ग्राह्यः समर्थः कार्यनिर्णये" याज्ञ० २-१०।

**कार्यपुट ಕಾರ್ಯಪುಟ** (ವಿಂ) 1. ಪ್ರಯೋಜನವಿಲ್ಲದ ಕೆಲಸವನ್ನು ಮಾಡುವ. 2. ಕೃಪಣ, ಜಿಪುಣ. 3. ಉನ್ಮತ್ತ, ಹುಚ್ಚ. "कार्यपुटोऽनर्थकरे कृपणोन्मत्तयोरपि" हेम०।

**कार्यप्रद्वेष ಕಾರ್ಯಪ್ರದ್ವೇಷ** (ಪುಂ) 1. ಆಲಸ್ಯ, ಸೋಮಾರಿತನ. कार्यं प्रद्विषत्यनेन–प्र+द्विष (अप्रीतौ) कर० "घञ्" (३-३-१२१)। 2. ಕಾರ್ಯದಲ್ಲಿ ದ್ವೇಷ, ಕೆಲಸದಲ್ಲಿ ಆದರವಿಲ್ಲದಿರುವುದು.

**कार्यप्रेष्य ಕಾರ್ಯಪ್ರೇಷ್ಯ** (ಪುಂ) ದೂತ, ಯಾವುದಾದರೊಂದು ಕಾರ್ಯಕ್ಕಾಗಿ ಕಳುಹಿಸಲ್ಪಟ್ಟವನು. (1) निसृष्टार्थः, (2) मितार्थः ಮತ್ತು (3) सन्देशहारकः ಎಂದು ದೂತನು ಮೂರು ಬಗೆ. [ವಿವರಕ್ಕೆ "दूत" ಪದದಲ್ಲಿ ನೋಡಿ.] "निसृष्टार्थो मितार्थश्च तथा सन्देशहारकः। कार्यप्रेष्यस्त्रिधा दूतः" सा० द० ३-४७।

**कार्यवत् ಕಾರ್ಯವತ್** (ವಿಂ) 1. ಕಾರ್ಯದಿಂದ ಕೂಡಿದ, ಕೆಲಸವುಳ್ಳ. कार्यमस्यास्ति "मतुप्" (५-२-९४)। "विधाय वृत्तिं भार्यायाः प्रवसेत् कार्यवान्नरः" मनु० ९-७४। 2. ಯಾವುದಾದರೊಂದು ಉದ್ದೇಶವುಳ್ಳ, ಒಂದು ಗುರಿಯುಳ್ಳ. (अव्य०) 3. ಕೆಲಸದಂತೆ, ಅವಶ್ಯವಾಗಿ ಮಾಡಬೇಕಾದ ಕೆಲಸದ ಹಾಗೆ. "योऽकार्यं कार्यवच्छास्ति स किमन्त्री नृपेच्छया। वरं स्वामिमनो दुःखं तन्नाशो नत्वकार्यतः" हितो० ३-१०३।

**कार्यवत्ता ಕಾರ್ಯವತ್ತಾ** (ಸ್ತ್ರೀಂ) ಕಾರ್ಯದಿಂದ ಕೂಡಿರುವುದು, ಕೆಲಸದಿಂದ ಕೂಡಿರುವಿಕೆ. कार्यवतो भावः "तल्" (५-१-११९)।

**कार्यवश ಕಾರ್ಯವಶ** (ವಿಂ) ಕೆಲಸಕ್ಕೆ ಅಧೀನನಾದ, ಯಾವುದಾದರೊಂದು ಕಾರ್ಯದ ನಿರ್ಬಂಧಕ್ಕೆ ಒಳಪಟ್ಟ.

**कार्यवस्तु ಕಾರ್ಯವಸ್ತು** (ನಂ) ಮಾಡಲ್ಪಡಬೇಕಾದ ವಿಷಯ; ಯಾವುದು ಮಾಡಲ್ಪಡುವುದೋ ಅದು.

**कार्यविद् ಕಾರ್ಯವಿದ್** (ವಿಂ) ಕಾರ್ಯವನ್ನು ತಿಳಿದಿರುವ, ವಿಷಯವನ್ನು ಅರಿತಿರುವ. कार्यं वेत्ति – विद (ज्ञाने) "क्विप्" (३-२-६१)। "जोषं जनः कार्यविदस्तु वस्तु" नैष० ७-१०७।

**कार्यविनिमय ಕಾರ್ಯವಿನಿಮಯ** (ಪುಂ) ಕೆಲಸದ ಬದಲಾವಣೆ, ಪರಸ್ಪರ ಕಾರ್ಯದ ಬದಲಾವಣೆ, ಒಪ್ಪಂದದಂತೆ ಒಬ್ಬನ ಕೆಲಸವನ್ನು ಇನ್ನೊಬ್ಬನು ಮಾಡುವಂತೆ ಬದಲಾಯಿಸಿಕೊಳ್ಳುವುದು. कार्यस्य विनिमयः। "कथं कार्यविनिमयेन मयि व्यवहरत्यनात्मज्ञः" माल० १।

**कार्यविनिर्णय ಕಾರ್ಯವಿನಿರ್ಣಯ** (ಪುಂ) ಕಾರ್ಯದ ನಿಶ್ಚಯ, ಕೆಲಸದ ತೀರ್ಮಾನ. कार्यस्य विनिर्णयः। "धर्मं शाश्वतमाश्रित्य कुर्यात्कार्यविनिर्णयम्" मनु० ८-८।

**कार्यविपत्ति ಕಾರ್ಯವಿಪತ್ತಿ** (ಸ್ತ್ರೀಂ) ಕಾರ್ಯನಾಶ, ಕೆಲಸವು ಕೆಟ್ಟುಹೋಗುವುದು. कार्यस्य विपत्तिः। "न गणस्याग्रतो गच्छेत् सिद्धे कार्ये समं फलम्। यदि कार्यविपत्तिः स्यान्मुखरस्तत्र हन्यते" हितो० १-२९।

**कार्यशेष ಕಾರ್ಯಶೇಷ** (ಪುಂ) ಕಾರ್ಯದ ಉಳಿಕೆ, ಕೆಲಸವು ಬಾಕಿಯಾಗಿರುವುದು. कार्यस्य शेषः।

**कार्यसंसिद्धि ಕಾರ್ಯಸಂಸಿದ್ಧಿ** (ಸ್ತ್ರೀಂ) ಕಾರ್ಯವು ಕೈಗೂಡುವಿಕೆ, ಕೆಲಸವು ಸಫಲವಾಗುವುದು. कार्यस्य संसिद्धिः। "मनसा कार्यसंसिद्धौ त्वराद्विगुणरंहसा" कुमा० २-६३।

**कार्यसाधक ಕಾರ್ಯಸಾಧಕ** (ವಿಂ) ಕೆಲಸವನ್ನು ಸಾಧಿಸುವ, ಕಾರ್ಯವನ್ನು ಕೈಗೂಡಿಸುವ. कार्यस्य साधकः। स्त्रियाम् **–साधिका –ಸಾಧಿಕಾ.** "अल्पानामपि वस्तूनां संहतिः कार्यसाधिका। तृणैर्गुणत्वमापन्नैर्बध्यन्ते मत्तदन्तिनः" हितो० १-३५।

**कार्यसिद्धि ಕಾರ್ಯಸಿದ್ಧಿ** (ಸ್ತ್ರೀಂ) ಕಾರ್ಯವು ಕೈಗೂಡುವಿಕೆ, ಕೆಲಸವು ಸಫಲವಾಗುವುದು. कार्यस्य सिद्धिः। "अस्तित्वं कार्यसिद्धेः स्फुटमथ कथयन् पक्षतेः कम्पभेदैः" नैष० ३-१३२।

**कार्यस्थान ಕಾರ್ಯಸ್ಥಾನ** (ನಂ) 1. ಕೆಲಸ ನಡೆಸುವ ಜಾಗ, ಕಚೇರಿ, ಕಾರ್ಯಾಲಯ (Office). 2. ಜ್ಯೋತಿಷದಲ್ಲಿ (ಜಾತಕ ಕುಂಡಲಿಯಲ್ಲಿ) ಲಗ್ನದಿಂದ ಹತ್ತನೆಯ ಸ್ಥಾನ.

**कार्याधिप ಕಾರ್ಯಾಧಿಪ** (पुं०) 1. ಕೆಲಸದ ಯಜಮಾನ, ಅಧ್ಯಕ್ಷ. 2. (ಜ್ಯೋತಿಷದಲ್ಲಿ) ಕಾರ್ಯಸ್ಥಾನಾಧಿಪತಿ, ಲಗ್ನದಿಂದ ಹತ್ತನೆಯ ಸ್ಥಾನದ ಗ್ರಹ. कार्यस्याधिपः।

**कार्यानुमेय ಕಾರ್ಯಾನುಮೇಯ** (वि०) 1. ಕೆಲಸದಿಂದ ಊಹಿಸಲ್ಪಡುವ. 2. ಕೆಲಸದಿಂದ ಊಹಿಸಲು ಯೋಗ್ಯವಾದ. 3. ಕೆಲಸದಿಂದ ಊಹಿಸಲು ಶಕ್ಯವಾದ. कार्येण अनुमेयः। "कार्यानुमेयाः सर्वत्र परोक्षगुणवृत्तयः। तस्मात् परोक्षवृत्तीनां फलैः कर्मानुभाव्यते" हितो० ४-१०१।

**कार्यान्तर ಕಾರ್ಯಾಂತರ** (न०) 1. ಬೇರೆ ಕೆಲಸ, ಮತ್ತೊಂದು ಕೆಲಸ. अन्यत् कार्यम्। 2. ಕಾರ್ಯದ ಮಧ್ಯಕಾಲ. ಕೆಲಸದ ಮಧ್ಯೆ ವಿರಾಮಕಾಲ. कार्यस्य अन्तरम्।

**कार्यान्तरसचिव ಕಾರ್ಯಾಂತರಸಚಿವ** (पुं०) ಬೇರೆ ಕೆಲಸದ ಸಹಾಯಕ. ರಾಜಕೀಯಕ್ಕಿಂತಲೂ ಭಿನ್ನವಾದ ಕೆಲಸಕ್ಕೆ ಸಹಾಯವಾಗಿರುವವನು. कार्यान्तरे सचिवः सहायः। "सचिवो मन्त्रिचेटयोः" मेदि०। "अयमपरः कार्यान्तरसचिवोऽस्मानुपस्थितः" माल० १।

**कार्याब्धि ಕಾರ್ಯಾಬ್ಧಿ** (पुं०) ಕಾರ್ಯದ ಸಮುದ್ರ, ಸಮುದ್ರದಂತಿರುವ ಅನೇಕ ಕೆಲಸಗಳು. ಸಮುದ್ರದಂತಿರುವ ದೊಡ್ಡ ಕೆಲಸ. कार्याणि अब्धिरिव। "धूर्तः स्त्री वा शिशुर्यस्य मन्त्रिणः स्युर्महीपतेः। अनीतिपवनक्षिप्तः कार्याब्धौ स निमज्जति" हितो० ३-१३१।

**कार्यार्थम् ಕಾರ್ಯಾರ್ಥಮ್** (अव्य०) ಕೆಲಸಕ್ಕಾಗಿ, ಯಾವುದಾದರೊಂದು ಕಾರ್ಯಕ್ಕೋಸ್ಕರ. कार्याय कार्यार्थम्। "दिवा चरेयुः कार्यार्थं चिह्निता राजशासनैः" मनु० १०-५५।

**कार्यार्थिन् ಕಾರ್ಯಾರ್ಥಿನ್** (वि०) 1. ಕೆಲಸವನ್ನು ಅಪೇಕ್ಷಿಸುವವನು. ಕೆಲಸವನ್ನು ಬೇಡುವವನು. कार्यमर्थयते — अर्थ (उपयाचने) "णिनिः" (३-२-७८)। 2. ಉದ್ಯೋಗವನ್ನು ಬೇಡುವವನು. 3. ನ್ಯಾಯಾಲಯದಲ್ಲಿ ಕಾರಣವನ್ನು ಹಿಡಿದು ವಾದಿಸುವವನು. स्त्रियाम् "ङीप्" (४-१-५)। **-अर्थिनी -ಅರ್ಥಿನೀ.**

**कार्यिक ಕಾರ್ಯಿಕ** (वि०) 1. ಕೆಲಸವುಳ್ಳವನು. 2. ಉದ್ಯೋಗವುಳ್ಳವನು. कार्यमस्यास्ति "ठन्" (५-२-११५)। 3. ನ್ಯಾಯವಾದಿ, ನ್ಯಾಯಾಲಯದಲ್ಲಿ ವ್ಯಾಜ್ಯದ ಕಾರಣವನ್ನು ಹಿಡಿದು ವಾದಿಸುವವನು. "ये कार्यिकेभ्योऽर्थमेव गृह्णीयुः पापचेतसः। तेषां सर्वस्वमादाय राजा कुर्यात्प्रवासनम्" मनु० ७-१२४। स्त्रियाम् **कार्यिका ಕಾರ್ಯಿಕಾ.**

**कार्यिन् ಕಾರ್ಯಿನ್** (वि०) 1. ಕಾರ್ಯವುಳ್ಳವನು, ಯಾವುದಾದರೊಂದು ಕೆಲಸ ಹೊಂದಿರುವವನು. कार्यमस्यास्ति "इनिः" (५-२-११५)। 2. ಕೆಲಸವನ್ನು ಅಪೇಕ್ಷಿಸುವವನು. 3. ಉದ್ಯೋಗವನ್ನು ಬೇಡುವವನು. 4. (ವ್ಯಾಕರಣಶಾಸ್ತ್ರದಲ್ಲಿ) ಆದೇಶ ಮೊದಲಾದ ಕಾರ್ಯಕ್ಕೆ ವಿಷಯವಾದ ಸ್ಥಾನಿ. "कार्यमनुभवन् हि कार्यी निमित्ततया नाश्रीयते" परि०। 5. ಉದ್ಯೋಗವುಳ್ಳವನು, ಯಾವುದಾದರೊಂದು ವ್ಯವಹಾರವುಳ್ಳವನು. 6. (ವ್ಯಾಜ್ಯದಲ್ಲಿ) ವಾದಿ ಅಥವಾ ಪ್ರತಿವಾದಿ.

**कार्शानव ಕಾರ್ಶಾನವ** (वि०) ಕೃಶಾನುಸಂಬಂಧವಾದ, ಬೆಂಕಿಯ ಸಂಬಂಧವಾದ. कृशानोरिदम् "अण्" (४-३-१२०)। "फलद्भिरुष्णांशुकराभिमर्शात्कार्शानवं धाम पतङ्गकान्तैः" माघ० ४-१६।

**कार्श्य ಕಾರ್ಶ್ಯ** (न०) 1. ಕೃಶವಾಗಿರುವಿಕೆ, ತೆಳ್ಳಗಿರುವಿಕೆ, ಬಡಕಲಾಗಿರುವಿಕೆ. कृशस्य भावः "ष्यञ्" (५-१-१२४)। "तदद्य ते वन्यफलाशिनः परं परैति कार्श्यं यशसा समं वपुः" किरा० १-३९। 2. ಚಿಕ್ಕದಾಗಿರುವಿಕೆ, ಕಡಮೆಯಾಗಿರುವಿಕೆ. "निर्बन्धसञ्जातरुषार्थकार्श्यमचिन्तयित्वा गुरुणाहमुक्तः" रघु० ५-२१।

**कार्ष ಕಾರ್ಷ** (पुं०) ಬೇಸಾಯ (ವ್ಯವಸಾಯ) ಮನೋಧರ್ಮವುಳ್ಳ ಕೃಷೀವಲ, ರೈತ. कृषिः शीलमस्य "अण्" (४-४-६२)।

**कार्षक ಕಾರ್ಷಕ** (पुं०) ಕೃಷೀವಲ, ರೈತ. कर्षक स्वार्थे "अण्" (५-४-३८)।

**कार्षापण ಕಾರ್ಷಾಪಣ** (पुंन०) 1. ಒಂದು ಬಗೆಯ ನಾಣ್ಯ, ಕರ್ಷತೂಕದ ಬೆಳ್ಳಿಯ ನಾಣ್ಯ, ಹದಿನಾರು ಆದ್ಯ ಮಾಷಕಗಳ ತೂಕದ ನಾಣ್ಯ. कर्षस्येदम् कार्षम्। तेन आपण्यते — पण (व्यवहारे) "अप्" (३-३-६६)। ಕಾರ್ಷಾಪಣವು ತಾಮ್ರದ ನಾಣ್ಯವೆಂದು ಕೆಲವರ ಮತ. "ते षोडश स्याद्धरणं पुराणश्चैव राजतः। कार्षापणस्तु विज्ञेयः ताम्रिकः कार्षिकः पणः" मनु० ८-१३६। ಹೀಗೆ "कार्षापण" ಪದವು ಬೆಳ್ಳಿಯ ಮತ್ತು ತಾಮ್ರದ ಎರಡು ನಾಣ್ಯಗಳಿಗೂ ಹೆಸರಾಗುವುದು. 2. ಹದಿನಾರು ಪಣಗಳು. "कार्षापणोऽस्त्री कार्षिके पणषोडशकेऽपि च" मेदि०।

**कार्षापणिक ಕಾರ್ಷಾಪಣಿಕ** (वि०) ಕಾರ್ಷಾಪಣ ನಾಣ್ಯದಿಂದ ಕ್ರಯಕ್ಕೆ ಕೊಳ್ಳಲ್ಪಟ್ಟ. कार्षापणेन क्रीत: "टिठन्" (वा० ५-१-२५)।

**कार्षि ಕಾರ್ಷಿ** (पु०) 1. ಅಗ್ನಿ, ಬೆಂಕಿ. कृष (विलेखने) "इञ्" (उ० ४-१२६)। (स्त्री०) 2. ಎಳೆಯುವಿಕೆ. 3. ಉಳುಮೆ, ಬೇಸಾಯ. (वि०) 4. ಎಳೆಯುವ. 5. ಉಳುವ, ಬೇಸಾಯ ಮಾಡುವ.

**कार्षिक ಕಾರ್ಷಿಕ** (पु०) 1. ಕರ್ಷತೂಕದ ಬೆಳ್ಳಿಯ ನಾಣ್ಯ. कर्षे भवम् "ठञ्" (वा० ४-३-६०)। (वि०) 2. ಒಂದು ಕರ್ಷದ ಬೆಲೆಬಾಳುವ. कर्षं नित्यमर्हति "ठञ्" (५-१-६४)। 3. ಒಂದು ಕರ್ಷದಿಂದ ಕೊಳ್ಳಲ್ಪಟ್ಟ. कर्षेण क्रीतम् "ठञ्" (५-१-३७)। 4. ಬೇಸಾಯಗಾರ, ರೈತ. कर्ष: कर्षणं शीलमस्य "ठक्" (४-४-६१)।

**कार्ष्ण ಕಾರ್ಷ್ಣ** (वि०) 1. ಶ್ರೀಕೃಷ್ಣನ ಸಂಬಂಧವಾದ. 2. ಕೃಷ್ಣದ್ವೈಪಾಯನರ ಸಂಬಂಧವಾದ. कृष्णस्येदम् "अण्" (४-३-१२०)। 3. ಕೃಷ್ಣಮೃಗದ (ಜಿಂಕೆಯ) ಸಂಬಂಧವಾದ, ಕೃಷ್ಣಮೃಗದ ಚರ್ಮ (ಕೃಷ್ಣಾಜಿನ)ದಿಂದ ನಿರ್ಮಿತವಾದ. "कार्ष्णरौरवबास्तानि चर्माणि ब्रह्मचारिण:। वसीरन्नानुपूर्व्येण शाणक्षौमाविकानि च" मनु० २-४१। 4. ಕೃಷ್ಣಪಕ್ಷಕ್ಕೆ ಸಂಬಂಧಪಟ್ಟ.

**कार्ष्णायन ಕಾರ್ಷ್ಣಾಯನ** (पु०) 1. ವ್ಯಾಸಮಹರ್ಷಿಯ ಗೋತ್ರದಲ್ಲಿ ಹುಟ್ಟಿದ. 2. ಶ್ರೀಕೃಷ್ಣನ ಗೋತ್ರದಲ್ಲಿ ಹುಟ್ಟಿದ. कृष्णस्य गोत्रापत्यम् "फक्" (४-१-९९)।

**कार्ष्णायस ಕಾರ್ಷ್ಣಾಯಸ** (न०) 1. ಕೃಷ್ಣಲೋಹ, ಕಬ್ಬಿಣ. (वि०) 2. ಕೃಷ್ಣಲೋಹಸಂಬಂಧವಾದ. 3. ಕೃಷ್ಣಲೋಹದಿಂದ ನಿರ್ಮಿತವಾದ. कृष्णायस: इदम् "अण्" (४-३-१२०)। कृष्णायसो विकार: "अण्" (४-३-१३४) वा। "कार्ष्णायसमलङ्कार: परिव्रज्या च नित्यश:" मनु० १०-५२। स्त्रियाम् "ङीप्" (४-१-१५)। **कार्ष्णायसी ಕಾರ್ಷ್ಣಾಯಸೀ.** "अभ्रिं कार्ष्णायसीं दद्यात्सर्पं हत्वा द्विजोत्तम:" मनु० ११-१३३।

**कार्ष्णि ಕಾರ್ಷ್ಣಿ** (पु०) 1. ಕೃಷ್ಣದ್ವೈಪಾಯನರ ಮಗ, ಶುಕಮಹರ್ಷಿ. 2. ಶ್ರೀಕೃಷ್ಣನ ಮಗ, ಕಾಮ, ಮನ್ಮಥ, ಪ್ರದ್ಯುಮ್ನ. कृष्णस्यापत्यम् "इञ्" (४-१-९६)। "कार्ष्णि: प्रत्यग्रहीदेक: सरस्वानिव निम्नगा:" माघ० १९-१०।

**कार्ष्ण्य ಕಾರ್ಷ್ಣ್ಯ** (पु०) 1. ಶ್ರೀಕೃಷ್ಣನ ವಂಶದಲ್ಲಿ ಹುಟ್ಟಿದವನು. कृष्णस्य गोत्रापत्यम् "यञ्" (४-१-१०५)। (न०) 2. ಕೃಷ್ಣತ್ವ, ಕಪ್ಪು. कृष्णस्य भाव: "ष्यञ्" (५-१-१२४)।

**कार्ष्मन् ಕಾರ್ಷ್ಮನ್** (न०) 1. ಯುದ್ಧ, ಕಾಳಗ. कृष (विलेखने) + स्वार्थे णिच् अधि० "मनिन्" (उ० ४-१४४)। 2. ಎಳೆಯುವಿಕೆ. कृष भावे "मनिन्"।

**कार्ष्मरी ಕಾರ್ಷ್ಮರೀ** (स्त्री०) ಶೀವನೆಯ ಮರ. कार्ष्म कर्षणं राति – रा (दाने) "क:" (३-२-३)। गौरा० "ङीष्" (४-१-४१)।

**कार्ष्य ಕಾರ್ಷ್ಯ**[1] (पु०) ಮತ್ತಿಮರ. कृषति – कृष (विलेखने) "क:" (३-१-१३५)। "ष्यञ्" (वा० ५-१-१२४)। "साले तु सर्जकार्ष्याश्वकर्णका: सस्यसंवरा:" अम०।

**कार्ष्यवण ಕಾರ್ಷ್ಯವಣ** (न०) ಮತ್ತಿಮರದ ಕಾಡು. कार्ष्यस्य वनम्। णत्वम् (८-४-५)।

**काल ಕಾಲ** (पु०) 1. ವಿಷ್ಣು, ಪರಮಾತ್ಮ. कलते संकलितं भवत्यस्मिन् चराचरं जगत् – कल (शब्दसंख्यानयो:) अधि० "घञ्" (३-३-१२१)। "चिदचित्कालनात्काल: गुणैरात्मनि चेदृश:" इति निरुक्ति:। "ऋतु: सुदर्शन: काल: परमेष्ठी परिग्रह:" वि० स०। "कालोऽस्मि लोकक्षयकृत् प्रवृद्धो लोकान् समाहर्तुमिह प्रवृत्त:" गीता ११-३२। 2. ಸಮಯ, ವೇಳೆ, ಹೊತ್ತು. कलयति सर्वाणि भूतानि – कल (क्षेपे) + णिच् "अच्" (३-१-१३४)। ಕಾಲವು ವಿಭು ಮತ್ತು ನಿತ್ಯ. ಇದು ಸಕಲ ಕಾರ್ಯಗಳ ಉತ್ಪತ್ತಿ, ಸ್ಥಿತಿ ಮತ್ತು ಲಯಗಳಿಗೆ ಕಾರಣವಾಗಿರುವುದು. "काल: सृजति भूतानि काल: संहरति प्रजा:"। "कलनात्सर्वभूतानां स काल: परिकीर्तित:"। ಮತ್ತು ಸ್ಥೂಲ, ಸೂಕ್ಷ್ಮಗಳೆಂದು ಎರಡು ಬಗೆಯಾದುದರಿಂದ मूर्त: ಮತ್ತು अमूर्त: ಎಂದು ಎರಡು ವಿಧ. "लोकानामन्तकृत्काल: कालोऽन्य: कलनात्मक:। स द्विधा स्थूलसूक्ष्मत्वात् मूर्तश्चामूर्त उच्यते" सू० सि० १०। ಕಾಲವು क्षण:, लव:, निमेष:, काष्ठा, कला, क्षण:, मुहूर्त:, याम:, अहोरात्र:, पक्ष:, मास:, ऋतु:, अयनम्, संवत्सर:, युगम्, मन्वन्तरम्, प्रलय:, महाप्रलय: ಈ ವ್ಯವಹಾರಗಳಿಗೆ ಕಾರಣವಾಗಿರುವುದು. ಕಾಲದಲ್ಲಿ (1) एकत्वसंख्या, (2) परिमिति:, (3) पृथक्त्वम्, (4) संयोग: ಮತ್ತು (5) विभाग: ಎಂಬ ಐದು ಗುಣಗಳಿರುವುವು.

ಕಾಲವು ಒಂದೇ ಆದರೂ अतीत: (भूत:), अनागत: (भविष्यत्) ಮತ್ತು वर्तमान: ಎಂಬ ಉಪಾಧಿಭೇದಗಳಿಂದ ಮೂರು ವಿಧ. ಭೂತ ಮತ್ತು ಭವಿಷ್ಯತ್ ಕಾಲಗಳು अद्यतन: ಮತ್ತು अनद्यतन: ಎಂದು ಎರಡೆರಡು ವಿಧ.

**ನಿಮೇಷಾದಿ ಕಾಲ ವಿಭಾಗ:**

ಲಘ್ವಕ್ಷರವನ್ನು ಉಚ್ಚರಿಸುವಷ್ಟು ಕಾಲ ಅಥವಾ ರೆಪ್ಪೆಯನ್ನು ಆಡಿಸುವಷ್ಟು ಕಾಲ ನಿಮೇಷವೆನಿಸುವುದು. ನಿಮೇಷದ ನಾಲ್ಕನೆಯ ಒಂದು ಭಾಗವು ಕ್ಷಣ.

| | |
|---|---|
| २ क्षणौ | १ लव: |
| २ लवौ | १ निमेष: |
| १८ निमेषा: | १ काष्ठा |
| ३० काष्ठा: | १ कला |
| ३० कला: | १ क्षण: |
| १२ क्षणा: | १ मुहूर्त: |
| ३० मुहूर्ता: | १ अहोरात्र: (दिनम्) |
| ३० अहोरात्रा: | १ मास: |
| १२ मासा: | १ संवत्सर: (वर्ष:) |

ಇತ್ಯಾದಿ. "उत्पत्स्यते मम तु कोऽपि समानधर्मा कालो- ह्ययं निरवधिर्विपुला च पृथ्वी" मालती० १-८। 3. ಆಯಾ ಕಾರ್ಯಗಳಿಗೆ ಯೋಗ್ಯವಾದ ಸಮಯ. "वरमेकाहुति: काले नाकाले लक्षकोटय:"। 4. ಜ್ಯೋತಿಷದಲ್ಲಿ ಉಕ್ತವಾಗಿರುವ ಒಂದು ಯೋಗ. ಈ ಯೋಗವು ಯಾತ್ರಾದಿಗಳಿಗೆ ನಿಷಿದ್ಧವಾದುದು. ಇದು ಭಾನುವಾರ ಮೊದಲುಗೊಂಡು ಆಯಾ ವಾರಗಳ ಎದುರಿಗೆ ಕಾಣಿಸಿರುವ ದಿಕ್ಕುಗಳಲ್ಲಿ ಸಂಭವಿಸುವುವು:—

| | | |
|---|---|---|
| ಭಾನುವಾರ | ... | ಉತ್ತರದಿಕ್ಕು |
| ಸೋಮವಾರ | ... | ವಾಯುವ್ಯದಿಕ್ಕು |
| ಮಂಗಳವಾರ | ... | ಪಶ್ಚಿಮದಿಕ್ಕು |
| ಬುಧವಾರ | ... | ನೈರ್ಋತಿದಿಕ್ಕು |
| ಗುರುವಾರ | ... | ದಕ್ಷಿಣದಿಕ್ಕು |
| ಶುಕ್ರವಾರ | ... | ಆಗ್ನೇಯದಿಕ್ಕು |
| ಶನಿವಾರ | ... | ಪೂರ್ವದಿಕ್ಕು |

ಈ ವಾರಗಳಲ್ಲಿ ಇವುಗಳಿಗೆ ಎದುರು ದಿಕ್ಕುಗಳಲ್ಲಿ ಪಾಶ ಯೋಗವು:—

| | | |
|---|---|---|
| ಭಾನುವಾರ | ... | ದಕ್ಷಿಣದಿಕ್ಕು |
| ಸೋಮವಾರ | ... | ಆಗ್ನೇಯದಿಕ್ಕು |
| ಮಂಗಳವಾರ | ... | ಪೂರ್ವದಿಕ್ಕು |
| ಬುಧವಾರ | ... | ಈಶಾನ್ಯದಿಕ್ಕು |
| ಗುರುವಾರ | ... | ಉತ್ತರದಿಕ್ಕು |
| ಶುಕ್ರವಾರ | ... | ವಾಯುವ್ಯದಿಕ್ಕು |
| ಶನಿವಾರ | ... | ಪಶ್ಚಿಮದಿಕ್ಕು |

ಹಗಲು ಈ ದಿಕ್ಕುಗಳಲ್ಲಿ ಕಾಲಪಾಶಯೋಗವು. ರಾತ್ರಿ ಕಾಲದಲ್ಲಿ ಇವುಗಳ ಎದುರು ದಿಕ್ಕುಗಳಲ್ಲಿ ಕಾಲಪಾಶ ಯೋಗವು. "कौबेरीतो वैपरीत्येन कालो वारेऽर्काद्ये संमुखे तस्य पाश:। रात्रावेतौ वैपरीत्येन गण्यौ यात्रायुद्धे संमुखे वर्जनीयौ" मु० चि०। 5. ಅವಕಾಶ, ಪುರಸತ್ತು, ವಿರಾಮ. 6. ಅವಧಿ, ಗಡು, ಒಂದು ಗೊತ್ತಾದ ಸಮಯ. 7. ಕಪ್ಪು ಬಣ್ಣ. "कालोऽकलो कलि: काले कोलिकेलिकिल: किल" माघ० १९-९८। 8. ಶನಿಗ್ರಹ. 9. ಯಮ. "आमीलानि प्राणिन: प्रत्यवस्यन् कालो नूनं व्याददावाननानि" माघ० १८-७८। 10. ಮಹಾಕಾಲ, ಪರಮೇಶ್ವರ, ಪರಶಿವ. 11. ಮೃತಿ, ಮರಣ. 12. ಕೋಗಿಲೆ. 13. ಸಾಂಖ್ಯಮತದಲ್ಲಿ ಉಕ್ತವಾದ ಒಂಬತ್ತು ವಿಧ ತುಷ್ಟಿಗಳಲ್ಲೊಂದು. (1) प्रकृति:, (2) उपादानम्, (3) काल:, (4) भाग: — ಇವು ನಾಲ್ಕು ಆಧ್ಯಾತ್ಮಿಕ ತುಷ್ಟಿಗಳು. (5) अर्जनदोषदर्शनजन्यविषयोपरमजन्या, (6) रक्षणदोषदर्शनविषयोपरमजन्या, (7) क्षयदोषदर्शनजन्यविषयोपरमजन्या, (8) भोगदोषदर्शनजन्यविषयोपरमजन्या ಮತ್ತು (9) हिंसादोषदर्शनजन्यविषयोपरमजन्या—ಇವು ಐದು ಬಾಹ್ಯತುಷ್ಟಿಗಳು. "आध्यात्मिकयश्चतस्र: प्रकृत्युपादानकालभागाख्या:। बाह्या: विषयोपरमात्पञ्च च नव तुष्टयोऽभिमता:" सां० का० ५०। (वि०) 14. ಕಪ್ಪು ಬಣ್ಣದ. 15. ಹಿಂಸಿಸುವ, ಪೀಡಿಸುವ. स्त्रियाम् "टाप्" (४-१-४)। –ಲಾ –ಲಾ. ವರ್ಣವಿಶಿಷ್ಟವಾದರೆ –ಲೀ –ಲೀ ಎಂದೂ, ಸಂಜ್ಞಾವಾಚಕವಾದರೆ –ಲಾ –ಲಾ ಎಂದೂ ಆಗುವುದು. (स्त्री०) –ಲಾ –ಲಾ. 16. ದುರ್ಗಾದೇವಿ, ಪಾರ್ವತಿ. 17. ಕರಿಯ ತಿಗಡೆಮರ. 18. ಕರಿಯ ಜೀರಿಗೆ. 19. ನೀಲಿ ಗಿಡ. 20. ಮಂಜಿಷ್ಠೆ. "कालोऽनेहा यमो मृत्यु: श्यामो ना तद्वति त्रिषु। काला तु कृष्णत्रिवृते नीलिन्यां कृष्णजीरके" नानार्थर०। –ಲೀ –ಲೀ. 21. ಕಾಲಿಕಾದೇವಿ, ದುರ್ಗಾದೇವಿಯ ಒಂದು ರೂಪ. "प्रीतेन तेन प्रभुणा नियुक्ता काली कलत्रस्य मुदे प्रियस्य" कुमा० १-४९। 22. ಕ್ಷೀರಕೀಟ, ಹುಳಿ ಬಂದ ಹಾಲಿನಲ್ಲಿ ಹುಟ್ಟುವ ಒಂದು ಜಾತಿಯ ಹುಳು. 23. ಹೊಸ ಮೇಘಗಳ ಸಮೂಹ. 24. ಅಪವಾದ. 25. ಸಪ್ತಮಾತೃಗಳಲ್ಲಿ ಒಬ್ಬಳು. "तासां च पश्चात्कनकप्रभाणां काली कपालाभरणा चकाशे" कुमा० ७-३९। 26. ಭೀಮ

ಸೇನನ ಒಬ್ಬ ಹೆಂಡತಿ. "अथ घटोत्कचः। भीमसेनाद्धिडिम्बायां काल्यां सर्वगतस्ततः" भाग० ९-२२-२४। 27. ಕಪ್ಪು ಬಣ್ಣದ ಹೆಂಗಸು. 28. ರಾತ್ರಿ. 29. ಅಗ್ನಿಯ ಏಳು ಜಿಹ್ವೆಗಳಲ್ಲೊಂದು. 30. ಸತ್ಯವತಿ, ಶಂತನು ಚಕ್ರವರ್ತಿಯ ಪತ್ನಿ, ವೇದವ್ಯಾಸರ ತಾಯಿ. 31. ಪರಶಿವನ ಒಂಬತ್ತು ಶಕ್ತಿಗಳಲ್ಲೊಂದು. "काली कलेबरा भूतदमनी चेशशक्तयः" वैज०। "कादम्बिनी मेघमाला काली कृष्णनवाम्बुदः" वैज०। 32. ಬಜ್ಜಿ ಬದನೆಕಾಯಿ. "बृहत्यां प्रहसा काली वार्ताकी हिंगुदी कुली" वैज०। 33. ಹಿಪ್ಪಲಿ. 34. ಹತ್ತು ವಿಧ ಮಹಾವಿದ್ಯೆಗಳಲ್ಲಿ ಒಂದು. "काली तारा महाविद्या षोडशी भुवनेश्वरी। भैरवी छिन्नमस्ता च विद्या धूमावती तथा। वगला सिद्धविद्या च मातङ्गी कमलात्मिका। एता दश महाविद्याः सिद्धविद्याः प्रकीर्तिताः" तन्त्रसा०। "कालो मृत्यौ महाकाले समये यमकृष्णयोः। कृष्णत्रिवृत्तौ काला तु नीलीमञ्जिष्ठयोरपि। काली गौर्यां क्षीरकीटे कालिकामातृभेदयोः। नवाम्बुवाहवृन्देऽपि परिवादेऽपि च क्वचित्" विश्व०।

**कालक ಕಾಲಕ** (पुं०) 1. ಸಂಗಾತಿ, ಮೈಮೇಲೆ ಹುಟ್ಟುವ ಕಪ್ಪು ಚುಕ್ಕಿ, ಹುಟ್ಟು ಮಚ್ಚೆ. कालयति — कल (क्षेपे) + णिच् "ण्वुल्" (३-१-१३३)। 2. ನೀರುಹಾವು. (न०) 3. ಯಕೃತ್ತು, ಹೊಟ್ಟೆಯ ಬಲಭಾಗದ ದೊಡ್ಡ ಮಾಂಸಗ್ರಂಥಿ. (वि०) 4. ನೀಲಿಬಣ್ಣದಲ್ಲಿ ಅದ್ದಲ್ಪಟ್ಟ ಬಟ್ಟೆ ಮುಂತಾದುದು. काल "कन्" (५-४-३३)। 5. ಕೋಪ ಮೊದಲಾದ ಕಾರಣಗಳಿಂದ ತತ್ಕಾಲದಲ್ಲಿ ಬಣ್ಣ ಬದಲಾಯಿಸಿದ ಮುಖ ಮೊದಲಾದುದು. काल "कन्" (५-४-३३)। कालकः पटः। कालिका शाटी। कालकं मुखम्। ನಾಚಿಕೆ ಅಸೂಯೆ ಮುಂತಾದ ಕಾರಣಗಳಿಂದ ಬಣ್ಣ ಬದಲಾಯಿಸಿದ ಮುಖ.

**कालकञ्ज ಕಾಲಕಂಜ** (पुं० ब० व०) 1. ದಾನವರ ಒಂದು ಗುಂಪು. (न०) 2. ನೀಲೋತ್ಪಲ, ನೀಲಿ ಕಮಲ, ಕನ್ನೈದಿಲೆ. "पौलोमैः कालकञ्जैश्च नित्यहृष्टैरधिष्ठितम्" भा० वन० १७३-२।

**कालकटङ्कट ಕಾಲಕಟಂಕಟ** (पुं०) ಶಿವ, ಈಶ್ವರ. कालरूपः कटङ्कटः। "वैणवी पणवी ताली खली कालकटङ्कटः"।

**कालकण्ठ ಕಾಲಕಂಠ** (पुं०) 1. ಶಿವ, ಈಶ್ವರ, ಮಹಾದೇವ. कालः कण्ठोऽस्य विषपानात्। [ಅಮೃತಮಥನದ ಸಮಯದಲ್ಲಿ ಉತ್ಪನ್ನವಾದ ಹಾಲಾಹಲವೆಂಬ ವಿಷವನ್ನು ಪರಮೇಶ್ವರನು ಪಾನಮಾಡಿದುದರಿಂದ ಈ ಹೆಸರು.] "ततः करतलीकृत्य व्यापि हालाहलं विषम्। अभक्षयन्महादेवः कृपया भूतभावनः। तस्यापि दर्शयामास स्ववीर्यं जलकल्मषः। यच्चकार गले नीलं तच्च साधोर्विभूषणम्" भाग० ८-७। 2. ನವಿಲು, ಮಯೂರ. 3. ನೀರುಕೋಳಿ. 4. ಗುಬ್ಬಚ್ಚಿ. 5. ಕಾಡಿಗೆ ಸೊಗಸಿನ ಹಕ್ಕಿ. 6. ಮತ್ತಿಮರ. "कालकण्ठश्च दात्यूहे कलविङ्के च खञ्जने। मयूरे पीतसारे च स्यात् खण्डपरशौ पुमान्" मेदि०। वा "कप्" (५-४-१५४) —कण्ठकः —ಕಂಠಕಃ. (1) ನೀರುಕೋಳಿ. (2) ಗುಬ್ಬಚ್ಚಿ.

**कालकलि ಕಾಲಕಲಿ** (पुं०) ವಿರೋಚನನ ಮಗ ಒಬ್ಬ ರಾಕ್ಷಸ, ಬಲಿಚಕ್ರವರ್ತಿಯ ಸಹೋದರ. [ಇವನು ದೇವತೆಗಳಿಗೆ ಹೆದರಿ ಗೋಕುಲದಲ್ಲಿ ಒಂದು ಬೇಲದ ಮರದ ರೂಪದಿಂದ ಇದ್ದನು. ಈ ಮರದ ಕಾಯಿ ಹಣ್ಣುಗಳು ನಾರುತ್ತಿದ್ದುದರಿಂದ ಜನ ದನಕರುಗಳು ರೋಗಪೀಡಿತರಾಗುತ್ತಿರಲು ಗೋಪಾಲಕರೆಲ್ಲರೂ ಪರಮೇಶ್ವರನಿಂದ ಶಂಕುಕರ್ಣನ ಮೂಲಕ ಈ ಮರದ ಸಮಾಚಾರವನ್ನು ತಿಳಿದು ಬಲರಾಮಕೃಷ್ಣರಿಗೆ ಹೇಳಿ ಈ ಮರವನ್ನು ಕಡಿದು ಹಾಕಿಸಿದರು.] हरिवं०।

**कालका ಕಾಲಕಾ** (स्त्री०) ಒಬ್ಬ ರಾಕ್ಷಸಿ, ಕಾಲಕೇಯ ರಾಕ್ಷಸರ ತಾಯಿ, ಮಾರೀಚನ ಹೆಂಡತಿ.

**कालकूट ಕಾಲಕೂಟ** (पुं०) ವಿಷ, ನಂಜು. कालस्य मृत्योः कूटो राशिरिव। ಸಮುದ್ರಮಥನದ ಸಮಯದಲ್ಲಿ ಉತ್ಪನ್ನವಾಗಿ ಮಹಾದೇವನಿಂದ ನುಂಗಲ್ಪಟ್ಟ ಒಂದು ವಿಷ. स्वार्थे "कन्" —कूटकम् —ಕೂಟಕವ್. "ततो दुर्योधनः पापः तद्भक्ष्ये कालकूटकम्। विप्रं प्रक्षेपयामास भीमसेनजिघांसया" भा० आदि० १२७।

**कालकृत् ಕಾಲಕೃತ್** (पुं०) 1. ಸೂರ್ಯ. कालं करोति— डु कृञ् (करणे) "क्विप्" (३-२-७६)। ಸೂರ್ಯನು ತನ್ನ ಗತಿಯಿಂದ ಕ್ಷಣ ಮುಹೂರ್ತ ಯಾಮ ದಿವಸ ಮುಂತಾದ ಕಾಲವನ್ನು ಗೊತ್ತುಮಾಡುವುದರಿಂದ ಈ ಹೆಸರು. 2. ಪರಮಾತ್ಮ, ಪರಮೇಶ್ವರ. "त्रयीमयोऽयं भगवान् कालात्मा कालकृद्विभुः" सू० सि० १२-१८।

**कालकृत ಕಾಲಕೃತ** (पुं०) 1. ಸೂರ್ಯ. कालः कृतो येन। ಕಾಲಕ್ಕೆ ಸೂರ್ಯನು ಕಾರಣನಾದುದರಿಂದ ಈ ಹೆಸರು. 2. ನಿಗದಿಯಾದ ಅವಧಿಯುಳ್ಳ ಗಿರವಿ, ಗೊತ್ತಾದ ಗಡುವುಳ್ಳ ಅಡಮಾನ. ಚರವಸ್ತುವಾದರೆ ಗಿರವಿಯಾಗು

ವುದು. ಸ್ಥಿರ ವಸ್ತುವಾದರೆ ಭೋಗ್ಯವೆನ್ನುವರು. ಸಾಲ ಕೊಂಡವನು ಗೊತ್ತಾದ ಅವಧಿಯೊಳಗೆ ಗಿರವಿಯಿಟ್ಟ ವಸ್ತುವನ್ನು ಸಾಲ ತೀರಿಸಿ ಬಿಡಿಸಿಕೊಳ್ಳದಿದ್ದರೆ ಮೊತ್ತವೂ ಬಡ್ಡಿಯೂ ಸೇರಿ ಸಾಲದ ಎರಡರಷ್ಟಾದ ಕೂಡಲೆ ಆ ವಸ್ತುವು ಸಾಲಕೊಟ್ಟವನದೇ ಆಗುವುದು. ಫಲಭೋಗ್ಯವಾದ ಮನೆ ಜಮೀನು ಮುಂತಾದುವಕ್ಕೆ ಈ ಅವಧಿಯ ನಿಯಮವಿಲ್ಲ. "आधि: प्रणश्येत् द्विगुणे धने यदि न मोक्ष्यते। काले कालकृतो नश्येत् फलभोग्यो न नश्यति" याज्ञ० २-५८।

**कालकेय ಕಾಲಕೇಯ** (ಪುಂ) ದಾನವರ ಒಂದು ಗುಂಪು. कालकाया अपत्यम् "ढक्" (४-१-१२०)। "हिरण्यपुरमित्येवं ख्यायते नगरं महत्। रक्षितं कालकेयैश्च पौलोमैश्च महासुरैः" भा० वन० १७३-१३। [ಈ ರಾಕ್ಷಸರು ಹಿರಣ್ಯಪುರದಲ್ಲಿ ವಾಸಮಾಡುತ್ತ ಇಂದ್ರನನ್ನು ಬಹಳವಾಗಿ ಪೀಡಿಸುತ್ತಿದ್ದರು. ಇಂದ್ರನು ಇವರನ್ನು ಜಯಿಸಲಾರದೆ ಹೋಗಲಾಗಿ ಅರ್ಜುನನು ಪಾಶುಪತಾಸ್ತ್ರವನ್ನು ಸಂಪಾದಿಸಿದ ನಂತರ ಸ್ವರ್ಗದಲ್ಲಿ ಕೆಲವು ಕಾಲವಿದ್ದಾಗ ಯುದ್ಧದಲ್ಲಿ ಈ ರಾಕ್ಷಸರನ್ನು ಸಂಹರಿಸಿದನು. ಈ ರಾಕ್ಷಸರ ಮತ್ತೊಂದು ಗುಂಪು ಹಗಲೆಲ್ಲಾ ಸಮುದ್ರದೊಳಗೆ ವಾಸಮಾಡುತ್ತ ರಾತ್ರಿಕಾಲದಲ್ಲಿ ಲೋಕವೆಲ್ಲವನ್ನೂ ಪೀಡಿಸುತ್ತಿದ್ದಾಗ ಇಂದ್ರಾದಿ ದೇವತೆಗಳೆಲ್ಲರೂ ಬ್ರಹ್ಮನಲ್ಲಿಗೆ ಹೋಗಿ ಮೊರೆಯಿಡಲು ಬ್ರಹ್ಮನ ಸಲಹೆಯಂತೆ ಇವರು ಅಗಸ್ತ್ಯ ಮಹರ್ಷಿಯನ್ನು ಪ್ರಾರ್ಥಿಸುವರು. ಇವರ ಪ್ರಾರ್ಥನೆಯಂತೆ ಅಗಸ್ತ್ಯರು ಸಮುದ್ರದ ನೀರೆಲ್ಲವನ್ನೂ ಪಾನಮಾಡಲು ಅಲ್ಲಿಂದ ಹೊರಬಿದ್ದ ರಾಕ್ಷಸರನ್ನು ದೇವತೆಗಳು ಜಯಿಸಲು ಅನುಕೂಲವಾಯಿತು.] "आसन् कृतयुगे घोरा दानवा युद्धदुर्मदाः। कालकेया इति ख्याता गणाः परमदारुणाः" भा० वन० १००-३।

**कालक्षेप ಕಾಲಕ್ಷೇಪ** (ಪುಂ) 1. ಕೆಲಸವಿಲ್ಲದೆ ಕಾಲ ಕಳೆಯುವುದು. 2. ಕಾಲವು ವ್ಯರ್ಥವಾಗುವಿಕೆ. कालस्य क्षेपः। 3. ಸಾವಕಾಶ, ಸಮಯ ಮೀರುವಿಕೆ, ಗೊತ್ತಾದ ಕಾಲವನ್ನು ಮೀರುವುದು.

**कालखण्ड ಕಾಲಖಂಡ** (ಪುಂ) ಯಕೃತ್ತು, ಹೊಟ್ಟೆಯ ಬಲಭಾಗದ ಮಾಂಸಗ್ರಂಥಿ. कालं च खण्डं च। "स्वादुंकारं कालखण्डोपदंशं क्रोष्टा डिम्बं व्यष्वणद्व्यस्वनच्च" माघ० १८-७७।

**कालग्रन्थि ಕಾಲಗ್ರಂಥಿ** (ಪುಂ) ವರ್ಷ, ಸಂವತ್ಸರ. कालस्य ग्रन्थिरिव। "कालग्रन्थि: समा संवन्मासमानो युगांसकः" हारा०।

**कालघातिन् ಕಾಲಘಾತಿನ್** (ಪುಂ) ಕಾಲಕ್ರಮದಲ್ಲಿ ಸಾವಕಾಶವಾಗಿ ಕೊಲ್ಲುವ ವಿಷ ಮೊದಲಾದುದು. कालेन हन्ति – हन (हिंसागत्योः) "णिनिः" (३-२-७८)।

**कालचक्र ಕಾಲಚಕ್ರ** (ನಂ) 1. ಚಕ್ರದಂತೆ ಉರುಳುತ್ತಿರುವ ಕಾಲ. कालः चक्रमिव। ಚಕ್ರದಂತೆ ಯಾವಾಗಲೂ ಉರುಳುತ್ತಿರುವುದರಿಂದ ಕಾಲಕ್ಕೆ ಈ ಹೆಸರು. "यथा कुलालचक्रेण भ्रमता सह भ्रमतां तदाश्रयाणां पिपीलिकादीनां गतिरन्यैव प्रदेशान्तरेष्वप्युपलम्भमानत्वात् एवं नक्षत्रराशिभिरुपलक्षितेन कालचक्रेण ध्रुवं मेरुं च प्रदक्षिणेन परिधावता सह परिधावमानानां तदाश्रयाणां सूर्यादीनां ग्रहाणां गतिरन्यैव नक्षत्रान्तरे राश्यन्तरेचोपलभ्यमानत्वात्" भाग० ५-२२-२। 2. ಕಾಲರೂಪವಾದ ಚಕ್ರ. कालस्य कालगतेः चक्रमिव। ಕಾಲವು उत्सर्पिणी ಮತ್ತು अवसर्पिणी ಎಂದು ಎರಡು ಭಾಗವಾಗಿರುವುದು. [ವಿವರಕ್ಕೆ "उत्सर्पिणी" ಮತ್ತು "अवसर्पिणी" ಪದಗಳಲ್ಲಿ ನೋಡಿ.] "एवमेष चरन् पार्थ कालचक्रमतन्द्रितः। प्रकर्षन् सर्वभूतानि सविता परिवर्तते" भा० वन० १६३-४०। ಜೈನಸಿದ್ಧಾಂತದ ಪ್ರಕಾರ ಅವಸರ್ಪಿಣಿ ಮತ್ತು ಉತ್ಸರ್ಪಿಣಿ ಭೇದಗಳಿಂದ ಕೂಡಿದ ಕಲ್ಪಕಾಲದಲ್ಲಿ ಕಾಲಚಕ್ರವು ಒಂದು ಸಲ ತಿರುಗಲು 2,000,000,000,000,000 ಸಾಗರ ವರ್ಷಗಳು ಹಿಡಿಯುವುವು.

**कालचिन्तक ಕಾಲಚಿಂತಕ** (ಪುಂ) ಕಾಲಗತಿಯನ್ನು ವಿಚಾರಮಾಡುವ ದೈವಜ್ಞ, ಗ್ರಹಗಳ ಚಾರವನ್ನು ತಿಳಿದಿರುವ ಜೋಯಿಸ. कालं चिन्तयति–चिति (स्मृत्याम्) + णिच् "ण्वुल्" (३-१-१३३)।

**कालचिह्न ಕಾಲಚಿಹ್ನ** (ನಂ) ಮರಣಲಕ್ಷಣ, ಮೃತ್ಯುವನ್ನು ಸೂಚಿಸುವ ಲಕ್ಷಣ. कालस्य मृत्योर्ज्ञापकं चिह्नम्। [ವಿವರಕ್ಕೆ ಕಾಶೀಖಂಡದಲ್ಲಿ 41 ನೆಯ ಅಧ್ಯಾಯ ನೋಡಿ.]

**कालज्ञ ಕಾಲಜ್ಞ** (ಪುಂ) 1. ದೈವಜ್ಞ, ಜ್ಯೋತಿಷದಲ್ಲಿ ಉಕ್ತವಾದ ಕಾಲವಿಚಾರವನ್ನು ತಿಳಿದಿರುವ ಜೋಯಿಸ. कालं कालावयवं जानाति – ज्ञा (अवबोधने) "कः" (३-२-३)। 2. ಕುಕ್ಕುಟ, ಕೋಳಿ. (ವಿಂ) 3. ಕರ್ತವ್ಯಕ್ಕೆ ಯೋಗ್ಯವಾದ ಕಾಲವನ್ನು ತಿಳಿದವನು. "तेजः क्षमा वा नैकान्तं कालज्ञस्य महीपतेः" माघ० २-८३। 4. ಭೂತ ಭವಿಷ್ಯದ್ವರ್ತಮಾನಕಾಲಗಳನ್ನು ತಿಳಿದಿರುವ ಜ್ಞಾನಿ.

**कालज्ञान ಕಾಲಜ್ಞಾನ** (ನಂ) 1. ಜ್ಯೋತಿಃಶಾಸ್ತ್ರ. कालो ज्ञायतेऽनेन – ज्ञा (अवबोधने) करः० "ल्युट्"

(३-३-११७)। "विदितस्ते मया भावस्तोषितस्तपसा-ह्यहम्। दद्यां कालाश्रयं ज्ञानं ग्रहाणां चरितं महत्" सू०सि० ५। 2. ಮರಣ ಸೂಚಕವಾದ ಚಿಹ್ನೆ. कालो मृत्युर्ज्ञायतेऽनेन – कर० "ल्युट्"।

**कालज्ञानिन् ಕಾಲಜ್ಞಾನಿನ್** (वि०) ಕಾಲದ ಅರಿವುಳ್ಳವನು. कालज्ञानमस्यास्ति "इनिः" (५-२-११५)।

**कालत्रय ಕಾಲತ್ರಯ–त्रितय–ತ್ರಿತಯ** (न०) ಮೂರು ಕಾಲಗಳು, ಭೂತ ಭವಿಷ್ಯತ್ ಮತ್ತು ವರ್ತಮಾನರೂಪವಾದ ಮೂರು ಕಾಲಗಳು. कालस्य त्रयं त्रितयं वा। "शरीरभाजां भवदीयदर्शनं व्यनक्ति कालत्रितयेऽपि योग्यताम्" माघ० १-२३।

**कालदण्ड ಕಾಲದಂಡ** (पु०) ಜ್ಯೋತಿಷೋಕ್ತವಾದ ಆನಂದ ಮೊದಲಾದ 28 ಯೋಗಗಳಲ್ಲೊಂದು. ಈ ಯೋಗಗಳು ವಾರಗಳು ಮತ್ತು ನಕ್ಷತ್ರಗಳ ಸಂಬಂಧದಿಂದ ಉಂಟಾಗುವುವು.

| | | |
|---|---|---|
| ಭಾನುವಾರ | ... | ಭರಣಿ |
| ಸೋಮವಾರ | ... | ಆರಿದ್ರೆ |
| ಮಂಗಳವಾರ | ... | ಮಖೆ |
| ಬುಧವಾರ | ... | ಚಿತ್ತೆ |
| ಗುರುವಾರ | ... | ಜ್ಯೇಷ್ಠೆ |
| ಶುಕ್ರವಾರ | ... | ಅಭಿಜಿತ್ |
| ಶನಿವಾರ | ... | ಪೂರ್ವಾಭಾದ್ರೆ |

ಈ ವಾರಗಳ ಮತ್ತು ನಕ್ಷತ್ರಗಳ ಸಂಬಂಧದಿಂದ "**ಕಾಲದಂಡ**" ಯೋಗವು ಸಂಭವಿಸುವುದು, ಇದು ಪ್ರಯಾಣಕ್ಕೆ ನಿಷಿದ್ಧವಾದುದು. [ವಿವರಕ್ಕೆ "योग" ಪದದಲ್ಲಿ ನೋಡಿ.]

**कालधर्म ಕಾಲಧರ್ಮ** (पु०) 1. ಮೃತ್ಯು, ಮರಣ. कालस्य धर्मः। "अप्राप्तवति तस्मिंस्तु यौवनं पुरुषर्षभे। स राजा शन्तनुर्धीमान् कालधर्ममुपेयिवान्" भा० आदि० १०१-१। 2. ಋತು ಧರ್ಮ. ವಸಂತಾದಿ ಋತುಗಳ ಸ್ವಭಾವ.

**कालधर्मन् ಕಾಲಧರ್ಮನ್** (पु०) ಮೃತ್ಯು, ಮರಣ. कालस्येव धर्मोऽस्य "अनिच्" (५-४-१२४)। "स तया सह संगम्य भार्यया कुरुनन्दनः। पाण्डुः परमधर्मात्मा युयुजे कालधर्मणा" भा० आदि० १२४-१२।

**कालनर ಕಾಲನರ** (पु०) 1. ಮೇಷ ಮೊದಲಾದ ಹನ್ನೆರಡು ರಾಶಿರೂಪವಾದ ಶಿರಸ್ಸು ಮೊದಲಾದ ಹನ್ನೆರಡು ಅಂಗಗಳುಳ್ಳ ಕಾಲಪುರುಷ. "इति कालनरस्याङ्गे सदसद्ग्रहयोगतः" बृहज्जा०। 2. ಸಭಾಸರರಾಜನ ಮಗ.

**कालनाथ ಕಾಲನಾಥ** (पु०) ಶಿವ, ಪರಮೇಶ್ವರ, ಮಹಾದೇವ. कालस्य भैरवस्य नाथः। "कालनाथाय कल्याय क्षयायोपक्षयाय च" भा० शान्ति० २८६-८९।

**कालनाभ ಕಾಲನಾಭ** (पु०) ಹಿರಣ್ಯಾಕ್ಷನ ಒಬ್ಬ ಮಗ. कालः कृष्णः नाभिरस्य "अच्" (५-४-७५)। "हिरण्याक्षसुताः पञ्च विद्वांसः सुमहाबलाः। झर्झरः शकुनिश्चैव भूतसन्तापनस्तथा। महानाभश्च विक्रान्तः कालनाभस्तथैव च"।

**कालनियोग ಕಾಲನಿಯೋಗ** (पु०) ಕಾಲದ ಆಜ್ಞೆ, ಕಾಲದ ನಿಯಮ, ಅದೃಷ್ಟ. कालस्य नियोगः।

**कालनेमि ಕಾಲನೇಮಿ** (पु०) 1. ಒಬ್ಬ ರಾಕ್ಷಸ, ರಾವಣನ ಸೋದರಮಾವ. कालस्य मृत्योर्नेमिरिव। 2. ಹಿರಣ್ಯಕಶಿಪುವಿನ ಒಬ್ಬ ಮಗ.

**कालनेमिरिपु ಕಾಲನೇಮಿರಿಪು** (पु०) 1. ವಿಷ್ಣು. 2. ಹನುಮಂತ.

**कालनेमिहन् ಕಾಲನೇಮಿಹನ್** (पु०) 1. ಕಾಲನೇಮಿಯನ್ನು ಸಂಹರಿಸಿದ ವಿಷ್ಣು. कालनेमिं हतवान् – हन (हिंसागत्योः) "क्विप्" (३-२-८७)। कालस्य कालचक्रस्य नेमिं तत्तुल्याम् अविद्यां कलिकल्मषं निहन्ति – नि+हन "क्विप्" (३-२-८७)। **–निहन् –ನಿಹನ್.** ಕಾಲನೇಮಿಸದೃಶವಾದ ಅವಿದ್ಯೆಯೆಂಬ ಕಲಿದೋಷವನ್ನು ನಾಶಪಡಿಸುವುದರಿಂದ ಈ ಹೆಸರು. "कालचक्रस्य या नेमिरविद्याख्या च दुर्धरा। तां नाशयति यश्चासौ कालनेमिनिहा स्मृतः" इति निरुक्तिः। "कालनेमिनिहा शौरिः शूरः शूरजनेश्वरः" वि० स०। 2. ಹನುಮಂತ.

**कालपथ ಕಾಲಪಥ** (पु०) ವಿಶ್ವಾಮಿತ್ರ ಮಹರ್ಷಿಯ ಒಬ್ಬ ಮಗ. "मधुच्छन्दश्च भगवान् देवरातश्च वीर्यवान्। अक्षीणश्च शकुन्तश्च बभ्रुः कालपथस्तथा" भा० अनु० ४-५०।

**कालपर्णी ಕಾಲಪರ್ಣೀ** (स्त्री०) ಕೃಷ್ಣತುಲಸಿ.

**कालपर्यय ಕಾಲಪರ್ಯಯ** (पु०) 1. ಕಾಲಪರಿಭ್ರಮಣ, ಕಾಲವು ತಿರುಗುವುದು, ಕಾಲಗತಿ, ಕಾಲಕ್ರಮ. कालस्य पर्ययः वैपरीत्येन गमनम्। 2. ಕಾಲವು ಕಳೆದು ಹೋಗುವಿಕೆ, ಸಾವಕಾಶ, ಕಾಲವು ಮೀರುವುದು. "मा भूत् कालस्य पर्ययः" रामा०।

**कालपर्वत ಕಾಲಪರ್ವತ** (पुं०) ತ್ರಿಕೂಟಪರ್ವತದ ಹತ್ತಿರದ ಒಂದು ಬೆಟ್ಟ. "स निश्चित्य ततः कृत्यं स्वसारमुपसान्त्व्य च। ऊर्ध्वमाचक्रमे राजन् विधाय नगरे विधिम्। त्रिकूटं समतिक्रम्य कालपर्वतमेव च। ददर्श मकरावासं गम्भीरोदं महोदधिम्" भा० वन० २७७।

**कालपालक ಕಾಲಪಾಲಕ** (वि०) ಕಾಲವನ್ನು ಪ್ರತೀಕ್ಷಿಸುವ, ಸಮಯವನ್ನು ಎದುರುನೋಡುವ. कालं पालयति—पाल (रक्षणे)+णिच् "ण्वुल्" (३-१-१३३)।

**कालपुरुष ಕಾಲಪುರುಷ** (पुं०) 1. ಕಾಲವ್ಯವಹಾರಕ್ಕೆ ಕಾರಣವಾದ ಮೇಷಾದಿ ಹನ್ನೆರಡು ರಾಶಿರೂಪವಾದ ಪುರುಷಾಕಾರದ ಒಂದು ಚಕ್ರ. ಈ ಪುರುಷಾಕಾರದ ಚಕ್ರಕ್ಕೆ ಹನ್ನೆರಡು ರಾಶಿಗಳೂ ಕರಚರಣ ಮೊದಲಾದ ಅವಯವಗಳಾಗಿರುವುವು.

(1) ಮೇಷ ... ಶಿರಸ್ಸು-ತಲೆ
(2) ವೃಷಭ ... ವಕ್ತ್ರ-ಬಾಯಿ
(3) ಮಿಥುನ ... ಬಾಹು-ತೋಳು
(4) ಕರ್ಕಾಟಕ ... ಹೃದಯ-ಎದೆ
(5) ಸಿಂಹ ... ಉದರ-ಹೊಟ್ಟೆ
(6) ಕನ್ಯಾ ... ಕಟಿ-ಸೊಂಟ
(7) ತುಲಾ ... ಬಸ್ತಿ-ಹೊಕ್ಕಳ ಕೆಳಭಾಗ
(8) ವೃಶ್ಚಿಕ ... ಗುಹ್ಯಸ್ಥಾನ
(9) ಧನುಸ್ಸು ... ಊರು-ತೊಡೆ
(10) ಮಕರ ... ಜಾನು-ಮಂಡಿ
(11) ಕುಂಭ ... ಮೊಳಕಾಲು
(12) ಮೀನ ... ಕಾಲು

"मेषः शिरो वृषो वक्त्रं मिथुनं बाहुयुग्मकम्। कर्कटो हृदयं चैव सिंहस्तूदरमेव च। कन्या कटिस्तुला वस्तिः वृश्चिको गुह्यमेव च। धनुरूरू मृगो जानु कुम्भो जङ्घे प्रकीर्तिते। मीनः पादद्वयं चैवाङ्गानि कालनरस्य तु" बृहज्जा०। 2. ಕಪ್ಪು ಬಣ್ಣದ ಮನುಷ್ಯ.

**कालपृष्ठ ಕಾಲಪೃಷ್ಠ** (पुं०) 1. ರಣಹದ್ದು. "कालपृष्ठं तु कोदण्डमात्रके कर्णधन्वनि। कालपृष्ठो कङ्के" हेम०। (न०) 2. ಧನುಸ್ಸು, ಬಿಲ್ಲು. 3. ಕರ್ಣನ ಬಿಲ್ಲು. कालं पृष्ठं यस्य।

**कालप्रबोध ಕಾಲಪ್ರಬೋಧ** (पुं०) ಸರಿಯಾದ ಕಾಲದಲ್ಲಿ ಎಚ್ಚರಿಕೆ. काले यथाकालं प्रबोधः।

**कालप्रबोधिन् ಕಾಲಪ್ರಬೋಧಿನ್** (वि०) 1. ಸರಿಯಾದ ಕಾಲದಲ್ಲಿ ಎಚ್ಚರಿಕೆಯುಳ್ಳ. काले प्रबोधोऽस्यास्ति "इनिः" (५-२-११५)। 2. ಸರಿಯಾದ ಕಾಲದಲ್ಲಿ ಎಚ್ಚರಗೊಳಿಸುವ, ಸಕಾಲದಲ್ಲಿ ತಿಳಿವಳಿಕೆ ಕೊಡುವ. काले प्रबोधयति—प्र + बुध (अवगमने) + णिच् "णिनिः" (३-२-७८)।

**कालप्रभात ಕಾಲಪ್ರಭಾತ** (न०) ಶರದೃತು. कालं कृष्णं प्रभातं यत्र।

**कालभक्ष ಕಾಲಭಕ್ಷ** (पुं०) ರುದ್ರ, ಈಶ್ವರ.

**कालभृत् ಕಾಲಭೃತ್** (पुं०) ಸೂರ್ಯ.

**कालभैरव ಕಾಲಭೈರವ** (पुं०) ಕಾಶಿಯಲ್ಲಿ ಈಶ್ವರನ ಅಂಶದಿಂದ ಹುಟ್ಟಿದ ಭೈರವ. भीरोर्भावः भैरवं भीरुत्वम्, कालस्य भैरवं भयं यस्मात्। ಈಶ್ವರತತ್ತ್ವಜ್ಞಾನಶೂನ್ಯನಾದ ಬ್ರಹ್ಮನ ಐದನೆಯ ಶಿರಸ್ಸನ್ನು ಛೇದಿಸಲು ಕಾಲಭೈರವನು ಈಶ್ವರನಿಂದ ಸೃಷ್ಟಿಸಲ್ಪಟ್ಟನು. "त्वत्तो भेष्यति कालोऽपि ततस्तु कालभैरवः" काशीखं०।

**कालमयूख ಕಾಲಮಯೂಖ** (पुं०) ಒಂದು ಸ್ಮೃತಿ ಗ್ರಂಥ.

**कालमाधवीय ಕಾಲಮಾಧವೀಯ** (पुं०) ಮಾಧವಾಚಾರ್ಯರಿಂದ ರಚಿತವಾದ ಒಂದು ಸ್ಮೃತಿಗ್ರಂಥ.

**कालमान ಕಾಲಮಾನ** (पुं०) 1. ಕೃಷ್ಣತುಲಸಿ. कालो मन्यतेऽसौ – मन (ज्ञाने) कर्म० "घञ्" (३-३-१९)। (न०) 2. ಕಾಲದ ಪರಿಮಾಣ, ಕಾಲದ ಅಳತೆ. कालस्य मानं परिमाणम्। ಸೌರ, ಚಾಂದ್ರ ಮತ್ತು ಸಾವನಗಳೆಂದು ಕಾಲಗಣನೆಯು ಮೂರು ವಿಧ. (ರಾಶಿಗಳಲ್ಲಿ ಸಂಚರಿಸುವಾಗ) ಸೂರ್ಯನ ಗತಿಯನ್ನು ಅನುಸರಿಸಿ ಅಳೆಯುವ ಕಾಲವು ಸೌರ. ಚಂದ್ರನ ಗತಿಯನ್ನು ಅನುಸರಿಸಿ ಎಣಿಸುವ ಕಾಲವು ಚಾಂದ್ರ. ಸೂರ್ಯನ ಉದಯಾಸ್ತಗಳನ್ನು ಲೆಕ್ಕ ಮಾಡಿ ಅಳೆಯುವ ಕಾಲವು ಸಾವನ. ರಾಜನು ತನ್ನ ಸೇವಕರಿಗೆ ಸಂಬಳ ಕೊಡುವುದಕ್ಕೆ ಸೌರಮಾನವನ್ನು ಗಣನೆಗೆ ತೆಗೆದುಕೊಳ್ಳಬೇಕು. ಹಣವನ್ನು ಕೊಡುವುದು ತೆಗೆದುಕೊಳ್ಳುವುದು (ಲೇನಾ ದೇನಾ) ಈ ವಿಷಯದಲ್ಲಿ ಚಾಂದ್ರಮಾನ (ಶುಕ್ಲ ಪಾಡ್ಯದಿಂದ ಅಮಾವಾಸ್ಯೆವರೆಗಿನ ಕಾಲ) ವನ್ನು ಗಣನೆಗೆ ತೆಗೆದುಕೊಳ್ಳಬೇಕು. ದಿನಗೂಲಿಯನ್ನು ಕೊಡುವುದಕ್ಕೂ ಒಂದು ಕಾಲದ ಅವಧಿ (ಗಡು) ಯನ್ನು ಗೊತ್ತುಮಾಡಿ ಕೂಲಿ ಕೊಡುವುದಕ್ಕೂ ಸಾವನ ಕಾಲವನ್ನು ಗಣನೆಗೆ ತೆಗೆದುಕೊಳ್ಳಬೇಕು.

**कालमुख ಕಾಲಮುಖ** (पुं०) 1. ಕಪ್ಪು ಮುಖವುಳ್ಳ ಒಂದು ಜಾತಿಯ ಕಪಿ. कालं मुखं यस्य। "यस्य

शाखामृगा मित्राण्यृक्षाः कालमुखास्तथा" भा० वन० २९४-१२। (वि०) 2. ಕಪ್ಪು ಮುಖವುಳ್ಳವನು. स्त्रियाम् "ङीष्" (४-१-५४)। **-मुखी -ಮುಖೀ.**

**कालमेषिका ಕಾಲಮೇಷಿಕಾ** (स्त्री०) 1. ಮಂಜಿಷ್ಠೆ. 2. ಕರಿಯ ತಿಗಡೆ. कालं वर्णं मिषति—मिष (स्पर्धायाम्) "अण्" (३-२-१)। स्वार्थे "कन्" (५-३-७५)। "मञ्जिष्ठा विकसा जिङ्गी समङ्गा कालमेषिका"। "काला मसूरविदलार्धचन्द्रा कालमेषिका" अम०।

**कालमेषी ಕಾಲಮೇಷೀ** (स्त्री०) 1. ಮಂಜಿಷ್ಠೆ. 2. ಬಾಹುಜಿಗೆ ಗಿಡ. "कालमेषी कृष्णफला वागुजी पूतिफल्यपि" अम०।

**कालयवन ಕಾಲಯವನ** (पु०) ಯವನರಿಗೆ ಒಡೆಯನಾದ ಒಬ್ಬ ದೊರೆ, ಯಾದವರಿಗೆ ಅಜೇಯನಾದ ಒಬ್ಬ ಶತ್ರು, ಯಾದವರ ಪುರೋಹಿತರಾದ ಗರ್ಗಋಷಿಯ ಮಗ. "ये चान्ये कालयवनसाल्वरुक्मिद्रुमादयः" माघ० २-९८। [ಯಾದವರು ತಮ್ಮ ಪುರೋಹಿತರಾದ ಗರ್ಗಋಷಿಯನ್ನು ಒಮ್ಮೆ ಹಾಸ್ಯಮಾಡಲಾಗಿ ಕುಪಿತರಾದ ಋಷಿಯು ಶಿವನ ಅನುಗ್ರಹದಿಂದ ಯಾದವರನ್ನು ಶಿಕ್ಷಿಸುವ ಮಗನೊಬ್ಬನನ್ನು ಅಪ್ಸರಸಿಯೊಬ್ಬಳಲ್ಲಿ ಪಡೆದು ಯಾದವರ ಶತ್ರುವಾದ ಯವನರಾಜನಲ್ಲಿ ಸೇರಿಸಿದರು. ಯವನನು ವಿಶ್ವಾಸದಿಂದ ಈ ಮಗುವನ್ನು ಸಲಹಿದುದರಿಂದ ಮಗುವಿಗೆ ಕಾಲಯವನನೆಂದು ಹೆಸರಾಯಿತು. ಇವನು ಯಾದವರನ್ನೆಲ್ಲಾ ದ್ವೇಷಿಸುತ್ತಿದ್ದು ಒಮ್ಮೆ ಗುಹೆಯೊಂದರಲ್ಲಿ ಮಲಗಿ ನಿದ್ರಿಸುತ್ತಿದ್ದ ಮುಚುಕುಂದನನ್ನು ಕೆಣಕಿ ಅವನ ದೃಷ್ಟಿಪಾತದಿಂದ ಹತನಾದನು.] भाग० १०-५१।

**कालयापन ಕಾಲಯಾಪನ** (न०) ಕಾಲಹರಣ, ಕಾಲ ಕಳೆಯುವಿಕೆ, ಕಾಲವಿಳಂಬ. कालस्य यापनम्।

**कालयुक्त ಕಾಲಯುಕ್ತ** (पु०) 1. ಪ್ರಭವ ಮೊದಲಾದ ಅರವತ್ತು ಸಂವತ್ಸರಗಳಲ್ಲಿ ಐವತ್ತೆರಡನೆಯ ಸಂವತ್ಸರ. **ಈ ಸಂವತ್ಸರದ ಫಲ:** ಹಸು, ಎಮ್ಮೆ, ನಟ ನರ್ತಕರು ಇವರಿಗೆ ಹಾನಿ. ಮಳೆಯು ಚೆನ್ನಾಗಿ ನಡೆದರೂ ಪೈರುಗಳು ಚೆನ್ನಾಗಿ ಬೆಳೆಯುವುದಿಲ್ಲ. ಎಳ್ಳು, ಸಾಸವೆ, ಉದ್ದು, ಹತ್ತಿ ಇವುಗಳ ಬೆಲೆ ಹೆಚ್ಚುವುದು. ಹಸು, ಎಮ್ಮೆ, ಚಿನ್ನ, ತಾಮ್ರಗಳನ್ನು ಮಾರಿ ಅದರಿಂದ ಧಾನ್ಯಗಳನ್ನು ಕೂಡಿಟ್ಟುಕೊಂಡು ಈ ಕಷ್ಟಕಾಲವನ್ನು ಕಳೆಯಬೇಕು. ರಾಜಪೀಡೆಯು ಹೆಚ್ಚುವುದು. भविष्य०। (वि०) 2. ಮೃತ್ಯುವಿನೊಡನೆ ಕೂಡಿದ. कालेन युक्तः। **-युक्तिः -ಯುಕ್ತಿಃ.** ಕಾಲದೊಡನೆ ಸೇರುವುದು.

**कालयोग ಕಾಲಯೋಗ** (पु०) 1. ಕಾಲದ ಸಂಬಂಧ. "महता कालयोगेन प्रकृतिं यास्यतेऽर्णवः" भा० वन०। 2. ಜ್ಯೋತಿಷೋಕ್ತವಾದ ಒಂದು ಯೋಗ. [ವಿವರಕ್ಕೆ "काल" ಪದದಲ್ಲಿ ನೋಡಿ.]

**कालयोगिन् ಕಾಲಯೋಗಿನ್** (पु०) 1. ಶಿವ, ಈಶ್ವರ. काल एव योगोऽस्त्यस्य "इनिः" (५-२-११५)। "कालयोगी महानादः सर्वकामश्चतुष्पथः" भा०। 2. ಕಾಲದ ಸಂಬಂಧವುಳ್ಳ. कालस्य योगोऽस्त्यस्य।

**कालरात्रि ಕಾಲರಾತ್ರಿ** (स्त्री०) 1. ಬ್ರಹ್ಮನ ಹಗಲಿನಲ್ಲಿ ಪ್ರಪಂಚದ ಸೃಷ್ಟ್ಯಾದಿ ವ್ಯಾಪಾರವೆಲ್ಲ ಕೊನೆಗೊಂಡಮೇಲೆ ಎಲ್ಲವೂ ನಾಶವಾಗಿ ಬ್ರಹ್ಮನು ನಿದ್ರಿಸುವ ಕಾಲ, ಬ್ರಹ್ಮನ ರಾತ್ರಿ ಕಾಲ, ಪ್ರಳಯಕಾಲದ ರಾತ್ರಿ, ಹದಿನಾಲ್ಕು ಮಂದಿ ಮನುಗಳ ಅಧಿಕಾರದ ಕೊನೆಯ ಕಾಲ. कालो रात्रिरिव अप्रकाशकत्वात्। ಈ ಕಾಲದಲ್ಲಿ ಜಗತ್ತಿನ ವ್ಯಾಪಾರವೆಲ್ಲವೂ ಶೂನ್ಯವಾಗಿರುವುದು. "यदा स देवो जागर्ति तदेदं चेष्टते जगत्। यदा स्वपिति शान्तात्मा तदा सर्वं निमीलति" मनु० १-५२। "कालरात्रिकरालास्यदन्तान्तर्गतया मया। दृष्टासि सखि सैव त्वं पुनरत्रैव जन्मनि" प्रबोध० ४-२। 2. ದುರ್ಗಾದೇವಿಯ ಒಂದು ರೂಪ. "कालरात्रिर्महारात्रिर्मोहरात्रिश्च दारुणा" देवीमा०। 3. ಮನುಷ್ಯನ ಜೀವಮಾನದಲ್ಲಿ 77ನೆಯ ವರ್ಷದ 7ನೆಯ ತಿಂಗಳಿನ 7ನೆಯ ರಾತ್ರಿ. [ಇದು ಬಹಳ ಕ್ರೂರ ಕಾಲ.] 4. ಕಗ್ಗತ್ತಲೆಯ ರಾತ್ರಿ. 5. ದೀಪಾವಳಿಯ ಅಮಾವಾಸ್ಯೆ. "दीपावली तु या प्रोक्ता कालरात्रिश्च सा मता"। 6. ಕಾರ್ಯಕ್ಕೆ ಅನರ್ಹವಾದ ಕಾಲ. "रवौ षष्ठं विधौ वेदं कुजवारे द्वितीयकम्। बुधे सप्त गुरौ पञ्च भृगुवारे तृतीयकम्। शनावाद्यं तथाचान्त्यं रात्रौ कालं विवर्जयेत्"।

**काललौह ಕಾಲಲೌಹ** (न०) ಕಬ್ಬಿಣ, ಉಕ್ಕು.

**कालविद् ಕಾಲವಿದ್** (वि०) ಕಾಲವನ್ನು ತಿಳಿದಿರುವ, ಸಮಯವನ್ನು ಅರಿತಿರುವ. कालं वेत्ति—विद (ज्ञाने) "क्विप्" (३-२-६१)। "यूपवत्यवसिते क्रियाविधौ कालवित् कुशिकवंशवर्धनः" रघु० ११-३७।

**कालविप्रकर्ष ಕಾಲವಿಪ್ರಕರ್ಷ** (पु०) ದೂರದ ಕಾಲ, ಹತ್ತಿರವಲ್ಲದ ಕಾಲ. कालस्य विप्रकर्षः।

**कालविभक्ति ಕಾಲವಿಭಕ್ತಿ** (स्त्री०) ಕಾಲ ವಿಭಾಗ, ಪಕ್ಷ ಮಾಸ ಋತು ಅಯನ ಮುಂತಾದ ಕಾಲದ ಭಾಗ. कालस्य विभक्तिः। "कालं कालविभक्तीश्च नक्षत्राणि ग्रहांस्तथा। सरितः सागरान् शैलान्समानि विषमाणि च" मनु०

१-२४। -विभाग: -ವಿಭಾಗಃ. "कालविभागे चानहोरात्राणाम्" पा० सू० ३-३-१३७।

**कालवृद्धि ಕಾಲವೃದ್ಧಿ** (स्त्री०) ನಿಗದಿಯಾದ ಆಯಾ ಕಾಲಗಳಲ್ಲಿ ಕೊಡುವ ವೃದ್ಧ್ಯಂಶ, ತಿಂಗಳು ಕಾಲುವರ್ಷ ಅರ್ಧವರ್ಷ ಮತ್ತು ವರ್ಷಗಳಲ್ಲಿ ಕೊಡಬೇಕಾದ ಬಡ್ಡಿ. "नातिसांवत्सरीं वृद्धिं नचादृष्टां पुनर्हरेत्। चक्रवृद्धिः कालवृद्धिः कारिता कायिका च या" मनु० ८-१५३।

**कालवृन्त ಕಾಲವೃಂತ** (पु०) ಹುರುಳಿಗಿಡ. कालं कृष्णं वृन्तमस्य।

**कालवृन्ती ಕಾಲವೃಂತೀ** (स्त्री०) ಹಸುರು ಪಾದರೀ ಗಿಡ.

**कालवेग ಕಾಲವೇಗ** (पु०) ವಾಸುಕಿಯ ಮಗ.

**कालवेला ಕಾಲವೇಳಾ** (स्त्री०) ಯಾವ ಶುಭ ಕಾರ್ಯಕ್ಕೂ ಯೋಗ್ಯವಲ್ಲದ ವೇಳೆ, ಭಾನು ಮೊದಲಾದ ವಾರಗಳಲ್ಲಿ ಶನಿಯ ವೇಳೆ. कालस्य वेला। ಇದು ಪ್ರತಿ ದಿನವೂ ಹಗಲು ಅರ್ಧಜಾವ ಮತ್ತು ರಾತ್ರಿ ಅರ್ಧಜಾವ ಕಾಲವಿರುವುದು. ಈ ಕಾಲದಲ್ಲಿ ಯಾವ ಕಾರ್ಯವನ್ನೂ ಮಾಡಕೂಡದು. "निधनं प्रहरार्धे तु निःसत्वं यमघण्टके। कुलिके सर्वनाशः स्यात् रात्रावेते न दोषदाः"। "न वारदोषाः प्रभवन्ति रात्रौ देवेज्यदैत्येन्द्रदिवाकराणाम्। दिवा शशाङ्कार्कजभूसुतानां सर्वत्र निन्द्यो बुधवारदोषः"।

**ನಿಷಿದ್ಧವಾದ ಅರ್ಧಯಾಮಗಳು:**

| | | |
|---|---|---|
| ಭಾನುವಾರ | ಹಗಲು 5ನೆಯ ಅರ್ಧಯಾಮ | |
| | ರಾತ್ರಿ 6ನೆಯ ಅರ್ಧಯಾಮ | |
| ಸೋಮವಾರ | ಹಗಲು 2ನೆಯ ಅರ್ಧಯಾಮ | |
| | ರಾತ್ರಿ 4ನೆಯ ಅರ್ಧಯಾಮ | |
| ಮಂಗಳವಾರ | ಹಗಲು 6ನೆಯ ಅರ್ಧಯಾಮ | |
| | ರಾತ್ರಿ 7ನೆಯ ಅರ್ಧಯಾಮ | |
| ಬುಧವಾರ | ಹಗಲು 3ನೆಯ ಅರ್ಧಯಾಮ | |
| | ರಾತ್ರಿ 7ನೆಯ ಅರ್ಧಯಾಮ | |
| ಗುರುವಾರ | ಹಗಲು 7ನೆಯ ಅರ್ಧಯಾಮ | |
| | ರಾತ್ರಿ 5ನೆಯ ಅರ್ಧಯಾಮ | |
| ಶುಕ್ರವಾರ | ಹಗಲು 4ನೆಯ ಅರ್ಧಯಾಮ | |
| | ರಾತ್ರಿ 3ನೆಯ ಅರ್ಧಯಾಮ | |
| ಶನಿವಾರ | ಹಗಲು 8ನೆಯ ಅರ್ಧಯಾಮ | |
| | ರಾತ್ರಿ 8ನೆಯ ಅರ್ಧಯಾಮ | |

**कालशाक ಕಾಲಶಾಕ** (पु०) ಕರಿಬೇವಿನ ಗಿಡ. "कालशाकं महाशल्काः खड्गलोहामिषं मधु। आनन्त्यायैव कल्प्यन्ते मुन्यन्नानि च सर्वशः" मनु० ३-२७२।

**कालशालि ಕಾಲಶಾಲಿ** (पु०) ಕಪ್ಪು ಧಾನ್ಯ, ಕೃಷ್ಣವ್ರೀಹಿ, ಕಪ್ಪು ಬತ್ತ.

**कालशे(से)य ಕಾಲಶೇ(ಸೇ)ಯ** (न०) ಕಡೆದ ಮೊಸರು. कलश्यां भवम् "ढक्" (४-३-५६)। "दण्डाहतं कालशेयम्" अम०।

**कालशैल ಕಾಲಶೈಲ** (पु०) ಒಂದು ಪರ್ವತ. "उशीरबीजं मैनाकं गिरिं श्वेतं च भारत। समतीतोऽसि कौन्तेय कालशैलं च पार्थिव" भा० वन० १३९-१।

**कालसंरोध ಕಾಲಸಂರೋಧ** (पु०) ಬಹಳ ಕಾಲದ ವರೆಗೂ ಇರುವಿಕೆ. कालस्य संरोधः। "न चाधेः कालसंरोधान्निसर्गोऽस्ति न विक्रयः" मनु० ८-१४३।

**कालसर्प ಕಾಲಸರ್ಪ** (पु०) 1. ಕೃಷ್ಣಸರ್ಪ, ಮಹಾ ವಿಷವುಳ್ಳ ಒಂದು ಸರ್ಪ. कालः कृष्णः सर्पः। 2. ರಾಹುಕೇತುಗಳ ಮಧ್ಯೆ ಎಲ್ಲಾ ಗ್ರಹಗಳೂ ಸಂಚರಿಸುವುದರಿಂದುಂಟಾದ ಒಂದು ಕೆಟ್ಟ ಯೋಗ.

**कालसार ಕಾಲಸಾರ** (पु०) 1. ಕೃಷ್ಣಸಾರ, ಕಪ್ಪು ಚುಕ್ಕೆಯುಳ್ಳ ಒಂದು ಜಾತಿಯ ಜಿಂಕೆ. कालः कृष्णवर्णः सारः प्रधानमस्य। (न०) 2. ಹಳದಿ ಚಂದನ.

**कालसाह्वय ಕಾಲಸಾಹ್ವಯ** (न०) ಕಾಲಸೂತ್ರವೆಂಬ ಒಂದು ನರಕ. कालेन समानः आह्वयो यस्य।

**कालसूत्र ಕಾಲಸೂತ್ರ** (न०) ಒಂದು ನರಕ. कालस्य यमस्य सूत्रमिव बन्धनहेतुत्वात्।

**कालसूर्य ಕಾಲಸೂರ್ಯ** (पु०) ಪ್ರಳಯಕಾಲದ ಸೂರ್ಯ.

**कालस्कन्ध ಕಾಲಸ್ಕಂಧ** (पु०) 1. ತಮಾಲವೃಕ್ಷ, ಹೊಂಗೆ ಮರ. कालः कृष्णः स्कन्धोऽस्य। 2. ತೂಬರೆಗಿಡ.

**कालहर ಕಾಲಹರ** (पु०) 1. ಶಿವ, ಈಶ್ವರ, ಮೃತ್ಯುಂಜಯ. कालं मृत्युं हरति — हृञ् (हरणे) "अच्" (३-२-९)। 2. ಒಂದು ಶಿವಲಿಂಗ. "तस्मात्पूर्वं भद्रकामः पर्वतस्तु त्रिकोणकः। यत्र कालहरो नाम शिवलिङ्गं व्यवस्थितम्"। 3. ಕಾಲವನ್ನು ತಿಂದುಹಾಕುವ, ಕಾಲವನ್ನು ಅಪಹರಿಸುವ. कालं वेलां हरति।

**कालहरण ಕಾಲಹರಣ** (न०) ಕಾಲ ಕಳೆಯುವಿಕೆ. कालस्य हरणम्।

**कालहानि ಕಾಲಹಾನಿ** (स्त्री०) ಸಾವಕಾಶ, ವಿಳಂಬ, ತಡ. कालस्य हानिः।

**कालहोरा ಕಾಲಹೋರಾ** (स्त्री०) ಲಗ್ನದ ಅರ್ಧಕಾಲ, ಹಗಲು ಮತ್ತು ರಾತ್ರಿ ಕಾಲಗಳಲ್ಲಿ ಮೇಷಾದಿ ಹನ್ನೆರಡು ಲಗ್ನಾಧಿಪತಿಗಳ ಕಾಲ. ಹಗಲು ಮತ್ತು ರಾತ್ರಿಗಳನ್ನು ಹನ್ನೆರಡು ಭಾಗ ಮಾಡಿ ಪ್ರತಿಯೊಂದು ಭಾಗಕ್ಕೂ ಆಯಾ ಗ್ರಹಗಳನ್ನು ಹೋರಾಧಿಪತಿಗಳನ್ನಾಗಿ ತಿಳಿಯಬೇಕು.

**ಕಾಲಹೋರಾಕ್ರಮ :**

| ವಾರ | | ಘಳಿಗೆಯ | ಗಂಟೆ |
|---|---|---|---|
| ಭಾನುವಾರ | | ವರೆಗೆ | ಯಿಂದ–ವರೆಗೆ |
| ಹಗಲು | ರಾತ್ರಿ | | |
| ರ | ಗು | 2–30 | 6–7 |
| ಶು | ಕು | 5–00 | 7–8 |
| ಬು | ರ | 7–30 | 8–9 |
| ಚಂ | ಶು | 10–00 | 9–10 |
| ಶ | ಬು | 12–30 | 10–11 |
| ಗು | ಚಂ | 15–00 | 11–12 |
| ಕು | ಶ | 17–30 | 12–1 |
| ರ | ಗು | 20–00 | 1–2 |
| ಶು | ಕು | 22–30 | 2–3 |
| ಬು | ರ | 25–00 | 3–4 |
| ಚಂ | ಶ | 27–30 | 4–5 |
| ಶ | ಬು | 30–00 | 5–6 |

ಹೀಗೆಯೇ ಸೋಮವಾರ ಮೊದಲ್ಗೊಂಡು ಎಲ್ಲಾ ವಾರಗಳಲ್ಲೂ ಆಯಾ ವಾರಾಧಿಪತಿಯ ಹೋರೆಯು ಪ್ರಾರಂಭವಾಗುವುದು. ಸೌಮ್ಯಗ್ರಹಗಳ ಹೋರೆಗಳಲ್ಲಿ ಶುಭಕಾರ್ಯ ಮಾಡಬೇಕು.

**काला ಕಾಲಾ** (स्त्री०) 1. ದಕ್ಷಬ್ರಹ್ಮನ ಮಗಳು, ಕಶ್ಯಪನ ಪತ್ನಿ. "प्रजज्ञिरे महाभाग दक्षकन्यास्त्रयोदश। अदितिर्दितिर्दनुः काला दनायुः सिंहिका तथा" भा० आदि० ६६-१२। 2. ಮಂಜಿಷ್ಠೆ. 3. ಅಶ್ವಗಂಧಿಯ ಗಿಡ. 4. ಹಸುರು ಪಾದರೀ ಗಿಡ. 5. ಕರಿ ಜೀರಿಗೆ. 6. ದುರ್ಗಾದೇವಿ. 7. ಕರಿ ತಿಗಡೆ. 8. ನೀಲಿ ಗಿಡ. "काला तु कृष्णा त्रिवृता मञ्जिष्ठानीलिनीषु च" मेदि०।

**कालाक्षरिक ಕಾಲಾಕ್ಷರಿಕ** (वि०) ಸರಿಯಾದ ಕಾಲದಲ್ಲಿ ಅಕ್ಷರಗಳನ್ನು ಕಲಿತವನು, ವಿದ್ಯೆ ಕಲಿತವನು. काले अक्षरं वेत्ति — विद (ज्ञाने) "ठक्" (४-२-६०)।

**कालागुरु ಕಾಲಾಗುರು** (न०) ಕೃಷ್ಣಾಗುರು.

**कालाग्नि ಕಾಲಾಗ್ನಿ** (पु०) 1. ಪ್ರಳಯಕಾಲದ ಅಗ್ನಿ. कालः सकलहिंसकोऽग्निः। 2. ರುದ್ರ. 3. ಪಂಚಮುಖ ರುದ್ರಾಕ್ಷ. "पञ्चवक्त्रः स्वयं रुद्रः कालाग्निर्नाम नामतः। अगम्यागमनाच्चैव अभक्ष्यस्य च भक्षणात्। मुच्यते सर्वपापेभ्यः पञ्चवक्त्रस्य धारणात्" स्कान्द०।

**कालाग्निरुद्र ಕಾಲಾಗ್ನಿರುದ್ರ** (पु०) ಪ್ರಳಯಕಾಲದ ಅಗ್ನಿಯಂತಿರುವ ರುದ್ರ. कालाग्निरिव रुद्रः।

**कालाजिन ಕಾಲಾಜಿನ** (न०) ಕೃಷ್ಣಾಜಿನ, ಕೃಷ್ಣಮೃಗದ ಚರ್ಮ. कालस्य कृष्णमृगस्य अजिनम्।

**कालाञ्जन ಕಾಲಾಂಜನ** (न०) ಕಣ್ಣು ಕಪ್ಪು. कालमञ्जनम्। "न चक्षुषोः कान्तिविशेषबुद्ध्या कालाञ्जनं मङ्गलमित्युपात्तम्" कुमा० ७-२०।

**कालाण्डज ಕಾಲಾಂಡಜ** (पु०) ಕೋಗಿಲೆ.

**कालातिक्रम ಕಾಲಾತಿಕ್ರಮ** (पु०) ಕಾಲ ಮೀರುವುದು.

**कालातिक्रमण ಕಾಲಾತಿಕ್ರಮಣ** (न०) ಕಾಲ ಮೀರುವುದು. कालस्यातिक्रमणम्।

**कालातिपत्ति ಕಾಲಾತಿಪತ್ತಿ** (स्त्री०) ಕಾಲ ಮೀರುವುದು, ಕಾಲ ಕಳೆದುಹೋಗುವುದು. कालस्यातिपत्तिः।

**कालातिपात ಕಾಲಾತಿಪಾತ** (पु०) ಕಾಲಾತಿಕ್ರಮ, ಕಾಲವು ಮೀರುವುದು, ಕಾಲವು ಕಳೆದುಹೋಗುವುದು. कालस्यातिपातः।

**कालातिरेक ಕಾಲಾತಿರೇಕ** (पु०) ಕಾಲದ ಆಧಿಕ್ಯ, ಹೆಚ್ಚು ಕಾಲ. कालस्यातिरेकः। "कालातिरेके द्विगुणं प्रायश्चित्तं समाचरेत्"।

**कालातीत ಕಾಲಾತೀತ** (वि०) 1. ಕಾಲವು ಮೀರಿರುವಿಕೆ, ಕಾಲಾತಿಕ್ರಮ. (वि०) 2. ಕಾಲವು ಮೀರಿರುವ, ಕಾಲವು ಅತಿಕ್ರಮಿಸಿರುವ. अतीतः कालोऽस्य। परनिपातः।

**कालात्मन् ಕಾಲಾತ್ಮನ್** (पु०) ಪರಮಾತ್ಮ, ಪರಮೇಶ್ವರ. कालः आत्माऽस्य। "कालात्मा कालकृद्विभुः" सू० सि०।

**कालात्यय ಕಾಲಾತ್ಯಯ** (पु०) "कालातीत" ಪದದ 1ನೆಯ ಅರ್ಥ. "आधिश्चोपनिधिश्चोभौ न कालात्ययमर्हतः" मनु० ८-१४५।

**कालात्ययापदिष्ट ಕಾಲಾತ್ಯಯಾಪದಿಷ್ಟ** (पु०) ಐದು ವಿಧ ಹೇತ್ವಾಭಾಸಗಳಲ್ಲೊಂದಾದ ಹೇತುದೋಷ. कालात्ययेनापदिष्टः। ["हेत्वाभास" ಪದದಲ್ಲಿ ನೋಡಿ.]

**कालाध्यक्ष ಕಾಲಾಧ್ಯಕ್ಷ** (पु०) 1. ಪರಮಾತ್ಮ. 2. ಸೂರ್ಯ. कालस्याध्यक्षः। "कालाध्यक्षः प्रजाध्यक्षो विश्वकर्मा तमोनुदः" भा० वन०।

**कालानल ಕಾಲಾನಲ** (ಪುಂ) 1. ಕಾಲಾಗ್ನಿ, ಪ್ರಳಯ ಕಾಲದ ಬೆಂಕಿ. कालः सर्वसंहारकारकः अनलः। "दंष्ट्राकरालानि च ते मुखानि दृष्ट्वैव कालानलसंनिभानि" गीता ११-२५। 2. ಒಬ್ಬ ರಾಜ. "सभानरस्य पुत्रस्तु विद्वान् कालानलो नृपः"।

**कालानुनादिन् ಕಾಲಾನುನಾದಿನ್** (ಪುಂ) 1. ಭ್ರಮರ, ದುಂಬಿ. 2. ಗುಬ್ಬಚ್ಚಿ. 3. ಕಪಿಂಜಲಪಕ್ಷಿ. काले वर्षाकाले अनुनदति—अनु+णद (अव्यक्ते शब्दे) "णिनिः" (३-२-७८)। स्त्रियाम् जाति० "ङीष्" (४-१-४१)। **–नादिनी –ನಾದಿನೀ.** "कालानुनादी रोलम्बे कलविङ्के कपिञ्जले" मेदि०।

**कालानुसारक ಕಾಲಾನುಸಾರಕ** (ನಂ) 1. ಪೀತಗಂಧ, ಹಳದಿ ಚಂದನ. कालं कृष्णवर्णं मृगमदमनुसरति—अनु+सृ (गतौ) "ण्वुल्" (३-१-१३३)। (ವಿಂ) 2. ಕಾಲವನ್ನು ಅನುಸರಿಸುವ. "णिनिः" (३-२-७८)। **–अनुसारिन् –ಅನುಸಾರಿನ್.**

**कालानुसार्य ಕಾಲಾನುಸಾರ್ಯ** (ನಂ) 1. ಕಲ್ಲುಹೂವು. कालो मृगमदो गन्धेनानुसार्यो यस्य। "कालानुसार्यवृद्धाश्मपुष्पशीतशिवानि च"। 2. ಒಂದುವಿಧ ಸುಗಂಧ ದ್ರವ್ಯ. "कालेयकं च कालानुसार्यम्" अम०। 3. ಅಗುರು ಗಿಡ. "कालानुसार्यं शैलेये कालीये शिंशुपाद्रुमे" मेदि०। वा "कप्"। **–सार्यकम् –ಸಾರ್ಯಕಮ್.**

**कालान्तर ಕಾಲಾಂತರ** (ನಂ) ಬೇರೆ ಸಮಯ, ಮತ್ತೊಂದು ಕಾಲ. अन्यः कालः।

**कालापक ಕಾಲಾಪಕ** (ನಂ) 1. ಕಲಾಪಿಯಿಂದ ಪ್ರೋಕ್ತವಾದ ಶಾಖೆಯ ಧರ್ಮ.

**कालाभ्र ಕಾಲಾಭ್ರ** (ನಂ) ನೀರಿನಿಂದ ತುಂಬಿದ ಕಪ್ಪು ಮೋಡ, ನೀಲಮೇಘ.

**कालाम्र ಕಾಲಾಮ್ರ** (ಪುಂ) ಒಂದು ದ್ವೀಪ. "कुरून् यात्युत्तरान् वीर कालाम्रद्वीपमेव च"।

**कालायस ಕಾಲಾಯಸ** (ನಂ) ಕಪ್ಪು ಲೋಹ, ಕಬ್ಬಿಣ. कालमयः जातौ "टच्" (५-४-९४)।

**कालाशुद्धि ಕಾಲಾಶುದ್ಧಿ** (ಸ್ತ್ರೀಂ) ವೇಳೆಯ ಅಶುದ್ಧಿ, ಮಾಡುವ ಕಾರ್ಯಕ್ಕೆ ಅನರ್ಹತೆಯನ್ನು ಕೊಡುವ ಒಂದು ಧರ್ಮ. ಗುರುಶುಕ್ರರ ವಕ್ರತೆ, ಅತಿಚಾರ, ವೃದ್ಧತ್ವ, ಅಸ್ತ, ಬಾಲತ್ವ ಮುಂತಾದುವು ಕಾಲಕ್ಕೆ ಅನರ್ಹತೆಯನ್ನು ಉಂಟುಮಾಡುವುವು. ಇದರಿಂದ ಕಾಲವು ಅಶುದ್ಧವಾಗುವುದು. "वक्रातिचारवृद्धास्तबालत्वे गुरुशुक्रयोः। गुरौ मकरसिंहस्थे क्षयमासद्विमासयोः। त्रयोदशदिने पक्षे गुर्वादित्ये तथैव च। लुप्ताब्दे त्रिविधोत्पाते कालाशुद्धिरुदाहृतः"।

**कालिक ಕಾಲಿಕ** (ಪುಂ) 1. ಬಕಪಕ್ಷಿ. काले वर्षाकाले चरति – "ठक्"। 2. ಸುಂಕದ ಕಟ್ಟೆಯ ಅಧಿಕಾರಿ, ತೆರಿಗೆಯನ್ನು ವಸೂಲು ಮಾಡುವ ಅಧಿಕಾರಿ. "कालिकोऽधिकृतः शुल्के" वैज०। (ನಂ) 3. ದೀರ್ಘಕಾಲವುಳ್ಳ ವೈರ, ಹೆಚ್ಚುಕಾಲವುಳ್ಳ ಶತ್ರುತ್ವ. काल "ठञ्" (५-१-१०८)।

**कालिका ಕಾಲಿಕಾ** (ಸ್ತ್ರೀಂ) 1. ಅಂಬಿಕೆ, ಪಾರ್ವತಿಯ ಒಂದು ಅವತಾರ, ಶಿವಶಕ್ತಿ. 2. ಕಪ್ಪು ಬಣ್ಣ. "बहुविधेन वियोगिवधैनसा शशमिषादथ कालिकयाङ्कितः" नैष० ४-७३। 3. ಕ್ರಮವಾಗಿ ಕೊಡತಕ್ಕ ಪದಾರ್ಥಗಳ ಬೆಲೆ, ಕಂತುಗಳಲ್ಲಿ ಕೊಡುವ ವಸ್ತುಗಳ ಮೌಲ್ಯ. 4. ಹೊಸ ಮೋಡ. 5. ಮೋಡಗಳ ಸಾಲು. 6. ಹೆಣ್ಣು ಕಾಗೆ. 7. ಹೆಣ್ಣು ನರಿ. 8. ಮದ್ಯ. 9. ವೃಶ್ಚಿಕಪತ್ರೆ ಗಿಡ. 10. ಕ್ಲೃಪ್ತ ಕಾಲದಲ್ಲಿ ಪಾವತಿ ಮಾಡಿದ ಬಡ್ಡಿ. 11. ಜಟಾಮಾಂಸಿ. 12. ರೋಮಪಙ್ಕ್ತಿ, ಕೂದಲಿನಸಾಲು. "कालिका चण्डिकाभेदे कार्ष्ण्यवृश्चिकपत्रयोः। क्रमदेयवस्तुमूल्ये धूसरीनवमेघयोः। पटोलशाखारोमालीमांसीकाकीशिवासु च। मेघावलौ च" मेदि०। 13. ಒಂದು ಜಾತಿಯ ಸುವಾಸನೆಯ ಮಣ್ಣು. 14. ಗಿಡ್ಡ ಹೆಂಗಸು, ಮದುವೆಗೆ ಯೋಗ್ಯಳಲ್ಲದ ಕುಳ್ಳು ಹೆಂಗಸು. "कुब्जा तु दुर्दर्शा कालिकाऽपि च" वैज०। 15. ಕುದುರೆಯ ಹಲ್ಲುಗಳ ಸಾಲು. "कश्यमश्वस्य मध्यं स्याद्दन्तवेष्टस्तु नालिका। कालिका दन्तरेखा स्यात्" वैज०। 16. ಸಣ್ಣ ಜೀರಿಗೆ. "अथ सूक्ष्मोऽसौ कणजीरण ओसरः। अग्निमन्थो हृद्यगन्धस्सुगन्धिः कालिका कणा" वैज०। 17. ವೈವರ್ಣ್ಯ ಹೊಂದುವುದು, ಬಣ್ಣ ಬದಲಾಯಿಸುವುದು. "कालिका तु विवर्णता" वैज०। 18. ಮಸಿ, ಶಾಯಿ. 19. ಬೆಂಕಿಯಲ್ಲಿ ಕಾಯಿಸುವಾಗ ಚಿನ್ನದಲ್ಲಿ ಕಾಣುವ ಕೊಳೆ. 20. ವರುಣನ ಪತ್ನಿ.

**कालिङ्ग ಕಾಲಿಂಗ** (ಪುಂ) 1. ಕಳಿಂಗ ದೇಶದ ರಾಜನ ಮಗ. कलिङ्गस्यापत्यम् "अण्" (४-१-१६८)। 2. ಕಳಿಂಗ ದೇಶದ ದೊರೆ. "प्रतिजग्राह कालिङ्गः तमस्त्रैर्गजसाधनः" रघु० ४-४०। (ಪುಂ ಬಂ ವಂ) 3. ಕಳಿಂಗ ದೇಶದ ಜನರು. (ವಿಂ) 4. ಕಳಿಂಗ ದೇಶದ

ರಾಜರಿಗೆ ಸಂಬಂಧಿಸಿದ. "चकलिङ्गषरांश्चके कालिङ्गान् किङ्करीकृतान्" यादं २२-१५३।

**कालिदास ಕಾಳಿದಾಸ** (पुं०) ವಿಶ್ವವಿಖ್ಯಾತನಾದ ಕಾಳಿದಾಸ ಕವಿ. ರಘುವಂಶ ಕುಮಾರಸಂಭವ ಮುಂತಾದ ಕಾವ್ಯಗಳನ್ನೂ ಶಾಕುಂತಲ ಮುಂತಾದ ನಾಟಕಗಳನ್ನೂ ಬರೆದ ಮಹಾಕವಿ. काल्या: दास:। संज्ञायां ह्रस्व:। ಕಾಳಿದಾಸ ಮಹಾಕವಿಯ ಕಾಲ ದೇಶ ವಿಚಾರದಲ್ಲಿ ನಾನಾ ವಾದವಿವಾದಗಳು ಹುಟ್ಟಿ ಅವರವರಿಗೆ ತೋರಿಬಂದ ಕಾರಣಗಳಿಂದ ಒಬ್ಬೊಬ್ಬ ವಿಮರ್ಶಕಾರರೂ ಒಂದೊಂದು ಕಾಲವನ್ನು ನಿರ್ದೇಶಿಸುತ್ತ ಬಂದಿರುವುದರಿಂದ ಕ್ರಿಸ್ತಪೂರ್ವ ಒಂದನೆಯ ಶತಮಾನದಿಂದ ಪ್ರಾರಂಭಿಸಿ ಸದ್ಯಃ ಕ್ರಿಸ್ತಶಕ ಐದನೆಯ ಶತಮಾನಕ್ಕೆ ತಂದು ನಿಲ್ಲಿಸಿರುತ್ತಾರೆ. "मत्तोऽधुना कृतिरियं सति मालवेन्द्रे श्रीविक्रमार्कनृपराजवरे समासीत्" ಎಂಬ ಈ ಕವಿರಚಿತವಾದ ಜ್ಯೋತಿರ್ವಿದಾಭರಣಶ್ಲೋಕದಿಂದಲೂ "धन्वन्तरि: क्षपणकोऽमरसिंहशङ्कुवेतालभट्टघटकर्परकालिदासा:। ख्यातो वराहमिहिरो नृपते: सभायां रत्नानि वै वररुचिर्नव विक्रमस्य" ಮತ್ತು "शङ्क्वादिपण्डितवरा: कवयस्त्वनेके ज्योतिर्विद: समभवंश्च वराहपूर्वा:। श्रीविक्रमस्य बुधसंसदि प्राज्यबुद्धे: तैरप्ययं नयसख: किल कालिदास:" ಈ ಶ್ಲೋಕಗಳಿಂದಲೂ ಈ ಮಹಾಕವಿಯು ಮಾಳವದೇಶದ ಉಜ್ಜಯಿನಿಯಲ್ಲಿ ಐದನೆಯ ಶತಮಾನದ ವಿಕ್ರಮಾರ್ಕರಾಜನ ಆಸ್ಥಾನ ಪಂಡಿತರಲ್ಲೊಬ್ಬನಾಗಿದ್ದನೆಂದು ತಿಳಿಯಬಹುದಾಗಿದೆ. "काव्यत्रयं सुमतिकृत् रघुवंशपूर्वं जातं यतो ननु कियच्छ्रुतिकर्मवाद:। ज्योतिर्विदाभरणकालविधानशास्त्रं श्रीकालिदासकवितो हि ततो बभूव" ಎಂಬ ಶ್ಲೋಕದಿಂದ ಈ ಮಹಾಕವಿಯು ರಘುವಂಶ ಮೊದಲಾದ ಮೂರು ಕಾವ್ಯಗಳನ್ನೂ ಜ್ಯೋತಿರ್ವಿದಾಭರಣವೆಂಬ ಜ್ಯೋತಿಷ ಗ್ರಂಥವನ್ನೂ ರಚಿಸಿರುವನೆಂದು ತಿಳಿದುಬರುವುದು. ಕುಮಾರಸಂಭವ, ಮೇಘದೂತ ಮತ್ತು ರಘುವಂಶಗಳು ಈ ಮಹಾಕವಿರಚಿತವೆಂದು ಈ ಕೆಳಗೆ ಕಂಡ ಐತಿಹ್ಯದಿಂದಲೂ ತಿಳಿಯಬಹುದಾಗಿದೆ. ಮಹಾವಿದುಷಿಯಾದ ಒಬ್ಬ ಕನ್ಯೆಯು ತನ್ನ ತಂದೆಯು ತನ್ನ ವಿವಾಹಕ್ಕಾಗಿ ಕರೆತರಿಸಿದ ಅನೇಕ ಮಂದಿ ವಿದ್ವಾಂಸರನ್ನು ವಾದದಲ್ಲಿ ಜಯಿಸಿ ಅವರಾರನ್ನೂ ವರಿಸಲು ಒಪ್ಪದೆ ಕಳುಹಿಸಿಬಿಡುತ್ತಿರಲು ಪರಾಜಯ ಭಯದಿಂದ ಮತ್ತಾರೂ ಬರುತ್ತಲೇ ಇರಲಿಲ್ಲ. ಇದರಿಂದ ಬೇಸರಗೊಂಡ ತಂದೆಯು ಇನ್ನುಮುಂದೆ ಶಾಸ್ತ್ರಾರ್ಥವಿಚಾರವೇ ಇಲ್ಲದೆ ಯಾರು ಬಂದರೂ ಕನ್ಯೆಯನ್ನು ಕೊಟ್ಟು ವಿವಾಹ ಮಾಡಿಕೊಡುವುದಾಗಿ ನಿಶ್ಚಯಿಸಿದನು. ಹಿಂದೆ ಬಂದಿದ್ದವರಾರೂ ಪುನಃ ಬರಲು ಸಮ್ಮತಿಸದಿರಲು ದೂತರು ಬಹಳ ಬೇಜಾರಿನಿಂದ ವರನನ್ನು ಹುಡುಕುತ್ತಿದ್ದಾಗ ಒಂದು ಮರದ ಮೇಲೆ ರೆಂಬೆಯ ತುದಿಯಲ್ಲಿ ನಿಂತು ಬುಡವನ್ನು ಕಡಿಯುತ್ತಿದ್ದ ಕಾಳಿದಾಸನನ್ನು ಕಂಡು ಈ ಮಂದಮತಿಯೇ ಈ ಕನ್ಯೆಗೆ ಯೋಗ್ಯ ವರನೆಂದು ತಿಳಿದು ಅವನನ್ನು ಕರೆತರಲು ತಂದೆಯು ಅವನ ಗುಣದೋಷಗಳನ್ನು ವಿಚಾರಮಾಡದೆ ಮಗಳನ್ನು ಕೊಟ್ಟು ವಿವಾಹ ನಡೆಯಿಸಿದನು. ಬಳಿಕ ದಂಪತಿಗಳ ಸಂಭಾಷಣಕಾಲದಲ್ಲಿ ಕಾಳಿದಾಸನ ಅಪಭ್ರಂಶ ಪದಪ್ರಯೋಗಗಳನ್ನು ಕಂಡ ಪತ್ನಿಯು ಜುಗುಪ್ಸೆಯಿಂದ ಇವನನ್ನು ಮನೆಯಿಂದ ಓಡಿಸಿದಳು. ಆಗ ಕಾಳಿದಾಸನು ಬಹಳ ಖಿನ್ನನಾಗಿ ಕಾಡಿಗೆ ಹೋಗಿ ಸರಸ್ವತಿಯ ಉಪಾಸನೆ ಮಾಡಿ ಆ ದೇವಿಯ ಅನುಗ್ರಹದಿಂದ ಅಪಾರ ಪಾಂಡಿತ್ಯವನ್ನು ಸಂಪಾದಿಸಿ ಮನೆಗೆ ಹಿಂತಿರುಗಿದನು. ರಾತ್ರಿಯಲ್ಲಿ ಇವನು ಮನೆಗೆ ಬಂದಾಗ ಬಾಗಿಲು ಹಾಕಿದ್ದುದನ್ನು ಕಂಡು "अनावृतकवाटं द्वारं देहि" ಎಂದನು. ಇವನ ಧ್ವನಿಯನ್ನು ಕೇಳಿದ ಪತ್ನಿಯು ತನ್ನ ಪತಿಯೆಂದು ತಿಳಿದು "अस्ति कश्चित् वाग्विशेष: ?" ಎಂದು ಕೇಳಿದಳು. ಆಗ ಈ ಮಹಾಕವಿಯು अस्ति कश्चित् वाक् ಈ ಮೂರು ಪದಗಳನ್ನು ತೆಗದುಕೊಂಡು "अस्त्युत्तरस्यां दिशि देवतात्मा" ಎಂದು ಪ್ರಾರಭಿಸಿ ಕುಮಾರಸಂಭವ ಕಾವ್ಯವನ್ನೂ "कश्चित् कान्ताविरहगुरुणा" ಎಂದು ಪ್ರಾರಂಭಿಸಿ ಮೇಘದೂತಕಾವ್ಯವನ್ನೂ "वागर्थाविव संपृक्तौ" ಎಂದು ಪ್ರಾರಂಭಿಸಿ ರಘುವಂಶವೆಂಬ ಕಾವ್ಯವನ್ನೂ ರಚಿಸಿದುದಾಗಿ ಕಥೆಯಿರುವುದು. ಈ ಕಾವ್ಯಗಳ ರಚನೆಯಿಂದ ಪ್ರಸಿದ್ಧಿ ಪಡೆದ ಈ ಕವಿಯು ವಿಕ್ರಮಾದಿತ್ಯನ ಆಸ್ಥಾನಪಂಡಿತನಾದನು. ಮತ್ತು ಈ ಮಹಾಕವಿಯು ಶಾಕುಂತಲ, ಮಾಲವಿಕಾಗ್ನಿಮಿತ್ರ ಮತ್ತು ವಿಕ್ರಮೋರ್ವಶೀಯಗಳೆಂಬ ನಾಟಕಗಳನ್ನು ರಚಿಸಿರುವನು. "प्रथितयशसां भाससौमिल्लकविपुत्रादीनां प्रबन्धानतिक्रम्य वर्तमानकवे: कालिदासस्य कृतौ कथं बहुमान:" ಎಂಬ ಮಾಲವಿಕಾಗ್ನಿಮಿತ್ರದ ವಚನದಿಂದ ಮಾಲವಿಕಾಗ್ನಿಮಿತ್ರ ನಾಟಕವು ಕಾಳಿದಾಸವಿರಚಿತವನ್ನಬಹುದಾದರೂ ಭೋಜದೇವನಿಗಿಂತಲೂ ಪ್ರಾಚೀನನಾಗಿದ್ದ ಧನಿಕನಿಂದ ಈ ನಾಟಕವು ಉದಾಹರಿಸಲ್ಪಟ್ಟಿರುವುದರಿಂದಲೂ ಶಾಕುಂತಲನಾಟಕಕ್ಕಿಂತಲೂ ವಿಭಿನ್ನವಾದ ಶೈಲಿಯು ಇದರಲ್ಲಿರುವುದರಿಂದಲೂ ಈ ಕಾಳಿದಾಸನಿಗಿಂತಲೂ ಬೇರೆಯಾದ ಮತ್ತೊಬ್ಬ ಕಾಳಿದಾಸನಿಂದ ರಚಿತವಾಗಿರಬಹುದೆಂದೂ ಒಂದು ಅಭಿಪ್ರಾಯವಿದೆ. ಆದರೆ ಮಾಲವಿಕಾಗ್ನಿಮಿತ್ರವು ಪ್ರಾರಂಭದ ಗ್ರಂಥವಾದುದರಿಂದ ಶೈಲಿಯು ಭಿನ್ನವಾಗಿರ

ಬಹುದೆಂದೂ ಕೆಲವರ ಅಭಿಪ್ರಾಯ. ದಂಡಿ ಕವಿಯ ಕಾವ್ಯದಲ್ಲಿ ಪದಲಾಲಿತ್ಯವೂ ಭಾರವಿ ಕವಿಯ ಕಾವ್ಯದಲ್ಲಿ ಅರ್ಥಗೌರವವೂ ಇರುವಂತೆ ಕಾಳಿದಾಸನ ಕಾವ್ಯಗಳಲ್ಲಿ ಉಪಮಾಲಂಕಾರದ ಒಂದು ವೈಶಿಷ್ಟ್ಯವಿರುವುದು. "उपमा कालिदासस्य भारवेरर्थगौरवम्। दण्डिनः पदलालित्यं माघे सन्ति त्रयो गुणाः"।

**कालिनी ಕಾಲಿನೀ** (स्त्री०) 1. ಆರಿದ್ರಾನಕ್ಷತ್ರ. 2. ಹೊಕ್ಕುಳ ಬಳ್ಳಿ. "निष्ठचा स्वातीविशाखे तु राधे आर्द्रा तु कालिनी"। "बालस्य नाभिनालायाममरा कालिनीति च" वैजं०।

**कालिन्द ಕಾಳಿಂದ** (पुं०) 1. ಕಲ್ಲಂಗಡಿ ಗಿಡ. (नं०) 2. ಕಲ್ಲಂಗಡಿ ಹಣ್ಣು. स्वार्थे "कः"। –कम् –ಕವರ್.

**कालिन्दी ಕಾಳಿಂದೀ** (स्त्री०) ಯಮುನಾನದಿ. कलिन्दे भवा "अण्" (४-३-५३)। कलिन्दस्येयं "अण्" (४-३-१२०) वा। "ङीप्" (४-१-१५)। "कालिन्दीजलजनितश्रियः श्रयन्ते वैदग्धीमिह सरितः सुरापगायाः" माघ० ४-२६।

**कालिन्दीकर्षण ಕಾಳಿಂದೀಕರ್ಷಣ** (पुं०) ಬಲರಾಮ. कर्षति – कृष (विलेखने) "ल्युः" (३-१-१३४)। कालिन्द्याः कर्षणः। [ಬಲರಾಮನು ಯಮುನಾ ತೀರದಲ್ಲಿ ವಿಹರಿಸುತ್ತಿದ್ದಾಗ ಜಲಕ್ರೀಡೆಗಾಗಿ ಯಮುನೆಯು ತನ್ನ ಹತ್ತಿರಕ್ಕೆ ಬರಬೇಕೆಂದು ಹೇಳಿದನು. ಯಮುನೆಯು ಬರದಿರಲು ತನ್ನ ಹಲದಿಂದ ಯಮುನೆಯ ಪ್ರವಾಹವನ್ನು ಎಳೆದಾಗ ಹೆದರಿದ ಯಮುನೆಯು ಬಲರಾಮನ ಹತ್ತಿರಕ್ಕೆ ಬಂದು ಹರಿಯುತ್ತಾ ಸ್ತ್ರೀರೂಪದಿಂದ ಬಲರಾಮನನ್ನು ನಾನಾ ಬಗೆಯಾಗಿ ಸ್ತುತಿಸಿ ನೀಲಾಂಬರ, ಪುಷ್ಪಮಾಲೆ ಮತ್ತು ಅನೇಕ ಆಭರಣಗಳನ್ನು ಕೊಟ್ಟು ಕಳುಹಿಸಿದಳು.] भाग० १०-६५। कालिन्द्याः भेदनः। –भेदनः –ಭೇದನಃ.

**कालिन्दीसू ಕಾಳಿಂದೀಸೂ** (स्त्री०) ಕಾಳಿಂದಿಯ ತಾಯಿ, ಸೂರ್ಯನ ಪತ್ನಿ. कालिन्दीं यमुनां सूते – षूङ् (प्राणिगर्भविमोचने) "क्विप्" (३-२-६१)।

**कालिमन् ಕಾಳಿಮನ್** (पुं०) ಕೃಷ್ಣವರ್ಣ, ಕಪ್ಪು ಬಣ್ಣ. कालस्य भावः "इमनिच्" (५-१-१२२)। "या बिभर्ति कलवल्लकीगुणस्वानमानमतिकालिमाऽलया" माघ० ४-५७।

**कालिय ಕಾಳಿಯ** (पुं०) ಒಂದು ಸರ್ಪ. के जले आलीयते – आ + लीङ् (संश्लेषणे) "कः" (वा० ३-२-५)। "काले कालियकायकालवपुषः पांसून् गजाम्भोमुचः" माघ० १७-६१। [ಗರುಡನು ರಮಣಕದ್ವೀಪದಲ್ಲಿ ಸರ್ಪಗಳನ್ನೆಲ್ಲಾ ತಿನ್ನಲು ಬಂದಾಗ ಸರ್ಪಗಳೆಲ್ಲವೂ ತಾವು ಗರುಡನಿಗೆ ಸರದಿಯಂತೆ ಆಹಾರವನ್ನು ಒದಗಿಸಲು ನಿಶ್ಚಯಿಸಿಕೊಂಡುವು. ಈ ಕಾಳಿಯನು ತನ್ನ ಸರದಿ ಬಂದಾಗ ಅದಕ್ಕೆ ಸಮ್ಮತಿಸದೆ ರಮಣಕದ್ವೀಪವನ್ನು ಬಿಟ್ಟು, ಸೌಭರಿಯ ಶಾಪದಿಂದ ಗರುಡನಿಗೆ ಪ್ರವೇಶವಿಲ್ಲದಿದ್ದ ಕಾಳಿಂದೀನದಿಯ ಮಡುವನ್ನು ಪ್ರವೇಶಿಸಿತು. ಈ ಕಾಳಿಯನ ಪ್ರವೇಶದಿಂದ ಕಾಳಿಂದೀನದಿಯ ಮಡುವೆಲ್ಲಾ ವಿಷಮಯವಾಗಿ ಆ ವಿಷಜ್ವಾಲೆಯಿಂದ ತೀರದಲ್ಲಿ ಸಂಚರಿಸುತ್ತಿದ್ದ ಪಶು ಪಕ್ಷಿ ಮೊದಲಾದುವೆಲ್ಲಾ ಪ್ರಾಣ ಬಿಡುತ್ತಿರಲು ಶ್ರೀಕೃಷ್ಣನು ಕಾಳಿಂದಿಯ ಮಡುವಿನೊಳಕ್ಕೆ ಧುಮುಕಿ ಕಾಳಿಯನ ತಲೆಯ ಮೇಲೆ ನಿಂತು ಬಾಲ ಹಿಡಿದು ತುಳಿಯುತ್ತ ಅದನ್ನು ಕೊಲ್ಲಲು ಯತ್ನಿಸಿದಾಗ ಅವರ ಪತ್ನಿಯರಾದ ನಾಗಕನ್ಯೆಯರು ಬಂದು ಶ್ರೀಕೃಷ್ಣನನ್ನು ನಾನಾ ವಿಧವಾಗಿ ಸ್ತುತಿಸಿ ಕಾಳಿಯನ ಪ್ರಾಣಭಿಕ್ಷೆಯನ್ನು ಬೇಡುವರು. ಆಗ ಶ್ರೀಕೃಷ್ಣನು ಕಾಳಿಯನಿಗೆ ಗರುಡನಿಂದ ಉಂಟಾಗಿದ್ದ ಭಯವನ್ನು ತಪ್ಪಿಸಿ ಪಾತಾಳದಲ್ಲಿ ವಾಸಮಾಡುವಂತೆ ಆಜ್ಞೆಯಿತ್ತು ಕಳುಹಿಸಿದನು.] भाग० १०-१६।

**कालियदमन ಕಾಳಿಯದಮನ** (पुं०) 1. ಕಾಳಿಯ ಸರ್ಪವನ್ನು ದಂಡಿಸಿದ ಶ್ರೀಕೃಷ್ಣ. कालियं दमयति – दमु (उपशमे) + णिच् "ल्युः" (३-१-१३४)। ["कालिय" ಪದದಲ್ಲಿ ನೋಡಿ.] (नं०) 2. ಕಾಳಿಯ ಸರ್ಪವನ್ನು ದಂಡಿಸುವುದು. भावे "ल्युट्" (३-३-११५)।

**कालियह्रद ಕಾಳಿಯಹ್ರದ** (पुं०) ಕಾಳಿಂದೀನದಿಯಲ್ಲಿ ಕಾಳಿಯ ಸರ್ಪವು ವಾಸಿಸುತ್ತಿದ್ದ ಒಂದು ಮಡು. कालियस्य ह्रदः।

**काली ಕಾಳೀ** (स्त्री०) 1. ಪರಶಿವನ ಪತ್ನಿ. कालस्य शिवस्य पत्नी – काल "ङीष्" (४-१-४८)। 2. ಕಪ್ಪು ಬಣ್ಣದ ಹೆಂಗಸು. काल "ङीष्" (४-१-४२)। 3. ಹಿಮವಂತನ ಮಗಳಾದ ಪಾರ್ವತಿ. "सुतामनुजगामाशु गतां कालीं हराश्रमम्"। 4. ದುರ್ಗಾದೇವಿ. "काली करालवदना विनिष्क्रान्तासिपाशिनी"। 5. ಭೀಮಸೇನನ ಒಬ್ಬ ಪತ್ನಿ. "युधिष्ठिरात्तु पौरव्यां देवकोऽथ घटोत्कचः। भीमसेनाद्धिडिम्बायां काल्यां सर्वगतस्ततः" भाग० ९-२२-३०। 6. ರಾತ್ರಿ. 7. ಅಗ್ನಿಯ ಸಪ್ತಜ್ವಾಲೆಗಳಲ್ಲೊಂದು. 8. ಕಾಳರಾತ್ರಿ. 9. ತಂತ್ರೋಕ್ತವಾದ ಹತ್ತು ಮಹಾವಿದ್ಯೆಗಳಲ್ಲೊಂದು. ["काल" ಪದದಲ್ಲಿ ನೋಡಿ.]

**कालीक ಕಾಳೀಕ** (पुं०) ಬಕಪಕ್ಷಿ. के जले अलीक इव। स्त्रियाम् "ङीष्" (४-१-६३)। **–की –ಕೀ.**

**कालीय ಕಾಳೀಯ** (नं०) ಕೃಷ್ಣಚಂದನ.

**कालीयक ಕಾಳೀಯಕ** (नं०) ಕಾಲಾನುಸಾರ್ಯವೆಂಬ ಒಂದು ಸುಗಂಧವಸ್ತು.

**कालेय ಕಾಲೇಯ** (पुं०) 1. ಒಬ್ಬ ರಾಕ್ಷಸ. (नं०) 2. ಕೃಷ್ಣಚಂದನ. "आश्यानकालेयकृताङ्गरागाम्" कुमा० ७-९।

**कालेयक ಕಾಲೇಯಕ** (पुं०) 1. ಕುಕ್ಕುರ, ನಾಯಿ. 2. ಮರದರಿಶಿನ. कलेरयम् "ढक्" (वा० ४-२-८)। स्वार्थे "कन्"। 3. ಕೃಷ್ಣಚಂದನ.

**कालेश ಕಾಲೇಶ** (पुं०) ಕಾಲಕ್ಕೆ ಅಧಿಪತಿಯಾದ ಸೂರ್ಯ. कालस्य ईशः।

**काल्पनिक ಕಾಲ್ಪನಿಕ** (वि०) 1. ಕಲ್ಪಿತವಾದ, ಸೃಷ್ಟಿಸಲ್ಪಟ್ಟ. 2. ಆರೋಪಿಸಲ್ಪಟ್ಟ. ಇಲ್ಲದುದನ್ನು ಹೊರಿಸಲ್ಪಟ್ಟ. कल्पनया निर्वृत्तम् "ठञ्" (४-४-१९)।

**काल्पसूत्र ಕಾಲ್ಪಸೂತ್ರ** (वि०) ಕಲ್ಪಸೂತ್ರಗಳನ್ನು ತಿಳಿದವನು ಅಥವಾ ಅಧ್ಯಯನ ಮಾಡಿದವನು. कल्पसूत्रं वेत्त्यधीते वा "अण्" (४-२-५९)। स्त्रियाम् "ङीप्" (४-१-१५)। **–सूत्री –ಸೂತ್ರೀ.**

**काल्य ಕಾಲ್ಯ** (नं०) 1. ಪ್ರಾತಃಕಾಲ. कल्य स्वार्थे "अण्" (५-४-३८)। (वि०) 2. ಕಾಲದಲ್ಲಿ ಉಂಟಾದ, ಆಯಾ ಋತುಗಳಲ್ಲಿ ಉಂಟಾದ. काले भवम् "यत्" (४-३-५४)। 3. ಸಮಯವು ಒದಗಿಬಂದಿರುವ, ಅದಕ್ಕೆ ತಕ್ಕ ಕಾಲವು ಒದಗಿರುವ–ಚಳಿ ಮೊದಲಾದುದು. कालः प्राप्तोऽस्य "यत्" (५-१-१०७)।

**काल्या ಕಾಲ್ಯಾ** (स्त्री०) ಗರ್ಭಗ್ರಹಣಕ್ಕೆ ಯೋಗ್ಯವಾದ ಕಾಲವುಳ್ಳ ಹಸು. कालः गर्भग्रहणयोग्यः कालः प्राप्तोऽस्य "यत्" (५-१-१०७)। "काल्योपसर्या प्रजने" अम०। "उपसर्या काल्या प्रजने" पा० सू० ३-१-१०४।

**काल्याणक ಕಾಲ್ಯಾಣಕ** (नं०) ಕಲ್ಯಾಣದ ಭಾವ, ಮಂಗಳವಾಗಿರುವಿಕೆ. कल्याणस्य भावः "वुञ्" (५-१-१३३)।

**काल्याणिनेय ಕಾಲ್ಯಾಣಿನೇಯ** (पुं०) ಕಲ್ಯಾಣಿಯ ಮಗ, ಅದೃಷ್ಟಶಾಲಿ ಹೆಂಗಸಿನ ಮಗ. कल्याणी "ढक्" इनङादेशश्च (४-१-१२६)।

**काव ಕಾವ** (नं०) ಕವಿದೇವತಾಕವಾದ ಒಂದು ಸಾಮ. कविर्देवताऽस्य "अण्" (४-२-२४)।

**कावचिक ಕಾವಚಿಕ** (नं०) ಕವಚಧಾರಿಗಳ ಸಮೂಹ, ಕವಚಗಳನ್ನು ತೊಟ್ಟಿರುವವರ ಗುಂಪು. कवच "ठञ्" (४-२-४१)।

**कावाद ಕಾವಾದ** (पुं०) ಕಲಹ, ಜಗಳ. कुत्सितः ईषद्वा वादः कादेशः (६-३-१०५)। "देवाकानिनि कावादे वाहिकास्वस्वका हि वा" किरा० १५-२५।

**कावार ಕಾವಾರ** (पुं०) ಶೈವಾಲ, ಪಾಚಿ. कं जलमावृणोति –आ + वृञ् (वरणे) "अण्" (३-२-१)।

**कावृक ಕಾವೃಕ** (पुं०) 1. ಕೋಳಿ, ಹುಂಜ. 2. ಚಕ್ರವಾಕಪಕ್ಷಿ. 3. ಹಳದಿ ತಲೆಯ ಒಂದು ಹಕ್ಕಿ. ईषत् वृकइव। "कावृकः कृकवाकौ स्यात् पीतमस्तककोकयोः" मेदि०।

**कावेरी ಕಾವೇರೀ** (स्त्री०) 1. ಕೊಡಗು ಜಿಲ್ಲೆಯ ತಲಕಾವೇರಿಯಲ್ಲಿ ಹುಟ್ಟಿ ಮೈಸೂರು ಮತ್ತು ಮದರಾಸು ಪ್ರಾಂತಗಳಲ್ಲಿ ಹರಿಯುತ್ತಿರುವ ಒಂದು ಮಹಾನದಿ. कं जलमेव बेरं शरीरम्, तस्य इदम् "अण्" (४-३-१२०)। "ङीप्" (४-१-१५)। "कावेरीं सरितां पत्युः शङ्कनीयामिवाकरोत्" रघु० ४-४५। "ततो गच्छेत कावेरीं वृतामप्सरसां गणैः। तत्र स्नात्वा नरो राजन् गोसहस्रफलं लभेत्" भा० वन० ८५। ಸ್ನಾನಮಾತ್ರದಿಂದಲೇ ಸಕಲ ಪಾಪಗಳನ್ನೂ ಪರಿಹರಿಸುವ ಪವಿತ್ರವಾದ ಈ ಮಹಾನದಿಯು ದಕ್ಷಿಣಭಾರತದಲ್ಲೆಲ್ಲಾ ಪ್ರಸಿದ್ಧವಾಗಿದೆ. ಈ ನದಿಗೆ ಬೆಳಗೋಳದ ಹತ್ತಿರ ಕೃಷ್ಣರಾಜಸಾಗರವೆಂಬ ಒಂದು ದೊಡ್ಡ ಅಣೆಕಟ್ಟನ್ನು ನಿರ್ಮಿಸಿ ಮೈಸೂರು ಸರ್ಕಾರವೂ ಮೆಟ್ಟೂರು ಬಳಿ ಒಂದು ಅಣೆಯನ್ನು ಕಟ್ಟಿ ಮದರಾಸು ಸರ್ಕಾರವೂ ಕಾಲುವೆಗಳ ಮೂಲಕ ನೀರು ಹಾಯಿಸಿ ಲಕ್ಷೋಪಲಕ್ಷ ಎಕರೆಗಳ ಜಮೀನಿನಲ್ಲಿ ಬತ್ತ, ಕಬ್ಬುಗಳನ್ನು ಬೆಳೆಯಲು ದೇಶದ ಜನತೆಗೆ ಅನುಕೂಲ್ಯ ಕಲ್ಪಿಸಿಕೊಟ್ಟಿವೆ. ಮತ್ತು ಇಂದು ನಮ್ಮ ದೇಶವಲ್ಲವನ್ನೂ ತನ್ನ ದಿವ್ಯ ಪ್ರಕಾಶದಿಂದ ಬೆಳಗುತ್ತಿರುವ ವಿದ್ಯುಚ್ಛಕ್ತಿಯನ್ನು ಈ ನದಿಯ ನೀರಿನ ಪ್ರಪಾತದಿಂದಲೇ ಶಿವಸಮುದ್ರ ಮತ್ತು ಮೆಟ್ಟೂರುಗಳಲ್ಲಿ ಉತ್ಪಾದಿಸುತ್ತಿದ್ದಾರೆ. ಈ ಎಲ್ಲಾ ಮೂಲಗಳಿಂದಲೂ ಜನತೆಗೆ ಆಹಾರವಸ್ತುಗಳೂ ಕೈಗಾರಿಕೆಗಳೂ ಬೆಳೆದು ನಮ್ಮ ಮೈಸೂರು ದೇಶದ ಸಂಪತ್ತು ಸರ್ವತೋಮುಖವಾಗಿ ಅಭಿವೃದ್ಧಿ ಹೊಂದುತ್ತಿದೆ. ಈ ನದಿಯು ಮೂರು ಜಾಗಗಳಲ್ಲಿ ಕವಲೊಡೆದು ಮೈಸೂರು ಜಿಲ್ಲೆಯ ಶ್ರೀರಂಗಪಟ್ಟಣದಲ್ಲಿ ಆದಿರಂಗನನ್ನೂ ಶಿವಸಮುದ್ರದಲ್ಲಿ ಮಧ್ಯರಂಗನನ್ನೂ ತಿರುಚ್ಚಿರಪಳ್ಳಿಜಿಲ್ಲೆಯ ಶ್ರೀರಂಗದಲ್ಲಿ ಅಂತ್ಯರಂಗನನ್ನೂ ಪ್ರದಕ್ಷಿಣೆಮಾಡಿ ಹರಿಯು

ತ್ತಿರುವುದು. ಇದು ನಾಲ್ಕುನೂರು ಮೈಲಿಗಳಿಗಿಂತಲೂ ಅಧಿಕದೂರ ಹರಿದು ಮದರಾಸು ಪ್ರಾಂತದ ಚಿದಂಬರದ ಸಮೀಪದಲ್ಲಿ ಸಮುದ್ರಕ್ಕೆ ಸೇರುವುದು. 2. ವೇಶ್ಯೆ, ಸೂಳೆ. 3. ಹರಿದ್ರೆ, ಅರಿಶಿನ. "कावेरी तु हरिद्रायां वेश्यायां सरिदन्तरे" ಹೇಮ೦।

**ಕಾವ್ಯ ಕಾವ್ಯ** (ಪುಂ) 1. ಭೃಗುಋಷಿಯ ಮಗನಾದ ಕವಿಯ ಮಗ ಶುಕ್ರಾಚಾರ್ಯರು. कवेः भृगुपुत्रस्यापत्यम् "ण्यः" (೪-೧-೧೫೧)। "दैतेयनीतेः पथि सार्थवाहः काव्यः स काव्येन सभामभाणीत्" ನೈಷ೦ ೧೦-೫೯। (ನ೦) 2. ಕಾವ್ಯ, ಗ್ರಂಥ, ಗದ್ಯ ಅಥವಾ ಪದ್ಯರೂಪವಾದ ಕವಿಯ ಕವಿತೆ (ಕೃತಿ). कवेः कर्म "ष्यञ्" (೫-೧-೧೨೪)। "तैः शरीरं च काव्यानामलङ्कारास्त्र दर्शिताः। शरीरं तावदिष्टार्थ-व्यवच्छिन्ना पदावली" ಕಾವ್ಯಾ೦ ೧-೧೦। **ಕಾವ್ಯ ಲಕ್ಷಣ :** ಕಾವ್ಯದ ಲಕ್ಷಣವನ್ನು ಒಬ್ಬೊಬ್ಬ ಲಕ್ಷಣ ಕಾರರೂ ಒಂದೊಂದು ರೀತಿಯಲ್ಲಿ ಹೇಳಿರುತ್ತಾರೆ. **ಕಾವ್ಯ ಪ್ರಕಾಶಕಾರರು :** "तददोषौ शब्दार्थौ सगुणावनलंकृती पुनः क्वापि" ರಸಾದ್ಯಪಕರ್ಷಕ ದುಃಶ್ರವತ್ವಾದಿ ದೋಷ ರಹಿತವಾದ, ಮಾಧುರ್ಯಾದಿ ಗುಣವಿಶಿಷ್ಟವಾದ ಕೆಲವು ಕಡೆ ಅಲಂಕಾರವು ಅಸ್ಫುಟವಾಗಿದ್ದರೂ ಅಂತಹ ಶಬ್ದಾರ್ಥಗಳು ಕಾವ್ಯವೆಂದೂ, **ಸಾಹಿತ್ಯದರ್ಪಣಕಾರರು :** "वाक्यं रसात्मकं काव्यम्" ಕಾವ್ಯದ ಉಪಾದೇಯತ್ವಕ್ಕೆ ಮುಖ್ಯ ಕಾರಣವಾದ ರಸಪರಿಪೂರ್ಣವಾದ ವಾಕ್ಯವೇ ಕಾವ್ಯವೆಂದೂ, **ರಸಗಂಗಾಧರಕಾರರು :** "रमणीयार्थप्रतिपादकः शब्दः काव्यम्" ಚಿತ್ತಾಹ್ಲಾದಕವಾದ ಅರ್ಥವನ್ನು ಕೊಡುವ ಶಬ್ದವೇ ಕಾವ್ಯವೆಂದೂ, **ಆಚಾರ್ಯದಂಡಿಯು :** "इष्टार्थव्यवच्छिन्ना पदावली (काव्यस्य) शरीरम्" ರಸಾದ್ಯನುಗತವಾಗಿ ಮನೋಹರವಾಗಿರುವ ಚಮತ್ಕಾರಾಧಾಯಕವಾದ ಪದಸಮೂಹವು ಕಾವ್ಯವೆಂದೂ, **ಆನಂದ ವರ್ಧನಾಚಾರ್ಯರು :** "काव्यस्यात्मा ध्वनिः" ಧ್ವನಿಯೇ ಕಾವ್ಯದ ಮುಖ್ಯ ಜೀವಾಳವೆಂದೂ ಈ ರೀತಿ ಅನೇಕ ವಿಧವಾಗಿ ಅಭಿಪ್ರಾಯಪಡುತ್ತಾರೆ.

**ಕಾವ್ಯನಿರ್ಮಾಣಫಲ:** "काव्यं यशसेऽर्थकृते व्यवहारविदे शिवेतरक्षतये। सद्यः परनिर्वृतये कान्तासम्मिततयोपदेशयुजे" ಯಶಸ್ಸು, ದ್ರವ್ಯ (ಧನ), ವ್ಯವಹಾರ ಜ್ಞಾನ, ಅಮಂಗಳನಿವೃತ್ತಿಪೂರ್ವಕ ಶುಭಫಲಪ್ರಾಪ್ತಿ, ಸೌಖ್ಯ, ಕಾಂತಾಸಮ್ಮಿತವಾದ ವಾಕ್ಯದಿಂದ ಉಪದೇಶ ಇವು ಕಾವ್ಯರಚನೆಯ ಫಲವೆಂದು ಕಾವ್ಯಪ್ರಕಾಶಕಾರರೂ, "चतुर्वर्गफलप्राप्तिः सुखादल्पधियामपि। काव्यादेव यतस्तेन तत्स्वरूपं निरूप्यते" ಕೇವಲಕೋಮಲಮತಿಯುಳ್ಳ ಸಾಮಾನ್ಯ ಜನರಿಗೂ ಸುಖವಾಗಿ ಧರ್ಮಾರ್ಥಕಾಮಮೋಕ್ಷ ರೂಪವಾದ ಚತುರ್ವರ್ಗಫಲಲಾಭವೇ ಮುಖ್ಯ ಫಲವೆಂದು ಸಾಹಿತ್ಯದರ್ಪಣಕಾರರೂ ಹೇಳಿರುತ್ತಾರೆ.

**ಕಾವ್ಯಪ್ರಭೇದಗಳು :** ಕಾವ್ಯವು ಗದ್ಯ, ಪದ್ಯ ಮತ್ತು ಉಭಯಾತ್ಮಕ (ಚಂಪು)ಗಳೆಂದು ಮೂರು ವಿಧ. ರಸ ಗಂಗಾಧರಕಾರರಿಂದ ಧ್ವನಿ, ಗುಣೀಭೂತವ್ಯಂಗ್ಯ, ಅರ್ಥ ಚಿತ್ರ ಮತ್ತು ಶಬ್ದಚಿತ್ರಗಳೆಂದು ನಾಲ್ಕು ವಿಧವಾದ ಈ ಕಾವ್ಯವು "तच्चोत्तमोत्तमोत्तममध्यमाधमभेदाच्चतुर्धा" ಕ್ರಮವಾಗಿ ಉತ್ತಮೋತ್ತಮ, ಉತ್ತಮ, ಮಧ್ಯಮ ಮತ್ತು ಅಧಮಗಳೆಂದು ನಾಲ್ಕು ಭೇದಗಳಾಗಿ ವಿಂಗಡಿಸಲ್ಪಟ್ಟಿದೆ. "काव्यं ध्वनिर्गुणीभूतव्यङ्ग्यं चेति द्विधा मतम्" ಧ್ವನಿ ಮತ್ತು ಗುಣೀಭೂತವ್ಯಂಗ್ಯಗಳೆಂದು ಕಾವ್ಯವು ಎರಡು ವಿಧ ಎಂದು ಸಾಹಿತ್ಯದರ್ಪಣಕಾರರು ಹೇಳಿರುತ್ತಾರೆ.

**ಧ್ವನಿಕಾವ್ಯವು :** (1) ಅಭಿಧಾಮೂಲ ಮತ್ತು (2) ಲಕ್ಷಣಾಮೂಲಗಳೆಂದು ಮೊದಲು ಎರಡು ವಿಧ. "भेदौ ध्वनेरपि द्वावुदीरितौ लक्षणाभिधामूलौ" ಸಾ೦ ದ೦ ೪-೨೦। ಅಭಿಧಾಮೂಲಧ್ವನಿಯು ಸಂಲಕ್ಷ್ಯಕ್ರಮ ಮತ್ತು ಅಸಂಲಕ್ಷ್ಯಕ್ರಮಗಳೆಂದೂ ಲಕ್ಷಣಾಮೂಲಧ್ವನಿಯು ಅರ್ಥಾಂತರ ಸಂಕ್ರಮಿತ ಮತ್ತು ಅತ್ಯಂತ ತಿರಸ್ಕೃತಗಳೆಂದೂ ಭೇದಗಳನ್ನು ಹೊಂದುವುವು. ಸಂಲಕ್ಷ್ಯಕ್ರಮವು ಶಬ್ದಶಕ್ತಿ ಮೂಲ, ಅರ್ಥಶಕ್ತಿಮೂಲ ಮತ್ತು ಉಭಯಶಕ್ತಿಮೂಲ ಗಳೆಂದು ಮೂರು ವಿಧ. ಶಬ್ದಶಕ್ತಿಮೂಲವು ವಸ್ತು, ಅಲಂಕಾರಭೇದಗಳಿಂದ ಎರಡು ವಿಧ. ಈ ಎರಡು ಭೇದ ಗಳುಳ್ಳ ಅರ್ಥಶಕ್ತಿಮೂಲವೂ ಸ್ವತಃಸಂಭವಿ, ಕವಿ ಪ್ರೌಢೋಕ್ತಿ ಮತ್ತು ಕವಿನಿಬದ್ಧಪ್ರೌಢೋಕ್ತಿಗಳೆಂದು ಮೂರು ವಿಧಗಳಾಗಿ ಒಟ್ಟು ಆರು ವಿಧಗಳಾಗುವುದು. ಈ ರೀತಿಯಾಗಿ ಅನೇಕ ಭೇದಗಳಿಂದ ಅಭಿಧಾಮೂಲ ಮತ್ತು ಲಕ್ಷಣಾಮೂಲಧ್ವನಿಗಳು ಐವತ್ತೊಂದು (51) ವಿಧವಾಗಿ ಆಗುವುವು. ಈ ಐವತ್ತೊಂದು ಭೇದಗಳೂ ಅಂಗಾಂಗಿಭಾವಸಂಕರ, ಏಕಾಶ್ರಯಸಂಕರ, ಸಂದೇಹ ಸಂಕರ ಮತ್ತು ಸಂಸೃಷ್ಟಿಭೇದಗಳಿಂದ ಸಜಾತೀಯ ವಿಜಾತೀಯ ಮೇಳನದಿಂದ ಒಟ್ಟು 5304 ಭೇದಗಳಾಗುವುವು. ಸಂಕರ ಮತ್ತು ಸಂಸೃಷ್ಟಿರಹಿತವಾದ ಶುದ್ಧವಾದ ಐವತ್ತೊಂದು (51) ಭೇದಗಳ ಪರಸ್ಪರ ಯೋಗದಿಂದ 5355 ಭೇದ ಗಳಾಗುವುವು. "संकरेण त्रिरूपेण संसृष्ट्या चैकरूपया। वेदखाग्निशराः (5304) शुद्धैरिषुबाणाग्निसायकाः" (5355) ಸಾ೦ ದ೦ ೪-೧೨।

**ಗುಣೀಭೂತವ್ಯಂಗ್ಯಕಾವ್ಯವು :** (1) ಇತರಾಂಗ, (2) ಕಾಕ್ವಾಕ್ಷಿಪ್ತ, (3) ವಾಚ್ಯಸಿದ್ಧ್ಯಂಗ, (4) ಸಂದಿಗ್ಧ

ಪ್ರಾಧಾನ್ಯ, (5) ತುಲ್ಯಪ್ರಾಧಾನ್ಯ, (6) ಅಸ್ಫುಟ, (7) ಅಗೂಢ ಮತ್ತು (8) ಅಸುಂದರಗಳೆಂದು ಎಂಟು ವಿಧ. "अपरं तु गुणीभूतव्यङ्ग्यं वाच्यादनुत्तमे व्यङ्ग्ये। तत्र स्यादितराङ्ग काक्वाक्षिप्तं च वाच्यसिद्धयङ्गम्। सन्दिग्ध-प्राधान्यं तुल्यप्राधान्यमस्फुटमगूढम्। व्यङ्ग्यमसुन्दरमेवं भेदास्तस्योदिता अष्टौ" सा० द० ४-१३, १४। ಮತ್ತು ಕಾವ್ಯವು ಶ್ರವ್ಯ ಮತ್ತು ದೃಶ್ಯಗಳೆಂದು ಎರಡು ವಿಧ. ಗದ್ಯ, ಪದ್ಯ ಮತ್ತು ಉಭಯಾತ್ಮಕ (ಚಂಪು)ಗಳು ಶ್ರವ್ಯಕಾವ್ಯ. ದೃಶ್ಯಕಾವ್ಯವು (1) ನಾಟಕ, (2) ಪ್ರಕರಣ, (3) ಭಾಣ, (4) ಪ್ರಹಸನ, (5) ಡಿಮ, (6) ವ್ಯಾಯೋಗ, (7) ಸಮವಕಾರ, (8) ವೀಥಿ, (9) ಅಂಕ ಮತ್ತು (10) ಈಹಾಮೃಗಗಳೆಂದು ಹತ್ತುವಿಧ. [ವಿವರಕ್ಕೆ ಆಯಾ ಪದಗಳಲ್ಲಿ ನೋಡಿ.]

**काव्यचन्द्रिका ಕಾವ್ಯಚಂದ್ರಿಕಾ** (स्त्री०) ಕಾವ್ಯಲಕ್ಷಣ ಮೊದಲಾದುವನ್ನು ಪ್ರತಿಪಾದಿಸುವ ಒಂದು ಅಲಂಕಾರ ಗ್ರಂಥ.

**काव्यचौर ಕಾವ್ಯಚೌರ** (पुं०) ಇತರರು ಬರೆದ ಕಾವ್ಯ ಭಾಗಗಳನ್ನು ಕದ್ದು ಕಾವ್ಯ ಬರೆಯುವವನು, ಬೇರೆಯವರ ಕಾವ್ಯಗಳಿಂದ ವಿಷಯಗಳನ್ನು ತೆಗೆದು ತನ್ನ ಕಾವ್ಯಕ್ಕೆ ಸೇರಿಸಿ ಬರೆಯುವವನು. काव्यस्य चौर इव।

**काव्यप्रकाश ಕಾವ್ಯಪ್ರಕಾಶ** (पुं०) ಮಮ್ಮಟಕವಿವಿರಚಿತ ವಾದ ಕಾವ್ಯಾದಿ ಲಕ್ಷಣಗಳನ್ನು ಪ್ರತಿಪಾದಿಸುವ ಒಂದು ಅಲಂಕಾರ ಗ್ರಂಥ. काव्यस्य स्वरूपादिप्रकाशो यत्र।

**काव्यप्रदीप ಕಾವ್ಯಪ್ರದೀಪ** (पुं०) ಕಾವ್ಯಸ್ವರೂಪಾದಿ ಗಳನ್ನು ತಿಳಿಸುವ ಒಂದು ಅಲಂಕಾರಗ್ರಂಥ. ಇದು ಕಾವ್ಯ ಪ್ರಕಾಶದ ಒಂದು ವ್ಯಾಖ್ಯಾನಗ್ರಂಥ.

**काव्यरसिक ಕಾವ್ಯರಸಿಕ** (वि०) ಕಾವ್ಯಗಳಲ್ಲಿ ನಿರೂಪಿಸ ಲ್ಪಡುವ ರಸಗಳನ್ನು ಚೆನ್ನಾಗಿ ಆಸ್ವಾದಿಸಲು ಬಲ್ಲವನು. काव्यरस: आस्वाद्यत्वेनास्त्यस्य "ठन्" (५-२-११५)।

**काव्यलक्षण ಕಾವ್ಯಲಕ್ಷಣ** (न०) ಕಾವ್ಯಗಳ ಸ್ವರೂಪ ವನ್ನು ತಿಳಿಸುವುದು, ಕಾವ್ಯಗಳ ರಚನಾಕ್ರಮ ಮೊದಲಾದು ವನ್ನು ವಿವರಿಸುವುದು.

**काव्यलिङ्ग ಕಾವ್ಯಲಿಂಗ** (न०) ಅರ್ಥಾಲಂಕಾರದ ಒಂದು ಭೇದ; ದುಷ್ಕರವಾದ ಯಾವುದಾದರೊಂದು ವಿಷಯ ವನ್ನು ಹೇಳಿ ಅದು ಮತ್ತೊಂದರಿಂದ ಸಮರ್ಥನೆಯನ್ನು ಅಪೇಕ್ಷಿಸಿದಾಗ ಒಂದು ಹೇತುವಿನಿಂದ ಸಮರ್ಥಿಸಿದರೆ ಅಲ್ಲಿ **ಕಾವ್ಯಲಿಂಗಾಲಂಕಾರ.** ಇದು ಪದಾರ್ಥಹೇತುಕ, ವಾಕ್ಯಾರ್ಥಹೇತುಕಗಳೆಂದು ಎರಡು ವಿಧ. **ಇದರ** **ಲಕ್ಷಣ :** "समर्थनीयस्यार्थस्य काव्यलिङ्गं समर्थनम्"। **ಉದಾ० :** "जितोऽसि मन्द कन्दर्प मच्चित्तेऽस्ति त्रिलोचन:" चन्द्रा०। ಇಲ್ಲಿ ದುಷ್ಕರವಾದ ಮನ್ಮಥನ ವಿಜಯರೂಪ ವಾದ ಅರ್ಥವು "मच्चित्तेऽस्ति त्रिलोचन:" ಎಂಬ ಹೇತುಭೂತವಾದ ವಾಕ್ಯಾರ್ಥದಿಂದ ಸಮರ್ಥಿಸಲ್ಪಟ್ಟಿರು ವುದರಿಂದ **ವಾಕ್ಯಾರ್ಥಹೇತುಕಕಾವ್ಯಲಿಂಗಾ ಲಂಕಾರ.**

**काव्यशास्त्र ಕಾವ್ಯಶಾಸ್ತ್ರ** (न०) ಶಾಸ್ತ್ರದಂತಿರುವ ಕಾವ್ಯ. काव्यं शास्त्रमिव। ಕಾವ್ಯವು ಶಾಸ್ತ್ರದಂತೆ ಹಿತವನ್ನು ಬೋಧಿಸುವುದರಿಂದ ಶಾಸ್ತ್ರಸಮಾನವಾದುದು.

**काव्या ಕಾವ್ಯಾ** (स्त्री०) 1. ಬುದ್ಧಿ. कव् (वर्णने) "ण्यत्" (३-१-१२४)। 2. ಪೂತನೆಯೆಂಬ ಒಬ್ಬ ರಾಕ್ಷಸಿ. "काव्यं ग्रन्थे पुमान् शुक्रे काव्या स्यात् पूतनाधियो:" मेदि०।

**काव्यादर्श ಕಾವ್ಯಾದರ್ಶ** (पुं०) ದಂಡಿಕವಿವಿರಚಿತವಾದ ಒಂದು ಲಕ್ಷಣಗ್ರಂಥ. ಇದರಲ್ಲಿ ಮೂರು ಪರಿಚ್ಛೇದಗಳಿರು ವುವು. **ಪ್ರಥಮ ಪರಿಚ್ಛೇದದಲ್ಲಿ** ವೈದರ್ಭೀ ಮತ್ತು ಗೌಡೀ ರೀತಿಗಳೂ, ಶ್ಲೇಷ ಪ್ರಸಾದ ಮೊದಲಾದ ಹತ್ತು ಕಾವ್ಯಗುಣಗಳೂ, ಗದ್ಯಪದ್ಯಕಾವ್ಯಪ್ರಭೇದಗಳೂ, ಅನುಪ್ರಾಸಾಲಂಕಾರ ಭೇದಗಳೂ, **ದ್ವಿತೀಯ ಪರಿಚ್ಛೇದ ದಲ್ಲಿ** ಸ್ವಭಾವೋಕ್ತಿ ಮೊದಲಾದ ಅರ್ಥಾಲಂಕಾರಗಳೂ, **ತೃತೀಯ ಪರಿಚ್ಛೇದದಲ್ಲಿ** ಯಮಕಾಲಂಕಾರಗಳೂ ಕಾವ್ಯಗಳಲ್ಲಿ ಅವಶ್ಯವಾಗಿ ಬಿಡಬೇಕಾದ ಹತ್ತುವಿಧ ದೋಷ ಗಳೂ ಪ್ರತಿಪಾದಿಸಲ್ಪಟ್ಟಿವೆ. ಈ ದಂಡಿಕವಿಯು (1) ಕಾವ್ಯಾ ದರ್ಶ, (2) ದಶಕುಮಾರಚರಿತ ಮತ್ತು (3) ಛಂದೋವಿಚಿತಿ ಗಳೆಂಬ ಮೂರು ಗ್ರಂಥಗಳನ್ನು ರಚಿಸಿರುವನು. "त्रयो-ऽग्नयस्त्रयो वेदास्त्रयो देवास्त्रयो गुणा:। त्रयो दण्डि-प्रबन्धाश्च त्रिषु लोकेषु विश्रुता:"।

**काव्यार्थापत्ति ಕಾವ್ಯಾರ್ಥಾಪತ್ತಿ** (स्त्री०) ಅರ್ಥಾ ಲಂಕಾರದ ಒಂದು ಭೇದ. अर्थस्य कस्यचित् कार्यस्य आपत्ति: सिद्धि:। ದುಷ್ಕರವಾದ ಒಂದು ಕಾರ್ಯದ ವರ್ಣನೆ ಯಿಂದ ಸುಕರವಾದ ಮತ್ತೊಂದು ಕಾರ್ಯವು ಸಿದ್ಧಿಸುವಲ್ಲಿ **"ಕಾವ್ಯಾರ್ಥಾಪತ್ತಿ"** ಅಲಂಕಾರವು. **ಲಕ್ಷಣ :** "कैमुत्येनार्थसंसिद्धि: काव्यार्थापत्तिरिष्यते"। **ಉದಾ० :** "स जितस्त्वन्मुखेनेन्दु: का वार्ता सरसीरुहाम्" चन्द्रा०। ಇಲ್ಲಿ ದುರ್ಜಯನಾದ ಇಂದುವಿನ ಜಯದ ವರ್ಣನೆಯಿಂದ ಸುಜಯವಾದ ಸರಸೀರುಹಗಳ ಜಯವು ಕೈಮುತಿಕ ನ್ಯಾಯ ದಿಂದ ಸಿದ್ಧವಾದುದರಿಂದ ಕಾವ್ಯಾರ್ಥಾಪತ್ತಿ ಅಲಂಕಾರವು.

**काश ಕಾಶ** (पुं०) 1. ಜಂಬುಹುಲ್ಲು. ಜೊಂಡುಹುಲ್ಲು. काशते – काशृ (दीप्तौ) "अच्" (३-१-१३४)। 2. ಕಾಸರೋಗ, ಕೆಮ್ಮಲು. केन कफात्मकेन जलेन अश्यते— अशू (व्याप्तौ) "घञ्" (३-३-१२१)। [ವಿವರಕ್ಕೆ "कास" ಪದದಲ್ಲಿ ನೋಡಿ.] 3. ಶೀನು. 4. ಮೂಷಿಕ, ಇಲಿ. ईषदश्नाति—अश (भोजने) "अच्" (३-१-१३४)। को: कादेश: (६-३-१०५)। 5. ಕಾಂತಿ, ಪ್ರಕಾಶ. (न०) 6. ಜಂಬುಹುಲ್ಲಿನ ಹೂವು. "आकर्णमुल्लसितमम्बुविकासिकाशनीकाशमाप समतां सितचामरस्य" माघ० ५-३५। "पुण्डरीकातपत्रस्तं विकसत्काशचामर:" रघु० ४-१७।

**काशक ಕಾಶಕ** (पुं०) 1. ಜಂಬುಹುಲ್ಲು, ಜೊಂಡುಹುಲ್ಲು. काशृ (दीप्तौ) "ण्वुल्" (३-१-१३३)। (वि०) 2. ಪ್ರಕಾಶಿಸುವ, ಹೊಳೆಯುವ.

**काशकृत्स्न ಕಾಶಕೃತ್ಸ್ನ** (पुं०) ಎಂಟು ಮಂದಿ ಆದಿ ಶಾಬ್ದಿಕರಲ್ಲೊಬ್ಬ ಋಷಿ. "इन्द्रश्चन्द्र: काशकृत्स्नापिशलि: शाकटायन:। पाणिन्यमरजैनेन्द्रा जयन्त्यष्टादिशाब्दिका:"।

**काशकृत्स्नक ಕಾಶಕೃತ್ಸ್ನಕ** (वि०) ಕಾಶಕೃತ್ಸ್ನಋಷಿಯಿಂದ ನಿರ್ಮಿತವಾದ. काशकृत्स्नेन निर्वृत्तम् "वुञ्" (४-२-८०)।

**काशमय ಕಾಶಮಯ** (वि०) 1. ಜಂಬುಹುಲ್ಲಿನಿಂದ ತುಂಬಿದ, ಜೊಂಡುಹುಲ್ಲಿನಿಂದ ನೆರೆದಿರುವ. 2. ಜೊಂಡುಹುಲ್ಲಿನಿಂದ ತಯಾರಿಸಲ್ಪಟ್ಟ, ಜಂಬುಹುಲ್ಲಿನಿಂದ ಮಾಡಲ್ಪಟ್ಟ. काशेन प्रचुर: काशविकारो वा "मयट्" (५-४-२१)। (४-३-१४३) वा।

**काशि ಕಾಶಿ** (पुं०) 1. ಸೂರ್ಯ. काशते—काशृ (दीप्तौ) कर्तृ० "इन्" (उ० ४-११७)। 2. ಪ್ರಕಾಶ, ಬೆಳಕು. भावे "इन्"। 3. ಮುಷ್ಟಿ, ಹಿಡಿ. (पुं०ब०व०) 4. ಕಾಶೀ ಜನಪದ, ಕಾಶೀ ನಗರದಿಂದ ಕೂಡಿದ ಒಂದು ದೇಶ. "काशिष्वपि नृपो राजन् दिवोदासपितामह:। हर्यश्व इति विख्यातो बभूव जयतां वर:" भा० अनु० ८-११। (स्त्री०) 5. ಕಾಶಿ, ವಾರಣಾಸಿ. (वि०) 6. ಪ್ರಕಾಶದಿಂದ ಕೂಡಿದ.

**काशिक ಕಾಶಿಕ** (वि०) 1. ಕಾಶಿಸಂಬಂಧವಾದ. काशेरिदम् "ठञ्" "ञिठ्" वा (४-२-११६)। 2. ಕಾಶಿಯಲ್ಲಿ ಹುಟ್ಟಿದ, ಕಾಶಿಯಲ್ಲಿರುವ. काश्यां भव: "ठञ्" "ञिठ्" वा (४-२-११६)। 3. ಕಾಶಿಯಿಂದ ಬಂದಿರುವ. काश्या आगत: "ठञ्" "ञिठ्" वा (४-२-११६)। स्त्रियाम् ठञि "ङीप्" (४-१-१५)। **काशिकी ಕಾಶಿಕೀ.** ञिठि "टाप्" (४-१-४)। **काशिका ಕಾಶಿಕಾ.**

**काशिका ಕಾಶಿಕಾ** (स्त्री०) 1. ಕಾಶಿಕಾವೃತ್ತಿ, ಪಾಣಿನಿಸೂತ್ರಗಳಿಗೆ ಒಂದು ವ್ಯಾಖ್ಯಾನಗ್ರಂಥ. 2. ಕಾಶೀಪಟ್ಟಣ.

**काशिन् ಕಾಶಿನ್** (वि०) 1. ಪ್ರಕಾಶಿಸುವ, ಹೊಳೆಯುವ. काशते – काशृ (दीप्तौ) "णिनि:" (३-१-१३४)। 2. ಕಾಸರೋಗವುಳ್ಳವನು, ಕೆಮ್ಮಲುಳ್ಳವನು. काशोऽस्यास्ति "इनि:" (५-२-११५)। स्त्रियाम् "ङीप्" (४-१-५)। **काशिनी ಕಾಶಿನೀ.**

**काशिप ಕಾಶಿಪ** (पुं०) 1. ಮಹಾದೇವ, ಪರಮೇಶ್ವರ. 2. ಕಾಶಿದೇಶದ ದೊರೆ, ದಿವೋದಾಸ ಮೊದಲಾದವರು. काशिं वाराणसीं काशीन् देशान् वा पाति—पा (रक्षणे) "क:" (३-२-४)। ಇದೇ ಅರ್ಥದಲ್ಲಿ **काशिनाथ: ಕಾಶಿನಾಥಃ, –नृपति: –ನೃಪತಿಃ.** "एतस्य काशिनृपते: त्वमवेक्ष्य लक्ष्मीमक्ष्णो: सुखं जनय खञ्जनमञ्जुनेत्रे" नैष० ११-११३।

**काशिराज ಕಾಶಿರಾಜ** (पुं०) ಕಾಶಿದೇಶದ ದೊರೆ, ದಿವೋದಾಸ ಮುಂತಾದವರು. काशीनां जनपदानां राजा "टच्" (५-४-९१)। "हर्यश्वस्य च दायाद: काशिराजोऽभ्यषिच्यत" भा० अनु० ८-१४।

**काशिल ಕಾಶಿಲ** (वि०) 1. ಜೊಂಡುಹುಲ್ಲಿನಿಂದ ತಯಾರಿಸಲ್ಪಟ್ಟ. 2. ಜೊಂಡುಹುಲ್ಲಿನಿಂದ ಕೂಡಿದ ಕಾಶಿಲವೆಂಬ ಒಂದು ದೇಶ. काश "इल:" (४-२-८०)।

**काशिष्णु ಕಾಶಿಷ್ಣು** (वि०) ಹೊಳೆಯುವ ಸ್ವಭಾವದ, ಪ್ರಕಾಶಮಾನವಾದ. काशृ (दीप्तौ) बाहु० "इष्णुच्"। "काशिष्णुना कनकवर्णविभूषणेन भ्राजत्कपोलवदनो विलसत्किरीट:" भाग० ४-३०-६।

**काशी ಕಾಶೀ** (स्त्री०) ಕಾಶಿ, ವಾರಾಣಸಿ. काशते—काशृ (दीप्तौ) "इन्" (उ० ४-११७)। "ङीष्" (ग० ४-१-४५)। ಕಾಶೀ ನಗರವು ಮೋಕ್ಷ ಪ್ರದವಾದ ಏಳು ಪ್ರಸಿದ್ಧ ನಗರಗಳಲ್ಲೊಂದು. "काशी भवेत्तरणधर्मतरि: स्मरारे:" नैष० ११-११४। ಕಾಶೀನಗರವು ಗಂಗಾನದಿಯ ತೀರದಲ್ಲಿರುವುದು. ಕಾಶಿಯಲ್ಲಿ ವಿಶ್ವೇಶ್ವರ ದೇವಾಲಯವು ಪ್ರಸಿದ್ಧವಾಗಿದೆ. ಇದಲ್ಲದೆ ಇಲ್ಲಿ ಅನ್ನಪೂರ್ಣಾ, ಸರ್ವಮಂಗಳಾ, ಬಿಂದುಮಾಧವ ಮೊದಲಾದ ದೇವಾಲಯಗಳಿವೆ. ಗಂಗಾನದಿಗೆ ಇಲ್ಲಿ ವ್ಯಾಸ, ಮಣಿಕರ್ಣಿಕಾ, ಹನೂಮಂತ, ಹರಿಶ್ಚಂದ್ರ ಮೊದಲಾದ ಹೆಸರಿನ ಘಟ್ಟಗಳಿವೆ. ಪರಮೇಶ್ವರನು ಎಲ್ಲರಿಗೂ ರಾಮತಾರಕ

ಮಂತ್ರೋಪದೇಶ ಮಾಡುವುದರಿಂದ ಇಲ್ಲಿ ದೇಹತ್ಯಾಗ ಮಾಡಿದವರೆಲ್ಲರಿಗೂ ಮುಕ್ತಿಯು ಲಭಿಸುವುದೆಂದು ಪ್ರಸಿದ್ಧಿಯುಂಟು. "यत्नतोऽयत्नतो वापि कालात् त्यक्त्वा कलेबरम्। तारकस्योपदेशेन काशीसंस्थोऽमृतो भवेत्" ಕಾಶೀಖಂ। "अयोध्या मथुरा माया काशी काञ्ची अवन्तिका। पुरी द्वारवती चैव सप्तैता मोक्षदायिकाः"। ಪ್ರಮಥಗಣಪರಿವಾರದಲ್ಲಿ ಒಬ್ಬನಾದ ಕುಂಭನು ನಿಕುಂಭನೆಂಬ ಒಬ್ಬ ಬ್ರಾಹ್ಮಣನಿಗೆ ಕನಸಿನಲ್ಲಿ ಕಾಣಿಸಿಕೊಂಡು ಶಿವನಿಗೆ ಕಾಶಿಯಲ್ಲಿ ಒಂದು ದೇವಸ್ಥಾನವನ್ನು ನಿರ್ಮಿಸಿ ಪೂಜಿಸುವಂತೆ ಹೇಳಲಾಗಿ ನಿಕುಂಭನು ಕಾಶೀರಾಜನಾದ ದಿವೋದಾಸನ ಮೂಲಕ ದೇವಾಲಯವೊಂದನ್ನು ನಿರ್ಮಿಸಿ ಭಕ್ತಿಯಿಂದ ಪೂಜಾದಿಗಳು ನಡೆಯುವಂತೆ ಏರ್ಪಾಡು ಮಾಡಿದನು. ಶಿವನ ಪ್ರಭಾವದಿಂದ ಕ್ಷೇತ್ರಮಹಿಮೆಯು ಕ್ರಮೇಣ ವೃದ್ಧಿಹೊಂದಿತು. ಶಿವನು ಅನವರತವೂ ಕಾಶೀಕ್ಷೇತ್ರದಲ್ಲಿ ವಾಸಮಾಡುತ್ತಿರುವುದರಿಂದ ಕಾಶೀಕ್ಷೇತ್ರಕ್ಕೆ "**ಅವಿಮುಕ್ತಕ್ಷೇತ್ರ**"ವೆಂದು ಹೆಸರಾಯಿತು. ಇಲ್ಲಿ ಮೋಕ್ಷಹೊಂದಿ ಪ್ರಕಾಶಿಸುವುದರಿಂದ ಈ ಕ್ಷೇತ್ರ (ನಗರ)ವು "**ಕಾಶಿ**" ಯೆಂದು ಪ್ರಸಿದ್ಧವಾಯಿತು. "निर्वाणकाशनाद्यत्र काशीति प्रथिता पुरी। अविमुक्ते महाक्षेत्रे न मुक्ते शम्भुना क्वचित्" ಕಾಶೀಖಂ। ನಿರ್ವಾಣ ಹೊಂದಿ ಶಿವಭಾವವನ್ನು ಹೊಂದಿದವರೆಲ್ಲರನ್ನೂ ನೋಡಿದ ಇಂದ್ರಾದಿದೇವತೆಗಳು ಈ ಕ್ಷೇತ್ರರಕ್ಷಣೆಗಾಗಿ ದಕ್ಷಿಣ ಮತ್ತು ಉತ್ತರ ದಿಕ್ಕುಗಳಲ್ಲಿ ವರಣಾ ಮತ್ತು ಅಸಿಗಳೆಂಬ ಎರಡು ನದಿಗಳನ್ನು ನಿರ್ಮಿಸಿದುದರಿಂದ ಇದಕ್ಕೆ "**ವಾರಾಣಸಿ**" ಯೆಂಬ ಪ್ರಸಿದ್ಧಿಯುಂಟಾಯಿತು. "वरणासी च नद्यौ द्वे पुण्ये पापहरे उभे। तयोरन्तर्गता या तु सैषा वाराणसी स्मृता"। "महेन्द्राग्निमुखा देवाः दृष्ट्वा मुक्तिपथोन्मुखान्। सर्वान् सर्वेशमालोक्य रक्षां चक्रुः पुरा पुरः। असिं महासिरूपां च पापसङ्घतिखण्डिनीम्। दृष्ट्वा प्रवेशं धुन्वानां धुनीं देवा विनिर्ममुः। वरणां च व्यधुस्तत्र क्षेत्रविघ्ननिवारिणीम्। दुर्वृत्तस्य प्रवृत्तेश्च निवृत्तिकरणीं सुराः। दक्षिणोत्तरदिग्भागे कृत्वासिं वरणां सुराः। क्षेत्रस्य मोक्षनिःक्षेपरक्षां निर्वृतिमाययुः"।

**ಕಾಶೀಖಣ್ಡ ಕಾಶೀಖಂಡ** (ಪುಂ) ಸ್ಕಾಂದಪುರಾಣದಲ್ಲಿ ಕಾಶೀಕ್ಷೇತ್ರಮಹಿಮೆಯನ್ನು ವರ್ಣಿಸುವ ಒಂದು ಭಾಗ. ಈ ಕಾಶೀಖಂಡದಲ್ಲಿ ವಿಂಧ್ಯನಾರದಸಂವಾದ, ಸತ್ಯಲೋಕದ ಪ್ರಭಾವ, ಅಗಸ್ತ್ಯಾಶ್ರಮಕ್ಕೆ ದೇವತೆಗಳ ಆಗಮನ, ಪತಿವ್ರತೆಯ ಚರಿತ್ರೆ, ಸಪ್ತರ್ಷಿ ಲೋಕ, ಧ್ರುವಕುಮಾರನ ತಪಸ್ಸು, ಶಿವಶರ್ಮನಿಗೆ ಸತ್ಯಲೋಕದರ್ಶನ, ಗಂಗಾಮಾಹಾತ್ಮ್ಯ, ಕೃತ್ಯಾಕೃತ್ಯಪ್ರಕರಣ, ಗೃಹಸ್ಥಧರ್ಮ, ಓಂಕಾರವರ್ಣನ, ಓಂಕಾರಮಾಹಾತ್ಮ್ಯ, ವಿಶ್ವೇಶ್ವರನ ಆವಿರ್ಭಾವ ಮುಂತಾದ ಒಂದು ನೂರು ಆಖ್ಯಾನಗಳು ಉಕ್ತವಾಗಿವೆ.

**ಕಾಶೀನಾಥ ಕಾಶೀನಾಥ** (ಪುಂ) ಶಿವ, ಪರಮೇಶ್ವರ, ಮಹಾದೇವ. काश्याः नाथः। "कालं निकटतो ज्ञात्वा काशीनाथं समाश्रयेत्। काशीनाथं समाश्रित्य कुतः कालभयं नृणाम्" ಕಾಶೀಖಂ।

**ಕಾಶೀಯಾತ್ರಾ ಕಾಶೀಯಾತ್ರಾ** (ಸ್ತ್ರೀಂ) ಕಾಶೀನಗರದ ಯಾತ್ರೆ, ಕಾಶೀಕ್ಷೇತ್ರದಲ್ಲಿರುವ ಪುಣ್ಯತೀರ್ಥಗಳನ್ನು ಕುರಿತ ಪ್ರಯಾಣ. ಕಾಶೀಖಂಡದಲ್ಲಿ ಉಕ್ತವಾದ ಕಾಶೀಯಾತ್ರೆಯ ಕ್ರಮ: ಮೊದಲು ಚಕ್ರಪುಷ್ಕರಿಣಿಯಲ್ಲಿ ಸ್ನಾನಮಾಡಿ ದೇವತೆಗಳು, ಪಿತೃಗಳು, ಯಾಚಕರು ಎಲ್ಲರನ್ನೂ ತೃಪ್ತಿಗೊಳಿಸಿ ಆದಿತ್ಯ, ವಿಷ್ಣು, ದಂಡಪಾಣಿ, ಮಹೇಶ್ವರರನ್ನು ನಮಸ್ಕರಿಸಿ ಧುಂಡಿವಿನಾಯಕನ ದರ್ಶನ ಮಾಡಬೇಕು. ಅನಂತರ ನಂದಿಕೇಶ, ತಾರಕೇಶ, ಮಹಾಕಾಳೇಶ್ವರ, ಪುನಃ ದಂಡಪಾಣಿ ಇವರ ಪೂಜೆ ಸಲ್ಲಿಸಿ ವಿಶ್ವೇಶ್ವರನ ದರ್ಶನ ಮಾಡಬೇಕು. ಬಳಿಕ ರತ್ನೇಶ, ಚಂದ್ರೇಶ, ಅವಿಮುಕ್ತೇಶ್ವರ ಮುಂತಾದ 14 ಕ್ಷೇತ್ರಗಳ ದರ್ಶನ ಪಡೆಯಬೇಕು. [ವಿವರಕ್ಕೆ ಕಾಶೀಖಂ ನೋಡಿ.] ಬ್ರಹ್ಮಚಾರಿಯು ವಿದ್ಯಾವ್ಯಾಸಂಗ ಮುಗಿದ ಬಳಿಕ ಸ್ನಾತಕನಾಗಿ ಗೃಹಸ್ಥನಾಗುವ ಮುಂಚೆ ಕಾಶೀಯಾತ್ರೆ ಮಾಡುವ ಪದ್ಧತಿಯಿತ್ತು. ಕನ್ಯೆಯ ತಂದೆಯು ಇಂತಹ ಸ್ನಾತಕನನ್ನೇ ಹಿಡಿದು ಕನ್ಯಾದಾನ ಮಾಡುವುದೂ ಒಂದು ಪದ್ಧತಿ. ವಿವಾಹ ಸಮಯದಲ್ಲಿ ಇದೇ ಅರ್ಥದಲ್ಲಿ ಈಗಿನ ಕಾಶೀಯಾತ್ರೆಯು ನಡೆಯುತ್ತಿರುವುದು.

**ಕಾಶೀರಹಸ್ಯ ಕಾಶೀರಹಸ್ಯ** (ನಂ) ಕಾಶೀಕ್ಷೇತ್ರದ ಮಹಿಮೆಯ ಗುಟ್ಟು. काश्याः रहस्यम्। "येषां हृदि सदैवास्ते काशीत्याशीविषाङ्गदः। संसाराशीविषविषं न तेषां प्रभवेत् क्वचित्। गर्भरक्षामणिर्मन्त्रः काशीवर्णद्वयात्मकः। यस्य कण्ठे सदा तिष्ठेत् तस्याकुशलभीः कुतः। सुधां पिबति यो नित्यं काशीवर्णद्वयात्मिकाम्। स नैर्जरीं दशां हित्वा सुधैव परिजायते। श्रुतं कर्णामृतं येन काशीत्यक्षरयुग्मकम्। न समाकर्णयत्येव स पुनर्गर्भजां कथाम्" ಕಾಶೀಖಂ।

**ಕಾಶೀಶ ಕಾಶೀಶ–ಈಶ್ವರ–ಈಶ್ವರ** (ಪುಂ) 1. ವಿಶ್ವೇಶ್ವರ. काश्या ईशः ईश्वरो वा। 2. ಕಾಶಿಯ ಒಡೆಯ, ದಿವೋದಾಸ.

**काशेय ಕಾಶೇಯ** (ಪುಂ०) 1. ಕಾಶಿರಾಜನ ಮಗ. काशेरपत्यम् "ढक्" (४-१-१२२)। (ವಿಂ) 2. ಕಾಶಿಯಲ್ಲಿ ಹುಟ್ಟಿದ, ಕಾಶಿಯಲ್ಲಿರುವ. काश्यां भवः "ढक्"। स्त्रियाम् "ङीप्" (४-१-१५)। **-यी -ಯೀ.** "भरतः खलु काशेयीमुपयेमे सार्वसेनीं सुनन्दां नाम तरयां जज्ञे भुमन्यूर्नाम" भा० आदि० ९५-३२।

**काश्मरी ಕಾಶ್ಮರೀ** (स्त्री०) ಶೀವನೆಯ ಮರ. काशते— काशृ (दीप्तौ) "वनिप्" (३-२-७५)। "ङीप्" रश्च (४-१-७)। पृषो०। "बिल्वान् कपित्थान् जम्बूंश्च काश्मरीबदरीस्तथा" भा० वन० १५८-४६।

**काश्मर्य ಕಾಶ್ಮರ್ಯ** (ಪುಂ०) ಶೀವನೆಯ ಮರ. काश्मरी स्वार्थे "ष्यञ्" (वा० ५-१-१२४)। काश्मरीशब्दोऽस्यास्ति "यप्" (५-२-१२०) वा।

**काश्मीर ಕಾಶ್ಮೀರ** (ಪುಂ० ಬ० ವ०) 1. ಕಾಶ್ಮೀರ ದೇಶ. 2. ಕಾಶ್ಮೀರ ದೇಶದ ನಿವಾಸಿಗಳು. (ಪುಂ०) 3. ಕಾಶ್ಮೀರ ದೇಶದ ದೊರೆ. (ನ०) 4. ಪುಷ್ಕರಮೂಲ, ತಾವರೆಯ ಗೆಡ್ಡೆ. काश्मीरेषु भवम् "अण्" (४-२-१३३)। 5. ಟಂಕ. 6. ಕುಂಕುಮಕೇಸರಿ. "काश्मीरं कुङ्कुमेऽपि स्यात् टङ्कपुष्करमूलयोः" मेदि०।

**काश्मीरक ಕಾಶ್ಮೀರಕ** (ವಿಂ) 1. ಕಾಶ್ಮೀರ ದೇಶದಲ್ಲಿ ಹುಟ್ಟಿದ. 2. ಕಾಶ್ಮೀರ ದೇಶದಲ್ಲಿರುವ. काश्मीरे जातो भवो वा "वुञ्" (४-२-१३४)। "ततः काश्मीरकान् वीरान् क्षत्रियान् क्षत्रियर्षभः" भा० सभा० २७-१७।

**काश्मीरज ಕಾಶ್ಮೀರಜ** (ನ०) 1. ಚಂಗಲುಕೋಷ್ಟ. 2. ಕುಂಕುಮಕೇಸರಿ. काश्मीरे जायते—जनी (प्रादुर्भावे) "डः" (३-२-९७)। "काश्मीरजै रश्मिभिरौपसन्ध्यैर्मृष्टं धृतघ्वान्तकुरङ्गनाभिः" नैष० २२-५४। 3. ಅತಿಬಜೆ. 4. ಪುಷ್ಕರಮೂಲ, ತಾವರೆಯ ಗೆಡ್ಡೆ. "काश्मीरजा-स्यादतिविषा कुष्ठकुङ्कुमपौष्करे" विश्व०।

**काश्मीरजन्मन् ಕಾಶ್ಮೀರಜನ್ಮನ್** (ನ०) ಕುಂಕುಮಕೇಸರಿ. काश्मीरे जन्म यस्य। "काश्मीरजन्माग्निशिखम्" अम०।

**काश्मीर्य ಕಾಶ್ಮೀರ್ಯ** (ನ०) 1. ಕುಂಕುಮಕೇಸರಿ. कश्मीरे जातम् "ष्यः" (४-२-८०)। (ವಿಂ) 2. ಕಾಶ್ಮೀರ ದೇಶದಲ್ಲಿ ಹುಟ್ಟಿದ. 3. ಕಾಶ್ಮೀರ ದೇಶದಲ್ಲಿರುವ.

**काश्य ಕಾಶ್ಯ** (ಪುಂ०) 1. ಕಾಶಿರಾಜ. (ನ०) 2. ಮದ್ಯ, ಹೆಂಡ. कश्य स्वार्थे "अण्" (५-४-३८)।

**काश्यप ಕಾಶ್ಯಪ** (ಪುಂ०) 1. ಕಶ್ಯಪಗೋತ್ರದಲ್ಲಿ ಹುಟ್ಟಿದ ಒಬ್ಬ ಋಷಿ. कश्यपस्य गोत्रापत्यं पुमान् "अञ्" (४-१-१०४)। 2. ಕಾಶ್ಯರಾಜನ ಮಗ. काश्यं पाति नरकात्। 3. ಕಶ್ಯಪಗೋತ್ರದಲ್ಲಿ ಹುಟ್ಟಿ ವಿಷಹರ ವಿದ್ಯೆಯನ್ನು ಕಲಿತ ಒಬ್ಬ ಬ್ರಾಹ್ಮಣ. ["कश्यप" ಪದದಲ್ಲಿ ನೋಡಿ.] 4. ಕಣಾದಮುನಿ. 5. ಒಂದು ಜಾತಿಯ ಜಿಂಕೆ. 6. ಮತ್ಸ್ಯ, ಮೀನು. (स्त्री०) **-पी -ಪೀ.** 7. ಕಶ್ಯಪ ಗೋತ್ರದಲ್ಲಿ ಹುಟ್ಟಿದ ಹೆಂಗಸು. 8. ಪೃಥ್ವಿ, ಭೂಮಿ. "क्षोणिर्ज्या काश्यपी क्षितिः" अम०। (ವಿಂ) 9. ಕಶ್ಯಪ ಸಂಬಂಧವಾದ. कश्यपस्येदम् "अण्" (४-३-१२०)। स्त्रियाम् "ङीप्" (४-१-१५)। **-पी -ಪೀ.**

**काश्यपनन्दन ಕಾಶ್ಯಪನಂದನ** (ಪುಂ०) 1. ಗರುಡ. 2. ಅರುಣ. 3. ದೇವತೆಗಳು, ಅಸುರರು ಮುಂತಾದ ಕಶ್ಯಪನ ಸಂತಾನಗಳು.

**काश्यपायन ಕಾಶ್ಯಪಾಯನ** (ಪುಂ०) ಕಶ್ಯಪನ ಗೋತ್ರದಲ್ಲಿ ಹುಟ್ಟಿದವನು. काश्यपस्य गोत्रापत्यं पुमान् "फक्" (४-१-९९)।

**काश्यपि ಕಾಶ್ಯಪಿ** (ಪುಂ०) 1. ಅರುಣ. 2. ಗರುಡ. कश्यपस्यापत्यम् "इञ्" (४-१-९६)। ಅರುಣನು ಸೂರ್ಯನ ಸಾರಥಿಯಾದನು. ಗರುಡನು ಪಕ್ಷಿಗಳ ರಾಜನಾಗಿ ಅಭಿಷಿಕ್ತನಾದನು. "विनता चापि सिद्धार्था बभूव मुदिता तदा। जनयामास पुत्रौ द्वौ अरुणं गरुडं तथा। विकलाङ्गोऽरुणस्तत्र भास्करस्य पुरःसरः। पतत्रिणां च गरुड इन्द्रत्वेनाभ्यषिच्यत" भा० आदि० ३१। "देवेन तेनैष च काश्यपिश्च साम्यं समीक्ष्योभयपक्षभाजौ" नैष० २२-८९।

**काश्यपिन् ಕಾಶ್ಯಪಿನ್** (ಪುಂ० ಬ० ವ०) ಕಾಶ್ಯಪಋಷಿಯಿಂದ ಪ್ರೋಕ್ತವಾದುದನ್ನು ಅಧ್ಯಯನ ಮಾಡುವವರು. काश्यपेन प्रोक्तमधीयते "णिनिः" (४-३-१०३)।

**काश्यपेय ಕಾಶ್ಯಪೇಯ** (ಪುಂ०) ಕಶ್ಯಪಪತ್ನಿಯರಲ್ಲಿ ಹುಟ್ಟಿದ ದೇವತೆಗಳು, ಅಸುರರು, ಅರುಣ, ಗರುಡ ಮುಂತಾದವರು. कश्यपस्येयं "अण्" (४-३-१२०)। "ङीप्" (४-१-१५)। काश्यपी कश्यपभार्या, तस्या अपत्यानि "ढक्" (४-१-१२०)। "इत्येते द्वादशादित्याः काश्यपेयाः प्रकीर्तिताः" भा० अनु० २५५-१६। "नागक्षय-करश्चव काश्यपेयो महाबलः" भा० आदि० २३-१३।

**काश्यायन ಕಾಶ್ಯಾಯನ** (ಪುಂ०) ಕಾಶಿರಾಜನ ಗೋತ್ರದಲ್ಲಿ ಹುಟ್ಟಿದವನು. काश्यस्य काशिराजस्य गोत्रापत्यं पुमान् "फक्" (४-१-९९)।

**काष ಕಾಷ** (पुं०) 1. ಸಾಣೆಕಲ್ಲು, ಉಜ್ಜುವಕಲ್ಲು. कष्यतेऽनेन — कष (हिंसायाम्) करं० "घञ्" (३-३-१२१)। 2. ಉಜ್ಜುವ ಸಾಧನ, ನವೆಯನ್ನು ಹೋಗಲಾಡಿಸಿಕೊಳ್ಳಲು ಮೈಯನ್ನು ಉಜ್ಜಿಕೊಳ್ಳುವ ಜಾಗ. "एतस्मिन्मदयति कोकिलानकाले लीनालिः सुरकरिणां कपोलकाषः" किरा० ५-२६।

**काषाय ಕಾಷಾಯ** (वि०) ಕಷಾಯ (ಕೆಂಪು) ಬಣ್ಣದಲ್ಲಿ ಅದ್ದಲ್ಪಟ್ಟ, ಕಾವಿಬಣ್ಣದಲ್ಲಿ ಅದ್ದಲ್ಪಟ್ಟ ಬಟ್ಟೆ ಮೊದಲಾದುದು, ಕಾವಿಬಟ್ಟೆ. कषायेण रक्तं "अण्" (४-२-१)। "यदि वासांसि वसीरन् रक्तानि वसीरन्, काषायं ब्राह्मणो, माञ्जिष्ठं क्षत्रियो, हारिद्रं वैश्यः" आश्व० गृ०। "काषायपरिवीतेन स्वपदार्पितचक्षुषा" रघु० १५-७७।

**काषायिन् ಕಾಷಾಯಿನ್** (पुं०) ಕಾವಿಬಟ್ಟೆಯನ್ನು ಉಟ್ಟಿರುವ ಸಂನ್ಯಾಸಿ.

**काष्ठ ಕಾಷ್ಠ** (न०) 1. ಇಂಧನ, ಸೌದೆ, ಕಟ್ಟಿಗೆ. काशतेऽनेन — काशृ (दीप्तौ) "क्थन्" (उ० २-२)। 2. ಮರ, ಚೌಬೀನೆ.

**काष्ठक ಕಾಷ್ಠಕ** (न०) 1. ಅಗುರು ಚಂದನ. 2. ಮರದ ತುಂಡು, ಕಟ್ಟಿಗೆಯ ಚೂರು.

**काष्ठकीट ಕಾಷ್ಠಕೀಟ** (पुं०) ಮರವನ್ನು ಕೊರೆಯುವ ಒಂದು ಹುಳು, ಘುಣವೆಂಬ ಒಂದು ಕ್ರಿಮಿ.

**काष्ठकुट्ट ಕಾಷ್ಠಕುಟ್ಟ** (पुं०) ಮರಕುಟಿಗ ಹಕ್ಕಿ. काष्ठं कुट्टयति — कुट्ट (छेदनभर्त्सनयोः) "अण्" (३-२-१)। "काष्ठकुट्टः शतच्छदे। दीर्घपादस्तु कङ्कः स्यात्" त्रिकाण्ड०। "ण्वुल्" (३-१-१३३)। **-कुट्टकः -ಕುಟ್ಟಕಃ.**

**काष्ठकुद्दाल ಕಾಷ್ಠಕುದ್ದಾಲ** (पुं०) ಹಡಗಿನೊಳಗೆ ಸೇರಿರುವ ನೀರನ್ನೂ ಕಸವನ್ನೂ ಹೊರಕ್ಕೆ ತೆಗೆದುಹಾಕುವ ಒಂದು ಮರದ ಮೊರಗುದ್ದಲಿ, ಎಲೆಗುದ್ದಲಿ. काष्ठमयः कुद्दालः। "अभ्रिः स्त्री काष्ठकुद्दालः" अम०।

**काष्ठतट् ಕಾಷ್ಠತಟ್** (पुं०) ಬಡಗಿ, ಮರಗೆಲಸದವನು, ಮರವನ್ನು ಕೆತ್ತುವವನು. काष्ठं तक्षति — तक्ष (त्वचने) "क्विप्" (३-२-७६)। "ण्वुल्" (३-१-१३३)। **-तक्षकः -ತಕ್ಷಕಃ.**

**काष्ठतक्षण ಕಾಷ್ಠತಕ್ಷಣ** (न०) ಮರವನ್ನು ಕೆತ್ತುವಿಕೆ. काष्ठस्य तक्षणम्।

**काष्ठतन्तु ಕಾಷ್ಠತಂತು** (पुं०) 1. ಮರದ ಒಳಗೆ ದಾರದಂತೆ ಉದ್ದವಾಗಿರುವ ಒಂದು ಜಾತಿಯ ಹುಳು. काष्ठे तन्तुरिव। 2. ರೇಷ್ಮೆ ಹುಳು. "कोशकारः काष्ठतन्तुः" हारा०।

**काष्ठदारु ಕಾಷ್ಠದಾರು** (पुं०) ದೇವದಾರು ಮರ. काष्ठप्रधानो दारुः।

**काष्ठद्रु ಕಾಷ್ಠದ್ರು** (पुं०) ಪಲಾಶವೃಕ್ಷ, ಮುತ್ತುಗದ ಮರ. काष्ठप्रधानो द्रुः।

**काष्ठपट्ट ಕಾಷ್ಠಪಟ್ಟ** (पुं०) ಮರದ ಹಲಗೆ, ದಾರುಫಲಕ.

**काष्ठभारिक ಕಾಷ್ಠಭಾರಿಕ** (वि०) ಸೌದೆ ಹೊರುವವನು.

**काष्ठभेद ಕಾಷ್ಠಭೇದ** (पुं०) ಸೌದೆ ಒಡೆಯುವುದು, ಸೌದೆ ಸೀಳುವುದು. काष्ठस्य भेदः। (न०) **-भेदनम् -ಭೇದನಮ್.**

**काष्ठभेदक ಕಾಷ್ಠಭೇದಕ-भेदन-ಭೇದನ** (वि०) ಸೌದೆ ಒಡೆಯುವವನು. काष्ठं भिनत्ति — भिदिर् (विदारणे) "ण्वुल्" (३-१-१३३)। "ल्युः" (३-१-१३४)। वा।

**काष्ठमय ಕಾಷ್ಠಮಯ** (वि०) 1. ಮರದಿಂದ ಮಾಡಲ್ಪಟ್ಟ, ಮರದಿಂದ ತಯಾರಿಸಲ್ಪಟ್ಟ. काष्ठस्य विकारः "मयट्"। "यथा काष्ठमयो हस्ती यथा चर्ममयो मृगः। यश्च विप्रोऽनधीयानः त्रयस्ते नाम बिभ्रति" मनु० २-१५७। 2. ಮರದಂತೆ ಕಠಿನವಾದ ಹೃದಯವುಳ್ಳ.

**काष्ठमौन ಕಾಷ್ಠಮೌನ** (न०) ಇಂಗಿತದಿಂದಲೂ ತನ್ನ ಅಭಿಪ್ರಾಯವನ್ನು ತಿಳಿಯಪಡಿಸದಿರುವಿಕೆ. काष्ठमिव मौनम्।

**काष्ठलेखक ಕಾಷ್ಠಲೇಖಕ** (पुं०) ಮರವನ್ನು ಕೊರೆಯುವ ಘುಣವೆಂಬ ಒಂದು ಹುಳು. काष्ठं लिखति — लिख (अक्षरविन्यासे) "ण्वुल्" (३-१-१३३)।

**काष्ठलोहिन् ಕಾಷ್ಠಲೋಹಿನ್** (पुं०) ಕಬ್ಬಿಣದ ಹಿಡಿ ಹಾಕಿರುವ ಮರದ ಗದೆ. काष्ठं च लोहं च स्तोऽस्य "इनिः" (५-२-११५)। "काष्ठलोही तु वार्तध्निः" त्रिकाण्ड०।

**काष्ठवत् ಕಾಷ್ಠವತ್** (वि०) 1. ಮರದಿಂದ ಕೂಡಿದ, ಸೌದೆಯನ್ನು ಹೊಂದಿರುವ. काष्ठमस्यास्ति "मतुप्" (५-२-९४)। (अव्य०) 2. ಮರದಂತೆ, ಮರದಹಾಗೆ, ಮರಕ್ಕೆ ಸಮಾನವಾಗಿ. काष्ठेन तुल्यम् "वतिः" (५-१-११५)।

**काष्ठवल्लिका ಕಾಷ್ಠವಲ್ಲಿಕಾ** (स्त्री०) ಕಟುಕರೋಹಿಣಿ. काष्ठमिव शुष्का वल्लिका।

**काष्ठा ಕಾಷ್ಠಾ** (स्त्री०) 1. ದಿಶೆ, ದಿಕ್ಕು. काशते — काशृ (दीप्तौ) "क्थन्" (उ० २-२)। "आसाद्य वाचं स भृशं दिदीपे काष्ठामुदीचीमिव तिग्मरश्मिः" किरा० ३-५५। 2. ಹದಿನೆಂಟು ನಿಮೇಷಗಳ ಕಾಲ, ಹದಿನೆಂಟು ಸಲ ರೆಪ್ಪೆಯಾಡಿಸುವಷ್ಟು ಕಾಲ, ಕಲೆಯ ಮೂವತ್ತನೆಯ ಒಂದು ಭಾಗ. "अष्टादशनिमेषास्तु काष्ठा त्रिंशत्तु ताः कला:" अम०। 3. ಸೀಮೆ, ಎಲ್ಲೆ, ಗಡಿ, ಅವಧಿ. "स्वयं विशीर्णद्रुमपर्णवृत्तिता परा हि काष्ठा तपसस्तया पुनः" कुमा० ५-२८। 4. ಉತ್ಕರ್ಷ, ಹೆಚ್ಚಿಗೆ, ಆಧಿಕ್ಯ. "काष्ठागतस्नेहरसानुविद्धं द्वन्द्वानि भावं क्रियया विवव्रुः" कुमा० ३-३५। 5. ಮರದರಿಶಿನ. 6. ಕಶ್ಯಪನ ಒಬ್ಬ ಪತ್ನಿ. 7. ಸ್ಥಾನ, ಜಾಗ. "काष्ठा दारुहरिद्रायां कालमानप्रकर्षयोः। स्याद्दिशि स्थानमात्रे च काष्ठमाख्यातमिन्धने" विश्व०।

**काष्ठागार ಕಾಷ್ಠಾಗಾರ** (न०) ಮರದಿಂದ ನಿರ್ಮಿಸಲ್ಪಟ್ಟ ಮನೆ. काष्ठमयमगारम्।

**काष्ठाम्बुवाहिनी ಕಾಷ್ಠಾಂಬುವಾಹಿನೀ** (स्त्री०) ದೋಣಿಯ ಆಕಾರದ ಮರದ ತೊಟ್ಟಿ, ಹಡಗಿನಿಂದ ನೀರನ್ನು ಎತ್ತಿ ಸುರಿಯುವ ಒಂದು ಮರದ ಪಾತ್ರೆ.

**काष्ठीला ಕಾಷ್ಠೀಲಾ** (स्त्री०) 1. ಒಂದು ಜಾತಿಯ ಬಾಳೆಗಿಡ. 2. ಎಕ್ಕದ ಗಿಡ.

**काष्ठोदुम्बरिका ಕಾಷ್ಠೋದುಂಬರಿಕಾ** (स्त्री०) ಕಲ್ಲತ್ತಿಗಿಡ, ಬ್ರಹ್ಮಮೇಡಿ. काष्ठप्रधाना उदुम्बरिका।

**कास ಕಾಸ** (पु०) ಕಾಸರೋಗ, ಕೆಮ್ಮಲು. कासृ (शब्दकुत्सायाम्) कर० "घञ्" (३-३-१२१)। **ಕಾಸರೋಗ ಲಕ್ಷಣ:** ಹೃದಯದಲ್ಲಿರುವ ಪ್ರಾಣವಾಯುವು ಕಂಠದಲ್ಲಿರುವ ಉದಾನವಾಯುವಿನೊಡನೆ ಸೇರಿ ದೋಷಯುಕ್ತವಾಗಿ, ಒಡೆದ ಕಂಚಿನ ಶಬ್ದದಂತೆ ಮುಖದಿಂದ ಶಬ್ದವು ಹೊರಡುವುದು. ಇದೇ ಕಾಸರೋಗವು. "प्राणो ह्युदानानुगतः प्रदुष्टः संभिन्नकांस्यस्वनतुल्यघोषः। निरेति वक्त्रात् सहसा सदोषः कासः स विद्वद्भिरुदाहृतस्तु" सुश्रुत० उत्तर० ५२-५। ಈ ಕಾಸರೋಗವು (1) ವಾತಜ, (2) ಪಿತ್ತಜ, (3) ಕಫಜ, (4) ಕ್ಷತಜ, ಮತ್ತು (5) ಕ್ಷಯಜಗಳೆಂದು ಐದು ವಿಧ. ಈ ಐದು ವಿಧ ಕೆಮ್ಮಲೂ ಗುಣವಾಗದೆ ಉಲ್ಬಣವಾದರೆ ಕ್ಷಯರೋಗಕ್ಕೆ ಕಾರಣವಾಗುವುದು. "स वातपित्तप्रभवः कफाच्च क्षतात्तथान्यः क्षयजोऽपरश्च। पञ्चप्रकारः कथितो भिषग्भिः विवर्धितो यक्ष्मविकारकृत् स्यात्" सुश्रुत० उत्तर० ५२-६।

**कासकर ಕಾಸಕರ** (वि०) ಕೆಮ್ಮಲನ್ನುಂಟುಮಾಡುವ. डु कृञ् (करणे) "टः" (३-२-२०)। कासस्य करः। "क्विप्" (३-२-७६)। **-कृत् -ಕೃತ್.**

**कासघ्न ಕಾಸಘ್ನ** (वि०) ಕೆಮ್ಮಲನ್ನು ಹೋಗಲಾಡಿಸುವ, ಕಾಸರೋಗವನ್ನು ನಾಶಮಾಡುವ. कासं हन्ति — हन (हिंसागत्योः) "टक्" (३-२-५३)।

**कासजित् ಕಾಸಜಿತ್** (वि०) 1. ಕಾಸರೋಗವನ್ನು ಗುಣಪಡಿಸುವ, ಕೆಮ್ಮಲನ್ನು ಹೋಗಲಾಡಿಸುವ. कासं जयति — जि (जये) "क्विप्" (३-२-६१)। (स्त्री०) 2. ಭಾರಂಗಿ ವೃಕ್ಷ.

**कासमर्द ಕಾಸಮರ್ದ** (पु०) ಒಂದು ವೃಕ್ಷ.

**कासर ಕಾಸರ** (पु०) ಮಹಿಷ, ಎಮ್ಮೆ. के जले आसरति —आ+सृ (गतौ) "अच्" (३-१-१३४)। "अधिष्ठितः कासरमुग्रं मुदा वैवस्वतो दण्डधरस्तमन्वगात्" कुमा० १४-७।

**कासवत् ಕಾಸವತ್** (वि०) ಕಾಸರೋಗವುಳ್ಳವನು. कासोऽस्यास्ति — "मतुप्" (५-२-९४)। "वैरेचनं मुखेनैव कासवान् धूममापिबेत्" चरक० चिकित्सा० १८-६५।

**कासहन् ಕಾಸಹನ್** (पु) 1. ಕಂಟಕಾರಿಯ ಕಷಾಯ. "कण्टकारीकृतः क्वाथः सकृष्णः सर्वकासहा"। (वि०) 2. ಕಾಸರೋಗವನ್ನು ನಾಶಪಡಿಸುವ, ಕೆಮ್ಮಲನ್ನು ಗುಣಪಡಿಸುವ. कासं हन्ति—हन (हिंसागत्योः) "क्विप्" (३-२-७६)।

**कासार ಕಾಸಾರ** (पु०) ಸರಸ್ಸು, ಸರೋವರ, ಕೊಳ. कासृ (शब्दकुत्सायाम्) "आरन्" (उ० ३-१३९)। कस्य जलस्य आसारोऽत्र वा।

**कासारि ಕಾಸಾರಿ** (पु०) ಕಾಸಮರ್ದವೃಕ್ಷ.

**कासिन् ಕಾಸಿನ್** (वि०) ಕಾಸರೋಗವುಳ್ಳವನು, ಕೆಮ್ಮಲುಳ್ಳವನು. कासोऽस्यास्ति "इनिः" (५-२-११५)। "मांसोचितेभ्यः कासिभ्यो लावादीनां रसा हिताः" चरक० चिकित्सा० १८-१३९।

**कासू ಕಾಸೂ** (स्त्री०) 1. ಶಕ್ತ್ಯಾಯುಧ. 2. ರೋಗ, ವ್ಯಾಧಿ. 3. ಬುದ್ಧಿ. 4. ಅಸ್ಪಷ್ಟವಾದ ಮಾತು. कस (गतौ) "ऊः" (उ० १-८५)। "कासूः शक्त्यायुधे रुजि। बुद्धौ विकलवाचि स्यात्" हेम०।

**कास्–शब्दकुत्सायाम्** (भ्वा० आत्म० अक० से०)। कासते। चकासे। कासांबभूव,–आस, चक्रे। कासताम्। अकासिष्ट। ಕೆಟ್ಟ ಶಬ್ದಮಾಡು, ಕೆಮ್ಮು.

**काहल ಕಾಹಳ** (पु०) 1. ಕುಕ್ಕುಟ, ಕೋಳಿ. कुत्सितं हलति – हल (विलेखने) "अच्" (३-१-१३४)। 2. ಶಬ್ದ, ಧ್ವನಿ. 3. ಬೆಕ್ಕು, ಮಾರ್ಜಾರ. 4. ದೊಡ್ಡ ನಗಾರಿ. (न०) 5. ಅಸಭ್ಯವಾದ ಮಾತು. 6. ಒಂದು ವಾದ್ಯ. (वि०) 7. ಶುಷ್ಕವಾದ, ಒಣಗಿರುವ. 8. ದೊಡ್ಡದಾದ, ಅತಿಶಯವಾದ. 9. ನೀಚ, ದುರ್ಜನ. 10. ಅಸಭ್ಯವಾಗಿ ಮಾತಾಡುವವನು. 11. ಅಸ್ಫುಟವಾಗಿ ಮಾತಾಡುವವನು. (अव्य०) 12. ಹೆಚ್ಚಾಗಿ, ಅಧಿಕವಾಗಿ. "तूर्यारावैराहितोत्तालतालैर्गायन्तीभिः काहलं काहलाभिः" माघ० १८-५४। (स्त्री०) –ला –ಳಾ. 13. ಉದ್ದವಾದ ನಗಾರಿ. 14. ಚಿನ್ನಗಾಳೆ. 15. ಒಬ್ಬ ಅಪ್ಸರಸ್ಸು. 16. ದತ್ತೂರಿ ಹೂವಿನಂತಿರುವ ಒಂದು ವಾದ್ಯ, ತುತೂರಿ. "आत्तया युधि विजित्य रतीशं राजितः कुसुमकाहलयेव" नैष० २१-३४। –ली –ಳಿ. 17. ತರುಣಿ, ಪ್ರಾಯದ ಹೆಂಗಸು. "काहला वाद्यभाण्डस्य भेदे चाप्सरसां भिदि। काहली तु तरुण्यां स्यात् काहलश्चरणायुधे। शब्दमात्रेऽपि पुल्लिङ्गस्त्रिषु शुष्के भृशे खले" मेदि०।

**काहलि ಕಾಹಳಿ** (पु०) 1. ಶಿವ, ಪರಮೇಶ್ವರ. कं सुखमाहलति–आ+हल (विलेखने) "इन्" (उ० ४-११७)। "मुख्योऽमुख्यश्च देहश्च काहलिः सर्वकामदः" भा० अनु०। (स्त्री०) –ली –ಳಿ. 2. ತರುಣಿ, ಪ್ರಾಯದ ಹೆಂಗಸು.

**कि – ज्ञाने** (जुहो० पर० सक० से०)। चिकेति। चिकाय। केता। अकैषीत्। ತಿಳಿ, ಅರಿ.

**किंनर ಕಿಂನರ** (पु०) ಮನುಷ್ಯನ ಮುಖ ಕುದುರೆಯ ಮೈಯುಳ್ಳ ಒಂದು ವಿಚಿತ್ರ ಪ್ರಾಣಿ, ಕುದುರೆಯ ಮುಖ ಮತ್ತು ಮನುಷ್ಯನ ದೇಹವುಳ್ಳ ಒಂದು ವಿಚಿತ್ರ ಪ್ರಾಣಿ, ದೇವಯೋನಿವಿಶೇಷ. किं कुत्सितो नरः। ಇವರು ಪುಲಸ್ತ್ಯಮಹರ್ಷಿಯ ಮಕ್ಕಳು. "राक्षसाश्च पुलस्त्यस्य वानराः किंनरास्तथा। यक्षाश्च मनुजव्याघ्र पुत्रास्तस्य च धीमतः" भा० आदि० ६७-७। "बिम्बोष्ठं बहु मनुते तुरङ्गवक्त्रश्चुम्बन्तं मुखमिह किंनरं प्रियायाः" माघ० ४-३८। –पुरुषः –ಪುರುಷಃ. "यक्षाः किंपुरुषाः पौराः योषितो वनदेवताः" कुमा० ६-३९।

**किंप्रभु ಕಿಂಪ್ರಭು** (पु०) ಅಸಭ್ಯನಾದ ರಾಜ, ಕೆಟ್ಟ ದೊರೆ. कुत्सितः प्रभुः। अस्वपदविग्रहः। "स किंसखा साधु न शास्ति योऽधिपं हितान्न यः संशृणुते स किंप्रभुः" किरा० १-५।

**किंयु ಕಿಂಯು** (वि०) ಏನನ್ನು ಅಪೇಕ್ಷಿಸುವವನು? किमिच्छति – किम् "क्यच्" "उः" बाहु०।

**किंराज ಕಿಂರಾಜ** (पु०) 1. ಯಾವ ರಾಜ? ಯಾವ ದೊರೆ? 2. ಯಾರಿಗೆ ಅಥವಾ ಯಾವ ದೇಶಕ್ಕೆ ದೊರೆ? कः कस्य वा राजा "टच्" (५-४-९१)। किमिति प्रश्नार्थकं मान्तमव्ययम्।

**किंराजन् ಕಿಂರಾಜನ್** (पु) 1. ಕೆಟ್ಟ ದೊರೆ. कुत्सितो राजा। क्षेपार्थत्वान्न टच् (५-४-७०)। 2. ಕೆಟ್ಟ ದೊರೆಯನ್ನು ಹೊಂದಿರುವ ದೇಶ.

**किंरूप ಕಿಂರೂಪ** (वि०) ಯಾವ ಆಕಾರವುಳ್ಳ?

**किंवत् ಕಿಂವತ್** (वि०) 1. ಯಾವುದನ್ನು ಹೊಂದಿರುವ? ಯಾವುದರೊಡನೆ ಕೂಡಿರುವ? किं विद्यतेऽस्य "मतुप्" (५-२-९४)। मस्य वः। (अव्य०) 2. ಯಾವುದರಂತೆ? ಯಾವುದಕ್ಕೆ ಸಮಾನವಾಗಿ? 3. ಯಾವುದರಲ್ಲಿರುವಂತೆ? कस्येव कस्मिन्निव वा "वतिः" (५-१-११६)।

**किंवदन्ती ಕಿಂವದಂತೀ** (स्त्री०) ಲೋಕಪ್ರವಾದ, ಜನರು ಆಡಿಕೊಳ್ಳುವ ಮಾತು. किं + वद (व्यक्तायां वाचि) "झच्" (उ० ३-१२८)। गौरा० "ङीष्" (४-१-४१)। ನಿಜವಾಗಲಿ ಸುಳ್ಳಾಗಲಿ ಜನರು ಆಡಿಕೊಳ್ಳುವ ಮಾತು किंवदन्ती ಎನಿಸುವುದು.

**किंविषयक ಕಿಂವಿಷಯಕ** (वि०) ಯಾವ ವಿಷಯಕ್ಕೆ ಸಂಬಂಧಪಟ್ಟಿರುವುದು?

**किंवीर्य ಕಿಂವೀರ್ಯ** (वि०, ಎಷ್ಟು ಶಕ್ತಿಯುಳ್ಳ?

**किंव्यापार ಕಿಂವ್ಯಾಪಾರ** (वि०) ಯಾವ ಕೆಲಸವುಳ್ಳವನು? ಯಾವ ವೃತ್ತಿಯುಳ್ಳವನು?

**किंशारु ಕಿಂಶಾರು** (पु०) 1. ಧಾನ್ಯದ ಮುಳ್ಳು, ಧಾನ್ಯದ ತುದಿಯ ಭಾಗ. किञ्चित् कुत्सितं वा शृणाति – शॄ (हिंसायाम्) "उण्" (उ० १-४)। "किंशारुः सस्यशूकं स्यात्" अम०। 2. ಕಂಕಪಕ್ಷಿ, ಹದ್ದು. 3. ಬಾಣ. "किंशारुर्ना सस्यशूके विशिखे कङ्कपक्षिणि" मेदि०।

**किंशील ಕಿಂಶೀಲ** (वि०) 1. ಯಾವ ಸ್ವಭಾವದವನು? 2. ಯಾವ ನಡತೆಯುಳ್ಳವನು? किं शीलमस्य। "शीलं स्वभावे सद्वृत्ते" अम०।

**किंशुक ಕಿಂಶುಕ** (पु०) 1. ಪಲಾಶ ವೃಕ್ಷ, ಮುತ್ತುಗದ ಮರ, किञ्चित् शुक इव। (न०) 2. ಪಲಾಶ ಕುಸುಮ,

ಮುತ್ತುಗದ ಹೂವು. "फलस्तनस्थानविशीर्णरागिहृद्विशच्छुकास्यस्मरकिंशुकाशुगम्" नैष० १-८३। "महावनानीव च किंशुकानाम्" किरा० १६-५२।

**किशुलुक ಕಿಂಶುಲುಕ** (पु०) ಪಲಾಶವೃಕ್ಷ, ಮುತ್ತುಗದ ಮರ. किंशुक ಪದವು "लु" ಮಧ್ಯಮವಾಗಿ ನಿಪಾತ ಹೊಂದಿರುವುದು. (६-३-११७)। ಇದಕ್ಕೆ गिरि ಶಬ್ದವು ಪರವಾದಾಗ ದೀರ್ಘ ಬರುವುದು. किंशुलुकागिरिः।

**किसख ಕಿಂಸಖ** (वि०) 1. ಯಾವ ಸ್ನೇಹಿತ? 2. ಯಾರ ಸ್ನೇಹಿತ? कः कस्य वा सखा "टच्" (५-४-९१)।

**किसखि (खा) ಕಿಂಸಖಿ (ಖಾ)** (पु०) ಕೆಟ್ಟ ಸ್ನೇಹಿತ, ಅಯೋಗ್ಯನಾದ ಗೆಳೆಯ. कुत्सितः सखा। क्षेपार्थत्वात् न "टच्" (५-४-७०)। "स किंसखा साधु न शास्ति योऽधिपं हिताद्न यः संशृणुते स किंप्रभुः" किरा० १-५।

**किस्तुघ्न ಕಿಂಸ್ತುಘ್ನ** (पु०) ಹನ್ನೊಂದು ಕರಣಗಳಲ್ಲೊಂದು. ["करण" ಪದದಲ್ಲಿ ನೋಡಿ.]

**किस्वित् ಕಿಂಸ್ವಿತ್** (अव्य०) 1. ಊಹೆ, ವಿತರ್ಕ. 2. ಸಂಶಯ. किमयं स्थाणुः किंस्वित् पुरुषः?। "अद्रेः शृङ्गं हरति पवनः किंस्विदित्युन्मुखीभिः" मेघ० १-१४।

**किकि ಕಿಕಿ** (पु०) 1. ನಾರಿಕೇಳವೃಕ್ಷ, ತೆಂಗಿನ ಮರ. 2. ಹಂಗನಹಕ್ಕಿ. किकीत्यस्फुटशब्दं करोति।

**किकीदिवि ಕಿಕೀದಿವಿ** (पु०) ಚಾಷಪಕ್ಷಿ, ಹಂಗನಹಕ್ಕಿ. किकीत्यव्यक्तं दीव्यति वाशते—दिवु (क्रीडादौ) "क्विन्" (उ० ४-५६)। निपा०। बाहुलकात् ह्रस्वदीर्घयोर्विनिमयः। "**किकिदीविः**" ರೂಪವೂ ಉಂಟು. "अथ चाषः किकीदिविः" अम०।

**किक्किश ಕಿಕ್ಕಿಶ** (पु०) ದೇಹದಲ್ಲಿರುವ ಕ್ರಿಮಿ, ತಲೆಯ ಕೂದಲು ಮೈಗೂದಲು ದಂತ ನಖಗಳನ್ನು ತಿನ್ನುವ ಒಂದು ಬಗೆಯ ಹುಳು. "केशरोमनखादाश्च दन्तादाः किक्किशास्तथा" सुश्रुत० उत्तरत० ५४-१५।

**किखि ಕಿಖಿ** (स्त्री०) ಹೆಣ್ಣು ನರಿ. "किखिरुल्कामुखी च सा" त्रिकाण्ड०।

**किङ्कर ಕಿಂಕರ** (पु०) ಸೇವಕ, ಆಳು. किञ्चित् कुत्सितं वा करोति—डु कृञ् (करणे) "अच्" (वा० ३-२-२१)। "अवेहि मां किङ्करमष्टमूर्तेः कुम्भोदरं नाम निकुम्भतुल्यम्" रघु० २-३५। स्त्रियाम् "टाप्" (४-१-४)। **—रा —ರಾ.** ಸೇವಕಿ, ಹೆಣ್ಣಾಳು. "ङीष्" (४-१-४८)। **—री —ರೀ.** ಸೇವಕನ ಹೆಂಡತಿ.

**किङ्किणि (णी)का ಕಿಂಕಿಣಿ (ಣೀ)ಕಾ** (स्त्री०) ಕಿರುಗೆಜ್ಜೆ. किञ्चित् किणं करोति—किण + तत्करोति (वा० ३-१-२६) णिच् "अच्" (३-१-१३४)। गौरा० "ङीष्" (४-१-४१)। "ग्रीवाग्रलोलकलकिङ्किणिकानिनादमिश्रं दधद्दशनचर्चुरशब्दमश्वः" माघ० ५-५८।

**किङ्किणी ಕಿಂಕಿಣೀ** (स्त्री०) ಕಿರುಗೆಜ್ಜೆ, ಕಿರುಗಂಟೆ. किञ्चित् किणं करोति—डु कृञ् + णिच् "अच्" (३-१-१३४)। गौरा० "ङीष्" (४-१-४१)। "दयितेन तत्क्षणचलद्रशनाकलकिङ्किणीरवमुदासि वधूः" माघ० ९-७४।

**किङ्किणीकिन् ಕಿಂಕಿಣೀಕಿನ್** (वि०) ಕಿರುಗೆಜ್ಜೆಯಿಂದ ಕೂಡಿದ, ಕಿರುಗೆಜ್ಜೆಯಿಂದ ಅಲಂಕರಿಸಲ್ಪಟ್ಟ. किङ्किणीकास्यास्ति "इनिः" (५-२-११६)।

**किङ्किर ಕಿಂಕಿರ** (पु०) 1. ಭ್ರಮರ, ದುಂಬಿ. किञ्चित् किरति — कृ (विक्षेपे) "कः" (३-१-१३५)। 2. ಕೋಗಿಲೆ. 3. ಅಶ್ವ, ಕುದುರೆ. 4. ಕಾಮ, ಮನ್ಮಥ. 5. ರಕ್ತವರ್ಣ, ಕೆಂಪುಬಣ್ಣ. (न०) 6. ಆನೆಯ ಕುಂಭಸ್ಥಳ. (वि०) 7. ಕೆಂಪುಬಣ್ಣದ.

**किङ्किरात ಕಿಂಕಿರಾತ** (पु०) 1. ವಕುಳವೃಕ್ಷ, ಅಶೋಕ ವೃಕ್ಷ. किङ्किरं रक्तवर्णमतति—अत (सातत्यगमने) "अण्" (३-२-१)। 2. ಹಳದಿಗೋರಂಟಿ. 3. ಕಾಮ, ಮನ್ಮಥ. 4. ಕೋಗಿಲೆ. 5. ಗಿಣಿ.

**किञ्च ಕಿಂಚ** (अव्य०) 1. ಪ್ರಾರಂಭ. 2. ಸಾಕಲ್ಯ, ಸಮಗ್ರತೆ, ಸಂಪೂರ್ಣತೆ. "किञ्चारम्भे च साकल्ये" मेदि०। 3. ಮತ್ತು, ಅದಲ್ಲದೆ. "प्रपित्सोः किञ्च ते मुक्ति निःस्पृहस्य कलेबरे" किरा० ११-१६। 4. ಊಹೆ, ಸಂಭಾವನೆ.

**किञ्चन ಕಿಂಚನ** (अव्य०) 1. ಅಸಾಕಲ್ಯ, ಅಸಂಪೂರ್ಣವಾಗಿರುವಿಕೆ. 2. ಸ್ವಲ್ಪ, ಅಲ್ಪ. किम् + चन ಎಂದು ಎರಡು ಪದಗಳೆಂದು ಕೆಲವರ ಮತ. 3. ಅನಿರ್ದಿಷ್ಟವಾದ ಯಾವುದೋ ಒಂದು.

**किञ्चित् ಕಿಂಚಿತ್** (अव्य०) 1. ಸ್ವಲ್ಪ, ಅಲ್ಪ. "तयोः समापत्तिषु कातराणि किञ्चिद्व्यवस्थापितसंहृतानि" कुमा० ७-७५। 2. ಅಸಾಕಲ್ಯ, ಅಸಂಪೂರ್ಣತೆ. किम् + चित् ಎಂದು ಎರಡು ಪದಗಳೆಂದು ಕೆಲವರ ಮತ. 3. ಯಾವುದೋ ಒಂದು, ಅನಿರ್ದಿಷ್ಟವಾದುದೊಂದು. "प्रस्थं हिमाद्रेर्मृगनाभिगन्धि किञ्चित् क्वणत्किन्नरमध्युवास" कुमा० १-५४।

**किञ्चिज्ज** ಕಿಂಚಿಜ್ಞ (वि०) ಸ್ವಲ್ಪ ತಿಳಿದವನು, ಸ್ವಲ್ಪ ವಿಷಯ ಬಲ್ಲವನು. किञ्चिज्जानाति – ज्ञा (अवबोधने) "क:" (३-२-३)। "यदा किञ्चिज्ज्ञोऽहं गज इव मदान्धः समभवत्" भर्तृ० १-८।

**किञ्चुलुक** ಕಿಂಚುಲುಕ (पु०) ಕೆಸರಿನಲ್ಲಿರುವ ಎರುಬು ಹುಳು. किञ्चित् चुलुम्पति – चुलुम्प "ड:" (३-२-१०१)। "कन्" (५-३-७५)। "गण्डूपदः किञ्चुलुकः" अम०।

**किञ्ज** ಕಿಂಜ (वि०) ಯಾರಿಂದಲೋ ಹುಟ್ಟಿದ, ಯಾವುದರಿಂದಲೋ ಹುಟ್ಟಿದ. "मन्ये किञ्जमहं घ्नन्तं त्वामक्षत्रियजे रणे" भट्टि० ६-१३३।

**किञ्जप्य** ಕಿಂಜಪ್ಯ (न०) ಇದರಲ್ಲಿ ಸ್ನಾನ ಮಾಡಿ ಸ್ವಲ್ಪವಾದರೂ ಜಪ ಮಾಡಲೇಬೇಕಾದ ಒಂದು ತೀರ್ಥ.

**किञ्जल्क** ಕಿಂಜಲ್ಕ (पु०) 1. ಕಮಲ ಮೊದಲಾದ ಹೂವುಗಳ ಕೇಸರ, ಹೂವುಗಳ ಕುಸುರು. किञ्चित् जलति– जल (अपवारणे) "क:" बाहु०। "किञ्जल्कव्यतिकरपिञ्जरान्तराभिश्चित्रश्रीरलमलकाग्रवल्लरीभिः" माघ० ८-५६। (न०) 2. ಗಗನ, ಆಕಾಶ. "किञ्जल्कः केसरे खे क्ली" वैज०।

**किट–गतौ** (भ्वा० पर० सक० से०)। केटति। चिकेट। केटिता। केटिष्यति। केटतु। अकेटत्। केटेत्। अकेटीत्। ಇತ್ಯಾದಿ. ಹೋಗು, ಹೊಂದು, ತಲುಪು.

**कर्मणि**:–किटयते। चिकिटे। केटिता। किटयताम्। अकिटयत। ಇತ್ಯಾದಿ.

**णिचि**:–केटयति, –ते। केटयांचकार, –चक्रे, –बभूव, –आस। केटयिता। अकेटयत्, –त। केटयेत्, –त। ಇತ್ಯಾದಿ.

**कृत्सु**:–केटितव्यम्। केटनीयम्। केट्यम्। किटितः। किटितवान्। केटन्, –न्ती।

**किट–त्रासे** (भ्वा० पर० अक० से०)। केटति। चिकेट ಇತ್ಯಾದಿ ಎಲ್ಲವೂ "किट-गतौ" ರೂಪಗಳಂತೆ ಆಗುವುವು.

**किटि** ಕಿಟಿ (पु०) ವರಾಹ, ಹಂದಿ. केटति–किट (गतौ) "इन्" (उ० ४-११९)।

**किटिम** ಕಿಟಿಮ (न०) ಒಂದು ವಿಧ ಕುಷ್ಠರೋಗ.

**किटिभ** ಕಿಟಿಭ (पु०) 1. ಹೇನು. किटिरिव भाति–भा (दीप्तौ) "क:" (३-२-४)। (न०) 2. ಹಾವು ಕಚ್ಚಿದ ನೋವು. "द्रद्रवः कर्णिकाश्चैव विसर्पाः किटिभानि च। तैर्भवन्तीह दष्टानां यथास्वं चाप्युपद्रवाः" सुश्रुत० कल्प० ८-२१।

**किट्ट** ಕಿಟ್ಟ (न०) 1. ಧಾತುಗಳ ಮಲ. 2. ಕಬ್ಬಿಣದ ತುಕ್ಕು, ಕಬ್ಬಿಣದ ಮೇಲಿನ ಮಲ. किट (गतौ) "क्त:" (३-४-७२)। 3. ಮನುಷ್ಯನ ಶರೀರದೊಳಗಿನ ಮಲ. 4. ಎಣ್ಣೆ ತುಪ್ಪ ಮೊದಲಾದುವುಗಳ ಗಷ್ಟು.

**किट्टवर्जित** ಕಿಟ್ಟವರ್ಜಿತ (न०) ವೀರ್ಯ, ರೇತಸ್ಸು, ಶುಕ್ರಧಾತು. किट्टेन मलेन वर्जितम्।

**किट्टाल** ಕಿಟ್ಟಾಲ (पु०) 1. ಧಾತುವಿನ ಮಲ. किट्टमालाति – आ + ला (आदाने) "क:" (३-२-४)। 2. ತಾಮ್ರದ ಪಾತ್ರೆ. "किट्टालः पुंसि ताम्रस्य कलशे लोहगूथके" मेदि०।

**किट्टिम** ಕಿಟ್ಟಿಮ (न०) ಉಪ್ಪುಪ್ಪಾದ ನೀರು. "वल्लूरं तु सितं तोयमतिक्षारं तु किट्टिमम्" वैज०।

**किण** ಕಿಣ (पु०) 1. ಒಣಗಿದ ಹುಣ್ಣು. कण (गतौ) "अच्" (३-१-१३४)। पृषो०। 2. ಗಾಯದ ಗುರುತು, ಉಜ್ಜಾಟದಿಂದ ಉಂಟಾದ ಮೈಮೇಲಿನ ಗುರುತು, ಜಡ್ಡು. "ज्ञास्यसि कियद्भुजो मे रक्षति मौर्वीकिणाङ्क इति" शाकु० १-१२। 3. ಮಾಂಸಗ್ರಂಥಿ. 4. ಸುಂಡಿಲಿ, ನರೋಲಿ.

**किणिही** ಕಿಣಿಹೀ (स्त्री०) ಉತ್ತರಣೆ ಗಿಡ. किणिनो व्रणान् हापयति – ओ हाङ् (गतौ) + णिच् "क:" (३-२-३)। "ङीष्" (४-१-४१)।

**किण्व** ಕಿಣ್ವ (न०) 1. ಸುರಾ ಬೀಜ. ಮದ್ಯವನ್ನು ತಯಾರಿಸಲು ಉಪಯೋಗಿಸುವ ಒಂದು ಮಾದಕ ದ್ರವ್ಯ. "सूत्रकार्पासकिण्वानां गोमयस्य गुडस्य च" मनु० ८-२३६। 2. ಪಾಪ.

**कितव** ಕಿತವ (पु०) 1. ಜೂಜಾಡುವವನು, ಜೂಜುಗಾರ. 2. ದತ್ತೂರಿ ಗಿಡ. 3. ವಂಚಕ, ಮೋಸಗಾರ. कि (ज्ञाने) "क्त:" (३-३-११४)। कितं वायति–ओ वै (शोषणे) "क:" (३-२-३)। "मुग्धे दुष्करमेतदित्यतितमामुद्दामहासं बलादाश्लिष्य च्छलितास्मि तेन कितवेनाद्य प्रदोषागमे" अमरु० ४६। स्त्रियाम् **कितवा** ಕಿತವಾ.

**किन्तनु** ಕಿಂತನು (पु०) ಜೇಡರಹುಳು. कुत्सिता तनुरस्य। "अष्टपादस्तु किन्तनुः" त्रिकाण्ड०।

**किन्तमाम् ಕಿಂತಮಾಮ್** (अव्य०) ಅನೇಕರಲ್ಲಿ ಯಾರು?, ಅನೇಕ ವಸ್ತುಗಳಲ್ಲಿ ಯಾವುದು? किम् स्वार्थिक: "तमप्" (५-३-५५)। "आमु:" (५-४-११)।

**किन्तराम् ಕಿಂತರಾಮ್** (अव्य०) ಇಬ್ಬರಲ್ಲಿ ಯಾರು?, ಎರಡರಲ್ಲಿ ಯಾವುದು? किम् "तरप्" (५-३-५७)। "आमु:" (५-४-११)।

**किन्तु ಕಿಂತು** (अव्य०) 1. ಹಿಂದೆ ಹೇಳಿದ ವಿಷಯಕ್ಕೆ ವಿರುದ್ಧವಾದ ಅರ್ಥ, ಆದರೆ. किञ्च तु च। "नृणां पश्यतस्य क्वचन विशिखान् किन्तु पतितद्विषद्वक्ष:श्वभ्रैरतुमितिरमून् गोचरयति" नैष० १२-४९। 2. ಮತ್ತು, ಮತ್ತೇನೆಂದರೆ. "अर्थिने न तृणवद्धनमात्रं किन्तु जीवनमपि प्रतिपाद्यम्" नैष० ५-८६।

**किन्दम ಕಿಂದಮ** (पु०) ಒಬ್ಬ ಋಷಿ. ಈ ಋಷಿಯು ಮೃಗರೂಪದಿಂದ ಸ್ತ್ರೀಮೃಗರೂಪತಾಳಿದ ತನ್ನ ಪತ್ನಿಯೊಡನೆ ಕ್ರೀಡಿಸುತ್ತಿದ್ದಾಗ ಬೇಟೆಗಾಗಿ ಅರಣ್ಯಕ್ಕೆ ಹೋಗಿದ್ದ ಪಾಂಡುಮಹಾರಾಜನು ಮೃಗಗಳೆಂದು ತಿಳಿದು ಪ್ರಯೋಗಿಸಿದ ಬಾಣದಿಂದ ಹತನಾದನು. "ಸುರತಕ್ರೀಡೆಯ ಕಾಲದಲ್ಲಿ ನಮ್ಮಿಬ್ಬರನ್ನೂ ನೀನು ಹೊಡೆದೆಯಾದ ಕಾರಣ ಪತ್ನೀಸಂಗಮಾಡಿದೆಯಾದರೆ ನಿನಗೂ ಇಂತಹ ಮರಣವು ಪ್ರಾಪ್ತವಾಗಲಿ"ಎಂದು ಋಷಿಯು ಪಾಂಡುವನ್ನು ಶಪಿಸಿದನು. "अस्यां मृग्यां च राजेन्द्र हर्षान्मैथुनमाचरम्। पुरुषार्थफलं कर्तुं तत्त्वया विफलीकृतम्। अहं हि किन्दमो नाम तपसा भावितो मुनि:। व्यपत्रपन्मनुष्याणां मृग्यां मैथुनमाचरम्। मृगो भूत्वा मृगै: सार्धं चरामि गहने वने। मृगरूपधरं हत्वा मामेवं काममोहितम्। अस्य तु त्वं फलं मूढ! प्राप्स्यसीदृशमेव हि। प्रियया सह संवासं प्राप्य कामविमोहित:। त्वमप्यस्यामवस्थायां प्रेतलोकं गमिष्यसि" भा० आदि० ११७।

**किन्दान ಕಿಂದಾನ** (न०) ಒಂದು ಪುಣ್ಯತೀರ್ಥ. ಈ ತೀರ್ಥದಲ್ಲಿ ಸ್ನಾನಮಾಡಿ ಸ್ವಲ್ಪವಾದರೂ ದಾನ ಮಾಡಲೇಬೇಕಾದುದರಿಂದ ಇದಕ್ಕೆ ಈ ಹೆಸರು. किञ्चिदपि दानमावश्यकं यत्र। "किन्दाने च नर: स्नात्वा किं जप्ये च महीपते। अप्रमेयमवाप्नोति दानं जप्यं च भारत" भा० वन०।

**किन्दास ಕಿಂದಾಸ** (पु०) ಕೆಟ್ಟ ಸೇವಕ, ಅಯೋಗ್ಯನಾದ ಆಳು. कुत्सितो दास:।

**किन्देवत ಕಿಂದೇವತ** (वि०) ಯಾವ ದೇವತೆಯುಳ್ಳ?

**किन्नामक ಕಿನ್ನಾಮಕ** (वि०) ಯಾವ ಹೆಸರುಳ್ಳವನು? –नामन् –ನಾಮನ್, –नामधेय: –ನಾಮಧೇಯಃ.

**किन्निमित्त ಕಿನ್ನಿಮಿತ್ತ** (वि०) 1. ಯಾವ ಕಾರಣವುಳ್ಳ? (अव्य०) 2. ಯಾವ ಕಾರಣದಿಂದ? "किन्निमित्तमिहागत:" रामा०।

**किन्नु ಕಿನ್ನು** (अव्य०) 1. ಪ್ರಶ್ನೆ. 2. ವಿತರ್ಕ, ಸಂಶಯ. किं च नु च। "किन्नु स्याच्चित्तमोहोऽयं भवेद्वातगतिस्त्वियम्" रामा०। "किन्नु प्रश्नवितर्कयो:" मेदि०। "किन्नु मे स्यादिदं कृत्वा किन्नु मे स्यादकुर्वत:। इति सञ्चिन्त्य मनसा प्राज्ञ: कुर्वीत वा न वा"।

**किप्य ಕಿಪ್ಯ** (पु०) ಪುರೀಷದಲ್ಲಿ ಜನಿಸುವ ಒಂದು ಕೀಟ, ಮಲದಲ್ಲಿ ಹುಟ್ಟುವ ಒಂದು ಹುಳು. "अयवा वियवा: किप्याश्चिप्या गण्डूपदास्तथा। चुरवो द्विमुखाश्चैव सप्तैवेते पुरीषजा:" सुश्रुत० उत्तरतं० ५४-८।

**किम् ಕಿಮ್** (न०) 1. ವಿಷ್ಣು, ಪರಮಾತ್ಮ. प्रच्छ (ज्ञीप्सायाम्) "इम्" कादेशश्च। कै (शब्दे) "डिमि:" (उ० ४-१५८) वा। "एको नैक: स व: क: किम्" वि० स०। "य ईप्सितार्थप्राप्त्यर्थं प्रष्टव्य: किमिति स्मृत:" इति निरुक्ति:। (वि०) ಈ ಕೆಳಗಿನ ಅರ್ಥಗಳನ್ನು ಕೊಡುವುದು. 2. ವಾದ ವಿಷಯ. 3. ಕುತ್ಸಿತ, ನಿಕರ್ಷ, ತುಚ್ಛ. कै (शब्दे) "डिमि:" (उ० ४-१५८)। "कुर्यां हरस्यापि पिनाकपाणे: धैर्यच्युतिं के मम धन्विनोऽन्ये" कुमा० ३-१०। 4. ಪ್ರಶ್ನೆ, ಜಿಜ್ಞಾಸಾಪೂರ್ವಕ ಕೇಳಿಕೆ. ಪ್ರಶ್ನಾರ್ಥಕವಾದಾಗ किम् ಶಬ್ದವು ತ್ರಿಲಿಂಗವಾಗುವುದು. ತ್ರಿಲಿಂಗವಾದಾಗ ಇದು ಸರ್ವನಾಮಸಂಜ್ಞೆಯನ್ನು ಹೊಂದುವುದು. (पु०) ಯಾವನು? ಯಾವುದು? क: कौ के। कम् कौ कान्। ಇತ್ಯಾದಿ. "क इत्थं भाषते पाकशासने मयि शासति" नैष० १७-८५। "कस्त्वं कुतो वेति न जातु शेकुस्तं प्रष्टुमप्यप्रतिभातिभारात्" नैष० ८-७। "अलं नल: कर्तुमनग्निसाक्षिकं विधिं विवाहे तव सारसाक्षि कम्?" नैष० ९-८०। "सुरा: स व: केन पपे कृपार्णव:" नैष० ९-९५। (स्त्री०) ಯಾವಳು? ಯಾವುದು? का के का:। काम् के का:। कया काभ्याम् काभि:। ಇತ್ಯಾದಿ. "का त्वमेकाकिनी भीरु निरन्वयजने वने" भट्टि० ५-६६। "वेदोऽपि देवकीयाज्ञा तत्राज्ञा: काधिकार्हणा?" नैष० १७-५९। "कामेकपत्नीव्रतदु:खशीलाम्" कुमा० ३-७। "कया न वाचा मुदमुद्गिरन्ति" नैष० ९-२६। (न०) ಯಾವುದು?

किम् के कानि। केन काम्याम् कैः। ಇತ್ಯಾದಿ. "किमपेक्ष्य फलं पयोधरान् ध्वनतः प्रार्थयते मृगाधिपः?" किरा० २-२१। "किमात्थ रे किमात्थेदमसमदग्रे निरर्गलम्" नैष० १७-९२। किम् ಶಬ್ದಕ್ಕೆ अपि चित् चन ಗಳು ಸೇರಿದಾಗ ಅನಿರ್ದಿಷ್ಟವಾದ ಒಂದು ಅರ್ಥವನ್ನು ಕೊಡುವುದು. **अपि-कोऽपि ಕೋऽಪಿ.** ಯಾವನೋ ಒಬ್ಬನು. "स्वस्ति यथास्थाने कुतोऽपि कोऽपि कमपि पुरुषविशेषमवगमयति" मुद्रा० ५। **काऽपि** ಯಾವಳೋ ಒಬ್ಬಳು. "कापि काममपि बभाण बुभुत्सुम्" नैष० ५-५३। "अबन्धि तन्मूर्धजपाशमञ्जरी कयापि धूपग्रहधूमकोमला" नैष० १५-२९। **किमपि** (1) ಯಾವುದೋ ಒಂದು. "ध्रुवं विनीतः स्मितपूर्वबाग्युवा किमप्यपृच्छ्यत्र विलोकयन्मुखम्" नैष० १६-६७। (2) ಅಲ್ಪ, ಸ್ವಲ್ಪ. "किमपि मनसः संमोहो मे तदा बलवानभूत्" शाकु० ७-२४।

**चित्-कश्चित् ಕಶ್ಚಿತ್.** ಯಾವನೋ ಒಬ್ಬನು. "मूर्धबद्धाञ्जलिर्देवानथैवं कश्चिदूचिवान्" नैष० १७-१०७। "केनचिन्मधुरमुल्बणरागं बाष्पतप्तमधिकं विरहेषु" माघ० १०-५४।

**काचित् ಕಾಚಿತ್.** ಯಾವಳೋ ಒಬ್ಬಳು. "काचित्समालम्ब्य सहैव कान्त्या" याद० १३-४६। "स्वयंवरार्हे स्वयमेव तस्मिन् कयाचिदाधायि कटाक्षमाला" याद० १३-५५।

**किञ्चित् ಕಿಂಚಿತ್.** ಯಾವುದೋ ಒಂದು. "किञ्चित्लवणकिन्नरमध्युवास" कुमा० १-५४।

**चन-कश्चन ಕಶ್ಚನ.** (1) ಯಾವನೋ ಒಬ್ಬನು. ಯಾವುದೋ ಒಂದು. "रभसोत्थितामुपगतः सहसा परिरम्य कञ्चन वधूमरुधत्" माघ० ९-७२। (2) ಯಾವನೊಬ್ಬನೂ, ಯಾವುದೊಂದೂ. "परितोषयिता न कश्चन स्वगतो यस्य गुणोऽस्ति देहिनः" माघ० १६-२८।

**काचन ಕಾಚನ.** ಯಾವಳೋ ಒಬ್ಬಳು. "भूमिनभसि रभसेन यती विरराज काचन समं महोल्कया" माघ० १५-९२।

**किञ्चन ಕಿಂಚನ.** (1) ಯಾವುದೋ ಒಂದು. (2) ಸ್ವಲ್ಪ, ಕೊಂಚ. "परासि यः किञ्चनकुञ्चितभ्रुवा" नैष० १६-८८। (3) ಯಾವುದೂ, ಯಾವುದೊಂದೂ. "न तव विदितं न किञ्चन" किरा० १२-३१। (अव्य०) 5. ಪ್ರಶ್ನೆ. (1) ಏತಕ್ಕಾಗಿ? "किमुपेक्षसे कथय नाथ" किरा० १२-३१। (2) ಯಾವ ಕಾರಣದಿಂದ? "किं स्वमिव मामपि तापितवानसि"? नैष० ४-७८। 6. ವಿತರ್ಕ, ಸಂಶಯ. "नावा स्मरः किं हरभीतिगुप्ते पयोधरे खेलति कुम्भ एव" नैष० ६-६६। 7. ಆಕ್ಷೇಪಣೆ. 8. ನಿಂದೆ, ದೂಷಣೆ. "स किंसखा साधु न शास्ति योऽधिपम् हिताम्न यः संशृणुते स किंप्रभुः" किरा० १-५। 9. ಸಾದೃಶ್ಯ. 10. ನಿಷೇಧ, ತಡೆ. 11. ಕೊಂಚ, ಸ್ವಲ್ಪ. "किं कुत्सायां वितर्के च निषेधप्रश्नयोरपि" मेदि०। ಮತ್ತು, ಒಂದು ವಿಷಯದಲ್ಲಿ ಪ್ರಶ್ನೆಮಾಡಿ ಅದನ್ನು ಸ್ಥಿರಪಡಿಸುವ ಅರ್ಥದಲ್ಲಿ किम् ಶಬ್ದವು ಉಪಯೋಗಿಸಲ್ಪಡುವುದು. "किं पद्मस्य रुचिं न हन्ति नयनानन्दं विधत्ते न किम् वृद्धिं वा झषकेतनस्य कुरुते नालोकमात्रेण किम्" रत्ना० ३-१३।

**किमर्थ ಕಿಮರ್ಥ** (वि०) 1. ಯಾವ ಪ್ರಯೋಜನವುಳ್ಳ?, 2. ಯಾವ ಉದ್ದೇಶವುಳ್ಳ?, ಯಾವ ಕಾರ್ಯವುಳ್ಳ?. "किमर्थोऽयं यत्नः"? किमर्थोऽयं प्रयासः"?

**किमर्थम् ಕಿಮರ್ಥಮ್** (अव्य०) ಏತಕ್ಕಾಗಿ?, ಯಾವ ಕಾರಣದಿಂದ? "किमर्थं तव नेत्राभ्यां वारि स्रवति शोकजम्" रामा०। "किमर्थं प्रतिषिद्धाः स्मः" शाकु० ७।

**किमाख्य ಕಿಮಾಖ್ಯ** (वि०) ಯಾವ ಹೆಸರುಳ್ಳವನು? ಯಾವ ಹೆಸರಿನವನು? "अथ सा तत्रभवती किमाख्यस्य राजर्षेः पत्नी? शाकु० ७।

**किमिच्छक ಕಿಮಿಚ್ಛಕ** (पु०) ಏನು ಅಪೇಕ್ಷಿಸುವಿರಿ? ಏನು ಬೇಕಾದರೂ ಕೊಡುವೆನು ಎನ್ನುವ ಒಂದು ವ್ರತ. किमिच्छसि इति प्रश्नेन दानार्थं कायति शब्दायते अत्र। पृषो०। [ಕರಂಧಮನ ಮಗನಾದ ಅವಿಕ್ಷಿತನು ವಿಶಾಲತನಯೆಯೆಂಬುವಳ ಸ್ವಯಂವರಕ್ಕೆ ಹೋಗಿದ್ದಾಗ ರಾಜರೆಲ್ಲರೂ ಸೇರಿ ಇವನನ್ನು ಸೆರೆಹಿಡಿಯಲಾಗಿ ಕರಂಧಮನು ರಾಜರನ್ನು ಸೋಲಿಸಿ ಮಗನನ್ನು ಬಿಡಿಸಿಕೊಂಡು ಬಂದನು. ಅವಿಕ್ಷಿತನು ಬಳಿಕ ತಂದೆ ಎಷ್ಟು ಹೇಳಿದರೂ ಬ್ರಹ್ಮಚಾರಿಯಾಗಿಯೇ ಇದ್ದನು. ತಾಯಿಯಾದ ವೀರೆಯು "ಕಿಮಿಚ್ಛಕ" ವ್ರತವನ್ನು ಕೈಕೊಂಡಾಗ ಹೇಗಾದರೂ ಮಗನು ಮದುವೆಯಾಗಬೇಕೆಂದು ಅಪೇಕ್ಷಿಸುತ್ತಿದ್ದ ತಂದೆ ಕರಂಧಮನು ತನಗೆ ಪೌತ್ರ (ಮೊಮ್ಮಗ)ನು ಹುಟ್ಟಬೇಕೆಂದು ಕೇಳಿಕೊಂಡುದರಿಂದ ಅವಿಕ್ಷಿತನು ಯತ್ನವಿಲ್ಲದೆ ಈ ವಿಶಾಲತನಯೆಯನ್ನು ವಿವಾಹಮಾಡಿಕೊಂಡನು.]

**किमिति ಕಿಮಿತಿ** (अव्य०) ಯಾವಕಾರಣದಿಂದ? "किमित्यपास्याभरणानि यौवने धृतं त्वया वार्धकशोभि वल्कलम्" कुमा० ५-४४।

**किमिव ಕಿಮಿವ** (अव्य०) 1. ಏತಕ್ಕಾಗಿ? ಯಾವ ಕಾರಣದಿಂದ? "किमिवाखिललोककीर्तितं कथयत्यात्मगुणं महामनाः" माघ० १६-३१। 2. ಯಾವುದು ತಾನೆ, ಏನು ತಾನೆ. "पदमपि चलितुं युवा न सेहे किमिव न शक्तिहरं ससाध्वसानाम्" माघ० ७-५२। अत्र इव शब्दो वाक्यालङ्कारे।

**किमु ಕಿಮು** (अव्य०) 1. ಪ್ರಶ್ನೆ, ಕೇಳಿಕೆ. किं च उच। "नोभाविलाभूः किमु दर्पकश्च भवन्ति नासत्ययुतौ भवन्तः" नैष० १०-४५। 2. ಊಹೆ, ಸಂಭಾವನೆ, ಉತ್ಪ್ರೇಕ್ಷೆ. "किमु तदन्तरुभौ भिषजौ दिवः स्मरनलौ विशतः स्म विगाहितुम्" नैष० ४-५। 3. ಏನು? ಯಾವುದು? "निरास्पदं प्रश्नकुतूहलित्वमस्मास्वधीनं किमु निःस्पृहाणाम्" किरा० ३-९। 4. ಎಷ್ಟು ಹೆಚ್ಚು? ಎಷ್ಟು ಕಡಮೆ?. "यौवनं धनसम्पत्तिः प्रभुत्वमविवेकिता। एकैकमप्यनर्थाय किमु यत्र चतुष्टयम्"। 5. ವಿತರ್ಕ, ಸಂಶಯ. "विनिश्चेतुं शक्यो न सुखमिति वा दुःखमिति वा प्रमोहो निद्रा वा किमु विषविसर्पः किमु मदः" उ० रा० १-३५। 6. ಹೇಗೆ?, ಯಾವ ರೀತಿ?. "किमु दिवं पुनरेति यदीदृशः पतित एष निषेव्य हि वारुणीम्" नैष० ४-७०। 7. ಏತಕ್ಕಾಗಿ? ಯಾವ ಕಾರಣದಿಂದ? "मार्गणैरथ तव प्रयोजनं नाथसे किमु पतिं न भूभृतः" किरा० १३-५९।

**किमुत ಕಿಮುತ** (अव्य०) 1. ಪ್ರಶ್ನೆ, ಕೇಳಿಕೆ. किम् च उत च। 2. ವಿಕಲ್ಪ, ಪಕ್ಷಾಂತರ. 3. ತರ್ಕ, ಸಂಶಯ, ಸಂದೇಹ. 4. ಅತಿಶಯ, ಆಧಿಕ್ಯ, ಹೆಚ್ಚಿಗೆ. "सर्वाविनयानां एकैकमप्यायतनं किमुत समवायः" काद०।

**किम्पच ಕಿಂಪಚ** (वि०) ಕೃಪಣ, ಜಿಪುಣ. किं पचति—डु पचष् (पाके) "अच्" (३-१-१३४)। ಅತಿಥಿ ಅಭ್ಯಾಗತರಿಗಲ್ಲದೆ ತನಗೋಸ್ಕರ ಮಾತ್ರ ಅಡಿಗೆ ಮಾಡಿಕೊಳ್ಳುವವನು ಕಿಂಪಚನು. "शानच्" (३-२-१२४)। —पचानः—ಪಚಾನಃ.

**किम्पाक ಕಿಂಪಾಕ** (पु०) ತನ್ನೊಬ್ಬನ ಊಟಕ್ಕಾಗಿ ಮಾಡುವ ಅಡಿಗೆ. कुत्सितः पाकः।

**किम्पुरुष ಕಿಂಪುರುಷ** (पु०) ಕಿನರ. किञ्चित् कुत्सितो वा पुरुषः। ಕೆಲವರಿಗೆ ಕುದುರೆಯ ಮುಖ ಮನುಷ್ಯ ಶರೀರ ಕೆಲವರಿಗೆ ಮನುಷ್ಯ ಮುಖ ಕುದುರೆಯ ಶರೀರ ಈ ರೀತಿ ವಿಕಾರರೂಪವಿರುವುದರಿಂದ ಈ ಹೆಸರು. ಇವರು ದೇವತೆಗಳಲ್ಲಿ ಒಂದು ಪಂಗಡದವರು. "यक्षाः किम्पुरुषाः पौरा योषितो वनदेवताः" कुमा० ६-३९।

**कियत् ಕಿಯತ್** (वि०) 1. ಪ್ರಶ್ನೆ. ಪ್ರಶ್ನಾರ್ಥಕವಾದಾಗ ಸರ್ವನಾಮಸಂಜ್ಞೆ ಹೊಂದುವುದು. किम् "वतुप्" घश्च (५-२-४०)। (पु०) कियान् कियन्तौ कियन्तः। ಎಷ್ಟು ಹೆಚ್ಚಿನವನು?, ಎಷ್ಟು ದೊಡ್ಡವನು?, ಎಷ್ಟು ದೊಡ್ಡದು?, ಎಷ್ಟು ಪರಿಮಾಣವುಳ್ಳದ್ದು?. किं परिमाणमस्य "वतुप्" घश्च (५-२-४०)। "कियान् कालस्तवैवं स्थितस्य संजातः" पञ्चतं०। (स्त्री०) कियती कियत्यौ कियत्यः। ಎಷ್ಟು ಮಾತ್ರದ್ದು?, ಎಷ್ಟು ಹೆಚ್ಚಿನದು?, ಎಷ್ಟು ದೊಡ್ಡವಳು?, ಎಷ್ಟು ದೊಡ್ಡದು?, "ददेऽपि तुभ्यं कियतीः कदर्थनाः सुरेषु रागप्रसवावकेशिनीः" नैष० ९-१३१। "कियती पञ्चसहस्री कियती लक्षापि कोटिरपि कियती। औदार्योन्नतमनसां रत्नावती वसुमती कियती"। (न०) कियत् कियती कियन्ति। ಎಷ್ಟು?, ಎಷ್ಟು ಮಾತ್ರ?, ಎಷ್ಟು ದೊಡ್ಡದು?, ಎಷು ಪರಿಮಾಣವುಳ್ಳದ್ದು?. "ज्ञास्यसि कियद्भुजो मे रक्षति मौर्वीकिणाङ्क इति" शाकु० १-१२। "निजः कटाक्षः खलु विप्रलम्भः कियन्ति यावद्गुण वासराणि? नैष० ८-९१। 2. ಅಲ್ಪ, ಸ್ವಲ್ಪ, ಕೊಂಚ. "कियान्यथानेन वियद्विभागः तमोनिरासात् विशदीकृतोऽयम्" नैष० २२-७१। 3. ಹೆಚ್ಚು, ಅಧಿಕ, ಬಹಳ. "कियतापि च कालेन कालः कलिरुपेयिवान्" नैष० १७-१६२। 4. ಕೆಲವು ಮಾತ್ರ. "वारितोऽप्यनुजगाम सयत्नं तं कियन्त्यपि पदान्यपराणि" नैष० ५-४३।

**कियत्कालम् ಕಿಯತ್ಕಾಲಮ್** (अव्य०) 1. ಎಷ್ಟು ಕಾಲದಲ್ಲಿ?, ಎಷ್ಟು ಸಮಯದಲ್ಲಿ?, ಎಷ್ಟು ಕಾಲದವರೆಗೆ? 2. ಕೆಲವು ಕಾಲ, ಕೆಲವು ಕಾಲದವರೆಗೆ.

**कियच्चिरम् ಕಿಯಚ್ಚಿರಮ್** (अव्य०) ಎಷ್ಟು ಕಾಲ?, ಎಷ್ಟು ಕಾಲದವರೆಗೆ?, ಎಲ್ಲಿಯವರೆಗೆ?. "कियच्चिरं श्राम्यसि गौरि विद्यते ममापि पूर्वाश्रमसञ्चितं तपः" कुमा० ५-५०।

**कियद्दूरम् ಕಿಯದ್ದೂರಮ್** (अव्य०) 1. ಎಷ್ಟು ದೂರ?, ಎಷ್ಟು ದೂರದವರೆಗೆ?. "पादौ कियद्दूरमिमौ प्रयासे निधित्ससे तुच्छदयं मनस्ते" नैष० ८-२४। 2. ಸ್ವಲ್ಪದೂರ. (वि०)3. ಎಷ್ಟು ದೂರದಲ್ಲಿರುವ?. "कियत् दूरं यस्य। "मदर्थसन्देशमृणालमन्थरः प्रियः कियद्दूर इति त्वयोदिते" नैष० १-१३७।

**किर ಕಿರ** (पु०) 1. ವರಾಹ, ಹಂದಿ. किरति—कॄ (विक्षेपे) "कः" (३-१-१३५)। 2. ಕಸದಗುಂಡಿ,

ತಿಪ್ಪೆ ಹಳ್ಳ. 3. ಊರಿನ ಸಮೀಪಪ್ರದೇಶ. कीर्यतेऽत्र —कॄ अधि० "कः"। (वि०) 4. ಎರಚುವ, ಬಿಸಾಡುವ, ಚೆಲ್ಲಾಪಿಲ್ಲಿಯಾಗಿ ಹಾಕುವ.

**किरक ಕಿರಕ** (पु०) 1. ಹಂದಿಯ ಮರಿ. अल्पः किरः। 2. ಲೇಖಕ, ಬರಹಗಾರ, ಬರೆಯುವವನು.

**किरण ಕಿರಣ** (पु०) 1. ಸೂರ್ಯಚಂದ್ರರ ರಶ್ಮಿ, ಕದಿರು. कीर्यते — कॄ (विक्षेपे) "क्युः" (उ० २-८२)। "एको हि दोषो गुणसन्निपाते निमज्जतीन्दोः किरणेष्विवाङ्कः" कुमा० १-३। 2. ಸೂರ್ಯ. कीर्यन्ते रश्मयोऽस्मात् — कॄ कर्म० "क्युः"।

**किरणमालिन् ಕಿರಣಮಾಲಿನ್** (पु०) ಸೂರ್ಯ. किरणानां मालाऽस्त्यस्य "इनिः" (५-२-११६)।

**किरत् ಕಿರತ್** (वि०) ಎರಚುತ್ತಿರುವ, ಚೆಲ್ಲುತ್ತಿರುವ. कॄ (विक्षेपे) "शतृ" (३-२-१२४)। "स पिशङ्गजटावलिः किरन्नुरु तेजः परमेण मन्युना" किरा० १५-४७। स्त्रियाम् "ङीप्" (४-१-६)। **किरन्ती ಕಿರಂತೀ.**

**किरात ಕಿರಾತ** (पु०) 1. ವ್ಯಾಧ, ಬೇಡರವನು. किरमवस्करदेशमतति—अत (सातत्यगमने) "अण्" (३-२-१)। "विदन्ति मार्गं नखरन्ध्रमुक्तैर्मुक्ताफलैः केसरिणां किराताः" कुमा० १-६। 2. ವಾಮನ, ಗಿಡ್ಡ, ಕುಳ್ಳ. "पर्यन्ताश्रयिभिर्निजस्य सदृशं नाम्नः किरातैः कृतम्" रत्ना० २-३। 3. ಕಾಡುಮನುಷ್ಯ, ಅರಣ್ಯನಿವಾಸಿ, ಅನಾಗರಿಕ. 4. ಕುದುರೆಯ ಪರಿಚಾರಕ, ಕುದುರೆಯ ಯೋಗಕ್ಷೇಮ ನೋಡಿಕೊಳ್ಳುವ ಆಳು. 5. ನೆಲಬೇವು. 6. ಮ್ಲೇಚ್ಛಜಾತಿಯವನು. "किरातः स्यादल्पतनौ भूनिम्बम्लेच्छयोरपि" मेदि०। 7. ಕಿರಾತವೇಷಧಾರಿಯಾದ ಪರಮೇಶ್ವರ. ["किरातार्जुनीय" ಪದದಲ್ಲಿ ನೋಡಿ.] (पु० ब० व०) 8. ಕಿರಾತ ದೇಶ. "तप्तकुण्डं समारभ्य रामक्षेत्रान्तिकं शिवे। किरातदेशो विज्ञेयो विन्ध्यशैलेऽवतिष्ठते"। (स्त्री०)**—ती —ತೀ.** ["किराती" ಪದದಲ್ಲಿ ನೋಡಿ.]

**किराततिक्त ಕಿರಾತತಿಕ್ತ** (पु०) ನೆಲಬೇವು. किरातदेशो जन्मस्थानमस्य "अच्" (५-२-१२७)। किरातश्चासौ तिक्तश्च।

**किरातार्जुनीय ಕಿರಾತಾರ್ಜುನೀಯ** (न०) ಕಿರಾತ ಮತ್ತು ಅರ್ಜುನ ಇವರ ಯುದ್ಧವನ್ನು ವರ್ಣಿಸುವ ಒಂದು ಕಾವ್ಯ. ಈ ಕಾವ್ಯವು ಭಾರವಿಕವಿವಿರಚಿತವಾದುದು. किरातं च अर्जुनं च अधिकृत्य कृतो ग्रन्थः "छः" (४-३-८८)। ಈ ಕಾವ್ಯದಲ್ಲಿ ಹದಿನೆಂಟು ಸರ್ಗಗಳಿರುವುವು. "भारवेरर्थगौरवम्" ಎಂಬಂತೆ ಬಹಳ ಅರ್ಥಗರ್ಭಿತವಾದ ಶೈಲಿಯಲ್ಲಿ ಅತಿಸುಂದರವಾಗಿ ನಾರಿಕೇಳಪಾಕದಲ್ಲಿ ಈ ಕಾವ್ಯವು ರಚಿತವಾಗಿರುವುದು. [**ಕಥಾವಸ್ತು:** ಪಾಂಡವರು ದ್ವೈತವನದಲ್ಲಿ ವಾಸಮಾಡುತ್ತಿದ್ದಾಗ ಒಬ್ಬ ವನೇಚರನು ದುರ್ಯೋಧನನ ರಾಜ್ಯಭಾರದ ವೈಖರಿಯನ್ನು ಧರ್ಮರಾಜನಲ್ಲಿ ವರ್ಣಿಸುತ್ತಿದ್ದುದನ್ನು ಕಂಡು ಶತ್ರುವಿನಿಂದುಂಟಾದ ಪರಾಭವ ಮತ್ತು ಆಗ ತಾವು ಅನುಭವಿಸುತ್ತಿದ್ದ ಕಷ್ಟ ಇವುಗಳಿಂದ ತಾಳಲಾರದಷ್ಟು ಕೋಪವು ಉಕ್ಕಿಬಂದು ದ್ರೌಪದಿ ಮತ್ತು ಭೀಮಸೇನ ಇವರನ್ನು ಬಹಳವಾಗಿ ಕೆರಳಿಸಿತು. ಧರ್ಮರಾಜನು ನೀತಿಬೋಧೆಯಿಂದ ಇವರನ್ನು ಸಮಾಧಾನಪಡಿಸುತ್ತಿರುವಾಗ ಪರಮಕಾರುಣಿಕರಾದ ವೇದವ್ಯಾಸಮಹರ್ಷಿಗಳು ಬಂದು ಶತ್ರುಗಳನ್ನು ಜಯಿಸಲು ಅರ್ಜುನನಿಗೆ "ಪಾಶುಪತಾಸ್ತ್ರ" ಮಂತ್ರವನ್ನು ಉಪದೇಶಿಸಿ ಹೋಗುವರು. ಮಂತ್ರೋಪದೇಶ ಹೊಂದಿದ ಅರ್ಜುನನು ಇಂದ್ರಕೀಲ ಪರ್ವತದಲ್ಲಿ ಪರಮೇಶ್ವರನನ್ನು ಕುರಿತು ತಪಸ್ಸು ಮಾಡುತ್ತಿದ್ದಾಗ ಮೂಕನೆಂಬೊಬ್ಬ ದಾನವನು ಅರ್ಜುನನನ್ನು ಹೆದರಿಸಲು ವರಾಹ (ಹಂದಿ) ರೂಪದಿಂದ ಅರ್ಜುನನ ಆಶ್ರಮಕ್ಕೆ ಬಂದಾಗ ಪರಮೇಶ್ವರನು ಆ ದಾನವನನ್ನು ಸಂಹರಿಸಲೂ ಪರಮಕೃಪೆಯಿಂದ ಅರ್ಜುನನಿಗೆ ಪಾಶುಪತಾಸ್ತ್ರವನ್ನು ಅನುಗ್ರಹಿಸಲೂ ಕಿರಾತರೂಪದಿಂದ ಬಂದು ವರಾಹದ ಮೇಲೆ ಬಾಣ ಪ್ರಯೋಗಿಸಲು ಅದೇ ಸಮಯದಲ್ಲಿ ಅರ್ಜುನನೂ ಹಂದಿಯನ್ನು ಕೊಲ್ಲಲು ಬಾಣ ಬಿಡುವನು. ಇದರಿಂದ ವರಾಹವು ಅಸುವನ್ನು ನೀಗಲು ಅದರ ಮೈಮೇಲಿದ್ದ ಬಾಣಗಳನ್ನು ತೆಗೆಯಲು ಹೋದ ಕಿರಾತ–ಅರ್ಜುನರಿಗೆ ವಿಶೇಷ ವಾಗ್ವಾದ ನಡೆದು ಕೊನೆಗೆ ಘೋರವಾದ ಅಸ್ತ್ರಯುದ್ಧ, ಬಾಹುಯುದ್ಧಗಳು ನಡೆಯುವುವು. ಅರ್ಜುನನ ವೀರ್ಯಾತಿಶಯದಿಂದ ಮೆಚ್ಚಿದ ಪರಮೇಶ್ವರನು ಅವನ ಅನುಗ್ರಹಾರ್ಥವಾಗಿ ನಿಜರೂಪವನ್ನು ತಾಳಿ ಪಾರ್ವತೀಸಮೇತನಾಗಿ ದರ್ಶನವನ್ನಿತ್ತು ನಿಲ್ಲಲು ಅರ್ಜುನನು ತನ್ನ ಅಪರಾಧಕ್ಕಾಗಿ ಕ್ಷಮೆ ಬೇಡಿ ನಾನಾ ವಿಧವಾಗಿ ಸ್ತುತಿಸುವನು. ಬಳಿಕ ಪ್ರಸನ್ನನಾದ ಪರಶಿವನು ಅರ್ಜುನನಿಗೆ ಪಾಶುಪತಾಸ್ತ್ರವನ್ನು ಅನುಗ್ರಹಿಸುವನು. ಇವರೀರ್ವರ ಈ ವಿಷಯವನ್ನು ವರ್ಣಿಸಿದ ಈ ಕಾವ್ಯಕ್ಕೆ "**किरातार्जुनीयम्**" ಎಂಬ ಹೆಸರಾಗಿದೆ.]

**किराताशिन् ಕಿರಾತಾಶಿನ್** (पु०) ಗರುಡ. किरातान् अश्नाति — अश (भोजने) "णिनिः" (३-२-७८)। [ತನ್ನ ತಾಯಿಯಾದ ವಿನತೆಯನ್ನು ಕದ್ರುವಿನ ದಾಸ್ಯದಿಂದ

ಬಿಡಿಸಲು ದೇವಲೋಕದಿಂದ ಅಮೃತವನ್ನು ತರಲು ಹೋಗುತ್ತಿದ್ದಾಗ ತಾಯಿಯ ಮಾತಿನಂತೆ ಮಾರ್ಗದಲ್ಲಿ ಆಹಾರಕ್ಕಾಗಿ ಕಿರಾತರನ್ನು ತಿನ್ನುತ್ತಿದ್ದುದರಿಂದ ಗರುಡನಿಗೆ ಈ ಹೆಸರಾಯಿತು.]

**किराती ಕಿರಾತೀ** (स्त्री०) 1. ಪಾರ್ವತಿ, ದುರ್ಗಾದೇವಿ, ಕಿರಾತವೇಷಧಾರಿಯಾದ ಪರಮೇಶ್ವರನೊಡನೆ ಪಾರ್ವತಿಯೂ ಕಿರಾತವೇಷವನ್ನು ಸ್ವೀಕರಿಸಿದುದರಿಂದ ಈ ಹೆಸರು. 2. ಬೇಡರವನ ಹೆಂಗಸು (ಹೆಂಡತಿ). किरात "ङीष्" (४-१-४८)। 3. ಗಂಗಾನದಿ. 4. ಚಾಮರವನ್ನು ಹಿಡಿಯುವ ಹೆಂಗಸು. "नोसंश्रयः पार्श्वगतां किरातीमुपात्तवालव्यजनां बभाषे" रघु० १६-५७। 5. ಕುಟ್ಟನಿ, ತಲೆಹಿಡುಕಿ. "किराती कुट्टिनी गङ्गा" हेम०। "स्त्रियाम् चामरधारिण्यां कुट्टिनीदुर्गयोरपि" मेदि०।

**किरि ಕಿರಿ** (पु०) 1. ವರಾಹ, ಹಂದಿ. किरति भूमिम् — कॄ (विक्षेपे) "इः" (उ० ४-१४२)। 2. ಮೇಘ, ಮೋಡ. स्त्रियाम् "ङीष्"।

**किरीट ಕಿರೀಟ** (पुन०) 1. ಕಿರೀಟ, ಮುಕುಟ, ಮುಡಿ. किरत्यनेन — कॄ (विक्षेपे) "कीटन्" (उ० ४-१८४)। "देवास्तदन्ते हरमूढभार्यं किरीटबद्धाञ्जलयो निपत्य। शापावसाने प्रतिपन्नमूर्तेर्ययाचिरे पञ्चशरस्य सेवाम्" कुमा० ७-९२। 2. ರುಮಾಲು, ಪೇಟ, ಮುಂಡಾಸ.

**किरीटिन् ಕಿರೀಟಿನ್** (पु०) 1. ಅರ್ಜುನ. किरीटोऽस्त्यस्य "इनिः" (५-२-११५)। [ಅರ್ಜುನನು ದಾನವರೊಡನೆ ಯುದ್ಧಮಾಡುತ್ತಿದ್ದಾಗ ಇಂದ್ರನು ಅವನ ತಲೆಯ ಮೇಲೆ ಪ್ರಕಾಶಮಾನವಾದ ಕಿರೀಟವೊಂದನ್ನು ಇಟ್ಟಿದ್ದರಿಂದ ಅವನಿಗೆ "ಕಿರೀಟಿ" ಯೆಂಬ ಹೆಸರಾಯಿತು.] "पुरा शक्रेण मे दत्तं युध्यतो दानवर्षभैः। किरीटं मूर्ध्नि सूर्याभं तेनाहुर्मां किरीटिनम्" भा० विरा० ४०-१७। ಇದು ಅರ್ಜುನನು ಉತ್ತರಕುಮಾರನಿಗೆ ತನ್ನ ಹತ್ತು ಹೆಸರುಗಳನ್ನು ವಿವರಿಸುತ್ತಿದ್ದಾಗ ಹೇಳಿದ ಮಾತು. "त्रिचतुरेषु पदेषु किरीटिना लुलितदृष्टि मदादिव चस्खले" किरा० १८-६। (वि०) 2. ಕಿರೀಟವನ್ನು ಧರಿಸಿರುವ. "किरीटिनं गदिनं चक्रिणं च तेजोराशिं सर्वतो दीप्तिमन्तम्" गीता ११-१७।

**किर्मीर ಕಿರ್ಮೀರ** (पु०) 1. ಹೆರಿಳೆಗಿಡ. कॄ (विक्षेपे) "ईरन्" (उ० ४-३०)। निपा०। 2. ಒಬ್ಬ ರಾಕ್ಷಸ. ಇವನು ಭೀಮಸೇನನಿಂದ ಹತನಾದನು. (वि०) 3. ಚಿತ್ರವರ್ಣಗಳಿಂದ ಕೂಡಿದ, ನಾನಾ ಬಣ್ಣಗಳುಳ್ಳ. "किर्मीरो नागरङ्गे च कर्बुरे राक्षसान्तरे" मेदि०। "नभोऽपि किर्मीरमकारि तेषाम्" नैष० १०-३१।

**किर्मीरजित् ಕಿರ್ಮೀರಜಿತ್** (पु०) ಭೀಮಸೇನ. किर्मीरं जयति — जि (जये) "क्विप्" (३-२-६१)।

**किर्मीरित ಕಿರ್ಮೀರಿತ** (वि०) 1. ಬೆರಸಲ್ಪಟ್ಟ, ಮಿಶ್ರಮಾಡಲ್ಪಟ್ಟ. 2. ನಾನಾ ಬಣ್ಣವಾಗಿರುವ, ಚಿತ್ರವಿಚಿತ್ರವಾಗಿರುವ. किर्मीरोऽस्य सञ्जातः "इतच्" (५-२-३६)। "तत्रास्मि पत्युर्वरिवस्ययेह शर्मोर्मिकिर्मीरितधर्मलिप्सुः" नैष० ६-९७।

**किल ಕಿಲ** (अव्य०) ಈ ಕೆಳಗಿನ ಅರ್ಥಗಳನ್ನು ಕೊಡುವ ಒಂದು ಅವ್ಯಯ. 1. ನಿಜವಾಗಿಯೂ, ವಾಸ್ತವವಾಗಿಯೂ. "अलं नलं रोद्धुममी किलाभवन्गुणा विवेकप्रमुखा न चापलम्" नैष० १-५४। 2. ಪ್ರಸಿದ್ಧಿ, ಎಲ್ಲರಿಗೂ ತಿಳಿದಿರುವುದು. "देवः स्वयं वसति तत्र किल स्वयंभूः" नैष० ११-२९। 3. ಅಲೀಕ, ಅಸತ್ಯ, ನಟನೆ. "अरमयन् भवनादचिरद्युतेः किल भयादपपातुमनिच्छवः" माघ० ६-४०। 4. ವಾಕ್ಯಾಲಂಕಾರ. "अलक्तकं पादसरोरुहाग्रे सरोरुहाक्ष्याः किल संनिवेश्य" कुमा० ९-२७। 5. ಆಗಮಪ್ರಸಿದ್ಧಿ. "कंसं जघान किल वासुदेवः"। "सांनिध्ययोगात्किल तत्र शच्याः स्वयंवरक्षोभकृतामभावः" रघु० ७-३। 6. ನ್ಯಕ್ಕಾರ, ತಿರಸ್ಕಾರ. "लघूकरिष्यन्नतिभारभङ्गुराममूं किल त्वं त्रिदिवादवातरः" माघ० १-३६। 7. ಊಹೆ, ಸಂಭಾವನೆ, ಹೀಗಿರಬಹುದೆಂಬ ಬುದ್ಧಿ. "दोषापि नूनमहिमांशुरसौ किलेति व्याकोशकोकनदतां दधते नलिन्यः" माघ० ४-४६। 8. ಅರುಚಿ, ಅಸಮಾಧಾನ. "एवं किल केचिद्वदन्ति"। "इदं किलाव्याजमनोहरं वपुस्तपःक्षमं साधयितुं य इच्छति" शाकु० १-१६। 9. ಐತಿಹ್ಯ. "प्रवर्तयामास किलानसूया त्रिस्रोतसं त्र्यम्बकमौलिमालाम्" रघु० १३-५१। 10. ಹೇತು, ಕಾರಣ. "स किलैवमुक्तवान्"। 11. ವಾರ್ತೆ. 12. ಅನುನಯ. "किलशब्दस्तु वार्तायां संभाव्यानुनयार्थयोः" मेदि०।

**किलकिञ्चित ಕಿಲಕಿಂಚಿತ** (न०) ಹೆಂಗಸರ ಸ್ವಭಾವಜನ್ಯವಾದ ಹದಿನೆಂಟು ವಿಧ ಅಲಂಕಾರಗಳಲ್ಲೊಂದು, ಒಂದು ವಿಧ ಶೃಂಗಾರಚೇಷ್ಟೆ. किल अलीकेन ईषत् चितम् रचितम्। ಹರ್ಷದಿಂದ ಮುಗುಳ್ನಗೆ ಪರಮಪ್ರೀತಿಪಾತ್ರವಾದ ವಸ್ತುವು ದೊರೆತಾಗ ಕಾರಣವಿಲ್ಲದೆ ಅಳುವುದು ನಗುವುದು ಭಯ ಕೋಪ ಶ್ರಮ ಇವುಗಳ ಸಾಂಕರ್ಯ (ಬೆರಕೆ)ವು "ಕಿಲಕಿಂಚಿತ" ವೆನಿಸುವುದು. "स्मितशुष्करुदितहसितत्रासक्रोधश्रमादीनाम्। सांकर्यं किल-

किञ्चितमभीष्टतमसंगमादिजाद्धर्षात्" सा० द० ३-१०१। "आवासः किलकिञ्चितस्य दयिताः पार्श्वे विलासालसाः:" भर्तृ० २-८३।

**किलकिला ಕಿಲಕಿಲಾ** (स्त्री०) 1. ಹರ್ಷಧ್ವನಿ. "आसीत् किलकिलाशब्दस्तस्मिन् गच्छति पार्थिवे" भा० आदि० ६९-८। 2. ವೀರಪುರುಷನ ಸಿಂಹನಾದ. "जितशात्रवदर्पस्य प्रतिज्ञापूरणीकृतः। वीरस्य गर्जितं सिंहनादः किलकिला तथा"।

**किलाट ಕಿಲಾಟ** (पु०) ಹೆಪ್ಪುಗಟ್ಟಿ ಗಟ್ಟಿಯಾದ ಹಾಲು, ಚೆನ್ನಾಗಿ ಕುದಿಯಿಸಿ ಮುದ್ದೆಯಾದ ಹಾಲು, ಹಾಲು ಖೋವ. "किलाटः शोषितक्षीरपिण्डस्सूरिभिरिष्यते" हारा०। स्वार्थे "कः"। **किलाटकः ಕಿಲಾಟಕಃ.** "नष्टदुग्धस्य पक्वस्य पिण्डः प्रोक्तः किलाटकः" भावप्र०।

**किलाटिन् ಕಿಲಾಟಿನ್** (पु०) ಬಿದಿರು ಮೆಳೆ, ವಂಶವೃಕ್ಷ. किलति—किल (श्वैत्यक्रीडनयोः) "कः" (३-१-१३५)। अटति—अट (गतौ) "णिनिः" (३-२-७८)। किलश्चासौ अटी च। "रेणुः सतीलस्तृणकेतुमृत्युबीजौ किलाटी च ततः सुपर्वा" हारा०।

**किलास ಕಿಲಾಸ** (न०) 1. ಚಿಬ್ಬು, ಚರ್ಮದ ಮೇಲಿನ ಬೊಬ್ಬೆ. 2. ತುರಿಗಜ್ಜಿ. किल (श्वैत्यक्रीडनयोः) "कः" (३-१-१३५)। अस्यति—असु (क्षेपणे) "अच्" (३-१-१३४)। किलं च तदसं च। 3. ಕುಷ್ಠರೋಗ. किलेन श्वैत्येन असति—अस (दीप्तौ) "अच्" (३-१-१३४)। (वि०) 4. ಮೈ ಚಿಬ್ಬುಗಳಿಂದ ಕೂಡಿದ. 5. ಕುಷ್ಠರೋಗವುಳ್ಳ. किलासमस्यास्ति "अच्" (५-२-१२७)।

**किलासिन् ಕಿಲಾಸಿನ್** (वि०) 1. ತುರಿಗಜ್ಜಿಯುಳ್ಳವನು. 2. ಕುಷ್ಠರೋಗವುಳ್ಳವನು. किलासमस्यास्ति "इनिः" (५-२-११५)। 3. ಚಿಬ್ಬುಗಳಿಂದ ಕೂಡಿದವನು.

**किलिञ्ज ಕಿಲಿಂಜ** (न०) 1. ಹುಲ್ಲಿನ ಚಾಪೆ. किल्यतेऽनेन—किल (श्वैत्यक्रीडनयोः) "इन्" (उ० ४-११९)। किलेर्जातः—जनी (प्रादुर्भावे) "डः" (३-२-९८)। पृषो०। (पु०) 2. ತೆಳುವಾದ ಹಲಗೆ. "किलिञ्जस्तु सूक्ष्मदारु" त्रिकाण्ड०।

**किलिञ्जक ಕಿಲಿಂಜಕ** (पु०) 1. ಹುಲ್ಲಿನ ಚಾಪೆ. किलिञ्ज स्वार्थे "कन्" (५-४-५)। "कटकिलिञ्जकौ" अम०। 2. ಹುಲ್ಲಿನ ಹಗ್ಗ, ಹುಲ್ಲಿನಿಂದ ಮಾಡಿದ ಹುರಿ.

**किलिम ಕಿಲಿಮ** (न०) ದೇವದಾರು ಮರ. "मरिचं पिप्पलीमूलं मगधागजपिप्पली। सरलः किलिमं हिङ्गु भार्गितेजोवती त्वचौ" चरक० कल्प० ७-१२।

**किल्कि ಕಿಲ್ಕಿ** (पु०) ಅಶ್ವ, ಕುದುರೆ. "अश्वकिल्की हरिक्रान्तः शालिहोत्रश्च मुद्गभुक्" त्रिकाण्ड०।

**किल्बिष ಕಿಲ್ಬಿಷ** (न०) 1. ಪಾಪ. किल्यते—किल (क्षेपे) "टिषच्" बुक् च (उ० १-५०)। "स्वं वपुः स किल किल्बिषच्छिदां रामपादरजसामनुग्रहः" रघु० ११-३४। 2. ರೋಗ, ವ್ಯಾಧಿ. 3. ಅಪರಾಧ, ತಪ್ಪು. "अथ किल्बिषम्। पापे रोगेऽपराधे च" हेम०। "को मे लुब्धक दोषोऽत्र विद्यते यदि बालिश। अस्वतन्त्रं च मां मृत्युर्विवशं यदचूचुदत्। तस्यैव वचनादृष्टो न कोपेन न काम्यया। तस्य तत्किल्बिषं लुब्ध विद्यते यदि किल्बिषम्" भा० अनु० ३५-३६।

**किल्बिषिन् ಕಿಲ್ಬಿಷಿನ್** (वि०) 1. ಪಾಪಮಾಡಿರುವ, ಪಾಪಾತ್ಮನಾದ. किल्बिषमस्यास्ति "इनिः" (५-२-११५)। 2. ಅಪರಾಧವುಳ್ಳ, ತಪ್ಪುಮಾಡಿದವನು. "किल्बिषी चापि मे वध्य किल्बिषी चापि पन्नग। आत्मानं कारणं ह्यत्र"। 3. ರೋಗವುಳ್ಳವನು.

**किश(स)र ಕಿಶ(ಸ)ರ** (पु०) ಮಾರಾಟಕ್ಕಿಟ್ಟಿರುವ ಒಂದು ಸುಗಂಧದ್ರವ್ಯ.

**किश(स)रिक ಕಿಶ(ಸ)ರಿಕ** (पु०) ಸುಗಂಧದ್ರವ್ಯವನ್ನು ಮಾರುವವನು. किश(स)रः पण्यं यस्य "ष्ठन्" (४-४-५३)। स्त्रियाम् "ङीष्" (४-१-४१)। **–रिकी –ರಿಕೀ.**

**किशोर ಕಿಶೋರ** (पु०) 1. ಕುದುರೆಯ ಮರಿ. किञ्चित् शृणाति—शॄ हिंसायाम् "ओरन्" टिलोपश्च (उ० १-६५)। किमः अन्त्यलोपश्च। निपा०। 2. ಸೂರ್ಯ. 3. ಹದಿನೈದು ವರ್ಷದೊಳಗಿನ ಬಾಲಕ. "किशोरो हयशावके। सूर्ये यूनि" हेम०। 4. ಜಿಂಕೆ, ನರಿ, ಹುಲಿ ಮೊದಲಾದ ಮೃಗಗಳ ಮರಿ.

**किशोरी ಕಿಶೋರೀ** (स्त्री०) ಕುಮಾರಿ, ಕನ್ಯೆ, ಬಾಲಿಕೆ. किशोर "ङीप्" (४-१-२०)।

**किष्किन्ध ಕಿಷ್ಕಿಂಧ** (पु०) 1. ದಕ್ಷಿಣ ಭಾರತದಲ್ಲಿ ಒಂದು ದೇಶ. 2. ಆ ದೇಶದಲ್ಲಿರುವ ಒಂದು ಪರ್ವತ. किं कि दधाति—डु धाञ् (धारणपोषणयोः) "कः" (३-२-३)। ಈ ಪರ್ವತದಲ್ಲಿ ಒಂದು ಗುಹೆಯು ಕಪಿಗಳ ರಾಜನಾದ ವಾಲಿಯ ವಾಸಸ್ಥಾನವಾಗಿದ್ದಿತು. (स्त्री०) **किष्किन्धा ಕಿಷ್ಕಿಂಧಾ.** ವಾಲಿಯ ರಾಜಧಾನಿಯಾದ ಒಂದು ಪಟ್ಟಣ. "गच्छ लक्ष्मण जानीहि किष्किन्धायां कपीश्वरम्"। "किष्किन्धां समुपागम्य वाली युधि निपातितः" रामा०।

**किष्किन्धाकाण्ड ಕಿಷ್ಕಿಂಧಾಕಾಂಡ** (पुं०) ವಾಲ್ಮೀಕಿ ರಾಮಾಯಣದಲ್ಲಿ ವಾಲಿ ಸುಗ್ರೀವರ ವಿಷಯವನ್ನು ವರ್ಣಿಸುವ ಒಂದು ಕಾಂಡ, ರಾಮಾಯಣದ ನಾಲ್ಕನೆಯ ಕಾಂಡ.

**किष्किन्धानगरी ಕಿಷ್ಕಿಂಧಾನಗರೀ** (स्त्री०) ವಾಲಿಯ ರಾಜಧಾನಿಯಾದ ಕಿಷ್ಕಿಂಧಾಪಟ್ಟಣ.

**किष्किन्ध्य ಕಿಷ್ಕಿಂಧ್ಯ** (पुं०) 1. ಒಂದು ದೇಶ. 2. ಆ ದೇಶದ ಒಂದು ಪರ್ವತ. (स्त्री०) **–ध्या –ಧ್ಯಾ.** 3. ಆ ಪರ್ವತದ ಒಂದು ಗುಹೆ. 4. ವಾಲಿಯ ರಾಜಧಾನಿ.

**किष्कु ಕಿಷ್ಕು** (पुंन०) 1. ಹನ್ನೆರಡು ಅಂಗುಲಗಳ ಅಳತೆ. 2. ಹದಿನೆಂಟು ಅಂಗುಲಗಳ ಅಳತೆ, ಒಂದು ಮೊಳ. "किष्कुर्हस्ते वितस्तौ च" अम०।

**किष्कुपर्वन् ಕಿಷ್ಕುಪರ್ವನ್** (पुं०) 1. ಕಬ್ಬಿನ ಜಲ್ಲೆ. 2. ಬಿದಿರು. 3. ಜಂಬು ಹುಲ್ಲು. किष्कुमितं पर्व यस्य। "किष्कुपर्वा पुमानिक्षौ वेणौ पोटगलेऽपि च" मेदि०।

**किसलय ಕಿಸಲಯ** (न०) ಹೊಸ ಚಿಗುರು. किम् किञ्चित् सलति – षल (गतौ) "कयन्" बाहु०। पृषो०। "परिपाटलाब्जदलचारुणा सकुच्चलिताङ्गुलीकिसलयेन पाणिना" माघ० १३-४२।

**किसलयित ಕಿಸಲಯಿತ** (वि०) ಚಿಗುರಿರುವ. किसलयोऽस्य सञ्जातः "इतच्" (५-२-३६)।

**कीकट ಕೀಕಟ** (पुं० ब० व०) 1. ಮಗಧ ದೇಶ. "ततः कलौ संप्रवृत्ते सम्मोहाय सुरद्विषाम्। बुद्धो नाम्ना जिनसुतः कीकटेषु भविष्यति" भाग० १-३-२४। "मागधाः कीकटा मताः" त्रिकाण्ड०। 2. ಕೀಕಟ ದೇಶದ ಜನರು. "साधवः समुदाचारास्ते पूयन्तेऽपि कीकटाः" भाग० ७-१०-१९। (पुं०) 3. ಅಶ್ವ, ಕುದುರೆ. (वि०) 4. ಲೋಭಿ, ಕೃಪಣ. 5. ದರಿದ್ರ, ಬಡವ. 6. ನೀಚ. "कीकटः कृपणे निःस्वे त्रिषु पुंभूम्नि नीवृति" मेदि०। "कीकटस्तुरगे निःस्वे देशभेदे मितम्पचे" विश्व०।

**कीकटाधिप ಕೀಕಟಾಧಿಪ** (पुं०) ಮಗಧದೇಶದ ದೊರೆ. "अपाङ्गरङ्गस्थलनाटचलम्पटाः कटाक्षधारास्तव कीकटाधिपः" नैष० १२-८८।

**कीकस ಕೀಕಸ** (पुं०) 1. ಕ್ರಿಮಿ, ಹುಳು. की इति कसति – कस (गतौ) "अच्" (३-१-१३४)। (न०) 2. ಎಲುಬು, ಮೂಳೆ. "कीकसस्तु कृमौ कीकसमस्थनि" हेम०। (वि०) 3. ಗಟ್ಟಿಯಾದ, ದೃಢ (ಕಠಿಣ)ವಾದ.

**कीकसास्य ಕೀಕಸಾಸ್ಯ** (पुं०) ಪಕ್ಷಿ, ಹಕ್ಕಿ. कीकसमास्ये यस्य।

**कीकि ಕೀಕಿ** (पुं०) ಚಾಷಪಕ್ಷಿ, ಹಂಗನಹಕ್ಕಿ. की इति शब्दं कायति – कै (शब्दे) "डिः" बाहु०।

**कीचक ಕೀಚಕ** (पुं०) 1. ಒಳಗೆ ಟೊಳ್ಳಾಗಿರುವ ಬಿದಿರು. चीकयते – चीक (आमर्षणे) "वुन्" (उ० ५-३६)। आद्यन्तविपर्ययश्च। ಇದು ಟೊಳ್ಳಾಗಿರುವುದರಿಂದ ಗಾಳಿಯು ತುಂಬಿ ಶಬ್ದವಾಗುವುದು. "वेणवः कीचकास्ते स्युर्ये स्वनन्त्यनिलोद्धताः" अम०। "स कीचकैर्मारुतपूर्णरन्ध्रैः कूजद्भिरापादितवंशकृत्यम्" रघु० २-१२। 2. ಒಬ್ಬ ರಾಕ್ಷಸ. 3. ವಿರಾಟರಾಜನ ಸೇನಾಪತಿ. ಇವನು ದ್ರೌಪದಿಯನ್ನು ಕಾಮಿಸಿ ಭೀಮಸೇನನಿಂದ ಹತನಾದನು. [ಕೇಕಯ ರಾಜನಿಗೆ ಮಾಲವಿಯಲ್ಲಿ ಬಾಣಾಸುರನ ಅಂಶದಿಂದ ಜನಿಸಿದ ಈ ಕೀಚಕನಿಗೆ ಒಂದು ನೂರ ಐದು ಮಂದಿ ಸಹೋದರ (ಉಪಕೀಚಕ)ರೂ ಸುದೇಷ್ಣೆಯೆಂಬ ಸಹೋದರಿಯೂ ಇದ್ದರು. ವಿರಾಟರಾಜನು ತನ್ನ ಭಾವಮೈದುನನಾದ ಇವನನ್ನು ತನ್ನ ಸೇನಾಪತಿಯನ್ನಾಗಿ ಮಾಡಿದ್ದನು. ಪಾಂಡವರು ವನವಾಸ ಕಳೆದು ವಿರಾಟರಾಜನ ರಾಜಧಾನಿಗೆ ಬಂದು ಅಜ್ಞಾತವಾಸದಲ್ಲಿದ್ದಾಗ ದ್ರೌಪದಿಯೂ ಸೈರಂಧ್ರಿಯ ವೇಷದಿಂದ ಸುದೇಷ್ಣೆಯ ಹತ್ತಿರ ಇದ್ದಳು. ಅಕ್ಕನ ಮನೆಗೆ ಬಂದ ಕೀಚಕನು ದ್ರೌಪದಿಯನ್ನು ಕಂಡು ಮೋಹಿಸಿ ಅವಳ ಮೂಲಕ ಸುರೆಯನ್ನು ತನ್ನ ಮನೆಗೆ ತರಿಸಿಕೊಂಡು ಅವಳನ್ನು ಭಂಗಪಡಿಸಲು ಯತ್ನಿಸಿದನು. ದ್ರೌಪದಿಯು ರಾಜನಲ್ಲಿ ಎಷ್ಟು ಹೇಳಿಕೊಂಡರೂ ಸಾರ್ಥಕವಾಗದೆ ಕೊನೆಗೆ ಭೀಮನಲ್ಲಿಗೆ ಬಂದು ಮೊರೆಯಿಡಲು ಭೀಮಸೇನನು ಒಂದು ದಿನ ರಾತ್ರಿ ಸ್ತ್ರೀವೇಷಧಾರಿಯಾಗಿ ನಾಟ್ಯಶಾಲೆಗೆ ಬಂದು ಸರಸಸಲ್ಲಾಪಗಳನ್ನಾಡುತ್ತ ಮುಷ್ಟಿಯುದ್ಧದಿಂದ ಅವನನ್ನು ಸಂಹರಿಸಿದನು.] भा० विरा० १४।

**कीचकजित् ಕೀಚಕಜಿತ್** (पुं०) ಕೀಚಕನನ್ನು ಸಂಹರಿಸಿದ ಭೀಮಸೇನ. कीचकं जयति – जि (जये) "क्विप्" (३-२-६१)। **–निषूदनः –ನಿಷೂದನಃ. –सूदनः –ಸೂದನಃ.** कीचकं निषूदयति सूदयति वा—षूद (क्षरणे) "ल्युः" (३-१-१३४)।

**कीट ಕೀಟ** (पुं०) 1. ಕ್ರಿಮಿಗಿಂತಲೂ ಸ್ವಲ್ಪ ದೊಡ್ಡ ಜಾತಿಯ ಹುಳು. कीट (बन्धे) "अच्" (३-१-१३४)। "कीटोऽपि सुमनःसङ्गादारोहति सतां शिरः" हितो०। 2. ವೃಶ್ಚಿಕರಾಶಿ. "अलिः सरीसृपः कौर्पिः कीटो वृश्चिकवाचकः" मुहू० दी०।

**कीटक ಕೀಟಕ** (पुं०) 1. ಕ್ರಿಮಿ, ಹುಳು. कीट स्वार्थे "कः"। (वि०) 2. ಕಠಿನವಾದ, ಗಟ್ಟಿಯಾದ. "कीटकः

कृमिजातौ ना निष्ठुरे पुनरन्यवत्" मेदि०। 3. ಮಾಗಧ ಕುಲ, ಸ್ತುತಿಪಾಠಕರ ವಂಶ, ಹೊಗಳುಭಟರ ಬುಡಕಟ್ಟು.

**कीटघ्न ಕೀಟಘ್ನ** (पुं०) ಕ್ರಿಮಿಗಳನ್ನು ನಾಶಪಡಿಸುವ ಗಂಧಕ. कीटं हन्ति—हन (हिंसागत्योः) "टक्" (३-२-५३)।

**कीटज ಕೀಟಜ** (न०) 1. ಮಗುಟ, ರೇಷ್ಮೆವಸ್ತ್ರ. "कार्पासकीटजोर्णानां द्विशफैकशफस्य च" मनु० ११-१६८। (वि०) 2. ಕ್ರಿಮಿಗಳಿಂದ ಉಂಟಾದ. (स्त्री०) —जा —ಜಾ. ಅರಗು. कीटेभ्यो जायते—जनी (प्रादुर्भावे) "डः" (३-२-९८)।

**कीटमणि ಕೀಟಮಣಿ** (पुं०) ಖದ್ಯೋತ, ಮಿಂಚುಹುಳು, ಮಿಣುಕುಹುಳು. कीटेषु मणिरिव।

**कीटसंज्ञ ಕೀಟಸಂಜ್ಞ** (पुं०) ವೃಶ್ಚಿಕರಾಶಿ. कीटः संज्ञा यस्य।

**कीदृक्ष ಕೀದೃಕ್ಷ** (वि०) ಯಾವ ವಿಧವಾದ? ಯಾವ ತೆರನಾದ? ಎಂತಹ? किमिव पश्यति—किम् + दृशिर् (प्रेक्षणे) "क्सः" (वा० ३-२-५७)। किमः की आदेशः (६-३-९०)। "क्विन्" (३-२-६०)। **कीदृक् ಕೀದೃಕ್.** "तद्भ्रोः कीदृगसौ विवेकविभवः कीदृक् प्रबोधोदयः" प्रबोध० १-१२। "कञ्" (३-२-६०)। **कीदृशः ಕೀದೃಶಃ.** स्त्रियाम् क्से "टाप्" (४-१-४)। **कीदृक्षा ಕೀದೃಕ್ಷಾ.** कञि "ङीप्" (४-१-१५)। **कीदृशी ಕೀದೃಶೀ.** क्विनि **कीदृक् ಕೀದೃಕ್.**

**कीनाश ಕೀನಾಶ** (पुं०) 1. ಬೇಸಾಯಗಾರ, ರೈತ. क्लिश्नाति—क्लिशू (विबाधने) "कन्" उपधाया ईत्त्वम् लस्य लोपः नाम् आगमश्च (उ० ५-५६)। "कीनाशो गोवृषो यानमलङ्कारश्च वेश्म च। विप्रस्यौद्धारिकं देयमेकांशश्च प्रधानतः" मनु० ९-१५०। 2. ಯಮಧರ್ಮರಾಯ. की कुत्सितं नाशयति—णश (अदर्शने)+णिच् "अच्" (३-१-१३४)। "हुताशकीनाशजलेशदूतीर्निराकरिष्णोः कृतकाकुयाच्ञाः" नैष० ६-७५। "येषां चित्ते वसेद्भक्तिः सर्वदा प्रेमरूपिणी। न ते पश्यन्ति कीनाशं स्वप्नेऽप्यमलमूर्तयः" भाग० मा० २-१६। (वि०) 3. ಕೃಪಣ, ಲೋಭಿ, ಜಿಪುಣ. 4. ರಹಸ್ಯದಲ್ಲಿ ಕೊಲ್ಲುವವನು. "कीनाशः क्षुद्रयमयोः कर्षकोपांशुघातिनोः" हेम०।

**कीर ಕೀರ** (पुं०) 1. ಶುಕ, ಗಿಳಿ. कीति ईरयति—ईर (गतौ) + णिच् "अच्" (३-१-१३४)। "खगवागियमित्यतोऽपि किं न मुदं धास्यति कीरवागिव" नैष० २-१५। (पुं०ब०व०) 2. ಕಾಶ್ಮೀರ ದೇಶ. 3. ಕಾಶ್ಮೀರದೇಶದ ಜನರು. "कीरः शुके पुंभूम्नि नीवृति" मेदि०। अल्पे "कन्" (५-३-८५)। **कीरकः ಕೀರಕಃ** ಗಿಣಿಯ ಮರಿ.

**कीरेष्ट ಕೀರೇಷ್ಟ** (पुं०) 1. ಮಾವಿನಮರ. 2. ನೀರುಹಿಪ್ಪೆಮರ. कीरस्य इष्टः।

**कीर्ण ಕೀರ್ಣ** (वि०) 1. ಹರಡಲ್ಪಟ್ಟ, ವ್ಯಾಪ್ತವಾದ. कॄ (विक्षेपे) "क्तः" (३-२-२०२)। "दर्भैरर्धावलीढैः श्रमविवृतमुखभ्रंशिभिः कीर्णवर्त्मा" शाकु० १-७। 2. ಎಸೆಯಲ್ಪಟ್ಟ, ಎರಚಲ್ಪಟ್ಟ. "कीर्णं शनैरनुकपोलमनेकपानाम्" माघ० ५-३५। 3. ಮುಚ್ಚಲ್ಪಟ್ಟ. 4. ಹಿಂಸಿಸಲ್ಪಟ್ಟ, ಗಾಯಗೊಳಿಸಲ್ಪಟ್ಟ. कॄ (हिंसायाम्) "क्तः" (३-२-१०२)।

**कीर्णि ಕೀರ್ಣಿ** (स्त्री०) 1. ಎಸೆಯುವುದು. 2. ಮುಚ್ಚುವುದು. 3. ಹರಡುವುದು. कॄ (विक्षेपे) "क्तिन्" (३-३-९४)। 4. ಹಿಂಸಿಸುವುದು. कॄ (हिंसायाम्) "क्तिन्" (३-३-९४)।

**कीर्तन ಕೀರ್ತನ** (न०) 1. ಹೇಳುವುದು. 2. ಸ್ತುತಿಸುವುದು, ಸ್ತೋತ್ರಮಾಡುವುದು, ಹೊಗಳುವುದು. कॄत (संशब्दने) भावे "ल्युट्" (३-३-११५)। 3. ವರ್ಣಿಸುವುದು. "श्रीशब्दरम्यकृतसर्गसमाप्तिलक्ष्म लक्ष्मीपतेश्चरितकीर्तनमात्रचारु" माघकविवंशवर्णनम्।

**कीर्तना ಕೀರ್ತನಾ** (स्त्री०) 1. ಹೇಳುವುದು. कॄत (संशब्दने) + णिच् "युच्" (३-३-१०७)। 2. ಯಶಸ್ಸು, ಕೀರ್ತಿ. कर्म० "युच्"।

**कीर्तनीय ಕೀರ್ತನೀಯ** (वि०) 1. ಸ್ತುತಿಸಲ್ಪಡತಕ್ಕವನು, ಹೊಗಳಲ್ಪಡತಕ್ಕವನು. 2. ವರ್ಣಿಸಲ್ಪಡತಕ್ಕವನು. 3. ಹೊಗಳಲ್ಪಡುವ. 4. ವರ್ಣಿಸಲ್ಪಡುವ. कॄत (संशब्दने) + णिच् "अनीयर्" (३-१-९६)। 5. ಹೊಗಳಲು ಯೋಗ್ಯವಾದ. स्त्रियाम् —नीया —ನೀಯಾ. "तस्याः खुरन्यासपवित्रपांसुमपांसुलानां धुरि कीर्तनीया" रघु० २-२।

**कीर्तयत् ಕೀರ್ತಯತ್** (वि०) 1. ಹೇಳುತ್ತಿರುವ. कॄत (संशब्दने) + णिच् "शतृ" (३-२-१२४)। "स्वामिनाय दहनस्य केतनः कीर्तयन्निव दिवौकसां प्रियम्" माघ० १४-२८। 2. ವರ್ಣಿಸುತ್ತಿರುವ. 3. ಹೊಗಳುತ್ತಿರುವ. स्त्रियाम् "ङीप्" (४-१-६)। —यन्ती —ಯಂತೀ.

**कीर्ति ಕೀರ್ತಿ** (स्त्री०) 1. ಯಶಸ್ಸು, ಖ್ಯಾತಿ, ಹೆಸರುವಾಸಿ. कीर्त्यते—कॄत (संशब्दने) + णिच् "क्तिन्" (३-३-९७)।

निपा०। "कीर्तिरेव भवतां प्रियदाराः दाननीरझरमौक्तिकहारा" नैष० ५-१२८। ದಾನಧರ್ಮಕಾರ್ಯಗಳಿಂದ ಕೀರ್ತಿ, ಶೌರ್ಯದಿಂದ ಯಶಸ್ಸು ಎಂದು ಕೀರ್ತಿ ಯಶಸ್ಸುಗಳಿಗೆ ಭೇದವು ಹೇಳಲ್ಪಟ್ಟಿದೆ. "यशःकीर्तिपरिभ्रष्टो जीवन्नपि न जीवति"। ಆದರೆ ಎರಡು ಅರ್ಥಗಳಲ್ಲಿಯೂ ಎರಡು ಪದಗಳ ಪ್ರಯೋಗವೂ ಉಂಟು. "अकृत्वा हेलया पादमुच्चैर्मूर्धसु विद्विषाम्। कथंकारमनालम्ब्य कीर्तिर्द्यामधिरोहति" माघ० २-५२। 2. ಪ್ರಾಸಾದ, ಸೌಧ, ಮನೆ. 3. ಕಥನ, ಹೇಳುವುದು. 4. ಪ್ರಸಾದ, ಅನುಗ್ರಹ. 5. ವಿಸ್ತಾರ. 6. ಕರ್ದಮ, ಕೆಸರು. "कीर्तिर्यशसि विस्तारे प्रासादे कर्दमेऽपि च" हेम०। "कीर्तिः प्रसादयशसोः" मेदि०। 7. ದಕ್ಷನ ಪುತ್ರಿ. ಧರ್ಮಪುರುಷನ ಪತ್ನಿ. कीर्तिः लक्ष्मीः धृतिः मेधा पुष्टिः श्रद्धा क्रिया बुद्धिः लज्जा मतिः ಇವರೆಲ್ಲರೂ ಧರ್ಮಪುರುಷನ ಪತ್ನಿಯರು.

**कीर्तित ಕೀರ್ತಿತ** (न०) 1. ಹೇಳುವುದು. 2. ಹೊಗಳುವುದು. 3. ವರ್ಣಿಸುವುದು. कृत (संशब्दने) "क्तः" (३-३-११४)। 4. ಹೇಳಲ್ಪಟ್ಟ. 5. ಹೊಗಳಲ್ಪಟ್ಟ. 6. ವರ್ಣಿಸಲ್ಪಟ್ಟ. कृत कर्म० "क्तः" (३-२-१०२)। "किमिवाखिललोककीर्तितं कथयत्यात्मगुणं महामनाः" माघ० १६-३१। "जितेन्द्रियाणां धुरि कीर्तितस्थितिः" नैष० १-५३।

**कीर्तितव्य ಕೀರ್ತಿತವ್ಯ** (वि०) 1. ಸ್ತುತಿಸಲ್ಪಡತಕ್ಕವನು, ಹೊಗಳಲ್ಪಡತಕ್ಕವನು. 2. ವರ್ಣಿಸಲ್ಪಡತಕ್ಕವನು. कृत (संशब्दने)+णिच् "तव्यः" (३-१-९६)। 3. ಸ್ತುತಿಸಲ್ಪಡುವ, ಹೊಗಳಲ್ಪಡುವ. 4. ವರ್ಣಿಸಲ್ಪಡುವ.

**कीर्तिपूर ಕೀರ್ತಿಪೂರ** (पुं०) ಯಶಸ್ಸಿನ ಪ್ರವಾಹ, ಕೀರ್ತಿಯ ಹೊನಲು. कीर्तेः पूरः प्रवाहः। "कायव्यूहः क्व जगति न जागर्त्यदः कीर्तिपूरः" नैष० १२-५७।

**कीर्तिभाज् ಕೀರ್ತಿಭಾಜ್** (वि०) ಖ್ಯಾತಿವಂತ, ಕೀರ್ತಿಯನ್ನು ಪಡೆದವನು. ಹೆಸರುವಾಸಿ ಪಡೆದವನು. कीर्ति भजते — भज (सेवायाम्) "ण्विः" (३-२-६२)।

**कीर्तिमत् ಕೀರ್ತಿಮತ್** (पुं०) 1. ಉತ್ತಾನಪಾದರಾಯನ ಹಿರಿಯ ಹೆಂಡತಿಯಾದ ಸುನೀತಿಯ ಮಗ, ಧ್ರುವಕುಮಾರನ ತಮ್ಮ. 2. ವಸುದೇವನ ಹಿರಿಯ ಮಗ, ದೇವಕಿಯ ಮೊದಲನೆಯ ಮಗ. "वसुदेवस्तु देवक्यामष्टपुत्रानजीजनत्। कीर्तिमन्तं सुषेणं च भद्रसेनमुदारधीः। ऋजुं संमर्दनं भद्रं संकर्षणमहीश्वरम्"। (वि०) 3. ಕೀರ್ತಿಶಾಲಿಯಾದ, ಖ್ಯಾತಿಪಡೆದ, ಹೆಸರುವಾಸಿಯಾದ. कीर्तिरस्यास्ति "मतुप्" (५-२-९४)। स्त्रियाम् "ङीप्" (४-१-६)। **—मती — ಮತೀ.** (स्त्री०) 4. ದಕ್ಷಕನ್ಯೆ, ದಾಕ್ಷಾಯಣಿ.

**कीर्तियुत ಕೀರ್ತಿಯುತ, —युक्त — ಯುಕ್ತ** (वि०) ಕೀರ್ತಿಯಿಂದ ಕೂಡಿದ, ಕೀರ್ತಿಶಾಲಿಯಾದ, ಹೆಸರುವಾಸಿಯಾದ.

**कीर्तिरथ ಕೀರ್ತಿರಥ** (पुं०) ವಿದೇಹದ ರಾಜಕುಮಾರ, ಪ್ರತೀಂಧಕ ರಾಜನ ಮಗ. ಇವನಿಗೆ कृत्तिरथः ಎಂಬ ಹೆಸರೂ ಉಂಟು.

**कीर्तिशेष ಕೀರ್ತಿಶೇಷ** (वि०) ಕೀರ್ತಿಯು ಮಾತ್ರ ಉಳಿದಿರುವ, ಹೆಸರಿನಿಂದ ಮಾತ್ರ ಉಳಿದಿರುವ (ಮೃತನಾದ). ಕೀರ್ತಿವಂತನು ಮೃತನಾದರೆ ಅವನ ಕೀರ್ತಿಯು ಮಾತ್ರ ಉಳಿಯುವುದು. कीर्तिः शेषो यस्य।

**कीर्यमाण ಕೀರ್ಯಮಾಣ** (वि०) 1. ಹರಡಲ್ಪಡುವ. 2. ಎರಚಲ್ಪಡುವ, कॄ (विक्षेपे) "शानच्" (३-२-१२४)। 3. ಮುಚ್ಚಲ್ಪಡುವ.

**कील-बन्धने** (भ्वा० पर० सक० से०)। कीलति। चिकील। कीलिता। कीलतु। अकेलीत्। ಅಣಿ, ಬೆಣೆ ಮೊದಲಾದುವುಗಳಿಂದ ಬಂಧಿಸು,—ಕಟ್ಟು—ಭದ್ರಪಡಿಸು, ಬೀಗಹಾಕಿ ಭದ್ರಪಡಿಸು.

**कर्मणि** :—कील्यते। कीलिता। कीलयिष्यते, कीलिष्यते। कील्यताम्। अकील्यत।

**णिचि** :—कीलयति, —ते। कीलयांचकार, —चक्रे, —बभूव, —आस। कीलयिता। कीलयतु, —ताम्। कीलयेत्, —त। कील्यात्, कीलयिषीष्ट। ಇತ್ಯಾದಿ.

**सनि** :—चिकीलिषति। चिकीलिषतु। अचिकीलिषत्। ಇತ್ಯಾದಿ.

**कृत्सु** :—कीलितव्यम्। कीलनीयम्। कील्यम्। कीलितः। कीलितवान्। कीलन्, कीलन्ती। कीलितुम्। कीलनम्। कीलित्वा। संकील्य।

**कील ಕೀಲ** (पुंस्त्री०) 1. ಅಗ್ನಿಯಜ್ವಾಲೆ, ಬೆಂಕಿಯ ಉರಿ. "धूमाविला कीलपरम्परेव" नैष० ८-७६। 2. ಕೀಲು, ಬೆಣೆ. 3. ಈಟಿ. ಭಲ್ಲೆ. कीलति — कील (बन्धने) "कः" (३-१-१३५)। 4. ಕಂಬ. 5. ಕಂಬ, ಗೂಟ, ಹಸು ಮೊದಲಾದುವುಗಳನ್ನು ಕಟ್ಟುವ ಮೋಟುಗಂಬ. "उत्खाय दर्पचलितेन सहैव रज्ज्वा कीलं प्रयत्नपरमानवदुर्ग्रहेण" माघ० ५-५९। 6. ಮೊಣಕೈ, ಮೊಳಕೈ. 7. ಕಾವು, ಒಂದು ವಸ್ತುವನ್ನು ಹಿಡಿದುಕೊಳ್ಳಲು ಮಾಡಿರುವ ಅದರ ಹಿಡಿ. 8. ಬಿರಿಪಟ್ಟೆ, ಒಂದು ವಸ್ತುವು

ಭದ್ರವಾಗಿ ನಿಲ್ಲಲು ಹಿಡಿದು ಕಟ್ಟುವ ಪಟ್ಟಿ. (ಪುಂ) 9. ಲೇಶ, ಚೂರು, ಸೂಕ್ಷ್ಮಾಂಶ. "कीलो लेशे द्वयोः स्तम्भज्वालाकफोणिशङ्कुषु" मेदि०। 10. ಪ್ರಸವವು ಸಮೀಪಿಸಿ ಜನನದ್ವಾರವನ್ನು ಮೇಲುಮುಖವಾದ ತೋಳು ತಲೆ ಕಾಲುಗಳಿಂದ ಮುಚ್ಚಿರುವ ಗರ್ಭದೊಳಗಿನ ಶಿಶು. ಗರ್ಭದಲ್ಲಿ ಪೂರ್ಣವಾಗಿ ಬೆಳೆದಿರುವ ಶಿಶು. "तत्र ऊर्ध्वबाहुशिरःपादो यो योनिमुखं निरुणद्धि कील इव स कीलः" सुश्रुत० निदान० ८-४। 11. ಅಗುಳಿ, ತಾಪಾಳು. 12. ಬೀಗ. 13. ತೋಳು. 14. ರುದ್ರ, ಈಶ್ವರ. "कीलोऽग्नौ कफणौ ज्वाले बाहौ ना शङ्कुशर्वयोः" वैज०। 15. ಹೊಟ್ಟೆಯೊಳಗಿನ ಊತ, ಬಾವು, ಗೆಡ್ಡೆ. 16. ಬಂಡಿಯ ಕಡಾಣಿ. "अक्षकीले त्वणिर्न क्ली ध्रुवः कीलोऽप्यनि र्न षण्" वैज०। (ನಂ) 17. ಕಟ್ಟು, ಬಂಧನ. कील (बन्धने) भावे करणादौ च "घञ्"। 18. ಜಲ, ನೀರು. (स्त्री०) -ला -ಲಾ. 19. ಮೊಣಕೈ ಪಟು, ಮೊಳಕೈಯಿಂದ ಹೊಡೆತ. ಇದೊಂದು ರತಿಕ್ರೀಡೆಯ ಸಮಯದಲ್ಲಿ ಎದೆಯಮೇಲೆ ಕೊಡುವ ಪ್ರಹಾರ. "कीला उरसि, कर्तरी शिरसि, विद्धा कपोलयोः" वात्स्या० सू०।

**कीलक ಕೀಲಕ** (पुं०) 1. ಪ್ರಭವ ಮೊದಲಾದ ಅರವತ್ತು ಸಂವತ್ಸರಗಳಲ್ಲಿ ನಲವತ್ತೆರಡನೆಯದು. 2. ಆಣಿ, ಮೊಳೆ. 3. ಗೂಟ, ಹಸುಗಳನ್ನು ಕರೆಯುವಾಗ ತಡೆಗಟ್ಟುವ ಗೂಟ. "जायन्ते सर्वशस्यानि सुभिक्षं निरुपद्रवम्। सौम्यवृष्टिर्भवेद्राजन् कीलके च शुभं भवेत्"। 4. (ಹೊಟ್ಟೆಯಲ್ಲಿ) ಊತ, ಬಾವು, ಗೆಡ್ಡೆ. 5. ಶಂಕು, ಕೀಲು, ಅಗುಳಿ, ತಾಪಾಳು. 6. ಕಂಬ. कीलति बध्नात्यनेन — कील (बन्धने) कर० "घञ्" (३-३-११७)। स्वार्थे "कः"। 7. ಕುರು, ಸ್ಫೋಟ. "स्फोटकः कीलको गण्डो विस्फोटः पिटका त्रयी" वैज०।

**कीलत् ಕೀಲತ್** (वि०) 1. ಬೀಗಹಾಕುತ್ತಿರುವ. 2. ಅಗುಳಿ ಹಾಕುತ್ತಿರುವ. कील (बन्धने) "शतृ" (३-२-१२४)।

**कीलन ಕೀಲನ** (न०) 1. ಬಂಧಿಸುವುದು, ಕಟ್ಟುವುದು. कील (बन्धने) भावे "ल्युट्" (३-३-११५)। 2. ಬೀಗ ಹಾಕುವುದು. 3. ಅಗುಳಿಹಾಕಿ ಭದ್ರಪಡಿಸುವುದು, ತಾಪಾಳು ಹಾಕುವುದು.

**कीलनीय ಕೀಲನೀಯ** (वि०) 1. ಬೀಗಹಾಕಿ ಭದ್ರಪಡಿಸಬೇಕಾದ. 2. ತಾಪಾಳು ಹಾಕಲು ಯೋಗ್ಯವಾದ. कील (बन्धने) "अनीयर्" (३-१-९६)। 3. ಗೂಟ ಹೊಡೆಯಲು ಶಕ್ಯವಾದ.

**कीलयत् ಕೀಲಯತ್** (वि०) 1. ಬೀಗ ಹಾಕಿಸುತ್ತಿರುವ. 2. ತಾಪಾಳು ಹಾಕಿಸುತ್ತಿರುವ. 3. ಗೂಟ ಹೊಡೆಯಿಸುತ್ತಿರುವ. कील (बन्धने)+णिच् "शतृ" (३-२-१२४)। स्त्रियाम् "ङीप्" (४-१-६)। -यन्ती -ಯಂತೀ.

**कीलयितृ ಕೀಲಯಿತೃ** (वि०) 1. ಬೀಗ ಹಾಕಿಸುತ್ತಿರುವವನು. 2. ತಾಪಾಳು ಹಾಕಿಸುತ್ತಿರುವವನು. 3. ಗೂಟ ಹೊಡೆಯಿಸುತ್ತಿರುವವನು. कील (बन्धने) + णिच् "तृच्" (३-१-१३३)। स्त्रियाम् "ङीप्" (४-१-६)। -यित्री -ಯಿತ್ರೀ.

**कीलाल ಕೀಲಾಲ** (न०) 1. ಜಲ, ನೀರು. कीलं ज्वालामलति वारयति — अल (भूषणादौ) "अण्" (३-२-१)। 2. ರಕ್ತ. 3. ಅಮೃತ. "कीलालं रुधिरे नीरे" हेम०। 4. ಹಾವಿನ ಹೆಡೆಯ ಒಂದು ಭಾಗ. "कीलालमसृगम्भसोः। फणभागे" नानार्थर०।

**कीलालज ಕೀಲಾಲಜ** (न०) ಮಾಂಸ. कीलालाज्जायते — जनी (प्रादुर्भावे) "डः" (३-२-९८)। "रसाद्रक्तं ततो मांसं मांसान्मेदः प्रजायते। मेदसोऽस्थि ततो मज्जा मज्ज्ञः शुक्रं तु जायते" सुश्रुत० सूत्र० १४-१०।

**कीलालधि ಕೀಲಾಲಧಿ** (पुं०) ಸಮುದ್ರ, ಕಡಲು. कीलालं धीयतेऽत्र — डु धाञ् (धारणपोषणयोः) "किः" (३-३-९३)।

**कीलालप ಕೀಲಾಲಪ** (पुं०) 1. ಒಬ್ಬ ರಾಕ್ಷಸ. कीलालं रक्तं पिबति — पा (पाने) "कः" (३-२-४)। (वि०) 2. ರಕ್ತವನ್ನು ಕುಡಿಯುವವನು. "स तु कीलालपो यस्तु परान्नं भोक्तुमिच्छति" भा० वन०।

**कीलित ಕೀಲಿತ** (न०) 1. ಬಂಧನ, ಕಟ್ಟು. कील (बन्धने) भावे "क्तः" (३-३-११४)। (वि०) 2. ಪಟ್ಟಿಯಿಂದ ಕಟ್ಟಲ್ಪಟ್ಟ. 3. ಬೀಗ ಹಾಕಲ್ಪಟ್ಟ, ಬೀಗ ಹಾಕಿ ಭದ್ರಪಡಿಸಲ್ಪಟ್ಟ. कील (बन्धने) "क्तः" (३-२-१०२)। 4. ಆಣಿಯಿಂದ ಹೊಡೆಯಲ್ಪಟ್ಟ, ಮೊಳೆ ಹೊಡೆದು ಭದ್ರವಾಗಿ ನಿಲ್ಲಿಸಲ್ಪಟ್ಟ. "सा नश्चेतसि कीलितेव विशिखैश्चेतोभुवः पञ्चभिश्चिन्तासन्ततितन्तुजालनिबिडस्यूतेव लग्ना प्रिया" मालती० ५-१०। 5. ಬಂಧನದಲ್ಲಿಡಲ್ಪಟ್ಟ, ಒಂದು ಮಿತಿಯಲ್ಲಿಡಲ್ಪಟ್ಟ.

**कीलितृ ಕೀಲಿತೃ** (वि०) 1. ಬೀಗ ಹಾಕುವ. 2. ಆಣಿ ಹೊಡೆಯುವ. 3. ಬಂಧನದಲ್ಲಿಡುವ. कील (बन्धने) "तृच्" (३-१-१३३)। स्त्रियाम् "ङीप्" (४-१-५)। कीलित्री ಕೀಲಿತ್ರೀ.

**कीश ಕೀಶ** (पुं०) 1. ಕಪಿ, ವಾನರ, ಕೋತಿ. कस्य वायोरपत्यम् "इञ्" (४-१-९५)। किः वायुपुत्रः हनुमान् — सः ईशो यस्य। "की" इति शब्दमीष्टे—ईश (ऐश्वर्ये) "कः" (वा० ३-२-५)। 2. ಸೂರ್ಯ. 3. ಪಕ್ಷಿ, ಹಕ್ಕಿ. (वि०) 4. ದಿಗಂಬರ, ಬಟ್ಟೆ ಹೊದೆಯದಿರುವವನು, ಬೆತ್ತಲೆಯವನು. "कीशो दिगम्बरे कपौ" मेदि०।

**कीशपर्ण ಕೀಶಪರ್ಣ** (पुंस्त्री०) ಅಪಾಮಾರ್ಗ, ಉತ್ತರಣೆ ಗಿಡ. स्त्रियाम् –पर्णी – ಪರ್ಣೀ. कीशलोमसदृशानि पर्णान्यस्याः "ङीष्" (४-१-६४)।

**कु – शब्दे** (अदा० पर० अक० अनि०)। कौति कुतः कुवन्ति। चुकाव चुकुवतुः चुकुवुः। चुकविथ, चुकोथ। कोता। कौतु, कुतात्। अकौत् अकुताम्। कुयात् कुयाताम् कुयुः। कूयात् कूयास्ताम् कूयासुः। अकौषीत्।

**भावे** :—कूयते। चुकुवे। काविता, कोता। काविष्यते, कोष्यते। कूयताम्। अकूयत। अकावि ಇತ್ಯಾದಿ.

**णिचि** :—कावयति, –ते। कावयांचकार, –चक्रे, –बभूव, –आस। कावयिता। कावयिष्यति, –ते। कावयतु, –ताम्। अकावयत्, –त। कावयेत्, –त। ಇತ್ಯಾದಿ.

**कृत्सु** :—कोतव्यम्। कवनीयम्। कव्यम्। कुतः। कुतवान्। कुवन्, कुवती। कोतुम्। कुतम्। कवनम्। कुत्वा। उत्कुत्य।

**कु ಕು** (पुं०) 1. क ख ग घ ङ ಈ ಐದು ವರ್ಣಗಳ ವರ್ಗ. ಇವು ಕಂಠದಲ್ಲಿ ಹುಟ್ಟುವುವು. "अकुहविसर्जनीयानां कण्ठः। 2. ಶಬ್ದ, ಧ್ವನಿ, ಸದ್ದು. (स्त्री०) 3. ಭೂಮಿ. कुवते—कुङ् (शब्दे) "डुः" (वा० ३-२-१८०)। (अव्य०) 4. ಪಾಪ. 5. ನಿಂದೆ, ದೂಷಣೆ. 6. ಸ್ವಲ್ಪ, ಅಲ್ಪ, ಕೊಂಚ. 7. ತಡೆ, ಅಡ್ಡಿ. "पृथिव्यां कुः समाख्यातः कुः शब्देऽपि प्रकीर्तितः" एका०। "कुः स्त्री भुवि कु पापेऽल्पे कुत्सायां वारणेऽव्ययम्" नानार्थर०। कुरूपम्। कुदेशः। "कु" ಶಬ್ದಕ್ಕೆ ಅಚಾದಿ ಪದವೂ तृण रथ वद ಪದಗಳೂ ಪರವಾದರೆ "कत्" ಆದೇಶವು ಬರುವುದು. कदन्नम्। कदश्वः। कत्तृणम्। कद्रथः। कद्वदः। पथिन् ಮತ್ತು अक्ष ಪದಗಳು ಪರವಾದರೂ ಅಲ್ಪಾರ್ಥದಲ್ಲಿಯೂ "का" ಆದೇಶವು ನಿತ್ಯವಾಗಿ ಬರುವುದು. कापथम्। काक्षः। पुरुष ಪದವು ಪರವಾದರೆ ವಿಕಲ್ಪವಾಗಿ "का" ಆದೇಶವು ಬರುವುದು. कापुरुषः। कुपुरुषः। उष्ण ಪದವು ಪರ ವಾದರೆ कव का ಮತ್ತು कत् ಆದೇಶಗಳು ಬರುವುವು. कवोष्णम् कोष्णम् कदुष्णम्।

**कुक – आदाने** (भ्वा० आत्म० सक० से०)। कोकते। चुकुके। कोकिता। कोकताम्। अकोकत ಇತ್ಯಾದಿ. ತೆಗೆದುಕೋ, ಸ್ವೀಕರಿಸು. कर्म० कुक्यते। कुक्यताम्। अकुक्यत ಇತ್ಯಾದಿ.

**कुक ಕುಕ** (वि०) 1. ತೆಗೆದುಕೊಳ್ಳುವವನು, ಸ್ವೀಕರಿಸು ವವನು. कुक (आदाने) "कः" (३-१-१३५)। 2. ಸಮರ್ಥ.

**कुकथा ಕುಕಥಾ** (स्त्री०) ಕೆಟ್ಟ ಕಥೆ, ದುಃಖದ ಕಥೆ. कुत्सिता कथा। "शृण्वन्ति येऽन्यविषयाः कुकथा मतिघ्नीः" भाग० ३-१५-२३।

**कुकन्या ಕುಕನ್ಯಾ** (स्त्री०) ಅಯೋಗ್ಯ ಹುಡುಗಿ, ಕೆಟ್ಟ ಹುಡುಗಿ. कुत्सिता कन्या।

**कुकभ ಕುಕಭ** (पुं०) ಮದ್ಯ, ಹೆಂಡ.

**कुकर ಕುಕರ** (पुं०) 1. ಮೊಂಡುಕೈ. कुत्सितः करः। (वि०) 2. ಮೊಂಡುಕೈಯುಳ್ಳವನು. कुत्सितः करो यस्य। 3. ಕೆಟ್ಟಕೆಲಸ ಮಾಡುವವನು. कुत्सितं करोति – डु कृञ् (करणे) "टः" (३-२-२०)।

**कुकर्मन् ಕುಕರ್ಮನ್** (न०) 1. ಕೆಟ್ಟಕೆಲಸ, ಅಕಾರ್ಯ. कुत्सितं कर्म। (वि०) 2. ಕೆಟ್ಟ ಕೆಲಸ ಮಾಡುವವನು. कुत्सितं कर्म यस्य।

**कुकलत्र ಕುಕಳತ್ರ** (न०) ಕೆಟ್ಟ ಹೆಂಡತಿ, ಅಸಭ್ಯ ಹೆಂಡತಿ. कुत्सितं कलत्रम्।

**कुकार्य ಕುಕಾರ್ಯ** (न०) ಕೆಟ್ಟ ಕೆಲಸ, ನೀಚವಾದ ಕಾರ್ಯ. कुत्सितं कार्यम्।

**कुकाव्य ಕುಕಾವ್ಯ** (न०) 1. ದುಷ್ಟಕಾವ್ಯ, ದೋಷಗಳಿಂದ ಕೂಡಿದ ಕಾವ್ಯ. 2. ನೀಚ ವಿಷಯವನ್ನು ಕುರಿತ ಕಾವ್ಯ. कुत्सितं काव्यम्।

**कुकील ಕುಕೀಲ** (पुं०) ಪರ್ವತ, ಬೆಟ್ಟ. कोः कील इव।

**कुकुण्ड ಕುಕುಂಡ** (पुं०) ನಾಯಿಕೊಡೆ.

**कुकुन्दर ಕುಕುಂದರ** (पुं०) ಹೆಂಗಸರ ಪಿರ್ರೆಗಳ ಮೇಲಿರುವ ಗುಳಿಗಳು. कुं भूमिं दारयति – दॄ (विदारणे) + णिच् "अण्" (३-२-१)। पृषो०। कुत्सितं कुन्दरम्।

**कुकुर ಕುಕುರ** (पुं०) 1. ಯದುವಂಶದ ಒಬ್ಬ ದೊರೆ, ಅಂಧಕರಾಜನ ಮಗ. (पुं० ब० व०) 2. ದಶಾರ್ಹದೇಶ. 3. ದಶಾರ್ಹದೇಶದ ಜನರು. ಯದುವಂಶದ ಮೂಲ ಪುರುಷನಾದ ದಶಾರ್ಹರಾಜನ ಹೆಸರು ಆ ದೇಶಕ್ಕೂ ಆ ವಂಶದವ (ಯಾದವ) ರಿಗೂ ಬಂದು ಆ ಹೆಸರಿನಿಂದಲೇ

ಪ್ರಸಿದ್ಧವಾಯಿತು. "सति मघावमवन्मदनव्यथाविधुरिता धुरि ताः कुकुरस्त्रियः" माघ० ६-१५।

**कुकूल ಕುಕೂಲ** (पुं०) 1. ತುಷಾನಲ, ಹೊಟ್ಟಿನೊಳಗಿನ ಬೆಂಕಿ. कोः भूमेः कूलम्। कु (शब्दे) "ऊलच्" कुगागमश्च (उ० ४-९०)। निपा०। (न०) 2. ಸಲಾಕಿಗಳಿಂದ ತುಂಬಿದ ಹಳ್ಳ, ಗೂಟಗಳಿಂದ ತುಂಬಿದ ಗುಳಿ. "कुकूलं शङ्कुसंकीर्णश्वभ्रे ना तु तुषानले" मेदि०। 3. ಕವಚ. 4. ಬೆರಣಿ. "येभ्योऽमी शतशः कुकूलहुतभुग्दाहं दहन्तः शनैः" प्रबोध० ५-१६।

**कुकृत्य ಕುಕೃತ್ಯ** (न०) 1. ಕೆಟ್ಟ ಕೆಲಸ, ಅಕಾರ್ಯ, ನೀಚ ಕಾರ್ಯ. कुत्सितं कृत्यम्। 2. ಅನುತಾಪ, ಪಶ್ಚಾತ್ತಾಪ. "कुकृत्यमनुतापे स्यादयुक्तकरणेऽपि च" हेम०।

**कुक्कुट ಕುಕ್ಕುಟ** (पुं०) 1. ಹುಂಜ, ಗಂಡುಕೋಳಿ. कुका आदानेन कुटति — कुट (कौटिल्ये) "कः" (३-१-१३५)। 2. ಕಾಡುಕೋಳಿ. स्त्रियाम् जाति० "ङीष्" (४-१-६३)। **-टी -ಟೀ.** 3. ಅಗ್ನಿಕಣ, ಬೆಂಕಿಯ ಕಿಡಿ. 4. ನಿಷಾದನಿಂದ ಶೂದ್ರಸ್ತ್ರೀಯಲ್ಲಿ ಹುಟ್ಟಿದ ಬೆರಕೆ ಜಾತಿಯವನು. "कुक्कुटः कुक्कुभे ताम्रचूडे वह्निकणेऽपि च। निषादशूद्रयोः पुत्रे" हेम०।

**कुक्कुटमण्डप ಕುಕ್ಕುಟಮಂಡಪ** (पुंन०) ಕಾಶಿಯಲ್ಲಿರುವ ಒಂದು ಪವಿತ್ರಸ್ಥಳ. ಕಾಶೀವಿಶ್ವೇಶ್ವರ ದೇವಾಲಯದೊಳಗಿರುವ ಒಂದು ಮಂಟಪ. ಇದು ಮುಕ್ತಿಪ್ರದವಾದ ಸ್ಥಳ. ಸತೀಪುತ್ರಸಹಿತನಾದ ಬ್ರಾಹ್ಮಣನೊಬ್ಬನು ಅಕೃತ್ಯದ ಫಲವಾಗಿ ಕುಕ್ಕುಟಜನ್ಮವನ್ನು ಪಡೆದು ಈ ಮಂಟಪದ ಮಹಿಮೆಯಿಂದ ಮೋಕ್ಷ ಪಡೆದನು. [ವಿವರಕ್ಕೆ ಕಾಶೀ ಖಂಡದ 98ನೆಯ ಅಧ್ಯಾಯ ನೋಡಿ.]

**कुक्कुटव्रत ಕುಕ್ಕುಟವ್ರತ** (न०) ಭಾದ್ರಪದ ಶುಕ್ಲ ಸಪ್ತಮಿಯ ದಿನ ಮಾಡಬೇಕಾದ ಒಂದು ವ್ರತ. "भाद्रे मासि सिते पक्षे सप्तम्यां नियमेन या। स्नात्वा शिवं लेखयित्वा मण्डलेन सहाम्बिकम्। पूजयेच्च तदा तस्या दुष्प्रापं नैव विद्यते"।

**कुक्कुटशिख ಕುಕ್ಕುಟಶಿಖ** (पुं०) ಕುಸುಂಬೆಗಿಡ. कुक्कुटस्य शिखेव शिखाऽस्य।

**कुक्कुटाण्ड ಕುಕ್ಕುಟಾಂಡ** (न०) ಕೋಳಿಯ ಮೊಟ್ಟೆ. कुक्कुट्या अण्डम्। कुक्कुट्याः पुंवद्भावः (६-३-३५)।

**कुक्कुटासन ಕುಕ್ಕುಟಾಸನ** (न०) ಯೋಗಾಸನಗಳಲ್ಲೊಂದು ಭೇದ. "निजहस्तद्वयं भूमौ पातयित्वा जितेन्द्रियः। पद्भ्यां बद्धं यत्करोति कूर्परद्वयमध्यगम्। सव्यापसव्ययुगलं कुक्कुटासनमुच्यते"। ಎರಡು ಮಂಡಿಗಳ ಮಧ್ಯದಲ್ಲಿ ಎರಡು ಹಸ್ತಗಳನ್ನೂ ನೆಲದಮೇಲೆ ಊರಿಕೊಂಡು (ನಿಂತು) ಎರಡು ಕಾಲುಗಳಿಂದಲೂ ತೋಳುಗಳನ್ನು ಬಲವಾಗಿ ಬಂಧಿಸಿ ಮಾಡುವುದು "**ಕುಕ್ಕುಟಾಸನ**" ವೆನಿಸುವುದು. ಈ ಆಸನದಿಂದ ನಾಡಿಗಳು ಶುದ್ಧವಾಗುವುವು.

**कुक्कुटि ಕುಕ್ಕುಟಿ** (स्त्री०) ಡಂಭಾಚಾರ, ಕಪಟ, ಮೋಸ. कुक्कुट इवाचरति — कुक्कुट आचारार्थे "क्विप्" (वा० ३-१-११)। "इन्" (उ० ४-११७)। "अथ कुक्कुटिः। कुहना दम्भचर्या च" अभि० चि०।

**कुक्कुभ ಕುಕ್ಕುಭ** (पुं०) ಕಾಡುಕೋಳಿ. कुक् इति कौति अव्यक्तशब्दं करोति — कु (शब्दे) "भक्" बाहु०। "कुक्कु" शब्दं भाषते — भाष (व्यक्तायां वाचि) "डः" (३-२-१०१) इति वा।

**कुक्कुर ಕುಕ್ಕುರ** (पुं०) 1. ನಾಯಿ. कोकते — कुक (आदाने) "क्विप्" (३-२-१७८)। कुक्। कुर (शब्दे) "कः" (३-१-१३५)। कुरः। कुक् चासौ कुरश्च। स्त्रियाम् जाति० "ङीष्" (४-१-६३)। **-री -ರೀ.** ಹೆಣ್ಣುನಾಯಿ. (न०) 2. ಮಾಚಿಪತ್ರೆ. "कुक्कुरः सारमेये ना ग्रन्थिपर्णे नपुंसकम्" मेदि०।

**कुक्ष ಕುಕ್ಷ** (पुं०) ಉದರ, ಜಠರ, ಹೊಟ್ಟೆ. कुष (निष्कर्षे) "सः" (उ० ३-६८)। षस्य कः (८-२-४१)। कुक्षो जठरम् सि० कौ०।

**कुक्षि ಕುಕ್ಷಿ** (पुं०) 1. ಉದರ, ಹೊಟ್ಟೆ. कुष्यते निष्कास्यते मलोऽस्मात् — कुष (निष्कर्षे) "क्सिः" (उ० ३-१५५)। "विपुलेन सागरशयस्य कुक्षिणा भुवनानि यस्य पपिरे युगक्षये" माघ० १३-४०। 2. ಗರ್ಭಾಶಯ. "विभक्तात्मा विभुस्तासामेकः कुक्षिष्वनेकधा" रघु० १०-६५। 3. ಗುಹೆ, ಗವಿ. "तदाप्रभृत्येव वनद्विपानां त्रासार्थमस्मिन्नहमद्रिकुक्षौ" रघु० २-३८। 4. ಒಂದು ವಸ್ತುವಿನ ಅಥವಾ ಪ್ರದೇಶದ ಮಧ್ಯಭಾಗ. "ततः सागरमासाद्य कुक्षौ तस्य महोर्मिणः" भा० वन०। 5. ಇಕ್ಷ್ವಾಕುರಾಜನ ಮಗ, ವಿಕುಕ್ಷಿಯ ತಂದೆ. 6. ಬಲಿ ಚಕ್ರವರ್ತಿ.

**कुक्षिज ಕುಕ್ಷಿಜ** (पुं०) 1. ಔರಸಪುತ್ರ, ಹೊಟ್ಟೆಯಲ್ಲಿ ಹುಟ್ಟಿದ ಮಗ. कुक्षौ जातः — जनी (प्रादुर्भावे) "डः" (३-२-९७)। (वि०) 2. ಹೊಟ್ಟೆಯಲ್ಲಿ ಹುಟ್ಟಿದ, ಹೊಟ್ಟೆಯಲ್ಲಿ ಉಂಟಾದ. "स च प्राप मधूपघ्नं कुम्भीनस्याश्च कुक्षिजः" रघु० १५-१५।

**कुक्षिम्भरि ಕುಕ್ಷಿಂಭರಿ** (वि०) ತನ್ನ ಹೊಟ್ಟೆಯನ್ನು ಮಾತ್ರ ತುಂಬಿಕೊಳ್ಳುವವನು, ಲೋಭಿ, ಜಿಪುಣ. कुक्षि बिभर्ति — डु भृञ् (धारणपोषणयोः) "इन्" मुम् च (३-२-२६)। निपा०।

**कुक्षिशूल ಕುಕ್ಷಿಶೂಲ** (पुंन०) ಉದರಶೂಲೆ, ಹೊಟ್ಟೆ ನೋವು, ವಾತದಿಂದ ಆಮದೋಷವುಂಟಾಗಿ ಬರುವ ಹೊಟ್ಟೆಶೂಲೆ. "प्रकुप्यति यदा कुक्षौ वह्निमाक्रम्य मारुतः। तदास्य भोजनं भुक्तं सोपष्टम्भं न पच्यते। उच्छ्वसित्यामशकृता शूलेनाहन्यते मुहुः। नैवासने न शयने तिष्ठन्न लभते सुखम्। कुक्षिशूल इति ख्यातो वातादामसमुद्भवः" सुश्रुत० उत्तरतं० ४२-१२३-१२५।

**कुखनक ಕುಖನಕ**(पुं०) 1. ಮೂಷಕ, ಇಲಿ. 2. ವರಾಹ, ಹಂದಿ. कोः भूमेः खनकः।

**कुग्रह ಕುಗ್ರಹ** (पुं०) ಕೆಟ್ಟ ಗ್ರಹ, ಪಾಪಗ್ರಹ. ರವಿ, ಕುಜ, ಶನಿ, ರಾಹು ಮತ್ತು ಕೇತು ಇವರು ಕುಗ್ರಹಗಳು.

**कुग्राम ಕುಗ್ರಾಮ** (पुं०) ಕೆಟ್ಟ ಗ್ರಾಮ, ವಾಸಮಾಡಲು ಸೌಕರ್ಯವಿಲ್ಲದ ಗ್ರಾಮ. ರಾಜ, ಅಗ್ನಿಹೋತ್ರಿ, ವೈದ್ಯ, ಧನಿಕ ಮತ್ತು ನದಿ ಇವುಗಳ ಸೌಕರ್ಯವಿಲ್ಲದಿದ್ದಲ್ಲಿ ಆ ಗ್ರಾಮವು ವಾಸಾನರ್ಹವಾದುದು.

**कुङ् — शब्दे** (तुदा० आत्म०अक०अनि०)। कुवते। चुकुवे। कुता। अकुत। ಇತ್ಯಾದಿ.

**कुङ्कुम ಕುಂಕುಮ** (न०) 1. ಕಾಶ್ಮೀರದೇಶದಲ್ಲಿ ಹುಟ್ಟಿದ ಕುಂಕುಮಕೇಸರಿ. कुक्यते — कुक (आदाने) "उमच्" बाहु०। "कुङ्कुमपङ्ककलङ्कितदेहा गौरपयोधरकम्पितहारा। नूपुरहंसरणत्पदपद्मा कं न वशीकुरुते भुवि रामा" भर्तृ० २-९। ಪದ್ಮದ ವಾಸನೆಯುಳ್ಳ ಕಾಶ್ಮೀರ ದೇಶದ ಕೇಸರಿಯು ಉತ್ತಮವಾದುದು. ಕೇತಕೀ (ತಾಳೆ) ಹೂವಿನ ವಾಸನೆಯುಳ್ಳ ಬಾಹ್ಲೀಕ ದೇಶದ ಕೇಸರಿಯು ಮಧ್ಯಮ ವರ್ಗಕ್ಕೆ ಸೇರಿದುದು. ಪಾರಸೀಕ ದೇಶದ ಜೇನಿನ ವಾಸನೆಯುಳ್ಳ ಕೇಸರಿಯು ಕೆಳಮಟ್ಟಕ್ಕೆ ಸೇರಿದುದು. "काश्मीरदेशजे क्षेत्रे कुङ्कुमं यद्भवेद्धि तत्। सूक्ष्मकेसरमारक्तं पद्मगन्धि तदुत्तमम्। बाह्लीकदेशसञ्जातं कुङ्कुमं पाण्डुरं मतम्। केतकीगन्धसंयुक्तं मध्यमं सूक्ष्मकेसरम्। कुङ्कुमं पारसीके यन्मधुगन्धि तदीरितम्। ईषत्पाण्डुरवर्णं यदधमं स्थूलकेसरम्" भावप्र०। 2. ಕುಂಕುಮ, ಹೆಂಗಸರು ಹಣೆಗೆ ಇಟ್ಟುಕೊಳ್ಳುವ ಒಂದು ಮಂಗಳವಸ್ತು.

**कुङ्कुमाद्रि ಕುಂಕುಮಾದ್ರಿ** (पुं०) ಕಾಶ್ಮೀರದಲ್ಲಿ ಕುಂಕುಮಕೇಸರಿಗೆ ಸ್ಥಾನವಾದ ಒಂದು ಪರ್ವತ.

**कुच — शब्दे तारे** (भ्वा० पर० अक० से०)। कोचति। चुकोच। अकोचीत्। ಗಟ್ಟಿಯಾಗಿ ಶಬ್ದಮಾಡು.

**कुच — संपर्चन-प्रतिष्टम्भ-विलेखनेषु** (भ्वा० पर० सक० से०)। कोचति। चुकोच। कोचिता। अकोचीत्। 1. ಸಂಪರ್ಕ ಹೊಂದು, ಬೆರೆ, ಜೊತೆಯಲ್ಲಿ ಸೇರು. 2. ವಕ್ರವಾಗು, ಬಗ್ಗು. 3. ತಡೆ, ಅಡ್ಡಿಪಡಿಸು. 4. ಗೆರೆ ಹಾಕು, ಬರೆ.

**कुच — संङ्कोचने** (तुदा० पर० अक० से०) कुचति। कुचिता। अकुचीत्। ಸಂಕೋಚಹೊಂದು, ಹಿಂದಕ್ಕೆ ಎಳೆದುಕೋ, ಚಿಕ್ಕದಾಗು, ಸಣ್ಣದಾಗು.

**कुच ಕುಚ** (पुं०) ಸ್ತನ, ಮೊಲೆ. कुचति—कुच (संकोचने) "कः" (३-१-१३५)। ಹೆಂಗಸರಿಗೆ ಯೌವನ (ಪ್ರಾಯ) ಪ್ರಾದುರ್ಭಾವವಾದಾಗ ಸ್ತನಗಳು ಮತ್ತು ರೋಮಪಙ್ಕ್ತಿಗಳು ಕಾಣಿಸಿಕೊಳ್ಳುವುವು. ಹೂವಿನ ಮೊಗ್ಗಿನೊಳಗೆ ಅಡಗಿರುವ ಪರಿಮಳವು ಅದು (ಮೊಗ್ಗು) ಅರಳಿದಾಗ ಹೊರಕ್ಕೆ ಹೊರಡುವಂತೆ ಹೆಂಗಸರಿಗೆ ಯೌವನ ಹುಟ್ಟಿ ಪುಷ್ಪವತಿಯರಾದಾಗ ರೋಮಪಙ್ಕ್ತಿ ಮತ್ತು ಸ್ತನಗಳು ಮುಂತಾದುವು ಮೇಲಕ್ಕೆದ್ದು ಕಾಣಿಸಿಕೊಳ್ಳುವುವು. "पुष्पाणां मुकुले गन्धो यथा सन्नपि नाप्यत। तेषां तदेव तारुण्ये पुष्टत्वाद्व्यक्तिमेति च। रोमराज्यादयः पुंसां नारीणामपि यौवने" भावप्र०। पुंसां रोमराजिश्मश्रुप्रभृतयः नारीणां तु रोमराजीस्तनार्तवादयः। "उपनेतुमुन्नतिमतेव दिवं कुचयोर्युगेन तरसाऽऽकलिताम्" माघ० ९-७२।

**कुचतट ಕುಚತಟ** (न०) 1. ಸ್ತನಪ್ರದೇಶ, ಮೊಲೆಯ ಮೇಲುಭಾಗ. कुचयोस्तटम्। "आहतं कुचतटेन तरुण्याः साधु सोढममुनेति पपात। त्रुटचतः प्रियतमोरसि हारात् पुष्पवृष्टिरिव मौक्तिकवृष्टिः" माघ० १०-७४। 2. ಮೊಲೆಯ ಒಂದು ಭಾಗ.

**कुचन्दन ಕುಚಂದನ** (न०) 1. ಕೆಂಪು ಚಂದನ. गन्धरहितत्वात् कुत्सितं चन्दनम्। 2. ಕುಂಕುಮಕೇಸರಿ.

**कुचफल ಕುಚಫಲ** (पुं०) 1. ದಾಳಿಂಬೆ ಗಿಡ. कुच इव फलमस्य। (न०) 2. ದಾಳಿಂಬೆ ಹಣ್ಣು. कुच इव फलम्।

**कुचर ಕುಚರ** (वि०) 1. ಪರದೂಷಕ, ಇತರರನ್ನು ದೂಷಿಸುವವನು, ಇತರರ ದೋಷವನ್ನು ಎತ್ತಿ ಹೇಳುವವನು, ನೀಚಸ್ವಭಾವದವನು. कुत्सितं चरति — चर (गतिभक्षणयोः) "अच्" (३-१-१३४)। 2. ಕೆಟ್ಟದಾರಿಯಲ್ಲಿ ನಡೆಯುವ. कुत्सिते मार्गे चरति — चर

"टः" (३-२-१६)। 3. ಭೂಮಿಯಲ್ಲಿ ನಡೆಯುವ. कौ भूमौ चरति — चर "टः" (३-२-१६)। स्त्रियाम् "ङीप्" (४-१-१५)। **–चरी –ಚರೀ.**

**कुचरित ಕುಚರಿತ** (नं०) ಕೆಟ್ಟ ನಡತೆ, ಕೆಟ್ಟ ಸ್ವಭಾವ. कुत्सितं चरितम्।

**कुचर्या ಕುಚರ್ಯಾ** (स्त्री०) ಕೆಟ್ಟ ನಡತೆ, ದುಷ್ಟತನ. कुत्सिता चर्या। "द्रोहभावं कुचर्यां च स्त्रीभ्यो मनुरकल्पयत्" मनु० ९-१७।

**कुचाग्र ಕುಚಾಗ್ರ** (नं०) ಚೂಚುಕ, ಮೊಲೆಯತೊಟ್ಟು, ಮೊಲೆಯ ತುದಿ. कुचस्याग्रम्।

**कुचाङ्गेरी ಕುಚಾಂಗೇರೀ** (स्त्री०) ಹುಳಿಹಬ್ಬೆಗಿಡ. कुत्सिता चाङ्गेरी।

**कुचिक ಕುಚಿಕ** (पुंस्त्री०) 1. ಒಂದು ಜಾತಿಯ ಮೀನು. कुच (संपर्चनादौ) "इकन्" बाहु०। (पुं०ब०व०) 2. ಈಶಾನ್ಯ ದಿಕ್ಕಿನಲ್ಲಿರುವ ಒಂದು ದೇಶ. "भल्लापलोल-जटासुरकुनठखसघोषकुचिकाख्याः"।

**कुचित ಕುಚಿತ** (वि०) 1. ಪರಿಮಿತವಾದ, ಚಿಕ್ಕದಾದ, ಕೊಂಚವಾದ. कुच (संकोचने) "कितच्" (उ० ४-१८५)। 2. ಮಿಶ್ರವಾದ, ಬೆರಸಲ್ಪಟ್ಟ. कुच (संपर्चने) "क्तः" (३-२-१०२)।

**कुचेल ಕುಚೇಲ** (पुं०) 1. ಒಬ್ಬ ಬ್ರಾಹ್ಮಣ, ಸುಧಾಮ ನೆಂಬ ಹೆಸರುಳ್ಳ ಶ್ರೀಕೃಷ್ಣನ ಒಬ್ಬ ಮಿತ್ರ. कुत्सितं चेलं वस्त्रमस्य। [ಈತನು ಬಹಳ ಬಡತನದಿಂದ ಛಿಂದಿ ಬಟ್ಟೆಯನ್ನೇ ಉಡುತ್ತಿದ್ದುದರಿಂದ ಕುಚೇಲನೆಂಬ ಹೆಸರೂ ಒಂದುಂಟು. ಇವನು ಬಲರಾಮಕೃಷ್ಣರೊಡನೆ ಸಾಂದೀಪನಿಯೆಂಬ ಗುರುವಿನಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದನು. ವಿದ್ಯಾಭ್ಯಾಸ ಮುಗಿಸಿ ಗುರುಕುಲದಿಂದ ಮನೆಗೆ ಬಂದ ಕುಚೇಲನು ಮದುವೆಯಾಗಿ ಬಹುಮಂದಿ ಮಕ್ಕಳನ್ನು ಪಡೆದನು. ಮಕ್ಕಳಿಗೆ ಹೊಟ್ಟೆತುಂಬ ಆಹಾರವನ್ನು ಕೊಡಲು ಶಕ್ತಿಯಿಲ್ಲದೆ ಯಾವಾಗಲೂ ಕುಚೇಲನು ಪರಮಾತ್ಮನ ಧ್ಯಾನದಲ್ಲೇ ಆಸಕ್ತನಾಗಿದ್ದನು. ಪತಿವ್ರತಾಶಿರೋಮಣಿಯಾದ ತನ್ನ ಪತ್ನಿಯ ಒತ್ತಾಯದಿಂದ ಪರಮ ಮಿತ್ರನೂ, ಪರಮ ಕಾರುಣಿಕನೂ ಆದ ಶ್ರೀಕೃಷ್ಣನನ್ನು ಬೇಡಿ ಕುಟುಂಬಭರಣಕ್ಕೆ ಏನಾದರೂ ತರಬೇಕೆಂದು ಶ್ರೀಕೃಷ್ಣನ ಸಂದರ್ಶನಾರ್ಥವಾಗಿ ಹೊರಟು ದ್ವಾರಕೆಯನ್ನು ತಲುಪಿ ಕಷ್ಟಪಟ್ಟು ಶ್ರೀಕೃಷ್ಣನ ಅರಮನೆಯನ್ನು ಪ್ರವೇಶಿಸಿದನು. ಬಾಲ್ಯಮಿತ್ರನಾದ ಕುಚೇಲನನ್ನು ಕಂಡು ಶ್ರೀಕೃಷ್ಣನು ಪ್ರೀತಿಯಿಂದ ಸತ್ಕರಿಸಿ ಕುಶಲಪ್ರಶ್ನೆಯನ್ನು ಮಾಡಿದನು. ಕುಚೇಲನು ತನಗಾಗಿ ತಂದಿದ್ದ ಅವಲಕ್ಕಿಯನ್ನು ಪ್ರೀತಿಯಿಂದ ತಿಂದನು. ತಾನು ಅಲ್ಲಿ ಕೆಲವು ದಿನಗಳಿದ್ದು ಸುಖವಾಗಿ ಕಾಲ ತಳ್ಳಿದ ಕುಚೇಲನು ಸಂಕೋಚದಿಂದ ಏನನ್ನೂ ಕೇಳದೆ ತನ್ನ ಗ್ರಾಮಕ್ಕೆ ಹಿಂತಿರುಗಿ ಬರುವುದರೊಳಗಾಗಿ ಶ್ರೀಕೃಷ್ಣನ ಆಜ್ಞೆಯಂತೆ ವಿಶ್ವಕರ್ಮನು ಆ ಗ್ರಾಮವನ್ನು ನವರತ್ನಗಳಿಂದ ದೇದೀಪ್ಯಮಾನವಾದ ಮಹಾಸೌಧಗಳಿಂದಲೂ, ಉದ್ಯಾನವನಗಳಿಂದಲೂ ಸುಂದರ ನಗರವನ್ನಾಗಿ ಮಾರ್ಪಡಿಸಿದ್ದನು. ಕುಚೇಲನಿಗೆ ತನ್ನ ಮನೆಯ ಗುರುತೇ ಸಿಕ್ಕದೆ ಹುಡುಕಾಡುತ್ತಿದ್ದಾಗ ಆತನ ಪತ್ನಿಯು ಪೀತಾಂಬರವನ್ನುಟ್ಟು ದಿವ್ಯಾಲಂಕಾರಗಳಿಂದ ಭೂಷಿತಳಾಗಿ ಅನೇಕಮಂದಿ ದಾಸಿಯರೊಡನೆಯೂ, ದಿವ್ಯ ವಾದ್ಯಗಳೊಡನೆಯೂ ಎದುರುಗೊಂಡು ಬಂದು ತಮ್ಮ ಮನೆಗೆ ಕರೆದುಕೊಂಡು ಹೋದಳು. ಕುಚೇಲನು ಶ್ರೀಕೃಷ್ಣನ ಪರಮಾನುಗ್ರಹವನ್ನು ಕೊಂಡಾಡುತ್ತಾ ಸಕಲ ಭೋಗವಸ್ತುಗಳಿದ್ದರೂ ಅವುಗಳಲ್ಲಿ ಆಸಕ್ತಿ ತೋರಿಸದೆ ಸತೀ ಪುತ್ರರೊಡನೆ ಧರ್ಮ ಮಾರ್ಗದಲ್ಲಿದ್ದುಕೊಂಡು ಪರಮಾತ್ಮಧ್ಯಾನದಿಂದ ಸುಖವಾಗಿ ಕಾಲ ಕಳೆಯುತ್ತಿದ್ದು ಮುಕ್ತಿಯನ್ನು ಹೊಂದಿದನು.] भाग० १०-८९,९०। (नं०) 2. ಹರುಕು ಬಟ್ಟೆ, ಜೂಲು ಬಟ್ಟೆ, ಛಿಂದಿ ಬಟ್ಟೆ. (वि०) 3. ಹರುಕು ಬಟ್ಟೆಯನ್ನು ಉಟ್ಟಿರುವ. (स्त्री०) **–ला –ಲಾ.** ಅಗುರುಶುಂಠಿ.

**कुचेष्टा ಕುಚೇಷ್ಟಾ** (स्त्री०) ಕೆಟ್ಟ ವ್ಯಾಪಾರ, ನೀಚ ಕೆಲಸ.

**कुचोद्य ಕುಚೋದ್ಯ** (नं०) ಅಸಂಗತವಾದ ಪ್ರಶ್ನೆ, ಯುಕ್ತವಲ್ಲದ ಕೇಳಿಕೆ. कुत्सितं चोद्यम्।

**कुज ಕುಜ** (पुं०) 1. ಭೂಮಿಯ ಪುತ್ರನಾದ ಅಂಗಾರಕ, ಕುಜಗ್ರಹ. कोः पृथिव्या जायते—जनी (प्रादुर्भावे) "डः" (३-२-९८)। ಕುಜನಿಗೆ ಮೇಷ ಮತ್ತು ವೃಶ್ಚಿಕ ರಾಶಿಗಳು ಕ್ಷೇತ್ರ. ಮಕರ ರಾಶಿಯು ಉಚ್ಚ. ಕರ್ಕಾಟಕ ರಾಶಿಯು ನೀಚ. ರವಿ, ಚಂದ್ರ ಮತ್ತು ಗುರು ಈ ಮೂವರೂ ಮಿತ್ರರು. ಶುಕ್ರ ಮತ್ತು ಶನಿ ಇವರಿಬ್ಬರೂ ಸಮರು. ಬುಧನು ಶತ್ರು. ಕುಜನು ಪಾಪಗ್ರಹ. ಕ್ಷತ್ರಿಯ. ಮೇಷವು ಇವನ ವಾಹನ. ಇವನ ಬಣ್ಣ ಕೆಂಪು. ರಕ್ತ ಚಂದನ, ರಕ್ತ ಪುಷ್ಪ ಮತ್ತು ರಕ್ತವಸ್ತ್ರಗಳು ಇವನಿಗೆ ಪ್ರಿಯವಾದುವು. ಕುಜನು ಸಾಮವೇದಾಧಿಪತಿ. ಕುಜನು ಜನ್ಮರಾಶಿಯಿಂದ 3, 6 ಮತ್ತು 11ನೆಯ ಸ್ಥಾನಗಳಲ್ಲಿ ಶುಭಫಲವನ್ನು ಕೊಡುತ್ತಾನೆ. ಕುಜದಶೆಯ ಕಾಲ ಏಳು (7) ವರ್ಷಗಳು. [ಈ ದಶೆಯಲ್ಲಿ ಇತರ ಗ್ರಹಗಳ ಭುಕ್ತಿಯ ವಿವರಕ್ಕೆ "अङ्गारक" ಪದದಲ್ಲಿ ನೋಡಿ.] 2. ನರಕಾಸುರ [ವಿವರಕ್ಕೆ "नरक"

ಪದದಲ್ಲಿ ನೋಡಿ.] 3. ವೃಕ್ಷ, ಮರ. (स्त्री०) **–जा –ಜಾ.** 4. ಸೀತಾದೇವಿ. [ಜನಕ ಮಹಾರಾಜನು ಯಾಗ ಭೂಮಿಯನ್ನು ಉಳುತ್ತಿದ್ದಾಗ ಸೀತೆಯು ಭೂಮಿಯಲ್ಲಿ ದೊರೆತದ್ದರಿಂದ ಈ ಹೆಸರು.] 5. ಕಾತ್ಯಾಯನಿ, ದುರ್ಗಾದೇವಿ. "कुजा कात्यायनीदेव्यां कुजो नरकभौमयोः" मेदि०।

**कुजदिन ಕುಜದಿನ** (न०) ಕುಜಗ್ರಹದ ದಿನ, ಮಂಗಳವಾರ. कुजस्य दिनम्।

**कुजननी ಕುಜನನೀ** (स्त्री०) ಕೆಟ್ಟ ತಾಯಿ. कुत्सिता जननी।

**कुजन्मन् ಕುಜನ್ಮನ್** (पुं०) 1. ಭೂಮಿಯ ಪುತ್ರನಾದ ಅಂಗಾರಕ ಗ್ರಹ. कोः जन्म यस्य। (न०) 2. ಕೀಳು ಜನ್ಮ, ಕಡಮೆ ಗುಣದ ಹುಟ್ಟು. कुत्सितं जन्म। (वि०) 3. ಕೀಳು ಜನ್ಮದ. कुत्सितं जन्म यस्य।

**कुजप ಕುಜಪ** (पुं०) 1. ಕೆಟ್ಟ ಜಪ, ಕೆಟ್ಟ ಉದ್ದೇಶದಿಂದ ಮಾಡುವ ಜಪ. 2. ಕೆಟ್ಟ ಮಾತು, ಅಯೋಗ್ಯವಾದ ಮಾತು. (वि०) 3. ಕೆಟ್ಟ ಜಪವನ್ನು ಮಾಡುವ. 4. ಕೆಟ್ಟ ಮಾತನಾಡುವ.

**कुजम्भ ಕುಜಂಭ** (पुं०) 1. ಪ್ರಹ್ಲಾದನ ಒಬ್ಬ ಮಗ. "प्रह्लादस्य त्रयः पुत्राः विक्रान्ताश्च महाबलाः। विरोचनश्च जम्भश्च कुजम्भश्चेति विश्रुताः" हरिवं०। 2. ಅಂದವಿಲ್ಲದ ಹಲ್ಲು. (वि०) 3. ಅಂದವಿಲ್ಲದ ಹಲ್ಲುಗಳುಳ್ಳ. कुत्सिता जम्भा दन्ता यस्य। "जम्भो दत्यविशेषे ना दन्ते" मेदि०।

**कुजम्भल ಕುಜಂಭಲ** (पुं०) ಮನೆಗೆ ಕನ್ನ ಕೊರೆಯುವ ಕಳ್ಳ.

**कुजाष्टम ಕುಜಾಷ್ಟಮ** (पुं०) ಮುಹೂರ್ತಲಗ್ನದಿಂದ ಅಷ್ಟಮ (8ನೆಯ) ಸ್ಥಾನದಲ್ಲಿ ಕುಜನಿರುವುದರಿಂದ ಉಂಟಾಗುವ ಒಂದು ದೋಷ. ಆದರೆ ಕುಜನು ಅಷ್ಟಮದಲ್ಲಿ ಶತ್ರುಕ್ಷೇತ್ರದಲ್ಲಿದ್ದರೂ ನೀಚರಾಶಿಯಲ್ಲಿದ್ದರೂ ಅಸ್ತಂಗತನಾಗಿದ್ದರೂ ಬಲಹೀನನಾಗಿರುವುದರಿಂದ ಈ ದೋಷವಿಲ್ಲವೆಂದು ಕೆಲವರ ಮತ. ಹೀಗೆಯೇ ಭೃಗುಷಟ್ಕದೋಷವೂ. "लग्नादष्टमगः कुजो निधनकृद्धौमाष्टमाख्योऽप्ययं यद्वेवं भृगुषट्कदोष इति तल्लग्नाद्भृगुः षष्ठगः। युद्धे शत्रुजितौ रिपोर्गृहगतौ नीचस्थितौ चास्तगौ तौ द्वौ दुर्बलिनौ वदन्ति च परे दोषस्तु नास्तीत्यहो" काला० ७७। "अस्तगे नीजगे भौमे शत्रुक्षेत्रगतेऽपि च। कुजाष्टमोद्भवो दोषो न किञ्चिदपि विद्यते"।

**कुज्जिश ಕುಜ್ಜಿಶ** (पुं०) ಒಂದು ಜಾತಿಯ ಮೀನು. "कुज्जिशो मधुरो हृद्यः कषायो दीपनस्तथा। बल्यः स्निग्धो गुरुग्राही वातकृत् रोचनो मतः" राजनि०।

**कुज्झटि ಕುಜ್ಝಟಿ** (स्त्री०) ಇಬ್ಬನಿ, ಮಂಜು. "कुज्झटिर्धूममहिषी रतान्धी च कुहोलिका" त्रिकाण्ड०। वा "ङीष्" (ग० ४-१-४५)। **–टी –ಟೀ.** स्वार्थे "कः"। **–टिका –ಟಿಕಾ.** "ज्ञेया कुज्झटिका रूक्षा तमःप्राया च सा तथा। कफपित्तकरी लोके भिषग्भिः परिकीर्तिता"।

**कुञ्च-कौटिल्याल्पीभावयोः** (भ्वा० पर० सक० से०)। कुञ्चति। चुकुञ्च। कुञ्चिता। कुञ्चतु। अकुञ्चत्। कुञ्चेत्। 1. ಬಗ್ಗಿಸು, ವಕ್ರವಾಗಿ ಮಾಡು. 2. ಗುಂಗುರು ಗುಂಗುರಾಗಿ ಮಾಡು, ಸುರುಳಿ ಸುತ್ತು, ಕಿರಿದಾಗಿ ಚಿಕ್ಕದಾಗಿ ಮಾಡು.

**कुञ्चत् ಕುಂಚತ್** (वि०) 1. ಬಗ್ಗುತ್ತಿರುವ, ಡೊಂಕಾಗುತ್ತಿರುವ. कुञ्च (कौटिल्ये) "शतृ" (३-२-१२४)। 2. ಕಡಮೆಯಾಗುತ್ತಿರುವ, ಚಿಕ್ಕದಾಗುತ್ತಿರುವ, ಸಣ್ಣದಾಗುತ್ತಿರುವ. कुञ्च (अल्पीभावे) "शतृ" (३-२-१२४)। स्त्रियाम् "ङीप्" (४-१-६)। **कुञ्चन्ती ಕುಂಚಂತೀ.**

**कुञ्चन ಕುಂಚನ** (न०) 1. ಬಗ್ಗುವುದು, ಡೊಂಕಾಗುವುದು. कुञ्च (कौटिल्ये) "ल्युट्" (३-३-११५)। 2. ಚಿಕ್ಕದಾಗುವುದು, ಕಡಮೆಯಾಗುವುದು, ಸಣ್ಣದಾಗುವುದು. कुञ्च (अल्पीभावे) "ल्युट्" (३-३-११५)। "कुर्यात् सिरागतः शूलं सिराकुञ्चनपूरणम्" सुश्रुत० निदान० १-२७। 3. ಒಂದು ವಿಧವಾದ ನೇತ್ರರೋಗ. "वाताद्या वर्त्म संकोच्य जनयन्ति यदा मलम्। तदा द्रष्टुं न शक्नोति कुञ्चनं नाम तद्विदुः"।

**कुञ्चयत् ಕುಂಚಯತ್** (वि०) 1. ಬಗ್ಗಿಸುತ್ತಿರುವ, ಡೊಂಕುಮಾಡುತ್ತಿರುವ. कुञ्च (कौटिल्ये) + णिच् "शतृ" (३-२-१२४)। 2. ಕಡಮೆ ಮಾಡುತ್ತಿರುವ, ಚಿಕ್ಕದಾಗಿ ಮಾಡುತ್ತಿರುವ. कुञ्च (अल्पीभावे) + णिच् "शतृ" (३-२-१२४)। स्त्रियाम् "ङीप्" (४-१-६)। **–यन्ती –ಯಂತೀ.**

**कुञ्चा ಕುಂಚಾ** (स्त्री०) ಜೀಗದಕ್ಕೆ. कुञ्च (कौटिल्याल्पीभावयोः) "अः" (३-३-१०३)।

**कुञ्चि ಕುಂಚಿ** (पुं०) ಅಷ್ಟಮುಷ್ಟಿ, ಎಂಟು ಹಿಡಿಯ ಅಳತೆ. कुञ्च (कौटिल्याल्पीभावयोः) "इन्" (उ० ४-११७)। "अष्टमुष्टिर्भवेत् कुञ्चिः कुञ्चयोऽष्टौ च पुष्कलम्"।

**कुञ्चिका ಕುಂಚಿಕಾ** (स्त्री०) 1. ಬೀಗದಕೈ. 2. ಒಂದು ಜಾತಿಯ ಮೀನು. 3. ಗುಲಗಂಜಿ. 4. ಬಿದಿರಿನ ಚಿಗುರು. 5. ಕೆಸರಿನಲ್ಲಿರುವ ಎರೆಹುಳು. कुच (कौटिल्याल्पीभावयोः) "ण्वुल्" (३-१-१३३)। "कुञ्चिकयैनं भाययति"।

**कुञ्चित ಕುಂಚಿತ** (न०) 1. ತಗರಪುಷ್ಪ. (वि०) 2. ಬಗ್ಗಿಸಲ್ಪಟ್ಟ, ವಕ್ರವಾಗಿ ಮಾಡಲ್ಪಟ್ಟ. कुच (कौटिल्ये) "क्तः" (३-२-१०२)। "कृतार्थनश्चाटुभिरिङ्गितैः पुरा परासि यः किञ्चनकुञ्चितभ्रुवा" नैष० १६-८८। 3. ಚಿಕ್ಕದಾಗಿ ಮಾಡಲ್ಪಟ್ಟ. कुच (अल्पीभावे) "क्तः" (३-२-१०२)। "भ्रूचातुर्यात्कुञ्चिताक्षाः कटाक्षाः स्निग्धा वाचो लज्जितान्ताश्च हासाः" भर्तृ० २-३।

**कुञ्च्यमान ಕುಂಚ್ಯಮಾನ** (वि०) 1. ಬಗ್ಗಿಸಲ್ಪಡುತ್ತಿರುವ, ಡೊಂಕಾಗಿ ಮಾಡಲ್ಪಡುತ್ತಿರುವ. कुच (कौटिल्ये) कर्म० "शानच्" (३-२-१२४)। 2. ಚಿಕ್ಕದಾಗಿ ಮಾಡಲ್ಪಡುತ್ತಿರುವ, ಕಡಮೆಯಾಗಿ ಮಾಡಲ್ಪಡುತ್ತಿರುವ. कुच (अल्पीभावे) कर्म० "शानच्" (३-२-१२४)। "कुञ्च्यमानं रुजार्तं वा गात्रं स्तब्धमथापि वा" सुश्रुत० चिकित्सा० ४-१६।

**कुञ्ज ಕುಂಜ** (पुंन०) 1. ಲತೆಗಳ ಪೊದರು, ಬಳ್ಳಿಗಳಿಂದ ಆವೃತವಾದ ಸ್ಥಳ. कौ जायते—जनी (प्रादुर्भावे) "डः" (३-२-९७)। "निर्घातोग्रैः कुञ्जलीनाञ्जिघांसुः ज्यानिर्घोषैः क्षोभयामास सिंहान्" रघु० ९-६४। 2. ಆನೆಯ ದವಡೆ. 3. ಆನೆಯ ದಂತ. "कुञ्जोऽस्त्रियां निकुञ्जेऽपि हनौ दन्तेऽपि हस्तिनाम्" मेदि०। 4. ಗವಿ, ಗುಹೆ. "वृत्तं युद्धे शूरमाश्लिष्य काचित् रन्तुं तूर्णं मेरुकुञ्जं जगाम" माघ० १९-६०।

**कुञ्जकुटीर ಕುಂಜಕುಟೀರ** (पुं०) ಲತಾಗೃಹ, ಲತೆಗಳಿಂದ ನಿರ್ಮಿತವಾದ ಮನೆ. "गुञ्जत्कुञ्जकुटीरकौशिकघटाघूत्कारसंवेल्लितम्" मालती० ५-१९।

**कुञ्जर ಕುಂಜರ** (पुं०) 1. ಗಜ, ಆನೆ. कुञ्जः प्रशस्तो हनुः दन्तो वाऽस्य—कुञ्ज "रः" (वा० ५-२-१०७)। "अद्रीन्द्रकुञ्जचरकुञ्जरगण्डकाषसंक्रान्तदानपयसो वनपादपस्य" माघ० ५-४३। 2. ಕೇಶ, ಕೂದಲು. 3. ಎಂಟು ಸಂಖ್ಯೆ. "कुञ्जरोऽनेकपे केशे" मेदि०। (स्त्री०) –रा –ರಾ. 4. ಮರಾಟಮೊಗ್ಗು. 5. ಹಸುರು ಪಾದರಿ ಗಿಡ. (वि०) 6. (ಸಮಾಸದಲ್ಲಿ ಉತ್ತರಪದವಾದರೆ) ಶ್ರೇಷ್ಠವಾದ. राजकुञ्जरः, कपिकुञ्जरः।

**कुञ्जरत्व ಕುಂಜರತ್ವ** (न०) ಆನೆಯಾಗಿರುವಿಕೆ, ಗಜರೂಪವನ್ನು ತಾಳಿರುವಿಕೆ. कुञ्जरस्य भावः "त्वः" (५-१-११९)।

**कुञ्जरपिप्पली ಕುಂಜರಪಿಪ್ಪಲೀ** (स्त्री०) ಗಜ ಹಿಪ್ಪಲಿ.

**कुञ्जरा ಕುಂಜರಾ** (स्त्री०) 1. ಮರಾಟಮೊಗ್ಗು. 2. ಹಸುರು ಪಾದರಿ ಗಿಡ. 3. ಹೆಣ್ಣು ಆನೆ. अजादि० "टाप्" (४-१-४)। जाति० "ङीष्" (४-१-६३) –री –ರೀ.

**कुञ्जराराति ಕುಂಜರಾರಾತಿ** (पुं०) 1. ಶರಭಮೃಗ. 2. ಸಿಂಹ. कुञ्जरस्यारातिः।

**कुञ्जराशन ಕುಂಜರಾಶನ** (पुं०) ಅಶ್ವತ್ಥವೃಕ್ಷ, ಅರಳಿ ಮರ. कुञ्जरैरश्यते अश (भोजने) "ल्युट्" (३-३-११३) "बोधिद्रुमश्चलदलः पिप्पलः कुञ्जराशनः" अम०।

**कुञ्जरासन ಕುಂಜರಾಸನ** (न०) ಆನೆಯಂತೆ ನಿಂತು ಹಾಕುವ ಒಂದು ಆಸನ. कुञ्जरस्येवासनमत्र। "अथ वक्ष्ये महाकाल कुञ्जरासनमुत्तमम्। करद्वयेन पादाभ्यां भूमौ तिष्ठेत् शिरःकरः"।

**कुञ्जल ಕುಂಜಲ** (न०) ಗಂಜಿ, ಅಂಬಲಿ. कुत्सितं जलं यत्र। पृषो०।

**कुट—कौटिल्ये** (तुदा० पर० अक० से०)। कुटति। चुकोट। कुटिता। कुटतु। अकुटीत्। ವಕ್ರವಾಗು, ಡೊಂಕಾಗು, ಬಗ್ಗು.

**कुट ಕುಟ** (पुं०) 1. ಕೋಟೆ, ದುರ್ಗ. (पुंन०) 2. ಕೊಡ, ಬಿಂದಿಗೆ. (पुंस्त्री०) 3. ಗೃಹ, ಮನೆ. कुटति—कुट (कौटिल्ये) "कः" (३-१-१३५)। 4. ಪರ್ವತ, ಬೆಟ್ಟ. 5. ವೃಕ್ಷ, ಮರ. "अनोकहः कुटः सालः पलाशी द्रुद्रुमागमाः" अम०। 6. ಸಣ್ಣ ಕಲ್ಲುಗಳನ್ನು ಚೂರು ಮಾಡುವ ಸುತ್ತಿಗೆ, ಚಮ್ಮಟಿಗೆ. "कुटः कोटे पुमानस्त्री घटे स्त्रीपुंसयोर्गृहे" मेदि०। "कुटः कोटे शिलाकुट्टे घटे गेहे" हेम०।

**कुटक ಕುಟಕ** (पुं० ब० व०) 1. ದಕ್ಷಿಣದಲ್ಲಿರುವ ಒಂದು ದೇಶ. "चङ्क्रममाणः कोङ्कवेङ्कटकुटकान् दक्षिणकर्णाटकान् देशान् यदृच्छयोपगतः कुटकाचलोपवने" भाग० ५-६-७। 2. ಕಟಕದೇಶದ ಜನರು. (न०) 3. ಈಚು ಇಲ್ಲದ ನೇಗಿಲು, ದಂಡರಹಿತವಾದ ಲಾಂಗಲ.

**कुटकाचल ಕುಟಕಾಚಲ** (पुं०) ಕುಟಕದೇಶದ ಒಂದು ಪರ್ವತ.

**कुटङ्क ಕುಟಂಕ** (पुं०) 1. ಮನೆಯ ಛಾವಣಿ. कुः गृहभूमिः टङ्क्यते आच्छाद्यतेऽनेन—टकि (आच्छादने) कर०

"घञ्" (३-३-१२१)। 2. ಮೊಂಡಾದ (ಚೂಪಿಲ್ಲದ) ಉಳಿ. कुत्सितः टङ्कः।

**कुटङ्गक ಕುಟಂಗಕ** (पुं०) ಹುಲ್ಲುಸೊಪ್ಪು ಹೊದಿಸಿರುವ ಮನೆ. कुटस्याङ्गमिव — इवार्थे "कन्" (५-३-९६)।

**कुटज ಕುಟಜ** (पुं०) 1. ಬೆಟ್ಟಮಲ್ಲಿಗೆ ಗಿಡ. कुटे पर्वते जायते—जनी (प्रादुर्भावे) "डः" (३-२-९७)। पृषो०। 2. ಕುಂಭದಲ್ಲಿ ಹುಟ್ಟಿದ. (1) ದ್ರೋಣಾಚಾರ್ಯರು. (2) ಅಗಸ್ತ್ಯಮಹರ್ಷಿ. कुटे घटे जायते — जनी "डः" (३-२-९७)। (न०) 3. ಬೆಟ್ಟಮಲ್ಲಿಗೆ ಹೂವು. "कुटजानि वीक्ष्य शिखिभिः शिखरीन्द्रं समयावनौ घनमदभ्रमराणि" माघ० ६-७३।

**कुटजपुटपाक ಕುಟಜಪುಟಪಾಕ** (पुं०) ಅತಿಸಾರ ರೋಗವನ್ನು ವಾಸಿಮಾಡುವ ಒಂದು ಔಷಧ. "स्निग्धं घनं कुटजवल्कमजंतुजग्धमादाय तत्क्षणमतीव च पाचयित्वा। जम्बूपलाशपुटतण्डुलतोयसिक्तं बद्धं कुशेन च बहिर्घनपङ्कलिप्तम्। सुस्विन्नमेतदवपीड्य रसं गृहीत्वा क्षौद्रेण युक्तमतिसारवते प्रदद्यात्। कृष्णात्रिपुत्रमतपूजित एष योगः सर्वातिसारहरणेष्वयमेव राजा" चक्रद०।

**कुटजरस ಕುಟಜರಸ** (पुं०) ಮೂಲವ್ಯಾಧಿಯನ್ನು ಗುಣ ಪಡಿಸುವ ಒಂದು ಕಷಾಯ.

**कुटजलेह ಕುಟಜಲೇಹ** (पुं०) ಅತಿಸಾರವನ್ನು ಹೋಗಲಾಡಿಸುವ ಒಂದು ಲೇಹ್ಯ.

**कुटत् ಕುಟತ್** (पुं०) ಬಗ್ಗುತ್ತಿರುವ, ಡೊಂಕಾಗುತ್ತಿರುವ. कुट (कौटिल्ये) "शतृ" (३-२-१२४) स्त्रियां "ङीप्" **कुटन्ती ಕುಟಂತೀ.**

**कुटन ಕುಟನ** (न०) ಬಗ್ಗುವುದು, ಡೊಂಕಾಗುವುದು, ವಕ್ರವಾಗುವುದು. कुट (कौटिल्ये) भावे "ल्युट्" (३-३-११५)।

**कुटन्नट ಕುಟನ್ನಟ** (पुं०) 1. ಹೆಮ್ಮರ, ತಿಗಡೆಮರ. (न०) 2. ಒಂದು ಜಾತಿಯ ಕೊನ್ನಾರಿಗೆಡ್ಡೆ, ತುಂಗ ಮುಸ್ತೆ. कुटन् सन् नटति।

**कुटप ಕುಟಪ** (पुं०) 1. ಮುನಿ, ಋಷಿ. कुट (कौटिल्ये) "कपन्" (उ० ३-१४२)। 2. ಒಂದು ಅಳತೆಯ ಪಾತ್ರೆ, ಇಕ್ಕೊಳಗದ ಒಂದು ಅಳತೆ. 3. ಉದ್ಯಾನವನ. "अथ कुटपो मुनौ। निष्कुटे मानभेदे च" हेम०।

**कुटर ಕುಟರ** (पुं०) ಕಡಗೋಲಿನ ಹಗ್ಗವನ್ನು ಕಟ್ಟುವ ಕಂಬ, ಮೊಸರು ಕಡೆಯುವ ಕಂಬ. कुट (कौलिल्ये) "करन्" बाहु०।

**कुटरु ಕುಟರು** (पुं०) ಬಟ್ಟೆಯ ಮನೆ, ಡೇರೆ. कुट (कौटिल्ये) "अरुः" (उ० ४-८०)।

**कुटहारिका ಕುಟಹಾರಿಕಾ** (स्त्री०) ಸೇವಕಿ, ದಾಸಿ, ಹೆಣ್ಣು ಆಳು. कुटं घटं हरति जलाहरणार्थं गृह्णाति — हृञ् (हरणे) "ण्वुल्" (३-१-१३३)। "टाप्" (४-१-४)।

**कुटि ಕುಟಿ** (स्त्री०) 1. ಗೃಹ, ಮನೆ. कुटति कुटलीभवति— कुट (कौटिल्ये) "इन्" (उ० ४-११७)। वा "ङीष्" (ग० ४-१-४५)। **कुटी ಕುಟೀ.** "ब्रह्महा द्वादशसमाः कुटीं कृत्वा वने वसेत्" मनु० ११-७२। 2. ವಕ್ರವಾಗಿರುವಿಕೆ, ಬಗ್ಗಿರುವಿಕೆ. "भ्रुकुटीकुटिलात्तस्याः"। (वि०) 3. ಬಗ್ಗಿರುವ, ಡೊಂಕಾದ.

**कुटिका ಕುಟಿಕಾ** (स्त्री०) ಕ್ಷುದ್ರಗೃಹ, ಸಣ್ಣ ಮನೆ, ಗುಡಿಸಲು. कुट अल्पार्थे "कन्" (५-३-८५)।

**कुटिचर ಕುಟಿಚರ** (पुं०) 1. ನೀರುಹಂದಿ. 2. ಮೊಸಳೆ. कुटि कुटिलं चरति — चर (गतिभक्षणयोः) "टः" (३-२-१६)।

**कुटित ಕುಟಿತ** (न०) 1. ವಕ್ರವಾಗಿರುವಿಕೆ, ಡೊಂಕಾಗಿರುವಿಕೆ, ಬಗ್ಗಿರುವಿಕೆ. कुट (कौटिल्ये) भावे "क्तः" (३-३-११४)। (वि०) 2. ವಕ್ರವಾಗಿರುವ, ಡೊಂಕಾಗಿರುವ, ಬಗ್ಗಿರುವ. कुट कर्त० "क्तः" (३-४-७२)।

**कुटिर ಕುಟಿರ** (पुं०) ಸಣ್ಣ ಮನೆ, ಗುಡಿಸಲು.

**कुटिल ಕುಟಿಲ** (न०) 1. ತಗರಪುಷ್ಪ. (वि०) 2. ವಕ್ರವಾದ, ಬಗ್ಗಿರುವ, ಡೊಂಕಾಗಿರುವ. कुट (कौटिल्ये) "इलच्" (उ० १-५७)। 3. ವಂಚಕ, ಮೋಸಗಾರ. "अवमन्यत एवमध्वरस्थः कुटिलो हन्त कुमार एष कुन्त्याः" याद० १५-४२। (क्रि० वि०) 4. ಸೊಟ್ಟೆಯಾಗಿ, ವಕ್ರವಾಗಿ. "आर्ये व्रजामोऽन्यत इत्यथैनां वधूरसूयाकुटिलं ददर्श" रघु० ६-८२। (स्त्री०) —ला —ಲಾ. 5. ಸರಸ್ವತೀನದಿ. 6. ಸ್ಪೃಕ್ಕಾ ಎಂಬ ಸುಗಂಧದ್ರವ್ಯ.

**कुटिलकीटक ಕುಟಿಲಕೀಟಕ** (पुं०) ಜೇಡರಹುಳು.

**कुटिलग ಕುಟಿಲಗ** (वि०) 1. ವಕ್ರವಾಗಿ ನಡೆಯುವ, ಸೊಟ್ಟೆಯಾಗಿ ಹೋಗುವ. कुटिलं गच्छति—गम्लृ (गतौ) "डः" (वा० ३-२-४८)। स्त्रियाम् "टाप्" (४-१-४)। —गा —ಗಾ. (स्त्री०) 2. ನದಿ, ಹೊಳೆ. "णिनिः" (३-२-७८)। —गामिन् —ಗಾಮಿನ್. स्त्रियाम् "ङीप्" (४-१-५)। —गामिनी —ಗಾಮಿನೀ.

**कुटिलगति ಕುಟಿಲಗತಿ** (स्त्री०) 1. ವಕ್ರವಾದ ಗಮನ, ಸೊಟ್ಟೆಯಾಗಿ ನಡೆಯುವುದು. कुटिला गतिः। (वि०) 2. ವಕ್ರವಾದ ಗಮನವುಳ್ಳ, ವಕ್ರವಾಗಿ ನಡೆಯುವ. कुटिला गतिर्यस्य।

**कुटिलता ಕುಟಿಲತಾ** (स्त्री०) 1. ವಕ್ರವಾಗಿರುವಿಕೆ, ಡೊಂಕಾಗಿರುವಿಕೆ. कुटिलस्य भावः "तल्" (५-१-११९)। 2. ವಂಚನೆ, ಮೋಸ, ಠಕ್ಕು.

**कुटिलपक्ष्मन् ಕುಟಿಲಪಕ್ಷ್ಮನ್** (न०) ವಕ್ರವಾದ ಕಣ್ಣಿನ ರೆಪ್ಪೆಕೂದಲು. कुटिलं च तत् पक्ष्म च।

**कुटिलमति ಕುಟಿಲಮತಿ** (स्त्री०) 1. ವಕ್ರವಾದ ಬುದ್ಧಿ, ಋಜುವಲ್ಲದ ಬುದ್ಧಿ. कुटिला मतिः। (वि०) 2. ವಕ್ರವಾದ ಬುದ್ಧಿಯುಳ್ಳ, ಅಪ್ರಾಮಾಣಿಕವಾದ ಬುದ್ಧಿಯುಳ್ಳ. कुटिला मतिर्यस्य। "कौटिल्यः कुटिलमतिः स एष येन क्रोधाग्नौ प्रसभमदाहि नन्दवंशः" मुद्रा० १-७।

**कुटिलाशय ಕುಟಿಲಾಶಯ** (वि०) ಕೆಟ್ಟ ಮನಸ್ಸುಳ್ಳ, ಮೋಸದ ಬುದ್ಧಿಯುಳ್ಳ.

**कुटिलिका ಕುಟಿಲಿಕಾ** (स्त्री०) 1. ಬೇಟೆಗಾರನ ಒಂದು ವಿಧವಾದ ನಡಿಗೆ, ವ್ಯಾಧನು ಬೇಟೆಯ ಸಮಯದಲ್ಲಿ ಬಗ್ಗಿಕೊಂಡು ನಡೆಯುವುದು. 2. ಕಮ್ಮಾರನ ಕಬ್ಬಿಣದ ಇಕ್ಕಳ. कुटिलिका व्याधानां गतिविशेषः कर्मारोपकरणभूतं लोहं च। कुटिलिकया हरति मृगानङ्गारान् वा कौटिलिको व्याधः कर्मारश्च। सि० कौ०।

**कुटी ಕುಟೀ** (स्त्री०) 1. ಸಣ್ಣ ಮನೆ, ಕುಟೀರ, ಗುಡಿಸಲು. कुट (कौटिल्ये) "इन्" (उ० ४-११७)। "ङीष्" (ग० ४-१-४५)। 2. ಕುಟ್ಟಿನಿ, ತಲೆಹಿಡುಕಿ, ಕುಂಟಣಿ. 3. ಸುರೆ, ಮದ್ಯ. 4. ಪುಷ್ಪಗುಚ್ಛ, ಹೂವಿನಗೊಂಚಲು. 5. ಆವಿಯು ಮೇಲಕ್ಕೆ ಬರಲು ಅವಕಾಶವುಳ್ಳ, ರಂಧ್ರವಿರುವ ಮುಚ್ಚಳ. 6. ಮುರೆಯೆಂಬ ಸುಗಂಧದ್ರವ್ಯ. "कुटी स्यात् कुम्भदास्यां च मुरायां चित्रगुच्छके" मेदि०। "कुटी सुरा। चित्रगुच्छा कुम्भदासी" हेम०।

**कुटीकुट ಕುಟೀಕುಟ** (न०) ಗುಡಿಸಲು ಮತ್ತು ಮನೆ. कुटी च कुटश्च अनयोः समाहारः। निपा० (२-४-११)।

**कुटीकृत ಕುಟೀಕೃತ** (वि०) ವಕ್ರವಾಗಿ ಮಾಡಲ್ಪಟ್ಟ, ಬಗ್ಗಿಸಿ ಮನೆಯಾಗಿ ಮಾಡಲ್ಪಟ್ಟ (ಬಟ್ಟೆ). कुटि + डु कृञ् (करणे) "च्विः" "क्तः" (३-२-१०२)। "और्णं च राङ्कवं चैव कुटिजं पट्टजं तथा। कुटीकृतं तथैवात्र कमलाभं सहस्रशः" भा० सभा०।

**कुटीचक ಕುಟೀಚಕ** (पुं०) ನಾಲ್ಕು ವಿಧ ಸಂನ್ಯಾಸಿಗಳಲ್ಲಿ ಒಂದು ಭೇದ. कुटचां चकते – चक (तृप्तौ) "अच्" (३-१-१३४)। कुटीचकः बहूदकः हंसः ಮತ್ತು परमहंसः ಎಂದು ಸಂನ್ಯಾಸಿಗಳು ನಾಲ್ಕು ಬಗೆ. ಕಾಷಾಯ ದಂಡಧಾರಿಯಾಗಿ ಪುತ್ರನಿರ್ಮಿತವಾದ ಕುಟೀರದಲ್ಲಿದ್ದುಕೊಂಡು ಮಗನ ಅಥವಾ ಬಂಧುಗಳ ಅನ್ನದಿಂದ ಜೀವಿಸುವವನು ಕುಟೀಚಕನು. "चतुर्विधा भिक्षवस्ते कुटीचकबहूदकौ। हंसः परमहंसश्च योऽत्र पश्चात् स उत्तमः" भा० अनु०। [ವಿವರಕ್ಕೆ "एकदण्डिन्" ಪದದಲ್ಲಿ ನೋಡಿ.]

**कुटीचर ಕುಟೀಚರ** (वि०) 1. "कुटीचक" ಪದದ ಅರ್ಥ. कुटयां चरति—चर (गतिभक्षणयोः) "टः" (३-२-१६)। 2. ನಳ್ಳಿ. "वहिः कुटीचरः" त्रिकाण्ड०।

**कुटीर ಕುಟೀರ** (पुं०) ಗುಡಿಸಲು, ಸಣ್ಣ ಜೋಪಡಿ. ह्रस्वा कुटी "रः" (५-३-८८)।

**कुटुङ्गक ಕುಟುಂಗಕ** (पुं०) 1. ಲತಾಗೃಹ, ಬಳ್ಳಿಗಳಿಂದ ತಯಾರಿಸಲ್ಪಟ್ಟ ಮನೆ. 2. ಧಾನ್ಯಗಳನ್ನಿಡುವ ಬಿದಿರಿನ ತೊಂಬೆ, ಕಣಜ. 3. ಗುಡಿಸಲು, ಜೋಪಡಿ.

**कुटुम्ब-धारणे** (चुरा० आत्म० सक० से०)। कुटुम्बयते। अचुकुटुम्बत।

**कुटुम्ब ಕುಟುಂಬ** (पुंन०) 1. ಸಂಸಾರ, ಮನೆಯ ಜನರು, ತಾಯಿ ತಂದೆ ಮಕ್ಕಳು ಮುಂತಾದವರು. कुटुम्ब्यते—कुटुम्ब (धारणे) कर्म० "घञ्" (३-३-१९)। "तस्य भृत्यजनं ज्ञात्वा स्वकुटुम्बान्महीपतिः। श्रुतिशीले च विज्ञाय वृत्तिं धर्म्यां प्रकल्पयेत्" मनु० ११-२२। "तदुपहितकुटुम्बः शान्तिमार्गोत्सुकोऽभूत्" रघु० ७-७१। 2. ಬಂಧು, ನೆಂಟ. 3. ವಂಶ, ಸಂತತಿ. 4. ಹೆಸರು. 5. (ಜ್ಯೋತಿಷದಲ್ಲಿ) ಲಗ್ನದಿಂದ ಎರಡನೆಯ ಸ್ಥಾನ. स्वार्थे "कः" **कुटुम्बकम् ಕುಟುಂಬಕಮ್.** "अयं निजः परो वेति गणना लघुचेतसाम्। उदारचरितानां तु वसुधैव कुटुम्बकम्" हितो०।

**कुटुम्बव्यापृत ಕುಟುಂಬವ್ಯಾಪೃತ** (वि०) ಸಂಸಾರ ಪೋಷಣೆಯಲ್ಲಿ ನಿರತನಾದವನು. ಗೃಹಕೃತ್ಯಕ್ಕೆ ಗಮನ ಕೊಡುವವನು (ಯಜಮಾನ). कुटुम्बे तत्पोषणे व्यापृतः।

**कुटुम्बिक ಕುಟುಂಬಿಕ** (वि०) ಗೃಹಸ್ಥ, ಮನೆಯ ಯಜಮಾನ. कुटुम्बोऽस्त्यस्य "ठन्" (५-२-११५)। "इनिः" (५-२-११५)। **कुटुम्बिन् ಕುಟುಂಬಿನ್.** स्त्रियाम् "ङीप्" (४-१-५)। **कुटुम्बिनी ಕುಟುಂಬಿನೀ.** 1. ಹೆಂಡತಿ, ಪತ್ನಿ. "प्रायेण गृहिणीनेत्राः कन्यार्थेषु

कुटुम्बिनः" कुमा० ६-८५। "भवतु, कुटुम्बिनीमाहूय पृच्छामि" मुद्रा० १। 2. ಕುಟುಂಬಗಳ ಸಮೂಹ. कुटुम्बानां समूहः "इनिः" (वा० ४-२-५१)।

**कुटुम्बिता ಕುಟುಂಬಿತಾ** (स्त्री०) ಸಂಸಾರಿಯಾಗಿರುವಿಕೆ, ಗೃಹಸ್ಥನಾಗಿರುವಿಕೆ. कुटुम्बिनो भावः "तल्" (५-१-११९)। "त्वः"। **कुटुम्बित्वम् ಕುಟುಂಬಿತ್ವಮ್.**

**कुटेरक ಕುಟೇರಕ** (पुं०) ಕಮ್ಮಗಗ್ಗರಗಿಡ. "अथ पर्णासे कठिञ्जरकुटेरकौ" अम०।

**कुट्ट–च्छेदनभर्त्सनयोः** (चुरा० उभ० सक० से०)। कुट्टयति,-ते। अचुकुट्टत्,-त। 1. ಕತ್ತರಿಸು. 2. ಅರೆ, ಪುಡಿಮಾಡು. 3. ನಿಂದಿಸು, ಆಕ್ಷೇಪಿಸು.

**कुट्ट-प्रतापने** (चुरा० आत्म० सक० से०)। कुट्टयते। अचुकुट्टत। 1. ಕುಟ್ಟು, ಜಜ್ಜು, ಅದುಮಿ ಹಿಂಡು. 2. ಹೆಚ್ಚಿಸು, ಅಧಿಕಪಡಿಸು.

**कुट्टक ಕುಟ್ಟಕ** (वि०) 1. ಕತ್ತರಿಸುವವನು, ಒಡೆಯುವವನು, ತುಂಡುಮಾಡುವವನು. कुट्ट (छेदने) "ण्वुल्" (३-१-१३३)। 2. ಅರೆಯುವವನು, ಪುಡಿಮಾಡುವವನು. 3. ನಿಂದಿಸುವವನು, ಆಕ್ಷೇಪಿಸುವವನು. 4. ಹೆಚ್ಚಿಸುವವನು, ಅಧಿಕಪಡಿಸುವವನು. 5. ಕುಟ್ಟುವವನು, ಜಜ್ಜುವವನು.

**कुट्टन ಕುಟ್ಟನ** (न०) 1. ಕತ್ತರಿಸುವಿಕೆ, ಒಡೆಯುವುದು, ತುಂಡುಮಾಡುವುದು. कुट्ट (छेदनभर्त्सनयोः) "ल्युट्" (३-३-११५)। "नुनुदे तनुकण्डु पण्डितः पटुचञ्चूपुटकोटिकुट्टनैः" नैष० २-४। 2. ಅರೆಯುವುದು, ಪುಡಿಮಾಡುವುದು. "अजस्रभूमीतटकुट्टनोत्थितैरुपास्यमानं चरणेषु रेणुभिः" नैष० १-५९। 3. ಜಜ್ಜುವುದು, ಕುಟ್ಟುವುದು. 4. ನಿಂದಿಸುವುದು.

**कुट्टनी ಕುಟ್ಟನೀ** (स्त्री०) ಪರಪುರುಷನೊಡನೆ ಪರಸ್ತ್ರೀಯನ್ನು ಸೇರಿಸುವ ಹೆಂಗಸು, ತಲೆಹಿಡುಕಿ. कुट्टयति—कुट्ट (छेदने) "ल्युट्" (३-३-११३)। "ङीप्" (४-१-१५)।

**कुट्टमित ಕುಟ್ಟಮಿತ** (न०) ಸ್ತ್ರೀಯರ ಸ್ವಭಾವಜನ್ಯವಾದ ವಿಲಾಸಗಳಲ್ಲೊಂದು. "मोट्टायितं कुट्टमितं विभ्रमो ललितं मदः" सा० द० ३-९१। "केशस्तनाधरादीनां ग्रहे हर्षेऽपि संभ्रमात्। आहुः कुट्टमितं नाम शिरःकरविधूननम्" सा० द० ३-१०३।

**कुट्टाक ಕುಟ್ಟಾಕ** (वि०) 1. ಕತ್ತರಿಸುವ, ಒಡೆಯುವ, ಬೇರ್ಪಡಿಸುವ. 2. ಕುಟ್ಟುವ, ಜಜ್ಜುವ. कुट्ट (छेदने) "षाकन्" (३-२-१५५)। "पट्टाभिषेकमभिलष्यति फालदेशे कुट्टाकभावकुतुकं कुरुते स्म भीमः" चं० भा० १। स्त्रियाम् "ङीष्" (४-१-४१)। **-की -ಕೀ.**

**कुट्टार ಕುಟ್ಟಾರ** (पुं०) 1. ಪರ್ವತ, ಬೆಟ್ಟ. कुट्ट (छेदने) "आरन्" बाहु०। (न०) 2. ಸುರತ, ಸಂಭೋಗ. 3. ಕಂಬಳಿ. 4. ಕೇವಲ, ಪ್ರತ್ಯೇಕವಾಗಿರುವಿಕೆ, ಇನ್ನೊಂದರೊಡನೆ ಬೆರೆಯದಿರುವಿಕೆ. "जीमूतकुटकुट्टीरकुट्टाराः कन्दराकरः" हारा०। "कुट्टारं केवले रते" मेदि०।

**कुट्टित ಕುಟ್ಟಿತ** (न०) 1. ಕತ್ತರಿಸುವುದು, ಒಡೆಯುವುದು. 2. ಕುಟ್ಟುವುದು, ಜಜ್ಜುವುದು. 3. ಅರೆಯುವುದು, ಪುಡಿಮಾಡುವುದು. 4. ನಿಂದೆ, ಆಕ್ಷೇಪಣೆ. कुट्ट (छेदने) भावे "क्तः" (३-३-११४)। (वि०) 5. ಕತ್ತರಿಸಲ್ಪಟ್ಟ, ಒಡೆಯಲ್ಪಟ್ಟ. 6. ಅರೆಯಲ್ಪಟ್ಟ, ಪುಡಿಮಾಡಲ್ಪಟ್ಟ. 7. ನಿಂದಿಸಲ್ಪಟ್ಟ, ಆಕ್ಷೇಪಿಸಲ್ಪಟ್ಟ. कुट्ट कर्म० "क्तः" (३-२-१०२)। 8. ಕುಟ್ಟಲ್ಪಟ್ಟ, ಜಜ್ಜಲ್ಪಟ್ಟ.

**कुट्टिम ಕುಟ್ಟಿಮ** (पुंन०) 1. ಸಣ್ಣ ಚಪ್ಪಡಿಗಳನ್ನು ಹಾಸಿ ನಿರ್ಮಿಸಲ್ಪಟ್ಟ ಭೂಮಿ. 2. ರತ್ನಖಚಿತವಾದ ಭೂಮಿ. कुट्ट (छेदने) भावे "घञ्" (३-३-१८)। कुट्टेन निर्वृत्तम् "इमप्" (वा० ४-२-२०)। 3. ಗಾರೆ ಹಾಕಿದ ನೆಲ, ಜಗುಲಿ. "कान्तेन्दुकान्तोपलकुट्टिमेषु प्रतिक्षपं हर्म्यतलेषु यत्र" माघ० ३-४४। "यदगारघटाट्टकुट्टिमस्रवदिन्दूपलतुन्दिलापया" नैष० २-८९।

**कुट्टीर ಕುಟ್ಟೀರ** (पुं०) 1. ಪರ್ವತ, ಬೆಟ್ಟ. कुट्ट (छेदने) "ईरन्" बाहु०। "जीमूतकुटकुट्टीरकुट्टाराः कन्दराकरः" हारा०। (वि०) 2. ಕತ್ತರಿಸುವ, ಒಡೆಯುವ, ತುಂಡುಮಾಡುವ.

**कुड्म(ड्म)ल ಕುಟ್ಮ(ಡ್ಮ)ಲ** (पुंन०) 1. ಮೊಗ್ಗು. कुट (कौटिल्ये) "कलः" मुट्च (उ० गण० १-१०६)। कुडि (दाहे) "क्मलन्" (उ० ४-१८६) वा। "द्योतितान्तःसभैः कुन्दकुड्मलाग्रदतः स्मितैः" माघ० २-७। (न०) 2. ಒಂದು ನರಕ. "संघातं च सकाकोलं कुड्मलं प्रतिमूर्तिकम्" मनु० ४-८९। 3. ಮೊಗ್ಗಿನಂತಿರುವ ಬಾಣದ ತುದಿ. "कुड्मलश्चाभवद्विष्णुस्तस्मिन्निपुवरे तदा" भा० कर्ण० ३४-१९।

**कुठ-छेदने** (सौत्रः पर० सक० से०) कोठति। चुकोठ। अकोठीत्। ಇತ್ಯಾದಿ.

**कुठ ಕುಠ** (पुं०) ವೃಕ್ಷ, ಮರ. कुठ (छेदने) कर्म० घञर्थे "कः" (वा० ३-३-५८)।

**कुठर ಕುಠರ** (पुं०) ಮೊಸರು ಕಡೆಯುವ ಕಂಬ, ಮೊಸರು ಕಡೆಯುವ ಮಗ್ಗ ಕಟ್ಟುವ ಕಂಬ. कुठ (छेदने) "करन्" बाहु०।

**कुठाकु ಕುಠಾಕು** (पुं०) ಮರಕುಟಿಗನ ಹಕ್ಕಿ. कुठ (छेदने) "काकुः" बाहु०।

**कुठाटङ्क ಕುಠಾಟಂಕ** (पुं०) ಕುಠಾರ, ಕೊಡಲಿ. कुठारस्य टङ्कः। पृषो०।

**कुठार ಕುಠಾರ** (पुं०) 1. ಪರಶು, ಕೊಡಲಿ. कुठं वृक्षं ऋच्छति – ऋ (गतौ) "अण्" (३-२-१)। "राजन्योच्चांसकूटक्रथनपटुरटद्घोरधारः कुठारः" प्रबोध० १-७। 2. ಗುದ್ದಲಿ, ಮಣ್ಣನ್ನು ಅಗೆಯುವ ಒಂದು ಆಯುಧ. 3. ವೃಕ್ಷ, ಮರ. कुठ्यते छिद्यते – कुठ कर्म० "आरन्"।

**कुठारक ಕುಠಾರಕ** (पुं०) ಸಣ್ಣ ಕೊಡಲಿ, ಕೈ ಕೊಡಲಿ. कुठार अल्पार्थे "कन्"।

**कुठारिका ಕುಠಾರಿಕಾ** (स्त्री०) ಸಣ್ಣ ಕೊಡಲಿ, ಕೈಕೊಡಲಿ. "विपुलविलसल्लज्जावल्लीवितानकुठारिका जठरपिठरी दुष्पूरेयं करोति विडम्बनम्" भर्तृ० ३-२२।

**कुठारु ಕುಠಾರು** (पुं०) 1. ವೃಕ್ಷ, ಮರ. कुठ (छेदने) "आरुः" बाहु०। 2. ವಾನರ, ಕಪಿ, ಕೋತಿ. "कुठारुर्ना द्रुमे कीशे" मेदि०।

**कुठि-प्रतिघाते** (भ्वा० पर० अक० से०) कुण्ठति। अकुण्ठीत् ಇತ್ಯಾದಿ.

**कुठि ಕುಠಿ** (पुं०) 1. ಪರ್ವತ, ಬೆಟ್ಟ. 2. ವೃಕ್ಷ, ಮರ. कुठि (प्रतिघाते) "इन्" (उ० ४-११७)।

**कुठिक ಕುಠಿಕ** (पुं०) ಕುಷ್ಠರೋಗ. कुठ (छेदने) "इकन्" बाहु०। "मृत्फली कुठिकः प्रोक्तः" हारा०।

**कुठेर ಕುಠೇರ** (पुं०) 1. ಕಮ್ಮಗಗ್ಗರ ಗಿಡ. 2. ವಹ್ನಿ, ಬೆಂಕಿ. कुठि (प्रतिघाते) "एरक्" (उ० १-५८)। (वि०) 3. ಕಷ್ಟಜೀವಿ. 4. ಎಲೆಗಳನ್ನು ತಿನ್ನುವವನು.

**कुठेरु ಕುಠೇರು** (पुं०) ಚಾಮರದ ಗಾಳಿ. कुठि (प्रतिघाते) "एरुः" बाहु०।

**कुड-बाल्ये** (तुदा० पर० अक० से०)। कुडति। चुकोड। कुडतु। अकुडीत्। ಹುಡುಗನಂತೆ ಆಡು, ಹುಡುಗಾಟ ಮಾಡು.

**कुडि-दाहे** (भ्वा० आत्म० सक० से०)। कुण्डते। चुकुण्डे। अकुण्डिष्ट। ದಹಿಸು, ಸುಡು.

**कुडि-रक्षणे** (चुरा० उभ० सक० से०)। कुण्डयति, –ते। अचुकुण्डत्, –त। ರಕ್ಷಿಸು, ಕಾಪಾಡು.

**कुडप(व) ಕುಡಪ(ವ)** (पुं०) ಪ್ರಸ್ಥದ (ಅಚ್ಚೇರಿನ) ನಾಲ್ಕನೆಯ ಒಂದು ಭಾಗದ ಅಳತೆ. कुडि (दाहे) "कपन्" "कवच्" वा बाहु०। "द्रोणस्तु खार्याः खलु षोडशांशः स्यादाढको द्रोणचतुर्थभागः। प्रस्थश्चतुर्थांश इहाढकस्य प्रस्थाङ्घ्रिराद्यैः कुडवः प्रदिष्टः"।

**कुडि ಕುಡಿ** (पुं०) ದೇಹ, ಶರೀರ, ಮೈ. कुण्डयते–कुडि (दाहे) "इन्" नलोपश्च (उ० ४-१४३)।

**कुड्मल ಕುಡ್ಮಲ** (पुंन०) "कुट्मल" ಪದದಲ್ಲಿ ನೋಡಿ.

**कुड्मलन ಕುಡ್ಮಲನ** (न०) ಸಂಕೋಚಹೊಂದಿರುವಿಕೆ, ಮೊಗ್ಗಾಗಿರುವಿಕೆ. "जगदतुर्निहिते हृदि नीरजे दवथु-कुड्मलनेन पृथुस्तनीम्" नैष० ४-३०।

**कुड्मलित ಕುಡ್ಮಲಿತ** (वि०) ಮೊಗ್ಗು ಬಿಟ್ಟಿರುವ. कुड्मलोऽस्य सञ्जातः "इतच्" (५-२-३६)।

**कुड्य ಕುಡ್ಯ** (न०) ಗೋಡೆ. कुटयां साधु "यत्" (४-४-९८)। पृषो०। "तदलक्ष्यरत्नमयकुड्यमादरादभि-धातरीत इत इत्यथो नृपे" माघ० १३-६२।

**कुड्यच्छेदक ಕುಡ್ಯಚ್ಛೇದಕ** (वि०) ಗೋಡೆಯಲ್ಲಿ ಕನ್ನ ಕೊರೆಯುವ ಕಳ್ಳ. कुड्यं छिनत्ति–छिदिर् (द्वैधीकरणे) "ण्वुल्" (३-१-१३३)। "णिनिः" (३-२-७८)। –छेदिन् –ಛೇದಿನ್.

**कुड्यच्छेदन ಕುಡ್ಯಚ್ಛೇದನ** (वि०) ಗೋಡೆಯಲ್ಲಿ ಕನ್ನ ಕೊರೆಯುವುದು. कुड्यस्य छेदनम्।

**कुड्यच्छेद्य ಕುಡ್ಯಚ್ಛೇದ್ಯ** (न०) 1. ಕನ್ನಗತ್ತರಿ, ಕನ್ನ ಕೊರೆಯತಕ್ಕ ಕತ್ತರಿ. कुड्यं छेद्यं यस्य। "कुड्यच्छेद्यं तु खानिकम्" त्रिकाण्ड०। 2. ಗೋಡೆಯ ಅಡಿಪಾಯಕ್ಕಾಗಿ ತೋಡುವ ಹಳ್ಳ. कुड्यस्य छेद्यम्।

**कुड्यमत्स्य ಕುಡ್ಯಮತ್ಸ್ಯ** (पुं०) ಹಲ್ಲಿ, ಗೌಳಿ. कुड्ये मत्स्य इव। स्त्रियाम् जाति० "ङीष्" (४-१-६३)। –मत्सी –ಮತ್ಸೀ.

**कुण-आमन्त्रणे** (चुरा० उभ० अक० से०)। कुणयति, –ते। अचुकुणत्, –त। 1. ಸಂಬೋಧಿಸು, ಕರೆ. 2. ಮಾತಾಡು, ಸಂಭಾಷಿಸು.

**कुण-शब्दोपकरणयोः** (तुदा० पर० सक० से०)। कुणति। कोणिता। अकोणीत्। 1. ಸದ್ದು ಮಾಡು. 2. ಸಾಹಾಯ್ಯ ಮಾಡು, ಒತ್ತಾಸೆ ಮಾಡು, ಉಪಕರಿಸು.

**कुण ಕುಣ** (पुं०) 1. ವಾಯಸ, ಕಾಗೆ. "आत्मघोषो महानेमिः कण्टको मौकलिः कुणः" वैज०। 2. ಕೂರೆ, ಹೇನು, ಬಟ್ಟೆಯ ಮೇಲೆ ಬರುವ ಒಂದು ಜಾತಿಯ ಕ್ರಿಮಿ. ಇದು ಉತ್ತರಪದವಾದಾಗ ವೃಕ್ಷವು ಪುಷ್ಪಿಸುವ ಮತ್ತು ಫಲಬಿಡುವ ಕಾಲವನ್ನು ಹೇಳುವುದು. पीलूनां पाकः "कुणप्" (५-२-२४)। पीलुकुणः।

**कुणक ಕುಣಕ** (पुं०) ಆಗತಾನೆ ಹುಟ್ಟಿದ ಮರಿ, ಸದ್ಯಃ ಜನಿಸಿದ ಶಿಶು. कुण्यते उपक्रियते — कुण (शब्दोपकरणयोः) कर्म० घञर्थे "कः" (वा० ३-३-५८)। "अहो बतायं हरिणकुणकः कृपणः ईश्वररथचरणपरिभ्रमणरयेण" भाग० ५-८-९।

**कुणञ्ज ಕುಣಂಜ** (पुं०) ಚಕ್ಕೋತದ ಸೊಪ್ಪು. कुणं जरयति — जॄ (वयोहानौ) "डः" बाहु०। पृषो०।

**कुणप ಕುಣಪ** (पुं०) 1. ಮೃತದೇಹ, ಜೀವವಿಲ್ಲದ ದೇಹ, ಶವ. क्वणति — क्वण (शब्दे) "कपन्" संप्रसारणं च (उ० ३-१४३)। 2. ದುರ್ಗಂಧ, ಕೆಟ್ಟವಾಸನೆ. 3. ಈಟಿ, ಭರ್ಜಿ. (स्त्री०) 4. **-पी -ಪೀ.** ಒಂದು ಜಾತಿಯ ಹಕ್ಕಿ. (विट्शारिका)। "कुणपी पुनः। विट्शारिकायां कुणपः पूतिगन्धे शवेऽपि च" मेदि०।

**कुणाल ಕುಣಾಲ** (पुं०) 1. ಅಶೋಕ ಚಕ್ರವರ್ತಿಯ ಒಬ್ಬ ಮಗ. 2. ಒಂದು ದೇಶ. क्वण (शब्दे) "कालन्" (उ० ३-७६)। कुणालो देशभेदः सि० कौ०।

**कुणि ಕುಣಿ** (पुं०) 1. ನಂದಿಮರ. (वि०) 2. ವಿಕಲವಾದ ಕೈಯುಳ್ಳವನು, ಮೊಂಡುಕೈಯುಳ್ಳವನು. कुण्यते — कुण (शब्दोपकरणयोः) "इन्" (उ० ४-११९)। "कुणिस्तुन्नकवृक्षे ना कुकरेत्वभिधेयवत्" मेदि०। ಗರ್ಭಿಣಿಯಾಗಿರುವಾಗ ಹೆಂಗಸರು ಅಪೇಕ್ಷಿಸಿದುದನ್ನು ಕೊಡದಿದ್ದರೆ ಆ ಗರ್ಭದ ಬೆಳವಣಿಗೆಯಲ್ಲಿ ಕೊರತೆಯುಂಟಾಗಿ ಹುಟ್ಟುವ ಶಿಶುವು ಕುಂಟು ಕುರುಡು ಕಿವುಡು ಕುಳ್ಳು ಮುಂತಾದ ದೋಷಗಳಿಂದ ಕೂಡಿರುವುವು. "दौहृदविमाननात् कुब्जं कुणिं खञ्जं जडं वामनं विकृताक्षमनक्षं वा नारी सुतं जनयति" सुश्रुत० शारीर० ३-१८।

**कुणिता ಕುಣಿತಾ** (स्त्री०) ಕೈಯಿಂದ ತೆಗೆದುಕೊಳ್ಳುವ ಮತ್ತು ಕೊಡುವ ಶಕ್ತಿಯಿಲ್ಲದಿರುವಿಕೆ, ಮೊಂಡುಕೈಯಿಂದ ಕೂಡಿರುವಿಕೆ. कुणेर्भावः "तल्" (५-१-११९)। "त्वः" (५-१-११९)। **-त्वम् -ತ್ವಮ್.**

**कुणिन्द ಕುಣಿಂದ** (पुं०) ಶಬ್ದ, ಸದ್ದು. कुण (शब्दोपकरणयोः) भावे "किन्दच्" (उ० ४-८६)।

**कुणपदी ಕುಣಪದೀ** (स्त्री०) ಕುಂಟು ಹೆಂಗಸು, ನಡೆಯಲು ಶಕ್ತಿಯಿಲ್ಲದ ಹೆಂಗಸು. कुणिरिव कुण्ठितशक्तिः पादोऽस्याः — पादस्य पद्भावः "ङीष्" च (५-४-१३९)। निपा०।

**कुण्ठ ಕುಂಠ** (वि०) 1. ಶಕ್ತಿಕುಂದಿದ, ಕೆಲಸದಲ್ಲಿ ಅಸಮರ್ಥನಾದ. कुठि (प्रतिघाते) "अच्" (३-१-१३४)। "वज्रं तपोवीर्यमहत्सु कुण्ठं त्वं सर्वतोगामि च साधकं च" कुमा० ३-१२। 2. ಮೊಂಡಾಗಿರುವ, ಹರಿತವಾಗಿಲ್ಲದ. "मूर्धानमूर्ध्वायतदन्तमण्डलं धुवन्नरोधि द्विरदो निषादिना" माघ० १२-१२। 3. ಮೂರ್ಖ, ದಡ್ಡ. "कुण्ठोऽकर्मण्यमूर्खयोः" मेदि०।

**कुण्ठक ಕುಂಠಕ** (वि०) 1. ಮೂರ್ಖ, ದಡ್ಡ, ಅವಿವೇಕಿ. 2. ಸೋಮಾರಿ, ಪಾಲುಮಾರಿಕೆಯುಳ್ಳವನು, ಮೈಗಳ್ಳ. 3. ಶಕ್ತಿಕುಂದಿದ, ಕೆಲಸದಲ್ಲಿ ಅಸಮರ್ಥನಾದ. (पुं०ब०व०) 4. ಮೂರ್ಖರಿಂದ ತುಂಬಿದ ದೇಶ.

**कुण्ठित ಕುಂಠಿತ** (वि०) 1. ಶಕ್ತಿಕುಂದಿದ, ಕೆಲಸಕ್ಕೆ ಅಸಮರ್ಥವಾದ. कुठि (प्रतिघाते) कर्त० "क्तः" (३-४-७२)। "तदङ्गभोगावलिगायनीनां मध्ये निरुक्तिक्रमकुण्ठितानाम्" नैष० १०-१०६। 2. ದಡ್ಡನಾದ, ವಿವೇಕಶೂನ್ಯನಾದ. 3. ಮೊಂಡಾದ, ಹರಿತವಾಗಿಲ್ಲದ. "वृत्रस्य हन्तुः कुलिशं कुण्ठिताश्रीव दृश्यते" कुमा० २-२०। "बिभ्रतोऽस्त्रमचलेऽप्यकुण्ठितम्" रघु० ११-७४।

**कुण्ठितता ಕುಂಠಿತತಾ** (स्त्री०) 1. ಶಕ್ತಿಕುಂದಿರುವಿಕೆ, ಕೆಲಸಕ್ಕೆ ಅಸಮರ್ಥವಾಗಿರುವಿಕೆ. 2. ದಡ್ಡನಾಗಿರುವಿಕೆ. कुण्ठितस्य भावः "तल्" (५-१-११९)। "त्वः" **कुण्ठितत्वम् ಕುಂಠಿತತ್ವಮ್.**

**कुण्ड ಕುಂಡ** (पुं०) 1. ಪತಿಯು ಜೀವಿಸಿರುವಾಗ ಪರಪುರುಷನಿಗೆ ಹುಟ್ಟಿದವನು. कुण्डयते कुलमनेन — कुडि (दाहे) "घञ्" (३-३-१९)। "परदारेषु जायेते द्वौ सुतौ कुण्डगोलकौ। पत्यौ जीवति कुण्डः स्यान्मृते भर्तरि गोलकः" मनु० ३-१७४। 2. ಅಗ್ನಿಕುಂಡ, ಭೂಮಿಯಲ್ಲಿ ಅಗ್ನಿಯನ್ನಿಟ್ಟು ರಕ್ಷಿಸುವ ಒಂದು ಗುಳಿ. "चण्डीशचण्डाक्षिहुताशकुण्डे जुहाव यन्मन्दिरमिन्द्रियाणाम्" नैष० ८-३३। 3. ನೀರನ್ನು ತುಂಬಿಡುವ ಪಾತ್ರೆ, ಕೊಡ, ಬಿಂದಿಗೆ, ಗಡಿಗೆ. "भुवं कोष्णेन कुण्डोध्नी मेध्येनावभृथादपि" रघु० १-८४। 4. ದೇವತೆಗಳಿಂದ ನಿರ್ಮಿತವಾದ ಜಲಾಶಯ. (स्त्री०) **कुण्डी ಕುಂಡೀ.** ಕಮಂಡಲು. कुण (शब्दोपकरणयोः) "डः" (उ० १-१११) "ङीष्" (४-१-४२)।

"कुण्डं देवजलाधारे पिठरेऽथ कमण्डलौ। कुण्डी कुण्डः स्मृतो जारात् पतिवत्नी सुतेऽपि च" विश्व०।

**कुण्डक ಕುಂಡಕ** (पुं०) 1. ಧೃತರಾಷ್ಟ್ರನ ಒಬ್ಬ ಮಗ. "कुण्डकश्चित्रसेनश्च सुवर्चाः कनकध्वजः" भा० आदि० २०१-३। 2. "कुण्ड" ಪದದ ಅರ್ಥ. कुण्ड स्वार्थे "कः"।

**कुण्डकीट ಕುಂಡಕೀಟ** (पुं०) 1. ಪತಿತಳಾದ ಬ್ರಾಹ್ಮಣ ಹೆಂಗಸಿನ ಮಗ. कुण्डे योनिकुण्डे कीट इव। 2. ದಾಸಿಯಲ್ಲಿ ಅನುರಾಗಹೊಂದಿದವನು, ಉಪಪತ್ನಿಯನ್ನು ಹೊಂದಿರುವವನು. 3. ಚಾರ್ವಾಕವಾದದಲ್ಲಿ ಅಭಿಜ್ಞನಾದವನು. "कुण्डकीटस्तु चार्वाकवचनाभिज्ञपूरुषे" मेदि०।

**कुण्डगोलक ಕುಂಡಗೋಳಕ** (पुं० द्विव०) 1. ಕುಂಡ ಮತ್ತು ಗೋಳಕ. कुण्डश्च गोलकश्च। "शूद्रशिष्यो गुरुश्चैव वाग्दुष्टः कुण्डगोलकौ" मनु० ३-१५६। (न०) 2. ಅಂಬಲಿ, ಗಂಜಿ. कुण्डे गोलं गोलाकारं कं जलमत्र।

**कुण्डज ಕುಂಡಜ** (पुं०) ಧೃತರಾಷ್ಟ್ರನ ಒಬ್ಬ ಮಗ. "कुण्डजश्चित्रकश्चैव दुःशला च शताधिका" भा० आदि० ६७-१०५।

**कुण्डपाय्य ಕುಂಡಪಾಯ್ಯ** (पुं०) ಮೃತ್ಪಾತ್ರದಲ್ಲಿ ಸೋಮಪಾನ ಮಾಡುವ ಒಂದು ಯಾಗ. कुण्डेन पीयतेऽस्मिन् सोमः "ण्यत्" (३-१-१३०)। निपा०। "कुण्डपाय्यवतां कच्चिदग्निचित्यावतां तथा" भट्टि० ६-६७।

**कुण्डभेदिन् ಕುಂಡಭೇದಿನ್** (पुं०) ಧೃತರಾಷ್ಟ್ರನ ಒಬ್ಬ ಮಗ. "अनाधृष्यः कुण्डभेदी विरावी दीर्घलोचनः" भा०आदि० ६७।

**कुण्डल ಕುಂಡಲ** (न०) 1. ಕರ್ಣಾಭರಣ, ಕಿವಿಯ ಒಡವೆ, ಹತ್ತಕಡಕು. कुण्डयते — कुडि (रक्षायाम्) "कलः" (उ० १-१०६)। "महार्हवैडूर्यकिरीटकुण्डलत्विषा परिष्वक्तसहस्रकुन्तलम्। उद्दामकाञ्च्यङ्गदकङ्कणादिभिर्विरोचमानं वसुदेव ऐक्षत" भाग० १०-३-१०। 2. ವಲಯ, ಬಳೆ, ಕಡಗ. "अनुययौ विविधोपलकुण्डलद्युतिवितानकसंवलितांशुकम्" माघ० ६-२७। 3. ಹಗ್ಗ, ರಜ್ಜು. 4. ಸುರುಳಿ. "कुण्डलं वलये पाशे ताटङ्के" मेदि०।

**कुण्डलन ಕುಂಡಲನ** (न०) ಸುರುಳಿಸುತ್ತುವಿಕೆ, ಗುಂಡಾಗಿ ಸುತ್ತುವಿಕೆ. कुण्डलं करोति — तत्करोति० "णिच्" (ग० ७-४-९७)। भावे "ल्युट्" (३-३-११५)। "युक्तं ह्रिया कुण्डलनच्छलेन गोपायति स्वं मुखपुष्करं सः" नैष० ७-९५।

**कुण्डलना ಕುಂಡಲನಾ** (स्त्री०) ಸುರುಳಿ ಸುತ್ತುವುದು, ಗುಂಡಾಗಿ ಸೊನ್ನೆ ಸುತ್ತುವುದು. कुण्डलं वेष्टनं करोति— कुण्डल+तत्करोति "णिच्" "युच्" (३-३-१०७)। "फणिभाषितभाष्यफक्किकाविषमा कुण्डलनामवापिता" नैष० २-९५। "तनोति भानोः परिवेषकैतवात्तदा विधिः कुण्डलनां विधोरपि" नैष० १-१४।

**कुण्डलिका ಕುಂಡಲಿಕಾ** (स्त्री०) ಪ್ರಾಕೃತದ ಒಂದು ಛಂದಸ್ಸು.

**कुण्डलित ಕುಂಡಲಿತ** (वि०) ಗುಂಡಾಗಿ ಸುತ್ತಲ್ಪಟ್ಟ, ಸುರುಳಿಯಾಗಿ ಮಾಡಲ್ಪಟ್ಟ. कुण्डल+तत्करोति "णिच्" "क्तः" (३-२-१०२)। "आवर्तशैलीमभिनेतुमिच्छन्त्यङ्गैरमी कुण्डलितैर्भुजङ्गाः" याद० १८-९६।

**कुण्डलिन् ಕುಂಡಲಿನ್** (पुं०)1. ಸರ್ಪ, ಹಾವು. कुण्डलं वेष्टनमस्त्यस्य "इनिः" (५-२-११५)। 2. ವರುಣ. 3. ಮಯೂರ, ನವಿಲು. (वि०) 4. ಕುಂಡಲವನ್ನು ಧರಿಸಿರುವ. कुण्डलं कर्णाभरणं अस्त्यस्य "इनिः" (५-२-११५)। "कुण्डली वरुणे केकिभोगिनोश्च सकुण्डले" मेदि०। 5. ಸೊನ್ನೆ ಸುತ್ತಿರುವ, ಸುರುಳಿ ಸುತ್ತಿರುವ. स्त्रियाम् "ङीप्" (४-१-५)। **-लिनी -ಲಿನೀ.**

**कुण्डलिनी ಕುಂಡಲಿನೀ** (स्त्री०) ಯೋಗಶಾಸ್ತ್ರದಲ್ಲಿ ಸರ್ಪವಾಗಿ ರೂಪಿಸಲ್ಪಟ್ಟಿರುವ ಪ್ರಕೃತಿ ಶಕ್ತಿ. "अष्टप्रकृतिरूपा कुण्डलिनी"। ಇದು ಹೆಂಗಸರಿಗೆ ಅತಿಶಯವಾಗಿಯೂ, ಗಂಡಸರಿಗೂ ನಪುಂಸಕರಿಗೂ ಸಮವಾಗಿಯೂ ಇರುತ್ತದೆ. ಸಾಮಾನ್ಯವಾಗಿ ಮೂಲಾಧಾರಧಾಮದಲ್ಲಿ ಸುಷುಮ್ನಾ ರಂಧ್ರವನ್ನು ನಿರೋಧಿಸುತ್ತ ನಿದ್ರಿಸುತ್ತಿರುತ್ತದೆ. ಆಹಾರವು ಜೀರ್ಣವಾಗುವುದಕ್ಕೂ ಸೃಷ್ಟಿಕಾರ್ಯವು ಮುಂದುವರೆಯುವುದಕ್ಕೂ ಸಹಾಯಕವಾಗಿದೆ. ಆದರೆ ಇದು ಯೋಗಿಗಳಿಗೆ ಜಾಗರಿತವಾಗುತ್ತದೆ. ಬ್ರಹ್ಮಮಾರ್ಗದಲ್ಲಿ ಯಾತ್ರೆ ಆರಂಭವಾದಾಗ ಇದು ಎಚ್ಚರಗೊಂಡು ತಾನು ನಿರೋಧಿಸಿರುವ ರಂಧ್ರವನ್ನು ತೆರೆಯುತ್ತದೆ. ಮತ್ತು ಫಣೆಯನ್ನು ಬಿಚ್ಚಿದ ಹಾವಿನಂತೆ ಊರ್ಧ್ವಮುಖವಾಗುತ್ತದೆ. ಇದು ಹೀಗೆ ಆರೋಹಣ ಮಾಡಿದಂತೆಲ್ಲಾ ಜ್ಞಾನಿಗಳಿಗೆ ಅಂತಃಪ್ರಪಂಚದ ಅನುಭವವು ಆಗುವುದು. ನಾರಾಯಣ ಶಿವ ಗಣೇಶ ಮುಂತಾದ ದೇವತಾಮೂರ್ತಿ

ಗಳಲ್ಲಿ ಕಾಣುವ ಸರ್ಪವು ಈ ಪ್ರಬುದ್ಧವಾದ ಕುಂಡಲಿನಿಯೇ ಆಗಿದೆ. ಸಮಾಧಿಯೋಗದಲ್ಲಿ ಜ್ಞಾನಿಗಳಿಗೆ ಬ್ರಹ್ಮಾನಂದಾಮೃತವನ್ನು ಪಾನಮಾಡಿಸಿ ಅವರು ಜಾಗ್ರದವಸ್ಥೆಗೆ ಹಿಂತಿರುಗಿದಾಗ ಪುನಃ ಮೂಲಾಧಾರಕ್ಕೆ ಬಂದು ಸೇರುತ್ತದೆ. "सम्भाव्य स्वगृहं गतां पुनरिमां संचिन्तयेत् कुण्डलीम्"। ಯೋಗಮಾರ್ಗಗಳಲ್ಲಿ ಕುಂಡಲಿನೀಯೋಗವೆಂಬ ಪ್ರತ್ಯೇಕವಾದ ಪಥವೂ ಉಂಟು. ಆದರೆ ಕುಂಡಲಿನೀ ಪ್ರಬೋಧ ಮತ್ತು ಪ್ರಸನ್ನತೆಯುಂಟಾಗದ ಯಾವ ಯೋಗದಿಂದಲೂ ಜ್ಞಾನವು ಸಿದ್ಧಿಸುವುದಿಲ್ಲ. ಲೋಕದಲ್ಲಿರುವ ಸರ್ಪಗಳಲ್ಲಿಯೂ ಈ ಕುಂಡಲಿನೀ ಶಕ್ತಿಯ ಅಂಶವಿರುವುದು. ಆದುದರಿಂದಲೇ ಅದರ ಪ್ರಕೋಪವಾಗದಿರಲೆಂದು ಸರ್ಪಗಳನ್ನು ಸಾಮಾನ್ಯವಾಗಿ ಕೊಲ್ಲುವುದು ಪಾಪವೆಂದು ಪರಿಗಣಿಸಲ್ಪಟ್ಟಿದೆ. 2. ಚಕ್ಕುಲಿ ಮುಚ್ಚೋರೆ ಜಿಲೇಬಿ ಮುಂತಾದುವು.

**कुण्डशायिन् ಕುಂಡಶಾಯಿನ್** (पुं०) ಧೃತರಾಷ್ಟ್ರನ ಒಬ್ಬ ಮಗ. "अपराजितः कुण्डशायी विशालाक्षो दुराधरः" भा० आदि० १३१-१०।

**कुण्डाशिन् ಕುಂಡಾಶಿನ್** (पुं०) ಧೃತರಾಷ್ಟ್ರನ ಒಬ್ಬ ಮಗ. "कुण्डाशी विरजाश्चैव दुःशला च शताधिका" भा० आदि० १३१-१४।

**कुण्डिका ಕುಂಡಿಕಾ** (स्त्री०) 1. ಕಮಂಡಲು. 2. ಮಡಕೆ, ಗಡಿಗೆ. कुडि (रक्षणे) "ण्वुल्" (३-१-१३३)।

**कुण्डिन् ಕುಂಡಿನ್** (पुं०) 1. ಶಿವ, ಈಶ್ವರ. "दण्डी छत्री च कुण्डी च द्विजानां धारणस्तथा" भा० वन०। 2. ಯತಿ, ಸಂನ್ಯಾಸಿ. (वि०) 3. ಗಡಿಗೆಗಳಿಂದ ತುಂಬಿರುವ, ಬಿಂದಿಗೆಗಳಿಂದ ಕೂಡಿದ. कुण्ड "इनिः" (५-२-११५)। स्त्रियाम् "ङीप्" (४-१-५)। –नी –ನೀ.

**कुण्डिनी ಕುಂಡಿನೀ** (स्त्री०) ರತ್ನಖಚಿತ ಪಾತ್ರೆ.

**कुण्डिन ಕುಂಡಿನ** (पुं०) 1. ಒಬ್ಬ ಋಷಿ. ಈ ಋಷಿಯ ಮಗ ಗೋತ್ರಪ್ರವರ್ತಕನಾದ ಕೌಂಡಿನ್ಯಋಷಿ. (न०) 2. ವಿದರ್ಭದೇಶದ ರಾಜಧಾನಿ, ಕುಂಡಿನನಗರ. "विलासिनः कुण्डिनमण्डनायितम्" नैष० १२-१।

**कुण्डिननगर ಕುಂಡಿನನಗರ** (न०) ಭೀಮರಾಜನ ರಾಜಧಾನಿ. (स्त्री०) –नगरी –ನಗರೀ. –पुरम् –ಪುರಮ್. "तस्य कुण्डिनपुरं प्रतिसर्पन् भूपतेर्व्यवसितानि वशांसुः" नैष० ५-६७। (स्त्री०) –पुरी –ಪುರೀ.

**कुण्डिनेन्द्र ಕುಂಡಿನೇಂದ್ರ** (पुं०) ವಿದರ್ಭದೇಶಾಧಿಪತಿ, ಕುಂಡಿನನಗರದ ದೊರೆ, ಭೀಮರಾಜ. "कुण्डिनेन्द्रसुतया किल पूर्वं मां वरीतुमुररीकृतमास्ते" नैष० ५-११४।

**कुण्डीर ಕುಂಡೀರ** (पुं०) 1. ಮನುಷ್ಯ. (वि०) 2. ಬಲಶಾಲಿ. कुडि (रक्षणे) "ईरन्" बाहु०।

**कुण्डोद ಕುಂಡೋದ** (पुं०) ಒಂದು ಪರ್ವತ. "कुण्डोदः पर्वतो रम्यो बहुमूलफलोदकः। नैषधस्तृषितो यत्र जलं शर्म च लब्धवान्" भा० वन० ८७-२५।

**कुण्डोदर ಕುಂಡೋದರ** (पुं०) 1. ಒಂದು ಸರ್ಪ. कुण्ड इव उदरमस्य। "कर्कराकर्करौ नागौ कुण्डोदरमहोदरौ" भा० आदि० ३५-१६। (वि०) 2. ಗಡಿಗೆಯಂತೆ ದಪ್ಪ ಹೊಟ್ಟೆಯುಳ್ಳವನು.

**कुतनय ಕುತನಯ** (पुं०) ಅಸಭ್ಯನಾದ ಪುತ್ರ, ಕೆಟ್ಟ ಮಗ. कुत्सितस्तनयः। "विप्रोऽनध्ययनात् कुलं कुतनयात् शीलं खलोपासनात्" भर्तृ० १-३३।

**कुतनु ಕುತನು** (पुं०) 1. ಕುಬೇರ. कुत्सिता तनुरस्य। "कुतनुकुहेच्छावसवः पिशाचकी सत्यसङ्गरस्त्रिशिराः" त्रिकाण्ड०। (स्त्री०) 2. ಕೆಟ್ಟ ಶರೀರ, ವಿಕಾರವಾದ ದೇಹ. कुत्सिता तनुः। (वि०) 3. ವಿಕಾರವಾದ ಮೈಯುಳ್ಳ. कुत्सिता तनुरस्य।

**कुतन्त्री ಕುತಂತ್ರೀ** (स्त्री०) 1. ಕೆಟ್ಟುಹೋಗಿರುವ ವೀಣೆ, ಸರಿಯಾದ ನಾದವಿಲ್ಲದ ವೀಣೆ. कुत्सिता तन्त्री यस्य। 2. ಚಿಕ್ಕ ದೊಣ್ಣೆ, ಸಣ್ಣ ಕೋಲು. "स ददर्श श्वमांसस्य कुतन्त्रीं विततां मुनिः" भा० शान्ति०।

**कुतप ಕುತಪ** (पुं०) 1. ಸೂರ್ಯ. कुं भूमिं तपति— तप (सन्तापे) "अच्" (३-१-१३४)। (पुंन०) 2. ದೌಹಿತ್ರ, ಮಗಳ ಮಗ. 3. ವಾದ್ಯ. 4. ಆಡಿನ ಕೂದಲಿನಿಂದ ತಯಾರಿಸಲ್ಪಟ್ಟ ನೇಪಾಳದ ಶಾಲು. 5. ಕುಶ, ದರ್ಭೆ. 6. ಕುತಪಕಾಲ, ಹಗಲಿನ ಎಂಟನೆಯ ಭಾಗ (ಮುಹೂರ್ತ). "दिवसस्याष्टमे भागे मन्दीभवति भास्करः। स कालः कुतपो ज्ञेयः पितृणां दत्तमक्षयम्" मत्स्यपु०। "कुतपोऽस्त्रियां दौहित्रे वाद्ये छागलकम्बले। कुशे दिनस्याष्टमांशे ना सूर्ये" मेदि०। "अह्नो मुहूर्ता विख्याता दश पञ्च च सर्वदा। तत्राष्टमो मुहूर्तो यः स कालः कुतपः स्मृतः"। 7. ಧಾನ್ಯ. "धान्ये कुशेऽष्टमांशेऽह्नः कुतपश्छागकम्बले" त्रिकाण्ड०। 8. ಅಗ್ನಿ, ಬೆಂಕಿ. 9. ಬ್ರಾಹ್ಮಣ. कुत्सितं पापं तपति। 10. ಅತಿಥಿ. 11. ವೃಷಭ, ಎತ್ತು. 12. ಭಾಗಿನೇಯ, ಸಹೋದರಿಯ ಮಗ, ಸೋದರಳಿಯ. "कुतपस्तु छागकम्बलदर्भयोः। वैश्वानरे दिनकरे द्विजन्मन्यतिथौ गवि। भागिनेयेऽष्टमांशेऽह्नो वाद्ये" हेम०।

**कुतस् ಕುತಸ್** (अव्य०) 1. ಎಲ್ಲಿಂದ ?, ಯಾವ ಕಡೆಯಿಂದ ? किम् "तसिल्" (५-३-७)। किमः कुभावः (७-२-१०४)। "कस्त्वम् ? कुतः समागतोऽसि ? " हितो०। 2. ಯಾವ ನಿಂದ? ಯಾವುದರಿಂದ? 3. ಯಾವ ಕಾರಣದಿಂದ? "कुतस्त्वा कश्मलमिदं विषमे समुपस्थितम्"? गीता २-२।

**कुतस्त्य ಕುತಸ್ತ್ಯ** (वि०) 1. ಎಲ್ಲಿಂದ ಬಂದಿರುವ ? 2. ಯಾರಿಂದ ಉಂಟಾದ ? कुतस् "त्यप्" (४-२-१०४)।

**कुतुक ಕುತುಕ** (न०) 1. ಕುತೂಹಲ, ತಿಳಿದುಕೊಳ್ಳಬೇಕೆಂಬ ಆಸೆ. कुतूं कायति – कै (शब्दे) "कः" (३-२-३)। "नृपमानसमिष्टमानसः स निमज्जत्कुतुकामृतोर्मिषु" नैष० २-८। 2. ಉತ್ಸಾಹ. 3. ಆನಂದ.

**कुतुकिन् ಕುತುಕಿನ್** (वि०) 1. ಕುತೂಹಲವುಳ್ಳ, ತಿಳಿದುಕೊಳ್ಳಲು ಆಸೆಯುಳ್ಳ. कुतुकमस्यास्ति "इनिः" (५-२-११५)। "उदरं परिमाति मुष्टिना कुतुकी कोऽपि दमस्वसुः किमु" नैष० २-३५। 2. ಉತ್ಸಾಹವುಳ್ಳ, 3. ಆನಂದವುಳ್ಳ.

**कुतुप ಕುತುಪ** (पुं०) 1. ತೊಗಲಿನಿಂದ ಮಾಡಿದ ಎಣ್ಣೆಯ ಅಥವಾ ತುಪ್ಪದ ಚೀಲ,—ಚಿಕ್ಕ ಪಾತ್ರೆ. अल्पा कुतूः "डुपच्" (५-३-८९)। "कुतूः कृत्तेः स्नेहपात्रं सैवाल्पा कुतुपः पुमान्" अम०। 2. ಹದಿನೈದು ಮುಹೂರ್ತಗಳಿಂದ ಕೂಡಿದ ಹಗಲಿನ ಎಂಟನೆಯ ಮುಹೂರ್ತ, ಹದಿನೈದು ಭಾಗಗಳುಳ್ಳ ಹಗಲಿನ ಎಂಟನೆಯ ಭಾಗ.

**कुतू ಕುತೂ** (स्त्री०) ಚರ್ಮದಿಂದ ಮಾಡಿದ ಎಣ್ಣೆಯ ಅಥವಾ ತುಪ್ಪದ ಪಾತ್ರೆ. कुत्सितं तन्यते—तनु (विस्तारे) "कूः" बाहु०। "कुतूः कृत्तेः स्नेहपात्रम्" अम०।

**कुतूहल ಕುತೂಹಲ** (न०) 1. ಆಸೆ, ಇಚ್ಛೆ, ಅಪೇಕ್ಷೆ. कुतूमिव हलति हृदयम् – हल (विलेखने) "कः" (वा० ३-२-५)। "अतुलं विदधे कुतूहलं भुजमेतस्य भजन् महीभुजः" नैष० २-७। 2. ಸ್ತ್ರೀಯರ ಸ್ವಭಾವಜನ್ಯವಾದ ವಿಲಾಸಗಳಲ್ಲೊಂದು. "विहृतं तपनं मौग्ध्यं विक्षेपश्च कुतूहलम्" सा० द० ३-९२। "रम्यवस्तु-समालोके लोलता स्यात्कुतूहलम्" सा० द० ३-१०९। 3. ಉತ್ಸಾಹ. (वि०) 4. ಪ್ರಶಸ್ತವಾದ, ಶ್ರೇಷ್ಠವಾದ. 5. ಅದ್ಭುತವಾದ, ಆಶ್ಚರ್ಯಕರವಾದ.

**कुतूहलित ಕುತೂಹಲಿತ** (वि०) 1. ಕುತೂಹಲ ಹೊಂದಿರುವ, ಆಸೆಯುಂಟಾಗಿರುವ. कुतूहलमस्य सञ्जातम् "इतच्" (५-२-३६)। 2. ಉತ್ಸಾಹ ಹೊಂದಿದ.

**कुतूहलिन् ಕುತೂಹಲಿನ್** (वि०) 1. ಆಸೆಯುಳ್ಳ, ಅಪೇಕ್ಷೆಯುಳ್ಳ. कुतूहलमस्यास्ति – "इनिः" (५-२-११५)। "ददर्श सानुजो रामः शुश्राव च कुतूहली" रघु० १५-६५। 2. ಉತ್ಸಾಹವುಳ್ಳ. स्त्रियाम् "ङीप्" (४-१-५)। **–हलिनी – ಹಲಿನೀ.** "करेण वातायनलम्बितेन स्पृष्टस्त्वया चण्डि कुतूहलिन्या" रघु० १३-२१।

**कुत्र ಕುತ್ರ** (अव्य०) ಎಲ್ಲಿ? ಯಾವ ಸ್ಥಳದಲ್ಲಿ? ಯಾವುದರಲ್ಲಿ? ಯಾರಲ್ಲಿ? किम् "त्रल्" (५-३-१०)। कुभावः (७-२-१०४)। "हा सीता केन नीता मम हृदयगता केन वा कुत्र दृष्टा" हनु० ना०। ಈ ಪದಕ್ಕೆ अपि चन चित् ಗಳು ಸೇರಿದಾಗ ಅನಿರ್ದಿಷ್ಟಾರ್ಥವನ್ನು ಕೊಡುವುದು. **कुत्रापि कुत्रचन कुत्रचित्** – "कुत्रचित्कनकनिर्मिताखिलः क्वापि यो विमलरत्नजः किल" नैष० १८-११।

**कुत्रत्य ಕುತ್ರತ್ಯ** (वि०) ಎಲ್ಲಿರುವ? ಎಲ್ಲಿ ವಾಸಮಾಡುವ? कुत्र "त्यप्" (४-२-१०४)।

**कुत्स – अवक्षेपणे** (चुरा० आत्म० सक० से०)। कुत्सयते। कुत्सयां चक्रे, –बभूव, –आस। अचुकुत्सत। ನಿಂದಿಸು, ಅವಹೇಳನ ಮಾಡು.

**कुत्स ಕುತ್ಸ** (पुं०) 1. ಒಬ್ಬ ಋಷಿ. कुत्सयते संसारम् – कुत्स (अवक्षेपणे) "अच्" (३-१-१३४)। (पुं० ब० व०) 2. ಕುತ್ಸ ಋಷಿಯ ಮಕ್ಕಳು, ಕುತ್ಸ ಋಷಿಯ ವಂಶದಲ್ಲಿ ಹುಟ್ಟಿದವರು. कुत्सस्य गोत्रापत्यानि पुमांसः "अण्" (४-१-११४)। लुक् (२-४-६५)। (वि०) 3. ನಿಂದಿತವಾದ, ಅಂದವಿಲ್ಲದ, ಚೆನ್ನಾಗಿಲ್ಲದ. "स्वच्छस्वशैलेक्षित-कुत्सबेरस्तां प्रत्यगान्नस्त्रितमां कुबेरः" नैष० १०-१३।

**कुत्सकुशिकिका ಕುತ್ಸಕುಶಿಕಿಕಾ** (स्त्री०) ಕುತ್ಸವಂಶದವರಿಗೂ ಕುಶಿಕವಂಶದವರಿಗೂ ನಡೆಯುವ ಮದುವೆ. कुत्सानां कुशिकानां च मैथुनम् "वुन्" (४-३-१२५)।

**कुत्सन ಕುತ್ಸನ** (न०) 1. ನಿಂದೆ, ದೂಷಣೆ. कुत्स (अवक्षेपणे) "ल्युट्" (३-३-११५)। "नास्तिक्यं वेदनिन्दां च देवतानां च कुत्सनम्। द्वेषं दम्भं च मानं च क्रोधं तैक्ष्ण्यं च वर्जयेत्" मनु० ४-१६३। 2. ಆಕ್ಷೇಪಣೆ, ಖಂಡನೆ. 3. ನಿಂದೆಗೆ ಅವಕಾಶ ಕೊಡುವ ಒಂದು ಧರ್ಮ, ನಿಂದಾಸಾಧನವಾದ ಒಂದು ಧರ್ಮ. कुत्स्यतेऽनेन—कुत्स करं० "ल्युट्" (३-३-११७)। "कुत्सितानि कुत्सनैः" पा० सू० २-१-५३। "वैयाकरणखसूचिः"। ಇಲ್ಲಿ ಪ್ರಶ್ನೆಯನ್ನು ಮರೆಸುವ ಖಸೂಚಿತ್ವ ರೂಪವಾದ ಧರ್ಮವು ವೈಯಾಕರಣನಲ್ಲಿ ನಿಂದೆಗೆ ಕಾರಣವಾಗಿರುವುದು.

**कुत्सा ಕುತ್ಸಾ** (स्त्री०) 1. ನಿಂದೆ, ದೂಷಣೆ. कुत्स (अवक्षेपणे) भावे "अ:" (३-३-१०३)। 2. ಆಕ್ಷೇಪಣೆ.

**कुत्सित ಕುತ್ಸಿತ** (न०) 1. ನಿಂದೆ, ದೂಷಣೆ, ಬೈಗಳು. कुत्स (अवक्षेपणे) भावे "क्त:" (३-३-११४)। (वि०) 2. ನಿಂದಿಸಲ್ಪಟ್ಟ. कुत्स वर्तमाने कर्म० "क्त:" (३-२-१८८)।

**कुत्स्य ಕುತ್ಸ್ಯ** (वि०) ನಿಂದ್ಯವಾದ, ದೂಷಣೆಗೆ ಅರ್ಹವಾದ, ಕೆಳಮಟ್ಟದ. कुत्स (अवक्षेपणे) "ण्यत्" (३-१-१२४)। "कुत्स्या: स्यु: कुपरीक्षकैर्न मणयो यैरर्घत: पातिता:" भर्तृ० १-११।

**कुत्स्यमान ಕುತ್ಸ್ಯಮಾನ** (वि०) ನಿಂದಿಸಲ್ಪಡುತ್ತಿರುವ, ದೂಷಿಸಲ್ಪಡುತ್ತಿರುವ. कुत्स (अवक्षेपणे) + यक् "शानच्" (३-२-१२४)।

**कुथ ಕುಥ** (पुं०) 1. ದರ್ಭೆಹುಲ್ಲು. कुथ्यति — कुथ (पूतीभावे) "क:" (३-१-१३५)। "शाद्वलेषु यदा शिश्ये वनान्ते वनगोचरा। कुथास्तरणतल्पेषु किं स्यात् सुखतरं तत:" रामा०। (पुंस्त्री०) 2. ಬಣ್ಣದ ಕಂಬಳಿ, ಆನೆಯ ಬೆನ್ನಿನಮೇಲೆ ಹೊದಿಸುವ ಚಿತ್ರಗಂಬಳಿ. "चकासतं चारुचमूरुचर्मणा कुथेन नागेन्द्रमिवेन्द्रवाहनम्" माघ० १-८।

**कुथोदरी ಕುಥೋದರೀ** (स्त्री०) ಕುಂಭಕರ್ಣನ ಮಗನಾದ ನಿಕುಂಭನ ಮಗಳು, ಕೀಲಕಂಜನೆಂಬ ರಾಕ್ಷಸನು ಇವಳ ಗಂಡ. ನಿಕುಂಜನೆಂಬುವನು ಇವಳ ಮಗ. ಹಿಮಾಲಯದಲ್ಲಿ ತಲೆಯಿಟ್ಟುಕೊಂಡು ನಿಷಧಪರ್ವತಕ್ಕೆ ಕಾಲನ್ನು ನೀಡಿ ಮಲಗಿದ್ದ ಇವಳ ನಿಟ್ಟುಸಿರಿನ ಗಾಳಿಯಿಂದ ನೂರಾರು ಮೈಲಿಗಳ ದೂರದಲ್ಲಿದ್ದ ಸಕಲ ಚರಾಚರವಸ್ತುಗಳೂ ಪ್ರಾಣಿಗಳೂ ಸೆಳೆಯಲ್ಪಟ್ಟು ಇವಳ ಹೊಟ್ಟೆಯೊಳಗೆ ಹೋಗಿ ಸೇರಿದ್ದುವು. ಮುನಿಗಳು ತಮ್ಮ ಈ ಕಷ್ಟವನ್ನು ಮಹಾವಿಷ್ಣುವಿನ ಅವತಾರವಾದ ಕಲ್ಕಿಮಹಾಪುರುಷನಲ್ಲಿ ನಿವೇದಿಸಲಾಗಿ ಕಲ್ಕಿಯ ಖಡ್ಗದಿಂದ ನಿರ್ಭಿನ್ನವಾದ ಈ ರಾಕ್ಷಸಿಯ ದೇಹದೊಳಗಿನಿಂದ ಅನೇಕ ಗಜರಥತುರಗಗಳು ಹೊರಕ್ಕೆ ಬಂದುವು. "शृणु विष्णुयश:पुत्र कुम्भकर्णात्मजात्मजा। कुथोदरीति विख्याता गगनार्धसमुत्थिता। कीलकिञ्जस्य महिषी निकुञ्जजननी च सा। हिमालये शिर:कृत्वा पादौ च निषधाचले। शेते स्तनौ पाययन्ती निकुञ्जं प्रस्नुतस्तनी। तस्या नि:श्वासवातेन विवशा वयमागता:। ......................। कल्कि: कमलपत्राक्ष: सुरारातिनिषूदन:। बाणाग्निचेलचर्मभ्यां कम्बलैर्यानदारुभि:। प्रज्वाल्योदरमध्येन करवालं समाददे। तेन खड्गेन महता कुक्षिं निर्भिद्य बन्धुभि:। बहिर्बभूव सर्वेश: कल्कि: कल्कविनाशन:। योनिरन्ध्राद्गजरथास्तुरगाश्चाभवन् बहि:। नासिकाकर्णविवरात् केऽपि तस्या विनिर्गता:। ते निर्गतास्ततस्तस्या: सैनिका रुधिरोक्षिता:। तां विव्यधुर्नि:क्षिपन्तीं तरसा चरणौ करौ। ममार सा भिन्नदेहा भिन्नकुक्षिशिरोधरा" कल्किपु०।

**कुदर्शन ಕುದರ್ಶನ** (न०) 1. ವೇದವಿರುದ್ಧವಾದ ದರ್ಶನ, ಅವೈದಿಕ ಮತ. कुत्सितं दर्शनम्। 2. ಕೆಟ್ಟ ದೃಷ್ಟಿ, ಕೆಟ್ಟ ನೋಟ.

**कुदिन ಕುದಿನ** (न०) 1. ಒಂದು ಸಾವನ ದಿನ, ಸೂರ್ಯನ ಉದಯದಿಂದ ಮರುದಿನದ ಉದಯದವರೆಗಿನ ಕಾಲ. को: पृथिव्या: भ्रमणेन दिनम्। "उदयादुदयं भानो: सावनं तत् प्रकीर्तितम्। सावनानि स्युरेतेन यज्ञकालविधिस्तुतै:" सू० सि० १४-१८। 2. ಜ್ಯೋತಿಷದಲ್ಲಿ ನಿಷಿದ್ಧವಾದ ದಿವಸ, ತಿಥಿವಾರಾದಿ ಶುದ್ಧಿಯಿಲ್ಲದ ದಿವಸ.

**कुदृष्टि ಕುದೃಷ್ಟಿ** (स्त्री०) 1. ವೇದವಿರುದ್ಧವಾದ ಚಾರ್ವಾಕಾದಿ ದರ್ಶನ, ಅವೈದಿಕ ಮತ. "या वेदबाह्या: स्मृतय: याश्च काश्च कुदृष्टय:। सर्वास्ता निष्फला: प्रेत्य तमोनिष्ठा हि ता: स्मृता:" मनु० १२-९५। "यानि चासत्तर्कमूलानि वेदविरुद्धानि चार्वाकदर्शनानि सर्वाणि परलोके निष्फलानि" इति कुल्लूकभट्ट:। 2. ಕೆಟ್ಟ ದೃಷ್ಟಿ, ಅಸಭ್ಯವಾದ ನೋಟ. 3. ನೋಡಲು ಶಕ್ತಿಯಿಲ್ಲದ ಕಣ್ಣು. कुत्सिता दृष्टि:। (वि०) 4. ಕೆಟ್ಟ ದೃಷ್ಟಿಯುಳ್ಳ, ಅಸಭ್ಯವಾದ ನೋಟವುಳ್ಳ. 5. ಶಕ್ತಿಕುಂದಿದ ಕಣ್ಣುಳ್ಳ. कुत्सिता दृष्टिर्यस्य।

**कुदेश ಕುದೇಶ** (पुं०) 1. ಕೆಟ್ಟ ದೇಶ, ವಾಸಕ್ಕೆ ಯೋಗ್ಯವಲ್ಲದ ದೇಶ, ಜೀವನಕ್ಕೆ ಬೇಕಾದ ವಸ್ತುಗಳಿಲ್ಲದ ದೇಶ. 2. ಅನೇಕ ಉಪದ್ರವಗಳಿಂದ ಕೂಡಿದ ದೇಶ. कुत्सितो देश:।

**कुदेह ಕುದೇಹ** (पुं०) 1. ಕುಬೇರ. कुत्सितो देहोऽस्य। 2. ಅನಾರೋಗ್ಯದಿಂದ ಕೂಡಿದ ದೇಹ. 3. ವಿಕಾರವಾದ ಶರೀರ. कुत्सितो देह:। (वि०) 4. ವಿಕಾರವಾದ ಶರೀರವುಳ್ಳ. 5. ಅನಾರೋಗ್ಯದಿಂದ ಕೂಡಿದ ಮೈಯುಳ್ಳ. कुत्सितो देहो यस्य।

**कुद्दाल ಕುದ್ದಾಲ** (पुं०) 1. ಕೋವಿದಾರವೃಕ್ಷ, ಕೆಂಗಾಂಚಾಳದ ಗಿಡ. कुमुद्दालयति — दल (विशरणे) + णिच् "अण्" (३-२-१)। शक०। 2. ನೆಲವನ್ನು ಅಗೆಯುವ

ಗುದ್ದಲಿ, ಪಿಕಾಸಿ. "समासाद्य बिलं तच्चाप्यखनन् सगरात्मजाः। कुद्दालैर्ह्रेषुकैश्चैव समुद्रं यत्नमास्थिताः" भा० वन० १०७। कुद्दाल ಪೂರ್ವಪದವುಳ್ಳ ಬಹುವ್ರೀಹಿಯಲ್ಲಿ ಪಾದಶಬ್ದಕ್ಕೆ ಅಂತ್ಯಲೋಪ ಬರುವುದಿಲ್ಲ. (५-४-१३८)। कुद्दालपादः। स्वार्थे "कः"। **कुद्दालकः ಕುದ್ದಾಲಕಃ.**

**कुव्रङ्ग ಕುದ್ರಂಗ** (पुं०) ಮಹಾದ್ವಾರದ ದಿಣ್ಣೆಯ ಮೇಲೆ ನಿರ್ಮಿಸಿರುವ ಕಾವಲುಗಾರನ ಮನೆ. कुत्सितो रङ्गः। पृषो०।

**कुद्रव ಕುದ್ರವ** (पुं०) ಹಾರಕವೆಂಬ ಒಂದು ಧಾನ್ಯ. कुं भूमिं द्रवति द्रावयति — द्रु (गतौ) अन्तर्भावितण्यर्थः "अच्" (३-१-१३४)।

**कुधान्य ಕುಧಾನ್ಯ** (न०) ಹಾರಕ, ಶಾಮೆ, ನವಣೆ ಮುಂತಾದ ಧಾನ್ಯ. कुत्सितं धान्यम्। "कोरदूषकश्यामाकनीवारशान्तनुवरकोद्दालकप्रियङ्गुमधूलिकानन्दीमुखीकुरुविन्दगवेधुकसरबरुकतोदपर्णीमुकुन्दकवेणुयवप्रभृतयः कुधान्यविशेषाः" सुश्रुत० सूत्र० ४६-२१।

**कुधी ಕುಧೀ** (स्त्री०) 1. ಕೆಟ್ಟ ಬುದ್ಧಿ. कुत्सिता धीः। (वि०) 2. ಕೆಟ್ಟ ಬುದ್ಧಿಯುಳ್ಳ, ಅವಿವೇಕಿ, ತಿಳಿವಳಿಕೆಯಿಲ್ಲದವನು. कुत्सिता धीर्यस्य। "ये मूढाः प्रविहाय यान्ति कुधियो मिथ्याफलान्वेषिणः" भर्तृ० २-७१।

**कुध्र ಕುಧ್ರ** (पुं०) ಪರ್ವತ, ಬೆಟ್ಟ. कुं भूमिं धरति — धृञ् (धारणे) "कः" (वा० ३-२-५)।

**कुनख ಕುನಖ** (पुं०) 1. ನಖಗಳು ಕೆಟ್ಟುಹೋಗುವ ಒಂದು ರೋಗ, ಉಗುರಿಗೆ ಏಟು ಬಿದ್ದು ಕೆಟ್ಟುಹೋಗಿ ಅವನ್ನು ಒರಟಾಗಿಯೂ ಕಪ್ಪಗೂ ಮಾಡುವ ಒಂದು ರೋಗ. "अभिघातात् प्रदुष्टो यो नखो रूक्षोऽसितः खरः। भवेत्तु कुनखं विद्यात् कुलीनमिति संज्ञितम्" सुश्रुत०। (न०) 2. ರೋಗಗ್ರಸ್ತವಾದ ಉಗುರು.

**कुनखिन् ಕುನಖಿನ್** (वि०) ಕುನಖವೆಂಬ ರೋಗವುಳ್ಳವನು. कुनखोऽस्त्यस्य "इनिः" (५-२-११५)। ಇಂತಹ ರೋಗಗಳು ಜನ್ಮಾಂತರದ ಪಾಪದ ಫಲ. "अथ नरकानुभूतदुःखानां तिर्यक्त्वमुत्तीर्णानां मानुष्ये लक्षणानि भवन्ति कुष्ठचतिपातकी ब्रह्महा यक्ष्मी सुरापः श्यावदन्तकः सुवर्णहारी कुनखी गुरुतल्पगो दुश्चर्मा"। स्त्रियाम् "ङीष्" (४-१-५४)। ಇಂತಹ ರೋಗಗಳು ಗರ್ಭಿಣಿಯಾಗಿರುವಾಗ ತಾಯಿಯ ದೋಷದಿಂದ ಉಂಟಾಗುವುವು. "दिवा स्वपन्त्याः स्वापशीलोऽञ्जनादन्धो रोदनाद्विकृतदृष्टिः स्नानानुलेपनात् दुःखशीलः तैलाभ्यङ्गात् कुष्ठी नखापकर्तनात् कुनखीत्यादि" सुश्रुत०।

**कुनट ಕುನಟ** (पुं०) 1. ಹೆಮ್ಮರ, ತಿಗಡು ಮರ. 2. ಅಯೋಗ್ಯನಾದ ನಟ, ಅನರ್ಹನಾದ ಅಭಿನಯಕಾರ. कुत्सितो नटः। (स्त्री०) **—नटी — ನಟೀ.**

**कुनाथ ಕುನಾಥ** (पुं०) 1. ಕೆಟ್ಟ ಯಜಮಾನ, ಅಯೋಗ್ಯನಾದ ಯಜಮಾನ. कुत्सितो नाथः। 2. ರಾಜ, ದೊರೆ, ಭೂಪತಿ. कोः भूमेः नाथः। (वि०) 3. ಕೆಟ್ಟ ಯಜಮಾನನುಳ್ಳ. 4. ಕೆಟ್ಟ ದೊರೆಯುಳ್ಳ. कुत्सितो नाथो यस्य। कुनायकः कुपतिः ಇತ್ಯಾದಿ.

**कुनामन् ಕುನಾಮನ್** (वि०) ಕೆಟ್ಟ ಹೆಸರುಳ್ಳವನು, ಬಹಳ ಕೃಪಣ, ಜಿಪುಣ. कुत्सितं नाम यस्य।

**कुनाशक ಕುನಾಶಕ** (पुं०) ತೀಟಕ ಸಂಧಿ. कुं नाशयति — णश (अदर्शने) + णिच् "ण्वुल्" (३-१-१३३)।

**कुनिषञ्ज ಕುನಿಷಂಜ** (पुं०) ಹತ್ತನೆಯ ಮನುವಿನ ಮಗ, ಬ್ರಹ್ಮಸಾವರ್ಣಿಯ ಮಗ.

**कुनीति ಕುನೀತಿ** (स्त्री०) 1. ಕೆಟ್ಟ ನೀತಿ, ಕೆಟ್ಟ ನಡವಳಿಕೆ. कुत्सिता नीतिः। (वि०) 2. ಕೆಟ್ಟ ನಡವಳಿಕೆಯುಳ್ಳ, ಕೆಟ್ಟ ಸ್ವಭಾವವುಳ್ಳ. कुत्सिता नीतिर्यस्य।

**कुनृप ಕುನೃಪ** (पुं०) ಕೆಟ್ಟ ದೊರೆ, ಅಯೋಗ್ಯನಾದ ರಾಜ. कुत्सितो नृपः। **—नृपतिः — ನೃಪತಿಃ.**

**कुपति ಕುಪತಿ** (पुं०) ಕೆಟ್ಟ ಗಂಡ, ಕೆಟ್ಟ ಯಜಮಾನ. कुत्सितः पतिः।

**कुन्त ಕುಂತ** (पुं०) 1. ಪ್ರಾಸಾಯುಧ, ಕೊಂತವೆಂಬ ಒಂದು ಆಯುಧ. कुं भूमिमुनत्ति — उन्दी (क्लेदने) "तः" बाहु०। शक०। "कुन्तेनोच्चैः सादिना हन्तुमिष्टान्नाजानेयो दन्तिनस्त्रस्यति स्म" माघ० १८-२३। 2. ಕಾಡುಗೋಧಿ. 3. ಕ್ಷುದ್ರಜಂತು. 4. ಕೋಪ, ಉಗ್ರತೆ. "कुन्तः प्रासे चण्डभावे क्षुद्रजन्तौ गवेधुके" मेदि०।

**कुन्तल ಕುಂತಲ** (पुं०) 1. ಕೇಶ, ಕೂದಲು. कुन्तं क्षुद्रजन्तुं लाति — ला (आदाने) "कः" (३-२-३)। "कापि कुन्तलसंव्यानसंयमव्यपदेशतः। बाहुमूलं कुचौ नाभिपङ्कजं दर्शयेत् स्फुटम्" सा० द०। 2. ಚಷಕ, ಕುಡಿಯುವ ಪಾತ್ರೆ. 3. ಮುಡಿವಾಳ. 4. ಯವಧಾನ್ಯ (Barley). 5. (ಸಂಗೀತದಲ್ಲಿ) ಒಂದು ಧ್ರುವಕ. (पुं० ब० व०) 6. ಕುಂತಲದೇಶ. "स्नाता तिष्ठति कुन्तलेश्वरसुता वारोऽङ्गराजस्वसुः द्यूते रात्रिरियं जिता कमलया

देवी प्रसाद्याद्य च" सा० द० ३। 7. ನೇಗಿಲು. "कुन्तलः स्याद्यवे देशे केशलाङ्गलयोरपि" विश्व०। "कुन्तलश्चषके वाले यवे पुंभूम्नि नीवृति" मेदि०।

**कुन्ति ಕುಂತಿ** (पुं० ब० व०) 1. ಒಂದು ದೇಶ. "कुन्तयोवन्तयश्चैव तथैवापरकुन्तयः" भा० भीष्म०। 2. ಕುಂತಿ ದೇಶದ ರಾಜರು. "सुस्थलाश्च मुकुट्टाश्च कुलिन्दाः कुन्तिभिः सह। साल्वायनाश्च राजानः" भा० सभा०। (पुं०) 3. ವಿದರ್ಭದೇಶದ ಕ್ರಥನೆಂಬ ಒಬ್ಬ ರಾಜನ ಮಗ. "क्रथस्य कुन्तिः पुत्रोऽभूत् रुचिस्तस्याथ निर्वृतिः" भाग० ९-३-२।

**कुन्तिभोज ಕುಂತಿಭೋಜ** (पुं०) ಪಾಂಡುರಾಜನ ಪತ್ನಿಯಾದ ಕುಂತಿಯ ಸಾಕುತಂದೆ. [ಕುಂತಿಭೋಜನಿಗೆ ಹೆಣ್ಣು ಮಕ್ಕಳಿಲ್ಲದೆ ಮಿತ್ರನಾದ ಶೂರರಾಜನನ್ನು ಬೇಡಲಾಗಿ ಶೂರನು ತನ್ನ ಮಗಳಾದ ಪೃಥೆಯನ್ನು ಸಾಕುಮಗಳಾಗಿ ಕೊಟ್ಟನು. ಇದರಿಂದ ಪೃಥೆಗೆ ಕುಂತಿಯೆಂದು ಹೆಸರಾಯಿತು.] "शूरो नाम यदुश्रेष्ठो वसुदेवपिताऽभवत्। तस्य कन्या पृथा नाम रूपेणासदृशी भुवि। पितुः स्वस्रीयपुत्राय सोऽनपत्याय वीर्यवान्। अग्रचमग्रे प्रतिज्ञाय स्वस्यापत्यस्य वै तदा। अग्रजातेति तां कन्यां शूरोऽनुग्रहकाङ्क्षया। अददत् कुन्तिभोजाय स तां दुहितरं तदा" भा० आदि० ६८।

**कुन्तिसुता ಕುಂತಿಸುತಾ** (स्त्री०) ಕುಂತಿಭೋಜರಾಜನ ಮಗಳು, ವಸುದೇವನ ತಂಗಿ. ಪೃಥಾದೇವಿ, ಪಾಂಡವರ ತಾಯಿ.

**कुन्ती ಕುಂತೀ** (स्त्री०) ಶೂರರಾಜನ ಮಗಳು, ಕುಂತಿಭೋಜನ ಸಾಕುಮಗಳು, ವಸುದೇವನ ತಂಗಿ, ಪಾಂಡುರಾಜನ ಪತ್ನಿ, ಪೃಥಾದೇವಿ. "शूरः पूज्याय वृद्धाय कुन्तिभोजाय तां ददौ। तस्मात् कुन्तीति विख्याता कुन्तिभोजात्मजा पृथा" हरिवं०।

**कुन्तीतनय ಕುಂತೀತನಯ, -पुत्र-ಪುತ್ರ, -सुत-ಸುತ** (पुं०) ಕುಂತಿಯ ಮಕ್ಕಳು—(1) ಧರ್ಮರಾಜ, (2) ಭೀಮಸೇನ, (3) ಅರ್ಜುನ ಮತ್ತು (4) ಕರ್ಣ. कुन्त्याः तनयः पुत्रः सुतो वा। [ಕುಂತಿಯು ಕನ್ಯಾವಸ್ಥೆಯಲ್ಲಿ ತಂದೆಯ ಮನೆಯಲ್ಲಿದ್ದಾಗ ಅತಿಥಿಗಳ ಶುಶ್ರೂಷೆಗಾಗಿ ನಿಯುಕ್ತಳಾಗಿದ್ದಳು. ಒಂದು ಸಲ ದುರ್ವಾಸಮುನಿಯನ್ನು ಪೂಜಿಸಿ ಅದರಿಂದ ಸಂತೋಷಗೊಂಡ ಆ ಮುನಿಯಿಂದ ಮಕ್ಕಳನ್ನು ಪಡೆಯುವ ಕೆಲವು ಮಂತ್ರಗಳ ಉಪದೇಶ ಹೊಂದಿ ಕನ್ಯೆಯಾಗಿದ್ದಾಗಲೇ ಸೂರ್ಯನ ಅನುಗ್ರಹದಿಂದ ಕರ್ಣನನ್ನೂ, ಮದುವೆಯಾದ ನಂತರ ಪಾಂಡುವಿಗೆ ಶಾಪ ಬಂದುದರಿಂದ ಧರ್ಮ, ವಾಯು ಮತ್ತು ಇಂದ್ರ ದೇವತೆಗಳ ಅನುಗ್ರಹದಿಂದ ಧರ್ಮರಾಜ, ಭೀಮಸೇನ ಮತ್ತು ಅರ್ಜುನನನ್ನೂ ಪಡೆದಳು.]

**कुन्थु ಕುಂಥು** (पुं०) ಕುಂಥುಸಾಗರಸ್ವಾಮಿಗಳು, ಆರನೆಯ ಜೈನಚಕ್ರವರ್ತಿಗಳು. [ಜೈನ ಚಕ್ರವರ್ತಿಗಳಾದ ಈ ಕುಂಥುಸ್ವಾಮಿಗಳು ಬೆಳಗಾವಿ ಜಿಲ್ಲೆಯ ಐನಾಪುರವೆಂಬ ಗ್ರಾಮದಲ್ಲಿ ತಮ್ಮ ಸದ್ಗುಣಗಳಿಂದ ಪ್ರಸಿದ್ಧರಾಗಿದ್ದ ಶ್ರೀ ಸರಸ್ವತೀದೇವಿ–ಸಾತಪ್ಪನವರ ಸುಪುತ್ರರು. ಇವರಿಗೆ ಬಾಲ್ಯದಿಂದಲೂ ಗುರು-ದೈವ ಭಕ್ತಿ ಬೆಳೆಯುತ್ತ ಬಂದು ಪರಮ ವೈರಾಗ್ಯವು ಹುಟ್ಟಿದುದರಿಂದ ಸಂಸಾರದಲ್ಲಿ ಜುಗುಪ್ಸೆಯುಂಟಾಗಿದ್ದರೂ ತಾಯಿತಂದೆಗಳ ನಿರ್ಬಂಧದಿಂದ ಸಂಸಾರಬಂಧನಕ್ಕೊಳಗಾಗಿ ಕೊನೆಗೂ ಶಾಂತಿಸಾಗರ ಮುನಿಗಳಿಂದ ಜೈನದೀಕ್ಷೆಯನ್ನು ಪಡೆದರು. ಬಳಿಕ ಇವರು ತಮ್ಮ ಉಪದೇಶದಿಂದ ಧರ್ಮಜ್ಯೋತಿಯನ್ನು ಬೆಳಗುತ್ತ ಜನರ ಅಜ್ಞಾನವನ್ನು ದೂರಮಾಡಿ ಧರ್ಮಜಾಗೃತಿಯನ್ನುಂಟುಮಾಡಿದರು. ಇವರ ಪ್ರಭಾವದಿಂದ ಅನೇಕ ಧಾರ್ಮಿಕಸಂಸ್ಥೆಗಳೂ, ಪುಸ್ತಕಭಾಂಡಾಗಾರಗಳೂ, ವಿದ್ಯಾಲಯಗಳೂ ಸ್ಥಾಪಿತವಾದುವು. ಇವರು ತಮ್ಮ ಪಾಂಡಿತ್ಯದಿಂದ ಬೋಧಾಮೃತಸಾರ, ನಿಜಾತ್ಮಶುದ್ಧಿಭಾವನಾ, ಮೋಕ್ಷಮಾರ್ಗಪ್ರದೀಪ ಮುಂತಾದ ನಲವತ್ತು ಗ್ರಂಥಗಳನ್ನು ರಚಿಸಿರುತ್ತಾರೆ.]

**कुन्द ಕುಂದ** (पुं०) 1. ವಿಷ್ಣು. कुमिति मान्तमव्ययम्। कुम् परभक्तिपरज्ञानादिभुवं ददाति — डु दाञ् (दाने) "कः" (३-२-३)। "भक्तेभ्यः परभक्त्यादिप्रदानात् कुन्द उच्यते" इति निरुक्तिः। "कुमुदः कुन्दरः कुन्दः" वि० स०। 2. ಕುಬೇರನ ನವ (ಒಂಬತ್ತು) ನಿಧಿಗಳಲ್ಲೊಂದು. 3. ಚರಕಿ ಯಂತ್ರ, ಕಡೆತ ಹಿಡಿಯುವ ಯಂತ್ರ, ನಿಡುಸುರುಳಿಯ ಬೈರಿಗೆ. (पुंन०) 4. ಮೊಲ್ಲೆಗಿಡ, ಕೋಲುಮಲ್ಲಿಗೆ. कु (शब्दे) "दन्" नुमागमश्च (उ० ४-९८)। "कुन्दो माध्येऽस्त्री मुकुन्दभ्रमिनिध्यन्तरेषु ना" मेदि०। 5. ಗುಗ್ಗುಳ, ಲೋಬಾನ, ಧೂಪಕ್ಕೆ ಉಪಯೋಗಿಸುವ ಒಂದು ಗೋಂದು. (न०) 6. ಮೊಲ್ಲೆ ಹೂವು. "प्रातः कुन्दप्रसवशिथिलं जीवितं धारयेथाः" मेघ० २-५०। 7. ಕಮಲ. 8. ಪರತತ್ತ್ವಜ್ಞಾನ.

**कुन्दक ಕುಂದಕ** (पुं०) "कुन्द" ಪದದ ಅರ್ಥ. स्वार्थे "कः"।

**कुन्दचतुर्थी ಕುಂದಚತುರ್ಥೀ** (स्त्री०) ಮಾಘಮಾಸದ ಶುಕ್ಲ ಚತುರ್ಥಿ.

**कुन्दम ಕುಂದಮ** (पुं०) ಬಿಡಾಲ, ಬೆಕ್ಕು, ಮಾರ್ಜಾರ. कुन्देन मीयते — माङ् (माने) "डः" (वा० ३-२-४८)। "बिडालः कुन्दमो नक्तचारी दीप्ताक्षजाहकौ" त्रिकाण्ड०. स्त्रियाम् जाति० "ङीष्" (४-१-६३)। **–मी –ಮೀ.**

**कुन्दर ಕುಂದರ** (पुं०) ವಿಷ್ಣು. कुन्दं परतत्त्वज्ञानं राति ददाति — रा (दाने) "कः" (३-२-३)। कुं पापं दारयति वा। "कुमुदः कुन्दरः कुन्दः" वि० स०।

**कुन्दाल ಕುಂದಾಲ** (नं०) ಗುದ್ದಲಿ, ಅಗೆಯುವ ಆಯುಧ. वैज०।

**कुन्दिनी ಕುಂದಿನೀ** (स्त्री०) 1. ಕಮಲಗಳ ಸಮೂಹ. कुन्दानां समूहः "इनिः" (वा० ४-२-५१)। 2. ಕಮಲಗಳಿಂದ ಕೂಡಿದ ಪ್ರದೇಶ. कुन्दान्यत्र सन्ति "इनिः" (५-२-१३५)।

**कुन्विल ಕುಂವಿಲ** (नं०) ಅರಣ್ಯ, ಕಾಡು. वैज०।

**कुन्दु ಕುಂದು** (पुं०) ಮೂಷಿಕ, ಇಲಿ. कुं भूमिं दृणाति— दृ (विदारणे) "डुः" बाहु०।

**कुप – क्रोधे** (दिवा० पर० अक० से०)। कुप्यति कुप्यतः कुप्यन्ति। चुकोप चुकुपतुः। कोपिता। कोपिष्यति। कुप्यतु। अकुप्यत्। कुप्येत्। कुप्यात्। अकुपत्। अकोपिष्यत्। ಕೋಪಗೊಳ್ಳು, ಸಿಟ್ಟುಮಾಡಿಕೊ.

**भावे :** कुप्यते। चुकुपे। कोपिता। कोपिष्यते। कुप्यताम्। अकुप्यत। ಇತ್ಯಾದಿ.

**णिचि :** कोपयति, –ते। कोपयां चकार, –चक्रे, –बभूव, –आस। कोपयिता। कोपयिष्यति, –ते। कोपयतु, –ताम्। ಇತ್ಯಾದಿ.

**कर्मणि :** कोप्यते। कोपयां चक्रे, –बभूवे, –आसे। कोपयिता, कोपिता। कोपयिष्यते, कोपिष्यते। कोप्यताम्। अकोप्यत। कोप्येत। ಇತ್ಯಾದಿ.

**सनि :** चुकुपिषति, चुकोपिषति। चुकुपिषां चकार, चुकोपिषां चकार, –बभूव, –आस। चुकुपिषिता, चुकोपिषिता। ಇತ್ಯಾದಿ.

**कृत्सु :** कोपितव्यम्। कोपनीयम्। कोप्यम्। कुपितः। कुपितवान्, –वती। कुप्यन्, कुप्यन्ती। कोपितुम्। कुपितम्। कोपनम्। कुपित्वा, कोपित्वा। प्रकुप्य।

**कुपित ಕುಪಿತ** (नं०) 1. ಕೋಪ, ಸಿಟ್ಟು. कुप (क्रोधे) भावे "क्तः" (३-३-११४)। "वाससां शिथिलतामुपनाभि ह्रीनिरासमपदे कुपितानि" किरा० ९-६५। (वि०) 2. ಕೋಪಗೊಂಡ, ಸಿಟ್ಟುಮಾಡಿಕೊಂಡ. कुप कर्तं० "क्तः" (३-४-७२)। "भजते कुपितोऽप्युदारधीरनुनीतिं नतिमात्रकेण सः" माघ० १६-५५। "जहौ न धैर्यं कुपितोऽपि पाण्डवः" किरा० १४-१।

**कुपिन्द ಕುಪಿಂದ** (पुं०) ನೇಯಿಗೆಯವನು. ಮಗ್ಗದವನು. कुप (क्रोधे) "किन्दच्" (उ० ४-८६)।

**कुपिनिन् ಕುಪಿನಿನ್** (पुं०) ಬೆಸ್ತ, ಮೀನು ಹಿಡಿಯುವವನು. कुपिनी अस्त्यस्य "इनिः" (५-२-११६)।

**कुपिनी ಕುಪಿನೀ** (स्त्री०) ಮೀನಿನ ಬುಟ್ಟಿ, ಮೀನುಗಳು ತುಂಬುವ ಬುಟ್ಟಿ. गुप्यते मत्स्या अत्र — गुपू (रक्षणे) "इनिः" बाहु०। "ङीप्"। पृषो०।

**कुपुत्र ಕುಪುತ್ರ** (पुं०) 1. ಕೆಟ್ಟ ಮಗ, ಅಯೋಗ್ಯನಾದ ಮಗ. कुत्सितः पुत्रः। 2. ಭೂಮಿಯ ಮಗ—(1) ಅಂಗಾರಕಗ್ರಹ. (2) ನರಕಾಸುರ. कोःपुत्रः।

**कुपूय ಕುಪೂಯ** (वि०) ನೀಚ, ನಿಕೃಷ್ಟ, ತುಚ್ಛ. कुत्सितं पूयते — पूयी (विशरणे) "अच्" (३-१-१३४)। "कुपूयकुत्सितावद्यखेटगर्ह्याणकाः समाः" अम०।

**कुप्य ಕುಪ್ಯ** (नं०) ಚಿನ್ನ ಬೆಳ್ಳಿ ಬಿಟ್ಟು ಉಳಿದ ಲೋಹ, ಹಿತ್ತಾಳೆ ತಾಮ್ರ ಮುಂತಾದುದು. गुपू (रक्षणे) "क्यप्" (३-१-११४)। कुत्वं च।

**कुप्यत् ಕುಪ್ಯತ್** (वि०) ಕೋಪಗೊಳ್ಳುತ್ತಿರುವ, ಸಿಟ್ಟುಗೊಳ್ಳುತ್ತಿರುವ. कुप (क्रोधे) "शतृ" (३-२-१२४)। "सोमाय कुप्यन्निव विप्रयुक्तः स सोममाचामति हूयमानम्" नैष० ८-७४। स्त्रियाम् "ङीप्" (४-१-६)। **कुप्यन्ती ಕುಪ್ಯಂತೀ.**

**कुप्यशाला ಕುಪ್ಯಶಾಲಾ** (स्त्री०) ತಾಮ್ರ ಹಿತ್ತಾಳೆ ಮುಂತಾದ ಲೋಹಪಾತ್ರೆಗಳನ್ನು ತಯಾರಿಸುವ ಮನೆ. कुप्यस्य तत्पात्रनिर्माणस्य शाला।

**कुबेर ಕುಬೇರ** (पुं०) 1. ಯಕ್ಷರಾಜ, ಧನಾಧಿಪ, ಉತ್ತರ ದಿಕ್ಕಿನ ಅಧಿಪತಿ. कुत्सितं बेरं शरीरं यस्य। [ಸೋಮನೆಂಬುದು ಇವನ ಹೆಸರು. "कुबेरो भव नाम्ना त्वं मम रूपेर्ष्यया सुत" ಎಂದು ದೇವಿಯ ಶಾಪದಿಂದ ಇವನಿಗೆ ಕುರೂಪವು ಪ್ರಾಪ್ತವಾಗಿ "**ಕುಬೇರ**"ನೆಂದು ಹೆಸರಾಯಿತು. ಇವನು ವಿಶ್ರವಸ್ಸಿನ ಮಗ. ಇಲಬಿಲೆಯು ಇವನ ತಾಯಿ. ಋದ್ಧಿಯೆಂಬುವಳು ಇವನ ಪತ್ನಿ. ಮಗ ನಳಕೂಬರ. ಅಲಕೆಯು ಕುಬೇರನ ರಾಜಧಾನಿ. ಇವನ ವಿಮಾನಕ್ಕೆ ಪುಷ್ಪಕವೆಂದು ಹೆಸರು. ರುದ್ರನನ್ನು ಕುರಿತು

ತಪಸ್ಸು ಮಾಡಿ ಪುಷ್ಪಕವಿಮಾನವನ್ನು ಪಡೆದು ಇವನು ಲಂಕೆಯಲ್ಲಿ ರಾಜ್ಯಭಾರ ಮಾಡುತ್ತಿರಲು ಇವನ ಮಲ ತಾಯಿಯ ಮಕ್ಕಳಾದ ರಾವಣಕುಂಭಕರ್ಣರು ಇವನನ್ನು ಸೋಲಿಸಿ ಲಂಕೆಯನ್ನೂ, ಪುಷ್ಪಕವಿಮಾನವನ್ನೂ ಸ್ವಾಧೀನ ಪಡಿಸಿಕೊಂಡರು. ಬಳಿಕ ಪರಮೇಶ್ವರನ ಅಪ್ಪಣೆಯಂತೆ ಕೈಲಾಸದಲ್ಲಿ ಅಲಕೆಯನ್ನು ನಿರ್ಮಿಸಿಕೊಂಡು ಯಕ್ಷರಿಗೆ ರಾಜನಾದನು.] "कुबेरस्य मनःशल्यं शंसतीव पराभवम्" कुमा० २-२२। वा "कप्" (५-४-१५४)। **कुबेरकः ಕುಬೇರಕಃ.** 2. ನಂದಿಮರ. "कुबेरस्तु धनदे नन्दिपादपे" हेम०। (न०) 3. ವಿಕಾರವಾದ ದೇಹ, ಅಂದ ವಿಲ್ಲದ ಮೈ. कुत्सितं वेरम्।

**कुबेरदिश् ಕುಬೇರದಿಶ್** (स्त्री०) ಕುಬೇರನು ಒಡೆಯ ನಾಗಿರುವ ಉತ್ತರದಿಕ್ಕು.

**कुबेराक्षी ಕುಬೇರಾಕ್ಷೀ** (स्त्री०) ಹಸುರು ಪಾದರಿ ಗಿಡ. कुबेरस्याक्षीव पिङ्गलं पुष्पमस्याः "षच्" (५-४-११३)।

**कुबेराचल ಕುಬೇರಾಚಲ -अद्रि -ಅದ್ರಿ** (पुं०) ಕೈಲಾಸ ಪರ್ವತ. कुबेरस्य अचलः अद्रिर्वा।

**कुब्ज ಕುಬ್ಜ** (पुं०) 1. ಉತ್ತರಣೆಗಿಡ. 2. ಖಡ್ಗ, ಕತ್ತಿ. 3. ಗೂನು, ಬೆನ್ನುಮೂಳೆ ಬಗ್ಗಿರುವಿಕೆ. हृदयं यदि वा पृष्ठमुन्नतं क्रमशः सरुक्। क्रुद्धो वायुर्यदा कुर्यात्तदा तं कुब्जमादिशेत्"। (वि०)4. ವಾಮನ, ಕುಳ್ಳ. 5. ಗಿಡ್ಡ, ಗೂನ. कौ उब्जति — उब्ज (आर्जवे) "अच्" (३-१-१३४)। "कुब्जा नीचतयैव यान्ति शनकैरात्मेक्षणाशङ्किनः" रत्ना० २-३।

**कुब्जा ಕುಬ್ಜಾ** (स्त्री०) 1. ಗೂನು ಮೈಯುಳ್ಳ ಹೆಂಗಸು. 2. ಕಂಸನ ಮನೆಯಲ್ಲಿದ್ದ ಒಬ್ಬ ದಾಸಿ. [ಇವಳು ಪ್ರತಿ ದಿನವೂ ಕಂಸನಿಗೆ ದಿವ್ಯವಾದ ಚಂದನವನ್ನು ಒದಗಿಸು ತ್ತಿದ್ದಳು. ಕಂಸನ ಆಹ್ವಾನದ ಮೇಲೆ ಶ್ರೀಬಲರಾಮ ಕೃಷ್ಣರು ಮಧುರಾಪಟ್ಟಣಕ್ಕೆ ಹೋಗುತ್ತಿದ್ದಾಗ ದಾರಿಯಲ್ಲಿ ಅವರನ್ನು ಕಂಡ ಕುಬ್ಜೆಯು ಚಂದನವನ್ನೆಲ್ಲಾ ಅವರಿಗೆ ಸಮರ್ಪಿಸಲು ರಾಮಕೃಷ್ಣರು ಅದನ್ನು ತಮ್ಮ ಮೈಗೆಲ್ಲಾ ಅನುಲೇಪ ಮಾಡಿಕೊಂಡರು. ಶ್ರೀಕೃಷ್ಣನು ಕುಬ್ಜೆಯ ಕಾಲನ್ನು ಅಂಗುಷ್ಠದಿಂದ ತುಳಿದುಕೊಂಡು ಗಲ್ಲವನ್ನು ಹಿಡಿದು ಮೇಲಕ್ಕೆ ಎತ್ತಿ ಬೆನ್ನಿನ ಗೂನನ್ನು ಹೋಗಲಾಡಿಸಿ ಅವಳನ್ನು ಸುಂದರಿಯನ್ನಾಗಿ ಮಾಡಿದನು.] 3. ದಶರಥನ ಕಿರಿಯ ಹೆಂಡತಿಯಾದ ಕೈಕಯಿಯ ದಾಸಿ. ಇವಳು ಶ್ರೀರಾಮನ ಪಟ್ಟಾಭಿಷೇಕಕ್ಕೆ ಅಡ್ಡ ಬಂದು ವನವಾಸಕ್ಕೆ ಕಳುಹುವಂತೆ ಕೈಕಯಿಗೆ ಉಪದೇಶಿಸಿದಳು.

**कुब्र ಕುಬ್ರ** (न०) 1. ಅರಣ್ಯ, ಕಾಡು. कुबि (आच्छादने) "रन्" (उ० २-२९)। निपा०। **कुब्रमरण्यम् सि० कौ०।** 2. ಯಜ್ಞಕುಂಡ. 3. ಕರ್ಣಾಭರಣ, ಹತ್ತುಕಡಕು. 4. ಶಕಟ, ಗಾಡಿ. 5. ದಾರ.

**कुभार्य ಕುಭಾರ್ಯ** (वि०) ಕೆಟ್ಟ ಹೆಂಡತಿಯುಳ್ಳವನು, ಅಯೋಗ್ಯಳಾದ ಪತ್ನಿಯುಳ್ಳವನು. कुत्सिता भार्या यस्य। (स्त्री०) **-भार्या -ಭಾರ್ಯಾ.** ಕೆಟ್ಟ ಹೆಂಡತಿ.

**कुभृत् ಕುಭೃತ್** (पुं०) 1. ಪರ್ವತ, ಬೆಟ್ಟ. कुं पृथिवीं बिभर्ति — डु भृञ् (धारणपोषणयोः) "क्विप्" (३-२-७६)। 2. ಏಳು ಸಂಖ್ಯೆ.

**कुमार ಕುಮಾರ** (पुं०) 1. ಕುಮಾರಸ್ವಾಮಿ, ಕಾರ್ತಿಕೇಯ, ಷಣ್ಮುಖ. कौ मारयति दुष्टान् — मृङ् (प्राणत्यागे) + णिच् "अच्" (३-१-१३४)। कुमारयति क्रीडति — कुमार (क्रीडायाम्) + णिच् "अच्" वा। "रराज तेषां व्रजतां सुराणां मध्ये कुमारोऽधिककान्तियुक्तः" कुमा० १३-८। 2. ಪುತ್ರ, ಮಗ. "नीराज्यमाने स्फटिकाचलेन सानन्दनिर्दिष्टदृशं कुमारे" कुमा० १२-२१। 3. ಯುವರಾಜ, ರಾಜಕುಮಾರ. [ವಿಶೇಷ ವಾಗಿ ನಾಟಕಗಳಲ್ಲಿ ಈ ಅರ್ಥದಲ್ಲಿ ಪ್ರಯೋಗ.] "उपवेष्टुमर्हति कुमारः" मुद्रा० ४। 4. ಶುಕ, ಗಿಣಿ. 5. ಅಶ್ವ ಪಾಲಕ, ಕುದುರೆಯ ಯೋಗಕ್ಷೇಮ ನೋಡಿಕೊಳ್ಳು ವವನು, ಕುದುರೆಯ ಆಳು. 6. ವರುಣ ವೃಕ್ಷ, ವಲಸೆ ಗಿಡ. 7. ಬಾಲಕ, ಐದುವರ್ಷ ವಯಸ್ಸಿನ ಹುಡುಗ. "कौमारं पञ्चवर्षान्तं पौगण्डं दशमावधि" भाग० १०। "कुमारः स्यात् शुके स्कन्दे युवराजेऽश्वचारके। बालके वरुणाद्रौ ना न द्वयोर्जात्यकाञ्चने" मेदि०। (न०) 8. ಶುದ್ಧವಾದ ಚಿನ್ನ. (स्त्री०) **-री -ರೀ.** 9. ಪುತ್ರಿ, ಮಗಳು. 10. ಮದುವೆಯಾಗದಿರುವ ಕನ್ಯೆ, ಹನ್ನೆರಡು ವರ್ಷ ವಯಸ್ಸಿನ ಕನ್ಯೆ. "संप्राप्ते द्वादशे वर्षे कुमारीत्यभिधीयते" स्मृतिः। "त्रीणि वर्षाण्युदीक्षेत कुमार्यृतुमती सती" मनु० ९-९०। 11. ಸಣ್ಣ ಗೋರಂಟಿ. 12. ನವಮಾಲಿಕೆ, ಹೆಜ್ಜಾಜಿ. 13. ಪಾರ್ವತಿ, ಗೌರಿ. 14. ಒಂದು ನದಿ. 15. ವಿಷ್ಣುಕ್ರಾಂತಗಿಡ. 16. ಜಂಬೂ ದ್ವೀಪ. "कुमारी शैलतनयानवमाल्योर्नदीभिदि। सहापराजिताकन्याजम्बुद्वीपेषु च स्त्रियाम्" मेदि०।

**कुमारधारा ಕುಮಾರಧಾರಾ** (स्त्री०) ಮಹಾಭಾರತದಲ್ಲಿ ಉಕ್ತವಾಗಿರುವ ಒಂದು ತೀರ್ಥ. "पितामहस्य सरसः प्रसुता लोकपावनी। कुमारधारा तत्रैव त्रिषु लोकेषु

बिश्रुता। यत्र स्नात्वा कृतार्थोस्मीत्यात्मानमवगच्छति" भा० वन० ८१।

**कुमारपालन ಕುಮಾರಪಾಲನ** (पुं०) 1. ಶಾಲಿವಾಹನ ರಾಜ. (न०) 2. ಬಾಲಕರನ್ನು ಕಾಪಾಡುವುದು. (वि०) 3. ಬಾಲಕರ ಯೋಗಕ್ಷೇಮವನ್ನು ನೋಡಿಕೊಳ್ಳುವವನು. कुमारं पालयति – पाल (रक्षणे) + णिच् "ल्युः" (३-१-१३४)।

**कुमारभृत्या ಕುಮಾರಭೃತ್ಯಾ** (स्त्री०) ಸೂಲಗಿತ್ತಿತನ, ಧಾತ್ರಿಯ ಕಾರ್ಯ. कुमारस्य भृत्या भरणम्। ಆಯುರ್ವೇದದ ಎಂಟು ಅಂಗಗಳಲ್ಲೊಂದು. ["अष्टाङ्ग" ಪದದಲ್ಲಿ ನೋಡಿ.]

**कुमारयु ಕುಮಾರಯು** (पुं०) ಯುವರಾಜ, ರಾಜಕುಮಾರ. कुमारं कौमारं याति – या (प्रापणे) "कुः" (उ० १-३७)।

**कुमारललिता ಕುಮಾರಲಲಿತಾ** (स्त्री०) ಸಮವೃತ್ತದ ಏಳನೆಯ ಛಂದಸ್ಸಿನ ಒಂದು ವೃತ್ತ, ಜಗಣ ಸಗಣ ಮತ್ತು ಒಂದು ಗುರುವಿರುವ ಒಂದು ವೃತ್ತ. "कुमारललिता ज्सगाः" वृ० र०। **ಈ ವೃತ್ತದ ಗಣವಿನ್ಯಾಸ:**

ज स गु.

ı0ı ıı0 0

**कुमारवाहिन् ಕುಮಾರವಾಹಿನ್** (पुं०) ಮಯೂರ, ನವಿಲು. कुमारं स्कन्दं वहति–वह (प्रापणे) "णिनिः" (३-१-१३४)। ಸ್ಕಂದನಿಗೆ ವಾಹನವಾದುದರಿಂದ ಇದಕ್ಕೆ ಈ ಹೆಸರು.

**कुमारश्रमणा ಕುಮಾರಶ್ರಮಣಾ** (स्त्री०) ಬಾಲ್ಯದಲ್ಲಿ ಸಂನ್ಯಾಸವನ್ನು ಪಡೆದ ಜೈನ ಹೆಂಗಸು, ಬಾಲಸಂನ್ಯಾಸಿನಿ. कुमारी श्रमणा। पुंवद्भावः (२-१-७०)।

**कुमारसंभव ಕುಮಾರಸಂಭವ** (न०) ಷಣ್ಮುಖನ ಉತ್ಪತ್ತಿಯನ್ನು ವರ್ಣಿಸುವ ಕಾಳಿದಾಸಕವಿಯ ಒಂದು ಕಾವ್ಯ. कुमारस्य संभवमधिकृत्य कृतो ग्रन्थः "अण्" (४-३-८७)। अणो "लुप्" (४-२-६०)।

**कुमारसू ಕುಮಾರಸೂ** (स्त्री०) 1. ಗಂಗಾನದಿ. 2. ಪಾರ್ವತಿ. कुमारं स्कन्दं सूते – षूङ् (प्राणिगर्भविमोचने) "क्विप्" (३-२-६१)।

**कुमारिका ಕುಮಾರಿಕಾ** (स्त्री०) 1. ಮದುವೆಯಾಗದಿರುವ ಕನ್ಯೆ. कुमारी स्वार्थे "कन्" (५-४-५)। 2. ಬಾಲಿಕೆ, ಕನ್ಯೆ. 3. ದೊಡ್ಡಜಾತಿಯ ಯಾಲಕ್ಕಿ. 4. ನವಮಲ್ಲಿಕೆ. [ಇದು ಮನ್ಮಥನ ಐದು ಬಾಣಗಳಲ್ಲೊಂದು.] 5. ಭಾರತವರ್ಷದ ಒಂಬತ್ತು ಖಂಡಗಳಲ್ಲೊಂದು. "ऐन्द्रं कशेरुशकलं किल ताम्रपर्णमन्यद्गभस्ति मदनश्च कुमारिकाख्यम्। नागं च सौम्यमिह वारुणमन्त्यखण्डं गन्धर्वसंज्ञमिति भारतवर्षमध्ये। वर्णव्यवस्थितिरिहैव कुमारिकाख्ये शेषेषु चान्त्यजजना निवसन्ति सर्वे"।

**कुमारिन् ಕುಮಾರಿನ್** (वि०) ಕುಮಾರರುಳ್ಳವನು, ಮಕ್ಕಳುಳ್ಳವನು. कुमारा अस्य सन्तीति – "इनिः" (५-२-११५)।

**कुमारिल ಕುಮಾರಿಲ** (पुं०) ಕುಮಾರಿಲ ಭಟ್ಟಾಚಾರ್ಯರು, ಒಬ್ಬ ಮೀಮಾಂಸಕರು. "साधु कुमारिल साधुप्रज्ञोस्यायुष्मन्" प्रबोध० ६।

**कुमारी ಕುಮಾರೀ** (स्त्री०) 1. ಮದುವೆಯಾಗದಿರುವ ಕನ್ಯೆ. कुमार "ङीप्" (४-१-२०)। "त्रीणि वर्षाण्युदीक्षेत कुमार्यृतुमती सती। ऊर्ध्वं तु कालादेतस्माद्विन्देत सदृशं पतिम्" मनु० ९-९०। 2. ಒಂದು ನದಿ. 3. ಪಾರ್ವತಿ. 4. ನವಮಲ್ಲಿಕೆ. 5. ಜಂಬೂದ್ವೀಪ. 6. ವಿಷ್ಣುಕ್ರಾಂತಗಿಡ. 7. ಸಣ್ಣ ಗೋರಂಟಿಗಿಡ. 8. ಹೆಜ್ಜಾಜಿ, ವೀರಜಾಜಿ. 9. ದೊಡ್ಡಜಾತಿಯ ಯಾಲಕ್ಕಿ. "कुमारः शैलतनयानवमाल्योर्नदीभिदि। सहापराजिता कन्या जम्बूद्वीपेषु च स्त्रियाम्" मेदि०।

**कुमारीक्रीडनक ಕುಮಾರೀಕ್ರೀಡನಕ** (न०) ಹೆಣ್ಣು ಮಕ್ಕಳ ಆಟದಸಾಮಾನು. कुमारीभिः क्रीड्यतेऽनेन – क्रीड् (विहारे) "ल्युट्" (३-३-११७)। स्वार्थे "कः"।

**कुमारीतनय ಕುಮಾರೀತನಯ, –पुत्र –ಪುತ್ರ, –सुत –ಸುತ** (पुं०) ಮದುವೆಯಾಗದಿರುವ ಕನ್ಯೆಯಲ್ಲಿ ಹುಟ್ಟಿದ ಮಗ. 1. ವ್ಯಾಸಮಹರ್ಷಿ (ಸತ್ಯವತಿಯ ಪುತ್ರ). 2. ಕರ್ಣ (ಕುಂತಿಯ ಮಗ). "पितृवेश्मनि कन्या तु यं पुत्रं जनयेद्रहः। तं कानीनं वदेन्नाम्ना वोढुः कन्यासमुद्भवम्" मनु० ९-१७२।

**कुमित्र ಕುಮಿತ್ರ** (न०) ಕೆಟ್ಟ ಸ್ನೇಹಿತ. कुत्सितं मित्रम्।

**कुमुद् ಕುಮುದ್** (न०) 1. ರಕ್ತೋತ್ಪಲ, ಕೆಂದಾವರೆ. कौ मोदते – मुद (हर्षे) "क्विप्" (३-२-७६)। "रक्तोत्पलमलिप्रियम्। लक्ष्मीगृहं कुमुच्चाथ" त्रिकाण्ड०। 2. ಬಿಳಿನೈದಿಲೆ. (वि०) 3. ಕೃಪಣ, ಲೋಭಿ, ಜಿಪುಣ. कुत्सिता मुदस्य। "कुमुद् त्रिषु स्यात् कृपणे कैरवे तु नपुंसकम्" मेदि०। 4. ತೃಪ್ತಿಯಿಲ್ಲದವನು, ಸಂತೋಷವಿಲ್ಲದವನು.

**कुमुद ಕುಮುದ** (पुं०) 1. ವಿಷ್ಣು. कौ प्रकृतिमण्डल एव तैः सह मोदते — मुद (हर्षे) "कः" (वा० ३-२-५)। "प्राकृते मण्डले भूमौ मोदनाच्च महात्मभिः। मुक्तिभूमिप्रदानाद्वा कुमुदः परिकीर्तितः" इति निरुक्तिः। "कुमुदः कुन्दरः कुन्दः" वि० स०। 2. ಒಬ್ಬ ನಾಗರಾಜ, ಕುಶ ಮಹಾರಾಜನ ಪತ್ನಿಯಾದ ಕುಮುದ್ವತಿಯ ಸಹೋದರ. "नागेन लौल्यात् कुमुदेन नूनमुपात्तमन्तर्ह्रदवासिना तत्" रघु० १६-७६। 3. ದಕ್ಷಿಣ ದಿಗ್ಗಜ. 4. ಒಬ್ಬ ವಾನರ. 5. ಕರ್ಪೂರ. 6. ಶಾಲ್ಮಲಿದ್ವೀಪದ ಒಂದು ಪರ್ವತ. 7. ಒಬ್ಬ ದೈತ್ಯ. (न०) 8. ಬಿಳಿನೈದಿಲೆ. कौ मोदते — मुद (हर्षे) "कः" (३-१-१३५)। (वा० ३-२-५) वा। "कलरवमुपगीते षट्पदौघेन धत्तः कुमुदकमलखण्डे तुल्यरूपामवस्थाम्" माघ० ११-१५। 9. ರಕ್ತೋತ್ಪಲ, ಕೆಂದಾವರೆ, ಕೆಂಪುನೈದಿಲೆ. (स्त्री०) **–दा –ದಾ.** 10. ಶೀವನೆಯ ಮರ. 11. ಕಿರಿಯ ಶಿವನಿಮರ. "कुमुदः कपौ। दिङ्नागनागयोर्दैत्यभेदे च सितोत्पले। कुमुदा कुम्भीगम्भार्योः" हेम०।

**कुमुदनाथ ಕುಮುದನಾಥ** (पुं०) ಚಂದ್ರ. कुमुदस्य नाथः। **–पतिः –ಪತಿಃ.**

**कुमुदबन्धु ಕುಮುದಬಂಧು** (पुं०) ಚಂದ್ರ. कुमुदस्य बन्धुः। **–बान्धवः –ಬಾಂಧವಃ.**

**कुमुदवती ಕುಮುದವತೀ** (स्त्री०) ಕುಮುದಲತೆ, ಬಿಳಿನೈದಿಲೆಯ ಬಳ್ಳಿ. कुमुदानि सन्त्यस्याम् "मतुप्" (५-२-९४)। मस्य वः (८-२-९)।

**कुमुदा ಕುಮುದಾ** (स्त्री०) "कुमुद" ಪದದಲ್ಲಿ ನೋಡಿ.

**कुमुदाकर ಕುಮುದಾಕರ** (पुं०) ಬಿಳಿನೈದಿಲೆಗೆ ಸ್ಥಾನವಾದ ಜಲಾಶಯ. कुमुदानामाकरः। "शुक्लैः सतारैर्मुकुलीकृतैः स्थूलैः कुमुद्वतीनां कुमुदाकरैरिव" माघ० १२-४।

**कुमुदिका ಕುಮುದಿಕಾ** (स्त्री०) ಕಿರಿಯ ಶಿವನಿಮರ. कौ मोदते—मुद (हर्षे) "कः" (३-१-१३५)। स्वार्थे "कन्" (५-३-७५)।

**कुमुदिनी ಕುಮುದಿನೀ** (स्त्री०) 1. ಕುಮುದಗಳಿಂದ ಕೂಡಿದ ದೇಶ. कुमुदान्यत्र सन्ति "इनिः" (५-२-१३५)। "सपदि कुमुदिनीभिर्मीलितं हा क्षपापि क्षयमगमदपेतास्तारकास्ताः समस्ताः" माघ० ११-२४। 2. ಕುಮುದ ಲತೆ, ಬಿಳಿನೈದಿಲೆಯ ಬಳ್ಳಿ. कुमुदानि सन्त्यस्याम् "इनिः" (५-२-१३५)। 3. ಕುಮುದಗಳ ಸಮೂಹ, ಬಿಳಿನೈದಿಲೆಗಳ ರಾಶಿ. कुमुदानां समूहः "इनिः" (वा० ४-२-५१)।

**कुमुद्वत् ಕುಮುದ್ವತ್** (वि०) 1. ಬಿಳಿನೈದಿಲೆ ಹೂವು ಹೆಚ್ಚಾಗಿರುವ ಪ್ರದೇಶ. कुमुदानि सन्त्यत्र "ड्मतुप्" (४-२-८७)। वत्वम् (८-२-१०)। "हंसश्रेणीषु तारासु कुमुद्वत्सु च वारिषु" रघु० ४-१९। 2. ಅತ್ತಿಷ್ಟಿಯುಳ್ಳ. कुमुदस्यास्ति "मतुप्" (५-२-९४)। स्त्रियाम् "ङीप्" (४-१-६)। **कुमुद्वती ಕುಮುದ್ವತೀ.**

**कुमुद्वती ಕುಮುದ್ವತೀ** (स्त्री०) 1. ಬಿಳಿನೈದಿಲೆಯ ಲತೆ. कुमुद्वत् "ङीप्" (४-१-६)। "ग्लपयति यथा शशाङ्कं न तथा हि कुमुद्वतीं दिवसः" शाकु० ३-१४। 2. ಬಿಳಿನೈದಿಲೆಗಳಿಂದ ಕೂಡಿದ ಪ್ರದೇಶ. कुमुदान्यत्र सन्ति "ड्मतुप्" (४-२-८७)। "ङीप्" (४-१-६)। "शुक्लैः सतारैर्मुकुलीकृतैः स्थूलैः कुमुद्वतीनां कुमुदाकरैरिव" माघ० १२-४। 3. ಕುಶಮಹಾರಾಜನ ಪತ್ನಿ, ಕುಮುದನೆಂಬ ಸರ್ಪರಾಜನ ಸಹೋದರಿ. "अतिथिं नाम काकुत्स्थात् पुत्रमाप कुमुद्वती" रघु० १७-१।

**कुम्बा ಕುಂಬಾ** (स्त्री०) 1. ಯಜ್ಞಶಾಲೆಯ ಸುತ್ತಲೂ ಕಟ್ಟಿದ ಬೇಲಿ. कुम्ब्यतेऽनया — कुबि (आच्छादने) "अङ्" (३-३-१०५)। 2. ದಪ್ಪಬಟ್ಟೆ, ದುಪ್ಪಟಿ. "कुम्बा तु स्थूलशाटकः" त्रिकाण्ड०।

**कुम्भ ಕುಂಭ** (पुं०) 1. ಲೋಹದ ಕೊಡ, ಬಿಂದಿಗೆ, ಮಣ್ಣಿನ ಗಡಿಗೆ. कुं उम्भति उम्भ (पूरणे) "अण्" (३-२-१)। "तदग्रजाग्रत्पृथुशातकुम्भकुम्भौ न संभावयति स्तनौ कः" नैष० १०-१२२। 2. ಆನೆಯ ತಲೆಯ ಮುಂಭಾಗದ ಮಾಂಸಪಿಂಡ. "मतः किमैरावतकुम्भकैतवप्रगल्भपीनस्तनदिग्धवस्तव" नैष० ९-५२। 3. ಕುಂಭಕರ್ಣನ ಒಬ್ಬ ಮಗ. 4. ಪ್ರಹ್ಲಾದನ ಒಬ್ಬ ಮಗ. "प्रह्लादस्य त्रयः पुत्राः ख्याताः सर्वत्र भारत। विशेषतश्च कुम्भश्च निकुम्भ इति नामतः" भा० आदि०। 5. (ಜ್ಯೋತಿಷದಲ್ಲಿ) ಕುಂಭರಾಶಿ, ಗ್ರಹಗಳು ಸಂಚರಿಸುವ ಹನ್ನೆರಡು ರಾಶಿಗಳಲ್ಲಿ ಹನ್ನೊಂದನೆಯದು. 6. ಪ್ರಾಣಾಯಾಮದ ಅಂಗವಾದ ಶ್ವಾಸನಿರೋಧ, ಪ್ರಾಣಾಯಾಮದಲ್ಲಿ ಬಾಯಿ ಮತ್ತು ಮೂಗುಗಳನ್ನು ಮುಚ್ಚಿಕೊಂಡು ಶ್ವಾಸವನ್ನು ತಡೆಯುವುದು. 7. ವೇಶ್ಯೆಯ ಪತಿ, ವಿಟಪುರುಷ, ಕಾಮುಕ. 8. ತೀವ್ರವಾಗಿ ಬಲಿತಿರುವ ಕಾಮಾಲೆ ರೋಗ. "नेत्ररक्तकामला क्लीबं कुम्भः स्यात्सा महत्तरा" वैज०। 9. ಎರಡು ಖಂಡಗದ ಅಳತೆ, ಇಪ್ಪತ್ತು

ಕೊಳಗದ ಅಳತೆ. "दशद्रोणा भवेत्खारी कुम्भस्तु द्रोणविंशतिः"। 10. ಈಗಿನ ಅವಸರ್ಪಿಣಿಯಲ್ಲಿ 19ನೆಯ ಅರ್ಹಂತರ ತಂದೆ. (ನಂ) 11. ಕೆಂಪು ತಿಗಡೆಯ ಮರ. 12. ಗುಗ್ಗುಳ. (ಸ್ತ್ರೀಂ) **-भा -ಭಾ.** 13. ವೇಶ್ಯೆ, ಸೂಳೆ. **-भी -ಭೀ.** 14. ಹಸರು ಪಾದರಿ. 15. ನೀರು ಕಾಗೆ. 16. ಸಣ್ಣ ಮಡಕೆ. 17. ಕಿರಿಯ ಶಿವನಿಮರ. "कुम्भो वेश्यापतौ घटे। द्विपाङ्गे राक्षसे राशौ कुम्भं त्रिवृति गुग्गुलौ। कुम्भ्युखायां पाटलायां वारिपर्ण्यां च कट्फले" हेम०।

**कुम्भक ಕುಂಭಕ** (ಪುಂ) ಪ್ರಾಣಾಯಾಮದ ಅಂಗವಾದ ಶ್ವಾಸನಿರೋಧ. कुम्भ स्वार्थे "कः"। (1) पूरकः, (2) कुम्भकः ಮತ್ತು (3) रेचकः ಎಂದು ಪ್ರಾಣಾಯಾಮದ ಅಂಗಗಳು ಮೂರು. ವಾಯುವನ್ನು ಎಳೆದು ಕೊಂಡು ತುಂಬುವುದು ಪೂರಕವು. ತುಂಬಿದ ವಾಯುವನ್ನು ಹೊಟ್ಟೆಯಲ್ಲಿ ತಡೆದು ನಿಲ್ಲಿಸುವುದು ಕುಂಭಕ. ಆ ವಾಯುವನ್ನು ಹೊರಕ್ಕೆ ಬಿಡುವುದು ರೇಚಕವು. "पूरकं पूरणं वायोः कुम्भकः स्थापनं क्वचित्। बहिर्निःसारणं तस्य रेचकः परिकीर्तितः। दक्षिणे रेचयेद्वायुं वामेन पूरितोदरः। कुम्भेन धारयेन्नित्यं प्राणायामं विदुर्बुधाः"।

**कुम्भकर्ण ಕುಂಭಕರ್ಣ** (ಪುಂ) ಒಬ್ಬ ರಾಕ್ಷಸ, ವಿಶ್ರವಸ್ಸಿನ ಮಗ, ರಾವಣನ ತಮ್ಮ. कुम्भाविव कर्णावस्य। [ಸುಮಾಲಿಕನ್ಯೆಯಾದ ಕೈಕಸಿಯು ಒಂದು ದಿನ ಸಂಧ್ಯಾಕಾಲದಲ್ಲಿ ಪುತ್ರಾರ್ಥಿನಿಯಾಗಿ ಬಂದು ವಿಶ್ರವಸ್ಸನ್ನು ಪ್ರಾರ್ಥಿಸಲು ಆತನು "ಈ ಸಮಯಕ್ಕೆ ತಕ್ಕಂತೆ ನಿನ್ನಲ್ಲಿ ಕ್ರೂರಕರ್ಮಿಗಳಾದ ರಾಕ್ಷಸರು ಹುಟ್ಟಲಿ" ಎಂದು ವರವನ್ನಿತ್ತನು. ಅದರಿಂದ ಮೊದಲು ಹತ್ತು ತಲೆಗಳಿಂದಲೂ ಇಪ್ಪತ್ತು ತೋಳುಗಳಿಂದಲೂ ಭಯಂಕರರೂಪದ ರಾವಣನು ಹುಟ್ಟಿದನು. ಬಳಿಕ ಬೃಹದಾಕಾರದ ಕುಂಭಕರ್ಣನೂ, ವಿಕಾರ ರೂಪದ ಶೂರ್ಪಣಖೆಯೂ ಹುಟ್ಟಿದರು. ಇದರಿಂದ ಖಿನ್ನಳಾದ ಕೈಕಸಿಯು ಮತ್ತೆ ವಿಶ್ರವಸ್ಸನ್ನು ಬೇಡಲಾಗಿ ಧರ್ಮಾತ್ಮನಾದ ವಿಭೀಷಣನು ಜನಿಸಿದನು.

ಕುಂಭಕರ್ಣನ ಘೋರ ತಪಸ್ಸಿನಿಂದ ಮೆಚ್ಚಿದ ಬ್ರಹ್ಮನು ಅವನಿಗೆ ವರವನ್ನು ಕೊಡಲು ಉದ್ಯುಕ್ತನಾದಾಗ ಅದರಿಂದ ಹೆದರಿದ ದೇವತೆಗಳ ಪ್ರಾರ್ಥನೆಯಂತೆ ಕುಂಭಕರ್ಣನನ್ನು ಮಂಕುಗೊಳಿಸುವಂತೆ ಬ್ರಹ್ಮನು ಸರಸ್ವತಿಗೆ ಹೇಳಲಾಗಿ ನಿರ್ದೇವತ್ವವನ್ನು ಕೇಳಲು ಹೊರಟ ಕುಂಭಕರ್ಣನ ಬಾಯಿಂದ ಸರಸ್ವತಿಯು ನಿದ್ರಾವತ್ತ್ವರೂಪವಾದ ವರವನ್ನು ಕೇಳಿಸಿದಳು. ಅದರಿಂದ ಕುಂಭಕರ್ಣನಿಗೆ ಸದಾ ನಿದ್ರೆಬರುವ ವರ ಲಭಿಸಿತು. ಬಲಿಚಕ್ರವರ್ತಿಯ ಮಗಳಾದ ವೃತ್ರಜ್ವಾಲೆಯೆಂಬುವಳು ಕುಂಭಕರ್ಣನ ಹೆಂಡತಿ. ಕುಂಭ ನಿಕುಂಭರೆಂಬುವರು ಇವನ ಮಕ್ಕಳು. ಹನುಮಂತನು ಸೀತಾನ್ವೇಷಣಮಾಡಿ ಲಂಕೆಯನ್ನು ನಾಶಗೊಳಿಸಿ ಹೋದ ನಂತರ ಸೀತೆಯನ್ನು ರಾಮನಿಗೆ ಒಪ್ಪಿಸಿ ಶರಣಾಗತನಾಗಬೇಕೆಂದು ಕುಂಭಕರ್ಣನು ಎಷ್ಟು ಹೇಳಿದರೂ ರಾವಣನು ಕೇಳದಿರಲು ಅವನ ಅವಿವೇಕವನ್ನು ನಿಂದಿಸುತ್ತ ಹೋಗಿ ನಿದ್ರಿಸುವನು. ರಾವಣನು ಶ್ರೀರಾಮನೊಡನೆ ಘೋರ ಯುದ್ಧ ಮಾಡುತ್ತಿದ್ದಾಗ ಕುಂಭನಿಕುಂಭರಿಬ್ಬರೂ ಮಡಿಯಲು ರಾವಣನಿಂದ ಎಚ್ಚರಗೊಳಿಸಲ್ಪಟ್ಟ ಕುಂಭಕರ್ಣನು ಪುನಃ ರಾವಣನಿಗೆ ಹೇಳಿದ ವಿವೇಕದ ಮಾತು ವಿಫಲವಾಗಲು ಘೋರ ಯುದ್ಧ ಮಾಡಿ ಶ್ರೀರಾಮನಿಂದ ಹತನಾದನು.] रामा०।

**कुम्भकामला ಕುಂಭಕಾಮಲಾ** (ಸ್ತ್ರೀಂ) ಕಾಮಾಲೆ ರೋಗದ ಒಂದು ಭೇದ.

**कुम्भकार ಕುಂಭಕಾರ** (ಪುಂ) ಮಡಕೆಯನ್ನು ತಯಾರಿಸುವ ಕುಂಬಾರ, ವೈಶ್ಯಹೆಂಗಸಿನಲ್ಲಿ ಬ್ರಾಹ್ಮಣನಿಗೆ ಹುಟ್ಟಿದ ಒಬ್ಬ ಬೆರಕೆಜಾತಿಯವನು. कुम्भं करोति — डु कृञ् (करणे) "अण्" (३-२-१)। "वैश्यायां विप्रतश्चौरात् कुम्भकारः स उच्यते"। स्त्रियाम् जाति० "ङीष्" (४-१-६३)।

**कुम्भकारक ಕುಂಭಕಾರಕ** (ವಿಂ) ಮಡಕೆಯನ್ನು ತಯಾರಿಸುವವನು. कुम्भं करोति — डु कृञ् (करणे) "ण्वुल्" (३-१-१३३)। स्त्रियाम् "टाप्" (४-१-४)। **-कारिका -ಕಾರಿಕಾ.**

**कुम्भज ಕುಂಭಜ** (ಪುಂ) 1. ಅಗಸ್ತ್ಯಮಹರ್ಷಿ. कुम्भाज्जायते — जनी (प्रादुर्भावे) "डः" (३-२-९८)। 2. ವಸಿಷ್ಠಮಹರ್ಷಿ. 3. ದ್ರೋಣಾಚಾರ್ಯ. (ವಿಂ) 4. ಕುಂಭದಿಂದ ಹುಟ್ಟಿದ.

**कुम्भजन्मन् ಕುಂಭಜನ್ಮನ್** (ಪುಂ) 1. ಅಗಸ್ತ್ಯಮಹರ್ಷಿ. 2. ವಸಿಷ್ಠಮಹರ್ಷಿ. 3. ದ್ರೋಣಾಚಾರ್ಯ. कुम्भाज्जन्म यस्य। [ಮಿತ್ರಾವರುಣರೆಂಬ ಋಷಿಗಳು ಒಂದು ದಿನ ಊರ್ವಶಿಯನ್ನು ಕಂಡು ಮೋಹಿತರಾಗಿ ವೀರ್ಯಸ್ಖಲನವಾಗಲು ಅದನ್ನು ಒಂದು ಕುಂಭದಲ್ಲಿಟ್ಟರು. ಅದರಿಂದ ಅಗಸ್ತ್ಯರೂ ವಸಿಷ್ಠರೂ ಜನಿಸಿದರು. "अगस्त्यश्च वसिष्ठश्च मित्रावरुणयोर्ऋषी। रेतः सिषिचतुः कुम्भे उर्वश्याः सन्निधौ द्रुतम्" भाग० ६-१८-५। ಭರದ್ವಾಜಮಹರ್ಷಿ ತಪಸ್ಸು ಮಾಡುತ್ತಿದ್ದಾಗ

ಘೃತಾಚಿಯೆಂಬ ಅಪ್ಸರಸ್ಸನ್ನು ಕಂಡು ವೀರ್ಯಸ್ಖಲನ ವಾಗಲು ಅದನ್ನು ಒಂದು ದ್ರೋಣದಲ್ಲಿರಿಸಲು ಅದರಿಂದ ದ್ರೋಣಾಚಾರ್ಯರು ಜನಿಸಿದರು. भा० आदि० ६४।] "पञ्चवटयां ततो रामः शासनात् कुम्भजन्मनः" रघु० १२-३१।

**कुम्भदासी ಕುಂಭದಾಸೀ** (स्त्री०) 1. ವೇಶ್ಯೆ, ಸೂಳೆ. 2. ತಲೆ ಹಿಡುಕಿ, ಕುಂಟಣಿ.

**कुम्भनाभ ಕುಂಭನಾಭ** (पुं०) ಬಲಿಚಕ್ರವರ್ತಿಯ ಒಬ್ಬ ಮಗ. "बलेः पुत्रशतं त्वासीत् बाणज्येष्ठं नराधिप। धृतराष्ट्रश्च सूर्यश्च चन्द्रमाश्चेन्द्रतापनः। कुम्भनाभो गर्दभाक्षः कुक्षिरित्येवमादयः" हरिवं०।

**कुम्भपदी ಕುಂಭಪದೀ** (स्त्री०) ಕುಂಭದಂತೆ ಕಾಲು ಗಳುಳ್ಳ ಹೆಂಗಸು. कुम्भस्येव पादावस्याः "ङीप्" (५-४-१३९)।

**कुम्भपाद ಕುಂಭಪಾದ** (वि०) ಕುಂಭದಂತೆ ಕಾಲು ಗಳುಳ್ಳವನು. कुम्भस्येव पादावस्य।

**कुम्भमण्डूक ಕುಂಭಮಂಡೂಕ** (पुं०) ಕುಂಭದೊಳಗೆ ವಾಸಿಸುವ ಮಂಡೂಕ (ಕಪ್ಪೆ) ದಂತೆ ಅಲ್ಪವಾದ ತಿಳಿವಳಿಕೆ ಯುಳ್ಳವನು, ಕೇವಲ ಪರಿಮಿತಪ್ರದೇಶದಲ್ಲಿ ಮಾತ್ರ ಸಂಚರಿಸುವವನು. कुम्भे मण्डूक इव।

**कुम्भयोनि ಕುಂಭಯೋನಿ** (पुं०) 1. ಅಗಸ್ತ್ಯಮಹರ್ಷಿ. 2. ವಸಿಷ್ಠಮಹರ್ಷಿ. 3. ದ್ರೋಣಾಚಾರ್ಯ. कुम्भः योनिरुत्पत्तिस्थानमस्य। ["कुम्भजन्मन्" ಪದದಲ್ಲಿ ನೋಡಿ.] "प्रससादोदयादम्भः कुम्भयोनेर्महौजसः" रघु० ४-२१। "कुम्भयोनिरलङ्कारं तस्मै दिव्यपरिग्रहम्" रघु० १५-५५।

**कुम्भशाला ಕುಂಭಶಾಲಾ** (स्त्री०) ಕುಂಭಗಳನ್ನು ತಯಾರಿಸುವ ಮನೆ, ಕುಂಬಾರನು ಮಡಕೆಗಳನ್ನು ತಯಾರಿಸುವ ಕಾರಖಾನೆ. कुम्भाय कुम्भनिर्माणार्थं शाला।

**कुम्भसन्धि ಕುಂಭಸಂಧಿ** (पुं०) ಆನೆಯ ತಲೆಯಮೇಲೆ ಎರಡು ದುಬ್ಬುಗಳ ಮಧ್ಯಭಾಗ. कुम्भयोः सन्धिः।

**कुम्भसंभव ಕುಂಭಸಂಭವ** (पुं०) 1. ಅಗಸ್ತ್ಯಮಹರ್ಷಿ. 2. ವಸಿಷ್ಠಮಹರ್ಷಿ. 3. ದ್ರೋಣಾಚಾರ್ಯ. कुम्भः संभवः उत्पत्तिस्थानमस्य। ["कुम्भजन्मन्" ಪದದಲ್ಲಿ ನೋಡಿ.]

**कुम्भा ಕುಂಭಾ** (स्त्री०) ವೇಶ್ಯೆ, ಸೂಳೆ. कु निन्दित-व्यापारेण उम्भति पूरयति उदरम्—उम्भ (पूरणे) "अङ्" (३-३-१०३)।

**कुम्भाण्ड ಕುಂಭಾಂಡ** (पुं०) ಬಾಣಾಸುರನ ಒಬ್ಬ ಮಂತ್ರಿ. कुम्भ इव अण्डमस्य। "कुम्भाण्डवचनैरेवं दानवेन्द्रः प्रचोदितः। वाचं रूक्षमतिक्रुद्धः प्रोवाच वदतां वरः" हरिवं०। ಬಾಣಾಸುರನು ಪರಾಜಯ ಹೊಂದಿದನಂತರ ಈ ಕುಂಭಾಂಡನು ಶ್ರೀಕೃಷ್ಣನ ಅನುಗ್ರಹದಿಂದ ಆ ದೇಶಕ್ಕೆ ರಾಜನಾದನು. "कुम्भाण्ड मन्त्रिणां श्रेष्ठ प्रीतोऽस्मि तव सुव्रत। सुकृतं ते विजानामि राष्ट्रिकोऽस्तु भवानिह" हरिवं०।

**कुम्भाधिप ಕುಂಭಾಧಿಪ, -अधिपति -ಅಧಿಪತಿ** (पुं०) ಕುಂಭರಾಶಿಯ ಅಧಿಪತಿಯಾದ ಶನಿಗ್ರಹ. कुम्भस्याधिपो-धिपतिर्वा।

**कुम्भिका ಕುಂಭಿಕಾ** (स्त्री०) 1. ವೇಶ್ಯೆ, ಸೂಳೆ. कुम्भा स्वार्थे "कः"। 2. ಕಿರಿಯ ಶಿವನಿಮರ.

**कुम्भिन् ಕುಂಭಿನ್** (पुं०) 1. [ತಲೆಯ ಮೇಲೆ ಕುಂಭ (ದುಬ್ಬು) ಗಳಿರುವ] ಗಜ, ಆನೆ. कुम्भावस्य स्तः "इनिः" (५-२-११५)। 2. ಮೊಸಳೆ. 3. ಗುಗ್ಗುಳ. (वि०) 4. ಘಟವನ್ನು ಹಿಡಿದಿರುವ, ಬಿಂದಿಗೆಯನ್ನು ಹೊತ್ತಿರುವ.

**कुम्भिल ಕುಂಭಿಲ** (पुं०) 1. ಮನೆಗೆ ಕನ್ನ ಕೊರೆಯುವ ಕಳ್ಳ. 2. ಮತ್ಸ್ಯ, ಮೀನು. 3. ಸ್ಯಾಲ, ಮೈದುನ, ಪತ್ನಿಯ ಸಹೋದರ. 4. ಗ್ರಂಥಚೋರ, ಇತರರ ಗ್ರಂಥ ಭಾಗವನ್ನು ತನ್ನದನ್ನಾಗಿ ಹೇಳಿ ಬಳಸಿಕೊಳ್ಳುವವನು, ಮತ್ತೊಬ್ಬನ ಕಾವ್ಯದಿಂದ ವಿಷಯವನ್ನು ಅಪಹರಿಸಿ ಬರೆಯುವವನು. 5. ಮತ್ಸ್ಯ, ಮೀನು. "कुम्भिलो झषचौरयोः। श्लोकच्छायाहरे स्याले" हेम०।

**कुम्भी ಕುಂಭೀ** (स्त्री०) 1. ಮಡಕೆ. 2. ಹಸುರು ಪಾದರಿ ಗಿಡ. 3. ನೀರುಕಾಗೆ. 4. ಕಿರಿಯ ಶಿವನಿ ಮರ. "कुम्भ्युखायां पाटलायां वारिपर्ण्यां च कट्फले" हेम०।

**कुम्भीक ಕುಂಭೀಕ** (पुं०) 1. ಪುನ್ನಾಗವೃಕ್ಷ, ಸುರಹೊನ್ನೆ ಮರ, ಸುರಗಿ ಮರ. कुम्भीव कायति—कै (शब्दे) "कः" (३-२-३)। 2. ನೀರುಕಾಗೆ.

**कुम्भीधान्य ಕುಂಭೀಧಾನ್ಯ** (न०) ಕುಂಭದಲ್ಲಿ ತುಂಬು ವಷ್ಟು ಧಾನ್ಯ. कुम्भीमितं धान्यम्।

**कुम्भीधान्यक ಕುಂಭೀಧಾನ್ಯಕ** (वि०) ಒಂದು ವರ್ಷಕ್ಕೆ ಬೇಕಾಗುವಷ್ಟು ಧಾನ್ಯವನ್ನು ಕೂಡಿಸಿಟ್ಟಿರುವವನು. कुम्भीमितं धान्यमस्य वा "कप्" (५-२-१५४)। "कुसूलधान्यको वा स्यात् कुम्भीधान्यक एव वा" मनु० ४-७।

**कुम्भीनस ಕುಂಭೀನಸ** (ಪುಂ) 1. ಕ್ರೂರವಾದ ಸರ್ಪ, ಹಾವು. कुम्भीव नसा नासाऽस्य। (स्त्री०) **–सी–ಸೀ.** 2. ಲವಣಾಸುರನ ತಾಯಿ. 3. ಚಿತ್ರರಥನ ಹೆಂಡತಿ.

**कुम्भीनसि ಕುಂಭೀನಸಿ** (ಪುಂ) ಒಬ್ಬ ರಾಕ್ಷಸ.

**कुम्भीपाक ಕುಂಭೀಪಾಕ** (ಪುಂ) ಪಾಪಾತ್ಮರನ್ನು ಆವಿಗೆಯಲ್ಲಿ ಮಡಕೆಯಂತೆ ಬೇಯಿಸುವ ಒಂದು ನರಕ. "यस्त्विह वा उग्रः पशून् पक्षिणो वा प्राणत उपरन्धयति तमपकरुणं पुरुषादैरपि विगर्हितं अमुत्र यमानुचराः कुम्भीपाके तप्ततैले उपरन्धयन्ति" भाग० ५-२६-१३।

**कुम्भीर ಕುಂಭೀರ** (ಪುಂ) ನಕ್ರ, ಮೊಸಳೆ. कुम्भिनं गजमीरयति – ईर (गतौ) "अण्" (३-२-१)। "गर्दभत्वं तु संप्राप्य दश वर्षाणि जीवति। संवत्सरं तु कुम्भीरः ततो जायेत मानवः" भा० अनु० १११-५९। स्त्रियाम् जाति० "ङीष्" (४-१-६३)। **–री–ರೀ.**

**कुम्भीरासन ಕುಂಭೀರಾಸನ** (ನಂ) ಯೋಗಾಸನಗಳಲ್ಲಿ ಒಂದು ಭೇದ. ಒಂದು ಕಾಲಿನ ಮೇಲೆ ಇನ್ನೊಂದು ಕಾಲಿನ ಅಡಿಯನ್ನೂ, ತಲೆಯಮೇಲೆ ಎರಡು ಕೈಗಳನ್ನೂ ಇಟ್ಟುಕೊಂಡು ದಂಡಾಕಾರವಾಗಿ ನಿಂತುಕೊಳ್ಳುವುದು ಕುಂಭೀರಾಸನ. "पादोपरि पदं दत्त्वा शीर्षोपरि करद्वयम्। तिष्ठेद्दण्डाकृतिर्भूमौ कुम्भीरासनमुच्यते।"

**कुम्भील ಕುಂಭೀಲ** (ಪುಂ) ನಕ್ರ, ಮೊಸಳೆ. कुम्भीर रस्य लत्वम्।

**कुम्भोदर ಕುಂಭೋದರ** (ಪುಂ) 1. ಈಶ್ವರನ ಒಬ್ಬ ಅನುಚರ. "अवेहि मां किंकरमष्टमूर्तेः कुम्भोदरं नाम निकुम्भतुल्यम्" रघु० २-३५। (ವಿ०) 2. ಕುಂಭದಂತೆ ಹೊಟ್ಟೆಯುಳ್ಳ. कुम्भ इव उदरं यस्य। स्त्रियाम् वा "ङीप्". (४-१-५५)। **कुम्भोदरी ಕುಂಭೋದರೀ.** कुम्भोदरा ಕುಂಭೋದರಾ.

**कुम्भोद्भव ಕುಂಭೋದ್ಭವ** (ಪುಂ) ಕುಂಭದಲ್ಲಿ ಜನಿಸಿದ, ಗಡಿಗೆಯಲ್ಲಿ ಹುಟ್ಟಿದ : 1. ಅಗಸ್ತ್ಯಮಹರ್ಷಿ. 2. ವಸಿಷ್ಠ ಮಹರ್ಷಿ. 3. ದ್ರೋಣಾಚಾರ್ಯ. कुम्भादुद्भवो यस्य।

**कुयोग ಕುಯೋಗ** (ಪುಂ) ತಿಥಿ ವಾರ ನಕ್ಷತ್ರಗಳ ಸಂಬಂಧದಿಂದ ಉಂಟಾಗುವ ಕೆಟ್ಟ ಯೋಗ. ["योग" ಪದದಲ್ಲಿ ನೋಡಿ.]

**कुरङ्कर ಕುರಂಕರ** (ಪುಂ) ಸಾರಸಪಕ್ಷಿ, ನೀರುಹಕ್ಕಿ, ತಾವರೆ ಹಕ್ಕಿ. करोति–डु कृञ् (करणे) "अच्" (३-१-१३४)। कुरस्य शब्दस्य करः। पृषो०। मुम्।

**कुरङ्ग ಕುರಂಗ** (ಪುಂ) 1. ಹುಲ್ಲೆ, ಜಿಂಕೆ. डु कृञ् (करणे) "अङ्गच्" (उ० १-११८)। बाहु० उत्वम्। "मुक्तातङ्ककुरङ्गकाननभुवः शैलाः स्खलद्वारयः" प्रबोध० ३-१। स्त्रियाम् जाति० "ङीष्" (४-१-६३)। **कुरङ्गी ಕುರಂಗೀ.** "यद्येतदीयेन ततः कृतार्था स्वचक्षुषी किं कुरुते कुरङ्गी" नैष० ७-३०। 2. ಒಂದು ಪುಣ್ಯ ತೀರ್ಥ. "करतोयां कुरङ्गे च त्रिरात्रोपोषितो नरः। अश्वमेधमवाप्नोति विगाह्य प्रयतः शुचिः" भा० अनु० २५-१२। स्वार्थे "कः"। **–कः–ಕಃ.**

**कुरङ्गनयना ಕುರಂಗನಯನಾ** (स्त्री०) ಜಿಂಕೆಯಂತೆ ಕಣ್ಣುಗಳುಳ್ಳ ಹೆಂಗಸು. कुरङ्गस्येव नयने यस्याः। "किन्त्वेका यमुना कुरङ्गनयना नेत्राम्बुभिर्वर्धते" उद्भ०।

**कुरङ्गम ಕುರಂಗಮ** (ಪುಂ) ಜಿಂಕೆ, ಹುಲ್ಲೆ, ಚಿಗರಿ. कौ रङ्गं मिमीते – माङ् (माने) "डः" (वा० ३-२-४८)। "एणः कुरङ्गमो रिश्यः सादृश्यश्चारुलोचनः" त्रिकाण्ड०।

**कुरचिल्ल ಕುರಚಿಲ್ಲ** (ಪುಂ) ಏಡಿ, ನಳ್ಳಿ. कुरे शब्दे चिल्लति – चिल्ल (शैथिल्ये) "अच्" (३-१-१३४)।

**कुरट ಕುರಟ** (ಪುಂ) ಚಪ್ಪಲಿಯನ್ನು ತಯಾರಿಸುವವನು, ಚರ್ಮದ ಕೆಲಸ ಮಾಡುವವನು. कुत्सितं रटति – रट (परिभाषणे) "अच्" (३-१-१३४)। "चर्मरुः कुरटः पादुकृत्" त्रिकाण्ड०।

**कुरण्टक ಕುರಂಟಕ** (ಪುಂ) ಹಳದಿ ಹೂವಿನ ಗೋರಂಟಿ ಗಿಡ. रुण्टति–रुटि (स्तेये) "ण्वुल्" (३-१-१३३)। कुत्सितः रुण्टकः। "तत्र पीतो कुरण्टकः" अम०।

**कुरण्टी ಕುರಂಟೀ** (स्त्री०) ಮರದ ಬೊಂಬೆ. "कुरण्टो झिण्टिकाभेदे कुरण्टी दारुपुत्रिका" हेम०।

**कुरण्ड ಕುರಂಡ** (ಪುಂ) ಅಂಡರೋಗ, ವೃಷಣವು ಊದಿಕೊಳ್ಳುವ ಒಂದು ರೋಗ. कुर (शब्दे) "अण्डन्" बाहु०। **ಅಂಡರೋಗಕ್ಕೆ ಕಾರಣ:** "मूत्रधारणशीलस्य मूत्रजः स तु गच्छतः। अम्भोभिः पूर्णदृतिवत् क्षोभं याति सरुङ्मृदुः। मूत्रकृच्छ्रमधः स्याच्च चालयन् फलकोषयोः। वातकोपिभिराहारैः शीततोयावगाहनैः। धारणे रणभाराध्वविषमाङ्गप्रवर्तनैः। पवनो विगुणीकृत्य स्वनिवेशादधो नयेत्। कुर्याद्वङ्क्षणसन्धिस्थो ग्रन्थ्याभं श्वयथुं तदा"। **ಅದರ ಚಿಕಿತ್ಸೆ:** "बहुवारस्य बीजं च पिष्ट्वा तच्चार्द्रकैः सह। कुरण्डं नाशयेद्द्रुद्रे लेपनान्नात्र संशयः।"

**कुरर ಕುರರ** (ಪುಂ) ಕುರವ ಹಕ್ಕಿ, ಮೀನು ತಿನ್ನುವ ಒಂದು ದೊಡ್ಡ ಜಾತಿಯ ಪಕ್ಷಿ, ಕಡಲಹದ್ದು. कु (शब्दे) "क्रन्" (उ० ३-१३३)। स्त्रियाम् "ङीप्" (४-१-६३)। **कुररी ಕುರರೀ.** "तत्र मामनयद्रक्षः क्रोशन्तीं कुररीमिव" भा० आदि० ६-१२।

**कुरल ಕುರಲ** (ಪುಂ) 1. ಚೂರ್ಣಕುಂತಲ, ಮುಂಗುರುಳು. 2. ಕುರವ ಹಕ್ಕಿ, ಕಡಲ ಹದ್ದು. कुरर रस्य लः। स्त्रियाम् जाति० "ङीष्" (४-१-६३)। **–ली –ಲೀ.**

**कुरव ಕುರವ** (ಪುಂ) 1. ಕೆಂಪು ಹೂವಿನ ದೊಡ್ಡ ಗೋರಂಟೆ. कु ईषत् अलीनां रवो यत्र। 2. ಕೆಂಪು ಹೂವಿನ ಮುಳ್ಳು ಗೋರಂಟೆ. 3. ಬಿಳಿ ಗೋರಂಟೆ. 4. ಕೆಟ್ಟ ಶಬ್ದ. कुत्सितो रवः। (ನಂ) 5. ಗೋರಂಟೆ ಹೂವು. (ವಿಂ) 5. ಕೆಟ್ಟ ಶಬ್ದವುಳ್ಳ. कुत्सितो रवो यत्र। वा "कप्" (५-४-१५४)। **कुरवकः ಕುರವಕಃ.** "मधुलिहां मधुदानविशारदाः कुरवका रवकारणतां ययुः" रघु० ९-२९। **कुरवकम् ಕುರವಕವಂ.** "चूडापाशे नवकुरवकं चारु कर्णे शिरीषं सीमन्ते च त्वदुपगमजं यत्र नीपं वधूनाम्" मेघ० २-२।

**कुरस ಕುರಸ** (ಪುಂ) 1. ಮದ್ಯ. कुत्सितो रसोऽत्र। "स्यादासवोऽपि कुरसः" हारा०। 2. ಕೆಟ್ಟ ರಸ. (ವಿಂ) 3. ಕೆಟ್ಟ ರಸವುಳ್ಳ. कुत्सितो रसोऽस्य। (स्त्री०) **–रसा –ರಸಾ.** ಬೆಂಡೆ ಗಿಡ.

**कुराल ಕುರಾಲ** (ಪುಂ) ಕಪ್ಪುಕಾಲಿನ ಬೂದು ಬಣ್ಣದ ಕುದುರೆ.

**कुरी ಕುರೀ** (स्त्री०) ಒಂದು ತೃಣಧಾನ್ಯ.

**कुरीर ಕುರೀರ** (ನಂ) 1. ಮೈಥುನ, ಸಂಭೋಗ. डु कृञ् (करणे) "ईरन्" (उ० ४-३३)। उत्वं च। कुरीरं मैथुनम् सि० कौ०। 2. ಹೆಂಗಸರ ತಲೆಯುಡಿಗೆ, ಅಲಂಕಾರದ ತೊಡಿಗೆ.

**कुरु ಕುರು** (ಪುಂ) 1. ಚಂದ್ರವಂಶದ ಒಬ್ಬ ದೊರೆ, ಅಜಮೀಢರಾಜನ ಮೊಮ್ಮಗನಾದ ಸಂವರಣನ ಮಗ, ಧೃತರಾಷ್ಟ್ರ ಮತ್ತು ಪಾಂಡು ಇವರ ಮೂಲಪುರುಷ. ಶುಭಾಂಗಿಯೆಂಬುವಳು ಕುರುವಿನ ಪತ್ನಿ. ವಿದೂರಥನು ಇವನ ಮಗ. "योऽजमीढसुतस्त्वन्यः ऋक्षः संवरणस्ततः। तपत्यां सूर्यकन्यायां कुरुक्षेत्रपतिः कुरुः" भाग० ९-२२-३। "तत्र अजमीढादृक्षायां संवरणो जज्ञे स वंशकरः। संवरणस्तु वैवस्वतीं तपतीं नामोपयेमे। तस्यामस्य जज्ञे कुरुः। कुरुस्तु खलु दाशार्हीमुपयेमे शुभाङ्गीं नाम। तस्यामस्य जज्ञे विदूरथः" भा०आदि० ६३। (ಪುಂ ಬಂ ವಂ) 2. ಕುರುದೇಶ. कुरूणां निवासो जनपदः कुरवः —कुरु "अण्" (४-२-६९)। अणो लुप् (४-२-८१)। "वितन्वति क्षेममदेवमातृकाश्चिराय तस्मिन् कुरवश्चकासति" किरा० १-१७। ಈ ದೇಶವು ಹಸ್ತಿನಾಪುರದಿಂದ ಹಿಡಿದು ಕುರುಕ್ಷೇತ್ರಕ್ಕೆ ದಕ್ಷಿಣಕ್ಕೂ ಪಂಚಾಲ ದೇಶದ ಪೂರ್ವಭಾಗಕ್ಕೂ ಸೇರಿದಂತಿರುವುದು. "हस्तिनापुरमारभ्य कुरुक्षेत्रस्य दक्षिणे। पञ्चालपूर्वभागे तु कुरुदेशः प्रकीर्तितः"। 3. ಕುರುದೇಶದ ದೊರೆಗಳು. "उवाच पार्थ पश्यैतान् समवेतान् कुरूनिति" गीता १-२५। 4. ಕುರುದೇಶದ ಜನರು. (ಪುಂ) 5. ಓದನ, ಅನ್ನ. "कुरुर्नृपान्तरे भक्ते पुमान् पुंभूम्नि नीवृति" मेदि०। 6. ಆಗ್ನೀಧ್ರರಾಜನ ಒಬ್ಬ ಮಗ. "जम्बुद्वीपेश्वरो यस्तु आग्नीध्रो मुनिसत्तम। तस्य पुत्रा बभूवुस्ते प्रजापतिसमा नव। नाभिः किंपुरुषश्चैव हरिवर्ष इलावृतः। रम्यो हिरण्वान् षष्ठश्च कुरुर्भद्राश्व एव च। केतुमालस्तथैवान्यः साधुचेष्टो नृपोऽभवत्" विष्णुपु०। (ಪುಂ ಬಂ ವಂ) 7. ಆಗ್ನೀಧ್ರರಾಜನ ಮಗ ಕುರುರಾಜನು ಆಳುತ್ತಿದ್ದ ಒಂದು ದೇಶ. ಇದಕ್ಕೆ **"ಉತ್ತರಕುರು"** ವೆಂದು ಹೆಸರು. [ಆಗ್ನೀಧ್ರನು ತಾನು ಆಳುತ್ತಿದ್ದ ಭೂಮಂಡಲವನ್ನು ಒಂಬತ್ತು ಭಾಗ ಮಾಡಿ ತನ್ನ ಒಂಬತ್ತು ಮಂದಿ ಮಕ್ಕಳಿಗೂ ಹಂಚಿದನು. ಕುರುರಾಜನು ಆಳುತ್ತಿದ್ದ ಭೂಭಾಗಕ್ಕೆ "कुरुवर्ष" ವೆಂದು ಹೆಸರಾಯಿತು. ಇದೇ **"ಉತ್ತರಕುರು"** ದೇಶ.] "विजित्य यः प्राज्यमयच्छदुत्तरान् कुरूनकुप्यं वसु वासवोपमः" किरा० १-३५। स्त्रियाम् "ऊङ्" (४-१-६६)। **कुरूः ಕುರೂಃ.** ಕುರುರಾಜನ ಮಗಳು. कुरोरपत्यं स्त्री "ण्यः" (४-१-१७)। तस्य लुक्" (४-१-१७४)।

**कुरुक्षेत्र ಕುರುಕ್ಷೇತ್ರ** (ನಂ) 1. ಭಾರತವರ್ಷದೊಳಗಣ ಒಂದು ಪುಣ್ಯಕ್ಷೇತ್ರ, ಸರಸ್ವತೀ-ದೃಷದ್ವತೀ ನದಿಗಳ ಮಧ್ಯದಲ್ಲಿರುವ ಒಂದು ದೇಶ. ಇದಕ್ಕೆ ಬ್ರಹ್ಮನ ಉತ್ತರ ವೇದಿ ಅಂತರ್ವೇದಿ ವಿಶಸನಕ್ಷೇತ್ರ ಮತ್ತು ಸಮಂತಪಂಚಕಗಳೆಂಬ ಹೆಸರೂ ಉಂಟು. ಕ್ಷತ್ರಿಯವಂಶವನ್ನು ನಾಶ ಮಾಡಲು ಹೊರಟ ಪರಶುರಾಮನು ಕ್ಷತ್ರಿಯರ ರಕ್ತದಿಂದ ಐದು ಮಡುಗಳನ್ನು ತುಂಬಿದುದರಿಂದ **"ಸಮಂತಪಂಚಕ"** ವೆಂದು ಹೆಸರಾಯಿತು. ಈ ಕ್ಷೇತ್ರದಲ್ಲಿ ಯುದ್ಧಮಾಡಿ ಮಡಿದವರಿಗೆ ಪುಣ್ಯಲೋಕಪ್ರಾಪ್ತಿಯುಂಟೆಂದು ಐತಿಹ್ಯವುಂಟು. ಸ್ವಾಯಂಭುವಮನುವಿನ

ಕಾಲದಲ್ಲಿ ಇದಕ್ಕೆ "ಬ್ರಹ್ಮಾವರ್ತ"ವೆಂದು ಹೆಸರು. ಈಗ ಇದು ದೆಹಲಿಗೆ ಉತ್ತರದಲ್ಲಿರುವ "ಕರ್ನಾಳ್" ಜಿಲ್ಲೆಯಲ್ಲಿ ಒಂದು ರೇಲ್ವೆ ನಿಲ್ದಾಣವಾಗಿದೆ. 2. ಕೌರವ ಪಾಂಡವರು ಯುದ್ಧಮಾಡಿದ ಒಂದು ಭೂಪ್ರದೇಶ. "धर्मक्षेत्रे कुरुक्षेत्रे समवेता युयुत्सवः। मामकाः पाण्डवाश्चैव किमकुर्वत सञ्जय" गीता १-१।

**कुरुजाङ्गल ಕುರುಜಾಂಗಲ** (पुं० ब० व०) 1. ಕುರುದೇಶ ಮತ್ತು ಜಾಂಗಲ ದೇಶ. कुरवश्च जाङ्गलाश्च। (न०) 2. ಕುರುದೇಶ ಮತ್ತು ಜಾಂಗಲ ದೇಶ. कुरवश्च जङ्गली च तेषां समाहारः। "विशिष्टलिङ्गो नदीदेशोऽग्रामाः" (पा० सू० २-४-७) इति एकवद्भावः। 3. ಕುರು ಕ್ಷೇತ್ರ. कुरुषु जाङ्गलम्। "तस्य नाम्नाऽभिविख्यातं पृथिव्यां कुरुजाङ्गलम्। कुरुक्षेत्रं स तपसा पुण्यं चक्रे महातपाः" भा० आदि० १०१-३८।

**कुरुण्ट ಕುರುಂಟ** (पुं०) ಹಳದಿ ಗೋರಂಟ ಗಿಡ. कुत्सितं रुण्टति — रुटि (स्तेये) "अच्" (३-१-१३४)।

**कुरुण्टी ಕುರುಂಟೀ** (स्त्री०) ಮರದ ಬೊಂಬೆ. कुरुण्ट "ङीष्" (४-१-४१)। "कुरुण्टी दारुपुत्र्यां च कुरुण्टो झिण्टिकान्तरे" विश्व०।

**कुरुत ಕುರುತ** (पुं०) ಬಿದಿರಿನಿಂದ ತಯಾರಿಸಲ್ಪಟ್ಟ ಗೆರಸಿ. कुर (शब्दे) "उतक्" बाहु०।

**कुरुपाण्डव ಕುರುಪಾಂಡವ** (पुं० द्विव०) ಕೌರವರು ಮತ್ತು ಪಾಂಡವರು.

**कुरुपुङ्गव ಕುರುಪುಂಗವ** (पुं०) ಕುರುಶ್ರೇಷ್ಠ, ಕುರು ವಂಶದಲ್ಲಿ ಮುಖ್ಯನಾದವನು. कुरुषु पुङ्गवः।

**कुरुबिल्व ಕುರುಬಿಲ್ವ** (पुं०) ಪದ್ಮರಾಗ, ಕೆಂಪು.

**कुरुबिस्त ಕುರುಬಿಸ್ತ** (पुं०) ಚಿನ್ನದ ಒಂದು ಪಲದ ತೂಕ. कुरुषु बिस्तः।

**कुरुराज् ಕುರುರಾಜ್, -राज -ರಾಜ** (पुं०) 1. ಕುರು ದೇಶದ ದೊರೆ, ದುರ್ಯೋಧನ. 2. ಯುಧಿಷ್ಠಿರ, ಧರ್ಮರಾಜ. कुरूणां राट् राजा वा — राजा "टच्" (५-४-९१)। "त्वयि भक्तिमता न सत्कृतः कुरुराजा गुरुरेव चेदिपः। प्रियमांसमृगाधिपोज्झितः किमवद्यः करिकुम्भजो मणिः" माघ० १६-४५। "कुरुराजनिर्दयनिपीडनाभयान्मुखमध्यरोहि मुरविद्विषः श्रिया" माघ० १३-११।

**कुरुल ಕುರುಲ** (पुं०) ಹಣೆಯ ಮೇಲಿನ ಚೂರ್ಣಕುಂತಲ, ಮುಂಗುರುಳು. कु ईषल्लडति—लड (विलासे) "अच्" (३-१-१३४)। पृषो०। "स तु भाले भ्रमरकः कुरुलो भ्रमरालकः" अभि० चि०।

**कुरुवक ಕುರುವಕ** (पुं०) 1. ಹಳದಿ ಗೋರಂಟ ಗಿಡ. 2. ಕೆಂಪು ಗೋರಂಟ ಗಿಡ. (वि०) 3. ದರಿದ್ರ, ಬಡವ. "निःस्वे कुरुवकः शोणाम्लानझिण्टीप्रभेदयोः" मेदि०।

**कुरुविन्द ಕುರುವಿಂದ** (पुं०) 1. ಭದ್ರಮುಸ್ತೆ, ಕೊನ್ನಾರಿ ಗೆಡ್ಡೆ. कुरून् विन्दति—विद्लृ (लाभे) "शः" (३-१-१३८)। मुम् (७-१-५९)। 2. ಪದ್ಮರಾಗ. "बहलानुरागकुरुविन्ददलप्रतिबद्धमध्यमिव दिग्वलयम्" माघ० ९-८। 3. ಮುಕುರ, ಕನ್ನಡಿ. 4. ಮಾಷ, ಉದ್ದು. 5. ಅಲಸಂದೆ, ಕಾರಾಮಣಿ. 6. ಚಂದನ, ಗಂಧ, ಮೈಗೆ ಪೂಸುವ ಒಂದು ಸುಗಂಧದ್ರವ್ಯ. "कुरुविन्दः पद्मरागे मुकुरव्रीहिभेदयोः। कुल्माषे हिङ्गुले मुस्ते" हेम०।

**कुरूप ಕುರೂಪ** (न०) 1. ಅಂದವಿಲ್ಲದ ರೂಪ, ವಿಕಾರ ರೂಪ, ವಿಕಾರವಾದ ಆಕಾರ. कुत्सितं रूपम्। (वि०) 2. ವಿಕಾರವಾದ ರೂಪವುಳ್ಳ, कुत्सितं रूपं यस्य। "सुरूपं वा कुरूपं वा पुमानित्येव भुञ्जते" मनु० ९-१४।

**कुर्कुट ಕುರ್ಕುಟ** (पुं०) ಕುಕ್ಕುಟ, ಕೋಳಿ. कुरिति शब्दं कुटति—कुट (कौटिल्ये) "कः" (३-१-१३५)। स्त्रियाम् "ङीप्" (४-१-६३)। -टी -ಟೀ.

**कुर्कुर ಕುರ್ಕುರ** (पुं०) ಕುಕ್ಕುಟ, ಕೋಳಿ. कुरिति अव्यक्तशब्दं कुरति—कुर "कः" (३-१-१३५)। "उपकर्तुमपि प्राप्तं निःस्वं मन्वन्ति कुर्कुरम्" पञ्चतं०।

**कुर्द—क्रीडायाम्** (भ्वा० आत्म० अक० से०)। कूर्दते। चुकूर्दे। कूर्दिता। कूर्दिष्यते। कूर्दताम्। अकूर्दत। ಇತ್ಯಾದಿ. ಆಟವಾಡು, ನೆಗೆ, ಹಾರು.

भावे:—कूर्द्यते। कूर्द्यताम्। अकूर्द्यत ಇತ್ಯಾದಿ.

णिचि:—कूर्दयति, -ते। कूर्दयां चकार, -चक्रे, -बभूव, -आस। कूर्दयिता। कूर्दयिष्यति, -ते। ಇತ್ಯಾದಿ.

कृत्सु:—कूर्दितव्यः। कूर्दनीयः। कूर्द्यः। कूर्दितः। कूर्दितवान्, कूर्दितवती। कूर्दमानः। कूर्दितम्। कूर्दनम्। कूर्दित्वा। ಇತ್ಯಾದಿ.

**कुर्वत् ಕುರ್ವತ್** (पुं०) 1. ಚಮ್ಮಾರ, ಮೋಚಿ. डु कृञ् (करणे) "शतृ" (३-२-१२४)। (वि०) 2. ಮಾಡು ತ್ತಿರುವ. "कुर्वन्तमित्यतिभरेण नगानवाचः पुष्पैविराम मलिनां च नगानवाचः" माघ० ६-७९, १०-२०।

3. ಸೇವಕ, ಆಳು. 4. ಕೆಲಸಗಾರ. स्त्रियाम् "ङीप्" (४-१-६)। -ती -ತೀ. "मध्येसमुद्रं ककुभः पिशङ्गीर्या कुर्वती काञ्चनवप्रभासा" माघ० ३-३३।

**कुर्वद्रूप ಕುರ್ವದ್ರೂಪ** (न०) (ಬೌದ್ಧ ಮತದಲ್ಲಿ) ಫಲೋತ್ಪತ್ತಿಗೆ ಅವ್ಯವಹಿತಪೂರ್ವದಲ್ಲಿರುವ ಒಂದು ಕಾರಣ. ನೀರು ಗೊಬ್ಬರ ಇತ್ಯಾದಿಗಳಿಂದ ಬೀಜದಲ್ಲಿ ಒಂದು ಅತಿಶಯವುಂಟಾಗಿ ಉತ್ತರಕ್ಷಣದಲ್ಲಿ ಅಂಕುರವು ಹುಟ್ಟುವುದು. ಇದರಿಂದ ಅಂಕುರವು ಹುಟ್ಟುವ ಮೊದಲು ಈ ಅತಿಶಯದಿಂದ ಕೂಡಿದ ಬೀಜವು ಈ ಮತದಲ್ಲಿ "ಕುರ್ವದ್ರೂಪ" ವಾಗುವುದು.

**कुर्वाण ಕುರ್ವಾಣ** (वि०) 1. ಸೇವಕ, ಆಳು. 2. ಮಾಡುತ್ತಿರುವ. डु कृञ् (करणे) "शानच्" (३-२-१२४)। "कुर्वाणानां सांपरायान्तरायं भूरेणूनां मृत्युना मार्जनाय" माघ० १८-८।

**कुल-संस्त्याने बन्धुषु च** (भ्वा० पर० अक० सेट्)। कोलति। चुकोल। कोलतु। अकोलीत्। 1. ಒಟ್ಟುಗೂಡಿಸು. 2. ಸಂಬಂಧ ಬೆಳೆಸು.

**कुल ಕುಲ** (न०) 1. ವಂಶ, ಪೀಳಿಗೆ. कोलति — कुल (संस्त्याने) "कः" (३-१-१३५)। "यः कुलेऽजनि जगन्मुकुटे वः प्रार्थकेप्सितमपूरि न येन" नैष० ५-१११। रघु० ३-१। 2. ಸಮಾನ ಜಾತಿಯ ಪಶುಗಳ ಸಮೂಹ, ಗುಂಪು. "सेनागजेन मथितस्य निजप्रसूनैर्मम्ले यथागतमगामि कुलैरलीनाम्" माघ० ५-४३। ಕೋಶಗಳಲ್ಲಿ "कुल" ಪದಕ್ಕೆ ತಿರ್ಯಕ್‌ಪ್ರಾಣಿಗಳ ಗುಂಪು ಎಂಬ ಅರ್ಥವಿದ್ದರೂ ಮನುಷ್ಯರ ಗುಂಪು ಎಂಬ ಅರ್ಥದಲ್ಲೂ ಮಹಾಕವಿಯ ಪ್ರಯೋಗವಿದೆ. "एतं नलं तं दमयन्ति पश्य त्यजार्तिमित्यालिकुलप्रबोधान्" नैष० ६-६०। 3. ಗೃಹ, ಮನೆ. 4. ತನು, ಶರೀರ, ಮೈ. 5. ಜನಪದ, ದೇಶ. 6. ಎರಡು ನೇಗಿಲುಗಳಿಂದ ಉಳಲ್ಪಡುವಷ್ಟು ಜಮೀನು; ಆರು ಎತ್ತುಗಳನ್ನು ಕಟ್ಟಿ ಉಳುವ ನೇಗಿಲು ಒಂದು ಹಲ. ಅಂತಹ ಎರಡು ಹಲಗಳಿಂದ ಉಳಬಹುದಾದ ಭೂಮಿಯು ಕುಲವು. "दशी कुलं तु भुञ्जीत विंशी पञ्च कुलानि च। ग्रामं ग्रामशताध्यक्षः सहस्राधिपतिः परम्" मनु० ७-११९। 7. ಋಷಿಗಳಿಗೆ ಸಂತೋಷವುಂಟುಮಾಡುವ ಕಾರ್ಯ, ಋಷಿತರ್ಪಣ. "ऋषीणां तर्पणं यत्तत्कौलकुल्यं कुलं च तत्" वैज०। (स्त्री०) -ली -ಲೀ. 8. ಹೆಗ್ಗುಳ್ಳದ ಗಿಡ. "कण्टकार्यौषधौ कुली" मेदि०।

**कुलक ಕುಲಕ** (पुं०) 1. ಕಾಗೆತೊಂಬರೆ ಗಿಡ. कुलस्य गृहस्य प्रतिकृतिरिव "कन्" (५-३-९६)। "काकेन्दुः कुलकः काकपीलुकः काकतिन्दुके" अम०। 2. ಸ್ವರ್ಗ, ದೇವಲೋಕ. "कुलको नाककाकेन्दू" त्रिकाण्ड०। 3. ವಲ್ಮೀಕ, ಹುತ್ತ. 4. ಒಂದು ವಂಶದ ಯಜಮಾನ. 5. ಒಂದು ಗುಂಪಿನ ಯಜಮಾನ. (न०) 6. ನಾಲಿಗೆಯ ಮೇಲಿನ ಕೊಳೆ. "कुलकं रसनामलम्" हारा०। 7. ಒಂದೇ ಕರ್ತೃ ಮತ್ತು ಕ್ರಿಯಾಪದಗಳ ಸಂಬಂಧವುಳ್ಳ (ಏಕಾನ್ವಯವುಳ್ಳ) ನಾಲ್ಕು ಶ್ಲೋಕಗಳಿಗಿಂತಲೂ ಹೆಚ್ಚು ಶ್ಲೋಕಗಳ ಸಮುದಾಯ. "द्वाभ्यां युग्ममिति प्रोक्तं त्रिभिः श्लोकैर्विशेषकम्। कालापकं चतुर्भिः स्यात् तदूर्ध्वं कुलकं मतम्"। 8. ಪಡವಲ ಗಿಡ. कुल (संस्त्याने) "कः" (३-१-१३५)। "कुलकं पञ्चादिश्लोकसमवाये पटोलके। कुलकः कुलप्रधाने वल्मीके काकतिन्दुके"।

**कुलकण्टक ಕುಲಕಂಟಕ** (वि०) ವಂಶಕ್ಕೆ ಮುಳ್ಳಿನಂತಿರುವವನು, ಕುಲಕ್ಕೆ ಅಪಕೀರ್ತಿ ತರುವ ನೀಚಮನುಷ್ಯ. कुले कण्टक इव।

**कुलकन्यका ಕುಲಕನ್ಯಕಾ, -कन्या -ಕನ್ಯಾ** (स्त्री०) ಸತ್ಕುಲದಲ್ಲಿ ಹುಟ್ಟಿದ ಕನ್ಯೆ, ಒಳ್ಳೆಯ ವಂಶದಲ್ಲಿ ಹುಟ್ಟಿದ ಹುಡುಗಿ. "गृहे गृहे पुरुषाः कुलकन्यका उद्वहन्ति। न च कोऽपि लज्जाप्रसाधनमनपराधमुग्धस्वभावं कुलकुमारीजनं प्रभवामीति वागनलेन प्रज्वलयति" मालती० ७।

**कुलकलङ्क ಕುಲಕಲಂಕ** (वि०) ವಂಶಕ್ಕೆ ಕೆಟ್ಟ ಹೆಸರು ತರುವವನು, ಮನೆತನಕ್ಕೆ ಅಪಕೀರ್ತಿ ತರುವವನು. कुलस्य कलङ्क इव।

**कुलकुणि ಕುಲಕುಣಿ** (स्त्री०) ವೇಶ್ಯೆ, ಸೂಳೆ.

**कुलक्षय ಕುಲಕ್ಷಯ** (पुं०) ವಂಶಕ್ಷಯ, ವಂಶವು ನಾಶವಾಗುವುದು, ವಂಶವು ಅಳಿದುಹೋಗುವುದು. कुलस्य क्षयः। "कुलक्षये प्रणश्यन्ति कुलधर्माः सनातनाः" गीता १-४०।

**कुलगुरु ಕುಲಗುರು** (पुं०) ವಂಶಪರಂಪರೆಯಾಗಿ ಬಂದ ಆಚಾರ್ಯರು. कुलस्य गुरुः।

**कुलघ्न ಕುಲಘ್ನ** (वि०) ವಂಶವನ್ನು ಹಾಳುಮಾಡುವವನು. कुलं हन्ति — हन (हिंसागत्योः) "कः" (३-२-५)। "स्त्रीषु दुष्टासु वार्ष्णेय जायते वर्णसङ्करः। सङ्करो नरकायैव कुलघ्नानां कुलस्य च" गीता।

**कुलज ಕುಲಜ** (वि०) 1. ಕುಲದಲ್ಲಿ ಜನಿಸಿದ, ವಂಶದಲ್ಲಿ ಹುಟ್ಟಿದ. कुले वंशे जायते — जनी (प्रादुर्भावे) "डः"

(३-२-९७)। "पतिंवरायाः कुलजं वरस्य वा यमः कमप्याचरितातिथिं यदि" नैष० ९-८१। 2. ಸತ್ಕುಲದಲ್ಲಿ ಜನಿಸಿದ, ಒಳ್ಳೆಯ ವಂಶದಲ್ಲಿ ಹುಟ್ಟಿದ. "कुलजे वृत्तसंपन्ने धर्मज्ञे सत्यवादिनि। महापक्षे धनिन्यार्ये निक्षेपं निक्षिपेद्बुधः" मनु० ८-१७९। स्त्रियाम् –जा –ಜಾ. "कुलाभिमानी कुलजां नराधिपः" किरा० १-३१।

**कुलजन ಕುಲಜನ** (पुं०) ಸತ್ಕುಲದಲ್ಲಿ ಜನಿಸಿದವನು, ಒಳ್ಳೆಯ ವಂಶದಲ್ಲಿ ಹುಟ್ಟಿದವನು.

**कुलटा ಕುಲಟಾ** (स्त्री०) ಮನೆಮನೆಗೂ ತಿರುಗಾಡುತ್ತಿರುವ ಹೆಂಗಸು, ಅಸಭ್ಯ ಹೆಂಗಸು, ಸ್ವೈರಿಣಿ, ವ್ಯಭಿಚಾರಿಣಿ. अटति–अट (गतौ) "अच्" (३-१-१३४)। कुलस्य अटा। शक०। "मूढ दुर्योधन, कुलटाविप्रलम्य-मानमात्मानं बहुमन्यमानः अधुना किं वक्ष्यसि" वेणी० २।

**कुलतन्तु ಕುಲತಂತು** (पुं०) ಒಂದು ವಂಶದಲ್ಲಿ ಹುಟ್ಟಿ ಇರುವವರಲ್ಲಿ ಕೊನೆಯ ಪ್ರಜೆ, ತಂತುವಿನಂತೆ ಮುಂದಕ್ಕೆ ಅವಿಚ್ಛಿನ್ನವಾಗಿ ಸಂತತಿಯು ಬೆಳೆಯಲು ಕಾರಣವಾದುದರಿಂದ ಈ ಹೆಸರು. कुलस्य तन्तुरिव।

**कुलतिथि ಕುಲತಿಥಿ** (स्त्री०) ಬಿದಿಗೆ, ಷಷ್ಠಿ ಮತ್ತು ದಶಮಿ ಹೊರತಾದ ಸಮತಿಥಿಗಳು, ಚೌತಿ, ಅಷ್ಟಮಿ, ದ್ವಾದಶಿ ಮತ್ತು ಚತುರ್ದಶೀ ತಿಥಿಗಳು. "द्वितीया दशमी षष्ठी कुलाकुलमुदाहृतम्। विषमाश्चाकुलाः सर्वाः शेषाश्च तिथयः कुलाः" तन्त्रसा०।

**कुलतिलक ಕುಲತಿಲಕ** (पुं०) ವಂಶಕ್ಕೆ ತಿಲಕದಂತಿರುವವನು, ವಂಶಕ್ಕೆ ಅಲಂಕಾರಪ್ರಾಯನಾದವನು. कुलस्य तिलकमिव।

**कुलत्थ ಕುಲತ್ಥ** (पुं०) 1. ಹುರುಳಿ ಗಿಡ. "ताम्रवृन्तः कुलत्थः स्यात्" त्रिकाण्ड०। (न०) 2. ಹುರುಳಿ.

**कुलदीप ಕುಲದೀಪ –प्रदीप –ಪ್ರದೀಪ** (पुं०) ವಂಶವನ್ನು ಪ್ರಕಾಶಗೊಳಿಸುವವನು, ವಂಶಕ್ಕೆ ಕೀರ್ತಿಗೌರವಗಳನ್ನು ತರುವವನು. कुलस्य दीप इव प्रदीप इव वा। "जातः कुले तस्य किलोरुकीर्तिः कुलप्रदीपो नृपतिर्दिलीपः" रघु० ६-७४।

**कुलदेवता ಕುಲದೇವತಾ** (स्त्री०) ಒಂದು ವಂಶದಲ್ಲಿ ಆರಾಧಿಸಲ್ಪಡುವ ದೇವತೆ, ವಂಶಪರಂಪರೆಯಾಗಿ ಪೂಜಿಸಲ್ಪಡುವ ದೇವತೆ. कुलस्य देवता। "तामर्चिताभ्यः कुलदेवताभ्यः कुलप्रतिष्ठां प्रणमय्य माता" कुमा० ७-२७।

**कुलद्रुम ಕುಲದ್ರುಮ** (पुं०) ಚಳ್ಳೆ, ಹೊಂಗೆ ಬಿಲ್ವ ಅರಳಿ ಕದಂಬ ಬೇವು ಆಲ ಅತ್ತಿ ನೆಲ್ಲಿ ಮತ್ತು ಹುಣಿಸೆ ಮರಗಳು. "श्लेष्मातकः करञ्जश्च बिल्वाश्वत्थकदम्बकाः। निम्बो वटोदुम्बरौ च धात्री चिञ्चा दश स्मृताः"।

**कुलधर्म ಕುಲಧರ್ಮ** (पुं०) ಕುಲಾಚಾರ, ಮನೆತನದಲ್ಲಿ ಆಚರಿಸಲ್ಪಡುವ ಧರ್ಮ. "उत्सन्नकुलधर्माणां मनुष्याणां जनार्दन। नरके नियतं वासो भवतीत्यनुशुश्रुम" गीता १-४४।

**कुलधारक ಕುಲಧಾರಕ** (पुं०) ಮಗ, ವಂಶವನ್ನು ಮುಂದೆ ಸ್ಥಿರವಾಗಿ ಬೆಳೆಸುವವನು, ವಂಶವನ್ನು ಕಾಪಾಡುವವನು. कुलं धारयति – धृञ् (धारणे) + णिच् "ण्वुल्" (३-१-१३३)। "पुत्रो द्वितीयः कुलधारकः" त्रिकाण्ड०।

**कुलधुर्य ಕುಲಧುರ್ಯ** (वि०) ಮನೆಯಲ್ಲಿ ಮುಖ್ಯನಾದವನು, ಮನೆಯ ಯಜಮಾನ, ಸಂಸಾರದ ಭಾರವನ್ನು ಹೊತ್ತಿರುವವನು, ಪ್ರಾಯದ ಮಗ. धुरां वहति "यत्" (४-४-७७)। कुलस्य धुर्यः। "तदुपहितकुटुम्बः शान्तिमार्गोत्सुकोऽभूत् न हि सति कुलधुर्ये सूर्यवंश्या गृहाय" रघु० ७-७१।

**कुलनक्षत्र ಕುಲನಕ್ಷತ್ರ** (न०) ಆರ್ದ್ರಾನಕ್ಷತ್ರ ಹೊರತಾದ ಸಮನಕ್ಷತ್ರಗಳು, ಭರಣಿ, ರೋಹಿಣಿ, ಪುಷ್ಯ, ಮಘೆ, ಉತ್ತರಫಲ್ಗುನಿ, ಚಿತ್ತೆ ಮುಂತಾದ ಸಮಸಂಖ್ಯಾಕ ನಕ್ಷತ್ರಗಳು. "वारुणार्द्राभिजिन्मूलं कुलाकुलमुदाहृतम्। कुलानि समधिष्ण्यानि शेषाणि चाकुलानि वै" तन्त्रसा०।

**कुलनारी ಕುಲನಾರೀ** (स्त्री०) ಸತ್ಕುಲದಲ್ಲಿ ಜನಿಸಿದ ಹೆಂಗಸು, ಒಳ್ಳೆಯ ಮನೆತನದಲ್ಲಿ ಹುಟ್ಟಿದ ಹೆಂಗಸು.

**कुलनाश ಕುಲನಾಶ** (पुं०) 1. ವಂಶದ ನಾಶ, ವಂಶವು ಅಳಿದುಹೋಗುವುದು. कुलस्य नाशः। ಮನೆಯ ಯಜಮಾನನ ಪೋಷ್ಯವರ್ಗಕ್ಕೆ ಸೇರಿದ ಹೆಂಡತಿ ಮಗಳು ತಂಗಿ ಸೊಸೆ ಮೊದಲಾದ ಹೆಂಗಸರನ್ನು ಪೀಡಿಸಿ ಅವರು ಕಣ್ಣೀರು ಬಿಡುವಂತಾದರೆ ಅಂತಹ ಮನೆಯು ಬೇಗ ನಾಶವಾಗುವುದು. ಮನೆಯ ಯಜಮಾನನು ಇವರನ್ನು ಸಂತೋಷದಿಂದಿರಿಸದಿದ್ದರೆ ಇವರ ಶಾಪಕ್ಕೊಳಗಾಗಿ ಆ ಮನೆಯು ಯಾವ ವಿಧದಲ್ಲೂ ಏಳಿಗೆಗೆ ಬರಲಾರದು. ಇವರೆಲ್ಲರೂ ಸಂತುಷ್ಟರಾಗಿ ಮನೆಯನ್ನು ಹರಸಿದರೆ ಅದು ಎಲ್ಲಾ ವಿಧದಲ್ಲೂ ವೃದ್ಧಿಹೊಂದುವುದು. "शोचन्ति जामयो यत्र विनश्यत्याशु तत्कुलम्। न शोचन्ति तु यत्रैता वर्धते तद्धि सर्वदा। जामयो यानि गेहानि शपन्त्यप्रतिपूजिताः। तानि कृत्याहतानीव विनश्यन्ति

समन्ततः" मनु० ३-५७,८। ವೇದವಿಹಿತವಾದ ಕರ್ಮಾನುಷ್ಠಾನವೂ ಪರಮಾತ್ಮನ ಪೂಜೆಯೂ ಶುದ್ಧವಾದ ನಡತೆಯೂ ಇರುವವರೆಗೂ ವಂಶವು ವೃದ್ಧಿ ಹೊಂದುವುದು. "यावच्च वेदधर्माः स्युः यावत् स्याच्छङ्करार्चनम्। यावत् स्यात् शुचि कृत्यं च तावन्न कुलनाशनम्"। 2. ಉಷ್ಟ್ರ, ಒಂಟೆ. कुलं भूलग्नं नाश्नाति – न + अश (भोजने) "अच्" (३-१-१३४)। ಒಂಟೆಯು ಕತ್ತು ಎತ್ತರವಾಗಿದ್ದು ಭೂಮಿಯಲ್ಲಿರುವ ಪದಾರ್ಥಗಳನ್ನು ತಿನ್ನಲು ಸಾಧ್ಯವಿಲ್ಲದಿರುವುದರಿಂದ ಈ ಹೆಸರು. स्त्रियाम् जाति० "ङीष्" (४-१-६३)। **–नाशनी – ನಾಶನೀ.** (न०) 3. ವಂಶವು ಅಳಿದುಹೋಗುವಿಕೆ. णश (अदर्शने) भावे "ल्युट्" (३-३-११५)। (वि०) 4. ವಂಶವನ್ನು ನಾಶಪಡಿಸುವ. कर्तृ० "ल्युः" (३-१-१३४)। स्त्रियाम् **–नाशनी – ನಾಶನೀ.** 5. ಯಾದವವಂಶವನ್ನು ನಾಶಪಡಿಸಿದ ಮುಸಲ (ಒನಕೆ). [ಒಂದು ದಿನ ಕೆಲವು ಮಹರ್ಷಿಗಳು ಶ್ರೀಕೃಷ್ಣನ ಸಂದರ್ಶನಕ್ಕಾಗಿ ದ್ವಾರಕೆಗೆ ಬಂದಿದ್ದಾಗ ಕೆಲವು ಯಾದವರು ಸಾಂಬನಿಗೆ ಹೆಂಗಸಿನ ವೇಷ ಹಾಕಿ ಇವಳು ಎಂತಹ ಮಗುವನ್ನು ಹೆರುವಳೆಂದು ಕೇಳಲಾಗಿ ಇದರಿಂದ ಕೋಪಗೊಂಡ ಆ ಋಷಿಗಳು "ವಂಶವನ್ನು ನಾಶಗೊಳಿಸುವ ಒನಕೆಯನ್ನು ಹೆರುವಳು"ಎಂದು ಹೇಳಿದರು. ಅದರಂತೆ ಸಾಂಬನು ಉಕ್ಕಿನ ಒನಕೆಯೊಂದನ್ನು ಹೆತ್ತನು. ಇದರಿಂದ ಹೆದರಿದ ಯಾದವರು ಆ ಒನಕೆಯನ್ನು ಪುಡಿಮಾಡಿ ಸಮುದ್ರದಲ್ಲಿ ಎಸೆದರು. ಜೊತೆಗೆ ಗಾಂಧಾರಿಯ ಶಾಪವೂ ಒಂದಿದ್ದುದರಿಂದ ಶ್ರೀಕೃಷ್ಣನ ಆಜ್ಞೆಯಂತೆ ತೀರ್ಥಯಾತ್ರೆಗೆ ಹೊರಟು ಪ್ರಭಾಸಕ್ಷೇತ್ರವನ್ನು ಸೇರಿದರು. ಅಲ್ಲಿ ಸಾತ್ಯಕಿ ಕೃತವರ್ಮರಿಗೆ ವಾಗ್ವಾದ ನಡೆದು ಸಾತ್ಯಕಿಯು ಕೃತವರ್ಮನ ತಲೆಯನ್ನು ಕಡಿದುಹಾಕಿದನು. ಇದರಿಂದ ಕೋಪಗೊಂಡ ಉಭಯಪಂಗಡದವರೂ, ತಾವು ಹಿಂದೆ ಸಮುದ್ರದಲ್ಲಿ ಬಿಸಾಡಿದ್ದ ಮುಸಲದ ಪುಡಿಯು ಶರಕಾಂಡಗಳಾಗಿ ಬೆಳೆದದ್ದರಿಂದ ಅವನ್ನು ತೆಗೆದುಕೊಂಡು ಪರಸ್ಪರ ಹೊಡೆದಾಡಿ ಹತರಾದರು. ಇದರಿಂದ ಯಾದವ ಕುಲವೇ ಅಳಿದುಹೋಯಿತು.] भा० मौसल०।

**कुलपति ಕುಲಪತಿ** (पुं०) 1. ಒಂದು ಮನೆಯ ಯಜಮಾನ. 2. ಒಂದು ವಂಶದ ಯಜಮಾನ. कुलस्य पतिः। 3. ಹತ್ತು ಸಹಸ್ರ ಮಂದಿ ವಿದ್ಯಾರ್ಥಿಗಳನ್ನು ಅಶನ ವಸನಗಳಿಂದ ಪೋಷಿಸಿ ವಿದ್ಯಾಭ್ಯಾಸ ಮಾಡಿಸುವ ಮುನಿ. "मुनीनां दशसाहस्रं योऽन्नदानादिपोषणात्। अध्यापयति विप्रर्षिरसौ कुलपतिः स्मृतः"। ಇದೇ ಅರ್ಥದಲ್ಲಿ ಈಗಿನ ವಿಶ್ವವಿದ್ಯಾಲಯದ ಅಧ್ಯಕ್ಷರಲ್ಲಿ ಈ ಪದದ ಪ್ರಯೋಗವಿರುವುದು. ಹಿಂದಿನ ಕಾಲದಲ್ಲಿ ನಳಂದ ತಕ್ಷಶಿಲಾ ವಿಶ್ವವಿದ್ಯಾಲಯಗಳು ಇಂತಹ ಕುಲಪತಿಗಳ ಆಡಳಿತಕ್ಕೊಳಪಟ್ಟಿದ್ದುವೆಂದು ಚರಿತ್ರೆಯಿರುವುದು.

**कुलपरम्परा ಕುಲಪರಂಪರಾ** (स्त्री०) ವಂಶಪರಂಪರೆ, ವಂಶದಲ್ಲಿ ಹುಟ್ಟುವವರ ಶ್ರೇಣಿ,—ಪಙ್ಕ್ತಿ. ಒಂದೇ ಬಗೆಯ ವಸ್ತುಗಳ ಸಾಲು ಪರಂಪರೆಯೆನಿಸುವುದು. ಹಾಗೆಯೇ ಒಂದು ವಂಶದಲ್ಲಿ ಹುಟ್ಟುವ ಜನರೆಲ್ಲರೂ ಆ ವಂಶದ ಪರಂಪರೆಯಲ್ಲಿ ಸೇರುವರು.

**कुलपर्वत ಕುಲಪರ್ವತ** (पुं०) ಒಂದು ದ್ವೀಪದ ಒಂದು ಭೂಭಾಗದ ಮೇರೆಯನ್ನು ತಿಳಿಸುವ ಪರ್ವತಗಳು. "रुणध्मि सवितुर्मार्गं भिनद्मि कुलपर्वतान्" भट्टि० ६-३५। ಒಂದೊಂದು ದ್ವೀಪದಲ್ಲೂ ಏಳೇಳು ಕುಲಪರ್ವತಗಳಿರುವುವು. "मर्यादाकारकास्तेषां तथान्ये वर्षपर्वताः। सप्तैव तेषां नामानि शृणुष्व मुनिसत्तम"।

**1. ಜಂಬೂದ್ವೀಪದ ಭಾರತವರ್ಷದ ಸಪ್ತ ಕುಲಪರ್ವತಗಳು:** (1) महेन्द्रः, (2) मलयः, (3) सह्यः, (4) शक्तिमान्, (5) ऋक्षः, (6) विन्ध्यः ಮತ್ತು (7) पारियात्रः।

**2. ಪ್ಲಕ್ಷದ್ವೀಪದ ಸಪ್ತಕುಲಪರ್ವತಗಳು:** (1) गोमेदः, (2) चन्द्रः, (3) नारदः, (4) दुन्दुभिः, (5) सोमकः, (6) सुमनाः ಮತ್ತು (7) वैभ्राजः।

**3. ಶಾಲ್ಮಲಿದ್ವೀಪದ ಸಪ್ತಕುಲಪರ್ವತಗಳು:** (1) कुमुदः, (2) उन्नतः, (3) वलाहकः, (4) द्रोणः, (5) कङ्कः, (6) महिषः ಮತ್ತು (7) कुमुद्वान्।

**4. ಕುಶದ್ವೀಪದ ಸಪ್ತಕುಲಪರ್ವತಗಳು:** (1) विद्रुमः, (2) हेमशैलः, (3) द्युतिमान्, (4) पुष्पवान्, (5) कुशेशयः, (6) हरिः ಮತ್ತು (7) मन्थराचलः।

**5. ಕ್ರೌಂಚದ್ವೀಪದ ಸಪ್ತಕುಲಪರ್ವತಗಳು:** (1) क्रौञ्चः, (2) वामनः, (3) अर्थकारकः। (4) रत्नशैलः, (5) दिवावृत्, (6) पुण्डरीकवान् ಮತ್ತು (7) दुन्दुभिः।

**6. ಶಾಕದ್ವೀಪದ ಸಪ್ತಕುಲಪರ್ವತಗಳು:** (1) उदयगिरिः, (2) जलधारः, (3) रैवतकः, (4) श्यामः, (5) अम्भोगिरिः, (6) अम्बिकेयः ಮತ್ತು (7) केसरी।

**7. ಪುಷ್ಕರದ್ವೀಪದ ಕುಲಪರ್ವತ:** ಈ ದ್ವೀಪದಲ್ಲಿ मानसोत्तरः ಎಂಬ ಒಂದು ಪರ್ವತ ಮಾತ್ರವಿರುವುದು. "एकश्चात्र महाभाग प्रख्यातो वर्षपर्वतः। मानसोत्तरसंज्ञो वै मध्यतो वलयाकृतिः" विष्णुपु०।

**कुलपांसन ಕುಲಪಾಂಸನ** (वि०) ವಂಶಕ್ಕೆ ಕಳಂಕ ತರುವವನು, ವಂಶದ ಹೆಸರನ್ನು ಕೆಡಿಸುವವನು. कुलं पांसयति —पसि (नाशने) + णिच् "ल्युः" (३-१-१३४)।

**कुलपांसुल ಕುಲಪಾಂಸುಲ** (वि०) ವಂಶದಲ್ಲಿ ಪಾಪ ಕಾರ್ಯವನ್ನು ಮಾಡುವವನು. "आः दुरात्मन् कुरुकुलपांसुल, एवमतिक्रान्तमर्यादे त्वयि निमित्तमात्रेण पाण्डवक्रोधेन भवितव्यम्" वेणी० १।

**कुलपालक ಕುಲಪಾಲಕ** (वि०) 1. ಕುಲವನ್ನು ಕಾಪಾಡುವವನು, ಮನೆಯ ಯೋಗಕ್ಷೇಮವನ್ನು ಚೆನ್ನಾಗಿ ನೋಡಿಕೊಳ್ಳುವವನು. 2. ವಂಶದ ಹೆಸರನ್ನು ಕಾಪಾಡುವವನು, ವಂಶದ ಗೌರವವನ್ನು ಕಾಪಾಡುವವನು, ಸತ್ಪುತ್ರ. कुलं पालयति—पाल (रक्षणे) + णिच् "ण्वुल्" (३-१-१३३)। स्त्रियाम् "टाप्" —पालिका — **ಪಾಲಿಕಾ.** ವಂಶಕ್ಕೆ ಗೌರವ ತರುವ ಸತ್ಕುಲದಲ್ಲಿ ಹುಟ್ಟಿದ ಹೆಂಗಸು. "कुलस्त्री कुलपालिका" अम०।

**कुलपालि(ली) ಕುಲಪಾಲಿ(ಲೀ)** (स्त्री०) ಸತ್ಕುಲದಲ್ಲಿ ಹುಟ್ಟಿದ ಹೆಂಗಸು, ವಂಶದ ಖ್ಯಾತಿ ಗೌರವಗಳನ್ನು ಕಾಪಾಡುವ ಹೆಂಗಸು. कुलं पालयति — पाल (रक्षणे) + णिच् "इन्" (उ० ४-११७)। वा "ङीप्" (ग० ४-१-४५)।

**कुलपुत्र ಕುಲಪುತ್ರ** (पुं०) ಸತ್ಕುಲದಲ್ಲಿ ಜನಿಸಿದ ಸತ್ಪುತ್ರ, ಒಳ್ಳೆಯ ಮನೆತನದಲ್ಲಿ ಹುಟ್ಟಿ ಕುಲಕ್ಕೆ ಗೌರವ ತರುವ ಮಗ. स्त्रियाम् **—पुत्री — ಪುತ್ರೀ.**

**कुलपुरुष ಕುಲಪುರುಷ** (पुं०) 1. ಒಂದು ವಂಶದ ದೊಡ್ಡ ಮನುಷ್ಯ. 2. ಒಂದು ವಂಶದ ಮೂಲಪುರುಷ.

**कुलप्रसूत ಕುಲಪ್ರಸೂತ** (वि०) ಸತ್ಕುಲದಲ್ಲಿ ಹುಟ್ಟಿದವನು. कुले सत्कुले प्रसूतः।

**कुलभूभृत् ಕುಲಭೂಭೃತ್** (पुं०) ಕುಲಪರ್ವತ. ["कुलपर्वत" ಪದದಲ್ಲಿ ನೋಡಿ.]

**कुलभूषण ಕುಲಭೂಷಣ** (वि०) ವಂಶಕ್ಕೆ ಅಲಂಕಾರಪ್ರಾಯನಾದ. कुलं भूषयति—भूष (अलङ्कारे) + णिच् "ल्युः" (३-१-१३४)।

**कुलभृत्या ಕುಲಭೃತ್ಯಾ** (स्त्री०) 1. ಗರ್ಭಿಣಿ ಹೆಂಗಸಿಗೆ ಬೇಕಾದುದನ್ನು ಕೊಟ್ಟು ಪೋಷಿಸುವುದು, ಬಸಿರು ಹೆಂಗಸಿನ ಬಯಕೆಯನ್ನು ಈಡೇರಿಸಿ ಉಪಚರಿಸುವುದು. कुलैः वंशजनैः भृत्या भरणम्। 2. ಸೂಲಗಿತ್ತಿ, ಹೆರಿಗೆಯಲ್ಲಿ ಸಹಾಯಕಳಾದ ಹೆಂಗಸು. 3. ವಂಶವನ್ನು ಕಾಪಾಡುವುದು. कुलस्य भृत्या भरणम्।

**कुलमित्र ಕುಲಮಿತ್ರ** (न०) ವಂಶದ ಸುಹೃತ್ತು, ಮನೆತನಕ್ಕೇ ಬಂದ ಗೆಳೆಯ, ಒಂದು ಕುಲದಲ್ಲಿ ಅಭಿಮಾನದಿಂದಿರುವ ಗೆಳೆಯ. कुलस्य मित्रम्।

**कुलयोषित् ಕುಲಯೋಷಿತ್** (स्त्री०) ದೊಡ್ಡ ವಂಶದಲ್ಲಿ ಹುಟ್ಟಿದ ಯೋಗ್ಯ ಹೆಂಗಸು.

**कुलवधू ಕುಲವಧೂ**(स्त्री०)ಸತ್ಕುಲದಲ್ಲಿ ಹುಟ್ಟಿದಹೆಂಗಸು, ಗೌರವದಿಂದ ವಂಶದ ಹೆಸರನ್ನು ಕಾಪಾಡುವ ಹೆಂಗಸು, ಮಾನದಿಂದ ಮನೆಯಲ್ಲಿರುವ ಹೆಂಗಸು. कुले स्थिता वधूः।

**कुलवर्धन ಕುಲವರ್ಧನ** (वि०) ಕುಲವನ್ನು ಬೆಳೆಸುವವನು, ವಂಶವನ್ನು ಮುಂದಕ್ಕೆ ವೃದ್ಧಿಪಡಿಸುವವನು. कुलं वर्धयति — वृधु (वृद्धौ) "ल्युः" (३-१-१३४)।

**कुलवार ಕುಲವಾರ** (पुं०) ಮಂಗಳ ಮತ್ತು ಶುಕ್ರವಾರಗಳು. "रविश्चन्द्रो गुरुः सौरिः चत्वारश्चाकुला इमे। भौमशुक्रौ कुलाख्यौ तु बुधवारः कुलाकुलः" तन्त्रसा०।

**कुलवृद्ध ಕುಲವೃದ್ಧ** (पुं०) ವಂಶದಲ್ಲಿ ಹಿರಿಯನಾದವನು, ಒಂದು ಸಂಸಾರದ ಯಜಮಾನ. कुले वृद्धः।

**कुलव्रत ಕುಲವ್ರತ** (न०) ಮನೆಯಲ್ಲಿ ಆಚರಿಸಲ್ಪಡುವ ವ್ರತ, ಕುಲಕ್ರಮಾಗತವಾದ ನಿಯಮಾಚರಣೆ. कुले आचरणीयं व्रतम्। "गलितवयसामिक्ष्वाकूणामिदं हि कुलव्रतम्" रघु० ३-७०।

**कुलशिखरिन् ಕುಲಶಿಖರಿನ್** (पुं०) ಕುಲಪರ್ವತಗಳು. ["कुलपर्वत" ಪದದಲ್ಲಿ ನೋಡಿ.] "कुलशिखरिणः क्षुद्रा नैते न वा जलराशयः" भर्तृ० १-९०।

**कुलशेखर ಕುಲಶೇಖರ** (पुं०) ಮುಕುಂದಮಾಲಾ ಸ್ತೋತ್ರವನ್ನು ರಚಿಸಿದ ಒಬ್ಬ ವಿಷ್ಣುಭಕ್ತರು. [ಇವರು ವಿಷ್ಣುಭಕ್ತರಾದ "ಆಳ್ವಾರ್" ಶ್ರೇಣಿಯಲ್ಲಿ ಸೇರಿದವರು. ಕುಲಶೇಖರಾಳ್ವಾರ್‌ರವರು "ಕೋಳಿಕ್ಕೂಡು" ರಾಜಧಾನಿಯಲ್ಲಿದ್ದ ದೃಢವ್ರತರಾಜನ ಮಕ್ಕಳು. ಈ ರಾಜನಿಗೆ ಬಹಳ ಕಾಲ ಮಕ್ಕಳಿಲ್ಲದಿರಲು ಮಹಾವಿಷ್ಣುವನ್ನು ವಿಶೇಷವಾಗಿ ಪೂಜಿಸಿ ಈ ಮಗನನ್ನು ಪಡೆದರು. ಇವರು ಬಾಲ್ಯದಲ್ಲೇ ನಾಲ್ಕು ವೇದಗಳಲ್ಲೂ ಷಡಂಗಗಳಲ್ಲೂ ಧನುರ್ವಿದ್ಯೆಯಲ್ಲೂ ರಥಗಜತುರಗಶಾಸ್ತ್ರಗಳಲ್ಲೂ ವಿಶೇಷವಾಗಿ ಪರಿಣತರಾಗಿದ್ದರು. ಇವರ ಅಪಾರವಾದ ಭಕ್ತಿಗೆ ಮೆಚ್ಚಿದ ಶ್ರೀರಾಮನು ಅನೇಕ ಸಲ ಇವರಿಗೆ ಪ್ರತ್ಯಕ್ಷವಾಗಿ ಅನುಗ್ರಹಿಸಿರುವ ಪ್ರಸಂಗಗಳೂ ಉಂಟು.]

**कुलश्रेष्ठ ಕುಲಶ್ರೇಷ್ಠ** (वि०) ಶಿಲ್ಪಿಗಳ ವಂಶದಲ್ಲಿ ಶ್ರೇಷ್ಠನಾದವನು, ಶಿಲ್ಪಿಗಳ ವಂಶದ ಪ್ರಧಾನಪುರುಷ. "कुलिकः स्यात् कुलश्रेष्ठः" अम०।

**कुलश्रेष्ठिन् ಕುಲಶ್ರೇಷ್ಠಿನ್** (ಪುಂ०) ಶಿಲ್ಪಿಕುಲದ ಯಜಮಾನ.

**कुलसम्भव ಕುಲಸಂಭವ** (ವಿ०) ಯಾವುದಾದರೊಂದು ವಂಶದಲ್ಲಿ ಹುಟ್ಟಿದ. कुले संभवोऽस्य। "बीज्यस्तु कुलसंभवः" अम०।

**कुलस्त्री ಕುಲಸ್ತ್ರೀ** (ಸ್ತ್ರೀ०) ಸತ್ಕುಲದಲ್ಲಿ ಹುಟ್ಟಿದ ಹೆಂಗಸು, ಮನೆತನದ ಗೌರವವನ್ನು ಕಾಪಾಡುವ ಹೆಂಗಸು. कुले स्थिता स्त्री। "कुलस्त्री कुलपालिका" अम०।

**कुलस्थक ಕುಲಸ್ಥಕ** (ಪುಂ०) 1. ಹುರುಳಿ ಗಿಡ. (ನ०) 2. ಹುರುಳಿ. "ताम्रवृन्तः कुलस्थकः" वैज०। 3. ಕೃಷ್ಣ ಸರ್ಪ. "कृष्णसर्पः कुलस्थकः" वैज०।

**कुलहीन ಕುಲಹೀನ** (ವಿ०) ನೀಚವಂಶದವನಾದ, ನೀಚ ಕುಲದಲ್ಲಿ ಹುಟ್ಟಿದ. कुलेन हीनः।

**कुलहुण्डक ಕುಲಹುಂಡಕ** (ಪುಂ०) ಆವರ್ತ, ನೀರಿನ ಸುಳಿ. "अथाम्भसां भ्रमः। पुरोटिः पत्रझङ्कारो वदालः कुलहुण्डकः" त्रिकाण्ड०।

**कुलाकुल ಕುಲಾಕುಲ** (ಪುಂ०) 1. ಬುಧವಾರ. "रविश्चन्द्रो गुरुः सौरिश्चत्वारश्चाकुला इमे। भौमशुक्रौ कुलाख्यौ तु बुधवारः कुलाकुलः" तन्त्रसा०। 2. ಬಿದಿಗೆ, ಷಷ್ಠಿ ಮತ್ತು ದ್ವಾದಶೀತಿಥಿಗಳು. "द्वितीया द्वादशी षष्ठी कुलाकुलमुदाहृतम्" तन्त्रसा०। 3. ಆರ್ದ್ರಾ, ಮೂಲ, ಅಭಿಜಿತ್ ಮತ್ತು ಶತಭಿಷಕ್ ಈ ನಕ್ಷತ್ರಗಳು. "वारुणार्द्राभिजिन्मूलं कुलाकुलमुदाहृतम्" तन्त्रसा०।

**कुलाङ्गना ಕುಲಾಂಗನಾ** (ಸ್ತ್ರೀ०) ಸತ್ಕುಲದಲ್ಲಿ ಹುಟ್ಟಿದ ಹೆಂಗಸು, ಒಳ್ಳೆಯ ಮನೆತನದ ಹೆಂಗಸು. कुलस्य सत्कुलस्याङ्गना। "असन्तुष्टा द्विजा नष्टाः सन्तुष्टश्च महीपतिः। सलज्जा गणिका नष्टा निर्लज्जा च कुलाङ्गना"।

**कुलाङ्गार ಕುಲಾಂಗಾರ** (ಪುಂ०) ಕುಲದೂಷಕ, ನಡತೆಯಿಂದ ತನ್ನ ವಂಶವನ್ನು ಕೆಡಿಸುವವನು, ವಂಶಕ್ಕೆ ಅಪಕೀರ್ತಿ ತರುವವನು. कुलस्याङ्गार इव।

**कुलाचल ಕುಲಾಚಲ** (ಪುಂ०) ಕುಲಪರ್ವತಗಳು. ["कुलपर्वत" ಪದದಲ್ಲಿ ನೋಡಿ.]

**कुलाचार ಕುಲಾಚಾರ** (ಪುಂ०) 1. ಕುಲಧರ್ಮ. ಮನೆತನದಲ್ಲಿ ಆಚರಿಸಲ್ಪಡುವ ಧರ್ಮ. कुलस्याचारः। 2. ಜೀವ ಪ್ರಕೃತಿತತ್ತ್ವ ದಿಕ್ಕು ಕಾಲ ಆಕಾಶ ಕ್ಷಿತಿ ಅಪ್ಪು ತೇಜಸ್ಸು ವಾಯು ಇವುಗಳಲ್ಲಿ ಬ್ರಹ್ಮಬುದ್ಧಿಯಿಂದ ಮಾಡುವ ಧ್ಯಾನ. "जीवः प्रकृतितत्त्वं च दिक्कालाकाशमेव च। क्षित्यप्तेजोवायवश्च कुलमित्यभिधीयते। ब्रह्मबुद्ध्या निर्विकल्पमेतेष्वाचरणं च यत्। कुलाचारः स एवोक्तो धर्मकामार्थमोक्षदः"।

**कुलाचार्य ಕುಲಾಚಾರ್ಯ** (ಪುಂ०) ಮನೆತನದ ಗುರು, ಕುಲಗುರು, ವಂಶಪರಂಪರೆಯಿಂದ ಬಂದ ಗುರು. कुलस्याचार्यः।

**कुलाद्रि ಕುಲಾದ್ರಿ** (ಪುಂ०) ಕುಲಪರ್ವತಗಳು. ["कुलपर्वत" ಪದದಲ್ಲಿ ನೋಡಿ.]

**कुलाधारक ಕುಲಾಧಾರಕ** (ಪುಂ०) ವಂಶವನ್ನು ಎತ್ತಿ ಹಿಡಿಯುವವನು, ಕುಲವನ್ನು ಉದ್ಧಾರಮಾಡುವ ಪುತ್ರ.

**कुलाय ಕುಲಾಯ** (ಪುಂ०) 1. ಹಕ್ಕಿಗಳ ಗೂಡು, ಹಕ್ಕಿಗಳು ವಾಸಮಾಡುವ ಸ್ಥಳ. कुलं पक्षिसमूहोऽयतेऽत्र — अय (गतौ) "घञ्" (३-३-१२१)। "ददतमन्तरिताऽहिमदीधितिं खगकुलाय कुलायनिलायिताम्। जलदकालमबोधकृतं दिशामपरथाप रथावयवायुधः" माघ० ६-४१। 2. ಸ್ಥಾನ, ಜಾಗ, ಸ್ಥಳ, ಮನೆ. "कुलायस्तु पुमान् स्थानमात्रे स्यात्पक्षिवासके" मेदि०। "गेहे कुलायो नीडोऽस्त्री" वैज०।

**कुलायिका ಕುಲಾಯಿಕಾ** (ಸ್ತ್ರೀ०) ಪಕ್ಷಿಗಳ ವಾಸಸ್ಥಾನ, ಹಕ್ಕಿಗಳ ಗೂಡು. "कुलायिका पक्षिशाला" त्रिकाण्ड०।

**कुलाल ಕುಲಾಲ** (ಪುಂ०) 1. ಕುಂಬಾರ, ಮಣ್ಣಿನ ಪಾತ್ರೆ ಹೆಂಚು ಮುಂತಾದುವನ್ನು ತಯಾರಿಸುವವನು. कुलमलति —अल (भूषणादौ) "अण्" (३-२-१)। "अनलसङ्गतितापमुपैतु नो कुसुमचापकुलालविलासजम्" नैष० ४-७। 2. ಕುಕ್ಕುಭಪಕ್ಷಿ, ಕಾಡುಕೋಳಿ. 3. ಘೂಕ, ಗೂಬೆ. "कुलालः कुम्भकारे स्यात्कुक्कुभे कौशिकेऽपि च" विश्व०। स्त्रियाम् "ङीष्" (४-१-६३)। **-ली -ಲೀ.** ಕುಂಬಾರನ ಹೆಂಡತಿ.

**कुलालकुक्कुट ಕುಲಾಲಕುಕ್ಕುಟ** (ಪುಂ०) ಕಾಡುಕೋಳಿ, ನೀರುಕೋಳಿ.

**कुलाली ಕುಲಾಲೀ** (ಸ್ತ್ರೀ०) 1. ಕುಂಬಾರನ ಹೆಂಡತಿ. कुलालस्य स्त्री "ङीष्" (४-१-६३)। 2. ನೀಲ ಕಮಲದ ಒಂದು ಭೇದ. 3. ಕುಳುತ್ಥಾಂಜನ.

**कुलाह ಕುಲಾಹ** (ಪುಂ०) ಕಂದು ಬಣ್ಣದ ಕಪ್ಪು ಮಂಡಿಯ ಕುದುರೆ. कुलमाहन्ति — हन (हिंसागत्योः) "ड:"।

**कुलि ಕುಲಿ** (ಪುಂ०) 1. ಹಸ್ತ, ಕೈ. कुल (संस्त्याने बन्धुषु च) "इन्" (उ० ४-११७)। "कुलिर्हस्तो भुजादलः" त्रिकाण्ड०। (ಸ್ತ್ರೀ०) **-लिः -ಲಿಃ, -ली -ಲೀ.** 2. ಹೆಗ್ಗುಳ್ಳದ ಗಿಡ. वा "ङीष्" (ग० ४-१-४५)।

**कुलिक ಕುಲಿಕ** (पुं०) 1. ಐವತ್ತು ಅಂಗುಲ ಉದ್ದದ ಬಾಣ. "अयः शलाका कूटोऽस्त्री पत्रकूटस्सपत्रणः। द्विद्वाविंशत्यङ्गुली स्यान्निचोटे द्व्यङ्गुलोत्तरः। स्युश्चोट- लिङ्गकस्तालः कुलिको बिम्बसारकः" वैजं०। 2. ಶಿಲ್ಪಿಗಳ ಕುಲದ ಯಜಮಾನ, ಶಿಲ್ಪಿಗಳ ಕುಲದಲ್ಲಿ ಶ್ರೇಷ್ಠನಾದವನು. "कारवः शिल्पिनः सर्वे कुलिकास्ते कुलोत्तमाः" वैजं०। 3. ಎಂಟು ಸರ್ಪನಾಯಕರಲ್ಲೊಬ್ಬ. "अनन्तो वासुकिः पद्मो महापद्मोऽपि तक्षकः। कर्कोटः कुलिकः शङ्ख इत्यष्टौ नागनायकाः" त्रिकाण्ड०। 4. ಒಂದು ಜಾತಿಯ ಮುಳ್ಳುಗಿಡ. 5. ಒಂದು ವಂಶದ ಯಜಮಾನ. 6. ಭಾನುವಾರ ಮೊದಲಾದ ದಿನಗಳಲ್ಲಿ ಶುಭಕಾರ್ಯಗಳಿಗೆ ನಿಷಿದ್ಧವಾದ ವೇಳೆ, ಗುಳಿಕ ಕಾಲ.

| ವಾರಗಳು | ಹಗಲು ಗುಳಿಕಕಾಲ |
|---|---|
| ಭಾನುವಾರ | 7ನೆಯ ಅರ್ಧಯಾಮ<br>3ರಿಂದ 4–30 ಗಂಟೆಯವರೆಗೆ |
| ಸೋಮವಾರ | 6ನೆಯ ಅರ್ಧಯಾಮ<br>1–30 ರಿಂದ 3 ಗಂಟೆಯವರೆಗೆ |
| ಮಂಗಳವಾರ | 5ನೆಯ ಅರ್ಧಯಾಮ<br>12 ರಿಂದ 1–30 ಗಂಟೆಯವರೆಗೆ. |
| ಬುಧವಾರ | 4ನೆಯ ಅರ್ಧಯಾಮ<br>10–30 ರಿಂದ 12 ಗಂಟೆಯವರೆಗೆ. |
| ಗುರುವಾರ | 3ನೆಯ ಅರ್ಧಯಾಮ<br>9 ರಿಂದ 10–30 ಗಂಟೆಯವರೆಗೆ. |
| ಶುಕ್ರವಾರ | 2ನೆಯ ಅರ್ಧಯಾಮ<br>7–30 ರಿಂದ 9 ಗಂಟೆಯವರೆಗೆ. |
| ಶನಿವಾರ | 1ನೆಯ ಅರ್ಧಯಾಮ<br>6 ರಿಂದ 7–30 ಗಂಟೆಯವರೆಗೆ. |

**ಈ ದೋಷಕ್ಕೆ ಅಪವಾದ:**

"वारेशे सबले चापि बलाढ्ये लग्नगे शुभे। कुलिकोद्भवदोषस्तु विनश्यति न संशयः"।

**कुलिङ्ग ಕುಲಿಂಗ** (पुं०) 1. ನೀರಿನೊಳಗಾಡುವ ಕುಕ್ಕುಟಿಯೆಂಬ ಹಕ್ಕಿ. कौ भूमौ लिङ्गति – लिगि (गतौ) "अच्" (३-१-१३४)। 2. ಗುಬ್ಬಚ್ಚಿ. स्त्रियाम् जाति० "ङीष्" (४-१-६३)। **कुलिङ्गी ಕುಲಿಂಗೀ.** (न०) 3. ಕೆಟ್ಟ ಗುರುತು. कुत्सितं लिङ्गम्। (वि०) 4. ಕೆಟ್ಟ ಗುರುತುಳ್ಳ. कुत्सितं लिङ्गं यस्य। (स्त्री०) **कुलिङ्गा ಕುಲಿಂಗಾ.** 5. ಮರಸೇಬಿನ ಗಿಡ.

**कुलिङ्गक ಕುಲಿಂಗಕ** (पुं०) ಗುಬ್ಬಚ್ಚಿ. कुलिङ्ग संज्ञायां "कन्" (५-३-८७)।

**कुलिज ಕುಲಿಜ** (वि०) ಕೈಯಲ್ಲಿ ಹುಟ್ಟಿದ, ಕೈಯಲ್ಲಿ ಉಂಟಾದ. कुलौ हस्ते जायते – जनी (प्रादुर्भावे) "डः" (३-२-९७)।

**कुलिन् ಕುಲಿನ್** (पुं०) 1. ಪರ್ವತ, ಬೆಟ್ಟ. (वि०) 2. ಒಳ್ಳೆಯ ಕುಲದಲ್ಲಿ ಹುಟ್ಟಿದ, ಸತ್ಕುಲದಲ್ಲಿ ಜನಿಸಿದ. प्रशस्तं कुलमस्यास्ति "इनिः" (५-२-११६)। स्त्रियाम् "ङीप्" (४-१-५)। **–नी – ನೀ.**

**कुलिन्द ಕುಲಿಂದ** (पुं० ब० व०) 1. ಒಂದು ದೇಶ. "कालिन्दाः कालवाश्चैव कुण्ठकाः करटास्तथा" भा० भीष्म०। 2. ಕುಳಿಂದ ದೇಶದ ಜನರು. 3. ಕುಳಿಂದ ದೇಶದ ದೊರೆಗಳು. कुलिन्दानां राजानः "अञ्" (४-१-१६६)। अञो लुक् (२-४-६२)।

**कुलिश ಕುಲಿಶ** (पुं०) 1. ಒಂದು ಜಾತಿಯ ಮೀನು. कुत्सितं ईषद्वा लिशति – कु + लिश (गतौ) "कः" (३-१-१३५)। (पुंन०) 2. (ಇಂದ್ರನ) ವಜ್ರಾಯುಧ. कुलौ हस्ते शेते – शीङ् (स्वप्ने) "डः" (३-२-१०१)। कुलिनः पर्वतान् श्यति – शो (तनूकरणे) "कः" (३-२-३) वा। "कुलिशो न स्त्री दम्भोलौ ना झषान्तरे" मेदि०। "वृत्रस्य हन्तुः कुलिशं कुण्ठिताश्रीव लक्ष्यते" कुमा० २-२०।

**कुलिशद्रुम ಕುಲಿಶದ್ರುಮ** (पुं०) ಮುಂಡುಕಳ್ಳಿಗಿಡ. कुलिशाख्यो द्रुमः। कुलिश इव द्रुमो वा।

**कुलिशधर ಕುಲಿಶಧರ** (पुं०) ವಜ್ರಾಯುಧವನ್ನು ಧರಿಸಿರುವ ಇಂದ್ರ. कुलिशं धरति – धृञ् (धारणे) "अच्" (३-१-१३४)। कुलिशस्य धरः।

**कुलिशपाणि ಕುಲಿಶಪಾಣಿ** (पुं०) ಇಂದ್ರ. कुलिशं पाणौ यस्य। "नवकनकपिशङ्गं वासराणां विधातुः ककुभि कुलिशपाणेर्भाति भासां वितानम्" ११-४३।

**कुलिशाङ्कुशा ಕುಲಿಶಾಂಕುಶಾ** (स्त्री०) ಬೌದ್ಧರ ಹದಿನಾರು ವಿದ್ಯಾದೇವತೆಗಳಲ್ಲಿ ಒಬ್ಬ ದೇವತೆ. "विद्या देव्यस्तु षोडश। रोहिणी प्रज्ञप्तिर्वज्रशृङ्खला कुलिशाङ्कुशा" ಇತ್ಯಾದಿ अभि० चि०।

**कुलिशासन ಕುಲಿಶಾಸನ** (पुं०) ಶಾಕ್ಯಮುನಿ. कुलिशवत् दृढमासनं यस्य। "सर्वार्थसिद्धिस्तु महाश्रमणः कुलिशासनः" त्रिकाण्ड०।

**कुली ಕುಲೀ** (स्त्री०) 1. ಹೆಗ್ಗುಳ್ಳದ ಗಿಡ. कोलति – कुल (संस्त्याने) "कः" (३-१-१३५)। गौरा० "ङीष्" (४-१-४१)। "प्रचोदनी कुली क्षुद्रा दुःस्पर्शा

राष्ट्रिकेत्यपि" अम०। 2. ಹೆಂಡತಿಯ ಅಕ್ಕ, ಹೆಂಡತಿಯ ಹಿರಿಯ ಸಹೋದರಿ, ನಾದಿನಿ. "पत्न्यास्तु भगिनी ज्येष्ठा ज्येष्ठश्वश्रूः कुली च सा" अभि० चि०।

**कुलीक ಕುಲೀಕ** (पुं०) ಪಕ್ಷಿ, ಹಕ್ಕಿ. कुल (संस्त्याने) "ईकन्" बाहु०।

**कुलीन ಕುಲೀನ** (पुं०) 1. ಉತ್ತಮ ಕುಲದಲ್ಲಿ ಹುಟ್ಟಿದ ಕುದುರೆ. ಒಳ್ಳೆಯ ಜಾತಿಯ ಕುದುರೆ. कुलस्यापत्यम् "खः"(४-१-१३९)। "आजानेयाः कुलीनाः स्युः" अम०। स्त्रियाम् जाति० "ङीष्" (४-१-६३)। (न०) 2. ಉಗುರುಸುತ್ತು, ಉಗುರಿನ ಒಂದು ವಿಧ ರೋಗ. (वि०) 3. ಸತ್ಕುಲಪ್ರಸೂತ, ಒಳ್ಳೆಯ ವಂಶದಲ್ಲಿ ಹುಟ್ಟಿದವನು. "यस्यास्ति वित्तं स नरः कुलीनः स पण्डितः स श्रुतवान् गुणज्ञः" भर्तृ० १-३२। "महाकुलकुलीनार्यसभ्य-सज्जनसाधवः" अम०। 4. ಭೂಮಿಯಲ್ಲಿ ಅಡಗಿ ಕೊಂಡಿರುವ. कौ भूमौ लीनः।

**कुलीनक ಕುಲೀನಕ** (पुं०) ಕಾಡು ಹೆಸರು. "वनमुद्गे तुरवकनिगूढककुलीनकाः" अभि० चि०।

**कुलीनस ಕುಲೀನಸ** (न०) ಜಲ, ನೀರು. कुलीनं भूलग्नं स्यति—षो (अन्तकर्मणि) "कः" (३-२-३)। "कुलीनसं कबन्धं च प्राणदं सर्वतोमुखम्" अभि० चि०।

**कुलीर ಕುಳೀರ** (पुं०) 1. ಏಡಿ, ನಳ್ಳಿ. कुल (संस्त्याने) "ईरन्" बाहु०। 2. ಕರ್ಕಾಟಕ ರಾಶಿ, ಮೇಷ ಮೊದಲಾಗಿ ನಾಲ್ಕನೆಯ ರಾಶಿ.

**कुलुक ಕುಲುಕ** (न०) ನಾಲಿಗೆಯ ಕೊಳೆ. कुल (संस्त्याने) "उलच्" बाहु०। "मलं विट्टं तदक्षिजम्। दूषीका दूषिका जैह्वं कुलुकम्" अभि० चि०।

**कुलुक्कगुञ्जा ಕುಲುಕ್ಕಗುಂಜಾ** (स्त्री०) ಕೊಳ್ಳಿಯ ಬೆಂಕಿ. "उल्का कुलुक्कगुञ्जा स्यात्" हारा०।

**कुलूत ಕುಲೂತ** (पुं० ब० व०) 1. ಒಂದು ದೇಶ. 2. ಕುಲೂತ ದೇಶದ ಜನರು. 3. ಕುಲೂತ ದೇಶದ ರಾಜರು.

**कुलोद्वह ಕುಲೋದ್ವಹ** (पुं०) ವಂಶದ ರಕ್ಷಣೆಯ ಭಾರವನ್ನು ಹೊತ್ತಿರುವವನು. कुलं वंशभारं रक्षणादिकम् उद्वहति उद् + वह (प्रापणे) "अच्" (३-१-१३४)। "पुत्रो ममानुरूपश्च शूरश्चेति कुलोद्वहः" भा० विरा०।

**कुल्माष ಕುಲ್ಮಾಷ** (पुं०) 1. ಅಲಸಂದೆ, ಕಾರಾಮಣಿ. 2. ಅರ್ಧ ಬೆಂದ ಗೋಧಿ ಮುಂತಾದ ಧಾನ್ಯ. 3. ಕಡಲೆ. (न०) 4. ಅಂಬಲಿ, ಗಂಜಿ. "कुल्माषं स्यात्तु काञ्जिके। कुल्माषोऽर्धस्विन्नधान्ये यावके चणकेऽपि च" हेम०।

**कुल्य ಕುಲ್ಯ** (पुं०) 1. ಮಾನ್ಯನಾದ ಪುರುಷ, ಗೌರವಿಸಲು ಯೋಗ್ಯನಾದವನು. कुले सत्कुले भवः "यत्" (४-३-५३)। (न०) 2. ಎಲುಬು, ಮೂಳೆ. कुल (संस्त्याने) "यक्" (उ० ४-१११)। 3. ಮಾಂಸ. 4. ಶೂರ್ಪ, ಮೊರ, ಧಾನ್ಯವನ್ನು ಕೇರುವ ಒಂದು ಸಾಧನ. 5. ಎಂಟು ಕೊಳಗದ ಅಳತೆ. (स्त्री०) 6. ಕೃತ್ರಿಮವಾದ ಸಣ್ಣ ಹೊಳೆ, ಅಗೆದು ತೋಡಿ ನಿರ್ಮಿತವಾದ ನದಿ. 7. ಬದನಿಕೆ ಗಿಡ. 8. ನದಿ, ಹೊಳೆ. "सेनास्वानाद्दन्तिनामात्मनैव स्थूलास्तावत् प्रावहन् दानकुल्याः" माघ० १८-२६। 9. ಸತ್ಕುಲದಲ್ಲಿ ಹುಟ್ಟಿದ ಹೆಂಗಸು. "केनापि दौष्कुलेयेन कुल्यां माहाकुलीं प्रियाम्। हृतां माहाकुलीनस्य तस्य लिप्सामहे वयम्" भट्टि० ७-८८। (वि०) 10. ಕುಲಕ್ಕೆ ಹಿತವಾದ, ವಂಶಕ್ಕೆ ಅನುಕೂಲವಾದ. कुलाय हितम् "यत्" (५-१-५)। 11. ವಂಶದಲ್ಲಿ ಹುಟ್ಟಿದ, ಕುಲದಲ್ಲಿ ಜನಿಸಿದ. "कुल्यं स्यात् कीकसेऽप्यष्टद्रोणीशूर्पामिषेषु च। कुल्या पयःप्रणाल्यां च नद्यां जीवन्तिकौषधौ। कुलोद्भवे कुलहिते त्रिषु मान्ये पुनः पुमान्" मेदि०।

**कुल्लूक ಕುಲ್ಲೂಕ** (पुं०) ಕುಲ್ಲೂಕಭಟ್ಟಾಚಾರ್ಯರು, ಮನುಸ್ಮೃತಿಯ ವ್ಯಾಖ್ಯಾಕಾರರಾದ ಒಬ್ಬ ವಿದ್ವಾಂಸರು.

**कुव ಕುವ** (न०) ನೈದಿಲೆ, ಉತ್ಪಲ. कुं भूमिं वाति गच्छति — वा (गतिगन्धनयोः) "कः" (३-२-३)। "कुवलं तूत्पलं कुवम्" त्रिकाण्ड०।

**कुवचस् ಕುವಚಸ್** (न०) 1. ಕೆಟ್ಟ ಮಾತು, ಅಪವಾದ, ದೂಷಣೆ. कुत्सितं वचः। (वि०) 2. ಕೆಟ್ಟ ಮಾತುಳ್ಳ, ಅಸಭ್ಯವಾದ ಮಾತುಳ್ಳ. कुत्सितं वचो यस्य।

**कुवत् ಕುವತ್** (वि०) ಕೂಗುತ್ತಿರುವ, ಶಬ್ದಮಾಡುತ್ತಿರುವ. कु (शब्दे) "शतृ" (३-२-१२४)। "द्रुमभङ्गध्वनिसंविग्नाः कुवत्पक्षिकुलाकुलाः" भट्टि० ९-१।

**कुवल ಕುವಲ** (पुं०) 1. ಎಲಚಿ ಮರ, ಬೋರೆಗಿಡ. (न०) 2. ಉತ್ಪಲ, ನೈದಿಲೆ. कौ वलति—वल (संचलने) "अच्" (३-१-१३४)। 3. ಮುಕ್ತಾಫಲ, ಮುತ್ತು. 4. ಬೋರೆಹಣ್ಣು, ಎಲಚಿ ಹಣ್ಣು. 5. ಜಲ, ನೀರು. "कुवलं चोत्पले मुक्ताफले च बदरीफले" मेदि०। 6. ಜೀವ. कौ भूमौ कुत्सितं वा वलन्ते आसंसारं भ्राम्यन्तीति (कुवला जीवाः) कु + वल (संचलने) "अच्" (३-१-१३४)।

**कुवलकुण ಕುವಲಕುಣ** (ಪುಂ) ಬೋರೆಗಿಡವು ಹಣ್ಣು ಬಿಡುವುದು, ಎಲಚಿಯು ಹಣ್ಣಾಗುವಿಕೆ. कुवलस्य पाकः "कुणप्" (५-२-२४)।

**कुवलय ಕುವಲಯ** (ನಂ) 1. ಉತ್ಪಲ, ನೈದಿಲೆ. कोर्वलयमिव। "पुत्रप्रेम्णा कुवलयदलप्रापि कर्णे करोति" मेघ० १-४४। 2. ಭೂಮಂಡಲ. कोर्वलयम्।

**कुवलयदृश् ಕುವಲಯದೃಶ್** (स्त्री०) ಕುವಲಯದಂತೆ ಕಪ್ಪಾದ ಕಣ್ಣುಗಳುಳ್ಳ ಹೆಂಗಸು. कुवलये इव दृशौ यस्याः।

**कुवलयानन्द ಕುವಲಯಾನಂದ** (ಪುಂ) ಒಂದು ಅಲಂಕಾರ ಗ್ರಂಥ, ಜಯದೇವವಿರಚಿತವಾದ ಚಂದ್ರಾಲೋಕದ ಒಂದು ವ್ಯಾಖ್ಯಾನ. ಇದನ್ನು ರಚಿಸಿದವರು ಮಹಾ ವಿದ್ವಾಂಸರಾದ ಶ್ರೀಮದಪ್ಪಯ ದೀಕ್ಷಿತರು. ಜಯದೇವ ಕವಿಯು ರಚಿಸಿದ ಒಂದು ನೂರು [illegible]ಅಲಂಕಾರಗಳನ್ನು ಇವರು ಉದಾಹರಣೆಗಳೊಡನೆ ವಿವರಿಸಿ ಮುಂದೆ ರಸವದಾದಿ ಇಪ್ಪತ್ತನಾಲ್ಕು ಅಲಂಕಾರಗಳನ್ನು ತಾವೇ ಹೊಸದಾಗಿ ಬರೆದಿರುವರು. "येषां चन्द्रालोके दृश्यन्ते लक्ष्यलक्षणश्लोकाः। प्रायस्त एव तेषामितरेषां त्वभिनवा विरच्यन्ते" कुव० ५। ಗ್ರಂಥದ ಕೊನೆಯಲ್ಲಿ ಇವರು ತಮ್ಮ ಮತ್ತು ಗ್ರಂಥದ ಹೆಸರುಗಳನ್ನು ಹೇಳಿಕೊಂಡಿರುತ್ತಾರೆ. "अमुं कुवलयानन्दमकरोदप्पदीक्षितः। नियोगाद्वेङ्कटपतेर्निरुपाधिकृपावधेः" कुव० १७१। ಚಂದ್ರಾಲೋಕಕ್ಕೂ ತಮ್ಮ ಗ್ರಂಥ (ಕುವಲಯಾನಂದ)ಕ್ಕೂ ಶ್ಲೇಷೆಯಿಂದ ಸಂಬಂಧ ಕಲ್ಪಿಸಿ ಹೇಳಿರುತ್ತಾರೆ. "चन्द्रालोको विजयतां शरदागमसंभवः। हृद्यः कुवलयानन्दो यत्प्रसादादभूदयम्" कुव० १७२।

**कुवलयापीड ಕುವಲಯಾಪೀಡ** (ಪುಂ) ಕಂಸನ ಒಂದು ಆನೆ. [ಬಲರಾಮಶ್ರೀಕೃಷ್ಣರು ಮಧುರೆಗೆ ಬಂದಾಗ ಅವರನ್ನು ಕೊಲ್ಲಲು ಕಂಸನು ಊರಿನ ಮಹಾದ್ವಾರದಲ್ಲಿ ಈ ಆನೆಯನ್ನು ನಿಲ್ಲಿಸಿದ್ದನು. ಅವರು ಊರಿನ ಹೆಬ್ಬಾಗಿಲಿಗೆ ಬಂದಕೂಡಲೆ ಈ ಆನೆಯು ಅವರ ಮೇಲೆ ಬೀಳಲು ಹೋದಾಗ ಶ್ರೀಕೃಷ್ಣನು ಅದರ ಕೊಂಬನ್ನು ಕಿತ್ತು ಅದನ್ನು ಸಂಹರಿಸಿದನು.] "स्वविक्रमे प्रतिहते कुञ्जरेन्द्रोऽत्यमर्षितः। चोद्यमानो महामात्रैः कृष्णमभ्यद्रवद्रुषा। तमापतन्तमासाद्य भगवान् मधुसूदनः। निगृह्य पाणिना हस्तं पातयामास भूतले। पतितस्य पदाक्रम्य मृगेन्द्र इव लीलया। दन्तमुत्पाट्य तेनेभं हस्तिपांश्चाहनद्धरिः" भाग० १०-४३।

**कुवलयाश्व ಕುವಲಯಾಶ್ವ** (ಪುಂ) ಸೂರ್ಯವಂಶದ ಒಬ್ಬ ದೊರೆ. ಇವನು ಬೃಹದಶ್ವ (ಶತ್ರುಜಿತ)ನ ಮಗ. ಇವನಿಗೆ "ಋತಧ್ವಜ" ನೆಂದು ಮೊದಲಿನ ಹೆಸರು. ದುಂಧುವೆಂಬ ರಾಕ್ಷಸನನ್ನು ಕೊಂದದ್ದರಿಂದ ಇವನಿಗೆ "ದುಂಧುಮಾರ" ನೆಂಬ ಹೆಸರೂ ಉಂಟು. [ಪಾತಾಳಕೇತುವೆಂಬ ರಾಕ್ಷಸನೊಬ್ಬನು ಗಾಲವ ಋಷಿಯ ತಪಸ್ಸಿಗೆ ತೊಂದರೆ ಕೊಡುತ್ತಿದ್ದಾಗ ಋಷಿಯು ತಪಸ್ಸಿನ ಕ್ಷಯದ ಭಯದಿಂದ ಶಾಪ ಕೊಡಲು ಯೋಚಿಸುತ್ತಿರಲು ಕುವಲಯ ಬಣ್ಣದ ಒಂದು ಕುದುರೆಯು ಆ ಋಷಿಯ ಮುಂದೆ ಬಂದು ನಿಂತಿತು. ಋಷಿಯು ಅಶರೀರವಾಣಿಯ ಆದೇಶದಂತೆ ಅದನ್ನು ಋತಧ್ವಜನಿಗೆ ಕೊಡಲಾಗಿ ಅವನು ಅದನ್ನೇರಿ ಪಾತಾಳಕೇತುವನ್ನು ಸಂಹರಿಸಲು ಹೊರಟನು. ಆಗ ರಾಕ್ಷಸನು ಹಂದಿಯ ರೂಪವನ್ನು ತಾಳಿ ಪಾತಾಳವನ್ನು ಪ್ರವೇಶಿಸಿದನು. ರಾಜನೂ ಬೆನ್ನಟ್ಟಿ ಹೋಗಿ ಅವನನ್ನು ಸಂಹರಿಸಿ ಅವನಿಂದ ಸೆರೆ ಹಿಡಿಯಲ್ಪಟ್ಟಿದ್ದ ಕುಂಡಲೆ ಮತ್ತು ಮದಾಲಸೆಯೆಂಬ ಇಬ್ಬರು ತರುಣಿಯರನ್ನು ಸೆರೆಯಿಂದ ಬಿಡಿಸಿಕೊಂಡು ನಗರಕ್ಕೆ ಹಿಂತಿರುಗಿದನು. ಗಾಲವ ಋಷಿಯಿಂದ ಕುವಲಯ ಬಣ್ಣದ ಅಶ್ವವನ್ನು ಪಡೆದದ್ದರಿಂದ ಇವನಿಗೆ "ಕುವಲಯಾಶ್ವ" ನೆಂಬ ಹೆಸರೂ ಬಂದಿತು.]

**कुवलाश्व ಕುವಲಾಶ್ವ** (ಪುಂ) ಋತಧ್ವಜನೆಂಬ ಒಬ್ಬ ದೊರೆ. ["कुवलयाश्व" ಪದದಲ್ಲಿ ನೋಡಿ.]

**कुवलेशय ಕುವಲೇಶಯ** (ಪುಂ) ವಿಷ್ಣು. ನಾರಾಯಣ. कुवले जले शेते – शीङ् (स्वप्ने) "अच्" (३-२-१५)। कौ भूमौ वलन्ते आसंसारं भ्राम्यन्तीति कुवला जीवाः, ते च ते ईशाः कुवलेशाः, तान्नियच्छन् याति—या (प्रापणे) "कः" (३-२-३) वा। "कुत्सितं बलमेषां ते कुवला जीवसंज्ञकाः। देहेन्द्रियादेरीशास्ते कुवलेशा इति स्मृताः" इति निरुक्तिः। "शुभाङ्गः शान्तिदः स्रष्टा कुमुदः कुवलेशयः" वि० स०।

**कुवाद ಕುವಾದ** (ಪುಂ) 1. ಕೆಟ್ಟ ಮಾತು, ಅಪವಾದ, ದೂಷಣೆ. कुत्सितो वादः। (वि०)2. ಕೆಟ್ಟಮಾತಾಡುವ. कुत्सितो वादोऽस्य। "समौ कुवादकुचरौ" अम०।

**कुविद्या ಕುವಿದ್ಯಾ** (स्त्री०) ಕೆಟ್ಟ ವಿದ್ಯೆ. कुत्सिता विद्या।

**कुविन्द ಕುವಿಂದ** (ಪುಂ) ನೇಯ್ಗೆಯವನು, ಬಟ್ಟೆಯನ್ನು ನೇಯುವವನು. कुं भूमिं विन्दति — विद्लृ (लाभे) "शः" (वा० ३-१-१३८)।

**कुविवाह ಕುವಿವಾಹ** (ಪುಂ) ಆಯಾ ವರ್ಣದವರಿಗೆ ವಿಹಿತವಾದುದಕ್ಕಿಂತಲೂ ಭಿನ್ನವಾದ ರೀತಿಯ ವಿವಾಹ, ನಿಷಿದ್ಧವಾದ ವಿವಾಹ, ಅಶಾಸ್ತ್ರೀಯವಾದ ಮದುವೆ. कुत्सितो विवाहः। "चतुर्णामपि वर्णानां प्रेत्य चेह हिताहितान्। अष्टाविमान् समासेन स्त्रीविवाहान्निबोधत" मनु० ३-२०।

**कुवृत्ति ಕುವೃತ್ತಿ** (ಸ್ತ್ರೀಂ) 1. ಕೆಟ್ಟ ವ್ಯಾಪಾರ, ಕೆಟ್ಟ ನಡತೆ, ಕೆಟ್ಟ ಆಚಾರ. कुत्सिता वृत्तिः। 2. ಕೆಟ್ಟ ಜೀವನ, ನಿಂದಿತವಾದ ಜೀವನ. (ವಿಂ) 3. ಕೆಟ್ಟ ವ್ಯಾಪಾರವುಳ್ಳ. कुत्सिता वृत्तिर्यस्य। 4. ನಿಂದಿತವಾದ ಜೀವನವುಳ್ಳ.

**कुवेणि(णी) ಕುವೇಣಿ(ಣೀ)** (ಸ್ತ್ರೀಂ) 1. ಮೀನುಗಳನ್ನು ಹಿಡಿದು ತುಂಬುವ ಬುಟ್ಟಿ. ईषत् वेणन्ते मत्स्या अस्याम्-वेणृ (गतौ) "इन्" (उ० ४-११७)। वा "ङीष्" (ग० ४-१-४५)। 2. ಅಡ್ಡಾದಿಡ್ಡಿಯಾಗಿ ಹೆಣೆದಿರುವ ಜಡೆ. कुत्सिता वेणी।

**कुवेर ಕುವೇರ** (ಪುಂ) ಕುಬೇರ, ಧನಾಧಿಪತಿ, ಯಕ್ಷರಾಜ. ["कुबेर" ಪದದಲ್ಲಿ ನೋಡಿ.]

**कुवेरक ಕುವೇರಕ** (ಪುಂ) ನಂದಿಮರ.

**कुवेराद्रि ಕುವೇರಾದ್ರಿ** (ಪುಂ) ಕೈಲಾಸಪರ್ವತ.

**कुश ಕುಶ** (ಪುನಂ) 1. ದರ್ಭೆಹುಲ್ಲು. कौ शेते—शीङ् (स्वप्ने) "डः" (३-२-१०१)। कुं पापं स्यति-शो (तनूकरणे) "कः" (३-२-४) वा। "दिश वनहरिणीभ्यो वंशकाण्डच्छवीनां कबलमुपलकोटिच्छिन्नमूलं कुशानाम्" भर्तृ० २-३४। (ಪುಂ) 2. ಕುಶಮಹಾರಾಜ, ಶ್ರೀರಾಮನ ಹಿರಿಯ ಮಗ. ದೋಷಪರಿಹಾರಕ್ಕಾಗಿ ಸೀತೆಯ ಗರ್ಭವನ್ನು ಕುಶ ಮತ್ತು ಗೋಪುಚ್ಛಗಳಿಂದ ಸವರಿದುದರಿಂದ ಶ್ರೀರಾಮನ ಮಕ್ಕಳಿಗೆ ಕುಶ ಮತ್ತು ಲವರೆಂದು ಹೆಸರಾಯಿತು. "स तौ कुशलवोन्मृष्टगर्भक्लेदौ तदाख्यया। कविः कुशलवावेव चकार किल नामतः" रघु० १५-३२। ಲೋಕಾಪವಾದದ ಕಾರಣದಿಂದ ಶ್ರೀರಾಮನು ಸೀತೆಯನ್ನು ಲಕ್ಷ್ಮಣನ ಮೂಲಕ ಅರಣ್ಯಕ್ಕೆ ಕಳುಹಿಸಿಬಿಟ್ಟನು. ವಾಲ್ಮೀಕಿಮಹರ್ಷಿಯು ಗರ್ಭಿಣಿಯಾಗಿದ್ದ ಸೀತೆಯನ್ನು ತಮ್ಮ ಆಶ್ರಮದಲ್ಲಿ ಸಲಹುತ್ತಿದ್ದರು. ಅಲ್ಲಿ ಜನಿಸಿದ ಅವಳಿ ಮಕ್ಕಳಿಗೆ ಕುಶಲವರೆಂದು ಹೆಸರಿಟ್ಟರು. ಮಕ್ಕಳಿಗೆ ಜಾತಕರಣಾದಿ ಎಲ್ಲಾ ಸಂಸ್ಕಾರಗಳನ್ನೂ ನಡೆಸಿ ತಾವು ರಚಿಸಿದ ಶ್ರೀಮದ್ರಾಮಾಯಣವನ್ನು ಅವರಿಗೆ ಉಪದೇಶಿಸಿದರು. ಕುಶಲವರು ಅದನ್ನು ಶ್ರೀರಾಮನ ಆಸ್ಥಾನದಲ್ಲಿ ವಾಲ್ಮೀಕಿ ಮಹರ್ಷಿಯ ಅಪ್ಪಣೆಯಂತೆ ಹಾಡಿದರು. "अथ प्राचेतसोपज्ञं रामायणमतन्द्रितः। मैथिलेयौ कुशलवौ जगतुर्गुरुचोदितौ" रघु० १५-३२। 3. ಎತ್ತಿನ ಕುತ್ತಿಗೆಯ ಮೇಲೆ ನೊಗವನ್ನಿಟ್ಟು ಕಟ್ಟುವ ದರ್ಭೆಯ ಹಗ್ಗ. 4. ಸಪ್ತದ್ವೀಪಗಳಲ್ಲೊಂದಾದ ಕುಶದ್ವೀಪ. ಈ ದ್ವೀಪದಲ್ಲಿ ದೇವತೆಗಳು ಒಂದು ಕುಶಸ್ತಂಭವನ್ನು ತಯಾರಿಸಿ ಇಟ್ಟಿರುವುದರಿಂದ ದ್ವೀಪಕ್ಕೆ ಈ ಹೆಸರಾಯಿತು. ಈ ದ್ವೀಪದ ರಾಜನಾದ ಹಿರಣ್ಯರೇತಸ್ಸೆಂಬುವವನು ತನ್ನ ಏಳು ಮಂದಿ ಮಕ್ಕಳಿಗೆ ಇದನ್ನು ಭಾಗಮಾಡಿ ಕೊಟ್ಟನು. ಈ ದ್ವೀಪವು ಘೃತಸಮುದ್ರದಿಂದ ಸುತ್ತುವರೆಯಲ್ಪಟ್ಟಿರುವುದು. (ನಂ) 5. ಜಲ, ನೀರು. (ವಿಂ) 6. ಪಾಪಾತ್ಮ. 7. ಮದಿಸಿದವನು. (ಸ್ತ್ರೀಂ) **-शा -ಶಾ.** 8. ಕುದುರೆಯ ಕಡಿವಾಣ, ಲಗಾಮು. 9. ರಜ್ಜು, ಹಗ್ಗ. 10. ಯಾಗದಲ್ಲಿ ಸಾಮಗಾನ ಮಾಡುವಾಗ ಸ್ತೋತ್ರಗಳ ಎಣಿಕೆಗಾಗಿ ಇಡುವ ಮರದ ಗೂಟ. अयस्कुशा। **-शी -ಶೀ.** 11. ಫಾಲ, ನೇಗಿಲಗುಳ. "कुशो रामसुते द्वीपे योक्त्रे दर्भे कुशं जले। कुशी फालेऽपि वल्गायां कुशा पापिष्ठमत्तयोः। कुशो वाच्यवदाख्यातः" विश्व०। "कुशी फाले कुशा रज्ज्वां त्रिषु पापिष्ठमत्तयोः" मेदि०।

**कुशकाश ಕುಶಕಾಶ** (ಪುನಂ) ಕುಶ (ದರ್ಭೆ) ಮತ್ತು ಜೊಂಡು ಹುಲ್ಲು. कुशाश्च काशाश्च। वा एकवद्भावः (२-४-१२)। कुशकाशम् कुशकाशाः।

**कुशद्वीप ಕುಶದ್ವೀಪ** (ಪುಂ) ಸಪ್ತದ್ವೀಪಗಳಲ್ಲೊಂದು, ಪ್ರಪಂಚದ ಒಂದು ಭೂಭಾಗ.

**कुशधारा ಕುಶಧಾರಾ** (ಸ್ತ್ರೀಂ) ಒಂದು ನದಿ.

**कुशध्वज ಕುಶಧ್ವಜ** (ಪುಂ) ಜನಕಮಹಾರಾಜನ ತಮ್ಮ, ಭರತ ಶತ್ರುಘ್ನರ ಮಾವ. "तस्य पुत्रद्वयं जज्ञे धर्मज्ञस्य महात्मनः। ज्येष्ठोऽहं मनुजो वीरो मम भ्राता कुशध्वजः" ರಾಮಾ०। ಕುಶಧ್ವಜನ ರಾಜಧಾನಿ ಸಾಂಕಾಶ್ಯನಗರ. "सांकाश्ये भ्रातरं शूरमभ्यषिचं कुशध्वजम्" ರಾಮಾ०। ಈ ರಾಜನು ಮಾಂಡವಿ ಮತ್ತು ಶ್ರುತಕೀರ್ತಿಯರೆಂಬ ತನ್ನ ಇಬ್ಬರು ಹೆಣ್ಣುಮಕ್ಕಳನ್ನು ಭರತಶತ್ರುಘ್ನರಿಗೆ ಕೊಟ್ಟು ಮದುವೆ ಮಾಡಿದನು.

**कुशनाभ ಕುಶನಾಭ** (ಪುಂ) ಚಂದ್ರವಂಶದ ಕುಶಮಹಾರಾಜನ ನಾಲ್ಕು ಮಂದಿ ಮಕ್ಕಳಲ್ಲೊಬ್ಬ. कुश इव नाभिरस्य "अच्" (५-४-७५)। [ಈ ರಾಜನು ಮಹೋದಯವೆಂಬ ನಗರವನ್ನು ನಿರ್ಮಿಸಿ ರಾಜ್ಯವಾಳುತ್ತಿದ್ದನು. ಈತನಿಗೆ ಘೃತಾಚಿಯಲ್ಲಿ ನೂರು ಮಂದಿ ಹೆಣ್ಣುಮಕ್ಕಳು ಹುಟ್ಟಿದರು. ಇವರು ಒಮ್ಮೆ ಉದ್ಯಾನವನದಲ್ಲಿ

ವಿಹರಿಸುತ್ತಿದ್ದಾಗ ವಾಯುದೇವನು ಇವರನ್ನು ಕಂಡು ಮೋಹಿಸಲು ತಂದೆಯ ಅನುಮತಿಯಿಲ್ಲದೆ ಅದಕ್ಕೆ ಇವರು ಸಮ್ಮತಿಸಲಿಲ್ಲ. ವಾಯುವು ಕೋಪಗೊಂಡು ಇವರ ಶರೀರದೊಳಗೆ ಪ್ರವೇಶಿಸಿ ಕುಬ್ಜೆಯರನ್ನಾಗಿ ಮಾಡಿದನು. ಬ್ರಹ್ಮದತ್ತನೆಂಬ ಒಬ್ಬ ಮುನಿಯು ಇವರನ್ನು ಮದುವೆಯಾಗಿ ತನ್ನ ತಪೋಬಲದಿಂದ ಸುಂದರಿಯರನ್ನಾಗಿ ಮಾಡಿದನು. ಇದರಿಂದ ಈ ಕನ್ಯೆಯರು ವಾಸಿಸುತ್ತಿದ್ದ ಪ್ರದೇಶಕ್ಕೆ "ಕನ್ಯಾಕುಬ್ಜ" ವೆಂಬ ಹೆಸರಾಯಿತು.] रामा०।

**कुशपुष्प ಕುಶಪುಷ್ಪ** (न०) ದರ್ಭೆ ಮತ್ತು ಹೂವು. कुशाश्च पुष्पाणि च।

**कुशल ಕುಶಲ** (न०) 1. ಕಲ್ಯಾಣ. ಶುಭ. ಮಂಗಳ. कुत्सितं शलते संवृणोति — शल (चलने संवरणे च) "अच्" (३-१-१३४)। "कल्याणं वो विधत्तां करटमदधुनीलोलकल्लोलमालाखेलल्लोलम्बकोलाहलमुखरितदिक्चक्रवालान्तरालम्" चं० भा० १-१। 2. ಆರೋಗ್ಯ. ಕ್ಷೇಮ. ಸೌಖ್ಯ. ನೆಮ್ಮದಿ. "अपि कुशलममर्त्याः स्वागतं सांप्रतं वः" चं० रा०। 3. ಜಾಣತನ, ಕಾರ್ಯಚತುರತೆ. 4. ಸಾಮರ್ಥ್ಯ, ದಕ್ಷತೆ. 5. ಪುಣ್ಯ, ಸುಕೃತ. 6. ತೃಪ್ತಿ. (वि०) 7. ದಕ್ಷನಾದ, ಸಮರ್ಥನಾದ. "ह्रीप्रत्यूहप्रशमकुशलाः शीधवश्चक्रुरासाम्" माघ० ९-८७। 8. ಶಿಕ್ಷಿತನಾದ, ಚೆನ್ನಾಗಿ ಪಳಗಿದ. 9. ಚೆನ್ನಾಗಿರುವ, ಒಳ್ಳೆಯ ಸ್ಥಿತಿಯಲ್ಲಿರುವ. 10. ಅರ್ಹನಾದ, ಯೋಗ್ಯನಾದ. "कुशलं निपुणे पुण्ये पर्याप्तौ मङ्गले क्षमे" वैज०। 11. ನಿಪುಣ, ಅಭಿಜ್ಞ. "ये चैवं पुरुषाः कलासु कुशलास्तेष्वेव लोकस्थितिः" भर्तृ १-१८। 12. ಜಾಣನಾದ, ಕಾರ್ಯದಲ್ಲಿ ಚತುರನಾದ. "भजते विदेशमधिकेन जितस्तदनुप्रवेशमथवा कुशलः" माघ० ९-४८। 13. ದರ್ಭೆಯನ್ನು ತೆಗೆದುಕೊಳ್ಳುವ. कुशान् लाति — ला (आदाने) "कः" (३-२-४)।

**कुशलकाम ಕುಶಲಕಾಮ** (वि०) ಮಂಗಳವನ್ನು ಅಪೇಕ್ಷಿಸುವ, ಶುಭವನ್ನು ಬಯಸುವ. कुशलं कामयते — कमु (कान्तौ) "अण्" (३-२-१)।

**कुशलता ಕುಶಲತಾ** (स्त्री०) 1. ದಕ್ಷತೆ. ಸಾಮರ್ಥ್ಯ. कुशलस्य भावः "तल्" (५-१-११९)। 2. ನಿಪುಣತೆ, ಅಭಿಜ್ಞತೆ. ಜಾಣತನ. "यथा यथा निषेवन्ते विषयान् विषयात्मकाः। तथा तथा कुशलता तेषां तेषूपजायते" मनु० १२-७३।

**कुशलप्रश्न ಕುಶಲಪ್ರಶ್ನ** (पुं०) ಪ್ರೀತಿಯಿಂದ ಆರೋಗ್ಯ ಕ್ಷೇಮಗಳನ್ನು ಕೇಳುವುದು. कुशलस्य प्रश्नः।

**कुशलव ಕುಶಲವ** (पुं० द्विव०) ಶ್ರೀರಾಮನ ಮಕ್ಕಳಾದ ಕುಶಲವರು. कुशश्च लवश्च। "मैथिलेयौ कुशलवौ जगतुर्गुरुचोदितौ" रघु० १५-६३।

**कुशलवत् ಕುಶಲವತ್** (वि०) ಕ್ಷೇಮದಿಂದಿರುವ. ಆರೋಗ್ಯವಂತ. कुशलमस्यास्ति "मतुप्" (५-२-९४)। मस्य वः (८-२-९)। "सर्वतः कुशलवानसि कच्चित्त्वं स नैषध इति प्रतिभा नः" नैष० ५-७४।

**कुशलिन् ಕುಶಲಿನ್** (वि०) 1. ಮಂಗಳವುಳ್ಳ. ಶುಭವುಳ್ಳ. कुशलमस्यास्ति "इनिः" (५-२-११५)। 2. ಕ್ಷೇಮವುಳ್ಳ. "संप्रत्युपेयाः कुशली पुनर्युधः सस्नेहमाशीरिति भर्तुरीरिता" माघ० १५-९५। 3. ಜಾಣನಾದ. ಕಾರ್ಯಚತುರನಾದ. स्त्रियाम् "ङीप्" (४-१-५)। **कुशलिनी ಕುಶಲಿನೀ.** "कुशलिनी क्षेमस्य वार्तापि न" सा० द०।

**कुशस्थल ಕುಶಸ್ಥಲ** (न०) ಕನ್ಯಾಕುಬ್ಜದೇಶ.

**कुशस्थली ಕುಶಸ್ಥಲೀ** (स्त्री०) ಅವಂತಿನಗರದ ಒಂದು ಹೆಸರು. ["अवन्ति" ಪದದಲ್ಲಿ ನೋಡಿ.]

**कुशा ಕುಶಾ** (स्त्री०) 1. ರಜ್ಜು, ಹಗ್ಗ. "कुशी फाले कुशा रज्वाम्" मेदि०। 2. ಯಾಗದಲ್ಲಿ ಸಾಮಗಾನ ಮಾಡುವಾಗ ಸ್ತೋತ್ರದ ಎಣಿಕೆಗಾಗಿ ಇಡುವ ಮರದ ಗೂಟ.

**कुशाकर ಕುಶಾಕರ** (पुं०) ಯಜ್ಞದ ಅಗ್ನಿ. कुशैराकीर्यते — आ + कॄ (विक्षेपे) "अप्" (३-३-५७)।

**कुशाक्ष ಕುಶಾಕ್ಷ** (पुं०) ದರ್ಭೆಯಂತೆ ತೀಕ್ಷ್ಣವಾದ ದೃಷ್ಟಿಯುಳ್ಳ ವಾನರ,—ಕಪಿ. कुश इव तीक्ष्णमक्षि अस्य।

**कुशाग्र ಕುಶಾಗ್ರ** (न०) ದರ್ಭೆಯ ತುದಿ. कुशस्याग्रम्।

**कुशाग्रधी ಕುಶಾಗ್ರಧೀ, -बुद्धि -ಬುದ್ಧಿ** (वि०) ದರ್ಭೆಯ ತುದಿಯಂತೆ ಸೂಕ್ಷ್ಮವಾದ ಬುದ್ಧಿಯುಳ್ಳ. कुशाग्रवत् सूक्ष्मा धीः बुद्धिर्वा यस्य। "अप्यग्रणीर्मन्त्रकृतामृषीणां कुशाग्रबुद्धे कुशली गुरुस्ते" रघु० ५-४।

**कुशाग्रीय ಕುಶಾಗ್ರೀಯ** (वि०) ದರ್ಭೆಯ ತುದಿಗೆ ಸಮಾನವಾದ, ದರ್ಭೆಯ ಅಗ್ರದಂತಿರುವ (ಸೂಕ್ಷ್ಮಬುದ್ಧಿ ಮುಂತಾದುದು). कुशाग्रमिव "छः" (५-३-१०५)। "कुरु बुद्धिं कुशाग्रीयामनुकामीनतां त्यज" भट्टि० ५-१५।

**कुशारणि ಕುಶಾರಣಿ** (पुं०) ದುರ್ವಾಸಮಹರ್ಷಿ. "दुर्वासास्तु कुशारणिः" त्रिकाण्ड०।

**कुशावती ಕುಶಾವತೀ** (स्त्री०) ಕುಶಮಹಾರಾಜನ ರಾಜಧಾನಿ. "स निवेश्य कुशावत्यां रिपुनागाङ्कुशं कुशम्" रघु० १५-९७।

**कुशाश्व ಕುಶಾಶ್ವ** (पुं०) 1. ಸೂರ್ಯವಂಶದ ಒಬ್ಬ ದೊರೆ. "सृञ्जयस्य सुतः श्रीमान् सहदेवः प्रतापवान्। कुशाश्वः सहदेवस्य पुत्रः परमधार्मिकः" रामा०। 2. ಚಂದ್ರವಂಶದ ಕುಶರಾಜನ ಒಬ್ಬ ಮಗ.

**कुशासन ಕುಶಾಸನ** (न०) 1. ದರ್ಭೆಯ ಆಸನ. कुशस्यासनम्। 2. ಭೂಮಿಯನ್ನು ಆಳುವುದು. कोः शासनम्। 3. ಕೆಟ್ಟ ಆಜ್ಞೆ. कुत्सितं शासनम्। (वि०)4. ದರ್ಭೆಯ ಆಸನವುಳ್ಳ. कुशस्य आसनं यस्य।

**कुशि ಕುಶಿ** (पुं०) ಘೂಕ, ಗೂಗೆ.

**कुशिक ಕುಶಿಕ** (पुं०) 1. ಕುಶರಾಜನ ಮಗ. ಚಂದ್ರವಂಶದ ಒಬ್ಬ ದೊರೆ. ವಿಶ್ವಾಮಿತ್ರನ ತಾತ. ಗಾಧಿಯ ತಂದೆ. कुशः जनकत्वेनास्त्यस्य "ठन्" (५-२-११५)। "कुशपुत्रा बभूवुर्हि चत्वारो देववर्चसः। कुशिकः कुशनाभश्च कुशाश्वो मूर्तिमांस्तथा"। 2. ನೇಗಿಲ ಗುಳ. 3. ಸರ್ಜವೃಕ್ಷ. ಮತ್ತಿಮರ. 4. ತಾರೆಗಿಡ. "कुशिको मुनिभेदे स्यात्फले सर्जे विभीतके" हेम०।

**कुशिन् ಕುಶಿನ್** (पुं०) 1. ವಾಲ್ಮೀಕಿ ಮಹರ್ಷಿ. "प्राचेतसस्तु वाल्मीकिर्वाल्मीकश्च कुशी कविः" वैज०। 2. ದರ್ಭೆ ಹಿಡಿದಿರುವ. ದರ್ಭೆಯನ್ನು ಧರಿಸಿರುವ. कुशोऽस्त्यस्य "इनिः" (५-२-११५)। "दिनेऽष्टमे तु दीक्षितोऽहं यथाविधि। दण्डी मुण्डी कुशी चीरी घृताक्तो मेखलीकृतः" भा० अनु०।

**कुशी ಕುಶೀ** (स्त्री०) 1. ಕಬ್ಬಿಣದ ನೇಗಿಲ ಗುಳ. कुं भूमिं श्यति — शो (तनूकरणे) "डः" (३-२-१०१)। "ङीष्" (४-१-४२)। 2. ಮುರಿದ ಮೂಳೆಗೆ ಕಟ್ಟುವ ದಬ್ಬೆ. "कुशी भग्नास्थिबन्धः स्यात्" वैज०।

**कुशील ಕುಶೀಲ** (वि०) ಕೆಟ್ಟ ಸ್ವಭಾವವುಳ್ಳ. कुत्सितं शीलं यस्य।

**कुशीलव ಕುಶೀಲವ** (पुं०) 1. ವಾಲ್ಮೀಕಿಮಹರ್ಷಿ. 2. ಗಾಯಕ, ಹಾಡುಗಾರ. "कुशीलवौ कुशलवनामधारिणौ" चं० रा०। 3. ನಟ, ಅಭಿನಯಕಾರ. कुत्सितं शीलं वाति — वा (गतिगन्धनयोः) "कः" (३-२-३)। 4. ಸ್ತುತಿಪಾಠಕ, ಹೊಗಳುಭಟ. 5. ಯಾಚಕ. ಭಿಕ್ಷುಕ. "कुशीलवस्तु वाल्मीकौ नटयाचकयोरपि" मेदि०।

**कुशीवश ಕುಶೀವಶ** (पुं०) ವಾಲ್ಮೀಕಿಮಹರ್ಷಿ. "प्राचेतसस्तु वाल्मीकिः कविज्येष्ठः कुशीवशः" त्रिकाण्ड०।

**कुशूल ಕುಶೂಲ** (पुं०) 1. ಕಣಜ, ಧಾನ್ಯವನ್ನು ಕೂಡಿಡುವ ಜಾಗ, ಉಗ್ರಾಣ. 2. ಹುರಿಯುವ ಬಾಣಲೆ. 3. ತುಷಾಗ್ನಿ, ಹೊಟ್ಟಿನೊಳಗಿನ ಬೆಂಕಿ.

**कुशूलधान्य ಕುಶೂಲಧಾನ್ಯ** (न०) 1. ಮೂರು ವರ್ಷಗಳಿಗಾಗುವಷ್ಟು ಕೂಡಿಸಿಟ್ಟಿರುವ ಧಾನ್ಯ. (वि०) 2. ಮೂರು ವರ್ಷಗಳಿಗಾಗುವಷ್ಟು ಧಾನ್ಯವನ್ನು ಕೂಡಿಸಿಟ್ಟಿರುವವನು. कुशूलपरिमितं धान्यं यस्य। वा "कप्" (५-४-१५४)। **-धान्यकः -ಧಾನ್ಯಕಃ.**

**कुशेशय ಕುಶೇಶಯ** (न०) 1. ಪದ್ಮ, ಕಮಲ, ತಾವರೆ ಹೂವು. कुशे जले शेते — शीङ् (स्वप्ने) "अच्" (३-२-१५)। "कुशेशयैरत्र जलाशयोषिता मुदा रमन्ते कलभा विकस्वरैः" माघ० ४-३३। 2. ಕುಶದ್ವೀಪದ ಸಪ್ತಕುಲಪರ್ವತಗಳಲ್ಲೊಂದು. "कुशेशयो हरिश्चैव सप्तमो मन्थराचलः"। 3. ಸಾರಸ ಪಕ್ಷಿ, ನೀರುಹಕ್ಕಿ. ತಾವರೆಹಕ್ಕಿ.

**कुशोदक ಕುಶೋದಕ** (न०) ದರ್ಭೆಯ ನೀರು, ದಾನ ಮಾಡುವಾಗ ದರ್ಭೆಯೊಡನೆ ಬಿಡುವ ನೀರು. कुशसहितमुदकम्।

**कुष-निष्कर्षे** (क्र्या० पर० सक० से०)। कुष्णाति। चुकोष। कुषिता। कुष्णातु। अकोषीत्। अकुष्णात्। 1. ಇಷ್ಟೆಂದು ನಿಶ್ಚಯಿಸು. 2. ಹೊರಕ್ಕೆ ತಳ್ಳು, ಹೊರಕ್ಕೆ ಹೊರಡಿಸು. "ततोऽकुष्णाद्दशग्रीवः क्रुद्धः प्राणान् वनौकसाम्" भट्टि० १७-८०।

**कुषाकु ಕುಷಾಕು** (पुं०) 1. ಅಗ್ನಿ, ಬೆಂಕಿ. 2. ಸೂರ್ಯ. कुष (निष्कर्षे) "काकुः" (उ० ३-७७)। 3. ವಾನರ, ಕಪಿ. (वि०) 4. ನೀಚ, ಅಧಮ. 5. ದಹಿಸುವ, ಸುಡುವ. 6. ಇತರರಿಗೆ ಖೇದವುಂಟುಮಾಡುವ, ಇತರರ ಮನ ನೋಯಿಸುವ. "कुषाकुर्मर्कटे भानौ परोत्तापिनि पावके" विश्व०।

**कुषीतक ಕುಷೀತಕ** (पुं०) ಒಬ್ಬ ಋಷಿ.

**कुषिन् ಕುಷಿನ್** (पुं०) ಅರವತ್ತು ವರ್ಷ ವಯಸ್ಸಿನ ಗಜ, ಆನೆ. "मदवृन्दः कुषी कम्बुः शुण्डालः षष्टिहायनः" वैज०।

**कुष्ठ ಕುಷ್ಠ** (न०) 1. ಚಂಗಲುಕೋಷ್ಠ: कुष्णाति रोगम् — कुष (निष्कर्षे) "क्थन्" (उ० २-२)। 2. ಶ್ವಿತ್ರ,

ಶ್ವೇತ, ತೊನ್ನುರೋಗ. कुष्णात्यङ्गम् — कुष "क्थन्" (उ० २-२)। "त्वं सर्वभक्षो भव भीमकर्मा कुष्ठाभिभूतोऽनल धूमगर्भः" कुमा० ९-१६। ಏಳು ವಿಧ ಮಹಾಕುಷ್ಠಗಳು ಹನ್ನೊಂದು ವಿಧ ಕ್ಷುದ್ರ ಕುಷ್ಠಗಳೆಂದು ಕುಷ್ಠರೋಗವು ಹದಿನೆಂಟು ವಿಧ. "तत्र महाकुष्ठान्यरुणोदुम्बरर्ष्यजिह्वकपालकाकणकपुण्डरीकदद्रुकुष्ठानीति"। क्षुद्रकुष्ठान्यपि स्थूलारुष्कं महाकुष्ठमेककुष्ठं चर्मदलं विसर्पः परिसर्पः सिध्मं विचर्चिका किटिभं पामा रसका चेति" सुश्रुत० निदान० ५-५। ಎಲ್ಲಾ ಕುಷ್ಠಗಳೂ ವಾತ ಪಿತ್ತ ಕಫ ಮತ್ತು ಕೃಮಿ ದೋಷಗಳಿಂದುಂಟಾಗುವುವು. "सर्वाणि कुष्ठानि सवातानि सपित्तानि सश्लेष्माणि सकृमीणि च भवन्ति" सुश्रुत० निदान० ५-६। ವಾತ ದೋಷದಿಂದ ಅರುಣಕುಷ್ಠವೂ ಪಿತ್ತದೋಷದಿಂದ ಉದುಂಬರ, ಋಷ್ಯಜಿಹ್ವ, ಕಪಾಲ ಮತ್ತು ಕಾಕಣ ಕುಷ್ಠಗಳೂ ಶ್ಲೇಷ್ಮದೋಷದಿಂದ ಪುಂಡರೀಕ ಮತ್ತು ದದ್ರುಕುಷ್ಠಗಳೂ ಸಂಭವಿಸುವುವು. "तत्र वातेनारुणं, पित्तेनोदुम्बरर्ष्यजिह्वकपालकाकणकानि, श्लेष्मणा पुण्डरीकं दद्रुकुष्ठं चेति" सुश्रुत० निदान० ५-७।

**कुष्ठघ्न ಕುಷ್ಠಘ್ನ** (वि०) ಕುಷ್ಠರೋಗವನ್ನು ನಾಶಪಡಿಸುವ (ಔಷಧ). कुष्ठं हन्ति — हन (हिंसागत्योः) "टक्" (३-२-५३)।

**कुष्ठनाशन ಕುಷ್ಠನಾಶನ** (पुं०) 1. ಹಂದಿಗೆಡ್ಡೆ, ವಾರಾಹಿ ಗಿಡ. कुष्ठं नाशयति — णश (अदर्शने) + णिच् "ल्युः" (३-१-१३४)। 2. ಬಿಳಿ ಸಾಸುವೆ. (न०) 3. ಕುಷ್ಠರೋಗವನ್ನು ವಾಸಿಮಾಡುವಿಕೆ. कुष्ठ + णश + णिच् भावे "ल्युट्" (३-३-११५)। (वि०) 4. ಕುಷ್ಠರೋಗವನ್ನು ವಾಸಿಮಾಡುವ, ತೊನ್ನುರೋಗವನ್ನು ಹೋಗಲಾಡಿಸುವ. **–नाशिन् –ನಾಶಿನ್.** ಕುಷ್ಠ ರೋಗವನ್ನು ಗುಣಪಡಿಸುವ. कुष्ठ + णश + णिच् "णिनिः (३-१-१३४)। स्त्रियाम् "ङीप्" (४-१-५)। **–नाशिनी –ನಾಶಿನೀ.**

**कुष्ठल ಕುಷ್ಠಲ** (न०) ಭೂತಲ, ಭೂಮಿ. कोः स्थलम्। षत्वम् (८-३-९६)। "शयानां कुष्ठले ताराम् दिविष्ठामिव निर्मलाम्" भट्टि० ९-८४।

**कुष्ठहृत् ಕುಷ್ಠಹೃತ್** (पुं०) 1. ಕಗ್ಗಲಿಮರ. कुष्ठं हरति—हृञ् (हरणे) "क्विप्" (३-२-७६)। "खदिरो बालपत्रकः। यूपद्रुः कुष्ठहृत्" त्रिकाण्ड०। (वि०) 2. ಕುಷ್ಠರೋಗವನ್ನು ವಾಸಿಮಾಡುವ.

**कुष्ठित ಕುಷ್ಠಿತ** (वि०) ಕುಷ್ಠರೋಗವುಂಟಾಗಿರುವ, ತೊನ್ನು ಹಿಡಿದಿರುವ. कुष्ठमस्य सञ्जातम् "इतच्" (५-२-३६)। "दम्पत्योः स्नेहबाहुल्यात् दुष्टशोणितशुक्रयोः। यदपत्यं तयोर्जातं ज्ञेयं तदपि कुष्ठितम्"।

**कुष्ठिन् ಕುಷ್ಠಿನ್** (वि०) ಕುಷ್ಠರೋಗಿ, ತೊನ್ನು ಹಿಡಿದವನು. कुष्ठमस्यास्ति "इनिः" (५-२-११५)। स्त्रियाम् "ङीप्" (४-१-५)। **कुष्ठिनी ಕುಷ್ಠಿನೀ.**

**कुष्मल ಕುಷ್ಮಲ** (न०) 1. ಕತ್ತರಿಸುವಿಕೆ. कुष (निष्कर्षे) "क्मलन्" (उ० ४-१८६)। 2. ಮೊಗ್ಗು.

**कुष्माण्ड ಕುಷ್ಮಾಂಡ** (पुं०) 1. ಕುಂಬಳದ ಗಿಡ. ईषत् ऊष्मा अण्डेष्वस्य। पृषो०। 2. ಈಶ್ವರನ ಪ್ರಮಥ ಗಣಗಳಲ್ಲೊಬ್ಬ. (स्त्री०) **कुष्माण्डी ಕುಷ್ಮಾಂಡೀ.** 3. ದುರ್ಗಾದೇವಿ.

**कुष्माण्डकरसायन ಕುಷ್ಮಾಂಡಕರಸಾಯನ** (न०) ಕುಷ್ಮಾಂಡ ಲೇಹ್ಯ, ಕುಂಬಳಕಾಯಿ ಲೇಹ್ಯ.

**कुस-श्लेषणे** (दिवा० पर० सक० से०)। कुस्यति। चुकोस। कुसिता। अकोसीत्। ಆಲಿಂಗಿಸು, ಅಪ್ಪಿಕೊ.

**कुसित ಕುಸಿತ** (पुं०) 1. ದೇಶ, ಜನಪದ. कुस (श्लेषणे) "इतः" (उ० ४-१०६)। 2. ಒಂದು ದೇವತೆ.

**कुसितायी ಕುಸಿತಾಯೀ** (स्त्री०) ಕುಸಿತ ದೇವತೆಯ ಪತ್ನಿ. कुसितस्य पत्नी "ऐ" आदेशः "ङीप्" च (४-१-३७)।

**कुसिद ಕುಸಿದ** (पुं०) 1. ಒಂದು ದೇವತೆ. 2. ದೇಶ, ಜನಪದ. कुस (श्लेषणे) "इदः" (उ० ४-१०६)।

**कुसिदायी ಕುಸಿದಾಯೀ** (स्त्री०) ಕುಸಿದ ದೇವತೆಯ ಪತ್ನಿ. कुसिदस्य पत्नी "ऐ" आदेशः "ङीप्" च (४-१-३७)।

**कुसीद ಕುಸೀದ** (न०) 1. ಬಡ್ಡಿಯಿಂದ ನಡೆಸುವ ಜೀವನ, ಸಾಲ ಕೊಟ್ಟು ಅದರಿಂದ ಬರುವ ಬಡ್ಡಿಯ ಹಣದಿಂದ ಜೀವಿಸುವುದು. (वि०) 2. ಬಡ್ಡಿಯ ಹಣದಿಂದ ಜೀವಿಸುವವನು. "कुसीदं वृद्धिजीवने। वृद्धयाजीवे" हेम०। स्वार्थे "कः"। **कुसीदकः ಕುಸೀದಕಃ.**

**कुसीदिन् ಕುಸೀದಿನ್** (वि०) ಬಡ್ಡಿಗಾಗಿ ಹಣವನ್ನು ಸಾಲ ಕೊಡುವವನು. कुसीदमस्यास्ति "इनिः" (५-२-११५)। स्त्रियाम् "ङीप्" (४-१-५)। **–दिनी –ದಿನೀ.**

**कुसीदपथ ಕುಸೀದಪಥ** (पुं०) ನ್ಯಾಯವಾದುದಕ್ಕಿಂತ ಹೆಚ್ಚು ಬಡ್ಡಿಗೆ ಸಾಲ ಕೊಡುವುದು. "कृतानुसारादधिका व्यतिरिक्ता न सिद्ध्यति। कुसीदपथमाहुस्तं पञ्चकं शतमर्हति" मनु० ८-१५२।

**कुसीदिक ಕುಸೀದಿಕ** (वि०) ಬಡ್ಡಿಗಾಗಿ ಹಣವನ್ನು ಸಾಲ ಕೊಡುವವನು. कुसीदं वृद्धिः, तदर्थं द्रव्यं कुसीदं, तत्प्रयच्छति "ष्ठन्" "ष्ठच्" वा (४-४-३१)। स्त्रियाम् **कुसीदिकी ಕುಸೀದಿಕೀ.**

**कुसुम ಕುಸುಮ** (न०) 1. ಪುಷ್ಪ. ಹೂವು. कुस्यति—कुस (श्लेषणे) "उमः" (उ० ४-१-१०६)। "सुगन्धयद्दिशः शुभ्रमम्लानि कुसुमं दिवः। भूरि तत्रापतत्तस्मादुत्पपात दिवं यशः" माघ० १९-२०। 2. ಒಂದು ವಿಧ ನೇತ್ರರೋಗ. 3. ಹೆಂಗಸರ ರಜಸ್ಸು. 4. ಫಲ, ಹಣ್ಣು. "कुसुमं स्त्रीरजोनेत्ररोगयोः फलपुष्पयोः" मेदि०।

**कुसुमकार्मुक ಕುಸುಮಕಾರ್ಮುಕ** (पुं०) ಮನ್ಮಥ. ಕಾಮದೇವ. कुसुमं कार्मुकमस्य। "कुसुमकार्मुककार्मुकसंहितद्रुतशिलीमुखखण्डितविग्रहाः" माघ० ६-१६।

**कुसुमचाप ಕುಸುಮಚಾಪ, -बाण -ಬಾಣ, -सायक -ಸಾಯಕ** (पुं०) ಮನ್ಮಥ, ಕಾಮದೇವ. कुसुमं चापो बाणः सायको वाऽस्य। "कुसुमचापमतेजयदंशुभिर्हिमकरो मकरोर्जितकेतनम्" रघु० ९-३९।

**कुसुमधन्वन् ಕುಸುಮಧನ್ವನ್** (पुं०) ಮನ್ಮಥ, ಕಾಮದೇವ. कुसुमं धनुरस्य।

**कुसुमपुर ಕುಸುಮಪುರ** (न०) ಪಾಟಲಿಪುತ್ರ ನಗರ, ಚಂದ್ರಗುಪ್ತನ ರಾಜಧಾನಿ. "अये, कुसुमपुरवृत्तान्तज्ञः। अहं भवत्प्रणिधिश्चेति गतार्थः" मुद्रा० २।

**कुसुममय ಕುಸುಮಮಯ** (वि०) ಹೂವಿನಿಂದ ತುಂಬಿದ, ಹೂವು ಹೆಚ್ಚಾಗಿರುವ. कुसुम "मयट्" (५-४-२१)। स्त्रियाम् "ङीप्" (४-१-१५)। **-मयी -ಮಯೀ.**

**कुसुमविचित्रा ಕುಸುಮವಿಚಿತ್ರಾ** (स्त्री०) 1. ವೃತ್ತರತ್ನಾಕರೋಕ್ತವಾದ ಹನ್ನೆರಡನೆಯ ಛಂದಸ್ಸಿನ ಒಂದು ವೃತ್ತ. **ಇದರ ಲಕ್ಷಣ:** "नयसहितौ न्यौ कुसुमविचित्रा" वृ० र०। **ಗಣವಿನ್ಯಾಸ:**

न य न य

III IUU III IUU

(वि०) 2. ಪುಷ್ಪಗಳಿಂದ ವಿಚಿತ್ರವಾಗಿರುವ, ಹೂವುಗಳಿಂದ ಚಿತ್ರವಿಚಿತ್ರವಾಗಿರುವ. "उपवनभूमौ हिमगिरिपुत्री मणिमयभूषा मधुरतराक्षी। भ्रमरकदम्बैरकलयदिद्धां कुसुमविचित्रां कुरवकशाखाम्"।

**कुसुमशयन ಕುಸುಮಶಯನ** (न०) ಹೂವಿನ ಹಾಸಿಗೆ.

**कुसुमाकर ಕುಸುಮಾಕರ** (पुं०) ಪುಷ್ಪಗಳಿಗೆ ಆಕರವಾಗಿರುವ ವಸಂತಋತು. कुसुमानामाकरः। "मासानां मार्गशीर्षोऽहमृतूनां कुसुमाकरः" गीता १०-३५।

**कुसुमागम ಕುಸುಮಾಗಮ** (पुं०) ಪುಷ್ಪಗಳ ಕಾಲವಾದ ವಸಂತ ಋತು. कुसुमानामागमो यत्र।

**कुसुमाञ्जन ಕುಸುಮಾಂಜನ** (न०) ಹಿತ್ತಾಳೆ ಭಸ್ಮದಿಂದ ತಯಾರಿಸಲ್ಪಟ್ಟ ಅಂಜನ.

**कुसुमाञ्जलि ಕುಸುಮಾಂಜಲಿ** (पुं०) 1. ಪುಷ್ಪಗಳ ಅಂಜಲಿ, ಹೂವಿನ ಬೊಗಸೆ. कुसुमानामञ्जलिः। 2. ಉದಯನಾಚಾರ್ಯರಿಂದ ರಚಿತವಾದ ಪರಮಾತ್ಮನನ್ನು ನಿರೂಪಿಸುವ ಒಂದು ಗ್ರಂಥ. "कुसुमाञ्जलिरपर इव प्रकीर्यते काव्यबन्ध एषोऽत्र" वेणी० १-५।

**कुसुमायुध ಕುಸುಮಾಯುಧ** (पुं०) ಮನ್ಮಥ, ಕಾಮದೇವ. कुसुमान्यायुधान्यस्य। "श्वासानिलामोदभरानुमेयां दधद्द्विवाणीं कुसुमायुधस्य" नैष० ७-३६।

**कुसुमावचय ಕುಸುಮಾವಚಯ** (पुं०) 1. ಗಿಡಗಳ ತುದಿಯಲ್ಲಿರುವ ಪುಷ್ಪಗಳನ್ನು ಕೋಲು ಮೊದಲಾದ ಸಾಧನಗಳ ಸಾಹಾಯ್ಯದಿಂದ ಬಿಡಿಸುವುದು. 2. ಗಿಡಗಳಲ್ಲಿ ಕಳ್ಳತನದಿಂದ ಹೂವನ್ನು ಬಿಡಿಸಿಕೊಳ್ಳುವುದು. कुसुम + अव + चिञ् (चयने) "अच्" (३-३-५६)। "घञ्" (३-३-४०)। **-अवचायः -ಅವಚಾಯಃ** ಭೂಮಿಯಲ್ಲೇ ನಿಂತು ಕೈಯಿಂದ ಗಿಡಗಳ ಹೂವುಗಳನ್ನು ಬಿಡಿಸುವುದು.

**कुसुमाशुग ಕುಸುಮಾಶುಗ** (पुं०) ಮನ್ಮಥ, ಕಾಮದೇವ. कुसुमान्याशुगा अस्य। "तनोरयकीर्ति कुसुमाशुगस्य सैषा बतेन्दीवरकर्णपूरा" नैष० १०-११८।

**कुसुमासव ಕುಸುಮಾಸವ** (पुं०) 1. ಜೇನುತುಪ್ಪ. 2. ಪುಷ್ಪದಿಂದ ತಯಾರಿಸಲ್ಪಟ್ಟ ಮದ್ಯ.

**कुसुमित ಕುಸುಮಿತ** (वि०) ಪುಷ್ಪಿಸಿರುವ, ಹೂವು ಬಿಟ್ಟಿರುವ, ಹೂವುಗಳಿಂದ ತುಂಬಿರುವ. कुसुमान्यस्य सञ्जातानि—कुसुम "इतच्" (५-२-३६)। "कुसुमिततरुजालसन्ततानि भ्रमरयुतानि समुद्रतीरजानि" रामा०।

**कुसुमेषु ಕುಸುಮೇಷು** (पुं०) ಮನ್ಮಥ, ಕಾಮದೇವ. कुसुमानि इषवोऽस्य। "अनिशं निजैरकरुणः करुणं कुसुमेषुरुत्तपति यद्विशिखैः" माघ० ९-६७।

**कुसुमोच्चय ಕುಸುಮೋಚ್ಚಯ** (पुं०) 1. ಪುಷ್ಪಗಳ ಸಮೂಹ, ಹೂವುಗಳ ರಾಶಿ. कुसुमानामुच्चयः। 2. ಹೂವಿನ ಗೊಂಚಲು. कुसुमानामुच्चयो यत्र।

**कुसुम्भ ಕುಸುಂಭ** (पुं०) 1. ಕಮಂಡಲು. कुस (श्लेषणे) "उम्भः" (उ० ४-१०६)। 2. ಕುಂಕುಮದ ಹೂವು, ಕುಂಕುಮಕೇಸರಿ. 3. ಕುಸುಬೆಗಿಡ. (न०) 4. ಕುಸುಬೆಹೂವು. "स्यात्कुसुम्भं वह्निशिखं महारजनमित्यपि" अम०।

"स्यान्महारजने क्लीबं कुसुम्भं करके पुमान्" अम०। "विहिताञ्जलिर्जनतया दधती विकसत्कुसुम्भ-कुसुमारुणताम्" माघ० ९-१४। 5. ಸುವರ್ಣ, ಚಿನ್ನ. "कुसुम्भं हेमनि महारजने ना कमण्डलौ" मेदि०।

**कुसुम्भराग ಕುಸುಂಭರಾಗ** (पुं०) 1. ಕುಸುಬೆಹೂವಿನ ಬಣ್ಣ. कुसुम्भस्य तत्पुष्पस्य रागः। 2. ಕುಸುಬೆ ಹೂವಿನ ಬಣ್ಣದಂತಿರುವ ಪತಿ-ಪತ್ನಿಯರ ಅನುರಾಗ,— ಗಂಡಹೆಂಡಿರ ಪ್ರೇಮ. कुसुम्भस्तद्रस इव रागः।

**कुसुम्भवत् ಕುಸುಂಭವತ್** (वि०) ಕಮಂಡಲುವನ್ನು ಹಿಡಿದಿರುವ (ಸಂನ್ಯಾಸಿ). कुसुम्भोऽस्यास्ति "मतुप्" (५-२-९४)। "क्लृप्तकेशनखश्मश्रुः पात्री दण्डी कुसुम्भवान्" मनु० ६-५२।

**कुसू ಕುಸೂ** (पुं०) ಕೆಸರಿನಲ್ಲಿರುವ ಎರುಬುಹುಳು. "गण्डूपदः किञ्चुलकः कुसूः" अभि० चि०।

**कुसूल ಕುಸೂಲ** (पुं०) 1. ಕಣಜ, ಧಾನ್ಯವನ್ನು ಕೂಡಿಸಿಡುವ ಮನೆ. कुस (श्लेषणे) "ऊलच्" (उ० ४-९०)। 2. ಹುರಿಯುವ ಬಾಣಲಿ.

**कुसूलधान्य ಕುಸೂಲಧಾನ್ಯ** (न०) 1. ಮೂರು ವರ್ಷಗಳಿಗಾಗುವಷ್ಟು ಕೂಡಿಸಿಟ್ಟಿರುವ ಧಾನ್ಯ. (वि०) 2. ಮೂರು ವರ್ಷಗಳಿಗಾಗುವಷ್ಟು ಧಾನ್ಯವನ್ನು ಕೂಡಿಸಿಟ್ಟಿರುವವನು. कुसूलमितं धान्यं यस्य। वा "कप्" (५-४-१५४)। **-धान्यकः -ಧಾನ್ಯಕಃ.** "कुसूलधान्यको वा स्यात्कुम्भीधान्यक एव वा" मनु० ४-७।

**कुसूलपाद ಕುಸೂಲಪಾದ** (वि०) ಬಾಣಲಿಯಂತೆ ಅಗಲವಾಗಿಯೂ ಗುಂಡಾಗಿಯೂ ಇರುವ ಕಾಲುಗಳುಳ್ಳವನು. कुसूलाविव पादौ यस्य।

**कुसृति ಕುಸೃತಿ** (स्त्री०) 1. ಶಾಠ್ಯ, ಠಕ್ಕು, ವಂಚನೆ, ಕಪಟ. कुत्सिता सृतिः — सृ (गतौ) "क्तिच्" (३-३-१७४)। "कुसृतिर्निकृतिः शाठ्यम्" अम०। 2. ಇಂದ್ರಜಾಲವಿದ್ಯೆ, ಯಕ್ಷಿಣೀ ವಿದ್ಯೆ. "इन्द्रजालं तु कुहकं जालं कुसृतिरित्यपि" अभि० चि०। 3. ಕೆಟ್ಟ ಮಾರ್ಗ, ತಪ್ಪುದಾರಿ. ಶಾಸ್ತ್ರೀಯವಲ್ಲದ ಮಾರ್ಗ. (वि०) 4. ಕಪಟಿ, ವಂಚಕ, ಮೋಸಗಾರ. कुत्सिता सृतिः पदवी यस्य। "कस्माद्वयं कुसृतयः खलयोनयस्ते दाक्षिण्यदृष्टिपदवीं भवतः प्रणीताः" भाग० ८-२३-७।

**कुस्तुभ ಕುಸ್ತುಭ** (पुं०) 1. ವಿಷ್ಣು. कुं स्तोभते — ष्टुभु (स्तम्भे) "कः" (वा० ३-२-५)। 2. ಸಮುದ್ರ. कुं भुवं स्तुम्नाति।

**कुस्तुम्बरी ಕುಸ್ತುಂಬರೀ** (स्त्री०) ಕೊತ್ತುಂಬರಿ. कुत्सिता तुम्बरी। पृषो०। "छत्रा कुस्तुम्बरी धान्या धन्या धाना धनीयिका" वैज०।

**कुस्तुम्बुरु ಕುಸ್ತುಂಬುರು** (न०) ಕೊತ್ತುಂಬರಿ, ಧನಿಯ. कुत्सितं तुम्बति — तुबि (अर्दने) "उरुः" बाहु०। सुट् (६-१-१४३)। "कुस्तुम्बुरु च धान्यं च भृंगा स्यान्मातुलानिका" वैज०।

**कुह ಕುಹ** (पुं०) 1. ಕುಬೇರ. कुहयते विस्मापयते – कुह (विस्मापने) + णिच् "अच्" (३-१-१३४)। "श्रीदः सितोदरकुहेश्सखाः" अभि० चि०। (वि०) 2. ಆಶ್ಚರ್ಯವುಂಟುಮಾಡುವ.

**कुहक ಕುಹಕ** (पुं०) 1. ಐಂದ್ರಜಾಲಿಕ, ಮಾಯಾವಿ, ಯಕ್ಷಿಣಿಗಾರ. कुह (विस्मापने) "क्वुन्" (उ० २-३८)। "क्वचिदर्चनमिन्द्रजालतश्चेत् कुहकाः सन्ति परःशताः पृथिव्याम्" याद० १५-५१। 2. ಒಂದು ಸರ್ಪ. "ततोऽधस्तान्महातले काद्रवेयाणां सर्पाणां नैकशिरसां क्रोधवशो नाम गणः कुहकतक्षककालियसुषेणादिप्रधानाः महाभोगवन्तः" भाग० ५-२४-२९। (न०) 3. ಇಂದ್ರಜಾಲವಿದ್ಯೆ, ಯಕ್ಷಿಣಿ, ಮಾಯೆ, ತಂತ್ರ, ಇಲ್ಲದಿರುವುದನ್ನು ಇರುವಂತೆ ತೋರಿಸುವ ವ್ಯಾಪಾರ. "इन्द्रजालं तु कुहकम्" अभि० चि०। "तेजोवारिमृदां यथा विनिमयो यत्र त्रिसर्गोऽमृषा धाम्ना स्वेन सदा निरस्तकुहकं सत्यं परं धीमहि" भाग० १-१-१। 4. ಕಪಟ, ಮೋಸ. (वि०) 5. ವಂಚಕ, ಮೋಸಗಾರ, ಕಪಟಿ. "धूर्तस्तु वञ्चकः। व्यंसकः कुहको दाण्डाजिनिको मायिजालकौ" अभि० चि०। स्त्रियाम् **-हिका -ಹಿಕಾ.**

**कुहकस्वन ಕುಹಕಸ್ವನ** (पुं०) ವನಕುಕ್ಕುಟ, ಕಾಡುಕೋಳಿ. "कुम्भकारः कुक्कुटस्तु कुक्कुभः कुहकस्वनः" अभि० चि०।

**कुहन ಕುಹನ** (पुं०) 1. ಮೂಷಿಕ, ಇಲಿ. कु ईषत्प्रयत्नेन हन्यते — हन (हिंसागत्योः) "अप्" बाहु०। (न०) 2. ಒಂದು ವಿಧ ಮಣ್ಣಿನ ಪಾತ್ರೆ. 3. ಗಾಜಿನ ಪಾತ್ರೆ. "कुहनं मृत्तिकाभाण्डविशेषे काचभाण्डने" मेदि०। (वि०) 4. ಅಸೂಯೆಯುಳ್ಳವನು, ಇತರರ ಅಭಿವೃದ್ಧಿಯನ್ನು ನೋಡಿ ಸಹಿಸಲಾರದವನು. "कुहनो मूषिके सेर्ष्ये" हेम०। (स्त्री०) **-ना -ನಾ.** 5. ಡಂಭಾಚಾರ, ಧನಸಂಪಾದನೆಗಾಗಿ ಧಾರ್ಮಿಕ ವೇಷ ಹಾಕುವುದು. "कुहना दम्भकर्मणि" हेम०। 6. ಕಪಟ ವೇಷ, ಕಾರಣಾಂತರದಿಂದ ರೂಪಬದಲಾವಣೆ. "मनुष्यभावाभिनयव्यवस्थितां कुशीलवार्हां कुहनां वहन् प्रभुः" याद० १४-६१।

**कुहर ಕುಹರ** (पुं०) 1. ಒಂದು ಸರ್ಪ. कुं भूमिं हरति—हृञ् (हरणे) "अच्" (३-२-९)। (न०) 2. ಬಿಲ, ರಂಧ್ರ, ತೂತು, ಹಳ್ಳ, ಗುಣಿ. "हाराग्रजाग्रद्गरुडाश्मरश्मिपीनाभनाभीकुहरान्धकारम्" नैष० १०-१०४। 3. ಗುಹೆ, ಗವಿ. "कुहरं गह्वरे छिद्रे क्लीबं नागान्तरे पुमान्" मेदि०। "तैः किं मत्तकरीन्द्रकुम्भकुहरे नारोपणीयाः कराः" प्र० रा०। 4. ಸಂಭೋಗ, ರತಿಕ್ರೀಡೆ.

**कुहरित ಕುಹರಿತ** (न०) 1. ಪಿಕಧ್ವನಿ, ಕೋಗಿಲೆಯ ಕೂಗು. 2. ರತಧ್ವನಿ, ಸಂಭೋಗಕಾಲದ ಶಬ್ದ. 3. ಶಬ್ದ. "कुहरितं पिकालापे रटिते रतनिस्वने" विश्व०।

**कुहलि ಕುಹಲಿ** (पुं०) ವಿವಾಹ ಮೊದಲಾದ ಶುಭ ಮಹೋತ್ಸವಗಳಲ್ಲಿ ಪುಡಿಯಡಕೆಯೊಡನೆ ಕೊಡುವ ತಾಂಬೂಲ. "सैव वन्दनमाला स्यात् कुहलिः पूगपुष्पिका" वैज०।

**कुहिढ ಕುಹಿಢ** (पुंन०) ಹಿಮದ ರಾಶಿ, ಮಂಜಿನ ಸಮೂಹ. "अथ हिमानी हिमसंहतिः। कुहिढोऽस्त्री कुहेलिः स्त्री कुहेडिर्धूमिका त्रयी" वैज०।

**कुहू ಕುಹೂ** (स्त्री०) 1. ಚಂದ್ರನ ಕಲೆಯು ಕಾಣಿಸದಿರುವ ಅಮಾವಾಸ್ಯೆ. कुह (विस्मापने)+णिच् "कूः" बाहु०। "कुहूषु दृश्येतरतां किमेत्य सायुज्यमाप्नोति भवन्मुखस्य" नैष० ८-३७। 2. ಅಮಾವಾಸ್ಯೆಯ ಅಧಿಷ್ಠಾನ ದೇವತೆ. 3. ಪ್ಲಕ್ಷದ್ವೀಪದ ಏಳು ನದಿಗಳಲ್ಲೊಂದು. "अनुमतिः सिनीवाली सरस्वती कुहूः रजनी नन्दा राकेति" भाग० ५-२०-१०। 4. ಕೋಗಿಲೆಯ ಕೂಗು, ಪಿಕಸ್ವರ. "कुहूः स्यात् कोकिलालापनष्टेन्दुकलयोरपि" विश्व०।

**कुहूकण्ठ ಕುಹೂಕಂಠ** (पुं०) ಕೋಗಿಲೆ. कुहूरिति शब्दः कण्ठेऽस्य। स्त्रियाम् **–कण्ठी – ಕಂಠೀ.**

**कुहूरव ಕುಹೂರವ** (पुं०) 1. ಕೋಗಿಲೆ. कुहूरिति रवोऽस्य। 2. "ಕುಹೂ" ಎಂಬ ಶಬ್ದ. "कुतूहलेनेव मुहुः कुहूरवं विडम्ब्य डिम्भेन पिकः प्रकोपितः" नैष० १-३८।

**कुहूरुत् ಕುಹೂರುತ್** (पुं०) 1. ಕೋಗಿಲೆ. कुहूरिति रुत् शब्दो यस्य। (स्त्री०) 2. "ಕುಹೂ" ಎಂಬ ಶಬ್ದ, ಕೋಗಿಲೆಯ ಕೂಗು, ಪಿಕಧ್ವನಿ. "पिकेन रोषारुणचक्षुषा मुहुः कुहूरुताहूयत चन्द्रवैरिणी" नैष० १-१००।

**कुहूल ಕುಹೂಲ** (न०) ಗೂಟಗಳಿಂದ ತುಂಬಿದ ಹಳ್ಳ.

**कुहेडि(लि) ಕುಹೇಡಿ(ಲಿ)** (स्त्री०) ಹಿಮದ ರಾಶಿ, ಮಂಜಿನ ಸಮೂಹ, ಆಕಾಶದಲ್ಲಿ ಮಳೆಹನಿಗಿಂತಲೂ ಸಣ್ಣ ಹನಿಯಾಗಿ ಬೀಳುವ ಮಂಜು, ಇಬ್ಬನಿ. "कुहिढोऽस्त्री कुहेलिः स्त्री कुहेडिर्धूमिका त्रयी" वैज०।

**कुह्वान ಕುಹ್ವಾನ** (न०) ಕೆಟ್ಟ ಶಬ್ದ. कुत्सितं ह्वानम्।

**कू–शब्दे** (क्र्या० उभ० अक० से०)। कुनाति। कुनीते। अकावीत्। अकविष्ट। ಶಬ್ದಮಾಡು. ಸದ್ದುಮಾಡು.

**कू ಕೂ** (स्त्री०) 1. ಭೂಮಿ, ನೆಲ. "भूर्भूतधात्री गिरिकर्णिकाब्धिद्वीपा समुद्राम्बरमेखला कूः" त्रिकाण्ड०। 2. ಶಬ್ದ, ಧ್ವನಿ, ಸದ್ದು. कूङ् (शब्दे) "क्विप्" (३-३-१०८)। 3. ಹೆಣ್ಣು ಪಿಶಾಚಿ.

**कूकुद ಕೂಕುದ** (पुं०) ಸತ್ಕಾರಪೂರ್ವಕ ಸಾಲಂಕೃತ ಕನ್ಯೆಯನ್ನು ದಾನಮಾಡುವವನು, ಆಭರಣಗಳಿಂದ ಅಲಂಕರಿಸಿದ ಕನ್ಯೆಯನ್ನು ಕೊಟ್ಟು ಮದುವೆ ಮಾಡುವವನು. कूः शब्दः, कुवः शब्दस्य कुः भूः—कूकुं ददाति—डु दाञ् (दाने) "कः" (३-२-४)। "सत्कृत्यालंकृतां कन्यां यो ददाति स कूकुदः" अम०।

**कूङ्–शब्दे** (तुदा० आत्म० अक० से०)। कुवते। चुकुवे। कुविता। अकुविष्ट। ಶಬ್ದಮಾಡು, ಸದ್ದುಮಾಡು, ಕೂಗು.

**कूच ಕೂಚ** (पुं०) 1. ಸ್ತನ, ಮೊಲೆ. कु (शब्दे) "चट्" दीर्घश्च (उ० ४-९१)। "कुचकूचौ स्तनौ मतौ" इति कोशः। (स्त्री०) **–ची – ಚೀ.** 2. ಚಿತ್ರವನ್ನು ಬರೆಯುವ ಕೂರ್ಚ,—ಕುಂಚ. "कूची चित्रलेखनिका" सि० कौ०। अल्पे "कः" (५-३-८५)। **कूचिका ಕೂಚಿಕಾ.** 1. ಸಣ್ಣ ಕುಂಚ. 2. ಬೀಗದ ಕೈ. "अथ तूलिका। कूचिका"। "कुञ्चिकायां तु कूचिका" अभि० चि०।

**कूचवार ಕೂಚವಾರ** (पुं०) ಒಂದು ದೇಶ.

**कूज–अव्यक्ते शब्दे** (भ्वा० पर० अक० से०। कूजति। चुकूज। कूजिता। कूजिष्यति। कूजतु। अकूजत्। कूजेत्। कूज्यात्। अकूजीत्। अकूजिष्यत्। ಅವ್ಯಕ್ತವಾಗಿ ಕೂಗು, ಅಸ್ಪಷ್ಟವಾಗಿ ಶಬ್ದಮಾಡು. "चूताङ्कुरास्वादकषायकण्ठः पुंस्कोकिलो यन्मधुरं चुकूज" कुमा० ३-३२।

**भावे:** कूज्यते। चुकूजे कूजिष्यते। कूज्यताम्। ಇತ್ಯಾದಿ.

**णिचि:** कूजयति, –ते। कूजयां चकार, –चक्रे, –बभूव, –आस। कूजयिता। कूजयिष्यति, –ते। कूजयतु, –ताम्। ಇತ್ಯಾದಿ.

**कर्मणि:** कूज्यते। कूजयांचक्रे, –बभूवे, –आसे। कूज्यताम्। अकूज्यत। ಇತ್ಯಾದಿ.

कृत्सु : कूजितव्यम्। कूजनीयम् कूज्यम्। कूजितः। कूजितवान्। कूजन्, –न्ती। कूजिष्यन्। कूजितम्। कूजनम्। कूजित्वा। उत्कूज्य। कूजं कूजम्।

**कूज ಕೂಜ** (पुं०) ಅವ್ಯಕ್ತವಚನ, ಅಸ್ಫುಟವಾದ ಮಾತು. "कण्ठास्यपूर्णत्वमतीव तोदः कूजश्च वायोरुत्तवाऽप्रवृत्तिः" सुश्रुत० उत्तर० ५५-१३।

**कूजत् ಕೂಜತ್** (वि०) 1. ಅವ್ಯಕ್ತವಾಗಿ ಶಬ್ದ ಮಾಡುತ್ತಿರುವ, ಅಸ್ಪಷ್ಟವಾಗಿ ಕೂಗುತ್ತಿರುವ. कूज (अव्यक्ते शब्दे) "शतृ" (३-२-१२४)। "ततः स कूजत्कलहंसमेखलां सपाकसस्याहितपाण्डुतागुणाम्" किरा० ४-१। 2. ಧ್ವನಿಮಾಡುತ್ತಿರುವ, ಶಬ್ದ ಮಾಡುತ್ತಿರುವ. "नृत्ते चक्षुः शून्यहस्तप्रयोगं काये कूजन् कम्बुरुच्चैर्जहास" माघ० १८-५४। स्त्रियाम् "ङीप्" (४-१-६)। **कूजन्ती ಕೂಜನ್ತೀ.**

**कूजन ಕೂಜನ** (न०) 1. ಹಕ್ಕಿಯ ಕೂಗು, ಪಕ್ಷಿಯ ಶಬ್ದ, ಇಂಚರ. कूज (अव्यक्ते शब्दे) भावे "ल्युट्" (३-३-११५)। 2. ಹೊಟ್ಟೆಯೊಳಗೆ ಆಗುವ ಮೊಟಮೊಟ ಶಬ್ದ.

**कूजा ಕೂಜಾ** (स्त्री०) ಮಧುರವಾದ ಅವ್ಯಕ್ತ ಶಬ್ದ, ಅಸ್ಪಷ್ಟ ಶಬ್ದ. कूज (अव्यक्ते शब्दे) "अः" (३-३-१०३)। "कुजायुजा बहुलपक्षशितिम्नि सीम्ना स्पष्टं कुहूपदपदार्थमिथोऽन्वयेन" नैष० २१-१२३।

**कूजित ಕೂಜಿತ** (न०) 1. ಹಕ್ಕಿಗಳ ಶಬ್ದ. 2. ಅಸ್ಪಷ್ಟವಾದ ಶಬ್ದ, ಅವ್ಯಕ್ತಮಧುರಧ್ವನಿ. कूज (अव्यक्ते शब्दे) भावे "क्तः" (३-३-११४)। "मधुकरनिकरकरम्बितकोकिलकूजितकुञ्जकुटीरे" गीतगो०। "तनुरुहाणि पुरो विजितध्वनेर्धवलपक्षविहङ्गमकूजितैः" माघ० ६-४५। (वि०) 3. ಅವ್ಯಕ್ತಧ್ವನಿ ಮಾಡಿದ, ಅಸ್ಪಷ್ಟವಾಗಿ ಶಬ್ದಮಾಡಿದ. कूज कर्त० "क्तः" (३-४-७२)। 4. ಅಸ್ಪಷ್ಟವಾಗಿ ಶಬ್ದಮಾಡಿಸಲ್ಪಟ್ಟ. कूज+णिच् "क्तः" (३-२-१०२)।

**कूट-आप्रदाने** (चुरा० आत्म० सक० से०)। कूटयते। कूटयां बभूव, –आस, –चकार –चक्रे। अचुकूटत। ದಾನಮಾಡದಿರು, ಕೊಡದಿರು, ಕೊಡುವುದನ್ನು ನಿಲ್ಲಿಸು.

**कूट-परितापे परिदाहे आमन्त्रणे च** (चुरा० उभ० सक० से०)। कूटयति, –ते। 1. ನೋಯಿಸು. 2. ದಹಿಸು, ಸುಡು. 3. ಕರೆ, ಆಹ್ವಾನ ಕೊಡು.

**कूट ಕೂಟ** (पुं०) 1. ಅಗಸ್ತ್ಯಮಹರ್ಷಿ. 2. ಕಲ್ಲು ಕುಟ್ಟಿಗ, ಕಲ್ಲುಗಳನ್ನು ಒಡೆದು ಜೀವಿಸುವವನು. कूट (परितापे) "कः" (३-१-१३५)। "आभीराणां जीवधनं कूटानामश्मतक्षणम्" वैज०। (पुं०) 3. ಪರ್ವತದ ಶಿಖರ, ಬೆಟ್ಟದ ತುದಿ. 4. ಅಲುಗಾಡದಿರುವ ವಸ್ತುಗಳ ಪುಂಜ, ರಾಶಿ, ಗುಂಪು. 5. ಮಾಯೆ, ಇಂದ್ರಜಾಲ, ಯಕ್ಷಿಣಿ. 6. ಪಾಪ. 7. ಕಬ್ಬಿಣದ ಬಾಣ. 8. ಕಬ್ಬಿಣದ ಸುತ್ತಿಗೆ, ಚಮಟಿಗೆ ಅಥವಾ ಗದೆ. 9. ಯಂತ್ರ. "वागुराभिश्च पाशैश्च कूटैश्च विविधैस्तथा" रामा०। 10. ಜಿಂಕೆ ಮೊದಲಾದ ಮೃಗಗಳನ್ನು ಹಿಡಿಯುವ ಬೋನು. 11. ಅನೃತ, ಸುಳ್ಳು. 12. ನೇಗಿಲಿನ ಒಂದು ಭಾಗ. 13. ದಂಭ, ಮೋಸ, ಕಪಟ. (न०) 14. ಊರಿನ ಬಾಗಿಲಲ್ಲಿ ಹಾಕಿರುವ ಆನೆಯ ಉಗುರಿನಂತೆ ಇಳಿಜಾರಾದ ಮಣ್ಣಿನ ದಿಣ್ಣೆ. 15. ಕಪಟ, ಮೋಸ. "नैव धर्मेण तद्राज्यं नार्जवेन न चौजसा। अक्षकूटमधिष्ठाय हृतं दुर्योधनेन वै" भा० वन० ३३-३। 16. ನಿಕೃಷ್ಟವಾದ ವ್ಯವಹಾರ. 17. ತುದಿ, ಅಗ್ರಭಾಗ. "किरीटकूटोज्वलितं शृङ्गारं दीप्तकुण्डलम्" रामा०। (पुंस्त्री०) 18. ಗೃಹ, ಮನೆ. 19. ಕೊಂಬು ಮುರಿದಿರುವ ಎತ್ತು. "भग्नशृङ्गपशुः कूटः" वैज०। (वि०) 20. ನಿಶ್ಚಲವಾದ, ಅಲುಗಾಡದಿರುವ. "कूटोऽस्त्री निश्चले राशौ लोहमुद्गरदम्भयोः। मायाद्रिशृङ्गयोस्तुच्छे सीरावयवयन्त्रयोः। अनृते च" मेदि०। 21. ಮಿಥ್ಯೆಯಾದ, ಸುಳ್ಳಾದ. "उक्तेऽपि साक्षिभिः साक्ष्ये यद्यन्ये गुणवत्तमाः। द्विगुणा वान्यथा ब्रूयुः कूटाः स्युः पूर्वसाक्षिणः" याज्ञ० २-८०। "कूटोऽस्त्री पुञ्जमायाघेष्वद्रिशृङ्गेपुभेदयोः। अयोघनेऽनृते फाले दम्भे निश्चलयन्त्रके" वैज०। ಆದರೆ ವಿಶ್ವಪ್ರಕಾಶದಲ್ಲಿ ಎಲ್ಲಾ ಅರ್ಥಗಳಲ್ಲೂ ನಪುಂಸಕವಾಗಿ ಹೇಳಿರುತ್ತೆ. "कूटं यन्त्रेऽनृते राशौ निश्चले लोहमुद्गरे। मायाद्रिशृङ्गयोस्तुच्छे सीरावयवदम्भयोः। पुरद्वारे च शंसन्ति" विश्व०। "कूटं पूर्द्वारि यद्धस्तिनखस्तस्मिन्" अम०।

**कूटक ಕೂಟಕ** (पुं०) 1. ಭಾರತವರ್ಷದ ಒಂದು ಪರ್ವತ. "भारतेऽप्यस्मिन् वर्षे सरिच्छैलाः सन्ति बहवो मलयो मङ्गलप्रस्थो मैनाकस्त्रिकूटऋषभः कूटकः कोल्लकः सह्यो देवगिरिः ऋष्यमूकः" ಇತ್ಯಾದಿ. 2. ಕೇಶಪಾಶ, ತುರುಬು. "कबरः केशगर्भकः। कबरी कूटकश्च" त्रिकाण्ड०। 3. ನೇಗಿಲ ಈಚುಮರ, ಗುಳವಿಲ್ಲದ ನೇಗಿಲಿನ ಉದ್ದದ ಮರ. 4. ಮುರೆಯೆಂಬ ಒಂದು ಸುಗಂಧ ವಸ್ತು.

**कूटकर्मन् ಕೂಟಕರ್ಮನ್** (न०) 1. ಮೋಸದ ಕಾರ್ಯ, ವಂಚನೆ, ಪ್ರತಾರಣ. (वि०) 2. ವಂಚಕ, ಮೋಸಗಾರ.

**कूटकारक ಕೂಟಕಾರಕ** (वि०) 1. ಮಿಥ್ಯಾವಾದಿ, ಸುಳ್ಳುಸಾಕ್ಷ್ಯ ಹೇಳುವವನು. कूटं करोति—डु कृञ् (करणे) "ण्वुल्" (३-१-१३३)। "समुद्रयायी बन्दी च तैलिकः कूटकारकः" मनु० ३-१५८। 2. ವಂಚಕ, ಮೋಸಗಾರ. ಕಪಟಿ.

**कूटकृत् ಕೂಟಕೃತ್** (वि०) 1. ಕಪಟಿ, ಮೋಸಗಾರ, ವಂಚಕ. कूटं करोति – डु कृञ् (करणे) "क्विप्" (३-२-७६)। "तुलाशासनमानानां कूटकृन्नाणकस्य च" याज्ञ० २-२४०। 2. ಶಿವ, ಪರಮೇಶ್ವರ. "पिङ्गाक्षः कठमर्दरैवतजटाटङ्काव्यया: कूटकृत्" त्रिकाण्ड०। 3. ಕಾಯಸ್ಥ, ಗುಮಾಸ್ತ, ಲೆಕ್ಕ ಬರೆಯುವವನು. "कायस्थे कूटकृत्पञ्जीकरौ" त्रिकाण्ड०।

**कूटतापस ಕೂಟತಾಪಸ** (पुं०) ಕಪಟಸನ್ಯಾಸಿ.

**कूटपाकल ಕೂಟಪಾಕಲ** (पुं०) 1. ಪಿತ್ತಜ್ವರ. 2. ಆನೆಯ ಜ್ವರ. "यथाभिहन्यात्कूटेन मृगयूथं वनेचरः। तथा पातात्मको नागं हन्ति वै कूटपाकलः"। "अचिरेण वैकृतविवर्तदारुणः कलभं कठोर इव कूटपाकलः" मालती० १-४२।

**कूटपालक ಕೂಟಪಾಲಕ** (पुं०) 1. ಕುಲಾಲ, ಕುಂಬಾರ, ಮಣ್ಣಿನ ರಾಶಿಯನ್ನಿಟ್ಟುಕೊಂಡು ಕೆಲಸಮಾಡುವವನು. 2. ಕುಂಬಾರನ ಆವಿಗೆ ಮನೆ, ಮಡಕೆ ಮೊದಲಾದುವನ್ನು ಬೇಯಿಸುವ ಆವಿಗೆ ಮನೆ. कूटं पालयति—पाल (रक्षणे) + णिच् "ण्वुल्" (३-१-१३३)।

**कूटपूर्व ಕೂಟಪೂರ್ವ** (पुं०) ಆನೆಗಳಿಗೆ ಬರುವ ತ್ರಿದೋಷ (ವಾತ ಪಿತ್ತ ಕಫ) ಜ್ವರ. "पित्तज्वरः पाकलोऽस्य कूटपूर्वस्त्रिदोषजः" त्रिकाण्ड०।

**कूटयन्त्र ಕೂಟಯಂತ್ರ** (न०) ಪಕ್ಷಿ ಮತ್ತು ಮೃಗಗಳನ್ನು ಹಿಡಿಯುವ ಬೋನು. ಬಲೆ. कूटरूपं यन्त्रम्। "उन्माथः कूटयन्त्रम् स्यात्" अम०।

**कूटयुद्ध ಕೂಟಯುದ್ಧ** (न०) ಕಪಟಯುದ್ಧ, ಮೋಸದಿಂದ ಮಾಡುವ ಕದನ. "कूटयुद्धविधिज्ञेऽपि तस्मिन् सन्मार्गयोधिनि" रघु० १७-६९।

**कूटलेख ಕೂಟಲೇಖ** (पुं०) –लेख्य –ಲೇಖ್ಯ (न०) ಕೃತ್ರಿಮವಾದ ಪತ್ರ. ಮೋಸದ ದಸ್ತೈವೇಜು, ಸುಳ್ಳು ಕಾಗದ.

**कूटव्यवहार ಕೂಟವ್ಯವಹಾರ** (पुं०) ಮೋಸದ ವ್ಯವಹಾರ, ಮೋಸದ ನಡವಳಿಕೆ.

**कूटव्यवहारिन् ಕೂಟವ್ಯವಹಾರಿನ್** (वि०) ಕಪಟದಿಂದ ವರ್ತಿಸುವವನು, ಮೋಸದಿಂದ ನಡೆದುಕೊಳ್ಳುವವನು. कूटेन व्यवहरति—वि+अव+हृञ् (हरणे) "णिनिः" (३-२-७८)।

**कूटशस् ಕೂಟಶಸ್** (अव्य०) ರಾಶಿರಾಶಿಯಾಗಿ, ಗುಂಪು ಗುಂಪಾಗಿ. कूट "शस्" (५-४-४३)।

**कूटशासन ಕೂಟಶಾಸನ** (न०) ಕೃತ್ರಿಮವಾದ ಆಜ್ಞೆ, ಮೋಸದ ಆಜ್ಞೆ.

**कूटसंक्रान्ति ಕೂಟಸಂಕ್ರಾಂತಿ** (स्त्री०) ಸ್ನಾನ ತರ್ಪಣಾದಿಗಳಿಗೆ ಅವಕಾಶವಿಲ್ಲದ ಅರ್ಧರಾತ್ರಿಯ ನಂತರ ಸಂಭವಿಸುವ ಸಂಕ್ರಮಣ. ಅರ್ಧರಾತ್ರಿಯ ನಂತರ ಸೂರ್ಯನು ಮುಂದಿನ ರಾಶಿಗೆ ಹೋಗುವುದು. "अर्धरात्रे व्यतीते तु यदा संक्रमते रविः। सा ज्ञेया कूटसंक्रान्तिर्मुनिभिः परिकीर्तिता"।

**कूटसाक्षिन् ಕೂಟಸಾಕ್ಷಿನ್** (वि०) ಸುಳ್ಳು ಹೇಳುವವನು, ಸುಳ್ಳುಸಾಕ್ಷ್ಯ ಹೇಳುವವನು. कूटः साक्षी। "न ददाति हि यः साक्ष्यं जानन्नपि नराधमः। स कूटसाक्षिणां पापैस्तुल्यो दण्डेन चैव हि" याज्ञ० २-७७।

**कूटस्थ ಕೂಟಸ್ಥ** (पुं०) 1. ಅಚಿತ್‌ಸಂಬಂಧವಿಲ್ಲದೆ ಸ್ವಸ್ವರೂಪದಿಂದಿರುವ ಮುಕ್ತಾತ್ಮ. कूटवत् निर्विकारेण निश्चलः सन् साधारणाकारेण तिष्ठति—ष्ठा (गतिनिवृत्तौ) "कः" (३-२-४)। "द्वाविमौ पुरुषौ लोके क्षरश्चाक्षर एव च। क्षरः सर्वाणि भूतानि कूटस्थोऽक्षर उच्यते" गीता १५-१६। "अक्षरशब्दनिर्दिष्टः कूटस्थः अचित्संसर्गवियुक्तः स्वेन रूपेणावस्थितो मुक्तात्मा" रा० भा०। ಕೂಟ (ರಾಶಿ) ದಂತೆ ನಿಶ್ಚಲನಾಗಿರುವ ಅಥವಾ ಮಾಯೆಯಿಂದ ಕೂಡಿರುವ ಈಶ್ವರನು ಕೂಟಸ್ಥ. कूटः राशिरिव स्थितः अथवा कूटः माया वञ्चना, अनेकमायावञ्चनादिप्रकारेण स्थितः कूटस्थः" शां० भा०। 2. ವ್ಯಾಘ್ರನಖಿ, ಹುಲಿಯುಗುರು ಗಿಡ. (वि०) 3. ಅಗ್ರದಲ್ಲಿರುವ, ತುದಿಯಲ್ಲಿರುವ.

**कूटस्थनित्य ಕೂಟಸ್ಥನಿತ್ಯ** (पु०) ಯಾವ ರೀತಿಯ ಪರಿಣಾಮವೂ ಇಲ್ಲದೆ ನಾಶವಿಲ್ಲದೆ ಸ್ವಸ್ವರೂಪದಿಂದಿರುವ ಪರಮಾತ್ಮ.

**कूटागार ಕೂಟಾಗಾರ** (न०) 1. ಚಂದ್ರಶಾಲೆ, ಉಪ್ಪರಿಗೆ ಮೇಲಿನ ಮನೆ, ಮಹಡಿಯ ಮೇಲಿನ ಕೊಠಡಿ. "वेडभी चन्द्रशालिका। कूटागारम्" त्रिकाण्ड०। 2. ಕ್ರೀಡಾ ಗೃಹ, ಆಟದ ಮನೆ.

**कूटार्थभाषा ಕೂಟಾರ್ಥಭಾಷಾ** (स्त्री०) 1. ಸಂದಿಗ್ಧವಾದ ಅರ್ಥವುಳ್ಳ ಮಾತು, ಅಸಷ್ಟಾರ್ಥವುಳ್ಳ ಭಾಷೆ.

2. ಕಲ್ಪಿತಕಥೆ, ಪ್ರಬಂಧ. ಇದೇ ಅರ್ಥದಲ್ಲಿ **–भाषितम् –ಭಾಷಿತಮ್.**

**कूटार्थभाषिन् ಕೂಟಾರ್ಥಭಾಷಿನ್** (वि०) ಕಲ್ಪಿತ ಕಥೆಗಳನ್ನು ಹೇಳುವವನು. कूटार्थं भाषते – भाष (व्यक्तायां वाचि) "णिनिः" (३-२-७८)। स्त्रियाम् "ङीप्" (४-१-५)। **–भाषिणी –ಭಾಷಿಣೀ.**

**कूण-संकोचे** (चुरा० उभ० सक० से०)। कूणयति, –ते। कूणयां बभूव, –आस, –चकार, –चक्रे। अचुकूणत्, –त। ಸಂಕೋಚಹೊಂದು, ಚಿಕ್ಕದಾಗು, ಹಿಂದಕ್ಕೆ ಎಳೆದುಕೊ.

**कूणि ಕೂಣಿ** (वि०) ರೋಗಾದಿಗಳಿಂದ ವಕ್ರವಾದ ತೋಳುಗಳುಳ್ಳವನು. कूण (संकोचे) "इन्" (उ० ४-११९)।

**कूणिका ಕೂಣಿಕಾ** (स्त्री०) 1. ವೀಣೆಯ ಬುಡದಲ್ಲಿ ತಂತಿಗಳನ್ನು ಎಳೆದು ಕಟ್ಟುವ ಬಿದಿರಿನ ಗೂಟ. कूण (संकोचे) + णिच् "ण्वुल्" (३-१-१३३)। "मूले वंशशलाका स्यात् कूणिका कलिकापि च" अभि० चि०। 2. ವಿಷಾಣ, ಕೊಂಬು, ದನ ಎಮ್ಮೆ ಮೊದಲಾದ ಪ್ರಾಣಿಗಳ ತಲೆಯ ಮೇಲಿನ ಕೋಡು. "विषाणं कूणिका शृङ्गम्" अभि० चि०।

**कूणित ಕೂಣಿತ** (वि०) 1. ಸಂಕೋಚಹೊಂದಿದ, ಹಿಂದಕ್ಕೆ ಎಳೆದುಕೊಂಡ. कूण (संकोचे) + णिच् "क्तः" (३-४-७२)। 2. ಸಂಕೋಚಹೊಂದಿಸಲ್ಪಟ್ಟ, ಚಿಕ್ಕದಾಗುವಂತೆ ಮಾಡಲ್ಪಟ್ಟ. कूण + णिच् कर्म० "क्तः" (३-२-१०२)।

**कूणिताक्ष ಕೂಣಿತಾಕ್ಷ** (वि०) ಶ್ಯೇನ, ಗಿಡುಗ ಹಕ್ಕಿ. कूणिते अक्षिणी यस्य "षच्" (५-४-११३)। **–ईक्षण –ಈಕ್ಷಣ.**

**कूदर ಕೂದರ** (पुं०) ಬ್ರಾಹ್ಮಣ ಹೆಂಗಸು ಋತುಮತಿಯಾಗಿರುವಾಗ ಮೊದಲನೆಯ ದಿನ ಋಷಿಯ ಸಂಗಮದಿಂದ ಹುಟ್ಟಿದವನು, ಋತುವಾಗಿದ್ದಾಗ ಮೊದಲನೆಯ ದಿನ ಋಷಿಯೊಡನೆ ಸಂಭೋಗದಿಂದ ಬ್ರಾಹ್ಮಣ ಸ್ತ್ರೀಯಲ್ಲಿ ಹುಟ್ಟಿದವನು. कुत्सितमुदरं यस्य। "ब्राह्मण्यामृषिवीर्येण ऋतोः प्रथमवासरे। कुत्सिते चोदरे जातः कूदरस्तेन कीर्तितः" ब्रह्मवै०।

**कूप ಕೂಪ** (पुं०) 1. ಬಾವಿ. कुवन्ति मण्डूका अत्र–कु (शब्दे) "पः" दीर्घश्च (उ० ३-२७)। "तद्धीरो भव वित्तवत्सु कृपणां वृत्तिं वृथा मा कृथाः कूपे पश्य पयोनिधावपि घटो गृह्णाति तुल्यं जलम्" भर्तृ० १-४०। 2. ಹಳ್ಳ, ಗುಳಿ, ರಂಧ್ರ. "त्वन्नाभिकूपस्य तटे निवासी न दृश्यते सम्प्रति मध्यभागः" च० भा० 3. ಹಡಗಿನ ಧ್ವಜಸ್ತಂಭ, ಹಡಗಿನ ಪಟದ ಕಂಬ. 4. ಹಡಗನ್ನು ಕಟ್ಟುವ ಮರದ ಅಥವಾ ಕಬ್ಬಿಣದ ಕಂಬ. 5. ನದಿಯ ಮಧ್ಯದಲ್ಲಿರುವ ಮರ ಅಥವಾ ಬಂಡೆ. "कूपः कूपकगर्तम्बुमृण्मानगुणवृक्षके" विश्व०। 6. ತೊಗಲಿನ ಎಣ್ಣೆಯ ಚೀಲ.

**कूपक ಕೂಪಕ** (पुं० द्विव०) 1. ಹೆಂಗಸರ ಪಿರ್ರೆಗಳ ಮೇಲಿರುವ ಗುಳಿಗಳು. ಜಘನಕೂಪ. कूपाविव "कन्" (५-३-९६)। (पुं०) 2. ಹಡಗನ್ನು ಕಟ್ಟುವ ಕಂಬ. 3. ಎಣ್ಣೆಯ ಪಾತ್ರ, ತೊಗಲಿನ ಎಣ್ಣೆಯ ಚೀಲ. 4. ನದಿಯ ಮಧ್ಯದಲ್ಲಿರುವ ಮರ ಅಥವಾ ಬಂಡೆ. 5. ಬಾವಿ. 6. ಚಿತೆ. "कूपको गुणवृक्षे स्यात् तैलपात्रे कुकुन्दरे। उदपाने चितायां च" विश्व०। 7. ನೀರು ಬತ್ತಿಹೋದ ನದಿಯಲ್ಲಿ ತೋಡಿದ ಹಳ್ಳ, ಜಿಲುಮೆ. अल्पः कूपः "कन्" (५-३-८५)।

**कूपकच्छप ಕೂಪಕಚ್ಛಪ, –कूर्म –ಕೂರ್ಮ** (पुं०) ಬಾವಿಯೊಳಗಿನ ಆಮೆಯಂತೆ ಅಲ್ಪಜ್ಞನಾದವನು, ಬಾವಿಯೊಳಗೆ ಅಲ್ಪಪ್ರದೇಶದಲ್ಲಿರುವ ಆಮೆಯಂತೆ ಕೇವಲ ಅಲ್ಪಕ್ಷೇತ್ರದಲ್ಲಿ ವಾಸಿಸುತ್ತ ಅಷ್ಟೇ ಪ್ರಪಂಚವೆಂದು ತಿಳಿದಿರುವವನು, ಪ್ರಪಂಚದ ಅರಿವಿಲ್ಲದವನು. कूपे कच्छप इव कूर्म इव वा।

**कूपमण्डूक ಕೂಪಮಂಡೂಕ** (पुं०) ಬಾವಿಯೊಳಗಿನ ಕಪ್ಪೆಯಂತೆ ಬೇರೆ ಯಾವ ವಿಷಯವನ್ನೂ ಅರಿಯದವನು. ವಿಚಾರಶೂನ್ಯ, ಪ್ರಪಂಚದ ಅರಿವಿಲ್ಲದವನು. कूपे मण्डूक इव।

**कूपचक्र ಕೂಪಚಕ್ರ** (न०) ಬಾವಿಯ ರಾಟೆ, ಬಾವಿಯಿಂದ ನೀರನ್ನು ಎಳೆಯುವ ಚಕ್ರ.

**कूपाङ्क ಕೂಪಾಂಕ** (पुं०) ರೋಮಾಂಚ, ಮೈಕೂದಲು ಏಳುವುದು. कूपाकारोऽङ्कश्चिह्नमस्मिन्।

**कूपिका ಕೂಪಿಕಾ** (स्त्री०) ಹೊಳೆಯ ಮಧ್ಯದಲ್ಲಿರುವ ಬಂಡೆ. "कूपिकाऽम्भोगतोपले." मेदि०।

**कूपी ಕೂಪೀ** (स्त्री०) 1. ಹಳ್ಳ, ಗುಳಿ. 2. ನಾಭಿಕೂಪ, ಹೊಕ್ಕಳ ಗುಳಿ. 3. ಗಾಜಿನ ಪಾತ್ರೆ. 4. ಎಣ್ಣೆಯಪಾತ್ರೆ.

**कूपोदक ಕೂಪೋದಕ** (न०) ಬಾವಿಯೊಳಗಿನ ನೀರು. कूपस्य उदकम्। "कूपोदकप्रभवकूर्मनयेन जातामस्वामिकप्रभुपरिग्रहबुद्धिमौज्झन्" याद० २०-९७।

**कूप्य ಕೂಪ್ಯ** (वि०) 1. ಬಾವಿಯಲ್ಲಿರುವ. कूपे भवः "यत्" (५-१-२)। 2. ಗುಳಿಯಲ್ಲಿರುವ, ಹಳ್ಳದಲ್ಲಿರುವ.

**कूबर ಕೂಬರ** (पुं०) 1. ಗಾಡಿಯ ಮೂಕಿ, ನೊಗವನ್ನಿಟ್ಟು ಕಟ್ಟುವ ಗಾಡಿಯ ಒಂದು ಉದ್ದದ ಮರ. कूवते — कूङ् (शब्दे) "ष्वरच्" बाहु०। 2. ಕುಬ್ಜ, ಬಗ್ಗಿದ ಬೆನ್ನುಳ್ಳವನು, ಗೂನು ಬೆನ್ನಿನವನು. (पुन०) 3. ಎತ್ತುಗಳು ಎಳೆಯುವ ಗಾಡಿ. "गन्त्री स्त्री कूबरं न स्त्री रथे कम्बलवाह्यके" वैज०। (वि०) 4. ರಮ್ಯವಾದ, ಸುಂದರವಾದ, ಅಂದವಾದ. "कूबरः कुब्जके चारौ कूबरश्च युगन्धरः" विश्व०।

**कूबरिन् ಕೂಬರಿನ್** (पुं०) ರಥ, ಗಾಡಿ. कूबरोऽस्यास्ति "इनिः"(५-२-११५)। "पादैः पुरः कूबरिणां विदारिताः प्रकाममाक्रान्ततलास्ततो गजाः" माघ० १२-२१।

**कूम ಕೂಮ** (न०) ಸರೋವರ, ದೊಡ್ಡ ಕೊಳ. कोः भूमेः उमा कान्तिर्यस्मात्।

**कूर ಕೂರ** (पुंन०) ಅನ್ನ. वेञ् (तन्तुसन्ताने) "क्विप्" (३-२-७६)। ऊः, कौ भूमौ उवं लाति—ला (आदाने) "कः" (३-२-४)। लस्य रः। "भक्तमन्धः कूरमन्नं भिस्सा दीदिविरोदनः" अभि० चि०। "इतश्च कूरच्युततैलमिश्रं पिण्डं हस्ती प्रतिग्राह्यते" मृच्छ० ४। "स्थितेऽपि कूरे मुहुरेव याचते" नैष० १६-९१।

**कूर्च ಕೂರ್ಚ** (पुंन०) 1. ಕುಂಚ, ಕೊಳೆಯನ್ನು ತೆಗೆಯಲು ಅನುಕೂಲವಾದ ಒರಟು ಕೂದಲಿನ ಗುಚ್ಛ, ಜುಂಗು ಮೊದಲಾದುವುಗಳ ಗುಚ್ಛ. कुरति — कुर (शब्दे) "चट्" दीर्घश्च बाहु०। 2. ಹುಬ್ಬುಗಳ ಮಧ್ಯಭಾಗ, ಮೂಗಿನ ಮೇಲುಭಾಗ. 3. ಕುಶಮುಷ್ಟಿ, ದರ್ಭೆಯ ಒಂದು ಹಿಡಿ. 4. ದಂಭ, ವೇಷ, ಕಪಟ. 5. ಆತ್ಮಶ್ಲಾಘನೆ. 6. ಗಡ್ಡ, ಮೀಸೆ. "स्वागतमनेकप्रकाराणां जीर्णकूर्चानामनध्यायकारणानां तपोधनानाम्" उ० रा० ४। 7. ನವಿಲು ಗರಿ. 8. ಕಾಲಿನ ಹೆಬ್ಬೆರಳಿನ ಮಧ್ಯದ ಮೇಲುಭಾಗ. "गुल्फशीर्षस्त्विन्द्रबस्तिः कूर्चस्त्वङ्गुष्ठकान्तरम्" वैज०। 9. ಪೀಠ, ಆಸನ. "पीठे श्मश्रुणि कूर्चोऽस्त्री भ्रूमध्ये कत्थने कुशे" वैज०। 10. ತಲೆ. 11. ಕಪಟ, ಮೋಸ, ವಂಚನೆ. (वि०) 12. ಕಠಿನವಾದ, ಗಟ್ಟಿಯಾದ. "कूर्चमस्त्री भ्रुवोर्मध्ये कठिनश्मश्रुकैतवे" मेदि०। "क्षिप्रं त्वङ्गुष्ठाङ्गुलिमध्यतः। कूर्चं क्षिप्रस्योपरि" अभि० चि०।

**कूर्चक ಕೂರ್ಚಕ** (पुं०) 1. ಗುಚ್ಛ, ಗೊಂಚಲು, ಕಂತೆ. कूर्च स्वार्थे "कः"। 2. ಕೊಳೆಯನ್ನು ತೆಗೆಯಲು ಅನುಕೂಲವಾದ ಒರಟು ಕೂದಲಿನ ಕುಂಚ. 3. ಚಿತ್ರಕಾರನ ಕುಂಚ, ವರ್ತಿಕೆ. 4. ಗಡ್ಡ, ಮೀಸೆ.

**कूर्चल ಕೂರ್ಚಲ** (वि०) ಗಡ್ಡ ಮೀಸೆಗಳಿಂದ ಕೂಡಿದ. कूर्चमस्यास्ति "लच्" (५-२-९६)।

**कूर्चशिरस् ಕೂರ್ಚಶಿರಸ್** (न०) ಪಾದದ ಮೇಲುಭಾಗ, ಕಾಲಿನ ಅಡಿಯ ಮೇಲುಮೈ. कूर्चस्य शिरः।

**कूर्चशेखर ಕೂರ್ಚಶೇಖರ** (पुं०) ತೆಂಗಿನಮರ. कूर्चमिव शेखरमस्य।

**कूर्चाल ಕೂರ್ಚಾಲ** (पुं०) ಯಜ್ಞ ಪಶು. "कूर्चालोलस्फटी पशुः" वैज०।

**कूर्चिका ಕೂರ್ಚಿಕಾ** (स्त्री०)1. ಕಾಯಿಸಿ ಗಟ್ಟಿಮಾಡಿದ ಹಾಲು, ಹಾಲಿನ ಗಿಣ್ಣು. कूर्चति — कूर्च (विकारे) संज्ञायां "ण्वुल्" (३-३-१०९)। ಇದು (1) दधिकूर्चिका ಮತ್ತು (2) तक्रकूर्चिका ಎಂದು ಎರಡು ವಿಧ. ಹಾಲನ್ನು ಮೊಸರಿನೊಡನೆ ಕಾಯಿಸಿ ಪಕ್ವಮಾಡಿದರೆ ದಧಿಕೂರ್ಚಿಕೆಯೂ ಮಜ್ಜಿಗೆಯೊಡನೆ ಕಾಯಿಸಿ ಪಕ್ವಮಾಡಿದರೆ ತಕ್ರಕೂರ್ಚಿಕೆಯೂ ಆಗುವುದು. "दध्ना सह च यत् पक्वं क्षीरं सा दधिकूर्चिका। तक्रेण पक्वं यत् क्षीरं सा भवेत् तक्रकूर्चिका"। 2. ಸೂಜಿ. 3. ಬೀಗದ ಕೈ. 4. ಚಿತ್ರ ಬರೆಯುವ ತೂಲಿಕೆ, ಕುಂಚ. 5. ಮೊಗ್ಗು. "कूर्चिका क्षीरविकृतौ कुञ्चिकायां च कुड्मले। आलेख्यकूर्चिका सूच्योः" हेम०।

**कूर्चिन् ಕೂರ್ಚಿನ್** (वि०) ಉದ್ದವಾದ ಗಡ್ಡ ಬೆಳೆಸಿರುವವನು. कूर्चमस्यास्ति "इनिः" (५-२-११५)।

**कूर्दन ಕೂರ್ದನ** (न०) 1. ಹಾರುವುದು, ನೆಗೆಯುವುದು. कुर्द (क्रीडायाम्) भावे "ल्युट्" (३-३-११५)। 2. ಆಟವಾಡುವುದು. "देवनं कूर्दनं खेला ललनं वर्करोऽपि च" अभि० चि०।

**कूर्दनी ಕೂರ್ದನೀ** (स्त्री०) ಚಿತ್ರಾಪೂರ್ಣಿಮಾ, ಚೈತ್ರಮಾಸದ ಹುಣ್ಣಿಮೆ, ಮದನಮಹೋತ್ಸವದ ದಿವಸ. कूर्द्यतेऽत्र — कुर्द (क्रीडायाम्) अधि० "ल्युट्" (३-३-११७)। "ङीप्" (४-१-१५)।

**कूर्प ಕೂರ್ಪ** (पुं०) ಹುಬ್ಬುಗಳ ಮಧ್ಯಭಾಗ, ಮೂಗಿನ ಮೇಲುಭಾಗ. कुरं पाति — पा (रक्षणे) "कः" (३-२-४)। "कूर्चं कूर्पं भ्रुवोर्मध्ये" अभि० चि०।

**कूर्पर ಕೂರ್ಪರ** (पुं०) 1. ಮೊಳಕೈ. कुर (शब्दे) "क्विप्" (३-२-१७८)। पिपर्ति — पृ (पालनपूरणयोः) "अच्" (३-१-१३४)। कुरा शब्देन परः। "प्रतिकुञ्चितकूर्परेण तेन श्रवणोपान्तिकनीयमानगव्यम्" माघ० २०-१९। 2. ಮಂಡಿ, ತೊಡೆಗೂ ಕೆಳಕಾಲಿಗೂ ಮಧ್ಯದಲ್ಲಿರುವ ಸಂಧಿ. "कूर्परः स्यात् कफोणौ च जान्वन्यपि च पुंस्ययम्" मेदि०।

**कूर्पास ಕೂರ್ಪಾಸ** (पुं०) ಮೈಗಾಪು, ಗುತ್ತನಾಗಿರುವ ಹೆಂಗಸರ ಕುಪ್ಪಸ, ತೋಳಿಲ್ಲದ ರವಿಕೆ. कूर्परे अस्यते — असु (क्षेपणे) "घञ्" (३-३-१९)। "कूर्पासस्त्वर्धचोलकः" हारा०। स्वार्थे "कः"। **कूर्पासकः ಕೂರ್ಪಾಸಕಃ.** "मनोज्ञकूर्पासकपीडितस्तनाः" ऋतुसं० ५-८। "कूर्पासकं क्षतनखक्षतमुत्क्षिपन्ती" माघ० ५-२३।

**कूर्म ಕೂರ್ಮ** (पुं०) 1. ಕಚ್ಛಪ, ಆಮೆ. कुत्सितः कौ वा ऊर्मिः वेगोऽस्य "अच्" (५-४-७५)। "यदा संहरते चायं कूर्मोऽङ्गानीव सर्वशः। इन्द्रियाणीन्द्रियार्थेभ्यस्तस्य प्रज्ञा प्रतिष्ठिता" गीता २-५८। 2. ಮಹಾವಿಷ್ಣುವಿನ ಹತ್ತು ಅವತಾರಗಳಲ್ಲಿ ಎರಡನೆಯದು. [ದೇವಾಸುರರು ಅಮೃತಕ್ಕಾಗಿ ಸಮುದ್ರವನ್ನು ಕಡೆಯುತ್ತಿದ್ದಾಗ ಪರಮಾತ್ಮನು ಕೂರ್ಮರೂಪದಿಂದ ಅವತರಿಸಿ ಮಂದರಾಚಲವು ಸಮುದ್ರದೊಳಗೆ ಮುಳುಗದಂತೆ ತನ್ನ ಬೆನ್ನಿನ ಮೇಲೆ ಹೊತ್ತಿದ್ದನು.] "सुरासुराणामुदधिमथ्नतां मन्दराचलम्। दध्रे कमठरूपेण पृष्ठे एकादशे विभुः" भाग० १-३-१६। 3. ದೇಹದೊಳಗೆ ಉನ್ಮೀಲನ ಮಾಡುವ ಒಂದು ವಾಯು. "वाग्द्वारे नाग आख्यातः कूर्म उन्मीलने स्मृतः" अम०। 4. ಕೂರ್ಮಮುದ್ರೆ, ದೇವರ ಧ್ಯಾನಕ್ಕಾಗಿ ಕೈಬೆರಳುಗಳ ಜೋಡಣೆಯಿಂದ ಮಾಡುವ ಒಂದು ಮುದ್ರೆ. "वामहस्तस्य तर्जन्यां दक्षिणस्य कनिष्ठया। तथा दक्षिणतर्जन्यां वामाङ्गुष्ठेन योजयेत्। उन्नतं दक्षिणाङ्गुष्ठं वामस्य मध्यमादिकाः। अङ्गुलीर्योजयेत् पृष्ठे दक्षिणस्य करस्य च। वामस्य पितृतीर्थेन मध्यमानामिके तथा। अधोमुखे च ते कुर्यात् दक्षिणस्य करस्य च। कूर्मपृष्ठसमं कुर्याद्दक्षपाणिं च सर्वतः। कूर्ममुद्रेयमाख्याता देवताध्यानकर्मणि" तन्त्रसा०। 5. ಕದ್ರುವಿನ ಮಕ್ಕಳಲ್ಲಿ ಒಂದು ಸರ್ಪ. "शेषोऽनन्तो वासुकिश्च तक्षकश्च भुजङ्गमः। कूर्मश्च कुलिकश्चैव काद्रवेयाः प्रकीर्तिताः" भा० आदि० ६५-४१। 6. ಕುಬೇರನ ಒಂಬತ್ತು ನಿಧಿಗಳಲ್ಲೊಂದು.

**कूर्मकल्प ಕೂರ್ಮಕಲ್ಪ** (पुं०) ಚತುರ್ಮುಖಬ್ರಹ್ಮನ ಒಂದು ತಿಂಗಳಲ್ಲಿ ಬರುವ ಶ್ವೇತವರಾಹಾದಿ ಪಿತೃಕಲ್ಪದವರೆಗಿನ ಮೂವತ್ತು ಕಲ್ಪಗಳಲ್ಲೊಂದು.

**कूर्मचक्र ಕೂರ್ಮಚಕ್ರ** (न०) 1. ತಂತ್ರಸಾರದಲ್ಲಿ ಹೇಳಿರುವ ಕೂರ್ಮಾಕಾರದ ಒಂದು ಚಕ್ರ. 2. ನಕ್ಷತ್ರಭೇದದಿಂದ ದೇಶಭೇದಗಳ ಶುಭಾಶುಭ ಫಲಗಳನ್ನು ಸೂಚಿಸುವ ಒಂದು ಚಕ್ರ. ಕೂರ್ಮರೂಪಿಯಾದ ಪರಮಾತ್ಮನು ಒಂಬತ್ತು ಭಾಗವಾಗಿರುವ ಭಾರತವರ್ಷವನ್ನು ಆಕ್ರಮಿಸಿಕೊಂಡು ಪೂರ್ವಾಭಿಮುಖವಾಗಿ ಪವಳಿಸಿರುವನು. "प्राङ्मुखो भगवान् देवः कूर्मरूपी व्यवस्थितः। आक्रम्य भारतं वर्षं नवभेदं यथाक्रमम्"। **ಈ ಚಕ್ರದ ಮಧ್ಯದಲ್ಲಿರುವ ದೇಶಗಳು:** "मध्ये सारस्वता मत्स्याः शूरसेनाः समाथुराः। पञ्चालशाल्वमाण्डव्यकुरुक्षेत्रगजाह्वयाः। मरुनैमिषविन्ध्याद्रिपाण्डयघोषाः सयामुनाः। काश्ययोध्या प्रयागश्च गया वैदेहकादयः"। **ಪೂರ್ವದಿಕ್ಕಿನ ದೇಶಗಳು:** "प्राच्यां मागधशोणौ च वारेन्द्रीगौडराढकाः। वर्धमानतमोलिप्तप्राग्ज्योतिषोदयाद्रयः"। **ಆಗ್ನೇಯ ದಿಕ್ಕಿನ ದೇಶಗಳು:** "आग्नेय्यामङ्गवङ्गोपवङ्गत्रैपुरकोशलाः। कलिङ्गौड्रान्ध्रकिष्किन्धाविदर्भशबरादयः"। **ದಕ್ಷಿಣ ದಿಕ್ಕಿನ ದೇಶಗಳು:** "दक्षिणेऽवन्तिमाहेन्द्रमलया ऋष्यमूककाः। चित्रकूटमहारण्यकाञ्चीसिंहलकोङ्कणाः। कावेरी ताम्रपर्णी च लङ्कात्रिकूटकादयः"। **ನೈರ್ಋತ ದಿಕ್ಕಿನ ದೇಶಗಳು:** "नैर्ऋते द्रविडानर्तमहाराष्ट्राश्च रैवतः। यवनः पह्नवः सिन्धुः पारसीकादयो मताः"। **ಪಶ್ಚಿಮ ದಿಕ್ಕಿನ ದೇಶಗಳು:** "पश्चिमे हैहयास्ताद्रिम्लेच्छवासशकादयः"। **ವಾಯು ದಿಕ್ಕಿನ ದೇಶಗಳು:** "वायव्ये गुज्जराटश्च नाटजालन्धरादयः"। **ಉತ್ತರ ದಿಕ್ಕಿನ ದೇಶಗಳು:** "उत्तरे चीननेपालहूणकैकयमन्दराः। गान्धारहिमवत्क्रौञ्चगन्धमादनमालवाः। कैलासमद्रकाश्मीरम्लेच्छदेशाः खसादयः"। **ಈಶಾನ ದಿಕ್ಕಿನ ದೇಶಗಳು:** "ऐशाने स्वर्णभौमश्च गङ्गाद्वारस्तु टङ्कणः। वाह्लीकब्रह्मपुरककैराता दरदादयः"। "मध्यप्रागाग्नियाम्यादिकृत्तिकादित्रयत्रयैः। क्रूरवेधयुतैस्तैस्तु पीडचन्ते तन्निवासिनः" ज्योतिस्०। ವೇಧಾದಿಗಳಿಂದ ಸಂಭವಿಸುವ ದೋಷಗಳು. "अतिवृष्टिरनावृष्टिः शलभा मूषिकाः खगाः। स्वचक्रं परचक्रं च सप्तैते सम्भवन्ति च। एवं देशगृहग्रामक्षेत्रनामर्क्षतो वदेत्। तथा च यत्र नक्षत्रे दिव्यपार्थिवनाभसाः। दृश्यन्ते

सुमहोत्पाताः स्वां दिशं तत्र पीडयेत्। सौरिर्बलाधिपो दुष्टः स्वल्पवीर्यः शुभावहः। एकदा पीडयेद्यत्र सानुजः कूर्मपञ्चके। तत्र स्थाने महाविघ्नो जायते नात्र संशयः। दुष्टस्थाने गते चन्द्रे कर्तव्यं शान्तिपौष्टिकम्"।

**कूर्मपुराण ಕೂರ್ಮಪುರಾಣ** (न०) ವ್ಯಾಸಮಹರ್ಷಿ ಪ್ರಣೀತವಾದ ಹದಿನೆಂಟು ಪುರಾಣಗಳಲ್ಲೊಂದು. कूर्मेण प्रोक्तम् पुराणम्। ಮಹಾವಿಷ್ಣುವು ಕೂರ್ಮಾವತಾರ ವನ್ನೆತ್ತಿದಾಗ ಮಹರ್ಷಿಗಳಿಗೆ ಇಂದ್ರದ್ಯುಮ್ನನ ಪ್ರಸಂಗ ದಿಂದ ಚತುರ್ವಿಧ ಪುರುಷಾರ್ಥ (ಧರ್ಮ, ಅರ್ಥ, ಕಾಮ ಮತ್ತು ಮೋಕ್ಷ) ಗಳ ಮಾಹಾತ್ಮ್ಯವನ್ನು ಈ ಪುರಾಣದಲ್ಲಿ ವಿವರವಾಗಿ ತಿಳಿಸಿದುದರಿಂದ ಇದಕ್ಕೆ "कूर्मपुराणम्" ಎಂಬ ಹೆಸರಾಯಿತು. ಈ ಪುರಾಣದಲ್ಲಿ 17,000 ಶ್ಲೋಕಗಳಿವೆ. ಇದರ ಪೂರ್ವಭಾಗದಲ್ಲಿ ಲಕ್ಷ್ಮೀ-ಪ್ರದ್ಯುಮ್ನ ಸಂವಾದ, ವರ್ಣಾಶ್ರಮ ಧರ್ಮಗಳು, ಜಗತ್ತಿನ ಉತ್ಪತ್ತಿ ಕ್ರಮ, ಕಾಲಮಾನ. ಪ್ರಳಯಕಾಲದಲ್ಲಿ ಪರಮಾತ್ಮನ ಸ್ತುತಿ, ಸೃಷ್ಟಿಕ್ರಮ, ಶಂಕರನ ಚರಿತ್ರೆ, ಪಾರ್ವತಿಯ ಸಹಸ್ರನಾಮ, ಯೋಗನಿರೂಪಣೆ, ಭೃಗುವಂಶ ಮತ್ತು ಸ್ವಾಯಂಭುವಮನುವಂಶಗಳ ವರ್ಣನೆ, ದೇವತೆಗಳ ಉತ್ಪತ್ತಿ, ದಕ್ಷಯಜ್ಞಧ್ವಂಸ, ಶ್ರೀಕೃಷ್ಣಚರಿತ್ರೆ, ಮಾರ್ಕಂಡೇಯ-ಕೃಷ್ಣಸಂವಾದ ಮುಂತಾದ ವಿಷಯ ಗಳೂ ಉತ್ತರ ಭಾಗದಲ್ಲಿ ವ್ಯಾಸಗೀತೆ, ನಾನಾ ತೀರ್ಥಗಳ ಮಾಹಾತ್ಮ್ಯ, ನಾನಾ ಧರ್ಮಗಳ ನಿರೂಪಣೆ, ಬ್ರಾಹ್ಮಣಾದಿ ಚಾತುರ್ವರ್ಣ್ಯದ ವೃತ್ತಿ, ಸಂಕರವರ್ಣದ ವೃತ್ತಿ, ಕಾಮ ಮತ್ತು ಮೋಕ್ಷಗಳ ಪ್ರತಿಪಾದನೆ ಇತ್ಯಾದಿ ವಿಷಯಗಳೂ ಕೊನೆಯಲ್ಲಿ ಫಲಶ್ರುತಿಯೂ ಉಕ್ತವಾಗಿವೆ. ಇದು ಆರು ತಾಮಸಪುರಾಣಗಳಲ್ಲೊಂದು. "मात्स्यं कौर्मं तथा लैङ्गं शैवं स्कान्दं तथैव च। आग्नेयं च षडेतानि तामसानि निबोधत" पाद्मपु०।

**कूर्मपृष्ठ ಕೂರ್ಮಪೃಷ್ಠ** (पुं०) 1. ದೊಡ್ಡ ಗೋರಂಟಿ ಗಿಡ. (न०) 2. ಆಮೆಯ ಬೆನ್ನು. ಆಮೆಯ ಚಿಪ್ಪು. 3. ಶ್ರಾವ, ಮಣ್ಣಿನ ತಟ್ಟೆ.

**कूर्मराज ಕೂರ್ಮರಾಜ** (पुं०) 1. ಮಹಾವಿಷ್ಣುವಿನ ಕೂರ್ಮಾವತಾರ, ಕೂರ್ಮರೂಪದಿಂದ ಅವತರಿಸಿದ ಮಹಾವಿಷ್ಣು. 2. ಶ್ರೇಷ್ಠವಾದ ಆಮೆ. कूर्माणां राजा "टच्" (५-४-९१)।

**कूर्मावतार ಕೂರ್ಮಾವತಾರ** (पुं०) ಕೂರ್ಮರೂಪದಿಂದ ಪರಮಾತ್ಮನ ಅವತಾರ.

**कूल-आवरणे** (भ्वा० पर० सक० से०)। कूलति। चुकूल। कूलिता। अकूलीत्। ಇತ್ಯಾದಿ. ಆವರಿಸು, ಮುಚ್ಚು, ಮರೆಮಾಡು.

**कूल ಕೂಲ** (न०) 1. ಕೆರೆ ನದಿ ಮೊದಲಾದುವುಗಳ ತೀರ, –ದಡ. कूलति आवृणोति प्रवाहम् — कूल (आवरणे) "क:" (३-१-१३५)। "विदलितमहाकूलामुक्षणां विषाणविघट्टनैः" माघ० १२-७७। 2. ಸರಸ್ಸು, ಕೊಳ. 3. ಸೈನ್ಯದ ಹಿಂಭಾಗ. 4. ತಟಾಕ, ಕೆರೆ, ಏರಿ. 5. ಸ್ತೂಪ, ದಿಣ್ಣೆ, ದಿಬ್ಬ. 6. ಸೈನ್ಯದ ಮಧ್ಯಭಾಗ. "कूलं तीरे चमूकटौ" वैज०। 7. ಸಮೀಪ, ಹತ್ತಿರದ ಪ್ರದೇಶ. "तवापि हा हा विरहात्क्षुधाकुलाः कुलायकूलेषु विलुठ्य तेषु ते" नैष० १-१४१। "कूलं तटे सैन्यपृष्ठे तटागस्तूपयोरपि" हेम०।

**कूलक ಕೂಲಕ** (पुं०) 1. ತೀರ, ದಡ. 2. ಸ್ತೂಪ, ದಿಣ್ಣೆ, ದಿಬ್ಬ. कूल स्वार्थे "क:"। 3. ವಲ್ಮೀಕ, ಹುತ್ತ. "कूलकः कृमिशैले च प्रतीरस्तूपयोरपि" विश्व०। ಮೇದಿನೀ ಕೋಶದಲ್ಲಿ "कूलकं न स्त्रियाम्" ಎಂದು ಪುಂನಪುಂಸಕಲಿಂಗದಲ್ಲಿ ಹೇಳಿದೆ.

**कूलङ्कष ಕೂಲಂಕಷ** (पुं०) 1. ಸಮುದ್ರ, ಕಡಲು. "पुमान् कचङ्गलो वांकः कूलङ्कषपरांगवौ" त्रिकाण्ड०। (वि०) 2. ತೀರವನ್ನು ವ್ಯಾಪಿಸುವ. ದಡವನ್ನು ಮುಟ್ಟುವ, ದಡವನ್ನು ಕೊರೆಯುವ. कूलं कषति — कष (हिंसायाम्) "खच्" (३-२-४२)। मुम् (६-३-६७)। "कूलंकषौघाः सरितस्तथापराः प्रवर्तयामासुरिभा मदाम्बुभिः" माघ० १२-६०। (स्त्री०)–**कषा –ಕಷಾ.** 3. ಹೊಳೆ, ನದಿ.

**कूलचर ಕೂಲಚರ** (वि०) 1. ತೀರದಲ್ಲಿ ಸಂಚರಿಸುವ, ದಡದಲ್ಲಿ ತಿರುಗಾಡುವ. 2. ತೀರದಲ್ಲಿ ಮೇಯುವ. कूले चरति — चर (गतिभक्षणयोः) "टः" (३-२-१६)। ಕೂಲಚರಪ್ರಾಣಿಗಳು ; "तत्र गज-गवय-महिष-रुरु-चमर-सृमर-रोहित-वराह-खड्गि-गोकर्ण-कालपुच्छक-ओद्रन्यङ्कु-अरण्यगवयप्रभृतयः कूलचराः पशवः" सुश्रुत० सूत्र० ४६-९४।

**कूलभू ಕೂಲಭೂ –भूमि –ಭೂಮಿ** (स्त्री०) ನದಿಯ ತೀರ, ದಡ, ತೀರಭೂಮಿ, ತೀರಪ್ರದೇಶ.

**कूलमुद्रुज ಕೂಲಮುದ್ರುಜ** (वि०) ದಡವನ್ನು ಭೇದಿ ಸುವ, ತೀರವನ್ನು ಕೊರೆಯುವ ನದಿ ಮುಂತಾದುದು. कूलमुद्रुजति—उद्+रुजो (भङ्गे) "खश्" (३-२-३१)।

मुमागमः (६-३-६७)। "मदोदग्राः ककुद्मन्तः सरितां कूलमुद्रुजाः" रघु० ४-२२।

**कूलमुद्वह ಕೂಲಮುದ್ವಹ** (वि०) ತೀರದವರೆಗೂ ತುಂಬಿ ಪ್ರವಹಿಸುವ, ದಡದವರೆಗೂ ತುಂಬಿ ಹರಿಯುವ (ನದಿ, ಹೊಳೆ). कूलमुद्वहति — उद् + वह (प्रापणे) "खश्" (३-२-३१)। मुमागमः (६-३-६७)। "उत्तीर्णो वा कथं भीमाः सरितः कूलमुद्वहाः" भट्टि० ६-९५।

**कूलवत् ಕೂಲವತ್** (वि०) ದಡಗಳಿಂದ ಕೂಡಿರುವ. कूलेऽस्य स्तः "मतुप्" (५-२-१३६)। स्त्रियाम् "ङीप्" (४-१-६)। **-वती -ವತೀ.** ನದಿ, ಹೊಳೆ.

**कूलिन् ಕೂಲಿನ್** (वि०) ತೀರಗಳಿಂದ ಕೂಡಿರುವ, ದಡಗಳಿರುವ. कूलेऽस्य स्तः "इनिः" (५-२-१३६)। स्त्रियाम् "ङीप्" (४-१-५)। **कूलिनी ಕೂಲಿನೀ.** ನದಿ, ಹೊಳೆ.

**कूवर ಕೂವರ** (पुं०) "कूबर" ಪದದ ಅರ್ಥ.

**कूष्माण्ड ಕೂಷ್ಮಾಂಡ** (पुं०) 1. ಈಶ್ವರನ ಪ್ರಮಥಗಣಗಳಲ್ಲೊಬ್ಬ. 2. ಒಬ್ಬ ಋಷಿ, "कूष्माण्डो राजपुत्रश्चेत्यन्ते स्वाहासमन्वितैः" याज्ञ० १-२८५। (पुं० ब० व०) 3. ಆ ಋಷಿದೃಷ್ಟವಾದ ಮಂತ್ರಗಳು. "कूष्माण्डैर्वापि जुहुयात् घृतमग्नौ यथाविधि" मनु० ८-१०६। गौरा० "ङीष्" (४-१-४१)। **-डी -ಡೀ.** 4. ಆ ಋಷಿದೃಷ್ಟವಾದ ಮಂತ್ರಗಳು. "त्रिरात्रोपोषितो हुत्वा कूष्माण्डीभिर्घृतं शुचिः" याज्ञ० ३-३०३। 5. ಕುಂಬಳದ ಗಿಡ. कु ईषत् ऊष्मा अण्डेषु यस्य। (न०) 6. ಕುಂಬಳಕಾಯಿ. "पित्तघ्नं तेषु कूष्माण्डं बालं मध्यं कफावहम्। शुक्लं लघूष्णं सक्षारं दीपनं बस्तिशोधनम्" सुश्रुत० सूत्र० ४६-२१३। स्वार्थे "कः"। **कूष्माण्डकः ಕೂಷ್ಮಾಂಡಕಃ.**

**कूष्माण्डी ಕೂಷ್ಮಾಂಡೀ** (स्त्री०) 1. ದುರ್ಗಾದೇವಿ. 2. ಕುಂಬಳದ ಗಿಡ. कूष्माण्ड गौरा० "ङीष्" (४-१-४१)।

**कूहा ಕೂಹಾ** (स्त्री०) ಹಿಮದರಾಶಿ, ಹಿಮದ ಗಡ್ಡೆ. कु ईषत् ऊह्यतेऽत्र — ऊह (वितर्के) अधि० घञर्थे "कः" (वा० ३-३-५८)।

**कृक ಕೃಕ** (पुं०) ಕಂಠಮಧ್ಯ, ಕುತ್ತಿಗೆಯ ಮಧ್ಯಭಾಗ. क्रियतेऽसौ—डु कृञ् (करणे) "कक्" बाहु०। "कृकस्तु कन्धरामध्यम्" अभि० चि०।

**कृकण ಕೃಕಣ** (पुं०) 1. ಕಬ್ಬಕ್ಕಿ, ತಿತ್ತಿರಿ ಪಕ್ಷಿಯ ಒಂದು ಭೇದ. कृ इति कणति — कण (शब्दे) "अच्" (३-१-१३४)। कृकेण कण्ठेन अणति — अण (शब्दे) "अच्" (३-१-१३४) वा। शक०। "कृकणक्रकरौ समौ" अम०। 2. ಒಂದು ಕ್ರಿಮಿ. "कृपणः कृमिरुद्दिष्टः" हारा०। 3. ಒಂದು ದೇಶ.

**कृकणीय ಕೃಕಣೀಯ** (वि०) 1. ಕೃಕಣ ದೇಶದಿಂದ ಬಂದ. 2. ಕೃಕಣ ದೇಶದಲ್ಲಿ ಹುಟ್ಟಿದ. कृकण "छः" (४-२-१४५)।

**कृकर ಕೃಕರ** (पुं०) ಸೀನನ್ನುಂಟುಮಾಡುವ ದೇಹದೊಳಗಿನ ಒಂದು ವಾಯು. "कृकराच्च क्षुतं ज्ञेयं देवदत्ताद्विजृम्भणम्" अम०।

**कृकला ಕೃಕಲಾ** (स्त्री०) ಹಿಪ್ಪಲಿ. कृकं कृकाकारं लाति — ला (आदाने) "कः" (३-२-३)।

**कृकलास ಕೃಕಲಾಸ** (पुं०) ಹೆಂಟೆಗೊದ್ದ, ಓತಿಕೇತ. कृकं कण्ठं लासयति — लस (शिल्पयोगे) + णिच् "अण्" (३-२-१)। "श्रमेण महता युक्तास्तस्मिंस्तोये सुसंवृते। ददृशुस्ते महाकायं कृकलासमवस्थितम्" भा० अनु० ७०-४।

**कृकवाकु ಕೃಕವಾಕು** (पुं०) 1. ಕುಕ್ಕುಟ, ಕೋಳಿ. कृकेण वक्ति — वच (परिभाषणे) "ञुण्" कश्च (उ० १-६)। "अनुनयमगृहीत्वा न्यायसुप्ता पराची रुतमथ कृकवाकोस्तारमाकर्ण्य कल्ये" माघ० ११-९। 2. ಮಯೂರ, ನವಿಲು. 3. ಹೆಂಟೆಗೊದ್ದ, ಓತಿಕೇತ. "कृकवाकुस्ताम्रचूडे मयूरकृकलासयोः" हेम०।

**कृकवाकुध्वज ಕೃಕವಾಕುಧ್ವಜ** (पुं०) ಮಯೂರವೇ ಧ್ವಜವಾಗಿರುವ ಕಾರ್ತಿಕೇಯ, ಸ್ಕಂದ. ಕುಮಾರಸ್ವಾಮಿ. कृकवाकुर्मयूरो ध्वजश्चिह्नमस्य। "बालचर्यः सिद्धसेनः कृकवाकुध्वजश्च सः" त्रिकाण्ड०।

**कृकाटिका ಕೃಕಾಟಿಕಾ** (स्त्री०) ಕುತ್ತಿಗೆಯ ಹಿಂಭಾಗ, ಹೆಕ್ಕತ್ತು. कृकं कण्ठमटति — अट (गतौ) "इन्" (उ० ४-११७)। स्वार्थे "कन्" (५-४-५)। "कृकाटिकान्ते छिन्ने तु गच्छत्यपि समीरणे। सम्यङ्निवेश्य बध्नीयात् सीव्येच्चापि निरन्तरम्" सुश्रुत० चिकित्सा० २-३२।

**कृच्छ्र ಕೃಚ್ಛ್ರ** (न०) 1. ಕಷ್ಟ, ತೊಂದರೆ. कृन्तति—कृती (छेदने) "रक्" छकारादेशश्च (उ० २-२१)। "रामेण मैथिलसुतां दशकण्ठकृच्छ्रात्प्रत्युद्धृतां धृतिमतीं भरतो ववन्दे" रघु० १३-७७। 2. ಪ್ರಾಜಾಪತ್ಯ ಚಾಂದ್ರಾಯಣ ಮುಂತಾದ ವ್ರತ. "प्राजापत्यं चरेत्कृच्छ्रमब्दमेकं

समाहितः" मनु० ११-१०५। 3. ಪಾಪ. "कृच्छ्रमंहसि। कष्टे सान्तपने" हेम०। (वि०) 4. ಕಷ್ಟಸಾಧ್ಯವಾದ, ಕಷ್ಟದಿಂದ ಮಾಡಬಹುದಾದ. "अतोऽन्यथात्वसाध्यः स्यात् कृच्छ्रोऽयं मिश्रलक्षणः" सुश्रुत०। 5. ತೊಂದರೆಯನ್ನುಂಟುಮಾಡುವ, ಪೀಡಿಸುವ. "सदाहवेदनं कृच्छ्रं कुर्यातां मूत्रसंक्षयम्" सुश्रुत० उत्तर० ५८-१७। 6. ಕಷ್ಟವನ್ನುಂಟುಮಾಡುವ, ಕಷ್ಟಕ್ಕೆ ಕಾರಣವಾದ. "कृच्छ्रं गतस्यापि दशाविपाकं धर्मान्न चेतः स्खलतु त्वदीयम्" नैष० १४-८१। 7. ನೀಚ, ಪಾಪಿ. 8. ಕಷ್ಟವನ್ನು ಅನುಭವಿಸುತ್ತಿರುವ, ಕಷ್ಟಕ್ಕೆ ಒಳಗಾಗಿರುವ.

**कृच्छ्रसान्तपन ಕೃಚ್ಛ್ರಸಾಂತಪನ** (पुं०) ಪ್ರಾಯಶ್ಚಿತ್ತಕ್ಕಾಗಿ ಆಚರಿಸಬೇಕಾದ ಒಂದು ವ್ರತ. ಗೋಮೂತ್ರ, ಗೋಮಯ, ಕ್ಷೀರ, ಮೊಸರು, ತುಪ್ಪ ಮತ್ತು ಕುಶೋದಕಗಳನ್ನು ಒಂದಾಗಿ ಬೆರಸಿ ಅದನ್ನು ಒಂದು ದಿನ ಆಹಾರವನ್ನಾಗಿ ತೆಗೆದುಕೊಂಡು ಮರುದಿನ ಉಪವಾಸವಿರುವುದು ಕೃಚ್ಛ್ರಸಾಂತಪನವ್ರತ. "गोमूत्रं गोमयं क्षीरं दधि सर्पिः कुशोदकम्। एकरात्रोपवासश्च कृच्छ्रं सान्तपनं स्मृतम्" मनु० ११-२१२। ಈ ಆರನ್ನೂ ಪ್ರತ್ಯೇಕವಾಗಿ ಆರು ದಿವಸ ಆಹಾರವಾಗಿ ತೆಗೆದುಕೊಂಡು ಏಳನೆಯ ದಿವಸ ಉಪವಾಸವಿರುವುದು ಮಹಾಸಾಂತಪನವ್ರತ. "पृथक् सान्तपनद्रव्यैः षडहः सोपवासिकः। सप्ताहेन तु कृच्छ्रोऽयं महासान्तपनः स्मृतः" याज्ञ० ३-३१५।

**कृच्छ्रिन् ಕೃಚ್ಛ್ರಿನ್** (वि०) ಕಷ್ಟದಿಂದ ಕೂಡಿರುವ, ಕಷ್ಟವನ್ನು ಅನುಭವಿಸುತ್ತಿರುವ. कृच्छ्रमस्यास्ति "इनिः" (५-२-१३१)।

**डुकृञ्–करणे** (तना० उभ० सक० से०)।

| | | | | |
|---|---|---|---|---|
| लट्— | पर० | करोति | कुरुतः | कुर्वन्ति। |
| | | करोषि | कुरुथः | कुरुथ। |
| | | करोमि | कुर्वः | कुर्मः। |
| | आत्म० | कुरुते | कुर्वाते | कुर्वते। |
| | | कुरुषे | कुर्वाथे | कुरुध्वे। |
| | | कुर्वे | कुर्वहे | कुर्महे। |
| लिट्— | पर० | चकार | चक्रतुः | चक्रुः। |
| | | चकर्थ | चक्रथुः | चक्र। |
| | | चकार / चकर | चकृव | चकृम। |
| | आत्म० | चक्रे | चक्राते | चक्रिरे। |
| | | चकृषे | चक्राथे | चकृढ्वे। |
| | | चक्रे | चकृवहे | चकृमहे। |
| लुट्— | पर० | कर्ता | कर्तारौ | कर्तारः। |
| | | कर्तासि | कर्तास्थः | कर्तास्थ। |
| | | कर्तास्मि | कर्तास्वः | कर्तास्मः। |
| | आत्म० | कर्ता | कर्तारौ | कर्तारः। |
| | | कर्तासे | कर्तासाथे | कर्ताध्वे। |
| | | कर्ताहे | कर्तास्वहे | कर्तास्महे। |
| लृट्— | पर० | करिष्यति | करिष्यतः | करिष्यन्ति। |
| | | करिष्यसि | करिष्यथः | करिष्यथ। |
| | | करिष्यामि | करिष्यावः | करिष्यामः। |
| | आत्म० | करिष्यते | करिष्येते | करिष्यन्ते। |
| | | करिष्यसे | करिष्येथे | करिष्यध्वे। |
| | | करिष्ये | करिष्यावहे | करिष्यामहे। |
| लोट्— | पर० | करोतु / कुरुतात् | कुरुताम् | कुर्वन्तु। |
| | | कुरु / कुरुतात् | कुरुतम् | कुरुत। |
| | | करवाणि | करवाव | करवाम। |
| | आत्म० | कुरुताम् | कुर्वाताम् | कुर्वताम्। |
| | | कुरुष्व | कुर्वाथाम् | कुरुध्वम्। |
| | | करवै | करवावहै | करवामहै। |
| लङ्— | पर० | अकरोत् | अकुरुताम् | अकुर्वन्। |
| | | अकरोः | अकुरुतम् | अकुरुत। |
| | | अकरवम् | अकुर्व | अकुर्म। |
| | आत्म० | अकुरुत | अकुर्वाताम् | अकुर्वत। |
| | | अकुरुथाः | अकुर्वाथाम् | अकुरुध्वम्। |
| | | अकुर्वि | अकुर्वहि | अकुर्महि। |
| लिङ्— | पर० | कुर्यात् | कुर्याताम् | कुर्युः। |
| | | कुर्याः | कुर्यातम् | कुर्यात। |
| | | कुर्याम् | कुर्याव | कुर्याम। |
| | आत्म० | कुर्वीत | कुर्वीयाताम् | कुर्वीरन्। |
| | | कुर्वीथाः | कुर्वीयाथाम् | कुर्वीध्वम्। |
| | | कुर्वीय | कुर्वीवहि | कुर्वीमहि। |
| आशीलिङ्— | | | | |
| | पर० | क्रियात् | क्रियास्ताम् | क्रियासुः। |
| | आत्म० | कृषीष्ट | कृषीयास्ताम् | कृषीरन्। |
| लुङ्— | पर० | अकार्षीत् | अकार्ष्टाम् | अकार्षुः। |
| | | अकार्षीः | अकार्ष्टम् | अकार्ष्ट। |
| | | अकार्षम् | अकार्ष्व | अकार्ष्म। |
| | आत्म० | अकृत | अकृषाताम् | अकृषत। |

लृङ्— परं० अकरिष्यत् अकरिष्यताम् अकरिष्यन्।
आत्म० अकरिष्यत अकरिष्येताम् अकरिष्यन्त।

**ಈ ಧಾತುವು ಸಂದರ್ಭಾನುಸಾರ ಈ ಕೆಳಗಿನ ಅರ್ಥಗಳಲ್ಲಿ ಪ್ರಯೋಗಿಸಲ್ಪಡುವುದು :**

1. ಮಾಡು. "चक्रुरेव ललनोरुषु राजीः स्पर्शलोभवशलोलकराणाम्" माघ० १०-६६। "तीर्थगामि करवै विधानतस्तज्जुषस्व जुहवानि चानले" माघ० १४-९। 2. ತಯಾರಿಸು. घटं करोति। 3. ನೇಮಿಸು. तं सेवकमकरोत्। 4. ಉಂಟುಮಾಡು. "अकृतार्थेऽपि मनसिजे रतिमुभयप्रार्थना कुरुते" शाकु० २-१। "कुर्यां हरस्यापि पिनाकपाणेर्धैर्यच्युतिं के मम धन्विनोऽन्ये" कुमा० ३-१०। 5. ರಚಿಸು. "अञ्जलिं प्राङ्मुखः कुर्वन् पवनायात्मयोनये" रामा०। 6. ಸಂಕಲಿಸು, ಜೋಡಿಸು. "रसगङ्गाधरनाम्नीं करोति कुतुकेन काव्यमीमांसाम्" रसगं०। 7. ನೆರವೇರಿಸು. "अर्हणामर्हते चक्रुर्मुनयो नयचक्षुषे" रघु० १-५५। 8. ಹೇಳು, ವಿವರಿಸು. "तास्ताः कथाः कुर्वन्"। 9. ನಡೆಸು, ಅಚ್ಚುಕಾಲಿಸು. "शासनं मे कुरुष्व"। 10. ಸಾಧಿಸು. "सत्सङ्गतिः कथय किं न करोति पुंसाम्"। 11. ಉಚ್ಚರಿಸು, ಹೇಳು. "मानुषीं गिरं कृत्वा"। 12. ಇಡು, ಇರಿಸು. "कुरु करे गुरुमेकमयोघनम्" नैष० ४-५९। 13. ತೆಗೆದುಕೊ, ಹಿಡಿದುಕೊ. "बहिरतो मुकुरं च कुरुष्व मे" नैष० ४-५९। 14. ನಿಶ್ಚಯಿಸು. "मनसि कृत्वा"। 15. ಒಪ್ಪಿಕೊ, ಸಂಮತಿಸು. "उरसि कृत्वा" ಇತ್ಯಾದಿ.

**कर्मणि** :—क्रियते क्रियेते क्रियन्ते। चक्रे चक्राते चक्रिरे। कर्ता कर्तारौ कर्तारः। कारिता कारितारौ कारितारः। करिष्यते करिष्येते करिष्यन्ते। कारिष्यते कारिष्येते कारिष्यन्ते। क्रियताम्। अक्रियत। क्रियेत। कृषीष्ट। कारिषीष्ट। अकारि अकारिषाताम्, अकृषाताम्। अकारिषत, अकृषत। अकारिष्यत, अकरिष्यत।

**णिचि** :—कारयति, –ते। कारयां चकार, –चक्रे, –बभूव, –आस। कारयिता। कारयिष्यति, –ते। कारयतु, कारयताम्। अकारयत्, –त। ಇತ್ಯಾದಿ.

**सनि** :—चिकीर्षति, –ते। चिकीर्षांचकार, –चक्रे, –बभूव, –आस। चिकीर्षिता। चिकीर्षिष्यति, –ते। चिकीर्षतु, –ताम्। ಇತ್ಯಾದಿ.

**कृत्सु** :—कर्तव्यम्। करणीयम्। कार्यम्। कृत्यम्। कृतः। कृतवान्। कुर्वन्, कुर्वती। कुर्वाणः। कर्तुम्। कृतम्। करणम्। कृत्वा। प्रकृत्य। ऊरीकृत्य। उररीकृत्य।

**ಈ ಧಾತುವಿಗೆ ಉಪಸರ್ಗಗಳ ಯೋಗದಿಂದ ಉಂಟಾಗುವ ಅರ್ಥಭೇದಗಳು :**

**(1) अधि + कृञ्** = अधिकरोति। अधिकारः। 1. ಅಧಿಕಾರ, ಯೋಗ್ಯತೆ. "हृताधिकारां मलिनां पिण्डमात्रोपजीविनाम्" याज्ञ० १-७०। 2. ಪ್ರಭುತ್ವ, ಆಡಳಿತ. "क्षणादायुष्मान् स्वाधिकारभूमौ वर्तिष्यते" शाकु० ७। 3. ಗಣನೆ, ಎಣಿಕೆ. "संसत्सु जाते पुरुषाधिकारे न पूरणी तं समुपैति संख्या" किरा० ३-५१। 4. ಯಾಜಮಾನ್ಯ. "अधिकारविलम्बितापवर्गस्थिरसङ्गात्" याद० १५-७।

**(2) अनु + कृञ्** = अनुकरोति। अनुकरणम्। 1. ಸಾಮ್ಯ, ಹೋಲಿಕೆ. "आमोदमुपजिघ्रन्तौ स्वनिःश्वासानुकारिणम्" रघु० १-४३। 2. ಅನುಕರಿಸು, ಅಣಕಿಸು, ಒಬ್ಬ ಮಾಡಿದಂತೆ ಮಾಡು.

**(3) अप+कृञ्**=अपकरोति। अपकारः। अपकृतः। अपकृतिः। ಅಪಕಾರ ಮಾಡು, ಕೆಡಕು ಮಾಡು. "अपकृतं वसुदेवममोचयद्दयितया सह दीनविलापया" याद० ३-५५। "त्वमिव कोऽपि परापकृतौ कृती न ददृशे न च मन्मथ शुश्रुवे" नैष० ४-९८।

**(4) अप + आ + कृञ्** = अपाकरोति। अपाकृतिः। अपाकरणम्। 1. ಅವಮಾನ. "निशम्य सिद्धिं द्विषतामपाकृतीः" किरा० १-२७। 2. ಹಿಂದಕ್ಕೆ ಎಳೆದುಕೊಳ್ಳುವುದು. "वत्समपाकरोति"। 3. ತಳ್ಳಿಹಾಕು, ತಿರಸ್ಕರಿಸು, ವರ್ಜಿಸು.

**(5) आ+कृञ्**=आकारः। आकृतिः। ಆಕಾರ, ರೂಪ. "आकारसदृशप्रज्ञः प्रज्ञया सदृशागमः" रघु० १-१५।

**(6) उप+कृञ्**=उपकरोति। उपकारः। उपकृतम्। उपकृतिः। ಉಪಕಾರಮಾಡು, ಸಾಹಾಯ್ಯಮಾಡು. "शाम्येत्प्रत्यपकारेण नोपकारेण दुर्जनः" कुमा० २-४०। "प्रतिकर्म कर्तुमुपचक्रमिरे समये हि सर्वमुपकारि कृतम्" माघ० ९-४३।

**(7) उप + आ + कृञ्** = उपाकरणम्। उपाकृत्य। ಉಪಕ್ರಮ, ಪ್ರಾರಂಭ. "श्रावण्यां प्रौष्ठपद्यां वाऽप्युपाकृत्य यथाविधि" मनु० ४-९५।

**(8) दुर्+कृञ्, दुस्+कृञ्** = दुष्कृतम्। दुष्कृतिः। ಅಕಾರ್ಯ, ಕೆಟ್ಟ ಕೆಲಸ.

**(9) नि+कृञ्** = निकारः। ಅವಮಾನ. "पुरःसरा धामवतां यशोधनाः सुदुःसहं प्राप्य निकारमीदृशम्" किरा० १-४३।

**(10) निर्+आ+कृञ्** = निराकृतिः। ತಿರಸ್ಕರಿಸು. "हुताशकीनाशजलेशदूतीर्निराकरिष्णोः कृतकाकुयाच्ञाः" नैष० ६-७५।

**(11) निस् + कृञ्** = निष्कृतिः। ಶುದ್ಧಿಕಾರ್ಯ, ಪ್ರಾಯಶ್ಚಿತ್ತ. "एषा विचित्राभिहिता सुरापानस्य निष्कृतिः" मनु० ११-९८।

**(12) परा + कृञ्** = पराकरोति। पराकृतिः। ತಿರಸ್ಕಾರ. "ता हनूमान् पराकुर्वन्नगमत् पुष्पकं प्रति" भट्टि० ८-५०।

**(13) परि + कृञ्** = परिष्करोति। परिष्करणम्। परिष्कारः। परिष्कृतः। ಅಲಂಕರಿಸು, ಭೂಷಿಸು. "जज्ञे निवेशनविभागपरिष्कृतानां लक्ष्मीः पुरोपवनजा वनपादपानाम्" किरा० ७-४०।

**(14) प्र+कृञ्**=प्रकरोति। प्रकुरुते। प्रकारः। प्रकृतः। प्रकृतिः। प्रकृत्य। 1. ಪ್ರಸ್ತಾವ, ಪ್ರಸ್ತುತ. "विषयात्मतयारोप्ये प्रकृतार्थोपयोगिनि" सा० द० १०-३४। 2. ಪ್ರಾರಂಭ, ಉಪಕ್ರಮ. "प्रकृतजपविधीनामास्यमुद्रश्मिदन्तम्" माघ० ११-४२। 3. ಪ್ರಕೃತಿ, ಸ್ವಭಾವ. "सिंहः शिशुरपि निपतति मदमलिनकपोलभित्तिषु गजेषु। प्रकृतिरियं सत्त्ववतां न खलु वयस्तेजसां हेतुः" भर्तृ० १-३०। "यशसि चाभिरुचिर्व्यसनं श्रुतौ प्रकृतिसिद्धमिदं हि महात्मनाम्" भर्तृ० १-५२। 4. ಕಾರಣ, ಹೇತು. "मूलप्रकृतिरविकृतिः" सां० का० ३। 5. (ಪರಸ್ತ್ರೀಯಲ್ಲಿ) ಬಲಾತ್ಕಾರವಾಗಿ ಪ್ರವೇಶಿಸು. "परदारान् प्रकुरुते"। 6. ರೀತಿ, ಸಾದೃಶ್ಯ, ಪ್ರಕಾರ. "प्रकारवचने थाल्" पा० सू० ५-३-२३।

**(15) प्रति + कृञ्** = प्रतिकरोति। प्रतिकारः। प्रतीकारः। प्रतिकृतम्। प्रतिकृतिः। 1. ಪ್ರತಿಯಾಗಿ ಮಾಡು, ಬದಲಾಗಿ ಮಾಡು. "कृतप्रतिकृतप्रीतैस्तयोर्मुक्तां सुरासुरैः। परस्परशरव्राताः पुष्पवृष्टिं न सेहिरे" रघु० १२-९४। "क्षययुक्तिमुपेक्षते कृती कुरुते तत्प्रतिकारमन्यथा" किरा० २-९। 2. ನಿವಾರಣೆಯ ಉಪಾಯ, ಪರಿಹಾರೋಪಾಯ. "विकारं खलु परमार्थतोऽज्ञात्वानारम्भः प्रतीकारस्य" शाकु० ३। 3. ಪ್ರತಿಬಿಂಬ, ವಿಗ್ರಹ. "तस्या एव प्रतिकृतिसखो यत्कृनाजहार" रघु० १४-८७। 4. ಹಿಂತಿರುಗಿಸು, ಹಿಂದಕ್ಕೆ ಕೊಡು. "रिक्थभाज ऋणं प्रतिकुर्युः" गौतमध० १२-३७।

**(16) वि+कृञ्** = विकरोति। विकारः। विकृतिः। 1. ವಿಕಾರಹೊಂದು, ಬದಲಾವಣೆ ಹೊಂದು. "विकारहेतौ सति विक्रियन्ते येषां न चेतांसि त एव धीराः" कुमा० १-५९। 2. ಕೋಪ, ಸಿಟ್ಟು. "सावलेपमुपलिप्सिते परैरभ्युपैति विकृतिं रजस्यपि" किरा० १३-५६। 3. ಹಿಂಸಿಸು, ತೊಂದರೆಕೊಡು. "हीनान्यनुपकर्तृणि प्रवृद्धानि विकुर्वते" रघु० १७-५८।

**(17) वि+आ+कृञ्** = व्याकरोति। व्याकरणम्। ವ್ಯಾಖ್ಯಾನ, ವಿವರಣೆ. ವಿಸ್ತಾರವಾಗಿ ಹೇಳುವುದು, ಸ್ಪಷ್ಟಪಡಿಸುವುದು, ವಿಶದವಾಗಿ ಹೇಳುವುದು. "नामरूपे व्याकरवाणि" छान्दोग्य०।

**(18) वि + प्र + कृञ्** = विप्रकरोति। विप्रकृतः। 1. ಪೀಡಿಸು, ತೊಂದರೆಪಡಿಸು. "तस्मिन् विप्रकृताः काले तारकेण दिवौकसः" कुमा० २-१। 2. ಅಪಕಾರ ಮಾಡು. "त्वया विप्रकृतश्चैद्यः" माघ० २-३८।

**(19) सम्+कृञ्** = संस्करोति। संस्कारः। संस्कृतः। 1. ಅಲಂಕರಿಸು, ಭೂಷಿಸು. "स्फुरदंशुजालमथ शीतरुचः ककुभं समस्कुरुत माघवनीम्" माघ० ९-२५। भूषणे सुडागमः। 2. ಶುದ್ಧಿಮಾಡು. "वाण्येका समलंकरोति पुरुषं या संस्कृता धार्यते" भर्तृ० १-१५। 3. ಚೆನ್ನಾಗಿ ಶಿಕ್ಷಣ ಕೊಡು, ತರಬೇತುಮಾಡು, ಪಳಗಿಸು. "अथवा शश्वदार्योपदेशसंस्क्रियमाणमतयः सदैव स्वतन्त्रा वयम्" मुद्रा० ३। 4. ನಯಮಾಡು, ನಾಜೂಕುಮಾಡು, ಹೊಳಪುಕೊಡು. "प्रयुक्तसंस्कार इवाधिकं बभौ" रघु० ३-१८।

**ಫಲವು ಕರ್ತೃಗಾಮಿಯಲ್ಲದಿದ್ದರೂ ಈ ಕೆಳಗಿನ ಅರ್ಥಗಳಲ್ಲಿ कृञ् ಧಾತುವು ಆತ್ಮನೇಪದಿಯಾಗುವುದು :**

**(1) गन्धनम्** = ಹಿಂಸೆ. "उत्कुरुते"। सूचयतीत्यर्थः। सूचनं हिंसा।

**(2) अवक्षेपणम्** = ಭರ್ತ್ಸನ, ಹೆದರಿಕೆ. "श्येनो वर्तिकामुदाकुरुते"। भर्त्सयतीत्यर्थः।

**(3) सेवनम्**=ಗೌರವಿಸು, ಪೂಜಿಸು. "हरिमुपकुरुते"। सेवते इत्यर्थः।

**(4) साहसिक्यम्** = (ಪರಸ್ತ್ರೀಯನ್ನು) ಬಲಾತ್ಕಾರವಾಗಿ ಕೆಡಿಸುವುದು, –ಭಂಗಪಡಿಸುವುದು. "परदारान् प्रकुरुते"। तेषु सहसा प्रवर्तते इत्यर्थः।

**(5) प्रतियत्नः**=ಗುಣಾಂತರವನ್ನು ಹೊಂದಿಸುವುದು, ಬೇರೆ ಗುಣವನ್ನು ಉಂಟುಮಾಡುವುದು. "एधोदकस्योपस्कुरुते"। गुणमाधत्ते इत्यर्थः।

**(6) प्रकथनम्** = ಚೆನ್ನಾಗಿ ಹೇಳುವುದು. "गाथा: प्रकुरुते"। प्रकथयतीत्यर्थ:।

**(7) उपयोग:** = ವಿನಿಯೋಗಿಸು, ಬಳಸು. "शतं प्रकुरुते"। धर्मार्थं विनियुङ्क्ते इत्यर्थ:।

**(8) प्रहसनम्** = ಕ್ಷಮಿಸುವುದು ಮತ್ತು ತಿರಸ್ಕರಿಸುವುದು. "शत्रुमधिकुरुते"। क्षमते, अभिभवति वा।

**(9) ಶಬ್ದವೇ ಕರ್ಮವಾಗಿರುವ ಮತ್ತು**

**(10) ಅಕರ್ಮಕವಾಗಿರುವ** वि ಪೂರ್ವಕ कृञ् ಧಾತುವು ಆತ್ಮನೇಪದಿಯಾಗುವುದು. "स्वरान् विकुरुते"। उच्चारयतीत्यर्थ:। "छात्रा विकुर्वते"। विकारं लभन्ते इत्यर्थ:।

**कृणु ಕೃಣು** (पुं०) ಚಿತ್ರಗಾರ, ಚಿತ್ರ ಬರೆಯುವವನು. डु कृञ् (करणे) "नु:" णत्वं च बाहु०। "चित्रकरे कृणु:" त्रिकाण्ड०।

**कृत् ಕೃತ್** (पुं०) 1. "धातो:" ಸೂತ್ರದ ಅಧಿಕಾರದಲ್ಲಿ ಧಾತುಗಳ ಮುಂದೆ ವಿಹಿತವಾದ ಪ್ರತ್ಯಯ, ಧಾತ್ವಧಿಕಾರದಲ್ಲಿ ವಿಹಿತವಾದ "तिङ्" ಭಿನ್ನವಾದ ಪ್ರತ್ಯಯಗಳು. "कृदतिङ्" (३-१-९३)। "धातो:" (३-१-९१) ಎಂಬ ಸೂತ್ರದ ಅಧಿಕಾರದಲ್ಲಿ ಧಾತುಗಳ ಮುಂದೆ ವಿಹಿತವಾಗುವ ण्वुल्, तृच्, ल्यु:, णिनि:, अच्, क: ಇತ್ಯಾದಿ ಪ್ರತ್ಯಯಗಳು "कृत्" ಸಂಜ್ಞೆಯುಳ್ಳವು. कृञ् "ण्वुल्" = कारक:। कृञ् "तृच्" = कर्ता। जनी (प्रादुर्भावे) "ण्वुल्" = जनक:। टुनदि (समृद्धौ) "ल्यु:" = नन्दन:। ग्रह (उपादाने) "णिनि:" ग्राही। ಇತ್ಯಾದಿ ಧಾತುಗಳಿಗೆ ಈ ಪ್ರತ್ಯಯಗಳು ಸೇರಿದರೆ ಪ್ರಾತಿಪದಿಕ ಸಂಜ್ಞೆ ಮತ್ತು ನಾಮಸಂಜ್ಞೆ ಹೊಂದಿ ಅನಂತರ **सु औ** जस् ಇತ್ಯಾದಿ ಪ್ರತ್ಯಯಗಳು ಬರುವುವು. "कृत्तद्धितसमासाश्च" (१-२-४६)। "उणाद्यन्तं कृदन्तं च तद्धितान्तं समासजम्। नामसंज्ञा भवेत्तेषां स्वाद्युत्पत्ति: तत:परम्"। (वि०) 2. ಮಾಡುವವನು. डु कृञ् (करणे) "क्विप्" (३-२-७६)।

**कृत ಕೃತ** (न०) 1. ಕಾರ್ಯ, ಕೆಲಸ. डु कृञ् (करणे) भावे "क्त:" (३-३-११४)। 2. ಕೃತಯುಗ, ಸತ್ಯಯುಗ, ಚತುರ್ಯುಗಗಳಲ್ಲಿ ಒಂದನೆಯದು; ರವಿ ಚಂದ್ರ ಬೃಹಸ್ಪತಿಗಳು ಮೂವರೂ ಪುಷ್ಯ ನಕ್ಷತ್ರದಲ್ಲಿ ಸೇರಿದಾಗ ಕೃತಯುಗಾರಂಭವಾಗುವುದು. ಇದಕ್ಕೆ ಆದಿಯುಗ ಮತ್ತು ದೇವಯುಗಗಳೆಂಬ ಹೆಸರೂ ಉಂಟು. ಈ ಯುಗದಲ್ಲಿ ಜನರು ಹುಟ್ಟಿದ ಮಾತ್ರದಿಂದಲೇ ಕೃತಕೃತ್ಯರಾಗುವುದರಿಂದ ಈ ಯುಗಕ್ಕೆ ಈ ಹೆಸರು. "कृतकृत्या: प्रजा जाता तस्मात् कृतयुगं विदु:"। **ಕೃತಯುಗಮಾನ:** ದೇವವರ್ಷಗಳು 4,800, ಮಾನುಷವರ್ಷಗಳು 17,28,000. ಇದರಲ್ಲಿ ಆರನೆಯ ಒಂದು ಭಾಗ ಸಂಧ್ಯಾಸಂಧ್ಯಾಂಶಗಳನ್ನು ಕಳೆದರೆ 4,000 ದೇವವರ್ಷಗಳು ಕೃತಯುಗಮಾನ. "तद्द्वादशसहस्राणि चतुर्युगमुदाहृतम्। सूर्याब्दसंख्यया द्वित्रिसागरैरयुताहतै:। सन्ध्यासन्ध्यांशसहितं विज्ञेयं तच्चतुर्युगम्। कृतादीनां व्यवस्थेयं धर्मपादव्यवस्थया" सू० सि० १-१५-१६। "पदैश्चतुर्भि: सुकृते स्थिरीकृते कृतेऽमुना के न तप: प्रपेदिरे। भुवं यदेकाङ्घ्रिकनिष्ठया स्पृशन् दधावधर्मोऽपि कृशस्तपस्विताम्" नैष० १-७। ಕೃತಯುಗದಲ್ಲಿ ಜನರೆಲ್ಲರೂ ದ್ವೇಷಾಸೂಯೆಗಳಿಲ್ಲದೆ ಅನ್ಯೋನ್ಯಸ್ನೇಹದಿಂದ ಬಾಳುತ್ತಿದ್ದರು. ಈ ಯುಗದಲ್ಲಿ ಜನರು ಹೃಷ್ಟಪುಷ್ಟರಾಗಿದ್ದು ಯಾರೊಬ್ಬರನ್ನೂ ಯಾಚಿಸದಿದ್ದುದರಿಂದ ಯಾಚಕರೇ ದುರ್ಲಭವಾಗಿರುತ್ತಿದ್ದರು. ಧರ್ಮಪುರುಷನು ಈ ಯುಗದಲ್ಲಿ ನಾಲ್ಕು ಪಾದಗಳನ್ನೂ ಭೂಮಿಯ ಮೇಲೆ ಊರಿ ನಿಂತಿದ್ದರಿಂದ ಧರ್ಮವೂ ನೆಲದಲ್ಲಿ ಸ್ಥಿರವಾಗಿ ನಿಂತು ರಾಜರೂ ಸಕಲ ಪ್ರಜೆಗಳೂ ಧರ್ಮಾತ್ಮರಾಗಿದ್ದರು. "पदैश्चतुर्भि: सुकृते स्थिरीकृते कृतेऽमुना के न तप: प्रपेदिरे"। ಕಲಿಯುಗದ ಕೊನೆಯಲ್ಲಿ ಪರಮಾತ್ಮನು ಕಲ್ಕಿರೂಪದಿಂದ ಅವತರಿಸಿ ದುಷ್ಟರಾಜರನ್ನೂ ಚೋರರನ್ನೂ ಧ್ವಂಸಮಾಡಿ ಅಶ್ವಮೇಧಯಾಗದಲ್ಲಿ ಭೂಮಿಯನ್ನು ಬ್ರಾಹ್ಮಣರಿಗೆ ವಹಿಸಿಕೊಡುವನು. ಕಲ್ಕಿಯಿಂದ ಅಧರ್ಮವು ನಾಶವಾಗಿ ಧರ್ಮವು ಬೆಳೆಯುತ್ತಾ ಬಂದು ಪ್ರಜೆಗಳೆಲ್ಲರೂ ತಮ್ಮ ತಮ್ಮ ಧರ್ಮಗಳಲ್ಲಿ ನಿರತರಾಗುವರು. ಸುವೃಷ್ಟಿಯಿಂದ ಕೆರೆಕಟ್ಟೆಗಳು ತುಂಬಿ ತುಳುಕಾಡುವುವು. ದೇವಾಲಯಗಳು ಭಕ್ತರಿಂದ ವಿರಾಜಿಸುವುವು. ಋಷಿಗಳೆಲ್ಲರೂ ತಪೋನಿಷ್ಠರಾಗಿ ಆಶ್ರಮಗಳಲ್ಲಿ ವಾಸಿಸುವರು. ಎಲ್ಲಾ ಋತುಗಳಲ್ಲಿಯೂ ಭೂಮಿಯು ಸಸ್ಯಸಮೃದ್ಧವಾಗಿ ಋತುಧರ್ಮಗಳು ಚೆನ್ನಾಗಿ ನಡೆಯುವುವು. ಜನರೆಲ್ಲರೂ ಧಾರ್ಮಿಕರಾಗಿ ವ್ರತನಿಯಮಾನುಷ್ಠಾನನಿರತರಾಗುವರು. ಬ್ರಾಹ್ಮಣರೆಲ್ಲರೂ ಜಪಯಜ್ಞಾಸಕ್ತರಾಗಿಯೂ, ಕ್ಷತ್ರಿಯರೆಲ್ಲರೂ ಪರಾಕ್ರಮಶಾಲಿಗಳಾಗಿ ಧರ್ಮದಿಂದ ರಾಜ್ಯವನ್ನು ಪಾಲಿಸುವವರಾಗಿಯೂ, ವೈಶ್ಯರು ವಾಣಿಜ್ಯಾದಿ ವ್ಯವಹಾರಪರರಾಗಿಯೂ, ತುರೀಯವರ್ಣದವರು ವ್ಯವಸಾಯಾದಿ ವೃತ್ತಿಯುಳ್ಳವರಾಗಿಯೂ ಇರುತ್ತ ತಮ್ಮ ತಮ್ಮ ಧರ್ಮಗಳನ್ನು ಪಾಲಿಸುವರು. "ततश्चोरक्षयं कृत्वा द्विजेभ्य: पृथिवीमिमाम्। वाजिमेध

महायज्ञे विधिवत्कल्पयिष्यति। ततोऽधर्मविनाशो वै धर्मवृद्धिश्च भारत। भविष्यति कृते प्राप्ते क्रियावांश्च जनस्तथा। आरामाश्चैव चैत्याश्च तटाकावसथास्तथा। पुष्करिण्यश्च विविधा भविष्यन्ति कृते युगे। ब्राह्मणाः साधवश्चैव मुनयश्च तपस्विनः। आश्रमाह्वृत-पाखण्डाः स्थिताः सत्यरताः प्रजाः। जनिष्यन्ते च बीजानि रोप्यमाणानि चैव हि। सर्वेष्वृतुषु राजेन्द्र सर्वं सस्यं भविष्यति। नानादानेषु निरता व्रतेषु नियमेषु च। जपयज्ञपरा विप्राः धर्मकामा मुदा युताः" ಇತ್ಯಾದಿ. भा० वन० ९१। 3. ಅನ್ನ ಮೊದಲಾದ ಹವಿಸ್ಸು. "यवादित्वकृतं हव्यं तण्डुलास्तु कृताकृतम्। अन्नादि कृतम्" वैज०। 4. ಫಲ. 5. ನಾಲ್ಕು ಸಂಖ್ಯೆ. 6. ಪಗಡೆಯ ದಾಳದಲ್ಲಿ ಬೀಳುವ ನಾಲ್ಕು ಅಂಕಗಳು. (वि०) 7. ಮಾಡಲ್ಪಟ್ಟ. ·डु कृञ् (करणे) "क्तः" (३-२-१०२)। "प्रतिकर्म कर्तुमुपचक्रमिरे समये हि सर्वमुपकारि कृतम्" माघ० ९-४३। 8. ಹಿಂಸಿಸಲ್ಪಟ್ಟ, ಪೀಡಿಸಲ್ಪಟ್ಟ. 9. ಪರ್ಯಾಪ್ತವಾದ, ಸಾಕಾಗುವಷ್ಟು. 10. ವಿಹಿತವಾದ. "कृतं पर्याप्तियुगयोः विहिते हिंसिते फले" हेम०। 11. ಉತ್ತು ಬೀಜಬಿತ್ತಲ್ಪಟ್ಟಿರುವ. "अकृतं च कृतात् क्षेत्रात् गौरजाविकमेव च। हिरण्यं धान्यमन्नं च पूर्वं पूर्वमदोषवत्" मनु० १०-११४। 12. ಉಂಟಾದ, ಹುಟ್ಟಿದ, ಸಂಭವಿಸಿದ. कृञ् कर्तं० "क्तः" (३-४-७२)। "जपहोमैरपैत्येनः याजनाध्यापनैः कृतम्" मनु० १०-१११। 13. ತನ್ನ ಊಟಕ್ಕಾಗಿ ಸೇವಕನಾಗಿ ಸೇರಿಕೊಂಡಿರುವ. "भक्तायैव स्थितः कृतः" वैज०। (अव्य०) **-तम् -ತಮ್.** 14. ಸಾಕು. 15. ಸಾಕುಮಾಡು, ನಿಲ್ಲಿಸು. "कृतं सन्देहेन"। ಸಂದೇಹ ಪಡುವುದು ಸಾಕು, ಸಂದೇಹಪಡುವುದನ್ನು ಸಾಕುಮಾಡು, ಸಂದೇಹ ಬೇಡ. **-ते -ತೇ.** 16. ಅದಕ್ಕಾಗಿ, ಅದಕ್ಕೋಸ್ಕರ. "देवातिथ्यर्चनकृते गुरुभृत्यार्थमेव वा। सर्वतः प्रति-गृह्णीयादात्मवृत्त्यर्थमेव च" याज्ञ० १-२१६।

**कृतक ಕೃತಕ** (वि०) 1. ಕೃತ್ರಿಮವಾದ, ಸ್ವಭಾವದ್ದಲ್ಲದ. ಕಾರ್ಯದಿಂದ ಉಂಟಾದ, ಸಲಕರಣೆಗಳಿಂದ ತಯಾರಾದ. कृतमेव स्वार्थे "कन्" (५-४-५)। "लिम्पद्भिः कृतकं कृतोऽपि रजतं राज्ञां यशः पारदैः" नैष० १२-९१। (अव्य०) **-कम् -ಕಮ್.** 2. ಕೃತ್ರಿಮವಾಗಿ, ಅಸ್ವಾಭಾವಿಕವಾಗಿ, ಅಸತ್ಯವಾಗಿ. "अपयाति सरोषया निरस्ते कृतकं कामिनि चुक्षुवे मृगाक्ष्या" माघ० ९-८३।

**कृतकर्तव्य ಕೃತಕರ್ತವ್ಯ** (वि०) ಮಾಡಬೇಕಾದುದನ್ನು ಮಾಡಿರುವ, ಕರ್ತವ್ಯವನ್ನು ನೆರವೇರಿಸಿರುವ. कृतं कर्तव्यं येन। "किन्त्वसौ स्वामिनः प्रत्यक्प्रवणतां विचिन्त्य कृतकर्तव्यमिवात्मानं मत्वा स्वयमेव धर्मः शून्य-व्यापारोऽभूत्" प्रबोध० ६।

**कृतकर्मन् ಕೃತಕರ್ಮನ್** (पुं०) 1. ಪರಮಾತ್ಮ, ವಿಷ್ಣು. कृतं स्वयमनुष्ठितं कर्म तदाचारोऽनेन। "स्वानुष्ठित-तदाचारः कृतकर्मेति कथ्यते" इति निरुक्तिः। "इन्द्रकर्मा महाकर्मा कृतकर्मा कृतागमः" वि० स०। (न०) 2. ಮಾಡಲ್ಪಟ್ಟ ಕಾರ್ಯ. कृतं कर्म। (वि०) 3. ಮಾಡಲ್ಪಟ್ಟ ಕೆಲಸವುಳ್ಳ, ತನ್ನ ಕೆಲಸ ಮಾಡಿಕೊಂಡಿರುವ. कृतं कर्म येन। 4. ಕಾರ್ಯಚತುರನಾದ, ದಕ್ಷನಾದ, ಕಾರ್ಯದಲ್ಲಿ ಸಮರ್ಥನಾದ.

**कृतकार्य ಕೃತಕಾರ್ಯ** (न०) 1. ಮಾಡಲ್ಪಟ್ಟ ಕೆಲಸ. कृतं कार्यम्। (वि०) 2. ಮಾಡಲ್ಪಟ್ಟ ಕೆಲಸವುಳ್ಳ, ಕಾರ್ಯವನ್ನು ನೆರವೇರಿಸಿದ. कृतं कार्यं येन। "समूहकार्य आयातान् कृतकार्यान् विसर्जयेत्" याज्ञ० २-१८९।

**कृतकाल ಕೃತಕಾಲ** (पुं०) ಗೊತ್ತುಮಾಡಿರುವ ಸಮಯ, ನಿಗದಿಮಾಡಿರುವ ಕಾಲ. कृतः कालः। "कृतशिल्पोऽपि निवसेत् कृतकालं गुरोर्गृहे" याज्ञ० २-१८४।

**कृतकृत्य ಕೃತಕೃತ್ಯ** (न०) 1. ಮಾಡಲ್ಪಟ್ಟ ಕಾರ್ಯ, ನೆರವೇರಿಸಲ್ಪಟ್ಟ ಕೆಲಸ. कृतं कृत्यम्। (वि०) 2. ಮಾಡಲ್ಪಟ್ಟ ಕರ್ತವ್ಯವುಳ್ಳ, ಕರ್ತವ್ಯವನ್ನು ನೆರವೇರಿಸಿದ. कृतं कृत्यं येन। "संपदा सुस्थिरंमन्यो भवति स्वल्पयापि यः। कृतकृत्यो विधिर्मन्ये न वर्धयति तस्य ताम्" माघ० २-३२। "तल्" (५-१-११९)। **-कृत्यता -ಕೃತ್ಯತಾ.** (स्त्री०) ಕೃತಾರ್ಥನಾಗುವಿಕೆ, ಮಾಡಬೇಕಾದುದನ್ನು ಮಾಡಿರುವುದು. "राज्यप्राप्तिकृतार्थमेकमपरं तीर्ण-प्रतिज्ञार्णवं सौहार्दात् कृतकृत्यतैव नियतं लब्धान्तरा भेत्स्यति" मुद्रा० २-२३।

**कृतकेतर ಕೃತಕೇತರ** (वि०) 1. ಕೃತ್ರಿಮವಲ್ಲದ, ಸ್ವಭಾವವಾದ. कृतकात् इतरः। 2. ಅಪೌರುಷೇಯವಾದ, ಮನುಷ್ಯರಿಂದ ಮಾಡಲ್ಪಡದ. "उच्चैर्गतिर्जगति सिद्ध्यति धर्मतश्चेत् तस्य प्रमा च वचनैः कृतकेतरैश्चेत्" चं० रा०।

**कृतकोटि ಕೃತಕೋಟಿ** (पुं०) 1. ಕಶ್ಯಪಮಹರ್ಷಿ. 2. ಉಪವರ್ಷಋಷಿ. "कृतकोटिस्तु काश्यपः" त्रिकाण्ड०। "उपवर्षो हलभृतिः कृतकोटिरयाचितः" त्रिकाण्ड०।

**कृतक्रय ಕೃತಕ್ರಯ** (वि०) ಮಾಡಲ್ಪಟ್ಟ ಕ್ರಯವುಳ್ಳ, ಕ್ರಯಕ್ಕೆ ತೆಗೆದುಕೊಂಡ, ಬೆಲೆಕೊಟ್ಟು ತೆಗೆದುಕೊಂಡ. कृतः क्रयो येन।

**कृतक्रिय ಕೃತಕ್ರಿಯ** (वि०) 1. ಮಾಡಲ್ಪಟ್ಟ ಕೆಲಸವುಳ್ಳ, ಕೆಲಸವನ್ನು ನೆರವೇರಿಸಿದ. कृता क्रिया येन। "विप्रः शुध्यत्यपः स्पृष्ट्वा क्षत्रियो वाहनायुधम्। वैश्यः प्रतोदं रश्मीन् वा यष्टिं शूद्रः कृतक्रियः" मनु० ५-९९। 2. ಆಚರಿಸಲ್ಪಟ್ಟ ಕರ್ತವ್ಯವುಳ್ಳ. कृतं कार्यं यस्य। "स बभव दुरासदः परैर्गुरुणाथर्वविदा कृतक्रियः" रघु० ८-४।

**कृतक्षण ಕೃತಕ್ಷಣ** (वि०) 1. ಅವಕಾಶವನ್ನು ಹೊಂದಿರುವ. 2. ಸಮಯವನ್ನು ಕಾಯುವ, ಸರಿಯಾದ ಕಾಲವನ್ನು ನಿರೀಕ್ಷಿಸುವ, ಗೊತ್ತಾದ ಕಾಲವನ್ನು ಕಾದು ನೋಡುವ. कृतः क्षणो येन। "वयं सर्वे कृतक्षणास्तिष्ठामः" पञ्चतं०। "तमुत्तङ्कः प्रत्युवाच कृतक्षण एवास्मि शीघ्रमिच्छामि यथोपपन्नमन्नमुपस्कृतम्" भा० आदि० ३।

**कृतघ्न ಕೃತಘ್ನ** (वि०) ಮಾಡಿದ ಉಪಕಾರವನ್ನು ಮರೆತಿರುವ, ಮಾಡಿದ ಉಪಕಾರಕ್ಕೆ ಬದಲಾಗಿ ಅಪಕಾರಮಾಡುವ, ಉಪಕಾರಮಾಡಿದವನನ್ನು ಹಿಂಸಿಸುವ. कृतं हन्ति — हन (हिंसागत्योः) "कः" (वा० ३-२-५)। "परलोकगतो देवः कृतघ्नैर्नानुगम्यते" मुद्रा० २-२०। "बालघ्नांश्च कृतघ्नांश्च विशुद्धानपि धर्मतः। शरणागतहंतृंश्च स्त्रीहन्तृंश्च न संवसेत्" मनु० ११-१९२। **ಕೃತಘ್ನನಿಗೆ ಪ್ರಾಯಶ್ಚಿತ್ತವೇ ಇಲ್ಲ.** "ब्रह्मघ्ने च सुरापे च चौरे च गुरुतल्पगे। निष्कृतिर्विहिता सद्भिः कृतघ्ने नास्ति निष्कृतिः"। **ಇವರೆಲ್ಲರೂ ಕೃತಘ್ನರು:** "भर्तृपिण्डापहर्ता च पितृपिण्डापहारकः। यस्माद्गृहीत्वा विद्यां च दक्षिणां न प्रयच्छति। पुत्रान् स्त्रियं च यो द्वेष्टि यश्चैतान् घातयेन्नरः। कृतस्य दोषं वदति सकामान्न करोति यः। न स्मरेच्च कृतं यश्च आश्रमान् यश्च दूषयेत्। सर्वांस्तान् ऋषिभिः सार्थं कृतघ्नानब्रवीन्मनुः" स्कान्द०।

**कृतघ्नता ಕೃತಘ್ನತಾ** (स्त्री०) ಕೃತಘ್ನನಾಗಿರುವಿಕೆ. ಮಾಡಿದ ಉಪಕಾರವನ್ನು ಮರೆಯುವಿಕೆ, ಉಪಕಾರ ಮಾಡಿದವನಿಗೆ ಅಪಕಾರಮಾಡುವಿಕೆ. कृतघ्नस्य भावः "तल्" (५-१-११९)। "निग्रहे तावत् पर्वतकोस्माभिः व्यापादित इति कृतघ्नतायाः स्वयं हस्तो दत्तः स्यात्" मुद्रा० ३। "त्वः" (५-१-११९)। **कृतघ्नत्वम् ಕೃತಘ್ನತ್ವನು.**

**कृतज्ञ ಕೃತಜ್ಞ** (पुं०) 1. ವಿಷ್ಣು. ಪರಮಾತ್ಮ. कृतं सुकृतमानुकूल्यवज्जानाति—ज्ञा (अवबोधने) "कः" (३-२-३)। "प्राणिभिर्यत्कृतं कर्म तज्ज्ञात्वा फलदो यतः। पत्रपुष्पादिना तुष्टः कृतज्ञो मोक्षदानतः" इति निरुक्तिः। "अनुत्तमो दुराधर्षः कृतज्ञः कृतिरात्मवान्" वि० स०। 2. ನಾಯಿ. ನಾಯಿಯು ಉಪಕಾರವನ್ನು ಮರೆಯುವುದಿಲ್ಲ. (वि०) 3. ಮಾಡಿದ ಉಪಕಾರವನ್ನು ಸ್ಮರಿಸುವವನು, ಉಪಕಾರಕ್ಕೆ ತಕ್ಕ ಪ್ರತ್ಯುಪಕಾರವನ್ನು ಮಾಡುವವನು. "कृतज्ञः कुक्कुरे पुंसि मर्यादिन्यभिधेयवत्" मेदि०।

**कृतज्ञता ಕೃತಜ್ಞತಾ** (स्त्री०) 1. ಉಪಕಾರವನ್ನು ಸ್ಮರಿಸುವುದು. "कृतज्ञतामस्य वदन्ति संपदः" किरा० १-१४। 2. ಪ್ರತ್ಯುಪಕಾರಮಾಡುವುದು. कृतज्ञस्य भावः "तल्" (५-१-११९)। "तेनाप्यसौ ममानेन प्राणाः परिरक्षिता इति कृतज्ञतामनुरुध्यमानेन पैतृकं च परिचयं आत्मनोऽनन्तरम् अमात्यपदं ग्राहितः" मुद्रा० ३।

**कृततीर्थ ಕೃತತೀರ್ಥ** (वि०) 1. ಪುಣ್ಯಕ್ಷೇತ್ರಗಳ ಯಾತ್ರೆ ಮಾಡಿದವನು. 2. ಶ್ರೇಷ್ಠನಾದ ಆಚಾರ್ಯನಲ್ಲಿ ವಿದ್ಯೆ ಕಲಿತವನು. 3. ಉಪಾಯವನ್ನು ತಿಳಿದವನು. 4. ಜಲಾವತಾರ ಮಾಡಿದವನು, ನೀರಿನಲ್ಲಿ ಸರಿಯಾದ ತೊರೆಯಲ್ಲಿ ಇಳಿದವನು. कृतं तीर्थं क्षेत्रं उपाध्यायः उपायः जलावतारो वा येन। "विषमोऽपि विगाह्यते नयः कृततीर्थः पयसामिवाशयः" किरा० २-३।

**कृतदार ಕೃತದಾರ** (पुं०) ಮದುವೆಯಾದವನು, ಪತ್ನಿಯನ್ನು ಪಡೆದುಕೊಂಡಿರುವವನು. "कृतदारोऽपरान् दारान् भिक्षित्वा योऽधिगच्छति" मनु० ११-५।

**कृतदास ಕೃತದಾಸ** (पुं०) ಕಾಲಪರಿಮಿತಿಯನ್ನು ನಿಗದಿ ಮಾಡಿ ಸೇವಕನಾಗಿರುವವನು, ಇಷ್ಟು ಕಾಲ ನಿನ್ನಲ್ಲಿ ಸೇವಕನಾಗಿರುವೆನೆಂದು ಒಪ್ಪಿರುವವನು, ಹದಿನೈದು ವಿಧ ದಾಸ (ಸೇವಕ)ರಲ್ಲೊಬ್ಬ. कृतो दासः। **ಹದಿನೈದು (15) ವಿಧ ದಾಸ (ಸೇವಕ) ರು:**

(1) गृहजातः = ಮನೆಯಲ್ಲಿ ದಾಸಿಯಲ್ಲಿ ಹುಟ್ಟಿದವನು.

(2) क्रीतः = ಕ್ರಯಕ್ಕೆ ಕೊಳ್ಳಲ್ಪಟ್ಟವನು.

(3) लब्धः = ದಾನವಾಗಿ ಕೊಡಲ್ಪಟ್ಟವನು.

(4) दायादुपागतः = ತಂದೆಯ ಕಾಲದಿಂದ ಬಂದು ತನ್ನ ಭಾಗಕ್ಕೆ ಸೇರಿದವನು.

(5) अनाकालभृतः = ದುರ್ಭಿಕ್ಷಕಾಲದಲ್ಲಿ ಅನ್ನಕೊಟ್ಟು ರಕ್ಷಿಸಲ್ಪಟ್ಟು ದಾಸನಾಗಿರುವವನು.

(6) आहित: = ಯಜಮಾನನಿಂದ ಹಣ ಪಡೆದು ಅದಕ್ಕಾಗಿ ದಾಸನಾಗಿರುವವನು.

(7) ऋणदास: = ತಾನುಮಾಡಿದ ಸಾಲವನ್ನು ತೀರಿಸಿದವನಲ್ಲಿ ಒಪ್ಪಿ ದಾಸನಾಗಿರುವವನು.

(8) युद्धप्राप्त: = ಯುದ್ಧದಲ್ಲಿ ಜಯಿಸಲ್ಪಟ್ಟು ದಾಸನಾಗಿರುವವನು.

(9) प्रणेजित: = ವಿವಾದದಲ್ಲಿ ಜಯಿಸಲ್ಪಟ್ಟು ದಾಸನಾಗಿರುವವನು.

(10) उपगत: = "ನಾನು ನಿನ್ನವನು" ಎಂದು ತಾನಾಗಿ ಬಂದು ದಾಸನಾಗಿರುವವನು.

(11) प्रव्रज्यावसित: =ಸಂನ್ಯಾಸಿಯಾಗಿದ್ದು ಭ್ರಷ್ಟನಾಗಿ ಬಂದು ದಾಸನಾಗಿರುವವನು.

(12) कृतदास: = ಇಷ್ಟುಕಾಲ ದಾಸನಾಗಿರುವೆನೆಂದು ಒಪ್ಪಿರುವವನು.

(13) भक्तदास: = ಭಕ್ತರಿಗಾಗಿ ದಾಸತ್ವವನ್ನು ಅಂಗೀಕರಿಸಿ ಬಂದವನು.

(14) बडबाहृत: = ದಾಸಿಯಿಂದ ಕರೆತರಲ್ಪಟ್ಟು ಅವಳನ್ನು ಮದುವೆಯಾಗಿ ತಾನೂ ದಾಸನಾಗಿರುವವನು.

(15) विक्रेता = ತನ್ನನ್ನು ಮಾರಿಕೊಂಡು ದಾಸನಾಗಿರುವವನು.

**कृतधी ಕೃತಧೀ** (वि०) 1. ವಿದ್ಯಾವಂತ, ವಿದ್ಯಾಭ್ಯಾಸದಿಂದ ಒಳ್ಳೆಯ ಸಂಸ್ಕೃತಿಯನ್ನು ಪಡೆದವನು. कृता लब्धा धीर्येन। "महारम्भाः कृतधियस्तिष्ठन्ति च निराकुलाः" माघ० २-७९। 2. ಸ್ಥಿರಚಿತ್ತನಾದ. 3. ವಿವೇಕಶಾಲಿಯಾದ, ಯುಕ್ತಾಯುಕ್ತ ಪರಿಜ್ಞಾನವುಳ್ಳ. "पुत्रेभ्यः कृतवेदिनां कृतधियो येषामभिन्ना वयम्" मुद्रा० ५-२०।

**कृतध्वज ಕೃತಧ್ವಜ** (पुं०) ಕುಶಧ್ವಜನ ಮೊಮ್ಮಗ, ಧರ್ಮಧ್ವಜನ ಮಗ. "कुशध्वजस्तस्य पुत्रस्ततो धर्मध्वजो नृपः। धर्मध्वजस्य द्वौ पुत्रौ कृतध्वजमितध्वजौ" भाग० ९-१३।

**कृतनामधेय ಕೃತನಾಮಧೇಯ** (वि०) 1. ಹೆಸರುವಾಸಿಯಾದವನು, ಪ್ರಸಿದ್ಧಿ ಪಡೆದವನು, ಪ್ರಖ್ಯಾತ, ಕೀರ್ತಿವಂತ. कृतं नामधेयं यस्य। 2. ಹೆಸರಿಡಲ್ಪಟ್ಟ, ನಾಮಕರಣ ಮಾಡಲ್ಪಟ್ಟ.

**कृतनिश्चय ಕೃತನಿಶ್ಚಯ** (वि०) 1. ನಿಶ್ಚಯಿಸಿಕೊಂಡವನು, ತೀರ್ಮಾನಮಾಡಿಕೊಂಡವನು. कृतो निश्चयो येन। "इहैव तावत् कृतनिश्चयोह्यहं यदि भजेयं प्लवगेश्वरालयम्" रामा०। "हतो वा प्राप्स्यसि स्वर्गं जित्वा वा भोक्ष्यसे महीम्। तस्मादुत्तिष्ठ कौन्तेय युद्धाय कृतनिश्चयः" गीता २-३७। 2. ಸ್ಥಿರಚಿತ್ತವುಳ್ಳ, ದೃಢವಾದ ಮನಸ್ಸುಳ್ಳ. कृतो निश्चयो येन।

**कृतपुङ्ख ಕೃತಪುಂಖ** (वि०) ಬಾಣಪ್ರಯೋಗದಲ್ಲಿ ಚತುರನಾದ, ಬಾಣಗಳನ್ನು ಬಿಡುವುದರಲ್ಲಿ ಜಾಣನಾದ, ಬಾಣಪ್ರಯೋಗವನ್ನು ಚೆನ್ನಾಗಿ ಅಭ್ಯಾಸಮಾಡಿದ. कृतः अभ्यस्तः पुङ्खो येन।

**कृतप्रणाम ಕೃತಪ್ರಣಾಮ** (वि०) 1. ನಮಸ್ಕಾರ ಮಾಡಿದವನು. कृतः प्रणामो येन। "कृतप्रणामस्य महीं महीभुजे जितां सपत्नेन निवेदयिष्यतः" किरा० १-२। 2. ನಮಸ್ಕಾರ ಮಾಡಲ್ಪಟ್ಟವನು. कृतः प्रणामो यस्य।

**कृतप्रतिज्ञ ಕೃತಪ್ರತಿಜ್ಞ** (वि०) 1. ಪ್ರತಿಜ್ಞೆಮಾಡಿದವನು. कृता प्रतिज्ञा येन। 2. ಮಾಡಿದ ಪ್ರತಿಜ್ಞೆಯನ್ನು ಈಡೇರಿಸಿದವನು, ಪ್ರತಿಜ್ಞೆಯನ್ನು ಪೂರ್ಣಗೊಳಿಸಿದವನು.

**कृतबुद्धि ಕೃತಬುದ್ಧಿ** (वि०) ಸುಸಂಸ್ಕೃತ ಬುದ್ಧಿಯುಳ್ಳ, ಪಕ್ವವಾದ ಬುದ್ಧಿಯುಳ್ಳ. "पश्यत्यकृतबुद्धित्वान्न स पश्यति दुर्मतिः" गीता १८-१६।

**कृतम् ಕೃತಮ್** (अव्य०) ಸಾಕು, ಸಾಕುಮಾಡು, ನಿಲ್ಲಿಸು. "कृतम् युगेऽलमर्थे स्यात्" मेदि०।

**कृतमति ಕೃತಮತಿ** (वि०) ಮನಸ್ಸಿನಲ್ಲಿ ನಿಶ್ಚಯಿಸಿಕೊಂಡ, ನಿರ್ಣಯಮಾಡಿಕೊಂಡ. कृता मतिर्येन। "सत्त्वहितकृतमतिः सहसा तमसा विनाशयति सर्वमावृतः" माघ० १५-१३।

**कृतमाल ಕೃತಮಾಲ** (पुं०) 1. ಕಕ್ಕೆಗಿಡ. कृता मालास्य पुष्पैः। "काश्मर्याः कृतमालमुद्गतदलं कोयष्टिकष्टीकते" मालती० ९-७। 2. ಕಣಗಿಲೆ ಗಿಡ. (वि०)3. ಹಾರವನ್ನು ತಯಾರಿಸಿದವನು. कृता माला येन।

**कृतमुख ಕೃತಮುಖ** (वि०) ವಿದ್ಯಾವಂತ, ಜಾಣ, ಬುದ್ಧಿವಂತ, ನಿಪುಣ. कृतं संस्कृतं मुखं यस्य। "वैज्ञानिकः कृतमुखः कृती कुशल इत्यपि" अम०।

**कृतयुग ಕೃತಯುಗ** (न०) ಚತುರ್ಯುಗಗಳಲ್ಲಿ ಒಂದು, ಕೃತ, ತ್ರೇತಾ, ದ್ವಾಪರ ಮತ್ತು ಕಲಿಗಳೆಂಬ ನಾಲ್ಕು ಯುಗಗಳಲ್ಲಿ ಮೊದಲನೆಯದು. ಈ ಯುಗದಲ್ಲಿ ಜನರೆಲ್ಲರೂ ಭಗವದ್ಧ್ಯಾನಪರರಾಗಿಯೂ ಸುಶೀಲರಾಗಿಯೂ ಧರ್ಮಾತ್ಮರಾಗಿಯೂ ಸದಾಚಾರಸಂಪನ್ನರಾಗಿಯೂ ಇರುವುದರಿಂದಲೂ ಭೂಮಿಯು ಸಕಲಸಸ್ಯಸಮೃದ್ಧವಾಗಿ

ಜಗತ್ತೆಲ್ಲವೂ ಸುಭಿಕ್ಷವಾಗಿಯೂ ರಾಜರೆಲ್ಲರೂ ಧರ್ಮದಿಂದ ಪ್ರಜಾಪರಿಪಾಲನನಿರತರಾಗಿಯೂ ಇರುವುದರಿಂದಲೂ ಈ ಯುಗಕ್ಕೆ ಸ್ವರ್ಣಯುಗವೆಂದೂ ಹೆಸರು.

**कृतलक्षण ಕೃತಲಕ್ಷಣ** (पुं०) 1. ವಿಷ್ಣು, ಪರಮಾತ್ಮ. कृतं लक्षणं चक्रादिलाञ्छनं येन। "कृतं हि लाञ्छनं येन उपादेयेषु जन्तुषु। परमात्मा हृषीकेशः स तु स्यात् कृतलक्षणः" इति निरुक्तिः। "अविज्ञाता सहस्रांशुर्विधाता कृतलक्षणः" वि० स०। (वि०) 2. ಸದ್ಗುಣಗಳಿಂದ ಕೂಡಿದ, ಒಳ್ಳೆಯ ಗುಣಗಳಿಂದ ಪ್ರಸಿದ್ಧನಾದ. कृतानि लक्षणानि यस्य। 3. ಗುರುತುಮಾಡಲ್ಪಟ್ಟ. "ज्ञातिसम्बन्धिभिस्त्वेते त्यक्तव्याः कृतलक्षणाः" मनु० ९-२३१। 4. ಮುದ್ರೆಹಾಕಲ್ಪಟ್ಟ.

**कृतवत् ಕೃತವತ್** (वि०) ಮಾಡಿದವನು. डु कृञ् (करणे) "क्तवतु" (३-२-१०२)। "प्रयत्नं कृतवन्तोऽपि दृश्यन्ते ह्यफला जनाः। मार्गन्त्यायशतैरर्थान् अमार्गश्चापरः सुखी" भा० अनु० १६३-५। स्त्रियाम् "ङीप्" (४-१-६)। **–वती –ವತೀ.**

**कृतवसति ಕೃತವಸತಿ** (वि०) ವಸತಿಯನ್ನು ಕಲ್ಪಿಸಿಕೊಂಡ, ಮನೆಮಾಡಿಕೊಂಡ, ವಾಸಸ್ಥಾನವನ್ನು ಏರ್ಪಡಿಸಿಕೊಂಡ. कृता वसतिर्येन। "अमृतकरशिरोमणिर्गिरीन्द्रे कृतवसतिर्वशिभिर्गणैर्ननन्द" कुमा० ९-५२।

**कृतविद्य ಕೃತವಿದ್ಯ** (वि०) ವಿದ್ಯಾವಂತ, ವಿದ್ಯಾಭ್ಯಾಸ ಮಾಡಿದವನು, ವಿದ್ಯೆಕಲಿತವನು. कृता अभ्यस्ता विद्या येन। "शूरश्च कृतविद्यश्च यश्च जानाति सेवितुम्" पञ्चतं०।

**कृतवीर्य ಕೃತವೀರ್ಯ** (पुं०) ಕಾರ್ತವೀರ್ಯಾರ್ಜುನನ ತಂದೆ, ಚಂದ್ರವಂಶದ ಧನಕರಾಜನ ಮಗ.

**कृतवेतन ಕೃತವೇತನ** (वि०) ಕೂಲಿಕೊಡಲ್ಪಟ್ಟ ಆಳು, ಸಂಬಳ ತೆಗೆದುಕೊಂಡ ಸೇವಕ. कृतं वेतनं यस्य।

**कृतवेदिन् ಕೃತವೇದಿನ್** (वि०) ಮಾಡಿದುದನ್ನು ನೆನೆದುಕೊಳ್ಳುವವನು, ಉಪಕಾರವನ್ನು ಸ್ಮರಿಸಿಕೊಳ್ಳುವವನು, ಕೃತಜ್ಞ, ಮಾಡಿದುದಕ್ಕೆ ಪ್ರತ್ಯುಪಕಾರ ಮಾಡುವವನು. कृतं वेत्ति — विद (ज्ञाने) "णिनिः" (३-२-७८)। "पुत्रेभ्यः कृतवेदिनां कृतधियो येषामभिन्ना वयम्" मुद्रा० ५-२०। "न तथा कृतवेदिनां करिष्यन् प्रियतामेति यथा कृतावदानः" किरा० १३-३२। स्त्रियाम् "ङीप्" (४-१-५)। **–वेदिनी –ವೇದಿನೀ.**

**कृतशिल्प ಕೃತಶಿಲ್ಪ** (वि०) ಕುಶಲವಿದ್ಯೆಯನ್ನು ಕಲಿತವನು, ಕಲಾಭ್ಯಾಸ ಮಾಡಿದವನು. कृतमभ्यस्तं शिल्पं येन। "कृतशिल्पोऽपि निवसेत् कृतकालं गुरोर्गृहे। अन्तेवासी गुरुप्राप्तभोजनस्तत्फलप्रदः" याज्ञ० २-१८४।

**कृतश्रम ಕೃತಶ್ರಮ** (वि०) ಬಹಳ ಪರಿಶ್ರಮಹೊಂದಿರುವ, ಉತ್ಸಾಹದಿಂದ ಶ್ರಮಪಟ್ಟಿರುವ. कृतः श्रमो येन। "शास्त्रेषु कृतश्रमः"।

**कृतसंज्ञ ಕೃತಸಂಜ್ಞ** (वि०) ಸಂಕೇತಮಾಡಲ್ಪಟ್ಟ, ಗುರುತು ಮಾಡಲ್ಪಟ್ಟ. कृता संज्ञा संकेतो यस्य। "गुल्मांश्च स्थापयेदाप्तान् कृतसंज्ञान् समन्ततः" मनु० ७-१९०।

**कृतसंस्कार ಕೃತಸಂಸ್ಕಾರ** (वि०) 1. ಜಾತಕರ್ಮ ನಾಮಕರಣ ಮೊದಲಾದ ಸಂಸ್ಕಾರಗಳನ್ನು ಪಡೆದಿರುವ. कृतः संस्कारो यस्य। "कुमाराः कृतसंस्कारास्ते धात्रीस्तन्यपायिनः" रघु० १०-७८। 2. ಶುದ್ಧಿಕಾರ್ಯ ಮಾಡಲ್ಪಟ್ಟ. 3. ಅಲಂಕಾರ ಮಾಡಲ್ಪಟ್ಟ.

**कृतसन्नाह ಕೃತಸನ್ನಾಹ** (पुं०) ಯುದ್ಧಕವಚ ತೊಟ್ಟು ಸಿದ್ಧನಾಗಿರುವವನು.

**कृतसापत्निका ಕೃತಸಾಪತ್ನಿಕಾ** (स्त्री०) ಸವತಿಯನ್ನು ಹೊಂದಿರುವ ಹೆಂಗಸು, ಎರಡನೆಯ ಹೆಂಡತಿಯನ್ನು ಹೊಂದಿರುವವನ ಹಿರಿಯ ಹೆಂಡತಿ. सपत्न्या भावः "ष्यञ्" (५-१-१२४)। "ङीष्" (४-१-४१)। यलोपः (६-४-१५०)। स्वार्थे "कन्" (५-३-७५)। सापत्निका। कृता सापत्निका यस्याः।

**कृतहस्त ಕೃತಹಸ್ತ** (वि०) 1. ಬಾಣಸಂಧಾನ ಮತ್ತು ಉಪಸಂಹಾರಗಳಲ್ಲಿ ಕೈಚಟುವಟಿಕೆಯುಳ್ಳ, ಬಾಣಪ್ರಯೋಗದಲ್ಲಿ ನಿಪುಣನಾದ. कृतोऽभ्यस्तो हस्तो यस्य। 2. ದಕ್ಷನಾದ, ಎಲ್ಲಾ ಕಾರ್ಯಗಳಲ್ಲೂ ನಿಪುಣನಾದ.

**कृताकृत ಕೃತಾಕೃತ** (पुं०) 1. ವಿಷ್ಣು, ಪರಮಾತ್ಮ. कृतश्च अकृतश्च। ಅನಿತ್ಯಫಲವನ್ನು ಕೊಡುವ ಸಂಸಾರಪ್ರವರ್ತಕಧರ್ಮ ಮತ್ತು ನಿತ್ಯಫಲವನ್ನು ಕೊಡುವ ಸಂಸಾರನಿವರ್ತಕ ಧರ್ಮಗಳೆಂದು ಧರ್ಮವು ಎರಡು ವಿಧ. ಈ ಎರಡು ಫಲಗಳನ್ನು ಕೊಡುವ ಧರ್ಮವಾದುದರಿಂದ ಪರಮಾತ್ಮನು ಕೃತಾಕೃತನು. "अनित्यनित्यफलदौ प्रवर्तकनिवर्तकौ। ददौ यस्य स्वरूपं सः कृताकृत इतीरितः" इति निरुक्तिः। "लोकाध्यक्षः सुराध्यक्षो धर्माध्यक्षः कृताकृतः" वि० स०। (न०) 2. ಕಾರ್ಯ ಮತ್ತು ಕಾರಣ. कृतं कार्यं च अकृतं कारणं च अनयोः समाहारः। 3. ಕರಗಿಸಲ್ಪಟ್ಟ ಮತ್ತು ಕರಗಿಸಲ್ಪಡದಿರುವ

ಚಿನ್ನ ಮತ್ತು ಬೆಳ್ಳಿ. 4. ಆಭರಣವಾಗಿ ಮಾಡಲ್ಪಟ್ಟ ಮತ್ತು ಮಾಡಲ್ಪಡದಿರುವ ಚಿನ್ನ ಮತ್ತು ಬೆಳ್ಳಿ. "स्यात् कोशश्च हिरण्यं च हेमरूप्ये कृताकृते" अम०। (वि०) 5. ಭಾಗಶಃ ಮಾಡಲ್ಪಟ್ಟ ಭಾಗಶಃ ಮಾಡಲ್ಪಡದಿರುವ. कृतं चाकृतं च।

**कृतागम ಕೃತಾಗಮ** (पुं०) ವಿಷ್ಣು, ಪರಮಾತ್ಮ. कृतः आगमो वेदलक्षणो येन। "कृतागमो येन कृता आगमा वेदलक्षणाः" इति निरुक्तिः। "इन्द्रकर्मा महाकर्मा कृतकर्मा कृतागमः" वि० स०। "अस्य महतो भूतस्य निःश्वसितमेदद्यदृग्वेदो यजुर्वेदः सामवेदश्चेति" श्रुतिः।

**कृतागस् ಕೃತಾಗಸ್** (वि०) ಅಪರಾಧ ಮಾಡಿದವನು, ತಪ್ಪು ಮಾಡಿದವನು. कृतमागो येन। "कृतागाः कौटिल्यो भुजग इव निर्याय नगरात्" मुद्रा० ३-११।

**कृताङ्क ಕೃತಾಂಕ** (पुं०) 1. ನಾಲ್ಕು ಎಣಿಕೆಯುಳ್ಳ ಪಗಡೆಯ ದಾಳ. (वि०) 2. ಸಂಖ್ಯೆಹಾಕಿರುವ. 3. ಏನಾದರೊಂದು ಬರೆದು ಗುರುತುಮಾಡಲ್ಪಟ್ಟ. कृतोऽङ्को यस्य। 4. ಬರೆಹಾಕಲ್ಪಟ್ಟ. "कटयां कृताङ्को निर्वास्यः स्फिचं चैवावकर्तयेत्" मनु० ८-२८२।

**कृताञ्जलि ಕೃತಾಂಜಲಿ** (पुं०)1. ಮುಟ್ಟಿದರೆ ಮುನಿ ಯೆಂಬ ಒಂದು ಗಿಡ. कृतोऽञ्जलिरिव पत्रसंकोचोऽस्य। (वि०)2. ಭಕ್ತಿವಿನಯಗಳಿಂದ ನಮಸ್ಕರಿಸಲು ಕೈಜೋಡಿಸಿ ಕೊಂಡಿರುವ. कृतोऽञ्जलियेन। "स्वरूपमास्थाय ततो हुताशनस्त्रसन् वलत्कम्पकृताञ्जलिः सन्" कुमा० ९-६।

**कृतात्मन् ಕೃತಾತ್ಮನ್** (वि०)1. ಶುದ್ಧವಾದ ಆತ್ಮನುಳ್ಳ. 2. ಶಾಸ್ತ್ರಗಳಿಂದ ಪರಿಶುದ್ಧವಾದ ಹೃದಯವುಳ್ಳ. कृतः शुद्धः संस्कृतः आत्मा हृदयं यस्य।

**कृतात्यय ಕೃತಾತ್ಯಯ** (पुं०) ಮಾಡಿದ ಪುಣ್ಯಗಳ ನಾಶ, ಅನುಭವಿಸಿದ ಪುಣ್ಯಫಲಗಳ ನಾಶ. कृतस्यात्ययः। "कृतात्ययेऽनुशयवान्"।

**कृतादर ಕೃತಾದರ** (वि०) 1. ಪ್ರೀತಿ ತೋರಿಸಲ್ಪಟ್ಟ. ಪ್ರೀತಿಯಿಂದ ನೋಡಲ್ಪಟ್ಟ. 2. ಗೌರವಿಸಲ್ಪಟ್ಟ. कृतः आदरो यस्य।

**कृतानति ಕೃತಾನತಿ** (वि०)1. ನಮಸ್ಕಾರಮಾಡಿದವನು. ಗೌರವಿಸಿದವನು. कृता आनतिर्येन। "कृतानतिर्व्याहृत-सान्त्ववादे जातस्पृहः पुण्यजनः स जिष्णौ" किरा० ३-३१। 2. ನಮಸ್ಕರಿಸಲ್ಪಟ್ಟವನು. कृता आनतिर्यस्य।

**कृतानुकम्प ಕೃತಾನುಕಂಪ** (वि०) 1. ದಯೆತೋರಿಸಿದ, ಕರುಣೆತೋರಿಸಿದ. कृता अनुकम्पा येन। "कृतानुकम्पः त्रिदशेषु तेषु भूयोपि भूताधिपतिर्बभाषे" कुमा० १२-५३। 2. ದಯೆತೋರಿಸಲ್ಪಟ್ಟ. कृता अनुकम्पा यस्य।

**कृतानुकर ಕೃತಾನುಕರ** (वि०) ಒಬ್ಬ ಮಾಡಿದುದನ್ನು ಅನುಕರಿಸುವವನು, ಒಬ್ಬ ಮಾಡಿದಂತೆ ಮಾಡುವವನು. कृतमनुकरोति—अनु + डु कृञ् (करणे) "टः" (३-२-२०)।

**कृतानुकरण ಕೃತಾನುಕರಣ** (न०) ಒಬ್ಬ ಮಾಡಿದಂತೆ ಮಾಡುವುದು. कृतस्यानुकरणम्। अनु+डु कृञ् (करणे) भावे "ल्युट्" (३-३-११५)।

**कृतानुकार ಕೃತಾನುಕಾರ** (पुं०) 1. ಒಬ್ಬ ಮಾಡಿದಂತೆ ಮಾಡುವುದು, ಒಬ್ಬ ಮಾಡಿದುದನ್ನು ಅನುಕರಿಸುವುದು. कृतस्यानुकारः—अनु + डु कृञ् (करणे) "घञ्" (३-३-१८)। (वि०)2. ಅನುಕರಿಸಲ್ಪಟ್ಟ. कृतोऽनुकारो यस्य। "ददर्श गोपानुपधेनु पाण्डवः कृतानुकारानिव गोभिरार्जवे" किरा० ४-१३।

**कृतानुकृत ಕೃತಾನುಕೃತ** (न०) ಒಬ್ಬ ಮಾಡಿದಂತೆ ಮಾಡುವುದು. कृतस्यानुकृतम्।

**कृतानुव्याध ಕೃತಾನುವ್ಯಾಧ** (वि०) ಸಂಬಂಧಹೊಂದಿ ರುವ, ಬೆರೆತಿರುವ, ಒಟ್ಟಿಗೆ ಸೇರಿರುವ. कृतः अनुव्याधो येन। "मुखामोदं मदिरया कृतानुव्याधमुद्वमन्" माघ० २-२०।

**कृतान्त ಕೃತಾಂತ** (पुं०) 1. ಸಿದ್ಧಾಂತ, ತೀರ್ಮಾನ, ನಿರ್ಣಯ. कृतोऽन्तो येन। 2. ವಿಧಿ, ದೈವ, ಅದೃಷ್ಟ. "क्रूरस्तस्मिन्नपि न सहते संगमं नौ कृतान्तः" मेघ० २-४२। 3. ಯಮ. कृतोऽन्तो नाशो येन। "रज्जेव पुरुषं बध्वा कृतान्तः परिकर्षति" रामा०। 4. ಪಾಪ ಕಾರ್ಯ, ಅಮಂಗಳಕಾರ್ಯ. 5. ಶನಿಗ್ರಹ. "कृतान्तो यमसिद्धान्तदैवाकुशलकर्मसु" मेदि०। 6. ಶನಿವಾರ. "कृतान्तकुजयोवरि यस्य जन्मदिनं भवेत्"। 7. ಭರಣೀ ನಕ್ಷತ್ರ. 8. ಎರಡು ಸಂಖ್ಯೆ.

**कृतान्न ಕೃತಾನ್ನ** (न०) ಪಕ್ವಮಾಡಿದ ಅನ್ನ ರೊಟ್ಟಿ ಲಾಡು ಹೋಳಿಗೆ ಮೊದಲಾದುವು. कृतं पक्वं च तदन्नं च।

**कृतापराध ಕೃತಾಪರಾಧ** (वि०) ಅಪರಾಧಮಾಡಿದವನು, ತಪ್ಪುಮಾಡಿದವನು. कृतोऽपराधो येन। "नार्हति कृतापराधोऽप्युत्सवदिवसेषु परिजनो बन्धुम्" माल० ४-१६।

**कृताभिषेक ಕೃತಾಭಿಷೇಕ** (पुं०) 1. ಪಟ್ಟಾಭಿಷಿಕ್ತನಾದ ರಾಜಕುಮಾರ. कृतोऽभिषेको यस्य। (वि०) 2. ಪಟ್ಟಾಭಿಷೇಕ ಮಾಡಲ್ಪಟ್ಟ. स्त्रियाम् **-अभिषेका -ಅಭಿಷೇಕಾ**. "कृताभिषेका महिषी" अम०। 3. ಸ್ನಾನ ಮಾಡಿದ. कृतोऽभिषेको येन। "कृताभिषेकैर्दिव्यायां त्रिस्रोतसि च सप्तभिः" रघु० १०-६३। "कृताभिषेकां हुतजातवेदसं त्वगुत्तरासङ्गवतीमधीतिनीम्" कुमा० ५-१६।

**कृताभ्यनुज्ञ ಕೃತಾಭ್ಯನುಜ್ಞ** (वि०) 1. ಅನುಮತಿಕೊಡಲ್ಪಟ್ಟ, ಅಪ್ಪಣೆ ನೀಡಲ್ಪಟ್ಟ. कृता अभ्यनुज्ञा यस्य। "भ्रूसंज्ञयानेन कृताभ्यनुज्ञः सुरेश्वरं तं जगदीश्वरेण" कुमा० १२-७। 2. ಅನುಮತಿ ಕೊಟ್ಟವನು. कृता अभ्यनुज्ञा येन।

**कृताभ्यास ಕೃತಾಭ್ಯಾಸ** (वि०) ಅಭ್ಯಾಸಮಾಡಿದ, ಪಳಗಿದ, ಶಿಕ್ಷಣ ಪಡೆದ. कृतोऽभ्यासो येन।

**कृतारु ಕೃತಾರು** (पुं०) ಹಿಮಾಲಯದ ಎತ್ತರ ಪ್ರದೇಶದಲ್ಲಿ ವಾಸಮಾಡುವ ಸುಂದರವಾದ ಕೊಂಬುಗಳುಳ್ಳ ಎತ್ತಿನ ಆಕಾರದ ಬಾಲವಿಲ್ಲದ ಒಂದು ಜಾತಿಯ ಜಿಂಕೆ. "कुचारुश्चारुपुच्छः स्यात् सुविषाणो वृषाकृतिः। कृतारुस्तु स निष्पुच्छो जायते हिमवत्तटे" वैज०।

**कृतार्थ ಕೃತಾರ್ಥ** (वि०) 1. ಕಾರ್ಯವನ್ನು ಮಾಡಿದವನು, ಕರ್ತವ್ಯವನ್ನು ನೆರವೇರಿಸಿದವನು, ಮಾಡಬೇಕಾದುದನ್ನು ಮಾಡಿ ಪೂರಯಿಸಿದವನು. कृतोऽर्थो येन। "प्रत्यागतं त्वास्मि कृतार्थमेव स्तनोपपीडं परिरब्धुकामा" किरा० ३-५४। 2. ಸಫಲವಾದ, ಫಲಹೊಂದಿದ. "विलोकनेनैव तवामुना मुने कृतः कृतार्थोऽस्मि निबर्हितांहसा" माघ० १-२९।

**कृतार्थता ಕೃತಾರ್ಥತಾ** (स्त्री०) ಸಫಲನಾಗಿರುವಿಕೆ, ಫಲ ಕೈಗೂಡಿರುವಿಕೆ. कृतार्थस्य भावः "तल्" (५-१-११९)। "विशदोच्छ्वसितेन मेदिनी कथयामास कृतार्थतामिव" रघु० ८-३। "निरीक्ष्य मेने शरदः कृतार्थता" किरा० ४-३।

**कृतार्थन ಕೃತಾರ್ಥನ** (वि०) ಯಾಚನೆಮಾಡಿದವನು, ಬೇಡಿದವನು. कृता अर्थना येन। "कृतार्थनश्चाटुभिरिङ्गितैः पुरा परासि यः किञ्चनकुञ्चितभ्रुवा" नैष० १६-८८।

**कृतार्थनीय ಕೃತಾರ್ಥನೀಯ** (वि०) ಸಫಲನನ್ನಾಗಿ ಮಾಡಬೇಕಾದ, ಪ್ರಯೋಜನವುಳ್ಳವನನ್ನಾಗಿ ಮಾಡಬೇಕಾದ. कृतार्थ + तत्करोति णिच् "अनीयर्" (३-१-९६)। "त्रपामपाकृत्य मनाक्कुरु स्फुटं कृतार्थनीयः कतमः सुरोत्तमः" नैष० ९-५१।

**कृतार्थयत् ಕೃತಾರ್ಥಯತ್** (वि०) ಸಫಲನನ್ನಾಗಿ ಮಾಡುತ್ತಿರುವ, ಪ್ರಯೋಜನಹೊಂದಿದವನನ್ನಾಗಿ ಮಾಡುತ್ತಿರುವ. कृतार्थ+तत्करोति णिच् "शतृ" (३-२-१२४)। "कृतार्थयन्नर्थिजनाननारतं बभूव तस्यामरभूरुहः करः" नैष० १५-६८। स्त्रियाम् "ङीप्" (४-१-६)। **-यन्ती -ಯಂತೀ**. "इयं शिवाया नियतेरिवायतिः कृतार्थयन्ती जगतः फलैः क्रियाः" किरा० ४-२१।

**कृतार्थीकरण ಕೃತಾರ್ಥೀಕರಣ** (न०) ಸಫಲನನ್ನಾಗಿ ಮಾಡುವುದು. कृतार्थ + डु कृञ् (करणे) "च्विः" (५-४-५०)। दीर्घः (७-४-२६)। भावे "ल्युट्" (३-३-११५)।

**कृतार्थीकृत ಕೃತಾರ್ಥೀಕೃತ** (वि०) ಸಫಲನನ್ನಾಗಿ ಮಾಡಲ್ಪಟ್ಟ. कृतार्थ+डु कृञ् (करणे) "च्विः" (५-४-५०)। दीर्घः (७-४-२६)। कर्म० "क्तः" (३-२-१०२)।

**कृतालय ಕೃತಾಲಯ** (वि०) ಮನೆಮಾಡಿಕೊಂಡಿರುವ, ವಸತಿಯನ್ನು ಕಲ್ಪಿಸಿಕೊಂಡಿರುವ. कृतः आलयो येन।

**कृतावदान ಕೃತಾವದಾನ** (वि०) 1. ಪ್ರಸಿದ್ಧಕಾರ್ಯಗಳನ್ನು ಮಾಡಿರುವ, ಕೀರ್ತಿಬರುವ ಕೆಲಸಗಳನ್ನು ಮಾಡಿರುವ. कृतमवदानं येन। 2. ಕೆಲಸಮಾಡಿದವನು. "न तथा कृतवेदिनां करिष्यन् प्रियतामेति यथा कृतावदानः" किरा० १३-३२।

**कृतावधान ಕೃತಾವಧಾನ** (वि०) 1. ಎಚ್ಚರಿಕೆ ತೆಗೆದುಕೊಂಡಿರುವ, ಜಾಗರೂಕನಾಗಿರುವ. कृतमवधानं येन। 2. ಏಕಾಗ್ರಚಿತ್ತನಾದ, ಒಂದೇ ವಿಷಯದಲ್ಲಿ ನೆಟ್ಟ ಮನಸ್ಸುಳ್ಳ. "कृतावधानं जितबर्हिणध्वनौ सुरक्तगोपीजनगीतनिःस्वने" किरा० ४-३३।

**कृतावधि ಕೃತಾವಧಿ** (वि०) 1. ಅವಧಿ ನಿಶ್ಚಯಿಸಲ್ಪಟ್ಟ, ವಾಯಿದೆ ಕೊಡಲ್ಪಟ್ಟ, ಗಡು ನಿಗದಿಮಾಡಲ್ಪಟ್ಟ. कृतः अवधिर्यस्य। "अभियोग इमान् महीभुजो भवता तस्य कृतः कृतावधेः" किरा० २-४६। 2. ಎಲ್ಲೆ ನಿಗದಿ ಮಾಡಲ್ಪಟ್ಟ, ಗಡಿ ಗೊತ್ತುಮಾಡಲ್ಪಟ್ಟ.

**कृतावसक्थिक ಕೃತಾವಸಕ್ಥಿಕ** (वि०) ಕಾಲು ಮಡಿಸಿಕೊಂಡು ಬೆನ್ನು ಮತ್ತು ಮಂಡಿಗಳ ಸುತ್ತಲೂ ಬಟ್ಟೆಯನ್ನು ಕಟ್ಟಿ ಕುಳಿತುಕೊಂಡಿರುವವನು. कृता अवसक्थिका येन। "कृतावसक्थिकः कृतपृष्ठजानुजङ्घाबन्धः"।

**कृतास्त्र ಕೃತಾಸ್ತ್ರ** (वि०) ಬಾಣಗಳ ಸಂಧಾನ ಮತ್ತು ಪ್ರಯೋಗಗಳನ್ನು ಅಭ್ಯಾಸಮಾಡಿದವನು. ಬಾಣಪ್ರಯೋಗವನ್ನು ಚೆನ್ನಾಗಿ ಕಲಿತಿರುವವನು. कृतं शिक्षितमस्त्रं येन। "कृतहस्तः सुहस्तश्च कृतास्त्रः कृतपुङ्खकः" वैज०। "कृतास्त्रास्त्रविदां श्रेष्ठाः परस्परजयैषिणः" रामा०।

**कृताहार ಕೃತಾಹಾರ** (वि०) ಆಹಾರವನ್ನು ತೆಗೆದುಕೊಂಡ, ಊಟಮಾಡಿದ. कृतः आहारो येन। "देवादेशादेष वैशम्पायनः स्नातः कृताहारश्च देवपादमूलं प्रतीहार्यानीतः" काद०।

**कृति ಕೃತಿ** (स्त्री०) 1. ಕಾರ್ಯ, ಕೆಲಸ. डु कृञ् (करणे) "क्तिन्" (३-३-९४)। "जगतां कारकः कृष्णः कृतिर्मुररिपोरियम्"। 2. ಸೃಷ್ಟಿ, ನಿರ್ಮಾಣ. "कृतिः स्मरस्यैव न धातुरेषा नास्या हि शिल्पीतरकारुजेयः" नैष० १०-१३१। 3. ಕವಿರಚಿತವಾದ ಕಾವ್ಯ, ಪ್ರಬಂಧ. "भाससौमिल्लकविपुत्रादीनां प्रबन्धानतिक्रम्य वर्तमानकवेः कालिदासस्य कृतौ कथं बहुमानः?" माल० १। 4. ಇಪ್ಪತ್ತನೆಯ ಛಂದಸ್ಸು. "धृतिश्चातिधृतिश्चैव कृतिः प्रकृतिराकृतिः" वृ० र०। 5. ಇಪ್ಪತ್ತು ಸಂಖ್ಯೆ. 6. ಹಿಂಸೆ. कृञ् (हिंसायाम्) "क्तिन्" (३-३-९४)। "कृतिः करणहिंसयोः" मेदि०। 7. (ನಾಟಕದಲ್ಲಿ) ನಿರ್ವಹಣಸಂಧಿಯ ಒಂದು ಅಂಗ. ಮುಖ್ಯಪ್ರಯೋಜನ ಪಡೆದು ಮನಸ್ಸಿಗೆ ಸ್ಥೈರ್ಯ (ನೆಮ್ಮದಿ) ಉಂಟಾಗುವುದು ಕೃತಿ. "लब्धार्थशमनं कृतिः" सा० द० ६-१११। "एते भगवन्तो व्यासवाल्मीकिप्रभृतयोऽभिषेकं धारयन्तस्तिष्ठन्ति" वेणी० ६। अनेन प्राप्तराज्याभिषेकमङ्गलैः स्थिरीकरणं कृतिः" सा० द० ६। 8. ವಿಷ್ಣು, ಪರಮಾತ್ಮ. "यस्मात्प्रसन्नात्सुकृतं तेषां स कृतिरुच्यते" इति निरुक्तिः। "अनुत्तमो-दुराधर्षः कृतज्ञः कृतिरात्मवान्" वि० स०। 9. ಒಬ್ಬ ದೊರೆ. "सप्ताश्वमेधानाहृत्य राजसूयं च पार्थिवः कृतिर्नामाच्यवत्स्वर्गादसत्यवचनात्सकृत्" मार्कं०।

**कृतिकर ಕೃತಿಕರ** (पुं०) 1. ಇಪ್ಪತ್ತು ಕೈಗಳುಳ್ಳ ರಾವಣ. कृतिसंख्याः करा यस्य। (वि०) 2. ಕೆಲಸಮಾಡುವವನು. कृतेः करः।

**कृतिन् ಕೃತಿನ್** (वि०) 1. ಕಾರ್ಯಮಾಡಿದವನು, ಕೆಲಸವನ್ನು ನಡೆಸಿದವನು. कृतमनेन — कृत "इनिः" (५-२-८८)। "किमु चोदिताः प्रियहितार्थकृतः कृतिनो भवन्ति सुहृदः सुहृदाम्" माघ० ९-५७। 2. ಪುಣ್ಯಶಾಲಿ, ಅದೃಷ್ಟವಂತ. "करौ व्याधुन्वत्याः पिबसि रतिसर्वस्वमधरं वयं तत्त्वान्वेषान्मधुकर हतास्त्वं खलु कृती" शाकु० १-२१। "कृतिनः कार्तयुगेन कर्मणा ते" याद० १५-६५। 3. ಕುಶಲ. ಬುದ್ಧಿವಂತ. ಜಾಣ, ನಿಪುಣ. कृतं कर्म प्रशस्तमस्य "इनिः" (५-२-११५)। "क्षययुक्तिमुपेक्षते कृती कुरुते तत्प्रतिकारमन्यथा" किरा० २-९। 4 ಪಂಡಿತ, ಜ್ಞಾನಿ. ತಿಳಿವಳಿಕೆಯುಳ್ಳವನು. 5. ಸಮರ್ಥ. "आत्मना कृतिना च त्वमात्मन्येव प्रलीयसे" कुमा० २-१०।

**कृती — छेदने** (तुदा० पर० सक० से०)। कृन्तति। चकर्त। कर्तिता। कृन्ततु। अकृन्तत्। ಕತ್ತರಿಸು, ತುಂಡುಮಾಡು.

कर्मणि :— कृत्यते। कृत्यताम्। अकृत्यत। अकर्ति। ಇತ್ಯಾದಿ.

णिचि :— कर्तयति, —ते। अचीकृतत्, —त। अचकर्तत्, —त।

सनि :— चिकर्तिषति, चिकृत्सति।

कृत्सु :— कर्तितव्यम्। कर्तनीयम्। कृत्यम्। कृत्तः। कृत्तवान्। कृन्तन्, कृन्तन्ती। कर्तितुम्। कृत्तम्। कर्तनम्। कर्तित्वा। निकृत्य।

**कृती — वेष्टने** (रुधा० पर० सक० से०।)। कृणत्ति कृन्तः कृन्तन्ति। चकर्त। कृणत्तु। अकृणत्। कृन्त्यात्। ಆವರಿಸು, ಸುತ್ತುಗಟ್ಟು. ಉಳಿದೆಲ್ಲ ರೂಪಗಳೂ तुदा० कृती ಧಾತುವಿನಂತೆ ಆಗುವುವು.

**कृते ಕೃತೇ** (अव्य०) ನಿಮಿತ್ತಾರ್ಥಕವಾದ ಒಂದು ಅವ್ಯಯ. —ಓಸ್ಕರ. ಅದಕ್ಕಾಗಿ, ಅದಕ್ಕೋಸ್ಕರ. राज्ञः कृते ರಾಜನಿಗೋಸ್ಕರ. प्राणिनां कृते ಪ್ರಾಣಿಗಳಿಗೋಸ್ಕರ. "कृते कानिष्ठिनेयस्य ज्यैष्ठिनेयं विवासितम्" भट्टि० ५-८४।

**कृत्त ಕೃತ್ತ** (वि०) 1. ಕತ್ತರಿಸಲ್ಪಟ್ಟ. ತುಂಡುಮಾಡಲ್ಪಟ್ಟ. कृती (छेदने) "क्तः" (३-२-१०२)। "कृत्तैः कीर्णा मही रेजे दन्तैर्गात्रैश्च दन्तिनाम्" माघ० १९-८१। 2. ಸುತ್ತುವರಿಯಲ್ಪಟ್ಟ, ಬಳಸಲ್ಪಟ್ಟ. "कृत्तं छिन्ने वेष्टिते च" हेम०।

**कृत्तवत् ಕೃತ್ತವತ್** (वि०) 1. ಕತ್ತರಿಸಿದವನು, ತುಂಡುಮಾಡಿದವನು. कृती (छेदने) "क्तवतुः" (३-२-१०२)। 2. ಸುತ್ತುಗಟ್ಟಿದವನು. कृती (वेष्टने) "क्तवतुः" (३-२-१०२)।

**कृत्ति ಕೃತ್ತಿ** (स्त्री०) 1. ಜಿಂಕೆ ಹುಲಿ ಮೊದಲಾದುವುಗಳ ಚರ್ಮ. कृत्यते—कृती (छेदने) "क्तिन्" (३-३-९४)। 2. ಚರ್ಮ, ತೊಗಲು. "क्षणं क्षणोत्क्षिप्तगजेन्द्रकृत्तिना स्फुटोपमं भूतिसितेन शम्भुना" माघ० १-४। 3. ಭುಜಪತ್ರೆ ಗಿಡ. 4. ಕೃತ್ತಿಕಾನಕ್ಷತ್ರ. 5. ಮನೆ, ವಾಸಸ್ಥಳ. "कृत्तिश्चर्मत्वचोर्भूर्जे कृत्तिकायां द्वयं स्त्रियाम्" मेदि०।

**कृत्तिका ಕೃತ್ತಿಕಾ** (स्त्री०) ಚಂದ್ರನನ್ನು ಮದುವೆಯಾದ ದಕ್ಷಸುತೆಯರಾದ ಅಶ್ವಿನೀ ಮೊದಲಾದ ಇಪ್ಪತ್ತೇಳು ನಕ್ಷತ್ರಗಳಲ್ಲಿ ಮೂರನೆಯದು. ಕೃತ್ತಿಕಾನಕ್ಷತ್ರವು ಬಂಡಿಯಾಕಾರದ ಆರು ನಕ್ಷತ್ರಗಳ ಒಂದು ಪುಂಜ. ಈ ಆರು ನಕ್ಷತ್ರಗಳೇ ಆರು ಕೃತ್ತಿಕಾದೇವತೆಗಳು. ಈ ನಕ್ಷತ್ರವು ಅಗ್ನಿದೇವತಾಕವಾದುದು. ಇದರ ಮೊದಲನೆಯ ಪಾದವು ಮೇಷರಾಶಿಗೂ ಉಳಿದ ಮೂರು ಪಾದಗಳು ವೃಷಭರಾಶಿಗೂ ಸೇರಿದುವು. ಇದು ರಾಕ್ಷಸ ಗಣಕ್ಕೂ ಅಜ (ಆಡು) ಯೋನಿಗೂ ಸೇರಿದುದು. ಈ ನಕ್ಷತ್ರದಲ್ಲಿ ಹುಟ್ಟಿದವರಿಗೆ ಸೂರ್ಯದಶೆಯು ಪ್ರಾರಂಭವಾಗುವುದು. ಈ ದಶೆಯ ಪ್ರಮಾಣ ಆರು ವರ್ಷಗಳು. ಸ್ಕಂದಕುಮಾರನಿಗೆ ಸ್ತನ್ಯಪಾನ ಮಾಡಿಸಲು ಇಂದ್ರಾದಿ ದೇವತೆಗಳು ಈ ಆರು ಕೃತ್ತಿಕಾದೇವತೆಗಳನ್ನು ಕಳುಹಿಸಿದರು. ಕುಮಾರನು ಆರು ಮುಖಗಳಿಂದ ಇವರಲ್ಲಿ ಸ್ತನ್ಯಪಾನ ಮಾಡಿದುದರಿಂದ **"ಷಣ್ಮುಖ"**ನೆಂದೂ ಕೃತ್ತಿಕಾ ದೇವತೆಗಳು ಬಂದು ಪೋಷಿಸಿದುದರಿಂದ **"ಕಾರ್ತಿಕೇಯ"**ನೆಂದೂ ಹೆಸರಾಯಿತು. "प्राप्याकृतिं कामपि षड्भिरेत्य निषेव्यमाणः खलु कृत्तिकाभिः" कुमा० ११-२। ತಾವು ಸ್ತನ್ಯಪಾನಮಾಡಿಸಿ ಪೋಷಿಸಿದುದರಿಂದ ತಮ್ಮ ಮಗನೆಂದು ಪ್ರಸಿದ್ಧಿಬರಬೇಕೆಂದು ಕೇಳಿಕೊಂಡುದರಿಂದ ಕಾರ್ತಿಕೇಯನೆಂದು ಪ್ರಸಿದ್ಧಿಯಾಯಿತು. "तं कुमारं ततो जातं दृष्ट्वा सेन्द्रा मरुद्गणाः। तदा क्षीरप्रदानार्थं कृत्तिकाः संन्ययोजयन्। ताः क्षीरं तस्य देवस्य समयेन ददुस्तदा। स्यादस्माकमयं पुत्रः ख्यातो नाम्नेति राघव। अन्योन्यं पिबतस्तासां तनयस्य मुखानि षट्। समभूवन् महाबाहो षण्मुखस्तेन विश्रुतः। ततस्ता देवता ऊचुः कार्तिकेय इति प्रभुः। पुत्रोऽयं जगति ख्यातो भविष्यति न संशयः" रामा० बाल०।

**कृत्तिवास ಕೃತ್ತಿವಾಸ** (पुं०) ಮಹಾದೇವ, ಗಜಚರ್ಮವನ್ನು ಧರಿಸಿದ ಪರಮೇಶ್ವರ. कृत्ति गजचर्म वस्ते—वस (आच्छादने) "अण्" (३-२-१)।

**कृत्तिवासस् ಕೃತ್ತಿವಾಸಸ್** (पुं०) ಗಜಚರ್ಮವೇ ವಸ್ತ್ರವಾಗಿ ಉಳ್ಳ ಪರಮೇಶ್ವರ, ಪರಶಿವ. कृत्तिः वासो यस्य। [ಮಹಿಷಾಸುರನ ಮಗನಾದ ಗಜಾಸುರನು ಉಗ್ರ ತಪಸ್ಸು ಮಾಡಿ ಪರಮೇಶ್ವರನನ್ನು ಮೆಚ್ಚಿಸಿ ವರವನ್ನು ಪಡೆದು ದೇವತೆಗಳನ್ನು ಪೀಡಿಸತೊಡಗಿದನು. ಇವನ ಬಾಧೆಯನ್ನು ತಡೆಯಲಾರದ ದೇವತೆಗಳು ಪರಮೇಶ್ವರನಲ್ಲಿ ಮೊರೆಯಿಟ್ಟರು. ಪರಶಿವನು ಈ ಅಸುರನನ್ನು ಕೊಲ್ಲಲು ಬಂದಾಗ ಅಸುರನು "ನಿನ್ನಿಂದಲೇ ನಾನು ಸಾಯಬೇಕೆಂದು ದೇವತೆಗಳನ್ನು ಪೀಡಿಸಿದೆನು. ನನ್ನನ್ನು ಕೊಂದು ನನ್ನ ಚರ್ಮವನ್ನು ನೀನು ಧರಿಸಿ **'कृत्तिवासस्'** ಎಂಬ ಹೆಸರನ್ನು ಹೊಂದಬೇಕು" ಎಂದು ಕೇಳಿಕೊಳ್ಳಲು ಈಶ್ವರನು ಅವನನ್ನು ಕೊಂದು ಗಜಚರ್ಮಧಾರಿಯಾದನು.] मत्स्यपु०। "एकैश्वर्ये स्थितोऽपि प्रणतबहुफले यः स्वयं कृत्तिवासाः कान्तासंमिश्रदेहोऽप्यविषयमनसां यः परस्ताद्यतीनाम्" माल० १-१।

**कृत्तिवासेश्वर ಕೃತ್ತಿವಾಸೇಶ್ವರ** (पुं०) ಕಾಶಿಯಲ್ಲಿರುವ ಒಂದು ಶಿವಲಿಂಗ.

**कृत्नु ಕೃತ್ನು** (पुं०) 1. ಶಿಲ್ಪಿ, ಚಿತ್ರಗಾರ. डु कृञ् (करणे) "क्त्नुः" (उ० ३-३०)। 2. ದಕ್ಷ, ಸಮರ್ಥ. 3. ಜಾಣ, ಕುಶಲ.

**कृत्य ಕೃತ್ಯ** (न०) 1. ಕಾರ್ಯ, ಕೆಲಸ. डु कृञ् (करणे) "क्यप्" (३-१-११०)। 2. (ವ್ಯಾಕರಣದಲ್ಲಿ) तव्य, अनीयर्, यत्, क्यप्, ण्यत् ಮೊದಲಾದ ಪ್ರತ್ಯಯಗಳು. "कृत्याः" पा० सू० ३-१-९५। 3. ಕರ್ತವ್ಯ, ಅವಶ್ಯವಾಗಿ ಮಾಡಬೇಕಾದ ಕಾರ್ಯ, ವೇದವಿಹಿತ ಕರ್ಮಾಚರಣೆ. (वि०) 4. ಕುಪಿತನಾದ, ಕೋಪಗೊಂಡ. "कृत्या क्रियादेवतयोः कार्ये क्ली कुपिते त्रिषु" वैज०।

**कृत्यज्ञ ಕೃತ್ಯಜ್ಞ** (वि०) ಅವಶ್ಯವಾಗಿ ಮಾಡಬೇಕಾದುದನ್ನು ತಿಳಿದಿರುವ, ಕರ್ತವ್ಯವನ್ನು ಅರಿತಿರುವ. कृत्यं जानाति — ज्ञा (अवबोधने) "कः" (३-२-३)।

**कृत्यवत् ಕೃತ್ಯವತ್** (वि०) ಕಾರ್ಯವುಳ್ಳವನು, ಅವಶ್ಯವಾದ ಕಾರ್ಯವನ್ನು ಹೊಂದಿರುವವನು. कृत्यमस्यास्ति "मतुप्" (५-२-९४)। स्त्रियाम् "ङीप्" (४-१-६)। **-वती – ವತೀ**

**कृत्यवर्त्मन् ಕೃತ್ಯವರ್ತ್ಮನ್** (न०) ಕಾರ್ಯವಿಧಾನಮಾರ್ಗ, ಕಾರ್ಯವನ್ನು ಸಾಧಿಸುವ ಉಪಾಯ, ಕಾರ್ಯವನ್ನು ನಡೆಸುವ ರೀತಿ. कृत्यस्य वर्त्म। "स तु तत्र विशेषदुर्लभः सदुपन्यस्यति कृत्यवर्त्म यः" किरा० २-३।

**कृत्यवस्तु ಕೃತ್ಯವಸ್ತು** (न०) ಅವಶ್ಯವಾಗಿ ಮಾಡಬೇಕಾದ ಕೆಲಸ. कृत्यस्य वस्तु। "शासनेऽपि गुरुणि व्यवस्थितं कृत्यवस्तुषु नियुङ्क्ष्व कामतः" माघ० १४-१५।

**कृत्यविद् ಕೃತ್ಯವಿದ್** (वि०) ಕೆಲಸವನ್ನು ಬಲ್ಲವನು, ಕಾರ್ಯದ ವಿಧಾನವನ್ನು ಅರಿತಿರುವವನು. कृत्यं वेत्ति — विद (ज्ञाने) "क्विप्" (३-२-६१)। "कृत्वा कृत्यविदस्तीर्थेष्वन्तः प्रणिधयः पदम्" माघ० २-१११।

**कृत्या ಕೃತ್ಯಾ** (स्त्री०) 1. ಕಾರ್ಯ, ಕೆಲಸ. 2. ಆಭಿಚಾರಿಕ ಕಾರ್ಯದ ದೇವತೆ, ಶೂನ್ಯದೇವತೆ, ಮಾಟದ ಬೊಂಬೆ. ದ್ವೇಷಿಗಳು ಯಾರನ್ನಾದರೂ ನಾಶಪಡಿಸಬೇಕಾದರೆ ಮಾಟಮಾಡಿಸಿ ಶೂನ್ಯದೇವತೆ (ಮಾಟದ ಬೊಂಬೆ) ಯನ್ನು ಪ್ರಯೋಗಿಸುವರು. ಸಂಬಂಧಪಟ್ಟವರು ಅದರಿಂದ ಬಹಳ ಕಷ್ಟನಷ್ಟಗಳನ್ನು ಅನುಭವಿಸಬೇಕಾಗಬಹುದು. ತಕ್ಕ ಪ್ರತೀಕಾರ ನಡೆಸಿ ಅದರಿಂದ ಪಾರಾಗಲೂಬಹುದು. "कृत्या क्रियादेवतयोः" वैज०।

**कृत्याकृत्य ಕೃತ್ಯಾಕೃತ್ಯ** (न०) ಮಾಡಬೇಕಾದ ಮತ್ತು ಮಾಡಬಾರದ ಕೆಲಸ. कृत्यं च अकृत्यं च अनयोः समाहारः।

**कृत्रिम ಕೃತ್ರಿಮ** (पुं०) 1. ಹನ್ನೆರಡು ವಿಧ ಪುತ್ರರಲ್ಲೊಬ್ಬ; ತಾಯಿತಂದೆಗಳ ಐಹಿಕ-ಪಾರಲೌಕಿಕಹಿತಾಸಕ್ತಿಯುಳ್ಳವನಾಗಿ ಪುತ್ರನ ಗುಣಗಳಿಂದ ಕೂಡಿದವನು ಕೃತ್ರಿಮ ಪುತ್ರನು. "सदृशं तु प्रकुर्याद्यं गुणदोषविचक्षणम्। पुत्रं पुत्रगुणैर्युक्तं स विज्ञेयश्च कृत्रिमः" मनु० ९-१६९। (1) औरसः, (2) क्षेत्रजः, (3) दत्तः, (4) कृत्रिमः, (5) गूढोत्पन्नः, (6) अपविद्धः, (7) कानीनः, (8) सहोढः, (9) क्रीतः, (10) पौनर्भवः, (11) स्वयंदत्तः ಮತ್ತು (12) शौद्रः ಇವರು ಹನ್ನೆರಡು ವಿಧ ಪುತ್ರರು (ಮಕ್ಕಳು). (न०) 2. ಬಿಡ್ಲವಣ. 3. ಕಾಚಲವಣ. 4. ರಸಾಂಜನ, (वि०) 5. ಕಾರ್ಯದಿಂದ ಉಂಟಾದ, ಉಪಾಧಿಯಿಂದ ಹುಟ್ಟಿದ, ಅಸ್ವಾಭಾವಿಕವಾದ. कृत्या निर्वृत्तम् — डुकृञ् (करणे) "क्त्रिः" (३-३-८८)। "मप्" (४-४-२०)। "सखा गरीयान् शत्रुश्च कृत्रिमस्तौ हि कार्यतः" माघ० २-३६।

**कृत्रिमपुत्र ಕೃತ್ರಿಮಪುತ್ರ** (पुं०) ಹನ್ನೆರಡು ವಿಧ ಪುತ್ರರಲ್ಲಿ ನಾಲ್ಕನೆಯವನು. कृत्रिमश्चासौ पुत्रश्च। ["कृत्रिम" ಪದದಲ್ಲಿ ನೋಡಿ.] स्वार्थे "कः". **–पुत्रकः –ಪುತ್ರಕಃ.** ಪುತ್ಥಳಿಕೆ, ಬಟ್ಟೆಯಿಂದ ಮಾಡಿದ ಬೊಂಬೆ. "मन्दाकिनीसैकतवेदिकाभिः सा कन्दुकैः कृत्रिमपुत्रकैश्च" कुमा० १-२९।

**कृत्वा ಕೃತ್ವಾ** (अव्य०) 1. ಮಾಡಿ. ನಿರ್ಮಿಸಿ. ರಚಿಸಿ, ಸೃಷ್ಟಿಸಿ, डु कृञ् (करणे) "क्त्वा" (३-४-२१)। "कृत्वा दृशौ ते बहुवर्णचित्रे किं कृष्णसारस्य तयोर्मृगस्य" नैष० ८-३८। 2. ಹಿಂಸಿಸಿ, ಪೀಡಿಸಿ, ತೊಂದರೆ ಪಡಿಸಿ. कृञ् (हिंसायाम्) "क्त्वा" (३-४-२१)।

**कृत्स्न ಕೃತ್ಸ್ನ** (न०) 1. ಜಲ, ನೀರು. 2. ಉದರ, ಹೊಟ್ಟೆ. कृती (छेदने) "क्स्नः" (उ० ३-१७)। (वि०) 3. ಎಲ್ಲಾ, ಸಮಸ್ತ, ಸಕಲ, ಸಂಪೂರ್ಣ. "कृत्स्नापि सा तव रुचा विजितश्रि यस्याः" नैष० ११-८६।

**कृत्स्नविद् ಕೃತ್ಸ್ನವಿದ್** (वि०) ಸರ್ವಜ್ಞ, ಸಕಲವನ್ನೂ ತಿಳಿದವನು, ಎಲ್ಲವನ್ನೂ ಬಲ್ಲವನು. कृत्स्नं वेत्ति — विद (ज्ञाने) "क्विप्" (३-२-६१)। "तानकृत्स्नविदो मन्दान् कृत्स्नविन्न विचालयेत्" गीता ३-२९।

**कृदन्त ಕೃದಂತ** (पुं०) ಧಾತುವಿಗೆ कृत् ಪ್ರತ್ಯಯಗಳನ್ನು ಸೇರಿಸುವುದರಿಂದ ನಿಷ್ಪನ್ನವಾದ ಶಬ್ದ. कृत् अन्ते यस्य।

**कृदर ಕೃದರ** (पुं०) 1. ಕಣಜ, ಉಗ್ರಾಣ. 2. ಗೃಹ, ಮನೆ. कृ + दृ (विदारण) "अरः" (उ० ५-४१)। निपा०।

**कृन्तत्र ಕೃಂತತ್ರ** (न०) ಲಾಂಗಲ, ನೇಗಿಲು. कृती (छेदने) "क्त्रः" (उ० ३-१०९)।

**कृन्तन ಕೃಂತನ** (न०) 1. ಕತ್ತರಿಸುವುದು, ತುಂಡುಮಾಡುವುದು. कृती (छेदने) "ल्युट्" (३-३-११५)। मुम् बाहु०। "कृन्तनं नखकेशानां छेदनं च वनस्पतेः। शावाशौचे न कर्तव्यं पठनं पाठनं तथा" नारदः। (वि०) 2. ಕತ್ತರಿಸುವವನು, ತುಂಡುಮಾಡುವವನು. कृती कर्त० "ल्युः" (३-१-१३४)। 3. ಕತ್ತರಿಸುವ ಸಾಧನ. कृती कर० "ल्युट्" (३-३-११७)। स्त्रियाम् "ङीप्" (४-१-१५)। **–नी –ನೀ.**

**कृप ಕೃಪ** (पुं०) ಕೃಪಾಚಾರ್ಯ, ಅಶ್ವತ್ಥಾಮನ ಸೋದರಮಾವ, ಗೌತಮವಂಶದ ಶಾರದ್ವತಋಷಿಯ ಮಗ. ಈ ಆಚಾರ್ಯರು ಏಳು ಮಂದಿ ಚಿರಂಜೀವಿಗಳಲ್ಲೊಬ್ಬರು. "अश्वत्थामा बलिर्व्यासो हनूमांश्च विभीषणः। कृपः परशुरामश्च सप्तैते चिरजीविनः"। [ಶಾರದ್ವತಋಷಿಯು ತಪಸ್ಸಿನಲ್ಲಿದ್ದಾಗ ಅವರ ತಪೋಭಂಗಕ್ಕಾಗಿ ಇಂದ್ರನಿಂದ ಕಳುಹಿಸಲ್ಪಟ್ಟ ಒಬ್ಬ ಅಪ್ಸರಸ್ಸನ್ನು ಕಂಡು ಮೋಹಗೊಂಡುದುದರಿಂದ ಅವರ ವೀರ್ಯಸ್ಖಲನವಾಗಿ ಅದನ್ನು ಒಂದು ಜೊಂಡುವನದಲ್ಲಿ ಬಿಟ್ಟರು. ಅದರಿಂದ ಒಂದು ಗಂಡು ಮತ್ತು ಒಂದು ಹೆಣ್ಣು ಶಿಶುಗಳು ಹುಟ್ಟಿದುವು. ಅರಣ್ಯಕ್ಕೆ ಬೇಟೆಗೆ ಬಂದಿದ್ದ ಶಂತನು

ರಾಜನು ಈ ಶಿಶುಗಳನ್ನು ತೆಗೆದುಕೊಂಡು ಬಂದು ಕೃಪೆಯಿಂದ ಸಲಹಿದುದರಿಂದ ಕೃಪ ಮತ್ತು ಕೃಪಿಯೆಂದು ಹೆಸರಿಟ್ಟನು. ಬಳಿಕ ಶಾರದ್ವತಋಷಿಯು ಬಂದು ತನ್ನ ಮಕ್ಕಳೆಂದು ಹೇಳಿ ಕರೆದುಕೊಂಡು ಹೋಗಿ ಕೃಪನಿಗೆ ಧನುರ್ವಿದ್ಯಾಭ್ಯಾಸಮಾಡಿಸಿದರು. ಬಳಿಕ ಕೃಪಾಚಾರ್ಯರು ಕೌರವ ಪಾಂಡವರಿಗೆ ಧನುರ್ವಿದ್ಯಾಭ್ಯಾಸ ಮಾಡಿಸಿದರು. ಇವರು ರುದ್ರಾಂಶಸಂಭೂತರು. "यस्तु राजन् कृपो नाम ब्रह्मर्षिरभवत् क्षितौ। रुद्राणान्तु गणाद्विद्धि संभूतममितौजसम्" भा० आदि० ३७-७७। ಕೃಪಿಯನ್ನು ದ್ರೋಣಾಚಾರ್ಯರು ಮದುವೆಯಾದರು. ಕೃಪಾಚಾರ್ಯರು ಕೌರವರ ಪಕ್ಷ ಸೇರಿ ಪಾಂಡವರೊಡನೆ ಯುದ್ಧಮಾಡಿ ಅರ್ಜುನನಿಂದ ಪರಾಜಿತರಾದರು.]

**कृपण ಕೃಪಣ** (पुं०) 1. ಕೃಮಿ, ಹುಳು. कृपू (सामर्थ्ये) "क्युन्" बाहु०। (वि०) 2. ಲೋಭಿ, ಜಿಪುಣ. "कृपणेन समो दाता न कश्चिद्भुवि जायते। अनश्नन्नेव वित्तानि यः परेभ्यः प्रयच्छति"। 3. ವಿವೇಕಶೂನ್ಯ, ಮನೋಬಲವಿಲ್ಲದವನು. "कामार्ता हि प्रकृतिकृपणाश्चेतनाचेतनेषु" मेघ० १-५। 4. ದರಿದ್ರ, ಬಡವ. "ततः स पुरुषव्याघ्रस्तद्धनं सहलक्ष्मणः। द्विजेभ्यो बालवृद्धेभ्यः कृपणेभ्यो ह्यदापयत्" रामा०। 5. ದೀನ, ದೊಡ್ಡ ಕಷ್ಟದಲ್ಲಿ ಸಿಕ್ಕಿರುವವನು, ದುಃಖವನ್ನು ಅನುಭವಿಸುತ್ತಿರುವವನು. "राजन्नपत्यं रामस्ते पाल्याश्च कृपणा जनाः" उ० रा० ४-२५। 6. ನೀಚ, ಕೆಟ್ಟವನು. "किन्त्वङ्गीकृतमुत्सृजन् कृपणवत् श्लाघ्यो जनो लज्जते निर्वाहः प्रतिपन्नवस्तुषु सतामेतद्धि गोत्रव्रतम्" मुद्रा० २-१८। 7. ದಯನೀಯ, ದಯೆತೋರಿಸಲು ಯೋಗ್ಯನಾದ. "कृपाश्रये यः कृपणे पतत्रिणि" नैष० १-१३२। 8. ಪಶುವಿನಂತೆ ಇತರರ ಸೇವೆಮಾಡುವವನು, ಆತ್ಮಸ್ವರೂಪವನ್ನು ತಿಳಿಯದೆ ಇತರರಿಗಾಗಿಯೇ ಜೀವಿಸಿರುವವನು.

ಆತ್ಮಜ್ಞಾನವಿಲ್ಲದವರು ಈ ಲೋಕದಲ್ಲಿ ದೇವತೆಗಳಿಗಾಗಿ ಕರ್ಮಾನುಷ್ಠಾನಮಾಡುತ್ತ ದಾಸರಾಗಿರುತ್ತಾರೆ. ಈ ಕರ್ಮಾನುಷ್ಠಾನದಿಂದ ಸ್ವರ್ಗಪ್ರಾಪ್ತಿಯಾದರೂ ಅಲ್ಲೂ ಇವರು ದೇವತೆಗಳ ಭೋಗಸಾಮಗ್ರಿಗಳಾಗಿರುತ್ತಾರೆ. "एतदक्षरं गार्ग्य विदित्वाऽस्माल्लोकात् प्रैति, सकृपणः" बृहदा०। कृपणः परिक्रीत इव दासादिः भाष्यम्।

**कृपणत्व ಕೃಪಣತ್ವ** (न०) 1. ಲೋಭಿತನ, ಕಾರ್ಪಣ್ಯ, ಜಿಪುಣತನ. कृपणस्य भावः "त्वः" (५-१-११९)। 2. ದಾರಿದ್ರ್ಯ, ಬಡತನ. 3. ನೀಚತನ. 4. ಅಜ್ಞಾನಿಯಾಗಿರುವಿಕೆ, ತಿಳಿಗೇಡಿತನ.

**कृपणिन् ಕೃಪಣಿನ್** (पुं० ब० व०) ಲೋಭಿಗಳುಳ್ಳ ದೇಶ, ಜಿಪುಣರಿಂದ ಕೂಡಿದ ದೇಶ. कृपणाः सन्त्यत्र देशे। "इनिः" (५-२-१३१)।

**कृपा ಕೃಪಾ** (स्त्री०) 1. ದಯೆ, ಕನಿಕರ, ಕಷ್ಟವನ್ನು ಪರಿಹರಿಸಿ ಹಿತವನ್ನು ಮಾಡುವ ಬುದ್ಧಿ, ಮರುಕ. कृपू (सामर्थ्ये) "अङ्" (३-३-१०४)। "कृपा नृपाणामुपरि क्वचिन्न ते नतेन हा हा शिरसा रसादृशाम्" नैष० १२-४३। 2. ಅನುಗ್ರಹಿಸುವ ಇಚ್ಛೆ. "तपःफलत्वेन हरेः कृपेयमिमं तपस्येव जनं नियुङ्क्ते" नैष० ६-९३।

**कृपाकर ಕೃಪಾಕರ** (वि०) ದಯೆತೋರಿಸುವ, ಕನಿಕರಪಡುವ. कृपायाः करः।

**कृपामय ಕೃಪಾಮಯ** (वि०) ದಯೆಯಿಂದ ತುಂಬಿದ, ಕನಿಕರದಿಂದ ಕೂಡಿದ. कृपायाः प्रचुरः "मयट्" (५-४-२१)। स्त्रियाम् "ङीप्" (४-१-१५)। **-मयी -ಮಯೀ.** "अथान्यमुद्दिश्य नृपं कृपामयी मुखेन तद्दिङ्मुखसंमुखेन सा" नैष० १२-५२।

**कृपाण ಕೃಪಾಣ** (पुं०) 1. ಖಡ್ಗ, ದೊಡ್ಡ ಕತ್ತಿ. कृपां नुदति — णुद (प्रेरणे) "ड:" (३-२-१०१)। "दैवाद्यदा प्रवितरन्ति न ते तदैव नेदंकृपा निजकृपाणकरग्रहाय" नैष० ११-१२६। (स्त्री०) **-णी -ಣೀ.** 2. ಚಾಕು, ಸಣ್ಣಕತ್ತಿ. 3. ಕತ್ತರಿ. "कृपाणः खड्गे छुरिकाकर्तर्योरपि योषिति" मेदि०। स्वार्थे "कः"। **कृपाणकः ಕೃಪಾಣಕಃ.** स्त्रियाम् "टाप्"। **कृपाणिका ಕೃಪಾಣಿಕಾ.** ಖಡ್ಗ, ಕತ್ತಿ. "कृपाणिकाभिः कुकुराः कम्पिताभिरकम्पयन्" याद० २२-१३४।

**कृपालु ಕೃಪಾಲು** (वि०) ದಯಾಶೀಲ, ಕನಿಕರವುಳ್ಳವನು. कृपां लाति — ला (आदाने) "डुः" (वा० ३-२-१८०)।

**कृपी ಕೃಪೀ** (स्त्री०) ಶಾರದ್ವತಋಷಿಯ ಮಗಳು, ದ್ರೋಣಾಚಾರ್ಯರ ಹೆಂಡತಿ, ಅಶ್ವತ್ಥಾಮನ ತಾಯಿ. ["कृप" ಪದದಲ್ಲಿ ನೋಡಿ.]

**कृपीट ಕೃಪೀಟ** (न०) 1. ಉದರ, ಹೊಟ್ಟೆ. 2. ಜಲ, ನೀರು. कृपू (सामर्थ्ये) "कीटन्" (उ० ४-१६४)। "कृपीटं कुक्षिवारिणोः" सि० कौ०। "कृपीटं चोदरे जले" हेम०। 3. ಸೌದೆ. 4. ಅರಣ್ಯ, ಕಾಡು.

**कृपीटपाल ಕೃಪೀಟಪಾಲ** (पुं०) 1. ಸಮುದ್ರ, ಕಡಲು. कृपीटं पालयति — पाल (रक्षणे) "अण्" (३-२-१)।

2. ದೋಣಿ ನಡೆಸುವ ಹುಟ್ಟುಗೋಲು. "कृपीटपाल उद्दिष्टः केनिपातसमुद्रयोः" मेदि०। 3. ವಾಯು, ಗಾಳಿ.

**कृपीटयोनि ಕೃಪೀಟಯೋನಿ** (ಪುಂ०) ಅಗ್ನಿ, ಬೆಂಕಿ. कृपीटस्य जलस्य योनिः। "किंचित्कृपीटयोनिं तं दिवस्पतिरभाषत" कुमा० १०-१६। "आकाशादग्निः। अग्नेरापः" श्रुतिः।

**कृपू – सामर्थ्ये** (भ्वा० आत्म० अक० वेट्) कल्पते। चक्लृपे। कल्प्ता, कल्पिता। कल्प्स्यति, कल्प्स्यते, कल्पिष्यते। कल्पताम्। अकल्पत। कल्पेत। कल्पिषीष्ट। ಇತ್ಯಾದಿ. ಕಲ್ಪಿಸು, ಏರ್ಪಡಿಸು, ಸಿದ್ಧಪಡಿಸು. "कल्पिष्यते हरेः प्रीतिर्लङ्का चोपहनिष्यते" भट्टि० १६-१२।

**भावे :**—क्लृप्यते। चक्लृपे। कल्प्ता, कल्पिता। कल्प्स्यते, कल्पिष्यते। क्लृप्यताम्। अक्लृप्यत। ಇತ್ಯಾದಿ.

**णिचि :**—कल्पयति, कल्पयते। कल्पयां चकार, –चक्रे, –बभूव, –आस। कल्पयिता, कल्पिता। कल्पयिष्यति, –ते। कल्पयतु, –ताम्। अकल्पयत्, –त। कल्पयेत्, –त। अचकल्पत्, –त। अचीक्लृपत्, अचीक्लृपत।

**ण्यन्तात् कर्मणि :**—कल्प्यते। कल्पयां चक्रे, –बभूवे, –आसे। कल्पिता, कल्पयिता। कल्प्यताम्। अकल्प्यत। ಇತ್ಯಾದಿ.

**कृत्सु :**—कल्पितव्यम्, कल्प्तव्यम्। कल्पनीयम्। कल्प्यम्। क्लृप्तः। क्लृप्तवान्। कल्पमानः। कल्पितुम्, कल्प्तुम्। क्लृप्तम्। कल्पनम्। कल्पित्वा, क्लृप्त्वा। परिक्लृप्य।

**ಈ ಧಾತುವಿಗೆ ಉಪಸರ್ಗಗಳ ಯೋಗದಿಂದ ಉಂಟಾಗುವ ಅರ್ಥಭೇದಗಳು :**

**(1) अनु + कृपू** = अनुकल्पः। ಮುಖ್ಯವಾದುದಕ್ಕಿಂತಲೂ ಹೀನವಾದ ನಿಯಮ, ಗೌಣ ವಿಧಿ.

**(2) अव + कृपू** = अवक्लृप्तिः। ಅವಧಾರಣ, ನಿಶ್ಚಯ.

**(3) आ + कृपू** = आकल्पः। ಭೂಷಣ, ಅಲಂಕಾರ, ಒಡವೆ. "अवधिं दर्शनीयानामाकल्पमनघं दिवः" याद० १६-१८।

**(4) उप+कृपू** = उपकल्पनम्। ಸಿದ್ಧಪಡಿಸುವುದು.

**(5) प्र+कृपू**=प्रकल्पनम्। 1. ಸಿದ್ಧಪಡಿಸುವುದು. 2. ಉಂಟು ಮಾಡುವುದು.

**(6) वि + कृपू** = विकल्पः। 1. ಸಂಶಯಪಡು, ಸಂದೇಹಿಸು. "रात्रिंदिवविभागेषु यदादिष्टं महीक्षिताम्। तत्सिषेवे नियोगेन स विकल्पपराङ्मुखः" रघु० १७-४९। 2. ಬದಲಾವಣೆಮಾಡು, ಪಕ್ಷಾಂತರವನ್ನು ಅಂಗೀಕರಿಸು, ಎರಡರಲ್ಲಿ ಯಾವುದಾದರೊಂದನ್ನು ಮಾಡು. "तस्य दण्डविकल्पः स्यात् यथेष्टं नृपतेस्तथा" मनु० ९-२२८।

**(7) सम् + कृपू** = संकल्पः। ಮನೋವ್ಯಾಪಾರ, ಹೀಗೆ ಮಾಡುವೆನೆಂಬ ನಿರ್ಣಯರೂಪವಾದ ಮನಸ್ಸಿನ ವ್ಯಾಪಾರ. "संकल्पितं प्रथममेव मया तवार्थे भर्तारमात्मसदृशं सुकृतैर्गता त्वम्" शाकु० ४-१२।

**कृमि ಕೃಮಿ** (ಪುಂ०) 1. ಹುಳು, ಜಂತು. क्रामति – क्रमु (पादविक्षेपे) "इत्" (उ० ४-१२१)। संप्र०। "कृमिकीटपतङ्गांश्च यूकामक्षिकमत्कुणम्" मनु० १-४०। 2. ಅರಗು. 3. ಗರ್ದಭ, ಕತ್ತೆ. (ವಿ०) 4. ಹುಳುಗಳಿಂದ ಕೂಡಿದ. "कृमिर्ना क्रिमिवत् कीटे लाक्षायां कृमिले खरे" मेदि०। पुरीषजः, कफजः ಮತ್ತು रक्तजः ಎಂದು ಮೂರು ಬಗೆಯ ಕೃಮಿಗಳು ಅನೇಕ ವಿರುದ್ಧಾಹಾರ ದೋಷದಿಂದ ಹುಟ್ಟುವುವು. ಪುರೀಷ (ಮಲ)ದಿಂದ ಹುಟ್ಟುವ ಕೃಮಿಗಳು (1) अयवाः, (2) वियवाः, (3) किप्याः, (4) चिप्याः, (5) गण्डूपदाः, (6) चूरवः ಮತ್ತು (7) द्विमुखाः ಎಂದು ಏಳು ವಿಧ. ಬೆಳ್ಳಗೆ ತೆಳ್ಳಗಿರುವ ಈ ಹುಳುಗಳು ಯಾವಾಗಲೂ ಮಲದ್ವಾರವನ್ನು ಬಾಧಿಸುವುವು. ಅದೇ ಜಾತಿಯ ಕೆಲವು ದೊಡ್ಡ ಹುಳುಗಳು ಹೊಟ್ಟೆ ಮತ್ತು ಮಲದ್ವಾರಗಳನ್ನು ಚುಚ್ಚುವುವು, ಅಗ್ನಿಮಾಂದ್ಯವುಂಟುಮಾಡುವುವು ಇತ್ಯಾದಿ. "श्वेताः सूक्ष्मास्तुदन्त्येते गुदं प्रतिसरन्ति च। तेषामेवापरे पुच्छैः पृथवश्च भवन्ति हि। शूलाग्निमान्द्यपाण्डुत्वविष्टम्भबलसंक्षयाः। प्रसेकारुचिहृद्रोगविड्भेदास्तु पुरीषजैः" सुश्रुत० उत्तरत० ५४-९, १०। (1) दर्भपुष्पाः, (2) महापुष्पाः, (3) प्रलूनाः, (4) चिपिटाः, (5) पिपीलिकाः ಮತ್ತು (6) दारुणाः ಎಂದು ಕಫವಿಕಾರದಿಂದ ಹುಟ್ಟುವ ಕೃಮಿಗಳು ಆರು ವಿಧ. ಇವು ಮಜ್ಜೆ, ಕಣ್ಣು, ಕಿವಿ, ದವಡೆಗಳನ್ನು ತಿಂದುಹಾಕುವುವು. ಆದರಿಂದ ತಲೆನೋವು, ಎದೆನೋವು, ವಾಂತಿ ಮುಂತಾದುವು ಉಂಟಾಗುವುವು. "मज्जादा नेत्रलेढारस्तालुश्रोत्रभुजस्तथा। शिरोहृद्रोगवमथुप्रतिश्यायकराश्च ते" सुश्रुत० उत्तरत० ५४-१४। (1-3) रक्तरोमनखादाः, (4) दन्तादाः, (5) किक्किशाः, (6) कुष्ठजाः ಮತ್ತು (7) परीसर्पाः ಎಂದು ರಕ್ತಜ

ಕೃಮಿಗಳು ಏಳು ವಿಧ. ಇವು ರಕ್ತಕ್ಕೆ ಸಂಬಂಧಿಸಿದ ಕುಷ್ಠ, ಹೊಪ್ಪೆ ಮುಂತಾದ ರೋಗಗಳನ್ನು ಉಂಟು ಮಾಡುವುವು. "रक्ताधिष्ठानजान् प्रायो विकारान् जनयन्ति ते" सुश्रुत० उत्तरत० ५४-१६। ಅಜೀರ್ಣ, ಅಧ್ಯಶನ (ತಿಂದ ಆಹಾರವು ಜೀರ್ಣವಾಗುವ ಮುನ್ನ ಭೋಜನ) ಮೈಗೆ ಹೊಂದದೆ ಇರುವ (ದೇಹಕ್ಕೆ ಸುಖ ವುಂಟುಮಾಡದ) ಆಹಾರ, ಮೈಗೆ ಹಿತವಿಲ್ಲದ ಹಳಸಿ ಕೊಳೆತುಹೋಗಿರುವ ಆಹಾರ, ವ್ಯಾಯಾಮವಿಲ್ಲದಿರು ವುದು, ಹಗಲು ನಿದ್ರೆ, ಗುರು ಅತಿಸ್ನಿಗ್ಧ ಮತ್ತು ಶೀತಕರವಾದ ಮಾಷ (ಉದ್ದು), ಪಿಷ್ಟಾನ್ನ (ಹಿಟ್ಟು ಮುಂತಾದುದು), ಕಾಡುಹೆಸರು, ತಾವರೆದಂಟು, ತಾವರೆ ಗೆಡ್ಡೆ ಮುಂತಾದುವುಗಳನ್ನು ತಿನ್ನುವುದು ಇವುಗಳಿಂದ ನಾನಾವಿಧವಾದ ಕೃಮಿಗಳು ಹುಟ್ಟುವುವು. "अजीर्णाध्यशनासात्म्यविरुद्धमलिनाशनैः। अव्यायामदिवास्वप्नगुर्वतिस्निग्धशीतलैः। माषपिष्टान्नविदलबिसशालूकसेरुकैः" ಇತ್ಯಾದಿ. सुश्रुत० उत्तरत० ५४-३, ४।

**क्रमिक ಕ್ರಿಮಿಕ** (पुं०) 1. ಸಣ್ಣ ಹುಳು. अल्पः क्रमिः "कन्" (५-३-८५)। "रुदन्तं विगतज्ञानं क्रमयः क्रमिकं यथा" भाग० ३-३१-२७। 2. ಅಡಕೆ.

**क्रमिकण्टक ಕ್ರಿಮಿಕಂಟಕ** (न०) ಕೃಮಿಗಳನ್ನು ನಾಶ ಮಾಡುವ 1. ವಾಯಿವಿಳಂಗ. 2. ಇಲಿಯಾಲದ ಗಿಡ. 3. ಉದುಂಬರ ವೃಕ್ಷ, ಅತ್ತಿಮರ.

**क्रमिकर्णक ಕ್ರಿಮಿಕರ್ಣಕ** (पुं०) ಒಂದು ವಿಧ ಕಿವಿಯ ರೋಗ. क्रमियुक्तः कर्णो यस्य। वा कप्। **ಇದರ ಲಕ್ಷಣ:** "यदा तु मूर्च्छन्त्यथवापि जन्तवः सृजन्त्यपत्यान्यथवापि मक्षिकाः। तदञ्जनत्वाच्छ्रवणो निरुच्यते भिषग्भिराद्यैः क्रमिकर्णको गदः" सुश्रुत० उत्तरत० २०-१३। **ಇದರ ಚಿಕಿತ್ಸೆ:** "क्रमिकर्णकनाशार्थं क्रमिघ्नं योजयेद्विधिम्। वार्ताकुधूपश्च हितः सार्षपस्नेह एव वा" सुश्रुत० उत्तरत० २१-५१। ಕಿವಿಯಲ್ಲಿ ದುರ್ಗಂಧ ವುಂಟಾದರೆ "क्रमिघ्नं हरितालेन गवां मूत्रयुतेन च। गुग्गुलोः कर्णदौर्गन्ध्ये धूपनं श्रेष्ठमुच्यते। छर्दनं धूमपानं च कवलस्य च धारणम्" सुश्रुत० उत्तरत० २१-५२, ५३।

**क्रमिकोशोत्थ ಕ್ರಿಮಿಕೋಶೋತ್ಥ** (न०) ರೇಷ್ಮೆಯ ವಸ್ತ್ರ, ಮಗುಟ. क्रमिकोशादुत्थम्।

**क्रमिग्रन्थि ಕ್ರಿಮಿಗ್ರಂಥಿ** (पुं०) ಸಂಧಿರೋಗಗಳಲ್ಲೊಂದು, ಕಣ್ಣಿನ ರೆಪ್ಪೆ ಮತ್ತು ಕಣ್ಣು ಕೂದಲುಗಳ ಮಧ್ಯೆ (ಕಣ್ಣು ಕೂದಲ ಬುಡದಲ್ಲಿ) ಬರುವ ಒಂದು ರೋಗ. ಈ ಕೂದಲ ಬುಡದಲ್ಲಿ ಹುಟ್ಟಿದ ಕೃಮಿಗಳು ಮೊದಲು ನವೆಯನು ಉಂಟುಮಾಡುವುವು. ಅನಂತರ ಕಣ್ಣಿನೊಳಕ್ಕೆ ಪ್ರವೇಶಿಸಿ ಕಣ್ಣನ್ನೇ ತಿಂದುಹಾಕುವುವು. "क्रमिग्रन्थिर्वर्त्मनः पक्ष्मणश्च कण्डूं कुर्युः क्रमयः सन्धिजाताः। नानारूपा वर्त्मशुक्लस्य सन्धौ चरन्तोऽन्तर्नयनं दूषयन्ति" सुश्रुत० उत्तर० २-९।

**क्रमिघ्न ಕ್ರಿಮಿಘ್ನ** (पुं०) 1. ವಾಯಿವಿಳಂಗ. क्रमिं हन्ति—हन (हिंसागत्योः) "कः" (३-२-५३)। 2. ಗೇರು ಮರ. (स्त्री०) **–घ्ना –ಘ್ನಾ.** ಅರಿಶಿನ. **–घ्नी –ಘ್ನೀ.** ವಾಯಿವಿಳಂಗ.

**क्रमिज ಕ್ರಿಮಿಜ** (न०) 1. ಅಗುರು ಚಂದನ. (वि०) 2. ಕೃಮಿಯಿಂದ ಹುಟ್ಟಿದ. क्रमेर्जातः — जनी (प्रादुर्भावे) "डः" (३-२-९८)।

**क्रमिण ಕ್ರಿಮಿಣ** (वि०) ಕೃಮಿಗಳಿಂದ ಕೂಡಿದ, ಹುಳುಗಳು ಸೇರಿಕೊಂಡಿರುವ. क्रमयोऽस्त्यस्य "नः" (३-२-१००)।

**क्रमिदन्तक ಕ್ರಿಮಿದಂತಕ** (पुं०) ಒಂದು ವಿಧ ದಂತ ರೋಗ. ದಂತರೋಗವು (1) दालनः, (2) क्रमिदन्तकः, (3) दन्तहर्षकः, (4) भञ्जनकः, (5) दन्तशर्करा, (6) कपालिका, (7) श्यावदन्तकः ಮತ್ತು (8) हनुमोक्षः ಎಂದು ಎಂಟು ವಿಧ. ಕೃಮಿದಂತಕದಲ್ಲಿ ಹಲ್ಲುಗಳು ಕಪ್ಪಾಗುವುವು, ಒಡಕಾಗುವುವು, ಬುಡವು ಸಡಿಲವಾಗಿ ಆಡುವುವು. ರಕ್ತ ಸುರಿಯುವುದು. ನೋವಿನಿಂದ ನಡುಗುವುವು. "कृष्णच्छिद्री चलः स्रावी ससंरम्भो महारुजः। अनिमित्तरुजो वाताद्विज्ञेयः क्रमिदन्तकः" सुश्रुत० निदान० १६-२९।

**क्रमिपर्वत ಕ್ರಿಮಿಪರ್ವತ** (पुं०) ವಲ್ಮೀಕ, ಹುತ್ತ. क्रमीणां पर्वतइव।

**क्रमिपुरीषक ಕ್ರಿಮಿಪುರೀಷಕ** (पुं०) ಪುರೀಷ (ಮಲ)ದ ಮೇಲೆ ಓಡಾಡುವ ಒಂದು ವಿಧ ನೀಲಿ ನೊಣ.

**क्रमिफल ಕ್ರಿಮಿಫಲ** (पुं०) 1. ಅತ್ತಿಮರ. क्रमयः फलेऽस्य। (न०) 2. ಅತ್ತಿಹಣ್ಣು.

**क्रमिभक्ष ಕ್ರಿಮಿಭಕ್ಷ** (पुं०) 1. ಒಂದು ನರಕ. क्रमिभिर्भक्ष्यतेऽत्र — भक्ष (अदने) "घञ्" (३-३-१२१)। ["क्रमिभोजन" ಪದದಲ್ಲಿ ನೋಡಿ]. (वि०) 2. ಕೃಮಿಗಳನ್ನು ತಿನ್ನುವ. क्रमीन् भक्षयति — भक्ष + णिच् "अच्" (३-२-१३४)।

**क्रमिभोजन ಕ್ರಿಮಿಭೋಜನ** (पुं०) 1. ಕೃಮಿಯಾಗಿ ಹುಟ್ಟಿ ಕೃಮಿಗಳಿಂದಲೇ ತಿನ್ನಲ್ಪಟ್ಟು ಯಾತನೆ ಅನುಭವಿಸುವ ಒಂದು ನರಕ. क्रमिभिर्भुज्यतेऽत्र — भुज (पालनाभ्यव-

हारयोः) "ल्युट्" (३-३-११७)। "यस्त्विहासंविभज्याश्नाति यत्किञ्चनोपनतमनिर्मितपञ्चयज्ञो वायससंस्तुतः स परत्र कृमिभोजने नरकाधमे निपतति तत्र शतसहस्रयोजने कृमिकुण्डे कृमिभूतः स्वयं कृमिभिरेव भक्ष्यमाणः कृमिभोजनो यावत्तदप्रत्ताप्रहुतादोऽनिर्वेशमात्मानं यातयते" भाग० ५-२६-१८। (वि०)2. ಕೃಮಿಗಳನ್ನು ತಿನ್ನುವ, ಕೃಮಿಗಳೇ ಆಹಾರವಾಗಿ ಉಳ್ಳ.

**कृमिमत् ಕೃಮಿಮತ್** (वि०) ಕೃಮಿಗಳಿಂದ ಕೂಡಿದ, ಹುಳುಗಳು ಸೇರಿಕೊಂಡಿರುವ, ಹುಳಿತಿರುವ. कृमयोऽत्र सन्ति "मतुप्" (५-२-९४)। स्त्रियाम् "ङीप्" (४-१-६)। **–मती –ಮತೀ.**

**कृमिरिपु ಕೃಮಿರಿಪು** (पुं०) ವಾಯಿವಿಳಂಗ. कृमीणां रिपुः।

**कृमिशैल ಕೃಮಿಶೈಲ** (पुं०) ವಲ್ಮೀಕ, ಹುತ್ತ. कृमीणां शैल इव।

**कृमीलक ಕೃಮೀಲಕ** (पुं०) ಕಾಡುಹೆಸರು. कृमीन् ईरयति—ईर (गतौ) "ण्वुल्" (३-१-१३३)। रस्य लः।

**कृवि ಕೃವಿ** (पुं०) ಮಗ್ಗದವನು ನೇಯ್ಗೆಗಾಗಿ ಉಪಯೋಗಿಸುವ ಒಂದು ವಸ್ತು. डु कृञ् (करणे) "क्विन्" (उ० ४-५६)। "कृविस्तन्तुवायद्रव्यम्" सि० कौ०।

**कृवी ಕೃವೀ** (स्त्री०) ಕತ್ತರಿ. "कर्त्रिका कर्तनी कृवी" वैज०।

**कृश—तनूकरणे** (दिवा० पर० अक० से०)। कृश्यति। चकर्श। कर्शिता। कर्शिष्यति। कृश्यतु। अकृश्यत्। कृश्येत्। कृश्यात्। अकृशत्। अकर्शिष्यत्। ಕೃಶವಾಗು, ತೆಳ್ಳಗಾಗು, ಸಣ್ಣದಾಗು.

**भावे:**—कृश्यते। चकृशे। कर्शिता। कर्शिष्यते। कृश्यताम्। अकृश्यत। कृश्येत। कर्शिषीष्ट। अकर्शि। अकर्शिष्यत।

**णिचि:**—कर्शयति, –ते। कर्शयां चकार, –चक्रे, –बभूव, –आस। कर्शयिता। कर्शयतु, –ताम्। अकर्शयत्, –त। ಇತ್ಯಾದಿ.

**कृत्सु:**—कर्शितव्यम्। कर्शनीयम्। कृश्यम्। कृशः। कृशितवान्। कृश्यन्, कृश्यन्ती। कर्शितुम्। कृशम्। कर्शनम्। कर्शित्वा। परिकृश्य।

**कृश ಕೃಶ** (पुं०)1. ವಿಷು, ಪರಮಾತ್ಮ. कृश (तनूकरणे) "क्तः" (८-२-५५)। तलोपः इडभावश्च निपात्यते। "सर्वत्राव्याहतगतिः लघिम्ना कृश ईरितः" इति निरुक्तिः। "अणुर्बृहत् कृशः स्थूलः गुणभृन्निर्गुणो महान्" वि० स०। 2. ಉಷ್ಣ, ಬಿಸಿ, ಕಾವು. (पुं० ब० व०) 3. ಕೇತುಗ್ರಹ. "केतवो विकचाः कृशाः" वैज०। (न०) 4. ತೆಳ್ಳಗಿರುವಿಕೆ, ಸಣ್ಣಗಿರುವಿಕೆ. कृश भावे "क्तः" (३-३-११४)। (वि०) 5. ಸಣ್ಣದಾದ, ತೆಳುವಾದ. "कृशमपि कृशतां पुनर्नयन्ती विपुलतरोन्मुखलोचनावलग्नम्" माघ० ७-३३। 6. ಚಿಕ್ಕದಾದ, ಪುಟ್ಟ. 7. ಅಲ್ಪ. "वनानि दहतो वह्नेः सखा भवति मारुतः। स एव दीपनाशाय कृशे कस्यास्ति गौरवम्"। 8. ದುರ್ಬಲ, ಬಲಹೀನ, ಬಡಕಲಾಗಿರುವ. "क्षत्रियं चैव सर्पं च ब्राह्मणं वा बहुश्रुतम्। नावमन्येत वै भूष्णुः कृशानपि कदाचन" मनु० ४-१३५। 9. ಉಷ್ಣವಾದ, ಬಿಸಿಯಾದ. "उष्णं ज्वलः खरः क्रूरो बालस्तिग्मः कृशश्चुपः" वैज०।

**कृशता ಕೃಶತಾ** (स्त्री०) 1. ತೆಳ್ಳಗಿರುವಿಕೆ, ಸಣ್ಣಗಿರುವಿಕೆ. कृशस्य भावः "तल्" (५-१-११९)। 2. ಚಿಕ್ಕದಾಗಿರುವುದು, ಸಣ್ಣದಾಗಿರುವುದು. 3. ಅಲ್ಪವಾಗಿರುವುದು. 4. ಬಡಕಲಾಗಿರುವುದು, ಬಲಹೀನವಾಗಿರುವುದು. "कृशमपि कृशतां पुनर्नयन्ती" माघ० ७-३३। "त्वः" (५-१-११९)। **–त्वम् ಕ್ತ್ವಮ್.**

**कृशधन ಕೃಶಧನ** (वि०) ಅಲ್ಪಧನವುಳ್ಳವನು, ಕೊಂಚ ಹಣವುಳ್ಳವನು, ದರಿದ್ರ, ಬಡವ. कृशं धनं यस्य।

**कृशबुद्धि ಕೃಶಬುದ್ಧಿ** (वि०) ಅಲ್ಪಬುದ್ಧಿಯುಳ್ಳವನು. कृशा बुद्धिर्यस्य।

**कृशर ಕೃಶರ** (पुं०) ಎಳ್ಳು ಅಕ್ಕಿ ಬೆರಸಿ ಪಕ್ವಮಾಡಿದ ಅನ್ನ. ಗೃಹಯಜ್ಞದಲ್ಲಿ ಶನಿಗ್ರಹದ ಪ್ರೀತಿಗಾಗಿ ಕೃಶರದ ಬಲಿಯನ್ನು ಕೊಡಬೇಕು. "गुडौदनं रवेर्दद्यात् सोमाय घृतपायसम्। संयावकं कुजे दद्यात् क्षीरान्नं सोमसूनवे। दध्योदनञ्च जीवस्य शुक्राय तु घृतौदनम्। शनैश्चराय कृशरमाजमांसं च राहवे। चित्रौदनञ्च केतुभ्यः सर्वभक्ष्यैः समर्चयेत्"।

**कृशला ಕೃಶಲಾ** (स्त्री०) ತಲೆಯ ಕೂದಲು. कृशं कार्श्यं लाति — ला (आदाने) "कः" (३-२-४)।

**कृशाङ्ग ಕೃಶಾಂಗ** (वि०) ತೆಳುವಾದ ಮೈಯುಳ್ಳ. कृशमङ्गं यस्य। स्त्रियाम् "ङीप्"। **कृशाङ्गी ಕೃಶಾಂಗೀ** ತೆಳುವಾದ ಮೈಯುಳ್ಳ ಹೆಂಗಸು. "उत्तस्थुरभ्युत्थितिवाञ्छयेव निजासनान्नैकरसाः कृशाङ्ग्यः" नैष० ८-७।

**कृशानु ಕೃಶಾನು** (पुं०) 1. ಅಗ್ನಿ, ಬೆಂಕಿ. कृश्यति — कृश (तनूकरणे) "आनुक्" (उ० ४-२)। "ऋते कृशानोर्न हि

मन्त्रपूतमर्हन्ति तेजांस्यपराणि हव्यम्" कुमा० १-५१। 2. ಅಗ್ನಿದೇವತೆ. "आखण्डलो दण्डधर: कृशानु: पाशीति नाथै: ककुभां चतुर्भि:" नैष० १०-१०। 3. ಚಿತ್ರ ಮೂಲದ ಗಿಡ. 4. ಹರಳು ಗಿಡ. 5. ಅಗ್ನಿದೇವತಾಕವಾದ ಕೃತ್ತಿಕಾ ನಕ್ಷತ್ರ. 6. ಮೂರು ಸಂಖ್ಯೆ.

**कृशानुरेतस् ಕೃಶಾನುರೇತಸ್** (पुं०) 1. ಪರಶಿವ, ಪರಮೇಶ್ವರ, ಮಹಾದೇವ. कृशानौ रेतो यस्य। [ಪಾರ್ವತಿಯೊಡನೆ ಅನೇಕ ವರ್ಷಗಳಕಾಲ ರತಿಕ್ರೀಡೆಯಲ್ಲಿ ಮಗ್ನನಾಗಿದ್ದ ಪರಮೇಶ್ವರನನ್ನು ಬಹಳ ಕಾಲದಿಂದಲೂ ಕಾಣದೆ ತಾರಕಾಸುರನಿಂದ ಪೀಡಿತರಾದ ದೇವತೆಗಳು ಬಹಳ ಕಾತುರರಾಗಿ ಪರಮೇಶ್ವರನನ್ನು ಕಂಡುಬರಲು ಅಗ್ನಿ ಪುರುಷನನ್ನು ಕಳುಹಿಸುವರು. ಅಗ್ನಿಯು ಕಪೋತವೇಷ ದಿಂದ ಪರಮೇಶ್ವರನ ಶಯನಗೃಹವನ್ನು ಪ್ರವೇಶಿಸಿದಾಗ ಶಿವನು ಸಂಭೋಗಭಂಗದಿಂದ ಕ್ರುದ್ಧನಾಗುವನು. ಆಗ ಅಗ್ನಿಯಿಂದ ವಾಸ್ತವವಿಷಯವನ್ನು ತಿಳಿದು ತಾರಕಾಸುರನ ವಧೆಗಾಗಿ ಸಮರ್ಥನಾದ ಸೇನಾನಿಯ ಉತ್ಪತ್ತಿಯಾಗಲು ತನ್ನ ವೀರ್ಯವು ಸಾರ್ಥಕವಾಗಬೇಕೆಂಬ ಉದ್ದೇಶದಿಂದ ಅದನ್ನು ಅಗ್ನಿಯಲ್ಲಿ ಇರಿಸಿದನು. ಅದರಿಂದ ಪರಮೇಶ್ವರ ನಿಗೆ "**कृशानुरेतस्**" ಎಂಬ ಹೆಸರಾಯಿತು.] कालिकापु०। (न०) 2. ಅಗ್ನಿಯ ತೇಜಸ್ಸು.

**कृशाश्व ಕೃಶಾಶ್ವ** (पुं०) 1. ಒಬ್ಬ ದೊರೆ. 2. ತೆಳುವಾದ ಕುದುರೆ. कृशोऽश्व:। 3. ಒಬ್ಬ ನಾಟ್ಯಾಚಾರ್ಯ. (वि०) 4. ತೆಳುವಾದ ಕುದುರೆಯುಳ್ಳ. कृशोऽश्वो यस्य।

**कृशाश्विन् ಕೃಶಾಶ್ವಿನ್** (पुं० ब० व०) ನಟರು, ನಾಟ್ಯಾ ಚಾರ್ಯರಾದ ಕೃಶಾಶ್ವಮುನಿಯ ನಟಸೂತ್ರವನ್ನು ಅಧ್ಯಯನ ಮಾಡುವವರು. कृशाश्वेन प्रोक्तं नटसूत्रमधीयते — "इनि:" (४-३-१११)। "कृशाश्विनो नटा:" सि० कौ०।

**कृशिका ಕೃಶಿಕಾ** (स्त्री०) ಇಲಿಕಿವಿಯ ಗಿಡ. कृशैव — स्वार्थे "क:"।

**कृशोदर ಕೃಶೋದರ** (वि०) ತೆಳುವಾದ ಹೊಟ್ಟೆಯುಳ್ಳ.

**कृशोदरी** (स्त्री०) ತೆಳುವಾದ ಹೊಟ್ಟೆಯುಳ್ಳ ಹೆಂಗಸು. कृशमुदरं यस्या: — वा "ङीष्" (४-१-५५)। पक्षे **कृशोदरा ಕೃಶೋದರಾ.** "सहामुना तत्र पय:पयोनिधौ कृशोदरि क्रीड यथामनोरथम्" नैष० ९-५९।

**कृश्यत् ಕೃಶ್ಯತ್** (वि०) 1. ತೆಳುವಾಗುತ್ತಿರುವ, ಸಣ್ಣ ನಾಗುತ್ತಿರುವ. 2. ಚಿಕ್ಕದಾಗುತ್ತಿರುವ, ಪುಟ್ಟದಾಗುತ್ತಿರುವ. कृश (तनूकरणे) "शतृ" (३-२-१२४)। स्त्रियाम् "ङीप्" (४-१-६)। **—न्ती —ತ್ತಿ.**

**कृष-विलेखने** (भ्वा० पर० सक० अनि०)। कर्षति। चकर्ष। क्रष्टा क्रष्टारौ क्रष्टार:। क्रक्ष्यति, कर्क्ष्यति। कर्षतु। अकर्षत्। कर्षेत्। कृष्यात्। अक्राक्षीत्, अकार्क्षीत्। अकृक्षत्, अक्रक्ष्यत्। अकर्क्ष्यत्। ಆಕರ್ಷಿಸು, ಎಳೆ, ಸೆಳೆ.

**कर्मणि:**—कृष्यते। चकृषे। क्रष्टा, कर्ष्टा। क्रक्ष्यते, कर्क्ष्यते। कृष्यताम्। अकृष्यत। कृष्येत। ಇತ್ಯಾದಿ.

**णिचि:**—कर्षयति, —ते। कर्षयां चकार, —चक्रे, —बभूव, —आस। कर्षयिता। कर्षयतु, —ताम्। कर्षयेत्, —त। ಇತ್ಯಾದಿ.

**कृत्सु:**—क्रष्टव्य:, कर्ष्टव्य:। कर्षणीय:। कृष्य:। कृष्ट:। कृष्टवान्। कर्षन्, कर्षन्ती। क्रष्यन्, क्रष्यती, क्रष्यन्ती। कर्क्ष्यन्, कर्क्ष्यती, कर्क्ष्यन्ती। क्रष्टुम्। कर्ष्टुम्। कृष्टम्। कर्षणम्। कृष्ट्वा। आकृष्य।

**ಈ ಧಾತುವಿಗೆ ಉಪಸರ್ಗಗಳ ಯೋಗದಿಂದ ಉಂಟಾಗುವ ಅರ್ಥಭೇದಗಳು :**

**(1)** अनु+कृष = अनुकर्षति। अनुकर्ष:। ಹಿಂದಿನಿಂದ ಎಳೆದುಕೊ. ಎಳೆದು ಮುಂದಕ್ಕೆ ಸಂಬಂಧಪಡಿಸು. ಒಂದು ವಾಕ್ಯದ ಅರ್ಥ ಹೇಳುವಾಗ ಅದಕ್ಕೆ ಬೇಕಾದ ಪದ ಗಳನ್ನು ಹಿಂದಿನ ವಾಕ್ಯದಿಂದ ತೆಗೆದುಕೊಳ್ಳುವುದು (ಪ್ರಕೃತ ವಾಕ್ಯಾರ್ಥಕ್ಕೆ ಸಂಬಂಧಿಸಿದಂತೆ ಎಳೆದುಕೊಳ್ಳು ವುದು) ಅನುಕರ್ಷವು.

**(2)** अप+कृष = अपकर्षति। अपकर्ष:। 1. ಕಡಮೆ ದರ್ಜೆಯದಾಗಿ ಮಾಡು, ಗುಣತಗ್ಗಿಸು, ಹೀನವಾಗಿ ಮಾಡು, ಕೀಳಾಗಿ ಮಾಡು. 2. (ವ್ಯಾಕರಣಶಾಸ್ತ್ರದಲ್ಲಿ) ಮುಂದಿನ ಸೂತ್ರದಿಂದ ಹಿಂದಿನ ಸೂತ್ರದ ವಾಕ್ಯಾರ್ಥಕ್ಕೆ ಬೇಕಾಗುವ ಪದಗಳನ್ನು ಸೇರಿಸಿಕೊಳ್ಳುವುದು.

**(3)** अप+आ+कृष = अपाकर्षणम्। ಹಿಂತಿರುಗಿಸು, ಹಿಂದಕ್ಕೆ ಕಳುಹಿಸು. "तमशक्यमपाक्रष्टुं निदेशात् स्वर्गिण: पितु:" रघु० १२-१७।

**(4)** अभि + कृष = अभिकर्षति। ಎದುರಾಗಿ ಎಳೆದುಕೋ.

**(5)** अव+कृष = अवकर्षति। ಮೇಲಿನಿಂದ ಕೆಳಕ್ಕೆ ಎಳೆದುಕೊ.

**(6)** आ+कृष=आकर्षति। आकर्षणम्। ಎಳೆದುಕೊ.

**(7)** उद्+कृष = उत्कर्ष:। 1. ಹಿರಿಮೆ (ಉಂಟು ಮಾಡು), ಮೇಲ್ಮೆ (ಕೊಡು). 2. ಮೇಲಕ್ಕೆ ಎಳೆದುಕೊ.

(8) निस्+कृष = निष्कृष्टम्। निष्कर्षः। 1. ನಿಶ್ಚಯ. 2. ಎಳೆದುಕೊ. "गामात्तसारां रघुरप्यवेक्ष्य निष्क्रष्टुमर्थं चकमे कुबेरात्" रघु० ५-२६।

(9) प्र + कृष = प्रकर्षति। प्रकर्षः। प्रकृष्टः। 1. ಹೆಚ್ಚಿಸು, ಅಧಿಕಪಡಿಸು. 2. ಚೆನ್ನಾಗಿ ಎಳೆ. ಹೆಚ್ಚಾಗಿ ಎಳೆ.

(10) सम्+कृष = संकर्षति। संकर्षणम्। ಚೆನ್ನಾಗಿ ಎಳೆ.

(11) सम्+आ+कृष = समाकर्षति। समाकृष्य। ಬಹಳ ದೂರದವರೆಗೂ ಚೆನ್ನಾಗಿ ಎಳೆ.

**कृष–विलेखने** (तुदा० उभ० सक० अनि०) 1. कृषति, कृषते। चकर्ष, चकृषे। क्रष्टा, कर्ष्टा। क्रक्ष्यति, –ते, कर्क्ष्यति, –ते। कृषतु, –ताम्। ಇತ್ಯಾದಿ. कर्मणि णिचि कृत्सु च भ्वादि० कृष धातुवत् रूपाणि। केवलाच्छतरि कृषन्, कृषती, कृषन्ती शानचि कृषमाणः, क्रक्ष्यमाणः, कर्क्ष्यमाणः इति विशेषः। 1. ಎಳೆ, ಸೆಳೆ, ಆಕರ್ಷಿಸು. 2. ಉಳು, ನೇಗಿಲುಹೊಡೆ.

**कृषक ಕೃಷಕ** (पुं०) 1. ವೃಷಭ, ಎತ್ತು. कृष (विलेखने) "क्वुन्" (उ० २-३९)। 2. ನೇಗಿಲಗುಳ. 3. ರೈತ, ಬೇಸಾಯಗಾರ. 4. ಎಳೆಯುವವನು. "कृषकः पुंसि फाले स्यात् कर्षके त्वभिधेयवत्" मेदि०।

**कृषाण ಕೃಷಾಣ** (पुं०) ರೈತ, ಬೇಸಾಯಗಾರ, ಉಳುವವನು. कृष (विलेखने) "आनक्" बाहु०। "गोपाः सीमाकृषाणाश्च सर्वे च वनगोचराः" याज्ञ० २-१५०।

**कृषि ಕೃಷಿ** (स्त्री०) ಬೇಸಾಯ, ವ್ಯವಸಾಯ, ಭೂಮಿಯನ್ನು ಉಳುವುದು, ಸಾಗುವಳಿ, ಪೈರು ಬೆಳೆಯಲು ಉಳುಮೆ. कृष (विलेखने) "इक्" (वा० ३-३-१०८)। "शरीरमाद्यं खलु धर्मसाधनम्" ಸಕಲಧರ್ಮಕಾರ್ಯಗಳಿಗೂ ಶರೀರವು ಸಾಧನವಾದುದು. ಆದುದರಿಂದ ಈ ಶರೀರವನ್ನು ಪೋಷಿಸುವುದು ಮನುಷ್ಯನ ಆದ್ಯಕರ್ತವ್ಯ. ಎಷ್ಟೇ ಧನಕನಕವಸ್ತ್ರಭೂಷಣಗಳಿದ್ದರೂ ಶರೀರಪೋಷಣೆಗೆ ಬೇಕಾದ ಅನ್ನವೊಂದಿಲ್ಲದಿದ್ದರೆ ಉಪವಾಸವಿರಬೇಕಾಗುವುದು. ಆ ಅನ್ನಕ್ಕಾಗಿ ಕೃಷಿಯು ಅವಶ್ಯವಾದುದು. ಅನ್ನವೇ ಪ್ರಾಣ, ಅನ್ನವೇ ಬಲ. ಅನ್ನವೇ ಎಲ್ಲಾ ಕಾರ್ಯಗಳಿಗೂ ಸಾಧನ. ಜಗತ್ತಿನಲ್ಲಿ ಮನುಷ್ಯಸಾಮಾನ್ಯವೂ ಅನ್ನದಿಂದಲೇ ಜೀವಿಸಬೇಕಾದುದರಿಂದ ಅನ್ನವನ್ನು ಕೊಡುವ ವ್ಯವಸಾಯಕ್ಕೆ ಆದ್ಯತೆಯನ್ನು ಕೊಡಬೇಕು. "कण्ठे हस्ते च कर्णे च सुवर्णं यदि विद्यते। उपवासस्तथापि स्यात् अन्नाभावेन देहिनाम्। अन्नं प्राणा बलञ्चान्नमन्नं सर्वार्थसाधकम्। अन्नं तु धान्यसंभूतं धान्यं कृष्या विना न च। तस्मात् सर्वं परित्यज्य कृषिं यत्नेन कारयेत्। कृषिर्धन्या कृषिर्मेध्या जन्तूनां जीवनं कृषिः। हिंसादिदोषयुक्तोपि मुच्यतेऽतिथिपूजनात्। तेनार्चितं जगत्सर्वमतिथिर्येन पूजितः। अर्चितास्तेन देवाश्च स एव पुरुषोत्तमः" कृषिपराशरः।

**कृषिक ಕೃಷಿಕ** (पुं०) 1. ನೇಗಿಲಗುಳ. कृष (विलेखने) "किकन्" (उ० २-४१)। 2. ರೈತ, ಬೇಸಾಯಗಾರ, ಉಳುಮೆಯಿಂದ ಜೀವಿಸುವವನು. कृष (विलेखने) "किकन्" (उ० २-४१)। "कुटुम्बी कर्षकः क्षेत्री हली कृषिककार्षकौ" अभि० चि०।

**कृषिकर्मन् ಕೃಷಿಕರ್ಮನ್** (न०) ಬೇಸಾಯ, ಉಳುಮೆ, ಬೆಳೆಗಾಗಿ ಮಾಡುವ ವ್ಯವಸಾಯ.

**कृषिजीविन् ಕೃಷಿಜೀವಿನ್** (वि०) ವ್ಯವಸಾಯದಿಂದ ಜೀವಿಸುವವನು. कृष्या जीवति–जीव (प्राणधारणे) "णिनिः" (३-२-७८)।

**कृषिपराशर ಕೃಷಿಪರಾಶರ** (पुं०) ವ್ಯವಸಾಯದ ವಿಷಯವನ್ನು ಹೇಳುವ ಒಂದು ಗ್ರಂಥ.

**कृषिफल ಕೃಷಿಫಲ** (न०) ಸಸ್ಯ, ಪೈರು, ಬೆಳೆ. कृषेः फलम्। "त्वय्यायत्तं कृषिफलमिति भ्रूविलासानभिज्ञैः" मेघ० १-१६।

**कृषीवल ಕೃಷೀವಲ** (पुं०) ರೈತ, ಬೇಸಾಯಗಾರ, ಉಳುಮೆಯಿಂದ ಜೀವಿಸುವವನು. कृषिरस्यास्ति – "वलच्" (५-२-११२)। दीर्घः (६-३-११८)। "सुखेन लभ्या दधतः कृषीवलैरकृष्टपच्या इव सस्यसम्पदः" किरा० १-१७।

**कृष्ट ಕೃಷ್ಟ** (न०) 1. ಎಳೆಯುವಿಕೆ. 2. ಉಳುಮೆ. कृष (विलेखने) भावे "क्तः" (३-३-११४)। (वि०) 3. ಎಳೆಯಲ್ಪಟ್ಟ. कृष कर्म० "क्तः" (३-२-१०२)। "नाभीमथैष श्लथवाससोऽनु मिमील दिक्षु क्रमकृष्टचक्षुः" नैष० ६-२०। 4. ಉಳಲ್ಪಟ್ಟ (ಭೂಮಿ). "भग्नोन्नतानन्तरपूरितान्तरा बभुर्भुवः कृष्टसमीकृता इव" माघ० १२-२१।

**कृष्टपच्य ಕೃಷ್ಟಪಚ್ಯ** (वि०) ಉತ್ತಭೂಮಿಯಲ್ಲಿ ಬೆಳೆದು ತಾನಾಗಿಯೇ ಹಣ್ಣಾಗುವ ಧಾನ್ಯ ಮುಂತಾದುದು. कृष्टेन स्वयमेव पच्यते–डु पचष् (पाके) "क्यप्" (३-१-११४)। निपा०। "सुखेन लभ्या दधतः कृषीवलैरकृष्टपच्या इव सस्यसम्पदः" किरा० १-१७।

**कृष्टि ಕೃಷ್ಟಿ** (ಪುಂ) 1. ಪಂಡಿತ. कृष (विलेखने) कर्तृ० "क्तिच्" (३-३-१७४)। (स्त्री०) 2. ಆಕರ್ಷಣ, ಎಳೆಯುವುದು. कृष भावे "क्तिन्" (३-३-९४)। 3. ಉಳುಮೆ, ಬೇಸಾಯ. "अथ कृष्टिः स्यादाकर्षे स्त्री बुधे पुमान्" मेदि०। "कृष्टिः कर्षे बुधे पुमान्" त्रिकाण्ड०।

**कृष्टोप्त ಕೃಷ್ಟೋಪ್ತ** (ವಿ०) ಉತ್ತು ಬಿತ್ತಲ್ಪಟ್ಟ, ಉತ್ತಿರುವ ಭೂಮಿಯಲ್ಲಿ ಬಿತ್ತನೆ ಮಾಡಲ್ಪಟ್ಟ. कृष्टे उप्तः।

**कृष्ण ಕೃಷ್ಣ** (ಪುಂ) 1. ಮಹಾವಿಷ್ಣುವಿನ ಹತ್ತು ಅವತಾರಗಳಲ್ಲಿ ಒಂಬತ್ತನೆಯ ಅವತಾರ, ವೈಕುಂಠದಲ್ಲಿ ದ್ವಾರಪಾಲಕರಾಗಿದ್ದ ಜಯವಿಜಯರು ಸನಕಾದಿಮುನಿಗಳ ಶಾಪಕ್ಕೆ ಗುರಿಯಾಗಿ ಭೂಮಿಯಲ್ಲಿ ಮೂರನೆಯ ಜನ್ಮದಲ್ಲಿ ಶಿಶುಪಾಲ–ದಂತವಕ್ತ್ರರಾಗಿ ಹುಟ್ಟಿದಾಗ ಅವರ ಸಂಹಾರಕ್ಕಾಗಿ ಅವತರಿಸಿದ ಮಹಾವಿಷ್ಣು, ದೇವಕೀ–ವಸುದೇವರ ಎಂಟನೆಯ ಮಗ. कर्षत्यरीन्—कृष (विलेखने) "नक्" णत्वं च बाहु०। "कृषिर्भूवाचकः शब्दो णश्च निर्वृतिवाचकः। कृष्णस्तद्भावयोगाच्च कृष्णो भवति सात्वतः" भा० उद्योग० ७०। "एकान्तलीलारसतो निर्वृतः कृष्ण उच्यते" इति निरुक्तिः। "अग्राह्यः शाश्वतः कृष्णः" वि० स०।

**ಶ್ರೀಕೃಷ್ಣಾವತಾರ:** ತಂಗಿ ದೇವಕಿಯ ಗರ್ಭದಲ್ಲಿ ಹುಟ್ಟುವ ಮಗನು ತನಗೆ ಮೃತ್ಯುವಾಗುವನೆಂಬ ಆಕಾಶವಾಣಿಯನ್ನು ಕೇಳಿದ ಕಂಸನು ದೇವಕೀ–ವಸುದೇವರನ್ನು ಸೆರೆಯಲ್ಲಿಟ್ಟು ಮೊದಲ ಆರು ಮಕ್ಕಳನ್ನು ಕೊಲ್ಲುತ್ತ ಬಂದನು. ಏಳನೆಯ ಗರ್ಭವನ್ನು ಪರಮಾತ್ಮನು ವಸುದೇವನ ಇನ್ನೊಬ್ಬ ಪತ್ನಿಯಾದ ರೋಹಿಣೀ ದೇವಿಯ ಗರ್ಭದಲ್ಲಿ ಇರಿಸಿದನು. ಅವಳಲ್ಲಿ ಬಲರಾಮನು ಜನಿಸಿದನು. ದೇವಕೀದೇವಿಯ ಎಂಟನೆಯ ಗರ್ಭದಲ್ಲಿ ವಿಷ್ಣುವು ಪ್ರವೇಶಿಸಿ ಶ್ರಾವಣ ಕೃಷ್ಣಾಷ್ಟಮೀ ಬುಧವಾರ ರೋಹಿಣೀ ನಕ್ಷತ್ರದಲ್ಲಿ ಮಧ್ಯರಾತ್ರಿಯ ವೇಳೆಯಲ್ಲಿ ಭೂಲೋಕದಲ್ಲಿ ಅವತರಿಸಿದನು. **ಇದೇ ಶ್ರೀಕೃಷ್ಣಾವತಾರ.** ಚತುರ್ಭುಜಗಳಿಂದ ಶಂಖ ಚಕ್ರ ಗದಾದ್ಯಾಯುಧಗಳನ್ನು ಧರಿಸಿ ಶ್ರೀಕೃಷ್ಣಾವತಾರವಾದಕೂಡಲೇ ದೇವಕೀ–ವಸುದೇವರು ಪರಮಾತ್ಮನನ್ನು ಬಗೆಬಗೆಯಾಗಿ ಸ್ತುತಿಸುವರು. ಶ್ರೀಕೃಷ್ಣನ ಆದೇಶದಂತೆ ವಸುದೇವನು ಶಿಶುವನ್ನು ನಂದಗೋಕುಲಕ್ಕೆ ಕೊಂಡುಹೋಗಿ ಯಶೋದೆಯ ಬಳಿ ಮಲಗಿಸಿ ಯಶೋದಾ ಗರ್ಭದಲ್ಲಿ ಹುಟ್ಟಿದ ಯೋಗಮಾಯೆಯನ್ನು ದೇವಕಿಯ ಬಳಿ ತಂದು ಮಲಗಿಸಿದನು. ದೇವಕಿಯು ಪ್ರಸವಿಸಿದ ಸುದ್ದಿಯನ್ನು ಕೇಳಿದ ಕಂಸನು ಯೋಗಮಾಯೆಯನ್ನು ಕೊಲ್ಲಲು ಬಂದಾಗ ತನಗೆ ಮೃತ್ಯುವಾದ ಕೃಷ್ಣನು ನಂದಗೋಕುಲದಲ್ಲಿ ಬೆಳೆಯುತ್ತಿರುವುದನ್ನು ತಿಳಿದು ಬಹಳ ಚಿಂತಾಕ್ರಾಂತನಾಗುವನು.

**ಶ್ರೀಕೃಷ್ಣನ ಬಾಲಲೀಲೆಗಳು:** ಶ್ರೀಕೃಷ್ಣನಿಗೆ ನಂದಗೋಕುಲದಲ್ಲಿ ಜಾತಕರ್ಮ ನಾಮಕರಣಾದಿ ಮಹೋತ್ಸವಗಳು ಜರುಗುವುವು. ಈ ಶಿಶುವು ತನ್ನನ್ನು ಕೊಲ್ಲುವುದಕ್ಕಾಗಿ ಕಂಸನು ಕಳುಹಿಸಿದ ಪೂತನೆಯೆಂಬ ರಾಕ್ಷಸಿಯನ್ನೂ ಶಕಟಾಸುರ, ತೃಣಾವರ್ತ, ಅಘಾಸುರ, ಬಕಾಸುರ, ವತ್ಸಾಸುರರನ್ನೂ ಸಂಹರಿಸುವುದು. ಶ್ರೀಕೃಷ್ಣನ ಚೇಷ್ಟೆಗಳನ್ನು ನೋಡಿ ಯಶೋದೆಯು ಅವನನ್ನು ಒಂದು ಒರಳುಕಲ್ಲಿಗೆ ಕಟ್ಟಿಹಾಕುವ ಸಾಹಸ ಮಾಡಿದಾಗ ಒರಳನ್ನು ಎಳೆದುಕೊಂಡು ಹೋಗಿ ಅರ್ಜುನವೃಕ್ಷಗಳನ್ನು ಕೆಡವಿ ಯಮಳಾರ್ಜುನರ ಶಾಪವಿಮೋಚನೆಮಾಡುವನು. ಭಾಗ० ೧೦-೯, ೧೦। ಮಣ್ಣನ್ನು ತಿನ್ನಲು ಹೋದಾಗ ಯಶೋದೆಯು ಬಾಯಿತೆರೆದು ನೋಡಲು ಅವಳಿಗೆ ವಿಶ್ವರೂಪಪ್ರದರ್ಶನವಾಗುವುದು. ಭಾಗ० ೧೦-೮। ರಾಕ್ಷಸರ ಹಾವಳಿಗಳನ್ನೂ, ಶ್ರೀಕೃಷ್ಣನ ಅಮಾನುಷವಾದ ಮತ್ತು ಅದ್ಭುತವಾದ ಬಾಲಲೀಲೆಗಳಿಂದ ವಿಪತ್ತುಗಳೆಲ್ಲವೂ ಪರಿಹಾರವಾದುದನ್ನೂ ಕಂಡ ಗೋಪಗೋಪಾಲಕರೆಲ್ಲರೂ ಬೃಂದಾವನಕ್ಕೆ ತೆರಳುವರು. ಭಾಗ० ೧೦-೧೧। ಗೋಪಾಲಕರೊಡನೆ ಶ್ರೀಕೃಷ್ಣನು ಗೋವುಗಳನ್ನು ಕಾಯುತ್ತಿದ್ದಾಗ ಬ್ರಹ್ಮನು ಎಲ್ಲಾ ಗೋಪಾಲಕರನ್ನೂ ಹಸುಕರುಗಳನ್ನೂ ಅಪಹರಿಸಿಕೊಂಡು ಹೋಗುವುದು. ಒಂದು ವರ್ಷಕಾಲ ಶ್ರೀಕೃಷ್ಣನು ಆಯಾ ಗೋಪಾಲಕರು ಮತ್ತು ದನಕರುಗಳ ರೂಪದಿಂದಿರಲಾಗಿ ಬ್ರಹ್ಮನು ಗರ್ವಭಂಗದಿಂದ ಎಲ್ಲರನ್ನೂ ಮತ್ತೆ ಶ್ರೀಕೃಷ್ಣನಲ್ಲಿಗೆ ತಂದೊಪ್ಪಿಸಿ ಅವನನ್ನು ಸ್ತುತಿಸುವುದು. ಭಾಗ० ೧೦-೧೩, ೧೪। ಧೇನುಕಾಸುರವಧೆ, ಕಾಳಿಯಸರ್ಪಮರ್ದನ ಮತ್ತು ಸರ್ಪದ ವಿಷಜ್ವಾಲೆಯಿಂದ ಮೃತರಾದ ಗೋವುಗಳ ಮತ್ತು ಗೋಪಾಲಕರ ಪುನರುಜ್ಜೀವನ. ಭಾಗ० ೧೦-೧೫, ೧೬। ನಂದಗೋಪನು ಇಂದ್ರಯಾಗವನ್ನು ಮಾಡಲು ಯತ್ನಿಸಿದಾಗ ಶ್ರೀಕೃಷ್ಣನು ಅದನ್ನು ತಡೆದು ಗೋವರ್ಧನಪೂಜೆಯನ್ನು ಮಾಡಿಸುವನು. ಅದರಿಂದ ಇಂದ್ರನು ಕೋಪಗೊಂಡು ಮೇಘಗಳಿಗೆಲ್ಲಾ ಆಜ್ಞೆಮಾಡಿ ಭಯಂಕರವಾದ ಸಿಡಿಲು ಗುಡುಗು ಸಹಿತವಾದ ಪ್ರಚಂಡ ವೃಷ್ಟಿಯನ್ನು ಕರೆಯಲು ಗೋಪಾಲಕರೆಲ್ಲರೂ ಪರಮಪುರುಷನಾದ ಶ್ರೀಕೃಷ್ಣನನ್ನು ಮರೆಹೊಕ್ಕು ಪ್ರಾರ್ಥಿಸಿ

ಕೊಳ್ಳುವರು. ಆಗ ಶ್ರೀಕೃಷ್ಣನು ಗೋವರ್ಧನ ಪರ್ವತವನ್ನು ಮೇಲಕ್ಕೆತ್ತಿಹಿಡಿದು ಮಳೆಗಾಳಿಯಿಂದ ಎಲ್ಲರಿಗೂ ರಕ್ಷಣೆ ಕೊಟ್ಟುದುದನ್ನು ನೋಡಿ ಇಂದ್ರನು ಅವಮಾನಗೊಂಡು ಮೇಘಗಳೆಲ್ಲವನ್ನೂ ಹಿಂದಕ್ಕೆ ಕರೆಯಿಸುವನು. ಶ್ರೀಕೃಷ್ಣನ ಕ್ಷಮೆಯಾಚಿಸಿದ ಇಂದ್ರನಿಂದ ಗೋವಿಂದ ಪಟ್ಟಾಭಿಷೇಕ. ಭಾಗ ೧೦-೨೫-೨೭। ಶ್ರೀಕೃಷ್ಣನ ವೇಣುಗಾನವನ್ನು ಕೇಳಿ ಗೋಪಾಂಗನೆಯರೆಲ್ಲರೂ ಬಂದು ಅವನೊಡನೆ ಪ್ರೇಮಸಲ್ಲಾಪ ನಡೆಸುವುದು. ಶ್ರೀಕೃಷ್ಣನು ತಮ್ಮ ಸೌಂದರ್ಯಕ್ಕೆ ಮೆಚ್ಚಿರುವನೆಂದು ತಿಳಿದ ಗೋಪಾಂಗನೆಯರ ಅಹಂಕಾರವನ್ನು ಕಂಡು ಅಲ್ಲಿಂದ ಶ್ರೀಕೃಷ್ಣನ ಅಂತರ್ಧಾನ. ಆಗ ಗೋಪಾಂಗನೆಯರು ವಿರಹಾರ್ತರಾಗಿ "जयति तेऽधिकं जन्मना व्रज: श्रयत इन्दिरा शश्वदत्र हि। दयित दृश्यतां दिक्षु तावकास्त्वयि धृतासवस्त्वां विचिन्वते" ಇತ್ಯಾದಿ ಬಗೆಬಗೆಯಾಗಿ ಶ್ರೀಕೃಷ್ಣನ ಆಗಮನಕ್ಕಾಗಿ ಪ್ರಾರ್ಥಿಸುವುದು. ಅಲ್ಲಿ ಪರಮಾತ್ಮನ ಪ್ರಾದುರ್ಭಾವ. ಗೋಪಾಂಗನೆಯರೊಡನೆ ರಾಸಕ್ರೀಡೆ. ಭಾಗ ೧೦-೨೯-೩೩। ಧನುರ್ಯಾಗದ ನೆಪದಿಂದ ಬಲರಾಮ-ಕೃಷ್ಣರನ್ನು ಮಧುರೆಗೆ ಕರೆತರಲು ಕಂಸನು ಅಕ್ರೂರನನ್ನು ಕಳುಹಿಸುವನು. ಅಕ್ರೂರನು ಬರುವಾಗ ದಾರಿಯಲ್ಲಿ ಯಮುನಾನದಿಯಲ್ಲಿ ಸ್ನಾನ ಮಾಡುತ್ತಿದ್ದಾಗ ನೀರಿನಲ್ಲಿ ಶ್ರೀಕೃಷ್ಣನು ಅವನಿಗೆ ತನ್ನ ದಿವ್ಯರೂಪವನ್ನು ತೋರಿಸಿದನು. ಭಾಗ ೧೦-೩೯। ರಾಮಕೃಷ್ಣರು ಮಧುರೆಯನ್ನು ಪ್ರವೇಶಿಸಿ ಕಂಸನಿಗೆ ಚಂದನವನ್ನು ತಯಾರಿಸಿ ಕೊಡುತ್ತಿದ್ದ ಕುಬ್ಜೆಯ ಕುರೂಪವನ್ನು ಹೋಗಲಾಡಿಸಿ ಸುಂದರಿಯನ್ನಾಗಿ ಮಾಡಿ ಅನುಗ್ರಹಿಸಿದುದು. ಮಲ್ಲಶಾಲಾಪ್ರವೇಶ. ಮುಷ್ಟಿಕಾಸುರ-ಚಾಣೂರರ ವಧೆ. ಕಂಸನ ಸಂಹಾರ. ಭಾಗ ೧೦-೪೧-೪೪। ದೇವಕೀ-ವಸುದೇವರ ಬಂಧ ವಿಮೋಚನೆ. ಉಗ್ರಸೇನ ಪಟ್ಟಾಭಿಷೇಕ. ಶ್ರೀಕೃಷ್ಣ-ಬಲರಾಮರ ಉಪನಯನ. ಸಾಂದೀಪಿನಿಯಲ್ಲಿ ವಿದ್ಯಾಭ್ಯಾಸ. ಗುರುವಿನ ಮೃತಪುತ್ರನನ್ನು ಬದುಕಿಸಿ ತಂದೊಪ್ಪಿಸುವುದು. ಇತ್ಯಾದಿ ಇತ್ಯಾದಿ. ಭಾಗ ೧೦-೪೫।

**ಶ್ರೀಕೃಷ್ಣ-ಬಲರಾಮರ ವಿವಾಹ ಮುಂತಾದುವು:** ವಿದ್ಯಾಭ್ಯಾಸಾನಂತರ ಮಧುರೆಗೆ ಬಂದು ತನ್ನ ಸೋದರತ್ತೆಯ ಮಕ್ಕಳಾದ ಪಾಂಡವರ ಯೋಗಕ್ಷೇಮ ತಿಳಿಯಲು ಹಸ್ತಿನಾವತಿಗೆ ಅಕ್ರೂರನನ್ನು ಕಳುಹಿಸುವುದು. ಭಾಗ ೧೦-೪೮। ಕಂಸವಧೆಯಿಂದ ಕುಪಿತನಾದ ಜರಾಸಂಧನೊಡನೆ ಯುದ್ಧ. ಬಲರಾಮನಿಗೆ ರೇವತಿಯೊಡನೆ ವಿವಾಹ. ಶ್ರೀಕೃಷ್ಣನಿಂದ ರುಕ್ಮಿಣೀಹರಣ. ರುಕ್ಮಿಣೀಕಲ್ಯಾಣ. ಭಾಗ ೧೦-೫೦-೫೨-೫೪।

**ಶ್ರೀಕೃಷ್ಣನ ಅಷ್ಟಮಹಿಷಿಯರು ಮತ್ತು ಅವರಲ್ಲಿ ಸಂತಾನಗಳು:**

(1) **ರುಕ್ಮಿಣೀ**— ಪ್ರದ್ಯುಮ್ನ, ಚಾರುದೇಷ್ಣ, ಸುದೇಷ್ಣ, ಚಾರುದೇಹ, ಸುಚಾರು, ಚಾರುಗುಪ್ತ, ಚಾರುಚಂದ್ರ, ವಿಚಾರು, ಭದ್ರಚಾರು ಮತ್ತು ಚಾರುಮತಿಯೆಂಬ ಕನ್ಯೆ.

(2) **ಸತ್ಯಭಾಮಾ**— ಭಾನು, ಸುಭಾನು, ಸ್ವರ್ಭಾನು, ಪ್ರಭಾನು, ಭಾನುಮಂತ, ಚಂದ್ರಭಾನು, ಬೃಹದ್ಭಾನು, ಅತಿಭಾನು, ಶ್ರೀಭಾನು, ಪ್ರತಿಭಾನು ಮತ್ತು ಒಬ್ಬ ಕನ್ಯೆ.

(3) **ಜಾಂಬವತೀ**— ಸಾಂಬ, ಸುಮಿತ್ರ, ಪುರುಜಿತ್, ಶತಜಿತ್, ಸಹಸ್ರಜಿತ್, ವಿಜಯ, ಚಿತ್ರಕೇತು, ವಸುಮಾನ, ದ್ರವಿಡ, ಕ್ರತು ಮತ್ತು ಒಬ್ಬ ಕನ್ಯೆ.

(4) **ಭದ್ರಾ**— ಸಂಗ್ರಾಮಜಿತ್, ಬೃಹತ್ಸೇನ, ಶೂರ, ಪ್ರಹರಣ, ಅರಿಜಿತ್, ಜಯ, ಸುಭದ್ರ, ವಾಮ, ಆಯು, ಸತ್ಯಕ ಮತ್ತು ಒಬ್ಬ ಕನ್ಯೆ.

(5) **ಮಿತ್ರವಿಂದಾ**— ವೃಕ, ಹರ್ಷ, ಅನಿಲ, ಗೃಧ್ರ, ವರ್ಧನ, ಉನ್ನಾದ, ಮಹಾಶ, ಪಾವನ, ವಹ್ನಿ, ಕ್ಷುಧಿ.

(6) **ಸತ್ಯಾ**— ವೀರ, ಚಂದ್ರ, ಅಶ್ವಸೇನ, ಚಿತ್ರಗು, ವೇಗವಂತ, ವೃಷ, ಆಮ್ರ, ಕುಂತಿ, ಶಂಕು.

(7) **ಕಾಳಿಂದೀ**— ಶ್ರುತ, ಕವಿ, ವೃಷ, ವೀರ, ಸುಬಾಹು, ಭದ್ರ, ಶಾಂತಿ, ದರ್ಶ, ಪೂರ್ಣಮಾಸ ಮತ್ತು ಸೋಮಕ.

(8) **ಲಕ್ಷ್ಮಣಾ**— ಪ್ರಘೋಷ, ಗಾತ್ರವಂತ, ಸಿಂಹಬಲ, ಪ್ರಬಲ, ಊರ್ಧ್ವಗ, ಮಹಾಶಕ್ತಿ, ಸಹ, ಓಜ, ಅಪರಿಜಿತ್ ಮತ್ತು ಒಬ್ಬ ಕನ್ಯೆ.

ಇವರಲ್ಲದೆ ಮತ್ತೊಬ್ಬ ಪತ್ನಿ **ರೋಹಿಣಿಯಲ್ಲಿ ಹುಟ್ಟಿದವರು:** ಪ್ರದ್ಯುಮ್ನ, ಅನಿರುದ್ಧ, ದೀಪ್ತಿಮಂತ, ಭಾನು, ಸಾಂಬ, ಮಧು, ಬೃಹದ್ಭಾನು, ಚಿತ್ರಭಾನು, ವೃಕ, ಅರುಣ, ಪುಷ್ಕರ, ಶ್ರುತವೇಗ, ಸುನಂದನ, ಕವಿ, ನ್ಯಗ್ರೋಧ, ವಿರೂಪ ಮತ್ತು ಚಿತ್ರಭಾನು. ಭಾಗ ೧೦-೬೧। ಇವರೆಲ್ಲರ ಮತ್ತು ಇನ್ನು ಹದಿನಾರು ಸಾವಿರ ಮಂದಿ ಪತ್ನಿಯರ

ಮನೆಗಳಲ್ಲೂ ಶ್ರೀಕೃಷ್ಣನು ಏಕಕಾಲದಲ್ಲಿ ಬೇರೆ ಬೇರೆ ಕಾರ್ಯಗಳಲ್ಲಿ ನಿರತನಾಗಿ ಸಂಸಾರ ಮಾಡುತ್ತಿದ್ದನು. ಈ ಆಶ್ಚರ್ಯವನ್ನು ನೋಡುವ ಕುತೂಹಲದಿಂದ ನಾರದ ಮಹರ್ಷಿಯು ಪ್ರತಿಯೊಂದು ಮನೆಗೂ ಹೋಗಿ ನೋಡಿದಾಗ ಶ್ರೀಕೃಷ್ಣನು :

ಒಂದು ಮನೆಯಲ್ಲಿ ಪಗಡೆಯಾಟವಾಡುತ್ತಲೂ
,, ಸ್ನಾನಕ್ಕಾಗಿ ಸಿದ್ಧನಾಗುತ್ತಲೂ
,, ಯಾಗ ಮಾಡುತ್ತಲೂ
,, ಬ್ರಾಹ್ಮಣಭೋಜನ ಮಾಡಿಸುತ್ತಲೂ
,, ಸಂಧ್ಯಾವಂದನೆ ಮಾಡುತ್ತಲೂ
,, ಜಪಮಾಡುತ್ತಲೂ
,, ಆನೆ ಕುದುರೆಗಳ ಮೇಲೆ ಸವಾರಿ ಮಾಡುತ್ತಲೂ
,, ಮಂಚದ ಮೇಲೆ ಮಲಗಿಕೊಂಡೂ
,, ಮಂತ್ರಿಗಳೊಡನೆ ಮಂತ್ರಾಲೋಚನೆ ಮಾಡಿಕೊಂಡೂ
,, ವಾರಾಂಗನೆಯರೊಡನೆ ಜಲಕ್ರೀಡಾಸಕ್ತನಾಗಿಯೂ

ಮುಂತಾಗಿ ಅದ್ಭುತವಾದ ಕಾರ್ಯಗಳಲ್ಲಿ ನಿರತನಾಗಿದ್ದನು. "नरकं निहतं श्रुत्वा तथोद्वाहं च योषिताम्। कृष्णेनैकेन बह्वीनां तद्दिदृक्षुः स्म नारदः। चित्रं बतैतदेकेन वपुषा युगपत् पृथक्। गृहेषु द्व्यष्टसाहस्रं स्त्रिय एक उदावहत्। इत्युत्सुको द्वारवतीं देवर्षिर्द्रष्टुमागमत्। ............ ..................। ततोऽन्यदाविशद्गेहं कृष्णपत्न्याः स नारदः। दीव्यन्तमक्षैस्तत्रापि प्रियया चोद्धवेन च। पूजितः परया भक्त्या प्रत्युत्थानासनादिभिः। स तु विस्मित उत्थाय तूष्णीमन्यदगाद्गृहम्। तत्राप्यचष्ट गोविन्दं लालयन्तं सुतान् शिशून्। ततोऽन्यस्मिन् गृहेऽपश्यन्मज्जनाय कृतोद्यमम्। जुह्वन्तं च वितानाग्नीन् यजन्तं पञ्चभिर्मखैः। भोजयन्तं द्विजान् क्वापि भुञ्जानमवशेषितम्। क्वापि सन्ध्यामुपासीनं जपन्तं ब्रह्म वाग्यतम्। अश्वैर्गजैरथैः क्वापि विचरन्तं गदाग्रजम्। क्वचिच्छयानं पर्यङ्के स्तूयमानं च वन्दिभिः। मन्त्रयन्तं च कस्मिंश्चिन्मन्त्रिभिश्चोद्धवादिभिः। जलक्रीडारतं चापि वारमुख्याबलावृतम्" भाग० १०-६९। ಇತ್ಯಾದಿ. ಧರ್ಮರಾಜನ ರಾಜಸೂಯಯಾಗದಲ್ಲಿ ಶ್ರೀಕೃಷ್ಣನಿಗೆ ಅಗ್ರಪೂಜೆಮಾಡಿದಾಗ ಅಸಹನೆಯಿಂದ ಕೋಪಗೊಂಡು ನಿಂದಿಸುತ್ತಿದ್ದ ಶಿಶುಪಾಲನನ್ನು ಶ್ರೀಕೃಷ್ಣನು ಸಂಹರಿಸಿದುದು. भाग० १०-७४। ದಂತವಕ್ತ್ರ ಮತ್ತು ವಿದೂರಥರ ವಧೆ. भाग० १०-७८। ಕಡು ಬಡವನಾಗಿದ್ದ ಕುಚೇಲನು ಪತ್ನಿಯ ಪ್ರೇರಣೆಯಿಂದ ಶ್ರೀಕೃಷ್ಣನಲ್ಲಿಗೆ ತನ್ನ ಕಷ್ಟವನ್ನು ಹೇಳಿಕೊಳ್ಳಲು ಹೋಗಿ ಆತನಿಂದ ಸತ್ಕಾರ ಹೊಂದಿ ತಮ್ಮ ಊರಿಗೆ ಬಂದು ಸೇರುವುದರೊಳಗಾಗಿ ತನ್ನನ್ನು ಅಮಿತವಾದ ಐಶ್ವರ್ಯವಂತನನ್ನಾಗಿ ಮಾಡಿದ ಶ್ರೀಕೃಷ್ಣನ ವಾತ್ಸಲ್ಯವನ್ನು ಕೊಂಡಾಡಿದುದು. भाग० १०-८०, ८१। ದುರ್ಯೋಧನನ ಸಭೆಯಲ್ಲಿ ದುಃಶಾಸನನು ದ್ರೌಪದಿಯ ವಸ್ತ್ರಾಪಹಾರ ಮಾಡುತ್ತಿದ್ದಾಗ ದ್ರೌಪದಿಗೆ ಅಕ್ಷಯವಸ್ತ್ರವನ್ನು ಅನುಗ್ರಹಿಸಿ ಮಾನ ಸಂರಕ್ಷಣೆ ಮಾಡಿದುದು. भा० सभा० ९०। ದುರ್ಯೋಧನನ ಪ್ರೇರಣೆಯಿಂದ ದುರ್ವಾಸಮಹರ್ಷಿಯು, ಎಲ್ಲರೂ ಊಟಮಾಡಿ ಪಾತ್ರೆಯು ಖಾಲಿಯಾಗಿದ್ದಾಗ ಪಾಂಡವರಲ್ಲಿಗೆ ಬಂದು ಭಿಕ್ಷೆ ಬೇಡಲು ದ್ರೌಪದಿಯು ಏನೂ ತೋಚದೆ ಶ್ರೀಕೃಷ್ಣನನ್ನು ಸ್ಮರಿಸಿಕೊಂಡಳು. ಶ್ರೀಕೃಷ್ಣನು ಪರಮವಿಶ್ವಾಸದಿಂದ ಬಂದು ಅಕ್ಷಯ ಪಾತ್ರೆಯ ಅಂಚಿನಲ್ಲಿ ಅಂಟಿಕೊಂಡಿದ್ದ ಒಂದು ಶಾಕ ದಳವನ್ನು ಆಪೋಶನ ತೆಗೆದುಕೊಂಡು ದುರ್ವಾಸರಿಗೂ ಶಿಷ್ಯವರ್ಗಕ್ಕೂ ತೃಪ್ತಿಯುಂಟುಮಾಡಿ ಪಾಂಡವರನ್ನು ರಕ್ಷಿಸಿದುದು. भा० वन० २६४। ಪಾಂಡವರಿಗೆ ಅರ್ಧ ರಾಜ್ಯವನ್ನು ಕೊಡಿಸುವುದಕ್ಕಾಗಿ ದುರ್ಯೋಧನನಲ್ಲಿಗೆ ದೂತನಾಗಿ ಹೋಗಿದ್ದಾಗ ದುರ್ಯೋಧನನು ಸಭೆಯಲ್ಲಿ ಶ್ರೀಕೃಷ್ಣನನ್ನು ಕಟ್ಟಿಹಾಕುವಂತೆ ಮನಸ್ಸು ಮಾಡಲು ತನ್ನ ವಿಶ್ವರೂಪವನ್ನು ತೋರಿಸಿ ಎಲ್ಲರನ್ನೂ ಚಕಿತರನ್ನಾಗಿ ಮಾಡಿದುದು ಮತ್ತು ಧೃತರಾಷ್ಟ್ರನಿಗೂ ಭೀಷ್ಮ ದ್ರೋಣ ವಿದುರಾದಿಗಳಿಗೂ ದಿವ್ಯ ಚಕ್ಷುಸ್ಸನ್ನು ಅನುಗ್ರಹಿಸಿದುದು. भा० उद्योग० १३१। ಕರ್ಣನನ್ನು ಪಾಂಡವರೊಡನೆ ಸೇರಬೇಕೆಂದು ಪ್ರೋತ್ಸಾಹಿಸಿದುದು. भा० उद्योग० १३७। ರಣರಂಗದಲ್ಲಿ ಅರ್ಜುನನು ತನ್ನ ಬಂಧುಗಳ ಮೇಲೆ ಯುದ್ಧಮಾಡಲು ಹಿಂಜರಿದಾಗ ಶ್ರೀ ಭಗವದ್ಗೀತೆಯನ್ನು ಉಪದೇಶಿಸಿ ತನ್ನ ದಿವ್ಯ ಮಹಿಮೆಯನ್ನು ತೋರಿ ಯುದ್ಧೋದ್ಯುಕ್ತನನ್ನಾಗಿ ಮಾಡಿದುದು. भा० भीष्म० २५-४२। ಕರ್ಣಾರ್ಜುನರ ಘೋರಯುದ್ಧದಲ್ಲಿ ಅರ್ಜುನನ ಮೇಲೆ ಪ್ರಯೋಗಿಸಿದ ನಾಗಾಸ್ತ್ರದ ಗುರಿಯನ್ನು ತಪ್ಪಿಸಲು ಶ್ರೀಕೃಷ್ಣನು ಅರ್ಜುನನ ರಥವು ನೆಲಕ್ಕೆ ಕುಸಿಯುವಂತೆ ಮಾಡಿ ಅವನನ್ನು ರಕ್ಷಿಸಿದುದು. भा० कर्ण० ९७। ತಾಯಿಯ ಗರ್ಭದಲ್ಲಿದ್ದಾಗ ಅಶ್ವತ್ಥಾಮನ ಬ್ರಹ್ಮಾಸ್ತ್ರಕ್ಕೆ ತುತ್ತಾಗಿದ್ದ ಪರಿಕ್ಷಿತ್ತನ್ನು ಬದುಕಿಸಿದುದು. भा० अश्व० ६९। ಕುರುಕುಲನಾಶಕ್ಕೂ ಸಕಲ ರಾಜರ

ವಿನಾಶಕ್ಕೂ ಶ್ರೀಕೃಷ್ಣನೇ ಕಾರಣನೆಂದು ತಿಳಿದ ಉದಂಕ ಮುನಿಯು ಶ್ರೀಕೃಷ್ಣನಿಗೆ ಶಾಪವನ್ನು ಕೊಡಲು ಹೋದಾಗ ಶ್ರೀಕೃಷ್ಣನು ಆ ಮುನಿಗೆ ತನ್ನ ನಿಜರೂಪವನ್ನು ತೋರಿದುದು. भा० आश्व० ५३। ಇತ್ಯಾದಿ ಇತ್ಯಾದಿ. 2. ಅರ್ಜುನ, ಇದು ಅರ್ಜುನನ ಹತ್ತು ಹೆಸರುಗಳಲ್ಲೊಂದು. "कृष्ण इत्येव दशमं नाम चक्रे पिता मम। कृष्णावदातस्य सतः प्रियत्वाद्बालकस्य वै" भा० विरा० ४०-२२। 3. ಮಹಾದೇವ. "दीर्घश्च हरिकेशश्च सुतीर्थः कृष्ण एव च" भा०। 4. ವ್ಯಾಸಮಹರ್ಷಿ. "यो व्यस्य वेदांश्चतुरो भगवांस्तपसा ऋषिः। लोके व्यासत्वमापेदे काष्ण्र्यात् कृष्णत्वमेव च" भा० आदि० १०५। 5. ಕೋಗಿಲೆ. 6. ಕಲಿಯುಗ. 7. ಕಾಗೆ. 8. ಕಪ್ಪುಬಣ್ಣ. 9. ಕರಮರ್ದಕ ವೃಕ್ಷ. ಕವುರಿಕೆಗಿಡ. 10. ಕೃಷ್ಣಪಕ್ಷ, ತಿಂಗಳಿನ ಎರಡನೆಯ ಅರ್ಧಭಾಗ. "चन्द्रवृद्धिकरः शुक्लः कृष्णश्चन्द्रक्षयात्मकः" तिथित०। 11. ಕೃಷ್ಣಪಕ್ಷದ ದೇವತೆ. "धूमो रात्रिस्तथा कृष्णः षण्मासा दक्षिणायनम्" गीता ८-२५। 12. ಶೂದ್ರ. 13. ಆನೆ. 14. ಅಗ್ನಿ, ಬೆಂಕಿ. (न०) 15. ದುರಿತ, ಪಾಪ. 16. ಮೆಣಸು. 17. ಕೃಷ್ಣಲೋಹ, ಕಬ್ಬಿಣ. (वि०) 18. ಕಪ್ಪುಬಣ್ಣದ. (स्त्री०) **–ष्णा –ಷ್ಣಾ.** 19. ದ್ರೌಪದಿ, ಪಾಂಡವರ ಪತ್ನಿ. "कृष्णेत्येवाब्रुवन् कृष्णां कृष्णाभूत् सा हि वर्णतः। तथा तन्मिथुनं जज्ञे द्रुपदस्य महामखे" भा० आदि० १८१-५७। 20. ಹಿಪ್ಪಲಿ. 21. ದ್ರಾಕ್ಷಿ. 22. ನೀಲಿಗಿಡ. 23. ಕರಿಜೀರಿಗೆ. 24. ಶೀವನೆಯ ಮರ. 25. ಕಟುಕ ರೋಹಿಣಿ. 26. ಬಾಹುಜಿಗೆ ಗಿಡ. "कृष्णः काके पिके वर्णे विष्णौ व्यासेऽर्जुने कलौ। कृष्णा तु नील्यां द्रौपद्यां पिप्पलीद्राक्षयोरपि। कृष्णं तु मरिचे लोहे" हेम०। 27. ಕೃಷ್ಣಾನದಿ. "व्यासार्जुनाग्निहरिकोकिलकाकशूद्रतामिस्रपक्षकरिनीलगुणेषु कृष्णः। द्रव्ये त्रिषु द्रुपदजाततटिनीकणासु कृष्णाथ लोहमरिचे दुरितं च कृष्णम्" नानार्थर०।

**कृष्णक ಕೃಷ್ಣಕ** (पुं०) 1. ಕರಿ ಎಳ್ಳು. कृष्णप्रकारः "कन्" (५-४-३)। (न०) 2. ಕೃಷ್ಣಾಜಿನನೆಂಬ ಒಬ್ಬ ಮನುಷ್ಯ. कृष्णाजिन "कन्" अजिनपदलोपश्च (५-३-८२)।

**कृष्णकन्द ಕೃಷ್ಣಕಂದ** (न०) ಕೆಂದಾವರೆ, ರಕ್ತೋತ್ಪಲ. कृष्णः कन्दोऽस्य।

**कृष्णकर्मन् ಕೃಷ್ಣಕರ್ಮನ್** (न०) 1. ಅಕೃತ್ಯ, ಕೆಟ್ಟಕೆಲಸ, ನಿಷಿದ್ಧವಾದ ಕಾರ್ಯ. कृष्णं कर्म। 2. ಗಾಯವನ್ನು ಒಣಗಿಸಿ ಕಪ್ಪಾಗಿಸುವ ಕಾರ್ಯ. "दारुणत्वात्तु शुक्लानां कृष्णकर्म हितं भवेत्। भल्लातकान् वासयेत्तु क्षीरे प्राङ्मूत्रभावितान्" इत्यादि सुश्रुत० चिकित्सा० १। (वि०) 3. ಕೆಟ್ಟಕೆಲಸಮಾಡುವ, ನಿಷಿದ್ಧವಾದ ಪಾಪಕಾರ್ಯಮಾಡುವ. कृष्णं कर्म यस्य।

**कृष्णकाक ಕೃಷ್ಣಕಾಕ** (पुं०) ಒಂದು ಜಾತಿಯ ಕಾಗೆ, ಮುಂಡಕಾಗೆ, ಡೊಂಬಕಾಗೆ.

**कृष्णकाय ಕೃಷ್ಣಕಾಯ** (पुं०) ಮಹಿಷ, ಎಮ್ಮೆ. कृष्णः कायोऽस्य। स्त्रियाम् "टाप्" (४-१-४)। अत्र योपधत्वात् न ङीष्। **–काया –ಕಾಯಾ.**

**कृष्णकोहल ಕೃಷ್ಣಕೋಹಲ** (पुं०) ಜೂಜುಗಾರ, ಜೂಜಾಟದವನು. "द्यूतकृत् कृष्णकोहलः" त्रिकाण्ड०।

**कृष्णगङ्गा ಕೃಷ್ಣಗಂಗಾ** (स्त्री०) ಕೃಷ್ಣಾನದಿ.

**कृष्णगति ಕೃಷ್ಣಗತಿ** (पुं०) ಅಗ್ನಿ, ಬೆಂಕಿ. कृष्णा धूमरूपा गतिर्यस्य। "आयोधने कृष्णगतिं सहायमवाप्य यः क्षत्रियकालरात्रिम्" रघु० ६-४२।

**कृष्णगर्भ ಕೃಷ್ಣಗರ್ಭ** (पुं०) ಕರಿಶಿವನಿಯ ಮರ. कृष्णवर्णो गर्भोऽस्य।

**कृष्णगिरि ಕೃಷ್ಣಗಿರಿ** (पुं०) 1. ನೀಲಪರ್ವತ. 2. ಸೇಲಂ ಜಿಲ್ಲೆಯಲ್ಲಿ ಒಂದು ಗ್ರಾಮ.

**कृष्णग्रीव ಕೃಷ್ಣಗ್ರೀವ** (पुं०) 1. ನೀಲಕಂಠ, ಮಹಾದೇವ, ಪರಮೇಶ್ವರ. कृष्णा ग्रीवाऽस्य। (वि०) 2. ಕಪ್ಪಾದ ಕುತ್ತಿಗೆಯುಳ್ಳ. कृष्णा ग्रीवा यस्य।

**कृष्णचञ्चु (क) ಕೃಷ್ಣಚಂಚು (ಕ)** (पुं०) ಚಣಕ, ಕಡಲೆ. कृष्णा चञ्चुरस्य वा "कप्" (५-४-१५४)।

**कृष्णचतुर्दशी ಕೃಷ್ಣಚತುರ್ದಶೀ** (स्त्री०) ಕೃಷ್ಣಪಕ್ಷದ ಚತುರ್ದಶಿ, ಮಾಸದ ಎರಡನೆಯ ಅರ್ಧದ ಹದಿನಾಲ್ಕನೆಯ ದಿನ.

**कृष्णचन्दन ಕೃಷ್ಣಚಂದನ** (न०) ಹರಿಚಂದನ, ಬಿಳಿಚಂದನ. कृष्णप्रियं चन्दनम्।

**कृष्णचन्द्र ಕೃಷ್ಣಚಂದ್ರ** (पुं०) ಶ್ರೀಕೃಷ್ಣ, ವಾಸುದೇವ. कृष्णश्चन्द्र इव।

**कृष्णचूर्ण ಕೃಷ್ಣಚೂರ್ಣ** (न०) 1. ಕಬ್ಬಿಣದ ತುಕ್ಕು, ಕಬ್ಬಿಣದ ಕಿಲುಬು. 2. ಅರದಿಂದ ಕಬ್ಬಿಣವನ್ನು ಉಜ್ಜಿ ಬಂದ ಪುಡಿ, कृष्णं कृष्णवर्णं चूर्णम्, कृष्णलोहस्य चूर्णं वा।

**कृष्णज ಕೃಷ್ಣಜ** (पुं०) ಶ್ರೀಕೃಷ್ಣನ ಮಗ, ಪ್ರದ್ಯುಮ್ನ. कृष्णात् जायते – जनी (प्रादुर्भावे) "डः" (३-२-९८)।

**कृष्णजटा ಕೃಷ್ಣಜಟಾ** (स्त्री०) ಜಟಾಮಾಂಸಿ. कृष्णा जटा यस्याः।

**कृष्णजन्मखण्ड ಕೃಷ್ಣಜನ್ಮಖಂಡ** (पुं०) ಶ್ರೀಕೃಷ್ಣನ ಜನ್ಮ (ಅವತಾರ) ವನ್ನು ವರ್ಣಿಸುವ ಬ್ರಹ್ಮವೈವರ್ತ ಪುರಾಣದ ಒಂದು ಭಾಗ.

**कृष्णजन्माष्टमी ಕೃಷ್ಣಜನ್ಮಾಷ್ಟಮೀ**(स्त्री०)ಶ್ರೀಕೃಷ್ಣನು ಅವತರಿಸಿದ ಶ್ರಾವಣ ಕೃಷ್ಣಾಷ್ಟಮಿ, ಶ್ರೀಕೃಷ್ಣನು ಹುಟ್ಟಿದ ದಿವಸ, ಸಿಂಹಮಾಸದ ಕೃಷ್ಣಪಕ್ಷದ ಅಷ್ಟಮಿ.

**कृष्णजीरक ಕೃಷ್ಣಜೀರಕ** (पुं०) ಕರಿಜೀರಿಗೆ. कृष्णो जीरकः।

**कृष्णता ಕೃಷ್ಣತಾ** (स्त्री०) ಕಪ್ಪಾಗಿರುವುದು. कृष्णस्य भावः "तल्" (५-१-११९)। "त्वः" (५-१-११९)। **-त्वम् -ತ್ವಮ್.**

**कृष्णत्वच् ಕೃಷ್ಣತ್ವಚ್** (स्त्री०) ಕೃಷ್ಣಾಜಿನ, ಜಿಂಕೆಯ ಚರ್ಮ. कृष्णस्य कृष्णमृगस्य त्वक्। "कण्ठप्रभासङ्ग-विशेषनीलां कृष्णत्वचं ग्रन्थिमतीं दधानम्" कुमा० ३-४६।

**कृष्णदेह ಕೃಷ್ಣದೇಹ** (पुं०) 1. ಕಪ್ಪುಮೈ. 2. ಭ್ರಮರ, ದುಂಬಿ. (वि०) 3. ಕಪ್ಪುದೇಹವುಳ್ಳ.

**कृष्णद्वादशी ಕೃಷ್ಣದ್ವಾದಶೀ** (स्त्री०) ಕೃಷ್ಣಪಕ್ಷದ ದ್ವಾದಶೀ ತಿಥಿ, ಕೃಷ್ಣಪಕ್ಷದ ಹನ್ನೆರಡನೆಯ ದಿವಸ.

**कृष्णद्वैपायन ಕೃಷ್ಣದ್ವೈಪಾಯನ** (पुं०) ಪರಾಶರ ಮಹರ್ಷಿಯ ಪುತ್ರ, ವೇದವ್ಯಾಸಮಹರ್ಷಿ. द्वीपोऽयनं जन्मभूमिरस्य। द्वीपायन एव "अण्" (५-४-३८)। "तमहमरागमकृष्णं कृष्णद्वैपायनं वन्दे" वेणी० १-४। "कृष्णद्वैपायनं व्यासं विद्धि नारायणं विभुम्। कोह्यन्यः पुण्डरीकाक्षात् महाभारतकृद्भवेत्" विष्णुपु०। [ಪರಾಶರ ಮುನಿಯು ಒಂದು ಸಲ ದೋಣಿಯಲ್ಲಿ ಕುಳಿತು ಯಮುನಾ ನದಿಯನ್ನು ದಾಟುತ್ತಿದ್ದಾಗ ದೋಣಿಯನ್ನು ನಡೆಸುತ್ತಿದ್ದ ದಾಶರಾಜನ ಮಗಳಾದ ಸತ್ಯವತಿಯನ್ನು ಮೋಹಿಸಿದುದ ರಿಂದ ನದಿಯ ಮಧ್ಯದಲ್ಲೇ ಆಗಲೇ ಮಗುವೊಂದು ಜನಿಸಿತು. ಶಿಶುವು ಕೃಷ್ಣವರ್ಣವಾದುದರಿಂದಲೂ ಯಮುನಾನದಿಯ ದ್ವೀಪದಲ್ಲಿ ಹುಟ್ಟಿದುದರಿಂದಲೂ **"ಕೃಷ್ಣದ್ವೈಪಾಯನ"** ರೆಂದೂ ಈ ಮಹರ್ಷಿಯು ತಪಃಪ್ರಭಾವದಿಂದ ವೇದಗಳ ವಿಭಾಗಮಾಡಿದುದರಿಂದ **"ವೇದವ್ಯಾಸ"** ರೆಂದೂ ಹೆಸರಾಯಿತು. "कन्यापुत्रो मम पुरा द्वैपायन इति श्रुतः। यो व्यस्य वेदांश्चतुर-स्तपसा भगवान् ऋषिः। लोके व्यासत्वमापेदे कार्ष्ण्यात् कृष्णत्वमेव च। सत्यवादी शमपरः तपस्वी दग्धकिल्बिषः। सद्योत्पन्नः स तु महान् सह पित्रा ततो गतः"] भा० आदि० १०४।

**कृष्णधन ಕೃಷ್ಣಧನ** (न०) ಅನ್ಯಾಯದಿಂದ ಸಂಪಾದಿಸಿದ ಹಣ, ಕಳ್ಳತನ ಜೂಜು ಕಾಳಸಂತೆ ಮೊದಲಾದುವು ಗಳಲ್ಲಿ ಸಂಪಾದಿಸಿದ ಹಣ. कृष्णं अन्यायार्जितं धनम्।

**कृष्णधान्य ಕೃಷ್ಣಧಾನ್ಯ** (न०) ಕಪ್ಪುಧಾನ್ಯ; ಉದ್ದು, ಎಳ್ಳು, ರಾಗಿ ಮುಂತಾದುವು.

**कृष्णपक्ष ಕೃಷ್ಣಪಕ್ಷ** (पुं०) 1. ಚಂದ್ರನ ಕಲೆಗಳು ಕಡಮೆ ಯಾಗುವ ತಿಂಗಳಿನ ಎರಡನೆಯ ಅರ್ಧಭಾಗ, ಕೃಷ್ಣ ಪ್ರತಿಪತ್ತಿನಿಂದ ಅಮಾವಾಸ್ಯೆವರೆಗಿನ ಹದಿನೈದು ದಿನ ಗಳುಳ್ಳ ಪಕ್ಷ. कृष्णः पक्षः। 2. ಶ್ರೀಕೃಷ್ಣನ ಪಕ್ಷ.

**कृष्णपदी ಕೃಷ್ಣಪದೀ** (स्त्री०) ಕಪ್ಪುಕಾಲಿನ ಹೆಂಗಸು. कृष्णः पादोऽस्याः। पादस्य लोपो "ङीप्" च (५-४-१३९) निपा०। "पादः पत्" (६-४-१३०) इति पदादेशः।

**कृष्णपर्णी ಕೃಷ್ಣಪರ್ಣೀ** (स्त्री०) ಕೃಷ್ಣತುಲಸಿ. कृष्णं पर्णमस्याः।

**कृष्णपाकफल ಕೃಷ್ಣಪಾಕಫಲ** (पुं०) ಕರಮರ್ದವೃಕ್ಷ, ಕವಳಿಕೆಗಿಡ. "कृष्णपाकफलाविग्नसुषेणाः करमर्दके" अम०।

**कृष्णपुच्छ ಕೃಷ್ಣಪುಚ್ಛ** (पुं०) ರೋಹಿತವೆಂಬ ಕಪ್ಪು ಬಾಲದ ಒಂದು ಜಾತಿಯ ಮೀನು, ಕೆಂಪು ಮೀನು. कृष्णः पुच्छोऽस्य।

**कृष्णफल ಕೃಷ್ಣಫಲ** (पुं०) ಕವಳಿಕೆಗಿಡ. कृष्णं फलमस्य।

**कृष्णभक्त ಕೃಷ್ಣಭಕ್ತ** (पुं०) ಶ್ರೀಕೃಷ್ಣನನ್ನು ಪೂಜಿಸು ವವನು, ಕೃಷ್ಣೋಪಾಸಕ.

**कृष्णभूम ಕೃಷ್ಣಭೂಮ** (पुं०) ಕಪ್ಪುಮಣ್ಣಿನ ಪ್ರದೇಶ. कृष्णा भूमिर्यस्य "अच्" (वा० ५-४-७५)। "पाण्डूदक्-कृष्णतो भूमः पाण्डूदक् कृष्णमृत्तिके" अभि० चि०।

**कृष्णभेदी ಕೃಷ್ಣಭೇದೀ** (स्त्री०) ಕಟುಕರೋಹಿಣಿ.

**कृष्णमुख ಕೃಷ್ಣಮುಖ** (पुं०) 1. ಕಪ್ಪುಮುಖದ ಒಂದು ಜಾತಿಯ ಕಪಿ. (वि०)2. ಕಪ್ಪುಮುಖವುಳ್ಳ. 3. ಕಪ್ಪು ತುದಿಯುಳ್ಳ, ತುದಿಯಲ್ಲಿ ಕಪ್ಪಾಗಿರುವ. कृष्णं मुखं वदनम् अग्रभागो वा यस्य। "तल्" (५-१-११९)। **-मुखता -ಮುಖತಾ.** 1. ಕಪ್ಪುಮುಖದಿಂದ ಕೂಡಿರು ವಿಕೆ. 2. ಕಪ್ಪು ತುದಿಯಿಂದ ಕೂಡಿರುವಿಕೆ. "स्तनयोः कृष्णमुखता रोमराज्युद्गमस्तथा" सुश्रुत०।

**कृष्णमृग ಕೃಷ್ಣಮೃಗ** (पुं०) ಕಪ್ಪುಚುಕ್ಕೆಯ ಜಿಂಕೆ, ಚಿಗರಿ. कृष्णो मृगः। "रुरून् कृष्णमृगांश्चैव मेध्यादन्यान्

वनेचरान्" भा० वन०। स्त्रियाम् "ङीप्" (४-१-६३)।
–मृगी –ಮೃಗೀ.

**कृष्णयजुर्वेद ಕೃಷ್ಣಯಜುರ್ವೇದ** (ಪುಂ) ಶುಕ್ಲ ಮತ್ತು ಕೃಷ್ಣಗಳೆಂಬ ಎರಡು ಯಜುರ್ವೇದಗಳಲ್ಲಿ ಒಂದು ಭೇದ. ತೈತ್ತಿರೀಯ ಯಜುರ್ವೇದವು ಇದರ ಒಂದು ಶಾಖೆ. (ವೈಶಂಪಾಯನ ಶಿಷ್ಯರಾದ) ಯಾಜ್ಞವಲ್ಕ್ಯಮಹರ್ಷಿಯು ಒಂದು ದಿನ ಗುರುವಾದ ವೈಶಂಪಾಯನರಲ್ಲಿ ಅಧಿಕ್ಷೇಪವಾಗಿ ಮಾತಾಡಲು ಅಧ್ಯಯನಮಾಡಿದ ವೇದವೆಲ್ಲವೂ ಹೊರಟು ಹೋಗಲೆಂಬ ಗುರುವಿನ ಶಾಪದಿಂದ ಯಾಜ್ಞವಲ್ಕ್ಯರು ವೇದವೆಲ್ಲವನ್ನೂ ವಾಂತಿಮಾಡಿದರು. ಇತರ ಮಹರ್ಷಿಗಳೆಲ್ಲರೂ ತಿತ್ತಿರಿಪಕ್ಷಿರೂಪದಿಂದ ಆ ವೇದವೆಲ್ಲವನ್ನೂ ಗ್ರಹಿಸಿ ಪ್ರಚಾರಮಾಡಿದುದರಿಂದ ಈ ವೇದಕ್ಕೆ **"ತೈತ್ತಿರೀಯ ಯಜುರ್ವೇದ"**ವೆಂದು ಹೆಸರಾಯಿತು.

ಯಜುರ್ವೇದವು ಎಂಬತ್ತಾರು ಭೇದಗಳಿಂದ ಕೂಡಿರುವುದು.

**ಚರಕಶಾಖೆಯುವರ ಭೇದಗಳು 12:** (1) चरकाः, (2) आह्वरकाः, (3) कठाः, (4) प्राच्यकठाः, (5) कापिष्ठलकठाः, (6) चारायणीयाः, (7) वार्तान्तिरीयाः, (8) श्वेताश्वतराः, (9) वाराहाः, (10) औपमन्यवः, (11) छागलेयाः ಮತ್ತು (12) मैत्रायणीयाः।

**ಮೈತ್ರಾಯಣೀಯ ಶಾಖೆಯುವರ ಭೇದಗಳು 7 :** (1) मानवाः, (2) मैत्रायणीयाः, (3) दुन्दुभाः, (4) चैकेयाः, (5) हारिद्रवेयाः, (6) श्यामाः ಮತ್ತು (7) श्यामायनीयाः।

**ವಾಜಸನೇಯ ಶಾಖೆಯುವರ ಭೇದಗಳು 15 :** (1) काण्वाः, (2) माध्यन्दिनाः, (3) शावीयाः, (4) श्यामायनीयाः, (5) कापोलाः (6) पौण्ड्रवत्साः, (7) आवटिकाः, (8) परमावटिकाः, (9) पाराशर्याः, (10) वैधेयाः, (11) वैनेयाः, (12) औधेयाः, (13) गालयाः, (14) वैजपाः ಮತ್ತು (15) कात्यायनीयाः।

**ತೈತ್ತಿರೀಯಕ ಶಾಖೆಯುವರ ಭೇದಗಳು 2 :** (1) औख्याः, (2) काण्डिकेयाः।

**ಕಾಂಡಿಕೇಯರ ಭೇದಗಳು 5 :** (1) आपस्तम्बी, (2) बौधायनी, (3) सत्याषाढी, (4) हिरण्यकेशी ಮತ್ತು (5) औधेयी। ಇತ್ಯಾದಿ.

ಇವುಗಳಲ್ಲಿ ಈಗ ದಕ್ಷಿಣದೇಶದಲ್ಲಿ ಹೆಚ್ಚು ವ್ಯಾಪಕವಾಗಿರುವುದು ತೈತ್ತಿರೀಯ ಶಾಖೆ. ಈ ತೈತ್ತಿರೀಯ ಶಾಖೆಯಲ್ಲಿ संहिता, ब्राह्मणम्, आरण्यकम्, उपनिषदः ಎಂದು ನಾಲ್ಕು ವಿಭಾಗಗಳಿರುವುವು. ಸಂಹಿತೆ, ಬ್ರಾಹ್ಮಣ ಮತ್ತು ಆರಣ್ಯಕೋಪನಿಷತ್ತುಗಳಲ್ಲಿ ಒಟ್ಟು 82 ಪ್ರಶ್ನಗಳಿರುವುದರಿಂದ ಅಶೀತಿದ್ವಯವಾಗುವುದು.

ಸಂಹಿತೆಯಲ್ಲಿ ಸಪ್ತ (7) ಕಾಂಡಗಳಿರುವುವು.

| | |
|---|---|
| 1 ನೆಯ ಕಾಂಡದಲ್ಲಿ | 8 ಪ್ರಶ್ನಗಳು |
| 2 ನೆಯ ,, | 6 ,, |
| 3 ನೆಯ ,, | 5 ,, |
| 4 ನೆಯ ,, | 7 ,, |
| 5 ನೆಯ ,, | 7 ,, |
| 6 ನೆಯ ,, | 6 ,, |
| 7 ನೆಯ ,, | 5 ,, |
| | 44 |

ಬ್ರಾಹ್ಮಣದಲ್ಲಿ ಅಷ್ಟಕಗಳು (3) ಮೂರು.

| | |
|---|---|
| 1 ನೆಯ ಅಷ್ಟಕದಲ್ಲಿ | 8 ಪ್ರಶ್ನಗಳು |
| 2 ನೆಯ ,, | 8 ,, |
| 3 ನೆಯ ,, (ಕಾಠಕವೂ ಸೇರಿ) | 12 ,, |
| ಆರಣ್ಯಕೋಪನಿಷತ್ತುಗಳಲ್ಲಿ | 10 ,, |
| ಒಟ್ಟು | 82 ಪ್ರಶ್ನಗಳು. |

ಸಂಹಿತೆಯಲ್ಲಿ ಯಜ್ಞಮಂತ್ರಗಳೂ ಬ್ರಾಹ್ಮಣದಲ್ಲಿ ವಿಧಿವಾಕ್ಯಗಳೂ ಆರಣ್ಯಕದಲ್ಲಿ ಬ್ರಹ್ಮಮೇಧ, ಪಿತೃಮೇಧ, ಪ್ರವರ್ಗ್ಯ ಮುಂತಾದುವುಗಳೂ ಉಪನಿಷತ್ತುಗಳಲ್ಲಿ ತತ್ತ್ವ ವಿಚಾರಗಳೂ ಉಕ್ತವಾಗಿವೆ.

**ಸಂಹಿತೆಯ ಪ್ರಮಾಣ :**

| | |
|---|---|
| ಕಾಂಡಗಳು | 7 |
| ಪ್ರಶ್ನಗಳು | 44 |
| ಅನುವಾಕಗಳು | 651 |
| ಹನಸುಗಳು | 2198 |
| ಪದಗಳು | 192090 |
| ಅಕ್ಷರಗಳು | 253868 |

**कृष्णयजुर्वेदीय ಕೃಷ್ಣಯಜುರ್ವೇದೀಯ** (वि०) ಕೃಷ್ಣಯಜುರ್ವೇದ ಸಂಬಂಧವಾದ, ಕೃಷ್ಣಯಜುರ್ವೇದದ.

**कृष्णयाम ಕೃಷ್ಣಯಾಮ** (ಪುಂ) ಅಗ್ನಿ, ಬೆಂಕಿ. कृष्णो यामो वर्त्म यस्य।

**कृष्णरक्त ಕೃಷ್ಣರಕ್ತ** (ಪುಂ) 1. ಕಪ್ಪು ಮತ್ತು ಕೆಂಪು ಬೆರೆತ ಬಣ್ಣ. कृष्णमिश्रो रक्तः। (वि०) 2. ಕಪ್ಪು ಮತ್ತು ಕೆಂಪು ಬೆರೆತ ಬಣ್ಣದ, ಧೂಮ್ರವರ್ಣದ. कृष्णश्चासौ रक्तश्च।

**कृष्णल ಕೃಷ್ಣಲ** (पुं०) 1. ಗುಲಗಂಜಿ ಗಿಡ. कृष्णं वर्णं लाति — ला(आदाने) "कः" (३-२-३)। (नं०)2. ಗುಲಗಂಜಿಕಾಯಿ. 3. ಮಧ್ಯಯವದ ತೂಕ. (ಇದೊಂದು ಪ್ರಾಚೀನ ಕಾಲದ ತೂಕ).

| | |
|---|---|
| ८ त्रसरेणवः | १ लिक्षा |
| ३ लिक्षाः | १ राजसर्षपः |
| ३ राजसर्षपाः | १ गौरसर्षपः |
| ६ गौरसर्षपाः | १ यवो मध्यमः |
| ३ मध्ययवाः | १ कृष्णलम् |
| ५ कृष्णलानि | १ माषः |

"त्रसरेणवोऽष्टौ विज्ञेया लिक्षैका परिमाणतः। ता राजसर्षपस्तिस्रः ते त्रयो गौरसर्षपः। सर्षपाः षट् यवो मध्यः त्रियवन्त्वेककृष्णलम्" मनु० ८-१३३, ३४। (स्त्री०) **—ला —ಲಾ.** ಗುಲಗಂಜಿಗಿಡ. स्वार्थे "कः"। **—लकः —ಲಕಃ.**

**कृष्णलवण ಕೃಷ್ಣಲವಣ** (नं०) ಸೌವರ್ಚಲವೆಂಬ ಲವಣ.

**कृष्णलोह ಕೃಷ್ಣಲೋಹ** (नं०)1. ಅಯಸ್ಕಾಂತ, ಸೂಜಿಗಲ್ಲು. 2. ಕಬ್ಬಿಣ.

**कृष्णलोहित ಕೃಷ್ಣಲೋಹಿತ** (पुं०) 1. ಕಪ್ಪು ಕೆಂಪು ಬೆರೆತ ಬಣ್ಣ. कृष्णमिश्रो लोहितः। (वि०) 2. ಕಪ್ಪು ಕೆಂಪು ಬೆರೆತ ಬಣ್ಣದ, ಧೂಮ್ರವರ್ಣದ.

**कृष्णवक्त्र ಕೃಷ್ಣವಕ್ತ್ರ** (पुं०) 1. ಕೃಷ್ಣಮುಖದ ವಾನರ, ಕಪಿ. कृष्णं वक्त्रं यस्य। (वि०)2. ಕಪ್ಪು ಮುಖವುಳ್ಳ. स्त्रियाम् "टाप्" (४-१-४)। **—वक्त्रा —ವಕ್ತ್ರಾ.**

**कृष्णवर्ण ಕೃಷ್ಣವರ್ಣ** (पुं०) 1. ಕಪ್ಪು ಬಣ್ಣ. कृष्णो वर्णः। 2. ರಾಹು. कृष्णो वर्णोऽस्य। (वि०)3. ಕಪ್ಪು ಬಣ್ಣದ. कृष्णो वर्णो यस्य।

**कृष्णवर्त्मन् ಕೃಷ್ಣವರ್ತ್ಮನ್** (पुं०)1. ಅಗ್ನಿ ಬೆಂಕಿ. कृष्णं वर्त्माऽस्य। "श्रद्दधे त्रिदशगोपमात्रके दाहशक्तिमिव कृष्णवर्त्मनि" रघु० ११-४२। 2. ಚಿತ್ರಕವೃಕ್ಷ, ಚಿತ್ರಮೂಲದ ಗಿಡ. 3. ರಾಹುಗ್ರಹ. (वि०)4. ನೀಚ ಕಾರ್ಯವನ್ನು ಮಾಡುವವನು. कृष्णमशुद्धं वर्त्माचरणं यस्य। "कृष्णवर्त्मा पुमानग्नौ दुराचारे विधुन्तुदे" मेदि०।

**कृष्णवल्ली ಕೃಷ್ಣವಲ್ಲೀ** (स्त्री०) 1. ಕೃಷ್ಣ ತುಲಸಿ. 2. ಸೊಗದೆ ಗಿಡ.

**कृष्णवानर ಕೃಷ್ಣವಾನರ** (पुं०) ಗೋಲಾಂಗೂಲವೆಂಬ ಒಂದು ಜಾತಿಯ ವಾನರ, ಒಂದು ಜಾತಿಯ ಕಪಿ.

**कृष्णवृन्ता ಕೃಷ್ಣವೃಂತಾ** (स्त्री०) ಹಸುರು ಪಾದರಿ ಗಿಡ. कृष्णं वृन्तमस्याः।

**कृष्णवृन्तिका ಕೃಷ್ಣವೃಂತಿಕಾ** (स्त्री०) ಶೀವನೆಯ ಮರ. कृष्णवृन्ता संज्ञायां "कन्" (५-३-८७)।

**कृष्णवेणी ಕೃಷ್ಣವೇಣೀ** (स्त्री०) ಭಾರತದೇಶದಲ್ಲಿ ಪ್ರಸಿದ್ಧವಾಗಿ ಪ್ರವಹಿಸುವ ಒಂದು ನದಿ, ಕೃಷ್ಣಾನದಿ. "ततो देवह्रदेऽरण्ये कृष्णवेणीजलोद्भवे। जातिस्मरह्रदे स्नात्वा भवेज्जातिस्मरो नरः" भा० वन० ८५-३८।

**कृष्णव्रीहि ಕೃಷ್ಣವ್ರೀಹಿ** (पुं०) ಕಪ್ಪುಬತ್ತ. कृष्णो व्रीहिः।

**कृष्णशकुनि ಕೃಷ್ಣಶಕುನಿ** (पुं०) ಕಾಗೆ. कृष्णः शकुनिः।

**कृष्णशार ಕೃಷ್ಣಶಾರ** (पुं०) ಕಪ್ಪು ಮತ್ತು ಚಿತ್ರವರ್ಣದ ಜಿಂಕೆ. कृष्णश्चासौ शारश्च।

**कृष्णशालि ಕೃಷ್ಣಶಾಲಿ** (पुं०) ಕಪ್ಪು ಬತ್ತ. कृष्णः शालिः।

**कृष्णशृङ्ग ಕೃಷ್ಣಶೃಂಗ** (पुं०) ಮಹಿಷ, ಎಮ್ಮೆ. कृष्णं शृङ्गमस्य।

**कृष्णसख ಕೃಷ್ಣಸಖ** (पुं०) ಕೃಷ್ಣನ ಗೆಳೆಯ, ಅರ್ಜುನ. कृष्णस्य सखा "टच्" (५-४-९१)।

**कृष्णसर्प ಕೃಷ್ಣಸರ್ಪ** (पुं०) ಕಾಳಿಂಗ ಸರ್ಪ. कृष्णः सर्पः। "आशीविषैः कृष्णसर्पैः सुप्तं चैनमदंशयत्" भा० आदि० ६१। स्त्रियाम् "टाप्"।

**कृष्णसर्षप ಕೃಷ್ಣಸರ್ಷಪ** (पुं०) ಕರಿ ಸಾಸವೆ. कृष्णः सर्षपः।

**कृष्णसार ಕೃಷ್ಣಸಾರ** (पुं०) ಸಾರಂಗದ ಒಂದು ಭೇದ, ಒಂದು ಜಾತಿಯ ಜಿಂಕೆ, ಮೈಯಲ್ಲಿ ಕಪ್ಪು ಚುಕ್ಕಿಗಳುಳ್ಳ ಚಿತ್ರವರ್ಣದ ಜಿಂಕೆ. कृष्णश्चासौ सारश्च। "कृष्णसारे ददच्चक्षुस्त्वयि चाधिज्यकार्मुके" शाकु० १-६।

**कृष्णसारङ्ग ಕೃಷ್ಣಸಾರಂಗ** (पुं०) ಒಂದು ಜಾತಿಯ ಜಿಂಕೆ. कृष्णश्चासौ सारङ्गश्च।

**कृष्णसारथि ಕೃಷ್ಣಸಾರಥಿ** (पुं०) 1. ಕೃಷ್ಣನೇ ಸಾರಥಿಯಾಗಿ ಉಳ್ಳ ಅರ್ಜುನ. कृष्णः सारथिर्यस्य। 2. ಕೃಷ್ಣನ ಸಾರಥಿ, ದಾರುಕ. कृष्णस्य सारथिः।

**कृष्णस्कन्ध ಕೃಷ್ಣಸ್ಕಂಧ** (पुं०) ಹೊಂಗೆಮರ, ತಮಾಲವೃಕ್ಷ. कृष्णः स्कन्धोऽस्य।

**कृष्णा ಕೃಷ್ಣಾ** (स्त्री०) "कृष्ण" ಪದದ ದ್ರೌಪದಿ ಮೊದಲಾದ ಸ್ತ್ರೀಲಿಂಗದ ಅರ್ಥ.

**कृष्णागुरु ಕೃಷ್ಣಾಗುರು** (पुं०) ಅಗುರು ಚಂದನ, ಕಪ್ಪು ಜಾತಿಯ ಚಂದನವೃಕ್ಷ.

**कृष्णाचल ಕೃಷ್ಣಾಚಲ** (पुं०) 1. ಕೃಷ್ಣನಿಗೆ ಪ್ರಿಯವಾದ ರೈವತಕ ಪರ್ವತ. कृष्णप्रियः अचलः। 2. ಇಂದ್ರನೀಲ ಪರ್ವತ. कृष्णः अचलः।

**कृष्णाजिन ಕೃಷ್ಣಾಜಿನ** (न०) ಜಿಂಕೆಯ ಚರ್ಮ, ಕೃಷ್ಣ ಮೃಗದ ತೊಗಲು. कृष्णस्य अजिनम्।

**कृष्णायस ಕೃಷ್ಣಾಯಸ** (न०) ಕೃಷ್ಣಲೋಹ, ಕಬ್ಬಿಣ. कृष्णमयः "टच्" (५-४-९४)।

**कृष्णाष्टमी ಕೃಷ್ಣಾಷ್ಟಮಿ** (स्त्री०) 1. ಶ್ರೀಕೃಷ್ಣನು ಅವತರಿಸಿದ ಸಿಂಹಮಾಸದ ಬಹುಳ ಅಷ್ಟಮಿ, ಜನ್ಮಾಷ್ಟಮಿ. ["कृष्णजयन्ती" ಪದದಲ್ಲಿ ನೋಡಿ.] 2. ಕೃಷ್ಣಪಕ್ಷದ ಅಷ್ಟಮೀ ತಿಥಿ.

**कृष्णिका ಕೃಷ್ಣಿಕಾ** (स्त्री०) ರಾಜಸಾಸವೆ, ಕರಿಸಾಸವೆ. कृष्णवर्णोऽतिशयेनास्त्यस्य "ठन्" (५-२-११५)।

**कृष्णेक्षु ಕೃಷ್ಣೇಕ್ಷು** (पुं०) ಕಾಡು ಕಬ್ಬು. कृष्णश्चासौ इक्षुश्च।

**कृष्णोदर ಕೃಷ್ಣೋದರ** (पुं०) ಕಪ್ಪು ಹೊಟ್ಟೆಯುಳ್ಳ ಒಂದು ಜಾತಿಯ ಸರ್ಪ. कृष्णमुदरमस्य। स्त्रियाम् जाति० "ङीष्" (४-१-६३)। **–उदरी –ಉದರೀ.**

**कृष्णोदुम्बरिका ಕೃಷ್ಣೋದುಂಬರಿಕಾ** (स्त्री०) ಕಲ್ಲತ್ತಿ ಗಿಡ. कृष्णस्य काकस्य प्रिया उदुम्बरिका।

**कृष्य ಕೃಷ್ಯ** (वि०) 1. ಎಳೆಯಲ್ಪಡುವ. 2. ಎಳೆಯಲು ಯೋಗ್ಯವಾದ. 3. ಎಳೆಯಲು ಶಕ್ಯವಾದ. कृष (विलेखने) "क्यप्" (३-१-११०)। 4. ಉಳಲು ಯೋಗ್ಯವಾದ, ಉಳಲ್ಪಡುವ, ಉಳಲು ಶಕ್ಯವಾದ. "कृष्यां दहन्नपि खलु क्षितिमिन्धनेद्धो बीजप्ररोहजननीं ज्वलनः करोति" रघु० ९-८०।

**कृष्यमाण ಕೃಷ್ಯಮಾಣ** (वि०) 1. ಉಳಲ್ಪಡುತ್ತಿರುವ. कृष (विलेखने) कर्म० "शानच्" (३-२-१२४)। 2. ಎಳೆಯಲ್ಪಡುತ್ತಿರುವ. "पुरो विलग्नैर्हरदृष्टिपातैः सुवर्णसूत्रैरिव कृष्यमाणः" कुमा० ७-५०।

**कृसर ಕೃಸರ** (पुं०) ತಿಲಾನ್ನ, ಎಳ್ಳಿನೊಡನೆ ಬೇಯಿಸಲ್ಪಟ್ಟ ಅನ್ನ. "तिलतण्डुलसंपक्वः कृसरः सोऽभिधीयते"।

**कॄ – विक्षेपे** (तुदा० पर० सक० से०)। किरति। चकार, चकरतुः। चकरिथ। चकरिम। करिता, करीता। करिष्यति, करीष्यति। किरतु। किर। किराणि। अकिरत्। किरेत्। कीर्यात्। अकारीत्। अकरिष्यत्, अकरीष्यत्। 1. ಎರಚು, ಎಸೆ, ಬಿಸಾಡು, ಚೆಲ್ಲು. "अवाकिरन् बाललताः प्रसूनैराचारलाजैरिव पौरकन्याः" रघु० २-१०। 2. ಹರಡು.

**कर्मणि** :—कीर्यते। चकरे। करिता, करीता। कारिता। करिष्यते, करीष्यते, कारिष्यते। कीर्यताम्। अकीर्यत। कीर्येत। ಇತ್ಯಾದಿ.

**णिचि** :—कारयति, –ते। कारयां चकार, –चक्रे, बभूव, –आस। कारयिता। कारयिष्यति, –ते। कारयतु, –ताम्। अकारयत्, –त। कारयेत्, –त। ಇತ್ಯಾದಿ.

**सनि** :—चिकरिषति। चिकरिषां चकार, –बभूव, –आस। ಇತ್ಯಾದಿ.

**कृत्सु** :—करितव्यः, करीतव्यम्। करणीयम्। कार्यम्। कर्म० कीर्णम्। कीर्णवान्। किरन्, किरती, किरन्ती। करितुम्। करीतुम्। (भावे) कीर्णम्। करणम्। कीर्त्वा। विकीर्य।

**ಈ ಧಾತುವಿಗೆ ಉಪಸರ್ಗಗಳ ಯೋಗದಿಂದ ಉಂಟಾಗುವ ಅರ್ಥಭೇದಗಳು :**

**(1)** अनु+कॄ = अनुकिरति। ಅನಂತರ ಎಸೆ, –ಚೆಲ್ಲು, –ಎರಚು.

**(2)** अप + कॄ = अपस्किरते। ಹರ್ಷ ಆಶ್ರಯ ಭಕ್ಷಣ ಈ ಅರ್ಥಗಳಲ್ಲಿ ಚತುಷ್ಪಾತ್ ಪ್ರಾಣಿಗಳ ಮತ್ತು ಪಕ್ಷಿಗಳ ವ್ಯಾಪಾರ (ಅರ್ಥ)ವು ತೋರಿದಾಗ अप ಪೂರ್ವಕವಾದ कॄ ಧಾತುವಿಗೆ "सुट्" ಆಗಮ ಮತ್ತು ಆತ್ಮನೇಪದಗಳು ಬರುವುವು. अपस्किरते वृषो हृष्टः। भक्षार्थी कुक्कुटः अपस्किरते। आश्रयार्थी श्वा अपस्किरते।

**(3)** अव+कॄ = अवकिरति। 1. ಕೆಳಕ್ಕೆ ಚೆಲ್ಲು. 2. ದೂರಕ್ಕೆ ಎಸೆ. ಮಲವೆಂಬ ಅರ್ಥದಲ್ಲಿ "सुट्" (६-१-१४८)। अवस्करः। ನಿಯಮಭ್ರಷ್ಟನೆಂಬ ಅರ್ಥದಲ್ಲಿ अवकीर्णी।

**(4)** आ+कॄ=आकिरति। आकीर्णम्। 1. ಸುತ್ತಲೂ ಎರಚು. 2. ಸುತ್ತಲೂ ಹರಡು, ಎಲ್ಲಾ ಕಡೆಯಲ್ಲೂ ವ್ಯಾಪಿಸು. "आकीर्णमृषिपत्नीनामुटजद्वाररोधिभिः। अपत्यैरिव नीवारभागधेयोचितैर्मृगैः" रघु० १-५०।

**(5)** उद्+कॄ=उत्किरति। उत्कीर्णम्। 1. ಮೇಲಕ್ಕೆ ಎರಚು, ಮೇಲಕ್ಕೆ ಎಸೆ. 2. ಕಲ್ಲು ಮೊದಲಾದುವುಗಳ ಮೇಲೆ ಚಿತ್ರವನ್ನು ಕೆತ್ತು, –ಚಿತ್ರವನ್ನು ಕೊರೆ. "लीनेव प्रतिबिम्बितेव लिखितेवोत्कीर्णरूपेव च" मालती० ५-१०।

(6) सम्+उद्+कॄ = समुत्किरति। समुत्कीर्णः। ರಂಧ್ರ ಮಾಡು, ವೆಜ್ಜ ಕೊರೆ. "मणौ वज्रसमुत्कीर्णे सूत्रस्येवास्ति मे गतिः" रघु० १-४।

(7) प्र+कॄ = प्रकिरति। प्रकीर्णः। ಚೆರಸು, ಕಲಸು.

(8) प्रति+कॄ = प्रतिकिरति। ಹಿಂಸಿಸು, ಪೀಡಿಸು. हिंसायां सुडागमः (६-१-१४१)। "स मुग्धकान्तास्तनसङ्गभङ्गुरैरुरोविदारं प्रतिचस्करे नखैः" माघ० १-४७।

(9) सम्+कॄ = संकिरति। संकीर्णम्। ಮಿಶ್ರವಾಗು, ಬೆರೆ. संकरः।

**कॄ – हिंसायाम्** (क्र्या० पर० सक० से०)। कृणाति। चकार। करिता, करीता। करिष्यति, करीष्यति। कृणातु। अकृणात्, अकृणीताम्। कृणीयात्। ಇತ್ಯಾದಿ. ಹಿಂಸಿಸು, ಪೀಡಿಸು.

**कर्मणि :**—कीर्यते। चकरे। करिता करीता, कारिता। ಇತ್ಯಾದಿ. ಉಳಿದುವು कॄ (विक्षेपे) ಧಾತುವಿನ ರೂಪಗಳಂತೆ ಆಗುವುವು.

**णिचि :**—कारयति, –ते। ಇತ್ಯಾದಿ कॄ (विक्षेपे) ಧಾತುವಿನ ರೂಪಗಳಂತೆ ಆಗುವುವು.

**कृत्सु :**—कृणन् कृणती ಈ ರೂಪಗಳನ್ನು ಬಿಟ್ಟು ಉಳಿದೆಲ್ಲವೂ कॄ (विक्षेपे) ರೂಪಗಳಂತೆ ಆಗುವುವು.

**कॄञ् – हिंसायाम्** (क्र्या० उभ० सक० से०)। कृणाति, कृणीते। अकारीत्, अकरिष्ट। ಇತ್ಯಾದಿ.

**कॄत – संशब्दने** (चुरा० उभ० सक० से०)। कीर्तयति, –ते। अचकीर्तत्, –त। अचीकृतत्, –त। ಇತ್ಯಾದಿ. 1. ಹೇಳು. 2. ಹೆಸರು ಹಿಡಿದು ಕರೆ. 3. ಹೊಗಳು. 4. ವರ್ಣಿಸು. 5. ಸ್ತೋತ್ರಮಾಡು.

**क्लृप्त ಕ್ಲೃಪ್ತ** (वि०) 1. ಏರ್ಪಟ್ಟಿರುವ. 2. ಸಿದ್ಧವಾಗಿರುವ. ಸಜ್ಜಾಗಿರುವ. कृपू (सामर्थ्ये) "क्तः" (३-४-७२)। "क्लृप्तपुष्पशयनाँल्लतागृहानेत्य दूतिकृतमार्गदर्शनः" रघु० १९-२३। 3. ಮಾಡಿರುವ. 4. ಸೃಷ್ಟಿಯಾಗಿರುವ, ಉತ್ಪತ್ತಿಹೊಂದಿದ. 5. ನಿಶ್ಚಿತವಾದ, ತೀರ್ಮಾನವಾದ. 6. ವಿಹಿತವಾದ, ಗೊತ್ತಾದ, ನಿಗದಿಯಾದ. "क्लृप्तानां पशुसोमानां निष्कृत्यर्थमसंभवे" मनु० ११-२७।

**क्लृप्तकीला ಕ್ಲೃಪ್ತಕೀಲಾ** (स्त्री०) ಹಕ್ಕುಪತ್ರ, ವ್ಯವಸ್ಥಾಪತ್ರ, ಮನೆ ಜಮೀನು ಮೊದಲಾದುವುಗಳ ಖಾತೆಪತ್ರ, ಪಟ್ಟೆ. क्लृप्तं कीलयति — कील (बन्धने) + णिच् "अच्" (३-१-१३४)। "पट्टोलिका क्लृप्तकीला" त्रिकाण्ड०।

**क्लृप्तधूप ಕ್ಲೃಪ್ತಧೂಪ** (पुं०) ಸಿಲ್ಹಕ, ಲೋಬಾನ, ಮ್ಲೇಚ್ಛ ದೇಶದ ಒಂದು ವಾಸನಾದ್ರವ್ಯ. क्लृप्तो धूपो येन।

**क्लृप्ति ಕ್ಲೃಪ್ತಿ** (स्त्री०) 1. ಕಲ್ಪನೆ, ಏರ್ಪಾಡು. कृपू (सामर्थ्ये) "क्तिन्" (३-३-९४)। 2. ಅವಧಾರಣ, ನಿಶ್ಚಯ. 3. ನಿರ್ಮಾಣ, ತಯಾರಿಕೆ. 4. ಸಿದ್ಧತೆ, ಸಜ್ಜು. 5. ಗೊತ್ತುವಳಿ. ವಿಧಿ. 6. ಸೃಷ್ಟಿ, ಉತ್ಪತ್ತಿ.

**केकय ಕೇಕಯ** (पुं० ब० व०) 1. ಕೇಕಯ ದೇಶ. "उभौ भरतशत्रुघ्नौ केकयेषु परन्तपौ" रामा०। (पुं०) 2. ಕೇಕಯ ದೇಶದ ದೊರೆ. "सत्कृत्य केकयो राजा भरतस्य ददौ धनम्" रामा०। (स्त्री०) **–यी –ಯೀ.** ಕೇಕಯ ರಾಜನ ಮಗಳು. ಜನ್ಯಜನಕಭಾವರೂಪವಾದ ಪುಂಯೋಗವಿರುವುದರಿಂದ "पुंयोगादाख्यायाम्" (४-१-४८) "ङीष्"।

**केकर ಕೇಕರ** (न०) 1. ಮಾಲುಗಣ್ಣು, ಓರೆಗಣ್ಣು. (वि०) 2. ಹಳ್ಳಬಿಟ್ಟುಗಳಿಂದ ಕೂಡಿದ ಕಣ್ಣುಗಳುಳ್ಳವನು, ವಿಕಾರವಾದ ಕಣ್ಣುಗಳುಳ್ಳವನು, ಮಾಲುಗಣ್ಣುಳ್ಳವನು. के मूर्ध्नि कर्तुं शीलमस्य — डु कृञ् (करणे) "टः" (३-२-२०)।

**केका ಕೇಕಾ** (स्त्री०) ಮಯೂರದ ಶಬ್ದ, ನವಿಲಿನ ಕೂಗು. के मूर्ध्नि कायति — कै (शब्दे) "डः" (३-२-१०१)। "षड्जसंवादिनीः केका द्विधा भिन्नाः शिखण्डिभिः" रघु० १-३९।

**केकावल ಕೇಕಾವಲ** (पुं०) ಮಯೂರ, ನವಿಲು. केका वलते — वल (संवरणे) "अच्" (३-१-१३४)। स्त्रियाम् जाति० "ङीष्" (४-१-६३)। **–वली –ವಲೀ.**

**केकिक ಕೇಕಿಕ** (पुं०) ಮಯೂರ, ನವಿಲು. केकास्यास्ति "ठन्" (५-२-११६)।

**केकिन् ಕೇಕಿನ್** (पुं०) ಮಯೂರ, ನವಿಲು. केकास्यास्ति "इनिः" (५-२-११६)।

**केट ಕೇಟ** (पुं०) ತ್ರಾಸ, ಭಯ. किट (त्रासे) "घञ्" (३-३-१८)।

**केणिका ಕೇಣಿಕಾ** (स्त्री०) ವಸ್ತ್ರಗೃಹ, ಡೇರೆ, ಗುಡಾರ. "स्थूलं दूष्ये केणिका पटकुटयपि" अभि० चि०।

**केत ಕೇತ** (पुं०) 1. ಗೃಹ, ಮನೆ, ವಾಸಸ್ಥಳ. कित (निवासे) अधि० "घञ्" (३-३-१२१)। "मत्स्यो

युगान्तसमये मनुनोपलब्धः क्षोणीमयो निखिलजीवनिकायकेतः" भाग० २-७-१२। 2. ವಾಸಮಾಡುವುದು, ಇರುವುದು. कित भावे "घञ्" (३-३-१८)। "अवाङ्मुखाः पक्षिगणा दिनान्ते विशन्ति केतार्थमिवाशु वृक्षम्" भा० कर्ण० ८९-१५।

**केतक ಕೇತಕ** (पुं०) 1. ತಾಳೆ ಮರ. कित (निवासे) "ण्वुल्" (३-१-१३३)। "विलासिनीविभ्रमदन्तपत्रमापाण्डुरं केतकबर्हमन्यः" रघु० ६-१७। (न०)2. ತಾಳೆ ಹೂವು. केतक्याः पुष्पं "अण्" (४-३-१३५)। अणो "लुक्" (वा० ४-३-१६६)। ङीपो लुक् (१-२-४९)। "दधानमाशासु चरिष्णु दुर्यशः स कौतुकी तत्र ददर्श केतकम्" नैष० १-७८। (स्त्री०) **-की -ಕೀ.** 3. ತಾಳೆ ಮರ. केतक जाति० "ङीष्" (४-१-६३)। "सरजसमपहाय केतकीनां प्रसवमुपान्तिकनीपरेणुकीर्णम्" किरा० १०-२६। 4. ತಾಳೆ ಹೂವು. बहुलग्रहणात् क्वचित् ङीषो न लुक्।

**केतन ಕೇತನ** (पुंन०) 1. ಧ್ವಜ, ಬಾವುಟ, ಪತಾಕೆ. केत्यते ज्ञायतेऽनेन — कित (निवासादौ) कर० "ल्युट्" (३-३-११७)। "इत्यस्य तेने कदलीर्मधुश्रीः प्रभावनी केतनवैजयन्तीः" माघ० ६-६९। "भग्नं भीमेन मरुता भवतो रथकेतनम्" वेणी० २-२४। 2. ಚಿಹ್ನೆ, ಗುರುತು. "अगणितमहिमानः केतनं मङ्गलानां कथमिव भुवनेऽस्मिन् तादृशाः संभवन्ति" मालती० २-९। 3. ನಿವಾಸ, ಗೃಹ, ವಾಸಸ್ಥಳ. "न तत्र वृक्षच्छाया वा पानीयं केतनानि च" भा० वन०। 4. ನಿಮಂತ್ರಣ, ಆಹ್ವಾನ, ಕರೆ. "यावन्तः पतिता विप्रा जडोन्मत्तास्तथैव च। दैवे वाप्यथवा पित्र्ये तावन्नार्हन्ति केतनम्" भा०। 5. ಕೃತ್ಯ. 6. ಸ್ಥಾನ, ಜಾಗ. "एतद्राजासनं सर्वभूभृत्संश्रयकेतनम्" विष्णुपु०।

**केतु ಕೇತು** (पुं०) 1. ನವಗ್ರಹಗಳಲ್ಲೊಂದಾದ ಕೇತುಗ್ರಹ, ರಾಹುವಿನ ಶರೀರ. चायृ (पूजानिशामनयोः) "तुः" किः आदेशश्च (उ० १-७३)। ಕೇತುವು ಒಂದು ಛಾಯಾ ಗ್ರಹ ಮತ್ತು ಪಾಪಗ್ರಹ. "अर्वोनेन्द्वर्कसौराराः पापाः सौम्यास्तथापरे। पापयुक्तो बुधः पापो राहुकेतू च पापदौ"। ಈ ಗ್ರಹವು ಜನ್ಮರಾಶಿಯಿಂದ ಮೂರು (3) ಆರು (6) ಹತ್ತು (10) ಮತ್ತು ಹನ್ನೊಂದ (11) ನೆಯ ಸ್ಥಾನಗಳಲ್ಲಿದ್ದರೆ ಶುಭಫಲಪ್ರದವಾದುದು. "केतूपप्लवभौममन्दगतयः षष्ठत्रिसंस्थाः शुभाः चन्द्रार्कावपि ते च तौ च दशमौ चन्द्रः पुनः सप्तमः। जीवः सप्तनवद्विपञ्चमगतो युग्मेषु सोमात्मजः शुक्रः षड्दशसप्तवर्जमितरे सर्वेऽप्युपान्ते शुभाः" ज्योतिस्०। ಕೇತುಗ್ರಹಕ್ಕೆ ಮೀನರಾಶಿಯು ಕ್ಷೇತ್ರ. ಸಿಂಹರಾಶಿಯು ತ್ರಿಕೋಣವಾಗುವುದು. ಧನೂರಾಶಿಯು ಉಚ್ಚಸ್ಥಾನ. ಮಿಥುನವು ನೀಚಸ್ಥಾನ. ಸೂರ್ಯ ಚಂದ್ರ ಮತ್ತು ಕುಜರು ಮಿತ್ರರು. ಬುಧ ಗುರುಗಳು ಸಮಾನರು. ಶುಕ್ರ ಶನಿಗಳು ಶತ್ರುಗಳು. "सिंहस्त्रिकोणं धनुरुच्चसंज्ञं मीनो गृहं शुक्रशनी विपक्षौ। सूर्यारचन्द्राः सुहृदः समानौ जीवेन्दुजौ षट् शिखिनः परांशाः" ज्योतिस्०।

**ಕೇತುದಶಾ ಪ್ರಮಾಣ ಏಳು (7) ವರ್ಷಗಳು. ಇತರ ಗ್ರಹಗಳ ದಶೆಗಳಲ್ಲಿ ಕೇತುವಿನ ಅಂತರ್ದಶಾ (ಭುಕ್ತಿ) ಮಾನ:**

| ದಶೆ | ವರ್ಷ | ಮಾಸಗಳು | ದಿನಗಳು |
|---|---|---|---|
| ರವಿದಶೆ | – | 4 | 6 |
| ಚಂದ್ರದಶೆ | – | 7 | – |
| ಕುಜದಶೆ | – | 4 | 27 |
| ರಾಹುದಶೆ | 1 | – | 18 |
| ಗುರುದಶೆ | – | 11 | 6 |
| ಶನಿದಶೆ | 1 | 1 | 9 |
| ಬುಧದಶೆ | – | 11 | 27 |
| ಕೇತುದಶೆ | – | 4 | 27 |
| ಶುಕ್ರದಶೆ | 1 | 2 | – |

**ಕೇತುಮಹಾದಶೆಯಲ್ಲಿ ತನ್ನ (ಸ್ವ) ಮತ್ತು ಇತರ ಗ್ರಹಗಳ ಅಂತರ್ದಶಾ (ಭುಕ್ತಿ) ಮಾನ:**

| | ವರ್ಷ | ಮಾಸಗಳು | ದಿನಗಳು |
|---|---|---|---|
| ಸ್ವಭುಕ್ತಿ | – | 4 | 27 |
| ಶುಕ್ರಭುಕ್ತಿ | 1 | 2 | – |
| ರವಿಭುಕ್ತಿ | – | 4 | 6 |
| ಚಂದ್ರಭುಕ್ತಿ | – | 7 | – |
| ಕುಜಭುಕ್ತಿ | – | 4 | 27 |
| ರಾಹುಭುಕ್ತಿ | 1 | – | 18 |
| ಗುರುಭುಕ್ತಿ | – | 11 | 6 |
| ಶನಿಭುಕ್ತಿ | 1 | 1 | 9 |
| ಬುಧಭುಕ್ತಿ | – | 11 | 27 |

2. ಧೂಮಕೇತು. ["धूमकेतु" ಪದದಲ್ಲಿ ನೋಡಿ.]

**केतुभ ಕೇತುಭ** (पुं०) ಮೇಘ, ಮೋಡ. केतुरिव भाति — भा (दीप्तौ) "कः" (३-२-४)।

**केतुमत् ಕೇತುಮತ್** (ಪುಂ) 1. ದಿವೋದಾಸರಾಜನ ವಂಶದ ಒಬ್ಬ ದೊರೆ. "क्षेमस्य केतुमान् पुत्रः सुकेतुरस्य चात्मजः" हरिवं। 2. ಧನ್ವಂತರಿಯ ಒಬ್ಬ ಮಗ. 3. ಒಬ್ಬ ರಾಕ್ಷಸ. (ವಿಂ) 4. ಚಿಹ್ನೆಯಿಂದ ಕೂಡಿದವನು, ಗುರುತುಳ್ಳವನು. केतुरस्यास्ति "मतुप्" (५-२-९४)। 5. ಬುದ್ಧಿವಂತ, ಪ್ರಜ್ಞಾಶಾಲಿ. 6. ಪ್ರಕಾಶಮಾನವಾದ. 7. ಧ್ವಜದಿಂದ ಕೂಡಿದ. स्त्रियां "ङीप्" (४-१-६)। **-मती -ಮತೀ.** (स्त्रीं) ಸುಮಾಲಿಯೆಂಬ ರಾಕ್ಷಸನ ಹೆಂಡತಿ.

**केतुमाल ಕೇತುಮಾಲ** (ಪುಂ) 1. ಆಗ್ನೀಧ್ರನ ಒಬ್ಬ ಮಗ. (ಪುನಂ) 2. ಜಗತ್ತಿನ ಒಂಬತ್ತು ದ್ವೀಪಗಳಲ್ಲೊಂದಾದ ಜಂಬೂದ್ವೀಪದ ಪಶ್ಚಿಮ ಭಾಗ. "पश्चिमे केतुमालाख्ये रोमकाख्या प्रकीर्तिता" सू० सि० १२-३९। (स्त्रीं) **-माला -ಮಾಲಾ.** ಅವಂತಿದೇಶದಲ್ಲಿರುವ ಒಂದು ನದಿ.

**केतुमालिन् ಕೇತುಮಾಲಿನ್** (ಪುಂ) ಒಬ್ಬ ದಾನವ. "दुर्धरः केतुमाली च शत्रुहन्ता प्रमर्दनः" हरिवं।

**केतुरत्न ಕೇತುರತ್ನ** (ನಂ) ನವರತ್ನಗಳಲ್ಲೊಂದಾದ ವೈಡೂರ್ಯ. ವೈಡೂರ್ಯಕ್ಕೆ ಕೇತುವು ಅಧಿಪತಿಯಾದುದರಿಂದ ಈ ಹೆಸರು.

**केदर ಕೇದರ** (ವಿಂ) ವಿಕಾರದೃಷ್ಟಿಯುಳ್ಳವನು.

**केदार ಕೇದಾರ** (ಪುಂ) 1. ಗದ್ದೆ, ನೀರಿನ ಆಸರೆಯಿಂದ ಬತ್ತ ಮೊದಲಾದುವನ್ನು ಬೆಳೆಯತಕ್ಕ ಭೂಮಿ. केन जलेन दीर्यते—दृ (विदारणे) कर्मं "घञ्" (३-३-१९)। "केदारभाजा शिशिरप्रवेशात् पुण्याय मन्ये मृतमुत्पलिन्या" नैष० ७-३५। 2. ಆಲವಾಲ, ಗಿಡದ ಬುಡದಲ್ಲಿ ನೀರು ನಿಲ್ಲಲು ಸುತ್ತಲೂ ಕಟ್ಟಿ ಕಟ್ಟಿದ ಪಾತಿ. 3. ಗದ್ದೆಯೊಳಗೆ ಮಾಡಿರುವ ಒಂದು ಸಣ್ಣ ಕುಂಟೆ. "वृषः पिबति केदारे निःश्वासाकुलितं पयः" रामा०। 4. ಹಿಮಾಚಲದ ಒಂದು ಭಾಗವಾದ ಕೇದಾರಕ್ಷೇತ್ರ. 5. ಪರಶಿವ, ಪರಮೇಶ್ವರ. 6. ಶಿವಲಿಂಗ. "केदारोऽद्री शिवे क्षेत्रे भूमिभेदालवालयोः" मेदि०।

**केदारनाथ ಕೇದಾರನಾಥ** (ಪುಂ) ಹಿಮಾಲಯದಲ್ಲಿ ಪೂಜಿಸಲ್ಪಡುವ ಪರಶಿವ. केदारक्षेत्रस्य नाथः।

**केदारेश्वर ಕೇದಾರೇಶ್ವರ** (ಪುಂ) 1. ಕಾಶಿಯಲ್ಲಿ ನೆಲೆಸಿರುವ ಪರಶಿವ, ಪರಮೇಶ್ವರ. (ನಂ) 2. ಹಿಮಾಲಯದಲ್ಲಿರುವ ಒಂದು ಪುಣ್ಯ ತೀರ್ಥ.

**केन ಕೇನ** (ಪುಂ) ಕೇನೋಪನಿಷತ್ತು.

**केनती ಕೇನತೀ** (स्त्रीं) ರತಿ, ಮನ್ಮಥನ ಪತ್ನಿ. के सुखार्थं नतिः—बाहु० "ङीप्"। "अस्य प्रिया रागलता केलिकलावती। सः केनती" त्रिकाण्ड०।

**केनार ಕೇನಾರ** (ಪುಂ) 1. ಕುಂಭಿಯೆಂಬ ಒಂದು ನರಕ. के मूर्ध्नि नारः—नृ (नये) "घञ्" (३-३-१९)। 2. ಶಿರಸ್ಸು, ತಲೆ. 3. ಕಪೋಲ, ಕೆನ್ನೆ, ಗಂಡಸ್ಥಲ. 4. ಸಂಧಿ, ಸೇರಿಕೆ, ದೇಹದಲ್ಲಿ ಎರಡು ಮೂಳೆಗಳು ಸೇರುವ ಜಾಗ (ಕೀಲು). "केनारः कुम्भिनरके शिरःकपोलसन्धिषु" मेदि०।

**केनिपात ಕೇನಿಪಾತ** (ಪುಂ) 1. ದೋಣಿ ನಡೆಸುವ ಹುಟ್ಟು ಗೋಲು, ಜಲ್ಲೆ. 2. ಹಡಗಿನ ಚುಕ್ಕಾಣಿ ಹಲಗೆ. के निपातोऽस्य। वा "कप्" (५-४-१५४)। **-निपातकः -ನಿಪಾತಕಃ.**

**केन्दु ಕೇಂದು** (ಪುಂ) ತಿಂದುಕ ವೃಕ್ಷ, ತೂಬರೆ ಗಿಡ.

**केन्द्र ಕೇಂದ್ರ** (ನಂ) 1. ಒಂದು ಮಂಡಲದ ಮಧ್ಯಭಾಗ, ಒಂದು ಆವರಣದ ಮಧ್ಯಭಾಗ. 2. ಲಗ್ನ ಮತ್ತು ಅದರಿಂದ 4, 7 ಮತ್ತು 10 ನೆಯ ಸ್ಥಾನಗಳು. 3. ಪ್ರಯಾಣಕ್ಕೆ ಸಂಬಂಧಿಸಿದ ಒಂದು ಶುಭಯೋಗ. "आपोक्लिमगते चन्द्रे केन्द्रस्थे सुरपूजिते। योगः केन्द्र इति ख्यातो यातुरिष्टार्थसिद्धिदः"।

**केन्द्रिन् ಕೇಂದ್ರಿನ್** (ಪುಂ) ಕೇಂದ್ರದಲ್ಲಿರುವ ಗ್ರಹ. केन्द्रं स्थानत्वेनास्त्यस्य "इनिः" (५-२-११५)।

**केमद्रुम ಕೇಮದ್ರುಮ** (ಪುಂ) ಜನ್ಮಕಾಲದಲ್ಲಿ ಗ್ರಹಗಳ ಒಂದು ಯೋಗ, ಫಲಭಂಗವುಂಟುಮಾಡುವ ಒಂದು ಅಶುಭ ಯೋಗ. "रविवर्जं द्वादशगैरनफा चन्द्रात् द्वितीयगैः सुनफा। उभयस्थितैर्दुरधुरा केमद्रुमसंज्ञितोऽन्यः"। ಜನನಕಾಲದಲ್ಲಿ ಸೂರ್ಯನ ಹೊರತು ಇತರ ಎಲ್ಲಾ ಗ್ರಹಗಳೂ ಚಂದ್ರನಿಗೆ ದ್ವಾದಶದಲ್ಲಿದ್ದರೆ **"अनफा"** ಎಂಬ ಯೋಗವೂ ಚಂದ್ರನಿಗೆ ದ್ವಿತೀಯದಲ್ಲಿದ್ದರೆ **"सुनफा"** ಎಂಬ ಯೋಗವೂ ದ್ವಿತೀಯ ಮತ್ತು ದ್ವಾದಶ ಎರಡು ಕಡೆಗಳಲ್ಲೂ ಇದ್ದರೆ **"दुरधुरा"** ಎಂಬ ಯೋಗವೂ ಚಂದ್ರನಿಗೆ ದ್ವಿತೀಯ ಮತ್ತು ದ್ವಾದಶ ಎರಡು ಕಡೆಗಳಲ್ಲೂ ಗ್ರಹಗಳಿಲ್ಲದಿದ್ದರೆ **"केमद्रुमः"** ಎಂಬ ಯೋಗವೂ ಉಂಟಾಗುವುದು.

**"अनफा" ಯೋಗದ ಫಲ:** "सच्छीलं विषयसुखान्वितं प्रभुख्यातियुक्तमनफायाम्"।

**"सुनफा" ಯೋಗದ ಫಲ:** "सुनफायां धीधनकीर्तियुक्तमात्मार्जितैश्वर्यं च"।

**"दुरधुरा" ಯೋಗದ ಫಲ:** "बहुभृत्यकुटुम्बारम्भमुद्विग्नचित्तमपि दौरधुरे"।

**"केमद्रुम" ಯೋಗದ ಫಲ:** "भूतकं दुःखिनमधनं जातं केमद्रुमे विद्यात्" ज्योतिस्०। "नृपतेर्वंशजातोऽपि केमद्रुमभवो नरः। मलिनो दुःखितो नीचो निःस्वो दासो भवेत् खलः" जातकप०।

**"केमद्रुम" (ಕೇಮದ್ರುಮ) ಯೋಗದ ಭಂಗ** "चन्द्रे केन्द्रगतेऽथवा ग्रहयुते सर्वैश्च दृष्टे विधौ सर्वैः कण्टकसंज्ञितैर्ग्रहयुतैः केमद्रुमो नेष्यते" जातकप०।

**केयूर ಕೇಯೂರ** (न०) 1. ವಂಕಿ, ತೋಳಿನ ಒಂದು ಆಭರಣ. के बाहुशिरसि यौति — यु (मिश्रणे) "ऊरः" (उ० ४-९०)। सप्तम्या अलुक् (६-२-९)। "वामेतरः संशयमस्य बाहुः केयूरबन्धोच्छ्वसितैर्नुनोद" रघु० ६-६८। 2. ಒಂದು ವಿಧ ರತಿ ಬಂಧ. "स्त्रीजङ्घे चैव संपीड्य दोर्भ्यामालिङ्ग्य सुन्दरीम्। कारयेत् स्थापनं कामी बन्धः केयूरसंज्ञितः" स्मरदी०।

**केयूरिन् ಕೇಯೂರಿನ್** (वि०) ತೋಳಿನಲ್ಲಿ ವಂಕಿಯನ್ನು ತೊಟ್ಟಿರುವ. केयूरमस्यास्ति "इनिः" (५-२-११५)।

**केरल ಕೇರಲ** (पुं० ब० व०) 1. ಕೇರಳ ದೇಶ, ಮಲಬಾರ್ ಪ್ರದೇಶ. 2. ಕೇರಳ ದೇಶದ ಜನರು. (पुं०) 3. ಕೇರಳ ದೇಶದ ದೊರೆ. "भयोत्सृष्टविभूषाणां तेन केरलयोषिताम्" रघु० ४-५४। (स्त्री०) **–ली –ಲೀ.** 4. ಕೇರಳ ದೇಶದ ಹೆಂಗಸು. 5. ಕೇರಳೀಯ ಜ್ಯೋತಿಷ ಗ್ರಂಥ. 6. ಹೋರೆ, ಲಗ್ನದ ಅರ್ಧಭಾಗ, ಸುಮಾರು ಒಂದು ಗಂಟೆ ಕಾಲ.

**केलृ – चलने** (भ्वा० पर० अक० से०)। केलति। चिकेल। केलिता। केलिष्यति। केलतु। अकेलत्। केलेत्। केल्यात्। अकेलीत्। अकेलिष्यत्। 1. ಅಲುಗಾಡು, ಚಲಿಸು. 2. ಹೋಗು, ಮುಂದೆ ಸಾಗು, ಮುಂದಕ್ಕೆ ನಡೆ.

**णिचि :—**केलयति, –ते। केलयां चकार, –चक्रे, –बभूव, –आस। केलयिता। केलयिष्यति, –ते। केलयतु, –ताम्। अकेलयत् –त। ಇತ್ಯಾದಿ.

**कृत्सु :—**केलितव्यम्। केलनीयम्। केल्यम्। केलितः। केलितवान्। केलन्, केलन्ती। केलितुम्। केलितम्। केलनम्। केलित्वा। प्रकेल्य।

**केलक ಕೇಲಕ** (पुं०) 1. ನರ್ತಕ, ನರ್ತನಮಾಡುವವನು, ಕುಣಿಯುವವನು. 2. ಕತ್ತಿಯ ಅಲುಗಿನ ಮೇಲೆ ಕುಣಿಯುವವನು. केलृ (चलने) "ण्वुल्" (३-१-१३३)। "लयपुत्री नटी नर्तुः खड्गधारादिनर्तके। प्लवकः केलकश्च" त्रिकाण्ड०।

**केलि ಕೇಲಿ** (पुंस्त्री०) 1. ಸ್ತ್ರೀಪುರುಷರ ಪರಿಹಾಸ, ರತಿಕ್ರೀಡೆಯ ಸಮಯದಲ್ಲಿ ನಾಯಿಕಾ ನಾಯಕರ ವಿನೋದ. केलृ (चलने) "इन्" (उ० ४-११७)। "उपचारक्रिया केलिः स्पर्शो भूषणवाससाम्। सह खट्वासनं चैव सर्वं संग्रहणं स्मृतम्" मनु० ८-३५७। स्रगन्धानुलेपनप्रेषणाद्युपचारकरणं केलिः परिहासालिङ्गनादिः इति कुल्लूतभट्टः। 2. ಕ್ರೀಡೆ, ಆಟ. "मिलन्निमीलं ससृजुर्विलोकिताः नभस्वतस्तं कुसुमेषु केलयः" नैष० १-९७। "राधामाधवयोर्जयन्ति यमुनाकूले रहःकेलयः" गीतगो० १। 3. ಸ್ತ್ರೀಯರಿಗೆ ಸ್ವಭಾವಸಿದ್ಧವಾದ ಹದಿನೆಂಟು ವಿಧ ಅಲಂಕಾರಗಳಲ್ಲೊಂದು. ............। हसितं चकितं केलिरित्यष्टादशसंख्यकाः। स्वभावजाश्च भावाद्या दश पुंसां भवन्त्यमी" सा० द० ३-९२। ವಿಹಾರಕಾಲದಲ್ಲಿ ಪತಿಯೊಡನೆ ನಾಯಿಕೆಯ ಕ್ರೀಡೆಯು ಕೇಳಿಯೆನಿಸುವುದು. "विहारे सह कान्तेन क्रीडितं केलिरुच्यते" सा० द० ३-११०। (स्त्री०) 4. ಪೃಥ್ವಿ, ಭೂಮಿ. 5. ಮುಚ್ಚಿಟ್ಟುಕೊಳ್ಳುವುದು, ಮರೆಸಿಕೊಳ್ಳುವುದು, \ ಬೇರೆ ವೇಷದಿಂದ ತನ್ನ ಸ್ವರೂಪವನ್ನು ಬಚ್ಚಿಟ್ಟುಕೊಳ್ಳುವುದು.

**केलिक ಕೇಲಿಕ** (पुं०) ಅಶೋಕವೃಕ್ಷ. केलिः प्रयोजनमस्त्यस्य "इनिः" (५-२-११५)।

**केलिकला ಕೇಲಿಕಲಾ** (स्त्री०) 1. ಕ್ರೀಡಾವಿದ್ಯೆ, ಆಟದ ಕಲೆ. केलिरूपाकला। 2. ಸರಸ್ವತಿಯ ವೀಣೆ. 3. ಆಟದಲ್ಲಿ ಜಾಣ್ಮೆ. 4. ವಿಷಯಾಸಕ್ತಿ, ವಿಷಯದಲ್ಲಿ ಲಾಲಸೆ.

**केलिकलावती ಕೇಲಿಕಲಾವತೀ** (स्त्री०) ರತಿ, ಮನ್ಮಥನ ಪತ್ನಿ. "अस्य प्रिया रागलता केलिकलावती" त्रिकाण्ड०।

**केलिकीर्ण ಕೇಲಿಕೀರ್ಣ** (पुंस्त्री०) ಉಷ್ಟ್ರ, ಒಂಟೆ. केल्या कीर्यते — कॄ (विक्षेपे) "क्तः" (३-२-१०२)। "भूतघ्न उष्ट्रो दाशेरो रवणः कण्टकाशनः। दीर्घग्रीवः केलिकीर्णः" अभि० चि०।

**केलिकुञ्चिका ಕೇಲಿಕುಂಚಿಕಾ** (स्त्री०) ನಾದಿನಿ, ಪತ್ನಿಯ ಕಿರಿಯಸಹೋದರಿ. केल्यां कुञ्चति कुटिलीभवति — कुञ्च (कौटिल्ये) "ण्वुल्" (३-१-१३३)। "पत्न्यास्तु भगिनी ज्येष्ठा ज्येष्ठश्वश्रूः कुली च सा। कनिष्ठा श्यालिका हाली यन्त्रणी केलिकुञ्चिका" अभि० चि०।

**केलिकोश ಕೇಲಿಕೋಶ** (पुं०) ಆಟಗಾರ, ಅಭಿನಯಕಾರ, ನಟ. केलीनां कोश इव।

**केलिगृह ಕೇಲಿಗೃಹ** (न०) 1. ಕ್ರೀಡಾಮಂದಿರ, ಆಟದ ಮನೆ. 2. ರತಿಗೃಹ, ಸಂಭೋಗ ಗೃಹ. केल्याः गृहम्।

**केलिनागर ಕೇಲಿನಾಗರ** (पुं०) ಭೋಗಿ, ವಿಷಯಾಸಕ್ತ. केलिप्रधानो नागरः।

**केलिमण्डप ಕೇಲಿಮಂಡಪ, –मन्दिर –ಮಂದಿರ** (न०) "केलिगृह" ಪದದ ಅರ್ಥ.

**केलिमुख ಕೇಲಿಮುಖ** (पुं०) 1. ಪರಿಹಾಸ್ಯ, ವಿನೋದ. 2. ಕ್ರೀಡೆ, ಆಟ. केलिः मुखमत्र। "परिहासः केलिमुखः" त्रिकाण्ड०।

**केलिसचिव ಕೇಲಿಸಚಿವ** (पुं०) (ನಾಟಕದಲ್ಲಿ) ನಾಯಕನ ನರ್ಮಸಚಿವ, ಕ್ರೀಡಾಸಚಿವ, ವಿದೂಷಕ. केलौ सचिवः।

**केलिस्थली ಕೇಲಿಸ್ಥಲೀ** (स्त्री०) ಕ್ರೀಡಾರಂಗ. ಆಟದ ಮೈದಾನ.

**केवृ – सेवने** (भ्वा० आत्म० सक० से०)। केवते। चिकेवे। केविता। केवताम्। अकेवत। केवेत। अकेविष्ट। अकेविष्यत। ಸೇವಿಸು. ಸೇವೆಮಾಡು. ಊಳಿಗ ಮಾಡು.

**केवर्त ಕೇವರ್ತ** (पुं०) ಬೆಸ್ತರವನು. ಮೀನು ಹಿಡಿಯುವವನು.

**केवल ಕೇವಲ**(वि०)1. ಅಸಹಾಯ, ಅದ್ವಿತೀಯ, ಒಂದು ಅಥವಾ ಒಬ್ಬ ಮಾತ್ರ. केवृ (सेवने) "कलः" (उ० १-१०६)। "नमस्त्रिमूर्तये तुभ्यं प्राक्सृष्टेः केवलात्मने" कुमा० २-४। 2. ಏಕಾಕಿ, ಒಬ್ಬಂಟಿಗ, ಇತರರ ಸಂಪರ್ಕವಿಲ್ಲದ, ಬೇರೆಯಾಗಿರುವ. ಇತರರೊಡನೆ ಬೆರೆಯದಿರುವ. 3. ಸಮಗ್ರವಾದ. ಸಂಪೂರ್ಣವಾದ. "अनन्यगुर्वास्तव केन केवलः पुराणमूर्तेर्महिमावगम्यते" माघ० १-३५। 4. ಶುದ್ಧವಾದ, ಮಿಶ್ರವಲ್ಲದ, ಬೆರಕೆಯಿಲ್ಲದ. 5. ಅಸೂಯೆಯುಳ್ಳವನು. (अव्य०)6. ಒಂದು ಮಾತ್ರ, ಅದೊಂದೇ. "न केवलं गच्छति तस्य काले ययुः शरीरावयवा विवृद्धिम्" रघु० १८-४९। 7. ಅವಧಾರಣ, ನಿಶ್ಚಯ. "न केवलं सद्मनि मागधीपतेः पथि व्यजृम्भन्त दिवौकसामपि" रघु० ३-१९। "वचसस्तस्य सपदि क्रिया केवलमुत्तरम्" माघ० २-२२। (न०)8. ನಿರ್ಣೀತ. "केवलः कुहने पुमान्। नपुंसकन्तु निर्णीते वाच्यवच्चैककृत्स्नयोः" मेदि०। 9. ಪ್ರಕೃತಿ ಪುರುಷವಿವೇಕ ಜ್ಞಾನ. (स्त्री०) **–ला –ಲಾ.** असंज्ञाय "टाप्"। **–ली –ಲೀ.** संज्ञायां छन्दसि च "ङीप्" (४-१-३०)।

**केवलव्यतिरेकि ಕೇವಲವ್ಯತಿರೇಕಿ** (न०) ಮೂರು ವಿಧ ಲಿಂಗ ಅಥವಾ ಅನುಮಾನಗಳಲ್ಲಿ ಒಂದು ಭೇದ. ಅನುಮಾನವು (1) अन्वयव्यतिरेकि, (2) केवलान्वयि ಮತ್ತು (3) केवलव्यतिरेकि ಎಂದು ಮೂರು ವಿಧ.

**(1) अन्वयव्यतिरेकि :** ಅನ್ವಯವ್ಯಾಪ್ತಿ ಮತ್ತು ವ್ಯತಿರೇಕವ್ಯಾಪ್ತಿ ಎರಡೂ ಇರುವುದು ಅನ್ವಯವ್ಯತಿರೇಕಿ. "अन्वयेन व्यतिरेकेण च व्याप्तिमत् अन्वयव्यतिरेकि"। "हेतुसाध्ययोर्व्याप्तिः अन्वयव्याप्तिः—यत्र धूमस्तत्राग्निः — यथा महानसम्"। ಹೇತುಸಾಧ್ಯಗಳಿಗೆ ಸಾಹಚರ್ಯವಿರುವುದು ಅನ್ವಯವ್ಯಾಪ್ತಿ. ಹೇತುವಾದ ಧೂಮ ಮತ್ತು ಸಾಧ್ಯವಾದ ಅಗ್ನಿಗಳಿಗೆ ಸಾಹಚರ್ಯವು ಮಹಾನಸದಲ್ಲಿರುವುದರಿಂದ ಇಲ್ಲಿ ಅನ್ವಯವ್ಯಾಪ್ತಿ. "साध्याभावहेत्वभावयोः व्याप्तिः व्यतिरेकव्याप्तिः—यत्र वह्न्यभावः तत्र धूमाभावः—यथा महाह्रदः" ಸಾಧ್ಯಾಭಾವ ಮತ್ತು ಹೇತ್ವಭಾವಗಳ ವ್ಯಾಪ್ತಿಯು ವ್ಯತಿರೇಕವ್ಯಾಪ್ತಿ. ವಹ್ನ್ಯಭಾವ ಮತ್ತು ಧೂಮಾಭಾವಗಳಿಗೆ ಮಹಾಹ್ರದದಲ್ಲಿ ವ್ಯಾಪ್ತಿಯಿರುವುದರಿಂದ ಇಲ್ಲಿ ವ್ಯತಿರೇಕವ್ಯಾಪ್ತಿ. ಈ ರೀತಿ ಹೇತುಸಾಧ್ಯಗಳ ವ್ಯಾಪ್ತಿಯಾದ ಅನ್ವಯವ್ಯಾಪ್ತಿಯೂ ಸಾಧ್ಯಾಭಾವ ಹೇತ್ವಭಾವಗಳ ವ್ಯಾಪ್ತಿಯಾದ ವ್ಯತಿರೇಕ ವ್ಯಾಪ್ತಿಯೂ ಇಲ್ಲಿರುವುದರಿಂದ **"ಅನ್ವಯವ್ಯತಿರೇಕಿ".**

**(2) केवलान्वयि :** ಅನ್ವಯವ್ಯಾಪ್ತಿ ಮಾತ್ರವಿರುವ ಹೇತುವು ಕೇವಲಾನ್ವಯಿ. "अन्वयव्याप्तिमात्रकं केवलान्वयि—घटोभिधेयः प्रमेयत्वात्—यथा पटः"। ಇಲ್ಲಿ ಘಟವು ಪಕ್ಷ. ಅಭಿಧೇಯತ್ವವು ಸಾಧ್ಯ. ಪ್ರಮೇಯತ್ವವು ಹೇತು. यत्राभिधेयत्वम् तत्र प्रमेयत्वम्—यथा पटः। ಎಲ್ಲಿ ಅಭಿಧೇಯತ್ವವಿರುವುದೋ ಅಲ್ಲಿ ಪ್ರಮೇಯತ್ವವಿರುವುದೆಂದು ಇಲ್ಲಿ ಅನ್ವಯವ್ಯಾಪ್ತಿಯಿರುವುದು. ಅಭಿಧೇಯತ್ವ ಪ್ರಮೇಯತ್ವಗಳು ಎಲ್ಲಾ ಕಡೆಯಲ್ಲೂ ಇರುವುದರಿಂದಲೂ ಮತ್ತು ಸಾಧ್ಯಾಭಾವ ಹೇತ್ವಭಾವಗಳು ಅಪ್ರಸಿದ್ಧವಾದುದರಿಂದಲೂ ವ್ಯತಿರೇಕವ್ಯಾಪ್ತಿಯಿರುವುದಿಲ್ಲ. ಆದುದರಿಂದ ಇದು **ಕೇವಲಾನ್ವಯಿ.**

**(3) केवलव्यतिरेकि :** ವ್ಯತಿರೇಕವ್ಯಾಪ್ತಿಮಾತ್ರವಿರುವ ಹೇತುವು ಕೇವಲವ್ಯತಿರೇಕಿ. "साध्याभावहेत्वभावयोः व्याप्तिः व्यतिरेकव्याप्तिः—व्यतिरेकव्याप्तिमात्रकं केवलव्यतिरेकि। पृथिवीतरेभ्यो भिद्यते गन्धवत्वात्—यदितरेभ्यो न भिद्यते न तद्गन्धवत्—यथा जलम्"

ಎಂಬಲ್ಲಿ ಪಕ್ಷವಾದ ಪೃಥಿವಿಯಲ್ಲಿ ಮಾತ್ರ ಗಂಧವಿರುವುದರಿಂದಲೂ ತದಿತರವಾದ ಜಲಾದಿಗಳಲ್ಲಿ ಗಂಧವಿಲ್ಲದಿರುವುದರಿಂದಲೂ ಎಲ್ಲದಕ್ಕಿಂತ ಇದು ಭಿನ್ನವಾದುದು. ಮತ್ತು ಇಲ್ಲಿ ಅನ್ವಯವ್ಯಾಪ್ತಿಯಿರುವುದಿಲ್ಲ. ಎಲ್ಲಿ ಜಲ ಮೊದಲಾದ ಇತರ ವಸ್ತುವಿಗಿಂತಲೂ ಭೇದವಿರುವುದಿಲ್ಲವೋ ಅಲ್ಲಿ ಗಂಧವತ್ತ್ವವಿಲ್ಲವೆಂಬ ವ್ಯತಿರೇಕವ್ಯಾಪ್ತಿ ಮಾತ್ರ ಬರುವುದರಿಂದ **ಕೇವಲವ್ಯತಿರೇಕಿ.**

**केवलान्वयि ಕೇವಲಾನ್ವಯಿ** (वि०) ["केवलव्यतिरेकि" ಪದದಲ್ಲಿ ನೋಡಿ.]

**केश ಕೇಶ** (पुं०) 1. ತಲೆಯ ಕೂದಲು. के शिरसि शेते — शीङ् (स्वप्ने) "ड:" (३-२-१०१)। ತಲೆಯ ಕೂದಲು ಅಸ್ಥಿಧಾತುವಿನ ಒಂದು ಉಪಧಾತು. ಇದು ತಂದೆಯ ಅಂಶದಿಂದ ಉಂಟಾದುದು. "गर्भस्य केशश्मश्रु-लोमास्थिनखदन्तसिरास्नायुधमनीरेतःप्रभृतीनि स्थिराणि पितृजानि" सुश्रुत० शारीर० ३-३३। ಎಷ್ಟೇ ವಯಸ್ಸಾದರೂ ನಖ ಮತ್ತು ಕೇಶಗಳನ್ನು ಕತ್ತರಿಸುತ್ತಿದ್ದರೂ ಬೆಳೆಯುತ್ತಲೇ ಇರುವುವು. "शरीरे क्षीयमाणेऽपि वर्धेते द्वाविमौ सदा। स्वभावं प्रकृतिं कृत्वा नखकेशाविति स्थितिः" सुश्रुत० शारीर० ४-६१। ಕೋಪ ಶೋಕ ಮತ್ತು ಹೆಚ್ಚು ಶ್ರಮದ ಕಾರ್ಯಗಳಿಂದ ದೇಹದ ಉಷ್ಣಾಂಶವು ತಲೆಗೆ ಪ್ರವೇಶಿಸಿ ಪಿತ್ತದೊಡನೆ ಕಲೆತು ತಲೆಯ ಕೂದಲನ್ನು ಬೆಳ್ಳಗೆ ಮಾಡುವುದು. "क्रोधशोकश्रमकृतः शरीरोष्मा शिरोगतः। पित्तं च केशान् पचति पलितं तेन जायते" सुश्रुत० निदान० १३-३७। "लताप्रतानोद्ग्रथितैः स केशैरधिज्यधन्वा विचचार दावम्" रघु० २-८। 2. ವರುಣ, ಜಲಾಧಿಪತಿ. कस्य जलस्य ईशः। 3. ಮುಡಿವಾಳ, "केशः स्यात् पुंसि वरुणे ह्रीबेरे कुन्तलेऽपि च" मेदि०। 4. ಒಬ್ಬ ರಾಕ್ಷಸ. "केशः शिरसिजे पाशपाणौ ह्रीबेरदैत्ययोः" हेम०।

**केशकर्मन् ಕೇಶಕರ್ಮನ್** (न०) 1. ತಲೆಯನ್ನು ಬಾಚಿ ಜಡೆ ಹೆಣೆದು ಶೃಂಗರಿಸುವುದು. केशानां कर्म रचना। "साहं ब्रुवाणा सैरन्ध्री कुशला केशकर्मणि" भा० विरा० ३-१८। 2. ಚೂಡಾಕರ್ಮ, ಜುಟ್ಟುಬಿಡಿಸುವುದು.

**केशकलाप ಕೇಶಕಲಾಪ** (पुं०) ತಲೆಯ ಕೂದಲಿನ ಸಮೂಹ. केशानां कलापः।

**केशकारिन् ಕೇಶಕಾರಿನ್** (वि०) ತಲೆಯ ಕೂದಲನ್ನು ಬಾಚಿ ಹೆಣೆದು ಶೃಂಗರಿಸುವವನು. केशं तस्य रचनां करोति — डु कृञ् (करणे) "णिनिः" (३-२-७८)। स्त्रियाम् "ङीप्" (४-१-५)। **—कारिणी — ಕಾರಿಣೀ.** "निहीनवर्णां सैरन्ध्रीं बीभत्सां केशकारिणीम्" भा० विरा० १४-३४।

**केशकीट ಕೇಶಕೀಟ** (पुं) 1. ತಲೆಯ ಕೂದಲಿಗೆ ಸೇರುವ ಕ್ರಿಮಿ, ಹೇನು. केशे कीटः। (न०) 2. ತಲೆಯ ಕೂದಲು ಮತ್ತು ಹೇನು. केशश्च कीटश्च अनयोः समाहारः। "केशकीटावपन्नं च पदा स्पृष्टं च कामतः" मनु० ४-२०७।

**केशगर्भ (क) ಕೇಶಗರ್ಭ (ಕ)** (पुं०) ವೇಣಿ, ಜಡೆ. केशाः गर्भेऽस्य — वा "कप्" (५-४-१५४)। "कवरः केशगर्भकः" त्रिकाण्ड०।

**केशग्रह ಕೇಶಗ್ರಹ** (पुं०) 1. ರತಿಕ್ರೀಡೆಯ ಕಾಲದಲ್ಲಿ ಮಾಡುವ ಕಚಗ್ರಹಣ. केशस्य ग्रहः। "रतेषु केशग्रहः" काद०। 2. ತಲೆಯ ಕೂದಲನ್ನು ಹಿಡಿದೆಳೆಯುವುದು. "केशग्रहान् प्रहारांश्च शिरस्येतान् विवर्जयेत्" मनु० ४-८३।

**केशग्रहण ಕೇಶಗ್ರಹಣ** (न०) "केशग्रह" ಪದದ ಅರ್ಥ. केशानां ग्रहणम् — ग्रह (उपादाने) भावे "ल्युट्" (३-३-११५)।

**केशग्राहम् ಕೇಶಗ್ರಾಹಮ್** (अव्य०) ಕೂದಲನ್ನು ಹಿಡಿದುಕೊಂಡು. केशान् गृहीत्वा — ग्रह (उपादाने) "णमुल्" (३-४-५४)।

**केशघ्न ಕೇಶಘ್ನ** (न०) ಇಂದ್ರಲುಪ್ತಕವೆಂಬ ರೋಗ, ತಲೆಯ ಕೂದಲನ್ನು ಉದುರಿಸುವ ಒಂದು ರೋಗ. केशान् हन्ति — हन (हिंसागत्योः) "टक्" (३-२-५३)। ["इन्द्रलुप्त" ಪದದಲ್ಲಿ ನೋಡಿ.]

**केशचण ಕೇಶಚಣ** (वि०) ಕೂದಲಿನಿಂದ ಪ್ರಸಿದ್ಧನಾದ, ಒಳ್ಳೆಯ ಕೂದಲಿನಿಂದ ಪ್ರಸಿದ್ಧಿ ಹೊಂದಿದ. केशैः वित्तः "चणप्" (५-२-२६)।

**केशच्छिद् ಕೇಶಚ್ಛಿದ್** (पुं०) 1. ನಾಪಿತ, ಕ್ಷೌರಿಕ, ನಾಯಿಂದ. केशान् छिनत्ति छिदिर् (द्वैधीकरणे) "क्विप्" (३-२-६१)। (वि०) 2. ಕೂದಲನ್ನು ಕತ್ತರಿಸುವವನು.

**केशजाह ಕೇಶಜಾಹ** (न०) ಕೇಶಮೂಲ, ತಲೆಯ ಕೂದಲಿನ ಬುಡ. केशानां मूलम् "जाहच्" (५-२-२४)।

**केशट ಕೇಶಟ** (पुं०) 1. ವಿಷ್ಣು. को ब्रह्मा ईशः महादेवः तौ अटतः यं प्रलयकाले — अट (गतौ) "अच्"

(३-१-१३४)। 2. ಅಜ, ಮೇಕೆ. केशेषु काशादितृणजातेषु अटति। 3. ತಿಗಣೆ. केशेषु शिरोरुहेषु अटति। 4. ಸಹೋದರ. 5. ಹೆಮ್ಮರ, ತಿಗಡುಮರ. 6. ಮನ್ಮಥನ ಬಾಣ. "केशटः शोणके विष्णौ" त्रिकाण्ड०।

**केशपक्ष ಕೇಶಪಕ್ಷ** **–पाश –ಪಾಶ** (पुं०) ತಲೆಯ ಕೂದಲಿನ ಸಮೂಹ. केशानां पक्षः पाशो वा। "केशपक्षे परामृष्टा पापेन हतबुद्धिना" भा० आदि०। "तिमिरमिव दधानाः स्रंसिनः केशपाशान्" माघ० ११-२०।

**केशपर्णी ಕೇಶಪರ್ಣೀ** (स्त्री०) ಅಪಾಮಾರ್ಗ, ಉತ್ತರಾಣಿ ಗಿಡ.

**केशप्रसाधनी ಕೇಶಪ್ರಸಾಧನೀ** (स्त्री०) ತಲೆಯ ಕೂದಲನ್ನು ಬಾಚಿ ಶೃಂಗರಿಸುವ ಬಾಚಣಿಗೆ. केशः प्रसाध्यतेऽनया—प्र+साध (संसिद्धौ) कर० "ल्युट्" (३-३-११७)। "केशप्रसाधनी केश्या रजोजन्तुमलापहा" सुश्रुत० चिकित्सा० २४-२९।

**केशभू ಕೇಶಭೂ** (स्त्री०) ಶಿರಸ್ಸು, ತಲೆ. केशानां भूः उत्पत्तिस्थानम्। **–भूमिः –ಭೂಮಿಃ.** "दारुणा कण्डुरा रूक्षा केशभूमिः प्रजायते" सुश्रुत०।

**केशमार्जक ಕೇಶಮಾರ್ಜಕ** (पुं०) ಬಾಚಣಿಗೆ. केशान् मार्ष्टि — मृजू (शुद्धौ) "ण्वुल्" (३-१-१३३)।

**केशमार्जन ಕೇಶಮಾರ್ಜನ** (न०) 1. ತಲೆಯನ್ನು ಬಾಚುವುದು. केशानां मार्जनम् — मृजू (शुद्धौ) "ल्युट्" (३-३-११५)। 2. ಬಾಚಣಿಗೆ. मृजू कर० "ल्युट्" (३-३-११७)।

**केश(स)र ಕೇಶ(ಸ)ರ** (पुं०) 1. ವಕುಳವೃಕ್ಷ, ಪವಳದ ಗಿಡ. 2. ಸುರಗಿ ಮರ, ಸುರಹೊನ್ನೆಮರ. प्रशस्ताः केसराः सन्त्यस्य "अच्" (५-२-१२७)। 3. ನಾಗಸಂಪಿಗೆ ಮರ. 4. ಕುದುರೆ ಮತ್ತು ಸಿಂಹದ ಹೆಗಲಿನ ಕೂದಲು. (पुंन०) 5. ಕಿಂಜಲ್ಕ, ಪದ್ಮ ಮೊದಲಾದುವುಗಳ ಒಳಗಿನ ಕುಸುರು. "सरजसारुणकेशरचारुभिः" माघ० ६-४७। (न०) 6. ಸಿಂದೂರ, ಇಂಗಲೀಕ. 7. ವಕುಳಪುಷ್ಪ. 8. ಸುರಗಿಹೂವು. 9. ನಾಗಸಂಪಿಗೆ ಹೂವು. 10. ಸ್ವರ್ಣ, ಚಿನ್ನ. 11. ಕುಂಕುಮಕೇಸರಿ. के जले शिरसि वा शीर्यति — शॄ (हिंसायाम्) "अप्" (३-३-५७)। "केशरं हिङ्गुले क्लीबं किञ्जल्के न स्त्रियां पुमान्। सिंहसटायां पुन्नागे वकुले नागकेसरे" मेदि०। 12. ಚಾಮರ. "चामरं रोमगुत्सं च केशरं चावचूलकम्" त्रिकाण्ड०।

**केशरचना ಕೇಶರಚನಾ** (स्त्री०) ತಲೆಯನ್ನು ಬಾಚಿ ಜಡೆ ಹೆಣೆಯುವುದು. केशानां रचना।

**केशरञ्जन ಕೇಶರಂಜನ** (पुं०) 1. ಗರಗದ ಗಿಡ. केशान् रञ्जयति—रञ्ज (रागे)+णिच् "ल्युः" (३-१-१३४)। 2. ತಲೆಯ ಕೂದಲಿಗೆ ಬಣ್ಣ ಹಾಕುವುದು. केशानां रञ्जनम्।

**केशराज ಕೇಶರಾಜ** (पुं०) ಗರಗದ ಸೊಪ್ಪು. केशा रज्यन्तेऽनेन—रञ्ज (रागे) कर० "घञ्" (३-३-१२१)। "भृङ्गराजः केशराजो भृङ्गारः केशरञ्जनः" भावप्र०।

**केशलुञ्चक ಕೇಶಲುಂಚಕ** (पुं०) ಜೈನಸಂನ್ಯಾಸಿ. केशान् लुञ्चति—लुञ्च (अपनयने) "ण्वुल्" (३-१-१३३)। "आः पाप, पाषण्डापसद। चण्डालवेष, केशलुञ्चक" प्रबोध०। "ल्युः" (३-१-१३४)। **–लुञ्चनः –ಲುಂಚನಃ.**

**केशव ಕೇಶವ** (पुं०) 1. ವಿಷ್ಣು. कश्च ईशश्च केशौ — तौ पुत्रपौत्रत्वेन स्तोऽस्य, प्रशस्तोः केशाः सन्त्यस्य वा "वः" (५-२-१०९)। "शम्भोः पितामहो ब्रह्मापिता शक्राद्यधीश्वरः" पाद्मपु०। "प्रशस्तनीलकेशत्वात् केशवः परिकीर्तितः" इति निरुक्तिः। "नारसिंहवपुः श्रीमान् केशवः पुरुषोत्तमः" वि० स०। "प्रतिवाचमदत्त केशवः शपमानाय न चेदिभूभुजे" माघ० १६-२५। ಕೇಶಿಯೆಂಬ ರಾಕ್ಷಸನನ್ನು ಕೊಂದದ್ದರಿಂದ "ಕೇಶವ"ನೆಂಬ ಹೆಸರಾಯಿತು. "यस्मात्त्वयैव दुष्टात्मा हतः केशी जनार्दन। तस्मात् केशवनाम्ना त्वं लोके ज्ञेयो भविष्यसि" विष्णुपु०। 2. ಸುರಗಿಮರ, ಸುರಹೊನ್ನೆ ಮರ. (वि०) 3. ಉತ್ತಮವಾದ ಕೇಶಪಾಶವುಳ್ಳ, ಶ್ರೇಷ್ಠವಾದ ತುರುಬಿನಿಂದ ಕೂಡಿದ. "केशवः केशसंयुते। पुन्नागे वासुदेवे च" हेम०।

**केशवर्धन ಕೇಶವರ್ಧನ** (न०) 1. ತಲೆಯ ಕೂದಲನ್ನು ಬೆಳಸುವುದು. केशानां वर्धनम्। 2. ತಲೆಯ ಕೂದಲನ್ನು ಕತ್ತರಿಸುವುದು. (वि०) 3. ತಲೆಯ ಕೂದಲನ್ನು ಬೆಳಸುವ. केशान् वर्धयति — वृधु (वृद्धौ) + णिच् "ल्युः" (३-१-१३४)। 4. ತಲೆಯ ಕೂದಲನ್ನು ಕತ್ತರಿಸುವ. केशान् वर्धयति — वर्ध (छेदने) + णिच् "ल्युः" (३-१-१३४)। स्त्रियाम् **–वर्धना –ವರ್ಧನಾ.**

**केशवर्धनी ಕೇಶವರ್ಧನೀ** (स्त्री०) ಸಹದೇವೀಲತೆ. केशा वर्धन्तेऽनया — वृधु (वृद्धौ) कर० "ल्युट्" (३-३-११७)। स्त्रियाम् "ङीप्" (४-१-१५)।

**केशवर्धिनी ಕೇಶವರ್ಧಿನೀ** (स्त्री०) ಸಹದೇವೀಲತೆ. केशान् वर्धयति — वृधु (वृद्धौ) + णिच् "णिनिः" (३-१-१३४)। "ङीप्" (४-१-५)।

**केशवालय ಕೇಶವಾಲಯ** (पुं०) 1. ವಿಷ್ಣು ದೇವಸ್ಥಾನ. केशवस्यालयः। 2. ಅಶ್ವತ್ಥವೃಕ್ಷ, ಅರಳಿಮರ.

**केशवेश ಕೇಶವೇಶ** (पुं०) 1. ಹೆರಳು, ತುರುಬು. केशानां वेशः। 2. ಕೇಶರಚನೆ, ಜಡೆ ಹೆಣೆಯುವುದು. "यथा कुलधर्मं केशवेशान् कारयेत्" आश्व० गृ०।

**केशहस्त ಕೇಶಹಸ್ತ** (पुं०) ಕೇಶಕಲಾಪ, ಕೂದಲಿನ ಸಮೂಹ. केशानां हस्तः। "कस्याश्चिद्विततचलच्छिखाङ्गुलीको लक्ष्मीवान् सरसि रराज केशहस्तः" माघ० ८-२७।

**केशाकेशि ಕೇಶಾಕೇಶಿ** (अव्य०) ಪರಸ್ಪರ ಕೂದಲನ್ನು ಹಿಡಿದುಕೊಂಡು ನಡೆದ ಯುದ್ಧ. केशेषु केशेषु गृहीत्वा प्रवृत्तं युद्धम् "इच्" (५-४-१२७)। पूर्वपदस्य दीर्घः (६-३-१३७)। "केशाकेश्यमवद्युद्धं रक्षसां वानरैः सह" भा० वन० २८४-३७।

**केशाद ಕೇಶಾದ** (पुं०) ತಲೆಯ ಕೂದಲನ್ನು ತಿನ್ನುವ ಒಂದು ಕ್ರಿಮಿ. केशान् अत्ति — अद (भक्षणे) "अण्" (३-२-१)।

**केशान्त ಕೇಶಾಂತ** (पुं०) 1. ಹದಿನಾರನೆಯ ವರ್ಷದಲ್ಲಿ ಮಾಡುವ ಕೇಶಖಂಡನಸಂಸ್ಕಾರ, ಗೋದಾನಕರ್ಮ. केशान् अन्तयति छेदनात् हन्ति—अन्त + णिच् (नामधा०) "अण्" (३-२-१)। "केशान्तः षोडशे वर्षे ब्राह्मणस्य विधीयते। राजन्यबन्धोर्द्वाविंशे वैश्यस्य द्व्यधिके ततः" मनु० २-६५। 2. ತಲೆಯ ಕೂದಲಿನ ತುದಿ, ತುರುಬಿನ ತುದಿಯ ಭಾಗ. "धूपोष्मणा त्याजितमार्द्रभावं केशान्तमन्तःकुसुमं तदीयम्" कुमा० ७-१४।

**केशान्तिक ಕೇಶಾಂತಿಕ** (वि०) ತಲೆಯ ಕೂದಲಿನ ತುದಿಯವರೆಗಿನ. केशान्तः परिमाणमस्य "ठन्" (५-१-५७)। "केशान्तिको ब्राह्मणस्य दण्डः कार्यः प्रमाणतः। ललाटसंमितो राज्ञः स्यात्तु नासान्तिको विशः" मनु० २-४६।

**केशारि ಕೇಶಾರಿ** (पुं०) ತಲೆಯ ಕೂದಲಿನ ಶತ್ರು. केशानामरिः।

**केशार्हा ಕೇಶಾರ್ಹಾ** (स्त्री०) ಮಹಾನೀಲಿ ಗಿಡ. केशं केशवर्णमर्हति — अर्ह (पूजायाम्) "अण्" (३-२-१)।

**केशि ಕೇಶಿ** (पुं०) ಒಬ್ಬ ದಾನವ.

**केशिक ಕೇಶಿಕ** (वि०) ಶ್ರೇಷ್ಠವಾದ ಕೇಶಪಾಶವುಳ್ಳ, ಬಹಳ ಕೂದಲುಳ್ಳ. प्रशस्ताः केशा यस्य "ठन्" (५-२-११५)।

**केशिका ಕೇಶಿಕಾ** (स्त्री०) ಶತಾವರಿ ಗಿಡ.

**केशिध्वज ಕೇಶಿಧ್ವಜ** (पुं०) ನಿಮಿವಂಶದ ಒಬ್ಬ ದೊರೆ.

**केशिन् ಕೇಶಿನ್** (पुं०) 1. ಒಬ್ಬ ರಾಕ್ಷಸ. [ಇವನು ಕುದುರೆಯ ರೂಪವನ್ನು ತಾಳಿ ಗೋಕುಲದಲ್ಲಿ ಬಲರಾಮ-ಕೃಷ್ಣರನ್ನೂ ಗೋಪಬಾಲಕರನ್ನೂ ಹಿಂಸಿಸುತ್ತಿರಲು ಶ್ರೀಕೃಷ್ಣನಿಂದ ಹತನಾದನು. "केशी तु कंसप्रहितः खुरैर्महीं महाहयो निर्जरयन् मनोजवः। सटावधूताभ्रविमानसंकुलं कुर्वन् नभो हेषितभीषिताखिलः। तं त्रासयन्तं भगवान् स्वगोकुलं तद्धेषितैर्वालविघूर्णिताम्बुदम्। आत्मानमाजौ मृगयन्तमग्रणीरुपाह्वयत् स व्यनदन्मृगेन्द्रवत्। ………………। समेधमानेन स कृष्णबाहुना निरुद्धवायुश्चरणांश्च विक्षिपन्। प्रस्विन्नगात्रः परिवृत्तलोचनः पपात लेण्डं विसृजन् क्षितौ व्यसुः"] भाग० १०-३७। 2. ಒಬ್ಬ ದಾನವ. [ಇವನು ಪ್ರಜಾಪತಿಯ ಮಗಳಾದ ದೇವಸೇನೆಯನ್ನು ಅಪಹರಿಸಿಕೊಂಡು ಹೋಗುತ್ತಿದ್ದಾಗ ಇಂದ್ರನು ದೇವಸೇನೆಯನ್ನು ಇವನಿಂದ ಬಿಡಿಸಿ ಕಾರ್ತಿಕೇಯನಿಗೆ ಕೊಟ್ಟು ಮದುವೆ ಮಾಡಿಸಿದನು.] भा० वन० २२३, २९। (वि०) 3. ಶ್ರೇಷ್ಠವಾದ ಕೂದಲುಳ್ಳ. प्रशस्ताः केशा यस्य "इनिः" (५-२-११५)। स्त्रियाम् "ङीप्" (४-१-५)। **केशिनी ಕೇಶಿನೀ.**

**केशिनिषूदन ಕೇಶಿನಿಷೂದನ** (पुं०) ಶ್ರೀಕೃಷ್ಣ. केशिनं निषूदयति — नि + षूद (क्षरणे) + णिच् "ल्युः" (३-१-१३४)। ["केशिन्" ಪದದಲ್ಲಿ ನೋಡಿ.]

**केशिनी ಕೇಶಿನೀ** (स्त्री०) 1. ಕಡಿಯಾಲದಗಿಡ. 2. ಜಟಾಮಾಂಸಿ. केशाः केशाकारा जटाः सन्त्यस्य "इनिः" (५-२-११५)। "ङीप्" (४-१-५)। 3. ದಮಯಂತಿಯ ಒಬ್ಬ ಗೆಳತಿ. "रचय चारुमति स्तनयोर्वृतिं कलय केशिनि कैश्यमसंयतम्" नैष० ४-११४। 4. ಅಜಮೀಢನ ಪತ್ನಿ, ಜಹ್ನುವಿನ ತಾಯಿ. 5. ಸಗರಚಕ್ರವರ್ತಿಯ ಪತ್ನಿ. 6. ಒಬ್ಬ ಅಪ್ಸರಸ್ಸು.

**केशी ಕೇಶೀ** (स्त्री०) ನೀಲಿ ಗಿಡ.

**केशोच्चय ಕೇಶೋಚ್ಚಯ** (पुं०) ಕೇಶಪಾಶ, ತಲೆಯ ಕೂದಲಿನ ಸಮೂಹ. केशानामुच्चयः।

**केश्य ಕೇಶ್ಯ** (पुं०) 1. ಗರಗದ ಸೊಪ್ಪು. (न०) 2. ಕೃಷ್ಣಾಗುರು. (वि०) 3. ತಲೆಯ ಕೂದಲನ್ನು ಬಾಚಿ

ಶೃಂಗರಿಸುವ ಸಾಧನವಾದ ಬಾಚಣಿಗೆ ಮೊದಲಾದುದು. केशाय हितः "यत्" (५-१-५)। "केशप्रसाधनी केश्या रजोजन्तुमलापहा" सुश्रुत० चिकित्सा० २४-२९।

**केसर ಕೇಸರ** (पुन०) 1. ಕುದುರೆ ಮತ್ತು ಸಿಂಹದ ಹೆಗಲಿನ ಕೂದಲು. के सरति—सृ (गतौ) "अच्" (३-१-१३४)। "सितत्विषश्चञ्चलतामुपेयुषो मिषेण पुच्छस्य च केसरस्य च" नैष० १-६२। 2. ಕಮಲ ಮೊದಲಾದ ಹೂವುಗಳ ಕುಸುರು. के जले सरति—सृ (गतौ) "अच्" (३-१-१३४)। "नीपं दृष्ट्वा हरितकपिशं केसरैरर्धरूढैः" मेघ० १-२१। "दुधुवुर्वाजिनः स्कन्धान् लग्नकुङ्कुमकेसरान्" रघु० ४-६७। (पुं०) 3. ಸುರಗಿ ಮರ, ಸುರಹೊನ್ನೆ ಮರ. प्रशस्ताः केसरा अस्य। 4. ನಾಗಸಂಪಿಗೆ ಮರ. 5. ಪಕುಳವೃಕ್ಷ, ಪವಳದ ಗಿಡ. (न०) 6. ಹಿಂಗು. 7. ಪಕುಳಪುಷ್ಪ. "स्रस्तां नितम्बादवलम्बमाना पुनःपुनः केसरदामकाञ्चीम्" कुमा० ३-५५। 8. ಸುರಗಿ ಹೂವು. 9. ನಾಗಸಂಪಿಗೆ ಹೂವು. "केसरो नागकेसरे। तुरङ्गसिंहयोः स्कन्धकेशेषु वकुलद्रुमे। पुन्नागवृक्षे किञ्जल्के स्यात् केसरं तु हिङ्गुनि" हेम०। 10. ಸ್ವರ್ಣ, ಚಿನ್ನ.

**केसरवत् ಕೇಸರವತ್** (वि०) ಕೇಸರಗಳಿಂದ ಕೂಡಿದ. केसरा अस्य सन्ति—"मतुप्" (५-२-९४)। स्त्रियाम् "ङीप्" (४-१-६)। **-वती -ವತೀ.**

**केसरवर ಕೇಸರವರ** (न०) ಕುಂಕುಮ ಕೇಸರಿ.

**केसराचल ಕೇಸರಾಚಲ** (पुं०) ಸುಮೇರು ಪರ್ವತ. भूपद्मस्य केसरे स्थितोऽचलः।

**केसराम्ल ಕೇಸರಾಮ್ಲ** (पुं०) 1. ಹೇರಿಳೆಗಿಡ, ನಿಂಬೆಗಿಡ ಮುಂತಾದುವು. (न०) 2. ಹೇರಿಳೆಹಣ್ಣು, ನಿಂಬೆಹಣ್ಣು ಮುಂತಾದುವು.

**केसरिन् ಕೇಸರಿನ್** (पुं०) 1. ಸಿಂಹ. केसरोऽस्यास्ति "इनिः" (५-२-११५)। "स पाटलायां गवि तस्थिवांसं धनुर्धरः केसरिणं ददर्श" रघु० २-२९। "किं जीर्णं तृणमत्ति मानमहतामग्रेसरः केसरी" भर्तृ० १-२१। 2. ಕುದುರೆ. 3. ಹನುಮಂತನ ತಂದೆಯಾದ ಒಬ್ಬ ವಾನರ. "सूर्यदत्तवरः स्वर्णः सुमेरुर्नाम पर्वतः। यत्र राज्यं प्रशास्त्यस्य केसरी नाम वै पिता" रामा०। 4. ಸುರಗಿ ಮರ. 5. ನಾಗಸಂಪಿಗೆ ಗಿಡ. "केसर्यर्वणि पुन्नागे नागकेसरसिंहयोः" हेम०। 6. ತೋಟಮಾದಳದ ಗಿಡ. "मातुलुङ्गे तु रुचको वराम्लः केसरी शठः" वैज०।

**केसरिसुत ಕೇಸರಿಸುತ** (पुं०) ಆಂಜನೇಯ, ಹನುಮಂತ. केसरिणः सुतः।

**कै – शब्दे** (भ्वा० पर० अक० अनि०)। कायति। चकौ। काता। कास्यति। कायतु। अकायत्। कायेत्। केयात्। अकासीत्। अकास्यत्। ಕೂಗು, ಶಬ್ದಮಾಡು.

**कर्मणि**:—कीयते। चके। कायिता, काता। कायिष्यते—कास्यते। कीयताम्। अकीयत। कीयेत। ಇತ್ಯಾದಿ.

**णिचि**:—कापयति, —ते। कापयां चकार, —चक्रे, —बभूव, —आस। कापयिता। कापयिष्यति, —ते। कापयतु, कापयताम्। अकापयत्, —त। ಇತ್ಯಾದಿ.

**सनि**:—चिकासति। चिकासां चकार, —बभूव, —आस। चिकासिता। चिकासिष्यति। चिकासतु। ಇತ್ಯಾದಿ.

**कृत्सु**:—कातव्यम्। कानीयम्। केयम्। कातम्। कातवान्। कायन्, कायन्ती। कातुम्। कातम्। कानम्। कात्वा। प्रकाय।

**कैंकिरात ಕೈಂಕಿರಾತ** (न०) ಅಶೋಕ ಕುಸುಮ, ಅಶೋಕ ವೃಕ್ಷದ ಹೂವು. किंकिरातानां विकारः "अण्" (४-३-१३४)। "कीर्णैः पिष्टातकौघैः कृतदिवसमुखैः कुङ्कुमक्षोदगौरैः हेमालङ्कारभाभिर्भरनमितशिरःशेखरैः कैंकिरातैः" रत्ना० १-१०।

**कैंशुक ಕೈಂಶುಕ** (न०) ಮುತ್ತುಗದ ಹೂವು. किंशुकस्य विकारः "अण्" (४-३-१३४)।

**कैकसी ಕೈಕಸೀ** (स्त्री०) ಬ್ರಹ್ಮನ ವಂಶದಲ್ಲಿ ಹುಟ್ಟಿದ ಸುಮಾಲಿಯೆಂಬ ರಾಕ್ಷಸನ ಮಗಳು, ರಾವಣನ ತಾಯಿ. "राका पुष्पोत्कटा चैव कैकसी च शुचिस्मिता। कुम्भीनसी च इत्येताः सुमालेः प्रसवाः सुताः" रामा०। ತಂದೆಯ ಆದೇಶದಂತೆ ಕೈಕಸಿಯು ವಿಶ್ರವಸ್ಸಿನ ಶುಶ್ರೂಷೆ ಮಾಡುತ್ತಿದ್ದು ಒಂದು ದಿನ ಸಂಜೆಯಲ್ಲಿ ತಾನು ಪುತ್ರಾರ್ಥಿನಿಯಾಗಿ ಬಂದಿರುವ ವಿಷಯವನ್ನು ತಿಳಿಸಿದಳು. ಸಾಯಂಕಾಲದಲ್ಲಿ ಪ್ರಾರ್ಥಿಸಿದ್ದರಿಂದ ಕ್ರೂರರಾದ ಮಕ್ಕಳೇ ಅವಳಲ್ಲಿ ಹುಟ್ಟುವರೆಂದು ಮಹರ್ಷಿಯು ಹೇಳಿದರು. "विज्ञातं ते मया भद्रे कारणं यन्मनोगतम्। सुताभिलाषो मत्तस्ते मत्तमातङ्गगामिनि। दारुणायां तु वेलायां यस्मात्त्वं मामुपस्थिता। शृणु तस्मात् सुतान् भद्रे यादृशान् जनयिष्यसि। दारुणान् दारुणाकारान् दारुणाभिजनप्रियान्। प्रसविष्यसि सुश्रोणि राक्षसान् क्रूरकर्मणः"।

ಇದರಿಂದ ಕ್ರೂರರೂಪಿಗಳಾದ ರಾವಣಕುಂಭಕರ್ಣರು ಜನಿಸಿದರು. ಆಗ ಖಿನ್ನಳಾಗಿ ಪುನಃ ಬೇಡಿಕೊಳ್ಳಲು ಧರ್ಮಾತ್ಮನಾದ ವಿಭೀಷಣನು ಜನಿಸಿದನು. "पश्चिमो यस्तव सुतो भविष्यति शुभानने। मम वंशानुरूपः सः धर्मात्मा च न संशयः" रामा०।

**कैकेय ಕೈಕೇಯ** (पुं०) ಕೇಕಯದೇಶದ ದೊರೆ. केकयानां राजा "अञ्" (वा० ४-१-१६६)। यादेरियादेशः (७-३-२)। (स्त्री०) **कैकेयी ಕೈಕೇಯಿ.** केकयस्यापत्यं स्त्री "अञ्" (४-१-१६६)। "ङीप्" (४-१-१५)। ಕೇಕಯ ರಾಜನ ಮಗಳು, ದಶರಥ ಮಹಾರಾಜನ ಕಿರಿಯ ಹೆಂಡತಿ, ಭರತನ ತಾಯಿ. [ಕೈಕೇಯಿಯು ತನ್ನ ಮಗನಾದ ಭರತನಿಗೆ ರಾಜ್ಯವು ದೊರಕಬೇಕೆಂದು ಶ್ರೀರಾಮನ ಪಟ್ಟಾಭಿಷೇಕವನ್ನು ತಡೆದು ಶ್ರೀರಾಮನನ್ನು ಹದಿನಾಲ್ಕು ವರ್ಷಗಳ ವನವಾಸಕ್ಕೆ ಕಳುಹಿಸಿದಳು. ಬಳಿಕ ಭರತನು ಈ ವಿಷಯವನ್ನು ತಿಳಿದು ತಾಯಿಯ ಈ ಕಾರ್ಯದಿಂದ ಬಹಳವಾಗಿ ದುಃಖಿಸಿ ಕಾಡಿಗೆ ಹೋಗಿದ್ದ ಶ್ರೀರಾಮನನ್ನು ಪುನಃ ಅಯೋಧ್ಯೆಗೆ ಬರಬೇಕೆಂದು ಪ್ರಾರ್ಥಿಸಿದನು. ಶ್ರೀರಾಮನು ಪ್ರತಿಜ್ಞೆಯನ್ನು ಮೀರಲು ಸಾಧ್ಯವಿಲ್ಲವೆನ್ನಲು ಭರತನು ಶ್ರೀರಾಮನ ಪಾದುಕೆಗಳನ್ನು ತಂದು ನಗರಪ್ರವೇಶಮಾಡದೆ ನಂದಿಗ್ರಾಮದಲ್ಲಿ ಪಾದುಕೆಗಳಿಗೆ ಪಟ್ಟಾಭಿಷೇಕಮಾಡಿ ಶ್ರೀರಾಮನು ವನವಾಸವನ್ನು ಮುಗಿಸಿಕೊಂಡು ಬರುವವರೆಗೂ ಪಾದುಕೆಗಳ ಹೆಸರಿನಲ್ಲಿ ರಾಜ್ಯ ಪರಿಪಾಲನೆ ಮಾಡುತ್ತಿದ್ದನು.] रामा०। कैकेय्यास्तनयो जज्ञे भरतो नाम शीलवान्। जनयित्रीमलंचक्रे यः प्रश्रय इव श्रियम्" रघु० १०-७०।

**कैटभ ಕೈಟಭ** (पुं०) ವಿಷ್ಣುವಿನ ಕರ್ಣಸ್ರೋತಸ್ಸಿನಿಂದ (ಕಿವಿಯ ಮಲದಿಂದ) ಹುಟ್ಟಿದ ಒಬ್ಬ ರಾಕ್ಷಸ, ಮಧುವೆಂಬ ಒಬ್ಬ ರಾಕ್ಷಸನ ತಮ್ಮ. [ಕಲ್ಪದ ಪ್ರಾರಂಭದಲ್ಲಿ ವಿಷ್ಣುವು ವಟಪತ್ರದಲ್ಲಿ ಪವಳಿಸಿದ್ದಾಗ ಕಿವಿಯ ಮಲದಿಂದ ಮಧುಕೈಟಭರೆಂಬ ಇಬ್ಬರು ರಾಕ್ಷಸರು ಹುಟ್ಟಿ ವಿಷ್ಣುವಿನ ನಾಭಿಕಮಲದಲ್ಲಿದ್ದ ಬ್ರಹ್ಮನನ್ನು ಹಿಂಸಿಸತೊಡಗಿದರು. ಬ್ರಹ್ಮನ ಸ್ತೋತ್ರದಿಂದ ಎಚ್ಚರಗೊಂಡ ವಿಷ್ಣುವು ಅವರೊಡನೆ ಘೋರ ಯುದ್ಧಮಾಡಿ ತನ್ನ ಪರಾಕ್ರಮಕ್ಕೆ ಮೆಚ್ಚಿದ ಅವರಿಂದಲೇ ಅವರನ್ನು ಕೊಲ್ಲುವ ವರವನ್ನು ಪಡೆದು ಇಬ್ಬರು ರಾಕ್ಷಸರನ್ನೂ ಸಂಹರಿಸಿದನು. "अथ दीर्घस्य कालस्य द्वौ दैत्यौ युद्धदुर्मदौ। ऊचतुः प्रीतमनसौ देवं नारायणं प्रभुम्। प्रीतौ स्वस्तव युद्धेन श्लाघ्यस्त्वं मृत्युरावयोः। आवां जहि न यत्रोर्वी सलिलेन परिप्लुता। हतौ च तव पुत्रत्वं प्राप्नुयाव सुरोत्तम। स तु गृह्य मृधे दोर्भ्यां दैत्यौ तौ समपीडयत्। जग्मतुर्निधनं चापि तावुभौ मधुकैटभौ"] हरिवं०।

**कैटभजित् ಕೈಟಭಜಿತ್** (पुं०) ಕೈಟಭನೆಂಬ ರಾಕ್ಷಸನನ್ನು ಕೊಂದ ವಿಷ್ಣು. कैटभं जितवान् — जि (जये) "क्विप्" (३-२-६१)। ["कैटभ" ಪದದಲ್ಲಿ ನೋಡಿ.]

**कैटभारि ಕೈಟಭಾರಿ** (पुं०) ಮಹಾವಿಷ್ಣು. कैटभस्यारिः।

**कैटभी ಕೈಟಭೀ** (स्त्री०) ಮಹಾಕಾಳಿ, ದುರ್ಗಾದೇವಿ.

**कैटर्य ಕೈಟರ್ಯ** (पुं०) 1. ತೇಗದಮರ. केटं भयं राति अतितिक्तत्वात् — रा (दाने) "कः" (३-२-३)। केटरस्य भावः "ष्यञ्" (वा० ५-१-१२४)। 2. ನೆಲಬೇವು. 3. ತಪಸಿ ಗಿಡ.

**कैतक ಕೈತಕ** (न०) 1. ತಾಳೆಹೂವು. केतकस्य विकारः (पुष्पम्) "अण्" (४-३-१३५)। (वि०) 2. ತಾಳೆ ಹೂವಿನ ಸಂಬಂಧವಾದ. केतकस्येदम् "अण्" (४-३-१२०)। "पुण्डरीकमुखि पूर्वदिङ्मुखं कैतकैरिव रजोभिराहतम्" कुमा० ८-५८।

**कैतव ಕೈತವ** (पुं०) 1. ಶಕುನಿ, ದುರ್ಯೋಧನನ ಮಾವ. 2. ವಂಚಕ, ಮೋಸಗಾರ. 3. ಮೂರ್ಖ, ತಿಳಿಗೇಡಿ. 4. ಜೂಜುಗಾರ. 5. ದತ್ತೂರಿ ಗಿಡ. कितव स्वार्थे "अण्" (५-४-३८)। (न०) 6. ಮೋಸ, ವಂಚನೆ. 7. ಜೂಜಾಟ. कितवस्य भावः कर्म वा "अण्" (५-१-१३०)। 8. ವ್ಯಾಜ, ನೆಪ. "स्वदृशोर्जनयन्ति सान्त्वनां खुरकण्डूयनकैतवान्मृगाः" नैष० २-२१। 9. ಕಪಟ, ಅಸತ್ಯ, ಅಲೀಕ. "विशङ्कसे कैतवनर्तितं चेदन्तश्चरः पञ्चशरः प्रमाणम्" नैष० ८-९४।

**कैतवक ಕೈತವಕ** (न०) ಆಟದಲ್ಲಿ ನಡೆಯುವ ಮೋಸ. "मत्त कैतवकेनैव यज्जितोऽस्मि दुरोदरे" भा० सभा० ८५-१०।

**कैतवेय ಕೈತವೇಯ** (पुं०) ಅಂಶುಮಂತನ ಮಗ ಉಲೂಕ. कितवाया अपत्यम् "ढक्" (४-१-१२०)। "उलूकः कैतवेयश्च वीरश्चांशुमतः सुतः" हरिवं०।

**कैतव्य ಕೈತವ್ಯ** (पुं०) ಶಕುನಿಯ ಮಗ. "उलूक गच्छ कैतव्य पाण्डवान् सहसोमकान्" भा० उद्योग० १६०-६।

**कैदार ಕೈದಾರ** (वि०) ಕೇದಾರ ಸಂಬಂಧವಾದ, ಕೆಸರು ಗದ್ದೆಗಳಲ್ಲಿ ಬೆಳೆದ ಬತ್ತ, ಗೋಧಿ ಮೊದಲಾದುವು. केदारस्येदम् "अण्" (४-३-१२०)। "कैदारा मधुरा वृष्या बल्याः पित्तनिबर्हणाः। ईषत्कषायाल्पमला गुरवः कफशुक्रलाः" सुश्रुत० सूत्र० ४६-१७।

**कैदारक ಕೈದಾರಕ** (ನಂ) ಗದ್ದೆಗಳ ಸಮೂಹ. केदाराणां समूहः "वुञ्" (४-२-४०)। "ठञ्" (४-२-४१)। **कैदारिकम् ಕೈದಾರಿಕವು.** "यञ्" (४-२-४०)। **कैदार्यम् ಕೈದಾರ್ಯವು.** "कैदारकं स्यात् कैदार्यं क्षेत्रं कैदारिकं गणे" अम०। "कैदारिकाणामभितः समाकुलाः सहासमालोकयति स्म गोपिकाः" माघ० १२-४२।

**कैन्नर ಕೈನ್ನರ** (वि०) 1. ಕಿನ್ನರಖಂಡದಲ್ಲಿ ವಾಸಮಾಡುವ. किन्नरः किन्नरवर्षमभिजनोऽस्य "अञ्" (४-३-९३)। 2. ಕಿಂಪುರುಷಸಂಬಂಧವಾದ. किन्नरस्येदम् "अण्" (४-३-१२०)।

**कैमुतिक ಕೈಮುತಿಕ** (पुं०) ಕೈಮುತಿಕನ್ಯಾಯ. ಅಧಿಕ ಪ್ರಯಾಸದಿಂದ ಸಾಧಿಸಬಹುದಾದ ಕಾರ್ಯವು ಅಲ್ಪ ಪ್ರಯತ್ನದಿಂದಲೇ ಸಾಧ್ಯವಾಗುವಲ್ಲಿ ಹೆಚ್ಚು ಪ್ರಯತ್ನ ದಿಂದ ಸಾಧ್ಯವೆಂಬುದನ್ನು ಬೇರೆ ಹೇಳಬೇಕೆ ಎಂಬ ಅರ್ಥ ವಲ್ಲಿ ಉಂಟಾದ ಒಂದು ನ್ಯಾಯ. किमुत इत्यर्थादागतः "ठक्" (४-३-७४)।

**कैयट ಕೈಯಟ** (पुं०) ಪಾತಂಜಲಮಹಾಭಾಷ್ಯದ ವ್ಯಾಖ್ಯಾನಕಾರರು, ಜೈಯಟರ ಮಗ.

**कैरव ಕೈರವ** (पुं०) 1. ಶತ್ರು, ಹಗೆ. (ನಂ) 2. ಬಿಳಿ ನೈದಿಲೆ, ಕುಮುದ. के रवो यस्य के जले रौति वा केरवो हंसः। तस्येदं (प्रियम्) "अण्" (४-३-१२०)। (वि०) 3. ಕಪಟಿ, ಮೋಸಗಾರ, ವಂಚಕ. "कैरवः कितवे रिपौ। नपुंसकं च कुमुदे" मेदि०।

**कैरवबन्धु ಕೈರವಬಂಧು** (पुं०) ಕುಮುದ (ಬಿಳಿ ನೈದಿಲೆ) ಗಳ ಬಂಧುವಾದ ಚಂದ್ರ. ಬಿಳಿ ನೈದಿಲೆಯು ಚಂದ್ರೋದಯ ವಾದ ನಂತರ ಅರಳುವುದರಿಂದ ಈ ಹೆಸರು. कैरवस्य बन्धुः।

**कैरविणी ಕೈರವಿಣೀ** (स्त्री०) 1. ಬಿಳಿ ನೈದಿಲೆಯ ಬಳ್ಳಿ. 2. ಸರೋವರ, ಬಿಳಿ ನೈದಿಲೆಗಳಿಂದ ಕೂಡಿದ ಪ್ರದೇಶ. 3. ಬಿಳಿ ನೈದಿಲೆಗಳ ಸಮೂಹ. कैरव "इनिः" ङीप् च (५-२-१३५)।

**कैरविन् ಕೈರವಿನ್** (पुं०) ಚಂದ್ರ. कैरवं प्रकाश्यतयास्यास्ति "इनिः" (५-२-११५)।

**कैरवी ಕೈರವೀ** (स्त्री०) ಚಂದ್ರಿಕೆ, ಬೆಳದಿಂಗಳು. "नपुंसकं च कुमुदे चन्द्रिकायां तु कैरवी" मेदि०।

**कैरात ಕೈರಾತ** (पुं०) 1. ಬಲಶಾಲಿಯಾದ ಪುರುಷ. 2. ನೆಲಬೇವು. किरातदेशे भवः "अण्" (४-३-५३)। (वि०) 3. ಕಿರಾತನ ಸಂಬಂಧವಾದ. किरातस्येदम् "अण्"(४-३-१२०)। "कैरातं वेशमास्थाय काञ्चनद्रुमसन्निभम्" भा० वन० ३९-२।

**कैराल ಕೈರಾಲ** (ನಂ) ವಾಯುವಿಳಂಗ. किरं पर्यन्तभूमिमलति — अल (भूषणादौ) "अण्" (३-२-१)।

**कैराली ಕೈರಾಲೀ** (स्त्री०) ವಾಯುವಿಳಂಗ. कैराल गौरा० "ङीष्" (४-१-४१)।

**कैलास ಕೈಲಾಸ** (पुं०) ಕೈಲಾಸ ಪರ್ವತ, ಬೆಳ್ಳಿಯ ಬೆಟ್ಟ. के जले लासो लसनं दीप्तिरस्य केलसः स्फटिकः तस्यायम् "अण्" (४-३-१२०)। ಕೈಲಾಸ ಪರ್ವತವು ಪರಶಿವ ಮತ್ತು ಕುಬೇರ ಇವರ ವಾಸಸ್ಥಳ. ಇದು ಹಿಮವತ್ಪರ್ವತದ ಶಿಖರಗಳಲ್ಲಿ ಉತ್ತರ ಭಾಗದಲ್ಲಿದೆ. ಇದಕ್ಕೆ ರಜತಾದ್ರಿಯೆಂದೂ ಹೆಸರು. [ತಮ್ಮನಾದ ರಾವಣನು ತನ್ನನ್ನು ಜಯಿಸಿ ಲಂಕೆ ಮತ್ತು ಪುಷ್ಪಕ ವಿಮಾನಗಳನ್ನು ಸ್ವಾಧೀನಪಡಿಸಿಕೊಂಡ ಬಳಿಕ ಕುಬೇರನು ಪರಮೇಶ್ವರನೊಡನೆ ಸ್ನೇಹ ಬೆಳಸಿ ಕೈಲಾಸದಲ್ಲಿ ಅಲಕಾ ಪಟ್ಟಣವನ್ನು ನಿರ್ಮಿಸಿಕೊಂಡು ಯಕ್ಷರಾಜನಾದನು. ಈ ಅಲಕೆಯ ಸಮೀಪದಲ್ಲೇ ಪರಮೇಶ್ವರನು ನೆಲೆಸಿರು ವುದು. "हेमकूटस्तु सुमहान् कैलासो नाम पर्वतः। यत्र वैश्रवणो राजन् गुह्यकैः सह मोदते"] भा० भीष्म० ६-४१। "अलकां समया चैष कैलासः शङ्करालयः" काशीख०। ಕೈಲಾಸ ಪರ್ವತವು ದೇವಾಂಗ ನೆಯರ ವಿಹಾರಸ್ಥಾನವಾಗಿರುವುದು. "कैलासस्य त्रिदशवनितादर्पणस्यातिथिः स्याः" मेघ० १-५८।

**कैलासनाथ ಕೈಲಾಸನಾಥ** (पुं०) 1. ಪರಶಿವ, ಪರಮೇಶ್ವರ. 2. ಕುಬೇರ. कैलासस्य नाथः। "सामन्तसंभावनयैव धीरः कैलासनाथं तरसा जिगीषुः" रघु० ५-२८। **–पतिः – ಪತಿಃ.**

**कैलासौकस् ಕೈಲಾಸೌಕಸ್** (पुं०) ಕೈಲಾಸವೇ ವಾಸಸ್ಥಾನ ವಾಗಿ ಉಳ್ಳ 1. ಪರಮೇಶ್ವರ. 2. ಕುಬೇರ. कैलासः ओको यस्य। **–निकेतनः – ನಿಕೇತನಃ.**

**कैवर्त ಕೈವರ್ತ** (पुं०) ಬೆಸ್ತರವನು, ಮೀನು ಹಿಡಿಯು ವವನು. के जले वर्तते — वृतु (वर्तने) "अच्" (३-१-१३४)। केवर्ता मत्स्याः। तेषामयं घातकः "अण्" (४-३-१२०)। ನಿಷಾದನಿಂದ ಆಯೋಗವಿ ಯಲ್ಲಿ ದಾಶನೆಂಬುವನು ಹುಟ್ಟುವನು. ಈ ಮಿಶ್ರಜಾತಿಯ ದಾಶನನ್ನು "ಕೈವರ್ತ"ನೆನ್ನುವರು. "निषादो मार्गवं सूते दाशं नौकर्मजीविनम्। कैवर्तमिति यं प्राहुरार्या-

वर्तनिवासिनः" मनु० १०-३४। ಇವನು ದೋಣಿ ನಡೆಸುವುದು ಮೀನು ಹಿಡಿಯುವುದು ಇವುಗಳಿಂದ ಜೀವಿಸುವನು. "कैवर्ते दाशधीवरौ" अम०। (स्त्री०) **–र्ती –ರ್ತೀ.** ಬೆಸ್ತರವನ ಹೆಂಡತಿ.

**कैवर्तीमुस्त ಕೈವರ್ತೀಮುಸ್ತ** (न०) ಕೊನ್ನಾರಿಗಡ್ಡೆಯ ಒಂದು ಭೇದ. स्वार्थे "कः"। **–मुस्तकः –ಮುಸ್ತಕಃ.**

**कैवल्य ಕೈವಲ್ಯ** (न०) ಅತ್ಯಂತಿಕ ದುಃಖನಾಶರೂಪವಾದ ಮೋಕ್ಷ, ಸಂಸಾರಬಂಧವಿಮೋಚನೆ. बन्धविरहात् केवलस्य भावः "ष्यञ्" (५-१-१२४)। [ವಿವರಕ್ಕೆ "मोक्ष" ಪದದಲ್ಲಿ ನೋಡಿ.]

**कैशिक ಕೈಶಿಕ** (पुं०) 1. ಶೃಂಗಾರ ರಸ. 2. ಅನುರಾಗ, ಪ್ರೇಮ. केशेषु केशविन्यासादौ साधुः "ठक्" (४-४-१०२)। 3. ಕ್ರಥನ ಸಹೋದರ, ವಿದರ್ಭರಾಜನ ಮಗ. (न०) 4. ಕೇಶಸಮೂಹ, ತಲೆಯ ಕೂದಲಿನ ಸಮೂಹ. केशानां समूहः "ठक्" (४-२-४७)। (स्त्री०) 5. **कैशिकी ಕೈಶಿಕೀ.** ನಾಟಕಾದಿ ರೂಪಕಗಳಲ್ಲಿ ಬರುವ ನಾಲ್ಕು ವೃತ್ತಿಗಳಲ್ಲೊಂದು. (1) कैशिकी, (2) सात्वती, (3) भारती ಮತ್ತು (4) आरभटी ಎಂದು ವೃತ್ತಿಗಳು ನಾಲ್ಕು. ಇವುಗಳಲ್ಲಿ ಶೃಂಗಾರರಸವನ್ನು ಪ್ರತಿಪಾದಿಸುವುದು ಕೈಶಿಕೀವೃತ್ತಿ. "शृङ्गारे कैशिकी वीरे सात्वत्यारभटी पुनः। रसे रौद्रे च बीभत्से वृत्तिः सर्वत्र भारती" सा० द० ६-१२२।

**कैशोर ಕೈಶೋರ** (न०) ಕಿಶೋರಭಾವ, ಬಾಲ್ಯ, ಹನ್ನೊಂದರಿಂದ ಹದಿನೈದರೊಳಗಿನ ವಯಸ್ಸು. किशोरस्य भावः "अञ्" (५-१-१२९)। "कौमारं पञ्चमाब्दान्तं पौगण्डं दशमावधि। कैशोरमापञ्चदशात् यौवनं तु ततः परम्"।

**कैश्य ಕೈಶ್ಯ** (न०) ತಲೆಯ ಕೂದಲಿನ ಸಮೂಹ, ತುರುಬು. केशानां समूहः "यञ्" (४-२-४८)। "रचय चारुमति स्तनयोर्वृतिं कलय केशिनि कैश्यमसंयतम्" नैष० ४-११४।

**कोक ಕೋಕ** (पुं०) 1. ಚಕ್ರವಾಕಪಕ್ಷಿ. कुक (आदाने) "अच्" (३-१-१३४)। 2. ವಿಷ್ಣು. "कोकः पुराणपुरुषः" त्रिकाण्ड०। 3. ತೋಳ. "वने यूथपरिभ्रष्टा मृगी कोकैरिवार्दिता" रामा०। 4. ಕೋಗಿಲೆ. 5. ಮಂಡೂಕ, ಕಪ್ಪೆ. 6. ಖರ್ಜೂರದ ಮರ. 7. ಹಲ್ಲಿ, ಗೌಳಿ. "कोकश्चक्रे वृके ज्येष्ठ्यां खर्जूरीद्रुमदर्दुरे" मेदि०।

**कोकदेव ಕೋಕದೇವ** (पुं०) ಕಪೋತ, ಪಾರಿವಾಳದ ಪಕ್ಷಿ. कोक इव दीव्यति—दिवु (क्रीडायाम्) "अच्" (३-१-१३४)।

**कोकनद ಕೋಕನದ** (न०) 1. ಕೆಂಪು ನೈದಿಲೆ. कोकान् नदति (नादयति) अन्तर्भावितण्यर्थः — णद (अव्यक्ते शब्दे) "कः" (वा० ३-२-५)। "दरोद्गतैः कोकनदौघकोरकैः धृतप्रवालाङ्कुरसञ्चयश्च यः" नैष० १-११२। 2. ಕೆಂದಾವರೆ, ಕೆಂಪು ಕಮಲ. "अथ कोकनदं रक्तकुमुदे रक्तपङ्कजे" मेदि०। "व्याकोशकोकनदतां दधते नलिन्यः" माघ० ४-४६।

**कोकनदच्छवि ಕೋಕನದಚ್ಛವಿ** (पुं०) 1. ಕೆಂಪು ಬಣ್ಣ. (वि०) 2. ಕೆಂಪು ಬಣ್ಣದ. कोकनदस्य छविरिव छविर्यस्य।

**कोकबन्धु ಕೋಕಬಂಧು** (पुं०) ಸೂರ್ಯ. कोकयोः चक्रवाकयोः बन्धुरिव (मेलनकारित्वात्)।

**कोकाह ಕೋಕಾಹ** (पुं०) ಶ್ವೇತಾಶ್ವ, ಬಿಳಿಯ ಕುದುರೆ. "सिते तु कर्ककोकाहौ" अभि० चि०।

**कोकिल ಕೋಕಿಲ** (पुं०) 1. ಕೋಗಿಲೆ. कुक (आदाने) "इलच्" (उ० १-५४)। "चूताङ्कुरास्वादकषायकण्ठः पुंस्कोकिलो यन्मधुरं चुकूज" कुमा० ३-३२। स्त्रियाम् "टाप्"। **कोकिला ಕೋಕಿಲಾ.** ಹೆಣ್ಣು ಕೋಗಿಲೆ. "विधुविरोधितिथेरभिधायिनीं ननु न किं पुनरिच्छसि कोकिलाम्" नैष० ४-१०७। 2. ಅಂಗಾರ, ಅರ್ಧ ಬೆಂದಿರುವ ಕೊಳ್ಳಿ. "स्यादङ्गारे कोकिलाज्झलौ" त्रिकाण्ड०।

**कोकिलक ಕೋಕಿಲಕ** (न०) ಹದಿನೇಳನೆಯ ಛಂದಸ್ಸಿನ ಒಂದು ವೃತ್ತ. **ಇದರ ಲಕ್ಷಣ:** "हयदशभिर्नजौ भजजलागिति नर्कुटकम्। मुनिगुहकार्णवैः कृतयति वद कोकिलकम्" वृ० र०। ನಗಣ ಜಗಣ ಭಗಣ ಜಗಣದ್ವಯ ಲಘು ಮತ್ತು ಗುರುವರ್ಣಗಳಿಂದ ಕೂಡಿ ಏಳು ಆರು ಮತ್ತು ಅನಂತರ ನಾಲ್ಕನೆಯ ವರ್ಣಗಳಿಗೆ ಯತಿಯಿದ್ದರೆ "कोकिलकम्" ಎಂಬ ವೃತ್ತವಾಗುವುದು.

**ಈ ವೃತ್ತದ ಗಣ ವಿನ್ಯಾಸ :**

न ज भ ज ज ल गु।
III IOI OII IOI IOI I O

**कोकिलाक्ष ಕೋಕಿಲಾಕ್ಷ** (पुं०) ಕೊಳವಳಿಕೆ ಗಿಡ. कोकिलस्याक्षीव रक्तपुष्पमस्य "अच्" (५-४-७६)।

**कोकिलावास ಕೋಕಿಲಾವಾಸ** (पुं०) ಕೋಗಿಲೆಗಳಿಗೆ ವಾಸಸ್ಥಾನವಾದ ಮಾವಿನ ಮರ. कोकिलानामावासः।

**कोकिलासन ಕೋಕಿಲಾಸನ** (नं०) ರುದ್ರಯಾಮಲದಲ್ಲಿ ಹೇಳಿರುವ ಆಸನಗಳಲ್ಲೊಂದು ಭೇದ. "निरुन्ध्याद्वायुसंचारं कोकिलाख्यासनेन च। ऊर्ध्वं हस्तद्वयं कृत्वा तदग्रे पादयोः सुधीः। बद्धाङ्गुष्ठद्वयं नाथ शनैः शनैः प्रकारयेत्। पद्मासनं समाकृत्य कूर्परोपरि संस्थितः"।

**कोकिलेक्षु ಕೋಕಿಲೇಕ್ಷು** (पुं०) ಕಪ್ಪು ಬಣ್ಣದ ಒಂದು ಜಾತಿಯ ಕಬ್ಬು. कोकिल इव कृष्णः इक्षुः।

**कोङ्कण ಕೋಂಕಣ** (पुं० ब० व०) 1. ಕೊಂಕಣ ದೇಶ. ಇದು ದಕ್ಷಿಣಭಾರತದ ಪಶ್ಚಿಮತೀರದಲ್ಲಿರುವುದು. "अथापरे जनपदा दक्षिणा भरतर्षभ। कौकुट्टकास्तथा चोलाः कोङ्कणा मालवा नराः" भा० भीष्म० ९-६०। 2. ಕೊಂಕಣ ದೇಶದ ದೊರೆಗಳು. कोङ्कणानां राजानः "अञ्" (४-१-१६६)। अञो लुक् (२-४-६२)। "शरैरभ्यर्चितास्तेन कोङ्कणाः समराङ्गणे" याद० २२-२१२। 3. ಕೊಂಕಣ ದೇಶದ ಜನರು. (नं०) 4. ಒಂದು ಆಯುಧ. "कोङ्कणः स्याज्जनपदे कोङ्कणन्त्वायुधान्तरे" हेम०।

**कोङ्कणा ಕೋಂಕಣಾ** (स्त्री०) ರೇಣುಕಾದೇವಿ, ಪರಶುರಾಮನ ತಾಯಿ. **–सुतः –ಸುತಃ.** ಪರಶುರಾಮ.

**कोच ಕೋಚ** (पुं०) 1. ಬೆಸ್ತರವನಿಂದ ಕಟುಕರ ಹೆಂಗಸಿನಲ್ಲಿ ಹುಟ್ಟಿದವನು, ಒಬ್ಬ ಬೆರಕೆ ಜಾತಿಯವನು. 2. ಸಂಕೋಚ ಹೊಂದುವುದು, ಚಿಕ್ಕದಾಗುವುದು, ಇಂಗುವುದು. कुच (संपर्चनादौ) भावे "घञ्" (३-३-१८)। (वि०) 3. ಸಂಕೋಚಹೊಂದುವ, ಚಿಕ್ಕದಾಗುವ, ಇಂಗುವ. कुच कर्तं० "णः" (३-१-१४०)।

**कोजागर ಕೋಜಾಗರ** (पुं०) ಆಶ್ವಯುಜಮಾಸದ ಹುಣ್ಣಿಮೆ. [ಈ ದಿವಸ ರಾತ್ರಿ ಜಾಗರಣೆಮಾಡಿ ಪಗಡೆ ಯಾಟವಾಡುತ್ತಾ ಕಾಲಕಳೆಯಬೇಕು. ಮತ್ತು ವಿಶೇಷವಾಗಿ ದೇವತಾರ್ಚನೆ ಮಾಡಬೇಕು. ಈ ವ್ರತವನ್ನು ಆಚರಿಸಿದವರಿಗೆ ಪುಷ್ಕಳವಾದ ಐಶ್ವರ್ಯವನ್ನು ಕೊಡುವುದಾಗಿ ಲಕ್ಷ್ಮಿಯ ಉಕ್ತಿಯಿರುವುದು.] को जागर्ति इति लक्ष्म्या उक्तिरत्र काले। "आश्विने पौर्णमास्यां तु चरेज्जागरणं निशि। कौमुद्यां पूजयेल्लक्ष्मीमिन्द्रमैरावते स्थितम्। निशीथे वरदा लक्ष्मीः को जागर्तीति भाषिणी। तस्मै वित्तं प्रयच्छामि अक्षैः क्रीडां करोति यः" लिङ्गपु०।

**कोट ಕೋಟ** (पुं०) 1. ಕೋಟೆ, ದುರ್ಗ. कुट (कौटिल्ये) अधि० "घञ्" (३-३-१२१)। 2. ಕೌಟಿಲ್ಯ, ವಕ್ರವಾಗಿರುವುದು. कुट भावे "घञ्"। 3. ಅಡಕೆಮರ. "करमट्टस्तन्तुसारो गुवाकः कोट इत्यपि" त्रिकाण्ड०।

**कोटर ಕೋಟರ** (पुंन०) 1. ಮರದ ಪೊಟರೆ. कोटं राति – रा (दाने) "कः" (३-२-३)। "विदूरथः प्रतिभयमास्यकन्दरं चलत्फणाधरमिव कोटरं तरुः" माघ० १७-१७। 2. ಕಂದರ, ಗುಹೆ.

**कोटरी ಕೋಟರೀ** (स्त्री०) 1. ನಗ್ನಳಾದ ಹೆಂಗಸು, ಬೆತ್ತಲೆಯ ಹೆಂಗಸು. कोटं कौटिल्यं रिणाति – री (गतौ) "क्विप्" (३-२-७६)। 2. ದುರ್ಗಾದೇವಿ. ಪಾರ್ವತಿ.

**कोटवी ಕೋಟವೀ** (स्त्री०) 1. ನಗ್ನಳಾದ ಹೆಂಗಸು, ಬೆತ್ತಲೆಯ ಹೆಂಗಸು. कोटं कौटिल्यं दुर्गं वा वाति – वा (गतौ) "कः" (३-२-३)। 2. ದುರ್ಗಾದೇವಿ, ಪಾರ್ವತಿ.

**कोटि ಕೋಟಿ** (स्त्री०) 1. ಅಗ್ರಭಾಗ, ತುದಿ. कुट (कौटिल्ये) "इः" (उ० ४-१३८)। "नुनुदे तनुकण्डुपण्डितः पटुचञ्चत्पुटकोटिकुट्टनैः" नैष० २-४। 2. ಬಿಲ್ಲಿನ ತುದಿ. "तेन भूमिनिहितैककोटि तत्कार्मुकं च बलिनाधिरोपितम्" रघु० ११-८१। 3. ಒಂದು ನೂರು ಲಕ್ಷ ಸಂಖ್ಯೆ, 1,00,00,000 ಸಂಖ್ಯೆ. "आलोकितामपि पुनः पिबतां दृशैनामिच्छापि गच्छति न वत्सरकोटिभिर्वः" नैष० ११-२४। 4. ಅತ್ಯುತ್ಕರ್ಷ, ಅತಿಶಯ. "अनेन सार्धं तव यौवनेन कोटिं परामच्छिदुरोऽध्यरोहत्" नैष० ८-६१। 5. ಶಸ್ತ್ರಾಸ್ತ್ರಗಳ ಅಂಚು, ಕತ್ತಿ ಮೊದಲಾದುವುಗಳ ಅಲುಗು. "हृतान्यपि श्येननखाग्रकोटिव्यासक्तकेशानि चिरेण पेतुः" रघु० ७-४६। 6. ಕಮಾನಿನ ಆಕಾರದಲ್ಲಿರುವ ಒಂದು ವಸ್ತುವಿನ ಎರಡೂ ಕಡೆಗಳ ಕೋಡುಗಳು, ಅರ್ಧಚಂದ್ರನ ಎರಡು ಕಡೆಗಳ ತುದಿಯ ಭಾಗ. "आवर्जितजटामौलिविलम्बिशशिकोटयः" कुमा० २-२६। 7. ತ್ರಿಕೋಣಮಿತಿಯ ಒಂದು ರೇಖೆ. "कोटिज्यया विभज्याप्ते छाया कर्णावहर्दले" सू० सि० ३-२१। 8. ಪೂರ್ವಪಕ್ಷ, ವಿಷಯನಿರ್ಣಯಕ್ಕಾಗಿ ಮಾಡುವ ಏಕಪಕ್ಷವಾದ. 9. ಸಂಶಯದ ಪ್ರಕಾರ. "विप्रतिपत्तिवाक्यजन्यकोटयुपस्थितिः"। 10. ವಸ್ತುವಿನ ವಿಭಾಗ, ವಸ್ತುವಿನ ವರ್ಗ. प्रजाकोटिः शिष्यकोटिः।

**कोटिजित् ಕೋಟಿಜಿತ್** (पुं०) ಕಾಳಿದಾಸ ಕವಿ. कोटिं जितवान्। "रघुकारः कालिदासो मेधारुद्रश्च कोटिजित्" त्रिकाण्ड०।

**कोटितीर्थं ಕೋಟಿತೀರ್ಥ** (ನಂ) ಮಹಾಕಾಳೇಶ್ವರ ಸನ್ನಿಧಿಯಲ್ಲಿರುವ ಒಂದು ತೀರ್ಥ. कोटिस्तीर्थान्यत्र।

**कोटिपात्र ಕೋಟಿಪಾತ್ರ** (ನಂ) 1. ದೋಣಿ ನಡೆಸುವ ಜಲ್ಲೆ. 2. ಚುಕ್ಕಾಣಿ ಹಲಗೆ. कोटिरग्रं पात्रे जलाशयेऽस्य।

**कोटिर ಕೋಟಿರ** (ಪುಂ) 1. ಇಂದ್ರ. 2. ನಕುಲ, ಮುಂಗಸಿ, ಕೀರ. 3. ಇಂದ್ರಗೋಪಕೀಟ. 4. ಜಟೆ. कोटिं राति—रा (दाने) "कः" (३-२-३)। "कोटिरः स्याज्जटा सटा" त्रिकाण्ड०। "कोटिरः पुंसि नकुले शक्रगोपकशक्रयोः" मेदि०।

**कोटिवर्ष ಕೋಟಿವರ್ಷ** (ನಂ) ಬಾಣಪುರ, ದೇವೀಕೋಟೆ, ಬಾಣಾಸುರನ ನಗರ. "देवीकोटो बाणपुरं कोटिवर्षमुषावनम्। स्याच्छोणितपुरं च" त्रिकाण्ड०।

**कोटिश ಕೋಟಿಶ** (ಪುಂ) 1. ಹೆಂಟೆಯನ್ನು ಒಡೆಯುವ ಮರದ ಕೊಡತಿ. कोटिना अग्रेण श्यति—शो (तनूकरणे) "कः" (३-२-४)। "कोटिशो लोष्टभेदनः" अम०। 2. ವಾಸುಕಿಯ ವಂಶದಲ್ಲಿ ಹುಟ್ಟಿದ ಒಂದು ಸರ್ಪ. (अव्य०) **-शस् -ಶಸ್.** ಕೋಟಿಗಟ್ಟಲೆಯಲ್ಲಿ, ಕೋಟಿ ಸಂಖ್ಯೆಯಲ್ಲಿ. कोटि "शस्" (५-४-४३)। "शक्योऽस्य मन्युर्भवता विनेतुं गाः कोटिशः स्पर्शयता घटोध्नीः" रघु० २-४९।

**कोटी ಕೋಟೀ** (स्त्री०) ಕೋಟಿಸಂಖ್ಯೆ, ಒಂದು ನೂರು ಲಕ್ಷ. "प्रतोदैश्चापकोटीभिः हुंकारैः साधु वाहितैः" भा० द्रोण० ८९-३०।

**कोटीर ಕೋಟೀರ** (ಪುಂ) 1. ಜಟೆ. 2. ಕಿರೀಟ. कोटिमीरयति—ईर (गतौ) "अण्" (३-२-१)। "कठोरे कोटीरे स्खलसि जहि जम्भारिमुकुटम्" आनन्दल०।

**कोट्ट ಕೋಟ್ಟ** (ಪುಂ) ದುರ್ಗ, ಕೋಟೆ. कुट्ट (प्रतापने) "घञ्" (३-३-१९)। बाहु० गुणः।

**कोट्टवी ಕೋಟ್ಟವೀ** (स्त्री०) 1. ನಗ್ನಳಾದ ಹೆಂಗಸು, ಬಿತ್ತರಲೆಯ ಹೆಂಗಸು. कोट्टं वाति—वा (गतौ) "कः" (३-२-३)। 2. ದುರ್ಗಾದೇವಿ, ಪಾರ್ವತಿ. "कोट्टवी बाभ्रवी कैटभी केटभा यादवी कर्बुरी चेश्वरी चेश्वरा" त्रिकाण्ड०। 3. ಬಾಣಾಸುರನ ತಾಯಿ.

**कोट्टार ಕೋಟ್ಟಾರ** (ಪುಂ) 1. ಬಾವಿ. कुट्ट (छेदने) "आरक्" बाहु०। 2. ಭದ್ರಮುಸ್ತೆ, ಕೊನ್ನಾರಿ ಗೆಡ್ಡೆ. "कोट्टारी कूपनागरौ" त्रिकाण्ड०। 3. ಪುಷ್ಕರಿಣಿಯ ತೀರ, ಸರೋವರದ ಸೋಪಾನ. "कोट्टारो नागरे कूपे पुष्करिण्याश्च पाटके" हेम०। 4. ಪಟ್ಟಣ, ಕಾಮುಕ, ಸ್ತ್ರೀಲೋಲ. 5. ಕೋಟೆಯಿಂದ ಭದ್ರವಾದ ನಗರ.

**कोठ ಕೋಠ** (ಪುಂ) ಮಂಡಲಾಕಾರವಾಗಿ ಏಳುವ ಒಂದು ವಿಧ ಚರ್ಮವ್ಯಾಧಿ, ಹುಳುಕಡ್ಡಿ, ದದ್ರುಕುಷ್ಠ. कुण्ठति—कुठि (प्रतिघाते) "अच्" (३-१-१३५)। ["कुण्ठ" ಪದದಲ್ಲಿ ನೋಡಿ.]

**कोण ಕೋಣ** (ಪುಂ) 1. ಪಿಟೀಲು, ನಗಾರಿ ಮೊದಲಾದುವನ್ನು ನುಡಿಯಿಸುವ ಸಾಧನ. कुण्यते—कुण (शब्दोपकरणयोः) "घञ्" (३-३-१२१)। "सुवर्णकोणाभिहतः प्राणदद्यामदुन्दुभिः" रामा०। 2. ಕೋಣೆ, ಕೊಠಡಿ, ಮನೆ ಮೊದಲಾದುವುಗಳ ಒಂದು ಭಾಗ. 3. ಶಸ್ತ್ರ ಮತ್ತು ಅಸ್ತ್ರಗಳ ತುದಿ, ಕತ್ತಿ ಮೊದಲಾದುವುಗಳ ತುದಿ. 4. ಒಂದು ವಿಧ ವಾದ್ಯ. 5. ಕೋಲು, ದೊಣ್ಣೆ. "कोणो वाद्यप्रभेदे स्यात् वीणादीनां च वादने। एकदेशे गृहादीनामश्रौ च लगुडेऽपि च" मेदि०। 6. ಕುಜಗ್ರಹ. "कोणो वीणादिवादने। लगुडेऽश्रौ लोहिताङ्गे" हेम०। 7. ಶನಿಗ್ರಹ. "कोणोऽश्रौ लगुडेऽर्कजे" नानार्थर०। 8. ವಿದಿಕ್ಕು, ಎರಡು ದಿಕ್ಕುಗಳ ಮಧ್ಯಭಾಗ. 9. ಒಂದು ಮೂಲೆ, ಭಿನ್ನ ಭಿನ್ನ ದಿಕ್ಕುಗಳಿಗೆ ಹೋಗುವ ರೇಖೆಗಳ ಸಂಧಿಸ್ಥಾನ.

**कोणकुण ಕೋಣಕುಣ** (ಪುಂ) ತಿಗಣೆ. कोणे मस्तकैकदेशे कुणति—कुण (शब्दोपकरणयोः) "अच्" (३-१-१३४)।

**कोणाघात ಕೋಣಾಘಾತ** (ಪುಂ) ಒಂದು ಲಕ್ಷ ಡಮಣೆಗಳನ್ನೂ ಹತ್ತು ಸಾವಿರ ನಗಾರಿಗಳನ್ನೂ ಒಂದೇ ಸಮಯದಲ್ಲಿ ಬಾರಿಸುವುದು. "ढक्काशतसहस्राणि भेरीशतशतानि च। एकदा यत्र वाद्यन्ते कोणाघातः स उच्यते" भरतः।

**कोणि ಕೋಣಿ** (वि०) ಮೊಂಡು ಕೈಯುಳ್ಳವನು. ಹಸ್ತವಿಲ್ಲದವನು.

**कोथ ಕೋಥ** (ಪುಂ) 1. ಒಂದು ವಿಧ ನೇತ್ರರೋಗ. कुथ (पूतीभावे) "घञ्" (३-३-१९)। 2. ದುರ್ಮಾಂಸ, ಕೊಳೆತ ಮಾಂಸ. 3. ದುರ್ಗಂಧ. ಕೆಟ್ಟವಾಸನೆ. 4. ಭಗಂದರ ರೋಗ. कुथ्यति क्षिणोति गुदम्—कर्त० "अच्" (३-१-१३४)। 5. ಮೊಸರನ್ನು ಕಡೆಯುವುದು. (वि०) 6. ನೋವಿನಿಂದ ಪೀಡಿಸಲ್ಪಟ್ಟ. "कोथस्तु मथने नेत्ररुग्भेदे शठिते त्रिषु" हेम०।

**कोदण्ड ಕೋದಂಡ** (ಪುಂ) 1. ಒಂದು ದೇಶ. 2. ಧನೂರಾಶಿ. (ನಂ) 3. ಧನುಸ್ಸು, ಬಿಲ್ಲು. ಕು

(शब्दे) "क्विप्" (३-२-७५)। कौर्दण्डोऽस्य। "कोदण्डपाणि निनदत्प्रतिरोधकानामापातदुष्प्रसहमाविरभूदनीकम्" माल० ५-१०। "उद्दण्डे भुजदण्डे तव कोदण्डे परिस्फुरति। अरिमण्डलरविमण्डलरम्भाकुचमण्डलानि वेपन्ते"। 4. ಧನುಸ್ಸಿನಂತಿರುವ ಭ್ರೂಲತೆ, ಹುಬ್ಬು. "अथ कोदण्डं चापे ना नीवृदन्तरे। भ्रुव्यथो" मेदि०।

**कोद्रव ಕೋದ್ರವ** (पुं०) ಹಾರಕಧಾನ್ಯ. केन वायुना द्रवति—द्रु (गतौ) "अप्" (३-३-५७)। पृषो०। "अश्राद्धीयानि धान्यानि कोद्रवाः पुलकास्तथा" भा०।

**कोप ಕೋಪ** (पुं०) 1. ಕೋಪ, ಸಿಟ್ಟು. कुप (क्रोधे) भावे "घञ्" (३-३-१८)। "पीनःपुन्यादसृगन्धेन मत्तो मृद्नन् कोपाल्लोकमायोधनोर्व्याम्" माघ० १८-५७। 2. ಶೃಂಗಾರರಸಕ್ಕೆ ಅಂಗವಾದ ಪ್ರಣಯ ಮತ್ತು ಈರ್ಷ್ಯೆಗಳಿಂದ ಉಂಟಾಗುವ ಮುನಿಸು. ನಾಯಿಕಾ ನಾಯಕರ ಅಸಭ್ಯವರ್ತನೆಗಳಿಂದ ಪ್ರಣಯ ಕೋಪವುಂಟಾಗುವುದು. ಪತಿಯು ಬೇರೆ ನಾಯಿಕೆಯರಲ್ಲಿ ಅನುರಕ್ತನಾಗಿರುವುದು ತಿಳಿದಾಗ ನಾಯಿಕೆಯಲ್ಲಿ ಈರ್ಷ್ಯಾಕೋಪವುಂಟಾಗುವುದು. "मानः कोपः स तु द्वेधा प्रणयेर्ष्यासमुद्भवः। द्वयोः प्रणयमानः स्यात् प्रमोदे सुमहत्यपि। प्रेम्णः कुटिलगामित्वात्कोपो यः कारणं विना। पत्युरन्यप्रियासङ्गे दृष्टेऽथानुमिते श्रुते। ईर्ष्यामानो भवेत् स्त्रीणाम्" सा० द० ३-१९७–९९। **उदा.**: "नवनखपदमङ्गं गोपयस्यंशुकेन स्थगयसि पुनरोष्ठं पाणिना दन्तदष्टम्। प्रतिदिशमपरस्त्रीसङ्गशंसी विसर्पन्नवपरिमलगन्धः केन शक्यो वरीतुम्"।

**कोपक्रम ಕೋಪಕ್ರಮ** (पुं०) 1. ಕೋಪದ ಕ್ರಮ, ಕೋಪದ ರೀತಿ. कोपस्य क्रमः। (न०) 2. ಬ್ರಹ್ಮನಿಂದ ಪ್ರಾರಂಭಿಸಲ್ಪಡುವ ಜಗತ್ತಿನ ಸೃಷ್ಟಿ. उपक्रम्यते—उप+क्रमु (पादविक्षेपे) कर्म० "घञ्" (३-३-१९)। कस्य ब्रह्मणः उपक्रमः।

**कोपन ಕೋಪನ** (पुं०) 1. ಒಬ್ಬ ಅಸುರ. "शरभः शलभश्चैव कुपनः कोपनः क्रथः" हरिवं०। (न०) 2. ಕೋಪವನ್ನುಂಟುಮಾಡುವುದು, ರೇಗಿಸುವುದು. कुप+णिच् भावे "ल्युट्" (३-३-११५)। (वि०) 3. ಕೋಪವನ್ನುಂಟುಮಾಡುವ, ಸಿಟ್ಟೆಬ್ಬಿಸುವ, ರೇಗಿಸುವ. कुप+णिच् "ल्युः" (३-१-१३४)। 4. ಕೋಪದ ಸ್ವಭಾವದ. कुप ताच्छील्ये "युच्" (३-२-१५१)। "आसीद्विभावसुर्नाम महर्षिः कोपनो भृशम्" भा० आदि० २९-१६। स्त्रियाम् **कोपना ಕೋಪನಾ.** ಕೋಪ ಸ್ವಭಾವದ ಹೆಂಗಸು. "कयासि कामिन् सुरतापराधात् पादानतः कोपनयावधूतः" कुमा० ३-८।

**कोपनीय ಕೋಪನೀಯ** (वि०) 1. ಕೋಪಗೊಳಿಸಲ್ಪಡುವ. 2. ಕೋಪಗೊಳಿಸಲ್ಪಡಲು ಯೋಗ್ಯನಾದ. 3. ಕೋಪಗೊಳಿಸಲ್ಪಡಲು ಶಕ್ಯನಾದ. कुप (क्रोधे)+णिच् "अनीयर्" (३-१-९६)। "तव्यः"। **कोपयितव्यः ಕೋಪಯಿತವ್ಯಃ.**

**कोपयत् ಕೋಪಯತ್** (वि०) ಕೋಪವನ್ನುಂಟುಮಾಡುತ್ತಿರುವ, ಸಿಟ್ಟೆಬ್ಬಿಸುತ್ತಿರುವ, ರೇಗಿಸುತ್ತಿರುವ. कुप (क्रोधे)+णिच् "शतृ" (३-२-१२४)। स्त्रियाम् "ङीप्" (४-१-६)। **—यन्ती —ಯಂತೀ.** "शानच्" (३-२-१२४)। **—यमाना —ಯಮಾನಾ.**

**कोपयितृ ಕೋಪಯಿತೃ** (वि०) ಕೋಪವುಂಟುಮಾಡುವ, ರೇಗಿಸುವ. कुप (क्रोधे)+णिच् "तृच्" (३-१-१३३)। स्त्रियाम् "ङीप्" (४-१-५)। **—यित्री —ಯಿತ್ರೀ.**

**कोपवत् ಕೋಪವತ್** (वि०) ಕೋಪವುಳ್ಳ, ರೇಗಿದ. कोपोऽस्यास्ति "मतुप्" (५-२-९४)। स्त्रियाम् "ङीप्" (४-१-६)। **—वती —ವತೀ.** "कोपवत्यनुनयानगृहीत्वा" माघ० १०-२९।

**कोपित ಕೋಪಿತ** (न०) 1. ರೇಗಿಸುವುದು, ಸಿಟ್ಟೆಬ್ಬಿಸುವುದು. कुप (क्रोधे)+णिच् भावे "क्तः" (३-३-११४)। (वि०) 2. ರೇಗಿಸಲ್ಪಟ್ಟ, ಕೋಪಗೊಳಿಸಲ್ಪಟ್ಟ. कुप+णिच् कर्म० "क्तः" (३-२-१०२)। "कोपितं विरहखेदितचित्ता कान्तमेव कलयन्त्यनुनिन्ये" माघ० १०-२९।

**कोपितवत् ಕೋಪಿತವತ್** (वि०) ಕೋಪಗೊಳಿಸಿದವನು. ರೇಗಿಸಿದವನು. कुप (क्रोधे)+णिच् "क्तवतुः" (३-२-१०२)। स्त्रियाम् "ङीप्" (४-१-६)। **—वती —ವತೀ.**

**कोपिन् ಕೋಪಿನ್** (पुं०) 1. ನೀರು ಪಾರಿವಾಳದ ಹಕ್ಕಿ. (वि०) 2. ಕೋಪಿಸಿಕೊಳ್ಳತಕ್ಕವನು. अवश्यं कुप्यति—कुप (क्रोधे) "णिनिः" (३-३-१७०)। 3. ಕೋಪವುಂಟುಮಾಡುವ. कोपयति—कुप+णिच् "णिनिः" (३-१-१३४)।

**कोमल ಕೋಮಲ** (न०) 1. ಜಲ, ನೀರು. कु (शब्दे) "कलः" मुडागमश्च (उ० १-१०६)। बाहु० गुणः। (वि०) 2. ಮೃದುವಾದ, ಮೆದುವಾದ, ಮೆತ್ತನೆಯ, ಸುಕುಮಾರವಾದ. 3. ಮನೋಹರವಾದ, ರಮಣೀಯವಾದ. "निशा च शय्या च शशाङ्ककोमला" नैष०

१-४९। 4. ಮಧುರವಾದ. ಇಂಪಾದ. "अमवद्यवाद्यलयगामि कोमलं नवगीतमप्यनवगीततां दधत्" माघ० १३-६६। (स्त्री०) –ला – ಲಾ. 5. ಹಾಲೆಗಿಡ.

**कोमलक ಕೋಮಲಕ** (न०) 1. ತಾವರೆಯ ದಂಟು. कोमल संज्ञायां "कन्"। 2. "कोमल" ಪದದ ಅರ್ಥ. स्वार्थे "कः"।

**कोमासिका ಕೋಮಾಸಿಕಾ** (स्त्री०) ಪಕ್ಷಿಗಳನ್ನು ಹಿಡಿಯುವ ಬಲೆ. कु ईषत् उमेव अतसीवृक्ष इव आस्ते–आस (उपवेशने) "ण्वुल्" (३-१-१३३)। स्त्रियाम् "टाप्"।

**कोयष्टि (क) ಕೋಯಷ್ಟಿ (ಕ)** (पुं०) ನೀರು ಸಡಗೆಯುದ್ದದ ಕಾಲುಗಳುಳ್ಳ ಬಿಳಿಯ ಕೊಕ್ಕರೆ, ಬಕಪಕ್ಷಿ. कं जलं यष्टिरिवास्य। पृषो०। स्वार्थे "कन्" (५-३-७५)। "प्रतुदान् जालपादांश्च कोयष्टिनखविष्किरान्" मनु० ५-१३। "काश्मर्याः कृतमालमुद्गतदलं कोयष्टिकष्टीकते" मालती० ९-७।

**कोयष्टिभ ಕೋಯಷ್ಟಿಭ** (पुं०) ಬಿಳಿಯ ಕೊಕ್ಕರೆ, ಬಕಪಕ್ಷಿ.

**कोर ಕೋರ** (पुं०) ಶರೀರಚಲನೆಯನ್ನುಂಟುಮಾಡುವ ಬೆರಳು ಮಂಡಿ ಮೊಣಕೈ ಮುಂತಾದುವುಗಳ ಎಂಟು ವಿಧ ಸಂಧಿಗಳಲ್ಲೊಂದು. कुल (संस्त्याने) "अच्" (३-१-१३४)। लस्य रः।

**ಶರೀರದ ಎಂಟು ವಿಧ ಸಂಧಿಗಳು :** (1) कोराः, (2) उलूखलाः, (3) सामुद्गाः, (4) प्रतराः, (5) तुन्नसेवन्यः, (6) वायसतुण्डाः, (7) मण्डलाः ಮತ್ತು (8) शङ्खावर्ताः।

**(1) "ಕೋರ"** ಸಂಧಿಗಳು ಬೆರಳು ಮಣಿಕಟ್ಟು ಕಾಲುಗಳ ಗಂಟು (ಗುಲ್ಫ)ಗಳು ಮಂಡಿ ಮತ್ತು ಮೊಣಕೈಗಳಲ್ಲಿರುವುವು. "तेषामङ्गुलिमणिबन्धगुल्फजानुकूर्परेषु कोराः"। ಇವು ಯಾವಾಗಲೂ ಅಸ್ಥಿಭಾಗಗಳಲ್ಲಿ ಉನ್ನತವಾದ ಅಸ್ಥಿ (ಎಲುಬು)ಗಳ ಸಂಧಾನರೂಪವ್ಯಾಪಾರವುಳ್ಳವು.

**(2) "ಉಲೂಖಲ"** ಸಂಧಿಗಳು ಕಕ್ಷ ವಂಕ್ಷಣ (ತೊಡೆಗಳ ಸಂಧಿ) ದಶನಗಳಲ್ಲಿರುವುವು. "कक्षावङ्क्षणदशनेषूलूखलाः"। ಇವುಗಳೂ ಉಲೂಖಲಗಳಂತೆ ಗುಳಿಗಳುಳ್ಳ (ಆಳವಾದ) ಉಳಿದ ಅಸ್ಥಿಮುಂಡಗಳ ಸಂಧಾನರೂಪ ವ್ಯಾಪಾರವುಳ್ಳವು.

**(3) "ಸಾಮುದ್ಗ"** ಸಂಧಿಗಳು ಹೆಗಲು ಗುದಸ್ಥಾನ ಭಗ ಮತ್ತು ನಿತಂಬಗಳಲ್ಲಿರುವುವು. "अंसपीठगुदभगनितम्बेषु सामुद्गाः"। ಇವು ಬುಟ್ಟಿಗಳನ್ನು ತಯಾರಿಸುವವನ ಕಾರ್ಯದಂತೆ ಕಡಮೆ ಚಲನೆಯುಳ್ಳವು.

**(4) "ಪ್ರತರ"** ಸಂಧಿಗಳು ಕುತ್ತಿಗೆ ಬೆನ್ನೆಲಬುಗಳಲ್ಲಿರುವುವು. "ग्रीवापृष्ठवंशयोः प्रतराः"। ಇವು ಅಲ್ಪ ಚಲನೆಯುಳ್ಳ ಮತ್ತು ಒಂದಕ್ಕೊಂದು ಸೇರಿಕೊಂಡಿರುವ ಅಸ್ಥಿಖಂಡಗಳಿಂದ ನಿರ್ಮಿತವಾದುವು.

**(5) "ತುನ್ನಸೇವನೀ"** ಸಂಧಿಗಳು ತಲೆ ಕಟಿಪ್ರದೇಶ ಮತ್ತು ಕಪಾಲಗಳಲ್ಲಿರುವುವು. "शिरःकटीकपालेषु तुन्नसेवन्यः"।

**(6) "ವಾಯಸತುಂಡ"** ಸಂಧಿಗಳು ಹನು (ಕೆನ್ನೆಗಳ ಮೇಲು ಭಾಗ) ಗಳ ಎರಡು ಕಡೆಯೂ ಇರುವುವು. "हन्वोरुभयतस्तु वायसतुण्डाः"। ಇವು ಕೆನ್ನೆಗಳ ಮೇಲುಭಾಗ ಮತ್ತು ತಲೆಯ ಮಧ್ಯ ಹಣೆಯ ಎಲುಬುಗಳಲ್ಲಿರುವ ಕಪೋಲಸಂಧಿಗಳೊಡನೆ ಸೇರಿ ಬಾಯಿ ತೆರೆದು ಮುಚ್ಚುವಂತೆ ಮಾಡುವುವು.

**(7–8) "ಮಂಡಲ–ಶಂಖಾವರ್ತ"** ಸಂಧಿಗಳು ಕ್ರಮವಾಗಿ ಕುತ್ತಿಗೆ ಹೃದಯ ಕಣ್ಣು ಮೂತ್ರಕೋಶನಾಡಿಗಳು ಮತ್ತು ಕಿವಿ ಶೃಂಗಾಟಕಗಳಲ್ಲಿರುವುವು. "कण्ठहृदयनेत्रक्लोमनाडीषु मण्डलाः श्रोत्रशृङ्गाटकेषु शङ्खावर्ताः"। ಇವು ಕ್ರಮವಾಗಿ ಶ್ವಾಸಮಾರ್ಗ ಮತ್ತು ಕರ್ಣಕುಹರಗಳಲ್ಲಿರುವ ಎಳೆಯ ಮೂಳೆಗಳ ಸಂಧಿಗಳು. सुश्रुत० शारीर० ५-२७।

**कोरक ಕೋರಕ** (पुंन०) 1. ಹೂವಿನ ಮೊಗ್ಗು. कुर्यते–कुर (शब्दे) "वुन्" (उ० ५-३५)। "मरुदवनिरुहां रजो वधूभ्यः समुपहरन् विचकार कोरकाणि" माघ० ७-२९। 2. ತಕ್ಕೋಲವೃಕ್ಷದ ಪರಿಮಳದ್ರವ್ಯ. 3. ಮೃಣಾಳ. ತಾವರೆಯ ದಂಟು. "कोरकोऽस्त्री कुड्मले स्यात् कक्कोलकमृणालयोः" मेदि०।

**कोरकित ಕೋರಕಿತ** (वि०) ಮೊಗ್ಗು ಬಿಟ್ಟಿರುವ, ಮೊಗ್ಗು ಕಾಣಿಸಿಕೊಂಡಿರುವ. कोरका अस्य सञ्जाताः "इतच्" (५-२-३६)। "यस्ते नवः पल्लवितः कराभ्यां स्मितेन यः कोरकितस्तवास्ते" नैष० ३-१२१।

**कोरङ्गी ಕೋರಂಗೀ** (स्त्री०) 1. ಸಣ್ಣ ಜಾತಿಯ ಯಾಲಕ್ಕಿ. कुरति – कुर (शब्दे) "अङ्गच्" बाहु०। गौरा० "ङीष्" (४-१-४१)। "सूक्ष्मोपकुञ्चिका तुत्था कोरङ्गी त्रिपुटा त्रुटिः" अम०। 2. ಹಿಪ್ಪಲಿ.

**कोरदूष ಕೋರದೂಷ** (पुं०) ಹಾರಕ ಧಾನ್ಯ. कोरं दूषयति – दुष (वैकृत्ये) + णिच् "अण्" (३-२-१)।

"सकोरदूषः श्यामाकः कषायमधुरो लघुः। वातलः कफपित्तघ्नः शीतसंग्राहिशोषणः" चरक० सूत्र० २७-१५।

**कोल ಕೋಲ** (पुं०) 1. ವರಾಹ, ಹಂದಿ. कुल (संस्त्याने) "अच्" (३-१-१३४)। "कोले घृतघटो देय उष्ट्रे गुञ्जा हयेंऽशुकम्" याज्ञ० ३-२७३। 2. ತೆಪ್ಪ, ಹರಿಗೋಲು. 3. ಎದೆ, ಭುಜಗಳ ಮಧ್ಯಭಾಗ. 4. ಶನಿಗ್ರಹ. 5. ಆಲಿಂಗನ. 6. ಚಿತ್ರಮೂಲದ ಗಿಡ. 7. ತೊಡೆ, ಮಡಿಲು. 8. ಬೆಸ್ತರ ಜಾತಿಯ ಕನ್ಯೆಯಲ್ಲಿ ಹುಟ್ಟಿದ ಒಬ್ಬ ಬೆರಕೆ ಜಾತಿಯವನು. 9. ಒಬ್ಬ ದೊರೆ. (पुं० ब० व०) 10. ಒಂದು ದೇಶ. "कस्त्यमादधाक्रीडश्चत्वारस्तस्य चात्मजाः। पाण्ड्यश्च केरलश्चैव कोलश्चोलश्च पार्थिवः। तेषां जनपदाः स्फीताः पाण्ड्याः कोलाः सकेरलाः" हरिवं०। (न०) 11. ಎಲಚಿಹಣ್ಣು, ಬೋರೆ ಹಣ್ಣು. कोल्याः फलम् "अण्" (४-३-१३५)। तस्य लुक् (४-३-१६३)। 12. ಮೆಣಸು. (स्त्री०) **–ला –ಲಾ.** 13. ಹಿಪ್ಪಲಿ. 14. ಚವ್ಯ. "कोलं कोलिफले क्लीबं पिप्पलीचव्ययोः स्त्रियाम्। नाऽङ्कुपाली शनौ चित्रे वराहोत्सङ्गभेलके" मेदि०।

**कोलक ಕೋಲಕ** (न०) 1. ಒಂದು ಸುಗಂಧದ್ರವ್ಯ. 2. ಮೆಣಸು.

**कोलकर्कटिका ಕೋಲಕರ್ಕಟಿಕಾ** (स्त्री०) ಒಂದು ಜಾತಿಯ ಖರ್ಜೂರ. कोल इव कर्कटिका। **–कर्कटी –ಕರ್ಕಟೀ.**

**कोलकुण ಕೋಲಕುಣ** (पुं०) ಮತ್ಕುಣ, ತಿಗಣೆ.

**कोलपुच्छ ಕೋಲಪುಚ್ಛ** (पुं०) ರಣಹದ್ದು. कोलस्येव पुच्छोऽस्य।

**कोलम्बक ಕೋಲಂಬಕ** (पुं०) ವೀಣೆಯ ಮೈ, ತಂತಿಯಿಲ್ಲದ ವೀಣೆಯ ಶರೀರ, ತಂತಿಯಿಲ್ಲದ ವೀಣಾದಂಡ ಬುರುಡೆ ಮತ್ತು ಕಿವಿಗಳು. कुल (संस्त्याने) "अम्बच्" बाहु०। "कोलम्बकस्तु कायोऽस्याः" अम०।

**कोलवल्ली ಕೋಲವಲ್ಲೀ** (स्त्री०) ಗಜಹಿಪ್ಪಲಿ. कोलो वराह इव वल्ली तल्लोमतुल्यशुङ्गा अस्य।

**कोला ಕೋಲಾ** (स्त्री०) "कोल" ಪದದಲ್ಲಿ ನೋಡಿ.

**कोलापुर ಕೋಲಾಪುರ** (न०) ಮಹಾಲಕ್ಷ್ಮಿಯ ವಾಸಸ್ಥಾನವಾದ ಒಂದು ಪಟ್ಟಣ.

**कोलाहल ಕೋಲಾಹಲ** (पुं०) ಗುಂಪಿನ ಗಲಭೆ, ಗದ್ದಲ. कोलमाहलति – आ + हल (विलेखने) "अच्" (३-१-१३४)। "कोलाहलेनोच्चलतां दिवौकसां महाचमूनां गुरुभिर्ध्वजव्रजैः" कुमा० १४-१६।

**कोलाहलिन् ಕೋಲಾಹಲಿನ್** (वि०) ಗುಂಪಿನ ಗಲಭೆಯಿಂದ ಕೂಡಿದ, ಗದ್ದಲದಿಂದ ಕೂಡಿದ. कोलाहलोऽस्यास्ति।

**कोलि (ली) ಕೋಲಿ (ಲೀ)** (स्त्री०) ಎಲಚಿ ಮರ, ಬೋರೆ ಗಿಡ. कुल (संस्त्याने) "इन्" (उ० ४-११७)। वा "ङीप्" (ग० ४-१-४५)।

**कोल्या ಕೋಲ್ಯಾ** (स्त्री०) ಹಿಪ್ಪಲಿ. कोलमर्हति "यत्" (५-१-६६)।

**कोल्ल (क) ಕೋಲ್ಲ (ಕ)** (पुं०) ದಕ್ಷಿಣ ಭಾರತದಲ್ಲಿ ಇರುವ ಒಂದು ಪರ್ವತ. "कर्णाटकमहाटविचित्रकूटनासिककोल्लगिरिचोलाः"। "ऋषभः कूटकः कोल्लकः सह्यो देवगिरिः" भाग० ५-१९-१६।

**कोविद ಕೋವಿದ** (पुं०) 1. ಪಂಡಿತ, ವಿದ್ವಾಂಸ. कौर्वेदः तं वेत्ति—विद (ज्ञाने) "कः" (३-१-१३५)। "श्रौतमार्गसुखगानकोविदब्रह्मषट्चरणगर्भमुज्ज्वलम्" माघ० १४-६९। 2. ತಿಳಿದವನು, ಬಲ್ಲವನು. "आत्मनैव गुणदोषकोविदः किं न वेत्ति करणीयवस्तुषु" माघ० १४-५४।

**कोविदार ಕೋವಿದಾರ** (पुं०) ಕೆಂಗಾಂಚಾಳದ ಗಿಡ. कुं भूमिं विदृणाति – वि + दृ (विदारणे) "अण्" (३-२-१)। पृषो०। "कोविदारकलिकाऽतिकोमला तक्रसिद्धतिलतैलपाचिता" पाकशास्त्रम्।

**कोश (ष) ಕೋಶ (ಷ)** (पुंन०) 1. ಅಂಡ, ಮೊಟ್ಟೆ, ತತ್ತಿ. कुष्यति निष्क्रामत्यस्मात् – कुष (निष्कर्षे) "घञ्" (३-३-१९)। 2. ಪಾನಪಾತ್ರೆ, ಕುಡಿಯುವ ಪಾತ್ರೆ. 3. ಕತ್ತಿಯ ಒರೆ. 4. ಮುಚ್ಚಳ. 5. ಶಬ್ದಕೋಶ, ಅಮರ ಮೊದಲಾದ ನಿಘಂಟು. 6. ಖಜಾನೆ, ಬೊಕ್ಕಸ, ಧನರಾಶಿ. "तमध्वरे विश्वजिति क्षितीशं निःशेषविश्राणितकोशजातम्" रघु० ५-१। 7. ಸಮೂಹ. 8. ಕಾಯಿ ಧಾನ್ಯ ಮೊದಲಾದುವುಗಳ ಸಿಪ್ಪೆ. 9. ಕುಡ್ಮಲ, ಮೊಗ್ಗು. "आसारसिक्तक्षितिबाष्पयोगात् मामक्षिणोद्यत्र विभिन्नकोशैः" रघु० १३-२९। 10. ಹಲಸು ತೆಂಗು ಮೊದಲಾದ ಫಲಗಳ ಒಳಭಾಗ. 11. ಮೇಘ, ಮೋಡ. 12. (ವೇದಾಂತಿಗಳ ಮತದಲ್ಲಿ) ಜೀವನಿಗೆ ಆವರಣವಾಗಿರುವ (1) ಅನ್ನಮಯ, (2) ಪ್ರಾಣಮಯ, (3) ಮನೋಮಯ,

(4) ವಿಜ್ಞಾನಮಯ ಮತ್ತು (5) ಆನಂದಮಯಗಳೆಂಬ ಐದು ಕೋಶಗಳು. 13. ಗೋಳ, ವರ್ತುಲ, ಗುಂಡು. 14. ಯೋನಿ, ಸ್ತ್ರೀಯರ ಜನನೇಂದ್ರಿಯ. 15. ಜಾಯಿ ಕಾಯಿ. "कोशः कोष इवाण्डके। कुड्मले चषके दिव्येऽर्थचये योनिशिम्बयोः। जातीकोषेऽसिपिधाने" हेम०। 16. ಶಾಸ್ತ್ರ. 17. ಗೃಹ. ಮನೆ. 18. ಪುಸ್ತಕ ಗಳ ರಾಶಿ. 19. ದೇಹ, ಶರೀರ. "कोशोऽस्त्री कुड्मलेऽर्थौघे गुहचेऽङ्गे शास्त्रदिव्ययोः। गृहे देहे पुस्तकौघे पेश्यामसिपिधानके" नानार्थर०। 20. ರೇಷ್ಮೆ ಹುಳುವಿನ ಗೂಡು. 21. ಗರ್ಭಕೋಶ. 22. ಪರಸ್ಪರ ಸಂಬಂಧ ವಿಲ್ಲದ ಅನೇಕ ಶ್ಲೋಕಗಳ ಸಮುದಾಯ.

**कोश(ष)कार ಕೋಶ(ಷ)ಕಾರ** (ಪುಂ) 1. ನಿಘಂಟು ಕಾರ. कोशं (षं) करोति – डु कृञ् (करणे) "अण्" (३-२-१)। 2. ರೇಷ್ಮೆಹುಳು. कोशं तन्तुभिः स्ववेष्टनं करोति – कृञ् "अण्"। "संवेष्टमानं बहुभिर्मोहा-तन्तुभिरात्मजैः। कोशकार इवात्मानं वेष्टयन्नावबुध्यसे" भा० शान्ति० ३२९-२८। (वि०) 3. ಕತ್ತಿಯ ಒರೆ ಯನ್ನು ತಯಾರಿಸುವವನು. डु कृञ् "ण्वुल्" (३-१-१३३)। **–कारकः –ಕಾರಕಃ.** "निजलाला-समायोगात् कोशं वा कोशकारकः" याज्ञ० ३-१४७। स्त्रियाम् **–कारिका –ಕಾರಿಕಾ.**

**कोश(ष)कृत् ಕೋಶ(ಷ)ಕೃತ್** (ಪುಂ) 1. "कोश (ष) कार" ಪದದ ಅರ್ಥ. 2. ಒಂದು ಜಾತಿಯ ಕಬ್ಬು. "नैपालो दीर्घपत्रश्च नीलपोरोऽथ कोशकृत्" सुश्रुत० सूत्र० ४५-१५०।

**कोश(ष)गृह ಕೋಶ(ಷ)ಗೃಹ** (ನಂ) ಬೊಕ್ಕಸ, ಧನಾಗಾರ, ಹಣವನ್ನು ಕೂಡಿಸಿಡುವ ಕೊಠಡಿ. कोश (ष)स्य गृहम्। "हिरण्मयीं कोषगृहस्य मध्ये वृष्टिं शशंसुः पतितां नभस्तः" रघु० ५-२९।

**कोश(ष)पाल ಕೋಶ(ಷ)ಪಾಲ** (ಪುಂ) ಖಜಾಂಚಿ, ಬೊಕ್ಕಸದ ಅಧಿಕಾರಿ, ಖಜಾನೆಯ ಉಸ್ತುವಾರಿ ನೋಡಿ ಕೊಳ್ಳುವವನು, ಕೋಶಾಧ್ಯಕ್ಷ. कोशं (षं) पालयति – पाल (रक्षणे) + णिच् "अण्" (३-२-१)। "निर्यान्तु कोश (ष) पालाश्च कुरुक्षेत्राश्रमं प्रति" भा० आश्रम० २२-२१। "ण्वुल्" (३-१-१३३)। **–पालकः –ಪಾಲಕಃ.**

**कोश(ष)पेटक ಕೋಶ(ಷ)ಪೇಟಕ** (ಪುಂ) ಹಣದ ಪೆಟ್ಟಿಗೆ.

**कोश(ष)फल ಕೋಶ(ಷ)ಫಲ** (ನಂ) 1. ಒಂದು ಸುಗಂಧದ್ರವ್ಯ, ತಕ್ಕೋಲವೃಕ್ಷದ ಪರಿಮಳದ್ರವ್ಯ. 2. ಜಾಯಿಕಾಯಿ.

**कोश(ष)वत् ಕೋಶ(ಷ)ವತ್** (ವಿಂ) ಧನಿಕ, ಐಶ್ವರ್ಯವಂತ. कोशो (षो) ऽस्यास्ति "मतुप्" (५-२-९४)। "धर्मात्मा कोश(ष) वांश्चापि देवराज इवापरः" भा० अनु० २-११। स्त्रियाम् "ङीप्" (४-१-६)। **–वती –ವತೀ.**

**कोश(स)ल ಕೋಶ(ಸ)ಲ** (ಪುಂ ಬಂ ವಂ) ಕೋಸಲ ದೇಶ, ಅಯೋಧ್ಯಾನಗರವು ರಾಜಧಾನಿಯಾಗಿದ್ದು ಇಕ್ಷ್ವಾಕು ವಂಶದ ಚಕ್ರವರ್ತಿಗಳಿಂದ ಆಳಲ್ಪಡುತ್ತಿದ್ದ ಒಂದು ದೇಶ.

**कोश(ष)शायिका ಕೋಶ(ಷ)ಶಾಯಿಕಾ** (स्त्री०) ಸಣ್ಣಕತ್ತಿ. कोशे (षे) शेते – शीङ् (स्वप्ने) "ण्वुल्" (३-१-१३३)।

**कोशा(षा)गार ಕೋಶಾ(ಷಾ)ಗಾರ** (ನಂ) ಬೊಕ್ಕಸ, ಖಜಾನೆ, ಹಣವನ್ನು ಶೇಖರಿಸಿಡುವ ಮನೆ.

**कोशा(षा)तकी ಕೋಶಾ(ಷಾ)ತಕೀ** (स्त्री०) 1. ಕಹಿ ಹೀರೆ ಗಿಡ. 2. ಪಡವಲ ಗಿಡ. कोश (ष) मतति – अत (सातत्यगमने) "क्वुन्" (उ० २-३३)।

**कोशा(षा)धिपति ಕೋಶಾ(ಷಾ)ಧಿಪತಿ** (ಪುಂ) 1. ಧನಾಧ್ಯಕ್ಷ, ಬೊಕ್ಕಸದ ಅಧಿಕಾರಿ. कोश (ष) स्याधिपतिः। 2. ಕುಬೇರ. ಇದೇ ಅರ್ಥದಲ್ಲಿ **–अधीशः –ಅಧೀಶಃ, –अध्यक्षः –ಅಧ್ಯಕ್ಷಃ** ಇತ್ಯಾದಿ.

**कोशि(षि)न् ಕೋಶಿ(ಷಿ)ನ್** (ವಿಂ) ಕೋಶವುಳ್ಳ ವನು, ಐಶ್ವರ್ಯವಂತ, ಹಣವಂತ. कोशोऽस्यास्ति "इनिः" (५-२-११५)।

**कोशी(षी) ಕೋಶೀ(ಷೀ)** (स्त्री०) ತೊಗಲಿನ ಪಾದರಕ್ಷೆ, ಚಪ್ಪಲಿ. "पन्नध्री पादविरजाः कोशी पादरथी भवेत्" हारा०।

**कोष ಕೋಷ** (ಪುಂ) "कोश" ಪದದ ಅರ್ಥ.

**कोष्ठ ಕೋಷ್ಠ** (ಪುಂ) 1. ಮನೆಯ ಒಳ ಕೊಠಡಿ, 2. ಹೊಟ್ಟೆಯ ಒಳಭಾಗ, ಒಳಹೊಟ್ಟೆ. 3. ಉಗ್ರಾಣ, ಕಣಜ, ಧಾನ್ಯವನ್ನು ತುಂಬುವ ಮನೆ. कुष (निष्कर्षे) "थन्" (उ० २-४)। 4. ಹೊಟ್ಟೆಯೊಳಗಿನ ಅಂಗಗಳು, ಅಂತರವಯವಗಳು, ಕರುಳು ಯಕೃತ್ತು ಹೃದಯ ಮುಂತಾದುವು. (वि०) 5. ತನ್ನದಾದ, ಸ್ವಂತವಾದ. "कोष्ठः कुसूले चात्मीये मध्ये कुक्षेर्गृहस्य च" मेदि०।

ನಾನಾರ್ಥರತ್ನಮಾಲೆಯಲ್ಲಿ ಪುನಂ। "कुक्षेरन्तर्गृहस्यान्तः कुसूले कोष्ठमस्त्रियाम्" नानार्थर०।

**कोष्ठपाल ಕೋಷ್ಠಪಾಲ** (ಪುಂ) 1. ಉಗ್ರಾಣವನ್ನು ರಕ್ಷಿಸುವವನು. कोष्ठं पालयति—पाल (रक्षणे) + णिच् "अण्" (३-२-१)। 2. ಪೋಲೀಸಿನವನು, ಪೋಲೀಸು ಪ್ಯಾದೆ, ನಗರ ರಕ್ಷಕ.

**कोष्ठागार ಕೋಷ್ಠಾಗಾರ** (ನಂ) 1. ಧಾನ್ಯಾದಿಗಳನ್ನು ಕೂಡಿಸಿಡುವ ಮನೆ, ಉಗ್ರಾಣ. कोष्ठमगारमिव। "ततः पर्याप्तभरितकोष्ठागारं मांसशोणितैर्मे गृहं भविष्यति" वेणी० ३। 2. ಬೊಕ್ಕಸ, ಧನಗೃಹ, ಖಜಾನೆ.

**कोष्ठागारिक ಕೋಷ್ಠಾಗಾರಿಕ** (ಪುಂ) 1. ಕೋಷ್ಠಾಗಾರದಲ್ಲಿ ನಿಯುಕ್ತನಾದವನು, ಉಗ್ರಾಣದ ಅಧಿಕಾರಿ, ಉಗ್ರಾಣದ ಪಾರುಪತ್ಯಗಾರ. कोष्ठागारे नियुक्तः "ठन्" (४-४-७०)। 2. ಕೋಷ್ಠಾಗಾರದಲ್ಲಿರುವ, ಉಗ್ರಾಣದಲ್ಲಿರುವ.

**कोष्ठागारिन् ಕೋಷ್ಠಾಗಾರಿನ್** (ಪುಂ) ಕಣಜದ ಹುಳು.

**कोष्ठाग्नि ಕೋಷ್ಠಾಗ್ನಿ** (ಪುಂ) ಹೊಟ್ಟೆಯೊಳಗಿನ ಅಗ್ನಿ, ತಿಂದ ಆಹಾರವನ್ನು ಜೀರ್ಣವಾಗಿಸುವ ಒಂದು ಶಕ್ತಿ.

**कोष्ण ಕೋಷ್ಣ** (ನಂ) 1. ಸ್ವಲ್ಪ ಬಿಸಿ. कु ईषदुष्णम्। कोः कादेशः (६-३-१०७)। (ವಿಂ) 2. ಸ್ವಲ್ಪ ಬಿಸಿಯಾಗಿರುವ, ಬೆಚ್ಚಗಿರುವ. "भुवं कोष्णेन कुण्डोघ्नी मेध्येनावभृथादपि" रघु० १-८४।

**कोसल ಕೋಸಲ** (ಪುಂ ಬಂ ವಂ) 1. ಕೋಸಲ ದೇಶ. कुस (संश्लेषणे) "कलच्" (उ० १-१०६)। 2. ಕೋಸಲ ದೇಶದ ನಿವಾಸಿಗಳು. ಸರಯೂ ನದಿಯ ಇಬ್ಭಾಗಗಳಲ್ಲಿಯೂ ಕೋಸಲವು (1) ಪ್ರಾಚ್ಯಕೋಸಲ ಮತ್ತು (2) ಉತ್ತರ ಕೋಸಲಗಳೆಂದು ಎರಡು ಭಾಗವಾಗಿದೆ. ಅಯೋಧ್ಯಾ ನಗರದಿಂದ ಕೂಡಿದುದು ಉತ್ತರ ಕೋಸಲ ದೇಶ. "इति स्म पृच्छत्यनुवेलमादृतः प्रियासखीरुत्तरकोसलेश्वरः" रघु० ३-५। "दक्षिणा ये च पञ्चालाः पूर्वाः कुन्तिषु कोसलाः" भा० सभा० १४-२७।

**कोहल ಕೋಹಲ** (ಪುಂ) 1. ಒಂದು ವಿಧ ವಾದ್ಯ. 2. ನಾಟ್ಯಶಾಸ್ತ್ರಪ್ರವರ್ತಕರಾದ ಒಬ್ಬ ಋಷಿ. कौ हलति—हल (विलेखने) "अच्" (३-१-१३४)। "कोहलो वाद्यभेदेऽपि स्यात् नाटयशास्त्रप्रवक्तरि" मेदि०। 3. ಮದ್ಯ.

**कौकृत्य ಕೌಕೃತ್ಯ** (ನಂ) 1. ಅಕೃತ್ಯ, ಅಕಾರ್ಯ, ಅಯೋಗ್ಯವಾದ ಕಾರ್ಯ. कुत्सितं कृत्यम्—स्वार्थे "अण्" (५-४-३८)। 2. ಅನುತಾಪ, ಪಶ್ಚಾತ್ತಾಪ. "कौकृत्यमनुतापे स्यात् अयुक्तकरणेऽपि च" मेदि०।

**कौक्कुट ಕೌಕ್ಕುಟ** (ನಂ) 1. ಕುಕ್ಕುಟಾಸನ, ಯೋಗದ ಅಂಗಗಳಲ್ಲೊಂದಾದ ಆಸನದ ಒಂದು ಭೇದ. (ವಿಂ) 2. ಕುಕ್ಕುಟಸಂಬಂಧವಾದ, ಕೋಳಿಯ ಸಂಬಂಧವಾದ. कुक्कुटस्येदम् "अण्" (४-३-१२०)।

**कौक्कुटिक ಕೌಕ್ಕುಟಿಕ** (ಪುಂ) 1. ವೇಷಧಾರಿ, ವಂಚಕ, ಮಾಯಾವಿ. 2. ಕ್ರಿಮಿಕೀಟಾದಿಗಳು ಕಾಲಿಗೆ ಸಿಕ್ಕುವುವೆಂಬ ಭಯದಿಂದ ಕೋಳಿಯು ಕಾಲಿಡುವಷ್ಟು ಮಾತ್ರ ಪ್ರದೇಶವನ್ನು ನೋಡಿಕೊಂಡು ನಡೆಯುವ ಸಂನ್ಯಾಸಿ, ಪ್ರಾಣಿಹಿಂಸೆಯ ಭಯದಿಂದ ತಾನು ಹೆಜ್ಜೆಯಿಡುವ ಜಾಗವನ್ನು ಮಾತ್ರ ನೋಡಿಕೊಂಡು ನಡೆಯುವ ಭಿಕ್ಷುಕ. कुक्कुटीं मायां कुक्कुटीपादपतनार्हप्रदेशं च पश्यति—"ठक्" (४-४-४६)। "अथ कौक्कुटिकोऽदूरप्रेरिताक्षे च दाम्भिके" मेदि०।

**कौक्कुटिकन्दल ಕೌಕ್ಕುಟಿಕಂದಲ** (ಪುಂ) ಒಂದು ಜಾತಿಯ ಸರ್ಪ. "कौक्कुटिकन्दलः। गोनासगोनसौ" त्रिकाण्ड०।

**कौक्ष ಕೌಕ್ಷ** (ವಿಂ) 1. ಹೊಟ್ಟೆಗೆ ತೊಡಿಸುವ ಒಡವೆ ಮುಂತಾದುದು. कुक्षौ भवः "अण्" (४-३-५३)। 2. ಹೊಟ್ಟೆಯ ಸಂಬಂಧವಾದ. कुक्षेरिदम् "अण्" (४-३-१२०)।

**कौक्षक ಕೌಕ್ಷಕ** (ವಿಂ) ಹೊಟ್ಟೆಯಲ್ಲಿರುವ, ಉದರ ಪ್ರದೇಶದಲ್ಲಿರುವ. कुक्षौ भवः "वुञ्" (४-२-१२७)।

**कौक्षेयक ಕೌಕ್ಷೇಯಕ** (ಪುಂ) ಖಡ್ಗ, ಕತ್ತಿ. कुक्षौ भवः (असिः) "ढकञ्" (४-२-९६)। "कौक्षेयको मण्डलाग्रः करवालः कृपाणवत्" अम०। "कौक्षेयकेण सन्निहितविषधरेणेव चन्दनलता" काद०।

**कौचवार्य ಕೌಚವಾರ್ಯ** (ವಿಂ) ಕೂಚವಾರದೇಶದವನಾದ, ಕೂಚವಾರದೇಶನಿವಾಸಿಯಾದ. कूचवारोऽभिजनोऽस्य "यक्" (४-३-९४)।

**कौचुमारयोग ಕೌಚುಮಾರಯೋಗ** (ಪುಂ) ಶರೀರ ಸಂಬಂಧವಾದ ನಷ್ಟಗಳನ್ನು ಹೋಗಲಾಡಿಸಿ ಸೌಭಾಗ್ಯವನ್ನುಂಟುಮಾಡುವ ಒಂದು ವಿಧ ಯೋಗ. कुचुमारस्यायं योगः।

**कौञ्च ಕೌಂಚ** (ಪುಂ) ಕ್ರೌಂಚ ಪರ್ವತ, ಮಾಲ್ಯವತ್ ಪರ್ವತ. कुञ्च एव स्वार्थे "अण्"। पृषो०। "कौञ्चः क्रौञ्चश्च माल्यवान्" त्रिकाण्ड०।

**कौञ्जर ಕೌಂಜರ** (न०) 1. ಕುಂಜರಾಸನ, ಆನೆಯಂತೆ ಕೂಡುವುದು. (वि०) 2. ಆನೆಯ ಸಂಬಂಧವಾದ. कुञ्जरस्येदम् "अण्" (४-३-१२०)। स्त्रियाम् "ङीप्" (४-१-१५)। **-री -ರೀ.** "आपन्नः कौञ्जरीं योनिमात्मस्मृतिविनाशिनीम्" भाग० ८-४-१२।

**कौट ಕೌಟ** (पुं०) 1. ಕುಟಜವೃಕ್ಷ, ಬೆಟ್ಟಮಲ್ಲಿಗೆ ಗಿಡ. कूटे अद्रिशृङ्गे भवः "अण्" (४-३-५३)। (न०) 2. ಮಿಥ್ಯಾವಚನ, ಸುಳ್ಳುಮಾತು. (वि०) 3. ಸ್ವಂತ ಮನೆಯಲ್ಲಿ ವಾಸಿಸುವ, ಸ್ವತಂತ್ರನಾದ, ಪರಾಧೀನನಲ್ಲದ. कुटयां भवः "अण्" (४-३-५३)। 4. ವಂಚಕ, ಮೋಸಗಾರ.

**कौटकिक ಕೌಟಕಿಕ** (वि०) ಮಾಂಸವನ್ನು ಮಾರುವವನು. कूटकं मांसकूटं पण्यमस्य "ठक्" (४-४-५१)।

**कौटज ಕೌಟಜ** (पुं०) ಬೆಟ್ಟಮಲ್ಲಿಗೆ ಗಿಡ. कूटमेव कौटमद्रिशृङ्गम् — तत्र जातः।

**कौटतक्ष ಕೌಟತಕ್ಷ** (पुं०) ಸ್ವತಂತ್ರನಾದ ಬಡಗಿ, ಊರಿನವರಿಗೆ ಅಧೀನನಲ್ಲದೆ ಸ್ವತಂತ್ರನಾಗಿ ಮರಗೆಲಸ ಮಾಡುವವನು. कुटयां भवः कौटः स्वतन्त्रः स चासौ तक्षश्च "टच्" (५-४-९५)। "कौटतक्षोऽनधीनकः" अम०।

**कौटसाक्ष्य ಕೌಟಸಾಕ್ಷ್ಯ** (न०) ಮೋಸದ ಸಾಕ್ಷ್ಯ, ಸುಳ್ಳುಪ್ರಮಾಣ ವಚನ, ತಾನು ಹೇಳುವುದು ನಿಜವೆಂದು ಸುಳ್ಳು ಹೇಳುವುದು. कूटः साक्षी — तस्य भावः "ष्यञ्" (५-१-१२४)। "यस्मिन् यस्मिन् विवादे तु कौटसाक्ष्यं कृतं भवेत्। तत्तत्कार्यं निवर्तेत कृतं चाप्यकृतं भवेत्" मनु० ८-११७।

**कौटि ಕೌಟಿ** (पुं०) ಸುಳ್ಳುಸಾಕ್ಷಿಯ ಮಗ, ಸುಳ್ಳು ಹೇಳುವವನ ಮಗ. कूटस्यापत्यम् "इञ्" (४-१-९५)।

**कौटिक ಕೌಟಿಕ** (पुं०) 1. ಬೇಡರವನು, ವ್ಯಾಧ, ಬಲೆಯನ್ನು ಬೀಸಿ ಮೃಗಗಳನ್ನು ಹಿಡಿಯುವವನು. कूटेन मृगबन्धनयन्त्रेण चरति—"ठक्" (४-४-८)। 2. ಮೃಗಗಳ ಮಾಂಸವನ್ನು ಮಾರಿ ಜೀವಿಸುವವನು.

**कौटिलिक ಕೌಟಿಲಿಕ** (पुं०) 1. ವ್ಯಾಧ, ಬೇಡರವನು. कुटिलिका व्याधानां गतिविशेषः — कुटिलिकया हरति "अण्" (४-४-१८)। 2. ಕಮ್ಮಾರ, ಕಬ್ಬಿಣದ ಕೆಲಸಗಾರ. कुटिलिका कर्मारोपकरणभूतं लोहम्—कुटिलिकया हरति "अण्" (४-४-१८)।

**कौटिल्य ಕೌಟಿಲ್ಯ** (पुं०) 1. ಚಾಣಕ್ಯ, ನೀತಿಶಾಸ್ತ್ರವನ್ನು ಬರೆದ ಒಬ್ಬ ಮುನಿ. कुटिल स्वार्थे "ष्यञ्" (वा० ५-१-१२४)। "कौटिल्यः कुटिलमतिः स एष येन क्रोधाग्नौ प्रसभमदाहि नन्दवंशः" मुद्रा० १-७। [ವಿವರಕ್ಕೆ "चाणक्य" ಪದದಲ್ಲಿ ನೋಡಿ.] (न०) 2. ವಕ್ರತೆ, ಡೊಂಕಾಗಿರುವಿಕೆ. कुटिलस्य भावः "ष्यञ्" (५-१-१२४)। 3. ಅಪ್ರಾಮಾಣಿಕತೆ, ಠಕ್ಕು, ಅನೀತಿ, ಮೋಸ. "आजन्मसिद्धं कौटिल्यं खलस्य च हलस्य च। सोढुं तयोर्मुखाक्षेपमलमेकैव सा क्षमा"।

**कौटीर्य ಕೌಟೀರ್ಯ** (वि०) 1. ಸ್ವತಂತ್ರ, ಅಧೀನನಲ್ಲದವನು. 2. ಅಸಹಾಯ, ಒಬ್ಬಂಟಿಗ. कुटीरः केवलः स्वार्थे "ष्यञ्"। (स्त्री०) **-र्या -ರ್ಯಾ.** 3. ದುರ್ಗಾದೇವಿ.

**कौटुम्ब ಕೌಟುಂಬ** (वि०) 1. ಕುಟುಂಬಭರಣಕ್ಕೆ ಬೇಕಾದ ದ್ರವ್ಯ. कुटुम्बं तद्भरणं प्रयोजनमस्य "अण्"। 2. ಕುಟುಂಬಕ್ಕೆ ಸಂಬಂಧಿಸಿದ. कुटुम्बस्येदम् "अण्" (४-३-१२०)।

**कौटुम्बिक ಕೌಟುಂಬಿಕ** (वि०) 1. ಕುಟುಂಬಭರಣದಲ್ಲಿ ನಿರತನಾದ, ಸಂಸಾರಿ. कुटुम्बे प्रसृतः "ठक्"। "पदेपदेऽभ्यन्तरवह्निनार्दितः कौटुम्बिकः क्रुध्यति वै जनाय" भाग० ५-१३-८। 2. ಕುಟುಂಬದಲ್ಲಿರುವವನು, ಕುಟುಂಬಕ್ಕೆ ಸೇರಿದವನು. कुटुम्बे भवः "ठञ्" (वा० ४-३-६०)। "अथ च यत्र कौटुम्बिका दारापत्यादयो नाम्ना कर्मणा वृकसृगाला एवानिच्छतोऽपि कदर्यस्य कुटुम्बिनः उरणवत्संरक्ष्यमाणं मिषतोऽपि हरन्ति" भाग० ५-१४-३।

**कौडविक ಕೌಡವಿಕ** (वि०) 1. ಅಚ್ಚೇರು ಧಾನ್ಯವನ್ನು ಬಿತ್ತಲು ಯೋಗ್ಯವಾದ ಪ್ರದೇಶ (ಭೂಮಿ). उप्यतेऽस्मिन्निति वापः क्षेत्रम् — कुडवस्य वापः "ठञ्" (५-१-४५)। 2. ಅಚ್ಚೇರು ಅಕ್ಕಿಯನ್ನು ಬೇಯಿಸುವ ಪಾತ್ರೆ. 3. ಅಚ್ಚೇರು ಅಕ್ಕಿಯ ಅನ್ನವನ್ನು ಬೇಯಿಸುವವನು. कुडवं पचति "ठञ्" (५-१-५२)। 4. ಅಚ್ಚೇರು ಅಳತೆಯ ಧಾನ್ಯ. कुडवः परिमाणमस्य "ठञ्" (५-१-५७)। 5. ಅಚ್ಚೇರು ಧಾನ್ಯವನ್ನು ತರುವವನು. कुडवमवहरति "ठञ्" (५-१-५२)। स्त्रियाम् "ङीप्" (४-१-१५)। **-विकी -ವಿಕೀ.**

**कौणप ಕೌಣಪ** (पुं०) ರಾಕ್ಷಸ. कुणपस्य भक्षणं शीलमस्य "अण्" (४-४-६१)। "अहो संप्रति इतस्ततः प्रवर्तमानकौणपनिकरस्य महती रौद्रता" मालती० ५।

**कौणपदन्त ಕೌಣಪದಂತ** (पुं०) ಭೀಷ್ಮಾಚಾರ್ಯರು. कौणपस्य दन्ता इव दन्ता यस्य। "भीष्मः कौणपदन्तश्च स्वेच्छामृत्युः पुरावसुः" त्रिकाण्ड०।

**कौण्डायन ಕೌಂಡಾಯನ** (वि०) 1. ಕುಂಡದ ಸಮೀಪದಲ್ಲಿ ಇರುವ ಪ್ರದೇಶ. 2. ಕುಂಡದಿಂದ ಉಂಟಾದ.

**कौण्डिन ಕೌಂಡಿನ** (पुं०) ಕೌಂಡಿನ್ಯಋಷಿಯ ಶಿಷ್ಯ. कौण्डिन्यस्य छात्रः "अण्" (४-२-१११)। यलोपः (६-४-१५१)।

**कौण्डिनेयक ಕೌಂಡಿನೇಯಕ** (वि०) 1. ಕುಂಡಿನ ನಗರದಲ್ಲಿ ಹುಟ್ಟಿದ. 2. ಕುಂಡಿನ ನಗರದಲ್ಲಿ ಇರುವ. कुण्डिने जातः भवो वा "ढकञ्" (४-२-९५)।

**कौण्डिन्य ಕೌಂಡಿನ್ಯ** (पुं०) ಕುಂಡಿನಋಷಿಯ ಗೋತ್ರದಲ್ಲಿ ಹುಟ್ಟಿದವನು. कुण्डिनस्य गोत्रापत्यं पुमान् "यञ्" (४-१-१०५)।

**कौतस्कुत ಕೌತಸ್ಕುತ** (वि०) ಎಲ್ಲೆಲ್ಲಿಂದ ಬಂದಿರುವ? कुतः कुतः आगतः? वीप्सायां द्विर्भावः "अण्" (४-३-७४)। विसर्गस्य सः (८-३-४८)। "यद्यस्ति नाके भुवनेऽथवाधस्तदा न कौतस्कुतलोकबाधः" नैष० १०-१२५।

**कौतुक ಕೌತುಕ** (न०) 1. ಕುತೂಹಲ, ಆಶ್ಚರ್ಯದ ವಿಷಯವನ್ನು ನೋಡುವ ಅಥವಾ ತಿಳಿಯುವ ಆಸೆ. कुतुकस्य भावः "अण्" (५-१-१३०)। "भर्त्रान्या मुहुरभिलष्यता निदध्ये नैवाह्नो विरमति कौतुकं प्रियेभ्यः" माघ० ८-६९। "नवनिधुवनलीलाः कौतुकेनातिवीक्ष्य" माघ० ११-१८। 2. ಅಪೇಕ್ಷೆ, ಇಚ್ಛೆ, ಅಭಿಲಾಷೆ. "पश्यन्त्यास्तं नृपं तस्या लज्जाकौतुकयोर्दृशि" कथास०। 3. ಉತ್ಸವ, ಹಬ್ಬ. "कथं सुतायाः पितृगेहकौतुकं निशम्य देहः सुरवर्य नेङ्गते" भाग० ४-३-१३। 4. ಕ್ರೀಡೆ, ಆಟ, ವಿನೋದ. 5. ಹರ್ಷ, ಸಂತೋಷ. 6. ಸಾಂಪ್ರದಾಯಿಕವಾದ ಮಂಗಳಕಾರ್ಯ, ವಂಶಪರಂಪರೆಯಿಂದ ನಡೆಯುವ ಮಂಗಳಕಾರ್ಯ. "पतिव्रताभिः परिगृह्य निन्ये क्लृप्तासनं कौतुकवेदिमध्यम्" कुमा० ७-१२। 7. ಕಂಕಣ, ವಿವಾಹಾದಿ ಶುಭಕಾರ್ಯಗಳಲ್ಲಿ ಕೈಗೆ ಕಟ್ಟುವ ಮಂಗಳ ಸೂತ್ರ. "वैवाहिकैः कौतुकसंविधानैर्गृहे गृहे व्यग्रपुरन्ध्रिवर्गम्" कुमा० ७-२। 8. ಸುಖಾನುಭವದ ಕಾಲ. 9. ಸಂಗೀತ ನೃತ್ಯ ಮೊದಲಾದುವು. "कौतुकं त्वभिलाषे स्यादुत्सवे नर्महर्षयोः। तथा परम्परायातमङ्गले च कुतूहले। विवाहसूत्रगीतादिभोगयोरपि न द्वयोः" मेदि०। "कौतुकं नर्मणीच्छायामुत्सवे कुतुके मुदि। पारम्पर्यागतस्थाने मङ्गलोद्वाहसूत्रयोः। गीतादौ भोगकाले च" हेम०।

**कौतुकक्रिया ಕೌತುಕಕ್ರಿಯಾ** (स्त्री०) ವಿವಾಹ ಮಹೋತ್ಸವ ಮೊದಲಾದ ಮಂಗಳಕಾರ್ಯ. "कन्यकातनयकौतुकक्रियां स्वप्रभावसदृशीं वितेनतुः" रघु० ११-५३।

**कौतुकगृह ಕೌತುಕಗೃಹ** (न०) 1. ಶಯ್ಯಾಗೃಹ, ಮಲಗುವ ಮನೆ. 2. ವಿನೋದ ಗೃಹ. 3. ವಿವಾಹ ಮಂದಿರ, ಕಲ್ಯಾಣ ಗೃಹ.

**कौतुकतोरण ಕೌತುಕತೋರಣ** (न०) ವಿವಾಹ ಹಬ್ಬ ಮೊದಲಾದ ಮಹೋತ್ಸವಗಳಲ್ಲಿ ಕಟ್ಟುವ ತೋರಣ. "गोपुरद्वारमार्गेषु कृतकौतुकतोरणाम्। चित्रध्वजपताकाग्रैरन्तःप्रतिहतातपाम्" भाग० १-११-१३।

**कौतुकमङ्गल ಕೌತುಕಮಂಗಲ** (न०) ಮಂಗಳಕಾರ್ಯ, ಕಂಕಣಧಾರಣಮಹೋತ್ಸವ.

**कौतुकमय ಕೌತುಕಮಯ** (वि०) ನೋಡಬೇಕೆಂಬ ಅಥವಾ ತಿಳಿದುಕೊಳ್ಳಬೇಕೆಂಬ ಆಸೆಯಿಂದ ತುಂಬಿರುವ.

**कौतुकरस ಕೌತುಕರಸ** (पुं०) 1. ಕ್ರೀಡೆ, ಆಟ, ವಿನೋದ. 2. ಸಂಗೀತ. 3. ಆನಂದ, ಹರ್ಷ, ಸಂತೋಷ.

**कौतुकवत् ಕೌತುಕವತ್** (वि०) ಕುತೂಹಲದಿಂದ ಕೂಡಿದ, ಆಸೆಯಿಂದ ಕೂಡಿದ. कौतुक "मतुप्" (५-२-९४)। "विद्या विदर्भेन्द्रसुताधरोष्ठे नृत्यन्ति कत्यन्तरभेदभाजः। इतीव रेखाभिरपश्रमस्ताः संख्यातवान् कौतुकवान् विधाता" नैष० ७-४१। स्त्रियाम् "ङीप्" (४-१-६)। **-वती -ವತೀ.**

**कौतुकागार ಕೌತುಕಾಗಾರ** (न०) 1. ವಿನೋದ ಗೃಹ. 2. ವಿವಾಹ ಮಂದಿರ, ಕಲ್ಯಾಣ ಮಂಟಪ. 3. ಶಯ್ಯಾಗೃಹ, ಮಲಗುವ ಮನೆ. "कनककलशयुक्तं भक्तिशोभासनाथं क्षितिविरचितशय्यं कौतुकागारमागात्" कुमा० ७-९४।

**कौतुकिन् ಕೌತುಕಿನ್** (वि०) 1. ನೋಡುವ ಅಥವಾ ತಿಳಿಯುವ ಆಸೆಯುಳ್ಳ. कौतुकमस्यास्ति "इनिः" (५-२-११५)। "दधानमाशासु चरिष्णु दुर्यशः स कौतुकी तत्र ददर्श केतकम्" नैष० १-७८। 2. ಆಸೆಯುಳ್ಳ, ಅಭಿಲಾಷೆಯುಳ್ಳ. स्त्रियाम् "ङीप्" (४-१-५)। **-किनी -ಕಿನೀ.** "यस्तन्वि भर्ता घुसृणेन सायं दिशः समालम्भनकौतुकिन्याः" नैष० ८-८०।

**कौतूहल ಕೌತೂಹಲ** (न०) 1. ಆಸೆ, ಅಪೇಕ್ಷೆ. 2. ಉತ್ಸಾಹ, ನೋಡುವ ಅಥವಾ ತಿಳಿಯುವ ಆಸೆ. कुतूहलस्य भाव: "अण्" (५-१-१३०)। 3. ಆಶ್ಚರ್ಯದ ವೃಕ್ಷ. "विरोधिवर्णाभरणाश्मभासां मल्लाजिकौतूहलमीक्षमाणाम्" नैष० १०-९६। (वि०) 4. ಆಶ್ಚರ್ಯಕರವಾದ. 5. ಪ್ರಶಸ್ತವಾದ, ಶ್ರೇಷ್ಠವಾದ.

**कौतूहलिन् ಕೌತೂಹಲಿನ್** (वि०) ಕುತೂಹಲವುಳ್ಳ, ಆಸೆಯುಳ್ಳ. कौतूहलमस्यास्ति "इनि:" (५-२-११५)। स्त्रियाम् "ङीप्" (४-१-५)। **–हलिनी –ಹಲಿನೀ.** "श्रुत्वेति वाक्यं हृदयप्रियाया: कौतूहलिन्या विमलस्मितश्री:" कुमा० ११-९।

**कौत्स ಕೌತ್ಸ** (पुं०) 1. ವರತಂತುಮಹರ್ಷಿಯ ಶಿಷ್ಯ, ಕುತ್ಸ ಋಷಿಯ ಮಗ. कुत्सस्य ऋषेरपत्यम् "अण्" (४-१-११४)। "उपात्तविद्यो गुरुदक्षिणार्थी कौत्स: प्रपेदे वरतन्तुशिष्य:" रघु० ५-१। ಬಹುವಚನದಲ್ಲಿ ಗೋತ್ರಪ್ರತ್ಯಯಕ್ಕೆ "लुक्" (२-४-६५)। **कुत्सा: ಕುತ್ಸಾಃ.** (न०) 2. ಕುತ್ಸಋಷಿಯು ಕಂಡು ಗಾನಮಾಡಿದ ಸಾಮ. कुत्सेन दृष्टं साम। (वि०) 3. ಕುತ್ಸಋಷಿಯ ಸಂಬಂಧವಾದ. कुत्सस्यायम् "अण्" (४-३-१२०)।

**कौदालीक ಕೌದಾಲೀಕ** (पुं०) ಬೆಸ್ತನಿಂದ ಅಗಸರ ಹೆಂಗಸಿನಲ್ಲಿ ಹುಟ್ಟಿದ ಬೆರಕೆ ಜಾತಿಯವನು.

**कौद्रवीण ಕೌದ್ರವೀಣ** (न०) ಹಾರಕವನ್ನು ಬೆಳೆಯುವ ಭೂಮಿ. कोद्रवस्य भवनं क्षेत्रम् "खञ्" (५-२-१)।

**कौनख्य ಕೌನಖ್ಯ** (न०) 1. ನಖ ರೋಗ, ಉಗುರು ಕೆಟ್ಟಿರುವುದು. कुनखस्य भाव: "ष्यञ्" (५-१-१२४)। "सुवर्णचौर: कौनख्यं सुराप: श्यावदन्तताम्" मनु० ११-४९। 2. ನಖ ರೋಗದಿಂದ ಕೂಡಿರುವಿಕೆ. कुनखिनो भाव: "ष्यञ्" (५-१-१२४)।

**कौन्तिक ಕೌಂತಿಕ** (पुं०) ಕೊಂತವೆಂಬ ಆಯುಧದಿಂದ ಯುದ್ಧ ಮಾಡುವವನು, ಚೂಪಾದ ಎಸೆಗೋಲೇ ಆಯುಧವಾಗಿ ಉಳ್ಳವನು. कुन्त: प्रहरणमस्य "ठक्" (४-४-५७)।

**कौन्ती ಕೌಂತೀ** (स्त्री०) ರೇಣುಕವೆಂಬ ಒಂದು ಗಂದಿಗರ ವಸ್ತು. कुन्तिषु देशेषु भवा "अण्" (४-३-५३)।

**कौन्तेय ಕೌಂತೇಯ** (पुं०) 1. ಕುಂತಿಯ ಮಗ. (1) ಧರ್ಮರಾಜ, (2) ಭೀಮ ಮತ್ತು (3) ಅರ್ಜುನ. कुन्त्या अपत्यम् "ढक्" (४-१-१२०)। "कौन्तेय प्रतिजानीहि न मे भक्त: प्रणश्यति" गीता ९-३१। 2. ಅರ್ಜುನ ವೃಕ್ಷ, ಕೆಂಪು ಮತ್ತಿಮರ.

**कौप ಕೌಪ** (न०) 1. ಬಾವಿಯ ನೀರು. ಬಾವಿಯ ನೀರು ಉಪ್ಪಾಗಿದ್ದರೆ ಪಿತ್ತವನ್ನುಂಟುಮಾಡುವುದು. "सक्षारं पित्तलं कौपं श्लेष्मघ्नं दीपनं लघु" सुश्रुत० सूत्र० ४५-३३। (वि०) 2. ಕೂಪಸಂಬಂಧವಾದ, ಬಾವಿಯ ಸಂಬಂಧವಾದ, कूपस्येदम् "अण्" (४-३-१२०)। ವಸಂತ ಮತ್ತು ಗ್ರೀಷ್ಮ ಋತುಗಳಲ್ಲಿ ಬಾವಿಯ ಅಥವಾ ಚಿಲುಮೆಯ ನೀರನ್ನು ಕುಡಿಯಬೇಕು. "वसन्ते कौपं प्रास्रवणं वा सेवेत, ग्रीष्मेऽप्येवम्" सुश्रुत० सूत्र० ४५-८।

**कौपीन ಕೌಪೀನ** (न०) 1. ಅಕಾರ್ಯ, ಪಾಪಕಾರ್ಯ. कूपे नरके पतनमर्हति "खञ्" (५-२-२०)। निपा०। 2. ಶರೀರದ ಗುಹ್ಯಪ್ರದೇಶ, ಪುರುಷಲಿಂಗ. 3. ಗುಹ್ಯಪ್ರದೇಶವನ್ನು ಮುಚ್ಚುವ ಚೂರು ಬಟ್ಟೆ, ಲಂಗೋಟಿ. "कौपीनं शतखण्डजर्जरतरं कन्था पुनस्तादृशी" भर्तृ० ३-९१। "कौपीनं स्यादकार्येऽपि चीरगुह्यप्रदेशयो:" मेदि०।

**कौबेर ಕೌಬೇರ** (वि०) ಕುಬೇರನ ಸಂಬಂಧವಾದ. कुबेरस्यायम् "अण्" (४-३-१२०)। स्त्रियाम् "ङीप्" (४-१-१५)। **–री –ರೀ.** ಕುಬೇರನ ದಿಕ್ಕು, ಉತ್ತರ ದಿಕ್ಕು. "कौबेरदिग्भागमपास्य मार्गमागस्त्यमुष्णांशुरिवावतीर्ण:" माघ० ३-१। "तत: प्रतस्थे कौबेरीं भास्वानिव रघुर्दिशम्" रघु० ४-६६।

**कौमार ಕೌಮಾರ** (पुं०) 1. ಕನ್ಯೆಯನ್ನು ಮದುವೆಯಾದವನು, ಯಾವ ಪತಿಯನ್ನೂ ಸೇರದಿರುವ (ಯಾರನ್ನೂ ಮದುವೆಯಾಗದಿರುವ) ಕುಮಾರಿಯನ್ನು ಮದುವೆಯಾದವನು. न पूर्व: पतिर्यस्या: तामपूर्वपतिम् कुमारीम् उपपन्न: — कुमारी "अण्" (४-२-१३)। निपा०। 2. ಕುಮಾರ, ಬಾಲಕ. कुमार स्वार्थे "अण्"(५-४-३८)। (न०) 3. ಜೀವಿತಕಾಲದ ಒಂದು ವಯಸ್ಸು, ಬಾಲ್ಯ ಯೌವನ ಮೊದಲಾದ ಅವಸ್ಥೆಗಳಲ್ಲೊಂದು. कुमारस्य भाव: "अञ्" (५-१-१२९)। "देहिनोऽस्मिन् यथा देहे कौमारं यौवनं जरा। तथा देहान्तरप्राप्ति: धीरस्तत्र न मुह्यति" गीता २-१३। (वि०) 4. ಕುಮಾರನ ಸಂಬಂಧವಾದ. कुमारस्येदम् "अण्" (४-३-१२०)। "तत्र विद्याव्रतस्नात: कौमारं व्रतमास्थित:" भा० वन० ९५-१७। स्त्रियाम् "ङीप्" (४-१-१५)। **–री –ರೀ.** "कौमारीं दर्शयंश्चेष्टां प्रेक्षणीयो वनौकसाम्। रुदन्निव हसन्मुग्धबालसिंहावलोकिन:" भाग० ३-२-२८।

**कौमारभृत्य ಕೌಮಾರಭೃತ್ಯ** (ನ०) ಮಕ್ಕಳ ಚಿಕಿತ್ಸೆ. ಕುಮಾರನನ್ನು ಪೋಷಿಸುವ ದಾದಿಯ ಹಾಲಿನಿಂದ ಉಂಟಾದ ದೋಷದ ಶಮನಕ್ಕಾಗಿಯೂ ದುಷ್ಟಗ್ರಹ (ಬಾಲಗ್ರಹ) ಗಳಿಂದಲೂ ಕೆಟ್ಟ ಸ್ತನ್ಯಪಾನದಿಂದಲೂ ಉಂಟಾದ ವ್ಯಾಧಿಗಳನ್ನು ನಿವಾರಣೆ ಮಾಡುವುದಕ್ಕೂ ನಡೆಸುವ ಚಿಕಿತ್ಸೆ. "कौमारभृत्यं नाम कुमारभरणधात्री-क्षीरदोषसंशोधनार्थं दुष्टस्तन्यग्रहसमुत्थानां च व्याधीनामुपशमनार्थम्" सुश्रुत० सूत्र० १-५।

**कौमारहर ಕೌಮಾರಹರ** (वि०) ಕನ್ಯಾವಸ್ಥೆಯನ್ನು ಹೋಗಲಾಡಿಸುವ. कौमारं हरति— हृञ् (हरणे) "अच्" (३-२-९)। "यः कौमारहरः स एव हि वरस्ता एव चैत्रक्षपास्ते चोन्मीलितमालतीसुरभयः प्रौढाः कदम्बानिलाः" सा० द०।

**कौमारिकेय ಕೌಮಾರಿಕೇಯ** (पुं०) ಕುಮಾರಿಯ ಮಗ, ಕನ್ಯಾವಸ್ಥೆಯಲ್ಲಿ (ಮದುವೆಗೆ ಮುಂಚೆ) ಹುಟ್ಟಿದ ಮಗ, ಕಾನೀನ. कुमारिकायाः अपत्यम् "ढक्" (४-१-१२०)।

**कौमारी ಕೌಮಾರೀ** (स्त्री०) 1. ಬ್ರಹ್ಮಚಾರಿಯನ್ನು ಮದುವೆಯಾದ ಕನ್ಯೆ, ಬೇರೆ ಯಾರನ್ನೂ ಮದುವೆಯಾಗದವನ ಪತ್ನಿ. अपूर्वपतिः कुमारी पतिमुपपन्ना "अण्" (४-२-१३)। "ङीप्" (४-१-१५)। "उपलभ्यामपश्यन्तः कौमारीं पततां वर" भट्टि० ७-९०। 2. ಕಾರ್ತಿಕೇಯನ ಶಕ್ತಿ.

**कौमुद ಕೌಮುದ** (पुं०) 1. ಕಾರ್ತಿಕ ಮಾಸ. कौ मोदन्ते जना यस्मिन्—मुद (हर्षे) "कः" (३-१-१३६)। सप्तम्या अलुक् (६-३-१४)। (स्त्री०) **-दी -ದೀ.** 2. ಚಂದ್ರಿಕೆ, ಬೆಳದಿಂಗಳು. "कौमुदः स्यात् कार्तिकिके चन्द्रिकायां तु कौमुदी" मेदि०।

**कौमुदी ಕೌಮುದೀ** (स्त्री०) 1. ಚಂದ್ರಿಕೆ, ಬೆಳದಿಂಗಳು. कुमुदस्येयं प्रकाशकत्वात् "अण्" (४-३-१२०)। "ङीप्" (४-१-१५)। "आनन्दितोर्वीन्द्रमुखारविन्दैर्मुदं नुदन्तीं हृदि कौमुदीनाम्" नैष० १०-१०३। 2. ಆಶ್ವಯುಜಮಾಸದ ಹುಣ್ಣಿಮೆ. "आश्विने पौर्णमास्यां तु चरेज्जागरणं निशि। कौमुदी सा समाख्याता कार्या लोकविभूतये"। 3. ಕಾರ್ತಿಕಮಾಸದ ಹುಣ್ಣಿಮೆ, ಕಾರ್ತಿಕೇಯನ ಹುಟ್ಟಿದ ದಿನ, ಕೃತ್ತಿಕೋತ್ಸವದ ದಿನ. 4. ವ್ಯಾಕರಣ ಮತ್ತು ಇತರ ಕೆಲವು ಗ್ರಂಥಗಳ ವ್ಯಾಖ್ಯಾನದ ಹೆಸರು. ಆಯಾ ಗ್ರಂಥಗಳ ಅರ್ಥಪ್ರಕಾಶಕವಾದುದರಿಂದ ಆ ವ್ಯಾಖ್ಯಾನಕ್ಕೆ ಈ ಹೆಸರು. सांख्यतत्त्वकौमुदी, प्रक्रियाकौमुदी, लघुकौमुदी, सिद्धान्तकौमुदी, पदार्थकौमुदी ಇತ್ಯಾದಿ.

**कौमुदीचार ಕೌಮುದೀಚಾರ** (पुं०) ಆಶ್ವಯುಜ ಮಾಸದ ಹುಣ್ಣಿಮೆ. कौमुद्याश्चन्द्रिकायाश्चारोऽत्र। "कोजागरः शरत्पर्वकौमुदीचारमस्त्रियाम्" त्रिकाण्ड०।

**कौमुदीनाथ ಕೌಮುದೀನಾಥ -पति -ಪತಿ** (पुं०) ಚಂದ್ರ.

**कौमुदीमुख ಕೌಮುದೀಮುಖ** (न०) 1. ಚಂದ್ರಿಕೆಯ ಪ್ರಾದುರ್ಭಾವ, ಬೆಳದಿಂಗಳು ಹುಟ್ಟುವುದು. 2. ದೀಪೋತ್ಸವ ತಿಥಿಯ ಪ್ರಾರಂಭ. कौमुद्याः चन्द्रिकायाः दीपोत्सवतिथेर्वा मुखम्। "अथेप्सितं भर्तुरुपस्थितोदयं सखीजनोद्वीक्षणकौमुदीमुखम्" रघु० ३-१।

**कौमोदकी ಕೌಮೋದಕೀ** (स्त्री०) ಮಹಾವಿಷ್ಣುವಿನ ಗದೆ. कोः पृथिव्याः पालकत्वात् मोदकः कुमोदको विष्णुः तस्येयम् "अण्" (४-३-१२०)। "कौमोदकी गदा खड्गो नन्दकः कौस्तुभो मणिः" अम०। "नित्यं हरेः संनिहिता निकामं कौमोदकी नन्दयति स्म चेतः" माघ० ३-१८।

**कौमोदी ಕೌಮೋದೀ** (स्त्री०) ಮಹಾವಿಷ್ಣುವಿನ ಗದೆ. कुं मोदयति — मुद (हर्षे) + णिच् "अण्" (३-२-१)। कुमोदो विष्णुः तस्येयम् "अण्" (४-३-१२०)। "ङीप्" (४-१-१५)।

**कौम्भकर्णि ಕೌಂಭಕರ್ಣಿ** (पुं०) ಕುಂಭಕರ್ಣನ ಮಗ. कुम्भकर्णस्यापत्यम् "इञ्" (४-१-९५)। "मुष्टिना कौम्भकर्णि च क्रुद्धः प्राणैरतित्यजत्" भट्टि० १५-१२०।

**कौम्भकारि ಕೌಂಭಕಾರಿ** (पुं०) ಕುಂಬಾರನ ಮಗ. कुम्भकारस्यापत्यम् "इञ्" (४-१-१५३)। पक्षे "ण्यः" (४-१-१५२)। **-कार्यः -ಕಾರ್ಯಃ.** स्त्रियाम् वा "ङीप्" (ग० ४-१-४५)। **-कारी -ಕಾರೀ.**

**कौम्भायन ಕೌಂಭಾಯನ** (पुं०) 1. ಕುಂಭಕ್ಕೆ ಹತ್ತಿರದ ಪ್ರದೇಶ. कुम्भस्यादूरभवो देशः "फक्" (४-२-८०)। 2. ಕುಂಭವಿರುವ ಪ್ರದೇಶ. कुम्भोऽस्त्यस्मिन् देशे पक्षादि "फक्" (४-२-८०)। ಈ ಅರ್ಥಗಳಲ್ಲಿ कर्णादि "फिञ्" (४-२-८०)। **कौम्भायनिः ಕೌಂಭಾಯನಿಃ.** सङ्काशादि "ण्यः" (४-२-८०)। **कौम्भ्यः ಕೌಂಭ್ಯಃ.**

**कौम्भेयक ಕೌಂಭೇಯಕ** (वि०) 1. ಕುಂಭಿಯಲ್ಲಿ ಉಂಟಾದ, ಸಣ್ಣ ಗಡಿಗೆಯಲ್ಲಿ ಹುಟ್ಟಿದ. 2. ಸಣ್ಣ ಗಡಿಗೆಯಲ್ಲಿರುವ. कुम्भ्यां जातः भवो वा — कुम्भी "ढकञ्" (४-२-९५)।

**कौरव ಕೌರವ** (पुं०)1. ಕುರುರಾಜನ ಮಗ. कुरोरपत्यम् "अञ्"(४-१-८६)। 2. ಕುರುವಂಶದಲ್ಲಿ ಹುಟ್ಟಿದವನು. "तमुद्यतं रथेनैकमाशुकारिणमाहवे। अनेकमिव सन्त्रासान्मेनिरे तत्र कौरवाः" भा० आदि० १४८-१८। "मथ्नामि कौरवशतं समरे न कोपात्" वेणी० १-१५। (वि०) 3. ಕುರುಸಂಬಂಧವಾದ. कुरोरिदम् "अण्" (४-३-१२०)। "क्षेत्रं क्षत्रप्रधनपिशुनं कौरवं तद्भजेथाः" मेघ० १-४८। स्त्रियाम् "ङीप्" (४-१-१५)। **कौरवी ಕೌರವೀ.** "द्रुपदः कौरवान् दृष्ट्वा प्राधावत समन्ततः। शरजालेन महता मोहयन् कौरवीं चमूम्" भा० आदि० १४८-१७।

**कौरवक ಕೌರವಕ** (वि०) 1. ಕುರುವಂಶದಲ್ಲಿ ಹುಟ್ಟಿದ. 2. ಕುರು ದೇಶದಲ್ಲಿರುವ. कुरौ कुरुवंशे जातः कुरुषु जातः भवो वा "वुञ्" (४-२-१३०)। 3. ಕುರುವಕ ಸಂಬಂಧವಾದ, ಗೋರಂಟಿ ಸಂಬಂಧವಾದ. कुरवकस्येदम् "अण्" (४-३-१२०)।

**कौरवराज ಕೌರವರಾಜ** (पुं०) ಕುರು ದೇಶದ ದೊರೆ, ಕೌರವರ ದೊರೆ, ದುರ್ಯೋಧನ. "मानिनः प्रणष्टस्य कौरवराजस्य पदवीमन्वेष्टुम्" वेणी० ६।

**कौरवेय ಕೌರವೇಯ** (पुं०) ಕುರುರಾಜನ ಮಗ. कुरोरपत्यम् "ढक्"। "समा हि कौरवेयाणां वयं ते चैव पुत्रक"।

**कौरव्य ಕೌರವ್ಯ** (पुं०) 1. ಕುರುವಂಶದಲ್ಲಿ ಹುಟ್ಟಿದವನು, ದುರ್ಯೋಧನ. कुरोरपत्यम् "ण्यः" (४-१-१७०)। 2. ಕುರುದೇಶದ ದೊರೆ. कुरूणां राजा "ण्यः"। कौरव्ये साधुः "यत्" (४-४-९८)। ತದ್ರಾಜಸಂಜ್ಞೆ ಯಿಲ್ಲದ ಈ "यत्" ಪ್ರತ್ಯಯಕ್ಕೆ ಬಹುವಚನದಲ್ಲಿ ಲುಕ್ ಬರುವುದಿಲ್ಲ. कौरव्याः। "कौरव्याः पशवः प्रियापरिभवक्लेशोपशान्तिः फलम्" वेणी० १-२५। 3. ಕುರು ವೆಂಬ ಒಬ್ಬ ಬ್ರಾಹ್ಮಣನ ಮಗ. कुरु "ण्यः"(४-१-१५२)। कौरव्या ब्राह्मणाः सि० कौ०।

**कौर्म ಕೌರ್ಮ** (पुं०)1. ಮಹಾವಿಷ್ಣುವಿನ ಹತ್ತು ಅವತಾರ ಗಳಲ್ಲಿ ಎರಡನೆಯದು. "कौर्मे धृतोऽद्रिरमृतोन्मथने स्वपृष्ठे ग्राहात् प्रपन्नमिभराजममुञ्चदार्तम्" भाग० ११-४-१८। 2. ಬ್ರಹ್ಮನ ಒಂದು ಕಲ್ಪ, ಚತುರ್ಮುಖನ ಒಂದು ಹುಣ್ಣಿಮೆಯ ದಿನ, ಬ್ರಹ್ಮನ ತಿಂಗಳಲ್ಲಿ ಹದಿನೈದ ನೆಯ ದಿನ. ["कल्प" ಪದದಲ್ಲಿ ನೋಡಿ.] 3. ಕೂರ್ಮ ಪುರಾಣ. कूर्ममधिकृत्य कृतो ग्रन्थः "अण्" (४-३-८५)। (न०)4. ಯೋಗಾಸನಗಳಲ್ಲಿ ಒಂದು ಭೇದ. (वि०)5. ಕೂರ್ಮಸಂಬಂಧವಾದ, ಆಮೆಯ ಸಂಬಂಧವಾದ. कूर्मस्येदम् "अण्" (४-३-१२०)।

**कौल ಕೌಲ** (पुं०)1. ತಂತ್ರಶಾಸ್ತ್ರೋಕ್ತ ಕ್ರಮದಲ್ಲಿ ಶಕ್ತಿಯ ಉಪಾಸಕ. (न०)2. ತಂತ್ರಶಾಸ್ತ್ರ. (वि०)3. ಕುಲಕ್ಕೆ ಸಂಬಂಧಿಸಿದ, ವಂಶಸಂಬಂಧವಾದ. कुलस्येदम् "अण्" (४-३-१२०)। 4. ಕುಲಾಚಾರದಲ್ಲಿ ನಿರತನಾದ. 5. ಕುಲಾಚಾರವನ್ನು ತಿಳಿದಿರುವ. कुले कुलाचारे साधुः कुलं कुलाचारं वेत्ति वा "अण्" (४-४-९८)। (४-२-५९) वा। 6. ಸತ್ಕುಲದಲ್ಲಿ ಹುಟ್ಟಿದ. "भृत्यं विपन्नं पतयः कौलं गाश्चापयस्विनीः" भाग० १२-३-३६।

**कौलटिनेय ಕೌಲಟಿನೇಯ** (पुं०) ಕುಲಟೆಯ ಮಗ. ಸಾಧ್ವಿಯಾಗಿದ್ದು ಭಿಕ್ಷೆಗಾಗಿ ಮನೆಗಳಿಗೆ ತಿರುಗುವವಳು ಕುಲಟೆ. कुलटाया अपत्यम् "ढक्" (४-१-१२०)। वा "इनङ्" (४-१-१२७)। पक्षे **कौलटेयः ಕೌಲಟೇಯಃ.** ವ್ಯಭಿಚಾರಕ್ಕಾಗಿ ಮನೆ ಮನೆಗೂ ಹೋಗುವವಳೂ ಕುಲಟೆ. ಈ ಅರ್ಥದಲ್ಲಿ "ढ्रक्" (४-१-१३१)। **कौलटेरः ಕೌಲಟೇರಃ.** स्त्रियाम् "ङीप्" (४-१-१५)। **कौलटिनेयी ಕೌಲಟಿನೇಯೀ. कौलटेयी ಕೌಲಟೇಯೀ.**

**कौलत्थ ಕೌಲತ್ಥ** (वि०) ಕುಳುತ್ಥದೊಡನೆ ಬೇಯಿಸಿ ತಯಾರಿಸಲ್ಪಟ್ಟ, ಹುರುಳಿಯೊಡನೆ ಬೆರಸಿ ಬೇಯಿಸಲ್ಪಟ್ಟು ಸಿದ್ಧವಾದ. कुलत्थेन संस्कृतम् "अण्" (४-४-४)। "पाययेच्चाम्लकौलत्थसुरासौवीरकादिभिः" सुश्रुत०।

**कौलत्थीन ಕೌಲತ್ಥೀನ** (न०) ಹುರುಳಿಯನ್ನು ಬೆಳೆಯಲು ಯೋಗ್ಯವಾದ ಭೂಮಿ. कुलत्थस्य भवनं क्षेत्रम् "खञ्" (५-२-१)।

**कौलपुत्रक ಕೌಲಪುತ್ರಕ** (न०) ಕುಲಪುತ್ರನ ಭಾವ. कुलपुत्रस्य भावः "वुञ्" (५-१-१३३)।

**कौलाल ಕೌಲಾಲ** (वि०) ಕುಲಾಲಸಂಬಂಧವಾದ, ಕುಂಬಾರನ ಸಂಬಂಧವಾದ. कुलालस्येदम् "अण्" (४-३-१२०)।

**कौलालक ಕೌಲಾಲಕ** (वि०) ಕುಂಬಾರನಿಂದ ತಯಾರಿಸ ಲ್ಪಟ್ಟ. कुलालेन कृतम्, संज्ञायाम् "वुञ्" (४-३-११८)।

**कौलिक ಕೌಲಿಕ** (वि०) 1. ವಂಶಪರಂಪರಾಗತವಾದ. कुलादागतः "ठक्" (४-३-७५)। 2. ತಂತ್ರೋಕ್ತವಾದ ಆಚಾರ, ಕುಲಾಚಾರ. 3. ಪಾಷಂಡ, ಅವೈದಿಕ ಮತ ದವನು. "पाषण्डकौलिकौ" त्रिकाण्ड०।

**कौलिशायनि ಕೌಲಿಶಾಯನಿ** (वि०) 1. ಕುಲಿಶಕ್ಕೆ ಹತ್ತಿರದ ಪ್ರದೇಶ. कुलिशस्य अदूरभवो देशः "फिञ्" (४-२-८०)। 2. ಕುಲಿಶವಿರುವ ಪ್ರದೇಶ. कुलिशोऽस्त्यस्मिन् देशे "फिञ्" (४-२-८०)।

**कौलीन ಕೌಲೀನ** (न०) 1. ಉತ್ತಮ ಕುಲದಲ್ಲಿ ಹುಟ್ಟುವುದು. कुलीनस्य भावः "अण्" (५-१-१३०)। 2. ಲೋಕಾಪವಾದ, ಜನಾಪವಾದ. "कौलीनभीतेन गुहान्निरस्ता न तेन वैदेहसुता मनस्तः" रघु० १४-८४। 3. ನಿಂದೆ, ದೂಷಣೆ. "कौलीनमात्माश्रयमाचचक्षे तेभ्यः पुनश्चेदमुवाच वाक्यम्" रघु० १४-३६। 4. ಪಶು ಪಕ್ಷಿ ಸರ್ಪ ಮೊದಲಾದುವುಗಳ ಕಾಳಗ. "कौलीनं सुकुलीनत्वे प्राणिद्यूतापवादयोः" नानार्थर०। 5. ಅಕೃತ್ಯ, ಅಯೋಗ್ಯವಾದ ಕಾರ್ಯ. 6. ಯುದ್ಧ. ಕಾಳಗ. 7. ಶರೀರದ ಗುಹ್ಯ ಪ್ರದೇಶ. "कौलीनं गुह्यजन्ययोः। कुकर्मणि कुलीनत्वे युद्धे पश्वहिपक्षिणाम्" मेदि०। (वि०) 8. ಕುಲಕ್ರಮದಲ್ಲಿ ಬಂದ. ವಂಶಪರಂಪರೆಯಾಗಿ ಬಂದ. 9. ಭೂಮಿಯಲ್ಲಿ ಸೇರಿಕೊಂಡಿರುವ. कौ लीनम्। सप्तम्या अलुक्।

**कौलेयक ಕೌಲೇಯಕ** (पुं०) 1. ನಾಯಿ. कुले भवः श्वा "ढकञ्" (४-२-९६)। (वि०) 2. ಸತ್ಕುಲದಲ್ಲಿ ಹುಟ್ಟಿದ. कुलस्यापत्यम् "ढकञ्" (४-१-१४०)। "कौलेयकः सारमेयः कुलीने" मेदि०।

**कौल्माषीण ಕೌಲ್ಮಾಷೀಣ** (न०) ಅಲಸಂದೆಯನ್ನು ಬೆಳೆಯಲು ಯೋಗ್ಯವಾದ ಭೂಮಿ. कुल्माषाणां भवनं क्षेत्रम् "खञ्" (५-२-१)।

**कौश ಕೌಶ** (पुं०) 1. ಕುಶದ್ವೀಪ. कुश स्वार्थे "अण्" (५-४-६८)। 2. ಕಾನ್ಯಕುಬ್ಜ ದೇಶ. (वि०) 3. ಕುಶ ಸಂಬಂಧವಾದ. कुशस्येदम् "अण्" (४-३-१२०)।

**कौशल ಕೌಶಲ** (न०) 1. ದಕ್ಷತೆ. ಜಾಣತನ, ನಿಪುಣತನ. कुशलस्य भावः "अण्" (५-१-१३०)। "हावहारि हसितं वचनानां कौशलं दृशि विकारविशेषः" माघ० १०-१३। 2. ಯೋಗಕ್ಷೇಮ. "पृष्ट्वा कौशलमन्योन्यं रथेष्वेवावतस्थिरे" भा० वन० २४५-३०।

**कौशलि ಕೌಶಲಿ** (पुं०) ಜಾಣೆಯ ಮಗ. कुशलाया अपत्यम् "इञ्" (४-१-९६)। स्त्रियाम् वा "ङीप्" (ग० ४-१-४५)। **कौशली ಕೌಶಲೀ.**

**कौशलिका ಕೌಶಲಿಕಾ** (स्त्री०) ಕುಶಲಪ್ರಶ್ನೆ, ಕ್ಷೇಮ ಸಮಾಚಾರದ ಪ್ರಶ್ನೆ. कुशलं पृच्छति कुशल "ठक्" (वा० ७-३-७)।

**कौशली ಕೌಶಲೀ** (स्त्री०) 1. ಕುಶಲಪ್ರಶ್ನೆ. 2. ಗೌರವಪೂರ್ವಕ ಒಪ್ಪಿಸುವ ಕಾಣಿಕೆ. "कौशली कुशलप्रश्नः"। "सन्देशः प्राभृतं कौशली" त्रिकाण्ड०।

**कौश(स)लेय ಕೌಶ(ಸ)ಲೇಯ** (पुं०) ಕೌಸಲ್ಯೆಯ ಮಗ, ಶ್ರೀರಾಮ. कौश (स) ल्याया अपत्यम् "ढक्" (४-१-१२०)। यलोपः (६-४-१४८)।

**कौश(स)ल्य ಕೌಶ(ಸ)ಲ್ಯ** (पुं०) 1. ಕೋಸಲ ರಾಜನ ಮಗ. कोश (स) लस्य अपत्यं पुमान्. "ञ्यङ्" (४-१-१६९)। 2. ಕೋಸಲ ದೇಶದಲ್ಲಿ ಹುಟ್ಟಿದವನು. (स्त्री०) **–ल्या –ಲ್ಯಾ.** ಕೌಸಲ್ಯಾದೇವಿ, ಶ್ರೀರಾಮನ ತಾಯಿ. कोसलदेशे भवा।

**कौशल्य ಕೌಶಲ್ಯ** (न०) 1. ಜಾಣತನ. कुशलस्य भावः "ष्यञ्" (५-१-१२४)। 2. ಕುಶಲ, ಕ್ಷೇಮ. कुशल स्वार्थे "ष्यञ्" (वा० ५-१-१२४)।

**कौश(स)ल्यातनय ಕೌಶ(ಸ)ಲ್ಯಾತನಯ –सुत –ಸುತ, –सूनु –ಸೂನು** (पुं०) ಕೌಸಲ್ಯೆಯ ಮಗ, ಶ್ರೀರಾಮ. कौश (स) ल्यायाः तनयः सुतः सूनुर्वा।

**कौश(स)ल्यायनि ಕೌಶ(ಸ)ಲ್ಯಾಯನಿ** (पुं०) ಕೋಸಲ ರಾಜನ ಮಗ, ಶ್ರೀರಾಮ. कोश (स) लस्यापत्यम् "फिञ्" (४-१-१५५)। "परमप्रकृतेरेवायमिष्यते। प्रत्ययसन्नियोगेन प्रकृतिरूपं निपात्यते" सि० कौ०। "कौशल्याया अपत्यम् कौशल्यायनी रामः, तस्य वल्लभाम्" इति भट्टि० व्याख्या। "म्रियामहे न गच्छामः कौशल्यायनिवल्लभाम्। उपलम्भ्यामपश्यन्तः कौमारीं पततां वर" भट्टि० ७-९०।

**कौशाम्ब ಕೌಶಾಂಬ** (वि०) ಕುಶಾಂಬನ ಸಂಬಂಧವಾದ. कुशाम्बस्येदम् "अण्" (४-३-१२०)। स्त्रियाम् "ङीप्" (४-१-१५)। **कौशाम्बी ಕೌಶಾಂಬೀ.**

**कौशाम्बी ಕೌಶಾಂಬೀ** (स्त्री०) ಕುಶಾಂಬನಿಂದ ನಿರ್ಮಿತವಾದ ಒಂದು ನಗರ. कुशाम्बेन निर्वृत्ता नगरी "अण्" (४-२-६८)। "कुशाम्बस्तु महातेजा कौशाम्बीमकरोत्पुरीम्" रामा०। ಈ ನಗರವು ಈಗಿನ ಅಲಹಾಬಾದಿನ ಸಮೀಪದಲ್ಲಿ ಯಮುನಾನದಿಯ ತೀರದಲ್ಲಿರುವುದು. ಇದಕ್ಕೆ ಈಗ "ಕೋಸ" ವೆಂಬ ಹೆಸರಾಗಿದೆ. "ವತ್ಸಪಟ್ಟಣ" ವೆಂಬ ಮತ್ತೊಂದು ಹೆಸರೂ ಉಂಟು.

**कौशिक ಕೌಶಿಕ** (पुं०) 1. ಕುಶಿಕಗೋತ್ರದಲ್ಲಿ ಹುಟ್ಟಿದ ವಿಶ್ವಾಮಿತ್ರಮಹರ್ಷಿ. कुशिकस्य गोत्रापत्यं पुमान् "अञ्" (४-१-१०४)। "कौशिकेन स किल क्षितीश्वरो

"राममध्वरविघातशान्तये" रघु० ११-१। 2. ಗಾಧಿಯಾಗಿ ಹುಟ್ಟಿದ ಇಂದ್ರ. कुशिकस्यापत्यं पुमान् "अण्" (४-१-९२)। [ಕುಶಿಕ ರಾಜನು ಇಂದ್ರನಿಗೆ ಸಮಾನನಾದ ಮಗನನ್ನು ಪಡೆಯಬೇಕೆಂದು ತಪಸ್ಸು ಮಾಡುತ್ತಿರಲು ಇಂದ್ರನು ತನ್ನ ಅಂಶದಿಂದ ಅವನ ಮಗನಾಗಿ ಹುಟ್ಟಲು ಒಪ್ಪಿದನು. ಇವನೇ ಗಾಧಿ ಮಹಾರಾಜನು.] "कुशिकस्तु तपस्तेपे पुत्रमिन्द्रसमप्रभम्। लभेयमिति तं शक्रस्त्रासादभ्येत्य जग्मिवान्। स गाधिरभवद्राजा मघवान् कौशिकः स्वयम्" हरिवं०। 3. ಗೂಬೆ. "कौशिकः स्वमखिलं परिपश्यन् मन्यते स्म खलु कौशिकमेव" नैष० ५-६४। 4. ಕೋಶಕಾರ, ನಿಘಂಟುಕಾರ. 5. ಹಾವಾಡಿಗ. 6. ಗುಗ್ಗುಳ, ಧೂಪದ ಪುಡಿ. 7. ಮಜ್ಜೆ, ದೇಹಸಾರ. "मज्जा तु कौशिकः शुक्रकरोऽस्थ्नः स्नेहसम्भवौ" अभि० चि०। 8. ಜರಾಸಂಧನ ಒಬ್ಬ ಸೇನಾಪತಿ. "स तु सेनापतिं राजा सस्मार भरतर्षभ। कौशिकं चित्रसेनं च तस्मिन् युद्ध उपस्थिते" भा० सभा० २२-३२। 9. ನಕುಲ, ಮುಂಗುಸಿ. 10. ಕೋಶಾಧ್ಯಕ್ಷ. "कौशिको नकुले व्यालग्राहे गुग्गुलुशक्रयोः। कोशज्ञोलूकयोश्च स्यात् विश्वामित्रमुनावपि" मेदि०। 11. ಒಬ್ಬ ಅಸುರ. 12. ಶೃಂಗಾರರಸ. "वात्सल्यशान्तौ तु रसौ शृङ्गारः कौशिकः स्मृतः" त्रिकाण्ड०। (न०)13. ರೇಷ್ಮೆ ಬಟ್ಟೆ. "सोषरोदकगोमूत्रैः शुध्यत्याविककौशिकम्" याज्ञ० १-१८६। (वि०)14. ಕೋಶ (ಒರೆ) ದಲ್ಲಿರುವ (ಕತ್ತಿ). 15. ಕ್ರಿಮಿಕೋಶದಿಂದ ಹುಟ್ಟಿದ, ರೇಷ್ಮೆ ಹುಳುವಿನ ಹೊಟ್ಟೆಯಿಂದ ಹುಟ್ಟಿದ. (स्त्री०)**–की –ಕೀ.** 16. ಪಾರ್ವತಿ, ದುರ್ಗಾದೇವಿ. 17. ಒಂದು ನದಿ. "कौशिकी चण्डिकानद्योः" हेम०।

**कौशिकप्रिय ಕೌಶಿಕಪ್ರಿಯ** (पुं०) ವಿಶ್ವಾಮಿತ್ರಮಹರ್ಷಿಗೆ ಪ್ರೀತಿಪಾತ್ರನಾದ ಶ್ರೀರಾಮ. कौशिकस्य प्रियः।

**कौशिकफल ಕೌಶಿಕಫಲ** (पुं०) ತೆಂಗಿನಮರ.

**कौशिका ಕೌಶಿಕಾ** (स्त्री०) ಪಾನಪಾತ್ರೆ, ಕುಡಿಯುವ ಪಾತ್ರೆ.

**कौशिकाराति ಕೌಶಿಕಾರಾತಿ** (पुं०) ವಾಯಸ, ಕಾಗೆ. कौशिकस्यारातिः।

**कौशीधान्य ಕೌಶೀಧಾನ್ಯ** (न०) ಕೋಶದೊಳಗೆ ಬೆಳೆಯುವ ಧಾನ್ಯ, ಕಾಯಿಸೊಳೆಗೆ ಬಿಡುವ ತೊಗರಿ, ಅವರೆ, ಎಳ್ಳು, ಹೆಸರು ಮೊದಲಾದ ಧಾನ್ಯ.

**कौशेय ಕೌಶೇಯ** (न०) 1. ರೇಷ್ಮೆ. 2. ರೇಷ್ಮೆವಸ್ತ್ರ. कोशस्य विकारः "ढञ्" (४-३-४२)। "कौशेयं व्रजदपि गाढतामजस्रं सस्रंसे विगलितनीवि नीरजाक्ष्याः" माघ० ८-६।

**कौषीतक ಕೌಷೀತಕ** (पुं०) ಕುಷೀತಕಪುತ್ರನಾದ ಕಹೋಡ ಋಷಿ. कुषीतकस्यापत्यम् "अण्" (४-१-११४)।

**कौषीतकि ಕೌಷೀತಕಿ** (पुं०) 1. ಕುಷೀತಕಪುತ್ರನಾದ ಕಹೋಡ ಋಷಿ. कुषीतकस्यापत्यम् "इञ्" (४-१-९५)। (स्त्री०)**कौषीतकी ಕೌಷೀತಕೀ.** 2. ಅಗಸ್ತ್ಯಮಹರ್ಷಿಯ ಪತ್ನಿ, ಲೋಪಾಮುದ್ರೆ. "दीप्ताग्निरौर्वशेयश्च समुद्रचुलकोऽस्य तु। प्रिया कौषीतकी लोपामुद्राख्या च विदर्भजा" त्रिकाण्ड०।

**कौषीतकिन् ಕೌಷೀತಕಿನ್** (पुं० ब० व०) ಕುಷೀತ ಋಷಿಯ ಶಿಷ್ಯರು.

**कौषीतकेय ಕೌಷೀತಕೇಯ** (पुं०) ಕಾಶ್ಯಪಋಷಿ. कुषीतकस्यापत्यम् "ढक्" (४-१-१२४)।

**कौष्ठ्य ಕೌಷ್ಠ್ಯ** (वि०) ಹೊಟ್ಟೆಯ ಒಳಭಾಗದಲ್ಲಿರುವ. कोष्ठे भवः "यत्" (४-३-५५)। "उदरं च गुदौ कौष्ठ्यौ विस्तारोऽयमुदाहृतः" याज्ञ० ३-९५।

**कौसल ಕೌಸಲ** (वि०) ಕೋಸಲದೇಶ ಸಂಬಂಧವಾದ.

**कौसीद्य ಕೌಸೀದ್ಯ** (न०) 1. ಬಡ್ಡಿಯ ಸಂಪಾದನೆ, ಲೇಣಿ ದೇಣಿಗಳಿಂದ ಹಣವನ್ನು ಹೆಚ್ಚಿಸುವ ವ್ಯಾಪಾರ. कुसीदस्य भावः "ष्यञ्" (५-१-१२४)। 2. ಸೋಮಾರಿತನ, ಮೈಗಳ್ಳತನ, ಪಾಲುಮಾರಿಕೆ.

**कौसुम ಕೌಸುಮ** (वि०) 1. ಪುಷ್ಪಸಂಬಂಧವಾದ. कुसुमस्येदम् "अण्" (४-३-१२०)। "विनयति सुदृशो दृशः परागं प्रणयिनि कौसुममाननानिलेन" माघ० ७-५७। 2. ಕುಸುಮದಿಂದ ಉಂಟಾದ, ಹೂವಿನಿಂದ ತಯಾರಿಸಲ್ಪಟ್ಟ. कुसुमेन निर्वृत्तम् "अण्" (५-१-७९)।

**कौसुम्भ ಕೌಸುಂಭ** (वि०)1. ಕುಸುಂಬೆ ಗಿಡದ ಸಂಬಂಧವಾದ, ಕುಸುಂಬೆ ಹೂವಿನ ದಳಗಳಿಂದ ತಯಾರಿಸಲ್ಪಟ್ಟ. 2. ಕುಸುಂಬೆ ಹೂವಿನ ಬಣ್ಣ ಹಾಕಲ್ಪಟ್ಟ, ಕುಸುಂಬೆ ಹೂವಿನ ಬಣ್ಣದಲ್ಲಿ ಅದ್ದಲ್ಪಟ್ಟ. कुसुम्भेन रक्तम् "अण्" (४-२-१)। "शृङ्गाणि द्रुतकनकोज्ज्वलानि गन्धाः कौसुम्भं पृथुकुचकुम्भसङ्गि वासः" माघ० ८-३०।

**कौस्तुभ ಕೌಸ್ತುಭ** (पुं०) ಶ್ರೀವಿಷ್ಣುವಿನ ವಕ್ಷಸ್ಥಳದಲ್ಲಿರುವ ಮಣಿ. कुं भुवं स्तुभ्नाति इति कुस्तुभो वारिधिः, तत्र भवः "अण्" (४-३-५३)। कुं भुवं स्तोभते कुस्तुभो विष्णुः, तस्यायम् "अण्" (४-३-१२०) वा। [ದೇವದಾನವರು ಅಮೃತಕ್ಕಾಗಿ ಸಮುದ್ರಮಥನ ಮಾಡಿ

ದಾಗ ಸಮುದ್ರದಲ್ಲಿ ದೊರೆತ ಈ ಮಣಿಯನ್ನು ವಿಷ್ಣುವು ತನ್ನ ಎದೆಯಲ್ಲಿ ಧರಿಸಿಕೊಂಡನು.] "वक्षःस्थलव्यापि-रुचं दधानः सकौस्तुभं ह्रेपयतीव कृष्णम्" रघु० ६-४९।

**कौस्तुभधामन् ಕೌಸ್ತುಭಧಾಮನ್** (पुं०) ಮಹಾವಿಷ್ಣು. कौस्तुभस्य धाम।

**कौस्तुभभृत् ಕೌಸ್ತುಭಭೃತ್** (पुं०) ಕೌಸ್ತುಭಮಣಿಯನ್ನು ಧರಿಸಿರುವ ವಿಷ್ಣು. कौस्तुभं बिभर्ति — डु भृञ् (धारणपोषणयोः) "क्विप्" (३-२-७६)।

**कौस्तुभवक्षस् ಕೌಸ್ತುಭವಕ್ಷಸ್** (पुं०) ಕೌಸ್ತುಭದಿಂದ ಅಲಂಕೃತವಾದ ಎದೆಯುಳ್ಳ ವಿಷ್ಣು. कौस्तुभो वक्षसि यस्य।

**क्रकच ಕ್ರಕಚ** (पुं०) 1. ಮುಳ್ಳು ಅಜ್ಜಿಗಿಡ. (पुंन०) 2. ಗರಗಸ. ಮರವನ್ನು ಕೊಯ್ಯುವ ಒಂದು ಮುಳ್ಳು ಕತ್ತಿ. ರಂಪ. क्र इति कचति — कच (शब्दे) "अच्" (३-१-१३४)। 3. ಜ್ಯೋತಿಷದಲ್ಲಿ ಉಕ್ತವಾಗಿರುವ ಒಂದು ಯೋಗ. "षष्ठ्यादितिथयो मन्दात् विलोमं क्रकचः स्मृतः"। ತಿಥಿ—ವಾರಗಳ ಯೋಗದಿಂದ ಈ ಯೋಗವು ಸಂಭವಿಸುವುದು.

| ವಾರ | ತಿಥಿ |
| --- | --- |
| ಶನಿವಾರ | ಷಷ್ಠಿ |
| ಶುಕ್ರವಾರ | ಸಪ್ತಮಿ |
| ಗುರುವಾರ | ಅಷ್ಟಮಿ |
| ಬುಧವಾರ | ನವಮಿ |
| ಮಂಗಳವಾರ | ದಶಮಿ |
| ಸೋಮವಾರ | ಏಕಾದಶಿ |
| ಭಾನುವಾರ | ದ್ವಾದಶಿ |

**क्रकचच्छद ಕ್ರಕಚಚ್ಛದ** (पुं०) ತಾಳೆಮರ. क्रकच इव छदो यस्य। "केतकः क्रकचच्छदः" त्रिकाण्ड०।

**क्रकचपत्र ಕ್ರಕಚಪತ್ರ** (पुं०) 1. ತೇಗದ ಮರ. 2. ತಾಳೆ ಮರ. क्रकच इव पत्रमस्य।

**क्रकचपाद् ಕ್ರಕಚಪಾದ್ —पाद — ಪಾದ** (पुं०) ಓತಿಕೇತ, ಹೆಂಟೆಗೊದ್ದ. क्रकच इव पादो यस्य वा अन्त्यलोपः। "वेदारः क्रकचपात्" त्रिकाण्ड०। "भशा विदारुः क्रकचपादः" हारा०।

**क्रकचपृष्ठी ಕ್ರಕಚಪೃಷ್ಠೀ** (स्त्री०) ಒಂದು ಜಾತಿಯ ಮೀನು.

**क्रकचव्यवहार ಕ್ರಕಚವ್ಯವಹಾರ** (पुं०) ಗರಗಸದಿಂದ ಕೊಯ್ಯಲ್ಪಡುವ ಮರದ ಸಂಖ್ಯೆ ಮತ್ತು ಅದರ ಕೂಲಿಯ ಮೊತ್ತವನ್ನು ಕಂಡುಹಿಡಿಯಬಲ್ಲ ಒಂದು ಗಣಿತ,

**क्रकचा ಕ್ರಕಚಾ** (स्त्री०) ಕೇತಕೀವೃಕ್ಷ. ತಾಳೆಮರ. क्रकचस्तदाकारोऽस्त्यस्याः "अच्" (५-२-१२७)।

**क्रकण ಕ್ರಕಣ** (पुं०) ಕಬ್ಬಕ್ಕಿ. ಗವುಜಗ ಪಕ್ಷಿ. क्र इति कणति — कण (शब्दे) "अच्" (३-१-१३४)।

**क्रकर ಕ್ರಕರ** (पुं०) 1. ಕಬ್ಬಕ್ಕಿ. ಗವುಜಗ ಪಕ್ಷಿ. क्र इति शब्दं कर्तुं शीलमस्य — डु कृञ् (करणे) "टः" (३-२-२०)। 2. ಗರಗಸ. ರಂಪ. 3. ದರಿದ್ರ. ಬಡವ. 4. ಮುಳ್ಳು ಅಜ್ಜಿಗಿಡ. "क्रकरः करीरवृक्षे दीने क्रकचे च पक्षिभेदे च" मेदि०।

**क्रतु ಕ್ರತು** (पुं०) 1. ಯಜ್ಞ. ಯಾಗ. क्रियते — डु कृञ् (करणे) "कतुः" (उ० १-७७)। "क्रतुं विधत्ते यदि सार्वकामिकं कथं स मिथ्यास्तु विधिस्तु वैदिकः" नैष० ९-७५। 2. ವಿಷ್ಣು. देवयज्ञादयः पञ्चमहायज्ञाः औपासनादयः सप्त पाकयज्ञाः अग्निहोत्रादयः सप्त हविर्यज्ञाः अग्निष्टोमादयः सप्त सोमसंस्थाः क्रतवः ते च परिगणितयज्ञाः तैर्यज्ञक्रतुभिः आराध्यः क्रियते इति क्रतुः। "अग्निष्टोमादयः सप्तसंस्थाः क्रतव ईरिताः। आराध्यः क्रियते तैस्तैरिति क्रतुरुदीरितः" इति निरुक्तिः। "यज्ञ इज्यो महेज्यश्च क्रतुः सत्रं सतां गतिः" वि० स०। 3. ಸಂಕಲ್ಪ. ಉದ್ದೇಶ. "कामः क्रतुः कर्म जन्मेत्येवमेषां क्रमो भवेत्। पुंसो या विषयापेक्षा स काम इति भण्यते। स एव वर्धमानश्चेत् क्रतुत्वं प्रतिपद्यते"। 4. ಬ್ರಹ್ಮನ ಮಾನಸಪುತ್ರನಾದ ಒಬ್ಬ ಋಷಿ. 5. ಅಪೇಕ್ಷೆ. ಅಭಿಲಾಷೆ. 6. ಇಂದ್ರಿಯ. 7. ಪ್ರಜ್ಞೆ. ಪ್ರತಿಭೆ. 8. ಪೂಜೆ. ಉಪಾಸನೆ. "अथ खलु क्रतुमयः पुरुषः यथा क्रतुरस्मिन् लोके पुरुषो भवति" छान्दोग्य०। 9. ಹತ್ತು ಮಂದಿ ಪ್ರಜಾಪತಿಗಳಲ್ಲೊಬ್ಬ. "मरीचिमत्र्यङ्गिरसौ पुलस्त्यं पुलहं क्रतुम्। प्रचेतसं वसिष्ठं च भृगुं नारदमेव च" मनु० १-३५। 10. ಅಶ್ವಮೇಧಯಾಗ. "यजेत राजा क्रतुभिर्विविधैराप्तदक्षिणैः" मनु० ७-७९।

**क्रतुद्विष् ಕ್ರತುದ್ವಿಷ್** (पुं०) 1. ಯಜ್ಞದ ಶತ್ರು. ಅಸುರ, ರಾಕ್ಷಸ. क्रतुं द्वेष्टि — द्विष (अप्रीतौ) "क्विप्" (३-२-६१)। (वि०) 2. ಯಜ್ಞವನ್ನು ದ್ವೇಷಿಸುವವನು, ನಾಸ್ತಿಕ.

**क्रतुध्वंसिन् ಕ್ರತುಧ್ವಂಸಿನ್** (पुं०) ದಕ್ಷಯಾಗವನ್ನು ನಾಶಗೊಳಿಸಿದ ಪರಮೇಶ್ವರ. क्रतुं दक्षयज्ञं ध्वंसयति — ध्वंसु (अवस्रंसने) "णिनिः" (३-४-७८)।

**क्रतुपशु ಕ್ರತುಪಶು** (पुं०) ಯಜ್ಞದ ಪಶು, ಅಶ್ವ.

**कर्मणि :**—क्लिश्यते। चिक्लिशे। क्लेशिता, क्लेष्टा। क्लेशिष्यते, क्लेक्ष्यते। क्लिश्यताम्। अक्लिश्यत। क्लिश्येत। ಇತ್ಯಾದಿ.

**णिचि :**—क्लेशयति, –ते। ಇತ್ಯಾದಿ.

**कृत्सु :**—क्लेशितव्यम्, क्लेष्टव्यम्। क्लेशनीयः। क्लेश्यः। क्लिशितः, क्लिष्टः। क्लिशितवान्, क्लिष्टवान्। क्लिश्नन्, क्लिश्नती। क्लेशितुम्, क्लेष्टुम्। क्लिशितम्, क्लिष्टम्। क्लिशित्वा, क्लिष्ट्वा। परिक्लिश्य। "रूढेन्द्रजित्प्रहरणव्रणकर्कशेन क्लिश्नन्निवास्य भुजमध्यमुरःस्थलेन" रघु० १३-७३।

**क्लिशित ಕ್ಲಿಶಿತ** (न०) 1. ತೊಂದರೆ, ಪೀಡೆ, ಬಾಧೆ. क्लिशू भावे "क्तः" (३-३-११४)। (वि०) 2. ತೊಂದರೆಗೊಂಡ, ಕ್ಲೇಶದಿಂದ ಕೂಡಿದ. क्लिशू (विबाधने) कर्त० "क्तः" (३-४-७२)। वा इडागमः। इडभावे क्लिष्टः। 3. ತೊಂದರೆ ಪಡಿಸಲ್ಪಟ್ಟ, ಪೀಡಿಸಲ್ಪಟ್ಟ. 4. ನೋಯಿಸಲ್ಪಟ್ಟ. क्लिशू कर्म० "क्तः" (३-२-१०२)।

**क्लिशितवत् ಕ್ಲಿಶಿತವತ್** (वि०) ತೊಂದರೆಯನ್ನು ಅನುಭವಿಸಿದ. क्लिश (उपतापे) "क्तवतुः" (३-२-१०२)। "उपद्रुतश्चिरं द्वन्द्वैर्ययोः क्लिशितवानहम्" भट्टि० २२-७। स्त्रियाम् "ङीप्" (४-१-६)। **–वती – ವತೀ.**

**क्लिश्यमान ಕ್ಲಿಶ್ಯಮಾನ** (वि०) ಪೀಡಿಸಲ್ಪಡುತ್ತಿರುವ, ತೊಂದರೆ ಪಡಿಸಲ್ಪಡುತ್ತಿರುವ. क्लिशू (विबाधने) कर्म० "शानच्" (३-२-१२४)। "विद्वान् तथैव यः शक्तः क्लिश्यमानः प्रकुप्यति" भा० वन० २९-१५।

**क्लिष्ट ಕ್ಲಿಷ್ಟ** (न०) 1. ತೊಂದರೆ, ಪೀಡೆ, ಬಾಧೆ. क्लिशू (विबाधने) भावे "क्तः" (३-३-११४)। 2. ಪೂರ್ವಾಪರ ವಿರೋಧವುಳ್ಳ ಮಾತು, ಪರಸ್ಪರ ಸಂಬಂಧವಿಲ್ಲದ ಮಾತು. "अथ संकुलक्लिष्टे परस्परपराहते" अम०। (वि०) 3. ಪೀಡಿಸಲ್ಪಟ್ಟ, ತೊಂದರೆಪಡಿಸಲ್ಪಟ್ಟ. क्लिशू (विबाधने) कर्म० "क्तः" (३-२-१०२)। 4. ನೋಯಿಸಲ್ಪಟ್ಟ. "अक्लिष्टबालतरुपल्लवलोभनीयं पीतं मया सदयमेव रतोत्सवेषु" शाकु० ६-२०। 5. ಕೆಟ್ಟಿರುವ. "इदमुपनतमेवं रूपमक्लिष्टकान्ति प्रथमपरिगृहीतं स्यान्नवेति व्यवस्यन्" शाकु० ५-१९। 6. ಕೆದರಿದ, ತಾರುಮಾರು ಹೊಂದಿದ. "अर्धपीतस्तनं मातुरामर्दक्लिष्टकेसरम्" शाकु० ७-१४। 7. ಗ್ಲಾನಿಹೊಂದಿದ, ಕಳೆಗುಂದಿದ. "हिमक्लिष्टप्रकाशानि ज्योतींषीव मुखानि वः" कुमा० २-१९।

**क्लिष्टत्व ಕ್ಲಿಷ್ಟತ್ವ** (न०) ಒಂದು ಸಮಸ್ತಪದದಲ್ಲಿ ಮಧ್ಯೆ ಬೇರೆ ಪದಗಳ ವ್ಯವಧಾನದಿಂದ ವಿವಕ್ಷಿತವಾದ ಅರ್ಥವು ಸಾವಕಾಶವಾಗಿ ತೋರುವಿಕೆ. "क्लिष्टत्वमर्थप्रतीतेर्व्यवहितत्वम्" सा० द० ७।

**क्लिष्टवर्त्मन् ಕ್ಲಿಷ್ಟವರ್ತ್ಮನ್** (न०) ಒಂದು ವಿಧ ನೇತ್ರ ವ್ಯಾಧಿ. "मृद्वल्पवेदनं ताम्रं यद्वर्त्म सममेव च। अकस्माच्च भवेद्रक्तं क्लिष्टवर्त्म तदादिशेत्" सुश्रुत० उत्तर० ३-१८।

**क्लिष्टि ಕ್ಲಿಷ್ಟಿ** (स्त्री०) 1. ಪೀಡೆ, ತೊಂದರೆ, ಕ್ಲೇಶ. क्लिश (उपतापे) भावे "क्तिन्" (३-३-९४)। 2. ಸೇವೆ, ಶುಶ್ರೂಷೆ.

**क्लीत ಕ್ಲೀತ** (पुं०) ವಿಷತುಂಬಿದ ಒಂದು ಜಾತಿಯ ಹುಳು, ಕ್ರಿಮಿ. "क्लीतः कृमिसरारी च यच्चाप्युत्क्लेशकस्तथा" सुश्रुत० कल्प० ८-११।

**क्लीतक ಕ್ಲೀತಕ** (न०) 1. ಅತಿಮಧುರ. क्लीबृ (अधाष्टर्ये) भावे "क्तः" (३-३-११४)। क्लीतमधाष्टर्यं कलति – कल (क्षेपे) "डः" (३-२-१०१)। "मधुकं क्लीतकं यष्टिमधुकं मधुयष्टिका" अम०। 2. ಹೊಗೆ ಬೀಜ.

**क्लीतकिका ಕ್ಲೀತಕಿಕಾ** (स्त्री०) ನೀಲಿಗಿಡ. क्लीतकमस्त्यस्याः "इनिः" (५-२-११५)। रस्य लत्वम्।

**क्लीतनक ಕ್ಲೀತನಕ** (न०) ಕುರಟಿಗೆ ಗಿಡ.

**क्लीबृ–अधाष्टर्ये** (भ्वा० आत्म० अक० से०)। क्लीबते। चिक्लीबे। अक्लीबिष्ट। ಅಧೃಷ್ಟನಾಗು, ಅಶಕ್ತನಾಗು, ಕಳೆಗುಂದಿದವನಾಗು.

**क्लीब ಕ್ಲೀಬ** (पुन०) 1. ಷಂಡ, ನಪುಂಸಕ, ವೀರ್ಯವಿಲ್ಲದವನು, ಗಂಡಸೂ ಹೆಂಗಸೂ ಅಲ್ಲದ ವ್ಯಕ್ತಿ. क्लीबृ (अधाष्टर्ये) "अच्" (३-१-१३४)। ಯಾವನ ಮೂತ್ರದಲ್ಲಿ ನೊರೆಯಿರುವುದಿಲ್ಲವೋ ಯಾವನ ಮಲವು ನೀರಿನಲ್ಲಿ ಮುಳುಗಿಹೋಗುವುದೋ ಯಾವನ ಜನನೇಂದ್ರಿಯದಲ್ಲಿ ಉನ್ಮಾದ ಮತ್ತು ವೀರ್ಯಗಳಿರುವುದಿಲ್ಲವೋ ಅವನು ನಪುಂಸಕ. "न मूत्रं फेनिलं यस्य विष्ठा चाप्सु निमज्जति। मेढ्रं चोन्मादशुक्राभ्यां हीनः क्लीबः स उच्यते" कात्या०। "नष्टे मृते प्रव्रजिते क्लीबे च पतिते पतौ" परा०।

**ಷಂಡನು ಹದಿನಾಲ್ಕು ವಿಧ:** "चतुर्दशविधः शास्त्रे षण्डो दृष्टो मनीषिभिः। चिकित्स्यश्चाचिकित्स्यश्च तेषामुक्तो विधिः क्रमात्। (1) **निसर्गषण्डो**

(2) ऽनण्डश्च (3) पक्षषण्डस्तथैव च। (4) अभिशापाद्गुरोः (5) रोगात् (6) देवक्रोधात्तथैव च। (7) ईर्ष्याषण्डस्तथा (8) आसेक्यो (9) वातरेता (10) मुखभगः। (11) आक्षेप्ता (12) मोघबीजश्च (13) शालीनः (14) अन्यापतिस्तथा" नारदः। **ಷಂಡತನಕ್ಕೆ ಕಾರಣ:** ಪುರುಷನ ಶುಕ್ರ (ವೀರ್ಯ) ವು ಹೆಚ್ಚಾಗಿದ್ದರೆ ಪುಂಶಿಶುವೂ ಹೆಂಗಸಿನ ಆರ್ತವವು (ರಜಸ್ಸು) ಅಧಿಕವಾಗಿದ್ದರೆ ಸ್ತ್ರೀ ಶಿಶುವೂ ಎರಡೂ ಸಮವಾಗಿದ್ದರೆ ನಪುಂಸಕಶಿಶುವೂ ಜನಿಸುವುವು. "तत्र शुक्रबाहुल्यात् पुमान् आर्तवबाहुल्यात् स्त्री साम्यादुभयोर्नपुंसकम्" सुश्रुत० शारीर० ३-५। 2. ಧೈರ್ಯವಿಲ್ಲದವನು. 3. ಕಾರ್ಯದಲ್ಲಿ ಉತ್ಸಾಹವಿಲ್ಲದವನು. 4. ಶಕ್ತಿಯಿಲ್ಲದವನು, ಪೌರುಷವಿಲ್ಲದವನು. 5. ನಪುಂಸಕಲಿಂಗ, ಶಬ್ದದಲ್ಲಿರುವ ಒಂದು ಧರ್ಮ. ಲಿಂಗವು ಪ್ರಾಕೃತಗುಣಗತವಾದ ಅವಸ್ಥೆಯ ಒಂದು ಧರ್ಮ. ಪ್ರತಿಯೊಂದು ಲಿಂಗವೂ ತ್ರಿಗುಣಪ್ರಕೃತಿಯುಳ್ಳದ್ದಾದುದರಿಂದ ಶಬ್ದಗಳೂ ಗುಣತ್ರಯಾತ್ಮಕಗಳಾದುವು. ಶಬ್ದಗಳು ಆಯಾ ಗುಣಗಳಿಗನುಸಾರವಾಗಿ ಸತ್ತ್ವಗುಣಾಧಿಕ್ಯದಿಂದ ಪುಲ್ಲಿಂಗವೆಂದೂ ರಜೋಗುಣಾಧಿಕ್ಯದಿಂದ ಸ್ತ್ರೀಲಿಂಗವೆಂದೂ ಎರಡೂ ಗುಣಗಳ ಸಾಮ್ಯದಿಂದ ನಪುಂಸಕಲಿಂಗವೆಂದೂ ವ್ಯವಹರಿಸಲ್ಪಡುವುವು. ಆದರೆ ಈ ಲಿಂಗಗಳು ಶಬ್ದನಿಷ್ಠ ಮತ್ತು ಅರ್ಥನಿಷ್ಠಗಳೆಂದು ವೈಯಾಕರಣರಲ್ಲಿ ಭಿನ್ನಾಭಿಪ್ರಾಯವಿದೆ.

**क्लीबता ಕ್ಲೀಬತಾ** (स्त्री०) ನಪುಂಸಕತ್ವ, ನಪುಂಸಕನಾಗಿರುವಿಕೆ. क्लीबस्य भावः "तल्" (५-१-११९)। "त्वः"। **क्लीबत्वम् ಕ್ಲೀಬತ್ವಮ್.**

**क्लेद ಕ್ಲೇದ** (पुं०) 1. ಒದ್ದೆ, ತೇವ. क्लिदू (आर्द्रीभावे) "घञ्" (३-३-१८)। "तदञ्जनक्लेदसभाकुलाक्षं प्रम्लानबीजाङ्कुरकर्णपूरम्" रघु० ७-२७। 2. ದೇಹದೊಳಗಿರುವ ಉಪದ್ರವ. "स तौ कुशलवोन्मृष्टगर्भक्लेदौ तदाख्यया" रघु० १५-३२। 3. ಕೊಳೆತು ಹೋಗುವುದು, ಕೊಳೆತು ನಾರುವುದು. 4. ಸೋರುವುದು. ಜಿನುಗುವುದು.

**क्लेदक ಕ್ಲೇದಕ** (पुं०) 1. ದೇಹದೊಳಗೆ ತೇವವುಂಟುಮಾಡುವ ಶ್ಲೇಷ್ಮ, ಕಫ. क्लेदयति — क्लिदू (आर्द्रीभावे) + णिच् "ण्वुल्" (३-१-१३३)। 2. ದೇಹದೊಳಗಿನ ಹತ್ತು ಅಗ್ನಿಗಳಲ್ಲೊಂದು. **ಹತ್ತು ಜಠರಾಗ್ನಿಗಳು:** (1) भ्राजकः, (2) रञ्जकः, (3) क्लेदकः, (4) स्नेहकः, (5) धारकः, (6) बन्धकः, (7) द्रावकः, (8) व्यापकः, (9) पाचकः ಮತ್ತು (10) श्लेष्मकः। (वि०) 3. ತೇವವುಂಟುಮಾಡುವ (ನೀರು ಮುಂತಾದುದು).

**क्लेदन् ಕ್ಲೇದನ್** (पुं०) ಚಂದ್ರ. क्लिदू (आर्द्रीभावे) "कनिः" (उ० १-१५७)। निपा०।

**क्लेदन ಕ್ಲೇದನ** (पुं०) 1. ತೇವವುಂಟುಮಾಡುವ ದೇಹದೊಳಗಿನ ಶ್ಲೇಷ್ಮ, ಕಫ. क्लेदयति—क्लिदू (आर्द्रीभावे) + णिच् "ल्युः" (३-१-१३४)। **ದೇಹದಲ್ಲಿರುವ ಕಫಗಳು:** (1) क्लेदनः, (2) अवलम्बनः, (3) रसनः, (4) स्नेहनः ಮತ್ತು (5) श्लेष्मणः। **ಇವುಗಳ ಸ್ಥಾನಗಳು:** (ಕ್ರಮವಾಗಿ) (1) आमाशयः, (2) हृदयम्, (3) कण्ठः, (4) शिरः, (5) सन्धयः। "कफस्यैतानि नामानि क्लेदनश्चावलम्बनः। रसनः स्नेहनश्चापि श्लेष्मणः स्थानभेदतः। आमाशयेऽथ हृदये कण्ठे शिरसि सन्धिषु। स्थानेष्वेषु मनुष्याणां श्लेष्मा तिष्ठत्यनुक्रमात्" भावप्र०। (न०) 2. ತೇವಮಾಡುವಿಕೆ, ಒದ್ದೆಮಾಡುವಿಕೆ, ನೆನೆಯಿಸುವುದು. क्लिदू भावे "ल्युट्" (३-३-११५)। 3. ಸೋರುವುದು. ಜಿನುಗುವುದು. (वि०) 4. ತೇವ ಮಾಡುವ, ಒದ್ದೆ ಮಾಡುವ.

**क्लेदु ಕ್ಲೇದು** (पुं०) ಚಂದ್ರ. क्लिदू (आर्द्रीभावे) "उः" (उ० १-१०)।

**क्लेद्य ಕ್ಲೇದ್ಯ** (वि०) ನೆನೆಯಿಸಲು ಶಕ್ಯವಾದ, ತೋಯಿಸಲು ಶಕ್ಯವಾದ. क्लिदू (आर्द्रीभावे) "ण्यत्" (३-१-१२४)। "अच्छेद्योऽयमदाह्योऽयमक्लेद्योऽशोष्य एव च" गीता २-२४।

**क्लेश ಕ್ಲೇಶ** (पुं०) 1. ಕಷ್ಟ, ತೊಂದರೆ, ದುಃಖ. क्लिशू (विबाधने) "घञ्" (३-३-१८)। "यान्ति निर्वहणमस्य संसृतिक्लेशनाटकविडम्बनाविधेः" माघ० १४-६३। 2. ಆಯಾಸ, ಶ್ರಮ, ದಣಿವು. "अह्नाय सा नियमजं क्लममुत्ससर्ज क्लेशः फलेन हि पुनर्नवतां विधत्ते" कुमा० ५-८६। 3. ಸಿಟ್ಟು, ಕೋಪ. 4. ವ್ಯವಸಾಯ. "क्लेशो दुःखेऽपि कोपेऽपि व्यवसायेऽपि च दृश्यते" मेदि०। 5. ಯೋಗಶಾಸ್ತ್ರದಲ್ಲಿ ಉಕ್ತವಾದ ಐದು ವಿಧ ಕ್ಲೇಶಗಳು: (1) अविद्या, (2) अस्मिता, (3) रागः, (4) द्वेषः ಮತ್ತು (5) अभिनिवेशः ಎಂದು ಕ್ಲೇಶವು ಐದು ಪ್ರಕಾರ. ಅನಿತ್ಯವನ್ನು ನಿತ್ಯವೆಂದೂ ಅಶುಚಿಯನ್ನು ಶುಚಿಯೆಂದೂ ದುಃಖವನ್ನು ಸುಖವೆಂದೂ ಅನಾತ್ಮನನ್ನು ಆತ್ಮನೆಂದೂ ತಿಳಿಯುವುದು **ಅವಿದ್ಯೆ.** ಬುದ್ಧಿಪುರುಷರನ್ನು ಒಂದಾಗಿ

ತೀರದುಕೊಂಡು ನಾನು ನನ್ನದು ಎಂಬ ಅಭಿಮಾನ, ಅಹಂಕಾರ ಮಮಕಾರಗಳು **ಅಸ್ಮಿತೆ.** ಮನುಷ್ಯನ ಪ್ರವೃತ್ತಿಗೆ ಕಾರಣವಾದ ಆಶೆಯು **ರಾಗ**ವೆನಿಸುವುದು. ನಿವೃತ್ತಿಗೆ ಕಾರಣವಾದ ಜಿಹಾಸೆಯು **ದ್ವೇಷ.** ಜರಾಮರಣ ಮೊದಲಾದ ಭಯವು **ಅಭಿನಿವೇಶ.** "अविद्यास्मितारागद्वेषाभिनिवेशाः पञ्च क्लेशाः" पा० यो० सू०। ಕ್ಲೇಶಕ್ಕೆ ಕಾರಣವಾದುದರಿಂದ ಇವೆಲ್ಲವೂ ಕ್ಲೇಶಗಳು. "क्लेशकर्मफलभोगवर्जितं पुंविशेषममुमीश्वरं विदुः" माघ० १४-६२।

**क्लेशक ಕ್ಲೇಶಕ** (वि०) 1. ತೊಂದರೆಕೊಡುವ, ಕಷ್ಟವನ್ನುಂಟುಮಾಡುವ. 2. ಆಯಾಸವನ್ನುಂಟುಮಾಡುವ. क्लिशू (विबाधने) "वुञ्" (३-२-१४६)।

**क्लेशक्षम ಕ್ಲೇಶಕ್ಷಮ** (वि०) ಕಷ್ಟವನ್ನು ಸಹಿಸಿಕೊಳ್ಳತಕ್ಕವನು. क्लेशं क्षमते।

**क्लेशद ಕ್ಲೇಶದ** (वि०) 1. ಕಷ್ಟವನ್ನು ಕೊಡುವ, ತೊಂದರೆಯನ್ನುಂಟುಮಾಡುವ. क्लेशं ददाति — डु दाञ् (दाने) "कः" (३-२-३)। 2. ಆಯಾಸವನ್ನುಂಟುಮಾಡುವ.

**क्लेशनाशन ಕ್ಲೇಶನಾಶನ** (न०) 1. ಕಷ್ಟವನ್ನು ಪರಿಹರಿಸುವುದು. 2. ಆಯಾಸವನ್ನು ಹೋಗಲಾಡಿಸುವುದು. क्लेशस्य नाशनम्। (वि०) 3. ಕಷ್ಟವನ್ನು ಪರಿಹರಿಸುವ. 4. ಆಯಾಸವನ್ನು ಹೋಗಲಾಡಿಸುವ. क्लेशं नाशयति— णश (अदर्शने) + णिच् "ल्युः" (३-१-१३४)।

**क्लेशभाज् ಕ್ಲೇಶಭಾಜ್** (वि०) 1. ಕಷ್ಟವನ್ನು ಹೊಂದುವವನು. 2. ಆಯಾಸಪಡುವವನು. क्लेशं भजते — भज (सेवायाम्) "ण्विः" (३-२-६२)।

**क्लेशयत् ಕ್ಲೇಶಯತ್** (वि०) 1. ಕಷ್ಟಪಡಿಸುವ. 2. ಆಯಾಸಪಡಿಸುವ. क्लिशू (विबाधने) + णिच् "शतृ" (३-२-१२४)।

**क्लेशापह ಕ್ಲೇಶಾಪಹ** (वि०) 1. ಕಷ್ಟವನ್ನು ಹೋಗಲಾಡಿಸುವವನು, ತೊಂದರೆಯನ್ನು ಪರಿಹರಿಸುವವನು. क्लेशमपहन्ति — हन (हिंसागत्योः) "डः" (३-२-५०)। 2. ಆಯಾಸವನ್ನು ಪರಿಹರಿಸುವ. क्लेशापहः पुत्रः।

**क्लेशित ಕ್ಲೇಶಿತ** (वि०) 1. ತೊಂದರೆಪಡಿಸಲ್ಪಟ್ಟ, ಪೀಡಿಸಲ್ಪಟ್ಟ. क्लिशू (विबाधने) + णिच् "क्तः" (३-२-१०२)। 2. ಆಯಾಸಪಡಿಸಲ್ಪಟ್ಟ.

**क्लेशितृ ಕ್ಲೇಶಿತೃ** (वि०) 1. ಕಷ್ಟವನ್ನುಂಟುಮಾಡುವ, ತೊಂದರೆಪಡಿಸುವ, ನೋಯಿಸುವ. क्लिशू (विबाधने) "तृच्" (३-१-१३३)। 2. ಆಯಾಸವನ್ನುಂಟುಮಾಡುವ, ಶ್ರಮವನ್ನು ಕೊಡುವ. स्त्रियाम् "ङीप्" (४-१-५)। **क्लेशित्री ಕ್ಲೇಶಿತ್ರೀ.**

**क्लेशिन् ಕ್ಲೇಶಿನ್** (वि०) ಕ್ಲೇಶವುಳ್ಳ, ತೊಂದರೆಯುಳ್ಳ. क्लेशोऽस्यास्ति "इनिः" (५-२-११५)।

**क्लैतकिक ಕ್ಲೈತಕಿಕ** (न०) ಅತಿಮಧುರದಿಂದ ತಯಾರಿಸಲ್ಪಟ್ಟ ಮದ್ಯ. क्लीतकेन निर्वृत्तम् "ठञ्" (५-१-७९)।

**क्लैब्य ಕ್ಲೈಬ್ಯ** (न०) 1. ನಪುಂಸಕತನ. 2. ಅಧಾರ್ಷ್ಟ್ಯ, ಧೈರ್ಯವಿಲ್ಲದಿರುವುದು. 3. ಅಸಾಮರ್ಥ್ಯ, ಪೌರುಷವಿಲ್ಲದಿರುವುದು. क्लीबस्य भावः "ष्यञ्" (५-१-१२४)। "क्लैब्यं मा स्म गमः पार्थ नैतत्त्वय्युपपद्यते। क्षुद्रं हृदयदौर्बल्यं त्यक्त्वोत्तिष्ठ परन्तप" गीता २-३। 4. ನಪುಂಸಕಲಿಂಗ.

**क्लोमन् ಕ್ಲೋಮನ್** (न०) ಹೊಟ್ಟೆಯೊಳಗಿರುವ ಜಲಾಶಯ, ಮೂತ್ರಕೋಶ. क्लवते—क्लुङ् (गतौ) "मनिन्" (उ० ४-१४४)।

**क्व ಕ್ವ** (अव्य०) ಎಲ್ಲಿ ? ಯಾವ ಜಾಗದಲ್ಲಿ ? ಯಾರಲ್ಲಿ ? ಯಾವುದರಲ್ಲಿ ? किम् "अत्" (५-३-१२)। क्वादेशः (७-२-१०५)। "क्वास्ते दुर्योधनोऽसौ कथयत न रुषा द्रष्टुमभ्यागतौ स्वः" वेणी० ५-२६। ಎರಡು ವಸ್ತುಗಳಿಗಿರುವ ಬಹಳ ಅಂತರವನ್ನು ಹೇಳುವ ಮತ್ತು ಅಸಂಭವವಾದ ಅರ್ಥಗಳನ್ನು ಹೇಳುವ ವಾಕ್ಯಗಳಲ್ಲಿ ಎರಡು "क्व" ಶಬ್ದಗಳು ಪ್ರಯೋಗಿಸಲ್ಪಡುವುವು. "क्व सूर्यप्रभवो वंशः क्व चाल्पविषया मतिः" रघु० १-२। "क्व वयं क्व परोक्षमन्मथो मृगशावैः सममेधितो जनः" शाकु० २-१८। "क्व" ಶಬ್ದಕ್ಕೆ चन, चित् ಗಳು ಸೇರಿದರೆ ಕೆಲವು ಕಡೆ, ಯಾವುದೋ ಒಂದು ಕಡೆ ಮುಂತಾದ ಅನಿರ್ದಿಷ್ಟವಾದ ಅರ್ಥವನ್ನು ಕೊಡುವುವು. **क्वचन ಕ್ವಚನ.** ಯಾವುದೋ ಒಂದು ಕಡೆ, ಒಂದು ಜಾಗದಲ್ಲಿ. "भ्रमणरयविकीर्णभासा खगेन क्वचन पतनयोग्यं देशमन्विष्यताधः" नैष० २-१०८। **क्वचित् ಕ್ವಚಿತ್.** ಕೆಲವು ಕಡೆಯಲ್ಲಿ, ಕೆಲವು ಜಾಗದಲ್ಲಿ, "क्वचित् पथा सञ्चरते सुराणां क्वचित् घनानां पततां क्वचिच्च" रघु० १३-१९।

**क्वङ्गु ಕ್ವಂಗು** (पु०) ನವಣೆಯೆಂಬ ಒಂದು ಧಾನ್ಯ. "कङ्गुस्तु कङ्गुनी क्वङ्गुः प्रियङ्गुः पीततण्डुला" अभि० चि०।

**क्वण — शब्दे** (भ्वा० पर० अक० से०)। क्वणति। चक्वाण। क्वणिता। क्वणिष्यति। क्वणतु। अक्वणीत्, अक्वाणीत्। ಇತ್ಯಾದಿ, ಶಬ್ದಮಾಡು, ಸದ್ದುಮಾಡು.

**भावे** :—क्वण्यते। चक्वणे। क्वणिता। क्वणिष्यते। क्वण्यताम्। ಇತ್ಯಾದಿ.

**णिचि** :—क्वाणयति, –ते। क्वाणयां चकार, –चक्रे। –बभूव –आस। क्वाणयिता। क्वाणयिष्यति –ते। क्वण्यतु, –ताम्। ಇತ್ಯಾದಿ.

**कृत्सु** :—क्वणितव्यम्। क्वणनीयम्। क्वण्यम्। क्वणितः। क्वणितवान्। क्वणन्, क्वणन्ती। क्वणितुम्। क्वणितम्। क्वणनम्। क्वणित्वा। प्रक्वण्य। "दुःसहा ही परिक्षिप्ताः क्वणद्भिरलिगाथकैः" भट्टि० ६-८४।

**क्वण ಕ್ವಣ** (पुं०) 1. ಆಭರಣಗಳ ಶಬ್ದ, ಒಡವೆಗಳ ಸದ್ದು. क्वण (शब्दे) वा "अप्" (३-३-६५)। पक्षे "घञ्" (३-३-१८)। **क्वाणः ಕ್ವಾಣಃ.** "भूषणानां तु शिञ्जितम्। निक्वाणो निक्वणः क्वाणः क्वणः क्वणनमित्यपि" अम०। 2. ಸದ್ದು, ಶಬ್ದ. (वि०) 3. ಶಬ್ದಮಾಡುವ, ಸದ್ದುಮಾಡುವ.

**क्वणत् ಕ್ವಣತ್** (वि०) ಶಬ್ದಮಾಡುತ್ತಿರುವ, ಸದ್ದುಮಾಡುತ್ತಿರುವ. क्वण (शब्दे) "शतृ" (३-२-१२४)। "प्रस्थं हिमाद्रेर्मृगनाभिगन्धि किञ्चित्क्वणत्किन्नरमध्युवास" कुमा० १-५४। स्त्रियाम् "ङीप्" (४-१-६)। **क्वणन्ती ಕ್ವಣಂತೀ.**

**क्वणन ಕ್ವಣನ** (पुं०) 1. ಸಣ್ಣ ಮಡಕೆ, ಚಿಕ್ಕ ಮಣ್ಣಿನ ಪಾತ್ರೆ. क्वण (शब्दे) कर्त० "ल्युः" (३-१-१३४)। "क्वणनो हण्डिकासुतः" त्रिकाण्ड०। 2. ಶಬ್ದ, ಸದ್ದು. क्वण भावे "ल्युट्" (३-१-११५)। 3. ತಂತೀವಾದ್ಯದ ಶಬ್ದ. 4. ಆಭರಣಗಳ ಶಬ್ದ, ಒಡವೆಗಳ ಸದ್ದು. 5. ವೀಣೆ ಮೊದಲಾದ ತಂತೀವಾದ್ಯಗಳ ಶಬ್ದ.

**क्वणित ಕ್ವಣಿತ** (न०) 1. ಶಬ್ದ, ಸದ್ದು. क्वण (शब्दे) भावे "क्तः" (३-३-११४)। 2. ವೀಣೆ ಮೊದಲಾದ ತಂತೀವಾದ್ಯಗಳ ಟಂಕಾರ, ತಂತಿಯ ಶಬ್ದ. "रक्तवैणिकहताधरतन्त्रीमण्डलक्वणितचारु चुकूजे" माघ० १०-६४। 3. ಹೆಂಗಸರ ಸುರತಕಾಲದ ಮಾತು. "अनर्थकैरजनि विदग्धकामिनीरतान्तरक्वणितविलासकौशलैः" माघ० १७-३३। (वि०) 4. ಶಬ್ದಮಾಡಿದ, ಸದ್ದುಮಾಡಿದ. क्वण कर्त० "क्तः" (३-४-७२)।

**क्वत्य ಕ್ವತ್ಯ** (वि०) ಎಲ್ಲಿ ಇರುವುದು ? ಎಲ್ಲಿ ಉಂಟಾದುದು ? ಯಾರಲ್ಲಿ ಇರುವುದು ? ಯಾರಲ್ಲಿ ಉಂಟಾದುದು ? क्व "त्यप्" (४-२-१०४)।

**क्वथे – निष्पाके** (भ्वा० पर० सक० से०)। **क्वथति।** चक्वाथ। क्वथिता। क्वथिष्यति। क्वथतु। अक्वथत्। क्वथेत्। क्वथ्यात्। अक्वथीत्। ಇತ್ಯಾದಿ. 1. ಕುದಿಯಿಸು, ಮರಳಿಸು. 2. ಬೇಯಿಸು.

**कर्मणि** :—क्वथ्यते। चक्वथे। ಇತ್ಯಾದಿ.

**णिचि** :—क्वाथयति, –ते। ಇತ್ಯಾದಿ.

**क्वथन ಕ್ವಥನ** (न०) 1. ಬೇಯಿಸುವುದು. 2. ಕುದಿಯಿಸುವುದು, ಮರಳಿಸುವುದು. क्वथे (निष्पाके) भावे "ल्युट्" (३-३-११५)। (वि०) 3. ಕುದಿಯಿಸುವವನು. 4. ಬೇಯಿಸುವವನು. क्वथे कर्त० "ल्युः" (३-१-१३४)।

**क्वथित ಕ್ವಥಿತ** (वि०) 1. ಕುದಿಯಿಸಲ್ಪಟ್ಟ. 2. ಬೇಯಿಸಲ್ಪಟ್ಟ, ಸುಡಲ್ಪಟ್ಟ. क्वथे (निष्पाके) "क्तः" (३-२-१०२)। "प्रियावियोगक्वथितादिवैलाच्चन्द्राच्च राहुग्रहपीडितात्ते" नैष० १०-२२।

**क्वाण ಕ್ವಾಣ** (पुं०) "क्वण" ಶಬ್ದದ ಅರ್ಥ. क्वण (शब्दे) "घञ्" (३-३-१८)।

**क्वाथ ಕ್ವಾಥ** (पुं०) ಕಷಾಯ, ಮರಳಿಸಿ ಇಳಿಸಿದ ಘಟ್ಟ. क्वथे (निष्पाके) वा "णः" (३-१-१४०)। पक्षे "अच्" (३-१-१३४)। **क्वथः ಕ್ವಥಃ.**

**क्वाथयितव्य ಕ್ವಾಥಯಿತವ್ಯ** (वि०) 1. ಕಾಯಿಸಲ್ಪಡಬೇಕಾದ. 2. ಕುದಿಯಿಸಲ್ಪಡಬೇಕಾದ. 3. ಬೇಯಿಸಲ್ಪಡಬೇಕಾದ. क्वथे (निष्पाके) + णिच् "तव्यः" (३-१-९६)। "अनीयर्" (३-१-९६)। **क्वाथनीयः ಕ್ವಾಥನೀಯಃ.**

**क्वाथ्यमान ಕ್ವಾಥ್ಯಮಾನ** (वि०) ಕುದಿಯಿಸಲ್ಪಡುತ್ತಿರುವ. क्वथे (निष्पाके) + णिच् कर्म० "शानच्" (३-२-१२४)। "जलाशयेषु तप्तेषु क्वाथ्यमानेषु वह्निना" भा० आदि० २५२-९।

**क्ष ಕ್ಷ** (पुं०) 1. ವಿಷ್ಣು, ನಾರಸಿಂಹ. 2. ರಾಕ್ಷಸ. 3. ಪ್ರಳಯ, ಜಗತ್ತಿನ ನಾಶ. 4. ಭೂಮಿ, ಕ್ಷೇತ್ರ. 5. ಕ್ಷೇತ್ರಪಾಲ, ರೈತ. 6. ವಿದ್ಯುತ್ತು, ಮಿಂಚು. 7. ನಾಶ. "क्षः संवर्ते राक्षसे च नारसिंहे च विद्युति। क्षेत्रे नाशे क्षेत्रपाले" मेदि०। 8. ವಕ್ಷಃಸ್ಥಲ, ಎದೆ. 9. ವ್ಯಾಕರಣ ಶಾಸ್ತ್ರ. "क्षः क्षेत्रे वक्षसि प्रोक्तो बुधैः क्षः शब्दशासने" एका०।

**क्षण ಕ್ಷಣ** (पुं०) 1. ಉತ್ಸವ, ಹಬ್ಬ, ಸಂತೋಷದ ಕಾಲ. क्षणोति दुःखम्–क्षणु (हिंसायाम्) "अच्" (३-१-१३४)। "क्षणं क्षणोत्क्षिप्तगजेन्द्रकृत्तिना स्फुटोपमं भूतिसितेन

शम्भुना" माघ० १-४। 2. ಒಂದು ಮುಹೂರ್ತದ ಹನ್ನೆರಡನೆಯ ಒಂದು ಭಾಗ, ನಾಲ್ಕು ನಿಮೇಷಗಳ ಕಾಲ.

**ಕಾಲಮಾನ:**

| | |
|---|---|
| क्षणद्वयं | १ लव: |
| लवद्वयं | १ निमेष: |
| अष्टादश (१८) निमेषा: | १ काष्ठा |
| त्रिंशत् (३०) काष्ठा: | १ कला |
| त्रिंशत् (३०) कला: | १ क्षण: |
| द्वादश (१२) क्षणा: | १ मूहूर्त: |
| त्रिंशत् (३०) मुहूर्ता: | १ अहोरात्र: (एकं दिनम्) |
| ದಿವಸದ 1/30 ಭಾಗ | 1 ಮುಹೂರ್ತ |
| ಮುಹೂರ್ತದ 1/12 ಭಾಗ | 1 ಕ್ಷಣ |
| ಕ್ಷಣದ 1/30 ಭಾಗ | 1 ಕಲೆ |
| ಕಲೆಯ 1/30 ಭಾಗ | 1 ಕಾಷ್ಠೆ |
| ಕಾಷ್ಠೆಯ 1/18 ಭಾಗ | 1 ನಿಮೇಷ |
| ನಿಮೇಷದ 1/2 ಭಾಗ | 1 ಲವ |
| ಲವದ 1/2 ಭಾಗ | 1 ಕ್ಷಣ. |

"इति विज्ञापितो राज्ञा ध्यानस्तिमितलोचन:। क्षणमात्रमृषिस्तस्थौ सुप्तमीन इव ह्रद:" रघु० १-७३। 3. ಬಿಡುವು, ವಿರಾಮ, ಪುರಸತ್ತು, ಅವಕಾಶ. "अहमपि लब्धक्षण: स्वगेहं गच्छामि" माल० १। 4. ಪ್ರಶಸ್ತವಾದ ಮುಹೂರ್ತ. 5. ಕೆಲಸವಿಲ್ಲದಿರುವಿಕೆ, ಯಾವ ಕಾರ್ಯವೂ ಇಲ್ಲದಿರುವಿಕೆ. 6. ಮಧ್ಯಭಾಗ. 7. ಪರತಂತ್ರತೆ, ಇತರರಿಗೆ ಅಧೀನನಾಗಿರುವಿಕೆ. 8. ನಿಮೇಷ ಕಾಲದ ನಾಲ್ಕನೆಯ ಒಂದು ಭಾಗ. 9. ಪರಮಾಣು. 10. ಒಂದು ಪರ್ವಕಾಲ. 11. ಒಂದು ಮುಹೂರ್ತ ಕಾಲ. "तदाकुलोऽसौ कुलदैवतस्य स्मृतिं ततान क्षणमेकतान:" नैष० १०-६९। "क्षण: कालविशेषे स्यात्पर्वण्यवसरे महे। व्यापारविकलत्वे च परतन्त्रत्वमध्ययो:" हेम०। (अव्य०) 12. ಒಂದು ಸಮಯದಲ್ಲಿ, ಒಂದು ಮುಹೂರ್ತಕಾಲದಲ್ಲಿ. "संरम्भं मैथिलीहास: क्षणसौम्यां निनाय ताम्" रघु० १२-३६।

**क्षणक्षण ಕ್ಷಣಕ್ಷಣ** (अव्य०) ಕ್ಷಣಕಾಲ ಮಾತ್ರ. "क्षणमात्रे क्षणक्षणम्" त्रिकाण्ड०।

**क्षणक्षेप ಕ್ಷಣಕ್ಷೇಪ** (पुं०) ಕ್ಷಣಕಾಲ ವಿಳಂಬ, ಕ್ಷಣಕಾಲ ಸಾವಕಾಶ. क्षणस्य क्षेप:। "प्रस्थानकालक्षमवेषकल्पनाकृतक्षणक्षेपमदैक्षताच्युतम्" माघ० १२-१।

**क्षणद ಕ್ಷಣದ** (पुं०) 1. ದೈವಜ್ಞ, ಜೋಯಿಸ, ಮೌಹೂರ್ತಿಕ. क्षणं यात्रादिमुहूर्तं ददाति — डु दाञ् (दाने) "क:" (३-२-३)। (न०) 2. ಜಲ, ನೀರು. (स्त्री०) **–दा –ದಾ.** 3. ರಾತ್ರಿ. क्षणमवकाशं ददाति। ವಿಶ್ರಾಂತಿಗಾಗಿ ವಿರಾಮಕೊಡುವುದರಿಂದ ರಾತ್ರಿಗೆ ಈ ಹೆಸರು. "क्षणदं तोये क्षणदो गणके क्षणदा निशि" हेम०। "विशदाश्मकूटघटिता: क्षपाकृत: क्षणदासु यत्र च रुचैकतां गता:" माघ० १३-५३।

**क्षणदाकर ಕ್ಷಣದಾಕರ** (पुं०) ಚಂದ್ರ. क्षणदां करोति— डु कृञ् (करणे) "ट:" (३-२-२०)। "उदिते तत: सपदि लब्धपदै: क्षणदाकरेऽनुपदिभि: प्रयये" माघ० ९-७०।

**क्षणदाचर ಕ್ಷಣದಾಚರ** (पुं०) ರಾತ್ರಿಯಲ್ಲಿ ಸಂಚರಿಸುವ ರಾಕ್ಷಸ. क्षणदायां चरति — चर (गतिभक्षणयो:) "ट:" (३-२-१६)। स्त्रियाम् "ङीप्" (४-१-१५)। **–चरी –ಚರೀ.**

**क्षणदान्ध्य ಕ್ಷಣದಾಂಧ್ಯ** (न०) ಇರುಳುಗಣ್ಣು, ರಾತ್ರಿ ಕಾಣದಿರುವ ಕಣ್ಣು. क्षणदायामान्ध्यं यस्य।

**क्षणद्युति ಕ್ಷಣದ್ಯುತಿ –प्रभा –ಪ್ರಭಾ** (स्त्री०) ವಿದ್ಯುತ್ತು, ಮಿಂಚು. क्षणं द्युति: प्रभा वा अस्या:।

**क्षणन ಕ್ಷಣನ** (न०) ಹನನ, ವಧೆ, ಕೊಲ್ಲುವುದು. क्षणु (हिंसायाम्) "ल्युट्" (३-३-११५)।

**क्षणभङ्गुर ಕ್ಷಣಭಂಗುರ** (वि०) ಕ್ಷಣಕಾಲದಲ್ಲಿ ನಾಶವಾಗುವ, ಶಾಶ್ವತವಲ್ಲದ. क्षणात् भङ्गुर:। "संदृश्य क्षणभङ्गुरं तदखिलं धन्यस्तु संन्यस्यति" भर्तृ० ३-२०।

**क्षणमात्र ಕ್ಷಣಮಾತ್ರ** (न०) 1. ಒಂದು ಕ್ಷಣಕಾಲ. "विंशतिविषवीक्षणानां क्षणमात्रं पात्रं भवति" चं० रा०। (अव्य०)2. ಒಂದು ಕ್ಷಣಕಾಲದಲ್ಲಿ. "क्षणमात्रमृषिस्तस्थौ सुप्तमीन इव ह्रद:" रघु० १-७३।

**क्षणरामी ಕ್ಷಣರಾಮೀ** (पुं०) 1. ಪಾರಿವಾಳದ ಹಕ್ಕಿ. 2. ಗುಬ್ಬಚ್ಚಿ. क्षणात् परं रमते।

**क्षणशस् ಕ್ಷಣಶಸ್** (अव्य०) ಕ್ಷಣಕ್ಷಣವಾಗಿ, ಒಂದೊಂದು ಕ್ಷಣದಲ್ಲಿಯೂ. क्षणं क्षणमर्जयति "शस्" (५-४-४३)। "क्षणश: कणशश्चैव विद्यामर्थं च साधयेत्"।

**क्षणान्तर ಕ್ಷಣಾಂತರ** (न०)1. ಒಂದು ಕ್ಷಣಕಾಲದ ಮಧ್ಯಭಾಗ. क्षणस्य अन्तरम्। 2. ಬೇರೆ ಕ್ಷಣ, ಮತ್ತೊಂದು ಕ್ಷಣ. अन्यत् क्षणम्। **–अन्तरे –ಅಂತರೇ.** (अव्य०) ಬೇರೆಕ್ಷಣದಲ್ಲಿ, ಉತ್ತರಕ್ಷಣದಲ್ಲಿ, ಕೊಂಚ ಕಾಲಾನಂತರ.

**क्षणिक** ಕ್ಷಣಿಕ (वि०) 1. ಕ್ಷಣಮಾತ್ರವಿರುವ, ಕ್ಷಣಕಾಲ ಮಾತ್ರವಿರುವ ಸ್ವಭಾವದ, ಅಸ್ಥಿರವಾದ, ಶಾಶ್ವತವಲ್ಲದ. क्षणोऽस्यास्ति "ठन्" (५-२-११५)। "स्वप्नेषु क्षणिकसमागमोत्सवैश्च" रघु० ८-९२। (स्त्री०) –का – ಕಾ. 2. ವಿದ್ಯುತ್ತು, ಮಿಂಚು.

**क्षणिकता** ಕ್ಷಣಿಕತಾ (स्त्री०) ಒಂದು ಕ್ಷಣಕಾಲ ಮಾತ್ರ ಇರುವಿಕೆ, ನಾಲ್ಕು ನಿಮೇಷಗಳಕಾಲ ಮಾತ್ರವಿರುವಿಕೆ. क्षणिकस्य भावः "तल्" (५-१-११९)। "एतद्दलैः क्षणिकतामपि भूखुराग्रस्पर्शायुषां रयरसादसमापयद्भिः" नष० ११-१२७।

**क्षणित** ಕ್ಷಣಿತ (वि०) ಒಂದು ಕ್ಷಣಕಾಲವುಂಟಾಗಿರುವ, ಕ್ಷಣಕಾಲ ಅವಕಾಶ ದೊರೆತಿರುವ. क्षणोऽस्य सञ्जातः "इतच्" (५-२-३६)।

**क्षणिन्** ಕ್ಷಣಿನ್ (वि०) 1. ಒಂದು ಕ್ಷಣಕಾಲವುಳ್ಳ. क्षणोऽस्यास्ति "इनिः" (५-२-११५)। 2. ಅಸ್ಥಿರವಾದ, ಅಶಾಶ್ವತವಾದ. 3. ವಿಶ್ರಾಂತಿಯುಳ್ಳ. 4. ಸಂತೋಷವುಳ್ಳ. "तं विश्रान्तं शुभे देशे क्षणिनं कल्यमच्युतम्" भा० सभा० १३-५४। स्त्रियाम् "ङीप्" (४-१-५)। **क्षणिनी** ಕ್ಷಣಿನೀ. 5. ರಾತ್ರಿ.

**क्षणु – हिंसायाम्** (तना० उभ० सक० से०)। क्षणोति, क्षणुते। चक्षाण, चक्षणे। क्षणिता। क्षणिष्यति, –ते। क्षणोतु, क्षणुताम्। ಇತ್ಯಾದಿ. ಹಿಂಸಿಸು, ಪೀಡಿಸು.

**क्षत्** ಕ್ಷತ್ (स्त्री०) 1. ಹಿಂಸೆ, ಪೀಡೆ, ಬಾಧೆ. 2. ವಧೆ, ಕೊಲ್ಲುವುದು. 3. ಭೇದಿಸುವುದು, ಒಡೆಯುವುದು, ಸೀಳುವುದು. क्षणु (हिंसायाम्) "क्विप्" (वा० ३-३-९४)। 4. ನಾಶ.

**क्षत** ಕ್ಷತ (न०) 1. ಗಾಯ. क्षणु (हिंसायाम्) "क्तः" (३-४-७२)। "सद्यो वसन्तेन समागतानां नखक्षतानीव वनस्थलीनाम्" कुमा० ३-२९। 2. ಉಜ್ಜುವುದು, ತಿಕ್ಕುವುದು, ಗೀರುವುದು. "अजस्रमास्फालितवल्लकीगुणक्षतोज्ज्वलाङ्गुष्ठनखांशुभिन्नया" माघ० १-९। 3. ನಾಶ. "क्षतात् किल त्रायत इत्युदग्रः क्षत्रस्य शब्दो भुवनेषु रूढः" रघु० २-५३। 4. ಪೀಡೆ, ಹಿಂಸೆ. 5. ಏಟು, ಹೊಡೆತ. 6. ಭೇದಿಸುವುದು, ಒಡೆಯುವುದು. क्षणु भावे "क्तः" (३-३-११४)। (वि०) 7. ಭೇದಿಸಲ್ಪಟ್ಟ, ಒಡೆಯಲ್ಪಟ್ಟ. "नलिनीं क्षतसेतुबन्धनो जलसंघात इवासि विद्रुतः" कुमा० ४-६। 8. ನಾಶಪಡಿಸಲ್ಪಟ್ಟ. "रुद्राणामपि मूर्धानः क्षतहुंकारशंसिनः" कुमा० २-२६। 9. ಪೀಡಿಸಲ್ಪಟ್ಟ, ಹಿಂಸಿಸಲ್ಪಟ್ಟ. 10. ಗಾಯಗೊಳಿಸಲ್ಪಟ್ಟ. क्षणु कर्म० "क्तः" (३-२-१०२)। "त्याज्यो दुष्टः प्रियोऽप्यासीदङ्गुलीवोरगक्षता" रघु० १-२८। 11. ಹೊಡೆಯಲ್ಪಟ್ಟ. "रघोरवष्टम्भमयेन पत्रिणा हृदि क्षतो गोत्रभिदप्यमर्षणः" रघु० ३-५३।

**क्षतकास** ಕ್ಷತಕಾಸ (पुं०) ಐದು ವಿಧ ಕೆಮ್ಮಲು ರೋಗಗಳಲ್ಲೊಂದು. क्षतात् कासः। [ವಿವರಕ್ಕೆ "कास" ಪದದಲ್ಲಿ ನೋಡಿ.]

**क्षतज** ಕ್ಷತಜ (न०) 1. ರಕ್ತ, ನೆತ್ತರು. क्षताज्जायते— जनी (प्रादुर्भावे) "डः" (३-१-९८)। "स च्छिन्नमूलः क्षतजेन रेणुस्तस्योपरिष्टात्पवनावधूतः" रघु० ७-४३। 2. ಒಂದು ವಿಧ ಕಾಸರೋಗ. "सवातपित्तप्रभवः कफाच्च क्षतात्तथान्यः क्षयजोऽपरश्च। पञ्चप्रकारः कथितो भिषग्भिः विवर्धितो यक्ष्मविकारकृत् स्यात्" सुश्रुत० उत्तरतं ५२-६। 3. ಕೀವು. (वि०) 4. ಗಾಯದಿಂದ ಉಂಟಾದ.

**क्षतयोनि** ಕ್ಷತಯೋನಿ (स्त्री०) ಪ್ರೌಢೆಯಾದ ಹೆಂಗಸು, ಕನ್ಯಾವಸ್ಥೆಯನ್ನು ಮೀರಿದವಳು, ಋತುಮತಿಯಾದವಳು. क्षता योनिर्यस्य। "सा चेदक्षतयोनिः स्यात् गतप्रत्यागतापि वा" मनु० ९-१७६।

**क्षतवृत्ति** ಕ್ಷತವೃತ್ತಿ (स्त्री०) 1. ಬಡತನ, ದಾರಿದ್ರ್ಯ, ದುರವಸ್ಥೆ, ಯಾವ ಆಶ್ರಯವೂ ಇಲ್ಲದಿರುವಿಕೆ. क्षता वृत्तिः। (वि०) 2. ದುರವಸ್ಥೆಯಲ್ಲಿರುವ, ಜೀವನೋಪಾಯವಿಲ್ಲದಿರುವ. क्षता वृत्तिर्यस्य।

**क्षतव्रत** ಕ್ಷತವ್ರತ (वि०) ಅವಕೀರ್ಣಿ, ವ್ರತವನ್ನು ಭಂಗಪಡಿಸಿಕೊಂಡವನು. क्षतं व्रतं यस्य।

**क्षतारि** ಕ್ಷತಾರಿ (वि०) ಶತ್ರುಗಳಿಲ್ಲದವನು, ನಾಶವಾದ ಶತ್ರುಗಳುಳ್ಳವನು. क्षताः अरयो यस्य।

**क्षति** ಕ್ಷತಿ (स्त्री०) 1. ನಾಶ, ಹಾನಿ. क्षणु (हिंसायाम्) "क्तिन्" (३-३-९४)। "हयानां न क्षतिः काचित् न रथस्य न मातलेः" भा० वन० १७२-१९। 2. ಗಾಯ. "द्विषां क्षतीर्याः प्रथमे शिलीमुखाः विभिद्य देहावरणानि चक्रिरे" किरा० १४-५५। 3. ಅಪಚಯ, ಕಡಮೆ. "अमी च कथमादित्याः प्रतापक्षतिशीतलाः" कुमा० २-२४। 4. ಕತ್ತರಿಸುವುದು, ಒಡೆಯುವುದು, ಬೇರ್ಪಡಿಸುವುದು. 5. ಸೀಳುವುದು. "विस्रब्धं क्रियतां वराहततिभिः मुस्ताक्षतिः पल्वले" शाकु० २-६।

**क्षतिन् ಕ್ಷತಿನ್** (वि०) ಗಾಯಗೊಂಡವನು. क्षतमस्यास्ति "इनिः" (५-२-११५)।

**क्षतिमत् ಕ್ಷತಿಮತ್** (वि०) ಗಾಯಗೊಂಡವನು. क्षतिरस्यास्ति "मतुप्" (५-२-९४)। "असृग्जनोऽस्त्र-क्षतिमानवमज्जवसादनम्" माघ० १९-७८। स्त्रियाम् "ङीप्" (४-१-६)। **-मती -ಮತೀ.**

**क्षतोदर ಕ್ಷತೋದರ** (न०) ಅಜೀರ್ಣಾದಿ ದೋಷಗಳಿಂದ ಉಂಟಾದ ಹೊಟ್ಟೆಯೊಳಗಿನ ರೋಗ, ಆಮಶಂಕೆ, ರಕ್ತಾತಿಸಾರ. क्षतात् उदरम् उदररोगः।

**क्षत्तृ ಕ್ಷತ್ತೃ** (पुं०) 1. ಬ್ರಹ್ಮ, ಪಿತಾಮಹ. 2. ಸೂತ, ಸಾರಥಿ. क्षद (सौत्रधातुः) "तृच्" (उ० २-९४)। 3. ದಾಸೀಪುತ್ರ, ಸೇವಕಿಯ ಮಗ, ವಿದುರ. "ततः प्रीतमनाः क्षत्ता धृतराष्ट्रं विशांपते" भा० आदि० २००-१७। 4. ದ್ವಾರಪಾಲಕ. 5. ಸೇವಕ, ಆಳು. 6. ಶೂದ್ರನಿಂದ ಕ್ಷತ್ರಿಯಹೆಂಗಸಿನಲ್ಲಿ ಹುಟ್ಟಿದವನು. "क्षत्ता शूद्रात् क्षत्रियाजे प्रतीहारे च सारथौ। भुजिष्यातनयेऽपि स्यान्नियुक्तवेधसोः पुमान्" मेदि०। 7. ಶೂದ್ರನಿಂದ ವೈಶ್ಯಹೆಂಗಸಿನಲ್ಲಿ ಹುಟ್ಟಿದವನು, ಆಯೋಗವ. "क्षत्तार्याशूद्रयोः सुतः" अम०। "शूद्रादायोगवः क्षत्ता" मनु० १०-१२। 8. ಮತ್ಸ್ಯ, ಮೀನು. (वि०) 9. ಕತ್ತರಿಸುವವನು, ತುಂಡುಮಾಡುವವನು.

**क्षत्र ಕ್ಷತ್ರ** (पुंन०) 1. ಕ್ಷತ್ರಿಯ. क्षतात् त्रायते — त्रैङ् (पालने) "कः" (३-२-४) पृषो०। "क्षतात् किल त्रायत इत्युदग्रः क्षत्रस्य शब्दो भुवनेषु रूढः" रघु० २-५३। "क्षत्रस्यातिप्रवृद्धस्य ब्राह्मणान् प्रति सर्वशः। ब्रह्मैव संनियन्तृ स्यात्क्षत्रं हि ब्रह्मसंभवम्" मनु० ९-३२०। 2. ರಾಷ್ಟ್ರ, ನಾಡು, ದೇಶ. (न०) 3. ಜಲ, ನೀರು. 4. ದೇಹ, ಶರೀರ. 5. ಧನ, ಸಂಪತ್ತು, ಐಶ್ವರ್ಯ.

**क्षत्रकर्मन् ಕ್ಷತ್ರಕರ್ಮನ್** (न०) ಕ್ಷತ್ರಿಯನ ಕೆಲಸ, ಕ್ಷತ್ರಿಯನಿಗೆ ಸ್ವಭಾವಸಿದ್ಧವಾದ ಕಾರ್ಯ. ಶೌರ್ಯ ಪ್ರದರ್ಶನ, ತೇಜಸ್ಸು, ಧೈರ್ಯ, ಕಾರ್ಯದಕ್ಷತೆ, ಯುದ್ಧದಲ್ಲಿ ಹೆದರಿ ಓಡಿಹೋಗದಿರುವುದು, ದಾನ ಮತ್ತು ಪ್ರಭುತ್ವ ಇವೆಲ್ಲವೂ ಕ್ಷತ್ರಿಯನಿಗೆ ಸ್ವಭಾವಸಿದ್ಧವಾದ ಕರ್ಮಗಳು. "शौर्यं तेजो धृतिर्दाक्ष्यं युद्धे चाप्यपलायनम्। दानमीश्वरभावश्च क्षात्रं कर्म स्वभावजम्" गीता १८-४३।

**क्षत्रधर्म ಕ್ಷತ್ರಧರ್ಮ** (पुं०) ಕ್ಷತ್ರಿಯನ ಕರ್ತವ್ಯ, ಪ್ರಜಾಪಾಲನರೂಪವಾದ ಕಾರ್ಯ. क्षत्रस्य धर्मः। "राज्यस्थः क्षत्रियश्चापि प्रजा धर्मेण पालयन्। कुर्यादध्ययनं सम्यग्यजेद्यज्ञान् यथाविधि। दद्याद्दानं द्विजातिभ्यो धर्मबुद्धिसमन्वितः। स्वभार्यानिरतो नित्यं षड्भागार्हः सदा नृपः। नीतिशास्त्रार्थकुशलः सन्धिविग्रहतत्त्ववित्। देवब्राह्मणभक्तश्च पितृकार्यपरस्तथा। धर्मेण यजनं कार्यमधर्मपरिवर्जनम्। उत्तमां गतिमाप्नोति क्षत्रियोऽप्येवमाचरन्" हारीत०। **ರಾಜ್ಯಭಾರ ವಹಿಸಿಕೊಂಡಿರುವ ರಾಜನ ಧರ್ಮ:** ಪ್ರಜಾಪರಿಪಾಲನ, ವೇದಶಾಸ್ತ್ರಾಧ್ಯಯನ, ಶಾಸ್ತ್ರೋಕ್ತವಾಗಿ ಯಾಗಮಾಡುವುದು, ಧರ್ಮಬುದ್ಧಿಯಿಂದ ಬ್ರಾಹ್ಮಣರಿಗೆ ದಾನಮಾಡುವುದು, ಸ್ವಭಾರ್ಯೆ (ಪತ್ನಿ) ಯಲ್ಲಿ ಮಾತ್ರ ಅನುರಾಗ, ವರಮಾನದ ಆರನೆಯ ಒಂದು ಭಾಗದಷ್ಟು ಮಾತ್ರ ಪ್ರಜೆಗಳಿಂದ ಕಂದಾಯ ತೆಗೆದುಕೊಳ್ಳುವುದು, ಸಂಧಿವಿಗ್ರಹಾದಿ ಷಡ್ಗುಣಗಳಲ್ಲಿ ಪ್ರಾವೀಣ್ಯ ಇತ್ಯಾದಿ.

**क्षत्रबन्धु ಕ್ಷತ್ರಬಂಧು** (पुं०) 1. ಕ್ಷತ್ರಿಯ. क्षत्रं राष्ट्रं बन्धुरिव। "ब्राह्मणं कुशलं पृच्छेत् क्षत्रबन्धुमनामयम्। वैश्यं क्षेमं समागम्य शूद्रमारोग्यमेव च" मनु० २-१२७। 2. ಕ್ಷತ್ರಿಯಧರ್ಮದಲ್ಲಿಲ್ಲದ ಹೀನ ಕ್ಷತ್ರಿಯ. क्षत्रस्य बन्धुरिव।

**क्षत्रभृत् ಕ್ಷತ್ರಭೃತ್** (पुं०) 1. ಕ್ಷತ್ರಿಯ. 2. ರಾಷ್ಟ್ರದ ಹೊರೆಯನ್ನು ಹೊತ್ತಿರುವವನು.

**क्षत्रवर्धन ಕ್ಷತ್ರವರ್ಧನ** (वि०) ರಾಷ್ಟ್ರವನ್ನು ವಿಸ್ತಾರಗೊಳಿಸುವವನು, ರಾಜ್ಯವನ್ನು ದೊಡ್ಡದು ಮಾಡುವವನು. क्षत्रं राष्ट्रं वर्धयति—वृधु (वृद्धौ) "ल्युः" (३-१-१३४)।

**क्षत्रविद्या ಕ್ಷತ್ರವಿದ್ಯಾ** (स्त्री०) ಧನುರ್ವಿದ್ಯೆ, ಅಸ್ತ್ರವಿದ್ಯೆ. क्षत्रस्य विद्या।

**क्षत्रान्तक ಕ್ಷತ್ರಾಂತಕ** (पुं०) ಕ್ಷತ್ರಿಯರನ್ನು ನಾಶಪಡಿಸಿದ ಪರಶುರಾಮ. क्षत्राणामन्तकः। "वधेन संख्ये पिशिताशनानां क्षत्रान्तकस्याभिभवेन चैव" भट्टि० ३-१।

**क्षत्रिय ಕ್ಷತ್ರಿಯ** (पुं०) ಚಾತುರ್ವರ್ಣ್ಯದಲ್ಲಿ ಎರಡನೆಯ ವರ್ಣದವನು. क्षत्रस्यापत्यम् "घः" (४-१-१३८)। घस्य इयादेशः (७-१-२)। "ब्राह्मणः क्षत्रियो वैश्यस्त्रयो वर्णा द्विजातयः" मनु० १०-४।

**क्षत्रिया ಕ್ಷತ್ರಿಯಾ** (स्त्री०) ಕ್ಷತ್ರಿಯ ಜಾತಿಯ ಹೆಂಗಸು. क्षत्रिय "टाप्"। योपधत्वात् न ङीष्।

**क्षत्रियाणी ಕ್ಷತ್ರಿಯಾಣೀ** (स्त्री०) ಕ್ಷತ್ರಿಯ ಜಾತಿಯ ಹೆಂಗಸು. ಕ್ಷತ್ರಿಯನಿಂದ ಕ್ಷತ್ರಿಯ ಹೆಂಗಸಿನಲ್ಲಿ ಹುಟ್ಟಿದವಳು. क्षत्रिय वा आनुक् "ङीष्" च (वा० ४-१-४९)। पक्षे "टाप्"। **क्षत्रिया ಕ್ಷತ್ರಿಯಾ.**

**क्षत्त्रियी ಕ್ಷತ್ತ್ರಿಯೀ** (स्त्री०) ಕ್ಷತ್ರಿಯನ ಪತ್ನಿ. क्षत्त्रिय "ङीष्" (४-१-४८)।

**क्षद – शकलीकरणे भक्षणे च** (सौत्रधातुः)। 1. ತುಂಡು ಮಾಡು, ಚೂರುಮಾಡು. 2. ತಿನ್ನು, ಭಕ್ಷಿಸು.

**क्षद्मन् ಕ್ಷದ್ಮನ್** (न०) 1. ಅನ್ನ. 2. ಜಲ, ನೀರು. क्षद "मनिन्" (उ० ४-१४४)।

**क्षन्तव्य ಕ್ಷಂತವ್ಯ** (वि०) 1. ಕ್ಷಮಿಸಲ್ಪಡುವ. क्षमू (सहने) "तव्यः" (३-१-९६)। 2. ಕ್ಷಮಿಸಲು ಯೋಗ್ಯವಾದ. "क्षन्तव्यमद्य भवता करुणार्णवेन" चं० भा०। "अनीयर्" (३-१-९६)। **क्षमणीयम् ಕ್ಷಮಣೀಯಮ್.**

**क्षन्तृ ಕ್ಷಂತೃ** (वि०) ಸಹನೆಯುಳ್ಳವನು, ತಾಳ್ಮೆಯುಳ್ಳವನು, ಸೈರಣೆಯುಳ್ಳವನು. क्षमूष् (सहने) "तृन्" (३-२-२३५)। "ये क्षन्तारो नाभिजल्पन्ति चान्यान्" भा० अनु० १०२-३१। स्त्रियाम् "ङीप्" (४-१-५)। **क्षन्त्री ಕ್ಷಂತ್ರೀ.**

**क्षप् ಕ್ಷಪ್** (स्त्री०) ರಾತ್ರಿ.

**क्षप ಕ್ಷಪ** (पुं०) ಜಲ, ನೀರು.

**क्षपण ಕ್ಷಪಣ** (पुं०) 1. ಬೌದ್ಧಸಂನ್ಯಾಸಿ. क्षपयति विषयरागम् – क्षै (क्षये) + णिच् "ल्युः" (३-१-१३४)। स्वार्थे "कः"। **क्षपणकः ಕ್ಷಪಣಕಃ.** "नग्नक्षपणके देशे रजकः किं करिष्यति" चाणक्य० ११०। 2. (ಕಾಲ) ಕಳೆಯುವುದು. क्षै + णिच् भावे "ल्युट्" (३-३-११५)। (वि०) 3. ಕಾಲ ಕಳೆಯುವ. क्षै + णिच् "ल्युः"।

**क्षपणी ಕ್ಷಪಣೀ** (स्त्री०) ದೋಣಿ ನಡೆಯಿಸುವ ಹುಟ್ಟು, ಗಳ, ಜಲ್ಲೆ. क्षप (क्षपे) कर्म० "ल्युट्"। "ङीप्" (४-१-१५)।

**क्षपणीय ಕ್ಷಪಣೀಯ** (वि०) 1. ನಾಶಪಡಿಸಲ್ಪಡುವ. 2. ನಾಶಪಡಿಸಬೇಕಾದ. 3. ನಾಶಪಡಿಸಲು ಯೋಗ್ಯವಾದ. 4. ನಾಶಪಡಿಸಲು ಶಕ್ಯವಾದ. 5. ಕಡಮೆ ಮಾಡಿಸಲ್ಪಡುವ. 6. ಕಡಮೆ ಮಾಡಿಸಲು ಯೋಗ್ಯವಾದ. 7. ಕಡಮೆ ಮಾಡಿಸಲು ಶಕ್ಯವಾದ. 8. ಕಡಮೆ ಮಾಡಿಸಬೇಕಾದ. क्षै (क्षये) + णिच् "अनीयर्" (३-१-९६)।

**क्षपयमाण ಕ್ಷಪಯಮಾಣ** (वि०) 1. ನಾಶಪಡಿಸುವಂತೆ ಮಾಡುತ್ತಿರುವ. 2. ಕಡಮೆಯಾಗುವಂತೆ ಮಾಡಿಸುತ್ತಿರುವ. क्षै (क्षये) + णिच् "शानच्" (३-२-१२४)।

**क्षपयत् ಕ್ಷಪಯತ್** (वि०) ನಾಶಪಡಿಸುತ್ತಿರುವ, ಹೋಗಲಾಡಿಸುತ್ತಿರುವ. क्षै (क्षये) + णिच् "शतृ" (३-२-१२४)। "स्नेहममृदुहृदयः क्षपयन्निरपेक्ष एष समुपैति निर्वृतिम्" माघ० १५-१२। स्त्रियाम् "ङीप्" (४-१-६)। **-यन्ती -ಯಂತೀ.**

**क्षपयितव्य ಕ್ಷಪಯಿತವ್ಯ** (वि०) "क्षपणीय" ಪದದ ಅರ್ಥ. क्षै (क्षये) + णिच् "अनीयर्" (३-१-९६)।

**क्षपयिष्णु ಕ್ಷಪಯಿಷ್ಣು** (वि०) ನಾಶಪಡಿಸುವ ಸ್ವಭಾವದ. क्षै (क्षये) + णिच् "इष्णुच्"। "अथ ते कालरूपस्य क्षपयिष्णोरमुष्य वै। अक्षौहिणीनां निधनं द्रक्ष्याम्यर्जुनसारथेः" भाग० १०-३७-२२।

**क्षपा ಕ್ಷಪಾ** (स्त्री०) 1. ರಾತ್ರಿ. क्षपयति चेष्टाम् – क्षै (क्षये) + णिच् "अच्" (३-१-१३४)। "व्यलोकयन्नुन्मिषितैस्तटिन्मयैर्महातपःसाक्ष्य इव स्थिताः क्षपाः" कुमा० ५-२५। 2. ಅರಿಶಿನ.

**क्षपाकर ಕ್ಷಪಾಕರ** (पुं०) (ರಾತ್ರಿಯನ್ನುಂಟುಮಾಡುವ) ಚಂದ್ರ. क्षपां करोति–डु कृञ् (करणे) "टः" (३-२-२०)। "शनकैरथास्य तनुजालकान्तरस्फुरितक्षपाकरकरोत्कराकृतिः" माघ० १२-२०। कृञ् "क्विप्" (३-२-६१)। **-कृत् -ಕೃತ್.** "विशदाश्मकूटघटिताः क्षपाकृतः क्षणदासु यत्र च रुचैकतां गताः" माघ० १३-५३।

**क्षपाचर ಕ್ಷಪಾಚರ** (पुं०) 1. (ರಾತ್ರಿಯಲ್ಲಿ ಸಂಚರಿಸುವ) ರಾಕ್ಷಸ. क्षपायां चरति–चर (गतौ) "टः" (३-२-१६)। "निर्णये च मतिं कृत्वा निधायासि क्षपाचरः" भा० वन० २८८। "दनुजः स्विदयं क्षपाचरो वा वनजे नेति बलं बतासि सत्त्वे" किरा० १३-८। (वि०) 2. ರಾತ್ರಿಯಲ್ಲಿ ಸಂಚರಿಸುವ.

**क्षपाट ಕ್ಷಪಾಟ** (पुं०) (ರಾತ್ರಿಯಲ್ಲಿ ಸಂಚರಿಸುವ) ರಾಕ್ಷಸ. क्षपायामटति– अट (गतौ) "अच्" (३-१-१३४)। "ततः क्षपाटैः पृथुपिङ्गलाक्षैः खं प्रावृषेण्यैरिव चाऽऽनशेऽब्दैः" भट्टि० २-३०।

**क्षपात्यय ಕ್ಷಪಾತ್ಯಯ** (पुं०) ರಾತ್ರಿಯ ಕೊನೆ, ಪ್ರಭಾತ, ಪ್ರಾತಃಕಾಲ. क्षपाया अत्ययः। **-अवसानम् -ಅವಸಾನಮ್.**

**क्षपानाथ ಕ್ಷಪಾನಾಥ** (पुं०) 1. (ರಾತ್ರಿಗೆ ಒಡೆಯನಾದ) ಚಂದ್ರ. क्षपाया नाथः। "महारथः पुष्यरथं रथाङ्गी क्षिप्रं क्षपानाथ इवाधिरूढः" माघ० ३-२२। **-पतिः -ಪತಿಃ.** 2. ಕರ್ಪೂರ.

**क्षपित ಕ್ಷಪಿತ** (वि०) 1. ಕಡಮೆಮಾಡಿಸಲ್ಪಟ್ಟ. 2. ನಾಶಪಡಿಸಲ್ಪಟ್ಟ. क्षै (क्षये) + णिच् "क्तः" (३-२-१०२)।

**क्षपितवत् ಕ್ಷಪಿತವತ್** (वि०) 1. ಕಡಮೆಮಾಡಿಸಿದವನು. 2. ನಾಶಪಡಿಸಿದವನು. क्षै (क्षये) + णिच् "क्तवतुः" (३-२-१०२)। स्त्रियाम् "ङीप्" (४-१-६)। **–वती –ವತೀ.**

**क्षप्य ಕ್ಷಪ್ಯ** (वि०) 1. ಕಡಮೆಮಾಡಲ್ಪಡುವ. 2. ನಾಶಪಡಿಸಲ್ಪಡುವ. क्षै (क्षये) + णिच् "यत्" (३-१-९७)।

**क्षम ಕ್ಷಮ** (वि०) 1. ಯೋಗ್ಯನಾದ, ಅರ್ಹನಾದ. क्षमूष् (सहने) "अच्" (३-१-१३४)। "दिगङ्गनाः क्षणमविलोकनक्षमाः शरीरिणां परिहरणीयतां ययुः" माघ० १७-६१। 2. ಶಕ್ತನಾದ, ಸಮರ್ಥನಾದ. "उभ एव क्षमे वोढुमुभयोर्बीजमाहितम्" कुमा० २-६०। 3. ಉಚಿತವಾದ, ಯೋಗ್ಯವಾದ, ತಕ್ಕುದಾದ. "प्रस्थानकालक्षमवेषकल्पनाकृतक्षणक्षेपमुदैक्षताच्युतम्" माघ० १२-१। 4. ಹಿತವಾದ, ಅನುಕೂಲವಾದ. 5. ಸಹನೆಯುಳ್ಳ, ತಾಳ್ಮೆಯುಳ್ಳ. "अतोऽत्र किञ्चिद्भवतीं बहुक्षमां द्विजातिभावादुपपन्नचापलः" कुमा० ५-४०। 6. ಅನುರೂಪವಾದ, ಸದೃಶವಾದ. 7. ಯುಕ್ತವಾದ, ಸಂಗತವಾದ. "न समयपरिरक्षणं क्षमं ते निकृतिपरेषु परेषु भूरिधाम्नः" किरा० १-४५।

**क्षमण ಕ್ಷಮಣ** (न०) ಸಹಿಸುವಿಕೆ, ತಾಳ್ಮೆಯಿಂದಿರುವಿಕೆ. क्षमूष् (सहने) "ल्युट्" (३-३-११५)।

**क्षमता ಕ್ಷಮತಾ** (स्त्री०) 1. ಯೋಗ್ಯತೆ. ಅರ್ಹತೆ. क्षमस्य भावः "तल्" (५-१-११९)। 2. ಸಾಮರ್ಥ್ಯ. 3. ಶಬ್ದಶಕ್ತಿ, ಅರ್ಥವನ್ನು ತಿಳಿಯಪಡಿಸುವ ಶಬ್ದದಲ್ಲಿರುವ ಒಂದು ಸಾಮರ್ಥ್ಯ.

**क्षमा ಕ್ಷಮಾ** (स्त्री०) 1. ಸಹನೆ, ತಾಳ್ಮೆ. क्षमूष् (सहने) "अङ्" (३-३-१०४)। "अपराधशतक्षमं नृपः क्षमयात्येति भवन्तमेकया" माघ० १६-४८। ಇತರರು ಎಷ್ಟೇ ಕೋಪಿಸಿಕೊಂಡರೂ ಹೊಡೆದು ಬಡಿದರೂ ಅವರ ವಿಷಯದಲ್ಲಿ ಸ್ವಲ್ಪವೂ ಕೋಪಿಸಿಕೊಳ್ಳಲೂ ಹೊಡೆಯಲೂ ಯತ್ನಿಸದೆ ಅವೆಲ್ಲವನ್ನೂ ಶುದ್ಧವಾದ ಮನೋವಾಕ್ಕಾಯಗಳಿಂದ ಸಹಿಸಿಕೊಳ್ಳುವುದು ಕ್ಷಮೆಯೆನಿಸುವುದು. "आक्रुष्टोऽभिहतो वापि नाक्रोशेन्न च हन्ति च। अदुष्टैर्वाङ्मनःकायैस्तितिक्षोः सा क्षमा मता"। "ज्ञाने मौनं क्षमा शक्तौ त्यागे श्लाघाविपर्ययः" रघु० १-२२। ಇದು ಮನುಷ್ಯಸಾಮಾನ್ಯಕ್ಕೂ ಇರಬೇಕಾದ ದಶವಿಧ ಧರ್ಮಗಳಲ್ಲೊಂದು. "धृतिः क्षमा दमोऽस्तेयं शौचमिन्द्रियनिग्रहः। धीर्विद्या सत्यमक्रोधो दशकं धर्मलक्षणम्" मनु० ६-९२। 2. ಭೂಮಿ. "विभूषणान्युन्मुमुचुः क्षमायां पेतुर्बभञ्जुर्वलयानि चैव" भट्टि० ३-२२। 3. ದುರ್ಗಾದೇವಿ. "जयन्ती मङ्गला काली भद्रकाली कपालिनी। दुर्गा शिवा क्षमा धात्री स्वाहा स्वधा नमोऽस्तु ते"।

**क्षमाकर ಕ್ಷಮಾಕರ** (वि०) ತಾಳ್ಮೆಯನ್ನು ತೋರುವವನು, ಸಹನೆಯುಳ್ಳವನು.

**क्षमाज ಕ್ಷಮಾಜ, –तनय –ತನಯ, –सूनु –ಸೂನು** (पुं०) ಭೂಮಿಯ ಮಗನಾದ 1. ಅಂಗಾರಕ. 2. ನರಕಾಸುರ. क्षमाया जायते — जनी (प्रादुर्भावे) "डः" (३-२-९८)। क्षमायास्तनयः सूनुर्वा।

**क्षमातल ಕ್ಷಮಾತಲ** (न०) ಭೂಮಿಯ ಮೇಲ್ಮೈ, ನೆಲದ ಹೊರಮೈ. क्षमायास्तलम्। "द्रुतद्रवद्रथचरणक्षतक्षमातलोल्लसद्बहुलरजोऽवगुण्ठितम्" माघ० १७-६०।

**क्षमान्वित ಕ್ಷಮಾನ್ವಿತ** (वि०) ಸಹನೆಯಿಂದ ಕೂಡಿದ. क्षमया अन्वितः।

**क्षमापति ಕ್ಷಮಾಪತಿ** (पुं०) ಭೂಮಿಯ ಒಡೆಯ, ರಾಜ, ದೊರೆ. क्षमायाः पतिः। "अशङ्कितं युधमधुना विशन्त्वमी क्षमापतीनिति निरराजयन्निव" माघ० १७-१६।

**क्षमाभुज् ಕ್ಷಮಾಭುಜ್** (पुं०) ಭೂಮಿಯನ್ನು ಪಾಲಿಸುವ ರಾಜ, ದೊರೆ. क्षमां भुनक्ति — भुज (पालनाभ्यवहारयोः) "क्विप्" (३-२-७६)। "न ममौ कपाटतटविस्तृतं तनौ मुरवैरिवक्ष उरसि क्षमाभुजः" माघ० १३-१०।

**क्षमाभृत् ಕ್ಷಮಾಭೃತ್** (पुं०) 1. ರಾಜ, ದೊರೆ. क्षमां बिभर्ति — डु भृञ् (धारणपोषणयोः) "क्विप्" (३-२-७६)। "भव सानुचरस्त्वमुच्चकैर्महतामप्युपरि क्षमाभृताम्" माघ० १६-९। 2. ಪರ್ವತ, ಬೆಟ್ಟ. "अवारितं गतमुभयेषु भूरिशः क्षमाभृतामथ कटकान्तरेष्वपि" माघ० १७-२७।

**क्षमावत् ಕ್ಷಮಾವತ್** (वि०) ಸಹನೆಯುಳ್ಳ, ತಾಳ್ಮೆಯಿಂದ ಕೂಡಿದ. क्षमास्यास्ति "मतुप्" (५-२-९४)। "एकः क्षमावतां दोषो द्वितीयो नोपपद्यते। यदेनं क्षमया युक्तमशक्तं मन्यते जनः" गरुडपु०। स्त्रियाम् "ङीप्" (४-१-६)। **–वती –ವತೀ.**

**क्षमाशील ಕ್ಷಮಾಶೀಲ** (वि०) ಸಹಿಸುವ ಸ್ವಭಾವದವನು, ಸೈರಣೆಯ ಸ್ವಭಾವದವನು.

**क्षमितृ ಕ್ಷಮಿತೃ** (वि०) ಸಹಿಸುವವನು, ತಾಳ್ಮೆಯುಳ್ಳವನು. क्षमते — क्षमूष् (सहने) "तृन्" (३-२-१३५)।

"सहिष्णुः सहनः क्षन्ता तितिक्षुः क्षमिता क्षमी" अम०। स्त्रियाम् "ङीप्" (४-१-५)। -क्षी -ಕ್ಷೀ.

**क्षमिन् ಕ್ಷಮಿನ್** (वि०) ಕ್ಷಮಿಸುವ ಸ್ವಭಾವದವನು. क्षमते—क्षमूष् (सहने) "घिनुण्" (३-२-१४१)। "तरुणानपि रक्षति क्षमी स शरण्यः शरणागतान् द्विषः" माघ० १६-५४।

**क्षम्य ಕ್ಷಮ್ಯ** (वि०) ಕ್ಷಮಿಸಲು ಯೋಗ್ಯವಾದ, ಮನ್ನಿಸಬಹುದಾದ. क्षमूष् (सहने) "यत्" (३-१-९८)।

**क्षय ಕ್ಷಯ** (पुं०) 1. ನಿವಾಸ, ಮನೆ, ವಾಸಸ್ಥಳ. क्षीयतेऽत्र—क्षि (निवासगत्योः) "अच्" (३-३-५६)। 2. ನಾಶ. क्षि (क्षये) "अच्" (३-३-५६)। "कालोऽस्मि लोकक्षयकृत् प्रवृद्धः" गीता ११-३२। "सपदि कुमुदिनीभिर्मीलितं हा क्षपापि क्षयमगमदपेतास्तारकास्ताः समस्ताः" माघ० ११-२४। 3. ಪ್ರಳಯ, ಜಗತ್ತಿನ ನಾಶ, ಕಲ್ಪದ ಕೊನೆ. क्षीयन्ते प्राणिनोऽत्र क्षि (क्षये) "अच्" (३-३-५६)। 4. ಅಪಚಯ, ಕಡಮೆ. क्षयणम्—क्षि (क्षये) "अच्"। "समारुरुक्षुर्दिवमायुषः क्षये ततान सोपानपरम्परामिव" रघु० ३-६९। 5. ರೋಗ, ವ್ಯಾಧಿ. 6. ಕ್ಷಯರೋಗ. क्षयति देहम्—क्षि (क्षये) अन्तर्भावितण्यर्थः "अच्"। ಈ ರೋಗವು ಪ್ರಬಲವಾಗಿ ಕಾಯಮನೋವ್ಯಾಪಾರಗಳನ್ನು ಕಡಮೆಮಾಡುವುದರಿಂದ ಇದಕ್ಕೆ ಕ್ಷಯರೋಗವೆಂದು ಹೆಸರು. "संशोषणाद्रसादीनां शोष इत्यभिधीयते। क्रियाक्षयकरत्वाच्च क्षय इत्युच्यते पुनः" सुश्रुत० उत्तरतं० ४१-४। ರಾಜನಾದ ಚಂದ್ರನಿಗೂ ಈ ಕ್ಷಯಸಂಬಂಧವಿರುವುದರಿಂದ ಇದನ್ನು "राजयक्ष्मा" ಎಂದೂ ಕೆಲವರು ಹೇಳುವರು. "राज्ञश्चन्द्रमसो यस्मात् अभूदेष किलामयः। तस्मात्तं राजयक्ष्मेति केचिदाहुः पुनर्जनाः" सुश्रुत० उत्तरतं० ४१-५। (1) ಅನ್ನದ್ವೇಷ, (2) ಜ್ವರ, (3) ಶ್ವಾಸ, (4) ಕೆಮ್ಮಲು, (5) ರಕ್ತಕಾರುವುದು ಮತ್ತು (6) ಸ್ವರವಿಕಾರ ಈ ಆರು ವಿಧ ದೋಷಗಳು ಕ್ಷಯರೋಗದಲ್ಲಿ ಕಂಡುಬರುವುವು. "भक्तद्वेषो ज्वरः श्वासः कासः शोणितदर्शनम्। स्वरभेदश्च जायेत षड्रूपे राजयक्ष्मणि" सुश्रुत० उत्तरतं० ४१-११। 7. ಮಲಮಾಸ, ಕ್ಷಯಮಾಸ, ಎರಡು ಸಂಕ್ರಮಣಗಳುಳ್ಳ ಒಂದು ಚಾಂದ್ರಮಾಸ. [ಸಂಕ್ರಮಣವೇ ಇಲ್ಲದ ಚಾಂದ್ರಮಾಸವು ಅಧಿಕಮಾಸ. ಎರಡು ಸಂಕ್ರಮಣಗಳುಳ್ಳ ಒಂದು ಚಾಂದ್ರಮಾಸವು ಕ್ಷಯಮಾಸ.] "असंक्रान्तिमासोऽधिमासः स्फुटं स्यात् द्विसंक्रान्तिमासः क्षयाख्यः कदाचित्। क्षयः कार्तिकादित्रये नान्यतः स्यात् तदा वर्षमध्येऽधिमासद्वयं च" सिद्धान्तशि०। 8. ಪ್ರಭವಾದಿ ಅರವತ್ತು ಸಂವತ್ಸರಗಳಲ್ಲೊಂದು. 9. ಇಳಿ, ತಗ್ಗು. 10. ಗಮನ. 11. ರಾಜನೀತಿಶಾಸ್ತ್ರಜ್ಞರ ಅಷ್ಟವರ್ಗದಲ್ಲಿ ಸೇರಿದ ತ್ರಿವರ್ಗದಲ್ಲಿ ಮೊದಲನೆಯದು. "क्षयः स्थानं च वृद्धिश्च त्रिवर्गो नीतिवेदिनाम्" अम०। ಶತ್ರುವಿಗಿಂತಲೂ ಶಕ್ತಿಯು ಕಡಮೆಯಾಗಿರುವುದು ಕ್ಷಯ. ಶತ್ರುವಿಗಿಂತಲೂ ಮಿಗಿಲಾದ ಶಕ್ತಿ ಹೊಂದಿರುವುದು ವೃದ್ಧಿ. ಈ ಉಪಚಯಾಪಚಯ (ಹೆಚ್ಚು ಕಡಮೆ)ಗಳೆರಡೂ ಇಲ್ಲದೆ ಸಮವಾಗಿರುವುದು ಸ್ಥಾನ.

**क्षयकार ಕ್ಷಯಕಾರ** (वि०) 1. ನಾಶಕ್ಕೆ ಕಾರಣವಾದ, ಹಾನಿಯನ್ನುಂಟುಮಾಡುವ. क्षयं करोति—डु कृञ् (करणे) "अण्" (३-२-१)। 2. ಕಡಮೆಮಾಡುವ.

**क्षयकाल ಕ್ಷಯಕಾಲ** (पुं०) 1. ಪ್ರಳಯಕಾಲ, ಕಲ್ಪದ ಕೊನೆಯಕಾಲ, ಜಗತ್ತಿನ ನಾಶದ ಕಾಲ. 2. ಇಳಿತದ ಕಾಲ, ತಗ್ಗಿನ ಕಾಲ.

**क्षयकास ಕ್ಷಯಕಾಸ** (पुं०) ಕ್ಷಯರೋಗದ ಕೆಮ್ಮಲು, ಕ್ಷಯರೋಗದ ಸಂಬಂಧವಾದ ಕೆಮ್ಮಲು. क्षयात् कासः।

**क्षयङ्कर ಕ್ಷಯಂಕರ** (वि०) ನಾಶಪಡಿಸುವ, ಕಡಮೆ ಮಾಡುವ. क्षयं करोति—डु कृञ् (करणे) "खच्" बाहु०। मुमागमः। "शत्रुपक्षक्षयङ्करः" भा०।

**क्षयज ಕ್ಷಯಜ** (पुं०) ಕ್ಷಯರೋಗಸಂಬಂಧವಾದ ಕೆಮ್ಮಲು, ಕ್ಷಯರೋಗದಿಂದ ಉಂಟಾದ ಕೆಮ್ಮಲು. क्षयात् जायते—जनी (प्रादुर्भावे) "डः" (३-२-९८)।

**क्षयण ಕ್ಷಯಣ** (न०) ನಾಶಹೊಂದುವಿಕೆ, ಅಳಿದುಹೋಗುವಿಕೆ. क्षि (क्षये) "ल्युट्" (३-३-११५)।

**क्षयनाशिन् ಕ್ಷಯನಾಶಿನ್** (वि०) ರೋಗವನ್ನು ನಾಶಪಡಿಸುವ. क्षयं रोगं नाशयति—णश (अदर्शने)+णिच् "णिनिः" (३-२-७८)। स्त्रियाम् "ङीप्" (४-१-५)। -नाशिनी -ನಾಶಿನೀ.

**क्षयनाशिनी ಕ್ಷಯನಾಶಿನೀ** (स्त्री०) ಸಿಹಿಹಾಲೆಗಿಡ.

**क्षयपक्ष ಕ್ಷಯಪಕ್ಷ** (पुं०) ಕೃಷ್ಣಪಕ್ಷ, ಮಾಸದಲ್ಲಿ ಚಂದ್ರನು ಕ್ಷಯಹೊಂದುವ ಎರಡನೆಯ ಅರ್ಧ ಭಾಗ. क्षीयतेऽस्मिन् चन्द्रः—क्षि (क्षये) "अच्" (३-३-५६)। "क्षयपक्ष इवैन्दवीः कलाः सकला हन्ति स शक्तिसम्पदः" किरा० ३-३७।

**क्षयमास ಕ್ಷಯಮಾಸ** (पुं०) "क्षय" ಪದದ 7ನೆಯ ಅರ್ಥ.

**क्षययुक्त ಕ್ಷಯಯುಕ್ತ** (वि०) ಕ್ಷಯದಿಂದ ಕೂಡಿದ, ಕ್ಷೀಣವಾದ, ಕಡಮೆಯಾದ. क्षयेण युक्तम्। "क्षययुक्तमपि स्वभावजं दधतं धाम शिवं समृद्धये" किरा० २-११।

**क्षययुक्ति ಕ್ಷಯಯುಕ್ತಿ** (स्त्री०) ಕ್ಷಯದಯೋಗ, ನಾಶದಕಾಲ, ಕ್ಷೀಣಸ್ಥಿತಿ, ಅಳಿವು. क्षयस्य युक्तिः योगः। "अचिरेण परस्य भूयसीं विपरीतां विगणय्य चात्मनः। क्षययुक्तिमुपेक्षते कृती कुरुते तत्प्रतिकारमन्यथा" किरा० २-९।

**क्षयरोग ಕ್ಷಯರೋಗ** (पुं०) ಶರೀರವು ಕ್ಷಯಹೊಂದುವ ಒಂದು ರೋಗ, ಧಾತುಗಳನ್ನು ಕ್ಷೀಣಗೊಳಿಸಿ ಶರೀರವನ್ನು ದುರ್ಬಲವಾಗಿ ಮಾಡುವ ಒಂದು ವ್ಯಾಧಿ. ಅತಿಯಾದ ಸ್ತ್ರೀ ಸಂಭೋಗದಿಂದ ದೇಹದಲ್ಲಿ ಶುಕ್ರಧಾತುವು ಕಡಮೆಯಾಗಿ ಎಲ್ಲಾ ಧಾತುಗಳೂ ಕ್ಷೀಣವಾಗುವುವು. ಆದರಿಂದ ಮನುಷ್ಯನು ಕ್ಷಯರೋಗಕ್ಕೆ ತುತ್ತಾಗುವನು. "अतिव्यवायिनो वापि क्षीणे रेतस्यनन्तरम्। क्षीयन्ते धातवः सर्वे ततः शुष्यति मानवः" सुश्रुत० उत्तरतं० ४१-१०।

**क्षयवायु ಕ್ಷಯವಾಯು** (पुं०) ಕಲ್ಪದ ಕೊನೆಯಲ್ಲಿ ಬೀಸುವ ಗಾಳಿ, ಚಂಡಮಾರುತ. क्षयस्य प्रलयस्य वायुः। "युष्मानचेतन् क्षयवायुकल्पान् सीता स्फुलिङ्गं परिगृह्य जाल्मः" भट्टि० १०-३६।

**क्षयित ಕ್ಷಯಿತ** (वि०) 1. ನಾಶಪಡಿಸಲ್ಪಟ್ಟ. क्षि (क्षये) + णिच् "क्तः" (३-२-१०२)। "क्षितिपः क्षयितोद्धतान्धकोहरलीलां स विडम्बयिष्यति" माघ० १६-५८। 2. ಕಡಮೆ ಮಾಡಲ್ಪಟ್ಟ.

**क्षयिन् ಕ್ಷಯಿನ್** (पुं०) 1. ಚಂದ್ರ. क्षयोऽस्यास्ति "इनिः" (५-२-११५)। 2. ಕ್ಷಯರೋಗವುಳ್ಳವನು. "दक्षस्य शापेन शशी क्षयीव प्लुष्टो हिमेनेव सरोजकोशः" कुमा० ९-१७। 3. ಕಡಮೆಯಾಗುವ ಸ್ವಭಾವದ, ಕ್ಷಯ ಹೊಂದುವ ಸ್ವಭಾವದ. क्षि (क्षये) ताच्छील्ये "णिनिः" (३-२-१५७)।

**क्षयिष्णु ಕ್ಷಯಿಷ್ಣು** (वि०) 1. ಕ್ಷಯಹೊಂದುವ ಸ್ವಭಾವದ, ಕಡಮೆಯಾಗುವ ಸ್ವಭಾವದ. क्षि (क्षये) "इष्णुच्" बाहु०। 2. ನಾಶದ ಸ್ವಭಾವದ. "एवं हि लोकाः क्रतुभिः कृता अमी क्षयिष्णवः सातिशया न निर्मलाः" भाग० ७-७-४०।

**क्षय्य ಕ್ಷಯ್ಯ** (वि०) ನಾಶಪಡಿಸಲು ಶಕ್ಯವಾದ. क्षेतुं शक्यम् यान्तादेशः (६-१-८१)। निपा०।

**क्षर – सञ्चलने** (भ्वा० पर० अक० से०)। क्षरति। चक्षार। क्षरिता। क्षरिष्यति। क्षरतु। अक्षारीत्। ಇತ್ಯಾದಿ. 1. ಪ್ರವಹಿಸು, ಹರಿ. 2. ಸೋರು, ಜಿನುಗು. 3. ಜಾರು. 4. ಎಡವು. 5. ನಾಶವಾಗು, ಅಳಿದು ಹೋಗು. "यज्ञोऽनृतेन क्षरति तपः क्षरति विस्मयात्" मनु० ४-२३७।

**क्षर ಕ್ಷರ** (पुं०) 1. ಮೇಘ, ಮೋಡ. क्षरति स्यन्दते मुञ्चति वा – क्षर (सञ्चलने) "अच्" (३-१-१३४)। 2. ವಿಕಾರಹೊಂದುವ ಸ್ವಭಾವದ ಸರ್ವಪ್ರಾಣಿಗಳು. ಲೋಕದಲ್ಲಿ ಕ್ಷರ ಮತ್ತು ಅಕ್ಷರ ಎಂದು ಇಬ್ಬರು ಪುರುಷರು ಪ್ರಸಿದ್ಧರು. ವಿಕಾರಸ್ವಭಾವದ ಪ್ರಕೃತಿಯೊಡನೆ ಸೇರಿಕೊಂಡಿರುವ ಸಕಲ ಪ್ರಾಣಿಗಳೂ ಕ್ಷರಪುರುಷರು. ಪ್ರಕೃತಿ ಸಂಬಂಧವಿಲ್ಲದೆ ತಮ್ಮ ನಿಜಸ್ವರೂಪದಲ್ಲಿರುವ ಮುಕ್ತಾತ್ಮರು ಅಕ್ಷರ ಪುರುಷರು. ಪ್ರಕೃತಿ ಸಂಬಂಧವೂ ಪ್ರಕೃತಿ ಪರಿಣಾಮವಾದ ದೇಹಸಂಬಂಧವೂ ಇಲ್ಲದಿರುವುದರಿಂದ ಅಕ್ಷರನು ಕೂಟಸ್ಥನೆಂದು ಹೇಳಲ್ಪಡುವನು. "द्वाविमौ पुरुषौ लोके क्षरश्चाक्षर एव च। क्षरः सर्वाणि भूतानि कूटस्थोऽक्षर उच्यते" गीता १५-१६। "क्षरं नीरे क्षरोऽम्बुदे" मेदि०। (न०)3. ಜಲ, ನೀರು. 4. ದೇಹ, ಶರೀರ. (वि०)5. ವಿಕಾರಸ್ವಭಾವದ, ಮಾರ್ಪಡುವ ಸ್ವಭಾವದ, ಅಸ್ಥಿರವಾದ.

**क्षरज ಕ್ಷರಜ** (वि०) ಮೇಘದಲ್ಲಿ ಉಂಟಾದ. क्षरे जायते – जनी (प्रादुर्भावे) "डः" (३-२-९७)।

**क्षरण ಕ್ಷರಣ** (न०) 1. ಸ್ರವಿಸುವುದು, ಸೋರುವುದು. 2. ಸುರಿಯುವುದು. 3. ಬೆವರು ಹರಿಯುವುದು. क्षर (सञ्चलने) "ल्युट्" (३-३-११५)। "वर्तते स्म स कथंचिदालिखन् अङ्गुलीक्षरणसन्नवर्तिकः" रघु० १९-१९। 4. ಚಲಿಸುವುದು. (वि०)5. ಸೋರುವ, ಜಿನುಗುವ. क्षर कर्तं० "ल्युः" (३-१-१३४)।

**क्षरत् ಕ್ಷರತ್** (वि०) 1. ಸ್ರವಿಸುತ್ತಿರುವ, ಸೋರುತ್ತಿರುವ. 2. ಹರಿಯುತ್ತಿರುವ. 3. ಚಲಿಸುತ್ತಿರುವ. 4. ಸುರಿಯುತ್ತಿರುವ. क्षर (सञ्चलने) "शतृ" (३-२-१२४)। "मुनिभिः पुलकाञ्चिताखिलाङ्गैः क्षरदानन्दथुबाष्पदिग्धदेहैः" याद० १५-७७। स्त्रियाम् "ङीप्" (४-१-६)। **क्षरन्ती ಕ್ಷರಂತೀ.** "शरसंहतयस्तस्य क्षरन्त्यः शार्ङ्गशैलतः" याद० १६-८६।

**क्षरिन् ಕ್ಷರಿನ್** (पुं०) 1. ವರ್ಷಾಕಾಲ, ಮಳೆಗಾಲ. क्षराः मेघाः सन्त्यत्र "इनिः" (५-२-११५)। "वर्षास्तपात्यः

प्रावृट् मेघात् कालागमौ क्षरी" अभि० चि०। (वि०) 2. ಸ್ರವಿಸುವ, ಸೋರುವ. 3. ಸುರಿಯುವ. 4. ಚಲಿಸುವ. 5. ವಿಕಾರಹೊಂದುವ.

**क्षल – शौचकर्मणि** (चुरा० उभ० सक० से०)। क्षालयति, –ते। क्षालयां बभूव, –चकार, –चक्रे, –आस। क्षालयिता। क्षालयिष्यति, –ते। क्षालयतु, –ताम्। अचिक्षलत्, –त। ತೊಳೆ, ಶುದ್ಧಿಮಾಡು. "क्षालयामि तव पादपङ्कजं नाथ दारुदृषदोः किमन्तरम्"।

**कर्मणि**:—क्षाल्यते। चक्षाले। ಇತ್ಯಾದಿ.

**सनि**:—चिक्षालयिषति, –ते। ಇತ್ಯಾದಿ.

**कृत्सु**:—क्षालितव्यम्। क्षालनीयम्। क्षाल्यम्। क्षालितः। क्षालितवान्। क्षालयन्, क्षालयन्ती। क्षालयितुम्। क्षालितम्। क्षालनम्। क्षालयित्वा। प्रक्षाल्य।

**क्षव ಕ್ಷವ** (पुं०) 1. ಸೀನು, ಮೂಗಿನ ಒಂದು ರೋಗ. टुक्षु (शब्दे) "अप्" (३-३-५७)। 2. ಕಾಸ, ಕೆಮ್ಮಲು. 3. ಕರಿಸಾಸವೆ. क्षौति – टु क्षु अन्तर्भावितण्यर्थः "अच्" (३-१-१३४)। "क्षवः क्षुते राजिकायाम्" मेदि०।

**क्षवक ಕ್ಷವಕ** (पुं०) 1. ಕರಿಸಾಸವೆ. 2. ಉತ್ತರೇಣಿ ಗಿಡ.

**क्षवथु ಕ್ಷವಥು** (पुं०) 1. ಕೆಮ್ಮಲು, ಕಾಸ. 2. ಸೀನು, ಮೂಗಿನ ಒಂದು ರೋಗ. टु क्षु (शब्दे) "अथुच्" (३-३-८९)। ಮೂಗಿನೊಳಗಿನ ಮರ್ಮವು ಕೆಟ್ಟು ಹೋದಾಗ ಕಫದೊಡನೆ ಮೂಗಿನಿಂದ ಹೊರಡುವ ಶಬ್ದದಿಂದ ಕೂಡಿದ ವಾಯುವೇ ಸೀನು. "घ्राणाश्रिते मर्मणि संप्रदुष्टे यस्यानिलो नासिकया निरेति। कफानुयातो बहुशः सशब्दः तं रोगमाहुः क्षवथुं विधिज्ञाः" सुश्रुत० उत्तरतं० २२-११। ಮೂಗಿನ ರೋಗಗಳು (1) अपीनसः, (2) पूतिनस्यम्, (3) नासापाकः, (4) शोणितपित्तम्, (5) पूयशोणितम्, (6) क्षवथुः, (7) भ्रंशथुः, (8) दीप्तः (9) नासानाहः, (10) परिस्रवः ಮತ್ತು (11) नासाशोषः ಎಂದು ಹನ್ನೊಂದು ಬಗೆ. "अपीनसः पूतिनस्यं नासापाकः तथैव च। तथा शोणितपित्तं च पूयशोणितमेव च। क्षवथुर्भ्रंशथुर्दा॰। नासानाहः परिस्रवः। नासाशोषेण सहिता दशैकश्चेरिता गदाः" सुश्रुत० उत्तरतं २२-३, ४।

**क्षात्र ಕ್ಷಾತ್ರ** (न०) 1. ಕ್ಷತ್ರಿಯರ ಸಮೂಹ, ಕ್ಷತ್ರಿಯರ ಗುಂಪು. क्षत्राणां समूहः "अण्" (४-२-३७)। (वि०) 2. ಕ್ಷತ್ರಿಯ ಸಂಬಂಧವಾದ. क्षत्रस्येदम् "अण्" (४-३-१२०)। "शौर्यं तेजो धृतिर्दाक्ष्यं युद्धे चाप्यपलायनम्। दानमीश्वरभावश्च क्षात्रं कर्म स्वभावजम्" गीता १८-४३। "आत्मकर्मक्षमं देहं क्षात्रो धर्म इवाश्रितः" रघु० १-१२। "क्षात्रो धर्मः श्रित इव तनुं ब्रह्मकोशस्य गुप्त्यै" उ० रा० ६-९

**क्षात्रि ಕ್ಷಾತ್ರಿ** (पुं०) ಕ್ಷತ್ರಿಯನ ಮಗ, ಕ್ಷತ್ರಿಯನಿಗೆ ಭಿನ್ನಜಾತಿಯ ಹೆಂಗಸಿನಲ್ಲಿ ಹುಟ್ಟಿದ ಮಗ. जातौ क्षत्रिय क्षात्रिरन्यः सि० कौ० (४-१-१३८)।

**क्षान्त ಕ್ಷಾಂತ** (न०) 1. ತಾಳ್ಮೆ, ಸೈರಣೆ, ಸಹನೆ. क्षमूष् भावे "क्तः" (३-३-११४)। (वि०) 2. ಕ್ಷಮಿಸಲ್ಪಟ್ಟವನು. क्षमूष् (सहने) कर्म० "क्तः" (३-२-१०२)। 3. ಸಹಿಸುವವನು, ತಾಳ್ಮೆಯುಳ್ಳವನು. क्षमूष् कर्त० "क्तः" (३-४-७२)।

**क्षान्ति ಕ್ಷಾಂತಿ** (स्त्री०) ಸಹನೆ, ಸೈರಣೆ, ತಾಳ್ಮೆ. क्षमू (सहने) "क्तिन्" (३-३-९४)। ಶಕ್ತಿಯಿದ್ದರೂ ಇತರರಿಂದ ಆದ ಅಪಕಾರಕ್ಕೆ ಪ್ರತೀಕಾರ ಮಾಡದೆ ಸೈರಿಸುವುದು. "शमो दमः तपः शौचं क्षान्तिरार्जवमेव च। ज्ञानविज्ञानमास्तिक्यं ब्राह्मं कर्म स्वभावजम्" गीता १८-४२

**क्षाम ಕ್ಷಾಮ** (पुं०) 1. ವಿಷ್ಣು. क्षै (क्षये) "क्तः" (३-४-७२)। निष्ठातस्य "मः" (८-२-५३)। "क्षामो ध्रुवसमीपस्थः चतुर्नक्षत्रसंयुतः" इति निरुक्तिः। "नक्षत्रनेमिर्नक्षत्री क्षमः क्षामः समीहनः" वि० स०। 2. ಕ್ಷೀಣತೆ, ಕಡಮೆಯಾಗುವುದು, ಬರ. (वि०) 3 ಬಡಕಲಾದ, ಕ್ಷೀಣವಾದ. "मध्ये क्षामा चकितहरिणीप्रेक्षणा निम्ननाभिः" मेघ० २-१९। 4. ಸ್ವಲ್ಪವಾದ, ಕಡಮೆಯಾದ. "क्षामच्छायं भवनमधुना मद्वियोगेन नूनम्" मेघ० २-१७। 5. ಚಿಕ್ಕದಾದ, ಸಣ್ಣದಾದ 6. ಶಕ್ತಿಕುಂದಿದ, ದುರ್ಬಲವಾದ.

**क्षार ಕ್ಷಾರ** (पुं०) 1. ಲವಣ, ಉಪ್ಪು. क्षर (सञ्चलने) वा "णः" (३-१-१४०)। 2. ಧೂರ್ತ, ಪಟಿಂಗ. 3. ಗಾಜು. 4. ಭಸ್ಮ, ಬೂದಿ. 5. ಲವಣರಸ "क्षारो रसान्तरे धूर्ते लवणे काचभस्मनोः" मेदि० 6. ಗುಡ, ಬೆಲ್ಲ. "क्षारः काचे रसे गुडे। भस्मनि धूर्तलवणे" हेम०। (वि०) 7. ಉಗ್ರವಾದ, ತೀಕ್ಷ್ಣವಾದ, ಕೊರೆಯುವ, ಕೊರೈಸುವ, ಸಹಿಸಲಾಗದ. "मन्दे गन्धवहः क्षारो वह्निरिन्दुश्च जायते। चर्चा चन्दनपातश्च शस्त्रपातः प्रवासिनाम्" काव्या० २-१०४। 8 ಹರಿಯುವ, ಪ್ರವಹಿಸುವ. 9. ಸೋರುವ, ಜಿನುಗುವ,

**क्षारक ಕ್ಷಾರಕ** (ಪುಂ) 1. ಪಕ್ಷಿಗಳ ಬೋನು. 2. ಮೀನು ಮೊದಲಾದುವುಗಳ ಬುಟ್ಟಿ. क्षर (सञ्चलने) "ण्वुल्" (३-१-१३३)। 3. ಹಕ್ಕಿಗಳನ್ನು ಹಿಡಿಯುವ ಬಲೆ. "क्षारकः पक्षिमत्स्यादिपिटके जालकेऽपि च" मेदि०। 4. ರಸ, ಹಣ್ಣು ಕಾಯಿಗಳ ದ್ರವ. 5. ಮೊಗ್ಗು. "क्षारको रसे। कोरके पक्ष्यादिपाशे" हेम०। 6. ರಜಕ, ಅಗಸ.

**क्षारण ಕ್ಷಾರಣ** (ನಂ) 1. ಸೋರಿಸುವುದು. क्षर (सञ्चलने) + णिच् "ल्युट्" (३-३-११५)। 2. ವ್ಯಭಿಚಾರದ ಅಪವಾದ.

**क्षारत्रय ಕ್ಷಾರತ್ರಯ** (ನಂ) ಬಿಳಿಗಾರ ಸೋಡಾಕಾರ್ಬೋನೇಟು ಖನಿಜ ಮತ್ತು ಪೆಟ್ಲುಪ್ಪು (ಯವಕ್ಷಾರ) ಇವು ಕ್ಷಾರತ್ರಯ.

**क्षारदशक ಕ್ಷಾರದಶಕ** (ನಂ) (1) ನುಗ್ಗೆ, (2) ಮೂಲಂಗಿ, (3) ಪಲಾಶ (ಮುತ್ತುಗ), (4) ಚುಕ್ರಿಕಾ (ಪುಲ್ಲಂಪುರಿಚಿ), (5) ಚಿತ್ರಕ (ಚಿತ್ರಮೂಲ), (6) ಆರ್ದ್ರಕ (ಹಸಿಶುಂಠಿ), (7) ನಿಂಬ (ಬೇವು), (8) ಇಕ್ಷು (ಕಬ್ಬು), (9) ಶೈಖರಿಕ (ಉತ್ತರೇಣಿ), ಮತ್ತು (10) ಮೋಚಿಕಾ (ಕೀರೆ) ಇವು ಹತ್ತು (ಕ್ಷಾರದಶಕ) ಕ್ಷಾರದ್ರವ್ಯಗಳು.

**क्षारदेश ಕ್ಷಾರದೇಶ** (ಪುಂ) ಲವಣಪ್ರಧಾನವಾದ ಮಣ್ಣಿನ ಭೂಮಿ. ಚೌಳುಮಣ್ಣಿನ ಭೂಮಿ. क्षारप्रधानो देशः।

**क्षारद्रु ಕ್ಷಾರದ್ರು, –वृक्ष –ವೃಕ್ಷ** (ಪುಂ) ಘಂಟಾಪಾಟಲಿ ವೃಕ್ಷ, ಮೊಕ್ಕಮರ. क्षारप्रधानो द्रुः वृक्षो वा।।

**क्षारनदी ಕ್ಷಾರನದೀ** (ಸ್ತ್ರೀಂ) ನರಕದಲ್ಲಿರುವ ಉಪ್ಪು ನೀರಿನ ಒಂದು ನದಿ. क्षारप्रधाना नदी।

**क्षारपत्र ಕ್ಷಾರಪತ್ರ** (ಪುಂ) ಚಕ್ಕೋತದ ಸೊಪ್ಪು. क्षारः पत्रेऽस्य।

**क्षारभूमि ಕ್ಷಾರಭೂಮಿ** (ಸ್ತ್ರೀಂ) ಉಪ್ಪು ಮಣ್ಣಿನ ಭೂಮಿ, ಚೌಳುಮಣ್ಣಿನ ಭೂಮಿ, ಕರಳು ಭೂಮಿ. क्षारयुक्ता भूमिः।

**क्षारमृत्तिका ಕ್ಷಾರಮೃತ್ತಿಕಾ** (ಸ್ತ್ರೀಂ) ಉಪ್ಪು ಮಣ್ಣು, ಚೌಳುಮಣ್ಣು.

**क्षारमेह ಕ್ಷಾರಮೇಹ** (ಪುಂ) ಪಿತ್ತವಿಕಾರದಿಂದ ಉಂಟಾದ ಒಂದು ಮೂತ್ರ ರೋಗ.

**क्षारमेहिन् ಕ್ಷಾರಮೇಹಿನ್** (ವಿಂ) ಒಂದು ವಿಧ ಮೂತ್ರ ರೋಗವುಳ್ಳವನು. "क्षारमेहिनं त्रिफलाकषायं पाययेत्" सुश्रुत० चिकित्सा० ११-९।

**क्षारषट्क ಕ್ಷಾರಷಟ್ಕ** (ನಂ) (1) ಅಪಾಮಾರ್ಗ (ಉತ್ತರೇಣಿ), (2) ಕುಟಜ (ಬೆಟ್ಟಮಲ್ಲಿಗೆ), (3) ಲಾಂಗಲಿ (ನೀರುಹಿಪ್ಪಲಿ), (4) ತಿಲ ಮತ್ತು (5) ಮುಷ್ಕಕ (ಮೊಕ್ಕಮರ) ಇವು ಕ್ಷಾರಷಟ್ಕ.

**क्षारसमुद्र ಕ್ಷಾರಸಮುದ್ರ** (ಪುಂ) ಉಪ್ಪುನೀರಿನ ಸಮುದ್ರ. क्षारप्रधानः समुद्रः।

**क्षारसूत्र ಕ್ಷಾರಸೂತ್ರ** (ನಂ) ಮೂಲವ್ಯಾಧಿಯ ಚಿಕಿತ್ಸೆಗಾಗಿ ಮೂಲಕ್ಕೆ ಕಟ್ಟುವ ಒಂದು ದಾರ. ದಾರಕ್ಕೆ ಅರಿಸಿನದ ಪುಡಿಯನ್ನು ಸವರಿ ಕಳ್ಳಿಹಾಲಿನಲ್ಲಿ ಚೆನ್ನಾಗಿ ಅದ್ದಿ ಅದನ್ನು ಮೂಲಕ್ಕೆ ಕಟ್ಟಿದರೆ ಮೂಲವನ್ನು ಕತ್ತರಿಸಿ ಮೂಲವ್ಯಾಧಿಯನ್ನು ಗುಣಪಡಿಸುವುದು. "भावितं रजनीचूर्णैः स्नुहीक्षीरे पुनः पुनः। बन्धनात् सुदृढं सूत्रं भिनत्त्यर्शोभगन्दरम्"।

**क्षारिका ಕ್ಷಾರಿಕಾ** (ಸ್ತ್ರೀಂ) ಹಸಿವು. क्षर (सञ्चलने) "ण्वुल्" (३-१-१३३)। "क्षुत् क्षारिका भोगपिशाचिका च" हारा०।

**क्षारित ಕ್ಷಾರಿತ** (ವಿಂ) 1. ವ್ಯಭಿಚಾರದ ಅಪವಾದದಿಂದ ಕೂಡಿದ, ವ್ಯಭಿಚಾರದ ದೋಷಕ್ಕೆ ಸಿಲುಕಿದವನು. क्षर (सञ्चलने) +णिच् "क्तः" (३-२-१०२)। 2. ಸೋರುವಂತೆ ಮಾಡಲ್ಪಟ್ಟ, ಸ್ರವಿಸುವಂತೆ ಮಾಡಲ್ಪಟ್ಟ.

**क्षारोद ಕ್ಷಾರೋದ** (ಪುಂ) ಲವಣಸಮುದ್ರ, ಉಪ್ಪು ಸಮುದ್ರ. क्षारः उदकेऽस्य वा उदादेशः (वा० ६-३-५७)। ಇದು ಸಪ್ತ ಸಮುದ್ರಗಳಲ್ಲೊಂದು. "क्षारोदेक्षुरसोदसुरोदघृतोदक्षीरोददधिमण्डोदशुद्धोदाः सप्तजलधयः" भाग० ५-१-३३।

**क्षाल ಕ್ಷಾಲ** (ಪುಂ) ತೊಳೆಯುವುದು, ಶುದ್ಧಿಮಾಡುವುದು. क्षल (शौचकर्मणि) + णिच् "घञ्" (३-३-१८)।

**क्षालन ಕ್ಷಾಲನ** (ನಂ) 1. ತೊಳೆಯುವುದು, ಶುದ್ಧಿಮಾಡುವುದು. क्षल (शौचकर्मणि) + णिच् भावे "ल्युट्" (३-३-११५)। (ವಿಂ) 2. ತೊಳೆಯುವ, ಶುದ್ಧಿಮಾಡುವ. क्षल कर्त० "ल्युः" (३-१-१३४)।

**क्षालनीय ಕ್ಷಾಲನೀಯ** (ವಿಂ) 1. ತೊಳೆಯಲ್ಪಡುವ. 2. ತೊಳೆಯಲು ಶಕ್ಯವಾದ. 3. ತೊಳೆಯಲು ಯೋಗ್ಯವಾದ. क्षल (शौचकर्मणि) + णिच् कर्मादौ "अनीयर्" (३-१-९६)। "तव्यः"। **क्षालयितव्यः ಕ್ಷಾಲಯಿತವ್ಯ**।

**क्षालयत् ಕ್ಷಾಲಯತ್** (ವಿಂ) ತೊಳೆಯುತ್ತಿರುವ, ಶುದ್ಧಿಮಾಡುತ್ತಿರುವ. क्षल (शौचकर्मणि) + णिच् "शतृ"

(३-२-१२४)। स्त्रियाम् "ङीप्" (४-१-६)। -यन्ती -ಯಂತೀ.

**क्षालयितृ ಕ್ಷಾಲಯಿತೃ** (वि०) ತೊಳೆಯುವ, ಶುದ್ಧಿ ಮಾಡುವ. क्षल (शौचकर्मणि)+णिच् "तृच्" (३-१-१३३)। स्त्रियाम् "ङीप्" (४-१-५)। -यित्री -ಯಿತ್ರೀ.

**क्षालित ಕ್ಷಾಲಿತ** (वि०) ತೊಳೆಯಲ್ಪಟ್ಟ, ಶುದ್ಧಿಮಾಡಲ್ಪಟ್ಟ. क्षल (शौचकर्मणि)+णिच् "क्तः" (३-२-१०२)। "मलिनं रणरेणुभिर्मुहुर्द्विषतां क्षालितमङ्गनाश्रुभिः" माघ० १६-६२।

**क्षाल्यमान ಕ್ಷಾಲ್ಯಮಾನ** (वि०) ತೊಳೆಯಲ್ಪಡುತ್ತಿರುವ. क्षल (शौचकर्मणि)+णिच् "शानच्" (३-२-१२४)।

**क्षि – क्षये** (भ्वा० पर० अक० अन्तर्भावितण्यर्थस्तु सक० से०)। क्षयति। चिक्षाय। क्षेता। क्षेष्यति। क्षयतु। अक्षयत्। क्षयेत्। क्षीयात्। अक्षैषीत्। अक्षेष्यत्। ಕ್ಷಯಹೊಂದು, ಕ್ಷೀಣಿಸು, ಕಡಮೆಯಾಗು.

**भावे**:—क्षीयते। चिक्षिये। क्षायिता, क्षेता। क्षायिष्यते, क्षेष्यते। क्षीयताम्। अक्षीयत। क्षीयेत। क्षायिषीष्ट, क्षेषीष्ट। अक्षायि। अक्षायिष्यत, अक्षेष्यत।

**णिचि**:—क्षाययति, -ते। क्षययां चकार, -चक्रे, -बभूव, -आस। क्षाययिता। क्षाययिष्यति, -ते। क्षाययतु, -ताम्। ಇತ್ಯಾದಿ.

**कर्मणि**:—क्षाय्यते। क्षाययां -चक्रे, -बभूवे, -आसे। क्षाययिता, क्षायिता। क्षाययिष्यते, क्षायिष्यते। क्षाय्यताम्। अक्षाय्यत। ಇತ್ಯಾದಿ.

**सनि**:—चिक्षीषति। चिक्षीषां चकार, -बभूव, -आस। ಇತ್ಯಾದಿ.

**कृत्सु**:—क्षेतव्यम्। क्षयणीयम्। क्षय्यम् (क्षेतुं शक्यम्)। क्षेयम् (क्षेतुं योग्यम्)। क्षीणः। क्षीणवान्। (आदिकर्मणि कर्तरि क्तः अण्यदर्थे दीर्घः)। भावकर्मणोस्तु क्षितः कामो मया। आक्रोशे दैन्ये च वा दीर्घः। क्षीणायुर्भव क्षितायुर्वा। क्षीणोऽयं तपस्वी क्षितो वा। क्षयन्, क्षयन्ती। क्षेतुम्। क्षितम्। क्षयणम्। क्षित्वा। प्रक्षीय।

**क्षि – निवासगत्योः** (तुदा० पर० अक० अनि०)। क्षियति। चिक्षाय। क्षेता। क्षेष्यति, क्षियतु। अक्षीयत्। क्षियेत्। ಇತ್ಯಾದಿ. ಉಳಿದೆಲ್ಲ ರೂಪಗಳೂ क्षि (क्षये) ಧಾತುವಿನ ರೂಪಗಳಂತಾಗುವುವು. 1. ವಾಸಮಾಡು. 2. ನಡೆ, ಸಂಚರಿಸು, ಚಲಿಸು.

**क्षि – हिंसायाम्** (स्वा० पर० सक० अनि०)। क्षिणोति। चिक्षाय। क्षेता। क्षेष्यति। क्षिणोतु। अक्षिणोत्। क्षिणुयात्। ಇತ್ಯಾದಿ. ಉಳಿದೆಲ್ಲ ರೂಪಗಳೂ क्षि (क्षये) ಧಾತುವಿನ ರೂಪಗಳಂತಾಗುವುವು. ಹಿಂಸಿಸು. ಪೀಡಿಸು. ನೋಯಿಸು.

**क्षि ಕ್ಷಿ** (स्त्री०) 1. ನಿವಾಸ, ವಾಸಸ್ಥಳ, ಮನೆ. 2. ಗಮನ, ಚಲನೆ, ಸಂಚಾರ. क्षि (निवासगत्योः) "डिः" बाहु०। 3. ಕ್ಷಯ, ಕಡಮೆಯಾಗುವುದು. क्षि (क्षये) "डिः"। "क्षिर्निवासे गतौ क्षये" मेदि०। 4. ಹಿಂಸೆ, ಪೀಡೆ, ನೋವು.

**क्षित ಕ್ಷಿತ** (न०) 1. ಹಿಂಸಿಸುವುದು, ಪೀಡಿಸುವುದು, ನೋಯಿಸುವುದು. क्षि (हिंसायाम्) भावे "क्तः" (३-३-११४)। (वि०) 2. ಹಿಂಸಿಸಲ್ಪಟ್ಟ, ನೋಯಿಸಲ್ಪಟ್ಟ. क्षि कर्मं० "क्तः" (३-२-१०२)। क्षितः कामो मया। 3. ಕಡಮೆಮಾಡಲ್ಪಟ್ಟ. 4. ನಾಶಪಡಿಸಲ್ಪಟ್ಟ. क्षि (क्षये) कर्मं० "क्तः" (३-२-१०२)। 5. ಕಡಮೆಯಾದ. क्षि (क्षये) कर्त० "क्तः" (३-४-७१)। क्षितायुर्भव।

**क्षिति ಕ್ಷಿತಿ** (स्त्री०) 1. ಪೃಥಿವಿ, ಭೂಮಿ. क्षि (निवासे) "क्तिच्" (३-३-१७४)। "क्षुण्णासु क्षितिषु क्षिपन्निव यशःक्षोणीजबीजव्रजम्" नैष० १२-६६। "क्षितिप्रतिष्ठोऽपि मुखारविन्दैर्वधूजनश्चन्द्रमधश्चकार" माघ० ३-५२। 2. ನಿವಾಸ, ಮನೆ, ವಾಸಸ್ಥಳ. क्षि (निवासे) अधि० "क्तिन्" (३-३-९४)। 3. ಪ್ರಳಯಕಾಲ, ಜಗತ್ತಿನ ಕೊನೆಯಕಾಲ. 4. ಕ್ಷಯ, ಅವನತಿ, ಕಡಮೆಯಾಗುವುದು. "क्षितिर्निवासे मेदिन्यां कालभेदे क्षये स्त्रियाम्" मेदि०। 5. ಮನುಷ್ಯ. 6. ಕೆಂಪು ಬೂರುಗದ ಮರ. 7. ನಾಶ.

**क्षितिकण ಕ್ಷಿತಿಕಣ** (पुं०) ಭೂಮಿಯ ಧೂಳು. "वातकेतुः क्षितिकणः स्यात् पांशुर्मेदिनीद्रवः" त्रिकाण्ड०।

**क्षितिकम्प ಕ್ಷಿತಿಕಂಪ** (पुं०) ಪರ್ವತಗಳ ಚಲನೆಯಿಂದ ಆಗುವ ಭೂಮಿಯ ನಡುಕ, ಭೂಕಂಪ, ಭೂಮಿಯು ಅಲುಗಾಡುವುದು. क्षितेः कम्पः। ಭೂಮಿಯನ್ನು ಹೊತ್ತಿರುವ ಗಜಗಳು ಆದಿಶೇಷ ಕೂರ್ಮ ಇವುಗಳ ಚಲನೆಯಾದರೆ ಪರ್ವತಗಳು ಚಲಿಸಿ ಭೂಕಂಪವಾಗುವುದು. "मेषे वृश्चिकभे गजः प्रचलति व्यासादिभिः कथ्यते चापे मीनकुलीरभे च वृषभे सत्यं चलेत् कच्छपः। यूके कुम्भवरे मृगेन्द्रमिथुने कन्यामृगे पन्नगस्तेषामेकतमो यदि प्रचलति क्षोणी

तदा कम्पते"। ಕೂರ್ಮವೂ ಆದಿಶೇಷನೂ ಚಲಿಸಿದರೆ ಭೂಮಿಯಲ್ಲಿ ಮರಣವುಂಟಾಗುವುದು. ಗಜಗಳು ಚಲಿಸಿದರೆ ಭೂಮಿಯಲ್ಲಿ ಎಲ್ಲಾ ಕಡೆಗಳಲ್ಲೂ ಸೌಖ್ಯವುಂಟಾಗುವುದು. "कच्छपे मरणं ज्ञेयं मरणं चापि पन्नगे। सर्वत्र सुखदं चैव पृथिव्यां चलिते गजे"। ತಿಂಗಳಿನ ಮೂರು, ನಾಲ್ಕು ಮತ್ತು ಐದನೆಯ ದಿನಗಳಲ್ಲಿಯೂ ಪಕ್ಷದ ಮೂರು ಮತ್ತು ಐದನೆಯ ದಿನಗಳಲ್ಲಿಯೂ ಭೂಕಂಪವು ಸಂಭವಿಸಿದರೆ ಪ್ರಧಾನನಾದ ದೊರೆಯ ನಾಶವಾಗುವುದು. "त्रिचतुर्थपञ्चमदिने मासे पक्षे त्रिपञ्चके। भवति यदा भूकम्पः प्रधाननृपनाशनं कुरुते" अद्भुतसा०। "क्षितिभृदिव क्षितिकम्पकीर्णशृङ्गः" भट्टि० ४-४५।

**क्षितिक्षित् ಕ್ಷಿತಿಕ್ಷಿತ್** (पुं०) ಭೂಮಿಯ ಒಡೆಯ, ರಾಜ, ದೊರೆ. क्षितिं क्षियति — क्षि (निवासगत्योः) "क्विप्" (३-२-७६)। "क्षितिपतिष्वेवासौ क्षितिक्षित्" इति भट्टमल्लः इति माघव्याख्याने मल्लिनाथः। "अपदान्तरं च परितः क्षितिक्षितामपतन् द्रुतभ्रमितहेमनेमयः" माघ० १३-४।

**क्षितिक्षोद ಕ್ಷಿತಿಕ್ಷೋದ** (पुं०) ಪಾಂಸು, ರಜಸ್ಸು, ಭೂಮಿಯ ಧೂಳು. क्षितेः क्षोदः।

**क्षितिज ಕ್ಷಿತಿಜ** (पुं०) 1. ಅಂಗಾರಕ, ಕುಜಗ್ರಹ. 2. ನರಕಾಸುರ. 3. ವೃಕ್ಷ, ಮರ. 4. ಭೂನಾಗ, ಮಣ್ಣುಹುಳು, ಎರುಬಾಹುಳು. क्षितेर्जायते — जनी (प्रादुर्भावे) "डः" (३-२-९८)। (न०) 5. ದಿಗಂತ, ಬಾನಿನ ಅಂಚು, ಭೂಮಿಯೂ ಆಕಾಶವೂ ಸೇರುವಂತೆ ಕಾಣುವ ರೇಖೆ. (स्त्री०) **-जा -ಜಾ.** 6. ಸೀತಾದೇವಿ, ಜಾನಕಿ. (वि०) 7. ಭೂಮಿಯಲ್ಲಿ ಹುಟ್ಟಿದ.

**क्षितितट ಕ್ಷಿತಿತಟ** (न०) ಭೂತಲ, ಭೂಮಿಯ ಮೇಲುಮೈ, ಭೂಮಿಯ ಹೊರಮೈ. क्षितेस्तटम्। "क्षिततटशयनान्तादुत्थितं दानपङ्कप्लुतबहुलशरीरं शाययत्येष भूयः" माघ० ११-७।

**क्षितितनय ಕ್ಷಿತಿತನಯ** (पुं०) 1. ಕುಜಗ್ರಹ, ಅಂಗಾರಕ. 2. ನರಕಾಸುರ. क्षितेस्तनयः। (स्त्री०) **-तनया -ತನಯಾ.** 3. ಸೀತಾದೇವಿ. एवं **-पुत्रः -ಪುತ್ರಃ, -सुतः -ಸುತಃ, -सूनुः -ಸೂನುಃ** ಇತ್ಯಾದಿ. "व्यक्ततवं नियतमनेन निन्युरस्याः सापत्न्यं क्षितिसुतविद्विषो महिष्यः" माघ० ८-१५।

**क्षितितल ಕ್ಷಿತಿತಲ** (न०) ಭೂಮಿಯ ಮೇಲುಮೈ, ಭೂಮಿಯ ಹೊರಮೈ. क्षितेस्तलम्। "भैमीमवाप्यत जन्यजनस्तदन्यं गङ्गामिव क्षितितलं रघुवंशदीपः" नैष० ११-९५।

**क्षितिदेव ಕ್ಷಿತಿದೇವ** (पुं०) ಭೂಸುರ, ಭೂದೇವ, ಬ್ರಾಹ್ಮಣ. क्षितौ देव इव।

**क्षितिधर ಕ್ಷಿತಿಧರ** (पुं०) ಪರ್ವತ, ಬೆಟ್ಟ. क्षितिं धारयति— धृ (धारणे) + णिच् "खच्" (३-२-४६)। ह्रस्वः (६-४-९४)। "भुवनतलमशेषं प्रत्यवेक्षिष्यमाणः क्षितिधरतटपीठादुत्थितः सप्तसप्तिः" माघ० ११-४८।

**क्षितिधेनु ಕ್ಷಿತಿಧೇನು** (स्त्री०) ಧೇನುವಿನಂತಿರುವ ಭೂಮಿ. क्षितिर्धेनुरिव। "राजन् दुधुक्षसि यदि क्षितिधेनुमेनां तेनाद्य वत्समिव लोकममुं पुषाण" भर्तृ० २-३७।

**क्षितिनाथ ಕ್ಷಿತಿನಾಥ, -पति -ಪತಿ, -भर्तृ -ಭರ್ತೃ** (पुं०) ಭೂಮಿಯ ಒಡೆಯ, ರಾಜ, ದೊರೆ. क्षितेः नाथः पतिः भर्ता वा। "परिशिशिलषुः क्षितिपतीन् क्षितीश्वराः कुलिशात्परेण गिरयो गिरीनिव" माघ० १३-१५। "इदं निगद्य क्षितिभर्तरि स्थिते तयाभ्यधायि स्वगतं विदग्धया" नैष० ९-२२।

**क्षितिप ಕ್ಷಿತಿಪ** (पुं०) ಭೂಮಿಯನ್ನು ರಕ್ಷಿಸುವ ರಾಜ, ದೊರೆ. क्षितिं पाति—पा (रक्षणे) "कः" (३-२-३)। "क्षितिपेन तावदनपेक्षितक्रमं भुजपञ्जरेण रभसादगृह्यत" माघ० १३-९।

**क्षितिपाल ಕ್ಷಿತಿಪಾಲ** (पुं०) ಭೂಮಿಯನ್ನು ಕಾಪಾಡುವ ರಾಜ, ದೊರೆ. क्षितिं पालयति—पाल (रक्षणे) + णिच् "अण्" (३-२-१)। "शिलोच्चयोऽपि क्षितिपालमुच्चैः प्रीत्या तमेवार्थमभाषतेव" रघु० २-५१। "ण्वुल्" (३-१-१३३)। **-पालकः -ಪಾಲಕಃ.**

**क्षितिभुज् ಕ್ಷಿತಿಭುಜ್** (पुं०) ರಾಜ, ದೊರೆ. क्षितिं भुङ्क्ते—भुज (पालनाभ्यवहारयोः) "क्विप्" (३-२-७६)। "इतरानपि क्षितिभुजोऽनुजन्मनः प्रमनाः प्रमोदपरिफुल्लचक्षुषः" माघ० १३-१४।

**क्षितिभृत् ಕ್ಷಿತಿಭೃತ್** (पुं०) 1. ರಾಜ, ದೊರೆ. क्षितिं बिभर्ति — डु भृञ् (धारणपोषणयोः) "क्विप्" (३-२-७६)। "दूष्यैरिव क्षितिभृतां द्विरदैरुदारतारावलीविरचनैर्व्यरुचन्निवासाः" माघ० ५-२१। 2. ಪರ್ವತ, ಬೆಟ್ಟ. "अमुना धनैः क्षितिभृतातिभृता समतीत्य भाति जगती जगती" किरा० ५-२०।

**क्षितिरुह् ಕ್ಷಿತಿರುಹ್** (पुं०) ವೃಕ್ಷ, ಮರ. क्षितौ रोहति – रुह (बीजजन्मनि प्रादुर्भावे च) "विवप्" (३-२-७६)। "कः" (३-१-१३५)। **–रुहः –ರುಹಃ.** "तव कितव! किमाहितैर्वृथा नः क्षितिरुहपल्लवपुष्पकर्णपूरैः" माघ० ७-५४।

**क्षितिव्युदास ಕ್ಷಿತಿವ್ಯುದಾಸ** (पुं०) ಭೂಗೃಹ, ಭೂಮಿಯೊಳಗಿನ ಗುಹೆ. क्षितिं व्युदस्यति – वि+उद्+अस् (क्षेपणे) "अण्" (३-२-१)।

**क्षितीन्द्र ಕ್ಷಿತೀಂದ್ರ** (पुं०) ರಾಜ, ದೊರೆ. क्षितौ इन्द्र इव। **–पाकशासनः –ಪಾಕಶಾಸನಃ.**

**क्षितीश ಕ್ಷಿತೀಶ** (पुं०) 1. ವಿಷ್ಣು, ಪರಮಾತ್ಮ. क्षितेरीष्टे तद्द्वारावतरणसमर्थो भवति – ईश (ऐश्वर्ये) "कः" (३-१-१३५)। "भूभारक्लेशहारी यः क्षितीशः स च कथ्यते" इति निरुक्तिः। "देवकीनन्दनः स्रष्टा क्षितीशः पापनाशनः" वि० स०। 2. ಭೂಮಿಯ ಒಡೆಯ, ರಾಜ, ದೊರೆ. क्षितेरीशः। "ततः क्षितीशः स निजां तनूजां मध्ये महाराजकमाजुहाव" नैष० १०-९२। **–ईश्वरः –ಈಶ್ವರಃ.** "कौशिकेन स किल क्षितीश्वरो राममध्वरविघातशान्तये" रघु० ११-१।

**क्षित्यदिति ಕ್ಷಿತ್ಯದಿತಿ** (पुं०) ಭೂಮಿಯ ಅದಿತಿ, ದೇವಕಿ.

**क्षिप – प्रेरणे** (दिवा० पर० सक० अनि०)। क्षिप्यति। चिक्षेप। क्षेप्ता। क्षेप्स्यति। क्षिप्यतु। अक्षिप्यत्। क्षिप्येत्। ಇತ್ಯಾದಿ. 1. ಎಸೆ, ಬಿಸಾಡು. 2. (ಬಾಣವನ್ನು) ಪ್ರಯೋಗಿಸು. "वारुणं लक्ष्मणोऽक्षिप्यदक्षिपद्रौद्रमिन्द्रजित्" भट्टि० १७-४३।

**कर्मणि:**—क्षिप्यते। चिक्षिपे। क्षेप्ता। क्षेप्स्यते। क्षिप्यताम्। अक्षिप्यत। ಇತ್ಯಾದಿ.

**कृत्सु:**—क्षेप्तव्यम्। क्षेपणीयम्। क्षेप्यः। क्षिप्तः। क्षिप्तवान्। क्षिप्यन्, क्षिप्यन्ती। क्षेप्तुम्। क्षिप्तम्। क्षेपणम्। क्षिप्त्वा। प्रक्षिप्य। [ಈ ಧಾತುವಿಗೆ ಉಪಸರ್ಗಗಳ ಯೋಗದಿಂದ ಉಂಟಾಗುವ ಅರ್ಥಭೇದಗಳಿಗೆ तुदा० क्षिप (प्रेरणे) ಧಾತುವಿನಲ್ಲಿ ನೋಡಿ.]

**क्षिप – प्रेरणे** (तुदा० उभ० सक० अनि०)। क्षिपति, –ते। चिक्षेप, चिक्षिपे। क्षेप्ता। क्षेप्स्यति, –ते। क्षिपतु, –ताम्। अक्षिपत्, अक्षिपत। क्षिपेत्, –त। क्षिप्यात्, क्षिप्सीष्ट। अक्षैप्सीत्, अक्षिप्त। अक्षेप्स्यत्, –त। 1. ಎಸೆ, ಬಿಸಾಡು. 2. ಕಳುಹಿಸು, ಹೊರಡಿಸು. 3. (ಬಾಣವನ್ನು) ಪ್ರಯೋಗಿಸು. "अक्षिपद्रौद्रमिन्द्रजित्" भट्टि० १७-४३। 4. ಇಡು, ಇರಿಸು. 5. ತೆಗೆದು ಹಾಕು, ತಳ್ಳಿಹಾಕು. 6. ದೂಷಿಸು. 7. ಹರಡು. 8. ಕೊಲ್ಲು.

**कर्मणि:**—क्षिप्यते। क्षिप्यताम्। अक्षिप्यत। क्षिपेत। अक्षेपि। ಉಳಿದ ರೂಪಗಳು ಕರ್ತೃಲಕಾರದ ಆತ್ಮನೇಪದದ ರೂಪಗಳಂತಾಗುತ್ತವೆ.

**णिचि:**—क्षेपयति, –ते। क्षेपयां चकार, –चक्रे, –बभूव, –आस। क्षेपयिता। क्षेपयिष्यति, –ते। क्षेपयतु, –ताम्। अक्षेपयत्, –त। क्षेपयेत्, –त। क्षेप्यात्, क्षेपयिषीष्ट। ಇತ್ಯಾದಿ.

**सनि:**—चिक्षिप्सति, –ते ಇತ್ಯಾದಿ.

**कृत्सु:**—क्षेप्तव्यम्। क्षेपणीयम्। क्षेप्यः। क्षिप्तम्। क्षिप्तवान्। क्षिपन्, क्षिपती, क्षिपन्ती। क्षिपमाणः। क्षेप्तुम्। क्षिप्तम्। क्षेपणम्। क्षिप्त्वा। निक्षिप्य।

**ಈ ಧಾತುವಿಗೆ ಉಪಸರ್ಗಗಳ ಯೋಗದಿಂದ ಉಂಟಾಗುವ ಅರ್ಥಭೇದಗಳು:**

**(1) अति + क्षिप** = अतिक्षिपति। अतिक्षिप्तः। ದೂರಕ್ಕೆ ತಳ್ಳು, ದೂರಕ್ಕೆ ಎಸೆ. ಅತಿಕ್ಷಿಪ್ತವೆಂಬುದು ಅಸ್ಥಿಭಂಗದ ಭೇದವಾದ ಆರು ವಿಧ ಸಂಧಿಮುಕ್ತಗಳಲ್ಲೊಂದು. ಶರೀರದಲ್ಲಿ ಮೂಳೆಗಳು ಸೇರಿಕೊಂಡಿರುವ ಕೀಲುಗಳು ಸಂಧಿಗಳು. ಆಘಾತಾದಿಗಳಿಂದ ಆ ಸಂಧಿಗಳ ಭಂಗವುಂಟಾದರೆ ಅದು "ಸಂಧಿಮುಕ್ತ"ವೆನಿಸುವುದು. ಇದು (1) उत्पिष्टम्, (2) विश्लिष्टम्, (3) विवर्तितम्, (4) अवक्षिप्तम्, (5) अतिक्षिप्तम् ಮತ್ತು (6) तिर्यक्क्षिप्तम् ಎಂದು ಆರು ವಿಧ. सुश्रुत० निदान० १५-५। ಎರಡು ಮೂಳೆಗಳೂ ಸಂಧಿಭಂಗದಿಂದ ದೂರಕ್ಕೆ ಸರಿದು ಹೋಗುವುದು "अतिक्षिप्त"ವು. ಇದು ಬಹಳ ವೇದನೆಯನ್ನುಂಟುಮಾಡುವುದು. "अतिक्षिप्ते द्वयोः सन्ध्यस्थ्नोरतिक्रान्तता वेदना च" सुश्रुत० निदान० १५-७।

**(2) अधि + क्षिप** = अधिक्षिपति। अधिक्षेपः। ತಿರಸ್ಕರಿಸು. "भवादृशेषु प्रमदाजनोचितं भवत्यधिक्षेप इवानुशासनम्" किरा० १-२८।

**(3) अव + क्षिप** = अवक्षिपति। अवक्षेपणम्। 1. ಕೆಳಗೆ ಇರಿಸು. 2. ಕೆಳಕ್ಕೆ ಎಸೆ. "उत्क्षेपणं तथावक्षेपणमाकुञ्चनं तथा" भाषाप०। 3. ನಿಂದಿಸು, ದೂಷಿಸು.

**(4) आ+क्षिप**=आक्षिपति। आक्षेपः। 1. ಆಕರ್ಷಿಸು, ಹಿಂದಕ್ಕೆ ಎಳೆ. "वदनमपहरन्तीं तत्कृताक्षेपमीशः"

कुमा० ७-९५। 2. ಹೆದರಿಸು. 3. ತಿರಸ್ಕರಿಸು. "विरुद्धमाक्षेपवचस्तितिक्षितम्" किरा० १४-२५। 4. ಇಡು, ಇರಿಸು. "गोरोचनाक्षेपनितान्तगौरे" कुमा० ७-१५। 5. ಎಸೆ, ಬಿಸಾಡು. 6. ತೆಗೆದುಹಾಕು. "ते जग्मुरद्रिपतयः सरसीर्विगाढुमाक्षिप्तकेतुकुथसैन्यगजच्छलेन" माघ० ५-३१। ಇತ್ಯಾದಿ.

(5) परि+आ+क्षिप = पर्याक्षिपति। पर्याक्षिपत्। ಬಂಧಿಸು. ಕಟ್ಟು. "पर्याक्षिपत्काचिदुदारबन्धम्" कुमा० ७-१४।

(6) उद्+क्षिप = उत्क्षिपति। उत्क्षेपः। उत्क्षेपणम्। 1. ಮೇಲೆ ಇಡು. ಮೇಲಕ್ಕೆ ಎಸೆ. "उत्क्षेपणं तथावक्षेपणमाकुञ्चनं तथा" भाषाप०। 2. ಮೇಲಕ್ಕೆ ಹಾರು. "बिन्दूत्क्षेपान् पिपासुः परिसरति शिखी भ्रान्तिमद्वारियन्त्रम्" माल० २-१२। 3. ಮೇಲಕ್ಕೆ ಎತ್ತು, ಮೇಲಕ್ಕೆ ಎತ್ತಿ ಹಿಡಿ. "उत्क्षिप्तकाण्डपटकान्तरलीयमानमन्दानिलप्रशमितश्रमघर्मतोयैः" माघ० ५-२२।

(7) नि + क्षिप = निक्षिपति। निक्षेपः। ಇಡು, ಇರಿಸು. "अन्नं भूमौ श्वचण्डालवायसेभ्यश्च निक्षिपेत्" याज्ञ० १-१०३।

(8) परि + क्षिप = परिक्षिपति। परिक्षेपः। ಸುತ್ತಲೂ ಇಡು, ಸುತ್ತಲೂ ಹರಡು. "गङ्गास्रोतःपरिक्षिप्तं वप्रान्तर्ज्वलितौषधि" कुमा० ६-३८।

(9) प्र+क्षिप = प्रक्षिपति। प्रक्षेपः। 1. ಚೆನ್ನಾಗಿ ಇಡು, ಸರಿಯಾಗಿ ಇರಿಸು. 2. ಎಸೆ, ಬಿಸಾಡು. "नामेध्यं प्रक्षिपेदग्नौ न च पादौ प्रतापयेत्" मनु० ४-५३। 3. ಒಳಸೇರಿಸು, ಗ್ರಂಥದಲ್ಲಿ ಹೊಸದಾಗಿ ವಿಷಯವನ್ನು ಸೇರಿಸು.

(10) प्रति + क्षिप = प्रतिक्षिपति। प्रतिक्षेपः। 1. ತಡೆ, ಪ್ರತಿರೋಧಿಸು. ಅಡ್ಡಿಪಡಿಸು. "अन्तः सिराणां श्वसनः स्थितो दृष्टिं प्रतिक्षिपन्" सुश्रुत०। 2. ಅಧಿಕ್ಷೇಪ ಮಾಡು, ತಿರಸ್ಕರಿಸು. 3. ನಿವಾರಿಸು, ಹೋಗಲಾಡಿಸು.

(11) वि+क्षिप = विक्षिपति। विक्षेपः। 1. ಚೆನ್ನಾಗಿ ಎಸೆ, ಬಿಸಾಡು. "विक्षिप्यमाणा धनुषा नरेन्द्राः" भा०। 2. ಕದಲು, ಬೇರೆ ಕಡೆಗೆ ಚಲಿಸು. (ಯೋಗಕ್ಕೆ ಅಡ್ಡಿ ಮಾಡುವ ಚಿತ್ತಚಾಂಚಲ್ಯರೂಪವಾದ ಅರ್ಥದಲ್ಲಿ) "लये संबोधयेत् चित्तं विक्षिप्तं शमयेत् पुनः"।

(12) सम्+क्षिप = संक्षिपति। संक्षेपः। ಸಂಗ್ರಹಿಸು, ವಿಸ್ತಾರವಾದುದನ್ನು ಚಿಕ್ಕದಾಗಿ ಮಾಡು. "आतपात्ययसंक्षिप्तनीवारासु निषादिभिः" रघु० १-५२।

**क्षिप ಕ್ಷಿಪ** (वि०) 1. ಎಸೆಯುವವನು, ಬಿಸಾಡುವವನು. क्षिप (प्रेरणे) "कः" (३-१-१३५)। 2. ಇಡುವವನು, ಇರಿಸುವವನು.

**क्षिपक ಕ್ಷಿಪಕ** (पुं०) 1. ಬಿಲ್ಲುಗಾರ, ಬಾಣವನ್ನು ಪ್ರಯೋಗಿಸುವವನು. (वि०) 2. ಇಡುವವನು, ಇರಿಸುವವನು. क्षिप स्वार्थे "कः" (५-३-७३)। स्त्रियाम् "टाप्" (४-१-४)। अस्य नेत्त्वम् (वा० ७-३-४५)। **क्षिपका ಕ್ಷಿಪಕಾ.**

**क्षिपण ಕ್ಷಿಪಣ** (न०) 1. ಇಡುವುದು, ಇರಿಸುವುದು. क्षिप (प्रेरणे) "क्युः" वाहु०। (वि०) 2. ಎಸೆಯುವವನು, ಬಿಸಾಡುವವನು.

**क्षिपणि ಕ್ಷಿಪಣಿ** (पुं०) 1. ಅಸ್ತ್ರ, ಆಯುಧ. क्षिप्यते — क्षिप (प्रेरणे) कर्म० "अनिः" (उ० २-१०७)। स च कित्। कित्त्वान्न गुणः। 2. ವೇಗವಾಗಿ ಓಡುವ ಕುದುರೆ ಮೊದಲಾದುವುಗಳ ನಾಗಾಲೋಟ. 3. ಬಲೆ. 4. ಮೀನಿನ ಬಲೆ. 5. ಅಧ್ವರ್ಯು, ಯಜುರ್ವೇದದ ಮಂತ್ರವನ್ನು ಹೇಳುವ ಋತ್ವಿಕ್ಕು. (स्त्री०) 6. ನೌಕಾದಂಡ. ಹಡಗನ್ನು ನಡೆಸುವ ಗಡೆ (ಜಲ್ಲೆ). क्षिप करः० "अनिः" वा "ङीप्" (ग० ४-१-४५)। **–णी – ಣೀ.**

**क्षिपणु ಕ್ಷಿಪಣು** (पुं०) 1. ವಾತ, ಗಾಳಿ. क्षिप (प्रेरणे) "अनुङ्" (उ० ३-५२)। "क्षिपणुर्वातः" उणा०। "श्वश्वासः क्षिपणुर्धूलिध्वजः सरयुरङ्कुतिः" त्रिकाण्ड०। 2. ಅಸ್ತ್ರ, ಆಯುಧ. 3. ವ್ಯಾಧ, ಬೇಡರವನು.

**क्षिपण्यु ಕ್ಷಿಪಣ್ಯು** (पुं०) 1. ವಸಂತಋತು. क्षिप (प्रेरणे) "कन्युच्" (उ० ३-५१)। "क्षिपण्युर्वसन्तः" इत्युज्ज्वलदत्तः। 2. ಶರೀರ, ಮೈ. 3. ವಾಸನಾದ್ರವ್ಯ. (वि०) 4. ಸುವಾಸನೆಯುಳ್ಳ, ಪರಿಮಳವುಳ್ಳ. "क्षिपण्युस्तु पुमान् देहे सुरभौ वाच्यलिङ्गकः" मेदि०।

**क्षिपत् ಕ್ಷಿಪತ್** (वि०) 1. ಎಸೆಯುತ್ತಿರುವ, ಬಿಸಾಡುತ್ತಿರುವ, ಎರಚುತ್ತಿರುವ. क्षिप (प्रेरणे) "शतृ" (३-२-१२४)। "सविक्रमक्रमणचलैरितस्ततः प्रकीर्णकैः क्षिपत इव क्षिते रजः" माघ० १७-३६। 2. ಇಡುತ್ತಿರುವ, ಇರಿಸುತ್ತಿರುವ. "क्षुण्णासु क्षितिषु क्षिपन्निव यशःक्षोणीजबीजव्रजम्" नैष० १२-६६। 3. (ಬಾಣವನ್ನು) ಪ್ರಯೋಗಿಸುತ್ತಿರುವ,– ಬಿಡುತ್ತಿರುವ. "इतीव चापं दधदाशुगं क्षिपन्नयं नयं सम्यगुपादिशद्द्विषाम्" नैष० १२-३४। 4. ಹರಡುತ್ತಿರುವ, 5. ತೆಗೆದುಹಾಕು

ತ್ತಿರುವ, ತಳ್ಳಿಹಾಕುತ್ತಿರುವ. "नाव्यं पयः केचिदतारिषुर्भुजैः क्षिपद्भिरूर्मीनपरैरिवोर्मिभिः" माघ० १२-७६। 6. ದೂಷಿಸುತ್ತಿರುವ. 7. ಕೊಲ್ಲುತ್ತಿರುವ. 8. ಹೊರಡಿಸುತ್ತಿರುವ. स्त्रियाम् "ङीप्" (४-१-६)। **क्षिपती, क्षिपन्ती ಕ್ಷಿಪತೀ, ಕ್ಷಿಪಂತೀ.** "शानच्" (३-२-१२४)। **क्षिपमाणः ಕ್ಷಿಪಮಾಣಃ.** स्त्रियाम् "टाप्" (४-१-४)। **–माणा – ಮಾಣಾ.**

**क्षिपति ಕ್ಷಿಪತಿ** (पुं०) ಬಾಹು, ತೋಳು.

**क्षिपा ಕ್ಷಿಪಾ** (स्त्री०) 1. ಇಡುವುದು, ಇರಿಸುವುದು. 2. ಎಸೆಯುವುದು. क्षिप (प्रेरणे) "अङ्" (३-३-१०४)।

**क्षिप्त ಕ್ಷಿಪ್ತ** (न०) 1. ಎಸೆಯುವುದು, ಬಿಸಾಡುವುದು. 2. ಇಡುವುದು, ಇರಿಸುವುದು. 3. (ಬಾಣವನ್ನು) ಪ್ರಯೋಗಿಸುವುದು. 4. ಹರಡುವುದು. 5. ತಳ್ಳಿಹಾಕುವುದು. 6. ದೂಷಿಸುವುದು. 7. ಕೊಲ್ಲುವುದು. 8. ಹೊರಡಿಸುವುದು. क्षिप (प्रेरणे) भावे "क्तः" (३-३-११४)। (वि०) 9. ಎಸೆಯಲ್ಪಟ್ಟ, ಬಿಸಾಡಲ್ಪಟ್ಟ. "विस्मेरतामापुरविस्मरन्त्यः क्षिप्तं मिथः कन्दुकमिन्दुमुख्यः" नैष० ६-४२। 10. ತೆಗೆದುಹಾಕಲ್ಪಟ್ಟ, ತಳ್ಳಿಹಾಕಲ್ಪಟ್ಟ. क्षिप कर्म० "क्तः" (३-२-१०२)। "क्षिप्ता इवेन्दोः स रुचोऽधिवेलं मुक्तावलीराकलयांचकार" माघ० ३-७३। 11. ಇಡಲ್ಪಟ್ಟ, ಇರಿಸಲ್ಪಟ್ಟ. "क्षिप्तं पुरो न जगृहे मुहुरिक्षुकाण्डं नापेक्षते स्म निकटोपगतां करेणुम्" माघ० ५-५०। 12. ಹರಡಲ್ಪಟ್ಟ. "क्षिप्तं समीरैः सरितां पुरः पतज्जलान्यनैषीद्रज एव पङ्कताम्" माघ० १२-५८। 13. ನಿಂದಿಸಲ್ಪಟ್ಟ, ದೂಷಿಸಲ್ಪಟ್ಟ. 14. ಕೊಲ್ಲಲ್ಪಟ್ಟ. "केसरी निष्ठुरक्षिप्तमृगपूगो मृगाधिपः" माघ० २-५३। 15. ಅವಮಾನಗೊಳಿಸಲ್ಪಟ್ಟ. "तिरस्कृता विप्रलब्धाः शप्ताः क्षिप्ता हता अपि" भाग० २-१८-४८। 16. ಹೊರಕ್ಕೆ ಹೊರಡಿಸಲ್ಪಟ್ಟ. 17. ಚಂಚಲವಾದ (ಮನಸ್ಸು). 18. ವಾಯುರೋಗದಿಂದ ಪೀಡಿತನಾದ. 19. ಕೆಳಗೆ ಬಿದ್ದಿರುವ. क्षिप (प्रेरणे) कर्त० "क्तः"। "क्षिप्तमायतमदर्शयदुर्व्याम्" माघ० १०-७७।

**क्षिप्तकुक्कुर ಕ್ಷಿಪ್ತಕುಕ್ಕುರ** (पुं०) ಹುಚ್ಚುನಾಯಿ.

**क्षिप्तचित्त ಕ್ಷಿಪ್ತಚಿತ್ತ** (वि०) ಚಂಚಲವಾದ ಮನಸ್ಸುಳ್ಳ, ಚಿತ್ತಸ್ವಾಸ್ಥ್ಯವಿಲ್ಲದ. क्षिप्तं चित्तं यस्य।

**क्षिप्तयोनि ಕ್ಷಿಪ್ತಯೋನಿ** (वि०) ಹೇಯವಾದ ಜನ್ಮವುಳ್ಳವನು, ತುಚ್ಛವಾದ ಜನ್ಮತಾಳಿದವನು, ಪತಿಯ ಅಧೀನದಲ್ಲಿಲ್ಲದ ಹೆಂಗಸಿನಲ್ಲಿ ಹುಟ್ಟಿದವನು. क्षिप्ता निन्दिता योनिर्यस्य।

**क्षिप्तवत् ಕ್ಷಿಪ್ತವತ್** (वि०) 1. ಮೇಲಕ್ಕೆ ಎಸೆದವನು. ಮೇಲಕ್ಕೆ ಬಿಸಾಡಿದವನು. क्षिप (प्रेरणे) कर्त० "क्तवतुः" (३-२-१०२)। "हस्तेनाग्रे वीतभीतिं गृहीत्वा कंचिद्व्यालः क्षिप्तवानूर्ध्वमुच्चैः" माघ० १८-४८। 2. ಇಟ್ಟವನು, ಇರಿಸಿದವನು. 3. ಹರಡಿದವನು. 4. ನಿಂದಿಸಿದವನು. 5. ಅವಮಾನಗೊಳಿಸಿದವನು. 6. ಹೊರಡಿಸಿದವನು, ಕಳುಹಿಸಿದವನು. 7. ಕೊಂದವನು. 8. ತಳ್ಳಿಹಾಕಿದವನು.

**क्षिप्ता ಕ್ಷಿಪ್ತಾ** (स्त्री०) ರಾತ್ರಿ.

**क्षिप्ति ಕ್ಷಿಪ್ತಿ** (स्त्री०) 1. ಇಡುವುದು, ಇರಿಸುವುದು. क्षिप (प्रेरणे) भावे "क्तिन्" (३-३-९४)। 2. ಹೊರಡಿಸುವುದು, ಕಳುಹಿಸುವುದು. 3. ಎಸೆಯುವುದು, ಎರಚುವುದು, ಬಿಸಾಡುವುದು. 4. ತೆಗೆದುಹಾಕುವುದು, ತಳ್ಳಿಹಾಕುವುದು. 5. ನಿಂದಿಸುವುದು. 6. ಹರಡುವುದು. 7. ಅವಮಾನಗೊಳಿಸುವುದು. 8. (ನಾಟಕದಲ್ಲಿ) ರಹಸ್ಯವಾದ ಅರ್ಥವನ್ನು ಪ್ರಕಾಶಪಡಿಸುವುದು. "रहस्यार्थस्य तूद्भेदः क्षिप्तिः स्यात्" सा० द० ६-९१। "एकस्य तावत्पाकोऽयं दारुणो भुवि वर्तते। केशग्रहे द्वितीयेऽस्मिन् नूनं निःशेषिताः प्रजाः" वेणी० ३-१४। 9. ಸಮಸ್ಯೆಯನ್ನು ಪೂರ್ತಿಮಾಡುವುದು. 10. ಕೊಲ್ಲುವುದು.

**क्षिप्नु ಕ್ಷಿಪ್ನು** (वि०) 1. ಎಸೆಯುವ ಸ್ವಭಾವದ. 2. ಇಡುವ ಸ್ವಭಾವದ. 3. ತಳ್ಳುವ ಸ್ವಭಾವದ. 4. ನಿಂದಿಸುವ ಸ್ವಭಾವದ. 5. (ಬಾಣವನ್ನು) ಪ್ರಯೋಗಿಸುವ. क्षिप (प्रेरणे) तच्छीलादिषु "क्नुः" (३-२-१४०)। "क्षिप्नुरेनमृजुमाशु सपक्षं सायकं धनुरिवाजनि वक्रः" नैष० ५-१०२। 6. ಕೊಲ್ಲುವ ಸ್ವಭಾವದ. "तव सर्वगतस्य संप्रति क्षितिपः क्षिप्नुरमीशुमानिव" माघ० १६-५०। 7. ತಿರಸ್ಕರಿಸುವ ಸ್ವಭಾವದ. "निराकरिष्णुः क्षिप्नुः स्यात्" अम०।

**क्षिप्यत् ಕ್ಷಿಪ್ಯತ್** (वि०) 1. ಎಸೆಯುತ್ತಿರುವ. 2. ಇಡುತ್ತಿರುವ. 3. ನಿಂದಿಸುತ್ತಿರುವ. 4. ಹರಡುತ್ತಿರುವ. 5. ಅವಮಾನಗೊಳಿಸುತ್ತಿರುವ. क्षिप (प्रेरणे) "शतृ" (३-२-१२४)। 6. ಕೊಲ್ಲುತ್ತಿರುವ. 7. ತೆಗೆದುಹಾಕುತ್ತಿರುವ, ತಳ್ಳಿಹಾಕುತ್ತಿರುವ. 8. ಹೊರಡಿಸುತ್ತಿರುವ, ನೂಕುತ್ತಿರುವ.

**क्षिप्यमाण ಕ್ಷಿಪ್ಯಮಾಣ** (वि०) 1. ಎಸೆಯಲ್ಪಡುತ್ತಿರುವ, ಬಿಸಾಡಲ್ಪಡುತ್ತಿರುವ. क्षिप (प्रेरणे) कर्मं० "शानच्" (३-२-१२४)। 2. ತಳ್ಳಲ್ಪಡುತ್ತಿರುವ, ಕಡವಲ್ಪಡುತ್ತಿರುವ. "जग्मतुः पृथुकभावविहारक्षिप्यमाणयमलार्जुन-कक्ष्याम्" याद० २१-३४।

**क्षिप्र ಕ್ಷಿಪ್ರ** (न०) 1. ಬೇಗ, ಜಾಗ್ರತೆ, ಶೀಘ್ರ. क्षिप (प्रेरणे) "रक्" (उ० २-१३)। 2. ಕ್ಷಿಪ್ರಸಂಜ್ಞೆಯುಳ್ಳ, ಅಶ್ವಿನಿ, ಹಸ್ತ ಮತ್ತು ಪುಷ್ಯ ನಕ್ಷತ್ರಗಳು. "क्षिप्रं दस्रवीज्यम्" काला० ४। ವ್ಯಾಪಾರ ಶಿಲ್ಪಕಾರ್ಯ ಔಷಧ ಯಾನ ಮೊದಲಾದ ಕ್ಷಿಪ್ರಕಾರ್ಯಗಳನ್ನು ಕ್ಷಿಪ್ರ ನಕ್ಷತ್ರಗಳಲ್ಲಿ ಆರಂಭಿಸಬೇಕು. 3. ಸಕ್ಥಿಸಂಬಂಧವಾದ ಹನ್ನೊಂದು ಮರ್ಮಗಳಲ್ಲೊಂದು. "तत्र सक्थिमर्माणि क्षिप्रतलहृदयकूर्चकूर्चशिरोगुल्फेन्द्रबस्तिजान्वाण्युर्विलोहिताक्षाणि विटपं चेति" सुश्रुत० शारीर० ६-६। ಕಾಲಿನ ಹೆಬ್ಬೆರಳುಗಳ ಮಧ್ಯದಲ್ಲಿ ಈ ಕ್ಷಿಪ್ರಮರ್ಮವಿರುವುದು. ಈ ಮರ್ಮಸ್ಥಾನಕ್ಕೆ ಪೆಟ್ಟುಬಿದ್ದರೆ ಆಕ್ಷೇಪಕ (ವಾತ) ವ್ಯಾಧಿಯು ಬಂದು ಮರಣ ಸಂಭವಿಸುವುದು. "तत्र पादस्याङ्गुष्ठाङ्गुल्योर्मध्ये क्षिप्रनाम मर्म तत्र विद्धस्याक्षेपकेण मरणम्" सुश्रुत० शारीर० ६-२४। (वि०) 4. ಶೀಘ್ರವಾದ, ವೇಗವಾದ, ಬೇಗ ಹೋಗುವ. "महारथः पुष्यरथं रथाङ्गी क्षिप्रं क्षपानाथ इवाधिरूढः" माघ० ३-२२।

**क्षिप्रकारिन् ಕ್ಷಿಪ್ರಕಾರಿನ್** (वि०) ಬೇಗ ಕೆಲಸಮಾಡುವ ಸ್ವಭಾವದ. क्षिप्रं करोति—डु कृञ् (करणे) "णिनिः" (३-२-७८)। "इति नरपतिरस्त्रं यद्यदाविश्चकार प्रकुपित इव रोगः क्षिप्रकारी विकारम्" माघ० २०-७६। स्त्रियाम् "ङीप्" (४-१-५)। **—कारिणी —ಕಾರಿಣೀ.**

**क्षिप्रनिश्चय ಕ್ಷಿಪ್ರನಿಶ್ಚಯ** (वि०) ಕರ್ತವ್ಯಕಾರ್ಯದಲ್ಲಿ ಬೇಗ ಒಂದು ನಿರ್ಣಯಕ್ಕೆ ಬರುವವನು. "आयत्यां गुणदोषज्ञः तदात्वे क्षिप्रनिश्चयः। अतीते कार्यशेषज्ञः शत्रुभिर्नाभिभूयते" मनु० ८-१७९।

**क्षिप्रहोम ಕ್ಷಿಪ್ರಹೋಮ** (पुं०) ಸಾಯಂಕಾಲ ಮತ್ತು ಪ್ರಾತಃಕಾಲಗಳಲ್ಲಿ ಮಾಡತಕ್ಕ ಹೋಮ. क्षिप्रं हूयते—हु (दानादनयोः) "मन्" (उ० १-१४०)। ಹೋಮಗಳು ಕ್ಷಿಪ್ರಹೋಮ ಮತ್ತು ತಂತ್ರಹೋಮಗಳೆಂದು ಎರಡು ವಿಧ. ಪ್ರಾತಃಕಾಲ ಮತ್ತು ಸಾಯಂಕಾಲಗಳಲ್ಲಿ ಬೇಗ ಮಾಡಿ ಮುಗಿಸುವುದು ಕ್ಷಿಪ್ರಹೋಮ. ಪರಿಸಮೂಹನಾದಿ ಅಂಗಗಳಿಂದ ವಿಸ್ತಾರವಾದುದು ತಂತ್ರಹೋಮ.

**क्षिया ಕ್ಷಿಯಾ** (स्त्री०) 1. ನಾಶ. 2. ಕಡಮೆಯಾಗುವುದು. 3. ಧರ್ಮದ ವ್ಯತಿಕ್ರಮ, ಧರ್ಮಮಾರ್ಗವನ್ನು ಬಿಟ್ಟು ನಡೆಯುವುದು. क्षीष् (हिंसायाम्) "अङ्" (३-३-१०४)।

**क्षिवु – निरसने** (भ्वा० पर० सक० से०)। क्षेवति। चिक्षेव। क्षेविता। 1. ಉಗುಳು, ಬಾಯಿಂದ ಹೊರಡಿಸು. 2. ವಾಂತಿಮಾಡು.

**क्षीज–अव्यक्ते शब्दे** (भ्वा० पर० अक० से०)। क्षीजति। चिक्षीज। अक्षीजत्। ಅಸ್ಪಷ್ಟವಾಗಿ ಶಬ್ದಮಾಡು.

**भावे :—**क्षीज्यते। चिक्षीजे। क्षीजिता। क्षीजिष्यते। क्षीज्यताम्। ಇತ್ಯಾದಿ.

**णिचि :—**क्षीजयति, –ते। क्षीजयां चकार, –चक्रे, –बभूव, –आस। क्षीजयिता। क्षीजयतु, –ताम्। ಇತ್ಯಾದಿ.

**क्षीजन ಕ್ಷೀಜನ** (न०) ಬಿದಿರುಮೆಳೆಯ ಶಬ್ದ, ಬಿದಿರಿನೊಳಗೆ ಗಾಳಿಯು ತುಂಬಿ ಹೊರಡುವ ಶಬ್ದ. क्षीज (अव्यक्ते शब्दे) "ल्युट्" (३-३-११५)। "प्रक्वाणः प्रक्वणस्तन्त्र्याः मर्दलस्य तु गुन्दलः। क्षीजनं तु कीचकानाम्" अभि० चि०।

**क्षीण ಕ್ಷೀಣ** (वि०) 1. ಕಡಮೆಯಾದ. 2. ದುರ್ಬಲವಾದ, ಬಡಕಲಾದ. 3. ನಾಶಹೊಂದಿದ. क्षि (क्षये) "क्तः" (३-४-७२)। दीर्घः (६-४-६०)। निष्ठातस्य नत्वम् (८-२-४६)। "ते तं भुक्त्वा स्वर्गलोकं विशालं क्षीणे पुण्ये मर्त्यलोकं विशन्ति" गीता ९-२१। 4. ಅವನತಿಹೊಂದಿದ, ಕ್ಷಯಹೊಂದಿದ. "वारेऽर्कस्य सुदुःखदः कलहदः क्षीणेन्दुवारेऽर्थदः" काला० २७२। 5. ಚಿಕ್ಕದಾದ, ಪುಟ್ಟದಾದ. 6. ಸಣ್ಣದಾದ, ತೆಳುವಾದ. "क्षीणेन मध्येऽपि सतोदरेण यत्प्राप्यते नाक्रमणं वलिभ्यः" नैष० ७-८१।

**क्षीणचन्द्र ಕ್ಷೀಣಚಂದ್ರ** (पुं०) ಎರಡು ಪಕ್ಷಗಳ ಅಷ್ಟಮಿಗಳ ಮಧ್ಯಕಾಲದ ಚಂದ್ರ, ಕೃಷ್ಣಾಷ್ಟಮಿಯಿಂದ ಮುಂದೆ ಶುಕ್ಲಾಷ್ಟಮಿಯವರೆಗಿನ ಕಾಲದ ಚಂದ್ರ. "कृष्णाष्टमी दलादूर्ध्वं यावच्छुक्लाष्टमीदलम्। तावत्कालं शशी क्षीणः पूर्णस्तत्रोपरि स्मृतः"।

**क्षीणवत् ಕ್ಷೀಣವತ್** (वि०) ಕ್ಷೀಣನಾದ, ಕೃಶನಾದ, ದುರ್ಬಲನಾದ. क्षि (क्षये) "क्तवतुः" (३-२-१०२)। दीर्घः (६-४-६०)। निष्ठातस्य नत्वम् (८-२-४६)।

**क्षीणाष्टकर्मन् ಕ್ಷೀಣಾಷ್ಟಕರ್ಮನ್** (पुं०) ಜಿನದೇವ. क्षीणानि अष्टौ ज्ञानावरणीयादीनि कर्माणि अस्य। "अर्हन् जिनः पारगतिस्त्रिकालवित्क्षीणाष्टकर्मा परमेष्ठ्यधीश्वरः" अभि० चि०।

**क्षीब ಕ್ಷೀಬ** (वि०) ಮದಿಸಿದ. ಮದ್ಯಪಾನದಿಂದ ಉನ್ಮಾದ ಹೊಂದಿದ. क्षीबृ (मदे) "क्तः" (३-४-७२)। निपा० (८-२-५५)। "विवेश लोलं हृदयं नलस्य जीवः पुनः क्षीबमिव प्रबोधः" नैष० ६-१११।

**क्षीबता ಕ್ಷೀಬತಾ** (स्त्री०) ಮದಿಸಿರುವುದು, ಅಮಲೇರಿರುವುದು. क्षीबस्य भावः "तल्" (५-१-११९)। "क्षीबतामुपगतास्वनुवेलं तासु रोषपरितोषवतीषु" माघ० १०-३४।

**क्षीर ಕ್ಷೀರ** (न०) 1. ಹಾಲು. घस्यते—घस्लृ (अदने) "ईरन्" (उ० ४-३४)। उपधालोपः (६-४-९८)। चर्त्वम् (८-४-५५)। सस्य षत्वम् (८-३-६०)। "चित्रं तु यद्विशदिमाद्वयमादिशन्ती क्षीरं च नाम्बु च मिथः पृथगातनोति" नैष० ११-३१। 2. ಜಲ, ನೀರು. 3. ಗಿಡ ಮರಗಳ ಹಾಲು. "भित्त्वा सद्यः किसलयपुटान् देवदारुद्रुमाणां ये तत्क्षीरस्रुतिसुरभयो दक्षिणेन प्रवृत्ताः" मेघ० २-४४।

**क्षीरक ಕ್ಷೀರಕ** (पुं०) ಹಾಲುಕುರಟಿಗೆ ಗಿಡ.

**क्षीरकण्ठ ಕ್ಷೀರಕಂಠ** (पुं०) 1. ಶಿಶು, ಎಳೆಯ ಮಗು, ಹಾಲು ಕುಡಿಯುವ ಮಗು. क्षीरं कण्ठे यस्य। 2. ಮರಿ. 3. ಎಳೆಯ ಗಿಡ. "पृथुकार्भोत्तानशयाः क्षीरकण्ठः कुमारकः" अभि० चि०।

**क्षीरकन्द ಕ್ಷೀರಕಂದ** (पुं०) ಕರಿಯ ನೆಲಗುಂಬಳ. क्षीरमिव कन्दोऽस्य।

**क्षीरकाण्ड ಕ್ಷೀರಕಾಂಡ** (पुं०) 1. ಅರ್ಕವೃಕ್ಷ, ಎಕ್ಕದ ಗಿಡ. 2. ಕಳ್ಳಿಗಿಡ. क्षीरयुक्तं काण्डं यस्य। वा "कप्" (५-४-१५४)। **-काण्डकः-ಕಾಂಡಕಃ.**

**क्षीरकीट ಕ್ಷೀರಕೀಟ** (पुं०) ಹಾಲಿನಲ್ಲಿ ಹುಟ್ಟಿದ ಹುಳು. "कालिका क्षीरकीटः स्यात्" हारा०।

**क्षीरखर्जूर ಕ್ಷೀರಖರ್ಜೂರ** (पुं०) ಕ್ಷೀರದಂತೆ ಮಧುರವಾದ ಖರ್ಜೂರ. क्षीरवत् स्वादुः खर्जूरः।

**क्षीरघृत ಕ್ಷೀರಘೃತಮ್** (न०) ಹಾಲನ್ನು ಕಡೆದು ಬಂದ ಬೆಣ್ಣೆಯ ತುಪ್ಪ. क्षीरमथनात् समुद्भूतनवनीतोत्थितं घृतम्। "क्षीरघृतं पुनः संग्राहि रक्तपित्तभ्रममूर्च्छाप्रशमनं नेत्ररोगहितं च" सुश्रुत० सूत्र० ४५-१०५।

**क्षीरज ಕ್ಷೀರಜ** (न०) 1. ಮೊಸರು. क्षीराज्जायते—जनी (प्रादुर्भावे) "डः" (३-२-९८)। "पायसं परमान्नं च क्षैरेयी क्षीरजं दधि" अभि० चि०। (वि०) 2. ಹಾಲಿನಿಂದ ಉಂಟಾದ.

**क्षीरदल ಕ್ಷೀರದಲ** (पुं०) ಅರ್ಕವೃಕ್ಷ, ಎಕ್ಕದ ಗಿಡ. क्षीरं दलेऽस्य।

**क्षीरधात्री ಕ್ಷೀರಧಾತ್ರೀ** (स्त्री०) ಹಾಲು ಕೊಡುವ ದಾದಿ, ಮಗುವಿಗೆ ಮೊಲೆಯೂಡಿಸಿ ಆರೈಕೆಮಾಡುವ ದಾದಿ.

**क्षीरधि ಕ್ಷೀರಧಿ** (पुं०) ಕ್ಷೀರಸಮುದ್ರ, ಪಾಲ್ಗಡಲು. क्षीरं धीयतेऽत्र—डु धाञ् (धारणपोषणयोः) "किः" (३-३-९३)। "नैनं त्यज क्षीरधिमन्थनाद्यैरस्यानुजायोद्गमितामरश्रीः" नैष० ६-८०।

**क्षीरधेनु ಕ್ಷೀರಧೇನು** (स्त्री०) ಬ್ರಾಹ್ಮಣನಿಗೆ ದಾನಕ್ಕಾಗಿ ಕ್ಷೀರದಿಂದ ನಿರ್ಮಿತವಾದ ಧೇನು. [ವಿವರಕ್ಕೆ ಹೇಮಾದ್ರಿ ದಾನ ಖಂಡದಲ್ಲಿ ನೋಡಿ.]

**क्षीरनदी ಕ್ಷೀರನದೀ** (स्त्री०) ಹಾಲಿನ ಹೊಳೆ, ಪಾಲಾರ್ ಎಂಬ ಹೊಳೆ.

**क्षीरनिधि ಕ್ಷೀರನಿಧಿ** (पुं०) ಕ್ಷೀರಸಮುದ್ರ, ಪಾಲ್ಗಡಲು. क्षीरं निधीयतेऽत्र—नि+डु धाञ् (धारणपोषणयोः) "किः" (३-३-९३)। "दिलीप इति राजेन्दुरिन्दुः क्षीरनिधाविव" रघु० १-१२।

**क्षीरनीर ಕ್ಷೀರನೀರ** (न०) 1. ಆಲಿಂಗನ, ಅಪ್ಪಿಕೊಳ್ಳುವುದು. क्षीरमिश्रितं नीरमिव। 2. ಹಾಲು ಮತ್ತು ನೀರು. क्षीरं च नीरं च अनयोः समाहारः। "क्षीरनीरसमं मित्रं प्रशंसन्ति विचक्षणाः। नीरं क्षीरयते तत्र वह्नौ तप्यति तत्पयः" वेतालपं०। 3. ಹಾಲಿನಂತಿರುವ ನೀರು. क्षीरमिव नीरम्।

**क्षीरप ಕ್ಷೀರಪ** (पुं०) 1. ಶಿಶು, ಹಾಲು ಕುಡಿಯುವ ಮಗು. क्षीरं पिबति—पा (पाने) "कः" (३-२-४)। (वि०) 2. ಹಾಲು ಕುಡಿಯುವವನು.

**क्षीरपयोधि ಕ್ಷೀರಪಯೋಧಿ** (पुं०) ಕ್ಷೀರಸಮುದ್ರ, ಪಾಲ್ಗಡಲು. क्षीरस्य पयोधिः। **-पयोनिधिः-ಪಯೋನಿಧಿಃ.** "ब्रह्मा तदुपधार्याथ सह देवैस्तया सह जगाम सत्रिनयनस्तीरं क्षीरपयोनिधेः" भाग० १०-१-१९।

**क्षीरपर्णिन् ಕ್ಷೀರಪರ್ಣಿನ್** (पुं०) ಅರ್ಕವೃಕ್ಷ, ಎಕ್ಕದ ಗಿಡ. क्षीरयुक्तं पर्णमस्त्यस्य "इनिः" (५-२-११५)।

**क्षीरपर्णी ಕ್ಷೀರಪರ್ಣೀ** (स्त्री०) ಅರ್ಕವೃಕ್ಷ, ಎಕ್ಕದ ಗಿಡ. क्षीरं पर्णेऽस्याः—गौरा० "ङीष्" (४-१-४१)।

**क्षीरपाण ಕ್ಷೀರಪಾಣ** (पुं० ब० व०) 1. ಹಾಲನ್ನು ಕುಡಿಯುವ ಉಶೀನರ ದೇಶದ ಜನರು. पीयते—पा (पाने) कर्म० "ल्युट्"। क्षीरं पानं येषां ते क्षीरपाणाः उशीनराः इति सि० कौ०। नस्य णत्वम् (८-४-९)। भावे करणे च "ल्युट्"। वा णत्वम् (८-४-१०)। क्षीरपाणम्, -पानम् ಕ್ಷೀರಪಾಣಮ್, -ಪಾನಮ್. भावे— 2. ಹಾಲು ಕುಡಿಯುವುದು. करणे 3. ಹಾಲು ಕುಡಿಯುವ ಪಾತ್ರೆ.

**क्षीरपायिन् ಕ್ಷೀರಪಾಯಿನ್** (पुं० ब० व०) 1. ಮತ್ತೆ ಮತ್ತೆ ಹಾಲು ಕುಡಿಯುವ ಉಶೀನರ ದೇಶದ ಜನರು. पुनः पुनः क्षीरं पिबन्ति—पा (पाने) "णिनिः" (३-२-८१)। "क्षीरपायिण उशीनराः" सि० कौ०। (वि०) 2. ಹಾಲು ಕುಡಿಯುವ. क्षीरं पिबति—पा (पाने) "णिनिः" (३-२-७८)। स्त्रियाम् "ङीप्" (४-१-५)। **-पायिनी -ಪಾಯಿನೀ.**

**क्षीरभृत ಕ್ಷೀರಭೃತ** (पुं०) ಹಾಲಿನಿಂದ ಕಾಪಾಡಲ್ಪಟ್ಟ ಗೊಲ್ಲ, ಹಾಲಿನ ರೂಪದಲ್ಲಿ ವೇತನ (ಸಂಬಳ) ವನ್ನು ಪಡೆದು ಜೀವಿಸುವ ಗೋಪಾಲಕ. क्षीरेण भृतः। "गोपः क्षीरभृतो यस्तु स दुह्याद्दशतो वराम्" मनु० ८-२३१।

**क्षीरमोरटा ಕ್ಷೀರಮೋರಟಾ** (स्त्री०) ಹಾಲುಕುರಟಿಗೆ ಗಿಡ.

**क्षीरलता ಕ್ಷೀರಲತಾ** (स्त्री०) ಕರಿಯ ನೆಲಗುಂಬಳದ ಗಿಡ. क्षीरप्रधाना लता।

**क्षीरवत् ಕ್ಷೀರವತ್** (वि०) ಹಾಲಿನಿಂದ ಕೂಡಿದ. क्षीरमस्यास्ति "मतुप्" (५-२-९४)। स्त्रियाम् "ङीप्" (४-१-६)। **-वती -ವತೀ** ಒಂದು ನದಿ.

**क्षीरवर्ग ಕ್ಷೀರವರ್ಗ** (पुं०) ಹಾಲಿನ ವರ್ಗ, ಔಷಧದ ಉಪಯೋಗಕ್ಕಾಗಿ ಅರ್ಹವಾದ ಹಾಲುಗಳು. क्षीराणां वर्गः। (1) ಹಸುವಿನ ಹಾಲು, (2) ಆಡಿನ ಹಾಲು. (3) ಒಂಟೆಯ ಹಾಲು, (4) ಕುರಿಯ ಹಾಲು. (5) ಎಮ್ಮೆಯ ಹಾಲು, (6) ಕುದುರೆಯ ಹಾಲು, (7) ಸ್ತ್ರೀಯ ಹಾಲು ಮತ್ತು (8) ಆನೆಯ ಹಾಲು ಈ ಎಂಟು ಹಾಲುಗಳು ಕ್ಷೀರವರ್ಗಕ್ಕೆ ಸೇರಿದುವು. "गव्यमाजं तथा चौष्ट्रमाविकं माहिषं च यत्। अश्वायाश्चैव नार्याश्च करेणूनां च यत्पयः" सुश्रुत० सूत्र० ४५-४७।

**क्षीरवल्ली ಕ್ಷೀರವಲ್ಲೀ** (स्त्री०) ಕರಿಯ ನೆಲಗುಂಬಳದ ಗಿಡ. क्षीरवती वल्ली।

**क्षीरवारिधि ಕ್ಷೀರವಾರಿಧಿ** (पुं०) ಕ್ಷೀರಸಮುದ್ರ. क्षीरस्य वारिधिः। एवं **क्षीरवार्धिः ಕ್ಷೀರವಾರ್ಧಿಃ.**

**क्षीरविकृति ಕ್ಷೀರವಿಕೃತಿ** (स्त्री०) ಕುದಿಯಿಸಿದ ಹಾಲಿನಿಂದ ತಯಾರಿಸಲ್ಪಟ್ಟ ಹಾಲುಖೋವ. क्षीरस्य विकृतिः।

**क्षीरविदारी ಕ್ಷೀರವಿದಾರೀ** (स्त्री०) 1. ಕರಿಯ ನೆಲಗುಂಬಳ. क्षीरवती विदारी। 2. ಬಿಳಿಯ ನೆಲಗುಂಬಳ. क्षीरमिव शुक्ला विदारी।

**क्षीरवृक्ष ಕ್ಷೀರವೃಕ್ಷ** (पुं०) 1. ಆಲದ ಮರ. 2. ಅತ್ತಿ ಮರ. 3. ಅರಳಿ ಮರ. 4. ಹಾಲೆ ಗಿಡ. 5. ಹಿಪ್ಪೆ ಮರ. "क्षीरवृक्षकषायैर्वा क्षीरेण च विमिश्रितैः" सुश्रुत० चिकित्सा० २४-१५।

**क्षीरशर ಕ್ಷೀರಶರ** (पुं०) ಬಿಸಿ ಹಾಲಿಗೆ ಮೊಸರನ್ನು ಸೇರಿಸಿ ಪಕ್ವಮಾಡಿದ ಒಂದು ವಸ್ತು. क्षीरं शीर्यतेऽत्र—शॄ (पाके) "अप्" (३-३-५७)।

**क्षीरशीर्ष ಕ್ಷೀರಶೀರ್ಷ** (पुं०) ಸರಳವೃಕ್ಷದ ಹಾಲು ಮಡ್ಡಿ.

**क्षीरशुक्ला ಕ್ಷೀರಶುಕ್ಲಾ** (स्त्री०) ಬಿಳಿಯ ನೆಲಗುಂಬಳ. क्षीरमिव शुक्ला। "विदारी क्षीरशुक्लेक्षुगन्धा क्रोष्ट्री च या सिता" अम०।

**क्षीरसन्तानिका ಕ್ಷೀರಸಂತಾನಿಕಾ** (स्त्री०) ಬಿಸಿಹಾಲಿಗೆ ಬೆರಸಿದ ಮೊಸರು. क्षीरस्य सन्तानोऽस्त्यस्य "ठन्" (४-२-११५)।

**क्षीरसमुद्र ಕ್ಷೀರಸಮುದ್ರ** (पुं०) ಹಾಲಿನ ಸಮುದ್ರ, ಪಾಲ್‌ಗಡಲು. ಇದು ಸಪ್ತಸಮುದ್ರಗಳಲ್ಲೊಂದು. क्षीरस्य समुद्रः। (1) ಲವಣ, (2) ಇಕ್ಷು, (3) ಸುರಾ, (4) ಸರ್ಪಿಸ್, (5) ದಧಿ, (6) ಕ್ಷೀರ ಮತ್ತು (7) ಜಲ ಸಮುದ್ರಗಳೆಂದು ಸಮುದ್ರಗಳು ಏಳು. ಕ್ಷೀರಸಮುದ್ರವು ಕ್ರೌಂಚ ದ್ವೀಪದ ಸುತ್ತಲೂ ಇರುವುದು. ಅಮೃತಕ್ಕಾಗಿ ದೇವತೆಗಳು ಈ ಕ್ಷೀರಸಮುದ್ರವನ್ನು ಮಥಿಸಿದಾಗ ಸಮುದ್ರದಿಂದ ಚಂದ್ರ, ಲಕ್ಷ್ಮೀ, ಉಚ್ಚೈಃಶ್ರವಸ್ಸು, ಐರಾವತ, ಕೌಸ್ತುಭಮಣಿ, ಅಪ್ಸರಸ್ಸು ಮೊದಲಾದವರ ಆವಿರ್ಭಾವವಾಯಿತು.

**क्षीरसागर ಕ್ಷೀರಸಾಗರ** (पुं०) ಕ್ಷೀರಸಮುದ್ರ.

**क्षीरसार ಕ್ಷೀರಸಾರ** (पुं०) 1. ಬೆಣ್ಣೆ. क्षीरस्य सारः। 2. ಹಾಲಿನ ಮೇಲಿನ ಕೆನೆ. 3. ಗಟ್ಟಿ ಹಾಲಿನ ಖೋವ. "क्षीरसारमपनीय शङ्कया स्वीकृतं यदि पलायनं त्वया" उद्भ०।

**क्षीरस्वामिन् ಕ್ಷೀರಸ್ವಾಮಿನ್** (पुं०) ಅಮರಕೋಶದ ವ್ಯಾಖ್ಯಾಕಾರನಾದ ಒಬ್ಬ ವೈಯಾಕರಣ.

**क्षीरा ಕ್ಷೀರಾ** (स्त्री०) ಬೊಕ್ಕಣೆ ಗಿಡ.

**क्षीरान्न ಕ್ಷೀರಾನ್ನ** (न०) ಹಾಲಿನಲ್ಲಿ ಬೇಯಿಸಿದ ಅನ್ನ. क्षीरेण पक्वमन्नम्।

**क्षीराब्धि ಕ್ಷೀರಾಬ್ಧಿ** (पुं०) ಕ್ಷೀರಸಮುದ್ರ. क्षीरस्याब्धिः।

**क्षीराब्धिज ಕ್ಷೀರಾಬ್ಧಿಜ** (पुं०) 1. ಚಂದ್ರ. 2. ಉಚ್ಚೈಃಶ್ರವಸ್ಸು, ಇಂದ್ರನ ಕುದುರೆ. 3. ಐರಾವತ, ಇಂದ್ರನ ಆನೆ. 4. ಕೌಸ್ತುಭಮಣಿ. 5. ಕಲ್ಪವೃಕ್ಷ. 6. ಧನ್ವಂತರಿ. (न०) 7. ಅಮೃತ. 8. ಮುತ್ತು, ಮೌಕ್ತಿಕ. 9. ಕಾಲಕೂಟವೆಂಬ ಒಂದು ಮಹಾವಿಷ. क्षीराब्धेर्जातः — जनी (प्रादुर्भावे) "डः" (३-२-९८)। (स्त्री०) **–जा –ಜಾ.** 10. ಲಕ್ಷ್ಮಿ. 11. ಅಪ್ಸರಸ್ಸು. भाग० ८-८। "क्षीराब्धिजं तु मौक्तिके। वशिरे क्षीराब्धिजस्तु चन्द्रे क्षीराब्धिजा श्रियाम्" हेम०।

**क्षीराब्धितनय ಕ್ಷೀರಾಬ್ಧಿತನಯ** (पुं०) 1. ಚಂದ್ರ. क्षीराब्धेस्तनयः। (स्त्री०) **–तनया –ತನಯಾ.** 2. ಲಕ್ಷ್ಮಿ. एवं **–पुत्रः –ಪುತ್ರಃ, –सुतः –ಸುತಃ, –सूनुः –ಸೂನುಃ.**

**क्षीराम्बुधि ಕ್ಷೀರಾಂಬುಧಿ** (पुं०) ಕ್ಷೀರಸಮುದ್ರ. क्षीरस्याम्बुधिः। एवं **–अम्बुनिधिः –ಅಂಬುನಿಧಿಃ.**

**क्षीरार्णव ಕ್ಷೀರಾರ್ಣವ** (पुं०) ಕ್ಷೀರಸಮುದ್ರ. क्षीरस्यार्णवः। "एष नारायणः श्रीमान् क्षीरार्णवनिकेतनः। नागपर्यङ्कमुत्सृज्य ह्यागतो मधुरां पुरीम्"।

**क्षीरावी ಕ್ಷೀರಾವೀ** (स्त्री०) ಹಾಲುತೊಟ್ಟಿನ ಗಿಡ. क्षीरमवति — अव (रक्षणे) "अण्" (३-२-१)। "ङीप्" (४-१-१५)।

**क्षीराह्व ಕ್ಷೀರಾಹ್ವ** (पुं०) ಸರಳ ವೃಕ್ಷ, ದೇವದಾರು ಮರ.

**क्षीरिका ಕ್ಷೀರಿಕಾ** (स्त्री०) 1. ಹಾಲೆ ಗಿಡ. क्षीरमस्त्यस्याः "ठन्" (५-२-११५)। 2. ಪರಮಾನ್ನ, ಪಾಯಸ.

**क्षीरिन् ಕ್ಷೀರಿನ್** (पुं०) ಹಾಲಿನಂತೆ ರಸವುಳ್ಳ. 1. ಆಲದ ಮರ. 2. ಅತ್ತಿಮರ. 3. ಅರಳಿಮರ. 4. ಕಳ್ಳಿಗಿಡ. 5. ಎಕ್ಕದ ಗಿಡ. क्षीरं तत्तुल्यनिर्यासोऽस्त्यस्य "इनिः" (५-२-११५)। (स्त्री०) **–णी –ಣೀ.** 6. ಹಾಲುತೊಟ್ಟಿನ ಗಿಡ. 7. ಶಿವನೆಯ ಮರ. 8. ವರಾಹಕ್ರಾಂತಾ ಗಿಡ.

**क्षीरेयी ಕ್ಷೀರೇಯೀ** (स्त्री०) ಪರಮಾನ್ನ, ಪಾಯಸ. क्षीरेण ईं शोभां याति — या (प्रापणे) "कः" (३-२-४)।

**क्षीरोद ಕ್ಷೀರೋದ** (पुं०) ಕ್ಷೀರಸಮುದ್ರ. क्षीरमुदकं यस्य। उदकस्योदादेशः (६-३-५७)। "चन्द्रं विना तदुपलम्भनहेतुभूतं क्षीरोदमाश्रयति किं तृषितश्चकोरः" चं० रा०।

**क्षीरोदज ಕ್ಷೀರೋದಜ** (पुं०) 1. ಚಂದ್ರ. 2. ಐರಾವತ. 3. ಉಚ್ಚೈಃಶ್ರವಸ್ಸು. 4. ಕಲ್ಪತರು. 5. ಕೌಸ್ತುಭಮಣಿ. 6. ಧನ್ವಂತರಿ. (न०) 7. ವಿಷ. 8. ಮುತ್ತು. 9. ಅಮೃತ. (स्त्री०) **–जा –ಜಾ.** 10. ಲಕ್ಷ್ಮಿ. 11. ಅಪ್ಸರಸ್ಸು.

**क्षीरोदतनय ಕ್ಷೀರೋದತನಯ** (पुं०) 1. ಚಂದ್ರ. (स्त्री०) **–तनया –ತನಯಾ.** 2. ಲಕ್ಷ್ಮಿ.

**क्षीरौदन ಕ್ಷೀರೌದನ** (न०) ಕ್ಷೀರಾನ್ನ, ಕ್ಷೀರದೊಡನೆ ಪಕ್ವವಾದ ಅನ್ನ. क्षीरेण पक्वमोदनम्।

**टुक्षु–शब्दे** (अदा० पर० अक० से०)। क्षौति क्षुतः क्षुवन्ति। चुक्षाव चुक्षुवतुः चुक्षुवुः। क्षविता। क्षविष्यति। क्षौतु। अक्षौत्। क्षुयात्। क्षूयात्। अक्षावीत्। अक्षविष्यत्। 1. ಸೀನು. 2. ಶಬ್ದಮಾಡು. "अभ्युवास रथं तेये पुराच्चुक्षाव चाशुभम्" भट्टि० १४-७५।

**भावे** :—क्षूयते। चुक्षुवे। क्षाविता, क्षोता। क्षाविष्यते, क्षोष्यते। क्षूयताम्। अक्षूयत। ಇತ್ಯಾದಿ. "अपयाति सरोषया निरस्ते कृतकं कामिनि चुक्षुवे मृगाक्ष्या" माघ० ९-८३।

**णिचि** :—क्षावयति, –ते। क्षावयां चकार, –चक्रे, –बभूव, –आस। क्षावयिता। क्षावयिष्यति, –ते। क्षावयतु, –ताम्। ಇತ್ಯಾದಿ.

**सनि** :—चुक्षूषति। चुक्षूषां चकार, –बभूव, –आस। चुक्षूषिता। चुक्षूषिष्यति। चुक्षूषतु। ಇತ್ಯಾದಿ.

**कृत्सु** :—क्षवितव्यम्। क्षवणीयम्। क्षव्यम्। क्षाव्यम्। क्षुतः। क्षुतवान्। क्षुवन्, क्षुवती। क्षवितुम्। क्षुतम्। क्षवणम्। क्षुत्वा। प्रक्षुत्य। "सुप्त्वा क्षुत्वा च भुक्त्वा च निष्ठीव्योक्त्वानृतानि च। पीत्वापोऽध्येष्यमाणश्च आचमेत्प्रयतोऽपि सन्" मनु० ५-१४५।

ಅವ ಪೂರ್ವಕವಾದ ಈ ಕ್ಷು ಧಾತುವು ಕೆಳಗಿರುವ ವಸ್ತುವನ್ನು ಸೀನಿನಿಂದ ಕೆಡಿಸು, –ಅಶುದ್ಧಮಾಡು ಎಂಬ ಅರ್ಥವನ್ನು ಕೊಡುವುದು. "अनर्चितं वृथामांसमवीरायाश्च योषितः। द्विषदन्नं नगर्यन्नं पतितान्नमवक्षुतम्" मनु० ४-२१३।

**क्षुण्ण ಕ್ಷುಣ್ಣ** (वि०) 1. ಅಭ್ಯಸಿಸಲ್ಪಟ್ಟ. ಪುನಃ ಪುನಃ ಉಚ್ಚರಿಸಲ್ಪಟ್ಟ ಅಥವಾ ಮನಸ್ಸಿನಲ್ಲಿ ಚಿಂತಿಸಲ್ಪಟ್ಟ. क्षुदिर् (संपेषणे) "क्तः" (३-२-१०२)। निष्ठातस्य नः (८-२-४२)। "क्षुण्णं यदन्तःकरणेन वृक्षाः फलन्ति कल्पोपपदास्तदेव" माघ० ३-५९। 2. ಚೆನ್ನಾಗಿ ತುಳಿದು ಸವೆಸಲ್ಪಟ್ಟ (ದಾರಿ), ನಡೆದು ಪಳಗಿಸಲ್ಪಟ್ಟ (ಮಾರ್ಗ). "रेखामात्रमपि क्षुण्णादामनोर्वर्त्मनः परम्। न व्यतीयुः प्रजास्तस्य नियन्तुर्नेमिवृत्तयः" रघु० १-१७। 3. ಪುಡಿ ಮಾಡಲ್ಪಟ್ಟ, ಚೂರ್ಣವಾಗಿ ಮಾಡಲ್ಪಟ್ಟ. "उत्पाट्य मेरुशृङ्गाणि क्षुण्णानि हरितां खुरैः" कुमा० २-४३। 4. ಒಡೆಯಲ್ಪಟ್ಟ, ಸೀಳಲ್ಪಟ್ಟ, ಚೂರುಮಾಡಲ್ಪಟ್ಟ. "क्षुण्णासु क्षितिषु क्षिपन्निव यशःक्षोणीजबीजव्रजम्" नैष० १२-६६।

**क्षुत् ಕ್ಷುತ್** (स्त्री०) ಸೀನು, ಮೂಗಿನ ಒಂದು ರೋಗ. टुक्षु (शब्दे) "क्विप्" (वा० ३-३-९४)।

**क्षुत ಕ್ಷುತ** (नु०) 1. ಸೀನು. टु क्षु (शब्दे) भावे "क्तः" (३-३-११४)। "स्रस्तभुजयुगगलद्वलयस्वनितं प्रतिक्षुतमिवोपशुश्रुवे" माघ० १५-९१। "स्नात्वा पीत्वा क्षुते सुप्ते भुक्त्वा रथ्योपसर्पणे। आचान्तः पुनराचामेत् वासो विपरिधाय च" याज्ञ० १-१९६। (वि०)2. ಸೀನಿದವನು. टु क्षु कर्त० "क्तः" (३-४-७२)।

**क्षुतक ಕ್ಷುತಕ** (पुं०) ಕರಿಸಾಸವೆ.

**क्षुतकर ಕ್ಷುತಕರ** (वि०) ಸೀನನ್ನು ಉಂಟುಮಾಡುವ. क्षुतं करोति – डु कृञ् (करणे) "टः" (३-२-२०)।

**क्षुताभिजनन ಕ್ಷುತಾಭಿಜನನ** (पुं०) ಕರಿಸಾಸವೆ. क्षुतमभिजनयति – अभि+जनी (प्रादुर्भावे)+णिच् "ल्युः" (३-१-१३४)। "क्षवः क्षुताभिजननो राजिका कृष्णिकासुरी" अम०।

**क्षुति ಕ್ಷುತಿ** (स्त्री०) ಸೀನು. टु क्षु (शब्दे) "क्तिन्" (३-३-९४)।

**क्षुद् ಕ್ಷುದ್** (स्त्री०) 1. ಪುಡಿಮಾಡುವುದು, ಚೂರ್ಣ ಮಾಡುವುದು. 2. ಒಡೆಯುವುದು, ಚೂರುಮಾಡುವುದು. 3. ತುಳಿದು ಮರ್ದನಮಾಡುವುದು. क्षुदिर् (संपेषणे) "क्विप्" (वा० ३-३-९४)।

**क्षुदिर् – संपेषणे** (रुधा० उभ० सक० अनि०)। क्षुणत्ति क्षुन्तः क्षुन्दन्ति, क्षुन्ते क्षुन्दाते क्षुन्दते। चुक्षोद, चुक्षुदे। क्षोत्ता। क्षोत्स्यति, क्षोत्स्यते। क्षुणत्तु, क्षुन्ताम्। अक्षुणत्। अक्षुन्त। क्षुन्द्यात्, क्षुन्दीत। क्षुद्यात्, क्षुत्सीष्ट। अक्षुन्दत्, अक्षौत्सीत्। अक्षोत्स्यत्, –त। 1. ಪುಡಿಮಾಡು, ಚೂರ್ಣಮಾಡು. "क्षुणद्मि सर्पान् पाताले छिनद्मि क्षणदाचरान्" भट्टि० ६-३६। 2. ಚೂರುಮಾಡು, ಒಡೆದುಹಾಕು. 3. (ದಾರಿ) ಪಳಗಿಸು, ನಡೆದು ರೂಢಿಸು. 4. ತುಳಿದು ಮರ್ದಿಸು, ತುಳಿದು ತುಳಿದು ಗಟ್ಟಿ (ಹದ) ಮಾಡು.

**कर्मणि :**—क्षुद्यते। क्षुद्यताम्। अक्षुद्यत। क्षुद्येत। अक्षोदीत्। ಉಳಿದುವು ಆತ್ಮನೇಪದದ ರೂಪಗಳಂತಾಗುವುವು.

**णिचि :**—क्षोदयति, –ते। क्षोदयां चकार, –चक्रे, –बभूव, –आस।

**कृत्सु :**—क्षोत्तव्यम्। क्षोदनीयम्। क्षोद्यम्। क्षुण्णः। क्षुण्णवान्। क्षुन्दन्, क्षुन्दन्ती। क्षुन्दानः। क्षोत्तुम्। क्षुण्णम्। क्षोदनम्। क्षुत्त्वा। संक्षुद्य।

**क्षुद्र ಕ್ಷುದ್ರ** (वि०) 1. ದರಿದ್ರ, ಬಡವ. 2. ಕೃಪಣ, ಜಿಪುಣ. 3. ಚಿಕ್ಕದಾದ, ಸಣ್ಣದಾದ. 4. ನೀಚ, ಅಧಮ. क्षुदिर् (संपेषणे) "रक्" (उ० २-१३)। "क्षुद्रेऽपि नूनं शरणं प्रपन्ने ममत्वमुच्चैःशिरसां सतीव" कुमा० १-१२। 5. ಕ್ರೂರ, ದಯೆಯಿಲ್ಲದವನು, ಹಿಂಸಿಸುವವನು. "क्षुद्रो दरिद्रे कृपणे निकृष्टेऽल्पनृशंसयोः" हेम०। (स्त्री०) –द्रा –ದ್ರಾ. 6. ಜೇನು ಹುಳು. "क्षुद्राभिरक्षुद्रतराभिराकुलं विदश्यमानेन जनेन दुद्रुवे" माघ० १२-५४। 7. ಅಂಗಹೀನಳಾದ ಹೆಂಗಸು. 8. ನಟಿ, ನರ್ತಕಿ. 9. ಕಂಟಕಾರಿ, ಹೆಗ್ಗುಳ್ಳ. 10. ವೇಶ್ಯೆ, ಸೂಳೆ. 11. ನೊಣ. 12. ಕಲಹಪ್ರಿಯಳಾದ ಹೆಂಗಸು. 13. ಪುಲ್ಲಂಪುರಿಚಿ. "क्षुद्राव्यङ्गानटीकण्टकारिकासरघासु च। चाङ्गेरी वेश्ययोर्हिस्रामक्षिकामात्रयोरपि" मेदि०।

**क्षुद्रक ಕ್ಷುದ್ರಕ** (पुं०) 1. ಪ್ರಸೇನಜಿತ್ತಿನ ಒಬ್ಬ ಮಗ. (पुं० ब० व०) 2. ಆಯುಧಗಳಿಂದ ಜೀವಿಸುವವರು. (वि०) 3. ಸಣ್ಣದಾದ, ಚಿಕ್ಕದಾದ. क्षुद्र स्वार्थे "कन्" (५-४-५)। "क्षुद्रकाणां पशूनां तु हिंसायां द्विशतो दमः" मनु० ८-२९७।

**क्षुद्रकमानस ಕ್ಷುದ್ರಕಮಾನಸ** (न०) ಕಾಶ್ಮೀರದಲ್ಲಿ ಕುಂಕುಮಕೇಸರಿಯನ್ನು ಬೆಳೆಯುವ ಜಾಗ (ಸರಸ್ಸು). "काश्मीरेषु सरो नाम्ना दिव्यं क्षुद्रकमानसम्" सुश्रुत०।

**क्षुद्रकम्बु ಕ್ಷುದ್ರಕಂಬು** (पुं०) ಗುಳ್ಳೆಶಂಖ, ಚಿಕ್ಕ ಶಂಖ. क्षुद्रः कम्बुः।

**क्षुद्रकुष्ठ ಕ್ಷುದ್ರಕುಷ್ಠ** (ನ०) ಏಕಕುಷ್ಠಾದಿ ಹನ್ನೊಂದು ವಿಧ ಕುಷ್ಠಗಳಲ್ಲಿ ಒಂದು ಬಗೆ.

**क्षुद्रगोक्षुरक ಕ್ಷುದ್ರಗೋಕ್ಷುರಕ** (ಪುं०) ಚಿಕ್ಕ ಜಾತಿಯ ನೆಗ್ಗಿಲು ಗಿಡ.

**क्षुद्रघण्टिका ಕ್ಷುದ್ರಘಂಟಿಕಾ** (स्त्री०) 1. ಕಿರುಗಂಟೆ. 2. ಕಿರುಗೆಜ್ಜೆ. अल्पा घण्टा — अल्पार्थे "कन्" (५-३-८५)। क्षुद्रा घण्टिका।

**क्षुद्रजन्तु ಕ್ಷುದ್ರಜಂತು** (ಪುं०) 1. ಸಣ್ಣ ಪ್ರಾಣಿ. 2. ಶತಪದಿ, ಲಕ್ಷ್ಮೀಚೇಳು.

**क्षुद्रजीरक ಕ್ಷುದ್ರಜೀರಕ** (ಪುं०) ಚಿಕ್ಕ ಜಾತಿಯ ಜೀರಿಗೆ, ಕರಿಜೀರಿಗೆ.

**क्षुद्रदंशिका ಕ್ಷುದ್ರದಂಶಿಕಾ** (स्त्री०) ತೊಣಚಿ, ಕಾಡು ನೊಣ.

**क्षुद्रनदी ಕ್ಷುದ್ರನದೀ** (स्त्री०) ಸಣ್ಣ ಹೊಳೆ, ತೊರೆ, ಅಡ್ಡ ಹಳ್ಳ.

**क्षुद्रपत्रा ಕ್ಷುದ್ರಪತ್ರಾ** (स्त्री०) 1. ಬಜೆ. 2. ಪುಲ್ಲಂಪುರಿಚಿ ಗಿಡ. क्षुद्रं पत्रं यस्याः।

**क्षुद्रपनस ಕ್ಷುದ್ರಪನಸ** (ಪುं०) ಲಕುಚವೃಕ್ಷ, ಗಜನಿಂಬೆ ಗಿಡ.

**क्षुद्रपर्ण ಕ್ಷುದ್ರಪರ್ಣ** (ಪುं०) 1. ಬಿಳಿಯ ಗಗ್ಗರ ಗಿಡ. (वि०) 2. ಚಿಕ್ಕ ಎಲೆಗಳುಳ್ಳ. क्षुद्राणि पर्णानि यस्य।

**क्षुद्रपिप्पली ಕ್ಷುದ್ರಪಿಪ್ಪಲೀ** (स्त्री०) ಕಾಡುಹಿಪ್ಪಲಿ.

**क्षुद्रबुद्धि ಕ್ಷುದ್ರಬುದ್ಧಿ** (स्त्री०) 1. ಅಲ್ಪಬುದ್ಧಿ, ನೀಚ ಬುದ್ಧಿ. (वि०) 2. ಕೆಟ್ಟಬುದ್ಧಿಯುಳ್ಳ, ನೀಚ ಬುದ್ಧಿಯುಳ್ಳ. क्षुद्रा बुद्धिर्यस्य।

**क्षुद्रमत्स्य ಕ್ಷುದ್ರಮತ್ಸ್ಯ** (ಪುं०) ಸಣ್ಣ ಜಾತಿಯ ಮೀನು, ಶೀಗಡಿ. क्षुद्रः अल्पो मत्स्यः।

**क्षुद्ररोग ಕ್ಷುದ್ರರೋಗ** (ಪುं०) ನಲವತ್ತನಾಲ್ಕು ವಿಧ ಸಾಮಾನ್ಯ ರೋಗಗಳು. सुश्रुत० निदान० १३-३।

**क्षुद्ररोगिक ಕ್ಷುದ್ರರೋಗಿಕ** (वि०) ಕ್ಷುದ್ರರೋಗದಿಂದ ಪೀಡಿತನಾದವನು.

**क्षुद्रल ಕ್ಷುದ್ರಲ** (वि०) ಕ್ಷುದ್ರರೋಗದಿಂದ ಕೂಡಿದವನು. क्षुद्राः क्षुद्ररोगाः सन्त्यस्य "लच्" (५-२-९७)।

**क्षुद्रवार्ताकी ಕ್ಷುದ್ರವಾರ್ತಾಕೀ** (स्त्री०) ಬಿಳಿ ಹೆಗ್ಗುಳ್ಳದ ಗಿಡ.

**क्षुद्रशङ्ख ಕ್ಷುದ್ರಶಂಖ** (ಪುं०) ಗುಳ್ಳೆಶಂಖ, ಸಣ್ಣ ಶಂಖ. क्षुद्रः शङ्खः। "क्षुद्रशङ्खाः शङ्खनखाः" अम०।

**क्षुद्रशार्दूल ಕ್ಷುದ್ರಶಾರ್ದೂಲ** (ಪುं०) ಚಿಕ್ಕ ಜಾತಿಯ ಹುಲಿ, ಚಿರತೆ. क्षुद्रः शार्दूलः।

**क्षुद्रशील ಕ್ಷುದ್ರಶೀಲ** (वि०) ನೀಚಸ್ವಭಾವದ, ಕೆಟ್ಟ ಚರ್ಯೆಯುಳ್ಳ. क्षुद्रं शीलं यस्य।

**क्षुद्रशुक्ति ಕ್ಷುದ್ರಶುಕ್ತಿ** (स्त्री०) ಕಪ್ಪೆಚಿಪ್ಪು. क्षुद्रा शुक्तिः।

**क्षुद्रश्यामा ಕ್ಷುದ್ರಶ್ಯಾಮಾ** (स्त्री०) ಕಂಗೊಂಗೆ ಗಿಡ.

**क्षुद्रसहा ಕ್ಷುದ್ರಸಹಾ** (स्त्री०) ಕಾಡುಹೆಸರು ಗಿಡ.

**क्षुद्रसुवर्ण ಕ್ಷುದ್ರಸುವರ್ಣ** (ನ०) ಹಿತ್ತಾಳೆ. क्षुद्रं सुवर्णम्।

**क्षुद्रस्फोट ಕ್ಷುದ್ರಸ್ಫೋಟ** (ಪುं०) ಗುಳ್ಳೆ, ಬೊಕ್ಕೆ, ಕೆಟ್ಟ ಕುರು.

**क्षुद्रा ಕ್ಷುದ್ರಾ** (स्त्री०) "क्षुद्र" ಪದದಲ್ಲಿ ನೋಡಿ.

**क्षुद्रापामार्ग ಕ್ಷುದ್ರಾಪಾಮಾರ್ಗ** (ಪುं०) ಕೆಂಪು ಉತ್ತರಣೆ ಗಿಡ.

**क्षुद्राम्ला ಕ್ಷುದ್ರಾಮ್ಲಾ** (स्त्री०) ಪುಲ್ಲಂಪುರಿಚಿ ಗಿಡ.

**क्षुध् ಕ್ಷುಧ್** (स्त्री०) 1. ಹಸಿವು. क्षुध (बुभुक्षायाम्) "क्विप्" (३-२-१७८)। "तवापि हा हा विरहात्क्षुधाकुलाः कुलायकूलेषु विलुठ्य तेषु ते" नैष० १-१४१। 2. ಅನ್ನ. क्षुध कर्म० "क्विप्"। भागुरिमते "टाप्"। **क्षुधा ಕ್ಷುಧಾ.**

**क्षुध–बुभुक्षायाम्** (दिवा० पर० अक० अनि०)। क्षुध्यति। चुक्षोध। क्षोद्धा। क्षोत्स्यति। क्षुध्यतु। अक्षुध्यत्। क्षुध्येत्। क्षुध्यात्। अक्षुधत्। अक्षोत्स्यत्। ಊಟವನ್ನು ಅಪೇಕ್ಷಿಸು.

**भावे :—**क्षुध्यते। चुक्षुधे। क्षोद्धा। क्षोत्स्यते। क्षुध्यताम्। ಇತ್ಯಾದಿ.

**क्षुधा ಕ್ಷುಧಾ** (स्त्री०) ಹಸಿವು. क्षुध् "टाप्" भागुरिमते। "वष्टि भागुरिरल्लोपमवाप्योरुपसर्गयोः। आपं चैव हलन्तानां यथा वाचा निशा दिशा"। "महीयसा मण्डितपादपद्मं दध्यन्नसारेण मधुप्लुतेन। दृष्ट्वा ननन्दुः क्षुधयान्वितास्तं वत्सानुचर्यासु वयस्यगोपाः" याद० ४-७३।

**क्षुधापीडित ಕ್ಷುಧಾಪೀಡಿತ** (वि०) ಹಸಿವಿನಿಂದ ಬಾಧಿಸಲ್ಪಟ್ಟ. क्षुधया पीडितः।

**क्षुधाभिजनन ಕ್ಷುಧಾಭಿಜನನ** (वि०) ಹಸಿವನ್ನುಂಟು ಮಾಡುವ. क्षुधामभिजनयति — अभि + जनी (प्रादुर्भावे) + णिच् "ल्युः" (३-१-१३४)।

**क्षुधार्त ಕ್ಷುಧಾರ್ತ, –अर्दित –ಅರ್ದಿತ** (वि०) ಹಸಿವಿನಿಂದ ಪೀಡಿಸಲ್ಪಟ್ಟ. क्षुधया आर्तः अर्दितो वा।

**क्षुधावत् ಕ್ಷುಧಾವತ್** (वि०) ಹಸಿವಿನಿಂದ ಕೂಡಿದ. क्षुधास्यास्ति "मतुप्" (५-२-९४)। स्त्रियाम् "ङीप्" (४-१-६)। **–वती –ವತೀ.**

**क्षुधाविष्ट ಕ್ಷುಧಾವಿಷ್ಟ** (वि०) ಹಸಿವಿನಿಂದ ಕೂಡಿದ. क्षुधया आविष्टः।

**क्षुधित ಕ್ಷುಧಿತ** (वि०) ಹಸಿದಿರುವ, ಹಸಿವು ಉಂಟಾಗಿರುವ. क्षुधास्य सञ्जाता "इतच्" (५-२-३६)। क्षुध (बुभुक्षायाम्) कर्त० "क्तः" (३-४-७२)। इडागमः (७-२-५२) वा। "तथा न तापाय पयोनिधीनामश्वामुखोत्थः क्षुधितः शिखावान्" नैष० ८-८१।

**क्षुध्यत् ಕ್ಷುಧ್ಯತ್** (वि०) ಊಟಮಾಡಲು ಅಪೇಕ್ಷಿಸುತ್ತಿರುವ. क्षुध (बुभुक्षायाम्) "शतृ" (३-२-१२४)। "क्षुध्यता जगृहाते तौ रक्षसा दीर्घबाहुना" भट्टि० ६-४४। स्त्रियाम् "ङीप्" (४-२-६)। **क्षुध्यन्ती ಕ್ಷುಧ್ಯಂತೀ.**

**क्षुप ಕ್ಷುಪ** (पुं०) 1. ಸಣ್ಣ ರೆಂಬೆ ಮತ್ತು ಬುಡಗಳುಳ್ಳ ಮರ. टुक्षु (शब्दे) "पः" बाहु०। "नभसः कलभैरुपासितं जलदैर्भूरितरक्षुपं नगम्" नैष० २-६७। 2. ಶ್ರೀಕೃಷ್ಣನ ಪುತ್ರ, ಸತ್ಯಭಾಮೆಯ ಮಗ. "जज्ञिरे सत्यभामायां भानुर्भीमरथः क्षुपः" हरिवं०।

**क्षुब्ध ಕ್ಷುಬ್ಧ** (पुं०) 1. ಕಡಗೋಲು, ಮೊಸರನ್ನು ಕಡೆಯುವ ಕೋಲು, ಮಂತು. क्षुभ (सञ्चलने) "क्तः" (७-२-१८)। मन्थनदण्डश्चेत् इडभावो निपात्यते। "शोभैव मन्दरक्षुब्धक्षुभिताम्भोधिवर्णना" माघ० २-१०७। 2. ಒಂದು ವಿಧ ರತಿಬಂಧ. क्षुभ कर्त० "क्तः" (३-४-७२)। "पार्श्वोपरि पदे कृत्वा योनिं लिङ्गेन ताडयेत्। बाहुभ्यां धारणं गाढं बन्धोऽयं क्षुब्धसंज्ञकः" रतिमं०।

**क्षुब्धाचल ಕ್ಷುಬ್ಧಾಚಲ** (पुं०) ಅಮೃತಕ್ಕಾಗಿ ಕ್ಷೀರಸಮುದ್ರವನ್ನು ಕಡೆದ ಮಂದರಪರ್ವತ. "भोगीन्द्रवेष्टशतघृष्टिकृताभिरद्धिक्षुब्धाचलः कनककेतकगोत्रगात्रि" नैष० ११-६१।

**क्षुभ–सञ्चलने** (भ्वा० आत्म० अक० से०)। क्षोभते। चुक्षुभे। क्षोभिता। क्षोभिष्यते। क्षोभताम्। अक्षोभत। क्षोभेत। क्षोभिषीष्ट। अक्षुभत्। अक्षोभिष्ट। अक्षोभिष्यत। ಚಲಿಸು, ಅಲುಗಾಡು.

**भावे :**—क्षुभ्यते। क्षुभ्यताम्। अक्षुभ्यत। क्षुभ्येत। अक्षोभि। ಉಳಿದೆಲ್ಲ ರೂಪಗಳೂ ಕರ್ತರಿ ರೂಪಗಳಂತಾಗುವುವು.

**णिचि :**—क्षोभयति, –ते। क्षोभयां चकार, –चक्रे, –बभूव, –आस। क्षोभयिता। क्षोभयिष्यति, –ते। क्षोभयतु, –ताम्। अक्षोभयत्, –त। ಇತ್ಯಾದಿ.

**कृत्सु :**—क्षोभितव्यम्। क्षोभणीयम्। क्षोभ्यम्। क्षुब्धो मन्थः। अन्यत्र क्षुभितः। क्षुभितवान्, –वती। क्षुभितम् क्षोभितं वा तेन। प्रक्षुभितः प्रक्षोभितो वा चैत्रः। क्षोभितुम्। क्षुभितम्। क्षोभणम्। क्षुभित्वा, क्षोभित्वा। परिक्षुभ्य, परिक्षोभ्य।

**क्षुभ – सञ्चलने** (दिवा० पर० अक० से०)। क्षुभ्यति। चुक्षोभ। इत्यादि सर्वं "कुप" धातुवत्।

**क्षुभ–सञ्चलने** (क्र्या० पर० अक० से०)। क्षुभ्नाति। चुक्षोभ। क्षोभिता। क्षोभिष्यति। क्षुभ्नातु। अक्षुभ्नात्। क्षुभ्नीयात्। क्षुभ्यात्। अक्षोभीत्। अक्षोभिष्यत्।

**भावे :**—क्षुभ्यते। इत्यादि सर्वं भ्वा० "क्षुभ" धातुवत्।

**कृत्सु :**—क्षुभ्नन्, क्षुभ्नती इति विशेषः। शेषं सर्वं क्षोभतिवत्।

**क्षुभित ಕ್ಷುಭಿತ** (वि०) 1. ಚಲಿಸಿದ, ಕ್ಷೋಭೆಗೊಂಡ, ಎಲ್ಲೆ ಮೀರಿದ. क्षुभ (सञ्चलने) कर्त० "क्तः" (३-४-७२)। "स्माह चलयति भुवं मरुति क्षुभितस्य नादमनुकुर्वदम्बुधेः" माघ० १५-४४। 2. ಕಲಕಲ್ಪಟ್ಟ ಮನಸ್ಸುಳ್ಳ, ಅಸಮಾಧಾನಗೊಂಡ. "प्राह मुररिपुतिरस्करणक्षुभितः स्म वाचमिति जाह्नवीसुतः" माघ० १५-४५। 3. ಉದ್ಧತವಾದ, ಬಿರುಸಾದ. "इतीरिते वचसि वचस्विनामुना युगक्षयक्षुभितमरुद्गरीयसि" माघ० १७-१। 4. ಕೋಪಗೊಂಡ, ಸಿಟ್ಟೇರಿದ. "क्षुभितस्य महीभृतस्त्वयि प्रथमोपन्यसनं वृथा मम" माघ० १६-५१। 5. ಹೆದರಿದ, ಭಯಗೊಂಡ, ಕಳವಳಗೊಂಡ. 6. ಕಲಕಲ್ಪಟ್ಟ. "शोभैव मन्दरक्षुब्धक्षुभिताम्भोधिवर्णना" माघ० २-१०७।

**क्षुभ्नत् ಕ್ಷುಭ್ನತ್** (वि०) ಚಲಿಸುತ್ತಿರುವ, ಎಲ್ಲೆಮೀರುತ್ತಿರುವ. क्षुभ (सञ्चलने) "शतृ" (३-२-१२४)। स्त्रियाम् "ङीप्" (४-१-६)। **क्षुभ्नती ಕ್ಷುಭ್ನತೀ.** [क्र्या०]

**क्षुभ्यत् ಕ್ಷುಭ್ಯತ್** (ವಿ०) ಚಲಿಸುತ್ತಿರುವ, ಎಲ್ಲೆಮೀರಿ ಬರುತ್ತಿರುವ, ಕ್ಷೋಭೆಹೊಂದುತ್ತಿರುವ. क्षुभ (सञ्चलने) "शतृ" (३-२-१२४)। स्त्रियाम् "ङीप्" (४-१-६)। **क्षुभ्यन्ती ಕ್ಷುಭ್ಯಂತೀ.** [दिवा०]। "तूर्यैर्युगक्षये क्षुभ्यदकूपारानुकारिणी" माघ० १९-२६।

**क्षुमा ಕ್ಷುಮಾ** (स्त्री०) ಅತಸೀವೃಕ್ಷ, ಅಗಸೇಮರ. क्षौति — टुक्षु (शब्दे) "मक्" बाहु०।

**क्षुर — विलेखने** (तुदा० पर० सक० से०)। क्षुरति। चुक्षोर। क्षोरिता। ಇತ್ಯಾದಿ. 1. ಕತ್ತರಿಸು. 2. ಗೆರೆ ಎಳೆ.

**क्षुर ಕ್ಷುರ** (पुं०) 1. ನಾಪಿತನ ಕತ್ತಿ, ಕ್ಷೌರಕತ್ತಿ. क्षुर (विलेखने) "रन्" (उ० ३-२९)। गुणाभावश्च निपा०। "समुपजातकोपोऽयं नापितः तं क्षुरं दूरादेव क्षिप्तवान्" हितो०। "आधोरणानां गजसंनिपाते शिरांसि चक्रैर्निशितैः क्षुराग्रैः" रघु० ७-४६। 2. ಹಸು ಮೊದಲಾದ ಪ್ರಾಣಿಗಳ ಕಾಲಿನ ಗೊರಸು. 3. ಬಾಣ. 4. ಕೊಳವಳಿಕೆ ಗಿಡ. 5. ಓಂಡೀತಕ ವೃಕ್ಷ, ಮಂಗಾರೆ ಗಿಡ. 6. ನೆಗ್ಗಿಲು ಗಿಡ. 7. ಖಡ್ಗ, ಕತ್ತಿ. "क्षुरः स्यात् छेदनद्रव्ये कोकिलाक्षे च गोक्षुरे" मेदि०। "नापितस्योपकरणे कोकिलाक्षेऽपि च क्षुरः" त्रिकाण्ड०। "क्षुरेण शितधारेण चकर्तास्य शरासनम्" रामा०।

**क्षुरक ಕ್ಷುರಕ** (पुं०) 1. ತಿಲಕವೃಕ್ಷ. 2. ನೆಗ್ಗಿಲು ಗಿಡ. 3. ಕೊಳವಳಿಕೆ ಗಿಡ. 4. ಹಸು ಮೊದಲಾದ ಪ್ರಾಣಿಗಳ ಕಾಲಿನ ಗೊರಸು. क्षुर (विलेखने) "क्वुन्" (उ० २-९०)।

**क्षुरकर्मन् ಕ್ಷುರಕರ್ಮನ್** (न०) ಕ್ಷೌರ, ಕೇಶಖಂಡನ, ಚೌಲ ಸಂಸ್ಕಾರ. क्षुरसाध्यं कर्म। "यो जन्ममासे क्षुरकर्म यात्रां कर्णस्य वेधं कुरुते च मोहात्। नूनं स रोगं धनपुत्रनाशं प्राप्नोति मूढो वधबन्धनानि"। ಆದುದರಿಂದ ಜನ್ಮ (ಹುಟ್ಟಿದ) ಮಾಸದಲ್ಲಿ ಚೌಲವನ್ನು ಮಾಡಕೂಡದು. **ಚೌಲಕರ್ಮಕ್ಕೆ ಯೋಗ್ಯವಾದ ಕಾಲ:** ಮೂರನೆಯ ವಯಸ್ಸಿನ ನಂತರ ವಿಷಮ ವರ್ಷಗಳಲ್ಲಿ ಉತ್ತರಾಯಣದಲ್ಲಿ ಶುದ್ಧ ಪಾಡ್ಯ ಚೌತಿ ಷಷ್ಠಿ ಅಷ್ಟಮಿ ನವಮಿ ದ್ವಾದಶಿ ಚತುರ್ದಶಿ ಹುಣ್ಣಿಮೆ ಮತ್ತು ಅಮಾವಾಸ್ಯೆ ತಿಥಿಗಳನ್ನೂ ಗ್ರಹಣ ಸಂಕ್ರಮಣಗಳನ್ನೂ ಬಿಟ್ಟು ಉಳಿದ ತಿಥಿಗಳಲ್ಲೂ ಸೋಮ, ಬುಧ, ಗುರು ಮತ್ತು ಶುಕ್ರವಾರಗಳಲ್ಲೂ, ಅಶ್ವಿನಿ ಮೃಗಶೀರ್ಷ ಪುಷ್ಯ ಹಸ್ತ ಚಿತ್ತೆ ಶ್ರವಣ ಧನಿಷ್ಠೆ ಮತ್ತು ರೇವತಿ ನಕ್ಷತ್ರಗಳಲ್ಲೂ ಕರ್ಕಾಟಕ ಕನ್ಯಾ ಮಿಥುನ ಮೀನ ತುಲಾ ವೃಷಭ ಮಕರ ಲಗ್ನಗಳಲ್ಲೂ ಮಾಡುವುದು ಪ್ರಶಸ್ತವು. ರೋಹಿಣಿ ಉತ್ತರಫಲ್ಗುನಿ ಸ್ವಾತಿ ಶತಭಿಷೆ ಉತ್ತರಾಷಾಢ ಮತ್ತು ಉತ್ತರಾಭಾದ್ರೆಗಳಲ್ಲಿ ಮಧ್ಯಮ. "तृतीयवर्षेऽप्यथपञ्चमेऽब्दे गतत्रिभागे प्रवदन्ति चौलम्। उदग्गतेऽर्के गुरुशुक्रतेजःप्रकाशितं व्योम्नि च शुक्लपक्षे॥ आदित्यसौम्यवसुवैष्णवपौष्णतिष्यत्वष्ट्रश्विचण्डकिरणेषु दिवा प्रशस्तम्। स्वातीविधातृवरुणोत्तरभानि मध्यान्याहुर्निशास्वपि न च क्षुरकर्म कार्यम्" मुहू० द०। "कर्क्यङ्गनामिथुनमीनतुलोक्षनक्राः पूज्याः" मुहू० द०।

**क्षुरधान ಕ್ಷುರಧಾನ** (न०) ಕ್ಷೌರಿಕನ ಕತ್ತಿ ಸಾಣೆಕಲ್ಲು ಮೊದಲಾದುವನ್ನು ಇಡುವ ಚೀಲ. क्षुरो धीयतेऽत्र — डुधाञ् (धारणपोषणयोः) अधि० "ल्युट्" (३-३-११७)।

**क्षुरपत्र ಕ್ಷುರಪತ್ರ** (पुं०) ಕತ್ತಿಯ ಅಲುಗಿನಂತೆ ತೀಕ್ಷ್ಣವಾದ ತುದಿಯುಳ್ಳ ಬಾಣ. क्षुर इव पत्त्रमस्य।

**क्षुरप्र ಕ್ಷುರಪ್ರ** (पुं०) 1. ಕುಡಗಲು, ಹುಲ್ಲು ಮೊದಲಾದುವನ್ನು ಕೊಯ್ಯುವ ಒಂದು ಆಯುಧ. क्षुरं प्राति — प्रा (पूरणे) "कः" (३-२-४)। 2. ಕತ್ತಿಯಂತೆ ತೀಕ್ಷ್ಣವಾದ ತುದಿಯುಳ್ಳ ಬಾಣ. "प्रायो विषाणपरिमोक्षलघूत्तमाङ्गान् खड्गांश्चकार नृपतिर्निशितैः क्षुरप्रैः" रघु० ९-६२।

**क्षुरभाण्ड ಕ್ಷುರಭಾಂಡ** (न०) ಕ್ಷೌರಿಕನ ಕತ್ತಿಯ ಚೀಲ, ಕ್ಷೌರಿಕನ ಕತ್ತಿಯನ್ನು ಇಡುವ ಚೀಲ. क्षुरस्य भाण्डम्। "शीघ्रमानीयतां क्षुरभाण्डं क्षौरकर्मकरणाय गच्छामि" पञ्चतं०।

**क्षुरमर्दिन् ಕ್ಷುರಮರ್ದಿನ್** (पुं०) ನಾಪಿತ, ಕ್ಷೌರಿಕ. क्षुरं मृद्नाति घर्षयति — मृद (क्षोदे) "णिनिः" (३-१-१३४)।

**क्षुरमुण्डिन् ಕ್ಷುರಮುಂಡಿನ್** (पुं०) ನಾಪಿತ, ಕ್ಷೌರಿಕ, ನಾಯಿಂದ. क्षुरेण मुण्डयति — मुण्ड + णिच् "णिनिः" (३-१-१३४)।

**क्षुराङ्ग ಕ್ಷುರಾಂಗ** (पुं०) ನೆಗ್ಗಿಲು ಗಿಡ. क्षुर इवाङ्गमस्य।

**क्षुरिका ಕ್ಷುರಿಕಾ** (स्त्री०) ಚಾಕು, ಚೂರಿ, ಸಣ್ಣಕತ್ತಿ. क्षुरति — क्षुर (विलेखने) "कः" (३-१-१३५)। स्वार्थे "कन्" (५-४-५)। स्त्रियाम् "टाप्" (४-१-४)। अत इत्वम्।

**क्षुरिकापत्र ಕ್ಷುರಿಕಾಪತ್ರ** (पुं०) ಶರ, ಬಾಣ. क्षुरिकेव पत्त्रमस्य।

**क्षुरिन् ಕ್ಷುರಿನ್** (पुं०) 1. ನಾಪಿತ, ಕ್ಷೌರಿಕ, ನಾಯಿಂದ. क्षुरोऽस्यास्ति—क्षुर "इनिः" (५-२-११५)। स्त्रियाम् "ङीप्" (४-१-५)। **-णी -ಣೀ.** 2. ನಾಪಿತನ ಹೆಂಡತಿ. 3. ವರಾಹಕ್ರಾಂತಿಯೆಂಬ ಗಿಡ.

**क्षुरी ಕ್ಷುರೀ** (स्त्री०) ಚಾಕು, ಚೂರಿ, ಸಣ್ಣ ಕತ್ತಿ. ಅಲ್ಪಃ ಕ್ಷುರಃ। "क्षुरी छुरी कृपाणिका" अभि० चि०।

**क्षुल्ल ಕ್ಷುಲ್ಲ** (वि०) 1. ಅಲ್ಪ, ಸ್ವಲ್ಪ. क्षुदं लाति — ला (आदाने) "कः" (३-२-३)। 2. ಕನಿಷ್ಠ, ಕಿರಿಯ. 3. ನೀಚ, ಅಧಮ.

**क्षुल्लक ಕ್ಷುಲ್ಲಕ** (पुं०) 1. ಗುಳ್ಳೆ, ಶಂಖ. (वि०) 2. ನೀಚ, ಅಧಮ. 3. ಅಲ್ಪವಾದ, ಸ್ವಲ್ಪವಾದ. 4. ಸಣ್ಣದಾದ, ಚಿಕ್ಕದಾದ. ಕ್ಷುದಂ ಲಾತಿ — ಲಾ (आदाने) "कः" (३-२-३)। स्वार्थे "कन्" (५-४-५)। क्षुधं लाति — ला (आदाने) "क्वुन्" (उ० २-३२) वा। "क्षुल्लकस्त्रिषु नीचेऽल्पे" मेदि०। 5. ಪಾಮರ, ಅಜ್ಞಾನಿ, ತಿಳಿವಳಿಕೆಯಿಲ್ಲದವನು, ಮೂರ್ಖ. 6. ದುಃಖಗೊಂಡವನು, ನೊಂದವನು. 7. ಕನಿಷ್ಠ, ಕಿರಿಯ. "क्षुल्लकः पामरे स्वल्पे कनिष्ठे दुःखिते खले" हेम०।

**क्षेतव्य ಕ್ಷೇತವ್ಯ** (वि०) 1. ಕಡಮೆಮಾಡಲು ಯೋಗ್ಯವಾದ. 2. ಕಡಮೆಮಾಡಲು ಶಕ್ಯವಾದ. 3. ಕಡಮೆಮಾಡಲ್ಪಡುವ. 4. ನಾಶಪಡಿಸಲ್ಪಡುವ. 5. ನಾಶಪಡಿಸಲು ಯೋಗ್ಯವಾದ. 6. ನಾಶಪಡಿಸಲು ಶಕ್ಯವಾದ. क्षि (क्षये) अन्तर्भावितण्यर्थः "तव्यः" (३-१-९६)।

**क्षेत्र ಕ್ಷೇತ್ರ** (न०) 1. ಬತ್ತ ಮೊದಲಾದುವನ್ನು ಬೆಳೆಯುವ ಭೂಮಿ, ಗದ್ದೆ. क्षीयते धान्यैरत्र — क्षि (निवासगत्योः) "ष्ट्रन्" (उ० ४-१५९)। "चीयते बालिशस्यापि सत्क्षेत्रपतिता कृषिः" मुद्रा० १-३। 2. ಸ್ಥಾನ, ಜಾಗ, ಪ್ರದೇಶ. "सद्यः सीरोत्कषणसुरभि क्षेत्रमारुह्य मालम्" मेघ० १-१६। 3. ಪುಣ್ಯಸ್ಥಲ, ಯಾತ್ರಾಸ್ಥಲ, ತಿರುಪತಿ (ಆದಿವರಾಹ ಕ್ಷೇತ್ರ), ಕಂಚಿ (ಸತ್ಯವ್ರತ ಕ್ಷೇತ್ರ), ಶ್ರೀರಂಗ ಕ್ಷೇತ್ರ, ಮೇಲುಕೋಟೆ (ಯಾದವಗಿರಿ—ವೈಕುಂಠವರ್ಧನ ಕ್ಷೇತ್ರ), ಕಾಶಿ, ಪ್ರಯಾಗ (ಗಯಾ ಭಾಸ್ಕರ ಕ್ಷೇತ್ರ), ಕಾಮರೂಪ, ಶ್ರವಣಬೆಳಗೊಳ ಮೊದಲಾದುವು. "आसन्नं युवयोः क्षेत्रमिदं वाराणसी तु यत्। कथितं नातिदूरे च वर्तते नरसत्तमौ"। "नाचिरात् कामदं पुण्यं क्षेत्रं पीठं निगद्यते। कामरूपं महापीठं गुह्याद्गुह्यतमं परम्" कालिकापु०। 4. ಕಳತ್ರ, ಪತ್ನಿ, ಹೆಂಡತಿ. "अपि नाम कुलपतेरियमसवर्णक्षेत्रसंभवा स्यात्" शाकु० १। 5. ಶರೀರ, ದೇಹ. "इदं शरीरं कौन्तेय क्षेत्रमित्यभिधीयते" गीता १३-१। इदं शरीरं — "देवोऽहम्, मनुष्योऽहम्, स्थूलोऽहम्, कृशोऽहम् इत्यात्मना भोक्त्रा सह सामानाधिकरण्येन प्रतीयमानं भोक्तुरात्मनोऽर्थान्तरभूतस्य भोगक्षेत्रमिति शरीरयाथात्म्यविद्भिरभिधीयते" **इति श्रीरामानुजभाष्यम्।** "इदमिति सर्वनाम्नोक्तं विशिनष्टि शरीरमिति। हे कौन्तेय क्षतत्राणात् क्षयात्, क्षरणात् क्षेत्रवच्च अस्मिन् कर्मफलनिष्पत्तेः क्षेत्रमित्येवम् अभिधीयते कथ्यते" **इति श्रीशंकरभाष्यम्।** "क्षेत्रं शरीरे केदारे सिद्धस्थानकलत्रयोः" मेदि०। "योगिनो यं विचिन्वन्ति क्षेत्राभ्यन्तरचारिणम्" कुमा० ६-७७। 6. ಗೃಹ, ಮನೆ. 7. ಯೋನಿ, ಉತ್ಪತ್ತಿಸ್ಥಾನ. "क्षेत्रं भार्याङ्गकेदारपुण्यभूगृहयोनिषु" नानार्थर०। 8. ಪರಮಾತ್ಮ, ಪರಮೇಶ್ವರ. 9. ಅಂತಃಕರಣ, ಮನಸ್ಸು. 10. ಸೂರ್ಯಾದಿ ಗ್ರಹಗಳ ಗೃಹ, ಮೇಷ ಮೊದಲಾದ ಹನ್ನೆರಡು ರಾಶಿಗಳು. "कुजशुक्रबुधेन्द्वर्कसौम्यशुक्रावनीभुवाम्। जीवार्किभानुजेज्यानां क्षेत्राणि स्युरजादयः" ज्योतिस्०।

| ಗ್ರಹ | ಕ್ಷೇತ್ರ |
|---|---|
| ಕುಜ | ಮೇಷ, ವೃಶ್ಚಿಕ |
| ಶುಕ್ರ | ವೃಷಭ, ತುಲಾ |
| ಬುಧ | ಮಿಥುನ, ಕನ್ಯಾ |
| ಚಂದ್ರ | ಕರ್ಕಾಟಕ |
| ರವಿ | ಸಿಂಹ |
| ಗುರು | ಧನಸ್ಸು, ಮೀನ |
| ಶನಿ | ಮಕರ, ಕುಂಭ |

ಈ ಗ್ರಹಗಳು ಆಯಾ ಕ್ಷೇತ್ರಗಳಿಗೆ ಅಧಿಪತಿಗಳು. 11. ಲೀಲಾವತಿಯಲ್ಲಿ ಉಕ್ತವಾದ ವೃತ್ತ ತ್ರಿಕೋಣ ಚತುಷ್ಕೋಣ ಮೊದಲಾದುವು.

**क्षेत्रकर ಕ್ಷೇತ್ರಕರ** (पुं०) ರೈತ, ಭೂಮಿಯ ಸಾಗುವಳಿ ಮಾಡುವ ಬೇಸಾಯಗಾರ. क्षेत्रं करोति — डु कृञ् (करणे) "टः" (३-२-२१)।

**क्षेत्रज ಕ್ಷೇತ್ರಜ** (पुं०) 1. ಹನ್ನೆರಡು ವಿಧ ಪುತ್ರರಲ್ಲೊಬ್ಬ, ವಂಶಾಭಿವೃದ್ಧಿಗಾಗಿ ಹಿರಿಯರ ಅನುಮತಿಯಿಂದ ಪತಿಯ ಸಹೋದರರಿಂದ ಹುಟ್ಟಿದ ಮಗ. क्षेत्रे जायते — जनी (प्रादुर्भावे) "डः" (३-२-९७)। "यस्तल्पजः प्रमीतस्य क्लीबस्य व्याधितस्य वा। स्वधर्मेण नियुक्तायां स पुत्रः क्षेत्रजः स्मृतः" मनु० ९-१६७। ಇದು ಕಲಿಯುಗದಲ್ಲಿ

ನಿಷಿದ್ಧ. "कलि" ಪದದಲ್ಲಿ ನೋಡಿ. (वि०) 2. ಕ್ಷೇತ್ರ ದಲ್ಲಿ ಹುಟ್ಟಿದ, ಭೂಮಿಯಲ್ಲಿ ಹುಟ್ಟಿದ. 3. ಶರೀರ ದಲ್ಲಿ ಉತ್ಪನ್ನವಾದ. (स्त्री०) -जा -ಜಾ. 4. ಬಿಳಿ ಹೆಗ್ಗುಳ್ಳ.

**क्षेत्रजात ಕ್ಷೇತ್ರಜಾತ** (पुं०) "क्षेत्रज" ಪದದ ಅರ್ಥ. क्षेत्रे जातः। "क्षेत्रजः क्षेत्रजातस्तु सगोत्रेणेतरेण वा" याज्ञ० २-१२८।

**क्षेत्रज्ञ ಕ್ಷೇತ್ರಜ್ಞ** (पुं०) 1. ಜೀವ, ಈ ಕ್ಷೇತ್ರ (ಶರೀರ)ವು ನನ್ನದೆಂಬ ಜ್ಞಾನವುಳ್ಳ ಜೀವಾತ್ಮ. क्षेत्रं शरीरं ममेति जानाति — ज्ञा (अवबोधने) "कः" (३-१-१३५)। 2. ಪರಮಾತ್ಮ. क्षेत्रेषु सर्वदेहेषु अन्तर्यामितया आत्मस्वरूपं जानाति — ज्ञा "कः" (३-१-१३५)। "इदं शरीरं कौन्तेय क्षेत्रमित्यभिधीयते। एतद्यो वेत्ति तं प्राहुः क्षेत्रज्ञ इति तद्विदः। क्षेत्रज्ञं चापि मां विद्धि सर्वक्षेत्रेषु भारत। क्षेत्रक्षेत्रज्ञयोर्ज्ञानं यत्तज्ज्ञानं मतं मम" गीता १३-१, २। 3. ವಿಷ್ಣು. मुक्तेभ्यः स्वानुभवं दातुं तदेकान्तं क्षेत्रं जानाति। "क्षेत्रं तु परमव्योम मुक्तेभ्यो वेत्ति नित्यशः। दातुं स्वानुभवं यश्च क्षेत्रज्ञः स तु कथ्यते" इति निरुक्तिः। "यं प्राप्य न निवर्तन्ते तद्धाम परमं मम" गीता ८-२१। "अव्ययः पुरुषः साक्षी क्षेत्रज्ञोऽक्षर एव च" वि० स०। 4. ಅಂತರ್ಯಾಮಿ. ಜೀವಾತ್ಮನನ್ನು ಪ್ರೇರಿಸಿ ಕೆಲಸ ಮಾಡಿಸುವವನು. "योऽस्यात्मनः कारयिता तं क्षेत्रज्ञं प्रचक्षते। यः करोति तु कर्माणि स भूतात्मोच्यते बुधैः" मनु० १२-१२। (वि०) 5. ನಿಪುಣ, ಜಾಣ, ಬುದ್ಧಿವಂತ. 6. ರೈತ, ಬೇಸಾಯಗಾರ. 7. ಭೂಮಿಯ ಸ್ವರೂಪವನ್ನು ತಿಳಿದವನು.

**क्षेत्रप ಕ್ಷೇತ್ರಪ** (पुं०) ಕ್ಷೇತ್ರವನ್ನು ಕಾಪಾಡುವ ಒಂದು ದೇವತೆ. क्षेत्रं पाति—पा (रक्षणे) "कः" (३-२-४)।

**क्षेत्रपति ಕ್ಷೇತ್ರಪತಿ** (पुं०) 1. ಭೂಮಿಯ ಒಡೆಯ, ಜಮೀನುದಾರ. क्षेत्रस्य पतिः। 2. ತನಗೆ ಆಧಾರವಾದ ದೇಹಕ್ಕೆ ಒಡೆಯನಾದ ಜೀವಾತ್ಮ. "जीवं क्षेत्रपतिं प्राहुः केचिदग्निमथापरे। स्वतन्त्र एव स कश्चित् क्षेत्रस्य पतिरिष्यते" तन्त्रसा०।

**क्षेत्रपाल ಕ್ಷೇತ್ರಪಾಲ** (पुं०) 1. ಜಮೀನನ್ನು ಕಾಪಾಡುವವನು, ಹೊಲ ಗದ್ದೆಗಳನ್ನು ಕಾಯುವವನು. क्षेत्रं पालयति — पाल (रक्षणे) + णिच् "अण्" (३-२-१)। "ण्वुल्" (३-१-१३३)। -पालकः -ಪಾಲಕಃ. "वृषापेहि परक्षेत्रादायाति क्षेत्रपालकः" चन्द्रा०। 2. ಕ್ಷೇತ್ರವನ್ನು ರಕ್ಷಿಸುವ ಒಂದು ದೇವತೆ. 3. ಭೈರವ. ಒಟ್ಟು 49 ಭೈರವ ಭೇದಗಳೆಂದು ಪ್ರಯೋಗಸಾರದಲ್ಲಿ ಉಕ್ತವಾಗಿದೆ.

**क्षेत्रभक्ति ಕ್ಷೇತ್ರಭಕ್ತಿ** (स्त्री०) ಜಮೀನಿನ ವಿಭಾಗ.

**क्षेत्ररक्ष ಕ್ಷೇತ್ರರಕ್ಷ** (वि०) ಜಮೀನನ್ನು ಕಾಯುವವನು, ಹೊಲ ಗದ್ದೆ ತೋಟಗಳನ್ನು ಕಾಯುವವನು. क्षेत्रं रक्षति — रक्ष (पालने) "अच्" (३-१-१३४)।

**क्षेत्ररुह ಕ್ಷೇತ್ರರುಹ** (वि०) ಭೂಮಿಯಲ್ಲಿ ಹುಟ್ಟಿದ. क्षेत्रे रोहति—रुह (बीजजन्मादौ) "कः" (३-१-१३५)। (स्त्री०) -रुहा -ರುಹಾ. ಸೌತೆಕಾಯಿ.

**क्षेत्रविद् ಕ್ಷೇತ್ರವಿದ್** (पुं०) 1. ರೈತ, ನೆಲದ ಸ್ವರೂಪವನ್ನೂ ವ್ಯವಸಾಯವನ್ನೂ ತಿಳಿದವನು. क्षेत्रं वेत्ति—विद (ज्ञाने) "क्विप्" (३-२-६१)। 2. "क्षेत्रज्ञ" ಪದದ ಅರ್ಥ. "यमक्षरं क्षेत्रविदो विदुस्तमात्मानमात्मन्यवलोकयन्तम्" कुमा० ३-५०।

**क्षेत्रसंभव ಕ್ಷೇತ್ರಸಂಭವ** (वि०) ಭೂಮಿಯಲ್ಲಿ ಹುಟ್ಟಿದ. क्षेत्रे संभवति—सम्+भू "अच्" (३-१-१३४)। -संभूतः -ಸಂಭೂತಃ.

**क्षेत्राजीव ಕ್ಷೇತ್ರಾಜೀವ** (पुं०) 1. ರೈತ, ಬೇಸಾಯಗಾರ. क्षेत्रमाजीवो यस्य। (वि०) 2. ಬೇಸಾಯದಿಂದ ಜೀವಿಸುವವನು.

**क्षेत्राधिदेवता ಕ್ಷೇತ್ರಾಧಿದೇವತಾ** (स्त्री०) ಪುಣ್ಯಕ್ಷೇತ್ರದ ದೇವತೆ.

**क्षेत्राधिप ಕ್ಷೇತ್ರಾಧಿಪ** (पुं०) 1. ಪುಣ್ಯಕ್ಷೇತ್ರದ ದೇವತೆ. 2. ಜಮೀನಿನ ಒಡೆಯ. 3. ಮೇಷ ಮೊದಲಾದ ಹನ್ನೆರಡು ರಾಶಿಗಳ ಅಧಿಪತಿಗಳು. क्षेत्रस्य क्षेत्राणां वाधिपः। -अधिपतिः -ಅಧಿಪತಿಃ.

**क्षेत्रिक ಕ್ಷೇತ್ರಿಕ** (पुं०) 1. ಜಮೀನಿನ ಒಡೆಯ. क्षेत्रमस्त्यस्य "ठन्" (५-२-११५)। "क्षेत्रेष्वन्येषु तु पशुः सपादं पणमर्हति। सर्वत्र तु सदो देयः क्षेत्रिकस्येति धारणा" मनु० ८-२४१। 2. ಯಜಮಾನ, ಪತ್ನಿಯನ್ನು ಹೊಂದಿರುವವನು, ಪತಿ. "ओघवाताहृतं बीजं यस्य क्षेत्रे प्ररोहति। क्षेत्रिकस्यैव तद्बीजं न वप्ता लभते फलम्" मनु० ९-५४।

**क्षेत्रिन् ಕ್ಷೇತ್ರಿನ್** (पुं०) 1. ಜೀವಾತ್ಮ. 2. ಪರಮಾತ್ಮ. 3. ರೈತ, ಬೇಸಾಯಗಾರ. 4. ಜಮೀನುದಾರ. "यावत् सस्यं विनश्येत्तु तावत् स्यात् क्षेत्रिणः फलम्" याज्ञ० २-१६१। 5. ಪತಿ, ಯಜಮಾನ. क्षेत्रमस्यास्ति

"इनिः" (५-२-११५)। "तथैवाक्षेत्रिणो बीजं परक्षेत्रप्रवापिणः। कुर्वन्ति क्षेत्रिणामर्थं न बीजी लभते फलम्" मनु० ९-५१।

**क्षेत्रिय ಕ್ಷೇತ್ರಿಯ** (पुं०) 1. ವರ್ತಮಾನ (ಈಗಿನ) ಶರೀರದಲ್ಲಿ ಚಿಕಿತ್ಸೆಗೆ ಯೋಗ್ಯವಲ್ಲದ ವ್ಯಾಧಿ, ಬೇರೆ ಶರೀರ (ಜನ್ಮಾಂತರ) ದಲ್ಲಿ ಚಿಕಿತ್ಸೆಗೆ ಯೋಗ್ಯವಾದ ವ್ಯಾಧಿ. परक्षेत्रे चिकित्स्यः—परक्षेत्र "घच्" परशब्दस्य लोपश्च (५-२-९२)। "दण्डोयं क्षेत्रियो येन मय्यपातीति साऽब्रवीत्" भट्टि० ४-३२। 2. ಕ್ಷೇತ್ರಸ್ವಾಮಿ, ಜಮೀನಿನ ಯಜಮಾನ. "क्षेत्रियस्यात्यये दण्डयो भागाद्दशगुणो भवेत्। ततोऽर्धदण्डो भृत्यानामज्ञानात्क्षेत्रिकस्य तु" मनु० ८-२४३। (वि०) 3. ಪರಸ್ತ್ರೀಯಲ್ಲಿ ಆಸಕ್ತನಾದವನು, ಜಾರ, ವ್ಯಭಿಚಾರಿ. 4. ಕ್ಷೇತ್ರದಲ್ಲಿ ಹುಟ್ಟಿದ. ಜಮೀನಿನಲ್ಲಿ ಬೆಳೆದ.

**क्षेप ಕ್ಷೇಪ** (पुं०) 1. ಇಡುವುದು, ಇರಿಸುವುದು. क्षिप (प्रेरणे) "घञ्" (३-३-१८)। "गोरोचनाक्षेपनितान्तगौरे" कुमा० ७-१७। 2. ಪ್ರೇರಿಸುವುದು, ಮುಂದಕ್ಕೆ ನೂಕುವುದು. 3. ಎಸೆಯುವುದು, ಬಿಸಾಡುವುದು. 4. ನಿಂದಿಸುವುದು, ದೂಷಿಸುವುದು. 5. ವಿಲಂಬ, ಸಾವಕಾಶ. "प्रस्थानकालक्षमवेषकल्पनाकृतक्षणक्षेपमुदैक्षताच्युतम्" माघ० १२-१। 6. ಗರ್ವ, ಕೊಬ್ಬು. 7. ಲಂಘನ, ದಾಟುವುದು, ಮೀರುವುದು. 8. ತಿರಸ್ಕಾರ, ಅವಮಾನಗೊಳಿಸುವುದು. 9. ಗುಚ್ಛ, ಗೊಂಚಲು. 10. ಕಳುಹಿಸುವುದು. 11. ಚಲಿಸುವುದು, ಅಲುಗಾಡುವುದು. "कुन्दक्षेपानुगमधुकरश्रीमुषामात्मबिम्बं पात्रीकुर्वन् दशपुरवधूनेत्रकौतूहलानाम्" मेघ० १-४७। "क्षेपो गर्वे लङ्घननिन्दयोः। विलम्बे रणहेलासु" हेम०। "गुच्छो गुलुच्छः क्षेपः स्यात्" त्रिकाण्ड०।

**क्षेपक ಕ್ಷೇಪಕ** (वि०) 1. ಇರಿಸುವವನು, ಇಡುವವನು. 2. ಗ್ರಂಥಗಳಲ್ಲಿ ಹೊಸ ವಿಷಯಗಳನ್ನು ಸೇರಿಸುವವನು. क्षिप (प्रेरणे) "ण्वुल्" (३-१-१३३)। 3. ನಿಂದಿಸುವವನು. 4. ಎಸೆಯುವವನು, ಬಿಸಾಡುವವನು. 5. ಕಳುಹಿಸುವವನು. 6. ಪ್ರೇರಿಸುವವನು, ಮುಂದಕ್ಕೆ ತಳ್ಳುವವನು. 7. ಅತಿಕ್ರಮಿಸುವವನು, ಮೀರಿ ನಡೆಯುವವನು. 8. (ಬಾಣ) ಪ್ರಯೋಗಿಸುವವನು.

**क्षेपण ಕ್ಷೇಪಣ** (नं०) 1. ಇರಿಸುವುದು, ಇಡುವುದು. क्षिप (प्रेरणे) भावे "ल्युट्" (३-३-११५)। 2. ತಿರಸ್ಕರಿಸುವುದು, ಅವಮಾನಗೊಳಿಸುವುದು. 3. ಎಸೆಯುವುದು, ಬಿಸಾಡುವುದು. 4. ನಿಂದಿಸುವುದು, ದೂಷಿಸುವುದು. 5. ಗ್ರಂಥದ ಮಧ್ಯದಲ್ಲಿ ಹೊಸ ವಿಷಯಗಳನ್ನು ಸೇರಿಸುವುದು. 6. ಕಾಲಕಳೆಯುವುದು, (ಆಯುಸ್ಸನ್ನು) ಕಳೆಯುವುದು. "आयुषः क्षेपणार्थं च दातव्यं स्त्रीधनं विना" हारीत०। "उपाकर्मणि चोत्सर्गे त्रिरात्रं क्षेपणं स्मृतम्" मनु० ४-११९। 7. ಕವಣೆಯಿಂದ ಎಸೆಯುವುದು. "क्षेपणैर्मुष्टिभिश्चैवावरोहोद्भूतनिःस्वनैः" भा० विरा० १३।

**क्षेपणी ಕ್ಷೇಪಣೀ** (स्त्री०) 1. ಲಂಗರು, ನೌಕಾದಂಡ. 2. ಮೀನು ಹಿಡಿಯುವ ಬಲೆ. 3. ಕವಣೆ, ಕಲ್ಲು ಎಸೆಯುವ ಒಂದು ಹಗ್ಗ. क्षिप (प्रेरणे) "ल्युट्" (३-३-११७)। "ङीप्" (४-१-१५)।

**क्षेपणीय ಕ್ಷೇಪಣೀಯ** (पुं०) 1. ಭಿಂಡಿಪಾಲವೆಂಬ ಒಂದು ಕಬ್ಬಿಣದ ಆಯುಧ. (नं०) 2. ಕವಣೆ. क्षिप (प्रेरणे) "अनीयर्" (३-१-९६)। "नाराचक्षेपणीयाश्मनिष्पेषोत्पतितानलम्" रघु० ४-७७। (नं०) 3. ಎಸೆಯಲ್ಪಡುವ. 4. ಎಸೆಯಲು ಯೋಗ್ಯವಾದ. 5. ಎಸೆಯಲು ಶಕ್ಯವಾದ.

**क्षेपिमन् ಕ್ಷೇಪಿಮನ್** (पुं०) ಶೀಘ್ರತೆ, ವೇಗ. क्षिप्रस्य भावः "इमनिच्" (५-१-१२२)। यणादिलोपः पूर्वस्य च गुणः (६-४-१५६)।

**क्षेपिष्ठ ಕ್ಷೇಪಿಷ್ಠ** (वि०) ಅತಿಶೀಘ್ರವಾದ, ಬಹಳ ವೇಗವಾದ. अतिशयेन क्षिप्रः "इष्ठन्" (५-३-५५)। रेफलोपः पूर्वस्य च गुणः (६-४-१५६)।

**क्षेपीयस् ಕ್ಷೇಪೀಯಸ್** (वि०) ಎರಡರಲ್ಲಿ ಹೆಚ್ಚು ಶೀಘ್ರವಾದ. —ಅತಿವೇಗವಾದ. अनयोरयमतिशयेन क्षिप्रः "ईयसुन्" (५-३-५७)। रेफलोपः पूर्वस्य च गुणः (६-४-१५६)। स्त्रियाम् "ङीप्" (४-१-६)। **–यसी –ಯಸೀ.**

**क्षेप्तृ ಕ್ಷೇಪ್ತೃ** (वि०) "क्षेपक" ಪದದ ಅರ್ಥ. क्षिप (प्रेरणे) "तृच्" (३-१–१३३)। "उपस्पृश्य ददौ शापं क्षेप्तारं वालिनं प्रति" रामा०। स्त्रियाम् "ङीप्" (४-१-५)। **क्षेप्त्री ಕ್ಷೇಪ್ತ್ರೀ.**

**क्षेप्तव्य ಕ್ಷೇಪ್ತವ್ಯ** (वि०) 1. ಎಸೆಯಲ್ಪಡುವ, ಬಿಸಾಡಲ್ಪಡುವ. 2. ಇಡಲ್ಪಡುವ. 3. ಎಸೆಯಲು ಯೋಗ್ಯವಾದ. 4. ಎಸೆಯಲು ಶಕ್ಯವಾದ. 5. ಇಡಲು ಯೋಗ್ಯವಾದ. 6. ಇಡಲು ಶಕ್ಯವಾದ. क्षिप (प्रेरणे) "तव्यः" (३-१-९६)। 7. ನಿಂದಿಸಲ್ಪಡುವ. "न चाप्येवं त्वया

भूयः क्षेप्तव्या ब्रह्मवादिनः" भा० आदि० ३१-३५। 8. ಗ್ರಂಥಕ್ಕೆ ಹೊಸದಾಗಿ ಸೇರಿಸಬೇಕಾದ (ವಿಷಯ).

**क्षेप्य ಕ್ಷೇಪ್ಯ** (वि०) 1. ಎಸೆಯಲ್ಪಡುವ. 2. ಇಡಲ್ಪಡುವ. 3. ಗ್ರಂಥಕ್ಕೆ ಹೊಸದಾಗಿ ಸೇರಿಸಲ್ಪಡುವ. 4. ಮುಂದಕ್ಕೆ ನೂಕಲ್ಪಡುವ. 5. ಕಳುಹಿಸಲ್ಪಡುವ. 6. ನಿಂದಿಸಲ್ಪಡುವ. क्षिप (प्रेरणे) "ण्यत्" (३-१-१२४)।

**क्षेम ಕ್ಷೇಮ** (पुं०) 1. ಕರಿಯಕಚೋರ. क्षिणोति—क्षिणु (हिंसायाम्) "मन्" (उ० १-१४०)। "चण्डा धनहरी क्षेमदुष्पत्रगणहासकाः" अम०। 2. ಧರ್ಮಪುರುಷನಿಂದ ಶಾಂತಿಯಲ್ಲಿ ಜನಿಸಿದ ಒಬ್ಬ ಮಗ. "व्यवसायं प्रजज्ञे वै क्षेमं शान्तिरसूयत" विष्णुपु०। 3. ಕಳಿಂಗ ದೇಶದ ಒಬ್ಬ ದೊರೆ. "क्षेमोऽप्रतीर्थः कुहरः कलिङ्गेषु नराधिपः" भा० आदि० ६७। (पुंन०) 4. ದೊರೆತ ವಸ್ತುವನ್ನು ಭದ್ರವಾಗಿ ರಕ್ಷಿಸುವುದು. 5. ಶುಭ, ಮಂಗಳ, ಕಲ್ಯಾಣ, ಕುಶಲ. क्षयत्यशुभं — क्षि (क्षये) "मन्" (उ० १-१४०)। 6. ಕುಶಲ, ನೆಮ್ಮದಿ, ಸುಖ. "ब्राह्मणं कुशलं पृच्छेत्क्षत्रबन्धुमनामयम्। वैश्यं क्षेमं समागम्य शूद्रमारोग्यमेव च" मनु० २-१२७। "आशास्य लाजाञ्जलिहोमभाजा क्षेमाशिषा किञ्चिदशेषहृद्यम्" याद० १३-८६। (न०) 7. ರಕ್ಷಣೆ, ಪಾಲನೆ, ಕಾಪಾಡುವುದು. "क्षेमं कल्याणरक्षयोः" त्रिकाण्ड०। "वितन्वति क्षेममदेवमातृकाः चिराय तस्मिन् कुरवश्चकासति" किरा० १-१७। 8. ಮೋಕ್ಷ, ಮುಕ್ತಿ. "क्षेमं तु मङ्गले। लब्धसंरक्षणे मोक्षे" हेम०। (वि०) 9. ಕುಶಲವುಳ್ಳ, ಮಂಗಳವುಳ್ಳ. क्षेममस्यास्ति "अच्" (५-२-१२७)। "कृताः क्षेमाश्च पन्थानः सुखं गच्छन्ति खेचराः" रामा०। 10. ನೆಮ್ಮದಿಯುಳ್ಳ, ಸುಖವುಳ್ಳ.

**क्षेमक ಕ್ಷೇಮಕ** (पुं०) 1. ಒಬ್ಬ ರಾಕ್ಷಸ. "एतस्मिन्नेव काले तु पुरीं वाराणसीं नृप। पुण्यां निवेशयामास क्षेमको नाम राक्षसः" हरिवं०। 2. ಕಚೋರ, ಒಂದು ಸುಗಂಧದ್ರವ್ಯ. 3. ಪ್ಲಕ್ಷದ್ವೀಪದ ಒಂದು ಭಾಗ (ವರ್ಷ). ಇಲ್ಲಿ ಕ್ಷೇಮಕನು ಆಳುತ್ತಿದ್ದನು. विष्णुपु० २-४-५।

**क्षेमकर ಕ್ಷೇಮಕರ** (वि०) ಮಂಗಳವನ್ನು ಉಂಟುಮಾಡುವ, ಒಳ್ಳೆಯದನ್ನು ಉಂಟುಮಾಡುವ. करोति—डु कृञ् (करणे) "अच्" (३-१-१३४)। क्षेमस्य करः। "पन्थानं वः प्रवक्ष्यामि शिवं क्षेमकरं द्विजाः" भा० आश्व० ३५-३७। क्षेमं करोति—डु कृञ् "अण्" (३-२-४४)। **–कारः –ಕಾರಃ.** "पितुः प्रियङ्करो भर्ता क्षेमकारस्तपस्विनाम्" भट्टि० ५-७७। चात् "खश्"। **क्षेमङ्करः ಕ್ಷೇಮಂಕರಃ.** "क्षेमङ्करोऽरिष्टतातिः शिवतातिः शिवङ्करः" अम०। "क्षेमङ्कराणि कार्याणि पर्यालोचयतां ततः" भट्टि० ६-१०५। "ण्वुल्" (३-१-१३३)। **–कारकः –ಕಾರಕಃ.**

**क्षेमकृत् ಕ್ಷೇಮಕೃತ್** (पुं०) 1. ವಿಷ್ಣು. क्षेमं निवृत्तानां तत्संकोचनविमोचनरूपं करोति — डु कृञ् (करणे) "क्विप्" (३-२-७६)। "असंकोचज्ञानरूपक्षेमस्य करणात् सताम्। क्षेमकृत्" इति निरुक्तिः। "अनिवर्ती निवृत्तात्मा संक्षेप्ता क्षेमकृत् शिवः" वि० स०। (वि०) 2. ಶುಭವನ್ನು ಉಂಟುಮಾಡುವ, ಮಂಗಳವನ್ನು ಉಂಟುಮಾಡುವ. क्षेमं करोति — डु कृञ् (करणे) "क्विप्" (३-२-७६)।

**क्षेमङ्करी ಕ್ಷೇಮಂಕರೀ** (स्त्री०) ದುರ್ಗಾದೇವಿ, ಪಾರ್ವತಿ. "क्षेमान् देवेषु सा देवी कृत्वा दैत्यपतेः क्षयम्। क्षेमङ्करी शिवेनोक्ता पूज्या लोके भविष्यसि"।

**क्षेमतर ಕ್ಷೇಮತರ** (न०) ಹೆಚ್ಚು ಕ್ಷೇಮ, ಅತಿಶಯವಾದ ಸೌಖ್ಯ, ಬಹಳ ನೆಮ್ಮದಿ. अतिशयेन क्षेमम्। "धार्तराष्ट्रा रणे हन्युस्तन्मे क्षेमतरं भवेत्" गीता १-४६।

**क्षेमधन्वन् ಕ್ಷೇಮಧನ್ವನ್** (पुं०) ರಘುವಂಶದ ಪುಂಡರೀಕ ರಾಜನ ಮಗ. "स क्षेमधन्वानममोघधन्वा पुत्रं प्रजाक्षेमविधानदक्षम्" रघु० १८-९।

**क्षेमधर्मन् ಕ್ಷೇಮಧರ್ಮನ್** (पुं०) ಒಬ್ಬ ರಾಜ. क्षेमे धर्मो यस्य। "ततश्च शिशुनागस्तस्य पुत्रश्च काकवर्णो भविता तस्य पुत्रः क्षेमधर्मा तस्यापि क्षत्रौजाः" विष्णुपु०।

**क्षेमफला ಕ್ಷೇಮಫಲಾ** (स्त्री०) ಉದುಂಬರವೃಕ್ಷ, ಅತ್ತಿಮರ. क्षेमं फलमस्याः।

**क्षेममूर्ति ಕ್ಷೇಮಮೂರ್ತಿ** (पुं०) ದುರ್ಯೋಧನನ ಒಬ್ಬ ಸಹೋದರ. "उग्रश्रवा उग्रसेनः क्षेममूर्तिस्तथैव च" भा० आदि० ६७।

**क्षेमवत् ಕ್ಷೇಮವತ್** (वि०) ಕ್ಷೇಮದಿಂದ ಕೂಡಿದ, ಮಂಗಳವುಳ್ಳ. क्षेममस्यास्ति "मतुप्" (५-२-९४)।

**क्षेमशर ಕ್ಷೇಮಶೂರ** (पुं०) ಭಯವಿಲ್ಲದ ಜಾಗದಲ್ಲಿ ಪರಾಕ್ರಮವನ್ನು ತೋರಿಸುವವನು. क्षेमे मङ्गलस्थाने शूरः। "किं क्षेमशूरैर्विबुधैरसंयुगविकत्थनैः। रहोजुषा वा हरिणा शम्भुना वा वनौकसा" भाग० १०-४-३६।

**क्षेमा ಕ್ಷೇಮಾ** (स्त्री०) 1. ದುರ್ಗಾದೇವಿ, ಪಾರ್ವತಿ. 2. ಒಬ್ಬ ಅಪ್ಸರಸ್ಸು. "अम्बिका लक्षणा क्षेमा देवी रम्भा मनोरमा" भा० आदि० १२३।

**खसूचि ಖಸೂಚಿ** (ಪುಂ) ಆಕಾಶವನ್ನು ತೋರಿಸುವವನು. ಇದೊಂದು ನಿಂದಾವಚನ. ಯಾವುದಾದರೊಂದು ವಿಷಯ ದಲ್ಲಿ ಪ್ರಶ್ನೆಮಾಡಿದಾಗ ಅದಕ್ಕೆ ಉತ್ತರ ಹೇಳಲು ಅಸಮರ್ಥನಾಗಿ ಆ ಪ್ರಶ್ನೆಯನ್ನು ಮರೆಸಲು ಆಕಾಶವನ್ನು ತೋರಿಸುತ್ತ ಮಾತಾಡುವವನು ಖಸೂಚಿ. **ಉದಾ :** "वैयाकरणखसूचि: " सि० कौ०। ವ್ಯಾಕರಣ ಪ್ರಶ್ನೆಯನ್ನು ಕೇಳಿದಾಗ ಆಕಾಶವನ್ನು ತೋರಿಸುತ್ತ ಮಾತನಾಡುವ ನಿಂದ್ಯನಾದ ವೈಯಾಕರಣನಲ್ಲಿ ಈ ಪ್ರಯೋಗ.

**खसृम ಖಸೃಮ** (ಪುಂ) 1. ಸಿಂಹಿಕೆಯ ಮಗನಾದ ಒಬ್ಬ ಅಸುರ. "सिंहिकायां समुत्पन्ना विप्रचित्तिसुतास्तथा। व्यंश: शल्यश्च बलवान् नभश्चैव महाबल:। वातापिर्नमुचिश्चैव इल्वल: खसृमस्तथा"। 2. ವಿಶ್ವಾಮಿತ್ರನ ಒಬ್ಬ ಮಗ.

**खस्तनी ಖಸ್ತನೀ** (ಸ್ತ್ರೀ०) ಆಕಾಶವೇ ಸ್ತನವಾಗಿ ಉಳ್ಳ ಪೃಥ್ವಿ. खमाकाश: स्तनमिवास्या:।

**खाजिक ಖಾಜಿಕ** (ಪುಂ) ಲಾಜ, ಪುರಿ, ಅರಳು. खे ऊर्ध्वभागे आज: क्षेप:—तत्र साधु: "ठञ्" (४-४-१०३)।

**खाण्डपरशव ಖಾಂಡಪರಶವ** (ವಿ०) 1. ವಿಷ್ಣು ಸಂಬಂಧ ವಾದ. 2. ಪರಮೇಶ್ವರನ ಸಂಬಂಧವಾದ. 3. ಪರಶು ರಾಮನ ಸಂಬಂಧವಾದ. खण्डपरशोरिदम् "अण्" (४-३-१२०)।

**खाण्डव ಖಾಂಡವ** (ಪುನ०) 1. ಸಿಹಿಮೋದಕ. ಮಿಠಾಯಿ. (ನ०) 2. ಕುರುಕ್ಷೇತ್ರದ ಒಂದು ವನ. ಖಾಂಡವೀ ನಗರವಿದ್ದ ಜಾಗದಲ್ಲಿ ಈ ವನವು ನಿರ್ಮಿತವಾಗಿದ್ದುದರಿಂದ ಇದಕ್ಕೆ ಈ ಹೆಸರು. [ಚಂದ್ರವಂಶದ ಸುದರ್ಶನನೆಂಬ ಒಬ್ಬ ರಾಜನು ಹಿಮವತ್‌ಪರ್ವತದ ಸಮೀಪದಲ್ಲಿ ದೇವತೆ ಗಳು ಯಕ್ಷಗಂಧರ್ವರು ತಪಸ್ವಿಗಳು ಇವರೆಲ್ಲರಿಗೂ ಆಶ್ರಯವಾಗಿದ್ದ ದೊಡ್ಡ ವನವೊಂದನ್ನು ಕಡಿದು ಸಕಲ ಸಂಪತ್ಸಮೃದ್ಧವಾದ ಖಾಂಡವಿಯೆಂಬ ಮಹಾನಗರ ವೊಂದನ್ನು ನಿರ್ಮಿಸಿ ಸಕಲ ರಾಜರನ್ನೂ ದೇವಗಂಧರ್ವ ರನ್ನೂ ಜಯಿಸಿ ಅಸಂಖ್ಯಾತವಾದ ರತ್ನಕನಕ ರಾಶಿಗಳಿಂದ ನಗರವನ್ನು ತುಂಬಿ ಬೇರೆ ಬೇರೆ ಪಟ್ಟಣಗಳಿಂದ ಜನರನ್ನು ಕರೆತಂದು ಅಲ್ಲಿ ನೆಲೆಸಿರುವಂತೆ ಮಾಡಿದನು. ಇವಲ್ಲವನ್ನೂ ನೋಡಿ ಸಹಿಸದಿದ್ದ ಇಂದ್ರನ ಮಾತಿನಂತೆ ವಾರಾಣಸಿಯ ವಿಜಯನೆಂಬ ಒಬ್ಬ ರಾಜನು ಸುದರ್ಶನನನ್ನು ಯುದ್ಧ ದಲ್ಲಿ ಜಯಿಸಿ ಖಾಂಡವಿಯಲ್ಲಿ ವಾಸಿಸುತ್ತಿದ್ದ ಜನರನ್ನು ಅವರವರ ಪೂರ್ವಸ್ಥಾನಗಳಿಗೆ ಕಳುಹಿಸಿ ಆ ನಗರ ವನ್ನು ನಾಶಪಡಿಸಿ ಇಂದ್ರನ ಸಂತೋಷಾರ್ಥವಾಗಿ ಅಲ್ಲಿ ಮೊದಲಿನಂತೆಯೇ ದೊಡ್ಡ ಉದ್ಯಾನವನವೊಂದನ್ನು ನಿರ್ಮಿಸಿದನು.

ಅನೇಕ ಸಂವತ್ಸರಗಳಕಾಲ ನಡೆದ ಶ್ವೇತಕಿಯ ಯಾಗದ ಹವಿಸ್ಸಿನಿಂದ ಅಜೀರ್ಣಗೊಂಡಿದ್ದ ಅಗ್ನಿಯು ಖಾಂಡವ ವನವನ್ನು ಭಕ್ಷಿಸಲು ಏಳು ಸಲ ಪ್ರಯತ್ನಿಸಿದರೂ ಅಲ್ಲಿದ್ದ ಆನೆಗಳು ಸೊಂಡಿಲಿನಿಂದ ನೀರನ್ನು ತಂದು ತಂದು ಬೆಂಕಿ ಯನ್ನು ಆರಿಸುತ್ತಲೇ ಇದ್ದುವು. ಕೊನೆಗೆ ಬ್ರಹ್ಮನ ಮಾತಿ ನಂತೆ ಶ್ರೀಕೃಷ್ಣಾರ್ಜುನರನ್ನು ಬೇಡಲಾಗಿ ಅವರ ಅನುಮತಿ ಯಂತೆ ಖಾಂಡವವನವನ್ನು ಭಕ್ಷಿಸಲು ಅಗ್ನಿಯು ಯತ್ನಿಸಿ ದಾಗ ಅಗ್ನಿಯನ್ನು ಆರಿಸಲು ಇಂದ್ರನು ಮಳೆ ಸುರಿಸಿದನು. ಆಗ ಅರ್ಜುನನು ಆಕಾಶದಲ್ಲಿ ಶರಗಳಿಂದ ದೊಡ್ಡ ಚಪ್ಪರ ವನ್ನು ನಿರ್ಮಿಸಿ ಮಳೆಗೆ ತಡೆಮಾಡಲು ಇಂದ್ರನು ಕೋಪ ಗೊಂಡು ಶ್ರೀಕೃಷ್ಣಾರ್ಜುನರ ಮೇಲೆ ಯುದ್ಧಕ್ಕೆ ಬಂದು ಸೋತುಹೋದನು. ಅಗ್ನಿಯು ಖಾಂಡವವನವನ್ನು ಸ್ವೇಚ್ಛೆಯಿಂದ ಭಕ್ಷಿಸಿ ಸಂತೋಷಗೊಂಡನು. ಈ ಸಂದರ್ಭ ದಲ್ಲಿ ಅಗ್ನಿಯಿಂದ ಅರ್ಜುನನಿಗೆ ಗಾಂಡೀವಧನುಸ್ಸು, ದಿವ್ಯರಥ ಶ್ವೇತಾಶ್ವಗಳು ಇವೆಲ್ಲವೂ ಲಭಿಸಿದುವು.] भा० आदि० २४८-२५३।

**खाण्डवप्रस्थ ಖಾಂಡವಪ್ರಸ್ಥ** (ಪುಂ) ಇಂದ್ರಪ್ರಸ್ಥ ನಗರ. ಪಾಂಡವರು ದುರ್ಯೋಧನನಿಂದ ಕೇಳಿದ ಐದು ಗ್ರಾಮ ಗಳಲ್ಲೊಂದು, ಧೃತರಾಷ್ಟ್ರನಿಂದ ಅರ್ಧರಾಜ್ಯ ಪಡೆದು ಧರ್ಮರಾಜನು ನಿರ್ಮಿಸಿದ ನಗರ. "अस्माभि: खाण्डवप्रस्थे युष्मद्वासोऽभिचिन्तित:" भा० आदि०। ["इन्द्रप्रस्थ" ಪದದಲ್ಲಿ ನೋಡಿ.]

**खाण्डविक ಖಾಂಡವಿಕ** (ಪುಂ) ಮಿಠಾಯಿ ಮೊದಲಾದ ಸಿಹಿಮೋದಕಗಳನ್ನು ತಯಾರಿಸುವವನು. खाण्डवं शिल्पमस्य "ठञ्" (४-४-५१)। "आरालिका सूपकारा: ये च खाण्डविकास्तथा" भा० आश्रम०।

**खाण्डवी ಖಾಂಡವೀ** (ಸ್ತ್ರೀ०) ಸುದರ್ಶನ ರಾಜನು ನಿರ್ಮಿ ಸಿದ್ದ ಒಂದು ಮಹಾನಗರ. ["खाण्डव" ಪದದಲ್ಲಿ ನೋಡಿ.]

**खात ಖಾತ** (ನ०) 1. ಅಗೆಯುವುದು, ತೋಡುವುದು. खनु (अवदारणे) भावे "क्त:" (३-३-११४)। 2. ಪುಷ್ಕರಿಣಿ, ಕೊಳ, ಕೆರೆ, ತಟಾಕ. खन्० कर्म० "क्त:" (३-२-१०२)। "पूर्तं खातादि कर्म यत्" अम०। 3. ಕಾಲುವೆ. 4. ಕಂದಕ, ಕೋಟೆಯ ಸುತ್ತಲೂ ನೀರನ್ನು ತುಂಬಲು ತೋಡುವ ಹಳ್ಳ. (ವಿ०) 5. ಅಗೆಯಲ್ಪಟ್ಟ. 6. ಕೆದಕಲ್ಪಟ್ಟ, ತುಳಿದು ಮೇಲಕ್ಕೆ ಎಬ್ಬಿಸಲ್ಪಟ್ಟ. खनु

कर्म० "क्तः"। "खातं खुरै रथ्यतुरङ्गपुंगवैरुपत्यकाहाटक-मेदिनीरजः" कुमा० १४-२०। 7. ಭೇದಿಸಲ್ಪಟ್ಟ, ಒಡೆಯಲ್ಪಟ್ಟ, ಸೀಳಲ್ಪಟ್ಟ.

**खातक ಖಾತಕ** (न०) 1. ಚಚ್ಚೌಕವಾಗಿ ತೋಡಲ್ಪಟ್ಟ ಕೊಳ, ಪುಷ್ಕರಿಣಿ. खात संज्ञायां "कन्" (५-३-७५)। "पुष्करिण्यां तु खातकम्" अभि० चि०। (वि०) 2. ಅಧಮರ್ಣ, ಸಾಲಗಾರ, ಸಾಲಪಡೆದವನು. "उत्तमर्णो धनस्वामी अधमर्णस्तु खातकः"। 3. ಶತ್ರು ಸೈನ್ಯವನ್ನು ಭೇದಿಸುವವನು. "खातकव्यूहतत्त्वज्ञं बलहर्षणकोविदम्" भा० शान्ति० ११८। 4. ಅಗೆಯುವವನು, ನೆಲವನ್ನು ತೋಡುವವನು. खनु कर्त० "ण्वुल्" (३-१-१३३)।

**खातभू ಖಾತಭೂ** (स्त्री०) 1. ಕಂದಕ, ಕೋಟೆಯ ಸುತ್ತಲೂ ನೀರು ತುಂಬಲು ತೋಡಿದ ಹಳ್ಳ. खातयुक्ता भूः। 2. ಕಾಲುವೆ.

**खाति ಖಾತಿ** (स्त्री०) ಅಗೆಯುವುದು, ನೆಲವನ್ನು ತೋಡುವುದು. खनु (अवदारणे) "क्तिन्" (३-३-९४)।

**खात्र ಖಾತ್ರ** (न०) 1. ಖನಿತ್ರ, ಗುದ್ದಲಿ, ನೆಲವನ್ನು ಅಗೆಯುವ ಆಯುಧ. 2. ಕೊಳ, ಸರಸ್ಸು. खनु (अवदारणे) "ष्ट्रन्" (उ० ४-१६१)। "खात्रं खनित्रं जलाधारश्च" सि० कौ०। 3. ವನ, ಕಾಡು. 4. ಸೂತ್ರ, ದಾರ.

**खादृ – भक्षणे** (भ्वा० पर० सक० से०)। खादति। चखाद। खादिता। खादिष्यति। खादतु। अखादत्। खादेत्। खाद्यात्। अखादीत्। अखादिष्यत्। 1. ಭಕ್ಷಿಸು, ತಿನ್ನು. 2. ಹಿಂಸಿಸು, ನೋಯಿಸು.

**कर्मणि:**—खाद्यते। चखादे। खादिता। खादिष्यते। खाद्यताम्। अखाद्यत। ಇತ್ಯಾದಿ.

**णिचि:**—खादयति। खादयां चकार, –बभूव, –आस। खादयिता। खादयिष्यति। खादयतु। ಇತ್ಯಾದಿ.

**सनि:**—चिखादिषति। चिखादिषां चकार, –बभूव, –आस। ಇತ್ಯಾದಿ.

**कृत्सु:**—खादितव्यः। खादनीयः। खाद्यः। खादितः। खादितवान्। खादन्, खादन्ती। खादितुम्। खादितम्। खादनम्। खादित्वा। प्रखाद्य।

**खादक ಖಾದಕ** (वि०) 1. ಭಕ್ಷಿಸುವವನು, ತಿನ್ನುವವನು. खादृ (भक्षणे) "वुञ्" (३-२-१४६)। "अनुमन्ता विशसिता निहन्ता क्रयविक्रयी। संस्कर्ता चोपहर्ता च खादकश्चेति घातकाः" मनु० ५-५१। 2. ಸಾಲಗಾರ. "खादको वित्तहीनः स्यात् लग्नको वित्तवान् यदि"।

**खादत् ಖಾದತ್** (वि०) ತಿನ್ನುತ್ತಿರುವ. खादृ (भक्षणे) "शतृ" (३-२-१२४)। "देवान् पितृंश्चार्चयित्वा खादन्मांसं न दुष्यति" मनु० ५-३२। स्त्रियाम् "ङीप्" (४-१-६)। खादन्ती ಖಾದಂತೀ.

**खादतमोदता ಖಾದತಮೋದತಾ** (स्त्री०) "ಬೇಕಾದ ಹಾಗೆ ಊಟಮಾಡಿರಿ ಮತ್ತು ಸಂತೋಷಪಡಿರಿ" ಎಂದು ಉಪಚಾರದ ಮಾತು ಹೇಳುವ ಸಮಾರಂಭ. खादत मोदध्वम् इत्युच्यते यस्यां क्रियायाम्।

**खादन ಖಾದನ** (पुं०) 1. ದಂತ, ಹಲ್ಲು. खादत्यनेन—खादृ (भक्षणे) "ल्युट्" (३-३-११७)। (न०) 2. ಭಕ್ಷಣ, ತಿನ್ನುವುದು.

**खादनीय ಖಾದನೀಯ** (वि०) 1. ತಿನ್ನಲು ಯೋಗ್ಯವಾದ, –ಶಕ್ಯವಾದ. खादृ (भक्षणे) "अनीयर्" (३-१-९६)। 2. ಅವಶ್ಯವಾಗಿ ತಿನ್ನಬೇಕಾದ. 3. ತಿನ್ನಲ್ಪಡುವ. "तव्यः" (३-१-९६)। खादितव्यः ಖಾದಿತವ್ಯಃ. "अत्रैव दग्ध्वा खादितव्योऽयम्" हितो० ४।

**खादित ಖಾದಿತ** (वि०) ತಿನ್ನಲ್ಪಟ್ಟ, ಭಕ್ಷಿಸಲ್ಪಟ್ಟ. खादृ (भक्षणे) "क्तः" (३-२-१०२)। "आशङ्कमानो वैदेहीं खादितां निहतां मृताम्" भट्टि० ६-६। "अतो निर्मण्डूकं सरो विलोक्य मण्डूकनाथोऽपि तेन खादितः" हितो० ४।

**खादितवत् ಖಾದಿತವತ್** (वि०) ಭಕ್ಷಿಸಿದವನು, ತಿಂದವನು. खादृ (भक्षणे) "क्तवतुः" (३-२-१०२)। "ततः गृहीतोऽयं महाप्रसादः इत्युक्त्वा स क्रमशो मण्डूकान् खादितवान्" हितो० ४। स्त्रियाम् "ङीप्" (४-१-६)। –वती –ವತೀ.

**खादितृ ಖಾದಿತೃ** (वि०) "खादक" ಪದದ 1ನೆಯ ಅರ್ಥ. खादृ (भक्षणे) "तृच्" (३-१-१३३)।

**खादिन् ಖಾದಿನ್** (वि०) ಭಕ್ಷಿಸುವವನು, ತಿನ್ನುವವನು. खादृ (भक्षणे) "णिनिः" (३-२-७८)। "लोष्टमर्दी तृणच्छेदी नखखादी च यो नरः। स विनाशं व्रजत्याशु सूचकोऽशुचिरेव च" मनु० ४-७१। स्त्रियाम् "ङीप्" (४-१-५)। –नी –ನೀ.

**खादिर ಖಾದಿರ** (पुं०) 1. ಕಗ್ಗಲಿಮರದ ಗೋಂದು, ಕಾಚು. (वि०) 2. ಕಗ್ಗಲಿಮರದ ಸಂಬಂಧವಾದ. खदिरस्येदम् "अण्" (४-३-१२०)।

**खादुक ಖಾದುಕ** (वि०) ಹಿಂಸಿಸುವ ಸ್ವಭಾವದವನು, ದುರ್ಜನ.

**खाद्य ಖಾದ್ಯ** (न०) 1. ಭಕ್ಷ್ಯ, ತಿಂಡಿ, ಆಹಾರ. खाद् (भक्षणे) "ण्यत्" (३-१-१२४)। (वि०) 2. ತಿನ್ನಲು ಯೋಗ್ಯವಾದ.

**खान ಖಾನ** (न०) 1. ಭಕ್ಷಣ, ತಿನ್ನುವುದು. खे (खेदने) भावे "ल्युट्" (३-३-११५)। धातूनामनेकार्थत्वात्। "सद्भावेन हि तुष्यन्ति देवाः सत्पुरुषा द्विजाः। इतरे खानपानेन वाक्प्रदानेन पण्डिताः" गरुडपु०। 2. ಅಗೆಯುವುದು.

**खानक ಖಾನಕ** (वि०) ಅಗೆಯುವವನು, ತೋಡುವವನು. खनति — खनु (अवदारणे) "ण्वुल्" (३-१-१३३)। "व्याधान् शाकुनिकान् गोपान् कैवर्तान् मूलखानकान्" मनु० ७-२६०।

**खानि ಖಾನಿ** (पुं०) ಆಕರ, ಗಣಿ, ರತ್ನ ಚಿನ್ನ ಮೊದಲಾದುವುಗಳ ಉತ್ಪತ್ತಿ ಸ್ಥಾನ. खनिरेव। पृषो०।

**खानिक ಖಾನಿಕ** (न०) 1. ಕನ್ನಗತ್ತರಿ, ಕನ್ನವನ್ನು ಕೊರೆಯುವ ಕತ್ತರಿ. 2. ಕನ್ನವನ್ನು ಕೊರೆಯುವ ಕಳ್ಳ. 3. ಗೋಡೆಯೊಳಗೆ ತೋಡಿರುವ ಗುಳಿ. खानेन निर्वृत्तम् "ठञ्" (५-१-७९)। "कुडयच्छेद्यं तु खानिकम्" त्रिकाण्ड०।

**खानिल ಖಾನಿಲ** (वि०) ಕನ್ನಕೊರೆದು ಕದಿಯುವವನು, ಚೋರ. ಕಳ್ಳ. खानं खननं शिल्पत्वेनास्यास्ति "इलच्"।

**खानिष्क ಖಾನಿಷ್ಕ** (पुं०) ಒಂದು ಮಾಂಸ. "दीप्ताग्नीनां सदा पथ्यः खानिष्कः कफहा गुरुः" सुश्रुत०।

**खानोदक ಖಾನೋದಕ** (पुं०) ಎಳನೀರು. खानाय उदकमत्र।

**खापगा ಖಾಪಗಾ** (स्त्री०) ಆಕಾಶಗಂಗೆ, ದೇವನದಿ. खस्यापगा।

**खारिम्पच ಖಾರಿಂಪಚ** (वि०) ಒಂದು ಖಂಡಗದಷ್ಟು ಬೇಯಿಸುವ. खारीं पचति — डु पचष् (पाके) "खच्" (३-२-३३)। मुमागमः (६-३-६७)। ह्रस्वः (६-३-६६)।

**खारी ಖಾರೀ** (स्त्री०) 1. ಒಂದು ಖಂಡಗ, 180 ಸೇರು, 16 ದ್ರೋಣದ ಅಳತೆ. खं मध्यमाकाशम् आराति — आ+रा (दाने) "कः" (३-२-३)। गौरा० "ङीष्" (४-१-४१)।

**खारीक ಖಾರೀಕ** (वि०) 1. ಒಂದು ಖಂಡಗ ಧಾನ್ಯದ ಬೆಲೆಗೆ ಕೊಂಡದ್ದು. खार्या क्रीतम् "ईकन्" (५-१-३३)। अध्यर्धखारीकम् द्विखारीकम् ಇತ್ಯಾದಿ. 2. ಒಂದು ಖಂಡಗದ ಬೀಜವರಿಯ ಜಮೀನು. खारीं खारीवापमर्हति "ईकन्" (५-१-३३)।

**खारीवाप ಖಾರೀವಾಪ** (वि) ಒಂದು ಖಂಡಗ ಧಾನ್ಯವನ್ನು ಬಿತ್ತುವಷ್ಟು ಜಮೀನು, ಖಂಡಗದ ಬೀಜವರಿಯ ನೆಲ. खारी उप्यतेऽत्र — डु वप् (बीजतन्तुसन्ताने) "घञ्" (३-३-१२१)।

**खालत्य ಖಾಲತ್ಯ** (न०) ಪಟ್ಟೆತಲೆ. ಇಂದ್ರಲುಪ್ತಕವೆಂಬ ಒಂದು ರೋಗ. खलतेर्भावः "ष्यञ्" (५-१-१२४)।

**खिट — त्रासे** (भ्वा० पर० अक० से०)। खेटति। चिखेट। खेटिता। खेटिष्यति। खेटतु। अखेटत्। ಇತ್ಯಾದಿ. ಹೆದರು, ಭಯಪಡು.

**भावे :**—खिटयते। चिखिटे। खेटिता। खेटिष्यते। खिटयताम्। ಇತ್ಯಾದಿ.

**णिचि :**—खेटयति, –ते। खेटयां चकार, –चक्रे, –बभूव, –आस। खेटयिता। खेटयिष्यति, –ते। खेटयतु, –ताम्। ಇತ್ಯಾದಿ.

**कृत्सु :**—खेटितव्यम्। खेटनीयम्। खेटयम्। खिटितः। खिटितवान्। खेटन्, खेटन्ती। खेटितुम्। खिटितम्। खेटनम्। खेटित्वा। विखिटय।

**खिद — दैन्ये** (दिवा० आत्म० अक० अनि०)। खिद्यते। चिखिदे। खेत्ता। खेत्स्यते। खिद्यताम्। अखिद्यत। ಇತ್ಯಾದಿ. ಕಷ್ಟಪಡು, ಆಯಾಸಹೊಂದು, ಬಳಲು. "स्वसुखनिरभिलाषः खिद्यसे लोकहेतोः" शाकु० ५-७।

**भावे :**—ಮೇಲಿನ ಏಕವಚನ ರೂಪಗಳು.

**णिचि :**—खेदयति, –ते। ಇತ್ಯಾದಿ.

**कृत्सु :**—खेत्तव्यम्। खेदनीयम्। खेद्यम्। खिन्नः। खिन्नवान्। खिद्यमानः। खेत्तुम्। खिन्नम्। खेदनम्। खित्त्वा। निखिद्य।

**खिद — परितापे** (तुदा० पर० अक० अनि०)। खिन्दति। चिखेद। ಇತ್ಯಾದಿ. ದುಃಖಿಸು, ವ್ಯಸನಪಡು.

**खिदिर ಖಿದಿರ** (पुं०) 1. ಚಂದ್ರ. खिद्यते कृष्णपक्षे—खिद (दैन्ये) "किरच्" (उ० १-५१)। खिदिरश्चन्द्रः सि० कौ०। 2. ದರಿದ್ರ, ಬಡವ.

**खिद्यमान ಖಿದ್ಯಮಾನ** (वि०) 1. ದುಃಖಪಡುತ್ತಿರುವ, ವ್ಯಸನಪಡುತ್ತಿರುವ. खिद (दैन्ये) "शानच्" (३-२-१२४)। 2. ದುಃಖಪಡುವ ಸ್ವಭಾವದ. खिद ताच्छील्ये "चानश्" (३-२-१२९)।

**खिद्र ಖಿದ್ರ** (वि०) 1. ದರಿದ್ರ, ಬಡವ. 2. ರೋಗ. खिद (दैन्ये) "रक्" (उ० २-१३)। खिद्रो रोगो दरिद्रश्च सि० कौ०।

**खिन्न ಖಿನ್ನ** (वि०) 1. ದೈನ್ಯದಿಂದ ಕೂಡಿದ. खिद (दैन्ये) "क्तः" (३-४-७२)। 2. ಆಯಾಸಗೊಂಡ, ದಣಿದಿರುವ. "स्थापयेदासने तस्मिन् खिन्नः कार्येक्षणे नृणाम्" मनु० ७-१४१। "खिन्नानखिन्नमतिरापततो मनुष्यान्" माघ० ५-२७। 3. ಧೃತಿಗೆಟ್ಟ, ಧೈರ್ಯಕುಂದಿದ.

**खिल – उञ्छे** (तुदा० पर० सक० से०)। खिलति। खेलिता। अखेलीत्।

**खिल ಖಿಲ** (पुं०) 1. ವಿಷ್ಣು, ನಾರಾಯಣ. "खिलो नारायणः प्रोक्तस्तद्गुणाः इषवः स्मृताः"। 2. ಅವಕಾಶ, ರಂಧ್ರ. 3. ಶೂನ್ಯತೆ, ಬರಿದಾಗಿರುವಿಕೆ. (न०) 4. ದೊಡ್ಡ ಗ್ರಂಥದ ಸಂಗ್ರಹ, ಶ್ರೀಸೂಕ್ತ ಪುರುಷಸೂಕ್ತ ಮೊದಲಾದುವು. "आख्यानानीतिहासांश्च पुराणानि खिलानि च" मनु० ३-२३२। (त्रि०) 5. ಉಳದೆ ಇರುವ ಭೂಮಿ. खिल (उञ्छे) "कः" (३-१-१३५)। स्त्रियाम् **खिला ಖಿಲಾ.** "द्वे खिलाप्रहते समे। त्रिषु" अम०।

**खिलीकरण ಖಿಲೀಕರಣ** (न०) 1. ಆತಂಕಪಡಿಸುವುದು. ಅಡ್ಡಿಪಡಿಸುವುದು. 2. ನಾಶಪಡಿಸುವುದು. अखिलं खिलं क्रियते — खिल+डु कृञ् (करणे) भावे "ल्युट्" (३-३-११५)। "च्विः" (वा० ५-४-५०)। ईत् (७-४-३२)। दीर्घः(७-४-२६)। 3. ಶಕ್ತಿ ಕುಂದಿಸುವುದು.

**खिलीकृत ಖಿಲೀಕೃತ** (वि०) 1. ಅಡ್ಡಿಪಡಿಸಲ್ಪಟ್ಟ. 2. ಶಕ್ತಿ ಕುಂದಿಸಲ್ಪಟ್ಟ. अखिलं खिलं कृतम् "च्विः" (वा० ५-४-५०)। ईत् (७-४-३२)। दीर्घः (७-४-२६)। "तौ सुकेतुसुतया खिलीकृते कौशिकाद्विदितशापया पथि" रघु० ११-१४। 3. ನಾಶಪಡಿಸಲ್ಪಟ್ಟ.

**खिलीभूत ಖಿಲೀಭೂತ** (वि०) 1. ನಡೆದು ಸವೆಯದಿರುವ. अखिलं खिलं भूतम् "च्विः" (वा० ५-४-५०)। ईत् (७-४-३२)। दीर्घः (७-४-२६)। "खिलीभूते विमानानां तदापातभयात्पथि" कुमा० २-४५। 2. ನಾಶವಾದ. 3. ಶಕ್ತಿಕುಂದಿದ. "प्रजागरात् खिलीभूतस्तस्याः स्वप्ने समागमः" शाकु० ६-२२।

**खिलेषु ಖಿಲೇಷು** (पुं०) ಹರಿವಂಶವೆಂಬ ಒಂದು ಗ್ರಂಥ. खिलस्य नारायणस्य इषुः गुणः यत्र। "खिलो नारायणः प्रोक्तः तद्गुणा इषवः स्मृताः"।

**खिल्य ಖಿಲ್ಯ** (पुं०) ಉತ್ತು ಸಾಗುವಳಿ ಮಾಡಿದ ಜಮೀನುಗಳ ಮಧ್ಯೆ ಇರುವ ಉಳದಿರುವ ಭೂಮಿ. **खिले भवः** "यत्" (४-३-५४)।

**खुर – छेदने** (तुदा० पर० सक० से०)। खुरति। चुखोर। अखोरीत्। ಕತ್ತರಿಸು, ತುಂಡುಮಾಡು.

**खुर ಖುರ** (पुं०) 1. ನಖವೆಂಬ ಒಂದು ಸುಗಂಧದ್ರವ್ಯ. 2. ಹಸು ಎಮ್ಮೆ ಮೊದಲಾದುವುಗಳ ಕಾಲಿನ ಗೊರಸು. खुर (छेदने) "कः" (३-१-१३५)। "तस्याः खुरन्यास-पवित्रपांसुमपांसुलानां धुरि कीर्तनीया" रघु० २-२। 3. ಮಂಚದ ಕಾಲು. 4. ಕ್ಷೌರದ ಕತ್ತಿ.

**खुरणस् ಖುರಣಸ್** (वि०) ಗೊರಸಿನಂತೆ ಮೂಗುಳ್ಳ. खुर इव नासिका यस्य वा नस् आदेशः (वा० ५-४-११८)। पक्षे "अच्" अपि (५-४-११८)। **खुरणसः ಖುರಣಸಃ.** उभयत्र णत्वम् (८-४-३)।

**खुरप्र ಖುರಪ್ರ** (पुं०) 1. ಚೂಪಾದ ಅಲುಗುಳ್ಳ ಅಸ್ತ್ರ. खुर इव प्राति पूरयति—प्रा (पूरणे) "कः" (३-२-३)। 2. ಕುಡುಗೋಲು, ಕುಯಿಲಗತ್ತಿ, ಕುಪುಲು.

**खुरली ಖುರಲೀ** (स्त्री०) 1. ಶಸ್ತ್ರಾಭ್ಯಾಸ, ಆಯುಧ ಪ್ರಯೋಗದ ಅಭ್ಯಾಸ. खुर इव आलाति — ला (आदाने) "कः" (३-२-३)। गौरा० "ङीष्" (४-१-४१)। "शस्त्राभ्यासश्च खुरली" त्रिकाण्ड०। 2. ಬಾಣವನ್ನು ಪ್ರಯೋಗಿಸುವುದು, ಬಾಣವನ್ನು ಗುರಿಯಿಟ್ಟು ಹೊಡೆಯುವುದು. "अस्त्रप्रयोगखुरलीकलहे गणानाम्" म० वी० २-३४। "खुरली लक्ष्यबन्धनम्" केशवः।

**खुराक ಖುರಾಕ** (पुं०) ಪಶು. ಕಾಲಿನಲ್ಲಿ ಗೊರಸಿರುವ ಪ್ರಾಣಿ. खुर (छेदने) "आकः" (उ० ४-१५)।

**खुरालक ಖುರಾಲಕ** (पुं०) ಕಬ್ಬಿಣದ ಬಾಣ. खुर इवालति पर्याप्नोति — अल (भूषणादौ) "ण्वुल्" (३-१-१३३)।

**खुरालिक ಖುರಾಲಿಕ** (पुं०) 1. ನಾಪಿತನ ಆಯುಧಗಳ ಚೀಲ, ಕ್ಷೌರಕತ್ತಿಯ ಚೀಲ. खुराणामालिभिः कायति—कै (शब्दे) "कः" (३-२-३)। 2. ಕಬ್ಬಿಣದ ಆಯುಧ. 3. ತಲೆದಿಂಬು.

**खुलक ಖುಲಕ** (पुं०) ಮೊಳಕಾಲು ಮತ್ತು ಪಾದಗಳ ಸಂಧಿ (ಮಧ್ಯ) ಭಾಗ. खुर (छेदने) "क्वुन्" (उ० २-३३)। "आगुल्फकर्णात् सुमितस्य जन्तोस्तस्याष्टभागं खुलका-द्विभज्य" सुश्रुत० चिकित्सा० १८-२६।

**खुल्ल ಖುಲ್ಲ** (न०) 1. ನಖವೆಂಬ ಒಂದು ಸುಗಂಧವಸ್ತು. क्षुदिर् (संपेषणे) "क्विप्" (वा० ३-३-९४)। क्षुदं लाति — ला (आदाने) "क:" (३-३-४)। पृषो०। (वि०) 2. ಸಣ್ಣದಾದ. ಚಿಕ್ಕದಾದ. 3. ಅಲ್ಪ. ಕೊಂಚ. 4. ಕನಿಷ್ಠ. ಕಿರಿಯ.

**खुल्लक ಖುಲ್ಲಕ** (वि०) 1. ನೀಚ. 2. ದರಿದ್ರ. ಬಡವ. 3. ಕಠಿನ. ಒರಟು ಸ್ವಭಾವದ. 4. ಅಲ್ಪ. ಕೊಂಚ. 5. ಸಣ್ಣದಾದ. ಚಿಕ್ಕದಾದ. खुल्ल स्वार्थे "क:"। 6. ದುರ್ಜನ. ಕೆಟ್ಟವನು. "खुल्लक: खलनीचयो:" हेम०।

**खुल्लतात ಖುಲ್ಲತಾತ** (पुं०) ಚಿಕ್ಕಪ್ಪ. ತಂದೆಯ ತಮ್ಮ. ತಂದೆಯ ಕಿರಿಯ ಸಹೋದರ. खुल्ल: तात:।

**खुल्लम ಖುಲ್ಲಮ** (पुं०) ಮಾರ್ಗ. ದಾರಿ. खुल्लेन मीयते— माङ् (माने) घञर्थे "क:" (वा० ३-३-५८)। "पन्थास्तु खुल्लमो वह:। वाट: पथश्च मार्गश्च" त्रिकाण्ड०।

**खेचर ಖೇಚರ** (पुं०) 1. ವಿದ್ಯಾಧರ. 2. ಸೂರ್ಯ ಮೊದಲಾದ ಗ್ರಹ. 3. ಮೇಷ ಮೊದಲಾದ ರಾಶಿ. 4. ಪಾದರಸ. (न०) 5. ತೃಣ, ಹುಲ್ಲು. 6. ಕುದುರೆ. "विद्याधर: कामरूपी खेचर: स्थिरयौवन:" त्रिकाण्ड०। (वि०) 7. ಆಕಾಶದಲ್ಲಿ ಸಂಚರಿಸುವ. खे चरति — चर (गतौ) "ट:" (३-२-१६)। सप्तम्या "अलुक्" (६-३-१४)। स्त्रियाम् "ङीप्" (४-१-१५)। **–चरी –ಚರೀ.**

**खेचरी ಖೇಚರೀ** (स्त्री०) ಯೋಗಾಂಗವಾದ ಒಂದು ಮುದ್ರೆ. "कपालकुहरे जिह्वा प्रतिष्ठा विपरीतगा। भ्रुवोरन्तर्गता दृष्टि: मुद्रा भवति खेचरी"। ಇದೊಂದು ತಂತ್ರೋಕ್ತವಾದ ಪೂಜಾಸಮಯದ ಮುದ್ರೆ.

**खेट ಖೇಟ** (पुं०) 1. ಸೂರ್ಯ ಮೊದಲಾದ ಗ್ರಹ. खे अटति—अट (गतौ) "अच्" (३-१-१३४)। 2. ರೈತರ ಹಳ್ಳಿ, ಗ್ರಾಮ. 3. ಕಫ, ಶ್ಲೇಷ್ಮ. 4. ಒಂದು ಅಸ್ತ್ರ. 5. ಕುದುರೆ. 6. ನಾಸಾಮಲ, ಸಿಂಬಳ. (पुंन०) 7. ಬಲರಾಮನ ಗದೆ. 8. ಬೇಟೆ. कर्म० "घञ्" (३-३-१९)। (न०) 9. ತೃಣ, ಹುಲ್ಲು. 10. ಗುರಾಣಿ. 11. ಚರ್ಮ. (वि०) 12. ಆಕಾಶದಲ್ಲಿ ಸಂಚರಿಸುವ. 13. ಬಡ್ಡಿಯ ಹಣದಿಂದ ಜೀವಿಸುವ. 14. ನೀಚ, ಕೆಟ್ಟ ಸ್ವಭಾವದವನು. "खेट: सिंघाणके हीने" त्रिकाण्ड०।

**खेटक ಖೇಟಕ** (पुंन०) 1. ರೈತರಹಳ್ಳಿ, ಬೇಸಾಯಗಾರರ ಗ್ರಾಮ. 2. ಬಲರಾಮನ ಗದೆ. 3. ಗುರಾಣಿ. खेट स्वार्थे "क:"।

**खेटिन् ಖೇಟಿನ್** (पुं०) 1. ಕಾಮುಕ, ಸ್ತ್ರೀಲೋಲ. 2. ವೈತಾಳಿಕ. ಹೊಗಳುಭಟ. ಸ್ತುತಿಪಾಠಕ.

**खेद ಖೇದ** (पुं०) 1. ಶೋಕ. ದುಃಖ. खिद "घञ्" (३-३-१८)। "शोक: शुक् शोचनं खेद:" अभि० चि०। 2. ಆಯಾಸ. ಬಳಲಿಕೆ. ದಣಿವು. "रतिखेदसमुत्पन्ना निद्रा संज्ञाविपर्यय:" सा० द०। 3. ಪೀಡೆ. ಹಿಂಸೆ.

**खेदन ಖೇದನ** (न०) 1. ಶೋಕ. ದುಃಖ. खिद (दैन्ये) भावे "ल्युट्" (३-३-११५)। 2. ಆಯಾಸ, ಬಳಲಿಕೆ. 3. ದುಃಖಪಡಿಸುವುದು. 4. ಆಯಾಸಗೊಳಿಸುವುದು. खिद + णिच् "ल्युट्" (३-३-११५)। (वि०) 5. ದುಃಖಪಡಿಸುವ. 6. ಆಯಾಸಪಡಿಸುವ. खिद+णिच् "ल्यु:" (३-१-१३४)।

**खेदनीय ಖೇದನೀಯ** (वि०) 1. ದುಃಖಗೊಳಿಸಲ್ಪಡುವ. 2. ಆಯಾಸಪಡಿಸಲ್ಪಡುವ. खिद (दैन्ये) कर्म० "अनीयर्" (३-१-९६)। 3. ಕುಗ್ಗಿಸಲ್ಪಡುವ, ನಿರುತ್ಸಾಹ ಗೊಳಿಸಲ್ಪಡುವ. "तव्य:" (३-१-९६)। **खेत्तव्य: ಖೇತ್ತವ್ಯಃ.**

**खेदित ಖೇದಿತ** (वि०) 1. ಆಯಾಸಪಡಿಸಲ್ಪಟ್ಟ. 2. ದುಃಖಪಡಿಸಲ್ಪಟ್ಟ. खिद(दैन्ये) + णिच् "क्त:" (३-२-१०२)। 3. ನೋಯಿಸಲ್ಪಟ್ಟ.

**खेदिन् ಖೇದಿನ್** (वि०) 1. ದುಃಖವುಳ್ಳವನು. 2. ಆಯಾಸವುಳ್ಳವನು, ದಣಿದಿರುವವನು. खेदोऽस्यास्ति "इनि:" (५-२-११५)।

**खेय ಖೇಯ** (न०) 1. ಕಂದಕ, ಕೋಟೆಯ ಸುತ್ತಲೂ ನೀರನ್ನು ತುಂಬಲು ತೋಡಿರುವ ಹಳ್ಳ. खनु (अवदारणे) "क्यप्" (३-१-१११)। (वि०) 2. ತೋಡಲ್ಪಡುವ, ಅಗೆಯಲ್ಪಡುವ. 3. ಅಗೆಯಲು ಶಕ್ಯವಾದ. 4. ಅಗೆಯ ಬೇಕಾದ.

**खेलन ಖೇಲನ** (न०) 1. ಕ್ರೀಡೆ, ಆಟ. खेलृ (चलने) भावे "ल्युट्" (३-३-११५)। 2. ಪಗಡೆಯಹಾಸು. खेलृ अधि० "ल्युट्" (३-३-११७)। 3. ಆಟದ ಸಾಮಾನು. खेलृ कर० "ल्युट्" (३-३-११७)।

**खेलनी ಖೇಲನೀ** (स्त्री०) ಪಗಡೆಯಕಾಯಿ. खेल्यतेऽनया— खेलृ (चलने) कर० "ल्युट्" (३-३-११७)। "ङीप्" (४-१-१५)।

**खेला ಖೇಲಾ** (स्त्री०) ಆಟ, ಕ್ರೀಡೆ. खेलृ (चलने) "अः" (३-३-१०३)। "क्रीडा खेला च कूर्दनम्" अम०।

**खेलि ಖೇಲಿ** (स्त्री०) 1. ಕ್ರೀಡೆ, ಆಟ. 2. ಪಕ್ಷಿ, ಹಕ್ಕಿ. 3. ಸೂರ್ಯ. 4. ಬಾಣ. 5. ಗಾನ, ಸಂಗೀತ. खे अलति — अल (भूषणादौ) "इन्" (उ० ४-११७)। (वि०) 6. ಆಕಾಶದಲ್ಲಿ ಸಂಚರಿಸುವ.

**खोडृ — गतिप्रतिघाते** (भ्वा० पर० अक० से०)। खोडति। चुखोड। खोडिता। खोडिष्यति। खोडतु। ಇತ್ಯಾದಿ. ಸಂಚಾರಕ್ಕೆ ಅಡ್ಡಿಮಾಡು, ನಡೆಯಲು ಅಡ್ಡಿಮಾಡು.

**खोड ಖೋಡ** (वि०) ಕುಂಟ, ಒಂದು ಕಾಲಿಲ್ಲದವನು. ನಡೆಯಲು ಅಶಕ್ತನಾದವನು. खोडति — खोडृ (गतिप्रतिघाते) "अच्" (३-१-१३४)। "खोडे खञ्जः" अम०।

**खोर(ल) ಖೋರ(ಲ)** (वि०) 1. ಕುಂಟ, ಒಂದು ಕಾಲಿಲ್ಲದವನು. खोॠ (लृ) (गतिप्रतिघाते) "अच्" (३-१-१३४)। (पुंन०) 2. ರುಮಾಲು, ಟೋಪಿ ಮುಂತಾದುದು.

**खोलक ಖೋಲಕ** (पुं०) 1. ತಲೆಯ ಕಾಪು, ರುಮಾಲು, ಟೋಪಿ ಮುಂತಾದುವು. 2. ವಲ್ಮೀಕ, ಹುತ್ತ. 3. ಅಡಕೆ ಕಾಯಿನ ಚಿಪ್ಪು (ಸಿಪ್ಪೆ). 4. ಒಂದು ಅಡಿಗೆಯ ಪಾತ್ರೆ. "स्यात् खोलकस्तु पाके शिरस्त्रवल्मीकपूगकोशेषु" मेदि०। 5. ಸ್ವರ್ಗ. "मूर्धत्राणे नाकौ च खोलः" त्रिकाण्ड०।

**ख्या — प्रकथने** (अदा० पर० सक० अनि०)। ख्याति। चख्यौ। ख्याता। ख्यास्यति। ख्यातु। अख्यात्। चक्षिङ् ಧಾತುವಿಗೆ ಆರ್ಧಧಾತುಕವು ಪರವಾದರೆ ख्या ಆದೇಶವು ಬಂದು ಉಭಯಪದಿಯಾಗುವುದು.

**कर्मणि :—** ख्यायते। चख्ये। ख्यायिता, ख्याता। ख्यायिष्यते, ख्यास्यते। ख्यायताम्। ಇತ್ಯಾದಿ.

**णिचि :—** ख्यापयति, –ते। ख्यापयां चकार, –चक्रे, –बभूव, –आस। ಇತ್ಯಾದಿ.

**कृत्सु :—** ख्यातव्यम्। ख्यानीयम्। ख्येयम्। ख्यातः। ख्यातवान्। ख्यान्, ख्याती, ख्यान्ती। ख्यातुम्। ख्यातम्। ख्यानम्। ख्यात्वा। आख्याय। 1. ಹೇಳು. 2. ಪ್ರಸಿದ್ಧಪಡಿಸು.

**ಈ ಧಾತುವಿಗೆ ಉಪಸರ್ಗಗಳ ಯೋಗದಿಂದ ಉಂಟಾಗುವ ಅರ್ಥಭೇದಗಳು :**

**(1) अनु+आ+ख्या** = अन्वाख्याति। अन्वाख्यानम्। ಹಿಂದೆ ಹೇಳಿದ ವಿಷಯವನ್ನು ವಿವರಿಸಿ ಹೇಳು.

**(2) अभि+ख्या** = अभिख्याति। अभिख्या। ಪ್ರಕಾಶಿಸು, ಹೊಳೆ. "काप्यभिख्या तयोरासीत् व्रजतोः शुद्धवेषयोः" रघु० १-४६।

**(3) आ+ख्या** = आख्याति। आख्यानम्। 1. ಚೆನ್ನಾಗಿ ಹೇಳು, ಸರಿಯಾಗಿ ಹೇಳು. "आख्याहि मे को भवानुग्ररूपो नमोस्तु ते देववर प्रसीद" गीता ११-३१। "आख्यातासि हतं शत्रुमभिषिक्तं विभीषणम् भट्टि० २२-१५।

**(4) उप+आ+ख्या** = उपाख्यानम्। ಹಿಂದೆ ನಡೆದ ಕಥೆಯನ್ನು ಹೇಳು.

**(5) प्र+ख्या** = प्रख्याति। 1. ಪ್ರಸಿದ್ಧಿಹೊಂದು. 2. ಚೆನ್ನಾಗಿ ಹೇಳು.

**(6) प्रति + आ + ख्या** = प्रत्याख्यानम्। प्रत्याख्यातम्। ತಿರಸ್ಕರಿಸು, ನಿರಾಕರಿಸು.

**(7) वि+ख्या** = विख्याति। विख्यातः। ಪ್ರಸಿದ್ಧಿ ಹೊಂದು.

**(8) वि+आ+ख्या** = व्याख्याति। व्याख्यानम्। ಅರ್ಥವನ್ನು ವಿವರಿಸು, ಅರ್ಥವನ್ನು ವಿವರವಾಗಿ ಹೇಳು.

**ख्यात ಖ್ಯಾತ** (न०) 1. ಹೇಳುವುದು. ಪ್ರಸಿದ್ಧಪಡಿಸುವುದು. ख्या (प्रकथने) भावे "क्तः" (३-३-११४)। (वि०) 2. ಪ್ರಸಿದ್ಧಿಪಡೆದ, ಪ್ರಸಿದ್ಧನಾದ. ख्या कर्त० "क्तः" (३-४-७२)। "ख्यातं नभः शब्दमयेन नाम्ना कान्तं नभोमासमिव प्रजानाम्" रघु० १८-६। "ख्यातः प्राज्ञः कृतज्ञश्च सानुक्रोशश्च राघवः"। 3. ಹೇಳಲ್ಪಟ್ಟ. 4. ಪ್ರಸಿದ್ಧಪಡಿಸಲ್ಪಟ್ಟ. ख्या कर्म० "क्तः" (३-२-१०२)।

**ख्यातगर्हण ಖ್ಯಾತಗರ್ಹಣ** (वि०) ಪ್ರಸಿದ್ಧವಾಗಿ ನಿಂದ್ಯನಾದ, ಎಲ್ಲರಿಗೂ ತಿಳಿದಂತೆ ನಿಂದೆಗೆ ಪಾತ್ರನಾದ. ख्याता गर्हणा यस्य।

**ख्यातगर्हित ಖ್ಯಾತಗರ್ಹಿತ** (वि०) ಪ್ರಸಿದ್ಧವಾಗಿ ನಿಂದಿಸಲ್ಪಟ್ಟ, ಎಲ್ಲರಿಗೂ ತಿಳಿದಂತೆ ನಿಂದಿಸಲ್ಪಟ್ಟ, ಕೆಟ್ಟ ಹೆಸರನ್ನು ಗಳಿಸಿದ. गर्हितं भावे "क्तः"। ख्यातं गर्हितं यस्य।

**ख्याति ಖ್ಯಾತಿ** (स्त्री०) 1. ಪ್ರಸಿದ್ಧಿ. 2. ಕೀರ್ತಿ, ಹೆಸರುವಾಸಿ. ख्या (प्रकथने) "क्तिन्" (३-३-९४)। "येनास्मिन् कर्मणा लोके ख्यातिमिच्छति पुष्कलाम्। न च शोचत्यसम्पत्तौ तद्विज्ञेयं तु राजसम्" मनु० १२-३६। 2. ಪ್ರಶಂಸೆ, ಹೊಗಳಿಕೆ. 3. ಜ್ಞಾನ, ಅರಿವು, ತಿಳಿವಳಿಕೆ. "ख्यातिं च सत्त्वपुरुषान्यतयाधिगम्य वाञ्छन्ति तामपि समाधिभृतो निरोद्धुम्" माघ० ४-५५। 4. ವರ್ಣನ

ಒಬ್ಬ ಮಗಳು, ಧರ್ಮಪುರುಷನ ಒಬ್ಬ ಪತ್ನಿ. 7. ಕರ್ದಮನ ಮಗಳು. (पुं०) 8. ನಾಲ್ಕನೆಯ ಮನುವಿನ ಒಬ್ಬ ಮಗ.

**ख्यातिकर ಖ್ಯಾತಿಕರ** (वि०) ಕೀರ್ತಿಯನ್ನುಂಟುಮಾಡುವ. करोति—डु कृञ् (करणे) "अच्" (३-१-१३४)। ख्यातेः करः।

**ख्यातिमत् ಖ್ಯಾತಿಮತ್** (वि०) 1. ಪ್ರಸಿದ್ಧಿ ಪಡೆದ. 2. ಕೀರ್ತಿಶಾಲಿಯಾದ. ख्यातिरस्यास्ति "मतुप्" (५-२-९४)। स्त्रियाम् "ङीप्" (४-१-६)। **–मती –ಮತೀ.**

**ख्यान ಖ್ಯಾನ** (न०) 1. ಜ್ಞಾನ, ತಿಳಿವಳಿಕೆ, ಅರಿವು. 2. ಹೇಳುವುದು, ತಿಳಿಸುವುದು. 3. ಹೊಗಳಿಕೆ. ख्या (प्रकथने) भावे "ल्युट्" (३-३-११५)।

**ख्यापक ಖ್ಯಾಪಕ** (वि०) 1. ಹೇಳುವವನು. 2. ಪ್ರಸಿದ್ಧಿ ಪಡಿಸುವವನು. 3. ತಿಳಿಸುವವನು. ख्या (प्रकथने) + णिच् "ण्वुल्" (३-१-१३३)।

**ख्यापन ಖ್ಯಾಪನ** (न०) 1. ಪ್ರಕಾಶಪಡಿಸುವುದು. ಪ್ರಸಿದ್ಧ ಪಡಿಸುವುದು. 2. ತಿಳಿಯಪಡಿಸುವುದು. ತಿಳಿಯುವಂತೆ ಮಾಡುವುದು. ख्या (प्रकथने) + णिच् "ल्युट्" (३-३-११५)। "ख्यापनेनानुतापेन तपसाध्ययनेन च। पापकृन्मुच्यते पापात्तथा दानेन चापदि" मनु० ११-२२७।

**ख्यापनीय ಖ್ಯಾಪನೀಯ** (वि०) 1. ಪ್ರಸಿದ್ಧ ಪಡಿಸಬೇಕಾದ. 2. ಪ್ರಸಿದ್ಧ ಪಡಿಸಲ್ಪಡುವ. 3. ಪ್ರಸಿದ್ಧ ಪಡಿಸಲು ಯೋಗ್ಯವಾದ. ख्या (प्रकथने) + णिच् "अनीयर्" (३-१-९६)। "तव्यः" (३-१-९६)। **ख्यापयितव्यः ಖ್ಯಾಪಯಿತವ್ಯಃ.**

**ख्यापित ಖ್ಯಾಪಿತ** (वि०) 1. ಪ್ರಸಿದ್ಧ ಪಡಿಸಲ್ಪಟ್ಟ. ಪ್ರಕಾಶ ಪಡಿಸಲ್ಪಟ್ಟ. ख्या (प्रकथने) + णिच् "क्तः" (३-२-१०२)। 2. ತಿಳಿಯುವಂತೆ ಮಾಡಲ್ಪಟ್ಟ. ತಿಳಿಯಪಡಿಸಲ್ಪಟ್ಟ.

**ख्याप्य ಖ್ಯಾಪ್ಯ** (वि०) 1. ಪ್ರಸಿದ್ಧ ಪಡಿಸಲ್ಪಡುವ. ಪ್ರಕಾಶ ಪಡಿಸಲ್ಪಡುವ. 2. ಪ್ರಸಿದ್ಧ ಪಡಿಸಲು ಯೋಗ್ಯವಾದ. 3. ಪ್ರಸಿದ್ಧ ಪಡಿಸಬೇಕಾದ. ख्या (प्रकथने) + णिच् "यत्" (३-१-९७)।

**इति "ख" कारादिपदार्थनिरूपणम्**

---

# ग

**ग ಗ** ಇದು ವ್ಯಂಜನಾಕ್ಷರಗಳಲ್ಲಿ "क" ವರ್ಗದ ಮೂರನೆಯ ಮತ್ತು, ಆಭ್ಯಂತರಸ್ಪೃಷ್ಟಪ್ರಯತ್ನದಿಂದ ಕಂಠದಲ್ಲಿ ಹುಟ್ಟುವ ಅಕ್ಷರ. "कादयो मावसानाः स्पर्शाः"। "स्पृष्टं प्रयतनं स्पर्शानाम्" सि० कौ०। ಸಂವಾರ, ನಾದ, ಘೋಷ ಮತ್ತು ಅಲ್ಪಪ್ರಾಣ ಇವು ಇವರ ಬಾಹ್ಯ ಪ್ರಯತ್ನಗಳು.

**ग ಗ** (पुं०) 1. ಗಣಪತಿ. 2. ಗಂಧರ್ವ. (न०) 3. ಗಾನ, ಸಂಗೀತ. (स्त्री०) **गा ಗಾ.** 4. ಗಾಥಾ. गै (शब्दे) "कः" (३-२-३)। "गो गणेशः समुद्दिष्टः गन्धर्वो गः प्रकीर्तितः। गं गीतं गा च गाथा" एका०। 5. ಛಂದಃಶಾಸ್ತ್ರದಲ್ಲಿ "ಗುರು" ಸಂಜ್ಞೆಯ ವರ್ಣ. "यरावन्तगलौ सतौ" वृ० र०। "गुरुरेको गकारस्तु लकारो लघुरेककः" छन्दोमं०। गम्लृ ಧಾತುವಿಗೆ ಸುಬಂತವು ಉಪಪದವಾದಲ್ಲಿ "ड" ಪ್ರತ್ಯಯವು ಬಂದು गः ಎಂದಾಗುವುದು. यानेन गच्छति यानगः, कण्ठं गच्छति कण्ठगः ಇತ್ಯಾದಿ. "न नावं न खरं नोष्ट्रं नेरिणस्थो न यानगः" मनु० ४-१२०। गै ಧಾತುವಿಗೆ ಸುಬಂತವು ಉಪಪದವಾದಲ್ಲಿ "क" ಪ್ರತ್ಯಯವು ಬಂದು गः ಎಂದಾಗುವುದು. साम गायति सामगः, छन्दोगः ಇತ್ಯಾದಿ.

**गकार ಗಕಾರ** (पुं०) "ग" ಎಂಬ ಅಕ್ಷರ. ग "कारः" (वा० ३-३-१०८)। "गुरुरेको गकारस्तु लकारो लघुरेककः" छन्दोमं०।

**गगन ಗಗನ** (न०) 1. ಆಕಾಶ, ಅಂತರಿಕ್ಷ. गच्छन्त्यस्मिन्—गम्लृ (गतौ) "युच्" गश्चान्तादेशः (उ० २-७८)। "अवोचदेनं गगनस्पृशा रघुः स्वरेण धीरेण विवर्तयन्निव" रघु० ३-४३। 2. ಶೂನ್ಯ, ಸೊನ್ನೆ.

**गगनग ಗಗನಗ** (वि०) ಆಕಾಶದಲ್ಲಿ ಹೋಗುವ, ಅಂತರಿಕ್ಷದಲ್ಲಿ ಸಂಚರಿಸುವ. गगने गच्छति गम्लृ (गतौ) "डः" (वा० ३-२-४८)।

**गगनगति ಗಗನಗತಿ** (पुंस्त्री०) 1. ದೇವತೆ. 2. ಸಿದ್ಧ ಗಂಧರ್ವ ಮೊದಲಾದ ಖೇಚರರು. "प्रेक्षिष्यन्ते गगनगतयो नूनमावर्ज्य दृष्टीरेकं मुक्तागुणमिव भुवः स्थूलमध्येन्द्रनीलम्" मेघ० १-४६। 3. ಸೂರ್ಯ ಮೊದಲಾದ ಗ್ರಹ. (स्त्री०) 4. ಆಕಾಶದಲ್ಲಿ ಸಂಚಾರ. गगने गतिः। "गगनगतिविहीना ये घनाः पल्वलान्ते" च० रा०। (वि०) 5. ಅಂತರಿಕ್ಷದಲ್ಲಿ ಗಮನವುಳ್ಳ, ಆಕಾಶದಲ್ಲಿ ಸಂಚಾರವುಳ್ಳ.

**गगनचर ಗಗನಚರ**(पुं०) 1. ದೇವತೆ. 2. ಸಿದ್ಧ ಗಂಧರ್ವ ಮೊದಲಾದ ಖೇಚರರು. 3. ಸೂರ್ಯ ಮೊದಲಾದ ಗ್ರಹ. 4. ಪಕ್ಷಿ, ಹಕ್ಕಿ. गगने चरति — चर (गतौ) "टः" (३-२-१६)। "णिनिः" (३-२-७८)। **-चारिन् -ಚಾರಿನ್.** (वि०) 5. ಆಕಾಶದಲ್ಲಿ ಸಂಚರಿಸುವ.

**गगनचरेश्वर ಗಗನಚರೇಶ್ವರ**(पुं०) ಪಕ್ಷಿರಾಜನಾದ ಗರುಡ. गगनचराणामीश्वरः। "निषूदयन् बहुविधमत्स्यजीविनो बुभुक्षितो गगनचरेश्वरस्तदा" भा० आदि० २८-२१।

**गगननदी ಗಗನನದೀ** (स्त्री०) ಆಕಾಶಗಂಗೆ. "कान्तानां गगननदीतरङ्गशीतः" किरा० ७-१०।

**गगनध्वज ಗಗನಧ್ವಜ** (पुं०) ಮೇಘ, ಮೋಡ. गगनस्य ध्वज इव।

**गगनप्रिय ಗಗನಪ್ರಿಯ** (पुं०) ಒಬ್ಬ ದೈತ್ಯ. "प्रह्लादोऽश्वशिराः कुम्भः संह्लादो गगनप्रियः" हरिवं०।

**गगनविहार ಗಗನವಿಹಾರ** (पुं०) ಆಕಾಶದಲ್ಲಿ ಸಂಚಾರ. गगने विहारः।

**गगनविहारिन् ಗಗನವಿಹಾರಿನ್** (वि०) ಆಕಾಶದಲ್ಲಿ ಸಂಚರಿಸುವ. गगने विहरति — वि + हृञ् (हरणे) "णिनिः" (३-२-७८)। स्त्रियाम् "ङीप्" (४-१-५)। "स हि गगनविहारी कल्मषध्वंसकारी" हितो०। **-विहारिणी -ವಿಹಾರಿಣೀ.**

**गगनसद् ಗಗನಸದ್** (वि०) ಆಕಾಶದಲ್ಲಿ ಸಂಚರಿಸುವ. गगने सीदति — षद्लृ (विशरणगत्यवसादनेषु) "क्विप्" (३-२-६१)। "विस्मेरान् गगनसदः करोत्यमुष्मिन्नाकाशे रचितमभित्ति चित्रकर्म" माघ० ४-५३।

**गगनसिन्धु ಗಗನಸಿಂಧು** (स्त्री०) ಆಕಾಶಗಂಗೆ. गगनस्य सिन्धुः। "गगनसिन्धुफेनपटलजालान्तरस्य" काद०।

**गगनस्थ ಗಗನಸ್ಥ** (वि०) ಆಕಾಶದಲ್ಲಿರುವ. गगने तिष्ठति — ष्ठा (गतिनिवृत्तौ) "कः" (३-२-४)। **-स्थितः -ಸ್ಥಿತಃ.**

**गगनस्पृश् ಗಗನಸ್ಪೃಶ್** (वि०) ಆಕಾಶವನ್ನು ಮುಟ್ಟುವ. गगनं स्पृशति — स्पृश (संस्पर्शे) "क्विन्" (३-२-५८)।

**गगनाङ्गना ಗಗನಾಂಗನಾ** (स्त्री०) ಅಪ್ಸರಸ್ಸು. गगनस्था अङ्गना।

**गगनाध्वग ಗಗನಾಧ್ವಗ**(पुं०) 1. ದೇವತೆ. 2. ಸೂರ್ಯ ಮೊದಲಾದ ಗ್ರಹ. 3. ಸಿದ್ಧಗಂಧರ್ವ ಮೊದಲಾದವರು. 4. ಪಕ್ಷಿ, ಹಕ್ಕಿ. गगनाध्वानं गच्छति — गम्लृ (गतौ) "डः" (३-२-४८)।

**गगनेचर ಗಗನೇಚರ** (वि०) ಆಕಾಶದಲ್ಲಿ ಸಂಚರಿಸುವ ದೇವತೆ ಸೂರ್ಯಾದಿಗ್ರಹ ಸಿದ್ಧ ಗಂಧರ್ವ ಪಕ್ಷಿ ಮೊದಲಾದುವು. गगने चरति—चर (गतौ) "टः" (३-२-१६)। सप्तम्या अलुक् (६-३-१४)। "तस्मिंस्तु कथिते मात्रा कारणे गगनेचरः" भा० आदि० २७-१४। स्त्रियाम् "टाप्" **-चरा -ಚರಾ.**

**गगनोल्मुक ಗಗನೋಲ್ಮುಕ** (पुं०) ಮಂಗಳಗ್ರಹ. गगने उल्मुक इव।

**गङ्गा ಗಂಗಾ** (स्त्री०) ಗಂಗಾನದಿ, ವಿಷ್ಣುವಿನ ಪಾದದಿಂದ ಹುಟ್ಟಿದ ನದಿ. गच्छति — गम्लृ (गतौ) "गन्" (उ० १-१२०)। "गङ्गाप्रपातान्तविरूढशष्पं गौरीगुरोर्गह्वरमाविवेश" रघु० २-२६। ಇಕ್ಷ್ವಾಕುವಂಶದ ಭಗೀರಥನು ತನ್ನ ಪಿತಾಮಹರಾದ ಸಗರಪುತ್ರರ ಸದ್ಗತಿಗಾಗಿ ಬ್ರಹ್ಮನನ್ನು ಕುರಿತು ತಪಸ್ಸುಮಾಡಿ ಗಂಗೆಯನ್ನು ಭೂಲೋಕಕ್ಕೆ ಕರೆತಂದುದರಿಂದ ಗಂಗೆಗೆ **"भागीरथी"** ಎಂದೂ ವಿಷ್ಣು ಪಾದದಲ್ಲಿ ಜನಿಸಿ ಹೊರಟುಬಂದುದರಿಂದ **"विष्णुपदी"** ಎಂದೂ ಜಹ್ನುಮಹರ್ಷಿಯ ಆಶ್ರಮಕ್ಕೆ ಪ್ರವೇಶಿಸಿದಾಗ ಅವರು ಪಾನಮಾಡಿ ಭಗೀರಥನ ಪ್ರಾರ್ಥನೆಯಂತೆ ಗಂಗೆಯನ್ನು ಕಿವಿಯಲ್ಲಿ ಬಿಟ್ಟುದರಿಂದ **"जाह्नवी"** ಎಂದೂ ಹಿಮವತ್ಪರ್ವತದಲ್ಲಿ ಹುಟ್ಟಿ ಬೆಳೆದುಬಂದದ್ದರಿಂದ **"हैमवती"** ಎಂದೂ ಆಕಾಶದಿಂದ ಬೀಳುತ್ತಿದ್ದ ಗಂಗೆಯ ವೇಗವನ್ನು ಪರಶಿವನು ತನ್ನ ಜಟಾಜೂಟದಲ್ಲಿ ಅಡಗಿಸಿಕೊಂಡಾಗ ಭಗೀರಥನು ಪರಶಿವನನ್ನು ಕುರಿತು ತಪಸ್ಸು ಮಾಡಲಾಗಿ ಅದರಿಂದ ಮೆಚ್ಚಿದ ಪರಮೇಶ್ವರನ ಜಟಾಕುಹರದಿಂದ ಗಂಗೆಯು ಪೂರ್ವ ದಿಕ್ಕಿಗೂ ಪಶ್ಚಿಮ ದಿಕ್ಕಿಗೂ ಮತ್ತು ಭಗೀರಥನ ಮಾರ್ಗವನ್ನು ಅನುಸರಿಸಿಯೂ ಮೂರು ಭಾಗವಾಗಿ ಪ್ರವಹಿಸಿದ್ದರಿಂದ **"त्रिपथगा"** ಎಂದೂ ಪ್ರಸಿದ್ಧಿ ಹೊಂದಿತು.

"त्रिविक्रमपदोद्भिन्नब्रह्माण्डसुषिरोद्भवा। परा विष्णुपदी गङ्गा समुद्रापूर्तिकारिणी" स्कान्द०। "सर्वलोक-

प्रभुर्ब्रह्मा राजानमिदमब्रवीत्। तारिता नरशार्दूल दिवं यातास्र्च देववत्। षष्टिः पुत्राः सहस्राणि सगरस्य महात्मनः। सागरस्य जलं लोके यावत् स्थास्यति पार्थिव। सगरस्यात्मजाः सर्वे दिवि स्थास्यन्ति देववत्। इयं तु दुहिता ज्येष्ठा तव गङ्गा भविष्यति। त्वत्कृतेन च नाम्नाथ लोके स्थास्यति विश्रुता। गङ्गा त्रिपथगा नाम दिव्या भागीरथीति च। त्रीन् पथो भावयन्तीति तस्मात्त्रिपथगा स्मृता" रामा०।

ನದಿಗಳಲ್ಲೆಲ್ಲಾ ಗಂಗಾನದಿಯು ಸರ್ವಶ್ರೇಷ್ಠವಾದುದು ಮತ್ತು ಮೋಕ್ಷಪ್ರದವಾದುದು. "तीर्थानां परमं तीर्थं नदीनामुत्तमा नदी। मोक्षदा सर्वभूतानां मह्यं प्राह दिवामणिः" मत्स्यपु०।

ಗಂಗಾನದಿಯ ಸ್ನಾನದಿಂದಲೂ ಗಂಗಾತೀರ್ಥಸ್ಪರ್ಶ ಮಾತ್ರದಿಂದಲೂ ಸಕಲಪಾಪಗಳೂ ಪರಿಹೃತವಾಗುವುವು. "स्पृष्ट्वा स्वर्गमवाप्नोति पीत्वा ज्ञानमवाप्नुयात्। गङ्गास्नाने तु भक्त्या वै प्राप्नोति परमं पदम्" ब्रह्माण्डपु०। "ब्रह्महा गुरुहा गोघ्नः स्पृष्टो वा सर्वपातकैः। तस्यास्तीर्थं नरः स्पृष्ट्वा सर्वपापैः प्रमुच्यते" वराहपु०।

**गङ्गाक्षेत्र ಗಂಗಾಕ್ಷೇತ್ರ** (न०) ಗಂಗಾನದಿ ಮತ್ತು ಅದರ ಎರಡೂ ಕಡೆಗಳಲ್ಲಿರುವ ಒಂದೊಂದು ಗಾವುದದ ಪ್ರದೇಶ.

**गङ्गाज ಗಂಗಾಜ** (पुं०) 1. ಭೀಷ್ಮಾಚಾರ್ಯ. 2. ಕಾರ್ತಿಕೇಯ. गङ्गाया जायते—जनी (प्रादुर्भावे) "डः" (३-२-९७)। ["गङ्गापुत्र" ಪದದಲ್ಲಿ ನೋಡಿ.]

**गङ्गाटेय ಗಂಗಾಟೇಯ** (पुं०) ಒಂದು ಜಾತಿಯ ಮೀನು. "गङ्गाटेयो गलानिलः" त्रिकाण्ड०।

**गङ्गादत्त ಗಂಗಾದತ್ತ** (पुं०) ಭೀಷ್ಮಾಚಾರ್ಯ.

**गङ्गाद्वार ಗಂಗಾದ್ವಾರ** (न०) ಹರಿದ್ವಾರ, ಗಂಗೆಯು ಸ್ವರ್ಗದಿಂದ ಬಂದು ಭೂಮಿಯಲ್ಲಿ ಇಳಿದ ಸ್ಥಳ. गङ्गाया भूम्यवतरणद्वारम्। ಇದಕ್ಕೆ ಮಾಯಾಪುರಿಯೆಂದು ಹೆಸರು. "ततो मायापुरीं प्राप दुष्प्रापां पापकारिभिः। यत्र सा वैष्णवी माया जन्तून् पाशैर्न पाशयेत्। केचिद्दूचुर्हरिद्वारं मोक्षद्वारं परे जगुः। गङ्गाद्वारं च केऽप्याहुः केचिन्मायापुरीं पुनः। यतो विनिर्गता गङ्गा ख्याता भागीरथी भुवि" काशीखं०।

**गङ्गाधर ಗಂಗಾಧರ** (पुं०) ಆಕಾಶದಿಂದ ವೇಗವಾಗಿ ಬರುತ್ತಿದ್ದ ಗಂಗೆಯನ್ನು ತಲೆಯಲ್ಲಿ ಧರಿಸಿದ ಪರಮೇಶ್ವರ. धरति—धृञ् (धारणे) "अच्" (३-१-१३४)। गङ्गाया धरः। "महापुण्यां गगनतः पतन्तीं वै महेश्वरः। दधार शिरसा गङ्गां तामेव दिवि सेवते" भा०।

**गङ्गापुत्र ಗಂಗಾಪುತ್ರ, —सुत —ಸುತ, —सूनु —ಸೂನು** (पुं०) 1. ಭೀಷ್ಮಾಚಾರ್ಯ. गङ्गायाः पुत्रः सुतः सूनुर्वा। [ಗಂಗೆಯು ಒಂದು ದಿನ ಬ್ರಹ್ಮನ ಆಸ್ಥಾನಕ್ಕೆ ಹೋಗಿದ್ದಾಗ ಅಲ್ಲಿಗೆ ಬಂದಿದ್ದ ಇಕ್ಷ್ವಾಕುವಂಶದ ಮಹಾಭಿಷನಿಗೂ ಇವಳಿಗೂ ಪರಸ್ಪರ ಮೋಹವುಂಟಾಯಿತು. ಅದರಿಂದ ಬ್ರಹ್ಮನು ಅವರಿಬ್ಬರಿಗೂ ಭೂಮಿಯಲ್ಲಿ ಹುಟ್ಟುವಂತೆ ಶಾಪವಿತ್ತನು. ಮಹಾಭಿಷನು ಶಂತನುವಾಗಿ ಹುಟ್ಟಿದನು. ಗಂಗೆಯು ಭೂಲೋಕಕ್ಕೆ ಬರುತ್ತಿದ್ದಾಗ ವಸಿಷ್ಠರಿಂದ ಶಪ್ತರಾದ ಅಷ್ಟವಸುಗಳೂ ಭೂಲೋಕದಲ್ಲಿ ತಮಗೆ ತಾಯಿಯಾಗಬೇಕೆಂದು ಕೇಳಿಕೊಳ್ಳಲಾಗಿ "अस्तु" ಎಂದಳು.

ಒಂದು ದಿನ ಶಂತನುವು ಗಂಗಾತೀರದಲ್ಲಿ ಸಂಚರಿಸುತ್ತಿದ್ದಾಗ ಇವನಿಗೂ ಗಂಗೆಗೂ ಪರಸ್ಪರ ಮೋಹವುಂಟಾಯಿತು. ತಾನು ಆಡಿದ ಮಾತಿಗೂ ಮಾಡಿದ ಕೆಲಸಕ್ಕೂ ಅಡ್ಡಿ ಬರಕೂಡದೆಂಬ ಕರಾರಿನ ಮೇಲೆ ಗಂಗೆಯು ಶಂತನುವನ್ನು ಮದುವೆಯಾದಳು. ಕಾಲಕ್ರಮದಲ್ಲಿ ಗಂಗೆಯು ತಾನು ಹೆತ್ತ ಮಕ್ಕಳೆಲ್ಲವನ್ನೂ ಹುಟ್ಟಿದ ಕೂಡಲೆ ನದಿಯಲ್ಲಿ ಬಿಸಾಡುತ್ತ ಬಂದಳು. ಏಳು ಮಕ್ಕಳನ್ನು ತ್ಯಜಿಸುವವರೆಗೂ ರಾಜನು ಸುಮ್ಮನಿದ್ದನು. ಎಂಟನೆಯ ಮಗುವನ್ನೂ ಗಂಗೆಯು ಹಿಂದಿನಂತೆಯೇ ಮಾಡಲು ಹೊರಟಾಗ ರಾಜನು ತಡೆದು ನಿಲ್ಲಿಸಲು ಗಂಗೆಯು ತನ್ನ ಒಪ್ಪಂದವು ಮುರಿಯಿತಾದುದರಿಂದ ತಾನಿನ್ನು ಇಲ್ಲಿ ಇರುವುದಿಲ್ಲವೆಂದು ಹೇಳಿ ಅಷ್ಟವಸುಗಳ ವಿಷಯವನ್ನೂ ತಿಳಿಸಿ ಸಮಯ ಬಂದಾಗ ಮಗುವನ್ನು ತಂದೊಪ್ಪಿಸುವುದಾಗಿ ಹೇಳಿ ಶಿಶುವಿನೊಡನೆ ಹೊರಟು ಹೋದಳು. ಈ ಎಂಟನೆಯ ಮಗನೇ ಭೀಷ್ಮಾಚಾರ್ಯನು. "एतत् श्रुत्वा वचो राज्ञः सस्मितं मृदु वल्गु च। वसूनां समयं श्रुत्वाऽथाभ्यागच्छदनिन्दिता। उवाच चैवं राज्ञः सा ह्लादयन्ती मनो गिरा। भविष्यामि महीपाल महिषी ते वशानुगा। यत्तु कुर्यामहं राजन् शुभं वा यदि वाऽशुभम्। न तद्वारयितव्यास्मि न वक्तव्या तथाप्रियम्। एवं हि वर्तमानेऽहं त्वयि वत्स्यामि पार्थिव। वारिता विप्रियं चोक्ता त्यजेयं त्वामसंशयम्। तथेति राज्ञा सा तूक्ता तथा भरतसत्तम। प्रहर्षमतुलं लेभे प्राप्य तं पार्थिवोत्तमम्। न प्रष्टव्येति मन्वानः न स तां किञ्चिदुक्तवान्।..............। जातं जातं च सा पुत्रं क्षिपत्यम्भसि भारत।.................।

पुरन्धि सुमहत्पापं संप्राप्तं ते विगर्हिते। स्त्री उवाच— पुत्रकाम न ते हन्मि पुत्रं पुत्रवतां वर। जीर्णोऽस्तु मम वासोऽयं यथा स समयः कृतः"] ಇತ್ಯಾದಿ. ಭಾ० ಆದಿ०। 2. ಕಾರ್ತಿಕೇಯ, ಷಣ್ಮುಖ. [ಪಾರ್ವತೀ ಪರಮೇಶ್ವರರು ಕ್ರೀಡಾಸಕ್ತರಾಗಿದ್ದಾಗ ಅಗ್ನಿಯು ಹೋಗಿ ವಿಘ್ನವುಂಟು ಮಾಡಿದ್ದರಿಂದ ಕುಪಿತಳಾದ ಪಾರ್ವತಿಯು ಅಗ್ನಿಯೇ ಆ ಗರ್ಭವನ್ನು ಧರಿಸಬೇಕೆಂದು ಹೇಳಲಾಗಿ ಅಗ್ನಿಯು ಕೆಲವು ಕಾಲ ಧರಿಸಿ ತಾಳಲಾರದೆ ಅದನ್ನು ಗಂಗೆಯಲ್ಲಿ ಬಿಟ್ಟನು. ಗಂಗೆಯು ಶರವಣದಲ್ಲಿ ಬಿಟ್ಟಳು. ಅಲ್ಲಿ ಷಣ್ಮುಖನ ಜನನವಾಯಿತು. ಇದರಿಂದ ಷಣ್ಮುಖನಿಗೆ "**गङ्गापुत्रः**" ಎಂದೂ "**शरवणभवः**" ಎಂದೂ ಹೆಸರಾಯಿತು.]

**गङ्गायात्रा ಗಂಗಾಯಾತ್ರಾ** (स्त्री०) ಗಂಗಾನದಿಯಲ್ಲಿ ಸ್ನಾನಕ್ಕಾಗಿ ಮಾಡುವ ಯಾತ್ರೆ. गङ्गां गङ्गास्नानमुद्दिश्य यात्रा।

**गङ्गालहरी ಗಂಗಾಲಹರೀ** (स्त्री०) 1. ಗಂಗಾನದಿಯ ಅಲೆಗಳ ಸಾಲು. 2. ಜಗನ್ನಾಥಪಂಡಿತನು ರಚಿಸಿದ ಗಂಗಾನದಿಯ ಸ್ತೋತ್ರ.

**गङ्गावतार ಗಂಗಾವತಾರ** (ಪುಂ०) 1. ಗಂಗೆಯು ಸ್ವರ್ಗ ಲೋಕದಿಂದ ಇಳಿದು ಬಂದ ಪ್ರದೇಶ, ಗಂಗಾದ್ವಾರ, ಹರಿದ್ವಾರವೆಂಬ ಕ್ಷೇತ್ರ. गङ्गाया अवतारोऽत्र। ["गङ्गाद्वार" ಪದದಲ್ಲಿ ನೋಡಿ.] 2. ಗಂಗೆಯು ಭೂಲೋಕಕ್ಕೆ ಇಳಿದುಬಂದುದು. गङ्गाया अवतारः। ಸಗರಚಕ್ರವರ್ತಿಯ ಯಜ್ಞಾಶ್ವವನ್ನು ಹುಡುಕಲು ಹೋದ ಅವನ ಅರವತ್ತು ಸಹಸ್ರಮಂದಿ ಮಕ್ಕಳೂ ಕಪಿಲ ಮಹರ್ಷಿಯ ಕೋಪಾಗ್ನಿಯಿಂದ ದಗ್ಧರಾಗಲು ಅವರ ಪ್ರಪೌತ್ರ (ಮರಿಮಗ) ನಾದ ಭಗೀರಥನು ಅವರಿಗೆ ಸದ್ಗತಿ ಯುಂಟಾಗಿಸಲು ಭೂಲೋಕಕ್ಕೆ ಗಂಗೆಯನ್ನು ಕರೆತರಲು ಬ್ರಹ್ಮನನ್ನು ಕುರಿತು ತಪಸ್ಸು ಮಾಡಲಾಗಿ ಅದರಿಂದ ಮೆಚ್ಚಿದ ಬ್ರಹ್ಮನು ಅದಕ್ಕೆ ಒಪ್ಪಿದನು. ಗಂಗೆಯು ಇಳಿದು ಬರುವ ವೇಗವನ್ನು ತಡೆಯಲು ಪರಶಿವನು ಒಪ್ಪಿದನು. ಗಂಗೆಯು ಮೊದಲು ಪರಮೇಶ್ವರನ ಜಟೆಗಳ ಮೇಲೆ ಬಿದ್ದು ಅಲ್ಲಿಂದ ಮುಂದೆ ಭಗೀರಥನೊಡನೆ ಬರುತ್ತ ದಾರಿ ಯಲ್ಲಿ ಜಹ್ನುವಿನ ಯಜ್ಞಶಾಲೆಗೆ ನುಗ್ಗಲಾಗಿ ಜಹ್ನುವು ಗಂಗೆಯನ್ನು ಆಪೋಶನ ಮಾಡಿದನು. ಬಳಿಕ ಭಗೀರಥನ ಪ್ರಾರ್ಥನೆಯಂತೆ ಜಹ್ನುವು ತನ್ನ ಕಿವಿಯಿಂದ ಹೊರಕ್ಕೆ ಬಿಟ್ಟನು.

ಪರಮೇಶ್ವರನ ಜಟಾಗಹ್ವರದಿಂದ ಹೊರಟ ಗಂಗೆಯು ಏಳು ಶಾಖೆಗಳಾಗಿ ಪ್ರವಹಿಸಿತು. ಹ್ಲಾದಿನಿ, ಪಾವನಿ ಮತ್ತು ನಳಿನಿಗಳೆಂಬ ಮೂರು ಶಾಖೆಗಳು ಪೂರ್ವದಿಕ್ಕಿಗೂ ಸುಚಕ್ಷು, ಸೀತೆ ಮತ್ತು ಸಿಂಧುಗಳೆಂಬ ಮೂರು ಶಾಖೆಗಳು ಪಶ್ಚಿಮದಿಕ್ಕಿಗೂ ಪ್ರವಹಿಸಿ ಒಂದು ಶಾಖೆಯು ಭಗೀರಥ ನೊಡನೆ ಬಂದಿತು. ಈರೀತಿ ಮೂರು ಮಾರ್ಗಗಳಲ್ಲಿ ಹರಿದುಬಂದುದರಿಂದ ಗಂಗೆಗೆ "**त्रिपथगा**" ಎಂಬ ಹೆಸ ರಾಯಿತು. **—अवतरणम् —ಅವತರಣವು.**

**गङ्गासागर ಗಂಗಾಸಾಗರ**(ಪುಂ०)ಗಂಗಾನದಿಯೊಡನೆ ಸೇರಿದ ಸಮುದ್ರ, ಗಂಗಾ ಸಮುದ್ರಗಳ ಸಂಗಮ. गङ्गया सङ्गतः सागरः।

**गङ्गोद्भेद ಗಂಗೋದ್ಭೇದ** (ಪುಂ०) ಗಂಗೆಯು ಭೂಲೋಕ ದಲ್ಲಿ ಮೊದಲು ಕಾಣಿಸಿಕೊಂಡ ಸ್ಥಳ. गङ्गाया उद्भेदः प्रथमप्रकाशो यत्र। "गङ्गोद्भेदं समासाद्य तर्पयेत् पितृदेवताः। वाजपेयमवाप्नोति ब्रह्मभूतो भवेत् सदा" भा० वन० ८१।

**गच्छ ಗಚ್ಛ** (ಪುಂ०) ವೃಕ್ಷ, ಮರ. गम्लृ (गतौ) "क्विप्" (वा० ३-३-९४)। गत्। गतं गमनं छ्यति — छो (छेदने) "कः" (३-२-४)। "वृक्षः कारस्करो गच्छः पलाशी विष्टरः स्थिरः" त्रिकाण्ड०।

**गच्छत् ಗಚ್ಛತ್** (वि०) 1. ಹೋಗುತ್ತಿರುವ, ನಡೆಯು ತ್ತಿರುವ. गम्लृ (गतौ) "शतृ" (३-२-१२४)। "दूरेऽभवन्भोजबलस्य गच्छतः शैलोपमातीतगजस्य निम्नगाः" माघ० १२-६१। 2. ಪಡೆಯುವ, ಹೊಂದುವ. "गच्छता दशरथेन निर्वृतिं भूभुजामसुलभां भुजाबलात्" चं० रा०। स्त्रियाम् "ङीप्" (४-१-६)। **गच्छन्ती ಗಚ್ಛಂತೀ.** "गच्छन्तीरलसमवेक्ष्य विस्मयिन्यस्तास्तन्वी- र्न विदधिरे गतानि हंस्यः" माघ० ८-७।

**गज—मदे शब्दे च** (भ्वा० पर० अक० से०)। गजति। जगाज। गजिता। अगजत्। अगजीत्। ಇತ್ಯಾದಿ. 1. ಶಬ್ದಮಾಡು, ಗರ್ಜಿಸು. 2. ಮದಿಸು. "हया जिहेषिरे हर्षाद्गम्भीरं जगजुर्गजाः" भट्टि० १४-५।

**गज — शब्दे** (चुरा० उभ० अक० से०)। गाजयति, —ते। ಇತ್ಯಾದಿ. ಶಬ್ದಮಾಡು, ಗರ್ಜಿಸು.

**गज ಗಜ** (ಪುಂ०)1. ಆನೆ. गजति — गज (मदे) "अच्" (३-१-१३४)। "रुद्धे गजेन सरितः सरुषावतारे रिक्तोदपात्रकरमास्त चिरं जनौघः" माघ० ५-३३। 2. ಎಂಟು ಸಂಖ್ಯೆ. 3. ಒಂದು ಅಳತೆ. "अरत्नीनां शतान्यष्टौ एकषष्ट्यन्वितानि च। गजप्रमाणमाख्यातं मुनिभिर्मानकोविदैः"। 4. ಒಂದು ಗಜದ ಅಳತೆ,

ಮನುಷ್ಯನ ಮೂವತ್ತು ಅಂಗುಲಗಳ ಅಳತೆ. "साधारण-नराङ्गुल्या त्रिंशदङ्गुलको गजः"। 5. ವಾಸ್ತುಪುರುಷನ ಒಂದು ಸ್ಥಾನ. "गजो माने मतङ्गजे। वास्तुनः स्थानभेदे च" मेदि०। 6. ಔಷಧವನ್ನು ಪುಟಪಾಕಲು ತೋಡುವ ಹಳ್ಳ,–ಗುಣಿ. "हस्तप्रमाणगर्तो यः पुटः स तु गजाह्वयः। इत्थं चारत्निके कुण्डे पुटो वाराह उच्यते" वैद्यक-प्रयोगामृतम्। 7. ಮಹಿಷಾಸುರನ ಮಗನಾದ ಒಬ್ಬ ಅಸುರ, ಗಜಾಸುರ. "महिषासुरपुत्रोऽसौ समायाति गजासुरः। प्रमथन् प्रमथान् सर्वान् निजवीर्यमदोद्धतः" काशीखं०। 8. ಸುಗ್ರೀವನ ಸೈನ್ಯದಲ್ಲಿ ಒಬ್ಬ ವಾನರ. "गजो गवाक्षो गवयः शरभो गन्धमादनः" रामा०।

**गजकर्ण ಗಜಕರ್ಣ** (पुं०) ಒಬ್ಬ ಯಕ್ಷ. गजस्य कर्ण इव कर्णोऽस्य। "कुस्तुम्बरुः पिशाचश्च गजकर्णो विशालकः" भा०।

**गजकूर्माशिन् ಗಜಕೂರ್ಮಾಶಿನ್** (पुं०) ಆನೆ ಮತ್ತು ಆಮೆಗಳನ್ನು ತಿಂದ ಗರುಡ. गजकूर्मावश्नाति — अश (भोजने) णिनिः (३-२-७८)। [ತಪಸ್ವಿಗಳಾದ ವಿಭಾವಸು-ಸುಪ್ರತೀಕರೆಂಬ ಇಬ್ಬರು ಮುನಿಸಹೋದರರಿಗೆ ಆಸ್ತಿಯ ವಿಭಾಗದ ವಿಷಯದಲ್ಲಿ ವಾಗ್ವಾದ–ಮನಸ್ತಾಪಗಳು ಬೆಳೆದು ಪರಸ್ಪರ ಶಾಪದಿಂದ ಇಬ್ಬರೂ ಆನೆ ಮತ್ತು ಆಮೆಗಳಾಗಿ ಹುಟ್ಟಿ, ಒಂದು ಸರೋವರದಲ್ಲಿ ಇಬ್ಬರೂ ಸೇರಿ ಜನ್ಮಾಂತರ ದ್ವೇಷದಿಂದ ಅಲ್ಲೂ ಕಾದಾಡುತ್ತಿದ್ದರು. ಗರುಡನು ತಾಯಿಯ ಶಾಪವಿಮೋಚನೆಗಾಗಿ ಅಮೃತವನ್ನು ತರಲು ಹೋಗುತ್ತ, ತಾಯಿಯ ಮಾತಿನಂತೆ ನಿಷಾದ (ಬೇಡ) ರನೇಕರನ್ನು ತಿಂದರೂ ತೃಪ್ತನಾಗದೆ ಕೊನೆಗೆ ತಂದೆಯ ಮಾತಿನಂತೆ ಈ ಸರೋವರಕ್ಕೆ ಬಂದು ಅಲ್ಲಿ ಕಾದಾಡುತ್ತಿದ್ದ ಈ ಗಜ ಮತ್ತು ಕೂರ್ಮಗಳನ್ನು ಹಿಡಿದು ಭಕ್ಷಿಸಿದನು.] भा० आदि० २९।

**गजकृष्णा ಗಜಕೃಷ್ಣಾ** (स्त्री०) ಗಜಹಿಪ್ಪಲಿ. गज इव कृष्णा।

**गजगमन ಗಜಗಮನ** (न०) ಆನೆಯಂತೆ ಗಂಭೀರವಾದ ನಡಗೆ. गज इव गमनम्।

**गजगामिनी ಗಜಗಾಮಿನೀ** (स्त्री०) ಆನೆಯಂತೆ ಗಂಭೀರವಾದ ನಡಗೆಯುಳ್ಳ ಹೆಂಗಸು. गज इव गच्छति — गम्लृ (गतौ) "णिनिः" (३-२-७८)। "ङीप्" (४-१-५)।

**गजचिर्भटा ಗಜಚಿರ್ಭಟಾ** (स्त्री०) ಹಾವು ಮೆಕ್ಕೆಗಿಡ.

**गजच्छाया ಗಜಚ್ಛಾಯಾ** (स्त्री०) 1. ತಿಥಿ ನಕ್ಷತ್ರಗಳ ಯೋಗದಿಂದ ಉಂಟಾಗುವ ಒಂದು ಯೋಗ. ಮಘಾ ನಕ್ಷತ್ರದಲ್ಲಿ ಚಂದ್ರನೂ ಹಸ್ತನಕ್ಷತ್ರದಲ್ಲಿ ಸೂರ್ಯನೂ ಇರುವಾಗ ಬರುವ ಒಂದು ಪುಣ್ಯತಿಥಿ. "यदेन्दुः पितृदैवत्ये हंसश्चैव करे स्थितः। यस्यां तिथिर्भवेत्सा हि गजच्छाया प्रकीर्तिता"। ಇದೊಂದು ಶ್ರಾದ್ಧಕಾಲ. "व्यतीपातो गजच्छाया ग्रहणं चन्द्रसूर्ययोः। श्राद्धं प्रति रुचिश्चैते श्राद्धकालाः प्रकीर्तिताः" याज्ञ० १-२१८। 2. ಸೂರ್ಯಗ್ರಹಣಕಾಲ. "सैंहिकेयो यदा भानुं ग्रसते पर्वसन्धिषु। गजच्छाया तु सा प्रोक्ता श्राद्धं तत्र प्रकल्पयेत्"।

**गजढक्का ಗಜಢಕ್ಕಾ** (स्त्री०) ಆನೆಯ ಮೇಲೆ ಏರಿಸಿರುವ ನಗಾರಿ. "गजढक्का मदाम्नातः" हारा०।

**गजता ಗಜತಾ** (स्त्री०) ಆನೆಗಳ ಗುಂಪು. गजानां समूहः "तल्" (वा० ४-२-४३)। "आलोकयामास हरिर्महीधरानधिश्रयन्तीर्गजताः परः शताः" माघ० १२-५०।

**गजदन्त ಗಜದಂತ** (पुं०) 1. ಆನೆಯ ಕೊಂಬುಗಳಂತೆ ಕೊಂಬುಗಳುಳ್ಳ ವಿನಾಯಕ, ಗಣಪತಿ. 2. ಆನೆಯ ಕೊಂಬು. गजस्य दन्तः। "गजदन्तमयीं दिव्यां शिबिकामन्तरिक्षगाम्" रामा०। 3. ನಾಗದಂತ, ಮನೆಯ ಗೋಡೆಯಲ್ಲಿ ಬಟ್ಟೆ ಮೊದಲಾದುವನ್ನು ತೂಗುಹಾಕಲು (ಇಡಲು) ಹೊಡೆದಿರುವ ಆನೆಯ ಕೊಂಬುಗಳಂತಿರುವ ಗೂಟ. 4. ಹಲ್ಲಿನ ಮೇಲೆ ಹುಟ್ಟಿರುವ ಹಲ್ಲು. (वि०) 5. ಆನೆಯ ಕೊಂಬಿನಂತೆ ಹಲ್ಲುಗಳುಳ್ಳ.

**गजदान ಗಜದಾನ** (न०) 1. ಆನೆಯ ಮದದ ನೀರು. गजस्य दानम्। ಆನೆಯ ಮೈಯಿಂದ ಮದೋದಕವು ಹೊರಡುವ ಜಾಗಗಳು—ಸೊಂಡಿಲು, ಗಂಡ (ಕಪೋಲ) ಸ್ಥಲಗಳು, ಜನನೇಂದ್ರಿಯ, ಕಣ್ಣುಗಳು. "करात् कटाभ्यां मेढ्राच्च नेत्राभ्यां च मदस्रुतिः"। 2. ಆನೆಯ ದಾನ, ಆನೆಯ ಕೊಡುಗೆ.

**गजनासा ಗಜನಾಸಾ** (स्त्री०) ಆನೆಯ ಸೊಂಡಿಲು. गजस्य नासा।

**गजनासोरू ಗಜನಾಸೋರೂ** (स्त्री०) ಆನೆಯ ಸೊಂಡಿಲಿನಂತೆ ತೊಡೆಯುಳ್ಳ ಹೆಂಗಸು. गजस्य नासेव ऊरू यस्याः। ಆನೆಯ ಸೊಂಡಿಲಿನಂತೆ ಹೆಂಗಸರ ತೊಡೆಗಳು ಮೇಲುಗಡೆ ದಪ್ಪವಾಗಿದ್ದು ಕೆಳಕ್ಕೆ ಬರಬರುತ್ತಾ ಸಣ್ಣದಾಗಿರುವುವು. "धर्मस्तु गजनासोरु सद्भिराचरितः पुरा" रामा०।

**गजपति ಗಜಪತಿ** (पुं०) 1. ಶ್ರೇಷ್ಠವಾದ ಆನೆ. गजानां पतिः। 2. ಬಹಳ ಎತ್ತರವಾದ ಆನೆ. 3. ಆನೆಗಳ ಗುಂಪಿನ ಯಜಮಾನ, ಸಲಗ.

**गजपतिद्वयस ಗಜಪತಿದ್ವಯಸ**(वि०) ಆನೆಯ ಪ್ರಮಾಣವುಳ್ಳ, ಆನೆಯಷ್ಟು ಎತ್ತರವುಳ್ಳ. गजपतिः प्रमाणमस्य "द्वयसच्" (५-२-३७)। स्त्रियाम् "ङीप्" (४-१-१५)। **–द्वयसी –ದ್ವಯಸೀ.** "गजपतिद्वयसीरपि हैमनस्तुहिनयन् सरितः पृषतां पतिः" माघ० ६-५५।

**गजपिप्पली ಗಜಪಿಪ್ಪಲೀ**(स्त्री०)ಗಜಪಿಪ್ಪಲಿ. गजोपपदा पिप्पली। "चविकायाः फलं प्राज्ञैः कथिता गजपिप्पली। गजकृष्णा कटुर्वातश्लेष्मनुत् वह्निवर्धनी" सुश्रुत०।

**गजपुङ्गव ಗಜಪುಂಗವ** (पुं०) ಶ್ರೇಷ್ಠವಾದ ಆನೆ. गजानां पुङ्गवः।

**गजपुट ಗಜಪುಟ** (पुं०) ಒಂದು ಹಸ್ತ (ಮೊಳ)ದ ಪ್ರಮಾಣದ (ಆಳವುಳ್ಳ) ಹಳ್ಳ, ಔಷಧವನ್ನು ಪುಟಹಾಕಲು ತೋಡುವ ಗುಣಿ. "हस्तप्रमाणो गर्तो यः पुटः स तु गजाह्वयः"।

**गजपुर ಗಜಪುರ** (न०) ಹಸ್ತಿನಾಪುರ, ಧರ್ಮರಾಜನ ರಾಜಧಾನಿ. गजस्य हस्तिनामकनृपस्य पुरम्। "स निर्ययौ गजपुरात् याजकैः परिवारितः" भा० अनु० १६७-६।

**गजप्रिया ಗಜಪ್ರಿಯಾ** (स्त्री०) ಆನೆಬೇಲದ ಮರ. गजस्य प्रिया।

**गजबन्धन ಗಜಬಂಧನ** (न०) ಆನೆಗಳನ್ನು ಕಟ್ಟುವ ಕಂಬ. गजा बध्यन्तेऽत्र—बन्ध (बन्धने) "ल्युट्" (३-३-११७)। (स्त्री०) **–बन्धनी –ಬಂಧನೀ.** ಆನೆಯ ಕರವಟ್ಟಿಗೆ, ಗಜಶಾಲೆ. "ङीप्" (४-१-१५)। **–बन्धिनी –ಬಂಧಿನೀ.** गजानां बन्धोऽस्त्यत्र "इनिः" (५-२-११५)। "ङीप्" (४-१-५)। ಗಜಶಾಲೆ.

**गजभक्ष्या ಗಜಭಕ್ಷ್ಯಾ** (स्त्री०) ಆನೆಬೇಲದ ಮರ. गजैर्भक्ष्यते — भक्ष (अदने) "ण्यत्" (३-१-१२४)।

**गजमण्डलिका ಗಜಮಂಡಲಿಕಾ** (स्त्री०) ಸುತ್ತುಗಟ್ಟಿ ನಿಂತಿರುವ ಆನೆಗಳ ಒಂದು ವರ್ತುಲ. गजानां मण्डली स्वार्थे "कः"।

**गजमाचल ಗಜಮಾಚಲ** (पुं०) ಆನೆಯ ಗರ್ವವನ್ನು ಅಡಗಿಸುವ ಸಿಂಹ. गजस्य माचं कल्कं लुनाति — लूञ् (छेदने) "डः" बाहु०। "कण्ठीरवस्तु पारीन्द्रः केसरी गजमाचलः" हारा०।

**गजमुक्ता ಗಜಮುಕ್ತಾ** (स्त्री०) **–मौक्तिक –ಮೌಕ್ತಿಕ** (न०) ಆನೆಯ ಕುಂಭಸ್ಥಳದಲ್ಲಿರುವ ಮುತ್ತು. गजस्य कुम्भोद्भवा(वं) मुक्ता मौक्तिकं वा। "घर्मजनितपुलकेन लसद्गजमौक्तिकावलिगुणेन वक्षसा" किरा० १२-४०।

**ಮುತ್ತುಗಳು ಉತ್ಪನ್ನವಾಗುವ ಮೂಲಗಳು:** (1) जीमूतः (ಮೋಡ), (2) करी (ಆನೆ), (3) मत्स्यः (ಮೀನು), (4) अहिः (ಸರ್ಪ), (5) वंशः (ಬಿದಿರು), (6) शङ्खः (ಶಂಖ), (7) वराह (ಹಂದಿ) जाः ಮುತ್ತು (8) शुक्तिः (ಮುತ್ತಿನ ಚಿಪ್ಪು) "उद्भवाश्च विज्ञेया अष्टौ मौक्तिकयोनयः"।

**गजमुख ಗಜಮುಖ, –वदन –ವದನ, –वक्त्र –ವಕ್ತ್ರ** (पुं०) ವಿನಾಯಕ, ಗಣಪತಿ. गजस्य मुखमिव मुखं वदनमिव वदनं वक्त्रमिव वक्त्रं वाऽस्य। [ವಿವರಕ್ಕೆ "गजानन" ಪದದಲ್ಲಿ ನೋಡಿ.]

**गजमोटन ಗಜಮೋಟನ** (पुं०) ಆನೆಯನ್ನು ಸಂಹರಿಸುವ ಸಿಂಹ. गजं मोटयति — मुट (संचूर्णने) "ल्युः" (३-१-१३४)। स्त्रियाम् जाति० "ङीष्" (४-१-६३)। **–मोटनी –ಮೋಟನೀ.**

**गजयूथ ಗಜಯೂಥ**(न०)ಆನೆಗಳ ಗುಂಪು. गजानां यूथम्।

**गजराज ಗಜರಾಜ** (पुं०) ಶ್ರೇಷ್ಠವಾದ ಆನೆ. गजानां राजा "टच्" (५-४-९१)।

**गजरिपु ಗಜರಿಪು** (पुं०) ಆನೆಯ ಶತ್ರು, ಸಿಂಹ. गजस्य रिपुः।

**गजवत् ಗಜವತ್** (वि०) ಆನೆಗಳನ್ನು ಹೊಂದಿರುವ, ಆನೆಗಳಿಂದ ತುಂಬಿರುವ. गजाः सन्त्यस्मिन् "मतुप्" (५-२-९४)। स्त्रियाम् "ङीप्" (४-१-६)। **–वती –ವತೀ.**

**गजवीथी ಗಜವೀಥೀ** (स्त्री०) ಉತ್ತರ ಮಾರ್ಗದಲ್ಲಿರುವ ರೋಹಿಣಿ ಮೃಗಶೀರ್ಷ ಮತ್ತು ಆರ್ದ್ರಾ ನಕ್ಷತ್ರಗಳು. "रोहिण्याद्रमृगशिरो गजवीथ्यभिधीयते"॥

**गजशास्त्र ಗಜಶಾಸ್ತ್ರ** (न०) ಆನೆಗಳ ಲಕ್ಷಣ ಅವುಗಳ ಚಿಕಿತ್ಸೆ, ಅವನ್ನು ಪಳಗಿಸುವುದು ಮುಂತಾದುವನ್ನು ಕುರಿತ ಒಂದು ಗ್ರಂಥ.

**गजशिक्षा ಗಜಶಿಕ್ಷಾ** (स्त्री०) ಆನೆಗಳನ್ನು ಪಳಗಿಸಿ ನಡೆಸುವುದು ಮುಂತಾದುದನ್ನು ಕಲಿಯುವುದು. "तथैव गज-शिक्षायां नीतिशास्त्रेषु पारगः" भा० आदि०।

**गजशिरस् ಗಜಶಿರಸ್** (पुं०) 1. ಒಬ್ಬ ದೈತ್ಯ. गजस्येव शिरोऽस्य। "गजोदरो गजशिरा गजस्कन्धो गजेक्षणः" हरिवं०। (न०) 2. ಆನೆಯ ತಲೆ.

**गजसाह्वय ಗಜಸಾಹ್ವಯ** (न०) ಹಸ್ತಿನಾಪುರ. "स तूर्यशतशङ्खानां भेरीणां च महास्वनैः। हर्षयन् सर्वशः पौरान् विवेश गजसाह्वयम्" भा० आदि० ११२-४५।

**गजस्कन्ध ಗಜಸ್ಕಂಧ** (ಪುಂ) ಒಬ್ಬ ದೈತ್ಯ. ["गजशिरस्" ಪದದಲ್ಲಿ ನೋಡಿ.]

**गजस्नान ಗಜಸ್ನಾನ** (ನಂ) ಆನೆಯು ಮಾಡುವ ಸ್ನಾನ. गजस्य स्नानम्। ಆನೆಯು ನೀರಿನಲ್ಲಿ ಮುಳುಗಿ ಮೈ ಅದ್ದುವುದು. ಅಥವಾ ಸೊಂಡಿಲಿನಿಂದ ಮೈಗೆ ನೀರೆರಚಿ ಕೊಳ್ಳುವುದು. ಆದರೆ ಮರುಕ್ಷಣದಲ್ಲೇ ಮೈಗೆಲ್ಲಾ ಧೂಳನ್ನು ಎರಚಿಕೊಳ್ಳುವುದು. ಇದರಿಂದ ಅದರ ಸ್ನಾನವು ವ್ಯರ್ಥ. ಅಂತೆಯೇ ಪರಮಾತ್ಮನ ಧ್ಯಾನ, ಅವನಲ್ಲಿ ಭಕ್ತಿ ಇವುಗಳಿಲ್ಲದಿದ್ದರೆ ಯಾವ ಪುಣ್ಯಕ್ಷೇತ್ರದಲ್ಲಿ ತೀರ್ಥಸ್ನಾನ ಮಾಡಿದರೂ ಅದು ಗಜಸ್ನಾನದಂತೆ ವ್ಯರ್ಥವೆಂದು ಶ್ರೀ ಕುಲಶೇಖರಾಳ್ವಾರ್ ಅವರು ಮುಕುಂದಮಾಲೆಯಲ್ಲಿ ಹೇಳಿರುತ್ತಾರೆ. "तीर्थानामवगाहनानि च गजस्नानं विना यत्पदद्वन्द्वाम्भोरुहसंस्मृति विजयते देवः स नारायणः" मु० मा०।

**गजाग्रणी ಗಜಾಗ್ರಣೀ** (ಪುಂ) ಐರಾವತ.

**गजाजीव ಗಜಾಜೀವ** (ಪುಂ) ಆನೆಗಳನ್ನು ಕಾಪಾಡುವುದು ಮುಂತಾದ ಕಾರ್ಯಗಳಿಂದ ಜೀವನ ಮಾಡುವವನು, ಮಾವಟಿಗ. गजैराजीवो जीवनमस्य — आ + जीव (प्राणधारणे) "घञ्" (३-३-१८)।

**गजानन ಗಜಾನನ** (ಪುಂ) ವಿನಾಯಕ, ಗಣಪತಿ. गजस्याननमिव आननमस्य। ಗಣಪತಿಯ ಉತ್ಪತ್ತಿ ಕಥೆಗಳು ಅನೇಕವಾಗಿರುವುವು.

(1) ಗಣಪತಿಯು ಪಾರ್ವತಿಯ ಗರ್ಭದಲ್ಲಿ ತಲೆಯಿಲ್ಲದೆ ಜನಿಸಿದನು. ಆಗ ಪರಮೇಶ್ವರನು ಪೂರ್ವದಲ್ಲಿ ಕೈಲಾಸ ದಲ್ಲಿ ಕತ್ತರಿಸಿ ಇಟ್ಟಿದ್ದ ಗಜಾಸುರನ ತಲೆಯನ್ನು ತಂದು ಸೇರಿಸಿದ್ದರಿಂದ ಗಣಪತಿಗೆ "**ಗಜಾನನ**"ನೆಂದು ಹೆಸರಾಯಿತು. स्कान्द० गणेशखण्डः।

(2) ಪಾರ್ವತಿಯು ಒಂದು ದಿನ ಅಂಗಲೇಪನ ಮಾಡಿ ಕೊಳ್ಳುತ್ತಿದ್ದಾಗ ಕೆಳಗೆ ಬಿದ್ದ ಲೇಪನ ವಸ್ತುಗಳನ್ನೆಲ್ಲಾ ಸೇರಿಸಿ ಒಂದು ಬೊಂಬೆಯನ್ನು ನಿರ್ಮಿಸಿದಳು. ಅದು ಆನೆಯಂತೆ ಇದ್ದುದರಿಂದ ಗಂಗೆಯಲ್ಲಿ ಬಿಟ್ಟಳು. ಗಂಗೆಯು ಅದನ್ನು "ಮಗು" ಎಂದು ಕರೆಯಲು ಪಾರ್ವತಿಯೂ ಹಾಗೆಯೇ ಕರೆದಳು. ಅದಕ್ಕೆ ಜೀವಕಳೆ ಬಂದಿತು. ಆಗ ಶಿಶುವಿಗೆ "**ಗಜಾನನ**"ನೆಂದು ಹೆಸರಿಟ್ಟು ದೇವಗಣ ಗಳಿಗೆ ಅಧಿಪತಿಯನ್ನಾಗಿ ಮಾಡಿದುದರಿಂದ "ಗಣಪತಿ" ಯೆಂದೂ ಹೆಸರಾಯಿತು. स्कान्द० कौमारखण्डः।

(3) ದಕ್ಷಯಜ್ಞವನ್ನು ನಾಶಪಡಿಸಿದ ಕಾಲದಲ್ಲಿ ವೀರಭದ್ರನು ವಿನಾಯಕನ ತಲೆಯನ್ನೂ ಕತ್ತರಿಸಿದನು. ಆದರಿಂದ ಹೆದರಿದ ಬ್ರಹ್ಮಾದಿ ದೇವತೆಗಳು ವಿನಾಯಕನನ್ನು ಬದುಕಿಸಿಕೊಡಬೇಕೆಂದು ಪರಶಿವನಲ್ಲಿ ಮೊರೆಯಿಟ್ಟರು. ಈಶ್ವರನ ಆಜ್ಞೆಯಂತೆ ಉತ್ತರದಿಕ್ಕಿಗೆ ತಲೆಯನ್ನಿಟ್ಟು ಮಲಗಿದ್ದ ಒಂದು ಆನೆಯ ಶಿರಸ್ಸನ್ನು ಕತ್ತರಿಸಿ ತಂದು ಸೇರಿಸಿದರು. ಆಗ ವಿನಾಯಕನಿಗೆ "**ಗಜಾನನ**"ನೆಂದು ಹೆಸರಾಯಿತು.] ब्रह्मवै० गणपतिखण्डः। ಇತ್ಯಾದಿ.

**गजायुर्वेद ಗಜಾಯುರ್ವೇದ** (ಪುಂ) ಆನೆಗಳ ವಿಷಯವಾಗಿ ಬರೆದ ಒಂದು ವೈದ್ಯಗ್ರಂಥ, ಗಜವೈದ್ಯ, ಆನೆಗಳ ರೋಗ ಮತ್ತು ಅವುಗಳ ಚಿಕಿತ್ಸೆ ಕುರಿತ ಒಂದು ಗ್ರಂಥ.

**गजारि ಗಜಾರಿ** (ಪುಂ) ಆನೆಗೆ ಶತ್ರುವಾದ ಸಿಂಹ. गजस्यारिः।

**गजारोह ಗಜಾರೋಹ** (ಪುಂ) ಆನೆಯ ಮೇಲೆ ಹತ್ತಿ ಸವಾರಿಮಾಡುವವನು, ಮಾವಟಿಗ. गजमारोहति — आ +रुह (बीजजन्मादौ) "अण्" (३-२-१)। "धन्विनस्तुरगारूढाः गजारोहान् शरैः क्षतान्" कुमा० १६-३७।

**गजाशन ಗಜಾಶನ**(ಪುಂ)1. ಆನೆಬೇಲದಮರ. 2. ಅಶ್ವತ್ಥ ವೃಕ್ಷ, ಅರಳಿಮರ. 3. ತಾವರೆಯ ದಂಟು. गजैरश्यते— अश (भोजने) कर्म० "ल्युट्" (३-३-११३)।

**गजासुर ಗಜಾಸುರ** (ಪುಂ) ಆನೆಯ ಜನ್ಮವೆತ್ತಿದ ಒಬ್ಬ ಅಸುರ. ಸಕಲ ಶಾಸ್ತ್ರಜ್ಞನೂ ದೇವಬ್ರಾಹ್ಮಣ ಪೂಜಾ ನಿರತನೂ ಆಗಿದ್ದ ಮಹೇಶನೆಂಬ ರಾಜನೊಬ್ಬನು ಮಾರ್ಗ ದಲ್ಲಿ ಹೋಗುತ್ತಿದ್ದಾಗ ಅವನಿಂದ ಅವಮಾನಗೊಳಿಸಲ್ಪಟ್ಟು ದಾಗಿ ತಿಳಿದ ನಾರದಮಹರ್ಷಿಯ ಶಾಪದಿಂದ ಗಜಮುಖಿ ನಾದ ಒಬ್ಬ ಅಸುರನಾಗಿ ಹುಟ್ಟಿದನು. ಈತನೇ ಮಹಿಷಾ ಸುರನ ಮಗನಾದ ಗಜಾಸುರನು. [ವಿವರಕ್ಕೆ "कृत्तिवासस्" ಪದದಲ್ಲಿ ನೋಡಿ.]

**गजास्य ಗಜಾಸ್ಯ** (ಪುಂ)1. ಗಣಪತಿ. गजस्येवास्यं यस्य। 2. ಗಜಾಸುರ. (ನಂ)3. ಆನೆಯ ಮುಖ. (ವಿಂ)4. ಆನೆಯ ಮುಖದಂತೆ ಮುಖವುಳ್ಳ.

**गजेन्द्र ಗಜೇಂದ್ರ** (ಪುಂ)1. ಶ್ರೇಷ್ಠವಾದ ಆನೆ. गजः इन्द्र इव। 2. ಆನೆಗಳ ಹಿಂಡುಗಳ ಯಜಮಾನ, ಸಲಗ. गजानामिन्द्रः। "यां चन्द्रकैर्मदजलस्य महानदीनां नेत्रश्रियं विकसतो विदधुर्गजेन्द्राः" माघ० ५-४०। 3. ಅಗಸ್ತ್ಯಮಹರ್ಷಿಯ ಶಾಪದಿಂದ ಆನೆಯಾಗಿ ಹುಟ್ಟಿದ ಇಂದ್ರದ್ಯುಮ್ನ. [ಪರಮಭಕ್ತನಾದ ಇಂದ್ರದ್ಯುಮ್ನ ರಾಜನು ಒಂದು ದಿನ ದೇವತಾರ್ಚನೆ ಮಾಡುತ್ತಿದ್ದಾಗ ಅಲ್ಲಿಗೆ ಬಂದ ಅಗಸ್ತ್ಯಮಹರ್ಷಿಯು ತಮ್ಮನ್ನು ಗೌರವಿಸಲಿಲ್ಲವೆಂಬ ಕಾರಣದಿಂದ ಆನೆಯಾಗಿ ಹುಟ್ಟುವಂತೆ ರಾಜನಿಗೆ ಶಾಪ

ವಿತ್ತರು. ಇವನು ಆನೆಯಾಗಿ ಹುಟ್ಟಿದರೂ ಸಂಸ್ಕಾರ ವಿಶೇಷದಿಂದ ಸರ್ವದಾ ಪರಮಾತ್ಮನ ಧ್ಯಾನದಲ್ಲೇ ಆಸಕ್ತನಾಗಿದ್ದನು. ಒಂದು ದಿನ ವರುಣನ ಉದ್ಯಾನವನದಲ್ಲಿದ್ದ ತಟಾಕವೊಂದರಲ್ಲಿ ನೀರು ಕುಡಿಯಲು ಹೋಗಿ ಮೊಸಳೆಯ ಬಾಯಿಗೆ ಸಿಕ್ಕಿಕೊಂಡಾಗ ಇಂದ್ರಾದಿ ದೇವತೆಗಳೆಲ್ಲರನ್ನೂ ಬೇಡಿಕೊಂಡರೂ ಯಾರೂ ರಕ್ಷಣೆಗೆ ಬರಲಿಲ್ಲ. ಕೊನೆಗೆ ಇವನ ಮೊರೆಗೆ ಕಿವಿಗೊಟ್ಟು, ವಿಷ್ಣುವು ಆ ಕೂಡಲೆ ಗರುಡಾರೂಢನಾಗಿ ಬಹಳ ರಭಸದಿಂದ ಬಂದು ಚಕ್ರಾಯುಧದಿಂದ ಮೊಸಳೆಯನ್ನು ಸಂಹರಿಸಿ ಗಜೇಂದ್ರನನ್ನು ಬದುಕಿಸಿದನು.] "तं तद्वदार्तमुपलभ्य जगन्निवासः स्तोत्रं निशम्य दिविजैः सह संस्तुवद्भिः। छन्दोमयेन गरुडेन समुह्यमानः चक्रायुधोऽभ्यगमदाशु यतो गजेन्द्रः। सोऽन्तःसरस्युरुबलेन गृहीत आर्तः दृष्ट्वा गरुत्मति हरिं ख उपात्तचक्रम्। उत्क्षिप्य सांबुजकरं गिरमाह कृच्छ्रात् नारायणाखिलगुरो! भगवन्नमस्ते। तं वीक्ष्य पीडितमजः सहसावतीर्य सग्राहमाशु सरसः कृपयोज्जहार। ग्राहाद्विपाटितमुखादरिणा गजेन्द्रं संपश्यतां हरिरमूमुचदुस्रियाणाम्" भाग० ८-३-३१–३३। ದೇವಲ ಶಾಪದಿಂದ ಮೊಸಳೆಯಾಗಿ ಹುಟ್ಟಿದ್ದ ಹೂಹೂ ಎಂಬ ಗಂಧರ್ವನಿಗೂ ಅಗಸ್ತ್ಯ ಶಾಪದಿಂದ ಗಜವಾಗಿ ಹುಟ್ಟಿದ್ದ ಇಂದ್ರದ್ಯುಮ್ನ ರಾಜನಿಗೂ ಶಾಪದಿಂದ ವಿಮೋಚನೆಯಾಯಿತು.]

**गञ्ज ಗಂಜ** (ಪುಂ०) 1. ಧನಗಳ ಕೊಟ್ಟಿಗೆ. "गोष्ठागारेऽपि गञ्जः स्यात्" हारा०। 2. ಗಣಿ. 3. ಧನಕನಕಾದಿಗಳನ್ನು ರಕ್ಷಿಸಿಡುವ ಮನೆ, ಜವಾಹಿರಿಯ ಕೊಠಡಿ. 4. ಅಗೌರವ, ಅವಮರ್ಯಾದೆ. गजि (शब्दे) अधि० भावे वा "घञ्"। (स्त्री०) **गञ्जा ಗಂಜಾ.** 5. ಮದ್ಯದ ಮನೆ, ಹೆಂಡದ ಅಂಗಡಿ. "गञ्जो भाण्डागारे रीढाखन्योर्गञ्जा सुरागृहे" हेम०। 6. ಮದ್ಯವನ್ನು ಕುಡಿಯುವ ಪಾತ್ರೆ.

**गञ्जन ಗಂಜನ** (ವಿ०) ಅವಮಾನಪಡಿಸುವವನು. गजि (शब्दे) + णिच् "ल्युः" (३-१-१३४)। "नेत्रे खञ्जनगञ्जने सरसिजप्रस्पर्धि पाणिद्वयम्" सा० द०।

**गञ्जिका ಗಂಜಿಕಾ** (स्त्री०) ಮದ್ಯಶಾಲೆ, ಹೆಂಡದ ಅಂಗಡಿ.

**गड – सेचने** (भ्वा० पर० सक० से०)। गडति। जगाड। अगाडीत्, अगडीत्। ಇತ್ಯಾದಿ. ಸೋರು, ಸ್ರವಿಸು, ಜಿನುಗು, ತೊಟ್ಟಿಕ್ಕು.

**गड ಗಡ** (ಪುಂ०) 1. ಒಂದು ಜಾತಿಯ ಮೀನು. 2. ವಿಘ್ನ. गड (सेचने) "अच्" (३-१-१३४)। "गडो मीनान्तरायथोः" मेदि०। 3. ಕಂದಕ, ಕೋಟೆಯ ಸುತ್ತಲೂ ನೀರು ತುಂಬಲು ತೋಡುವ ಹಳ್ಳ. 4. ವ್ಯವಧಾನ, ತೆರೆ, ಗೋಡೆ, ಬೇಲಿ ಮುಂತಾದುವು.

**गडक ಗಡಕ** (ಪುಂ०) ಮೀನಿನ ಮರಿ.

**गडि ಗಡಿ** (ಪುಂ०) 1. ಪಳಗಿಸಲು ಯೋಗ್ಯವಯಸ್ಸುಳ್ಳ ಹೋರಿ. 2. ಗಾಡಿಯನ್ನು ಎಳೆಯಲು ಸರಿಯಾಗಿ ಪಳಗದ ಎತ್ತು. "असञ्जातकिणस्कन्धः सुखं स्वपिति गौर्गडिः" काव्यप्र०।

**गडु ಗಡು** (ಪುಂ०) 1. ಗಳಗಂಡ. 2. ಹೆಕ್ಕತ್ತು ಮತ್ತು ತಲೆಗಳ ಮಧ್ಯೆ ಏಳುವ ಮಾಂಸಗ್ರಂಥಿ, ಗಂಡಮಾಲೆಯೆಂಬ ಒಂದು ರೋಗ. गड (सेचने) "उः" बाहु०। 3. ಕೆಸರಿನಲ್ಲಿರುವ ಎರುಬು ಹುಳು. "गडुः किञ्चुलकः" त्रिकाण्ड०। 4. ಒಂದು ಆಯುಧ, ಭಲ್ಯ, ಹಗುರವಾದ ಈಟಿ. (वि०) 5. ಗೂನ, ಗೂನುಬೆನ್ನಿನವನು. 6. ಕತ್ತಿನಲ್ಲಿರುವ ಮಾಂಸಗ್ರಂಥಿಯಂತೆ ಪ್ರಯೋಜನವಿಲ್ಲದ ವಸ್ತು. "काव्यान्तर्गडुभूतत्वात् नालङ्कारः प्रहेलिका" सा० द०। "गडुः पृष्ठगुडे कुब्जे" मेदि०।

**गडुक ಗಡುಕ** (ಪುಂ०) ಒಂದು ನೀರಿನ ಪಾತ್ರೆ, ಗಿಂಡಿ. गडुः गलगण्डइव कायति – कै (शब्दे) "कः" (३-२-४)।

**गडुर(ल) ಗಡುರ(ಲ)** (ಪುಂ०) ಕುಬ್ಜ, ಕುಳ್ಳ, ಗಿಡ್ಡ, ಗುಜ್ಜಾರಿ. गडुं राति – रा (दाने) "कः" (३-२-३)। गडुरस्यास्ति "लच्" (५-२-९७) वा। "गडुलः कुब्जे" अम०।

**गडेर ಗಡೇರ** (ಪುಂ०) ಮೋಡ, ಟಗರು. गड (सेचने) "एरक्" (उ० १-५८)।

**गडोल ಗಡೋಲ** (ಪುಂ०) ಹಸಿ ಬೆಲ್ಲ, ಅಪಕ್ವವಾದ ಬೆಲ್ಲ.

**गण – संख्याने** (चुरा० उभ० सक० से०)। गणयति, –ते। गणयां चकार, –चक्रे, –बभूव, –आस। गणयिता। गणयिष्यति, –ते। गणयतु, –ताम्। ಇತ್ಯಾದಿ. ಎಣಿಸು, ಲೆಕ್ಕಮಾಡು. "लीलाकमलपत्राणि गणयामास पार्वती" कुमा० ६-८४।

**गण ಗಣ** (ಪುಂ०) 1. ಸಮೂಹ, ಗುಂಪು. गण्यते – गण (संख्याने) + णिच् "घञ्" (३-३-१९)। "अच्" (३-३-५६) वा। "श्रुतानि शृण्वन् वयसा गणोऽन्तेवासित्वमाप स्फुटमङ्गनानाम्" माघ० ३-५५। 2. ಪ್ರಮಥಗಣ. "गणा नमेरुप्रसवावतंसा भूर्जत्वचः स्पर्शवतीर्दधानाः" कुमा० १-५५। 3. ಸಂಖ್ಯೆ. 4. ಸೇನೆಗಳ ಸಮೂಹ, ಆನೆ ಕುದುರೆ ರಥ ಮತ್ತು ಕಾಲಾಳುಗಳಿಂದ

ಕೂಡಿದ ಸೇನೆಗಳ ಒಂದು ಗುಂಪು. **ಸೇನಾವಿವರಣ ಚಕ್ರ.**

| ಸೇನೆಗಳ ಗುಂಪು | ಆನೆ | ರಥ | ಕುದುರೆ | ಕಾಲಾಳು |
|---|---|---|---|---|
| ಪತ್ತಿ | 1 | 1 | 3 | 5 |
| ಸೇನಾಮುಖ | 3 | 3 | 9 | 15 |
| ಗುಲ್ಮ | 9 | 9 | 27 | 45 |
| ಗಣ | 27 | 27 | 81 | 135 |

"एकैभेकरथा त्र्यश्वा पत्तिः पञ्चपदातिका। पत्त्यङ्गैस्त्रिगुणैः सर्वैः क्रमादाख्या यथोत्तरम्। सेनामुखं गुल्मगणौ वाहिनी पृतना चमूः। अनीकिनी दशानीकिन्यक्षौहिणी" अम०। [ವಿವರಕ್ಕೆ "अनीकिनी" ಪದದಲ್ಲಿ ನೋಡಿ.] 5. ನಕ್ಷತ್ರಗಳ ಗುಂಪು. ದೇವ ಮನುಷ್ಯ ರಾಕ್ಷಸ ವರ್ಗಗಳಿಗೆ ಸೇರಿದ ನಕ್ಷತ್ರಗಳ ಗುಂಪು.

**ದೇವಗಣದ ನಕ್ಷತ್ರಗಳು:** ಅಶ್ವಿನಿ, ಮೃಗಶಿರೆ, ಪುನರ್ವಸು, ಪುಷ್ಯ, ಹಸ್ತ, ಸ್ವಾತಿ, ಅನೂರಾಧೆ, ಶ್ರವಣ ಮತ್ತು ರೇವತಿ.

**ಮನುಷ್ಯಗಣದ ನಕ್ಷತ್ರಗಳು:** ಭರಣಿ, ರೋಹಿಣಿ, ಆರಿದ್ರೆ, ಪೂರ್ವಫಲ್ಗುನಿ, ಉತ್ತರಫಲ್ಗುನಿ, ಪೂರ್ವಾಷಾಢ, ಉತ್ತರಾಷಾಢ, ಪೂರ್ವಾಭಾದ್ರೆ ಮತ್ತು ಉತ್ತರಾಭಾದ್ರೆ.

**ರಾಕ್ಷಸಗಣದ ನಕ್ಷತ್ರಗಳು:** ಕೃತ್ತಿಕೆ, ಆಶ್ಲೇಷೆ, ಮಘೆ, ಚಿತ್ತೆ, ವಿಶಾಖೆ, ಜ್ಯೇಷ್ಠೆ, ಮೂಲ, ಧನಿಷ್ಠೆ ಮತ್ತು ಶತಭಿಷೆ. ವಿವಾಹಕ್ಕಾಗಿ ವಧೂವರರ ನಕ್ಷತ್ರಗಳ ಹೊಂದಿಕೆಗೆ ಈ ಗಣಕೂಟವನ್ನು ಮುಖ್ಯವಾಗಿ ನೋಡಬೇಕು. 6. ಪಂಗಡ, ವಂಶ, ಬುಡಕಟ್ಟು. 7. ಛಂದಃಶಾಸ್ತ್ರದಲ್ಲಿ ಉಕ್ತವಾಗಿರುವ ಗುರು ಲಘುರೂಪವಾದ ವರ್ಣಗಳ ಸಮೂಹ. (1) जगणः, (2) तगणः, (3) नगणः, (4) भगणः, (5) मगणः, (6) यगणः, (7) रगणः ಮತ್ತು (8) सगणः, (9) गः (गुरुः), (10) लः (लघुः)। ಸಕಲ ವಾಙ್ಮಯವೂ ಈ ಹತ್ತು ವರ್ಣಗಳಿಂದ ಕೂಡಿರುವುದು. "म्यरस्तजभ्नगैर्लान्तैरेभिर्दशभिरक्षरैः। समस्तं वाङ्मयं व्याप्तं त्रैलोक्यमिव विष्णुना" वृ० र०। 8. ವ್ಯಾಕರಣದಲ್ಲಿ ಉಕ್ತವಾದ ಪದಗಳ ಮತ್ತು ಧಾತುಗಳ ಗುಂಪು.

**(1) ಪದಗಳ ಗುಂಪು:** गौरादिः, उत्सादिः, बाह्वादिः, नडादिः, गर्गादिः, शुभ्रादिः, कल्याण्यादिः, दिगादिः, कथादिः, गुडादिः ಇತ್ಯಾದಿ.

**(2) ಧಾತುಗಳ ಗುಂಪು:** भ्वादिः, अदादिः, जुहोत्यादिः, दिवादिः, स्वादिः, तुदादिः, रुधादिः, तनादिः, क्र्यादिः ಮತ್ತು चुरादिः।

**गणक ಗಣಕ** (पुं०) 1. ದೈವಜ್ಞ, ಜ್ಯೌತಿಷಿಕ, ಜೋಯಿಸ. गणयति—गण (संख्याने) + णिच् "ण्वुल्" (३-१-१३३)। 2. ಎಣಿಸುವವನು, ಲೆಕ್ಕಮಾಡುವವನು. 3. ದೇವಲನಿಂದ ವೈಶ್ಯ ಹೆಂಗಸಿನಲ್ಲಿ ಹುಟ್ಟಿದ ಬೆರಕೆಜಾತಿಯವನು. 4. ಚರ್ಮಕಾರನ ಮಗ, ಒಬ್ಬ ಸಂಕೀರ್ಣಜಾತಿಯವನು.

**गणकर्णिका ಗಣಕರ್ಣಿಕಾ** (स्त्री०) ಇಂದ್ರವಾರುಣಿ, ಹಾವುಮೆಕ್ಕೆ ಗಿಡ.

**गणकूट ಗಣಕೂಟ** (पुं०) ವಿವಾಹದ ಸಲುವಾಗಿ ವಧೂವರರ ನಕ್ಷತ್ರಗಳ ಹೊಂದಿಕೆಗೆ ನೋಡಬೇಕಾದ ಹನ್ನೆರಡು ವಿಧ ಕೂಟಗಳಲ್ಲಿ ಒಂದು, ವಧೂವರರ ನಕ್ಷತ್ರಗಳ ಹೊಂದಿಕೆಗಾಗಿ ನೋಡಬೇಕಾದ ದೇವ ಮನುಷ್ಯ ರಾಕ್ಷಸ ವರ್ಗಗಳಿಗೆ ಸೇರಿದ ನಕ್ಷತ್ರಗಳ ಗುಂಪು. ["गण" ಪದದಲ್ಲಿ ನೋಡಿ.]

**गणचक्रक ಗಣಚಕ್ರಕ** (न०) ಧಾರ್ಮಿಕರು ಒಟ್ಟುಗೂಡಿ ಊಟಮಾಡುವುದು. धार्मिकगणानां चक्रमत्र "कप्"। "धार्मिकाणां तु संभूय भोजने गणचक्रकम्" त्रिकाण्ड०।

**गणतिथ ಗಣತಿಥ** (वि०) ಅನೇಕ ಗುಂಪುಗಳ, ಅನೇಕ ಸಮೂಹಗಳ. गण "डट्" (४-२-४८)। तिथुकागमः (५-२-५२)।

**गणदास ಗಣದಾಸ** (पुं०) ಅಗ್ನಿಮಿತ್ರರಾಜನ ಆಸ್ಥಾನದಲ್ಲಿ ಒಬ್ಬ ನಾಟ್ಯಾಚಾರ್ಯ.

**गणदेवता ಗಣದೇವತಾ** (स्त्री०) ಗುಂಪುಗುಂಪಾಗಿರುವ ದೇವತೆಗಳು. गणभूता देवताः। "आदित्यविश्ववसवस्तुषिता भास्वरानिलाः। महाराजिकसाध्याश्च रुद्राश्च गणदेवताः" अम०।

**गणन ಗಣನ** (न०) 1. ಎಣಿಕೆ, ಎಣಿಸುವುದು. गण्यते—गण (संख्याने) "ल्युट्" (३-३-११५)। "युच्" (३-३-१०७)। (स्त्री०) **गणना ಗಣನಾ**. 2. ಸಂಖ್ಯೆ. "गणना न बभूव कृष्णपक्षे हतभग्नादिविकल्पितेऽपि तस्मिन्" याद० १५-१२४। 3. ಎಣಿಕೆ, ಪರಿಗಣನೆ. "अयं निजः परो वेति गणना लघुचेतसाम्"।

**गणनाथ ಗಣನಾಥ** (ಪುಂ) 1. ಗಣಪತಿ, ವಿನಾಯಕ, ದೇವ ಗಣಗಳ ಯಜಮಾನ. 2. ಈಶ್ವರ, ಪರಶಿವ, ಪರಮೇಶ್ವರ. गणानां नाथः। 3. ಗುಂಪುಗಳ ಯಜಮಾನ. **-नायकः -ನಾಯಕಃ.**

**गणनीय ಗಣನೀಯ** (ವಿಂ) 1. ಎಣಿಸಲ್ಪಡುವ. 2. ಎಣಿಸಲು ಯೋಗ್ಯವಾದ. 3. ಎಣಿಸಲು ಶಕ್ಯವಾದ. 4. ಎಣಿಸಬೇಕಾದ. गण (संख्याने) + णिच् कर्मादौ "अनीयर्" (३-१-९६)।

**गणप ಗಣಪ** (ಪುಂ) 1. ಗಣಪತಿ, ವಿನಾಯಕ. 2. ಈಶ್ವರ. ಪರಶಿವ. ಪರಮೇಶ್ವರ. गणान् पाति — पा (रक्षणे) "कः" (३-२-३)।

**गणपति ಗಣಪತಿ** (ಪುಂ) 1. ಪ್ರಮಥ ಗಣಗಳ ಯಜಮಾನ, ವಿನಾಯಕ, ವಿಘ್ನೇಶ್ವರ. देवगणानां पतिः। ["गजानन" ಪದವಲ್ಲಿ ನೋಡಿ.] ಗಣಪತಿಯು ವಿದ್ಯಾಧಿದೇವತೆ. ಸಕಲ ವಿಘ್ನಗಳಿಗೂ ನಿಯಾಮಕನಾಗಿದ್ದು ವಿಘ್ನಗಳೆಲ್ಲವನ್ನೂ ಪರಿಹರಿಸುವುದರಿಂದ ಸಕಲ ಕಾರ್ಯಾರಂಭದಲ್ಲೂ ವಿಘ್ನೇಶ್ವರನ ಪೂಜೆಯನ್ನು ಮಾಡಬೇಕು. ವಿಘ್ನಗಳ ಪರಿಹಾರಕ್ಕಾಗಿ ವಿನಾಯಕನನ್ನು ಬ್ರಹ್ಮರುದ್ರಾದಿಗಳು ನೇಮಿಸಿದರು. "विनायकः कर्मविघ्नसिद्ध्यर्थं विनियोजितः। गणानामाधिपत्ये च रुद्रेण ब्रह्मणा तथा" याज्ञ० १-२७१। ಮಹಾಭಾರತವನ್ನು ಬರೆಯಲು ಗಣಪತಿಯನ್ನು ಕೇಳಿಕೊಳ್ಳಬೇಕೆಂದು ಬ್ರಹ್ಮನು ಹೇಳಲು ವೇದವ್ಯಾಸ ಮಹರ್ಷಿಯು ಗಣಪತಿಯನ್ನು ಸ್ಮರಿಸಿದರು. ಆ ಕೂಡಲೆ ಅಲ್ಲಿಗೆ ಬಂದ ಗಣಪತಿಯನ್ನು ವೇದವ್ಯಾಸರು ವಿಶೇಷವಾಗಿ ಪೂಜಿಸಿ ಮಹಾಭಾರತವನ್ನು ಬರೆಯಲು ಪ್ರಾರ್ಥಿಸಿದರು. "एवमाभाष्य तं ब्रह्मा जगाम स्वं निवेशनम्। ततः सस्मार हेरम्बं व्यासः सत्यवतीसुतः। स्मृतमात्रो गणेशानो भक्तचिन्तितपूरकः। तत्राजगाम विघ्नेशो वेदव्यासो यतः स्थितः। पूजितश्चोपविष्टश्च व्यासेनोक्तस्तदानघ। लेखको भारतस्यास्य भव त्वं गणनायक। मयैव प्रोच्यमानस्य मनसा कल्पितस्य च" भा० आदि० १-७४-७७।

ಗಣಪತಿಯು ಮಹಾಭಾರತವನ್ನು ಬರೆಯಲು ಒಪ್ಪಿ ತನ್ನ ಲೇಖನಿಗೆ ಸ್ವಲ್ಪವೂ ವಿರಾಮಕೊಡದೆ ಹೇಳುತ್ತಿರಬೇಕೆಂದು ತಿಳಿಸಲು ತಾನು ಹೇಳುವುದನ್ನು ಚೆನ್ನಾಗಿ ಅರ್ಥಮಾಡಿಕೊಂಡು ಬರೆಯಬೇಕೆಂದೂ ವ್ಯಾಸರು ಹೇಳಿದರು. ಗಣಪತಿಯು "अस्तु" ಎಂದನು. "श्रुत्वैतत् प्राह विघ्नेशो यदि मे लेखनी क्षणम्। लिखतो नावतिष्ठेत तदा स्यां लेखको ह्यहम्। व्यासोऽप्युवाच तं देवमबुद्ध्वा मा लिख क्वचित्। ओमित्युक्त्वा गणेशोऽपि बभूव किल लेखकः" भा० आदि० १-७८, ७९। 2. ಪರಶಿವ, ಪರಮೇಶ್ವರ. 3. ಗುಂಪುಗಳ ಯಜಮಾನ.

**गणपतिकल्प ಗಣಪತಿಕಲ್ಪ** (ಪುಂ) ವಿಘ್ನ ಪರಿಹಾರಕ್ಕಾಗಿ ಮಾಡುವ ಗಣಪತಿಯ ಪೂಜೆಯ ವಿಧಾನ. गणपत्युद्देशेन कल्पः। [ವಿವರಕ್ಕೆ ಯಾಜ್ಞವಲ್ಕ್ಯ ಸ್ಮೃತಿಯಲ್ಲಿ "ಗಣಪತಿ ಕಲ್ಪ ಪ್ರಕರಣ" ನೋಡಿ.]

**गणपर्वत ಗಣಪರ್ವತ** (ಪುಂ) ಪ್ರಮಥಗಣಗಳಿಗೆ ಆಶ್ರಯವಾದ ಕೈಲಾಸಪರ್ವತ. गणभूयिष्ठः पर्वतः। "कैलासो गणपर्वतश्च रजतप्रस्थः कुबेराचलः" त्रिकाण्ड०।

**गणभर्तृ ಗಣಭರ್ತೃ** (ಪುಂ) 1. ಪರಶಿವ, ಪರಮೇಶ್ವರ, ಮಹಾದೇವ. गणानां भर्ता। "शृङ्गाण्यमुष्य भजते गणभर्तुरुक्षा कुर्वन् वधूजनमनस्सु शशाङ्कशङ्काम्" कुमा० ५-४२। 2. ವಿನಾಯಕ, ಗಣಪತಿ. 3. ಗುಂಪಿನ ನಾಯಕ, ಮುಂದಾಳು, ಮುಖಂಡ.

**गणभोजन ಗಣಭೋಜನ** (ನಂ) ಕೂಟಭೋಜನ, ಗುಂಪಿನ ಊಟ, ಗುಂಪಿನಲ್ಲಿ ಕುಳಿತು ಮಾಡುವ ಊಟ.

**गणयितृ ಗಣಯಿತೃ** (ವಿಂ) ಎಣಿಸುವ, ಲೆಕ್ಕಮಾಡುವ. गण (संख्याने) + णिच् "तृच्" (३-१-१३३)। स्त्रियाम् "ङीप्" (४-१-५)। **-यित्री -ಯಿತ್ರೀ.**

**गणरात्र ಗಣರಾತ್ರ** (ನಂ) ಅನೇಕ ರಾತ್ರಿಗಳ ಸಾಲು, ಅನೇಕ ರಾತ್ರಿಗಳು. गणानां बह्वीनां रात्रीणां समाहारः—द्विगुः (२-१-५१)। "अच्" (५-४-८७)। "गणरात्रं निशा बह्व्यः" अम०।

**गणरूप ಗಣರೂಪ** (ಪುಂ) ಎಕ್ಕದ ಗಿಡ. "अर्काह्ववसुकास्फोटगणरूपविकीरणाः" अम०।

**गणशस् ಗಣಶಸ್** (ಅವ್ಯಂ) ಗುಂಪುಗುಂಪಾಗಿ. गण वीप्सायां कारकार्थे "शस्" (५-४-४२)।

**गणहासक ಗಣಹಾಸಕ** (ಪುಂ) 1. ಕರಿಯಕಚೋರ. गणं हासयति—हसे (हसने) + णिच् "ण्वुल्" (३-१-१३३)। "चण्डा धनहरी क्षेमदुष्पत्रगणहासकाः" अम०। (ವಿಂ) 2. ಗುಂಪನ್ನು ನಗಿಸುವವನು, ಗುಂಪನ್ನು ನಗುವಂತೆ ಮಾಡುವವನು, ನಕಲಿಯವನು, ಹಾಸ್ಯಗಾರ.

**गणाग्रणी ಗಣಾಗ್ರಣೀ** (ಪುಂ) 1. ಗಣಪತಿ, ಪ್ರಮಥಗಣಗಳ ಅಧಿಪತಿ. गणानामग्रणीः। 2. ಗುಂಪಿನ ಯಜಮಾನ, ಗುಂಪಿನ ಮುಂದಾಳು.

**गणाचल ಗಣಾಚಲ** (ಪುಂ) ಪ್ರಮಥ ಗಣಗಳಿಂದ ತುಂಬಿದ ಕೈಲಾಸಪರ್ವತ. गणभूयिष्ठोऽचलः।

**गणाधिप ಗಣಾಧಿಪ** (पुं०) 1. ಗಣಪತಿ, ವಿನಾಯಕ. 2. ಪರಶಿವ, ಪರಮೇಶ್ವರ. गणानामधिपः। **–अधिपतिः –ಅಧಿಪತಿಃ** "क्षणमभ्यपद्यत जनैर्न मृषा गगनं गणाधिपतिमूर्तिरिति" माघ० ९-२७। 3. ಗುಂಪಿನ ಯಜಮಾನ, ಗುಂಪಿನ ಮುಖಂಡ.

**गणाधीश ಗಣಾಧೀಶ, –अध्यक्ष –ಅಧ್ಯಕ್ಷ** (पुं०) "गणाधिप" ಪದದ ಅರ್ಥ. गणानामधीशः अध्यक्षो वा।

**गणान्न ಗಣಾನ್ನ** (न०) ಬಹುಜನರಿಗೆ ಮಾಡಿದ ಅನ್ನ, ಮಠ ಛತ್ರ ಮೊದಲಾದುವುಗಳಲ್ಲಿ ಅನೇಕರಿಗೆ ಮಾಡಿದ ಅನ್ನ. गणाय अन्नम्। "गणान्नं गणिकान्नं च विदुषा च जुगुप्सितम्" मनु० ४-२०९।

**गणाभ्यन्तर ಗಣಾಭ್ಯಂತರ** (वि०) 1. ಎಲ್ಲರಿಗೂ ಸಮಾನವಾದ ಮಠ ಛತ್ರಗಳಲ್ಲಿ ಸೇರಿಕೊಂಡಿರುವವನು, ಧಾರ್ಮಿಕ ಕ್ಷೇತ್ರವಲ್ಲಿ ಸೇರಿ ಜೀವಿಸುವವನು. 2. ಗುಂಪಿನ ಮಧ್ಯದಲ್ಲಿ ಸೇರಿರುವವನು. "ब्रह्मद्विट् परिवित्तिश्च गणाभ्यन्तर एव च" मनु० ३-१५४।

**गणि ಗಣಿ** (स्त्री०) ಗಣನೆ, ಎಣಿಕೆ. गण (संख्याने) "इन्" (उ० ४-११७)।

**गणिका ಗಣಿಕಾ** (स्त्री०) 1. ವೇಶ್ಯಾಂಗನೆ, ಸೂಳೆ. गणः समूहो भर्तृत्वेनास्त्यस्याः "ठन्" (५-२-११५)। "निरकासयद्रविमपेतवसुं वियदालयादपरदिग्गणिका" माघ० ९-१०। 2. ಕಾಡುಮಲ್ಲಿಗೆ. 3. ತಕ್ಕಿಲೆಗಿಡ. 4. ಹೆಣ್ಣಾನೆ. "गणिकेभ्यां यूथिकायां तर्कार्यां पण्ययोषिति" हेम०। 5. ನೆಲ್ಲಿಗಿಡದ ಒಂದು ಭೇದ.

**गणिकारिका ಗಣಿಕಾರಿಕಾ** (स्त्री०) ನೆಲ್ಲಿಗಿಡದ ಒಂದು ಭೇದ.

**गणित ಗಣಿತ** (न०) 1. ಗಣನೆ, ಎಣಿಕೆ, ಲೆಕ್ಕಾಚಾರ. गण (संख्याने) भावे "क्तः" (३-३-११४)। "पारे परार्धं गणितं यदि स्याद्गणेयनिःशेषगुणोऽपि स स्यात्" नैष० ३-४०। 2. ಲೆಕ್ಕ, ಗಣಿತಶಾಸ್ತ್ರ. 3. ಗ್ರಹಗಳ ಸ್ಥಿತಿ ಚಲನೆ ಮೊದಲಾದುವುಗಳ ಲೆಕ್ಕಾಚಾರ. (वि०) 4. ಎಣಿಸಲ್ಪಟ್ಟ. गण कर्म० "क्तः" (३-२-१०२)।

**गणितव्य ಗಣಿತವ್ಯ** (वि०) 1. ಎಣಿಸಲ್ಪಡುವ. 2. ಎಣಿಸಲು ಯೋಗ್ಯವಾದ. 3. ಎಣಿಸಲು ಶಕ್ಯವಾದ. 4. ಪರಿಗಣಿಸಲ್ಪಡುವ.

**गणिताध्याय ಗಣಿತಾಧ್ಯಾಯ** (पुं०) ಸಿದ್ಧಾಂತ ಶಿರೋಮಣಿಯ ಒಂದು ಅಧ್ಯಾಯ. ಗ್ರಹಗಳ ಚಲನವಲನಗಳನ್ನು ತಿಳಿಸುವ ಈ ಗ್ರಂಥದ ಒಂದು ಭಾಗ. गणितमधीयतेऽत्र अधि + इङ् (अध्ययने) अधि० "घञ्" (३-३-१२२)।

**गणितिन् ಗಣಿತಿನ್** (वि०) 1. ಗಣಿತಶಾಸ್ತ್ರವನ್ನು ತಿಳಿದವನು. 2. ಎಣಿಸುವವನು, ಲೆಕ್ಕಾಚಾರ ಮಾಡುವವನು. गणितमनेन "इनिः" (५-२-८८)।

**गणेय ಗಣೇಯ** (वि०) ಎಣಿಸಲು ಶಕ್ಯವಾದ. गण (संख्याने) + णिच् "अच्" (३-१-९७)। "पारे परार्धं गणितं यदि स्यात् गणेयनिःशेषगुणोऽपि स स्यात्" नैष० ३-४०।

**गणेरु ಗಣೇರು** (पुं०) 1. ಬೆಟ್ಟಕಣಗಿಲೆ ಗಿಡ. गण (संख्याने) "एरुः" बाहु०। (स्त्री०) 2. ಹೆಣ್ಣಾನೆ. 3. ವೇಶ್ಯೆ, ಸೂಳೆ. "गणेरुः कर्णिकारद्रौ करिणीवेश्ययोः स्त्रियाम्" मेदि०।

**गणेरुका ಗಣೇರುಕಾ** (स्त्री०) ತಲೆಹಿಡುಕಿ, ಕುಂಟಣಿ. गणेरुषु वेश्यासु कायति—कै (शब्दे) "कः" (३-२-४)। "अथ कुट्टनी। इज्या स्याद्रलताली च घटेदासी गणेरुका" त्रिकाण्ड०।

**गणेश ಗಣೇಶ, –ईशान –ಈಶಾನ, –ईश्वर –ಈಶ್ವರ** (पुं०) 1. ಗಣಪತಿ, ವಿನಾಯಕ. 2. ಪರಶಿವ, ಪರಮೇಶ್ವರ. गणानामीशः ईशानः ईश्वरो वा।

**गणेशखण्ड ಗಣೇಶಖಂಡ** (पुं०) ಸ್ಕಾಂದಪುರಾಣದಲ್ಲಿ ಗಣಪತಿಯ ಆವಿರ್ಭಾವ ಮುಂತಾದುವನ್ನು ವರ್ಣಿಸಿರುವ ಒಂದು ಭಾಗ.

**गण्ड ಗಂಡ** (पुं०) 1. ಕಪೋಲ, ಕೆನ್ನೆ. गडि (वदनैकदेशे) "अच्" (३-१-१३४)। "गण्डेषु स्फुटरचनाब्जपत्रवल्ली पर्याप्तं पयसि विभूषणं वधूनाम्" माघ० ८-५९। 2. ಆನೆಯ ಕಪೋಲ, ಆನೆಯ ಹಣೆ ಮತ್ತು ಕಿವಿಗಳ ಮಧ್ಯಭಾಗ. "अद्रीन्द्रकुञ्जचरकुञ्जरगण्डकाषसंक्रान्तदानपयसो वनपादपस्य" माघ० ५-४३। 3. ಗುರುತು, ಚಿಹ್ನೆ. "गण्डोज्ज्वलामुज्ज्वलनाभिचक्रया विराजमानां नवयोदरश्रिया" माघ० १२-८। 4. ಹೊಪ್ಪೆ, ಗುಳ್ಳೆ. 5. ಗಡ್ಡೆ, ಕುರು. "अयमपरो गण्डस्योपरि पिटकः संवृत्तः" मुद्रा० ५। 6. ಒಂದು ವಿಧ ವೀಥ್ಯಂಗ. "वाक्केल्यधिबले गण्डमवस्यन्दितनालिके" सा० द० ६-२५६। ಪ್ರಕೃತಾರ್ಥಕ್ಕೆ ಸಂಬಂಧಿಸಿದಂತೆ ಅರ್ಥಾಂತರದಲ್ಲಿ ಆಡುವ ಕಳವಳದ ಮಾತು. "गण्डं प्रस्तुतसम्बन्धि भिन्नार्थं सत्वरं वचः" सा० द० ६-२६०। "अध्यासितं तव चिराज्जघनस्थलस्य पर्याप्तमेव करभोरु ममोरु-

युग्मम्" (प्रविश्य) कञ्चुकी—"देव भग्नं भग्नम्" इत्यादि। ಇಲ್ಲಿ ರಥದ ಕೇತನ (ಧ್ವಜ)ವು ಭಗ್ನವಾಯಿ ತೆಂದು ಅರ್ಥಾಂತರದಲ್ಲಿ ಆಡಿದ ಕಂಚುಕಿಯ ಸಂಭ್ರಮದ ಮಾತು ಪ್ರಸ್ತುತವಾದ ಊರುಯುಗ್ಮಕ್ಕೆ ಸಂಬಂಧಿಸಿ ದುರ್ಯೋಧನನ ಊರುಭಂಗ ಸಂಬಂಧವಾದ ಅರ್ಥವನ್ನು ಕೊಡುವುದರಿಂದ "ಗಂಡ"ವೆಂಬ ವೀಥಿಯ ಒಂದು ಅಂಗ. 7. ಕುದುರೆಯ ಒಂದು ಆಭರಣ. 8. ನೊರೆ. 9. (ಜ್ಯೋತಿಷದಲ್ಲಿ) ವಿಷ್ಕಂಭ ಮೊದಲಾದ ಇಪ್ಪತ್ತೇಳು (27) ಯೋಗಗಳಲ್ಲಿ ಹತ್ತನೆಯದು. 10. ಅಶ್ವಿನೀ ಮೊದಲಾದ ನಕ್ಷತ್ರಗಳಲ್ಲಿ ಗಂಡಕಾಲ; ಅಶ್ವಿನಿ ಮಘೆ ಮತ್ತು ಮೂಲಾ ನಕ್ಷತ್ರಗಳಲ್ಲಿ ಮೊದಲು ಮೂರು ಘಳಿಗೆಗಳೂ ಆಶ್ಲೇಷೆ ಜ್ಯೇಷ್ಠೆ ಮತ್ತು ರೇವತೀ ನಕ್ಷತ್ರ ಗಳಲ್ಲಿ ಕೊನೆಯ ಮೂರು ಘಳಿಗೆಗಳೂ ಗಂಡಕಾಲ. ಈ ಗಂಡಕಾಲವು ಜ್ಯೇಷ್ಠೆ ಮತ್ತು ಮೂಲಗಳಿಗೆ ಹಗಲಿ ನಲ್ಲೂ ಆಶ್ಲೇಷೆ ಮತ್ತು ಮಘೆಗಳಿಗೆ ರಾತ್ರಿಯಲ್ಲೂ ರೇವತಿ ಮತ್ತು ಅಶ್ವಿನೀ ನಕ್ಷತ್ರಗಳಿಗೆ ಎರಡು ಸಂಧ್ಯಾಕಾಲ ಗಳಲ್ಲೂ ಇರುವುದು. ಈ ಗಂಡಕಾಲದಲ್ಲಿ ಶಿಶುವು ಹುಟ್ಟಿ ದರೆ ದೋಷ. ಸಂಧ್ಯಾಕಾಲಗಳಲ್ಲಿ ಹುಟ್ಟಿದರೆ ಶಿಶು ವಿಗೂ ರಾತ್ರಿಕಾಲದಲ್ಲಿ ಹುಟ್ಟಿದರೆ ತಾಯಿಗೂ ಹಗಲು ಹುಟ್ಟಿದರೆ ತಂದೆಗೂ ದೋಷ. "सन्ध्यारात्रिदिवाभागे गण्डयोगोद्भवः शिशुः। आत्मानं मातरं तातं विनिहन्ति यथाक्रमम्"। 11. ಖಡ್ಗಮೃಗ. 12. ವೀರ. 13. ಕತ್ತಿನ ಮೇಲಿನ ಒಂದು ಗಂಟು. "गण्डः स्यात् पुंसि खड्गिनि। ग्रहयोगप्रभेदे च वीथ्यङ्गे पिटकेऽपि च। चिह्नवीरकपोलेषु हयभूषणबुद्बुदे" मेदि०। 14. ಗರ್ವ, ಅಹಂಕಾರ. 15. ಉಪಾಯ. "गण्डो व्रणे कपोले पिटके गर्वे मृगान्तरे योगे। मूलादिदुष्टभागे हयभूषणे बुद्बुदेऽप्युपाये च" नानार्थर०।

**गण्डक ಗಂಡಕ** (पुं०) 1. ಖಡ್ಗಮೃಗ. गण्ड स्वार्थे "कः"। स्त्रियाम् जाति० "ङीष्" (४-१-६३)। **गण्डकी ಗಂಡಕೀ.** 2. ವಿಘ್ನ. 3. ಒಂದು ವಿದ್ಯೆ. 4. ಮೀನಿನ ಮರಿ. "गण्डकः शकुलार्भकः" अम०। 5. ಬೊಬ್ಬೆ, ಗುಳ್ಳೆ. "अनेकवेत्राघातनिर्मितबहुगात्रगण्डकम्" काद०। 6. ಒಂದು ಆಭರಣ, ಒಂದು ಒಡವೆ. "व्याघ्रनखपङ्क्तिमण्डिता गण्डकाभरणा च" काद०। 7. ಚಿಹ್ನೆ, ಗುರುತು. 8. ಗ್ರಂಥಿ, ಗಂಟು. (पुं० ब० व०) 9. ಪಾಂಚಾಲ ದೇಶಕ್ಕೆ ಪೂರ್ವದಲ್ಲಿರುವ ಒಂದು ದೇಶ. 10. ಆ ದೇಶದ ರಾಜರು. "ततः स गण्डकान् शूरो विदेहान् भरतर्षभः" भा० सभा० २९-४। 11. ಆ ದೇಶದ ಜನರು.

**गण्डकारी ಗಂಡಕಾರೀ** (स्त्री०) ಮುಟ್ಟಿದರೆ ಮುನಿವ ಗಿಡ.

**गण्डकी ಗಂಡಕೀ** (स्त्री०) 1. ಹೆಣ್ಣು ಖಡ್ಗಮೃಗ. 2. ನೇಪಾಳ ಮತ್ತು ಉತ್ತರ ಭಾರತದಲ್ಲಿ ಪ್ರವಹಿಸು ತ್ತಿರುವ ಒಂದು ಪ್ರಸಿದ್ಧ ನದಿ. ಈ ನದಿಯಲ್ಲಿ ನೇಪಾಳದ ಗಡಿಯೊಳಗೆ ಸಿಕ್ಕುವ ಶಿಲೆಗಳೇ ಸಾಲಗ್ರಾಮಗಳು. ಅವು ಗಳಲ್ಲಿ ಪರಮಾತ್ಮನ ಸಾನ್ನಿಧ್ಯವಿರುವುದೆಂಬ ಐತಿಹ್ಯವುಂಟು. 3. ಗಂಡಕೀನದಿಯ ಅಧಿಷ್ಠಾತೃದೇವತೆ. ಈ ದೇವಿಯು ವಿಷ್ಣುವನ್ನು ಕುರಿತು ಉಗ್ರವಾದ ತಪಸ್ಸನ್ನಾಚರಿಸಿ ವಿಷ್ಣುವು ತನ್ನ ಗರ್ಭದಲ್ಲಿ ಬಂದಿರಬೇಕೆಂಬ ವರವನ್ನು ಕೇಳಿದಳು. ಸಾಲಗ್ರಾಮ ರೂಪದಿಂದ ನದಿಯ ಗರ್ಭದಲ್ಲಿ ಇರುವುದಾಗಿ ವಿಷ್ಣುವು ವರವನ್ನಿತ್ತುದರಿಂದ ಸಾಲಗ್ರಾಮ ಗಳನ್ನು ಎಲ್ಲರೂ ಆರಾಧಿಸುತ್ತಿರುವರು. "गण्डक्यापि पुरा तप्तं वर्षाणामयुतं विधे। ततः साक्षाज्जगन्नाथो हरिर्भक्तजनप्रियः। उवाच मधुरं वाक्यं प्रीतः प्रणतवत्सलः। गण्डकि त्वां प्रसन्नोऽस्मि तपसा विस्मितोऽनघे। किं देयं तद्वदस्वाशु प्रीतोऽस्मि वरवर्णिनि। गण्डक्यपि पुरो दृष्ट्वा शङ्खचक्रगदाधरम्। प्राञ्जलिः प्रणता भूत्वा मधुरं वाक्यमब्रवीत्। यदि देव प्रसन्नोऽसि देयो मे वाञ्छितो वरः। मम गर्भगतो भूत्वा विष्णो मत्पुत्रतां व्रज। ततः प्रसन्नो भगवान् चिन्तयामास गोपते। गण्डकीमवदत् प्रीतः शृणु देवि वचो मम। सालग्रामशिलारूपी तव गर्भगतः सदा। तिष्ठामि तव पुत्रत्वे भक्तानुग्रहकारणात्। मत्सान्निध्यान्नदीनां त्वमतिश्रेष्ठा भविष्यसि। दर्शनात् स्पर्शनात् स्नानात् पानाच्चैवावगाहनात्"। ಇತ್ಯಾದಿ वराहपु०। "गण्डक्याश्चैकदेशे च सालग्रामस्थलं स्मृतम्। पाषाणं तद्भवं यत्तत् सालग्राममिति स्मृतम्" स्मृतिः।

**गण्डकीशिला ಗಂಡಕೀಶಿಲಾ** (स्त्री०) ಸಾಲಗ್ರಾಮ ಶಿಲೆ.

**गण्डकुसुम ಗಂಡಕುಸುಮ** (न०) ಆನೆಯ ಮದೋದಕ, ಆನೆಯ ಕಪೋಲದಿಂದ ಹೊರಡುವ ಮದದ ನೀರು. "उत्कटो गण्डकुसुमम्" हारा०।

**गण्डकूप ಗಂಡಕೂಪ** (पुं०) ಬೆಟ್ಟದ ತುದಿಯ ಪ್ರದೇಶ. गण्डे गण्डवदुन्नतपर्वतभगौ कूप इव। "उद्देशो गण्डकूपस्तु पर्वतस्याभिधीयते" हारा०।

**गण्डफलक ಗಂಡಫಲಕ** (न०) ಹಲಗೆಯಂತೆ ವಿಸ್ತಾರವಾದ ಕೆನ್ನೆ. गण्डः फलकमिव। "धृतमुग्धगण्डफलकैर्विबभुर्विकसद्भिरास्यकमलैः प्रमदाः" माघ० ९-४७।

**गण्डभित्ति ಗಂಡಭಿತ್ತಿ** (स्त्री०) ಗೋಡೆಯಂತೆ ವಿಸ್ತಾರವಾದ ಕೆನ್ನೆ. गण्डः भित्तिरिव। "अथ मदगुरुपक्षैर्लोकपालद्विपानामनुगतमलिवृन्दैर्गण्डभित्तीर्विहाय" रघु० १२-१०२।

**गण्डमाला ಗಂಡಮಾಲಾ** (स्त्री०) ಕತ್ತಿನಲ್ಲಿ ರಸಗ್ರಂಥಿಯು ಕಟ್ಟುವುದರಿಂದ ಆಗುವ ಉರಿತದ ಬೇನೆ, ಗಂಡಮಾಲೆಯೆಂಬ ಒಂದು ರೋಗ.

**गण्डमालिका ಗಂಡಮಾಲಿಕಾ** (स्त्री०) ಮುಟ್ಟಿದರೆ ಮುನಿವ ಗಿಡ. गण्डानां ग्रन्थीनां माला यत्र।

**गण्डमालिन् ಗಂಡಮಾಲಿನ್** (वि०) ಗಂಡಮಾಲೆಯೆಂಬ ರೋಗವುಳ್ಳವನು. गण्डमालास्यास्ति "ठन्" (५-२-११६)। "भ्रामरी गण्डमाली च श्वित्र्यथो पिशुनस्तथा" मनु० ३-१६१।

**गण्डयन्त गಂಡಯಂತ** (पुं०) ಮೇಘ, ಮೋಡ. गडि (वदनैकदेशे) "झच्" (उ० ३-१२८)।

**गण्डलेखा ಗಂಡಲೇಖಾ** (स्त्री०) ಶ್ರೇಷ್ಠವಾದ ಕಪೋಲ, ಪ್ರಶಸ್ತವಾದ ಗಂಡಸ್ಥಲ. लिख्यतेऽत्र लेखा स्थली — गण्डः लेखेव। "तदीषदार्द्रारुणगण्डलेखमुच्छ्वासिकालाञ्जनरागमक्ष्णोः" कुमा० ७-८२।

**गण्डशिला ಗಂಡಶಿಲಾ** (स्त्री०) ಬಂಡೆ, ದೊಡ್ಡ ಕಲ್ಲು. गण्डः भूमेरुन्नतप्रदेश इव शिला। "इष्टोङ्गुष्ठशिरोमात्रः क्षणाद्गण्डशिलासमः" भाग० ३-१३-३१।

**गण्डशैल ಗಂಡಶೈಲ** (पुं०) 1. ಬೆಟ್ಟದಿಂದ ಉರುಳಿ ಹೊರಕ್ಕೆ ಬಿದ್ದಿರುವ ದೊಡ್ಡ ಬಂಡೆ. शैलानां गण्ड इव। परनिपातः। "अथ गण्डशैलोऽद्रिच्युतस्थूलाश्मभालयोः" हेम०। "संप्रापे निसृतमदाम्बुभिर्गजेन्द्रैः प्रस्यन्दिप्रचलितगण्डशैलशोभा" किरा० ७-३७। 2. ಹಣೆ.

**गण्डसाह्वया ಗಂಡಸಾಹ್ವಯಾ** (स्त्री०) ಗಂಡಕೀನದಿ. "गङ्गा च शतकुम्भा च सरयूर्गण्डसाह्वया" भा० वन०।

**गण्डस्थल ಗಂಡಸ್ಥಲ** (न०) ಕಪೋಲ ಪ್ರದೇಶ, ಕೆನ್ನೆ, ಹಣೆ ಮತ್ತು ಕಿವಿಗಳ ಮಧ್ಯಭಾಗ. (स्त्री०) —स्थली —ಸ್ಥಲೀ. "चकार बाणैरसुराङ्गनानां गण्डस्थलीः प्रोषितपत्रलेखाः" रघु० ६-७२।

**गण्डाङ्ग ಗಂಡಾಂಗ** (पुं०) ಖಡ್ಗಮೃಗ. गण्ड इव अङ्गमस्य।

**गण्डान्त ಗಂಡಾಂತ** (न०) ಕೆಲವು ತಿಥಿ-ನಕ್ಷತ್ರ-ಲಗ್ನಗಳ ಸಂಧಿಕಾಲ. ಯಾತ್ರೆ ಉದ್ವಾಹ ಮೊದಲಾದುವು ಈ ಸಂಧಿ ಕಾಲದಲ್ಲಿ ನಿಷಿದ್ಧ.

**ತಿಥಿಗಂಡಾಂತ:** ಪೂರ್ಣ (ಪಂಚಮೀ, ದಶಮೀ, ಪೂರ್ಣಿಮಾ) ತಿಥಿಗಳ ಕೊನೆಯ ಒಂದು ಘಳಿಗೆಯೂ ನಂದ (ಪ್ರತಿಪತ್, ಷಷ್ಠೀ, ಏಕಾದಶೀ) ತಿಥಿಗಳ ಮೊದಲನೆಯ ಒಂದು ಘಳಿಗೆಯೂ ಅಂದರೆ ಪಂಚಮೀ-ಷಷ್ಠಿಗಳ ದಶಮೀ-ಏಕಾದಶಿಗಳ ಮತ್ತು ಪೂರ್ಣಿಮಾ-ಪ್ರತಿಪತ್ತುಗಳ ಅಂತರಾಳದ ಎರಡೆರಡು ಘಳಿಗೆಗಳು **ತಿಥಿಗಂಡಾಂತಗಳು.**

**ನಕ್ಷತ್ರಗಂಡಾಂತ:** ರೇವತೀ ಆಶ್ಲೇಷಾ ಜ್ಯೇಷ್ಠಾ ನಕ್ಷತ್ರಗಳ ಕೊನೆಯಲ್ಲಿ ಎರಡು ಘಳಿಗೆಗಳೂ ಅಶ್ವಿನೀ ಮಖಾ ಮೂಲಾ ನಕ್ಷತ್ರಗಳ ಮೊದಲನೆಯ ಎರಡು ಘಳಿಗೆಗಳೂ ಅಂದರೆ ರೇವತೀ-ಅಶ್ವಿನೀ ಆಶ್ಲೇಷಾ-ಮಖಾ ಮತ್ತು ಜ್ಯೇಷ್ಠಾ-ಮೂಲಾ ನಕ್ಷತ್ರಗಳ ಅಂತರಾಳದ ನಾಲ್ಕು ನಾಲ್ಕು ಘಳಿಗೆಗಳು **ನಕ್ಷತ್ರಗಂಡಾಂತಗಳು.**

**ಲಗ್ನಗಂಡಾಂತ:** ಕರ್ಕಾಟಕ ವೃಶ್ಚಿಕ ಮೀನಗಳ ಕೊನೆಯ ಅರ್ಧ ಘಳಿಗೆ ಸಿಂಹ ಧನುಸ್ಸು ಮೇಷ ಲಗ್ನಗಳ ಮೊದಲನೆಯ ಅರ್ಧ ಘಳಿಗೆ ಅಂದರೆ ಕರ್ಕಾಟಕ-ಸಿಂಹ ವೃಶ್ಚಿಕ-ಧನುಸ್ಸು ಮತ್ತು ಮೀನ-ಮೇಷ ಲಗ್ನಗಳ ಅಂತರಾಳದ ಒಂದೊಂದು ಘಳಿಗೆಯೂ **ಲಗ್ನಗಂಡಾಂತ.** "ज्येष्ठापौष्णभसार्पभान्त्यघटिकायुग्मं च मूलाश्विनी पित्र्यादौ घटिकाद्वयं निगदितं तद्भस्य गण्डान्तकम्। कर्काल्यण्डजभान्ततोऽर्धघटिका सिंहाश्वमेषादिगा पूर्णान्ते घटिकात्मकं त्वशुभदं नन्दातिथेश्चादिमम्" मु० चि०।

**गण्डारि ಗಂಡಾರಿ** (पुं०) ಕೋವಿದಾರವೃಕ್ಷ, ಕೆಂಗಾಂಚಾಳದ ಗಿಡ. गण्डस्य गण्डरोगस्यारिः।

**गण्डाली ಗಂಡಾಲೀ** (स्त्री०) ಬಿಳಿಗರಿಕೆ.

**गण्डि ಗಂಡಿ** (पुं०) ಬುಡದಿಂದ ರೆಂಬೆಗಳವರೆಗಿನ ವೃಕ್ಷದ ಮಧ್ಯದ ದೂಲ. गडि (वदनैकदेशे) "इन्" (उ०४-११७)।

**गण्डिक ಗಂಡಿಕ** (पुं०) ಬೆಣಚುಕಲ್ಲು, ನೊರೆಯಂತಿರುವ ಸಣ್ಣ ಕಲ್ಲುಗಳು. गण्डः बुद्बुद इवाकारोऽस्त्यस्य "ठन्" (५-२-११५)।

**गण्डीर ಗಂಡೀರ** (पुं०) ಮಂಗರವಳ್ಳಿ. गडि (वदनैकदेशे) "ईरन्" बाहु०। "गण्डीरस्तु समष्ठिला" अम०।

**गण्डु(ण्डू) ಗಂಡು(ಡೂ)** (पुंस्त्री०) 1. ತಲೆದಿಂಬು. गडि (वदनैकदेशे) "उः" बाहु० "ऊङ्" (वा० ४-१-६६) वा। 2. ಗ್ರಂಥಿ, ಗಂಟು. 3. ಎಲುಬು, ಮೂಳೆ.

**गण्डुल ಗಂಡುಲ** (वि०) ಗ್ರಂಥಿಯುಳ್ಳ, ಗಂಟುಳ್ಳ. गण्डुरस्यास्ति वा "लच्" (५-२-९७)। पक्षे "मतुप्" (५-२-९४)। **गण्डुमान् ಗಂಡುಮಾನ್.**

**गण्डूपद ಗಂಡೂಪದ** (पुं०) ಕೆಸರಿನಲ್ಲಿರುವ ಎರುಬು ಹುಳು. गुण्डवो ग्रन्थयः पदान्यस्य। स्त्रियाम् "ङीष्" (४-१-६३)। **-पदी -ಪದೀ.** "गण्डूपदः किञ्चुलुको निहाका गोधिका समे"। "शिली गण्डूपदी" अम०।

**गण्डूष ಗಂಡೂಷ** (पुं०) 1. ಬಾಯಿಯೊಳಗಿನ ನೀರು, ಬಾಯಿ ತುಂಬ ಇರುವ ನೀರು. गडि (वदनैकदेशे) "ऊषन्" (उ० ४-७८)। "गण्डूषमुज्झितवता पयसः सरोषं नागेन लब्धपरवारणमारुतेन" माघ० ५-३६। 2. ಬಾಯಿ ಮುಕ್ಕಳಿಸಲು ಕೈತುಂಬ ಇರುವ ನೀರು. ಬೆರಳುಗಳನ್ನು ಬಗ್ಗಿಸಿ ಮಡಿಸಿದ ಹಸ್ತದ ಕುಳಿಯಲ್ಲಿ (ಸೆರೆಯಲ್ಲಿ) ಇರುವ ನೀರು. 3. ಆನೆಯ ಸೊಂಡಿಲಿನ ತುದಿ. 4. ಬಾಯಿ ಮುಕ್ಕಳಿಸುವುದು. "गण्डूषो मुखपूर्तौ स्यात् गजहस्ताङ्गुलावपि। प्रसृतिप्रमितेऽपि स्यात्" हेम०।

**गण्डोपधान ಗಂಡೋಪಧಾನ** (न०) ತಲೆದಿಂಬು. ಕಪೋಲವನ್ನು ಇಟ್ಟುಕೊಂಡು ಮಲಗಲು ಹಿತವಾಗಿರುವ ದಿಂಬು. गण्डः उपधीयतेऽत्र — उप + धाञ् (धारणे) अधि० "ल्युट्" (३-३-११७)। "मृदुगण्डोपधानानि शयनानि सुखानि च" सुश्रुत०।

**गण्डोल ಗಂಡೋಲ** (पुं०) 1. ಗ್ರಾಸ, ಕಬಳ, ಬಾಯಿತುಂಬ ಇರುವ ವಸ್ತು. गडि (वदनैकदेशे) "कोलच्" (उ० १-६६)। 2. ಹಸಿಬೆಲ್ಲ. ಅಪಕ್ವವಾದ ಬೆಲ್ಲ. "गडोलगण्डोलौ गुडकपर्यायौ" सि० कौ०।

**गण्य ಗಣ್ಯ** (वि०) 1. ಎಣಿಸಲ್ಪಡುವ. 2. ಎಣಿಸಲು ಯೋಗ್ಯವಾದ. 3. ಎಣಿಸಲು ಶಕ್ಯವಾದ. 4. ಗೌರವಿಸಲ್ಪಡುವವನು. गण (संख्याने) + णिच् "यत्" (३-१-९७)। 5. ಗಣನೆಗೆ ತೆಗೆದುಕೊಳ್ಳಲ್ಪಡುವ, ಭಾವಿಸಲ್ಪಡುವ. "आशीविषेण रदनच्छददंशदानमेतेन ते पुनरनर्थतया न गण्यम्" नैष० ११-२०। 6. ಯೋಗ್ಯಸ್ಥಾನವನ್ನು ಪಡೆದ, ಗುಂಪಿನಲ್ಲಿ ಮಾನ್ಯತೆ ಪಡೆದ, ಯೋಗ್ಯರ ಗುಂಪಿನಲ್ಲಿ ಸೇರಿದ. गणं लब्धा—गण "यत्" (४-४-८४)। 7. ಗಣದಲ್ಲಿರುವ, ಗುಂಪಿನಲ್ಲಿರುವ. गणे भवम् — गण "यत्" (४-३-५४)।

**गत ಗತ** (न०) 1. ಗಮನ, ನಡಗೆ. गम्लृ (गतौ) भावे "क्तः" (३-३-११४)। "गतं तिरश्चीनमनूरुसारथेः प्रसिद्धमूर्ध्वज्वलनं हविर्भुजः" माघ० १-२। "गतमलसं परिपाण्डुता विषादः" किरा० १०-५९। (वि०) 2. ತಲುಪಿರುವ, ಸೇರಿರುವ. गम्लृ कर्त० "क्तः" (३-४-७२)। 3. ಅದೃಶ್ಯವಾದ, ನಾಶವಾದ. "संविशेत्तु यथाकालमुत्तिष्ठेच्च गतक्लमः" मनु० ७-२२५। 4. ಪ್ರಾಪ್ತವಾದ, ಹೊಂದಿರುವ. "गतेऽतिभूमिं प्रणये प्रयुक्तानबुद्धिपूर्वं परिलुप्तसंज्ञः" भट्टि० ११-२९। 5. ಹೊರಟಿರುವ, ಸರಿದಿರುವ, ಮುಂದಕ್ಕೆ ಚಲಿಸಿರುವ. "गतया पुरः प्रतिगवाक्षमुखं दधती रतेन भृशमुत्सुकताम्" माघ० ९-२। 6. ಅತೀತವಾದ, ಕಳೆದುಹೋದ. "पञ्चरात्रे पञ्चरात्रे पक्षे पक्षेऽथवा गते। कुर्वीत चैषां प्रत्यक्षमर्घसंस्थापनं नृपः" मनु० ८-४०२। 7. ಕೀರಿಹೋದ, ಮೃತಿಹೊಂದಿದ. "गत एव न ते निवर्तते स सखा दीप इवानिलाहतः" कुमा० ४-३०। 8. ಹೊರಟುಹೋದ, ಪ್ರಯಾಣ ಮಾಡಿದ. "गते तस्मिन् गृहीतार्थे रामः सुग्रीवराक्षसौ" भट्टि० २१-१८। 9. ತಿಳಿಯಲ್ಪಟ್ಟ. 10. ಹೊಂದಲ್ಪಟ್ಟ. गम्लृ कर्म० "क्तः" (३-२-१०२)।

**गतकाल ಗತಕಾಲ** (पुं०) ಹಿಂದಿನ ಕಾಲ, ಕಳೆದುಹೋದ ಕಾಲ. गतः कालः।

**गतक्लम ಗತಕ್ಲಮ** (वि०) ನಾಶವಾದ ಆಯಾಸವುಳ್ಳ, ನಿವಾರಣೆಯಾದ ಶ್ರಮವುಳ್ಳ, ವಿಶ್ರಾಂತಿಪಡೆದ. ಆಯಾಸವನ್ನು ಪರಿಹರಿಸಿಕೊಂಡ. गतः क्लमः यस्य। "संविशेत्तु यथाकालमुत्तिष्ठेच्च गतक्लमः" मनु० ७-२२५।

**गतचेतन ಗತಚೇತನ** (वि०) ಪ್ರಜ್ಞೆತಪ್ಪಿದ, ಜ್ಞಾನವಿಲ್ಲದ. गता चेतना यस्य। **-चेतस् -ಚೇತಸ್.**

**गतत्रप ಗತತ್ರಪ** (वि०) ಲಜ್ಜೆಯಿಲ್ಲದ. ನಾಚಿಕೆಯನ್ನು ಬಿಟ್ಟಿರುವ. गता त्रपा यस्य।

**गतदिन ಗತದಿನ, -दिवस -ದಿವಸ** (पुं०) ಕಳೆದ ದಿನ, ಹಿಂದಿನ ದಿನ, ನೆನ್ನೆಯ ದಿವಸ.

**गतनासिक ಗತನಾಸಿಕ** (वि०) ಮೂಗಿಲ್ಲದವನು. ಮೂಗನ್ನು ಕಳೆದುಕೊಂಡವನು. गता नासिका यस्य।

**गतपाप ಗತಪಾಪ** (वि०) ಪಾಪವನ್ನು ಕಳೆದುಕೊಂಡವನು. गतं पापं यस्य।

**गतपार ಗತಪಾರ** (वि०) 1. ಕೊನೆಯನ್ನು ಮುಟ್ಟಿದವನು. 2. ದಡವನ್ನು ಮುಟ್ಟಿದವನು. गतं पारं येन।

**गतप्रत्यागत ಗತಪ್ರತ್ಯಾಗತ** (वि०) ಹೋಗಿ ಮತ್ತೆ ಬಂದವನು. ಹೊರಟುಹೋದ ನಂತರ ಪುನಃ ಹಿಂದಕ್ಕೆ ಬಂದವನು. पूर्वं गतः पश्चादागतः। "गतप्रत्यागते चैव स हि कष्टतरो रिपुः" मनु० ७-१८६।

**गतभर्तृका ಗತಭರ್ತೃಕಾ** (स्त्री०) ಪತಿಯಿಲ್ಲದವಳು. ಗಂಡನನ್ನು ಕಳೆದುಕೊಂಡವಳು. गतो भर्ता यस्याः।

**गतभी ಗತಭೀ** (वि०) ಭಯವಿಲ್ಲದ. ಹೆದರಿಕೆಯಿಲ್ಲದ. गता भीर्यस्य।

**गतरस ಗತರಸ** (वि०) 1. ರಸವನ್ನು ಕಳೆದುಕೊಂಡಿರುವ. ಶುಷ್ಕವಾದ. ಒಣಗಿದ. 2. ಹಳೆಯದಾದ. गतो रसो यस्य। "यातयामं गतरसम्"।

**गतवत् ಗತವತ್** (वि०) 1. ಹೊಂದಿದವನು. ಸೇರಿದವನು. ತಲುಪಿದವನು. गम्लृ (गतौ) "क्तवतु:" (३-२-१०२)। "इत्युक्त्वा सपदि हितं प्रियं प्रियार्हे धाम स्वं गतवति राजराजभृत्ये" किरा० ५-५१। 2. ಪಡೆದವನು. ಹೊಂದಿದವನು. 3. ಹೊರಟುಹೋದವನು. ತೆರಳಿದವನು.

**गतव्यथ ಗತವ್ಯಥ** (वि०) ದುಃಖವಿಲ್ಲದ. ದುಃಖವನ್ನು ಕಳೆದುಕೊಂಡ. गता व्यथा यस्य।

**गतश्री ಗತಶ್ರೀ** (वि०) 1. ಐಶ್ವರ್ಯವನ್ನು ಸಂಪಾದಿಸಿದ. ಐಶ್ವರ್ಯವನ್ನು ಹೊಂದಿರುವ. गता प्राप्ता श्रीर्यस्य। (वि०) 2. ಐಶ್ವರ್ಯವನ್ನು ಕಳೆದುಕೊಂಡ. गता नष्टा श्रीः यस्य। "गतश्रीर्वनगोचरः" रामा०।

**गतसङ्ग ಗತಸಂಗ** (वि०) ವೀತರಾಗ. ವಿರಕ್ತ, ಸಂಬಂಧವನ್ನು ಬಿಟ್ಟಿರುವ. गतः सङ्गो यस्य।

**गतस्पृह ಗತಸ್ಪೃಹ** (वि०) ಆಸೆಯನ್ನು ತೊರೆದಿರುವ. ಅಪೇಕ್ಷೆಯಿಲ್ಲದ. गता स्पृहा यस्य। "गतस्पृहोऽप्यागमनप्रयोजनं वदेति वक्तुं व्यवसीयते यया" माघ० १-१०।

**गतस्मय ಗತಸ್ಮಯ** (वि०) 1. ಅಹಂಕಾರವಿಲ್ಲದ. गतः स्मयोऽहंकारो यस्य। "स सन्ततं दर्शयते गतस्मयः कृताधिपत्यामिव साधु बन्धुताम्" किरा० १-१०। 2. ಆಶ್ಚರ್ಯವಿಲ್ಲದ. गतः स्मयो विस्मयो यस्य।

**गताक्ष ಗತಾಕ್ಷ** (वि०) ಕಣ್ಣುಗಳಿಲ್ಲದವನು, ಅಂಧ. ಕುರುಡ. गतमक्षि यस्य "षच्" (५-४-११३)। स्त्रियाम् "ङीप्" (४-१-४१)। **गताक्षी ಗತಾಕ್ಷೀ.**

**गतागत ಗತಾಗತ** (न०) 1. ಹೋಗುವುದು ಮತ್ತು ಬರುವುದು. गतं चागतं चानयोः समाहारः। "गतागतैर्हंसकुलान्यमूनि च्छायापथं सञ्जनयन्त्यपूर्वम्" याद० १८-३२। 2. ಈ ದೇಹವನ್ನು ಬಿಟ್ಟು ಸ್ವರ್ಗಾದಿ ಲೋಕಗಳನ್ನು ಹೊಂದುವುದು ಪುನಃ ಭೂಲೋಕಕ್ಕೆ ಬರುವುದು. "एवं त्रयीधर्ममनुप्रपन्ना गतागतं कामकामा लभन्ते" गीता ९-२१। (वि०) 3. ಹೋಗಿರುವ ಮತ್ತು ಬಂದಿರುವ, ಹೋಗಿ ಮತ್ತೆ ಬಂದಿರುವ. गतश्चासावागतश्च।

**गतागति ಗತಾಗತಿ** (स्त्री०) 1. ಹೋಗುವುದು ಮತ್ತೆ ಬರುವುದು. गतं चागतिश्च। 2. ಸಾಯುವುದು ಮತ್ತೆ ಹುಟ್ಟುವುದು.

**गताध्वन् ಗತಾಧ್ವನ್** (वि०) 1. ದಾಟಲ್ಪಟ್ಟ ದಾರಿಯುಳ್ಳ, ದಾರಿಯನ್ನು ದಾಟಿರುವ. गतोऽध्वा येन। "बलैरध्युषिता स्तस्य विजिगीषोर्गताध्वनः" रघु० ४-४६। 2. ತತ್ತ್ವಜ್ಞಾನಿ, ತತ್ತ್ವವನ್ನು ತಿಳಿದವನು. "गताध्वा छिन्नसंशयः" भा० शान्ति०। (स्त्री०) 3. ಚತುರ್ದಶಿಯೊಡನೆ ಕೂಡಿದ ಅಮಾವಾಸ್ಯೆ.

**गतानुगत ಗತಾನುಗತ** (वि०) 1. ಗಮನವನ್ನು ಅನುಸರಿಸಿ ಗಮನ. ಹೋಗುವುದನ್ನು ಅನುಸರಿಸಿ ಹೋಗುವುದು. गतस्यानुगतम्। 2. ಹೋಗುವವನನ್ನು ಅನುಸರಿಸಿ ಹೋಗುವುದು, ಒಬ್ಬ ಮಾಡಿದಂತೆ ತಾನೂ ಮಾಡುವುದು.

**गतानुगतिक ಗತಾನುಗತಿಕ** (वि०) 1. ಹೋಗುವವನನ್ನು ಅನುಸರಿಸಿ ಹೋಗುವ. गतानुगतमस्यास्ति "ठन्" (५-२-११५)। 2. ಒಬ್ಬನು ನಡೆದ ದಾರಿಯಲ್ಲಿ ನಡೆಯುವ, ಒಳ್ಳೆಯದೋ ಕೆಟ್ಟದ್ದೋ ಒಬ್ಬ ಮಾಡಿದಂತೆ ತಾನೂ ಮಾಡುವವನು, ಅಂಧಪರಂಪರೆಯಲ್ಲಿ ನಡೆಯುವವನು. ಇದು ಲೋಕದ ಸ್ವಭಾವ. ಸಾಧುತ್ವಾಸಾಧುತ್ವ-ಕರ್ತವ್ಯಾಕರ್ತವ್ಯಜ್ಞಾನವು ಜನರಿಗಿರುವುದಿಲ್ಲ. "गतानुगतिको लोको न लोकः पारमार्थिकः" पञ्चतं०।

**गतान्त ಗತಾಂತ** (वि०) 1. ಕೊನೆಯನ್ನು ಮುಟ್ಟಿದ, ಕಾರ್ಯದ ಸಮಾಪ್ತಿಯನ್ನು ಕಂಡ. गतोऽन्तः कार्यस्य चरमसीमा येन। 2. ಮುಮೂರ್ಷು, ಅವಸಾನಕಾಲವನ್ನು ಹೊಂದಿದ. गतोऽन्तोऽवसानकालो येन।

**गतायुस् ಗತಾಯುಸ್** (वि०) ಕಳೆದುಹೋದ ಆಯುಸ್ಸುಳ್ಳ, ಜೀವಿತಕಾಲವು ಕಳೆಯುತ್ತ ಬಂದಿರುವ. गतं गतप्रायमायुर्जीवितकालो यस्य।

**गतार्तवा ಗತಾರ್ತವಾ** (स्त्री०) 1. ಋತುಕಾಲವು ನಿಂತುಹೋಗಿರುವ ಹೆಂಗಸು, ಮುಟ್ಟು ನಿಂತಿರುವ ಹೆಂಗಸು, ಸುಮಾರು ಐವತ್ತು ವರ್ಷಗಳ ವಯಸ್ಸು ಕಳೆದಿರುವ ಹೆಂಗಸು. गतमार्तवं यस्याः। "द्वादशाद्वत्सरादूर्ध्वमापञ्चाशत्समं स्त्रियः। मासि मासि भगद्वारा प्रकृत्यैवार्तवं स्रवेत्" भावप्र०। 2. ರೋಗದಿಂದ ಮಧ್ಯಕಾಲದಲ್ಲಿ ಮುಟ್ಟು ನಿಂತಿರುವ ಹೆಂಗಸು, ಬಂಜೆ.

**गतार्थ ಗತಾರ್ಥ** (वि०) 1. ತಿಳಿಯಲ್ಪಟ್ಟ ಅರ್ಥವುಳ್ಳ, ಅರ್ಥವಾಗಿರುವ. गतः अवगतोऽर्थो यस्य। 2. ಚರಿತಾರ್ಥವಾದ, ಒಂದರಿಂದಲೇ ಮತ್ತೊಂದು ವಿಷಯವನ್ನು

ಹೇಳಿದಂತೆ ಆಗಿರುವ, ಇನ್ನೊಂದರಿಂದ ಸಿದ್ಧವಾದ. 3. ಪ್ರಯೋಜನವಿಲ್ಲದ, ಪ್ರಯೋಜನವನ್ನು ಕಳೆದುಕೊಂಡ. "गतार्थं षड्विधं बलम्" याद० २२-३१।

**गतासु ಗತಾಸು** (वि०) ಪ್ರಾಣವು ಹೋಗಿರುವ, ಮೃತಿ ಹೊಂದಿದ. गता: असव: यस्य। "गतासुरन्तरा दन्ती वरण्डक इवाभवत्" माघ० १९-६५।

**गति ಗತಿ** (स्त्री०) 1. ಗಮನ, ನಡಗೆ, ಸಂಚಾರ. गम्लृ (गतौ) "क्तिन्" (३-३-९४)। "मणौ वज्रसमुत्कीर्णे सूत्रस्येवास्ति मे गति:" रघु० १-४। 2. ವಸ್ತು, ವಿಷಯ. "तप: किलेदं तदवाप्तिसाधनं मनोरथानामगतिर्न विद्यते" कुमा० ५-६४। 3. ದಶೆ, ಅವಸ್ಥೆ, ಸ್ಥಿತಿ. "शरार्थमेष्यत्यथ लप्स्यसे गतिं शिरोमणिं दृष्टिविषाज्जिघृक्षत:" किरा० १४-२५। 4. ಉಪಪತ್ತಿ, ಉಪಾಯ, ಕಾರ್ಯಸಾಧಿಸುವ ಯುಕ್ತಿ. "अपक्रमणानुपेक्षणे द्वयी गति:" मुद्रा० ३। 5. ಸ್ಥಾನ. "गुरुक्रियारम्भफलैरलंकृतं गतिं प्रतापस्य जगत्प्रमाथिन:" किरा० १४-४२। 6. ಸರಣಿ, ಪದ್ಧತಿ, ಮಾರ್ಗ. 7. ಆಧಾರ, ಆಶ್ರಯ, ರಕ್ಷಣ ಸ್ಥಾನ. "आत्मैव ह्यात्मन: साक्षी गतिरात्मा तथात्मन:। मावमंस्था: स्वमात्मानं नृणां साक्षिणमुत्तमम्" मनु० ८-८४। 8. ಹೋಗಬೇಕಾದ ಸ್ಥಾನ, ಸೇರಬೇಕಾದ ಜಾಗ. "उपागमे दुश्चरिता इवापदां गतिं न निश्चेतुमलं शिलीमुखा:" किरा० ४-३५। 9. ಪ್ರಮಾಣ, ನಿರ್ಣಯಮಾಡುವ ರುಜುವಾತು (ಋಜುಮಾತು, ಪ್ರಾಮಾಣಿಕ ವಚನ), ಗುರುತು. "कृपेति चेदस्तु मृग: क्षत: क्षणादनेन पूर्वं न मयेति का गति:" किरा० १४-१५। 10. ಸ್ವರೂಪ, ವಸ್ತುಸ್ಥಿತಿ, ನಿಜಸ್ಥಿತಿ. "चरतस्तपस्तव वनेषु सहा न वयं निरूपयितुमस्य गतिम्" किरा० ६-३६। 11. ಪರಿಣಾಮ, ಕೊನೆ, ಅವಸಾನ. 12. ಯಾತ್ರೆ. 13. ರಕ್ತ ಮೊದಲಾದುವುಗಳ ಸುರಿತ, ದ್ರವವಸ್ತುವು ಪ್ರವಹಿಸುವುದು. 14. ಜ್ಞಾನ, ತಿಳಿವಳಿಕೆ. 15. ಕರ್ದಮನ ಕನ್ಯೆಯರಲ್ಲಿ ಒಬ್ಬಳು, ಪುಲಹ ಋಷಿಯ ಪತ್ನಿ. "पुलहस्य गतिर्भार्या त्रीनसूत सती सुतान्" भाग० ४-१-३८। 16. ನಾಡಿಯ ಹುಣ್ಣು. "गतिर्मार्गे दशायां च ज्ञाने यात्राभ्युपाययो:। नाडीव्रणसरण्यां च" विश्व०। 17. (ವ್ಯಾಕರಣದಲ್ಲಿ) ಗತಿಸಂಜ್ಞೆಯುಳ್ಳ ಶಬ್ದಗಳು.

**ಈ ಮುಂದಿನ ಸೂತ್ರಗಳಲ್ಲಿ ಉಕ್ತವಾದ ಶಬ್ದಗಳು ಆಯಾ ಅರ್ಥಗಳಲ್ಲಿ ಗತಿಸಂಜ್ಞೆಯನ್ನು ಹೊಂದುವುವು.**

"प्रादय:" (१-४-५८), "उपसर्गा: क्रियायोगे" (१-४-५९), "गतिश्च" (१-४-६०), "ऊर्यादिच्विडाचश्च" (१-४-६१), "अनुकरणं चानितिपरम्" (१-४-६२), "आदरानादरयो: सदसती" (१-४-६३), "भूषणेऽलम्" (१-४-६४), "अन्तरपरिग्रहे" (१-४-६५), "कणे मनसी श्रद्धाप्रतीघाते" (१-४-६६), "पुरोऽव्ययम्" (१-४-६७), "अस्तं च" (१-४-६८), "अच्छ गत्यर्थवदेषु" (१-४-६९), "अदोऽनुपदेशे" (१-४-७०), "तिरोऽन्तर्धौ" (१-४-७१), "विभाषा कृञि" (१-४-७२), "उपाजेऽन्वाजे" (१-४-७३), "साक्षात्प्रभृतीनि च" (१-४-७४), "अनत्याधान उरसिमनसी" (१-४-७५), "मध्ये पदे निवचने च" (१-४-७६), "नित्यं हस्ते पाणावुपयमने" (१-४-७७), "प्राध्वं बन्धने" (१-४-७८) ಮತ್ತು "जीविकोपनिषदावौपम्ये" (१-४-७९) ಈ ಸೂತ್ರಗಳಲ್ಲಿ ಉಕ್ತವಾಗಿರುವ ಶಬ್ದಗಳು ಕ್ರಿಯಾಯೋಗದಿಂದ ಆಯಾ ಅರ್ಥಗಳಲ್ಲಿ ಗತಿಸಂಜ್ಞೆಯನ್ನು ಹೊಂದಿ "कुगतिप्रादय:" (२-२-१८) ಎಂಬ ಸೂತ್ರದಿಂದ ಅವುಗಳಿಗೆ ಗತಿಸಮಾಸ ಬರುವುದು.

**गतिभङ्ग ಗತಿಭಂಗ** (पुं०) ಹೊರಡಲು ಅಡ್ಡಿ, ಸಂಚಾರಕ್ಕೆ ತಡೆ. गतेर्भङ्ग:। "शकुन्तला—(गतिभङ्गं रूपयित्वा) को नु खलु निवसने मे सज्जते" शाकु० ४।

**गतिमत् ಗತಿಮತ್** (वि०) 1. ಚಲನೆಯುಳ್ಳ, ಸಂಚಾರವುಳ್ಳ. गतिरस्यास्ति "मतुप्" (५-४-९४)। स्त्रियाम् "ङीप्" (४-१-६)। **–मती –ಮತೀ.** 2. ನಳಿಕೆ, ಕೊಳವೆ.

**गतिला ಗತಿಲಾ** (स्त्री०) 1. ನದಿ, ಹೊಳೆ. 2. ವೇತ್ರಲತೆ, ಬೆತ್ತದ ಗಿಡ. गम्लृ (गतौ) "इलच्" (उ० १-५७)।

**गतिसत्तम ಗತಿಸತ್ತಮ** (पुं०) ಪರಮಾತ್ಮ. गति: प्राप्यस्थानम्, गतिश्चासौ सत्तमश्च। "आदित्यो ज्योतिरादित्य: सहिष्णुर्गतिसत्तम:" वि० स०।

**गत्वर ಗತ್ವರ** (वि०) 1. ಗಮನಶೀಲ, ಸಂಚರಿಸುವ ಸ್ವಭಾವದ. गम्लृ (गतौ) "क्वरप्" (३-२-१६४)। "विदुरो जित्वर: प्राप लक्ष्मणो गत्वरान् कपीन्" भट्टि० ७-२२। 2. ಅಸ್ಥಿರವಾದ, ಶಾಶ್ವತವಲ್ಲದ, ಕ್ಷಣಿಕವಾದ. "अभिमानधनस्य गत्वरैरसुभि: स्थास्नु यशश्चिचीषत:" किरा० २-१९। स्त्रियाम् "ङीप्" (४-१-१५)। **गत्वरी ಗತ್ವರೀ.**

**गत्वा ಗತ್ವಾ** (अव्य०) 1. ಹೋಗಿ, ನಡೆದು ಹೋಗಿ. 2. ಹೊಂದಿ, ತಲುಪಿ, ಸೇರಿ. गम्लृ (गतौ) "क्त्वा"

(३-४-२१)। "गत्वा नूनं वैबुधं सद्म रम्यं मूर्च्छाभाजामाजगामान्तरात्मा। भूयो दृष्टप्रत्ययाः प्राप्तसंज्ञाः साधीयस्ते यद्रणायाद्रियन्ते" माघ० १८-६३।

**गद – व्यक्तायां वाचि** (भ्वा० पर० सक० से०)। गदति। जगाद। गदिता। गदिष्यति। गदतु। अगदत्। गदेत्। अगादीत्, अगदीत्। अगदिष्यत्। ಚೆನ್ನಾಗಿ ಮಾತನಾಡು, ಸ್ಪಷ್ಟವಾಗಿ ಮಾತನಾಡು. "तथ्यामुतथ्यानुजवज्जगादाग्रे गदाग्रजम्" माघ० २-६९।

**कर्मणि:**—गद्यते। जगदे। गदिता। गदिष्यते। गद्यताम्। अगद्यत। गद्येत। ಇತ್ಯಾದಿ.

**णिचि:**—गादयति, –ते। गादयां चकार, –चक्रे, –बभूव, –आस। गादयिता। गादयिष्यति, –ते। गादयतु, –ताम्। ಇತ್ಯಾದಿ.

**सनि:**—जिगदिषति। जिगदिषां चकार, –बभूव, –आस। जिगदिषिता। जिगदिषिष्यति। जिगदिषतु। ಇತ್ಯಾದಿ.

**कृत्सु:**—गदितव्यम्। गदनीयम्। गद्यम्। उपसर्गे तु प्रगाद्यः। गदितः। गदितवान्। गदन्, गदन्ती। गदितुम्। गदितम्। गदनम्। गदित्वा। निगद्य।

**ಈ ಧಾತುವಿಗೆ ಉಪಸರ್ಗಗಳ ಯೋಗದಿಂದ ಉಂಟಾಗುವ ಅರ್ಥಭೇದಗಳು:**

**(1) नि+गद** = निगदति। निजगाद। न्यगादीत्। ಚೆನ್ನಾಗಿ ಹೇಳು, ಸಂಪೂರ್ಣವಾಗಿ ಹೇಳು. "पौरा निवर्तध्वमिति न्यगादीत् तातस्य शोकापनुदा भवेत" भट्टि० ३-१५।

**(2) प्रति+गद** = प्रतिगदति। प्रतिजगाद। ಪ್ರತಿ ಹೇಳು, ಉತ್ತರಕೊಡು. "आभिर्गाथाभिरव्यग्रः प्रश्नं प्रतिजगाद ह" भा० अनु०।

**(3) वि+गद** = विगदति। व्यगादीत्। ವಿರುದ್ಧವಾಗಿ ಮಾತನಾಡು. "न हि निम्बात् क्षरेत् क्षौद्रं लोके विगदितं वचः" रामा०।

**गद ಗದ** (पुं०) 1. ರೋಹಿಣೀಗರ್ಭದಲ್ಲಿ ಹುಟ್ಟಿದ ವಸುದೇವನ ಒಬ್ಬ ಮಗ, ಬಲರಾಮನ ಮತ್ತು ಶ್ರೀಕೃಷ್ಣನ ತಮ್ಮ. "बलं गदं सारणं च दुर्मदं विपुलं ध्रुवम्। वसुदेवस्तु रोहिण्यां कृतादीनुदपादयत्" भाग० ९-२४-४६। 2. ರೋಗ, ವ್ಯಾಧಿ. गदति – गद (व्यक्तायां वाचि) "अच्" (३-१-१३४)। "असाध्यं कुरुते कोपं प्राप्ते काले गदो यथा" माघ० २-८४। (स्त्री०) **–दा –ದಾ.** ಒಂದು ಆಯುಧ. "गदो भ्रातरि विष्णोः स्यादामये नाऽऽयुधे गदा" मेदि०।

**गदगद ಗದಗದ** (न०) ಗದ್ಗದ ವಚನ. "वक्त्रजेषु कण्ठोष्ठतालूनामन्यतमे गदगदवाक्यता" सुश्रुत०।

**गदत् ಗದತ್** (वि०) ಚೆನ್ನಾಗಿ ಮಾತನಾಡುತ್ತಿರುವ, ಸ್ಪಷ್ಟವಾಗಿ ಹೇಳುತ್ತಿರುವ. गद (व्यक्तायां वाचि) "शतृ" (३-२-१२४)। स्त्रियाम् "ङीप्" (४-१-६)। **गदन्ती ಗದಂತೀ.**

**गदन ಗದನ** (न०) ಮಾತನಾಡುವುದು, ಹೇಳುವುದು. गद (व्यक्तायां वाचि) "ल्युट्" (३-३-११५)।

**गदयित्नु ಗದಯಿತ್ನು** (पुं०) 1. ಕಾಮ, ಮನ್ಮಥ. गदी (देवशब्दे) + णिच् "इत्नुच्" (उ० ३-२९)। 2. ಶಬ್ದ, ಸದ್ದು. (वि०) 3. ಕಾಮುಕ. 4. ಹೆಚ್ಚು ಮಾತನಾಡುವವನು. "गदयित्नुः पुमान् कामे जल्पाके कामुकेऽपि च" मेदि०।

**गदा ಗದಾ** (स्त्री०) ಗದೆ, ಒಂದು ಆಯುಧ. गद (व्यक्तायां वाचि) "अच्" (३-१-१३४)। "टाप्" (४-१-४)। "संचूर्णयामि गदया न सुयोधनोरू संधिं करोतु भवतां नृपतिः पणेन" वेणी० १-१५।

**गदागद ಗದಾಗದ** (पुं० द्विव०) ಅಶ್ವಿನೀದೇವತೆಗಳು. गदमागच्छति गदागो रुग्णः, तं दायतः शोधयतः — दैप् (शोधने) "कः" (३-२-३)। "नासिक्यायुजौ दस्रौ गदागदौ" त्रिकाण्ड०।

**गदाग्रज ಗದಾಗ್ರಜ** (पुं०) 1. ಬಲರಾಮ. 2. ಶ್ರೀಕೃಷ್ಣ. गदस्याग्रजः। "गृहीतकुण्डलो गन्तुमन्वमंस्त गदाग्रजः" याद० १६-१३१।

**गदाग्रणी ಗದಾಗ್ರಣೀ** (पुं०) ಎಲ್ಲಾ ರೋಗಗಳಿಗಿಂತಲೂ ದೊಡ್ಡದಾದ ಕ್ಷಯರೋಗ.

**गदाधर ಗದಾಧರ** (पुं०) 1. ಗದೆಯನ್ನು ಧರಿಸಿರುವ ವಿಷ್ಣು. धरति—धृञ् (धारणे) "अच्" (३-१-१३४)। गदाया धरः। "कौमोदकीधारणाच्च गदाधर इतीरितः" इति निरुक्तिः। "शङ्खभृन्नन्दकी चक्री शार्ङ्गधन्वा गदाधरः" वि० स०। (वि०) 2. ಗದೆಯನ್ನು ಹಿಡಿದಿರುವ.

**गदाभृत् ಗದಾಭೃತ್** (पुं०) 1. ವಿಷ್ಣು. गदां बिभर्ति—डु भृञ् (धारणपोषणयोः) "क्विप्" (३-२-७६)। (वि०) 2. ಗದೆಯನ್ನು ಹಿಡಿದಿರುವ.

**गदायुध ಗದಾಯುಧ** (वि०) ಗದೆಯನ್ನು ಹಿಡಿದಿರುವ. गदा आयुधं यस्य।

**गदायुद्ध ಗದಾಯುದ್ಧ** (न०) ಗದೆಯಿಂದ ನಡೆದ ಯುದ್ಧ. ಗದಾಯುದ್ಧವು ಭೀಮ-ಜರಾಸಂಧ ಭೀಮ-ದುರ್ಯೋಧನ ಇವರಿಗೆ ನಡೆಯಿತು.

**गदावसान ಗದಾವಸಾನ** (न०) ಮಧುರೆಯಲ್ಲಿ ಜರಾಸಂಧನ ಗದೆಯು ಬಿದ್ದ ಪ್ರದೇಶ. गदाया अवसानमत्र। ಕಂಸನ ವಧೆಯಿಂದ ಕುಪಿತನಾದ ಜರಾಸಂಧನು ಶ್ರೀಕೃಷ್ಣನ ಮೇಲಿನ ವೈರದಿಂದ ತನ್ನ ಗದೆಯನ್ನು ತೊಂಬತ್ತೊಂಬತ್ತು ಸಲ ತಿರುಗಿಸಿ ಗಿರಿವ್ರಜದಿಂದ ಮಧುರೆಯ ಕಡೆಗೆ ಎಸೆದನು. ಅದು ತೊಂಬತ್ತೊಂಬತ್ತು ಯೋಜನಗಳ ದೂರದಲ್ಲಿ ಬಿದ್ದಿತು. ಅದರಿಂದ ಮಧುರೆಯ ಸಮೀಪದ ಆ ಪ್ರದೇಶಕ್ಕೆ "**गदावसानम्**" ಎಂಬ ಹೆಸರಾಯಿತು. "निहते वासुदेवेन तदा कंसे महीपतौ। जातो वै वैरनिर्बन्धः कृष्णेन सह तस्य वै। भ्रामयित्वा शतगुणमेकोनं येन भारत। गदा क्षिप्ता बलवता मागधेन गिरिव्रजात्। तिष्ठतो मधुरायां वै कृष्णस्याद्भुतकर्मणः। एकोनयोजनशते सा पपात गदा शुभा। गदावसानं तत् ख्यातं मधुरायाः समीपतः" भा० सभा० १९।

**गदि ಗದಿ** (स्त्री०) ಮಾತು, ನುಡಿ. गद (व्यक्तायां वाचि) "इन्" (उ० ४-११७)। "एवं गदिः कर्मगतिर्विसर्गो घ्राणो रसो दृक् स्पर्शः श्रुतिश्च" भाग० १२-१९।

**गदित ಗದಿತ** (न०) 1. ಮಾತು, ನುಡಿ. गद (व्यक्तायां वाचि) भावे "क्तः" (३-३-११४)। "अन्तर्बाष्पभरोपरोधि गदितं चिन्ताजडं दर्शनम्" शाकु० ४-५। (वि०) 2. ನುಡಿಯಲ್ಪಟ್ಟ, ಹೇಳಲ್ಪಟ್ಟ. गद कर्म० "क्तः" (३-२-१०२)।

**गदितवत् ಗದಿತವತ್** (वि०) ಮಾತನಾಡಿದ, ಹೇಳಿದ. गद (व्यक्तायां वाचि) "क्तवतुः" (३-२-१०२)। स्त्रियाम् "ङीप्" (४-१-६)। **-वती -ವತೀ.** "इति गदितवती रुषा जघान स्फुरितमनोरमपक्ष्मकेसरेण" माघ० ७-५६।

**गदितृ ಗದಿತೃ** (वि०) ಮಾತನಾಡುವವನು. ಹೇಳುವವನು. गद (व्यक्तायां वाचि) "तृच्" (३-१-१३३)।

**गदिन् ಗದಿನ್** (पुं०) ವಿಷ್ಣು. गदास्यास्ति "इनिः" (५-२-११६)। "वनमाली गदी शार्ङ्गी शङ्खी चक्री च नन्दकी। श्रीमान्नारायणो विष्णुर्वासुदेवोऽभिरक्षतु"। "किरीटिनं गदिनं चक्रहस्तमिच्छामि त्वां द्रष्टुमहं तथैव" गीता ११-४६।

**गद्गद-वाक्स्खलने** (कण्ड्वा० पर० सक० से०)। गद्गद्यति। ಕಷ್ಟದಿಂದ ಮಾತನಾಡು, ಕಂಠದಲ್ಲಿ ಸ್ವರವು ತಡೆಯಲ್ಪಟ್ಟು ಮಾತನಾಡು.

**गद्गद ಗದ್ಗದ** (पुं०) 1. ಕಫಸಹಿತವಾದ ವಾತದಿಂದ ಕಂಠದಲ್ಲಿ ತಡೆಯಲ್ಪಟ್ಟು ಹೊರಡುವ ಮಾತು. गद्गद (वाक्स्खलने) "घञ्" (३-३-१८)। "तत्किं रोदिषि गद्गदेन वचसा कस्याग्रतो रुद्यते" अमरु० ५७। 2. ಮದ ಸಂತೋಷ ಹಿಂಸೆ ಮುಂತಾದುವುಗಳಿಂದ ಉಂಟಾಗುವ ಸ್ವರಭೇದ.

**गद्गदध्वनि ಗದ್ಗದಧ್ವನಿ** (पुं०) 1. ಗದ್ಗದಸ್ವರ, ಅಸ್ಪಷ್ಟವಾದ ಮಾತು, ಕಫದ ತೊಂದರೆ ಸಂತೋಷ ಅಥವಾ ಕಷ್ಟ ಇವುಗಳಿಂದ ಹೊರಡುವ ಅಸ್ಪಷ್ಟ ಧ್ವನಿ. गद्गदः कफादिना अस्पष्टः ध्वनिः। 2. ಅಸ್ಪಷ್ಟವಾದ ಮಾತುಳ್ಳವನು.

**गद्य ಗದ್ಯ** (न०) 1. ಗದ್ಯಕಾವ್ಯ. ಪಾದಗಳ ನಿಯಮವಿಲ್ಲದ ಪದಗಳ ಸಮೂಹ. गद्यते — गद (व्यक्तायां वाचि) कर्म० "यत्" (३-१-१००)। ಶ್ರವ್ಯಕಾವ್ಯವು ಗದ್ಯ ಪದ್ಯ ಮತ್ತು ಮಿಶ್ರ (ಗದ್ಯಪದ್ಯಾತ್ಮಕ ಚಂಪು) ಗಳೆಂದು ಮೂರು ವಿಧ. ರಘುವಂಶ ಕುಮಾರಸಂಭವ ಮೊದಲಾದುವು ಪದ್ಯಕಾವ್ಯಗಳು. ಕಾದಂಬರಿ ಹರ್ಷಚರಿತೆ ಮೊದಲಾದುವು ಗದ್ಯಕಾವ್ಯಗಳು. ಚಂಪೂರಾಮಾಯಣ ಚಂಪೂಭಾರತ ಯಶಸ್ತಿಲಕ ಮುಂತಾದುವು ಮಿಶ್ರಕಾವ್ಯಗಳು. "अपादः पदसन्तानो गद्यम्" काव्या० १-२३। ವಾಮನರು ಗದ್ಯಕಾವ್ಯವನ್ನು (1) वृत्तगन्धि, (2) चूर्णम् ಮತ್ತು (3) उत्कलिकाप्रायम् ಎಂದು ಮೂರು ಬಗೆಯಾಗಿ ಹೇಳಿರುತ್ತಾರೆ. "गद्यं वृत्तगन्धि चूर्णमुत्कलिकाप्रायं च" काव्या० सू० १-३-२२। (1) ಪದ್ಯಭಾಗವನ್ನು ಹೋಲುವ ಗದ್ಯವು ವೃತ್ತಗಂಧಿಯು. "पद्यभागवत् वृत्तगन्धि" १-३-२३। उदा: "पातालतालुतलवासिषु दानवेषु" ಇಲ್ಲಿ ವಸಂತತಿಲಕ ವೃತ್ತದ ಛಾಯೆಯಿರುವುದು. (2) ದೀರ್ಘಸಮಾಸವಿಲ್ಲದೆ ಲಲಿತ ಪದಗಳುಳ್ಳದ್ದು ಚೂರ್ಣಗದ್ಯ. "अनाविद्धललितपदं चूर्णम्" १-३-२४। उदा: "अभ्यासो हि कर्मणां कौशलमावहति"। (3) ದೀರ್ಘಸಮಾಸಗಳಿಂದಲೂ ಉದ್ಧತಪದಗಳಿಂದಲೂ ಕೂಡಿರುವುದು ಉತ್ಕಲಿಕಾಪ್ರಾಯ ಗದ್ಯ. "विपरीतम् उत्कलिकाप्रायम्" १-३-२५। उदा: "कुलिशशिखरखरनखरप्रचयप्रचण्डचपेटापाटितमत्तमातङ्गकुम्भस्थलगलन्मदच्छटाच्छुरितचारुकेसरभारभासुरमुखे केसरिणि"। ಸಾಹಿತ್ಯದರ್ಪಣಕಾರರು ಮುಕ್ತಕವೆಂಬ ಮತ್ತೊಂದು

ಭೇದವನ್ನು ಹೇಳಿ ಗದ್ಯಕಾವ್ಯವು ನಾಲ್ಕು ಬಗೆಯೆಂದು ಹೇಳಿರುತ್ತಾರೆ. "वृत्तगन्धोज्झितं गद्यं मुक्तकं वृत्तगन्धि च। भवेदुत्कलिकाप्रायं चूर्णकं च चतुर्विधम्" ಸಾ० ದ० ೬-೩೩೦, ೩೧। ಇವರು ಗದ್ಯಕಾವ್ಯವು ವಸ್ತುಭೇದದಿಂದ (1) कथा ಮತ್ತು (2) आख्यायिका ಎಂದು ಹೇಳಿರುತ್ತಾರೆ. ಕಲ್ಪಿತ ವಸ್ತುವುಳ್ಳ ಕಾದಂಬರಿ ಮೊದಲಾದುದು ಕಥೆ. ನಿಜವಾಗಿ ನಡೆದ ವಸ್ತುವುಳ್ಳ ಹರ್ಷಚರಿತೆ ಮೊದಲಾದುದು ಆಖ್ಯಾಯಿಕೆ. ಆಚಾರ್ಯದಂಡಿಯು ಗದ್ಯಕಾವ್ಯವು ಒಂದೇ ವಿಧವೆಂದೂ ಆಖ್ಯಾಯಿಕೆ, ಕಥೆಗಳೆಂದು ಹೆಸರು ಮಾತ್ರ ಬೇರೆಯೆಂದೂ ಈ ಒಂದರೊಳಗೇ ಎಲ್ಲ ಭೇದಗಳೂ ಅಂತರ್ಭಾವ ಹೊಂದುವುವೆಂದೂ ಹೇಳಿರುತ್ತಾರೆ. "तत्कथाख्यायिका चेति जातिः संज्ञाद्वयान्विता। अत्रैवान्तर्भविष्यन्ति शेषाश्चाख्यानजातयः" काव्या० ೧-೨೮। (वि०) 2. ಹೇಳಲ್ಪಡುವ, ಉಚ್ಚರಿಸಲ್ಪಡುವ.

**गन्तव्य ಗಂತವ್ಯ** (वि०) 1. ಹೋಗಬೇಕಾದ. 2. ಸೇರಬೇಕಾದ, ತಲುಪಬೇಕಾದ. 3. ಹೊಂದಬೇಕಾದ, ಪಡೆಯಬೇಕಾದ. गम्लृ (गतौ) "तव्यः" (೩-೧-೯೬)। 4. ತಿಳಿಯಬೇಕಾದ. 5. ತಲುಪಲ್ಪಡುವ. ಸೇರಲ್ಪಡುವ. गम्लृ कर्म० "तव्यः" (೩-೧-೯೬)। "राजा स्तेनेन गन्तव्यो मुक्तकेशेन धावता। आचक्षाणेन तत्स्तेयमेवं कर्मास्मि शाधि माम्" मनु० ೮-೩೧೪। 6. ಹೊಂದಲ್ಪಡುವ. ಪಡೆಯಲ್ಪಡುವ. 7. ತಿಳಿಯಲ್ಪಡುವ. "अनीयर्"। **गमनीयम् ಗಮನೀಯಮ್.**

**गन्तु ಗಂತು** (पुं०) 1. ಮಾರ್ಗ, ದಾರಿ. गम्लृ (गतौ) "तुन्" (उ० ೧-೬೯)। (वि०) 2. ಪಥಿಕ, ದಾರಿ ನಡೆಯುವವನು, ಪ್ರಯಾಣಮಾಡುವವನು. "यातुर्गन्तुश्च पथिकः" त्रिकाण्ड०।

**गन्तुकाम ಗಂತುಕಾಮ** (वि०) ಹೋಗಲು ಅಪೇಕ್ಷೆಯುಳ್ಳವನು. गन्तुं कामो यस्य। तुमुनो मकारलोपः।

**गन्तृ ಗಂತೃ** (वि०) 1. ಸಂಚರಿಸುವ ಶೀಲದವನು, ನಡೆಯುವ ಸ್ವಭಾವದವನು. गम्लृ (गतौ) "तृन्" (೩-೨-೧೩೫)। 2. ನಡೆಯುವವನು, ಹೋಗುವವನು. गम्लृ (गतौ) "तृच्" (೩-೧-೧೩೩)। "क्वासि गन्ता महाकाय क्षुधिताया ममेप्सितः" रामा०। 3. ಪಡೆಯುವ, ಹೊಂದುವ. स्त्रियाम् "ङीप्" (೪-೧-೫)। **गन्त्री ಗಂತ್ರೀ.**

**गन्त्री ಗಂತ್ರೀ** (स्त्री०) 1. ಎತ್ತುಗಳು ಎಳೆಯುವ ಗಾಡಿ. गम्यतेऽनया — गम्लृ (गतौ) "ष्ट्रन्" (उ० ೪-೧೫೮)। "ङीष्" (೪-೧-೪೧)। 2. ನಡೆಯುವ ಸ್ವಭಾವದ ಹೆಂಗಸು.

**गन्ध – अर्दने** (चुरा० आत्म० सक० से०)। गन्धयते। अजगन्धत। ಹಿಂಸಿಸು. ಪೀಡಿಸು.

**गन्ध ಗಂಧ** (पुं०) 1. ವಾಸನೆ, ಕಂಪು. गन्ध (अर्दने) "अच्" (೩-೧-೧೩೪)। ಗಂಧವು ಪೃಥಿವಿಯ ವಿಶೇಷ ಗುಣ. "गन्धवती पृथिवी" त० सं०। "गन्धेन स्फुरता मनागनुसृतो भक्तस्य सर्पिष्मतः" उ० रा० ೪-೧। 2. ಪರಿಮಳ, ಸೌರಭ. "विकासि वप्रांभसि गन्धसूचितं नमन्ति निघ्रातुमिवासितोत्पलम्" किरा० ೪-೨೬। 3. ಚಂದನ ಕೇಸರಿ ಮುಂತಾದ ಸುಗಂಧದ್ರವ್ಯ. "शृङ्गाणि द्रुतकनकोज्ज्वलानि गन्धाः कौसुम्भं पृथुकुचकुम्भसङ्गिवासः" माघ० ೮-೩೦। 4. ಗಂಧಕ. 5. ಸಂಬಂಧ. 6. ಚೂರು, ತುಂಡು. 7. ಗರ್ವ, ಅಹಂಕಾರ. "गन्धः सम्बन्धलेशयोः। गन्धकामोदगर्वेषु" हेम०। "वामश्चायं नदति मधुरं चातकस्ते सगन्धः" मेघ० ೧-೯। 8. ನುಗ್ಗಿಮರ. 9. ಬಲ, ಶಕ್ತಿ. "गन्धो गर्वे बलेऽपि च" त्रिकाण्ड०। (वि०) 10. ನೆರೆಮನೆಯವನು, ಪಕ್ಕದ ಮನೆಯವನು. 11. ಪರಿಮಳವುಳ್ಳ, ಸುವಾಸನೆಯುಳ್ಳ. गन्धोऽस्यास्ति "अच्" (೫-೨-೧೨೭)। "गन्धः प्रतिवेश्यामोदलेशसम्बन्धगन्धके" मेदि०।

**गन्धक ಗಂಧಕ** (पुं०) 1. ಗಂಧಕ, ಗಂಧಕಶಿಲೆ. 2. ನುಗ್ಗಿಮರ.

**गन्धकारिका ಗಂಧಕಾರಿಕಾ** (स्त्री०) ಸೈರಂಧ್ರಿ, ಪರಗೃಹದಲ್ಲಿ ಶಿಲ್ಪಕಾರ್ಯಗಳನ್ನು ಮಾಡುವ ಹೆಂಗಸು. गन्धं गन्धप्रधानमलंकारं करोति—डु कृञ् (करणे) "ण्वुल्" (೩-೧-೧೩೩)।

**गन्धकाली ಗಂಧಕಾಳೀ** (स्त्री०) ಸತ್ಯವತಿ, ವ್ಯಾಸಮಹರ್ಷಿಯ ತಾಯಿ. "भीष्मः पुनः पितुः प्रियचिकीर्षया सत्यवतीं मातरमुदवाहयत् यामाहुर्गन्धकालीमिति" भा० आदि०।

**गन्धकाष्ठ ಗಂಧಕಾಷ್ಠ** (न०) ಗಂಧದ ಕಟ್ಟಿಗೆ.

**गन्धकुटी ಗಂಧಕುಟೀ** (स्त्री०) ಮುರೆಯೆಂಬ ಒಂದು ಸುಗಂಧದ್ರವ್ಯ.

**गन्धकेलिका ಗಂಧಕೇಲಿಕಾ** (स्त्री०) ಕಸ್ತೂರಿ, ಮೃಗದ ಮದ. गन्धं केलति—केलृ (गतौ) "ण्वुल्" (೩-೧-೧೩೩)।

**गन्धगज ಗಂಧಗಜ** (पुं०) ಮದೋದಕವನ್ನು ಸುರಿಸುವ ಆನೆ, ಮದೋದಕದಿಂದ ಕೂಡಿದ ಆನೆ.

**गन्धग्राहक ಗಂಧಗ್ರಾಹಕ** (ಪುಂ॰) ವಾಸನೆಯನ್ನು ಕಂಡು ಹಿಡಿಯುವ ಘ್ರಾಣೇಂದ್ರಿಯ, ಮೂಗು. गन्धं गृह्णाति–ग्रह (उपादाने) "ण्वुल्" (३-१-१३३)।

**गन्धजल ಗಂಧಜಲ** (ನ॰) ಪನ್ನೀರು, ಸುಗಂಧದ್ರವ್ಯ ಮಿಶ್ರವಾದ ನೀರು.

**गन्धतन्मात्र ಗಂಧತನ್ಮಾತ್ರ** (ನ॰) ಉತ್ಕಟಾವಸ್ಥೆಯನ್ನು ಹೊಂದದ ಮತ್ತು ಪೃಥಿವಿಗೆ ಉಪಾದಾನಕಾರಣವಾದ ಸ್ಥೂಲ ಪೃಥಿವ್ಯಾರಂಭಕ ದ್ರವ್ಯ. ಸ್ಥೂಲಪೃಥಿವಿಯ ಅವಸ್ಥೆಯನ್ನು ಹೊಂದುವ ಮೊದಲು ಸ್ಥೂಲಪೃಥಿವಿಗೆ ಕಾರಣವಾದ ಗಂಧಗುಣವುಳ್ಳ ದ್ರವ್ಯ, ಸೂಕ್ಷ್ಮವಾದ ಪಾರ್ಥಿವಾಂಶ.

**गन्धतूर्य ಗಂಧತೂರ್ಯ** (ನ॰) ರಣಕಹಳೆ, ಯುದ್ಧದಲ್ಲಿ ಉಪಯೋಗಿಸುವ ಒಂದು ವಾದ್ಯ.

**गन्धतैल ಗಂಧತೈಲ** (ನ॰) ಸುವಾಸನೆಯ ತೈಲ, ಭೃಂಗಾಮಲಕ ತೈಲ ಮುಂತಾದುದು.

**गन्धदारु ಗಂಧದಾರು** (ನ॰) ಗಂಧದ ಕಟ್ಟಿಗೆ.

**गन्धद्विप ಗಂಧದ್ವಿಪ –हस्ती –ಹಸ್ತೀ** (ಪುಂ॰) 1. ಮದೋದಕದಿಂದ ಕೂಡಿದ ಆನೆ. "गन्धेन जेतुः प्रमुखागतस्य गन्धद्विपस्येव मतङ्गजौघ" किरा॰ १७-१७। 2. ಚಂದನ ಮೊದಲಾದ ಸುಗಂಧದ್ರವ್ಯಗಳ ವಾಸನೆಯಿಂದ ಕೂಡಿದ ಆನೆ, ಕ್ಷತ್ರಿಯ ಜಾತಿಯ ಆನೆ. "जङ्गमानिव विन्ध्यादीन् जगृहे गन्धहस्तिनः" याद॰ २२-१५२।

**गन्धधारिन् ಗಂಧಧಾರಿನ್** (ಪುಂ॰) 1. ಪರಶಿವ, ಮಹಾದೇವ, ಪರಮೇಶ್ವರ. "अजश्च बहुरूपश्च गन्धधारी कपर्द्यपि" भा॰ अनु॰। (ವಿ॰) 2. ಸುಗಂಧದ್ರವ್ಯವನ್ನು ಹೊಂದಿರುವ. स्त्रियाम् "ङीप्" (४-१-५)। **–धारिणी –ಧಾರಿಣೀ.**

**गन्धन ಗಂಧನ** (ನ॰) 1. ಉತ್ಸಾಹ. 2. ಇತರರ ತಪ್ಪನ್ನು ಪ್ರಕಾಶಪಡಿಸುವುದು. 3. ಹಿಂಸಿಸುವುದು. 4. ಸೂಚಿಸುವುದು. 5. ಕೊಲ್ಲುವುದು, ನಾಶಪಡಿಸುವುದು. गन्ध (अर्दने) भावे कर॰ वा "ल्युट्" (३-३-११५, ११७)। "गन्धनमुत्साहे स्यात्प्रकाशने सूचनेऽपि हिंसायाम्" मेदि॰। "उत्सादने च हिंसायां सूचने चापि गन्धनम्" अम॰।

**गन्धनकुल ಗಂಧನಕುಲ** (ಪುಂ॰) ಮೂಗಿಲಿ, ದುರ್ಗಂಧದ ಇಲಿ. गन्धेन लेशेन नकुलसदृशत्वात् दुर्गन्धप्रधानो वा नकुलः।

**गन्धनाकुली ಗಂಧನಾಕುಲೀ** (ಸ್ತ್ರೀ॰) ಸರ್ಪಾಕ್ಷಿ, ಈಶ್ವರೀ ಬಂಬು. गन्धसहिता नाकुली।

**गन्धनाली ಗಂಧನಾಲೀ** (ಸ್ತ್ರೀ॰) ವಾಸನೆಯನ್ನು ಕಂಡು ಹಿಡಿಯುವ ಕೊಳವೆಯಂತಿರುವ ಮೂಗು. गन्धस्य नालीव। "गन्धनाली च नासिक्याम्" त्रिकाण्ड॰।

**गन्धपत्र ಗಂಧಪತ್ರ** (ಪುಂ॰) 1. ತುಲಸಿಗಿಡ. गन्धयुक्तं पत्रमस्य। 2. ಮರುಗ. 3. ಬಿಲ್ವಪತ್ರೆಗಿಡ. 4. ಕಿತ್ತಲಿಗಿಡ. (ವಿ॰) 5. ವಾಸನೆಯಿಂದ ಕೂಡಿದ ಎಲೆಯುಳ್ಳ ಗಿಡ. (ಸ್ತ್ರೀ॰) **–पत्रा –ಪತ್ರಾ.** 6. ಕಚೋರ.

**गन्धपलाशिका ಗಂಧಪಲಾಶಿಕಾ** (ಸ್ತ್ರೀ॰) ಹರಿದ್ರೆ, ಅರಿಶಿನ. गन्धयुक्तं पलाशमस्याः "कप्"।

**गन्धपाषाण ಗಂಧಪಾಷಾಣ** (ಪುಂ॰) ಗಂಧಕಶಿಲೆ, ಉಪಧಾತುಗಳಲ್ಲಿ ಒಂದು ಭೇದ.

**गन्धपुष्प ಗಂಧಪುಷ್ಪ** (ಪುಂ॰) 1. ಕೇತಕೀವೃಕ್ಷ, ತಾಳೆಮರ. 2. ವೇತಸವೃಕ್ಷ, ಹಬ್ಬೆಗಿಡ. 3. ಅಂಕೋಲೆಗಿಡ. (ನ॰) 4. ಸುವಾಸನೆಯಿಂದ ಕೂಡಿದ ಹೂವು. गन्धसहितं पुष्पम्।

**गन्धफल ಗಂಧಫಲ** (ಪುಂ॰) 1. ಕಪಿತ್ಥವೃಕ್ಷ, ಬೇಲದ ಮರ. 2. ಬಿಲ್ವವೃಕ್ಷ, ಬಿಲ್ವಪತ್ರೆ ಗಿಡ. गन्धयुक्तं फलमस्य। (ಸ್ತ್ರೀ॰)**–ला –ಲಾ.** 3. ಮಂಜಿಷ್ಠ. 4. ಬಿಳಿ ನೆಲಗುಂಬಳ. 5. ಆನೆಬೇಲ. **–ली –ಲೀ.** 6. ಪ್ರಿಯಂಗುವೃಕ್ಷ, ಪ್ರೇಂಕಣ ಗಿಡ. 7. ಸಂಪಿಗೆಯ ಮೊಗ್ಗು. "विष्वक्सेना गन्धफली कारम्भा प्रियकश्च सा"। "चम्पको हेमपुष्पकः। एतस्य कलिका गन्धफली" अम॰। "गन्धफल्यपि गुन्द्रायां चम्पकस्य च कोरके" मेदि॰।

**गन्धबीजा ಗಂಧಬೀಜಾ** (ಸ್ತ್ರೀ॰) ಮೆಂತ್ಯ. गन्धो बीजे यस्याः।

**गन्धमाद ಗಂಧಮಾದ** (ಪುಂ॰) 1. ಸುಗ್ರೀವ ಸೈನ್ಯದಲ್ಲಿ ಒಬ್ಬ ವಾನರ. 2. ಅಕ್ರೂರನ ಒಬ್ಬ ಸಹೋದರ.

**गन्धमादन ಗಂಧಮಾದನ** (ಪುಂ॰) 1. ಭ್ರಮರ, ದುಂಬಿ. 2. ಗಂಧಕ. 3. ಸುಗ್ರೀವನ ಸೈನ್ಯದಲ್ಲಿ ಒಬ್ಬ ವಾನರ. "गजो गवाक्षो गवयः शरभो गन्धमादनः। मैन्दश्च द्विविदश्चैव हनूमान् जाम्बवांस्तथा" रामा॰। (ಪುಂನ॰)4. ಗಂಧಮಾದನಪರ್ವತ, ಸಪ್ತಕುಲಪರ್ವತಗಳಲ್ಲೊಂದು. गन्धेन मादयति — मदी (हर्षे) + णिच् "ल्युः" (३-१-१३४)। "पद्मभेदपिशुनाः सिषेविरे गन्धमादनवनान्तमारुताः" कुमा॰ ८-८६। (ನ॰)5. ಗಂಧಮಾದನ ಪರ್ವತದ ಒಂದು ಅರಣ್ಯ. (ಸ್ತ್ರೀ॰)**–मादनी –ಮಾದನೀ.** 6. ಸುರೆ, ಮದ್ಯ. "गन्धमादनः कप्यद्रिभिदोरलिनि गन्धके। गन्धमादनी सुरायाम्" हेम॰।

**गन्धमार्जार ಗಂಧಮಾರ್ಜಾರ** (ಪುಂ०) ಪುನುಗುಬೆಕ್ಕು. गन्धप्रधानो मार्जारः।

**गन्धमूली ಗಂಧಮೂಲೀ** (स्त्री०) ಕಚೋರ. गन्धं मूलमस्याः। "शटी गन्धमूली षड्ग्रन्थिकेत्यपि" अम०।

**गन्धमूषिक ಗಂಧಮೂಷಿಕ** (ಪುಂ०) ಮೂಗಿಲಿ.

**गन्धमूषी ಗಂಧಮೂಷೀ** (स्त्री०) ಮೂಗಿಲಿ.

**गन्धमृग ಗಂಧಮೃಗ**(ಪುಂ०) 1. ಪುನುಗುಬೆಕ್ಕು. 2. ಕಸ್ತೂರಿ ಮೃಗ. गन्धप्रधानो मृगः।

**गन्धमैथुन ಗಂಧಮೈಥುನ** (ಪುಂ०) ವೃಷಭ, ಎತ್ತು. गन्धेन गन्धघ्राणेन मैथुनमस्य।

**गन्धमोदन ಗಂಧಮೋದನ** (ಪುಂ०) ಗಂಧಕ. गन्धेन मोदयति — मुद (हर्षे) + णिच् "ल्युः" (३-१-१३४)।

**गन्धमोहिनी ಗಂಧಮೋಹಿನೀ** (स्त्री०) ಸಂಪಿಗೆಯ ಮೊಗ್ಗು. गन्धेन मोहयति — मुह (वैचित्ये) + णिच् "णिनिः" (३-२-७८)। "ङीप्" (४-१-५)।

**गन्धयुक्ति ಗಂಧಯುಕ್ತಿ** (स्त्री०) ಸುಗಂಧದ್ರವ್ಯಗಳ ಮೇಳನ, ಸುಗಂಧವಸ್ತುಗಳ ಮಿಶ್ರಣ, ಪರಿಮಳದ್ರವ್ಯಗಳನ್ನು ಸೇರಿಸಿ ಸಿದ್ಧಪಡಿಸುವುದು. गन्धद्रव्याणां युक्तिः योजनम्।

**गन्धराज ಗಂಧರಾಜ**(ಪುಂ०) 1. ಸುಗಂಧರಾಜ ಗಿಡ. गन्धानां गन्धयुक्तानां राजा "टच्" (५-४-९१)। (न०) 2. ಗಂಧದ ಮರ. (स्त्री०) **-राजी -ರಾಜೀ.** 3. ನಖಿ ಯೆಂಬ ಒಂದು ಸುಗಂಧದ್ರವ್ಯ.

**गन्धर्व ಗಂಧರ್ವ** (ಪುಂ०) 1. ಅಶ್ವ, ಕುದುರೆ. गन्धमर्वति— अर्व (गतौ) "अण्" (३-२-१)। शक०। 2. ಕಸ್ತೂರಿ ಮೃಗ. 3. ಪುಂಸ್ಕೋಕಿಲ, ಗಂಡುಕೋಗಿಲೆ. 4. ಅಂತರಾಭವಸತ್ತ್ವ, ಮರಣಾನಂತರ ಪುನಃ ಬೇರೆ ಶರೀರವನ್ನು ಹೊಂದುವ ಪೂರ್ವ ಮಧ್ಯಕಾಲದಲ್ಲಿ ಯಾತನಾಶರೀರವುಳ್ಳ ಜೀವ. ಅಂತರಾಭವಸತ್ತ್ವವು ಬೇರೆ ಪ್ರಾಣಿಗಳಲ್ಲಿ ಪ್ರವೇಶಿಸಿ ಆವೇಶವುಂಟುಮಾಡುವುದು. 5. ಗಂಧರ್ವ, ದೇವಯೋನಿ ವಿಶೇಷ, ದೇವಗಾಯಕ.

**गन्धर्वकन्या ಗಂಧರ್ವಕನ್ಯಾ** (स्त्री०) ಗಂಧರ್ವರ ಹುಡುಗಿ.

**गन्धर्वतैल ಗಂಧರ್ವತೈಲ** (न०) ಹರಳೆಣ್ಣೆ ತೈಲ, ಹರಳೆಣ್ಣೆ.

**गन्धर्वनगर ಗಂಧರ್ವನಗರ -पुर -ಪುರ** (न०) 1. ಗಂಧರ್ವರ ಪಟ್ಟಣ. ಇದು ಗುಹ್ಯಕಲೋಕಕ್ಕೆ ಮೇಲುಭಾಗದಲ್ಲೂ ವಿದ್ಯಾಧರಲೋಕದ ಕೆಳಭಾಗದಲ್ಲೂ ಇರುವುದು. 2. ಆಕಾಶದಲ್ಲಿ ಹುಟ್ಟುವ ಅಶುಭಸೂಚಕವಾದ ಒಂದು ಪಟ್ಟಣ.

**गन्धर्वपत्नी ಗಂಧರ್ವಪತ್ನೀ** (स्त्री०) ಗಂಧರ್ವನ ಹೆಂಡತಿ, ಅಪ್ಸರಸ್ಸು.

**गन्धर्वराज ಗಂಧರ್ವರಾಜ** (ಪುಂ०) ಗಂಧರ್ವರ ಒಡೆಯನಾದ ಚಿತ್ರರಥ.

**गन्धर्वलोक ಗಂಧರ್ವಲೋಕ** (ಪುಂ०) ಗುಹ್ಯಕಲೋಕ ಮತ್ತು ವಿದ್ಯಾಧರಲೋಕಗಳ ಮಧ್ಯಲೋಕ.

**गन्धर्ववधू ಗಂಧರ್ವವಧೂ** (स्त्री०) 1. ಗಂಧರ್ವನ ಪತ್ನಿ. 2. ಕಚೋರ.

**गन्धर्वविद्या ಗಂಧರ್ವವಿದ್ಯಾ** (स्त्री०) ಸಂಗೀತವಿದ್ಯೆ, ಗಾನಕಲೆ.

**गन्धर्ववेद ಗಂಧರ್ವವೇದ** (ಪುಂ०) ಸಾಮವೇದದ ಉಪವೇದವಾದ ಸಂಗೀತಶಾಸ್ತ್ರ.

**गन्धर्वविवाह ಗಂಧರ್ವವಿವಾಹ** (ಪುಂ०) ಎಂಟುವಿಧ ವಿವಾಹಗಳಲ್ಲೊಂದು ಭೇದ, ವಧೂವರರ ತಾಯಿತಂದೆಗಳಾರನ್ನೂ ಕೇಳದೆ ಅವರ ಅನುಮತಿ ಪಡೆಯದೆ ಪರಸ್ಪರ ಪ್ರೇಮದಿಂದ ತಮ್ಮ ಇಷ್ಟದಂತೆ ಮಾಡಿಕೊಳ್ಳುವ ಮದುವೆ. "इच्छयान्योन्यसंयोगः कन्यायाश्च वरस्य च। गान्धर्वः स तु विज्ञेयः मैथुन्यः कामसंभवः" मनु० ३-३२।

**गन्धर्वहस्त ಗಂಧರ್ವಹಸ್ತ** (ಪುಂ०) ಏರಂಡವೃಕ್ಷ, ಹರಳು ಗಿಡ. गन्धर्वस्य शरभमृगस्य हस्त इव पत्रमस्य। "अमण्डपञ्चाङ्गुलवर्धमाना गन्धर्वहस्तत्रिपुटीफलश्च" हारा०।

**गन्धवणिज् ಗಂಧವಣಿಜ್** (ಪುಂ०) ಸುಗಂಧದ್ರವ್ಯಗಳ ವ್ಯಾಪಾರಿ.

**गन्धवत् ಗಂಧವತ್** (वि०) 1. ವಾಸನೆಯಿಂದ ಕೂಡಿದ, ಪರಿಮಳಯುಕ್ತವಾದ. गन्धोऽस्यास्ति "मतुप्" (५-२-९४)। 2. ದುರ್ಗಂಧಯುಕ್ತವಾದ, ಕೆಟ್ಟ ವಾಸನೆಯಿಂದ ಕೂಡಿದ. "गन्धवद्रुधिरचन्दनोक्षिता जीवितेशवसतिं जगाम सा" रघु० ११-२०। स्त्रियाम् "ङीप्" (४-१-६)। **-वती -ವತೀ.**

**गन्धवती ಗಂಧವತೀ** (स्त्री०) 1. ಪೃಥಿವಿ, ಭೂಮಿ. गन्धोऽस्यास्ति "मतुप्" (५-२-९४)। मस्य "वः" (८-२-९)। "ङीप्" (४-१-६)। ಪೃಥಿವಿಯಲ್ಲಿ ಗಂಧಗುಣವಿರುವುದರಿಂದ ಈ ಹೆಸರು. "तत्र गन्धवती पृथिवी" त० सं०। 2. ಸತ್ಯವತಿ, ವ್ಯಾಸಮಹರ್ಷಿಯ ತಾಯಿ. ಪರಾಶರಮಹರ್ಷಿಯ ವರಪ್ರಸಾದದಿಂದ ದಾಶಕನ್ಯೆಯಾದ ಇವಳ ದೇಹದಲ್ಲಿ ಸೌಗಂಧ್ಯವುಂಟಾದುದರಿಂದ ಸತ್ಯವತಿಗೆ ಈ ಹೆಸರು. "एवमुक्ता वरं वव्रे गात्र

सौगन्ध्यमुत्तमम्। स चास्यै भगवान् प्रादात् मनसः काङ्क्षितं प्रभुः। तेन गन्धवतीत्येवं नामास्याः प्रथितं भुवि" भा० आदि० ६४। 3. ಸುರೆ, ಮದ್ಯ. 4. ಮುರೆ ಯೆಂಬ ಒಂದು ಸುಗಂಧದ್ರವ್ಯ. 5. ಮಲ್ಲಿಗೆ ಗಿಡ. 6. ಜಾಜಿಗಿಡ.

**गन्धवह ಗಂಧವಹ**(पुं०) 1. ವಾಯು, ಗಾಳಿ. वहति—वह (प्रापणे) "अच्" (३-१-१३४)। गन्धस्य वहः। "दिग्दक्षिणा गन्धवहं मुखेन व्यलीकनिश्वासमिवोत्ससर्ज" कुमा० ३-२५। (वि०) 2. ವಾಸನೆಯನ್ನು ಹೊಂದಿರುವ. ಪರಿಮಳವನ್ನು ಹೊತ್ತು ತರುವ. (स्त्री०) **-वहा -ವಹಾ.** 3. ಘ್ರಾಣ, ಮೂಗು, ನಾಸಿಕೆ. गन्धस्य वहा।

**गन्धवारि ಗಂಧವಾರಿ** (न०) ಪನ್ನೀರು, ಪರಿಮಳದ್ರವ್ಯ ಮಿಶ್ರವಾದ ನೀರು.

**गन्धवाह ಗಂಧವಾಹ** (पुं०)1. ವಾಯು, ಗಾಳಿ. गन्धं वहति—वह (प्रापणे) "अण्" (३-२-१)। ವಾಯುವು ಗಂಧವನ್ನು ಹೊತ್ತು ತರುವುದರಿಂದ ಈ ಹೆಸರು. "इह हि दहति चेतः केतकीगन्धबन्धुः प्रसरदसमबाणप्राणवद्गन्धवाहः" गीतगो०। 2. ಕಸ್ತೂರಿ ಮೃಗ. (स्त्री०) **-वाही -ವಾಹೀ.** ನಾಸಿಕೆ, ಮೂಗು.

**गन्धलुब्ध ಗಂಧಲುಬ್ಧ** (पुं०) ಭ್ರಮರ, ದುಂಬಿ.

**गन्धशटी ಗಂಧಶಟೀ** (स्त्री०) ಕಚೋರ.

**गन्धशुण्डिनी ಗಂಧಶುಂಡಿನೀ** (स्त्री०) ಮೂಗಿಲಿ. गन्धयुक्तः शुण्डो मुखमस्य "इनिः" (५-२-११५)। "ङीप्" (४-१-५)।

**गन्धशेखर ಗಂಧಶೇಖರ** (न०) ಮೃಗಮದ, ಕಸ್ತೂರಿ. "मृगनाभिर्मृगमदो गन्धशेखरमित्यपि" हारा०।

**गन्धसार ಗಂಧಸಾರ** (पुं०) ಚಂದನವೃಕ್ಷ, ಗಂಧದಮರ. गन्धयुक्तः सारोऽस्य।

**गन्धसोम ಗಂಧಸೋಮ** (न०) ಬಿಳಿನೈದಿಲೆ. गन्धार्थं सोमो यस्य। "ह्रीबेरं वारिवालकम्। सितोत्पलं गन्धसोमम्" हारा०।

**गन्धहारिका ಗಂಧಹಾರಿಕಾ** (स्त्री०) ಪರಗೃಹದಲ್ಲಿ ಇದ್ದುಕೊಂಡು ಸುಗಂಧದ್ರವ್ಯಗಳನ್ನು ತಯಾರಿಸುವ ಹೆಂಗಸು. गन्धं हरति—हृञ् (हरण) "ण्वुल्" (३-१-१३३)। "टाप्" (४-१-४)।

**गन्धा ಗಂಧಾ** (स्त्री०) 1. ಸಂಪಿಗೆ ಹೂವಿನ ಮೊಗ್ಗು. 2. ಕಚೋರ. 3. ಮೂರೆಲೆ ಹೊನ್ನೆ. गन्धोऽस्त्यस्याः।

**गन्धाखु ಗಂಧಾಖು** (पुं०) ಮೂಗಿಲಿ.

**गन्धाजीव ಗಂಧಾಜೀವ** (पुं०) ಸುಗಂಧದ್ರವ್ಯಗಳ ವ್ಯಾಪಾರಿ, ಸುಗಂಧದ್ರವ್ಯಗಳನ್ನು ಮಾರಿ ಜೀವಿಸುವವನು. गन्धेन गन्धद्रव्येणाजीवति — आ+जीव (प्राणधारणे) "अच्" (३-१-१३४)। गन्धेन आजीवो जीविका यस्य वा।

**गन्धाढ्य ಗಂಧಾಢ್ಯ**(पुं०)1. ಕಿತ್ತಲೆಗಿಡ. गन्धेन आढ्यः। (न०) 2. ಚಂದನ, ಗಂಧ. (वि०) 3. ಸುಗಂಧದಿಂದ ತುಂಬಿದ. (स्त्री०) **-ढ्या -ಢ್ಯಾ.** 4. ಮಾದಳದ ಗಿಡ.

**गन्धार ಗಂಧಾರ** (पुं० ब० व०) 1. ಗಂಧಾರದೇಶ. (वि०) 2. ಪರಿಮಳದಿಂದ ಕೂಡಿದ, ಸುವಾಸನೆಯುಳ್ಳ. गन्धमृच्छति — ऋ (गतौ) "अण्" (३-२-१)।

**गन्धाश्मन् ಗಂಧಾಶ್ಮನ್** (पुं०) ಗಂಧಕಶಿಲೆ. गन्धयुक्तोऽश्मा। "गन्धाश्मनि तु गन्धकः" अम०।

**गन्धिन् ಗಂಧಿನ್** (वि०) ಸುಗಂಧಯುಕ್ತವಾದ, ಪರಿಮಳದಿಂದ ಕೂಡಿದ. गन्धोऽस्यास्ति "इनिः" (५-२-११५)। स्त्रियाम् "ङीप्" (४-१-५)। **गन्धिनी ಗಂಧಿನೀ.**

**गन्धिनी ಗಂಧಿನೀ** (स्त्री०) ಮುರೆಯೆಂಬ ಒಂದು ಸುಗಂಧ ದ್ರವ್ಯ.

**गन्धिपर्ण ಗಂಧಿಪರ್ಣ** (पुं०) ಏಳೆಲೆ ಬಾಳೆಗಿಡ.

**गन्धेन्द्रिय ಗಂಧೇಂದ್ರಿಯ** (न०) ಘ್ರಾಣೇಂದ್ರಿಯ, ಮೂಗು. गन्धग्राहकमिन्द्रियम्।

**गन्धोत्तमा ಗಂಧೋತ್ತಮಾ** (स्त्री०) ಮದ್ಯ, ಹೆಂಡ. गन्धेन उत्तमा।

**गन्धोदक ಗಂಧೋದಕ** (न०) ಪನ್ನೀರು, ಸುಗಂಧದ್ರವ್ಯಗಳಿಂದ ಕೂಡಿದ ನೀರು.

**गन्धोली ಗಂಧೋಲೀ** (स्त्री०) 1. ಕಣಜದ ಹುಳು. गन्धयते—गन्ध (अर्दने) "ओलच्" बाहु०। "गन्धोली वरटा द्वयोः" अम०। 2. ಶುಂಠಿ.

**गभस्ति ಗಭಸ್ತಿ** (पुं०) 1. ರಶ್ಮಿ, ಕಿರಣ. गम्यते इति गः ज्ञेयवर्गः विषयः, तं बभस्ति दीपयति — भस (भर्त्सनदीप्त्योः) "क्तिच्" (३-३-१७४)। "तथातितप्तं सवितुर्गभस्तिभिर्मुखं तदीयं कमलश्रियं दधौ" कुमा० ५-२१। 2. ಸೂರ್ಯ. (स्त्री०) 3. ಸ್ವಾಹಾದೇವಿ, ಅಗ್ನಿಯ ಪತ್ನಿ. "गभस्तिः किरणे सूर्ये ना स्वाहायां तु योषिति" मेदि०।

**गभस्तिपाणि ಗಭಸ್ತಿಪಾಣಿ** (पुं०) ಕಿರಣವೇ ಕೈಯಾಗಿ ಉಳ್ಳ, ಸೂರ್ಯ. गभस्तिः पाणिरिवास्य।

**गभस्तिमत् ಗಭಸ್ತಿಮತ್** (पुं०) (ಅತಿಶಯವಾದ ಕಿರಣಗಳುಳ್ಳ) ಸೂರ್ಯ. गभस्तयो भूम्ना सन्त्यस्य "मतुप्" (५-२-९४)। "विभावसुः सारथिनेव वायुना घनव्यपायेन गभस्तिमानिव" रघु० ३-३७।

**गभस्तिमालिन् ಗಭಸ್ತಿಮಾಲಿನ್** (पुं०) ಸೂರ್ಯ. गभस्तीनां मालास्त्यस्य "इनिः" (५-२-११६)।

**गभस्तिहस्त ಗಭಸ್ತಿಹಸ್ತ** (पुं०) ಸೂರ್ಯ. गभस्तयो हस्ता इव यस्य।

**गभीर ಗಭೀರ** (वि०) 1. ಅಗಾಧವಾದ, ಆಳವಾದ. गम्लृ (गतौ) "ईरन्" भश्च (उ० ४-३५)। "गभीररन्ध्रेषु भृशं महीभृतः प्रतिस्वनैरुन्नमितेन सानुषु" किरा० १४-४६। 2. ಗಹನವಾದ, ತಿಳಿಯಲು ಅಶಕ್ಯವಾದ. 3. ಗೂಢವಾದ, ರಹಸ್ಯವಾದ. "गभीरो माहात्म्यात्प्रशमशुचिरत्यन्तसुजनः" म० वी० २-१५। 4. ಪ್ರವೇಶಿಸಲು ಅಶಕ್ಯವಾದ, ಪ್ರವೇಶಕ್ಕೆ ಅವಕಾಶವಿಲ್ಲದ, ಹೋಗಲಾಗದ.

**गभीरात्मन् ಗಭೀರಾತ್ಮನ್** (पुं०) ವಿಷ್ಣು. गभीरः अन्येषां चतुर्मुखादीनामप्रधृष्यः आत्मा यस्य। "धात्रादीनामप्रधृष्यं गाम्भीर्यं यस्य विद्यते। गभीरात्मा स विज्ञेयः वस्वर्णो मनुरुत्तमः" इति निरुक्तिः। "चतुरश्रो गभीरात्मा" वि० स०।

**गम्लृ-गतौ** (भ्वा० पर० अक० अनि०)। गच्छति। जगाम। गन्ता। गमिष्यति। गच्छतु। अगच्छत्। गच्छेत्। गम्यात्। अगमत्। अगमिष्यत्। 1. ಹೋಗು, 2. ಹೊಂದು, ಸೇರು, ತಲುಪು.

**भावे:**—गम्यते। जग्मे। गन्ता। गंस्यते। गम्यताम्। अगम्यत। गम्येत। ಇತ್ಯಾದಿ.

**णिचि:**—गमयति, -ते। गमयां चकार, -चक्रे, -बभूव, -आस। गमयिता। गमयिष्यति, -ते। गमयतु, -ताम्। अगमयत्, -त। गमयेत्, -त। ಇತ್ಯಾದಿ.

**सनि:**—जिगमिषति। जिगमिषां चकार, -बभूव, -आस। जिगमिषिता। जिगमिषिष्यति। जिगमिषतु। अजिगमिषत्। जिगमिषेत्। जिगमिष्यात्। अजिगमिषीत्। अजिगमिषिष्यत्।

**कृत्सु:**—गन्तव्यम्। गमनीयम्। गम्यम्। भावे -गतम्। गतवान्। कर्त० -गतः। गच्छन्, गच्छन्ती। गन्तुम्। गतम्। गमनम्। गत्वा। आगत्य, आगम्य।

**ण्यन्तात् कृत्सु:**—गमयितव्यः। गमनीयः। गम्यः। गमितः। गमितवान्। गमयन्, गमयन्ती। गमयमानः। गमयितुम्। गमितम्। गमनम्। गमयित्वा, आगम्य।

**सम्** ಪೂರ್ವಕ **गम्लृ** ಧಾತುವು ಆತ್ಮನೇಪದಿಯಾಗುವುದು. संगच्छते। संजग्मे। संगन्ता। संगंस्यते। संगच्छताम्। समगच्छत। संगच्छेत। ಇತ್ಯಾದಿ.

**ಈ ಧಾತುವಿಗೆ ಉಪಸರ್ಗಗಳ ಯೋಗದಿಂದ ಉಂಟಾಗುವ ಅರ್ಥಭೇದಗಳು:**

**(1) अधि + गम्लृ** = अधिगच्छति। अध्यगच्छत्। अधिगतम्। अधिगत्य। 1. ಹೊಂದು, ಪಡೆ. "अधिगत्य जगत्यधीश्वरादथ मुक्तिं पुरुषोत्तमात्ततः" नैष० २-१। 2. ಹೋಗು, ಹೊಂದು, ಸೇರು. "अधिगतनिलयानामौपवाह्यद्विपानां मदपयसि वितन्वन् मज्जनोन्मज्जनानि" याद० १९-७७।

**(2) सम्+अधि+गम्लृ** = समधिगच्छति। ಚೆನ್ನಾಗಿ ಹೊಂದು, ಸರಿಯಾಗಿ ಪಡೆ. "यत्ते समधिगच्छन्ति यस्यैते तस्य तद्धनम्" मनु० ८-४१६।

**(3) अनु + गम्लृ** = अनुगच्छति। अन्वगच्छत्। अनुगमनम्। ಅನುಸರಿಸಿ ಹೋಗು, ಹಿಂಬಾಲಿಸಿ ಹೋಗು. "मार्गं मनुष्येश्वरधर्मपत्नी श्रुतेरिवार्थं स्मृतिरन्वगच्छत्" रघु० २-२।

**(4) अप + गम्लृ** = अपगच्छति। अपजगाम। ಹೊರಟುಹೋಗು. "सा कन्यापजगामाथ समीपात्तस्य धीमतः" भा० द्रोण० ५४-१४।

**(5) अभि + गम्लृ** = अभिगच्छति। अभिजगाम। अभिगतः। ಎದುರಿಗೆ ಬಾ. "अभिगम्य ततः क्षिप्रं राक्षसी धान्यमालिनी" रामा०। "तमभ्यगच्छत्प्रथमो विधाता श्रीवत्सलक्ष्मा पुरुषश्च साक्षात्" कुमा० ७-४३।

**(6) अव+गम्लृ**=अवगच्छति। अवगतम्। अवगम्य। ತಿಳಿದುಕೊ, ಅರಿತುಕೊ. "तदेव ध्यानादवगतोऽस्मि" शाकु० ७। "न च मेऽवगच्छति यथा लघुताम्" माघ० ९-५६।

**(7) आ+गम्लृ**=आगच्छति। आगमनम्। आगतः। आगत्य। ಆಗಮಿಸು, ಬಾ. "आगच्छतोऽनूचि गजस्य घण्टयोः स्वनं समाकर्ण्य समाकुलाङ्गनाः" माघ० १२-३४।

**(8) अधि+आ+गम्लृ** = अध्यागच्छति। ಹೊಂದು, ಪಡೆ.

(9) अभि+आ+गम्लृ=अभ्यागच्छति। अभ्यागतः। ಎದುರಿಗೆ ಬಾ, ಅಭಿಮುಖವಾಗಿ ಬಾ. "अभ्यागतं सुररिपोः सुरराजसैन्यं क्षोभं जगाम परमं भयवेपमानम्" कुमा० १७-११।

(10) उप+आ+गम्लृ=उपागच्छति। उपाजगाम। ಸಮೀಪಕ್ಕೆ ಬಾ. ಹತ್ತಿರಕ್ಕೆ ಬಾ. "विचिन्तयन्ती यमनन्यमानसा तपोधनं वेत्सि न मामुपागतम्" शाकु० ४-१।

(11) प्रति+आ+गम्लृ=प्रत्यागच्छति। प्रत्यागतः। ಹಿಂತಿರುಗಿ ಬಾ. "रणात् प्रत्यागतं शूरं भार्यां च गतयौवनाम्" चाणक्य०।

(12) उद् + गम्लृ = उद्गच्छति। उद्गतः। 1. ಮೇಲಕ್ಕೆ ಹೋಗು. ಮೇಲಕ್ಕೆ ಹೊರಡು. "रोमोद्गमः प्रादुरभूदुमायाः" कुमा० ७-७७। 2. ಮೇಲಕ್ಕೆ ಏಳು. "उद्गतेन्दुमविभिन्नतमिस्रां पश्यति स्म रजनीमवितृप्तः" किरा० ९-२४।

(13) प्रति+उद्+गम्लृ=प्रत्युद्गच्छति। प्रत्युद्गतः। ಎದುರುಗೊಂಡು ಹೋಗು. "श्रुतप्रकाशं यशसा प्रकाशः प्रत्युज्जगामातिथिमातिथेयः" रघु० ५-२।

(14) उप + गम्लृ = उपगच्छति। 1. ಹತ್ತಿರಕ್ಕೆ ಹೋಗು, ಸಮೀಪಕ್ಕೆ ಹೋಗು. "सदनमुपगतोऽहं पूर्वमम्भोजयोनेः सपदि मुनिभिरुच्चैरासनेषूज्झितेषु" प्रबोध० २-१०। 2. ಪ್ರಾಪ್ತವಾದ. "उपगतमवधीरयन्त्यभव्याः स निपुणमेत्य कयाचिदेवमूचे" किरा० १०-५१।

(15) अभि+उप+गम्लृ=अभ्युपगच्छति। अभ्युपगमः। 1. ಅಂಗೀಕರಿಸು. ಒಪ್ಪಿಕೊ, ಸಂಮತಿಸು. "करिष्याम्येवं नो पुनरिति भवेदभ्युपगमः" रत्ना० २-१९। 2. ಎದುರಾಗಿ ಹತ್ತಿರಕ್ಕೆ ಹೋಗು.

(16) निर + गम्लृ = निर्गच्छति। निर्जगाम। ಹೊರಡು, ಹೊರಟುಹೋಗು. "अधिविन्ना तु या नारी निर्गच्छेद्रुषिता गृहात्" मनु० ९-८३।

(17) परा + गम्लृ = परागच्छति। परागतः। 1. ವ್ಯಾಪಿಸು. ಹರಡು. "नवपलाशपलाशवनं पुरः स्फुटपरागपरागतपङ्कजम्" माघ० ६-२। 2. ಹಿಂತಿರುಗಿ ಬಾ.

(18) परि + गम्लृ = परिगच्छति। परिगतः। 1. ಸುತ್ತು, ಸುತ್ತಲೂ ತಿರುಗು. ಸುತ್ತಲೂ ಹೋಗು. "यथा हि मेरुर्भगवता (सूर्येण) नित्यशः परिगम्यते" भा० वन०। 2. ಬಳಸು, ಸುತ್ತುವರೆ, ಸುತ್ತುಗಟ್ಟು. "अथ स वल्कदुकूलकुथादिभिः परिगतो ज्वलदुद्धतवालधिः" भट्टि० १०-१।

(19) प्रति + गम्लृ = पतिगच्छति। प्रतिगतः। ಹಿಂತಿರುಗಿ ಹೋಗು.

(20) वि+गम्लृ=विगच्छति। विगमः। ಹೊರಟು ಹೋಗು, ಮರೆಯಾಗಿ ಹೋಗು, ಮಾಯವಾಗು. "रुचिभर्तुरस्य विरहाधिगमादिति सन्ध्ययापि सपदि व्यगमि" माघ० ९-१७।

(21) सम्+गम्लृ = संगच्छते। संगमः। ಒಟ್ಟು ಗೂಡು, ಒಟ್ಟಿಗೆ ಸೇರು, ಜೊತೆಯಲ್ಲಿ ಸೇರು. "संजग्माते तावपायानपेक्षौ सेनाम्भोधी धीरनादौ रयेण" माघ० १८-१।

**गम ಗಮ** (पुं०) 1. ಜೈತ್ರಯಾತ್ರೆ, ವಿಜಯಕ್ಕಾಗಿ ಹೊರಟ ಪ್ರಯಾಣ. गम्लृ (गतौ) "अप्" (३-३-५८)। 2. ಮಾರ್ಗ, ದಾರಿ. "अश्वस्यैकाहगमः" पा० सू० ५-२-१९। 3. ಹೋಗುವುದು, ನಡೆಯುವುದು. 4. ಉಪಭೋಗ, ಸಂಭೋಗ, ಹೆಂಗಸಿನೊಡನೆ ಸಂಬಂಧ. "ब्रह्महत्या सुरापानं स्तेयं गुर्वङ्गनागमः" मनु० ११-५४। 5. ಜೂಜು, ದ್ಯೂತ, ಪಗಡೆಯಾಟ ಮುಂತಾದುದು. 6. ಯೋಚಿಸದೆ ಮಾಡುವ ಕಾರ್ಯ, ದುಡುಕಿ ಮಾಡುವ ಕೆಲಸ. 7. ಸಮಾನವಾದ ಪಾಠ, ಎರಡು ಗ್ರಂಥಗಳಲ್ಲಿರುವ ಒಂದೇ ವಿಷಯ, ಏಕರೀತಿಯಾದ ಸಾಹಿತ್ಯ. "गमोऽध्वद्यूतप्रभेदयोः। सदृक्पाठेऽपि" हेम०।

**गमक ಗಮಕ** (वि०) 1. ನಡೆಯಿಸುವವನು, ಚಲಿಸುವಂತೆ ಮಾಡುವವನು, ಹೊರಡಿಸುವವನು. गमयति — गम्लृ (गतौ) + णिच् "ण्वुल्" (३-१-१३३)। 2. ಬೋಧಿಸುವ, ತಿಳಿಸುವ, ಚೆನ್ನಾಗಿ ತಿಳಿಯಪಡಿಸುವ. "यत् प्रौढित्वमुदारता च वचसां यच्चार्थतो गौरवं तच्चेदस्ति ततस्तदेव गमकं पाण्डित्यवैदग्ध्ययोः" मालती० १-७। 3. ಸಂಗೀತದ ಒಂದು ಸ್ವರ.

**गमकारित्व ಗಮಕಾರಿತ್ವ** (न०) ವೇಗ, ಶೀಘ್ರತೆ. "रभसो गमकारित्वम्" त्रिकाण्ड०।

**गमथ ಗಮಥ** (पुं०) 1. ರಸ್ತೆ, ದಾರಿ. 2. ಪಥಿಕ, ಪ್ರಯಾಣಿಕ. गम्लृ (गतौ) "अथ" (उ० ३-११३)। "गमथः पथिकः पन्थाश्च" सि० कौ०।

**गमन ಗಮನ** (न०) 1. ನಡೆಯುವುದು, ಹೋಗುವುದು, ಸಂಚಾರ. गम्लृ (गतौ) भावे "ल्युट्" (३-३-११५)। "श्रोणीभारादलसगमना स्तोकनम्रा स्तनाभ्याम्" मेघ०

२-१९। 2. ವಿಜಯಕ್ಕಾಗಿ ಹೊರಟ ಪ್ರಯಾಣ. 3. ಹೆಂಗಸಿನೊಡನೆ ಸಂಭೋಗ. 4. ಉತ್ಕ್ಷೇಪಣ ಮೊದಲಾದ ಐದು ವಿಧ ಕರ್ಮಗಳಲ್ಲೊಂದು. ["कर्मन्" ಪದದಲ್ಲಿ ನೋಡಿ.]

**गमनिका ಗಮನಿಕಾ** (स्त्री०) ಅಭಿಪ್ರಾಯ ನಿರೂಪಣೆ. ವಿಷಯದ ವಿವರಣೆ.

**गमनीय ಗಮನೀಯ** (वि०) 1. ಹೋಗಲು ಶಕ್ಯವಾದ. 2. ಹೋಗಲು ಅರ್ಹವಾದ. 3. ಹೋಗಬೇಕಾದ. 4. ತಿಳಿಯಲು ಶಕ್ಯವಾದ. 5. ತಿಳಿಯಲು ಅರ್ಹವಾದ. 6. ತಿಳಿಯಲ್ಪಡುವ. गम्लृ (गतौ) "अनीयर्" (३-१-९६)। 7. ಹೊರಡಿಸಲು ಶಕ್ಯವಾದ. 8. ಹೊರಡಿಸಲು ಅರ್ಹವಾದ. 9. ಹೊರಡಿಸಲ್ಪಡುವ. 10. ತಿಳಿಸಲು ಯೋಗ್ಯವಾದ. 11. ತಿಳಿಸಲು ಶಕ್ಯವಾದ. 12. ತಿಳಿಸಲ್ಪಡುವ. गम्लृ (गतौ) + णिच् "अनीयर्" (३-१-९६)।

**गमयत् ಗಮಯತ್** (वि०) 1. ಹೊರಡಿಸುತ್ತಿರುವ. 2. ತಿಳಿಸುತ್ತಿರುವ, ಬೋಧಿಸುತ್ತಿರುವ. गम्लृ (गतौ) + णिच् "शतृ" (३-२-१२४)। स्त्रियाम् "ङीप्" (४-१-६)। –यन्ती –ಯಂತೀ.

**गमयितव्य ಗಮಯಿತವ್ಯ** (वि०) 1. "गमनीय" ಪದದ 7–12ರ ಅರ್ಥ. गम्लृ (गतौ) + णिच् "तव्यः" (३-१-९६)। 2. (ಕಾಲ) ಕಳೆಯಲ್ಪಡುವ. "अविनोद-दीर्घयामा कथं नु रात्रिर्गमयितव्या" विक्र० ३-४।

**गमयितृ ಗಮಯಿತೃ** (वि०) 1. ಹೊರಡಿಸುವ. ಹೊರಡುವಂತೆ ಮಾಡುವ. 2. ತಿಳಿಯಪಡಿಸುವ. गम्लृ (गतौ) + णिच् "तृच्" (३-१-१३३)। स्त्रियाम् "ङीप्" (४-१-५)। –यित्री –ಯಿತ್ರೀ.

**गमित ಗಮಿತ** (वि०) 1. ಹೊಂದಿಸಲ್ಪಟ್ಟ. गम्लृ (गतौ) + णिच् "क्तः" (३-२-१०२)। "विधुरं किमतः परं परैरवगीतां गमिते दशामिमाम्" किरा० २-७। 2. ಹೊರಡಿಸಲ್ಪಟ್ಟ, ಹೋಗುವಂತೆ ಮಾಡಲ್ಪಟ್ಟ, ಕಳುಹಿಸಲ್ಪಟ್ಟ. "कोटरमकालवृष्ट्या प्रबल-पुरोवातया गमिते" माल० ४-२।

**गम्भारी ಗಂಭಾರೀ** (स्त्री०) ಶಿವನೆಯ ಮರ. "गम्भारी सर्वतोभद्रा" अम०।

**गम्भीर ಗಂಭೀರ** (पुं०) 1. ಜಂಬೀರವೃಕ್ಷ, ನಿಂಬೆ ಗಿಡ. 2. ಪದ್ಮ, ಕಮಲ. गच्छति जलमत्र – गम्लृ (गतौ) "ईरन्" भश्च (उ० ४-३५)। 3. ತಗ್ಗಾದ, ಆಳವಾದ. "गम्भीराः प्रावहन्नद्यः समजायन्त च ह्रदाः" भट्टि० १७-६३। 4. ಗಂಭೀರವಾದ, ಮನವನ್ನು ಆಕರ್ಷಿಸುವ. "स्निग्धगम्भीरनिर्घोषमेकं स्यन्दनमास्थितौ" रघु० १-३६। 5. ಗೂಢವಾದ, ಗಹನವಾದ. 6. ಗಾಢವಾದ, ಘನವಾದ, ಶ್ರೇಷ್ಠವಾದ.

**गम्भीरवेदिन् ಗಂಭೀರವೇದಿನ್** (वि०) ತುಂಟತನದ ಆನೆ, ತಕರಾರುಮಾಡುವ ಆನೆ, ಎಷ್ಟೇ ಶಿಕ್ಷಿಸಿದರೂ ಲಕ್ಷ್ಯ ಮಾಡದ ಆನೆ. गम्भीरं मन्दं वेत्ति – विद (ज्ञाने) "णिनिः" (३-२-७८)। "चिरकालेन यो वेत्ति शिक्षां परिचितामपि। गम्भीरवेदी विज्ञेयः स गजो गज-वेदिभिः"। "अङ्कुशं द्विरदस्येव यन्ता गम्भीरवेदिनः" रघु० ४-३९।

**गम्भीरशील ಗಂಭೀರಶೀಲ** (वि०) ಗಂಭೀರಸ್ವಭಾವದ, ಉನ್ನತಮಟ್ಟದ ಸ್ವಭಾವದ. गम्भीरं शीलं यस्य।

**गम्य ಗಮ್ಯ** (वि०) 1. ಹೊಂದಲು ಯೋಗ್ಯವಾದ, ಹತ್ತಿರಕ್ಕೆ ಹೋಗಬಹುದಾದ. गम्लृ (गतौ) "यत्" (३-१-९८)। 2. ಹೊಂದಲು ಶಕ್ಯವಾದ. 3. ಹೊಂದಲ್ಪಡುವ. 4. ತಿಳಿಯಲು ಶಕ್ಯವಾದ. 5. ತಿಳಿಯಲು ಯೋಗ್ಯವಾದ. 6. ತಿಳಿಯಲ್ಪಡುವ. "रुक्माभं स्वप्नधीगम्यं विद्यात्तं पुरुषं परम्" मनु० १२-१२२। 7. ಸ್ತ್ರೀಯರು ಭೋಗಿಸಲು ಅರ್ಹನಾದ (ಪುರುಷ). 8. ಪುರುಷರು ಭೋಗಿಸಲು ಅರ್ಹಳಾದ (ಹೆಂಗಸು). "अवरुद्धासु दासीषु भुजिष्यासु तथैव च। गम्यास्वपि पुमान् दाप्यः पञ्चाशत्-पणिकं दमम्" याज्ञ० २-२९०। 9. ವಾಸಿಯಾಗುವ, ನಿವೃತ್ತಿಹೊಂದುವ, ಗುಣವಾಗುವ (ರೋಗ). "न गम्यो मन्त्राणां न च भवति भैषज्यविषयो न चापि प्रध्वंसं व्रजति विविधैः शान्तिकशतैः" भर्तृ० २-७७। 10. ಅನುರೂಪನಾದ, ಸದೃಶನಾದ, ಅಪೇಕ್ಷಿಸಲು ಅರ್ಹನಾದ. "गम्यं त्वभावे दातृणां कन्या कुर्यात् स्वयंवरम्" याज्ञ० १-६४।

**गम्यता ಗಮ್ಯತಾ** (स्त्री०) 1. ಹೊಂದಲು ಅರ್ಹವಾಗಿರುವಿಕೆ, ಸಮೀಪಕ್ಕೆ ಹೋಗಲು ಯೋಗ್ಯವಾಗಿರುವಿಕೆ. 2. ಗ್ರಹಣಮಾಡಲು (ತಿಳಿಯಲು) ಸಾಧ್ಯವಾಗಿರುವಿಕೆ, ಸ್ಪಷ್ಟವಾಗಿರುವಿಕೆ. गम्यस्य भावः "तल्" (५-१-११९)। "त्वः"। गम्यत्वम् ಗಮ್ಯತ್ವಮ್.

**गम्यमान ಗಮ್ಯಮಾನ** (वि०) 1. ತಿಳಿಯಲ್ಪಡುತ್ತಿರುವ. गम्लृ (गतौ) कर्म० "शानच्" (३-२-१२४)। 2. ಹೊಂದಲ್ಪಡುತ್ತಿರುವ. "गम्यमानं न तेनासीदगतं क्रामता पुरः" भट्टि० ८-२।

**गय ಗಯ** (ಪುಂ०)1. ಸುಗ್ರೀವ ಸೈನ್ಯದಲ್ಲಿದ್ದ ಒಬ್ಬ ವಾನರ. 2. ಪ್ರಿಯವ್ರತರಾಜನ ವಂಶದ ನಕ್ತನ ಮಗ. "विभोरत्यां च पृथुषेणस्तस्मान्नक्त: आकूत्यां नक्तात् द्रुतिपुत्रो गयो राजर्षिप्रवर उदारश्रवा अजायत" भाग० ५-१५-६। 3. ಚಂದ್ರವಂಶದ ಆಯುರಾಜನ ಮಗ, ನಹುಷನ ಸಹೋದರ. "नहुषं वृद्धशर्माणं रंजि गयमनेनसम्। स्वर्भानवी सुतानेतानायो: पुत्रान् प्रचक्षते" भा० आदि० ६९-२८। 4. ಒಬ್ಬ ಗಂಧರ್ವ. [ಒಂದು ದಿನ ಶ್ರೀಕೃಷ್ಣನು ಅರ್ಘ್ಯಕೊಡುತ್ತಿದ್ದಾಗ, ತಾಂಬೂಲಚರ್ವಣ ಮಾಡುತ್ತ ವಿಮಾನದಲ್ಲಿ ಹೋಗುತ್ತಿದ್ದ ಇವನ ತಂಬುಲವು ಬಿದ್ದು ಕೃಷ್ಣನ ಅಂಜಲಿಯು ಅಶುದ್ಧವಾಯಿತು. ಅವರಿಂದ ಕೃಷ್ಣನ ಕೋಪಕ್ಕೆ ಪಾತ್ರನಾದ ಗಯನು ನಾರದರ ಮಾತಿನಂತೆ ಅರ್ಜುನನನ್ನು ಮರೆಹೊಕ್ಕು ರಕ್ಷಣೆಯನ್ನು ಕೇಳಿದನು. ರಕ್ಷಿಸುವುದಾಗಿ ಅರ್ಜುನನೂ ಅಭಯಕೊಟ್ಟನು. ಇವನಿಗಾಗಿ ಕೃಷ್ಣಾರ್ಜುನರಿಬ್ಬರಿಗೂ ಯುದ್ಧ ನಡೆಯಿತು. ದೇವತೆಗಳ ಪ್ರಾರ್ಥನೆಯಂತೆ ಶ್ರೀಕೃಷ್ಣನು ಶರಣಾಗತನಾದ ಗಯನನ್ನು ರಕ್ಷಿಸಿದನು.] ಈ ಕಥೆಗೆ ಯಾವ ಪುರಾಣದಲ್ಲೂ ಆಧಾರವಿಲ್ಲದಿದ್ದರೂ ಗಯಚರಿತ್ರೆಯು ಮಾತ್ರ ಲೋಕಪ್ರಸಿದ್ಧವಾಗಿರುವುದು. 5. ಒಬ್ಬ ರಾಕ್ಷಸ. ಇವನು ಲೋಕಕಂಟಕನಾಗಿದ್ದನು. ಬ್ರಹ್ಮನು ಇವನ ನಿಗ್ರಹಕ್ಕಾಗಿ ಯೋಚಿಸಿ ತಾನು ಮಾಡಬೇಕಾದ ಯಾಗದಲ್ಲಿ ಯಜ್ಞವೇದಿಕೆಯನ್ನು ಇವನ ಶರೀರದ ಮೇಲೆ ನಿರ್ಮಿಸಬೇಕೆಂದು ಕೇಳಲು ಇವನು ಅದಕ್ಕೆ ಒಪ್ಪಿದನು. ಬ್ರಹ್ಮನು ಒಂದು ದೊಡ್ಡ ಚಪ್ಪಡಿಯನ್ನು ಇವನ ಶರೀರದ ಮೇಲೆ ಹಾಸಿ ವೇದಿಕೆಯನ್ನು ನಿರ್ಮಿಸಿದನು. ಆಗ ಇವನ ಶರೀರವು ಅಲುಗಾಡಿತು. ತನ್ನ ಶರೀರವು ಅಲುಗಾಡದಿರಬೇಕಾದರೆ ತಾನು ಸತ್ತಮೇಲೆ ಆ ಪ್ರದೇಶವು ಪುಣ್ಯಕ್ಷೇತ್ರವಾಗಬೇಕೆಂದೂ ಈ ಕ್ಷೇತ್ರದಲ್ಲಿ ಪಿತೃಗಳ ಪ್ರೀತ್ಯರ್ಥವಾಗಿ ಕೊಡುವ ಪಿಂಡವು ಅಕ್ಷಯ್ಯವಾಗಬೇಕೆಂದೂ ವಿಷ್ಣುವನ್ನು ಪ್ರಾರ್ಥಿಸಿದನು. ವಿಷ್ಣುವು "ಆಗಲಿ" ಎಂದನು. ಅವನ ಕಾಲಾನಂತರ ಆ ಪ್ರದೇಶಕ್ಕೆ "गया" ಎಂಬ ಪ್ರಸಿದ್ಧಿ ಬಂದಿತು. ಈಗ ಯಾತ್ರಿಕರೆಲ್ಲರೂ ಈ ಕ್ಷೇತ್ರದಲ್ಲಿ ಪಿತೃಗಳಿಗೆ ಪಿಂಡಪ್ರದಾನ ಮಾಡುತ್ತಾರೆ. 6. ಧನ, ಸಂಪತ್ತು. 7. ಗೃಹ, ಮನೆ. 8. ಗೃಹೋಪಕರಣ. 9. ಒಬ್ಬ ರಾಜರ್ಷಿ. 10. ಹವಿರ್ಧಾನರಾಜನ ಮಗ. 11. ಗಯಾಕ್ಷೇತ್ರದ ಪರ್ವತ. 12. ಅಮೂರ್ತರಜಸ್ಸಿನ ಒಬ್ಬ ಮಗ.

**गयशिरस् ಗಯಶಿರಸ್** (ನಂ०) ಗಯಾಕ್ಷೇತ್ರದ ಸಮೀಪದಲ್ಲಿರುವ ಒಂದು ಪರ್ವತ.

**गया ಗಯಾ** (ಸ್ತ್ರೀ०) ಗಯಾಕ್ಷೇತ್ರ, ಹಿಂದುಗಳ ಒಂದು ಪವಿತ್ರ ಯಾತ್ರಾಸ್ಥಳ. गयो गयासुर: कारणत्वेनास्त्यस्या: "अच्" (५-२-१२७)। ["गय" ಪದದಲ್ಲಿ ನೋಡಿ.]

**ಗಯಾಮಾಹಾತ್ಮ್ಯ:** "गयनाम्ना गयाख्याता क्षेत्रं ब्रह्माभिकाङ्क्षितम्। काङ्क्षन्ति पितर: पुत्रान् नरकाद्भयभीरव:। गयां यास्यति य: पुत्र: स नस्त्राता भविष्यति। गयाप्राप्तं सुतं दृष्ट्वा पितृणामुत्सवो भवेत्। पद्भ्यामपि जलं स्पृष्ट्वा सोऽस्मभ्यं किं न दास्यति। गयां गत्वान्नदाता य: पितरस्तेन पुत्रिण:। पक्षत्रयनिवासी च पुनात्यासप्तमं कुलम्। ब्रह्महत्या सुरापानं स्तेयं गुर्वङ्गनागम:। पापं तत्सङ्गजं सर्वं गयाश्राद्धाद्विनश्यति। आत्मजोऽप्यन्यजो वापि गयाभूमौ यदा तदा। यन्नाम्ना पातयेत्पिण्डं तन्नयेद्ब्रह्म शाश्वतम्। नामगोत्रे समुच्चार्य पिण्डपातनमीक्षते। येन केनापि कस्मैचित् स याति परमां गतिम्" वायुपु०।

**गर ಗರ** (ಪುಂ०)1. ನುಂಗುವುದು, ತಿನ್ನುವುದು. गॄ (निगरणे) भावे "अप्" (३-३-५७)। 2. ವಿಷ, ನಂಜು. गीर्यते भक्ष्यते गॄ कर्म० "अप्" (३-३-५७)। "तस्मादिदं विषं भुञ्जे प्रजानां स्वस्तिरस्तु मे" भाग० ८-२-४१। 3. ಉಪವಿಷ, ಕೃತ್ರಿಮವಾದ ವಿಷ. 4. ರೋಗ. गिरति जीवम्—गॄ "अच्" (३-१-१३४)। 5. ವತ್ಸನಾಭವೆಂಬ ವಿಷ. (ನಂ०) 6. ಹನ್ನೊಂದು ವಿಧ ಕರಣಗಳಲ್ಲೊಂದು, ಐದನೆಯ ಕರಣ.

**गरघ्न ಗರಘ್ನ** (ಪುಂ०) 1. ವಿಷನಾಶಕವಾದ ಮತ್ಸ್ಯ. 2. ಕರಿಗಗ್ಗರ ಗಿಡ. 3. ಭಾರಂಗಿ ಗಿಡ. गरं हन्ति—हन (हिंसागत्यो:) "टक्" (३-२-५३)।

**गरण ಗರಣ** (ನಂ०) ನುಂಗುವುದು, ತಿನ್ನುವುದು. गॄ (निगरणे) भावे "ल्युट्" (३-३-११५)।

**गरद ಗರದ** (ನಂ०) 1. ವಿಷ, ನಂಜು. (ವಿ०) 2. ವಿಷಪ್ರಯೋಗಮಾಡುವವನು, ವಿಷವನ್ನು ಹಾಕುವವನು. गरं ददाति—डु दाञ् (दाने) "क:" (३-२-३)। "अगारदाही गरद: कुण्डाशी सोमविक्रयी। समुद्रयायी बन्दी च तैलिक: कूटकारक:" मनु० ३-१५८।

**गरल ಗರಲ** (ನಂ०) 1. ನಂಜು, ಹಾವಿನ ವಿಷ. गरं लाति—ला (आदाने) "क:" (३-२-३)। 2. ಹುಲ್ಲಿನ ಹೊರೆ. 3. ಒಂದು ಅಳತೆ. "गरलं पन्नगविषे तृणपूलकमानयो:" हेम०।

**गरलपुरी ಗರಲಪುರೀ** (स्त्री०) ನಂಜನಗೂಡು.

**गरलारि ಗರಲಾರಿ** (पुं०) ಮರಕತ ಮಣಿ.

**गरव्रत ಗರವ್ರತ** (न०) ಮಯೂರ, ನವಿಲು. गरं विषसहितसर्पभोजनं व्रतमस्य ।

**गरहन् ಗರಹನ್** (पुं०) 1. ಕಲಿಬೇವಿನ ಗಿಡ. 2. ಗಂಟು ಭಾರಂಗಿ. "गरहा कालशाकोऽपि" त्रिकाण्ड० ।

**गरा ಗರಾ** (स्त्री०) ದೇವತಾಳೆ ಮರ.

**गरागरी ಗರಾಗರೀ** (स्त्री०) ದೇವತಾಳೆ ಮರ. गरं मूषिकविषमागिरति—गॄ (निगरणे) "अच्" (३-१-१३४)। गौरा० "ङीष्" (४-१-४१)। "वेणी गरागरी देवताली जीमूत इत्यपि" अम० ।

**गरिमन् ಗರಿಮನ್** (पुं०) 1. ಗುರುತ್ವ, ಭಾರ, ತೂಕ. गुरोर्भावः वा "इमनिच्" (५-१-१२२)। पक्षे—"अण्" (५-१-१३१)। **गौरवम् ಗೌರವಮ್.** 2. ಘನತೆ, ಗೌರವ, ಮರ್ಯಾದೆ. "अचेष्टताष्टापदभूमिरेणुः पादाहतो यत्सदृशं गरिम्णः" माघ० ३-२८।

**गरिष्ठ ಗರಿಷ್ಠ** (वि०) 1. ಹೆಚ್ಚು ಭಾರವಾದ. 2. ಅತಿ ದೊಡ್ಡದಾದ. 3. ಘನತೆಯುಳ್ಳ. अतिशयेन गुरुः "इष्ठन्" (५-३-५५)। गुरोः गर् आदेशः (६-४-१५७)।

**गरीयस् ಗರೀಯಸ್** (वि०) 1. ಹೆಚ್ಚು ಭಾರವಾದ. 2. ಬಹಳ ದೊಡ್ಡದಾದ. 3. ಹೆಚ್ಚು ಘನತೆಯುಳ್ಳ. अयमनयोरतिशयेन गुरुः "ईयसुन्" (५-३-५७)। गुरोः गर् आदेशः (६-४-१५७)। "सखा गरीयान् शत्रुश्च कृत्रिमस्तौ हि कार्यतः" माघ० २-३६। स्त्रियाम् "ङीप्" (४-१-६)। **–यसी –ಯಸೀ.** "शिवमौपयिकं गरीयसीं फलनिष्पत्तिमदूषितायतिम्" किरा० २-३५।

**गरुड ಗರುಡ** (पुं०) 1. ಕಶ್ಯಪನ ಮಗ, ವಿನತೆಯ ಪುತ್ರ, ಪಕ್ಷಿರಾಜ. गरुद्भ्यां डयते—डीङ् (विहायसा गतौ) "डः" (३-२-१०१)। पृषो०। गॄ (निगरणे) "उडच्" (उ० ४-१५९) वा। "विनतापि सुसिद्धार्था बभूव मुदिता तदा। जनयामास पुत्रौ द्वावरुणं गरुडं तथा। विकलाङ्गो ऽरुणस्तत्र भास्करस्य पुरःसरः। पतत्रिणां तु गरुड इन्द्रत्वेनाभ्यषिच्यत" भा० आदि०। "गरुडा इव पन्नगानुदग्रान् द्रुमषण्डानिव मारुताः प्रचण्डाः" याद० १५-११३। 2. ಗರುಡನ ಆಕಾರದಲ್ಲಿರುವ ಮನೆ. 3. ಗರುಡನ ಆಕಾರದಲ್ಲಿ ನಿಲ್ಲಿಸುವ ಸೇನೆಗಳ ವ್ಯೂಹ. "दण्डव्यूहेन तन्मार्गं यायात्तु शकटेन वा। वराहमकराभ्यां वा सूच्या वा गरुडेन वा" मनु० ७-१८७। ಹಿಂಭಾಗದಲ್ಲಿ ಕಿರಿದಾಗಿಯೂ ಮಧ್ಯದಲ್ಲಿ ವಿಸ್ತಾರವಾಗಿಯೂ ಇರುವಂತೆ ಸೈನ್ಯವನ್ನು ನಿಲ್ಲಿಸುವುದು ವರಾಹವ್ಯೂಹ. ಇದೇ ರೀತಿಯಲ್ಲಿ ಮಧ್ಯಭಾಗವು ಮತ್ತಷ್ಟು ಅಗಲವಾಗಿರುವಂತೆ ನಿಲ್ಲಿಸುವುದು ಗರುಡವ್ಯೂಹ. "सूक्ष्ममुखपश्चाद्भागः पृथुमध्यो वराहव्यूहः। एष एव पृथुतरमध्यो गरुडव्यूहः इति कुल्लूकभट्टः।

**गरुडध्वज ಗರುಡಧ್ವಜ** (पुं०) ವಿಷ್ಣು. गरुडः ध्वजोऽस्य। "अक्षस्तु तार्क्ष्यो वहनात् रथावयवसाम्यतः। स एव तु ध्वजो यस्य स उक्तो गरुडध्वजः" इति निरुक्तिः। "महर्धि ऋद्धो वृद्धात्मा महाक्षो गरुडध्वजः" वि० स०। "पयांसि भक्त्या गरुडध्वजस्य ध्वजानिवोच्चिक्षिपिरे फणीन्द्राः माघ० ३-७७।

**गरुडपुराण ಗರುಡಪುರಾಣ** (न०) ವ್ಯಾಸಮಹರ್ಷಿಗಳಿಂದ ರಚಿತವಾದ ಹದಿನೆಂಟು ಪುರಾಣಗಳಲ್ಲೊಂದು. गरुडाय (विष्णुना) उक्तं पुराणम्। ಈ ಪುರಾಣವು ವಿಷ್ಣುವಿನಿಂದ ಗರುಡನಿಗೆ ಪ್ರೋಕ್ತವಾದುದು. "मरीचे शृणु वच्म्यद्य पुराणं गारुडं शुभम्। गरुडायाब्रवीत् पृष्टो भगवान् गरुडासनः" नारदीयपु०। ಈ ಪುರಾಣದಲ್ಲಿ ಹತ್ತೊಂಬತ್ತು ಸಹಸ್ರ (19,000) ಗ್ರಂಥಗಳಿರುವುವು. [255 ನೆಯ ಪುಟದಲ್ಲಿ ಈ ಸಂಖ್ಯೆಯು 950 ಎಂದು ತಪ್ಪಾಗಿ ಬಿದ್ದಿರುವುದು.] ಗರುಡಪುರಾಣದ ಪೂರ್ವಖಂಡದಲ್ಲಿ ಸೂರ್ಯಾದಿ ಪೂಜಾವಿಧಿ, ದೀಕ್ಷಾವಿಧಿ, ಲಕ್ಷ್ಮೀ ಮೊದಲಾದವರ ಪೂಜಾಕ್ರಮ, ಯೋಗಾಧ್ಯಾಯ, ವಿಷ್ಣು ಸಹಸ್ರನಾಮಕೀರ್ತನ, ವಿಷ್ಣುಧ್ಯಾನ, ಗೋಪಾಲಾರ್ಚನೆ, ಶ್ರೀಧರಾರ್ಚನೆ, ದುರ್ಗಾರ್ಚನೆ, ಸುರಾರ್ಚನೆ, ಮಾಹೇಶ್ವರೀ ಪೂಜೆ, ಮೂರ್ತಿಧ್ಯಾನ, ಅಷ್ಟಾಂಗಯೋಗಗಳು, ದಾನ ಧರ್ಮಗಳು, ಪ್ರಾಯಶ್ಚಿತ್ತಗಳು, ಸಾಮುದ್ರಿಕ, ಸ್ವರಜ್ಞಾನ, ರತ್ನಪರೀಕ್ಷೆ, ಪುಣ್ಯತೀರ್ಥಗಳ ಮಾಹಾತ್ಮ್ಯ, ವಾಸ್ತುಮಾನ, ಪ್ರಾಸಾದಗಳ ಲಕ್ಷಣ, ವರ್ಣಧರ್ಮ ಮುಂತಾದ ಮಾನವ ಜೀವನಕ್ಕೆ ಬೇಕಾದ ಅನೇಕ ವಿಷಯಗಳೂ ಉತ್ತರಖಂಡದಲ್ಲಿ ಮನುಷ್ಯನ ಉತ್ತರಕರ್ಮಗಳಿಗೆ ಬೇಕಾದ ವಿಷಯಗಳೂ ಉಕ್ತವಾಗಿವೆ.

**गरुडमुद्रा ಗರುಡಮುದ್ರಾ** (स्त्री०) ಗರುಡನ ಆಕಾರದಂತೆ ಹಸ್ತಗಳ ಬೆರಳುಗಳನ್ನು ಮಡಿಸಿಕೊಂಡು ಮಾಡುವ ಒಂದು ಮುದ್ರೆ, ಎರಡೂ ಹಸ್ತಗಳನ್ನು ವಿಮುಖ (ಹಿಮ್ಮುಖ) ವಾಗಿ ಮಾಡಿಕೊಂಡು ಕಿರುಬೆರಳುಗಳನ್ನು ಜೋಡಿಸಿ ಗಂಟಿಕ್ಕಿ ಎರಡು ತರ್ಜನಿ ಮತ್ತು ಅಂಗುಷ್ಠ (ಹೆಬ್ಬೆರಳು) ಗಳನ್ನು ಸೇರಿಸಿಕೊಂಡು ಮಧ್ಯದ ಬೆರಳು

ಮತ್ತು ಅನಾಮಿಕೆಗಳನ್ನು ಎರಡು ರೆಕ್ಕೆಗಳಂತೆ ಅಡಿಸುತ್ತ ಮಾಡುವುದು ಗರುಡಮುದ್ರೆ. ಇದು ವಿಷ್ಣುವಿಗೆ ಪ್ರೀತಿಕರವಾದುದು. "हस्तौ तु विमुखौ कृत्वा ग्रथयित्वा कनिष्ठिके। मिथस्तर्जनिके श्लिष्टे श्लिष्टावङ्गुष्ठकौ तथा। मध्यमानामिकाग्रे तु द्वौ पक्षाविव चालयेत्। एषा गरुडमुद्रा स्यात् विष्णोः सन्तोषवर्द्धनी" तन्त्रसा०।

**गरुडव्यूह ಗರುಡವ್ಯೂಹ** (पुं०) ಗರುಡನ ಆಕಾರದಂತೆ ಸೇನೆಗಳನ್ನು ನಿಲ್ಲಿಸುವುದು. ["गरुड" ಪದದಲ್ಲಿ ನೋಡಿ.]

**गरुडाग्रज ಗರುಡಾಗ್ರಜ** (पुं०) ಗರುಡನ ಅಣ್ಣ, ವಿನತೆಯ ಹಿರಿಯಮಗ, ಅರುಣ. गरुडस्याग्रजः। "विभिन्नवर्णा गरुडाग्रजेन सूर्यस्य रथ्याः परितः स्फुरन्त्याः" माघ० ४-१४।

**गरुडाङ्कित ಗರುಡಾಂಕಿತ** (न०) ಮರಕತ ಮಣಿ. गरुड इवाङ्कितम्।

**गरुडाश्मन् ಗರುಡಾಶ್ಮನ್** (पुं०) ಮರಕತ ಮಣಿ.

**गरुडासन ಗರುಡಾಸನ** (पुं०) 1. ವಿಷ್ಣು. 2. ಯೋಗಾಸನದ ಒಂದು ಭೇದ.

**गरुडोपनिषद् ಗರುಡೋಪನಿಷದ್** (स्त्री०) ಅಥರ್ವವೇದದ ಒಂದು ಉಪನಿಷತ್ತು.

**गरुत् ಗರುತ್** (पुं०) ಗರಿ, ರೆಕ್ಕೆ. गिरति—गॄ (निगरणे) "उतिः" (उ० १-९४)। "विलासैर्दम्भोलेर्दलितगरुतस्सर्वगिरयः स चैको मैनाकः पयसि मम मग्नो निवसति" प्र० रा० ५-५०।

**गरुत्मत् ಗರುತ್ಮತ್** (पुं०) 1. ಗರುಡ, ವಿನತೆಯ ಮಗ. प्रशस्तौ गरुतौ स्तोऽस्य "मतुप्"(५-२-९४)। "गरुत्मतः कम्पितदिव्यवृक्षं पक्षानिलं पातुमुपेत्य नागाः" याद० १८-९४। (वि०)2. ರೆಕ್ಕೆಗಳುಳ್ಳ. "तयोरुपान्तस्थितसिद्धसैनिकं गरुत्मदाशीविषभीमदर्शनैः" रघु० ३-५७।

**गरुद्योधिन् ಗರುದ್ಯೋಧಿನ್** (पुं०) ಲಾವಕ್ಕಿ, ಭಾರತೀಪಕ್ಷಿ, ಗುವ್ವಜುಗಜಾತಿಯ ಒಂದು ಪಕ್ಷಿ. गरुता युध्यति—युध (संप्रहारे) "णिनिः" (३-२-७८)। "फलेखेला गरुद्योधी भारती व्योमनासिका" त्रिकाण्ड०।

**गर्ग ಗರ್ಗ** (पुं०)1. ಅಂಗಿರಸ ಮುನಿ, ಭರದ್ವಾಜ ಋಷಿಯ ವಂಶದ ಒಬ್ಬ ಋಷಿ. "वितथं चाभिषिच्याथ भरद्वाजो वनं ययौ। स चापि वितथः पुत्रान् जनयामास पञ्च वै। सुहोत्रं च सुहोतारं गयं गर्गं तथैव च। कपिलं च महात्मानम्" हरिवं०। 2. ವೃಷಭ, ಎತ್ತು. 3. ಕೆಸರಿನ ಎರುಬುಮುಳು. गॄ (निगरणे) "गः" (उ० १-१२५)। "गर्गो मुनिविशेषे स्याद्वृषे किञ्चुलकेऽपि च" हेम०। (पुं० ब० व०) 4. ಗರ್ಗಋಷಿಯ ವಂಶದಲ್ಲಿ ಹುಟ್ಟಿದವರು, ಗರ್ಗಗೋತ್ರದಲ್ಲಿ ಹುಟ್ಟಿದವರು. गर्गस्यापत्यानि पुमांसः गर्ग "यञ्" (४-१-१०५)। यञो लुक् (२-४-६४)।

**गर्गर ಗರ್ಗರ**(पुं०)1. ಒಂದು ಜಾತಿಯ ಮೀನು. स्त्रियाम् **गर्गरी ಗರ್ಗರೀ.** ಹೆಣ್ಣು ಮೀನು. (स्त्री०)2. ನೀರಿನ ಪಾತ್ರೆ. 3. ಕೊಡ, ಬಿಂದಿಗೆ, ಹೂಜಿ ಮೊದಲಾದುವು. गर्गेति शब्दं राति—रा (दाने) "कः" (३-२-३)। 4. ಮೊಸರು ಕಡೆಯುವ ಪಾತ್ರೆ. "अथ गर्गरो मीने स्यात् गर्गरी तु मन्थनी" हेम०। "कलसी गर्गरी तुल्या" त्रिकाण्ड०।

**गर्गरूप्य ಗರ್ಗರೂಪ್ಯ** (न०) ಗರ್ಗವಂಶದವರಿಂದ ಬಂದ. गर्गेभ्यः आगतम् "रूप्यः" (४-३-८३)।

**गर्गसंहिता ಗರ್ಗಸಂಹಿತಾ** (स्त्री०) ಗರ್ಗಾಚಾರ್ಯರಿಂದ ವಿರಚಿತವಾದ ಕಾಲಜ್ಞಾನವನ್ನುಂಟುಮಾಡುವ ಒಂದು ಜ್ಯೋತಿಷ ಗ್ರಂಥ.

**गर्गाट ಗರ್ಗಾಟ** (पुं०) ಒಂದು ಜಾತಿಯ ಮೀನು. "कोलपुच्छस्तु कङ्कः स्यात् गर्गाटो योगनालिकः" हारा०।

**गर्गीय ಗರ್ಗೀಯ** (वि०) ಗಾರ್ಗ್ಯರಿಗೆ ಹಿತವಾದ. गर्गेभ्यो हितम् "छः" (५-१-५)।

**गर्ज—शब्दे** (भ्वा० पर० अक० से०)। गर्जति। जगर्ज। गर्जिता। गर्जिष्यति। गर्जतु। अगर्जत्। गर्जेत्। गर्ज्यात्। अगर्जीत्। अगर्जिष्यत्। ಗರ್ಜಿಸು, ಗಟ್ಟಿಯಾಗಿ ಕೂಗು, ಅಬ್ಬರಿಸು, ಮೇಘದಂತೆ ಶಬ್ದಮಾಡು.

**भावे :**—गर्ज्यते। जगर्जे। गर्जिता। गर्ज्यताम्। अगर्ज्यत।

**णिचि :**—गर्जयति, —ते। गर्जयां चकार, —चक्रे, —बभूव, —आस। गर्जयिता। गर्जयतु, —ताम् ಇತ್ಯಾದಿ.

**सनि :**—जिगर्जिषति। जिगर्जिषां चकार, —बभूव, —आस। ಇತ್ಯಾದಿ.

**कृत्सु :**—गर्जितव्यम्। गर्जनीयम्। गर्ज्यम्। गर्जितः। गर्जितवान्। गर्जन्, गर्जन्ती। गर्जितुम्। गर्जितम्। गर्जनम्। गर्जित्वा। प्रगर्ज्य।

**गर्ज—शब्दे** (चुरा० उभ० सक० से०)। गर्जयति, —ते। गर्जयां चकार, —चक्रे, —बभूव, —आस। ಇತ್ಯಾದಿ.

**गर्ज ಗರ್ಜ** (पुं०) 1. ಗಜದ ಗರ್ಜನೆ, ಆನೆಯ ಕೂಗು. गर्ज (शब्दे) "घञ्" (३-३-१८)। 2. ಮೇಘಗರ್ಜನೆ,

ಮೋಡದ ಶಬ್ದ, ಗುಡುಗು. "अजहद्भृङ्गगीतेन गर्जडम्भरशोभिना। स्वकान्त्या कर्णतालेन क्लृप्तसंगीतखेलनम्" याद० १६-९। गुरुमत्त्वात् भावे "अ:" (३-३-१०३)। **गर्जा ಗರ್ಜಾ.**

**गर्जत् ಗರ್ಜತ್** (वि०) 1. ಗರ್ಜಿಸುತ್ತಿರುವ. ಗಟ್ಟಿಯಾಗಿ ಶಬ್ದಮಾಡುತ್ತಿರುವ. ಅಬ್ಬರಿಸುತ್ತಿರುವ. गर्ज (शब्दे) "शतृ" (३-२-१२४)। "गर्जन् हरिः साम्भसि शैलकुञ्जे प्रतिध्वनीनात्मकृतान् निशम्य" भट्टि० २-९। 2. ಗುಡುಗುತ್ತಿರುವ. "गर्जत्प्रर्जन्यनादं स्फुरितरविरुचं चक्षुरक्षुद्र रौद्रम्" मन्त्रराजस्तवः।

**गर्जन ಗರ್ಜನ** (न०) 1. ಆನೆಯ ಗರ್ಜನೆ. 2. ಮೇಘ ಗರ್ಜನೆ. 3. ಧ್ವನಿ, ಶಬ್ದ, ಸದ್ದು. गर्ज (शब्दे) भावे "ल्युट्" (३-३-११५)। 4. ಕೋಪ, ಸಿಟ್ಟು. 5. ಯುದ್ಧ. गर्ज कर० "ल्युट्" (३-३-११७)। "गर्जनं स्तनिते क्रुधि" हेम०।

**गर्जनीय ಗರ್ಜನೀಯ** (वि०) 1. ಗಟ್ಟಿಯಾಗಿ ಕೂಗಿಸಲ್ಪಡುವ. 2. ಗಟ್ಟಿಯಾಗಿ ಕೂಗಿಸಲು ಶಕ್ಯವಾದ. 3. ಗಟ್ಟಿಯಾಗಿ ಕೂಗಿಸಲು ಯೋಗ್ಯವಾದ. गर्ज (शब्दे) कर्मादौ "अनीयर्" (३-१-९६)।

**गर्जयत् ಗರ್ಜಯತ್** (वि०) ಗರ್ಜಿಸುವಂತೆ ಮಾಡುತ್ತಿರುವ. ಗಟ್ಟಿಯಾಗಿ ಶಬ್ದಮಾಡಿಸುತ್ತಿರುವ, ಗಟ್ಟಿಯಾಗಿ ಕೂಗಿಸುತ್ತಿರುವ. गर्ज (शब्दे)+णिच् "शतृ" (३-२-१२४)। स्त्रियाम् "ङीप्" (४-१-६)। **–यन्ती –ಯಂತೀ.**

**गर्जर ಗರ್ಜರ** (न०) ಬೆಳ್ಳುಳ್ಳಿ. गर्ज (शब्दे) "अरः" बाहु०। "गर्जरं गृञ्जनं प्रोक्तम् तथा सारङ्गवर्णकम्" भावप्र०।

**गर्जि ಗರ್ಜಿ** (पुं०) 1. ಮೇಘ ಗರ್ಜನೆ, ಮೋಡದ ಶಬ್ದ, ಗುಡುಗು. गर्ज (शब्दे) भावे "इन्" (उ० ४-११७)। 2. ಆನೆಯ ಗರ್ಜನೆ.

**गर्जित ಗರ್ಜಿತ** (पुं०) 1. ಮದಿಸಿದ ಆನೆ. गर्जयति—गर्ज (शब्दे)+णिच् कर्त० "क्तः" (३-४-७२)। 2. ಮೇಘ ಗರ್ಜನೆ, ಗುಡುಗು. (वि०) 3. ಗರ್ಜಿಸಿದ, ಗಟ್ಟಿಯಾಗಿ ಕೂಗಿದ. "गर्जितो मत्तकुञ्जरे। गर्जितं जलदध्वाने" हेम०। 4. ಗಟ್ಟಿಯಾದ ಶಬ್ದವುಂಟಾದ, ಗರ್ಜನೆಯುಂಟಾದ. गर्जोऽस्य सञ्जातः "इतच्" (५-२-३६)।

**गर्जितृ ಗರ್ಜಿತೃ** (वि०) ಗರ್ಜಿಸುವ, ಗಟ್ಟಿಯಾಗಿ ಕೂಗುವ, ಮೇಘದಂತೆ ಶಬ್ದಮಾಡುವ. गर्ज (शब्दे) "तृच्" (३-१-१३३)। स्त्रियाम् "ङीप्" (४-१-५)। **गर्जित्री ಗರ್ಜಿತ್ರೀ.**

**गर्ज्य ಗರ್ಜ್ಯ** (वि०) 1. ಗಟ್ಟಿಯಾಗಿ ಕೂಗಿಸಲ್ಪಡುವ. 2. ಗಟ್ಟಿಯಾಗಿ ಕೂಗಿಸಲು ಯೋಗ್ಯವಾದ. 3. ಗಟ್ಟಿಯಾಗಿ ಕೂಗಿಸಲು ಶಕ್ಯವಾದ. गर्ज (शब्दे)+णिच् "ण्यत्" (३-१-१२४)।

**गर्त ಗರ್ತ** (पुं०) 1. ಹಳ್ಳ, ಗುಳಿ, ರಂಧ್ರ. गिरति—गॄ (निगरणे) "तन्" (उ० ३-८६)। 2. ಗವಿ, ಗುಹೆ. 3. ಬಿಲ. 4. ಕಾಲುವೆ, ನಾಲೆ. "स्नानं समाचरेन्नित्यं गर्तप्रस्रवणेषु च" मनु० ४-२०३। 5. ರೋಗ, ವ್ಯಾಧಿ. 6. ಗೃಹ, ಮನೆ. 7. ತ್ರಿಗರ್ತದೇಶದ ಒಂದು ಭಾಗ. 8. ಹೆಂಗಸರ ಪಿರ್ರೆಗಳ ಗುಳಿಗಳು. "गर्तस्त्रिगर्तभेदे स्यादवटे च कुकुन्दरे" मेदि०। 9. ಸಭಾಭವನದ ಕಂಬ. 10. ರಥ.

**गर्ताश्रय ಗರ್ತಾಶ್ರಯ** (पुं०) ಬಿಲ ಮತ್ತು ಗುಹೆಗಳಲ್ಲಿ ವಾಸಿಸುವ ಇಲಿ ಮೊದಲಾದುದು. गर्तः आश्रयो यस्य। "श्रीण्याद्यान्याश्रितास्त्वेषां मृगगर्ताश्रयाप्सराः" मनु० ७-७२।

**गर्तिका ಗರ್ತಿಕಾ** (स्त्री०) ಮಗ್ಗದ ಮನೆ, ನೇಯ್ಗೆಯ ಮನೆ. गर्तोऽस्त्यस्याः "ठन्" (५-२-११५)। ನೇಯ್ಗೆಯವನು ಹಳ್ಳದೊಳಗೆ ಕಾಲುಗಳನ್ನಿಟ್ಟುಕೊಂಡು ಮಗ್ಗದ ಮೇಲೆ ಕೂಡುವುದರಿಂದ ಈ ಹೆಸರು. "तन्तुशाला तु गर्तिका" अभि० चि०।

**गर्द–शब्दे** (वा चुरा० उभ० पक्षे भ्वा० पर० अक० से०)। गर्दयति, –ते। गर्दयां चक्रे, –चकार, –बभूव, –आस। ಇತ್ಯಾದಿ. पक्षे गर्दति। जगर्द। गर्दिता। गर्दिष्यति। ಇತ್ಯಾದಿ. ಕೂಗು, ಶಬ್ದಮಾಡು, ಕಿರುಚು.

**गर्दभ ಗರ್ದಭ** (पुं०) 1. ರಾಸಭ, ಕತ್ತೆ. गर्द (शब्दे) "अभच्" (उ० ३-१२२)। स्त्रियाम् "ङीष्" (४-१-६३)। **–भी –ಭೀ.** (1) ಹೆಣ್ಣು ಕತ್ತೆ. (2) ಒಂದು ರೋಗ. (3) ಸಗಣಿಯ ಹುಳು. 2. ಗಂಧ, ವಾಸನೆ. (न०) 3. ಕುಮುದ, ಬಿಳಿನೈದಿಲೆ. 4. ವಾಯುವಿಳಂಗ. "गर्दभं श्वेतकुमुदे गर्दभो गन्धभिद्यपि। रासभे गर्दभी क्षुद्ररोगजन्तुविशेषयोः" मेदि०।

**गर्दभक ಗರ್ದಭಕ** (वि०) ಕತ್ತೆಯಂತಿರುವ. ಕತ್ತೆಯನ್ನು ಹೋಲುವ.

**गर्दभयाग ಗರ್ದಭಯಾಗ** (पुं०) ವ್ರತಭಂಗ ಹೊಂದಿದವನು ಪಾಪಪರಿಹಾರಕ್ಕಾಗಿ ಮಾಡುವ ಒಂದು ಯಾಗ. ಇದಕ್ಕಾಗಿ ಕುರುಡು ಕತ್ತೆಯನ್ನು ಪಶುವನ್ನಾಗಿಟ್ಟುಕೊಂಡು ನಿರ್ಋತಿದೇವತಾಕವಾದ ಯಾಗವನ್ನು ಆಚರಿಸಬೇಕು.

"अवकीर्णी तु काणेन गर्दभेन चतुष्पथे। पाकयज्ञविधानेन यजेत निर्ऋतिं निशि। हुत्वाग्नौ विधिवद्धोमान् संततं च समेत्यृचा। वातेन्द्रगुरुवह्नीनां जुहुयात् सर्पिषाऽऽहुतीः। कामतो रेतसः सेकं व्रतस्थस्य द्विजन्मनः। अतिक्रमं व्रतस्याहुः धर्मज्ञा ब्रह्मवादिनः। मारुतं पुरुहूतं च गुरुं पावकमेव च। चतुरो व्रतिनोऽभ्येति ब्राह्मं तेजोऽवकीर्णिनः" मनु० ११-११८-२१।

**गर्दभाण्ड ಗರ್ದಭಾಂಡ**(पुं०)1. ಬಸುರಿಮರ. 2. ಹಿಪ್ಪಲಿ. गर्दभं गन्धममति—अम (गत्यादौ)"ड:"(उ० १-१११)।

**गर्दभाह्वय ಗರ್ದಭಾಹ್ವಯ** (पुं०) ಬಿಳಿನೈದಿಲೆ.

**गर्दभिका ಗರ್ದಭಿಕಾ** (स्त्री०) ವಾತಪಿತ್ತದಿಂದ ಉಂಟಾಗುವ ಒಂದು ಚರ್ಮದ ರೋಗ, ಸುತ್ತಲೂ ಗುಳ್ಳೆಗಳಿದ್ದು ರಕ್ತದಿಂದ ತುಂಬಿದ ಕುರು, ರಕ್ತಕುರು. "मण्डलं वृत्तमुत्सन्नं सरक्तं पिडकावृतम्। रुजाकारीं गर्दभिकां तां विद्याद्वातपित्तजाम्"।

**गर्द्ध – अभिकाङ्क्षायाम्** (चुरा० उभ० सक० से०)। गर्द्धयति, –ते। गर्द्धयां चक्रे, –चकार, –बभूव, –आस। गर्द्धयतु, –ताम्। अजगर्द्धत्, –त। ಇತ್ಯಾದಿ.

**गर्द्ध ಗರ್ದ್ಧ** (पुं०) ಅತಿಯಾದ ಆಸೆ, ಮಿತಿಮೀರಿದ ಆಸೆ. ಲೋಭ. गृधु (अभिकाङ्क्षायाम्) भावे "घञ्" (३-३-१८)।

**गर्द्धन ಗರ್ದ್ಧನ** (वि०) ಅತ್ಯಾಶೆಯುಳ್ಳ, ದುರಾಶೆಯುಳ್ಳ. ಲೋಭಿ. गृधु (अभिकाङ्क्षायाम्) "युच्" (३-२-१५०)। "कपिभ्रङ्क्रमणोऽद्यापि नासौ भवति गर्द्धनः" भट्टि० ७-१६।

**गर्भ ಗರ್ಭ**(पुं०)1. ಭ್ರೂಣ, ಸ್ತ್ರೀಪುರುಷರ ಶುಕ್ರಶೋಣಿತ ಸಂಯೋಗದಿಂದ ಉಂಟಾಗುವ ಮಾಂಸಪಿಂಡ, ಬಸಿರು. गीर्यते उद्गीर्यते—गॄ (निगरणे) "भन्" (उ० ३-१५२)। "नरपतिकुलभूत्यै गर्भमाधत्त राज्ञी गुरुभिरभिनिविष्टं लोकपालानुभावैः" रघु० २-७५। 2. ಶಿಶು, ಮಗು. "कामान्मिथुनसंयोगे शुद्धशोणितशुक्रजः। गर्भः सञ्जायते नार्याः स जातो बाल उच्यते" भावप्र०। 3. ಕುಕ್ಷಿ, ಹೊಟ್ಟೆ, ಗರ್ಭಾಶಯ. 4. ರೂಪಕಗಳ ಪಂಚಸಂಧಿಗಳಲ್ಲೊಂದು. ಮೊದಲು ದೃಷ್ಟವಾಗಿ ಬಳಿಕ ಕಾರಣಾಂತರದಿಂದ ನಷ್ಟವಾದ (ಮುಖ್ಯ ಫಲಕ್ಕೆ ಮೂಲಕಾರಣವಾದ) ಬೀಜದ ಪುನರನ್ವೇಷಣವು ಗರ್ಭಸಂಧಿ. "फलप्रधानोपायस्य प्रागुद्भिन्नस्य किञ्चन। गर्भो यत्र समुद्भेदो ह्रासान्वेषणवान् मुहुः" सा० द०। 5. ಹಲಸಿನ ಹಣ್ಣಿನ ಮೇಲಿನ ಮುಳ್ಳು. 6. ಮಧ್ಯಭಾಗ, ಒಳಭಾಗ. "गर्भमेणमदकर्दमसान्द्रं भाजनानि रजतस्य भजन्ति" नैष० २१-२६। 7. ಕೊಠಡಿ. 8. ದೇವಸ್ಥಾನದ ಗರ್ಭಗೃಹ. 9. ಭಾದ್ರಪದ ಕೃಷ್ಣ ಚತುರ್ದಶಿಯ ದಿನ ತುಂಬಿ ಹರಿಯುವ ಗಂಗಾನದಿಯ ಪಾತ್ರ. "भाद्रकृष्णचतुर्दश्यां यावदाप्लवते जलम्। तावद्गर्भं विजानीयात्"। 10. ಅಗ್ನಿ, ಬೆಂಕಿ. 11. ಅನ್ನ, ಆಹಾರ. 12. ಸಂಧಿ, ಸೇರಿಕೆ. "गर्भो भ्रूणेऽर्भके कुक्षौ सन्धौ पनसकण्टके" मेदि०।

**गर्भक ಗರ್ಭಕ**(पुं०)1. ತುರುಬಿನ ಮಧ್ಯದಲ್ಲಿರುವ ಹೂವು. (न०)2. ಎರಡು ರಾತ್ರಿಗಳಿಂದ ಕೂಡಿದ ಒಂದು ಹಗಲು.

**गर्भकर ಗರ್ಭಕರ** (पुं०) 1. ಪುತ್ರಜೀವವೆಂಬ ವೃಕ್ಷ. गर्भं करोति उत्पादयति तत्सेवनेन—डु कृञ् (करणे) "टः" (३-२-२०)। (वि०) 2. ಗರ್ಭವನ್ನು ಉಂಟು ಮಾಡುವ.

**गर्भकार ಗರ್ಭಕಾರ** (पुं०) ಗರ್ಭೋತ್ಪತ್ತಿ ಮಾಡುವ ಪತಿ. गर्भं करोति—डु कृञ् (करणे) "अण्" (३-२-१)। "ण्वुल्" (३-१-१३३)। –कारकः –ಕಾರಕಃ. "णिनिः" (३-२-७८)। –कारिन् –ಕಾರಿನ್.

**गर्भकारण ಗರ್ಭಕಾರಣ** (न०) ಗರ್ಭವನ್ನುಂಟುಮಾಡುವ ವಸ್ತು.

**गर्भकोश ಗರ್ಭಕೋಶ** (पुं०) ಗರ್ಭವನ್ನು ಧರಿಸುವ ಚೀಲ, ಗರ್ಭಾಶಯ. गर्भस्य कोश इव।

**गर्भगृह ಗರ್ಭಗೃಹ** (न०) 1. ಮನೆಯ ಮಧ್ಯಭಾಗ, ಮನೆಯ ಒಳಭಾಗ, ಕೊಠಡಿ. गर्भं इव गृहम्। 2. ದೇವಾಲಯದೊಳಗಿನ ಭಾಗ. "कान्ता गर्भगृहे गवाक्षविवरव्यापारिताक्ष्या बहिः सख्या वक्त्रमभिप्रयच्छति परं पर्यश्रुणी लोचने" सा० द०।

**गर्भग्रहण ಗರ್ಭಗ್ರಹಣ** (न०) ಗರ್ಭವನ್ನು ಧರಿಸುವುದು, ಬಸಿರಾಗುವುದು. गर्भस्य ग्रहणम्।

**गर्भचलन ಗರ್ಭಚಲನ** (न०) ಗರ್ಭವು ಗರ್ಭಾಶಯವನ್ನು ಬಿಟ್ಟು ಕದಲುವುದು, ಗರ್ಭಕೋಶದಿಂದ ಬೇರೆ ಕಡೆಗೆ ಜಾರುವುದು.

**गर्भचेट ಗರ್ಭಚೇಟ** (पुं०) ಹುಟ್ಟಿದಾಗಿನಿಂದ ಸೇವಕನಾಗಿರುವವನು. गर्भात् चेटः।

**गर्भच्युति ಗರ್ಭಚ್ಯುತಿ** (स्त्री०) ಗರ್ಭಸ್ರಾವ, ಗರ್ಭವು ಒಡೆದು ಬೀಳುವುದು. गर्भस्य च्युतिः। ಪ್ರಸವಕಾಲಕ್ಕೆ ಮುಂಚೆ ಗರ್ಭಕ್ಕೆ ಏಟು ಮೊದಲಾದುವುಗಳಿಂದ ತೊಂದರೆ

ಪರ್ಯಟ್ಟರೆ ಗರ್ಭಸ್ರಾವ, ಗರ್ಭಪಾತಗಳು ಸಂಭವಿಸುವುವು. ಪೂರ್ಣಗರ್ಭಿಣಿಯಾಗಿರುವಾಗ ಮೈಥುನ (ಸಂಭೋಗ). ವಾಹನ (ಆನೆ ಕುದುರೆ ಗಾಡಿ ಮೊದಲಾದುವು) ಗಳಲ್ಲಿ ಪ್ರಯಾಣ. ದಾರಿ ನಡೆಯುವುದು, ಜಾರುವುದು, ಎಡವುವುದು. ಗರ್ಭಕ್ಕೆ ಹೆಚ್ಚು ಹಿಂಸೆಯಾಗುವ ಕಾರ್ಯ, ಓಡುವುದು, ಏಟು ಬೀಳುವುದು, ಇಕ್ಕಟ್ಟಿನಲ್ಲಿ ಮಲಗುವುದು. ಉಪವಾಸ, ವೇಗವಾಗಿ ನಡೆಯುವುದು, ಕಾರವಾದ ಆಹಾರ ಸೇವನೆ. ಅತಿಸಾರ, ವಾಂತಿ, ಭೇದಿ, ಉಯ್ಯಾಲೆ ಆಡುವುದು ಇತ್ಯಾದಿಗಳಿಂದ ಗರ್ಭವು ಸ್ವಸ್ಥಾನವನ್ನು ಬಿಟ್ಟು ಕದಲುವುದು. ಆದರಿಂದ ಗರ್ಭಸ್ರಾವ ಗರ್ಭಪಾತಗಳು ಉಂಟಾಗುವುವು. "ग्राम्यधर्म-यान-वाहनाध्वगमन-प्रस्खलन-प्रपतन-प्रपीडन-धावनाभिघातातिरूक्षकटुतिक्त भोजन-शोकातिक्षारसेवनातिसार-वमन-विरेचन-प्रेङ्खोलनाजीर्णगर्भशातप्रभृतिभिः बन्धनान्मुच्यते गर्भः" सुश्रुत० निदान० ७-३।

**गर्भद ಗರ್ಭದ** (पुं०) 1. ಪುತ್ರಜೀವವೆಂಬ ವೃಕ್ಷ. गर्भं ददाति – डु दाञ् (दाने) "कः" (३-२-३)। 2. ಗರ್ಭವನ್ನುಂಟುಮಾಡುವ ಔಷಧ.

**गर्भदास ಗರ್ಭದಾಸ** (पुं०) ಗೃಹಜಾತ ದಾಸಿಯಲ್ಲಿ ಹುಟ್ಟಿದ ಸೇವಕ, ಹುಟ್ಟಿದಾಗಿನಿಂದ ಸೇವಕನಾಗಿರುವವನು. गर्भात् गर्भमारभ्य दासः।

**गर्भधरा ಗರ್ಭಧರಾ** (स्त्री०) ಗರ್ಭಿಣಿ, ಬಸಿರು ಹೆಂಗಸು, ಗರ್ಭ ಧರಿಸಿದ ಹೆಂಗಸು.

**गर्भधारण ಗರ್ಭಧಾರಣ** (न०) ಗರ್ಭವನ್ನು ಧರಿಸುವುದು, ಶುಕ್ರಶೋಣಿತಗಳು ಬೆರೆತು ಗರ್ಭಾಶಯದೊಳಕ್ಕೆ ಸೇರುವುದು.

**गर्भध्वंस ಗರ್ಭಧ್ವಂಸ** (पुं०) ಸ್ರಾವಪಾತ ಮುಂತಾದುವುಗಳಿಂದ ಆಗುವ ಗರ್ಭದ ನಾಶ. गर्भस्य ध्वंसः।

**गर्भनाडी ಗರ್ಭನಾಡೀ** (स्त्री०) ಹೊಕ್ಕುಳಕುಡಿ, ಹೊಕ್ಕುಳ ಬಳ್ಳಿ. गर्भस्य नाडी। "ततो गर्भनाडीमष्टाङ्गुलमायम्य सूत्रेण बध्वा छेदयेत्" सुश्रुत० शारीर० १०-१२।

**गर्भपाकिन् ಗರ್ಭಪಾಕಿನ್** (पुं०) ಷಷ್ಟಿಧಾನ್ಯ, ಅರವತ್ತು ದಿನಗಳಲ್ಲಿ ಹಣ್ಣಾಗಿ ಕುಯ್ಲಿಗೆ ಬರುವ ಬತ್ತ. गर्भस्य पाकः पुष्टिः साध्यत्वेनास्त्यस्य "इनिः" (५-२-११५)।

**गर्भपात ಗರ್ಭಪಾತ** (पुं०) ಗರ್ಭದ ಪತನ, ಅತಿಯಾದ ಆಯಾಸ ಆಘಾತ ಮೊದಲಾದುವುಗಳಿಂದ ಉಂಟಾಗುವ ಗರ್ಭನಾಶ, ಗರ್ಭವು ಗರ್ಭಕೋಶದಿಂದ ಜಾರಿ ಬೀಳುವುದು. गर्भस्य नाशः। ಇದು ಗರ್ಭ ಧರಿಸಿದ ಐದು ತಿಂಗಳನಂತರ ಸಂಭವಿಸಿದರೆ ಗರ್ಭಪಾತ. ಐದು ತಿಂಗಳೊಳಗಾದರೆ ಗರ್ಭಸ್ರಾವ.

**गर्भपातक ಗರ್ಭಪಾತಕ** (पुं०) ಕೆಂಪುಹೂವಿನ ನುಗ್ಗೆ ಮರ. गर्भं पातयति – पत्लृ (गतौ) + णिच् "ण्वुल्" (३-१-१३३)। ಇದರ ಸೊಪ್ಪಿನ ಸೇವನೆಯಿಂದ ಗರ್ಭಪಾತವಾಗುವುದು.

**गर्भपातिनी ಗರ್ಭಪಾತಿನೀ** (स्त्री०) ಅಮೃತಬಳ್ಳಿ. गर्भं पातयति–पत्लृ (गतौ) + णिच् "णिनिः" (३-२-७८)। "ङीप्" (४-१-५)।

**गर्भपोषण ಗರ್ಭಪೋಷಣ** (न०) ಗರ್ಭವನ್ನು ಪೋಷಿಸುವುದು, ಗರ್ಭವು ಬೆಳೆಯಲು ಮಾಡುವ ಉಪಚಾರ. गर्भस्य पोषणम्। ಗರ್ಭವು ಚೆನ್ನಾಗಿ ಬೆಳೆಯಲು ಅವಶ್ಯವಾದ ನಿಯಮಗಳು. ಗರ್ಭಿಣಿಯು ಗರ್ಭಧಾರಣ ಮಾಡಿದಂದಿನಿಂದ ಪ್ರತಿದಿನವೂ ಸಂತೋಷದಿಂದಿರಬೇಕು. ಶುಚಿಯಾದ ವಸ್ತ್ರಾಲಂಕಾರಗಳನ್ನು ಧರಿಸಬೇಕು. ಮಂಗಳ ಕಾರ್ಯ ಮತ್ತು ಗುರು ದೇವತಾಬ್ರಾಹ್ಮಣಪೂಜೆಗಳಲ್ಲಿ ನಿರತಳಾಗಿರಬೇಕು. ಮಲಿನವಾದ ವಿಕಾರವಾದ ಮತ್ತು ವಿಕಲವಾದ ದೇಹಗಳನ್ನು ಮುಟ್ಟಕೂಡದು. ಕೆಟ್ಟ ವಾಸನೆಯನ್ನು ಸೇವಿಸಕೂಡದು. ಭಯಂಕರ ದೃಶ್ಯಗಳನ್ನು ನೋಡಕೂಡದು. ಉದ್ವೇಗಕರವಾದ ಕಥೆಗಳನ್ನು ಕೇಳಕೂಡದು. ನೀರಸವಾದ ಆಹಾರ ಮತ್ತು ತಂಗಳನ್ನಗಳನ್ನು ತಿನ್ನಕೂಡದು. ಪಾಳುಮನೆಗಳು ಮತ್ತು ಮರದ ನೆರಳುಗಳಲ್ಲಿ ಇರಕೂಡದು. ಕೋಪದ ಮತ್ತು ಭಯಂಕರ ಮಾತುಗಳನ್ನು ಆಡಲೂ ಕೇಳಲೂ ಕೂಡದು. ಶರೀರಕ್ಕೆ ಆಯಾಸಕರವಾದ ಕಾರ್ಯಗಳನ್ನು ಮಾಡಕೂಡದು. ಪದೇ ಪದೇ ತೈಲಾಭ್ಯಂಗ ಮಾಡಕೂಡದು. ಮೃದುವಾದ ಹಾಸಿಗೆಯಲ್ಲಿ ಮಲಗಬೇಕು. ಇಷ್ಟವಾದ ಹಿತವಾದ ದ್ರವವಾದ ಮಧುರವಾದ ಮತ್ತು ಜಿಡ್ಡಿನಿಂದ ಕೂಡಿದ ಆಹಾರಗಳನ್ನು ಸೇವಿಸಬೇಕು ಇತ್ಯಾದಿ. "गर्भिणी प्रथमदिवसात् प्रभृति नित्यं प्रहृष्टा शुच्यलङ्कृता शुक्लवसना शान्तिमङ्गलदेवताब्राह्मणगुरुपरा च भवेत्, मलिनविकृतहीनगात्राणि न स्पृशेत्, दुर्गन्धदुर्दर्शनानि परिहरेत्, उद्वेजनीयाश्च कथाः शुष्कं पर्युषितं कुथितं क्लिन्नं चान्नं नोपभुञ्जीत। बहिर्निष्क्रमणं शून्यागारचैत्यश्मशानवृक्षाश्रयान् क्रोधभयङ्करान् भावान् उच्चैर्भाष्यादिकं च परिहरेद्यानि च गर्भं व्यापादयन्ति, न चाभीक्ष्णं तैलाभ्यङ्गोत्सादनादीनि सेवेत। न चायासयेच्छरीरम्" ಇತ್ಯಾದಿ. सुश्रुत० शारीर० १०-३।

**गर्भप्रसव ಗರ್ಭಪ್ರಸವ** (ಪುಂ) ಹೆರುವನ್ನು ಹೆರುವುದು, ಮಗುವನ್ನು ಪಡೆಯುವುದು. गर्भस्य प्रसवः। ಗರ್ಭಿಣಿಯನ್ನು ಒಂಬತ್ತನೆಯ ತಿಂಗಳಲ್ಲಿ ಶುಭದಿವಸದಲ್ಲಿ ಸೂತಿಕಾ ಗೃಹಕ್ಕೆ ಕರೆದೊಯ್ಯಬೇಕು. ಕ್ರಮೇಣ ಗರ್ಭವು ಹೊಟ್ಟೆಯಿಂದ ಕೆಳಕ್ಕೆ ಜಾರಿದಾಗ ಹೊಟ್ಟೆಯು ಸಡಿಲವಾಗುವುದು. ಹೃದಯವು ಲಘುವಾಗುವುದು. ತೊಡೆಗಳಲ್ಲಿ ಸೆಳೆತ ಪ್ರಾರಂಭವಾಗುವುದು. ಆಗ ಪ್ರಸವಕಾಲವು ಸನ್ನಿಹಿತವಾಯಿತೆಂದು ತಿಳಿಯಬೇಕು. "नवमे मासि सूतिकागारमेनां प्रवेशयेत् प्रशस्ते तिथ्यादौ"। "जाते हि शिथिले कुक्षौ मुक्ते हृदयबन्धने। सशूले जघने नारी ज्ञेया सा तु प्रजायिनी" सुश्रुत० शारीर० १०-५, ६।

**गर्भभर्मन् ಗರ್ಭಭರ್ಮನ್** (ನಂ) ಗರ್ಭದ ಪೋಷಣೆ, ಸೂಲಗಿತ್ತಿಯ ಕಾರ್ಯ. गर्भस्य भर्म। "कुमारभृत्याकुशलैरनुष्ठिते भिषग्भिराप्तैरथ गर्भभर्मणि" रघु० ३-१२।

**गर्भमास ಗರ್ಭಮಾಸ** (ಪುಂ) ಗರ್ಭವನ್ನು ಧರಿಸಿದ ಮಾಸ. गर्भस्य तदारम्भस्य मासः।

**गर्भरक्षा ಗರ್ಭರಕ್ಷಾ** (स्त्री०) ಗರ್ಭದ ರಕ್ಷಣೆ, ಬಸಿರನ್ನು ಕಾಪಾಡುವುದು.

**गर्भलम्भन ಗರ್ಭಲಂಭನ** (ನಂ) ಗರ್ಭವು ಸುರಕ್ಷಿತವಾಗಿರಲು ಮಾಡುವ ಒಂದು ಕರ್ಮ. गर्भोऽमोघवीर्यतया लम्यतेऽनेन — डु लभष् (प्राप्तौ) "ल्युट्"(३-३-११७)।

**गर्भवती ಗರ್ಭವತೀ** (स्त्री०) ಗರ್ಭಿಣಿ, ಬಸಿರು ಹೆಂಗಸು. गर्भोऽस्त्यस्याः "मतुप्" (५-२-९४)। "ङीप्" (४-१-६)।

**गर्भवसति ಗರ್ಭವಸತಿ** (स्त्री०) ಗರ್ಭಕ್ಕೆ ಸ್ಥಾನವಾದ ಹೊಟ್ಟೆ, ಗರ್ಭಾಶಯ. गर्भः कुक्षिरेव वसतिः। "स तत्र गर्भवसतौ वसत्यात्मेच्छया हरिः" हरिवं०।

**गर्भवास ಗರ್ಭವಾಸ** (ಪುಂ) ಗರ್ಭಕ್ಕೆ ಸ್ಥಾನವಾದ ಕುಕ್ಷಿ, ಹೊಟ್ಟೆ. वसत्यस्मिन् वासः वासस्थानम्, गर्भ एव वासः। "असकृद्गर्भवासेषु वासं जन्म च दारुणम्" मनु० १२-७८।

**गर्भव्यूह ಗರ್ಭವ್ಯೂಹ** (ಪುಂ) ಯುದ್ಧದಲ್ಲಿ ರಹಸ್ಯವಾಗಿ ನಿಲ್ಲಿಸುವ ಸೇನೆಗಳ ಗುಂಪು. गर्भ इव गूढो व्यूहः। ಗರ್ಭವ್ಯೂಹವು ಪದ್ಮದ ಆಕಾರದಲ್ಲಿ ಇರಬೇಕು. "पश्चाद्धै तस्य पद्मस्तु गर्भव्यूहः सुदुर्भिदः। सूचीपद्मस्य गर्भस्थो गूढो व्यूहः कृतः पुनः" भा० द्रोण०।

**गर्भशय्या ಗರ್ಭಶಯ್ಯಾ** (स्त्री०) ಗರ್ಭದ ಉತ್ಪತ್ತಿಸ್ಥಾನ, ಗರ್ಭವು ನಿಲ್ಲುವ ಸ್ಥಾನ, ಹೊಟ್ಟೆ, ಗರ್ಭಕೋಶ. गर्भस्य शय्येव। "यो यः पाञ्चालगोत्रे शिशुरधिकवया गर्भशय्यां गतो वा" वेणी० ३-३२।

**गर्भसंक्रमण ಗರ್ಭಸಂಕ್ರಮಣ** (ನಂ) ಗರ್ಭಕೋಶವನ್ನು ಪ್ರವೇಶಿಸುವುದು, ಬೇರೆ ಶರೀರವನ್ನು ಹೊಂದಲು ಜೀವನು ಗರ್ಭಕೋಶದೊಳಕ್ಕೆ ಸೇರುವುದು. गर्भे संक्रमणम्।

**गर्भसंस्रव ಗರ್ಭಸಂಸ್ರವ** (ಪುಂ) ರೋಗಾದಿಗಳಿಂದ ಪ್ರಸವಕಾಲಕ್ಕಿಂತ ಮುಂಚೆ ಗರ್ಭವು ತನ್ನ ಜಾಗದಿಂದ ಕಳಚಿ ಬೀಳುವುದು. गर्भस्य संस्रवः।

**गर्भस्राव ಗರ್ಭಸ್ರಾವ** (ಪುಂ) ಪ್ರಸವಕಾಲಕ್ಕಿಂತ ಮುಂಚೆ ರೋಗಾದಿಗಳಿಂದ ಗರ್ಭವು ಗರ್ಭಕೋಶದಿಂದ ಜಾರಿಬೀಳುವುದು. गर्भस्य स्रावः। ಗರ್ಭ ಧರಿಸಿದ ಐದು ತಿಂಗಳೊಳಗೆ ಗರ್ಭನಾಶವಾದರೆ ಗರ್ಭಸ್ರಾವ. ಐದು ತಿಂಗಳ ನಂತರವಾದರೆ ಗರ್ಭಪಾತ.

**गर्भागार ಗರ್ಭಾಗಾರ** (ನಂ) 1. ವಾಸದ ಮನೆ, ಮನೆಯ ಮಧ್ಯಭಾಗ. गर्भ इवागारम्। 2. ಗರ್ಭಕೋಶ, ಗರ್ಭದ ಉತ್ಪತ್ತಿಸ್ಥಾನ. गर्भ एवागारम्।

**गर्भाधान ಗರ್ಭಾಧಾನ** (ನಂ) 1. ಗರ್ಭವನ್ನು ಇಡುವುದು, ಗರ್ಭಕೋಶದಲ್ಲಿ ವೀರ್ಯವನ್ನು ಸೇರಿಸುವುದು, ಬಸಿರು ಮಾಡುವುದು. 2. ಮನುಷ್ಯನ ದೇಹಕ್ಕೆ ಆಗಬೇಕಾದ ಹದಿನಾರು ಸಂಸ್ಕಾರಗಳಲ್ಲೊಂದು. गर्भ आधीयतेऽनेन — डु धाञ् (धारणपोषणयोः) "ल्युट्" (३-३-११७)। ಗರ್ಭಾಧಾನಕ್ಕೆ ಪ್ರಶಸ್ತವಾದ ತಿಥಿವಾರಾದಿಗಳು: ಉಭಯ ಪಕ್ಷಗಳ ಷಷ್ಠಿ, ಅಷ್ಟಮಿ, ಚತುರ್ದಶಿ ಮತ್ತು ಹದಿನೈದನೆಯ (ಪೂರ್ಣಿಮೆ ಮತ್ತು ಅಮಾವಾಸ್ಯೆ) ತಿಥಿಗಳನ್ನು ಬಿಟ್ಟು ಉಳಿದ ತಿಥಿಗಳೂ ಸೋಮ ಬುಧ ಗುರು ಮತ್ತು ಶುಕ್ರವಾರಗಳೂ ರೋಹಿಣಿ ಉತ್ತರ ಫಲ್ಗುನಿ ಹಸ್ತ ಸ್ವಾತಿ ಅನೂರಾಧೆ ಮೂಲ ಶ್ರವಣ ಉತ್ತರಾಷಾಢ ಶತಭಿಷ ಉತ್ತರಾಭಾದ್ರ ಮತ್ತು ರೇವತೀ ನಕ್ಷತ್ರಗಳೂ ಅಷ್ಟಮ ಶುದ್ಧಿಯಿರುವ ವೃಷಭ ಮಿಥುನ ಕರ್ಕಾಟಕ ಸಿಂಹ ಕನ್ಯಾ ತುಲಾ ಧನುಸ್ಸು ಕುಂಭ ಮತ್ತು ಮೀನ ಲಗ್ನಗಳೂ ಪ್ರಶಸ್ತವಾದುವು. "विष्णुप्रजेशरविमित्रसमीरपौष्णमूलोत्तरावरुणभानि निषेककार्ये। पूज्यानि पुष्यवसुशीतकराश्विचित्रादित्याश्च मध्यमफला विफलाः स्युरन्ये॥ षष्ठ्यष्टमीपञ्चदशीचतुर्थीः चतुर्दशीमप्युभयत्र हित्वा। शेषाः शुभाः स्युस्तिथयो निषेके वाराः शशाङ्कार्यसितेन्दुजानाम्॥ वृषमिथुनकुलीरसिंहकन्यातुलघटचापझषाः शुभं वहन्ति। यदि शुभफलशालिनोऽनुकूले निधनशुद्धियुते निषेककार्ये" मुहू० द० ३३६, ३७, ३८। "गर्भाधान-

क्षणपरिचयाच्छ्रूनमाबद्धमाला: सेविष्यन्ते नयनसुभगं खे भवन्तं बलाका:" मेघ० १-९।

**गर्भावक्रान्ति ಗರ್ಭಾವಕ್ರಾಂತಿ** (स्त्री०) ಗರ್ಭಾಶಯಕ್ಕೆ ಜೀವನ ಪ್ರವೇಶ. गर्भस्यावक्रान्तिः अवतारः। ["गर्भोत्पत्ति" ಪದದಲ್ಲಿ ನೋಡಿ.]

**गर्भाशय ಗರ್ಭಾಶಯು** (पुं०) ಗರ್ಭಕೋಶ. ಗರ್ಭವು ನಿಲ್ಲುವ ಜಾಗ, ಗರ್ಭಕ್ಕೆ ಆಧಾರವಾದ ಸ್ಥಾನ. गर्भः आशेतेऽत्र — आ+शीङ् (स्वप्ने) "घः" (३-३-११८)। ಪುರುಷನಿಗಿಂತಲೂ ಹೆಂಗಸಿಗೆ ಅಧಿಕವಾಗಿರುವ ಮೂರು ಆಶಯಗಳಲ್ಲಿ ಗರ್ಭಾಶಯವು ಒಂದು. ಇದು ಪಿತ್ತಾಶಯ ಮತ್ತು ಪಕ್ವಾಶಯಗಳ ಮಧ್ಯದಲ್ಲಿರುವುದು. "पुरुषेभ्योऽधिकाश्चान्ये नारीणामाशयास्त्रयः। एको गर्भाशयः प्रोक्तः पित्तपक्वाशयान्तरे" भावप्र०।

**गर्भाष्टम ಗರ್ಭಾಷ್ಟಮ** (पुं०) 1. ಗರ್ಭಧರಿಸಿದ ಮೊದಲು ಗೊಂಡು ಎಂಟನೆಯ ವರ್ಷ ಅಥವಾ ಎಂಟನೆಯ ತಿಂಗಳು. गर्भात् गर्भलालात् अष्टमः। ಗರ್ಭಾಷ್ಟಮ (ಗರ್ಭ ಧಾರಣವಾದ ಎಂಟನೆಯ ವರ್ಷ) ದಲ್ಲಿ ಬ್ರಾಹ್ಮಣನಿಗೆ ಉಪನಯನವು ನಡೆಯಬೇಕು. "गर्भाष्टमेऽब्दे कुर्वीत ब्राह्मणस्योपनायनम्। गर्भादेकादशे राज्ञो गर्भात्तु द्वादशे विशः" मनु० २-३६। 2. ಎಂಟನೆಯ ತಿಂಗಳಲ್ಲಿ ಹುಟ್ಟಿದವನು.

**गर्भास्पन्दन ಗರ್ಭಾಸ್ಪಂದನ** (न०) ಗರ್ಭನಾಶದ ಚಿಹ್ನೆ, ಗರ್ಭಿಣಿಯ ಉದರದಲ್ಲಿ ಶಿಶುವು ಮೃತವಾಗಿರುವ ಲಕ್ಷಣ. ಪ್ರಸವವೇದನೆಯಿಲ್ಲದೆ ಗರ್ಭಿಣಿಯ ಮೈಯಲ್ಲಿ ಹಸುರು ಬೆರೆತ ಕೆಂಪುಬಣ್ಣ ಪಾಂಡುತ್ವ ಉಚ್ಛ್ವಾಸದಲ್ಲಿ ದುರ್ವಾಸನೆ ಹೊಟ್ಟೆಯ ಉಬ್ಬರ ಇವೆಲ್ಲ ಉದರದಲ್ಲಿ ಶಿಶುವು ಮೃತ ವಾಗಿರುವುದರ ಲಕ್ಷಣಗಳು. "गर्भास्पन्दनमावीनां प्रणाशः श्यावपाण्डुता। भवत्युच्छ्वासपूतित्वं शूनतान्तर्मृते शिशौ" सुश्रुत० निदान० ९-१२।

**गर्भास्राव ಗರ್ಭಾಸ್ರಾವ** (पुं०) ಗರ್ಭಸ್ರಾವ, ಪ್ರಸವ ಕಾಲಕ್ಕಿಂತಲೂ ಮುಂಚೆ ರೋಗಾದಿಗಳಿಂದ ಗರ್ಭವು ಗರ್ಭಕೋಶದಿಂದ ಜಾರಿ ಬೀಳುವುದು. ["गर्भस्राव" ಪದದಲ್ಲಿ ನೋಡಿ.]

**गर्भिणी ಗರ್ಭಿಣೀ** (स्त्री०) ಗರ್ಭವತಿ, ಗರ್ಭ ಧರಿಸಿದ ಹೆಂಗಸು, ಬಸಿರು ಹೆಂಗಸು. गर्भोऽस्त्यस्याः "इनिः" (५-२-११५)। "ङीप्" (४-१-५)। **ಗರ್ಭಿಣಿಯ ನಿಯಮಗಳು:** ಬಸಿರು ಹೆಂಗಸು ಆನೆ ಕುದುರೆ ಬೆಟ್ಟ ಮಹಡಿ ಇವುಗಳನ್ನು ಹತ್ತಕೂಡದು. ವ್ಯಾಯಾಮ (ಅಂಗಸಾಧನೆ) ವೇಗವಾದ ನಡಿಗೆ ಗಾಡಿಯಲ್ಲಿ ಪ್ರಯಾಣ ಇವನ್ನು ಬಿಡಬೇಕು. ದುಃಖಿಸಕೂಡದು. ದೇಹದಿಂದ ರಕ್ತವನ್ನು ಹೊರಕ್ಕೆ ಬಿಡಕೂಡದು. ಹೆದರಕೂಡದು. ಕುಕ್ಕುಟಾಸನದಲ್ಲಿ ಕುಳಿತುಕೊಳ್ಳಕೂಡದು. ಮೈಥುನ (ಸಂಭೋಗ) ಹಗಲು ನಿದ್ರೆ ರಾತ್ರಿ ಜಾಗರಣೆ ಇವು ಕೂಡದು. "गर्भिणी कुञ्जराश्वादिशैलहर्म्यादिरोहणम्। व्यायामं शीघ्रगमनं शकटारोहणं त्यजेत्। शोकं रक्तविमोक्षं च साध्वसं कुक्कुटासनम्। व्यवायं च दिवास्वापं रात्रौ जागरणं त्यजेत्"। तदाप्रभृति व्यवायं व्यायाममतितर्पणमतिकर्शनं दिवास्वप्नं रात्रिजागरणं शोकं यानारोहणं भयं चैकान्ततः स्नेहादिक्रियां शोणितमोक्षणं चाकाले वेगविधारणं च न सेवेत" सुश्रुत० शारीर० ३-१६।

**गर्भिणीदोहद ಗರ್ಭಿಣೀದೋಹದ** (न०) ಗರ್ಭಿಣಿ ಹೆಂಗಸು ಬಯಸುವ ವಸ್ತು. ಗರ್ಭದಲ್ಲಿರುವ ಶಿಶುಗಳು ಅಪೇಕ್ಷಿಸಿದುದನ್ನೆಲ್ಲಾ ತಾಯಿಯೂ ಅಪೇಕ್ಷಿಸುತ್ತಾಳೆ. ಆ ಶಿಶು ಮತ್ತು ತಾಯಿ ಇಬ್ಬರೂ ಬಯಸುವುದರಿಂದ ಗರ್ಭಕ್ಕೆ "दौर्हृदम्" ಎಂದು ಹೆಸರು. "सुदक्षिणा दौर्हृदलक्षणं दधौ" रघु० ३-१। ಗರ್ಭಿಣಿಯು ಬಯಸಿದುದನ್ನು ಒದಗಿಸಿಕೊಟ್ಟರೆ ಗುಣಶಾಲಿಯಾದ ಪುತ್ರನು ಹುಟ್ಟುವನು. ಅದಿಲ್ಲದಿದ್ದರೆ ಯಾವ ಇಂದ್ರಿಯ ತೃಪ್ತಿಗಾಗಿ ಅಪೇಕ್ಷಿಸುವಳೋ ಶಿಶುವಿನ ಆ ಇಂದ್ರಿಯವು ಊನವಾಗುವುದು. "इन्द्रियार्थांस्तु यान् यान् सा भोक्तुमिच्छति गर्भिणी। गर्भाबाधभयात्तांस्तान् भिषगाहृत्य दापयेत्। सा प्राप्तदौर्हृदा पुत्रं जनयेत गुणान्वितम्। अलब्धदौर्हृदा गर्भे लभेतात्मनि वा भयम्। येषु येष्विन्द्रियार्थेषु दौर्हृदे वै विमानना। प्रजायेत सुतस्यार्तिः तस्मिंस्तस्मिंस्तथेन्द्रिये" सुश्रुत० शारीर० ३-१९-२१। ["खञ्ज" ಪದದಲ್ಲಿ ನೋಡಿ.]

**गर्भिण्यवेक्षण ಗರ್ಭಿಣ್ಯವೇಕ್ಷಣ** (न०) ಗರ್ಭಿಣಿಯ ಉಪಚಾರ, ಸೂಲಗಿತ್ತಿತನ. गर्भिण्या अवेक्षणम्। "कुमारभृत्या स्याद्बालतन्त्रं गर्भिण्यवेक्षणम्" त्रिकाण्ड०।

**गर्भाङ्क ಗರ್ಭಾಂಕ** (पुं०) ನಾಟಕದ ಅಂಕಮಧ್ಯದಲ್ಲಿ ಬರುವ ಒಂದು ಅಂಕ, ನಾಂದಿ ಆಮುಖ ಪ್ರರೋಚನಾ ಇವುಗಳಿಂದ ಕೂಡಿದ ಅಂಕದ ಮಧ್ಯದಲ್ಲಿ ಬರುವ ಬೇರೊಂದು ಅಂಕ. गर्भे अङ्काद्येऽङ्कः। "अङ्कोदरप्रविष्टो यो रङ्गद्वारा मुखादिमान्। अङ्कोऽपरः स गर्भाङ्कः सबीजः फलवानपि" सा० द० ६-२०।

**गर्भित ಗರ್ಭಿತ** (ನಂ) 1. ಒಂದು ಕಾವ್ಯದೋಷ. गर्भोऽस्य सञ्जातः "इतच्" (५-२-३६)। ಒಂದು ವಾಕ್ಯಾರ್ಥವು ಪೂರ್ತಿಯಾಗುವ ಮೊದಲು ಆ ವಾಕ್ಯದ ಮಧ್ಯದಲ್ಲಿ ಬೇರೊಂದು ವಾಕ್ಯದ ಪದಗಳು ಸೇರಿಸಲ್ಪಡುವುದು ಗರ್ಭಿತವು. "वाक्यान्तरपदानां वाक्यान्तरेऽनुप्रवेशो गर्भितता" सा० द०। "रमणे चरणप्रान्ते प्रणतिप्रवणेऽधुना। वदामि सखि ते तत्त्वं कदाचिन्नोचिताः क्रुधः"। ಕಾಲಿಗೆ ಬಿದ್ದು ನಮಸ್ಕಾರ ಮಾಡುತ್ತಿರುವ ಪತಿಯ ವಿಷಯದಲ್ಲಿ ಕೋಪಿಸಿಕೊಳ್ಳುವುದು ಉಚಿತವಲ್ಲವೆಂಬ ವಾಕ್ಯದ ಮಧ್ಯದಲ್ಲಿ ತತ್ತ್ವೋಪದೇಶದ ಮಾತು ಬಂದು ಪ್ರಕೃತಾರ್ಥಕ್ಕೆ ಅಡ್ಡಿಯುಂಟುಮಾಡುವುದರಿಂದ ಇದೊಂದು ಕಾವ್ಯದೋಷ. (ವಿಂ) 2. ಯಾವುದಾದರೊಂದರ ಮಧ್ಯದಲ್ಲಿ ಸೇರಿಕೊಂಡಿರುವ. "नाम कार्यं नाटकस्य गर्भितार्थप्रकाशकम्" सा० द० ६-१४२।

**गर्भेतृप्त ಗರ್ಭೇತೃಪ್ತ** (ವಿಂ) 1. ಗರ್ಭದಲ್ಲೇ ತೃಪ್ತಿಹೊಂದಿದ. 2. ಅನ್ನದಲ್ಲಿ ತೃಪ್ತಿಹೊಂದಿದ. गर्भे तृप्तः अलुक्स० (२-१-४८)।

**गर्भेश्वर ಗರ್ಭೇಶ್ವರ** (ಪುಂ) ಹುಟ್ಟಿದಂದಿನಿಂದಲೇ ರಾಜನಾಗಿರುವ, ಜನ್ಮತಃ ಒಡೆಯನಾಗಿರುವ. गर्भात् ईश्वरः।

**गर्भेश्वरता ಗರ್ಭೇಶ್ವರತಾ** (ಸ್ತ್ರೀಂ) ಹುಟ್ಟಿನಿಂದಲೇ ರಾಜನಾಗಿರುವಿಕೆ. गर्भेश्वरस्य भावः "तल्" (५-१-११९)। "त्वः" (५-१-११९)। **–ईश्वरत्वम् –ಈಶ್ವರತ್ವಮ್.** "गर्भेश्वरत्वमभिनवयौवनत्वमप्रतिमरूपत्वममानुषशक्तित्वं चेति महतीयं खल्वनर्थपरम्परा" काद०।

**गर्भोत्पत्ति ಗರ್ಭೋತ್ಪತ್ತಿ** (ಸ್ತ್ರೀಂ) ಗರ್ಭವು ಹುಟ್ಟುವುದು. ಗರ್ಭವು ನಿರ್ಮಾಣವಾಗುವುದು, ಗರ್ಭವು ರೂಪಗೊಳ್ಳುವುದು. गर्भस्य उत्पत्तिः। ಸ್ತ್ರೀಪುರುಷರ ಸಂಯೋಗವಾದಾಗ ವಾಯುವು ಶರೀರದಿಂದ ಸ್ತ್ರೀಪುರುಷರ ಸಂಘರ್ಷಜನ್ಯವಾದ ತೇಜಸ್ಸನ್ನು ಪ್ರೇರಿಸುವುದು. ಬಳಿಕ ಈ ವಾಯು ಮತ್ತು ತೇಜಸ್ಸುಗಳ ಮೇಳನದಿಂದ ಪುರುಷನ ವೀರ್ಯವು ಹೊರಬಂದು ಸ್ತ್ರೀಯರ ಆರ್ತವ (ಶೋಣಿತ) ದೊಡನೆ ಬೆರೆತು ಗರ್ಭಕೋಶವನ್ನು ಪ್ರವೇಶಿಸುವುದು. "तत्र स्त्रीपुंसयोः संयोगे तेजः शरीराद्वायुरुदीरयति। ततस्तेजोऽनिलसंनिपाताच्छुक्रं च्युतं योनिमभिप्रपद्यते संसृज्यते चार्तवेन, ततोऽग्नीषोमसंयोगात् संसृज्यमानो गर्भाशयमनुप्रतिपद्यते" सुश्रुत० शारीर० ३-४। ಜೀವನು ಪುಣ್ಯ ಪಾಪ ಕರ್ಮಗಳ ಫಲವಾದ ಸ್ವರ್ಗ ನರಕಗಳನ್ನು ಅನುಭವಿಸಿಯೂ ಕರ್ಮಶೇಷವನ್ನು, ಪುನಃ ದೇಹವನ್ನು ಪಡೆದೇ ಕಳೆಯಬೇಕು. ಆದುದರಿಂದ ಪರಮಾತ್ಮನ ಸಂಕಲ್ಪದಂತೆ ಕರ್ಮಶೇಷಾನುಗುಣವಾದ ಮಾನುಷ ಅಥವಾ ತಿರ್ಯಕ್ ಜನ್ಮವನ್ನು ಪಡೆಯುವನು. ಇದಕ್ಕಾಗಿ ಜೀವನು ಮೊದಲು ಆಹಾರಗಳ ಮೂಲಕ ಪುರುಷನ ವೀರ್ಯವನ್ನು ಸೇರಿ ಬಳಿಕ ಹೆಂಗಸಿನ ಗರ್ಭಕೋಶವನ್ನು ಪ್ರವೇಶಿಸುವನು. ವೀರ್ಯವು ಮೊದಲನೆಯ ರಾತ್ರಿ ಶೋಣಿತ (ಹೆಂಗಸಿನ ಆರ್ತವ) ದೊಡನೆ ಸೇರುವುದು. ಐದು ರಾತ್ರಿಗಳಲ್ಲಿ ಅದು ಗುಳ್ಳೆಯಂತೆ ಉಂಟಾಗುವುದು. ಹತ್ತು ದಿನಗಳಲ್ಲಿ ಕಠಿನವಾಗುವುದು. ಒಂದು ತಿಂಗಳಲ್ಲಿ ಮಾಂಸದ ಮುದ್ದೆಯಾಗಿ ಅದರಲ್ಲಿ ತಲೆಯೂ ಎರಡನೆಯ ತಿಂಗಳಲ್ಲಿ ಕೈಕಾಲು ಮೊದಲಾದ ಅವಯವಗಳೂ ಮೂರನೆಯ ತಿಂಗಳಲ್ಲಿ ನಖ ರೋಮ ಎಲುಬು ಚರ್ಮ ಮತ್ತು ಸ್ತ್ರೀ ಪುರುಷ ಚಿಹ್ನೆಗಳೂ ನಾಲ್ಕನೆಯ ತಿಂಗಳಲ್ಲಿ ಸಪ್ತಧಾತುಗಳೂ ಐದನೆಯ ತಿಂಗಳಲ್ಲಿ ಹಸಿವು ಬಾಯಾರಿಕೆಗಳೂ ಕಂಡುಬರುವುವು. ಆರನೆಯ ತಿಂಗಳಲ್ಲಿ ಗರ್ಭಾಶಯದಲ್ಲಿ ಬಂಧಿಸಲ್ಪಟ್ಟು ಹೆಂಗಸಿನ ಹೊಟ್ಟೆಯ ಬಲಗಡೆಗೆ ತಿರುಗಿಕೊಂಡಿರುವುದು. ತಾಯಿಯು ಸೇವಿಸುವ ಆಹಾರದಿಂದಲೇ ಜೀವನು ಬೆಳೆದು ಪುಷ್ಟನಾಗುವನು. ಹತ್ತನೆಯ ತಿಂಗಳಲ್ಲಿ ಪ್ರಸವ (ಹೆರಿಗೆ) ವಾಗುವವರೆಗೂ ಗರ್ಭಕೋಶದಲ್ಲಿ ಸೇರಿಕೊಂಡಿರುವ ಈ ಜೀವನು ನಾನಾವಿಧ ಕಷ್ಟಗಳನ್ನು ಅನುಭವಿಸಬೇಕಾಗುವುದು. "कर्मणा दैवनेत्रेण जन्तुर्देहोपपत्तये। स्त्रियाः प्रविष्ट उदरं पुंसो रेतःकणाश्रयः। कललं त्वेकरात्रेण पञ्चरात्रेण बुद्बुदम्। दशाहेन तु कर्कन्धूः पेश्यण्डं वा ततः परम्। मासेन तु शिरो द्वाभ्यां बाह्वङ्घ्र्याद्यङ्गविग्रहः। नखलोमास्थिचर्माणि लिङ्गच्छिद्रोद्भवस्त्रिभिः। चतुर्भिर्धातवः सप्त पञ्चभिः क्षुत्तृडुद्भवः। षड्भिर्जरायुणा वीतः कुक्षौ भ्राम्यति दक्षिणे। मातुर्जग्धान्नपानाद्यैरेधद्धातुरसम्मते। शेते विण्मूत्रयोर्गर्ते स जन्तुर्जन्तुसंभवे। कृमिभिः क्षतसर्वाङ्गः सौकुमार्यात्प्रतिक्षणम्। मूर्च्छामाप्नोत्युरुक्लेशैस्तत्रत्यैः क्षुधितैर्मुहुः" भाग० ३-३१।

**गर्मुत् ಗರ್ಮುತ್** (ಸ್ತ್ರೀಂ) 1. ಲಾಳದ ಗಿಡ, ನಾಣಲ ಗಿಡ. 2. ಸುವರ್ಣ, ಚಿನ್ನ. 3. ತೃಣಧಾನ್ಯ. गॄ (निगरणे) "उतिः" मुट् च (उ० १-९५)। "गर्मुत् सुवर्णे लताविशेषश्च" सि० कौ०। "गर्मुत् सुवर्णनलयोः" मेदि०।

**गर्व – दर्पे** (भ्वा० पर० अक० से०)। गर्वति। जगर्व। गर्विता। अगर्वीत्। ಇತ್ಯಾದಿ. ಗರ್ವಹೊಂದು, ಅಹಂಕಾರಪಡು.

**गर्ब – माने** (चुरा० आत्म० अक० से०)। गर्बयते। अजगर्बत।

**गर्ब ಗರ್ಬ** (पुं०) 1. ಅಹಂಕಾರ, ಅಭಿಮಾನ. गर्ब (माने) + णिच् "घञ्" (३-३-१८)। 2. ಮದ, ಸೊಕ್ಕು, ಕೊಬ್ಬು, ಹಮ್ಮು. गर्ब (दर्पे) "घञ्" (३-३-१८)। ಇದು ಮೂವತ್ತಮೂರು ವ್ಯಭಿಚಾರಿ ಭಾವಗಳಲ್ಲೊಂದು. ಇತರರಲ್ಲಿ ತಿರಸ್ಕಾರಬುದ್ಧಿ ತಾನೇ ಸುಂದರನೆಂಬ ಅಭಿಮಾನ ತನ್ನ ಸೌಂದರ್ಯವನ್ನು ನೋಡಿಕೊಂಡು ತಾನೇ ಮೆಚ್ಚಿಕೊಳ್ಳುವುದು ಅವಿನಯ ಇತ್ಯಾದಿಗಳು ಗರ್ವದ ಕಾರ್ಯ. सा० द० ३-१५४। 3. ಅಹಂಕಾರದ ಮಾತು. "गर्वोऽवलेपजं वाक्यम्" सा० द० ६-२००।

**गर्वाट ಗರ್ವಾಟ** (पुं०) ದ್ವಾರಪಾಲಕ, ಬಾಗಿಲನ್ನು ಕಾಯುವವನು, ಕಾವಲುಗಾರ. गर्वेणाटति – अट (गतौ) "अच्" (३-१-१३४)। "द्वाःस्थितो वेत्रधारकः। दौःसाधिको वर्तरूको गर्वाटो दण्डवासिनि" त्रिकाण्ड०।

**गर्वित ಗರ್ವಿತ** (वि०) 1. ಗರ್ವವುಂಟಾಗಿರುವ, ಅಹಂಕಾರವುಂಟಾಗಿರುವ. गर्वोऽस्य सञ्जातः "इतच्" (५-२-३६)। 2. ಉನ್ಮತ್ತ, ಮದಿಸಿದವನು. 3. ಅಹಂಕಾರಗೊಂಡ, ಗರ್ವಗೊಂಡ. "प्रेमगर्वितविपक्षमत्सरादायताच्च मदनान्महीक्षिताम्" रघु० १९-२०।

**गर्ह – कुत्सायाम्** (भ्वा० आत्म० सक० से०)। गर्हते। जगर्हे। गर्हिता। ಇತ್ಯಾದಿ. ಕೆಟ್ಟಮಾತನ್ನಾಡು, ಬಯ್ಯು.

**गर्ह – निन्दायाम्** (वा० चुरा० उभ० पक्षे भ्वा० पर० सक० से०)। गर्हयति, –ते। गर्हयांचकार, –चक्रे, –बभूव, –आस। ಇತ್ಯಾದಿ. पक्षे गर्हति। जगर्ह। गर्हिता। ಇತ್ಯಾದಿ. 1. ನಿಂದಿಸು, ದೂಷಿಸು, ತೆಗಳು. 2. ಕೆಟ್ಟಮಾತನ್ನಾಡು, ಬಯ್ಯು.

**गर्हण ಗರ್ಹಣ** (न०) 1. ನಿಂದೆ, ತೆಗಳಿಕೆ. 2. ಬೈಗಳು. गर्ह (निन्दायाम्) + णिच् "ल्युट्" (३-३-११५)। भावे "युच्" (३-३-१०७)। **गर्हणा ಗರ್ಹಣಾ.**

**गर्हणीय ಗರ್ಹಣೀಯ** (वि०) 1. ನಿಂದಿಸಲ್ಪಡುವ. 2. ನಿಂದಿಸಲು ಅರ್ಹವಾದ. 3. ನಿಂದಿಸಲು ಶಕ್ಯವಾದ. गर्ह (निन्दायाम्) + णिच् "अनीयर्" (३-१-९६)। "तव्यः"। **गर्हितव्यः ಗರ್ಹಿತವ್ಯಃ.**

**गर्हत् ಗರ್ಹತ್** (वि०) 1. ನಿಂದಿಸುತ್ತಿರುವ, ತೆಗಳುತ್ತಿರುವ. गर्ह (निन्दायाम्) "शतृ" (३-२-१२४)। 2. ಕೆಟ್ಟಮಾತನ್ನಾಡುತ್ತಿರುವ, ಬಯ್ಯುತ್ತಿರುವ. गर्ह (कुत्सायाम्) "शतृ"। स्त्रियाम् "ङीप्" (४-१-६)। **गर्हन्ती ಗರ್ಹಂತೀ.** "शानच्"। **गर्हमाणः ಗರ್ಹಮಾಣಃ.** स्त्रियाम् **–माणा –ಮಾಣಾ.**

**गर्हयत् ಗರ್ಹಯತ್** (वि०) "गर्हत्" ಪದದ ಅರ್ಥ. गर्ह (निन्दायाम्) + णिच् "शतृ" (३-२-१२४)। स्त्रियाम् "ङीप्" (४-१-६)। **–यन्ती –ಯಂತೀ.**

**गर्हा ಗರ್ಹಾ** (स्त्री०) 1. ನಿಂದೆ, ದೂಷಣೆ. 2. ಬೈಗಳು. गर्ह (कुत्सायाम्) "अः" (३-३-१०३)।

**गर्हित ಗರ್ಹಿತ** (न०) 1. ನಿಂದೆ, ದೂಷಣೆ. 2. ಬೈಗಳು. गर्ह (कुत्सायाम्) भावे "क्तः" (३-३-११४)। (वि०) 3. ನಿಂದಿಸಲ್ಪಟ್ಟ, ದೂಷಿಸಲ್ಪಟ್ಟ. 4. ಬಯ್ಯಲ್ಪಟ್ಟ. गर्ह कर्म० "क्तः" (३-२-१०२)।

**गर्हितवत् ಗರ್ಹಿತವತ್** (वि०) 1. ನಿಂದಿಸಿದವನು, ದೂಷಿಸಿದವನು. 2. ಬೈದವನು. गर्ह (कुत्सायाम्) "क्तवतुः" (३-२-१०२)। स्त्रियाम् "ङीप्" (४-१-६)। **–वती –ವತೀ.**

**गर्ह्य ಗರ್ಹ್ಯ** (वि०) 1. ನಿಂದಿಸಲ್ಪಡುವ, ದೂಷಿಸಲ್ಪಡುವ. गर्ह (कुत्सायाम्) "ण्यत्" (३-१-१२४)। 2. ನಿಂದಿಸಲು ಶಕ್ಯನಾದ. 3. ನಿಂದಿಸಲು ಅರ್ಹನಾದ, ನೀಚ, ಅಲ್ಪ, ಅಧಮ. "पित्रा भर्त्रा सुतैर्वापि नेच्छेद्विरहमात्मनः। एषां हि विरहेण स्त्री गर्ह्ये कुर्यादुभे कुले" मनु० ५-१४९।

**गर्ह्यवादिन् ಗರ್ಹ್ಯವಾದಿನ್** (वि०) ನಿಂದ್ಯವಾದ ಮಾತನ್ನಾಡುವ, ಕೆಟ್ಟಮಾತನ್ನಾಡುವ. गर्ह्यं वदति – वद (व्यक्तायां वाचि) "णिनिः" (३-२-७८)। स्त्रियाम् "ङीप्" (४-१-५)। **–वादिनी –ವಾದಿನೀ.**

**गल – अदने** (भ्वा० पर० सक० से०)। गलति। जगाल। गलिता। गलिष्यति। गलतु। अगलत्। ಇತ್ಯಾದಿ. ಭಕ್ಷಿಸು, ತಿನ್ನು, ನುಂಗು.

**गल – प्रस्रवणे** (चुरा० आत्म० अक० से०)। गालयते। गालयां चक्रे। गालयिता। गालयताम्। 1. ಜಾರು, ಕಳಚು. 2. ಸ್ರವಿಸು, ಸೋರು.

**गल ಗಲ** (पुं०) 1. ಕಂಠ, ಕುತ್ತಿಗೆ. गलति – गल (अदने) "अच्" (३-१-१३४)। "गले कस्तूरीयं शिरसि शशिलेखा न कुसुमम्" कुव०। 2. ಸಾಲವೃಕ್ಷದ ರಸ, ಮತ್ತಿಮರದ ಹಾಲು. "गलः कण्ठे सर्जरसे" मेदि०। 3. ಒಂದು ಜಾತಿಯ ಮೀನು. 4. ಒಂದು ವಿಧ ವಾದ್ಯ.

**गलक ಗಲಕ** (पुं०) 1. ಮತ್ಸ್ಯ, ಮೀನು. गल (अदने) बाहु० "वुन्"। 2. ಕಂಠ, ಕುತ್ತಿಗೆ. स्वार्थे "कन्" ।

**गलकम्बल ಗಲಕಂಬಲ** (ಪುಂ) ಗಂಗೆದೊಗಲು. गले कम्बल इव।

**गलगण्ड ಗಲಗಂಡ**(ಪುಂ) ಹೆಕ್ಕತ್ತು ಮತ್ತು ತಲೆಗಳ ಮಧ್ಯೆ ಏಳುವ ದುರ್ಮಾಂಸದ ಗಂಟು. ಕತ್ತಿನಲ್ಲಿ ವಾತ ಮತ್ತು ಕಫಗಳು ಒಟ್ಟಾಗಿ ಸೇರಿ ಏಳುವ ಒಂದು ಮಾಂಸ ಗ್ರಂಥಿ. ಗಲಗಂಡವು ಕತ್ತಿನ ಒಂದು ಭಾಗದಲ್ಲಿ ಮಾತ್ರ ಏಳುವುದು. ಗಂಡಮಾಲೆಯು ಕತ್ತಿನ ಸುತ್ತಲೂ ಏಳುವುದು.

**गलग्रह ಗಲಗ್ರಹ** (ಪುಂ) 1. ಅಧ್ಯಯನವನ್ನು ಪ್ರಾರಂಭಿಸಿದ ದಿನದ ಮುಂದಿನ ಅನಧ್ಯಯನ ದಿನ. "आरम्भानन्तरं यत्र प्रत्यारम्भो न दृश्यते। गर्गादिमुनयः सर्वे तमेवाहुर्गलग्रहम्" नारदः। 2. ಕೃಷ್ಣಪಕ್ಷದ ಚತುರ್ಥಿ ಸಪ್ತಮಿ ಅಷ್ಟಮಿ ನವಮಿ ಮತ್ತು ತ್ರಯೋದಶಿಯಿಂದ ನಾಲ್ಕು ತಿಥಿಗಳು. "कृष्णपक्षे चतुर्थी च सप्तम्यादिदिनत्रयम्। त्रयोदशीचतुष्कं च अष्टावेते गलग्रहाः"। 3. ಕುತ್ತಿಗೆಯಲ್ಲಿ ಹಿಡಿಯುವುದು, ಕುತ್ತಿಗೆಯನ್ನು ಹಿಡಿದೆತ್ತುವುದು. गले ग्रहः।

**गलत् ಗಲತ್** (ವಿಂ) 1. ಸುರಿಯುತ್ತಿರುವ, ಹರಿಯುತ್ತಿರುವ, ಸೋರುತ್ತಿರುವ. गल (अदने) "शतृ" (३-२-१२४)। "ह्रीमत्याः सरसि गलन्मुखेन्दुकान्तेः" माघ० ८-४२। 2. ಜಾರುತ್ತಿರುವ, ಕೆಳಕ್ಕೆ ಸರಿದು ಬೀಳುತ್ತಿರುವ. "गलद्भिरन्या वलयप्रसूनैरभ्यर्चनामातनुतेव शौरेः" याद० १३-५९। स्त्रियाम् "ङीप्" (४-१-६)। **गलन्ती ಗಲಂತೀ.** 3. ತಿನ್ನುತ್ತಿರುವ, ನುಂಗುತ್ತಿರುವ. गल (अदने) "शतृ" (३-२-१२४)।

**गलन ಗಲನ** (ನಂ) 1. ಜಾರಿ ಬೀಳುವುದು. 2. ಸೋರುವುದು. 3. ತಿನ್ನುವುದು, ನುಂಗುವುದು. गल (प्रस्रवणे अदने वा) "ल्युट्" (३-३-११५)।

**गलनीय ಗಲನೀಯ** (ವಿಂ) 1. ತಿನ್ನಲ್ಪಡುವ, ನುಂಗಲ್ಪಡುವ. 2. ನುಂಗಲು ಯೋಗ್ಯವಾದ. 3. ನುಂಗಲು ಶಕ್ಯವಾದ. गल (अदने) कर्मादौ "अनीयर्" (३-१-९६)।

**गलन्तिका ಗಲಂತಿಕಾ** (ಸ್ತ್ರೀಂ) ಗಿಂಡಿ, ಹೂಜಿ. गलन्ती "कन्" (५-४-५)। "कर्कर्यालुर्गलन्तिका" अम०।

**गलन्ती ಗಲಂತೀ** (ಸ್ತ್ರೀಂ) ಹೂಜಿ. गल (अदने) "शतृ" (३-२-१२४)। "ङीप्" (४-१-६)।

**गलमेखला ಗಲಮೇಖಲಾ**(ಸ್ತ್ರೀಂ) ಕಂಠಾಭರಣ, ಅಡ್ಡಿಗೆ. गलस्य मेखलेव।

**गलवार्त ಗಲವಾರ್ತ** (ಪುಂ) ಇಷ್ಟದಂತೆ ಊಟಮಾಡಲು ಯೋಗ್ಯನಾದ, ಗಂಟಲು ಬೇನೆಯಿಲ್ಲದ, ಆರೋಗ್ಯವಂತ. गले गलव्यापारे भोजनादौ वार्तः निरामयः। "दृश्यन्ते चैव तीर्थेषु गलवार्तास्तपस्विनः" पञ्चतं०।

**गलविद्रधि ಗಲವಿದ್ರಧಿ** (ಪುಂ) ಒಂದು ಕಂಠರೋಗ, ಕಂಠದೊಳಗೆ ಕೀವುತುಂಬಿದ ಬಾವು. "सर्वं गलं व्याप्य समुत्थितो यः शोफो रुजो यत्र च सन्ति सर्वाः। स सर्वदोषो गलविद्रधिस्तु यस्यैव तुल्यः खलु सर्वजस्य" सुश्रुत० निदान० १६-५९।

**गलव्रत ಗಲವ್ರತ** (ಪುಂ) ಮಯೂರ, ನವಿಲು.

**गलशुण्डिका ಗಲಶುಂಡಿಕಾ** (ಸ್ತ್ರೀಂ) 1. ಕಿರುನಾಲಗೆ. गले शुण्डिकेव। "तालूहरं बस्तिशीर्ष चिबुके गलशुण्डिके" याज्ञ० ३-८७। 2. ದವಡೆಯ ಒಂದು ರೋಗ. "तालुगतास्तु गलशुण्डिका तुण्डिकेरी अध्रुषः कच्छपः अर्बुदम् मांससंघातः तालुपुप्पुटः तालुशोषः ಮತ್ತು तालुपाकः ಇವು ದವಡೆಯ ರೋಗಗಳು. सुश्रुत० निदान० १४-४०।

**गलशुण्डी ಗಲಶುಂಡೀ** (ಸ್ತ್ರೀಂ) ಕಿರುನಾಲಗೆಯ ಊತ, ಕಿರುನಾಲಗೆಯು ಊದಿಕೊಳ್ಳುವುದು.

**गलस्तन ಗಲಸ್ತನ** (ಪುಂ) ಆಡಿನ ಕತ್ತಿನಲ್ಲಿ ಸ್ತನಗಳಂತೆ ಜೋಲಾಡುವ ಮಾಂಸಪಿಂಡ. गले स्तन इव।

**गलस्तनी ಗಲಸ್ತನೀ** (ಸ್ತ್ರೀಂ) ಕತ್ತಿನಲ್ಲಿ ಸ್ತನಗಳಿರುವ ಆಡು. गले स्तनौ यस्याः।

**गलहस्त ಗಲಹಸ್ತ** (ಪುಂ) 1. ಹೊರಕ್ಕೆ ನೂಕಲು ಕತ್ತಿಗೆ ಹಾಕಿರುವ ಹಸ್ತ, ಕತ್ತುಹಿಡಿದು ತಳ್ಳಲು ಕತ್ತಿನ ಮೇಲೆ ಇಟ್ಟಿರುವ ಕೈ. गलेऽर्पितो हस्तः। 2. ಅರ್ಧಚಂದ್ರಾಕಾರದ ಬಾಣ.

**गलहस्तित ಗಲಹಸ್ತಿತ** (ವಿಂ) ಕತ್ತುಹಿಡಿದು ನೂಕಲ್ಪಟ್ಟ. गलहस्तोऽस्य सञ्जातः "इतच्" (५-२-३६)। "वियोगिवैरात् कुचयोर्नखाङ्कादर्धेन्दुलीलैर्गलहस्तितेव" नैष० ६-२५।

**गला ಗಲಾ** (ಸ್ತ್ರೀಂ) ಮುಟ್ಟಿದರೆ ಮುನಿವ ಗಿಡ.

**गलाङ्कुर ಗಲಾಂಕುರ** (ಪುಂ) ಕಂಠದಲ್ಲಿ ಬರುವ ಒಂದು ರೋಗ.

**गलानिल ಗಲಾನಿಲ** (ಪುಂ) ಒಂದು ಜಾತಿಯ ಮತ್ಸ್ಯ, ಮೀನು. गलेऽनिलः प्राणवायुरस्य। "गङ्गाटेयो गलानिलः" त्रिकाण्ड०।

**गलि ಗಲಿ** (ಪುಂ) ಶಕ್ತಿಯಿದ್ದರೂ ಭಾರ ಹೊರಲು ಮೊಂಡುಹಿಡಿಯುವ ವೃಷಭ, ಗಾಡಿ ಎಳೆಯಲು ಸರಿಯಾಗಿ ಪಳಗದ ಎತ್ತು.

**गलित ಗಲಿತ** (ವಿ०) 1. ಜಾರಿ ಬಿದ್ದಿರುವ. ಕೆಳಕ್ಕೆ ಜಾರಿ ಕೊಂಡಿರುವ. गल (प्रस्रवणे) कर्त० "क्तः" (३-४-७२)। "ह्रीतया गलितनीवि निरस्यन्नन्तरीयमवलम्बितकाञ्चि" किरा० ९-४८। 2. ಪರಿಣತವಾದ. ಪಕ್ವವಾದ. ಇಳಿ ಮುಖವಾದ. "गलितवयसामिक्ष्वाकूणामिदं हि कुलव्रतम्" रघु० ३-७०।

**गलोद्देश ಗಲೋದ್ದೇಶ** (पुं०) ಕುದುರೆಯ ಕುತ್ತಿಗೆಯ ಸಮೀಪದ ಅವಯವ. गलस्य उद्देशः।

**गलोद्भव ಗಲೋದ್ಭವ** (पुं०) ಕುದುರೆಯ ಕತ್ತಿನಲ್ಲಿರುವ ರೋಮಾವರ್ತ, ಕುದುರೆಯ ಕತ್ತಿನಲ್ಲಿ ಹುಟ್ಟಿರುವ ರೋಚಮಾನವೆಂಬ ಕೂದಲಿನ ಸುಳಿ. गले उद्भवति — उद् + भू "अप्" (३-३-५७)। "रोचमानो गलोद्भवः" त्रिकाण्ड०।

**गल्भ — धाष्टर्चे** (भ्वा० आत्म० अक० से०)। गल्भते। जगल्भे। अगल्भिष्ट। ಧೈರ್ಯದಿಂದಿರು. ದಿಟ್ಟತನದಿಂದಿರು. "या कथंचन सखीवचनेन प्रागभिप्रियतमं प्रजगल्भे" माघ० १०-१८।

**गल्भ ಗಲ್ಭ** (पुं०) ಧೈರ್ಯಶಾಲಿ, ಸಾಹಸವುಳ್ಳವನು.

**गल्या ಗಲ್ಯಾ** (स्त्री०) ಕಂಠಗಳ ಸಮೂಹ. ಕತ್ತುಗಳ ಸಮುದಾಯ. गलानां समूहः "यः" (४-२-४९)।

**गल्ल ಗಲ್ಲ** (पुं०) ಕಪೋಲ. ಕೆನ್ನೆ.

**गल्लक ಗಲ್ಲಕ** (पुं०) 1. ಪಾನಪಾತ್ರೆ, ಕುಡಿಯುವ ಲೋಟ ಮೊದಲಾದುದು. 2. ಇಂದ್ರನೀಲಮಣಿ.

**गल्लचातुरी ಗಲ್ಲಚಾತುರೀ** (स्त्री०) ದಿಂಬು, ಕೆನ್ನೆಯನ್ನು ಇಟ್ಟುಕೊಂಡು ಮಲಗಲು ಹಿತವಾದ ದಿಂಬು.

**गल्लूरण ಗಲ್ಲೂರಣ** (न०) ಹುಲಿಯು ಮಾಂಸವನ್ನು ತಿನ್ನುವಾಗ ಕೋಪದಿಂದ ಮಾಡುವ ಗರ್ಜನೆ. "रल्लिगल्लूरणशब्दसन्दर्भपरिपूरितनभस्तलः" मालती० ३।

**गल्वर्क ಗಲ್ವರ್ಕ** (पुं०) 1. ಇಂದ್ರನೀಲಮಣಿ. "गल्वर्कश्च सुसारवत्। अश्मसारस्त्विन्द्रनीलः" त्रिकाण्ड०। 2. ಪದ್ಮರಾಗ. "ससारगल्वर्कसुवर्णरूप्यैः" भा० द्रोण०। 3. ಪಾನಪಾತ್ರೆ, ಕುಡಿಯುವ ಪಾತ್ರೆ.

**गवय ಗವಯ** (पुं०) 1. ಸುಗ್ರೀವ ಸೈನ್ಯದಲ್ಲಿ ಒಬ್ಬ ವಾನರ. "गयो गवाक्षो गवयः शरभो गन्धमादनः" रामा०। 2. ಕಾಡುಹಸು. ಗಂಗೆದೊಗಲಿಲ್ಲದ ಹಸುವಿನಂತಿರುವ ಒಂದು ಪಶು. गां तदवयवं सादृश्येन अयते — अय (गतौ) "अच्" (३-१-१३४)। "गोसदृशो गवयः"। ಗವಯವನ್ನು ಮೊದಲನೆಯ ಸಲ ನೋಡಿದವನಿಗೆ ಹಸುವಿನ ಹೋಲಿಕೆಯನ್ನು ಕೊಟ್ಟು ಅದರ ಪರಿಚಯವನ್ನುಂಟು ಮಾಡಬೇಕು. "ग्रामीणस्य प्रथमतः पश्यतो गवयादिकम्। सादृश्यधीर्गवादीनां या स्यात्सा करणं मतम्। गवयादिपदानां तु शक्तिधीरुपमाफलम्" भाषाप०। स्त्रियाम् "ङीष्" (४-१-६३)। **गवयी ಗವಯೀ.** योपधत्वप्रयुक्तप्रतिषेधो नास्ति (वा० ४-१-६३)।

**गवल ಗವಲ** (पुं०) 1. ಕಾಡುಕೋಣ. गुङ् (शब्दे) भावे "अप्" (३-३-५७)। गवं शब्दं लाति — ला (आदाने) "कः" (३-२-४)। स्त्रियाम् "ङीष्" (४-१-६३)। **—ली —ಲೀ.** (न०) 2. ಕಾಡುಕೋಣದ ಕೊಂಬು. "गवलासितकान्ति तस्य मध्यस्थितघोरायतबाहुदण्डनासम्" माघ० २०-१२।

**गवाक्ष ಗವಾಕ್ಷ** (पुं०) 1. ಕಿಟಕಿ. गवामक्षीवाक्षि यस्य "अच्" (५-४-७६)। "गवाक्षमागम्य गजेन्द्रयाता काचित् प्रससमार कृतावशेषम्" याद० १३-४७। 2. ಸುಗ್ರೀವ ಸೈನ್ಯದಲ್ಲಿ ಗೋಲಾಂಗೂಲ ಜಾತಿಯ ಒಬ್ಬ ವಾನರ. "गयो गवाक्षो गवयः शरभो गन्धमादनः" रामा०। 3. ಒಬ್ಬ ಕ್ಷತ್ರಿಯ, ಶಕುನಿಯ ಸಹೋದರ.

**गवाक्षक ಗವಾಕ್ಷಕ** (पुं०) ಕಿಟಕಿ.

**गवाक्षजाल ಗವಾಕ್ಷಜಾಲ** (न०) ಕಿಟಕಿಯ ಸಂದಿ, ಕಿಟಕಿಯೊಳಗಿನ ವಿವರ. "अन्तर्निविष्टोज्ज्वलरत्नभासो गवाक्षजालैरभिनिष्पतन्त्यः" भट्टि० १-८।

**गवाक्षी ಗವಾಕ್ಷೀ** (स्त्री०) 1. ಬಿಡುಮೆಯ ಗಿಡ. 2. ಹಾವುಮೆಕ್ಕೆಗಿಡ.

**गवाची ಗವಾಚೀ** (स्त्री०) ಒಂದು ಜಾತಿಯ ಮೀನು.

**गवादन ಗವಾದನ** (न०) 1. ತೃಣ, ಹುಲ್ಲು, ದನಕರುಗಳ ಆಹಾರ. गोभिरद्यते — अद (भक्षणे) कर्म० "ल्युट्" (३-३-११३)। (स्त्री०)**—अदनी —ಅದನೀ.** 2. ದನಕರುಗಳು ಮೇಯಲು ಹುಲ್ಲು ಹಾಕುವ ತೊಟ್ಟಿ. अधि० "ल्युट्" (३-३-११७)। "ङीप्" (४-१-१५)। 3. ಬಿಡುಮೆಯ ಗಿಡ. 4. ಹಾವುಮೆಕ್ಕೆಗಿಡ. "गवादनीन्द्रवारुणी। घासस्थानं गवादीनाम्" हेम०।

**गवानृत ಗವಾನೃತ** (न०) ಗೋವಿನ ವಿಷಯವಲ್ಲಿ ಹೇಳಿದ ಸುಳ್ಳು. गवि गोविषयेऽनृतम्। "पञ्च पश्वनृते हन्ति दश हन्ति गवानृते। शतमश्वानृते हन्ति सहस्रं पुरुषानृते" मनु० ८-९८।

**गवामयन ಗವಾಮಯನ** (न०) ಹತ್ತು ಮತ್ತು ಹನ್ನೆರಡು ತಿಂಗಳಲ್ಲಿ ಮಾಡಬಹುದಾದ ಒಂದು ಯಾಗ.

**गवामृत ಗವಾಮೃತ** (न०) ಗೋಕ್ಷೀರ, ಹಸುವಿನ ಹಾಲು.

**गवाम्पति ಗವಾಂಪತಿ** (पुं०) 1. ವೃಷಭ, ಎತ್ತು. 2. ಗೋಪಾಲಕ, ಹಸುಗಳನ್ನು ಕಾಪಾಡುವವನು. गवां पतिः। अलुक्। "यथा दृष्ट्वा यवीयांसं सहदेवं गवाम्पतिम्" भा०। 3. ಸೂರ್ಯ. 4. ಅಗ್ನಿ, ಬೆಂಕಿ.

**गवाविक ಗವಾವಿಕ** (न०) ದನಗಳು ಮತ್ತು ಕುರಿಗಳು. गावश्च अवयश्च (२-४-११) निपातनात्साधुः।

**गवाश्व ಗವಾಶ್ವ** (न०) ಗೋವುಗಳು ಮತ್ತು ಕುದುರೆಗಳು. गावश्च अश्वाश्च (२-४-११) निपातनात्साधुः।

**गवाह्निक ಗವಾಹ್ನಿಕ** (न०) ಹಸುವು ಒಂದು ದಿನದಲ್ಲಿ ತಿನ್ನುವಷ್ಟು ಆಹಾರ. अह्नि भवम् "ठक्" गोः आह्निकम्। "निरुद्धेगस्तु यो दद्यात् मासमेकं गवाह्निकम्। एकभक्तं तथाश्नीयात् श्रूयतां तस्य यत् फलम्" भा० अनु०।

**गविनी ಗವಿನೀ** (स्त्री०) ಗೋವುಗಳ ಸಮೂಹ, ಹಸುಗಳ ಗುಂಪು. गवां समूहः "इनिः" (वा० ४-१-५१)। "ङीप्" (४-१-५)। स्त्रीत्वं लोकात्।

**गविष्ठ ಗವಿಷ್ಠ** (पुं०) ಒಬ್ಬ ದೈತ್ಯ. गविष्ठस्तु महातेजा यः प्रख्यातो महासुरः। द्रुमसेन इति ख्यातो पृथिव्यां समजायत" भा० आदि०।

**गवेधु ಗವೇಧು** (स्त्री०) ಕಾಡುಗೋಧಿ. गवा एधते — एध (वृद्धौ) "कुः" (उ० १-३७)।

**गवेधुका ಗವೇಧುಕಾ** (स्त्री०) ಕಾಡುಗೋಧಿ. गवेधु स्वार्थे "कन्" (५-३-५)।

**गवेन्द्र ಗವೇಂದ್ರ** (पुं०) 1. ಉತ್ತಮವಾದ ವೃಷಭ, ಶ್ರೇಷ್ಠ ಎತ್ತು. गौरिन्द्र इव। 2. ದನಗಳ ಯಜಮಾನ.

**गवेषण ಗವೇಷಣ** (वि०) 1. ಹುಡುಕುವವನು. गवेष (अन्वेषणे) कर्त० "ल्युः" (३-१-१३४)। 2. ಹಸುವನ್ನು ಅಪೇಕ್ಷಿಸುವವನು. 3. ನೀರನ್ನು ಅಪೇಕ್ಷಿಸುವವನು. गो+इषु (इच्छायाम्) "ल्युः" (३-१-१३४)।

**गवेषणा ಗವೇಷಣಾ** (स्त्री०) 1. ಹುಡುಕುವುದು, ಅನ್ವೇಷಣೆ. गवेष (अन्वेषणे) + णिच् "युच्" (३-३-१०७)। 2. ನೀರನ್ನು ಅಪೇಕ್ಷಿಸುವುದು. 3. ಹಸುವನು ಅಪೇಕ್ಷಿಸುವುದು. गो+एषृ (गतौ) "युच्"।

**गवेषित ಗವೇಷಿತ** (वि०) ಹುಡುಕಲ್ಪಟ್ಟ. गवेष (अन्वेषणे) "क्तः" (३-२-१०२)।

**गवेषिन् ಗವೇಷಿನ್** (वि०) ಹುಡುಕುವವನು. गवेष (अन्वेषणे) "णिनिः" (३-१-१३४)।

**गव्य ಗವ್ಯ** (न०) 1. ಮೌರ್ವಿ, ಬಿಲ್ಲಿನ ಹೆದೆ. "मौर्वी जीवो गुणो गव्या शिञ्जा बाणासनं द्रुणा" अभि० चि०। 2. ಬಣ್ಣಕ್ಕಾಗಿ ಉಪಯೋಗಿಸುವ ವಸ್ತು. (वि०) 3. ಹಸುವಿನ ಹಾಲು ಮೊಸರು ಮುಂತಾದುವು. 4. ಹಸುವಿನಲ್ಲಿರುವ. 5. ಹಸುವಿನಿಂದ ಉಂಟಾದ. 6. ಹಸುವಿಗೆ ಯೋಗ್ಯವಾದ, ಹಸುವಿಗೆ ಹಿತವಾದ. गवि भवम् गोरागतम् गवे हितं वा "यत्" (वा० ४-१-८५)। (स्त्री०) **-व्या-व्या.** 7. ಗೋವುಗಳ ಸಮೂಹ. गवां समूहः "यः" (४-२-५०)। 8. ಗೋರೋಚನ. गोः विकारः "यत्" (४-३-१६०)। "श्रवणोपान्तिकनीयमानगव्यम्"। ಮೇದಿನೀಕೋಶದಲ್ಲಿ (न०) ಲಿಂಗದಲ್ಲಿಯೂ ಅಭಿಧಾನ ಚಿಂತಾಮಣಿಯಲ್ಲಿ (स्त्री०) ಲಿಂಗದಲ್ಲಿಯೂ ಉಕ್ತವಾಗಿದೆ. 9. ಗವ್ಯೂತಿ, ಎರಡು ಕ್ರೋಶಗಳ ದೂರ. "गव्या गव्यूतगव्यूती" अभि० चि०।

**गव्यूत ಗವ್ಯೂತ** (न०) 1. ಒಂದು ಕ್ರೋಶದ ದೂರ. 2. ಎರಡು ಕ್ರೋಶಗಳ ದೂರ, ಒಂದು ಗಾವುದ. ಒಂದು ಸಾವಿರ ಧನುಸ್ಸುಗಳಷ್ಟು ದೂರವು ಒಂದು ಕ್ರೋಶ. ಎರಡು ಕ್ರೋಶಗಳು ಒಂದು ಗಾವುದ. "धन्वन्तरसहस्रं तु क्रोशः क्रोशद्वयं पुनः। गव्यूतं स्त्री तु गव्यूतिः"।

**गव्यूति ಗವ್ಯೂತಿ** (स्त्री०) ಎರಡು ಕ್ರೋಶಗಳ ದೂರ, ಒಂದು ಗಾವುದ. "गव्या गव्यूतगव्यूती" अभि० चि०।

**गहन ಗಹನ** (पुं०) 1. ವಿಷ್ಣು. महागुणे अतिभूमितया दुर्विज्ञेयः — गाहू (विलोडने) "युच्" (उ० २-७९)। (न०) 2. ಅರಣ್ಯ, ಕಾನನ, ಕಾಡು. गाहयते — गाहू (विलोडने) "युच्" (उ० २-७९)। 3. ಗಹ್ವರ, ಗುಹೆ. 4. ದುಃಖ. (वि०) 5. ಆಳವಾದ, ಪ್ರವೇಶಿಸಲು ಕಷ್ಟವಾದ. 6. ತಿಳಿಯಲು ಕಷ್ಟವಾದ. 7. ಹೋಗಲೂ ಕಷ್ಟವಾದ. "मतिभेदतमस्तिरोहिते गहने कृत्यविधौ विवेकिनाम्" किरा० २-३३।

**गह्व ಗಹ್ವ** (न०) 1. ಗಾಂಭೀರ್ಯ, ಆಳವಾಗಿರುವಿಕೆ. 2. ಪ್ರವೇಶಿಸಲು ಕಷ್ಟವಾದ ಪ್ರದೇಶ, ಇಕ್ಕಟ್ಟಾದ ಜಾಗ.

**गह्वर ಗಹ್ವರ** (पुं०) 1. ಲತಾಗೃಹ, ಮೇಲುಗಡೆ ಬಳ್ಳಿಗಳಿಂದ ಆವೃತವಾದ ಪ್ರದೇಶ. (न०) 2. ಬಿಲ, ಬೆಟ್ಟದ ಗವಿ, ಅಕೃತ್ರಿಮವಾದ ಗುಹೆ. गाहयते—गाहू (विलोडने) "ष्वरच्" (उ० ३-१)। निपा०। "गङ्गाप्रपातान्तनिरूढशष्पं गौरीगुरोर्गह्वरमाविवेश" रघु० २-२६। 3. ದಂಭ, ಕಪಟ. 4. ವನ, ಕಾಡು. "अथ गह्वरम्। गुहागहनदम्भेषु निकुञ्जे तु पुमानयम्" मेदि०।

5. ಇಕ್ಕಟ್ಟಾದ ಜಾಗ. 6. ರೋದನ, ಅಸ್ಪಷ್ಟವಾಗಿ ಗದ್ಗದ ಸ್ವರದೊಡನೆ ಅಳುವುದು. "रुदितं क्रन्दितं क्रुष्टं तदपुष्टं तु गह्वरम्" अभि० चि०।

**गा – स्तुतौ** (जुहो० पर० सक० अनि०)। जिगाति जिगीतः जिगति। जगौ जगतुः। गाता। गास्यति। जिगातु जिगीतात् जिगीताम् जिगतु। अजिगात्। ಇತ್ಯಾದಿ. ಸ್ತುತಿಸು, ಸ್ತೋತ್ರಮಾಡು, ಹೊಗಳು.

**गाङ् – गतौ** (भ्वा० आत्म० सक० अनि०)। गाते गाते गाते। गासे गाथे गाध्वे। जगे जगाते जगिरे। गाता गातारौ गातारः। गास्यते। गाताम् गाताम् गाताम्। गास्व गाथाम् गाध्वम्। अगात अगाताम्। गेत गेयाताम् गेरन्। गासीष्ट। अगास्त। अगास्यत। ಹೋಗು, ಹೊರಡು.

**कर्म०** :—गीयते। जगे। जगिषे। गायिता, गाता। गायिष्यते, गास्यते।

**णिचि** :—गापयति, –ते। गापयां चकार, –चक्रे, –बभूव, –आस। गापयिता। गापयिष्यति, –ते। गापयतु, –ताम्। अगापयत्, –त। ಇತ್ಯಾದಿ.

**सनि** :—जिगासते। जिगासां चक्रे, –बभूव, आस। जिगासिता। जिगासिष्यते। जिगासताम्। ಇತ್ಯಾದಿ.

**कृत्सु** :—गातव्यम्। गानीयम्। गेयम्। गीतम्। गीतवान्, –वती। गायन्, गायन्ती। गातुम्। गीतम्। गानम्। गीत्वा। प्रगाय।

**ण्यन्तात् कृत्सु** :—गापयितव्यम्। गापनीयम्। गाप्यम्। गापितः। गापितवान्, –वती। गापयन्, –यन्ती। गापयमानः। गापयितुम्। गापितम्। गापनम्। गापयित्वा। प्रगाप्य।

**गाङ्ग ಗಾಂಗ** (पुं०) 1. ಭೀಷ್ಮಾಚಾರ್ಯ. 2. ಕಾರ್ತಿಕೇಯ, ಷಣ್ಮುಖ. गङ्गाया अपत्यम् "अण्" (४-१-११२)। (न०) 3. ಸುವರ್ಣ, ಚಿನ್ನ. "यं गर्भं सुषुवे गङ्गा पावकाद्दीप्ततेजसम्। तदुल्बं पर्वते न्यस्तं हिरण्यं समपद्यत" भा० वन०। 4. ಮಳೆಯ ನೀರು. (वि०) 5. ಗಂಗಾನದಿಯ ಸಂಬಂಧವಾದ. गङ्गायाः इदम् "अण्" (४-३-१२०)। "विकीर्णसप्तर्षिबलिप्रहासिभिस्तथा न गाङ्गैः सलिलैर्दिवश्च्युतैः" कुमा० ५-३७।

**गाङ्गटेय ಗಾಂಗಟೇಯ** (पुं०) ಒಂದು ಜಾತಿಯ ಮೀನು.

**गाङ्गायनि ಗಾಂಗಾಯನಿ** (पुं०) 1. ಗಂಗಾಪುತ್ರನಾದ ಭೀಷ್ಮಾಚಾರ್ಯ. गङ्गाया अपत्यम् "फिञ्" (४-१-१५४)। 2. ಕಾರ್ತಿಕೇಯ, ಷಣ್ಮುಖ.

**गाङ्गेय ಗಾಂಗೇಯ** (पुं०) 1. ಭೀಷ್ಮಾಚಾರ್ಯ. 2. ಷಣ್ಮುಖ. गङ्गाया अपत्यम् "ढक्" (४-१-१२३)। (न०) 3. ಸುವರ್ಣ, ಚಿನ್ನ. "गाङ्गेयमुत्पाद्य वसु प्रकृष्टम्"। 4. ಭದ್ರಮುಸ್ತೆ. 5. ತಾವರೆ ಮೊದಲಾದುವುಗಳ ಗಡ್ಡೆ. "कशेरुहेम्नोर्गाङ्गेयम्" अम०।

**गाङ्गेरुकी ಗಾಂಗೇರುಕೀ** (स्त्री०) ಹೀರೆಗಿಡ. गाङ्गं जलमीरयति – ईर (गतौ कम्पने च) "कुः" (उ० १-३७)। "कन्" (५-३-७५)।

**गाढ ಗಾಢ** (न०) 1. ಅತಿಶಯ, ಹೆಚ್ಚಿಗೆ. गाहू (विलोडने) "क्तः" (३-४-७२)। (वि०) 2. ಅತಿಶಯವಾದ, ಹೆಚ್ಚಾದ. 3. ಸೇವಿಸಲ್ಪಟ್ಟ, ಮುಳುಗಿ ಸ್ನಾನ ಮಾಡಲ್ಪಟ್ಟ. "श्रमफेनमुचा तपस्विगाढां तमसां प्राप नदीं तुरङ्गमेण" रघु० ९-७२। 4. ಪ್ರವೇಶಿಸಲ್ಪಟ್ಟ. (अव्य०) 5. ದೃಢವಾಗಿ, ಬಲವಾಗಿ. "ते प्रापुरुद्रूट भुजङ्गमभीमभावं गाढं बबन्धुरपि तांस्त्रिदशेन्द्रमुख्यान्" कुमा० १७-५।

**गाढमुष्टि ಗಾಢಮುಷ್ಟಿ** (पुं०) 1. ಖಡ್ಗ, ಕತ್ತಿ. गाढो मुष्टिरत्र। (वि०) 2. ಕೃಪಣ, ಜಿಪುಣ. गाढो मुष्टिर्यस्य। "गाढमुष्टिः कृपाणे ना कृपणे त्वभिधेयवत्" मेदि०।

**गाणपत ಗಾಣಪತ** (वि०) 1. ಗಣಪತಿ ಸಂಬಂಧವಾದ. गणपतेरिदम् "अण्" (४-१-८४)। 2. ಗುಂಪಿನ ಯಜಮಾನನ ಸಂಬಂಧವಾದ.

**गाणपत्य ಗಾಣಪತ್ಯ** (न०) ಗಣಪತಿಯ ಭಾವ. गणपतेर्भावः "यक्" (५-१-१२८)। "महादेवप्रसादेन गाणपत्यं च विन्दति" भा० वन०।

**गाणिक ಗಾಣಿಕ** (वि०) ಗಣಪಾಠವನ್ನು ತಿಳಿದವನು ಅಥವಾ ಅಧ್ಯಯನ ಮಾಡುವವನು. गणं वेत्त्यधीते वा "ठक्" (४-२-६०)।

**गाणिक्य ಗಾಣಿಕ್ಯ** (न०) ವೇಶ್ಯೆಯರ ಸಮೂಹ, ಸೂಳೆಯರ ಗುಂಪು. गणिकानां समूहः "यञ्" (वा० ४-२-४०)। "गणिकादेस्तु गाणिक्यम्" अम०।

**गाण्डि ಗಾಂಡಿ** (स्त्री०) ಗಂಟು, ಗ್ರಂಥಿ. गडि (वदनैकदेशे) "इन्" (उ० ४-११७)।

**गाण्डीव ಗಾಂಡೀವ** (पुंन०) ಅರ್ಜುನನ ಧನುಸ್ಸು. गाण्डिर्ग्रन्थिरस्यस्ति – वा "ङीष्" (ग० ४-१-४५)। "वः" (५-२-११०)। ङीषोऽभावे **गाण्डिवम् ಗಾಂಡಿವವೂ.** ಈ ಧನುಸ್ಸು ಬ್ರಹ್ಮನಿಂದ ಇಂದ್ರನಿಗೂ

ಇಂದ್ರನಿಂದ ವರುಣನಿಗೂ ವರುಣನಿಂದ ಅಗ್ನಿಗೂ ಬಂದು ಸೇರಿತು. ಖಾಂಡವದಹನ ಸಮಯದಲ್ಲಿ ಅರ್ಜುನನು ಮಾಡಿದ ಉಪಕಾರಕ್ಕಾಗಿ ಅಗ್ನಿಯು ಇದನ್ನು ಅರ್ಜುನನಿಗೆ ಕೊಟ್ಟನು.

**गाण्डि(ण्डी)वधन्वन् ಗಾಂಡಿ(ಡೀ)ವಧನ್ವನ್** (पुं०) ಅರ್ಜುನ. गाण्डि(ण्डी)वं धनुरस्य।

**गाण्डि(ण्डी)विन् ಗಾಂಡಿ(ಡೀ)ವಿನ್** (पुं०) ಅರ್ಜುನ. गाण्डि(ण्डी)वमस्यास्ति "इनि:" (५-२-११५)।

**गातव्य ಗಾತವ್ಯ** (वि०) 1. ಗಾನಮಾಡಲ್ಪಡುವ, ಹಾಡಲ್ಪಡುವ. 2. ಹಾಡಲು ಯೋಗ್ಯವಾದ. 3. ಹಾಡಲು ಶಕ್ಯವಾದ. गै (शब्दे) "तव्य:" (३-१-९६)। "अनीयर्" (३-१-९६)। **गानीयम् ಗಾನೀಯಮ್.**

**गातागतिक ಗಾತಾಗತಿಕ**(वि०) ಗಮನ ಮತ್ತು ಆಗಮನದಿಂದ ಉಂಟಾದ, ಹೋಗುವುದು ಮತ್ತು ಬರುವುದು ಇವುಗಳಿಂದ ಉಂಟಾದ. गतागतेन निर्वृत्तम् "ठक्" (४-४-१९)।

**गातानुगतिक ಗಾತಾನುಗತಿಕ** (वि०) ಗಮನ ಮತ್ತು ಅನುಗಮನದಿಂದ ಉಂಟಾದ. गतानुगतेन निर्वृत्तम् "ठक्" (४-४-१९)।

**गातु ಗಾತು** (पुं०) 1. ಕೋಗಿಲೆ. 2. ಭ್ರಮರ, ದುಂಬಿ. 3. ಗಂಧರ್ವ. गै (शब्दे) "तु:" (उ० १-७२)। "गातु: पुंस्कोकिले भृङ्गे गन्धर्वे गायनेऽपि च" हेम०। 4. ಪಥಿಕ, ಪ್ರಯಾಣಿಕ. गाङ् (गतौ) कर्त० "तु:" (उ० १-७२)। (न०) 5. ಗಾನ, ಹಾಡುವುದು. गै (शब्दे) भावे "तु:"। 6. ಮಾರ್ಗ, ದಾರಿ. गाङ् (गतौ) अधि० "तु:"। (वि०)7. ಸಿಟ್ಟಿನಿಂದ ಕೂಡಿದವನು, ಕೋಪವುಳ್ಳವನು. गाते कोपं गच्छति — गाङ् "तु:"। 8. ಗಾಯಕ, ಹಾಡುವವನು, ಸಂಗೀತಗಾರ. गै (शब्दे) कर्त० "तु:"। "गातुर्ना कोकिले भृङ्गे गन्धर्वे त्रिषु रोषणे" मेदि०। 9. ಸ್ತೋತ್ರ, ಸ್ತುತಿ. 10. ಪೃಥ್ವಿ, ಭೂಮಿ.

**गातृ ಗಾತೃ** (वि०) ಹಾಡುಗಾರ, ಗಾಯಕ. गै (शब्दे) "तृच्" (३-१-१३३)। "गाता चतुर्णां वेदानामुद्गाता प्रथमर्त्विजाम्। स नारदोऽथ विप्रर्षि:" हरिवं०। स्त्रियाम् "ङीप्" (४-१-५)। **गात्री ಗಾತ್ರೀ.**

**गात्र ಗಾತ್ರ** (न०)1. ಶರೀರ, ದೇಹ, ಮೈ. गातेऽनेन— गाङ् (गतौ) "ष्ट्रन्" (उ० ४-१५९)। "शय्योत्सङ्गे निहितमसकृद्दु:खदु:खेन गात्रम्" मेघ० २-३०। 2. ಅಂಗ, ಅವಯವ. 3. ಆನೆಯ ಶರೀರದ ಮುಂಭಾಗ. "गात्रं गजाग्रजङ्घादिभागेऽप्यङ्गे कलेबरे" मेदि०।

**गात्रकम्प ಗಾತ್ರಕಂಪ**(पुं०), **-कम्पन -ಕಂಪನ** (न०) ಶರೀರದ ಕಂಪನ, ಮೈನಡುಕ. गात्रस्य कम्प: कम्पनं वा।

**गात्रभङ्ग ಗಾತ್ರಭಂಗ** (पुं०) ಮೈ ಮುರಿಯುವಿಕೆ. ನಿದ್ರೆಯಿಂದ ಏಳುವಾಗ ಕೈಕಾಲುಗಳನ್ನು ನೀಡಿ ಮೈ ಮುರಿಯುವುದು. गात्रस्य भङ्ग:।

**गात्रमार्जनी ಗಾತ್ರಮಾರ್ಜನೀ** (स्त्री०) ಮೈಯನ್ನು ಒರಸುವ ಬಟ್ಟೆ, ಟವೆಲ. गात्रं मृज्यतेऽनया — मृजू (शुद्धौ) कर० "ल्युट्" (३-३-११७)। "ङीप्" (४-१-१५)।

**गात्रयष्टि ಗಾತ್ರಯಷ್ಟಿ** (स्त्री०) ಕೋಲಿನಂತೆ ತೆಳ್ಳನೆಯ ದೇಹ. गात्रं यष्टिरिव। "रोमाञ्चलक्ष्येण स गात्रयष्टिं भित्त्वा निराक्रामदरालकेश्या:" रघु० ६-८१।

**गात्ररुह ಗಾತ್ರರುಹ** (न०) ಮೈಗೂದಲು. गात्रे रोहति— रुह (बीजजन्मादौ) "क:" (वा० ३-२-५)। "न विक्रियेताथ यदा विकारो नेत्रे जलं गात्ररुहेषु हर्ष:" भाग० २-३-२४।

**गात्रवत् ಗಾತ್ರವತ್** (वि०) ಉತ್ತಮವಾದ ದೇಹವುಳ್ಳ, ಅಂದವಾದ ಮೈಯುಳ್ಳ. प्रशस्तं गात्रं यस्य—"मतुप्" (५-२-९४)। स्त्रियाम् "ङीप्" (४-१-६)। **-वती -ವತೀ.**

**गात्रानुलेपनी ಗಾತ್ರಾನುಲೇಪನೀ** (स्त्री०) 1. ಮೈಗೆ ಸುಗಂಧದ್ರವ್ಯವನ್ನು ಬಳಿಯುವ ಕುಂಚ, -ಕೂರ್ಚ, -ವರ್ತಿಕೆ, -ತೂಲಿಕೆ. गात्रमनुलिप्यतेऽनया—अनु+लिप (उपदेहे) कर० "ल्युट्" (३-३-११७)। 2. ಸುಗಂಧದ್ರವ್ಯಗಳನ್ನು ಅರೆದು ಮಾಡಿದ ಗಂಧದ ಬಿಲ್ಲೆ, ಒಣಗಿಸಿದ ಗಂಧದ ಬಿಲ್ಲೆ.

**गाथ ಗಾಥ** (पुं०) 1. ಹಾಡು. 2. ಸ್ತೋತ್ರ.

**गाथक ಗಾಥಕ** (वि०) ಹಾಡುವವನು, ಸಂಗೀತಗಾರ. गायति — गै (शब्दे) "थकन्" (३-१-१४६)। "दु:सहा ह्री परिक्षिप्ता: क्वणद्भिरलिगाथकै:" भट्टि० ६-८४।

**गाथा ಗಾಥಾ** (स्त्री०) 1. ಶ್ಲೋಕ, ಪದ್ಯ. 2. ಪ್ರಾಕೃತ ಮೊದಲಾದ ಭಾಷೆ. 3. ಆರ್ಯಾ (ಮಾತ್ರಾ) ವೃತ್ತದ ಒಂದು ಭೇದ. "पादे द्वादश विषमे मात्राश्चाष्टादश द्वितीये हि। पञ्चदश चेत् तुरीये कथिता गाथा तथैवार्या" छन्दोमं०। 4. ಗಾನ, ಹಾಡು. "गाथा श्लोके संस्कृतान्यभाषायां गेयवृत्तयो:" मेदि०।

**गाथाकार ಗಾಥಾಕಾರ** (वि०) ಶ್ಲೋಕಗಳನ್ನು ರಚಿಸುವವನು, ಪದ್ಯಗಳನ್ನು ಬರೆಯುವವನು. गाथां करोति—डु कृञ् (करणे) "अण्" (३-२-१)।

**गाथिन् ಗಾಥಿನ್** (वि०) ಸಂಗೀತದಲ್ಲಿ ಒಳ್ಳೆಯ ಪರಿಶ್ರಮವಿರುವವನು, ಚೆನ್ನಾಗಿ ಸಂಗೀತವನ್ನು ಕಲಿತವನು. गाथाऽस्यास्ति "इनिः" (५-२-११६)।

**गाध ಗಾಧ** (पुं०) 1. ಸ್ಥಾನ. ಜಾಗ. "अनासादितगाधं च पातालतलमव्ययम्" भा० आदि० २१-१३। 2. ಹೊಂದಲು ಇಚ್ಛೆ, ಪಡೆಯಲು ಆಸೆ. गाधृ (लिप्सायाम्) "घञ्" (३-३-१८)। 3. ತಳಕ್ಕೆ ಪ್ರವೇಶಿಸುವುದು, ಆಳವಾದ ಜಾಗವನ್ನು ಮುಟ್ಟುವುದು. (वि०)4. ಆಳವಿಲ್ಲದ, ತಳವನ್ನು ಮುಟ್ಟಲು ಯೋಗ್ಯವಾದ. "सरितः कुर्वती गाधाः पथश्चाश्यानकर्दमान्" रघु० ४-२४।

**गाधि ಗಾಧಿ** (पुं०) ಇಂದ್ರನ ಅಂಶದಿಂದ ಚಂದ್ರವಂಶದಲ್ಲಿ ಹುಟ್ಟಿದ ಒಬ್ಬ ದೊರೆ, ವಿಶ್ವಾಮಿತ್ರನ ತಂದೆ. गाधृ (प्रतिष्ठायाम्) "इन्" (उ० ४-११७)। ["कौशिक" ಪದದಲ್ಲಿ ನೋಡಿ.] "स पिता मम काकुत्स्थ गाधिः परमधार्मिकः" रामा०।

**गाधिज ಗಾಧಿಜ** (पुं०) ವಿಶ್ವಾಮಿತ್ರ ಮಹರ್ಷಿ. गाधेर्जायते — जनी (प्रादुर्भावे) "डः" (३-२-९८)। "कुबेरश्च धनैश्वर्यं ब्राह्मण्यं चैव गाधिजः" मनु० ७-४२।

**गाधिन् ಗಾಧಿನ್** (पुं०) ವಿಶ್ವಾಮಿತ್ರ ಮಹರ್ಷಿಯ ತಂದೆ, ಕನ್ಯಾಕುಬ್ಜದ ದೊರೆ. "शीघ्रमाख्यात मां प्राप्तं कौशिकं गाधिनः सुतम्" रामा०।

**गाधिपुर ಗಾಧಿಪುರ** (न०) ಗಾಧಿಯ ನಗರ. ಕನ್ಯಾಕುಬ್ಜ. गाधेः पुरम्।

**गाधृ — प्रतिष्ठालिप्सयोर्ग्रन्थे च** (भ्वा० आत्म० प्रतिष्ठायामकर्मकः लिप्सायां ग्रन्थे च सक० से०)। गाधते। जगाधे। गाधिता। अगाधिष्ट। 1. ಸ್ಥಿರವಾಗಿ ನಿಲ್ಲು. "गाधितासे नभो भूयः स्फुटन्मेघघटावलि" भट्टि० २२-२। 2. ಅಪೇಕ್ಷಿಸು. ಆಸೆಪಡು. 3. ಜೋಡಿಸು, ಒಟ್ಟಿಗೆ ಸೇರಿಸು.

**गाधेय ಗಾಧೇಯ** (पुं०) ಗಾಧಿಯ ಮಗ, ವಿಶ್ವಾಮಿತ್ರ ಮಹರ್ಷಿ. गाधेरपत्यम् — गाधि "ढक्" (४-१-१२२)। "गाधेयदिष्टं विरसं रसन्तं रामोऽपि मायाचणमस्त्रचुञ्चुः" भट्टि० २-३२।

**गान ಗಾನ** (न०) 1. ಗೀತ, ಹಾಡುವುದು. गै (शब्दे) भावे "ल्युट्" (३-३-११५)। "उदकण्ठि कण्ठपरिवर्तितकलस्वरशून्यगानपरयाऽपरया" माघ० ९-५४। 2. ಶಬ್ದ, ಸದ್ದು. 3. ಗಮನ, ಹೋಗುವಿಕೆ. गाङ् (गतौ) भावे "ल्युट्" (३-३-११५)। 4. ಸ್ತೋತ್ರ, ಹೊಗಳಿಕೆ. गा (स्तुतौ) "ल्युट्" (३-३-११५)।

**गानकला ಗಾನಕಲಾ** (स्त्री०) ಸಂಗೀತವಿದ್ಯೆ.

**गानविद्या ಗಾನವಿದ್ಯಾ** (स्त्री०) ಸಂಗೀತವಿದ್ಯೆ, ಹಾಡುಗಾರಿಕೆಯ ಶಾಸ್ತ್ರ, ಗಾಂಧರ್ವವಿದ್ಯೆ.

**गानिन् ಗಾನಿನ್** (वि०) 1. ಗಮನವುಳ್ಳ, ಚಲನೆಯುಳ್ಳ, ನಡೆಯುವ. 2. ಸಂಗೀತದಿಂದ ಕೂಡಿದ. 3. ಹೊಗಳಿಕೆಯಿಂದ ಕೂಡಿದ. गानमस्यास्ति "इनिः" (५-२-११५)। स्त्रियाम् "ङीप्" (४-१-५)। **गानिनी ಗಾನಿನೀ.**

**गानिनी ಗಾನಿನೀ** (स्त्री०) ಬಜೆ, ಒಂದು ಔಷಧದ ಮೂಲಿಕೆ.

**गान्त्री ಗಾಂತ್ರೀ** (स्त्री०) ಎತ್ತಿನಗಾಡಿ, ಎತ್ತುಗಳು ಎಳೆಯುವ ಗಾಡಿ. गम्लृ (गतौ) "ष्ट्रन्" वृद्धिश्च (उ० ४-१५९)।

**गान्दिनी ಗಾಂದಿನೀ** (स्त्री०) 1. ಕಾಶಿರಾಜನ ಮಗಳು, ಶ್ವಫಲ್ಕರಾಜನ ಪತ್ನಿ, ಅಕ್ರೂರನ ತಾಯಿ. [ಕಾಶಿರಾಜನ ಪತ್ನಿಯು ಗರ್ಭಿಣಿಯಾಗಿ ಹನ್ನೆರಡು ವರ್ಷಗಳಾದರೂ ಪ್ರಸವವಾಗಲಿಲ್ಲ. ಆಗ ರಾಜನು ಯದುವಂಶದ ಶ್ವಫಲ್ಕನನ್ನು ಕರೆಯಿಸಿ ಈ ವಿಷಯವನ್ನು ತಿಳಿಸಿದನು. ಶ್ವಫಲ್ಕನು ಗರ್ಭದಲ್ಲಿರುವುದು ಸ್ತ್ರೀ ಶಿಶುವೆಂದು ತಿಳಿದು ಗರ್ಭದಿಂದ ಬೇಗ ಹೊರಕ್ಕೆ ಬರಬೇಕೆಂದು ಹೇಳಿದನು. ಪ್ರತಿದಿನವೂ ಒಂದೊಂದು ಗೋದಾನ ಮಾಡಿದರೆ ಬರುವುದಾಗಿ ಆ ಶಿಶುವು ತಿಳಿಸಲು ರಾಜನು ಅದಕ್ಕೆ ಒಪ್ಪಿದನು. ಪ್ರಸವವಾಯಿತು. ಅನಾವೃಷ್ಟಿಗೆ ಒಳಗಾಗಿದ್ದ ದೇಶದಲ್ಲಿ ಸುವೃಷ್ಟಿಯುಂಟಾಯಿತು. ಕಾಶಿರಾಜನು ತನ್ನ ಮಗಳನ್ನು ಶ್ವಫಲ್ಕನಿಗೆ ಕೊಟ್ಟು ಮದುವೆ ಮಾಡಿದನು. ಇವಳೇ ಗಾಂದಿನಿ.] 2. ಗಂಗಾನದಿ. गां भूमिं दायति शोधयति—दैप् (शोधने) "णिनिः" (३-१-१३४)। "ङीप्" (४-१-५)। पृषो०।

**गान्दिनीसुत ಗಾಂದಿನೀಸುತ** (पुं०) 1. ಅಕ್ರೂರ. गान्दिन्याः सुतः। "विलङ्घितस्थितिमभिवीक्ष्य रूक्षया रिपोर्गिरा गुरुमपि गान्दिनीसुतम्" माघ० १७-१२। 2. ಭೀಷ್ಮಾಚಾರ್ಯ. "गाङ्गेयो गान्दिनीसुतः। देवव्रतः शान्तनवो गाङ्गो गाङ्गायनिश्च सः" त्रिकाण्ड०। 3. ಕಾರ್ತಿಕೇಯ, ಷಣ್ಮುಖ.

**गान्धर्व ಗಾಂಧರ್ವ** (पुं०)1. ಎಂಟು ವಿಧ ವಿವಾಹಗಳಲ್ಲೊಂದು. ವಧೂವರರಲ್ಲಿ ಪರಸ್ಪರ ಅನುರಾಗವು ಬೆಳೆದು

ತಮ್ಮ ಇಚ್ಛೆಯಿಂದಲೇ ಆಲಿಂಗನಾದಿಶರೀರಸಂಬಂಧ ಹೊಂದಿ ನಡೆಯುವ ವಿವಾಹವು ಗಾಂಧರ್ವವು. "इच्छयान्योन्यसंयोगः कन्यायाश्च वरस्य च। गान्धर्वः स तु विज्ञेयः मैथुन्यः कामसंभवः" मनु० ३-३२। 2. ಭಾರತ ವರ್ಷದ ಉಪದ್ವೀಪಗಳಲ್ಲೊಂದು. 3. ಸಾಮವೇದದ ಉಪವೇದ. 4. ಅಶ್ವ, ಕುದುರೆ. गन्धर्व एव स्वार्थे "अण्" (५-४-३८)। "गान्धर्वभूयिष्ठतया समानतां स सामवेदस्य दधौ बलोदधिः" माघ० १२-११। (न०) 5. ಸಂಗೀತಶಾಸ್ತ್ರ. ಗಾನವಿದ್ಯೆ. 6. ಗಂಧರ್ವ ದೇವತಾಕವಾದ ಅಸ್ತ್ರ. गन्धर्वो देवताऽस्य "अण्" (४-२-२४)। "गान्धर्वमादत्स्व यतः प्रयोक्तुर्नचारिहिंसा विजयश्च हस्ते" रघु० ५-५७। 7. ಗೀತ, ಹಾಡು. "आलापैरिव गान्धर्वमदीप्यत पदातिभिः" माघ० ११-४७। (वि०) 8. ಗಂಧರ್ವ ಸಂಬಂಧವಾದ. गन्धर्वस्येदम् "अण्" (४-३-१२०)। 9. ಸಂಗೀತಗಾರ. (स्त्री०) **-र्वी -ರ್ವೀ.** 10. ದುರ್ಗಾದೇವಿ. ಪಾರ್ವತಿ. 11. ಮಾತು.

**गान्धर्वकला ಗಾಂಧರ್ವಕಲಾ, -विद्या -ವಿದ್ಯಾ** (स्त्री०) ಗಾನಕಲೆ, ಸಂಗೀತವಿದ್ಯೆ, ಸಂಗೀತಶಾಸ್ತ್ರ.

**गान्धर्विक ಗಾಂಧರ್ವಿಕ** (वि०) ಸಂಗೀತಗಾರ, ಹಾಡುಗಾರ, ಗಾಯಕ. गान्धर्वं शिल्पमस्य "ठक्" (४-४-५५)।

**गान्धार ಗಾಂಧಾರ** (पुं०) 1. ತಂತಿಯಿಂದಲೂ ಕಂಠದಿಂದಲೂ ಹುಟ್ಟುವ ಸಂಗೀತದ ಸಪ್ತಸ್ವರಗಳಲ್ಲೊಂದು. ಸ್ವರಗ್ರಾಮದಲ್ಲಿ ಮೂರನೆಯದು. गन्धारदेशे भवः "अण्" (४-३-५३)। ಇದು ಆಡು ಮತ್ತು ಕುರಿಗಳ ಸ್ವರದಂತಿರುವುದು. "अजाविकं तु गान्धारं क्रौञ्चः क्वणति मध्यमम्" अम०। (पुं० ब० व०) 2. ಗಾಂಧಾರ ದೇಶ. 3. ಗಾಂಧಾರ ದೇಶದ ದೊರೆಗಳು. 4. ಗಾಂಧಾರ ದೇಶದ ಜನರು.

**गान्धारि ಗಾಂಧಾರಿ** (पुं०) ಗಾಂಧಾರದೇಶದ ರಾಜನ ಮಗ, ಶಕುನಿ. गान्धारस्यापत्यं पुमान् "इञ्" (४-१-९५)।

**गान्धारी ಗಾಂಧಾರೀ** (स्त्री०) 1. ಗಾಂಧಾರದೇಶದ ಸುಬಲರಾಜನ ಮಗಳು, ಧೃತರಾಷ್ಟ್ರನ ಪತ್ನಿ, ಕೌರವರ ತಾಯಿ. गान्धारस्यापत्यं स्त्री "अण्" (४-१-९२)। "ङीप्" (४-१-१५)। [ಗಾಂಧಾರಿಯು ಧೃತರಾಷ್ಟ್ರನ ಶೌರ್ಯ ಧೈರ್ಯಾದಿ ಗುಣಗಳನ್ನು ಕೇಳಿ ಕುರುಡನಾಗಿದ್ದರೂ ಅವನನ್ನೇ ಮದುವೆಯಾದಳು. ಈಕೆಯು ಪರಶಿವನನ್ನು ಪೂಜಿಸಿ ನೂರು ಮಂದಿ ಮಕ್ಕಳಾಗಬೇಕೆಂದು ವರವನ್ನು ಪಡೆದಳು. ಕುಂತಿಯು ಧರ್ಮರಾಜನನ್ನು ಪ್ರಸವಿಸಿದ ವಿಷಯವನ್ನು ತಿಳಿದು ಗರ್ಭಿಣಿಯಾಗಿದ್ದ ಗಾಂಧಾರಿಯೂ ತನ್ನ ಹೊಟ್ಟೆಯನ್ನು ಹಿಸುಕಿಕೊಂಡಳು. ಗರ್ಭವು ಒಡೆದು ಚೂರಾಗಿ ನೂರು ಮಾಂಸ ಪಿಂಡಗಳು ಹೊರಕ್ಕೆ ಬಿದ್ದುವು. ಗಾಂಧಾರಿಯು ಅದರಿಂದ ದುಃಖಿಸುತ್ತಿದ್ದಾಗ ವ್ಯಾಸ ಮಹರ್ಷಿಯು ಬಂದು ಸಮಾಧಾನಪಡಿಸಿ ಅವನ್ನು ನೂರು ತುಪ್ಪದ ಗಡಿಗೆಗಳಲ್ಲಿಟ್ಟು ರಕ್ಷಿಸುವಂತೆ ಹೇಳಿದರು. ಕಾಲಕ್ರಮದಲ್ಲಿ ಆ ಗಡಿಗೆಗಳಿಂದ ನೂರು ಮಕ್ಕಳು ಎದ್ದು ಬಂದರು. ಇವರೇ ದುರ್ಯೋಧನ ಮೊದಲಾದ ಕೌರವರು. ಬಳಿಕ ಗಾಂಧಾರಿಯು ದುಶ್ಶಲೆಯೆಂಬ ಒಬ್ಬ ಮಗಳನ್ನೂ ಹೆತ್ತಳು. ಪಾಂಡವರಿಗೂ ಕೌರವರಿಗೂ ದ್ವೇಷವು ಪ್ರಬಲವಾಗಿ ಯುದ್ಧವು ಪ್ರಾರಂಭವಾಗಲು ಇವಳು ತನ್ನ ಮಕ್ಕಳಿಗೆ ಅನೇಕ ಸಲ ಬುದ್ಧಿಯನ್ನು ಹೇಳಿದಳು. ಯುದ್ಧವನ್ನು ಮಾಡಲೇಕೂಡದೆಂದು ಅನೇಕ ಸಲ ಒತ್ತಿ ಒತ್ತಿ ಹೇಳುತ್ತಿದ್ದಳು.] 2. ಅಜಮೀಢ ರಾಜನ ಪತ್ನಿ.

**गान्धारीतनय ಗಾಂಧಾರೀತನಯ, -सुत -ಸುತ, -सूनु -ಸೂನು** (पुं०) ದುರ್ಯೋಧನ ಮೊದಲಾದ ನೂರುಮಂದಿ ಕೌರವರು. (स्त्री०) **-तनया -ತನಯಾ, -सुता -ಸುತಾ.** ದುಶ್ಶಳೆ.

**गान्धारेय ಗಾಂಧಾರೇಯ** (पुं०) ಗಾಂಧಾರಿಯ ಮಕ್ಕಳಾದ ನೂರುಮಂದಿ ಕೌರವರು. (स्त्री०) **-यी -ಯೀ.** ಗಾಂಧಾರಿಯ ಮಗಳಾದ ದುಶ್ಶಳೆ. गान्धार्याः अपत्यम् "ढक्" (४-१-१२०)। स्त्रियाम् "ङीप्" (४-१-१५)।

**गान्धिक ಗಾಂಧಿಕ** (पुं०) 1. ಸುಗಂಧದ್ರವ್ಯಗಳ ವ್ಯಾಪಾರಿ. गन्धो गन्धद्रव्यं पण्यमस्य "ठक्" (४-४-५१)। 2. ಲೇಖಕ, ಗುಮಾಸ್ತ. "गान्धिको लेखकेऽपि स्यात्" त्रिकाण्ड०।

**गामिन् ಗಾಮಿನ್** (वि०) ಹೋಗುವವನು, ನಡೆಯುವವನು. गच्छति—गम्लृ (गतौ) "णिनिः" (३-१-१३४)। ಸಾಮಾನ್ಯವಾಗಿ ಇದು ಸಮಾಸದ ಕೊನೆಯಲ್ಲಿ ಬರುವುದು. ಅದರಂತೆ ನಡೆಯುವ, ಅದಕ್ಕೆ ಸಮಾನವಾಗಿ ಹೋಗುವ ಎಂಬ ಅರ್ಥದಲ್ಲಿ ಇದರ ಪ್ರಯೋಗ. "सममेव समाक्रान्तं द्वयं द्विरदगामिना" रघु० ४-४। स्त्रियाम् "ङीप्" (४-१-५)। **-गामिनी -ಗಾಮಿನೀ.** "अव्यङ्गाङ्गीं सौम्यनाम्नीं हंसवारणगामिनीम्" मनु० ३-१०।

**गामुक ಗಾಮುಕ** (वि०) ಸಂಚಾರದ ಸ್ವಭಾವದ, ನಡೆಯುವ ಸ್ವಭಾವದ. गम्लृ (गतौ) "उकञ्" (३-२-१५४)।

**गाम्भीर्य ಗಾಂಭೀರ್ಯ** (ನಂ) 1. ಆಳವಾಗಿರುವಿಕೆ, ತಳವನ್ನು ಮುಟ್ಟಲಾಗದಿರುವಿಕೆ. गम्भीरस्य भावः "ष्यञ्" (५-१-१२४)। "गाम्भीर्यं दधदपि रन्तुमङ्गनाभिः संक्षोभं जघनविघट्टनेन नीतः" माघ० ८-२६। 2. ಭಯ ಶೋಕ ಕೋಪ ಹರ್ಷ ಇತ್ಯಾದಿಗಳಿಂದ ಯಾವ ವಿಧವಾದ ವಿಕಾರವನ್ನೂ ಹೊಂದದಿರುವಿಕೆ. "भीशोकक्रोधहर्षाद्यैः गाम्भीर्यं निर्विकारता" सा० द० ३-५३। ಇದು ನಾಯಕನ ಎಂಟು ವಿಧ ಸಾತ್ತ್ವಿಕ ಗುಣಗಳಲ್ಲೊಂದು. "शोभा विलासो माधुर्यं गाम्भीर्यं स्थैर्यतेजसी। ललितौदार्यमित्यष्टौ सत्त्वजाः पौरुषा गुणाः" सा० द० ३-५०। "निरस्तगाम्भीर्यमपास्तपुष्पकं प्रकम्पयामास न मानसं न सः" माघ० १-५५। 3. ಚಿತ್ತಚಾಂಚಲ್ಯವಿಲ್ಲದಿರುವಿಕೆ, ಮನಸ್ಸು ನಿಶ್ಚಲವಾಗಿರುವಿಕೆ. "पुपोष गाम्भीर्यमनोहरं वपुः" रघु० ३-३२। (वि०) 4. ಆಳವಲ್ಲಿರುವ. गम्भीरे भवम्—गम्भीर "ञ्यः" (४-३-५८)।

**गाय ಗಾಯ** (पुं०) ಗಾನ, ಹಾಡುವುದು. गै (शब्दे) "घञ्" (३-३-१८)।

**गायक ಗಾಯಕ** (वि०) ಹಾಡುಗಾರ, ಸಂಗೀತಗಾರ. गै (शब्दे) "ण्वुल्" (३-१-१३४)। "गतमनुगतवीणैरेकतां वेणुनादैः कलमविकलतालं गायकैर्बोधहेतोः" माघ० ११-१०। **ಸಂಗೀತಗಾರನಲ್ಲಿರುವ ದೋಷಗಳು:** ಲಜ್ಜೆಪಡುವುದು, ಹೆದರುವುದು, ಅಸ್ಪಷ್ಟವಾದ ಉಚ್ಚಾರಣೆ, ಮೂಗಿನಿಂದಲೇ ಸ್ವರ ಹೊರಡುವುದು, ಕಾಗೆಯಂತೆ ಕರ್ಕಶಸ್ವರ, ಹಾಡುವಾಗ ತಲೆಯಾಡಿಸುವುದು, ತಾಳಲಯಗಳನ್ನು ತಪ್ಪಿ ಹಾಡುವುದು, ಅಪಸ್ವರ ಮುಂತಾದುವು.

**गायत् ಗಾಯತ್** (वि०) ಹಾಡುತ್ತಿರುವ. गै (शब्दे) "शतृ" (३-२-१२४)। स्त्रियाम् "ङीप्" (४-१-६)। **गायन्ती ಗಾಯಂತೀ.** "तूर्यारावैराहितोत्तालतालैर्गायन्तीभिः काहलं काहलाभिः" माघ० १८-५४।

**गायत्री ಗಾಯತ್ರೀ** (स्त्री०) 1. ಕಗ್ಗಲಿಮರ. गायन्तं त्रायते—त्रैङ् (पालने) "कः" (३-२-३)। "गायत्री बालतनयः खदिरो दन्तधावनः" अम०। 2. ಆರು ಅಕ್ಷರಗಳ ಪಾದಗಳುಳ್ಳ ಒಂದು ಛಂದಸ್ಸು, ಆರನೆಯ ಛಂದಸ್ಸು. "उक्तात्युक्ता तथा मध्या प्रतिष्ठान्या सुपूर्विका। गायत्र्युष्णिगनुष्टुप् च बृहती पङ्क्तिरेव च" वृ० र०। 3. ಗಾಯತ್ರೀದೇವಿ, ಬ್ರಹ್ಮನ ಪತ್ನಿ, ವೇದಗಳ ಮಾತೆ. "गायन्तं त्रायते यस्माद्गायत्रीयं ततः स्मृता"। 4. ಗಾಯತ್ರೀಮಂತ್ರ, ಬ್ರಹ್ಮೋಪದೇಶದ ಮಂತ್ರ. ತನ್ನ ಉಪಾಸಕನನ್ನು ರಕ್ಷಿಸುವ ಬ್ರಹ್ಮನನ್ನು ಇದು ಪ್ರತಿಪಾದಿಸುವುದರಿಂದ ಈ ಮಂತ್ರವು ಗಾಯತ್ರಿಯೆಂದು ಪ್ರಸಿದ್ಧವಾಯಿತು. "कर्मणा जायते द्विजः" ಬ್ರಹ್ಮೋಪದೇಶರೂಪವಾದ ಉಪನಯನ ಸಂಸ್ಕಾರದಿಂದ ಬ್ರಾಹ್ಮಣತ್ವವು ಬರುವುದರಿಂದ ಬ್ರಾಹ್ಮಣತ್ವಕ್ಕೆ ಈ ಮಂತ್ರವು ಹೇತುವಾಯಿತು. "गायत्र्या ब्राह्मणमसृजत, त्रिष्टुभा राजन्यं, जगत्या वैश्यम्"। ಗಾಯತ್ರೀಜಪವು ಸಕಲ ಪಾಪಗಳನ್ನೂ ಪರಿಹರಿಸುವುದು. "गायत्रीं जपते यस्तु कल्यमुत्थाय यो द्विजः। स लिम्पति न पापेन पद्मपत्रमिवाम्भसा"। ಗಾಯತ್ರಿಯು ಪರಬ್ರಹ್ಮಸ್ವರೂಪವು ಮತ್ತು ಸಕಲ ವೇದಗಳ ಸಾರಭೂತವಾದುದು. "गायत्र्येव परो विष्णुः गायत्र्येव परः शिवः। गायत्र्येव परो ब्रह्मा गायत्र्येव त्रयी यतः" काशीखं०। "अकारश्चाप्युकारश्च मकारं च प्रजापतिः। वेदत्रयान्निरदुहत् भूर्भुवः स्वरितीति च। त्रिभ्य एव तु वेदेभ्यः पादं पादमदूदुहत्"।

**गायन ಗಾಯನ** (वि०) 1. ಗಾಯಕ, ಹಾಡುಗಾರ, ಸಂಗೀತಗಾರ. गायति—गै (शब्दे) "ण्युट्" (३-१-१४७)। "देवानां गायना ह्येते चारणाः स्तुतिपाठकाः" काशीखं०। स्त्रियाम् "ङीप्" (४-१-१५)। **गायनी ಗಾಯನೀ.** 2. ಹಾಡುಗಾರಿಕೆಯಿಂದ ಜೀವಿಸುವವನು. "स्तेनगायनयोश्चान्नं तक्ष्णो वार्धुषिकस्य च" मनु० ४-२१०। 3. ಸ್ತುತಿಪಾಠಕ, ಹೊಗಳುವವನು. "सत्यं किलैतत् सा प्राह दैत्यानामपि गायनः" भा० आदि० ७८।

**गारित्र ಗಾರಿತ್ರ** (न०) ಅನ್ನ. गॄ (निगरणे) "णित्रन्" (उ० ४-१७०)। गारित्रमोदनम् इति सि० कौ०।

**गारुड ಗಾರುಡ** (न०) 1. ವಿಷ್ಣುವಿನಿಂದ ಗರುಡನಿಗೆ ಉಕ್ತವಾದ ಒಂದು ಪುರಾಣ. गारुडस्येदम् "अण्" (४-३-१२०)। ಇದು ವ್ಯಾಸ ಮಹರ್ಷಿ ವಿರಚಿತವಾದ ಹದಿನೆಂಟು ಪುರಾಣಗಳಲ್ಲಿ ಹದಿನೇಳನೆಯದು. [ವಿವರಕ್ಕೆ "गरुडपुराण" ಪದದಲ್ಲಿ ನೋಡಿ.] 2. ವಿಷವನ್ನು ಹೋಗಲಾಡಿಸುವ ಗರುಡಮಂತ್ರ, ವಿಷಮಂತ್ರ. 3. ಗರುಡನ ಆಕಾರದಂತೆ ನಿಲ್ಲಿಸಲ್ಪಡುವ ಸೈನ್ಯಗಳ ಗುಂಪು, ಗರುಡವ್ಯೂಹ. "गारुडं च महाव्यूहं चक्रे शान्तनवस्तथा" भा० भीष्म० ५६-२। 4. ಮರಕತಮಣಿ, ಪಚ್ಚೆ, ಗಾರುಡಮಣಿ. "राशिर्मणीनामिव गारुडानां सपद्मरागः फलितो विभाति" रघु० १३-५३। 5. ಗರುಡದೇವತಾಕವಾದ ಅಸ್ತ್ರ. गरुडो देवताऽस्य "अण्" (४-२-२४)। 6. ಸ್ವರ್ಣ, ಚಿನ್ನ.

**गारुडिक ಗಾರುಡಿಕ**(ಪುಂ) ವಿಷವೈದ್ಯ. गारुडेन विषमन्त्रेण जीवति — "ठक्" (४-४-१२)।

**गारुत्मत ಗಾರುತ್ಮತ** (ನಂ) 1. ಮರಕತ, ಪಚ್ಚೆ. गरुत्मत इदम् "अण्" (४-३-१२०)। "गारुत्मतं मरकतमश्मगर्भो हरिन्मणिः" अम०। "तस्योल्लसत्काञ्चनकुण्डलाग्रप्रत्युप्तगारुत्मतरत्नभासा" माघ० ३-५। 2. ಗರುಡದೇವತಾಕವಾದ ಅಸ್ತ್ರ. गरुत्मान् देवताऽस्य "अण्" (४-२-२४)। "गारुत्मतं तीरगतस्तरस्वी भुजङ्गनाशाय समाददेऽस्त्रम्" रघु० १६-७७।

**गार्ग ಗಾರ್ಗ** (ಪುಂ) 1. ಗಾರ್ಗಿಯ ಮಗ. गार्ग्याः कुत्सितमपत्यम् वा "णः" (४-१-१४७)। पक्षे "ठक्" **गार्गिकः ಗಾರ್ಗಿಕಃ.** ಇಲ್ಲಿ ತಂದೆಯ ಹೆಸರನ್ನು ಹೇಳದೆ ತಾಯಿಯ ಹೆಸರಿನಲ್ಲಿ ಮಗನನ್ನು ಹೇಳಿರುವುದರಿಂದ ಮಗನು ಕುತ್ಸಿತ (ನಿಂದಿತ—ನಿಕೃಷ್ಟ) ನಾದನು. 2. ಗರ್ಗ ಗೋತ್ರದವರ ಸಂಘ, ಗರ್ಗವಂಶದವರ ಸಮೂಹ, ಗಾರ್ಗ್ಯರ ಗುಂಪು.

**गार्गक ಗಾರ್ಗಕ** (ಪುಂ) ಗರ್ಗನ ಮಗ. गर्गस्यापत्यं पुमान् "यञ्" (४-१-१०५)। "कन्"। यलोपः (६-४-१५१)।

**गार्गी ಗಾರ್ಗೀ** (स्त्री०) ಗರ್ಗನ ವಂಶದಲ್ಲಿ ಹುಟ್ಟಿದ ಹೆಂಗಸು. गर्गस्य गोत्रापत्यं स्त्री "यञ्" (४-१-१०५)। "ङीप्" (४-१-१६)। यलोपः (६-४-१५०)।

**गार्गीय ಗಾರ್ಗೀಯ** (ವಿ०) 1. ಗಾರ್ಗ್ಯನ ಸಂಬಂಧವಾದ. गार्ग्यस्येदम् "छः" (४-२-११४)। 2. ಗಾರ್ಗ್ಯನಿಂದ ಪ್ರೋಕ್ತವಾದ, ಗಾರ್ಗ್ಯನಿಂದ ಮೊದಲು ಹೇಳಲ್ಪಟ್ಟ. गार्ग्येण प्रोक्तम् "छः" (४-३-१०१)।

**गार्ग्य ಗಾರ್ಗ್ಯ** (ಪುಂ) ಗರ್ಗಗೋತ್ರದಲ್ಲಿ ಹುಟ್ಟಿದ. गर्गस्यापत्यं पुमान् "यञ्" (४-१-१०५)। स्त्रियाम् "ङीप्" (४-१-१६)। यलोपः (६-४-१५०)। **गार्गी ಗಾರ್ಗೀ.**

**गार्तक ಗಾರ್ತಕ** (ವಿ०) ಗರ್ತದೇಶದಲ್ಲಿರುವ. गर्ते गर्तदेशे भवः "वुञ्" (४-२-१२७)।

**गार्दभ ಗಾರ್ದಭ** (ವಿ०) ಗರ್ದಭ ಸಂಬಂಧವಾದ, ಕತ್ತೆಯ ಮೂತ್ರ ಮೊದಲಾದುದು. गर्दभस्येदम् "अण्" (४-३-१२०)।

**गार्ध्य ಗಾರ್ಧ್ಯ** (ನಂ) ಲೋಭ, ಅತಿಯಾದ ಆಸೆ. गर्ध एव स्वार्थे "ष्यञ्" (वा० ७-३-३१)। "पीत्वा जलानां निधिनातिगार्ध्यात् वृद्धिं गतेऽप्यात्मनि नैव मान्तीः" माघ० ३-७३।

**गार्ध्र ಗಾರ್ಧ್ರ** (ವಿ०) ಗೃಧ್ರಸಂಬಂಧವಾದ, ಹದ್ದಿನ ಸಂಬಂಧವಾದ. गृध्रस्यायम् "अण्" (४-३-१२०)।

**गार्ध्रपक्ष ಗಾರ್ಧ್ರಪಕ್ಷ**(ಪುಂ) ಹದ್ದಿನ ರೆಕ್ಕೆಗಳಿಂದ ಕೂಡಿದ ಬಾಣ. गार्ध्रः पक्षो यस्य। ಬಾಣಗಳಿಗೆ ಹದ್ದಿನ ರೆಕ್ಕೆಗಳನ್ನು ಕಟ್ಟುವುದರಿಂದ ಈ ಹೆಸರು.

**गार्भ ಗಾರ್ಭ** (ವಿ०) ಗರ್ಭದ (ಶಿಶುವಿನ) ಶುದ್ಧಿ ಮತ್ತು ಬೆಳವಣಿಗೆಗಾಗಿ ಮಾಡುವ ಕಾರ್ಯ, ಗರ್ಭಸಂಬಂಧವಾದ. गर्भस्येदम् "अण्" (४-३-१२०)। "गार्भैर्होमैर्जातकर्मचौडमौञ्जीनिबन्धनैः" मनु० २-२७।

**गार्भिक ಗಾರ್ಭಿಕ** (ವಿ०) ಗರ್ಭದಲ್ಲಿ ಉಂಟಾದ, ಗರ್ಭ ಸಂಬಂಧವಾದ. "बैजिकं गार्भिकं चैनो द्विजानामपमृज्यते" मनु० २-२७।

**गार्भिण ಗಾರ್ಭಿಣ**(ನಂ) ಗರ್ಭಿಣಿಯರ ಸಮೂಹ, ಬಸಿರು ಹೆಂಗಸರ ಗುಂಪು. गर्भिणीनां समूहः "अण्" (४-२-३८)।

**गार्ह ಗಾರ್ಹ** (ವಿ०) ಗೃಹಸಂಬಂಧವಾದ, ಮನೆಗೆ ಸಂಬಂಧಿಸಿದ. गृहस्यायं "अण्" (४-३-१२०)।

**गार्हपत ಗಾರ್ಹಪತ** (ವಿ०) ಗೃಹಪತಿ ಸಂಬಂಧವಾದ, ಮನೆಯ ಯಜಮಾನನಿಗೆ ಸಂಬಂಧಿಸಿದ. गृहपतेरिदम् "अण्" (४-१-८४)।

**गार्हपत्य ಗಾರ್ಹಪತ್ಯ** (ಪುಂ) 1. ಯಜ್ಞದ ಮೂರು ಅಗ್ನಿಗಳಲ್ಲಿ ಒಂದು, ಮನೆಯ ಯಜಮಾನನು ಅಗ್ನಿಹೋತ್ರಕ್ಕಾಗಿ ಇಟ್ಟಿರುವ ಅಗ್ನಿ. गृहपतिना संयुक्तः—गृहपति "ञ्यः" (४-४-९०)। 2. ಮನೆಯ ಯಜಮಾನತನ.

**गार्हमेध ಗಾರ್ಹಮೇಧ** (ಪುಂ) ಗೃಹಸ್ಥನು ಪ್ರತಿದಿನವೂ ಮನೆಯಲ್ಲಿ ಆಚರಿಸಬೇಕಾದ ಪಂಚಯಜ್ಞಗಳು. गार्हो मेधः। "तथैव राजभुरुगार्हमेधवितानविद्योरुविजृम्भितेषु" भाग० ५-११-२।

**गार्हस्थ्य ಗಾರ್ಹಸ್ಥ್ಯ** (ನಂ) 1. ಗೃಹಸ್ಥನ ಭಾವ, ಮನೆಯ ಯಜಮಾನನಾಗಿರುವಿಕೆ, ವಿವಾಹಾನಂತರ ಸಂಸಾರಿಯಾಗಿ ಮನೆಯಲ್ಲಿ ವಾಸಮಾಡುವಿಕೆ. गृहस्थस्य भावः "ष्यञ्" (५-१-१२४)। 2. ಗೃಹಸ್ಥನ ಕರ್ತವ್ಯವಾದ ಪಂಚ ಯಜ್ಞಗಳು. गृहस्थस्य कर्म "ष्यञ्" (५-१-१२४)।

**गाल ಗಾಲ** (ಪುಂ) 1. ಪ್ರವಹಿಸುವುದು, ಹರಿಯುವುದು. 2. ಸುರಿಯುವುದು, ಸೋರುವುದು. गल (प्रस्रवणे) भावे "घञ्" (३-३-१८)।

**गालन ಗಾಲನ**(ನಂ) 1. ಕರಗಿಸುವುದು. गल (प्रस्रवणे) + णिच् "ल्युट्" (३-३-११५)। 2. ಹರಿಯಿಸುವುದು.

**गालव ಗಾಲವ**(पुं०)1. ಲೋಧ್ರದ ಗಿಡ. गालं नेत्रस्रावं वायति – ओवै (शोषणे) "कः" (३-२-३)। "गालवः शाबरो लोध्रः" अम०। 2. ವಿಶ್ವಾಮಿತ್ರನ ಒಬ್ಬ ಶಿಷ್ಯ. [ಈ ಋಷಿಯು ವಿಶ್ವಾಮಿತ್ರನಲ್ಲಿ ವೇದಾಧ್ಯಯನ ಮಾಡಿ ಗುರುದಕ್ಷಿಣೆಯನ್ನು ತೆಗೆದುಕೊಳ್ಳಬೇಕೆಂದು ಹೇಳಿದನು. ವಿಶ್ವಾಮಿತ್ರನು ತೆಗೆದುಕೊಳ್ಳಲು ಇಷ್ಟಪಡಲಿಲ್ಲ. ಆದರೂ ಶಿಷ್ಯನು ಬಲಾತ್ಕಾರಮಾಡಿದುದರಿಂದ ಒಂದು ಕಿವಿಯು ಮಾತ್ರ ಕಪ್ಪಗಿರುವ 800 ಬಿಳಿಯ ಕುದುರೆಗಳನ್ನು ತಂದೊಪ್ಪಿಸಬೇಕೆಂದು ಹೇಳಲು ಗಾಲವನು ವಿಷ್ಣುವನ್ನು ಕುರಿತು ತಪಸ್ಸುಮಾಡಿದನು. ವಿಷ್ಣುವಿನ ಆಜ್ಞೆಯಂತೆ ಗರುಡನು ಈತನನ್ನು ಯಯಾತಿರಾಜನಲ್ಲಿಗೆ ಕರೆತಂದು ಬಿಟ್ಟನು. ಯಯಾತಿಯು ತನ್ನ ಮಗಳಾದ ಮಾಧವಿಯನ್ನು ಕಳುಹಿಸಿಕೊಟ್ಟು ಅವಳ ಮೂಲಕ ಅಶ್ವಗಳನ್ನು ಸಂಪಾದಿಸಿಕೊಳ್ಳಬಹುದೆಂದು ಹೇಳಿದನು. ಗಾಲವನು ಮಾಧವಿಯ ಮೂಲಕ ಕೆಲವು ರಾಜರಲ್ಲಿಗೆ ಹೋಗಿ 600 ಕುದುರೆಗಳನ್ನು ಸಂಪಾದಿಸಿ ಅವುಗಳನ್ನೂ ಮತ್ತೆ 200 ಕುದುರೆಗಳಿಗೆ ಬದಲಾಗಿ ಮಾಧವಿಯನ್ನೂ ವಿಶ್ವಾಮಿತ್ರನಿಗೆ ಒಪ್ಪಿಸಿದನು.]

**गालि ಗಾಲಿ** (पुं०) ಆಕ್ರೋಶ, ಬೈಗಳು, ಶಾಪ. गल (प्रस्रवणे) + णिच् "इन्" (उ० ४-११७)। "गालिः शपनम्" त्रिकाण्ड०।

**गालित ಗಾಲಿತ** (वि०) ದ್ರವವಾಗಿ ಮಾಡಲ್ಪಟ್ಟ, ಕರಗಿಸಲ್ಪಟ್ಟ. गल (प्रस्रवणे) + णिच् "क्तः" (३-२-१०२)। "गालितस्य सुवर्णस्य षोडशांशेन सीसकम्"।

**गालोडित ಗಾಲೋಡಿತ** (न०)1. ವಿಚಾರಮಾಡುವುದು, ವಿಮರ್ಶಿಸುವುದು. (वि०)2. ರೋಗಪೀಡಿತನಾದವನು. 3. ಉನ್ಮಾದಹೊಂದಿದವನು, ಚಿತ್ತಭ್ರಮೆಹೊಂದಿದವನು. 4. ಮೂರ್ಖ.

**गालोड्य ಗಾಲೋಡ್ಯ** (न०) ಕಮಲದ ಬೀಜ.

**गाहू – विलोडने** (भ्वा० आत्म० सक० वे०)। गाहते। जगाहे। गाहिता, गाढा। गाहिष्यते, घाक्ष्यते। गाहताम्। अगाहत। गाहेत। गाहिषीष्ट। ಇತ್ಯಾದಿ. 1. ಪ್ರವೇಶಿಸು, ಒಳಕ್ಕೆ ಹೋಗು. 2. ನೀರಿನಲ್ಲಿ ಮುಳುಗಿ ಸ್ನಾನಮಾಡು. 3. ಹೊಂದು, ಪಡೆ. "अगाहताष्टादशतां जिगीषया नवद्वयद्वीपपृथग्जयश्रियाम्" नैष० १-५।

**कर्मणि**:—गाह्यते। जगाहे। गाहिता, गाढा। गाहिष्यते, घाक्ष्यते। गाह्यताम्। अगाह्यत। गाह्येत। अगाहि। अगाहिष्यत।

**सनि**:—जिगाहिषते, जिघाक्षते। जिगाहिषां चक्रे, जिघाक्षां चक्रे, –बभूव, –आस। जिगाहिषिता, जिघाक्षिता। जिगाहिषताम्, जिघाक्षताम्। ಇತ್ಯಾದಿ.

**कृत्सु**:—गाहितव्यः, गाढव्यः। गाहनीयः। गाह्यः। गाढः, गाढवान्। गाहमानः। गाढुम्, गाहितुम्। गाढम्। गाहित्वा, गाढ्वा। विगाह्य।

**गाह ಗಾಹ** (पुं०) 1. ಆಳ. गाह्यते—गाहू (विलोडने) कर्म० "घञ्" (३-३-१९)। 2. ನೀರು ಮೊದಲಾದುವುಗಳಲ್ಲಿ ಮುಳುಗುವುದು. 3. ನೀರಿನೊಳಕ್ಕೆ ಇಳಿಯುವುದು. गाहू भावे "घञ्" (३-३-१८)। (वि०)4. ನೀರಿನಲ್ಲಿ ಮುಳುಗುವ, ನೀರಿನಲ್ಲಿ ಮುಳುಗಿ ಸ್ನಾನ ಮಾಡುವ. 5. ಪ್ರವೇಶಿಸುವ. गाहते – गाहू कर्त० "अच्" (३-१-१३४)।

**गाहन ಗಾಹನ** (न०) 1. ನೀರಿನೊಳಗೆ ಮುಳುಗುವುದು, ನೀರಿನೊಳಗೆ ಮುಳುಗಿ ಸ್ನಾನಮಾಡುವುದು. गाहू (विलोडने) भावे "ल्युट्" (३-३-११५)। 2. ನೀರಿನೊಳಗೆ ಇಳಿಯುವುದು. 3. ಪ್ರವೇಶಿಸುವುದು.

**गाहनीय ಗಾಹನೀಯ** (वि०)1. ಮುಳುಗಲು ಯೋಗ್ಯವಾದ, ಮುಳುಗಿ ಸ್ನಾನಮಾಡಲು ಅರ್ಹವಾದ. गाहू (विलोडने) "अनीयर्" (३-१-९६)। 2. ಮುಳುಗಲು ಶಕ್ಯವಾದ, ಸ್ನಾನಮಾಡಬಹುದಾದ. 3. ಪ್ರವೇಶಿಸಬಹುದಾದ. 4. ನೀರಿನೊಳಕ್ಕೆ ಇಳಿಯಲು ಶಕ್ಯವಾದ, ಪ್ರವೇಶಿಸಲು ಸಾಧ್ಯವಾದ.

**गाहमान ಗಾಹಮಾನ** (वि०) 1. ನೀರಿನೊಳಕ್ಕೆ ಇಳಿಯುತ್ತಿರುವ. 2. ನೀರಿನೊಳಗೆ ಮುಳುಗಿ ಸ್ನಾನಮಾಡುತ್ತಿರುವ. गाहू(विलोडने) "शानच्" (३-२-१२४)। 3. ಪ್ರವೇಶಿಸುತ್ತಿರುವ. "तस्मिन् वनं गोप्तरि गाहमाने" रघु० २-१४।

**गाहित ಗಾಹಿತ** (वि०) 1. ನೀರಿನಲ್ಲಿ ಮುಳುಗಿಸಲ್ಪಟ್ಟ. 2. ನೀರಿನೊಳಕ್ಕೆ ಇಳಿಸಲ್ಪಟ್ಟ. गाहू (विलोडने) + णिच् "क्तः" (३-२-१०२)। 3. ಪ್ರವೇಶಗೊಳಿಸಲ್ಪಟ್ಟ.

**गाहितृ ಗಾಹಿತೃ** (वि०)1. ಪ್ರವೇಶಿಸುವ. 2. ನೀರಿನಲ್ಲಿ ಮುಳುಗುವ, ಮುಳುಗಿ ಸ್ನಾನಮಾಡುವ. 3. ನೀರಿನೊಳಕ್ಕೆ ಇಳಿಯುವ. गाहू (विलोडने) "शतृ" (३-१-१२४)। स्त्रियाम् "ङीप्" (४-१-५)। **गाहित्री ಗಾಹಿತ್ರೀ.**

**गाह्य ಗಾಹ್ಯ** (वि०)1. ಪ್ರವೇಶಿಸಲ್ಪಡುವ. 2. ಮುಳುಗಿ ಸ್ನಾನಮಾಡಬಹುದಾದ. 3. ಸ್ನಾನಮಾಡಲು ಯೋಗ್ಯವಾದ. गाहू (विलोडने) "ण्यत्" (३-१-१२४)। 4. ಪ್ರವೇಶಿಸಲು ಯೋಗ್ಯವಾದ.

**गिर् ಗಿರ್** (स्त्री०) 1. ಮಾತು, ಭಾಷೆ. गॄ (शब्दे) "क्विप्" (वा० ३-३-९४)। इत् (७-१-१००)। "प्रापयन् पवनव्याधैर्गिरमुत्तरपक्षताम्" माघ० २-१५। "टाप्"। गिरा ಗಿರಾ. 2. ಸರಸ್ವತಿ.

**गिरि ಗಿರಿ** (पुं०) 1. ಪರ್ವತ, ಬೆಟ್ಟ. गिरति – गॄ (निगरणे) "किः" बाहु०। इक् (वा० ३-३-१०८)। "वनं तदेतन्महितं तपोवनं गिरिं च वेद्मि त्रिदिवेश्वरालयम्" याद० १४-२८। 2. ಚೆಂಡು. 3. ಶಿಲಾಜಿತು. 4. ಒಂದು ವಿಧ ನೇತ್ರರೋಗ. 5. ಸುಂಗುಪುದು. (वि०) 6. ಪೂಜ್ಯ, ಗೌರವಾರ್ಹ. "गिरिः पूज्येऽक्षिरुजि कन्दुके। शैले गैरेयके गीर्णावपि" हेम०।

**गिरिक ಗಿರಿಕ** (पुं०) ಈಶ್ವರ, ಪರಶಿವ. गिरौ कायति—कै (शब्दे) "कः" (३-२-४)।

**गिरिकच्छप ಗಿರಿಕಚ್ಛಪ** (पुं०) ಬೆಟ್ಟದ ಗವಿಯಲ್ಲಿ ವಾಸ ಮಾಡುವ ಆಮೆ. गिरौ पर्वतगुहायां कच्छपः।

**गिरिकण्टक ಗಿರಿಕಂಟಕ** (पुं०) ಇಂದ್ರನ ವಜ್ರಾಯುಧ. गिरेः कण्टक इव।

**गिरिकर्णिका ಗಿರಿಕರ್ಣಿಕಾ** (स्त्री०) ಪೃಥ್ವಿ, ಭೂಮಿ. गिरिः कर्ण इव यस्याः। "कन्" (५-३-७५)। "भूर्भूतधात्री गिरिकर्णिकाब्धिद्वीपा समुद्राम्बरमेखलाकूः" त्रिकाण्ड०।

**गिरिकर्णी ಗಿರಿಕರ್ಣೀ** (स्त्री०) 1. ವಿಷ್ಣುಕ್ರಾಂತ ಗಿಡ. 2. ಸಟ್ಟಗದ ಹಂಬು.

**गिरिका ಗಿರಿಕಾ** (स्त्री०) ಬೆಟ್ಟಲಿ. गिरिरेव स्वार्थे "कः" (५-३-७५)।

**गिरिचर ಗಿರಿಚರ** (पुं०) 1. ಚೋರ, ಕಳ್ಳ. गिरौ चरति—चर (गतौ) "टः" (३-२-१६)। (वि०) 2. ಪರ್ವತದಲ್ಲಿ ಸಂಚರಿಸುವ. "गिरिचर इव नागः प्राणसारं बिभर्ति" शाकु० २-४। स्त्रियाम् "ङीप्" (४-१-१५)। **–चरी –ಚರೀ.**

**गिरिज ಗಿರಿಜ** (न०) 1. ಅಭ್ರಕ, ಕಾಗೆಬಂಗಾರ. 2. ಶಿಲಾಜಿತು. 3. ಕೃಷ್ಣಲೋಹ, ಕಬ್ಬಿಣ. (स्त्री०) **–जा –ಜಾ.** 4. ಮಾದಳದಗಿಡ. 5. ಗೌರಿ, ಪಾರ್ವತಿ. गिरेर्जायते—जनी (प्रादुर्भावे) "डः" (३-२-९८)। "तौ पारिजातप्रसवप्रसङ्गो मरुत् सिषेवे गिरिजागिरीशौ" कुमा० ९-३८। (वि०) 6. ಪರ್ವತದಲ್ಲಿ ಹುಟ್ಟಿದ. गिरौ जायते — जनी "डः" (३-२-९७)।

**गिरिजातनय ಗಿರಿಜಾತನಯ** (पुं०) 1. ಕಾರ್ತಿಕೇಯ, ಷಣ್ಮುಖ. 2. ಗಣಪತಿ. गिरिजायास्तनयः। एवं **–नन्दनः –ನಂದನಃ, –पुत्रः –ಪುತ್ರಃ, –सुतः –ಸುತಃ, –सूनुः –ಸೂನುಃ.**

**गिरिजापति ಗಿರಿಜಾಪತಿ** (पुं०) ಪರಮೇಶ್ವರ, ಮಹಾದೇವ. गिरिजायाः पतिः।

**गिरिजामल ಗಿರಿಜಾಮಲ** (न०) ಅಭ್ರಕ. ಕಾಗೆಬಂಗಾರ. गिरिजायाः बीजरूपं मलम्।

**गिरिज्वर ಗಿರಿಜ್ವರ** (पुं०) ವಜ್ರಾಯುಧ. गिरिं ज्वरयति – ज्वर (रोगे) + णिच् "अच्" (३-१-१३४)।

**गिरिदुर्ग ಗಿರಿದುರ್ಗ** (न०) ಬೆಟ್ಟದ ಕೋಟೆ, ಪರ್ವತರೂಪವಾದ ಕೋಟೆ, ಶತ್ರುಗಳ ಭಯವಿಲ್ಲದೆ ರಾಜರು ವಾಸಮಾಡುವ ಸ್ಥಳ. गिरिरेव दुर्गम्। "धन्वदुर्गं महीदुर्गमब्दुर्गं वार्क्षमेव च। नृदुर्गं गिरिदुर्गं वा समाश्रित्य वसेत् पुरीम्। सर्वेण तु प्रयत्नेन गिरिदुर्गं समाश्रयेत्" मनु० ७-७०, ७१।

**गिरिनदी ಗಿರಿನದೀ** (स्त्री०) ಪರ್ವತದಲ್ಲಿ ಹರಿಯುವ ಹೊಳೆ, ಬೆಟ್ಟದಿಂದ ಹೊರಡುವ ಪ್ರವಾಹ.

**गिरिनन्दिनी ಗಿರಿನಂದಿನೀ** (स्त्री०) 1. ಹಿಮವಂತನ ಮಗಳು, ಪಾರ್ವತಿ. गिरेः हिमाद्रेः नन्दिनी। 2. ಗಂಗಾನದಿ. 3. ನದಿ. ಸಾಮಾನ್ಯವಾಗಿ ನದಿಗಳು ಬೆಟ್ಟಗಳಲ್ಲಿ ಹುಟ್ಟುವುದರಿಂದ ಈ ಹೆಸರು. "कलिन्दगिरिनन्दिनीतटसुरद्रुमालम्बिनी मदीयमतिचुम्बिनी भवतु कापि कादम्बिनी" रसगं०।

**गिरिपुष्पक ಗಿರಿಪುಷ್ಪಕ** (न०) ಶಿಲಾಜಿತು. गिरेः पुष्पमिव कायति – कै (शब्दे) "कः" (३-२-४)।

**गिरिप्रिया ಗಿರಿಪ್ರಿಯಾ** (स्त्री०) ಹೆಣ್ಣು ಚಮರೀಮೃಗ. गिरिः प्रियोऽस्याः।

**गिरिभिद् ಗಿರಿಭಿದ್** (पुं०) 1. ಇಂದ್ರ. 2. ನದಿ, ಹೊಳೆ. गिरिं भिनत्ति—भिदिर् (विदारणे) "क्विप्" (३-२-६१)।

**गिरिभू ಗಿರಿಭೂ** (स्त्री०) 1. ಪಾರ್ವತಿ. 2. ಗಂಗಾನದಿ. 3. ಪರ್ವತಪ್ರದೇಶ. (वि०) 4. ಬೆಟ್ಟದಲ್ಲಿ ಹುಟ್ಟಿದ. गिरौ भवति – भू "क्विप्" (३-२-७६)।

**गिरिमल्लिका ಗಿರಿಮಲ್ಲಿಕಾ** (स्त्री०) ಬೆಟ್ಟಮಲ್ಲಿಗೆ. गिरिमल्लीव "कन्" (५-३-९६)।

**गिरिराज् ಗಿರಿರಾಜ್** (पुं०) 1. ಪರ್ವತಗಳ ರಾಜ, ಹಿಮವಂತ. गिरीणां राट्। 2. ಶ್ರೇಷ್ಠವಾದ ಪರ್ವತ,

ದೊಡ್ಡ ಬೆಟ್ಟ. गिरिषु राजते—राजृ (दीप्तौ) "क्विप्" (३-२-६१)।

**गिरिराज ಗಿರಿರಾಜ** (पुं०) ಪರ್ವತಗಳ ರಾಜ, ಹಿಮವಂತ. गिरीणां राजा "टच्" (५-४-९१)।

**गिरिराजपुत्री ಗಿರಿರಾಜಪುತ್ರೀ** (स्त्री०) ಹಿಮವಂತನ ಮಗಳಾದ ಪಾರ್ವತಿ. गिरिराजस्य पुत्री। "संभावितानां गिरिराजपुत्र्या गृहेऽभवन्मङ्गलगीतकानि" कुमा० ११-३४।

**गिरिवासिन् ಗಿರಿವಾಸಿನ್** (वि०) ಬೆಟ್ಟದಲ್ಲಿ ವಾಸ ಮಾಡುವ. गिरौ वसति—वस (निवासे) "णिनिः" (३-१-१३४)।

**गिरिव्रज ಗಿರಿವ್ರಜ** (पुं०) ಜರಾಸಂಧನ ನಗರ, ಮಗಧ ದೇಶದ ರಾಜಧಾನಿ. गिरीणां व्रजो यत्र।

**गिरिश ಗಿರಿಶ** (पुं०) ಪರಶಿವ, ಪರಮೇಶ್ವರ. गिरिरस्यास्ति "शः" (५-२-१००)। "प्रत्याहतास्त्रो गिरिशप्रभावादात्मन्यवज्ञां शिथिलीचकार" रघु० २-४१।

**गिरिशय ಗಿರಿಶಯ** (पुं०) ಪರಶಿವ, ಪರಮೇಶ್ವರ. गिरौ शेते—शीङ् (स्वप्ने) "अच्" (३-२-१५)।

**गिरिशृङ्ग ಗಿರಿಶೃಂಗ** (पुं०) 1. ಗಣಪತಿ. (न०) 2. ಪರ್ವತದ ಶಿಖರ. गिरेः शृङ्गमाकारेणास्त्यस्य "अच्" (५-२-११७) गिरेः शृङ्गं शिखरं वा।

**गिरिसार ಗಿರಿಸಾರ** (पुं०) 1. ಕಬ್ಬಿಣ. 2. ತವರ. गिरेः सारः। 3. ಮಲಯ ಪರ್ವತ. "गिरिसारः पुमान् लोहे वङ्गे मलयपर्वते" मेदि०।

**गिरिसुत ಗಿರಿಸುತ** (पुं०) 1. ಮೈನಾಕಪರ್ವತ. (स्त्री०) –सुता –ಸುತಾ. 2. ಪಾರ್ವತಿ. गिरेः सुतः सुता वा।

**गिरिस्रवा ಗಿರಿಸ್ರವಾ** (स्त्री०) ಗಿರಿನದಿ, ಬೆಟ್ಟದಲ್ಲಿ ಹುಟ್ಟಿ ಹರಿಯುವ ನದಿ. गिरेः स्रवति—स्रु (गतौ) "अच्" (३-१-१३४)।

**गिरीन्द्र ಗಿರೀಂದ್ರ** (पुं०) 1. ಪರ್ವತಗಳ ರಾಜ, ಹಿಮವಂತ. गिरीणामिन्द्रः। "विनोदयामास गिरीन्द्रपुत्रीम्" कुमा० ९-१८। 2. ಕೈಲಾಸಕ್ಕೆ ಒಡೆಯನಾದ ಪರಮೇಶ್ವರ. गिरेः कैलासस्य इन्द्रः ईश्वरः।

**गिरीश ಗಿರೀಶ** (पुं०) 1. ಪರಶಿವ, ಈಶ್ವರ. गिरेः कैलासस्य ईशः। "गिरीशगौर्योर्हृदयं जहार मुदे न हृद्या किमु बालकेलिः" कुमा० ११-४०। 2. ಹಿಮಾಚಲ, ಪರ್ವತಗಳ ರಾಜ. गिरीणामीशः। 3. ಬೃಹಸ್ಪತಿ. गिरां वाचामीशः। "गिरीशो वाक्पतौ हरे। अद्रिराजे" हेम०।

**गिल ಗಿಲ** (पुं०) 1. ಮೊಸಳೆ. गिरति—गॄ (निगरणे) "अच्" (३-१-१३४)। रस्य "लः" (८-२-२१)। (वि०) 2. ನುಂಗುವ, ತಿನ್ನುವ.

**गिलन ಗಿಲನ** (न०) ನುಂಗುವುದು, ತಿನ್ನುವುದು. गॄ (निगरणे) भावे "ल्युट्" (३-३-११५)।

**गिलि ಗಿಲಿ** (स्त्री०) ನುಂಗುವುದು. गॄ (निगरणे) "इक्" (वा० ३-३-१०८)।

**गीत ಗೀತ** (न०) 1. ಗಾನ, ಹಾಡುಗಾರಿಕೆ. गीयते—गै (शब्दे) भावे "ल्युट्" (३-३-११४)। "गीतान्तरेषु श्रमवारिलेशैः किञ्चित्समुच्छ्वासितपत्रलेखम्" कुमा० ३-३८। (वि०) 2. ಹಾಡಲ್ಪಟ್ಟ. गै कर्म० "क्तः" (३-२-१०२)। 3. ಸ್ತೋತ್ರಮಾಡಲ್ಪಟ್ಟ. "अत्र गाथा वायुगीताः कीर्तयन्ति पुराविदः" मनु० ९-४२।

**गीतगोविन्द ಗೀತಗೋವಿಂದ** (न०) ಜಯದೇವ ಕವಿ ರಚಿತವಾದ ಗೀತಗೋವಿಂದ ಕಾವ್ಯ. गीतो गोविन्दोऽत्र। ಈ ಕಾವ್ಯದಲ್ಲಿ ಹನ್ನೆರಡು ಸರ್ಗಗಳಿರುವುವು. ಇದರಲ್ಲಿ ಶ್ರೀಕೃಷ್ಣನ ಚರಿತ್ರೆಯು ವರ್ಣಿಸಲ್ಪಟ್ಟಿರುವುದು.

**गीतज्ञ ಗೀತಜ್ಞ** (वि०) ಸಂಗೀತವನ್ನರಿತವನು, ಸಂಗೀತ ವಿದ್ಯೆಯನ್ನು ಅಭ್ಯಾಸಮಾಡಿದವನು. गीतं जानाति—ज्ञा (अवबोधने) "कः" (३-२-३)।

**गीतप्रिय ಗೀತಪ್ರಿಯ** (पुं०) 1. ಮಹಾದೇವ, ಮಹೇಶ್ವರ. (वि०) 2. ಸಂಗೀತದಲ್ಲಿ ಪ್ರೀತಿಯುಳ್ಳವನು. गीतं प्रियं यस्य।

**गीतमोदिन् ಗೀತಮೋದಿನ್** (पुं०) 1. ಕಿನ್ನರ. गीतेन मोदते—मुद (हर्षे) "णिनिः" (३-२-७८)। (वि०) 2. ಸಂಗೀತದಿಂದ ಸಂತೋಷಪಡುವ. स्त्रियाम् "ङीप्" (४-१-५)। –मोदिनी –ಮೋದಿನೀ.

**गीता ಗೀತಾ** (स्त्री०) ಆತ್ಮವಿದ್ಯೆಯನ್ನು ಬೋಧಿಸುವ ಶ್ಲೋಕರೂಪವಾದ ಗ್ರಂಥ. रामगीता, भगवद्गीता, शिवगीता ಇತ್ಯಾದಿ. ಆದರೆ गीता ಪದವು ಶ್ರೀಮದ್ಭಗವದ್ಗೀತೆಯಲ್ಲಿ ಪ್ರಸಿದ್ಧವಾಗಿದೆ. "गीता सुगीता कर्तव्या किमन्यैः शास्त्रसङ्ग्रहैः। या स्वयं पद्मनाभस्य मुखपद्माद्विनिःसृता"। ಶ್ರೀಭಗವದ್ಗೀತೆಯು ಮಹಾಭಾರತದ ಭೀಷ್ಮಪರ್ವದಲ್ಲಿ ಉಕ್ತವಾಗಿದೆ. ಯುದ್ಧಕ್ಷೇತ್ರದಲ್ಲಿ ಶತ್ರುಗಳನ್ನು ನೋಡಿ ಬಹಳ ಮರುಕಗೊಂಡು ಯುದ್ಧದಿಂದ ವಿಮುಖನಾಗಿದ್ದ ಅರ್ಜುನನಿಗೆ ಪುನಃ ಯುದ್ಧೋನ್ಮುಖನಾಗುವಂತೆ ಶ್ರೀಕೃಷ್ಣನು ಮಾಡಿದ ತತ್ತ್ವೋಪದೇಶವೇ ಈ ಭಗವದ್ಗೀತೆ. ಇದು ಅರ್ಜುನನ

ವ್ಯಾಜದಿಂದ ಇಡೀ ಜಗತ್ತಿಗೇ ಮಾಡಿದ ತತ್ತ್ವೋಪದೇಶ.

ಶ್ರೀಮದ್ಭಗವದ್ಗೀತೆಯಲ್ಲಿ ಹದಿನೆಂಟು ಅಧ್ಯಾಯಗಳಿವೆ.

1 ನೆಯ ಅಧ್ಯಾಯದಲ್ಲಿ ಅರ್ಜುನವಿಷಾದಯೋಗ.
2 ನೆಯ ,, ಸಾಂಖ್ಯಯೋಗ.
3 ನೆಯ ,, ಕರ್ಮಯೋಗ.
4 ನೆಯ ,, ಜ್ಞಾನಯೋಗ.
5 ನೆಯ ,, ಕರ್ಮಸಂನ್ಯಾಸಯೋಗ.
6 ನೆಯ ,, ಧ್ಯಾನ(ಯೋಗಾಭ್ಯಾಸ)ಯೋಗ.
7 ನೆಯ ,, ವಿಜ್ಞಾನಯೋಗ.
8 ನೆಯ, 9 ನೆಯ ಮತ್ತು 10 ನೆಯ ,, ಅಕ್ಷರ ಪರಬ್ರಹ್ಮಯೋಗ.
11 ನೆಯ ,, ವಿಶ್ವರೂಪಸಂದರ್ಶನಯೋಗ.
12 ನೆಯ ,, ಭಕ್ತಿಯೋಗ.
13 ನೆಯ ,, ಕ್ಷೇತ್ರಕ್ಷೇತ್ರಜ್ಞವಿಭಾಗಯೋಗ.
14 ನೆಯ ,, ಗುಣತ್ರಯವಿಭಾಗಯೋಗ.
15 ನೆಯ ,, ಪುರುಷೋತ್ತಮಯೋಗ.
16 ನೆಯ ,, ದೈವಾಸುರಸಂಪದ್ವಿಭಾಗಯೋಗ.
17 ನೆಯ ,, ಶ್ರದ್ಧಾತ್ರಯವಿಭಾಗಯೋಗ.
18 ನೆಯ ,, ಮೋಕ್ಷಸಂನ್ಯಾಸಯೋಗ.

**गीताचार्य ಗೀತಾಚಾರ್ಯ** (पुं०) ಅರ್ಜುನನಿಗೆ ಭಗವದ್ಗೀತೆಯನ್ನು ಉಪದೇಶಿಸಿದ ಶ್ರೀಕೃಷ್ಣ.

**गीति ಗೀತಿ** (स्त्री०) 1. ಗಾನ, ಹಾಡುಗಾರಿಕೆ. गीयते—गै (शब्दे) भावे "क्तिन्" (३-३-९४)। "श्रुताप्सरोगीतिरपि क्षणेऽस्मिन् हरः प्रसंख्यानपरो बभूव" कुमा० ३-४०। 2. ಮಾತ್ರಾವೃತ್ತದ ಒಂದು ಭೇದ. **ಇದರ ಲಕ್ಷಣ:** ಆರ್ಯಾವೃತ್ತದ ಪೂರ್ವಾರ್ಧದ ಲಕ್ಷಣವು ಎರಡು ಅರ್ಧಗಳಲ್ಲೂ ಇದ್ದು ಅವರಂತೆಯೇ ಯತಿ ನಿಯಮವೂ ಇದ್ದರೆ "**ಗೀತಿ**" ವೃತ್ತವಾಗುವುದು. "आर्याप्रथमदलोक्तं यदि कथमपि लक्षणं भवेदुभयोः। दलयोः कृतयतिशोभां तां गीतिं गीतवान् भुजङ्गेशः" वृ० र०।

**गीतिका ಗೀತಿಕಾ** (स्त्री०) 1. ಗಾನ, ಹಾಡುಗಾರಿಕೆ. गीतिः स्वार्थे "कः"। 2. ಹಾಡಿನಂತಿರುವ ಸಣ್ಣ ಪದ್ಯ, ಚಿಕ್ಕ ಕೀರ್ತನೆ. गीतिरिव कायति।

**गीरथ ಗೀರಥ** (पुं०) 1. ಗುರು, ಬೃಹಸ್ಪತಿ. गीः रथ इवास्य। 2. ಜೀವಾತ್ಮ.

**गीर्ण ಗೀರ್ಣ** (वि०) 1. ಸ್ತೋತ್ರಮಾಡಲ್ಪಟ್ಟ, ಹೊಗಳಲ್ಪಟ್ಟ. गॄ (शब्दे) कर्म० "क्तः" (३-२-१०२)। 2. ವರ್ಣಿಸಲ್ಪಟ್ಟ. 3. ನುಂಗಲ್ಪಟ್ಟ. गॄ (निगरणे) "क्तः" (३-२-१०२)।

**गीर्णि ಗೀರ್ಣಿ** (स्त्री०) 1. ಸ್ತೋತ್ರ. 2. ವರ್ಣನೆ. 3. ನುಂಗುವುದು. गॄ (शब्दे निगरणे वा) भावे "क्तिन्" (३-३-११४)।

**गीर्देवी ಗೀರ್ದೇವೀ** (स्त्री०) ವಾಗ್ದೇವಿ, ಸರಸ್ವತಿ. गिरः अधिष्ठात्री देवी।

**गीर्पति ಗೀರ್ಪತಿ** (पुं०) ಗುರು, ಬೃಹಸ್ಪತಿ. गिरां पतिः। वा रेफः (वा० ८-२-६९)। पक्षे विसर्गोपध्मानीयौ। **गीःपतिः ಗೀಃಪತಿಃ, गीᳶपतिः ಗೀᳶಪತಿಃ**। कस्कादित्वात् षत्वम् **गीष्पतिः ಗೀಷ್ಪತಿಃ** इति केचित्। "गीर्पतिर्धिषणो गुरुः" अम०।

**गीर्बा(र्वा)ण ಗೀರ್ಬಾ(ರ್ವಾ)ಣ** (पुं०) ದೇವತೆ, ಅಮರ. गीरेव बाणः यस्य।

**गुग्गुलु ಗುಗ್ಗುಲು** (पुं०) 1. ಗುಗ್ಗುಳದ ಗಿಡ, ಹಾಲುಮಡ್ಡಿ ಗಿಡ. गुजति—गुज (शब्दे) "क्विप्" (३-२-१७८)। गुजो व्याधेर्गुडति—गुड (रक्षणे) "उः" बाहु०। डलयोरभेदः। (न०) 2. ಹಾಲುಮಡ್ಡಿ.

**गुग्गुलक ಗುಗ್ಗುಲಕ** (वि०) ಹಾಲುಮಡ್ಡಿಯ ವ್ಯಾಪಾರಿ, ಗುಗ್ಗುಲವನ್ನು ಮಾರುವವನು. गुग्गुलुः पण्यमस्य "ष्ठन्" (४-४-५१)। स्त्रियाम् "ङीष्" (४-१-४१)। **—लुकी ಲುಕೀ.**

**गुच्छ ಗುಚ್ಛ** (पुं०) 1. ಗೊಂಚಲು, ಕಂತೆ. गुतं छ्यति—छो (छेदने) "कः" (३-२-३)। "ववुरयुक्छदगुच्छसुगन्धयः" माघ० ६-५०। 2. ಪುಷ್ಪಗುಚ್ಛ, ಹೂವಿನ ಗೊಂಚಲು. 3. ಹುಲ್ಲು ಮೊದಲಾದುವುಗಳ ಹೊರೆ. 4. 32 ಎಳೆಗಳ ಮುತ್ತಿನಹಾರ. 5. ನವಿಲಿನ ಗರಿ. 6. ಕಥೆಯ ಒಂದು ಭಾಗ, ಗ್ರಂಥಭಾಗ. 7. ಪೊದರು, ಪೊದೆ. "गुच्छगुल्मं तु विविधं तथैव तृणजातयः" मनु० १-४८।

**गुच्छपत्र ಗುಚ್ಛಪತ್ರ** (पुं०) ತಾಳವೃಕ್ಷ, ಪನ್ನೇಮರ. गुच्छाकृतीनि पत्राण्यस्य।

**गुच्छफल ಗುಚ್ಛಫಲ** (पुं०) 1. ಬಾಳೆಗಿಡ. 2. ಚಿಲ್ಲದಗಿಡ. 3. ಹಾಲೆಗಿಡ. 4. ಕಾಚಿಗಿಡ. 5. ದ್ರಾಕ್ಷಿಗಿಡ. गुच्छाकृतीनि फलान्यस्य।

**गुञ्ज ಗುಂಜ** (पुं०) 1. ಮಧುರವಾದ ಧ್ವನಿ, ಇಂಪಾದ ಧ್ವನಿ. गुजि (अव्यक्ते शब्दे) भावे "घञ्"(३-३-१८)। 2. ಹೂವಿನ ಗೊಂಚಲು. गुञ्जति – गुजि कर्त० "अच्" (३-१-१३४)।

**गुञ्जत् ಗುಂಜತ್** (वि०) 1. ಇಂಪಾಗಿ ಶಬ್ದಮಾಡುತ್ತಿರುವ. गुजि (अव्यक्ते शब्दे) "शतृ" (३-२-१२४)। 2. ಕೂಗುತ್ತಿರುವ, ಶಬ್ದಮಾಡುತ್ತಿರುವ. "गुञ्जत्कुञ्जकुटीरकौशिकघटाघूत्कारसंवेल्लित०" मालती० ५-१९।

**गुञ्जन ಗುಂಜನ** (न०) ಇಂಪಾಗಿ ಧ್ವನಿಹೊರಡಿಸುವುದು, ಮಧುರವಾಗಿ ಕೂಗುವುದು. गुजि (अव्यक्ते शब्दे) भावे "ल्युट्" (३-३-११५)।

**गुञ्जा ಗುಂಜಾ** (स्त्री०) 1. ಗುಲಗಂಜಿ ಬಳ್ಳಿ. गुजि (अव्यक्ते शब्दे)भावे "अच्"(३-१-१३४)। 2. ತಮಟೆ. 3. ಮಧುರವಾದ ಧ್ವನಿ, ಇಂಪಾದ ಧ್ವನಿ. "गुञ्जा तु कृष्णलायां स्यात्पटहे मधुरध्वनौ" हेम०। 4. ಎರಡು ಗೋಧಿಗಳ ತೂಕ. 5. ನಾಲ್ಕು ಅಕ್ಕಿಗಳ ತೂಕ. 6. ಚರ್ಚೆ, ವಿಚಾರಮಾಡುವುದು. "तर्कनिर्णयौ। गुञ्जा चर्चा" त्रिकाण्ड०। 7. ಮದ್ಯಗೃಹ.

**गुटिका ಗುಟಿಕಾ**(स्त्री०)1. ಮಾತ್ರೆ, ಗುಳಿಗೆ. 2. ಮುಂಡಾಗಿ ಇರುವ ವಸ್ತು, ಗೋಲಿ. वटी स्वार्थे "कन्" (५-४-२९)। पृषो०। 3. ಮುತ್ತು, ಮೌಕ್ತಿಕ. "ताम्रोदरेषु पतितं तरुपल्लवेषु निर्धातहारगुटिकाविशदं हिमाम्भः" रघु० ५-७०।

**गुटी ಗುಟೀ** (स्त्री०) "गुटिका" ಪದದ ಅರ್ಥ.

**गुड – रक्षणे** (तुदा० पर० सक० से०)। गुडति। जुगोड। अगुडीत्। ಇತ್ಯಾದಿ.

**गुड ಗುಡ** (पुं०)1. ಬೆಲ್ಲ, ಕಬ್ಬಿನರಸದ ಪಾಕ. गुड(रक्षणे) "क:" (३-१-१३५)। "स पुराणोऽधिकगुणो गुडः पथ्यतमःस्मृतः" सुश्रुत० सूत्र० ४५-१६१। 2. ಗೋಲಿ, ಮುಂಡಾಗಿರುವ ವಸ್ತು. "प्रादुरासन् महीपाल कृष्णायसमया गुडाः" भा० द्रोण०। 3. ಚೆಂಡು, ಗೋಳ. 4. ಮಾತ್ರೆ, ಗುಳಿಗೆ. 5. ಕಾಕಂಬಿ, ಸರಿಯಾದ ಬೆಲ್ಲದ ಪಾಕಕ್ಕೆ ಬರದಿರುವ ಅರ್ಧಪಾಕದ ಕಬ್ಬಿನ ರಸ. 6. ಗ್ರಾಸ, ತುತ್ತು. 7. ಆನೆಯ ಯುದ್ಧಕವಚ, ಯುದ್ಧದಲ್ಲಿ ಆನೆಯ ದೇಹದ ರಕ್ಷಣೆಗಾಗಿ ಹಾಕುವ ಹೊದಿಕೆ. (स्त्री०) **–डा –ಡಾ.** 8. ಕಳ್ಳಿಗಿಡ. 9. ಹತ್ತಿಗಿಡ. 10. ಮಾತ್ರೆ, ಗುಳಿಗೆ. "गुडः कुञ्जरसन्नाहे गोलकेक्षुविकारयोः। गुडा तु गुडिकास्नुहयोः" हेम०। "गुडः स्यात् गोलके हस्तिसन्नाहेक्षुविकारयोः। गुडा स्नुहयां च कथिता घुडिकायां च योषिति" मेदि०।

**गुडक ಗುಡಕ** (पुं०)1. ಬೆಲ್ಲದ ಪಾಕದಿಂದ ತಯಾರಿಸಲ್ಪಟ್ಟ ಔಷಧ. 2. ಮಾತ್ರೆ, ಗುಳಿಗೆ. 3. ಚೆಂಡು, ದುಂಡಾಗಿರುವ ವಸ್ತು. 4. ಗ್ರಾಸ, ತುತ್ತು.

**गुडपर्पटक ಗುಡಪರ್ಪಟಕ** (पुं०) ಸಿಹಿ ಹಪ್ಪಳ, ಬೆಲ್ಲ ಸೇರಿಸಿ ತಯಾರಿಸಲ್ಪಟ್ಟ ತೆಳುರೊಟ್ಟಿ.

**गुडपुष्प ಗುಡಪುಷ್ಪ** (पुं०) ಮಧೂಕವೃಕ್ಷ, ಹಿಪ್ಪೆಮರ. गुड इव पुष्पमस्य।

**गुडफल ಗುಡಫಲ** (पुं०) ಪೀಲುವೃಕ್ಷ, ಗೋನುಮರ. गुड इव फलमस्य।

**गुडशर्करा ಗುಡಶರ್ಕರಾ** (स्त्री०) ಬೆಲ್ಲದಿಂದ ತಯಾರಿಸಲ್ಪಟ್ಟ ಸಕ್ಕರೆ.

**गुडशिग्रु ಗುಡಶಿಗ್ರು** (पुं०) ಕೆಂಪುನುಗ್ಗೆಮರ.

**गुडा ಗುಡಾ** (स्त्री०) 1. ಕಳ್ಳಿಗಿಡ. 2. ಹತ್ತಿಗಿಡ. 3. ಮಾತ್ರೆ, ಗುಳಿಗೆ.

**गुडाका ಗುಡಾಕಾ** (स्त्री०) 1. ಆಲಸ್ಯ. 2. ನಿದ್ರೆ. गुडि (वेष्टने) "आकन्"।

**गुडाकेश ಗುಡಾಕೇಶ** (पुं०)1. ಅರ್ಜುನ. गुडाका निद्रा आलस्यं इन्द्रियाणि वा तस्या ईशः। "मम देहे गुडाकेश यच्चान्यद्द्रष्टुमर्हसि" गीता ११-७। (वि०)2. ನಿದ್ರೆಯನ್ನು ಜಯಿಸಿದವನು.

**गुडाचल ಗುಡಾಚಲ** (पुं०) ದಾನಕ್ಕಾಗಿ ಬೆಲ್ಲದಿಂದ ತಯಾರಿಸಲ್ಪಟ್ಟ ಬೆಟ್ಟ. गुडेन निर्मितोऽचलः।

**गुडापूप ಗುಡಾಪೂಪ** (पुं०) ಬೆಲ್ಲವನ್ನು ಸೇರಿಸಿ ಹಿಟ್ಟಿನಿಂದ ತಯಾರಿಸಲ್ಪಟ್ಟ ರೊಟ್ಟಿ, ಒಬ್ಬಿಟ್ಟು, ಹೋಳಿಗೆ ಮುಂತಾದ ಭಕ್ಷ್ಯ. गुडेन मिश्रितोऽपूपः।

**गुडाशय ಗುಡಾಶಯ** (पुं०) ಪೀಲುವೃಕ್ಷ, ಬೆಟ್ಟಗೋನು ಮರ. गुड इव मधुररसः आशेतेऽत्र – आ + शीङ् (स्वप्ने) अधि० "अच्" (३-२-१५)।

**गुडूची ಗುಡೂಚೀ** (स्त्री०) ಅಮೃತಬಳ್ಳಿ. गुड (रक्षणे) "ऊचट्" बाहु०। "गुडूची तन्त्रिकाऽमृता" अम०।

**गुडोद्भवा ಗುಡೋದ್ಭವಾ** (स्त्री०) 1. (ಬೆಲ್ಲದಿಂದ ತಯಾರಿಸಲ್ಪಟ್ಟ) ಸಕ್ಕರೆ. उद्भवत्यस्मात् – उद् + भू "अप्" (३-३-५७)। गुडः उद्भवोऽस्याः। (वि०)2. ಬೆಲ್ಲದಿಂದ ಉಂಟಾದ.

**गुडौदन ಗುಡೌದನ** (ನ०) ಬೆಲ್ಲದ ಅನ್ನ, ಸಕ್ಕರೆ ಪೊಂಗಲು. गुडमिश्रमोदनम्। "गुडौदनं पायसं च हविष्यं क्षीरषाष्टिकम्" याज्ञ० १-३०४।

**गुण – आमन्त्रणे** (चुरा० उभ० सक० से०)। गुणयति, –ते। अजुगुणत्, –त। ಇತ್ಯಾದಿ. 1. ಆಮಂತ್ರಿಸು, ಕರೆ. 2. ಅಭಿವೃದ್ಧಿಪಡಿಸು, ಹೆಚ್ಚಿಸು.

**गुण ಗುಣ** (पुं०) 1. ಸತ್ತ್ವ, ರಜಸ್ಸು ಮತ್ತು ತಮಸ್ಸು ಗಳೆಂಬ ಮೂರು ಗುಣಗಳು. "सत्त्वं रजस्तम इति प्रकृतेर्गुणास्तैर्युक्तः परः पुरुष एक इहास्य धत्ते। स्थित्यादये हरिविरिञ्चिहरेति संज्ञाः श्रेयांसि तत्र खलु सत्त्वतनोर्नृणां स्युः" भाग० १-२-२३। "स्वमूर्तिभेदेन गुणाग्र्यवर्तिना पतिः प्रजानामिव सर्गमात्मनः" रघु० ३-२७। 2. ಬಿಲ್ಲಿನ ಅಂಬು, ಹೆದೆ, ಬಿಲ್ಲನ್ನು ಎಳೆದುಕಟ್ಟುವ ಮೌರ್ವಿ. गुण (आमन्त्रणे) कर्म० "घञ्" (३-३-१९)। "अथ नभस्य इव त्रिदशायुधं कनकपिङ्गतटिद्गुणसंयुतम्" रघु० ९-५४। 3. ಧೈರ್ಯ, ಸ್ಥೈರ್ಯ, ಶೌರ್ಯ, ದಯೆ, ವಾತ್ಸಲ್ಯ ಮೊದಲಾದ ಆತ್ಮಧರ್ಮಗಳು. "गुणसिन्धुरसौ गुणातिवर्ती गतिरन्तस्स्थितिरागमैकगम्यः" याद० १५-५। 4. ಪಾಚಕ, ಅಡಿಗೆಯವನು. गुण अदन्तः + णिच् "अच्" (३-१-१३४)। "आरालिका आन्धसिकाः सूदा औदनिका गुणाः" अम०। 5. ರಾಜನ ಸಂಬಂಧವಾದ ಆರು ಗುಣಗಳು. (1) सन्धिः, (2) विग्रहः, (3) यानम्, (4) आसनम्, (5) द्वैधीभावः ಮತ್ತು (6) आश्रयः ಇವು ರಾಜನ ಆರು ಗುಣಗಳು. "संधिं च विग्रहं चैव यानमासनमेव च। द्वैधीभावं संश्रयं च षड्गुणांश्चिन्तयेत्सदा" मनु० ७-१६०। "षड्गुणाः शक्तयस्तिस्रः सिद्धयश्चोदयास्त्रयः" माघ० २-२६। 6. ರಜ್ಜು, ಹಗ್ಗ. "गुणवन्तोऽपि सीदन्ति न गुणग्राहको यदि। सगुणोऽपि पूर्णकुम्भो यथा कूपे निमज्जति"। 7. ತಂತು, ದಾರ. "काञ्चीगुण इव पतितः स्थितंकरत्नः फणी स्फुरति"। 8. ದ್ರವ್ಯಗಳನ್ನು ಆಶ್ರಯಿಸಿರುವ ಶುಕ್ಲ (ಬಿಳುಪು) ಕೃಷ್ಣ (ಕಪ್ಪು) ರಕ್ತ (ಕೆಂಪು) ಪೀತ (ಹಳದಿ) ಮುಂತಾದುವು. 9. ವ್ಯಾಕರಣದಲ್ಲಿ ಉಕ್ತವಾದ ಗುಣಸಂಜ್ಞೆಯುಳ್ಳ ವರ್ಣಗಳು, अ ಕಾರ ए ಕಾರ ಮತ್ತು ओ ಕಾರಗಳು. "अदेङ्गुणः" पा० सू० १-१-२। 10. ಶಬ್ದ ಮತ್ತು ಅರ್ಥಗಳಲ್ಲಿರುವ ಗುಣಗಳು. (1) ओजः, (2) प्रसादः, (3) श्लेषः, (4) समता, (5) समाधिः, (6) माधुर्यम्, (7) सौकुमार्यम्, (8) उदारता, (9) अर्थव्यक्तिः ಮತ್ತು (10) कान्तिः ಇವು ಶಬ್ದಾರ್ಥನಿಷ್ಠಗುಣಗಳು. "ओजः प्रसादश्लेषसमतासमाधिमाधुर्यसौकुमार्योदारतार्थव्यक्तिकान्तयो बन्धगुणाः" काव्या० सू० ३-२-४। ಸಾಹಿತ್ಯದರ್ಪಣಕಾರರು (1) ओजः, (2) माधुर्यम् ಮತ್ತು (3) प्रसादः ಎಂದು ಮೂರು ಗುಣಗಳನ್ನು ಮಾತ್ರ ಹೇಳಿ ಇವು ರಸಧರ್ಮಗಳೆಂದೂ ಪರಂಪರಾಸಂಬಂಧದಿಂದ ಶಬ್ದಾರ್ಥಧರ್ಮಗಳಾಗುವುವೆಂದೂ ಹೇಳಿರುತ್ತಾರೆ. "रसस्याङ्गित्वमाप्तस्य धर्माः शौर्यादयो यथा। गुणाः माधुर्यमोजोऽथ प्रसाद इति ते त्रिधा। एषां शब्दगुणत्वं तु गुणवृत्त्योच्यते बुधैः" सा० द० ८-१, ९। ಇವರು, ವಾಮನರು ಹೇಳಿರುವ ಹತ್ತು ಗುಣಗಳಲ್ಲಿ ಕೆಲವು ಈ ಮೂರು ಗುಣಗಳಲ್ಲಿಯೇ ಅಂತರ್ಭಾವ ಹೊಂದುವುವೆಂದೂ ಹೇಳಿರುತ್ತಾರೆ. "श्लेषः समाधिरौदार्यं प्रसाद इति ये पुनः। गुणाश्चिरन्तनैरुक्ता ओजस्यन्तर्भवन्ति ते" सा० द० ८-९। ಇತ್ಯಾದಿ. 11. ಉತ್ಕರ್ಷ, ಶ್ರೇಷ್ಠತೆ. "श्रियमतिशयिनीं समेत्य जग्मुर्गुणमहतां महते गुणाय योगः" किरा० १०-२५। 12. ನೈಯಾಯಿಕರು ಹೇಳಿರುವ ರೂಪ ರಸ ಮೊದಲಾದ ಇಪ್ಪತ್ತನಾಲ್ಕು ಗುಣಗಳು. (1) रूपम्, (2) रसः, (3) गन्धः, (4) स्पर्शः, (5) संख्या, (6) परिमाणम्, (7) पृथक्त्वम्, (8) संयोगः, (9) विभागः, (10) परत्वम्, (11) अपरत्वम्, (12) गुरुत्वम्, (13) द्रवत्वम्, (14) स्नेहः, (15) शब्दः, (16) बुद्धिः, (17) सुखम्, (18) दुःखम्, (19) इच्छा, (20) द्वेषः, (21) प्रयत्नः, (22) धर्मः, (23) अधर्मः ಮತ್ತು (24) संस्कारः ಇವು ನ್ಯಾಯಮತದ ಗುಣಗಳು. 13. ಆವೃತ್ತಿ, ಮಾಡಿದುದನ್ನು ಮತ್ತೆಮಾಡುವುದು. 14. ಯೋಗ್ಯತೆ, ಅರ್ಹತೆ. "तद्गुणैः कर्णमागत्य चापलाय प्रचोदितः" रघु० १-९। 15. ವೀಣೆ ಪಿಟೀಲು ಮೊದಲಾದುವುಗಳ ತಂತಿ. "या बिभर्ति कलवल्लकीगुणस्वानमानमतिकालिमालया" माघ० ४-५७। 16. ಗಣಿತಶಾಸ್ತ್ರದಲ್ಲಿ ಗುಣಕ ಸಂಖ್ಯೆ. 17. ಇಂದ್ರಿಯ. 18. ಅಧಿಕ, ಹೆಚ್ಚು. 19. ಎಣಿಕೆ. 20. ತ್ಯಾಗ. 21. ಭೀಮಸೇನ. 22. "ಮೂರು" ಸಂಖ್ಯೆ. 23. ವಿಶೇಷಣ, ಮತ್ತೊಂದಕ್ಕೆ ಅಧೀನವಾದ ಪದ (ವಿಶೇಷ್ಯ). 24. ಸ್ವಭಾವ, ಧರ್ಮ. (वि०) 25. ಅಪ್ರಧಾನವಾದ, ಮುಖ್ಯವಲ್ಲದ. "गुणो मौर्व्यामप्रधाने रूपादौ सूद इन्द्रिये। त्यागशौर्यादिसत्त्वादिसन्ध्याद्यावृत्तिरज्जुषु। शुक्लादावपि वट्यां च" मेदि०। "गुणो ज्यासूदतन्तुषु। रज्जौ सत्त्वादौ सन्ध्यादौ शौर्यादौ भीम इन्द्रिये। रूपादावप्रधाने च दोषान्यस्मिन् विशेषणे" हेम०।

**गुणक ಗುಣಕ**(वि०) 1. ಗಣಕ, ಎಣಿಸುವವನು. गुणयति— गुण (आमन्त्रणे) "ण्वुल्" (३-१-१३३)। 2. ಗುಣಿಸು ವವನು, ಹೆಚ್ಚಿಸುವವನು, ವೃದ್ಧಿಪಡಿಸುವವನು. गुणयति आवर्तयति — गुण "ण्वुल्"।

**गुणकथन ಗುಣಕಥನ** (नं०) ಗುಣವರ್ಣನೆ, ಹೊಗಳಿಕೆ, ಪ್ರಶಂಸೆ. गुणानां कथनम्। "संस्पर्शः स्तनसंस्पर्शो वीक्षणं रत्नवीक्षणम्। तस्याः केलिकलालापसमयः समयः सखे"।

**गुणकर्मन् ಗುಣಕರ್ಮನ್** (नं०) 1. ಅಪ್ರಧಾನವಾದ ಕಾರ್ಯ. 2. (ವ್ಯಾಕರಣಶಾಸ್ತ್ರದಲ್ಲಿ) ಅಪ್ರಧಾನ ಕರ್ಮ. 3. ಸತ್ತ್ವರಜಸ್ತಮೋಗುಣಜನ್ಯವಾದ ಕಾರ್ಯ.

**गुणकार ಗುಣಕಾರ** (पुं०) 1. ಭೀಮಸೇನ. गुणम् अन्नरस-रूपं गुणं करोति — डु कृञ् (करणे) "अण्" (३-२-१)। ಅಜ್ಞಾತವಾಸದಲ್ಲಿದ್ದಾಗ ವಿರಾಟರಾಜನಲ್ಲಿ ಅಡಿಗೆಯವ ನಾಗಿ ಸೇರಿದ್ದರಿಂದ ಈ ಹೆಸರು. "वीररेणुर्नागबलो गुणकारो वृकोदरः" त्रिकाण्ड०। (वि०) 2. ಅಡಿಗೆ ಯವನು. 3. ಒಳ್ಳೆಯ ಭಕ್ಷ್ಯಭೋಜ್ಯಗಳನ್ನು ತಯಾರಿಸು ವವನು, ಶುಚಿರುಚಿಯಾದ ತಿಂಡಿ ಮತ್ತು ಆಹಾರವಸ್ತು ಗಳನ್ನು ತಯಾರಿಸುವವನು.

**गुणकीर्तन ಗುಣಕೀರ್ತನ** (नं०) ಗುಣವರ್ಣನೆ, ಪ್ರಶಂಸೆ, ಹೊಗಳಿಕೆ. गुणानां कीर्तनम्।

**गुणगान ಗುಣಗಾನ** (नं०) ಗುಣಕೀರ್ತನ, ಗುಣಗಳನ್ನು ಹೊಗಳುವುದು. गुणानां गानम्।

**गुणगृह्य ಗುಣಗೃಹ್ಯ** (वि०) ಗುಣಪಕ್ಷಪಾತಿ, ಗುಣದಲ್ಲಿ ಪ್ರೇಮವುಳ್ಳವನು. गुणैर्गृह्यते—ग्रह (उपादाने) "क्यप्" (३-१-११९)। "ननु वक्तृविशेषनिःस्पृहाः गुणगृह्या वचने विपश्चितः" किरा० २-५।

**गुणगौरी ಗುಣಗೌರೀ** (स्त्री०) 1. ಗುಣಗಳಿಂದ ಶುದ್ಧ ಳಾದವಳು. 2. ಗುಣಗಳಿಂದ ಪಾರ್ವತಿಗೆ ಸಮಾನ ಳಾದವಳು. गुणेन गौरी।

**गुणग्रहण ಗುಣಗ್ರಹಣ** (नं०) 1. ಗುಣಗಳನ್ನು ಗ್ರಹಿಸು ವುದು, ಒಬ್ಬನ ಗುಣಗಳನ್ನು ಸರಿಯಾಗಿ ತಿಳಿದುಕೊಳ್ಳು ವುದು. गुणानां ग्रहणम्। 2. ಹಗ್ಗವನ್ನು ಹಿಡಿದು ಕೊಳ್ಳುವುದು.

**गुणग्रहीतृ ಗುಣಗ್ರಹೀತೃ** (वि०) 1. ಗುಣಗಳನ್ನು ಸರಿ ಯಾಗಿ ತಿಳಿದುಕೊಳ್ಳುವವನು, ಒಬ್ಬನ ಗುಣಗಳನ್ನು ಸರಿಯಾಗಿ ಅರ್ಥಮಾಡಿಕೊಳ್ಳುವವನು. गुणानां ग्रहीता। 2. ಹಗ್ಗವನ್ನು ಹಿಡಿದುಕೊಳ್ಳುವವನು. स्त्रियाम् "ङीप्" (४-१-५)। **–ग्रहीत्री –ಗ್ರಹೀತ್ರೀ.**

**गुणग्राम ಗುಣಗ್ರಾಮ** (पुं०) ಗುಣಗಳ ಸಮೂಹ. गुणानां ग्रामः।

**गुणग्राहक ಗುಣಗ್ರಾಹಕ** (वि०) 1. ಗುಣಗಳನ್ನು ತಿಳಿದು ಕೊಳ್ಳುವವನು. गुणान् गृह्णाति — ग्रह (उपादाने) "ण्वुल्" (३-१-१३३)। 2. ಹಗ್ಗವನ್ನು ಹಿಡಿದು ಕೊಳ್ಳುವವನು. "गुणवन्तोऽपि सीदन्ति न गुणग्राहको यदि। सगुणोऽपि पूर्णकुम्भो यथा कूपे निमज्जति"।

**गुणग्राहिन् ಗುಣಗ್ರಾಹಿನ್** (वि०) ಗುಣವನ್ನು ಗ್ರಹಿಸುವ ಸ್ವಭಾವದವನು. गुणान् गृह्णाति — ग्रह (उपादाने) "णिनिः" (३-२-७८)। स्त्रियाम् "ङीप्" (४-१-५)। **–ग्राहिणी –ಗ್ರಾಹಿಣೀ.** "श्रीहर्षो निपुणः कविः परिषद-प्येषा गुणग्राहिणी लोके हारि च वत्सराजचरितं नाट्ये च दक्षा वयम्" रत्ना० १-५।

**गुणज्ञ ಗುಣಜ್ಞ** (वि०) ಗುಣವನ್ನು ಅರಿತಿರುವ. गुणान् जानाति — ज्ञा (अवबोधने) "कः" (३-२-३)। "भगवति कमलालये, भृशमगुणज्ञासि" मुद्रा० २। "यस्यास्ति वित्तं स नरः कुलीनः स पण्डितः स श्रुतवान् गुणज्ञः" भर्तृ० १-३२।

**गुणत्रय ಗುಣತ್ರಯ** (नं०) ಸತ್ತ್ವ ರಜಸ್ಸು ತಮಸ್ಸುಗಳೆಂಬ ಮೂರು ಗುಣಗಳು. गुणानां त्रयम्।

**गुणधर्म ಗುಣಧರ್ಮ** (पुं०) ಸ್ವಂತ ಉದ್ಯೋಗದ ಧರ್ಮ, ಹಕ್ಕಿನ ಧರ್ಮ. "यो गुणेन प्रवर्तेत गुणधर्मः स उच्यते"। ರಾಜನಿಗೆ ಪ್ರಜಾಪಾಲನ ರೂಪವಾದ ಧರ್ಮವು ಗುಣಧರ್ಮವು.

**गुणन ಗುಣನ** (नं०) 1. ಎಣಿಸುವುದು, ಎಣಿಕೆಮಾಡು ವುದು. 2. ಗುಣಿಸುವುದು. ಗುಣಾಕಾರ ಮಾಡುವುದು. गुण (आम्रेडने) "ल्युट्" (३-३-११५)।

**गुणनिका ಗುಣನಿಕಾ** (स्त्री०) 1. ಅಭ್ಯಾಸ, ಆವೃತ್ತಿ, ಪುನರುಚ್ಚಾರಣೆ. गुण (आम्रेडने) + णिच् "युच्" (३-३-१०७)। संज्ञायां "कन्"। कात्पूर्वस्यात इकारः। "हेतुः परिचयस्थैर्ये वक्तुर्गुणनिकैव सा" माघ० २-७५। 2. ನರ್ತನ, ಕುಣಿದಾಟ. 3. ಮಾಲೆ, ಸರ. "दरिद्राणां चिन्तामणिगुणनिका" आनन्दल०। 4. ಶೂನ್ಯ, ಪೂಜ್ಯ, ಸೊನ್ನೆ. "गुणनिका तु शून्याङ्के नर्तने पाठनिश्चये" त्रिकाण्ड०।

**गुणनिधि ಗುಣನಿಧಿ** (वि०) ಗುಣಗಳಿಗೆ ಆಶ್ರಯಸ್ಥಾನ ವಾದ, ಗುಣಗಳಿಗೆ ಆಧಾರವಾದ. गुणा निधीयन्तेऽस्मिन्— नि + डु धाञ् (धारणपोषणयोः) "किः" (३-३-९२)।

**गुणनी ಗುಣನೀ** (स्त्री०) ಅಭ್ಯಾಸ, ಆವೃತ್ತಿ, ಪುನರುಚ್ಚಾರಣೆ.

**गुणनीय ಗುಣನೀಯ** (पुं०) 1. ಅಭ್ಯಾಸ, ಆವೃತ್ತಿ, ಮತ್ತೆ ಮತ್ತೆ ಉಚ್ಚರಿಸುವುದು. "अभ्यासो गुणनीयः स्यात्" हारा०। (वि०) 2. ಹೆಚ್ಚಿಸಲ್ಪಡುವ, ಅಧಿಕಪಡಿಸಲ್ಪಡುವ. 3. ಹೆಚ್ಚಿಸಲು ಯೋಗ್ಯವಾದ. 4. ಹೆಚ್ಚಿಸಲು ಶಕ್ಯವಾದ. गुण (आम्रेडने) + णिच् "अनीयर्" (३-१-९६)। 5. ಎಣಿಸಲು ಯೋಗ್ಯವಾದ. 6. ಎಣಿಸಲು ಶಕ್ಯವಾದ. 7. ಎಣಿಸಲ್ಪಡುವ.

**गुणपूग ಗುಣಪೂಗ** (पुं०) ಗುಣಗಳ ಸಮೂಹ. गुणानां पूगः। "घनतां ध्रुवं नयति तेन भवद्गुणपूगपूरितमतृप्ततया" माघ० ९-६४।

**गुणप्रवृद्ध ಗುಣಪ್ರವೃದ್ಧ** (वि०) ಸತ್ತ್ವರಜಸ್ತಮೋಗುಣಗಳಿಂದ ವೃದ್ಧಿಹೊಂದಿದ. गुणैः सत्त्वरजस्तमोभिः प्रवृद्धाः। "अधश्चोर्ध्वं प्रसृतास्तस्य शाखा गुणप्रवृद्धा विषयप्रवालाः" गीता १५-२।

**गुणभृत् ಗುಣಭೃತ್** (पुं०) 1. ವಿಷ್ಣು. गुणं बिभर्ति स्वसंकल्पेन सर्वं स्वगुणभूतसर्वावस्थं कुर्वन् बिभर्ति — डु भृञ् (धारणपोषणयोः) "क्विप्" (३-२-७६)। "संकल्पात् स्वगुणीभूतसर्वावस्थमिदं जगत्। कुर्वन् बिभर्ति नित्यं यः गुणभृत् स स्मृतो बुधैः" इति निरुक्तिः। "गुणभृन्निर्गुणो महान्" वि० स०। (वि०) 2. ಒಳ್ಳೆಯ ಗುಣಶಾಲಿಯಾದ, ಉತ್ತಮ ಗುಣಗಳನ್ನು ಹೊಂದಿರುವ.

**गुणभोक्तृ ಗುಣಭೋಕ್ತೃ** (वि०) ವಸ್ತುಗಳ ಗುಣಗಳನ್ನು ಭೋಗಿಸುವವನು, ಸತ್ತ್ವಾದಿಗುಣಗಳನ್ನು ಹೊಂದಿರುವವನು, ಸತ್ತ್ವಾದಿ ಗುಣಗಳ ಭೋಗದಲ್ಲಿ ಸಮರ್ಥನಾದವನು. गुणानां भोक्ता। "असक्तं सर्वभृच्चैव निर्गुणं गुणभोक्तृ च" गीता १३-१४। ಇಲ್ಲಿ ವಸ್ತುತಃ ಸ್ವಭಾವವಾಗಿ ಗುಣಸಂಬಂಧವು ಬಾಧಿತವಾದರೂ ಅದು ಔಪಾಧಿಕವಾದುದು. ಅವನ್ನು ಹೊಂದುವ ಸಾಮರ್ಥ್ಯವು ಮಾತ್ರ ನಿತ್ಯವಾದುದು.

**गुणभ्रंश ಗುಣಭ್ರಂಶ** (पुं०) ಗುಣಗಳ ನಾಶ, ಉತ್ತಮ ಗುಣಗಳು ನಾಶಹೊಂದುವಿಕೆ. गुणानां भ्रंशः।

**गुणमय ಗುಣಮಯ** (वि०) 1. ಉತ್ತಮ ಗುಣಗಳಿಂದ ತುಂಬಿರುವ, ಗುಣಾಢ್ಯ. प्रचुरगुणः—गुण प्राचुर्ये "मयट्" (५-४-२१)। "त्रिभिर्गुणमयैर्भावैरेभिः सर्वमिदं जगत्" गीता ७-१३। "तया बद्धमनश्चक्षुः पाशैर्गुणमयैस्तदा" भा० आदि०। 2. ತಂತುಮಯವಾದ, ದಾರದಿಂದ ಕೂಡಿದ.

**गुणलुब्ध ಗುಣಲುಬ್ಧ** (वि०) ಗುಣದಲ್ಲಿ ಆಸೆಯುಳ್ಳ, ಗುಣಪಕ್ಷಪಾತಿಯಾದ. गुणेषु लुब्धः। "वृणते हि विमृश्यकारिणं गुणलुब्धाः स्वयमेव संपदः" किरा० २-३०।

**गुणवचन ಗುಣವಚನ** (पुं०) ಶುಕ್ಲಾದಿ ಗುಣವಿಶಿಷ್ಟವಾದ ವಸ್ತುಗಳನ್ನು ಹೇಳುವ ಶಬ್ದ, ಬಿಳುಪು ಕೆಂಪು ಮಾರ್ದವ ಕಾಠಿನ್ಯ ಮುಂತಾದ ಗುಣಗಳಿಂದ ಕೂಡಿದ ಪದಾರ್ಥಗಳನ್ನು ಹೇಳುವ ಶಬ್ದ. गुणमुक्तवान्—वच (परिभाषणे) भूते कर्त० "ल्युः" (३-१-१३४)। "वोतो गुणवचनात्" पा० सू० ४-१-४४। मृद्वी मृदुः। "गुणवचनब्राह्मणादिभ्यः कर्मणि च" पा० सू० ५-१-१२४। जडस्य कर्म भावो वा जाड्यम्। मूढस्य भावः कर्म वा मौढ्यम्।

**गुणवत् ಗುಣವತ್** (वि०) ಗುಣಸಂಪನ್ನನಾದ, ಸದ್ಗುಣಗಳಿಂದ ಕೂಡಿದ. गुणा अस्य सन्ति "मतुप्" (५-२-९४)। "गुणवन्तमप्ययमपास्य जनमखिलमव्यवस्थितैः" माघ० १५-१०। स्त्रियाम् "ङीप्" (४-१-६)। **—वती —ವತೀ.** "गुणवत्युपायनिलये स्थितिहेतो साधिके त्रिवर्गस्य" मुद्रा० १-५।

**गुणवर्णन ಗುಣವರ್ಣನ** (न०) ಗುಣಗಳನ್ನು ವಿವರಿಸುವುದು, ಗುಣಗಳನ್ನು ನಿರೂಪಿಸುವುದು. गुणानां वर्णनम्।

**गुणवाचक ಗುಣವಾಚಕ** (वि०) ಗುಣಗಳನ್ನು ಹೇಳುವ ಶಬ್ದ, ವಿಶೇಷಣ. गुणा उच्यन्तेऽनेन—वच (परिभाषणे) कर० "ल्युट्" (३-३-११७)।

**गुणवृक्ष(क) ಗುಣವೃಕ್ಷ(ಕ)** (पुं०) ಹಡಗಿನ ಹಗ್ಗವನ್ನು ಕಟ್ಟುವ ಕಂಬ. गुणानां नौकाबन्धनरज्जूनां वृक्षः संज्ञायां "कन्" (५-३-८७)।

**गुणवृत्ति ಗುಣವೃತ್ತಿ** (स्त्री०) ಲಕ್ಷಣಾವೃತ್ತಿ, ಸಾದೃಶ್ಯಾದಿ ಗುಣಗಳಿಂದ ಶಬ್ದದ ಅರ್ಥವನ್ನು ತಿಳಿಸುವ ಶಕ್ತಿ. गुणेन वृत्तिः।

**गुणसङ्ग ಗುಣಸಂಗ** (पुं०) ಗುಣದ ಕಾರ್ಯವಾದ ಸುಖದುಃಖಗಳಲ್ಲಿ ಆಸಕ್ತಿ. गुणेषु गुणकार्येषु सुखदुःखादिषु सङ्गः आसक्तिः। "कारणं गुणसङ्गोऽस्य सदसद्योनिजन्मसु" गीता १३-२१।

**गुणसम्पद् ಗುಣಸಂಪದ್** (स्त्री०) ಗುಣಸಮೃದ್ಧಿ, ಗುಣಾತಿಶಯ. गुणस्य सम्पद्। "गुणसम्पदा समधिगम्य परं महिमानमत्र महिते जगताम्" किरा० ५-२४।

**गुणसम्पन्न ಗುಣಸಂಪನ್ನ** (वि०) ಗುಣಗಳಿಂದ ಕೂಡಿದ, ಗುಣಶಾಲಿಯಾದ. गुणैः सम्पन्नः।

**गुणसागर ಗುಣಸಾಗರ** (पुं०) 1. ಚತುರ್ಮುಖ ಬ್ರಹ್ಮ. गुणानां सागर इवाधारः। (वि०) 2. ಗುಣಗಳಿಗೆ ಆಧಾರವಾದ.

**गुणसिन्धु ಗುಣಸಿಂಧು** (वि०) ಗುಣಗಳಿಗೆ ಸಮುದ್ರದಂತಿರುವ, ಗುಣಗಳಿಗೆ ಆಧಾರವಾದ. गुणानां सिन्धुरिव। "गुणसिन्धुरसौ गुणातिवर्ती गतिरन्तस्स्थितिरागमैकगम्यः" याद० १५-५।

**गुणहीन ಗುಣಹೀನ** (वि०) ಗುಣವಿಲ್ಲದವನು, ಅಯೋಗ್ಯ, ಅಸಭ್ಯ. गुणैः हीनः।

**गुणा ಗುಣಾ** (स्त्री०) ಗರುಕೆಹುಲ್ಲು, गुणोऽस्त्यस्याः "अच्" (५-२-१२७)।

**गुणाकर ಗುಣಾಕರ** (वि०) ಗುಣಗಳ ಗಣಿ, ಗುಣಗಳಿಗೆ ವಾಸಸ್ಥಾನ. गुणानामाकरः।

**गुणाढ्य ಗುಣಾಢ್ಯ** (पुं०) 1. "ಬೃಹತ್‌ಕಥಾ" ಗ್ರಂಥವನ್ನು ರಚಿಸಿದ ಒಬ್ಬ ಪ್ರಸಿದ್ಧ ಕವಿ. (वि०) 2. ಗುಣಗಳಿಂದ ತುಂಬಿರುವ. गुणैराढ्यः।

**गुणातिवर्तिन् ಗುಣಾತಿವರ್ತಿನ್** (पुं०) ಸತ್ತ್ವರಜಸ್ತಮೋರೂಪವಾದ ಮಾಯಾಗುಣಗಳನ್ನು ಮೀರಿದವನು, ಪರಮಾತ್ಮ. गुणान् मायागुणान् अतिवर्तते — अति+वृतु (वर्तने) "णिनिः" (३-२-७८)। "गुणसिन्धुरसौ गुणातिवर्ती" याद० १५-५।

**गुणातिशय ಗುಣಾತಿಶಯ** (पुं०) ಹೆಚ್ಚು ಗುಣಗಳು, ಅಧಿಕವಾದ ಉತ್ತಮ ಗುಣಗಳು. गुणानामतिशयः।

**गुणातीत ಗುಣಾತೀತ** (पुं०) 1. ಪರಮಾತ್ಮ. गुणान् सत्त्वादीन् मायागुणान् अतीतः। (वि०) 2. ದೇಹಾಕಾರವಾಗಿ ಪರಿಣಾಮಹೊಂದಿದ ಪ್ರಕೃತಿಯಿಂದ ಉಂಟಾದ ಈ ಸತ್ತ್ವಾದಿ ಗುಣಗಳನ್ನು ದಾಟಿದ ಜೀವಾತ್ಮ, ಸ್ಥಿತಪ್ರಜ್ಞ. ಜೀವನು ಸತ್ತ್ವರಜಸ್ತಮೋಗುಣಗಳನ್ನು ಮೀರಿ ಜನ್ಮ ಮೃತ್ಯು ಮುಪ್ಪು ಇವುಗಳ ದುಃಖದಿಂದ ಬಿಡಲ್ಪಟ್ಟವನಾಗಿ ಜ್ಞಾನೈಕಸ್ವರೂಪನಾದ ಪರಮಾತ್ಮನನ್ನು ಸಾಕ್ಷಾತ್ಕರಿಸಿ ಅನುಭವಿಸುತ್ತಾನೆ. "गुणानेतानतीत्य त्रीन् देही देहसमुद्भवान्। जन्ममृत्युजरादुःखैः विमुक्तोऽमृतमश्नुते" गीता १४-२०। "सर्वारम्भपरित्यागी गुणातीतः स उच्यते" गीता १४-२५।

**गुणाधान ಗುಣಾಧಾನ** (न०) ಅಧಿಕವಾದ ಗುಣಗಳನ್ನು ಸೇರಿಸುವದು, ಬೇರೆ ಗುಣಗಳನ್ನು ಹೊಂದಿಸುವುದು. गुणस्य गुणान्तरस्याधानम्।

**गुणाधार ಗುಣಾಧಾರ** (वि०) ಗುಣಗಳಿಗೆ ಆಧಾರವಾದ, ಗುಣಗಳಿಗೆ ವಾಸಸ್ಥಾನವಾದ. गुणानामाधारः।

**गुणानुराग ಗುಣಾನುರಾಗ** (पुं०) ಗುಣದಲ್ಲಿ ಪ್ರೀತಿ, ಇತರರ ಗುಣದ ವಿಷಯದಲ್ಲಿ ವಿಶ್ವಾಸ. गुणेष्वनुरागः। "गुणानुरागादिव सख्यमीयिवान्न बाधतेऽस्य त्रिगुणः परस्परम्" किरा० १-११।

**गुणानुरोध ಗುಣಾನುರೋಧ** (पुं०) ಗುಣಕ್ಕೆ ಅನುಸಾರ, ಗುಣಗಳಿಗೆ ಅನುರೂಪವಾಗಿರುವಿಕೆ. गुणानामनुरोधः।

**गुणान्तर ಗುಣಾಂತರ** (न०) ಬೇರೆ ಗುಣ. अन्यो गुणः। "पात्रविशेषे न्यस्तं गुणान्तरं व्रजति शिल्पमाधातुः" माल० १-६।

**गुणान्वित ಗುಣಾನ್ವಿತ** (वि०) 1. ಸದ್ಗುಣಗಳಿಂದ ಕೂಡಿದ, ಗುಣಶೀಲನಾದ. 2. ವಿವೇಕ ವೈರಾಗ್ಯ ಮೊದಲಾದ ಮೋಕ್ಷೋಪಾಯಗಳಿಂದ ಕೂಡಿದ. "प्रक्षीणदोषाय गुणान्विताय" वेदान्तसा०।

**गुणाभिलाषिन् ಗುಣಾಭಿಲಾಷಿನ್** (वि०) ಗುಣದಲ್ಲಿ ಆಸೆಯುಳ್ಳ, ಗುಣವನ್ನು ಅಪೇಕ್ಷಿಸುವ. गुणमभिलषति— अभि + लष (कान्तौ) "णिनिः" (३-१-१३४)। स्त्रियाम् "ङीप्" (४-१-५)। **—लाषिणी —ಲಾಷಿಣೀ.** "अगच्छदंशेन गुणाभिलाषिणी नवावतारं कमलादिवोत्पलम्" रघु० ३-३६।

**गुणालङ्कृत ಗುಣಾಲಂಕೃತ** (वि०) ಸದ್ಗುಣಗಳಿಂದ ಭೂಷಿತನಾದ, ಒಳ್ಳೆಯ ಗುಣಗಳಿಂದ ಅಲಂಕರಿಸಲ್ಪಟ್ಟ. गुणैरलङ्कृतः।

**गुणाश्रय ಗುಣಾಶ್ರಯ** (वि०) ಗುಣಗಳಿಗೆ ಆಧಾರವಾದ, ಗುಣಗಳಿಗೆ ವಾಸಸ್ಥಾನವಾದ. गुणानामाश्रयः।

**गुणिका ಗುಣಿಕಾ** (स्त्री०) ಊತ, ಬಾವು, ಗೆಡ್ಡೆ.

**गुणित ಗುಣಿತ** (वि०) 1. ಗುಣಿಸಲ್ಪಟ್ಟ, ಹೆಚ್ಚಿಸಲ್ಪಟ್ಟ. गुण (आमन्त्रणे) "क्तः" (३-२-१०२)। "अनधिगतमनोरथस्य पूर्वं शतगुणितेव गता मम त्रियामा" विक्रं० ३-२२। 2. ದೊಡ್ಡದಾಗಿ ಮಾಡಲ್ಪಟ್ಟ, ಬೆಳೆಸಲ್ಪಟ್ಟ. "पश्चादावां विरहगुणितं तं तमात्माभिलाषं निर्वेक्ष्यावः परिणतशरच्चन्द्रिकासु क्षपासु" मेघ० २-४७। 3. ಎಣಿಸಲ್ಪಟ್ಟ, ಲೆಕ್ಕಮಾಡಲ್ಪಟ್ಟ.

**गुणितव्य ಗುಣಿತವ್ಯ** (वि०) "गुणनीय" ಪದದ ಅರ್ಥ, गुण "तव्यः" (३-१-९६)।

**गुणिन् ಗುಣಿನ್** (पुं०) 1. ಧನುಸ್ಸು, ಬಿಲ್ಲು. "स्थावरं तु धनुर्गुणी" त्रिकाण्ड०। (वि०) 2. ಒಳ್ಳೆಯ ಗುಣ

ಗಳಿಂದ ಕೂಡಿದ. गुणा अस्य सन्ति "इनिः"(५-२-११५)। "नागुणी गुणिनं वेत्ति गुणी गुणिषु मत्सरी। गुणी च गुणरागी च विरलः सरलो जनः"। 3. ರಜ್ಜುಸಹಿತವಾದ. 4. ತಂತುಸಹಿತವಾದ. स्त्रियाम् "ङीप्" (४-१-५)। **गुणिनी ಗುಣಿನೀ.**

**गुणीभाव ಗುಣೀಭಾವ**(पुं०) ಅಪ್ರಧಾನವಾಗಿ ಆಗುವುದು. "यत्र वस्त्वलङ्काररसादिरूपव्यङ्ग्यानां रसाभ्यन्तरे गुणीभावः तत्र प्रधानकृत एव व्यवहारः" सा० द०।

**गुणीभूत ಗುಣೀಭೂತ** (वि०) ಮುಖ್ಯವಲ್ಲದ, ಅಪ್ರಧಾನವಾದ, ಅಪ್ರಧಾನವಾಗಿ ಮಾಡಲ್ಪಟ್ಟ. अगुणः गुणः भूतः — गुण + भू "च्विः" (५-४-५०)। ततः "क्तः" (३-२-१०२)। "सर्वैरपि गुणैर्युक्तो निर्वीर्यः किं करिष्यति। गुणीभूता गुणाः सर्वे तिष्ठन्ति हि पराक्रमे" भा० सभा० १६-११।

**गुणीभूतव्यङ्ग्य ಗುಣೀಭೂತವ್ಯಂಗ್ಯ**(न०)ಗುಣೀಭೂತ ವ್ಯಂಗ್ಯಕಾವ್ಯ. ವ್ಯಂಗ್ಯಾರ್ಥವು ಅಪ್ರಧಾನವಾಗಿಯೇ ಇದ್ದು ಚಮತ್ಕಾರಾಧಾಯಕವಾಗಿರುವಲ್ಲಿ ಅದು ಗುಣೀಭೂತ ವ್ಯಂಗ್ಯಕಾವ್ಯ. "यत्र व्यङ्ग्यमप्रधानमेव सच्चमत्कारकारणं तद्द्वितीयम्" रसगं०। उदा: "राघवविरहज्वालासन्तापितसह्यशैलशिखरेषु। शिशिरे सुखं शयानाः कपयः कुप्यन्ति पवनतनयाय"। ಇಲ್ಲಿ ಆಂಜನೇಯನು ಜಾನಕಿಯ ಕುಶಲವನ್ನು ತಿಳಿಸಿದುದರಿಂದ ಶ್ರೀರಾಮನ ವಿರಹತಾಪವೆಲ್ಲವೂ ಕಡಮೆಯಾಯಿತೆಂಬ ವ್ಯಂಗ್ಯಾರ್ಥವು, ಶಿಶಿರಋತುವಿನಲ್ಲಿ ಶೈತ್ಯದಿಂದ ಕೂಡಿದ ಸಹ್ಯಾದ್ರಿ ಶಿಖರದಲ್ಲಿ ಶ್ರೀರಾಮನ ವಿರಹಜ್ವಾಲೆಯ ಶಾಖದಿಂದ ಸುಖವಾಗಿ ಮಲಗಿದ್ದ ಕಪಿಗಳು ಆಂಜನೇಯನ ವಿಷಯದಲ್ಲಿ ಕೋಪಗೊಂಡವು ಎಂಬ ವಾಚ್ಯಾರ್ಥಕ್ಕೆ ಗುಣೀಭೂತವಾಗಿ ಚಮತ್ಕಾರಾಧಾಯಕವಾಗಿರುವುದರಿಂದ ಇಲ್ಲಿ **ಗುಣೀಭೂತವ್ಯಂಗ್ಯಕಾವ್ಯ.** "अपरं तु गुणीभूतव्यङ्ग्यं वाच्यादनुत्तमे व्यङ्ग्ये" सा० द०।

**गुणोत्कर्ष ಗುಣೋತ್ಕರ್ಷ**(पुं०)1. ಉತ್ಕೃಷ್ಟವಾದ ಗುಣಗಳು. गुणानामुत्कर्षः। "मुखादित्वं निवर्त्यैव पद्मादित्वेन रूपणात्। उद्भावितगुणोत्कर्षं तत्त्वापह्नवरूपकम्" काव्या० २-९५। "भूयस्तव गुणोत्कर्षमेते विद्ये करिष्यतः" रामा०।

**गुणोदधि ಗುಣೋದಧಿ** (वि०) ಗುಣಗಳಿಗೆ ಸಮುದ್ರದಂತಿರುವ, ಗುಣಗಳಿಗೆ ಆಶ್ರಯವಾದ. गुणानामुदधिः। "गुणोदधिस्त्वं गुणकर्बुरात्मना तिरस्करिण्या पिहितात्मदृष्टिभिः" याद० १४-३७।

**गुणोपेत ಗುಣೋಪೇತ** (वि०) ಗುಣಗಳಿಂದ ಕೂಡಿದ. गुणैरुपेतः। "पुत्रमेवंगुणोपेतं चक्रवर्तिनमाप्नुहि" शाकुं० १-११।

**गुण्ठन ಗುಂಠನ** (न०) 1. ಮುಚ್ಚುವುದು, ಮರೆಮಾಡುವುದು. गुठि (वेष्टने) भावे "ल्युट्" (३-३-११५)। 2. ಬಳಿಯುವುದು, ಹಚ್ಚುವುದು. "अग्निहोत्रं त्रयो वेदास्त्रिदण्डं भस्मगुण्ठनम्" प्रबोध० २-२६। 3. ಸುತ್ತುವರಿಯುವುದು.

**गुण्ठित ಗುಂಠಿತ** (वि०) 1. ಧೂಳಿನಿಂದ ಮುಚ್ಚಲ್ಪಟ್ಟ. 2. ಬಳಿಯಲ್ಪಟ್ಟ. 3. ಸುತ್ತುವರಿಯಲ್ಪಟ್ಟ. गुठि (वेष्टने) कर्म० "क्तः" (३-२-१०२)।

**गुण्ड ಗುಂಡ** (पुं०)1. ಅರೆಯುವುದು, ಪುಡಿಮಾಡುವುದು. गुडि (वेष्टने) + णिच् भावे "अच्" (३-३-५६)। 2. ಕಬ್ಬು. (वि०)3. ಅರೆಯಲ್ಪಟ್ಟ, ಪುಡಿಮಾಡಲ್ಪಟ್ಟ.

**गुण्डक ಗುಂಡಕ** (पुं०)1. ಧೂಳು. 2. ಚೂರ್ಣ, ಪುಡಿ. 3. ಎಣ್ಣೆಯ ಪಾತ್ರೆ. 4. ಮಧುರಧ್ವನಿ, ಇಂಪಾದ ಮಾತು. (वि०)5. ಮಲಿನವಾದ, ಕೊಳೆಯಾದ. गुडि (वेष्टने) "ण्वुल्" (३-१-१३३)। "गुण्डको मलिने धूली कलोक्तिस्नेहपात्रयोः" मेदि०।

**गुण्डन ಗುಂಡನ** (न०) "गुण्ठन" ಪದದ ಅರ್ಥ.

**गुण्डित ಗುಂಡಿತ** (वि०) 1. ಅರೆಯಲ್ಪಟ್ಟ, ಪುಡಿಮಾಡಲ್ಪಟ್ಟ. 2. ಧೂಳಿನಿಂದ ಮುಚ್ಚಲ್ಪಟ್ಟ. 3. ಬಳಿಯಲ್ಪಟ್ಟ. गुडि (वेष्टने) "क्तः" (३-२-१०२)।

**गुण्य ಗುಣ್ಯ**(वि०)1. ಗುಣಿಸಲು ಯೋಗ್ಯವಾದ. 2. ಎಣಿಸಲು ಯೋಗ್ಯವಾದ. 3. ಗುಣಿಸಲ್ಪಡುವ. 4. ಎಣಿಸಲ್ಪಡುವ. गुण(आमन्त्रणे) + णिच् "यत्"(३-१-९७)। (वि०) 4. ಉತ್ತಮ ಗುಣಗಳಿಂದ ಕೂಡಿದ. प्रशस्ता गुणा अस्य सन्ति "यप्" (वा० ५-२-१२०)। "दित्सया तदपि पार्थिवोऽर्थिनं गुण्यगुण्य इति न व्यजीगणत्" माघ० १४-४७।

**गुत्स ಗುತ್ಸ** (पुं०)1. ಗೊಂಚಲು. 2. ಹುಲ್ಲು ಮೊದಲಾದುವುಗಳ ಹೊರೆ. 3. ಹಾರದ ಒಂದು ಭೇದ. 4. ಮಾಚಿಪತ್ರೆ. 5. ಹೂವಿನ ಗೊಂಚಲು. गुध (परिवेष्टने) "सः" (उ० ३-६८)। "गुत्सः स्यात् स्तबके स्तम्बे हारभिद्ग्रन्थिपर्णयोः" मेदि०।

**गुत्सक ಗುತ್ಸಕ** (पुं०) 1. ಗೊಂಚಲು. 2. ಹೂವಿನ ಗೊಂಚಲು. 3. ಚಾಮರ. 4. ಪುಸ್ತಕದ ಭಾಗ, ಅಧ್ಯಾಯ.

**गुत्सार्ध ಗುತ್ಸಾರ್ಧ** (पुं०) ಇಪ್ಪತ್ತುನಾಲ್ಕು ಎಳೆಗಳ ಮುತ್ತಿನ ಹಾರ. "गुत्सगुत्सार्धगोस्तना:" अम०।

**गुद – क्रीडायाम्** (भ्वा० आत्म० अक० से०)। गोदते। जुगुदे। अगोदिष्ट। ಕ್ರೀಡಿಸು, ಆಟವಾಡು.

**गुद ಗುದ** (न०) ಗುದಸ್ಥಾನ, ಮಲದ್ವಾರ, ಅಪಾನದ್ವಾರ. गोदते – गुद (क्रीडायाम्) "क:" (३-१-१३५)।

**गुदकील ಗುದಕೀಲ** (पुं०) ಅರ್ಶೋರೋಗ, ಮೂಲವ್ಯಾಧಿ. गुदे कील इव। "स्थूलकन्दस्तु नात्युष्ण: शूरणो गुदकीलहा" सुश्रुत० सूत्र० ४६-३०७।

**गुदग्रह ಗುದಗ್ರಹ**(पुं०)ಮಲಬದ್ಧತೆ, ಹೊಟ್ಟೆಕಟ್ಟುವುದು. गुदं तद्व्यापारं गृह्णाति – ग्रह (उपादाने) "अच्" (३-१-१३४)।

**गुदपाक ಗುದಪಾಕ** (पुं०) ಅತಿಸಾರ ಆಮಶಂಕೆ ಮೊದಲಾದ ರೋಗಗಳಿಂದ ಮಲದ್ವಾರದಲ್ಲಿ ಉಂಟಾಗುವ ಉರಿತ. गुदस्य पाक:।

**गुदभ्रंश ಗುದಭ್ರಂಶ** (पुं०) ಗುದವು ಜಾರಿಬೀಳುವುದು, ಆಸನದ್ವಾರದ ಮಾಂಸಖಂಡವು ಕೆಳಕ್ಕೆ ಜಾರುವುದು. गुदस्य भ्रंश:। ದೇಹಬಲವಿಲ್ಲದವನಿಗೆ ಅತಿಸಾರ ಆಮಶಂಕೆ ಹೆಚ್ಚು ಭಾರ ಹೊರುವುದು ಇವುಗಳಿಂದ ಗುದಭ್ರಂಶವುಂಟಾಗುವುದು. "प्रवाहणातिसाराभ्यां निर्गच्छति गुदं बहि:। रूक्षदुर्बलदेहस्य गुदभ्रंशं तमादिशेत्"। "गुदभ्रंशमिमं कृच्छ्रं पानाभ्यङ्गात् प्रसाधयेत्" सुश्रुत०। ಬಹಳ ದಿನಗಳ ಅತಿಸಾರರೋಗವುಳ್ಳವರಿಗೆ ಗುದವು ದುರ್ಬಲವಾಗಿ ಗುದಭ್ರಂಶವಾಗುವುದು. ಗುದವು ದುರ್ಬಲವಾಗಿರುವಾಗ ಪಿಚಕಾರಿಯಿಂದ ಎಣ್ಣೆಯನ್ನು ಬಿಡಬೇಕು. "प्रायेण गुददौर्बल्यं दीर्घकालातिसारिणाम्। भवेत्तस्माद्धितं तेषां गुदे तैलावचारणम्" सुश्रुत० उत्तरत० ४०-११२।

**गुदरोग ಗುದರೋಗ** (पुं०) ಮಲದ್ವಾರದಲ್ಲಿ ಉಂಟಾಗುವ ವ್ಯಾಧಿ. ಇದು ಪಾಪಕಾರ್ಯದಿಂದ ಉಂಟಾಗುವ ರೋಗ. "सुरालये जले वापि शकृन्मूत्रं करोति य:। गुदरोगो भवेत्तस्य पापरूप: सुदारुण:"।

**गुदस्तम्भ ಗುದಸ್ತಂಭ** (पुं०) ಮಲದ್ವಾರದ ವ್ಯಾಪಾರವನ್ನು ತಡೆಯುವುದು. ಮಲಬದ್ಧತೆ.

**गुदाङ्कुर ಗುದಾಂಕುರ** (पुं०) ಅರ್ಶೋರೋಗ, ಮೂಲವ್ಯಾಧಿ. गुदे अङ्कुर इव।

**गुध – परिवेष्टने** (दिवा० पर० सक० से०)। गुध्यति। जुगोध। गोधिता। गोधिष्यति। गुध्यतु। अगुध्यत्। गुध्येत्। ಇತ್ಯಾದಿ. ಸುತ್ತುಗಟ್ಟು, ಮರೆಮಾಡು, ಮುಚ್ಚು.

**कर्मणि** :—गुध्यते। जुगुधे। गोधिता। ಇತ್ಯಾದಿ.

**गुधित ಗುಧಿತ** (वि०) ಸುತ್ತುಗಟ್ಟಲ್ಪಟ್ಟ, ಮುಚ್ಚಲ್ಪಟ್ಟ. गुध (परिवेष्टने) कर्म० "क्त:" (३-२-१०२)।

**गुधेर ಗುಧೇರ** (वि०) ರಕ್ಷಕ, ಕಾಪಾಡುವವನು. गुध (परिवेष्टने) "एरक्" (उ० १-६१)।

**गुन्दल ಗುಂದಲ** (पुं०) ಮದ್ದಲೆಯ ಶಬ್ದ. गुमित्यव्यक्तशब्देन दल्यते – दल (विशरणे) णिच् "अच्" (३-३-५६)। "प्रक्वाण: प्रक्वणस्तन्त्र्या: मर्दलस्य तु गुन्दल:" अभि० चि०।

**गुन्द्र ಗುಂದ್ರ** (पुं०) 1. ಜಾಗೆ ಬಿದಿರು, ನಾಣಿಲ ಕಡ್ಡಿ. गुणान् राति – रा (दाने) "क:" (३-२-४)। पृषो०। "अथ तेजन:। गुन्द्रो मुञ्ज: शर:" अभि० चि०। (स्त्री०) **गुन्द्रा ಗುಂದ್ರಾ**. 2. ನವಣೆ. 3. ಭದ್ರಮುಸ್ತೆ, ಕೆಂಪು ಕೊನ್ನಾರಿ. 4. ಕಾಡು ಗೋಧಿ.

**गुन्द्रला ಗುಂದ್ರಲಾ** (स्त्री०) ಚಕೋರ ಪಕ್ಷಿ.

**गुपू – रक्षणे** (भ्वा० पर० सक० वे०)। गोपायति। गोपायां चकार, –बभूव, –आस। आयप्रत्ययाभावे जुगोप। गोपायिता, गोपिता, गोप्ता। गोपायिष्यति, गोपिष्यति, गोप्स्यति। गोपायतु। अगोपायत्। गोपायेत्। गोपाय्यात्, गुप्यात्। अगोपायीत्, अगोपीत्, अगौप्सीत्। अगोपायिष्यत्, अगोपिष्यत्, अगोप्स्यत्। ರಕ್ಷಿಸು, ಕಾಪಾಡು.

**कर्मणि** :—गोपाय्यते, गुप्यते। गोपायां चक्रे, –बभूवे, आसे। जुगुपे। गोपायिता, गोपिता, गोप्ता। गोपायिष्यते, गोपिष्यते, गोप्स्यते। गोपाय्यताम्, गुप्यताम्। ಇತ್ಯಾದಿ.

**णिचि** :—गोपाययति, –ते। गोपयति, –ते। गोपाययां चकार, –चक्रे, –बभूव, –आस। गोपयां चकार, –चक्रे, –बभूव, –आस। गोपाययिता, गोपयिता। गोपाययिष्यति, –ते। गोपयिष्यति, –ते। गोपाययतु, –ताम्। गोपयतु, –ताम्। ಇತ್ಯಾದಿ.

**गुप् ಗುಪ್** (वि०) ರಕ್ಷಕ, ಕಾಪಾಡುವವನು. गुपू (रक्षणे) "क्विप्" (३-२-७६)। "नावा स्मर: किं हरभीतिगुप् ते पयोधरे" नैष० ६-६६।

**गुपिल ಗುಪಿಲ** (पुं०) 1. ರಾಜ, ದೊರೆ. 2. ರಕ್ಷಕ, ಕಾಪಾಡುವವನು. गुपू (रक्षणे) "इलच्" (उ० १-५७)। गुपिलो राजा सि० कौ०।

**गुप्त ಗುಪ್ತ** (पुं०) 1. ವಿಷ್ಣು. "अन्यैर्दुरवबोधो य: गुप्त इत्यभिधीयते" इति निरुक्ति:। "गुह्यो गभीरो गहनो

गुप्तश्चक्रादाघरः" वि० स० । 2. ಯುದ್ಧ. 3. ವೈಶ್ಯರ ಹೆಸರಿಗೆ ಸೇರಿಸುವ ಒಂದು ಉಪಪದ. "गुप्तदासात्मकं नाम प्रशस्तं गुप्तशूद्रयोः"। (स्त्री०) -प्ता -ಪ್ತಾ. 4. ನಸುಗುನ್ನಿಗಿಡ. 5. ರಕ್ಷಿಸಲ್ಪಟ್ಟ ಹೆಂಗಸು. "ब्राह्मणीं यद्यगुप्तां तु गच्छेतां वैश्यपार्थिवौ" मनु० ८-३७६। (न०) 6. ರಕ್ಷಣೆ. गुपू (रक्षणे) भावे "क्तः" (३-३-११४)। (वि०)7. ರಕ್ಷಿಸಲ್ಪಟ್ಟ, ಕಾಪಾಡಲ್ಪಟ್ಟ. 8. ಗೂಢವಾದ, ರಹಸ್ಯವಾದ. "स गुप्तमूलप्रत्यन्तः शुद्धपार्ष्णिरयान्वितः" रघु० ४-२६। (अव्य०) 9. ರಹಸ್ಯವಾಗಿ.

**गुप्तकथा ಗುಪ್ತಕಥಾ** (स्त्री०) ರಹಸ್ಯ ಸಮಾಚಾರ, ಗುಟ್ಟಾದ ಸುದ್ದಿ.

**गुप्तगति ಗುಪ್ತಗತಿ** (पुं०)1. ಗೂಢಚಾರ. गुप्ता गतिर्यस्य। (वि०) 2. ರಹಸ್ಯವಾದ ಸಂಚಾರವುಳ್ಳ.

**गुप्तचर ಗುಪ್ತಚರ** (पुं०) 1. ಗೂಢಚಾರ, ರಹಸ್ಯವಾಗಿ ಸಂಚರಿಸುವ ಸೇವಕ, ದೂತ. 2. ಬಲರಾಮ. "संवर्तको गुप्तचरः रुक्मिदार्यैककुण्डलः" त्रिकाण्ड०।

**गुप्ति ಗುಪ್ತಿ** (स्त्री०) 1. ರಕ್ಷಣೆ, ಕಾಪಾಡುವುದು. गुपू (रक्षणे) भावे "क्तिन्" (३-३-९४)। "सर्वस्यास्य च सर्गस्य गुप्त्यर्थं स महाद्युतिः" मनु० १-८७। 2. ಮರೆಮಾಚುವುದು. ಮುಚ್ಚಿಕೊಳ್ಳುವುದು, ಒಳಗೇ ಅಡಗಿಸಿಕೊಳ್ಳುವುದು. "भयगौरवलज्जादेर्हर्षाद्याकारगुप्तिरवहित्था" सा० द० ३-१५८। 3. ದುರ್ಗವನ್ನು ಕಟ್ಟಿ ಮರೆಮಾಡುವುದು, ಕೋಟೆಯಿಂದ ಮುಚ್ಚುವುದು. "बृहन्मणिशिलासालं गुप्तावपि मनोहरम्" कुमा० ६-३८। 4. ರಹಸ್ಯವಾಗಿಡುವಿಕೆ. 5. ಕಾರಾಗಾರ, ಬಂದೀಖಾನೆ. "दलितदलकपाटः षट्पदानां सरोजे सरभस इव गुप्तिस्फोटमर्कः करोति" माघ० ११-६०। 6. ಹಡಗಿನ ಕೆಳಗಿನ ಅಂತಸ್ತು. 7. ಭೂಮಿಯೊಳಗಿನ ಹಳ್ಳ, ಕಸದ ಗುಂಡಿ. 8. ಯೋಗದ ಅಂಗವಾದ ಯಮ. "गुप्तिर्यमे भूगर्तरक्षयोः। कारायाम्" हेम०। 9. ಹಳ್ಳಕ್ಕಾಗಿ ಭೂಮಿಯನ್ನು ತೋಡುವುದು. 10. ಹಡಗಿನ ಬಿರುಕು. 11. ಒಂದು ಮಂತ್ರ ಸಂಸ್ಕಾರ.

**गुम्फ ಗುಂಫ** (पुं०)1. ಮಾಲೆಯ ರಚನೆ, ಹೂವನ್ನು ಕಟ್ಟುವುದು. 2. ಜೋಡಿಸುವುದು, ಒಟ್ಟಿಗೆ ಸೇರಿಸುವುದು. गुम्फ (ग्रन्थे) भावे "घञ्" (३-३-१८)। 3. ಅಂಗದ, ತೋಳಿನ ಒಂದು ಆಭರಣ. "गुम्फस्तु गुम्फने बाहोरलंकारे च कीर्त्यते" मेदि०। 4. ಮೀಸೆ, ಗಲ್ಲದ ಕೂದಲು.

**गुम्फत् ಗುಂಫತ್** (वि०) 1. ಹೂವುಗಳನ್ನು ಕಟ್ಟುತ್ತಿರುವ, ಹೂವುಗಳನ್ನು ಪೋಣಿಸುತ್ತಿರುವ. गुम्फ (ग्रन्थे) "शतृ" (३-२-१२४)। 2. ವಾಕ್ಯಗಳನ್ನು ಜೋಡಿಸುತ್ತಿರುವ.

**गुम्फन ಗುಂಫನ** (न०) 1. ಶಬ್ದಾರ್ಥಗಳ ಜೋಡಣೆ. 2. ಮಾಲಾರಚನೆ. गुम्फ (ग्रन्थे) भावे "ल्युट्" (३-३-११५)।

**गुम्फना ಗುಂಫನಾ** (स्त्री०) 1. ವಾಕ್ಯಗಳಲ್ಲಿ ಶಬ್ದಾರ್ಥಗಳ ಜೋಡಣೆ, ರಮಣೀಯವಾದ ವಾಕ್ಯರಚನೆ. गुम्फ (ग्रन्थे) + णिच् "युच्" (३-३-१०७)। "वाक्ये शब्दार्थयोः सम्यग्रचना गुम्फना स्मृता"। 2. ಮಾಲೆ ಮೊದಲಾದುವುಗಳ ರಚನೆ.

**गुम्फित ಗುಂಫಿತ** (वि०) ಜೋಡಿಸಲ್ಪಟ್ಟ, ಒಟ್ಟಿಗೆ ಸೇರಿಸಲ್ಪಟ್ಟ. गुम्फ (ग्रन्थे) "क्तः" (३-२-१०२)।

**गुम्फितृ ಗುಂಫಿತೃ** (वि०)1. ಜೋಡಿಸುವ, ಒಟ್ಟಿಗೆ ಸೇರಿಸುವ. 2. ಹೂವುಗಳನ್ನು ಪೋಣಿಸುವ. गुम्फ (ग्रन्थे) "तृच्" (३-१-१३३)। स्त्रियाम् "ङीप्" (४-१-५)। -त्री -ತ್ರೀ.

**गुरी–उद्यमने** (तुदा० आत्म० सक० से०)। गुरते। जुगुरे। गुरिता। गुरिष्यते। गुरताम्। अगुरत। ಇತ್ಯಾದಿ. ಮೇಲಕ್ಕೆ ಎತ್ತು.

**कर्मणि:**—गूर्यते। जुगुरे। गुरिता। गूर्यताम्। ಇತ್ಯಾದಿ.

**कृत्सु:**—गुरितव्यम्। गुरणीयम्। गोर्यम्। गूर्णः। गूर्णवान्। गुरमाणः। गुरितुम्। गूर्णम्, गुरणम्। गुरित्वा। उद्गूर्य।

**गुरण ಗುರಣ** (न०) ಮೇಲಕ್ಕೆ ಎತ್ತುವುದು. गुरी (उद्यमने) "ल्युट्" (३-३-११५)।

**गुरमाण ಗುರಮಾಣ** (वि०) ಮೇಲಕ್ಕೆ ಎತ್ತುತ್ತಿರುವ. गुरी (उद्यमने) कर्त० "शानच्" (३-२-१२४)। स्त्रियाम् -माणा -ಮಾಣಾ.

**गुरु ಗುರು** (पुं०) 1. ಬೃಹಸ್ಪತಿ, ದೇವತೆಗಳ ಆಚಾರ್ಯ. गृणाति उपदिशति — गॄ (शब्दे) "कुः" उकार अन्तादेशश्च (उ० १-२४)। "गुरुकाव्यानुगां बिभ्रच्चान्द्रीमभिनभः श्रियम्" माघ० २-२। 2. ಆಚಾರ್ಯ, ಉಪಾಧ್ಯಾಯ. "गुरोः सदारस्य निपीड्य पादौ समाप्य सान्ध्यं च विधिं दिलीपः" रघु० २-२३। 3. ತಂದೆ. "स्यान्निषेकादिकृद्गुरुः" अम०। "न केवलं तद्गुरुरेकपार्थिवः क्षितावभूदेकधनुर्धरोऽपि सः" रघु० ३-३१।

4. ಜ್ಯೇಷ್ಠ ಸಹೋದರ. "उपाध्यायः पिता ज्येष्ठभ्राता चैव महीपतिः। मातुलः श्वशुरस्त्राता मातामहपितामहौ। वर्णज्येष्ठः पितृव्यश्च पुंस्येते गुरवः स्मृताः"। 5. ಪೂಜ್ಯ, ಗೌರವಕ್ಕೆ ಅರ್ಹನಾದವನು. "प्रत्यग्रहीदग्रजशासनं तदाज्ञा गुरूणां ह्यविचारणीया" रघु० १४-४६। 6. ಉಪದೇಶಕ, ಆತ್ಮವಿದ್ಯೋಪದೇಶಕ. "तौ गुरुर्गुरुपत्नी च प्रीत्या प्रतिननन्दतुः" रघु० १-५७। 7. ದ್ರೋಣಾಚಾರ್ಯ. 8. ಸಂಪ್ರದಾಯ ಪ್ರವರ್ತಕ. 9. ಪುರೋಹಿತ. 10. ಪರಮಾತ್ಮ. 11. ಗುರುಸಂಜ್ಞೆಯುಳ್ಳ ವರ್ಣ, ದೀರ್ಘವರ್ಣ ಅನುಸ್ವಾರ ಮತ್ತು ವಿಸರ್ಗಗಳಿಂದ ಕೂಡಿದ ವರ್ಣ ಸಂಯುಕ್ತಾಕ್ಷರದ ಹಿಂದಿನ ವರ್ಣ ಇವು ಗುರುಸಂಜ್ಞೆಯುಳ್ಳ ವರ್ಣಗಳು. "सानुस्वारो विसर्गान्तो दीर्घो युक्तपरश्च लः। वा पादान्तस्त्वसौ ग्वक्रः" वृ० र०। ಪಾದಾಂತ್ಯದಲ್ಲಿರುವ ಲಘುವರ್ಣಕ್ಕೆ ವಿಕಲ್ಪವಾಗಿ "ಗುರು" ಸಂಜ್ಞೆಯುಂಟು. 12. ಪುಷ್ಯ ನಕ್ಷತ್ರ. 13. ಸೂರ್ಯ ಮೊದಲಾದ ನವಗ್ರಹಗಳಲ್ಲೊಂದು ಗ್ರಹ. ಗುರುವಿಗೆ ಧನುಸ್ಸು ಮತ್ತು ಮೀನ ರಾಶಿಗಳು ಕ್ಷೇತ್ರಗಳು. ಕರ್ಕಾಟಕ ರಾಶಿಯು ಉಚ್ಚ. ಮಕರವು ನೀಚರಾಶಿ. ರವಿ ಚಂದ್ರ ಕುಜರು ಮಿತ್ರರು. ಶನಿಯು ಸಮ. ಬುಧಶುಕ್ರರು ಶತ್ರುಗಳು. ಗುರುವು ಶುಭಗ್ರಹ. ಬ್ರಾಹ್ಮಣ. ಪುರುಷಗ್ರಹ. 2, 5, 7, 9 ಮತ್ತು 11 ನೆಯ ರಾಶಿಗಳಲ್ಲಿರುವಾಗ ಗುರುವು ಶುಭಫಲವನ್ನು ಕೊಡುತ್ತಾನೆ. "गुरुरद्विद्विनवपञ्चमे शुभफलदः, एकादशस्थाः सर्वे" गोचारद०। [ಇನ್ನೂ ವಿವರಕ್ಕೆ "जीव" ಪದದಲ್ಲಿ ನೋಡಿ.] (वि०) 14. ದೊಡ್ಡದಾಗಿರುವ. "अवैमि ते सारमतः खलु त्वां कार्ये गुरुण्यात्मसमं नियोक्ष्ये" कुमा० ३-१३। 15. ಭಾರವಾಗಿರುವ. "गुरुणा स्तनभारेण मुखचन्द्रेण भास्वता" भर्तृ० २-१७। 16. ಅಧಿಕವಾದ, ಹೆಚ್ಚಾದ, ಅತಿಯಾದ. "गुरुसमीरसमीरितभूधरा इव गजा गगनं विजगाहिरे" कुमा० १४-५०। 17. ದುಷ್ಕರವಾದ, ಕಷ್ಟವಾದ. 18. ಉದ್ದವಾದ, ದೀರ್ಘವಾದ, ದೊಡ್ಡದಾದ. 19. ಬಲಶಾಲಿಯಾದ. 20. ಕಠಿನವಾದ, ಜೀರ್ಣವಾಗದಿರುವ. 21. ಪ್ರಸಿದ್ಧನಾದ. "गुरुर्निषेकादिकरे पुरोधसि बृहस्पतौ। पित्रादौ ना बृहत्ख्यातदुर्भरेषु च स त्रिषु" नानार्थर०। स्त्रियाम् वा "ङीप्" (४-१-४४)। **गुर्वी ಗುರ್ವೀ.** "तेन धूर्जगतो गुर्वी सचिवेषु निचिक्षिपे" रघु० १-३४।

**गुरुकर्मन् ಗುರುಕರ್ಮನ್** (न०) 1. ಆಚಾರ್ಯನ ಕೆಲಸ, ಗುರುವಿನ ಕಾರ್ಯ. गुरोः कर्म। "तथा गुरुकर्मसु" आप० ध० १-२-२४। 2. ದೊಡ್ಡ ಕಾರ್ಯ. गुरु कर्म।

**गुरुकार ಗುರುಕಾರ** (पुं०) ಅರ್ಚನೆ, ಪೂಜೆ.

**गुरुकार्य ಗುರುಕಾರ್ಯ** (न०) 1. ಆಚಾರ್ಯನ ಕೆಲಸ. 2. ದೊಡ್ಡ ಕಾರ್ಯ, ಅತಿಮುಖ್ಯವಾದ ಕೆಲಸ.

**गुरुकुल ಗುರುಕುಲ** (न०) ಗುರುವಿನ ಮನೆ. गुरोः कुलम्।

**गुरुकुलवास ಗುರುಕುಲವಾಸ** (पुं०) ಆಚಾರ್ಯನ ಮನೆಯಲ್ಲಿ ವಾಸಮಾಡುವುದು. ಪೂರ್ವಕಾಲದಲ್ಲಿ ಆಚಾರ್ಯನ ಮನೆಯಲ್ಲೇ ವಾಸಮಾಡುತ್ತ ಆಚಾರ್ಯನ ಸೇವೆಮಾಡಿ ವಿದ್ಯಾಭ್ಯಾಸ ಮಾಡುವ ಪದ್ಧತಿಯಿತ್ತು.

**गुरुकुलवासिन् ಗುರುಕುಲವಾಸಿನ್** (पुं०) ಗುರುವಿನ ಮನೆಯಲ್ಲಿ ವಾಸಮಾಡುವ ವಿದ್ಯಾರ್ಥಿ. गुरुकुले वसति—वस (निवासे) "णिनिः" (३-१-१३४)।

**गुरुकृत ಗುರುಕೃತ** (वि०) ದೊಡ್ಡದಾಗಿ ಮಾಡಲ್ಪಟ್ಟ, ಪ್ರಶಂಸಿಸಲ್ಪಟ್ಟ, ಹೊಗಳಲ್ಪಟ್ಟ.

**गुरुक्रम ಗುರುಕ್ರಮ** (पुं०) ಗುರುವಿನ ಕ್ರಮದಲ್ಲಿ ಬಂದ ಉಪದೇಶ, ವಂಶಪರಂಪರೆಯಾಗಿ ಬಂದ ಉಪದೇಶ. गुरुरेव क्रमो यत्र।

**गुरुघ्न ಗುರುಘ್ನ** (पुं०) 1. ಬಿಳಿ ಸಾಸವೆ. गुरुं गुरुत्वं हन्ति—हन (हिंसागत्योः) "टक्" (३-२-५३)। (वि०) 2. ಗುರುವನ್ನು ಹಿಂಸಿಸುವ.

**गुरुजन ಗುರುಜನ** (पुं०) 1. ಪೂಜ್ಯ, ಗೌರವಾರ್ಹ. 2. ಹಿರಿಯವನು, ದೊಡ್ಡವನು, ತಾಯಿ ತಂದೆ ಮೊದಲಾದವರು. "इतस्तपस्विकार्यम् इतो गुरुजनाज्ञा" शाकु० २।

**गुरुतम ಗುರುತಮ** (पुं०) 1. ವಿಷ್ಣು. (वि०) 2. ಅತಿಶಯವಾಗಿ ಗೌರವಿಸಬೇಕಾದ ತಾಯಿ ತಂದೆ ಮತ್ತು ಆಚಾರ್ಯ. अतिशयेन गुरुः "तमप्"। "त्रयः पुरुषस्यातिगुरवो भवन्ति माता पिताचार्यश्च"। 3. ಬಹಳ ಭಾರವಾದ. 4. ಬಹಳ ಮುಖ್ಯವಾದ.

**गुरुतर ಗುರುತರ** (वि०) 1. ಹೆಚ್ಚು ಪೂಜ್ಯರಾದ. 2. ಹೆಚ್ಚು ಭಾರವಾದ. 3. ಹೆಚ್ಚು ಮುಖ್ಯವಾದ. अनयोरतिशयेन गुरुः "तरप्"।

**गुरुतल्प ಗುರುತಲ್ಪ** (न०) 1. ಆಚಾರ್ಯನ ಹಾಸಿಗೆ. 2. ಆಚಾರ್ಯನ ಪತ್ನಿ, ಗುರುಪತ್ನಿ. गुरोस्तल्पम्। (वि०) 3. ಆ ಗುರುಪತ್ನಿಯೊಡನೆ ಸಂಭೋಗಮಾಡುವವನು. "तल्पं शय्याट्टदारेषु" अम०। ಇದು ಮಹಾಪಾತಕಗಳ

ಲ್ಲೊಂದು. "ब्रह्महत्या सुरापानं गुरुतल्पगमनं ब्राह्मण-स्वर्णापहरणं द्विजातीनां महापातकम्" इति च्यवनः।

**गुरुतल्पग ಗುರುತಲ್ಪಗ** (वि०) ಗುರುಪತ್ನಿಯೊಡನೆ ಸಂಭೋಗಮಾಡುವವನು. ಇವನೊಬ್ಬ ಮಹಾಪಾತಕಿ. गुरोस्तल्पं भार्यां गच्छति — गम्लृ (गतौ) "डः" (वा० ३-२-४८)। "णिनिः" (३-१-१३४)। **–गामिन् –ಗಾಮಿನ್.** ಪಿತೃಷ್ವಸ್ರ (ಸೋದರತ್ತೆ) ಮೊದಲಾದವರಲ್ಲಿ ಸಂಭೋಗ ಮಾಡುವವನೂ ಗುರುತಲ್ಪಗಾಮಿ. "पितुः स्वसारं मातुश्च मातुलानीं स्नुषामपि। मातुः सपत्नीं भगिनीमाचार्यतनयां तथा। आचार्यपत्नीं स्वसुतां गच्छंस्तु गुरुतल्पगः" याज्ञ० ३-२३२, ३३।

**गुरुतल्पिन् ಗುರುತಲ್ಪಿನ್** (वि०) ಗುರುಪತ್ನಿಯಲ್ಲಿ ಪ್ರವೇಶಿಸುವವನು. गुरोस्तल्पं भार्यास्यास्ति "इनिः" (५-२-११५)। "गुरुतल्प्यभिभाष्यैनस्तप्ते स्वप्यादयोमये" मनु० ११-१०३।

**गुरुता ಗುರುತಾ** (स्त्री०) 1. ಭಾರವಾಗಿರುವಿಕೆ, ತೂಕವಾಗಿರುವಿಕೆ. गुरोर्भावः "तल्" (५-१-११९)। "यातं यच्च नितम्बयोर्गुरुतया मन्दं विलासादिव" शाकु० २-२। 2. ಅವಶ್ಯಕತೆ, ಪ್ರಾಧಾನ್ಯ. "अवधार्य कार्यगुरुतामभवन्न भयाय सान्द्रतमसन्तमसम्" माघ० ९-२२।

**गुरुत्व ಗುರುತ್ವ** (न०) 1. ಭಾರವಾಗಿರುವಿಕೆ, ತೂಕವಾಗಿರುವಿಕೆ. गुरोर्भावः "त्वः" (५-१-११९)। 2. ಮೇಲಿನಿಂದ ವಸ್ತುವು ಕೆಳಕ್ಕೆ ಬೀಳಲು ಕಾರಣವಾದ ವಸ್ತುವಿನ ಒಂದು ಧರ್ಮ. "आद्यपतनसमवायिकारणं गुरुत्वम्"। ಈ ಗುರುತ್ವವು ಅತೀಂದ್ರಿಯವಾದುದು. 3. ಗೌರವ, ಪೂಜ್ಯತೆ. 4. ಮರ್ಯಾದೆ, ಗಣ್ಯತೆ. 5. ಹಿರಿಯತನ, ದೊಡ್ಡತನ. 6. ಬೃಹತ್ತ್ವ, ದೊಡ್ಡದಾಗಿರುವಿಕೆ. 7. ತಂದೆಯಾಗಿರುವಿಕೆ. "मेने परार्ध्यमात्मानं गुरुत्वेन जगद्गुरोः" रघु० १०-६४। 8. ಆಚಾರ್ಯನಾಗಿರುವಿಕೆ.

**गुरुदक्षिणा ಗುರುದಕ್ಷಿಣಾ** (स्त्री०) ಗುರುವಿನ ಕಾಣಿಕೆ. ಗುರುವಿಗೆ ಅರ್ಪಿಸುವ ಸಂಭಾವನೆ. गुरोर्दक्षिणा। "उपात्तविद्यो गुरुदक्षिणार्थी कौत्सः प्रपेदे वरतन्तुशिष्यः" रघु० ५-१।

**गुरुदिन ಗುರುದಿನ** (न०) ಬೃಹಸ್ಪತಿಯ ದಿವಸ, ಗುರುವಾರ. गुरोर्दिनम्।

**गुरुदैवत ಗುರುದೈವತ** (पुं०) ಪುಷ್ಯ ನಕ್ಷತ್ರ. गुरुर्दैवतमस्य।

**गुरुपत्नी ಗುರುಪತ್ನೀ** (स्त्री०) ಗುರುವಿನ ಹೆಂಡತಿ. गुरोः पत्नी।

**गुरुपत्र ಗುರುಪತ್ರ** (न०) 1. ತಗರ. (स्त्री०) **–पत्रा –ಪತ್ರಾ.** 2. ಹುಣಿಸೆಮರ.

**गुरुपुत्र ಗುರುಪುತ್ರ** (पुं०) 1. ಗುರುವಿನ ಮಗ, ಉಪಾಧ್ಯಾಯನ ಮಗ. गुरोः पुत्रः। ಗುರುಪುತ್ರನಲ್ಲೂ ಗುರುವಿನಂತೆ ಮರ್ಯಾದೆಯಿಂದ ವರ್ತಿಸಬೇಕು. "श्रेयःसु गुरुवद्वृत्तिं नित्यमेव समाचरेत्। गुरुपुत्रेषु चार्येषु गुरोश्चैव स्वबन्धुषु" मनु० २-२०७। 2. ಪಿತೃವ್ಯ ಮಾತುಲ ಮಾತಾಮಹ ಮುಂತಾದ ಹಿರಿಯರ ಮಕ್ಕಳು.

**गुरुप्रसाद ಗುರುಪ್ರಸಾದ** (पुं०) ಗುರುವಿನ ಅನುಗ್ರಹ. ಗುರುವಿನ ಒಲವು, ಗುರುವಿನ ದಯೆ. गुरोः प्रसादः।

**गुरुप्रिय ಗುರುಪ್ರಿಯ** (पुं०) ಗುರುವಿನ ಪ್ರೀತಿಗೆ ಪಾತ್ರನಾದ.

**गुरुभ ಗುರುಭ** (न०) 1. ಗುರುದೇವತಾಕವಾದ ಪುಷ್ಯ ನಕ್ಷತ್ರ. 2. ಗುರುವು ಅಧಿಪತಿಯಾಗಿರುವ ಧನುಸ್ಸು ಮತ್ತು ಮೀನ ರಾಶಿಗಳು.

**गुरुभार्या ಗುರುಭಾರ್ಯಾ** (स्त्री०) ಗುರುಪತ್ನಿ, ಗುರುವಿನ ಹೆಂಡತಿ.

**गुरुमत् ಗುರುಮತ್** (वि०) ಗುರುವರ್ಣದೊಡನೆ ಕೂಡಿದ, ಗುರುವರ್ಣಸಹಿತವಾದ. गुरुः गुरुवर्णोऽस्यास्ति "मतुप्" (५-२-९४)। "इजादेश्च गुरुमतोऽनृच्छः" पा० सू० ३-१-३६। (स्त्री०) **–मती –ಮತೀ.** ಗರ್ಭಿಣಿ, ಬಸಿರು ಹೆಂಗಸು.

**गुरुमर्दल ಗುರುಮರ್ದಲ** (पुं०) ಢಿಮಿಕಿಯೆಂಬ ಒಂದು ವಾದ್ಯ.

**गुरुरत्न ಗುರುರತ್ನ** (न०) 1. ಪುಷ್ಪರಾಗ. 2. ಗೋಮೇದ ರತ್ನ. गुरोः प्रियं रत्नम्।

**गुरुराहु ಗುರುರಾಹು** (पुं०) ಗುರು ಮತ್ತು ರಾಹುಗಳ ಯೋಗ, ಗುರು ರಾಹುಗಳು ಒಂದೇ ರಾಶಿಯಲ್ಲಿರುವುದು. ಗುರು ರಾಹುಗಳು ಒಂದೇ ರಾಶಿಯಲ್ಲಿರುವಾಗ ಶುಭ ಕಾರ್ಯವು ನಿಷಿದ್ಧ. "एकराशौ स्थितौ स्यातां यदि राहुबृहस्पती। विवाहव्रतयज्ञादि सर्वं तत्र विवर्जयेत्"।

**गुरुवत् ಗುರುವತ್** (अव्य०) ಗುರುವಿನಂತೆ. गुरुणा तुल्यम्। "अध्यापयन् गुरुसुतो गुरुवन्मानमर्हति" मनु० २-२०८।

**गुरुवर्तिन् ಗುರುವರ್ತಿನ್** (पुं०) ಗುರುವಿನ ಗೃಹದಲ್ಲಿ ವಾಸಮಾಡುವವನು, ವಿದ್ಯಾರ್ಥಿ, ಬ್ರಹ್ಮಚಾರಿ. गुरौ गुरुकुले वर्तते — वृतु (वर्तने) "णिनिः" (३-१-१३४)।

**गुरुवार ಗುರುವಾರ, –वासर –ವಾಸರ** (पुं०) ಬೃಹಸ್ಪತಿವಾರ. गुरोः वारः वासरो वा।

**गुरुवृत्ति ಗುರುವೃತ್ತಿ** (स्त्री०) ಆಚಾರ್ಯನ ವಿಷಯದಲ್ಲಿ ಶಿಷ್ಯನ ನಡತೆ. गुरौ वृत्तिः। ಶಿಷ್ಯನು ಯಾವಾಗಲೂ ಗುರುವಿನ ಹಿತವನ್ನು ಬಯಸಬೇಕು. ಗುರುವು ಹೇಳ ದಿದ್ದರೂ ತನ್ನ ವ್ಯಾಸಂಗದಲ್ಲಿ ಆಸಕ್ತನಾಗಿರಬೇಕು. ಗುರು ವಿನ ವಿಷಯದಲ್ಲಿ ತ್ರಿಕರಣಶುದ್ಧಿಯಿಂದ ಇರಬೇಕು. ಗುರುವಿನ ಎದುರಿಗೆ ಯಾವ ವಿಧವಾದ ಆಡಂಬರವನ್ನೂ ತೋರಿಸಕೂಡದು. ಗುರುವಿನ ಅಪ್ಪಣೆಯಿಲ್ಲದೆ ಅವರೆದು ರಿಗೆ ಕುಳಿತುಕೊಳ್ಳಕೂಡದು. ಗುರುವನ್ನು ಯಾರಲ್ಲಿಯೂ ಯಾವಾಗಲೂ ದೂಷಿಸಕೂಡದು. ಯಾರು ದೂಷಿಸಿ ದರೂ ಅದನ್ನು ಕಿವಿಯಿಂದ ಕೇಳಲೂಕೂಡದು. ಗುರುವಿನ ಹೆಸರನ್ನು ಹಿಡಿದು ಕರೆಯಕೂಡದು. "आत्मनाम गुरोर्नाम नामातिकृपणस्य च। श्रेयस्कामो न गृह्णीयात् ज्येष्ठापत्यकलत्रयोः"। ಗುರುವಿನಲ್ಲಿ ಭಯಭಕ್ತಿವಿನಯಾದಿ ಗಳಿಂದ ನಡೆದುಕೊಳ್ಳಬೇಕು ಇತ್ಯಾದಿ. "पितुर्दशगुणा माता गौरवेणेति निश्चितम्। मातुः शतगुणः पूज्यो ज्ञानदाता गुरुः प्रभो" तन्त्रसा०। "नोदितो गुरुणा नित्यमप्रचोदित एव वा। कुर्यादध्ययने यत्नमाचार्यस्य हितेषु च। स्थास्यतामिति चोक्तः सन्नासीताभिमुखं गुरोः। हीनान्नवस्त्रवेषः स्यात् सर्वदा गुरुसन्निधौ। गुरोर्यत्र परीवादो निन्दा वापि प्रवर्तते। कर्णौ तत्र पिधातव्यौ गन्तव्यं वा ततोऽन्यतः" मनु० २।

**गुरूत्तम ಗುರೂತ್ತಮ** (वि०) ಅತ್ಯಂತ ಪೂಜ್ಯನಾದ, ಪರಮಪೂಜ್ಯನಾದ. गुरुषु उत्तमः।

**गुर्जर ಗುರ್ಜರ** (पुं० ब० व०) 1. ಗುರ್ಜರ ದೇಶ. 2. ಗುರ್ಜರ ದೇಶದಲ್ಲಿ ವಾಸಮಾಡುವವರು.

**गुर्विणी ಗುರ್ವಿಣೀ** (स्त्री०) ಗರ್ಭಿಣಿ, ಬಸಿರುಹೆಂಗಸು. गुरुः अलघुर्गर्भोऽस्या अस्ति "इनिः" (५-२-११६)। "ङीप्" (४-१-५)।

**गुर्वी ಗುರ್ವೀ** (स्त्री०) ಗರ್ಭಿಣಿ, ಬಸಿರುಹೆಂಗಸು.

**गुल ಗುಲ** (पुं०) 1. ಬೆಲ್ಲ. (स्त्री०) **–ला –ಲಾ.** 2. ಕಳ್ಳಿ ಗಿಡ. **–ली –ಲೀ.** 3. ಗುಳಿಗೆ, ಮಾತ್ರೆ. 4. ಒಂದು ರೋಗ, ಸಿಡುಬು. "गुलः स्यादैक्षवे पुमान्। गुली तु गुटिकारोगभिदोः स्नुहयां गुला स्मृता" मेदि०।

**गुलिका ಗುಲಿಕಾ** (स्त्री०) 1. ಗೋಲಿ, ಗುಂಡು. 2. ಗುಳಿಗೆ, ಮಾತ್ರೆ. गुडः गोलाकारोऽस्त्यस्याः "ठन्" (५-२-११५)। 3. ಒಂದು ವಿಧ ರೋಗ, ಸಿಡುಬು ರೋಗ.

**गुली ಗುಲೀ** (स्त्री०) "गुल" ಪದದಲ್ಲಿ ನೋಡಿ.

**गुलिङ्क ಗುಲಿಂಕ** (पुं०) ಗುಬ್ಬಚ್ಚಿ.

**गुलुच्छ ಗುಲುಚ್ಛ** (पुं०) ಗೊಂಚಲು. गुच्छ पृषो०। "गुच्छो गुलुच्छः क्षेपः स्यात्" त्रिकाण्ड०।

**गुल्फ ಗುಲ್ಫ** (पुं०) ಕಾಲಿನ ಗಂಟು, ಕಾಲಿನ ಹರಡು. गलति – गल (अदने) "फक्" उकारश्च (उ० ५-२६)। "आगुल्फकीर्णापणमार्गपुष्पम्" [illegible] ७-५५।

**गुल्फजाह ಗುಲ್ಫಜಾಹ** (न०) ಕಾಲಿನ ಗಂಟುಗಳ ತಳಭಾಗ. गुल्फस्य मूलम् "जाहच्" (५-२-२४)।

**गुल्म ಗುಲ್ಮ** (पुं०) 1. ಮಧ್ಯದ ದೂಲವಿಲ್ಲದ ಗಿಡ. गुडति – गुड (रक्षायाम्) "मन्" बाहु०। 2. ಲತೆ ಹುಲ್ಲು ಮೊದಲಾದುವುಗಳ ಪೊದರು. "प्रच्छन्नस्तरुगहनैः सगुल्मजालैर्लक्ष्मीवाननुपदमस्य संप्रतस्थे" किरा० १२-५४। 3. ಸೇನೆಗಳ ಗುಂಪು. 45 ಪದಾತಿ (ಕಾಲಾಳು) ಗಳು 27 ಕುದುರೆಗಳು 9 ರಥಗಳು 9 ಆನೆಗಳು ಇವುಗಳಿಂದ ಕೂಡಿದ ಸೇನೆಗಳ ಸಮೂಹ. 4. ಸುಂಕದ ಕಟ್ಟೆಯಲ್ಲಿರುವ ಕಾವಲು ಸೈನ್ಯ. 5. ಹೊಟ್ಟೆಯ ಎಡಭಾಗದಲ್ಲಿ ಇರುವ ಮಾಂಸಗ್ರಂಥಿ, ಪ್ಲೀಹ. 6. ಪ್ಲೀಹರೋಗ, ಹೊಟ್ಟೆಯ ಎಡಭಾಗದ ಮಾಂಸಗ್ರಂಥಿಯು ಬೆಳೆದು ಉಂಟಾಗುವ ಒಂದು ರೋಗ. ಹೃದಯ ಮತ್ತು ಬಸ್ತಿ (ಹೊಕ್ಕಳ ಕೆಳಭಾಗ) ಗಳ ಮಧ್ಯದಲ್ಲಿ (ವಾತಾಧಿಕ್ಯದಿಂದ) ಚಲಿಸು ತ್ತಲೂ (ವಾತವು ಕಡಮೆಯಾಗಿರುವಾಗ) ಒಂದೇ ಕಡೆ ಇರುವುದಾಗಿಯೂ ಕೆಲವು ವೇಳೆ ದೊಡ್ಡದಾಗಿಯೂ ಕೆಲವು ಕಾಲ ಚಿಕ್ಕದಾಗಿಯೂ ವಿಚಿತ್ರವ್ಯಾಪಾರವುಳ್ಳ ವರ್ತುಲ ವಾದ ಮಾಂಸಗ್ರಂಥಿಯೇ ಗುಲ್ಮವ್ಯಾಧಿ. "हृद्वस्त्योरन्तरे ग्रन्थिः संचारी यदि वाऽचलः। चयापचयवान् वृत्तः स गुल्म इति कीर्तितः" सुश्रुत० उत्तर० ४२-४। "गुपितानिलमूलत्वाद्गूढमूलोदयादपि। गुल्मवद्वा विशालत्वाद्गुल्म इत्यभिधीयते" सुश्रुत० उत्तर० ४२-५। ವಾತಜ, ಪಿತ್ತಜ, ಕಫಜ, ಕ್ಷತಜಗಳೆಂದು ಗುಲ್ಮ ರೋಗವು ಅನೇಕ ಕಾರಣಗಳಿಂದ ಬರುವುದು.

**गुल्ममूल ಗುಲ್ಮಮೂಲ** (न०) ಹಸಿಶುಂಠಿ. गुल्म इव मूलमस्य।

**गुल्मिन् ಗುಲ್ಮಿನ್** (वि०) 1. ಗುಲ್ಮರೋಗವುಳ್ಳವನು. गुल्मोऽस्यास्ति "इनिः" (५-२-११५)। "पेया वातहरैः सिद्धाः कौलत्थाः संस्कृता रसाः। खलाः सपञ्चमूलाश्च गुल्मिनां भोजने हिताः" सुश्रुत० उत्तर० ४२-५४। स्त्रियाम् "ङीप्" (४-१-५)। **गुल्मिनी ಗುಲ್ಮಿನೀ.** 2. ವಿಸ್ತಾರವಾಗಿ ಹರಡುವ ದ್ರಾಕ್ಷಿಯ ಬಳ್ಳಿ, ವೀಳೆಯ ದೆಲೆಯ ಬಳ್ಳಿ ಮುಂತಾದುವು. "पित्तवद्रक्तगुल्मिन्या नार्याः कार्यः क्रियाविधिः" सुश्रुत० उत्तर० ४२-१९।

**गुल्मी ಗುಲ್ಮೀ** (स्त्री०) 1. ನೆಲ್ಲಿಮರ. 2. ಯೂಚಕ್ಕೆಗಿಡ. 3. ವಸ್ತ್ರಗೃಹ. ಡೇರೆ. गुल्मः तदाकारफलम् अस्ति "अच्" (५-२-१२७)। गौरा० "ङीष्" (४-१-४१)।

**गवाक ಗವಾಕ** (पुं०) ಅಪಕೆಮರ. गुवन्त्यनेन—गु (पुरीषोत्सर्गे) "आकः" (उ० ४-१५)। निपा०। बाहु० दीर्घः **गूवाकः ಗೂವಾಕಃ.**

**गुह ಗುಹ** (पुं०) 1. ಕಾರ್ತಿಕೇಯ. ಸ್ಕಂದ. ಷಣ್ಮುಖ. गूहति देवसेनाम्—गुहू (संवरणे) "कः" (३-१-१३५)। "गुहोऽपि येषां प्रथमाप्तजन्मनां न पुत्रवात्सल्यमपाकरोति" कुमा० ५-१४। 2. ವಿಷ್ಣು. गूहति रक्षति—गुहू "कः"। "रक्षतीति गुहः स्मृतः" इति निरुक्तिः। "करणं कारणं कर्ता विकर्ता गहनो गुहः" वि० स०। 3. ಶ್ರೀರಾಮನ ಮಿತ್ರನಾದ ಒಬ್ಬ ನಿಷಾದ ರಾಜ. ಶೃಂಗಬೇರಪುರದ ದೊರೆ. "आससाद महावीरः शृङ्गवेरपुरं प्रति। यत्र राजा गुहो नाम रामस्यात्मसमः सखा" रामा०। 4. ಅಶ್ವ, ಕುದುರೆ. (स्त्री०) **–हा –ಹಾ.** 5. ನರಿಬಾಲದ ಗಿಡ. 6. ಪರ್ವತದ ಅಕೃತ್ರಿಮವಾದ ಬಿಲ. 7. ಗುಹೆ, ಗವಿ. "गुहाया निरगाद्वाली सिंहो मृगमिव द्युवन्" भट्टि० ६-११८। 8. ಹೃದಯ. 9. ಮಾಯೆ. 10. ಬುದ್ಧಿ.

**गुहषष्ठी ಗುಹಷಷ್ಠೀ** (स्त्री०) ಸ್ಕಂದಷಷ್ಠಿ. ಮಾರ್ಗಶೀರ್ಷ ಮಾಸದ ಶುಕ್ಲ ಷಷ್ಠಿ.

**गुहाचर ಗುಹಾಚರ** (न०) ಪರಬ್ರಹ್ಮ. गुहायां बुद्धौ विषयतया चरति—चर (गतौ) "टः" (३-२-१६)।

**गुहाशय ಗುಹಾಶಯ** (पुं०) 1. ಮೂಷಿಕ. ಇಲಿ. गुहायां शेते—शीङ् (स्वप्ने) "अच्" (३-२-१५)। 2. ಹುಲಿ, ಸಿಂಹ ಮೊದಲಾದ ಪ್ರಾಣಿಗಳು. 3. ಅಂತರ್ಯಾಮಿಯಾದ ಪರಮಾತ್ಮ. "श्रुतं मया सिद्धजनादिह स्वयं गुहाशयः प्राप्स्यति ते गुहामिति" याद० १४-२७। 4. ಪ್ರಾಣ. ನಿದ್ರಾಕಾಲದಲ್ಲಿ ಹೃದಯದಲ್ಲಿ ಸುಖವಾಗಿರುವುದರಿಂದ ಈ ಹೆಸರು.

**गुहाहित ಗುಹಾಹಿತ** (पुं०) ಪರಮೇಶ್ವರ. ಹೃದಯ ಕುಹರದಲ್ಲಿ ಧ್ಯಾನದಿಂದ ಇರಿಸಲ್ಪಟ್ಟ ಪರಮಾತ್ಮ. गुहायामाहितः।

**गुहू—संवरणे** (भ्वा० उभ० सक० वे०)। गूहति, –ते। जुगूह जुगुहतुः जुगुहुः। जुगुहे जुगुहाते जुगुहिरे। गूहिता, गोढा। गूहिष्यति, –ते। घोक्ष्यति, –ते। गूहतु, –ताम्। ಇತ್ಯಾದಿ. 1. ಮುಚ್ಚು, ಮರೆಮಾಡು. "गूहिष्यामि क्षितिं क्षतैरद्य गात्रैर्वनौकसाम्" भट्टि० १६-४१। 2. ರಹಸ್ಯವಾಗಿಡು. ಮರೆಮಾಡು. "आकारो गूहितुं शक्यः" भा०। 3. ರಕ್ಷಿಸು. ಕಾಪಾಡು.

**कर्मणि:**—गुह्यते। गुह्यताम्। अगुह्यत। गुह्येत। अगूहि। ಇತ್ಯಾದಿ.

**णिचि:**—गूहयति, –ते। ಇತ್ಯಾದಿ.

**कृत्सु:**—गूहितव्यम्, गोढव्यम्। गूहनीयम्। गुह्यम्. गोह्यम्। गूढः। गूढवान्। गूहन्, गूहन्ती। गूहमानः। गूहितुम्, गोढुम्। गूढम्। गूहनम्। गुहित्वा, गूहित्वा, गूढ्वा। निगुह्य।

**ಈ ಧಾತುವಿಗೆ ಉಪಸರ್ಗಗಳ ಯೋಗದಿಂದ ಉಂಟಾಗುವ ಅರ್ಥಭೇದಗಳು:**

**(1) उप+गुहू**=उपगूहति। उपगूहनम्। ಆಲಿಂಗಿಸು. ಅಪ್ಪಿಕೊ. "भुजान्तरेणोपजुगूह सादरम्" याद० १४-५४।

**(2) नि+गुहू**=निगूहति। निगूहनम्। ಮುಚ್ಚು, ಮರೆಮಾಡು.

**गुहेर ಗುಹೇರ** (पुं०) 1. ಲೋಹಕಾರ. ಕಂಬಾರ. 2. ರಕ್ಷಕ. गुहू (संवरणे) "एरक्" (उ० १-६१)।

**गुह्य ಗುಹ್ಯ** (पुं०) 1. ಕಪಟ, ಡಂಭ. गुहामर्हति "यत्" (५-१-६६)। 2. ವಿಷ್ಣು. गुह्यते संव्रियते परमोपनिषद्विषयेण वपुषा। "पञ्चोपनिषदङ्गेन गूढत्वात् गुह्य उच्यते" इति निरुक्तिः। "गुह्यो गभीरो गहनो गुप्तश्चक्रगदाधरः" वि० स०। 3. ಅಹಂಕಾರ. (न०) 4. ರಹಸ್ಯ. 5. ಉಪಸ್ಥ, ಹೆಂಗಸು ಮತ್ತು ಗಂಡಸರ ಚಿಹ್ನ, ಯೋನಿ ಮತ್ತು ಶಿಶ್ನ. गुहू (संवरणे) "क्यप्" (वा० ६-१-७१)। "गुह्यं रहस्युपस्थे च गुह्यः कमठदम्भयोः" मेदि०।

**गुह्यक ಗುಹ್ಯಕ** (पुं०) ಯಕ್ಷ. ಕುಬೇರನ ಅನುಚರ, ದೇವಯೋನಿವಿಶೇಷ. गूहति रक्षति निधिं—गुहू (संवरणे) "ण्वुल्" (३-१-१३३)। पृषो०। "शिलोच्चयं चारुशिलोच्चयं तमेष क्षणान्नेष्यति गुह्यकस्त्वाम्" किरा० ३-२१। "इत्यौत्सुक्यादपरिगणयन् गुह्यकस्तं ययाचे" मेघ० १-५।

**गुह्यकेश्वर ಗುಹ್ಯಕೇಶ್ವರ** (पुं०) ಯಕ್ಷರ ಅಧಿಪತಿಯಾದ ಕುಬೇರ. गुह्यकानामीश्वरः।

**गुह्यगुरु ಗುಹ್ಯಗುರು** (पुं०) ಪರಶಿವ, ಈಶ್ವರ.

**गुह्यदीपक ಗುಹ್ಯದೀಪಕ** (ಪುಂ०) ಖದ್ಯೋತ, ಮಿಣುಕು ಹುಳು. गुह्यः सन् दीपयति – दीपी (दीप्तौ)+ णिच् "ण्वुल्" (३-१-१३३)।

**गुह्यनिष्यन्द ಗುಹ್ಯನಿಷ್ಯಂದ** (ಪುಂ०) ಮೂತ್ರ. गुह्यात् उपस्थात् निष्यन्दते – नि + स्यन्द् (प्रस्रवणे) "अच्" (३-१-१३४)।

**गुह्यपुष्प ಗುಹ್ಯಪುಷ್ಪ** (ಪುಂ०) ಅಶ್ವತ್ಥವೃಕ್ಷ, ಅರಳಿಮರ. गुह्यं पुष्पमस्य।

**गुह्यभाषित ಗುಹ್ಯಭಾಷಿತ**(ನಂ०)1. ಮಂತ್ರ. 2. ರಹಸ್ಯವಾದ ಮಾತು. गुह्यं गुप्तं भाषितम्।

**गूढ ಗೂಢ** (ವಿಂ०)1. ರಹಸ್ಯವಾಗಿಡಲ್ಪಟ್ಟ, ಬಚ್ಚಿಡಲ್ಪಟ್ಟ. गुहू (संवरणे) "क्तः" (३-२-१०२)। "तस्य संवृत-मन्त्रस्य गूढाकारेङ्गितस्य च" रघु० १-२०। 2. ಮರೆ ಮಾಡಲ್ಪಟ್ಟ. 3. ರೂಪವನ್ನು ಮುಚ್ಚಿಕೊಂಡಿರುವ, ರೂಪವನ್ನು ಮರೆಮಾಡಿಕೊಂಡಿರುವ. "तान्विदित्वा सुचरितैर्गूढैस्तत्कर्मकारिभिः" मनु० ९-२६१। 4. ರಹಸ್ಯವಾದ, ಬಹಳ ಗುಟ್ಟಾದ. "गूढं नूपुरशब्दमात्रमपि मे कान्तं श्रुतौ पातयेत्" विक्र० ३-१५। 5. ಅಗೋಚರವಾದ, ಕಾಣದಿರುವ. "कामिनीकुचकलशवत् गूढं चमत्करोति" सा० द०। (क्रि० वि०)6. ರಹಸ್ಯವಾಗಿ. "द्वयोर्नायिकयोर्बहिर्दर्शितानुरागोऽन्यस्यां नायिकायां गूढं विप्रियमाचरति" सा० द०।

**गूढचार ಗೂಢಚಾರ** (ಪುಂ०) 1. ರಹಸ್ಯಕಾರ್ಯದಲ್ಲಿ ನಿಯುಕ್ತನಾದವನು. चरति – चर (गतौ) "अच्" (३-१-१३४)। स्वार्थे "अण्" (५-४-३८)। गूढः चारः। (ವಿಂ०) 2. ರಹಸ್ಯವಾಗಿ ಸಂಚರಿಸುವವನು. गूढं चरति।

**गूढचारिन् ಗೂಢಚಾರಿನ್** (ವಿಂ०) ರಹಸ್ಯವಾಗಿ ಸಂಚರಿಸುವವನು. ಚೌರ್ಯಾದಿಭಯದಿಂದ ತಪ್ಪಿಸಿಕೊಂಡು ತಿರುಗಾಡುವವನು. गूढं चरति – चर (गतौ) "णिनिः" (३-१-१३४)।

**गूढज ಗೂಢಜ** (ಪುಂ०) ಹನ್ನೆರಡು ವಿಧ ಪುತ್ರರಲ್ಲೊಬ್ಬ. ["गूढोत्पन्न" ಪದದಲ್ಲಿ ನೋಡಿ.]

**गूढनीड ಗೂಢನೀಡ**(ಪುಂ०) ಖಂಜನಪಕ್ಷಿ, ಕಾಡಿಗೆ ಸೊಗಟಿನ ಹಕ್ಕಿ, ವಾಸರಿಹಕ್ಕಿ. गूढं नीडं यस्य। स्त्रियाम् "ङीष्" (४-१-६३)। **–नीडी –ನೀಡೀ.**

**गूढपत्र ಗೂಢಪತ್ರ**(ಪುಂ०)1. ಅಂಕೋಲೆ ಮರ. 2. ಮುಳ್ಳು ಅಜ್ಜಿಗಿಡ.

**गूढपथ ಗೂಢಪಥ**(ಪುಂ०)1. ರಹಸ್ಯವಾದ ದಾರಿ, ಸುರಂಗದ ದಾರಿ, ಕಿರುದಾರಿ. गूढःपन्थाः। 2. ಮನಸ್ಸು, ಅಂತಃಕರಣ. गूढः पन्थाः यस्य।

**गूढपाद् ಗೂಢಪಾದ್** (ಪುಂ०) ಸರ್ಪ, ಹಾವು. गूढाः पादा यस्य। पृषो०। स्त्रियाम् "ङीप्" पादस्य लोपश्च (५-४-१३९)। पादः पत् (६-४-१३०)। **–पदी –ಪದೀ.**

**गूढपाद ಗೂಢಪಾದ** (ಪುಂ०) 1. ಸರ್ಪ, ಹಾವು. गूढाः पादा यस्य। (ವಿಂ०)2. ಮುಚ್ಚಿದ ಕಾಲುಗಳುಳ್ಳ, ಮರೆ ಮಾಡಿದ ಕಾಲುಗಳುಳ್ಳ. "उपानद्गूढपादश्च" हितो०।

**गूढपुरुष ಗೂಢಪುರುಷ** (ಪುಂ०) ರಹಸ್ಯಕಾರ್ಯದಲ್ಲಿ ನಿಯುಕ್ತನಾದ ಸೇವಕ. गूढश्चासौ पुरुषश्च।

**गूढमार्ग ಗೂಢಮಾರ್ಗ** (ಪುಂ०) ರಹಸ್ಯವಾದ ಮಾರ್ಗ, ಭೂಮಿಯೊಳಗೆ ಸುರಂಗದ ಮಾರ್ಗ. गूढो मार्गः।

**गूढमैथुन ಗೂಢಮೈಥುನ** (ಪುಂ०) ವಾಯಸ, ಕಾಗೆ. गूढं रहस्यं मैथुनं यस्य। "काको रतज्वरः सूत्री श्रावको गूढमैथुनः" त्रिकाण्ड०।

**गूढवर्चस् ಗೂಢವರ್ಚಸ್** (ಪುಂ०) ಮಂಡೂಕ, ಕಪ್ಪೆ. गूढं वर्चोऽस्य। "व्यङ्गस्तु नन्दको भेको गूढवर्चाः कृतालयः" त्रिकाण्ड०।

**गूढव्यङ्ग्या ಗೂಢವ್ಯಂಗ್ಯಾ** (स्त्री०) ಅಲಂಕಾರಶಾಸ್ತ್ರದಲ್ಲಿ ಪ್ರಯೋಜನಲಕ್ಷಣಾಭೇದವಾದ ವ್ಯಂಗ್ಯದ ಒಂದು ಭೇದ. ಎಂಟು ವಿಧವಾಗಿ ಹೇಳಲ್ಪಟ್ಟ ಪ್ರಯೋಜನ ಲಕ್ಷಣೆಯು ಮತ್ತೆ ಗೂಢವ್ಯಂಗ್ಯ ಅಗೂಢ ವ್ಯಂಗ್ಯಗಳೆಂದು ಎರಡು ವಿಧ. ["ಅಗೂಢವ್ಯಂಗ್ಯ"ಕ್ಕೆ "अगूढ" ಪದದಲ್ಲಿ ನೋಡಿ.] ವಾಕ್ಯಾರ್ಥಭಾವನೆಯಿಂದ ಪರಿಪಕ್ವಬುದ್ಧಿಯುಳ್ಳವರಿಗೆ ಮಾತ್ರ ವೇದ್ಯವು "ಗೂಢವ್ಯಂಗ್ಯ". गूढं वाक्यार्थभावनापरिपक्वबुद्धिमात्रवेद्यं व्यङ्ग्यं यत्र। "उपकृतं बहु तत्र किमुच्यते सुजनता प्रथिता भवता परम्। विदधदीदृशमेव सदा सखे सुखितमास्स्व ततः शरदां शतम्"। ಇಲ್ಲಿ ಅಪಕಾರಿಯನ್ನು ಕುರಿತು ಹೇಳುವಾಗ उपकृतं सुजनता सुखितं ಈ ಪದಗಳ ಮುಖ್ಯಾರ್ಥಕ್ಕೆ ಬಾಧವು ಬಂದು ವಿಪರೀತಲಕ್ಷಣೆಯಿಂದ ಅಪಕಾರಾತಿಶಯವು ವ್ಯಂಗ್ಯಮರ್ಯಾದೆಯಿಂದ ತೋರುಂಪುದು. ಈ ವ್ಯಂಗ್ಯಾರ್ಥವು ಪರಿಣತಬುದ್ಧಿಗಳಿಗೆ ಮಾತ್ರ ತೋರುವುದರಿಂದ ಇಲ್ಲಿ **"ಗೂಢವ್ಯಂಗ್ಯ".**

**गूढाङ्ग ಗೂಢಾಂಗ** (ಪುಂ०) 1. ಕಮಠ, ಆಮೆ. गूढानि अङ्गान्यस्य स्त्रियाम् जाति० "ङीष्" (४-१-६३)।

(वि०) 2. ಗುಪ್ತವಾದ ಅಂಗಗಳುಳ್ಳ. स्त्रियाम् स्वाङ्गत्वात् वा "ङीष्" (४-१-५४)। **गूढाङ्गी ಗೂಢಾಂಗೀ. गूढाङ्गा ಗೂಢಾಂಗಾ.**

**गूढाङ्घ्रि ಗೂಢಾಂಘ್ರಿ** (पुं०) ಸರ್ಪ, ಹಾವು. गूढा अङ्घ्रयोऽस्य।

**गूढोत्पन्न ಗೂಢೋತ್ಪನ್ನ** (पुं०) ಹನ್ನೆರಡು ವಿಧ ಪುತ್ರರ ಲ್ಲೊಬ್ಬ. गूढं यथातथा उत्पन्नः। ಯಾವನೊಬ್ಬನ ಪತ್ನಿಯಲ್ಲಿ ಜನಿಸಿದ ಪುತ್ರನು ಯಾವ ಪುರುಷನಿಂದ ಜನಿಸಿದವನೆಂದು ತಿಳಿಯಲಾಗುವುದಿಲ್ಲವೋ ಅವನು ಗೂಢೋತ್ಪನ್ನನು. ಯಾವನ ಪತ್ನಿಯಲ್ಲಿ ಜನಿಸಿದನೋ ಅವನ ಮಗನೆಂದು ತಿಳಿಯಬೇಕು. "उत्पद्यते गृहे यस्य न च ज्ञायेत कस्य सः। स गृहे गूढ उत्पन्नस्तस्य स्याद्यस्य तल्पजः" मनु० ९-१७०।

**गूढोत्मन् ಗೂಢೋತ್ಮನ್** (पुं०) ಪರಮಾತ್ಮ. गूढः आत्मा। पृषो०। ವರ್ಣದ ಆಗಮದಿಂದ (ಇರುವ ಅಕ್ಷರದ ಜೊತೆಗೆ ಮತ್ತೊಂದು ಅಕ್ಷರವು ಸೇರುವುದರಿಂದ) हंस ಪದವೂ, ವರ್ಣವಿಪರ್ಯಯದಿಂದ (ಅಕ್ಷರದ ಬದಲಾವಣೆಯಿಂದ) सिंह ಪದವೂ, ಇರುವ ವರ್ಣವು ವಿಕಾರ ಹೊಂದುವುದರಿಂದ गूढोत्मन् ಪದವೂ, ವರ್ಣಲೋಪದಿಂದ पृषोदर ಪದವೂ ನಿಷ್ಪನ್ನವಾಗುವುವು. "भवेद्वर्णागमाद्धंसः सिंहो वर्णविपर्ययात्। गूढोत्मा वर्णविकृतेर्वर्णलोपात् पृषोदरः"।

**गूथ ಗೂಥ** (न०) ಅಮೇಧ್ಯ, ಮಲ. गु (पुरीषोत्सर्गे) "थक्" (उ० २-१२)। निपा०।

**गून ಗೂನ** (वि०) ಮಲವಿಸರ್ಜನೆಮಾಡಿದವನು. गु (पुरीषोत्सर्गे) "क्तः" (३-२-१०२)। दीर्घः नत्वं च (वा० ८-२-४४)।

**गूरण ಗೂರಣ** (न०) ನಿಂದೆ, ದೂಷಣೆ. गूरी (हिंसायाम्) "ल्युट्" (३-३-११५)।

**गूरी – हिंसागत्योः** (दिवा० आत्म० सक० से०)। गूर्यते। जुगूरे। गूरिता। ಇತ್ಯಾದಿ. 1. ಹಿಂಸಿಸು. 2. ಹೋಗು, ನಡೆ, ಮುಂದೆ ಸಾಗು.

**गूवाक ಗೂವಾಕ** (पुं०) ಅಡಕೆ ಮರ. गुवाक पृषो०।

**गूहमान ಗೂಹಮಾನ** (वि०) ಮರೆಮಾಡಿಕೊಳ್ಳುತ್ತಿರುವ, ಮುಚ್ಚಿಕೊಳ್ಳುತ್ತಿರುವ. गुहू (संवरणे) "शानच्" (३-२-१२४)। "गूहमानः स्वमाहात्म्यम्" भट्टि० ८-४५।

**गृ – सेचने** (भ्वा० पर० सक० अनि०)। गरति। जगार। ಸೇಚನೆಮಾಡು, ಸಿಂಪಡಿಸು, ಚಿಮುಕಿಸು.

**गृज – शब्दे** (भ्वा० पर० अक० से०)। गर्जति। जगर्ज। गर्जिता। गर्जिष्यति। गर्जतु। ಇತ್ಯಾದಿ. ಶಬ್ದಮಾಡು, ಗರ್ಜನೆಮಾಡು.

**भावे:**—गृज्यते। जगृजे। गर्जिता। गृज्यताम्। अगृज्यत। ಇತ್ಯಾದಿ.

**णिचि :**—गर्जयति, –ते। गर्जयां चकार, –चक्रे, –बभूव, –आस।

**कृत्सु :**—गर्जितव्यम्। गर्जनीयम्। गर्ज्यम्। गृजितः। गृजितवान्। गर्जन्, गर्जन्ती। गर्जितुम्। गृजितम्। गर्जनम्। गर्जित्वा। अनुगृज्य।

**गृजि – शब्दे** (भ्वा० पर० सक० से०)। गृञ्जति। जगृञ्ज। गृञ्जिता। गृञ्जिष्यति। गृञ्जतु। अगृञ्जत्। गृञ्जेत्। ಇತ್ಯಾದಿ. ಶಬ್ದಮಾಡು.

**कर्मणि :**—गृञ्ज्यते। जगृञ्जे। गृञ्जिता। गृञ्जिष्यते। गृञ्ज्यताम्। अगृञ्ज्यत। ಇತ್ಯಾದಿ.

**गृञ्जन ಗೃಂಜನ** (पुं०) 1. ಬೆಳ್ಳುಳ್ಳಿ. गृञ्ज्यते कथ्यते भक्ष्यत्वेन रोगेषु—गृजि (शब्दे) कर्म० "ल्युट्" (३-३-११३)। "लशुनं गृञ्जनं चैव पलाण्डुं कवकानि च" मनु० ५-५। (न०) 2. ವಿಷಬಳಿದ ಪಶುವಿನ ಮಾಂಸ. "गृञ्जनं विषदिग्धस्य पशोर्मांसे रसोनके" हेम०।

**गृञ्जिम ಗೃಂಜಿಮ** (पुं०) ಯದುವಂಶದ ಶೂರರಾಜನ ಮಗ, ವಸುದೇವನ ಸಹೋದರ.

**गृण्डीव ಗೃಂಡೀವ** (पुं०) ದೊಡ್ಡ ಜಾತಿಯ ನರಿ. स्त्रियाम् जाति० "ङीष्" (४-१-६३)। **गृण्डीवी ಗೃಂಡೀವೀ.**

**गृत्स ಗೃತ್ಸ** (पुं०) 1. ಕಾಮದೇವ, ಮನ್ಮಥ. गृध्यत्यनेन—गृधु (अभिकाङ्क्षायाम्) "सः" (उ० ३-६९)। (वि०) 2. ಕಾಮುಕ, ವಿಷಯಾಸಕ್ತ. 3. ಮೇಧಾವಿ, ಜಾಣ, ಬುದ್ಧಿಶಾಲಿ. 4. ಸ್ತುತ್ಯ, ಹೊಗಳಲ್ಪಡುವವನು. 5. ಹೊಗಳುವವನು.

**गृधु – अभिकाङ्क्षायाम्** (दिवा० पर० सक० से०)। गृध्यति। जगर्ध। गर्धिता। गर्धिष्यति। गृध्यतु। अगृध्यत्। ಇತ್ಯಾದಿ. ಣಿಜಂತವಾದಾಗ ಇದು ಪ್ರಲಂಭನಾರ್ಥದಲ್ಲಿ ಆತ್ಮನೇಪದಿಯಾಗುವುದು. "माणवकं गर्धयते" प्रतारयतीत्यर्थः। अन्यत्र "श्वानं गर्धयति" अभिकाङ्क्षामस्योत्पादयति इत्यर्थः।

**गृधु ಗೃಧು** (पुं०) 1. ಕಾಮದೇವ, ಮನ್ಮಥ. गृधु (अभिकाङ्क्षायाम्) "कुः" (उ० १-२३)। गृधुः कामः सि० कौ०। (वि०) 2. ಲಂಬ್ಧ, ಆತ್ಯಾಶೆಯುಳ್ಳವನು.

**गृधू ಗೃಧೂ** (स्त्री०) 1. ಬುದ್ಧಿ. 2. ಅಪಾನವಾಯು. गृधु (अभिकाङ्क्षायाम्) "कू:" बाहु०।

**गृध्नु ಗೃಧ್ನು** (वि०) ಲುಬ್ಧ, ಅತ್ಯಾಶೆಯುಳ್ಳವನು. गृधु (अभिकाङ्क्षायाम्) "क्नु:" (३-२-१४०)।

**गृध्य ಗೃಧ್ಯ** (वि०) ಅಪೇಕ್ಷಿಸಲ್ಪಡುವ. गृधु (अभिकाङ्क्षायाम्) "क्यप" (३-१-११०)। "इत्यः शिष्येण गुरुवत् गृध्यमर्थमवाप्स्यसि" भट्टि० ६-५५।

**गृध्र ಗೃಧ್ರ** (पुं०) 1. ಹದ್ದು. गृधु (अभिकाङ्क्षायाम्) "क्रन्" (उ० २-२४)। "अप्रबोधाय सुष्वाप गृध्रच्छाये वरूथिनी" रघु० १२-५०। (वि०) 2. ಲುಬ್ಧ, ಅತ್ಯಾಶೆಯುಳ್ಳವನು. स्त्रियाम् "ङीष्" (४-१-६३)। "कोटिस्फुरत्पिशितपिण्डयुतेव गृध्री" प्रबोध० ४-३।

**गृध्रकूट ಗೃಧ್ರಕೂಟ** (पुं०) ಒಂದು ಪರ್ವತ.

**गृध्रनखी ಗೃಧ್ರನಖೀ** (स्त्री०) ಬದರೀವೃಕ್ಷ, ಎಲಚಿಗಿಡ. गृध्रस्य नखस्तदाकारोऽस्त्यस्य "अच्" (५-२-९७)। गौरा० "ङीष्" (४-१-४१)।

**गृध्रपति ಗೃಧ್ರಪತಿ** (पुं०) ಜಟಾಯುಪಕ್ಷಿ.

**गृध्रपत्रा ಗೃಧ್ರಪತ್ರಾ** (स्त्री०) ಬಾಣ.

**गृध्रराज ಗೃಧ್ರರಾಜ** (पुं०) ಜಟಾಯುಪಕ್ಷಿ.

**गृध्रसी ಗೃಧ್ರಸೀ** (स्त्री०) ವಾತರೋಗ. गृध्रमिव स्यति—षो (अन्तकर्मणि) "कः" (३-२-३)। गौरा० "ङीष्" (४-१-४१)। "पार्ष्णिप्रत्यङ्गुलीनां तु कण्डरा याऽनिलार्दिता। सक्थ्नः क्षेपं निगृह्णीयाद्गृध्रसीति हि सा स्मृता" सुश्रुत० निदान० १-७४।

**गृष्टि ಗೃಷ್ಟಿ** (स्त्री०) 1. ಒಂದು ಕರುಹಾಕಿದ ಹಸು, ಮೊದಲನೆಯ ಸಲ ಪ್ರಸವಿಸಿದ ಹಸು. गृह्णाति सकृद्गर्भम्—ग्रह (उपादाने) "क्तिच्" (३-३-१७४)। 2. ಒಂದು ಮಗುವನ್ನು ಪ್ರಸವಿಸಿದ ಹೆಂಗಸು.

**गृह ಗೃಹ** (न०) 1. ಮನೆ. गृह्णाति धान्यादिकं—ग्रह (उपादाने) "कः" (३-१-१४४)। "जगत्पते जाम्बवतीमिहार्हणां गृहाण पत्नीं गृहमागतःस्वयम्" याद० १४-४३। 2. ಕಳತ್ರ, ಪತ್ನಿ. ಯಾವಾಗಲೂ ಗೃಹದಲ್ಲೇ ಇರುವುದರಿಂದ ಪತ್ನಿಗೂ ಗೃಹವೆಂದು ಹೆಸರು. ಆದುದರಿಂದಲೇ "गृहिणी गृहमुच्यते" ಎಂಬ ವಚನವಿರುವುದು. 3. ಗೃಹಸ್ಥಾಶ್ರಮ. "तदुपहितकुटुम्बः शान्तिमार्गोत्सुकोऽभूत् न हि सति कुलधुर्ये सूर्यवंश्या गृहाय" रघु० ७-७१। (पुं० ब० व०) **गृहाः ಗೃಹಾಃ.** 4. ಮನೆ, ವಾಸಸ್ಥಳ, "इमे नो गृहाः, यावत्प्रविशामि" मुद्रा० १। 5. ಕಳತ್ರ, ಪತ್ನಿ. 6. ಮನೆಯಲ್ಲಿ ಯಾವಾಗಲೂ ಇರುವ ಪರಿವಾರದವರು, ಸಂಸಾರ, ಕುಟುಂಬ. "गृहं गृहाश्च पुंभूम्नि कलत्रेऽपि च सद्मनि" मेदि०। 7. ನಾಮಧೇಯ. ಹೆಸರು. 8. ಮೇಷ ಮೊದಲಾದ ಹನ್ನೆರಡು ರಾಶಿಗಳು. "गृहस्थस्य क्रियाः सर्वाः न सिध्यन्ति गृहं विना। यतस्तस्मात् गृहारम्भप्रवेशसमयं ब्रुवे। परगेहे कृताः सर्वाः श्रौतस्मार्तादिकाः क्रियाः। निष्फलाः स्युर्यतस्तस्मादधीशः फलमश्नुते"। ಆದುದರಿಂದ ಯಾಗಾದಿಗಳನ್ನು ಸ್ವಂತಮನೆಯಲ್ಲಿ ಆಚರಿಸಬೇಕು.

**गृहकच्छप ಗೃಹಕಚ್ಛಪ** (पुं०) ಒರಳು ಗುಂಡು, ರುಬ್ಬುವ ಗುಂಡುಕಲ್ಲು. गृहे कच्छप इव।

**गृहकपोत ಗೃಹಕಪೋತ** (पुं०) ಮನೆಯಲ್ಲಿ ಸಾಕಿ ಪಳಗಿಸಲ್ಪಟ್ಟ ಪಾರಿವಾಳದ ಹಕ್ಕಿ. "आवर्तिभिर्गृहकपोतशिरोधराभैः" माघ० ४-५२।

**गृहकर्तृ ಗೃಹಕರ್ತೃ** (पुं०) 1. ಗುಬ್ಬಚ್ಚಿ. (वि०) 2. ಗೃಹನಿರ್ಮಾಣ ಮಾಡುವವನು, ಮನೆಯನ್ನು ಕಟ್ಟುವವನು. गृहं करोति—डु कृञ् (करणे) "तृच्" (३-१-१३३)। स्त्रियाम् "ङीप्" (४-१-५)। **-कर्त्री -ಕರ್ತ್ರೀ.**

**गृहकर्मन् ಗೃಹಕರ್ಮನ್** (न०) 1. ಮನೆಯ ಕೆಲಸ. 2. ಗೃಹನಿರ್ಮಾಣಕಾರ್ಯ. **ಗೃಹನಿರ್ಮಾಣಕ್ಕೆ ಯೋಗ್ಯವಾದ ಭೂಮಿ:** ಶುಕ್ಲವರ್ಣದ ಮತ್ತು ಹಳ್ಳತಿಟ್ಟಿಲ್ಲದೆ ಸಮವಾಗಿರುವ ಭೂಮಿಯು ಶ್ರೇಷ್ಠವಾದುದು. "सर्वेषां चैव वर्णानां समभूमिः शुभावहा। शुक्लवर्णा च सर्वेषां शुभा भूमिरुदाहृता"। **ಗೃಹನಿರ್ಮಾಣಕ್ಕೆ ನಿಷಿದ್ಧವಾದ ಮರಗಳು:** ಹಾಲುತೊಟ್ಟಿಕ್ಕುವ ಮರಗಳು, ಪಕ್ಷಿಗಳು ವಾಸಮಾಡುವ ಮರಗಳು, ಗಾಳಿಯಿಂದ ಬಿದ್ದ ಮತ್ತು ಬೆಂಕಿಯಿಂದ ಸುಡಲ್ಪಟ್ಟ ಮರಗಳು, ಆನೆಯಿಂದ ಮುರಿಯಲ್ಪಟ್ಟ ಮತ್ತು ಸಿಡಿಲುಬಡಿದ ಮರಗಳು. ಚೈತ್ಯ ಮತ್ತು ದೇವಸ್ಥಾನಗಳಲ್ಲಿ ಬೆಳೆದ ಮರಗಳು, ರುದ್ರಭೂಮಿಯಲ್ಲಿ ಬೆಳೆದ ಮರಗಳು, ದೇವತೆಗಳು ವಾಸಿಸುವ ಮರಗಳು, ಈಚಲು ಬೇವು ಮತ್ತು ತಾರೆ ಮರಗಳು, ಮುಳ್ಳು ಮರಗಳು ಇವೆಲ್ಲವೂ ಗೃಹನಿರ್ಮಾಣಕಾರ್ಯಕ್ಕೆ ಕೂಡದು. "क्षीरिवृक्षोद्भवं दारु गृहेषु न निवेशयेत्। कृताधिवासं विहगैः अनिलानलपीडितम्। गजैर्विभग्नं च तथा विद्युन्निर्घातपीडितम्। चैत्यदेवालयोत्पन्नं वज्रभग्नं श्मशानजम्। देवाद्यधिष्ठितं दारु नीपनिम्बविभीतकान्। कण्टकिनोऽसारतरून् वर्जयेत् गृहकर्मणि" ज्योतिषतन्त्रम्।

**ಕೂಪಖನನದ ಫಲ:** ಐಶಾನಾದಿ ದಿಕ್ಕುಗಳಲ್ಲಿ ಬಾವಿಯನ್ನು ತೋಡಿದರೆ ಅದರ ಫಲ : ವಾಸ್ತುಪುರುಷನ (ಮನೆಯ) ಮಧ್ಯದಲ್ಲಿ ಬಾವಿಯನ್ನು ತೋಡಿದರೆ ಯಜಮಾನನಿಗೆ ಅರ್ಥನಾಶವಾಗುವುದು.

ಐಶಾನದಲ್ಲಿ ಬಾವಿಯಿದ್ದರೆ ಪುಷ್ಟಿ.
ಪೂರ್ವದಿಕ್ಕಿನಲ್ಲಿ ,, ಐಶ್ವರ್ಯವೃದ್ಧಿ.
ಆಗ್ನೇಯದಲ್ಲಿ ,, ಪುತ್ರನಾಶ.
ದಕ್ಷಿಣದಲ್ಲಿ ,, ಸ್ತ್ರೀವಿನಾಶ.
ನೈರುತ್ಯದಲ್ಲಿ ,, ಮನೆ ಕಟ್ಟಿದವನ ಮರಣ.
ಪಶ್ಚಿಮದಲ್ಲಿ ,, ಸಂಪತ್ತು.
ವಾಯುವ್ಯದಲ್ಲಿ ,, ಶತ್ರುಪೀಡೆ.
ಉತ್ತರದಲ್ಲಿ ,, ಸೌಖ್ಯ.

**ಗೃಹನಿರ್ಮಾಣ ಮಾಸ ಫಲ** (ಚಾಂದ್ರರೀತ್ಯಾ) : "चैत्रे व्याधिमवाप्नोति यो नवं कारयेद्गृहम्। वैशाखे धनरत्नानि ज्येष्ठे मृत्यु तथैव च। आषाढे भृत्यरत्नानि पशुवर्जमवाप्नुयात्। श्रावणे मित्रलाभं च हानिं भाद्रपदे तथा। युद्धं चैवाश्विने मासि कार्तिके धनधान्यकम्। धनवृद्धि मार्गशीर्षे पौषे तस्करतो भयम्। माघे चाग्निभयं विद्याल्लक्ष्मीवृद्धिश्च फाल्गुने"।

(ಸೌರರೀತ್ಯಾ) : "गृहसंस्थापनं सूर्ये मेषस्थे शुभदं भवेत्। वृषस्थे धनवृद्धिः स्यात् मिथुने मरणं भवेत्। कर्कटे शुभदं प्रोक्तं सिंहे भृत्यविवर्धनम्। कन्या रोगं तुला सौख्यं वृश्चिके धनधान्यकम्। कार्मुके च महाहानिर्मकरे स्याद्धनागमः। कुम्भेऽर्के रत्नलाभः स्यान्मीने मृत्युभयावहम्" विश्वकर्मविरचितं वास्तुशास्त्रम्।

**गृहकर्मकर ಗೃಹಕರ್ಮಕರ** (पुं०) ಮನೆಯ ಆಳು, ಮನೆಯ ಕೆಲಸಮಾಡುವವನು.

**गृहकारक ಗೃಹಕಾರಕ** (पुं०) ಮನೆಯನ್ನು ಕಟ್ಟುವವನು, ಗೃಹನಿರ್ಮಾಣ ಮಾಡುವವನು. गृहं करोति – डु कृञ् (करणे) "ण्वुल्" (३-१-१३३)। ಇವನೊಬ್ಬ ಮಿಶ್ರ ಜಾತಿಯವನು. "मृद्दण्डचक्रसंयोगात् कुम्भकारो यथा घटम्। करोति तृणमृत्काष्ठैः गृहं वा गृहकारकः" याज्ञ० ३-१४६।

**गृहकारिन् ಗೃಹಕಾರಿನ್** (पुं०) 1. ಮನೆಯನ್ನು ಕಟ್ಟುವವನು. ಗೃಹನಿರ್ಮಾಣ ಮಾಡುವವನು. गृहं करोति–डु कृञ् (करणे) "णिनिः" (३-१-१३४)। 2. ಕಣಜದ ಹುಳು. ಗೃಹೋಪಕರಣ (ಮನೆಯ ಬಳಕೆಯ ವಸ್ತು)ಗಳನ್ನು ಅಪಹರಿಸಿದವನು ಕಣಜದ ಹುಳುವಾಗಿ ಹುಟ್ಟುವನು. "बको भवति हृत्वाग्निं गृहकारी ह्युपस्करम्" मनु० १२-६६।

**गृहकुक्कुट ಗೃಹಕುಕ್ಕುಟ** (पुं०) ಮನೆಯಲ್ಲಿ ಸಾಕಿದ ಕೋಳಿ. गृहे कुक्कुटः। "श्वेताय दद्याद्गृहकुक्कुटाय चतुर्थभक्ताय बुभुक्षिताय" सुश्रुत० चिकित्सा० ९-१९।

**गृहगोधा ಗೃಹಗೋಧಾ** (स्त्री०) ಗೌಳಿ, ಹಲ್ಲಿ. गृहस्य गोधेव।

**गृहगोधिका ಗೃಹಗೋಧಿಕಾ** (स्त्री०) ಗೌಳಿ, ಹಲ್ಲಿ. अल्पा गोधा गोधिका, गृहस्य गोधिका।

**गृहचुल्ली ಗೃಹಚುಲ್ಲೀ** (स्त्री०) ಪೂರ್ವ ಮತ್ತು ಪಶ್ಚಿಮಾಭಿಮುಖವಾದ ಎರಡು ಸಮಾನವಾದ ಕೊಠಡಿಗಳಿಂದ ಕೂಡಿದ ಮನೆ. "पूर्वापरे तु शाले गृहचुल्ली दक्षिणोत्तरे काचम्" बृहत्सं० ४३-४०।

**गृहच्छिद्र ಗೃಹಚ್ಛಿದ್ರ** (न०) ಮನೆಯಲ್ಲಿ ಹುಟ್ಟುವ ಮನಸ್ತಾಪ, –ಕಚ್ಚಾಟ, –ಭಿನ್ನಾಭಿಪ್ರಾಯ, –ಜಗಳ.

**गृहज ಗೃಹಜ** (पुं०) ಮನೆಯ ದಾಸಿಯಲ್ಲಿ ಹುಟ್ಟಿದವನು, ಸೇವಕಿಯ ಮಗ. "ध्वजाहृतो भक्तदासो गृहजः क्रीतदत्रिमौ। पैत्रिको दण्डदासश्च सप्तैते दासयोनयः" मनु० ८-४१५।

**गृहजन ಗೃಹಜನ** (पुं०) ಕುಟುಂಬದ ಜನರು, ಮನೆಯ ಸಂಸಾರಕ್ಕೆ ಸೇರಿದವರು, ಪುತ್ರ ಹೆಂಡತಿ ಮೊದಲಾದವರು. "गृहजनमाहूय पृच्छामि" मुद्रा०।

**गृहतटी ಗೃಹತಟೀ** (स्त्री०) ಜಗಲಿ, ಮನೆಯ ಮುಂಭಾಗ. गृहस्य तटीव।

**गृहदीप्ति ಗೃಹದೀಪ್ತಿ** (स्त्री०) ಹೆಂಗಸು, ಮನೆಯನ್ನು ಪ್ರಕಾಶಗೊಳಿಸುವ ಗೃಹಲಕ್ಷ್ಮಿ. "प्रजनार्थं महाभागा पूजार्हा गृहदीप्तयः" मनु० ९-२६।

**गृहदेवता ಗೃಹದೇವತಾ** (स्त्री०) ವಾಸ್ತುಪುರುಷನ ಶರೀರದಲ್ಲಿರುವ ಅಗ್ನಿ ಮೊದಲಾದ ನಲವತ್ತೈದು ದೇವತೆಗಳು. गृहे वास्तौ देवता।

**गृहदेवी ಗೃಹದೇವೀ** (स्त्री०) ಮನೆಯ ಗೋಡೆಯ ಮೇಲೆ ಬರೆದು ಪೂಜಿಸಲ್ಪಡುವ ದೇವತೆ. ಜರೆಯೆಂಬ ರಾಕ್ಷಸಿ. गृहे तत्कुडचे विलिख्य पूज्या देवी। "जरा नामास्मि भद्रं ते राक्षसी कामरूपिणी। तव वेश्मनि राजेन्द्र पूजिता न्यवसं सुखम्। गृहे गृहे मनुष्याणां नित्यं तिष्ठामि राक्षसी। गृहदेवीति नाम्ना वै पुरा सृष्टा स्वयंभुवा। दानवानां विनाशाय स्थापिता दिव्यरूपिणी। यो मां भक्त्या लिखेत् कुडचे सुपुत्रां यौवनान्विताम्।

गृहे तस्य भवेद्वृद्धिरन्यथा हानिमाप्नुयात्। गन्धपुष्पैस्तथा धूपैः भक्ष्यैर्भोज्यैश्च पूजिता। साऽहं प्रत्युपकारार्थं चिन्तयाम्यनिशं तव" भा० सभा० १७।

**गृहदेहली ಗೃಹದೇಹಲೀ** (स्त्री०) ಮನೆಯ ಹೊಸ್ತಿಲು. गृहस्य देहली। "यासां बलिः सपदि मद्गृहदेहलीनाम्" मृच्छ० १-२।

**गृहद्रुम ಗೃಹದ್ರುಮ** (पुं०) ಕುರಟಿಗೆ ಗಿಡ. गृहमिव द्रुमः।

**गृहद्वार ಗೃಹದ್ವಾರ** (न०) ಮನೆಯ ಬಾಗಿಲು.

**गृहनाशन ಗೃಹನಾಶನ** (पुं०) ಕಾಡುಪಾರಿವಾಳದ ಹಕ್ಕಿ.

**गृहनीड ಗೃಹನೀಡ** (पुं०) ಮನೆಯಲ್ಲಿ ಗೂಡು ಕಟ್ಟಿಕೊಳ್ಳುವ ಗುಬ್ಬಚ್ಚಿ. गृहे नीडमस्य।

**गृहप ಗೃಹಪ** (पुं०) ಮನೆಯ ಯಜಮಾನ. गृहं पाति— पा (रक्षणे) "कः" (३-२-३)।

**गृहपति ಗೃಹಪತಿ** (पुं०) 1. ಮನೆಯ ಯಜಮಾನ. गृहस्य पतिः। 2. ಮಂತ್ರಿ. "भवेद्गृहपतिः पुंसि गृहस्थेऽपि च मन्त्रिणि" मेदि०। 3. ಯಾಗ ಮಾಡಿದವನು. "गृहपतिर्गृही सत्री" हेम०। 4. ಯಜಮಾನ, ಪ್ರಧಾನ, ಗ್ರಾಮದ ಮುಖ್ಯಸ್ಥ. 5. ವಿದ್ಯಾಭ್ಯಾಸ ಮುಗಿದನಂತರ ಮದುವೆಯಾದವನು, ಗೃಹಸ್ಥಾಶ್ರಮವನ್ನು ಸ್ವೀಕರಿಸಿದವನು.

**गृहपाल ಗೃಹಪಾಲ** (पुं०) 1. ಮನೆಯನ್ನು ರಕ್ಷಿಸುವವನು. 2. ನಾಯಿ. गृहं पालयति — पाल (रक्षणे) + णिच् "अण्" (३-२-१)।

**गृहप्रवेश ಗೃಹಪ್ರವೇಶ** (पुं०) ಶುಭಮುಹೂರ್ತದಲ್ಲಿ ಮನೆಗೆ ಶಾಸ್ತ್ರೋಕ್ತವಾಗಿ ಪ್ರವೇಶಿಸುವುದು. गृहे शास्त्रविधानेन प्रवेशः।

**गृहपोतक ಗೃಹಪೋತಕ** (पुं०) ವಾಸ್ತುಪುರುಷನ ಸ್ಥಾನ ಅಥವಾ ಗೃಹವಾಸ್ತು.

**गृहबभ्रु ಗೃಹಬಭ್ರು** (पुं०) ಮನೆಯಲ್ಲಿ ಸಾಕಿದ ಮುಂಗಸಿ. गृहस्थितो बभ्रुः।

**गृहबलि ಗೃಹಬಲಿ** (स्त्री०) ವೈಶ್ವದೇವವೆಂಬ ಒಂದು ಯಜ್ಞ, ಭೂತಬಲಿ, ಭೂತಯಜ್ಞ, ಪ್ರತಿದಿನವೂ ಗೃಹಸ್ಥನು ಆಚರಿಸಬೇಕಾದ ಪಂಚಮಹಾಯಜ್ಞಗಳಲ್ಲೊಂದು. गृहे देयो बलिः। "ततो गृहबलिं कुर्यादिति धर्मो व्यवस्थितः" मनु० ३-२६५।

**गृहबलिभुज् ಗೃಹಬಲಿಭುಜ್** (पुं०) 1. ವಾಯಸ, ಕಾಗೆ. 2. ಗುಬ್ಬಚ್ಚಿ. गृहबलिं भुङ्क्ते — भुज (पालनाभ्यवहारयोः) "क्विप्" (३-२-७६)। "नीडारम्भैर्गृहबलिभुजामाकुलग्रामचैत्याः" मेघ० १-२३।

**गृहभङ्ग ಗೃಹಭಂಗ** (पुं०) 1. ಮನೆ ಮುರಿಯುವುದು, ಮನೆಯವರಲ್ಲಿ ಅಂತಃಕಲಹವನ್ನುಂಟುಮಾಡಿ ಸಂಸಾರವನ್ನು ಕೆಡಿಸುವುದು. 2. ಮನೆಯನ್ನು ಒಡೆದುಹಾಕುವುದು, ಮನೆಯನ್ನು ಕೆಡವುವುದು. ಇದೇ ಅರ್ಥದಲ್ಲಿ **–भञ्जनम् –ಭಂಜನವ್.**

**गृहभर्तृ ಗೃಹಭರ್ತೃ** (पुं०) ಮನೆಯ ಯಜಮಾನ. गृहस्य भर्ता। "गृहभर्तुस्तत्तुल्ये पीडामङ्गे प्रयच्छन्ति" बृहत्सं० ४३-५८।

**गृहभेदिन् ಗೃಹಭೇದಿನ್** (वि०) ಗೃಹಚ್ಛಿದ್ರವನ್ನು ಉಂಟುಮಾಡುವ, ಮನೆಯವರಲ್ಲಿ ಕಲಹವನ್ನು ಉಂಟುಮಾಡುವ, ಮನೆಯನ್ನು ಮುರಿಯುವ. गृहं भिनत्ति — भिदिर् (विदारणे) "णिनिः" (३-२-७८)।

**गृहभोजिन् ಗೃಹಭೋಜಿನ್** (वि०) ಮನೆಯಲ್ಲೇ ಇದ್ದುಕೊಂಡು ಊಟಮಾಡುವವನು, ಸಹವಾಸಿ.

**गृहमणि ಗೃಹಮಣಿ** (पुं०) ದೀಪ. गृहे मणिरिव। "दशेन्धनो गृहमणिः स्नेहाशः कज्जलध्वजः" हारा०।

**गृहमाचिका ಗೃಹಮಾಚಿಕಾ** (स्त्री०) ಕಪಟಹಕ್ಕಿ, ಬಾವಲಿ ಹಕ್ಕಿ. "चर्मचटयां तु जननी गृहमाचिका" त्रिकाण्ड०।

**गृहमार्जनी ಗೃಹಮಾರ್ಜನೀ** (स्त्री०) ಮನೆಯನ್ನು ಗುಡಿಸಿ ಚೊಕ್ಕಟಮಾಡುವ ಸೇವಕಿ. गृहं मार्ष्टि — मृजू (शुद्धौ) "ल्युः" (३-१-१३४)। "तपश्चरन्तीमाज्ञाय स्वपादस्पर्शनाशया। सख्योपेत्याग्रहीत् पाणिं योऽहं तद्गृहमार्जनी" भाग० १०-८३-११।

**गृहमृग ಗೃಹಮೃಗ** (पुं०) ನಾಯಿ. गृहे मृग इव।

**गृहमेध ಗೃಹಮೇಧ** (पुं०) 1. ಗೃಹಸ್ಥ, ಪತ್ನಿಯೊಡನೆ ಕೂಡಿರುವವನು. गृहेण पत्न्या मेधते संगच्छते — मेधृ (संगमे) "अच्" (३-१-१३४)। 2. ಪಂಚಸೂನಾ ನಿಮಿತ್ತವಾದ ಹಿಂಸಾಕಾರ್ಯ. (1) चुल्ली (ಒಲೆ), (2) पेषणी (ಅರೆಯುವ ಕಲ್ಲು), (3) उपस्करः (ಗೃಹೋಪಕರಣವಾದ ಕಸಬರಿಕೆ ಮುಂತಾದುದು), (4) कण्डनी (ಗುಂಡುಕಲ್ಲು, ಒನಕೆ) ಮತ್ತು (5) ನೀರಿನ ಪಾತ್ರೆ, ಇವು ಐದೂ ಗೃಹಸ್ಥನಿಗೆ ಪಾಪವನ್ನು ಉಂಟುಮಾಡತಕ್ಕವು. मेधृ (हिंसायाम्) भावे "घञ्" (३-३-१८)। "पञ्चसूना गृहस्थस्य चुल्ली पेषण्युपस्करः। कण्डनी चोदकुम्भश्च बध्यते यास्तु वाहयन्" मनु० ३-६८। 3. ಪಂಚಯಜ್ಞಗಳನ್ನು ಮಾಡುವವನು. 4. ಮರುದ್ದೇವತೆ.

**गृहमेधिन् ಗೃಹಮೇಧಿನ್** (ಪುಂ) 1. ಗೃಹಸ್ಥ, ಗೃಹಯಜ್ಞಗಳನ್ನು ಆಚರಿಸುವವನು. गृहेण पत्न्या संगच्छते— मेधृ (संगमे) "णिनिः" (३-२-७८)। "यशसे विजिगीषूणां प्रजायै गृहमेधिनाम्" रघु० १-६। "अध्यापनं ब्रह्मयज्ञः पितृयज्ञस्तु तर्पणम्। होमो दैवो बलिर्भौतो नृयज्ञोऽतिथिपूजनम्। पञ्चैतान् यो महायज्ञान् न हापयति शक्तितः। स गृहेऽपि वसन्नित्यं सूनादोषैर्न लिप्यते" मनु० ३-७०, ७१। 2. ಪಂಚಸೂನಾನಿಮಿತ್ತವಾದ ಹಿಂಸಾಕಾರ್ಯವನ್ನು ಆಚರಿಸುವ ಗೃಹಸ್ಥ. ["गृहमेध" ಪದದಲ್ಲಿ ನೋಡಿ.] गृहमेधः पञ्चसूनानिमित्तहिंसा अस्त्यस्य "इनिः" (५-२-११५)। स्त्रियाम् "ङीप्" (४-१-५)। **–मेधिनी –ಮೇಧಿನೀ.** ಪತ್ನಿ. ಪತ್ನಿಗೂ ಯಜ್ಞಸಂಬಂಧವಿರುವುದರಿಂದ ಈ ಹೆಸರು. "न व्यचष्ट वरारोहां गृहिणीं गृहमेधिनीम्" भाग० ४-२६-१३। 3. ಮರುದ್ದೇವತೆ.

**गृहमेधीय ಗೃಹಮೇಧೀಯ** (वि०) ಮರುದ್ದೇವತಾಕವಾದ ಹವಿಸ್ಸು ಮೊದಲಾದುದು. गृहमेधो देवता अस्य वा "छः" (४-२-३२)। पक्षे "यत्" **–मेध्यम् –ಮೇಧ್ಯಮ್.**

**गृहयन्त्र ಗೃಹಯಂತ್ರ** (न०) 1. ಮನೆಯಲ್ಲಿ ಬಟ್ಟೆಗಳನ್ನು ಹರವಲು ಹಾಕಿರುವ ಕಂಬಿ ಅಥವಾ ತಂತಿ ಮುಂತಾದುದು. गृहे यन्त्रम्। 2. ಉತ್ಸವ ದಿವಸಗಳಲ್ಲಿ ಧ್ವಜಗಳನ್ನು ಏರಿಸಲು ಏರ್ಪಡಿಸಿರುವ ಮರದ ಅಥವಾ ಲೋಹದ ಕಂಬ. "गृहयन्त्रपताकाश्रीरपौरादरनिर्मिता" कुमा० ६-४१।

**गृहयालु ಗೃಹಯಾಲು** (वि०) ಗ್ರಹಿಸುವ ಸ್ವಭಾವದ, ಸ್ವೀಕರಿಸುವ ಸ್ವಭಾವವುಳ್ಳ. गृहयति – गृह (ग्रहणे) + णिच् "आलुच्" (३-२-१५८)।

**गृहवाटिका ಗೃಹವಾಟಿಕಾ** (स्त्री०) ಮನೆಗೆ ಸೇರಿದಂತಿರುವ ಉದ್ಯಾನವನ, ಮನೆಯ ಹತ್ತಿರವಿರುವ ಉಪವನ. गृहसमीपे वाटिकेव। "निष्कुटो गृहवाटिका" हारा०।

**गृहवित्त ಗೃಹವಿತ್ತ** (वि०) ಮನೆಯ ಯಜಮಾನ, ಮನೆಯೇ ಐಶ್ವರ್ಯವಾಗಿ ಉಳ್ಳವನು. गृहं वित्तं यस्य।

**गृहसंवेशक ಗೃಹಸಂವೇಶಕ** (पुं०) ವಾಸ್ತುವಿದ್ಯೆಯಿಂದ ಜೀವನ ನಡೆಸುವವನು, ಮನೆಯನ್ನು ಕಟ್ಟಿ ಅದರಿಂದ ಜೀವಿಸುವವನು.

**गृहसार ಗೃಹಸಾರ** (पुं०) ಆಸ್ತಿ, ಸ್ವತ್ತು, ಒಡವೆ ಮುಂತಾದುವು. गृहस्य सारः। "गृहीतगृहसारमेनं सपुत्रकलत्रं संयम्य" मुद्रा० १।

**गृहस्थ ಗೃಹಸ್ಥ** (पुं०) ಗೃಹದಲ್ಲಿ ಪತ್ನಿಯೊಡನೆ ಇರುವವನು, ಎರಡನೆಯ (ಗೃಹಸ್ಥ) ಆಶ್ರಮವನ್ನು ಸ್ವೀಕರಿಸಿದವನು, ಮನೆಯ ಯಜಮಾನ. गृहे दारेषु तिष्ठति — ष्ठा (गतिनिवृत्तौ) "कः" (३-२-४)। "गृहस्थस्तु यदा पश्येद्वलीपलितमात्मनः। अपत्यस्यैव चापत्यं तदारण्यं समाश्रयेत्" मनु० ६-२।

**गृहस्थाश्रम ಗೃಹಸ್ಥಾಶ್ರಮ** (पुंन०) ಬ್ರಹ್ಮಚರ್ಯ ಮೊದಲಾದ ನಾಲ್ಕು ಆಶ್ರಮಗಳಲ್ಲೊಂದು, ವಿದ್ಯಾಭ್ಯಾಸ ಪೂರ್ಣವಾದನಂತರ ವಿವಾಹ ಮಾಡಿಕೊಂಡು ಸ್ವೀಕರಿಸುವ ಆಶ್ರಮ. गृहस्थरूपमाश्रमम्।

**गृहस्थधर्म ಗೃಹಸ್ಥಧರ್ಮ** (पुं०) ಪತ್ನೀಸಮೇತನಾಗಿ ಮನೆಯ ಯಜಮಾನನು ಆಚರಿಸಬೇಕಾದ ಧರ್ಮ. गृहस्थस्य धर्मः। [ಗೃಹಸ್ಥನ ಕರ್ತವ್ಯ :—ವಿದ್ಯಾಭ್ಯಾಸ ಪೂರ್ತಿಯಾದ ಬಳಿಕ ಗುರುಗಳ ಅನುಮತಿಯಿಂದ ಪ್ರತಸಮಾವರ್ತನಮಾಡಿ ಸತ್ಕುಲಪ್ರಸೂತಳಾದ ಲಕ್ಷಣೋಪೇತಳಾದ ಕನ್ಯೆಯನ್ನು ಮದುವೆಯಾಗಬೇಕು. ಗೃಹಸ್ಥನಾಗಿ ಪಂಚಸೂನಾನಿಮಿತ್ತವಾದ ಹಿಂಸಾಕೃತ್ಯಗಳಿಗೆ ಪ್ರಾಯಶ್ಚಿತ್ತವಾಗಿ ಪಂಚಯಜ್ಞಗಳನ್ನು ಆಚರಿಸಬೇಕು. [ಪಂಚಸೂನಾ : "गृहमेध" ಪದದಲ್ಲಿ ನೋಡಿ.] (1) ब्रह्मयज्ञः, (2) देवयज्ञः, (3) पितृयज्ञः, (4) भूतयज्ञः ಮತ್ತು (5) मनुष्ययज्ञः ಇವು ಐದೂ ಗೃಹಸ್ಥನು ಪ್ರತಿದಿನದಲ್ಲೂ ಆಚರಿಸಬೇಕಾದ ಪಂಚಮಹಾಯಜ್ಞಗಳು. ಗೃಹಸ್ಥನು ಅಗ್ನಿಯಲ್ಲಿ ಹೋಮಮಾಡಿದರೆ ಆ ಹವಿಸ್ಸು ಸೂರ್ಯನನ್ನು ಸೇರುವುದು. ಸೂರ್ಯನಿಂದ ಮಳೆಯಾಗುವುದು. ಮಳೆಯಿಂದ ಬೆಳೆ (ಅನ್ನ). ಅದರಿಂದ ಜನರು ಬದುಕುವರು. ಸಕಲ ಪ್ರಾಣಿಗಳೂ ವಾಯುವನ್ನು ಆಶ್ರಯಿಸಿ ಜೀವಿಸಿರುವಂತೆ ಎಲ್ಲಾ ಆಶ್ರಮಗಳೂ ಗೃಹಸ್ಥಾಶ್ರಮವನ್ನು ಅವಲಂಬಿಸಿರುವುವು. "अग्नौ प्रास्ताहुतिः सम्यगादित्यमुपतिष्ठते। आदित्याज्जायते वृष्टिः वृष्टेरन्नं ततः प्रजाः। यथा वायुं समाश्रित्य वर्तन्ते सर्वजन्तवः। तथा गृहस्थमाश्रित्य वर्तन्ते सर्व आश्रमाः" मनु० ३-७६, ७७। ಉಳಿದ ಎಲ್ಲಾ ಆಶ್ರಮಗಳೂ ಗೃಹಸ್ಥನನ್ನು ಆಶ್ರಯಿಸಿ ಜೀವಿಸಬೇಕಾಗಿರುವುದರಿಂದ ಆ ಗೃಹಸ್ಥಾಶ್ರಮಧರ್ಮವನ್ನು ಚೆನ್ನಾಗಿ ಅನುಷ್ಠಿಸಬೇಕು. ವೇದಾಧ್ಯಯನದಿಂದ ಋಷಿಗಳನ್ನೂ ಹೋಮ (ಅಗ್ನಿಕಾರ್ಯ) ದಿಂದ ದೇವತೆಗಳನ್ನೂ ತರ್ಪಣಾದಿಗಳಿಂದ ಪಿತೃಗಳನ್ನೂ ಅನ್ನ (ಅತಿಥಿಸತ್ಕಾರ) ದಿಂದ ಮನುಷ್ಯರನ್ನೂ ಬಲಿಕರ್ಮದಿಂದ ಭೂತ (ಇತರ ಪ್ರಾಣಿ) ಗಳನ್ನೂ ಅರ್ಚಿಸುವುದು ಗೃಹಸ್ಥನ

ಧರ್ಮ. "स्वाध्यायेनार्चयेतर्षीन् होमैर्देवान्यथाविधि। पितॄन् श्राद्धैश्च नॄनन्नैः भूतानि बलिकर्मणा" मनु० ३-८१। ಅತಿಥಿಸತ್ಕಾರಮಾಡಿದ ನಂತರ ದಂಪತಿಗಳಿಬ್ಬರೂ ಭೋಜನ ಮಾಡಬೇಕು. "भुक्तवत्स्वथ विप्रेषु स्वेषु भृत्येषु चैव हि। भुञ्जीयातां ततः पश्चादवशिष्टं तु दम्पती" मनु० ३-११६। ಇತ್ಯಾದಿ.

**गृहस्थाश्रम ಗೃಹಸ್ಥಾಶ್ರಮ** (पुं०) ನಾಲ್ಕು ಆಶ್ರಮಗಳಲ್ಲಿ ಎರಡನೆಯದು, ವಿವಾಹವಾದನಂತರ ಧರ್ಮಚಾರಿಣಿ ಯೊಡನೆ ಕೂಡಿ ಧರ್ಮಕಾರ್ಯಗಳನ್ನು ಮಾಡುವ ಒಂದು ಆಶ್ರಮ. गृहस्थरूपः आश्रमः।

**गृहस्थूणा ಗೃಹಸ್ಥೂಣಾ** (स्त्री०) ಮನೆಗೆ ಆಧಾರವಾದ ಕಂಬ.

**गृहाक्ष ಗೃಹಾಕ್ಷ** (पुं०) ಗವಾಕ್ಷ, ಕಿಟಕಿ. गृहस्य अक्षीव "अच्" (५-४-७६)।

**गृहागत ಗೃಹಾಗತ** (पुं०) 1. ಅತಿಥಿ, ಅನಾಹೂತನಾಗಿ ಮನೆಗೆ ಬಂದವನು. गृहमागतः। (वि०) 2. ಮನೆಗೆ ಬಂದವನು. "सुरेन्द्रमात्राश्रितगर्भगौरवात्प्रयत्नमुक्तासनया गृहागतः" रघु० ३-११।

**गृहाचार ಗೃಹಾಚಾರ** (पुं०) 1. ಮನೆಯ ಯಜಮಾನನ ಕರ್ತವ್ಯ, ಅತಿಥಿಸತ್ಕಾರ ಮುಂತಾದುದು. 2. ಮನೆಯ ಆಚಾರ, ಮನೆಯ ಸಂಪ್ರದಾಯ, ಮನೆಯಲ್ಲಿ ನಡೆದು ಕೊಂಡು ಬಂದ ಪದ್ಧತಿ. गृहे आचारः।

**गृहाधिप ಗೃಹಾಧಿಪ** (पुं०) 1. ಮನೆಯ ಯಜಮಾನ. 2. ಮೇಷಾದಿ ರಾಶಿಗಳ ಅಧಿಪತಿ. **-अधिपतिः -ಅಧಿಪತಿಃ.**

**गृहाभिपालन ಗೃಹಾಭಿಪಾಲನ** (न०) ಮನೆಯನ್ನು ಕಾಯುವುದು. ಮನೆಯನ್ನು ರಕ್ಷಿಸುವುದು.

**गृहाम्बु ಗೃಹಾಂಬು** (न०) ಅಂಬಲಿ, ಗಂಜಿ.

**गृहाम्ल ಗೃಹಾಮ್ಲ** (न०) ಅಂಬಲಿ, ಗಂಜಿ.

**गृहायनिक ಗೃಹಾಯನಿಕ** (पुं०) ಗೃಹಸ್ಥ, ಮನೆಯ ಯಜಮಾನ. गृहरूपमयनमस्त्यस्य "ठन्" (५-२-११५)।

**गृहाराम ಗೃಹಾರಾಮ** (पुं०) ಮನೆಯ ಸಮೀಪದಲ್ಲಿರುವ ಕೈತೋಟ, ಉದ್ಯಾನವನ. गृहे गृहसमीपे आरामः।

**गृहार्थ ಗೃಹಾರ್ಥ** (पुं०) ಮನೆಯ ಕಾರ್ಯ, ಗೃಹಕೃತ್ಯ. "पतिसेवा गुरौ वासो गृहार्थोऽग्निपरिष्क्रिया" मनु० २-६७।

**गृहालिका ಗೃಹಾಲಿಕಾ** (स्त्री०) ಗೌಳಿ, ಹಲ್ಲಿ. गृहे आलिरिव कायति — कै (शब्दे) "कः" (३-२-३)। "गृहगोधा गृहालिका" हारा०।

**गृहावग्रहणी ಗೃಹಾವಗ್ರಹಣೀ** (स्त्री०) ಮನೆಯ ಹೊಸ್ತಿಲು. गृहमवगृह्यतेऽनया—अव+ग्रह (उपादाने) "ल्युट्" (३-३-११७)। "ङीप्" (४-१-१५)।

**गृहाशया ಗೃಹಾಶಯಾ** (स्त्री०) ವೀಳ್ಯದೆಲೆಯ ಬಳ್ಳಿ. गृहे इव छायायुक्तस्थाने आशेते — आ+शीङ् (स्वप्ने) "अच्" (३-२-१५)।

**गृहाश्मन् ಗೃಹಾಶ್ಮನ್** (पुं०) ಗುಂಡುಕಲ್ಲು, ರುಬ್ಬುವ ಕಲ್ಲು, ಅರೆಯುವ ಕಲ್ಲು. गृहस्थितोऽश्मा। "गृहाश्मा गृहकच्छपः" त्रिकाण्ड०।

**गृहाश्रम ಗೃಹಾಶ್ರಮ** (पुं०) ಗೃಹರೂಪವಾದ ಆಶ್ರಮ, ವಿದ್ಯಾಭ್ಯಾಸ ಮುಗಿದನಂತರ ಸ್ನಾತಕನು ಸ್ವೀಕರಿಸುವ ಗೃಹಸ್ಥಾಶ್ರಮ, ನಾಲ್ಕು ಆಶ್ರಮಗಳಲ್ಲಿ ಎರಡನೆಯದು. गृहमेवाश्रमः। "एवं गृहाश्रमे स्थित्वा विधिवत्स्नातको द्विजः। वने वसेत्तु नियतो यथावद्विजितेन्द्रियः" मनु० ६-१।

**गृहाश्रमिन् ಗೃಹಾಶ್ರಮಿನ್** (पुं०) ಗೃಹಸ್ಥ. गृहाश्रमोऽस्यास्ति "इनिः" (५-२-११५)।

**गृहाश्रया ಗೃಹಾಶ್ರಯಾ** (स्त्री०) ವೀಳ್ಯದೆಲೆಯ ಬಳ್ಳಿ.

**गृहासक्त ಗೃಹಾಸಕ್ತ** (पुं०) ಮನೆಯಲ್ಲಿ ಸಾಕಿದ ಮೃಗ ಮತ್ತು ಪಕ್ಷಿಗಳು. गृहे आसक्ताः। "गृहासक्ताः पक्षिमृगाः छेकाः स्युर्गृह्यकाश्च ते" अम०।

**गृहिन् ಗೃಹಿನ್** (पुं०) ಮನೆಯ ಯಜಮಾನ, ಗೃಹಸ್ಥ, ಸಂಸಾರಿ, ಕುಟುಂಬಿ. गृहं भार्यास्त्यस्य "इनिः" (५-२-११५)। "पीडयन्ते गृहिणः कथं नु तनयाविश्लेषदुःखैर्नवैः" शाकु० ४-५।

**गृहिणी ಗೃಹಿಣೀ** (स्त्री०) ಪತ್ನಿ, ಮನೆಯ ಯಜಮಾನಿ. गृहं गृहकृत्यं कर्तव्यत्वेनास्त्यस्याः "इनिः" (५-२-११५)। "ङीप्" (४-१-५)। "प्रायेण गृहिणीनेत्राः कन्यार्थेषु कुटुम्बिनः" कुमा० ६-८५। "न गृहं गृहमित्याहुः गृहिणी गृहमुच्यते"। "यान्त्येवं गृहिणीपदं युवतयो वामाः कुलस्याधयः" शाकु० ४-१७।

**गृहीत ಗೃಹೀತ** (त्रि०) 1. ಸ್ವೀಕರಿಸಲ್ಪಟ್ಟ, ತೆಗೆದುಕೊಳ್ಳಲ್ಪಟ್ಟ. ग्रह (उपादाने) कर्म० "क्तः" (३-२-१०२)। "गृहीतैरन्वगृह्यन्त तेन पोतोपजीविनः" याद० २२-१०२। 2. ಧರಿಸಲ್ಪಟ್ಟ. "गृहीतकुण्डलो गन्तुमन्वमंस्त गदाग्रजः" याद० १६-१३१। 3. ತಿಳಿಯಲ್ಪಟ್ಟ. "गृहीतमध्यात्मदृशा कथञ्चन" माघ० १-३३। 4. ಹಿಡಿಯಲ್ಪಟ್ಟ, ಕೈಗೊಳ್ಳಲ್ಪಟ್ಟ. "संग्रामाध्वरदीक्षितो नरपतिः

पत्नी गृहीतव्रता" वेणी० १-२५। 5. ಹಿಡಿದುಕೊಳ್ಳಲ್ಪಟ್ಟ. "गृहीताः पाणिभिर्वीरैः विकोशाः खड्गराजयः" कुमा० १६-१४। 6. ಪಡೆಯಲ್ಪಟ್ಟ, ಹೊಂದಲ್ಪಟ್ಟ. "पुत्रवती शकुन्तला तच्छापनिवृत्तौ स्मृतिमता दुष्यन्तेन गृहीता" शाकु० ७।

**गृहीतगर्भा ಗೃಹೀತಗರ್ಭಾ** (स्त्री०) ಪತ್ನಿ, ಗರ್ಭಿಣಿ ಹೆಂಗಸು, ಬಸಿರು ಹೆಂಗಸು. गृहीतो गर्भो यया। "गृहीतगर्भाणामार्तववहानां स्रोतसां वर्त्मान्यवरुध्यन्ते गर्भेण" सुश्रुत० शारीर० ४-२४।

**गृहीतचेतस् ಗೃಹೀತಚೇತಸ್** (वि०) ಆಕರ್ಷಿಸಲ್ಪಟ್ಟ ಮನಸ್ಸುಳ್ಳ, ಸೆಳೆಯಲ್ಪಟ್ಟ ಮನಸ್ಸುಳ್ಳ. गृहीतं चेतो यस्य। "अहो अचेन्द्रियारामो योषिन्मय्येह मायया। गृहीतचेताः कृपणः पतिष्ये नरके ध्रुवम्" भाग० ६-१८-३९।

**गृहीतदिश् (क्क) ಗೃಹೀತದಿಶ್ (ಕ್ಕ)** (वि०) ಪಲಾಯನ ಮಾಡಿದ, ತಪ್ಪಿಸಿಕೊಂಡು ಓಡಿಹೋದ. ದಿಕ್ಕುಗಳನ್ನು ಆಶ್ರಯಿಸಿದ. गृहीता दिशो यैः वा "कप्" (५-४-१५४)। "गृहीतदिक्कैरपुनर्निवर्तिभिश्चिराय याथार्थ्यमलम्भि दिग्गजैः" माघ० १-६४।

**गृहीतवत् ಗೃಹೀತವತ್** (वि०) ಸ್ವೀಕರಿಸಿದ, ತೆಗೆದುಕೊಂಡ. ग्रह (उपादाने) "क्तवतुः" (३-२-१०२)।

**गृहीतविद्य ಗೃಹೀತವಿದ್ಯ** (वि०) ವಿದ್ಯೆಯನ್ನು ಗ್ರಹಿಸಿದ, ವಿದ್ಯಾಭ್ಯಾಸ ಮಾಡಿದ, ವಿದ್ಯೆಯನ್ನು ಕಲಿತ. गृहीता विद्या येन।

**गृहीतसार ಗೃಹೀತಸಾರ** (वि०) ನಷ್ಟವಾದ ಶಕ್ತಿಯುಳ್ಳ, ಎಳೆಯಲ್ಪಟ್ಟ ಶಕ್ತಿಯುಳ್ಳ. गृहीतः सारो यस्य। "क्वचिच्च दुःसहेन कायाभ्यन्तरवह्निना गृहीतसारः स्वकुटुम्बाय क्रुध्यति" भाग० ५-१४-१९।

**गृहेनर्दिन् ಗೃಹೇನರ್ದಿನ್** (वि०) ಹೇಡಿ, ಅಂಜುಬುರುಕ. ರಣಭೀರು. गृहे नर्दति – नर्द (शब्दे) "णिनिः" (३-२-७८)। निपा० (२-१-४८)। ಮನೆಯಲ್ಲೇ ಕುಳಿತು ಜಂಭಹೊಡೆಯುವವನು — ಹೊರಗಡೆ ಅಂಜುಬುರುಕ ಎಂಬ ನಿಂದೆಯನ್ನು ಸೂಚಿಸುವ ಅರ್ಥದಲ್ಲಿ ಈ ಪ್ರಯೋಗ.

**गृहेरुह ಗೃಹೇರುಹ** (पुं०) ಮನೆಯಲ್ಲಿ ಹುಟ್ಟಿದ ಮರ. गृहे रोहति – रुह (बीजजन्मादौ) "कः" (३-१-१३५)। "भिन्नभाण्डञ्च खट्वाञ्च कुक्कुटं शुनकं तथा। अप्रशस्तानि सर्वाणि यश्च वृक्षो गृहेरुहः" भा०।

**गृहेश ಗೃಹೇಶ, –ईश्वर –ಈಶ್ವರ** (पुं०) 1. ಮನೆಯ ಯಜಮಾನ, ಗೃಹಸ್ಥ. 2. ಮೇಷ ಮೊದಲಾದ ರಾಶಿಗಳ ಅಧಿಪತಿ. गृहस्य गृहाणां वा ईशः ईश्वरो वा।

**गृहोलिका ಗೃಹೋಳಿಕಾ** (स्त्री०) ಗೌಳಿ. ಪಲ್ಲಿ.

**गृह्णत् ಗೃಹ್ಣತ್** (वि०) 1. ಹಿಡಿದುಕೊಳ್ಳುತ್ತಿರುವ. ग्रह (उपादाने) "शतृ" (३-२-१२४)। "गृह्णन् विषाणे हरवाहनस्य स्पृशन्नुमाकेसरिणं सलीलम्" कुमा० ११-४४। 2. ಸ್ವೀಕರಿಸುತ್ತಿರುವ. स्त्रियाम् "ङीप्" (४-१-६)। गृह्णती ಗೃಹ್ಣತೀ. "शानच्" (३-२-१२४)। गृह्णानः ಗೃಹ್ಣಾನಃ.

**गृह्य ಗೃಹ್ಯ** (पुं०) 1. ಮನೆಯಲ್ಲಿ ಸಾಕಿದ ಪಕ್ಷಿ ಮೃಗಗಳು. ग्रह (उपादाने) "क्यप्" (३-१-११९)। 2. ಗೃಹ್ಯಾಗ್ನಿ. ಬ್ರಾಹ್ಮಣನು ಅಗ್ನಿಕಾರ್ಯಕ್ಕಾಗಿ ರಕ್ಷಿಸಿ ಇಡುವ ಅಗ್ನಿ. 3. ಅಗ್ನಿಹೋತ್ರ. (न०) 4. ಗುದಸ್ಥಾನ, ಮಲದ್ವಾರ. 5. ಮನೆಯಲ್ಲಿ ಆಚರಿಸಬೇಕಾದ ಜಾತಕರ್ಮ ನಾಮಕರಣ ಉಪನಯನ ವಿವಾಹ ಮುಂತಾದ ಕಾರ್ಯ. 6. ಮನೆಯಲ್ಲಿ ಆಚರಿಸಬೇಕಾದ ವೇದವಿಹಿತಕಾರ್ಯಗಳನ್ನು ಕುರಿತ ಸೂತ್ರ, ಗೃಹ್ಯಸೂತ್ರ. (वि०) 7. ಪಕ್ಷಪಾತಿಯಾದ, ತನ್ನ ಕಡೆಯಿರುವ. "ननु वक्तृविशेषनिस्पृहा गुणगृह्या वचने विपश्चितः" किरा० २-५। 8. ಮನೆಯಲ್ಲಿರುವ, ಮನೆಗೆ ಸಂಬಂಧಪಟ್ಟ. 9. ಪರಾಧೀನನಾದ. "गृह्यं तु मलवर्त्मनि। गृह्योऽस्वैरिणि पक्ष्ये च गृहासक्तमृगाण्डजे" मेदि०। (स्त्री०) –ह्या –ಹ್ಯಾ. 10. ಶಾಖಾನಗರ, ಉಪನಗರ, ನಗರದ ಬಡಾವಣೆ. "गृह्या तु शाखानगरे" मेदि०।

**गृह्यक ಗೃಹ್ಯಕ** (पुं०) ಮನೆಯಲ್ಲಿ ಸಾಕಿದ 1. ಪಕ್ಷಿ. 2. ಮೃಗ. (वि०) 3. ಮನೆಗೆ ಸಂಬಂಧಪಟ್ಟ. 4. ಪರಾಧೀನನಾದ. गृह्यते – ग्रह (उपादाने) "क्यप्" (३-१-११९)। स्वार्थे "कन्" (५-४-५)।

**गृह्यकर्मन् ಗೃಹ್ಯಕರ್ಮನ್** (न०) ಮನೆಯಲ್ಲಿ ನಡೆಸಬೇಕಾದ ಮತಸಂಬಂಧವಾದ ಸಂಸ್ಕಾರ, ಗೃಹ್ಯಸೂತ್ರದಲ್ಲಿ ವಿಹಿತವಾದ ಕಾರ್ಯ.

**गृह्यपरिशिष्ट ಗೃಹ್ಯಪರಿಶಿಷ್ಟ** (न०) ಗೃಹ್ಯಕರ್ಮಗಳನ್ನು ಹೇಳುವ ಒಂದು ಗ್ರಂಥ.

**गृह्यमाण ಗೃಹ್ಯಮಾಣ** (वि०) 1. ಹಿಡಿಯಲ್ಪಡುತ್ತಿರುವ. ग्रह (उपादाने) कर्म० "शानच्" (३-२-१२४)। "अनेन चेदिच्छसि गृह्यमाणम्" रघु० ६-२४। 2. ಸ್ವೀಕರಿಸಲ್ಪಡುತ್ತಿರುವ.

**गृहयसूत्र ಗೃಹ್ಯಸೂತ್ರ** (ನಂ) ಗೃಹ್ಯಕರ್ಮಗಳನ್ನು ತಿಳಿಸುವ ಮತ್ತು ವಿಧಿಸುವ ಒಂದು ಸೂತ್ರಗ್ರಂಥ. ವೇದೋಕ್ತವಾದ ಕರ್ಮಗಳನ್ನು ತಿಳಿಸುವ ಒಂದು ಸೂತ್ರಗ್ರಂಥ. गोभिलगृहयसूत्रम् आश्वलायनगृहयसूत्रम् आपस्तम्बगृहयसूत्रम् कात्यायनगृहयसूत्रम् शाङ्खायनगृहयसूत्रम् ಇತ್ಯಾದಿ.

**गृहयाग्नि ಗೃಹ್ಯಾಗ್ನಿ** (ಪುಂ) ಪ್ರತಿಯೊಬ್ಬ ಗೃಹಸ್ಥ ಬ್ರಾಹ್ಮಣನೂ ರಕ್ಷಿಸಬೇಕಾದ ಗಾರ್ಹಪತ್ಯಾಗ್ನಿ.

**गॄ – निगरणे** (तुदा० पर० सक० से०)। गिरति, गिलति। जगार, जगाल। गरिता, गलिता, गरीता, गलीता। गिरतु, गिलतु। अगिरत्, अगिलत्। ಇತ್ಯಾದಿ. ತಿನ್ನು, ಭಕ್ಷಿಸು, ನುಂಗು.

**कर्मणि :**—गीर्यते। जगरे, जगले। गारिता, गालिता। गरिता, गलिता। गीर्यताम्। अगीर्यत। गीर्येत। ಇತ್ಯಾದಿ.

**ಈ ಧಾತುವಿಗೆ ಉಪಸರ್ಗಗಳ ಯೋಗದಿಂದ ಉಂಟಾಗುವ ಅರ್ಥಭೇದಗಳು :**

**(1) अव + गॄ** = (ಈ ಉಪಸರ್ಗಯೋಗದಿಂದ ಈ ಧಾತುವು ಆತ್ಮನೇಪದಿಯಾಗುವುದು.) अवगिरते। ಮೆಲ್ಲಗೆ ಹೇಳು, ತಗ್ಗಿದ ಧ್ವನಿಯಲ್ಲಿ ಹೇಳು.

**(2) उद्+गॄ** = उद्गिरति। ವಾಂತಿಮಾಡು, ಕಕ್ಕು. "प्रशमादर्चिषामेतदनुद्गीर्णसुरायुधम्" कुमा० २-२०।

**(3) सम् + गॄ** = (आत्म०) संगिरते। ಪ್ರತಿಜ್ಞೆ ಮಾಡು. "वसूनि देशांश्च निवर्तयिष्यन् रामं नृपः संगिरमाण एव" भट्टि० ३-८।

**गेन्दुक ಗೇಂದುಕ** (ಪುಂ) ಚೆಂಡು. गाते — गाङ् (गतौ) "विच्" (३-२-७५)। गा गच्छन्निन्दुरिव इवार्थे "कन्" (५-३-९६)।

**गेय ಗೇಯ** (ನಂ) 1. ಗಾನ, ಗೀತ, ಸಂಗೀತ. गीयते — गै (शब्दे) भावे "यत्" (३-४-६८)। निपा०। "अनन्ता वाङ्मयस्याहो गेयस्येव विचित्रता" माघ० २-७२। (वि०) 2. ಗಾಯಕ, ಹಾಡುಗಾರ, ಸಂಗೀತಗಾರ. गै कर्म० "यत्"। निपा०। 3. ಹಾಡಲ್ಪಡುವ. गीयते—गै कर्म० "यत्"। निपा०। "गेयो माणवकः साम्नाम्" सि० कौ०।

**गेयपद ಗೇಯಪದ** (ನಂ) ಆಸನದಲ್ಲಿ ಕುಳಿತವನ ಮುಂದೆ ವೀಣೆ ಮೊದಲಾದ ತಂತೀ ವಾದ್ಯವನ್ನು ನುಡಿಸುವುದು. "तन्त्रीभाण्डं पुरस्कृत्योपविष्टस्यासने पुरः। शुष्कं गानं गेयपदम्" सा० द० ६-११४।

**गेष्णु ಗೇಷ್ಣು** (ಪುಂ) ಗಾಯಕ, ಹಾಡುಗಾರ, ಸಂಗೀತಗಾರ. गै (शब्दे) "इष्णुच्" (उ० ३-१६)।

**गेह ಗೇಹ** (ನಂ) ಮನೆ, ವಾಸಸ್ಥಾನ. गो गणपतिः ईहः ईप्सितो यस्मिन्। "एतान्यपि सतां गेहे नोच्छिद्यन्ते कदाचन" हितो०।

**गेहिन् ಗೇಹಿನ್** (ಪುಂ) ಗೃಹಸ್ಥ, ಮನೆಯ ಯಜಮಾನ. गेहोऽस्यास्ति "इनिः" (५-२-११५)। स्त्रियाम् "ङीप्" (४-१-५)। **गेहिनी ಗೇಹಿನೀ.** ಪತ್ನಿ, ಮನೆಯ ಯಜಮಾನಿ. गेहं गृहकृत्यमस्त्यस्याः। "मद्गेहिन्याः प्रिय इति सखे चेतसा कातरेण" मेघ० २-१४।

**गेहेक्ष्वेडिन् ಗೇಹೇಕ್ಷ್ವೇಡಿನ್** (वि०) ಹೇಡಿ. ಮನೆಯಲ್ಲೇ ಶೌರ್ಯವನ್ನು ತೋರಿಸುವವನು, ಹೊರಗಡೆ ಅಂಜುಬುರುಕ. गेह एव क्ष्वेडते — क्ष्विड (स्नेहे) "णिनिः" (३-२-७८)। निपा० (२-१-४८)।

**गेहेनर्दिन् ಗೇಹೇನರ್ದಿನ್** (वि०) "गृहेनर्दिन्" ಪದವನ್ನು ನೋಡಿ.

**गेहेशूर ಗೇಹೇಶೂರ** (वि०) "गेहेनर्दिन्" ಪದವನ್ನು ನೋಡಿ.

**गेहय ಗೇಹ್ಯ** (वि०) 1. ಮನೆಯಲ್ಲಿರುವ, ಮನೆಯಲ್ಲಿ ಉಂಟಾದ. गेहे भवः। 2. ಮನೆಗೆ ಹಿತವಾದ. गेहाय हितम् "यत्" (५-१-५)।

**गै – शब्दे** (भ्वा० पर० सक० अनि०)। गायति। जगौ। गाता। गास्यति। गायतु। अगायत्। गायेत्। गेयात्। अगासीत्। अगास्यत्। ಶಬ್ದಮಾಡು, ಗಾನಮಾಡು, ಹಾಡು. "आकुमारकथोद्घातं शालिगोप्यो जगुर्यशः" रघु० ४-२०।

**कर्मणि :**—गीयते। जगे। गायिता, गाता। गायिष्यते, गास्यते। गीयताम्। अगीयत। गीयेत। गायिषीष्ट। अगायि। अगायिष्यत।

**णिचि :**—गापयति, –ते। गापयां चकार, –चक्रे, –बभूव, –आस। "जयोदाहरणं बाह्वोर्गापयामास किन्नरान्" रघु० ४-७८। गापयिता। गापयिष्यति, –ते। गापयतु, –ताम्। अगापयत्, –त। गापयेत्, –त। ಇತ್ಯಾದಿ.

**सनि :**—जिगासति। जिगासां चकार, –बभूव, –आस। जिगासिता। जिगासिष्यति। जिगासतु। अजिगासत्। जिगासेत्। ಇತ್ಯಾದಿ.

**कृत्सु :**—गातव्यम्। गानीयम्। गेयम्। गीतम्। गीतवान्। गायन्, गायन्ती। कर्म० गीयमानः। गातुम्। गीतम्। गानम्। गीत्वा। प्रगाय।

**ण्यन्तात् कृत्सु :**—गापयितव्यम्। गापनीयम्। गाप्यम्। गापितः। गापितवान्, गापितवती। गापयन्, गापयन्ती। गापयमानः। गापयितुम्। गापितम्। गापनम्। गापयित्वा। प्रगाप्य।

**ಈ ಧಾತುವಿಗೆ ಉಪಸರ್ಗಗಳ ಯೋಗದಿಂದ ಉಂಟಾಗುವ ಅರ್ಥಭೇದಗಳು :**

**(1) अनु+गै** = अनुगायति। अनुजगौ। ಅನುಸರಿಸಿ ಶಬ್ದಮಾಡು, ಅನಂತರ ಶಬ್ದಮಾಡು. "अनुजगुरथ दिव्यं दुन्दुभिध्वानमाशाः सुरकुसुमनिपातैर्व्योम्नि लक्ष्मीर्वितेने" किरा० ३-६०।

**(2) अभि + गै** = अभिगायति। ಎದುರಿಗೆ ಹಾಡು. "राजधानीषु राज्ञां च समाजेष्वभ्यगायताम्" रामा०।

**(3) अव + गै** = अवगीतम्। ನಿಂದಿಸು, ದೂಷಿಸು.

**(4) उद् + गै** = उद्गायति। ಗಟ್ಟಿಯಾಗಿ ಹಾಡು. "उद्गास्यतामिच्छति किंनराणां तानप्रदायित्वमिवोपगन्तुम्" कुमा० १-८।

**(5) उप+गै** = उपगायति। उपगीतः। 1. ಹತ್ತಿರದಲ್ಲಿ ಹಾಡು. "पिकोपगीतोऽपि शुकस्तुतोऽपि च" नैष० १-१०४। 2. ಹೆಚ್ಚಾಗಿ ಹಾಡು. "निवृत्ततर्षैरुपगीयमानात्" भाग०।

**(6) परि + गै** = परिगायति। परिगीतम्। ಎಲ್ಲಾ ಕಡೆಯಲ್ಲೂ ಹಾಡು. "ऋषिभिः परिगीतानि तानि वक्ष्यामि भूतये"।

**(7) प्र+गै** = प्रगायति। प्रगीयते। 1. ಚೆನ್ನಾಗಿ ಹಾಡು. 2. ಪ್ರಶಂಸೆಮಾಡು, ಹೊಗಳು. "यावत् कीर्तिर्मनुष्यस्य पृथग्लोके प्रगीयते" भा० उद्योग०।

**(8) वि + गै** = विगायति। विगीतः। ನಿಂದಿಸು, ದೂಷಿಸು. "विगीयसे मन्मथदेहदाहिना" नैष० १-७९।

**गैर ಗೈರ** (वि०) 1. ಪರ್ವತದಲ್ಲಿ ಬೆಳೆದ. गिरौ भवः "अण्" (४-३-५३)। स्त्रियाम् "ङीप्" (४-१-१५)। **–री –ರೀ.** (न०) 2. ಒಂದು ಉಪಧಾತು.

**गैरिक ಗೈರಿಕ** (न०) 1. ಬೆಟ್ಟದಲ್ಲಿ ಹುಟ್ಟಿದ ಉಪಧಾತು ಮುಂತಾದುದು. गिरौ भवम् "ठञ्" (वा० ४-३-६०)। 2. ಸುವರ್ಣ, ಚಿನ್ನ. "गृहीतपादसञ्चारो गैरिकाद्रिरिवाबभौ" याद० १६-१०४।

**गैरिकाक्ष ಗೈರಿಕಾಕ್ಷ** (पुं०) ನೀರು ಹಿಪ್ಪೆಮರ. गैरिकमिवाक्षि पुष्पमस्य "षच्" (५-४-११३)।

**गैरेय ಗೈರೇಯ** (न०) 1. ಶಿಲಾಜಿತು. गिरौ भवम् "ढक्" (४-२-९७)। (वि०)2. ಬೆಟ್ಟದಲ್ಲಿ ಹುಟ್ಟಿದ. "गैरेयमर्थ्यं गिरिजमश्मजं च शिलाजतु" अम०।

**गो ಗೋ** (पुं०)1. ವೃಷಭ, ಎತ್ತು. गच्छत्यनेन—गम्लृ (गतौ) "डोः" (उ० २-६७)। "गवां च यानं पृष्ठेन सर्वथैव विगर्हितम्" मनु० ४-७२। 2. ರಶ್ಮಿ, ಕಿರಣ. "त्रयोदशद्वीपवतीं गोभिर्भासयसे महीम्" भा० वन० ३-३३। 3. ಇಂದ್ರನ ವಜ್ರಾಯುಧ. 4. ಸೂರ್ಯ. 5. ಚಂದ್ರ. 6. ಗೋಮೇಧಯಾಗ. 7. ವೃಷಭರಾಶಿ. 8. ಸ್ವರ್ಗ. (स्त्री०) 9. ವಾಕ್ಕು, ಮಾತು. "उवाच यक्षस्तमचोदितोऽपि गां न ह्रीङ्गितज्ञोऽवसरेऽवसीदति" किरा० ४-२०। 10. ಭೂಮಿ. "दुदोह गां स यज्ञाय सस्याय मघवा दिवम्" रघु० १-२६। "पयोधरीभूतचतुःसमुद्रां जुगोप गोरूपधरामिवोर्वीम्" रघु० २-३। 11. ದಿಕ್ಕು. 12. ಧೇನು, ಹಸು, ಆಕಳು. (पुंस्त्री०)13. ರಶ್ಮಿ, ಕಿರಣ. 14. ಕಣ್ಣು. 15. ಬಾಣ. 16. ಮೈಗೂದಲು. (स्त्री० ब० व०) 17. ನೀರು. "गौः क्रतौ वृषभे चन्द्रे वाग्भूदिग्धेनुषु स्त्रियाम्। द्वयोस्तु रश्मिदृग्बाणस्वर्गवज्राम्बुलोमसु" नानार्थर०। "गौः स्वर्गे च बलीवर्दे रश्मौ च कुलिशे पुमान्" मेदि०। 18. ಇಂದ್ರಿಯ.

**गोकण्टक ಗೋಕಂಟಕ** (पुं०)1. ನೆಗ್ಗಿಲು ಗಿಡ. 2. ಹಸುವಿನ ಹೆಜ್ಜೆಯ (ಗೊರಸಿನ) ಗುರುತು. 3. ಹಸುವಿನ ಕಾಲಿನ ಗೊರಸು. (वि०) 4. ಹಸುವಿನ ಕಾಲಿನಿಂದ ತುಳಿಯಲ್ಪಟ್ಟು ಕೆಟ್ಟಿರುವ (ದಾರಿ). ಹಳ್ಳತಿಟ್ಟಾದ (ರಸ್ತೆ). "गोकण्टको गोक्षुरको वनशृङ्गाट इत्यपि" अम०। "गोकण्टको गोक्षुरके गोखुरे स्थपुटीकृते" हेम०।

**गोकर्ण ಗೋಕರ್ಣ** (पुं०) 1. ಸರ್ಪ, ಹಾವು. गौर्नेत्रं कर्णौ यस्य। 2. ಹೇಸರಗತ್ತೆ, ಹೆಣ್ಣು ಕತ್ತೆಯಲ್ಲಿ ಗಂಡು ಕುದುರೆಗೆ ಹುಟ್ಟಿದ ಒಂದು ಬರಕೆ ಜಾತಿಯ ಪ್ರಾಣಿ. गोरिव कर्णावस्य। 3. ಹೆಬ್ಬೆರಳಿನಿಂದ ಅನಾಮಿಕೆಯ (ಉಂಗುರದ ಬೆರಳು) ವರೆಗಿನ ಅಳತೆ, ಒಂದು ಗೇಣು. 4. ಒಂದು ಜಾತಿಯ ಜಿಂಕೆ. ಸಾರಗದ ಒಂದು ಭೇದ. 5. ಗಣದೇವತೆ. 6. ಗೋಕರ್ಣಕ್ಷೇತ್ರದಲ್ಲಿರುವ ಪರಮೇಶ್ವರ, ಗೋಕರ್ಣೇಶ್ವರ. 7. ಕಾಶೀಕ್ಷೇತ್ರದಲ್ಲಿರುವ ಒಂದು ಶಿವಲಿಂಗ. (स्त्री०) **गोकर्णी ಗೋಕರ್ಣೀ.**

8. ಕುರಟಗ ಗಿಡ. "गोकर्णोऽश्वतरे सर्पे सारङ्गे च गणान्तरे। अङ्गुष्ठानामिकोन्माने गोकर्णी मूर्विकौषधौ" मेदि०। (वि०) 9. ವಾದಿಪ್ರತಿವಾದಿಗಳ ಮಧ್ಯೆ ಹಸುವಿನ ಕಿವಿಯಂತೆ ಜೋಲಾಡುತ್ತಿರುವ (ಸಾಕ್ಷಿ).

**गोका ಗೋಕಾ** (स्त्री०) ಚಿಕ್ಕ ಹಸು. ಸಣ್ಣ ಜಾತಿಯ ಹಸು.

**गोकाम ಗೋಕಾಮ** (वि०) ಹಸುವನ್ನು ಅಪೇಕ್ಷಿಸುವವನು.

**गोकामुख ಗೋಕಾಮುಖ** (पुं०) ಹಸುವಿನಂತೆ ಜೋಲಾಡುತ್ತಿರುವ ಮುಖವುಳ್ಳ ಒಂದು ಬೆಟ್ಟ.

**गोकील ಗೋಕೀಲ** (पुं०) 1. ಮುಸಲ, ಒನಕೆ. 2. ಹಲ, ನೇಗಿಲು. "गोकीलो मुसले हले" मेदि०।

**गोकुल ಗೋಕುಲ** (न०) 1. ಗೋವುಗಳ ಸಮೂಹ, ದನಗಳ ಗುಂಪು. गवां कुलम्। "गोकुलाकुलतीरायाः तमसाया विदूरतः। अवसत् तत्र तां रात्रिं रामः प्रकृतिभिः सह" रामा०। 2. ದನಗಳ ಕೊಟ್ಟಿಗೆ. "गोकुले कन्दुशालायां तैलयन्त्रेक्षुयन्त्रयोः। अमीमांस्यानि शौचानि स्त्रीषु बालातुरेषु च" तिथ्यादित०। 3. ನಂದಗೋಪನ ವಾಸಸ್ಥಾನ. "कालेनाल्पेन राजर्षे रामः कृष्णश्च गोकुले। अघृष्टजानुभिः पद्भिः विचक्रमतुरञ्जसा" भाग० १०-८-२६।

**गोकुलिक ಗೋಕುಲಿಕ** (वि०) 1. ವಿಕಾರವಾದ ಕಣ್ಣುಗಳುಳ್ಳವನು. गोः नेत्रस्य कुलः संस्थानमस्मिन्। 2. ಕೆಸರಿನಲ್ಲಿ ಬಿದ್ದಿರುವ ಹಸುವನ್ನು ನೋಡಿ ಮೇಲಕ್ಕೆ ಎತ್ತಲು ಯತ್ನಿಸದೆ ಉದಾಸೀನನಾಗಿರುವವನು. "स्याद्गोकुलिको बलिरे पङ्कस्थगव्युपेक्षके" मेदि०।

**गोकृत ಗೋಕೃತ** (न०) ಗೋಮಯ, ದನದ ಸಗಣಿ. गवा कृतम्।

**गोक्षुरक ಗೋಕ್ಷುರಕ** (पुं०) 1. ನೆಗ್ಗಿಲು ಗಿಡ. गोः भूमेः क्षुर इव। "गोकण्टको गोक्षुरको वनशृङ्गाट इत्यपि" अम०। 2. ದನದ ಕಾಲಿನ ಗೊರಸು.

**गोगृष्टि ಗೋಗೃಷ್ಟಿ** (स्त्री०) ಒಂದು ಕರುವನ್ನು ಮಾತ್ರ ಪ್ರಸವಿಸಿದ ಹಸು. गृष्टिश्चासौ गौश्च।

**गोग्रन्थि ಗೋಗ್ರಂಥಿ** (पुं०) 1. ಬೆರಣಿ. गोर्जातो ग्रन्थिः। 2. ದನದ ಕೊಟ್ಟಿಗೆ. गोर्ग्रन्थिर्यत्र। 3. ಬೆಂಡೆ ಗಿಡ. गोर्ग्रन्थिरिव। "गोग्रन्थिर्ना करीषे स्यात् गोष्ठगोजिह्विकौषधौ" मेदि०।

**गोघ्न ಗೋಘ್ನ** (वि०) 1. ಗೋವುಗಳನ್ನು ಕೊಲ್ಲುವವನು. गाः हन्ति — हन (हिंसागत्योः) "कः" (वा० ३-२-५)। 2. ಅತಿಥಿ. गां हन्ति तस्मै। निपा० (३-४-७३)। "उपपातकसंयुक्तो गोघ्नो मासं यवान् पिबेत्" मनु० ११-१०८।

**गोघृत ಗೋಘೃತ** (न०) 1. ಹಸುವಿನ ತುಪ್ಪ. गोर्घृतम्। 2. ಮಳೆಯ ನೀರು. गोः भूमेः घृतमिव — सस्यपोषकत्वात्।

**गोचर ಗೋಚರ** (पुं०) 1. ಇಂದ್ರಿಯಗಳಿಗೆ ಗೋಚರವಾಗತಕ್ಕ ರೂಪ ರಸ ಗಂಧ ಸ್ಪರ್ಶ ಮತ್ತು ಶಬ್ದಗಳೆಂಬ ವಿಷಯಗಳು. गावः इन्द्रियाणि चरन्त्येषु। निपा० (३-३-११९)। 2. ಜ್ಞಾನಕ್ಕೆ ಗೋಚರವಾಗತಕ್ಕ (ತಿಳಿಯುವ) ವಿಷಯ. "सदसत्संशयगोचरोदरी" नैष० २-४०। 3. ಹುಲ್ಲುಗಾವಲು, ದನಗಳು ಹುಲ್ಲು ಮೇಯುವ ಸ್ಥಳ, ದನಗಳು ಮೇವಿಗಾಗಿ ತಿರುಗಾಡುವ ಅರಣ್ಯ ಪ್ರದೇಶ. गावश्चरन्त्यस्मिन् "घः" (३-३-११९)। "उपारताः पश्चिमरात्रिगोचरादपारयन्तः पतितुं जवेन गाम्" किरा० ४-१०। 4. ಜನ್ಮರಾಶಿಯಿಂದ ಗ್ರಹಗಳು ಸಂಚರಿಸುವ ರಾಶಿ. 5. ವಾಸಸ್ಥಾನ. "अकिञ्चनः सन् प्रभवः स सम्पदां त्रिलोकनाथः पितृसद्मगोचरः" कुमा० ५-७७। 6. ದೇಶ. "अब्रवीत् प्राञ्जलिर्भूत्वा गुहो गहनगोचरः" रामा०। (वि०) 7. ಭೂಮಿಯಲ್ಲಿ ಸಂಚರಿಸುವ. 8. ಗಂತವ್ಯಪ್ರದೇಶ, ಹೋಗಬೇಕಾದ ಜಾಗ.

ಸೂರ್ಯ ಮೊದಲಾದ ಗ್ರಹಗಳು ಜನ್ಮರಾಶಿಯಿಂದ ದ್ವಾದಶರಾಶಿ (ತನ್ವಾದಿಭಾವ) ಗಳಲ್ಲಿ ಸಂಚರಿಸುವಾಗ ಕೊಡುವ (ಗೋಚಾರ) ಫಲ.

**(1) ರವಿಚಾರ:**

| ಭಾವ | ಫಲ |
|---|---|
| (1) ಜನ್ಮದಲ್ಲಿ | ವ್ಯಾಧಿ. |
| (2) ದ್ವಿತೀಯದಲ್ಲಿ | ಭಯ. |
| (3) ದುಶ್ಚಿಕ್ಯದಲ್ಲಿ | ಅರ್ಥಲಾಭ. |
| (4) ಹಿಬುಕದಲ್ಲಿ | ಮಾನಕ್ಷಯ. |
| (5) ಪಂಚಮದಲ್ಲಿ | ದೈನ್ಯ. |
| (6) ಷಷ್ಠದಲ್ಲಿ | ದ್ರವ್ಯಲಾಭ. |
| (7) ಸಪ್ತಮದಲ್ಲಿ | ಲಾಭ. |
| (8) ಅಷ್ಟಮದಲ್ಲಿ | ಪೀಡೆ. |
| (9) ಧರ್ಮಸ್ಥಾನದಲ್ಲಿ | ಕಾಂತಿಕ್ಷಯ. |
| (10) ಕರ್ಮಸ್ಥಾನದಲ್ಲಿ | ಕರ್ಮಸಿದ್ಧಿ. |
| (11) ಲಾಭದಲ್ಲಿ | ಅರ್ಥಲಾಭ. |
| (12) ವ್ಯಯದಲ್ಲಿ | ಅರ್ಥಹಾನಿ. |

(2) ಚಂದ್ರಚಾರ:

| ಭಾವ | ಫಲ |
|---|---|
| (1) ಜನ್ಮದಲ್ಲಿ | ಅರ್ಥಲಾಭ. |
| (2) ದ್ವಿತೀಯದಲ್ಲಿ | ಅರ್ಥನಾಶ. |
| (3) ತೃತೀಯದಲ್ಲಿ | ದ್ರವ್ಯಲಾಭ. |
| (4) ಚತುರ್ಥದಲ್ಲಿ | ಬಂಧುವೈರ. |
| (5) ಪಂಚಮದಲ್ಲಿ | ಕಾರ್ಯನಾಶ. |
| (6) ಷಷ್ಠದಲ್ಲಿ | ಅರ್ಥಲಾಭ. |
| (7) ದ್ಯೂನದಲ್ಲಿ | ಸ್ತ್ರೀಸೌಖ್ಯ ಮತ್ತು ಅರ್ಥಲಾಭ. |
| (8) ಅಷ್ಟಮದಲ್ಲಿ | ಜಾಡ್ಯ. |
| (9) ನವಮದಲ್ಲಿ | ಕಲಹ. |
| (10) ದಶಮದಲ್ಲಿ | ಸುಖ. |
| (11) ಲಾಭದಲ್ಲಿ | ಧನಪ್ರಾಪ್ತಿ. |
| (12) ವ್ಯಯದಲ್ಲಿ | ರೋಗ. |

(3) ಕುಜಚಾರ:

| ಭಾವ | ಫಲ |
|---|---|
| (1) ಜನ್ಮದಲ್ಲಿ | ಶತ್ರುಭಯ. |
| (2) ಧನಸ್ಥಾನದಲ್ಲಿ | ಧನನಾಶ. |
| (3) ತೃತೀಯದಲ್ಲಿ | ಅರ್ಥಲಾಭ. |
| (4) ಚತುರ್ಥದಲ್ಲಿ | ಶತ್ರುಭಯ. |
| (5) ಪಂಚಮದಲ್ಲಿ | ಅರ್ಥನಾಶ. |
| (6) ಷಷ್ಠದಲ್ಲಿ | ವಿತ್ತಲಾಭ. |
| (7) ಸಪ್ತಮದಲ್ಲಿ | ರೋಗ. |
| (8) ಅಷ್ಟಮದಲ್ಲಿ | ಶತ್ರುಪೀಡೆ. |
| (9) ನವಮದಲ್ಲಿ | ದೇಹಪೀಡೆ. |
| (10) ದಶಮದಲ್ಲಿ | ಭಯ. |
| (11) ಲಾಭದಲ್ಲಿ | ಲಾಭ. |
| (12) ವ್ಯಯದಲ್ಲಿ | ಶತ್ರುಭಯ. |

(4) ಬುಧಚಾರ:

| ಭಾವ | ಫಲ |
|---|---|
| (1) ಜನ್ಮದಲ್ಲಿ | ಬಂಧುವೈರ. |
| (2) ಧನಸ್ಥಾನದಲ್ಲಿ | ಧನಲಾಭ. |
| (3) ತೃತೀಯದಲ್ಲಿ | ಶತ್ರುಭಯ. |
| (4) ಚತುರ್ಥದಲ್ಲಿ | ಅರ್ಥಲಾಭ. |
| (5) ಪಂಚಮದಲ್ಲಿ | ಕಷ್ಟ. |
| (6) ಷಷ್ಠದಲ್ಲಿ | ವಸ್ತ್ರಪ್ರಾಪ್ತಿ. |
| (7) ಸಪ್ತಮದಲ್ಲಿ | ಶರೀರಪೀಡೆ. |
| (8) ಅಷ್ಟಮದಲ್ಲಿ | ಧನವೃದ್ಧಿ. |
| (9) ಧರ್ಮದಲ್ಲಿ | ಶರೀರಪೀಡೆ. |
| (10) ಕರ್ಮದಲ್ಲಿ | ಅಪವಾದ. |
| (11) ಲಾಭದಲ್ಲಿ | ಅರ್ಥಲಾಭ. |
| (12) ವ್ಯಯದಲ್ಲಿ | ಅರ್ಥನಾಶ. |

(5) ಗುರುಚಾರ:

| ಭಾವ | ಫಲ |
|---|---|
| (1) ಜನ್ಮದಲ್ಲಿ | ಭಯ. |
| (2) ಧನಸ್ಥಾನದಲ್ಲಿ | ಅಪರಿಮಿತ ಧನಲಾಭ. |
| (3) ತೃತೀಯದಲ್ಲಿ | ದೇಹಾಯಾಸ. |
| (4) ಚತುರ್ಥದಲ್ಲಿ | ಅರ್ಥನಾಶ. |
| (5) ಪಂಚಮದಲ್ಲಿ | ಸುಖ. |
| (6) ಷಷ್ಠದಲ್ಲಿ | ರೋಗ. |
| (7) ದ್ಯೂನದಲ್ಲಿ | ಪೂಜಾ. |
| (8) ಅಷ್ಟಮದಲ್ಲಿ | ಧನನಾಶ. |
| (9) ಧರ್ಮದಲ್ಲಿ | ಧನವೃದ್ಧಿ. |
| (10) ದಶಮದಲ್ಲಿ | ಪ್ರೀತಿಹಾನಿ. |
| (11) ಲಾಭದಲ್ಲಿ | ಯಶೋಲಾಭ. |
| (12) ವ್ಯಯದಲ್ಲಿ | ದೇಹಪೀಡೆ. |

(6) ಶುಕ್ರಚಾರ:

| ಭಾವ | ಫಲ |
|---|---|
| (1) ಜನ್ಮದಲ್ಲಿ | ಸೌಖ್ಯ. |
| (2) ಧನಸ್ಥಾನದಲ್ಲಿ | ಅರ್ಥಲಾಭ. |
| (3) ದುಶ್ಚಿಕ್ಯದಲ್ಲಿ | ಸುಖ. |
| (4) ಚತುರ್ಥದಲ್ಲಿ | ಧನಲಾಭ. |
| (5) ಪಂಚಮದಲ್ಲಿ | ಪುತ್ರಲಾಭ. |
| (6) ಷಷ್ಠದಲ್ಲಿ | ಶತ್ರುವೃದ್ಧಿ. |
| (7) ಸಪ್ತಮದಲ್ಲಿ | ಶೋಕ. |
| (8) ಅಷ್ಟಮದಲ್ಲಿ | ಅರ್ಥಲಾಭ. |
| (9) ಧರ್ಮದಲ್ಲಿ | ವಸ್ತ್ರಲಾಭ. |
| (10) ದಶಮದಲ್ಲಿ | ಸೌಖ್ಯಹಾನಿ. |
| (11) ಲಾಭದಲ್ಲಿ | ಅರ್ಥಲಾಭ. |
| (12) ವ್ಯಯದಲ್ಲಿ | ಚೋರಬಾಧೆ. |

(7) ಶನಿಚಾರ:

| ಭಾವ | ಫಲ |
|---|---|
| (1) ಜನ್ಮದಲ್ಲಿ | ವಿತ್ತನಾಶ. |
| (2) ದ್ವಿತೀಯದಲ್ಲಿ | ಚಿತ್ತಕ್ಲೇಶ. |
| (3) ತೃತೀಯದಲ್ಲಿ | ದ್ರವ್ಯಲಾಭ. |
| (4) ಚತುರ್ಥದಲ್ಲಿ | ಶತ್ರುವೃದ್ಧಿ. |
| (5) ಪಂಚಮದಲ್ಲಿ | ಪುತ್ರಭೃತ್ಯನಾಶ. |
| (6) ಷಷ್ಠದಲ್ಲಿ | ಅರ್ಥಲಾಭ. |
| (7) ಸಪ್ತಮದಲ್ಲಿ | ಭಯ, ಶತ್ರುಪೀಡೆ. |
| (8) ಅಷ್ಟಮದಲ್ಲಿ | ದೇಹಪೀಡೆ. |
| (9) ನವಮದಲ್ಲಿ | ಧನನಾಶ. |
| (10) ಕರ್ಮದಲ್ಲಿ | ಮನಸ್ತಾಪ. |
| (11) ಲಾಭದಲ್ಲಿ | ಅರ್ಥಲಾಭ. |
| (12) ವ್ಯಯದಲ್ಲಿ | ಅನರ್ಥ. |

**(8, 9) ರಾಹು ಕೇತುಗಳು:** ಜನ್ಮ ಮೊದಲಾದ ದ್ವಾದಶರಾಶಿಗಳಲ್ಲಿ ಸಂಚರಿಸುವಾಗ ಕ್ರಮವಾಗಿ: (1) ಭಯ, (2) ಕಲಹ. (3) ಸೌಭಾಗ್ಯ, (4) ಮಾನ ಹಾನಿ, (5) ಚಿತ್ತಭ್ರಂಶ, (6) ಮಹಾಸೌಖ್ಯ, (7) ರಾಜ ಭಯ, (8) ಅರ್ಥನಾಶ, (9) ಸಂತಾಪ, (10) ಕಲಹ, (11) ಧನಲಾಭ ಮತ್ತು (12) ವಿನಾಶ ಈ ಫಲಗಳನ್ನು ಕೊಡುತ್ತಾರೆ. "राहुर्जन्मगतो भयं च कलहं सौभाग्यमानक्षयं चित्तभ्रंशमहासुखं नृपभयं चार्थक्षयं यच्छति। सन्तापं कलहं च वित्तमधिकं शीघ्रं विनाशं नृणाम् केतुस्तत्फलमेव राशिषु वदेत् शंसन्ति गर्गादयः।"

**गोचर्मन् ಗೋಚರ್ಮನ್** (नं०) 1. ದನದ ಚರ್ಮ, ಹಸುವಿನ ತೊಗಲು. गोःचर्म। 2. ಭೂಮಿಯ ಒಂದು ಅಳತೆ, ಹತ್ತು ಮೊಳದ ಗಳುವಿನಿಂದ ಅಳೆಯುವ ಹದಿನೈದು ಚದರಗಳ ಅಳತೆ. "दशहस्तेन वंशेन दशवंशान् समन्ततः। पञ्च चाप्यधिकान् दद्यादेतद्गोचर्म चोच्यते" वसिष्ठः।

**गोचारक ಗೋಚಾರಕ** (वि०) ಗೋವುಗಳ ರಕ್ಷಕ, ದನಗಳನ್ನು ಮೇಯಿಸುವವನು. गाः चारयति — चर (गतिभक्षणयोः) + णिच् "ण्वुल्" (३-१-१३३)।

**गोचारण ಗೋಚಾರಣ** (नं०) ದನಗಳನ್ನು ಮೇಯಿಸುವುದು. गवां चारणम्। "यदर्चितं ब्रह्मभवादिभिः सुरैः श्रिया च देव्या मुनिभिः ससात्वतैः। गोचारणायानुचरैश्चरद्वने यद्गोपिकानां कुचकुङ्कुमाङ्कितम्" भाग० १०-३८-८।

**गोचारिन् ಗೋಚಾರಿನ್** (वि०) ಹಸುವಿನಂತೆ ಬಾಯಿಂದ ಆಹಾರವನ್ನು ಎತ್ತಿ ತಿಂದು ಜೀವಿಸುವ ಒಬ್ಬ ಯತಿ. गौरिव चरति — चर (गतिभक्षणयोः) "णिनिः" (३-२-७८)।

**गोज ಗೋಜ** (नं०) 1. ಗೋರೋಚನ. (वि०) 2. ಹಸುವಿನಿಂದ ಉಂಟಾದ. गोः जातः। 3. ಭೂಮಿಯಿಂದ ಹುಟ್ಟಿದ.

**गोजर ಗೋಜರ** (पुं०) ಮುದಿ ಎತ್ತು. गोषु मध्ये जरः जीर्णः।

**गोजल ಗೋಜಲ** (नं०) ಗೋಮೂತ್ರ, ಗಂಜಲ. गोजलम् गवि जातं जलं वा।

**गोजा ಗೋಜಾ** (स्त्री०) ಸುರಭಿ, ಕಾಮಧೇನು.

**गोजागरिक ಗೋಜಾಗರಿಕ** (नं०) 1. ಮಂಗಳ. गवि स्वर्गे जागरः अप्रमत्ततयास्त्यस्य "ठन्" (५-२-११५)। 2. ಹೆಗ್ಗುಳ್ಳದ ಗಿಡ. (वि०) 3. ಭಕ್ಷ್ಯಕಾರ, ತಿಂಡಿಗಳನ್ನು ತಯಾರಿಸುವವನು. गोषु व्रीह्यादिषु जागरोऽस्त्यस्य। "स्याद्गोजागरिकं भक्ष्यकारके मङ्गलेऽपि च" हेम०।

**गोजिह्वा ಗೋಜಿಹ್ವಾ** (स्त्री०) ಬೆಂಡೆಗಿಡ. गोर्जिह्वेव।

**गोजी ಗೋಜೀ** (स्त्री०) ಬೆಂಡೆಗಿಡ. गोर्जिह्वेव। पृषो०। "गोजी च पिष्टा सह तालपत्र्या" सुश्रुत०।

**गोडिम्ब ಗೋಡಿಂಬ** (पुं०) 1. ನರಿನೇರಿಳೆ. 2. ಕಲ್ಲಂಗಡಿ ಕರಬೂಜ ಮೊದಲಾದ ಗಿಡ. (नं०) 3. ಕಲ್ಲಂಗಡಿ ಕರಬೂಜ ಮೊದಲಾದ ಹಣ್ಣು. 4. ನರಿನೇರಿಳೆಹಣ್ಣು.

**गोडुम्ब ಗೋಡುಂಬ** (पुं०) 1. ಕರಬೂಜ ಕಲ್ಲಂಗಡಿ ಮೊದಲಾದ ಗಿಡ. 2. ನರಿನೇರಿಳೆ. (नं०) 3. ಕಲ್ಲಂಗಡಿ ಕರಬೂಜ ಮೊದಲಾದ ಹಣ್ಣು. 4. ನರಿನೇರಿಳೆಹಣ್ಣು. (स्त्री०) **–बा –ಬಾ**. 5. ಹಾವುಮೆಕ್ಕೆಗಿಡ. स्वार्थे "कः"। **गोडुम्बिका ಗೋಡುಂಬಿಕಾ**. ಹಾವುಮೆಕ್ಕೆಗಿಡ.

**गोणी ಗೋಣೀ** (स्त्री०) 1. ಧಾನ್ಯ ಮೊದಲಾದುವನ್ನು ತುಂಬಿಡುವ ಚೀಲ ಅಥವಾ ಪಾತ್ರೆ. गोणी आवपनं चेत् गोणान्या सि० कौ०। "गोणीं जनेन स्म निधातुमुद्धृतामनुक्षणं नोक्षतरः प्रतीच्छति" माघ० १२-१०। 2. ಹರುಕುಬಟ್ಟೆ. 3. ನಾಲ್ಕು ದ್ರೋಣಗಳ ಅಳತೆ, ಎಂಟು ಕೊಳಗಗಳ ಅಳತೆ. 4. ಎರಡು ಮೊರಗಳ ಅಳತೆ. "शूर्पाभ्यां च भवेद्गोणी वाहो गोणी च सा स्मृता" भावप्र०।

**गोणीतरी ಗೋಣೀತರೀ** (स्त्री०) ಸಣ್ಣ ಗೋಣೀಚೀಲ. ह्रस्वा गोणी "ष्टरच्" (५-३-९०)।

**गोण्ड ಗೋಂಡ** (पुं०) 1. ನಿಮ್ನಜಾತಿಯವನು. 2. ಪುಷ್ಟವಾದ ಹೊಕ್ಕಳು, ಮಾಂಸತುಂಬಿದ ಹೊಕ್ಕಳು. (वि०) 3. ಪುಷ್ಟವಾದ ಹೊಕ್ಕಳುಳ್ಳ, ಚೆನ್ನಾಗಿ ಮಾಂಸತುಂಬಿ ಬೆಳೆದ ಹೊಕ್ಕಳುಳ್ಳ, ಉಬ್ಬಿದ ಹೊಕ್ಕಳುಳ್ಳ. "गोण्डः पामरजातौ च वृद्धनाभौ च तद्वति" मेदि०।

**गोतम ಗೋತಮ** (पुं०) 1. ಗೋತಮಮುನಿ, ಶ್ವೇತವರಾಹ ಕಲ್ಪದಲ್ಲಿ ಬ್ರಹ್ಮನ ಒಬ್ಬ ಮಾನಸಪುತ್ರ. गोभिस्तमो ध्वस्तं यस्य। "गोदमो दमतोऽधूमोऽदमस्ते समदर्शनात्। विद्धि मां गोतमं कृत्ये यातुधानि निबोध माम्" भा० अनु० १४२-३३। ಈ ಋಷಿಯು ಗೋತ್ರಪ್ರವರ್ತಕರಲ್ಲೊಬ್ಬರು. 2. ಬಹಳ ಸೋಮಾರಿತನವುಳ್ಳವನು, ಜಡ, ಅಲಸ. अतिशयेन गौः जडत्वात् अतिशायने "तमप्" (५-३-५५)।

**गोतमी ಗೋತಮೀ** (स्त्री०) ಗೋತಮ ಋಷಿಯ ಪತ್ನಿ.

**गोतल्लज ಗೋತಲ್ಲಜ** (पुंस्त्री०) ಶ್ರೇಷ್ಠವಾದ ವೃಷಭ, ಉತ್ತಮಜಾತಿಯ ಎತ್ತು, ಉತ್ತಮಜಾತಿಯ ಹಸು. तल्लजश्चासौ गौश्च।

**गोतीर्थ ಗೋತೀರ್ಥ** (न०) ದನದ ಕೊಟ್ಟಿಗೆ. गवा कृतं तीर्थम्। "बलिर्निवेद्यो गोतीर्थे रैवत्ये प्रयतात्मना" सुश्रुत०।

**गोत्र ಗೋತ್ರ** (पुं०) 1. ಪರ್ವತ, ಬೆಟ್ಟ. गां भूमिं त्रायते—त्रैङ् (पालने) "कः" (३-२-३)। "गोत्रोद्धारप्रवृत्तोऽपि गोत्रोद्भेदं पुराऽकरोः" चन्द्रा०। (न०) 2. ಹೆಸರು. गुङ् (शब्दे) "ष्ट्रन्" (उ० ४-१५९)। "स्मरसि स्मर मेखलागुणैरुत गोत्रस्खलितेषु बन्धनम्" कुमा० ४-८। 3. ಸಂತತಿ, ಪೀಳಿಗೆ, ಗೋತ್ರಪ್ರವರ್ತಕ ಋಷಿಗಳಿಂದ ಮುಂದೆ ಬೆಳೆದುಬಂದ ವಂಶ. (1) विश्वामित्रः, (2) जमदग्निः, (3) भरद्वाजः, (4) गोतमः, (5) अत्रिः, (6) वसिष्ठः, (7) कश्यपः ಮತ್ತು (8) अगस्त्यः ಈ ಎಂಟು ಋಷಿಗಳು ಗೋತ್ರಪ್ರವರ್ತಕರು. 4. ಅರಣ್ಯ, ಕಾಡು. 5. ಕ್ಷೇತ್ರ. 6. ಮಾರ್ಗ, ದಾರಿ. 7. ಸಂಭವನೀಯ ಜ್ಞಾನ, ಬಹುಶಃ ಒದಗಬಹುದಾದ ಸಂದರ್ಭಗಳ ತಿಳಿವಳಿಕೆ. 8. ಛತ್ರಿ, ಕೊಡೆ. 9. ಅಭಿವೃದ್ಧಿ. 10. ಅಪತ್ಯವಾಗಿ ವಿವಕ್ಷಿತರಾದ ಒಂದು ವಂಶದಲ್ಲಿ ಹುಟ್ಟಿದ ಪೌತ್ರ (ಪುತ್ರನ ಪುತ್ರ) ಮೊದಲಾದವರು. "अपत्यं पौत्रप्रभृति गोत्रम्" पा० सू० ४-१-१६२। 11. ಮೇಘ. गां भूमिं वृष्ट्या त्रायते। (स्त्री०) -त्रा -ತ್ರಾ. 12. ಭೂಮಿ. 13. ಹಸುಗಳ ಗುಂಪು, ಗೋವುಗಳ ಸಮೂಹ. "गोत्रं क्षेत्रेऽन्वये छत्रे सम्भाव्यबोधवर्त्मनोः। वने नाम्नि च गोत्रोऽद्रौ गोत्रा भुवि गवां गणे" हेम०।

**गोत्रकारिन् ಗೋತ್ರಕಾರಿನ್** (वि०) ವಂಶವನ್ನು ಪ್ರಾರಂಭಿಸಿದ ಮೂಲಪುರುಷ, ಕೂಟಸ್ಥ.

**गोत्रकीला ಗೋತ್ರಕೀಲಾ** (स्त्री०) ಪೃಥಿವಿ, ಭೂಮಿ. गोत्रः पर्वतः कील इव यस्याः।

**गोत्रज ಗೋತ್ರಜ** (वि०) ಒಂದೇ ಗೋತ್ರದಲ್ಲಿ ಹುಟ್ಟಿದವನು. ಬಂಧು, ಜ್ಞಾತಿ. गोत्रे समानगोत्रे जायते—जनी (प्रादुर्भावे) "डः" (३-२-९७)।

**गोत्रपट ಗೋತ್ರಪಟ** (पुं०) ವಂಶದ ಚರಿತ್ರೆಯನ್ನು ತಿಳಿಸುವ ಪಟ, ವಂಶಾವಳಿ.

**गोत्रप्रवर ಗೋತ್ರಪ್ರವರ** (पुं०) ವಂಶದ ಮೂಲಪುರುಷ.

**गोत्रभिद् ಗೋತ್ರಭಿದ್** (पुं०) ಇಂದ್ರ. गोत्रं पर्वतं मेघं वा भिनत्ति — भिदिर् (विदारणे) "क्विप्" (३-२-६१)। "रघोरवष्टम्भमयेन पत्रिणा हृदि स्थितो गोत्रभिदप्यमर्षणः" रघु० ३-५३।

**गोत्व ಗೋತ್ವ** (न०) ಗೋವಿನಲ್ಲಿರುವ ಗುಣ, ಇತರ ಪ್ರಾಣಿಗಳಲ್ಲಿಲ್ಲದ ಹಸುವಿನಲ್ಲಿ ಮಾತ್ರವಿರುವ ವಿಶೇಷ ಗುಣ. गोर्भावः "त्वः" (५-१-११९)। सास्नादिमत्त्वम्।

**गोद ಗೋದ** (पुं०) 1. ಮಿದುಳು, ತಲೆಯ ಬುರುಡೆಯೊಳಗೆ ಸುತ್ತುಸುತ್ತಾಗಿ ಇರುವ ನರಗಳು, ಮಸ್ತಿಷ್ಕ. गां नेत्रं दायति शोधयति — दैप् (शोधने) "कः" (३-२-३)। ಮಸ್ತಿಷ್ಕವು ಕಣ್ಣಿಗೆ ಪ್ರಕಾಶವನ್ನು ಕೊಡುವುದರಿಂದ ಈ ಹೆಸರು. (वि०) 2. ಗೋವನ್ನು ಕೊಡುವವನು. गां धेनुं ददाति — डु दाञ् (दाने) "कः" (३-२-३)। "वासोदश्चन्द्रसालोक्यमश्विसालोक्यमश्वदः। अनडुहः श्रियं पुष्टां गोदो ब्रध्नस्य विष्टपम्" मनु० ४-२३१। 3. ಭೂಮಿಯನ್ನು ಕೊಡುವವನು.

**गोदत्र ಗೋದತ್ರ** (न०) ತಲೆಯ ಮಿದುಳನ್ನು ರಕ್ಷಿಸುವ ಕಿರೀಟ ರುಮಾಲು ಟೋಪಿ ಮೊದಲಾದುವು. गोदं त्रायते — त्रैङ् (पालने) "कः" (३-२-३)।

**गोदा ಗೋದಾ** (स्त्री०) 1. ಗೋದಾವರೀ ನದಿ. गां स्वर्गं ददाति स्नानेन — डु दाञ् (दाने) "कः" (३-२-३)। 2. ಶ್ರೀ ಗೋದಾದೇವಿ.

**गोदान ಗೋದಾನ** (न०) 1. ಹದಿನಾರನೆಯ ವರ್ಷದಲ್ಲಿ ಮಾಡುವ ಕೇಶಖಂಡನಸಂಸ್ಕಾರ, ಕೇಶಾಂತಸಂಸ್ಕಾರ. गावः केशाः दीयन्ते खण्डयन्तेऽत्र — दो (अवखण्डने) अधि० "ल्युट्" (३-३-११७)। "अथास्य गोदानविधेरनन्तरं विवाहदीक्षां निरवर्तयद्गुरुः" रघु० ३-३३। 2. ಬಲಕಿವಿಯ ಸಮೀಪದ ತಲೆಯ ಭಾಗ. 3. ಹಸುವಿನ ದಾನ.

**गोदारण ಗೋದಾರಣ** (न०) 1. ನೇಗಿಲು. गां भूमिं दारयति— दॄ (विदारणे) + णिच् "ल्युट्" (३-३-११३) 2. ಗುದ್ದಲಿ, ನೆಲವನ್ನು ಅಗೆಯುವ ಒಂದು ಆಯುಧ.

**गोदावरी ಗೋದಾವರೀ** (स्त्री०) ಒಂದು ನದಿ. गां स्वर्गं ददाति स्नानेन — डु दाञ् (दाने) "वनिप्" रश्चान्तादेशः। ಇದು ದಕ್ಷಿಣ ಭಾರತದಲ್ಲಿ ಪ್ರಸಿದ್ಧವಾದ ಒಂದು ಪುಣ್ಯನದಿ. "गङ्गे च यमुने चैव गोदावरि सरस्वति। नर्मदे सिन्धु कावेरि जलेऽस्मिन् सन्निधिं कुरु" इति। ಇದು ಪುಣ್ಯತೀರ್ಥಗಳನ್ನು ಆವಾಹನೆ ಮಾಡುವ ಮಂತ್ರ.

**गोदुग्ध ಗೋದುಗ್ಧ** (ನಂ) ಹಸುವಿನ ಹಾಲು. गोः दुग्धम्।

**गोदुह् ಗೋದುಹ್** (ವಿಂ) ಹಸುವಿನ ಹಾಲನ್ನು ಕರೆಯುವವನು, ಗೊಲ್ಲ. गां दोग्धि — दुह (प्रपूरणे) "क्विप्" (३-२-६१)। "वर्धिष्णुधाराध्वनि रोहिणीः पयश्चिरं निदध्यौ दुहतः स गोदुहः" माघ० १२-४०।

**गोदोह ಗೋದೋಹ** (ಪುಂ) ಹಸುವಿನ ಹಾಲನ್ನು ಕರೆಯುವುದು. दुह (प्रपूरणे) भावे "घञ्" (३-३-१८)। गोः दोहः।

**गोदोहन ಗೋದೋಹನ** (ನಂ) 1. ಹಸುವಿನ ಹಾಲನ್ನು ಕರೆಯುವುದು. गोर्दोहनम् — दुह (प्रपूरणे) भावे "ल्युट्" (३-३-११५)। 2. ಹಾಲು ಕರೆಯುವ ವೇಳೆ. दुह अधि० "ल्युट्" (३-३-११७)। (स्त्री०) **–दोहनी –ದೋಹನೀ.** ಹಾಲು ಕರೆಯುವ ಪಾತ್ರೆ. गौर्दुह्यतेऽत्र— दुह अधि० "ल्युट्" (३-३-११७)। "ङीप्" (४-१-१५)।

**गोद्रव ಗೋದ್ರವ** (ಪುಂ) ಗೋಮೂತ್ರ.

**गोधन ಗೋಧನ** (ನಂ) 1. ಗೋವುಗಳ ಗುಂಪು. 2. ಗೋರೂಪವಾದ ಆಸ್ತಿ. गवां धनम्। (ವಿಂ) 3. ಗೋರೂಪವಾದ ಆಸ್ತಿಯುಳ್ಳ, ಗೋರೂಪವಾದ ಧನವುಳ್ಳ. गौरेव धनं यस्य।

**गोधर ಗೋಧರ** (ಪುಂ) ಪರ್ವತ, ಬೆಟ್ಟ. धरति — धृञ् (धारणे) "अच्" (३-१-१३४)। गोः धरः।

**गोधर्म ಗೋಧರ್ಮ** (ಪುಂ) ಪಶುಗಳ ಧರ್ಮ, ಮೈಥುನ ಮೊದಲಾದ ವಿಷಯಗಳಲ್ಲಿ ಮುಚ್ಚುಮರೆಯಿಲ್ಲದೆ ಮತ್ತು ಸಂಕೋಚವಿಲ್ಲದೆ ಪಶುಗಳಂತೆ ನಡೆಸುವ ವ್ಯವಹಾರ. गोरिव धर्मः।

**गोधा ಗೋಧಾ** (ಸ್ತ್ರೀಂ) 1. ಧನುಸ್ಸಿನ ಹೆದೆಯ ಏಟು ತಗಲದಿರಲು ತೋಳಿಗೆ ಕಟ್ಟುವ ಚರ್ಮದ ಪಟ್ಟಿ. गुध्यते परिवेष्ट्यते बाहुरनया — गुध (परिवेष्टने) "घञ्" (३-३-१२१)। "गोधाश्लिष्टभुजाशाखैरभूद्भीमा रणाटवी" माघ० १९-३९। 2. ದೊಡ್ಡ ಜಾತಿಯ ಹಲ್ಲಿ, ನೀರುಡ. "श्वाविधं शल्यकं गोधां खड्गकूर्मशशांस्तथा। भक्ष्यान् पञ्चनखेष्वाहुरनुष्ट्रांश्चैकतोदतः" मनु० ५-१८।

**गोधापदी ಗೋಧಾಪದೀ** (ಸ್ತ್ರೀಂ) ಹಂಸಪಾದಿ ಗಿಡ. गोधाया इव पादो मूलमस्याः "ङीप्" (५-४-१३९)। पादस्य पद्भावश्च (६-४-१३०)।

**गोधि ಗೋಧಿ** (ಪುಂ) 1. ಲಲಾಟ, ಹಣೆ. गावौ नेत्रे धीयन्तेऽस्मिन् अधि० "कि:" (३-३-९३)। 2. ದೊಡ್ಡ ಜಾತಿಯ ಹಲ್ಲಿ, ಉಡ. गुध (परिवेष्टने) "इन्" (उ० ४-११७)।

**गोधिका ಗೋಧಿಕಾ** (ಸ್ತ್ರೀಂ) ದೊಡ್ಡ ಜಾತಿಯ ಹಲ್ಲಿ, ನೀರುಡ. गुध्यति — गुध (परिवेष्टने) "ण्वुल्" (३-१-१३३)।

**गोधूम ಗೋಧೂಮ** (ಪುಂ) 1. ಗೋಧಿ. 2. ಹೇರಿಳೆ ಗಿಡ. गुध (परिवेष्टने) "ऊमः" (उ० ५-२)।

**गोधूमक ಗೋಧೂಮಕ** (ಪುಂ) ಒಂದು ಜಾತಿಯ ಸರ್ಪ. गोधूम इव कं शिरोऽस्य।

**गोधूमचूर्ण ಗೋಧೂಮಚೂರ್ಣ** (ನಂ) ಗೋಧಿ ಹಿಟ್ಟು.

**गोधूलि ಗೋಧೂಳಿ** (ಸ್ತ್ರೀಂ) ಗೋವುಗಳ ಕಾಲಿನಿಂದ ಧೂಳು ಮೇಲಕ್ಕೇಳುವ ವೇಳೆ, ಗೋಧೂಳಿ ಲಗ್ನ, ಗೋವುಗಳು ಹುಲ್ಲುಗಾವಲಿನಿಂದ ಮನೆಗೆ ಬರುವ ವೇಳೆ, ಸಂಧ್ಯಾಕಾಲ. गवां खुरोत्थितो धूलिरत्र काले। "सन्ध्यातपारुणितपश्चिमदिग्विभागे व्योम्नि स्फुरद्विरलतारकसन्निवेशे। रुद्धे गवां खुरपुटोद्गलितैरजोभिर्गोधूलिरेव कथितो भृगुजेन योगः"।

**गोधेनु ಗೋಧೇನು** (ಸ್ತ್ರೀಂ) ಹಾಲು ಕರೆಯುವ ಹಸು. धेनुश्चासौ गौश्च। परनिपातः।

**गोधेर ಗೋಧೇರ** (ವಿಂ) ರಕ್ಷಕ, ಕಾಪಾಡುವವನು. गुध (परिवेष्टने) "एरक्" (उ० १-६१)।

**गोध्र ಗೋಧ್ರ** (ಪುಂ) ಪರ್ವತ, ಬೆಟ್ಟ. गां धरति—धृञ् (धारणे) "कः" (वा० ३-२-५)।

**गोनर्द ಗೋನರ್ದ** (ಪುಂ) 1. ಸಾರಸಪಕ್ಷಿ. गवि जले नर्दति—नर्द (शब्दे) "अच्" (३-१-१३४)। (ನಂ) 2. ಕೊನ್ನಾರಿ, ತುಂಗಮುಸ್ತೆ. गवा जलेन नर्दति। (ಪುಂ ಬಂ ವಂ) 3. ಗೋನರ್ದದೇಶ. 4. ಗೋನರ್ದ ದೇಶದ ಜನರು. गोनर्दो निवासो येषां "अण्" (४-३-९०)। अणो लुप् (४-२-८१)।

**गोनर्दीय ಗೋನರ್ದೀಯ** (ಪುಂ) ಪತಂಜಲಿಮುನಿ. गोनर्दे देशे भवः "छः" (४-२-११४)।

**गोनस ಗೋನಸ** (ಪುಂ) ಮಂಡಲದ ಹಾವು. गोरिव नासिका यस्य "अच्" (५-४-११८)। नसादेशः।

**गोनास ಗೋನಾಸ** (ಪುಂ) ಒಂದು ಜಾತಿಯ ರತ್ನ.

**गोनाथ ಗೋನಾಥ** (ಪುಂ) 1. ವೃಷಭ. 2. ಜಮೀನುದಾರ. 3. ಗೋಪ, ಗೊಲ್ಲ. गोः वृषभस्य भूमेः धेनोश्च नाथः।

**गोनाय ಗೋನಾಯ** (ಪುಂ) ಗೋಪಾಲಕ, ಗೊಲ್ಲ. गाः नयति — णीञ् (प्रापणे) "अण्" (३-२-१)।

**गोनिष्यन्द ಗೋನಿಷ್ಯಂದ** (ಪುಂ) ಗೋಮೂತ್ರ. गोर्निष्यन्दते — नि + स्यन्दू (प्रस्रवणे) "अच्" (३-१-१३४)।

**गोप ಗೋಪ** (ಪುಂ) 1. ಗೊಲ್ಲ. गाः पाति—पा (रक्षणे) "कः" (३-२-३)। "प्रपेदिरे पूर्वयुगानुभूतिं गोपास्तदा गोप्तरि वासुदेवे" याद० ४-७८। स्त्रियाम् "ङीष्" (४-१-६३)। **गोपी ಗೋಪೀ.** गोपस्य स्त्री। ಗೊಲ್ಲನ ಹೆಂಡತಿ. **गोपा ಗೋಪಾ.** ಗೊಲ್ಲರ ಜಾತಿಯ ಹೆಂಗಸು. 2. ಗ್ರಾಮಾಧಿಕಾರಿ. 3. ಭೂಪಾಲ, ರಾಜ, ದೊರೆ. गां भूमिं पाति—पा "कः"। 4. ರಕ್ಷಕ, ಕಾಪಾಡುವವನು. 5. ಗೋಷ್ಠಾಧ್ಯಕ್ಷ, ದನಗಳ ಕೊಟ್ಟಿಗೆಯ ಅಧಿಕಾರಿ. "गोपो गोपालके गोष्ठाध्यक्षे पृथिवीपतावपि। ग्रामौघाधिकृते पुंसि शारिवाख्यौषधौ स्त्रियाम्" मेदि०।

**गोपक ಗೋಪಕ** (ಪುಂ) 1. ಗೋಪಾಲಕ, ಗೊಲ್ಲ. 2. ಅನೇಕ ಗ್ರಾಮಗಳ ಅಧಿಕಾರಿ. गोप स्वार्थे "कः"। (ವಿ೦) 3. ರಕ್ಷಕ, ಕಾಪಾಡುವವನು. गुपू (रक्षणे) "ण्वुल्" (३-१-१३३)।

**गोपकन्या ಗೋಪಕನ್ಯಾ** (स्त्री०) 1. ಗೊಲ್ಲರ ಜಾತಿಯ ಹುಡುಗಿ, ಗೋಪಾಂಗನೆ. गोपस्य कन्या। "गुञ्जापीडस्फुरितचिकुरो गोपकन्याभुजङ्गः" गोपालविं०। 2. ಸೊಗದೆಬೇರು.

**गोपति ಗೋಪತಿ** (ಪುಂ) 1. ವಿಷ್ಣು. गोः भूमेः स्वर्गस्यापि पतिः। "स्वर्गभूमेःपतित्वात् गोपतिः स्मृतः" इति निरुक्तिः। "गोहितो गोपतिर्गोप्ता" वि० स०। 2. ಶಿವ, ಪರಮೇಶ್ವರ. 3. ಶ್ರೀಕೃಷ್ಣ. 4. ವೃಷಭ, ಎತ್ತು, ಗೂಳಿ. गवां पशूनां पतिः। "स गोपतिं नन्दिभुजावलम्बी शार्दूलचर्मान्तरितोरुपृष्ठम्" कुमा० ७-३७। 5. ರಾಜ, ದೊರೆ. गोः भूमेः पतिः। 6. ಸೂರ್ಯ. गवां किरणानां पतिः। 7. ಇಂದ್ರ. गोः स्वर्गस्य पतिः। "गोपतिः शिवषण्ढयोः। नृपभास्करयोः पुंसि" मेदि०। "गोपतिः शङ्करे षण्डे नृपतौ त्रिदशाधिपे। सहस्रकिरणे चापि" हेम०। 8. ವರುಣ. गोः जलस्य पतिः। 9. ನಪುಂಸಕ. "गोपतिर्वृषभे राज्ञी शक्रे षण्डे दिवाकरे" नानार्थर०।

**गोपद ಗೋಪದ** (ನ೦) ದನದ ಕಾಲು. गोः पदम्। ["गोष्पद" ಪದದಲ್ಲಿ ನೋಡಿ.]

**गोपन ಗೋಪನ** (ನ೦) 1. ರಕ್ಷಿಸುವುದು, ಕಾಪಾಡುವುದು. गुपू (रक्षणे) भावे "ल्युट्" (३-३-११५)। "सैन्येन महता युक्तं भरद्वाजस्य गोपने" भा० भीष्म० ५३-३७। 2. ರಹಸ್ಯವಾಗಿಡುವುದು, ಬಚ್ಚಿಡುವುದು. 3. (ಮಾಡಿದ ಕಾರ್ಯವನ್ನು) ಹೊರಗೆಡಹದೆ ಇರುವುದು. गुप (गोपने) "ल्युट्"। 4. ಈರ್ಷ್ಯೆ, ಅಸೂಯೆ. 5. ನಿಂದೆ, ದೂಷಣೆ. 6. ಗಾಬರಿ, ಕಳವಳ. 7. ದೀಪ್ತಿ, ಪ್ರಕಾಶ.

**गोपनीय ಗೋಪನೀಯ** (ವಿ೦) 1. ರಹಸ್ಯವಾಗಿಡಲ್ಪಡುವ. 2. ರಕ್ಷಿಸಲ್ಪಡುವ. 3. ಅವಶ್ಯವಾಗಿ ರಕ್ಷಿಸಬೇಕಾದ. 4. ರಹಸ್ಯವಾಗಿಡಬೇಕಾದ. गुपू (रक्षणे) गुप (गोपने) वा "अनीयर्" (३-१-९६)।

**गोपरस ಗೋಪರಸ** (ಪುಂ) ಬಾಣಂತಿ ಬೋಳ, ಒಂದು ಸುವಾಸನಾ ದ್ರವ್ಯ.

**गोपवधू ಗೋಪವಧೂ** (स्त्री०) 1. ಗೋಪಾಂಗನೆ, ಗೊಲ್ಲರ ಹೆಂಗಸು. "कृतमनुकृतवत्य उन्मदान्धाः प्रकृतिमगमन् किल यस्य गोपवध्वः" भाग० १-९-४०। 2. ಸೊಗದೆಗಿಡ.

**गोपवधूटी ಗೋಪವಧೂಟೀ** (स्त्री०) ಗೋಪಯುವತಿ. ಪ್ರಾಯದ ಗೊಲ್ಲರ ಹೆಂಗಸು. वधूट "ङीप्" (४-१-२०)। "वधूटचिरण्टशब्दौ यौवनवाचिनौ" सि० कौ०। "गोपवधूटीदुकूलचोराय" भाषाप०।

**गोपवन ಗೋಪವನ** (ನ೦) ಗೊಲ್ಲರಿಂದ ತುಂಬಿದ ವನ, ಗೊಲ್ಲರು ಅಧಿಕವಾಗಿರುವ ವನ. गोपप्रधानं वनम्।

**गोपवल्ली ಗೋಪವಲ್ಲೀ** (स्त्री०) ಕುರಟಿಗೆ ಗಿಡ.

**गोपाध्यक्ष ಗೋಪಾಧ್ಯಕ್ಷ** (ಪುಂ) ಗೊಲ್ಲರ ಯಜಮಾನ. गोपानामध्यक्षः। "गोपाध्यक्षो भयत्रस्तो रथमास्थाय सत्वरः" भा० विरा०।

**गोपानसी ಗೋಪಾನಸೀ** (स्त्री०) ಮನೆಯ ಸೂರಿಗೆ ಆಧಾರವಾದ ಮರದ ಪಟ್ಟಿ. "गोपानसीषु क्षणमास्थिताताम्" माघ० ३-४९।

**गोपायक ಗೋಪಾಯಕ** (ವಿ೦) ರಕ್ಷಕ, ಕಾಪಾಡುವವನು. गोपायति—गुपू (रक्षणे) + आयः "ण्वुल्" (३-१-१३३)। "आसेदुषां गोत्रभिदोऽनुवृत्त्या गोपायकानां भुवनत्रयस्य" किरा० १८-१८।

**गोपायन ಗೋಪಾಯನ** (ನ೦) 1. ರಕ್ಷಣೆ. 2. ಕಾಪಾಡುವುದು, ರಹಸ್ಯವಾಗಿಡುವುದು. गुपू (रक्षणे) + आयः भावे "ल्युट्" (३-३-११५)। (ವಿ೦) 3. ರಕ್ಷಕ,

ಕಾಪಾಡುವವನು. गुपू कर्त० "ल्युः" (३-१-१३४)। "गोपानां बहुसाहस्रैर्बलैर्गोपायनैर्वृतः" भा० भीष्म०।

**गोपायित ಗೋಪಾಯಿತ** (वि०) 1. ರಕ್ಷಿಸಲ್ಪಟ್ಟ, ಕಾಪಾಡಲ್ಪಟ್ಟ. गुपू(रक्षणे)+आयः "क्तः"(३-२-१०२)। 2. ರಹಸ್ಯವಾಗಿಡಲ್ಪಟ್ಟ.

**गोपायितृ ಗೋಪಾಯಿತೃ** (वि०) ರಕ್ಷಿಸುವವನು, ಕಾಪಾಡುವವನು. गुपू (रक्षणे) + आयः "तृच्" (३-१-१३३)। स्त्रियाम् "ङीप्" (४-१-५)। **-यित्री -ಯಿತ್ರೀ.**

**गोपाल ಗೋಪಾಲ** (पुं०) 1. ಗೊಲ್ಲ, ದನಕಾಯುವವನು. गाः पालयति – पाल (रक्षणे) + णिच् "अण्" (३-२-१)। 2. ರಾಜ, ದೊರೆ. गां भूमिं पालयति – पाल (रक्षणे) + णिच् "अण्" (३-२-१)। 3. ಶ್ರೀಕೃಷ್ಣ. "गां दृष्ट्वा विहृष्टो हयभवं सर्वभूषणभूषणम्। गोपालमबलासङ्गमुदितं वेणुनादितम्" पद्मपु०। 4. ಕ್ಷತ್ರಿಯನಿಂದ ಶೂದ್ರಸ್ತ್ರೀಯಲ್ಲಿ ಹುಟ್ಟಿದ ಬೇರೆ ಜಾತಿಯವನು. "क्षत्रियात् शूद्रकन्यायां समुत्पन्नस्तु यः सुतः। स गोपाल इति ज्ञेयो भोज्यो विप्रैर्न संशयः"। "अर्धिकः कुलमित्रं च गोपालो दासनापितौ" मनु० ४-२५३।

**गोपालक ಗೋಪಾಲಕ** (पुं०) 1. ಗೊಲ್ಲ, ದನವನ್ನು ಕಾಪಾಡುವವನು. गां पालयति–पाल (रक्षणे) "ण्वुल्" (३-१-१३३)। 2. ಶ್ರೀಕೃಷ್ಣ. गोपाल स्वार्थे "कः"। 3. ರಾಜ, ದೊರೆ. गां भुवं पालयति – पाल "ण्वुल्" (३-१-१३३)। 4. ಈಶ್ವರ, ಪರಶಿವ.

**गोपालि ಗೋಪಾಲಿ** (पुं०) ಶಿವ, ಪರಮೇಶ್ವರ.

**गोपालिका ಗೋಪಾಲಿಕಾ** (स्त्री०) 1. ಗೊಲ್ಲನ ಹೆಂಡತಿ. गोपालस्य स्त्री "टाप्" (४-१-४)। न ङीप्। "पालकान्तान्न" (वा० ४-१-४८) इति निषेधात्। 2. ಸೊಗದೆ ಗಿಡ.

**गोपाली ಗೋಪಾಲೀ** (स्त्री०) ಗೋಪಾಲನ ಪತ್ನಿ, ಗೊಲ್ಲನ ಹೆಂಡತಿ. गोपालस्य स्त्री जाति० ङीष् (४-१-६३)।

**गोपाष्टमी ಗೋಪಾಷ್ಟಮೀ** (स्त्री०) ಕಾರ್ತಿಕಮಾಸದ ಶುಕ್ಲಾಷ್ಟಮಿ. गोपप्रिया अष्टमी। "शुक्लाष्टमी कार्तिके तु स्मृता गोपाष्टमी बुधैः। तद्दिने वासुदेवोऽभूत् गोपः पूर्वं स वत्सपः। तत्र कुर्यात् गवां पूजां गोग्रासं गोप्रदक्षिणम्। गवानुगमनं कार्यं सर्वान् कामानभीप्सता" कूर्मपु०।

**गोपिका ಗೋಪಿಕಾ** (स्त्री०) 1. ಕಾಪಾಡುವವಳು. गोपायति – गुपू (रक्षणे) "ण्वुल्" (३-१-१३३)। "कैदारिकाणामभितः समाकुलाः सहासमालोकयति स्म गोपिकाः" माघ० १२-४२। 2. ಗೊಲ್ಲರ ಹೆಂಗಸು. गोपी स्वार्थे "कन्"। "न खलु गोपिकानन्दनो भवानखिलदेहिनामन्तरात्मदृक्" भाग० १०-३१-४।

**गोपिकागीता ಗೋಪಿಕಾಗೀತಾ** (स्त्री०) ವಿರಹತಾಪವನ್ನು ತಾಳಲಾರದ ಗೋಪಾಂಗನೆಯರು ಮಾಡಿದ ಶ್ರೀಕೃಷ್ಣನ ಸ್ತೋತ್ರ. भाग० १०।

**गोपित्त ಗೋಪಿತ್ತ** (न०) ಗೋರೋಚನ.

**गोपिन् ಗೋಪಿನ್** (वि०) ರಕ್ಷಿಸುವವನು, ಕಾಪಾಡುವವನು. गोपायति – गुपू (रक्षणे) "णिनिः" (३-१-१३४)। स्त्रियाम् "ङीप्" (४-१-५)। **गोपिनी ಗೋಪಿನೀ.**

**गोपी ಗೋಪೀ** (स्त्री०) 1. ಕಾಪಾಡುವವಳು, ಕಾಯುವವಳು. गोपायति–गुपू (रक्षणे) "अच्" (३-१-१३४)। गौरा० "ङीष्" (४-१-४१)। "इक्षुच्छायानिषादिन्यस्तस्य गोप्तुर्गुणोदयम्। आकुमारकथोद्घातं शालिगोप्यो जगुर्यशः" रघु० ४-२। 2. ಗೊಲ್ಲಜಾತಿಯ ಹೆಂಗಸು. गोप जाति० "ङीष्" (४-१-६३)। ಶ್ರುತಿ ದೇವತೆಗಳು ಮತ್ತು ಋಷಿಕನ್ಯೆಯರೇ ಬೃಂದಾವನದಲ್ಲಿ ಗೋಪಾಂಗನೆಯರಾಗಿ ಹುಟ್ಟಿದ್ದರು. "गोप्यस्तु श्रुतयो ज्ञेयाः स्वधिका गोपकन्यकाः। देवकन्याश्च राजेन्द्र न मानुष्यः कथञ्चन" पद्मपु०। 3. ಸೊಗದೆ ಗಿಡ.

**गोपीगीता ಗೋಪೀಗೀತಾ** (स्त्री०) ಗೋಪಾಂಗನೆಯರು ಮಾಡಿದ ಶ್ರೀಕೃಷ್ಣನ ಸ್ತೋತ್ರ. "जयति तेऽधिकं जन्मना व्रजः श्रयत इन्दिरा शश्वदत्र हि। दयित दृश्यतां दिक्षु तावकास्त्वयि धृतासवस्त्वां विचिन्वते" ಇತ್ಯಾದಿ. भाग० १०-३१।

**गोपीवल्लभ ಗೋಪೀವಲ್ಲಭ** (पुं०) ಶ್ರೀಕೃಷ್ಣ. गोपीनां वल्लभः।

**गोपुच्छ ಗೋಪುಚ್ಛ** (पुंन०) 1. ಹಸುವಿನ ಬಾಲ. गोः पुच्छम्। (पुं०) 2. ಹಸುವಿನಂತೆ ಬಾಲವುಳ್ಳ ಒಂದು ಜಾತಿಯ ಕಪಿ, ಗೋಲಾಂಗೂಲ. गोः पुच्छमिव पुच्छं यस्य। (न०) 3. ಮೂವತ್ತನಾಲ್ಕು ಎಳೆಗಳ ಹಾರ.

**गोपुट ಗೋಪುಟ** (न०) ಪರಮೇಶ್ವರನ ವೃಷಭದ ಮಂಟಪ.

**गोपुर ಗೋಪುರ** (न०) 1. ಪುರದ್ವಾರ, ಪಟ್ಟಣದ ಹೆಬ್ಬಾಗಿಲು. गोपायति नगरं रक्षति – गुपू (रक्षणे) "उरच्"

बाहु०। 2. ಶ್ರೇಷ್ಠವಾದ ದ್ವಾರ. "प्रतिनादपूरित-विगन्तरः पतन् पुरगोपुरं प्रति स सैन्यसागरः" माघ० १३-२७। 3. ಕೆಂಪು ಕೊನ್ನಾರಿ.

**गोपुरक ಗೋಪುರಕ** (ಪುಂ०) "गोपुर" ಪದದ ಅರ್ಥ. गोपुर स्वार्थे "कः"।

**गोपुरीष ಗೋಪುರೀಷ** (ನಂ०) ಗೋಮಯ, ಹಸುವಿನ ಸಗಣಿ. गोः पुरीषम्।

**गोपेन्द्र ಗೋಪೇಂದ್ರ** (ಪುಂ०)1. ಶ್ರೀಕೃಷ್ಣ. गोपेषु इन्द्रः श्रेष्ठः। 2. ನಂದ. गोपानामिन्द्रः।

**गोपेश ಗೋಪೇಶ** (ಪುಂ०) 1. ನಂದ, ಗೊಲ್ಲರ ರಾಜ. 2. ಶಾಕ್ಯಮುನಿ. 3. ಶ್ರೀಕೃಷ್ಣ.

**गोप्तव्य ಗೋಪ್ತವ್ಯ** (ವಿ०) 1. ರಹಸ್ಯವಾಗಿ ಇಡಲ್ಪಡುವ, ಬಚ್ಚಿಡಲ್ಪಡುವ. गुपू (रक्षणे) कर्म० "तव्यः" (३-१-९६)। 2. ರಕ್ಷಿಸಲ್ಪಡುವ. 3. ರಹಸ್ಯವಾಗಿಡಬೇಕಾದ. 4. ರಕ್ಷಿಸಬೇಕಾದ.

**गोप्तुकाम ಗೋಪ್ತುಕಾಮ**(ವಿ०)1. ರಕ್ಷಿಸಲು ಅಪೇಕ್ಷೆಯುಳ್ಳ. 2. ರಹಸ್ಯವಾಗಿ ಇಡಲು ಅಪೇಕ್ಷೆಯುಳ್ಳ. गोप्तुं कामो यस्य।

**गोप्तृ ಗೋಪ್ತೃ** (ಪುಂ०) 1. ವಿಷ್ಣು. गोपायति रक्षति—गुपू (रक्षणे) "तृच्" (३-१-१३३)। अस्य कर्मफलचक्रस्य रक्षिता। "यः कर्मफलचक्रस्य गोप्ता हि परिपालनात्" इति निरुक्तिः। "गोहितो गोपतिर्गोप्ता" वि० स०। (ವಿ०) 2. ರಕ್ಷಕ, ಕಾಪಾಡುವವನು. गुपू (रक्षणे) "तृच्" (३-१-१३३)। "प्रपेदिरे पूर्वयुगानुभूतिं गोपास्तदा गोप्तरि वासुदेवे" याद० ४-७८। 3. ಮುಚ್ಚಿಡುವವನು, ರಹಸ್ಯವಾಗಿಡುವವನು. स्त्रियाम् "ङीप्" (४-१-५)। गोप्त्री ಗೋಪ್ತ್ರೀ.

**गोप्य ಗೋಪ್ಯ** (ಪುಂ०) 1. ದಾಸಿಯ ಮಗ, ಸೇವಕಿಯ ಮಗ. 2. ಸೇವಕ, ಆಳು. (ವಿ०)3. ರಕ್ಷಿಸಲ್ಪಡುವ. 4. ರಹಸ್ಯವಾಗಿಡಲ್ಪಡುವ. गुपू (रक्षणे) कर्म० "ण्यत्" (३-१-१२४)। 5. ರಕ್ಷಿಸಲ್ಪಡಬೇಕಾದ. 6. ರಹಸ್ಯವಾಗಿಡಲ್ಪಡಬೇಕಾದ. "आयुर्वित्तं गृहच्छिद्रं मन्त्रमैथुनभेषजम्। तपोदानापमानं च नव गोप्यानि यत्नतः" काशीखं०।

**गोप्यक ಗೋಪ್ಯಕ** (ಪುಂ०) ಸೇವಕ, ಆಳು. गोप्य स्वार्थे "कन्" (५-४-५)। गोप्यं कायति—कै (शब्दे) "कः" (३-२-३) वा।

**गोप्रकाण्ड ಗೋಪ್ರಕಾಂಡ** (ನಂ०) ಶ್ರೇಷ್ಠವಾದ ಹಸು. प्रकाण्डं चासौ गौश्च। नित्यसमासः (२-१-६६)। जातेः पूर्वनिपातः।

**गोप्रचार ಗೋಪ್ರಚಾರ** (ಪುಂ०) ದನಗಳು ಮೇಯುವ ಪ್ರದೇಶ, ಹುಲ್ಲುಗಾವಲು. गावः प्रचरन्त्यत्र — प्र + चर (गतिभक्षणयोः) "घञ्" (३-३-१२१)।

**गोप्रतार ಗೋಪ್ರತಾರ**(ಪುಂ०)ಸರಯೂ ತೀರ್ಥ, ಸರಯೂ ತೀರದಲ್ಲಿರುವ ಒಂದು ತೀರ್ಥ, ಸರಯೂ ನದಿಯ ತೀರದಲ್ಲಿರುವ ಒಂದು ಯಾತ್ರಾಸ್ಥಳ. गवां प्रतारः प्रतरण-तुल्यसंमर्दोऽत्र प्र + तॄ (प्लवनतरणयोः) "घञ्" (३-३-१२१)। ಶ್ರೀರಾಮನು ವೈಕುಂಠಕ್ಕೆ ತೆರಳುವ ಸಮಯದಲ್ಲಿ ಅವನ ಅನುಯಾಯಿಗಳಾದ ಪಟ್ಟಣಿಗರು ಗುಂಪುಗುಂಪಾಗಿ ಸೇರಿದ್ದ ಪ್ರದೇಶವಿದು. प्र+तॄ "अप्" (३-३-५७)। –प्रतरः –ಪ್ರತರಃ. "यद्गोप्रतरकल्पोऽभूत् संमर्दस्तत्र मज्जताम्" रघु० १५-१०१।

**गोप्रदान ಗೋಪ್ರದಾನ** (ನಂ०) ಗೋವಿನ ದಾನ. गोः प्रदानम्।

**गोप्रवेश ಗೋಪ್ರವೇಶ** (ಪುಂ०) ಕಾಡಿಗೆ ಮೇಯಲು ಹೋಗಿದ್ದ ಗೋವುಗಳು ಸಾಯಂಕಾಲ ಮನೆಗೆ ಪ್ರವೇಶಿಸುವುದು. गवां प्रवेशः।

**गोफणा ಗೋಫಣಾ** (ಸ್ತ್ರೀ०) ತುಟಿ ಗಲ್ಲ ಮೂಗುಗಳ ಗಾಯಕ್ಕೆ ಕಟ್ಟುವುದಕ್ಕಾಗಿ ಉಪಯೋಗಿಸುವ ಪಟ್ಟಿ. "वितानगोफणाः पञ्चाङ्गी चेति चतुर्दशबन्धविशेषाः" सुश्रुत० सूत्र० १८-१७।

**गोबलीवर्दन्याय ಗೋಬಲೀವರ್ದನ್ಯಾಯ** (ಪುಂ०) ಸಾಮಾನ್ಯವಾಚಕ ಶಬ್ದದ ಜೊತೆಯಲ್ಲಿ ವಿಶೇಷವಾಚಕ ಶಬ್ದವನ್ನು ಪ್ರಯೋಗಿಸಿದಾಗ ವಿಶೇಷವಾಚಕಶಬ್ದಕ್ಕೆ ವೈಯರ್ಥ್ಯ ಬರದಿರಲು ಹೇಳುವ ಒಂದು ನ್ಯಾಯ. ಇಂತಹ ಸಂದರ್ಭದಲ್ಲಿ ಗೋಬಲೀವರ್ದನ್ಯಾಯದಿಂದ ಪರಿಹಾರವನ್ನು ಹೇಳಬೇಕು. गामानय बलीवर्दं चानय ಎಂಬಲ್ಲಿ गो ಮತ್ತು बलीवर्द ಪದಗಳೆರಡೂ "ವೃಷಭ" ಎಂಬ ಅರ್ಥವನ್ನು ಕೊಡುವುವು. ಇಲ್ಲಿ ಸಾಮಾನ್ಯವಾದ गो ಪದದಿಂದಲೇ ವಿಶೇಷವಾದ बलीवर्द ಪದದ ಅರ್ಥವೂ ಬರುವಾಗ ವಿಶೇಷವಾಚಕಪದಕ್ಕೆ ವೈಯರ್ಥ್ಯವು ಸಂಭವಿಸಬಹುದಾದುದರಿಂದ बलीवर्द ಪದಕ್ಕೆ गो ಪದದ ಅರ್ಥಕ್ಕಿಂತಲೂ ಭಿನ್ನವಾದ "ಬಲಿಷ್ಠವಾದ ವೃಷಭ" ಎಂಬ ಅರ್ಥವನ್ನು ಹೇಳಿ ವೈಯರ್ಥ್ಯಪರಿಹಾರವನ್ನು ಹೇಳಬೇಕು. ಇದೇ "**ಗೋಬಲೀವರ್ದನ್ಯಾಯ**".

**गोभृत् ಗೋಭೃತ್** (ಪುಂ०) ಪರ್ವತ, ಬೆಟ್ಟ. गां बिभर्ति — डु भृञ् (धारणपोषणयोः) "क्विप्" (३-२-७६)।

**गोमक्षिका ಗೋಮಕ್ಷಿಕಾ** (स्त्री०) ಕಾಡುನೊಣ, ತೊಣಚಿ. गोः हिंसनार्था मक्षिका।

**गोमचर्चिका ಗೋಮಚರ್ಚಿಕಾ** (स्त्री०) ಪ್ರಶಸ್ತವಾದ ಗೋವು, ಶ್ರೇಷ್ಠವಾದ ಹಸು. मचर्चिका चासौ गौश्च। नित्यसमासः (२-१-६६)। जातेः पूर्वनिपातः।

**गोमण्डल ಗೋಮಂಡಲ** (न०) 1. ಹಸುಗಳ ಸಮೂಹ, ದನಗಳ ಗುಂಪು. गवां मण्डलम्। 2. ಭೂಮಂಡಲ. गोः भूमेः मण्डलम्। 3. ಕಿರಣಗಳ ಸಮೂಹ. "मग्नस्य तोयापदि दुस्तरायां गोमण्डलस्योद्धरणं चकार" माघ० १४-८६।

**गोमत् ಗೋಮತ್** (ಪುಂ०) 1. ಗೋವುಗಳ ಯಜಮಾನ, ದನಗಳ ಒಡೆಯ. गावः सन्त्यस्य "मतुप्" (५-२-९४)। (वि०) 2. ಗೋಸಂಪತ್ತುಳ್ಳವನು. स्त्रियाम् "ङीप्" (४-१-६)। **—मती —ಮತೀ.**

**गोमतल्लिका ಗೋಮತಲ್ಲಿಕಾ** (स्त्री०) ಪ್ರಶಸ್ತವಾದ ಗೋವು, ಉತ್ತಮವಾದ ಹಸು. मतल्लिका चासौ गौश्च। नित्यसमासः (२-१-६६)। जातेः पूर्वनिपातः। "वर्गादृगवां हुंकृतिचारु निर्यतीमरिर्मधोरैक्षत गोमतल्लिकाम्" माघ० १२-४१।

**गोमती ಗೋಮತೀ** (स्त्री०) ಗೋಮತಿ ಎಂಬ ಒಂದು ನದಿ. गावः स्तुतिरूपा वाचः सन्त्यस्याम् "मतुप्" (५-२-९४)। "गोमतीं धूतपापां च गण्डकीं च महानदीम्" भा०। ಈ ನದಿಯು ಸಮುದ್ರಕ್ಕೆ ಸೇರುವುದರಿಂದ ಬಹಳ ಪಾವನವಾದುದು. "गङ्गा सरस्वती पुण्या यमुना च महानदी। गोदावरी गोमती च नदी तापी च नर्मदा। नद्यः समुद्रसंयोगात् सर्वाः पुण्याः शुभावहाः"।

**गोमथ ಗೋಮಥ** (ಪುಂ०) ಹಾಲು ಕರೆಯುವ ಗೋಪಾಲಕ, ಗೊಲ್ಲ. गां मथति — मथे (विलोडने) "अच्" (३-१-१३४)।

**गोमन्त ಗೋಮಂತ** (ಪುಂ०) 1. ಒಂದು ಪರ್ವತ. "गोमन्तो पर्वतश्रेष्ठे येनैष परिमोक्षितः" भा० सभा० २५-६। 2. ಭಾರತದ ಒಂದು ಪ್ರದೇಶ, ಈಗಿನ "ಗೋವಾ" ಪ್ರಾಂತ.

**गोमन्द ಗೋಮಂದ** (ಪುಂ०) ಒಂದು ಪರ್ವತ.

**गोमय ಗೋಮಯ** (ಪುನ०) 1. ಹಸುವಿನ ಸಗಣಿ. गोः पुरीषम्—गो "मयट्" (४-३-१४५)। ಗೋಮಯವು ಬಹಳ ಪವಿತ್ರವಾದುದು. ಪೂರ್ವದಲ್ಲಿ ಗೋವುಗಳೆಲ್ಲವೂ ಸೇರಿ ತಮ್ಮಲ್ಲಿ ಶ್ರೇಷ್ಠತೆಯನ್ನು ಸಂಪಾದಿಸಿಕೊಳ್ಳಲು ಅನೇಕ ವರ್ಷಗಳಕಾಲ ಬ್ರಹ್ಮನನ್ನು ಕುರಿತು ತಪಸ್ಸು ಮಾಡಿದುವು. ಅದರಿಂದ ಮೆಚ್ಚಿ ಪ್ರತ್ಯಕ್ಷನಾದ ಬ್ರಹ್ಮನನ್ನು ಕುರಿತು ಲೋಕದಲ್ಲಿ ಎಲ್ಲರಿಗಿಂತಲೂ ತಾವು ಶ್ರೇಷ್ಠರಾಗಬೇಕೆಂದೂ ತಮ್ಮ ಪುರೀಷ (ಗೋಮಯ) ಮತ್ತು ಮೂತ್ರಗಳಿಂದ ಎಲ್ಲರೂ ಪವಿತ್ರತೆಯನ್ನು ಪಡೆಯುವಂತಾಗಬೇಕೆಂದೂ ವರವನ್ನು ಕೇಳಲು ಬ್ರಹ್ಮನು "अस्तु" ಎಂದನು. भा० अनु० ११४। ಗೋಮಯ ಮತ್ತು ಗೋಮೂತ್ರಗಳಲ್ಲಿ ಲಕ್ಷ್ಮಿಯ ಸಾನಿಧ್ಯವಿರುವುದು. "अवश्यं मानना कार्या तवास्माभिर्यशस्विनि। शकृन्मूत्रे निवस त्वं पुण्यमेतद्धि नः शुभे। श्रीरुवाच—दिष्ट्या प्रसादो युष्माभिः कृतो मेऽनुग्रहात्मकः। एवं भवतु भद्रं वः पूजितास्मि सुखप्रदाः" भा० अनु० १२८। "यस्यामलिन्देषु न चक्रुरेव मुग्धाङ्गना गोमयगोमुखानि" माघ० ३-४८। (न०) 2. ಬೆರಣಿ, ಒಣಗಿದ ಸಗಣಿ. "उपलशकलमेतद्भेदकं गोमयानाम्" मुद्रा० ३-१५। (वि०) 3. ಗೋವುಗಳಿಂದ ತುಂಬಿದ, ಬಹಳ ಹಸುಗಳಿಂದ ಕೂಡಿದ.

**गोमयच्छत्र ಗೋಮಯಚ್ಛತ್ರ** (न०) ನಾಯಿಕೊಡೆ. गोमये छत्रमिव।

**गोमयप्रिय ಗೋಮಯಪ್ರಿಯ** (न०) ನಾಯಿಕೊಡೆ. गोमयं प्रियमस्य।

**गोमर्द ಗೋಮರ್ದ** (ಪುಂ०) ಸಾರಸಪಕ್ಷಿ. "सारसस्तु कलांकुरः। गोमर्दाः" त्रिकाण्ड०।

**गोमांस ಗೋಮಾಂಸ** (न०) ಹಸುವಿನ ಮಾಂಸ. गोर्मांसम्। "अगम्यागमने चैव मद्यगोमांसभक्षणे। शुद्ध्यै चान्द्रायणं कुर्यात् नदीं गत्वा समुद्रगाम्"।

**गोमातृ ಗೋಮಾತೃ** (स्त्री०) ಗೋವುಗಳ ತಾಯಿಯಾದ ಸುರಭಿ, ಕಶ್ಯಪನ ಒಬ್ಬ ಹೆಂಡತಿ. गवां माता।

**गोमायु ಗೋಮಾಯು** (ಪುಂ०) 1. ಜಂಬುಕ, ನರಿ. गां विकृतां वाचं मिनोति — डु मिञ् (प्रक्षेपणे) "उण्" (उ० १-१)। "अनुहुंकुरुते घनध्वनिं न हि गोमायुरुतानि केसरी" माघ० १६-२५। 2. ಒಬ್ಬ ಗಂಧರ್ವ. "बहुभिः सह गन्धर्वैः प्रागायत च तुम्बुरुः। ......... । गोमायुः सूर्यवर्चाश्च सोमवर्चाश्च सप्तमः" हरिवं०।

**गोमिन् ಗೋಮಿನ್** (पुं०) 1. ಜಂಬುಕ, ನರಿ. (वि०) 2. ಗೋವುಗಳ ಯಜಮಾನ, ದನಗಳ ಒಡೆಯ. 3. ಉಪಾಸಕ. "गोमी सृगाले पुंसि स्यात्त्रिषु गोमत्युपासके" मेदि०।

**गोमुख ಗೋಮುಖ** (पुं०) 1. ನಕ್ರ, ಮೊಸಳೆ. गोर्मुखमिव मुखमस्य। 2. ಮಾತಲಿಯ ಮಗ. 3. ಪರಶಿವನ ಒಬ್ಬ ಅನುಚರ. (न०) 4. ವಕ್ರವಾದ ಮತ್ತು ಹಳ್ಳತಿಟ್ಟು ಗಳುಳ್ಳ ಮನೆ. 5. ಒಂದು ವಾದ್ಯ. "आडम्बरान् गोमुखांश्च डिण्डिमांश्च महास्वनान्" भा० शल्य० ४७-५८। 6. ಲೇಪನ, ಬಳಿಯುವುದು. "यस्यामलिन्देषु न चक्रुरेव मुग्धाङ्गना गोमयगोमुखानि" माघ० ३-४८। "नक्रे ना लेपने क्लीब वाद्ये न स्त्री च गोमुखम्" नानार्थर०। "गोमुखं कुटिलागारे वाद्यभाण्डे च लेपने। पुंसि मातलिपुत्र च महादेवगणान्तरे" मेदि०। 7. ಕಳ್ಳನು ಗೋಡೆಯಲ್ಲಿ ಕೊರೆದ ಕನ್ನ. 8. ಜಪಮಾಲೆಯನ್ನು ಇಡುವ ಚೀಲ. "प्रजपेद्विधिना गुह्यं वर्णमालाधिकं प्रिये। निधाय गोमुखे मालां गोपयेन्मातृजारवत्"। 9. ಯೋಗಾಸನದ ಒಂದು ಭೇದ. (वि०) 10. ಹಸುವಿನ ಮುಖದಂತೆ ಮುಖವುಳ್ಳ.

**गोमुखी ಗೋಮುಖೀ** (स्त्री०) 1. ಗಂಗಾನದಿಯು ಹೊರಟುಬರುವ ಹಿಮಾಲಯದ ಒಂದು ಗುಹೆ. 2. ಗೋವಿನಂತೆ ಮುಖವುಳ್ಳ ಹೆಂಗಸು. गोर्मुखमिव मुखं यस्याः।

**गोमूत्र ಗೋಮೂತ್ರ** (न०) ಗೋವಿನ ಗಂಜಲ, ಹಸುವಿನ ಮೂತ್ರ. गोर्मूत्रम्। ಗೋಮೂತ್ರವು ಬಹಳ ಪವಿತ್ರ ವಾದುದು. ["गोमय" ಪದದಲ್ಲಿ ನೋಡಿ.] ಮದ್ಯ ಪಾನ ಮಾಡಿದವನಿಗೆ ಯಾವಜ್ಜೀವವೂ ಗೋಮೂತ್ರ ಪಾನವು ಪ್ರಾಯಶ್ಚಿತ್ತವಾಗಿ ಉಕ್ತವಾಗಿದೆ. "गोमूत्रमग्निवर्णं वा पिबेदुदकमेव वा। पयो घृतं वाऽऽमरणात् गोशकृद्रसमेव वा" मनु० ११-९१। ಗೋವು ಸಕಲ ಪುಣ್ಯ ತೀರ್ಥಸ್ವರೂಪವೆಂದೂ ಅದರ ಮೂತ್ರವು ನರ್ಮದಾನದಿ ಯೆಂದೂ ಐತಿಹ್ಯವಿರುವುದು. "गोमयं यमुना साक्षात् गोमूत्रं नर्मदा शुभा। गङ्गा क्षीरं तु यासां वै किं पवित्रमतःपरम्"।

**गोमूत्रिका ಗೋಮೂತ್ರಿಕಾ** (स्त्री०) ಗೋಮೂತ್ರಿಕಾ ಬಂಧ, ಚಿತ್ರಾಲಂಕಾರದ ಒಂದು ಭೇದ, ಗೋವಿನ ಮೂತ್ರವು (ಗೋವು ಸಂಚರಿಸುವಾಗ) ನೆಲದ ಮೇಲೆ ಬೀಳುವ ಆಕಾರದಲ್ಲಿ ರಚಿಸುವ ಶ್ಲೋಕ. **ಇದರ ಲಕ್ಷಣ:** ಶ್ಲೋಕದ ಪೂರ್ವಾರ್ಧವೂ, ಅದರ ವಿಷಮಾಕ್ಷರಗಳನ್ನು ಉತ್ತರಾರ್ಧದ ಸಮಾಕ್ಷರಗಳೊಡನೆ ಕ್ರಮವಾಗಿ ಸೇರಿಸಿದಾಗ ಆಗುವ ಶ್ಲೋಕಾರ್ಧವೂ ಹಾಗೆಯೇ ಉತ್ತರಾರ್ಧವೂ, ಅದರ ವಿಷಮಾಕ್ಷರಗಳನ್ನು ಪೂರ್ವಾರ್ಧದ ಸಮಾಕ್ಷರಗಳೊಡನೆ ಕ್ರಮವಾಗಿ ಸೇರಿಸಿದಾಗ ಆಗುವ ಶ್ಲೋಕಾರ್ಧವೂ ಏಕರೂಪವಾಗಿದ್ದರೆ **"ಗೋಮೂತ್ರಿಕಾ ಬಂಧ"** ವಾಗುವುದು. "वर्णानामेकरूपत्वं यद्येकान्तरमर्धयोः। गोमूत्रिकेति तत्प्राहुः दुष्करं तद्विदो विदुः"। "प्रवृत्ते विकसद्धानं साधनेऽप्यविषादिभिः।
ववृषे विकसद्दानं युधमाप्यविषाणिभिः"।

प्र वृ त्ते वि क स द्धा नं सा ध ने प्य वि षा दि भिः।
XXXXXXXXXXXXXXX
व वृ षे वि क स द्दा नं यु ध मा प्य वि षा णि भिः॥

**गोमृग ಗೋಮೃಗ** (पुं०) ದನದ ಆಕಾರದ ಒಂದು ಪ್ರಾಣಿ, ಗವಯವೆಂಬ ಪಶು. गवाकृतिर्मृगः। स्त्रियाम् जाति० "ङीष्" (४-१-६३)। **गोमृगी ಗೋಮೃಗೀ.**

**गोमेद ಗೋಮೇದ** (पुं०) 1. ಗೋಮೇದಕ ಮಣಿ, ಬಿಳುಪು ಮಾಸಲುಹಳದಿ ಕೆಂಪು ಮತ್ತು ನೀಲಿ ಬಣ್ಣಗಳಿಂದ ಕೂಡಿದ ನಾಲ್ಕು ಜಾತಿಗಳುಳ್ಳ ಮಣಿ. गोर्जलमिव मेदयति — त्रि मिदा (स्नेहनमोचनयोः) "अच्" (३-१-१३४)। ಇದು ನವರತ್ನಗಳಲ್ಲೊಂದು. (1) रत्नम्, (2) गारुत्मतम्, (3) पुष्परागः, (4) माणिक्यम्, (5) इन्द्रनीलः, (6) गोमेदः, (7) वैडूर्यम्, (8) मौक्तिकम् ಮತ್ತು (9) विद्रुमः ಇವು ನವರತ್ನಗಳು. 2. ಗೋಮೇದ ವೆಂಬ ಒಂದು ದ್ವೀಪ. ಈ ದ್ವೀಪದ ರಾಜನಾದ ಗೋಪತಿಯು ಗೋಮೇಧವನ್ನು ಮಾಡಲು ಯತ್ನಿಸಿದಾಗ ಕುಪಿತನಾದ ಗೌತಮನ ಶಾಪದಿಂದ ನಾಶವಾದನು. ಅಲ್ಲಿದ್ದ ಗೋವುಗಳೆಲ್ಲವೂ ಋಷಿಯ ಕೋಪಾಗ್ನಿಯಿಂದ ದಗ್ಧ ವಾಗಲು ಅವುಗಳ ಮೇದಸ್ಸಿನಿಂದ ಕೂಡಿದ ಆ ಪ್ರದೇಶಕ್ಕೆ **"ಗೋಮೇದ"** ವೆಂಬ ಹೆಸರಾಯಿತು. "गोमेदे गोपतिर्नाम राजाभूद्गोसवोद्यतः। याज्योऽभूद्ब्राह्मिकल्पानामौतश्यानां मनोः कुले। स तेषु हरियज्ञाय प्रवृत्तेषु गुरून् भृगून्। वव्रे तं गोतमः कोपादशपत् सोऽगमत् क्षयम्। यज्ञवाटेऽस्य ता गावो दग्धाः कोपाग्निना मुनेः। तन्मेदसा मही छन्ना गोमेदः स ततोऽभवत्"। 3. ಪ್ಲಕ್ಷದ್ವೀಪದ ಕುಲಪರ್ವತಗಳ ಲ್ಲೊಂದು. ["कुलपर्वत" ಪದದಲ್ಲಿ ನೋಡಿ.]

**गोमेदक ಗೋಮೇದಕ** (पुं०) 1. ನವರತ್ನಗಳಲ್ಲೊಂದು ಮಣಿ. गोमेद स्वार्थे "कः"। ["गोमेद" ಪದದಲ್ಲಿ ನೋಡಿ.] 2. ಒಂದು ವಿಷ.

**गोमेध ಗೋಮೇಧ**(ಪುಂ)ಪಶುಯಜ್ಞ. मेधृ (हिंसायाम्) अधि० "घञ्" (३-३-१२१)। ಇದರಿಂದ ಗೋವುಗಳಿಗೆ ಗೋಲೋಕಪ್ರಾಪ್ತಿಯೂ ಯಜಮಾನನಿಗೆ ಸ್ವರ್ಗಲೋಕ ಪ್ರಾಪ್ತಿಯೂ ಆಗುವುದು. ಈ ಪಶುಯಜ್ಞವು ಕಲಿಯುಗದಲ್ಲಿ ನಿಷಿದ್ಧ. "अश्वालम्भो गवालम्भः सन्यासः पलपैतृकम्। देवराच्च सुतोत्पत्तिः कलौ पञ्च विवर्जयेत्"।

**गोयज्ञ ಗೋಯಜ್ಞ** (ಪುಂ) 1. ಪಶುಯಜ್ಞ. गवा कृतो यज्ञः। ["गोमेघ" ಪದದಲ್ಲಿ ನೋಡಿ.] 2. ಬೃಂದಾವನದ ಸಮೀಪದಲ್ಲಿ ಶ್ರೀಕೃಷ್ಣನು ಗೋಪಾಲಕರೊಡನೆ ನಡೆಸಿದ ಗೋವರ್ಧನಗಿರಿಪೂಜೆ ಮತ್ತು ಗೋವುಗಳ ಉತ್ಸವ. ಗೊಲ್ಲರೆಲ್ಲರೂ ಇಂದ್ರನ ಪೂಜೆಯನ್ನು ಮಾಡಲೆತ್ನಿಸಿದಾಗ ಅದನ್ನು ತಡೆದು ಶ್ರೀಕೃಷ್ಣನು ಗೋಯಜ್ಞವನ್ನು ಮಾಡಿಸಿದನು. "शिवाय गावः पूज्यन्तां गिरियज्ञः प्रवर्त्यताम्। पूज्यतां त्रिदशैः शक्रो गिरिरस्माभिरिज्यताम्। गोयज्ञं कारयिष्यामि बलादेव न संशयः"।

**गोयान ಗೋಯಾನ** (ನಂ) ಎತ್ತಿನಗಾಡಿ, ಎತ್ತುಗಳಿಂದ ಎಳೆಯಲ್ಪಡುವ ಗಾಡಿ. गवा कृष्टं यानम्। "मैथुनं तु समासेव्य पुंसि योषिति वा द्विजः। गोयानेऽप्सु दिवा चैव सवासाः स्नानमाचरेत्" मनु० ११-१७४। "गोयानेनागतस्तुष्टः पादाभ्यां शुभचेष्टितः" सुश्रुत०।

**गोरक्ष ಗೋರಕ್ಷ** (ಪುಂ) 1. ಗೋಪಾಲಕ, ಗೊಲ್ಲ. गाः रक्षति—रक्ष (पालने) "अण्" (३-२-१)। 2. ಹೇರಿಳೆಗಿಡ. 3. ಹೆರಿಗೆ ಹಾಲೆಯೆಂಬ ಒಂದು ಮೂಲಿಕೆ. (ವಿ०) 4. ದನವನ್ನು ಕಾಪಾಡುವವನು. (ನಂ) 5. ಗೋವುಗಳನ್ನು ಕಾಪಾಡುವುದು. रक्ष भावे "घञ्" (३-३-१८)। "कृषिगोरक्षमास्थाय जीवेद्वैश्यस्य जीविकाम्" मनु० १०-८२। "गोरक्षो नागरङ्गे स्याद्गवां च परिरक्षके" मेदि०।

**गोरक्षक ಗೋರಕ್ಷಕ** (ಪುಂ) 1. ದನಕಾಯುವವನು, ಗೊಲ್ಲ. गाः रक्षति—रक्ष (पालने) "ण्वुल्" (३-१-१३३)। (ವಿ०)2. ದನವನ್ನು ಕಾಪಾಡುವವನು. "गोरक्षकान् वाणिजकान् तथा कारुकुशीलवान्। प्रेष्यान् वार्धुषिकांश्चैव विप्रान् शूद्रवदाचरेत्" मनु० ८-१०२।

**गोरक्षजम्बू ಗೋರಕ್ಷಜಂಬೂ**(ಸ್ತ್ರೀ०)1. ಗೋಧೂಮ, ಗೋಧಿ. 2. ಬೋರೆಹಣ್ಣು, ಎಲಚಿಹಣ್ಣು.

**गोरक्षण ಗೋರಕ್ಷಣ** (ನಂ) ಗೋವುಗಳನ್ನು ರಕ್ಷಿಸುವುದು, ದನಗಳನ್ನು ಕಾಪಾಡುವುದು. गवां रक्षणम्।

**गोरक्ष्य ಗೋರಕ್ಷ್ಯ** (ನಂ) ಗೋವುಗಳನ್ನು ರಕ್ಷಿಸುವುದು, ಪಶುಪಾಲನೆ, ದನಗಳನ್ನು ಕಾಪಾಡುವುದು. "विद्या शिल्पं भृतिः सेवा गोरक्ष्यं विपणिः कृषिः। धृतिर्भैक्ष्यं कुसीदं च दश जीवनहेतवः" मनु० १०-११६। ಇವಿಷ್ಟೂ ಆಪತ್ಕಾಲದಲ್ಲಿ ಜೀವನೋಪಾಯಗಳು.

**गोरङ्कु ಗೋರಂಕು** (ಪುಂ) 1. ನೀರುಹಕ್ಕಿ, ನೀರುಕೋಳಿ. 2. ಸ್ತುತಿಪಾಠಕ, ಹೊಗಳುಭಟ. 3. ಹೊಣೆಗಾರ, ಜಾಮೀನುದಾರ. "गोरङ्कुः स्यात् पुमान् पक्षिभेदे नग्नकवन्दिनोः" मेदि०। 4. ಬೆತ್ತಲೆಯಾಗಿರುವವನು. "गोरङ्कुः पक्षिजातौ च भवेन्नग्नकवन्दिनोः" विश्व०।

**गोरस ಗೋರಸ** (ಪುಂ)1. ಗೋಕ್ಷೀರ, ಹಸುವಿನ ಹಾಲು. गोः रसः। 2. ಮೊಸರು. 3. ಮಜ್ಜಿಗೆ. अन्नं पर्युषितं भोज्यं स्नेहाक्तं चिरसंस्थितम्। अस्नेहा अपि गोधूमयवगोरसविक्रियाः" याज्ञ० १-१६९। 4. ಮಾತಿನ ಸವಿ, ಮಾತಿನಲ್ಲಿರುವ ಮಾಧುರ್ಯ. गवि रसः। "को रसो गोरसं विना" उद्भ०।

**गोरसज ಗೋರಸಜ** (ನಂ) ತಕ್ರ, ಮಜ್ಜಿಗೆ. गोरसात् दध्नो जायते—जनी (प्रादुर्भावे) "डः" (३-२-९८)।

**गोराज ಗೋರಾಜ**(ಪುಂ) ಶ್ರೇಷ್ಠವಾದ ವೃಷಭ, ಉತ್ತಮವಾದ ಹೋರಿ, ಗೂಳಿ. गवां राजा—"टच्" (५-४-९१)।

**गोराटिका ಗೋರಾಟಿಕಾ** (ಸ್ತ್ರೀ०) ಸಾರಿಕಾಪಕ್ಷಿ. गौरिव रटति—रट (परिभाषणे) "ण्वुल्" (३-१-१३३)।

**गोरुत ಗೋರುತ** (ನಂ)1. ದನಗಳ ಕೂಗು. 2. ಹಸುವಿನ ಕೂಗು ಕೇಳಿಸುವಷ್ಟು ದೂರ. गोरुतं श्रवणगोचरत्वेन अस्यास्ति "अच्" (५-२-१२७)।

**गोरूप ಗೋರೂಪ** (ನಂ) 1. ಹಸುವಿನ ಆಕಾರ. गोः रूपम्। "पयोधरीभूतचतुःसमुद्रां जुगोप गोरूपधरामिवोर्वीम्" रघु० २-३। (ವಿ०)2. ಹಸುವಿನ ಆಕಾರವುಳ್ಳ, ಮಹಾದೇವ. गोः रूपमिव रूपं यस्य।

**गोरोच ಗೋರೋಚ** (ನಂ) ಹರಿದಳ, ಹಳದಿಯ ಬಣ್ಣವಾಗಿ ಉಪಯೋಗಿಸುವ ಒಂದು ಖನಿಜ. गवा किरणेन रोचते—रुच (दीप्तौ) "अच्" (३-१-१३४)।

**गोरोचना ಗೋರೋಚನಾ** (ಸ್ತ್ರೀ०) ಹಸುವಿನ ಪಿತ್ತರಸದಿಂದ ಉಂಟಾದ ಒಂದು ಗಂಧದ್ರವ್ಯ. गोभ्यो जाता रोचना। "कर्णार्पितो लोध्रकषायरूक्षे गोरोचनाक्षेपनितान्तगौरे" कुमा० ७-१७।

**गोर्द ಗೋರ್ದ** (ನಂ) ಮಸ್ತಿಷ್ಕ, ಮಿದುಳು, ತಲೆಯೊಳಗಿರುವ ಸ್ನೇಹ. गूयंते—गूरी (उद्यमने) "दन्" (उं ४-९८) निपा०।

**गोल ಗೋಲ** (ಪುಂ) 1. ಗುಂಡಾಗಿರುವ ವಸ್ತು, ವರ್ತುಲವಾಗಿರುವ ಚೆಂಡು. 2. ಜಾರಪುರುಷನಿಂದ ಹುಟ್ಟಿದ ವಿಧವೆಯ ಮಗ. 3. ಗೋಳಾಧ್ಯಾಯವೆಂಬ ಒಂದು ಜ್ಯೋತಿಷಗ್ರಂಥ. 4. ಮಂಗಾರೆ ಗಿಡ. 5. ಜ್ಯೋತಿಷೋಕ್ತವಾದ ಗ್ರಹಗಳ ಯೋಗ. ಅನೇಕ ಗ್ರಹಗಳು ಒಂದೇ ಕಡೆ ಸೇರಿದರೆ "ಗೋಲ" ಯೋಗವಾಗುವುದು. **ಆರು ಗ್ರಹಗಳು ಒಂದೇ ರಾಶಿಯಲ್ಲಿ ಸೇರಿದರೆ—** "ग्रहाणामेकस्मिन् यदि भवति षण्णां निवसतिस्तदा गोलो योगः प्रलयपदमिन्द्रोऽपि लभते। भवेल्लोको रक्षः परिहरति पुत्रं च जननी नृपाणां नाशः स्यात् ज्वलति वसुधा शुष्यति नदी" प्रश्नकौ०। **ಸಪ್ತಗ್ರಹಗಳು ಸೇರಿದರೆ—**"सप्तग्रहा यदैकस्था गोलयोगस्तदा भवेत्। दुर्भिक्षं राष्ट्रपीडा च तस्मिन् काले नृपक्षयः"।

**गोलक ಗೋಲಕ** (ಪುಂ) 1. ವಿಧವೆಯಲ್ಲಿ ಜಾರಪುರುಷನಿಂದ ಹುಟ್ಟಿದ ಮಗ. 2. ಗುಡಾಣ, ಧಾನ್ಯಗಳನ್ನು ತುಂಬಿಡುವ ದೊಡ್ಡ ಮಣ್ಣಿನ ಪಾತ್ರೆ. 3. ಗುಡ, ಬೆಲ್ಲ. 4. "ಗೋಲ" ಪದದ ಅರ್ಥ. "गोलको विधवापुत्रे जारात् स्यान्मणिके गुडे" मेदि०। 5. ಚೆಂಡು. 6. ಗೋಲೋಕ.

**गोलक्षण ಗೋಲಕ್ಷಣ** (ನಂ) ಶುಭಾಶುಭಸೂಚನೆಯುಳ್ಳ ಗೋವುಗಳ ಲಕ್ಷಣ, ಗೋವುಗಳಲ್ಲಿರುವ ಶುಭದ ಮತ್ತು ಅಶುಭದ ಚಿಹ್ನೆ. **ಗೋವುಗಳಲ್ಲಿರುವ ಅಶುಭ ಲಕ್ಷಣಗಳು:** ಕಣ್ಣುಗಳಲ್ಲಿ ನೀರು ಸೋರುತ್ತಿರುವುದು, ಇಲಿಯಂತೆ ಕಿರುಗಣ್ಣುಗಳು, ಶಿಥಿಲವಾಗಿ ಆಡುತ್ತಿರುವ ಕೊಂಬುಗಳು, ಕತ್ತೆಯ ಬಣ್ಣ, ನಾಲ್ಕು ಏಳು ಮತ್ತು ಹತ್ತು ಹಲ್ಲುಗಳಿರುವುದು, ಜೋಲಾಡುತ್ತ ತಲೆ ಬಗ್ಗಿರುವುದು, ಇಳಿಜಾರಿನ ಬೆನ್ನು, ದಪ್ಪನಾಗಿಯೂ ಮೋಟಾಗಿಯೂ ಇರುವ ಕತ್ತು, ಕಪ್ಪಗೂ ಅತಿ ಉದ್ದವಾಗಿಯೂ ಇರುವ ನಾಲಿಗೆ, ಯವಾಕಾರದ ಬಹಳ ಸೂಕ್ಷ್ಮವಾದ ಸೊಂಟ, ಒಡೆದು ಭಿನ್ನವಾಗಿರುವ ಕಾಲಿನ ಗೊರಸು ಇವೆಲ್ಲವೂ ಹಸುವಿನಲ್ಲಿರುವ ಅಶುಭ ಲಕ್ಷಣಗಳು. ಇತ್ಯಾದಿ. बृहत्सं ६१ अ०।

**गोला ಗೋಲಾ** (ಸ್ತ್ರೀಂ) 1. ಗೋದಾವರೀ ನದಿ. गां अतिपृथुलां पृथ्वीं लाति—ला (आदाने) "कः" (३-२-३)। 2. ಸಖಿ, ಗೆಳತಿ. 3. ದುರ್ಗಾದೇವಿ. 4. ಗುಡಾಣ, ಧಾನ್ಯವನ್ನು ತುಂಬಿಡುವ ದೊಡ್ಡ ಮಣ್ಣಿನ ಪಾತ್ರೆ. 5. ಮಕ್ಕಳ ಒಂದು ಆಟದ ಸಾಮಾನು, ಚೆಂಡು. 6. ಮಣಿಶಿಲೆ. 7. ಪತ್ರಾಂಜನ. 8. ರಾಷ್ಟ್ರ. "गोला गोदावरीसख्योः कुनटीदुर्गयोः स्त्रियाम्। पत्राञ्जने मण्डले चालिञ्जरे बालखेलने" मेदि०।

**गोलाङ्गूल ಗೋಲಾಂಗೂಲ** (ಪುಂ) ಹಸುವಿನ ಬಾಲದಂತೆ ಬಾಲವುಳ್ಳ ಒಂದು ಜಾತಿಯ ವಾನರ. गोः लाङ्गूलमिव लाङ्गूलं यस्य। ಈ ವಾನರಗಳು ಕಶ್ಯಪನ ಪತ್ನಿ ಕ್ರೋಧೆಯ ಮಗಳಾದ ಹರಿಯ ಸಂತತಿಯವು. "नव क्रोधवशा नारीः प्रजज्ञे क्रोधसम्भवाः। मृगी च मृगमन्दा च हरी भद्रमना अपि। ........................। हर्याश्च हरयोऽपत्यं वानराश्च तरस्विनः। गोलाङ्गूलांश्च भद्रं ते हर्याः पुत्रान् प्रचक्षते" भा० आदि० ६७।

**गोलाध्याय ಗೋಲಾಧ್ಯಾಯ** (ಪುಂ) ಭಾಸ್ಕರಾಚಾರ್ಯರು ರಚಿಸಿದ ಒಂದು ಗ್ರಂಥ.

**गोलास ಗೋಲಾಸ** (ಪುಂ) ನಾಯಿಕೊಡೆ. गां भूमिं लासयति—लस (शिल्पयोगे) + णिच् "अण्" (३-२-१)।

**गोलीढ ಗೋಲೀಢ** (ಪುಂ) ಮೊಕ್ಕಮರ.

**गोलोक ಗೋಲೋಕ** (ಪುಂ) ಗೋಲೋಕ, ಶ್ರೀಕೃಷ್ಣನ ನಿತ್ಯವಾಸಸ್ಥಾನ. गोभिः किरणैः ब्रह्मज्ञानतेजोभिः लोक्यते—लोकृ (दर्शने) "घञ्" (३-३-१९)। ಗೋಲೋಕವು ಬ್ರಹ್ಮಲೋಕಕ್ಕೂ ಮೇಲಿರುವುದು. ಇದು ಅನಾದಿಯಾದುದು ಮತ್ತು ನಿರಾಧಾರವಾದುದು; ಬ್ರಹ್ಮಲೋಕಕ್ಕೆ ಮೇಲೆ ಐವತ್ತು ಕೋಟಿ ಯೋಜನಗಳ ದೂರದಲ್ಲಿದೆ. ಮೇಲುಗಡೆ ಆಧಾರವಿಲ್ಲದಿದ್ದರೂ ಇದು ರತ್ನಸಾರ ನಿರ್ಮಿತವಾದುದು. ಈ ಲೋಕವು ಏಳು ಬಾಗಿಲುಗಳು ಮತ್ತು ಏಳು ಕಂದಕಗಳಿಂದ ಕೂಡಿರುವುದು. ಇದಕ್ಕೆ ಲಕ್ಷ ಪ್ರಾಕಾರಗಳಿರುವುವು. ವಿರಜಾನದಿಯು ಇಲ್ಲಿ ಹರಿಯುತ್ತಿದೆ. ಒಂದು ನೂರು ಶಿಖರಗಳುಳ್ಳ ರತ್ನಶೈಲದಿಂದ ಇದು ಆವೃತವಾಗಿದೆ. ಇದರ ಒಂದು ಶಿಖರವು ಹತ್ತು ಸಾವಿರ ಯೋಜನಗಳ ಪರಿಮಾಣವುಳ್ಳದ್ದಾಗಿದೆ. ಈ ಶೈಲದ ಎತ್ತರ ಒಂದು ನೂರು ಕೋಟಿ ಯೋಜನಗಳು. ಇದಕ್ಕೆ ನೂರರಷ್ಟು ದೀರ್ಘ (ಉದ್ದ) ವಾಗಿರುವುದು. ವಿಸ್ತೀರ್ಣವು ಹತ್ತು ಸಾವಿರ ಯೋಜನಗಳು. ಈ ಗೋಲೋಕದಲ್ಲಿ ಒಂದು ಸಹಸ್ರ ಕಲ್ಪವೃಕ್ಷಗಳೂ ಒಂದು ನೂರು ಪುಷ್ಪೋದ್ಯಾನಗಳೂ ಇರುವುವು. ಮೂರು ಕೋಟಿ ರತ್ನಾಭರಣಗಳಿಂದ ಕೂಡಿದ ಒಂದು ಲಕ್ಷ ಗೋಪಾಂಗನೆಯರು ಇದನ್ನು ರಕ್ಷಿಸುತ್ತಿರುವರು. ರತ್ನ

ದೀಪಗಳಿಂದಲೂ ರತ್ನಖಚಿತ ತಲ್ಪ (ಹಾಸಿಗೆ) ಗಳಿಂದಲೂ ಪರಿಶೋಭಿಸುತ್ತಿರುವುದು. ಗೋಲೋಕದ ಮನೆಗಳ ಸಂಖ್ಯೆಗಳನ್ನೂ ಅವುಗಳ ಸೊಬಗನ್ನೂ ಹೇಳಲೂ ಮತ್ತು ವರ್ಣಿಸಲೂ ಯಾವ ವಿದ್ವಾಂಸನಿಗೂ ಸಾಧ್ಯವಾಗದು. "निराधारश्च वैकुण्ठः ब्रह्माण्डानां परोवरः। तत्परश्चापि गोलोकः पञ्चाशत्कोटियोजनात्। ऊर्ध्वे निराश्रयश्चापि रत्नसारविनिर्मितः। सप्तद्वारः सप्तसारः परिखासप्तसंयुतः। लक्षप्राकारयुक्तश्च नद्या विरजया युतः। वेष्टितो रत्नशैलेन शतशृङ्गेण चारुणा। योजनायुतमानं च यस्यैकं शृङ्गमुज्ज्वलम्। शतकोटियोजनं च शैल उच्छ्रित एव च। दैर्घ्यं तस्य शतगुणं प्रस्थे च लक्षयोजनम्। कल्पवृक्षसहस्रेण पुष्पोद्यानशतेन च। त्रिकोटिरत्नाभरणैर्गोपीलक्षैश्च रक्षितः। रत्नप्रदीपयुक्तश्च रत्नतल्पसमन्वितः। गोलोकगृहसंख्यानं वर्णनं वा विशारदः। न कोऽपि वेद विद्वान् वा वेदविद्वान् व्रजेश्वर" ब्रह्मवै०।

**गोलोमी ಗೋಲೋಮೀ** (स्त्री०) 1. ಬಜೆ. गोर्लोमेव लोम दलादिकमस्याः "अच्" (५-४-७५)। गौरा० "ङीष्" (४-१-४१)। 2. ಬಿಳಿಗರುಕೆ. गोलोमसु जाता "अण्" (४-३-२५)। "ङीप्" (४-१-१५)। 3. ವೇಶ್ಯೆ, ಸೂಳೆ. गवा वाचा लोमयति — लोमन् (नामधा०) "अच्" (३-१-१३४)। "ङीष्" (४-१-४१)। 4. ಜಟಾಮಾಂಸಿ. गोलोम्नामियम् "अण्" (४-३-१२०)। "ङीप्" (४-१-१५)। "गोलोमी श्वेतदूर्वायां स्याद्वचाभूतकेशयोः" मेदि०। "गोलोमी स्त्री वारनार्याम् षड्ग्रन्थाश्वेतदूर्वयोः" नानार्थर०।

**गोवत्स ಗೋವತ್ಸ** (पुं०) ಹಸುವಿನ ಕರು. गोर्वत्सः।

**गोवत्सादिन् ಗೋವತ್ಸಾದಿನ್** (पुं०) ವೃಕ, ತೋಳ. गोवत्समत्ति — अद (भक्षणे) "णिनिः" (३-२-७८)।

**गोवध ಗೋವಧ** (पुं०) ಗೋಹತ್ಯೆ, ದನಗಳ ಕೊಲೆ.

**गोवन्दनी ಗೋವಂದನೀ** (स्त्री०) ಪ್ರಿಯಂಗುವೃಕ್ಷ, ಪ್ರೇಂಕಣಗಿಡ. गवि भूमौ वन्द्यते — वदि (अभिवादनस्तुत्योः) कर्म० "ल्युट्" (३-३-११३)। "ङीप्" (४-१-१५)।

**गोवर ಗೋವರ** (न०) ದನದ ಕೊಟ್ಟಿಗೆಯೊಳಗೆ ದನಗಳ ಕಾಲಿನಿಂದ ತುಳಿಯಲ್ಪಟ್ಟು ಒಣಗಿದ ಸಗಣಿಯ ಪುಡಿ. "गोष्ठान्तर्गोखुरक्षुण्णशुष्कचूर्णितगोमयम्। गोवरं तत्समाख्यातं वरिष्ठं रससाधने" भावप्र०।

**गोवर्धन ಗೋವರ್ಧನ** (पुं०) 1. ಬೃಂದಾವನದಲ್ಲಿರುವ ಒಂದು ಪರ್ವತ, ಗೋವರ್ಧನಗಿರಿ. गो+वृधु (वृद्धौ) + णिच् "ल्युः" (३-१-१३४)। ಗೊಲ್ಲರೆಲ್ಲರೂ ಇಂದ್ರ ಪೂಜೆಯನ್ನು ಮಾಡಲು ಯತ್ನಿಸಿದಾಗ ಶ್ರೀಕೃಷ್ಣನು ಅದನ್ನು ತಡೆದು ಗೋವರ್ಧನಗಿರಿಪೂಜೆಯನ್ನು ಮಾಡು ಎಂತೆ ಹೇಳಿದನು. ಗೋವರ್ಧನ ಪೂಜೆಗೂ ಅಣಿಮಾಡಿ ಕೊಂಡರು. ಆಗ ಅದರಿಂದ ಕುಪಿತನಾದ ಇಂದ್ರನು ಎಲ್ಲವನ್ನೂ ಕೊಚ್ಚಿಕೊಂಡುಹೋಗುವಂತೆ ಮಳೆಯನ್ನು ಸುರಿಸಿದನು. ಗೋಪಾಲಕರೆಲ್ಲರೂ ಪೇಚಾಡುತ್ತಿರಲು ಶ್ರೀಕೃಷ್ಣನು ಗೋವರ್ಧನಗಿರಿಯನ್ನು ಏಳು ದಿನಗಳಕಾಲ ತನ್ನ ಕಿರುಬೆರಳಿನಿಂದ ಮೇಲಕ್ಕೆ ಎತ್ತಿಹಿಡಿದು ಅದರ ಕೆಳಗೆ ಎಲ್ಲರನ್ನೂ ಮಳೆಯಿಂದ ರಕ್ಷಿಸಿ ಇಂದ್ರನ ಗರ್ವಭಂಗ ಮಾಡಿದನು. "रजसा चोदिता मेघा वर्षन्त्यम्बूनि सर्वतः। प्रजास्तैरेव सिद्ध्यन्ति महेन्द्रः किं करिष्यति। न नःपुरो जनपदा न ग्रामा न गृहा वयम्। नित्यं वनौकसस्तात वनशैलनिवासिनः। तस्माद्गवां ब्राह्मणानामद्रेश्चारभ्यतां मखः। य इन्द्रयागसंभारास्तैरयं साध्यतां मखः। एतन्मम मतं तात क्रियतां यदि रोचते। अयं गोब्राह्मणाद्रीणां मह्यं च दयितो मखः। कालात्मना भगवता शक्रदर्पं जिघांसता। प्रोक्तं निशम्य नन्दाद्याः साध्वगृह्णन्त तद्वचः। ..........................। इन्द्रस्तदात्मनः पूजां विज्ञाय विहतां नृप। गोपेभ्यः कृष्णनाथेभ्यो नन्दादिभ्यश्चुकोप सः। गणं सांवर्तकं नाम मेघानां चान्तकारिणाम्। इन्द्रः प्राचोदयत् क्रुद्धो वाक्यं चाहेशमान्युत। ...............। इत्थं मघवताज्ञप्ता मेघा निर्मुक्तबन्धनाः। नन्दगोकुलमासारैः पीडयामासुरोजसा। अत्यासारातिवातेन पशवो जातवेपनाः। गोपा गोप्यश्च शीतार्ताः गोविन्दं शरणं ययुः। कृष्ण कृष्ण महाभाग त्वन्नाथं गोकुलं प्रभो। त्रातुमर्हसि देवान्नः कुपितात् भक्तवत्सल। शिलावर्षनिपातेन हन्यमानमचेतनम्। निरीक्ष्य भगवान् मेने कुपितेन्द्रकृतं हरिः। .....................। तस्मान्मच्छरणं गोष्ठं मन्नाथं मत्परिग्रहम्। गोपाये स्वात्मयोगेन सोऽयं मे व्रत आहितः। इत्युक्त्वैकेन हस्तेन कृत्वा गोवर्धनाचलम्। दधार लीलया कृष्णश्छत्राकमिव बालकः। अथाह भगवान् गोपान् हेऽम्ब तात व्रजौकसः। यथोपजोषं विशत गिरिगर्तं सगोधनाः। तथा निर्विविशुर्गर्तं कृष्णाश्वासितमानसाः। क्षुत्तृड्व्यथां सुखापेक्षां हित्वा तैर्व्रजवासिभिः। वीक्ष्यमाणो दधावद्रिं सप्ताहं नाचलत्

पदात्" भाग० १०-२४, २५। (न०)2. ಪಶುಪಾಲನೆಯಿಂದ ಗೋವುಗಳನ್ನು ವೃದ್ಧಿಪಡಿಸುವುದು. गवां वर्धनम्।

**गोवर्धनधर ಗೋವರ್ಧನಧರ** (पुं०) ಗೋವರ್ಧನಗಿರಿಯನ್ನು ಕಿರುಬೆರಳಿನಿಂದ ಎತ್ತಿ ನಿಂತಿದ್ದ ಶ್ರೀಕೃಷ್ಣ. धरति—धृञ् (धारणे) "अच्" (३-१-१३४)। गोवर्धनस्य धरः। ["गोवर्धन" ಪದದಲ್ಲಿ ನೋಡಿ.] गोवर्धनं धारयति—धृ (धारणे)+णिच् "णिनिः" (३-१-१३४)। **-धारिन् -ಧಾರಿನ್.**

**गोवशा ಗೋವಶಾ** (स्त्री०) ಬಂಜೆಯಾದ ಹಸು. वशा वन्ध्या चासौ गौश्च। पूर्वनिपातः (२-१-६५)।

**गोवाट ಗೋವಾಟ** (न०) ಗೋಷ್ಠ, ದನಗಳ ಕೊಟ್ಟಿಗೆ. गवां वाटम्। "सार्गलद्वारगोवाटं मध्ये गोस्थानसङ्कुलम्" हरिवं०।

**गोवास ಗೋವಾಸ** (पुं०) ಗೋಷ್ಠ, ದನಗಳ ಕೊಟ್ಟಿಗೆ. वसन्त्यत्र—वस (निवासे) अधि० "घञ्" (३-३-१२१)। गवां वासः।

**गोवासन ಗೋವಾಸನ**(पुं०)ಬ್ರಾಹ್ಮಣ. गाः वासयति—वस (निवासे)+णिच् "ल्युः" (३-१-१३४)। "गोवासना ब्राह्मणाश्च दासनीयाश्च सर्वतः। प्रीत्यर्थं ते महाराज धर्मराज्ञो महात्मनः" भा० सभा०।

**गोविकर्त ಗೋವಿಕರ್ತ** (पुं०) 1. ಹಸುವನ್ನು ಕೊಲ್ಲುವವನು. गां विकृन्तति—वि+कृती (छेदने) "अण्" (३-२-१)। 2. ರೈತ, ಬೇಸಾಯಗಾರ.

**गोविकर्तृ ಗೋವಿಕರ್ತೃ** (पुं०) ಹಸುವನ್ನು ಕೊಲ್ಲುವವನು. गां विकृन्तति—वि + कृती (छेदने) "तृच्" (३-१-१३३)।

**गोविदांपति ಗೋವಿದಾಂಪತಿ** (पुं०) ವಿಷ್ಣು. गाः वेदवाचः विन्दति—विद (ज्ञाने) "क्विप्" (३-२-६१)। गोविदो ज्ञानिनः, तेषां पतिः ज्ञानयज्ञाराध्यतया पाता। "गावो वेदगिरः प्रोक्ताः गोविदस्तत्सुपालनात्। गोविदां पतिरुद्दिष्टः वेदविद्व्रतदो मनुः" इति निरुक्तिः। "अनिरुद्धः सुरानन्दो गोविन्दो गोविदांपतिः" वि० स०।

**गोविन्द ಗೋವಿಂದ** (पुं०) ಶ್ರೀಕೃಷ್ಣ, ವಿಷ್ಣು. गाः उपनिषद्वाचः विन्दति, गां भुवं धेनुं स्वर्गं वेदं वा विन्दति—विद्लृ (लाभे) "शः" (वा० ३-१-१३८)। गाः स्तुतिगिरः विन्दति वा। "गवां स्तुतिगिरां विन्दो गोविन्दः स उदाहृतः" इति निरुक्तिः। "अनिरुद्धः सुरानन्दो गोविन्दो गोविदांपतिः" वि० स०। ಗೋವರ್ಧನಗಿರಿಪೂಜೆಯಿಂದ ಗರ್ವಭಂಗಹೊಂದಿದ ಇಂದ್ರನು ಸುರಭಿಯೊಡನೆ ಶ್ರೀಕೃಷ್ಣನಲ್ಲಿಗೆ ಬಂದು ತಾನು ಮಾಡಿದ ಅಪರಾಧಕ್ಕಾಗಿ ಕ್ಷಮೆಯನ್ನು ಬೇಡಿ ದೇವರ್ಷಿಗಳೊಡನೆ ಕೂಡಿ ಶ್ರೀಕೃಷ್ಣನನ್ನು **"ಗೋವಿಂದ"** ನೆಂದು ಕರೆದು ಗೋವಿಂದಪಟ್ಟಾಭಿಷೇಕ ಮಾಡಿದನು. "गोवर्धने धृते शैल आसाराद् रक्षिते व्रजे। गोलोकादाव्रजत् कृष्णं सुरभिः शक्र एव च। विविक्त उपसंगम्य व्रीडितः कृतहेलनः। पस्पर्श पादयोरेनं किरीटेनार्कवर्चसा। दृष्टश्रुतानुभावोऽस्य कृष्णस्यामिततेजसः। नष्टत्रिलोकेशमदः इन्द्र आह कृताञ्जलिः। ये मद्विधाज्ञा जगदीशमानिनः त्वां वीक्ष्य कालेऽभयमाशु तन्मदम्। हित्वाऽऽर्यमार्गं प्रभजन्त्यपस्मया ईहा खलानामपि तेऽनुशासनम्। स त्वं ममैश्वर्यमदप्लुतस्य कृतागसस्तेऽविदुषः प्रभावम्। क्षन्तुं प्रभोऽथार्हसि मूढचेतसो मैवं पुनर्भून्मतिरीश मेऽसती। सुरभिः—कृष्ण कृष्ण महायोगिन् विश्वात्मन् विश्वसंभव। भवता लोकनाथेन सनाथा वयमच्युत। त्वं नः परमकं दैवं त्वं न इन्द्रो जगत्पते। इन्द्रं नस्त्वाभिषेक्ष्यामो ब्रह्मणा नोदिता वयम्। अवतीर्णोऽसि विश्वात्मन् भूमेर्भारापनुत्तये। एवं कृष्णमुपामन्त्र्य सुरभिः पयसात्मनः। जलैराकाशगङ्गाया ऐरावतकरोद्धृतैः। इन्द्रः सुरर्षिभिः साकं नोदितो देवमातृभिः। अभ्यषिञ्चत दाशार्हं गोविन्द इति चाभ्यधात्। इति गोगोकुलपतिं गोविन्दमभिषिच्य सः। अनुज्ञातो ययौ शक्रो वृतो देवादिभिर्दिवम्" भाग० १०-२७। 2. ಗೊಲ್ಲರ ಯಜಮಾನ. 3. ಬೃಹಸ್ಪತಿ, ಗುರು. "गोविन्दो वासुदेवे स्याद्गवाध्यक्षे बृहस्पतौ" मेदि०। 4. ಫಾಲ್ಗುನ ಮಾಸ, ನಾಲ್ಕನೆಯ ತಿಂಗಳು. ಮಾರ್ಗಶೀರ್ಷ ಮೊದಲುಗೊಂಡು ವರ್ಷಾರಂಭವಾಗುವುದರಿಂದ ಫಾಲ್ಗುನ ಮಾಸವು ನಾಲ್ಕನೆಯದಾಯಿತು. ಕೇಶವಾದಿ ದ್ವಾದಶ (ಹನ್ನೆರಡು) ನಾಮಗಳೂ ಹನ್ನೆರಡು ತಿಂಗಳುಗಳ ಹೆಸರುಗಳು. "मृगशीर्षाद्याः केशवनारायणमाधवाः सगोविन्दाः। विष्णुमधुसूदनाख्यौ त्रिविक्रमो वामनश्चैव। श्रीधरनामा तस्मात् सहृषीकेशाश्च पद्मनाभश्च। दामोदर इत्येते मासाः प्रोक्ता यथासंख्यम्" बृहत्सं०।

**गोविन्दद्वादशी ಗೋವಿಂದದ್ವಾದಶೀ** (स्त्री०) ಫಾಲ್ಗುನ ಮಾಸದ ಶುಕ್ಲ ದ್ವಾದಶೀ. गोविन्दप्रिया द्वादशी।

**गोविष् ಗೋವಿಷ್** (न०) ಗೋಮಯ, ದನದ ಸಗಣಿ. गोः विट्।

**गोविषाण ಗೋವಿಷಾಣ** (नं०) ದನದ ಕೊಂಬು. गोर्विषाणम्।

**गोविषाणिक ಗೋವಿಷಾಣಿಕ** (पुं०) ಹಸುವಿನ ಕೊಂಬಿನಿಂದ ಮಾಡಿದ ವಾದ್ಯ, ಕಹಳೆ. गोविषाणं साधनतयास्त्यस्य "ठन्" (५-२-११५)।

**गोविष्ठा ಗೋವಿಷ್ಠಾ** (स्त्री०) ಗೋಮಯ, ಹಸುವಿನ ಸಗಣಿ. गोर्विष्ठा।

**गोवृन्द ಗೋವೃಂದ** (नं०) ಗೋವುಗಳ ಸಮೂಹ. गवां वृन्दम्।

**गोवृन्दारक ಗೋವೃಂದಾರಕ** (पुं०) ಶ್ರೇಷ್ಠವಾದ ಗೋವು, ಉತ್ತಮವಾದ ಹಸು. गौर्वृन्दारक इव।

**गोवृष ಗೋವೃಷ** (पुं०) ಶ್ರೇಷ್ಠವಾದ ವೃಷಭ, ಉತ್ತಮವಾದ ಹೋರಿ. गवि वर्षति रेतः — वृषु (सेचने) "कः" (३-१-१३५)।

**गोवृषध्वज ಗೋವೃಷಧ್ವಜ** (पुं०) ಮಹಾದೇವ, ಪರಮೇಶ್ವರ.

**गोव्याघ्र ಗೋವ್ಯಾಘ್ರ** (नं०) ಹಸು ಮತ್ತು ಹುಲಿ. गौश्च व्याघ्रश्च अनयोः समाहारः। एकवद्भावः (२-४-९)।

**गोव्रज ಗೋವ್ರಜ** (पुं०) 1. ಗೋವುಗಳ ಸಮೂಹ, ಹಸುಗಳ ಗುಂಪು. गवां व्रजः। 2. ಗೋವುಗಳು ಸಂಚರಿಸುವ ಪ್ರದೇಶ. गावो व्रजन्त्यत्र — व्रज (गतौ) "घः" (३-३-११९) निपा०। 3. ದೊಡ್ಡಿ, ಕರುಹಟ್ಟಿ, ದನಗಳ ಕೊಟ್ಟಿಗೆ.

**गोव्रत ಗೋವ್ರತ** (नं०) 1. ಗೋಹತ್ಯೆ ಮಾಡಿದವನು ಗೋವುಗಳ ವಿಷಯದಲ್ಲಿ ಮಾಡಬೇಕಾದ ಒಂದು ವ್ರತ. गोहत्यानिमित्तं गोषु व्रतम्। 2. ಗೋವುಗಳ ಸೇವಾರೂಪವಾದ ವ್ರತ.

**गोशकृत् ಗೋಶಕೃತ್** (नं०) ಗೋಮಯ. ಹಸುವಿನ ಸಗಣಿ. गोः शकृत्।

**गोशाल(ला) ಗೋಶಾಲ(ಲಾ)** (स्त्रीनं०) 1. ಗೋಶಾಲೆ, ದನದ ಕೊಟ್ಟಿಗೆ. गवां शाला, वा नपुंसकत्वम् (२-४-२५)। (वि०) 2. ಗೋಶಾಲೆಯಲ್ಲಿ ಹುಟ್ಟಿದ. गोशाले जातः "अण्" (४-३-२५)। अणो लुक् (४-३-३५)।

**गोशीर्ष ಗೋಶೀರ್ಷ** (पुं०) 1. ಋಷಭ ಪರ್ವತ. गोः शीर्षमिव शीर्षं यस्य। 2. ಚಂದನ ವೃಕ್ಷ, ಗಂಧದ ಮರ. 3. ಹಸುವಿನ ತಲೆಯ ಆಕಾರದ ಬಾಣ. (नं०) 4. ಹಸುವಿನ ತಲೆ. गोः शीर्षम्।

**गोशृङ्ग ಗೋಶೃಂಗ** (पुं०) 1. ಒಬ್ಬ ಋಷಿ. गोः शृङ्गमिव शृङ्गमस्य। (नं०) 2. ಹಸುವಿನ ಕೊಂಬು. गोः शृङ्गम्।

**गोष्ठ ಗೋಷ್ಠ** (नं०) 1. ಗೋವುಗಳ ಸ್ಥಾನ, ದನಗಳ ಕೊಟ್ಟಿಗೆ, ಕರುಹಟ್ಟಿ. गावस्तिष्ठन्त्यत्र—ष्ठा (गतिनिवृत्तौ) "कः" (वा० ३-३-५८)। "गोष्ठेषु गोष्ठीकृतमण्डलासनान् सनादमुत्थाय मुहुः सवलगतः" माघ० १२-३८। 2. ಸಭೆ.

**गोष्ठपति ಗೋಷ್ಠಪತಿ** (पुं०) ದನಗಳ ಕೊಟ್ಟಿಗೆಯ ಯಜಮಾನ. गोष्ठस्य पतिः।

**गोष्ठश्व ಗೋಷ್ಠಶ್ವ** (पुं०) 1. ದನದ ಕೊಟ್ಟಿಗೆಯಲ್ಲಿರುವ ನಾಯಿ. गोष्ठे श्वा। निपा० (५-४-७७)। 2. ಮನೆಯಲ್ಲೇ ಕುಳಿತು ನಾಯಿಯಂತೆ ಪಕ್ಕದ ಮನೆಯವರನ್ನು ಹಿಂಸಿಸುತ್ತ ದ್ವೇಷಿಸುವವನು. "स्वस्थानस्थः परान् द्वेष्टि यः स गोष्ठश्व उच्यते" त्रिकाण्ड०।

**गोष्ठागार ಗೋಷ್ಠಾಗಾರ** (नं०) 1. ದನದ ಕೊಟ್ಟಿಗೆಯೊಳಗಿನ ಮನೆ. 2. ಸಭಾಭವನ, ಬಹಳ ಜನರು ಕೂಡುವ ವಿಶಾಲವಾದ ಮನೆ. गोष्ठस्य सभाया अगारम्।

**गोष्ठाध्यक्ष ಗೋಷ್ಠಾಧ್ಯಕ್ಷ** (पुं०) ದನಗಳ ಕೊಟ್ಟಿಗೆಯ ಯಜಮಾನ, ದನಕಾಯುವವರ ಯಜಮಾನ. गोष्ठस्याध्यक्षः।

**गोष्ठाष्टमी ಗೋಷ್ಠಾಷ್ಟಮಿ** (स्त्री०) "गोपाष्टमी" ಪದದ ಅರ್ಥ.

**गोष्ठि ಗೋಷ್ಠಿ** (स्त्री०) ಸಭೆ. गावो वाचः तिष्ठन्त्यत्र—ष्ठा (गतिनिवृत्तौ) "किः" बाहु०।

**गोष्ठी ಗೋಷ್ಠೀ** (स्त्री०) 1. ಸಭೆ. गावोऽनेकवाचस्तिष्ठन्त्यत्र—ष्ठा (गतिनिवृत्तौ) "कः" (वा० ३-३-५८)। 2. ಪರಸ್ಪರ ಮಾತುಕತೆ ನಡೆಯುವುದು, ಪರಸ್ಪರ ಮಾತನಾಡುವುದು, ಸಂಭಾಷಣೆ. "आलस्यं मदमोहौ च चापलं गोष्ठिरेव च। स्तब्धता चाभिमानित्वं तथाऽत्यागित्वमेव च। त एते सप्त दोषाः स्युः सदा विद्यार्थिनां मताः" भा० उद्योग० ४०-४, ५। "गोष्ठेषु गोष्ठीकृतमण्डलासनान् सनादमुत्थाय मुहुः स वलातः" माघ० १२-३८। 3. ಏಕಾಂಕವುಳ್ಳ ಒಂದು ಉಪರೂಪಕ. ಒಂಬತ್ತು ಅಥವಾ ಹತ್ತು ಪ್ರಾಕೃತ ಪುರುಷ ಪಾತ್ರಗಳೂ ಐದು ಅಥವಾ ಆರು ಸ್ತ್ರೀ ಪಾತ್ರಗಳೂ ಉಳ್ಳ, ಗ್ರಾಮ್ಯ ವ್ಯವಹಾರಗಳಿಂದಲೂ ಕಾಮ ಮತ್ತು ಶೃಂಗಾರ ವಿಷಯಗಳಿಂದಲೂ ಕೂಡಿ ಗರ್ಭ ಮತ್ತು ವಿಮರ್ಶ ಸಂಧಿಗಳಿಲ್ಲದ ಉಪರೂಪಕ್ಕೆ "ಗೋಷ್ಠಿ" ಎಂದು ಹೆಸರು. "प्राकृतैर्नवभि

पुंभिर्दशभिर्वाप्यलंकृता। नोदात्तवचसा गोष्ठी कैशिकीवृत्तिशालिनी। हीना गर्भविमर्शाभ्यां पञ्चषड्योषिदन्विता। कामशृङ्गारसंयुक्ता स्यादेकाङ्कविनिर्मिता" सा० द० ६-२७४, ७५। 4. ಪೋಷ್ಯವರ್ಗ, ಕುಟುಂಬಕ್ಕೆ ಸೇರಿದವರು. "विषं गोष्ठी दरिद्रस्य वृद्धस्य तरुणी विषम्"। 5. ಸಮೂಹ, ಗುಂಪು.

**गोष्ठीपति ಗೋಷ್ಠೀಪತಿ** (पुं०) 1. ಸಭೆಯ ಅಧ್ಯಕ್ಷ. 2. ಒಂದು ಕುಟುಂಬದ ಯಜಮಾನ. गोष्ठ्याः पतिः।

**गोष्ठेशय ಗೋಷ್ಠೇಶಯ** (पुं०) ಗೋವ್ರತಕ್ಕಾಗಿ ದನಗಳ ಕೊಟ್ಟಿಗೆಯಲ್ಲಿ ಮಲಗುವವನು. गोष्ठे शेते – शीङ् (स्वप्ने) "अच्" (३-२-१५)। अलुक् (६-३-१८)। "पञ्चगव्यं पिबेद् गोघ्नो मासमासीत संयतः। गोष्ठेशयो गोऽनुगामी गोप्रदानेन शुध्यति" याज्ञ० ३-२६३।

**गोष्पद ಗೋಷ್ಪದ** (न०) 1. ಹಸುವು ಕಾಲೂರಿದ ಗುಳಿ, ಹಸುವಿನ ಹೆಜ್ಜೆಯ ಗುಳಿ. गोः पदम्। 2. ಹಸುವಿನ ಹೆಜ್ಜೆಯ ಅಳತೆ, ಹಸುವು ಹೆಜ್ಜೆಯೂರಿದಷ್ಟು ಜಾಗದ ಅಳತೆ. "धर्मस्य वासाः प्रथिताः पृथिव्यां सरित्वतौ गोष्पदबद्धवन्ति" याद० १८-११८। 3. ಹಸುವು ಸಂಚರಿಸಿದ ಪ್ರದೇಶ. गोः पद्यतेऽस्मिन् देशे स गवा सेवितो देशः सुट् सस्य षत्वं च। निपा०। 4. ಪ್ರಭಾಸ ಕ್ಷೇತ್ರದ ಒಂದು ತೀರ್ಥ.

**गोसंख्य ಗೋಸಂಖ್ಯ** (पुं०) ಗೋಪಾಲಕ, ಗೊಲ್ಲ, ದನಕಾಯುವವನು. गावः संचष्टे—सम्+चक्षिङ् (व्यक्तायां वाचि) चक्षिङः "ख्याञ" (२-४-५४)। "कः" (३-२-२७)।

**गोसत्र ಗೋಸತ್ರ** (पुं०) ಗವಾಮಯನವೆಂಬ ಒಂದು ಯಾಗ.

**गोसदृश ಗೋಸದೃಶ** (पुं०) 1. ಹಸುವಿನಂತಿರುವ ಗವಯವೆಂಬ ಒಂದು ಪ್ರಾಣಿ. गोः सदृशः। (वि०) 2. ಹಸುವಿಗೆ ಸಮಾನವಾದ.

**गोसम्प्रदाय ಗೋಸಂಪ್ರದಾಯ** (पुं०) ಗೋವನ್ನು ದಾನ ಮಾಡುವವನು. गां संप्रददाति — सम्+प्र+डु दाञ् (दाने) "अण्" (३-२-१)। उपसर्गपूर्वकत्वात् न कः।

**गोसम्भवा ಗೋಸಂಭವಾ** (स्त्री०) 1. ಬಿಳಿಯ ಗರುಕೆ. (वि०) 2. ಗೋವಿನಿಂದ ಉಂಟಾದ.

**गोसर्ग ಗೋಸರ್ಗ** (पुं०) 1. ಹಸುವನ್ನು ಬಿಡುವುದು, ಹಸುವನ್ನು ಮೇವಿಗಾಗಿ ಬಿಚ್ಚಿ ಕಳುಹಿಸುವುದು. गोः सर्गः। 2. ಹಸುವನ್ನು ಮೇವಿಗಾಗಿ ಬಿಡುವಕಾಲ. गोः सृज्यतेऽत्र काले – सृज (विसर्गे) "घञ्" (३-३-१२१)। 3. ಸೂರ್ಯನು ಕಿರಣಗಳನ್ನು ಬಿಡುವಕಾಲ, ಪ್ರಾತಃಕಾಲ.

**गोसव ಗೋಸವ** (पुं०) ಪಶುಯಾಗ. गौः सूयतेऽत्र—षू (प्रेरणे) "अप्" (३-३-५७)।

**गोसहस्र ಗೋಸಹಸ್ರ** (न०) 1. ಒಂದು ಸಾವಿರ ಗೋವುಗಳು. गवां सहस्रम्। 2. ಸಾವಿರ ಗೋವುಗಳನ್ನು ಕೊಡುವ ಒಂದು ಮಹಾದಾನ. (स्त्री०) **–सहस्री –ಸಹಸ್ರೀ.** 3. ಸೋಮ ಅಥವಾ ಮಂಗಳವಾರ ಸಹಿತವಾದ ಜ್ಯೇಷ್ಠ ಮತ್ತು ಕಾರ್ತಿಕ ಮಾಸಗಳ ಅಮಾವಾಸ್ಯೆ. गोसहस्रदानफलं विद्यतेऽत्र "अच्" (५-२-१२७)। गौरा० "ङीष्" (४-१-४१)। ಈ ಅಮಾವಾಸ್ಯೆಯ ದಿನ ಮಾಡುವ ಗಂಗಾಸ್ನಾನವು ಗೋಸಹಸ್ರದಾನದ ಫಲವನ್ನು ಕೊಡುವುದು. "अमावास्यां भवेद्वारो यदि भूमिसुतस्य च। गोसहस्रफलं दद्यात् स्नानमात्रेण जाह्नवी। सिनीवाली कुहूर्वापि यदि सोमदिने भवेत्। गोसहस्रफलं दद्यात् स्नानं यन्मौनिना कृतम्"।

**गोस्तन ಗೋಸ್ತನ** (पुं०) 1. ನಾಲ್ಕು ಎಳೆಗಳ ಹಾರ. गोः स्तन इव गुच्छो यस्य। 2. ಗೋವಿನ ಸ್ತನ, ಕೆಚ್ಚಲು.

**गोस्तना ಗೋಸ್ತನಾ, –स्तनी –ಸ್ತನೀ** (स्त्री०) ದ್ರಾಕ್ಷಾಫಲದ ಗೊಂಚಲು. गोः स्तन इव फलमस्याः. वा "ङीष्" (४-१-५४)।

**गोस्थान ಗೋಸ್ಥಾನ** (न०) ಗೋಷ್ಠ, ದನಗಳ ಕೊಟ್ಟಿಗೆ. गवां स्थानम्। स्वार्थे "कः"। **–स्थानकम् –ಸ್ಥಾನಕಮ್.**

**गोस्वामिन् ಗೋಸ್ವಾಮಿನ್** (पुं०) 1. ಹಸುಗಳ ಯಜಮಾನ. गवां स्वामी। 2. ಜಿತೇಂದ್ರಿಯ, ಇಂದ್ರಿಯಗಳನ್ನು ಜಯಿಸಿದವನು. 3. ಭೂಮಿಯ ಯಜಮಾನ.

**गोहत्या ಗೋಹತ್ಯಾ** (स्त्री०) ಗೋವಿನ ಹನನ, ಹಸುವಿನ ಕೊಲೆ. गोः हत्या।

**गोहन् ಗೋಹನ್** (पुं०) 1. ಇಂದ್ರ. (वि०) 2. ಗೋವನ್ನು ಕೊಲ್ಲುವವನು.

**गोहरीतकी ಗೋಹರೀತಕೀ** (स्त्री०) ಬಿಲ್ವದ ಮರ.

**गोहित ಗೋಹಿತ** (पुं०) 1. ಬಿಲ್ವದ ಮರ. गवां हितं यस्मात्। 2. ವಿಷ್ಣು. गोः संसारबीजावापे क्षेत्रीभूतायाः प्रकृतेः हितः तदधिष्ठानेन तस्याः कार्यकारकतया व्यवस्थापकः। "संसारबीजक्षेत्रस्य प्रकृतेः स्थापकश्च यः। स गोहितः" इति निरुक्तिः। "गोहितो गोपतिर्गोप्ता" वि० स०। 3. ಗೋವುಗಳ ಹಿತಚಿಂತಕ.

**गौञ्जिक ಗೌಂಜಿಕ** (वि०) ಸ್ವರ್ಣಕಾರ, ಅಕ್ಕಸಾಲೆ. गुञ्जाग्रहणं शीलमस्य "ठक्" (४-४-६१)। "कलादस्तु गौञ्जिकः। नाडिन्धमः स्वर्णकारः" त्रिकाण्ड०।

**गौड ಗೌಡ** (ಪುಂ० ಬ० ವ०) 1. ಗೌಡದೇಶ. 2. ಗೌಡದೇಶದ ನಿವಾಸಿಗಳು. 3. ಗೌಡ ಬ್ರಾಹ್ಮಣರು. "सारस्वताः कान्यकुब्जाः गौडमैथिलकोद्भवाः। पञ्च गौडा इति ख्याता विन्ध्यस्योत्तरवासिनः"। (वि०) 4. ಬೆಲ್ಲದ ವಿಕಾರ. ಬೆಲ್ಲದಿಂದ ತಯಾರಿಸಲ್ಪಟ್ಟ ವಸ್ತು. गुडस्य विकारः "अण्" (४-३-१३४)। "नानास्वादरसानां च खाण्डवानां तथैव च। भोजनानि सुपूर्णानि गौडानि च सहस्रशः" रामा०। (स्त्री०) -डी -ಡೀ 5. ಗೌಡೀರೀತಿ. ಕಾವ್ಯಗಳಲ್ಲಿ ರಸಾದಿಗಳಿಗೆ ಉಪಕಾರಕ ವಾದ ಪದಗಳ ಸಂಘಟನೆ (ಜೋಡಣೆ) ಯ ಒಂದು ಭೇದ, ಶೈಲಿ. ರೀತಿಯು ದೇಶಭೇದದಿಂದ वैदर्भी गौडी पाञ्चाली ಮತ್ತು लाटिका ಎಂದು ನಾಲ್ಕು ವಿಧ. "पदसंघटना रीतिरङ्गसंस्थाविशेषवत्। उपकर्त्री रसादीनां सा पुनः स्याच्चतुर्विधा। वैदर्भी चाथ गौडी च पाञ्चाली लाटिका तथा" सा० द० ९-१, २। [ವಿವರಕ್ಕೆ "रीति" ಪದದಲ್ಲಿ ನೋಡಿ.] 6. ಒಂದು ವಿಧ ಮದ್ಯ.

**गौडदेश ಗೌಡದೇಶ** (ಪುಂ०) ಒಂದು ದೇಶ. "वङ्गदेशं समारभ्य भुवनेशान्तगं शिवे। गौडदेशः समाख्यातः सर्वविद्याविशारदः" स्कान्द०। ಈ ದೇಶವು ಬಂಗಾಳ ಪ್ರಾಂತದ ಮಧ್ಯದಲ್ಲಿರುವುದು. ವಂಗದಿಂದ ಒರಿಸ್ಸದ ಗಡಿಯವರೆಗೂ ಈ ದೇಶವು ವಿಸ್ತಾರಗೊಂಡಿರುವುದು.

**गौडदेशीय ಗೌಡದೇಶೀಯ** (वि०) ಗೌಡದೇಶದಿಂದ ಬಂದಿರುವ. गौडदेशादागतः।

**गौडपाद ಗೌಡಪಾದ** (ಪುಂ०) ಉಪನಿಷತ್ತುಗಳ ಒಬ್ಬ ವ್ಯಾಖ್ಯಾಕಾರರು.

**गौडिक ಗೌಡಿಕ** (ಪುಂ०) 1. ಕಬ್ಬು. गुडे साधुः "ठञ्" (४-४-१०३)। (वि०) 2. ಬೆಲ್ಲದಿಂದ ತಯಾರಿಸಲ್ಪಟ್ಟ. गुडेन निर्वृत्तम् "ठञ्" (५-१-७९)।

**गौण ಗೌಣ** (ಪುಂ०) 1. ಗೌಣವೃತ್ತಿಯಿಂದ ಹೊರಟಿರುವ ಶಬ್ದ, ವಾಚ್ಯಾರ್ಥದ ಸಾದೃಶ್ಯ ಸಂಬಂಧದಿಂದ ಹೊರಟಿರುವ ಶಬ್ದ. गुणादागता गौणी — गौण्या वृत्त्याऽऽगतः "अण्" (४-३-७४)। (वि०) 2. ಅಮುಖ್ಯ. "बहूनि मम नामानि कीर्तितानि महर्षिभिः। गौणानि तत्र नामानि कर्मजानि च कानिचित्" भा० शान्ति०। 3. ಅಪ್ರಧಾನ ಕರ್ಮ. गुणः अप्रधानमेव स्वार्थे "अण्" (५-४-३८)। गां दोग्धि पयः ಎಂಬಲ್ಲಿ ಗೋವು ಅಪ್ರಧಾನಕರ್ಮ. "गौणे कर्मणि दुह्यादेः प्रधाने नीहृकृष्वहाम्।

**गौणकाल ಗೌಣಕಾಲ** (ಪುಂ०) ಮುಖ್ಯವಲ್ಲದ ಕಾಲ. ಮುಖ್ಯವಾದ ಕಾಲದಲ್ಲಿ ಮಾಡಬೇಕಾದ ಕಾರ್ಯಕ್ಕೆ ಯೋಗ್ಯವಲ್ಲದ ಕಾಲ. गौणोऽमुख्यः कालः।

**गौणी ಗೌಣೀ** (स्त्री०) ಗೌಣ ಲಕ್ಷಣೆ, ಸಾದೃಶ್ಯ ಮೂಲಕವಾದ ಲಕ್ಷಣೆ, ಶಕ್ಯಾರ್ಥದ ಸಾದೃಶ್ಯ ಮೂಲಕವಾದ ಲಕ್ಷಣೆ. गुणादागता "अण्" (४-३-७४)। "ङीप्" (४-१-१५)। "सादृश्येतरसंबन्धाः शुद्धास्ताः सकला अपि। सादृश्यात्तु मता गौण्यस्तेन षोडश भेदिताः" सा० द० २-९।

**गौतम ಗೌತಮ** (ಪುಂ०) 1. ಗೌತಮಮಹರ್ಷಿ. गोतमस्यापत्यम् "अण्" (४-१-११४)। ಈ ಮಹರ್ಷಿಯ ಪತ್ನಿ ಅಹಲ್ಯಾದೇವಿ. ಶತಾನಂದಋಷಿಯು ಈ ಋಷಿಯ ಮಗ. "गौतमस्याश्रमं श्रेष्ठं पूर्वमासीन्महात्मनः" रामा०। 2. ಶತಾನಂದಋಷಿ. ಗೌತಮಋಷಿಯ ಮಗ. 3. ವೈವಸ್ವತಮನ್ವಂತರದ ಸಪ್ತರ್ಷಿಗಳಲ್ಲೊಬ್ಬ ಋಷಿ. "अत्रिर्वसिष्ठो भगवान् कश्यपश्च महान् ऋषिः। गौतमश्च भरद्वाजो विश्वामित्रस्तथैव च। तथैव पुत्रो भगवानृचीकस्य महात्मनः। सप्तमो जमदग्निश्च ऋषयः साम्प्रता दिवि" हरिवं०। 4. ಏಕತ, ದ್ವಿತ ಮತ್ತು ತ್ರಿತರೆಂಬ ಮೂವರು ಋಷಿಗಳ ತಂದೆ. 5. ಕೌರವರ ಮತ್ತು ಪಾಂಡವರ ಆಚಾರ್ಯನಾದ ಕೃಪಾಚಾರ್ಯ, ಶಾರದ್ವತನ ಮಗ. "अवस्कन्नं शरस्तम्बे मिथुनं समपद्यत। कृपया तच्च जग्राह शन्तनुर्मृगयां गतः। कृपः स्मृतः स वै तस्मात् गौतमी च कृपी तथा। इति शारद्वताः प्रोक्ता एते ते गौतमाः स्मृताः" हरिवं०। 6. ಶಾಕ್ಯಮುನಿ, ಶಾಕ್ಯಸಿಂಹ, ಸರ್ವಾರ್ಥಸಿದ್ಧ, ಶಾಕ್ಯರಿಗೆ ಪೂಜ್ಯನಾದ ಬುದ್ಧದೇವ. (स्त्री०) -मी -ಮೀ. 7. ದ್ರೋಣಾಚಾರ್ಯರ ಪತ್ನಿ ಕೃಪಿ, ಕೃಪಾಚಾರ್ಯರ ಸಹೋದರಿ, ಅಶ್ವತ್ಥಾಮನ ತಾಯಿ. "कृपः स्मृतः स वै तस्माद्गौतमी च कृपी मता। एते शारद्वताः प्रोक्ता एते ते गौतमाः स्मृताः" हरिवं०। 8. ಗೋರೋಚನ. 9. ದುರ್ಗಾದೇವಿ. 10. ಒಬ್ಬ ರಾಕ್ಷಸಿ. 11. ಗೋದಾವರೀ ನದಿ. 12. ಶಾಕ್ಯಮುನಿವಿರಚಿತವಾದ ವಿದ್ಯೆ. 13. ಗೋತಮ ವಿರಚಿತವಾದ ವಿದ್ಯೆ.

**गौतमसम्भवा ಗೌತಮಸಂಭವಾ** (स्त्री०) ಗೌತಮ ಗಂಗೆಯಾದ ಗೋದಾವರೀ ನದಿ. गौतमाय तत्पालनाय सम्भवति — सम्+भू "अप्" (३-३-५७)।

**गौतमीय ಗೌತಮೀಯ** (वि०) ಗೌತಮ ಸಂಬಂಧವಾದ. गौतमस्येदम् "छः" (४-२-११४)।

**गौदानिक ಗೌದಾನಿಕ**(वि०)1. ಗೋದಾನಬ್ರಹ್ಮಚರ್ಯೆಯ ಸಂಬಂಧವಾದ. गोदानं कर्मास्य ब्रह्मचर्यस्य "ठक्" (वा० ५-१-९४)। 2. ಗೋದಾನದಲ್ಲಿ ಉಕ್ತವಾದ, ಗೋದಾನ ಸಂಬಂಧವಾದ. "उपरि समिधं कृत्वा गामन्नं च ब्राह्मणेभ्यः प्रदाय गौदानिकं कर्म कुर्वीत" आश्व० गृ०।

**गौधार ಗೌಧಾರ, गौधेय ಗೌಧೇಯ, गौधेर ಗೌಧೇರ** (पुं०) ಉಡದ ಮರಿ, ಸರ್ಪದಿಂದ ದೊಡ್ಡಜಾತಿಯ ಹಲ್ಲಿಯಲ್ಲಿ ಹುಟ್ಟಿದ ಮರಿ. गोधाया अपत्यम् "आरक्" (४-१-१३०) "ढक्" (४-१-१२३) "ढ्रक्" (४-१-१२९) वा। "त्रयो गौधारगौधेयगौधेरा गोधिकात्मजे" अम०।

**गौधूम ಗೌಧೂಮ** (वि०) ಗೋಧಿಯ ಸಂಬಂಧವಾದ. ಗೋಧಿಯಿಂದ ತಯಾರಿಸಲ್ಪಟ್ಟ. गोधूमस्य विकारः "अण्" (४-३-१३६)। स्त्रियाम् "ङीप्" (४-१-१५)। –मी –ಮೀ.

**गौधूमीन ಗೌಧೂಮೀನ** (न०) ಗೋಧಿಯು ಬೆಳೆಯುತಕ್ಕ ಜಮೀನು. गोधूमस्य भवनं क्षेत्रम् "खञ्" (५-२-१)।

**गौनर्द ಗೌನರ್ದ**(पुं०)1. ಪತಂಜಲಿ ಮಹರ್ಷಿ. गोनर्ददेशे भवः "अण्"(४-३-५३)। प्राचां मते वृद्धत्वम्। इतरमते एङादित्वेऽपि न वृद्धत्वम्। अतो न "छ" प्रत्ययः। (वि०)2. ಗೋನರ್ದ ದೇಶದಲ್ಲಿ ಹುಟ್ಟಿದ, –ಉಂಟಾದ.

**गौपिक ಗೌಪಿಕ** (पुं०) ಗೋಪಿಕೆಯ ಮಗ. गोपिकाया अपत्यम् "अण्" (४-१-११२)। स्त्रियाम् "ङीप्" (४-१-१५)। –की –ಕೀ.

**गौपुच्छ ಗೌಪುಚ್ಛ** (पुं०) ಗೋಪುಚ್ಛಸದೃಶವಾದ.

**गौपुच्छिक ಗೌಪುಚ್ಛಿಕ** (वि०) 1. ಹಸುವಿನ ಬಾಲದಿಂದ ಕೊಳ್ಳಲ್ಪಟ್ಟ. गोपुच्छेन क्रीतम् "ठञ्" (५-१-३७)। 2. ಹಸುವಿನ ಬಾಲದಿಂದ ದಾಟುವ. गोपुच्छेन तरति "ठञ्" (४-४-६)।

**गौप्तेय ಗೌಪ್ತೇಯ** (पुं०) ಗುಪ್ತಸ್ತ್ರೀಯ ಮಗ, ವೈಶ್ಯ ಹೆಂಗಸಿನ ಮಗ. गुप्ता वैश्यस्त्री — तस्या अपत्यम् "ढक्" (४-१-१२३)।

**गौमयिक ಗೌಮಯಿಕ** (वि०) ಗೋಮಯದಿಂದ ತಯಾರಿಸಲ್ಪಟ್ಟ.

**गौर ಗೌರ** (पुं०) 1. ಚಂದ್ರ. गुङ् (गतौ) "रन्" (उ० २-२९) निपा०। 2. ಬಿಳಿಯ ಸಾಸವೆ. 3. ಬಿಳಿಯ ಬಣ್ಣ. 4. ಹಳದಿಯ ಬಣ್ಣ. 5. ಕೆಂಪು ಬಣ್ಣ. 6. ಒಂದು ತೂಕ, ಮೂರು ರಾಜಸಾಸವೆಗಳ ತೂಕ. ಕಿಟಕಿ ಮೊದಲಾದುವುಗಳ ಸಂದಿಯಲ್ಲಿ ಬೀಳುವ ಸೂರ್ಯ ಕಿರಣ ದಲ್ಲಿ (ಬಿಸಿಲಿನಲ್ಲಿ) ಕಾಣುವ ಧೂಳು ತ್ರಸರೇಣು. ಎಂಟು ತ್ರಸರೇಣುಗಳು ಒಂದು ಲಿಕ್ಷೆ. ಮೂರು ಲಿಕ್ಷೆಗಳು ಒಂದು ರಾಜಸರ್ಷಪ. ಮೂರು ರಾಜಸರ್ಷಪಗಳು ಒಂದು ಗೌರ. "जालसूर्यमरीचिस्थं त्रसरेणु रजः स्मृतम्। तेऽष्टौ लिक्षा तु तास्तिस्रो राजसर्षप उच्यते। गौरस्तु ते त्रयः" याज्ञ० १-३६२, ६३। (न०)7. ಪದ್ಮಕೇಸರ, ಕಮಲದ ಕುಸುರು. 8. ಸುವರ್ಣ, ಚಿನ್ನ. 9. ಕುಂಕುಮ ಕೇಸರಿ. (वि०) 10. ಬಿಳುಪಾದ, ಬಿಳಿಯ ಬಣ್ಣದ. "कैलासगौरं वृषमारुरुक्षोः पादार्पणानुग्रहपूतपृष्ठम्" रघु० २-३५। 11. ಹಳದಿಯ ಬಣ್ಣದ. "कर्णार्पितो लोध्रकषायरूक्षे गोरोचनाक्षेपनितान्तगौरे" कुमा० ७-१७। 12. ಕೆಂಪು ಬಣ್ಣದ. "कीर्णैः पिष्टातकौघैः कृतदिवसमुखैः कुङ्कुमक्षोदगौरैः" रत्ना० १-१०। 13. ಶುದ್ಧವಾದ, ಸ್ವಚ್ಛವಾದ. "गौरःस्वयं गैरिक-संभृतश्रीः" याद० १८-२३। "गौरः श्वेतेऽरुणे पीते विशुद्धे चाभिधेयवत्। ना श्वेतसर्षपे चन्द्रे न द्वयोः पद्मकेसरे" मेदि०।

**गौरक्ष्य ಗೌರಕ್ಷ್ಯ** (न०) ಪಶುಪಾಲನ, ಗೋವುಗಳ ಸಂರಕ್ಷಣೆ. गोरक्षस्य भावः कर्म वा "ष्यञ्" (५-१-१२४)। "कृषि-गौरक्ष्यवाणिज्यं वैश्यं कर्म स्वभावजम्" गीता १८-४४।

**गौरव ಗೌರವ** (न०) 1. ಭಾರ, ತೂಕ. गुरोर्भावः "अण्" (५-१-१२२)। 2. ಗುರುತ್ವ, ಪೂಜ್ಯತೆ. "तथापि यन्मय्यपि ते गुरुरित्यस्ति गौरवम्" माघ० २-७१। 3. ಗಣ್ಯತೆ, ಮರ್ಯಾದೆ. 4. ಆದರ, ವಿಶ್ವಾಸ. "प्रयोजनापेक्षितया प्रभूणां प्रायश्चलं गौरवमाश्रितेषु" कुमा० ३-१। 5. ಗೌರವವನ್ನು ಸೂಚಿಸಲು ಎದುರು ಗೊಳ್ಳುವಿಕೆ. ಹಿರಿಯರು ಬಂದಾಗ ಎದ್ದು ನಿಂತು ಮರ್ಯಾದೆ ಮಾಡುವುದು. (वि०) 6. ಗುರುವಿನ ಸಂಬಂಧವಾದ. गुरोरिदम् "अण्" (४-३-१२०)।

**गौरवित ಗೌರವಿತ** (वि०) ಗೌರವಹೊಂದಿರುವ, ಮಾನ್ಯನಾದ, ಪೂಜ್ಯನಾದ. गौरवं सञ्जातमस्य "इतच्" (५-२-३६)।

**गौरसर्षप ಗೌರಸರ್ಷಪ**(पुं०)ಬಿಳಿಯ ಸಾಸವೆ. गौरश्चासौ सर्षपश्च।

**गौरा ಗೌರಾ** (स्त्री०) ಸ್ವಚ್ಛವಾಗಿರುವ ಹೆಂಗಸು, ಶುಭ್ರ ವರ್ಣದ ಹೆಂಗಸು. गौर "टाप्" (४-१-४)।

**गौराङ्ग ಗೌರಾಂಗ** (पुं०) 1. ವಿಷ್ಣು. गौरं सितं पीतं वाङ्गमस्य। "शुक्लो रक्तस्तथा पीत इदानीं कृष्णतां गतः" भाग० १०-८-१३। 2. ಶ್ರೀಕೃಷ್ಣ. (वि०) 3.

ಶುಭ್ರವಾದ ದೇಹವುಳ್ಳ, ಸ್ವಚ್ಛವಾದ ಮೈಯುಳ್ಳ. गौरं विशुद्धमङ्गं यस्य। स्त्रियाम् "ङीष्" (४-१-५५)।

**गौराश्व ಗೌರಾಶ್ವ** (ಪುಂ) ಒಬ್ಬ ರಾಜ. गौरोऽश्वो यस्य। "अलर्कः कक्षसेनश्च गयो गौराश्व एव च" भा० सभा०।

**गौरास्य ಗೌರಾಸ್ಯ** (ಪುಂ) ಬಿಳಿಯ ಮುಖದ ಒಂದು ಜಾತಿಯ ಕಪಿ. गौरमास्यमस्य। स्त्रियाम् 'टाप्" (४-१-४)। योपधत्वान्न ङीष्।

**गौरिक ಗೌರಿಕ** (ಪುಂ) 1. ಬಿಳಿಯ ಸಾಸವೆ. गौरवर्णोऽस्त्यस्य "ठन्" (५-२-११५)। (ವಿ०) 2. ಬಿಳಿಯ ಬಣ್ಣದ. "यवाह्वगौरिकोन्मिश्रैः पादलेपः प्रशस्यते" सुश्रुत०।

**गौरिल ಗೌರಿಲ** (ಪುಂ) 1. ಬಿಳಿಯ ಸಾಸವೆ. गौरवर्णोऽस्त्यस्य "इलच्" बाहु०। 2. ಕಬ್ಬಿಣದ ಪುಡಿ. "गौरिलस्तु पुमान् लोहचूर्णे स्यात् गौरसर्षपे" मेदि०।

**गौरी ಗೌರೀ** (स्त्री०) 1. ಪಾರ್ವತಿ, ಉಮಾದೇವಿ, ಗಿರಿಜೆ. गौरो वर्णोऽस्त्यस्याः "ङीष्" (४-१-४१)। "योगाग्निदग्धदेहा सा पुनर्जाता हिमालये। शङ्खेन्दुकुन्दधवला ततो गौरीति सा स्मृता"। "कियच्चिरं श्राम्यसि गौरि विद्यते ममापि पूर्वाश्रमसञ्चितं तपः। तदर्धभागेन लभस्व काङ्क्षितं वरं तमिच्छामि च साधु वेदितुम्" कुमा० ५-५०। 2. ಎಂಟು ವರ್ಷಗಳು ತುಂಬಿದ ಕನ್ಯೆ, ಋತುಮತಿಯಾಗದಿರುವ ಕನ್ಯೆ. "अष्टवर्षा भवेद्गौरी नववर्षा तु रोहिणी"। 3. ಗೋರೋಚನ. 4. ಹರಿದ್ರೆ, ಅರಸಿನ. 5. ಪ್ರಿಯಂಗುವೃಕ್ಷ, ಪ್ರೇಂಕಣಗಿಡ. 6. ಮರದರಿಶಿನ. 7. ಪೃಥಿವಿ, ಭೂಮಿ. 8. ಒಂದು ನದಿ. 9. ಸೂರ್ಯವಂಶದ ಪ್ರಸೇನಜಿತ್ತೆಂಬ ರಾಜನ ಪತ್ನಿ, ಬಾಹುದಾ ನದಿ. "लेभे प्रसेनजिद्भार्यां गौरीं नाम पतिव्रताम्। अभिशस्ता तु सा भर्त्रा नदी वै बाहुदाऽभवत्" हरिवं०। 10. ವರುಣನ ಪತ್ನಿ. 11. ಮಂಜಿಷ್ಠ. 12. ಬಿಳಿಯ ಗರುಕೆ. 13. ಮಲ್ಲಿಗೆ ಬಳ್ಳಿ. 14. ತುಲಸಿ ಗಿಡ. "गौरी त्वसञ्जातरजःकन्याशङ्करभार्ययोः। रोचनीरजनीपिङ्गाप्रियङ्गुवसुधासु च। आपगाया विशेषे च यादसांपतियोषिति" मेदि०। 15. ಹೊಂಬಣ್ಣದ ಹೆಂಗಸು. 16. ವಾಕ್ಕು, ಮಾತು.

**गौरीकान्त ಗೌರೀಕಾಂತ, –नाथ –ನಾಥ, –पति –ಪತಿ** (ಪುಂ) ಗೌರಿಯ ಪತಿಯಾದ ಮಹಾದೇವ, ಪರಮೇಶ್ವರ. गौर्याः कान्तः नाथः पतिर्वा।

**गौरीगुरु ಗೌರೀಗುರು** (ಪುಂ) ಪಾರ್ವತಿಯ ತಂದೆಯಾದ ಹಿಮವಂತ. गौर्याः गुरुः। "गङ्गाप्रपातान्तविरूढशष्पं गौरीगुरोर्गह्वरमाविवेश" रघु० २-२६।

**गौरीज ಗೌರೀಜ** (ಪುಂ) 1. ಕಾರ್ತಿಕೇಯ, ಷಣ್ಮುಖ. (ನ०) 2. ಅಭ್ರಕ, ಕಾಗೆಬಂಗಾರ. गौर्या रजसो जायते– जनी (प्रादुर्भावे) "ड:" (३-२-९८)।

**गौरीतनय ಗೌರೀತನಯ, –पुत्र –ಪುತ್ರ** (ಪುಂ) ಕಾರ್ತಿಕೇಯ, ಷಣ್ಮುಖ.

**गौरीशिखर ಗೌರೀಶಿಖರ** (ನ०) ಪಾರ್ವತಿಯು ತಪಸ್ಸು ಮಾಡಿದ ನಂತರ ಅವಳ ಹೆಸರಿನಿಂದ ಪ್ರಸಿದ್ಧವಾದ ಹಿಮಾಲಯದ ಒಂದು ಶಿಖರ, ಪಾರ್ವತಿಯು ತಪಸ್ಸು ಮಾಡಿದ ಹಿಮವತ್ಪರ್ವತದ ಒಂದು ಶಿಖರ. "प्रजासु पश्चात् प्रथितं तदाख्यया जगाम गौरीशिखरं शिखण्डिमत्" कुमा० ५-७।

**गौरीसुत ಗೌರೀಸುತ** (ಪುಂ) 1. ಕಾರ್ತಿಕೇಯ. 2. ಎಂಟನೆಯ ವರ್ಷದಲ್ಲಿ ಮದುವೆಯಾದವಳ ಮಗ. गौर्याः सुतः।

**गौरुतल्पिक ಗೌರುತಲ್ಪಿಕ** (ಪುಂ) ಗುರುವಿನ ಪತ್ನಿಯಲ್ಲಿ ಪ್ರವೇಶಿಸಿದವನು. ಗುರುಪತ್ನೀಗಮನ ಮಾಡಿದವನು. गुरुतल्पं गुरुपत्नीं गच्छति–गुरुतल्प "ठक्" (४-४-१)।

**गौलक्षणिक ಗೌಲಕ್ಷಣಿಕ** (ತ್ರಿ०) ಗೋವುಗಳ ಲಕ್ಷಣವನ್ನು ಅರಿತವನು. गोलक्षणं वेत्ति तत्प्रतिपादकं ग्रन्थमधीते वा "ठक्" (वा० ४-२-६०)।

**गौलोमन ಗೌಲೋಮನ** (ವಿ०) ಹಸುವಿನ ಕೂದಲಿನಂತಿರುವ. गोलोमेव "अण्" (५-३-१०७)।

**गौल्मिक ಗೌಲ್ಮಿಕ** (ಪುಂ) ಗುಲ್ಮಸ್ಥಾನದಲ್ಲಿ ನಿಯುಕ್ತನಾದವನು, ಸುಂಕದಕಟ್ಟೆಯಲ್ಲಿ ರಕ್ಷಣೆಗಾಗಿ ನಿಯುಕ್ತನಾದ ಒಬ್ಬ ಸೈನಿಕ. गुल्मे नियुक्तः "ठक्"(४-४-६९)। "त्यक्त्वा द्वाराणि च द्वाःस्थाः तथा गुल्मानि गौल्मिकाः" भा०।

**गौशतिक ಗೌಶತಿಕ** (ವಿ०) ನೂರು ಹಸುಗಳನ್ನು ಇಟ್ಟಿರುವವನು. ನೂರು ಹಸುಗಳ ಯಜಮಾನ. गोशतमस्यास्ति "ठञ्" (५-२-११८)। स्त्रियाम् "ङीप्" (४-१-१५)। **–शतिकी –ಶತಿಕೀ.**

**गौष्ठीन ಗೌಷ್ಠೀನ** (ನ०) ಪೂರ್ವದಲ್ಲಿ ಕೊಟ್ಟಿಗೆಯಿದ್ದ ಪ್ರದೇಶ. पूर्वं भूतं गोष्ठम् "खञ्" (५-२-१८)। "पूरुकुलावनीपसुरसुरभिगोष्ठीगौष्ठीने देशे" चं० भा०।

**गौसहस्रिक ಗೌಸಹಸ್ರಿಕ** (ವಿ०) ಸಾವಿರ ಹಸುಗಳನ್ನು ಇಟ್ಟಿರುವವನು. ಸಾವಿರ ಹಸುಗಳ ಯಜಮಾನ. गोसहस्रमस्यास्ति "ठञ्" (५-२-११८)। स्त्रियाम् "ङीप्" (४-१-१५)। **–सहस्रिकी –ಸಹಸ್ರಿಕೀ.**

**ग्रथन ಗ್ರಥನ** (ನ०) 1. ಸೇರಿಸಿ ಕಟ್ಟುವುದು. ಒಟ್ಟಿಗೆ ಜೋಡಿಸಿ ಕಟ್ಟುವುದು. ग्रथ (कौटिल्ये) भावे "ल्युट्"

(३-३-११५)। 2. ಹೂವಿನ ಸರವನ್ನು ಕಟ್ಟುವುದು. 3. ಗ್ರಂಥರಚನೆ.

**ग्रथनीय ಗ್ರಥನೀಯ** (वि०) 1. ಸೇರಿಸಿ ಕಟ್ಟಲ್ಪಡುವ, ಒಟ್ಟಿಗೆ ಸೇರಿಸಿ ಪೋಣಿಸಲ್ಪಡುವ. 2. ರಚಿಸಲ್ಪಡುವ ಗ್ರಂಥ. ग्रथ (कौटिल्ये संदर्भे च) "अनीयर्" (३-१-९६)। "तव्य:"। **ग्रथितव्यम् ಗ್ರಥಿತವ್ಯಮ್.**

**ग्रथित ಗ್ರಥಿತ** (वि०) 1. ಒಟ್ಟಿಗೆ ಸೇರಿಸಿ ಕಟ್ಟಲ್ಪಟ್ಟ ಹೂವಿನಮಾಲೆ ಮೊದಲಾದುದು. ग्रथ (कौटिल्ये सन्दर्भे च) कर्म० "क्त:" (३-२-१०२) "पर्यायग्रथिताक्षसूत्रवलयप्रत्येकबीजग्रहव्यग्राग्राङ्गुलयो हरन्ति" प्रबोध० २-५। 2. ರಚಿಸಲ್ಪಟ್ಟ, ಜೋಡಿಸಲ್ಪಟ್ಟ ಗ್ರಂಥ ಮೊದಲಾದುದು. "वर्णैः कतिपयैरेव ग्रथितस्य स्वरैरिव" माघ० २-७२।

**ग्रथितवत् ಗ್ರಥಿತವತ್** (वि०) 1. ಒಟ್ಟಿಗೆ ಸೇರಿಸಿ ಕಟ್ಟಿದವನು, ಹೂವಿನಮಾಲೆ ಮೊದಲಾದುವನ್ನು ತಯಾರಿಸಿದವನು. 2. ಗ್ರಂಥ ಮೊದಲಾದುವನ್ನು ರಚಿಸಿದವನು. स्त्रियाम् "ङीप्"। **-वती -ವತೀ.**

**ग्रथ्नत् ಗ್ರಥ್ನತ್** (वि०) 1. ಮಾಲೆ ಮೊದಲಾದುವನ್ನು ಕಟ್ಟುತ್ತಿರುವ, 2. ಗ್ರಂಥವನ್ನು ರಚಿಸುತ್ತಿರುವ. ग्रन्थ (सन्दर्भे) "शतृ" (३-२-१२४)। स्त्रियाम् "ङीप्" (४-१-६)। **ग्रथ्नती ಗ್ರಥ್ನತೀ.**

**ग्रन्थ – सन्दर्भे** (क्र्या० पर० सक० से०)। ग्रथ्नाति। जग्रन्थ। ग्रन्थिता। ग्रन्थिष्यति। ग्रथ्नातु। अग्रथ्नात्। ग्रथ्नीयात्। ग्रथ्यात्। अग्रन्थीत्। अग्रन्थिष्यत्। 1. ಗ್ರಂಥ ರಚಿಸು. 2. ಸರವನ್ನು ಪೋಣಿಸು, ಮಾಲೆಯನ್ನು ಕಟ್ಟು.

**कर्मणि :**—ग्रथ्यते। ग्रथ्यताम्। अग्रथ्यत। अग्रन्थि। ಇತ್ಯಾದಿ.

**कृत्सु :**—ग्रन्थितव्यम्। ग्रन्थनीयम्। ग्रन्थ्यः। ग्रथितः। ग्रथितवत्। ग्रथ्नन्, ग्रथ्नती। ग्रन्थितुम्। ग्रथितम्। ग्रन्थनम्। ग्रथित्वा, ग्रन्थित्वा। संग्रन्थ्य, संग्रथ्य।

**ग्रन्थ ಗ್ರಂಥ** (पुं०) 1. ಪುಸ್ತಕ, ಸಂದರ್ಭ, ಪ್ರಬಂಧ, ಕೃತಿ, ಕವನ. ग्रन्थ (सन्दर्भे) कर्म० "घञ्" (३-३-१९)। "ग्रन्थग्रन्थिरिह क्वचित् क्वचिदपि न्यासि प्रयत्नान्मया" नैष० २२-१५२। 2. ಒಟ್ಟಿಗೆ ಸೇರಿಸುವುದು, ಒಟ್ಟಿಗೆ ಸೇರಿಸಿ ಕಟ್ಟುವುದು, ಹೂವು ಮುತ್ತು ಮೊದಲಾದುವುಗಳನ್ನು ಪೋಣಿಸಿ ಮಾಲೆಯನ್ನು ರಚಿಸುವುದು. ग्रन्थ भावे "घञ्" (३-३-१८)। 3. ಮೂವತ್ತೆರಡು ಅಕ್ಷರಗಳ ಒಂದು ಶ್ಲೋಕ. 4. ಧನ, ಸಂಪತ್ತು, ಐಶ್ವರ್ಯ. "ग्रन्थो ग्रन्थनधनयोः स्याच्छास्त्राक्षरसंख्ययोः" मेदि०।

**ग्रन्थकरण ಗ್ರಂಥಕರಣ** (न०) ಗ್ರಂಥರಚನೆ, ಪ್ರಬಂಧ ನಿರ್ಮಾಣ, ಪುಸ್ತಕ ಬರೆಯುವುದು. ग्रन्थस्य करणम्।

**ग्रन्थकर्तृ ಗ್ರಂಥಕರ್ತೃ** (पुं०) ಗ್ರಂಥವನ್ನು ರಚಿಸುವವನು, ಪುಸ್ತಕವನ್ನು ಬರೆಯುವವನು. ग्रन्थस्य कर्ता। स्त्रियाम् **–कर्त्री –ಕರ್ತ್ರೀ.**

**ग्रन्थकार ಗ್ರಂಥಕಾರ** (पुं०) "ग्रन्थकर्तृ" ಪದದ ಅರ್ಥ. ग्रन्थं करोति – डु कृञ् (करणे) "अण्" (३-२-१)।

**ग्रन्थकुटी ಗ್ರಂಥಕುಟೀ** (स्त्री०) ಗ್ರಂಥಗಳನ್ನು ಬರೆಯುವ ಸ್ಥಳ, ಪುಸ್ತಕ ಭಾಂಡಾಗಾರ. ग्रन्थस्य कुटीव।

**ग्रन्थन ಗ್ರಂಥನ** (न०) 1. ಸೇರಿಸುವಿಕೆ, ಒಟ್ಟಿಗೆ ಸೇರಿಸಿ ಕಟ್ಟುವಿಕೆ, –ಒಟ್ಟಿಗೆ ಸೇರಿಸಿ ಮಾಲೆಯನ್ನು ರಚಿಸುವುದು. 2. ಗ್ರಂಥವನ್ನು ರಚಿಸುವುದು, ಪುಸ್ತಕವನ್ನು ಬರೆಯುವುದು. ग्रन्थ (सन्दर्भे) भावे "ल्युट्" (३-३-११५)।

**ग्रन्थविस्तर ಗ್ರಂಥವಿಸ್ತರ** (पुं०) 1. ಗ್ರಂಥವು ದೊಡ್ಡದಾಗಿರುವಿಕೆ. ग्रन्थस्य विस्तरः। "प्रथममुनिकथितमवितथमवलोक्य ग्रन्थविस्तरस्यार्थम्" बृहत्सं० १-२। 2. ಗ್ರಂಥಬಾಹುಳ್ಯ, ಗ್ರಂಥಗಳು (32 ಅಕ್ಷರಾತ್ಮಕ) ಅನೇಕವಾಗಿರುವಿಕೆ.

**ग्रन्थसन्धि ಗ್ರಂಥಸಂಧಿ** (पुं०) ಗ್ರಂಥಭಾಗ, ಕಾಂಡ, ಅಧ್ಯಾಯ, ಸರ್ಗ, ಪರ್ವ, ಉಲ್ಲಾಸ ಮುಂತಾದುವು. "पटलः काण्डमस्त्रियाम्। स्थानं प्रकरणं पर्वाह्निकं च ग्रन्थसन्धयः" त्रिकाण्ड०।

**ग्रन्थि ಗ್ರಂಥಿ** (पुं०) 1. ಗಂಟು, ಡುಬ್ಬು, ಉಬ್ಬು. ग्रथि (कौटिल्ये) "इः" (उ० ४-१३९)। 2. ಗೆಣ್ಣು, ಕಬ್ಬು ಬಿದಿರು ಮೊದಲಾದುವುಗಳ ಎಲೆ ಹೊರಡುವ ಭಾಗ, ಪರ್ವ. 3. ಗಂಟು ಕಟ್ಟು, ಬಂಧನ. "ग्रन्थिमुद्ग्रथयितुं हृदयेशे वाससः स्पृशति मानधनायाः" माघ० १०-६३। 4. ಅವಯವಗಳ ಸಂಧಿ, (ಶರೀರದಲ್ಲಿರುವ) ಎಲುಬುಗಳ ಕೀಲು. 5. ಮರಗಳ ರೆಂಬೆ ಹೊರಡುವ ಜಾಗ. 6. ಗಂಟು, ವಸ್ತುಗಳನ್ನಿಟ್ಟು ಕಟ್ಟುವ ಬಟ್ಟೆಯ ಮೂಟೆ. 7. ಸಂಶಯ, ಅಜ್ಞಾನ, ಮಾಯಾಪಾಶ. "भिद्यते हृदयग्रन्थिः छिद्यन्ते सर्वसंशयाः" भाग० १-२-२१। 8. ಕೌಟಿಲ್ಯ, ವಕ್ರವಾಗಿರುವಿಕೆ, ಡೊಂಕು, 9. ಗ್ರಂಥಿಪರ್ಣವೃಕ್ಷ, ಮಾಚಿಪತ್ರೆಯ ಗಿಡ. 10. ಭದ್ರಮುಸ್ತೆ.

**ग्रन्थिक ಗ್ರಂಥಿಕ** (पुं०) 1. ದೈವಜ್ಞ, ಕಾಲಗಳ ಸಂಧಿಯನ್ನು ತಿಳಿದವನು, ಜೋಯಿಸ. 2. ವಿರಾಟನಗರದಲ್ಲಿ ಅಶ್ವಪಾಲನಾಗಿದ್ದ ನಕುಲ. (न०)3. ಹಿಪ್ಪಲಿ. 4. ಮಾಚಿ

पत्रे. 5. ಗುಗ್ಗುಳದ ಗಿಡ. 6. ಮುಳ್ಳು ಅಜ್ಜ ಗಿಡ. "ग्रन्थिकं पिप्पलीमूले ग्रन्थिकं गुग्गुलुद्रुमे। माद्रेये च करीरे च दैवज्ञे च प्रकीर्तितम्" विश्व०।

**ग्रन्थित ಗ್ರಂಥಿತ** (वि०) ಪೋಣಿಸಲ್ಪಟ್ಟ, ಸೇರಿಸಿ ಕಟ್ಟಲ್ಪಟ್ಟ. ग्रथ्यते स्म — ग्रन्थ (सन्दर्भे) "क्तः" (३-२-१०२)।

**ग्रन्थिन् ಗ್ರಂಥಿನ್** (वि०) 1. ಗ್ರಂಥದ ಅರ್ಥವನ್ನು ತಿಳಿದವನು. ग्रन्थः तदर्थो ज्ञेयतयाऽस्त्यस्य "इनिः" (५-२-११५)। 2. ಗ್ರಂಥಗಳುಳ್ಳವನು. ಗ್ರಂಥಗಳನ್ನು ಹೊಂದಿರುವವನು. 3. ಗ್ರಂಥಕಾರ. ಗ್ರಂಥಕರ್ತೃ. ಲೇಖಕ.

**ग्रन्थिपर्ण ಗ್ರಂಥಿಪರ್ಣ** (पुं०) ಮಾಚಿಪತ್ರೆ. ग्रन्थौ पर्णान्यस्य।

**ग्रन्थिभेद ಗ್ರಂಥಿಭೇದ** (पुं०) ಬಟ್ಟೆಯ ಗಂಟನ್ನು ಬಿಚ್ಚಿ ಕದಿಯುವ ಕಳ್ಳ. ग्रन्थिं वस्त्रादिग्रन्थिं भिनत्ति—भिदिर् (विदारणे) "अण्" (३-२-१)। "अङ्गुलीर्ग्रन्थिभेदस्य छेदयेत् प्रथमे ग्रहे। द्वितीये हस्तचरणौ तृतीये वधमर्हति" मनु० ९-२७७।

**ग्रन्थिमत् ಗ್ರಂಥಿಮತ್** (वि०) ಗಂಟುಹಾಕಿರುವ. ಗಂಟಿನಿಂದ ಕೂಡಿದ. ग्रन्थिरस्त्यस्य "मतुप्" (५-२-९४)। स्त्रियाम् "ङीप्" (४-१-६)। **—मती —ಮತೀ.** "कण्ठप्रभासङ्गविशेषनीलां कृष्णत्वचं ग्रन्थिमतीं दधानम्" कुमा० ३-४६।

**ग्रन्थिमूल ಗ್ರಂಥಿಮೂಲ** (न०) 1. ಬೆಳ್ಳುಳ್ಳಿ. (स्त्री०) **—मूला —ಮೂಲಾ.** 2. ಬಳ್ಳಿ ಗರುಕೆ. ग्रन्थियुक्तं मूलं यस्य।

**ग्रन्थिल ಗ್ರಂಥಿಲ** (पुं०) 1. ಹುಳಿಚೇಲದ ಮರ. 2. ಮುಳ್ಳು ಅಜ್ಜ. ग्रन्थिरस्यास्ति "लच्" (५-२-९७)। (न०) 3. ಹಿಪ್ಪಲಿ. 4. ಹಸಿಶುಂಠಿ. 5. ಬಳ್ಳಿ ಗರುಕೆ. (वि०) 6. ಗಂಟುಗಳುಳ್ಳ, ಗಂಟಿನಿಂದ ಕೂಡಿದ.

**ग्रन्थिहर ಗ್ರಂಥಿಹರ** (पुं०) ಅಮಾತ್ಯ. ಸಚಿವ. ग्रन्थिं हरति — हृञ् (हरणे) "अच्" (३-२-९)। "मन्त्री ग्रन्थिहरोऽमात्यः" त्रिकाण्ड०।

**ग्रन्थीक ಗ್ರಂಥೀಕ** (न०) ಹಿಪ್ಪಲಿ.

**ग्रसु — अदने** (भ्वा० आत्म० सक० से०)। ग्रसते। जग्रसे। ग्रसिता। ग्रसिष्यते। ग्रसताम्। अग्रसत। ग्रसेत। ग्रसिषीष्ट। अग्रसिष्ट। अग्रसिष्यत। ಕಬಳಿಸು, ತಿನ್ನು, ನುಂಗು. "हिमांशुमाशु ग्रसते तन्म्रदिम्नः स्फुटं फलम्" माघ० २-४९।

**कर्मणि :—**ग्रस्यते। ग्रस्यताम्। अग्रस्यत। ग्रस्येत। अग्रासि। ಇತ್ಯಾದಿ.

**कृत्सु :—**ग्रसितव्यस्। ग्रसनीयम्। ग्रास्यम्। ग्रस्तः। ग्रस्तवान्। ग्रसमानः। ग्रसितुम्। ग्रस्तम्। ग्रसनम्। ग्रसित्वा, ग्रस्त्वा।

**ग्रसन ಗ್ರಸನ** (न०) 1. ತಿನ್ನುವುದು, ಕಬಳಿಸುವುದು. ನುಂಗುವುದು. ग्रसु (अदने) भावे "ल्युट्" (३-३-११५)। 2. ಸೂರ್ಯ ಮತ್ತು ಚಂದ್ರಗ್ರಹಣ. ಗ್ರಸನವು (ಸೂರ್ಯ ಮತ್ತು ಚಂದ್ರ) ಗ್ರಹಣದ ಹತ್ತು ವಿಧಗಳಲ್ಲೊಂದು ಭೇದ. ಗ್ರಸನ ಗ್ರಹಣದಲ್ಲಿ ಸೂರ್ಯನ ಅಥವಾ ಚಂದ್ರನ ಬಿಂಬವು ಮೂರನೆಯ ಒಂದು ಭಾಗವೋ ನಾಲ್ಕನೆಯ ಒಂದು ಭಾಗವೋ ಅಥವಾ ಅರ್ಧ ಭಾಗವೋ ಮುಚ್ಚಲ್ಪಡುವುದು. ಇಂತಹ ಗ್ರಹಣದಿಂದ ಒಳ್ಳೆಯ ಅಭಿವೃದ್ಧಿಸ್ಥಿತಿಯಲ್ಲಿರುವ ರಾಜನಿಗೆ ಅರ್ಥಹಾನಿಯೂ ದೊಡ್ಡ ರಾಷ್ಟ್ರಗಳಿಗೆ ಪೀಡೆಯೂ ಸಂಭವಿಸುವುದು. "सव्यापसव्यलेहग्रसननिरोधावमर्दनारोहाः। आघ्रातं मध्यतमस्तमोन्त्य इति ते दश ग्रासाः॥ ग्रसनमिति यदा त्र्यंशः पादो वा गृह्यतेऽथवाप्यर्धम्। स्फीतनृपतिवित्तहानिः पीडा च स्फीतदेशानाम्" बृहत्सं० ५-४३, ४६। 3. ಗ್ರಾಸ. ಕಬಳ. 4. ದವಡೆ. "प्राशिश्रमास्ये ग्रसने ग्रहास्तु ते यच्चर्वणं ते भगवन्नग्निहोत्रम्" भाग० ३-१३-३६।

**ग्रसनीय ಗ್ರಸನೀಯ** (वि०) ತಿನ್ನಲ್ಪಡಬೇಕಾದ. ನುಂಗಲ್ಪಡುವ. ग्रसु (अदने) "अनीयर्" (३-१-९६)। "तव्यः"। **ग्रसितव्यः ಗ್ರಸಿತವ್ಯ.**

**ग्रसमान ಗ್ರಸಮಾನ** (वि०) ತಿನ್ನುತ್ತಿರುವ, ನುಂಗುತ್ತಿರುವ. ग्रसु (अदने) "शानच्" (३-२-१२४)। "ग्रसमानमिवौजांसि सदसा गौरवेरितम्। नाम यस्याभिनन्दन्ति द्विषोऽपि स पुमान् पुमान्" किरा० ११-७३।

**ग्रसिष्णु ಗ್ರಸಿಷ್ಣು** (वि०) ತಿನ್ನುವ ಸ್ವಭಾವದ. ನುಂಗುವ ಸ್ವಭಾವದ. ग्रसु (अदने) ताच्छील्ये "इष्णुच्"। "भूतभर्तृ च तज्ज्ञेयं ग्रसिष्णु प्रभविष्णु च" गीता १३-१६।

**ग्रस्त ಗ್ರಸ್ತ** (वि०) 1. ತಿನ್ನಲ್ಪಟ್ಟ, ನುಂಗಲ್ಪಟ್ಟ. ग्रसु (अदने) "क्तः" (३-२-१०२)। (न०) 2. ಅಕ್ಷರಗಳನ್ನು ನುಂಗಿ ಆಡುವ ಮಾತು. ಅಸಂಪೂರ್ಣವಾಗಿ ಉಚ್ಚರಿಸಲ್ಪಟ್ಟ ಮಾತು. "लुप्तवर्णपदं ग्रस्तम्" अम०।

**ग्रस्तास्त ಗ್ರಸ್ತಾಸ್ತ** (पुं०) ಗ್ರಹಣವಾದ ನಂತರ ಪೂರ್ತಿ ಮೋಕ್ಷವಾಗುವುದರೊಳಗೆ ಅಸ್ತಹೊಂದಿದ ಸೂರ್ಯ ಅಥವಾ ಚಂದ್ರ.

**ग्रस्तृ ಗ್ರಸ್ತೃ** (वि०) 1. ತಿನ್ನುವವನು. ನುಂಗುವವನು. ग्रसु (अदने) "तृच्" (३-१-१३३)। "ग्रस्तारं चैव चन्द्रस्य सूर्यस्य च महाप्रभम्" हरिवं०।

**ग्रस्तोदय ಗ್ರಸ್ತೋದಯ** (ಪುಂ) ಗ್ರಹಣವಾದ ನಂತರ ಮೋಕ್ಷಕ್ಕೆ ಮುಂಚೆ ಆಗುವ ಸೂರ್ಯ ಚಂದ್ರರ ಉದಯ, ಗ್ರಹಣವಾಗಿರುವಾಗಲೇ ಸೂರ್ಯ ಚಂದ್ರರು ಉದಯಿಸುವುದು. ग्रस्तस्य सूर्यस्य चन्द्रस्य वा उदयः। "ग्रस्तास्ते त्रिदिनं पूर्वं पश्चाद् ग्रस्तोदये तथा। खण्डग्रासे च त्रिदिनं निःशेषे सप्त सप्त च"।

**ग्रस्य ಗ್ರಸ್ಯ** (वि०) ತಿನ್ನಲ್ಪಡುವ, ನುಂಗಲ್ಪಡುವ. ग्रसु (अदने) "यत्"। "यच्छक्यं ग्रसितुं ग्रस्यं ग्रस्तं परिणमेच्च यत्" भा० उद्योग० ३४-१४।

**ग्रह – उपादाने** (क्र्या० उभ० सक० से०)। गृह्णाति गृह्णीतः गृह्णन्ति। गृह्णीते गृह्णाते गृह्णते। जग्राह। जगृहे। ग्रहीता। ग्रहीष्यति, –ते। गृह्णातु, गृह्णीताम्। अगृह्णात्, अगृह्णीत। गृह्णीयात्, गृह्णीत। गृह्यात्, ग्रहीषीष्ट। अग्रहीत्, अग्रहीष्ट। अग्रहीष्यत्, अग्रहीष्यत। 1. ಹಿಡಿದುಕೊ. "तयोर्जगृहतुः पादान् राजा राज्ञी च मागधी" रघु० १-५७। 2. ತೆಗೆದುಕೊ. "प्रजानामेव भूत्यर्थं स ताभ्यो बलिमग्रहीत्" रघु० १-१८। 3. ಸ್ವೀಕರಿಸು, ಅಂಗೀಕರಿಸು. "द्युतिमग्रहीद्ग्रहगणो लघवः प्रकटीभवन्ति मलिनाश्रयतः" माघ० ९-२३। 4. ತಿಳಿದುಕೊ. "मयापि मृत्पिण्डबुद्धिना तथैव गृहीतम्" शाकु० ६। 5. ಕಲಿತುಕೊ, ಗ್ರಹಿಸು. "कात्स्न्येन गृह्णाति लिपिं न यावत्" रघु० १८-४६।

**कर्मणि:**—गृह्यते। जगृहे। ग्राहिता, ग्रहीता। ग्राहिष्यते, ग्रहीष्यते। गृह्यताम्। अगृह्यत। गृह्येत। ग्राहिषीष्ट, ग्रहिषीष्ट। अग्राहि। अग्राहिष्यत।

**णिचि:**—ग्राहयति, –ते। ग्राहयां चकार, –चक्रे, –बभूव, –आस। ग्राहयिता, ग्राहिता। ग्राहयिष्यते, ग्राहिष्यते। ग्राहयताम्। अग्राहयत। ಇತ್ಯಾದಿ.

**कृत्सु:**—ग्रहीतव्यः। ग्रहणीयः। ग्राह्यः। गृहीतः। गृहीतवान्, –वती। गृह्णन्, गृह्णती। गृह्णानः। ग्रहीतुम्। गृहीतम्। ग्रहणम्। गृहीत्वा। प्रतिगृह्य।

**ಈ ಧಾತುವಿಗೆ ಉಪಸರ್ಗಗಳ ಯೋಗದಿಂದ ಉಂಟಾಗುವ ಅರ್ಥಭೇದಗಳು:**

**(1) अनु+ग्रह**=अनुगृह्णाति। अनुग्रहः। ಅನುಕೂಲ್ಯವುಂಟುಮಾಡು, ದಯೆತೋರು. "प्रलयेष्वपि दीर्घायुः प्रतिभूस्त्वदनुग्रहः" याद० १-५७।

**(2) अभि + ग्रह** = अभिगृह्णाति। अभिगृह्य। ಎದುರಿನಿಂದ ಹಿಡಿದುಕೊ. "अम्बालिकापि बलवदभिगृह्य चण्डवर्मणा" दशकु०।

**(3) अव + ग्रह** = अवगृह्णाति। अवग्रहः। 1. ತಡೆಗಟ್ಟು, ಅಡ್ಡಿಮಾಡು, ಆತಂಕಪಡಿಸು. "वृष्टिर्भवति सस्यानामवग्रहविशोषिणाम्" रघु० १-६२। 2. ನಿಗ್ರಹಿಸು, ಶಿಕ್ಷಿಸು. "मन्दोऽपि नाम न महानवगृह्य साध्यः" माघ० ५-४९।

**(4) आ + ग्रह** = आग्रहः। ಎದುರಾಗಿ ಎಳೆದುಕೊ.

**(5) उद्+ग्रह**=उद्गृह्णाति। उदग्रहीत्। ಮೇಲಕ್ಕೆ ಎತ್ತಿಹಿಡಿ. "तं प्राप्तं प्रासहिष्टारिः शक्तिं चोग्रामुदग्रहीत्" भट्टि० १५-५२।

**(6) नि+ग्रह**=निजग्राह। निग्रहः। 1. ಬಲಾತ್ಕಾರದಿಂದ ತಡೆದುನಿಲ್ಲಿಸು. "निजग्राह महाबाहुः मारुतात्मजमिन्द्रजित्" रामा०। 2. ನಿಯಮಿಸು, ಅಂಕೆಯಲ್ಲಿಡು. "अनिग्रहाच्चेन्द्रियाणां नरः पतनमृच्छति" याज्ञ० ३-२१९।

**(7) परि + ग्रह** = परिगृह्णाति। परिग्रहः। 1. ಸುತ್ತಲೂ ಹಿಡಿದುಕೊ, ಎಲ್ಲಾ ಕಡೆಯಲ್ಲೂ ಹಿಡಿದುಕೊ. "बाहुना परिजग्राह दक्षिणेन शिरोधराम्" भा० आदि०। 2. ಸ್ವೀಕರಿಸು, ತೆಗೆದುಕೊ. "कस्य गुप्तः परिग्रहः"।

**(8) प्रति + ग्रह** = प्रतिगृह्णाति। प्रतिजग्राह। प्रतिग्रहः। ತೆಗೆದುಕೊ, ಸ್ವೀಕರಿಸು. "तथेति प्रतिजग्राह प्रीतिमान् सपरिग्रहः" रघु० १-९२।

**(9) वि + ग्रह** = विगृह्णाति। विग्रहः। 1. ವಿರೋಧಿಸು, ದ್ವೇಷಿಸು. "विगृह्य चक्रे नमुचिद्विषा बली य इत्थमस्वास्थ्यमहर्दिवं दिवः" माघ० १-५१। 2. ವೃತ್ತಿಯ ಅರ್ಥವನ್ನು ವಿವರಿಸು. "वृत्त्यर्थावबोधकं वाक्यं विग्रहः" सि० कौ०।

**(10) सम् + ग्रह** = संगृह्णाति। संग्रहः। ಸಂಗ್ರಹಿಸು, ಶೇಖರಿಸು, ಕೂಡಿಡು. "संग्रहः खलु कर्तव्यः संग्रही नावसीदति"।

**ग्रह ಗ್ರಹ** (ಪುಂ) 1. ಸೂರ್ಯ ಚಂದ್ರ ಮೊದಲಾದ ಗ್ರಹಗಳು. गृह्णाति—ग्रह(उपादाने) "अच्" (३-१-१४३)। "नक्षत्रताराग्रहसंकुलापि ज्योतिष्मती चन्द्रमसैव रात्रिः" रघु० ६-२२।

**ನವಗ್ರಹಗಳು:**

(1) रविः, (2) चन्द्रः, (3) कुजः, (4) बुधः, (5) गुरुः, (6) शुक्रः, (7) शनिः, (8) राहुः ಮತ್ತು (9) केतुः। "रविश्चन्द्रो मङ्गलश्च बुधश्चापि बृहस्पतिः। शुक्रः शनैश्चरो राहुः केतुश्चेति नव ग्रहाः"।

## ಸೂರ್ಯಾದಿ ಗ್ರಹಗಳಿಗೆ ಜನ್ಮಭೂಮಿ ಗೋತ್ರ ಮೊದಲಾದುವನ್ನು ತಿಳಿಸುವ ವಿವರಣ ಪದಕ

| ಜನ್ಮಭೂಮಿ ಮೊದಲಾದುವು | ರವಿಗೆ | ಚಂದ್ರನಿಗೆ | ಕುಜನಿಗೆ | ಬುಧನಿಗೆ | ಗುರುವಿಗೆ | ಶುಕ್ರನಿಗೆ | ಶನಿಗೆ | ರಾಹುವಿಗೆ | ಕೇತುವಿಗೆ |
|---|---|---|---|---|---|---|---|---|---|
| ಜನ್ಮಭೂಮಿ | ಕಳಿಂಗ | ಯಮುನಾ | ಅವಂತಿ | ಮಗಧ | ಸೈಂಧವ | ಭೋಜಕಟ | ಸೌರಾಷ್ಟ್ರ | ವರ್ವರಕ | ಅಂತರ್ವೇದಿ |
| ಗೋತ್ರ | ಕಶ್ಯಪ | ಅತ್ರಿ | ಭರದ್ವಾಜ | ಅತ್ರಿ | ಆಂಗಿರಸ್ | ಭೃಗು | ಕಶ್ಯಪ | ಪೈಠೀನಸಿ | ಜೈಮಿನಿ |
| ರೂಪಾತ್ಮಕವರ್ಣ | ರಕ್ತ | ಶುಕ್ಲ | ರಕ್ತ | ಪೀತ | ಪೀತ | ಶುಕ್ಲ | ಕೃಷ್ಣ | ಕೃಷ್ಣ | ಚಿತ್ರ |
| ಮಂಡಲದಲ್ಲಿ ಸ್ಥಾನ | ಮಧ್ಯ | ಪೂರ್ವ ದಕ್ಷಿಣ | ದಕ್ಷಿಣ | ಪೂರ್ವೋತ್ತರ | ಉತ್ತರ | ಪೂರ್ವ | ಪಶ್ಚಿಮ | ದಕ್ಷಿಣ ಪಶ್ಚಿಮ | ಪಶ್ಚಿಮೋತ್ತರ |
| ಆಕಾರ | ವರ್ತುಲ | ಅರ್ಧಚಂದ್ರ | ತ್ರಿಕೋಣ | ಧನುಸ್ಸು | ಪದ್ಮ | ಚತುಷ್ಕೋಣ | ಸರ್ಪ | ಮಕರ | ಖಡ್ಗ |
| ವಾಹನ | ಸಪ್ತಾಶ್ವರಥ | ದಶಾಶ್ವರಥ | ಮೇಷ | ಸಿಂಹ | ಗಜ | ಅಶ್ವ | ಗೃಧ್ರ | ಸಿಂಹ | ಗೃಧ್ರ |
| ಪುಷ್ಪ | ಗನ್ನೇರಿಳೆ | ನೈದಿಲೆ | ಜಪಾ (ದಾಸಿವಾಳ) | ಸಂಪಿಗೆ | ತಾವರೆ | ಜಾಜಿ | ಮಲ್ಲಿಗೆ | ಪೊಲ್ಲೆ | ಮಲ್ಲಿಗೆ |
| ಫಲ | ದ್ರಾಕ್ಷಿ | ಕಬ್ಬು | ಪೂಗ | ನಾಗರಂಗ | ಜಂಬೀರ | ಬೀಜಪೂರ | ಜಾಜಿ | ನಾರಿಕೇಳ | ದಾಳಿಂಬೆ |
| ವಸ್ತ್ರ | ರಕ್ತ | ಶುಕ್ಲ | ರಕ್ತ | ಪೀತ | ಪೀತ | ಶುಕ್ಲ | ಕೃಷ್ಣ | ಕೃಷ್ಣ | ಚಿತ್ರ |
| ಧಾನ್ಯ | ಗೋಧಿ | ಬತ್ತ | ತೊಗರಿ | ಹೆಸರು | ಕಡಲೆ | ಅವರೆ | ಎಳ್ಳು | ಉದ್ದು | ಹುರುಳಿ |
| ರತ್ನ | ಮಾಣಿಕ್ಯ | ಮುತ್ತು | ಹವಳ | ಪಚ್ಚೆ | ಪುಷ್ಪರಾಗ | ವಜ್ರ | ನೀಲ | ಗೋಮೇದಕ | ವೈಡೂರ್ಯ |
| ಅಧಿಷ್ಠಾತೃ ದೇವತೆ | ಶಿವ | ಉಮಾ | ಸ್ಕಂದ | ನಾರಾಯಣ | ಬ್ರಹ್ಮ | ಇಂದ್ರ | ಯಮ | ಕಾಲ | ಚಿತ್ರಗುಪ್ತ |

**ಸೂರ್ಯಾದಿಗ್ರಹಗಳು ಈ ಕೆಳಗೆ ಆಯಾ ಗ್ರಹಗಳ ಎದುರಿಗೆ ಕಾಣಿಸಿರುವ ವಿಷಯಗಳಿಗೆ ಕಾರಕರು :**

(1) रवि: ಪಿತೃ, ಆತ್ಮ, ಪ್ರಭಾವ ಮತ್ತು ಶಕ್ತಿ ಇವುಗಳಿಗೆ ಕಾರಕ.

(2) चन्द्र: ಮಾತೃ, ಮನಸ್ಸು, ಬುದ್ಧಿ ಮತ್ತು ಪ್ರಸಾದ ಇವುಗಳಿಗೆ ಕಾರಕ.

(3) कुज: ಸಹೋದರ, ಭೃತ್ಯ ಮತ್ತು ಭೂಮಿಗಳಿಗೆ ಕಾರಕ.

(4) बुध: ಪ್ರಜ್ಞೆ, ಕರ್ಮ ಮತ್ತು ವಿಜ್ಞಾನಗಳಿಗೆ ಕಾರಕ.

(5) गुरु: ದೇಹಪುಷ್ಟಿ, ಬುದ್ಧಿ, ಪುತ್ರ, ಅರ್ಥ ಮತ್ತು ಸಂಪತ್ತುಗಳಿಗೆ ಕಾರಕ.

(6) शुक्र: ವಿವಾಹ, ಭಾಗ್ಯ, ಭೋಗ ಮತ್ತು ವಾಹನಗಳಿಗೆ ಕಾರಕ.

(7) शनि: ಆಯುಷ್ಯ, ಜೀವನೋಪಾಯ ಮತ್ತು ಮರಣಗಳಿಗೆ ಕಾರಕ.

(8) राहु: ಮಾತಾಮಹ, ತಟಾಕ, ಆರಾಮ ಮತ್ತು ವಿಶ್ರಾಮ ಇವುಗಳಿಗೆ ಕಾರಕ.

(9) केतु: ಪಿತಾಮಹ ಮತ್ತು ಮೋಕ್ಷಗಳಿಗೆ ಕಾರಕ.

**ಸೂರ್ಯಾದಿ ಗ್ರಹಗಳಿಗೆ ಪರಸ್ಪರ ಸಮ ಶತ್ರು ಮಿತ್ರ ಗ್ರಹಗಳು :**

| | ಸಮ | ಶತ್ರು | ಮಿತ್ರ |
|---|---|---|---|
| (1) ಸೂರ್ಯನಿಗೆ | ಬುಧ | ಶುಕ್ರ, ಶನಿ | ಚಂದ್ರ, ಕುಜ, ಗುರು |
| (2) ಚಂದ್ರನಿಗೆ | ಕುಜ, ಗುರು, ಶುಕ್ರ, ಶನಿ | — | ರವಿ ಮತ್ತು ಬುಧ |
| (3) ಕುಜನಿಗೆ | ಶುಕ್ರ, ಶನಿ | ಬುಧ | ರವಿ, ಚಂದ್ರ, ಗುರು. |
| (4) ಬುಧನಿಗೆ | ಕುಜ, ಗುರು, ಶನಿ | ಚಂದ್ರ | ರವಿ, ಶುಕ್ರ |
| (5) ಗುರುವಿಗೆ | ಶನಿ | ಬುಧ, ಶುಕ್ರ | ರವಿ, ಚಂದ್ರ, ಕುಜ |
| (6) ಶುಕ್ರನಿಗೆ | ಕುಜ, ಗುರು | ರವಿ, ಚಂದ್ರ | ಬುಧ, ಶನಿ |
| (7) ಶನಿಗೆ | ಗುರು | ರವಿ, ಕುಜ, ಶುಕ್ರ, ಚಂದ್ರ | ಬುಧ |

**ಸೂರ್ಯಾದಿ ಗ್ರಹಗಳ ಕ್ಷೇತ್ರಗಳು :**

| ಗ್ರಹಗಳು | ಕ್ಷೇತ್ರಗಳು |
|---|---|
| (1) ಸೂರ್ಯನಿಗೆ | ಸಿಂಹ |
| (2) ಚಂದ್ರನಿಗೆ | ಕರ್ಕಾಟಕ |
| (3) ಕುಜನಿಗೆ | ಮೇಷ, ವೃಶ್ಚಿಕ |
| (4) ಬುಧನಿಗೆ | ಮಿಥುನ, ಕನ್ಯಾ |
| (5) ಗುರುವಿಗೆ | ಧನುಸ್ಸು, ಮೀನ |
| (6) ಶುಕ್ರನಿಗೆ | ವೃಷಭ, ತುಲಾ |
| (7) ಶನಿಗೆ | ಮಕರ, ಕುಂಭ |

**ಸೂರ್ಯಾದಿ ಗ್ರಹಗಳಿಗೆ ಉಚ್ಚ ನೀಚ ರಾಶಿಗಳು**

| ಗ್ರಹಗಳು | ಉಚ್ಚರಾಶಿ | ನೀಚರಾಶಿ |
|---|---|---|
| (1) ಸೂರ್ಯನಿಗೆ | ಮೇಷ | ತುಲಾ |
| (2) ಚಂದ್ರನಿಗೆ | ವೃಷಭ | ವೃಶ್ಚಿಕ |
| (3) ಕುಜನಿಗೆ | ಮಕರ | ಕರ್ಕಾಟಕ |
| (4) ಬುಧನಿಗೆ | ಕನ್ಯಾ | ಮೀನ |
| (5) ಗುರುವಿಗೆ | ಕರ್ಕಾಟಕ | ಮಕರ |
| (6) ಶುಕ್ರನಿಗೆ | ಮೀನ | ಕನ್ಯಾ |
| (7) ಶನಿಗೆ | ತುಲಾ | ಮೇಷ |

**ಸೂರ್ಯಾದಿ ಗ್ರಹಗಳು ಮೇಷಾದಿ ರಾಶಿಗಳಲ್ಲಿ ಸಂಚರಿಸುವ ಕಾಲ :**

| ಗ್ರಹಗಳು | ಕಾಲ |
|---|---|
| (1) ಸೂರ್ಯ | ಒಂದು ತಿಂಗಳು |
| (2) ಚಂದ್ರ | ಎರಡೂಕಾಲು ದಿನಗಳು (54 ಗಂಟೆಗಳ ಕಾಲ) |
| (3) ಕುಜ | ಮೂರು ಪಕ್ಷಗಳು |
| (4) ಬುಧ | ಹದಿನೆಂಟು ದಿನಗಳು |
| (5) ಗುರು | ಒಂದು ವರ್ಷ |
| (6) ಶುಕ್ರ | ಇಪ್ಪತ್ತೆಂಟು ದಿನಗಳು |
| (7) ಶನಿ | ಎರಡು ವರ್ಷ ಆರು ತಿಂಗಳು (30 ತಿಂಗಳುಗಳ ಕಾಲ) |
| (8, 9) ರಾಹು ಕೇತುಗಳು | ಒಂದೂವರೆ ವರ್ಷ (18 ತಿಂಗಳುಗಳ ಕಾಲ) |

"रविर्मासं निशानाथः सपाददिवसद्वयम् ।
पक्षत्रयं भूमिपुत्रः बुधोऽष्टादशवासरान् ।
वर्षमेकं सुराचार्यश्चाष्टादशदिनं भृगुः ।
शनिः सार्धद्वयं वर्षं स्वर्भानुः सार्धवत्सरम् "॥

**ಕ್ರೂರ ಮತ್ತು ಸೌಮ್ಯ ಗ್ರಹಗಳು :**

ಸೂರ್ಯ, ಕುಜ, ಶನಿ, ರಾಹು ಮತ್ತು ಕೇತು ಇವರು ಕ್ರೂರ ಗ್ರಹಗಳು.

ಚಂದ್ರ, ಬುಧ, ಗುರು ಮತ್ತು ಶುಕ್ರ ಇವರು ಸೌಮ್ಯ ಗ್ರಹಗಳು.

**ಪುರುಷ ಸ್ತ್ರೀ ನಪುಂಸಕ ಗ್ರಹಗಳು :**

ಸೂರ್ಯ. ಕುಜ ಮತ್ತು ಗುರು ಪುರುಷಗ್ರಹಗಳು.
ಚಂದ್ರ, ಶುಕ್ರ ಮತ್ತು ರಾಹು ಸ್ತ್ರೀ ಗ್ರಹಗಳು.
ಬುಧ, ಶನಿ ಮತ್ತು ಕೇತು ನಪುಂಸಕ ಗ್ರಹಗಳು.

**ಗ್ರಹಗಳಿಗೆ ಸಾಮಾನ್ಯ ಮತ್ತು ವಿಶೇಷ ದೃಷ್ಟಿ :**

ಸಾಮಾನ್ಯವಾಗಿ ಎಲ್ಲಾ ಗ್ರಹಗಳೂ ತಾವಿರುವ ರಾಶಿಯಿಂದ ಸಪ್ತಮ (ಏಳನೆಯ) ರಾಶಿಯನ್ನು ಸಂಪೂರ್ಣ ದೃಷ್ಟಿಯಿಂದ ನೋಡುವುವು.

ಕುಜನು ತಾನಿರುವ ರಾಶಿಯಿಂದ ನಾಲ್ಕನೆಯ ಮತ್ತು ಎಂಟನೆಯ ರಾಶಿಗಳಲ್ಲಿರುವ ಗ್ರಹಗಳನ್ನು ತ್ರಿಪಾದ ದೃಷ್ಟಿಯಿಂದಲೂ ಗುರುವು ತಾನಿರುವ ರಾಶಿಯಿಂದ ಐದನೆಯ ಮತ್ತು ಒಂಬತ್ತನೆಯ ರಾಶಿಗಳಲ್ಲಿರುವ ಎಲ್ಲಾ ಗ್ರಹಗಳನ್ನು ಅರ್ಧ ದೃಷ್ಟಿಯಿಂದಲೂ ಶನಿಯು ತಾನಿರುವ ರಾಶಿಯಿಂದ ಮೂರನೆಯ ಮತ್ತು ಹತ್ತನೆಯ ರಾಶಿಗಳಲ್ಲಿರುವ ಎಲ್ಲಾ ಗ್ರಹಗಳನು ಪಾದದೃಷ್ಟಿಯಿಂದಲೂ ವಿಶೇಷವಾಗಿ ನೋಡುತ್ತಾರೆ. "त्रिदशत्रिकोणचतुरश्रसप्तगानवलोकयन्ति चरणाभिवृद्धितः। रविजामरेड्यरुधिराः परे च ये क्रमशो भवन्ति सकलेक्षणाधिपाः" मुहू० ८०। 2. ಸ್ವೀಕರಿಸುವುದು, ತೆಗೆದುಕೊಳ್ಳುವುದು. "यो यथा निक्षिपेद्धस्ते यमर्थं यस्य मानवः। स तथैव ग्रहीतव्यो यथा दायस्तथा ग्रहः" मनु० ८-१८०। 3. ಹಿಡಿದುಕೊಳ್ಳುವುದು. "विश्व हे शठ पलायनच्छलान्यञ्जसेति रुरुधुः कचग्रहैः" रघु० १९-३१। 4. ಸೂರ್ಯ ಚಂದ್ರರ ಗ್ರಹಣ. "ग्रस्ते क्रमान्निमित्तः पुनर्ग्रहो मासषट्कपरिवृद्धया। पवनोल्कापातरजः क्षितिकम्पतमोऽशनिनिपातैः" बृहत्सं० ५-६३। 5. ಅನುಗ್ರಹ, ವಿಶ್ವಾಸ, ದಯೆ. 6. ರಣೋದ್ಯಮ. 7. ಪೂತನಾದಿ ಬಾಲಗ್ರಹಗಳು. 8. ಸಿಂಹಿಕಾಪುತ್ರ, ರಾಹು. "सन्ध्याभ्रकपिशस्तस्य विराधो नाम राक्षसः। अतिष्ठन्मार्गमावृत्य रामस्येन्दोरिव ग्रहः" रघु० १२-२८। 9. ಒಂಬತ್ತು ಸಂಖ್ಯೆ. 10. ಚೌರ್ಯ, ಕದಿಯುವುದು. "अङ्गुलीर्ग्रन्थिभेदस्य छेदयेत्प्रथमे ग्रहे" मनु० ९-२७७। 11. ತಿಳುವಳಿಕೆ, ಅರಿವು. 12. ನಿರ್ಬಂಧ. "हिमांशुवंशस्य करीरमेव मां निशम्य किं नासि फलेग्रहिग्रहा" नैष० ९-१२। "ग्रहोऽनुग्रहनिर्बन्धग्रहणेषु रणोद्यमे। सूर्यादौ पूतनादौ च सैंहिकेयोपरागयोः" मेदि०।

**ग्रहकल्लोल ಗ್ರಹಕಲ್ಲೋಲ** (ಪುಂ०) ರಾಹು. ग्रहेषु कल्लोल इव।

**ग्रहगणित ಗ್ರಹಗಣಿತ** (ನ०) ಜ್ಯೋತಿಃಶಾಸ್ತ್ರದ ಒಂದು ಭಾಗ, ಖಗೋಳ ವಿಜ್ಞಾನ, ಗ್ರಹಗಳ ಗತಿಯನ್ನು ತಿಳಿಸುವ ಒಂದು ಗ್ರಂಥ, ಸ್ಕಂಧತ್ರಯವುಳ್ಳ ಜ್ಯೋತಿಃಶಾಸ್ತ್ರದ ಒಂದು ಭಾಗ. "स्कन्धेऽस्मिन् गणितेन या ग्रहगतिः तन्त्राभिधानस्त्वसौ" बृहत्सं० १-९।

**ग्रहगति ಗ್ರಹಗತಿ** (ಸ್ತ್ರೀ०) ಗ್ರಹಗಳ ಸಂಚಾರ. ग्रहाणां गतिः।

**ग्रहगोचर ಗ್ರಹಗೋಚರ** (ಪುಂ०) ಜನ್ಮರಾಶಿಯಿಂದ ಇತರ ರಾಶಿಗಳಲ್ಲಿ ಶುಭಾಶುಭ ಸೂಚಕವಾದ ಗ್ರಹಗಳ ಗತಿ. ["गोचर" ಪದದಲ್ಲಿ ನೋಡಿ.]

**ग्रहचिन्तक ಗ್ರಹಚಿಂತಕ** (ಪುಂ०) ಜ್ಯೌತಿಷಿಕ, ಜೋಯಿಸ, ಗ್ರಹಗಳ ಸ್ಥಿತಿಗತಿಗಳನ್ನು ಕುರಿತು ಯೋಚಿಸುವವನು. "वक्तव्यमिष्टं जगतोऽशुभं वा शास्त्रोपदेशात् ग्रहचिन्तकेन" बृहत्सं० २४-४।

**ग्रहण ಗ್ರಹಣ** (ನ०) 1. ಸ್ವೀಕಾರ, ತೆಗೆದುಕೊಳ್ಳುವುದು. ग्रह (उपादाने) भावे "ल्युट्" (३-३-११५)। "न शेकुर्ग्रहणे तस्य धनुषस्तोलनेऽपि वा" रामा०। 2. ಉಪರಾಗ, ಸೂರ್ಯಚಂದ್ರರನ್ನು ರಾಹುವು ನುಂಗುವುದು. "यद्येकस्मिन् मासे ग्रहणं रविसोमयोस्तदा क्षितिपाः। स्वबलक्षोभैः संक्षयमायान्त्यतिशस्त्रकोपश्च" बृहत्सं० ५-२६। 3. ಜ್ಞಾನ, ತಿಳುವಳಿಕೆ. "स्वत एव सतां परार्थता ग्रहणानां हि यथा यथार्थता" नैष० २-६१। 4. ಇಂದ್ರಿಯ. 5. ಹಸ್ತ, ಕೈ. ग्रह कर० "ल्युट्" (३-३-११७)। 6. ಹಿಡಿಯುವುದು, ಆಕ್ರಮಿಸುವುದು. "नित्यमास्यं शुचि स्त्रीणां शकुनिः फलपातने। प्रसवे च शुचिर्वत्सः श्वा मृगग्रहणे शुचिः" मनु० ५-१३०। 7. ಕಲಿಯುವುದು, ಶಿಕ್ಷಣ ಪಡೆಯುವುದು. "लिपेर्यथावद्ग्रहणेन वाङ्मयं नदीमुखेनेव समुद्रमाविशत्" रघु० ३-२८। 8. ಕೈದಿ, ಸೆರೆಯಾಳು. 9. ಆಕರ್ಷಣ, ಎಳೆತ. 10. ಆದರ. 11. ಹಿಡಿದುಕೊಳ್ಳುವುದು. "विप्रोष्य पादग्रहणमन्वहञ्चाभिवादनम्" मनु० २-२१७। 12. ಪಡೆಯುವುದು, ಹೊಂದುವುದು. 13. ಅಂಗೀಕಾರ, ಒಪ್ಪಿಗೆ. 14. ತಾಳುವುದು. ಕೈಗೊಳ್ಳುವುದು, ಪಡೆಯುವುದು. "अजः शरीरग्रहणात्स जात इति कीर्त्यते" याज्ञ० ३-६९।

**ग्रहणक ಗ್ರಹಣಕ** (ನ०) ಸಮಾನಸ್ಥಾನ ಪ್ರಯತ್ನಗಳುಳ್ಳ ಸವರ್ಣಾಕ್ಷರಗಳನ್ನು ಜೊತೆಗೆ ಸೇರಿಸಿಕೊಳ್ಳುವ ಶಾಸ್ತ್ರ. गृह्णन्त्यकारादयः स्वसवर्णान् येन तद्ग्रहणम् — ग्रह

(उपादाने) कर० "ल्युट्" (३-३-११७)। स्वार्थे "कः"। "अन्यथा ग्रहणकशास्त्रबलाद् दीर्घादीनामिव हकारादीनामपि अच्त्वं स्यात्"।

**ग्रहणि(णी) ಗ್ರಹಣಿ(ಣೀ)** (स्त्री०) 1. ಪಿತ್ತಧರೆಯೆಂಬ ಒಂದು ಕಲೆ. 2. ಪಿತ್ತಾಶಯದಲ್ಲಿ ಉಂಟಾಗುವ ಒಂದು ರೋಗ. गृह्णाति रोगिणो देहम्। ದೇಹದಲ್ಲಿರುವ ಸಪ್ತ ಕಲೆಗಳಲ್ಲಿ ಪಿತ್ತಧರೆಯೆಂಬುದು ಒಂದು ಕಲೆ. ಇದು ಪಕ್ವಾಶಯ ಮತ್ತು ಆಮಾಶಯಗಳ ಮಧ್ಯದಲ್ಲಿರುವುದು. ಇದಕ್ಕೆ "ग्रहणी" ಎಂದು ಹೆಸರು. "षष्ठी पित्तधरा नाम या कला परिकीर्तिता। पक्वामाशयमध्यस्था ग्रहणी सा प्रकीर्तिता" सुश्रुत० उत्तरतं० ४०-१६९। ಈ ಗ್ರಹಣಿಗೆ ಜಾಠರಾಗ್ನಿಯು ಬಲವನ್ನು ಕೊಡುವುದು. ಜಾಠರಾಗ್ನಿಯೂ ಗ್ರಹಣಿಯಿಂದ ಬಲಿಷ್ಠವಾಗುವುದು. ಈ ಅಗ್ನಿಯು ಕಡಿಮೆಯಾದರೆ ಗ್ರಹಣಿಯೂ ಕೆಟ್ಟು ಆಹಾರವು ಜೀರ್ಣವಾಗದೆ ಆಮವನ್ನೇ ಹೊರಕ್ಕೆ ಬಿಡುವುದು. ಒಂದು ವೇಳೆ ಜೀರ್ಣವಾದರೂ ದುರ್ಗಂಧದಿಂದ ಕೂಡಿ ಪದೇ ಪದೇ ಭೇದಿಯಾಗುವುದು. ಇದೇ "**ಗ್ರಹಣೀರೋಗ**"ವಾಗುವುದು. "ग्रहण्या बलमग्निर्हि स चापि ग्रहणीं श्रितः। तस्मात्संदूषिते वह्नौ ग्रहणी संप्रदुष्यति॥ एकशः सर्वशश्चैव दोषैरत्यर्थमुच्छ्रितैः। सा दुष्टा बहुशो भुक्तमाममेव विमुञ्चति॥ पक्वं वा सरुजं पूति मुहुर्बद्धं मुहुर्द्रवम्। ग्रहणीरोगमाहुस्तमायुर्वेदविदो जनाः" सुश्रुत० उत्तरतं० ४०-१७०-७२।

**ग्रहणीहर ಗ್ರಹಣೀಹರ** (न०) 1. ಲವಂಗ. ग्रहणीं हरति—हृञ् (हरणे) "अच्" (३-२-९)। (वि०)2. ಗ್ರಹಣೀರೋಗವನ್ನು ವಾಸಿಮಾಡುವ ಔಷಧ.

**ग्रहदृष्टि ಗ್ರಹದೃಷ್ಟಿ** (स्त्री०) ಗ್ರಹಗಳು ತಾವಿರುವ ಸ್ಥಾನಗಳಿಂದ ಬೇರೆ ಬೇರೆ ಸ್ಥಾನಗಳನ್ನು ನೋಡುವುದು.

**ग्रहदेवता ಗ್ರಹದೇವತಾ** (स्त्री०) ಸೂರ್ಯಾದಿ ಗ್ರಹಗಳಿಗೆ ಅಧಿಷ್ಠಾತೃ ದೇವತೆ.

**ग्रहनायक ಗ್ರಹನಾಯಕ** (पुं०)1. ಗ್ರಹಗಳ ಪತಿಯಾದ ಸೂರ್ಯ. 2 ಶನಿ. 3. ಎಕ್ಕದ ಗಿಡ. 4. ಚಂದ್ರ.

**ग्रहनेमि ಗ್ರಹನೇಮಿ** (पुं०) ಚಂದ್ರ. ग्रहाणां नेमिरिव।

**ग्रहपति ಗ್ರಹಪತಿ** (पुं०) 1. ಸೂರ್ಯ. 2. ಚಂದ್ರ. 3. ಎಕ್ಕದ ಗಿಡ. 4. ಶನಿ. ग्रहाणां पतिः। "तस्य विस्तीर्यते राज्यं ज्योत्स्ना ग्रहपतेरिव" भा०।

**ग्रहपुष ಗ್ರಹಪುಷ** (पुं०) ಸೂರ್ಯ. ग्रहान् पुष्णाति— पुष (पुष्टौ) "कः" (३-१-१३५)। "सूर्योऽर्कः किरणो भगो ग्रहपुषः पूषा पतङ्गः खगो मार्तण्डो यमुनाकृतान्तजनकः प्रद्योतनस्तापनः" अभि० चि०।

**ग्रहबल ಗ್ರಹಬಲ** (न०) ಸೂರ್ಯಾದಿ ಗ್ರಹಗಳಿಗೆ ಸ್ವಕ್ಷೇತ್ರ ಸ್ವೋಚ್ಚಕ್ಷೇತ್ರ ಮಿತ್ರಕ್ಷೇತ್ರ ಮೊದಲಾದುವುಗಳಲ್ಲಿರುವುದರಿಂದ ಉಂಟಾಗುವ ಬಲ. ग्रहाणां स्वोच्चक्षेत्रादिस्थित्या बलम्। "स्वोच्चसुहृत्स्वत्रिकोणनवांशैः स्थानबलं स्वगृहोपगते च। दिक्षु बुधाङ्गिरसौ रविभौमौ सूर्यसुतः सितशीतकरौ च। उदगयने रविशीतमयूखौ वक्रसमागमगाः परिशेषाः" ಇತ್ಯಾದಿ. बृहत्सं०।

**ग्रहमैत्र ಗ್ರಹಮೈತ್ರ** (न०) ದಂಪತಿಗಳ (ಪತಿಪತ್ನಿಯರ) ಜಾತಕಗಳಲ್ಲಿ ಚಂದ್ರನಿರುವ ರಾಶಿಗಳ ಅಧಿಪತಿಗಳಿಗೆ ಇರಬೇಕಾದ ಪರಸ್ಪರ ಸ್ನೇಹ. ವಿವಾಹಕಾಲದಲ್ಲಿ ಈ ಅಂಶವನ್ನು ಮುಖ್ಯವಾಗಿ ನೋಡಬೇಕು. ಈ ರಾಶ್ಯಧಿಪತಿಗಳಿಗೆ ಪರಸ್ಪರ ಮೈತ್ರಿಯಿಲ್ಲದಿದ್ದರೆ ವಧೂವರರ (ದಂಪತಿಗಳ)ಲ್ಲಿ ಪರಸ್ಪರ ಪ್ರೇಮವುಂಟಾಗುವುದಿಲ್ಲವಾದುದರಿಂದ ಅಂತಹ ಜಾತಕಗಳಿಗೆ ಹೊಂದಿಕೆಯಿಲ್ಲವೆಂಬುದು ಅಭಿಪ್ರಾಯ. ಗ್ರಹಮೈತ್ರವು ವಿವಾಹಕ್ಕೆ ನೋಡಬೇಕಾದ ಹನ್ನೆರಡು ಕೂಟಗಳಲ್ಲಿ ಮುಖ್ಯವಾದ ಒಂದು ಕೂಟ. "दम्पत्योर्यदि जन्मराश्यधिपयोरेकाधिपत्ये शुभो मैत्रे वा समयोस्समस्त्वहितयोर्वर्गस्तयोर्मृत्युकृत्" काला० ११५।

**ग्रहयज्ञ ಗ್ರಹಯಜ್ಞ** (पुं०) ಗ್ರಹಗಳ ಶಾಂತಿಗಾಗಿ ಅವುಗಳನ್ನುದ್ದೇಶಿಸಿ ಮಾಡುವ ಪೂಜೆ. ग्रहाणां तदुद्देशेन यज्ञः। ಐಶ್ವರ್ಯಪ್ರಾಪ್ತಿ, ಪೀಡಾನಿವೃತ್ತಿ, ವೃಷ್ಟಿ (ಮಳೆ) ಆಯುರ್ವೃದ್ಧಿ ಇವೇ ಮೊದಲಾದುವುಗಳಿಗಾಗಿ ಗ್ರಹಯಜ್ಞವನ್ನು ಆಚರಿಸಬೇಕು. "श्रीकामः शान्तिकामो वा ग्रहयज्ञं समाचरेत्। वृष्ट्यायुःपुष्टिकामो वा तथैवाऽभिचरन्नपि" याज्ञ० १-२९५। ಈ ಶಾಂತಿಯನ್ನು ಶುಭದಿನಗಳಲ್ಲಿ ನಡೆಸಬೇಕು. "शुभग्रहार्कवारेषु मृदुक्षिप्रध्रुवेषु च। शुभराशिविलग्नेषु शुभं शान्तिकपौष्टिकम्"। "गोचरे वा विलग्ने वा ये ग्रहा रिष्टसूचकाः। पूजयेत्तान् प्रयत्नेन पूजिताः स्युः शुभावहाः"।

**ಗ್ರಹದಕ್ಷಿಣೆಯಾಗಿ ಕೊಡುವ ದಾನ:**

| ಗ್ರಹ | ದಕ್ಷಿಣೆ |
|---|---|
| ಸೂರ್ಯನಿಗೆ | ಕಪಿಲವರ್ಣದ ಹಸು. |
| ಚಂದ್ರನಿಗೆ | ಶಂಖ. |
| ಕುಜನಿಗೆ | ಕೆಂಪು ಎತ್ತು. |
| ಬುಧನಿಗೆ | ಸುವರ್ಣ. |
| ಗುರುವಿಗೆ | ಹಳದಿಯ ವಸ್ತ್ರ. |

| ಗ್ರಹ | ದಕ್ಷಿಣೆ |
|---|---|
| ಶುಕ್ರನಿಗೆ | ಬಿಳಿಯ ಕುದುರೆ. |
| ಶನಿಗೆ | ಕಪ್ಪು ಹಸು. |
| ರಾಹುವಿಗೆ | ಕಬ್ಬಿಣದ ಆಯುಧ. |
| ಕೇತುವಿಗೆ | ಹೋತ. |

"सूर्याय कपिलां धेनुं शङ्खं दद्यात्तथेन्दवे। रक्तं धुरन्धरं दद्याद्भौमाय च ककुद्मिनम्। बुधाय जातरूपं तु गुरवे पीतवाससी। श्वेताश्वं दैत्यगुरवे कृष्णाङ्गामर्कसूनवे। आयसं राहवे दद्यात् केतुभ्यश्छागमुत्तमम्" मत्स्यपु०।

**ग्रहयुद्ध ಗ್ರಹಯುದ್ಧ** (नं०) ಮೇಲೆ ಮೇಲೆ ಇರುವ ಗ್ರಹಗಳ ಕಿರಣಸಂಪರ್ಕದಿಂದ ಉಂಟಾಗುವ ಗ್ರಹಗಳ ಯುದ್ಧ.

**ग्रहराज ಗ್ರಹರಾಜ** (पुं०) ಸೂರ್ಯ.

**ग्रहवर्ष ಗ್ರಹವರ್ಷ** (पुं०) ಸೂರ್ಯಾದಿ ಗ್ರಹಗಳು ಅಧಿಪತಿಯಾಗಿರುವ ಸಂವತ್ಸರಗಳು.

**ग्रहविप्र ಗ್ರಹವಿಪ್ರ** (पुं०) ದೈವಜ್ಞ, ಜೋಯಿಸ.

**ग्रहशान्ति ಗ್ರಹಶಾಂತಿ** (स्त्री०) ಅಶುಭಸ್ಥಾನಗಳಲ್ಲಿರುವ ಗ್ರಹಗಳ ಪ್ರಸಾದಕ್ಕಾಗಿ ಮಾಡುವ ಶಾಂತಿ.

**ग्रहाधार ಗ್ರಹಾಧಾರ** (पुं०) ಧ್ರುವನಕ್ಷತ್ರ.

**ग्रहाधिपति ಗ್ರಹಾಧಿಪತಿ** (पुं०) ಸೂರ್ಯ.

**ग्रहाधीश ಗ್ರಹಾಧೀಶ** (पुं०) ನವಗ್ರಹಗಳಿಗೂ ಅಧಿಪತಿಯಾದ ಸೂರ್ಯ.

**ग्रहावमर्दन ಗ್ರಹಾವಮರ್ದನ** (पुं०) 1. ರಾಹು. ग्रहौ चन्द्रसूर्यौ अवमृद्नाति — अव + मृद (क्षोदे) "ल्युः" (३-१-१३४)। (नं०) 2. ಗ್ರಹಗಳ ಯುದ್ಧ. भावे "ल्युट्" (३-३-११५)।

**ग्रहिल ಗ್ರಹಿಲ** (वि०) 1. ನಿರ್ಬಂಧಕ್ಕೆ ಒಳಪಟ್ಟ. ग्रहोऽस्यास्ति "इलः" (४-२-८०)। ನಿರ್ಬಂಧವು ಆಗ್ರಹದಿಂದಲೂ ಅನುರಾಗದಿಂದಲೂ ಉಂಟಾಗುವುದು. ಆಗ್ರಹಮೂಲವಾದ ನಿರ್ಬಂಧ: "न निशाऽखिलयापि वापिका प्रससाद ग्रहिलेव मानिनी" नैष० २-७७। ಅನುರಾಗಮೂಲವಾದ ನಿರ್ಬಂಧ: "अभिधादिविलक्षणव्यापारमात्रप्रसाधनग्रहिलैरस्माभिः रसादीनां व्यङ्ग्यत्वमुक्तं भवति" सा० द० ३।

**ग्रहीतृ ಗ್ರಹೀತೃ** (वि०) 1. ಸ್ವೀಕರಿಸುವವನು, ತೆಗೆದುಕೊಳ್ಳುವವನು. ग्रह (उपादाने) "तृच्" (३-१-१३३)। 2. ಸಾಲಪಡೆಯುವವನು, ಸಾಲ ತೆಗೆದುಕೊಳ್ಳುವವನು. "ग्रहीता यदि नष्टः स्यात् कुटुम्बार्थे कृतो व्ययः। दातव्यं बान्धवैस्तत् स्यात्प्रविभक्तैरपि स्वतः" मनु० ८-१६६। 3. ಗ್ರಹಿಸಿಕೊಳ್ಳುವವನು, ಅರಿತುಕೊಳ್ಳುವವನು, ಶ್ರದ್ಧೆಯಿಂದ ಗಮನಿಸುವವನು. 4. ಕೊಳ್ಳುವವನು. स्त्रियाम् "ङीप्" (४-१-५)। **ग्रहीत्री ಗ್ರಹೀತ್ರೀ.**

**ग्राम ಗ್ರಾಮ** (पुं०) 1. ಹಳ್ಳಿ, ವ್ಯವಸಾಯಕ್ಕೆ ಯೋಗ್ಯವಾದ ಜಮೀನುಗಳ ಮಧ್ಯೆ ಇರುವ ಜನರ ವಾಸಸ್ಥಾನ. ग्रसु (अदने) "मन्" आत्वं च (उ० १-१४३)। "ग्रामेष्वात्मविसृष्टेषु यूपचिह्नेषु यज्वनाम्" रघु० १-४४। 2. ಸಂಗೀತದ ಸ್ವರಗಳ ಸಮೂಹ. ಒಂದು ಕುಟುಂಬದವರು ಒಂದು ಕಡೆ ಒಟ್ಟಿಗೆ ಸೇರುವಂತೆ ಸ್ವರಗಳ ಸಮೂಹವು ಗ್ರಾಮವೆನಿಸುವುದು. "यथा कुटुम्बिनः सर्वेऽप्येकीभूता भवन्ति हि। तथा स्वराणां संदोहो ग्राम इत्यभिधीयते"। ಈ ಗ್ರಾಮವು ಷಡ್ಜ ಗ್ರಾಮ, ಮಧ್ಯಮ ಗ್ರಾಮ ಮತ್ತು ಗಾಂಧಾರ ಗ್ರಾಮಗಳೆಂದು ಮೂರು ವಿಧ. "षड्जग्रामो भवेदादौ मध्यमग्राम एव च। गान्धारग्राम इत्येतद्ग्रामत्रयमुदाहृतम्"। "स्फुटीभवद्ग्रामविशेषमूर्च्छनामवेक्षमाणं महतीं मुहुर्मुहुः" माघ० १-१०। 3. ಸಂಘ, ಸಮೂಹ, ಗುಂಪು. "बलवानिन्द्रियग्रामो विद्वांसमपि कर्षति"। 4. ಗ್ರಾಮ್ಯಧರ್ಮ, ಮೈಥುನ. (पुं० ब० व०) 5. ಗ್ರಾಮವಾಸಿಗಳು, ಹಳ್ಳಿಯಲ್ಲಿ ವಾಸಮಾಡುವವರು.

**ग्रामकण्टक ಗ್ರಾಮಕಂಟಕ** (पुं०) ಗ್ರಾಮಕ್ಕೆ ಮುಳ್ಳಿನಂತೆ ತೊಂದರೆಕೊಡುವವನು, ಊರಿನವರನ್ನು ಪೀಡಿಸುವವನು.

**ग्रामकाम ಗ್ರಾಮಕಾಮ** (वि०) ಗ್ರಾಮವನ್ನು ತನ್ನದನ್ನಾಗಿ ಮಾಡಿಕೊಳ್ಳಲು ಅಪೇಕ್ಷಿಸುವವನು. ग्रामं कामयते— कमु (कान्तौ) + णिङ् "अण्" (३-२-१)।

**ग्रामकुक्कुट ಗ್ರಾಮಕುಕ್ಕುಟ** (पुं०) ಹುಂಜ, ಮನೆಯಲ್ಲಿ ಸಾಕುವ ಕೋಳಿ. "छत्राकं विड्वराहं च लशुनं ग्रामकुक्कुटम्। पलाण्डुं गृञ्जनं चैव मत्या जग्ध्वा पतेत् द्विजः" मनु० ५-१९।

**ग्रामकूटक ಗ್ರಾಮಕೂಟಕ** (पुं०) ಹಳ್ಳಿಯ ಯಜಮಾನ.

**ग्रामकोल ಗ್ರಾಮಕೋಲ, –क्रोड –ಕ್ರೋಡ** (पुं०) ಊರು ಹಂದಿ, ಹಳ್ಳಿಯಲ್ಲಿ ಸಾಕುವ ಹಂದಿ. "स दोग्ध्रीं धेनुमुत्सृज्य ग्रामक्रोडं दुधुक्षति" काशीखं०।

**ग्रामगृह्य ಗ್ರಾಮಗೃಹ್ಯ** (वि०) ಗ್ರಾಮಕ್ಕೆ ಸೇರಿದಂತಿರುವ, ಗ್ರಾಮದಿಂದ ಹೊರಗಿರುವ. ग्रामगृह्या सेना — ग्रह (उपादाने) "क्यप्" (३-१-११९)।

**ग्रामघात ಗ್ರಾಮಘಾತ** (पुं०) 1. ಹಳ್ಳಿಯನ್ನು ಲೂಟಿ ಮಾಡುವುದು, ಹಳ್ಳಿಯಲ್ಲಿ ಕೊಳ್ಳೆಹೊಡೆಯುವುದು. ग्रामस्य घातः। "ग्रामघाते हिताभङ्गे पथि मेषाभिदर्शने" मनु० ९-२७४। 2. ಹಳ್ಳಿಯವರನ್ನು ಕೊಲೆಮಾಡುವುದು.

**ग्रामघातक ಗ್ರಾಮಘಾತಕ** (वि०) ಹಳ್ಳಿಯನ್ನು ನಾಶ ಮಾಡುವ. ग्रामस्य घातकः। "एकस्थाने स्वन् दीप्तः सप्ताहात् ग्रामघातकः" बृहत्सं० ८६-६४।

**ग्रामघातिन् ಗ್ರಾಮಘಾತಿನ್** (वि०) 1. ಹಳ್ಳಿಯವರನ್ನು ಕಾಪಾಡಲು ಪಶುಗಳನ್ನು ಕೊಲ್ಲುವವನು. ग्रामार्थं ग्रामजनभक्षणार्थं हन्ति पशून् — हन (हिंसागत्योः) "णिनिः" (३-१-१३४)। 2. ಹಳ್ಳಿಯನ್ನು ಲೂಟಿ ಮಾಡುವ. "ग्रामघाती च कौन्तेय मांसस्य परिविक्रयी" भा० शान्ति०। स्त्रियाम् **–घातिनी –ಘಾತಿನೀ.**

**ग्रामघोषिन् ಗ್ರಾಮಘೋಷಿನ್** (पुं०) ಇಂದ್ರ. ग्रामे घोषोऽस्त्यस्य "इनिः" (५-२-११५)।

**ग्रामचर्या ಗ್ರಾಮಚರ್ಯಾ** (स्त्री०) ಗ್ರಾಮ್ಯಧರ್ಮ, ಮೈಥುನ, ಸ್ತ್ರೀಸಂಭೋಗ. "सर्वशो वर्जयेद् ग्रामचर्याम्" आश्व० श्रौ० सू०।

**ग्रामज ಗ್ರಾಮಜ** (वि०) 1. ಹಳ್ಳಿಯಲ್ಲಿ ಹುಟ್ಟಿದ. ग्रामे जायते — जनी (प्रादुर्भावे) "डः" (३-२-९७)। 2. ವ್ಯವಸಾಯಮಾಡಿದ ಭೂಮಿಯಲ್ಲಿ ಬೆಳೆದ ಧಾನ್ಯ.

**ग्रामजाल ಗ್ರಾಮಜಾಲ** (न०) ಹಳ್ಳಿಗಳ ಸಮೂಹ.

**ग्रामटिका ಗ್ರಾಮಟಿಕಾ** (स्त्री०) ಕ್ಷುದ್ರಗ್ರಾಮ. ಸಣ್ಣ ಹಳ್ಳಿ. "स्वर्गग्रामटिकाविलुण्ठनवृथोच्छूनैः किमेभिर्भुजैः" सा० द०।

**ग्रामणि ಗ್ರಾಮಣಿ** (पुं०) 1. ಪತಿ, ಗಂಡ. "ग्रामणेरिव तैस्तस्य सैनिकैरवरोधिताः" याद० २२-११३। 2. ಯಜಮಾನ, ಮುಖ್ಯ. "ग्रामणिः पतिमुख्ययोः"।

**ग्रामणी ಗ್ರಾಮಣೀ** (पुं०) 1. ವಿಷ್ಣು. नित्यसिद्धानां ग्रामं समाजं नयति — णीञ् (प्रापणे) "क्विप्" (३-२-६१)। "ग्रामं समाजं सूरीणां नयति ग्रामणीश्च यः" इति निरुक्तिः। "अग्रणीर्ग्रामणीः श्रीमान्" वि० स०। 2. ನಾಪಿತ, ಕ್ಷೌರಿಕ. 3. ಗ್ರಾಮಾಧಿಪತಿ, ಗ್ರಾಮದ ಯಜಮಾನ, ಹಳ್ಳಿಯವರನ್ನು ಅವರವರ ಕಾರ್ಯದಲ್ಲಿ ಸರಿಯಾಗಿ ನಡೆಸುವವನು. ग्रामं जनसमूहं नयति प्रेरयति—णीञ् (प्रापणे) "क्विप्" (३-२-६१)। (वि०) 4. ಗುಂಪಿನ ಯಜಮಾನ. (स्त्री०) 5. ವೇಶ್ಯೆ, ಸೂಳೆ. ग्रामेण ग्राम्यधर्मेण नयति कालम्। 6. ನೀಲಿ ಗಿಡ.

**ग्रामतक्ष ಗ್ರಾಮತಕ್ಷ** (पुं०) ಗ್ರಾಮದ ಅಧೀನವಲ್ಲಿರುವ ಬಡಗಿ. ಗ್ರಾಮದವರಿಗೆಲ್ಲಾ ಸಮಾನನಾದ ಮರಗೆಲಸದವನು. ग्रामस्य तक्षा "टच्" (५-४-९५)। "ग्रामाधीनो ग्रामतक्षः कौटतक्षोऽनधीनकः" अम०।

**ग्रामता ಗ್ರಾಮತಾ** (स्त्री०) ಗ್ರಾಮಗಳ ಸಮೂಹ. ग्रामाणां समूहः "तल्" (४-२-४३)।

**ग्रामधर्म ಗ್ರಾಮಧರ್ಮ** (पुं०) ಗ್ರಾಮ್ಯಧರ್ಮ, ಮೈಥುನ, ಸ್ತ್ರೀ ಸಂಭೋಗ. ग्रामे भवः "अण्" (४-३-५३)। ग्रामो धर्मः।

**ग्रामपाल ಗ್ರಾಮಪಾಲ** (पुं०) 1. ಗ್ರಾಮಾಧಿಪತಿ. 2. ಗ್ರಾಮರಕ್ಷಣೆಗಾಗಿರುವ ಸೈನ್ಯ. ग्रामं पालयति—पाल (रक्षणे) + णिच् "अण्" (३-२-१)।

**ग्रामप्रेष्य ಗ್ರಾಮಪ್ರೇಷ್ಯ** (पुं०) ಗ್ರಾಮದ ಸೇವಕ. ग्रामस्य प्रेष्यः।

**ग्रामभृत ಗ್ರಾಮಭೃತ** (पुं०) ಗ್ರಾಮದ ಜನರಿಂದ ಪೋಷಿಸಲ್ಪಟ್ಟವನು. ग्रामेण ग्रामस्थजनेन भृतः पोष्यः। "अब्राह्मणास्तु षट् प्रोक्ता ऋषिणा तत्त्ववादिना। आद्यो राजभृतस्तेषां द्वितीयः क्रयविक्रयी। तृतीयो बहुयाज्यः स्यात् चतुर्थो ग्रामयाजकः। पञ्चमस्तु भृतस्तेषां ग्रामस्य नगरस्य च। अनागतां तु य पूर्वां सादित्यां चैव पश्चिमाम्। नोपासीत द्विजः सन्ध्यां स षष्ठोऽब्राह्मणः स्मृतः" शाता०।

**ग्राममुख ಗ್ರಾಮಮುಖ** (पुं०) ಹಟ್ಟಿ, ವ್ಯಾಪಾರಸ್ಥಳ, ಅಂಗಡಿ ಬೀದಿ. ग्रामो ग्रामस्थजनो मुखमिवास्य। "हट्टक्रयारोहौ जन्यं ग्राममुखं च तत्" त्रिकाण्ड०।

**ग्राममृग ಗ್ರಾಮಮೃಗ** (पुं०) ನಾಯಿ. ग्रामस्य मृगः। स्त्रियाम् "ङीष्" (४-१-६३)। **–मृगी –ಮೃಗೀ.**

**ग्रामयाजक ಗ್ರಾಮಯಾಜಕ** (पुं०) ಗ್ರಾಮದಲ್ಲಿರುವ ಎಲ್ಲ ವರ್ಗದವರಿಗೂ ಮತಸಂಬಂಧವಾದ ವ್ರತಗಳನ್ನು ಮಾಡಿಸುವವನು, ಗ್ರಾಮ ಪುರೋಹಿತ. ग्रामस्य याजकः। "गुरौ चानृतके पापे कृतघ्ने ग्रामयाजके" भा० वन० २०३-७।

**ग्रामयाजिन् ಗ್ರಾಮಯಾಜಿನ್** (पुं०) ಗ್ರಾಮ ಪುರೋಹಿತ. ग्रामान् ग्रामस्य जनान् याजयति—यज (देवपूजायाम्) + णिच् "णिनिः" (३-१-१३४)। "नाश्रोत्रियतते यज्ञे ग्रामयाजिकृते तथा" मनु० ४-२०५।

**ग्रामलुण्ठन ಗ್ರಾಮಲುಂಠನ** (न०) ಗ್ರಾಮವನ್ನು ಲೂಟಿ ಮಾಡುವುದು.

**ग्राम(मे)वास ಗ್ರಾಮ(ಮೇ)ವಾಸ** (ಪುಂ) ಹಳ್ಳಿಯಲ್ಲಿ ವಾಸಮಾಡುವುದು. ग्रामे वासः. सप्तम्या वा अलुक् (६-३-१८)।

**ग्राम(मे)वासिन् ಗ್ರಾಮ(ಮೇ)ವಾಸಿನ್** (ವಿಂ) ಹಳ್ಳಿಯಲ್ಲಿ ವಾಸಮಾಡುವ. ग्रामे वसति – वस (निवासे) "णिनिः"(३-२-७८)। सप्तम्या वा अलुक् (६-३-१८)। "सारसैकशफान् हंसान् सर्वांश्च ग्रामवासिनः" याज्ञ० १-१७२। स्त्रियाम् "ङीप्" (४-१-५)। **–वासिनी –ವಾಸಿನೀ.**

**ग्रामविशेष ಗ್ರಾಮವಿಶೇಷ** (ಪುಂ) ಸ್ವರಸಮೂಹಗಳ ಭೇದ, ಷಡ್ಜ ಮಧ್ಯಮ ಮತ್ತು ಗಾಂಧಾರ ರೂಪವಾದ ಸ್ವರ ಸಂಘಾತಗಳ (ಷಡ್ಜಗ್ರಾಮ, ಮಧ್ಯಮಗ್ರಾಮ ಮತ್ತು ಗಾಂಧಾರ ಗ್ರಾಮಗಳ) ಭೇದ. "स्फुटीभवद्ग्रामविशेषमूर्च्छनामवेक्षमाणं महतीं मुहुर्मुहुः" माघ० १-१०।

**ग्रामषण्ड ಗ್ರಾಮಷಂಡ** (ಪುಂ) ನಪುಂಸಕ. ग्रामे ग्राम्यधर्मे षण्डः।

**ग्रामस्थ ಗ್ರಾಮಸ್ಥ** (ಪುಂ) ಹಳ್ಳಿಯವನು, ಗ್ರಾಮದಲ್ಲಿರುವವನು. ग्रामे तिष्ठति – ष्ठा (गतिनिवृत्तौ) "कः" (३-२-४)।

**ग्रामहासक ಗ್ರಾಮಹಾಸಕ** (ಪುಂ) ಸಹೋದರಿಯ ಗಂಡ.

**ग्रामाचार ಗ್ರಾಮಾಚಾರ** (ಪುಂ) ಹಳ್ಳಿಯ ಪದ್ಧತಿ, ಹಳ್ಳಿಯವರ ಸಂಪ್ರದಾಯ.

**ग्रामाधान ಗ್ರಾಮಾಧಾನ** (ನಂ) ಬೇಟೆ.

**ग्रामान्त ಗ್ರಾಮಾಂತ**(ನಂ)ಹಳ್ಳಿಯ ಸಮೀಪದ ಪ್ರದೇಶ. ग्रामस्य अन्तम्। "कृतवापनो निवसेत् ग्रामान्ते गोव्रजेऽपि वा" मनु० ११-७८।

**ग्रामान्तीय ಗ್ರಾಮಾಂತೀಯ** (ವಿಂ) ಹಳ್ಳಿಯ ಸಮೀಪ ಪ್ರದೇಶದಲ್ಲಿರುವ. ग्रामान्ते भवम् "छः"। "पथि क्षेत्रे परिवृते ग्रामान्तीयेऽथवा पुनः" मनु० ८-२४०।

**ग्रामिक ಗ್ರಾಮಿಕ** (ಪುಂ) ಗ್ರಾಮಾಧಿಪತಿ, ಹಳ್ಳಿಯ ಯಜಮಾನ. ग्रामे ग्रामरक्षणे नियुक्तः "ठक्" (४-४-६९)। "यानि राजप्रदेयानि प्रत्यहं ग्रामवासिभिः। अन्नपानेन्धनादीनि ग्रामिकस्तान्यवाप्नुयात्" मनु० ७-११८।

**ग्रामिन् ಗ್ರಾಮಿನ್** (ವಿಂ) 1. ಗ್ರಾಮಾಧಿಪತಿ, ಹಳ್ಳಿಯ ಯಜಮಾನ. ग्रामोऽस्यास्ति स्वामित्वेन "इनिः" (५-२-११५)। 2. ಹಳ್ಳಿಯಲ್ಲಿ ವಾಸಮಾಡುವ. ग्रामोऽस्याधारत्वेनास्य "इनिः"। 3. ಗ್ರಾಮ್ಯಧರ್ಮವುಳ್ಳವನು, ಸ್ತ್ರೀ ಸಂಭೋಗವುಳ್ಳವನು.

**ग्रामीण ಗ್ರಾಮೀಣ** (ಪುಂ) 1. ನಾಯಿ. 2. ಹಂದಿ. 3. ಕಾಗೆ. ग्रामे भवः "खञ्" (४-२-९४)। (ವಿಂ)4. ಹಳ್ಳಿಯಲ್ಲಿ ವಾಸಮಾಡುತ್ತಿರುವ, ಹಳ್ಳಿಯಲ್ಲಿರುವ. "ग्रामीणवध्वस्तमलक्षिता जनैश्चिरं वृतीनामुपरि व्यलोकयन्" माघ० १२-३७। (ಸ್ತ್ರೀಂ)5. ನೀಲಿಗಿಡ.

**ग्रामेयक ಗ್ರಾಮೇಯಕ** (ವಿಂ) ಹಳ್ಳಿಯಲ್ಲಿ ವಾಸಮಾಡುವ. ಹಳ್ಳಿಯಲ್ಲಿರುವ, –ಹುಟ್ಟಿದ. ग्रामे भवः जातो वा "ढकञ्" (४-२-९५)। "ग्रामेयककुलानां च समक्षं सीम्नि साक्षिणः। प्रष्टव्याः सीमलिङ्गानि तयोश्चैव विवादिनोः" मनु० ८-२५४।

**ग्रामेश ಗ್ರಾಮೇಶ** (ಪುಂ) ಗ್ರಾಮಾಧ್ಯಕ್ಷ, ಗ್ರಾಮಾಧಿಪತಿ, ಹಳ್ಳಿಯ ಯಜಮಾನ. ग्रामस्य ईशः। "यं कञ्चित् पुरुषाधमं कतिपयग्रामेशमल्पार्थदं सेवायै मृगयामहे नरमहो मूका वराका वयम्" मु० मा०।

**ग्राम्य ಗ್ರಾಮ್ಯ** (ಪುಂ) 1. ಒಂದು ಕಾವ್ಯದೋಷ. ಇದು (1) ಶಬ್ದಗತ ಮತ್ತು (2) ಅರ್ಥಗತ ಎಂದು ಎರಡು ವಿಧ. ಉದಾ: (1) "कटिस्ते हरते मनः"। (2) "स्वपिहि त्वं समीपे मे स्वपिम्येवाधुना प्रिये" सा० द०। "ग्राम्याप्रतीतसन्दिग्धनेयार्थनिहतार्थताः" सा० द० ७-२। "अपुष्टदुष्क्रमग्राम्यव्याहृताश्लीलकष्टताः" सा० द० ७-९। 2. ಮೈಥುನ, ಸ್ತ್ರೀಸಂಭೋಗ. "व्यवायो ग्राम्यधर्मो मैथुनं निधुवनं रतम्" अम०। (ವಿಂ) 3. ಹಳ್ಳಿಯಲ್ಲಿ ಹುಟ್ಟಿದವನು, ಹಳ್ಳಿಯಲ್ಲಿ ವಾಸಮಾಡುವವನು. ग्रामे भवः जातो वा "यः" (५-२-९४)। "अल्पव्ययेन सुन्दरि ग्राम्यजनो मृष्टमश्नाति" वृ० र०। 4. ಹಳ್ಳಿಯಲ್ಲಿ ಹುಟ್ಟಿದ ಪ್ರಾಕೃತಜನ, ಮೂಢ, ತಿಳವಳಿಕೆಯಿಲ್ಲದವನು. "ग्राम्यभावमपहातुमिच्छवो योगमार्गपतितेन चेतसा" माघ० १४-६४। (ನಂ) 5. ಅಶ್ಲೀಲವಾದ ಮಾತು, ಹಳ್ಳಿಯವರ ಮಾತು, ಅಸಭ್ಯವಾದ ಮಾತು. 6. ಸ್ತ್ರೀಕಾರ. 7. ಗ್ರಾಮ್ಯಧರ್ಮ, ಮೈಥುನ.

**ग्राम्यकर्कटी ಗ್ರಾಮ್ಯಕರ್ಕಟೀ** (ಸ್ತ್ರೀಂ) ಕೂಷ್ಮಾಂಡ, ಕುಂಬಳ.

**ग्राम्यकर्मन् ಗ್ರಾಮ್ಯಕರ್ಮನ್** (ನಂ) ಪ್ರಾಕೃತ ಜನರ ವ್ಯವಹಾರ, ಹಳ್ಳಿಯ ಜನರ ಕಾರ್ಯ. ಕಾಮುಕ ವ್ಯಾಪಾರ. ग्राम्यस्य प्राकृतस्य कर्म। "ग्राम्यकर्मणैव विस्मृतकालावधिः" भाग० ५-१४-३१।

**ग्राम्यकुङ्कुम ಗ್ರಾಮ್ಯಕುಂಕುಮ** (ನಂ) ಕುಸುಂಬೆ ಹೂವು.

**ग्राम्यधर्म ಗ್ರಾಮ್ಯಧರ್ಮ** (पुं०) 1. ಹಳ್ಳಿಯ ಅನಾಗರಕ ಜನರ ಕಾರ್ಯ, ಕಾಮುಕ ವ್ಯಾಪಾರ, ಮೈಥುನ. ग्राम्यस्य प्राकृतस्य धर्मः। 2. ಹಳ್ಳಿಯ ಜನರ ಉದ್ಯೋಗ. "प्रमत्तो ग्राम्यधर्मेषु मन्दात्मा पापनिश्चयः। मम पुत्रः सुदुर्बुद्धिः पृथिवीं घातयिष्यति" भा० वन० ४६-४।

**ग्राम्यधर्मिन् ಗ್ರಾಮ್ಯಧರ್ಮಿನ್** (वि०) ಕಾಮುಕ ವ್ಯಾಪಾರದಲ್ಲಿ ನಿರತನಾದ, ಮೈಥುನ ಕಾರ್ಯದಲ್ಲಿ ಆಸಕ್ತನಾದ. ग्राम्यधर्मोऽस्यास्ति "इनिः" (५-२-११५)।

**ग्राम्यपशु ಗ್ರಾಮ್ಯಪಶು** (पुं०) ಗ್ರಾಮದಲ್ಲಿ ಹುಟ್ಟಿ ಬೆಳೆಯುವ ಪ್ರಾಣಿಗಳು : (1) ದನ, (2) ಕುರಿ, (3) ಆಡು, (4) ಅಶ್ವ, (5) ಹೇಸರಗತ್ತೆ, (6) ಗರ್ದಭ ಮತ್ತು (7) ಮನುಷ್ಯ. ಇವು ಗ್ರಾಮ್ಯ ಪಶುಗಳು ಎಂದು ಪೈಠೀನಸಿ. (1) ಅಶ್ವ, (2) ಅಶ್ವತರ (ಹೇಸರಗತ್ತೆ), (3) ದನ, (4) ಗರ್ದಭ, (5) ಉಷ್ಟ್ರ (ಒಂಟೆ), (6) ಆಡು (ಮೇಕೆ), (7) ಕುರಿ ಮೊದಲಾದುವು ಗ್ರಾಮ್ಯ ಪಶುಗಳೆಂದು ಸುಶ್ರುತ ಸಂಹಿತೆ.

**ग्राम्यमद्गुरिका ಗ್ರಾಮ್ಯಮದ್ಗುರಿಕಾ** (स्त्री०) ಶೃಂಗಿಯೆಂಬ ಹೆಣ್ಣು ಮೀನು.

**ग्राम्यमृग ಗ್ರಾಮ್ಯಮೃಗ** (पुं०) ನಾಯಿ.

**ग्राम्यवल्लभा ಗ್ರಾಮ್ಯವಲ್ಲಭಾ** (स्त्री०) 1. ವೇಶ್ಯೆ, ಸೂಳೆ. 2. ಕುಂದುರುಷ್ಕವೆಂಬ ಗಂದಿಗರ ಒಂದು ವಸ್ತು.

**ग्राम्यवादिन् ಗ್ರಾಮ್ಯವಾದಿನ್** (वि०) ಹಳ್ಳಿಗರ ಮಾತನ್ನಾಡುವವನು. ग्राम्यं ग्राम्यशब्दं वदति — वद (व्यक्तायां वाचि) "णिनिः" (३-२-७८)।

**ग्राम्यसूकर ಗ್ರಾಮ್ಯಸೂಕರ** (पुं०) ಹಳ್ಳಿಯಲ್ಲಿ ಹುಟ್ಟಿದ ಹಂದಿ, ಊರಿನಲ್ಲಿ ಹುಟ್ಟಿ ಬೆಳೆದ ಹಂದಿ. ग्राम्य सूकरः।

**ग्राम्या ಗ್ರಾಮ್ಯಾ** (स्त्री०) 1. ನೀಲಿ ಗಿಡ. 2. ತುಲಸಿ ಗಿಡ. 3. ಅವರೆಗಿಡ.

**ग्राम्याश्व ಗ್ರಾಮ್ಯಾಶ್ವ**(पुं०)ಗರ್ದಭ, ಕತ್ತೆ. ग्राम्योऽश्वः। "स्मरस्मर्यश्चिरमेही ग्राम्याश्वो रेणुरूषितः" त्रिकाण्ड०। स्त्रियाम् अजा० "टाप्" (४-१-४)। पृषो०।

**ग्रावन् ಗ್ರಾವನ್** (पुं०) 1. ಕಲ್ಲು, ಬಂಡೆ. गृणाति — गृ (शब्दे) "वनिप्" (३-२-७५)। "जनस्थाने शून्ये विकलकरणैरार्यचरितैरपि ग्रावा रोदित्यपि दलति वज्रस्य हृदयम्" उ० रा० १-२८। 2. ಪರ್ವತ, ಬೆಟ್ಟ. "पृथ्वी तावत् त्रिकोणा विपिननदनदीग्रावरुद्धं तदर्द्धम्" उद्ध०। 3. ಮೇಘ, ಮೋಡ. "ग्रावा प्रस्तरे जलदे गिरौ" विश्व०। (वि०)4. ದೃಢವಾದ, ಗಟ್ಟಿಯಾದ.

**ग्रावरोहक ಗ್ರಾವರೋಹಕ** (पुं०) ಅಶ್ವಗಂಧಾವೃಕ್ಷ. ग्रावणि रोहति — रुह (बीजजन्मादौ) "ण्वुल्" (३-१-१३३)।

**ग्रास ಗ್ರಾಸ** (पुं०) 1. ಕಬಳ, ತುತ್ತು. ग्रस्यते — ग्रसु (अदने) "घञ्" (३-३-१९)। "एकैकं ग्रासमश्नीयात् त्र्यहाणि त्रीणि पूर्ववत्" मनु० ११-२१३। 2. ನುಂಗುವುದು. 3. ಸೂರ್ಯ ಚಂದ್ರರ ಗ್ರಹಣಕಾಲದಲ್ಲಿ ಸೂರ್ಯ ಚಂದ್ರರ ಬಿಂಬಗಳ ಛಾದನ. ಬಿಂಬಗಳನ್ನು ಮುಚ್ಚುವುದು. ಸೂರ್ಯಗ್ರಹಣದಲ್ಲಿ ಸೂರ್ಯನು ಛಾದ್ಯ (ಮುಚ್ಚಲ್ಪಡುವವನು). ಸೂರ್ಯಬಿಂಬವನ್ನು ಮುಚ್ಚುವ (ಮರೆಸುವ) ಚಂದ್ರನು ಛಾದಕ. ಚಂದ್ರಗ್ರಹಣದಲ್ಲಿ ಚಂದ್ರನು ಛಾದ್ಯ. ಚಂದ್ರಬಿಂಬವನ್ನು ಮುಚ್ಚುವುದು ಭೂಮಿಯ ಛಾಯೆ. ಅದು ಛಾದಕ. "छादको भास्करस्येन्दुरधःस्थो घनवद्भवेत्। भूच्छायां प्राङ्मुखश्चन्द्रो विशत्यस्य भवेदसौ सू० सि० ४-१। ಈ ರೀತಿ ಛಾದ್ಯ ಮತ್ತು ಛಾದಕರ ಸ್ಪರ್ಶವೇ **ಗ್ರಾಸವು**. "योगार्धादधिके न स्याद्विक्षेपे ग्राससम्भवः" सू० सि० ४-११।

**ग्रासशल्य ಗ್ರಾಸಶಲ್ಯ** (न०) ಕಬಳದಲ್ಲಿರುವ ಕಸಕಡ್ಡಿ ಮೊದಲಾದುವು, ಅನ್ನದ ತುತ್ತಿನಲ್ಲಿರುವ ನುಂಗಲು ಅಡ್ಡಿಮಾಡುವ ಕಡ್ಡಿ ಮುಳ್ಳು ಮೊದಲಾದುವು. ग्रासे शल्यम्।

**ग्रास्य ಗ್ರಾಸ್ಯ** (वि०) 1. ನುಂಗಲ್ಪಡುವ. 2. ನುಂಗಲು ಅರ್ಹವಾದ. 3. ನುಂಗಲು ಶಕ್ಯವಾದ. ग्रसु (अदने) कर्मणि "ण्यत्" (३-१-१२४)।

**ग्राह ಗ್ರಾಹ** (पुं०)1. ಮೊಸಳೆ. गृह्णाति—ग्रह (उपादाने) जलचरार्थे "णः" (३-१-१४३)। "ग्राहग्रस्ते गजेन्द्रे रुवति सरभसं तार्क्ष्यमारुह्य धावन्" गजेन्द्रमो०। 2. ಭಾವನೆ, ಕಲ್ಪನೆ. 3. ಆಗ್ರಹ, ನಿರ್ಬಂಧ. ग्रह भावे "घञ्" (३-३-१८)। "मूढग्राहेणात्मनो यत् पीडया क्रियते तपः। परस्योत्सादनार्थं वा तत्तामसमुदाहृतम्" गीता १७-१९। 4. ಸ್ವೀಕಾರ, ತೆಗೆದುಕೊಳ್ಳುವುದು. 5. ಗ್ರಹಣ, ಹಿಡಿದುಕೊಳ್ಳುವುದು. 6. ಕೈದಿ, ಸೆರೆಯಾಳು. (वि०) 7. ತೆಗೆದುಕೊಳ್ಳುವ, ಸ್ವೀಕರಿಸುವ. ग्रह "अण्" (३-२-१)। उपपदसमासे। "रिक्थग्राह ऋणं दाप्यो योषिद्ग्राहस्तथैव च। पुत्रोऽनन्याश्रितद्रव्यः पुत्रहीनस्य रिक्थिनः" याज्ञ० २-५१।

**ग्राहक ಗ್ರಾಹಕ** (पुं०) 1. ಶ್ಯೇನಪಕ್ಷಿ, ಗಿಡಗದ ಹಕ್ಕಿ. ग्रह (उपादाने) "ण्वुल्" (३-१-२३३)। 2. ವಿಷ

ವೈದ್ಯ. ಹಾವಾಡಿಗ. "ग्राहको घातविहगे व्यालानां च ग्रहीतरि" विश्व०। (वि०) 3. ಸ್ವೀಕರಿಸುವವನು, ತೆಗೆದುಕೊಳ್ಳುವವನು. ग्रह (उपादाने) कर्त० "ण्वुल्" (३-१-१३३)। 4. ಹಿಡಿದುಕೊಳ್ಳುವವನು. "ग्राहकै-र्गृह्यते चौरो लोप्त्रेणाथ पदेन वा" याज्ञ० २-२६६। 5. ಕೊಳ್ಳುವವನು. ಕ್ರಯಕ್ಕೆ ಪಡೆಯುವವನು. 6. ಬಂಧಿಸುವವನು. ಸೆರೆಹಿಡಿಯುವವನು. 7. ಜ್ಞಾಪಿಸುವ, ತಿಳಿಸುವ. ग्रह + णिच् "ण्वुल्" (३-१-१३३)।

**ग्राहयत् ಗ್ರಾಹಯತ್** (वि०) 1. ಸ್ವೀಕರಿಸುವಂತೆ ಮಾಡುತ್ತಿರುವ. ತೆಗೆದುಕೊಳ್ಳುವಂತೆ ಮಾಡುತ್ತಿರುವ. 2. ತಿಳಿಯುವಂತೆ ಮಾಡುತ್ತಿರುವ. ग्रह (उपादाने) + णिच् "शतृ" (३-१-१२४)। स्त्रियाम् "ङीप्" (४-१-६)। **–यन्ती –ಯಂತೀ.**

**ग्राहयितव्य ಗ್ರಾಹಯಿತವ್ಯ** (वि०) ತೆಗೆದುಕೊಳ್ಳುವಂತೆ ಮಾಡಲ್ಪಡುವ. ग्रह (उपादाने) + णिच् कर्म० "तव्य:" (३-१-९६)।

**ग्राहित ಗ್ರಾಹಿತ** (वि०) 1. ತೆಗೆದುಕೊಳ್ಳುವಂತೆ ಮಾಡಲ್ಪಟ್ಟ, ಸ್ವೀಕರಿಸುವಂತೆ ಮಾಡಲ್ಪಟ್ಟ. ग्रह (उपादाने) + णिच् "क्त:" (३-२-१०२)। 2. ತಿಳಿಯುವಂತೆ ಮಾಡಲ್ಪಟ್ಟ, ಬೋಧಿಸಲ್ಪಟ್ಟ.

**ग्राहिन् ಗ್ರಾಹಿನ್** (पुं०) 1. ಕಪಿತ್ಥವೃಕ್ಷ, ಬೇಲದ ಮರ. गृह्णाति — ग्रह (उपादने) "णिनि:" (३-१-१३४)। "अथ कपित्थे स्युर्दधित्थग्राहिमन्मथा:" अम०। (वि०) 2. "ग्राहक" ಪದದ ಅರ್ಥ. व्यालग्राही पल्लवग्राही ಇತ್ಯಾದಿ. 3. ಮಲಬಂಧವನ್ನುಂಟುಮಾಡುವ. "कषायानुरसं ग्राहि स्निग्धं मेधाबलावहम्" भावप्र०। (स्त्री०) **ग्राहिणी ಗ್ರಾಹಿಣೀ.** 4. ಪ್ರತಿಕೂಲಳಾದ ಹೆಂಗಸು. "मा स्म भूर्ग्राहिणी भीरु गन्तुमुत्साहिनी भव" भट्टि० ५-९३।

**ग्राह्य ಗ್ರಾಹ್ಯ** (वि०) 1. ತೆಗೆದುಕೊಳ್ಳಲು ಯೋಗ್ಯವಾದ, ಸ್ವೀಕರಿಸಲು ಅರ್ಹವಾದ. 2. ಹಿಡಿದುಕೊಳ್ಳಲು ಯೋಗ್ಯವಾದ. 3. ಬಂಧಿಸಲು ಅರ್ಹನಾದ. "अन्येऽपि शङ्कया ग्राह्या: जातिनामादिनिह्नवै:। द्यूतस्त्रीपानसक्ताश्च शुष्कभिन्नमुखस्वरा:" याज्ञ० २-२६८। 4. ಅಂಗೀಕರಿಸಲು ಯೋಗ್ಯವಾದ. "स्वभावेनैव यद्ब्रूयुस्तद्ग्राह्यं व्यावहारिकम्" मनु० ८-७८। 5. ತೆಗೆದುಕೊಳ್ಳಲು ಶಕ್ಯವಾದ. ग्रह (उपादाने) "ण्यत्" (३-१-१२४)। 6. ತಿಳಿದುಕೊಳ್ಳಲು ಯೋಗ್ಯವಾದ, ತಿಳಿದುಕೊಳ್ಳಬಹುದಾದ. 7. ಹಿಡಿದುಕೊಳ್ಳಲು ಶಕ್ಯವಾದ. 8. ಬಂಧಿಸಲು ಶಕ್ಯನಾದ. 9. ತೆಗೆದುಕೊಳ್ಳಲ್ಪಡುವ. 10. ಹಿಡಿದುಕೊಳ್ಳಲ್ಪಡುವ. 11. ಬಂಧಿಸಲ್ಪಡುವ. 12. ತಿಳಿಯಲ್ಪಡುವ. ಅರಿಯಲ್ಪಡುವ, ಇಂದ್ರಿಯಗಳಿಂದ ಗ್ರಹಿಸಲ್ಪಡುವ. "योऽसावतीन्द्रियग्राह्य: सूक्ष्मोऽव्यक्त: सनातन:" मनु० १-७।

**ग्रीवा ಗ್ರೀವಾ** (स्त्री०) ಕೊರಳು, ಹೆಕ್ಕತ್ತು. गिरत्यनया– गॄ (निगरणे) "वन्" (उ० १-१५२)। निपा०। "ग्रीवाभङ्गाभिरामं मुहुरनुपतति स्यन्दने बद्धदृष्टि: पश्चार्धेन प्रविष्ट: शरपतनभयाद्भूयसा पूर्वकायम्" शाकु० १-७। "ग्रीवां चास्य तथाक्राक्षीत्" भट्टि० १५-१२२।

**ग्रीविन् ಗ್ರೀವಿನ್** (पुं०) 1. ಉದ್ದವಾದ ಕತ್ತುಳ್ಳ ಒಂಟೆ. दीर्घा ग्रीवास्त्यस्य "इनि:"। (वि०) 2. ಶ್ರೇಷ್ಠವಾದ ಕತ್ತುಳ್ಳ.

**ग्रीष्म ಗ್ರೀಷ್ಮ** (पुं०) 1. ಗ್ರೀಷ್ಮಕಾಲ, ಬೇಸಿಗೆಕಾಲ, ಗ್ರೀಷ್ಮಋತು. ग्रसु (अदने) "मक्" ईत्त्वं च (उ० १-१४७)। "विहर्तुमिच्छा वनितासखस्य तस्याम्भसि ग्रीष्मसुखे बभूव" रघु० १६-५४। "अत्यासन्नतया तेन ग्रीष्मे तीव्रकरा रवे:। देवभागेऽसुराणां तु हेमन्ते मन्दताऽन्यथा" सू० सि० १२-४६। "ग्रीष्मे तीव्रकरो भानुर्न हेमन्ते तथाविध:" सू० सि० १२-८। ಗ್ರೀಷ್ಮಋತುವಿನಲ್ಲಿ ಸೂರ್ಯನು ಜಂಬೂದ್ವೀಪಕ್ಕೆ ಬಹಳ ಸಮೀಪದಲ್ಲಿ ಸಂಚರಿಸುವುದರಿಂದ ಸೂರ್ಯನ ಕಿರಣಗಳು ಬಹಳ ತೀಕ್ಷ್ಣವಾಗಿರುವುವು. 2. ಉಷ್ಣತೆ, ಕಾವು, ಶಾಖ.

**ग्रीष्मकाल ಗ್ರೀಷ್ಮಕಾಲ** (पुं०) ಗ್ರೀಷ್ಮಋತು, ಬೇಸಿಗೆಯ ಕಾಲ.

**ग्रीष्मज ಗ್ರೀಷ್ಮಜ** (वि०) 1. ಗ್ರೀಷ್ಮಋತುವಿನಲ್ಲಿ ಹುಟ್ಟಿದ. ग्रीष्मे जायते — जनी (प्रादुर्भावे) "ड:" (३-२-९७)। (स्त्री०) 2. ವೀರಜಾಜಿ ಗಿಡ. 3. ಲವಲೀಲತೆ.

**ग्रीष्मसमय ಗ್ರೀಷ್ಮಸಮಯ** (पुं०) ಗ್ರೀಷ್ಮಋತು, ಬೇಸಿಗೆಯ ಕಾಲ. "अचिरप्रवृत्तमुपभोगक्षमं ग्रीष्मसमय-मधिकृत्य गीयताम्" शाकु० १।

**ग्रैव ಗ್ರೈವ** (न०) 1. ಕಂಠಾಭರಣ. (वि०) 2. ಕತ್ತಿನಲ್ಲಿರುವ. ಕೊರಳಿನಲ್ಲಿರುವ. ग्रीवायां भव: "अण्" (४-३-५७)। 3. ಕೊರಳಿಗೆ ಕಟ್ಟುವ ಸರಪಣಿ. "नाससत् करिणां ग्रैवं त्रिपदीच्छेदिनामपि" रघु० ४-४८।

**ग्रैवेय ಗ್ರೈವೇಯ** (न०) 1. ಕಂಠಾಭರಣ. ग्रीवायां भवम् "ढञ्" (४-३-५७)। (वि०) 2. ಕುತ್ತಿಗೆಯಲ್ಲಿರುವ.

ಕತ್ತಿನ ಸಂಬಂಧವಾದ. "सरलासक्तमातङ्गग्रैवेयस्फुरित-त्विषा" रघु० ४-७५।

**ग्रैवेयक ಗ್ರೈವೇಯಕ** (न०) ಕಂಠಾಭರಣ. ग्रीवायां भवम् "ढकञ्" (४-२-९६)। "अस्माकं सखि वाससी न रुचिरे ग्रैवेयकं नोज्ज्वलम्" सा० द०।

**ग्रैष्म ಗ್ರೈಷ್ಮ** (वि०) 1. ಗ್ರೀಷ್ಮಋತು ಸಂಬಂಧವಾದ. ग्रीष्मस्येदम् "अण्" (४-३-१२०)। 2. ಗ್ರೀಷ್ಮಋತುವಿನಲ್ಲಿ ಉಂಟಾದ. ग्रीष्मे भवम् "अञ्" (४-१-८६)। 3. ಗ್ರೀಷ್ಮಋತುವಿನಲ್ಲಿ ಬಿತ್ತಲ್ಪಟ್ಟ. ग्रीष्मे उप्तम् "अण्" (४-३-४६)। स्त्रियाम् "ङीप्" (४-१-१५)। **ग्रैष्मी ಗ್ರೈಷ್ಮೀ.** (स्त्री०) 4. ವೀರಜಾಜಿಗಿಡ.

**ग्रैष्मक ಗ್ರೈಷ್ಮಕ** (वि०) 1. ಗ್ರೀಷ್ಮಋತುವಿನಲ್ಲಿ ಬಿತ್ತಲ್ಪಟ್ಟ. ग्रीष्मे उप्तम् "वुञ्" (४-३-४६)। 2. ಗ್ರೀಷ್ಮಋತುವಿನಲ್ಲಿ ಕೊಡಬೇಕಾದ (ಸಾಲ). ग्रीष्मे देयं ऋणम् "वुञ्" (४-३-४९)।

**ग्रैष्मिक ಗ್ರೈಷ್ಮಿಕ** (वि०) 1. ಗ್ರೀಷ್ಮ ಧರ್ಮವನ್ನರಿತಿರುವ. 2. ಗ್ರೀಷ್ಮ ಧರ್ಮವನ್ನು ಪ್ರತಿಪಾದಿಸುವ ಗ್ರಂಥವನ್ನು ಅಧ್ಯಯನ ಮಾಡುವ. ग्रीष्मं ग्रीष्मधर्मं वेद तत्प्रतिपादकं ग्रन्थमधीते वा "ठक्" (४-२-६३)। 3. ಗ್ರೀಷ್ಮಋತುವಿನಲ್ಲಿ ಬೆಳೆಯುವ ಧಾನ್ಯ ಮೊದಲಾದುದು. "सौम्योऽस्तोदययोः पुरो भृगुसुतस्यावस्थितस्तोयकृद्रोगान् पित्तजकामलांश्च कुरुते पुष्णाति च ग्रैष्मिकान्" बृहत्सं० ९-४३।

**ग्लपन ಗ್ಲಪನ** (न०) 1. ಒಣಗಿಸುವುದು. 2. ಬಾಡಿಸುವುದು. 3. ಆಯಾಸಗೊಳಿಸುವುದು, ದಣಿಸುವುದು. ग्लै (हर्षक्षये) + णिच् "ल्युट्" (३-३-११५)। "तद्देशबलाघवग्लपनरूक्षणविचारणकरम्" सुश्रुत०। (वि०) 4. ಒಣಗಿಸುವ. 5. ಬಾಡಿಸುವ. ग्लै + णिच् कर्तं० "ल्युः" (३-१-१३४)। 6. ಆಯಾಸಗೊಳಿಸುವ.

**ग्लपनीय ಗ್ಲಪನೀಯ** (वि०) 1. ಒಣಗಿಸಲ್ಪಡುವ. 2. ಬಾಡಿಸಲ್ಪಡುವ. 3. ದಣಿಸಲ್ಪಡುವ. 4. ಬಾಡಿಸಲು ಯೋಗ್ಯವಾದ. 5. ಬಾಡಿಸಬೇಕಾದ. ग्लै (हर्षक्षये) + णिच् "अनीयर्" (३-१-९६)। "तव्यः"। **ग्लपयितव्यः ಗ್ಲಪಯಿತವ್ಯಃ.**

**ग्लपयत् ಗ್ಲಪಯತ್** (वि०) 1. ಒಣಗಿಸುತ್ತಿರುವ, 2. ಬಾಡಿಸುತ್ತಿರುವ. 3. ಆಯಾಸಗೊಳಿಸುತ್ತಿರುವ. ग्लै (हर्षक्षये) + णिच् "शतृ" (३-२-१२४)। स्त्रियाम् "ङीप्" (४-१-६)। **-यन्ती -ಯಂತೀ.** "मृणालिका-पेलवमेवमादिभिर्व्रतैः स्वमङ्गं ग्लपयन्त्यहर्निशम्" कुमा० ५-२९।

**ग्लपित ಗ್ಲಪಿತ** (न०) 1. ಬಾಡಿಸುವುದು. 2. ಒಣಗಿಸುವುದು. 3. ಆಯಾಸಗೊಳಿಸುವುದು. ग्लै (हर्षक्षये) + णिच् भावे "क्तः" (३-३-११४)। (वि०) 4. ಬಾಡಿಸಲ್ಪಟ್ಟ. 5. ಒಣಗಿಸಲ್ಪಟ್ಟ. 6. ಆಯಾಸಗೊಳಿಸಲ್ಪಟ್ಟ. ग्लै + णिच् कर्म० "क्तः" (३-२-१०२)। "रविकर-ग्लपितैरिव वारिभिः" किरा० १४-६४।

**ग्लपितवत् ಗ್ಲಪಿತವತ್** (वि०) 1. ಬಾಡಿಸಿದವನು. 2. ಒಣಗಿಸಿದವನು. 3. ದಣಿಸಿದವನು. ग्लै (हर्षक्षये) + णिच् "क्तवतुः" (३-२-१०२)। स्त्रियाम् "ङीप्" (५-१-६)। **-वती -ವತೀ.**

**ग्लसु – अदने** (भ्वा० आत्म० सक० से०)। ग्लसते। जग्लसे। ग्लसिता। ಇತ್ಯಾದಿ. ग्रसु ಧಾತುವಿನ ರೂಪಗಳಂತೆ ಆಗುವುವು.

**ग्लसन ಗ್ಲಸನ** (न०) ತಿನ್ನುವುದು. ग्लसु (अदने) भावे "ल्युट्" (३-३-११५)।

**ग्लस्त ಗ್ಲಸ್ತ** (वि०) ತಿನ್ನಲ್ಪಟ್ಟ, ಭಕ್ಷಿಸಲ್ಪಟ್ಟ. ग्लसु (अदने) कर्म० "क्तः" (३-२-१०२)।

**ग्लह ಗ್ಲಹ** (पुं०) ಆಟದಲ್ಲಿ ಪಂದ್ಯವಾಗಿ ಇಡಲ್ಪಡುವ ವಸ್ತು. ग्रह (उपादाने) "अप्" (३-३-५८)। लत्वं निपात्यते (३-३-७०)। "ताः कान्तैः सह करपुष्करे-रिताम्बुव्यात्युक्षीमभिसरणग्लहामदीव्यन्" माघ० ८-३२।

**ग्लान ಗ್ಲಾನ** (न०) 1. ಒಣಗುವುದು. 2. ಬಾಡುವುದು, 3. ದಣಿಯುವುದು. ग्लै (हर्षक्षये) भावे "क्तः" (३-३-११४)। 3. ಆಯಾಸ, ದಣಿವು, ಬಳಲಿಕೆ. "बुद्ध्वा पुंप्रकृतिं च यानुचरति ग्लानेतरैश्चेष्टितैः" बृहत्सं० ७८-१२। 4. ರೋಗ, ವ್ಯಾಧಿ. (वि०) 5. ರೋಗದಿಂದ ಕೂಡಿದ. 6. ದಣಿದಿರುವ, ಆಯಾಸಗೊಂಡ.

**ग्लानि ಗ್ಲಾನಿ** (स्त्री०) 1. ಆಯಾಸ, ದಣಿವು, ಬಳಲಿಕೆ. "ग्लानिच्छेदि क्षुत्प्रबोधाय पीत्वा रक्तारिष्टं शोषिताजीर्णशेषम्" माघ० १८-७७। 2. ರೋಗಾದಿಗಳಿಂದ ಉಂಟಾದ ದೌರ್ಬಲ್ಯ, ಶರೀರದ ಕ್ಷೀಣತೆ. ग्लै (हर्षक्षये) "निः" (उ० ४-५१)। 3. ಮನೋದೌರ್ಬಲ್ಯ, ಕೆಲಸದಲ್ಲಿ ಉತ್ಸಾಹವಿಲ್ಲದಿರುವಿಕೆ, ಚಟುವಟಿಕೆಯಿಲ್ಲದಿರುವಿಕೆ. "स्वकर्मभ्यो निवर्तन्ते मनश्च ग्लानिमृच्छति" मनु० १-५३। 4. ಒಂದು ವ್ಯಭಿಚಾರಿಭಾವ. "रत्यायास-

मनस्तापक्षुत्पिपासादिसम्भवा। ग्लानिर्निष्प्राणताकम्पकार्यानुत्साहतादिकृत्" सा० द० ३-१७०। "अङ्गग्लानि सुरतजनितां तन्तुजालावलम्बाः" मेघ० २-७। 5. ಕ್ಷಯ. ನಾಶ, ಅಳಿವು. "यदा यदा हि धर्मस्य ग्लानिर्भवति भारत" गीता ४-७।

**ग्लापन ಗ್ಲಾಪನ**(न०) 1. ದಣಿಸುವುದು. ಆಯಾಸಗೊಳಿಸುವುದು. ग्लै (हर्षक्षये) + णिच् "ल्युट्" (३-३-११५)। 2. ಒಣಗಿಸುವುದು. 3. ಬಾಡಿಸುವುದು. 4. ದುರ್ಬಲಗೊಳಿಸುವುದು. (वि०) 5. ಆಯಾಸಗೊಳಿಸುವ. 6. ಒಣಗಿಸುವ. 7. ಬಾಡಿಸುವ. 8. ದುರ್ಬಲಗೊಳಿಸುವ. ग्लै + णिच् कर्त० "ल्युः" (३-१-१३४)।

**ग्लापनीय ಗ್ಲಾಪನೀಯ** (वि०) "ग्लपनीय" ಪದದ ಅರ್ಥ. ग्लै (हर्षक्षये) + णिच् "अनीयर्" (३-१-९६)। "तव्यः"। **ग्लापयितव्यः ಗ್ಲಾಪಯಿತವ್ಯಃ.**

**ग्लापयत् ಗ್ಲಾಪಯತ್** (वि०) 1. ಆಯಾಸಗೊಳಿಸುತ್ತಿರುವ. ग्लै (हर्षक्षये) + णिच् "शतृ" (३-२-१२४)। 2. ಒಣಗಿಸುತ್ತಿರುವ. 3. ಬಾಡಿಸುತ್ತಿರುವ. स्त्रियाम् "ङीप्" (४-१-६)। **-यन्ती -ಯಂತೀ.**

**ग्लापित ಗ್ಲಾಪಿತ** (वि०) "ग्लपित" ಪದದ ಅರ್ಥ. ग्लै (हर्षक्षये) + णिच् "क्तः" (३-२-१०२)।

**ग्लापितवत् ಗ್ಲಾಪಿತವತ್** (वि०) "ग्लपितवत्" ಪದದ ಅರ್ಥ. ग्लै (हर्षक्षये) + णिच् "क्तवतुः" (३-२-१०२)। स्त्रियाम् "ङीप्" (४-१-६)। **-वती -ವತೀ.**

**ग्लायत् ಗ್ಲಾಯತ್** (वि०) 1. ಆಯಾಸಪಡುತ್ತಿರುವ. 2. ಒಣಗುತ್ತಿರುವ. 3. ಬಾಡುತ್ತಿರುವ. ग्लै (हर्षक्षये) "शतृ" (३-२-१२४)। स्त्रियाम् "ङीप्" (४-१-६)। **ग्लायन्ती ಗ್ಲಾಯಂತೀ.**

**ग्लास्नु ಗ್ಲಾಸ್ನು** (वि०) ರೋಗದಿಂದ ದುರ್ಬಲನಾದ, ರೋಗದಿಂದ ಕ್ಷೀಣನಾದ. ग्लै (हर्षक्षये) "क्स्नुः" (३-२-१३९)। "वसन् माल्यवति ग्लास्नुः रामो धृष्णुरधृष्णुवत्" भट्टि० ७-४।

**ग्लै – हर्षक्षये** (भ्वा० पर० अक० अनि०)। ग्लायति। जग्लौ। ग्लाता। ग्लास्यति। ग्लायतु। अग्लायत्। ಇತ್ಯಾದಿ. 1. ಗ್ಲಾನಿಹೊಂದು, ಕಳೆಗುಂದು. "जग्लौ दध्यौ वितस्तान क्षणं प्राण न विव्यथे" भट्टि० १४-६०। 2. ದಣಿ, ಆಯಾಸಪಡು. 3. ದುರ್ಬಲನಾಗು. ಕಳೆಗುಂದು. 4. ಬಾಡು. 5. ಒಣಗು.

**भावे :**—ग्लायते। जग्ले। ग्लायिता, ग्लाता। ग्लायिष्यते, ग्लास्यते। ग्लायताम्। ಇತ್ಯಾದಿ.

**णिचि :**—ग्लपयति, –ते, ग्लापयति, –ते। ग्लपयां चकार, –चक्रे, –बभूव, –आस, ग्लापयां चकार, –चक्रे, –बभूव, –आस। ग्लपयिता, ग्लापयिता। ग्लपयिष्यति, –ते। ग्लापयिष्यति, –ते। ग्लपयतु, –ताम्। ग्लापयतु, –ताम्। अग्लपयत्, –त, अग्लापयत्, –त। ಇತ್ಯಾದಿ. "ग्लपयति यथा शशाङ्कं न तथा हि कुमुद्वतीं दिवसः" शाकु० ३-१४।

**केवलात् कृत्सु :**—ग्लातव्यम्। ग्लानीयम्। ग्लेयम्। ग्लानः। ग्लायन्, ग्लायन्ती। ग्लातुम्। ग्लानम्। ग्लात्वा। प्रग्लाय।

**ण्यन्तात् कृत्सु :**—ग्लपयितव्यम्, ग्लापयितव्यम्। ग्लपनीयम्, ग्लापनीयम्। ग्लप्यः, ग्लाप्यः। ग्लपितः, ग्लपितवान्, ग्लापितः, ग्लापितवान्, ग्लपितवती, ग्लापितवती। ग्लपयन्, ग्लापयन्, ग्लपयन्ती, ग्लापयन्ती। ग्लपयितुम्, ग्लापयितुम्। ग्लपितम्, ग्लापितम्। ग्लपनम्, ग्लापनम्। ग्लपयित्वा, ग्लापयित्वा। प्रग्लप्य, प्रग्लाप्य।

**ग्लौ ಗ್ಲೌ** (पुं०) 1. ಚಂದ್ರ. ग्लै (हर्षक्षये) "डौः" (उ० २-६५)। 2. ಕರ್ಪೂರ. 3. ಧರಿತ್ರಿ, ಭೂಮಿ. "ग्लौर्धरण्यां निशापतौ" मेदि०।

इति "ग" काराविपदार्थनिरूपणम्।

272-63. ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೆಕ್ರೆಟರಿಗಳಾದ ಎಂ. ಎಸ್. ನಾರಾಯಣಮೂರ್ತಿಗಳವರು ಮುದ್ರಿಸಿರುವರು.

श्रीः

# शब्दार्थकौस्तुभः

## (प्रायौगिक संस्कृत-कर्णाटक शब्दकोशः)

# ಸಂಸ್ಕೃತ-ಕನ್ನಡ ಶಬ್ದಕೋಶ

ಸಂಪುಟ ೩

ಪದಗಳು : घ-नमस्कर्तृ

ಸಾಹಿತ್ಯ ವಿದ್ವಾನ್

ಚಕ್ರವರ್ತಿ ಶ್ರೀನಿವಾಸ ಗೋಪಾಲಾಚಾರ್ಯ

ಬಾಪ್ಕೊ ಪ್ರಕಾಶನ

ಬೆಂಗಳೂರು ಪ್ರೆಸ್, ಬೆಂಗಳೂರು

॥ श्रीः ॥

श्रीमते हयग्रीवाय नमः।

# शब्दार्थकौस्तुभः।

## (संस्कृत-कर्णाटक शब्दकोशः)

## ಸಂಸ್ಕೃತ-ಕನ್ನಡ ಶಬ್ದಕೋಶ

### ತೃತೀಯ ಭಾಗ

लक्ष्मीं तनोतु व्यवधूय चित्ते वितर्कडोलां विविधार्थराशेः।
लक्ष्मीहयास्यः स्फुरिताक्षमालो लक्ष्मीलसद्वत्सतलः सदा नः॥

नत्वा लक्ष्मीहयग्रीवौ शब्दव्युत्पत्तिसिद्धये।
शब्दार्थकौस्तुभस्यास्य तृतीयं भागमारभे॥

---

# घ

**घ ಘ** ಇದು ವ್ಯಂಜನಾಕ್ಷರಗಳಲ್ಲಿ ಕವರ್ಗದ ನಾಲ್ಕನೆಯ ಮತ್ತು ಕಂಠದಲ್ಲಿ ಅಭ್ಯಂತರಸ್ಪೃಷ್ಟಪ್ರಯತ್ನದಿಂದ ಹುಟ್ಟುವ ಅಕ್ಷರ. "कादयो मावसानाः स्पर्शाः"। "स्पृष्टं प्रयतनं स्पर्शानाम्" सि० कौ०।

**घ ಘ** (पुं०) 1. ಗಂಟೆ. 2. ಗಲಗಲ ಶಬ್ದ. घट(चेष्टायाम्) "डः" बाहु०। (स्त्री०) **घा ಘಾ**. 3. ಗಲಗಲ ಶಬ್ದ ಮಾಡುವ ಆಭರಣ, ಗೆಜ್ಜೆಯ ಒಡ್ಯಾಣ. 4. ಏಟು, ಪೆಟ್ಟು, ಹೊಡೆತ. "घो घर्घरे च घण्टायां काञ्चिका-घातयोरपि" मेदि०।

**घकार ಘಕಾರ** (पुं०) ಘವರ್ಣ, ಘ ಎಂಬ ಅಕ್ಷರ.

**घट – चेष्टायाम्** (भ्वा० आत्म० अक० से०)। घटते। जघटे। घटिता। घटिष्यते। घटताम्। अघटत। घटेत। ಇತ್ಯಾದಿ. 1. ಕೆಲಸಮಾಡು, ಕಾರ್ಯದಲ್ಲಿ ನಿರತನಾಗು. "घटेत सन्ध्यादिषु यो गुणेषु लक्ष्मीर्न तं मुञ्चति चञ्चलापि" भट्टि० १२-२६। 2. ಸೇರು, ಸಂಬಂಧ ಹೊಂದು. "अस्मिन् समाजे बहुषु भ्रमन्त्री भैमी किलास्मासु घटिष्यतेऽसौ" नैष० १०-४७।

**भावे** :—घटघते। घटघताम्। अघटघत। घटघेत। अघाटि। ಉಳಿದುವು ಕರ್ತೃ ರೂಪಗಳಂತಾಗುವುವು.

**णिचि** :— घटादयो मितः। "मितां ह्रस्वः" (६-४-९२)। घटयति, –ते। घटयां चकार, –चक्रे, –बभूव, –आस। घटयिता। घटयिष्यति, –ते। घटयतु, –ताम्। ಇತ್ಯಾದಿ.

**कृत्सु** :—घटितव्यम्। घटनीयम्। घाटयम्। घटितः। घटितवान्। घटमानः। घटितुम्। घटितम्। घटनम्। घटित्वा। प्रघटय।

**ಈ ಧಾತುವಿಗೆ ಉಪಸರ್ಗಗಳ ಯೋಗದಿಂದ ಉಂಟಾಗುವ ಅರ್ಥಭೇದಗಳು :**

(1) उद्+घट = उद्घटते। उद्घटितम्। ಆವರಣವನ್ನು ತೆಗೆ, ಮುಚ್ಚಳವನ್ನು ತೆಗೆ, ಬಿಚ್ಚು. "वर्गाविभौ देवमहीधराणां द्वारे पुरस्योद्घटितापिधाने" कुमा० ७-५३।

(2) प्र + घट = प्रघटते। प्रजघटे। ಪ್ರಾರಂಭಿಸು, ಉಪಕ್ರಮಿಸು. "ततः प्रजघटे युद्धं शस्त्राण्यासुः परस्परम्" भट्टि० १४-७७।

(3) वि+घट=विजघटे। विघटनम्। ಬೇರೆಯಾಗು. "ततो विजघटे शैलैर्व्येलं पुप्लुवेऽम्बुभिः" भट्टि० १४-६६। वि + घट + णिच् = विघटयति। ಬೇರ್ಪಡಿಸು, ಭೇದಿಸು. "त्रिष्णुरथदण्डकोऽसौ विघटयति विपक्षवाहिनीव्यूहम्" गरु० दं०।

(4) सम् + घट = संघटते। ಒಟ್ಟಿಗೆ ಸೇರು.

**घट – संघाते** (चुरा० उभ० सक० से०)। घाटयति, -ते। घाटयांचकार, -चक्रे, -बभूव, -आस। घाटयिता। घाटयिष्यति, -ते। घाटयतु, -ताम्। ಇತ್ಯಾದಿ. ಒಟ್ಟಿಗೆ ಸೇರಿಸು, ಒಟ್ಟುಗೂಡಿಸು.

**घट ಘಟ** (पुं०) 1. ಕೊಡ, ಬಿಂದಿಗೆ. घटते—घट (चेष्टायाम्) "अच्" (३-१-१३४)। "पयसा परिपूरितौ घटौ परिपश्यन् पथि पाकशासनिः" चं० भा०। 2. ಮನೆಗೆ ಆಧಾರವಾದ ಸ್ತಂಭದ (ಕಂಬದ) ಒಂದು ಭಾಗ. "स्तम्भं विभज्य नवधा वहनं भागो घटोऽस्य भागोऽन्यः। पद्मं तथोत्तरोष्ठं कुर्याद्भागेन भागेन" बृहत्सं० ५३-२९। 3. ಆನೆಯ ಕುಂಭಸ್ಥಳ. 4. (ಯೋಗಶಾಸ್ತ್ರದಲ್ಲಿ) ಸಮಾಧಿಯ ಒಂದು ಭೇದ. "घटस्त्विभशिरःकूटे समाधिकुम्भयोः" हेम०। 5. ಇಪ್ಪತ್ತು ದ್ರೋಣಗಳ ಅಳತೆ. [ಎರಡು ಕೋಗಗಳು – ಒಂದು ದ್ರೋಣ]. 6. ಕುಂಭ ರಾಶಿ. "कुम्भो घटो जलधरः हृद्रोग इति कीर्तितः"। "सिंहे वा यदि गोघटे गतनरः सर्वार्थसिद्धिं लभेत्" समयप्र०। 7. ಕುಂಭಕವೆಂಬ ಪ್ರಾಣಾಯಾಮ.

**घटक ಘಟಕ** (वि०) 1. ಸಣ್ಣ ಕೊಡ, ಚಿಕ್ಕ ಬಿಂದಿಗೆ. घट अल्पार्थे "कन्" (५-३-८५)। "घटकैरिव कर्मपाशनद्धैः स्थिरकालात्मकचक्रयन्त्रनिघ्नैः" याद० १५-२२। 2. ಪರಸ್ಪರ ಸಂಬಂಧವನ್ನು ಕಲ್ಪಿಸುವವನು. घटयति-घट (चेष्टायाम्) "ण्वुल्" (३-१-१३३)। ವಿವಾಹಕ್ಕಾಗಿ ವಧೂವರರನ್ನು ಹೊಂದಿಸಿಕೊಡುವುದು, ವ್ಯವಹಾರಗಳಲ್ಲಿ ಮನುಷ್ಯರನ್ನು ಪರಸ್ಪರ ಹೊಂದಾಣಿಕೆಯ ಮಾತಿನಿಂದ ಸೇರಿಸುವುದು, ಇತರರಿಗಾಗಿ ಶ್ರಮಪಟ್ಟು ಕಾರ್ಯಮಾಡಿ ಕೊಡುವುದು, ಪರಸ್ಪರ ಅನುರೂಪವಾದ ವಸ್ತುಗಳನ್ನು ಸೇರಿಸುವುದು ಮುಂತಾದ ಕಾರ್ಯಗಳನ್ನು ಮಾಡುವವನು ಘಟಕನು. "एते सत्पुरुषाः परार्थघटकाः स्वार्थान् परित्यज्य ये" भर्तृ० २-६४। 3. ತನ್ನೊಳಗೆ ಇನ್ನೊಂದನ್ನು ಸೇರಿಸಿಕೊಳ್ಳುವ.

**घटकर्पर ಘಟಕರ್ಪರ** (पुं०) 1. ವಿಕ್ರಮಾದಿತ್ಯನ ಆಸ್ಥಾನದಲ್ಲಿದ್ದ ನವಮಣಿಗಳಲ್ಲಿ ಒಬ್ಬ ಕವಿ. "धन्वन्तरिक्षपणकामरसिंहशङ्कुवेतालभट्टघटकर्परकालिदासाः" ज्योतिर्वि०। 2. ಮಡಕೆಯ ಅರ್ಧಭಾಗ, ಕಪಾಲ.

**घटकार ಘಟಕಾರ** (पुं०) ಮಡಕೆಯನ್ನು ತಯಾರಿಸುವವನು, ಕುಂಬಾರ. घटं करोति–डु कृञ् (करणे) "अण्" (३-२-१)।

**घटकारक ಘಟಕಾರಕ** (पुं०) ಕುಂಬಾರ, ಮಡಕೆಯನ್ನು ತಯಾರಿಸುವವನು. घटस्य कारकः।

**घटकृत् ಘಟಕೃತ್** (पुं०) ಕುಂಬಾರ, ಮಡಕೆಯನ್ನು ತಯಾರಿಸುವವನು घटं करोति—डु कृञ् (करणे) "क्विप्" (३-२-७६)।

**घटग्रह ಘಟಗ್ರಹ** (पुं०) ಮಡಕೆಯನ್ನು ಹಿಡಿದುಕೊಂಡಿರುವವನು. घटं गृह्णाति—ग्रह (उपादाने) अनुद्यमनार्थे "अच्" (वा० ३-२-९)। उद्यमनार्थे तु "अण्" (३-२-१)। घटग्राहः ಘಟಗ್ರಾಹಃ.

**घटज ಘಟಜ** (पुं०) ಘಟದಿಂದ ಹುಟ್ಟಿದ ಅಗಸ್ತ್ಯಮಹರ್ಷಿ. घटात् जायते—जनी (प्रादुर्भावे) "डः" (३-२-९८)।

**घटदासी ಘಟದಾಸೀ** (स्त्री०) ಕುಟ್ಟಣಿ, ನಾಯಿಕಾ ನಾಯಿಕೆಯರನ್ನು ಕೂಡಿಸುವವನು. घटयति नायिकानायकौ परस्परं योजयति — घट (चेष्टायाम्) + णिच् "अच्" (३-१-१३४)। घटा दासीव। "अथ कुट्टनी। इज्या स्याद्रततालो च घटदासी गणेरुका" त्रिकाण्ड०।

**घटन ಘಟನ** (न०) 1. ಸೇರಿಸುವಿಕೆ, ಒಟ್ಟುಗೂಡಿಸುವಿಕೆ, ಪರಸ್ಪರ ಸಂಬಂಧ ಕಲ್ಪಿಸುವಿಕೆ. घट (चेष्टायाम्) + णिच् "ल्युट्" (३-३-११५)। 2. ಕಾರ್ಯವು ಸಂಭವಿಸುವುದು.

**घटना ಘಟನಾ** (स्त्री०) 1. ಸೇರಿಸುವಿಕೆ, ಒಟ್ಟುಗೂಡಿಸುವಿಕೆ. घट (संघाते) + णिच् "युच्" (३-३-१०७)। 2. ಆನೆಗಳ ಗುಂಪು. 3 ನಡತೆ, ಚರ್ಯೆ, ಇರುವ ರೀತಿ. "दैवज्ञेन शुभाशुभं दिगुदितस्थानाहृतानीक्षता वाच्यं वक्तृनिजापराङ्गघटनां चालोक्य कालं धिया" बृहत्सं० ५१-१। 4. ಪರಸ್ಪರ ಸೇರುವುದು, ಒಬ್ಬನನ್ನೊಬ್ಬನು ಸಂಧಿಸುವುದು, ಪರಸ್ಪರ ಕೂಡುವುದು. "दौर्भाग्यं भ्रूयुगोत्थाः प्रियजनघटनामाशु दुःशीलतां च" बृहत्सं० ५२-२। 5. (ಕಾವ್ಯಗಳಲ್ಲಿ) ಪದಗಳ ಜೋಡಣೆ. "तथा समासो बहुलो घटनौद्धत्यशालिनी" सा० द० ८-७। 6. ರಾಶಿಹಾಕುವುದು, ಗುಪ್ಪೆಹಾಕುವುದು. 7. ಕಾರ್ಯವು ಸಂಭವಿಸುವುದು.

**घटपर्यसन ಘಟಪರ್ಯಸನ** (न०) ಪತಿತನಾದ ಬ್ರಾಹ್ಮಣನು ಪ್ರಾಯಶ್ಚಿತ್ತಮಾಡಿಕೊಳ್ಳಲು ಹಿಂಜರಿದರೆ ಸಮಾಜ

ದಿಂದ ಬಹಿಷ್ಕರಿಸಲು ಅವನು ಜೀವಿಸಿರುವಾಗಲೇ ಮಾಡುವ ಘಟಶ್ರಾದ್ಧ.

**घटप्रक्षेप ಘಟಪ್ರಕ್ಷೇಪ** (ಪುಂ) ಪ್ರಾಯಶ್ಚಿತ್ತ ನಡೆದ ಬಳಿಕ ಪುಣ್ಯತೀರ್ಥಸ್ನಾನಮಾಡಿ ಬಂದು ಬಂಧುಗಳ ಮುಂದೆ ಆ ತೀರ್ಥದಿಂದ ತುಂಬಿದ ಬಿಂದಿಗೆಯನ್ನು ಎಸೆಯುವುದು. घटस्य प्रक्षेपः।

**घटमान ಘಟಮಾನ** (वि०) ಸಂಭವಿಸುತ್ತಿರುವ, ಆಗುತ್ತಿರುವ. घट (चेष्टायाम्) "शानच्" (३-२-१२४)।

**घटसम्भव ಘಟಸಂಭವ** (ಪುಂ) ಅಗಸ್ತ್ಯಮಹರ್ಷಿ. घटः सम्भवोऽस्य।

**घटा ಘಟಾ** (स्त्री०) 1. ಗುಂಪು, ಸಮೂಹ. "यदगारघटाट्टकुट्टिमस्रवदिन्दूपलतुन्दिलापया" नैष० २-८९। 2. ಯುದ್ಧದಲ್ಲಿ ಒಂದು ಕಡೆ ಸೇರುವ ಆನೆಗಳ ಗುಂಪು. घट (संघाते) "अङ्" (३-३-१०४)। "तदीयमातङ्गघटाविघट्टितैः कटस्थलप्रोषितदानवारिभिः" माघ० १-६४। 3. ಸಭೆ, ಜನರು ಒಟ್ಟುಸೇರುವುದು. 4. ಘಟನೆ, ಕಾರ್ಯವು ಸಂಭವಿಸುವುದು. 5. ಗೋಷ್ಠಿ, ಪರಸ್ಪರ ಮಾತುಕತೆ ನಡೆಸುವುದು, ಸಂಲಾಪ. "घटा घटनगोष्ठीभघटनासु च योषिति" मेदि०। 6. ಆನೆಗಳನ್ನು ಅಲಂಕರಿಸುವುದು. "कल्पना सज्जना घटा" वैज०।

**घटिक ಘಟಿಕ** (ಪುಂ) 1. ಘಟದಿಂದ ಹೊಳೆಯನ್ನು ದಾಟುವವನು, ಘಟದ ಆಸರೆಯಿಂದ ನದಿಯನ್ನು ದಾಟುವವನು. घटेन तरति—घट "ष्ठन्" (४-४-७)। 2. ಕಾಲವನ್ನು ತಿಳಿಸಲು ರಂಧ್ರಮಾಡಿರುವ ಘಟವನ್ನು ಬಾರಿಸುವವನು. घटीं कायति वादयति — कै (शब्दे) "कः" (३-२-४)।

**घटिका ಘಟಿಕಾ** (स्त्री०) 1. ಸಣ್ಣ ಮಡಕೆ, ಚಿಕ್ಕ ಗಡಿಗೆ. अल्पो घटः "कन्" (५-३-८५)। "एष क्रीडति कूपयन्त्रघटिकान्यायप्रसक्तो विधिः" मृच्छ० १०-५९। 2. ಕಾಲದ ಒಂದು ಪ್ರಮಾಣ, ಒಂದು ಕಾಲಮಾನ, ಇಪ್ಪತ್ತನಾಲ್ಕು ನಿಮಿಷಗಳ ಕಾಲ. "चतस्रो घटिकाः प्रातररुणोदय उच्यते। यतीनां स्नानकालोऽयं गङ्गाम्भःसदृशः स्मृतः"। "व्रतोपवासस्नानादौ घटिकैका यदा भवेत्। उदये सा तिथिर्ग्राह्या श्राद्धादावस्तगामिनी" वि० ध०। 3. ಆನೆಯನ್ನು ಹಿಡಿಯುವ ಹಳ್ಳ, ಆನೆಯನ್ನು ಕೆಡವಲು ಮಾಡಿರುವ ಮುಚ್ಚಿದ ಗುಂಡಿ, —ಕಣ್ಣಿಗೆ ಕಾಣದಂತೆ ಮೇಲೆ ಮುಚ್ಚಿರುವ ಹಳ್ಳ. 4. ಆನೆಯನ್ನು ಕಟ್ಟುವ ಹಗ್ಗ ಅಥವಾ ಸರಪಣಿ. "वार्यां काले च घटिका" नानार्थर०। 5. ನಿತಂಬಪ್ರದೇಶ.

**घटिकायन्त्र ಘಟಿಕಾಯಂತ್ರ** (न०) ಕಾಲಮಾನವನ್ನು ತೋರಿಸುವ ಯಂತ್ರ, ಗಡಿಯಾರ.

**घटित ಘಟಿತ** (वि०) 1. ಸಂಭವಿಸಿದ, ಉಂಟಾದ. घट (चेष्टायाम्) कर्त० "क्त" (३-४-७२)। 2. ರಚಿಸಲ್ಪಟ್ಟ. 3. (ಚಿನ್ನ ಬೆಳ್ಳಿ ಮೊದಲಾದುವುಗಳ ಕಟ್ಟಡದಲ್ಲಿ) ಇಡಲ್ಪಟ್ಟ (ರತ್ನ ಮುಂತಾದುದು). 4. ಅನೇಕ ವಿಷಯಗಳ ಮಧ್ಯದಲ್ಲಿ ಸೇರಿಸಲ್ಪಟ್ಟ. घट + णिच् कर्म० "क्तः" (३-२-१०२)।

**घटितवत् ಘಟಿತವತ್** (वि०) 1. ಸೇರಿಸಿದವನು. 2. ಚಿನ್ನ ಬೆಳ್ಳಿ ಮೊದಲಾದುವುಗಳ ಕಟ್ಟಡದಲ್ಲಿ ರತ್ನ ಮೊದಲಾದುವನ್ನು ಇಟ್ಟವನು. घट (चेष्टायाम्) "क्तवतुः" (३-२-१०२)।

**घटिन् ಘಟಿನ್** (ಪುಂ) 1. ಕುಂಭರಾಶಿ. घटः तदाकारोऽस्त्यस्य "इनिः" (५-२-११५)। "मत्स्यौ घटी नृमिथुनं सगदे सवीणम्"। (वि०) 2. ಘಟವನ್ನು ಹೊಂದಿರುವ, ಗಡಿಗೆಯನ್ನು ಹಿಡಿದಿರುವ. स्त्रियाम् "ङीप्" (४-१-५)। घटिनी ಘಟಿನೀ.

**घटिन्धम ಘಟಿಂಧಮ** (वि०) ಬಾಯಿಯ ಗಾಳಿಯಿಂದ ಘಟವನ್ನು ಊದುವವನು, ರಂಧ್ರವಿರುವ ಘಟವನ್ನು ಊದಿ ಶಬ್ದಮಾಡುವವನು. घटीं धमति — ध्मा (शब्दाग्निसंयोगयोः) "खश्" (३-२-३०)। पूर्वस्य ह्रस्वः (६-३-६६)।

**घटिन्धय ಘಟಿಂಧಯ** (वि०) ಒಂದು ಗಡಿಗೆಯ ತುಂಬ ಕುಡಿಯುವವನು. घटीं धयति—धेट् (पाने) "खश्" (३-२-३०)। ह्रस्वः (६-३-६६)।

**घटी ಘಟೀ** (स्त्री०) 1. ಒಂದು ಘಳಿಗೆ, ಇಪ್ಪತ್ತನಾಲ್ಕು ನಿಮಿಷಗಳ ಕಾಲ. घटः कालमानज्ञापकः सरन्ध्रः कुम्भोऽस्त्यस्याम् "अच्" (५-२-१२७)। गौरा० "ङीष्" (४-१-४१)। 2. ಸಣ್ಣ ಗಡಿಗೆ, ಚಿಕ್ಕ ಮಡಕೆ, ಸಣ್ಣ ಬಿಂದಿಗೆ. "(ताम्रघटीं गृहीत्वा)—भगवन्, पादशौचं विधीयताम्" प्रबोध० २। 3. ಕಾಲವನ್ನು ಅಳೆಯಲು ಉಪಯೋಗಿಸುತ್ತಿದ್ದ ರಂಧ್ರಮಾಡಿದ ಮಡಕೆ.

**घटीकार ಘಟೀಕಾರ** (ಪುಂ) ಕುಲಾಲ, ಕುಂಬಾರ. घटीं करोति — डु कृञ् (करणे) "अण्" (३-२-१)।

**घटीग्रह ಘಟೀಗ್ರಹ** (ಪುಂ) ನೀರಿನ ಬಿಂದಿಗೆಯನ್ನು ಹಿಡಿದಿರುವ. घटीं गृह्णाति — ग्रह (उपादाने) अनुद्यमनार्थे "अच्" (वा० ३-२-९)। उद्यमनार्थे तु "अण्" (३-२-१)। -ग्राहः -ಗ್ರಾಹಃ.

**घटीचेटी ಘಟೀಚೇಟೀ** (स्त्री०) ನೀರನ್ನು ಹೊತ್ತು ತರುವ ದಾಸಿ. "घटीचेटी नोऽभूद्गृहपतिवधूटी द्रपदजा" चं० भा०।

**घटीजन्मन् ಘಟೀಜನ್ಮನ್** (पुं०) ಮಡಕೆಯಲ್ಲಿ ಹುಟ್ಟಿದ ದ್ರೋಣಾಚಾರ್ಯ. घट्यां जन्म यस्य।

**घटीजानुक ಘಟೀಜಾನುಕ** (वि०) ಘಟದಂತೆ ಮಂಡಿಯುಳ್ಳ, ಮಡಕೆಯಹಾಗಿರುವ ಮಂಡಿಯುಳ್ಳ. घटीवत् जानुनी यस्य।

**घटीदासी ಘಟೀದಾಸೀ** (स्त्री०) ನೀರನ್ನು ಹೊತ್ತು ತರುವ ದಾಸಿ.

**घटीयन्त्र ಘಟೀಯಂತ್ರ** (न०) 1. ಕಾಲವನ್ನು ಅಳೆಯಲು ನೀರಿನಿಂದ ತುಂಬಿದ ಒಂದು ಯಂತ್ರ. ಗಡಿಯಾರವು ಬರುವುದಕ್ಕೆ ಮುಂಚೆ ಕಾಲಜ್ಞಾನಕ್ಕಾಗಿ ರಂಧ್ರವುಳ್ಳ ಒಂದು ಮಡಕೆಯಲ್ಲಿ ನೀರುತುಂಬಿ ಅದು ಕೆಳಕ್ಕೆ ಸೋರಿದಂತೆಲ್ಲಾ ಕಾಲವನ್ನು ಅಳೆದು ತಿಳಿಯುತ್ತಿದ್ದರು. "तोययन्त्र-कपालाद्यैर्मयूरनरवानरैः। ससूत्ररेणुगर्भैश्च सम्यक्कालं प्रसाधयेत्" सू० सि०। 2. ಏತ, ಬಾವಿಯಿಂದ ತೋಟಕ್ಕೆ ನೀರನ್ನು ಹಾಯಿಸಲು ಉಪಯೋಗಿಸುವ ಯಂತ್ರ. "किं कनिष्ठाः किमु ज्येष्ठाः घटीयन्त्रस्य दुर्जनाः"।

**घटोत्कच ಘಟೋತ್ಕಚ** (पुं०) ಭೀಮನಿಂದ ಹಿಡಿಂಬೆಯೆಂಬ ರಾಕ್ಷಸಿಯಲ್ಲಿ ಹುಟ್ಟಿದ ಒಬ್ಬ ರಾಕ್ಷಸ. "एवं भ्रातृन् सप्त मासान् हिडिम्बावासवद्वने। पाण्डवान् भीमसेनार्थे राक्षसी कामरूपिणी। सुखं स विहरन् भीमस्तत्कालं पर्यणामयत्। ततोऽलभत सा गर्भं राक्षसी कामरूपिणी। प्रजज्ञे राक्षसी पुत्रं भीमसेनान्महाबलम्। अमानुषं मानुषजं भीमवेगमरिन्दमम्। प्रणम्य विकचः पादावगृह्णात् स पितुस्तदा। मातुश्च परमेष्वासस्तौ च नामास्य चक्रतुः। घटोहास्योत्कच इति माता तं प्रत्यभाषत। अभवत्तेन नामास्य घटोत्कच इति स्म ह" भा० आदि० १६९।

**घटोदर ಘಟೋದರ** (पुं०) ಗಡಿಗೆಯಂತೆ ಹೊಟ್ಟೆಯುಳ್ಳ ಒಬ್ಬ ರಾಕ್ಷಸ. घट इवोदरमस्य। "घटोदरो महापार्श्वः प्रथनुः पिठरस्तथा" हरिवं०।

**घट्ट – चलने** (भ्वा० आत्म० अक० से०)। घट्टते। जघट्टे। घट्टिता। घट्टिष्यते। घट्टताम्। अघट्टत। ಇತ್ಯಾದಿ. ಚಲಿಸು, ಅಲುಗಾಡು.

**घट्ट – चलने** (चुरा० उभ० सक० से०)। घट्टयति, –ते। घट्टयां चकार, –चक्रे, –बभूव, –आस। 1. ಉಜ್ಜು, ತಿಕ್ಕು. 2. ಅಲುಗಾಡಿಸು, ಕದಲಿಸು. 3. ನೂಕು, ತಳ್ಳು.

**घट्ट ಘಟ್ಟ** (पुंन०) 1. ಸ್ನಾನಘಟ್ಟ, ನದಿಯಲ್ಲಿ ಸ್ನಾನಕ್ಕಾಗಿ ಇಳಿಯುವ ಜಾಗ. घट्टन्तेऽत्र घट्ट (चलने) "घञ्" (३-३-१२१)। "घट्टोऽवतारस्तीर्थोऽस्त्री" वैज०। 2. ಚಾಲನ, ಅಲುಗಾಡಿಸುವುದು. 3. ಸುಂಕದ ಕಟ್ಟೆ.

**घट्टजीविन् ಘಟ್ಟಜೀವಿನ್** (पुं०) ನದಿಯ ಘಟ್ಟದಲ್ಲಿ ವಾಸಿಸುವವನು, ನದಿಗೆ ಇಳಿಯುವ ಸೋಪಾನದಲ್ಲಿ ವಾಸಮಾಡುವವನು, ಹೊಳೆಯನ್ನು ದಾಟಿಸಲು ಕೂಲಿಯನ್ನು ತೆಗೆದುಕೊಳ್ಳುವ ಜಾಗದಲ್ಲಿ ವಾಸಮಾಡುವವನು, ಅಂಬಿಗ. घट्टं तारणशुल्कस्थानं नद्यवतरणस्थानं वा तत्र जीवति– जीव (प्राणधारणे) "णिनिः" (३-१-१३४)। ಇವನು ನದಿಯನ್ನು ದಾಟಿಸಿ ಬಂದ ಕೂಲಿಯಿಂದ ಜೀವಿಸುವನು.

**घट्टन ಘಟ್ಟನ** (न०) 1. ಕದಲಿಸುವುದು. 2. ತಳ್ಳುವುದು, ನೂಕುವುದು. भ्वा० घट्ट (चलने) + णिच् भावे "ल्युट्" (३-३-११५)। "सुप्तसर्प इव दण्डघट्टनाद्रोषितोऽस्मि तव विक्रमश्रवात्" रघु० ११-७१। 3. ವೇಗವಾಗಿ ಬಂದು ತಾಗುವುದು, ಹೊಡೆಯುವುದು, ಬಡಿಯುವುದು. "बृहच्छिलानिष्ठुरकण्ठघट्टनाद्विकीर्णलोलाग्निकणं सुरद्विषः" माघ० १-५४। (स्त्री०) –ना –ನಾ. 4. ಉಜ್ಜುವುದು, ತಿಕ್ಕುವುದು. चुरा० घट्ट + णिच् "युच्" (वा० ३-३-१०७)। 5. ವೃತ್ತಿ, ಜೀವನೋಪಾಯ, ಉದ್ಯೋಗ. 6. ಕದಲಿಸುವುದು, ತಳ್ಳುವುದು, ನೂಕುವುದು. "घट्टना चलनावृत्त्योः" हेम०।

**घट्टयत् ಘಟ್ಟಯತ್** (वि०) ಕದಲಿಸುತ್ತಿರುವ.

**घट्टित ಘಟ್ಟಿತ** (वि०) 1. ಕದಲಿಸಲ್ಪಟ್ಟ, ಮುಂದಕ್ಕೆ ತಳ್ಳಲ್ಪಟ್ಟ. घट्ट (चलने) + णिच् "क्तः" (३-२-१०२)। 2. ಅದುಮಲ್ಪಟ್ಟ, ಕೆಳಕ್ಕೆ ಹಾಕಿ ಒತ್ತಲ್ಪಟ್ಟ. 3. ತಿಕ್ಕಲ್ಪಟ್ಟ, ಉಜ್ಜಲ್ಪಟ್ಟ.

**घण् – दीप्तौ** (तना० उभ० अक० से०)। घणोति, घणुते। जघाण, जघणे। अघणीत्, अघाणीत्, अघणिष्ट। ಪ್ರಕಾಶಿಸು, ಹೊಳೆ.

**घण्ट ಘಂಟ** (वि०) 1. ಪ್ರಕಾಶಮಾನವಾದ, ಹೊಳೆಯುವ. घण् (दीप्तौ) "क्तः" (३-४-७२)। (पुं०) 2. ಉಪದಂಶ, ಉಪ್ಪಿನಕಾಯಿ ಗೊಜ್ಜು ಮೊದಲಾದುವು.

**घण्टा ಘಂಟಾ** (स्त्री०) 1. ಗಂಟೆ, ಕಂಚಿನಿಂದ ನಿರ್ಮಿತವಾದ ಒಂದು ವಿಧ ವಾದ್ಯ. घटि (भाषार्थ) + णिच् "अच्" (३-१-१३४)। ಗಂಟೆಯು ಸರ್ವವಾದ್ಯಮಯ ವಾಜಂದು. ಉಳಿದ ಯಾವ ವಾದ್ಯಗಳಿಲ್ಲದಿದ್ದರೂ ಪೂಜಾಕಾಲದಲ್ಲಿ ಘಂಟಾನಾದ ಪೂರ್ವಕ ಸ್ನಪನಾದಿಗಳು ನಡೆಯು

ಬೇಕು. "वादित्राणामभावे तु पूजाकाले हि सर्वदा। घण्टाशब्दो नरैः कार्यः सर्ववाद्यमयी यतः। सर्ववाद्यमयी घण्टा देवदेवस्य वल्लभा। तस्मात् सर्वप्रयत्नेन घण्टानादं तु कारयेत्। मन्वन्तरसहस्राणि मन्वन्तरशतानि च। घण्टानादेन देवेशः प्रीतो भवति केशवः" स्कान्द०। 2. ಘಂಟಾಪಾಟಲಿವೃಕ್ಷ, ಮೊಕ್ಕಮರ.

**घण्टाक ಘಂಟಾಕ** (पुं०) ಘಂಟಾಪಾಟಲಿವೃಕ್ಷ, ಮೊಕ್ಕಮರ. घण्टेव कायति — कै (शब्दे) "कः" (३-२-४)।

**घण्टाकर्ण ಘಂಟಾಕರ್ಣ** (पुं०) 1. ಸ್ಕಂದನ ಒಬ್ಬ ಅನುಚರ. 2. ಈಶ್ವರನ ಒಬ್ಬ ಅನುಚರ. "घण्टाकर्णो गणः श्रीमान् शिवस्यातीव वल्लभः" शिवपुं०। 3. ಶಿವಭಕ್ತನಾದ ಒಬ್ಬ ರಾಕ್ಷಸ.

**घण्टाताड ಘಂಟಾತಾಡ** (पुं०) ಗಂಟೆಯನ್ನು ಬಾರಿಸುವವನು, ಗಂಟೆಯನ್ನು ಹೊಡೆದು ಜನರನ್ನು ಹೊಗಳುವವನು. घण्टां ताडयति — तड (आघाते) + णिच् "अण्" (३-२-१)। "नूनं प्रशंसत्यजस्रं यो घण्टाताडोऽरुणोदये" मनु० १०-३३।

**घण्टानाद ಘಂಟಾನಾದ** (पुं०) ಗಂಟೆಯ ಶಬ್ದ. घण्टायाः नादः। "घण्टानादो निस्वनो डिण्डिमानाम्" माघ० १८-१०।

**घण्टापथ ಘಂಟಾಪಥ** (पुं०) 1. ರಾಜಮಾರ್ಗ, ವಿಶಾಲವಾದ ಮಾರ್ಗ, ಗಂಟೆಗಳನ್ನು ಕಟ್ಟಿರುವ ಆನೆಗಳು ಸಂಚರಿಸುವ ರಸ್ತೆ. घण्टानां घण्टायुक्तहस्त्यादीनां पन्थाः "अः" (५-४-७४)। "दशधन्वन्तरो राजमार्गो घण्टापथः स्मृतः" इति कौटिल्यः। ಹತ್ತು ಧನುಸ್ಸುಗಳ ಉದ್ದದಷ್ಟು ಅಗಲವಾಗಿರುವ ರಸ್ತೆಯು ರಾಜಮಾರ್ಗ. 2. ಕಿರಾತಾರ್ಜುನೀಯಕ್ಕೆ ಮಲ್ಲಿನಾಥನು ಬರೆದಿರುವ ಒಂದು ವ್ಯಾಖ್ಯಾನ,

**घण्टापाटलि ಘಂಟಾಪಾಟಲಿ** (पुं०) ಮೊಕ್ಕಮರ.

**घण्टारव ಘಂಟಾರವ** (पुं०) ಗಂಟೆಯ ನಾದ, ಗಂಟೆಯ ಶಬ್ದ. घण्टाया रवः। "घण्टारवै रौद्रतरैर्निरन्तरम्" कुमा० १४-४७।

**घण्टारवा ಘಂಟಾರವಾ** (स्त्री०) ಸೆಣಬಿನ ಗಿಡ.

**घण्टाली ಘಂಟಾಲೀ** (स्त्री०) 1. ಗಂಟೆಗಳ ಸಾಲು. 2. ಕೋಶಾತಕೀ ಗಿಡ.

**घण्टावाद्य ಘಂಟಾವಾದ್ಯ** (नं०) ಗಂಟೆಯ ರೂಪವಾದ ವಾದ್ಯ.

**घण्टाशब्द ಘಂಟಾಶಬ್ದ** (पुं०) 1. ಕಂಚು. घण्टायाः शब्द इव शब्दोऽस्य। 2. ಗಂಟೆಯ ನಾದ.

**घण्टिका ಘಂಟಿಕಾ** (स्त्री०) ಚಿಕ್ಕ ಗಂಟೆ, ಕಿರುಗಂಟೆ. क्षुद्रा घण्टा "कन्" (५-३-८५)।

**घण्ड ಘಂಡ** (पुं०) ಭ್ರಮರ, ದುಂಬಿ.

**घतन ಘತನ** (वि०) ಮಾರಕ, ಕೊಲ್ಲುವವನು. हन (हिंसागत्योः) "युन्" आद्यन्तयोः घत्वतत्वे च (उ० ५-४२)।

**घन ಘನ** (पुं०) 1. ಮೇಘ, ಮೋಡ. हन्यते वायुना — हन (हिंसागत्योः) "अप्" घनश्चादेशः (३-३-७७)। "तप्तानामुपदधिरे विषाणभिन्नाः प्रह्लादं सुरकरिणां घनाः क्षरन्तः" किरा० ७-१३। 2. ಸಮೂಹ, ಗುಂಪು. 3. ದಾರ್ಢ್ಯ, ಗಟ್ಟಿಯಾಗಿರುವಿಕೆ. "घनाः कठिनसंघातमेघकाठिन्यमुद्गराः" वैज०। 4. ವಿಸ್ತಾರ, ವಿಸ್ತರಣ, ಬಡಾವಣೆ. 5. ಕೊನ್ನಾರಿಗೆಡ್ಡೆ. 6. ಕಬ್ಬಿಣದ ಗದೆ. "धनुरपास्य सबाणधि शंकरः प्रतिजघान घनैरिव मुष्टिभिः" किरा० १८-१। 7. ಕಫ, ಶ್ಲೇಷ್ಮ. 8. ದೇಹ, ಶರೀರ, ಮೈ. 9. ಕಾಗೆಬಂಗಾರ, 10. ವೇದಪಠನದ ಒಂದು ಕ್ರಮ. 11. ಒಂದು ಸಂಖ್ಯೆಯನ್ನು ಅದೇ ಸಂಖ್ಯೆಯಿಂದ ಮೂರಾವೃತ್ತಿ ಗುಣಿಸುವುದರಿಂದ ಬಂದ (ಲಬ್ಧ.) **ಉದಾ.:** $3\times3\times3=27$ ಇಲ್ಲಿ 27 ಘನವಾಗುವುದು. 27ರ ಘನಮೂಲ 3. $4\times4\times4=64$. ಇಲ್ಲಿ 64 ಘನವಾಗುವುದು. 64ರ ಘನಮೂಲ 4. (नं०) 12. ಕಂಚಿನ ಗಂಟೆ ತಾಳ ಜಾಗಟೆ ಮೊದಲಾದ ವಾದ್ಯ. 13. ಮಧ್ಯಮ ನೃತ್ಯ, ವೇಗವೂ ನಿಧಾನವೂ ಅಲ್ಲದ ಮಧ್ಯಮಕಾಲದ ನರ್ತನ. 14. ಲವಂಗಪಟ್ಟೆ. 15. ಕಬ್ಬಿಣ. 16. ಚರ್ಮ, ತೊಗಲು. 17. ತವರ. 18. ಕತ್ತಲೆ, ಅಂಧಕಾರ. (वि०) 19. ಸಾಂದ್ರವಾದ, ನಿಬಿಡವಾದ, ದಟ್ಟವಾದ. "घनानि कामं कुसुमानि बिभ्रतः करप्रचेयान्यपहाय शाखिनः" किरा० ८-४। 20. ಅತಿಶಯವಾದ, ಪೂರ್ಣವಾದ, ತುಂಬಿದ. "घनरसभावितघर्मबिन्दुभाजाम्" याद० २४-७४। 21. ದೃಢವಾದ, ಕಠಿನವಾದ, ಗಟ್ಟಿಯಾದ. "घनपोत्रविदीर्णशालमूलो निबिडस्कन्धनिकापरुग्णवप्रः" किरा० १३-३। (क्रि०वि०) 22. ನಿಬಿಡವಾಗಿ, ದಟ್ಟವಾಗಿ, ಅವಕಾಶವಿಲ್ಲದಂತೆ. "घटयति घनं कण्ठाश्लेषे रसान्न पयोधरौ" रत्ना० ३-९। "घनं स्यात् कांस्यतालादिवाद्यमध्यमनृत्ययोः। ना मुस्ताब्दौघदार्ढ्येषु विस्तारे लोहमुद्गरे। त्रिषु सान्द्रे दृढे च" मेदि०। "लोहं कालायसं शस्त्रं पिण्डं पारशवं घनम्" अभि० चि०।

**घनकफ ಘನಕಫ** (ಪುಂ०) ಆಲಿಕಲ್ಲು, ಮುಗಿಲ್ಗಲ್ಲು. घनस्य मेघस्य कफ इव।

**घनकाल ಘನಕಾಲ** (ಪುಂ०) ಮಳೆಗಾಲ, ವರ್ಷಾಕಾಲ, ವರ್ಷರ್ತು.

**घनगर्जित ಘನಗರ್ಜಿತ** (ನಂ०) ಮೋಘದ ಶಬ್ದ, ಗುಡುಗು.

**घनगोलक ಘನಗೋಲಕ** (ಪುಂ०) ಚಿನ್ನದೊಡನೆ ಬೆರೆತಿರುವ ಬೆಳ್ಳಿ.

**घनतोल ಘನತೋಲ** (ಪುಂ०) ಚಾತಕ ಪಕ್ಷಿ. घनं मेघं तोलयति ऊर्ध्वं नयति।

**घनध्वनि ಘನಧ್ವನಿ** (ಪುಂ०) 1. ಗಟ್ಟಿಯಾದ ಶಬ್ದ. 2. ಮೇಘದ ಶಬ್ದ, ಗುಡುಗು. घनस्य ध्वनिः। "अनुहुंकुरुते घनध्वनिं न हि गोमायुरुतानि केसरी" माघ० १६-२५।

**घननाभि ಘನನಾಭಿ** (ಪುಂ०) ಧೂಮ, ಹೊಗೆ. घनस्य मेघस्य नाभिरिव।

**घनपत्र ಘನಪತ್ರ** (ಪುಂ०) 1. ಸುಗ್ಗೆಮರ. 2. ಹುಣಿಸೆಮರ. 3. ಕೊಮ್ಮೆಗಿಡ.

**घनपदवी ಘನಪದವೀ** (ಸ್ತ್ರೀ०) ಅಂತರಿಕ್ಷ, ಆಕಾಶ. घनानां पदवी। "क्रामद्भिर्घनपदवीमनेकसंख्यैः" किरा० ५-३४।

**घनमूल ಘನಮೂಲ** (ನಂ०) "घन" ಪದದಲ್ಲಿ ನೋಡಿ.

**घनरस ಘನರಸ** (ಪುಂ०) 1. ನೀರು, ಜಲ. घनस्य मेघस्य रसः। 2. ಕರ್ಪೂರ. 3. ಗಟ್ಟಿಯಾದ ರಸ, ಕಷಾಯ. 4. ಮರದ ಗಟ್ಟಿಯಾದ ಹಾಲು. 5. ಕುರಟಿಗೆ ಗಿಡ. 6. ತೊಂಡೆಗಿಡ. "भवेद्घनरसः सान्द्रनिर्यासे मोरटेऽम्बुनि। कर्पूरे पीलुपर्ण्यां च सम्यक्सिद्धरसेऽपि च" मेदि०। (वि०) 7. ಗಟ್ಟಿಯಾದ ರಸವುಳ್ಳ.

**घनवर्त्मन् ಘನವರ್ತ್ಮನ್** (ನಂ०) ಆಕಾಶ, ಅಂತರಿಕ್ಷ. घनानां वर्त्म। "घनवर्त्म सहस्रधेव कुर्वन्" किरा० ५-१७।

**घनवल्लिका ಘನವಲ್ಲಿಕಾ, –वल्ली –ವಲ್ಲೀ** (ಸ್ತ್ರೀ०) 1. ವಿದ್ಯುತ್ತು, ಮಿಂಚು. घनस्य वल्लीव। 2. ಅಳಲಿಗಿಡ. घना निबिडा वल्ली यस्याः वा "कप्" (५-४-१५४)।

**घनवात ಘನವಾತ** (ಪುಂ०) ಒಂದು ನರಕ. घनः सान्द्रो वातो यत्र।

**घनवाहन ಘನವಾಹನ** (ಪುಂ०) 1. ಪರಶಿವ, ಪರಮೇಶ್ವರ. घन इव शुभ्रं वाहनमस्य। 2. ಇಂದ್ರ. घनो मेघो वाहनमस्य।

**घनवीथि ಘನವೀಥಿ** (ಸ್ತ್ರೀ०) ಅಂತರಿಕ್ಷ, ಆಕಾಶ. घनानां वीथिः। "घनवीथिवीथिमवतीर्णवतः" माघ० ९-३२।

**घनसार ಘನಸಾರ** (ಪುಂ०) 1. ಕರ್ಪೂರ. घनस्य मुस्तकस्य सारः। "शरदिन्दुकुन्दघनसारनीहारहार०"। 2. ಪಾದರಸ. घनो निबिडः सारोऽत्र। 3. ಜಲ, ನೀರು.

**घनव्यपाय ಘನವ್ಯಪಾಯ** (ಪುಂ०) ಶರತ್ಕಾಲ, ಮೋಡಗಳ ನಾಶದ ಸಮಯ. "घनव्यपायेन गभस्तिमानिव" रघु० ३-३७।

**घना ಘನಾ** (ಸ್ತ್ರೀ०) ಕಾಡುದ್ದಿನ ಗಿಡ.

**घनागम ಘನಾಗಮ** (ಪುಂ०) 1. ವರ್ಷರ್ತು, ಮಳೆಗಾಲ. घनानां मेघानामागमः। आगम्यतेऽत्र — आ + गम्लृ (गतौ) "अप्" (३-३-५८)। 2. ಮೇಘಗಳ ಆಗಮನ. घनानामागमः — आ+गम्लृ भावे "अप्" (३-३-५८)।

**घनाघन ಘನಾಘನ** (ಪುಂ०) 1. ಇಂದ್ರ. हन (हिंसागत्योः) "अच्" (३-१-१३४)। द्वित्वम् अभ्यासस्य आक् च (वा० ३-१-१३४)। 2. ಮಳೆಯನ್ನು ಸುರಿಸುತ್ತಿರುವ ಮೋಡ. "विरुत्य विश्रान्तवतीं तपात्यये घनाघनश्रातकमण्डलीमिव" नैष० ९-७। 3. ಮದಿಸಿದ ಆನೆ. 4. ಪರಸ್ಪರ ಹೊಡೆದಾಟ. (वि०) 5. ನಿರಂತರವಾಗಿ ಹೊಡೆದಾಡುತ್ತಿರುವ. "घनाघनो वर्षुकाब्दे मत्तघातुककुञ्जरे। शक्रे च" मेदि०।

**घनात्यय ಘನಾತ್ಯಯ** (ಪುಂ०) 1. ಮೋಡಗಳ ನಾಶದ ಸಮಯ, ಶರತ್ಕಾಲ. घनानामत्ययोऽत्र। 2. ವರ್ಷರ್ತುವು ಕಳೆದುಹೋಗುವುದು, ಮಳೆಗಾಲವು ಮುಗಿಯುತ್ತಾ ಬರುವಿಕೆ. घनानामत्ययः।

**घनामय ಘನಾಮಯ** (ಪುಂ०) ಖರ್ಜೂರದ ಗಿಡ. घन दृढः आमयो यस्मात्।

**घनाश्रय ಘನಾಶ್ರಯ** (ಪುಂ०) ಅಂತರಿಕ್ಷ, ಆಕಾಶ.

**घनीकृत ಘನೀಕೃತ** (वि०) 1. ಗಟ್ಟಿಯಾಗಿ ಮಾಡಲ್ಪಟ್ಟ. 2. ದಟ್ಟವಾಗಿ ಮಾಡಲ್ಪಟ್ಟ. घन + कृञ् "क्तः" (३-२-१०२)। "च्विः" (५-४-५०)। दीर्घः (७-४-२६)।

**घनीभूत ಘನೀಭೂತ** (वि०) 1. ಗಟ್ಟಿಯಾದ. 2. ದಟ್ಟವಾದ, ನಿಬಿಡವಾದ. अघनं घनं भूतम् — घन + भू (सत्तायाम्) "क्तः" (३-२-१०२)। "च्विः" (५-४-५०)। दीर्घः (७-४-२६)।

**घनोपल ಘನೋಪಲ** (ಪುಂ०) ಆಲಿಕಲ್ಲು. घनानामुपलः।

**घरट्ट ಘರಟ್ಟ** (पुं०) ಅರೆಯುವ ಕಲ್ಲು, ಬೀಸುವ ಕಲ್ಲು. घृ (सेके) "विच्"। घरं सेकमट्टते — अट्ट (अतिक्रमे) "अण्" (३-२-१)। "प्रतिहट्टपथे घरट्टजात्पथिकाह्वानदसक्तुसौरभैः" नैष० २-७५।

**घर्घर ಘರ್ಘರ** (पुं०) 1. ಮರ್ಮರ ಧ್ವನಿ, ಹರಿಯುವ ನೀರಿನ ಶಬ್ದ, -ಸದ್ದು. घर्घेत्यनुकरणशब्दं राति—रा (दाने) "कः" (३-२-३)। "ऋज्वीर्दधानैरवतत्य कन्धराश्चलावचूडाः कलघर्घरारवैः" माघ० १२-१८। 2. ದ್ವಾರ, ಬಾಗಿಲು. 3. ಹಾಸ್ಯ, ವಿನೋದ. "घर्घरो ना चलद्वारिध्वानोलूकनदान्तरे" मेदि०। 4. ಒಂದು ನದ, ಒಂದು ಗಂಡು ಹೊಳೆ. 5. ಘೂಕ, ಗೂಬೆ. 6. ತುಷಾನಲ, ಹೊಟ್ಟಿನೊಳಗಿನ ಬೆಂಕಿ. 7. ಧ್ವನಿ, ಶಬ್ದ. (वि०) 8. ಮರ್ಮರ ಶಬ್ದದಿಂದ ಕೂಡಿದ, ಘರ್ಘರಧ್ವನಿಯುಳ್ಳ, ಕಿವಿಗೆ ಇಂಪಾಗಿಲ್ಲದ.

**घर्घरा ಘರ್ಘರಾ** (स्त्री०) 1. ಕಿರುಗಂಟೆ, ಕಿರುಗೆಜ್ಜೆ. 2. ಒಂದು ವಿಧ ವೀಣೆ. **-री -ರೀ.** 3. ಘರ್ಘರ ಹೊಳೆಯೊಡನೆ ಸೇರಿದ ಗಂಗಾ ನದಿ. घर्घरोऽस्त्यस्याम् "अच्" (५-२-१२७)। गौरा० "ङीष्" (४-१-४१)।

**घर्घरिका ಘರ್ಘರಿಕಾ** (स्त्री०) 1. ಕಿರುಗಂಟೆ. 2. ಒಂದು ಹೊಳೆ. 3. ಹುರಿಯಲ್ಪಟ್ಟ ಧಾನ್ಯ. 4. ನಗಾರಿ ಮೊದಲಾದ ವಾದ್ಯಗಳನ್ನು ಬಾರಿಸುವ ಕೋಲು. "अथ घर्घरिका क्षुद्रघण्टावादित्रदण्डयोः" मेदि०। 5. ಡವಣೆ ಯೆಂಬ ಒಂದು ವಿಧ ವಾದ್ಯ. "स्मृता घर्घरिका क्षुद्रघण्टिकाभ्रष्टधान्ययोः। वाद्यप्रभेदवादित्रदण्डयोरापगान्तरे" विश्व०।

**घर्घरित ಘರ್ಘರಿತ** (न०) ವರಾಹದ ಶಬ್ದ, ಹಂದಿಯು ಗುರುಗುಟ್ಟುವ ಶಬ್ದ. घर्घरं करोति + णिच् "क्तः" (३-३-११४)। "निशम्य ते घर्घरितं स्वखेदक्षयिष्णु मायामयसूकरस्य" भाग० ३-१३-२५।

**घर्म ಘರ್ಮ** (पुं०) 1. ಗ್ರೀಷ್ಮರ್ತು, ಬೇಸಿಗೆಯ ಕಾಲ. घरति शरीरात् — घृ (सेचने) कर्त० "मक्" (उ० १-१४६)। गुणश्च निपा०। "निःश्वासहार्यांशुकमाजगाम घर्मः प्रियावेषमिवोपदेष्टुम्" रघु० १६-४३। 2. ಮೈಬೆವರು, ಸ್ವೇದ, ಉಷ್ಣತೆ ಆಯಾಸ ರತಿಕ್ರೀಡೆ ಮುಂತಾದುವು ಗಳಿಂದ ಮೈಯಲ್ಲಿ ಸ್ರವಿಸುವ ನೀರು. "अघमर्घमर्मोदकबिन्दुमौक्तिकैरलञ्चकारास्य वधूरहस्करः" माघ० १-५७। 3. ಉಷ್ಣತೆ, ಬಿಸಿ, ಕಾವು. "स वमन् रुषाश्रु घनघर्मविगलदुरुगण्डमण्डलः" माघ० १५-४। 4. ಬಿಸಿಲು. 5. ಬಿಸಿಲಿನಿಂದ ಕೂಡಿದ ಹಗಲು. "घर्मः स्यादातपे ग्रीष्मेऽप्यूष्मस्वेदाम्भसोरपि" मेदि०। "निदाघ ऊष्मणि ग्रीष्मे स्वेदे घर्मस्तु तेषु च। आतपे च दिने" वैज०।

**घर्मचर्चिका ಘರ್ಮಚರ್ಚಿಕಾ** (स्त्री०) ಬೆವರಿನ ಗುಳ್ಳೆ, ಬೆವರಿನಿಂದ ಮೈಯಲ್ಲಿ ಏಳುವ ಗುಳ್ಳೆ. घर्मेण चर्चिकेव।

**घर्मतप्त ಘರ್ಮತಪ್ತ** (वि०) ಬಿಸಿಲಿನಿಂದ ಕಾದಿರುವ.

**घर्मदीधिति ಘರ್ಮದೀಧಿತಿ** (पुं०) ಸೂರ್ಯ. घर्मा दीधितयो यस्य। "यः ससोम इव घर्मदीधितिः सद्विजिह्व इव चन्दनद्रुमः" रघु० ११-६४।

**घर्मद्युति ಘರ್ಮದ್ಯುತಿ** (पुं०) ಸೂರ್ಯ. घर्मा द्युतयो यस्य। "घर्मद्युतेरिह मुहुः पटलानि धाम्नामादर्शमण्डलनिभानि समुल्लसन्ति" किरा० ५-४१।

**घर्मान्त ಘರ್ಮಾಂತ** (पुं०) ವರ್ಷರ್ತು, ಮಳೆಗಾಲ. घर्मस्य ऊष्मणो अन्तो यस्मिन्। 'घर्मान्ते तोयदोर्मिभिः" हरिवं०। "घर्मान्तजीमूतरवानुकारी" याद० २०-२।

**घर्मान्तकामुकी ಘರ್ಮಾಂತಕಾಮುಕೀ** (स्त्री०) ಬೆಳ್ಳಕ್ಕಿ, ಒಂದು ಜಾತಿಯ ಹೆಣ್ಣು ಹಂಸ. घर्मान्ते कामुकी।

**घर्मांशु ಘರ್ಮಾಂಶು** (पुं०) ಸೂರ್ಯ. घर्मा अंशवो यस्य।

**घर्ष ಘರ್ಷ** (पुं०) 1. ತೀಡುವುದು, ತಿಕ್ಕುವುದು, ಉಜ್ಜುವುದು. 2. ಅರೆಯುವುದು, ಪುಡಿಮಾಡುವುದು. घृषु (संघर्षे)। भावे "घञ्" (३-३-१८)।

**घर्षक ಘರ್ಷಕ** (वि०) 1. ಅರೆಯುವವನು. 2. ಪುಡಿ ಮಾಡುವವನು. 3. ಉಜ್ಜುವವನು, ತಿಕ್ಕುವವನು. 4. ಪೀಡಿಸುವವನು, ಹಿಂಸಿಸುವವನು. घृषु (संघर्षे) "ण्वुल्" (३-१-१३३)।

**घर्षण ಘರ್ಷಣ** (न०) 1. ತಿಕ್ಕಾಟ, ಒಡೆದಾಟ, ಹೊಡೆದಾಟ, ಜಗಳ. घृषु (संघर्षे) "ल्युट्" (३-३-११५)। 2. ಅರೆಯುವುದು, ಪುಡಿಮಾಡುವುದು. 3. ಹಿಂಸಿಸುವುದು, ಪೀಡಿಸುವುದು. 4. ತಿಕ್ಕುವುದು, ಉಜ್ಜುವುದು. "ओषामासे मत्सरोत्पातवाताश्लिष्यद्दन्तक्ष्मारुहां घर्षणोत्थैः" माघ० १८-३५।

**घर्षणी ಘರ್ಷಣೀ** (स्त्री०) ಅರಿಶಿನ. घृष्यते — घृषु (संघर्षे) कर्म० "ल्युट्" (३-३-११३): "ङीप्" (४-१-१५)।

**घर्षणीय ಘರ್ಷಣೀಯ** (वि०) 1. ಅರೆಯಲ್ಪಡುವ, 2. ಪುಡಿಮಾಡಲ್ಪಡುವ. 3. ಉಜ್ಜಲ್ಪಡುವ, ತಿಕ್ಕಲ್ಪಡುವ. 4. ಪೀಡಿಸಲ್ಪಡುವ, ಹಿಂಸಿಸಲ್ಪಡುವ. घृषु (संघर्षे)

कर्म० "अनीयर्" (३-१-९६)। "तव्यः" (३-१-९६)। घर्षितव्यः ಘರ್ಷಿತವ್ಯಃ. 1. ಅರೆಯಬೇಕಾದ. 2. ಪುಡಿ ಮಾಡಬೇಕಾದ. 3. ಉಜ್ಜಬೇಕಾದ.

**घर्ष्य ಘರ್ಷ್ಯ** (वि०) 1. ಅರೆಯಲ್ಪಡುವ. 2. ಪುಡಿಮಾಡಲ್ಪಡುವ. 3. ಉಜ್ಜಲ್ಪಡುವ, ತಿಕ್ಕಲ್ಪಡುವ. 4. ಹಿಂಸಿಸಲ್ಪಡುವ. घृषु (संघर्षे) "ण्यत्" (३-१-१२४)।

**घसत् ಘಸತ್** (वि०) ಭಕ್ಷಿಸುತ್ತಿರುವ, ತಿನ್ನುತ್ತಿರುವ. घस्लृ (अदने) "शतृ" (३-२-१२४)। स्त्रियाम् "ङीप्" (४-१-६)। घसन्ती ಘಸಂತೀ.

**घसन ಘಸನ** (न०) ಭಕ್ಷಿಸುವುದು, ತಿನ್ನುವುದು.

**घसि ಘಸಿ** (पुं०) ಭಕ್ಷಿಸುವುದು, ತಿನ್ನುವುದು. घस्लृ (अदने) "इन्" (उ० ४-११७)।

**घस्त ಘಸ್ತ** (वि०) ಭಕ್ಷಿಸಲ್ಪಟ್ಟ, ತಿನ್ನಲ್ಪಟ್ಟ. घस्लृ (अदने) "क्तः" (३-२-१०२)।

**घस्मर ಘಸ್ಮರ** (वि०) 1. ಹೆಚ್ಚಾಗಿ ತಿನ್ನುವ ಸ್ವಭಾವದವನು, ತಿಂಡಿಪೋತ. 2. ನುಂಗುವವನು, ಗಪಗಪನೆ ತಿನ್ನುವವನು. घस्लृ (अदने) "क्मरच्" (३-२-१६०)। 3. ನಾಶಪಡಿಸುವವನು. "कल्पाग्निः पाण्डवानां द्रुपदसुतचमूघस्मरो द्रौणिरस्मि" वेणी० ५-३७।

**घस्र ಘಸ್ರ** (पुं०) 1. ದಿವಸ, ಹಗಲು. घसत्यन्धकारं— घस्लृ (अदने) "रक्" (उ० २-१३)। (वि०) 2. ಹಿಂಸಿಸುವವನು. "घस्रो वासरहिंस्रयोः" हेम०।

**घा ಘಾ** (स्त्री०) 1. ಗಲಗಲ ಶಬ್ದಮಾಡುವ ಆಭರಣ, ಒಡ್ಯಾಣ, ಡಾಬು. 2. ಪ್ರಹಾರ, ಏಟು.

**घाट ಘಾಟ** (पुं०) 1. ಕತ್ತಿನ ಹಿಂಬಾಗ, ಹೆಕ್ಕತ್ತು. घाटयति— घट (संघाते) + णिच् "अच्" (३-१-१३४)। 2. ನದಿಯ ಸ್ನಾನದ ಘಟ್ಟ. 3. ಗೋವುಗಳು ಸಂಚರಿಸುವ ಪ್ರದೇಶ.

**घाटा ಘಾಟಾ** (स्त्री०) ಕತ್ತಿನ ಹಿಂಭಾಗ, ಹೆಕ್ಕತ್ತು. "दोषांस्तु दुष्टस्त्रय एवमन्यां संपीड्य घाटां सुरुजाः सतीव्राम्" सुश्रुत०। स्वार्थे "कः"। घाटिका ಘಾಟಿಕಾ.

**घाण्टिक ಘಾಂಟಿಕ** (पुं०) 1. ರಾಜನನ್ನು [illegible] ಗಂಟೆಯನ್ನು ಹೊಡೆದು ಹೊಗಳುವವನು. घण्टा [illegible] "ठक्" (४-४-८)। 2. ದೇವರ ಸನ್ನಿಧಿಯಲ್ಲಿ ಘಂಟಾನಾದ ಮಾಡುವವನು. 3. ದತ್ತೂರಿ ಗಿಡ.

**घात ಘಾತ** (पुं०) 1. ಪ್ರಹಾರ, ಏಟು. हन (हिंसागत्योः) "घञ्" (३-३-१८)। "अनभिलुलितज्याघाताङ्कः" शाकु० १-१०। 2. ಮಾರಣ, ಕೊಲ್ಲುವುದು. "चरेद्व्रतमहत्वापि घातार्थं चेत्समागतः" याज्ञ० ३-२५२। 3. ಬಾಣ. हन करं० "घञ्" (३-३-१२१)। 4. ನಿಧನತಾರೆ, ಜನ್ಮನಕ್ಷತ್ರದಿಂದ 7, 16, 25ನೆಯ ನಕ್ಷತ್ರಗಳು.

**घातक ಘಾತಕ** (वि०) ಕೊಲ್ಲುವವನು. हन (हिंसागत्योः) "ण्वुल्" (३-१-१३३)। "अनुमन्ता विशसिता निहन्ता क्रयविक्रयी। संस्कर्ता चोपहर्ता च खादकश्चेति घातकाः" मनु० ५-५१।

**घातन ಘಾತನ** (न०) 1. ಮಾರಣ, ಕೊಲ್ಲುವುದು. हन (हिंसागत्योः) + स्वार्थे णिच् भावे "ल्युट्" (३-३-११५)। 2. ಯಾಗದಲ್ಲಿ ಮಾಡುವ ಪಶುವಧೆ. (वि०) 3. ಕೊಲ್ಲುವವನು, ಕೊಲೆಮಾಡುವವನು. घातयति—हन + (स्वार्थे) णिच् कर्त० "ल्युः" (३-१-१३४)।

**घातवार ಘಾತವಾರ** (पुं०) ಅಶುಭಸೂಚಕವಾದ ವಾರ.

**घातस्थान ಘಾತಸ್ಥಾನ** (न०) ಕೊಲ್ಲುವ ಜಾಗ, ವಧ್ಯಭೂಮಿ.

**घाति ಘಾತಿ** (स्त्री०) ಮಾರಣ, ಕೊಲ್ಲುವಿಕೆ. हन (हिंसागत्योः) "इञ्" (उ० ४-१२४)।

**घातिन् ಘಾತಿನ್** (वि०) ಕೊಲ್ಲುವವನು, ಸಂಹರಿಸುವವನು. हन (हिंसागत्योः) "णिनिः" (३-१-१३४)।

**घातिपक्षिन् ಘಾತಿಪಕ್ಷಿನ್** (पुं०) ಶ್ಯೇನಪಕ್ಷಿ, ಗಿಡಗದಹಕ್ಕಿ.

**घातुक ಘಾತುಕ** (वि०) 1. ಕ್ರೂರ. 2 ಹಿಂಸಿಸುವವನು. हन (हिंसागत्योः) "उकञ्" (३-२-१५४)।

**घात्य ಘಾತ್ಯ** (वि०) 1. ವಧ್ಯ, ಕೊಲ್ಲಲ್ಪಡುವವನು. 2. ಕೊಲ್ಲಲು ಯೋಗ್ಯನಾದವನು. 3. ಕೊಲ್ಲಲು ಶಕ್ಯನಾದವನು. हन (हिंसागत्योः) कर्मादौ "ण्यत्" (३-१-१२४)।

**घार ಘಾರ** (पुं०) ಸೇಚನೆ, ಚಿಮುಕಿಸುವುದು. घृ (सेचने) भावे "घञ्" (३-३-१८)।

**घार्तिक ಘಾರ್ತಿಕ** (वि०) ಕಡಲೆಹಿಟ್ಟಿನಲ್ಲಿ ತುಪ್ಪದಿಂದ ತಯಾರಿಸಲ್ಪಟ್ಟ ಭಕ್ಷ್ಯ, ಮೈಸೂರು ಪಾಕ. घृतेन निर्वृत्तम् "ठञ्" (५-१-७९)। "तृतीयस्य घार्तिकं ददाति स दृष्ट्वाह छिद्रेष्वनर्था बहुलीभवन्ति" पञ्चत०।

**घास ಘಾಸ** (पुं०) ಹಸು ಮೊದಲಾದುವುಗಳ ಆಹಾರವಾದ ತೃಣ, ದನ ಮೊದಲಾದುವುಗಳು ಮೇಯುವ ಹುಲ್ಲು. घस्लृ (अदने) "घञ्" (३-३-१९)। "घासमुष्टिं परगवे दद्यात् संवत्सरं तु यः" भा० अनु० १०४-१२।

**घासि ಘಾಸಿ** (पुं०) 1. ಭಕ್ಷ್ಯ, ತಿಂಡಿ. 2. ಅಗ್ನಿ, ಬೆಂಕಿ. घस्लृ (अदने) "इण्" (उ० ४-१२९)। "कृष्णघासि० सप्तयोऽश्वातिर्जुहुवाणः" त्रिकाण्ड०।

**घु ಘು** (ಪುಂ) 1. ಧ್ವನಿ, ಶಬ್ದ. घुङ् (शब्दे) "डु:" बाहु० । 2. दा ರೂಪವಾದ ಮತ್ತು धा ರೂಪವಾದ ಧಾತುಗಳ ಒಂದು ಸಂಜ್ಞೆ. "दाधा घ्वदाप्" पा० सू० १-१-२० । डु दाञ् (दाने) दाण् (दाने) ಅರ್ಥಹೊಂದಿರುವ दो (अवखण्डने) देङ् (रक्षणे) ಇವು दा ರೂಪದ ಧಾತುಗಳು. डु धाञ् (धारणपोषणयोः) धेट् (पाने) ಇವು धा ರೂಪದ ಧಾತುಗಳು. ಈ ಧಾತುಗಳು "घु" ಸಂಜ್ಞೆಯುಳ್ಳವು. "सर्वं विस्मृत्य दैवात्स्मृतिमुषसि गतां घोषयन्त्यो घुसंज्ञां प्राक्संस्कारेण संप्रत्यपि धुवति शिरः पट्टिकापाठजेन" नैष० १९-६१ ।

**घुट – परिवर्तने** (भ्वा० आत्म० सक० से०) । घोटते । जुघुटे । घुटिता । अघुटत्, अघोटिष्ट । 1. ಬದಲಾಯಿಸು, ಬದಲಾವಣೆ ಹೊಂದು. 2. ಹಿಂತಿರುಗು, ಹಿಂದಕ್ಕೆ ಬಾ.

**घुट – प्रतिघाते** (तुदा० पर० सक० से०) । घुटति । जुघोट । अघुटीत् । ಇತ್ಯಾದಿ. 1. ಹೊಡೆ. ಬದಲು ಏಟು ಹಾಕು, ಹಿಂತಿರುಗಿ ಹೊಡೆ. 2. ಪ್ರತಿಘಟಿಸು, ಎದುರಿಸು, ತಡೆಗಟ್ಟು.

**घुट ಘುಟ** (ಪುಂ) ಗುಲ್ಫ, ಕಾಲುಗಳ ಗಂಟು.

**घुटक ಘುಟಕ** (ಪುಂ) ಗುಲ್ಫ, ಕಾಲುಗಳ ಗಂಟು. घुट (परिवर्तने) "ण्वुल्" (३-१-१३३) ।

**घुटि (टी) ಘುಟಿ (ಟೀ)** (स्त्री०) ಗುಲ್ಫ, ಕಾಲುಗಳ ಗಂಟು. घुट (परिवर्तने) "इन्" (उ० ४-११७) । वा "ङीप्" (ग० ४-१-४५) ।

**घुटिक ಘುಟಿಕ** (पुंस्त्री०) ಗುಲ್ಫ, ಕಾಲುಗಳ ಗಂಟು. घुट अस्त्यर्थे "ठन्" (५-२-११५) । स्त्रियाम् **घुटिका ಘುಟಿಕಾ.**

**घुण – भ्रमणे** (तुदा० आत्म० अक० से०) । घोणते । जुघुणे । अघोणिष्ट । ತಿರುಗು, ಸುತ್ತು.

**घुण ಘುಣ** (ಪುಂ) ಮರವನ್ನು ಕೊರೆಯುವ ಒಂದು ಹುಳು. घोणते – घुण (भ्रमणे) "कः" (३-१-१३५) । "घुणः स्यात् काष्ठवेधके" रत्न० ।

**घुणक्षत ಘುಣಕ್ಷತ** (ವಿ०) ಘುಣವೆಂಬ ಹುಳುವಿನಿಂದ ಕೊರೆಯಲ್ಪಟ್ಟ. "श्रीनिर्मितिप्राप्तघुणक्षतैकवर्णोपमावाच्यम्" माघ० ३-५८ ।

**घुणवल्लभा ಘುಣವಲ್ಲಭಾ** (स्त्री०) ಅತಿಬಜೆ.

**घुणाक्षर ಘುಣಾಕ್ಷರ** (ನ०) 1. ಘುಣವೆಂಬ ಹುಳುವು ಕಾಗದದಲ್ಲಿ ಅಥವಾ ಮರದಲ್ಲಿ ಕೊರೆದ ಅಕ್ಷರಾಕಾರದ ಗೆರೆ. **घुणकृतमक्षरम्** । 2. **ಘುಣಾಕ್ಷರ ನ್ಯಾಯ.** ಘುಣವು ಉದ್ದೇಶವಿಲ್ಲದೆ ಕೊರೆದು ಅಕ್ಷರವಾಗುವಂತೆ ಉದ್ದೇಶವಿಲ್ಲದೆ ಇಷ್ಟಾರ್ಥವು ಸಿದ್ಧಿಸುವಲ್ಲಿ ಈ ನ್ಯಾಯವನ್ನು ಉಪಯೋಗಿಸುವರು.

**घुणि ಘುಣಿ** (ಪುಂ) ಭ್ರಮಣ, ತಿರುಗುವುದು. घुण (भ्रमणे) "इन्" (उ० ४-११७) ।

**घुण्ट ಘುಂಟ** (ಪುಂ) ಗುಲ್ಫ, ಕಾಲುಗಳ ಗಂಟು.

**घुण्ड ಘುಂಡ** (ಪುಂ) ಭ್ರಮರ, ದುಂಬಿ. घुण (भ्रमणे) "डः" (उ० १-१११) । स्त्रियाम् "ङीष्" (४-१-६३) । **घुण्डी ಘುಂಡೀ.**

**घुर – भीमार्थशब्दयोः** (तुदा० पर० अक० से०) । घुरति । जुघोर । अघुरत् । अघोरीत् । अघोरिष्यत् । 1. ಭಯಂಕರ ಶಬ್ದ ಮಾಡು. 2. ಗುರುಗುಟ್ಟು. "अघुरंस्ते महाघोरमश्च्योतन्नथ शोणितम्" भट्टि० १७-६२ ।

**घुरण ಘುರಣ** (ನ०) 1. ಭಯಂಕರ ಶಬ್ದ. 2. ಗುರುಗುಟ್ಟುವ ಶಬ್ದ.

**घुरि ಘುರಿ** (स्त्री०) ಹಂದಿಯ ಮೂತಿ. घुर (भीमार्थशब्दयोः) "किः" बाहु० । वा "ङीप्" (ग० ४-१-४५) । **घुरी ಘುರೀ.**

**घुर्घुर ಘುರ್ಘುರ** (ಪುಂ) 1. ಹಂದಿಯು ಗುರುಗುಟ್ಟುವ ಶಬ್ದ. 2. ನಾರುಹುಳು, ಜಿಗಣೆ. घुर् इत्यव्यक्तं घुरति— घुर "कः" (३-१-१३५) ।

**घुर्घुरक ಘುರ್ಘುರಕ** (ಪುಂ) 1. ಗುರುಗುಟ್ಟುವ ಶಬ್ದ. 2. ಹಾವಿನ ವಿಷದ ಬಾಧೆ.

**घुर्घुरिका ಘುರ್ಘುರಿಕಾ** (स्त्री०) ತಮಕವೆಂಬ ಕಾಸ (ಕೆಮ್ಮಲು) ರೋಗದ ಉಪದ್ರವ, ತಮಕಕಾಸದಿಂದ ಕಂಠದಲ್ಲಿ ಉಂಟಾಗುವ ಗುರ್‌ಗುರ್ ಎಂಬ ಶಬ್ದ. "तृट्स्वेदवमथुप्रायः कण्ठघुर्घुरिकान्वितः । विशेषाद्दुर्दिने ताम्येच्छ्वासः स तमको मतः" सुश्रुत० उत्तरतं० ५१-८ ।

**घुर्घुरी ಘುರ್ಘುರೀ** (स्त्री०) ನಾರುಹುಳು, ಜಿಗಣೆ.

**घुषिर् – अविशब्दने** (भ्वा० पर० सक० से०) । घोषति । जुघोष । घोषिता । अघुषत् । अघोषीत् । ಇತ್ಯಾದಿ. ಶಬ್ದ ಮಾಡು, ಕೂಗು.

**घुषिर् – विशब्दने** (चुरा० उभ० सक० से०) । घोषयति, –ते । अजुघुषत्, –त । ಇತ್ಯಾದಿ. ಅಂಗೀಕರಿಸು, ಒಪ್ಪಿಕೊ, ಪ್ರಚಾರಪಡಿಸು, ಅಭಿಪ್ರಾಯವನ್ನು ತಿಳಿಸು.

**घुषित ಘುಷಿತ** (ವಿ०) 1. ಅಂಗೀಕರಿಸಲ್ಪಟ್ಟ. 2. ಪ್ರಚಾರಪಡಿಸಲ್ಪಟ್ಟ, ಘೋಷಿಸಲ್ಪಟ್ಟ. घुषिर् (विशब्दने) "क्तः" (३-२-१०२) ।

**घुष्ट ಘುಷ್ಟ** (वि०) ಕೂಗಿ ಹೇಳಲ್ಪಟ್ಟ. ಗಟ್ಟಿಯಾಗಿ ಶಬ್ದ ಮಾಡಿ ಹೇಳಲ್ಪಟ್ಟ. घुषिर् (अविशब्दने) "क्तः" (३-२-१०२)। इण् निषेधः (७-२-२३)।

**घुष्टान्न ಘುಷ್ಟಾನ್ನ** (न०) ಗಟ್ಟಿಯಾಗಿ ಕರೆದು ಕೊಡಲ್ಪಟ್ಟ ಅನ್ನ. को भोक्ता इत्युद्घुष्य देयमन्नम्। "गवा चान्नमुपाघ्रातं घुष्टान्नं च विशेषतः। गणान्नं गणिकान्नं च विदुषा च जुगुप्सितम्" मनु० ४-२०९।

**घुसृण ಘುಸೃಣ** (न०) ಕುಂಕುಮಕೇಸರಿ. घुषि (कान्तिकरणे) "ऋणक्" बाहु०।

**घूक ಘೂಕ** (पुं०) ಉಲೂಕ, ಗೂಬೆ. घू इति कायति—कै (शब्दे) "कः" (३-२-३)। स्त्रियाम् "ङीष्" (४-१-६३)। **घूकी ಘೂಕೀ.**

**घूकारि ಘೂಕಾರಿ** (पुं०) ವಾಯಸ, ಕಾಗೆ, ಗೂಬೆಗಳ ಶತ್ರು. घूकानामरिः।

**घूकावास ಘೂಕಾವಾಸ** (पुं०) ಶಾಖೋಟಕವೃಕ್ಷ, ಕಾರೆ ಗಿಡ. घूकानामावासः।

**घूत्कार ಘೂತ್ಕಾರ** (पुं०) ಗೂಬೆಯ ಕೂಗು. "कौशिकघटाघूत्कारसंवेल्लित०" मालती० ५-१९।

**घूरी—हिंसायाम्** (दिवा० आत्म० सक० से०)। घूर्यते। जुघूरे। अघूरिष्ट। ಹಿಂಸಿಸು, ಪೀಡಿಸು.

**घूर्ण—भ्रमणे** (भ्वा० आत्म० अक० से०)। घूर्णते। जुघूर्णे। घूर्णिता। घूर्णिष्यते। घूर्णताम्। ಇತ್ಯಾದಿ.

**घूर्ण—भ्रमणे** (तुदा० पर० अक० से०)। घूर्णति। जुघूर्ण घूर्णिता। घूर्णिष्यति। घूर्णतु। अघूर्णत्। ಇತ್ಯಾದಿ ಸುತ್ತು, ತಿರುಗು, ಅಲೆದಾಡು.

**भावे:**—घूर्ण्यते। जुघूर्णे। घूर्णिता। घूर्णिष्यते। घूर्ण्यताम्। ಇತ್ಯಾದಿ.

**णिचि:**—घूर्णयति, –ते। घूर्णयां चकार, –चक्रे, –बभूव, –आस। घूर्णयिता। घूर्णयिष्यति, –ते। घूर्णयतु, –ताम्। ಇತ್ಯಾದಿ.

**कृत्सु:**—घूर्णितव्यम्। घूर्णनीयम्। घूर्ण्यम्। घूर्णितम्। घूर्णितवान्, घूर्णन्, घूर्णती, घूर्णन्ती। घूर्णितुम्। घूर्णितम्। घूर्णनम्। घूर्णित्वा। उद्घूर्ण्य।

**घूर्ण ಘೂರ್ಣ** (पुं०) 1. ಸುತ್ತಾಟ, ಅಲೆದಾಟ, ಅತ್ತಿತ್ತ ಓಡಾಟ. घूर्ण (भ्रमणे) भावे "घञ्" (३-३-१८)। (वि०) 2. ತಿರುಗುವ, ಸುತ್ತುವ. घूर्ण कर्त० "क्तः" (३-४-७२)। 3. ತಿರುಗಿಸುವ, ಸುತ್ತಿಸುವ. घूर्ण + णिच् "अच्" (३-१-१३४)।

**घूर्णन ಘೂರ್ಣನ** (न०) 1. ಸುತ್ತುವುದು, ತಿರುಗುವುದು. घूर्ण (भ्रमणे) भावे "ल्युट्" (३-३-११५)। "द्राङ्निमेषमिषघूर्णनपूर्णा" नैष० ५-१२६। 2. ಸುತ್ತಾಟ, ಅಲೆದಾಟ, ಓಡಾಟ.

**घूर्णमान ಘೂರ್ಣಮಾನ** (वि०) ಸುತ್ತುತ್ತಿರುವ, ತಿರುಗುತ್ತಿರುವ. घूर्ण (भ्रमणे) कर्त० "शानच्" (३-२-१२४)। "घूर्णमाननयनं स्खलत्कथं स्वेदबिन्दु मदकारणस्मितम्" कुमा० ८-८०।

**घूर्णयत् ಘೂರ್ಣಯತ್** (वि०) ತಿರುಗಿಸುತ್ತಿರುವ. घूर्ण (भ्रमणे) + णिच् "शतृ" (३-२-१२४)। "घूर्णयन् मदिरास्वादमदपाटलितद्युति" माघ० २-१६। स्त्रियाम् **–यन्ती –ಯಂತೀ.**

**घूर्णि ಘೂರ್ಣಿ** (पुं०) ತಿರುಗಾಟ, ಸುತ್ತಾಟ. घूर्ण (भ्रमणे) "इन्" (उ० ४-११७)।

**घूर्णित ಘೂರ್ಣಿತ** (न०) 1. ತಿರುಗಾಟ, ಸುತ್ತಾಟ. घूर्ण (भ्रमणे) भावे "क्तः" (३-३-११४)। (वि०) 2. ತೂಗಾಡಿಸುವ. घूर्ण कर्त० "क्तः" (३-४-७२)। 3. ತಿರುಗಿಸಲ್ಪಟ್ಟ, ಸುತ್ತಿಸಲ್ಪಟ್ಟ. घूर्ण कर्म० "क्तः" (३-२-१०२)।

**घूर्णितवत् ಘೂರ್ಣಿತವತ್** (वि०) ಸುತ್ತಿದ, ತಿರುಗಿದ. घूर्ण (भ्रमणे) "क्तवतुः" (३-२-१०२)।

**घूर्णितव्य ಘೂರ್ಣಿತವ್ಯ** (वि०) 1. ಸುತ್ತಿಸಲ್ಪಡುವ, ತಿರುಗಿಸಲ್ಪಡುವ. 2. ತಿರುಗಿಸಲು ಅರ್ಹವಾದ. 3. ತಿರುಗಿಸಲು ಶಕ್ಯವಾದ. घूर्ण (भ्रमणे) कर्मादौ "तव्यः" (३-१-९६)। "अनीयर्"। **घूर्णनीयम् ಘೂರ್ಣನೀಯಮ್.**

**घूर्ण्यमान ಘೂರ್ಣ್ಯಮಾನ** (वि०) ತಿರುಗಿಸಲ್ಪಡುತ್ತಿರುವ, ಸುತ್ತಿಸಲ್ಪಡುತ್ತಿರುವ. घूर्ण (भ्रमणे) + णिच् कर्म० "शानच्" (३-२-१२४)।

**घृ—क्षरणदीप्त्योः** (जुहो० पर० क्षरणे सक० दीप्तौ अक० अनि०)। जिघर्ति। जघार। घर्ता। घरिष्यति। जिघर्तु। अजिघः। घरेत्। जिघ्रियात्। ಇತ್ಯಾದಿ. 1. ಸ್ರವಿಸು, ಸೋರು, ಸುರಿ. 2. ಪ್ರಕಾಶಿಸು, ಹೊಳೆ.

**कर्मणि:**—घ्रियते। जघ्रे। घारिता. घर्ता। घारिष्यते, घरिष्यते। घ्रियताम्। अघ्रियत। घारिषीष्ट, घृषीष्ट। अघारि। अघारिष्यत, अघरिष्यत।

**कृत्सु:**—घर्तव्यम्। घरणीयम्। घार्यम्। घृतम्। घृतवान्। घरन्, घरन्ती। घरणम्। घर्तुम्। घृतम्। घृत्वा। अभिघृत्य।

**घृ–सेचने** (भ्वा० पर० सक० अनि०)। घरति। जघार। घर्ता। घरिष्यति। घरतु। अघरत्। घरेत्। घ्रियात्। ಇತ್ಯಾದಿ.

**कर्मणि:**—घ्रियते। जघ्रे। घारिता, घर्ता। घारिष्यते, घरिष्यते। घ्रियताम्। अघ्रियत। घ्रियेत। घारिषीष्ट, घृषीष्ट। अघारि। ಇತ್ಯಾದಿ.

**कृत्सु:**—ಹಿಂದಿನ ಧಾತುವಿನ ಕೃದಂತ ರೂಪಗಳಂತಾಗುವುವು.

**घृणु–दीप्तौ** (तना० उभ० अक० से०)। घर्णोति, घृणोति। घर्णुते, घृणुते। जघर्ण। जघृणे। घर्णिता। घर्णिष्यति, –ते। घर्णोतु, घृणोतु; घर्णुताम्, घृणुताम्। अघृणोत्। अघृणुत। घृणुयात्। घृण्वीत। ಇತ್ಯಾದಿ. ಪ್ರಕಾಶಿಸು, ಹೊಳೆ.

**घृणा ಘೃಣಾ** (स्त्री०) 1. ದಯೆ, ಕರುಣೆ, ಕನಿಕರ. घृ (सेचने) "नक्" बाहु०। "मन्दमस्यन्निषुलतां घृणया मुनिरेष वः। प्रणुदत्यागतावज्ञं जघनेषु पशूनिव" किरा० १५-१३। 2. ಜುಗುಪ್ಸೆ, ಅಸಹ್ಯತೆ. "अघारि पद्मेषु तदङ्घ्रिणा घृणा क्व तच्छयच्छायलवोऽपि पल्लवे" नैष० १-२०।

**घृणालु ಘೃಣಾಲು** (वि०) ದಯೆಯಿಂದ ಕೂಡಿದ, ಕರುಣೆಯುಳ್ಳ. घृणा "आलुच्" बाहु०। "निष्पादितश्च कार्त्स्न्येन भगवद्भिर्घृणालुभिः" भाग० ४-२२-४३।

**घृणावत् ಘೃಣಾವತ್** (वि०) ಕರುಣೆಯುಳ್ಳ, ದಯೆಯುಳ್ಳ. घृणास्यास्ति "मतुप्" (५-२-९४)। स्त्रियाम् "ङीप्" (४-१-६)। **–वती –ವತೀ.**

**घृणावास ಘೃಣಾವಾಸ** (पुं०) 1. ಕೂಷ್ಮಾಂಡ, ಕುಂಬಳ. "कूष्माण्डस्तु घृणावासः" त्रिकाण्ड०। (वि०) 2. ದಯೆಗೆ ಆಶ್ರಯವಾಗಿರುವವನು.

**घृणि ಘೃಣಿ** (पुं०) 1. ಕಿರಣ, ಕದಿರು. घृ (सेचने) "निः" (उ० ३-४२)। "गभस्तिघृणिघृष्टयः" अम०। 2. ಜ್ವಾಲೆ, ಉರಿ. 3. ತರಂಗ, ಅಲೆ. 4. ಸೂರ್ಯ. (न०) 5. ಜಲ, ನೀರು. 6. ಬೆಂಕಿ. (वि०) 7. ಪ್ರಕಾಶಿಸುವ, ಹೊಳೆಯುವ. "अर्न्यर्चिषोर्घृणिः" नानार्थर०।

**घृणिन् ಘೃಣಿನ್** (वि०) ದಯೆಯುಳ್ಳವನು, ಕನಿಕರವುಳ್ಳವನು. घृणास्यास्ति "इनिः" (५-२-११६)।

**घृणिनिधि ಘೃಣಿನಿಧಿ** (पुं०) ಸೂರ್ಯ.

**घृत ಘೃತ** (न०) 1. ಗಟ್ಟಿಯಾದ ತುಪ್ಪ. 2. ಜಲ, ನೀರು. घृ (सेचने) "क्तः" (उ० ३-८९)। (वि०) 3. ಪ್ರಕಾಶಿಸುವ, ಹೊಳೆಯುವ. घृ (दीप्तौ) कर्त० "क्तः" (३-४-७२)। 4. ಸಿಂಪಡಿಸುವ, ಪ್ರೋಕ್ಷಿಸುವ. घृ (सेचने) कर्त० "क्तः" (३-४-७२)। 5. ಸಿಂಪಡಿಸಲ್ಪಟ್ಟ, ಪ್ರೋಕ್ಷಿಸಲ್ಪಟ್ಟ. घृ (सेचने) कर्म० "क्तः" (३-२-१०२)।

**घृतकेश ಘೃತಕೇಶ** (पुं०) ಅಗ್ನಿ, ಬೆಂಕಿ. घृतो दीप्तः केश इव ज्वाला अस्य।

**घृतदीधिति ಘೃತದೀಧಿತಿ** (पुं०) ಅಗ್ನಿ, ಬೆಂಕಿ. घृतेन दीधितिरस्य। "छागवाहनसृदाकुर्बर्हिषः स्वर्णसप्तघृतमन्त्रदीधितिः" त्रिकाण्ड०।

**घृतप ಘೃತಪ** (पुं० ब० व०) ತುಪ್ಪವನ್ನೇ ಆಹಾರವಾಗಿ ಕುಡಿಯುವ ಒಂದು ಪಿತೃಗಣ. घृतं पिबति – पा (पाने) "कः" (३-२-३)। "घृतपाः सोमपा यव्याः वैश्वानरमरीचिपाः" भा०।

**घृतपूर ಘೃತಪೂರ** (पुं०) ತುಪ್ಪದಲ್ಲಿ ಪಕ್ವವಾದ ಗೋಧಿ ಹಿಟ್ಟಿನ ಒಂದು ಭಕ್ಷ್ಯ. ಸಕ್ಕರೆ ಬೆರೆಸಿದ ಗೋಧಿಹಿಟ್ಟನ್ನು ಹಾಲಿನಲ್ಲಿ ಚೆನ್ನಾಗಿ ಕಲೆಸಿ ತಟ್ಟೆಯ ಮೇಲೆ ಹರಡಿ ಬಿಲ್ಲೆ ಬಿಲ್ಲೆಯಾಗಿ ಕತ್ತರಿಸಿ ತುಪ್ಪದಲ್ಲಿ ಪಕ್ವಮಾಡಿದ ಭಕ್ಷ್ಯವು ಘೃತಪೂರವೆನಿಸುವುದು. "क्षीरेण मर्दितं चूर्णं गोधूमानां सुगालितम्। विस्तार्य सर्पिषा पाच्यं कटाहेऽथ सितान्वितम्। घृतपूरोऽयमुद्दिष्टः कर्पूरमरिचान्वितः"।

**घृतप्रतीक ಘೃತಪ್ರತೀಕ** (पुं०) ಅಗ್ನಿ, ಬೆಂಕಿ.

**घृताची ಘೃತಾಚೀ** (स्त्री०) 1. ಒಬ್ಬ ಅಪ್ಸರಸ್ಸು. घृतमुदकं कारणतयाञ्चति – अञ्चु (गतौ) "क्विन्" (३-२-५९)। "ङीप्" (४-१-५)। 2. ಸರಸ್ವತಿ. 3. ರಾತ್ರಿ.

**घृतान्न ಘೃತಾನ್ನ** (पुं०) 1. ಅಗ್ನಿ, ಬೆಂಕಿ. घृतमाज्यमन्नमस्य। (न०) 2. ತುಪ್ಪದಿಂದ ಕಲೆಸಿದ ಅನ್ನ. घृतेन मिश्रितमन्नम्। (वि०) 3. ತುಪ್ಪವನ್ನು ಆಹಾರವಾಗಿ ಕುಡಿಯುವವನು.

**घृतार्चिस् ಘೃತಾರ್ಚಿಸ್** (पुं०) ಅಗ್ನಿ, ಬೆಂಕಿ. घृतमर्चिर्यस्य।

**घृताहुति ಘೃತಾಹುತಿ** (स्त्री०) ತುಪ್ಪದಿಂದ ಮಾಡುವ ಆಹುತಿ. घृतेन आहुतिः।

**घृताह्व ಘೃತಾಹ್ವ** (पुं०) ತುಪ್ಪದಂತೆ ವಾಸನೆಯು ಹಾಲುಳ್ಳ ಸರಳ ವೃಕ್ಷ, ಸರಳ ದೇವದಾರು ಮರ.

**घृतिन् ಘೃತಿನ್** (त्रि०) 1. ಪ್ರಶಸ್ತವಾದ ತುಪ್ಪವುಳ್ಳ. 2. ಪ್ರಶಸ್ತವಾದ ನೀರುಳ್ಳ. घृतं प्रशस्तमाज्यमुदकं वा अस्त्यस्य "इनिः" (५-२-११५)। "पयस्विनीं घृतिनीमत्युदाराम्" भा० अनु०।

**घृतेली ಘೃತೇಲೀ** (स्त्री०) ಜಿರಳೆ. घृते इलति शेते— इल (स्वप्ने) "अच्" (३-१-१३४)। गौरा० "ङीष्" (४-१-४१)।

**घृतोद ಘೃತೋದ**(पुं०) ಘೃತ ಸಮುದ್ರ, ತುಪ್ಪದ ಕಡಲು. घृतमाज्यमिव स्वादु उदकं यस्य। उदकस्योदादेशः। एवं घृतोदधिः ಘೃತೋದಧಿಃ.

**घृतोदन ಘೃತೋದನ** (पुं०) ಘೃತಮಿಶ್ರಿತವಾದ ಅನ್ನ, ತುಪ್ಪಬೆರೆತ ಅನ್ನ. घृतेन मिश्रः ओदनः।

**घृषु – संघर्षे** (भ्वा० पर० सक० से०)। घर्षति। जघर्ष। घर्षिता। घर्षिष्यति। घर्षतु। अघर्षत्। ಇತ್ಯಾದಿ. 1. ಉಜ್ಜು, ತಿಕ್ಕು. 2. ಪೀಡಿಸು, ಹಿಂಸಿಸು. 3. ಅರೆ, ಪುಡಿಮಾಡು. 4. ಹೊಡೆದಾಡು, ಬಡಿದಾಡು.

**कर्मणि**:—घर्ष्यते। घर्षयां चक्रे, –बभूवे, –आसे। घर्षिता। घर्षिष्यते। घर्ष्यताम्। अघर्ष्यत। घर्ष्येत। ಇತ್ಯಾದಿ.

**कृत्सु**:—घर्षितव्यम्। घर्षणीयम्। घर्ष्यम्। घृष्टः। घृष्टवान्, घृष्टवती। घर्षन्, घर्षन्ती। घर्षितुम्। घृष्टम्। घर्षणम्। घर्षित्वा, घृष्ट्वा। प्रघृष्य।

**घृष्ट ಘೃಷ್ಟ** (वि०) 1. ಅರೆಯಲ್ಪಟ್ಟ. 2. ಪುಡಿಮಾಡಲ್ಪಟ್ಟ. घृषु (संघर्षे) कर्म० "क्तः" (३-२-१०२)। "घृष्टो मलयजो गन्धः सरलश्च नमेरुणा। अगुरुप्रभृतिश्चापि यस्य पङ्कः प्रदीयते"। 3. ತಿಕ್ಕಲ್ಪಟ್ಟ, ಉಜ್ಜಲ್ಪಟ್ಟ. 4. ಪೀಡಿಸಲ್ಪಟ್ಟ, ಹಿಂಸಿಸಲ್ಪಟ್ಟ.

**घृष्टि ಘೃಷ್ಟಿ** (पुं०) 1. ಸೂಕರ, ಹಂದಿ. घृषु (संघर्षे) "क्तिच्"(३-३-१७४)। (स्त्री०)2. ಸ್ಪರ್ಧೆ, ಹೋರಾಟ. 3. ತಿಕ್ಕಾಟ. 4. ಹೊಡೆದಾಟ, ಜಗಳ. घृषु भावे "क्तिन्" (३-३-९४)। 5. ವಾರಾಹೀಗಿಡ, ಹಂದಿಗೆಡ್ಡೆ. "विष्वक्सेनप्रिया घृष्टिर्वाराही बदरेत्यपि" अम०। 6. ವಿಷ್ಣುಕ್ರಾಂತಗಿಡ. "घृष्टिः स्त्री घर्षणस्पर्धाविष्णुक्रान्तासु ना किरौ" मेदि०।

**घृष्टिला ಘೃಷ್ಟಿಲಾ** (स्त्री०) ನರಿ ಬಾಲದ ಹುಲ್ಲು.

**घोट ಘೋಟ** (पुं०) ಅಶ್ವ, ಕುದುರೆ. घुट (परिवर्तने) "अच्" (३-१-१३४)। स्त्रियाम् जाति० "ङीष्" (४-१-६३)। घोटी ಘೋಟೀ.

**घोटक ಘೋಟಕ** (पुं०) ಅಶ್ವ, ಕುದುರೆ. घुट (प्रतिघाते) "ण्वुल्" (३-१-१३३)। ಪೂರ್ವಕಾಲದಲ್ಲಿ ಕುದುರೆಗಳಿಗೆ ರೆಕ್ಕೆಗಳಿದ್ದುವು. ಅವು ಅಂತರಿಕ್ಷದಲ್ಲಿ ಸಂಚರಿಸುತ್ತಿದ್ದುವು. ಶಾಲಿಹೋತ್ರನು ಇಂದ್ರನ ಆಜ್ಞೆಯಂತೆ ಅವುಗಳ ರೆಕ್ಕೆಗಳನ್ನು ಕತ್ತರಿಸಿದುದರಿಂದ ಅಂದಿನಿಂದ ಭೂಮಿಯನ್ನು ಸೇರಿದುವು. "सपक्षा वाजिनः पूर्वं संजाता व्योमचारिणः। गन्धर्वेभ्यो यथाकामं गच्छन्ति च समन्विताः॥ इन्द्रादेशात् शालिहोत्रस्तेषां पक्षमयाच्छिनत्। ततःप्रभृति निष्पक्षास्तुरङ्गा धरणीं गताः॥

**ಅಶ್ವಗಳ ಮೈಮೇಲಿರುವ ಸುಳಿಗಳ ಫಲ:** ಮೂಗಿನ ತುದಿ, ಹಣೆಯ ತುದಿ, ಶಂಖ (ಹಣೆಯ ಮೂಳೆ), ಕತ್ತು, ಮತ್ತು ತಲೆಗಳಲ್ಲಿ ಸುಳಿಯಿದ್ದರೆ ಅದು ಶ್ರೇಷ್ಠವಾದ ಕುದುರೆ.

ಹಣೆ, ಪೃಷ್ಠಗಳು ಮತ್ತು ತಲೆಗಳಲ್ಲಿ ಸುಳಿಗಳಿರುವ ಕುದುರೆಯು ಶ್ರೇಷ್ಠವಾದುದು,

ಬಲಕೆನ್ನೆಯಲ್ಲಿ ಸುಳಿಯಿರುವ ಕುದುರೆಯು ಯಜಮಾನನಿಗೆ ಬಹಳ ಸೌಖ್ಯಕರವಾದುದು. ಕಿವಿಗಳ ಬುಡದಲ್ಲಿಯೂ ಸ್ತನಗಳ ಮಧ್ಯದಲ್ಲಿಯೂ ವಿಜಯವೆಂಬ ಸುಳಿಗಳಿರುವ ಕುದುರೆಯು ಯುದ್ಧದಲ್ಲಿ ಜಯವನ್ನು ಉಂಟುಮಾಡುವುದು. "नासिकाग्रे ललाटाग्रे शङ्खे कण्ठे च मस्तके। आवर्तो जायते येषां ते धन्यास्तु तुरङ्गमाः॥ ललाटे यस्यचावर्तो द्वितीयस्तु कुकुन्दरे। मस्तके च तृतीयस्तु स विज्ञेयो हयोत्तमः॥ गण्डावर्तो भवेद्यस्य वाजिनो दक्षिणाश्रयः। स करोति महासौख्यं स्वामिनः शिवसंज्ञितः॥ कर्णमूले यदावर्तः स्तनमध्ये तथापरः। विजयाख्यावुभौ तौ तु युद्धकाले जयप्रदौ॥ ಇತ್ಯಾದಿ.

**ಅಶ್ವಗಳಲ್ಲಿರುವ ದೋಷಗಳು:** ಮೈಯೆಲ್ಲಾ ಬಿಳುಪಾಗಿದ್ದು ನಾಲ್ಕು ಕಾಲುಗಳೂ ಕಪ್ಪಗಿರುವ ಕುದುರೆಯು ತ್ಯಾಜ್ಯವು. "चत्वारोऽप्यसिताः पादाः सर्वश्वेतस्य वाजिनः। भवन्ति यस्य स त्याज्यो यमदूतः सुदूरतः"॥

ನಾಲ್ಕು ಕಾಲುಗಳೂ ಒಂದಕ್ಕೊಂದು ಭಿನ್ನವರ್ಣದವುಗಳಾಗಿದ್ದರೆ ಅಂತಹ ಅಶ್ವವು ಕುಲನಾಶವನ್ನುಂಟುಮಾಡುವುದು. "चत्वारो यस्य वै पादाः परस्परविवर्णकाः। स त्याज्यो मुसली नाम्ना मुनिभिः कुलनाशनः"॥

ಎಡ ಕೆನ್ನೆಯಲ್ಲಿ ಮಾತ್ರ ಸುಳಿಯಿರುವ ಚರ್ವಣಿಯೆಂಬ ಕುದುರೆಯು ಯಜಮಾನನಿಗೆ ಕೇಡುಂಟುಮಾಡುವುದರಿಂದ ಅದು ಪರಿತ್ಯಾಜ್ಯವು. "एको वामकपोलस्थो यस्यावर्तः प्रदृश्यते। चर्वणी स हयस्त्याज्यः कुरुते स्वामिनाशनम्"। ಇತ್ಯಾದಿ.

ಕುದುರೆಯ ಮೇಲೆ ವರ್ಷಋತುವಿನಲ್ಲಿ ಪ್ರಯಾಣ ಮಾಡಕೂಡದು. "न प्राज्ञो वाहयेदश्वान् प्रावृट्काले कथंचन। मदीच्छेवमृतं तस्य वाहनं दशमासिकम्"।

ಸಾತ್ತ್ವಿಕ, ರಾಜಸ ಮತ್ತು ತಾಮಸಗಳೆಂದು ಕುದುರೆಗಳಲ್ಲಿ ಮೂರು ಜಾತಿಗಳುಂಟು. "सात्त्विका राजसाश्चेति तामसाश्चेति ते हयाः"॥

ಶುದ್ಧವರ್ಣದ, ಬಹಳ ವೇಗವಾಗಿ ನಡೆಯುವ, ಸ್ವಲ್ಪವೂ ಆಯಾಸವಾಗದಿರುವ, ಹೆಚ್ಚು ಆಹಾರವನ್ನು ತಿನ್ನುವ, ಕೋಪವಿಲ್ಲದ ಆದರೆ ಯುದ್ಧಕಾಲದಲ್ಲಿ ಮಾತ್ರ ಕೋಪವನ್ನು ತೋರಿಸುವ ಕುದುರೆಗಳು ಸಾತ್ತ್ವಿಕ ಗುಂಪಿಗೆ ಸೇರಿದುವು. "ये शुद्धवर्णा भृशवेगयुक्ता अश्रान्तिभाजो बहुभोगिनश्च। अक्रोधशीलाः समरेऽतिरुष्टास्ते सात्त्विका भूप तुरङ्गमाः स्युः"॥

ಕೆಂಪು ಬಣ್ಣದ, ಹೆಚ್ಚು ವೇಗವುಳ್ಳ, ಕೋಪಸ್ವಭಾವದ, ಚಾವಟಿಯ ಏಟನ್ನೂ ಸಹಿಸದ, ಬಲಿಷ್ಠವಾದ ಮತ್ತು ಉದ್ದದ ಮೈಯುಳ್ಳ ಕುದುರೆಗಳು ರಾಜಸ ಗುಂಪಿಗೆ ಸೇರಿದುವು. "ये रक्तवर्णा गुरुवेगरोषाः कशाभिघातं न हि ये सहन्ते। येऽमी बलाढ्याः खलु दीर्घदेहाः ते राजसा भूप तुरङ्गमाः स्युः"॥

ಕಪ್ಪು ಬಣ್ಣದ, ಕಡಮೆ ವೇಗವುಳ್ಳ, ಸಾಮಾನ್ಯ ಕೋಪಸ್ವಭಾವದ, ಕೊಂಚ ಆಹಾರವನ್ನು ತಿನ್ನುವ, ಸಾಮಾನ್ಯ ಬಲವುಳ್ಳ ಮತ್ತು ಉತ್ತಮ ಗುಣಗಳಿಲ್ಲದ ಕುದುರೆಗಳು ತಾಮಸ ಗುಂಪಿಗೆ ಸೇರಿದುವು. "ये कृष्णवर्णास्तनुरोषवेगा अल्पाशिनो लक्षणलक्षिताश्च। ये दुर्बलाः सर्वगुणैर्विहीनास्ते तामसा भूप तुरङ्गमाधमाः"॥

**घोटकमुख ಘೋಟಕಮುಖ** (पुं०) ಕುದುರೆಯ ಮುಖದಂತೆ ಮುಖವುಳ್ಳ ಕಿಂಪುರುಷ. घोटकस्य मुखमिव मुखं यस्य।

**घोटकारि ಘೋಟಕಾರಿ** (पुं०) 1. ಕುದುರೆಗೆ ಶತ್ರುವಾದ ಎಮ್ಮೆಕೋಣ. घोटकस्यारिः। 2. ಗನ್ನೇರಿಳೆ.

**घोणा ಘೋಣಾ** (स्त्री०) 1. ಮೂಗು. 2. ಕುದುರೆಯ ಮೂಗು. 3. ಹಂದಿಯ ಮೂಗಿನ ಹೊಳ್ಳೆ. घुण (भ्रमणे) "अच्" (३-१-१३४)। "घुरघुरायमाणघोरघोणेन" काद०। "भित्त्वा घोणामायसेनाधिवक्षः" माघ० १८-२२।

**घोणिन् ಘೋಣಿನ್** (पुं०) ವರಾಹ, ಹಂದಿ. दीर्घा घोणा अस्त्यस्य "इनिः" (५-२-११६)। स्त्रियाम् "ङीप्" (४-१-५)। **घोणिनी ಘೋಣಿನೀ.** "दंष्ट्री घोणी स्तब्धरोमा क्रोडो भूदार इत्यपि" अम०।

**घोण्टा ಘೋಂಟಾ** (स्त्री०) 1. ಅಡಕೆಮರ. 2. ಬೋರೆಗಿಡ, ಎಲಚಿಮರ. घुण (भ्रमणे) "टः" बाहु०। "घोण्टा तु बदरीपूगवृक्षयोरपि योषिति" मेदि०।

**घोनस ಘೋನಸ** (पुं०) ಹೆಬ್ಬಾವು, ದಾಸರಹಾವು. गोनस पृषो०।

**घोर ಘೋರ** (पुं०) 1. ಪರಶಿವ, ಮಹಾದೇವ. "घोराय घोररूपाय घोरघोरतराय च" भा० शान्ति० २९०-१०१। 2. ವಿಷ, ನಂಜು. (वि०) 3. ಭಯಂಕರವಾದ. हन (हिंसागत्योः) "अच्" घुरादेशश्च (उ० ५-६४)। "शिवाघोरस्वनां पश्चाद्बुबुधे विकृतेति ताम्" रघु० १२-३९।

**घोरक ಘೋರಕ** (पुं० ब० व०) ಒಂದು ದೇಶ. "काश्मीराश्च कुमाराश्च घोरका हंसकास्तथा" भा० सभा० ७८-८९।

**घोरघोरतर ಘೋರಘೋರತರ** (पुं०) ಪರಶಿವ, ಮಹಾದೇವ. "घोराय घोररूपाय घोरघोरतराय च" भा० शान्ति० २९०-१०१।

**घोरदर्शन ಘೋರದರ್ಶನ** (पुं०) 1. ಉಲೂಕ, ಗೂಬೆ. घोरं दृश्यतेऽसौ – दृशिर् (प्रेक्षणे) कर्म० "ल्युट्" (३-३-११३)। स्त्रियाम् "ङीष्" (४-१-६३)। (वि०) 2. ಭಯಂಕರವಾದ. "वीक्षांचक्रे महाबाहुस्तद्वनं घोरदर्शनम्" भा०।

**घोररासन ಘೋರರಾಸನ** (पुं०) 1. ಜಂಬುಕ, ನರಿ. घोरं रासनं शब्दोऽस्य। स्त्रियाम् जाति० "ङीष्"(४-१-६३)। (वि०) 2. ಭಯಂಕರ ಶಬ್ದದಿಂದ ಕೂಡಿದ.

**घोररासिन् ಘೋರರಾಸಿನ್** (पुं०) 1. ಜಂಬುಕ, ನರಿ. घोरं रसति – रस (शब्दे) "णिनिः" (३-२-७८)। स्त्रियाम् "ङीप्" (४-१-५)। **–रासिनी –ರಾಸಿನೀ.** (वि०) 2. ಭಯಂಕರವಾಗಿ ಶಬ್ದಮಾಡುವ.

**घोररूप ಘೋರರೂಪ** (पुं०) 1. ಪರಮೇಶ್ವರ, ಮಹಾದೇವ. घोरं रूपमस्य। (वि०) 2. ಭಯಂಕರವಾದ ಆಕಾರವುಳ್ಳ. घोरं रूपं यस्य। "उच्चैः स्थानं घोररूपं नक्षत्राणामिव ग्रहम्" मनु० ७-१२१।

**घोरवाशन ಘೋರವಾಶನ** (पुं०) 1. ಜಂಬುಕ, ನರಿ. घोरं वाश्यते – वाशृ (शब्दे) "ल्युः" (३-१-१३४)। स्त्रियाम् जाति० "ङीष्" (४-१.६३)। (वि०) 2. ಭಯಂಕರವಾಗಿ ಶಬ್ದಮಾಡುವ.

**घोरवाशिन् ಘೋರವಾಶಿನ್** (पुं०) 1. ಜಂಬುಕ, ನರಿ. घोरं वाश्यते – वाशृ (शब्दे) "णिनिः" (३-२-७८)। स्त्रियाम् "ङीप्" (४-१-५)। **–वाशिनी –ವಾಶಿನೀ.** (वि०) 2. ಭಯಂಕರವಾಗಿ ಶಬ್ದಮಾಡುವ.

**घोरा ಘೋರಾ** (स्त्री०) 1. ರಾತ್ರಿ. 2. ದೇವತಾಳೆವೃಕ್ಷ.

**घोराराव ಘೋರಾರಾವ** (पुं०) ಭಯಂಕರವಾದ ಶಬ್ದ. घोर आरावः।

**घोल ಘೋಲ** (पुंन०) ನೀರು ಬೆರೆಸದ ಕಡೆದ ಮೊಸರು. "यत्तु सस्नेहमजलं मथितं घोलमुच्यते" सुश्रुत० सूत्र० ४५-८५। "हिङ्गुजीरयुतं घोलं सैन्धवेन च संयुतम्। भवेदतीव वातघ्नमर्शोऽतीसारहृत् परम्। रुचिदं पुष्टिदं बल्यं बस्तिशूलविनाशनम्। मूत्रकृच्छ्रे तु सगुडं पाण्डुरोगे सचित्रकम्" भावप्र०।

**घोष ಘೋಷ** (पुं०) 1. ಗೋಪಾಲಕ, ಗೊಲ್ಲ. घोषति— घुषिर् (अविशब्दने) "अच्" (३-१-१३४)। 2. ಗೊಲ್ಲರ ಹಳ್ಳಿ. घोषन्ति गावोऽत्र—घुषिर् "घञ्" (३-३-१२१)। "हैयङ्गवीनमादाय घोषवृद्धानुपस्थितान्" रघु० १-४५। 3. ಧ್ವನಿ, ಶಬ್ದ. "रथ्याघोषैर्बृंहणैर्वारणानामैक्यं गच्छन् वाजिनां ह्लेषया च" माघ० १८-३। "स्वघोषनिर्ह्लादितविश्वघोषाम्" याद० ४-७। 4. ಮೇಘದ ಶಬ್ದ, ಗುಡುಗು. "संगीताय प्रहतमुरजाः स्निग्धगम्भीरघोषम्" मेघ० २-१। 5. ಹಳ್ಳಿ, ಕೊಪ್ಪಲು, ಸಣ್ಣ ಗ್ರಾಮ. "गङ्गायां घोषः"। 6. ಕಂಚು. 7. ಶಬ್ದಗಳನ್ನು ಉಚ್ಚರಿಸುವ ಹನ್ನೊಂದು ವಿಧ ಬಾಹ್ಯ ಪ್ರಯತ್ನಗಳಲ್ಲೊಂದು. (1) विवारः, (2) संवारः, (3) श्वासः, (4) नादः, (5) घोषः, (6) अघोषः, (7) अल्पप्राणः, (8) महाप्राणः, (9) उदात्तः, (10) अनुदात्तः ಮತ್ತು (11) स्वरितः ಇವು ಹನ್ನೊಂದು ವಿಧ ಬಾಹ್ಯ ಪ್ರಯತ್ನಗಳು. 8. ಮಶಕ, ಸೊಳ್ಳೆ. "अथ मशको घोषो रणरणश्च सः" त्रिकाण्ड०। (वि०)9. ಪ್ರಚಾರಪಡಿಸುವವನು, ಸಾರುವವನು. (स्त्री०) **-षा -ಷಾ.** 10. ಕಾಡುಸಬ್ಬಸಿಗೆ. "घोषस्तु घोषके ध्वाने गोपालाभीरपल्लिषु। घोषा तु शतपुष्पायां घोषः कांस्येऽम्बुदध्वनौ" मेदि०।

**घोषक ಘೋಷಕ** (पुं०)1. ಕಹಿಸೋರೆ ಗಿಡ. (वि०)2. ಪ್ರಚಾರಪಡಿಸುವವನು, ಸಾರುವವನು. घुषिर् (अविशब्दने) "ण्वुल्" (३-१-१३३)।

**घोषण ಘೋಷಣ** (न०)1. ಧ್ವನಿ, ಶಬ್ದ. घुषिर् (अविशब्दने) "ल्युट्"। 2. ಪ್ರಚಾರಪಡಿಸುವುದು, ಸಾರುವುದು. "युच्" (३-३-१०७)। **घोषणा ಘೋಷಣಾ.** "दिग्विजृम्भितकाकुत्स्थपौलस्त्यजयघोषणः" रघु० १२-७२।

**घोषत् ಘೋಷತ್** (वि०) ಸಾರುತ್ತಿರುವ, ಡಂಗುರ ಹೊಡೆಯುತ್ತಿರುವ.

**घोषयितृ ಘೋಷಯಿತೃ** (वि०) ಪ್ರಚಾರಪಡಿಸುವವನು, ಸಾರಿಸುವವನು, ಡಂಗುರ ಹೊಡಿಸುವವನು. घुषिर् (अविशब्दने) + णिच् "तृच्" (३-१-१३३)। स्त्रियाम् "ङीप्" (४-१-५)। **-यित्री -ಯಿತ್ರೀ.**

**घोषयित्नु ಘೋಷಯಿತ್ನು** (पुं०) 1. ಬ್ರಾಹ್ಮಣ. 2. ಕೋಗಿಲೆ. (वि०)3. ಪ್ರಚಾರಪಡಿಸುವವನು, ಸಾರುವವನು. 4. ಸ್ತುತಿಪಾಠಕ, ಹೊಗಳು ಭಟ. "घोषयित्नुस्तु विप्रकोकिलयोः पुमान्" मेदि०।

**घोषवत् ಘೋಷವತ್** (वि०) 1. ಶಬ್ದದಿಂದ ಕೂಡಿದ, ಧ್ವನಿಯಿಂದ ಕೂಡಿದ. घोषो ध्वनिरस्यास्ति "मतुप्" (५-२-९४)। 2. ಒಂದು ವಿಧ ಬಾಹ್ಯ ಪ್ರಯತ್ನದಿಂದ ಕೂಡಿದ (ವರ್ಣ). स्त्रियाम् "ङीप्" (४-१-६)। **-वती -ವತೀ.**

**घोषवती ಘೋಷವತೀ** (स्त्री०) ವೀಣೆ.

**घोषित ಘೋಷಿತ** (न०)1. ಧ್ವನಿ, ಶಬ್ದ. घुषिर् (अविशब्दने) भावे "क्तः" (३-३-११४)। (वि०)2. ಘೋಷಿಸಲ್ಪಟ್ಟ, ಸಾರಲ್ಪಟ್ಟ. घुषिर् "क्तः" (३-२-१०२)। "दूषणजलनिधिशोषणतोषितऋषिगणघोषितविजयघोषण" रघु० ग०।

**घ्रा – गन्धोपादाने** (भ्वा० पर० अक० अनि०)। जिघ्रति। जघ्रौ जघ्रतुः जघ्रुः। घ्राता। घ्रास्यति। जिघ्रतु। अजिघ्रत्। जिघ्रेत्, घ्रेयात्। अघ्रात्, अघ्रासीत्।

**कर्मणि :**—घ्रायते। जघ्रे। घ्राता, घ्रायिता। घ्रायिष्यते, घ्रास्यते। घ्रायताम्। अघ्रायत। घ्रायेत। घ्रायिषीष्ट, घ्रासीष्ट। ಇತ್ಯಾದಿ.

**णिचि :**—घ्रापयति, -ते। घ्रापयां चकार, -चक्रे, बभूव, -आस। घ्रापयिता। घ्रापयिष्यति, -ते। घ्रापयतु, -ताम्। अघ्रापयत्, -त। घ्रापयेत्, -त। ಇತ್ಯಾದಿ.

**सनि :**—जिघ्रासति। जिघ्रासां चकार, -बभूव, -आस। जिघ्रासिता। जिघ्रासिष्यति। जिघ्रासतु। ಇತ್ಯಾದಿ.

**कृत्सु :**—घ्रातव्यः। घ्राणीयः। घ्रेयः। घ्राणः, घ्रातः। घ्राणवान्, घ्रातवान्। जिघ्रन्, जिघ्रन्ती, घ्रातुम्। घ्राणम्, घ्रातम्। घ्रात्वा। आघ्राय।

**घ्राण ಘ್ರಾಣ** (न०) 1. ಮೂಗು, ವಾಸನೆಯನ್ನು ಕಂಡು ಹಿಡಿಯುವ ಒಂದು ಇಂದ್ರಿಯ. घ्रायतेऽनेन—घ्रा (गन्धोपादाने) कर० "ल्युट्" (३-३-११७)। 2. ವಾಸನೆ

ನೋಡುವುದು, ಮೂಸಿನೋಡುವುದು. घ्रा भावे "ल्युट्" (३-३-११५)। "घ्राणेन सूकरो हन्ति पक्षवातेन कुक्कुटः" मनु० ३-२४१। (वि०) 3. ವಾಸನೆ ಹಿಡಿಯಲ್ಪಟ್ಟ, ಮೂಸಿನೋಡಲ್ಪಟ್ಟ. घ्रा कर्म० "क्तः" (३-२-१०२)। तकारस्य वा नत्वम् (८-२-५६)। पक्षे घ्रातः ಘ್ರಾತಃ.

**घ्राणज ಘ್ರಾಣಜ** (न०) ಘ್ರಾಣೇಂದ್ರಿಯದಿಂದ ಉಂಟಾದ ಒಂದು ಪ್ರತ್ಯಕ್ಷ. ಇದು ಆರು ವಿಧ ಪ್ರತ್ಯಕ್ಷಗಳಲ್ಲಿ ಒಂದು ಭೇದ. घ्राणे जायते – जनी (प्रादुर्भावे) "डः" (३-२-९७)। "घ्राणजादिप्रभेदेन प्रत्यक्षं षड्विधं स्मृतम्" भाषाप०।

**घ्राणतर्पण ಘ್ರಾಣತರ್ಪಣ** (पुं०) ಸುವಾಸನೆ, ಸುಗಂಧ. घ्राणं घ्राणेन्द्रियं तर्पयति – तृप (तृप्तौ) + णिच् "ल्युः" (३-१-१३४)। "सुरभिर्घ्राणतर्पणः" अम०।

**घ्राणश्रवस् ಘ್ರಾಣಶ್ರವಸ್** (पुं०) ಕಾರ್ತಿಕೇಯನ ಒಬ್ಬ ಸೈನಿಕ. घ्राणमिव श्रवः कर्णोऽस्य। "घ्राणश्रवाः प्रतिस्कन्धः काञ्चनाक्षो जलन्धरः" भा० अनु०।

**घ्राणीय ಘ್ರಾಣೀಯ**(वि०)1. ವಾಸನೆ ಹಿಡಿಯಲ್ಪಡುವ, ಆಘ್ರಾಣಿಸಲ್ಪಡುವ, ಮೂಸಿನೋಡಲ್ಪಡುವ. 2. ಆಘ್ರಾಣಿಸಲು ಯೋಗ್ಯವಾದ. 3. ಆಘ್ರಾಣಿಸಬೇಕಾದ. घ्रा (गन्धोपादाने) कर्मादौ "अनीयर्" (३-१-९६)। "तव्यः"। घ्रातव्यः ಘ್ರಾತವ್ಯಃ.

**घ्रात ಘ್ರಾತ** (न०) "घ्राण" ಪದದಲ್ಲಿ ನೋಡಿ.

**घ्रातवत् ಘ್ರಾತವತ್** (वि०) ವಾಸನೆ ಹಿಡಿದವನು, ಮೂಸಿನೋಡಿದವನು. घ्रा (गन्धोपादाने) "क्तवतुः"। स्त्रियाम् "ङीप्" (४-१-६)। –वती –ವತೀ.

**घ्राति ಘ್ರಾತಿ** (स्त्री०) 1. ಘ್ರಾಣೇಂದ್ರಿಯ, ಮೂಗು. घ्रायतेऽनेन – घ्रा (गन्धोपादाने) कर० "क्तिन्" (३-३-९४)। 2. ವಾಸನೆ ಹಿಡಿಯುವುದು, ಮೂಸಿನೋಡುವುದು. घ्रा भावे "क्तिन्"। "ब्राह्मणस्य रुजः कृत्वा घ्रातिरघ्रेयमद्ययोः" मनु० ११-६७।

**घ्रातृ ಘ್ರಾತೃ** (वि०) ವಾಸನೆ ಹಿಡಿಯುವವನು. घ्रा (गन्धोपादाने) "तृच्" (३-१-१३३)। स्त्रियाम् "ङीप्" (४-१-५)। घ्रात्री ಘ್ರಾತ್ರೀ.

**घ्रेय ಘ್ರೇಯ** (वि०) 1. ಆಘ್ರಾಣ ಮಾಡಬೇಕಾದ. 2. ಆಘ್ರಾಣ ಮಾಡಬಹುದಾದ. 3. ಆಘ್ರಾಣ ಮಾಡಲ್ಪಡುವ. घ्रा (गन्धोपादाने) "यत्" (३-१-९७)।

**इति "घ" कारादिपदार्थनिरूपणम्**

---

# ङ

**ङ ಙ** ಇದು ವ್ಯಂಜನಾಕ್ಷರಗಳಲ್ಲಿ "क" ವರ್ಗದ ಐದನೆಯ ಮತ್ತು ಆಭ್ಯಂತರ ಸ್ಪೃಷ್ಟ ಪ್ರಯತ್ನದಿಂದ ಕಂಠ ಮತ್ತು ನಾಸಿಕೆಗಳಲ್ಲಿ ಹುಟ್ಟುವ (ಅನುನಾಸಿಕ) ವರ್ಣ. "कादयो मावसानाः स्पर्शाः"। "स्पृष्टं प्रयतनं स्पर्शानाम्"। "अकुहविसर्जनीयानां कण्ठः"। "ञमङणनानां नासिका च" सि० कौ०।

**ङ ಙ** (पुं०) 1. ಭೈರವ, ಈಶ್ವರ. 2. ವಿಷಯ, ಇಂದ್ರಿಯಕ್ಕೆ ಗೋಚರವಾಗುವ ವಸ್ತು. 3. ಅಪೇಕ್ಷೆ, ಆಸೆ.

**इति "ङ" कारादिपदार्थनिरूपणम्।**

---

# च

**च ಚ** ಇದು ವ್ಯಂಜನಾಕ್ಷರಗಳಲ್ಲಿ "च" ವರ್ಗದ ಮೊದಲನೆಯ ಮತ್ತು ಅಭ್ಯಂತರ ಸ್ಪೃಷ್ಟ ಪ್ರಯತ್ನದಿಂದ ತಾಲು (ದವಡೆ) ಸ್ಥಾನದಲ್ಲಿ ಹುಟ್ಟುವ ಅಕ್ಷರ.

**च ಚ** (ಪುಂ)1. ಚಂದ್ರ. चीयते किरणैः — चिञ् (चयने) "डः" (३-२-१०१)। 2. ಕೂರ್ಮ, ಆಮೆ. चिनोति अङ्गम्। 3. ಶಿವ, ಈಶ್ವರ. 4. ಚರ್ವಣ, ಅಗಿಯುವುದು. 5. ಚೋರ, ಕಳ್ಳ. चिनोति परधनम्। "चश्चण्डेशे पुमानुक्तः कच्छपे चन्द्रचौरयोः" मेदि०। (वि०) 6. ನೀಚ, ಅಧಮ, ದುರ್ಜನ. (अव्य०) ಅವ್ಯಯ "च" ಕಾರವು ಈ ಕೆಳಗಿನ ಅರ್ಥಗಳಲ್ಲಿ ಪ್ರಯೋಗಿಸಲ್ಪಡುವುದು : 7. ಪಾದಪೂರಣ. "अश्वं नैव गजं नैव व्याघ्रं नैव च नैव च"। 8. ಅವಧಾರಣ. "ते तु यावन्त एवाजौ तावांश्च ददृशे स तैः" रघु० १२-४५। 9. ಹೇತು, ಕಾರಣ. 10. ಸಮುಚ್ಚಯ; ಪರಸ್ಪರ ನಿರಪೇಕ್ಷವಾದಂವುಗಳಿಗೆ ಏಕಕ್ರಿಯೆಯಲ್ಲಿ ಅನ್ವಯವು ಸಮುಚ್ಚಯ. "समुच्चयान्वाचयेतरेतरयोगसमाहाराश्चार्थाः"। (1) परस्परनिरपेक्षस्यानेकस्य एकस्मिन् अन्वयः समुच्चयः। "ईश्वरं गुरुं च भजस्व"। "तौ गुरुर्गुरुपत्नी च प्रीत्या प्रतिननन्दतुः" रघु० १-५७। 11. ಅನ್ವಾಚಯ, ಪ್ರಧಾನ ಕಾರ್ಯದೊಡನೆ ಅಪ್ರಧಾನ ಕಾರ್ಯವನ್ನು ಹೇಳುವುದು ; ಎರಡು ಪದಗಳಲ್ಲಿ ಯಾವುದಾದರೊಂದಕ್ಕೆ ಒಂದು ಕ್ರಿಯಾಪದದಲ್ಲಿ ಉದ್ದೇಶವಾದ ಅನ್ವಯವೂ ಮತ್ತೊಂದಕ್ಕೆ ಇನ್ನೊಂದು ಕ್ರಿಯೆಯಲ್ಲಿ ಆನುಷಂಗಿಕವಾದ (ಉದ್ದೇಶವಿಲ್ಲದ) ಅನ್ವಯವೂ ಇರುವುದು ಅನ್ವಾಚಯವಾಗುವುದು. (2) "अन्यतरस्यानुषङ्गिकत्वेनान्वयः अन्वाचयः"। "भिक्षामट गां चानय" ಎಂಬಲ್ಲಿ ಭಿಕ್ಷಾಟನೆಯು ಪ್ರಧಾನವಾದುದು. ಅದರೊಡನೆ ಗವಾನಯನರೂಪವಾದ ಅಪ್ರಧಾನವಾದ ಕಾರ್ಯದಲ್ಲಿ "गो" ಪದಕ್ಕೆ ಆನಯನ ಕ್ರಿಯೆಯಲ್ಲಿ ಆನುಷಂಗಿಕವಾದ ಅನ್ವಯವನ್ನು ಹೇಳಿರುವುದರಿಂದ ಇಲ್ಲಿ ಅನ್ವಾಚಯ. 12. ಇತರೇತರ ಯೋಗ ; ಪರಸ್ಪರ ಸಂಬಂಧದ ಅಪೇಕ್ಷೆಯಿರುವ ಅನೇಕ ಪದಗಳಿಗೆ ಒಂದು ಕ್ರಿಯಾಪದದಲ್ಲಿ ಅನ್ವಯವು ಇರುವಲ್ಲಿ ಇತರೇತರ ಯೋಗವು. (3) "मिलितानामन्वये इतरेतरयोगः"। परस्परापेक्षितानां समुदितानामेकस्मिन् क्रियापदे अन्वयः यत्र तत्र इतरेतरयोगः। "हरिश्च हरश्च मुकुन्दश्च हरिहरमुकुन्दाः"। ಇಲ್ಲಿ ಪರಸ್ಪರ ಸಾಹಚರ್ಯವು "च"ದ ಅರ್ಥ. 13. ಸಮಾಹಾರ, ಸಮೂಹ ; ಪರಸ್ಪರ ಒಟ್ಟುಗೂಡಿರುವುದು ಸಮೂಹ. संज्ञा च परिभाषा च अनयोः समाहारः संज्ञापरिभाषम्। ಸಂಜ್ಞೆ ಮತ್ತು ಪರಿಭಾಷೆಗಳ ಸಮೂಹವೆಂದು ಅರ್ಥ. 14. ಪಕ್ಷಾಂತರ. 15. ವಿರೋಧ. "शान्तमिदमाश्रमपदं स्फुरति च बाहुः कुतः फलमिहास्य" शाकु० १-१६। "चान्वाचये समाहारेऽप्यन्योन्यार्थे समुच्चये। पक्षान्तरे तथा पादपूरणेऽप्यवधारणे" मेदि०।

**चक — तृप्तौ प्रतिघाते च** (भ्वा० आत्म० अक० से०)। चकते। चेके। चकिता। चकिष्यते। चकताम्। अचकत। चकेत। चकिषीष्ट। अचकिष्ट। अचकिष्यत। 1. ತೃಪ್ತಿಹೊಂದು. 2. ಅಡ್ಡಿಪಡಿಸು, ತಡೆಗಟ್ಟು. चक ಧಾತುವನ್ನು ಘಟಾದಿಯಲ್ಲಿ ಪರಸ್ಮೈಪದಿ ಧಾತುಗಳ ಮಧ್ಯೆ ತೃಪ್ತಿ ಎಂಬ ಅರ್ಥದಲ್ಲಿ ಅನುವಾದ ಮಾಡಿರುವುದರಿಂದ ಪರಸ್ಮೈಪದಿಯಾಗಿಯೂ ಇದರ ಪ್ರಯೋಗವುಂಟು. चकति। चचाक। चकिता। चकिष्यति। चकतु। ಇತ್ಯಾದಿ.

**भावे** :—चक्यते। चक्यताम्। अचक्यत। चक्येत ಇತ್ಯಾದಿ.

**चकासृ — दीप्तौ** (अदा० पर० अक० से०)। चकास्ति चकास्तः चकासति। चकास्सि चकास्थः चकास्थ। चकास्मि चकास्वः चकास्मः। चकासां चकार, —बभूव, —आस। चकासिता। चकासिष्यति। चकास्तु। अचकात्, अचकाद् अचकास्ताम् अचकासुः। चकास्यात् चकास्याताम् चकास्युः। चकास्यात् चकास्यास्ताम्। अचकासीत्। अचकासिष्यत्। ಪ್ರಕಾಶಿಸು, ಹೊಳೆ, ಶೋಭಿಸು.

**भावे** :—चकास्यते। चकासां चक्रे, —बभूवे, —आसे। चकासिता। चकासिष्यते। चकास्यताम्। ಇತ್ಯಾದಿ.

**कृत्सु** :—चकासितव्यम्। चकासनीयम्। चकास्यम्। चकासितः। चकासितवान्। चकासत् चकासतौ चकासतः। चकासती। चकासितुम्। चकासितम्। चकासनम्। चकासित्वा।

**चकासत् ಚಕಾಸತ್** (वि०) ಪ್ರಕಾಶಿಸುತ್ತಿರುವ, ಶೋಭಿಸುತ್ತಿರುವ. चकासृ (दीप्तौ) "शतृ" (३-२-१२४)। "चकासतं चारुचमूरुचर्मणा कुथेन नागेन्द्रमिवेन्द्रवाहनम्" माघ० १-८। स्त्रियाम् "ङीप्" (४-१-६)।
**चकासती ಚಕಾಸತೀ.**

**चकासन ಚಕಾಸನ** (न०) ಪ್ರಕಾಶಿಸುವಿಕೆ, ಹೊಳೆಯುವಿಕೆ. चकासृ (दीप्तौ) "ल्युट्" (३-३-११५)।

**चकासनीय ಚಕಾಸನೀಯ** (वि०) ಪ್ರಕಾಶಿಸಲು ಯೋಗ್ಯವಾದ. चकासृ (दीप्तौ) "अनीयर्" (३-१-९६)।

**चकासित ಚಕಾಸಿತ** (वि०) ಪ್ರಕಾಶಗೊಳಿಸಲ್ಪಟ್ಟ. चकासृ (दीप्तौ) + णिच् "क्तः" (३-२-१०२)।

**चकासितृ ಚಕಾಸಿತೃ** (वि०) ಪ್ರಕಾಶಿಸುವ, ಹೊಳೆಯುವ. चकासृ (दीप्तौ) "तृच्" (३-१-१३३)। स्त्रियाम् "ङीप्" (४-१-५)। **चकासित्री ಚಕಾಸಿತ್ರೀ.**

**चकित ಚಕಿತ** (न०) 1. ಭಯ. चक (तृप्तौ प्रतिघाते च) भावे "क्तः" (३-३-११४)। 2. ನಡುಕ, ಕಂಪನ. 3. ಹೆಂಗಸರ ಸಾತ್ತ್ವಿಕಾಲಂಕಾರಗಳಲ್ಲೊಂದು ಭೇದ. "कुतोऽपि दयितस्याग्रे चकितं नयसंभ्रमः" सा० द०। (वि०) 4. ಕಂಪಿಸುವ, ನಡುಗುವ. 5. ಅಂಜಿದ, ಹೆದರಿದ, ಭಯಗೊಂಡ. चक कर्त० "क्तः" (३-४-७२)। "तस्योदये चतुर्मूर्तेः पौलस्त्यचकितेश्वराः" रघु० १०-७३। "मुद्रयन्ति चकितान् सुरस्त्रियः" यादं० १७-१७। (क्रि० वि०) 6. ಭಯದೊಡನೆ, ಭಯಸಹಿತವಾಗಿ. "न च न परिचितो न चाप्यगम्यः चकितमुपैमि तथापि पार्श्वमस्य" माल० १-११।

**चकोर ಚಕೋರ** (पुं०) ಚಕೋರಪಕ್ಷಿ. चकति — चक (तृप्तौ) "ओरन्" (उ० १-६४)। "इतश्चकोराक्षि विलोकयेति" रघु० ६-५९। स्वार्थे "कन्" (५-३-७५)। **चकोरकः ಚಕೋರಕಃ.** ಚಕೋರಪಕ್ಷಿಯು ವಿಷಮಿಶ್ರಿತವಾದ ಆಹಾರವನ್ನು ನೋಡಿದಾಗ ಅದರ ಕಣ್ಣು ಕೆಂಪಗಾಗುವುದೆಂದು ಕವಿಸಮಯಸಿದ್ಧ. स्त्रियाम् जाति० "ङीष्" (४-१-६३)। **चकोरी ಚಕೋರೀ.**

**चकोरदृश् ಚಕೋರದೃಶ್** (वि०) ಚಕೋರಪಕ್ಷಿಯ ಕಣ್ಣುಗಳಂತೆ ಕಣ್ಣುಗಳುಳ್ಳ, ಸುಂದರವಾದ ಕಣ್ಣುಗಳುಳ್ಳ (ಹೆಂಗಸು). चकोरस्येव दृशौ यस्याः। "मुखसरोजरुचं मदपाटलामनुचकार चकोरदृशां यतः" माघ० ६-४८।

**चक्र ಚಕ್ರ** (पुं०) 1. ಚಕ್ರವಾಕಪಕ್ಷಿ. चक (तृप्तौ) "रक्" (उ० २-१३)। "कोकश्चक्रश्चक्रवाको रथाङ्गाह्वयनामकः" अम०। (न०) 2. ರಥದ ಚಕ್ರ, ಗಾಡಿಯ ಗಾಲಿ. क्रियते गतिरनेन—डु कृञ् (करणे) "कः" (वा० ३-३-५८)। द्वित्वम् निपा०। "नीचैर्गच्छत्युपरि च दशा चक्रनेमिक्रमेण" मेघ० २-४६। 3. ಸೈನ್ಯ. "धृतवान्न चक्रमरिचक्रभयचकितमाहवे निजम्" माघ० १५-२६। 4. ಸಮೂಹ, ಸಮುದಾಯ, ಗುಂಪು. "वयसामिव चक्रमक्रियाकम्" माघ० २०-१७। 5. ಮಂಡಲ, ಜಿಲ್ಲೆ, ಗ್ರಾಮಗಳ ಗುಂಪು, ಒಂದು ಪ್ರಾಂತ. 6. ಕುಲಾಲನ ಚಕ್ರ, ಕುಂಬಾರನ ಗಾಲಿ. "कलशे निजहेतुदण्डजः किमु चक्रभ्रमिकारितागुणः" नैष० २-३२। 7. ದಿಕ್ಚಕ್ರ, ದಿಙ್ಮಂಡಲ. 8. ವಿಷ್ಣುವಿನ ಚಕ್ರಾಯುಧ. "चक्रेण रेजे यमुनाजलौघः स्फुरन्महावर्त इवैकबाहुः" माघ० ३-१७। 9. ಆಧಿಪತ್ಯ, ಪ್ರಭುತ್ವ. 10. ಜಲಾವರ್ತ, ನೀರಿನ ಸುಳಿ. 11. ಮಂಡಲಾಕಾರವಾಗಿ ನಿಂತಿರುವ ಸೈನ್ಯ, ಚಕ್ರವ್ಯೂಹ. 12. ರಾಷ್ಟ್ರ. "अविचालितचारुचक्रयोरनुरागादुपगूढयोः श्रिया" माघ० १६-७०। 13. ತೈಲಯಂತ್ರ, ಎಣ್ಣೆಯ ಗಾಣ. "दशसूनासमं चक्रं दशचक्रसमो ध्वजः। दशध्वजसमो वेशो दशवेशसमो नृपः" मनु० ४-८५। 14. ವರ್ತುಲ, ಗೋಲ, ಮಂಡಲ. "चक्रं चये जलावर्ते रथाङ्गे राष्ट्रसैन्ययोः। घटसाधनभेदेऽपि क्लीबे कोके तु पुंस्ययम्" नानार्थर०। 15. ಚಕ್ರಬಂಧ, ಅಲಂಕಾರಶಾಸ್ತ್ರೋಕ್ತವಾದ ಒಂದು ಕಾವ್ಯಬಂಧ. 16. ಜ್ಯೋತಿಷದಲ್ಲಿ ರಾಶಿ ಅಂಶ ಮುಂತಾದುವುಗಳ ಚಕ್ರ. 17. ದದ್ರುರೋಗ, ಹುಳುಕಡ್ಡಿ. 18. ದಂಭ, ಕಪಟ. 19. **ಶರೀರದೊಳಗಿರುವ ಷಟ್ಚಕ್ರಗಳು:** (1) मूलाधारः, (2) स्वाधिष्ठानम्, (3) मणिपूरम्, (4) अनाहतम्, (5) विशुद्धम् ಮತ್ತು (6) आज्ञाख्यम्। ಇವು ಆರು ಚಕ್ರಗಳು. 20. **ಮಂತ್ರಶಾಸ್ತ್ರಕ್ಕೆ ಸಂಬಂಧಿಸಿದ ಆರು ಚಕ್ರಗಳು:** (1) कुलाकुलचक्रम्, (2) राशिचक्रम्, (3) नक्षत्रचक्रम्, (4) अकथहचक्रम्, (5) अकडमचक्रम् ಮತ್ತು (6) ऋणिधनिचक्रम्।

(1) ಕುಲಾಕುಲಚಕ್ರದಲ್ಲಿ अ ಕಾರಾದಿ ह ಕಾರಾಂತ ಐವತ್ತು ವರ್ಣಗಳೂ ಪಂಚಭೂತಾತ್ಮಕಗಳೆಂದು ಹೇಳಿ ಪಂಚಭೂತಗಳಿಗೆ ಸೇರಿದ ವರ್ಣಗಳನ್ನು ಹೇಳಿದೆ. "कुलाकुलस्य भेदं हि वक्ष्यामि मन्त्रिणामिह। वाय्वग्निभूजलाकाशाः पञ्चाशल्लिपयः क्रमात्। पञ्च ह्रस्वाः पञ्चदीर्घा बिन्द्वन्ताः सन्धिसंभवाः। कादयः पञ्चशः ष क्ष ल स हान्ताः प्रकीर्तिताः"।

अ आ ए क च ट त प य षाः मारुताः।
इ ई ऐ ख छ ठ थ फ र क्षाः आग्नेयाः।
उ ऊ ओ ग ज ड द ब लाः पार्थिवाः।
ऋ ॠ औ घ झ ढ ध भ व साः वारुणाः।
ऌ ॡ अं ङ ञ ण न म श हाः नाभसाः।

"साधकस्याक्षरं पूर्वं मन्त्रस्यापि तदक्षरम्। यद्येकभूतदैवत्यं जानीयात् स्वकुलं हि तत्" इति तन्त्रसारः।

(2) ರಾಶಿಚಕ್ರದಲ್ಲಿ ಮೇಷಾದಿ ರಾಶಿಗಳಿಗೆ ಸೇರಿದ ವರ್ಣಗಳನ್ನು ಹೇಳಿದೆ :

| | |
|---|---|
| अ आ इ ई | मेषः। |
| उ ऊ ऋ | वृषभः। |
| ॠ ऌ ॡ | मिथुनम्। |
| ए ऐ | कर्काटकः। |
| ओ औ | सिंहः। |
| अं अः श ष स ह ल क्षाः | कन्या। |
| कवर्गः | तुला। |
| चवर्गः | वृश्चिकः। |
| टवर्गः | धनुः। |
| तवर्गः | मकरः। |
| पवर्गः | कुम्भः। |
| य र ल वाः | मीनः। |

ತಮ್ಮ ರಾಶಿಗಳಿಗೆ ಅನುಕೂಲವಾದ ಮಂತ್ರಗಳನ್ನು ಆರಿಸಿಕೊಳ್ಳಬೇಕು. "राशीनां शुद्धता ज्ञेया त्यजेत् शत्रुं मृतिं व्ययम्। स्वराशेर्मन्त्रराश्यन्तं गणनीयं विचक्षणैः"। यदा तु स्वराशेरज्ञानं तदा साधकनामाद्यक्षरसंबन्धिनं राशिं गृहीत्वा गणयेत्। इति आगमकल्पद्रुमः।

(3) ನಕ್ಷತ್ರಚಕ್ರದಲ್ಲಿ ಇಪ್ಪತ್ತೇಳು ನಕ್ಷತ್ರಗಳಿಗೂ ಸೇರಿದ ವರ್ಣಗಳ ಮತ್ತು ದೇವ ಮನುಷ್ಯ ಮತ್ತು ರಾಕ್ಷಸ ಗಣಗಳಿಗೆ ಸೇರಿದ ನಕ್ಷತ್ರಗಳ ವಿವರವನ್ನು ಕೊಟ್ಟಿದೆ. (1) अ आ ಅಶ್ವಿನಿ, ए ಮೃಗಶೀರ್ಷ, ओ औ ಪುನರ್ವಸು, क ಪುಷ್ಯ, झ ञ ಹಸ್ತ, ड ಸ್ವಾತಿ, त थ ध ಅನೂರಾಧಾ, म ಶ್ರವಣ, अं अः ल क्ष ರೇವತಿ—ಇವು **ದೇವಗಣ.** (2) इ ಭರಣಿ, ऋ ॠ ऌ ॡ ರೋಹಿಣಿ, ऐ ಆರ್ದ್ರಾ, च ಪೂರ್ವಫಲ್ಗುನಿ, छ ज ಉತ್ತರಫಲ್ಗುನಿ, ब ಪೂರ್ವಾಷಾಢ, भ ಉತ್ತರಾಷಾಢ, व श ಪೂರ್ವಾಭಾದ್ರ, ष स ह ಉತ್ತರಾಭಾದ್ರ—ಇವು **ಮಾನುಷಗಣ.** (3) ई उ ऊ ಕೃತ್ತಿಕೆ, ख ग ಆಶ್ಲೇಷೆ, घ ङ ಮಖೆ, ट ठ ಚಿತ್ತೆ, ढ ण ವಿಶಾಖೆ, द ಜ್ಯೇಷ್ಠೆ, न प फ ಮೂಲ, य र ಧನಿಷ್ಠೆ, ल ಶತಭಿಷ—ಇವು **ರಾಕ್ಷಸಗಣ.** भैरवीतन्त्रम्। ಇತ್ಯಾದಿ.

**चक्रक ಚಕ್ರಕ** (ಪುಂ) 1. ತಾರ್ಕಿಕನ ವಾದ. चक्रमिव कायति—कै (शब्दे) "कः" (३-२-३)। 2. ಮಂಡಲದ ಹಾವು. 3. ದದ್ರುರೋಗ, ಹುಳುಕಡ್ಡಿ. (ನಂ) 4. ಮನಸ್ತತ್ತ್ವ.

**चक्रकारक ಚಕ್ರಕಾರಕ** (ನಂ) 1. ನಖ, ಉಗುರು. चक्रं तदाकाररेखां करोति—डु कृञ् (करणे) "ण्वुल्" (३-१-१३३)। 2. ಹುಲಿಯುಗುರು ಗಿಡ. "व्यालायुधं व्याघ्रनखं करज्जं चक्रकारकम्" अम०।

**चक्रकुल्या ಚಕ್ರಕುಲ್ಯಾ** (ಸ್ತ್ರೀಂ) ನರಿಹೊನ್ನೆ ಗಿಡ. चक्रस्य तदाकारस्य कुल्येव।

**चक्रगज ಚಕ್ರಗಜ** (ಪುಂ) ಹುಳುಕಡ್ಡಿಯನ್ನು ವಾಸಿಮಾಡುವ ಚಕ್ರಮರ್ದವೃಕ್ಷ.

**चक्रगण्ड ಚಕ್ರಗಂಡು** (ಪುಂ) ಚಕ್ರಾಕಾರದ ದಿಂಬು. चक्रमिव गण्डुः।

**चक्रगति ಚಕ್ರಗತಿ** (ಸ್ತ್ರೀಂ) ತಿರುಗಣೆ, ಚಕ್ರದಂತೆ ತಿರುಗುವುದು, ಪರ್ಯಾಯ, ಸರದಿ. चक्रमिव गतिः।

**चक्रगदाधर ಚಕ್ರಗದಾಧರ** (ಪುಂ) ಮನಸ್ತತ್ತ್ವಾತ್ಮಕವಾದ ಚಕ್ರವನ್ನೂ ಬುದ್ಧಿತತ್ತ್ವಾತ್ಮಕವಾದ ಗದೆಯನ್ನೂ ಧರಿಸಿರುವ ಪರಮಾತ್ಮ. "मनस्तत्त्वात्मकं चक्रं बुद्धितत्त्वात्मिकां गदाम्। धारयन् लोकरक्षार्थं गुप्तश्चक्रगदाधरः"। चक्रगदे तदुपलक्ष्याणि च पञ्चशक्तिमयदिव्यायुधानि धरति—धृञ् (धारणे) "अच्" (३-१-१३४)। "यः शक्तिमद्दिव्यहेतिः स स्याच्चक्रगदाधरः" इति निरुक्तिः। "गुह्यो गभीरो गहनो गुप्तश्चक्रगदाधरः" वि० स०।

**चक्रगुच्छ ಚಕ್ರಗುಚ್ಛ** (ಪುಂ) ಅಶೋಕವೃಕ್ಷ. चक्रमिव गुच्छोऽस्य।

**चक्रचर ಚಕ್ರಚರ** (ಪುಂ) 1. ಕಪಟೋಪಾಯದಿಂದ ಜೀವಿಸುವ ಗಾರುಡಿಗಾರ, ಐಂದ್ರಜಾಲಿಕ, ಯಕ್ಷಿಣಿಗಾರ. चक्रेण कपटोपायेन चरति—चर (गतिभक्षणयोः) "अच्" (३-१-१३४)। 2. ಗುಂಪುಗುಂಪಾಗಿ ಸಂಚರಿಸುವ ಪ್ರಾಣಿಗಳು.

**चक्रचारिन् ಚಕ್ರಚಾರಿನ್** (ಪುಂ) 1. ಚಕ್ರದಿಂದ ಸಂಚರಿಸುವ ರಥ. चक्रेण चरति—चर (गतौ) "णिनिः" (३-२-७८)। "विधिरेककचक्रचारिणं किमु निर्मित्सति मान्मथं रथम्" नैष० २-३६। 2. ಮಂಡಲದೊಳಗೆ ಸಂಚರಿಸುವ, ಒಂದು ಪ್ರಾಂತದಲ್ಲಿ ಸಂಚರಿಸುವ. 3. ಒಂದು ವೃತ್ತದೊಳಗೆ ಸಂಚರಿಸುವ.

**चक्रजीवक ಚಕ್ರಜೀವಕ** (ಪುಂ) ಕುಲಾಲ, ಕುಂಬಾರ. चक्रेण जीवति—जीव (प्राणधारणे) "ण्वुल्" (३-१-१३३)। "णिनिः" (३-१-१३४)। **–जीविन् –ಜೀವಿನ್.**

**चक्रतीर्थ ಚಕ್ರತೀರ್ಥ** (ನಂ) ಪ್ರಭಾಸಕ್ಷೇತ್ರದಲ್ಲಿರುವ ಒಂದು ತೀರ್ಥ. चक्रेण सुदर्शनेन तत्क्षालनेन कृतं

। तीर्थम्। ದೇವಾಸುರರ ಯುದ್ಧದಲ್ಲಿ ವಿಷ್ಣುವು ದೈತ್ಯರನ್ನು ಸಂಹರಿಸಿ ರಕ್ತಮಯವಾದ ತನ್ನ ಚಕ್ರವನ್ನು ಇಲ್ಲಿ ತೊಳೆದುದರಿಂದ ಇದಕ್ಕೆ "**ಚಕ್ರತೀರ್ಥ**"ವೆಂಬ ಹೆಸರಾಯಿತು. "पुरा देवासुरे युद्धे हत्वा दैत्यान् जनार्दनः। चक्रं प्रक्षालयामास तत्र वै रक्तरञ्जितम्। अष्टकोटीस्तु तीर्थानि तत्रानीय स्वयं हरिः। तीर्थे प्रक्षालयामास शुद्धिं कृत्वा सुदर्शने। तीर्थस्य चक्रनामापि चक्रतीर्थमिति स्मृतम्" स्कान्द०। "भागीरथीपरिसरालंकारभूते चक्रतीर्थे मीमांसानुगतया मत्या कथंचिद्धार्यमाणप्राणो विवेकः उपनिषद्देव्याः संगमार्थं तपस्यति" प्रबोध० ४।

**चक्रतैल ಚಕ್ರತೈಲ** (न०) ಚಕ್ರಮರ್ದವೃಕ್ಷದ ಫಲದಿಂದ ತಯಾರಾದ ಒಂದು ತೈಲ. चक्रस्य चक्रमर्दफलस्य तैलम्। "कृत्वा सूक्ष्मेण नेत्रेण चक्रतैलेन तर्पयेत्" सुश्रुत०।

**चक्रदंष्ट्र ಚಕ್ರದಂಷ್ಟ್ರ** (पुं०) ಸೂಕರ, ಹಂದಿ. चक्रमिव दंष्ट्रास्य।

**चक्रदत्त ಚಕ್ರದತ್ತ** (पुं०) 1. ಒಬ್ಬ ಗ್ರಂಥಕಾರ, ಚರಕಸಂಹಿತೆಗೆ ಆಯುರ್ವೇದದೀಪಿಕೆಯೆಂಬ ವ್ಯಾಖ್ಯಾನವನ್ನು ಬರೆದ ಒಬ್ಬ ಪಂಡಿತ. "नरदत्तगुरुशिष्टचरकार्थानुगामिनी। क्रियते चक्रदत्तेन टीकायुर्वेददीपिका" चरकव्याख्या। ಇವನಿಗೆ ಚಕ್ರಪಾಣಿದತ್ತನೆಂಬ ಹೆಸರೂ ಉಂಟು. (न०) 2. ಚಕ್ರಪಾಣಿದತ್ತನಿಂದ ರಚಿತವಾದ ಒಂದು ವೈದ್ಯಗ್ರಂಥ.

**चक्रदेव ಚಕ್ರದೇವ** (पुं०) ಯದುವಂಶದ ಒಬ್ಬ ದೊರೆ. "अष्टादशसहस्राणि भ्रातृणां सन्ति नः कुले। आहुकस्य शतं पुत्रा एकैकस्त्रिदशावरः। चारुदेष्णः सह भ्रात्रा चक्रदेवश्च सात्यकिः। अहं च रौहिणेयश्च" भा० सभा० १४-५९-६०।

**चक्रद्वार ಚಕ್ರದ್ವಾರ** (पुं०) ಒಂದು ಪರ್ವತ. चक्रमिव द्वारमस्य। "द्रोणश्च शतशृङ्गश्च चक्रद्वारश्च पर्वतः" भा० शान्ति० ३२५-१८४।

**चक्रधनुस् ಚಕ್ರಧನುಸ್** (पुं०) ಕಪಿಲಮಹರ್ಷಿ. ಈ ಮಹರ್ಷಿಯು ಸೂರ್ಯನಿಂದ ಜನಿಸಿದುದಾಗಿ ಉಕ್ತವಾಗಿದೆ, ಸಗರಪುತ್ರರು ಯಾಗಾಶ್ವವನ್ನು ಹುಡುಕಲು ಹೋಗಿದ್ದಾಗ ಈ ಮಹರ್ಷಿಯ ಕೋಪಕ್ಕೆ ಪಾತ್ರರಾದರು. "अत्र चक्रधनुर्नाम सूर्याज्जातो महानृषिः। विदुर्यं कपिलं देवं येनार्ताः सगरात्मजाः" भा० उद्योग० १०९-१८।

**चक्रधर ಚಕ್ರಧರ** (पुं०) 1. ಚಕ್ರಾಯುಧವನ್ನು ಧರಿಸಿರುವ ವಿಷ್ಣು. धरति — धृ (धारणे) "अच्" (३-१-१३४)। चक्रस्य धरः। "विगाहितुं श्रीमहिमानुरूपं प्रचक्रमे चक्रधरप्रभावः" रघु० १६-५५। 2. ಸರ್ಪ, ಹಾವು. "विष्णुसर्पौ चक्रधरौ" नानार्थर०।

**चक्रधर्मन् ಚಕ್ರಧರ್ಮನ್** (पुं०) ಒಬ್ಬ ವಿದ್ಯಾಧರ. "विद्याधराधिपश्चैव चक्रधर्मा सहानुजैः। उपाचरति तत्र स्म धनानामीश्वरं प्रभुम्" भा० सभा० १०-२८।

**चक्रधारण ಚಕ್ರಧಾರಣ** (न०) 1. ಚಕ್ರವನ್ನು ಧರಿಸುವುದು, ಚಕ್ರಾಯುಧವನ್ನು ಹಿಡಿಯುವುದು. चक्रस्य धारणम्। 2. ಗಾಡಿಯ ಚಕ್ರವನ್ನು ಹೊಂದಿರುವುದು. 3. ಗಾಡಿಯ ಚಕ್ರವನ್ನು ಹೊತ್ತಿರುವುದು. 4. ದೂರಿಪಟ್ಟಿ, ಚಕ್ರವನ್ನು ಹೊತ್ತಿರುವ ಕಬ್ಬಿಣದ ಪಟ್ಟಿ. चक्रं धार्यतेऽनेन।

**चक्रधारा ಚಕ್ರಧಾರಾ** (स्त्री०) ಚಕ್ರದ ಅಗ್ರಭಾಗ, ಗಾಲಿಯ ಅಂಚು. चक्रस्य धारा।

**चक्रनख ಚಕ್ರನಖ** (पुं०) ವ್ಯಾಘ್ರನಖ, ಹುಲಿಯುಗುರು ಗಿಡ, ತಗಚೆ ಗಿಡ.

**चक्रनदी ಚಕ್ರನದೀ** (स्त्री०) ಗಂಡಕೀ ನದಿ. चक्रप्रधाना नदी।

**चक्रनाभि ಚಕ್ರನಾಭಿ** (पुं०) ಚಕ್ರದ ಮಧ್ಯಭಾಗ, ಗುಂಬ. चक्रस्य नाभिः। "यावत्यस्तु शिराः काये सम्भवन्ति शरीरिणाम्। नाभ्यां सर्वा निबद्धास्ताः प्रतन्वन्ति समन्ततः। नाभिस्थाः प्राणिनां प्राणाः प्राणान्नाभिर्व्युपाश्रिता। सिराभिरावृता नाभिश्चक्रनाभिरिवारकैः" सुश्रुत० शारीर० ७-४, ५।

**चक्रनामन् ಚಕ್ರನಾಮನ್** (न०) 1. ಮಾಕ್ಷಿಕಧಾತು. 2. ಚಕ್ರವಾಕಪಕ್ಷಿ.

**चक्रनायक ಚಕ್ರನಾಯಕ** (पुं०) 1. ಸೇನಾಪತಿ. 2. ಗುಂಪಿನ ಯಜಮಾನ. चक्रं सैन्यं समूहं वा नयति— णीञ् (प्रापणे) "ण्वुल्" (३-१-१३३)।

**चक्रपरिव्याध ಚಕ್ರಪರಿವ್ಯಾಧ** (पुं०) ಆರಗ್ವಧ ವೃಕ್ಷ.

**चक्रपर्णी ಚಕ್ರಪರ್ಣೀ** (स्त्री०) ನರಿಹೊನ್ನೆ ಗಿಡ. चक्रमिव पर्णमस्याः "ङीष्" (४-१-६४)।

**चक्रपाणि ಚಕ್ರಪಾಣಿ** (पुं०) ವಿಷ್ಣು, ಶ್ರೀಕೃಷ್ಣ. चक्रं पाणावस्य। "चक्रपाणिविजयाय चक्रिणात् भीमघोषदलिताखिलश्रुतेः" याद० १७-५३।

**चक्रपाणिदत्त ಚಕ್ರಪಾಣಿದತ್ತ** (पुं०) ಚಕ್ರದತ್ತವೆಂಬ ಒಂದು ವೈದ್ಯಗ್ರಂಥವನ್ನು ರಚಿಸಿದ ಒಬ್ಬ ಪಂಡಿತ.

**चक्रपाद ಚಕ್ರಪಾದ** (पुं०) ರಥ, ಗಾಡಿ, ಬಂಡಿ. चक्रं पाद इवास्य।

**चक्रपाल ಚಕ್ರಪಾಲ** (पुं०) 1. ಸೇನಾಪತಿ, ಸೇನೆಯನ್ನು ರಕ್ಷಿಸುವವನು. चक्रं पालयति—पाल (रक्षणे) + णिच् "अण्" (३-२-१)। 2. ಮಂಡಲಾಧಿಕಾರಿ, ಜಿಲ್ಲಾಧಿಕಾರಿ. चक्रं ग्रामसमूहं पालयति—पाल+णिच् "अण्"।

**चक्रपालन ಚಕ್ರಪಾಲನ** (नं०) 1. ರಾಜ್ಯವನ್ನು ರಕ್ಷಿಸುವುದು. 2. ಸೇನೆಯನ್ನು ಕಾಪಾಡುವುದು. चक्रस्य पालनम्।

**चक्रपुष्करिणी ಚಕ್ರಪುಷ್ಕರಿಣೀ** (स्त्री०) ವಾರಾಣಸೀ ಕ್ಷೇತ್ರದಲ್ಲಿರುವ ಒಂದು ದೊಡ್ಡ ಸರೋವರ. ಇದಕ್ಕೆ "ಮಣಿಕರ್ಣಿಕೆ" ಯೆಂಬ ಹೆಸರು.

**चक्रफल ಚಕ್ರಫಲ** (नं०) ತುದಿಯಲ್ಲಿ ಚಕ್ರಾಕಾರವಾಗಿರುವ ಒಂದು ಆಯುಧ. चक्रमिव फलमग्रं यस्य।

**चक्रभृत् ಚಕ್ರಭೃತ್** (पुं०) 1. ವಿಷ್ಣು. चक्रं बिभर्ति—डु भृञ् (धारणपोषणयोः) "क्विप्" (३-२-७६)। (वि०) 2. ಚಕ್ರವನ್ನು ಧರಿಸಿರುವ.

**चक्रभेदिनी ಚಕ್ರಭೇದಿನೀ** (स्त्री०) (ಚಕ್ರವಾಕಪಕ್ಷಿ ದಂಪತಿಗಳನ್ನು ಬೇರ್ಪಡಿಸುವ) ರಾತ್ರಿ.

**चक्रभोग ಚಕ್ರಭೋಗ** (पुं०) ಗ್ರಹಗಳು ಒಂದು ರಾಶಿಯಿಂದ ಸಂಚರಿಸಲು ಪ್ರಾರಂಭಿಸಿ ಪುನಃ ಆ ರಾಶಿಗೆ ಬಂದು ಸೇರುವುದು, ಗ್ರಹಗಳು ಹನ್ನೆರಡು ರಾಶಿಗಳಲ್ಲೂ ಒಂದು ಸಲ ಸಂಚರಿಸುವುದು. ಇದಕ್ಕೆ "परिवर्तः" ಎಂಬ ಸಂಜ್ಞೆ.

**चक्रभ्रम ಚಕ್ರಭ್ರಮ** (पुं०) 1. ಕತ್ತಿಗಳಿಗೆ ಸಾಣೆ ಹಿಡಿಯುವ ಚಕ್ರಾಕಾರದ ಯಂತ್ರ. चक्रमिव भ्रमति—भ्रमु (चलने) "अच्" (३-१-१३४)। "आरोप्य चक्रभ्रममुष्णतेजास्त्वष्ट्रेव यत्नोल्लिखितो विभाति" रघु० ६-३२। 2. ಅರೆಯುವ ಕಲ್ಲು, ಬೀಸುವ ಕಲ್ಲು.

**चक्रमर्द(क) ಚಕ್ರಮರ್ದ(ಕ)** (पुं०) ತಗಚೆ ಗಿಡ. चक्रं चक्राकारं हृद्रोगं मर्दयति—मृद (क्षोदे) "अण्" (३-२-१)। स्वार्थे "कन्" (५-३-७५)। "दद्रुघ्नश्चक्रमर्दकः" अम०।

**चक्रमुख ಚಕ್ರಮುಖ** (पुं०) ಸೂಕರ, ವರಾಹ, ಹಂದಿ. चक्रमिव वर्तुलं मुखमस्य। स्त्रियाम् "ङीप्"। **-मुखी -ಮುಖೀ.** "चक्रमुखः सूचिरोमा वराहः स्थूलनासिकः" हारा०।

**चक्रमुसल ಚಕ್ರಮುಸಲ** (पुं०) ಚಕ್ರಾಯುಧ ಮತ್ತು ಮುಸಲಾಯುಧಗಳಿಂದ ಮಾಡುವ ಯುದ್ಧ. चक्रं च मुसलश्च साधनतयास्त्यत्र "अच्" (५-२-१२७)। "तत्र चक्रं हलं चैव गदां कौमोदकीं तथा। सौनन्दं मुसलं चैव वैष्णवान्यायुधानि च। दर्शयिष्यन्ति संग्रामे पास्यन्ति च महीक्षिताम्। रुधिरं कालयुक्तानां वपुर्भिः कालसन्निभैः। स चक्रमुसलो नाम संग्रामः कृष्ण विश्रुतः" हरिवं०।

**चक्रयान ಚಕ್ರಯಾನ** (नं०) ಚಕ್ರಗಳಿಂದ ಕೂಡಿದ ರಥ, ಗಾಡಿ ಬಂಡಿ ಮೊದಲಾದುವು. चक्रयुक्तं यानम्। ಯಾತ್ರೆ ಉತ್ಸವ ಮೊದಲಾದ ಸಂದರ್ಭಗಳಲ್ಲಿ ಉಪಯೋಗಿಸಲ್ಪಡುವ ರಥ, ಯುದ್ಧಕ್ಕೆ ಉಪಯೋಗವಿಲ್ಲದ ರಥ. "असौ पुण्यरथश्चक्रयानं न समराय यत्" अम०।

**चक्ररक्ष(क) ಚಕ್ರರಕ್ಷ(ಕ)** (पुं०) 1. ಸೇನೆಯನ್ನು ರಕ್ಷಿಸುವ ಸೇನಾಪತಿ. 2. ಮಂಡಲಾಧಿಪತಿ, ಜಿಲ್ಲೆಯ ಅಧಿಕಾರಿ. चक्रं सेनां मण्डलं वा रक्षति—रक्ष (पालने) "अच्" (३-१-१३४)। "ण्वुल्" (३-१-१३३) वा। "चक्ररक्षौ तु भीमस्य माद्रीपुत्रौ महाद्युती" भा० भीष्म० १९-२१।

**चक्ररद ಚಕ್ರರದ** (पुं०) ವರಾಹ, ಹಂದಿ, ಸೂಕರ. चक्रमिव वर्तुलो रदोऽस्य। स्त्रियाम् जाति० "ङीष्" (४-१-६३)। **-रदी -ರದೀ.**

**चक्रवत् ಚಕ್ರವತ್** (पुं०) 1. ಒಂದು ಪರ್ವತ, ಚಕ್ರಾಕಾರದ ಒಂದು ಬೆಟ್ಟ. "तत्रैव चक्रसदृशं चक्रवन्तं महाचलम्। सहस्रकूटं विपुलं भगवान् संन्यवेशयत्" हरिवं०। 2. ಮಹಾವಿಷ್ಣು. चक्रं चक्रायुधमस्त्यस्य "मतुप्" (५-२-९४)। (वि०) 3. ಚಕ್ರಗಳಿಂದ ಕೂಡಿದ. 4. ಚಕ್ರಾಯುಧದಿಂದ ಕೂಡಿದ. 5. ಚಕ್ರಾಕಾರದ ಗಾಣವನ್ನು ಹೊಂದಿರುವ (ಗಾಣಿಗ). "सूनाचक्रध्वजवतां वेशेनैव च जीवताम्" मनु० ४-८४।

**चक्रवर्तिन् ಚಕ್ರವರ್ತಿನ್** (पुं०) 1. ಸಾರ್ವಭೌಮ, ಸಮುದ್ರದವರೆಗಿನ ಭೂಮಂಡಲದ ಅಧಿಪತಿ. चक्रे भूमण्डले वर्तितुं शीलमस्य—वृतु (वर्तने) "णिनिः" (३-२-७८)। "पुत्रमेवंगुणोपेतं चक्रवर्तिनमाप्नुहि" शाकु० १-११। 2. ಚಕ್ಕೋತದ ಸೊಪ್ಪು.

**चक्रवर्तिनी ಚಕ್ರವರ್ತಿನೀ** (स्त्री०) 1. ಮುಳ್ಳಗಸೆ ಗಿಡ. चक्रमिव वर्तितुं शीलमस्याः—वृतु (वर्तने) "णिनिः" (३-२-७८)। 2. ಜಟಾಮಾಂಸಿ. 3. ಅರಗು.

**चक्रवाक ಚಕ್ರವಾಕ** (पुं०) ಚಕ್ರವಾಕಪಕ್ಷಿ. चक्रशब्देनोच्यते—वच (परिभाषणे) कर्म० "घञ्" (३-३-१९)। "परस्पराक्रन्दिनि चक्रवाकयोः पुरो वियुक्ते मिथुने कृपावती" कुमा० ५-२६। स्त्रियाम् "ङीष्" (४-१-६३)। **-वाकी -ವಾಕೀ.** "तां जानीथाः परिमित-

कथां जीवितं मे द्वितीयं दूरीभूते मयि सहचरे चक्रवाकीमिवैकाम्" मेघ० २-२०।

**चक्रवाट ಚಕ್ರವಾಟ** (पुं०) 1. ಸೀಮೆ, ಎಲ್ಲೆ, ಗಡಿ. 2. ದೀಪದ ಕಂಬ. 3. ಕ್ರಿಯಾರೋಹ, ಕಾರ್ಯದ ಪ್ರಾರಂಭ. चक्रस्येव वाटोऽत्र। "चक्रवाटः क्रियारोहे पर्यन्ते च शिखातरौ" मेदि०।

**चक्रवाड (ल) ಚಕ್ರವಾಡ (ಲ)** (पुं०) 1. ಲೋಕಾಲೋಕ ಪರ್ವತ, ಭೂಮಿಯನ್ನು ಸುತ್ತಿಕೊಂಡಿರುವ ಒಂದು ಬೆಟ್ಟ. चक्रं भूमण्डलं वलते—वल (वेष्टने) "अण्" (३-२-१)। डलयोरभेदः। (न०) 2. ಮಂಡಲ, ವರ್ತುಲ. 3. ಮಂಡಲಾಕಾರದ ವಸ್ತುಗಳ ಸಮೂಹ. "प्रकटितदिक्चक्रवालान्तरालम्" चं० भा०। 4. ಗುಂಪು, ಸಮೂಹ. "प्रकटयति किमुच्चैरर्चिषां चक्रवालम्" रत्ना० ४-१६। "चक्रवाडं गणे चक्रवाडोऽद्रौ चक्रवालवत्" हेम०।

**चक्रवात ಚಕ್ರವಾತ** (पुं०) ಸುಂಟರಗಾಳಿ, ಸುಳಿಗಾಳಿ. चक्रमिव वातः। "दैत्यो नाम्ना तृणावर्तः कंसभृत्यः प्रचोदितः। चक्रवातस्वरूपेण जहारासीनमर्भकम्" भाग० ७-१८।

**चक्रवृद्धि ಚಕ್ರವೃದ್ಧಿ** (स्त्री०) 1. ಚಕ್ರಬಡ್ಡಿ, ಬಡ್ಡಿಯ ಮೇಲೆ ಹಾಕುವ ಬಡ್ಡಿ. चक्रमिव वृद्धिः। "कायिका कायसंयुक्ता मासग्राह्या च कालिका। वृद्धेर्वृद्धिश्चक्रवृद्धिः कारिता ऋणिना कृता" बृहस्पतिः। "चक्रवृद्धिः कालवृद्धिः कारिता कायिका च या" मनु० ८-१५३। 2. ಗಾಡಿಯ ಬಾಡಿಗೆ. चक्रं चक्रवत् शकटादि, तन्निमित्ता वृद्धिः। "चक्रवृद्धिं समारूढो देशकालव्यवस्थितः। अतिक्रामन् देशकालौ न तत्फलमवाप्नुयात्" मनु० ८-१६६।

**चक्रव्यूह ಚಕ್ರವ್ಯೂಹ** (पुं०) ಚಕ್ರಾಕಾರದ ಸೇನಾ ನಿವೇಶ, ಚಕ್ರದಂತೆ ವರ್ತುಲವಾಗಿ ನಿಲ್ಲಿಸುವ ಸೇನೆಗಳ ಸಮೂಹ. चक्रमिव व्यूहः। ಮಹಾಭಾರತದ ಯುದ್ಧದಲ್ಲಿ ಅಭಿಮನ್ಯುವಿನ ವಧೆಗಾಗಿ ನಿರ್ಮಿತವಾಗಿತ್ತು, ಈ ಚಕ್ರವ್ಯೂಹ. "चक्र (पद्म) व्यूहो महाराज द्रोणाचार्येणाभिकल्पितः" भा० द्रोण० ३४-२।

**चक्रसंज्ञ ಚಕ್ರಸಂಜ್ಞ** (पुं०) 1. ಚಕ್ರವಾಕಪಕ್ಷಿ. 2. ತವರ, ಕಲಾಯಿ. चक्रस्य संज्ञा यस्य।

**चक्रसक्थ ಚಕ್ರಸಕ್ಥ** (वि०) ಚಕ್ರದಂತಿರುವ ತೊಡೆಯುಳ್ಳವನು. चक्रमिव सक्थि यस्य "षच्" (५-४-११३)।

**चक्रसाह्वय ಚಕ್ರಸಾಹ್ವಯ** (पुं०) ಚಕ್ರವಾಕಪಕ್ಷಿ. चक्रेण समानामाह्वां याति—या (प्रापणे) "कः" (३-२-३)। स्त्रियाम् "टाप्"। **-साह्वया -ಸಾಹ್ವಯಾ.**

**चक्रहस्त ಚಕ್ರಹಸ್ತ** (पुं०) 1. ಶ್ರೀವಿಷ್ಣು. चक्रं हस्ते यस्य। (वि०) 2. ಚಕ್ರವನ್ನು ಧರಿಸಿರುವ.

**चक्राङ्ग ಚಕ್ರಾಂಗ** (पुं०) 1. ಹಂಸಪಕ್ಷಿ. चक्रमिवाङ्गमस्य। 2. ಚಕ್ರವಾಕಪಕ್ಷಿ. 3. ರಥ. चक्रमङ्गमस्य। "चक्राङ्गो मानसौकसि" मेदि०।

**चक्राङ्गी ಚಕ್ರಾಂಗೀ** (स्त्री०) 1. ಹೆಣ್ಣುಹಂಸ. चक्रमिवाङ्गमस्याः। "चक्राङ्गीमदपश्यतोहरचलच्छम्पासमुन्मेषणैः" चं० भा०। 2. ಕಟುಕರೋಹಿಣಿ. 3. ಮಂಜಿಷ್ಠ. "चक्राङ्गी कटुरोहिण्याम्" मेदि०।

**चक्राट ಚಕ್ರಾಟ** (पुं०) 1. ವಿಷವೈದ್ಯ, ಗಾರುಡಿಗಾರ. 2. ಧೂರ್ತ, ಕಪಟಿ, ಮೋಸಗಾರ. 3. ದೀನಾರವೆಂಬ ನಾಣ್ಯ. चक्रं चक्राकारमटति—अट (गतौ) "अण्" (३-२-१)। "चक्राटो विषवैद्येऽपि धूर्तदीनारयोरपि" मेदि०।

**चक्राधिवासिन् ಚಕ್ರಾಧಿವಾಸಿನ್** (पुं०) ನಾರಂಗ ವೃಕ್ಷ, ಕಿತ್ತಳೆ ಗಿಡ. "नागरङ्गके। चक्राधिवासी नारङ्गः" त्रिकाण्ड०।

**चक्रायुध ಚಕ್ರಾಯುಧ** (पुं०) 1. ಶ್ರೀವಿಷ್ಣು. चक्रमायुधं यस्य। "चक्रायुधेन चक्रेण पिबतोऽमृतमोजसा" भा० आदि० १९-७। (वि०) 2. ಚಕ್ರಾಯುಧವನ್ನು ಹೊಂದಿರುವ.

**चक्रावर्त ಚಕ್ರಾವರ್ತ** (पुं०) ಚಕ್ರದಂತೆ ಸುತ್ತುವುದು, ಚಕ್ರವು ತಿರುಗುತ್ತಿರುವಂತೆ ತಿರುಗುವುದು. चक्रस्येवावर्तः।

**चक्राह्व ಚಕ್ರಾಹ್ವ** (पुं०) 1. ಚಕ್ರವಾಕಪಕ್ಷಿ. चक्र इत्याह्वा यस्य। 2. ಚಕ್ರಮರ್ದವೃಕ್ಷ.

**चक्रिक ಚಕ್ರಿಕ** (वि०) ಚಕ್ರಾಯುಧವುಳ್ಳವನು. चक्रमस्त्यस्य "ठन्" (५-२-११५)।

**चक्रिन् ಚಕ್ರಿನ್** (पुं०) 1. ಶ್ರೀವಿಷ್ಣು, ಶ್ರೀಕೃಷ್ಣ. चक्रमस्यास्ति "इनिः" (५-२-११५)। "समासदत्सादितदैत्यसंपदः पदं महेन्द्रालयचारु चक्रिणः" माघ० १-११। "अरौद्रः कुण्डली चक्री" वि० स०। 2. ಕುಲಾಲ, ಕುಂಬಾರ. 3. ಚಕ್ರವಾಕಪಕ್ಷಿ. 4. ಸರ್ಪ, ಹಾವು. 5. ಸಾರ್ವಭೌಮ, ರಾಷ್ಟ್ರದ ಅಧಿಪತಿ. चक्रं राष्ट्रं स्वत्वेनास्त्यस्य "इनिः" (५-२-११५)। "चक्री कोके कुलालेऽहौ वैकुण्ठे चक्रवर्तिनि" हेम०। 6. ಗಾಣಿಗ, ಗಾಣದಿಂದ ಎಣ್ಣೆ ತೆಗೆಯುವವನು. 7. ಪುರೋಹಿತ. "चक्रिगो विष्णुभुजगकुलालग्रामयाजिनः" त्रिकाण्ड०। 8. ಒಬ್ಬ ಬೆರಕೆ ಜಾತಿಯವನು. "वैश्यायां शूद्रतश्चौरात्

जात: चक्री स उच्यते"। 9. ವಾಯಸ, ಕಾಗೆ. 10. ಗರ್ದಭ, ಕತ್ತೆ. (वि०) 11. ಚಾಡಿಕೋರ, ಇನ್ನೊಬ್ಬನ ತಪ್ಪನ್ನು ಹೇಳುವವನು. 12. ಚಕ್ರವನ್ನು ಹಿಡಿದಿರುವವನು. 13. ಚಕ್ರಗಳಿಂದ ಕೂಡಿದ ರಥದಲ್ಲಿರುವವನು. "चक्रिणो दशमीस्थस्य रोगिणो भारिण: स्त्रियाः। स्नातकस्य च राज्ञश्च पन्था देयो वरस्य च" मनु० २-१३८।

**चक्रीकृत ಚಕ್ರೀಕೃತ** (वि०) ಚಕ್ರಾಕಾರವಾಗಿ ಮಾಡಲ್ಪಟ್ಟ, ಗುಂಡಾಗಿ ಮಾಡಲ್ಪಟ್ಟ. अचक्रं चक्रं कृतम् "च्वि:" (५-४-५०)। दीर्घ: (७-४-२६)। चक्री+कृञ् "क्त:" (३-२-१०२)। "ददर्श चक्रीकृतचारुचापं प्रहर्तुमभ्युद्यतमात्मयोनिम्" कुमा० ३-७०।

**चक्रीभूत ಚಕ್ರೀಭೂತ** (वि०) ಚಕ್ರಾಕಾರವಾಗಿ ಆಗಿರುವ, ಬಗ್ಗಿರುವ. अचक्रं चक्रं भूतम् "च्वि:" (५-४-५०)। दीर्घ: (७-४-२६)। चक्री+भू "क्त:" (३-४-७२)।

**चक्रीवत् ಚಕ್ರೀವತ್** (पुं०) ಗರ್ದಭ, ಕತ್ತೆ. चक्रं चक्रवद्भ्रमणमस्त्यस्य "मतुप्" (५-२-९४)। "आसन्दीवत्" (८-२-१२) इति साधु:। "चक्रीवदङ्गरुहधूम्ररुचो विसस्रु:" माघ० ५-८। स्त्रियाम् **-वती -ವತೀ.**

**चक्रु ಚಕ್ರು** (वि०) ಮಾಡುವ, ತಯಾರಿಸುವ. डु कृञ् (करणे) "कु:" (उ० १-२२)। द्वित्वं च।

**चक्रेश्वर ಚಕ್ರೇಶ್ವರ**(पुं०)1. ಮಂಡಲಾಧಿಪತಿ, ಪ್ರಾಂತಾಧಿಕಾರಿ, ಜಿಲ್ಲಾಧಿಕಾರಿ. 2. ರಾಷ್ಟ್ರದ ಅಧಿಪತಿ, ಒಂದು ರಾಷ್ಟ್ರದ ಅಧ್ಯಕ್ಷ. चक्रस्य मण्डलस्य राष्ट्रस्य वा ईश्वर:। 3. ಸೇನಾಧಿಪತಿ.

**चक्रोपजीविन् ಚಕ್ರೋಪಜೀವಿನ್** (पुं०) ಗಾಣದಿಂದ ಜೀವಿಸುವ ಗಾಣಿಗ. चक्रेण उपजीवति — उप + जीव (प्राणधारणे) "णिनि:" (३-२-७८)।

**चक्षण ಚಕ್ಷಣ** (न०)1. ಹೇಳುವುದು, ಮಾತಾಡುವುದು. चक्षिङ् (व्यक्तायां वाचि) "ल्युट्" (३-३-११५)। 2. ತೋರಿಕೆ, ಕಾಣಿಸಿಕೊಳ್ಳುವುದು, ದರ್ಶನ. 3. ಮದ್ಯಪಾನವು ರುಚಿಸುವುದಕ್ಕಾಗಿ ಬೇರೊಂದು ರುಚಿಯಾದುದನ್ನು ತಿನ್ನುವುದು.

**चक्षणि ಚಕ್ಷಣಿ** (वि०) ಪ್ರಕಾಶಗೊಳಿಸುವ.

**चक्षस् ಚಕ್ಷಸ್** (पुं०) 1. ಬೃಹಸ್ಪತಿ, ದೇವತೆಗಳ ಗುರು. 2. ಉಪಾಧ್ಯಾಯ. चक्षिङ् (व्यक्तायां वाचि) "असुन्" (उ० ४-१८९)। "दिदिविद्वादशकरश्चक्षा: सुरगुरुर्गुरु:" त्रिकाण्ड०।

**चक्षिङ् – व्यक्तायां वाचि** (अदा० आत्म० सक० से० ख्याञादेशे अनि०)। चष्टे चक्षाते चक्षते। चक्षे चक्षाथे चड्ढ्वे। चक्षे चक्ष्वहे चक्ष्महे। आर्धधातुके ख्याञादेश:। लिटि वा (२-४-५५)। चख्यौ चख्यतु: चख्यु:। भाष्ये क्शादिरयमादेश:। पक्षे चक्शौ चक्शतु:। चक्शिथ चक्शाथ। चख्ये चख्याते। चक्शे चक्शाते। ख्याता क्शाता। ख्यास्यति, –ते। क्शास्यति, –ते। चष्टाम् चक्षाताम् चक्षताम्। अचष्ट अचक्षाताम् अचक्षत। चक्षीत चक्षीयाताम्। ख्यायात्, ख्येयात्। क्शायात् क्शेयात्। ಇತ್ಯಾದಿ. ಸ್ಪಷ್ಟವಾಗಿ ಹೇಳು.

**कर्मणि** :—ख्यायते, क्शायते, चख्ये, चक्शे। ख्यायिता, ख्याता, क्शायिता क्शाता। ಇತ್ಯಾದಿ.

**णिचि** :—ख्यापयति, –ते। ख्यापयां चकार, –चक्रे, –बभूव, –आस। ख्यापयिता। ख्यापयिष्यति, –ते। ख्याप्यताम्। अख्याप्यत। ಇತ್ಯಾದಿ.

**कृत्सु** :—ख्यातव्य:, क्शातव्य:। ख्यानीय:, क्शानीय:। ख्येय: क्शेय:। ख्यात: क्शात:। ख्यातवान्, क्शातवान्। ಇತ್ಯಾದಿ.

**ಈ ಧಾತುವಿಗೆ ಉಪಸರ್ಗಗಳ ಯೋಗದಿಂದ ಉಂಟಾಗುವ ಅರ್ಥಭೇದಗಳು :**

**(1) आ + चक्षिङ्** = आचष्टे। आचष्ट। ಚೆನ್ನಾಗಿ ಹೇಳು, ಸರಿಯಾಗಿ ಹೇಳು. "स रावणहृतां ताभ्यां वचसाचष्ट मैथिलीम्" रघु० १२-५५।

**(2) अनु+आ+चक्षिङ्** = अन्वाचष्टे। ಅನುಸರಿಸಿ ಹೇಳು, ಅನಂತರ ಹೇಳು.

**(3) अभि+आ+चक्षिङ्**=अभ्याचष्टे। ಎದುರಾಗಿ ಹೇಳು. "पाण्डुपुत्रानुपासीनान् प्रश्रयप्रेमसङ्गतान्। अभ्याचष्टानुरागास्रैरन्धीभूतेन चक्षुषा" भाग० १-९-११।

**(4) प्रति+आ+चक्षिङ्** = प्रत्याचष्टे। ಪ್ರತಿಯಾಗಿ ಹೇಳು, ನಿರಾಕರಿಸು, ತಿರಸ್ಕರಿಸು. "गुरुपुत्रीति कृत्वाऽहं प्रत्याचक्षे न दोषत:। गुरुणाचाननुज्ञात: काममेवं शपस्व माम्" भा० आदि० ७१-१७।

**(5) सम् + आ + चक्षिङ्** = समाचष्टे। ಸರಿಯಾಗಿ ಹೇಳು, ಚೆನ್ನಾಗಿ ಹೇಳು. "तत्सर्वं न: समाचक्ष्व पृष्टो यदिह किञ्चन। मन्ये त्वां विषये वाचां स्नातमन्यत्र छान्दसात्" भाग० १-४-१३।

**(6) परि+चक्षिङ्**=परिचष्टे। ಎಲ್ಲಾ ಕಡೆಯಲ್ಲೂ ಹೇಳು. "वेदप्रदानादाचार्यं पितरं परिचक्षते" मनु० २-१७१।

(7) प्र + चक्षिङ् = प्रचष्टे। ಪ್ರಸಿದ್ಧವಾಗಿ ಹೇಳು. "तं देवनिर्मितं देशं ब्रह्मावर्तं प्रचक्षते"।

(8) प्रति + चक्षिङ् = प्रतिचष्टे। 1. ಪ್ರತಿಯಾಗಿ ಹೇಳು, ಬದಲು ಹೇಳು, ಉತ್ತರ ಹೇಳು. 2. ನೋಡು. "यदा तु सर्वभूतेषु दारुष्वग्निमिव स्थितम्। प्रतिचक्षीत मां लोको जह्यात्तर्ह्येव कश्मलम्" भाग० ३-९-३२।

**चक्षुःश्रवस् ಚಕ್ಷುಃಶ್ರವಸ್** (पुं०) ಸರ್ಪ, ಹಾವು. चक्षुरेव श्रवोऽस्य चक्षुषा शृणोति — श्रु (श्रवणे) "असुन्" (उ० ४-१८८) वा। "तमाशु चक्षुःश्रवसां समूहं मन्त्रेण तार्क्ष्योदयकारणेन" किरा० १६-४२।

**चक्षुरिन्द्रिय ಚಕ್ಷುರಿಂದ್ರಿಯ** (न०) ಐದು ಜ್ಞಾನೇಂದ್ರಿಯಗಳಲ್ಲಿ ಒಂದು ಇಂದ್ರಿಯ, ನೇತ್ರೇಂದ್ರಿಯ.

**चक्षुर्गोचर ಚಕ್ಷುರ್ಗೋಚರ** (वि०) ಚಕ್ಷುರಿಂದ್ರಿಯಕ್ಕೆ ಗೋಚರವಾಗುವ, ಕಣ್ಣಿಗೆ ಕಾಣಿಸುವ. चक्षुषो गोचरः।

**चक्षुर्निरोध ಚಕ್ಷುರ್ನಿರೋಧ** (पुं०) ದೃಷ್ಟಿಗೆ ಉಂಟಾಗುವ ತಡೆ, ನೋಟಕ್ಕೆ ಉಂಟಾಗುವ ಅಡಚಣೆ, ನೋಡಲು ಅಡ್ಡಿ. चक्षुषो निरोधः। "चक्षुर्निरोधो ब्राह्मणस्य" आप०।

**चक्षुर्मन्त्र ಚಕ್ಷುರ್ಮಂತ್ರ** (पुं०) ಕಣ್ಣು ಕಟ್ಟಿ ಮಾಯ ಮಾಡುವುದು, ಅಭಿಚಾರಕಾರ್ಯ, ಮಾಟ, ಕೃತ್ಯ.

**चक्षुर्मल ಚಕ್ಷುರ್ಮಲ** (न०) ಕಣ್ಣಿನ ಕೊಳೆ, ನೇತ್ರದ ಮಲ, ಕಣ್ಣಿನ ಗೀಜು.

**चक्षुर्वर्धनिका ಚಕ್ಷುರ್ವರ್ಧನಿಕಾ** (स्त्री०) ಶಾಕದ್ವೀಪದಲ್ಲಿರುವ ಒಂದು ನದಿ. "महानदी च कौरव्य तथा मणिजला नदी। चक्षुर्वर्धनिका चैव नदी भरतसत्तम" भा० भीष्म० ११-३३।

**चक्षुर्वहन ಚಕ್ಷುರ್ವಹನ** (न०) ಬಲಮುರಿ ಗಿಡ.

**चक्षुर्विषय ಚಕ್ಷುರ್ವಿಷಯ** (पुं०) 1. ಕಣ್ಣಿಗೆ ಕಾಣಿಸುವ ರೂಪ, ದೃಷ್ಟಿಗೆ ಗೋಚರವಾಗುವ ದ್ರವ್ಯ. चक्षुषो विषयः। "उद्भूतरूपं नयनस्य गोचरो द्रव्याणि तद्वन्ति पृथक्त्वसंख्ये" भाषाप०। 2. ಕಣ್ಣಿಗೆ ಕಾಣಿಸುವ ಪ್ರದೇಶ. "गुरोस्तु चक्षुर्विषये न यथेष्टासनो भवेत्" मनु० २-१९८। 3. ದೃಷ್ಟಿಗೆ ಗೋಚರವಾಗುವಿಕೆ, ಕಣ್ಣಿಗೆ ಕಾಣಿಸುವಿಕೆ.

**चक्षुर्हन् ಚಕ್ಷುರ್ಹನ್** (वि०) ಕಣ್ಣಿನಿಂದಲೇ ಕೊಲ್ಲುವ, ನೋಟದಿಂದಲೇ ಸಾಯಿಸುವ. चक्षुषा हन्ति — हन (हिंसागत्योः) "क्विप्"। "त्वां तु चक्षुर्हणं प्राप्य दग्धो घोरेण चक्षुषा" भा० भीष्म० १२०-६८।

**चक्षुष्मत् ಚಕ್ಷುಷ್ಮತ್** (वि०) ಪ್ರಶಸ್ತವಾದ ನೇತ್ರವುಳ್ಳ, ಉತ್ತಮವಾದ ಕಣ್ಣುಳ್ಳ. प्रशस्तं चक्षुरस्त्यस्य "मतुप्" (५-२-९४)। "तदा चक्षुष्मतां प्रीतिरासीत्समरसा द्वयोः" रघु० ४-१८।

**चक्षुष्मत्ता ಚಕ್ಷುಷ್ಮತ್ತಾ** (स्त्री०) ಉತ್ತಮವಾದ ಕಣ್ಣುಗಳನ್ನು ಹೊಂದಿರುವಿಕೆ. चक्षुष्मतो भावः "तल्" (५-१-११९)। "चक्षुष्मत्ता तु शास्त्रेण सूक्ष्मकार्यार्थदर्शिना" रघु० ४-१३। "त्वः" (५-१-११९)।
**चक्षुष्मत्त्वम् ಚಕ್ಷುಷ್ಮತ್ತ್ವಮ್.**

**चक्षुष्य ಚಕ್ಷುಷ್ಯ** (पुं०) 1. ಕೇತಕವೃಕ್ಷ, ತಾಳೇಮರ. 2. ನುಗ್ಗಿಮರ. 3. ಪುಂಡರೀಕವೃಕ್ಷ, ಮಾವಿನಮರ. (न०) 4. ರಸಾಂಜನ. 5. ಸೌವೀರಾಂಜನ. (वि०) 6. ಸುಂದರವಾದ, ಅಂದವಾದ. 7. ಕಣ್ಣಿಗೆ ಹಿತವಾದ. चक्षुषे हितम् "यत्" (५-१-५)। 8. ಕಣ್ಣಿನಲ್ಲಿ ಉಂಟಾದ. चक्षुषि भवः "यत्" (५-१-६)। "चक्षुष्यः खलु महतां परैरलङ्घ्यः" माघ० ८-५७। "चक्षुष्यः सुभगे पुण्डरीकवृक्षे रसाञ्जने। केतकेऽक्षिहिते चापि चक्षुष्या तु कुलत्थिका" मेदि०। "प्रियेऽक्षिजे तु चक्षुष्यः" विश्व०।

**चक्षुष्या ಚಕ್ಷುಷ್ಯಾ** (स्त्री०) 1. ಸುಂದರಿ, 2. ಕುಳತ್ಥಾಂಜನ.

**चक्षुस् ಚಕ್ಷುಸ್** (न०) 1. ನೇತ್ರ, ಕಣ್ಣು. चक्षतेऽनेन— चक्षिङ् (व्यक्तायां वाचि) "उसिः" (उ० २-११९)। "अभियाति नः सतृष एव चक्षुषो हरिरित्यखिद्यत नितम्बिनीजनः" माघ० १३-४६। 2. ತೇಜಸ್ಸು, ಕಾಂತಿ.

**चक्षूराग ಚಕ್ಷೂರಾಗ** (पुं०) 1. ದರ್ಶನಮಾತ್ರದಿಂದಲೇ ಉಂಟಾಗುವ ಅನುರಾಗ, ನೋಡಿದ ಮಾತ್ರದಿಂದಲೇ ಹುಟ್ಟುವ ಪ್ರೀತಿ. चक्षुषो रागः तदाकर्षकः अनुरागः। "पुरश्चक्षूरागस्तदनु मनसोऽनन्यपरता तनुग्लानिर्यस्य त्वयि समभवद्यत्र च तव" मालती० ६-१५। 2. ಕಣ್ಣಿನಲ್ಲಿ ಉಂಟಾಗುವ ಕೆಂಪು. "चक्षूरागः कोकिलेषु न परकलत्रेषु" काद०।

**चक्षूरोग ಚಕ್ಷೂರೋಗ** (पुं०) ನೇತ್ರರೋಗ, ಕಣ್ಣಿನೊಳಗುಂಟಾಗುವ ಬೇನೆ. चक्षुषो रोगः। ಬಿಸಿಲಿನಲ್ಲಿ ಅಲೆದಾಡಿ ದೇಹವು ಉಷ್ಣವಾಗಿರುವಾಗ ನೀರಿನಲ್ಲಿ ಪ್ರವೇಶಿಸುವುದು ದೂರದ ವಸ್ತುವನ್ನು ದಿಟ್ಟಿಸಿ ನೋಡುವುದು ನಿದ್ದೆ ಕೆಡುವುದು ಅತಿಯಾಗಿ ಅಳುವುದು ಕೋಪಿಸಿಕೊಳ್ಳುವುದು ದುಃಖ ಕ್ಲೇಶ ಅಭಿಘಾತ ಅತಿಯಾದ ಸಂಭೋಗ ಈ ಕಾರಣಗಳಿಂದ ನೇತ್ರರೋಗಗಳು ಉಂಟಾಗುವುವು.

"उष्णाभितप्तस्य जलप्रवेशात् दूरेक्षणात् स्वप्नविपर्ययाच्च। प्रसक्तसंरोदनकोपशोकक्लेशाभिघातादतिमैथुनाच्च" सुश्रुत० उत्तरतं० १-२६।

**ಈ ನೇತ್ರರೋಗವು:**

| | | |
|---|---|---|
| ವಾತದೋಷದಿಂದ | .. | 10 ವಿಧ |
| ಪಿತ್ತದೋಷದಿಂದ | .. | 10 " |
| ಕಫದೋಷದಿಂದ | .. | 13 " |
| ರಕ್ತದೋಷದಿಂದ | .. | 16 " |
| ಸರ್ವದೋಷಗಳಿಂದ | .. | 25 " |
| ಬಾಹ್ಯಕಾರಣಗಳಿಂದ | .. | 2 " |

ಈ ರೀತಿ ಎಪ್ಪತ್ತಾರು ವಿಧ. "वाताद्दश तथा पित्तात् कफाच्चैव त्रयोदश। रक्तात् षोडश विज्ञेयाः सर्वजाः पञ्चविंशतिः। तथा बाह्यौ पुनर्द्वौ च रोगाः षट्सप्ततिः स्मृताः" सुश्रुत० उत्तरतं० १-२८, २९।

**चङ्कुर ಚಂಕುರ** (पुं०) 1. ರಥ, ಗಾಡಿ, ಬಂಡಿ. चङ्क (सौत्रो धातुः) "उरच्" (उ० १-३८)। 2. ವೃಕ್ಷ, ಮರ. "चङ्कुरः स्यात् रथे वृक्षे" मेदि०। 3. ಗಾಡಿ, ಸಂಚಾರಸಾಧನವಾದ ಮೋಟಾರು, ಬೈಸಿಕಲ್ಲು ಮುಂತಾದುವು. "चङ्कुरं धोरणं यानमात्रे" त्रिकाण्ड०।

**चङ्क्रम ಚಂಕ್ರಮ** (पुं०) 1. ಗಮನ, ನಡಗೆ. 2. ಓಡಾಟ, ತಿರುಗಾಟ. क्रमु (पादविक्षेपे) + यङ् "घञ्" (३-३-१८)। उपधावृद्धिर्न (७-३-३४)। "जानुभिः करसरोजसहायैः चङ्क्रमं च यदकुर्वत बालाः" चं० भा० १-७४। 3. ಭ್ರಮಣ, ಸುತ್ತುವುದು. "वितत्य वात्यामयचक्रचङ्क्रमान्" नैष० १-७३। क्रमु + यङ् "ल्युट्" (३-३-११५)। **चङ्क्रमणम् ಚಂಕ್ರಮಣವು.**

**चङ्क्रमण ಚಂಕ್ರಮಣ** (वि०) ನಡೆಯುವ ಸ್ವಭಾವದ. क्रमु (पादविक्षेपे) + यङ् "युच्" (३-२-१५०)।

**चङ्ग ಚಂಗ** (वि०) 1. ಸುಂದರವಾದ, ಅಂದವಾದ. 2. ದಕ್ಷನಾದ, ಸಮರ್ಥನಾದ, ಚತುರನಾದ. चीयते — चिञ् (चयने) "डः" बाहु०। चम् अङ्गमस्य। शक०। "चङ्गस्तु शोभने दक्षे" मेदि०।

**चङ्गल ಚಂಗಲ** (न०) ಪಣ್ಯವೀಥಿ, ಅಂಗಡಿಯ ಬೀದಿ. "निर्मुटस्तु पण्याजीवकचङ्गले" त्रिकाण्ड०।

**चञ्च ಚಂಚ** (पुं०) ಮಕ್ಕರಿ, ಬುಟ್ಟಿ.

**चञ्चत् ಚಂಚತ್** (वि०) ಚಲಿಸುತ್ತಿರುವ. चञ्चु (गतौ) "शतृ" (३-२-१२४)। "चञ्चद्भुजभ्रमितचण्डगदाभिघातसञ्चूर्णितोरुयुगलस्य सुयोधनस्य" वेणी० १-२१।

**चञ्चत्क ಚಂಚತ್ಕ** (वि०) ಚಲಿಸುವಂತೆ ಕಾಣುವ, ಹಾರಾಡುವಂತೆ ತೋರುವ. चञ्चत् "कन्" (वा० ५-४-३)।

**चञ्चत्पुट ಚಂಚತ್ಪುಟ** (पुं०) ಒಂದು ವಿಧ ತಾಳ. "ताले चञ्चत्पुटे ज्ञेयं गुरुद्वन्द्वं लघुप्लुतम्" सं० दा०।

**चञ्चरिन् ಚಂಚರಿನ್** (पुं०) ಭ್ರಮರ, ದುಂಬಿ. चर (गतौ) + यङ् — "णिनिः" (३-२-७८)। स्त्रियाम् "ङीप्" (४-१-५)। **-रिणी -ರಿಣೀ.**

**चञ्चरीक ಚಂಚರೀಕ** (पुं०) ಭ್ರಮರ, ದುಂಬಿ. चर (गतौ) "ईकन्" धातोर्द्वित्वम् नुम् च (उ० ४-२०)। "इन्दिन्दिरश्चञ्चरीको लोलम्बो बम्भरश्च सः" अम०। "अन्वयातामिव सुरतरोर्मञ्जरीं चञ्चरीकैः" हंस० २-१८।

**चञ्चरीकावली ಚಂಚರೀಕಾವಲೀ** (स्त्री०) ವೃತ್ತರತ್ನಾಕರದಲ್ಲಿ ಉಕ್ತವಾದ ಹದಿಮೂರನೆಯ ಛಂದಸ್ಸಿನ ಒಂದು ವೃತ್ತ. **ಇದರ ಲಕ್ಷಣ:** "यमौ रौ विख्याता चञ्चरीकावली गः" वृ० र०। ಯಗಣ ಮಗಣ ರಗಣದ್ವಯ ಮತ್ತು ಒಂದು ಗುರು. **ಇದರ ಗಣವಿನ್ಯಾಸ:**

य म र र गु।
100 000 010 010 0

**चञ्चल ಚಂಚಲ** (पुं०) 1. ಕಾಮುಕ, ಸ್ತ್ರೀಲೋಲ. 2. ವಾಯು, ಗಾಳಿ. चञ्चं गतिं लाति—ला (आदाने) "कः" (३-२-३)। "चञ्चलः कामुकेऽनिले" मेदि०। (स्त्री०) **-ला -ಲಾ.** 3. ಲಕ್ಷ್ಮಿ. (वि०) 4. ಚಲಿಸುವ, ಸ್ಥಿರವಾಗಿಲ್ಲದ. चञ्चु (गतौ) "अलच्" बाहु०। "चञ्चलं हि मनः कृष्ण प्रमाथि बलवद् दृढम्" गीता ६-३४। 5. ವಿದ್ಯುತ್ತು, ಮಿಂಚು. "चञ्चला तु तडिल्लक्ष्म्योः" मेदि०।

**चञ्चा ಚಂಚಾ** (स्त्री०) 1. ಜೊಂಡುಹುಲ್ಲಿನಿಂದ ತಯಾರಿಸಲ್ಪಟ್ಟ ಪುರುಷ, ತೃಣಪುರುಷ. "चञ्चा तृणमयः पुमान्—चञ्चेव मनुष्यश्चञ्चा" सि० कौ०। चञ्चा "कन्" (५-३-९६)। कनो लुप् (५-३-९८)। "नृणां यं सेवमानानां संसारोऽप्यपवर्गति। तं जगत्यभजन्मर्त्यश्चञ्चा चन्द्रकलाधरम्"। 2. ಲಾಳದ ಗಿಡದಿಂದ ಮಾಡಿದ ಚಾಪೆ.

**चञ्चु ಚಂಚು** (पुं०) 1. ಏರಂಡವೃಕ್ಷ, ಹರಳು ಗಿಡ. 2. ಚಿಟ್ಟುಹರಳು ಗಿಡ. "चञ्चुः पञ्चाङ्गुले त्रोटचाम्" हेम०। (स्त्री०) 3. ಹಕ್ಕಿಗಳ ಕೊಕ್ಕು, ಹಕ್ಕಿಗಳ ಮೂತಿ. चञ्चति — चञ्चु (गतौ) "उः" बाहु०। वा "ऊङ्"।

चञ्चूः ಚಂಚೂಃ. "करयन्त्रणदन्तुरान्तरे व्यलिखत् चञ्चुपुटेन पक्षती" नैष० २-२। "नुनुदे तनुकण्डु पण्डितः पटुचञ्चूपुटकोटिकुट्टनैः" नैष० २-४।

**चञ्चुभृत् ಚಂಚುಭೃಶ್** (पुं०) ಪಕ್ಷಿ, ಹಕ್ಕಿ. चञ्चुं बिभर्ति — डु भृञ् (धारणपोषणयोः) "क्विप्" (३-२-६१)। "पक्षी तु नाडीचरणः स्याच्चञ्चुभृदनेकजः" त्रिकाण्ड०।

**चञ्चुमत् ಚಂಚುಮತ್** (पुं०) ಪಕ್ಷಿ, ಹಕ್ಕಿ. चञ्चुरस्यास्ति "मतुप्" (५-२-९४)। स्त्रियाम् "ङीप्" (४-१-६)। **—मती — ಮತೀ.**

**चञ्चुर ಚಂಚುರ** (वि०) ದಕ್ಷನಾದ, ಸಮರ್ಥನಾದ, ಚತುರನಾದ. चञ्चु (गतौ) "उरच्" (उ० १-४१)।

**चञ्चुल ಚಂಚುಲ** (पुं०) ವಿಶ್ವಾಮಿತ್ರ ಮಹರ್ಷಿಯ ಒಬ್ಬ ಮಗ. "उदुम्बराहृचभिण्णातास्तारकायणचञ्चुलाः" हरिवं०।

**चञ्चुसूचि ಚಂಚುಸೂಚಿ** (पुं०) ಕಾರಂಡವ ಪಕ್ಷಿ. चञ्चुः सूचिरिव यस्य। स्त्रियाम् वा "ङीप्"।

**चट — भेदने** (चुरा० उभ० सक० से०)। चाटयति, —ते। अचीचटत्, —त। ಛೇದಿಸು, ಒಡೆ, ಬೇರ್ಪಡಿಸು.

उद् + चट = उच्चाटयति। उच्चाटनम्। उच्चाटनीयः। 1. ಪ್ರೇರಿಸು, ನೂಕು, ತಳ್ಳು, ಓಡಿಸು. 2. ಮೇಲಕ್ಕೆ ಹಾರಿಸು, ಮೇಲಕ್ಕೆ ಹೋಗುವಂತೆ ಮಾಡು. "उच्चाटनीयः करतालिकानां दानादिदानीं भवतीभिरेषः" नैष० ३-७।

**चटक ಚಟಕ** (पुं०) 1. ಗುಬ್ಬಚ್ಚಿ. चटति भिनत्ति धान्यादिकम् — चट (भेदने) "क्विन्" (उ० २-३३। स्त्रियाम् अजादि० "टाप्" (४-१-४)। **चटका ಚಟಕಾ.** स्वार्थे "कः" **चटककः ಚಟಕಕಃ.** (न०) 2. ಹಿಪ್ಪಲಿ.

**चटका ಚಟಕಾ** (स्त्री०) 1. ಹೆಣ್ಣು ಗುಬ್ಬಚ್ಚಿ. चटकस्य स्त्री — अजादि० "टाप्" (४-१-४)। 2. ಗುಬ್ಬಚ್ಚಿಯ ಹೆಣ್ಣುಮರಿ. चटकाया अपत्यं स्त्री — चटका "ऐरक्" (४-१-१२८)। तस्य लुक् (वा० ४-१-१२८)। टापो लुक् (१-२-४९)। "टाप्" (४-१-४)। स्वार्थे **चटकका ಚಟಕಕಾ, चटकिका ಚಟಕಿಕಾ.**

**चटकामुख ಚಟಕಾಮುಖ** (न०) ಗುಬ್ಬಚ್ಚಿಯ ಮುಖದಂತೆ ತುದಿಯುಳ್ಳ ಒಂದು ಅಸ್ತ್ರ. चटकाया मुखमिव मुखं यस्य।

**चटकाशिरस् ಚಟಕಾಶಿರಸ್** (पुं०) ಹಿಪ್ಪಲಿಯ ಬೇರು. चटकाया शिर इव। "सर्वे सान्ता अदन्ताः स्युः" ಎಂಬ ವಚನದಂತೆ **चटकाशिरः ಚಟಕಾಶಿರಃ** ಎಂದು ಅಕಾರಾಂತವೂ ಉಂಟು. "ग्रन्थिकं पिप्पलीमूलं चटकाशिर इत्यपि" अम०। "शिरो ना पिप्पलीमूले" इति रभसः।

**चटु ಚಟು** (पुंन०) 1. ಪ್ರಿಯವಾದ ಮಾತು, ಚಾಟುವಾಕ್ಯ. चट (भेदने) "कुः" (उ० १-३७)। "छायां निजस्त्रीचटुलालसानां मदेन किञ्चिच्चटुलाऽलसानाम्" माघ० ४-६। 2. ಹೊಟ್ಟೆ. 3. ವ್ರತಿಗಳ ಒಂದು ವಿಧ ಆಸನ. "चटुश्चाटौ पिचण्डे च व्रतिनामासने पुमान्" मेदि०।

**चटुक ಚಟುಕ** (पुं०) ದ್ರವವಸ್ತುವನ್ನು ಇಡುವ ಒಂದು ಮರದ ಪಾತ್ರೆ.

**चटुल ಚಟುಲ** (वि०) 1. ಚಂಚಲವಾದ, ಸ್ಥಿರವಾಗಿಲ್ಲದ. चट (भेदने) "उलच्" बाहु०। "आयस्तमैक्षत जनश्चटुलाग्रपादं गच्छन्तमुच्चलितचामरचारुमश्वम्" माघ० ५-६। 2. ಪ್ರಿಯವಾದ ಮಾತು, ಸವಿಮಾತು, ಪುಸಲಾಯಿಸುವ ಮಾತು. "पुरुषश्चटुलानि कामिनीनां कुरुते यानि रहो न तानि पश्चात्" बृहत्सं० ७४-१६। (स्त्री०) **—ला — ಲಾ.** 3. ವಿದ್ಯುತ್ತು, ಮಿಂಚು.

**चटूल्लोल ಚಟೂಲ್ಲೋಲ** (वि०) 1. ಪ್ರಿಯವಾದ ಮಾತುಗಳನ್ನಾಡುವ. चटौ उल्लोलः। 2. ಚಂಚಲವಾದ, ಸ್ಥಿರವಾಗಿಲ್ಲದ. 3. ಸುಂದರವಾದ.

**चडि — कोपे** (भ्वा० आत्म० अक० से०)। चण्डते। चचण्डे। अचण्डिष्ट। ರೇಗು, ಸಿಟ್ಟುಮಾಡು, ಕೋಪಿಸಿಕೊ.

**चडि — कोपे** (चुरा० उभ० अक० से०)। चण्डयति, —ते। ಕೋಪಿಸಿಕೊ, ಸಿಟ್ಟುಮಾಡು.

**चण — दाने** (भ्वा० पर० सक० से०)। चणति। चचाण। अचाणीत्, अचणीत्। ಕೊಡು, ದಾನಮಾಡು.

**चण ಚಣ** (पुं०) ಚಣಕ, ಕಡಲೆ. चण (दाने) "घञ्" (३-३-१९)।

**चणक ಚಣಕ** (पुं०) 1. ಕಡಲೆ. चण्यते — चण (दाने) "क्वुन्" (उ० २-३२)। "कार्पासमाषचणकाः पुरन्दरहुताशभक्ताश्च" बृहत्सं० १५-१४। 2. ಒಬ್ಬ ಋಷಿ, ಚಾಣಕ್ಯನ ತಂದೆ.

**चणकरोटिका ಚಣಕರೋಟಿಕಾ** (स्त्री०) ಕಡಲೆ ಹಿಟ್ಟಿನ ರೊಟ್ಟಿ.

**चणकात्मज ಚಣಕಾತ್ಮಜ** (पुं०) ಚಣಕನ ಮಗ, ಚಾಣಕ್ಯ, ಕೌಟಿಲ್ಯ.

**चण्ड ಚಂಡ** (ಪುಂ) 1. ಹುಣಿಸೆಮರ. 2. ಒಬ್ಬ ಯಮ ಕಿಂಕರ. 3. ಒಬ್ಬ ದೈತ್ಯ. चडि (कोपे) "अच्" (३-१-१३४)। "चण्डतुण्डौ महासुरौ" देवीमा०। (वि०) 4. ಬಹಳ ಕೋಪವುಳ್ಳ. "अथैकधेनोरपराधचण्डाद्गुरोः कृशानुप्रतिमाद्बिभेषि" रघु० २-४९। 5. ಬಹಳ ತೀಕ್ಷ್ಣವಾದ, ಉಗ್ರವಾದ. "दहन्तमिव तीक्ष्णांशुं चण्डवायुसमीरितम्" भा० आदि० ३२-२३२। (स्त्री०) **चण्डा ಚಂಡಾ.** 6. ದುರ್ಗಾದೇವಿ. 7. ಕರಿಯ ಕಚೋರ. 8. ದುರ್ಗಾದೇವಿಯ ಅಷ್ಟಶಕ್ತಿಗಳಲ್ಲೊಂದು ಭೇದ. ["चण्डनायिका" ನೋಡಿ.] 9. ಬಿಳಿಗರಿಕೆ. **चण्डी ಚಂಡೀ.** 10. ದುರ್ಗಾದೇವಿ. 11. ಕೋಪ ಸ್ವಭಾವದ ಹೆಂಗಸು, ಸುಲಭವಾಗಿ ಕೋಪಗೊಳ್ಳುವ ಹೆಂಗಸು. 12. ಉದ್ದಾಲಕ ಋಷಿಯ ಪತ್ನಿ. 13. ಹಿಂಸಿಸುವ ಹೆಂಗಸು. "चण्डो ना तिन्तिडीवृक्षे यमकिंकरदैत्ययोः। चण्डी कात्यायनीदेव्यां हिंस्रकोपनयोषितोः। चण्डा धनहरी शङ्खपुष्प्योस्त्रिष्वतिकोपने। तीव्रेऽपि" मेदि०।

**चण्डकर ಚಂಡಕರ, -किरण -ಕಿರಣ, -भानु -ಭಾನು** (ಪುಂ) ತೀಕ್ಷ್ಣವಾದ ಕಿರಣಗಳುಳ್ಳ ಸೂರ್ಯ. चण्डास्तीक्ष्णाः कराः किरणाः भानवो वा अस्य। "चण्डकरकिरणमण्डलबोधितपुण्डरीकवनरुचिलुण्टाकलोचन" रघु० ग०।

**चण्डकौशिक ಚಂಡಕೌಶಿಕ** (ಪುಂ) 1. ಒಬ್ಬ ಋಷಿ. ಕಕ್ಷೀವಂತನ ಮಗ. ಈ ಬ್ರಹ್ಮರ್ಷಿಯ ಅನುಗ್ರಹದಿಂದ ಬೃಹದ್ರಥರಾಜನು ಜರಾಸಂಧನನ್ನು ಪಡೆದನು. (न०)2. ಚಂಡಕೌಶಿಕವೆಂಬ ಒಂದು ನಾಟಕ. चण्डः कौशिको विश्वामित्रः वर्ण्यत्वेनास्त्यत्र "अच्" (५-२-१२७)।

**चण्डता ಚಂಡತಾ** (स्त्री०) ಉಗ್ರವಾಗಿರುವಿಕೆ, ತೀಕ್ಷ್ಣವಾಗಿರುವಿಕೆ. चण्डस्य भावः "तल्" (५-१-११९)। "त्वः" (५-१-११९)। **-त्वम् -ತ್ವಮ್.**

**चण्डतुण्डक ಚಂಡತುಂಡಕ** (ಪುಂ) ಗರುಡನ ಮಗ. "सुवर्णचूडो नागाशो दारुणश्चण्डतुण्डकः" भा० उद्योग० १०१-९।

**चण्डनायिका ಚಂಡನಾಯಿಕಾ** (स्त्री०) ದುರ್ಗಾದೇವಿಯ ಅಷ್ಟಶಕ್ತಿಗಳಲ್ಲೊಂದು ಭೇದ. "उग्रचण्डा प्रचण्डा च चण्डोग्रा चण्डनायिका। चण्डा चण्डवती चैव चामुण्डा चण्डिका तथा। आभिः शक्तिभिरष्टाभिः सततं परिवेष्टिताम्। चिन्तयेत्सततं दुर्गां धर्मकामार्थमोक्षदाम्" देवीपु०।

**चण्डवती ಚಂಡವತೀ** (स्त्री०) ದುರ್ಗಾದೇವಿಯ ಅಷ್ಟಶಕ್ತಿಗಳಲ್ಲೊಂದು ಭೇದ. ["चण्डनायिका" ಪದದಲ್ಲಿ ನೋಡಿ.] चण्डश्चण्डता विद्यतेऽस्याम् "मतुप्" (५-२-९४)।

**चण्डवर्मन् ಚಂಡವರ್ಮನ್** (ಪುಂ) ಒಬ್ಬ ರಾಜಕುಮಾರ.

**चण्डवृत्ति ಚಂಡವೃತ್ತಿ** (वि०) ತನ್ನ ದಾರಿಯನ್ನೇ ಹಿಡಿಯುವುದರಲ್ಲಿ ಹಟವುಳ್ಳ, ಹಟಮಾರಿತನದ, ಪಟ್ಟುಬಿಡದೆ ತನ್ನ ಇಚ್ಛೆಯಂತೆ ನಡೆಯುವ.

**चण्डवृष्टि ಚಂಡವೃಷ್ಟಿ** (स्त्री०) ಭಯಂಕರವಾದ ಮಳೆ, ಸಿಡಿಲು ಗುಡುಗುಗಳಿಂದ ಕೂಡಿದ ಮಳೆ. चण्डा वृष्टिः।

**चण्डवृष्टिप्रयात ಚಂಡವೃಷ್ಟಿಪ್ರಯಾತ** (ಪುಂ) ದಂಡಕದ ಒಂದು ಭೇದ. **ಇದರ ಲಕ್ಷಣ:** ನಗಣದ್ವಯ ಅನಂತರ ಏಳು ರಗಣಗಳು. "यदिह नयुगलं ततः सप्तरेफाः तदा चण्डवृष्टिप्रयातो भवेद्दण्डकः" वृ० र०। **ಇದರ ಗಣವಿನ್ಯಾಸ:**

| न | न | र | र | र | र | र | र | र |
|---|---|---|---|---|---|---|---|---|
| ।।। | ।।। | ऽ।ऽ | ऽ।ऽ | ऽ।ऽ | ऽ।ऽ | ऽ।ऽ | ऽ।ऽ | ऽ।ऽ |

उदा: "जलधररुचिरं भुजङ्गेन्द्रभोगाभचञ्चद्भुजाविद्धशूलायुधास्त्रप्रभाम्"।

**चण्डा ಚಂಡಾ** (स्त्री०) "चण्ड" ಪದದಲ್ಲಿ ನೋಡಿ.

**चण्डांशु ಚಂಡಾಂಶು** (ಪುಂ) ತೀಕ್ಷ್ಣವಾದ ಕಿರಣಗಳುಳ್ಳ ಸೂರ್ಯ. चण्डास्तीक्ष्णा अंशवो यस्य। "चण्डांशोर्निशि का कथा रघुपते चन्द्रोऽयमुज्जृम्भते" हनु० ना०।

**चण्डात ಚಂಡಾತ** (ಪುಂ) ಗನ್ನೇರಳೆ ಗಿಡ. चण्डमतति — अत (सातत्यगमने) "अण्" (३-२-१)।

**चण्डातक ಚಂಡಾತಕ** (न०) ಅರತೊಡೆಯವರೆಗಿನ ಹೆಂಗಸರ ಉಡುಗೆ, ಮಂಡಿಯ ಮೇಲಿನ ಒಳಲಂಗ. चण्डां कोपनां स्त्रियमतति — अत (सातत्यगमने) "ण्वुल्" (३-१-१३३)।

**चण्डाल ಚಂಡಾಲ** (ಪುಂ) 1. ನಿಮ್ನವರ್ಗದವನು, ಒಬ್ಬ ಬೆರಕೆ ಜಾತಿಯವನು, ಬ್ರಾಹ್ಮಣಸ್ತ್ರೀಯಲ್ಲಿ ಶೂದ್ರನಿಗೆ ಹುಟ್ಟಿದವನು. चण्डते कुप्यति—चडि (कोपे) "आलच्" (उ० १-११४)। "शूद्रादायोगवः क्षत्ता चण्डालश्चाधमो मतः। वैश्यराजन्यविप्रासु जायन्ते वर्णसंकराः" मनु० १०-१२। "गृह्यतामर्जितमिदं भार्यातनयविक्रयात्। शेषस्यार्थे करिष्यामि चण्डालेऽप्यात्मविक्रयम्" चण्डकौ०। (वि०) 2. ಕ್ರೂರಕರ್ಮವುಳ್ಳವನು, ಭಯಂಕರವಾದ ಕಾರ್ಯವುಳ್ಳವನು. चण्डान् क्रूरान् शरान् आलाति

आदत्ते। "चण्डालस्ते विषमविशिखः स्पृश्यते दृश्यते न" नैष० ९-१५६।

**चण्डालता ಚಂಡಾಲತಾ**(स्त्री०)ಚಂಡಾಲತ್ವ, ಚಂಡಾಲನ ಸ್ಥಿತಿ, ಚಂಡಾಲನಾಗಿರುವಿಕೆ. चण्डालस्य भावः "तल्" (५-१-११९)। "त्वः" (५-१-११९)। **–त्वम्–ತ್ವಮ್.**

**चण्डालवल्लकी ಚಂಡಾಲವಲ್ಲಕೀ** (स्त्री०) ಚಂಡಾಲನ ವೀಣೆ. चण्डालस्य वल्लकी।

**चण्डालिका ಚಂಡಾಲಿಕಾ** (स्त्री०)1. ಚಂಡಾಲನ ವೀಣೆ. 2. ಒಂದು ಲತೆ. 3. ಪಾರ್ವತಿ, ದುರ್ಗಾದೇವಿ. 4. ಕಿನ್ನರ ಹೆಂಗಸು. "चण्डालिका किन्नरायामुमायामोषधीभिदि" मेदि०।

**चण्डि ಚಂಡಿ** (स्त्री०) ಪಾರ್ವತಿ, ದುರ್ಗಾದೇವಿ. चडि (कोपे) "इन्" (उ० ४-११७)।

**चण्डिका ಚಂಡಿಕಾ** (स्त्री०) ಪಾರ್ವತಿ, ದುರ್ಗಾದೇವಿ. चण्डी स्वार्थे "कः"। चडि (कोपे) "ण्वुल्" (३-१-१३३) वा।

**चण्डिकागृह ಚಂಡಿಕಾಗೃಹ** (न०) ದುರ್ಗಾದೇವಿಯ ಗುಡಿ.

**चण्डिकालय ಚಂಡಿಕಾಲಯ** (पुं०) ದುರ್ಗಾದೇವಿಯ ಗುಡಿ.

**चण्डिल ಚಂಡಿಲ** (पुं०) 1. ಚಕ್ಕೋತದ (ಸೊಪ್ಪಿನ) ಗಿಡ. 2. ನಾಪಿತ, ನಾಯಿಂದ. चडि (कोपे) "इलच्" बाहु०।

**चण्डी ಚಂಡೀ** (स्त्री०)1. ದುರ್ಗಾದೇವಿ, ಪಾರ್ವತಿ. चण्ड वा "ङीष्" (४-१-४५)। 2. ಕೋಪವುಳ್ಳ ಹೆಂಗಸು. "सा किलाश्वासिता चण्डी भर्त्रा तत्संश्रुतौ वरौ" रघु० १२-५। 3. ಉದ್ದಾಲಕನ ಪತ್ನಿ.

**चण्डीकुसुम ಚಂಡೀಕುಸುಮ** (पुं०) ಕೆಂಪುಗನ್ನೇರಳೆ ಗಿಡ. चण्डीप्रीतिकरं कुसुमं यस्य।

**चण्डीपति ಚಂಡೀಪತಿ, चण्डिकापति ಚಂಡಿಕಾಪತಿ** (पुं०) ಪರಮೇಶ್ವರ, ಮಹಾದೇವ, ಶಂಕರ.

**चण्डीश ಚಂಡೀಶ, –ईश्वर–ಈಶ್ವರ**(पुं०)ಪರಮೇಶ್ವರ, ಪರಶಿವ, ಮಹಾದೇವ. चण्डया ईशः ईश्वरो वा। "पुण्यं यायास्त्रिभुवनगुरोर्धाम चण्डीश्वरस्य" मेघ० १-३३।

**चण्डु ಚಂಡು** (पुं०) ಮೂಷಿಕ, ಇಲಿ. चडि (कोपे) "उः" बाहु०।

**चण्डेश्वर ಚಂಡೇಶ್ವರ** (पुं०) ಕೆಂಪು ದೇಹವುಳ್ಳ ಪರಮೇಶ್ವರನ ಒಂದು ರೂಪ. "चण्डेश्वरं रक्ततनुं त्रिनेत्रम्" तन्त्रसा०।

**चण्डोग्रशूलपाणि ಚಂಡೋಗ್ರಶೂಲಪಾಣಿ** (पुं०) ಪರಮೇಶ್ವರನ ಒಂದು ಮೂರ್ತಿ. "चण्डोग्रशूलपाणेश्च मन्त्रः सर्वार्थसाधकः" तन्त्रसा०।

**चतुर् ಚತುರ್** (त्रि० ब० व०) 1. ನಾಲ್ಕು. 2. ನಾಲ್ಕರಿಂದ ಕೂಡಿದ. चते (याचने) "उरन्" (उ० ५-५८)। **ಇದರ ಲಿಂಗತ್ರಯದ ರೂಪಗಳು:** (पुं०) चत्वारः चतुरः चतुर्भिः चतुर्भ्यः चतुर्भ्यः चतुर्णाम् चतुर्षु। "चत्वारो वयमृत्विजः स भगवान् कर्मोपदेष्टा हरिः" वेणी० १-२५। (स्त्री०) चतस्रः चतस्रः चतसृभिः चतसृभ्यः चतसृभ्यः चतसृणाम् चतसृषु। "तासामाद्याश्चतस्रस्तु निन्दितैकादशी च या" मनु० ३-४७। (न०) चत्वारि चत्वारि ಉಳಿದುವು ಪುಲ್ಲಿಂಗದ ರೂಪಗಳಂತಾಗುವುವು. (अव्य०) 3. ನಾಲ್ಕಾವೃತ್ತಿ, ನಾಲ್ಕು ಸಲ.

**चतुःकूटा ಚತುಃಕೂಟಾ** (स्त्री०) ಶ್ರೀವಿದ್ಯೆಯ ಒಂದು ಮಂತ್ರ. "चतुःकूटा महाविद्या शङ्करेण प्रपूजिता" तन्त्रसा०।

**चतुःपञ्च ಚತುಃಪಂಚ, चतुष्पञ्च ಚತುಷ್ಪಂಚ**(वि०) ನಾಲ್ಕು ಅಥವಾ ಐದು. चत्वारः पञ्च वा। "अजानतामिवान्योन्यं चतुःपञ्चावशेषिताः" भाग० १-१५-२३।

**चतुःपञ्चाश ಚತುಃಪಂಚಾಶ, चतुष्पञ्चाश ಚತುಷ್ಪಂಚಾಶ** (वि०) ಐವತ್ತನಾಲ್ಕನೆಯ. चतुःप(ष्प)-ञ्चाशत् "डट्" (५-२-४८)। स्त्रियाम् "ङीप्" (४-१-१५)। **–पञ्चाशी–ಪಂಚಾಶೀ.**

**चतुःप (ष्प) ञ्चाशत् ಚತುಃಪಂ (ಷ್ಪಂ) ಚಾಶತ್** (स्त्री०) 1. ಐವತ್ತನಾಲ್ಕು. चतुरधिका पञ्चाशत्। (वि०) 2. ಐವತ್ತನಾಲ್ಕರಿಂದ ಕೂಡಿದ, ಐವತ್ತನಾಲ್ಕು ಸಂಖ್ಯೆಯುಳ್ಳ.

**चतुःशाल ಚತುಃಶಾಲ** (न०) ಒಂದಕ್ಕೊಂದು ಅಭಿಮುಖವಾಗಿರುವ ನಾಲ್ಕು ಮನೆಗಳು. चतसृणां शालानां समाहारः। "एकग्रामे चतुःशाले दुर्भिक्षे राष्ट्रविप्लवे। पतिना नीयमानायाः पुरःशुक्रो न दुष्यति" ज्योतिषम्।

**चतुःषष्टि ಚತುಃಷಷ್ಟಿ** (स्त्री०) 1. ಅರವತ್ತನಾಲ್ಕು. चतुरधिका षष्टिः। (वि०) 2. ಅರವತ್ತನಾಲ್ಕರಿಂದ ಕೂಡಿದ. चतुःषष्टि–पूरणे "डट्" (५-२-४८)। **–षष्टः–ಷಷ್ಟಃ.** ಅರವತ್ತನಾಲ್ಕನೆಯ.

**चतुःषष्टिकला ಚತುಃಷಷ್ಟಿಕಲಾ** (स्त्री०) ಅರವತ್ತನಾಲ್ಕು ಕಲೆಗಳು. ["कला" ಪದದಲ್ಲಿ ನೋಡಿ.]

**चतु:षष्टितम ಚತುಃಷಷ್ಟಿತಮ** (वि०) ಅರವತ್ತನಾಲ್ಕನೆಯ. चतु:षष्टि—पूरणे "डट्" (५-२-४८)। डट: वा "तमट्" (५-२-५६)। पक्षे **-षष्ट: -ಷಷ್ಟಃ.**

**चतु:सप्तति ಚತುಃಸಪ್ತತಿ** (स्त्री०) 1. ಎಪ್ಪತ್ತನಾಲ್ಕು. चतुरधिका सप्तति:। (वि०) 2. ಎಪ್ಪತ್ತನಾಲ್ಕುಳ್ಳ, ಎಪ್ಪತ್ತನಾಲ್ಕರಿಂದ ಕೂಡಿದ. चतु:सप्तति—पूरणे "डट्" (५-२-४८)। **-सप्तत: -ಸಪ್ತತಃ.**

**चतु:सप्ततितम ಚತುಃಸಪ್ತತಿತಮ** (वि०) ಎಪ್ಪತ್ತನಾಲ್ಕನೆಯ. चतु:सप्तति — पूरणे "डट्" (५-२-४८)। डट: वा "तमट्" (५-२-५६)। पक्षे **-सप्तत: -ಸಪ್ತತಃ.**

**चतुर ಚತುರ** (पुं०) 1. ಗಜಶಾಲೆ, ಆನೆಯ ಕರವಟ್ಟಿಗೆ. 2. ಗುಂಡಾದ ತಲೆದಿಂಬು. 3. ನಾಯಕರಲ್ಲಿ ಒಂದು ಭೇದ. चते (याचने) "उरच्" (उ० १-३८)। **ಇವನ ಲಕ್ಷಣ:** "वाक्चेष्टाव्यङ्ग्यसमागमश्चतुर:" रसमं०। ವ್ಯಂಗ್ಯವಾದ ಮಾತು ಮತ್ತು ಆಂಗಿಕವ್ಯಾಪಾರ ಇವುಗಳಿಂದ ಸಮಾಗಮವನ್ನು ಏರ್ಪಡಿಸಿಕೊಳ್ಳುವವನು ಚತುರ ನಾಯಕನು. **ಉದಾ:** (1) "तमोजटाले हरिदन्तराले काले निशायास्तव निर्गताया:। तटे नदीनां निकटे वनानां घटेत शातोदरि क: सहाय:?"। (2) "कान्ते कनकजम्बीरं करे कमपि कुर्वति। अपारनिश्चले भानौ बिन्दुमिन्दुमुखी ददौ"। (वि०) 4. ನಿಪುಣ, ಜಾಣ. 5. ಕಾರ್ಯದಲ್ಲಿ ದಕ್ಷನಾದ, ಕೆಲಸದಲ್ಲಿ ಸಮರ್ಥನಾದ. 6. ಚುರುಕಾಗಿರುವ, ಚಟುವಟಿಕೆಯುಳ್ಳ. 7. ಸುಂದರವಾದ. 8. ತಕ್ಕುದಾದ, ಯೋಗ್ಯವಾದ. (अव्य०) 9. ಚುರುಕಾಗಿ. 10. ಜಾಣತನದಿಂದ.

**चतुरंशा ಚತುರಂಶಾ** (स्त्री०) ವರ್ಣವೃತ್ತದ ಒಂದು ಭೇದ. **ಇದರ ಲಕ್ಷಣ:** ನಗಣ ಯಗಣ ನಗಣ ಯಗಣ. ಈ ಲಕ್ಷಣದ ವೃತ್ತಕ್ಕೆ ವೃತ್ತರತ್ನಾಕರದಲ್ಲಿ "कुसुमविचित्रा" ಎಂಬ ಹೆಸರು. "नयसहितौ न्यौ कुसुमविचित्रा" वृ० र०। **ಇದರ ಗಣವಿನ್ಯಾಸ:**

न य न य
III IUU III IUU ।

**चतुरंग ಚತುರಂಗ** (न०) 1. ಆನೆ ಕುದುರೆ ರಥ ಮತ್ತು ಪದಾತಿ (ಕಾಲಾಳು) ಗಳಿಂದ ಕೂಡಿದ ಸೈನ್ಯ. चत्वारि अङ्गानि यस्य। "प्रयातोऽस्मि नरव्याघ्र बलेन महतावृत:। क्लृप्तेन चतुरङ्गेण यत्तेन जितकाशिना" भा० वन० २०-१४। 2. ಚತುರಂಗವೆಂಬ ಒಂದು ಆಟ, ಕೆಂಪು ಹಸುರು ಹಳದಿ ಮತ್ತು ಕಪ್ಪು ಬಣ್ಣಗಳ ನಾಲ್ಕು ವಿಧ ಕಾಯಿಗಳನ್ನು ಸೇನೆಗಳಾಗಿ ಉಪಯೋಗಿಸಿ ನಾಲ್ವರು ಆಡುವ ಒಂದು ವಿಧ ವಿನೋದದ ಆಟ. [ವಿವರಕ್ಕೆ "ತಿಥ್ಯಾದಿತತ್ತ್ವ" ಗ್ರಂಥದಲ್ಲಿ ನೋಡಿ.]

**चतुरङ्गिन् ಚತುರಂಗಿನ್** (वि०) ಆನೆ ಕುದುರೆ ರಥ ಪದಾತಿರೂಪವಾದ ನಾಲ್ಕು ಅಂಗಗಳಿಂದ ಕೂಡಿದ. चत्वारि अङ्गानि भूम्ना सन्त्यस्य "इनि:" (५-२-११५)। "चालयन् वसुधां चेमां बलेन चतुरङ्गिणा" भा० आदि० १०१-२५।

**चतुरङ्गुल ಚತುರಂಗುಲ** (पुं०) 1. ಕಕ್ಕೆಗಿಡ. चतस्रोऽङ्गुलय: प्रमाणमस्य पर्वण: — अङ्गुलि — "अच्" (५-४-८६)। "आरग्वधे राजवृक्षसंपाकचतुरङ्गुला:" अम०। (वि०) 2. ನಾಲ್ಕು ಅಂಗುಲಗಳ ಪ್ರಮಾಣವುಳ್ಳ, ನಾಲ್ಕು ಬೆರಳುಗಳ ಅಳತೆಯುಳ್ಳ. चतस्रोऽङ्गुलय: प्रमाणमस्य। "चतुरङ्गुलमात्रोऽपि नावकाश: स विद्यते" रामा०।

**चतुरता ಚತುರತಾ** (स्त्री०) 1. ಜಾಣನಾಗಿರುವಿಕೆ. 2. ಸಮರ್ಥನಾಗಿರುವಿಕೆ. 3. ಚುರುಕಾಗಿರುವಿಕೆ. चतुरस्य भाव: "तल्" (५-१-११९)।

**चतुरन्त ಚತುರಂತ** (वि०) ನಾಲ್ಕು ಸಮುದ್ರಗಳ ಮೇರೆಯುಳ್ಳ, ನಾಲ್ಕು ಕಡೆಗಳಲ್ಲಿಯೂ ಸಮುದ್ರಗಳೇ ಎಲ್ಲೆಯಾಗಿ ಉಳ್ಳ. चत्वार: समुद्रा: अन्तो यस्य। स्त्रियाम् **चतुरन्ता ಚತುರಂತಾ.** "भूत्वा चिराय चतुरन्तमहीसपत्नी दौष्यन्तिमप्रतिरथं तनयं निवेश्य। भर्त्रा तदर्पितकुटुम्बभरेण सार्धं शान्ते करिष्यसि पदं पुनराश्रमेऽस्मिन्" शाकु० ४-१९।

**चतुरशीति ಚತುರಶೀತಿ** (स्त्री०) 1. ಎಂಬತ್ತನಾಲ್ಕು. चतुरधिका अशीति:। (वि०) 2. ಎಂಬತ್ತನಾಲ್ಕು ಸಂಖ್ಯೆಯುಳ್ಳ. पूरणे "डट्" (५-२-४८)। **चतुरशीत: ಚತುರಶೀತಃ.** ಎಂಬತ್ತನಾಲ್ಕನೆಯ. डट: वा "तमट्" (५-२-५६)। **चतुरशीतितम: ಚತುರಶೀತಿತಮಃ.** स्त्रियाम् "ङीप्" (४-१-१५)। **-अशीती -ಅಶೀತೀ. -अशीतितमी -ಅಶೀತಿತಮೀ.**

**चतुरस्र ಚತುರಸ್ರ** (वि०) 1. ನಾಲ್ಕು ಕೋಣಗಳುಳ್ಳ, ನಾಲ್ಕು ಮೂಲೆಗಳುಳ್ಳ. चतस्रोऽस्रा: कोणा यस्य। "मनुष्यवाह्यं चतुरस्रयानमध्यास्य कन्या परिवारशोभि" रघु० ६-१०। 2. ನಾಲ್ಕು ಕಡೆಗಳಲ್ಲಿಯೂ ಹೆಚ್ಚು ಕಡಮೆಯಿಲ್ಲದೆ ಒಂದೇ ಸಮನಾಗಿರುವ. "बभूव तस्याश्चतुरस्रशोभि वपुर्विभक्तं नवयौवनेन" कुमा० १-३२।

**चतुरात्मन् ಚತುರಾತ್ಮನ್** (पुं०) ವಿಷ್ಣು, ಪರಮೇಶ್ವರ, ನಾರಾಯಣ. चत्वारः वासुदेव-संकर्षण-प्रद्युम्नानिरुद्ध रूपाः आत्मानः स्वरूपाणि अस्य। "वासुदेवादिरूपत्वात् चतुरात्मेति कथ्यते" इति निरुक्तिः। "चतुरात्मा चतुर्व्यूहः चतुर्दंष्ट्रश्चतुर्भुजः" वि० स०। चत्वारो बुद्ध्यादयः आत्मानो यस्य वा।

**चतुरानन ಚತುರಾನನ** (पुं०) ಚತುರ್ಮುಖ, ಬ್ರಹ್ಮ. चत्वारि आननानि अस्य। "इतरतापशतानि यथेच्छया वितर तानि सहे चतुरानन। अरसिके तु रहस्यनिवेदनं शिरसि मालिख मालिख मालिख" उद्भ०।

**चतुराश्रम ಚತುರಾಶ್ರಮ** (न०) ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ ಮತ್ತು ಸಂನ್ಯಾಸಗಳೆಂಬ ನಾಲ್ಕು ಆಶ್ರಮಗಳು. चतुर्णामाश्रमाणां समाहारः। "चत्वार आश्रमाश्चैव ब्राह्मणस्य प्रकीर्तिताः। गार्हस्थ्यं ब्रह्मचर्यं च वानप्रस्थं तु भिक्षुकम्"। ಈ ನಾಲ್ಕು ವಿಧ ಆಶ್ರಮಗಳಿಂದ ವಿಪ್ರನು ದಶವಿಧ ಧರ್ಮಗಳನ್ನು ಆಚರಿಸಬೇಕು. "चतुर्भिरपि चैवैतैर्नित्यमाश्रमिभिर्द्विजैः। दशलक्षणको धर्मः सेवितव्यः प्रयत्नतः" मनु० ६-९१।

**चतुरूषण ಚತುರೂಷಣ** (न०) ಹಿಪ್ಪಲಿ, ಹಿಪ್ಪಲಿ ಬೇರು, ಶುಂಠಿ ಮತ್ತು ಮೆಣಸು. चतुर्णामूषणानां समाहारः। "त्र्यूषणं सकणामूलं कथितं चतुरूषणम्। व्योषस्येव गुणाः प्रोक्ताः अधिकाश्चतुरूषणे" भावप्र०।

**चतुर्गण ಚತುರ್ಗಣ** (पुं०) ನಾಲ್ಕರ ಒಂದು ಗುಂಪು, ನಾಲ್ಕು ಮಂದಿಗಳ ಅಥವಾ ನಾಲ್ಕು ವಸ್ತುಗಳ ಗುಂಪು. चतुर्णां गणः।

**चतुर्गति ಚತುರ್ಗತಿ** (पुं०) ವಿಷ್ಣು, ಪರಮಾತ್ಮ, ಪರಮೇಶ್ವರ. चतुर्णामाश्रमधर्माणामाश्रमिणां वा गतिराश्रयः। उपासकाभियोगतारतम्यकृतक्रमाच्चतस्रो गतयः प्राप्तयोऽस्मिन् वा। "चतस्रः प्राप्तयो यस्मिन् भक्तानां स चतुर्गतिः" इति निरुक्तिः। "चतुर्मूर्तिश्चतुर्बाहुश्चतुर्व्यूहश्चतुर्गतिः" वि० स०।

**चतुर्गुण ಚತುರ್ಗುಣ** (वि०) ನಾಲ್ಕರಷ್ಟು ಅಧಿಕವಾದ, ನಾಲ್ಮಡಿ ಹೆಚ್ಚಾಗಿರುವ, चत्वारो गुणा यस्य।

**चतुर्जातक ಚತುರ್ಜಾತಕ** (न०) ಲವಂಗಪಟ್ಟೆ (ದಾಲ್ಚಿನ್ನಿ) ಯಾಲಕ್ಕಿ ಜಾಪತ್ರೆ ಮತ್ತು ನಾಗಕೇಸರ (ನಾಗಸಂಪಿಗೆ) ಈ ನಾಲ್ಕರ ಗುಂಪು. चतुर्णां जातकानां समाहारः। "त्रिकटुचतुर्जातककुस्तुम्बुरुमिश्रं खादेत्" सुश्रुत०।

**चतुर्णवति ಚತುರ್ಣವತಿ** (स्त्री०) 1. ತೊಂಬತ್ತನಾಲ್ಕು. चतुर्भिरधिका नवतिः। (वि०) 2. ತೊಂಬತ್ತನಾಲ್ಕು ಸಂಖ್ಯೆಯುಳ್ಳ. चतुर्भिरधिका नवतिर्यस्य। चतुर्णवति पूरणे "डट्" (५-२-४८)। (वि०) **चतुर्णवतः ಚತುರ್ಣವತಃ.** ತೊಂಬತ್ತನಾಲ್ಕನೆಯ. डटो वा "तमट्" (५-२-५६)। **चतुर्णवतितमः ಚತುರ್ಣವತಿತಮಃ.** स्त्रियाम् "ङीप्" (४-१-१५)। **चतुर्णवती ಚತುರ್ಣವತೀ. चतुर्णवतितमी ಚತುರ್ಣವತಿತಮೀ.**

**चतुर्थ ಚತುರ್ಥ** (वि०) ನಾಲ್ಕನೆಯ. चतुर्णां पूरणः "डट्" (५-२-४८)। "थुक्" (५-२-५१)। "चतुर्थोपायसाध्ये तु रिपौ सान्त्वमपक्रिया" माघ० २-५४। स्त्रियाम् "ङीप्" (४-१-१५)। **चतुर्थी ಚತುರ್ಥೀ.**

**चतुर्थी ಚತುರ್ಥೀ** (स्त्री०) 1. ಚತುರ್ಥೀ ತಿಥಿ, ಪಕ್ಷದ ನಾಲ್ಕನೆಯ ದಿನ. ಈ ತಿಥಿಯು ಚಂದ್ರನ ನಾಲ್ಕನೆಯ ಕಲೆಯು ವೃದ್ಧಿಕ್ಷಯಗಳನ್ನು ಹೊಂದುವ ದಿವಸ. ಈ ದಿವಸದ ಚಂದ್ರನನ್ನು ನೋಡಕೂಡದೆಂಬ ವಚನವಿರುವುದು. "चतुर्थ्यामुदितश्चन्द्रो नेक्षितव्यः कदाचन"। 2. (ವ್ಯಾಕರಣದಲ್ಲಿ) ನಾಲ್ಕನೆಯ ವಿಭಕ್ತಿ. "चतुर्थी संप्रदाने" (२-३-१३)।

**चतुर्थक ಚತುರ್ಥಕ** (पुं०) ನಾಲ್ಕು ದಿನಗಳಿಗೊಂದಾವೃತ್ತಿ ಬರುವ ಜ್ವರ, ನಾಲ್ಕನೆಯ ಜ್ವರ. "दिनत्रयमतिक्रम्य यः स्यात् स हि चतुर्थकः"।

**चतुर्दन्त ಚತುರ್ದಂತ** (पुं०) ಐರಾವತ, ಇಂದ್ರನ ಆನೆ. चत्वारो दन्ता अस्य। "ऐरावणोऽभ्रमातङ्गश्चतुर्दन्तोऽर्कसोदरः" अभि० चि०। "चतुर्दन्तगजारूढो वज्री कुलिशभृत्करः" वि० ध०।

**चतुर्दश ಚತುರ್ದಶ** (वि०) ಹದಿನಾಲ್ಕನೆಯ. चतुर्दशन् "डट्" (५-२-४८)। स्त्रियाम् "ङीप्" (४-१-१५)। **–दशी –ದಶೀ.**

**चतुर्दशन् ಚತುರ್ದಶನ್** (पुं० ब० व०) ಹದಿನಾಲ್ಕು. चतुर्भिरधिका दश। "सप्ततन्तुजन्मा चतुर्दश जगन्ति यशःपटश्च" नैष० ११-१००।

**चतुर्दशभुवन ಚತುರ್ದಶಭುವನ** (न०) ಭೂಲೋಕ ಮೊದಲಾದ ಹದಿನಾಲ್ಕು ಲೋಕಗಳು. चतुर्दशानां भुवनानां समाहारः। पात्रा० न "ङीप्" (वा० २-४-१७)।

**ಹದಿನಾಲ್ಕು ಲೋಕಗಳು :** (1) भूलोकः (2) भुवर्लोकः (3) स्वर्लोकः (4) महर्लोकः (5) जनोलोकः (6) तपोलोकः (7) सत्यलोकः ಇವು ಏಳು ಊರ್ಧ್ವ

ಲೋಕಗಳು. (1) अतलम् (2) वितलम् (3) सुतलम् (4) तलातलम् (5) महातलम् (6) रसातलम् (7) पातालम् ಇವು ಏಳು ಅಧೋಲೋಕಗಳು. ಈ ಹದಿನಾಲ್ಕು ಲೋಕಗಳೂ ವಿರಾಟ್ ಪುರುಷನ ಅವಯವಗಳಾಗಿ ಕಲ್ಪಿತವಾಗಿವೆ. "स एव पुरुषस्तस्मादण्डं निर्भिद्य निर्गतः। सहस्रोर्वङ्घ्रिबाह्वक्षः सहस्राननशीर्षवान्। यस्येहावयवैर्लोकान् कल्पयन्ति मनीषिणः॥ कट्यादिभिरधः सप्त सप्तोर्ध्वं जघनादिभिः। पुरुषस्य मुखं ब्रह्म क्षत्रमेतस्य बाहवः। ऊर्वोर्वैश्यो भगवतः पद्भ्यां शूद्रोऽभ्यजायत"॥ ಇವುಗಳಲ್ಲಿ ಸಪ್ತ ಊರ್ಧ್ವಲೋಕಗಳು ನಡುವಿಗೆ ಮೇಲುಭಾಗದಲ್ಲೂ ಸಪ್ತ ಅಧೋಲೋಕಗಳು ನಡುವಿಗೆ ಕೆಳಭಾಗದಲ್ಲೂ ಕಲ್ಪಿತವಾಗಿವೆ. ಭೂರ್ಲೋಕ ಪಾದಗಳಲ್ಲಿ, ಭುವರ್ಲೋಕ (ನಾಭಿ) ಹೊಕ್ಕಳಲ್ಲಿ, ಹೃದಯದಲ್ಲಿ ಸ್ವರ್ಲೋಕ, ಎದೆಯಲ್ಲಿ ಮಹರ್ಲೋಕ, ಕಂಠದಲ್ಲಿ ಜನೋಲೋಕ, ಸ್ತನಗಳೆರಡರಲ್ಲೂ ತಪೋಲೋಕ, ತಲೆಗಳಲ್ಲಿ ಸತ್ಯಲೋಕ, ಕಟಿಪ್ರದೇಶದಲ್ಲಿ ಅತಲ, ತೊಡೆಗಳಲ್ಲಿ ವಿತಲ, ಮಂಡಿಗಳಲ್ಲಿ ಸುತಲ, ಮೊಣಕಾಲುಗಳಲ್ಲಿ ತಲಾತಲ, ಕಾಲುಗಳ ಗಂಟುಗಳಲ್ಲಿ ಮಹಾತಲ, ಕಾಲುಗಳ ತುದಿಯಲ್ಲಿ ರಸಾತಲ, ಕಾಲುಗಳ ತಳದಲ್ಲಿ ಪಾತಾಳ ಈ ರೀತಿ ಹದಿನಾಲ್ಕು ಲೋಕಗಳೂ ಪರಮಾತ್ಮನ ಶರೀರದಲ್ಲಿ ಸೇರಿಕೊಂಡಿವೆ. "भूर्लोकः कल्पितः पद्भ्यां भुवर्लोकोऽस्य नाभितः। हृदा स्वर्लोक उरसा महर्लोको महात्मनः। ग्रीवायां जनलोकश्च तपोलोकः स्तनद्वयात्। मूर्धभिः सत्यलोकस्तु ब्रह्मलोकः सनातनः॥ तत्कट्यां चातलं क्लृप्तं ऊरुभ्यां वितलं विभोः। जानुभ्यां सुतलं शुद्धं जङ्घाभ्यां तु तलातलम्। महातलं तु गुल्फाभ्यां प्रपदाभ्यां रसातलम्। पातालं पादतलतः इति लोकमयः पुमान्" भाग० २-५।

ಈ ಚತುರ್ದಶಲೋಕಗಳೂ ಮನುಷ್ಯನ ಶರೀರದಲ್ಲಿ ಇರುವುವು. ಯೋಗಿಗಳಿಗೆ ಮಾತ್ರ ಗೋಚರವಾಗುವುದರಿಂದ ಇವು ತಮ್ಮ ಶರೀರದಲ್ಲಿರುವಂತೆ ಯೋಗಿಗಳು ಧ್ಯಾನಮಾಡಬೇಕೆಂದು ಯೋಗಶಾಸ್ತ್ರದಲ್ಲಿ ಉಕ್ತವಾಗಿದೆ. "ब्रह्माण्डे सन्ति ये अण्डाः पिण्डमध्येऽपि संस्थिताः। तलं पादाङ्गुष्ठतले तस्योपरि तलातलम्। महातलं गुल्फमध्ये गुल्फोपरि रसातलम्। सुतलं जङ्घयोर्मध्ये वितलं जानुमध्यगम्। ऊर्वोर्मध्ये तलं प्रोक्तं सप्त पातालमीरितम्। तलातलं चातलं च महातलरसातलम्। सप्त पातालमेतत्तु सुतलं वितलं तलम्। इदानीं पिण्डमध्ये तु सप्तलोकं शृणु प्रिये। मूलाधारे तु भूर्लोको लिङ्गाग्रे तु भुवस्ततः। स्वर्लोको लिङ्गमूले तु मेरुमूले महस्तथा। मेरुच्छिद्रे जनोलोको मेरुनाड्यां तपस्तथा। कमले सत्यलोकस्तु इति लोकाः पृथक् पृथक्"।

ಹೀಗೆಯೇ ಶರೀರದಲ್ಲಿ ಸಪ್ತದ್ವೀಪಗಳೂ ಸಪ್ತಸಮುದ್ರಗಳೂ ಅಷ್ಟಪರ್ವತಗಳೂ ಸಕಲನದಿಗಳೂ ಇರುವುವು.

**ಸಪ್ತ ದ್ವೀಪಗಳು:** "सप्तद्वीपानि कथ्यन्तेऽधुना तानि शृणु प्रिये। जम्बुद्वीपस्तु मज्जायां शाकद्वीपन्तु मध्यमे। शाल्मद्वीपः शिरोमध्ये मांसमध्ये कुशस्तथा। त्वचि क्रौञ्चो लोममध्ये गोमेदद्वीप ईरितः। नखमध्ये तथा श्वेतः सप्तद्वीपा वसुन्धरा"।

**ಸಪ್ತ ಸಮುದ್ರಗಳು:** "लवणः स्वेदमध्ये तु इक्षूरक्ते मधु त्वचि। सर्पिर्मेदोवसामध्ये दधि क्षीरं ललाटके। वीर्यमध्येऽमृतो ज्ञेयः पादे कूर्मः स्थितो महान्"।

**ನವದ್ವಾರಗಳಲ್ಲಿ ನವ ಖಂಡಗಳು:** "पाय्वादौ भारतं खण्डं काश्मीरं त्रिकमण्डलु। द्विजखण्डमेकपादं खण्डं वक्ष्ये समण्डलम्। कैवर्तगर्तगान्धारं नवखण्डमिति स्थितम्"।

**ಅಷ್ಟ ಪರ್ವತಗಳು:** "मेरुदण्डे सुमेरुस्तु पीठमध्ये हिमालयः। वामस्कन्धे तथा दक्षे मलयो मन्दराचलः। विन्ध्यस्तु दक्षिणे कर्णे वामे मैनाक ईश्वरि। ललाटे मध्यदेशे तु श्रीशैलः परमेश्वरि। तथा ब्रह्मकपालस्थः कैलासः पर्वतो महान्"।

**ನವನಾಡಿಗಳಲ್ಲಿ ನದಿಗಳು:** "शरीरे नवनाडीस्थाः नर्मदा च महेश्वरि। इडायां यमुना देवि पिङ्गलायां सरस्वती। सुषुम्णायां वहेद्गङ्गा चान्यान्यासु च नाडिषु। गङ्गा सरस्वती गोदा नर्मदा यमुना तथा। कावेरी चन्द्रभागा च वितस्ता च इरावती"। ಇತ್ಯಾದಿ.

**चतुर्दशरत्न ಚತುರ್ದಶರತ್ನ** (ನಂ ಬಂ ವಂ) ಸಮುದ್ರದಲ್ಲಿ ದೊರೆತ ಹದಿನಾಲ್ಕು ರತ್ನಗಳು. (1) ಲಕ್ಷ್ಮಿ, (2) ಕೌಸ್ತುಭ ಮಣಿ, (3) ಪಾರಿಜಾತವೃಕ್ಷ, (4) ಸುರೆ, (5) ಧನ್ವಂತರಿ, (6) ಚಂದ್ರ, (7) ಕಾಮಧೇನು, (8) ಐರಾವತ, (9) ರಂಭೆ ಮೊದಲಾದ ಅಪ್ಸರೆಯರು, (10) ಉಚ್ಚೈಃಶ್ರವಸ್ಸು, (11) ವಿಷ, (12) ಶಂಖ, (13) ಅಮೃತ, (14) ಹರಿಧನುಸ್ಸು. **ಇವು ಹದಿನಾಲ್ಕು ರತ್ನಗಳು.**

**चतुर्दशविद्या ಚತುರ್ದಶವಿದ್ಯಾ** (ಸ್ತ್ರೀಂ ಬಂ ವಂ) ಹದಿನಾಲ್ಕು ವಿದ್ಯೆಗಳು. ನಾಲ್ಕು ವೇದಗಳು ಆರು ವೇದಾಂಗಗಳು ಧರ್ಮಶಾಸ್ತ್ರ ಪುರಾಣ ಮೀಮಾಂಸಾ ನ್ಯಾಯ (ತರ್ಕ) **ಇವು ಚತುರ್ದಶ ವಿದ್ಯೆಗಳು.** "अङ्गानि वेदाश्चत्वारो मीमांसा न्यायविस्तरः। पुराणं धर्मशास्त्रं च

विद्या ह्येताश्चतुर्दश" हेमाद्रिः। "पुराणन्यायमीमांसा धर्मशास्त्राङ्गमिश्रिताः। वेदाः स्थानानि विद्यानां धर्मस्य च चतुर्दश" याज्ञ० १-३।

**चतुर्दशी ಚತುರ್ದಶೀ** (स्त्री०) ಪಕ್ಷದ ಹದಿನಾಲ್ಕನೆಯ ತಿಥಿ.

**चतुर्दिश् ಚತುರ್ದಿಶ್** (स्त्री० ब० व०) ಪೂರ್ವ ಮೊದಲಾದ ನಾಲ್ಕು ದಿಕ್ಕುಗಳು. चतस्रो दिशः।

**चतुर्दिशम् ಚತುರ್ದಿಶಮ್** (न०) ಪೂರ್ವ ಮೊದಲಾದ ನಾಲ್ಕು ದಿಕ್ಕುಗಳು. चतसृणां दिशानां समाहारः। द्विगुः (२-१-५२)। एकवचनम् (२-४-१)।

**चतुर्दोल ಚತುರ್ದೋಲ** (पुंन०) ನಾಲ್ಕು ಜನರು ಹೆಗಲ ಮೇಲೆ ಹೊರುವ ರಾಜನ ಒಂದು ವಾಹನ, ಶಿಬಿಕೆ, ಚೌಕಟ್ಟಿನ ದೋಲಿ. "राज्ञो यद् द्विपदं यानं विशेषाख्यमलं विदुः। चतुर्भिरुह्यते यत्तु चतुर्दोलं तदुच्यते" इति भोजदेवः।

**चतुर्दोस् ಚತುರ್ದೋಸ್** (वि०) ನಾಲ್ಕು ತೋಳುಗಳುಳ್ಳ. चत्वारो दोषो यस्य। "आत्मैव तातस्य चतुर्भुजस्य जातश्चतुर्दोरुचितः स्मरोऽपि" नैष० ७-६५।

**चतुर्द्वार ಚತುರ್ದ್ವಾರ** (न०) 1. ನಾಲ್ಕು ಬಾಗಿಲುಗಳುಳ್ಳ ಮನೆ. चत्वारि द्वाराण्यस्य। 2. ನಾಲ್ಕು ಬಾಗಿಲುಗಳು. चतुर्णां द्वाराणां समाहारः। "मण्डपं कारयेत्तत्र चतुर्द्वारसमन्वितम्" हेमाद्रिः।

**चतुर्धा ಚತುರ್ಧಾ** (अव्य०) ನಾಲ್ಕು ವಿಧವಾಗಿ, ನಾಲ್ಕು ಪ್ರಕಾರವಾಗಿ. चतुर् विधार्थे "धा" (५-३-४२)। "ततश्च शेषं प्रविभज्य शीघ्रमर्धं चतुर्धा मम चात्मनश्च" भा० आदि० २०७-५। "मनो बुद्धिरहङ्कारश्चित्तमित्यन्तरात्मकम्। चतुर्धा लक्ष्यते भेदो वृत्त्या लक्षणरूपया" भाग० ३-२६-१४।

**चतुर्बाहु ಚತುರ್ಬಾಹು** (पुं०) 1. ವಿಷ್ಣು, ಪರಮಾತ್ಮ. चत्वारो बाहवोऽस्य। "व्यूहमूलपरावस्थानिरुपाधिकरूपतः। चत्वारो बाहवो यस्य स चतुर्बाहुरुच्यते" इति निरुक्तिः। "चतुर्मूर्तिश्चतुर्बाहुश्चतुर्व्यूहश्चतुर्गतिः" वि० स०। 2. ನಾಲ್ಕು ಮೂಲೆಗಳುಳ್ಳ ಚೌಕವಾದ ಪ್ರದೇಶ. (वि०)3. ನಾಲ್ಕು ಭುಜಗಳುಳ್ಳ.

**चतुर्भद्र ಚತುರ್ಭದ್ರ** (न०) 1. ಧರ್ಮ ಅರ್ಥ ಕಾಮ ಮತ್ತು ಬಲಗಳೆಂಬ ನಾಲ್ಕು ಪುರುಷಾರ್ಥಗಳು. चतुर्णां धर्मार्थकामबलरूपाणां भद्राणां श्रेयसां समाहारः। (वि०) 2. ಚತುರ್ವಿಧಪುರುಷಾರ್ಥಗಳಿಂದ ಕೂಡಿದ. चत्वारि भद्राणि यस्य।

**चतुर्भाग ಚತುರ್ಭಾಗ** (पुं०) ನಾಲ್ಕನೆಯ ಒಂದು ಭಾಗ, ಕಾಲುಭಾಗ.

**चतुर्भाव ಚತುರ್ಭಾವ** (पुं०) ವಿಷ್ಣು, ಪರಮಾತ್ಮ. चतुर्व्यूहप्रभवाः भावाः भावनाः प्रयोजनाभिव्यञ्जनानि अस्य। "चतुरात्मा चतुर्भावश्चतुर्वेदविदेकपात्" वि० स०।

**चतुर्भुज ಚತುರ್ಭುಜ** (पुं०) 1. ವಿಷ್ಣು. चत्वारो भुजा अस्य। "चतुर्भुजांशप्रभवः स तेषाम्" रघु० १५-९९। (वि०)2. ನಾಲ್ಕು ಭುಜಗಳುಳ್ಳ. "तेनैव रूपेण चतुर्भुजेन सहस्रबाहो भव विश्वमूर्ते" गीता ११-४६। 3. ನಾಲ್ಕು ಕೋಣಗಳುಳ್ಳ, ಚೌಕವಾಗಿರುವ.

**चतुर्भूमिक ಚತುರ್ಭೂಮಿಕ** (पुं०) ನಾಲ್ಕು ಮಹಡಿಗಳುಳ್ಳ ಮನೆ. चतस्रो भूमिका यस्य।

**चतुर्मास ಚತುರ್ಮಾಸ** (न०) ನಾಲ್ಕು ತಿಂಗಳುಗಳ ಕಾಲ.

**चतुर्मुख ಚತುರ್ಮುಖ** (पुं०) 1. ಬ್ರಹ್ಮ. चत्वारि मुखानि अस्य। "तस्यां स चाम्भोरुहकर्णिकायामवस्थितो लोकमपश्यमानः। परिक्रमन् व्योम्नि विवृत्तनेत्रश्चत्वारि लेभेऽनुदिशं मुखानि" भाग० ३-८-१६। "चतुर्वर्णमयो लोकस्त्वत्तः सर्वं चतुर्मुखात्" रघु० १०-२२। 2. ನಾಲ್ಕು ಮುಖಗಳು. चत्वारि मुखानि। "पुराणस्य कवेस्तस्य चतुर्मुखसमीरिता" कुमा० २-१७। 3. ನಾಲ್ಕು ಬಾಗಿಲುಗಳುಳ್ಳ ಮನೆ. चत्वारि मुखान्यस्य। चतुर्णां मुखानां समाहारः। द्विगुः। "ङीप्" (४-१-२१)। **—मुखी —ಮುಖೀ.**

**चतुर्मूर्ति ಚತುರ್ಮೂರ್ತಿ** (पुं०) ವಿಷ್ಣು, ಪರಮಾತ್ಮ. चतस्रो मूर्तयो यस्य। ಬಲಭದ್ರ, ವಾಸುದೇವ, ಪ್ರದ್ಯುಮ್ನ ಮತ್ತು ಅನಿರುದ್ಧ ರೂಪವಾದ ನಾಲ್ಕು ಮೂರ್ತಿಗಳನ್ನು ಹೊಂದಿರುವುದರಿಂದ ಈ ಹೆಸರು. "बलभद्रो वासुदेवः प्रद्युम्नश्चानिरुद्धकः। चतस्रो मूर्तयो यस्य स चतुर्मूर्तिरुच्यते" इति निरुक्तिः। "चतुर्मूर्तिश्चतुर्बाहुश्चतुर्व्यूहश्चतुर्गतिः" वि० स०।

**चतुर्युक्त ಚತುರ್ಯುಕ್ತ** (वि०) ನಾಲ್ಕು ಕುದುರೆಗಳಿಂದ ಎಳೆಯಲ್ಪಡುವ (ರಥ). चतुर्भिः हयैर्युक्तः। "चतुर्युक्तान् रथांस्तस्मै रौक्मान् दास्यामि षोडश" भा० उद्योग० ८६-६।

**चतुर्युग ಚತುರ್ಯುಗ** (न०) 1. ಕೃತ ತ್ರೇತಾ ದ್ವಾಪರ ಮತ್ತು ಕಲಿಗಳೆಂಬ ನಾಲ್ಕು ಯುಗಗಳು. चतुर्णां युगानां समाहारः। पात्रादित्वात् न ङीप्। 43,20,000 ಮಾನುಷ ವರ್ಷಗಳು ಅಥವಾ 12,000 ದೇವ ವರ್ಷಗಳು

ಕಳೆದರೆ ಒಂದು ಚತುರ್ಯುಗವಾಗುವುದು. [ಯುಗ ಮಾನಕ್ಕೆ "ಅಬ್ದ" ಮತ್ತು "ಕಲಿ" ಪದಗಳಲ್ಲಿ ನೋಡಿ.] "तद्द्वादशसहस्राणि चतुर्युगमुदाहृतम्। सूर्याब्दसंख्यया द्वित्रिसागरैरयुताहतैः। सन्ध्यासन्ध्यांशसहितं विज्ञेयं तच्चतुर्युगम्" सू० सि०। "यदेतत्परिसंख्यातमादावेव चतुर्युगम्। एतद्द्वादशसाहस्रं देवानां युगमुच्यते" मनु० १-७१। (वि०) 2. ನಾಲ್ಕು ಯುಗಗಳಿಂದ ಕೂಡಿದ. "चतुर्वर्गफलं ज्ञानं कालावस्थाश्चतुर्युगाः" रघु० १०-२२।

**चतुर्वक्त्र ಚತುರ್ವಕ್ತ್ರ** (पुं०) ಚತುರ್ಮುಖಬ್ರಹ್ಮ. चत्वारि वक्त्राण्यस्य।

**चतुर्वर्ग ಚತುರ್ವರ್ಗ** (पुं०) ಧರ್ಮ ಅರ್ಥ ಕಾಮ ಮತ್ತು ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳ ಗುಂಪು. चतुर्णां धर्मार्थकाममोक्षाणां वर्गः समुदायः। "चतुर्वर्गफलं ज्ञानं कालावस्थाश्चतुर्युगाः" रघु० १०-२२।

**चतुर्वर्ण ಚತುರ್ವರ್ಣ** (पुं० ब० व०) 1. ಬ್ರಾಹ್ಮಣ ಕ್ಷತ್ರಿಯ ವೈಶ್ಯ ಮತ್ತು ಶೂದ್ರರೆಂಬ ನಾಲ್ಕು ವರ್ಣಗಳು. चत्वारो वर्णाः। "चतुर्वर्णमयो लोकस्त्वत्तः सर्वं चतुर्मुखात्" रघु० १०-२२।

**चतुर्वर्षशतायुस् ಚತುರ್ವರ್ಷಶತಾಯುಸ್** (वि०) ನಾಲ್ಕುನೂರು ವರ್ಷಗಳ ಆಯುಸ್ಸುಳ್ಳ. चतुर्वर्षशतमायुर्यस्य। "अरोगाः सर्वसिद्धार्थाश्चतुर्वर्षशतायुषः" मनु० १-८३।

**चतुर्वाहिन् ಚತುರ್ವಾಹಿನ್** (पुं०) ನಾಲ್ಕು ಕುದುರೆ ಅಥವಾ ಎತ್ತುಗಳಿಂದ ಎಳೆಯಲ್ಪಡುವ ಗಾಡಿ.

**चतुर्विंशति ಚತುರ್ವಿಂಶತಿ** (स्त्री०) ಇಪ್ಪತ್ತನಾಲ್ಕು. चतुर्भिरधिका विंशतिः। "आद्वादशात्क्षत्रबन्धोरा चतुर्विंशतेर्विशः" मनु० २-३८। चतुर्विंशति पूरणे "डट्" (५-२-४८)। (वि०) **चतुर्विंशः ಚತುರ್ವಿಂಶಃ.** डटो वा "तमट्" (५-२-५६)। **–विंशतितमः –ವಿಂಶತಿತಮಃ.** ಇಪ್ಪತ್ತನಾಲ್ಕನೆಯ. स्त्रियाम् "ङीप्"। **–विंशी –ವಿಂಶೀ. –विंशतितमी –ವಿಂಶತಿತಮೀ.**

**चतुर्विंशतिक ಚತುರ್ವಿಂಶತಿಕ** (वि०) ಇಪ್ಪತ್ತನಾಲ್ಕುಳ್ಳ, ಇಪ್ಪತ್ತನಾಲ್ಕು ಸಂಖ್ಯೆಯಿಂದ ಕೂಡಿದ. चतुरधिका विंशतिर्यत्र "कप्" (५-४-१५४)।

**चतुर्विंशतिमूर्ति ಚತುರ್ವಿಂಶತಿಮೂರ್ತಿ** (स्त्री०) ವಿಷ್ಣುವಿನ ಚತುರ್ಭುಜಗಳಲ್ಲಿ ಶಂಖ ಚಕ್ರ ಗದಾ ಪದ್ಮಗಳನ್ನು ಹಸ್ತಭೇದದಿಂದ ಧರಿಸುವುದರಿಂದ ಉಂಟಾಗುವ ಇಪ್ಪತ್ತನಾಲ್ಕು ಮೂರ್ತಿಗಳು.

| ಮೂರ್ತಿಗಳ ಹೆಸರು | ಬಲಗಡೆಯ ಮೇಲಿನ ಹಸ್ತ | ಎಡಗಡೆಯ ಮೇಲಿನ ಹಸ್ತ | ಬಲಗಡೆಯ ಕೆಳಹಸ್ತ | ಎಡಗಡೆಯ ಕೆಳಹಸ್ತ |
|---|---|---|---|---|
| (1) ಕೇಶವ | ಪದ್ಮ | ಚಕ್ರ | ಶಂಖ | ಗದೆ |
| (2) ನಾರಾಯಣ | ಶಂಖ | ಗದೆ | ಪದ್ಮ | ಚಕ್ರ |
| (3) ಮಾಧವ | ಗದೆ | ಶಂಖ | ಚಕ್ರ | ಪದ್ಮ |
| (4) ಗೋವಿಂದ | ಚಕ್ರ | ಪದ್ಮ | ಗದೆ | ಶಂಖ |
| (5) ವಿಷ್ಣು | ಗದೆ | ಶಂಖ | ಪದ್ಮ | ಚಕ್ರ |
| (6) ಮಧುಸೂದನ | ಚಕ್ರ | ಪದ್ಮ | ಶಂಖ | ಗದೆ |
| (7) ತ್ರಿವಿಕ್ರಮ | ಪದ್ಮ | ಶಂಖ | ಗದೆ | ಚಕ್ರ |
| (8) ವಾಮನ | ಶಂಖ | ಗದೆ | ಚಕ್ರ | ಪದ್ಮ |
| (9) ಶ್ರೀಧರ | ಪದ್ಮ | ಗದೆ | ಚಕ್ರ | ಶಂಖ |
| (10) ಹೃಷೀಕೇಶ | ಗದೆ | ಪದ್ಮ | ಚಕ್ರ | ಶಂಖ |
| (11) ಪದ್ಮನಾಭ | ಶಂಖ | ಚಕ್ರ | ಪದ್ಮ | ಗದೆ |
| (12) ದಾಮೋದರ | ಪದ್ಮ | ಗದೆ | ಶಂಖ | ಚಕ್ರ |
| (13) ವಾಸುದೇವ | ಗದೆ | ಚಕ್ರ | ಶಂಖ | ಪದ್ಮ |
| (14) ಸಂಕರ್ಷಣ | ಗದೆ | ಪದ್ಮ | ಶಂಖ | ಚಕ್ರ |
| (15) ಪ್ರದ್ಯುಮ್ನ | ಚಕ್ರ | ಗದೆ | ಶಂಖ | ಪದ್ಮ |
| (16) ಅನಿರುದ್ಧ | ಚಕ್ರ | ಶಂಖ | ಗದೆ | ಪದ್ಮ |
| (17) ಅಧೋಕ್ಷಜ | ಪದ್ಮ | ಚಕ್ರ | ಗದೆ | ಶಂಖ |
| (18) ಪುರುಷೋತ್ತಮ | ಚಕ್ರ | ಶಂಖ | ಪದ್ಮ | ಗದೆ |
| (19) ನೃಸಿಂಹ | ಚಕ್ರ | ಗದೆ | ಪದ್ಮ | ಶಂಖ |
| (20) ಅಚ್ಯುತ | ಗದೆ | ಚಕ್ರ | ಪದ್ಮ | ಶಂಖ |
| (21) ಉಪೇಂದ್ರ | ಶಂಖ | ಚಕ್ರ | ಗದೆ | ಪದ್ಮ |
| (22) ಜನಾರ್ದನ | ಪದ್ಮ | ಶಂಖ | ಚಕ್ರ | ಗದೆ |
| (23) ಹರಿ | ಶಂಖ | ಪದ್ಮ | ಚಕ್ರ | ಗದೆ |
| (24) ಕೃಷ್ಣ | ಶಂಖ | ಪದ್ಮ | ಗದೆ | ಚಕ್ರ |

"ओंरूपः केशवः पद्मशङ्खचक्रगदाधरः। नारायणः शङ्खपद्मगदाचक्री प्रदक्षिणम्॥ ततो गदी माधवोऽरिशङ्खपद्मी नमामि तम्। चक्रकौमोदकीपद्मशङ्खी गोविन्द ऊर्जितः॥" ಇತ್ಯಾದಿ अग्निपु०।

**चतुर्विद्य ಚತುರ್ವಿದ್ಯ** (वि०) ನಾಲ್ಕು ವೇದಗಳನ್ನು ಅಧ್ಯಯನ ಮಾಡಿದವನು. चतस्रो वेदरूपा विद्या यस्य।

**चतुर्विद्या ಚತುರ್ವಿದ್ಯಾ** (स्त्री०) ಋಗ್ಯಜುಃಸಾಮ ಮತ್ತು ಅಥರ್ವಗಳೆಂಬ ನಾಲ್ಕು ವೇದಗಳು. चतस्रो विद्याः।

**चतुर्विध ಚತುರ್ವಿಧ** (वि०) ನಾಲ್ಕು ಪ್ರಕಾರವಾದ, ನಾಲ್ಕು ರೀತಿಯಾದ. चतस्रो विधा यस्य। "चतुर्विधा भजन्ते मां जनाः सुकृतिनोऽर्जुन। आर्तो जिज्ञासुरर्थार्थी

ज्ञानी च भरतर्षभ" गीता ७-१६। "पारुष्यमनृतं चैव पैशुन्यं चापि सर्वशः। असम्बन्धप्रलापश्च वाङ्मयं स्याच्चतुर्विधम्" मनु० ५-६।

**चतुर्वेद ಚತುರ್ವೇದ** (पुं०) 1. ಪರಮಾತ್ಮ. चत्वारो वेदाः प्रतिपादका यस्य। 2. ನಾಲ್ಕು ವೇದಗಳನ್ನು ತಿಳಿದವನು. चतुरो वेदान् वे अधीते वा — विद "अण्" (४-२-५९)। अणो लुक् (४-१-८८)।

**चतुर्वेदविद् ಚತುರ್ವೇದವಿದ್** (पुं०) 1. ಪರಮಾತ್ಮ. चतुरो वेदान् वेद —विद (ज्ञाने) "क्विप्" (३-२-६१)। "चतुरात्मा चतुर्भावः चतुर्वेदविदेकपात्" वि० स०। (वि०) 2. ನಾಲ್ಕು ವೇದಗಳನ್ನು ತಿಳಿದವನು.

**चतुर्व्यूह ಚತುರ್ವ್ಯೂಹ** (पुं०) 1. ವಿಷ್ಣು. चत्वारो व्यूहा यस्य। ವಾಸುದೇವಸಂಕರ್ಷಣಪ್ರದ್ಯುಮ್ನಾನಿರುದ್ಧ ರೂಪವಾದ ನಾಲ್ಕು ಮೂರ್ತಿಗಳುಳ್ಳವನಾದುದರಿಂದ ಪರಮಾತ್ಮನಿಗೆ ಈ ಹೆಸರು. "चतुर्मूर्तिश्चतुर्बाहुश्चतुर्व्यूहश्चतुर्गतिः" वि० स०। 2. ಮೋಕ್ಷಶಾಸ್ತ್ರ. ಹೇಯ ಹಾನ ಹೇಯಹೇತು ಮತ್ತು ಹಾನೋಪಾಯಗಳೆಂಬ ನಾಲ್ಕು ವಿಷಯಗಳನ್ನು ಪ್ರತಿಪಾದಿಸುವುದರಿಂದ ಮೋಕ್ಷ ಶಾಸ್ತ್ರಕ್ಕೆ ಈ ಹೆಸರು. (न०) 3. ಆಯುರ್ವೇದಶಾಸ್ತ್ರ. चत्वारो व्यूहा यस्मिन्। ಆಯುರ್ವೇದವು ರೋಗ ಆರೋಗ್ಯ ರೋಗನಿದಾನ ಮತ್ತು ಭೈಷಜ್ಯಗಳೆಂಬ ನಾಲ್ಕು ಭಾಗಗಳುಳ್ಳದುದರಿಂದ ಅದಕ್ಕೆ ಈ ಹೆಸರು.

**चतुर्हायन ಚತುರ್ಹಾಯನ** (वि०) ನಾಲ್ಕು ವರ್ಷ ವಯಸ್ಸುಳ್ಳ (ಪ್ರಾಣಿ). चत्वारो हायना यस्य। स्त्रियाम् "ङीप्" (४-१-२७)। णत्वम् (वा० ४-१-२७)। **-हायणी -ಹಾಯಣೀ.** वयोवाचकादन्यत्र ङीप् णत्वं च न। चतुर्हायना शाला।

**चतुर्होत्र ಚತುರ್ಹೋತ್ರ** (पुं०) ವಿಷ್ಣು. चत्वारि होत्राणि यस्य।

**चतुश्चत्वारिंश ಚತುಶ್ಚತ್ವಾರಿಂಶ** (वि०) ನಲವತ್ತನಾಲ್ಕನೆಯ. चतुश्चत्वारिंशतः पूरणः "डट्" (५-२-४८)। स्त्रियाम् "ङीप्" (४-१-१५)। **-चत्वारिंशी -ಚತ್ವಾರಿಂಶೀ.**

**चतुश्चत्वारिंशत् ಚತುಶ್ಚತ್ವಾರಿಂಶತ್** (स्त्री०) ನಲವತ್ತನಾಲ್ಕು. चतुरधिका चत्वारिंशत्।

**चतुःशृङ्ग ಚತುಃಶೃಂಗ** (पुं०) 1. ಕುಶದ್ವೀಪದ ಒಂದು ಪರ್ವತ. चत्वारि शृङ्गाण्यस्य। "चक्रश्चतुःशृङ्गः कपिलश्चित्रकूटः देवानीकः ऊर्ध्वरोमा द्रविण इति" भाग० ५-२०-१५। 2. ಶಬ್ದಶಾಸ್ತ್ರ. ಶಬ್ದಶಾಸ್ತ್ರದಲ್ಲಿ ನಾಮ ಆಖ್ಯಾತ ನಿಪಾತ ಮತ್ತು ಉಪಸರ್ಗರೂಪವಾದ ನಾಲ್ಕು ವಿಧ ಅರ್ಥಗಳನ್ನು ಬೋಧಿಸುವುದರಿಂದ ಈ ಹೆಸರು. (वि०) 3. ನಾಲ್ಕು ಕೊಂಬುಗಳುಳ್ಳ.



**चतुष्क ಚತುಷ್ಕ** (न०) 1. ನಾಲ್ಕು. चत्वारोऽवयवा यस्य। "द्विचतुष्कमिदं प्रभूतसारं पठतां वेङ्कटनायकप्रणीतम्" सुदर्श०। 2. ನಾಲ್ಕು ಮೂಲೆಗಳುಳ್ಳ ಆವರಣವಿರುವ ಒಂದು ಅಂಗಳ. 3. ನಾಲ್ಕು ಕಂಬಗಳುಳ್ಳ ಮಂಟಪ. "वैदर्भनिर्दिष्टमथो विवेश नारीमनांसीव चतुष्कमन्तः" रघु० ७-१७। 4. ನಾಲ್ಕರ ಒಂದು ಗುಂಪು. "एतत् कष्टतमं विद्यात् चतुष्कं कामजे गणे" मनु० ७-५०। 5. ನಾಲ್ಕು ರಸ್ತೆಗಳು ಕೂಡುವ ಒಂದು ಚೌಕ. "चतुष्पथे तु संस्थानं चतुष्कम्" अभि० चि०। (स्त्री०) **-ष्की -ಷ್ಕೀ.** 6. ಸೊಳ್ಳೆಯ ತೆರೆ. 7. ಪುಷ್ಕರಿಣಿ, ನಾಲ್ಕು ಮೂಲೆಗಳುಳ್ಳ ಸರೋವರ. "चतुष्की मशकहर्यां पुष्करिण्यन्तरेऽपि च" मेदि०।

**चतुष्कर्ण ಚತುಷ್ಕರ್ಣ** (वि०) 1. ನಾಲ್ಕು ಕಿವಿಗಳುಳ್ಳ. 2. ನಾಲ್ಕು ಕಿವಿಗಳಿಂದ ಕೇಳಲ್ಪಟ್ಟ, ಇಬ್ಬರು ಮಾತ್ರ ಸೇರಿ ಮಾಡುವ ಸಮಾಲೋಚನೆ, —ಮಂತ್ರಾಲೋಚನೆ. "षट्कर्णो भिद्यते मन्त्रः चतुष्कर्णः स्थिरो भवेत्" पञ्चत०। (स्त्री०) **-कर्णी -ಕರ್ಣೀ.** 3. ಸ್ಕಂದನ ಮಾತೃಗಣದಲ್ಲಿ ಒಬ್ಬಳು.

**चतुष्कल ಚತುಷ್ಕಲ** (पुं०) ಆರ್ಯಾದಿ ಮಾತ್ರಾ ವೃತ್ತಗಳಲ್ಲಿ ನಾಲ್ಕು ಮಾತ್ರೆಗಳುಳ್ಳ ಒಂದು ಗಣ. "ज्ञेयाः सर्वादिमध्यान्तगुरवोऽत्र चतुष्कलाः। गणाश्चतुर्लघूपेताः पञ्चार्यादिषु संस्थिताः" वृ० र०।

**चतुष्कोण ಚತುಷ್ಕೋಣ** (पुं०) ನಾಲ್ಕು ಮೂಲೆಗಳುಳ್ಳ ಚೌಕವಾದ ಪ್ರದೇಶ. चत्वारः कोणा यत्र।

**चतुष्टय ಚತುಷ್ಟಯ** (न०) 1. ನಾಲ್ಕು ವಸ್ತುಗಳುಳ್ಳ ಒಂದು ಗುಂಪು, ನಾಲ್ಕರ ಒಂದು ಸಮೂಹ. चत्वारोऽवयवा अस्य "तयप्" (५-२-४२)। 2. ನಾಲ್ಕು ಸಂಖ್ಯೆ. "तस्मात्प्रदेशाच्च वितानवन्तं युक्तं मणिस्तम्भचतुष्टयेन" कुमा० ७-१२। 3. 1, 4, 7 ಮತ್ತು 10ನೆಯ ರಾಶಿಗಳು, ಕೇಂದ್ರಸ್ಥಾನಗಳು. "केन्द्रं चतुष्टयं ज्ञेयम्"। स्त्रियाम् "ङीप्" (४-१-१५)। **-यी -ಯೀ.** "प्रवृत्तिरासीच्छब्दानां चरितार्था चतुष्टयी" कुमा० २-१७।

**चतुष्पञ्चाशत् ಚತುಷ್ಪಂಚಾಶತ್** (स्त्री०) 1. ಐವತ್ತನಾಲ್ಕು. चतुरधिका पञ्चाशत्। (वि०) 2. ಐವತ್ತನಾಲ್ಕು

ಸಂಖ್ಯೆಯುಳ್ಳ, ಐವತ್ತನಾಲ್ಕರಿಂದ ಕೂಡಿರುವ. ततः पूरणे "डट्"। चतुष्पञ्चाशतः पूरणः "डट्" (५-२-४८)। **चतुष्पञ्चाशः ಚತುಷ್ಪಂಚಾಶಃ.** ಐವತ್ತನಾಲ್ಕನೆಯ. स्त्रियाम् "ङीप्" (४-१-१५)। **-पञ्चाशी -ಪಂಚಾಶೀ.**

**चतुष्पथ ಚತುಷ್ಪಥ** (पुं०) 1. ಬ್ರಹ್ಮಚರ್ಯ ಗಾರ್ಹಸ್ಥ್ಯ ವಾನಪ್ರಸ್ಥ ಮತ್ತು ಸಂನ್ಯಾಸಗಳೆಂಬ ನಾಲ್ಕು ವಿಧ ಆಶ್ರಮಗಳುಳ್ಳವನು. चत्वारः पन्थानः ब्रह्मचर्यादयः आश्रमा यस्य। 2. ನಾಲ್ಕು ರಸ್ತೆಗಳು ಸೇರುವ ಒಂದು ಚೌಕ. चतुर्णां पथां समाहारः "अः" (५-४-७४)।

**चतुष्पथनिकेता ಚತುಷ್ಪಥನಿಕೇತಾ** (वि०) ಸ್ಕಂದನ ಮಾತೃಗಣದಲ್ಲಿ ಒಬ್ಬಳು. चतुष्पथे निकेतोऽस्याः। ನಾಲ್ಕು ರಸ್ತೆಗಳು ಸೇರುವ ಜಾಗದಲ್ಲಿ ಇವಳು ವಾಸಿಸುವುದರಿಂದ ಈ ಹೆಸರು.

**चतुष्पथरता ಚತುಷ್ಪಥರತಾ** (स्त्री०) ಸ್ಕಂದನ ಮಾತೃಗಣದಲ್ಲಿ ಒಬ್ಬಳು. चतुष्पथे रता।

**चतुष्पद ಚತುಷ್ಪದ** (वि०) 1. ನಾಲ್ಕು ಕಾಲುಗಳುಳ್ಳ ಪ್ರಾಣಿ. चत्वारि पदानि यस्य। "तरवश्च निरुपसृष्टाङ्कुरा नरचतुष्पदा हृष्टाः" बृहत्सं० २१-१७। 2. ಜ್ಯೋತಿಷೋಕ್ತವಾದ ಒಂದು ಕರಣ. "चतुष्पदभवो मर्त्यः सदाचारविवर्जितः। स्वल्पवित्तः क्षीणदेहश्चतुष्पादधनान्वितः"।

**चतुष्पाद् ಚತುಷ್ಪಾದ್** (वि०) ನಾಲ್ಕು ಕಾಲುಗಳುಳ್ಳ ಪ್ರಾಣಿ. चत्वारः पादाः यस्य। अन्त्यलोपः (५-४-१४०)। स्त्रियाम् वा "ङीप्" (४-१-८)। पादः पद्भावः (६-४-१३०)। **चतुष्पदी ಚತುಷ್ಪದೀ.**

**चतुष्पाद ಚತುಷ್ಪಾದ** (वि०) 1. ನಾಲ್ಕು ಕಾಲುಗಳುಳ್ಳ ಪ್ರಾಣಿ. चत्वारः पादा यस्य। समासान्तविधेरनित्यत्वात् अन्त्यलोपो न। 2. ನಾಲ್ಕು ಪಾದಗಳುಳ್ಳ (ಪದ್ಯ). "भिन्नचिह्नचतुष्पादं विषमं परिकीर्तितम्" छन्दोमं।

**चतुस्त्रिंश ಚತುಸ್ತ್ರಿಂಶ** (वि०) ಮೂವತ್ತನಾಲ್ಕನೆಯ. चतुस्त्रिंशतः पूरणः "डट्" (५-२-४८)। स्त्रियाम् "ङीप्" (४-१-१५)। **-त्रिंशी -ತ್ರಿಂಶೀ.**

**चतुस्त्रिंशत् ಚತುಸ್ತ್ರಿಂಶತ್** (स्त्री०) 1. ಮೂವತ್ತನಾಲ್ಕು. चतुरधिका त्रिंशत्। (वि०) 2. ಮೂವತ್ತನಾಲ್ಕು ಸಂಖ್ಯೆಯುಳ್ಳ.

**चतुःसन ಚತುಃಸನ** (पुं० ब० व०) ನಾಲ್ಕು "सन" ವೆಂಬ ಶಬ್ದಗಳಿಂದ ಕೂಡಿದ ಹೆಸರುಳ್ಳ ಬ್ರಹ್ಮನ ನಾಲ್ಕು ಮಂದಿ ಪುತ್ರರು, ಸನಕ ಸನಂದನ ಸನತ್ಕುಮಾರ ಮತ್ತು ಸನತ್ಸುಜಾತರೆಂಬ ಬ್ರಹ್ಮನ ನಾಲ್ಕು ಮಕ್ಕಳು. चत्वारः सनेति शब्दा नाम्नि येषाम्।

**चतूरात्र ಚತೂರಾತ್ರ** (पुं०) 1. ನಾಲ್ಕು ರಾತ್ರಿಗಳಲ್ಲಿ ಮಾಡುವ ಯಾಗ. चतसृभिः रात्रिभिः निर्वृत्तः। (न०) 2. ನಾಲ್ಕು ರಾತ್ರಿಗಳು. चतसृणां रात्रीणां समाहारः "अच्" (५-४-८७)। संख्यापूर्वं रात्रं क्लीबम् इति नपुंसकत्वम्।

**चत्वर ಚತ್ವರ** (न०) 1. ಸ್ಥಂಡಿಲ, ಹೋಮಕ್ಕಾಗಿ ಸಿದ್ಧಪಡಿಸಿದ ಸಮವಾದ ಭೂಭಾಗ. चतन्त्यस्मिन् - चते (याचने) "ष्वरच्" (उ० २-१२२)। 2. ಮನೆಯ ಮುಂಭಾಗದ ಅಂಗಳ. चत्यते—चते (याचने) "ष्वरच्"। "गृहचन्तां गृहवास्तूनि कार्यन्तां त्रिकचत्वराः" हरिवं०। 3. ನಾಲ್ಕು ರಸ್ತೆಗಳು ಸೇರುವ ಜಾಗ. "अनुरथ्यासु सर्वासु चत्वरेषु च कौरव" भा० वन० १५-१९। 4. ಜನನಿಬಿಡವಾದ ಪ್ರದೇಶ, ಅನೇಕ ಮಂದಿ ವಾಸಿಸುವ ಜಾಗ. "न चत्वरे निशि तिष्ठेन्निगूढः न राजकाम्यां योषितं प्रार्थयीत" भा० उद्योग० ३६-२८। "चत्वरं स्यात् पथां श्लेषे स्थण्डिलाजिरयोरपि" हेम०।

**चत्वरवासिनी ಚತ್ವರವಾಸಿನೀ** (स्त्री०) ಸ್ಕಂದನ ಮಾತೃವರ್ಗದಲ್ಲಿ ಒಬ್ಬಳು. "ऋक्षाम्बिका निम्बुटिका रामा चत्वरवासिनी"।

**चत्वारिंशत् ಚತ್ವಾರಿಂಶತ್** (स्त्री०) 1. ನಲವತ್ತು. चत्वारि दशतः परिमाणमस्य। निपा० (५-१-५९)। (वि०) 2. ನಲವತ್ತು ಸಂಖ್ಯೆಯುಳ್ಳ. चत्वारिंशतः पूरणः "डट्" (५-२-४८)। **चत्वारिंशः ಚತ್ವಾರಿಂಶಃ.** स्त्रियाम् "ङीप्" (४-१-१५)। **चत्वारिंशी ಚತ್ವಾರಿಂಶೀ.** डटो वा "तमट्" (५-२-५६)। **चत्वारिंशत्तमः ಚತ್ವಾರಿಂಶತ್ತಮಃ.** स्त्रियाम् "ङीप्" (४-१-१५)। **-तमी -ತಮೀ.**

**चत्वाल ಚತ್ವಾಲ** (पुं०) 1. ಹೋಮದ ಕುಂಡ. 2. ದರ್ಭೆ. चते (याचने) "वालञ्" (बाहु०)। "चत्वालो होमकुण्डे स्यात् पुंसि दर्भेऽपि दृश्यते" मेदि०।

**चदि - आह्लादे दीप्तौ च** (भ्वा० पर० अक० से०)। चन्दति अचन्दीत्। चचन्द। 1. ಸಂತೋಷಪಡು, 2. ಪ್ರಕಾಶಿಸು.

**चदिर ಚದಿರ** (पुं०) 1. ಕರ್ಪೂರ. 2. ಚಂದ್ರ. 3. ಆನೆ. 4. ಸರ್ಪ, ಹಾವು. स्त्रियाम् जाति० "ङीष्" (४-१-६३)।

**चदे - याचने** (भ्वा० उभ० द्विक० से०)। चदति, -ते। चचाद, चेदे। अचदीत्, अचदिष्ट। ಯಾಚಿಸು, ಬೇಡು.

**चन ಚನ** (अव्य०) 1. ಅಸಾಕಲ್ಯ, ಅಸಂಪೂರ್ಣ. "असाकल्ये तु चिच्चन" अम०। 2. ವಿಸ್ಮಯ, ಆಶ್ಚರ್ಯ. "चन विस्मयेऽसाकल्ये" मेदि०।

**चनस् ಚನಸ್** (न०) ಅನ್ನ. चाय् (पूजायाम्) "असुन्" ह्रस्वश्च (उ० ४-१९८)। चनो भक्तम् सि० कौ०।

**चन्द ಚಂದ** (पुं०) 1. ಕರ್ಪೂರ. 2. ಚಂದ್ರ. चदि (आह्लादे दीप्तौ च) + णिच् "अच्" (३-१-१३४)।

**चन्दन ಚಂದನ** (पुन०) 1. ಗಂಧದ ಮರ. चन्दयति — चदि (आह्लादे) + णिच् "ल्युः" (३-१-१३४)। "भोगिवेष्टनमार्गेषु चन्दनानां समर्पितम्" रघु० ४-४८। 2. ಒಬ್ಬ ವಾನರ. "चन्दनो वानरभिदि श्रीखण्डे" हेम०। "चन्दनोऽस्त्री मलयजे भद्रकाल्यां नपुंसकम्" मेदि०। (न०) 3. ರಕ್ತಚಂದನ, ಕೆಂಬಣ್ಣದ ಚಂದನ.

**चन्दनगिरि ಚಂದನಗಿರಿ** (पुं०) ಗಂಧದ ಮರಕ್ಕೆ ಉತ್ಪತ್ತಿ ಸ್ಥಾನವಾದ ಮಲಯಾಚಲ. चन्दनस्योत्पत्तिस्थानं गिरिः।

**चन्दनपुष्प ಚಂದನಪುಷ್ಪ** (न०) ಲವಂಗ. चन्दनमिव सुगन्धि पुष्पमस्य।

**चन्दनशारिवा ಚಂದನಶಾರಿವಾ** (स्त्री०) ಸೊಗದೆ ಗಿಡ.

**चन्दनरस ಚಂದನರಸ, चन्दनसार ಚಂದನಸಾರ**(पुं०) ಗಂಧದ ನೀರು, ಸುಗಂಧ ದ್ರವ್ಯಗಳನ್ನು ಸೇರಿಸಿ ತಯಾರಿಸಲ್ಪಟ್ಟ ಪನ್ನೀರು. चन्दनस्य रसः सारो वा। "विन्यस्तस्त्वयि सान्द्रचन्दनरसस्पर्शो न तस्याः करः" रत्ना० ३-१।

**चन्दनाचल ಚಂದನಾಚಲ –अद्रि –ಅದ್ರಿ** (पुं०) ಮಲಯಾದ್ರಿ, ಮಲಯಪರ್ವತ.

**चन्दनादि ಚಂದನಾದಿ** (पुं०) ಪಿತ್ತೋಪಶಮನ ಮಾಡುವ ಏಳು ದ್ರವ್ಯಗಳು. "चन्दनञ्च तथोशीरं कर्पूरो गन्धवाकुची। एलाकर्चूरगो लाः सप्तैते चन्दनादयः"।

**चन्दनीया ಚಂದನೀಯಾ** (स्त्री०) ಗೋರೋಚನ.

**चन्दनोदक ಚಂದನೋದಕ** (न०) ಗಂಧದ ನೀರು, ನೀರಿನಲ್ಲಿ ಕದಡಲ್ಪಟ್ಟ ಗಂಧ. "चन्दनोदकचन्द्रांशुचन्द्रकान्तादिशीतलाः" काव्या० २-४०।

**चन्दिर ಚಂದಿರ**(पुं०) 1. ಚಂದ್ರ. चदि(आह्लादे) "किरच्" (उ० १-५१)। 2. ಗಜ, ಆನೆ. स्त्रियाम् जाति० "ङीष्" (४-१-६३)। "चन्दिरो चन्द्रहस्तिनौ" सि० कौ०।

**चन्दिल ಚಂದಿಲ**(पुं०) 1. ಚಕ್ಕೋತದ ಸೊಪ್ಪು. 2. ಭರ್ಗ, ಶಿವ. 3. ನಾಪಿತ. मेदि०।

**चन्द्र ಚಂದ್ರ** (पुं०) 1. ಅತ್ರಿಯ ಮಗ, ಸೋಮ, ಕಲಾನಿಧಿ, ನಕ್ಷತ್ರಗಳ ಅಧಿಪತಿ. चदि (आह्लादे) + णिच् "रक्" (उ० २-१३)। "यतो बृहत्पार्वणचन्द्रचारु तस्यातपत्रं बिभरांबभूवे" माघ० ३-२। ಚಂದ್ರನು ಗೌರವರ್ಣವುಳ್ಳವನು. "रक्तश्यामो भास्करो गौर इन्दुर्नात्युच्चाङ्गो रक्तगौरो महीजः"। ಇವನು ವಾಯುದಿಕ್ಕಿನ ಅಧಿಪತಿ. "सूर्यः शुक्रः क्षमापुत्रः सैंहिकेयः शनिः शशी। सौम्यस्त्रिदशमन्त्री च प्राच्यादिदिगधीश्वराः"। ಚಂದ್ರನು ಸ್ತ್ರೀಗ್ರಹ ಮತ್ತು ಸೌಮ್ಯಗ್ರಹ. ವೈಶ್ಯಜಾತಿಗೆ ಸೇರಿದವನು. "क्रूरा भानुतमःशनिध्वजकुजाश्शुक्रार्यसौम्येन्दवः सौम्यास्ते पुरुषाः कुजार्कगुरवो राह्विन्दुशुक्राः स्त्रियः। तच्छेषास्तु नपुंसका गुरुभृगू विप्रौ कुजार्कौ नृपौ वैश्यौ चन्द्रबुधौ तदन्यकुलजो मन्दस्तु वर्णेश्वरः" मु० चि०। ಚಂದ್ರನಿಗೆ ಕರ್ಕಾಟಕ ರಾಶಿಯು ಕ್ಷೇತ್ರ. ವೃಷಭ ರಾಶಿಯು ಉಚ್ಚ. ವೃಶ್ಚಿಕ ರಾಶಿಯು ನೀಚ. ಸೂರ್ಯನೂ ಬುಧನೂ ಮಿತ್ರರು. ಉಳಿದವರು ಸಮರು. ಚಂದ್ರನು ಜನ್ಮರಾಶಿಯಿಂದ 1, 3, 6, 7, 10 ಮತ್ತು 11ನೇ ಸ್ಥಾನಗಳಲ್ಲಿರುವಾಗ ಶುಭಫಲವನ್ನು ಕೊಡುತ್ತಾನೆ. ಚಂದ್ರದಶೆಯು ಕಾಲ 10 ವರ್ಷಗಳು.

**ತನ್ನ ಮತ್ತು ಇತರ ಗ್ರಹಗಳ ದಶೆಗಳಲ್ಲಿ ಚಂದ್ರನ ಅಂತರ್ದಶಾ (ಭುಕ್ತಿ) ಮಾನ:**

| ದಶೆ | | ವರ್ಷ | ಮಾಸಗಳು | ದಿನಗಳು |
|---|---|---|---|---|
| ರವಿದಶೆ | .. | – | 6 | – |
| ಚಂದ್ರದಶೆ | .. | – | 10 | – |
| ಕುಜದಶೆ | .. | – | 7 | – |
| ರಾಹುದಶೆ | .. | 1 | 6 | – |
| ಗುರುದಶೆ | .. | 1 | 4 | – |
| ಶನಿದಶೆ | .. | 1 | 7 | – |
| ಬುಧದಶೆ | .. | 1 | 5 | – |
| ಕೇತುದಶೆ | .. | – | 7 | – |
| ಶುಕ್ರದಶೆ | .. | 1 | 8 | – |

**ಚಂದ್ರಮಹಾದಶೆಯಲ್ಲಿ ತನ್ನ (ಸ್ವ) ಮತ್ತು ಇತರ ಗ್ರಹಗಳ ಅಂತರ್ದಶಾ (ಭುಕ್ತಿ) ಮಾನ:**

| ಭುಕ್ತಿ | | ವರ್ಷ | ಮಾಸಗಳು | ದಿನಗಳು |
|---|---|---|---|---|
| ಸ್ವಭುಕ್ತಿ | .. | – | 10 | – |
| ಕುಜಭುಕ್ತಿ | .. | – | 7 | – |
| ರಾಹುಭುಕ್ತಿ | .. | 1 | 6 | – |
| ಗುರುಭುಕ್ತಿ | .. | 1 | 4 | – |
| ಶನಿಭುಕ್ತಿ | .. | 1 | 7 | – |
| ಬುಧಭುಕ್ತಿ | .. | 1 | 5 | – |
| ಕೇತುಭುಕ್ತಿ | .. | – | 7 | – |
| ಶುಕ್ರಭುಕ್ತಿ | .. | 1 | 8 | – |
| ರವಿಭುಕ್ತಿ | .. | – | 6 | – |

ಚಂದ್ರನು ನವಗ್ರಹಗಳಲ್ಲಿ ಒಬ್ಬ. ಬ್ರಹ್ಮನಿಂದ ಸೃಷ್ಟಿ ಕಾರ್ಯದಲ್ಲಿ ನಿಯಮಿತನಾಗಿದ್ದ ಅತ್ರಿಮಹರ್ಷಿಯು ತಪಸ್ಸುಮಾಡುತ್ತಿದ್ದಾಗ ಆತನ ಕಣ್ಣಿನಿಂದ ದಿವ್ಯ ಜ್ಯೋತಿ ಯೊಂದು ಹೊರಟು ಹತ್ತು ದಿಕ್ಕುಗಳಲ್ಲೂ ಹರಡಿತು. ದಿಕ್ಕುಗಳು ಅದನ್ನು ಧರಿಸಲು ಸಾಧ್ಯವಾಗದೆ ಭೂಮಿಯಲ್ಲಿ ಬಿಡಲಾಗಿ ಬ್ರಹ್ಮನು ಅದನ್ನು ಒಟ್ಟುಗೂಡಿಸಿ ಒಬ್ಬ ಪುರುಷನನ್ನಾಗಿ ಮಾಡಿ ಚಂದ್ರನೆಂದು ನಾಮಕರಣಮಾಡಿ ಗ್ರಹಗಳ ಮಂಡಲದಲ್ಲಿ ಸೇರಿಸಿದನು. ರಾಶಿಚಕ್ರದಲ್ಲಿ ಚಂದ್ರನು ಎಲ್ಲಾ ಗ್ರಹಗಳಿಗಿಂತಲೂ ಕೆಳಗೆ ಸಂಚರಿಸು ತ್ತಾನೆ. "मन्दामरेज्यभूपुत्रसूर्यशुक्रेन्दुजेन्दवः" ಸೂ० सि० १२-३१। ಇವನು ದಕ್ಷಪುತ್ರಿಯರಾದ ಅಶ್ವಿನೀ ಮೊದಲಾದ ಇಪ್ಪತ್ತೇಳು ಮಂದಿ ಕನ್ಯೆಯರನ್ನು ಮದುವೆಯಾದನು. ರೋಹಿಣಿಯನ್ನು ಮಾತ್ರ ಇವನು ವಿಶೇಷವಾಗಿ ಪ್ರೀತಿಸು ತ್ತಿದ್ದುದರಿಂದ ದಕ್ಷನು ಇವನಿಗೆ ಕ್ಷಯರೋಗ ಬರುವಂತೆ ಶಾಪವಿತ್ತನು. ಬಳಿಕ ತನ್ನ ಮಕ್ಕಳ ಪ್ರಾರ್ಥನೆಯಂತೆ ತಿಂಗಳ ಒಂದು ಪಕ್ಷದಲ್ಲಿ ಕ್ರಮೇಣ ಕ್ಷಯಹೊಂದು ವಂತೆಯೂ ಇನ್ನೊಂದು ಪಕ್ಷದಲ್ಲಿ ಕ್ರಮೇಣ ವೃದ್ಧಿ ಹೊಂದುವಂತೆಯೂ ವರವನ್ನು ಕೊಟ್ಟನು. "अश्विन्याद्यास्तु दक्षस्य उपयेमे सुता विधुः। रोहिण्यामेव सततं बद्धप्रेमा रराम ह। दृष्ट्वा तदितरास्ताश्च तप्ताः पितरमब्रुवन्। अस्माकं कामदस्तात जामाता तव रोहिणीम्। रमयत्येव सततं तेन तप्ता वयं पितः। तच्छ्रुत्वा चाप्रियं दक्षः सोममाह भजस्व भोः। प्रेम्णा समेन सर्वास्त्वं दुहितॄर्मम मानद। जगृहे तद्वचो नैव सोमः सप्रेम रोहिणीम्। तथैव रमयामास श्रुत्वा दक्षश्चुकोप ह। शशाप ते न भविता ह्यपत्यं मद्वचोऽतिगः। यक्ष्मणा च परिग्रस्तो भव त्वं क्षीणरेतकः। अथ क्षयमिते तस्मिन् सर्वास्ताः सहिताः स्त्रियः। पितरं शरणं प्राप्ताः क्षीयते नः पतिः पितः। उवाच दक्षस्ताः सर्वाः शापो मे नान्यथा भवेत्। मासमध्ये पक्षमेकं वर्धतां स क्रमेण वै। क्षयं क्रमेण प्राप्नोतु पक्षमेकं व्यवस्थया। एवं शापं वरञ्चैव ददावस्मै व्यवस्थया। तथैव राजते व्योम्नि क्षयवृद्धी दधद्विधुः" पाद्मपु०। [ಚಂದ್ರನ ಕಲೆಗಳ ಕ್ಷಯಕ್ಕೆ ಬೇರೆ ಕಾರಣವನ್ನು "कलाक्षय" ಪದದಲ್ಲಿ ನೋಡಿ.] ಅವಿಮುಕ್ತ ಕ್ಷೇತ್ರದಲ್ಲಿ ಚಂದ್ರನು ತನ್ನ ತಪಸ್ಸಿನಿಂದ ಪರಮೇಶ್ವರನನ್ನು ಮೆಚ್ಚಿಸಿ ಶಿವನ ತಲೆಯ ಮೇಲೆ ಸ್ಥಾನವನ್ನು ಪಡೆದನು. ಅಲ್ಲೇ ರಾಜಸೂಯ ಯಾಗ ಮಾಡಿ ಬ್ರಾಹ್ಮಣರನ್ನು ಸಂತೋಷಗೊಳಿಸಿ "द्विजराजः" ಎಂಬ ಹೆಸರನ್ನು ಪಡೆದನು. "तत्रैव राजसूयं च चक्रे चन्द्रेश्वराग्रतः। तत्रैव ब्राह्मणैः प्रीतैरित्युक्तोऽसौ कलानिधिः। सोमोऽस्माकं ब्राह्मणानां राजा त्रैलोक्यदक्षिणः। तत्रैव देवदेवस्य विलोचनपदं गतः। शम्भुना प्रीतमनसा त्रैलोक्याह्लादहेतवे। त्वं ममापि परा मूर्तिरित्युक्तस्तत्तपोबलात्" काशीख०। 2. ಪಚ್ಚಕರ್ಪೂರ. "विलेपनस्याधिकचन्द्रभागताविभावनाच्चापललाप पाण्डुताम्" नैष० १-५१। 3. ಸ್ವರ್ಣ, ಚಿನ್ನ. 4. ಕಪಿಲೆಬಟ್ಟು ಎಂಬ ಒಂದು ಓಷಧಿ. 5. ನವಿಲುಗರಿಯ ಮೇಲಿರುವ ಕಣ್ಣು. 6. ಜಲ, ನೀರು. 7. ಚಂದ್ರಗುಪ್ತನೆಂಬ ಒಬ್ಬ ದೊರೆ. "क्रूरग्रहः सकेतुः चन्द्रमसंपूर्णमण्डलमिदानीम्" मुद्रा० १-६। 8. ವಿಸರ್ಗದ ಚಿಹ್ನೆ. 9. ರತ್ನ. 10. ಚಂದ್ರ ದೇವತಾಕವಾದ ಮೃಗಶೀರ್ಷನಕ್ಷತ್ರ. (वि०) 11. ರಮ್ಯ ವಾದ, ಮನೋಹರವಾದ. 12. ಆಹ್ಲಾದಕರವಾದ. ಸಂತೋಷವುಂಟುಮಾಡುವ. "चन्द्रोऽम्बुकाम्ययोः। स्वर्णे सुधांशौ कर्पूरे कांपिल्ये मेचकेऽपि च" हेम०।

**चन्द्रक ಚಂದ್ರಕ** (पुं०) 1. ನವಿಲಿನ ಗರಿಯ ಮೇಲಿರುವ ಕಣ್ಣು. चन्द्र इव कायति—कै (शब्दे) "कः"। "संमोदस्ते पथि परिणमेच्चन्द्रकैरुज्झितानां मेघापाये विपिनशिखिनां वीक्ष्य वाचंयमत्वम्" हंस० १-१०। 2. ನಖ, ಉಗುರು. चन्द्र इव "कन्" (५-३-९७)। 3. ನೀರಿನಲ್ಲಿ ಬಿದ್ದ ತೈಲಬಿಂದುವಿನಂತೆ ಹರಡಿದ ಸ್ನೇಹ ವಸ್ತುವಿನ ಚಂದ್ರಾಕಾರವಾದ ಮಂಡಲ. "यां चन्द्रकैर्मदजलस्य महानदीनां नेत्रश्रियं विकसतो विदधुर्गजेन्द्राः" माघ० ५-४०। 4. ಬಿಳಿಯ ಮೆಣಸು. 5. ಸುಗ್ಗಿ ಬೀಜ.

**चन्द्रकला ಚಂದ್ರಕಲಾ** (स्त्री०) ಚಂದ್ರಮಂಡಲದ ಹದಿನಾರ ನೆಯ ಒಂದಂ ಭಾಗ. चन्द्रस्य कला। "राहोश्चन्द्रकलामिवाननचरीं दैवात्समासाद्य मे" मालती० ५-२८।

**चन्द्रकवत् ಚಂದ್ರಕವತ್** (वि०) ಮಯೂರ, ನವಿಲು. चन्द्रकाः सन्त्यस्य "मतुप्" (५-२-९४)। "प्रादुद्रवत् सपदि चन्द्रकवान् द्रुमाग्रात्" माघ० ५-१९।

**चन्द्रकान्त ಚಂದ್ರಕಾಂತ** (पुं०) 1. ಚಂದ್ರಕಾಂತಶಿಲೆ, ಚಂದ್ರನ ಕಿರಣವು ಬಿದ್ದಕೂಡಲೆ ನೀರು ಜಿನುಗುವ ಒಂದು ಜಾತಿಯ ಕಲ್ಲು. चन्द्रः कान्तोऽभीष्टो यस्य। "चन्द्रपादजनितप्रवृत्तिभिश्चन्द्रकान्तजलबिन्दुभिर्गिरिः" कुमा० ८-६७। 2. ಬಿಳಿನೈದಿಲೆ. मेदि०।

**चन्द्रकान्ता ಚಂದ್ರಕಾಂತಾ** (स्त्री०) 1. ರಾತ್ರಿ. चन्द्रः कान्तः प्रियो यस्याः। 2. ಚಂದ್ರನ ಪತ್ನಿ. चन्द्रस्य कान्ता। 3. ಚಂದ್ರಿಕೆ, ಬೆಳದಿಂಗಳು.

**चन्द्रकान्ति ಚಂದ್ರಕಾಂತಿ** (स्त्री०) 1. ಚಂದ್ರಿಕೆ, ಬೆಳದಿಂಗಳು. चन्द्रस्य कान्तिः। (न०) 2. ಬೆಳ್ಳಿ. चन्द्रस्येव कान्तिरस्य।

**चन्द्रकिन् ಚಂದ್ರಕಿನ್** (पुं०) ಮಯೂರ, ನವಿಲು. चन्द्रकोऽस्त्यस्य "इनिः" (५-२-११५)। "गोपानसीषु क्षणमास्थितानामालम्बिभिश्चन्द्रकिणां कलापैः" माघ० ३-४९। स्त्रियाम् "ङीप्" (४-१-५)। **चन्द्रकिनी ಚಂದ್ರಕಿನೀ.**

**चन्द्रकेतु ಚಂದ್ರಕೇತು** (पुं०) ಲಕ್ಷ್ಮಣನ ಮಗ. "अङ्गदं चन्द्रकेतुं च लक्ष्मणोऽप्यात्मसम्भवौ" रघु० १५-९०।

**चन्द्रक्षय ಚಂದ್ರಕ್ಷಯ** (पुं०) ಅಮಾವಾಸ್ಯೆ. चन्द्रस्य क्षयो यत्र। "पितृयज्ञं तु निर्वर्त्य विप्रश्चन्द्रक्षयेऽग्निमान्" मनु० ३-१२२।

**चन्द्रगुप्त ಚಂದ್ರಗುಪ್ತ** (पुं०) ಪಾಟಲಿಪುತ್ರದ ರಾಜನಾದ ಮೌರ್ಯವಂಶದ ಒಬ್ಬ ದೊರೆ. ಚಾಣಕ್ಯನೆಂಬೊಬ್ಬ ದ್ವಿಜನು ಕ್ಷತ್ರಿಯರಿಗೆ ಕಂಟಕರಾಗಿದ್ದ ನಂದರನ್ನು ನಾಶಗೊಳಿಸಿ ಮೌರ್ಯಕುಲದ ಚಂದ್ರಗುಪ್ತನನ್ನು ದೊರೆಯನ್ನಾಗಿ ಮಾಡಿದನು. "नवनन्दान् द्विजः कश्चित् प्रपन्नानुद्धरिष्यति। तेषामभावे जगतीं मौर्या भोक्ष्यन्ति वै कलौ॥ स एव चन्द्रगुप्तं वै द्विजो राज्येऽभिषेक्ष्यति" भाग० १२-१-१२, १३। चाणक्य :—भो राजन् चन्द्रगुप्त, किं ते भूयः प्रियं करोमि। चन्द्रगुप्त :—किमतः परं प्रियमस्ति? राक्षसेन समं मैत्री राज्ये चारोपिता वयम्। नन्दाश्चोन्मूलिताः सर्वे किं कर्तव्यमतःपरम्" मुद्रा० ७-१७।

**चन्द्रगृह ಚಂದ್ರಗೃಹ** (न०) ಕರ್ಕಾಟಕ ರಾಶಿ.

**चन्द्रगोल ಚಂದ್ರಗೋಲ** (पुं०) ಗೋಳಾಕಾರದ ಚಂದ್ರಮಂಡಲ.

**चन्द्रचार ಚಂದ್ರಚಾರ** (पुं०) ಚಂದ್ರನು ಮೇಷ ಮೊದಲಾದ ರಾಶಿಗಳಲ್ಲಿ ಸಂಚರಿಸುವುದು. चन्द्रस्य चारः।

**चन्द्रचूड ಚಂದ್ರಚೂಡ, -चूडामणि -ಚೂಡಾಮಣಿ** (पुं०) ಪರಶಿವ, ಮಹಾದೇವ. चन्द्रः चूडायां यस्य चन्द्रः चूडामणिभूतो यस्य वा। "चन्द्रचूडामणिर्देवो यामुद्वहति मूर्धनि। यस्या विलोकनं पुण्यं श्रद्दधुस्तां मुदा हृदि" कुमा० १०-४९।

**चन्द्रज ಚಂದ್ರಜ** (पुं०) ಚಂದ್ರನ ಮಗನಾದ ಬುಧಗ್ರಹ. चन्द्राज्जायते — जनी (प्रादुर्भावे) "डः" (३-२-९८)। "रौद्रादीनि मघान्तान्युपाश्रिते चन्द्रजे प्रजापीडा। शस्त्रनिपातक्षुद्भयरोगानावृष्टिसन्तापैः" बृहत्सं० ७-३। ಬೃಹಸ್ಪತಿಯ ಪತ್ನಿಯಾದ ತಾರೆಯನ್ನು ಚಂದ್ರನು ಅಪಹರಿಸಿದ್ದಾಗ ಅವಳಲ್ಲಿ ಬುಧನು ಜನಿಸಿದನು. ಆದರಿಂದ ಬುಧನು ಚಂದ್ರನ ಮಗನಾದನು. [ವಿವರಕ್ಕೆ "बुध" ಪದದಲ್ಲಿ ನೋಡಿ.]

**चन्द्रदार ಚಂದ್ರದಾರ** (पुं० ಬ० ವ०) ಚಂದ್ರನ ಪತ್ನಿಯರು, ಅಶ್ವಿನೀ ಮೊದಲಾದ ಇಪ್ಪತ್ತೇಳು ಮಂದಿ ದಕ್ಷಕನ್ಯೆಯರು, चन्द्रस्य दाराः। ಈ ಇಪ್ಪತ್ತೇಳು ಕನ್ಯೆಯರೇ ಅಶ್ವಿನೀ ಮೊದಲಾದ ಇಪ್ಪತ್ತೇಳು ನಕ್ಷತ್ರಗಳು.

**चन्द्रदेव ಚಂದ್ರದೇವ** (पुं०) ಒಬ್ಬ ದೊರೆ, ಕುರುಸೇನೆಯಲ್ಲಿ ಒಬ್ಬ ದಳಪತಿ. "सौश्रुतिश्चन्द्रदेवश्च मित्रवर्मा च भारत" भा० कर्ण० १८-३।

**चन्द्रद्युति ಚಂದ್ರದ್ಯುತಿ** (पुं०) 1. ಗಂಧದ ಕಟ್ಟಿಗೆ. चन्द्रस्य द्युतिरिव द्युतिरस्य। (स्त्री०) 2. ಚಂದ್ರನ ಪ್ರಕಾಶ, ಚಂದ್ರಿಕೆ, ಬೆಳದಿಂಗಳು.

**चन्द्रनाभ ಚಂದ್ರನಾಭ** (पुं०) ಒಬ್ಬ ದಾನವ. "सूर्यनाभश्च विक्रान्तश्चन्द्रनाभश्च भारत" हरिवं०।

**चन्द्रनामन् ಚಂದ್ರನಾಮನ್** (पुं०) ಕರ್ಪೂರ. चन्द्रस्य नामान्यस्य।

**चन्द्रपाद ಚಂದ್ರಪಾದ** (पुं०) ಚಂದ್ರನ ಕಿರಣ, ಚಂದ್ರಿಕೆ, ಬೆಳದಿಂಗಳು. चन्द्रस्य पादः। "गिरिशमुपचचार प्रत्यहं सा सुकेशी नियमितपरिखेदा तच्छिरश्चन्द्रपादैः" कुमा० १-६०।

**चन्द्रपुत्र ಚಂದ್ರಪುತ್ರ, -सुत -ಸುತ, -सूनु -ಸೂನು** (पुं०) ಚಂದ್ರನ ಮಗನಾದ ಬುಧಗ್ರಹ. चन्द्रस्य पुत्रः सुतः सूनुर्वा।

**चन्द्रप्रभा ಚಂದ್ರಪ್ರಭಾ** (स्त्री०) ಹಲವು ವಿಧ ನೇತ್ರರೋಗಗಳನ್ನು ಪರಿಹರಿಸುವ ಅಂಜನ. "अञ्जनं श्वेतमरिचं पिप्पली मधुयष्टिका। विभीतकस्य मध्यं तु शङ्खनाभिर्मनःशिला। एतानि समभागानि अजाक्षीरेण पेषयेत्। छायाशुष्कां कृतां वर्तिं नेत्रेषु च प्रयोजयेत्।" "अर्बुदं पटलं काचं तिमिरं रक्तराजिकाम्। वर्तिश्चन्द्रप्रभा नाम जातान्ध्यमपि शोधयेत्।"

**चन्द्रबाला ಚಂದ್ರಬಾಲಾ** (स्त्री०) 1. ದೊಡ್ಡ ಜಾತಿಯ ಯಾಲಕ್ಕಿ ಗಿಡ. 2. ಚಂದ್ರನ ಪತ್ನಿ. 3. ಚಂದ್ರಿಕೆ, ಬೆಳದಿಂಗಳು. चन्द्रस्य कर्पूरस्य बालेव।

**चन्द्रभस्मन् ಚಂದ್ರಭಸ್ಮನ್** (न०) ಕರ್ಪೂರ. चन्द्रस्येव भस्म।

**चन्द्रभाग ಚಂದ್ರಭಾಗ**(ಪುಂ)1. ಒಂದು ಪರ್ವತ. चन्द्रस्य भागोऽत्र। ಈ ಪರ್ವತದಲ್ಲಿ ಬ್ರಹ್ಮನು ದೇವತೆಗಳ ಮತ್ತು ಪಿತೃಗಳ ತೃಪ್ತಿಗಾಗಿ ತಿಥಿವೃದ್ಧಿಕ್ಷಯಾತ್ಮಕನಾದ ಚಂದ್ರನನ್ನು ಇಬ್ಭಾಗವಾಗಿ ಕಲ್ಪಿಸಿದನಾದುದರಿಂದ ಇದಕ್ಕೆ ಈ ಹೆಸರು ಬಂದಿತು. "तस्मिन् गिरौ पुरा वेधाश्चन्द्रं शुद्धं सुधानिधिम्। विभज्य कल्पयामास देवार्थं च पितामहः। पित्रर्थं च तथा यस्य तिथिवृद्धिक्षयात्मकम्। कल्पयामास जगतां हिताय कमलासनः। विभक्तश्चन्द्रमा यस्मात् तस्मिन् पर्वतसत्तमे। अतो देवाश्चन्द्रभागं नाम्ना चक्रुः पुरा गिरिम्" कालिकापु०। (स्त्री०)2. –गा –ಗಾ. ಒಂದು ನದಿ. ಚಂದ್ರಭಾಗಪರ್ವತದಲ್ಲಿ ಸೀತೆಯೆಂಬ ಒಂದು ನದಿಯು ಹುಟ್ಟಿತು. ದೇವತೆಗಳು ಬ್ರಹ್ಮನ ಮಾತಿನಂತೆ ಚಂದ್ರನನ್ನು ಅದರಲ್ಲಿ ಸ್ನಾನಮಾಡಿಸಿ ಪಾನಮಾಡಿದರು. ಚಂದ್ರನು ಸ್ನಾನಮಾಡಿದುದರಿಂದ ಆ ನದಿಯು ಅಮೃತಮಯವಾಗಿ ವೃದ್ಧಿಗೊಂಡು ಹರಿಯಿತು. ಆಗ ಆ ನದಿಯಿಂದ ಒಬ್ಬ ಕನ್ಯೆಯು ಎದ್ದು ಬಂದಳು. ಬ್ರಹ್ಮನು ಅವಳಿಗೆ "ಚಂದ್ರಭಾಗಾ" ಎಂದು ಹೆಸರಿಟ್ಟನು. ಅವಳು ನದಿಯ ರೂಪದಿಂದ ಸಮುದ್ರವನ್ನು ಸೇರಿದಳು. "तत्र जाता देवनदी सीताख्या वचनाद्विधेः। स्नापयित्वा यदा चन्द्रं सीतातोयैर्मनोहरैः। चन्द्रं पपुर्ब्रह्मवाक्यात्सर्वे ते त्रिदिवौकसः। तदा सीताजलं चन्द्रस्नानयोगाच्च सामृतम्। भूत्वा निपतितं तस्मिन् बृहल्लोहितसंज्ञके। तद्विवृद्धं तदा तोयं तस्मिन् सरसि निर्मलम्। तद्दृष्ट्वा स्वयं ब्रह्मा विवृद्धं साधु तज्जलम्। तद्दर्शनाज्जलात्तस्मादुत्थिता कन्यकोत्तमा। चन्द्रभागेति तन्नाम विधिश्चक्रे स्वयं ततः। भार्यार्थे सागरस्तां तु जग्राह ब्रह्मसम्मते। सागरोऽपि तदा भार्यां चन्द्रभागां महानदीम्। तेन तोयप्रवाहेण निनाय भवनं स्वकम्। एवं तस्मिन् समुत्पन्ना चन्द्रभागाह्वया नदी। चन्द्रभागे महाशैले गुणैर्गङ्गासमा सदा"।

**चन्द्रभूति ಚಂದ್ರಭೂತಿ** (ನಂ) ರಜತ, ಬೆಳ್ಳಿ. चन्द्रस्येव भूतिः कान्तिरस्य।

**चन्द्रमणि ಚಂದ್ರಮಣಿ** (ಪುಂ) ಚಂದ್ರಕಾಂತಮಣಿ. चन्द्रप्रियो मणिः।

**चन्द्रमण्डल ಚಂದ್ರಮಂಡಲ** (ನಂ) ಚಂದ್ರನ ಬಿಂಬ, ಗೋಲಾಕಾರವಾದ ಚಂದ್ರನ ಮೂರ್ತಿ. चन्द्रस्य मण्डलम्। ಚಂದ್ರನ ಬಿಂಬವು ಜಲಮಯವಾದುದು. ಆದುದರಿಂದ ಅದಕ್ಕೆ ಸ್ವಯಂಪ್ರಕಾಶವಿಲ್ಲ. ಶುಕ್ಲಪಕ್ಷದಲ್ಲಿ ದಿನೇ ದಿನೇ ಚಂದ್ರನು ಸೂರ್ಯನಿಂದ ದೂರಕ್ಕೆ ಹೋಗುವುದರಿಂದ ಎದುರಿಗೆ ಕಾಣುವ ಚಂದ್ರಬಿಂಬದ ಮೇಲೆ ಸೂರ್ಯನ ಕಿರಣವು ಬಿದ್ದು ಬಿಂಬವು ಪ್ರಕಾಶವಾಗುವುದು. ಜಲಮಯವಾದ ಚಂದ್ರನ ಬಿಂಬದ ಮೇಲೆ ಸೂರ್ಯನ ಕಿರಣವು ಬೀಳುವುದರಿಂದ ಆ ಕಿರಣವು ಭೂಮಿಯ ಮೇಲೆ ಪ್ರತಿಫಲಿತವಾಗುವುದು. ಇದೇ ಬೆಳದಿಂಗಳು. ಕೃಷ್ಣಪಕ್ಷದಲ್ಲಿ ಸೂರ್ಯನ ಸಮೀಪಕ್ಕೆ ಬರು ಬರುತ್ತ ಚಂದ್ರಬಿಂಬದಲ್ಲಿ ಪ್ರಕಾಶವು ಕಡಮೆಯಾಗುವುದು. ಅಮಾವಾಸ್ಯೆಯ ದಿನ ಬಿಂಬವು ಪೂರ್ಣವಾಗಿ ಜಲಮಯವಾಗಿ ಕಾಣುವುದು. "तरणिकिरणसङ्गादेष पीयूषपिण्डो दिनकरदिशि चन्द्रश्चन्द्रिकाभिश्चकास्ति। तदितरदिशि बालाकुन्तलश्यामलश्रीर्घट इव निजमूर्तिच्छाययैवातपस्थः। सूर्यादधःस्थस्य विधोरधःस्थमर्धं नृदृश्यं स्वकलासितं स्यात्। दर्शेऽथ भार्धान्तरितस्य शुक्लं तत् पौर्णमास्यां परिवर्तनेन" सिद्धान्तशि०। "सलिलमये शशिनि रवेर्दीधितयो मूर्च्छितास्तमो नैशम्। क्षपयन्ति दर्पणोदरनिहिता इव मन्दिरस्यान्तः। त्यजतोऽर्कतलं शशिनः पश्चात् अवलम्बते यथा शौक्ल्यम्। दिनकरवशात्तथेन्दोः प्रकाशतेऽधःप्रभृत्युदयः" बृहत्सं० ४-२, ३।

**चन्द्रमस् ಚಂದ್ರಮಸ್** (ಪುಂ) 1. ಚಂದ್ರ. चन्द्रं कर्पूरं माति सादृश्येन तुलयति—चन्द्र+माङ् (माने) "असिः" (उ० ४-२२७)। "उपहसित इवासौ चन्द्रमाः कामिनीनाम्" माघ० ११-३०। 2. ಕರ್ಪೂರ.

**चन्द्रमा ಚಂದ್ರಮಾ** (स्त्री०) ಒಂದು ನದಿ. चन्द्रेण मीयते—माङ् (माने) घञर्थे "कः" (वा० ३-३-५८)। "कौशिकीं निम्नगां शोणां बाहुदामथ चन्द्रमाम्" भा० भीष्म० ९-२९।

**चन्द्रमुखी ಚಂದ್ರಮುಖೀ** (स्त्री०) ಚಂದ್ರನಂತೆ ಸಂತೋಷವುಂಟುಮಾಡುವ ಮುಖವುಳ್ಳ ಹೆಂಗಸು, ಸುಂದರಿ. चन्द्र इव आह्लादकरं मुखं यस्याः। "त्वमीदृशि श्रेयसि संमुखेऽपि तं पराङ्मुखी चन्द्रमुखि न्यवीवृतः" नैष० ९-४०।

**चन्द्रमौलि ಚಂದ್ರಮೌಲಿ** (ಪುಂ) ಪರಶಿವ, ಮಹಾದೇವ, ಪರಮೇಶ್ವರ. चन्द्रो मौलावस्य। "देवोऽपि गौर्या सह चन्द्रमौलिर्यदृच्छया स्फाटिकशैलशृङ्गे" कुमा० ९-४६।

**चन्द्ररसा ಚಂದ್ರರಸಾ** (स्त्री०) ಒಂದು ನದಿ. चन्द्र इव रसो जलमस्याः।

**चन्द्रलेखा ಚಂದ್ರಲೇಖಾ** (स्त्री०) 1. ಚಂದ್ರನ ಕಲೆ. "चण्डद्युतेरुदयिनीमिव चन्द्रलेखाम्" नैष० ११-८१। 2. ಚಂದ್ರನ ಮಂಡಲವನ್ನು ತಿಳಿಸುವ ಸುತ್ತುಗೆರೆ. चन्द्रस्य

ಲೇಖಾ। 3. ವೃತ್ತರತ್ನಾಕರದಲ್ಲಿ ಉಕ್ತವಾಗಿರುವ ಹದಿನೈದನೆಯ ಛಂದಸ್ಸಿನ ಒಂದು ವೃತ್ತ. **ಇದರ ಲಕ್ಷಣ:** "म्रौ म्यौ याद्यौ भवेतां सप्ताष्टभिश्चन्द्रलेखा" वृ० र०। **ಈ ವೃತ್ತದ ಗಣವಿನ್ಯಾಸ:**

म र म य य
000 010 000 100 100।

**चन्द्रलोक ಚಂದ್ರಲೋಕ** (पुं०) ಚಂದ್ರನ ಪ್ರಪಂಚ, ಗೋಳಾಕಾರದ ಚಂದ್ರನ ಮಂಡಲ. चन्द्रस्य लोकः।

**चन्द्रलोहक ಚಂದ್ರಲೋಹಕ** (नं०) ರಜತ, ಬೆಳ್ಳಿ. चन्द्र इव शुभ्रं लोहकम्।

**चन्द्रलोह ಚಂದ್ರಲೌಹ, -लोहक -ಲೌಹಕ** (नं०) ರಜತ, ಬೆಳ್ಳಿ.

**चन्द्रवंश ಚಂದ್ರವಂಶ**(पुं०)ಚಂದ್ರಕುಲ, ಚಂದ್ರನ ಸಂತತಿ. चन्द्रस्य वंशः। ಜಗತ್ತಿನ ಸೃಷ್ಟಿಯಾದನಂತರ ಪ್ರಾರಂಭವಾದ ದೊಡ್ಡ ರಾಜವಂಶದಲ್ಲಿ ಇದು ಎರಡನೆಯದು. ಚಂದ್ರನು ಈ ವಂಶಕ್ಕೆ ಮೂಲಪುರುಷ. ಚಂದ್ರನ ಮಗ ಬುಧ. ಬುಧನಿಗೆ ಸೂರ್ಯವಂಶದ ಇಕ್ಷ್ವಾಕುವಿನ ಮಗಳಾದ ಇಲೆಯಲ್ಲಿ ಪುರೂರವನು ಜನಿಸಿದನು. ಪುರೂರವನ ಮಗ ಆಯು. ಆಯುವಿನ ಮಗ ನಹುಷ. ನಹುಷನ ಮಗ ಯಯಾತಿ. ಯಯಾತಿಯ ಮಕ್ಕಳಾದ ಪೂರು ಮತ್ತು ಯದು ಇವರಿಬ್ಬರಿಂದ ಚಂದ್ರವಂಶವು ಎರಡಾಗಿ ಬೆಳೆಯಿತು. ಯದುವಂಶದಲ್ಲಿ ಶ್ರೀಕೃಷ್ಣ ಬಲರಾಮರು ಅವತರಿಸಿದರು. ಪೂರುವಿನ ವಂಶದಲ್ಲಿ ಭರತ ಚಕ್ರವರ್ತಿಯ ತಂದೆ ದುಷ್ಯಂತನು ಜನಿಸಿದನು. ಭರತನ ವಂಶ ಬೆಳೆದು ಬಂದು ಮುಂದೆ ಕುರುರಾಜನು ಹುಟ್ಟಿದನು. ಇವನ ವಂಶದವರೇ ಕೌರವರು.

**चन्द्रवर्त्मन् ಚಂದ್ರವರ್ತ್ಮನ್** (नं०) ವೃತ್ತರತ್ನಾಕರೋಕ್ತವಾದ ಹನ್ನೆರಡನೆಯ ಛಂದಸ್ಸಿನ ಒಂದು ವೃತ್ತ. **ಇದರ ಲಕ್ಷಣ:** "चन्द्रवर्त्म निगदन्ति रनभसैः" वृ० र०। ರಗಣ ನಗಣ ಭಗಣ ಮತ್ತು ಸಗಣ. **ಈ ವೃತ್ತದ ಗಣವಿನ್ಯಾಸ:**

र न भ स
010 111 011 110।

**चन्द्रवल्लरी ಚಂದ್ರವಲ್ಲರೀ** (स्त्री०) 1. ಸೋಮಲತೆ. 2. ಕಾಡು ಇರುವಂತಿಕೆ ಗಿಡ.

**चन्द्रवल्ली ಚಂದ್ರವಲ್ಲೀ** (स्त्री०) 1. ಸೋಮಲತೆ. 2. ಕಾಡು ಇರುವಂತಿಕೆ ಗಿಡ.

**चन्द्रव्रत ಚಂದ್ರವ್ರತ** (नं०) ಚಾಂದ್ರಾಯಣ ವ್ರತ. चन्द्रस्य चन्द्रलोकस्य प्राप्तये व्रतम्।

**चन्द्रशाला ಚಂದ್ರಶಾಲಾ** (स्त्री०)1. ಮಹಡಿ, ಮೇಲಿನ ಮನೆ, ಉಪ್ಪರಿಗೆ. चन्द्र इव शाला। "वियद्गतः पुष्पकचन्द्रशालाः क्षणं प्रतिश्रुन्मुखराः करोति" रघु० १३-४०। 2. ಚಂದ್ರಿಕೆ, ಬೆಳದಿಂಗಳು. चन्द्रः शालेव आधारो यस्याः। "चन्द्रिका चन्द्रशाला स्यात्" त्रिकाण्ड०। स्वार्थे "कः"। **-शालिका -ಶಾಲಿಕಾ.**

**चन्द्रशिला ಚಂದ್ರಶಿಲಾ** (स्त्री०) ಚಂದ್ರಕಾಂತಮಣಿ. चन्द्रप्रिया शिला। "प्रह्लादिता चन्द्रशिलेव तूर्णं क्षोभात् स्रवत्स्वेदजला बभूव" भट्टि० ११-१५।

**चन्द्रशुक्ल ಚಂದ್ರಶುಕ್ಲ** (पुं०) ಜಂಬೂದ್ವೀಪದ ಎಂಟು ಉಪದ್ವೀಪಗಳಲ್ಲೊಂದು. "जम्बूद्वीपस्य च राजन्नुपद्वीपानष्टौ हैक उपदिशन्ति तद्यथा स्वर्णप्रस्थः चन्द्रशुक्लः आवर्तनः रमणकः मन्दरहरिणः पाञ्चजन्यः सिंहलः लङ्केति" भाग० ५-१९-३०।

**चन्द्रशेखर ಚಂದ್ರಶೇಖರ**(पुं०)1. ಪರಶಿವ, ಪರಮೇಶ್ವರ, ಮಹಾದೇವ. चन्द्रः शेखरो यस्य। "इति स्वहस्तोल्लिखितश्च मुग्धया रहस्युपालभ्यत चन्द्रशेखरः" कुमा० ५-५८। 2. ಒಂದು ಪರ್ವತ.

**चन्द्रसंज्ञ ಚಂದ್ರಸಂಜ್ಞ** (पुं०) ಪಚ್ಚಕರ್ಪೂರ. चन्द्रस्य संज्ञा यस्य।

**चन्द्रसंभव ಚಂದ್ರಸಂಭವ**(पुं०)1. ಚಂದ್ರನ ಮಗ ಬುಧ. चन्द्रः संभवोऽस्य। (स्त्री०) **-संभवा -ಸಂಭವಾ.** 2. ಸಣ್ಣ ಜಾತಿಯ ಯಾಲಕ್ಕಿ.

**चन्द्रसालोक्य ಚಂದ್ರಸಾಲೋಕ್ಯ** (नं०) ಚಂದ್ರಲೋಕವನ್ನು ಹೊಂದುವುದು, ಚಂದ್ರಲೋಕದಲ್ಲಿ ವಾಸ, ಚಂದ್ರನಿಗೆ ಸಮಾನವಾದ ಲೋಕದಲ್ಲಿ ವಾಸ. "वासोदश्चन्द्रसालोक्यमश्विसालोक्यमश्वदः। अनडुहः श्रियं पुष्टां गोदो ब्रध्नस्य विष्टपम्" मनु० ४-२३१।

**चन्द्रसेन ಚಂದ್ರಸೇನ** (पुं०) ಸಮುದ್ರಸೇನರಾಜನ ಮಗ. "समुद्रसेनपुत्रश्च चन्द्रसेनः प्रतापवान्" भा० आदि० २०१-११।

**चन्द्रहन् ಚಂದ್ರಹನ್** (पुं०) ರಾಹು. चन्द्रं हतवान्—हन (हिंसागत्योः) "क्विप्" (३-२-८७)। "एकाक्षश्चन्द्रहा राहुः संहारो मृदुलस्वनः" हरिवं०।

**चन्द्रहन्तु ಚಂದ್ರಹನು** (पुं०) ಒಬ್ಬ ದಾನವ.

**चन्द्रहन्तृ ಚಂದ್ರಹಂತೃ** (पुं०) ರಾಹು.

**चन्द्रहास ಚಂದ್ರಹಾಸ** (पुं०) 1. ಖಡ್ಗ, ಕತ್ತಿ. चन्द्रस्येव हासः प्रभा यस्य। 2. ರಾವಣನ ಕತ್ತಿ. "चन्द्रहासो

दशग्रीवकरवालेऽसिमात्रके" मेदि०। 3. ಒಬ್ಬ ರಾಜ ಕುಮಾರ, ಕೇರಳದೇಶದ ದೊರೆಯಾದ ಸುಧಾರ್ಮಿಕನ ಮಗ. [ಇವನು ಮೂಲಾನಕ್ಷತ್ರದಲ್ಲಿ ಹುಟ್ಟಿದ್ದರಿಂದಲೂ ಎಡಗಾಲಿನಲ್ಲಿ ಆರು ಬೆರಳುಗಳು ಇದ್ದುದರಿಂದಲೂ ಬಾಲ್ಯದಲ್ಲಿಯೇ ತಾಯಿ ತಂದೆಗಳನ್ನು ಕಳೆದುಕೊಂಡನು. ಇವನನ್ನು ಕುಂತಲದೇಶಕ್ಕೆ ಕರೆದುಕೊಂಡು ಹೋಗಿ ಸಾಕುತ್ತಿದ್ದ ದಾದಿಯೂ ಕಾಲವಾದ ಮೇಲೆ ಇವನು ಅನಾಥನಾದನು. ಈ ಬಾಲಕನು ಚಕ್ರವರ್ತಿ ಲಕ್ಷಣ ಗಳಿಂದ ಕೂಡಿರುವನೆಂದು ತಿಳಿದು ಕುಂತಲದೇಶದ ರಾಜ ನಾಗಬೇಕೆಂಬ ದುರುದ್ದೇಶದಿಂದ ಕೂಡಿದ್ದ ಆ ದೇಶದ ಮಂತ್ರಿಯಾದ ದುಷ್ಟಬುದ್ಧಿಯು ಇವನನ್ನು ಕಟುಕರಿಂದ ಕೊಲ್ಲಿಸಬೇಕೆಂದು ಯತ್ನಿಸಿದನು. ಕಟುಕರು ಕನಿಕರ ದಿಂದ ಸುಮ್ಮನಾದರು. ಬಳಿಕ ಇನ್ನೊಂದು ಸಮಯದಲ್ಲಿ ದೇಶಾಂತರದಲ್ಲಿ ಇವನನ್ನು ಸಂಧಿಸಿದ ಮಂತ್ರಿಯು ತನ್ನ ಮಗನಿಗೆ ರಹಸ್ಯಪತ್ರವೊಂದನ್ನು ಬರೆದು ಇವನಿಗೆ ವಿಷವನ್ನು ಕೊಡಬೇಕೆಂದು ತಿಳಿಸಿ ಇವನ ಮೂಲಕ ಕಳುಹಿಸಿದನು. ಆ ಪತ್ರವು ದುಷ್ಟಬುದ್ಧಿಯ ಮಗಳಾದ ವಿಷಯೆಯ ಕೈಗೆ ಸಿಕ್ಕಿತು. ಇವನನ್ನು ಕಂಡು ಮೋಹಿಸಿದ ಅವಳು ವಿಷವೆಂಬುದನ್ನು ವಿಷಯೆ ಎಂದು ತಿದ್ದಿದಳು. ಮಂತ್ರಿಯ ಮಗನು ಆ ಕಾಗದವನ್ನು ನೋಡಿ ಇವನನ್ನು ಗೌರವಿಸಿ ವಿಷಯೆಯನ್ನು ಕೊಟ್ಟು ಮದುವೆ ಮಾಡಿದನು. ರಾಜ್ಯಕ್ಕೆ ಹಿಂತಿರುಗಿದ ಮಂತ್ರಿಯು ಈ ವಿಷಯವನ್ನು ತಿಳಿದು ಖಿನ್ನನಾಗಿ ಕಾಳಿಕಾದೇವಾಲಯದಲ್ಲಿ ಚಂದ್ರಹಾಸನನ್ನು ಕೊಲ್ಲಿಸಬೇಕೆಂದು ಏರ್ಪಾಡು ಮಾಡಿದನು. ಪುತ್ರಸಂತಾನ ವಿಲ್ಲದ ಆ ದೇಶದ ರಾಜನು ಚಂದ್ರಹಾಸನೇ ತನ್ನ ರಾಜ್ಯಕ್ಕೆ ಮುಂದೆ ರಾಜನಾಗಬೇಕೆಂದೂ ತನ್ನ ಮಗಳನ್ನು ಅವನಿಗೆ ಕೊಡಬೇಕೆಂದೂ ನಿಶ್ಚಯಿಸಿ ಅರಮನೆಗೆ ಅವನನ್ನು ಬರ ಮಾಡಿ ಮಗಳಾದ ಚಂಪಕಮಾಲಿನಿಯನ್ನು ಕೊಟ್ಟು ಮದುವೆ ಮಾಡಿದನು. ಇತ್ತ ಚಂದ್ರಹಾಸನಿಗೆ ಬದಲಾಗಿ ಮಂತ್ರಿಯ ಮಗನು ಕಾಳಿಕಾದೇವಾಲಯದಲ್ಲಿ ಹತನಾ ದನು. ಇದರಿಂದ ದುಷ್ಟಬುದ್ಧಿಯೂ ಆತ್ಮಹತ್ಯೆ ಮಾಡಿ ಕೊಂಡನು. ಚಂದ್ರಹಾಸನು ಕಾಳಿಕೆಯನ್ನು ಸ್ತೋತ್ರಮಾಡಿ ಇಬ್ಬರನ್ನೂ ಬದುಕಿಸಿ ಕುಂತಲದೇಶದ ರಾಜನಾದನು.] (ನಂ) 4. ರಜತ, ಬೆಳ್ಳಿ. (स्त्री०) **–हासा –ಹಾಸಾ.** 5. ಅಮೃತಬಳ್ಳಿ.

**चन्द्रा ಚಂದ್ರಾ** (स्त्री०) 1. ಚಂದ್ರಿಕೆ, ಬೆಳದಿಂಗಳು. चदि (आह्लादे) "रक्" (ಉ० २-१३)। 2. ಯಾಲಕ್ಕಿ ಗಿಡ. 3. ಅಮೃತಬಳ್ಳಿ. 4. ವಿತಾನ (ಮೇಲುಕಟ್ಟು) ದಿಂದ ಮುಚ್ಚಲ್ಪಟ್ಟ ಹಜಾರ, –ತೊಟ್ಟಿ.

**चन्द्रांशु ಚಂದ್ರಾಂಶು** (ಪುಂ) 1. ಶ್ರೀವಿಷ್ಣು, ಪರಮಾತ್ಮ. चन्द्रस्यांशुरिवांशुर्यस्य। मन्त्रणां कलमहराह्लादनतेजस्वित्वात् चन्द्रांशुः। "मन्त्रणामेव चन्द्रांशुराह्लादफलदो मनुः" इति निरुक्तिः। "ऋद्धः स्पष्टाक्षरो मन्त्रः चन्द्रांशुर्भास्करद्युतिः" वि० स०। 2. ಚಂದ್ರಿಕೆ, ಚಂದ್ರನ ಕಿರಣ, ಬೆಳದಿಂಗಳು.

**चन्द्रातप ಚಂದ್ರಾತಪ** (ಪುಂ) 1. ಚಂದ್ರಿಕೆ, ಬೆಳದಿಂಗಳು. चन्द्रस्यातपः। 2. ವಿತಾನ, ಮೇಲಂಛಾವಣಿ. चन्द्रस्यातप इव।

**चन्द्रात्मज ಚಂದ್ರಾತ್ಮಜ** (ಪುಂ) ಬುಧಗ್ರಹ. चन्द्रस्यात्मजः।

**चन्द्रानन ಚಂದ್ರಾನನ** (ವಿ०) 1. ಚಂದ್ರನಂತೆ ಸಂತೋಷ ವುಂಟುಮಾಡುವ ಮುಖವುಳ್ಳ. चन्द्र इवाह्लादकरमाननं यस्य। (स्त्री०) **–आनना –ಆನನಾ.** 2. ಚಂದ್ರನಂತೆ ಮುಖವುಳ್ಳ ಹೆಂಗಸು. "चन्द्राननां यादववंशचन्द्रः" याद० १३-१९।

**चन्द्रापीड ಚಂದ್ರಾಪೀಡ** (ಪುಂ) 1. ಕಾಶ್ಮೀರದ ಒಬ್ಬ ರಾಜ. 2. ಕನ್ಯಾಕುಬ್ಜದ ಒಬ್ಬ ರಾಜ.

**चन्द्रारि ಚಂದ್ರಾರಿ** (ಪುಂ) ಚಂದ್ರನಿಗೆ ಶತ್ರುವಾದ ರಾಹು. चन्द्रस्यारिः।

**चन्द्रार्ध ಚಂದ್ರಾರ್ಧ** (ಪುಂ) ಚಂದ್ರನ ಒಂದು ಭಾಗ, ಚಂದ್ರ ಬಿಂಬದ ಒಂದು ಅಂಶ. चन्द्रस्य अर्धः। ಸಮಭಾಗ ವಾಚಕವಾದ ಅರ್ಧಶಬ್ದದೊಡನೆ ಸಮಾಸಮಾಡಿದಾಗ अर्धं चन्द्रस्य अर्धचन्द्रः ಎಂದಾಗುವುದು. (२-२-२)।

**चन्द्रार्धमौलि ಚಂದ್ರಾರ್ಧಮೌಳಿ** (ಪುಂ) ಪರಶಿವ, ಪರಮೇಶ್ವರ, ಮಹಾದೇವ. चन्द्रस्यार्धः, चन्द्रार्धयुक्तो मौलिर्यस्य। "प्रत्यग्ज्योतिर्जयति यमिनः स्पष्टलालाटनेत्रव्याजव्यक्तीकृतमिव जगद्व्यापि चन्द्रार्धमौलेः" प्रबोध० १-२।

**चन्द्रालोक ಚಂದ್ರಾಲೋಕ** (ಪುಂ) ಜಯದೇವ ಕವಿಯು ರಚಿಸಿದ ಒಂದು ಅಲಂಕಾರ ಗ್ರಂಥ. ಇದರಲ್ಲಿ ಉಪಮಾ ಲಂಕಾರ ಮೊದಲು ಹೇತ್ವಲಂಕಾರದವರೆಗೆ ಒಂದು ನೂರು ಅರ್ಥಾಲಂಕಾರಗಳನ್ನು ಲಕ್ಷಣ ಮತ್ತು ಲಕ್ಷ್ಯಸಹಿತವಾಗಿ ರಚಿಸಿರುವನು. ಇವಲ್ಲದೆ ಇದರಲ್ಲಿ ಕಾವ್ಯಲಕ್ಷಣ ದೋಷ ನಿರೂಪಣ ಗುಣಪ್ರಕರಣ ಶಬ್ದಾಲಂಕಾರಗಳ ಮತ್ತು ಅರ್ಥಾಲಂಕಾರಗಳ ಅನುಕ್ರಮಣಿಕೆ ಇವು ಐದು ಮಯೂಖ ಗಳಲ್ಲಿ ಉಕ್ತವಾಗಿವೆ. ಈ ಚಂದ್ರಾಲೋಕಕ್ಕೆ ವ್ಯಾಖ್ಯಾನ ರೂಪವಾಗಿ ಲಕ್ಷ್ಯಸಹಿತವಾದ ಕುವಲಯಾನಂದವೆಂಬ ಗ್ರಂಥವು ಶ್ರೀಮದಪ್ಪಯ ದೀಕ್ಷಿತರಿಂದ ರಚಿತವಾಗಿದೆ.

**चन्द्राह्वय ಚಂದ್ರಾಹ್ವಯ** (ಪುಂ) ಪಚ್ಚಕರ್ಪೂರ.

**चन्द्रिक ಚಂದ್ರಿಕ** (ಪುಂ) ಪರಶಿವ, ಪರಮೇಶ್ವರ. चन्द्रि चन्द्रयुक्तं कं शिरोऽस्य ।

**चन्द्रिका ಚಂದ್ರಿಕಾ** (स्त्री०) 1. ಚಂದ್ರನ ಪ್ರಕಾಶ, ಬೆಳದಿಂಗಳು. चन्द्रः आधारत्वेनास्त्यस्याः "ठन्" (५-२-११५)। "अन्वभुङ्क्त सुरतश्रमापहां मेघमुक्तविशदां स चन्द्रिकाम्" रघु० १९-३९। 2. ದೊಡ್ಡ ಯಾಲಕ್ಕಿ ಗಿಡ. 3. ಚಂದ್ರಭಾಗಾನದಿ. 4. ಮಲ್ಲಿಗೆ ಗಿಡ. 5. ಬಿಳಿ ಹೆಗ್ಗುಳ್ಳ. 6. ಮೆಂತ್ಯ. 7. ಬೆಳದಿಂಗಳಂತೆ ಆಹ್ಲಾದವನ್ನು ಉಂಟುಮಾಡುವ ಹೆಂಗಸು.

**चन्द्रिकापायिन् ಚಂದ್ರಿಕಾಪಾಯಿನ್** (ಪುಂ) ಚಕೋರಪಕ್ಷಿ. चन्द्रिकां पिबति—पा (पाने) "णिनिः" (३-१-१३४)। स्त्रियाम् "ङीप्" (४-१-५)। **-पायिनी -ಪಾಯಿನೀ.**

**चन्द्रिन् ಚಂದ್ರಿನ್** (वि०) 1. ಚಂದ್ರಯುಕ್ತವಾದ, ಚಂದ್ರನಿಂದ ಕೂಡಿದ. चन्द्रोऽस्त्यस्य "इनिः" (५-२-११५)। 2. ಸುವರ್ಣದಿಂದ ಕೂಡಿದ.

**चन्द्रिल ಚಂದ್ರಿಲ** (ಪುಂ) 1. ಭರ್ಗ, ಪರಮೇಶ್ವರ. 2. ಚಕ್ಕೋತದ ಸೊಪ್ಪು. 3. ನಾಪಿತ. "चन्द्रिलो नापिते ख्यातो हरवास्तूकशाकयोः" विश्व०।

**चन्द्रेष्टा ಚಂದ್ರೇಷ್ಟಾ** (स्त्री०) ಕನ್ನೈದಿಲೆ ಲತೆ. चन्द्रः इष्टोऽस्याः।

**चन्द्रोदय ಚಂದ್ರೋದಯ** (ಪುಂ) ಚಂದ್ರನ ಉದಯ, ಚಂದ್ರನು ಪೂರ್ವದಿಕ್ಕಿನಲ್ಲಿ ಕಾಣಿಸಿಕೊಳ್ಳುವುದು. चन्द्रस्योदयः। "हरस्तु किञ्चित्परिलुप्तधैर्यश्चन्द्रोदयारम्भ इवाम्बुराशिः" कुमा० ३-६७।

**चन्द्रोपल ಚಂದ್ರೋಪಲ** (ಪುಂ) ಚಂದ್ರಕಾಂತಶಿಲೆ. चन्द्रप्रियः उपलः। ಚಂದ್ರಕಿರಣಸಂಪರ್ಕದಿಂದ ಈ ಶಿಲೆಯಲ್ಲಿ ನೀರು ಸೋರುವುದರಿಂದ ಈ ಹೆಸರು.

**चप – सान्त्वने** (भ्वा० पर० सक० से०)। चपति। चचाप। अचपीत्, अचापीत्। ಮೈಸವರಿ ಮಾತಾಡು, ಮುದ್ದಾಡು, ಪ್ರೀತಿಯಿಂದ ಮಾತಾಡಿಸು.

**चप–परिकल्पने** (चुरा० उभ० सक० से०)। चपयति, –ते। अचीचपत्, –त। ಕುಟ್ಟು, ಪುಡಿಮಾಡು, ಮರ್ದಿಸು, ಅರೆ.

**चप ಚಪ** (ಪುಂ) 1. ವಂಶ, ಬಿದಿರು. "चपश्च तेषु पवनोद्धूतध्वनिषु कीचकाः" वैज०। 2. ಸಾಂತ್ವನ, ಸಮಾಧಾನ. चप (सान्त्वने) घञर्थे "कः" (वा० ३-३-५८)।

**चपट ಚಪಟ** (ಪುಂ) ಎಲ್ಲಾ ಬೆರಳುಗಳನ್ನೂ ನೀಡಿದ ಅಂಗೈ, ಹಸ್ತ.

**चपल ಚಪಲ** (ಪುಂ) 1. ಪಾದರಸ. चुप (मन्दायां गतौ) "कलः" उपधाया अकारश्च (उ० १-१०८)। 2. ಮತ್ಸ್ಯ, ಮೀನು. 3. ಒಂದು ಸುಗಂಧದ್ರವ್ಯ. 4. ಒಂದು ಜಾತಿಯ ಕಲ್ಲು. 5. ಕರಿ ಸಾಸುವೆ. 6. ವಾಯು, ಗಾಳಿ. 7. ವಾನರ, ಕಪಿ. "चपलश्चोरके मीने पारदे प्रस्तरान्तरे" मेदि०। (न०) 8. ಜಾಗ್ರತೆ, ಶೀಘ್ರತೆ. (स्त्री०) **–ला –ಲಾ.** 9. ವಿದ್ಯುತ್ತು, ಮಿಂಚು. 10. ಲಕ್ಷ್ಮೀ. 11. ಹಿಪ್ಪಲಿ. 12. ಅಸಭ್ಯ ಹೆಂಗಸು, ವ್ಯಭಿಚಾರಿಣಿ. 13. ನಾಲಿಗೆ. (वि०) 14. ಚಂಚಲವಾದ, ಸ್ಥಿರವಲ್ಲದ. 15. ಸಂಚರಿಸುವ ಸ್ವಭಾವದ, ಚಲಿಸುವ. 16. ನೀಚ, ದುರ್ಜನ, ಅಸಭ್ಯ. 17. ಅವಿಧೇಯ, ಹೇಳಿದಂತೆ ಕೇಳದವನು. 18. ಶೀಘ್ರವಾದ, ಚುರುಕಾದ. 19. ಪರ್ಯಾಲೋಚನೆಯಿಲ್ಲದ, ವಿವೇಚನೆಯಿಲ್ಲದ, ದುಡುಕಿನ. 20. ಕ್ಷಣಿಕವಾದ. "चपलः पारदे कीशे पुमांस्त्रिषु चञ्चले। दुर्विनीते द्रुते नीचे चपला तटिति श्रियाम्" नानार्थर०। "चपलश्चोरके चले। क्षणिके चिकुरे शीघ्रे पारदे प्रस्तरान्तरे। मीनेऽपि चपला तु स्यात्पिप्पल्यां विद्युति श्रियाम्। पुंश्चल्यामथ" हेम०। **–लम् –ಲಮ್.** (अव्य०) 21. ಜಾಗ್ರತೆಯಾಗಿ, ಶೀಘ್ರವಾಗಿ.

**चपलता ಚಪಲತಾ** (स्त्री०) 1. ಚಂಚಲವಾಗಿರುವಿಕೆ, ಅಸ್ಥಿರವಾಗಿರುವುದು. चपलस्य भावः "तल्" (५-१-११९)। 2. ಒಂದು ವ್ಯಭಿಚಾರಿಭಾವ. "चपलताग्लानिचिन्तावितर्काः" सा० द०।

**चपलाङ्ग ಚಪಲಾಂಗ** (ಪುಂ) ಒಂದು ಜಾತಿಯ ಜಲಜಂತು, –ಜಲಚರಪ್ರಾಣಿ. चपलमङ्गमस्य। "शिशुमारो जलकपिश्चपलाङ्गोऽसिपुच्छकः" हारा०।

**चपलार्या ಚಪಲಾರ್ಯಾ** (स्त्री०) ಮಾತ್ರಾಛಂದಸ್ಸಿನಲ್ಲಿ ಆರ್ಯಾವೃತ್ತದ ಒಂದು ಭೇದ. ಆರ್ಯಾವೃತ್ತದ ಎರಡು ಅರ್ಧಗಳ ಲಕ್ಷಣ (30, 27 ಮಾತ್ರೆಗಳು) ವಿದ್ದು ಎರಡು ಅರ್ಧಗಳಲ್ಲಿಯೂ ಎರಡನೆಯ ಮತ್ತು ನಾಲ್ಕನೆಯ ಗಣಗಳು ಜಗಣವಾಗಿಯೂ ಆ ಎರಡು ಗಣಗಳೂ ಎರಡು ಗುರುವರ್ಣಗಳ ಮಧ್ಯದಲ್ಲೂ ಇರುವುದಾದರೆ ಅದು "ಚಪಲಾರ್ಯಾ" ವೃತ್ತವಾಗುವುದು. "उभयार्धयोर्जकारौ द्वितीयतुर्यौ गमध्यगौ यस्याः। चपलेति नाम तस्याः प्रकीर्तितं नागराजेन" वृ० र०। **ಇದರ ಗಣವಿನ್ಯಾಸ:**

ज ज

।।ऽ ।ऽ। ऽऽ ।ऽ। ऽऽ ।ऽ। ऽऽ ऽ ।
उभया र्धयोर्जं कारौ द्वितीय तुर्यौ गमध्य गौय स्याः

ज ज
||0 |0| 00 |0| 00|00| वृ०र०।
चपले तिनाम तस्याः प्रकीर्तितं ना ग राजे न

**चपलावक्त्र ಚಪಲಾವಕ್ತ್ರ** (न०) ಅನುಷ್ಟುಪ್ ಛಂದಸ್ಸಿನಲ್ಲಿ ವಕ್ತ್ರವೃತ್ತದ ಒಂದು ಭೇದ. ಪ್ರಥಮ ಮತ್ತು ತೃತೀಯ ಪಾದಗಳಲ್ಲಿ ನಾಲ್ಕನೆಯ ಅಕ್ಷರಕ್ಕೆ ಮುಂದೆ ನಗಣವಿದ್ದರೆ "चपलावक्त्रम्" ಎಂಬ ವೃತ್ತವಾಗುವುದು. "चपलावक्त्र-मयुजोर्नकारश्चेतयोराशेः" वृ०र०। "चपलावक्त्रमयुजोः" ಎಂಬ ಪ್ರಥಮ ಪಾದದಲ್ಲಿ "क्त्रमयु" ಎಂಬ ನ ಗಣವು ನಾಲ್ಕನೆಯ ಅಕ್ಷರದ ಮುಂದಿನ ಗಣವಾಗಿರುವುದು.

**चपेट ಚಪೇಟ** (पुं०) 1. ಎಲ್ಲಾ ಬೆರಳುಗಳನ್ನೂ ನೀಡಿರುವ ಹಸ್ತ. चपति—चप (सान्त्वने) "अच्" (३-१-१३४)। चपाय सान्त्वनाय एटति—इट (गतौ) "कः" (३-१-१३५)। "खण्डिकोपाध्यायः शिष्याय चपेटां ददाति" ಎಂದು ಭಾಷ್ಯಪ್ರಯೋಗವಿರುವುದರಿಂದ ಸ್ತ್ರೀಲಿಂಗವಾಗಿಯೂ ಪ್ರಯೋಗವುಂಟು. "पाणौ चपेटप्रतलप्रहस्ता विस्तृताङ्गुलौ" ಎಂದು ಅಮರದಲ್ಲಿ ಪುಲ್ಲಿಂಗವಾಗಿ ಉಕ್ತವಾಗಿದೆ. 2. ಏಟು, ಹೊಡೆತ.

**चपेटा ಚಪೇಟಾ** (स्त्री०) "चपेट" ಪದದ ಅರ್ಥ. स्वार्थे "कः"। **चपेटिका ಚಪೇಟಿಕಾ.**

**चपेटी ಚಪೇಟೀ** (स्त्री०) ಭಾದ್ರಪದ ಶುಕ್ಲ ಷಷ್ಠಿ.

**चमत्करण ಚಮತ್ಕರಣ** (न०) ಅಪೂರ್ವವಸ್ತುದರ್ಶನದಿಂದ ಮನಸ್ಸಿಗೆ ಆನಂದವುಂಟಾಗುವಂತೆ ಆಶ್ಚರ್ಯಗೊಳಿಸುವುದು. चमदिति क्रियते—डु कृञ् (करणे) भावे "ल्युट्" (३-३-११५)। "अत एव हि रसनास्वादनचमत्करणादयो विलक्षणा एव व्यपदेशा इति" सा० द० ३। भावे "घञ्" (३-३-१८)। **-कारः-ಕಾರಃ.** "चमत्कारश्च चित्तविस्ताररूपो विस्मयापरपर्यायः" सा० द०। स्त्रियाम् "क्तिन्" (३-३-९४)। **-कृतिः-ಕೃತಿಃ.**

**चमर ಚಮರ** (पुं०) 1. ಒಂದು ಜಾತಿಯ ಜಿಂಕೆ. 2. ಚಮರಿ ಮೃಗ. चमु (अदने) "अरः" (उ० ३-१३२)। ಈ ಮೃಗದ ಬಾಲದಿಂದಲೇ ಚಾಮರವನ್ನು ತಯಾರಿಸುವುದು. स्त्रियाम् जाति० "ङीष्" (४-१-६३)। **चमरी ಚಮರೀ.** "तं केशपाशं प्रसमीक्ष्य कुर्युर्वालप्रियत्वं शिथिलं चमर्यः" कुमा० १-४८। 3. ಒಬ್ಬ ದೈತ್ಯ. (न०) 4. ಚಾಮರ. "चमरश्चामरे दैत्ये चमरी तु मृगान्तरे" हेम०। "गोकर्णपृषतैणर्श्यरोहिताश्चमरो मृगः" अम०।

**चमरिक ಚಮರಿಕ** (पुं०) ಕೋವಿದಾರ ವೃಕ್ಷ, ಕೆಂಗಾಂಚಾಳ ಮರ. चमरमस्यास्ति "ठन्" (५-२-११५)। "कोविदारश्चमरिकः कुद्दालो युगपत्रकः" अम०।

**चमरी ಚಮರೀ** (स्त्री०) 1. ಹೆಣ್ಣು ಚಮರಿಮೃಗ. 2. ಮಂಜರಿ, ಗೊಂಚಲು. "चमरं चामरे स्त्री तु मञ्जरीमृगभेदयोः" मेदि०।

**चमस ಚಮಸ** (पुंन०) 1. ಯಾಗದಲ್ಲಿ ಸೋಮರಸವನ್ನು ಪಾನಮಾಡಲು ಉಪಯೋಗಿಸುವ ಒಂದು ಪಾತ್ರೆ. चमन्त्यस्मिन्—चमु (अदने) "असच्" (उ० ३-११७)। 2. ಯಾಗದಲ್ಲಿ ಉಪಯೋಗಿಸುವ ಸೌಟಿನ ಆಕಾರದ ಒಂದು ಮರದ ಪಾತ್ರೆ. "चमसानां ग्रहाणां च शुद्धिः प्रक्षालनेन तु" मनु० ५-११६। 3. ಹಪ್ಪಳ. 4. ಲಾಡು. (स्त्री०) **-सी -ಸೀ.** 5. ಉದ್ದಿನ ಹಿಟ್ಟು. "चूर्णं यच्छुष्कमाषाणां चमसी साऽभिधीयते" भावप्र०।

**चमु – अदने** (भ्वा० पर० सक० से०)। चमति। चचाम। अचमीत्। 1. ಹೀರಿಕುಡಿ, ನಾಲಗೆಯಿಂದ ಎಳೆದು ಕುಡಿ. आचामति। आचान्तः। "तरङ्गावलीनिर्मुक्तेऽमृतसागराम्भसि मनाङ्मग्नोऽपि नाचामति" प्रबोध० ४-६। 2. ತಿನ್ನು. "ध्वजानुद्दुधुवुस्तुङ्गान् मांसं चेमुर्जगुः पपुः" भट्टि० १४-५३।

**चमू ಚಮೂ** (स्त्री०) 1. ಸೇನೆ. चमति शत्रून्—चमु (अदने) "ऊः" (उ० १-८०)। "तथा तथा हृषितवपुर्मुदाकुला द्विषां चमूरजनि जनीव चेतसा" माघ० १७-४३। 2. 729 ಆನೆಗಳು, 2187 ಕುದುರೆಗಳು, 729 ರಥಗಳು ಮತ್ತು 3645 ಕಾಲಾಳುಗಳು ಇವುಗಳಿಂದ ಕೂಡಿದ ಒಂದು ಸೈನ್ಯದ ಗುಂಪು. [ವಿವರಕ್ಕೆ "अनीकिनी" ಪದದಲ್ಲಿ ನೋಡಿ.] "रक्षाहेतोर्नवशशिभृता वासवीनां चमूनाम्" मेघ० १-४३।

**चमूचर ಚಮೂಚರ** (पुं०) ಸೈನಿಕ. चमूषु चरति—चर (गतौ) "टः" (३-२-१६)। "आसेदिरे लावणसैन्धवीनां चमूचरैः कच्छभुवां प्रदेशाः" माघ० ३-८०।

**चमूनाथ ಚಮೂನಾಥ -पति -ಪತಿ** (पुं०) ಸೇನಾಪತಿ, ಸೈನ್ಯಾಧ್ಯಕ್ಷ. चमूनां नाथः पतिर्वा। "रामाज्ञया हरिचमूपतयस्तदानीम्" रघु० १३-७४।

**चमूरु ಚಮೂರು** (पुं०) ಮೃಗ, ಜಿಂಕೆ. चमति—चमु (अदने) "ऊरः" (उ० ४-९०)। उत्त्वम्। पृषो०। "चकासतं चारुचमूरुचर्मणा कुथेन नागेन्द्रमिवेन्द्रवाहनम्" माघ० १-८।

**चम्प ಚಂಪ** (ಪುಂ) 1. ಕೆಂಗಾಂಚಾಳದ ಮರ, ಕೋವಿದಾರ ವೃಕ್ಷ. (ನಂ) 2. ಕೋವಿದಾರಪುಷ್ಪ.

**चम्पक ಚಂಪಕ** (ಪುಂ) 1. ಸಂಪಿಗೆಮರ. चम्पयति—चपि (गत्याम्) "क्वुन्" (ಉಂ ೨-೩೨)। 2. ಒಂದು ಜಾತಿಯ ಬಾಳೆಗಿಡ. (ನಂ) 3. ಸಂಪಿಗೆ ಹೂವು. "उन्निद्रपुष्पचणचम्पकपिङ्गभासः" माघ० ४-३१। 4. ಬಾಳೆಹಣ್ಣು. "चम्पकं वातपित्तघ्नं गुरुवीर्यकरं तथा" भावप्र०।

**चम्पकचतुर्दशी ಚಂಪಕಚತುರ್ದಶೀ** (ಸ್ತ್ರೀಂ) ಜ್ಯೇಷ್ಠ ಶುಕ್ಲ ಚತುರ್ದಶಿ.

**चम्पकमाला ಚಂಪಕಮಾಲಾ** (ಸ್ತ್ರೀಂ) 1. ಸಂಪಿಗೆ ಹೂವಿನ ಮಾಲೆ. चम्पककुसुमनिर्मिता माला। 2. ಸಂಪಿಗೆ ಹೂವಿನ ಆಕಾರದ ಕಂಠಹಾರ. 3. ವೃತ್ತರತ್ನಾಕರೋಕ್ತವಾದ ಹತ್ತನೆಯ ಛಂದಸ್ಸಿನ ಒಂದು ವೃತ್ತ. **ಇದರ ಲಕ್ಷಣ:** "चम्पकमाला चेद्भमसागः" वृ० र०। ಭಗಣ ಮಗಣ ಸಗಣ ಮತ್ತು ಒಂದು ಗುರು. **ಈ ವೃತ್ತದ ಗಣವಿನ್ಯಾಸ:**

भ म स गु।
011 000 110 0

**चम्पकमालिका ಚಂಪಕಮಾಲಿಕಾ** (ಸ್ತ್ರೀಂ) ಸಂಪಿಗೆ ಹೂವಿನ ಮಾಲೆ. "वलवैरिभुवस्तवाधिकण्ठं वरणे चम्पकमालिका वितेने" चं० भा० २-१०५।

**चम्पकारण्य ಚಂಪಕಾರಣ್ಯ** (ನಂ) ಸಂಪಿಗೆ ಮರಗಳು ಹೆಚ್ಚಾಗಿರುವ ಕಾಡು, ಬಿಳಿಗಿರಿರಂಗನ ಬೆಟ್ಟದ ಕಾಡು. चम्पकप्रधानमरण्यम्।

**चम्पकालु ಚಂಪಕಾಲು** (ಪುಂ) ಹಲಸಿನ ಮರ.

**चम्पकावती ಚಂಪಕಾವತೀ** (ಸ್ತ್ರೀಂ) ಚಂಪಾಪುರಿ, ಅಂಗ ದೇಶದ ರಾಜಧಾನಿ, ಕರ್ಣನ ರಾಜಧಾನಿ, ಈಗಿನ ಭಾಗಲ್ಪುರ. चम्पक "मतुप्" (५-२-९४)।

**चम्पा ಚಂಪಾ** (ಸ್ತ್ರೀಂ) 1. ಅಂಗದೇಶಾಧಿಪತಿಯಾದ ಕರ್ಣನ ರಾಜಧಾನಿ, ಚಂಪಾನಗರ. 2. ಹಲಸಿನ ಹಣ್ಣಿನ ಒಂದು ಭಾಗ. 3. ಲೋಮಪಾದ ಋಷಿಯು ವಾಸಮಾಡುತ್ತಿದ್ದ ಪಟ್ಟಣ. 4. ಮಾಲಿನೀನದಿ. "चम्पा तु मालिनी। लोमपादकर्णयोः पूः" अभि० चि०।

**चम्पाधिप ಚಂಪಾಧಿಪ** (ಪುಂ) ಅಂಗದೇಶದ ದೊರೆಯಾದ ಕರ್ಣ. "कर्णश्चम्पाधिपोऽङ्गराट्" अभि० चि०।

**चम्पानगर ಚಂಪಾನಗರ** (ನಂ), **–पुरी –ಪುರೀ** (ಸ್ತ್ರೀಂ) ಕರ್ಣನ ರಾಜಧಾನಿ.

**चम्पालु ಚಂಪಾಲು** (ಪುಂ) ಹಲಸಿನ ಮರ.

**चम्पावती ಚಂಪಾವತೀ** (ಸ್ತ್ರೀಂ) ಕರ್ಣನ ರಾಜಧಾನಿ, ಚಂಪಾನಗರ.

**चम्पू ಚಂಪೂ** (ಸ್ತ್ರೀಂ) ಗದ್ಯ ಮತ್ತು ಪದ್ಯಗಳಿಂದ ಕೂಡಿದ ಕಾವ್ಯ, ಗದ್ಯ ಮತ್ತು ಪದ್ಯಗಳು ಹೆಚ್ಚಾಗಿರುವ ಒಂದು ಕಾವ್ಯದ ಭೇದ. "गद्यपद्यमयी काचिच्चम्पूरित्यभिधीयते" काव्या० १-३१। ಇಲ್ಲಿ ಪ್ರಾಚುರ್ಯಾರ್ಥದಲ್ಲಿ "मयट्" ಪ್ರತ್ಯಯವನ್ನು ಹೇಳಿರುವುದರಿಂದ ಕೆಲವೇ ಪದ್ಯಗಳಿರುವ ಕಾದಂಬರಿ, ದಶಕುಮಾರಚರಿತ ಮೊದಲಾದ ಗದ್ಯಕಾವ್ಯಗಳಿಗೆ ಚಂಪುವೆಂದು ವ್ಯವಹಾರವಿಲ್ಲ. ಗದ್ಯಪದ್ಯಗಳ ಪ್ರಾಚುರ್ಯವಿರುವುದಾದರೂ ದೃಶ್ಯಕಾವ್ಯಕ್ಕೆ ನಾಟಕವೆಂದು ಹೆಸರು. "मिश्राणि नाटकादीनि तेषामन्यत्र विस्तरः" काव्या० १-३१।

**चम्पेश ಚಂಪೇಶ** (ಪುಂ) ಚಂಪಾಪುರಿಯ ದೊರೆ ಕರ್ಣ. चम्पाया ईशः।

**चय – गतौ** (भ्वा० आत्म० सक० से०)। चयते। चेये। अचयिष्ट। ಹೊಂದು, ಪಡೆ, ಸೇರು.

**चय ಚಯ** (ಪುಂ) 1. ರಾಶಿ, ಗುಂಪು, ಸಮೂಹ. चिञ् (चयने) "अच्" (३-३-५६)। "चयस्त्विषामित्यवधारितं पुरा ततः शरीरीति विभाविताकृतिम्" माघ० १-३। 2. ಪ್ರಾಕಾರ, ಸುತ್ತುಗೋಡೆ. "चयानिवाद्रीनिव तुङ्गशृङ्गान् क्वचित्पुराणीव हिरण्मयानि" किरा० १६-५२। 3. ಪ್ರಾಕಾರದ ತಳಹದಿ, ಸುತ್ತುಗೋಡೆಯ ಅಸ್ತಿಭಾರ, ಅಡಿಪಾಯ. "चयो वप्रोऽस्य पीठभूः" अभि० चि०। 4. ಕೋಟೆಯ ಗೋಡೆ. 5. ಕಂದಕದಿಂದ ತೆಗೆದ ಮಣ್ಣಿನ ರಾಶಿ. 6. ಹೂವು ಮೊದಲಾದುವನ್ನು ತರುವುದು. "चयः समूहे प्राकारे मूलबन्धे च संग्रहे" नानार्थर०।

**चयक ಚಯಕ** (ವಿಂ) ಕೂಡಿಹಾಕುವುದರಲ್ಲಿ ಜಾಣನಾದವನು. चये कुशलः "कन्" (५-२-६४)।

**चयन ಚಯನ** (ನಂ) 1. ಕೂಡಿಹಾಕುವುದು, ರಾಶಿಹಾಕುವುದು. 2. ವೃದ್ಧಿಪಡಿಸುವುದು, ಅಧಿಕಗೊಳಿಸುವುದು. चिञ् (चयने) भावे "ल्युट्" (३-३-११५)। 3. ಯಾಗದಲ್ಲಿ ಅಗ್ನಿ ಮೊದಲಾದುವುಗಳ ಸಂಸ್ಕಾರ. 4. ಯೂಪಸ್ತಂಭ.

**चयनीय ಚಯನೀಯ** (ವಿಂ) 1. ಕೂಡಿಹಾಕಲ್ಪಡುವ, ರಾಶಿಹಾಕಲ್ಪಡುವ. 2. ಹೆಚ್ಚಿಸಲ್ಪಡುವ. चिञ् (चयने) "अनीयर्" (३-१-९६)।

**चर – गतिभक्षणयोः** (भ्वा० पर० सक० से०)। चरति। चचार। चरिता। चरिष्यति। चरतु। अचरत्। चरेत्।

चर्यात्। अचारीत्। अचरिष्यत्। ಈ ಧಾತುವು ಗತ್ಯರ್ಥದಲ್ಲಿ ಅಕರ್ಮಕ. ಭಕ್ಷಣಾರ್ಥದಲ್ಲಿ ಸಕರ್ಮಕ. 1. ನಡೆ, ಸಂಚರಿಸು. "सेतुप्रालेयशैलौ चरति नरपतेः तावदेतस्य कीर्तिः" नैष० १२-४७। "दिवा चरेयुः कार्यार्थं चिह्निता राजशासनैः" मनु० १०-५५। 2. ಭಕ್ಷಿಸು, ತಿನ್ನು. "तिथिवृद्धया चरेत् पिण्डान् शुक्ले शिख्यण्डसंमितान्" याज्ञ० ३-३२३। 3. ಅಭ್ಯಾಸಮಾಡು. 4. ಮಾಡು, ಆಚರಿಸು. "सहोभौ चरतां धर्ममिति वाचानुभाष्य च" मनु० ३-३०। 5. ಹರಡು, ವ್ಯಾಪಿಸು. "वातोद्धतश्चरति वह्निरतिप्रचण्डो ग्रामान्वनानि नगराणि च सन्दिधक्षुः" बृहत्सं० १९-७। 6. ಮಾಡು. "सत्कारं चरति खले"।

**कर्मणि :**—चर्यते। चेरे। चरिता। चरिष्यते। चर्यताम्। अचर्यत। चर्येत। चरिषीष्ट। अचारि। अचरिष्यत।

**णिचि :**—चारयति, –ते। चारयां चकार, –चक्रे, –बभूव, –आस। चारयिता। चारयिष्यति, –ते। चारयतु, –ताम्। अचारयत्, –त। चारयेत्, –त। ಇತ್ಯಾದಿ. "सञ्जयन्ति हि ते नारीर्निगूढाश्चारयन्ति च" मनु० ८-३६२। "यत्पुंसः परदारेषु तच्चैनां चारयेद्व्रतम्" मनु० ११-१७६।

**कृत्सु :**—चरितव्यम्। चरणीयम्। चर्यम्। चरितः। चरितवान्। चरन्, चरन्ती। चरितुम्। चरितम्। चरणम्। चरित्वा। प्रचर्य।

**ण्यन्तात् कृत्सु :**—चारयितव्यः। चारणीयः। चार्यः। चारितः। चारितवान्। चारयन्, चारयन्ती। चारयमाणः। चारयितुम्। चारितम्। चारणम्। चारयित्वा।

**ಈ ಧಾತುವಿಗೆ ಉಪಸರ್ಗಗಳ ಯೋಗದಿಂದ ಉಂಟಾಗುವ ಅರ್ಥಭೇದಗಳು :**

(1) **अति+चर** = अतिचरति। अतिचारः। ಅತಿಕ್ರಮಿಸು, ಮೀರಿ ನಡೆ, ಕ್ರಮಮೀರಿ ನಡೆ. "पुत्राः पितॄनत्यचरन् नार्यश्चात्यचरन् पतीन्" भा० शान्ति०। "तत्र विराधदनुकबन्धप्रभृतयः केऽप्यतिचरन्तीति श्रुतम्" म० वी० २।

(2) **वि+अति+चर** = व्यतिचरति। व्यतिचारः। ವಿರುದ್ಧವಾಗಿ ನಡೆ. "त्वामहं न व्यतिचरे मनसापि कदाचन" रामा०।

(3) **अनु+चर**=अनुचरति। अनुचरः। 1. ಹಿಂಬಾಲಿಸಿ ನಡೆ, ಹಿಂದೆ ಹೋಗು. 2. ಅನಂತರ ಹೋಗು.

(4) **अप+चर**=अपचरति। अपचारः। ತೊಂದರೆ ಪಡಿಸು, ಕೆಡುಕನ್ನುಂಟುಮಾಡು. "यो यस्तेषामपचरेत् तमाचक्षीत वै द्विजः" भा० शान्ति०।

(5) **अभि+चर**=अभिचरति। 1. ಎದುರಾಗಿ ನಡೆ. 2. ಅತಿಕ್ರಮಿಸು, ಮೀರಿನಡೆ, ಅವಿಧೇಯತೆಯಿಂದ ನಡೆ. "पतिं या नाभिचरति मनोवाग्देहसंयुता" मनु० ५-१६५। 3. ಇತರರನ್ನು ಪೀಡಿಸುವುದಕ್ಕಾಗಿ ಮಾಟ ಕೂಟ್ಯ ಮೊದಲಾದುವನ್ನು ಮಾಡು. "प्रति तमभिचर योऽस्मान् द्वेष्टि"। "वृष्टयायुःपुष्टिकामो वा तथैवाभिचरन्नपि" याज्ञ० १-२३५।

(6) **वि+अभि+चर** = व्यभिचरति। व्यभिचारः। 1. ಹೆಚ್ಚು ವಿರುದ್ಧವಾಗಿ ನಡೆ, ನಿಯಮವನ್ನು ಉಲ್ಲಂಘಿಸು, ಕಟ್ಟಳೆಯನ್ನು ಮೀರು. "उस्राणां व्यभिचरतीव सप्तसप्तेः पर्यस्यन्निव निचयः सहस्रसंख्याम्" किरा० ५-३४। "अनुमितोऽपि च बाष्पनिरीक्षणाद्व्यभिचचार न तापकरो नलः" नैष० ४-१८। 2. ಪತಿಯನ್ನು ಬಿಟ್ಟು ಪರಪುರುಷನನ್ನು ಸಂಗಮಿಸು.

(7) **आ+चर**=आचरति। आचारः। 1. ಆಚರಿಸು, ಮಾಡು, ಅನುಷ್ಠಿಸು. "यद्यदाचरति श्रेष्ठस्तत्तदेवेतरो जनः" गीता ३-२१। 2. ಮಾಡು, ಕರ್ತವ್ಯವನ್ನು ನೆರವೇರಿಸು. "प्रस्थितायां प्रतिष्ठेथाः स्थितायां स्थितिमाचरेः" रघु० १-८९। 3. ನಡೆದುಕೊ, ವರ್ತಿಸು, ವ್ಯವಹರಿಸು. "प्राप्ते तु षोडशे वर्षे पुत्रं मित्रवदाचरेत्"। 4. ಸರಿಯಾಗಿ ನಡೆದುಕೊ, ಮರ್ಯಾದೆಯಿಂದ ನಡೆದುಕೊ. "प्रदक्षिणक्रियार्हायां तस्यां त्वं साधु नाचरः" रघु० १-७७। 5. ಆಶ್ರಯಿಸು, ಅವಲಂಬಿಸು. "अगस्त्याचरितामाशामनाशास्यजयो ययौ" रघु० ४-४४।

(8) **अनु+आ+चर** = अन्वाचरति। ಸದೃಶವಾಗಿ ಮಾಡು, ಸಮಾನವಾಗಿ ಮಾಡು. "को नु तत्कर्म राजर्षेर्नाभेरन्वाचरेत् पुमान्" भाग० ५-४-६।

(9) **सम्+उद्+आ+चर** = समुदाचरति। समुदाचारः। 1. ಚೆನ್ನಾಗಿ ಮಾಡು, ಚೆನ್ನಾಗಿ ನಡೆದುಕೊ, ಮರ್ಯಾದೆಯಿಂದ ನಡೆದುಕೊ. 2. ನಯವಾಗಿ ಮಾತಾಡಿಸು, ವಿಧೇಯತೆಯಿಂದ ಮಾತಾಡಿಸು. "बालानपि च गर्भस्थान् सान्त्वेन समुदाचरेत्" भा० शान्ति० ३२-३२।

(10) **उप+आ+चर** = उपाचरति। ಉಪಾಸಿಸು, ಉಪಚರಿಸು, ಸೇವಿಸು. "उपाचरति तत्र स्म धनानामीश्वरं प्रभुम्" भा० सभा० १०-२९।

**(11) सम्+आ+चर** = समाचरति। 1. ಚೆನ್ನಾಗಿ ನಡೆದುಕೊ. 2. ಚೆನ್ನಾಗಿ ಮಾಡು. "समाचराचारमुपात्तशस्त्रो जपोपवासाभिषवैर्मुनीनाम्" किरा० ३-२८।

**(12) उद् + चर** = उच्चरति। उच्चचार। 1. ಉಂಟಾಗು, ಹುಟ್ಟು. "आकस्मिकः पक्षपुटाहतायाः क्षितेस्तदा यः स्वन उच्चचार" नैष० ३-२। 2. ಮೀರಿ ನಡೆ, ಅತಿಕ್ರಮಿಸು. ಇಲ್ಲಿ उत् ಪೂರ್ವಕ ಸಕರ್ಮಕ चर ಧಾತುವು ಆತ್ಮನೇಪದಿಯಾಗುವುದು. "धर्ममुच्चरते" धर्ममुल्लङ्घ्य गच्छति इत्यर्थः। 3. ಉಚ್ಚರಿಸು, ಹೇಳು. "सकृदुच्चरितः शब्दः सकृदर्थं गमयति"। 4. ಮೇಲೆ ನಡೆ, ಮೇಲಕ್ಕೆ ಏಳು, ಮೇಲಕ್ಕೆ ಹೋಗು. "बाष्प उच्चरति"। "बलैश्चलच्चरणविधूतमुच्चरद्घनावलीरुदचरत क्षमारजः" माघ० १७-५२।

**(13) उप+चर** = उपचरति। उपचचार। ಉಪಚರಿಸು, ಸೇವಿಸು. "गिरिशमुपचचार प्रत्यहं सा सुकेशी नियमितपरिखेदा तच्छिरश्चन्द्रपादैः" कुमा० १-६०।

**(14) निस्+चर**=निश्चरति। निश्चचार। ಹೊರಕ್ಕೆ ಹೊರಡು, ನಿರ್ಗಮಿಸು. "यतो यतो निश्चरति मनश्चञ्चलमस्थिरम्" गीता ६-२६।

**(15) परि + चर** = परिचरति। 1. ಸುತ್ತಲೂ ಹೋಗು, ಸುತ್ತಲೂ ನಡೆ, ಸುತ್ತಲೂ ತಿರುಗಾಡು. "कङ्काः श्येनास्तथा गृध्रा नीचैः परिचरन्ति च" रामा०। 2. ಸೇವಿಸು, ಪೂಜಿಸು. "अनुत्पन्नं ज्ञानं यदि यदि च सन्देहविधुरं विपर्यस्तं वा स्यात्परिचर वसिष्ठस्य चरणौ" म० वी० ३-३६। 3. ಸೇವಿಸು, ಉಪಚಾರಮಾಡು, ಶುಶ್ರೂಷೆಮಾಡು. "यदित्वात्यन्तिकं वासं रोचयेत गुरोः कुले। युक्तः परिचरेदेनमाशरीरविमोक्षणात्" मनु० २-२४३।

**(16) प्र+चर** = प्रचरति। प्रचारः। 1. ಚೆನ್ನಾಗಿ ತಿಳಿಯುವಂತೆ ನಡೆ, ಪ್ರಕಾಶವಾಗಿ ನಡೆ. "प्राणः प्रालीयत ततः पुनश्च प्रचचार ह" भा० आश्व० २४-९। 2. ಚೆನ್ನಾಗಿ ಮಾಡು. "यैः कर्मभिः प्रचरितैः शुश्रूष्यन्ते द्विजातयः" मनु० १०-१००। 3. ಸುತ್ತಾಡು, ಅಲೆದಾಡು, ತಿರುಗಾಡು. 4. ಚೆನ್ನಾಗಿ ಹರಡು, ಸುತ್ತಲೂ ಹರಡು. 5. ಕಾರ್ಯವನ್ನು ಕೈಗೊಳ್ಳು. "चिकित्सकानां सर्वेषां मिथ्याप्रचरतां दमः" मनु० ९-२८४।

**(17) वि+चर**=विचरति। विचारः। 1. ವಿಮರ್ಶೆಮಾಡು, ಯೋಚಿಸು, ಪರ್ಯಾಲೋಚಿಸು. "परेषामात्मनश्चैव यो विचार्य बलाबलम्" पञ्चतं०। 2. ಚರ್ಚಿಸು, ವಾದಮಾಡು. "प्रत्यग्रहीदग्रजशासनं तदाज्ञा गुरूणामविचारणीया" रघु० १४-४६। 3. ದಾರಿಬಿಟ್ಟು ನಡೆ, ಅಮಾರ್ಗದಲ್ಲಿ ನಡೆ. "यन्मे माता प्रलुलुभे विचरन्त्यपतिव्रता" मनु० ९-२०। 4. ಸಂಚರಿಸು, ತಿರುಗಾಡು, ವಿಹರಿಸು. "इष्टान् देशान् जलद विचर प्रावृषा संभृतश्रीर्माभूदेवं क्षणमपि च ते विद्युता विप्रयोगः" मेघ० २-५२।

**(18) सम्+चर** = सञ्चरति। ಚೆನ್ನಾಗಿ ಹೋಗು, ಅಡ್ಡಿಯಿಲ್ಲದೆ ನಡೆ. "आमेखलं सञ्चरतां घनानां छायामधः सानुगतां निषेव्य" कुमा० १-५। सम् ಪೂರ್ವಕ चर ಧಾತುವು ತೃತೀಯಾವಿಭಕ್ತಿ (ಕರಣ) ಸಾಹಚರ್ಯದಿಂದ ಆತ್ಮನೇಪದಿಯಾಗುವುದು. "रथेन सञ्चरते" सि० कौ०।

**चर ಚರ** (पुं०) 1. ಸೇವಕ, ತನ್ನ ಮತ್ತು ಶತ್ರುರಾಜ್ಯಗಳ ಸಮಾಚಾರಗಳನ್ನು ತಿಳಿಸಲು ರಾಜನಿಂದ ನಿಯುಕ್ತನಾದ ಗೂಢಪುರುಷ. चरति – चर (गतौ) "अच्" (३-१-१३४)। "राजन्यकान्युपायज्ञैरेकार्थानि चरैस्तव" माघ० २-११४। 2. ಪಗಡೆಯಾಟ. 3. ಮಂಗಳವಾರ. 4. ಕುಜಗ್ರಹ. 5. ವಾಯು, ಗಾಳಿ. "क्वाहं तमोमहदहंखचराग्निवार्भूसंवेष्टिताण्डघटसप्तवितस्तिकायः" भाग० १०-१४-११। 6. ಕವಡೆ. 7. ಮೇಷ ಕರ್ಕಾಟಕ ತುಲಾ ಮತ್ತು ಮಕರರೂಪವಾದ ಚರಲಗ್ನಗಳು. (वि०) 8. ಸಂಚರಿಸುವ ಸ್ವಭಾವದ. 9. ಚಂಚಲವಾದ, ಅಲುಗಾಡುವ. "चरोऽक्षद्यूतभेदे च भौमे चारे त्रसे चले" मेदि०।

**चरक ಚರಕ** (पुं०) 1. ಗೂಢಪುರುಷ, ಸೇವಕ. चरति—चर (गतौ) "अच्" (३-१-१३४)। स्वार्थे "कः"। "देवाकर्णय सुश्रुतेन चरकस्योक्तेन जानेऽखिलं स्यादस्या नलदं विना न दलने तापस्य कोऽपि क्षमः" नैष० ४-११६। 2. ಆಯುರ್ವೇದಶಾಸ್ತ್ರಪ್ರವರ್ತಕರಾದ ಚರಕ ಮುನಿ. चर "क्वुन्" (उ० २-३३)। 3. ಚರಕಾಚಾರ್ಯ ವಿರಚಿತವಾದ ಚರಕಸಂಹಿತೆ, ಒಂದು ಆಯುರ್ವೇದ ಗ್ರಂಥ. 4. ಭಿಕ್ಷು, ಸಂನ್ಯಾಸಿ. 5. ಪರ್ಪಟ, ಹಪ್ಪಳ. 6. ನಡೆಯುವವನು, ಸಂಚರಿಸುವವನು.

**चरगृह ಚರಗೃಹ** (न०) ಮೇಷ ಕರ್ಕಾಟಕ ತುಲಾ ಮತ್ತು ಮಕರ ರಾಶಿಗಳು.

**चरट ಚರಟ** (पुं०) ಕಾಡಿಗೆ ಸೊಗಸಿನ ಹಕ್ಕಿ. स्त्रियाम् "ङीप्" (४-१-६३)। **चरटी ಚರಟೀ.**

**चरण ಚರಣ** (पुंन०) 1. ಪಾದ, ಕಾಲು. चरन्त्यनेन—चर (गतौ) कर० "ल्युट्" (३-३-११७)। "आजह्रतुस्तच्चरणौ पृथिव्यां स्थलारविन्दश्रियमव्यवस्थाम्" कुमा० १-३३। 2. ವೇದದ ಒಂದು ಭಾಗ, ವೇದದ ಒಂದು ಶಾಖೆ. 3. ಸೂರ್ಯಚಂದ್ರರ ಕಿರಣ. 4. ಶ್ಲೋಕದ ನಾಲ್ಕನೆಯ ಒಂದು ಭಾಗ, ಶ್ಲೋಕದ ಒಂದು ಪಾದ. 5. ನಾಲ್ಕನೆಯ ಒಂದು ಭಾಗ, ಕಾಲುಭಾಗ. 6. ಆಧಾರ ಸ್ತಂಭ. (न०) 7. ಸಂಚರಿಸುವುದು, ಚಲಿಸುವುದು. 8. ಆಚರಣೆ, ಅನುಷ್ಠಾನ. 9. ಭಕ್ಷಣ, ತಿನ್ನುವುದು. 10. ತಿರುಗಾಟ, ಅಲೆದಾಟ. चर (गतौ) भावे "ल्युट्" (३-३-११५)।

**चरणक ಚರಣಕ** (पुं०) ಸಣ್ಣ ಕಾಲು, ಚಿಕ್ಕ ಕಾಲು. अल्पश्चरण: "कन्" (५-३-८५)। "चपलचरणकाब्जप्रेरणोत्तुङ्गिताग्रम्" माघ० ११-३।

**चरणकमल ಚರಣಕಮಲ** (न०) ಕಮಲದಂತೆ ಸುಂದರ ವಾದ ಕಾಲು. चरणं कमलमिव।

**चरणकिसलय ಚರಣಕಿಸಲಯ** (न०) ಚಿಗುರಿನಂತೆ ಕೋಮಲವಾದ ಕಾಲು. चरणं किसलयमिव।

**चरणग्रन्थि ಚರಣಗ್ರಂಥಿ** (पुं०) ಗುಲ್ಫ, ಕಾಲಿನ ಗಂಟು. चरणस्य ग्रन्थि:।

**चरणन्यास ಚರಣನ್ಯಾಸ** (पुं०) ಅಡಿ ಇಡುವುದು, ಹೆಜ್ಜೆ ಹಾಕುವುದು. "सैन्दूरीक्रियते जनेन चरणन्यासै: पुर: कुट्टिमम्" रत्ना० १-११।

**चरणपर्वन् ಚರಣಪರ್ವನ್** (न०) ಗುಲ್ಫ, ಕಾಲಿನ ಗಂಟು.

**चरणपात ಚರಣಪಾತ** (पुं०) 1. ಕಾಲು ಇಡುವುದು, ಹೆಜ್ಜೆ ಹಾಕುವುದು. चरणस्य पात:। 2. ಕಾಲಿನ ಮೇಲೆ ಬೀಳುವುದು, ನಮಸ್ಕರಿಸುವುದು. चरणयो: पात:।

**चरणाक्ष ಚರಣಾಕ್ಷ** (पुं०) ಅಕ್ಷಪಾದ, ಗೌತಮ.

**चरणायुध ಚರಣಾಯುಧ** (पुं०) ಕುಕ್ಕುಟ, ಕೋಳಿ. चरण आयुधमस्य। स्त्रियाम् जाति० "ङीष्" (४-१-६३)। **-आयुधी -ಆಯುಧೀ.** "आकर्ण्य संप्रति रुतं चरणायुधानाम्" सा० द० ३।

**चरणारविन्द ಚರಣಾರವಿಂದ** (न०) ಕಮಲದಂತೆ ಕೋಮಲವಾದ ಮತ್ತು ಸುಂದರವಾದ ಕಾಲು. "अविन्वासौ मकरन्दलोलं मन्दाकिनी यच्चरणारविन्दे" वैष० १०-९०।

**चरण्टि ಚರಂಟಿ** (स्त्री०) ಸುವಾಸಿನಿ, ಸುಮಂಗಲಿ. चिरण्टी पृ ೧೦।

**चरण्य ಚರಣ್ಯ** (वि०) ಕಾಲಿಗೆ ಸಮಾನವಾದ, ಕಾಲಿನಂತಿರುವ. चरण इव "य:" (५-३-१०३)।

**चरत् ಚರತ್** (वि०) 1. ಸಂಚರಿಸುತ್ತಿರುವ, ಓಡಾಡುತ್ತಿರುವ. चरति — चर (गतौ) "शतृ" (३-२-१२४)। "निहताश्चैव भग्नाश्च पाण्डवेन यशस्विना। चरता बलमास्थाय पाकशासनिना मृधे" भा० शान्ति० १५५-३४। 2. ಭಕ್ಷಿಸುತ್ತಿರುವ, ತಿನ್ನುತ್ತಿರುವ. चर (भक्षणे) "शतृ" (३-२-१२४)। "मुक्तास्तृणानि परित: कटकं चरन्तस्त्रुटद्विततानतनिकाम्यतिषङ्गभाज:" माघ० ५-६१। 3. ಇರುವ, ವಾಸಿಸುವ. "चरच्चिरं शैशवयौवनीयवैराग्यभाजि त्वयि खेदमेति" नैष० ८-५९। स्त्रियाम् "ङीप्" (४-१-६)। **चरन्ती ಚರಂತೀ.**

**चरभ ಚರಭ** (न०) ಚರರಾಶಿಗಳು, ಮೇಷ ಕರ್ಕಾಟಕ ತುಲಾ ಮತ್ತು ಮಕರ ರಾಶಿಗಳು.

**चरम ಚರಮ** (वि०) 1. ಕೊನೆಯದಾದ. 2. ಅನಂತರ ಕಾಲದ. चरति—चर (गतौ) "अमच्" (उ० ५-७५)। (अव्य०) 3. ಕೊನೆಯಲ್ಲಿ. "चरममपि शयित्वा पूर्वमेव प्रबुद्धा:" माघ० ११-१३।

**चरमक्ष्माभृत् ಚರಮಕ್ಷ್ಮಾಭೃತ್** (पुं०) ಅಸ್ತಾಚಲ, ಪಶ್ಚಿಮದಿಕ್ಕಿನ ಪರ್ವತ. चरमश्चासौ क्ष्माभृच्च।

**चरमतस् ಚರಮತಸ್** (अव्य०) ಕೊನೆಯದಾದ. चरम "तसि:" (५-३-७)। "चरमतश्च ऋणादिव देवकीपतिरमुच्यत शृङ्खलत: स्थिरात्" याद० ३-११।

**चरमवयस् ಚರಮವಯಸ್** (न०) 1. ಜೀವಿತದ ಕೊನೆಯ ಕಾಲ, ಜೀವಮಾನದಲ್ಲಿ ಕೊನೆಯ ವಯಸ್ಸು. (वि०) 2. ಕೊನೆಯ ವಯಸ್ಸಿನ, ವೃದ್ಧ, ಮುದುಕ. "भो राजानश्चरमवयसामाशया सञ्चरध्वं कर्तव्येषु श्रवणसुभगं भूमिदेवा: पठन्तु" मालती० ६-२।

**चरव्य ಚರವ್ಯ** (वि०) ಚರುವಿಗೆ ಹಿತವಾದ, ಹವಿಸ್ಸಿಗೆ ಅನುಕೂಲವಾದ (ಅಕ್ಕಿ ಮೊದಲಾದುದು). चरवे हितम् "यत्" (५-१-२)।

**चराचर ಚರಾಚರ** (न०) 1. ಸ್ಥಾವರಜಂಗಮರೂಪವಾದ ಜಗತ್ತು. चरं च अचरं च अनयो: समाहार:। "एवं स जाग्रत्स्वप्नाभ्यामिदं सर्वं चराचरम्" मनु० १-५७। (वि०) 2. ಚಲಿಸುವ, ಸಂಚರಿಸುವ. 3. ಸ್ಥಾವರ ಮತ್ತು ಜಂಗಮ. 4. ಚಂಚಲವಾದ ಮತ್ತು ಸ್ಥಿರವಾದ. "सर्वे भावाश्चराचरा:" रामा०। "चराचरं जङ्गमे स्यादिङ्गविष्टपयोरपि" हेम०।

**चरि ಚರಿ** (पुं०) ಪ್ರಾಣಿ, ಪಶು, ತಿರ್ಯಗ್ಜಂತು. चर (गतौ) "इन्" (उ० ४-११७)।

**चरित ಚರಿತ** (न०) 1. ಸಂಚಾರ, ಹೋಗುವುದು, ನಡೆಯುವುದು. चर (गतौ) भावे "क्तः" (३-३-११४)। 2. ವರ್ತನೆ, ನಡವಳಿಕೆ, ನಡತೆ. "उदारचरितानां तु वसुधैव कुटुम्बकम्" हितो०। 3. ಚರಿತ್ರೆ, ಜೀವನಚರಿತ್ರೆ. "विचिन्त्य गीतक्षममर्थजातं दिवौकसस्त्वच्चरितं लिखन्ति" शाकु० ७-५। 4. ಸ್ವಭಾವ. 5. ಅನುಷ್ಠಾನ, ಆಚರಣೆ. (वि०) 6. ಆಚರಿಸಲ್ಪಟ್ಟ, ಮಾಡಲ್ಪಟ್ಟ. 7. ಹೊಂದಲ್ಪಟ್ಟ. 8. ತಿಳಿಯಲ್ಪಟ್ಟ.

**चरितव्य ಚರಿತವ್ಯ** (वि०) 1. ಅನುಷ್ಠಿಸಬೇಕಾದ, ಆಚರಿಸಬೇಕಾದ. चर (गतौ) "तव्यः" (३-१-९६)। "चरितव्यमतो नित्यं प्रायश्चित्तं विशुद्धये। निन्द्यैर्हि लक्षणैर्युक्ता जायन्तेऽनिष्कृतैनसः" मनु० ११-५३।

**चरितार्थ ಚರಿತಾರ್ಥ** (वि०) 1. ಸಫಲವಾದ, ಸಾರ್ಥಕವಾದ, ಕೈಗೂಡಿದ ಕಾರ್ಯವುಳ್ಳ. चरितः प्राप्तः अर्थो येन। "त्वामद्य लब्ध्वामृततृप्तिभाजां स्वदेवभूयं चरितार्थमस्तु" नैष० ३-१०१। 2. ಅರ್ಥಯುಕ್ತವಾದ, ಅರ್ಥಗರ್ಭಿತವಾದ, ಅನ್ವರ್ಥವಾದ. "प्रवृत्तिरासीच्छब्दानां चरितार्था चतुष्टयी" कुमा० २-१७। 3. ಉಚಿತವಾದ, ಯುಕ್ತವಾದ, ಸಂಗತವಾದ. "तत्रत्ययाच्च कुसुमायुधबन्धुरेनामाश्वासयत् सुचरितार्थपदैर्वचोभिः" कुमा० ४-४५।

**चरित्र ಚರಿತ್ರ** (न०) 1. ನಡತೆ, ವರ್ತನೆ, ನಡವಳಿಕೆ, ಆಚಾರ. "स्वां प्रसूतिं चरित्रं च कुलमात्मानमेव च" मनु० ९-८। 2. ಆಚರಣೆ, ಅನುಷ್ಠಾನ. चर (गतौ) "इत्रः" (३-२-१८४)। 3. ಜೀವನದ ವೃತ್ತಾಂತ, ಜೀವಮಾನದಲ್ಲಿ ನಡೆಸಿದ ಅಸಾಧಾರಣವಾದ ಕಾರ್ಯಗಳನ್ನು ತಿಳಿಸುವ ಸಾಹಿತ್ಯ. 4. ಶೀಲ, ಸ್ವಭಾವ. "मया निगाद्यं जगतीपतीनां गोत्रं चरित्रं च विचित्रमेषाम्" नैष० १०-८९।

**चरिष्णु ಚರಿಷ್ಣು** (वि०) 1. ನಡೆಯುವ ಸ್ವಭಾವದ. चर (गतौ) "इष्णुच्" (३-२-१३६)। "यदाणुमात्रिको भूत्वा बीजं स्थास्नु चरिष्णु च। समाविशति संसृष्टस्तदा मूर्ति विमुञ्चति" मनु० १-५६। 2. ಹರಡುವ ಸ್ವಭಾವದ. "दधानमाशासु चरिष्णु दुर्यशः स कौतुकी तत्र ददर्श केतकम्" नैष० १-७८।

**चरु ಚರು** (पुं०) 1. ಹೋಮಕ್ಕಾಗಿ ಪಾಕಮಾಡಿದ ಅನ್ನ, ಹವಿಸ್ಸು. चर्यते भक्ष्यते — चर (गतिभक्षणयोः) "उः" (उ० १-७)। 2. ಹೋಮದ ಅನ್ನ (ಹವಿಸ್ಸು)ವನ್ನು ಪಾಕಮಾಡುವ ಪಾತ್ರೆ. "चरूणां स्रुक्स्रुवाणां च शुद्धिरुष्णेन वारिणा" मनु० ५-११७। "चरुः पुमान् हव्यान्नभाण्डयोः" मेदि०। 3. ಮೇಘ, ಮೋಡ. चरन्त्यापोऽत्र-अधि० "उः"।

**चरुचेलिन् ಚರುಚೇಲಿನ್** (पुं०) ಪರಶಿವ, ಮಹಾದೇವ, ಪರಮೇಶ್ವರ. चरुश्चेलमिवास्त्यस्य "इनिः"(५-२-११५)।

**चरुस्थाली ಚರುಸ್ಥಾಲೀ** (स्त्री०) ಚರುವನ್ನು ಪಾಕಮಾಡುವ ಪಾತ್ರೆ.

**चर्च ಚರ್ಚ** (पुं०) ಕುಬೇರನ ನವನಿಧಿಗಳಲ್ಲೊಂದು. "मुकुन्दकुन्दनीलाश्च चर्चश्चेति निधेर्नव" वैज०।

**चर्चरिक ಚರ್ಚರಿಕ** (न०) ಒಂದು ವಿಧ ಗೀತ. "भवति मदनिके भवति चूतलतिके मामप्येतच्चर्चरिकं शिक्षयतम्" रत्ना० १।

**चर्चरी ಚರ್ಚರೀ** (स्त्री०) 1. ಒಂದು ಜಾತಿಯ ಗೀತ. चर्च्यते — चर्च (भाषायाम्) "अरन्" बाहु०। गौरा० "ङीष्" (४-१-४१)। "भो वयस्य हताश न खल्वेषा चर्चरी द्विपदीखण्डं खल्वेतत्" रत्ना० १। 2. ಗುಂಗುರು ಕೂದಲು. 3. ಕೈ ಶಬ್ದ, ಚಪ್ಪಾಳೆಯ ಶಬ್ದ. 4. ಸಂತೋಷದ ಆಟ, ಹಬ್ಬದ ಆಟ. 5. ಜಂಬದ ಮಾತು. 6. ಮುಖಸ್ತುತಿ. 7. ನೃತ್ಯ ಮತ್ತು ಗೀತ. 8. ಯಾಚಕರ ಆದರದ ಮಾತು.

**चर्चरीक ಚರ್ಚರೀಕ** (पुं०) 1. ಮಹಾಕಾಳೇಶ್ವರ. 2. ಕೇಶಾಲಂಕಾರ. 3. ಒಂದು ವಿಧ ಶಾಕ, ಒಂದು ಜಾತಿಯ ಸೊಪ್ಪು. चर्च (परिभाषणहिंसातर्जनेषु) "ईकन्" (उ० ४-२०)। "चर्चरीको महाकाले केशविन्यासशाकयोः" मेदि०।

**चर्चा ಚರ್ಚಾ** (स्त्री०) 1. ಚಿಂತೆ. 2. ವಿಚಾರ, ವಿಮರ್ಶೆ, ಚರ್ಚೆ. चर्च (अध्ययने) "अङ्" (३-३-१०५)। "कानुजे मम निजे दनुजारौ जाग्रति स्वशरणे रणचर्चा" नैष० ५-३८। 3. ದುರ್ಗಾದೇವಿ, ಪಾರ್ವತಿ. 4. ಗಂಧ ಮೊದಲಾದ ಸುಗಂಧ ದ್ರವ್ಯಗಳನ್ನು ಮೈಗೆ ಲೇಪನಮಾಡುವುದು. "मृगमदकृतचर्चा पीतकौशेयवासाः" छन्दोमं०। "चर्चाचन्दनपातश्च शस्त्रपातः प्रवासिनाम्" काव्या० २-१०४। 5. ವಾದ ವಿವಾದ, ವಿಚಾರ ಮಾಡುವುದು, ಜಿಜ್ಞಾಸೆಯಿಂದ ಮಾಡುವ ಚರ್ಚೆ. 6. ಅಸಭ್ಯ ಹೆಂಗಸು, ವ್ಯಭಿಚಾರಿಣಿ, ಕುಲಟೆ. "बन्धकी पांसुला चर्चा" वैज०।

**चर्चि ಚರ್ಚಿ** (स्त्री०) ವಿಚಾರ, ವಿಮರ್ಶೆ, ಚರ್ಚೆ. चर्च (अध्ययने) भावे "इन्" (उ० ४-११७)।

**चर्चिक्य ಚರ್ಚಿಕ್ಯ** (न०) ಸುಗಂಧ ದ್ರವ್ಯಗಳನ್ನು ಮೈಗೆ ಬಳಿಯುವುದು. "मार्ष्टिश्चर्चा च चर्चिक्यं समालम्भनमित्यपि" वैज०।

**चर्चित ಚರ್ಚಿತ**(वि०)1. ಚರ್ಚಿಸಲ್ಪಟ್ಟ, ವಿಮರ್ಶೆಮಾಡಲ್ಪಟ್ಟ. चर्च (अध्ययने)+णिच् "क्तः" (३-२-१०२)। 2. ಸುಗಂಧದ್ರವ್ಯದಿಂದ ಲೇಪನಮಾಡಲ್ಪಟ್ಟ. "पयोधराश्चन्दनपङ्कचर्चिताः" ऋतुसं०। 3. ಚಿಂತಿಸಲ್ಪಟ್ಟ, ಯೋಚಿಸಲ್ಪಟ್ಟ. (न०) 4. ಗಂಧದ ಲೇಪನ. चर्च भावे "क्तः" (३-३-११४)।

**चर्पट ಚರ್ಪಟ**(पुं०)1. ಹಪ್ಪಳ. चृप (सन्दीपने)+णिच् "अटन्" (उ० ४-८१)। 2. ಬಿಚ್ಚಿದ ಹಸ್ತ, ಬೆರಳುಗಳನ್ನು ನೀಡಿದ ಹಸ್ತ, ಕರತಲ. (वि०) 3. ಸಮತಲವಾದ, ಚಪ್ಪಟೆಯಾದ. 4. ಅಗಲವಾದ. "चर्पटः स्फारविपुले चर्पटे पर्पटेऽपि च" मेदि०। "निर्मांसैः कर्णैः पापमृत्यवश्चर्पटैः सुबहुभोगाः" बृहत्सं० ६८-५८। (स्त्री०) –टा –ಟಾ. 5. ಭಾದ್ರಪದ ಶುಕ್ಲ ಷಷ್ಠಿ. –टी –ಟೀ. 6. ಬಿಸ್ಕತ್ತು, ಹಿಟ್ಟಿನಿಂದ ತಯಾರಿಸಿ ಸುಟ್ಟ ರೊಟ್ಟಿ. गौरा० "ङीष्" (४-१-४१)। "पोली पूपालीचर्पटी च सा" त्रिकाण्ड०।

**चर्भट ಚರ್ಭಟ** (पुं०) ಸೌತೆಗಿಡ.

**चर्भटि ಚರ್ಭಟಿ** (स्त्री०) 1. ಸಂತೋಷದ ಶಬ್ದ, ಉಲ್ಲಾಸದ ಶಬ್ದ. 2. ಗರ್ವದ ಮಾತು. 3. ಸೌತೆಕಾಯಿ.

**चर्मकषा ಚರ್ಮಕಷಾ**(स्त्री०) ಮುಂಡಕಳ್ಳಿ. चर्म कषति-कष (हिंसायाम्) "अच्" (३-१-१३४)।

**चर्मकार ಚರ್ಮಕಾರ** (पुं०)1. ಮೋಚಿ, ಚರ್ಮದ ಕೆಲಸ ಮಾಡುವವನು, ಚಪ್ಪಲಿ ಮೊದಲಾದುವನ್ನು ತಯಾರಿಸುವವನು. चर्म चर्मनिर्मितं पादुकादि करोति–डु कृञ् (करणे) "अण्" (३-२-१)। 2. ಬೆಸ್ತನಿಗೆ ಶೂದ್ರ ಹೆಂಗಸಿನಲ್ಲಿ ಹುಟ್ಟಿದ ಬೆರಕೆ ಜಾತಿಯವನು. "विप्रा नाविकमम्बष्ठादस्मिन् क्वापि श्वपाकवाक्। आयोगवाच्चर्मकारं राज्ञी वार्मिकसूचकौ" वैज०। 2. ಕ್ಷತ್ರಿಯನಿಗೆ ವೈಶ್ಯ ಹೆಂಗಸಿನಲ್ಲಿ ಹುಟ್ಟಿದ ಮಾಹಿಷ್ಯ ಮತ್ತು ಕ್ಷತ್ರಿಯ ಹೆಂಗಸು ಇವರಲ್ಲಿ ಹುಟ್ಟಿದ ಬೆರಕೆ ಜಾತಿಯವನು. 3. ಧಿಗ್ವನ (ಬಡಗಿ, ಕಮ್ಮಾರ, ಅಕ್ಕಸಾಲೆ ಮತ್ತು ಕಂಚುಗಾರ)ನಿಂದ ಬೆಸ್ತರ ಹೆಂಗಸಿನಲ್ಲಿ ಹುಟ್ಟಿದ ಬೆರಕೆ ಜಾತಿಯವನು. "निषादी धिग्वनाच्चर्मकारं कारावरोऽपि सः" वैज०। स्त्रियाम् जाति० "ङीष्" (४-१-४१)। –कारी –ಕಾರೀ. ಚರ್ಮಕಾರನ ಹೆಂಡತಿ.

**चर्मकारक ಚರ್ಮಕಾರಕ**(पुं०) ಮೋಚಿ, ಚರ್ಮದ ಕೆಲಸ ಮಾಡುವವನು, ಚಪ್ಪಲಿ ಮೊದಲಾದುವನ್ನು ತಯಾರಿಸುವವನು. चर्म करोति–डु कृञ् (करणे) "ण्वुल्" (३-१-१३३)। कृञ् "क्विप्" (३-२-७६)। –कृत् –ಕೃತ್. "णिनिः" (३-१-१३४)। –कारिन् –ಕಾರಿನ್.

**चर्मकारी ಚರ್ಮಕಾರೀ**(स्त्री०) ಮುಂಡಕಳ್ಳಿ. "चर्मकारः पादुकृति चर्मकार्योषधीभिदि" हेम०।

**चर्मकील ಚರ್ಮಕೀಲ** (पुं०) ಮೈಮೇಲೆ ಏಳುವ ಮಾಂಸಗ್ರಂಥಿ, ಒಂದು ವಿಧ ಚರ್ಮರೋಗ.

**चर्मचटका ಚರ್ಮಚಟಕಾ** (स्त्री०) ಕಪಟದ ಹಕ್ಕಿ, ಬಾವಲಿ. चर्मणा चटक इव। स्त्रियाम् "टाप्"(४-१-४)।

**चर्मचित्रक ಚರ್ಮಚಿತ್ರಕ** (न०) ಬಿಳಿಯ ಕುಷ್ಠರೋಗ. चर्म चित्रयति – चित्र (चित्रीकरणे)+णिच् "ण्वुल्" (३-१-१३३)।

**चर्मज ಚರ್ಮಜ** (न०) 1. ಕೂದಲು. चर्मणि जायते–जनी (प्रादुर्भावे) "डः" (३-२-९७)। 2. ರಕ್ತ.

**चर्मण्य ಚರ್ಮಣ್ಯ** (वि०) ಚರ್ಮದಲ್ಲಿ ಹುಟ್ಟಿದ. चर्मणि भवः "यत्" (५-१-६)।

**चर्मण्वती ಚರ್ಮಣ್ವತೀ** (स्त्री०) ಚರ್ಮಣ್ವತೀ ನದಿ. चर्मन् "मतुप्" (५-२-९४)। नलोपाभावो णत्वं च निपात्यते (८-२-१२)। ಈ ನದಿಯು ರಂತಿದೇವನ ಯಜ್ಞದಲ್ಲಿ ಅರ್ಪಣಮಾಡಲ್ಪಟ್ಟ ಯಜ್ಞಪಶುಗಳ ಚರ್ಮದಿಂದ ಹುಟ್ಟಿದುದು. "महानदी चर्मराशेरुत्क्लेदात्ससृजे यतः। ततश्चर्मण्वतीत्येवं विख्याता सा महानदी" भा० शान्ति० २८-१२३।

**चर्मतरङ्ग ಚರ್ಮತರಂಗ** (पुं०) ಚರ್ಮದ ಮೇಲಿನ ಸುಕ್ಕು, ಮುಪ್ಪಿನಿಂದ ಶರೀರದಲ್ಲಿ ಉಂಟಾಗುವ ನಿರಿಗೆ. चर्मणि तरङ्ग इव।

**चर्मतिल ಚರ್ಮತಿಲ** (न०) ಸಂಗಾತಿ, ಮೈಮೇಲಿನ ಕಪ್ಪು ಚುಕ್ಕೆ.

**चर्मदण्ड ಚರ್ಮದಂಡ** (पुं०) ಚರ್ಮದ ಚಾವಟಿ, ಬಾರುಗೋಲು. चर्मणा कृतो दण्डः।

**चर्मदूषिका ಚರ್ಮದೂಷಿಕಾ**(स्त्री०) ಕುಷ್ಠರೋಗ. चर्म दूषयति–दुष (वैकृत्ये)+णिच् "ण्वुल्" (३-१-१३३)।

**चर्मद्रुम ಚರ್ಮದ್ರುಮ** (पुं०) ಭೂರ್ಜವೃಕ್ಷ, ಭುಜಪತ್ರೆಗಿಡ. चर्म चर्माकारवल्कलं तत्प्रधानो द्रुमः।

**चर्मन् ಚರ್ಮನ್** (नं०) 1. ತೊಗಲು. "कार्ष्णरौरवबास्तानि चर्माणि ब्रह्मचारिणः" मनु० २-४१। 2. ತ್ವಗಿಂದ್ರಿಯ. 3. ಗುರಾಣಿ. चर्यते – चर (गतौ) "मनिन्" (उ० ४-१४५)। "प्राप्यासह्यां वेदनामस्तधैर्यादप्यभ्रश्यच्चर्म नान्यस्य पाणेः" माघ० १८-२१।

**चर्मनालिका ಚರ್ಮನಾಲಿಕಾ** (स्त्री०) ಚಾವಟಿ.

**चर्मपट्टिका ಚರ್ಮಪಟ್ಟಿಕಾ** (स्त्री०) ಅಗಲವಾದ ತೊಗಲಿನ ಪಟ್ಟಿ, ಆಟವಾಡುವಾಗ ಆಟದ ಕಾಯಿಗಳನ್ನು ಹೊಡುವ ಅಗಲವಾದ ಒಂದು ತೊಗಲಿನ ಪಟ್ಟಿ.

**चर्मपादुका ಚರ್ಮಪಾದುಕಾ** (स्त्री०) ಚರ್ಮದಿಂದ ತಯಾರಿಸಲ್ಪಟ್ಟ ಚಪ್ಪಲಿ. चर्ममयी पादुका।

**चर्मपुट ಚರ್ಮಪುಟ** (पुं०) ತೊಗಲಿನ ಚೀಲ. चर्ममयं पुटमत्र। वा "कप्"। **–पुटकः –ಪುಟಕಃ.**

**चर्मप्रभेदिका ಚರ್ಮಪ್ರಭೇದಿಕಾ** (स्त्री०) ಚರ್ಮವನ್ನು ಕತ್ತರಿಸುವ ಆಯುಧ, ಮೋಚಿಯ ಉಳಿ. प्रभिनत्ति–प्र+भिदिर् (विदारणे) "ण्वुल्" (३-३-१०९)। "टाप्" (४-१-४)। चर्मणः प्रभेदिका।

**चर्मप्रसेविका ಚರ್ಮಪ್ರಸೇವಿಕಾ** (स्त्री०) ಬೆಂಕಿಗೆ ಗಾಳಿಯನ್ನೂದುವ ಚರ್ಮದ ಚೀಲ, ತಿದಿ. चर्मणा प्रसीव्यते–प्र+षिवु (तन्तुसन्ताने) "ण्वुल्" (३-३-१०९)।

**चर्ममय ಚರ್ಮಮಯ** (वि०) ಚರ್ಮದಿಂದ ತಯಾರಿಸಲ್ಪಟ್ಟ. चर्मणो विकारः "मयट्" (४-३-१३४)। स्त्रियाम् "ङीप्" (४-१-१५)। **–मयी –ಮಯೀ.**

**चर्ममुण्डा ಚರ್ಮಮುಂಡಾ** (स्त्री०) 1. ದುರ್ಗಾದೇವಿ. 2. ಸಪ್ತ ಮಾತೃಗಳಲ್ಲೊಬ್ಬಳು.

**चर्मयष्टि ಚರ್ಮಯಷ್ಟಿ** (स्त्री०) ತೊಗಲಿನ ಚಾವಟಿ.

**चर्मरु ಚರ್ಮರು** (पुं०) ಚರ್ಮಕಾರ, ಚಪ್ಪಲಿ ಮೊದಲಾದುವನ್ನು ತಯಾರಿಸುವವನು. चर्म राति – रा (दाने) "कुः" (उ० १-३७)। "चर्मरुः कुरटः पादुकृत्" त्रिकाण्ड०।

**चर्मवत् ಚರ್ಮವತ್** (वि०) 1. ಚರ್ಮದಿಂದ ಕೂಡಿದ್ದು. चर्मास्यास्ति–"मतुप्" (५-२-९४)। स्त्रियाम् "ङीप्" (४-१-६)। **–वती –ವತೀ.** (अव्य०) 2. ಚರ್ಮದಂತೆ, ತೊಗಲಿನಂತೆ. चर्मणा तुल्यम् "वतिः" (५-१-११५)।

**चर्मवसन ಚರ್ಮವಸನ** (पुं०) ಆನೆಯ ಚರ್ಮವನ್ನು ಧರಿಸಿರುವ ಪರಮೇಶ್ವರ, ಪರಶಿವ. चर्म वसनमस्य।

**चर्मवृक्ष ಚರ್ಮವೃಕ್ಷ** (पुं०) ಭೂರ್ಜವೃಕ್ಷ, ಭುಜಪತ್ರಿ ಗಿಡ. चर्म चर्मतुल्यवल्कलं तत्प्रधानो वृक्षः।

**चर्मसंभवा ಚರ್ಮಸಂಭವಾ** (स्त्री०) ಯಾಲಕ್ಕಿ. चर्मणि संभवति – सम् + भू "अच्" (३-१-१३४)। "एला त्वचिसुगन्धा च पुटिका चर्मसंभवा" हारा०।

**चर्मसार ಚರ್ಮಸಾರ** (पुं०) ದೇಹದ ಅಂಗಗಳಲ್ಲಿ ಕೆಂಪು ರಕ್ತದ ಕಣಗಳಿಲ್ಲದೆ ಇರುವ ನಿರ್ವರ್ಣವಾದ ದ್ರವ, ಸಿಡುಬು ಹಾಕಲು ಉಪಯೋಗಿಸುವ ಹಾಲು, ಪ್ರಾಣಿಗಳ ಶರೀರದ ನೀರಿನಂಥ ದ್ರವ. चर्मणः सारः।

**चर्माम्भस् ಚರ್ಮಾಂಭಸ್** (नं०) "चर्मसार" ಪದದ ಅರ್ಥ. चर्मणोऽम्भः।

**चर्मार ಚರ್ಮಾರ** (पुं०) ಚಮ್ಮಾರ, ಚರ್ಮದ ಕೆಲಸಮಾಡುವವನು, ಚಪ್ಪಲಿ ಮೊದಲಾದುವನ್ನು ತಯಾರಿಸುವವನು. चर्म शिल्पसाधनतया ऋच्छति–ऋ (गतौ) "अण्" (३-२-१)।

**चर्मावकर्तिन् ಚರ್ಮಾವಕರ್ತಿನ್** (पुं०) ಚಮ್ಮಾರ, ಚರ್ಮವನ್ನು ಕತ್ತರಿಸಿ ಚಪ್ಪಲಿ ಮೊದಲಾದುವನ್ನು ತಯಾರಿಸುವವನು. चर्म अवकृन्तति – अव + कृती (छेदने) "णिनिः" (३-२-७८)। "आयुः सुवर्णकाराणां यशश्चर्मावकर्तिनाम्" मनु० ४-१२८।

**चर्मिक ಚರ್ಮಿಕ** (वि०) ಗುರಾಣಿ ಹಿಡಿದಿರುವವನು.

**चर्मिन् ಚರ್ಮಿನ್** (पुं०) 1. ಭೂರ್ಜವೃಕ್ಷ, ಭುಜಪತ್ರಿ ಗಿಡ. 2. ಬಾಳೆಗಿಡ. 3. ಈಶ್ವರನ ಒಬ್ಬ ಅನುಚರ. (वि०) 4. ಚರ್ಮವನ್ನು ಹೊಂದಿರುವ, ಚರ್ಮದಿಂದ ಕೂಡಿದ. 5. ಗುರಾಣಿ ಹಿಡಿದಿರುವವನು. चर्मास्यास्ति "इनिः" (५-२-११६)। "चर्मी फलकपाणौ स्याद्भूर्जे भृङ्गिरिटावपि" विश्व०।

**चर्य ಚರ್ಯ** (वि०) 1. ಮಾಡಬೇಕಾದ, ಅನುಷ್ಠಿಸಬೇಕಾದ, ಆಚರಿಸಬೇಕಾದ. चर (गतौ) "यत्" (३-१-१००)। "षट्त्रिंशदाब्दिकं चर्यं गुरौ त्रैवेदिकं व्रतम्" मनु० ३-१। 2. ಆಚರಿಸಲು ಯೋಗ್ಯವಾದ.

**चर्या ಚರ್ಯಾ** (स्त्री०) 1. ಸದಾಚಾರ, ಸದ್ವರ್ತನೆ, ಒಳ್ಳೆಯ ನಡತೆ. चर (गतौ) भावे "यत्" (३-१-१००)। "चर्या त्वीर्यापथस्थितिः" अम०। 2. ಗತಿ, ಗಮನ, ಸಂಚಾರ. 3. ನಡತೆ, ವರ್ತನೆ, ನಡವಳಿಕೆ. "आसां महर्षिचर्याणां त्यक्त्वान्यतमया तनुम्। वीतशोकभयो विप्रो ब्रह्मलोके महीयते" मनु० ६-३२। 4. ಭೋಜನ, ಊಟಮಾಡುವುದು. 5. ವೃತ್ತಿ, ವ್ಯಾಪಾರ. "समीक्ष्य बाला तदनन्यदृष्टिश्चर्यामवालम्बत चातकानाम्" याद० १३-१६।

**चर्व – अदने** (भ्वा० पर० सक० से०)। चर्वति। चचर्व। चर्विता। चर्विष्यति। चर्वतु। अचर्वत्। चर्वेत्। ಇತ್ಯಾದಿ. ಅಗಿದು ತಿನ್ನು.

**कर्मणि :**—चर्व्यते। चचर्वे। चर्विता। चर्विष्यते। चर्व्यताम्। ಇತ್ಯಾದಿ.

**णिचि :**—चर्वयति, –ते। चर्वयां चकार, –चक्रे, –बभूव, –आस। चर्वयिता। चर्वयिष्यति, –ते। चर्वयतु, –ताम्। ಇತ್ಯಾದಿ.

**कृत्सु :**—चर्वितव्यम्। चर्वणीयम्। चर्व्यम्। चर्वितः। चर्वितवान्। चर्वन्, चर्वन्ती। चर्वितुम्। चर्वितम्। चर्वणम्। चर्वित्वा। प्रचर्व्य।

**चर्वण ಚರ್ವಣ** (न०) 1. ಅಗಿಯುವುದು, ನುಣ್ಣಗೆ ಅಗಿಯುವುದು. चर्व (अदने) भावे "ल्युट्" (३-३-११५)। 2. ಮೆಲುಕುಹಾಕುವುದು, ಜೀರ್ಣವಾಗದಿರುವ ಪದಾರ್ಥವನ್ನು ಮತ್ತೆ ಬಾಯಿಗೆ ತಂದುಕೊಂಡು ಅಗಿಯುವುದು. 3. ಚಿಂತನೆಮಾಡುವುದು, ಮನಸ್ಸಿನಲ್ಲೇ ಮತ್ತೆ ಮತ್ತೆ ಯೋಚನೆಮಾಡುವುದು. 4. ರುಚಿನೋಡುವುದು, ಆಸ್ವಾದನೆ ಮಾಡುವುದು. "निष्पत्त्या चर्वणस्यास्य निष्पत्तिरुपचारतः" सा० द० ३-२७। भावे "युच्"। **चर्वणा ಚರ್ವಣಾ.** "प्रमाणं चर्वणैवात्र स्वाभिन्ने विदुषां मतम्" सा० द० ३-२६।

**चर्वणा ಚರ್ವಣಾ** (स्त्री०) ನೀಲಿನೊಣ. "चर्वणा मक्षिका नीला" वैज०।

**चर्वणीय ಚರ್ವಣೀಯ** (वि०) 1. ನುಣ್ಣಗೆ ಅಗಿಯಲು ಯೋಗ್ಯವಾದ, ಹಲ್ಲಿನಿಂದ ಅಗಿಯಬಹುದಾದ. 2. ಆಸ್ವಾದಿಸಲು ಯೋಗ್ಯವಾದ. 3. ಚಿಂತನೆ ಮಾಡಬಹುದಾದ. चर्व (अदने) "अनीयर्" (३-१-९६)।

**चर्वा ಚರ್ವಾ** (स्त्री०) ಹಲ್ಲಿನಿಂದ ನುಣ್ಣಗೆ ಅಗಿಯುವುದು. चर्व (अदने) "अङ्" (३-३-१०५)।

**चर्वित ಚರ್ವಿತ** (न०) 1. ಅಗಿಯಲ್ಪಟ್ಟ, ನುಣ್ಣಗೆ ಅಗಿದು ತಿನ್ನಲ್ಪಟ್ಟ. 2. ರುಚಿನೋಡಲ್ಪಟ್ಟ, ಆಸ್ವಾದಿಸಲ್ಪಟ್ಟ. चर्व (अदने) "क्तः" (३-२-१०२)। 3. ವಿಚಾರಮಾಡಲ್ಪಟ್ಟ, ಚಿಂತಿಸಲ್ಪಟ್ಟ, ವಿಮರ್ಶಿಸಲ್ಪಟ್ಟ.

**चर्वितचर्वण ಚರ್ವಿತಚರ್ವಣ** (न०) 1. ಅಗಿದಿದ್ದನ್ನೇ ಅಗಿಯುವುದು. 2. ವಿಚಾರಮಾಡಿದ್ದನ್ನೇ ಪುನಃ ವಿಚಾರ ಮಾಡುವುದು, ಅಪ್ರಯೋಜಕವಾದ ಪುನರುಕ್ತಿ. चर्वितस्य चर्वणम्। "अदान्तगोभिर्विशतां तमिस्रं पुनःपुनश्चर्वितचर्वणानाम्" भाग० ७-५-३०।

**चर्षणि ಚರ್ಷಣಿ** (पुं०) 1. ಜನ, ಮನುಷ್ಯ. कृष (विलेखने) "अनिः" आदेश्च चः (उ० २-१०४)। "अर्यम्णो मातृका पत्नी तयोश्चर्षणयः सुताः। यत्र वै मानुषी जातिर्ब्रह्मणा चोपकल्पिता" भाग० ६-६-४२। स्त्रियाम् "ङीप्" (ग० ५०)। **चर्षणी ಚರ್ಷಣೀ.** 2. ಸ್ವೈರಿಣಿ, ವ್ಯಭಿಚಾರಿಣಿ. "स चर्षणीनामुदगाच्छुचो मृजन् प्रियः प्रियाया इव दीर्घदर्शनः" भाग० १०-२९-२। 3. ವರುಣನ ಪತ್ನಿ, ಭೃಗುಮಹರ್ಷಿಯ ತಾಯಿ. "चर्षणी वरुणस्यासीद्यस्यां जातो भृगुः पुनः" भाग० ६-१८-४।

**चर्षणीधृत ಚರ್ಷಣೀಧೃತ** (वि०) ಮನುಷ್ಯರನ್ನು ಪೋಷಿಸುವ.

**चर्षणीधृति ಚರ್ಷಣೀಧೃತಿ** (स्त्री०) ಮನುಷ್ಯರ ಪೋಷಣೆ. ಇಲ್ಲಿ चर्षणी ಪದವು ಮನುಷ್ಯಜಾತಿಪರವಾದುದರಿಂದ ಸ್ತ್ರೀಲಿಂಗದಲ್ಲಿ ಉಕ್ತವಾಗಿರುವುದು.

**चल – कम्पने** (भ्वा० पर० अक० से०)। चलति। चचाल। चलिता। चलिष्यति। चलतु। अचलत्। चलेत्। चल्यात्। ಇತ್ಯಾದಿ. 1. ಚಲಿಸು, ಅಲುಗಾಡು. 2. ನಡುಗು. 3. ಮುಂದೆ ಸಾಗು, ಮುಂದೆ ನಡೆ. "कृष्णेन निहते दैत्ये चचाल च वसुन्धरा" भा० सभा० ७०-५४। "चलत्येकेन पादेन तिष्ठत्येकेन बुद्धिमान्" चाणक्यः।

**कर्मणि :**—चल्यते। चेले। चलिता। चलिष्यते। चल्यताम्। अचल्यत। ಇತ್ಯಾದಿ.

**णिचि :**—चलयति। चलयां चकार, –बभूव, –आस। चलयिता। चलयिष्यति। चलयतु। ಇತ್ಯಾದಿ. निगरण चलनार्थेभ्यश्च इति (१-३-८७) सूत्रेण ण्यन्तात्परस्मैपदमेव। कम्पनादन्यत्र शीलं चालयति अन्यथा करोतीत्यर्थः। सूत्रं चालयति क्षिपतीत्यर्थः। पक्षे चालयति, –ते। चालयां चकार, –चक्रे, –बभूव, –आस।

**कृत्सु :**—चलितव्यम्। चलनीयम्। चाल्यम्। चलितः। चलितवान्। चलन्, चलन्ती। चलितुम्। चलितम्। चलनम्। चलित्वा। प्रचल्य।

**ण्यन्तात् कृत्सु :**—चलयितव्यः। चलनीयः। चाल्यः। चलितः। चलितवान्। चलयन्, चलयन्ती। चलयितुम्। चलितम्। चलनम्। चलयित्वा। प्रचल्य।

कम्पनादन्यत्र चालयितव्यः। चालनीयः। चाल्यः। चालितः। चालितवान्। ಇತ್ಯಾದಿ.

ಈ ಧಾತುವಿಗೆ ಉಪಸರ್ಗಗಳ ಯೋಗದಿಂದ ಉಂಟಾಗುವ ಅರ್ಥಭೇದಗಳು:

(1) उद्+चल=उच्चलति। उच्चचाल। 1. ಮೇಲಕ್ಕೆ ಹೋಗುವುದು, ಮೇಲಕ್ಕೆ ಹಾರಿಹೋಗುವುದು. "उच्चलत्कलरवालिकैतवाद्वैजयन्तविजयार्जिता जगत्" नैष० १८-२२। 2. ಮೇಲಕ್ಕೆ ಎದ್ದು ಹೊರಡು. "स्थित: स्थितामुच्चलित: प्रयातां निषेदुषीमासनबन्धधीर:" रघु० २-६।

(2) वि+चल=विचलति। विचचाल। विचलनम्। व्यचलत्। ಜಾರಿ ಬಿಟ್ಟು ಸರಿ, ಅರುಗಾಗು, ಸರಕ್ಕನೆ ತಿರುಗು. "व्यचलन् विशङ्कटकटीरकस्थलीशिखरस्खलन्मुखरमेखलाकुला:" माघ० १३-३४।

**चल ಚಲ** (ಪುಂ) 1. ಪರಮಾತ್ಮ. चलति—चल (कम्पने) "अच्" (३-१-१३४)। ಶ್ರೀಕೃಷ್ಣನು ಯುದ್ಧದಲ್ಲಿ ಆಯುಧವನ್ನು ಹಿಡಿಯುವುದಿಲ್ಲವೆಂದು ಹಿಂದೆ ದುರ್ಯೋಧನನಿಗೆ ಹೇಳಿದ್ದನು. ಭೀಷ್ಮನು ಕೃಷ್ಣನಿಂದ ಆಯುಧವನ್ನು ಹಿಡಿಸುವುದಾಗಿ ಪ್ರತಿಜ್ಞೆ ಮಾಡಿ ಅರ್ಜುನನೊಡನೆ ಯುದ್ಧಕ್ಕೆ ಹೊರಟು ಅವನನ್ನು ಸೋಲಿಸುವುದರಲ್ಲಿದ್ದಾಗ ಕೃಷ್ಣನು ಚಕ್ರಾಯುಧವನ್ನು ಧರಿಸಿ ಭೀಷ್ಮನೊಡನೆ ಯುದ್ಧಕ್ಕೆ ಹೋದನು. ಈ ರೀತಿ ಪ್ರತಿಜ್ಞಾಭಂಗವಾದುದರಿಂದ ಪರಮಾತ್ಮನು ಚಲನಾದನು. "सत्याद्य: पाण्डवार्थे हि चलतीति चल: स्मृत:" इति निरुक्ति:। "वीरहा विषम: शून्यो घृताशीरचलश्चल:" वि० स०। "सोऽहं भीष्मं निहन्म्यद्य पाण्डवार्थाय दंशित:। भारमेतं विनेष्यामि पाण्डवानां महात्मनाम्। अर्जुनो हि शरैस्तीक्ष्णै: वध्यमानोऽपि संयुगे। कर्तव्यं नाभिजानाति रणे भीष्मस्य गौरवात्। तस्मादहं गृहय रथाङ्गमुग्रं प्राणं हरिष्यामि महाव्रतस्य। निहत्य भीष्मं सगणं तथाजौ द्रोणं च शैनेय रथप्रवीरौ। तत: सुनामं वसुदेवपुत्र: सूर्यप्रभं वज्रसमप्रभावम्। क्षुरान्तमुद्यम्य भुजेन चक्रं रथादवप्लुत्य विसृज्य वाहान्। तमात्तचक्रं प्रणदन्तमुच्चै: क्रुद्धं महेन्द्रावरजं समीक्ष्य। सर्वाणि भूतानि भृशं विनेदु: क्षयं कुरूणामिव चिन्तयित्वा" भा० भीष्म० ५९। 2. ಪಾದರಸ. 3. ವಾಯು, ಗಾಳಿ. "मरुद्धूलिध्वजो मर्कस्समीरोऽग्निसखश्चल:" वैज०। (ನಂ) 4. ತಂತ್ರ, ಉಪಾಯ, ಯುಕ್ತಿ, ಶತ್ರುವನ್ನು ಮೋಸಗೊಳಿಸಲು ಹೂಡುವ ಹಂಚಿಕೆ. "अभ्यवस्कन्दनं त्वभ्यासादनं स्खलितं चलम्" वैज०। 5. ರಾಳ, ಧೂಪ. "वृकधूपश्च तूणस्तु पिण्डकश्चपलश्चल:" वैज०। (ವಿಂ) 6. ಚಂಚಲವಾದ, ಸ್ಥಿರವಲ್ಲದ. "न खलु प्रेम चलं सुहृज्जने" कुमा० ४-२८। 7. ನಡುಗುವ, ಅಲುಗಾಡುವ. "व्रजते दिवि यद्गृहावली चलचेलाञ्चलदण्डताडना:" नैष० २-८०। 8. ಚಲಿಸುವ, ನಡೆಯುವ, ಮುಂದೆ ಸಾಗುವ. 9. ದುರ್ಜನ, ಕೆಟ್ಟವನು, ದುಷ್ಟ. "खलच चलयोश्चल:" नानार्थर०।

**चलकेतु ಚಲಕೇತು** (ಪುಂ) ಸಂಚರಿಸುವ ಒಂದು ಧೂಮಕೇತು. ಇದು ಪಶ್ಚಿಮದಿಕ್ಕಿನಲ್ಲಿ ಉದಯಿಸಿ ಒಂದು ಅಂಗುಲ ಎತ್ತರವುಳ್ಳದ್ದಾಗಿಯೂ ದಕ್ಷಿಣಾಗ್ರವುಳ್ಳದ್ದಾಗಿಯೂ ಇರುವುದು. ಉತ್ತರ ದಿಕ್ಕಿಗೆ ಬರು ಬರುತ್ತಾ ಬಹಳ ದೀರ್ಘವಾಗುವುದು. ಈ ಗ್ರಹವು, ಸಪ್ತರ್ಷಿಗಳು ಧ್ರುವ ಮತ್ತು ಅಭಿಜಿತ್ ನಕ್ಷತ್ರಗಳನ್ನು ಸ್ಪರ್ಶಮಾಡಿಕೊಂಡು ಆಕಾಶದಲ್ಲಿ ಅರ್ಧದೂರ ಹೋಗಿ ಪುನಃ ದಕ್ಷಿಣ ದಿಕ್ಕಿಗೆ ತಿರುಗಿ ಅಲ್ಲಿ ಅಸ್ತವಾಗುವುದು. ಈ ಗ್ರಹವು ಕಾಣಿಸಿಕೊಂಡಾಗ ಪ್ರಯಾಗತೀರದಿಂದ ಹಿಡಿದು ಉಜ್ಜಯಿನಿ ಪಟ್ಟಣ ಮತ್ತು ಪುಷ್ಕರದ ಅರಣ್ಯಪ್ರದೇಶದವರೆಗಿನ ಜನರೆಲ್ಲರೂ ನಾಶವಾಗುವರು. ಉತ್ತರದಲ್ಲಿ ದೇವಿಕಾನದಿ ಮತ್ತು ಮಧ್ಯಪ್ರದೇಶದಲ್ಲಿ ವಾಸಿಸುವ ಬಹು ಮಂದಿ ರೋಗ ಮತ್ತು ದುರ್ಭಿಕ್ಷಗಳಿಂದ ಪೀಡಿತರಾಗುವರು. ಈ ತೊಂದರೆಯು ಸುಮಾರು ಹತ್ತು ತಿಂಗಳಕಾಲ ಮುಂದುವರೆಯುವುದು. "अपरस्यां चलकेतु: शिखया याम्याग्रयाङ्गुलोच्छ्रितया। गच्छेद्यथायथोदक् तथा तथा दैर्घ्यमायाति। सप्त मुनीन् संस्पृश्य ध्रुवमभिजितमेव च प्रतिनिवृत्त:। नभसोऽर्धमात्रमित्वा याम्येनास्तं समुपयाति। हन्यात्प्रयागकूलाद्यावदवन्तीं च पुष्करारण्यम्। उदगपि च देविकामपि भूयिष्ठं मध्यदेशाख्यम्। अन्यानपि च स देशान् क्वचित् क्वचिद्धन्ति रोगदुर्भिक्षै:। दश मासान् फलपाकोऽस्य कैश्चिदष्टादश प्रोक्त:" बृहत्सं० ११-३३-३६।

**चलचञ्चु ಚಲಚಂಚು** (ಪುಂ) ಚಕೋರಪಕ್ಷಿ. चला चञ्चुरस्य। "ज्योत्स्नाप्रिये चलचञ्चुचकोरविषसूचका:" अभि० चि०।

**चलचित्त ಚಲಚಿತ್ತ** (ವಿಂ) 1. ಚಂಚಲವಾದ ಮನಸ್ಸುಳ್ಳ. चलं चित्तं यस्य। "दुराराध्याश्चामी तुरगचलचित्ता: क्षितिभुजो वयं च स्थूलेच्छा: सुमहति फले बद्धमनस:" भर्तृ० ३-७७। (ನಂ) 2. ಚಂಚಲವಾದ ಮನಸ್ಸು. "पौंश्चल्याच्चलचित्ताच्च नैस्नेह्याच्च स्वभावत:। रक्षिता यत्नतोऽपीह भर्तृष्वेता विकुर्वते" मनु० ९-१५।

**चलत् ಚಲತ್** (वि०) 1. ಚಂಚಲವಾದ, ಸ್ಥಿರವಾಗಿಲ್ಲದ. "निःशेषमाक्रान्तमहीतलो जलैश्चलन् समुद्रोऽपि समुज्झति स्थितिम्" माघ० १२-३६। 2. ಕಂಪಿಸುತ್ತಿರುವ, ನಡುಗುತ್ತಿರುವ. ಅಲುಗಾಡುತ್ತಿರುವ. "स्फुटं चलच्चामरयुग्मचिह्नैरनिह्नुवानं निजवाजिराजताम्" नैष० १-६२। 3. ನಡೆಯುತ್ತಿರುವ, ಹೋಗುತ್ತಿರುವ. "चलन्नलंकृत्य महारयं हयं स्ववाहवाहोचितवेषपेशलः" नैष० १-६६। चल (कम्पने) "शतृ" (३-२-१२४)। स्त्रियाम् "ङीप्" (४-१-६)। **चलन्ती ಚಲಂತೀ.**

**चलता ಚಲತಾ** (स्त्री०) 1. ಚಂಚಲವಾಗಿರುವಿಕೆ. 2. ನಡುಗುವಿಕೆ. 3. ನಡೆಯುವಿಕೆ. चलस्य भावः "तल्" (५-१-११९)। "त्वः" (५-१-११९)। **चलत्वम् ಚಲತ್ವಮ್.**

**चलदल ಚಲದಲ** (पुं०) ಅಶ್ವತ್ಥವೃಕ್ಷ, ಅರಳಿಮರ. चलानि दलान्यस्य। "बोधिद्रुमश्चलदलः पिप्पलः कुञ्जराशनः" अम०।

**चलन ಚಲನ** (न०) 1. ಚಲಿಸುವುದು. 2. ನಡುಗುವುದು, ಕಂಪಿಸುವುದು. 3. ನಡೆಯುವುದು, ಹೋಗುವುದು. चल (कम्पने) भावे "ल्युट्" (३-१-११५)। "चलनेऽवनिश्चलति तस्य करणनियमे सदिङ्मुखम्" किरा० १२-२८। 4. ಪಾದ, ಕಾಲು. 5. ಯಂತ್ರ. "चलनं पादयन्त्रयोः" वैज०। (पुं०) 6. ಜಿಂಕೆ, ಚಿಗರಿ. (वि०) 7. ಚಲಿಸುವ. 8. ನಡುಗುವ. 9. ನಡೆಯುವ. चल कर्त० "युच्" (३-२-१४८)।

**चलनक ಚಲನಕ** (न०) ನರ್ತಕಿಯರ ಒಳಲಂಗ, ತುಂಡು ಲಂಗ. चलन संज्ञायां "कन्"।

**चलनिका ಚಲನಿಕಾ** (स्त्री०) ರೇಷ್ಮೆಯ ಸೆರಗಿನ ಅಂಚು, ರೇಷ್ಮೆ ದಾರದಿಂದ ಹೆಣೆದಿರುವ ಸೆರಗಿನ ಪಟ್ಟಿ.

**चलनी ಚಲನೀ** (स्त्री०) ಆನೆಯನ್ನು ಕಟ್ಟುವ ಹಗ್ಗ.

**चलनीय ಚಲನೀಯ** (वि०) ಅಲುಗಾಡಿಸಲ್ಪಡುವ, ಕದಲಿಸಲ್ಪಡುವ. चल (कम्पने) "अनीयर्" (३-१-९६)।

**चलपत्र ಚಲಪತ್ರ** (पुं०) ಅಶ್ವತ್ಥವೃಕ್ಷ, ಅರಳಿಮರ. चलानि पत्राणि यस्य। "अङ्गेन केनापि विजेतुमस्या गवेष्यते किं चलपत्रपत्रम्" नैष० ७-९१।

**चला ಚಲಾ** (स्त्री०) 1. ಲಕ್ಷ್ಮಿ. चल (कम्पने) "अच्" (३-१-१३४)। "चला लक्ष्म्यां पुमान् कम्पे" मेदि०। 2. ವಿದ್ಯುತ್ತು, ಮಿಂಚು. "ऐरावतं च विद्युत्तु चञ्चला चपला चला" वैज०। 3. ಅಸಭ್ಯ ಹೆಂಗಸು, ಸ್ವೈರಿಣಿ, ವ್ಯಭಿಚಾರಿಣಿ. "बन्धकी पांसुला चर्चा चला नग्ना तु कोट्टवी" वैज०।

**चलाचल ಚಲಾಚಲ** (पुं०) 1. ವಾಯಸ, ಕಾಗೆ. स्त्रियाम् जाति० "ङीष्" (४-१-६३)। (वि०) 2. ಚಂಚಲವಾದ, ಸ್ಥಿರವಲ್ಲದ. चल (कम्पने) "अच्" द्वित्वम् अभ्यासस्य अक् च (वा० ३-१-१३४)। "चलाचलप्रोथतया महीभृते स्ववेगदर्पानिव वक्तुमुत्सुकम्" नैष० १-६०। 3. ನಡುಗುವ, ಕಂಪಿಸುವ, ಅಲುಗಾಡುವ. 4. ಚಲಿಸುವ ಮತ್ತು ಚಲಿಸದಿರುವ.

**चलित ಚಲಿತ** (न०) 1. ನಡುಕ, ಕಂಪನ. चल (कम्पने) भावे "क्तः" (३-३-११४)। 2. ಸಂಚಾರ, ನಡೆಯುವುದು, ಹೋಗುವುದು. (वि०) 3. ನಡುಗಿದ, ಅಲುಗಾಡಿದ. 4. ಹೊರಟಿರುವ, ಮುಂದೆ ಹೋದ, ಮುಂದೆ ಸಾಗಿದ. "अपशङ्कमङ्कपरिवर्तनोचिताश्चलिताः पुरः पतिमुपेतुमात्मजाः" माघ० ४-४७। 5. ಹೊಂದಲ್ಪಟ್ಟ, ಪಡೆಯಲ್ಪಟ್ಟ. 6. ತಿಳಿಯಲ್ಪಟ್ಟ. कर्त० "क्तः" (३-४-७२) कर्म० वा (३-२-१०२)।

**चलितव्य ಚಲಿತವ್ಯ** (वि०) ಹೊರಡಬೇಕಾದ, ನಡೆಯಬೇಕಾದ. चल (कम्पने) "तव्यः" (३-१-९६)।

**चवर्ग ಚವರ್ಗ** (पुं०) च छ ज झ ञ ಈ ವರ್ಣಗಳ ಗುಂಪು. ಈ ಐದು ವರ್ಣಗಳೂ ಒಂದೇ ಸ್ಥಾನ (ತಾಲು) ದಲ್ಲಿ ಹುಟ್ಟುವುದರಿಂದ ಒಂದೇ ಗುಂಪಿಗೆ ಸೇರಿದುವು. इचुयशानां तालु।

**चविका ಚವಿಕಾ** (स्त्री०)
**चव्य ಚವ್ಯ** (न०) } ಚವ್ಯವೆಂಬ ಒಂದು ಗಂದಿಗರ ವಸ್ತು. "चव्यं तु चविका" अम०।

**चव्यजा ಚವ್ಯಜಾ** (स्त्री०) ಗಜಹಿಪ್ಪಲಿ.

**चव्यफल ಚವ್ಯಫಲ** (न०) ಗಜಹಿಪ್ಪಲಿ.

**चष – भक्षणे** (भ्वा० उभ० सक० से०)। चषति, –ते। चचाष। चषिता। ತಿನ್ನು, ಊಟಮಾಡು.

**चष – हिंसायाम्** (भ्वा० पर० सक० से०)। चषति। चचाष। चषिता। ಹಿಂಸಿಸು, ಪೀಡಿಸು.

**चषक ಚಷಕ** (पुंन०) 1. ಮದ್ಯವನ್ನು ಕುಡಿಯುವ ಪಾತ್ರೆ. ಹೆಂಡವನ್ನು ಕುಡಿಯುವ ಪಾತ್ರೆ. चष्यतेऽनेन—चष (भक्षणे) "क्वुन्" (उ० २-३२)। "आददे मृदुविलोलपलाशैरुत्पलैश्चषकवीचिषु कम्पः" किरा० ९-५६। (न०) 2. ಮದ್ಯ. 3. ಜೇನುತುಪ್ಪ. "चषकोऽस्त्री सुरापात्रे मधुमद्यप्रभेदयोः" मेदि०।

**चषाल ಚಷಾಲ** (ಪುಂ) ಯಜ್ಞಪಶುಸ್ತಂಭದ ಮೇಲುಗಡೆ ಇರುವ ಬಳೆ, ಯೂಪಸ್ತಂಭದ ಮರದ ವಲಯ. चष (भक्षणे) "आल:" (उ० ४-१०७)। "चषालो यूपकटक:" अम०। "भ्रूश्चषालतुलिताङ्गुलीयकम्" माघ० १४-५२।

**चह – परिकल्कने** (भ्वा० पर० अक० से०)। चहति। चचाह। चहिता। चहिष्यति। चहतु। ಇತ್ಯಾದಿ. ವಂಚಿಸು, ಮೋಸಮಾಡು.

**चह – परिकल्कने** (चुरा० मित् उभ० सक० से०)। चहयति, –ते। चहयां चकार, –चक्रे, –बभूव, –आस। चहयिता। ಇತ್ಯಾದಿ. ವಂಚಿಸು, ಮೋಸಮಾಡು.

**चाकचक्य ಚಾಕಚಕ್ಯ** (ನಂ) 1. ತೇಜಸ್ಸು, ಕಾಂತಿ, ಹೊಳಪು. चक (तृप्तौ प्रतिघाते च) "अच्" (३-१-१३४)। प्रकारे द्वित्वम् चकचक:। तस्य भाव: "ष्यञ्" (५-१-१२४)। 2. ಚುರುಕು, ಚಟುವಟಿಕೆ.

**चाक्र ಚಾಕ್ರ** (ವಿ०) ಚಕ್ರಸಂಬಂಧವಾದ. चक्रस्येदम् "अण्" (४-३-१२०)।

**चाक्रवर्मण ಚಾಕ್ರವರ್ಮಣ** (ಪುಂ) ಚಕ್ರವರ್ಮನ ಮಗ. चक्रवर्मणोऽपत्यम् "अण्" (४-१-९२)। ಈತನು ಒಬ್ಬ ದೊಡ್ಡ ವ್ಯಾಕರಣಪಂಡಿತ.

**चाक्रिक ಚಾಕ್ರಿಕ** (ಪುಂ) 1. ಶೂದ್ರನಿಂದ ವೈಶ್ಯಹೆಂಗಸಿನಲ್ಲಿ ರಹಸ್ಯ ಸಂಬಂಧದಿಂದ ಹುಟ್ಟಿದವನು. 2. ತೈಲ, ಎಣ್ಣೆ. "चाक्रिकौ तैलघाण्टिकौ" वैज०। 3. ಕಾಲವನ್ನು ತಿಳಿಸುವವನು, ಕಾಲದ ಗಂಟೆಯನ್ನು ಬಾರಿಸುವವನು. 4. ಸ್ತುತಿಪಾಠಕ, ಹೊಗಳುಭಟ, ಗುಂಪಿನಲ್ಲಿ ಸೇರಿ ಹೊಗಳುವವನು. चक्रेण समूहेन चरति – "ठक्" (४-४-८)। 5. ಗಾಣಿಗ, ಎಣ್ಣೆ ತೆಗೆದು ಮಾರುವವನು. 6. ಕುಂಬಾರ, ಚಕ್ರದ ಸಾಹಾಯ್ಯದಿಂದ ಮಡಕೆ ಮಾಡುವವನು. चक्रेण चरति "ठक्" (४-४-८)। 7. ಗಾಡಿಯವನು. चक्रेण चक्रयुक्तशकटेन चरति–"ठक्"(४-४-८)। "पिशुनानृतिनोश्चैव तथा चाक्रिकवन्दिनाम्। एषामन्नं न भोक्तव्यं सोमविक्रयिणस्तथा" याज्ञ० १-१६५। 8. ಪ್ರಕಟಿಸುವವನು, ಬಹಿರಂಗಪಡಿಸುವವನು. "चाक्रिको घोषयामास पुरुषो मृष्टकुण्डल:" हरिवं०।

**चाक्रेय ಚಾಕ್ರೇಯ** (ವಿ०) ಚಕ್ರದಿಂದ ಸಿದ್ಧವಾದ, ಚಕ್ರದಿಂದ ಉಂಟಾದ. चक्रेण निर्वृत्तम् "घञ्" (४-२-८०)।

**चाक्षुष ಚಾಕ್ಷುಷ** (ವಿ०) 1. ಕಣ್ಣಿನಿಂದ ತಿಳಿಯಲ್ಪಡುವ. चक्षुषा गृह्यते–चक्षुस् "अण्" (४-२-९२)। 2. ಕಣ್ಣಿನ ಸಂಬಂಧವಾದ. चक्षुष इदम् "अण्" (४-३-१२०)। "देवानामिदमामनन्ति मुनय: कान्तं क्रतुं चाक्षुषम्" माल० १-४। 3. ಕಣ್ಣಿನಿಂದ ಉಂಟಾದ, ನೋಟದಿಂದ ಉಂಟಾದ (ಪ್ರತ್ಯಕ್ಷ). चक्षुषा निर्वृत्तम् "अण्" (४-२-६८)। (ಪುಂ)4. ಚತುರ್ದಶಮನುಗಳಲ್ಲಿ ಆರನೆಯವನಾದ ಚಾಕ್ಷುಷ ಮನು. चक्षुषो रिपुञ्जयस्यापत्यम् "अण्" ४-१-९२।

**चाङ्ग ಚಾಂಗ** (ಪುಂ) 1. ಪುಲ್ಲಂಪುರಿಚಿಗಿಡ. (ನಂ) 2. ಹಲ್ಲಿನ ಸೌಂದರ್ಯ.

**चाङ्गेरी ಚಾಂಗೇರೀ** (स्त्री०) ಪುಲ್ಲಂಪುರಿಚಿಗಿಡ. चाङ्गमीरयति–ईर (गतौ) "अण्" (३-२-१)। "ङीप्" (४-१-१५)। "ग्रहण्यर्शोविकारघ्नी साम्ला वातकफे हिता। उष्णा कषायमधुरा चाङ्गेरी चाग्निदीपनी" सुश्रुत० सूत्र० ४६।

**चाचलि ಚಾಚಲಿ** (ವಿ०) 1. ಹೆಚ್ಚು ಚಲಿಸುವ. 2. ಅಧಿಕವಾಗಿ ಸಂಚರಿಸುವ. 3. ಹೆಚ್ಚು ನಡುಗುವ. चल (कम्पने) + यङ् "किकिन्" निपा० (वा० ३-२-१७१)।

**चाञ्चल्य ಚಾಂಚಲ್ಯ** (ನಂ) ಚಂಚಲವಾಗಿರುವುದು, ಸ್ಥಿರವಾಗಿಲ್ಲದಿರುವುದು. चञ्चलस्य भाव: "ष्यञ्" (५-१-१२४)।

**चाट ಚಾಟ** (ಪುಂ) 1. ಮೋಸಗಾರ, ವಂಚಿಸುವವನು, ಮೊದಲು ವಿಶ್ವಾಸವನ್ನುಂಟುಮಾಡಿ ಬಳಿಕ ಮೋಸಗೊಳಿಸುವವನು. चटयते भिद्यते – चट (भेदने) "घञ्" (३-३-१९)। "चाटतस्करदुर्वृत्तमहासाहसिकादिभि:" याज्ञ० १-३३६। 2. ಚೋರ, ಕಳ್ಳ.

**चाटकायन ಚಾಟಕಾಯನ** (ಪುಂ) ಚಟಕನ ಗೋತ್ರದಲ್ಲಿ ಹುಟ್ಟಿದವನು. चटकस्य गोत्रापत्यं पुमान् – चटक "फक्" (४-१-९९)।

**चाटकैर ಚಾಟಕೈರ** (ಪುಂ) ಗುಬ್ಬಚ್ಚಿಯ ಗಂಡು ಮರಿ. चटकस्यापत्यं पुमान् – चटकाया अपत्यं वा – चटक "ऐरक्" (४-१-१२८)।

**चाटु ಚಾಟು** (ಪುನಂ) ಪ್ರಿಯವಚನ, ಸಂತೋಷಪಡಿಸುವ ಮಾತು. चट (भेदने) "ञुण्" (उ० १-३)। "अस्मादृशां चाटुरसामृतानि" नैष० ३-१६। "चाटु चाकृतकसंभ्रममासां कार्मणत्वमगमन् रमणेषु" माघ० १०-३७। स्वार्थे "क:"। **चाटुकम् ಚಾಟುಕಮ್.** "विलब्धचाटुकशतानि रतान्तरेषु" सा० द०।

**चाटुकार ಚಾಟುಕಾರ** (ವಿ०) ಪ್ರಿಯವಚನವನ್ನು ಆಡುವವನು, ಸಂತೋಷಕರವಾದ ಮಾತುಗಳನ್ನು ಆಡುವವನು, चाटु करोति – डु कृञ् (करणे) "अण्" (३-२-१)।

ಇಲ್ಲಿ ಹೇತುತಾಚ್ಛೀಲ್ಯಾದ್ಯರ್ಥಗಳಲ್ಲಿ "कृञ्" ಧಾತುವಿಗೆ ಹೇಳಿದ "ट" ಪ್ರತ್ಯಯವು "न शब्दश्लोक........." (३-२-२३)। ಇತ್ಯಾದಿ ಸೂತ್ರದಿಂದ ನಿಷೇಧಿಸಲ್ಪಟ್ಟು "कर्मण्यण्" (३-२-१) ಸೂತ್ರದಿಂದ "अण्" ಪ್ರತ್ಯಯವು ಬರುವುದು. "पदं शतेनाप मखेर्यदिन्द्रस्तस्मै स ते याचनचाटुकारः" नैष० ६-८२। "चाटुकारमपि प्राणनाथं रोषादपास्य या" सा० द०। "णिनिः" (३-२-७८)। -कारिन् -ಕಾರಿನ್.

**चाटुवचन ಚಾಟುವಚನ** (न०) ಪ್ರಿಯನುಡಿ, ಸಂತೋಷಕರವಾದ ಮಾತು. "विरचितचाटुवचनरचनेन चरणरचितप्रणिपातम्" गीतगो० ११-१।

**चाटुवटु ಚಾಟುವಟು** (पुं०) ವಿದೂಷಕ, ಹಾಸ್ಯಗಾರ, ನಕಲಿ, ರಾಜನ ನರ್ಮ ಸಚಿವ.

**चाटुशत ಚಾಟುಶತ** (न०) ನೂರಾರು ಒಳ್ಳೆಯ ಮಾತುಗಳು. चाटूनां शतम्। "गजपुङ्गवस्तु धीरं विलोकयति चाटुशतैश्च भुङ्क्ते" भर्तृ० १-२३।

**चाटूक्ति ಚಾಟೂಕ್ತಿ** (स्त्री०) 1. ಪ್ರಿಯವಾದ ಮಾತು, ಸಂತೋಷಕರವಾದ ಮಾತು. 2. ಸೇವೆ, ಶುಶ್ರೂಷೆ.

**चाणक ಚಾಣಕ** (पुं० ब० व०) ಚಾಣಕ್ಯನ ಶಿಷ್ಯರು. चाणक्यस्य छात्राः "अण्" (४-२-१११)।

**चाणकीन ಚಾಣಕೀನ** (न०) ಕಡಲೆಯು ಬೆಳೆಯುವ ಭೂಮಿ. चणकस्य भवनं क्षेत्रम् "खञ्" (५-२-१)।

**चाणक्य ಚಾಣಕ್ಯ** (पुं०) 1. ಕೌಟಿಲ್ಯ, ಚಂದ್ರಗುಪ್ತನ ಮಂತ್ರಿ. चणकस्य गोत्रापत्यं पुमान् "यञ्" (४-१-१०५)। ನಂದವಂಶವನ್ನು ನಿರ್ಮೂಲಮಾಡಿ ಮೌರ್ಯಚಂದ್ರಗುಪ್ತನನ್ನು ರಾಜ್ಯದಲ್ಲಿ ದೊರೆಯನ್ನಾಗಿ ಮಾಡಿದ ಮಹಾರಾಜನೀತಿಕುಶಲನಿವನು. "अपि नाम दुरात्मनः चाणक्यहतकात् चन्द्रगुप्तो भिद्येत, अथवा सिद्धमेव समीहितं पश्यामि" मुद्रा० २। 2. ಚಾಣಕ್ಯನ ನೀತಿಶಾಸ್ತ್ರ.

**चाणूर ಚಾಣೂರ** (पुं०) ಕಂಸನ ಒಬ್ಬ ಸೇವಕ, ಕೃಷ್ಣನೊಡನೆ ಮಲ್ಲಯುದ್ಧಮಾಡಿ ಹತನಾದ ಒಬ್ಬ ಅಸುರ. "बाह्वोर्निगृह्य चाणूरं बहुशो भ्रामयन् हरिः। भूपृष्ठे पोथयामास तरसा क्षीणजीवितम्" भाग० १०-४४-२३।

**चाणूरमर्दन ಚಾಣೂರಮರ್ದನ -सूदन -ಸೂದನ** (पुं०) ಶ್ರೀಕೃಷ್ಣ. चाणूरं मर्दयति सूदयति वा — मृद (क्षोदे) षूद (क्षरणे) वा "ल्युः" (३-१-१३४)।

**चाण्ड ಚಾಂಡ** (न०) ಹಿಂಸೆ, ತೊಂದರೆ, ಬಲಾತ್ಕಾರ. चण्डस्य भावः "अण्" (५-१-१३०)।

**चाण्डाल ಚಾಂಡಾಲ** (पुं०) "चण्डाल" ಪದದ ಅರ್ಥ. चण्डाल स्वार्थे "अण्"। स्त्रियाम् जाति० "ङीष्" (४-१-६३)। -ली -ಲೀ.

**चाण्डालकि ಚಾಂಡಾಲಕಿ** (पुं०) ಚಂಡಾಲನ ಮಗ. चण्डालस्यापत्यम् "इञ्" अकङादेशश्च (वा० ४-१-९७)।

**चाण्डालक ಚಾಂಡಾಲಕ** (वि०) ಚಂಡಾಲನಿಂದ ಮಾಡಲ್ಪಟ್ಟ. चण्डालेन कृतम् "वुञ्" (४-३-११८)।

**चाण्डालिका ಚಾಂಡಾಲಿಕಾ** (स्त्री०) ಚಂಡಾಲನ ವೀಣೆ.

**चातक ಚಾತಕ** (पुं०) ಚಾತಕಪಕ್ಷಿ, ಮಳೆಗುಟುಕಿನ ಹಕ್ಕಿ. चतति—चते (याचने) "ण्वुल्" (३-१-१३३)। "समीक्ष्य बाला तदनन्यदृष्टिश्चर्यामिवालम्बत चातकानाम्" याद० १३-१६। स्त्रियाम् जाति० "ङीष्" (४-१-६३)। -की -ಕೀ.

**चातकानन्दन ಚಾತಕಾನಂದನ** (पुं०) ವರ್ಷರ್ತು, ಮಳೆಗಾಲ. चातकमानन्दयति — आ + टुनदि (समृद्धौ) + णिच् "ल्युः" (३-१-१३४)।

**चातन ಚಾತನ** (न०) 1. ಪೀಡಿಸುವುದು, ಹಿಂಸಿಸುವುದು. 2. ಯಾಚಿಸುವುದು, ಬೇಡುವುದು. चते (याचने) + णिच् "ल्युट्" (३-३-११५)।

**चातुर ಚಾತುರ** (वि०) 1. ಚತುರ, ಬುದ್ಧಿವಂತ, ಜಾಣ. चतुर स्वार्थे "अण्"। 2. ಪ್ರಿಯವಾದ ಮಾತನ್ನಾಡುವವನು. 3. ಆಡಳಿತ ಮಾಡುವವನು, ಆಳುವವನು, ಅಧಿಕಾರ ನಡೆಸುವವನು. 4. ಕಣ್ಣಿಗೆ ಕಾಣಿಸುವ, ದೃಷ್ಟಿಗೆ ಗೋಚರವಾದ. (न०) 5. ನಾಲ್ಕು ಕುದುರೆಗಳಿಂದ ಎಳೆಯಲ್ಪಡುವ ಗಾಡಿ. चतुर्भिरुह्यते—चतुर् "अण्" (४-२-९२)। "चातुरो नेत्रगोचरे। चाटुकारिनियन्त्रोश्च त्रिषु" मेदि०।

**चातुरक ಚಾತುರಕ** (पुं०) 1. ಗುಂಡಾದ ತಲೆದಿಂಬು. (वि०) 2. ಪ್ರಿಯವಾದ ಮಾತನ್ನಾಡುವವನು. 3. ನೇತ್ರಕ್ಕೆ ಗೋಚರವಾದ, ಕಣ್ಣಿಗೆ ಕಾಣಿಸುವ. 4. ಆಡಳಿತ ನಡೆಸುವ. "अथ चातुरकश्चक्रगण्डौ पुंस्यभिधेयवत्। गोचरे लोचनस्यापि चाटुकारे नियन्तरि" मेदि०।

**चातुरक्ष ಚಾತುರಕ್ಷ** (पुं०) 1. ನಾಲ್ಕು ಕಾಯಿಗಳಿಂದ ಆಡುವ ಪಗಡೆಯಾಟ. 2. ಗುಂಡಾದ ತಲೆದಿಂಬು.

**चातुरर्थिक ಚಾತುರರ್ಥಿಕ** (पुं०) ನಾಲ್ಕು ಅರ್ಥಗಳಲ್ಲಿ ವಿಧಿಸಲ್ಪಟ್ಟ ಪ್ರತ್ಯಯ. "तदस्मिन्नस्तीति देशे तन्नाम्नि" (४-२-६७)। "तेन निर्वृत्तम्" (४-२-६८)। "तस्य निवासः" (४-२-६९)। ಮತ್ತು "अदूरभवश्च" (४-२-७०)। ಈ ನಾಲ್ಕು ಸೂತ್ರಗಳಿಂದ ಹೇಳಲ್ಪಟ್ಟ

ಅರ್ಥಗಳಲ್ಲಿ ವಿಹಿತವಾದ ಪ್ರತ್ಯಯ. चत्वारोऽर्थाः प्रयोजनम् अस्य "ठक्" (५-१-१०९)।

**चातुराश्रमिक ಚಾತುರಾಶ್ರಮಿಕ**(वि०)ನಾಲ್ಕು ಆಶ್ರಮಗಳಲ್ಲಿ ವಿಹಿತವಾದ ಧರ್ಮ, ಬ್ರಹ್ಮಚರ್ಯ ಗಾರ್ಹಸ್ಥ್ಯ ವಾನಪ್ರಸ್ಥ ಮತ್ತು ಸಂನ್ಯಾಸರೂಪವಾದ ನಾಲ್ಕು ಆಶ್ರಮಗಳ ಧರ್ಮ. "चातुर्विद्यं तथा वर्णांश्चातुराश्रमिकान् पृथक्। धर्ममेकं चतुष्पादं नित्यमाहुर्मनीषिणः" भा० आश्व० ३६-३७।

**चातुराश्रम्य ಚಾತುರಾಶ್ರಮ್ಯ** (न०) ಬ್ರಹ್ಮಚರ್ಯ ಗಾರ್ಹಸ್ಥ್ಯ ವಾನಪ್ರಸ್ಥ ಮತ್ತು ಸಂನ್ಯಾಸರೂಪವಾದ ನಾಲ್ಕು ಆಶ್ರಮಗಳು. चत्वारः आश्रमाः स्वार्थे "ष्यञ्" (वा० ५-१-१२४)। "चातुराश्रम्यधर्माश्च वेदवादाश्च पार्थिव। ब्राह्मणेनानुगन्तव्या नान्यो विद्यात्कदाचन" भा० शान्ति० ६४-९।

**चातुरिक ಚಾತುರಿಕ** (पुं०) ಸಾರಥಿ, ರಥವನ್ನು ನಡೆಸುವವನು. चातुरीं वेत्ति – "ठक्" (४-२-५९)।

**चातुरी ಚಾತುರೀ**(स्त्री०)ಚಾತುರ್ಯ, ನೈಪುಣ್ಯ, ಜಾಣತನ. चतुरस्य भावः – चतुर "ष्यञ्" (५-१-१२५)। "ङीष्" (४-१-४१)। यलोपः (६-४-१५०)। "दिगङ्गनाङ्गावरणं रणाङ्गणे यशःपटं तद्भटचातुरीतुरी" नैष० १-१२।

**चातुरीक ಚಾತುರೀಕ**(वि०)ಗಂಧದ ಬಟ್ಟಲು. "चातुरीकं त्रिषु भवेच्चन्दनद्रवभाजने" वैज०।

**चातुर्जातक ಚಾತುರ್ಜಾತಕ** (न०) ಲವಂಗಪಟ್ಟೆ (ದಾಲ್ಚಿನ್ನಿ) ಯಾಲಕ್ಕಿ ಜಾಪತ್ರೆ ಮತ್ತು ನಾಗಸಂಪಿಗೆ ಈ ನಾಲ್ಕು ಸುಗಂಧ ವಸ್ತುಗಳು. चतुर्जातक स्वार्थे "अण्" (५-४-३८)। "त्वगेलापत्रकैस्तुल्यैस्त्रिसुगन्धि त्रिजातकम्। नागकेसरसंयुक्तं चातुर्जातकमुच्यते" भावप्र०।

**चातुर्थ ಚಾತುರ್ಥ**(वि०)1. ನಾಲ್ಕನೆಯದಕ್ಕೆ ಸಂಬಂಧಿಸಿದ. चतुर्थस्येदम् "अण्" (४-३-१२०)। 2. ನಾಲ್ಕು ದಿನಗಳಿಗೊಂದಾವೃತ್ತಿ ಬರುವ (ಜ್ವರ). "कृशानां ज्वरमुक्तानां मिथ्याहारविहारिणाम्। दोषः स्वल्पोऽपि संवृद्धो देहिनामनिलेरितः। सततान्येद्युष्कत्र्याख्यचातुर्थान् सप्रलेपकान्। कफस्थानविभागेन यथासंख्यं करोति हि" सुश्रुत० उत्तरतं० ३९-५१, ५२। "वाताधिकत्वात् प्रवदन्ति तज्ज्ञास्तृतीयकं चापि चतुर्थकं च। औपत्यके मद्यसमुद्भवे च हेतुं ज्वरे पित्तकृतं वदन्ति" सुश्रुत० उत्तरतं० ३९-५७।

**चातुर्दश ಚಾತುರ್ದಶ**(वि०)1. ಚತುರ್ದಶಿಯಲ್ಲಿ ಇರುವ। चतुर्दश्यां भवः "अण्" (४-३-१६)। (न०) 2. ಚತುರ್ದಶಿಯಲ್ಲಿ ಕಾಣಿಸಿಕೊಳ್ಳುವ ರಾಕ್ಷಸ. चतुर्दश्यां दृश्यते "अण्" (४-२-९२)। चातुर्दशं रक्षः सि० कौ०।

**चातुर्दशिक ಚಾತುರ್ದಶಿಕ** (पुं०) ಚತುರ್ದಶಿ ದಿವಸ (ಅನಧ್ಯಯನ ದಿನ) ದಲ್ಲಿ ಅಧ್ಯಯನ ಮಾಡುವವನು. चतुर्दश्यामधीते – चतुर्दशी "ठक्" (४-४-७१)।

**चातुर्भद्र ಚಾತುರ್ಭದ್ರ**(न०)ಒಣಶುಂಠಿ ಅತಿಬಜೆ ಕೊನ್ನಾರಿ ಮತ್ತು ಅಮೃತಬಳ್ಳಿಗಳೆಂಬ ನಾಲ್ಕು ಔಷಧಮೂಲಿಕೆಗಳು. चतुर्भद्रमेव स्वार्थे "अण्"।

**चातुर्भौतिक ಚಾತುರ್ಭೌತಿಕ** (वि०) ಪೃಥಿವಿ ಅಪ್ಪು, ತೇಜಸ್ಸು ಮತ್ತು ವಾಯುಗಳೆಂಬ ನಾಲ್ಕು ಭೂತಗಳಿಂದ ಉಂಟಾದ. चतुर्भिर्भूतैः निर्वृत्तः "ठञ्" (५-१-७९)।

**चातुर्मास ಚಾತುರ್ಮಾಸ** (वि०) ನಾಲ್ಕು ತಿಂಗಳಲ್ಲಿ ಉಂಟಾದ. चतुर्षु मासेषु भवः "अण्" (४-३-५१)।

**चातुर्मासिक ಚಾತುರ್ಮಾಸಿಕ** (वि०) ನಾಲ್ಕು ತಿಂಗಳ ಕಾಲ ಬ್ರಹ್ಮಚರ್ಯದಿಂದ ಕೂಡಿದ. चतुरो मासान् ब्रह्मचर्यमस्य "ठञ्" (५-१-९४)।

**चातुर्मास्य ಚಾತುರ್ಮಾಸ್ಯ** (वि०) 1. ನಾಲ್ಕು ತಿಂಗಳಲ್ಲಿ ನಡೆಯಬೇಕಾದ (ಯಜ್ಞ). चतुर्षु मासेषु भवः "ण्यः" (वा० ५-१-९४)। "अग्निहोत्रदर्शपूर्णमासचातुर्मास्य-पशुसोमानाम्" भाग० ५-७-५। 2. ವರ್ಷಋತುವಿನಲ್ಲಿ ಆಚರಿಸಬೇಕಾದ ಒಂದು ವ್ರತ. "आषाढशुक्लद्वादश्यां पौर्णमास्यामथापि वा। चातुर्मास्यव्रतारम्भं कुर्यात् कर्कटसंक्रमे। अभावे तु तुलार्केऽपि मन्त्रेण नियमं व्रती" वराहपु०।

**चातुर्य ಚಾತುರ್ಯ** (न०) ಜಾಣತನ, ಬುದ್ಧಿವಂತಿಕೆ, ದಕ್ಷತೆ. चतुरस्य भावः "ष्यञ्" (५-१-१२४)। "भ्रूचातुर्यात् कुञ्चिताक्षाः कटाक्षाः स्निग्धा वाचो लज्जितान्ताश्च हासाः" भर्तृ० २-३।

**चातुर्वर्ण्य ಚಾತುರ್ವರ್ಣ್ಯ** (न०) 1. ಬ್ರಾಹ್ಮಣ ಮೊದಲಾದ ನಾಲ್ಕು ವರ್ಣಗಳು. चत्वारो वर्णाः स्वार्थे "ष्यञ्" (वा० ५-१-१२४)। "चातुर्वर्ण्यं मया सृष्टं गुणकर्मविभागशः" गीता ४-१३। 2. ಬ್ರಾಹ್ಮಣಾದಿ ನಾಲ್ಕು ವರ್ಣಗಳ ಧರ್ಮ. चतुर्वर्णस्य भावः "ष्यञ्" (५-१-१२४)।

**चातुर्विध्य ಚಾತುರ್ವಿಧ್ಯ** (न०) ನಾಲ್ಕು ವಿಧವಾಗಿರುವುದು.

**चातुर्वैद्य ಚಾತುರ್ವೈದ್ಯ** (पुं०) ನಾಲ್ಕು ವೇದಗಳನ್ನು ಅಧ್ಯಯನ ಮಾಡಿದವನು. चतुरो वेदानधीते चतुर्वेदः, स एव चातुर्वैद्यः। चतुर्वेद स्वार्थे "ष्यञ्" उभयपदवृद्धिश्च (ग० ५-१-१२४)।

**चातुर्होत्र ಚಾತುರ್ಹೋತ್ರ** (वि०) 1. ಅಧ್ವರ್ಯು ಉದ್ಗಾತೃ ಹೋತೃ ಮತ್ತು ಬ್ರಾಹ್ಮಣ ರೂಪವಾದ ನಾಲ್ವರಿಂದ ನಡೆಸಲ್ಪಡುವ ಕರ್ಮ. चतुर्णां होतॄणां कर्म "अञ्" (५-१-१२९)। "चातुर्होत्रं कर्म शुद्धं प्रजानां वीक्ष्य वैदिकम्। व्यदधाद्यज्ञसन्तत्यै वेदमेकं चतुर्विधम्" भाग० १-४-१९। (न०) 2. ಅಧ್ವರ್ಯು ಮೊದಲಾದ ನಾಲ್ಕು ಮಂದಿಗಳಿಂದ ನಡೆಸಲ್ಪಡುವ ಯಾಗ. "ईजे च भगवन्तं यज्ञक्रतुरूपं क्रतुभिरुच्चावचैः श्रद्धया........ चातुर्होत्रविधिना" भाग० ५-७-५।

**चातुर्होत्रक ಚಾತುರ್ಹೋತ್ರಕ** (पुं०) ಚತುರ್ಹೋತೃ ಮಂತ್ರಗಳ ವ್ಯಾಖ್ಯಾನ ಗ್ರಂಥ ಅಥವಾ ಆ ಮಂತ್ರಗಳಲ್ಲಿ ರುವ. चतुर्होतॄणां व्याख्यानः तत्र भवो वा — चतुर्होतृ "ठक्" (४-३-७२)।

**चात्वाल ಚಾತ್ವಾಲ** (पुंन०) 1. ಉತ್ತರವೇದಿಯ ನಿರ್ಮಾಣಕ್ಕಾಗಿ ಭೂಮಿಯಲ್ಲಿ ತೋಡಿದ ಗುಳಿ, ಯಜ್ಞಕುಂಡ. 2. ದರ್ಭೆ, ಕುಶ. चते (याचने) "वालञ्" बाहु०। "चात्वालो यज्ञकुण्डदर्भयोः" हेम०। "चात्वालोऽस्त्री मृत्खनःस्यात्" वैज०।

**चान्दनिक ಚಾಂದನಿಕ** (वि०) ಚಂದನದ ಲೇಪನದಿಂದ ಶೋಭಿಸುವ. चन्दनेन संपादि "ठक्" (५-१-९९)। "वपुश्चान्दनिकं यस्य कार्णवेष्टनिकं मुखम्" भट्टि० ४-२५।

**चान्द्र ಚಾಂದ್ರ** (पुं०) 1. ಚಂದ್ರಕಾಂತಮಣಿ. 2. ಶುಕ್ಲಪಕ್ಷ. (न०) 3. ಚಾಂದ್ರಮಾನ, ಚಂದ್ರನ ಗತಿಯ ಮೇಲೆ ಎಣಿಸುವ ದಿನ ಮತ್ತು ಮಾಸಗಳು. "अर्काद्विनिःसृतः प्राचीं यद् यात्यहरहः शशी। तच्चान्द्रमानमंशैस्तु ज्ञेया द्वादशभिस्तिथिः" सू० सि० १४-१२। 4. ಮೃಗಶೀರ್ಷ ನಕ್ಷತ್ರ. 5. ಹಸಿಶುಂಠಿ. 6. ಚಾಂದ್ರಾಯಣ ವ್ರತ. (वि०) 7. ಚಂದ್ರಸಂಬಂಧವಾದ. चन्द्रस्येदम् "अण्" (४-३-१२०)। स्त्रियाम् "ङीप्" (४-१-१५)। "चान्द्रीमभिनभः श्रियम्" माघ० २-२।

**चान्द्रक ಚಾಂದ್ರಕ** (न०) ಶುಂಠಿ.

**चान्द्रमस ಚಾಂದ್ರಮಸ** (न०) 1. ಮೃಗಶೀರ್ಷ ನಕ್ಷತ್ರ. (वि०) 2. ಚಂದ್ರಸಂಬಂಧವಾದ. चन्द्रमस इदम् "अण्" (४-३-१२०)। स्त्रियाम् "ङीप्" (४-१-१५)। —मसी —ಮಸೀ. "चन्द्रं गता पद्मगुणान्न भुङ्क्ते पद्माश्रिता चान्द्रमसीमभिख्याम्" कुमा० १-४३।

**चान्द्रमसायनि ಚಾಂದ್ರಮಸಾಯನಿ** (पुं०) ಚಂದ್ರನ ಮಗ ಬುಧ. चन्द्रमसोऽपत्यम् — चन्द्रमस् "फिञ्" (४-१-१५४)। आयन्नादेशः (७-१-२)।

**चान्द्रमास ಚಾಂದ್ರಮಾಸ** (पुं०) ಚಂದ್ರನ ಗತಿಯನ್ನನುಸರಿಸಿ ಎಣಿಸುವ ಮಾಸ. चान्द्रो मासः।

**चान्द्रव्रतिक ಚಾಂದ್ರವ್ರತಿಕ** (पुं०) 1. ಚಾಂದ್ರಾಯಣ ವ್ರತವನ್ನು ಆಚರಿಸುವವನು. चान्द्रं व्रतमस्त्यस्य "ठन्" (५-२-११५)। 2. ಚಂದ್ರನಿಗೆ ಸಮಾನವಾಗಿ ವ್ರತವನ್ನು ಆಚರಿಸುವ ದೊರೆ.

**चान्द्रायण ಚಾಂದ್ರಾಯಣ** (न०) ಚಾಂದ್ರಾಯಣ ವ್ರತ, ಚಂದ್ರನ ವೃದ್ಧಿಕ್ಷಯಗಳನ್ನು ಅನುಸರಿಸಿ ಶುಕ್ಲ ಮತ್ತು ಕೃಷ್ಣ ಪಕ್ಷಗಳಲ್ಲಿ ಆಚರಿಸಲ್ಪಡುವ ಒಂದು ವ್ರತ. ಶುಕ್ಲಪಕ್ಷದಲ್ಲಿ ಮಯೂರಾಂಡಪ್ರಮಾಣದ ಗ್ರಾಸವನ್ನು ಪ್ರತಿದಿನವೂ ಹುಣ್ಣಿಮೆಯವರೆಗೆ ಒಂದೊಂದಾಗಿ ಹೆಚ್ಚಿಸುತ್ತ ಕೃಷ್ಣಪಕ್ಷದಲ್ಲಿ ಅಮಾವಾಸ್ಯೆವರೆಗೂ ಪ್ರತಿದಿನ ಆಹಾರದಲ್ಲಿ ಒಂದೊಂದು ಗ್ರಾಸವನ್ನು ಶೂನ್ಯವಾಗುವವರೆಗೂ ಕಡಮೆ ಮಾಡುತ್ತ ಆಚರಿಸಲ್ಪಡುವ ವ್ರತವು ಚಾಂದ್ರಾಯಣ ವ್ರತ. "तिथिवृद्ध्या चरेत्पिण्डान् शुक्ले शिख्यण्डसम्मितान्। एकैकं ह्रासयेत् कृष्णे पिण्डं चान्द्रायणं चरन्" याज्ञ० ३-३२३।

**चान्द्री ಚಾಂದ್ರೀ** (स्त्री०) 1. ಚಂದ್ರನ ಪತ್ನಿ. चन्द्रस्येयम् "अण्" (४-३-१२०)। 2. ಚಂದ್ರಿಕೆ, ಬೆಳದಿಂಗಳು. 3. ಚಂದ್ರಸಂಬಂಧವಾದ. "गुरुकाव्यानुगां बिभ्रच्चान्द्रीमभिनभः श्रियम्" माघ० २-२।

**चान्द्रायणिक ಚಾಂದ್ರಾಯಣಿಕ** (वि०) ಚಾಂದ್ರಾಯಣ ವ್ರತವನ್ನು ಆಚರಿಸುವವನು. चान्द्रायणं वर्तयति — चान्द्रायण "ठञ्" (५-१-७२)।

**चाप ಚಾಪ** (पुं०) 1. ಧನುಸ್ಸು, ಬಿಲ್ಲು. चपस्य वंशविशेषस्य विकारः "अण्" (४-३-१३५)। "चित्रं चापैरपेतज्यैः स्फुरद्रक्तशतह्रदम्" माघ० १९-७९। 2. ಧನೂರಾಶಿ, ಮೇಷ ಮೊದಲಾಗಿ ಒಂಭತ್ತನೆಯ ರಾಶಿ.

**चापयष्टि ಚಾಪಯಷ್ಟಿ** (स्त्री०) ಧನುಸ್ಸು, ಬಿಲ್ಲು. "ददृशेऽथ च तस्य चापयष्ट्याम्" माघ० २०-२८।

**चापल ಚಾಪಲ** (न०) 1. ಚಪಲಕಾರ್ಯ, ಪ್ರಯೋಜನ ಕಂಡುಬರದಿದ್ದರೂ ಯೋಚನೆಮಾಡದೆ ಆಸೆಯಿಂದ

ಮಾಡುವ ಕಾರ್ಯ, ದುಡುಕಿ ಮಾಡುವ ಕೆಲಸ. चपलस्य कर्म "अण्" (५-१-१३०)। "अलं नलं रोद्धुममी किलाभवन् गुणा विवेकप्रमुखा न चापलम्" नैष० १-५४। 2. ವೇಗ, ಶೀಘ್ರತೆ. "पुन: पुन: सूतनिषिद्धचापलं हरन्तमश्वं रथरश्मिसंयतम्" रघु० ३-४२। 3. ಚಾಂಚಲ್ಯ, ಚಲನೆ. चपलस्य भाव: "अण्" (५-१-१३०)। "ष्यञ्" (५-१-१२४)। **चापल्यम् ಚಾಪಲ್ಯಮ್.**

**चापिन् ಚಾಪಿನ್** (पुं०) 1. ಧನುಸ್ಸನ್ನು ಹಿಡಿದಿರುವ ಯೋಧ, ಭಟ. 2. ಶಿವ, ಈಶ್ವರ. चापोऽस्यास्ति "इनि:" (५-२-११५)। 3. ಧನೂರಾಶಿ.

**चामर ಚಾಮರ** (न०) ಚಮರೀಮೃಗದ ಬಾಲದಿಂದ ತಯಾರಿಸಿದ ಚಾಮರ,—ಬಾಲದಿಂದ ಮಾಡಿದ ಬೀಸಣಿಗೆ, ಬಾಲವ್ಯಜನ. चमर्या: विकार: "अण्" (४-३-१३५)। "तं वीजयाम: स्मरकेलिकाले पक्षैर्नृपं चामरबद्धसख्यै:" नैष० ३-२२।

**चामरग्राह ಚಾಮರಗ್ರಾಹ** (वि०) ಚಾಮರವನ್ನು ಹಿಡಿದು ಬೀಸುವವನು. चामरं गृह्णाति—ग्रह (उपादाने) "अण्" (३-२-१)।

**चामरग्राहिक ಚಾಮರಗ್ರಾಹಿಕ** (पुं०) ಚಾಮರವನ್ನು ಬೀಸುವವನ ಮಗ. चामरग्राहस्य अपत्यम् "ठक्" (४-१-१४६)।

**चामरग्राहिन् ಚಾಮರಗ್ರಾಹಿನ್** (वि०) ಚಾಮರವನ್ನು ಹಿಡಿದು ಬೀಸುವವನು. चामरं गृह्णाति—ग्रह (उपादाने) "णिनि:" (३-१-१३४)। स्त्रियाम् "ङीप्" (४-१-५)। **—ग्राहिणी —ಗ್ರಾಹಿಣೀ.** "अग्रे गीतं सरसकवय: पार्श्वयोर्दाक्षिणात्या: पश्चाल्लीलावलयरणितं चामरग्राहिणीनाम्" भर्तृ० ३-६६।

**चामरपुष्प ಚಾಮರಪುಷ್ಪ** (पुं०) 1. ಮಾವಿನಮರ. 2. ತಾಳೆಮರ. 3. ಕಾಶ, ಜಂಬುಹುಲ್ಲು. "आम्रे चामरपुष्प: स्यात् काशकेतकयोरपि" वैजं०। 4. ಅಡಕೆ ಮರ. "भवेच्चामरपुष्पस्तु पूगे काशाम्रकेतके" मेदि०।

**चामरिन् ಚಾಮರಿನ್** (पुं०) 1. ಅಶ್ವ, ಕುದುರೆ. चामरमिव केशोऽस्यास्ति "इनि:" (५-२-११५)। (वि०) 2. ಚಾಮರವನ್ನು ಹೊಂದಿರುವ.

**चामीकर ಚಾಮೀಕರ** (न०) 1. ಸುವರ್ಣ, ಚಿನ್ನ. चमीकरे आकरे भवम् "अण्" (४-३-५३)। "जगतीरिह स्फुरितचारुचामीकरा: सवितु: क्वचित् कपिशयन्ति चामी करा:" माघ० ४-२४। 2. ದತ್ತೂರಿಗಿಡ. (वि०) 3. ಸ್ವರ್ಣಮಯವಾದ, ಚಿನ್ನದಿಂದ ನಿರ್ಮಿತವಾದ. "खे खेलगामी तमुवाह वाह: सशब्दचामीकरकिंकिणीक:" कुमा० ७-४९।

**चामीकरक्ष्माभृत् ಚಾಮೀಕರಕ್ಷ್ಮಾಭೃತ್** (पुं०) ಸುಮೇರು ಪರ್ವತ.

**चामीकरीय ಚಾಮೀಕರೀಯ** (वि०) ಸುವರ್ಣದಿಂದ ನಿರ್ಮಿತವಾದ, ಚಿನ್ನದಿಂದ ತಯಾರಿಸಲ್ಪಟ್ಟ. "निरुञ्छनं चक्रुरथोत्तरीयैश्चामीकरीयैर्निजवल्कलैश्च" कुमा० १३-२१।

**चामुण्डा ಚಾಮುಂಡಾ** (स्त्री०) 1. ಪಾರ್ವತಿ, ದುರ್ಗಾದೇವಿ. "यस्माच्चण्डं च मुण्डं च गृहीत्वा त्वमुपागता। चामुण्डेति ततो लोके ख्याता देवी भविष्यसि" देवीमा०। 2. ಪಾರ್ವತಿಯ ಪರಿಚಾರಿಕೆಯರಲ್ಲೊಬ್ಬಳು, ಸಪ್ತ ಮಾತೃಗಳಲ್ಲೊಬ್ಬಳು. "कर्णमोटी तु चामुण्डा चर्ममुण्डा तु चर्चिका" अम०।

**चाम्पिला ಚಾಂಪಿಲಾ** (स्त्री०) ಚಂಪಾನದಿ, ಒಂದು ಹೊಳೆ. "तलोदा चाम्पिला सिन्धु: ऋषिकुल्या वहा च सा" त्रिकाण्ड०।

**चाम्पेय ಚಾಂಪೇಯ** (पुं०) 1. ಸುವರ್ಣ, ಚಿನ್ನ. चम्पाया अपत्यम् "ढक्" (४-१-१२०)। 2. ಸಂಪಿಗೆಮರ. 3. ನಾಗಸಂಪಿಗೆಮರ. 4. ದತ್ತೂರಿಗಿಡ. 5. ಕಿಂಜಲ್ಕ, ಕೇಸರ, ಹೂವಿನ ಕುಸುರು. "चाम्पेयश्चम्पके स्वर्णे किञ्जल्के नागकेसरे" मेदि०। 6. ವಿಶ್ವಾಮಿತ್ರ ಮಹರ್ಷಿಯ ಒಬ್ಬ ಮಗ. "अरालिर्नाचिकश्चैव चाम्पेयोज्जयनौ तथा" भा० अनु० ७-५८। (वि०) 7. ಚಂಪಾನದಿಯಲ್ಲಿ ಹುಟ್ಟಿದ.

**चायृ—पूजानिशामनयो:** (भ्वा० उभ० सक० से०)। चायति, —ते। चचाय, चचाये। चायिता। ಇತ್ಯಾದಿ. 1. ಪೂಜಿಸು, ಆರಾಧಿಸು. 2. ನೋಡು. "तं पर्वतीया: प्रमदाश्चचायिरे विकासविस्फारितविभ्रमेक्षणा:" माघ० १२-५१।

**चायत् ಚಾಯತ್** (वि०) 1. ಪೂಜಿಸುತ್ತಿರುವ. 2. ನೋಡುತ್ತಿರುವ. चायृ (पूजानिशामनयो:) "शतृ" (३-२-१२४)।

**चायनीय ಚಾಯನೀಯ** (वि०) 1. ಪೂಜಿಸಲ್ಪಡುವ. 2. ನೋಡಲ್ಪಡುವ. चायृ (पूजानिशामनयो:) "अनीयर्" (३-१-९६)। 3. ನೋಡಬೇಕಾದ. 4. ಪೂಜಿಸಬೇಕಾದ.

**चायमान ಚಾಯಮಾನ** (वि०) 1. ಪೂಜಿಸುತ್ತಿರುವ. 2. ನೋಡುತ್ತಿರುವ. चायृ (पूजानिशामनयो:) "शानच्" (३-२-१२४)।

**चायु ಚಾಯು** (वि०) 1. ಪೂಜಿಸುವವನು. 2. ನೋಡು ವವನು. चायृ (पूजानिशामनयोः) "उण्" (उ० १-३)।

**चार ಚಾರ** (पुं०) 1. ಗೂಢಪುರುಷ, ಗುಪ್ತಚಾರ, ರಹಸ್ಯ ಕಾರ್ಯಗಳಲ್ಲಿ ನಿಯುಕ್ತನಾದವನು. चरति—चर (गतौ) "अच्" (३-१-१३४)। चर स्वार्थे "अण्" (५-४-३८)। 2. ಪ್ರಿಯಾಳವೃಕ್ಷ, ಮೊರಟೆಗಿಡ. 3. ಕಾರಾಗಾರ, ಸೆರೆ ಮನೆ. 4. ಗತಿ, ನಡಗೆ, ಸಂಚಾರ. "क्रीडाशैले यदि च विचरेत्पादचारेण गौरी" मेघ० १-६०। 5. ಬೇಡಿ, ಸಂಕೋಲೆ. "चारः प्रियालवृक्षे स्याद्गतौ बन्धापसर्पयोः" मेदि०। "चारः कारागुप्तौ" अभि० चि०। (न०)6. ಕೃತ್ರಿಮವಾದ ವಿಷ. "कृत्रिमन्तु विषं चारं गरश्चोपविषं च तत्" अभि० चि०।

**चारक ಚಾರಕ** (पुं०) 1. ದನ ಕಾಯುವವನು, ಗೊಲ್ಲ, ಗೋಪಾಲಕ. चारयति — चर (गतिभक्षणयोः) + णिच् "ण्वुल्" (३-१-१३३)। 2. ಬಂಧನ, ಸಂಕೋಲೆ, 3. ಗತಿ, ಗಮನ, ಸಂಚಾರ. 4. ಮೊರಟೆಗಿಡ. चार स्वार्थे "कः"। 5. ಕಾರಾಗಾರ, ಸೆರೆಮನೆ. "चारकः पालकेऽश्वादेः स्यात् संचारकबन्धयोः" मेदि०।

**चारकीण ಚಾರಕೀಣ** (वि०) ಸಂಚರಿಸುವವನಿಗೆ ಹಿತವಾದ. चरकाय हितम् "खञ्" (५-१-११)।

**चारचक्षुस् ಚಾರಚಕ್ಷುಸ್** (वि०) ಗೂಢಚಾರನೇ ಕಣ್ಣಾಗಿ ಉಳ್ಳವನು. चारः चक्षुर्यस्य। "क्रियासु युक्तैर्नृप चारचक्षुषो न वञ्चनीयाः प्रभवोऽनुजीविभिः" किरा० १-४।

**चारचुञ्चु ಚಾರಚುಂಚು, -चण -ಚಣ** (वि०) ಸಂಚಾರದಲ್ಲಿ ಸಮರ್ಥನಾದ, ನಡೆಯುವುದರಲ್ಲಿ ದಕ್ಷನಾದ. चारेण वित्तः "चुञ्चुप्" "चणप्" वा (५-२-२६)।

**चारटिका ಚಾರಟಿಕಾ** (स्त्री०) ನೀಲಿಗಿಡ.

**चारटी ಚಾರಟೀ** (स्त्री०) ಕಾಶ್ಮೀರ ದೇಶದ ಬೆಟ್ಟದಾವರೆ. "चारटी पद्मचारिणी" अम०।

**चारण ಚಾರಣ** (पुं०) 1. ಕೀರ್ತಿಯನ್ನು ಹರಡುವ ಸ್ತುತಿ ಪಾಠಕ. चारयति कीर्तिम् — चर + णिच् "ल्युः" (३-१-१३४)। "गन्धर्वाणां ततो लोकः परतः शतयोजनात्। देवानां गायनास्ते च चारणाः स्तुतिपाठकाः" पाद्मपु०। 2. ಗೂಢಚಾರ, ಪರರಾಷ್ಟ್ರಗಳ ರಹಸ್ಯಗಳನ್ನು ತಿಳಿದು ರಾಜನಿಗೆ ವರದಿ ಮಾಡುವ ಬೇಹುಕಾರ. "अन्तर्बहिश्च भूतानां पश्यन् कर्माणि चारणैः। उदासीन इवाध्यक्षो वायुरात्मेव देहिनाम्" भाग० ४-१६-१२। 3. ದೇವಗಾಯಕ, ಗಂಧರ್ವ. **-णा -ಣಾ.** ಗಂಧರ್ವ ಹೆಂಗಸು. (वि०)4. ಒಂದೇ ವೇದಶಾಖೆಗೆ ಸೇರಿದ.

**चारमिक ಚಾರಮಿಕ** (पुं०) ಗ್ರಂಥಪೂರ್ತಿ ಅಧ್ಯಯನ ಮಾಡಿದವನು, ಸಂಪೂರ್ಣ ವೇದಾಧ್ಯಯನ ಮಾಡಿದವನು. चरममधीते "ठक्" (४-२-६२)।

**चारित्र ಚಾರಿತ್ರ** (न०) 1. ಸ್ವಭಾವ, ಶೀಲ, ನಡತೆ. चर (गतौ) "णित्रन् (उ० ४-१७१)। "कुलाक्रोशकरं लोके धिक् ते चारित्रमीदृशम्" रामा०। 2. ವಂಶ ಕ್ರಮಾಗತವಾದ ಆಚಾರ, ಸಂಪ್ರದಾಯ. "चारित्रं यैन नो लोके दूषितं दूषितात्मना" हरिवं०। 3. ಚರಿತ್ರೆ, ವೃತ್ತಾಂತ. चरित्रमेव — स्वार्थे "अण्" (५-४-३८)। (पुं०) 4. ಮರುತ್ವಂತರಾಜನ ಒಬ್ಬ ಮಗ.

**चारित्रा ಚಾರಿತ್ರಾ** (स्त्री०) ಹುಣಿಸೆಮರ.

**चारित्रिन् ಚಾರಿತ್ರಿನ್** (वि०) ಒಳ್ಳೆಯ ನಡತೆಯುಳ್ಳ, ಒಳ್ಳೆಯ ಸ್ವಭಾವದ. चारित्रमस्यास्ति "इनिः" (५-२-११५)।

**चारित्र्य ಚಾರಿತ್ರ್ಯ** (न०) ಒಳ್ಳೆಯ ನಡತೆ, ಒಳ್ಳೆಯ ಸ್ವಭಾವ. चरित्र स्वार्थे "ष्यञ्" (वा० ५-१-१२४)।

**चारिन् ಚಾರಿನ್** (वि०) 1. ಸಂಚರಿಸುವ, ನಡೆಯುವ. चरति — चर (गतौ) "णिनिः" (३-१-१३४)। "सङ्गमाय निशि गूढचारिणं चारदूतिकथितं पुरोगताः" रघु० १९-३३। 2. ಮಾಡುವ, ಆಚರಿಸುವ. 3. ಪದಾತಿ, ಕಾಲಾಳು, ಪಾದಚಾರಿ. स्त्रियाम् "ङीप्" (४-१-५)। **चारिणी ಚಾರಿಣೀ.**

**चारी ಚಾರೀ** (स्त्री०) ನೃತ್ಯದಲ್ಲಿ ಒಂದು ವಿಧ, ಶೃಂಗಾರ ಮೊದಲಾದ ರಸಗಳ ಭಾವೋದ್ದೀಪಕವಾದ ಒಂದು ವಿಧ ನೃತ್ಯ. "न हि चारीं विना नृत्ये नृत्यस्याङ्गं प्रवर्तते। शृङ्गारादिरसानान्तु भावोद्दीपनकारिकाम्। माधुर्योद्धतंना नृत्ये चारी चारुगतिर्मता" सं० दा०।

**चारु ಚಾರು** (पुं०) 1. ಗುರು, ಬೃಹಸ್ಪತಿ. चरति चित्ते— चर (गतौ) "ञुण्" (उ० १-३)। 2. ಕೃಷ್ಣನ ಒಬ್ಬ ಮಗ. "चारुचन्द्रो विचारुश्च चारुश्च दशमो हरेः" भाग० १०-६१-९। (न०)3. ಕುಂಕುಮಕೇಸರಿ. (वि०) 4. ಸುಂದರವಾದ, ಮನೋಹರವಾದ, ರಮಣೀಯವಾದ. "चकासतं चारुचमूरुचर्मणा कुथेन नागेन्द्रमिवेन्द्रवाहनम्" माघ० १-८। स्त्रियाम् वा "ङीष्" (४-१-४४)। **चार्वी ಚಾರ್ವೀ. चारुः ಚಾರುಃ.** "प्राशंसि संसद्गुरुणापि चार्वी चार्वाकतासर्वविदूषकेण" नैष० १०-५८। (अव्य०) 5. ಸುಂದರವಾಗಿ, ಮನೋಹರವಾಗಿ, ಅಂದವಾಗಿ.

**चारुगर्भ ಚಾರುಗರ್ಭ, -गुप्त -ಗುಪ್ತ** (पुं०) ಕೃಷ್ಣನ ಒಬ್ಬ ಮಗ.

**चारुचित्र ಚಾರುಚಿತ್ರ** (पुं०) ಧೃತರಾಷ್ಟ್ರನ ಒಬ್ಬ ಮಗ.

**चारुता ಚಾರುತಾ** (स्त्री०) ಮನೋಹರವಾಗಿರುವಿಕೆ, ಸುಂದರವಾಗಿರುವಿಕೆ. "चारुता वपुरभूषयदासाम्" माघ० १०-३३।

**चारुधारा ಚಾರುಧಾರಾ** (स्त्री०) ಇಂದ್ರನ ಪತ್ನಿ, ಶಚೀದೇವಿ. चार्वी धारास्याः। "पृतनाषाट् प्रियात्वस्य चारुधारा शतावरी" त्रिकाण्ड०।

**चारुनेत्र ಚಾರುನೇತ್ರ, -लोचन -ಲೋಚನ** (पुं०) 1. ಜಿಂಕೆ, ಚಿಗರಿ. चारु मनोहरं नेत्रमस्य। "एणः कुरङ्गमो रिश्यः सादृश्यश्चारुलोचनः" त्रिकाण्ड०। (वि०) 2. ಸುಂದರವಾದ ಕಣ್ಣುಗಳುಳ್ಳ. (स्त्री०) **-नेत्रा -ನೇತ್ರಾ.** 3. ಒಬ್ಬ ಅಪ್ಸರಸ್ಸು.

**चारुफला ಚಾರುಫಲಾ** (स्त्री०) ದ್ರಾಕ್ಷಾಲತೆ.

**चारुबाहु ಚಾರುಬಾಹು, -भद्र -ಭದ್ರ** (पुं०) ಕೃಷ್ಣನ ಒಬ್ಬ ಮಗ.

**चारुमती ಚಾರುಮತೀ** (स्त्री०) ಕೃಷ್ಣನ ಒಬ್ಬ ಮಗಳು.

**चारुयशस् ಚಾರುಯಶಸ್** (पुं०) ಕೃಷ್ಣನ ಒಬ್ಬ ಮಗ.

**चारुवक्त्र ಚಾರುವಕ್ತ್ರ** (वि०) ಸುಂದರವಾದ ಮುಖವುಳ್ಳ. चारु वक्त्रं यस्य।

**चारुवेष ಚಾರುವೇಷ** (वि०) ಸುಂದರವಾದ ಉಡುಪನ್ನು ಧರಿಸಿರುವ.

**चारुव्रता ಚಾರುವ್ರತಾ** (स्त्री०) ಒಂದು ತಿಂಗಳ ಕಾಲ ಉಪವಾಸಮಾಡುವ ಹೆಂಗಸು. चारु व्रतमस्याः। "राद्धं सिद्धमथो चारुव्रता मासोपवासिनी" त्रिकाण्ड०।

**चारुशिला ಚಾರುಶಿಲಾ** (स्त्री०) ರತ್ನ, ಮಣಿ. "रत्नं चारुशिला मणिः" त्रिकाण्ड०।

**चारुहासिन् ಚಾರುಹಾಸಿನ್** (वि०) ಸೊಗಸಾಗಿ ನಗುವ, ಮಧುರವಾಗಿ ನಗುವ. चारु हसति — हसे (हसने) "णिनिः" (३-२-७८)। स्त्रियाम् "ङीप्" (४-१-५)। **-हासिनी -ಹಾಸಿನೀ.**

**चारुहासिनी ಚಾರುಹಾಸಿನೀ** (स्त्री०) ವೃತ್ತರತ್ನಾಕರೋಕ್ತವಾದ ವೈತಾಳೀಯಛಂದಸ್ಸಿನ ಒಂದು ಭೇದ. **ಇದರ ಲಕ್ಷಣ:** "अयुग्भवा चारुहासिनी" वृ० र०। ಪ್ರವೃತ್ತಕವೃತ್ತದ ವಿಷಮಪಾದಗಳ ಲಕ್ಷಣವು ನಾಲ್ಕು ಪಾದಗಳಲ್ಲಿಯೂ ಇದ್ದರೆ "चारुहासिनी" ವೃತ್ತವಾಗುವುದು. ಅಂದರೆ ನಾಲ್ಕು ಪಾದಗಳಲ್ಲಿಯೂ ಮೊದಲು ಆರು ಮಾತ್ರೆಗಳೂ ಅನಂತರ 'र' ಗಣ ಲಘು ಗುರುಗಳೂ ಇದ್ದು ಎರಡನೆಯ ಮಾತ್ರೆಯು ಮೂರನೆಯ ಮಾತ್ರೆಯೊಡನೆ ಸೇರಿದ್ದು ಉಳಿದೆಲ್ಲ ಲಕ್ಷಣವೂ ವೈತಾಳೀಯದಂತಿರಬೇಕು. ಉದಾ.:

"कराम्बुजैरक्षमालिकां
शुकं लिपिं मुद्रिकां पराम्।
प्रबिभ्रती ब्रह्मवल्लभा
भवेत्पुरश्चारुहासिनी॥"

**चार्चिक ಚಾರ್ಚಿಕ** (वि०) ವೇದದ ಆವೃತ್ತಿಯಲ್ಲಿ ನಿಷ್ಣಾತನಾದವನು, ವೇದವನ್ನು ಪುನಃ ಪುನಃ ಹೇಳಿ ಅಭ್ಯಾಸಮಾಡಿದವನು ಮತ್ತು ತಿಳಿದವನು. चर्चामधीते वेद वा "ठक्" (४-२-६०)।

**चार्चिक्य ಚಾರ್ಚಿಕ್ಯ** (न०) ಗಂಧ ಮೊದಲಾದುವನ್ನು ಮೈಗೆ ಲೇಪನ ಮಾಡುವುದು. चर्चिकैव — स्वार्थे "ष्यञ्" (वा० ५-१-१२४)।

**चार्म ಚಾರ್ಮ** (पुं०) ಚರ್ಮದಿಂದ ಹೊದಿಸಲ್ಪಟ್ಟ ರಥ. चर्मणा परिवृतो रथः "अण्" (४-२-१०)।

**चार्मण ಚಾರ್ಮಣ** (न०) ಚರ್ಮಗಳ ಸಮೂಹ, ತೊಗಲಿನ ರಾಶಿ. चर्मणां समूहः "अण्" (४-२-३८)।

**चार्मिक ಚಾರ್ಮಿಕ** (वि०) ಚರ್ಮದಿಂದ ತಯಾರಿಸಲ್ಪಟ್ಟ. चर्मणा निर्वृत्तः "ठक्" (५-१-७९)। "चर्मचार्मिकभाण्डेषु काष्ठलोष्टमयेषु च" मनु० ८-२८९।

**चार्मिण ಚಾರ್ಮಿಣ** (न०) ಗುರಾಣಿ ಹಿಡಿದಿರುವವರ ಗುಂಪು. चर्मिणां समूहः "अण्" (४-२-३७)।

**चार्वाक ಚಾರ್ವಾಕ** (पुं०) 1. ಬೃಹಸ್ಪತಿಯ ಶಿಷ್ಯ, ನಾಸ್ತಿಕಮತಪ್ರವರ್ತಕ, ದೇಹಾತ್ಮವಾದಮತಸ್ಥಾಪಕ. चारुः लोकसंमतो वाको वाक्यं यस्य। पृषो०। 2. ದುರ್ಯೋಧನನ ಒಬ್ಬ ಸ್ನೇಹಿತ, ಒಬ್ಬ ರಾಕ್ಷಸ.

**चार्वाकदर्शन ಚಾರ್ವಾಕದರ್ಶನ** (न०) ನಾಸ್ತಿಕವಾದವನ್ನು ಪ್ರತಿಪಾದಿಸುವ ಚಾರ್ವಾಕ ಮತ. ಈ ದರ್ಶನವು ಉಳಿದೆಲ್ಲಾ ದರ್ಶನಗಳಿಗಿಂತಲೂ ಮೊದಲನೆಯದು ಮತ್ತು ಎಲ್ಲಾ ದರ್ಶನಗಳಿಗೂ ವಿರುದ್ಧವಾದುದು. ಬೃಹಸ್ಪತ್ಯಾಚಾರ್ಯರು ಈ ದರ್ಶನಕ್ಕೆ ಸೂತ್ರಗಳನ್ನು ಬರೆದಿರುತ್ತಾರೆ. ಈ ಸೂತ್ರಗಳಿಗೆ ಭಾಷ್ಯವನ್ನು ಬರೆದವರು ಚಾರ್ವಾಕರೆಂಬ ಒಬ್ಬ ವಿದ್ವಾಂಸರು. "तदेतदस्मदभिप्रायानुबन्धिना बृहस्पतिना प्रणीय चार्वाकाय समर्पितम्" प्रबोध० २। ಈ ದರ್ಶನವು ಲೋಕದಲ್ಲೆಲ್ಲಾ ಹರಡಿರುವುದರಿಂದ ಇದಕ್ಕೆ ಲೋಕಾಯತಮತವೆಂದು ಹೆಸರಾಗಿದೆ. ಈ ಮತದಲ್ಲಿ ದೇಹಕ್ಕಿಂತಲೂ ಬೇರೆ ಆತ್ಮನಿಲ್ಲ. ಜನ್ಮಾಂತರವಿಲ್ಲ. ಪುಣ್ಯಪಾಪಗಳೆಂಬ ಅದೃಷ್ಟವೂ ಇಲ್ಲ. ಪರ

ಲೋಕವೂ ಪರಮಾತ್ಮನೂ ಇಲ್ಲವೆಂದು ಹೇಳುವುದರಿಂದ ಇದು ನಾಸ್ತಿಕಮತವೆಂದು ಪ್ರಸಿದ್ಧವಾಗಿದೆ. ಈ ಮತದವರಿಗೆ ಪ್ರತ್ಯಕ್ಷವೇ ಪ್ರಮಾಣ. ಪ್ರತ್ಯಕ್ಷವಲ್ಲದ ವಸ್ತುಗಳನ್ನು ಇವರು ನಂಬುವುದಿಲ್ಲ. ಪುಣ್ಯ ಪಾಪಗಳಿಂದ ಸುಖ ದುಃಖಗಳುಂಟಾಗುವುದಿಲ್ಲ. ಸುಖ ದುಃಖಗಳಿಗೆ ಆಯಾ ವಸ್ತುಗಳ ಸ್ವಭಾವವೇ ಕಾರಣವೆಂದು ಇವರು ಹೇಳುತ್ತಾರೆ.

**ಈ ಮತದ ಸಿದ್ಧಾಂತವಿದು:** सर्वथा लोकायतमेव शास्त्रम्। प्रत्यक्षमेव प्रमाणम्। पृथिव्यप्तेजोवायवस्तत्त्वानि। अर्थकामौ पुरुषार्थौ। भूतान्येव चेतयन्ते। नास्ति परलोकः। मृत्युरेवापवर्गः। ಪ್ರತ್ಯಕ್ಷವಾಗಿರುವ ಪೃಥಿವಿ, ಅಪ್ಪು, ತೇಜಸ್ಸು ಮತ್ತು ವಾಯು ಈ ನಾಲ್ಕು ಮಾತ್ರ ತತ್ತ್ವಗಳು. ಇವುಗಳ ಪರಿಣಾಮದಿಂದಲೇ ಮನುಷ್ಯಾದಿಶರೀರಗಳು ಉತ್ಪನ್ನವಾಗುವುವು. ಇದೇ ಪ್ರಪಂಚ. ಅರ್ಥಕಾಮಗಳು ಎರಡು ಮಾತ್ರ ಪುರುಷಾರ್ಥಗಳು. ಮರಣವೇ ಮೋಕ್ಷ. ಮುಕ್ತಿಗೆ ಜ್ಞಾನವು ಕಾರಣವಲ್ಲ. ಸುಖವೇ ಸ್ವರ್ಗ. ದುಃಖವೇ ನರಕ ಎಂಬುದು ಇವರ ಮತ. "अङ्गनालिङ्गनाज्जन्यसुखमेव पुमर्थता। कण्टकादिव्यथाजन्यं दुःखं निरय उच्यते। लोकसिद्धो भवेद्राजा परेशो नापरः स्मृतः। देहस्य नाशो मुक्तिस्तु न ज्ञानान्मुक्तिरिष्यते। अथ चत्वारि भूतानि भूमिवार्यनिलानलाः। अहं स्थूलः कृशोऽस्मीति सामानाधिकरण्यतः। देहः स्थौल्यादियोगाच्च स एवात्मा न चापरः। मम देहोऽयमित्युक्तिः संभवेदौपचारिकी।" ಇವರು, ದುಃಖಕ್ಕೆ ಹೆದರಿ ಪ್ರಾಪ್ತವಾದ ಸುಖವನ್ನು ತ್ಯಜಿಸುವುದು ಮೂರ್ಖತನವೆನ್ನುವರು. "त्याज्यं सुखं विषयसंगमजन्म पुंसां दुःखोपसृष्टमिति मूर्खविचारणैषा। व्रीहीन् जिहासति सितोत्तमतण्डुलाढ्यान् को नाम भोस्तुषकणोपहितान् हितार्थी" स० द० सं०। ಯಜ್ಞಯಾಗಗಳು ವೇದಗಳು ಸಂನ್ಯಾಸ ಮುಂತಾದುವು ಬುದ್ಧಿ ಮತ್ತು ಸಾಮರ್ಥ್ಯವಿಲ್ಲದವರಿಗೆ ಕೇವಲ ಜೀವನಸಾಧನಗಳೆಂದು ಈ ಮತದವರ ಅಭಿಪ್ರಾಯ. "अग्निहोत्रं त्रयो वेदाः त्रिदण्डं भस्मगुण्ठनम्। प्रज्ञापौरुषहीनानां जीविकेति बृहस्पतिः" प्रबोध० २-२६।

**चार्वाकमत ಚಾರ್ವಾಕಮತ** (न०) "चार्वाकदर्शन" ಪದದ ಅರ್ಥ.

**चार्वी ಚಾರ್ವೀ** (स्त्री०) 1. ಸುಂದರಿಯಾದ ಹೆಂಗಸು. 2. ಚಂದ್ರಿಕೆ, ಬೆಳದಿಂಗಳು, 3. ಬುದ್ಧಿ. "बुद्धिः पण्डा विदा चार्वी" त्रिकाण्ड०। 4. ಕುಬೇರನ ಪತ್ನಿ. "चार्वी तु शोभनाबुद्धयोर्ज्योत्स्नाधनदभार्ययोः" मेदि०। 5. ದೀಪ್ತಿ, ಪ್ರಕಾಶ, ಬೆಳಕು. चारु "ङीप्" (४-१-४४)।

**चाल ಚಾಲ** (पुं०) 1. ಮನೆಯ ಮೇಲಿನ ಆವರಣ, ಮನೆಯ ಹೊದಿಕೆ. चल (कम्पने) "णः" (३-१-१४०)। 2. ಚಲನ, ಹೊರಡುವುದು. चल भावे "घञ्" (३-३-१८)। 3. ಹೊರಡಿಸುವಿಕೆ. चल+णिच् "अच्" (३-१-१३४)।

**चालक ಚಾಲಕ** (पुं०) 1. ಮದಿಸಿದ ಆನೆ, ಅಂಕುಶಕ್ಕೂ ಅಡಗದ ಆನೆ. "गम्भीरवेद्यंकुशदुर्धरः। चालको व्यालको" त्रिकाण्ड०। 2. ನಡೆಸುವವನು, ಮುಂದೆ ಸಾಗಿಸುವವನು. चल (कम्पने) "ण्वुल्" (३-१-१३३)।

**चालन ಚಾಲನ** (न०) 1. ಹೊರಡಿಸುವುದು. 2. ಬೇರೆ ಕಡೆಗೆ ಒಯ್ಯುವುದು. 3. ಕದಲಿಸುವುದು, ಅಲುಗಾಡಿಸುವುದು. चल (कम्पने) + णिच् "ल्युट्" (३-३-११५)। 4. ಅಲ್ಲಾಡಿಸುವುದು. "लाङ्गूलचालनमधश्चरणावघातं भूमौ निपत्य वदनोदरदर्शनं च। श्वा पिण्डदस्य कुरुते गजपुंगवस्तु धीरं विलोकयति चाटुशतैश्च भुङ्क्ते" भर्तृ० १-२३। (न०) 5. ಒಂದರಿ, ಜಲ್ಲಡೆ. चल + णिच् कर० "ल्युट्" (३-३-११७)।

**चालनी ಚಾಲನೀ** (स्त्री०) ಒಂದರಿ, ಜಲ್ಲಡೆ. चाल्यतेऽनेन—चल (कम्पने) + णिच् कर० "ल्युट्" (३-३-११७)।

**चालनीय ಚಾಲನೀಯ** (वि०) 1. ಒಂದರಿ ಆಡಲು ಯೋಗ್ಯವಾದ, ಶುದ್ಧಿಮಾಡಲು ತಕ್ಕುದಾದ, ಜಲ್ಲಡೆ ಹಿಡಿಯಬಹುದಾದ. चल (कम्पने) + णिच् "अनीयर्" (३-१-९६)। 2. ಕದಲಿಸಲ್ಪಡುವ, ಕದಲಿಸಲು ಅರ್ಹವಾದ. 3. ಅಲುಗಾಡಿಸಲು ಶಕ್ಯವಾದ. "तव्यः"। **चालयितव्यः ಚಾಲಯಿತವ್ಯಃ.**

**चालयत् ಚಾಲಯತ್** (वि०) 1. ಹೊರಡಿಸುತ್ತಿರುವ. 2. ಕದಲಿಸುತ್ತಿರುವ, ಅಲುಗಾಡಿಸುತ್ತಿರುವ. चल (कम्पने) +णिच् "शतृ" (३-२-१२४)। 3. ಅಲ್ಲಾಡಿಸುತ್ತಿರುವ. 4. ಒಂದರಿ ಆಡಿಸುತ್ತಿರುವ. स्त्रियाम् "ङीप्" (४-१-६)। **–यन्ती –ಯಂತೀ.** "इति चालयन्नचलसानुवनगहनजानुमापतिः" किरा० १२-५२।

**चाल्य ಚಾಲ್ಯ** (वि०) "चालनीय" ಪದದ ಅರ್ಥ. चल (कम्पने) "ण्यत्" (३-१-१२४)। "क्ष्मां वामनेन जगृहे त्रिपदच्छलेन याच्ञामृते पथि चरन् प्रभुभिर्न चाल्यः" भाग० २-७-१७।

**चाष ಚಾಷ** (पुं०) ಹಂಗನಹಕ್ಕಿ. चाषयति—चष (भक्षणे) +णिच् "अच्" (३-१-१३४)। स्त्रियाम् जाति० "ङीष्" (४-१-६३)। **चाषी ಚಾಷೀ.**

**चिक ಚಿಕ** (पुं०) ಮೂಗಿಲಿ, ದುರ್ವಾಸನೆಯ ಇಲಿ. "स्याच्चिको वेश्मनकुलः पुंवृषो गन्धमूषिकः" त्रिकाण्ड०।

**चिकर्तिषा ಚಿಕರ್ತಿಷಾ** (स्त्री०) ಕತ್ತರಿಸಲು ಅಪೇಕ್ಷೆ. कर्तितुमिच्छा—कृती (छेदने) + सन् "अः" (३-३-१०२)।

**चिकर्तिषु ಚಿಕರ್ತಿಷು** (वि०) ಕತ್ತರಿಸಲು ಅಪೇಕ್ಷೆಯುಳ್ಳವನು. कर्तितुमिच्छुः—कृती (छेदने) + सन् "उः" (३-२-१६८)। "प्रभुर्बुभूषुर्भुवनत्रयस्य यः शिरोऽतिरागाद्दशमं चिकर्तिषुः" माघ० १-४९।

**चिकित्सक ಚಿಕಿತ್ಸಕ** (पुं०) ವೈದ್ಯ. कित (रोगापनयने) + सन् "ण्वुल्" (३-१-१३३)। "पूयं चिकित्सकस्यान्नं पुंश्चल्यास्त्वन्नमिन्द्रियम्" मनु० ४-२२०।

**चिकित्सा ಚಿಕಿತ್ಸಾ** (स्त्री०) ವ್ಯಾಧಿಯ ಪ್ರತೀಕಾರ, ರೋಗವನ್ನು ವಾಸಿಮಾಡುವ ಕಾರ್ಯ. कित (रोगापनयने) + सन् "अः" (३-३-१०२)। "या क्रिया व्याधिहरणी सा चिकित्सा निगद्यते" भावप्र०। भावे "ल्युट्" (३-३-११५)। **चिकित्सनम् ಚಿಕಿತ್ಸನಮ್.** ಚಿಕಿತ್ಸೆ ಮಾಡುವ ವೈದ್ಯನು ಮೊದಲು ವ್ಯಾಧಿಯ ಸ್ವರೂಪವನ್ನು ತಿಳಿದು ಚಿಕಿತ್ಸೆಯನ್ನು ಪ್ರಾರಂಭಿಸಬೇಕು. "रोगमादौ परीक्षेत ततोऽनन्तरमौषधम्। ततः कर्म भिषक् पश्चात् ज्ञानपूर्वं समाचरेत्"। ಔಷಧವನ್ನು ತಯಾರಿಸಲು ಮಾತ್ರ ತಿಳಿದು ವ್ಯಾಧಿಯ ಸ್ವರೂಪವನ್ನು ತಿಳಿಯದೆ ಚಿಕಿತ್ಸೆ ಮಾಡುವವನು ಶಿಕ್ಷಾರ್ಹನಾಗುವನು. "भेषजं केवलं कर्तुं यो जानाति न चामयम्। वैद्यकर्म स चेत् कुर्याद्वधमर्हति राजतः"। ರೋಗ ಸ್ವರೂಪವನ್ನು ಮಾತ್ರ ತಿಳಿದು ಔಷಧ ಪರಿಜ್ಞಾನವಿಲ್ಲದ ವೈದ್ಯನನ್ನು ಆಶ್ರಯಿಸುವುದು ನಾವಿಕನಿಲ್ಲದ ಹಡಗನ್ನು ಆಶ್ರಯಿಸಿದಂತಾಗುವುದು. "यस्तु केवलरोगज्ञः भेषजेष्वविचक्षणः। तं वैद्यं प्राप्य रोगी स्यात् यथा नौर्नाविकं विना"। ವ್ಯಾಧಿಯ ಸ್ವರೂಪವನ್ನು ತಿಳಿದ ಮತ್ತು ಚಿಕಿತ್ಸೆಯ ದೇಶಕಾಲ ಪರಿಜ್ಞಾನವನ್ನು ಹೊಂದಿರುವ ಔಷಧನಿರ್ಮಾಣದಲ್ಲಿ ನಿಪುಣನಾದ ವೈದ್ಯನ ಚಿಕಿತ್ಸೆಯು ಸಂಶಯವಿಲ್ಲದೆ ಸಿದ್ಧಿ ಹೊಂದುವುದು. "यस्तु रोगविशेषज्ञः सर्वभैषज्यकोविदः। देशकालविभागज्ञः तस्य सिद्धिर्न संशयः"। ಯಾವ ಚಿಕಿತ್ಸೆಯಿಂದ ಶರೀರದಲ್ಲಿ ಧಾತುಗಳು ಸಮಸ್ಥಿತಿಗೆ ಬರುವುವೋ ಅದು ಸರಿಯಾದ ಚಿಕಿತ್ಸೆಯೆನಿಸುವುದು, "याभिः क्रियाभिर्जायन्ते शरीरे धातवः समाः। सा चिकित्सा विकाराणां कर्म तद्भिषजां मतम्"। ಶರೀರದಲ್ಲಿ ಉಂಟಾಗಿರುವ ವ್ಯಾಧಿಯನ್ನು ಶಮನಗೊಳಿಸಿ ಬೇರೆ ವ್ಯಾಧಿಯನ್ನು ಉಂಟುಮಾಡದಿರುವುದೇ ಸರಿಯಾದ ಚಿಕಿತ್ಸೆ. ವ್ಯಾಧಿಯೊಂದನ್ನು ವಾಸಿಮಾಡಿ ಮತ್ತೊಂದು ವ್ಯಾಧಿಯನ್ನುಂಟುಮಾಡುವ ಚಿಕಿತ್ಸೆಯು ಸರಿಯಾದುದಲ್ಲ. "या ह्युदीर्णं शमयति नान्यं व्याधिं करोति च। सा क्रिया न तु या व्याधिं हरत्यन्यमुदीरयेत्" भावप्र०।

**चिकित्सित ಚಿಕಿತ್ಸಿತ** (वि०) 1. ರೋಗಕ್ಕೆ ಪ್ರತೀಕಾರ ಮಾಡಲ್ಪಟ್ಟ, ರೋಗ ವಾಸಿಮಾಡಲ್ಪಟ್ಟ. कित (रोगापनयने) + सन् कर्म० "क्तः" (३-२-१०२)। (न०) 2. ವ್ಯಾಧಿಯ ಪ್ರತೀಕಾರ, ರೋಗವನ್ನು ವಾಸಿಮಾಡುವ ಕಾರ್ಯ. भावे "क्तः" (३-३-११४)। "आदावन्ते रुजां ज्ञाने प्रयतेत चिकित्सकः। भेषजानां विधानेन ततः कुर्याच्चिकित्सितम्" भावप्र०।

**चिकित्सु ಚಿಕಿತ್ಸು** (वि०) ವ್ಯಾಧಿಯ ಪ್ರತೀಕಾರ ಮಾಡುವವನು, ರೋಗ ವಾಸಿಮಾಡಲು ಔಷಧೋಪಚಾರ ಮಾಡುವವನು. कित (रोगापनयने) + सन् "उः" (३-२-१६८)। "स्मारं ज्वरं घोरमपत्रपिष्णोः सिद्धागदंकारचये चिकित्सौ" नैष० ३-१११।

**चिकित्स्य ಚಿಕಿತ್ಸ್ಯ** (वि०) ಚಿಕಿತ್ಸೆ ಹೊಂದಲು ಅರ್ಹನಾದ (ರೋಗಿ), ಚಿಕಿತ್ಸೆಮಾಡಲು ಅರ್ಹವಾದ (ರೋಗ). "अन्धोऽचिकित्स्यरोगाद्या भर्तव्या स्युर्निरंशकाः" याज्ञ० २-१४०।

**चिकीर्षक ಚಿಕೀರ್ಷಕ** (वि०) (ಕಾರ್ಯವನ್ನು) ಮಾಡಲು ಅಪೇಕ್ಷಿಸುವ.

**चिकीर्षा ಚಿಕೀರ್ಷಾ** (स्त्री०) (ಕಾರ್ಯವನ್ನು) ಮಾಡಲು ಅಪೇಕ್ಷೆ. कर्तुमिच्छा — डु कृञ् (करणे) + सन् "अः" (३-२-१०२)।

**चिकीर्षित ಚಿಕೀರ್ಷಿತ** (न०) 1. ಉದ್ದೇಶ, ಮನೋಗತ, ಮಾಡಲು ಇಚ್ಛೆ. कर्तुमिच्छा – डु कृञ् (करणे) + सन् भावे "क्तः" (३-३-११४)। "यादृशोऽस्य भवेदात्मा यादृशं च चिकीर्षितम्" मनु० ४-२५४। (वि०) 2. ಮಾಡಲು ಅಪೇಕ್ಷಿಸಲ್ಪಟ್ಟ. कर्तुमिष्टः— डु कृञ्+सन् कर्म० "क्तः" (३-२-१०२)।

**चिकीर्षु ಚಿಕೀರ್ಷು** (वि०) (ಕಾರ್ಯವನ್ನು) ಮಾಡಲು ಅಪೇಕ್ಷಿಸುವ. कर्तुमिच्छुः— डु कृञ् (करणे) + सन् "उः" (३-२-१६८)। "ततो गाण्डीवनिर्मुक्ता निरमित्रं चिकीर्षवः" भा० विरा० ६३-३०।

**चिकुर ಚಿಕುರ** (पुं०) 1. ಕೇಶಪಾಶ, ತಲೆಯ ಕೂದಲು. चि इत्यव्यक्तं कुरति—कुर (शब्दे) "कः" (३-१-१३५)। "इति स चिकुरादारभ्यैनां नखावधि वर्णयन् हरिणरमणीनेत्रां चित्राम्बुधौ तरदन्तरः" नैष० ७-१०९। 2. ಶೈಲ, ಪರ್ವತ, ಬೆಟ್ಟ. 3. ಮನೆಯಲ್ಲಿ ಸಾಕಿದ ಮುಂಗುಸಿ. 4. ಸರ್ಪ, ಹಾವು. 5. ಒಂದು ಜಾತಿಯ ಪಕ್ಷಿ. 6. ಒಂದು ವೃಕ್ಷ. (वि०) 7. ಚಂಚಲವಾದ. 8. ವಿಮರ್ಶೆಯಿಲ್ಲದೆ ಕಾರ್ಯ ಮಾಡುವ, ದುಡುಕುವ. "चिकुरोऽह्नौ गृहबभ्रौ केशे चञ्चलशैलयोः। पक्षिवृक्षभिदोश्चापि" हेम०।

**चिकुरपक्ष ಚಿಕುರಪಕ್ಷ, -पाश -ಪಾಶ, -प्रकर -ಪ್ರಕರ, -हस्त -ಹಸ್ತ** (पुं०) ಕೇಶಪಾಶ, ತಲೆಯ ಕೂದಲಿನ ಸಮೂಹ. "पाशः पक्षश्च हस्तश्च कलापार्थाः कचात् परे" अम०। "चिकुरप्रकरा जयन्ति ते विदुषी मूर्धनि सा बिभर्ति यान्" नैष० २-२०।

**चिकूर ಚಿಕೂರ** (पुं०) "चिकुर" ಪದದ ಅರ್ಥ.

**चिक्कण ಚಿಕ್ಕಣ** (पुं०) 1. ಅಡಕೆಮರ. (न०) 2. ಅಡಕೆ. (वि०) 3. ನುಣುಪಾದ, ನಯವಾದ. चिती (संज्ञाने) "कणः" धातोः कश्च (उ० ४-१७६)। बाहु० गुणाभावः। "चिक्कणं मसृणं स्निग्धम्" अम०। (स्त्री०) -णा -ಣಾ. ನುಣುಪಾದ ಕೂದಲುಳ್ಳ ಹಸು, ಶ್ರೇಷ್ಠವಾದ ಆಕಳು.

**चिक्रंसा ಚಿಕ್ರಂಸಾ** (स्त्री०) ಆಕ್ರಮಿಸಲು ಆಸೆ, ಹಿಡಿಯಲು ಇಚ್ಛೆ. क्रमितुमिच्छा क्रमु (पादविक्षेपे) + सन् "अः" (३-३-१०२)। "चिक्रंसया कृत्रिमपत्रिपङ्क्तेः कपोतपालीषु निकेतनानाम्" माघ० ३-५१।

**चिक्रंसु ಚಿಕ್ರಂಸು** (वि०) ಆಕ್ರಮಿಸಲು ಅಪೇಕ್ಷೆಪಡುವ, ಹಿಡಿಯಲು ಇಚ್ಛಿಸುವ. क्रमितुमिच्छुः — क्रमु (पादविक्षेपे) + सन् "उः" (३-२-१६८)।

**चिक्रीडिषा ಚಿಕ್ರೀಡಿಷಾ** (स्त्री०) ಆಟವಾಡಲು ಅಪೇಕ್ಷೆ, ಆಟವಾಡಲು ಆಸೆ. "क्रीडितुमिच्छा—क्रीड् (विहारे) + सन् "अः" (३-३-१०२)। "क्रीडायामुद्यमोऽर्भस्य कामश्चिक्रीडिषान्यतः" भाग० ३-७-३।

**चिक्रीडिषु ಚಿಕ್ರೀಡಿಷು** (स्त्री०) ಆಟವಾಡಲು ಅಪೇಕ್ಷಿಸುವ, ಆಟವಾಡಲು ಆಸೆಪಡುವ. क्रीडितुमिच्छुः—क्रीड् (विहारे) + सन् "उः" (३-२-१६८)।

**चिक्रोड ಚಿಕ್ರೋಡ** (पुं०) ಅಳಿಲು, ಇಣಚಿ. "अथ चिक्रोड स्तालको रोमशीति च" वैज०।

**चिखादिषा ಚಿಖಾದಿಷಾ** (स्त्री०) ತಿನ್ನಲು ಅಪೇಕ್ಷೆ, ಭಕ್ಷಿಸಲು ಆಸೆ. खादितुमिच्छा — खादृ (भक्षणे) + सन् "अः" (३-३-१०२)।

**चिखादिषु ಚಿಖಾದಿಷು** (वि०) ಭಕ್ಷಿಸಲು ಅಪೇಕ್ಷಿಸುವ, ತಿನ್ನಲು ಆಸೆಪಡುವ. खादितुमिच्छुः—खादृ (भक्षणे) + सन् "उः" (३-२-१६८)।

**चिख्यासत् ಚಿಖ್ಯಾಸತ್** (वि०) ಹೇಳಲು ಅಪೇಕ್ಷಿಸುತ್ತಿರುವ. ख्या (प्रकथने) + सन् "शतृ" (३-२-१२४)।

**चिख्यासिषा ಚಿಖ್ಯಾಸಿಷಾ** (स्त्री०) ಹೇಳಲು ಅಪೇಕ್ಷೆ, ಪ್ರಸಿದ್ಧಿ ಪಡಿಸಲು ಆಸೆ. ख्यातुमिच्छा—ख्या (प्रकथने) + सन् "अः" (३-३-१०२)।

**चिख्यासिषु ಚಿಖ್ಯಾಸಿಷು** (वि०) ಹೇಳಲು ಅಪೇಕ್ಷಿಸುವ, ಪ್ರಸಿದ್ಧಿ ಪಡಿಸಲು ಆಸೆಪಡುವ. ख्या (प्रकथने) + सन् "उः" (३-२-१६८)।

**चिचीषत् ಚಿಚೀಷತ್** (वि०) ಸಂಗ್ರಹಿಸಲು ಅಪೇಕ್ಷಿಸುತ್ತಿರುವ, ಸೇರಿಸಿಡಲು ಆಸೆಪಡುವ. चेतुमिच्छति — चिञ् (चयने) + सन् "शतृ" (३-२-१२४)। "चिचीषतां जन्मवतामलघ्वीं यशोऽवतंसामुभयत्र भूतिम्" किरा० ३-११।

**चिचीषा ಚಿಚೀಷಾ** (स्त्री०) ಸಂಗ್ರಹಿಸಲು ಅಪೇಕ್ಷೆ, ಶೇಖರಿಸಿಡಲು ಆಸೆ. चेतुमिच्छा—चिञ् (चयने) + सन् "अः" (३-३-१०२)।

**चिचीषु ಚಿಚೀಷು** (वि०) ಸಂಗ್ರಹಿಸಲು ಅಪೇಕ್ಷಿಸುವ, ಸೇರಿಸಿಡಲು ಆಸೆಪಡುವ. चिञ् (चयने) + सन् "उः" (३-२-१६८)।

**चिच्छक्ति ಚಿಚ್ಛಕ್ತಿ** (स्त्री०) ಚೈತನ್ಯ. "चिच्छक्तिः परमेश्वरस्य विमला चैतन्यमेवोच्यते"।

**चिञ् – चयने** (स्वा० उभ० द्विक० अनि०)। चिनोति चिनुतः चिन्वन्ति। चिनुते चिन्वाते चिन्वते। वा कुत्वम्- चिकाय चिक्यतुः चिक्युः। पक्षे चिचाय चिच्यतुः। चिक्ये. चिच्ये। चेता। चेष्यति, -ते। चिनोतु, चिनुताम्। अचिनोत्, अचिनुत। ಇತ್ಯಾದಿ. ಸೇರಿಸಿಡು, ಶೇಖರಿಸಿಡು, ಸಂಗ್ರಹಿಸು.

**कर्मणि :**—चीयते। चिक्ये, चिच्ये। चायिता। चायिष्यते, चेष्यते। चीयताम्। अचीयत। चीयेत। ಇತ್ಯಾದಿ.

**सनि :**—चिकीषति, -ते। चिचीषति, -ते। ಇತ್ಯಾದಿ.

**कृत्सु :**—चेतव्यः। चयनीयः। चेयः। निवासे संचाय्यः। अग्नौ उपचाय्यः, परिचाय्यः। चितः। चितवान्। चिन्वन्, चिन्वती। चिन्वानः। चेतुम्। चितम्। चयनम्। चित्वा। विचित्य।

ಈ ಧಾತುವಿಗೆ ಉಪಸರ್ಗಗಳ ಯೋಗದಿಂದ ಉಂಟಾಗುವ ಅರ್ಥಭೇದಗಳು :

(1) अप + चिञ् = अपचिनोति। अपचयः। अपचीयते। ಕಡಮೆಯಾಗು.

(2) अव + चिञ् = अवचिनोति। अवचयः। ಕೆಳಗೆ ನಿಂತು ಕೀಳು. "फलान्यवाचिनोत्"। "अवचितबलिपुष्पा वेदिसंमार्गदक्षा नियमविधिजलानां बर्हिषां चोपनेत्री" कुमा० १-६०।

(3) आ + चिञ् = आचिनुते। 1. ಚೆನ್ನಾಗಿ ಸಂಗ್ರಹಿಸು. "यदाक्षैश्चरितान् ध्यायन् कर्माण्याचिनुतेऽसकृत्" भाग० ४-२९-७८। 2. ವ್ಯಾಪಿಸು, ಹರಡು. "वनान्तशय्याकठिनीकृताकृती कचाचितौ विष्वगिवागजौ गजौ" किरा० १-३६।

(4) अनु+आ+चिञ् = अन्वाचिनुते। अन्वाचयः। ಪ್ರಧಾನಕಾರ್ಯದೊಡನೆ ಗೌಣಕಾರ್ಯವನ್ನು ಹೇಳು. "अन्यतरस्यानुषङ्गिकत्वेऽन्वाचयः"। ["च" ಪದದಲ್ಲಿ ನೋಡಿ.]

(5) सम्+आ+चिञ् = समाचिनोति। समाचितः। ಒಟ್ಟುಗೂಡು, ಒಟ್ಟಿಗೆ ಸೇರು. "यदा तु वाससां राशिः सभामध्ये समाचितः" भा० सभा० ९०-५३।

(6) उद्+चिञ् = उच्चिनोति। उच्चयः। ಮೇಲಿನಿಂದ ಕೀಳು. 'उच्चिक्यिरे पुष्पफलं वनानि" भट्टि० ३-३८।

(7) अभि + उद् + चिञ् = अभ्युच्चयः। ವೃದ್ಧಿಹೊಂದು, ಹೆಚ್ಚಾಗು.

(8) सम्+उद्+चिञ् = समुच्चिनोति। समुच्चयः। ಒಟ್ಟುಗೂಡಿಸು, ಒಟ್ಟಿಗೆ ಸೇರಿಸು.

(9) उप+चिञ्=उपचिनोति। उपचयः। ಹೆಚ್ಚಾಗು, ಅಭಿವೃದ್ಧಿ ಹೊಂದು, ಬೆಳೆ, ದೊಡ್ಡದಾಗು. "त्रयः परार्थे क्लिश्यन्ति साक्षिणः प्रतिभूः कुलम्। चत्वारस्तूपचीयन्ते विप्र आढ्यो वणिङ् नृपः" मनु० ८-१६९।

(10) नि+चिञ् = निचयः। 1. ಚೆನ್ನಾಗಿ ತುಂಬು, "रथः शरैर्मे निचितः"। 2. ಶೇಖರಿಸಿಡು.

(11) परि + चिञ् = परिचिनोति। परिचयः। ಪದೇ ಪದೇ ಪರಿಶೀಲಿಸು, ಅಭ್ಯಾಸಮಾಡು. "हेतुः परिचयस्थैर्ये वक्तुर्गुणनिकैव सा" माघ० २-७५।

(12) प्र + चिञ् = प्रचिनोति। प्रचयः। 1. ಬೆಳವಣಿಗೆ ಹೊಂದು, ವೃದ್ಧಿಯಾಗು, ಹೆಚ್ಚಾಗು. 2. ಸೇರಿಸು, ಒಟ್ಟುಗೂಡಿಸು, ರಾಶಿಹಾಕು. "प्र" ಉಪಸರ್ಗವು ಸೇರಿದಾಗ "चिञ्" ಧಾತುವಿಗೆ ಕೈಯಿಂದ ಹಣ್ಣು ಹೂವು ಮೊದಲಾದುವನ್ನು ಕೀಳುವುದು ಎಂಬ ಅರ್ಥದಲ್ಲಿ "घञ्" (३-३-४०) ಪ್ರತ್ಯಯವು ಬಂದು पुष्पप्रचायः ಎಂದಾಗುವುದು. ವೃಕ್ಷದ ಮೇಲಿರುವ ಹಣ್ಣು ಹೂವು ಮೊದಲಾದುವನ್ನು ಕೋಲಿನಿಂದ ಕೀಳುವುದು ಎಂಬ ಅರ್ಥದಲ್ಲಿಯೂ ಕಳ್ಳತನದಿಂದ ಕೀಳುವುದು ಎಂಬ ಅರ್ಥದಲ್ಲಿಯೂ यष्टया फलानां प्रचयं करोति चौर्येण पुष्पप्रचयं करोति ಎಂಬ ರೂಪವಾಗುವುದು.

**चिञ्चा ಚಿಂಚಾ** (स्त्री०) 1. ಹುಣಸೆಮರ. चिमित्यव्यक्तं शब्दं चिनोति — चिञ् (चयने) "डः" (३-२-१०१)। 2. ಹುಣಸೆಹಣ್ಣು. चिञ्चायाः फलम् "अण्" (४-३-१६४)। लुप् (४-३-१६७)।

**चिञ्चाम्ल ಚಿಂಚಾಮ್ಲ** (पुं०) ಪುಲ್ಲಂಪುರಚಿ ಗಿಡ. चिञ्चेवाम्लः।

**चिञ्चासार ಚಿಂಚಾಸಾರ** (पुं०) ಪುಲ್ಲಂಪುರಚಿ ಗಿಡ, चिञ्चाया इव सारोऽस्य।

**चिट – परप्रेष्ये** (भ्वा० पर० अक० से०)। चेटति। चिचेट। चेटिता। चेटिष्यति। चेटतु। अचेटत्। ಇತ್ಯಾದಿ. ಇತರರಿಗೆ ದೂತನಾಗು, ದಾಸನಾಗು, ಸೇವಕನಾಗು.

भावे :—चिटयते। चिचिटे। चेटिता। चिटचताम्। ಇತ್ಯಾದಿ.

णिचि :—चेटयति, –ते। चेटयां चकार, –चक्रे, –बभूव, –आस। चेटयिता। चेटयिष्यति, –ते। चेटयतु, –ताम्। ಇತ್ಯಾದಿ.

कृत्सु :—चेटितव्यः। चेटनीयः। चेट्यः। चिटितः। चिटितवान्। चेटन्, चेटन्ती। चेटितुम्। चिटितम्। चेटनम्। चेटित्वा। विचिटय।

**चित् ಚಿತ್** (स्त्री०) 1. ಜ್ಞಾನ, ಬುದ್ಧಿ. चिती (संज्ञाने) "क्विप्" (वा० ३-३-९४)। 2. ಚೈತನ್ಯ. 3. ಆತ್ಮ, ಜೀವ. (वि०) 4. ಸೇರಿಸಿಡುವವನು. 5. ವೃದ್ಧಿಪಡಿಸುವವನು, ಬೆಳೆಸುವವನು.

**चित ಚಿತ**(वि०)1. ಅಭಿವೃದ್ಧಿಪಡಿಸಲ್ಪಟ್ಟ, ಹೆಚ್ಚಿಸಲ್ಪಟ್ಟ, ಬೆಳೆಸಲ್ಪಟ್ಟ. चिञ् (चयने) "क्तः" (३-२-१०२)। 2. ರಾಶಿಹಾಕಲ್ಪಟ್ಟ. 3. ಸೇರಿಸಿಡಲ್ಪಟ್ಟ, ಕೂಡಿಹಾಕಲ್ಪಟ್ಟ. 4. ಮುಚ್ಚಲ್ಪಟ್ಟ, ಆವರಿಸಲ್ಪಟ್ಟ. 5. ಸಂಪಾದಿಸಲ್ಪಟ್ಟ. "तद्यथेह कर्मचितो लोकः क्षीयते एवममुत्र पुण्यचितो लोकः क्षीयते"।

**छिदुर ಛಿದುರ** (वि०) 1. ಕಿತ್ತುಹೋಗುವ ಸ್ವಭಾವದ, ತಾನಾಗಿ ಕಿತ್ತುಹೋಗುವ. छिदिर् (द्वैधीकरणे) "कुरच्" (३-२-१६२)। "पयोधरोत्सर्पिषु शीर्यमाण: संलक्ष्यते न छिदुरोऽपि हार:" रघु० १६-६२। 2. ಶತ್ರು. 3. ಧೂರ್ತ, ವಂಚಕ, ಮೋಸಗಾರ. 4. ಛೇದಕ, ಕತ್ತರಿಸುವ. "प्रियतमाय वपुर्गुरुमत्सरच्छिदुरयादुरयाचितमङ्गना:" माघ० ६-८।

**छिद्र – कर्णभेदने** (चुरा० उभ० सक० से०)। छिद्रयति, –ते। ರಂಧ್ರಮಾಡು, ತೂತುಕೊರೆ.

**छिद्र ಛಿದ್ರ** (न०) 1. ರಂಧ್ರ, ವಿವರ, ಬಿಲ. छिदिर् (द्वैधीकरणे) "रक्" (उ० २-१३)। 2. ವ್ಯವಸಾಯಕ್ಕೆ ಯೋಗ್ಯವಲ್ಲದ ಭೂಮಿ. "भूमिश्छिद्रं कृष्ययोग्या प्रहतं नालमुत्थितम्" वैज०। 3. ಜಾತಕಕುಂಡಲಿಯಲ್ಲಿ ಲಗ್ನದಿಂದ ಎಂಟನೆಯ ಸ್ಥಾನ. "धर्मकर्माधिनेतारौ रन्ध्र (छिद्र) लाभाधिपौ यदि। तयो: संबन्धमात्रेण न योगं लभते नर:" गोचारद०। 4. ದೋಷ, ಕಳಂಕ, ಅಪರಾಧ. 5. "ಒಂಬತ್ತು" ಸಂಖ್ಯೆ. ದೇಹದಲ್ಲಿ ನವದ್ವಾರಗಳಿರುವುದರಿಂದ ಈ ಹೆಸರು. 6. ದೋಷ, ನ್ಯೂನತೆ, ಕುಂದು, ದೌರ್ಬಲ್ಯ. "नास्य छिद्रं परो विद्याद्विद्याच्छिद्रं परस्य तु। गूहेत्कूर्म इवाङ्गानि रक्षेद्विवरमात्मन:" मनु० ७-१०५। "छिद्रं रन्ध्रापराधयो:" वैज०। (वि०) 7. ರಂಧ್ರವುಳ್ಳ, ವಿವರವಿರುವ. छिद्रमस्यास्ति "अच्" (५-२-१२७)। "सुखं दु:खं मलं छिद्रं किलासं सिध्ममर्मरौ। रभस: पलितं श्वित्रमेतेऽपि त्रिषु धर्मिणि" वैज०।

**छिद्रकर्ण ಛಿದ್ರಕರ್ಣ** (वि०) ತೂತುಕಿವಿಯುಳ್ಳ. छिद्र: कर्णो यस्य।

**छिद्रदर्शिन् ಛಿದ್ರದರ್ಶಿನ್** (वि०) ದೋಷವನ್ನು (ದೌರ್ಬಲ್ಯವನ್ನು) ನೋಡುವ ಮತ್ತು ತಪ್ಪನ್ನೇ ಹುಡುಕುವ ಶತ್ರು. छिद्रं पश्यति – दृशिर् (प्रेक्षणे) "णिनि:" (३-२-७८)।

**छिद्रवैदेही ಛಿದ್ರವೈದೇಹೀ** (स्त्री०) ಗಜಪಿಪ್ಪಲಿ. छिद्रप्रधाना वैदेही।

**छिद्रान्वेषिन् ಛಿದ್ರಾನ್ವೇಷಿನ್** (वि०) ಶತ್ರು, ಹಗೆ.

**छिद्रित ಛಿದ್ರಿತ** (वि०) 1. ರಂಧ್ರಮಾಡಲ್ಪಟ್ಟ, ತೂತುಕೊರೆಯಲ್ಪಟ್ಟ. छिद्र (कर्णभेदने) + णिच् "क्त:" (३-२-१०२)। 2. ತೂತಾಗಿರುವ, ರಂಧ್ರಸಹಿತವಾದ. छिद्रमस्य सञ्जातम् "इतच्" (५-२-३६)।

**छिद्रिन् ಛಿದ್ರಿನ್** (वि०) ರಂಧ್ರವುಳ್ಳ, ವೆಜ್ಜಕೊರೆದಿರುವ.

**छिद्वर ಛಿದ್ವರ** (वि०) 1. ವೈರಿ, ಹಗೆ. 2. ಧೂರ್ತ, ಕಪಟಿ, ವಂಚಕ, ಮೋಸಗಾರ. 3. ಕತ್ತರಿಸುವ ವಸ್ತು, ಛೇದಿಸುವ ಸಾಧನ.

**छिन्दत् ಛಿಂದತ್** (वि०) ಕತ್ತರಿಸುತ್ತಿರುವ, ತುಂಡುಮಾಡುತ್ತಿರುವ. छिदिर् (द्वैधीकरणे) "शतृ" (३-२-१२४)। स्त्रियाम् "ङीप्" (४-१-६)। **छिन्दती ಛಿಂದತೀ.**

**छिन्न ಛಿನ್ನ** (वि०) 1. ಕತ್ತರಿಸಲ್ಪಟ್ಟ, ತುಂಡುಮಾಡಲ್ಪಟ್ಟ. छिदिर् (द्वैधीकरणे) "क्त:" (३-२-१०२)। "नैरन्तर्यच्छिन्नदेहान्तरालं दुर्भक्षस्य ज्वालिना वाशितेन" माघ० १८-७६। 2. ಬೇರ್ಪಡಿಸಲ್ಪಟ್ಟ, ಪ್ರತ್ಯೇಕಿಸಲ್ಪಟ್ಟ. "कच्चिन्नोभयविभ्रष्टश्छिन्नाभ्रमिव नश्यति" गीता ६-३८। 3. ಒಡೆದು ಹೊರಕ್ಕೆ ತೆಗೆಯಲ್ಪಟ್ಟ. "रुरोध रामं शृङ्गीव टङ्कच्छिन्नमन:शिल:" रघु० १२-८०। 4. ನಷ್ಟವಾಗುವ, ನಾಶಹೊಂದುವ. "घन घटयितुं तं नि:स्नेहं य एव निवर्तने प्रभवति गवां किं नश्छिन्नं स एव धनञ्जय:" अमरु० ३२। "क्तवतु:" (३-२-१०२)। **छिन्नवान् ಛಿನ್ನವಾನ್.** ಕತ್ತರಿಸಿದವನು, ತುಂಡುಮಾಡಿದವನು.

**छिन्नक ಛಿನ್ನಕ** (वि०) ಸ್ವಲ್ಪಮಾತ್ರ ಕತ್ತರಿಸಲ್ಪಟ್ಟ. छिन्न "कन्" (५-४-४)।

**छिन्नकर्ण ಛಿನ್ನಕರ್ಣ** (वि०) ಕತ್ತರಿಸಿದ ಕಿವಿಯುಳ್ಳ, ತುಂಡು ಕಿವಿಯುಳ್ಳ. छिन्न: कर्णो यस्य। ಲಕ್ಷಣವಾಚಕ ಪದಕ್ಕೆ ६-३-११५ ಸೂತ್ರದಿಂದ ಬರಬೇಕಾದ ದೀರ್ಘವು विष्टादि ಯಲ್ಲಿ ಸೇರಿರುವ ಈ ಛಿನ್ನ ಪದಕ್ಕೆ ಬರುವುದಿಲ್ಲ.

**छिन्नकेश ಛಿನ್ನಕೇಶ** (वि०) ಕತ್ತರಿಸಿದ ಕೂದಲುಳ್ಳ. छिन्ना: केशा: यस्य।

**छिन्नवत् ಛಿನ್ನವತ್** (वि०) ಕತ್ತರಿಸಿದವನು, ಚೂರುಮಾಡಿದವನು. छिदिर् (द्वैधीकरणे) "क्तवतु:" (३-२-१०२)।

**छिन्नद्वैध ಛಿನ್ನದ್ವೈಧ** (वि०) ಸಂಶಯ ನಿವಾರಣೆಯಾದವನು, ಹೀಗೆಯೇ ಹಾಗೆಯೇ ಎಂಬ ಸಂದೇಹವಿಲ್ಲದವನು. छिन्नं द्वैधं संदेहो यस्य।

**छिन्ननास ಛಿನ್ನನಾಸ** (वि०) ಎರಡಾಗಿ ಕತ್ತರಿಸಲ್ಪಟ್ಟ ಮೂಗುಳ್ಳವನು. छिन्ना नासा यस्य।

**छिन्ननास्य ಛಿನ್ನನಾಸ್ಯ** (वि०) ಕಿತ್ತುಹೋದ ಲಗಾಮು ಅಥವಾ ಮೂಗುದಾರವುಳ್ಳ ಕುದುರೆ ಎತ್ತು ಮೊದಲಾದುವು. नासायां भवम् – नासा "यत्" (५-१-६)। "छिन्ननास्ये भग्नयुगे तिर्यक् प्रतिमुखागते। अक्षभङ्गे च यानस्य चक्रभङ्गे तथैव च" मनु० ८-२९१।

**छिन्नमस्ता ಛಿನ್ನಮಸ್ತಾ** (स्त्री०) ದಶಮಹಾವಿದ್ಯೆಗಳಲ್ಲಿ ಸೇರಿರುವ ದೇವಿಯ ಒಂದು ರೂಪ. "भैरवी छिन्नमस्ता च विद्या धूमावती तथा" तन्त्रसा०।

**छिन्नमूल ಛಿನ್ನಮೂಲ** (वि०) ಬುಡಸಹಿತ ಕತ್ತರಿಸಲ್ಪಟ್ಟ. छिन्नं मूलं यस्य। "स च्छिन्नमूलः क्षतजेन रेणुः" रघु० ७-४३।

**छिन्नरुहा ಛಿನ್ನರುಹಾ**(स्त्री०) 1. ಅಮೃತಬಳ್ಳಿ. 2. ಕೇತಕೀ ಗಿಡ, ತಾಳೆಮರ. छिन्ना सती रोहति—रुह (बीजजन्मादौ) "कः" (३-१-१३५)। "वत्सादनी छिन्नरुहा गुडूची तन्त्रिकाऽमृता" अम०।

**छिन्नश्वास ಛಿನ್ನಶ್ವಾಸ** (पुं०) 1. ತಡೆದು ತಡೆದು ಬರುವ ಶ್ವಾಸ, ತಡೆದು ಉಸಿರಾಡುವುದು, ಕ್ರಮವಾಗಿಲ್ಲದ ಉಸಿರಾಟ. छिन्नः श्वासः। (वि०) 2. ತಡೆದು ಉಸಿರಾಡುವ. छिन्नः श्वासो यस्य।

**छिन्ना ಛಿನ್ನಾ** (स्त्री०)1. ಅಮೃತಬಳ್ಳಿ. 2. ಸ್ವೈರಿಣಿ; ವ್ಯಭಿಚಾರಿಣಿ. "छिन्ना स्यादमृतेत्वरी" हेम०।

**छिन्नोद्भवा ಛಿನ್ನೋದ್ಭವಾ** (स्त्री०) ಅಮೃತಬಳ್ಳಿ.

**छुछुन्दर ಛುಛುಂದರ** (पुं०) ಮೂಗಿಲಿ. स्त्रियाम् "ङीप्" –री –ರೀ. पृषो०। छुछुन्दरिः ಛುಛುಂದರಿಃ. "छुछुन्दरिः शुभान् गन्धान् पत्रशाकं तु बर्हिणः" मनु० १२-६५।

**छुट – छेदने**(तुदा० पर० सक० से०)। छुटति। चुछोट। छुटिता। अच्छुटीत्।

**छुट – छेदने** (चुरा० उभ० सक० से०)। छोटयति, –ते। अचुच्छुटत्, –त। ಕತ್ತರಿಸು, ತುಂಡುಮಾಡು.

**छुद्र ಛುದ್ರ** (न०) 1. ಪ್ರತೀಕಾರ. 2. ರಶ್ಮಿ, ಕಿರಣ. छद (अपवारणे) "रक्" बाहु०। पृषो०।

**छुप – स्पर्शे** (तुदा० पर० सक० अनि०)। छुपति। चुच्छोप। ಸ್ಪರ್ಶಮಾಡು, ಮುಟ್ಟು.

**छुप ಛುಪ** (पुं०)1. ಸ್ಪರ್ಶ, ಮುಟ್ಟುವುದು. छुप (स्पर्शे) "कः" (३-१-१३५)। 2. ಚಿಕ್ಕ ರೆಂಬೆಗಳುಳ್ಳ ಮರ; "छुपःक्षुपस्पर्शनयोः" मेदि०।

**छुर – छेदने** (तुदा० पर० सक० से०)। छुरति। चुच्छोर। अच्छुरीत्। 1. ಕತ್ತರಿಸು, ತುಂಡುಮಾಡು. 2. ಕಚ್ಚು ಮಾಡು, ಕೊರೆ, ಕೆತ್ತು. 3. ಕೊರೆದು ಪ್ರತಿರೂಪಮಾಡು.

**छुरण ಛುರಣ** (न०) ಹರಡುವುದು, ಹರವುವುದು.

**छुरा ಛುರಾ** (स्त्री०) ಸುಣ್ಣ. छुर (छेदने) "कः" (३-१-१३५)।

**छुरिका ಛುರಿಕಾ** (स्त्री०) ಚಾಕು, ಚೂರಿ. छुर (छेदने) "क्वुन्" (उ० २-३५)। "स्याच्छस्त्री चासिपुत्री च छुरिका चासिधेनुका" अम०।

**छुरित ಛುರಿತ** (वि०) 1. ಕತ್ತರಿಸಲ್ಪಟ್ಟ. 2. ಲೇಪನ ಮಾಡಲ್ಪಟ್ಟ, ಬಳಿಯಲ್ಪಟ್ಟ. छुर (छेदने) "क्तः" (३-२-१०२)। 3. ಬೆರಸಲ್ಪಟ್ಟ, ಒಂದಕ್ಕೊಂದು ಸೇರಿಸಿ ಮಿಶ್ರಮಾಡಲ್ಪಟ್ಟ. "परस्परेण च्छुरितामलच्छवी तदेकवर्णाविव तौ बभूवतुः" माघ० १-२२।

**छुरी ಛುರೀ** (स्त्री०) 1. ಚಾಕು, ಸಣ್ಣ ಕತ್ತಿ. 2. ಕಠಾರಿ, ಬಾಕು. छुर (च्छेदने) "कः" (३-१-१३५)। "ङीष्" (४-१-४१)।

**छूरिका ಛೂರಿಕಾ** (स्त्री०)1. ಚಾಕು, ಸಣ್ಣಕತ್ತಿ. 2. ಹಸುವಿನ ಮೂಗಿನ ಹೊಳ್ಳೆ. "गोषु ब्राह्मणसंस्थासु छूरिकायाश्च भेदने। पशूनां हरणे चैव सद्यः कार्योऽर्धपादिकः" मनु० ८-३२५।

**छूरी ಛೂರೀ** (स्त्री०) ಚಾಕು, ಸಣ್ಣ ಕತ್ತಿ. छुरति—छुर (छेदने) "कः" (३-१-१३५)। "ङीष्" (४-१-४१)।

**छृदिर् – दीप्तिदेवनयोः** (रुधा० उभ० सक० दीप्तौ अक० से०)। छृणत्ति, छृन्ते। चच्छर्द, चच्छृदे। छर्दिता। छर्दिष्यति, –ते, छर्त्स्यति, –ते। छृणत्तु, छृन्ताम्। ಇತ್ಯಾದಿ। 1. ಪ್ರಕಾಶಿಸು, ಹೊಳೆ. 2. ಆಟವಾಡು.

कर्मणि :—छृद्यते। छृद्यताम्। ಇತ್ಯಾದಿ.

**छृदी – सन्दीपने** (वा चुरा० उभ० सक० से०)। छर्दयति, –ते। पक्षे छर्दति। ಇತ್ಯಾದಿ. 1. ಉರಿಸು, ಜ್ವಲಿಸುವಂತೆ ಮಾಡು. 2. ಪ್ರಕಾಶಗೊಳಿಸು.

**छेक ಛೇಕ** (पुं०) 1. ಮನೆಯನ್ನು ಆಶ್ರಯಿಸಿರುವ ಮೃಗ ಪಕ್ಷಿ ಮುಂತಾದುವು. छायते—छो (छेदने) "ईकन्" बाहु०। (वि०)2. ಜಾಣ, ಬುದ್ಧಿವಂತ, ನಾಗರ, ನಗರವಾಸಿ, ರಸಿಕ. "छेको गृहाश्रितमृगपक्षिणोर्नागरे त्रिषु" मेदि०।

**छेकानुप्रास ಛೇಕಾನುಪ್ರಾಸ** (पुं०) ಅನುಪ್ರಾಸಾಲಂಕಾರದ ಒಂದು ಭೇದ, ಶಬ್ದಾಲಂಕಾರದ ಭೇದವಾದ ಐದು ವಿಧ ಅನುಪ್ರಾಸಗಳಲ್ಲಿ ಒಂದು ವಿಧ. ಅನೇಕ ವ್ಯಂಜನ ವರ್ಣಗಳಿಗೆ ಸಕೃದಾವೃತ್ತಿಯಿರುವಲ್ಲಿ "छेकानुप्रास" ವೆಂಬ ಅಲಂಕಾರವಾಗುವುದು. ವಿದಗ್ಧನಾದವನು ಇದನ್ನು ಪ್ರಯೋಗಿಸುವುದರಿಂದ ಇದಕ್ಕೆ ಈ ಹೆಸರು. "छेको व्यञ्जनसङ्घस्य सकृत्साम्यमनेकधा" सा० द० १०-३। उदा : "आदाय बकुलगन्धानन्धीकुर्वन् पदपदे भ्रमरान्।

अयमेति मन्दमन्दं कावेरीवारिपावनः पवनः" ಇಲ್ಲಿ ಗನ್ಧಾನನ್ಧೀ ಎಂದು ಸಂಯುಕ್ತಾಕ್ಷರಗಳಿಗೂ ಕಾವೇರೀವಾರಿ ಎಂದು ಅಸಂಯುಕ್ತಾಕ್ಷರಗಳಿಗೂ ಪಾವನ:ಪವನ: ಎಂದೂ ಅನೇಕ ವ್ಯಂಜನಾಕ್ಷರಗಳಿಗೆ ಒಂದೊಂದು ಸಲ ಆವೃತ್ತಿ ಯಿರುವುದರಿಂದ ಛೇಕಾನುಪ್ರಾಸವಾಯಿತು.

**ಛೇಕಾಪಹ್ನುತಿ ಛೇಕಾಪಹ್ನುತಿ** (ಸ್ತ್ರೀ೦) ಅರ್ಥಾಲಂಕಾರದ ಒಂದು ಭೇದ, ಆರು ವಿಧ "ಅಪಹ್ನುತಿ" ಅಲಂಕಾರಗಳಲ್ಲಿ ಒಂದು ಭೇದ. ಆಡಿದ ಮಾತಿನ ಅಭಿಪ್ರಾಯವು ಇನ್ನೊಬ್ಬ ನಿಗೆ ತಿಳಿಯದೆ ಸಂದೇಹವು ತೋರಿ ನಿಜವಾದ ಅರ್ಥವನ್ನು ಕೇಳಿದಾಗ ಸ್ವಾಭಿಪ್ರಾಯವನ್ನು ಮುಚ್ಚಿಟ್ಟು ಬೇರೆ ರೀತಿಯ ಉತ್ತರವನ್ನು ಕೊಡುವುದು "**ಛೇಕಾಪಹ್ನುತಿ**" ಯಾಗು ವುದು. "छेकापह्नुतिरन्यस्य शङ्कातस्तथ्यनिह्नवे। प्रजल्पन् मत्पदे लग्नः कान्तः किं न हि नूपुरः" चन्द्रा०। ಇಲ್ಲಿ ಪ್ರಜಲ್ಪನ್ ಮತ್ಪದೇ ಲಗ್ನ: ಎಂಬುದು ಮಾತು. ಅದರ ಅಭಿಪ್ರಾಯವು ತಿಳಿಯದೆ ಕಾನ್ತ: ಕಿಮ್ ಎಂಬುದು ಪ್ರಶ್ನೆ. ನ ಹಿ ನೂಪುರ: ಎಂದು ಅನ್ಯಥಾ ಉತ್ತರ. ಆದುದರಿಂದ ಇಲ್ಲಿ "ಛೇಕಾಪಹ್ನುತಿ" ಅಲಂಕಾರ.

**ಛೇಕೋಕ್ತಿ ಛೇಕೋಕ್ತಿ** (ಸ್ತ್ರೀ೦) ಅರ್ಥಾಲಂಕಾರದ ಒಂದು ಭೇದ. ಅರ್ಥಾಂತರದಿಂದ ಕೂಡಿದ ಲೋಕೋಕ್ತಿಯು ಛೇಕೋಕ್ತಿ. ಲೋಕಾಭಿರಾಮವಾಗಿ ಹೇಳುವ ಮಾತು ಅರ್ಥಾಂತರಗರ್ಭಿತವಾಗಿರುವಲ್ಲಿ "ಛೇಕೋಕ್ತಿ" ಅಲಂಕಾರ ವಾಗುವುದು. "छेकोक्तिर्यत्र लोकोक्तिः स्यादर्थान्तरगर्भिता"। उदा : "भुजङ्ग एव जानीते भुजङ्गचरणं सखे"। ಇಲ್ಲಿ ಸರ್ಪಗಳಿಗೆ ಇರುವ ಕಾಲು ಸರ್ಪಕ್ಕೇ ಗೊತ್ತು ಎಂದು ಹೇಳುವ ಮಾತಿನಲ್ಲಿ ವಿಟನ ವಿಷಯ ವಿಟನಿಗೇ ಗೊತ್ತು ಎಂಬ ಅರ್ಥ ಗರ್ಭಿತವಾಗಿರುವುದರಿಂದ "ಛೇಕೋಕ್ತಿ" ಅಲಂಕಾರ.

**ಛೇತ್ತವ್ಯ ಛೇತ್ತವ್ಯ** (ವಿ೦) 1. ಕತ್ತರಿಸಬೇಕಾದ, ತುಂಡುಮಾಡ ಬೇಕಾದ. छिदिर् (द्वैधीकरणे) "तव्यः" (३-१-९६)। 2. ಕತ್ತರಿಸಲ್ಪಡುವ.

**ಛೇತೃ ಛೇತೃ** (ವಿ೦) 1. ಕತ್ತರಿಸುವವನು. 2, ಮರ ಮೊದಲಾದುವನ್ನು ತುಂಡುಮಾಡುವವನು. छिदिर् (द्वैधीकरणे) "तृच्" (३-१-१३३)। स्त्रियाम् "ङीप्" (४-१-५)। **छेत्त्री ಛೇತ್ರೀ.**

**ಛೇದ ಛೇದ** (ಪುಂ) 1. ಕತ್ತರಿಸುವುದು, ತುಂಡುಮಾಡು ವುದು. छिदिर् (द्वैधीकरणे) भावे "घञ्" (३-३-१८)। "छेदो दंशस्य दाहो वा" माल० ४-४। 2. ತುಂಡು, ಚೂರು. "आकैलासाद्बिसकिसलयच्छेदपाथेयवन्तः" मेघ० १-११। 3. ಪ್ರಹಾರ, ಏಟು. "द्विषद्विशसनच्छेदनिरस्तोरुयुगोऽपरः" माघ० १९-५३। (ವಿ೦) 4. ಕತ್ತರಿಸುವ, ತುಂಡುಮಾಡುವ. छिदिर् कर्त० "अच्" (३-१-१३४)। 5. ಛೇದಕ, ಭಾಗಿಸುವ. "छेदं गुणं गुणं छेदम्" लीला०।

**ಛೇದಕ ಛೇದಕ** (ಪುಂ) 1. ಭಾಜಕ, ಭಾಗಿಸಲು ಭಿನ್ನರಾಶಿಯ ಅಡ್ಡಗೆರೆಯ ಕೆಳಗಿನ ಅಂಕಿ. छिदिर् (द्वैधीकरणे) "ण्वुल्" (३-१-१३३)। (ವಿ೦) 2. ಕತ್ತರಿಸುವ, ತುಂಡು ಮಾಡುವ.

**ಛೇದನ ಛೇದನ** (ನಂ) 1. ಕತ್ತರಿಸುವುದು, ತುಂಡುಮಾಡು ವುದು. "छिदिर्" (द्वैधीकरणे) भावे "ल्युट्" (३-३-११५)। "करपाददतो भङ्गे छेदने कर्णनासयोः। मध्यो दण्डो व्रणोद्भेदे मृतकल्पहते तथा" याज्ञ० २-२१९। 2. ಕತ್ತರಿಸುವ ಸಾಧನ, ಶಸ್ತ್ರ. छिदिर् कर० "ल्युट्" (३-३-११७)। (ವಿ೦) 3. ಕತ್ತರಿಸುವ, ಚೂರುಮಾಡುವ. छिदिर् कर्त० "ल्युः" (३-१-१३४)।

**ಛೇದನೀಯ ಛೇದನೀಯ** (ಪುಂ) 1. ಕತಕವೃಕ್ಷ, ಚಿಲ್ಲದ ಗಿಡ. छेदनाय सलिलकालुष्यापनयनाय हितः "छः" (५-१-५)। (ವಿ೦) 2. ಕತ್ತರಿಸಲ್ಪಡುವ. 3. ಕತ್ತರಿಸಲು ಯೋಗ್ಯ ವಾದ. 4. ಕತ್ತರಿಸಲು ಶಕ್ಯವಾದ. छिदिर् (द्वैधीकरणे) "अनीयर्" (३-१-९६)।

**ಛೇದಯತ್ ಛೇದಯತ್** (ವಿ೦) ಕತ್ತರಿಸುವಂತೆ ಮಾಡು ತ್ತಿರುವ, ಕತ್ತರಿಸುವ ಕಾರ್ಯವನ್ನು ಮಾಡಿಸುತ್ತಿರುವ. छिदिर् (द्वैधीकरणे) + णिच् "शतृ" (३-२-१२४)। स्त्रियाम् "ङीप्" (४-१-६)। **-यन्ती -ಯಂತೀ.**

**ಛೇದಯಿತವ್ಯ ಛೇದಯಿತವ್ಯ** (ವಿ೦) ತುಂಡುಮಾಡಿಸ ಬೇಕಾದ. छिदिर् (द्वैधीकरणे) + णिच् "तव्यः" (३-१-९६)।

**ಛೇದಿ ಛೇದಿ** (ಪುಂ) 1. ಬಡಗಿ, ಮರಗೆಲಸದವನು. छिदिर् (द्वैधीकरणे) "इन्" (उ० ४-११७)। (ವಿ೦) 2. ಕತ್ತರಿಸುವವನು, ತುಂಡುಮಾಡುವವನು, ಚೂರುಮಾಡು ವವನು.

**ಛೇದಿತವತ್ ಛೇದಿತವತ್** (ವಿ೦) ಕತ್ತರಿಸಿದವನು, ತುಂಡು ಮಾಡಿದವನು. छिदिर् (द्वैधीकरणे) + णिच् "क्तवतुः" (३-२-१०२)। स्त्रियाम् "ङीप्" (४-१-६)। **-वती -ವತೀ.**

**ಛೇದಿನ್ ಛೇದಿನ್** (ವಿ೦) ಕತ್ತರಿಸುವ, ತುಂಡುಮಾಡುವ. छिनत्ति—छिदिर् (द्वैधीकरणे) "णिनिः" (३-१-१३४)

**छेद्य ಛೇದ್ಯ** (वि०) 1. ಕತ್ತರಿಸಲ್ಪಡುವ, ತುಂಡುಮಾಡಲ್ಪಡುವ. "विप्रपीडाकरं छेद्यमब्राह्मणस्य तु" याज्ञ० २-२१५। 2. ಕತ್ತರಿಸಲು ಯೋಗ್ಯವಾದ. 3. ಕತ್ತರಿಸಲು ಸಾಧ್ಯವಾದ. छिदिर् (द्वैधीकरणे) कर्मादौ "ण्यत्" (३-१-१२४)।

**छेमण्ड ಛೇಮಂಡ** (पुं०) ತಾಯಿತಂದೆ ಮೊದಲಾದ ಬಂಧುಗಳಿಲ್ಲದವನು. छमण्ड पृषो०।

**छेय ಛೇಯ** (वि०) ಕತ್ತರಿಸಲ್ಪಡುವ.

**छेलक ಛೇಲಕ** (पुं०) 1. ಮೇಕೆ, ಹೋತ. स्त्रियाम् "टाप्" (४-१-४)। **-लिका -ಲಿಕಾ.** 2. ಆಡು.

**छेलु ಛೇಲು** (पुं०) ಸೋಮರಾಜೀಲತೆ, ಬಾಹುಜಿಗೆ ಗಿಡ.

**छैदिक ಛೈದಿಕ** (वि०) ಛೇದನಕ್ಕೆ ಅರ್ಹವಾದ, ನಿತ್ಯವೂ ಕತ್ತರಿಸಬೇಕಾದ. छेदं नित्यमर्हति "ठक्" (५-१-६४)।

**छो – छेदने** (दिवा० पर० सक० अनि०)। छयति। चच्छौ। छाता। छास्यति। छयतु। अच्छयत्। छयेत्। छायात्। अच्छात्, अच्छासीत्। अच्छास्यत्।

**कर्मणि:**—छायते। चच्छे। छायिता। छाता। छायिष्यते, छास्यते। छायताम्। ಇತ್ಯಾದಿ.

**कृत्सु:**—छातव्यम्। छानीयम्। छेयम्। छितः। छितवान्। छातः, छातवान्। छयन्। छातुम्। छितम्, छातम्। छानम्। छित्वा, छात्वा। प्रच्छाय।

**छोटन ಛೋಟನ** (न०) ಕತ್ತರಿಸುವುದು, ತುಂಡುಮಾಡುವುದು. छुट (छेदने) "ल्युट्" (३-३-११५)।

**छोटिका ಛೋಟಿಕಾ** (स्त्री०) ಚಿಟಿಕೆ, ತರ್ಜನಿ ಮತ್ತು ಅಂಗುಷ್ಠಗಳನ್ನು ಮಿಡಿಸುವುದರಿಂದ ಉಂಟಾಗುವ ಶಬ್ದ. "तद्यावद्वसन्तकस्य संज्ञां करोमि, इति छोटिकां ददाति" रत्ना० ३।

**छोटिन् ಛೋಟಿನ್** (पुं०) ಬೆಸ್ತ, ಮೀನುಹಿಡಿಯುವವನು. छुट (छेदने) "णिनिः" (३-२-७८)। "कैवर्ते जालिकः छोटी" त्रिकाण्ड०।

**छोटित ಛೋಟಿತ** (वि०) ಕತ್ತರಿಸಲ್ಪಟ್ಟ, ಚೂರುಮಾಡಲ್ಪಟ್ಟ. छुट (छेदने) कर्म० "क्तः" (३-२-१०२)।

**छोरण ಛೋರಣ** (न०) ಪರಿತ್ಯಾಗ, ತೊರೆದುಬಿಡುವುದು. छुर (छेदने) भावे "ल्युट्" (३-३-११५)। "छोरणं परित्यागः स्यात्" त्रिकाण्ड०।

**छोरित ಛೋರಿತ** (वि०) ಪರಿತ್ಯಜಿಸಲ್ಪಟ್ಟ, ತೊರೆಯಲ್ಪಟ್ಟ. छुर (छेदने) कर्म० "क्तः" (३-२-१०२)।

**छोलङ्ग ಛೋಲಂಗ** (पुं०) ಮಾತುಲಂಗವೃಕ್ಷ, ಮಾದಳದ ಗಿಡ.

**इति "छ" काराविपदार्थनिरूपणम्।**

---

# ज

**ज ಜ** ಇದು ವ್ಯಂಜನಾಕ್ಷರಗಳಲ್ಲಿ ಚವರ್ಗದ ಮೂರನೆಯ ಮತ್ತು ತಾಲು (ದವಡೆ) ಸ್ಥಾನದಲ್ಲಿ ಅಭ್ಯಂತರ ಸ್ಪೃಷ್ಟ ಪ್ರಯತ್ನದಿಂದ ಹುಟ್ಟುವ ಒಂದು ಅಲ್ಪಪ್ರಾಣಾಕ್ಷರ. "कादयो मावसानाः स्पर्शाः"। "इचुयशानां तालु" सि० कौ०।

**ज ಜ** (पुं०) 1. ವಿಷ್ಣು. 2. ಪರಶಿವ, ಪರಮೇಶ್ವರ. जि (जये) "डः" (३-२-१०१)। 3. ಹುಟ್ಟು, ಜನನ, ಉತ್ಪತ್ತಿ. 4. ತಾತ, ತಂದೆ. "जो ना मृत्युञ्जये जन्यां तातमात्रे जनार्दने" मेदि०। 5. ಜಪ. 6. ವಿಜಯ. 7. ಮೇರು. 8. ಶಬ್ದ, ಧ್ವನಿ. 9. ಮತ್ಸರ. 10. ಹಾಡುವವನು, ಸಂಗೀತಗಾರ. "जकारो गायने प्रोक्तो जयने जः प्रकीर्तितः" हारा०। जनी (प्रादुर्भावे) "डः" (३-२-१०१)। (न०) 11. ಕಟಿಪ್ರದೇಶ. 12. ಭೂಷಣ, ಒಡವೆ. 13. ಪತ್ನಿ, ಹೆಂಡತಿ. 14. ತೇಜಸ್ಸು, ಕಾಂತಿ. 15. ಜಲ, ನೀರು. "जो जपे विजये मेरौ शब्दे जेतरि मत्सरे। जं कटौ भूषणे पत्न्यां तेजस्यम्बुनि जन्मनि" नानार्थर०। 16. (ಛಂದಃಶಾಸ್ತ್ರದಲ್ಲಿ) ಮಧ್ಯದಲ್ಲಿ ಗುರುವರ್ಣವುಳ್ಳ "ज" ಗಣ. "म्मध्याद्यौ ज्भौ त्रिलोनोऽष्टौ भवन्त्यत्र गणास्त्रिकाः" वृ० र०। (वि०) 17. ವೇಗವಾದ. 18. ಜಯಶಾಲಿಯಾದ. 19. (ಸಮಾಸಾಂತ್ಯ

दಲ್ಲಿ) ಹುಟ್ಟಿದ, ಉತ್ಪತ್ತಿಹೊಂದಿದ. प्रावृषिजः शरदिजः कालेजः दिविजः ललाटजः, मनसिजः मनोजः सरसिजम् सरोजम् ಇತ್ಯಾದಿ.

**जकार ಜಕಾರ** (पुं०) "ज" ವರ್ಣ.

**जकुट ಜಕುಟ** (पुं०) 1. ಮಲಯಪರ್ವತ. 2. ನಾಯಿ. (न०) 3. ಬದನೆ ಹೂವು. जं जातं सत् कुटति वक्रीभवति – कुट (कौटिल्ये) "कः" (३-१-१३५)। "जकुटं वार्ताकिपुष्पे जकुटो मलये शुनि" मेदि०।

**जक्ष – भक्षहसनयोः** (अदा० पर० भक्षणे सक० हसने अक० से०)। जक्षिति जक्षितः जक्षति। जजक्ष जजक्षतुः जजक्षुः। जक्षिता। जक्षिष्यति। जक्षितु। अजक्षीत्, अजक्षत्। जक्ष्यात्। ಇತ್ಯಾದಿ. 1. ಭಕ್ಷಿಸು, ತಿನ್ನು. 2. ನಗು. "भ्रेमुर्ववल्गुर्ननृतुर्जजक्षुर्जगुः समुत्पुप्लुविरे निषेदुः" भट्टि० १३-२८।

कर्मणि :—जक्ष्यते। जजक्षे। जक्षिता। जक्षिष्यते। ಇತ್ಯಾದಿ.

कृत्सु :—जक्षितव्यम्। जक्षणीयम्। जक्ष्यम्। जक्षितः। जक्षितवान्। जक्षत्, जक्षती। जक्षितुम्। जक्षितम्। जक्षणम्। जक्षित्वा। अनुजक्ष्य।

**जक्षण ಜಕ್ಷಣ** (न०) 1. ಭಕ್ಷಣ, ತಿನ್ನುವುದು. 2. ನಗುವುದು. जक्ष (भक्षहसनयोः) भावे "ल्युट्" (३-३-११५)।

**जक्षणीय ಜಕ್ಷಣೀಯ** (वि०) 1. ಭಕ್ಷಿಸಲ್ಪಡುವ, ತಿನ್ನಲ್ಪಡುವ. 2. ತಿನ್ನಲು ಯೋಗ್ಯವಾದ. 3. ತಿನ್ನಬೇಕಾದ. जक्ष (भक्षणे) कर्मादौ "अनीयर्" (३-१-९६)। "तव्यः"। जक्षितव्यः ಜಕ್ಷಿತವ್ಯಃ.

**जक्षत् ಜಕ್ಷತ್** (वि०) 1. ಭಕ್ಷಿಸುತ್ತಿರುವ, ತಿನ್ನುತ್ತಿರುವ. 2. ನಗುತ್ತಿರುವ. जक्ष (भक्षहसनयोः) "शतृ" (३-२-१२४)। स्त्रियाम् "ङीप्" (४-१-६)।

**जक्षि ಜಕ್ಷಿ** (स्त्री०) 1. ಭಕ್ಷಣ, ತಿನ್ನುವುದು. 2. ನಗುವುದು.

**जक्षित ಜಕ್ಷಿತ** (न०) 1. ಭಕ್ಷಣ, ತಿನ್ನುವುದು. 2. ನಗುವುದು. जक्ष (भक्षहसनयोः) भावे "क्तः" (३-३-११४)। (वि०) 3. ತಿನ್ನಲ್ಪಟ್ಟ. जक्ष कर्म० "क्तः" (३-२-१०२)।

**जक्षितवत् ಜಕ್ಷಿತವತ್** (वि०) ಭಕ್ಷಿಸಿದವನು, ಊಟ ಮಾಡಿದವನು. जक्ष (भक्षणे) "क्तवतुः" (३-२-१०२)। स्त्रियाम् "ङीप्" (४-१-६)। –वती –ವತೀ.

**जक्षितृ ಜಕ್ಷಿತೃ** (वि०) 1. ಭಕ್ಷಿಸುವ, ತಿನ್ನುವ. 2. ನಗುವ. जक्ष (भक्षहसनयोः) "तृच्" (३-१-१३३)। स्त्रियाम् "ङीप्" (४-१-५)। –त्री –ತ್ರೀ.

**जक्ष्य ಜಕ್ಷ್ಯ** (वि०) ತಿನ್ನಲ್ಪಡುವ. जक्ष (भक्षणे) कर्म० "ण्यत्" (३-१-१२४)।

**जगच्चक्षुस् ಜಗಚ್ಚಕ್ಷುಸ್** (पुं०) ಸೂರ್ಯ. जगतां चक्षुरिव।

**जगत् ಜಗತ್** (पुं०) 1. ವಾಯು, ಗಾಳಿ. (न०) 2. ಜಗತ್ತು, ಪ್ರಪಂಚ, ಲೋಕ. गच्छति – गम्लृ (गतौ) "क्विप्" (वा० ३-२-१७८)। "निधत्से हुतमर्काय स पर्जन्योऽभिवर्षति। ततोऽन्नानि प्रजास्तेभ्यस्तेनासि जगतः पिता" कुमा० १०-२०। "जगज्जयं तेन च कोशमक्षयं प्रणीतवान् शैशवशेषवानयम्" नैष० १-१९। 3. ಸಂಚರಿಸುವ, ಚಲಿಸುವ.

**जगती ಜಗತೀ** (स्त्री०) 1. ಭೂಮಿ. गम्लृ (गतौ) "अतिः" जगादेशश्च (उ० २-८४) निपा०। शतृवद्भावात् "ङीप्" (४-१-६)। "दुरोदरच्छद्मजितां समीहते नयेन जेतुं जगतीं सुयोधनः" किरा० १-७। 2. ಲೋಕ, ಪ್ರಪಂಚ. 3. ಜನ. 4. ಹನ್ನೆರಡು ಅಕ್ಷರಗಳುಳ್ಳ ಛಂದಸ್ಸು. "जगती भुवने क्ष्मायां छन्दोभेदे जनेऽपि च" मेदि०।

**जगतीजानि ಜಗತೀಜಾನಿ** (पुं०) ಭೂಮಿಯೇ ಪತ್ನಿಯಾಗಿ ಉಳ್ಳ ರಾಜ. जगती जानिर्यस्य।

**जगतीतल ಜಗತೀತಲ** (न०) ಭೂಮಿಯ ಮೇಲಿಭಾಗ, ಭೂಮಿಯ ಮೇಲ್ಮೈ. जगत्यास्तलम्।

**जगतीधर ಜಗತೀಧರ** (पुं०) ಪರ್ವತ, ಬೆಟ್ಟ. धरति – धृञ् (धारणे) "अच्" (३-१-१३४)। "जलधरावलिरप्रतिपालितस्वसमया समयाज्जगतीधरम्" माघ० ६-२५।

**जगतीपति ಜಗತೀಪತಿ** (पुं०) ರಾಜ, ದೊರೆ. जगत्याः पतिः। "इति ह वाव स जगतीपतिरीश्वरेच्छयाधिनिवेशितकर्माधिकारः" भाग० ५-१-२३।

**जगतीपाल ಜಗತೀಪಾಲ** (पुं०) ಭೂಮಿಯನ್ನು ಕಾಪಾಡುವ ದೊರೆ, ರಾಜ. जगत्याः पालः।

**जगतीभुज् ಜಗತೀಭುಜ್** (पुं०) ರಾಜ, ದೊರೆ. जगतीं भुनक्ति – भुज (परिपालने) "क्विप्" (३-२-७६)। "ददृशे जगतीभुजा मुनिः स वपुष्मानिव पुण्यसंचयः" किरा० २-५६।

**जगतीरुह् ಜಗತೀರುಹ್** (पुं०) ಭೂಮಿಯಲ್ಲಿ ಹುಟ್ಟುವ ಮರ, ವೃಕ್ಷ. जगत्यां रोहति – रुह (बीजजन्मनि प्रादुर्भावे च) "क्विप्" (३-२-७६)। "पवनेरिताकुल-

विजिह्मशिखा जगतीरुहोऽवचकरुः कुसुमैः" किरा० ६-२। "कः" (३-१-१३५)। -रुहः -ರುಹಃ.

**जगत्कर्तृ ಜಗತ್ಕರ್ತೃ** (पुं०) 1. ಜಗತ್ತನ್ನು ಸೃಷ್ಟಿಸುವ ಪರಮಾತ್ಮ. 2. ಚತುರ್ಮುಖ ಬ್ರಹ್ಮ. जगतः कर्ता।

**जगत्कारण ಜಗತ್ಕಾರಣ** (न०) ಪ್ರಪಂಚದ ಮೂಲ ಕಾರಣ. जगतः चराचरस्य कारणम्।

**जगत्क्षय ಜಗತ್‌ಕ್ಷಯ** (पुं०) ಪ್ರಳಯ, ಪ್ರಪಂಚದ ನಾಶ. जगतः क्षयः।

**जगत्त्रय ಜಗತ್ತ್ರಯ** (न०) ಸ್ವರ್ಗ ಮಧ್ಯ (ಭೂ) ಪಾತಾಳ ಗಳೆಂಬ ಮೂರು ಲೋಕಗಳು. जगतां त्रयम्। "शाधि शासक जगत्त्रयस्य माम्" माघ० १४-११।

**जगत्पति ಜಗತ್ಪತಿ** (पुं०) ಪರಮಾತ್ಮ, ಸರ್ವೇಶ್ವರ. जगतां पतिः। "यदा च तस्याधिगमे जगत्पतेः" कुमा० ५-५९।

**जगत्पवित्र ಜಗತ್ಪವಿತ್ರ** (वि०) ಜಗತ್ತೆಲ್ಲವನ್ನೂ ಪಾವನ ಗೊಳಿಸುವ. जगत् पुनाति—पूञ् (पवने) "इत्रः" (३-२-१८६)। "जगत्पवित्रैरपि तं न पादैः स्प्रष्टुं जगत्पूज्यमयुज्यतार्कः" माघ० ३-२।

**जगत्पूज्य ಜಗತ್ಪೂಜ್ಯ** (वि०) ಲೋಕಗಳಿಗೆಲ್ಲ ಪೂಜ್ಯ ನಾದ. जगतां पूज्यः। "जगत्पूज्यमयुज्यतार्कः" माघ० ३-२।

**जगत्प्रभु ಜಗತ್ಪ್ರಭು** (पुं०) ಮೂರು ಲೋಕಗಳಿಗೂ ಸ್ವಾಮಿ ಯಾದ ಪರಮಾತ್ಮ. जगतां प्रभुः। "जगत्प्रभोरप्रसहिष्णु वैष्णवं न चक्रमस्याक्रमताधिकन्धरम्" माघ० १-५४।

**जगत्प्राण ಜಗತ್ಪ್ರಾಣ** (पुं०) ವಾಯು, ಗಾಳಿ. जगतां भुवनस्थजीवानां प्राणः जीवनम्। "जगत्प्राण प्राणानपहरसि किं ते व्यवसितम्" सा० द०।

**जगत्साक्षिन् ಜಗತ್ಸಾಕ್ಷಿನ್** (पुं०) 1. ಸೂರ್ಯ. 2. ಪರ ಮಾತ್ಮ. जगतः साक्षी।

**जगदण्डक ಜಗದಂಡಕ** (न०) ಬ್ರಹ್ಮಾಂಡ, ಜಗತ್ತಿಗೆ ಆಶ್ರಯವಾದ ಕೋಶ. जगतः अण्डकम्। "रुरुचे विरिञ्चिनखभिन्नबृहज्जगदण्डकैकतरखण्डमिव" माघ० ९-९।

**जगदम्बा ಜಗದಂಬಾ** (स्त्री०) ಪಾರ್ವತಿ, ದುರ್ಗಾದೇವಿ. जगतः अम्बा। स्वार्थे "कः"। -अम्बिका -ಅಂಬಿಕಾ.

**जगदन्त ಜಗದಂತ** (पुं०) 1. ಜಗತ್ತಿನ ಕೊನೆ, ಪ್ರಳಯ. जगतोऽन्तः। 2. ಜಗತ್ತನ್ನು ನಾಶಪಡಿಸುವವನು. जगत् अन्तयति—"अच्" (३-१-१३४)। "जगद्योनिरयोनिस्त्वं जगदन्तो निरन्तकः" कुमा० २-९।

**जगदन्तक ಜಗದಂತಕ** (वि०) ಜಗತ್ತನ್ನು ನಾಶಗೊಳಿಸು ವವನು. जगतामन्तकः।

**जगदन्तकाल ಜಗದಂತಕಾಲ** (पुं०) ಕಲ್ಪದ ಕೊನೆಯ ಕಾಲ. "जगदन्तकालसमवेतविश्वदविषमेरितारवम्" माघ० १५-७३।

**जगदात्मक ಜಗದಾತ್ಮಕ** (वि०) ಜಗತ್ತಿನ ಸ್ವರೂಪವಾದ. जगत् आत्मा यस्य। "कप्" (५-४-१५४)।

**जगदादि ಜಗದಾದಿ** (पुं०) ಜಗತ್ತಿನ ಸೃಷ್ಟಿಗೂ ಮೊದಲು ಇದ್ದ ಪರಮಾತ್ಮ. जगतामादिः। "जगदादिरनादिस्त्वं जगदीशो निरीश्वरः" कुमा० २-९।

**जगदादिज ಜಗದಾದಿಜ** (पुं०) ಹಿರಣ್ಯಗರ್ಭರೂಪದಿಂದ ಜಗತ್ಸೃಷ್ಟಿಗೆ ಮೊದಲು ಆವಿರ್ಭಾವಹೊಂದಿದ ಪರ ಮಾತ್ಮ. जगतामादौ हिरण्यगर्भरूपेण जायते—जनी (प्रादुर्भावे) "डः" (३-२-९७)। "सोऽभिध्याय शरीरात् स्वात्सिसृक्षुर्विविधाः प्रजाः। अप एव ससर्जादौ तासु बीजमवासृजत्॥ तदण्डमभवद्धैमं सहस्रांशुसमप्रभम्। तस्मिन् जज्ञे स्वयं ब्रह्मा सर्वलोकपितामहः" मनु० १-८, ९। "जगतामादिभूतासु मूर्तिष्वन्यतमत्वतः। जातत्वाद्विष्णुरूपेण प्रोच्यते जगदादिजः" इति निरुक्तिः। "भ्राजिष्णुर्भोजनं भोक्ता सहिष्णुर्जगदादिजः" वि० स०।

**जगदाधार ಜಗದಾಧಾರ** (पुं०) 1. ವಾಯು, ಗಾಳಿ. जगतामाधारः। 2. ಕಾಲ. जगतामाश्रयभूतत्वात्। "जन्यानां जनकः कालो जगतामाश्रयो मतः" भाषाप०।

**जगदायु(स्) ಜಗದಾಯು(ಸ್)** (पुं०) ವಾಯು, ಗಾಳಿ. जगतामायुः आयुःसाधनत्वात्। पृषो० वा सलोपः। "अहं केसरिणः क्षेत्रे वायुना जगदायुषा" भा० वन० १४९-२७।

**जगदीश ಜಗದೀಶ** (पुं०) ಜಗತ್ತಿಗೆ ಒಡೆಯನಾದ ಪರ ಮಾತ್ಮ. जगतामीशः। "जगदादिरनादिस्त्वं जगदीशो निरीश्वरः" कुमा० २-९।

**जगदीशितृ ಜಗದೀಶಿತೃ** (पुं०) ಜಗತ್ತಿಗೆ ಒಡೆಯನಾದ ಪರಮಾತ್ಮ. जगतामीशिता।

**जगदीश्वर ಜಗದೀಶ್ವರ** (पुं०) ಜಗತ್ತಿಗೆ ಒಡೆಯನಾದ ಪರಮಾತ್ಮ. जगतामीश्वरः। "गम्योऽसौ जगदीश्वरो जलनिधिर्वारां प्रवाहैरिव" प्रबोध० ५-९।

**जगदेकनाथ ಜಗದೇಕನಾಥ** (पुं०) ಜಗತ್ತಿಗೆ ಏಕಮಾತ್ರ ನಾದ ದೊರೆ,–ಒಬ್ಬನೇ ಆಗಿರುವ ರಾಜ, ಸಾರ್ವಭೌಮ.

जगतः एको नाथः। "एनोनिवृत्तेन्द्रियवृत्तिरेनं जगाद भूयो जगदेकनाथः" रघु० ५-२३।

**जगद्गुरु ಜಗದ್ಗುರು** (पुं०) 1. ಪರಮಾತ್ಮ, ಪರಬ್ರಹ್ಮ. जगतां गुरुः। "मेने परार्ध्यमात्मानं गुरुत्वेन जगद्गुरोः" रघु० १०-६४। 2. ವಿಷ್ಣು. "विपदः सन्तु नः शश्वत् तत्र तत्र जगद्गुरो। भवतो दर्शनं यत्स्यादपुनर्भवदर्शनम्" भाग० १-८-२५। 3. ಪರಶಿವ, ಪರಮೇಶ್ವರ, "अथ ते मुनयः सर्वे मानयित्वा जगद्गुरुम्" कुमा० ६-१५। 4. ಚತುರ್ಮುಖಬ್ರಹ್ಮ. "तस्मै नमो भगवते वासुदेवाय धीमहि। यन्मायया दुर्जयया मां ब्रुवन्ति जगद्गुरुम्" भाग० २-५-१२। 5. ನಾರದಮುನಿ. 6. ಜಗತ್ತಿನ ಉಪದೇಶಕ, ಜಗದಾಚಾರ್ಯ.

**जगद्द्रुह् ಜಗದ್ದ್ರುಹ್** (वि०) ಜಗತ್ತನ್ನು ಪೀಡಿಸುವವನು. जगद्भ्यो द्रुह्यति — द्रुह (जिघांसायाम्) "क्विप्" (३-२-६१)। "निजौजसोज्जासयितुं जगद्द्रुहा मुपाजहीथा न महीतलं यदि" माघ० १-३७।

**जगद्धातृ ಜಗದ್ಧಾತೃ** (पुं०) ವಿಷ್ಣು, ಪರಮೇಶ್ವರ, ಜಗತ್ತನ್ನು ಸೃಷ್ಟಿಸುವ ಬ್ರಹ್ಮ. जगतां धाता। स्त्रियाम् "ङीप्" (४-१-६)। **-धात्री - ಧಾತ್ರೀ.** ದುರ್ಗಾದೇವಿ.

**जगद्बल ಜಗದ್ಬಲ** (पुं०) ವಾಯು, ಗಾಳಿ. जगतां बलं यस्मात्। "वातस्तु नभःप्राणो जगद्बलः भोगिकान्तः कम्पलक्ष्मा" त्रिकाण्ड०।

**जगद्योनि ಜಗದ್ಯೋನಿ** (पुं०) 1. ಪರಮಾತ್ಮ, ಪರಮೇಶ್ವರ, ಪರಬ್ರಹ್ಮ. जगतां चराचराणां योनिः उत्पत्तिस्थानम्। 2. ಪರಶಿವ, ಈಶ್ವರ. "जगद्योनिरयोनिस्त्वं जगदन्तो निरन्तकः" कुमा० २-९।

**जगद्वन्द्य ಜಗದ್ವಂದ್ಯ** (वि०) ಜಗತ್ತಿನಿಂದ ನಮಸ್ಕರಿಸಲ್ಪಡುವ, ಪ್ರಪಂಚವೇ ನಮಸ್ಕರಿಸಲು ಯೋಗ್ಯನಾದ.

**जगद्वहा ಜಗದ್ವಹಾ** (स्त्री०) ಜಗತ್ತೆಲ್ಲವನ್ನೂ ಹೊತ್ತಿರುವ ಭೂಮಿ. जगन्ति वहति—वह (प्रापणे) "अच्" (३-१-१३४)।

**जगन्नाथ ಜಗನ್ನಾಥ** (पुं०) 1. ಪರಮಾತ್ಮ, ಪರಬ್ರಹ್ಮ. जगतां नाथः। 2. ಪರಶಿವ, ಈಶ್ವರ. 3. ರಸಗಂಗಾಧರವನ್ನು ರಚಿಸಿದ ಜಗನ್ನಾಥ ಪಂಡಿತ. "जगन्नाथस्यायं सुरधुनि समुद्धारसमयः" गङ्गाल०। (न०) 4. ಜಗನ್ನಾಥ ಕ್ಷೇತ್ರ.

**जगन्निवास ಜಗನ್ನಿವಾಸ** (पुं०) ಜಗತ್ತಿಗೆಲ್ಲಾ ವಾಸಸ್ಥಾನವಾದ ವಿಷ್ಣು, ಕೃಷ್ಣ. जगतां निवासः। "श्रियः पतिः श्रीमति शासितुं जगज्जगन्निवासो वसुदेवसद्मनि" माघ० १-१। ಪ್ರಳಯಕಾಲದಲ್ಲಿ ಸಕಲಜಗತ್ತೂ ಪರಮಾತ್ಮನ ಉದರದಲ್ಲಿರುವುದು. "दिशो न जाने न लभे च शर्म प्रसीद देवेश जगन्निवास" गीता ११-२५।

**जगन्नेत्र ಜಗನ್ನೇತ್ರ** (न० द्विव०) ಸೂರ್ಯ ಮತ್ತು ಚಂದ್ರ. जगतां नेत्रे। "भगवन्तौ जगन्नेत्रे सूर्यचन्द्रमसावपि" काव्या० २-१७२।

**जगन्मातृ ಜಗನ್ಮಾತೃ** (स्त्री०) 1. ಲಕ್ಷ್ಮಿ. 2. ಪಾರ್ವತಿ. जगतां माता।

**जगन्मोहिनी ಜಗನ್ಮೋಹಿನೀ** (स्त्री०) ಜಗತ್ತನ್ನು ಮೋಹಗೊಳಿಸುವ ಮಹಾಮಾಯೆ. जगन्ति मोहयति—मुह (वैचित्ये) + णिच् "णिनिः" (३-१-१३४)। "ङीप्" (४-१-५)। "वेदात्मा विहगेश्वरो यवनिका माया जगन्मोहिनी" चतुःश्लोकी।

**जगर ಜಗರ** (पुं०) ಯುದ್ಧಕವಚ. जागर्ति — जागृ (निद्राक्षये) "अच्" (३-१-१३४)। पृषो०।

**जगल ಜಗಲ** (पुं०) 1. ಮಂಗಾರೆ ಗಿಡ. 2. ಮೇದಕ, ಮದ್ಯವನ್ನು ತಯಾರಿಸಲು ಬೇಕಾದ ನಾನಾ ಪದಾರ್ಥಗಳು, ಮದ್ಯದ ಸಂಬಾರಗಳು. गल्यते—गल (अदने) यङ्लुक् "अच्" (३-१-१३४)। 3. ಪಿಷ್ಟಮದ್ಯ. (वि०) 4. ವಂಚಕ, ಕಪಟಿ, ಧೂರ್ತ. "जगलो मदनद्रुमे। मेदके पिष्टमद्ये च पुंसि धूर्तेऽभिधेयवत्" मेदि०।

**जग्ध ಜಗ್ಧ** (न०) 1. ಭೋಜನ, ಊಟ. अद (भक्षणे) भावे "क्तः" (३-३-११४)। (वि०) 2. ಭಕ್ಷಿಸಲ್ಪಟ್ಟ, ತಿನ್ನಲ್ಪಟ್ಟ. अद कर्म० "क्तः" (३-२-१०२)। उभयत्र अदो "जग्धिः" आदेशः (२-४-३६)। "पक्षिजग्धं गवाघ्रातमवधूतमवक्षुतम्" मनु० ५-१२५।

**जग्धि ಜಗ್ಧಿ** (स्त्री०) ಭೋಜನ, ಊಟ. अद (भक्षणे) भावे "क्तिन्" (३-३-९४)। "जग्धि" आदेशः (२-४-३६)। "अदत्वा तु य एतेभ्यः पूर्वं भुङ्क्ते विचक्षणः। स भुञ्जानो न जानाति श्वगृध्रैर्जग्धिमात्मनः" मनु० ३-११५।

**जग्मि ಜಗ್ಮಿ** (पुं०) 1. ವಾಯು, ಗಾಳಿ. गम्लृ (गतौ) "किन्" (३-२-१७१)। (वि०) 2. ಸಂಚರಿಸುವ, ನಡೆಯುವ, ಮುಂದೆಸಾಗುವ.

**जग्मिवस् ಜಗ್ಮಿವಸ್** (वि०) ಹೊಂದಿರುವ, ಸೇರಿರುವ, ತಲುಪಿರುವ. गम्लृ (गतौ) "क्वसुः" (३-२-१०७)।

"वक्तुं मार्गं किल वसुमतीं जग्मुषस्तत्पदाब्जात् मञ्जीरस्य त्वदुपमरुतेः दक्षिणस्यास्य तुल्यम्" हंस० २-२०।

**जघन ಜಘನ** (न०) 1. ಹೆಂಗಸರ ಸೊಂಟದ ಮುಂಭಾಗ. हन्यते—हन (हिंसागत्योः) "अच्" धातोर्द्वित्वं च (उ० ५-३२)। "आत्मनैव रुरुधे कृतिनेव स्वेदसङ्गि वसनं जघनेन" माघ० १०-४५। 2. ಕಟಿಪ್ರದೇಶ, ಪಿರ್ರೆ. "न हि न विदितखदमेतदीयस्तनजघनोद्वहने तवापि चेतः" माघ० ७-१२। "गलद्दुकूलैर्जघनैरिवादधे" किरा० ४-१२।

**जघनकूपक ಜಘನಕೂಪಕ** (पुं० द्विव०) ಹೆಂಗಸರ ಪಿರ್ರೆಗಳ ಮೇಲಿರುವ ಗುಳಿಗಳು.

**जघनचपला ಜಘನಚಪಲಾ** (स्त्री०) ಆರ್ಯಾವೃತ್ತದ ಒಂದು ಭೇದ. ಪೂರ್ವಾರ್ಧದಲ್ಲಿ ಪಥ್ಯಾರ್ಯಾಲಕ್ಷಣವೂ ಉತ್ತರಾರ್ಧದಲ್ಲಿ ಚಪಲಾರ್ಯಾಲಕ್ಷಣವೂ ಇರುವಲ್ಲಿ "**जघनचपला**" ವೃತ್ತವಾಗುವುದು. "प्राक्प्रतिपादितमर्धे प्रथमे प्रथमेतरे तु चपलायाः। लक्ष्म श्रयेत सोक्ता विशुद्धधीभिर्जघनचपला" वृ० र०।

**जघनफल ಜಘನಫಲ** (पुं०) ಹಲಸಿನಮರ. "पनसे कण्टकिफलो पयोण्डो जघनेफलः" वैज०।

**जघनेफला ಜಘನೇಫಲಾ** (स्त्री०) ಕಲ್ಲತ್ತಿಗಿಡ, ಬ್ರಹ್ಮಮಂಡಿ. जघन इव मध्यभागे फलमस्याः। "काकोदुम्बरिका फल्गुर्मलपूर्जघनेफला" अम०।

**जघन्य ಜಘನ್ಯ** (पुं०) 1. ಕೊನೆಯ ವರ್ಣದವನು. 2. ಪೃಷ್ಠಭಾಗ, ಹಿಂಭಾಗ. "ततो जघन्यं सहितैः समन्त्रिभिः पुरःप्रधानैश्च तथैव सैनिकैः" रामा०। 3. ರಾಜನ ಅನುಚರರಲ್ಲಿ ಒಬ್ಬ. "पश्चापरे वामनको जघन्यः कुब्जोऽपरो मण्डलकोऽथ साची" बृहत्सं० ६९-३१। (न०)4. ಶಿಶ್ನ, ಲಿಂಗ. (वि०)5. ಅಧಮ, ನೀಚ, ಕೆಳಮಟ್ಟದ. जघनमिव "यः" (५-३-१०३)। "जघन्यं सेवमानां तु संयतां वासयेद् गृहे" मनु० ८-३६५। 6. ಕೊನೆಯದಾದ. "जघन्यं मेहने क्लीबं चरमे गर्हितेन्यवत्" मेदि०। 7. ನಿಂದ್ಯ, ಗರ್ಹಿತ. "जघन्यं तु कुपूयं स्यादसारं लघु फल्गु च" वैज०।

**जघन्यगुण ಜಘನ್ಯಗುಣ** (पुं०) ಗುಣತ್ರಯದಲ್ಲಿ ಕೊನೆಯದಾದ ತಮೋಗುಣ. जघन्यश्चासौ गुणश्च। "जघन्यगुणवृत्तिस्था अधो गच्छन्ति तामसाः" गीता १४-१८।

**जघन्यज ಜಘನ್ಯಜ** (पुं०)1. ಕೊನೆಯ ವರ್ಣದಲ್ಲಿ ಹುಟ್ಟಿದವನು. 2. ಕಿರಿಯ ಸಹೋದರ, ತಮ್ಮ. जघन्ये जायते—जनी (प्रादुर्भावे) "ड:" (३-२-९७)। "जघन्यजे स्युः कनिष्ठयवीयोऽवरजानुजाः" अम०। (वि०) 3. ಕೊನೆಯಲ್ಲಿ ಹುಟ್ಟಿದ. "जघन्यजः कनीयसि। वृषले च" मेदि०।

**जघन्यभ ಜಘನ್ಯಭ** (न०) ಆರಿದ್ರೆ, ಆಶ್ಲೇಷೆ ಸ್ವಾತಿ ಜ್ಯೇಷ್ಠ ಭರಣಿ ಶತಭಿಷೆ ಈ ಆರು ನಕ್ಷತ್ರಗಳು. आर्द्राश्लेषा तथा स्वातिर्ज्येष्ठा च भरणी तथा। शततारा जघन्यानि तारासु कथितानि वै"।

**जघन्यभाव ಜಘನ್ಯಭಾವ** (पुं०) ಕಡಮೆದರ್ಜೆ, ಕೆಳಮಟ್ಟ.

**जघ्नि ಜಘ್ನಿ** (पुं०) ಅಸ್ತ್ರ, ಆಯುಧ. हन (हिंसागत्योः) "किन्" (३-२-१७१)। द्वित्वं च।

**जघ्नु ಜಘ್ನು** (वि०) ಘಾತುಕ, ಕೊಲ್ಲುವವನು. हन (हिंसागत्योः) "कुः" (उ० १-२२)।

**जङ्गम ಜಂಗಮ** (वि०) ಸಂಚರಿಸುವ, ತಿರುಗಾಡುವ. गम्लृ (गतौ) + यङ् "अच्" (३-१-१३४)। "मान्यः स मे स्थावरजङ्गमानां सर्गस्थितिप्रत्यवहारहेतुः" रघु० २-४४।

**जङ्गमकुटी ಜಂಗಮಕುಟೀ**(स्त्री०)ಛತ್ರಿ, ಕೊಡೆ. जङ्गमा कुटीव। "कावारीजङ्गमकुटी भ्रमत्कुटी" त्रिकाण्ड०।

**जङ्गमगुल्म ಜಂಗಮಗುಲ್ಮ** (पुं०) ಪದಾತಿಗಳ ಸಮೂಹ, ರಕ್ಷಣೆಗಾಗಿ ಇರುವ ಕಾಲಾಳುಗಳ ಗುಂಪು. जङ्गमानां गुल्मः। "एवंविधान्नृपो देशान्गुल्मैः स्थावरजङ्गमैः। तस्करप्रतिषेधार्थं चारैश्चाप्यनुचारयेत्" मनु० ९-२६६।

**जङ्गमेतर ಜಂಗಮೇತರ** (वि०) ಸ್ಥಿರವಾದ, ಚಲಿಸದಿರುವ. जङ्गमादितरः।

**जङ्गल ಜಂಗಲ** (त्रि०) 1. ನಿರ್ಜನಪ್ರದೇಶ. (न०) 2. ಅರಣ್ಯ, ಕಾಡು. (स्त्री०) –ला –ಲಾ. 3. ಮಾಂಸ. "जङ्गलं निर्जने देशे त्रिलिङ्गचां पिशिते स्त्रियाम्" मेदि०।

**जङ्गाल ಜಂಗಾಲ** (पुं०) 1. ಜಮೀನಿಗೆ ನೀರು ಕಟ್ಟಲು ಅವರ ಅಂಚಿನಲ್ಲಿ ಮಾಡಿರುವ ಅಳಿವೆ ಮತ್ತು ಅವರ ಮೇಲೆ ಸಂಚರಿಸಲು ಮಾಡಿರುವ ದಾರಿ, ಜಲದಾರಿ. 2. ಅಣೆಕಟ್ಟು, ನೀರು ತಡೆಯಲು ಕಟ್ಟುವ ಕಟ್ಟೆ.

**जङ्गित ಜಂಗಿತ** (पुं०) ಜಾತಿಯನ್ನು ಬಿಟ್ಟಿರುವವನು. "हीनवर्णास्तु जङ्गिताः" वैज०।

**जङ्घा ಜಂಘಾ** (स्त्री०) ಮೊಣಕಾಲು, ಕಣಕಾಲು. जनी (प्रादुर्भावे) "अच्" जङ्घादेशश्च (उ० ५-३१) "आक्रम्यैकामग्रपादेन जङ्घामन्यामुच्चैराददानः करेण" माघ० १८-५१।

**जङ्घाकर ಜಂಘಾಕರ** (पुं०) 1. ಓಡುವವನು, ವೇಗವಾಗಿ ನಡೆಯುವವನು. जङ्घां तत्साध्यगतिं करोति – डु कृञ् (करणे) "टः" (३-२-२१)। 2. ಸಂಚಾರ ರೂಪದ ತೆರಿಗೆ, ದಾರಿ ನಡೆದು ತೀರಿಸಲ್ಪಡುವ ತೆರಿಗೆ.

**जङ्घाकरिक ಜಂಘಾಕರಿಕ** (वि०) ಓಡುವ ಉದ್ಯೋಗದಿಂದ ಜೀವಿಸುವವನು, ದಾರಿ ನಡೆಯುವುದರಿಂದ ಬಂದ ಕೂಲಿಯಿಂದ ಜೀವಿಸುವವನು. जङ्घाकरोऽस्यास्ति "ठन्" (५-२-११५)।

**जङ्घात्राण ಜಂಘಾತ್ರಾಣ** (न०) ಮೊಣಕಾಲಿನ ಕವಚ, ಕಾಲುಚೀಲ. जङ्घा त्रायतेऽनेन – त्रैङ् (पालने) "ल्युट्" (३-३-११७)।

**जङ्घाबल ಜಂಘಾಬಲ** (न०) ಮೊಣಕಾಲಿನ ಬಲ, ಕಣಕಾಲಿನ ಶಕ್ತಿ. जङ्घाया बलम्।

**जङ्घामात्र ಜಂಘಾಮಾತ್ರ** (वि०) ಮೊಣಕಾಲಿನ ಪ್ರಮಾಣದ, ಮೊಣಕಾಲಿನಷ್ಟು ಆಳತೆಯುಳ್ಳ. जङ्घा प्रमाणमस्य "मात्रच्" (५-२-३७)।

**जङ्घाल ಜಂಘಾಲ** (वि०) 1. ವೇಗವಾಗಿ ನಡೆಯುವವನು, ಓಡುವವನು. 2. ಓಡುವ ಉದ್ಯೋಗದಿಂದ ಜೀವಿಸುವವನು. अतिशयिता जङ्घाऽस्त्यस्य "लच्" (५-२-९७)।

**जङ्घिल ಜಂಘಿಲ** (वि०) "जङ्घाल" ಪದದ ಅರ್ಥ. अतिशयिता जङ्घाऽस्त्यस्य "इलच्" (५-२-१००)।

**जज ಜಜ** (पुं०) ಯೋಧ, ಸೈನಿಕ. जजति – जज (युद्धे) "अच्" (३-१-१३४)। "जजौजोजाजिजिज्जाजी" माघ० १९-३।

**जज्ञि ಜಜ್ಞಿ** (वि०) 1. ಅಂಕುರಿಸುವ. 2. ತಿಳಿದಿರುವ.

**जञ्ज ಜಂಜ** (पुं०) 1. ಯೋಧ, ಸೈನಿಕ. जजि (युद्धे) "अच्" (३-१-१३४)। 2. ಯುದ್ಧ. जजि भावे "घञ्" (३-३-१८)।

**जञ्जन ಜಂಜನ** (वि०) ಪುನರ್ಜನ್ಮವುಳ್ಳ, ಮತ್ತೆ ಮತ್ತೆ ಹುಟ್ಟುವ. जनी (प्रादुर्भावे) यङ्लुक् "अच्" (३-१-१३४)। पृषो०।

**जञ्जपूक ಜಂಜಪೂಕ** (पुं०) ತಪಸ್ವಿ, ಮಂತ್ರಗಳನ್ನು ಜಪಿಸುವವನು. जप (व्यक्तायां वाचि) + यङ् "ऊकः" (३-२-१६६)। नुगागमः (७-४-८६)। "जञ्जपूकमभिसृत्य जघान" याद० २१-४०।

**जटा ಜಟಾ** (स्त्री०) 1. ನಿಯಮದಲ್ಲಿರುವವರ ಸಿಕ್ಕುಕಟ್ಟಿ ಹೆಣೆದುಕೊಂಡಿರುವ ತಲೆಕೂದಲು, ಜಡೆ. जट (संघाते) "अच्" (३-१-१३४)। "दधानमम्भोरुहकेसरद्युतीर्जटाः शरच्चन्द्रमरीचिरोचिषम्" माघ० १-५। 2. ಬೇರುಗಳ ಸಮೂಹ, ಗೊಂಚಲಾಗಿರುವ ಬೇರು. 3. ಜಟಾಮಾಂಸಿ. 4. ಬೇರು. 5. ಶಾಖೆ, ರೆಂಬೆ. 6. ಶತಾವರಿ ಗಿಡ. 7. ವೇದಪಾಠದ ಒಂದು ಕ್ರಮ. **-टी -ಟೀ.** 8. ಪ್ಲಕ್ಷವೃಕ್ಷ, ಜುಲ್ಲಿಗಿಡ. "जटा लग्नकचे मूले मांस्यां प्लक्षे पुनर्जटी" मेदि०।

**जटाजूट ಜಟಾಜೂಟ** (पुं०) ಹೆಣೆದು ಅಂಟಿಸಿದ ತಲೆಯ ಕೂದಲು, ಜಟೆಗಳ ಸಮೂಹ. जटानां जूटः। "जटाजूटापीडं भुजगपतिभोगोपमभुजं ददर्श श्रीमन्तं विपिनभुवि सीतासहचरम्" चं० रा०।

**जटाज्वाल ಜಟಾಜ್ವಾಲ** (पुं०) ದೀಪ. जटेव ज्वालाऽस्य। "जटाज्वालो दशाकर्षी कथितो बहुदृश्वभिः" हारा०।

**जटाटङ्क ಜಟಾಟಂಕ** (पुं०) ಪರಶಿವ, ಮಹಾದೇವ. जटा टङ्क इवास्य। "कण्ठमर्दैरैवतजटाटङ्काह्वयाः" त्रिकाण्ड०।

**जटाटीर ಜಟಾಟೀರ** (पुं०) ಪರಶಿವ, ಮಹಾದೇವ. जटामटति – अट (गतौ) "ईरन्" बाहु०।

**जटाधर ಜಟಾಧರ** (पुं०) 1. ಪರಶಿವ, ಮಹಾದೇವ. जटानां धरः। 2. ತಪಸ್ವಿ, ಮುನಿ. 3. ದಕ್ಷಿಣ ಭಾರತದ ಒಂದು ದೇಶ. "कौञ्चद्वीपजटाधरकावेर्यो रिष्यमूकश्च" बृहत्सं० १४-१३। (वि०) 4. ಜಟೆಗಳನ್ನು ಧರಿಸಿರುವ. "विहाय लक्ष्मीपतिलक्ष्म कार्मुकं जटाधरः सन् जुहुधीह पावकम्" किरा० १-४४।

**जटाधारिन् ಜಟಾಧಾರಿನ್** (वि०) ಜಟೆಗಳನ್ನು ಧರಿಸಿರುವ. जटाः धरति–धृञ् (धारणे) "णिनिः" (३-१-१३४)। "नष्टशौचा मूढधियो जटाभस्मास्थिधारिणः" भाग० ४-२-२९। स्त्रियाम् "ङीप्" (४-१-५)। **-धारिणी -ಧಾರಿಣೀ.**

**जटामण्डल ಜಟಾಮಂಡಲ** (न०) ಜಟೆಗಳ ಸಮೂಹ. जटानां मण्डलम्। "अंसव्यापि शकुन्तनीडनिचितं बिभ्रज्जटामण्डलम्" शाकु० ७-११।

**जटामांसी ಜಟಾಮಾಂಸೀ** (स्त्री०) ಸುಗಂಧಮುಸ್ತೆ.

**जटायु(स्) ಜಟಾಯು(ಸ್)** (पुं०) ಒಬ್ಬ ಪಕ್ಷಿರಾಜ, ವಿನತೆಯ ಮಗನಾದ ಅರುಣನಿಗೆ ಶ್ಯೇನಿಯಲ್ಲಿ ಹುಟ್ಟಿದ ಒಬ್ಬ ಮಗ, ಸಂಪಾತಿಯ ತಮ್ಮ. [ಸಂಪಾತಿಯೂ ಜಟಾಯುವೂ ತಮ್ಮ ವೇಗವನ್ನು ಪರೀಕ್ಷಿಸುವುದಕ್ಕಾಗಿ ಅಂತರಿಕ್ಷದಲ್ಲಿ ಹಾರಾಡುತ್ತಿದ್ದಾಗ ಸೂರ್ಯನ ತಾಪವನ್ನು ಸಹಿಸಲಾರದೆ ಜಟಾಯುವು ದಂಡಕಾರಣ್ಯದಲ್ಲಿ ಬಿದ್ದನು,

ಬಳಿಕ ಚೇತರಿಸಿಕೊಂಡು ಅಲ್ಲೇ ಒಂದು ಗುಹೆಯಲ್ಲಿ ವಾಸಿಸುತ್ತಿದ್ದನು. ಅಗಸ್ತ್ಯಮಹರ್ಷಿಯ ಆಶ್ರಮದಿಂದ ಪಂಚವಟಿಗೆ ಸೀತಾಲಕ್ಷ್ಮಣರೊಡನೆ ಬರುತ್ತಿದ್ದ ಶ್ರೀರಾಮನಿಗೆ ಜಟಾಯುವು ಕಾಣಿಸಿಕೊಂಡು ತಾನು ದಶರಥನ ಮಿತ್ರನೆಂದು ತನ್ನ ಪರಿಚಯ ಮಾಡಿಕೊಟ್ಟನು. ದಂಡಕಾರಣ್ಯದಲ್ಲಿ ಖರದೂಷಣಾದಿಗಳನ್ನು ಸಂಹರಿಸಿದ ಕಾರಣ ಕುಪಿತನಾದ ರಾವಣನು ಸೀತೆಯಿಂದ ಶ್ರೀರಾಮನನ್ನು ಅಗಲಿಸಿ ಸೀತಾಪಹರಣಮಾಡಿ ಕೊಂಡೊಯ್ಯುತ್ತಿದ್ದಾಗ ಸೀತೆಯನ್ನು ರಕ್ಷಿಸಲು ರಾವಣನೊಡನೆ ಹೋರಾಡಿ ಪ್ರಾಣ ತೆತ್ತನು. ಆಶ್ರಮದಲ್ಲಿ ಸೀತೆಯನ್ನು ಕಾಣದೆ ರಾಮಲಕ್ಷ್ಮಣರು ಅವಳನ್ನು ಹುಡುಕುತ್ತಾ ಬಂದಾಗ ಜಟಾಯುವಿನಿಂದ ಈ ವೃತ್ತಾಂತವನ್ನು ತಿಳಿದರು. ಶ್ರೀರಾಮನು ಅವನಿಗೆ ಸಂಸ್ಕಾರಗಳನ್ನು ಮಾಡಿ ಸದ್ಗತಿಯನ್ನು ಹೊಂದಿಸಿದನು.] "परिश्रान्तस्य मे पक्षौ छित्वा खड्गेन रावणः। सीतामादाय वैदेहीमुत्पपात विहायसम्" रामा०। "स्वयमपि शरभङ्गस्त्रीकृतां भङ्गहीनां सपदि गतिमवाप्तः संहृतायुर्जटायुः। नयनसलिलमिश्रं रामहस्तेन दत्तं दशरथदुरवापं प्राप नैवापमम्भः" चं० रा०।

**जटाल ಜಟಾಲ** (पुं०)1. ವಟವೃಕ್ಷ, ಆಲದಮರ. जटाः सन्त्यस्य "लच्" (५-२-९७)। 2. ಗುಗ್ಗುಳ, ಧೂಪದ ಪುಡಿ. (वि०) 3. ಜಟೆಗಳಿಂದ ಕೂಡಿದ. (स्त्री०) **—ला —ಲಾ.** 4. ಜಟಾಮಾಂಸಿ, ಸುಗಂಧಮುಸ್ತೆ.

**जटावत् ಜಟಾವತ್** (वि०) 1. ಜಟೆಗಳಿಂದ ಕೂಡಿದ, ಜಟೆಗಳನ್ನು ಧರಿಸಿರುವ. जटा अस्य सन्ति "मतुप्" (५-२-९४)। स्त्रियाम् "ङीप्" (४-१-६)। **—वती —ವತೀ.** 2. ಜಟಾಮಾಂಸಿ, ಸುಗಂಧಮುಸ್ತೆ.

**जटासुर ಜಟಾಸುರ**(पुं०)ಒಬ್ಬ ರಾಕ್ಷಸ. जटायुक्तोऽसुरः। [ಇವನು ಬ್ರಾಹ್ಮಣವೇಷವನ್ನು ತಾಳಿ ಧರ್ಮರಾಜನ ಆಶ್ರಮದಲ್ಲಿ ಕೆಲವು ಕಾಲ ಧರ್ಮವಿಚಾರವಾಗಿ ಚರ್ಚೆ ಮಾಡುತ್ತ ಅವರಿಗೆ ನಂಬಿಕೆ ಹುಟ್ಟಿಸಿ ಅಲ್ಲೇ ವಾಸಮಾಡುತ್ತಿದ್ದನು. ಭೀಮಸೇನನು ಇಲ್ಲದ ಸಮಯದಲ್ಲಿ ಪಾಂಡವರನ್ನು ಕೊಂದು ದ್ರೌಪದಿಯನ್ನು ಅಪಹರಿಸಲು ಮಾಡಿದ ಇವನ ಸಂಚನ್ನು ತಿಳಿಯದೆ ಯುಧಿಷ್ಠಿರನು ಇವನನ್ನು ಉಪಚರಿಸುತ್ತಲೇ ಇದ್ದನು. ಕೊನೆಗೆ ಅರ್ಜುನ ಮತ್ತು ಭೀಮಸೇನ ಇಬ್ಬರೂ ಇಲ್ಲದಿದ್ದಾಗ ಇವನು ದ್ರೌಪದಿ ಧರ್ಮರಾಜ ನಕುಲ ಸಹದೇವರನ್ನು ಹೊತ್ತುಕೊಂಡು ಹೊರಟೇಬಿಟ್ಟನು. ಅರಣ್ಯದಲ್ಲಿ ಹಣ್ಣುಗಳನ್ನು ತರಲು ಹೊರಟಿದ್ದ ಭೀಮಸೇನನು ದಾರಿಯಲ್ಲಿ ಈ ಅಸುರನನ್ನು ಕೊಂದು ಎಲ್ಲರನ್ನೂ ಬಿಡಿಸಿಕೊಂಡು ಬಂದನು.] **ವನಂ** ೧೫೮।

**जटि ಜಟಿ** (पुं०)1. ವಟವೃಕ್ಷ, ಆಲದಮರ. जट (संघाते) "इन्" (उ० ४-११७)। 2. ಜಟೆ, ಹೆಣೆದು ಅಂಟು ಹಾಕಿದ ತಲೆಯ ಕೂದಲು. 3. ಸಮೂಹ, ರಾಶಿ, ಗುಂಪು.

**जटिन् ಜಟಿನ್** (पुं०) 1. ತಪಸ್ವಿ, ತಪಸ್ಸುಮಾಡುವವನು, ಮುನಿ. जटा अस्य सन्ति "इनिः" (५-२-११६)। 2. ಪ್ಲಕ್ಷವೃಕ್ಷ, ಜುಲ್ಲೀಗಿಡ. (वि०) 3. ಜಟೆಗಳಿಂದ ಕೂಡಿದ, ಜಟೆಗಳನ್ನು ಧರಿಸಿದ. "सुरापानापनुत्त्यर्थं वालवासा जटी ध्वजी" मनु० ११-९२।

**जटिल ಜಟಿಲ**(पुं०)1. ಸಿಂಹ. जटा अस्य सन्ति "इलच्" (५-२-१००)। 2. ತಪಸ್ವಿ, ತಪಸ್ಸು ಮಾಡುವವನು, ಮುನಿ. 3. ಬ್ರಹ್ಮಚಾರಿ. "जटिलं चानधीयानं दुर्बलं कितवं तथा" मनु० ३-१५१। 4. ನಾಲ್ಕು ವಿಧ ಹೋತ (ಮೇಕೆ) ಗಳಲ್ಲೊಂದು. कुटिलः कुट्टकः जटिलः ಮತ್ತು वामनः ಎಂದು ನಾಲ್ಕು ವಿಧ ಹೋತಗಳು ಲಕ್ಷ್ಮೀಪುತ್ರರೆಂದು ಹೇಳಲ್ಪಟ್ಟಿವೆ. "कुट्टकः कुटिलश्चैव जटिलो वामनस्तथा। ते चत्वारः श्रियः पुत्राः नालक्ष्मीके वसन्ति हि" बृहत्सं० ६५-९। ಇಂತಹ ಮೇಕೆಗಳು ದರಿದ್ರನ ಮನೆಯಲ್ಲಿ ವಾಸಮಾಡುವುದಿಲ್ಲ. (वि०)5. ಜಟೆಗಳಿಂದ ಕೂಡಿದ. "जटिलान् कृत्तिवसनान् नियमं तीव्रमास्थितान्" याद० १६-४०। 6. ಕೂದಲುಗಳಿಂದ ತುಂಬಿದ. "मुण्डार्धमुण्डाञ्जटिलान् अशुचीन् जटिलाननान्। म्लेच्छानशातयत्सर्वान्समेतानस्त्रतेजसा" भा० द्रोण० ९३-४७। 7. ತಿರುಚಲ್ಪಟ್ಟ, ಒಟ್ಟಿಗೆ ಸೇರಿಸಿ ಹೊಸೆಯಲ್ಪಟ್ಟ. "अभीक्ष्णावगाहकपिशान् जटिलान् कुटिलालकान्। आत्मानं चोग्रतपसा बिभ्रती चीरिणं कृशम्" भाग० ३-३३-१४। 8. ಬಹಳ ತೊಡಕಾಗಿರುವ, ಬಗೆಹರಿಸಲು ಸಾಧ್ಯವಾಗದ. (स्त्री०)**—ला —ಲಾ.** 9. ಜಟೆಗಳಿಂದ ಕೂಡಿದ ಹೆಂಗಸು. 10. ಹಿಪ್ಪಲಿ. 11. ಬಜೆ. 12. ಜಟಾಮಾಂಸಿ, ಸುಗಂಧಮುಸ್ತೆ. "तपस्विनी-जटामांसी जटिला" अम०। 13. ಒಂದು ಗೆಡ್ಡೆಯೊಳಗೆ ಅನೇಕ ಮೋತೆಗಳುಳ್ಳ ಕೊನ್ನಾರಿ. "जटिला पिप्पलीमांस्योर्जटायुक्ते च वाच्यवत्" मेदि०।

**जटिलीकृत ಜಟಿಲೀಕೃತ**(वि०)ತೊಡಕಾಗಿ ಮಾಡಲ್ಪಟ್ಟ, ಬಗೆಹರಿಸಲು ಸಾಧ್ಯವಿಲ್ಲದಂತೆ ಮಾಡಲ್ಪಟ್ಟ.

**जटुल ಜಟುಲ**(पुं०)ಮೈಮೇಲಿನ ಹುಟ್ಟು ಮಚ್ಚೆ, ಸಂಗಾತಿ, ಮತ್ತಿ, जट (संघाते) "उलच्" बाहु०। पृषो० टस्य

डो वा। जडुल: ಜಡುಲಃ. "जटु(डु)ल: कालक: पिप्लु:" अम०।

**जठर ಜಠರ** (पुंन०) 1. ಕುಕ್ಷಿ, ಹೊಟ್ಟೆ. जायतेऽत्र जन्तुर्गर्भो वा — जनी (प्रादुर्भावे) "अर:" ठादेशश्च (उ० ५-३८)। "जठरं को न बिभर्ति केवलम्" पञ्चतं०। (पुं०) 2. ವೃದ್ಧ, ಮುದುಕ. 3. ಒಂದು ದೇಶ. "जठरा: कुकुराश्चैव सुदशार्णाश्च भारत" भा० भीष्म० ९-४२। (वि०) 4. ಕರ್ಕಶವಾದ, ಕಠಿನವಾದ. "जठर: कुक्षिवृद्धयो:। कठिने च" हेम०। "आस्तेऽस्या जठरे वीर्यमविषह्यं सुरद्विष:" भाग० ७-७-९।

**जठरगद ಜಠರಗದ** (पुं०) ಉದರವ್ಯಾಧಿ, ಹೊಟ್ಟೆಯಬೇನೆ.

**जठरज्वलन ಜಠರಜ್ವಲನ** (पुं०) ಹೊಟ್ಟೆಯಲ್ಲಿ ಆಹಾರವನ್ನು ಜೀರ್ಣಮಾಡುವ ಅಗ್ನಿ.

**जठरनुद् ಜಠರನುದ್** (पुं०) ಉದರವನ್ನು ಕೆರಳಿಸಿ ಉದರ ಬೇನೆಯನ್ನು ಹೋಗಲಾಡಿಸುವ ಕಕ್ಕೆ ಗಿಡ. जठरं नुदति—णुद (प्रेरणे) "क्विप्" (३-२-७६)।

**जठराग्नि ಜಠರಾಗ್ನಿ** (पुं०) ಹೊಟ್ಟೆಯಲ್ಲಿ ಆಹಾರವನ್ನು ಜೀರ್ಣಮಾಡುವ ಅಗ್ನಿ. जठरस्थितोऽग्नि:। "अन्नरसो जठराग्निना पच्यमानो रक्ततां प्रतिपद्यते"। ಜಠರಾಗ್ನಿಯು ವಾಯುವಿನಿಂದ ಪ್ರಜ್ವಲಿಸಲ್ಪಟ್ಟು ಅನ್ನವನ್ನು ಪಚನಮಾಡುವುದು. ವಾಯುವು ಅನ್ನದ ಮಧ್ಯವನ್ನು ಪ್ರವೇಶಿಸಿ ರಸಭಾಗವನ್ನೂ ಮಲಭಾಗವನ್ನೂ ಬೇರ್ಪಡಿಸುವುದಲ್ಲದೆ ಜಠರಾಗ್ನಿಯ ಮೇಲುಭಾಗದಲ್ಲಿ ಜಲಾಂಶವನ್ನು ಇರಿಸಿ ಅನ್ನವನ್ನು ಅದರ ಮೇಲುಗಡೆ ಇರಿಸುವುದು. ಜಲಾಂಶದ ಕೆಳಗಡೆ ತಾನು (ವಾಯುವು) ಇದ್ದುಕೊಂಡು ಅಗ್ನಿಯನ್ನು ಬಲಪಡಿಸುವುದು. ಈ ರೀತಿ ವಾಯುವಿನಿಂದ ವೃದ್ಧಿಪಡಿಸಲ್ಪಟ್ಟ ಅಗ್ನಿಯು ಜಲವನ್ನು ಬಿಸಿಮಾಡುವುದರಿಂದ ಅನ್ನವು ಸುಖವಾಗಿ ಪಚನವಾಗುವುದು. ಆಗ ಅನ್ನರಸವೂ ಮಲಭಾಗವೂ ಬೇರೆಬೇರೆಯಾಗುವುದು. ಈ ಅನ್ನರಸವು ನಾಡಿಗಳಲ್ಲಿ ತುಂಬಿಕೊಳ್ಳುವುದು. "आयुष्यं भुक्तमाहारं स वायु: कुरुते द्विधा। संप्रविश्यान्नमध्यं तु पृथक् किट्टं पृथक् मलम्। अग्नेरूर्ध्वं जलं स्थाप्य तदन्नं च जलोपरि। जलस्याध: स्वयं प्राण: स्थित्वाग्निं धमते शनै:। वायुनाऽऽध्मायमानोऽग्निरत्युष्णं कुरुते जलम्। अन्नं तदुष्णतोयेन समन्तात् पच्यते पुन:। द्विधा भवति तत् पक्वं पृथक् किट्टं पृथङ्मलम्। रसेन तेन ता नाड्य: संपूर्यन्ते क्रमेण च। प्रतर्पयन्ति संपूर्णास्ताश्च देहं समन्तत:" इति योगा०।

**जठरामय ಜಠರಾಮಯ** (पुं०) ಉದರರೋಗ, ಹೊಟ್ಟೆಯ ಬೇನೆ.

**जड ಜಡ** (पुं०) 1. ಹಿಮಗಾಲ, ಚಳಿಗಾಲ. जलति—जल (घातने) "अच्" (३-१-१३४)। लडयोरभेद:। (न०) 2. ಸೀಸಲೋಹ. 3. ಜಲ, ನೀರು. "नीचप्रवणता लक्ष्मि जडजायास्तवोचिता" चन्द्रा०। (वि०) 4. ಮೂರ್ಖ, ವಿವೇಕವಿಲ್ಲದವನು. 5. ಮಂದಬುದ್ಧಿಯುಳ್ಳವನು. "जडानप्यनुलोमार्थान् प्रवाच: कृतिनां गिर:" माघ० २-२५। 6. ಸ್ತಬ್ಧವಾದ, ನಿಶ್ಚಲವಾದ, ಕೆಲಸಮಾಡದಿರುವ, ಚಟುವಟಿಕೆಯಿಲ್ಲದ. "कण्ठ: स्तम्भितबाष्पवृत्तिकलुषश्चिन्ताजडं दर्शनम्" शाकु० ४-५। 7. ಶೀತಲವಾದ, ತಣ್ಣಗಿರುವ. "परामृशन् हर्षजडेन पाणिना तदीयमङ्गं कुलिशव्रणाङ्कितम्" रघु० ३-६८। 8. ಮೂಗ, ಮಾತಾಡುವ ಶಕ್ತಿಯಿಲ್ಲದವನು. 9. ಪೆದ್ದ, ದಡ್ಡ, ಮಂಕ. "नापृष्ट: कस्यचिद्ब्रूयान्नचान्यायेन पृच्छत:। जानन्नपि हि मेधावी जडवल्लोक आचरेत्" मनु० २-११०। 10. ಜೀವವಿಲ್ಲದ, ಅಚೇತನ, ಜೀವಿವರ್ಗಕ್ಕೆ ಸೇರದಿರುವ, 11. ಕಾವಿಲ್ಲದ, ಕೊರೆಯುವಷ್ಟು ಶೀತವಾದ, ಮಂಜುಕವಿದಿರುವ. (स्त्री०) **-डा -ಡಾ.** 12. ನಸುಗುನ್ನಿ ಗಿಡ. "जडो मूर्खे हिमाघ्राते जडा स्याच्छूकशिम्बिका" हेम०।

**जडक्रिय ಜಡಕ್ರಿಯ** (वि०) ನಿಧಾನವಾಗಿ ಕೆಲಸಮಾಡುವ, ಮಂದಪ್ರಕೃತಿಯವನಾದ. जडस्येव क्रिया यस्य।

**जडता ಜಡತಾ** (स्त्री०) 1. ಚಟುವಟಿಕೆಯಿಲ್ಲದಿರುವಿಕೆ. जडस्य भाव: "तल्" (५-१-११९)। 2. ಶೀತವಾಗಿರುವಿಕೆ. 3. ದಡ್ಡನಾಗಿರುವಿಕೆ. 4. ಮೂಗನಾಗಿರುವಿಕೆ. 5. ಜಲರೂಪವಾಗಿರುವಿಕೆ. "त्व:" (५-१-११९)। **जडत्वम् ಜಡತ್ವಮ್.** "किं न दर्शितमनेनोद्गच्छता जडत्वम्" रत्ना० ३।

**जडधी ಜಡಧೀ** (वि०) 1. ಅವಿವೇಕಿ. 2. ಮಂದಬುದ್ಧಿಯುಳ್ಳ. जडा धीर्यस्य।

**जडप्रकृति ಜಡಪ್ರಕೃತಿ** (वि०) ನಿಧಾನವಾಗಿ ಕೆಲಸಮಾಡುವವನು, ಚಟುವಟಿಕೆಯಿಲ್ಲದವನು. जडा प्रकृतिर्यस्य।

**जडभरत ಜಡಭರತ** (पुं०) ಒಬ್ಬ ಋಷಿ. [ಈ ಋಷಿಯು ಪೂರ್ವಜನ್ಮದಲ್ಲಿ ಭರತನೆಂಬ ಹೆಸರಿನಿಂದ ಋಷಭದೇವ ರಾಜನ ಮಗನಾಗಿ ಹುಟ್ಟಿದ್ದನು. ಇವನು ತಂದೆಯ ನಂತರ ಕೆಲವುಕಾಲ ರಾಜ್ಯವನ್ನಾಳುತ್ತಿದ್ದು ತಾನು ಆಳುತ್ತಿದ್ದ ಅಜನಾಭ ದೇಶವನ್ನು ತನ್ನ ಮಕ್ಕಳಿಗೆ ಹಂಚಿಕೊಟ್ಟು

ಅರಣ್ಯಕ್ಕೆ ತಪಸ್ಸಿಗೆ ಹೋದನು. ಈತನ ಹೆಸರಿನಿಂದಲೇ ಈ ವರ್ಷಕ್ಕೆ "**ಭಾರತವರ್ಷ**" ವೆಂದು ಹೆಸರಾಯಿತು. ಒಂದು ದಿನ ಇವನು ನದಿಯಲ್ಲಿ ಸ್ನಾನಮಾಡುತ್ತಿದ್ದಾಗ ಗರ್ಭಧರಿಸಿದ್ದ ಜಿಂಕೆಯೊಂದಕ್ಕೆ ಸಿಂಹನಾದಶ್ರವಣದಿಂದ ಗರ್ಭಪತನವಾಗಿ ಅದು ಆ ಕೂಡಲೆ ಮೃತಿಹೊಂದಿತು. ಭರತನು ಆ ಜಿಂಕೆಯ ಮರಿಯನ್ನು ತಂದು ಬಹಳ ಪ್ರೀತಿಯಿಂದ ಸಾಕುತ್ತಿದ್ದನು. ಆದರಲ್ಲಿ ಇವನಿಗೆ ಮಮತೆಯು ಬೆಳೆಯುತ್ತ ಬಂದು ತನ್ನ ದೇಹತ್ಯಾಗದ ಕಾಲದಲ್ಲಿ ಅದನ್ನೇ ಸ್ಮರಿಸುತ್ತ ಇದ್ದುದರಿಂದ ಮುಂದಿನ ಜನ್ಮದಲ್ಲಿ ಒಂದು ಜಿಂಕೆಯಾಗಿ ಹುಟ್ಟಿದನು. ಅದಕ್ಕೆ ಮುಂದಿನ ಜನ್ಮದಲ್ಲಿ ಭರತನು ಅಂಗಿರಸನೆಂಬ ಬ್ರಾಹ್ಮಣನ ಮಗನಾಗಿ ಹುಟ್ಟಿ ಪರಮವೇದಾನ್ತಿಯಾಗಿ ಹುಚ್ಚನಂತೆ ಅಲೆಯುತ್ತಿದ್ದನು. ಇದರಿಂದ ಇವನಿಗೆ "**ಜಡಭರತ**" ನೆಂಬ ಹೆಸರಾಯಿತು. ರಹೂಗಣನೆಂಬ ರಾಜನೊಬ್ಬನು ವೇದಾನ್ತರಹಸ್ಯವನ್ನು ತಿಳಿದುಕೊಳ್ಳಲು ಕಪಿಲಮಹರ್ಷಿಯಲ್ಲಿಗೆ ಪಲ್ಲಕ್ಕಿಯಲ್ಲಿ ಹೋಗುತ್ತಿದ್ದಾಗ ಬೋಯಿಗಳು ದಾರಿಯಲ್ಲಿ ಇವನನ್ನು ಹಿಡಿದು ಪಲ್ಲಕ್ಕಿಯನ್ನು ಹೊರಿಸಿದರು. ಜಡಭರತನು ಹಳ್ಳತಿಟ್ಟುಗಳನ್ನೂ ಕಲ್ಲುಮುಳ್ಳುಗಳನ್ನೂ ಲಕ್ಷ್ಯಮಾಡದೆ ನಡೆಯುತ್ತಿದ್ದುದರಿಂದ ಆಯಾಸಗೊಂಡ ರಾಜನು ಬಹಳವಾಗಿ ಬಯ್ಯುತ್ತಿದ್ದರೂ ಇವನು ಕೋಪಿಸಿಕೊಳ್ಳದೆ "ಈ ಬೈಗಳೆಲ್ಲಾ ಈ ಶರೀರಕ್ಕಲ್ಲದೆ ಆತ್ಮನಿಗಲ್ಲ" ಎಂದು ಹೇಳಲು ಈತನು ಮಹಾ ವೇದಾನ್ತಿಯೆಂದು ತಿಳಿದ ರಹೂಗಣನು ಪಲ್ಲಕ್ಕಿಯಿಂದ ಇಳಿದು ಈತನಿಗೆ ನಮಸ್ಕರಿಸಿ ತನ್ನ ಅಪರಾಧಕ್ಕಾಗಿ ಕ್ಷಮೆ ಕೇಳಿದನು]. भाग० ५।

**जडा ಜಡಾ** (स्त्री०) ನಸುಗುನ್ನಿ ಗಿಡ. जडं करोति—जड+णिच् "अच्" (३-१-१३४)।

**जडिमन् ಜಡಿಮನ್** (पुं०) 1. ಜಾಡ್ಯ, ಮಂಕುತನ, ಜಡತೆ, ಯಾವ ಕಾರ್ಯದಲ್ಲೂ ಆಸಕ್ತಿಯಿಲ್ಲದಿರುವುದು. जडस्य भाव: "इमनिच्" (५-१-१२३)। "इष्टानिष्टापरिज्ञानं यत्र प्रश्नेष्वनुत्तरम्। दर्शनश्रवणाभावो जडिमा सोऽभिधीयते"। 2. ಶೈತ್ಯ, ಚಳಿ. "देशे देशे जडिमकुरङ्गास्तेजोभल्लैर्दिनकरभिल्ले। धावं धावं प्रहरति राज्ञां धारागेहं शरणमवापु:" चं० भा०।

**जडीकृत ಜಡೀಕೃತ** (वि०) 1. ಸ್ತಬ್ಧವಾಗಿ ಮಾಡಲ್ಪಟ್ಟ, ನಿಶ್ಚಲವಾಗಿ ಮಾಡಲ್ಪಟ್ಟ, ಚಲಿಸದಂತೆ ಮಾಡಲ್ಪಟ್ಟ. अजड: जड: कृत:—जड+डु कृञ् (करणे) "च्वि:" (५-४-५०)। "क्त:" (३-२-१०२)। ईत् (७-४-३२)। "जडीकृतस्त्र्यम्बकवीक्षणेन वज्रं मुमुक्षन्निव वज्रपाणि:" रघु० २-४२। 2. ಕಿವುಡಾಗಿ ಮಾಡಲ್ಪಟ್ಟ. "जडीकृतश्रवणपथे दिवौकसां चमूरवे विशति सुराद्रिकन्दरा:" माघ० १७-३३।

**जतु ಜತು** (न०) 1. ಅರಗು. 2. ಕೆಂಪುಬಣ್ಣ. जनी (प्रादुर्भावे) "उ:" तकरादेशश्च (उ० १-१८)।

**जतुक ಜತುಕ** (न०) 1. ಹಿಂಗು. 2. ಅರಗು. जत्विव "कन्" (५-३-९६)। (स्त्री०) **—का — ಕಾ.** 3. ಬಾವಲಿ, ಕಪಟದ ಹಕ್ಕಿ. "जतुकं हिङ्गुलाक्षयो:। जतुका च चर्मचटिका" हेम०। 4. ಮುಳ್ಳಗಸೆ ಗಿಡ.

**जतुकारी ಜತುಕಾರೀ** (स्त्री०) ಮುಳ್ಳಗಸೆ ಗಿಡ. जतुवत् संश्लेषं करोति—डु कृञ् (करणे) "अण्" (३-२-१)। गौरा० "ङीष्" (४-१-४१)।

**जतुकृत् ಜತುಕೃತ್** (स्त्री०) ಮುಳ್ಳಗಸೆ ಗಿಡ. जतुवत् संश्लेषं करोति—डु कृञ् (करणे) "क्विप्" (३-२-७६)।

**जतुकृष्णा ಜತುಕೃಷ್ಣಾ** (स्त्री०) ಮುಳ್ಳಗಸೆ ಗಿಡ. जत्विव कृष्णा।

**जतुगृह ಜತುಗೃಹ** (न०) ಅರಗಿನ ಮನೆ, ಅರಗಿನಿಂದ ತಯಾರಿಸಲ್ಪಟ್ಟ ಮನೆ. [ದುರ್ಯೋಧನನು ಪಾಂಡವರನ್ನು ಕೊಲ್ಲಿಸಬೇಕೆಂದು ವಾರಣಾವತದಲ್ಲಿ ಅರಗಿನ ಮನೆಯನ್ನು ತಯಾರಿಸಿ ಅಲ್ಲಿ ಸಕಲ ಭೋಗವಸ್ತುಗಳನ್ನೂ ಸಿದ್ಧಪಡಿಸಿ ಪಾಂಡವರು ಮಲಗಿದ್ದಾಗ ಮನೆಗೆ ಬೆಂಕಿಯನ್ನಿಡಬೇಕೆಂದು ಯೋಚಿಸಿದ್ದನು. ವಿದುರನಿಂದ ಈ ರಹಸ್ಯವನ್ನು ತಿಳಿದ ಭೀಮಸೇನನು ಸುರಂಗಮಾರ್ಗದಿಂದ ಎಲ್ಲರನ್ನೂ ಹೊತ್ತು ಸಾಗಿಸಿ ರಕ್ಷಿಸಿದನು. ಪಾಂಡವರೆಲ್ಲರೂ ಈ ಅಪಾಯದಿಂದ ಪಾರಾದರು.]

**जतुरस ಜತುರಸ** (पुं०) ಅರಗಿನ ರಸ.

**जतूका ಜತೂಕಾ** (स्त्री०) 1. ಬಾವಲಿ, ಕಪಟದ ಹಕ್ಕಿ. 2. ಮುಳ್ಳಗಸೆ ಗಿಡ. जनी (प्रादुर्भावे) "ऊक:" (उ० ४-४१)। पृषो०।

**जत्रु ಜತ್ರು** (न०) ಕೊರಳಿನ ಎಲುಬು, ಹೆಗಲು ಮತ್ತು ಎದೆ ಇವುಗಳ ಮಧ್ಯದ ಎಲುಬು. जनी (प्रादुर्भावे) "रु:" नकारस्य तकार: (उ० ४-१०२)। निपा०।

**जन ಜನ** (पुं०) 1. ಮನುಷ್ಯ. जायते—जनी (प्रादुर्भावे) "अच्" (३-१-१३४)। "न यावदेतावुदपश्यदुत्थितौ जनस्तुषाराञ्जनपर्वताविव" माघ० १-१५। 2. ಜನೋಲೋಕ, ಮಹರ್ಲೋಕದ ಮೇಲಿನ ಲೋಕ. "मूलाधारे तु भूर्लोको लिङ्गाग्रे तु भुवस्तथा। स्वर्लोको लिङ्गमूले

तु मेरुमूले महस्तथा। मेरुच्छिद्रे जनोलोको मेरुनाड्यां तपस्तथा। कमले सत्यलोकस्तु इति लोकाः पृथक् पृथक्"। 3. ಸ್ತ್ರೀ ಅಥವಾ ಪುರುಷ ವ್ಯಕ್ತಿ. "नेता जनस्तव समीपमुपैष्यतीति" शाकु० ६-१२। "जनोऽप्यमुच्चैः पदलङ्घनोत्सुकः" कुमा० ५-६४। 4. ಜನರ ಗುಂಪು. ಏಕವಚನ ಮತ್ತು ಬಹುವಚನಗಳಲ್ಲಿ ಪ್ರಯೋಗವುಂಟು. **ಏಕವಚನದಲ್ಲಿ:** "विश्रान्तविग्रहकथो रतिमान् जनस्य चित्ते वसन्" रत्ना० १-८। **ಬಹುವಚನದಲ್ಲಿ:** "किमेतदित्याकुलमीक्षितं जनैः" माघ० १-२। 5. ಜನನ, ಜನ್ಮ, ಉತ್ಪತ್ತಿ. जनी भावे "घञ्" (३-३-१८)।

**जनक ಜನಕ** (पुं०) 1. ತಂದೆ. जनयति—जनी (प्रादुर्भावे) "ण्वुल्" (३-१-१३३)। "जनक इव शिशुत्वे सुप्रियस्यैकसूनोरविनयमपि सेहे पाण्डवस्य स्मरारिः" किरा० १७-६४। 2. ವಿದೇಹಾಧಿಪತಿ, ಜನಕಮಹಾರಾಜ. "जग्राह जनकात्सीतां तातादेशेन राघवः" चं० रा०। [ಇಕ್ಷ್ವಾಕುರಾಜನ ಮಗನಾದ ನಿಮಿಯು ವಸಿಷ್ಠರನ್ನು ಬಿಟ್ಟು ಗೌತಮ ಮಹರ್ಷಿಯ ಮೂಲಕ ಯಾಗ ನಡೆಸಿದುದರಿಂದಲೂ ಯಾಗದ ಕೊನೆಯಲ್ಲಿ ನಿದ್ರಿಸುತ್ತಿದ್ದುದರಿಂದಲೂ ಅವನಿಗೆ ವಸಿಷ್ಠರು ವಿದೇಹನಾಗುವಂತೆ ಶಾಪವಿತ್ತರು. ರಾಜ್ಯವು ಅರಾಜಕವಾಗಲು ಋಷಿಗಳು ರಾಜನ ಬಲತೊಡೆಯನ್ನು ಅರಣಿಯಿಂದ ಕಡೆದರು. ಆ ಮಥನದಿಂದ ಜನಿಸಿದ ಪುರುಷನಿಗೆ ಮಿಥಿ, ಜನಕ ಮತ್ತು ವಿದೇಹನೆಂಬ ಹೆಸರಿಟ್ಟು ಅವನನ್ನೇ ರಾಜನನ್ನಾಗಿ ಮಾಡಿದರು. ಮುಂದೆ ಆ ರಾಜನ ವಂಶದವರೆಲ್ಲರಿಗೂ ಮೈಥಿಲ, ಜನಕ, ವೈದೇಹ ಎಂಬ ಹೆಸರಾಯಿತು]. (वि०)3. ಉತ್ಪತ್ತಿ ಮಾಡುವ, ಉಂಟುಮಾಡುವ. "जन्यानां जनकः कालो जगतामाश्रयो मतः" भाषाप०।

**जनकजा ಜನಕಜಾ** (स्त्री०) ಜನಕಮಹಾರಾಜನ ಮಗಳು, ಸೀತಾದೇವಿ. जनकाज्जायते—जनी (प्रादुर्भावे) "डः" (३-२-९८)।

**जनकतनया ಜನಕತನಯಾ, -सुता -ಸುತಾ** (स्त्री०) ಜನಕಮಹಾರಾಜನ ಮಗಳು, ಸೀತಾದೇವಿ. जनकस्य तनया सुता वा। एवं **जनकनन्दिनी ಜನಕನಂದಿನೀ, जनकपुत्री ಜನಕಪುತ್ರೀ** ಇತ್ಯಾದಿ. "यक्षश्चक्रे जनकतनयास्नानपुण्योदकेषु" मेघ० १-१।

**जनकात्मजा ಜನಕಾತ್ಮಜಾ** (स्त्री०) ಜನಕಮಹಾರಾಜನ ಮಗಳು, ಸೀತಾದೇವಿ, ಶ್ರೀರಾಮಚಂದ್ರನ ಪತ್ನಿ. जनकस्यात्मजा।

**जनङ्गम ಜನಂಗಮ** (पुं०) ಚಂಡಾಲ. जनेभ्यो गच्छति अधार्मिकान् जनान् गच्छति वा—गम्लृ (गतौ) "खच्" (३-२-४७)। मुमागमः (६-३-६७)। "अवधीज्जनङ्गम इवैष यदि हतवृषो वृषं ननु" माघ० १५-३५।

**जनचक्षुस् ಜನಚಕ್ಷುಸ್** (न०) ಸೂರ್ಯ. जनानां चक्षुरिव। एवं लोकचक्षुः ಲೋಕಚಕ್ಷುಃ. "लोकचक्षुर्दिवाकरः" रामा०।

**जनजन्मादि ಜನಜನ್ಮಾದಿ** (पुं०) ವಿಷ್ಣು, ಪರಮಾತ್ಮ. जनस्य जन्मनः आदिः। "जननो जनजन्मादिः" वि० स०।

**जनता ಜನತಾ** (स्त्री०) ಜನರ ಗುಂಪು. जनानां समूहः "तल्" (४-२-४३)। "उपपादिता विदधता भवतीः सुरसद्मयानसुमुखी जनता" किरा० ६-४२।

**जनदेव ಜನದೇವ** (पुं०) ರಾಜ, ದೊರೆ. जनानां देव इव। "वचस्तवैतज्जनदेव सूनृतं कुलोचितं धर्मयुत यशस्करम्" भाग० ८-१९-२।

**जनन ಜನನ** (पुं०) 1. ವಿಷ್ಣು, ಪರಮಾತ್ಮ. जनयति जीवान्—जनी (प्रादुर्भावे)+णिच् "ल्युः" (३-१-१३४)। "जननो जनजन्मादिः" वि० स०। (न०)2. ಹುಟ್ಟುವುದು, ಜನ್ಮಪಡೆಯುವುದು. जनी भावे "ल्युट्" (३-३-११५)। "पुनरपि जननं पुनरपि मरणं पुनरपि जननीजठरे शयनम्" भजगो०। "अभजदेव निशा दिवसश्रियं जननभाजिनि देवदिवाकरे" याद० ३-१। 3. ಉತ್ಪತ್ತಿಮಾಡುವುದು, ಸೃಷ್ಟಿಸುವುದು. जनी+णिच् भावे "ल्युट्"। "अन्योन्यशोभाजननाद्बभूव परस्परं भूषणभूष्यभावः" कुमा० १-४२। 4. ವಂಶ. जनी अधि० "ल्युट्"। (वि०)5. ಉತ್ಪತ್ತಿಮಾಡುವ, ಸೃಷ್ಟಿಸುವ. 6. ಪ್ರಸವಿಸುವ. जनी कर्त० "ल्युः" (३-१-१३४)। स्त्रियाम् **जननी ಜನನೀ.** "एकादशे स्त्रीजननी सद्यस्त्वप्रियवादिनी" मनु० ९-८१।

**जननाथ ಜನನಾಥ** (पुं०) ಜನರ ಒಡೆಯ, ರಾಜ, ದೊರೆ. जनानां नाथः। "जननाथ तवानुजन्मनाम्" किरा० २-१७।

**जननाशौच ಜನನಾಶೌಚ** (न०) ಸೂತಕ, ಜ್ಞಾತಿಗಳಿಗೆ ಪುತ್ರೋತ್ಪತ್ತಿಯಾದಾಗ ಸಂಭವಿಸುವ ಪುರುಡು. जनननिमित्तमाशौचम्।

**जनान्तर ಜನನಾಂತರ** (न०) ಬೇರೆ ಜನ್ಮ, ಹಿಂದಿನ ಅಥವಾ ಮುಂದಿನ ಜನ್ಮ. अन्यज्जननम्। "भावस्थिराणि जननान्तरसौहृदानि" शाकु० ५-२।

**जननिर्वाद ಜನನಿರ್ವಾದ** (पुं०) ಲೋಕಾಪವಾದ, ಜನರ ನಿಂದೆ. जनानां निर्वादः। "अपयान्त्यचिरान्महीभुजां जननिर्वादभयादिव श्रियः" किरा० २-१०।

**जननी ಜನನೀ** (स्त्री०) 1. ತಾಯಿ. जनयति-जनी (प्रादुर्भावे) + णिच् "ल्युट्" (३-३-११३)। "ङीप्" (४-१-१५)। "प्रचारितः प्रस्नुतया जनन्या पदे पदे विश्रममाचकाङ्क्षे" याद० ४-२४। 2. ದಯೆ, ಕರುಣೆ, ಕನಿಕರ. "जननी तु दयामात्रोर्जननं वंशजन्मनोः" मेदि०। 3. ಉತ್ಪಾದನ ಮಾಡುವ ಹೆಂಗಸು, ಸೃಷ್ಟಿಸುವ ಹೆಂಗಸು, ಲೋಕಕ್ಕೆ ತಾಯಿಯಾದ ಹೆಂಗಸು, ಲೋಕಮಾತೆ. "वदामस्ते किं वा जननि वयमुच्चैर्जडधियः"। 4. ಬಾವಲಿ, ಕಪಟದ ಹಕ್ಕಿ. 5. ಜಟಾಮಾಂಸಿ.

**जननीय ಜನನೀಯ** (वि०) 1. ಉತ್ಪಾದಿಸಲ್ಪಡುವ, ಸೃಷ್ಟಿಸಲ್ಪಡುವ, ಉಂಟುಮಾಡಲ್ಪಡುವ. 2. ಸೃಷ್ಟಿಸಲು ಯೋಗ್ಯವಾದ. जनी (प्रादुर्भावे) कर्मादौ "अनीयर्" (३-१-९६)।

**जनपद ಜನಪದ** (पुं०) 1. ದೇಶ, ಜನರು ವಾಸಿಸುವ ಸ್ಥಳ. जनाः पद्यन्तेऽत्र—पद (गतौ) "घः" (३-३-११८)। जनस्य लोकस्य पदं आश्रयस्थानं यत्र। जनः पदं वस्तु यत्रेति वा। "स्रोतोवेगादथ जनपदं सौम्य सीमन्तयन्ती प्रत्यादेशे विबुधसरितः स्यन्दते सह्यकन्या" हंस० १-४२। "त्यजेदेकं कुलस्यार्थे ग्रामस्यार्थे कुलं त्यजेत्। ग्रामं जनपदस्यार्थे आत्मार्थे पृथिवीं त्यजेत्" चाणक्य०। 2. ರಾಜ್ಯ. 3. ಗ್ರಾಮಗಳ ಸಮೂಹ. "पुण्यावासैः पुरजनपदैर्मण्डितान् पाण्ड्यदेशान्" हंस० १-५०।

**जनपदिन् ಜನಪದಿನ್** (पुं०) ರಾಜ್ಯದ ಒಡೆಯ, ರಾಜ, ದೊರೆ. जनपदाः सन्त्यस्य "इनिः" (५-२-११५)। "जनपदिनां जनपदवत् सर्वं जनपदेन समानशब्दानां बहुवचने" पा० सू० ४-३-१००।

**जनप्रवाद ಜನಪ್ರವಾದ** (पुं०) 1. ಲೋಕಾಪವಾದ, ಜನರ ನಿಂದೆ. 2. ಲೋಕವಾದ, ಜನರು ಆಡಿಕೊಳ್ಳುವ ಮಾತು. जनानां प्रवादः।

**जनप्रिय ಜನಪ್ರಿಯ** (पुं०) 1. ಧಾನ್ಯಾಕ, ಧನಿಯ, ಕೊತ್ತುಂಬರಿಬೀಜ. 2. ನುಗ್ಗೆಮರ. (वि०) 3. ಜನರಿಗೆ ಪ್ರಿಯನಾದ, ಜನರ ಪ್ರೀತಿಗೆ ಪಾತ್ರನಾದ. जनानां प्रियः। "उपाससादोपजनं जनप्रियः प्रियामिवासादितयौवनां भुवम्" किरा० ४-१।

**जनमेजय ಜನಮೇಜಯ** (पुं०) 1. ಅರ್ಜುನನ ಮಗನಾದ ಅಭಿಮನ್ಯುವಿನ ಮೊಮ್ಮಗ, ಅಭಿಮನ್ಯುವಿನ ಮಗನಾದ ಪರೀಕ್ಷಿತ್ತಿನ ಮಗ, ಚಂದ್ರವಂಶದ ಒಬ್ಬ ದೊರೆ. जनमेजयति—एज् (कम्पने) + णिच् "खश्" (३-२-२८)। मुमागमः (६-३-६७)। [ಈ ರಾಜನು ತನ್ನ ತಂದೆಯ ಮರಣಕ್ಕೆ ಕಾರಣವಾದ ಸರ್ಪದ ಮೇಲಿನ ಕೋಪದಿಂದ ಸರ್ಪಗಳ ಕುಲವನ್ನೇ ನಾಶಪಡಿಸುವ ಉದ್ದೇಶದಿಂದ ಸರ್ಪಯಾಗವನ್ನು ಮಾಡಿದನು.] "एतस्मिन्नेव काले तु स राजा जनमेजयः। उवाच मन्त्रिणः सर्वानिदं वाक्यमरिन्दमः" ........। "एवमुक्त्वा ततः श्रीमान् मन्त्रिभिश्चानुमोदितः। आरुरोह प्रतिज्ञां स सर्पसत्राय पार्थिवः" भा० आदि० ५०, ५१। 2. ಕುರುರಾಜನ ಒಬ್ಬ ಮಗ. "ततः संवरणात्सौरी तपती सुषुवे कुरुम्। राजत्वे तं प्रजाः सर्वा धर्मज्ञ इति वव्रिरे॥ अश्ववन्तमभिष्यन्तं तथा चैत्ररथं मुनिम्। जनमेजयं च विख्यातं पुत्रांश्चास्यानुशुश्रुम" भा० आदि० १०१। 3. ಪೂರುವಿನ ಮಗ, ಚಂದ್ರವಂಶದ ಒಬ್ಬ ದೊರೆ. "पूरोर्भार्या कौसल्या बभूव। तस्यामस्य जनमेजयो जज्ञे" भा० आदि० ६३-८। 4. ಪಾಂಡವರ ಪಕ್ಷದ ಒಬ್ಬ ರಾಜ.

**जनयत् ಜನಯತ್** (वि०) ಉಂಟುಮಾಡುವ, ಉತ್ಪತ್ತಿ ಮಾಡುವ. जनी (प्रादुर्भावे) + णिच् "शतृ" (३-२-१२४)। "बिभर्ति जनयन्नयं मुदमपामपायधवला बलाहकततीः" माघ० ४-५४। "विप्रियाणि जनयन्ननुनेयः" किरा० ९-३९। स्त्रियाम् "ङीप्" (४-१-६)। **–यन्ती –ಯಂತೀ.**

**जनयति ಜನಯತಿ** (स्त्री०) ಉತ್ಪಾದನ, ಸೃಷ್ಟಿ.

**जनयितव्य ಜನಯಿತವ್ಯ** (वि०) 1. ಸೃಷ್ಟಿಸಲ್ಪಡುವ, ಉತ್ಪತ್ತಿಮಾಡಲ್ಪಡುವ. जनी (प्रादुर्भावे) + णिच् "तव्यः" (३-१-९६)। "बाढम्, सा खलु विवेकेनोपनिषद्देव्यां प्रबोधचन्द्रेण भ्रात्रा समं जनयितव्या" प्रबोध० १। 2. ಉತ್ಪತ್ತಿಮಾಡಬೇಕಾದ, ಸೃಷ್ಟಿಸಬೇಕಾದ.

**जनयितृ ಜನಯಿತೃ** (पुं०) 1. ತಂದೆ. जनी (प्रादुर्भावे) + णिच् "तृच्" (३-१-१३३)। "गोत्ररिक्थे जनयितुः न हरेद्दत्त्रिमः क्वचित्" मनु० ९-१४२। (वि०) 2. ಸೃಷ್ಟಿಸುವವನು, ಉಂಟುಮಾಡುವವನು, ಉತ್ಪತ್ತಿಮಾಡುವವನು. (स्त्री०) **–यित्री –ಯಿತ್ರೀ.** 3. ತಾಯಿ. जनयितृ "ङीप्" (४-१-५)। "जनयित्रीमलंचक्रे यः प्रश्रय इव श्रियम्" रघु० १०-७०।

**जनवाद ಜನವಾದ** (पुं०) "जनप्रवाद" ಪದದ ಅರ್ಥ.

**जनश्रुत ಜನಶ್ರುತ** (वि०) ಲೋಕವಿಖ್ಯಾತ, ಲೋಕ ಪ್ರಸಿದ್ಧ.

**जनश्रुति ಜನಶ್ರುತಿ** (स्त्री०) ಸಮಾಚಾರ, ಜನರು ಆಡಿ ಕೊಳ್ಳುವಮಾತು, ಲೋಕಪ್ರವಾದ. "जनेभ्यः श्रूयते—श्रु (श्रवणे) "क्तिन्" (३-३-९४)। "किंवदन्ती जनश्रुतिः" अम०।

**जनस् ಜನಸ್** (स्त्री० द्विव०)1. ದ್ಯಾವಾಪೃಥಿವಿಗಳು, ಆಕಾಶ ಮತ್ತು ಭೂಮಿ. (न०)2. ಜನೋಲೋಕ, ಭೂಲೋಕ ದಿಂದ ಮೇಲಕ್ಕೆ ಐದನೆಯ ಲೋಕ.

**जनस्थान ಜನಸ್ಥಾನ** (न०) ದಂಡಕಾರಣ್ಯಪ್ರದೇಶ. [ಪೂರ್ವದಲ್ಲಿ ಈ ಪ್ರದೇಶವು ಇಕ್ಷ್ವಾಕು ಪುತ್ರನಾದ ದಂಡ ನೆಂಬ ರಾಜನ ರಾಜಧಾನಿಯಾಗಿದ್ದಿತು. ಒಂದು ದಿನ ದಂಡನು ಶುಕ್ರಾಚಾರ್ಯರ ಮಗಳನ್ನು ಬಲಾತ್ಕರಿಸಲು ಆದರಿಂದ ಕುಪಿತರಾದ ವಸಿಷ್ಠರು ದಂಡನ ರಾಜ್ಯವು ಏಳು ದಿನಗಳೊಳಗಾಗಿ ಭಸ್ಮೀಭೂತವಾಗಲೆಂದೂ ರಾಜನು ಸೇನೆ ಮತ್ತು ಪರಿವಾರಗಳೊಡನೆ ನಾಶವಾಗಲೆಂದೂ ಶಪಿಸಿ ಆ ದೇಶದ ಜನರೆಲ್ಲರನ್ನೂ ಹೊರಕ್ಕೆ ಹೋಗಬೇಕೆಂದು ಹೇಳಿದರು. ಏಳು ರಾತ್ರಿಗಳೊಳಗಾಗಿ ಎಲ್ಲವೂ ಸುಟ್ಟು ಭಸ್ಮವಾಯಿತು. ಶ್ರೀರಾಮಚಂದ್ರನು ಅರಣ್ಯಕ್ಕೆ ಹೋಗಿದ್ದಾಗ ಅಲ್ಲಿ ತಪಸ್ವಿಗಳು ಆಶ್ರಮಗಳನ್ನು ಕಟ್ಟಿಕೊಂಡು ವಾಸಮಾಡುತ್ತಿದ್ದರು. ಪೂರ್ವದಲ್ಲಿ ಜನರು ವಾಸಮಾಡುತ್ತಿದ್ದ ಈ ಅರಣ್ಯಪ್ರದೇಶಕ್ಕೆ "**ಜನಸ್ಥಾನ**" ವೆಂದು ಹೆಸರಾಯಿತು.]

**जनाचार ಜನಾಚಾರ** (पुं०) ಜನರ ನಡತೆ, ಸಂಪ್ರದಾಯ, ಪದ್ಧತಿ.

**जनातिग ಜನಾತಿಗ**(वि०)ಲೋಕಾತೀತವಾದ, ಅಮಾನುಷವಾದ, ಮನುಷ್ಯರನ್ನು ಮೀರಿದ. जनमतिगच्छति—अति+गम्लृ (गतौ) "डः" (वा० ३-२-४८)। "प्रसादलक्ष्मीं दधतं समग्रां वपुःप्रकर्षेण जनातिगेन" किरा० ३-२।

**जनाधिनाथ ಜನಾಧಿನಾಥ** (पुं०) ರಾಜ, ದೊರೆ, ಜನರ ಒಡೆಯ. जनानामधिनाथः। "पश्यन् कृतार्थैरपि बल्लवीजनो जनाधिनाथं न ययौ वितृष्णताम्" माघ० १२-३९। एवं **जनाधिपः ಜನಾಧಿಪಃ, -अधिपतिः -ಅಧಿಪತಿಃ**, ಇತ್ಯಾದಿ.

**जनान्त ಜನಾಂತ**(पुं०)1. ಜನರ ಸಮೀಪ. जनानामन्तः। "अन्योन्यामन्त्रणं यत्स्यात्तज्जनान्ते जनान्तिकम्" सा० द० ६-१३९। 2. ಪ್ರದೇಶ, ಸ್ಥಾನ, ಜಾಗ. 3. ಜನರ ಪ್ರಾಣಗಳನ್ನು ಎಳೆಯುವ ಯಮಧರ್ಮರಾಯ. "यज्ञश्च लोकानवताज्जनान्ताद् बलो गणात् क्रोधवशादहीन्द्रः" भाग० ६-८-१८।

**जनान्तिक ಜನಾಂತಿಕ** (न०) 1. ಜನರ ಸಮೀಪ. जनानामन्तिकम्। 2. ರಹಸ್ಯವಾಗಿ ವಿಷಯವನ್ನು ತಿಳಿಸುವುದು, ಕೈಯಿಂದ ಮುಖವನ್ನು ಒಂದು ಕಡೆ ಮರೆಸಿಕೊಂಡು ಜನರಿಗೆ ತಿಳಿಯದಂತೆ ಪರಸ್ಪರ ಮಾತನಾಡುವುದು, ರಹಸ್ಯ ಸಂಭಾಷಣೆ. "त्रिपताकाकरेणान्यानपवार्यान्तरा कथाम्। अन्योन्यामन्त्रणं यत्स्यात्तज्जनान्ते जनान्तिकम्" सा० द० ६-१३९।

**जनापवाद ಜನಾಪವಾದ** (पुं०) ಲೋಕಾಪವಾದ, ಜನರು ಸುಳ್ಳುಪ್ರಚಾರಮಾಡಿ ಹೇಳುವುದು.

**जनार्दन ಜನಾರ್ದನ** (पुं०) 1. ಪರಮಾತ್ಮ, ವಿಷ್ಣು, ಶ್ರೀಕೃಷ್ಣ. जनैरर्द्यते याच्यते — अर्द (गतौ याचने च) "ल्युट्" (३-३-११३)। जनान् रक्षाप्रतिपक्षान् अर्दयति अनपेक्षं पीडयति इति वा—अर्द (हिंसायाम्)+णिच् "ल्युः" (३-१-१३४)। "भक्तविद्वेषिणां तूर्णमर्दनाद्धि जनार्दनः" इति निरुक्तिः। "सर्वगः सर्वविद् भानुर्विष्वक्सेनो जनार्दनः" वि० स०। "आसत्तिमासाद्य जनार्दनस्य" माघ० ३-६१। (वि०)2. ಜನರನ್ನು ಪೀಡಿಸುವ.

**जनाशन ಜನಾಶನ** (पुं०)1. ವೃಕ, ತೋಳ. जनान् अश्नाति — अश (भोजने) "ल्युः" (३-१-१३४)। (न०) 2. ಮನುಷ್ಯರನ್ನು ತಿನ್ನುವುದು. अश भावे "ल्युट्" (३-३-११५)। (वि०) 3. ಮನುಷ್ಯರನ್ನು ತಿನ್ನುವ. अश "ल्युः" (३-१-१३४)।

**जनाश्रय ಜನಾಶ್ರಯ** (पुं०) ಮಂಟಪ, ಚಾವಡಿ. जनानामाश्रयः। "मण्डपोऽस्त्री जनाश्रयः" अम०।

**जनि ಜನಿ**(स्त्री०)1. ಉತ್ಪತ್ತಿ, ಹುಟ್ಟು. जनी (प्रादुर्भावे) "इण्" (उ० ४-१२९)। 2. ತಾಯಿ. 3. ಹೆಂಗಸು.

**जनिका ಜನಿಕಾ**(स्त्री०)1. ಉತ್ಪತ್ತಿ, ಸೃಷ್ಟಿ. 2. ಹೆಂಗಸು, ಜನ್ಮಕೊಡುವ ಮಾತೆ. 3. ಸೊಸೆ.

**जनित ಜನಿತ** (वि०) ಸೃಷ್ಟಿಸಲ್ಪಟ್ಟ, ಉಂಟುಮಾಡಲ್ಪಟ್ಟ. जनी (प्रादुर्भावे)+णिच् "क्तः" (३-२-१०२)। "जिगाय जम्बूजनितश्रियः श्रियं सुमेरुशृङ्गस्य तदा तदासनम्" माघ० १-१९।

**जनितवत् ಜನಿತವತ್** (वि०) ಉಂಟುಮಾಡಿದ, ಸೃಷ್ಟಿಸಿದ. जनी (प्रादुर्भावे) "क्तवतुः" (३-२-१०२)।

**जनितृ ಜನಿತೃ** (पुं०) ತಂದೆ. जनी (प्रादुर्भावे) अन्तर्भावितण्यर्थः "तृच्" (३-१-१३३)। "अर्थार्थी जीवलोकोऽयं श्मशानमपि सेवते। जनितारमपि त्यक्त्वा निःस्वं गच्छति दूरतः" पञ्चतं०। "जनिता चोपनेता च यश्च विद्यां प्रयच्छति। अन्नदाता भयत्राता पञ्चैते पितरः स्मृताः।"

**जनित्री ಜನಿತ್ರೀ** (स्त्री०) ತಾಯಿ. जनितृ "ङीप्" (४-१-५)। "धात्रीं स्थात्रीं जनित्रीं प्रकृतिमविकृतिं विश्वशक्तिं विधात्रीं विष्णोर्विश्वात्मनस्तां विपुलगुणमयीं प्राणनाथां प्रणौमि"। "जन्तुर्ज्येष्ठः समभवत् जनित्र्यामेव पार्थिव" भा० वन० १२८।

**जनित्व ಜನಿತ್ವ** (पुं०) 1. ಜನಕ, ತಂದೆ, जनी (प्रादुर्भावे) "इत्वन्" (उ० ४-१०४)। (स्त्री०) -त्वा -ತ್ವಾ. 2. ಜನನಿ, ತಾಯಿ. "जनित्वौ मातापितरौ" सि० कौ०।

**जनिमत् ಜನಿಮತ್** (वि०) ಪ್ರಾಣಿ, ಜನ್ಮವುಳ್ಳ. जनिरस्यास्ति—"मतुप्" (५-२-९४)।

**जनिमन् ಜನಿಮನ್** (पुं०) ಹುಟ್ಟು, ಉತ್ಪತ್ತಿ, ಜನ್ಮ. जन (जनने) "इमनिन्" (उ० ४-१४८)।

**जनी – प्रादुर्भावे** (दिवा० आत्म० अक० से०)। जायते। जज्ञे। जनिता। जनिष्यते। जायताम्। अजायत। जायेत। जनिषीष्ट। अजनि। अजनिष्यत। ಹುಟ್ಟು, ಜನ್ಮಪಡೆ, ಉತ್ಪತ್ತಿಹೊಂದು.

**भावे**:—कर्तरिवत् रूपाणि।

**णिचि**:—जनयति, -ते। जनयां चकार, -चक्रे, -बभूव, -आस। जनयिता। जनयिष्यति, -ते। जनयतु, -ताम्। अजनयत्, -त। जनयेत्, -त। जन्यात्, जनयिषीष्ट। अजीजनत्, -त। अजनयिष्यत्, -त।

**ण्यन्तात् कर्मणि**:—जन्यते। जनयां चक्रे, -बभूवे, -आसे। जानिता, जनिता, जनयिता। जानिष्यते, जनिष्यते, जनयिष्यते। जन्यताम्। अजन्यत। ಇತ್ಯಾದಿ.

**केवलात् कृत्सु**:—जनितव्यम्। जननीयम्। जन्यमनेन। जायत इति जन्यः, कर्त० ण्यदन्तो निपातितः। जातः। जातवान्। जायमानः। जनितुम्। जातम्। जननम्। जनित्वा। प्रजन्य।

**जनी ಜನೀ** (स्त्री०) 1. ಸ್ನುಷೆ, ಸೊಸೆ. जायते सन्ततिरस्याम् जनी (प्रादुर्भावे) "इण्" (उ० ४-१२९)। "तथा तथा हृषितवपुर्मुदाकुला द्विषां चमूरजनि जनीव चेतसा" माघ० १७-४३। 2. ತಾಯಿ. 3. ಪತ್ನಿ, ಹೆಂಡತಿ. 4. ಹೆಂಗಸು. 5. ಉತ್ಪತ್ತಿ, ಹುಟ್ಟು. "जनी स्नुषावनितयोः" हेम०। 6. ವಧೂವರರು, ದಂಪತಿಗಳು. "जनिर्वरस्त्रीपत्योश्च" वैज०।

**जनु ಜನು** (स्त्री०) ಜನ್ಮ, ಹುಟ್ಟು, ಉತ್ಪತ್ತಿ.

**जनुस् ಜನುಸ್** (न०) ಜನ್ಮ, ಉತ್ಪತ್ತಿ, ಹುಟ್ಟು. जायते—जनी (प्रादुर्भावे) "उसिः" (उ० २-११५)। "जनुर्जननजन्मानि जनिरुत्पत्तिरुद्भवः" अम०।

**जनू ಜನೂ** (स्त्री०) ಜನ್ಮ, ಉತ್ಪತ್ತಿ, ಹುಟ್ಟು. जनु "ऊङ्" (वा० ४-१-६६)।

**जनेन्द्र ಜನೇಂದ್ರ** (पुं०) ರಾಜ, ದೊರೆ. जनानामिन्द्रः।

**जनेश ಜನೇಶ, -ईश्वर -ಈಶ್ವರ** (पुं०) ರಾಜ, ದೊರೆ. जनानामीशः ईश्वरो वा।

**जनेष्ट ಜನೇಷ್ಟ** (वि०) ಜನರಿಗೆ ಸಮ್ಮತವಾದ, ಜನರಿಗೆ ಬೇಕಾದ, ಜನರಿಂದ ಅಪೇಕ್ಷಿಸಲ್ಪಟ್ಟ.

**जनेष्टा ಜನೇಷ್ಟಾ** (स्त्री०) 1. ಅರಿಶಿನ. 2. ಜಾಜಿಗಿಡ. 3. ಮಲ್ಲಿಗೆಸ ಗಿಡ.

**जनोदाहरण ಜನೋದಾಹರಣ** (न०) ಯಶಸ್ಸು, ಕೀರ್ತಿ. जनैरुदाह्रियते उद् + आङ् + हृञ् (हरणे) कर्म० "ल्युट्" (३-३-११३)।

**जनोलोक ಜನೋಲೋಕ** (पुं०) "जन" ಪದದಲ್ಲಿ ನೋಡಿ.

**जन्तु ಜಂತು** (पुं०) 1. (ಹುಟ್ಟುವ ಸ್ವಭಾವದ) ಪ್ರಾಣಿ. जायते – जनी (प्रादुर्भावे) "तुः" (उ० १-७२)। "एकः प्रजायते जन्तुः एक एव प्रलीयते। एकोऽनुभुङ्क्ते सुकृतमेक एव च दुष्कृतम्" मनु० ४-२४०। "अमर्षशून्येन जनस्य जन्तुना न जातहार्देन च विद्विषादरः" किरा० १-३३। 2. ಮನುಷ್ಯ, ಪುರುಷ. "बिभर्ति सर्वभूतानि वेदशास्त्रं सनातनम्। तस्मादेतत् परं मन्ये यज्जन्तोरस्य साधनम्" मनु० १२-९९। 3. ಜೀವ. "एतेषामेव जन्तूनां भार्यात्विमुपयान्ति ताः" मनु० १२-६९। 4. ಇರುವೆ ಮೊದಲಾದ ಸಣ್ಣ ಪ್ರಾಣಿ. "संरक्षणार्थं जन्तूनां रात्रावहनि वा सदा। शरीरस्यात्यये चैव समीक्ष्य वसुधां चरेत्" मनु० ६-६८। 5. ಸೋಮಕನೆಂಬ ಒಬ್ಬ ರಾಜನ ಮಗ. [ಸೋಮಕನೆಂಬ ರಾಜನೊಬ್ಬನಿಗೆ ನೂರು ಮಂದಿ ಪತ್ನಿಯರಿದ್ದರೂ ಬಹಳ ಕಾಲದವರೆಗೂ ಸಂತಾನವಿರಲಿಲ್ಲ. ಮುದಿತನದಲ್ಲಿ ಜಂತುವೆಂಬ ಓರ್ವ ಪುತ್ರನು ಜನಿಸಿದನು. ಆ ಏಕಮಾತ್ರ ಪುತ್ರನಲ್ಲಿ ನೂರು ಮಂದಿಯೂ ಬಹಳ ಪ್ರೀತಿಯಿಂದಿದ್ದರು. ಒಂದು ದಿನ

ಆ ಮಗುವನ್ನು ಒಂದು ಇರುವೆಯು ಕಚ್ಚಿತು. ಮಗುವು ಬಹಳ ಚಡಿಹಿಡಿಯಿತು. ಅದರ ವೇದನೆಯನ್ನು ನೋಡಿದ ರಾಜನು ಬಹಳ ವ್ಯಥೆಪಟ್ಟು "ಏಕಪುತ್ರನಿರುವುದಕ್ಕಿಂತಲೂ ಇಲ್ಲದಿರುವುದೇ ಒಳ್ಳೆಯದು. ನೂರುಮಂದಿ ಪತ್ನಿಯರಲ್ಲೂ ಮಕ್ಕಳಾಗಬೇಕಾದರೆ ಏನು ಉಪಾಯ" ಎಂದು ಪುರೋಹಿತನನ್ನು ಕೇಳಿದನು. "ಈ ಜಂತು ಕುಮಾರನನ್ನು ಹವಿಸ್ಸನ್ನಾಗಿ ಉಪಯೋಗಿಸಿ ಯಾಗಮಾಡಿ ಆ ವಪೆಯ ಹೊಗೆಯನ್ನು ಎಲ್ಲಾ ಪತ್ನಿಯರೂ ಕುಡಿದರೆ ಎಲ್ಲರಲ್ಲೂ ಮಕ್ಕಳು ಹುಟ್ಟುವರು" ಎಂದು ಪುರೋಹಿತನು ಹೇಳಿದನು. ರಾಜನು ಹಾಗೆಯೇ ಮಾಡಿದನು. ನೂರು ಮಂದಿ ಪತ್ನಿಯರಲ್ಲೂ ಪುತ್ರರು ಜನಿಸಿದರು. ಜಂತುವೂ ಅದೇ ತಾಯಿಯ ಹೊಟ್ಟೆಯಲ್ಲಿ ಪುನಃ ಜನಿಸಿದನು. "जन्तुर्ज्येष्ठः समभवज्जनित्र्यामेव पार्थिव" भा० वन० १२८।

**जन्तुकम्बु ಜಂತುಕಂಬು** (पुं०) ಕ್ರಿಮಿಶಂಖ, ಬಸವನ ಹುಳುವಿನ ಚಿಪ್ಪು. जन्तुः कम्बुरिव।

**जन्तुका ಜಂತುಕಾ** (स्त्री०) ಅರಗು.

**जन्तुघ्न ಜಂತುಘ್ನ** (पुं०)1. ಮಾದಳದ ಗಿಡ. (न०)2. ವಾಯಿವಿಳಂಗ. जन्तून् हन्ति—हन (हिंसागत्योः) "टक्" (३-२-५३)। ವಾಯಿವಿಳಂಗವು ಕ್ರಿಮಿನಾಶಕವಾದುದು. 3. ಹಿಂಗು. (वि०) 4. ಕ್ರಿಮಿಗಳನ್ನು ನಾಶಪಡಿಸುವ.

**जन्तुनाशन ಜಂತುನಾಶನ** (न०) ಹಿಂಗು. जन्तून् नाशयति—णश (अदर्शने)+णिच् "ल्युः" (३-१-१३४)।

**जन्तुफल ಜಂತುಫಲ** (पुं०) ಉದುಂಬರವೃಕ್ಷ, ಅತ್ತಿಮರ. जन्तवः फलेऽस्य। "उदुम्बरो जन्तुफलः" अम०।

**जन्तुमत् ಜಂತುಮತ್** (वि०) ಕ್ರಿಮಿಗಳಿಂದ ಕೂಡಿದ. जन्तवः सन्त्यस्मिन्" मतुप्" (५-२-९४)।

**जन्तुमती ಜಂತುಮತೀ** (स्त्री०) ಭೂಮಿ. जन्तवः सन्त्यस्याम् बाहुल्येन "मतुप्" (५-२-९४)। "ङीप्" (४-१.६)।

**जन्तुला ಜಂತುಲಾ** (स्त्री०) ಕಾಶತೃಣ, ಜಂಬುಹುಲ್ಲು. जन्तून् कृमीन् लाति—ला (आदाने) "कः" (३-२-३)। "काशोऽस्त्रवालः काकेक्षुर्वनहासश्च जन्तुला" त्रिकाण्ड०।

**जन्मकाल ಜನ್ಮಕಾಲ** (पुं०) ಹುಟ್ಟಿದ ವೇಳೆ, ಹುಟ್ಟಿದ ಲಗ್ನ.

**जन्मकील ಜನ್ಮಕೀಲ** (न०) ವಿಷ್ಣು. जन्मनः कील इव। "नरकजिद्गतधामा केशवो जन्मकीलः" त्रिकाण्ड०।

**जन्मकुण्डली ಜನ್ಮಕುಂಡಲೀ** (स्त्री०) ಹುಟ್ಟಿದ ಕಾಲದಲ್ಲಿ ಗ್ರಹಗಳ ಸ್ಥಿತಿಯನ್ನು ತಿಳಿಸುವ ರಾಶಿಚಕ್ರ.

**जन्मकृत् ಜನ್ಮಕೃತ್** (पुं०) ಹುಟ್ಟಿಗೆ ಕಾರಣನಾದ ತಂದೆ. जन्म करोति—डु कृञ् (करणे) "क्विप्" (३-२-७६)। "त्वमेकः सर्वभूतानां जन्मकृद् वृत्तिदः पिता। अथापि नः प्रजानां ते शुश्रूषा केन वा भवेत्" भाग० ३-१३-७।

**जन्मक्षेत्र ಜನ್ಮಕ್ಷೇತ್ರ** (न०) ಹುಟ್ಟಿದ ಸ್ಥಳ, ಹುಟ್ಟಿದ ಊರು.

**जन्मज्येष्ठ ಜನ್ಮಜ್ಯೇಷ್ಠ** (पुं०) ಹಿರಿಯ, ಹುಟ್ಟಿನಿಂದ ದೊಡ್ಡವನು. जन्मना ज्येष्ठः।

**जन्मतस् ಜನ್ಮತಸ್** (अव्य०)1. ಹುಟ್ಟಿನಿಂದ, ಹುಟ್ಟಿದ ಕಾಲದಿಂದ. जन्मन् तृतीयार्थे "तसिः" (वा० ५-४-४४)। "विप्राणां ज्ञानतो ज्यैष्ठ्यं क्षत्रियाणां तु वीर्यतः। वैश्यानां धान्यधनतः शूद्राणामेव जन्मतः" मनु० २-१५५। 2. ಹುಟ್ಟಿದ ಮೊದಲುಗೊಂಡು. "एवमाश्रमविरुद्ध-वृत्तिना संयमः किमिति जन्मतस्त्वया" शाकु० ७-१८।

**जन्मतारा ಜನ್ಮತಾರಾ** (स्त्री०) ಜನ್ಮನಕ್ಷತ್ರ, ಹುಟ್ಟಿದ ನಕ್ಷತ್ರ.

**जन्मतिथि ಜನ್ಮತಿಥಿ** (पुंस्त्री०) ಹುಟ್ಟಿದ ದಿವಸ.

**जन्मद ಜನ್ಮದ** (पुं०) ಜನ್ಮವನ್ನು ಕೊಟ್ಟ ತಂದೆ. जन्म ददाति—डु दाञ् (दाने) "कः" (३-२-३)।

**जन्मदातृ ಜನ್ಮದಾತೃ** (पुं०) "जन्मद" ಪದದ ಅರ್ಥ. जन्म ददाति — डु दाञ् (दाने) "तृच्" (३-१-१३३)। स्त्रियाम् –दात्री –ದಾತ್ರೀ. ತಾಯಿ.

**जन्मदिन ಜನ್ಮದಿನ** (न०) ಹುಟ್ಟಿದ ದಿನ, ಹುಟ್ಟಿದ ತಿಥಿ. जन्मनो दिनम्।

**जन्मन् ಜನ್ಮನ್** (न०) 1. ಜನನ, ಹುಟ್ಟುವುದು, ಶರೀರ ತ್ಯಾಗಕಾಲ ಮೊದಲುಗೊಂಡು ಪುನಃ ಸುಖಾನುಭವ ಪಡೆಯುವ ಪೂರ್ವಕ್ಷಣದವರೆಗಿನ ಅವಸ್ಥೆ. जनी (प्रादुर्भावे) भावे "मनिन्" (उ० ४-१४५)। "जन्म यस्य पुरोर्वंशे युक्तरूपमिदं तव। पुत्रमेवंगुणोपेतं चक्रवर्तिन-माप्नुहि" शाकु० १-११। 2. ಉತ್ಪತ್ತಿ, ಸೃಷ್ಟಿ. "आकरे पद्मरागाणां जन्म काचमणेः कुतः"। 3. ಜೀವಮಾನ, ಜೀವಿತಕಾಲ. "बहूनि मे व्यतीतानि जन्मानि तव चार्जुन। तान्यहं वेद सर्वाणि न त्वं वेत्थ परन्तप" गीता ४-५। 4. ಜನ್ಮನಕ್ಷತ್ರ, ಹುಟ್ಟಿದ ನಕ್ಷತ್ರ. 5. 10 ಮತ್ತು 19ನೆಯ ನಕ್ಷತ್ರ. 6. ಜನ್ಮರಾಶಿ. 7. ಜನ್ಮಲಗ್ನ.

**जन्मनामन् ಜನ್ಮನಾಮನ್** (नं०) ಹುಟ್ಟಿದ ಹನ್ನೊಂದನೆಯ ದಿನದನಂತರ ಇಡುವ ಹೆಸರು.

**जन्मप ಜನ್ಮಪ** (पुं०) 1. ಜನ್ಮ ಲಗ್ನಾಧಿಪತಿ. 2. ಜನ್ಮ ರಾಶ್ಯಧಿಪತಿ. जन्म जन्मलग्नं जन्मराशिं वा पाति—पा (रक्षणे) "क:" (३-२-३)। एवं **जन्मपति: ಜನ್ಮಪತಿಃ.**

**जन्मपत्रिका ಜನ್ಮಪತ್ರಿಕಾ** (स्त्री०) ಜಾತಕ. ಹುಟ್ಟಿದ ವೇಳೆ ಮತ್ತು ಆ ವೇಳೆಯಲ್ಲಿ ಗ್ರಹಗಳ ಸ್ಥಿತಿಗಳನ್ನು ತಿಳಿಸುವ ಪತ್ರಿಕೆ.

**जन्मप्रभृति ಜನ್ಮಪ್ರಭೃತಿ** (अव्य०) ಹುಟ್ಟಿದ ಮೊದಲುಗೊಂಡು, ಹುಟ್ಟಿದಂದಿನಿಂದ.

**जन्मभ ಜನ್ಮಭ** (नं०) 1. ಜನ್ಮನಕ್ಷತ್ರ. 2. ಜನ್ಮಲಗ್ನ. 3. ಜನ್ಮರಾಶಿ.

**जन्मभू ಜನ್ಮಭೂ, -भूमि -ಭೂಮಿ** (स्त्री०) ಹುಟ್ಟಿದ ಊರು, ಜನ್ಮಸ್ಥಳ. "जननी जन्मभूमिश्च स्वर्गादपि गरीयसी" उद्भ०।

**जन्ममास ಜನ್ಮಮಾಸ** (पुं०) ಹುಟ್ಟಿದ ತಿಂಗಳು. जन्मनो मास:। ಜನ್ಮಮಾಸದಲ್ಲಿ ಜ್ಯೇಷ್ಠ ಪುತ್ರ ಮತ್ತು ಜ್ಯೇಷ್ಠ ಪುತ್ರಿ ಇವರಿಗೆ ವಿವಾಹವು ನಿಷಿದ್ಧ. "जन्ममासे न जन्मर्क्षे न जन्मदिवसेऽपि वा। आद्यगर्भसुतस्यापि दुहितुर्वा करग्रह:"। ದ್ವಿತೀಯಾದಿ ಪುತ್ರ ಪುತ್ರಿಯರಿಗೆ ಜನ್ಮ ಮಾಸದಲ್ಲಿ ವಿವಾಹವು ಶುಭಪ್ರದವಾಮುದು. "जन्मर्क्षे जन्ममासे वा तारायामथ जन्मनि। जन्मलग्ने भवेदूढा पुत्राढ्या पतिवल्लभा"।

**जन्मराशि ಜನ್ಮರಾಶಿ** (पुं०) ಜನನಕಾಲದಲ್ಲಿ ಚಂದ್ರನಿರುವ ಮೇಷ ಮೊದಲಾದ ರಾಶಿ.

**जन्मर्क्ष ಜನ್ಮರ್ಕ್ಷ** (नं०) ಹುಟ್ಟಿದ ನಕ್ಷತ್ರ.

**जन्मलग्न ಜನ್ಮಲಗ್ನ** (नं०) ಜನನಕಾಲದ ಲಗ್ನ.

**जन्मवत् ಜನ್ಮವತ್** (वि०) ಜನ್ಮವುಳ್ಳ, ಹುಟ್ಟುವ, ಜನ್ಮವನ್ನು ತಾಳುವ (ಜೀವ). जन्मास्यास्ति—"मतुप्" (५-२-९४)। "चिचीषतां जन्मवतामलघ्वीं यशोवतंसामुभयत्र भूतिम्" किरा० ३-११। स्त्रियाम् "ङीप्" (४-१-६)। **-वती -ವತೀ.**

**जन्मवर्त्मन् ಜನ್ಮವರ್ತ್ಮನ್** (नं०) ಹುಟ್ಟುವ ಮಾರ್ಗ, ಗರ್ಭದಿಂದ ಹೊರಕ್ಕೆ ಬರುವ ಮಾರ್ಗ, ಯೋನಿ. "भगं गुह्यं वराङ्गं च कलत्रं जन्मवर्त्म च" त्रिकाण्ड०।

**जन्मशय्या ಜನ್ಮಶಯ್ಯಾ** (स्त्री०) ಪ್ರಸವಕ್ಕಾಗಿ ಹಾಕಿದ ಹಾಸಿಗೆ, ಹುಟ್ಟಿದ ಶಿಶುವನ್ನು ಮಲಗಿಸಲು ಹಾಸಿದ ಹಾಸಿಗೆ. जन्मार्थं शय्या। "स ददर्श महात्मानं शरतल्पगतं प्रभो। जन्मशय्यागतं वीरं कार्तिकेयमिव प्रभुम्" भा०।

**जन्मसाफल्य ಜನ್ಮಸಾಫಲ್ಯ** (नं०) ಜೀವನದ ಸಾರ್ಥಕತೆ.

**जन्मान्तर ಜನ್ಮಾಂತರ**(नं०)ಬೇರೆಜನ್ಮ, ಹಿಂದಿನ ಅಥವಾ ಮುಂದಿನ ಜನ್ಮ. अन्यत् जन्म। "त्वत्पादकमलादन्यत्र मे जन्मान्तरेष्वपि। निमित्तं कुशलस्यास्ति येन गच्छामि सद्गतिम्"। "मनो हि जन्मान्तरसङ्गतिज्ञम्" रघु० ७-१५। "जन्मान्तरकृतं पापं व्याधिरूपेण नश्यति"।

**जन्मान्तरीण ಜನ್ಮಾಂತರೀಣ** (वि०) ಬೇರೆ ಜನ್ಮದ ಸಂಬಂಧವಾದ, ಹಿಂದಿನ ಜನ್ಮದ ಸಂಬಂಧವಾದ. "जन्मान्तरीणरमणस्याङ्गसङ्गसमुत्सुका। सलज्जा चान्तिके सख्या: पातु न: पार्वती सदा"।

**जन्मान्तरीय ಜನ್ಮಾಂತರೀಯ** (वि०) ಬೇರೆ ಜನ್ಮದ ಸಂಬಂಧವಾದ, ಹಿಂದಿನ ಜನ್ಮದ ಸಂಬಂಧವಾದ, ಮತ್ತೊಂದು ಜನ್ಮದಲ್ಲಿ ಉಂಟಾದ. जन्मान्तरे भव: "छ:" (४-२-१३८)।

**जन्माष्टमी ಜನ್ಮಾಷ್ಟಮೀ** (स्त्री०) ಶ್ರೀಕೃಷ್ಣಜನ್ಮಾಷ್ಟಮಿ, ಶ್ರೀಕೃಷ್ಣನು ಅವತರಿಸಿದ ಶ್ರಾವಣ (ಸಿಂಹ) ಕೃಷ್ಣಾಷ್ಟಮಿ.

**जन्मास्पद ಜನ್ಮಾಸ್ಪದ** (नं०) ಜನ್ಮಕ್ಷೇತ್ರ, ಜನ್ಮಸ್ಥಳ, ಹುಟ್ಟಿದ ಊರು.

**जन्मिन् ಜನ್ಮಿನ್** (वि०) ಪ್ರಾಣಿಮಾತ್ರ, ಜೀವ. जन्मास्त्यस्य "इनि:" (५-२-११६)। "अन्तक: पर्यवस्थाता जन्मिन: सन्ततापद:। इति त्याज्ये भवे भव्यो मुक्तावुत्तिष्ठते जन:" किरा० ११-१३।

**जन्य ಜನ್ಯ** (पुं०) 1. ಜನಕ, ತಂದೆ. जायते जनयति वा—जनी (प्रादुर्भावे)+"णिच्" कर्त० "यत्" (३-४-६८)। 2. ಹೊಸದಾಗಿ ಮದುವೆಯಾದ ವಧುವಿನ ನೆಂಟರು ಮತ್ತು ಸೇವಕರು. जनीं वधूं नयति वहति वा "यत्" (४-४-८२)। 3. ಮದುವಣಿಗ (ವರ)ನ ಬಂಧು ಮತ್ತು ಸ್ನೇಹಿತ. "जन्या: स्निग्धा वरस्य ये" अम०। "ज्ञातिभृत्या नवोढाया जन्या: स्निग्धा वरस्य च" वैज०। 4. ದೇಹ, ಶರೀರ. "निवृत्तसर्वेन्द्रियवृत्तिविभ्रमस्तुष्टाव जन्यं विसृजन् जनार्दनम्" भाग० १-९-३१। (नं०)5. ಲೋಕಾಪವಾದ. जनानां जल्प: "यत्" (४-४-९७)। 6. ಯುದ್ಧ, ಕದನ. जनी "यक्" (उ० ४-१११)। "चारणा रमते जन्ये कोऽभीतो रसिताशिनि" किरा० १५-२३।

"तत्र जन्यं रघोर्घोरं पर्वतीयैर्गणैरभूत्" रघु० ४-७७। 7. ಜನನ, ಉತ್ಪತ್ತಿ, ಹುಟ್ಟು. 8. ಸಂತೆ, ವ್ಯಾಪಾರ ಸ್ಥಳ. (वि०) 9. ಜನರಿಗೆ ಹಿತವಾದ. जनाय हितम् "यत्" (५-१-५)। 10. ಉತ್ಪತ್ತಿಗೆ ಒಳಪಟ್ಟ, ಹುಟ್ಟುವ. जन्यते — जनी (प्रादुर्भावे) + णिच् कर्म० "यत्" (वा० ३-१-९७)। "जन्यानां जनकः कालः" भाषाप०। 11. ಕುಲಸಂಬಂಧವಾದ, ವಂಶಕ್ಕೆ ಸಂಬಂಧಿಸಿದ. (स्त्री०) —न्या —ನ್ಯಾ. 12. ತಾಯಿಯ ಗೆಳತಿ. 13. ಹರ್ಷ, ಸಂತೋಷ. "जन्यो जामातृवत्सले। जनके जननीये च नवोढानुचरादिके। जन्यं कौलीने युध्यट्टे जन्या मातृसखीमुदोः" हेम०। "जन्यं हट्टे परीवादे संग्रामे च नपुंसकम्। जन्या मातृवयस्यायां जन्यः स्याज्जनके पुमान्" मेदि०।

**जन्यु ಜನ್ಯು** (पुं०) 1. ಪ್ರಾಣಿ, ಜಂತು. जनी (प्रादुर्भावे) "युच्" (उ० ३-२०)। 2. ಅಗ್ನಿ, ಬೆಂಕಿ. 3. ಜನನ, ಉತ್ಪತ್ತಿ. 4. ಬ್ರಹ್ಮ, ಚತುರ್ಮುಖ. "जन्युः स्यात् पुंसि प्राण्यग्निधातृषु" मेदि०।

**जप — मानसे, व्यक्तायां वाचि** (भ्वा० पर० सक० से०)। जपति। जजाप। जपिता। जपिष्यति। जपतु। अजपत्। जपेत्। जप्यात्। अजापीत्, अजपीत्। अजपिष्यत्। ಜಪಿಸು, ಮಂತ್ರವನ್ನು (ಮನಸ್ಸಿನಲ್ಲಿ) ಆವೃತ್ತಿಮಾಡು, ಮಂತ್ರವನ್ನು ಮತ್ತೆ ಮತ್ತೆ ಉಚ್ಚರಿಸು.

**कर्मणि** :—जप्यते। जेपे। जपिता। जपिष्यते। जप्यताम्। अजप्यत। जप्येत। जपिषीष्ट। अजापि। अजपिष्यत।

**णिचि** :—जापयति, —ते। जापयां चकार, —चक्रे, —बभूव, —आस। जापयिता। जापयिष्यति, —ते। जापयतु, —ताम्। ಇತ್ಯಾದಿ.

**सनि** :—जिजपिषति। जिजपिषां चकार, —बभूव, —आस। जिजपिषिता। जिजपिषिष्यति। जिजपिषतु। ಇತ್ಯಾದಿ.

**कृत्सु** :—जपितव्यः। जपनीयः। जप्यः। जपितः। जपितवान्। जपन्, जपन्ती। जपितुम्। जपितम्। जपनम्। जपित्वा। उपजप्य।

**जप ಜಪ** (पुं०) 1. ಮಂತ್ರವನ್ನು ಆವೃತ್ತಿಮಾಡುವುದು, ಮಂತ್ರವನ್ನು ಮತ್ತೆ ಮತ್ತೆ ಉಚ್ಚರಿಸುವುದು. जप (व्यक्तायां वाचि) भावे "अप्" (३-३-६१)। "जपहोमैरपैत्येनो याजनाध्यापनैः कृतम्। प्रतिग्रहनिमित्तं तु त्यागेन तपसैव च" मनु० १०-१११। "समाचराचारमुपात्तशस्त्रो जपोपवासाभिषवैर्मुनीनाम्" किरा० ३-२८। (वि०) 2. ಮಂತ್ರವನ್ನು ಜಪಿಸುವ, ಮಂತ್ರವನ್ನು ಮತ್ತೆ ಮತ್ತೆ ಉಚ್ಚರಿಸುತ್ತಿರುವ. कर्त० "अच्" (३-१-१३४)।

**जपत् ಜಪತ್** (वि०) ಜಪಮಾಡುತ್ತಿರುವ, ಮೌನದಿಂದ ಮಂತ್ರವನ್ನು ಉಚ್ಚರಿಸುತ್ತಿರುವ. जप (व्यक्तायां वाचि) "शतृ" (३-२-१२४)। "जपतः सदा जपमुपांशु वदनमभितो विसारिभिः" किरा० १२-८। स्त्रियाम् "ङीप्" (४-१-६)। **जपन्ती ಜಪಂತೀ.**

**जपन ಜಪನ** (न०) ಜಪಮಾಡುವುದು, ತಗ್ಗಿದನಿಯಲ್ಲಿ ಮಂತ್ರವನ್ನು ಆವೃತ್ತಿಮಾಡುವುದು. जप (व्यक्तायां वाचि) भावे "ल्युट्" (३-३-११५)। "संन्यास एव वेदान्ते वर्तन्ते जपनं प्रति" भा० शान्ति० १९४-७।

**जपनीय ಜಪನೀಯ** (वि०) 1. ಜಪಮಾಡಲ್ಪಡುವ. 2. ಜಪಮಾಡಬೇಕಾದ, ಅವಶ್ಯವಾಗಿ ಜಪಿಸಬೇಕಾದ. 3. ಜಪಿಸಲು ಯೋಗ್ಯವಾದ. जप (व्यक्तायां वाचि) कर्मादौ "अनीयर्" (३-१-९६)। "तव्यः"। **जपितव्यः ಜಪಿತವ್ಯಃ.**

**जपमाला ಜಪಮಾಲಾ** (स्त्री०) ರುದ್ರಾಕ್ಷಿಯ ಸರ, ಜಪಸರ, ತುಲಸೀಮಣಿಯ ಸರ.

**जपयज्ञ ಜಪಯಜ್ಞ** (पुं०) ಜಪರೂಪವಾದ ಯಾಗ. जप एव यज्ञः। ಜಪಯಜ್ಞವು वाचिकः उपांशुः ಮತ್ತು मानसः ಎಂದು ಮೂರು ವಿಧ.

(1) ಅಕ್ಷರಗಳನ್ನು ಸ್ಪಷ್ಟವಾಗಿ ಉಚ್ಚರಿಸಿ ಮೆಲ್ಲಗೂ ಗಟ್ಟಿಯಾಗಿಯೂ ಮಂತ್ರಗಳನ್ನು ಜಪಿಸುವುದು ವಾಚಿಕ ಜಪಯಜ್ಞ. "यदुच्चनीचोच्चरितैः शब्दैः स्पष्टपदाक्षरैः। मन्त्रमुच्चारयन् वाचा जपयज्ञः स वाचिकः"।

(2) ತುಟಿಗಳು ಅಲುಗಾಡುವಷ್ಟು ಮಾತ್ರ ಮೆಲ್ಲಗೆ ಇತರರಿಗೆ ಕೇಳಿಸುವಂತೆ ಜಪಿಸುವುದು ಉಪಾಂಶು ಜಪಯಜ್ಞ. "शनैरुच्चारयन् मन्त्रं किञ्चिदोष्ठौ प्रचालयेत्। किञ्चित् श्रवणयोग्यस्तु स उपांशुर्जपः स्मृतः"।

(3) ಮನಸ್ಸಿನಲ್ಲೇ ಮಂತ್ರಾರ್ಥಗಳನ್ನು ಮನನ ಮಾಡುತ್ತಾ ಇತರರಿಗೆ ಕೇಳಿಸದಂತೆ ಜಪಿಸುವುದು ಮಾನಸ ಜಪಯಜ್ಞ. "धिया पदाक्षरश्रेण्या अवर्णमपदाक्षरम्। मन्त्रार्थचिन्तनाभ्यां तु तदुक्तं मानसं स्मृतम्"। "सालम्बनमिति ज्ञेयं जपयज्ञात्मकं शुभम्" भा० शान्ति० १९४-१०। "विधियज्ञाज्जपयज्ञो विशिष्टो दशभि-

गुणैः। उपांशुः स्याच्छतगुणः साहस्रो मानसः स्मृतः" मनु० २-८५।

**जपस्थान ಜಪಸ್ಥಾನ** (न०) ಜಪಕ್ಕೆ ಯೋಗ್ಯವಾದ ಸ್ಥಳ; ಪುಣ್ಯಕ್ಷೇತ್ರ, ನದೀತೀರ, ಗುಹೆ, ಪರ್ವತಶಿಖರ, ನದಿಗಳ ಸಂಗಮಸ್ಥಳ, ಪವಿತ್ರವಾದ ಸರಸ್ಸು, ದೇವಾಲಯ, ಸಮುದ್ರತೀರ, ಉದ್ಯಾನವನ, ಸ್ವಗೃಹ, ಬಿಲ್ವಮೂಲ. ಇವು ಜಪಯೋಗ್ಯ ಸ್ಥಳಗಳು.

**जपा ಜಪಾ** (स्त्री०) 1. ದಾಸಿವಾಳದ ಗಿಡ. 2. ದಾಸಿವಾಳದ ಹೂವು. "सान्ध्यं तेजः प्रतिनवजपापुष्परक्तं दधानः" मेघ० १-४०।

**जपित ಜಪಿತ** (न०) 1. ಜಪಮಾಡುವುದು. जप (व्यक्तायां वाचि) भावे "क्तः" (३-३-११४)। (वि०) 2. ಜಪಿಸಲ್ಪಟ್ಟ, ತಗ್ಗುದನಿಯಲ್ಲಿ ಉಚ್ಚರಿಸಲ್ಪಟ್ಟ. जप कर्मं० "क्तः" (३-२-१०२)। "परमं गृह्यतां तस्य फलं यज्जपितं मया" भा० शान्ति० १९७-५४।

**जपितवत् ಜಪಿತವತ್** (वि०) ಜಪಿಸಿದವನು, ಮಂತ್ರವನ್ನು ತಗ್ಗುದನಿಯಲ್ಲಿ ಉಚ್ಚರಿಸಿದವನು. जप (व्यक्तायां वाचि) "क्तवतुः" (३-२-१०२)। स्त्रियाम् "ङीप्" (४-१-६)। **-वती -ವತೀ.**

**जप्य ಜಪ್ಯ** (वि०) 1. ಜಪಿಸಲ್ಪಡುವ. 2. ಅವಶ್ಯವಾಗಿ ಜಪಿಸಬೇಕಾದ. 3. ಜಪಿಸಲು ಯೋಗ್ಯವಾದ. जप्यते— जप (व्यक्तायां वाचि) कर्मादौ "यत्" (३-१-९८)। "जप्यमावर्तयंस्तूष्णीं न स तां किञ्चिदब्रवीत्" भा० शान्ति० १९७-७। 4. ಜಪ, ಮನಸ್ಸಿನಲ್ಲಿ ಮಂತ್ರೋಚ್ಚಾರಣ ಮಾಡುವುದು. जप भावे "यत्" (३-१-९८)। "जप्येनैव हि संसिध्येत् ब्राह्मणो नात्र संशयः" मनु० २-८७।

**जमत् ಜಮತ್** (वि०) ತಿನ್ನುತ್ತಿರುವ, ಭಕ್ಷಿಸುತ್ತಿರುವ. जमु (अदने) "शतृ" (३-१-१२४)।

**जमदग्नि ಜಮದಗ್ನಿ** (पुं०) ಭೃಗುವಂಶದ ಒಬ್ಬ ಋಷಿ, ಪರಶುರಾಮನ ತಂದೆ. जमन् अग्निरिव। [ಈ ಋಷಿಯ ತಂದೆ ಋಚೀಕಋಷಿ. ಗಾಧಿರಾಜನ ಮಗಳಾದ ಸತ್ಯವತಿಯು ತಾಯಿ. ರೇಣುಕೆಯೆಂಬುವಳು ಪತ್ನಿ. ರುಮಣ್ವಂತ, ಸುಷೇಣ, ವಸು, ವಿಶ್ವಾವಸು ಮತ್ತು ಪರಶುರಾಮ ಎಂಬುವರು ಈ ಋಷಿಯ ಐದು ಮಂದಿ ಮಕ್ಕಳು. ಪತ್ನಿಯಾದ ರೇಣುಕೆಯು ಒಂದು ದಿನ ನದಿಗೆ ಸ್ನಾನಕ್ಕಾಗಿ ಹೋಗಿದ್ದಾಗ ಅಲ್ಲಿ ಜಲಕ್ರೀಡೆಯಾಡುತ್ತಿದ್ದ ಚಿತ್ರರಥಗಂಧರ್ವನನ್ನು ಕಂಡು ಮೋಹಪರವಶಳಾದುದರಿಂದ ಮನೆಗೆ ಬರಲು ತಡವಾಯಿತು. ಅದರಿಂದ ಸಂಶಯಗೊಂಡ ಜಮದಗ್ನಿಯು ಅವಳ ಕತ್ತನ್ನು ಕತ್ತರಿಸುವಂತೆ ತನ್ನ ಮಕ್ಕಳಿಗೆ ಹೇಳಲು ನಾಲ್ಕು ಮಂದಿ ಮಕ್ಕಳು ಅದಕ್ಕೆ ಹಿಂಜರಿದರು. ಪರಶುರಾಮನು ತಂದೆಯ ಮಾತನ್ನು ಪಾಲಿಸಿದನು. ಅದರಿಂದ ಪ್ರಸನ್ನನಾದ ತಂದೆಯು ವರವನ್ನು ಬೇಡುವಂತೆ ತಿಳಿಸಲು ಪರಶುರಾಮನು ತನ್ನ ತಾಯಿಯನ್ನು ಬದುಕಿಸಬೇಕೆಂದೂ ಇನ್ನು ಮುಂದೆ ಇಂತಹ ಕೋಪವನ್ನು ಬಿಡಬೇಕೆಂದೂ ತಂದೆಯನ್ನು ಕೇಳಿಕೊಂಡನು. ಜಮದಗ್ನಿಯು ಅದಕ್ಕೆ ಒಪ್ಪಿ ರೇಣುಕೆಯನ್ನು ಬದುಕಿಸಿದನು.] भा० वन० ११६।

**जमन ಜಮನ** (न०) ಭಕ್ಷಣ, ತಿನ್ನುವುದು. जमु (अदने) भावे "ल्युट्" (३-३-११५)।

**जम्पती ಜಂಪತೀ** (पुं० द्विव०) ದಂಪತಿಗಳು, ಪತಿಪತ್ನಿಯರು, ಗಂಡ ಮತ್ತು ಹೆಂಡತಿ. जाया च पतिश्च— जायाया जम् भावो निपात्यते (२-२-३१)।

**जम्बाल ಜಂಬಾಲ** (पुं०) 1. ಶೈವಾಲ, ಪಾಚಿ. 2. ಪಂಕ, ಕೆಸರು. जमति — जमु (अदने) "बालन्" बाहु०। "जम्बालः शैवले पङ्के" मेदि०। 3. ತಾಳೆಮರ.

**जम्बालिनी ಜಂಬಾಲಿನೀ** (स्त्री०) ನದಿ, ಹೊಳೆ. जम्बालोऽस्यामस्ति "इनिः" (५-२-११५)। "ङीप्" (४-१-५)।

**जम्बीर ಜಂಬೀರ** (पुं०) 1. ನಿಂಬೆಗಿಡ. 2. ಮರುಗ. 3. ಗಗ್ಗರಗಿಡ. जम्यते — जमु (अदने) "ईरन्" (उ० ४-३५)। निपा०।

**जम्बु(म्बू) ಜಂಬು(ಬೂ)** (स्त्री०) 1. ನೇರಿಳೆಮರ. जमु (अदने) "कूः" (उ० १-९३)। बुक् बाहु० ह्रस्वश्च निपा०। जनी (प्रादुर्भावे) "कूः" बुक् वा। 2. ಜಂಬೂದ್ವೀಪ. (न०) 3. ನೇರಿಳೆಹಣ್ಣು. जम्ब्वाः फलम् "अञ्" (४-३-१३९)। तस्य लुक् (४-३-१६३)। पक्षे लुप् (४-३-१६६)। "जम्बुचूतरसजग्धिरञ्जितैः स्निग्धकण्ठि कलकण्ठनिस्स्वनैः" याद० १७-१६।

**जम्बु(म्बू)क ಜಂಬು(ಬೂ)ಕ** (पुं०) 1. ಸೃಗಾಲ, ನರಿ. जमति मांसमत्ति—जमु (अदने) "कुः" (उ० १-३७)। निपा०। पृषो०। "गृध्राः कङ्का बकाः श्येना वायसा जम्बुकास्तथा" भा० द्रोण० ९७-१३। 2. ನೇರಿಳೆಮರ. जनी (प्रादुर्भावे) "कूः" बुकूच बाहु० ह्रस्वः। स्वार्थे "कः"। 3. ಹೆಮ್ಮರ, ಶಿಗಡುಮರ. 4. ವರುಣ. (वि०) 5. ನೀಚ, ಅಧಮ. "जम्बूकः फेरवे नीचे

पश्चिमाशापतावपि" मेदि०। "जम्बुको वरुणे फेरौ" हेम०।

**जम्बु(म्बू)द्वीप ಜಂಬು(ಬೂ)ದ್ವೀಪ** (पुं०) ಜಂಬೂ ವೃಕ್ಷಗಳಿಂದ ಕೂಡಿದ ಒಂದು ದ್ವೀಪ. ಭೂಮಿಯಲ್ಲಿರುವ ಸಪ್ತ (ಏಳು) ದ್ವೀಪಗಳಲ್ಲೊಂದು. जम्बु (म्बू) वृक्षयुक्तो द्वीपः। **ಸಪ್ತದ್ವೀಪಗಳು :** (1) जम्बु (म्बू) द्वीपः, (2) प्लक्षद्वीपः, (3) शाल्मलिद्वीपः, (4) कुशद्वीपः, (5) क्रौञ्चद्वीपः, (6) शाकद्वीपः ಮತ್ತು (7) पुष्करद्वीपः। ಈ ಏಳು ದ್ವೀಪಗಳೂ ಏಳು ಸಮುದ್ರಗಳಿಂದ ಸುತ್ತುವರಿಯಲ್ಪಟ್ಟಿವೆ. ಜಂಬೂದ್ವೀಪವು ಈ ಎಲ್ಲಾ ದ್ವೀಪಗಳ ಮಧ್ಯದಲ್ಲಿರುವುದು. ಮೇರುಪರ್ವತವು ಜಂಬೂದ್ವೀಪದ ಮಧ್ಯದಲ್ಲಿರುವುದು. "एते द्वीपाः समुद्रैस्तु सप्त सप्तभिरावृताः। लवणेक्षुसुरासर्पिर्दधिदुग्धजलैः समम्। जम्बु(म्बू)द्वीपः समस्तानामेतेषां मध्यसंस्थितः। तस्यापि मेरुर्मैत्रेय मध्ये कनकपर्वतः" विष्णुपु०।

**जम्बु(म्बू)नदी ಜಂಬು(ಬೂ)ನದೀ** (स्त्री०) 1. ಜಂಬೂ ಫಲದ ರಸದಿಂದ ಹುಟ್ಟಿ ಹರಿಯುವ ನದಿ. जम्बूफलरसजाता नदी। "महागजप्रमाणानि जम्ब्वास्तस्याः फलानि वै। पतन्ति भूभृतः पृष्ठे शीर्यमाणानि सर्वतः। रसेन तेषां प्रख्याता तत्र जम्बूनदीति वै। सरित् प्रवर्तते सा च पीयते तन्निवासिभिः" विष्णुपु०। 2. ಬ್ರಹ್ಮಲೋಕದಿಂದ ಹೊರಟ ಸಪ್ತ ನದಿಗಳಲ್ಲೊಂದು. "ब्रह्मलोकादपक्रान्ता सप्तधा प्रतिपद्यते। (1) वस्वोकसारा, (2) नलिनी (3) पावनी च सरस्वती। (4) जम्बूनदी च (5) सीता च (6) गङ्गा (7) सिन्धुश्च सप्तमी" भा० भीष्म० ६-४९।

**जम्बुमालिन् ಜಂಬುಮಾಲಿನ್** (पुं०) ಒಬ್ಬ ರಾಕ್ಷಸ.

**जम्बूल ಜಂಬೂಲ** (पुं०) 1. ನೇರಳೆಮರ. 2. ತಾಳೆಮರ. जम्बूं जम्बूफलं लाति—ला (आदाने) "कः" (३-२-३)। "जम्बूलस्तु पुमान् जम्बूविटपे क्रकचच्छदे" मेदि०। 3. ವಧೂವರರ ಕಡೆಯವರಲ್ಲಿ ನಡೆಯುವ ಹಾಸ್ಯದ ಮಾತು.

**जम्भ ಜಂಭ** (पुं०) 1. ಜಂಬೀರ, ನಿಂಬೆಗಿಡ. जम्भयत्यम्लत्वात्—जभी (गात्रविनामे) "अच्" (३-१-१३४)। नुम् (७-१-६१)। 2. ದಂತ, ಹಲ್ಲು. जभी कर० "घञ्" (३-३-१२१)। 3. ಒಬ್ಬ ರಾಕ್ಷಸ, ಮಹಿಷಾಸುರನ ತಂದೆ. [ಈ ರಾಕ್ಷಸನು ಇಂದ್ರನಿಂದ ಸೋತು ಹೋದುದರಿಂದ ಪರಮೇಶ್ವರನನ್ನು ಕುರಿತು ತಪಸ್ಸು ಮಾಡಿ ಮೂರು ಲೋಕಗಳನ್ನು ಜಯಿಸುವ ಮಗನನ್ನು ಪಡೆಯುವ ವರವನ್ನು ಕೇಳಿದನು. ಆದರೆ ಮನೆಗೆ ಬರುವ ಮೊದಲೇ ನಾರದಮಹರ್ಷಿಯ ಮಾತಿನಂತೆ ಇಂದ್ರನೊಡನೆ ಯುದ್ಧಕ್ಕೆ ಹೋಗಿ ಹತನಾದನು.] 4. ಅಂಶ, ಭಾಗ. जभी कर्म० "घञ्" (३-३-१९)। 5. ಬತ್ತಳಿಕೆ, ಬಾಣಗಳ ಚೀಲ. जभी कर० "घञ्" (३-३-१२१)। 6. ಕೆನ್ನೆಯ ಮೇಲುಭಾಗ. 7. ಭಕ್ಷ್ಯ, ತಿಂಡಿ. 8. ಭಕ್ಷಣ, ತಿನ್ನುವುದು, ನುಂಗುವುದು. "जम्भः स्याद्दानवान्तरे। दन्तभोजनयोरंशे हनौ जम्बीरतूणयोः" हेम०। 9. ರಾವಣನ ಒಬ್ಬ ಅನುಚರ. 10. ಹಿರಣ್ಯಕಶಿಪುವಿನ ಪತ್ನಿ ಕಯಾಧುವಿನ ತಂದೆ. "हिरण्यकशिपोर्भार्या कयाधुर्नाम दानवी। जम्भस्य तनया दत्ता सुषुवे चतुरः सुतान्" भाग० ६-१८-१२। 11. ಜೃಂಭೆ, ಆಕಳಿಕೆ.

**जम्भक ಜಂಭಕ** (वि०) ಭಕ್ಷಿಸುವವನು, ತಿನ್ನುವವನು. जभी (गात्रविनामे) "ण्वुल्" (३-१-१३३)।

**जम्भका ಜಂಭಕಾ** (स्त्री०) ಆಕಳಿಕೆ.

**जम्भद्विष् ಜಂಭದ್ವಿಷ್** (पुं०) ಜಂಭನೆಂಬ ರಾಕ್ಷಸನ ವೈರಿ, ಇಂದ್ರ. जम्भं द्वेष्टि—द्विष (अप्रीतौ) "क्विप" (३-२-६१)।

**जम्भभेदिन् ಜಂಭಭೇದಿನ್** (पुं०) ಜಂಭನೆಂಬ ರಾಕ್ಷಸನನ್ನು ಸೀಳಿದ ಇಂದ್ರ. जम्भं भिनत्ति—भिदिर् (विदारणे) "णिनिः" (३-१-१३४)। "जम्भभेदिजलदप्रसूतिभिः" याद० १७-५५।

**जम्भल ಜಂಭಲ** (पुं०) ನಿಂಬೆಗಿಡ.

**जम्भा ಜಂಭಾ** (स्त्री०) ಆಕಳಿಕೆ.

**जम्भारि ಜಂಭಾರಿ** (पुं०) 1. ಜಂಭನೆಂಬ ರಾಕ್ಷಸನ ವೈರಿ, ಇಂದ್ರ. जम्भस्यारिः। 2. ಅಗ್ನಿ, ಬೆಂಕಿ. 3. ವಜ್ರಾಯುಧ. "वज्राशनिर्भिदुर्भेद्रो जम्भारिस्त्रिदशायुधम्" त्रिकाण्ड०।

**जम्भिन् ಜಂಭಿನ್** (पुं०) 1. ನಿಂಬೆಗಿಡ. (वि०) 2. ಆಕಳಿಸುವ.

**जम्भीर ಜಂಭೀರ** (पुं०) 1. ನಿಂಬೆಗಿಡ. जभी (गात्रविनामे) "ईरन्" (उ० ४-३५)। 2. ಮರುಗ.

**जय ಜಯ** (पुं०) 1. ಗೆಲ್ಲುವುದು, ಜಯಿಸುವುದು, ಪರಪಕ್ಷವನ್ನು ಸೋಲಿಸಿ ಶ್ರೇಷ್ಠತೆ ಪಡೆಯುವುದು. जि (जये) भावे "अच्" (३-३-५६)। "जयाय सेनान्यमुशन्ति देवाः" कुमा० ३-१५। "जयमिच्छति तस्य जातशङ्के मनसीमं मुहुराददे वितर्कम्" किरा० १३-२। 2. ಉತ್ಕ

ಸಂಯಮ, ಇಂದ್ರಿಯ ಮೊದಲಾದುವುಗಳ ವಶೀಕರಣ. 3. ವಿರಾಟನಗರದಲ್ಲಿ ಪಾಂಡವರು ಅಜ್ಞಾತವಾಸದಲ್ಲಿದ್ದಾಗ ಧರ್ಮರಾಜನ ಹೆಸರು. ಪಾಂಡವರು ಐವರೂ (1) ಜಯ (2) ಜಯಂತ (3) ವಿಜಯ (4) ಜಯತ್ಸೇನ ಮತ್ತು (5) ಜಯದ್ಬಲರೆಂದು ಗುಪ್ತನಾಮಧೇಯಗಳನ್ನು ಹೊಂದಿದ್ದರು. 4. ಎಲ್ಲರಿಗಿಂತಲೂ ಮೇಲ್ಮೆಯನ್ನು ಪಡೆಯುವುದು. 5. ಇಂದ್ರನ ಮಗ ಜಯಂತ. 6. ಅರ್ಜುನ. "यदि नोत्तिष्ठति जयः पिता मे नरसत्तमः। अस्मिन्नेव रणोद्देशे शोषयिष्ये कलेबरम्" भा० आश्व० ८०-३६। 7. ವಿಷ್ಣುವಿನ ದ್ವಾರಪಾಲಕರಲ್ಲೊಬ್ಬ. [ಜಯ-ವಿಜಯರೆಂಬುವರು ವೈಕುಂಠದ ದ್ವಾರಪಾಲಕರು. ಇವರು ಮಹಾವಿಷ್ಣುವಿನ ದರ್ಶನಕ್ಕಾಗಿ ಬಂದ ಸನಕಾದಿಮಹರ್ಷಿಗಳನ್ನು ಬಾಗಿಲಲ್ಲಿ ತಡೆದುದರಿಂದ ಅವರ ಶಾಪಕ್ಕೆ ಗುರಿಯಾದರು. ಅದರಿಂದ ಭೂಲೋಕದಲ್ಲಿ ಮೂರು ಜನ್ಮಗಳಲ್ಲಿ ರಾಕ್ಷಸರಾಗಿ ಹುಟ್ಟಿದರು. ಮೊದಲನೆಯ ಜನ್ಮದಲ್ಲಿ ಹಿರಣ್ಯಾಕ್ಷ-ಹಿರಣ್ಯಕಶಿಪುಗಳಾಗಿ ಎರಡನೆಯ ಜನ್ಮದಲ್ಲಿ ರಾವಣ-ಕುಂಭಕರ್ಣರಾಗಿ ಮೂರನೆಯ ಜನ್ಮದಲ್ಲಿ ಶಿಶುಪಾಲ-ದಂತವಕ್ತ್ರರಾಗಿ ಹುಟ್ಟಿ ಪರಮಾತ್ಮನಿಂದಲೇ ಹತರಾಗಿ ಶಾಪವಿಮುಕ್ತರಾದರು.] 8. ವಿಷ್ಣು. आश्रितैः जीयते विधेयीक्रियते — जि (जये) कर्म० "अच्" (३-३-५६)। "आश्रितैर्जीयते यस्माद्विधेयीक्रियते जयः" इति निरुक्तिः। "आज्ञाप्योऽहं तपस्विनाम्"। "ततो नारायणो विष्णुः नियुक्तः सुरसत्तमैः" रामा०। "विनयो जयः सत्यसन्धो दाशार्हः सात्वतांपतिः" वि० स०। 9. ಪ್ರಭವ ಮೊದಲಾದ ಅರವತ್ತು ಸಂವತ್ಸರಗಳಲ್ಲಿ ಇಪ್ಪತ್ತೆಂಟನೆಯದು. 10. ವಿಶ್ವಾಮಿತ್ರ ಮಹರ್ಷಿಯ ಒಬ್ಬ ಮಗ. "मधुच्छन्दो जयश्चैव देवलश्च तथाष्टकः। कच्छपो हरितश्चैव विश्वामित्रस्य ते सुताः" हरिवं०। 11. ಸೃಂಜಯನ ಒಬ್ಬ ಮಗ. 12. ಐಲನಿಗೆ ಊರ್ವಶಿಯಲ್ಲಿ ಹುಟ್ಟಿದ ಒಬ್ಬ ಮಗ. "ऐलस्य चोर्वशीगर्भात् षडासन्नात्मजा नृप। आयुः श्रुतायुः सत्यायूरयोऽथ विजयो जयः" भाग० ९-१५-१। 13. ಭಾರತ ಮೊದಲಾದ ಗ್ರಂಥಗಳ ಹೆಸರು. "अष्टादश पुराणानि रामस्य चरितं तथा। विष्णुधर्मादिशास्त्राणि शिवधर्माश्च भारत। कार्ष्णं च पञ्चमो वेदो यन्महाभारतं स्मृतम्। जयेति नाम एतेषां प्रवदन्ति मनीषिणः" भविष्यपु०। "नारायणं नमस्कृत्य नरं चैव नरोत्तमम्। देवीं सरस्वतीं चैव ततो जयमुदीरयेत्" ಎಂದು ಮಹಾಭಾರತದ ಪ್ರತಿಯೊಂದು ಪರ್ವದ ಪ್ರಾರಂಭದಲ್ಲೂ ಪಠಿತವಾಗಿರುವುದು. 14. ಕೃಷ್ಣನಿಗೆ ಭದ್ರೆಯೆಂಬ ಮಹಿಷಿಯಲ್ಲಿ ಜನಿಸಿದ ಒಬ್ಬ ಮಗ. "सङ्ग्रामजित् बृहत्सेनः शूरः प्रहरणोऽरिजित्। जयः सुभद्रो भद्राया वाम आयुश्च सत्यकः" भाग० १०-६१-१७। 15. ಇಂದ್ರ. "आखण्डल उग्रधन्वा मेषाण्डोऽप्सरसां पतिः। खदिरो माहिरो दाल्भिः शचीर्चिर्वियुनो जयः" वैज०। 16. ಧೃತರಾಷ್ಟ್ರನ ಒಬ್ಬ ಮಗ.

**जयकोलाहल ಜಯಕೋಲಾಹಲ** (पुं०) 1. ಜಯದ ಶಬ್ದ. जयस्य कोलाहलः। 2. ಪಗಡೆಯಾಟದ ಒಂದು ಭೇದ. यजस्य कोलाहलो यस्मिन्।

**जयघोष ಜಯಘೋಷ** (पुं०) ಜಯದ ಶಬ್ದ.

**जयघोषण ಜಯಘೋಷಣ** (न०) ಜಯದ ಶಬ್ದ. (स्त्री०) **–घोषणा –ಘೋಷಣಾ.** जयस्य घोषणं घोषणा वा। "दिग्विजृम्भितकाकुत्स्थपौलस्त्यजयघोषणः" रघु० १२-७२।

**जयढक्का ಜಯಢಕ್ಕಾ** (स्त्री०) ಜಯವನ್ನು ಸೂಚಿಸುವ ನಗಾರಿ, ಜಯವನ್ನು ತಿಳಿಸುವ ಭೇರಿಯೆಂಬ ಒಂದು ವಾದ್ಯ.

**जयत् ಜಯತ್** (वि०) ಜಯಿಸುತ್ತಿರುವ, ಗೆಲ್ಲುತ್ತಿರುವ. जि (जये) "शतृ" (३-२-१२४)। स्त्रियाम् "ङीप्" (४-१-६)। **जयन्ती ಜಯಂತೀ.** "जगद्वशीकर्तुमिमाः स्मरस्य प्रभावनीके तनवै जयन्तीः। इत्यस्य तेने कदलीमंधुश्रीः प्रभावनी केतनवैजयन्तीः" माघ० ६-६९।

**जयत्सेन ಜಯತ್ಸೇನ** (पुं०) 1. ವಿರಾಟನಗರದಲ್ಲಿ ಅಜ್ಞಾತವಾಸದಲ್ಲಿದ್ದಾಗ ನಕುಲನ ಗುಪ್ತವಾದ ಹೆಸರು. ["जय" ಪದದಲ್ಲಿ ನೋಡಿ.] 2. ಜಯಿಸುವ ಸೈನ್ಯವುಳ್ಳ ರಾಜ. जयन्ती सेनाऽस्य। 3. ಮಗಧ ದೇಶದ ಒಬ್ಬ ದೊರೆ.

**जयदत्त ಜಯದತ್ತ** (पुं०) 1. ಇಂದ್ರನ ಮಗ ಜಯಂತ. 2. ಅಶ್ವವೈದ್ಯಕವೆಂಬ ಗ್ರಂಥವನ್ನು ಬರೆದ ಒಬ್ಬ ಪಂಡಿತ.

**जयदुर्गा ಜಯದುರ್ಗಾ** (स्त्री०) ದುರ್ಗಾದೇವಿಯ ಒಂದು ಮೂರ್ತಿ, ಪಾರ್ವತಿಯ ಒಂದು ರೂಪ.

**जयदेव ಜಯದೇವ** (पुं०) ಗೀತಗೋವಿಂದ ಕಾವ್ಯವನ್ನು ರಚಿಸಿದ ಒಬ್ಬ ಕವಿ. ಜಯದೇವ ಕವಿಯು ಗೀತಗೋವಿಂದವಲ್ಲದೆ "ಪ್ರಸನ್ನ ರಾಘವ"ವೆಂಬ ನಾಟಕ ಮತ್ತು "ಚಂದ್ರಾಲೋಕ"ವೆಂಬ ಅಲಂಕಾರ ಗ್ರಂಥಗಳನ್ನು ರಚಿಸಿರುತ್ತಾನೆ. ಈ ಕವಿಯ ತಾಯಿ ರಾಧಾದೇವಿ. ತಂದೆ ಭೋಜದೇವ. "श्री भोजदेवप्रभवस्य राधादेवीसुतश्रीजयदेवकस्य। पराशरादिप्रियवर्गकण्ठे श्रीगीतगोविन्दकवित्वमस्तु" गीतगो० १२-५। ಗಾನವಿದ್ಯೆಯಲ್ಲಿರುವ

ಪ್ರಾವೀಣ್ಯವೂ ಶ್ರೀಕೃಷ್ಣನಲ್ಲಿಡಬೇಕಾದ ಧ್ಯಾನವೂ ಕಾವ್ಯಗಳಲ್ಲಿರಬೇಕಾದ ಶೃಂಗಾರರಸವೂ ಸದಾ ಶ್ರೀಕೃಷ್ಣ ಪರಾಯಣನಾದ ಜಯದೇವಕವಿಯ "ಗೀತಗೋವಿಂದ" ಕಾವ್ಯದಲ್ಲಿ ತುಂಬಿ ತುಳುಕಾಡುತ್ತಿರುವುದನ್ನು ರಸಿಕರು ಪರಿಶೀಲಿಸಿ ಆಸ್ವಾದಿಸಬಹುದು. "यद्गान्धर्वकलासु कौशलमनुध्यानं च यद्वैष्णवं यच्छृङ्गारविवेकतत्त्वरचना काव्येषु लीलायितम्। तत्सर्वं जयदेवपण्डितकवेः कृष्णैकतानात्मनः सानन्दाः परिशोधयन्तु सुधियः श्रीगीतगोविन्दतः" गीतगो० १२-३। ಈ ಕಾವ್ಯದಲ್ಲಿ 12 ಸರ್ಗಗಳಿವೆ. ಇದರಲ್ಲಿ ಶ್ರೀಕೃಷ್ಣನ ಶೃಂಗಾರಲೀಲಾವಿನೋದಗಳು ವರ್ಣಿಸಲ್ಪಟ್ಟಿವೆ. "श्रीवासुदेवरतिकेलिकथासमेतमेतं करोति जयदेवकविः प्रबन्धम्" गीतगो० १-२।

**जयद्बल ಜಯದ್ಬಲ** (ಪುಂ०) ವಿರಾಟನಗರದಲ್ಲಿ ಅಜ್ಞಾತವಾಸದಲ್ಲಿದ್ದಾಗ ಪಾಂಡುಪುತ್ರನಾದ ಸಹದೇವನ ಹೆಸರು. ["जय" ಪದದಲ್ಲಿ ನೋಡಿ.]

**जयद्रथ ಜಯದ್ರಥ** (ಪುಂ०) 1. ಪುರುವಂಶದ ಬೃಹನ್ಮನಸ್ಸೆಂಬ ಒಬ್ಬ ರಾಜನ ಮಗ. 2. ಸಿಂಧು ದೇಶದ ದೊರೆಯಾದ ವೃದ್ಧಕ್ಷತ್ರನ ಮಗ. [ಇವನು ಸೌವೀರ ದೇಶದ ದೊರೆ. ಧೃತರಾಷ್ಟ್ರನ ಮಗಳಾದ ದುಃಶಲೆಯು ಈತನ ಹೆಂಡತಿ. ಜಯದ್ರಥನು ಕೌರವರ ಪಕ್ಷ ಸೇರಿ ಪಾಂಡವರನ್ನು ವಿರೋಧಿಸುತ್ತಿದ್ದನು. ಒಂದು ಸಲ ಕಾಮ್ಯಕವನದಲ್ಲಿ ಇವನು ಹೋಗುತ್ತಿದ್ದಾಗ ದ್ರೌಪದಿಯನ್ನು ಕಂಡು ಮೋಹಿಸಿ ಪಾಂಡವರು ಬೇಟೆಗಾಗಿ ಹೋಗಿರುವುದನ್ನು ತಿಳಿದು ಅವಳನ್ನು ಅಪಹರಿಸಿಕೊಂಡು ಹೊರಟನು. ಬೇಟೆಯಿಂದ ಬಂದ ಭೀಮಸೇನನು ಈ ವಿಷಯ ತಿಳಿದು ಜಯದ್ರಥನನ್ನು ಹಿಡಿದು ದ್ರೌಪದಿಯನ್ನು ಬಿಡಿಸಿಕೊಂಡು ಅವನನ್ನು ಕೊಲ್ಲಲು ಹೋದನು. ಧರ್ಮರಾಜನು ತಂಗಿಯಾದ ದುಃಶಲೆಯನ್ನು ದುಃಖಪಡಿಸಬಾರದೆಂದು ಹೇಳಿ ತಡೆದನು. ಭೀಮನು ಜಯದ್ರಥನಿಗೆ ಪಂಚಶಿಖೆಗಳನ್ನು ಮಾಡಿ ಅವಮಾನಪಡಿಸಿ ಕಳುಹಿಸಿದನು. ಬಳಿಕ ಚಕ್ರವ್ಯೂಹದಲ್ಲಿ ಅಭಿಮನ್ಯುವಿನ ಸಾವಿಗೆ ಇವನು ಪ್ರಧಾನಕಾರಣನಾದನೆಂದು ತಿಳಿದು ಅರ್ಜುನನು ಇವನ ತಲೆಯನ್ನು ಕಡಿದು ಕೊಂದುಹಾಕಿದನು.]

**जयध्वज ಜಯಧ್ವಜ** (ಪುಂ०) 1. ಜಯಪತಾಕೆ, ಜಯವನ್ನು ಸೂಚಿಸುವ ಬಾವುಟ. 2. ಕಾರ್ತವೀರ್ಯಾರ್ಜುನನ ಮಗ. "शूरसेनश्च शूरश्च धृष्णोक्तः कृष्ण एव च। जयध्वजश्च नाम्नासीदावन्त्यो नृपतिर्महान्। कार्तवीर्यस्य तनया वीर्यवन्तो महाबलाः" हरिवं०।

**जयन ಜಯನ** (ನಂ०) 1. ಜಯ, ಗೆಲುವು. जि (जये) भावे "ल्युट्" (३-३-११५)। 2. ಆನೆ ಕುದುರೆ ಮೊದಲಾದುವುಗಳ ಬೆನ್ನಿನ ಮೇಲೆ ಹಾಸುವ ಕವುದಿ ಜೀನು ಮೊದಲಾದುವು. "सकल्पनं द्विरदगणं वरूथिनस्तुरङ्गिणो जयनयुजश्च वाजिनः" माघ० १७-२३।

**जयनी ಜಯನೀ** (ಸ್ತ್ರೀ०) ಇಂದ್ರನ ಮಗಳು.

**जयन्त ಜಯಂತ** (ಪುಂ०) 1. ಇಂದ್ರನ ಮಗ. जि (जये) "झच्" (उ० ३-१२८)। जयन्तः शक्रपुत्रः सि० कौ०। "उमावृषाङ्कौ शरजन्मना यथा यथा जयन्तेन शचीपुरन्दरौ" रघु० ३-२३। 2. ಶಂಕರ, ಪರಮೇಶ್ವರ, ಪರಶಿವ. "जयन्तः शङ्करेऽपि स्याज्जयन्तः पाकशासनौ" विश्व०। 3. ಚಂದ್ರ. "अमृतांशुः कलानिधिः। जयन्तस्तपसः क्लेदुः" वैज०। 4. ಧರ್ಮಪುರುಷನ ಒಬ್ಬ ಮಗ, ಧರ್ಮಪತ್ನಿಯಾದ ಮರುತ್ವತಿಯಲ್ಲಿ ಹುಟ್ಟಿದ ಒಬ್ಬ ಮಗ. "मरुत्वांश्च जयन्तश्च मरुत्वत्यां बभूवतुः" भाग० ६-६-८। 5. ವಿಷ್ಣು. "आस्तिक्यवादिनां जेता जयन्त इति कथ्यते" इति निरुक्तिः। "अर्कौ वाजसनिः शृङ्गी जयन्तस्सर्वविज्जयी" वि० स०। 6. ವಿರಾಟ ನಗರದಲ್ಲಿ ಅಜ್ಞಾತವಾಸದಲ್ಲಿದ್ದಾಗ ಭೀಮಸೇನನ ಗುಪ್ತವಾದ ಹೆಸರು. ["जय" ಪದದಲ್ಲಿ ನೋಡಿ.]

**जयन्ती ಜಯಂತೀ** (ಸ್ತ್ರೀ०) 1. ಧ್ವಜ, ಪತಾಕೆ, ಬಾವುಟ. 2. ದುರ್ಗಾದೇವಿ. 3. ಜಯಂತನ ತಂಗಿ, ಇಂದ್ರನ ಮಗಳು. 4. ಶ್ರೀಕೃಷ್ಣ ಜಯಂತಿ, ಶ್ರೀಕೃಷ್ಣನು ಅವತರಿಸಿದ ಸಿಂಹಮಾಸದ ಕೃಷ್ಣಾಷ್ಟಮಿಯ ರಾತ್ರಿ. "अभिजिन्नाम नक्षत्रं जयन्ती नाम शर्वरी। मुहूर्तो विजयो नाम यत्र जातो जनार्दनः" हरिवं०। "जयं पुण्यं च तनुते जयन्तीं तेन तां विदुः"। 5. ಮಾರ್ಗಶೀರ್ಷ ಶುಕ್ಲ ಸಪ್ತಮಿ. "नन्दा मार्गशिरे शुक्ला सप्तम्यानन्ददायिनी। जयन्ती नाम सा प्रोक्ता पुण्या पापहरा स्मृता"। 6. ತಕ್ಕಿಲಗಿಡ.

**जयपताका ಜಯಪತಾಕಾ** (ಸ್ತ್ರೀ०) ಜಯಧ್ವಜ, ಜಯವನ್ನು ಸೂಚಿಸುವ ಬಾವುಟ.

**जयपत्र ಜಯಪತ್ರ** (ನಂ०) 1. ಜಯವನ್ನು ತಿಳಿಸುವ ಪತ್ರ, ಜಯದ ದಾಖಲೆ ಪತ್ರ, ತೀರ್ಪುಗಾರರು ಜಯದ ತೀರ್ಪನ್ನು ಬರೆದುಕೊಟ್ಟ ಕಾಗದ. जयसूचकं पत्रम्। 2. ಅಶ್ವಮೇಧಯಾಗದ ಕುದುರೆಯ ಹಣೆಯ ಮೇಲೆ ಬರೆದು ಕಟ್ಟಿರುವ ಚೀಟಿ.

**जयपाल ಜಯಪಾಲ** (ಪುಂ) 1. ಬ್ರಹ್ಮ. 2. ವಿಷ್ಣು. 3. ರಾಜ, ದೊರೆ. जयं पालयति—पाल (रक्षणे)+ णिच् "अण्" (३-२-१)।

**जयपुर ಜಯಪುರ** (ನಂ) 1. ಆಳ್ವಾರ್ ಸಂಸ್ಥಾನವನ್ನೊಳಗೊಂಡ ಜಯಪುರ ಸಂಸ್ಥಾನ; ಮಹಾಭಾರತ ಕಾಲದಲ್ಲಿ ಇದು ಮತ್ಸ್ಯದೇಶವೆಂದು ಪ್ರಸಿದ್ಧವಾಗಿತ್ತು. ಇದರ ರಾಜಧಾನಿಯು ಆಗ ಪಾಂಡವರು ಅಜ್ಞಾತವಾಸದಲ್ಲಿದ್ದ ವಿರಾಟನಗರ. ಈಗ ಇದು "ಬೈರಾಟ"ವೆಂದು ಪ್ರಸಿದ್ಧವಾಗಿದೆ.

**जयप्रस्थान ಜಯಪ್ರಸ್ಥಾನ** (ನಂ) ವಿಜಯಕ್ಕಾಗಿ ಮಾಡುವ ಪ್ರಯಾಣ, ಜಯಗಳಿಕೆಗಾಗಿ ಹೊರಟುಬರುವುದು.

**जयप्रिय ಜಯಪ್ರಿಯ** (ಪುಂ) ವಿರಾಟರಾಜನ ಒಬ್ಬ ಸಹೋದರ. "श्रुतध्वजो बलानीको जयानीको जयप्रियः। चन्द्रोदयः कामरूपो विराटभ्रातरः शुभाः" भा० द्रोण० १५९।

**जयभेरी ಜಯಭೇರಿ** (ಸ್ತ್ರೀಂ) ಜಯಸೂಚಕವಾದ ನಗಾರಿ.

**जयमङ्गल ಜಯಮಂಗಲ** (ಪುಂ) ರಾಜನು ಸವಾರಿ ಮಾಡುವ ಆನೆ. जयेन मङ्गलं यस्मात्।

**जयमङ्गलरस ಜಯಮಂಗಲರಸ** (ಪುಂ) ಸಕಲ ವಿಧ ಜ್ವರಗಳನ್ನು ವಾಸಿಮಾಡುವ ಆಯುರ್ವೇದೋಕ್ತವಾದ ಒಂದು ಔಷಧ. जयेन रोगजयेन मङ्गलं यस्मात् तादृशो रसः। "जीर्णज्वरं महाघोरं चिरकालसमुद्भवम्। ज्वरमष्टविधं हन्ति साध्यासाध्यमथापि वा। पृथग्दोषांश्च विविधान् समस्तान् विषमज्वरान्। मेदोगतं मांसगतमस्थिमज्जागतं तथा। अन्तर्गतं महाघोरं बहिस्थं च विशेषतः। नानादोषोद्भवं चैव ज्वरं शुक्रगतं तथा। निखिलं ज्वरनामानं हन्ति श्रीशिवशासनात्। जयमङ्गलनामायं रसः श्रीशिवनिर्मितः। बलपुष्टिकरश्चैव सर्वरोगनिबर्हणः" भैषज्यर०।

**जययज्ञ ಜಯಯಜ್ಞ** (ಪುಂ) ವಿಜಯನಿಮಿತ್ತವಾದ ಅಶ್ವಮೇಧಯಾಗ.

**जयलक्ष्मी ಜಯಲಕ್ಷ್ಮೀ** (ಸ್ತ್ರೀಂ) ವಿಜಯಲಕ್ಷ್ಮಿ, ಜಯದ ಅಧಿದೇವತೆ. "कथमपि जयलक्ष्मीर्भीतभीता विहातुं विषमनयनसेनापक्षपातं विषेहे" किरा० १४-६५।

**जयलेख ಜಯಲೇಖ** (ಪುಂ) "जयपत्र"ದ ಅರ್ಥ.

**जयवत् ಜಯವತ್** (ವಿಂ) ಜಯದಿಂದ ಕೂಡಿದ, ವಿಜಯವನ್ನು ಗಳಿಸಿದ. जयोऽस्यास्ति "मतुप्" (५-२-९४)।

**जयवाहिनी ಜಯವಾಹಿನೀ** (ಸ್ತ್ರೀಂ) 1. ಶಚೀದೇವಿ, ಇಂದ್ರನ ಪತ್ನಿ. 2. ವಿಜಯಗಳಿಸಿದ ಸೇನೆ. जययुक्ता वाहिनी।

**जयशङ्ख ಜಯಶಂಖ** (ಪುಂ) ಜಯವನ್ನು ಸೂಚಿಸುವ ಶಂಖಧ್ವನಿ.

**जयशब्द ಜಯಶಬ್ದ** (ಪುಂ) ಜಯಧ್ವನಿ, ಜಯವನ್ನು ಸಾರುವ ಶಬ್ದ. "क्षत्रं क्षितौ क्षपितभूरिबलारिपक्षमुद्घुष्टनैकजयशब्दविराविताशम्" बृहत्सं० १९-१७।

**जयशील ಜಯಶೀಲ** (ವಿಂ) ವಿಜಯವನ್ನು ಗಳಿಸಿದ.

**जयशृङ्ग ಜಯಶೃಂಗ** (ನಂ) ಜಯವನ್ನು ಸೂಚಿಸಲು ಊದುವ ಕೊಂಬು.

**जयश्री ಜಯಶ್ರೀ** (ಸ್ತ್ರೀಂ) ಜಯಲಕ್ಷ್ಮಿ, ವಿಜಯದ ಅಧಿದೇವತೆ, ಜಯಸಂಪತ್ತು. "जयश्रियं पार्थ पृथूकरोतु ते" किरा० ४-२१। "सन्मङ्गलस्नात इव प्रतिपेदे जयश्रियम्" रघु० ४-४१।

**जयसेन ಜಯಸೇನ** (ಪುಂ) 1. ಮಗಧದೇಶದ ಒಬ್ಬ ದೊರೆ. जययुक्ता सेनाऽस्य। 2. ಅಹೀನವೊರೆಯ ಒಬ್ಬ ಮಗ. "सहदेवस्ततोऽहीनो जयसेनस्तु तत्सुतः" भाग० ९-१७-१७। 3. ವಿದೂರಥನ ಪುತ್ರನಾದ ಸಾರ್ವಭೌಮ ರಾಜನ ಮಗ. "ततो विदूरथस्तस्मात् सार्वभौमस्ततोऽभवत्। जयसेनस्तत्तनयः" भाग० ९-२२-१०।

**जयस्तम्भ ಜಯಸ್ತಂಭ** (ಪುಂ) ಜಯವನ್ನು ಸೂಚಿಸುವ ಕಂಬ, ವಿಜಯವನ್ನು ಗಳಿಸಿದ ರಾಜನು ತಾನು ಜಯಿಸಿದ ಜ್ಞಾಪಕಾರ್ಥ ತನ್ನ ಹೆಸರನ್ನು ಬರೆದು ನೆಟ್ಟ ಕಂಬ. जयसूचकः स्तम्भः। "वङ्गानुत्खाय तरसा नेता नौसाधनोद्यतान्। निचखान जयस्तम्भान् गङ्गास्रोतोन्तरेषु सः" रघु० ४-३६। "मत्तेभरदनोत्कीर्णव्यक्तविक्रमलक्षणम्। त्रिकूटमेव तत्रोच्चैर्जयस्तम्भं चकार सः" रघु० ४-५९।

**जया ಜಯಾ** (ಸ್ತ್ರೀಂ) 1. ತಕ್ಕಲಿಗಿಡ. 2. ಒಂದು ಜಾತಿಯ ನೆಲ್ಲಿಗಿಡ. 3. ದುರ್ಗಾದೇವಿ. "जयः कल्याणवचनः आकारो दातृवाचकः। जयं ददाति सा नित्यं सा जया परिकीर्तिता" ब्रह्मवै०। "जया त्वं विजया चैव संग्रामे च जयप्रदा। ममापि विजयं देहि वरदा त्वं च सांप्रतम्" भा० विरा० ८-१७। 4. ಪಕ್ಷದ 3, 8 ಮತ್ತು 13 ನೆಯ ತಿಥಿಗಳು, ತದಿಗೆ, ಅಷ್ಟಮಿ ಮತ್ತು ತ್ರಯೋದಶೀ ತಿಥಿಗಳು. "नन्दा भद्रा जया रिक्ता पूर्णा च प्रतिपत्क्रमात्"। ಪಾಡ್ಯ (ಪ್ರತಿಪತ್) ಮೊದಲುಗೊಂಡು (1) नन्दा (ಪಾಡ್ಯ) (2) भद्रा (ಬಿದಿಗೆ) (3) जया (ತದಿಗೆ) (4) रिक्ता (ಚತುರ್ಥಿ) ಮತ್ತು (5) पूर्णा (ಪಂಚಮಿ) ಎಂದು ತಿಥಿಗಳಿಗೆ ಐದು ಸಂಜ್ಞೆಗಳು. ಇದೇ ರೀತಿ ಪುನಃ

ಎರಡು ಪರ್ಯಾಯಗಳಲ್ಲಿ ಕ್ರಮವಾಗಿ ಉಳಿದ ತಿಥಿಗಳನ್ನು ಎಣಿಸಬೇಕು. 5. ಗರಿಕೆಹುಲ್ಲು.

**जयाजय ಜಯಾಜಯ** (पुं० द्विव०) ಜಯ ಮತ್ತು ಅಪಜಯ, ಗೆಲುವು ಮತ್ತು ಸೋಲು. जयश्च अजयश्च। "सुखदुःखे समे कृत्वा लाभालाभौ जयाजयौ" गीता २-३८।

**जयानीक ಜಯಾನೀಕ** (पुं०) 1. ದ್ರುಪದರಾಜನ ಒಬ್ಬ ಮಗ. ಇವನು ಅಶ್ವತ್ಥಾಮನಿಂದ ಹತನಾದನು. "पुनः शत्रुञ्जयं नाम द्रुपदस्यात्मजं रणे। बलानीकं जयानीकं जयाश्वं चाभिजघ्निवान्" भा० द्रोण० १५७-१८१। 2. ವಿರಾಟರಾಜನ ಒಬ್ಬ ಸಹೋದರ. "बलानीको जयानीको जयाश्वो रथवाहनः। चन्द्रोदयः समरथः विराटभ्रातरः शुभाः" भा० द्रोण० १५९-४१।

**जयावह ಜಯಾವಹ** (वि०) ಜಯವನ್ನುಂಟುಮಾಡುವ, ವಿಜಯವನ್ನು ತಂದುಕೊಡುವ. जयस्यावहः—आ+वह (प्रापणे) "अच्" (३-१-१३४)।

**जयाशिस् ಜಯಾಶಿಸ್** (स्त्री०) 1. ಜಯವಾಚನ, ಜಯ ಘೋಷ. 2. ವಿಜಯವನ್ನು ಆಶಂಸೆಮಾಡುವ ಶಬ್ದ, ಜಯವಾಗಬೇಕೆಂಬ ಪ್ರಾರ್ಥನೆ. "तस्मै जयाशीः ससृजे पुरस्तात् सप्तर्षिभिस्तान् स्मितपूर्वमाह" कुमा० ७-४७।

**जयाश्व ಜಯಾಶ್ವ** (पुं०) 1. ದ್ರುಪದರಾಜನ ಒಬ್ಬ ಮಗ. 2. ವಿರಾಟರಾಜನ ಒಬ್ಬ ಸಹೋದರ. ["जयानीक" ಪದದಲ್ಲಿ ನೋಡಿ.]

**जयिन् ಜಯಿನ್** (वि०) ಜಯಶೀಲ, ವಿಜಯವನ್ನು ಪಡೆದ. जयोऽस्यास्ति "इनिः" (५-२-११५)। "उपहितपरमप्रभावधाम्नां न हि जयिनां तपसामलङ्घ्यमस्ति" किरा० १०-६। "निजगृहे जयिनं तिसृणां पुराम्" किरा० १८-१२।

**जयिष्णु ಜಯಿಷ್ಣು** (वि०) ಜಯಶೀಲ. जि (जये) "इष्णुच्" बाहु०।

**जयैषिन् ಜಯೈಷಿನ್** (वि०) ಜಯವನ್ನು ಅಪೇಕ್ಷಿಸುವ. जयमिच्छति—इषु (इच्छायाम्) "णिनिः" (३-२-७८)। "बभूव युद्धं तुमुलं जयैषिणोरधोमुखैरूर्ध्वमुखैश्च पत्रिभिः" रघु० ३-५७।

**जयोदाहरण ಜಯೋದಾಹರಣ** (न०) 1. ಜಯವನ್ನು ಪ್ರಚಾರಪಡಿಸುವ ಗೀತೆ. जयः उदाह्रियतेऽत्र—उद्+आङ्+हृञ् (हरणे) "ल्युट्" (३-३-११७)। "जयोदाहरणं बाह्वोर्गापयामास किंकरान्" रघु० ४-७८। 2. ಕೀರ್ತಿ, ಯಶಸ್ಸು. "यशो जयोदाहरणं साधुवादो गुणावली" वैज०।

**जय्य ಜಯ್ಯ** (वि०) ಜಯಿಸಲು ಶಕ್ಯನಾದ. जेतुं शक्यः—जि (जये) "यत्" (३-१-९७)। निपा० (६-१-८१)।

**जर ಜರ** (पुं०) 1. ಮುಪ್ಪು, ಮುದಿತನ. 2. ವಿನಾಶನ. जॄष् (वयोहानौ) "अङ्" (३-३-१०४)। (वि०) 3. ಮುದಿಯಾದ.

**जरठ ಜರಠ** (पुं०) 1. ಮುಪ್ಪು, ಮುದಿತನ. (वि०) 2. ಕಠಿನವಾದ, ಒರಟಾದ. जॄष् (वयोहानौ) "अठच्" बाहु०। "अयमतिजरठाः प्रकामगुर्वीरलघुविलम्बिपयोधरोपरुद्धाः" माघ० ४-२९। 3. ಜೀರ್ಣವಾದ, ಮುದಿಯಾದ. 4. ಪರಿಣತವಾದ, ಬಲಿತಿರುವ. "जरठकमलकन्दच्छेदगौरैर्मयूखैः" माघ० ११-१४।

**जरण ಜರಣ** (न०) 1. ಜೀರಿಗೆ, 2. ಕರಿಜೀರಿಗೆ. 3. ಸೌವರ್ಚಲ ಲವಣ, ಸದ್ಯಕ್ಷಾರ. 4. ಇಂಗು. जॄष् (वयोहानौ) "ल्युः" (३-१-१३४)। "जरणं जीरकाजाजिहिङ्गुसौवर्चलेष्वपि" विश्व०। (वि०) 5. ಜೀರ್ಣವಾದ, ಮುದಿಯಾದ. 6. ಜೀರ್ಣವಾದ, ಪಚನವಾದ.

**जरणा ಜರಣಾ** (स्त्री०) 1. ಮುಪ್ಪು, ಮುದಿತನ. 2. ಸ್ತುತಿ, ಹೊಗಳಿಕೆ.

**जरत् ಜರತ್** (पुं०) 1. ಮುದುಕ. जॄष् (वयोहानौ) "अतृन्" (३-२-१०४)। "त्वदीक्षणात्प्राप्तफलोऽस्मि सांप्रतं जरन् पुनर्यौवनमाप्तवानिव" याद० १४-३२। (वि०) 2. ಜೀರ್ಣವಾದ, ಪಚನವಾದ, ಅರಗಿದ. 3. ಜೀರ್ಣವಾದ, ಮುದಿಯಾದ. "जनो जरन्महिषविषाणधूसराम्" माघ० १७-४१। स्त्रियाम् "ङीप्" (४-१-६)। **जरती ಜರತೀ**. "जरतीमपि बिभ्राणस्तनुमप्राकृताकृतिः" किरा० ११-७।

**जरतिका ಜರತಿಕಾ**, **जरती ಜರತೀ** } (स्त्री०) ಮುದುಕಿ.

**जरत्कारु ಜರತ್ಕಾರು** (पुं०) 1. ಒಬ್ಬ ಋಷಿ. (स्त्री०) 2. ವಾಸುಕಿಯ ತಂಗಿಯಾದ ಮನಸಾದೇವಿ. [ಜರತ್ಕಾರು ಋಷಿಯು ಮದುವೆಯಾಗದೆ ಯಾವಾಗಲೂ ಬ್ರಹ್ಮಚರ್ಯೆಯಲ್ಲೇ ಇರುವುದನ್ನು ಕಂಡ ಆತನ ಪಿತೃಗಳು ಸದ್ಗತಿಗೆ ಮಾರ್ಗವಿಲ್ಲದೆ ಬಹಳ ದುಃಖಿತಪ್ತರಾಗಿದ್ದರು. ಆಗ ಈ ಋಷಿಯು ತನ್ನ ಹೆಸರಿನ ಕನ್ಯೆಯೇ ತನ್ನ ಪತ್ನಿಯಾಗಬೇಕೆಂದೂ ಆಗ ಮದುವೆಯಾಗುವನೆಂದೂ ಹೇಳಿ ಪಿತೃಗಳನ್ನು ಸಮಾಧಾನಪಡಿಸಿದನು, ಈ ವಿಷಯವನ್ನು

ತಿಳಿದ ವಾಸುಕಿಯು ತನ್ನ ತಂಗಿಯಾದ ಜರತ್ಕಾರು (ಮನಸಾದೇವಿ) ವನ್ನು ಋಷಿಗೆ ಕೊಟ್ಟು ಮದುವೆಮಾಡಿದನು. ಒಂದು ದಿನ ಋಷಿಯು ತನ್ನ ಪತ್ನಿಯ ತೊಡೆಯ ಮೇಲೆ ಮಲಗಿ ನಿದ್ರಿಸುತ್ತಿದ್ದಾಗ ಸೂರ್ಯಾಸ್ತಮಯವಾಯಿತು. ಸಂಧ್ಯಾಕಾಲ ಮೀರುವುದೆಂಬ ಭಯದಿಂದ ಪತಿಯನ್ನು ಎಬ್ಬಿಸಿದಳು. ತನಗೆ ನಿದ್ರಾಭಂಗವಾಯಿತೆಂದು ಅವಳಲ್ಲಿ ಕೋಪಗೊಂಡು ಅವಳನ್ನು ಪರಿತ್ಯಜಿಸಿ ಆಕೆಯು ಗರ್ಭಿಣಿಯಾಗಿರುವುದಾಗಿಯೂ ಜನಿಸುವ ಮಗನೇ ಮುಂದೆ ರಕ್ಷಕನಾಗುವನೆಂದೂ ಹೇಳಿ ಹೊರಟುಹೋದನು. ಈತನೇ ಆಸ್ತಿಕ ಋಷಿ.]

**जरत्कारुप्रिया** **ಜರತ್ಕಾರುಪ್ರಿಯಾ** (स्त्री०) ಮನಸಾದೇವಿ.

**जरद्गव** **ಜರದ್ಗವ**(पुं०)1. ಮುದಿ ಎತ್ತು, ವೃದ್ಧ ವೃಷಭ. जरंश्वसौ गोश्च "टच्" (५-४-९२)। "अकृत्वा पौरुषं या श्रीः किं तयापि सुभोग्यया। जरद्गवः समश्नाति दैवादुपगतं तृणम्" पंचतं०। 2. ಒಂದು ಹದ್ದು, ಗೃಧ್ರ. "अज्ञातकुलशीलस्य वासो देयो न कस्यचित्। मार्जारस्य हि दोषेण हतो वृद्धो जरद्गवः" हितो०। 3. ಕ್ಷೀಣವಾಗುತ್ತಿರುವ ವೃಷಭರೂಪವಾದ ಧರ್ಮ. "नैतस्येह यथास्माकं शश्वच्छास्त्रं जरद्गव.। अलसः क्षुत्परो मूर्खस्तेन पीवान् शुना सह" भा० अनु०।

**जरन्त** **ಜರಂತ** (पुं०) ಮಹಿಷ, ಎಮ್ಮೆ. जृष् (वयोहानौ) "झच्" (उ० ३-१२६)। झस्य अन्तादेशः (७-२-३)।

**जरा** **ಜರಾ** (स्त्री०)1. ಮುಪ್ಪು, ಮುದಿತನ. जीर्यतेऽनया—जृष् (वयोहानौ) "अङ्" (३-३-१०४)। "जरानिरुद्धोऽपि जवेन जाम्बवान्" याद० १४-७। 2. ಒಬ್ಬ ರಾಕ್ಷಸಿ, ಜರಾಸಂಧನ ಉಪಮಾತೆ. ["जरासन्ध" ಪದದಲ್ಲಿ ನೋಡಿ.] 3. ಮುಪ್ಪಿನ ಕಾರಣ, ಮುದಿತನದ ಹೇತು. "या हृष्टमनसा नित्यं स्थानमानविचक्षणा। भर्तुः प्रीतिकरी नित्यं सा भार्या हीतरा जरा"। 4. ಮೃತ್ಯುವಿನ ಮಗಳು. ಈ ಜರೆಗೆ ವ್ಯಾಧಿಗಳೆಲ್ಲವೂ ಒಡಹುಟ್ಟಿದುವು. ಜರೆಯು ಸಹೋದರರಾದ ರೋಗಗಳೊಡನೆ ಜಗತ್ತೆಲ್ಲವನ್ನೂ ಸುತ್ತುತ್ತಿರುವಳು. ಆಚಾರ ವ್ಯವಹಾರ ವಿಹೀನರಾದವರನ್ನು ಬಹಳ ಸಂತೋಷದಿಂದ ಅಪ್ಪಿಕೊಳ್ಳುವಳು. ಒಣಗಿದ ಮಾಂಸವನ್ನೂ ವೃದ್ಧ ಹೆಂಗಸನ್ನೂ ಎಳೆಯ ಬಿಸಿಲನ್ನೂ ಎಳೆಯ ಮೊಸರನ್ನೂ ಸೇವಿಸುವವರನ್ನು ಜರೆಯು ಸಹೋದರರೊಡಗೂಡಿ ಬಂದು ಸೇರುವಳು. "शुष्कमांसं स्त्रियं वृद्धां बालार्कं तरुणं दधि। संसेवन्तं जरा याति प्रहृष्टा भ्रातृभिः सह"। ರಾತ್ರಿ ವೇಳೆಯಲ್ಲಿ ಗಟ್ಟಿ ಮೊಸರನ್ನೂ ಋತುಮತಿ, ವ್ಯಭಿಚಾರಿಣಿಯರನ್ನೂ ಸೇವಿಸುವವರು ಜರೆಗೆ ಬಹಳ ಪ್ರೀತಿಪಾತ್ರರು. "रात्रौ ये दधि सेवन्ते पुंश्चलीं च रजस्वलाम्। तानुपैति जरा हृष्टा भ्रातृभिः सह सुन्दरि"। ಜರೆಯ ಪ್ರತೀಕಾರೋಪಾಯವನ್ನು ತಿಳಿದವರಿಗೆ ಜರೆಯು ಮತ್ತು ವ್ಯಾಧಿಗಳ ಬಾಧೆಯಿರುವುದಿಲ್ಲ. "एते चोपायवेत्तारं न गच्छन्ति च संयतम्। पलायन्ते च तं दृष्ट्वा वैनतेयमिवोरगाः"। **ಜರೆಯ ಪ್ರತೀಕಾರೋಪಾಯಗಳಿವು:** ಕಣ್ಣುಗಳನ್ನು ನೀರಿನಿಂದ ಚೆನ್ನಾಗಿ ತೊಳೆಯುವುದು, ವ್ಯಾಯಾಮ, ಕಾಲಿನ ಅಡಿಗಳಿಗೆ ತೈಲ ಹಚ್ಚುವುದು, ಕಿವಿಗಳ ರಂಧ್ರಗಳಲ್ಲಿ ಎಣ್ಣೆಯನ್ನು ತುಂಬುವುದು, ತಲೆಗೆ ಎಣ್ಣೆಯನ್ನು ಹಚ್ಚುವುದು ಇವುಗಳಿಂದ ಮುಪ್ಪು ಮತ್ತು ವ್ಯಾಧಿಗಳು ಹತ್ತಿರ ಸೇರುವುದಿಲ್ಲ. **ವಸಂತಕಾಲದಲ್ಲಿ** ಸಂಚಾರ, ವಹ್ನಿಸೇವನೆ, ಬಾಲಸ್ತ್ರೀ (ತರುಣಿ) ಯ ಸೇವನೆ, ಕೊಳಗಳ ನೀರಿನಲ್ಲಿ ಸ್ನಾನ, ಚಂದನದ ಲೇಪನ, **ಬೇಸಿಗೆಯಲ್ಲಿ** ಶುದ್ಧಗಾಳಿಯ ಸೇವನೆ, **ವರ್ಷರ್ತುವಿನಲ್ಲಿ** ಉಷ್ಣೋದಕಸ್ನಾನ, ವರ್ಷೋದಕದ ವರ್ಜನ, ಸಕಾಲದಲ್ಲಿ ಆಹಾರ ಸೇವನೆ, **ಶರದೃತುವಿನಲ್ಲಿ** ಹೆಚ್ಚು ಸಂಚರಿಸದಿರುವಿಕೆ, ಕೊಳಗಳ ನೀರಿನಲ್ಲಿ ಸ್ನಾನ, **ಹೇಮಂತಋತುವಿನಲ್ಲಿ** ಕೊಳದ ನೀರಿನಲ್ಲಿ ಸ್ನಾನ, ವಹ್ನಿಸೇವನೆ ಹೊಸದಾದ ಮತ್ತು ಬಿಸಿಯಾದ ಅನ್ನದ ಊಟ, **ಶಿಶಿರಋತುವಿನಲ್ಲಿ** ಬೆಚ್ಚನೆಯ ಬಟ್ಟೆ, ವಹ್ನಿಸೇವನೆ, ಹೊಸದಾದ ಬಿಸಿ ಅನ್ನದ ಊಟ, ಉಷ್ಣೋದಕ ಸ್ನಾನ, ಸದ್ಯಃ ದೊರೆತ ಮಾಂಸ, ಬಿಸಿ ಅನ್ನ, ತರುಣಸ್ತ್ರೀ, ಹಾಲು, ತುಪ್ಪ, ಹಸಿವಾದಾಗ ಊಟ, ನಿತ್ಯವೂ ತಾಂಬೂಲಸೇವನೆ ಇವು ಜರೆಯ ಪ್ರತೀಕಾರೋಪಾಯಗಳು. "मृत्युकन्या सुताश्चैव जरा तस्याश्च कन्यका। जरा च भ्रातृभिः सार्धं शश्वत् भ्रमति भूतलम्। चक्षुर्जलं च व्यायामः पादाधस्तैलसेवनम्। कर्णयोर्मूर्ध्नि तैलं च जराव्याधिविनाशनम्। वसन्ते भ्रमणं वह्निसेवां स्वल्पां करोति यः। बालां च सेवते काले जरा तं नोपगच्छति। खातशीतोदकस्नायी सेवते चन्दनद्रवम्। नोपयाति जरा तं च निदाघेऽनिलसेविनम्। प्रावृष्युष्णोदकस्नायी घनतोयं न सेवते। समये च समाहारी जरा तं नोपगच्छति। शरद्रौद्रं न गृह्णाति भ्रमणं तत्र वर्जयेत्। खातस्नायी समाहारी जरा तं नोपगच्छति। खातस्नायी च हेमन्ते काले वह्निं निषेवते। भुङ्क्ते नवान्नमुष्णं च जरा तं नोपगच्छति। शिशिरेंऽशुकवह्निं च नवोष्णान्नं च सेवते। य

एवोष्णोदकस्नायी जरा तं नोपगच्छति। सद्योमांसं नवान्नं च बाला स्त्री क्षीरभोजनम्। घृतं च सेवते यो हि जरा तं नोपगच्छति। भुङ्क्ते सदन्नं क्षुत्काले तृष्णायां पीयते जलम्। नित्यं भुङ्क्ते च ताम्बूलं जरा तं नोपगच्छति" ब्रह्मवै०।

**जरातुर ಜರಾತುರ**(वि०) 1. ವಯಸ್ಸಿನಿಂದ ಕುಗ್ಗಿಹೋಗಿರುವ, ಮುಪ್ಪಿನಿಂದ ಉಡುಗಿಹೋದ, ಮುದಿತನದಿಂದ ಸತ್ತ್ವಗುಂದಿದ. जरया आतुरः। 2. ಜೀರ್ಣವಾದ, ಮುದಿಯಾದ.

**जरान्वित ಜರಾನ್ವಿತ** (वि०) ಮುಪ್ಪಿನಿಂದ ಕೂಡಿದ. जरया अन्वितः।

**जरापुष्ट ಜರಾಪುಷ್ಟ** (पुं०) ಜರೆಯೆಂಬ ರಾಕ್ಷಸಿಯಿಂದ ಪೋಷಿಸಲ್ಪಟ್ಟ ಜರಾಸಂಧ. जरया पुष्टः।

**जराभिभूत ಜರಾಭಿಭೂತ** (वि०) ಮುಪ್ಪಿನಿಂದ ಉಡುಗಿಹೋದ, ಮುದಿತನದಿಂದ ಸತ್ತ್ವಗುಂದಿದ. जरयाभिभूतः।

**जराभीत ಜರಾಭೀತ** (पुं०) 1. ಕಾಮ, ಮನ್ಮಥ. (वि०) 2. ಮುದಿತನದಿಂದ ಹೆದರಿದ. जराया भीतः।

**जराभीरु ಜರಾಭೀರು** (पुं०) 1. ಮನ್ಮಥ, ಕಾಮ. (वि०) 2. ಮುಪ್ಪಿನಿಂದ ಹೆದರುವ. जराया भीरुः।

**जरायु ಜರಾಯು** (पुं०) 1. ಗರ್ಭಾಶಯ, ಗರ್ಭಕೋಶ. जरामेति — इण् (गतौ) "ञुण्" (उ० १-४)। 2. ಗರ್ಭದ ಹೊರಚರ್ಮ, ಗರ್ಭಕ್ಕೆ ಸುತ್ತಿಕೊಂಡಿರುವ ಚರ್ಮದ ಹೊದಿಕೆ. "जरायुणा मुखे च्छन्ने कण्ठे च कफवेष्टिते। वायोर्मार्गनिरोधाच्च न गर्भस्थः प्ररोदिति" सुश्रुत० शारीर० ३-५४। 3. ಜಟಾಯುಪಕ್ಷಿ. 4. ಹಾವಿನ ಸೋಲೆ.

**जरायुज ಜರಾಯುಜ**(वि०)ಗರ್ಭಾಶಯದಿಂದ ಹುಟ್ಟುವ ಮನುಷ್ಯ ಪಶುಗಳು ಮೊದಲಾದುವು. स्वेदजः अण्डजः ಮತ್ತು जरायुजः ಎಂದು ಮೂರು ಜಾತಿಯ ಪ್ರಾಣಿಗಳಿರುವುವು. (1) ಶಾಖದಿಂದ ಹುಟ್ಟುವ ಹುಳು ನೊಣ ಮುಂತಾದುವು **ಸ್ವೇದಜಗಳು.** (2) ಮೊಟ್ಟೆಯೊಡೆದು ಹುಟ್ಟುವ ಹಕ್ಕಿ ಹಾವು ಮೊದಲಾದುವು **ಅಂಡಜಗಳು.** (3) ಗರ್ಭಾಶಯದಿಂದ ಹುಟ್ಟುವ ಮನುಷ್ಯ ಮತ್ತು ಪಶುಗಳು **ಜರಾಯುಜಗಳು.** ಇವಲ್ಲದೆ ಭೂಮಿಯನ್ನು ಭೇದಿಸಿಕೊಂಡು ಹುಟ್ಟುವ ಸಸ್ಯಗಳು **ಉದ್ಭಿಜ್ಜಗಳು.** "नृगवाद्या जरायुजाः। स्वेदजाः कृमिदंशाद्याः पक्षिसर्पादयोऽण्डजाः। उद्भिदस्तरुगुल्माद्याः उद्भिदुद्भिज्जमुद्भिदम्" अम०।

**जरासन्ध ಜರಾಸಂಧ** (पुं०) ಬೃಹದ್ರಥನ ಮಗನಾದ ಒಬ್ಬ ರಾಕ್ಷಸ. जरया राक्षस्या सन्धा शरीरयोजनमस्य। [ಬೃಹದ್ರಥ ರಾಜನಿಗೆ ಬಹಳ ಕಾಲದವರೆಗೂ ಸಂತಾನವಿರಲಿಲ್ಲ. ಒಂದು ದಿನ ಒಂದು ಮಾವಿನ ಮರದ ಕೆಳಗೆ ತಪಸ್ಸುಮಾಡುತ್ತಿದ್ದ ಚಂಡಕೌಶಿಕ ಋಷಿಯಲ್ಲಿಗೆ ಬಂದು ಸಂತಾನಕ್ಕಾಗಿ ಬೇಡಿದನು. ಋಷಿಯು ಒಂದು ಮಾವಿನ ಹಣ್ಣನ್ನು ಮಂತ್ರಿಸಿ ಅದನ್ನು ರಾಣಿಗೆ ಕೊಡುವಂತೆ ತಿಳಿಸಿದನು. ರಾಜನು ಅದನ್ನು ಎರಡು ಭಾಗಮಾಡಿ ಇಬ್ಬರು ಪತ್ನಿಯರಿಗೂ ಕೊಟ್ಟನು. ಅವರಿಬ್ಬರೂ ಗರ್ಭವನ್ನು ಧರಿಸಿ ಮಗುವಿನ ಎರಡು ಸೀಳುಗಳನ್ನು ಹೆತ್ತರು. ಅದರಿಂದ ಬೇಸರಗೊಂಡ ಅವರು ಅವನ್ನು ಬಿಸಾಡುವಂತೆ ದಾದಿಗೆ ಹೇಳಿದರು. ದಾದಿಯು ಕಸದ ಗುಂಡಿಯಲ್ಲಿ ಬಿಸಾಡಿದಳು. ಆಗ ಆಹಾರಕ್ಕಾಗಿ ತಿರುಗುತ್ತಿದ್ದ ಜರೆಯೆಂಬ ರಾಕ್ಷಸಿಯೊಬ್ಬಳು ಆ ಸೀಳುಗಳನ್ನು ತೆಗೆದು ಜೋಡಿಸಿದಳು. ಅದು ಒಂದು ಶಿಶುವಾಯಿತು. ಅವಳು ಆ ಶಿಶುವನ್ನು ರಾಜನಿಗೆ ಒಪ್ಪಿಸಿದಳು. ಜರೆಯು ಆ ಸೀಳುಗಳನ್ನು ಜೋಡಿಸಿದ್ದರಿಂದ ಶಿಶುವಿಗೆ "**ಜರಾಸಂಧ**"ನೆಂಬ ಹೆಸರಾಯಿತು. ಜರಾಸಂಧನು ಪ್ರಾಪ್ತವಯಸ್ಕನಾಗಿ ರಾಜ್ಯಕ್ಕೆ ಒಡೆಯನಾದನು. ಅನೇಕ ರಾಜರನ್ನು ಜಯಿಸಿ ಬಂಧನದಲ್ಲಿರಿಸಿದನು. ಗಿರಿವ್ರಜವು ಇವನ ರಾಜಧಾನಿ. ರಾಜರೆಲ್ಲರೂ ಸೇರಿ ರಹಸ್ಯವಾಗಿ ಶ್ರೀಕೃಷ್ಣನಿಗೆ ಹೇಳಿಕಳುಹಿಸಿ ತಮ್ಮನ್ನು ಕಾಪಾಡಬೇಕೆಂದು ಪ್ರಾರ್ಥಿಸಲು ಶ್ರೀಕೃಷ್ಣನು ಭೀಮಸೇನನಿಂದ ಜರಾಸಂಧನನ್ನು ಕೊಲ್ಲಿಸಿ ರಾಜರನ್ನು ಸೆರೆಯಿಂದ ಬಿಡಿಸಿದನು.] भा० सभा०।

**जरासन्धजित् ಜರಾಸಂಧಜಿತ್** (पुं०) ಜರಾಸಂಧನನ್ನು ಜಯಿಸಿದ ಭೀಮಸೇನ. जरासन्धं जितवान्—जि (जये) "क्विप्" (३-२-६१)।

**जरित ಜರಿತ** (वि०) ಮುದಿಯಾದ, ಮುದಿತನಹೊಂದಿದ. जराऽस्य सञ्जाता "इतच्" (५-२-३६)।

**जरिन् ಜರಿನ್** (वि०) ಮುದಿತನ ಹೊಂದಿದ, ವೃದ್ಧನಾದ. जराऽस्यास्ति "इनिः" (३-२-११६)। स्त्रियाम् "ङीप्" (४-१-५)। **जरिणी ಜರಿಣೀ.**

**जरूथ ಜರೂಥ**(न०)ಮಾಂಸ. जॄ(वयोहानौ)"ऊथन्"(उ० २-६)। "श्लेष्माबलाशो मांसं तु जरूथम्" त्रिकाण्ड०।

**जर्जन ಜರ್ಜನ** (न०) ಬೆದರಿಕೆ, ಹೆದರಿಸುವುದು. जर्ज (भर्त्सने) भावे "ल्युट्" (३-३-११५)।

**जर्जर ಜರ್ಜರ** (पुं०)1. ವೃದ್ಧ, ಮುದುಕ. 2. ಶೈವಾಲ, ಪಾಚಿ. 3. ಇಂದ್ರನ ಧ್ವಜ. (वि०)4. ಜೀರ್ಣವಾದ,

ಮುದಿಯಾದ, ಶಕ್ತಿಗುಂದಿದ, ಶಿಥಿಲವಾದ. "जर्जरः शैवले शक्रध्वजे त्रिषु जरातुरे" मेदि०। 5. ಒಡೆದುಹೋದ, ಚೂರು ಚೂರಾದ. "कृत्वा पुंवत्पातमुच्चैर्भृगुभ्यो मूर्ध्नि ग्राव्णां जर्जरा निर्झरौघाः" माघ० ४-२३।

**जर्जरित ಜರ್ಜರಿತ** (वि०) 1. ಜೀರ್ಣವಾಗಿ ಮಾಡಲ್ಪಟ್ಟ, ಶಕ್ತಿಗುಂದಿಸಲ್ಪಟ್ಟ. "कृष्णो जर्जरिताङ्गस्य कुञ्जरस्यार्तचेतसः" हरिवं०। 2. ಚೂರು ಚೂರಾಗಿ ಮಾಡಲ್ಪಟ್ಟ. जर्जरं करोति—जर्जर+णिच् कर्म० "क्तः" (३-२-१०२)। 3. ಅರಗಿಸಲ್ಪಟ್ಟ, ಜೀರ್ಣಿಸಲ್ಪಟ್ಟ.

**जर्जरीक ಜರ್ಜರೀಕ** (वि०) 1. ಚೂರುಚೂರಾಗಿರುವ, ಒಡೆದುಹೋಗಿರುವ. 2. ಬಹಳ ತೂತಾಗಿರುವ, ಬಹಳ ರಂಧ್ರಗಳುಳ್ಳ. 3. ಜೀರ್ಣವಾದ, ಮುದಿಯಾದ. जॄ (वयोहानौ) "ईकन्" धातोर्द्वित्वं रुक्चाभ्यासस्य। निपा० (उ० ४-२०)। "जर्जरीकं बहुच्छिद्रे जरातुरेऽपि वाच्यवत्" मेदि०।

**जर्ण ಜರ್ಣ** (पुं०) 1. ಚಂದ್ರ. 2. ವೃಕ್ಷ, ಮರ. जॄ (वयोहानौ) "नः" (उ० ३-१०)। "जर्णश्चन्द्रे च वृक्षे च" मेदि०। (वि०) 3. ಜೀರ್ಣವಾದ. "जर्णो जीर्णद्रुमेन्दुषु" हेम०।

**जर्तिल ಜರ್ತಿಲ** (पुं०) ಕಾಡು ಎಳ್ಳು.

**जर्तु ಜರ್ತು** (पुं०) 1. ಗಜ, ಆನೆ. 2. ಯೋನಿ. जन (जनने) "तुः" रश्च (उ० ५-४६)। "जर्तुर्हस्ती योनिश्च" सि० कौ०।

**जल—अपवारणे** (चुरा० उभ० सक० से०)। जालयति, —ते। अजीजलत्, —त। ಆವರಿಸು, ಮುಚ್ಚು, ಮರೆಮಾಡು.

**जल—घातने** (भ्वा० पर० सक० से०)। जलति। जजाल। जलिता। अजालीत्। ತೀಕ್ಷ್ಣವಾಗಿರು, ಹರಿತವಾಗಿರು, ಚೂಪಾಗಿರು.

**जल ಜಲ** (न०) 1. ನೀರು. जलति — जल "अच्" (३-१-१३४)। "जलाभिलाषी जलमाददानां छायेव तां भूपतिरन्वगच्छत्" रघु० २-६। "तस्यापतन्मूर्ध्नि जलानि जिष्णोः" रघु० १४-८। ಪ್ರಾಣಿಗಳಿಗೆ ನೀರೇ ಪ್ರಾಣವಾದುದರಿಂದ ಅವು (ಪ್ರಾಣಿ)ಗಳ ಜೀವನಕ್ಕೆ ಕಾರಣವಾದ ನೀರು ಯಾವಾಗಲೂ ಬಹಳ ಅವಶ್ಯವಾದುದು. ಅನ್ನವಿಲ್ಲದಿದ್ದರೂ ಕೆಲವು ಕಾಲ ಬದುಕಿರಬಹುದು. ನೀರಿಲ್ಲದೆ ಯಾವ ಪ್ರಾಣಿಯೂ ಬದುಕಿರಲಾರದು. ಆದುದರಿಂದ ರೋಗಿಯೂ ನೀರನ್ನು ಅಪೇಕ್ಷಿಸಿದರೆ ಅವಶ್ಯವಾಗಿ ಕೊಡಬೇಕು. "पानीयं प्राणिनां प्राणास्तदायत्तं हि जीवनम्। तस्मात्सर्वास्ववस्थासु न क्वचिद् वारि वार्यते। अन्नेनापि विना जन्तुः प्राणान् धारयते चिरम्। तोयाभावे पिपासार्तः क्षणात्प्राणैर्विमुच्यते। तृषितो मोहमायाति मोहात् प्राणान् विमुञ्चति। तस्माज्जलमवश्यं हि दातव्यं भेषजैः समम्"। 2. ಮುಡಿವಾಳವೆಂಬ ಒಂದು ಗಂಧದ್ರವ್ಯ. 3. ಪೂರ್ವಾಷಾಢಾ ನಕ್ಷತ್ರ. (ಈ ನಕ್ಷತ್ರವು ಜಲದೇವತಾಕವಾದುದು.) 4. (ಜ್ಯೋತಿಷದಲ್ಲಿ) ಲಗ್ನದಿಂದ ನಾಲ್ಕನೆಯ ಸ್ಥಾನ. 5. ಹಸುವಿನ ಗರ್ಭ. (वि०) 6. ಜಡ, ಮಂದ, ಮಂಕ, ದಡ್ಡ, ಪೆದ್ದ. "अनेडमूकस्तु जडो जलो मूकः" वैज०। "दानं ददत्यपि जलैः सहसाधिरूढे को विद्यमानगतिरासितुमुत्सहेत" माघ० ५-३७। "जलं गोकलले नीरे ह्रीबेरेऽप्यन्यवज्जडे" मेदि०।

**जलकण्टक ಜಲಕಂಟಕ** (पुं०) 1. ನಕ್ರ, ಮೊಸಳೆ. जले कण्टक इव। "जलशूकरजलजिह्वौ जलकण्टकवार्भटौ। तथा नक्रे" हारा०। 2. ನೀರು ನೆಗ್ಗಿಲುಗಿಡ. "क्षीरबीजः क्षीरशुक्लः तर्पणो जलकण्टकः" वैज०।

**जलकपि ಜಲಕಪಿ** (पुं०) ಒಂದು ಜಲಚರ ಪ್ರಾಣಿ.

**जलकपोत ಜಲಕಪೋತ** (पुं०) ನೀರು ಪಾರಿವಾಳ. जलजातः कपोतः।

**जलकर ಜಲಕರ** (पुं०) ನೀರಿನ ಕಂದಾಯ, ನೀರಿಗಾಗಿ ಕೊಡುವ ತೆರಿಗೆ.

**जलकरङ्क ಜಲಕರಂಕ** (पुं०) 1. ತೆಂಗಿನಕಾಯಿ, 2. ಮೇಘ, ಮೋಡ. जलस्य करङ्क इव। 3. ಪದ್ಮ, ಕಮಲ. 4. ಶಂಖ. 5. ತರಂಗ, ಅಲೆ. "अथो जलकरङ्कः स्यान्नारिकेलफलेऽम्बुजे। शङ्खे जललतायां च वारिवाहे च कीर्तितः" मेदि०।

**जलकल्क ಜಲಕಲ್ಕ** (पुं०) 1. ಕೆಸರು, ಪಂಕ. जले कल्क इव। "जम्बालो जलकल्कः स्यादारणिः कुलहण्डकः" हारा०। 2. ಶೈವಾಲ, ಪಾಚಿ.

**जलकाक ಜಲಕಾಕ** (पुं०) ನೀರುಕಾಗೆ, ನೀರಿನಲ್ಲಿ ಮುಳುಗಿ ಮೀನು ತಿನ್ನುವ ಕಾಗೆ. स्त्रियाम् जाति० "ङीष्" (४-१-६३)। **-काकी -ಕಾಕೀ.**

**जलकाङ्क्ष ಜಲಕಾಂಕ್ಷ** (पुं०) 1. ಗಜ, ಆನೆ. जलं काङ्क्षति — काक्षि (काङ्क्षायाम्) "अण्" (३-२-१)। "हस्ती महामृगः पीलुः सिन्धुरो दीर्घमारुतः। राजीवो जलकाङ्क्षश्च" त्रिकाण्ड०। (वि०) 2. ನೀರನ್ನು ಅಪೇಕ್ಷಿಸುವ,

**जलकाङ्क्षिन् ಜಲಕಾಂಕ್ಷಿನ್** (पुं०) 1. ಗಜ, ಆನೆ. जलं काङ्क्षति – काक्षि (काङ्क्षायाम्) "णिनिः" (३-२-७८)। "महामृगः पुष्करदीर्घमारुतौ विलोमजिह्वो जलकाङ्क्षिसिन्धुरौ" हारा०। (वि०) 2. ನೀರನ್ನು ಅಪೇಕ್ಷಿಸುವ. स्त्रियाम् "ङीप्" (४-१-५)। **–काङ्क्षिणी –ಕಾಂಕ್ಷಿಣೀ.**

**जलकान्तार ಜಲಕಾಂತಾರ** (पुं०) ವರುಣ. जलमेव कान्तारो दुर्गमः पन्थाः यस्य।

**जलकिराट ಜಲಕಿರಾಟ** (पुं०) ಉದ್ದವಾದ ಒಂದು ಜಾತಿಯ ಮೀನು.

**जलकुक्कुट ಜಲಕುಕ್ಕುಟ** (पुं०) ನೀರುಕೋಳಿ. जले कुक्कुट इव। "भृङ्गराजैस्तथा हंसैर्दात्यूहैर्जलकुक्कुटैः" भा० वन० १०८-७।

**जलकुन्तल ಜಲಕುಂತಲ** (पुं०) ಶೈವಾಲ, ಪಾಚಿ. जलस्य कुन्तल इव।

**जलकूपी ಜಲಕೂಪೀ** (स्त्री०) 1. ಬಾವಿ. 2. ಸರಸ್ಸು, ಕೊಳ. 3. ನೀರಿನ ಸುಳಿ. जलेन कूपीव। "जलकूपी कूपगर्ते पुष्करिण्यां च योषिति" मेदि०।

**जलकूर्म ಜಲಕೂರ್ಮ** (पुं०) ಒಂದು ಜಲಚರ ಪ್ರಾಣಿ, ಒಂದು ಜಾತಿಯ ಮೀನು.

**जलकेश ಜಲಕೇಶ** (पुं०) ಶೈವಾಲ, ಪಾಚಿ. जलस्य केश इव।

**जलकेलि ಜಲಕೇಲಿ** (पुं० स्त्री०) ಜಲಕ್ರೀಡೆ.

**जलक्रिया ಜಲಕ್ರಿಯಾ** (स्त्री०) ನೀರಿನಲ್ಲಿ ಮಾಡುವ ಕಾರ್ಯ, ತರ್ಪಣ ಮೊದಲಾದುದು.

**जलक्रीडा ಜಲಕ್ರೀಡಾ** (स्त्री०) ನೀರಿನಲ್ಲಿ ಆಡುವ ಆಟ, ನೀರಿನಲ್ಲಿ ನಿಂತು ಪರಸ್ಪರ ನೀರನ್ನು ಎರಚುತ್ತಾ ಆಡುವ ಆಟ. जलेन क्रीडा। "जलक्रीडासमासक्तगोपीवस्त्रापहारकः"। "ततस्ते सहिताः सर्वे जलक्रीडामकुर्वत" भा० आदि० १३८-१९।

**जलखग ಜಲಖಗ** (पुं०) ನೀರಿನಲ್ಲಿ ಸಂಚರಿಸುವ ಒಂದು ಜಾತಿಯ ಪಕ್ಷಿ. "ह्लदिनीविलासिनीनां जलखगनखविक्षतेषु रम्येषु" बृहत्सं० ४८-८।

**जलगुल्म ಜಲಗುಲ್ಮ** (पुं०) 1. ಕೂರ್ಮ, ಆಮೆ. जलस्य गुल्म इव। 2. ನೀರಿನ ಸುಳಿ. 3. ಚತುರಶ್ರವುಳ್ಳ ಸರಸ್ಸು, ನಾಲ್ಕು ಮೂಲೆಗಳುಳ್ಳ ಕೊಳ. "जलगुल्मो जलावर्ते कच्छपे जलचत्वरे" मेदि०।

**जलचत्वर ಜಲಚತ್ವರ** (न०) ಚೌಕವಾದ ಸರಸ್ಸು, ನಾಲ್ಕು ಮೂಲೆಗಳುಳ್ಳ ಕೊಳ. जलेन चत्वरम्।

**जल(ले)चर ಜಲ(ಲೇ)ಚರ** (पुं०) 1. ನೀರಿನಲ್ಲಿ ಸಂಚರಿಸುವ ಪ್ರಾಣಿ, ಮೊಸಳೆ ಮೀನು ನೀರುಕೋಳಿ ಮುಂತಾದುವು. जले चरति – चर (गतिभक्षणयोः) "टः" (३-२-१६)। सप्तम्या बहुलमलुक् (६-३-१४)। (वि०) 2. ನೀರಿನಲ್ಲಿ ಸಂಚರಿಸುವ. स्त्रियाम् "ङीप्" (४-१-१५)। **–चरी –ಚರೀ.** "णिनिः" (३-२-७८)। **–चारिन् –ಚಾರಿನ್.** स्त्रियाम् "ङीप्" (४-१-५)। **–चारिणी –ಚಾರಿಣೀ.** "सरांसि च मनोज्ञानि समन्तात् जलचारिभिः" भा० वन०।

**जलज ಜಲಜ** (पुं०) 1. ಚಂದ್ರ. 2. ಶೈವಾಲ, ಪಾಚಿ. 3. ನೀರು ಹಲಸಿನಮರ. 4. ಮೀನು. जले जायते – जनी (प्रादुर्भावे) "डः" (३-१-९७)। (न०) 5. ಪದ್ಮ, ಕಮಲ. "रुचिरपल्लवपुष्पलतागृहैरुपलसज्जलजैर्जलराशिभिः" किरा० ५-१९। 6. ಶಂಖ. "जलजासिगदाशार्ङ्गचक्रलाञ्छितमूर्तिभिः" रघु० १०-६०। 7. ಲವಣ, ಉಪ್ಪು. (वि०) 8. ನೀರಿನಲ್ಲಿ ಹುಟ್ಟುವ.

**जलजन्तु ಜಲಜಂತು** (पुं०) ನೀರಿನಲ್ಲಿ ಹುಟ್ಟಿದ ಪ್ರಾಣಿ, ಮೀನು ಮೊಸಳೆ ಮುಂತಾದುವು. जले जातो जन्तुः।

**जलजन्तुका ಜಲಜಂತುಕಾ** (स्त्री०) ಜಿಗಣೆ.

**जलजन्मन् ಜಲಜನ್ಮನ್** (न०) ಪದ್ಮ, ಕಮಲ. जले जन्म यस्य। "निलयः श्रियः सततमेतदिति प्रथितं यदेव जलजन्म तया" माघ० ९-१६।

**जलजम्बूका ಜಲಜಂಬೂಕಾ** (स्त्री०) ಒಂದು ಜಾತಿಯ ನೇರಿಳೆ ಗಿಡ.

**जलजाजीव ಜಲಜಾಜೀವ** (पुं०) ಜಲಚರಪ್ರಾಣಿಗಳನ್ನು ಹಿಡಿದು ಅದರಿಂದ ಜೀವಿಸುವ ಬೆಸ್ತರವನು. जलजं मत्स्यादि तस्य वधेनाजीवति – आ+जीव (प्राणधारणे) "कः" (३-१-१३५)।

**जलजात ಜಲಜಾತ** (न०) 1. ಪದ್ಮ, ಕಮಲ. (वि०) 2. ನೀರಿನಲ್ಲಿ ಹುಟ್ಟಿದ.

**जलजिह्व ಜಲಜಿಹ್ವ** (पुं०) ನಕ್ರ, ಮೊಸಳೆ. जला जडा जिह्वा यस्य। "जलशूकरजलजिह्वौ जलकण्टकवार्भटौ तथा नक्रे" हारा०।

**जलजीविन् ಜಲಜೀವಿನ್** (पुं०) ಬೆಸ್ತರವನು, ಮೀನು ಹಿಡಿಯುವವನು. जलेन तज्जातमत्स्यादिना जीवति – जीव (प्राणधारणे) "णिनिः" (३-२-७८)। "सूत्र-

जालैर्यथा मत्स्यान् बध्नन्ति जलजीविनः" भा० शान्ति०।

**जलडिम्भ ಜಲಡಿಂಭ** (पुं०) ಕಪ್ಪೆಚಿಪ್ಪು. "शम्बूको जलडिम्भः स्याद्दुश्चरः पङ्कमण्डुकः" हारा०।

**जलतरङ्ग ಜಲತರಂಗ**(पुं०)1. ನೀರಿನ ಅಲೆ. 2. ಒಂದು ವಿಧ ವಾದ್ಯ, ಬಟ್ಟಲುಗಳಲ್ಲಿ ನೀರು ತುಂಬಿ ಸಪ್ತಸ್ವರ ಗಳೂ ಬರುವಂತೆ ಬಾರಿಸುವ ಒಂದು ವಾದ್ಯ.

**जलता ಜಲತಾ** (स्त्री०)1. ನೀರಾಗಿರುವಿಕೆ. जलस्य भावः "तल्" (५-१-११९)। 2. ಶಿಥಿಲವಾಗಿರುವಿಕೆ, ಸಡಿಲ ವಾಗಿರುವುದು.

**जलताडन ಜಲತಾಡನ** (न०) ನೀರನ್ನು ಹೊಡೆಯುವುದು. ಇದು ಅಪ್ರಯೋಜಕವಾದ ಉದ್ಯೋಗ. ನೀರನ್ನು ಹೊಡೆ ಯುವುದರಿಂದ ಯಾವ ಪ್ರಯೋಜನವೂ ಇಲ್ಲದಿರುವಂತೆ ಅಪ್ರಯೋಜಕ ಉದ್ಯೋಗ ಎಂಬ ಅರ್ಥದಲ್ಲಿ ಇದು ಲಾಕ್ಷಣಿಕ ಪ್ರಯೋಗ.

**जलताल ಜಲತಾಲ** (पुं०) ಇಲ್ಲೀಶವೆಂಬ ಒಂದು ಜಾತಿಯ ಮೀನು.

**जलत्रा ಜಲತ್ರಾ** (स्त्री०) ಛತ್ರಿ, ಕೊಡೆ. जलात् त्रायते—त्रैङ् (पालने) "कः" (३-२-३)।

**जलत्रास ಜಲತ್ರಾಸ** (पुं०) "ಜಲಭಯ"ವೆಂಬ ಒಂದು ರೋಗ, ನಾಯಿಹುಚ್ಚು, ನಾಯಿ ಕಡಿತದಿಂದ ಉಂಟಾಗುವ ನೀರನ್ನು ಕಂಡು ಅಂಜುವ ಒಂದು ರೋಗ. "येन चापि भवेद्दष्टः तस्य चेष्टां रुतं नरः। बहुशः प्रतिकुर्वाणः क्रियाहीनो विनश्यति। दंष्ट्रिणा येन दष्टश्च तद्रूपं यदि पश्यति। अप्सु वा यदि वादर्शेऽरिष्टं तस्य विनिर्दिशेत्। त्रस्यत्यकस्माद्योऽभीक्ष्णं श्रुत्वा दृष्ट्वापि वा जलम्। जलत्रासस्तु विद्यात्तं रिष्टं तदपि कीर्तितम्" सुश्रुत० कल्प० ७।

**जलद ಜಲದ**(पुं०)1. ಮೇಘ, ಮೋಡ. जलं ददाति—डु दाञ् (दाने) "कः" (३-२-३)। "अनतिचिरोज्झितस्य जलदेन चिरस्थितबहुबुद्बुदस्य पयसोऽनुकृतिम्" माघ० ४-४१। 2. ಕರ್ಪೂರ. 3. ಕೊನ್ನಾರಿ. (वि०)4. ನೀರನ್ನು ಕೊಡುವ.

**जलदकाल ಜಲದಕಾಲ** (पुं०) ವರ್ಷಾಕಾಲ, ವರ್ಷರ್ತು, ಮಳೆಗಾಲ. जलदानां कालः। "जलदकालमबोधकृतं दिशामपरथाप रथावयवायुधः" माघ० ६-४१।

**जलदक्षय ಜಲದಕ್ಷಯ**(पुं०)ಶರದೃತು. जलदानां क्षयोऽत्र। "सर्वाणि तनुतां यान्ति जलानि जलदक्षये" हरिवं०।

**जलदर्दुर ಜಲದರ್ದುರ** (पुं०) ನೀರಿನಲ್ಲಿ ವಾದಿಸುವ ಒಂದು ವಿಧ ವಾದ್ಯ. जलं दर्दुर इव। "अवादयंस्ता जलदर्दुरांश्च वाद्यानुरूपं जगुरेव हृष्टाः" हरिवं०।

**जलदागम ಜಲದಾಗಮ** (पुं०) ವರ್ಷಾಕಾಲ, ಮಳೆಗಾಲ.

**जलदुर्ग ಜಲದುರ್ಗ** (न०) ನೀರಿನಿಂದ ಸುತ್ತಲ್ಪಟ್ಟ ಕೋಟೆ, ನೀರಿನ ಕಂದಕದಿಂದ ಕೂಡಿದ ಕೋಟೆ. जलावृतं दुर्गम्।

**जलदेव ಜಲದೇವ** (पुं०) ಜಲದೇವತಾಕವಾದ ಪೂರ್ವಾ ಷಾಢಾನಕ್ಷತ್ರ. जलं देवः अधिष्ठात्री देवतास्य। "इष्टानन्दकलत्रो मानी दृढसौहृदश्च जलदेवे" बृहत्सं० १०१-११।

**जलदेवता ಜಲದೇವತಾ** (स्त्री०) ನೀರಿಗೆ ಅಧಿಷ್ಠಾನವಾದ ದೇವತೆ.

**जलद्रोणी ಜಲದ್ರೋಣೀ** (स्त्री०) ಬಾನೆ, ತೊಟ್ಟಿ (ಬಕೆಟ್ಟು).

**जलधर ಜಲಧರ**(पुं०)1. ಮೇಘ, ಮೋಡ. धरति—धृञ् (धारणे) "अच्" (३-१-१३४)। जलस्य धरः। "जलधरावलिरप्रतिपालितस्वसमया समयाज्जगतीधरम्" माघ० ६-२५। 2. ಮುಸ್ತಕ, ಕೊನ್ನಾರಿ. 3. ಸಮುದ್ರ. (वि०) 4. ನೀರನ್ನು ಹೊರುವವನು.

**जलधरमाला ಜಲಧರಮಾಲಾ**(स्त्री०)1. ಮೇಘಪಙ್ಕ್ತಿ, ಮೋಡಗಳ ಸಾಲು. जलधराणां माला। 2. ಹನ್ನೆರಡ ನೆಯ ಛಂದಸ್ಸಿನ ಒಂದು ವೃತ್ತ, ಮಗಣ ಭಗಣ ಸಗಣ ಮತ್ತು ಮಗಣಗಳಿಂದ ಕೂಡಿದ ಒಂದು ವೃತ್ತ. **ಇದರ ಲಕ್ಷಣ**: "अब्ध्यष्टाभिर्जलधरमाला म्भौ स्मौ" वृ० र०। **ಈ ವೃತ್ತದ ಗಣವಿನ್ಯಾಸ**:

म भ स म

ooo oll llo ooo ।

**जलधार ಜಲಧಾರ** (पुं०)1. ಶಾಕದ್ವೀಪದಲ್ಲಿರುವ ಒಂದು ಪರ್ವತ. जलं धारयति—धृ (धारणे)+णिच् "अण्" (३-२-१)। (वि०) 2. ನೀರನ್ನು ಹೊರುವವನು.

**जलधारण ಜಲಧಾರಣ** (न०) ನೀರನ್ನು ಹೊರುವುದು.

**जलधारा ಜಲಧಾರಾ** (स्त्री०) ನೀರಿನ ಧಾರೆ, ಎಡೆಬಿಡದ ನೀರಿನ ಪ್ರವಾಹ.

**जलधि ಜಲಧಿ** (पुं०) 1. ಸಾಗರ, ಸಮುದ್ರ, ಕಡಲು. जलानि धीयन्तेऽत्र—डु+धाञ् (धारणपोषणयोः) अधि० "किः" (३-३-९३)। "व्यक्तं बलीयान् यदि हेतुरागमादपूरयत् सा जलधिं न जाह्नवी" माघ० १२-६९। 2. ನಾಲ್ಕು ಸಂಖ್ಯೆ. 3. ಕೊಳ, ಕೆರೆ ಮುಂತಾದುವು.

**जलधिकन्या ಜಲಧಿಕನ್ಯಾ** (स्त्री०) ಸಮುದ್ರನ ಮಗಳು, ಲಕ್ಷ್ಮಿ. जलधेः कन्या ।

**जलधिगा ಜಲಧಿಗಾ** (स्त्री०) ಸಮುದ್ರವನ್ನು ಸೇರುವ ನದಿ, ಹೊಳೆ. जलधिं गच्छति — गम्लृ (गतौ) "ड:" (वा० ३-२-४८)। ಎಲ್ಲಾ ನದಿಗಳೂ ತಾವು ನೇರವಾಗಿ ಅಥವಾ ಇತರ ದೊಡ್ಡ ನದಿಗಳೊಡನೆ ಸೇರಿ ಸಮುದ್ರವನ್ನು ಸೇರುವುದರಿಂದ ಈ ಹೆಸರು.

**जलधिज ಜಲಧಿಜ** (पुं०) 1. ಚಂದ್ರ. जलधौ जायते— जनी (प्रादुर्भावे) "ड:" (३-२-९७)। (स्त्री०) —जा —ಜಾ. 2. ಲಕ್ಷ್ಮಿ. (वि०) 3. ಸಮುದ್ರದಲ್ಲಿ ಹುಟ್ಟಿದ.

**जलधितनया ಜಲಧಿತನಯಾ** (स्त्री०) ಲಕ್ಷ್ಮಿ, ಸಮುದ್ರ ರಾಜನ ಮಗಳು. जलधेस्तनया। "दिव्यं तेजो जलधितनयास्नेहनित्यानुषक्तम्" हंस० १-३९। एवं **जलधितनु(नू)जा, —पुत्री, —सुता** ಇತ್ಯಾದಿ.

**जलनकुल ಜಲನಕುಲ** (पुं०) ನೀರುಹಂದಿ, ಉದ್ರವೆಂಬ ಒಂದು ಜಲಚರ ಪ್ರಾಣಿ. जले नकुल इव।

**जलनिधि ಜಲನಿಧಿ** (पुं०) 1. ಸಮುದ್ರ, ಸಾಗರ, ಕಡಲು. जलानि निधियन्तेऽत्र — नि+डु धाञ् (धारणपोषणयोः) "किः" (३-३-९३)। "श्रीसन्निधानरमणीयतरोऽश्व उच्चैरुच्चैःश्रवा जलनिधेरिव जातमात्रः" माघ० ५-५७। 2. ನಾಲ್ಕು ಸಂಖ್ಯೆ. 3. ಕೊಳ, ಕೆರೆ ಮುಂತಾದುವು.

**जलनिर्गम ಜಲನಿರ್ಗಮ** (पुं०) 1. ಜಲಮಾರ್ಗ, ನೀರು ಹರಿಯುವ ಕಾಲುವೆ. 2. ಕೆರೆಯ ತೂಬು, ಕೆರೆಯಿಂದ ಜಮೀನುಗಳಿಗೆ ನೀರು ಹಾಯಿಸಲು ಮಾಡಿರುವ ದಾರಿ. जलानां निर्गमः।

**जलनीली ಜಲನೀಲೀ** (स्त्री०) ಶೈವಾಲ, ಪಾಚಿ. जलं नीलयति—नील+तत्करोति० णिच् "अण्" (३-२-१)। "ङीप्" (४-१-१५)। "जलनीली तु शैवालः" अम०। स्वार्थे "कः"। **—नीलिका —ನೀಲಿಕಾ.**

**जलन्धर ಜಲಂಧರ** (पुं०) 1. ಒಬ್ಬ ಅಸುರ. [ಬೃಹಸ್ಪತಿಯೂ ಇಂದ್ರನೂ ಒಂದು ಸಲ ಪರಮೇಶ್ವರನ ದರ್ಶನಕ್ಕಾಗಿ ಹೊರಟರು. ಪರಮೇಶ್ವರನು ಇಂದ್ರನ ಗರ್ವ ಭಂಗಕ್ಕಾಗಿ ಅವಧೂತ ವೇಷವನ್ನು ತಾಳಿ ದಾರಿಗೆ ಅಡ್ಡಲಾಗಿ ನಿಂತನು. ಇಂದ್ರನು "ಪರಮೇಶ್ವರನು ಎಲ್ಲಿರುವನು" ಎಂದು ಕೇಳಿದನು. ಪರಶಿವನು ಉತ್ತರಕೊಡಲಿಲ್ಲ. ಇಂದ್ರನು ಅವಧೂತನನ್ನು ಕೊಲ್ಲಲು ವಜ್ರಾಯುಧವನ್ನು ಮೇಲಕ್ಕೆ ಎತ್ತಿದನು. ಎತ್ತಿದ ಕೈ ಹಾಗೆಯೇ ನಿಂತಿತು. ಪರಮೇಶ್ವರನ ಫಾಲನೇತ್ರದಿಂದ ಇಂದ್ರನನ್ನು ಸುಡಲು ಅಗ್ನಿಯು ಹೊರಟಿತು. ಬೃಹಸ್ಪತಿಯ ಪ್ರಾರ್ಥನೆಯಂತೆ ಈಶ್ವರನು ಆ ಅಗ್ನಿಯನ್ನು ಸಮುದ್ರದಲ್ಲಿ ಬಿಸಾಡಿದನು. ಅದು ಒಂದು ರಾಕ್ಷಸಶಿಶುವಾಗಿ ಜಲಂಧರನೆಂಬ ಹೆಸರನ್ನು ಪಡೆಯಿತು. ಇವನೇ ಜಲಂಧರಾಸುರ.

ನಾರದ ಮಹರ್ಷಿಯು ಒಮ್ಮೆ ಜಲಂಧರನಲ್ಲಿಗೆ ಬಂದು ಪಾರ್ವತಿಯಂತಹ ಪತ್ನಿಯಿಲ್ಲದಿದ್ದರೆ ನಿನ್ನ ಸೌಂದರ್ಯ ಮತ್ತು ಐಶ್ವರ್ಯಗಳಿಗೇನು ಪ್ರಯೋಜನವೆಂದು ಉಬ್ಬಿಸಿದರು. ಕೂಡಲೇ ಪಾರ್ವತಿಯನ್ನು ತಂದು ತನಗೆ ಒಪ್ಪಿಸಬೇಕೆಂದು ಪರಮೇಶ್ವರನಿಗೆ ಹೇಳಿಕಳುಹಿಸಿದನು. ಇದರಿಂದ ಕೋಪಗೊಂಡ ಪರಶಿವನಿಂದ ಯುದ್ಧದಲ್ಲಿ ಜಲಂಧರನು ಹತನಾದನು.]

**जलपक्षिन् ಜಲಪಕ್ಷಿನ್** (पुं०) ನೀರಿನಲ್ಲಿ ಸಂಚರಿಸುವ ಹಕ್ಕಿ.

**जलपति ಜಲಪತಿ** (पुं०) 1. ವರುಣ, ನೀರಿನ ಒಡೆಯ. जलानां पतिः। [ವರುಣನು ಕಾಶಿಯಲ್ಲಿ ಲಿಂಗಪ್ರತಿಷ್ಠೆ ಮಾಡಿ ಐದು ಸಾವಿರ ವರ್ಷಕಾಲ ಪರಮೇಶ್ವರನನ್ನು ಕುರಿತು ಘೋರವಾದ ತಪಸ್ಸು ಮಾಡಿದನು. ಇವನ ತಪಸ್ಸಿಗೆ ಮೆಚ್ಚಿದ ಪರಶಿವನು ಇವನ ಕೋರಿಕೆಯಂತೆ ಸಕಲ ನದಿಗಳು ಕೆರೆ ಕೊಳಗಳು ಬಾವಿಗಳು ಸಮುದ್ರದ ರತ್ನಗಳು ಜಲಜಂತುಗಳು ಮತ್ತು ಪಶ್ಚಿಮ ದಿಕ್ಕು ಇವುಗಳಿಗೆಲ್ಲಾ ಅಧಿಪತಿಯಾಗಿರುವಂತೆ ವರವನ್ನು ಅನುಗ್ರಹಿಸಿದನು. ಇದರಿಂದ ವರುಣನು **ಜಲಪತಿ**ಯಾದನು.] "यदि नाथ प्रसन्नोऽसि भक्तानामनुकम्पन। सर्वासामाधिपत्यं मे देहयपां यादसामपि। इति श्रुत्वा महेशानः सर्वचिन्तितदः प्रभुः। अभ्यषिञ्चत् ततस्तं च वारुणे परमे पदे। रत्नानामब्धिजातानामब्दानां सरितामपि। सरसां पल्वलानां च वाप्यम्बुस्रोतसामपि। जलाशयानां सर्वेषां प्रतीच्याश्चैव वै दिशः। अधीश्वरः पाशपाणिर्भव सर्वामरप्रियः" काशीखं०। 2. ಸಮುದ್ರ. 3. ಪೂರ್ವಾಷಾಢಾ ನಕ್ಷತ್ರ. जलं पतिरस्य। ಈ ನಕ್ಷತ್ರವು ಜಲಾಧಿದೇವತಾಕವಾದುದು.

**जलपथ ಜಲಪಥ** (पुं०) 1. ಜಲಮಾರ್ಗ. जलमेव पन्थाः "अः" (५-४-७४)। "इन्द्राद्वृष्टिर्नियमितगदोद्रेकवृत्तिर्यमोऽभूत् यादोनाथः शिवजलपथः कर्मणे नौचराणाम्" रघु० १७-८१। 2. ಕಾಲುವೆ. 3. ನಲ್ಲಿ, ಕೊಳಾಯಿ. 4. ಚರಂಡಿ ಮುಂತಾದುವು. जलस्य पन्थाः।

**जलपद्धति ಜಲಪದ್ಧತಿ** (स्त्री०) "जलपथ" ನೋಡಿ.

**जलपात्र ಜಲಪಾತ್ರ** (न०) ನೀರಿನ ಪಾತ್ರೆ.

**जलपान ಜಲಪಾನ** (न०) ನೀರು ಕುಡಿಯುವುದು.

**जलपायिन् ಜಲಪಾಯಿನ್** (वि०) ನೀರನ್ನು ಕುಡಿಯುವ. जलं पिबति—पा (पाने) "णिनिः" (३-१-१३४)।

**जलपालिका ಜಲಪಾಲಿಕಾ** (स्त्री०) ವಿದ್ಯುತ್ತು, ಮಿಂಚು. "आकालिकी शतावर्ता जलदा जलपालिका" वैज०।

**जलपित्त ಜಲಪಿತ್ತ** (न०) ಅಗ್ನಿ, ಬೆಂಕಿ. जलस्य पित्तमिव।

**जलपिप्पली ಜಲಪಿಪ್ಪಲೀ** (स्त्री०) ನೀರುಹಿಪ್ಪಲಿ. जलजाता पिप्पली।

**जलपिप्पिक ಜಲಪಿಪ್ಪಿಕ** (स्त्री०) ಒಂದು ಜಾತಿಯ ದೊಡ್ಡ ಮೀನು.

**जलपूर ಜಲಪೂರ** (पुं०) ನೀರಿನ ಪ್ರವಾಹ. जलस्य पूरः। "बृन्दावनविपिने परिसरपरिगतयमुनाजलपूरे विहरति" गीतगो०।

**जलपृष्ठजा ಜಲಪೃಷ್ಠಜಾ** (स्त्री०) ಶೈವಾಲ, ಪಾಚಿ. जलस्य पृष्ठे जायते जनी (प्रादुर्भावे) "ड:" (३-२-९८)।

**जलप्रपा ಜಲಪ್ರಪಾ** (स्त्री०) ಅರವಟ್ಟಿಗೆ. ಯಾತ್ರಿಕರಿಗೆ ಕುಡಿಯುವ ನೀರನು ಕೊಡುವ ಮನೆ. जलदानार्थं प्रपा।

**जलप्रपात ಜಲಪ್ರಪಾತ** (पुं०) ಜಲಪಾತ, ನೀರು ಧುಮುಕುವುದು. जलस्य प्रपातः।

**जलप्रलय ಜಲಪ್ರಲಯ** (पुं०) ನೀರಿನಿಂದಾಗುವ ನಾಶ.

**जलप्रान्त ಜಲಪ್ರಾಂತ** (पुं०) ನೀರಿನ ಸಮೀಪ ಪ್ರದೇಶ.

**जलप्राय ಜಲಪ್ರಾಯ** (न०) ನೀರಿನಿಂದ ತುಂಬಿದ ಪ್ರದೇಶ. जलं प्रायं यत्र।

**जलप्रिय ಜಲಪ್ರಿಯ** (पुं०) 1. ಮೀನು, ಮತ್ಸ್ಯ. 2. ಚಾತಕ ಪಕ್ಷಿ. 3. ವರಾಹ, ಹಂದಿ. "वराहः सूकरो घोणी वक्रदंष्ट्रो जलप्रियः" वैज०। (वि०) 4. ಜಲವು ಪ್ರಿಯವಾಗಿ ಉಳ್ಳ. जलं प्रियं यस्य।

**जलबन्ध ಜಲಬಂಧ** (पुं०) ಅಣೆಕಟ್ಟು, ನೀರನ್ನು ತಡೆಯುವ ಸೇತುವೆ. जलं बध्यतेऽनेन — बन्ध (बन्धने) "घञ्" (३-३-१२१)। **—बन्धकः —ಬಂಧಕಃ.** जलं बध्नाति—बन्ध "ण्वुल्" (३-१-१३३)।

**जलबन्धु ಜಲಬಂಧು** (पुं०) ಮತ್ಸ್ಯ, ಮೀನು. जलं बन्धुर्यस्य।

**जलबिडाल ಜಲಬಿಡಾಲ** (पुं०) ನೀರು ಬೆಕ್ಕು.

**जलबिन्दु ಜಲಬಿಂದು** (पुं०) ನೀರಿನ ತೊಟ್ಟು.

**जलबिम्ब ಜಲಬಿಂಬ** (पुंन०) ಬುದ್ಬುದ, ನೀರಿನಗುಳ್ಳೆ, ನೊರೆ. जलस्य बिम्बम्। "जम्बूवज्जलबिम्बवज्जलजवज्जम्बालवज्जालवत्" उद्भ०।

**जलबिल्व ಜಲಬಿಲ್ವ** (पुं०) 1. ಕರ್ಕಟ, ಏಡಿ, ನಳ್ಳಿ. 2. ಕೂರ್ಮ, ಆಮೆ. 3. ನಾಲ್ಕು ಮೂಲೆಗಳುಳ್ಳ ಚೌಕವಾದ ಕೊಳ.

**जलबुद्बुद ಜಲಬುದ್ಬುದ** (न०) ನೀರಿನ ನೊರೆ, ನೀರಿನ ಮೇಲಿನ ಗುಳ್ಳೆ.

**जलब्राह्मी ಜಲಬ್ರಾಹ್ಮೀ** (स्त्री०) (ನೀರು) ಹೊನಗೊನ್ನೆ ಸೊಪ್ಪು. जले ब्राह्मीव। "मत्स्याक्षी हिलमोचिका। जलब्राह्मी च" त्रिकाण्ड०।

**जलभू ಜಲಭೂ** (पुं०) 1. ಮೇಘ, ಮೋಡ. जलं भवत्यस्मात्—भू (सत्तायाम्) "क्विप्" (३-२-१७९)। (स्त्री०) 2. ಜಲಾಶಯ, ಸರಸ್ಸು, ಕೊಳ. जलस्य भूः। (वि०) 3. ನೀರಿನಲ್ಲಿ ಹುಟ್ಟಿದ, ನೀರಿನಲ್ಲಿರುವ.

**जलभृत् ಜಲಭೃತ್** (पुं०) 1. ಮೇಘ, ಮೋಡ. जलं बिभर्ति—डु भृञ् (धारणपोषणयोः) "क्विप्" (३-२-७६)। 2. ಕರ್ಪೂರ. (वि०) 3. ನೀರನ್ನು ತುಂಬಿಡುವ ಹೂಜಿ, ಬಿಂದಿಗೆ ಮೊದಲಾದುವು.

**जलमक्षिका ಜಲಮಕ್ಷಿಕಾ** (स्त्री०) ನೀರಿನಲ್ಲಿ ಹುಟ್ಟುವ ಹುಳ. जलजाता मक्षिका।

**जलमद्गु ಜಲಮದ್ಗು** (पुं०) ಜಾಲಗಾರಹಕ್ಕಿ, ಒಂದು ಜಾತಿಯ ಜಲಚರ ಪಕ್ಷಿ. जले मद्गुरिव।

**जलमधूक ಜಲಮಧೂಕ** (पुं०) ಹಿಪ್ಪೆಮರ, ನೀರಿನ ಸಮೀಪದಲ್ಲಿ ಹುಟ್ಟುವ ಒಂದು ವೃಕ್ಷ.

**जलमय ಜಲಮಯ** (वि०) ನೀರಿನಿಂದ ತುಂಬಿದ, ಎಲ್ಲಾ ಕಡೆಯಲ್ಲೂ ನೀರಿನಿಂದ ಕೂಡಿದ, ಜಲರೂಪವಾದ. जल "मयट्" (५-४-२१)। स्त्रियाम् "ङीप्" (४-१-१५)। **—मयी —ಮಯೀ.** "सा वा शम्भोस्तदीया वा मूर्तिर्जलमयी मम" कुमा० २-६०।

**जलमार्ग ಜಲಮಾರ್ಗ** (पुं०) 1. ಕೋಳಾಯಿ, ನಲ್ಲಿ. जलस्य मार्गः। 2. ಕಾಲುವೆ. 3. ಚರಂಡಿ. 4. ನೀರಿನ ದಾರಿ, ನೀರಿನಲ್ಲಿ ಹೋಗುವ ದಾರಿ. जलमेव मार्गः।

**जलमार्जार ಜಲಮಾರ್ಜಾರ** (पुं०) ನೀರುಬೆಕ್ಕು.

**जलमुच् ಜಲಮುಚ್** (पुं०) 1. ಮೇಘ, ಮೋಡ. जलानि मुञ्चति—मुच्लृ (मोक्षणे) "क्विप्" (३-२-७६)।

"शङ्कास्पृष्टा इव जलमुचस्त्वादृशा जालमार्गैः" मेघ० २-६। 2. ಕರ್ಪೂರ. (ವಿ०) 3. ನೀರನ್ನು ಬಿಡುವ, ನೀರು ಸುರಿಸುವ. "तीक्ष्णं तपत्यदितिजः शिशिरेऽपि काले नात्यम्बुदा जलमुचोऽचलसन्निकाशाः" बृहत्सं १९-२।

**जलमूर्ति ಜಲಮೂರ್ತಿ** (ಪುं०) ಪರಶಿವ, ಈಶ್ವರ, ಮಹಾದೇವ. जलं मूर्तिरस्य।

**जलमूर्तिका ಜಲಮೂರ್ತಿಕಾ** (ಸ್ತ್ರೀ०) ಆಲಿಕಲ್ಲು, ಮಂಜಿನ ಗಡ್ಡೆ, ಉಷ್ಣವಾಯುಗಳ ಸಂಯೋಗದಿಂದ ಘನೀಭೂತವಾದ (ಗಟ್ಟಿಯಾದ) ನೀರು.

**जलमोद ಜಲಮೋದ** (ಪುं०) ಉಶೀರ, ಲಾಮಂಚದ ಬೇರು. जलयोगेन मोदयति – मुद (हर्षे) + णिच् "अण्" (३-२-१)।

**जलयन्त्र ಜಲಯಂತ್ರ** (ನ०) 1. ನೀರು ಚಿಮ್ಮುವ ಯಂತ್ರ, ಧಾರಾಯಂತ್ರ, ನೀರು ತುಂತುರು ತುಂತುರಾಗಿ ಬೀಳುವಂತೆ ಮಾಡಿರುವ ಯಂತ್ರ. 2. ಏತ, ಬಾವಿಯಿಂದ ನೀರನ್ನು ಮೇಲಕ್ಕೆ ಎತ್ತುವ ಯಂತ್ರ. जलोत्क्षेपणार्थं यन्त्रम्। 3. ಕಾಲವನ್ನು ತಿಳಿಸುವ ಘಟೀಯಂತ್ರ.

**जलयन्त्रगृह ಜಲಯಂತ್ರಗೃಹ** (ನ०) ಸುತ್ತಲೂ ನೀರಿನಿಂದ ಆವರಿಸಲ್ಪಟ್ಟ ಮನೆ, ಬೇಸಿಗೆಗಾಗಿ ನೀರಿನ ಮಧ್ಯದಲ್ಲಿ ತಯಾರಿಸಲ್ಪಟ್ಟ ಮನೆ.

**जलयात्रा ಜಲಯಾತ್ರಾ** (ಸ್ತ್ರೀ०) 1. ಶುಭಕಾರ್ಯಕ್ಕಾಗಿ ನೀರನ್ನು ತರಲು ಹೊರಡುವುದು. ಯಾವ ಶುಭಕಾರ್ಯದಲ್ಲೂ ಜಲಯಾತ್ರೆ ನಡೆಯದಿದ್ದರೆ ಅದು ಪ್ರಯೋಜನವಿಲ್ಲದಾಗುವುದು. ತಟಾಗಾದಿಪ್ರತಿಷ್ಠೆ, ದೇವಾಲಯ ಪ್ರತಿಷ್ಠೆ, ಹೋಮ, ವ್ರತೋತ್ಸರ್ಜನ ಯಜ್ಞಯಾಗಗಳು ಇವುಗಳಲ್ಲಿ ಜಲಯಾತ್ರೆಯನ್ನು ಅವಶ್ಯವಾಗಿ ಮಾಡಬೇಕು. "शान्तिकं पौष्टिकं वापि जलयात्रां विना बुधः। कुरुते यदि वा मोहात्कर्म तस्य च निष्फलम्"। "जलयात्रां पुरा कृत्वा श्रेष्ठं कर्म समाचरेत्"। 2. ಜಲದ ಮೇಲೆ ಮಾಡುವ ಪ್ರಯಾಣ.

**जलयान ಜಲಯಾನ** (ನ०) ಹಡಗು, ದೋಣಿ. जले यान्ति गच्छन्ति अनेन—या (प्रापणे) कर० "ल्युट्" (३-३-११७)।

**जलरङ्क ಜಲರಂಕ** (ಪುं०) ಬಕಪಕ್ಷಿ.

**जलरङ्कु ಜಲರಂಕು** (ಪುं०) ಹದ್ದು.

**जलरञ्ज ಜಲರಂಜ** (ಪುं०) ಬಕಪಕ್ಷಿ.

**जलरस ಜಲರಸ** (ಪುं०) ಲವಣ, ಉಪ್ಪು. जलप्रधानो रसोऽस्य।

**जलराक्षसी ಜಲರಾಕ್ಷಸೀ** (ಸ್ತ್ರೀ०) ನೀರಿನಲ್ಲಿರುವ ಸಿಂಹಿಕೆಯೆಂಬ ಒಬ್ಬ ರಾಕ್ಷಸಿ. [ಲವಣಸಮುದ್ರದಲ್ಲಿದ್ದ ಈ ರಾಕ್ಷಸಿಯು ಮೇಲೆ ಹೋಗುವವರ ನೆರಳನ್ನು ಹಿಡಿದೆಳೆದು ಪೀಡಿಸುತ್ತಿದ್ದಳು. ಸೀತಾನ್ವೇಷಣಕ್ಕಾಗಿ ಹೊರಟ ಆಂಜನೇಯನು ಸಮುದ್ರವನ್ನು ದಾಟುತ್ತಿದ್ದಾಗ ಅವನ ಛಾಯೆಯನ್ನು ಆಕರ್ಷಿಸಿ ಮುಂದೆ ಹೋಗದಂತೆ ತಡೆದು ಅವನನ್ನು ನುಂಗಲು ಹೋದಾಗ ಬೃಹದಾಕಾರವನ್ನು ತಾಳುತ್ತಿದ್ದ ಅವನ ಆಕಾರಕ್ಕಿಂತಲೂ ಅಗಲವಾಗಿ ಇವಳೂ ಬಾಯನ್ನು ತೆರೆಯುತ್ತಿರಲು ಕೂಡಲೇ ಆಂಜನೇಯನು ಸೂಕ್ಷ್ಮರೂಪದಿಂದ ರಾಕ್ಷಸಿಯ ಬಾಯಲ್ಲಿ ನುಗ್ಗಿ ಅವಳ ಮರ್ಮಗಳನ್ನು ನಖಗಳಿಂದ ಕತ್ತರಿಸಿ ಸಂಹರಿಸಿದನು.] रामा०।

**जलराशि ಜಲರಾಶಿ** (ಪುं०) 1. ಸಮುದ್ರ, ಕಡಲು. जलानां राशिरत्र। "समक्रमः समविषमेष्वथ क्षणात् क्षमातलं बलजलराशिरानशे" माघ० १७-४६। 2. ನೀರಿನ ರಾಶಿ. "रुचिरपल्लवपुष्पलतागृहैरुपलसज्जलजैर्जलराशिभिः" किरा० ५-१९।

**जलरुण्ड ಜಲರುಂಡ** (ಪುं०) 1. ನೀರಿನ ಸುಳಿ. 2. ಸಣ್ಣ ತುಂತುರು. 3. ಸರ್ಪ. ಹಾವು. "जलरुण्डो जलावर्ते पयोरेणौ भुजङ्गमे" मेदि०।

**जलरुह् ಜಲರುಹ್** (ನ०) 1. ಪದ್ಮ, ಕಮಲ, ತಾವರೆ ಹೂವು. जले रोहति—रुह (बीजजन्मनि प्रादुर्भावे च) "क्विप्" (३-२-७६)। (ವಿ०) 2. ನೀರಿನಲ್ಲಿ ಹುಟ್ಟಿದ. **–रुहम् – ರುಹಮ್.** रुह "कः" (३-१-१३५)।

**जलरूप ಜಲರೂಪ** (ಪುं०) 1. ಮಕರ, ಮೊಸಳೆ. जलस्य रूपमिव रूपं यस्य। "जलरूपस्तु मकरो मरोलिरसिदंष्ट्रकः" त्रिकाण्ड०। 2. ನೀರಿನ ರೂಪ.

**जललता ಜಲಲತಾ** (ಸ್ತ್ರೀ०) ತರಂಗ, ಅಲೆ, ನೀರಿನ ಬಳ್ಳಿ. जलस्य लतेव। "वीची जललता श्रुण्डिः" हारा०।

**जललेखा ಜಲಲೇಖಾ** (ಸ್ತ್ರೀ०) ನೀರಿನ ಮೇಲೆ ಎಳೆದ ಗೆರೆ.

**जलवत् ಜಲವತ್** (ವಿ०) ನೀರಿನಿಂದ ಕೂಡಿದ, ನೀರಿನಿಂದ ತುಂಬಿದ.

**जलवरण्ट ಜಲವರಂಟ** (ಪುं०) ನೀರಿನಿಂದ ತುಂಬಿದ ಗುಳ್ಳೆ, ಮೊಡವೆ. जलप्रधानो वरण्टः।

**जलवल्कल ಜಲವಲ್ಕಲ** (ಪುं०) ಒಂದು ಜಾತಿಯ ಕಡಲು ಹಕ್ಕಿ, ನೀರು ಕಾಗೆ. जलस्य वल्कल इव।

**जलवानीर ಜಲವಾನೀರ** (ಪುं०) ಅಂಬುವೇತಸ, ನೀರು ಹಬ್ಬೆಗಿಡ. जलजातो वानीरः।

**जलवायस ಜಲವಾಯಸ** (पुं०) ನೀರಿನಲ್ಲಿ ಮುಳುಗಿ ಮೀನು ಹಿಡಿದು ತಿನ್ನುವ ಹಕ್ಕಿ, ಜಾಲಗಾರ ಹಕ್ಕಿ. जले वायस इव।

**जलवास ಜಲವಾಸ** (पुं०) 1. ಉಶೀರ, ಲಾಮಂಚ. जलं वास्यते सुरभीक्रियतेऽनेन — वास (उपसेवायाम्) + णिच् "घः" (३-३-११८)। 2. ನೀರಿನಲ್ಲಿ ವಾಸಮಾಡುವುದು.

**जलवासिन् ಜಲವಾಸಿನ್** (वि०) ನೀರಿನಲ್ಲಿ ವಾಸಿಸುವ.

**जलवाह ಜಲವಾಹ** (पुं०) 1. ಮೇಘ, ಮೋಡ. जलं वहति — वह (प्रापणे) "अण्" (३-२-१)। "जलवाहावलयः शिरोरुहेभ्यः" माघ० २०-६६। 2. ನೀರನ್ನು ಹೊರುವ.

**जलवाहक ಜಲವಾಹಕ** (वि०) ನೀರು ಹೊರುವ.

**जलवृश्चिक ಜಲವೃಶ್ಚಿಕ** (पुं०) ಮತ್ಸ್ಯ, ಸಮುದ್ರದಲ್ಲಿ ವಾಸಿಸುವ ಒಂದು ಜಾತಿಯ ಮೀನು.

**जलवेतस ಜಲವೇತಸ** (पुं०) ಅಂಬುವೇತಸ, ನೀರುಹಬ್ಬೆ ಗಿಡ.

**जलव्यध ಜಲವ್ಯಧ** (पुं०) ಒಂದು ಜಾತಿಯ ಮೀನು. "कङ्कत्रोटो जलव्यधः" त्रिकाण्ड०।

**जलव्याल ಜಲವ್ಯಾಲ** (पुं०) 1. ನೀರುಹಾವು. 2. ಸಮುದ್ರದಲ್ಲಿರುವ ಒಂದು ಕ್ರೂರ ಪ್ರಾಣಿ. जलस्थो व्यालः।

**जल(ले)शय ಜಲ(ಲೇ)ಶಯ** (पुं०) ವಿಷ್ಣು. जले शेते — शीङ् (स्वप्ने) "अच्" (३-२-१५)। सप्तम्या वा "अलुक्" (६-३-१४)।

**जलशयन ಜಲಶಯನ** (पुं०) ವಿಷ್ಣು. जलं शयनमस्य।

**जलशायिन् ಜಲಶಾಯಿನ್** (पुं०) ವಿಷ್ಣು. जले शेते— शीङ् (स्वप्ने) "णिनिः" (३-१-१३४)।

**जलशुक्ति ಜಲಶುಕ್ತಿ** (स्त्री०) ಕಪ್ಪೆಚಿಪ್ಪು. जलस्य शुक्तिरिव।

**जलशूक ಜಲಶೂಕ** (न०) ಶೈವಾಲ, ಪಾಚಿ. जलस्य शूकमग्रमिव।

**जलशूकर ಜಲಶೂಕರ** (पुं०) ಮೊಸಳೆ. जलस्य शूकर इव।

**जलसमुद्र ಜಲಸಮುದ್ರ** (पुं०) ಸಪ್ತ ಸಮುದ್ರಗಳಲ್ಲೊಂದು. जलमयः समुद्रः। "जम्बूद्वीप" ನೋಡಿ.

**जलसर्पिणी ಜಲಸರ್ಪಿಣೀ** (स्त्री०) ಜಿಗಣೆ. जले सर्पति —सृप्लृ (गतौ) "णिनिः" (३-२-७८)।

**जलसूचि ಜಲಸೂಚಿ** (स्त्री०) 1. ಜಿಗಣೆ. 2. ನೀರು ಚೆಕ್ಕು. 3. ಒಂದು ಜಾತಿಯ ಮೀನು. 4. ಕಾಗೆ. 5. ಹದ್ದು. 6. ಕಡಲ ಹಂದಿ. "जलसूचिः शिशुमारे त्रोटिमत्स्ये जलौकसि। कङ्कशृङ्गाटयोश्चापि" हेम०।

**जलसेक ಜಲಸೇಕ** (पुं०) ನೀರು ಚಿಮುಕಿಸುವುದು.

**जलस्तम्भ ಜಲಸ್ತಂಭ** (पुं०) ನೀರನ್ನು ತಡೆಯುವುದು. स्तन्भु (रोधने) भावे "घञ्" (३-३-१८)।

**जलस्तम्भन ಜಲಸ್ತಂಭನ** (न०) 1. ನೀರನ್ನು ತಡೆಯುವುದು. जलस्य स्तम्भनम् — स्तन्भु (रोधने) भावे "ल्युट्" (३-३-११५)। (वि०) 2. ನೀರನ್ನು ತಡೆಯುವ ಮಂತ್ರ ಮೊದಲಾದುದು. जलं स्तम्यतेऽनेन— स्तन्भु कर० "ल्युट्" (३-३-११७)।

**जलस्थ ಜಲಸ್ಥ** (वि०) ನೀರಿನಲ್ಲಿ ಇರುವ. जले तिष्ठति ष्ठा (गतिनिवृत्तौ) "कः" (३-२-४)।

**जलस्थान ಜಲಸ್ಥಾನ** (न०) ಸರೋವರ, ಕೊಳ, ಜಲಾಶಯ.

**जलह ಜಲಹ** (न०) ನೀರು ಚಿಮ್ಮುವ ಯಂತ್ರಗೃಹ, ನೀರು ತುಂತುರು ತುಂತುರಾಗಿ ಬೀಳುವ ಸ್ನಾನಗೃಹ.

**जलहस्तिन् ಜಲಹಸ್ತಿನ್** (पुं०) ನೀರು ಆನೆ.

**जलहरण ಜಲಹರಣ** (न०) ನೀರನ್ನು ಒಯ್ಯುವುದು.

**जलहारिन् ಜಲಹಾರಿನ್** (वि०) ನೀರನ್ನು ಹೊರುವವನು. जलं हरति — हृञ् (हरणे) "णिनिः" (३-१-१३४)। स्त्रियाम् "ङीप्" (४-१-५)। **-हारिणी -ಹಾರಿಣೀ.**

**जलहास ಜಲಹಾಸ** (पुं०) 1. ಫೇನ, ನೊರೆ. 2. ಸಮುದ್ರದ ನೊರೆ. जलस्य हास इव। "समुद्रकफहिण्डीरजलहासस्तु फेनके" त्रिकाण्ड०।

**जलहोम ಜಲಹೋಮ** (पुं०) ನೀರಿನಲ್ಲಿ ಹಾಕಲ್ಪಡುವ ವೈಶ್ವದೇವಾದಿ ಹುತಶೇಷ. जले क्षिप्तः होमः।

**जलह्रद ಜಲಹ್ರದ** (पुं०) ನೀರಿನ ಮಡು, ನೀರು ತುಂಬಿರುವ ಹಳ್ಳ.

**जलाकर ಜಲಾಕರ** (पुं०) ನೀರಿಗೆ ಆಧಾರವಾದ ಚಿಲುಮೆ.

**जलाका ಜಲಾಕಾ** (स्त्री०) ಜಿಗಣೆ. जले आकायति— आ+कै (शब्दे) "कः" (३-१-१३६)।

**जलाकाश ಜಲಾಕಾಶ** (पुं०) ನೀರಿನಲ್ಲಿ ಪ್ರತಿಬಿಂಬಿಸಿರುವ ಆಕಾಶ. जले प्रतिबिम्बितः आकाशः।

**जलाक्षी ಜಲಾಕ್ಷೀ** (स्त्री०) ನೀರು ಹಿಪ್ಪಲಿ. जलमक्ष्णोति व्याप्नोति — अक्षू (व्याप्तौ) "अण्" (३-२-१)।

**जलाखु ಜಲಾಖು** (ಪುಂ) ನೀರುಬೆಕ್ಕು. "उद्रस्तु जलमार्जारजलाखुनकुलप्लवाः" त्रिकाण्ड०।

**जलागम ಜಲಾಗಮ** (ಪುಂ) ವೃಷ್ಟಿ, ಮಳೆ. "तपति प्रावृषि नितरामभ्यर्णजलागमो दिवसः" रत्ना० ३-१०।

**जलाञ्चल ಜಲಾಂಚಲ** (ನಂ) 1. ಶೈವಾಲ, ಪಾಚಿ. 2. ತಾನಾಗಿ ನೀರು ಹೊರಟು ಹರಿಯುವುದು. "जलाञ्चलं स्वतो वारिनिर्गमे शैवलेऽपि च" मेदि०।

**जलाञ्जलि ಜಲಾಂಜಲಿ** (ಪುಂ) 1. ನೀರಿನಿಂದ ತುಂಬಿದ ಬೊಗಸೆ. जलपूर्णोऽञ्जलिः। 2. ಪಿತೃಗಳಿಗೆ ಕೊಡುವ ತರ್ಪಣದ ನೀರು. "कुपुत्रमासाद्य कुतो जलाञ्जलिः"।

**जलाटन ಜಲಾಟನ** (ಪುಂ)1. ರಣಹದ್ದು. जले अटति—अट (गतौ) "ल्युः" (३-१-१३४)। स्त्रियाम् जाति० "ङीष्" (४-१-६३)। (ನಂ)2. ನೀರಿನಲ್ಲಿ ಸಂಚರಿಸುವುದು. जले अटनम्। (स्त्री०) –अटनी –ಅಟನೀ. 3. ಜಿಗಣೆ. "जलाटनो लोहपृष्ठे जलौकायां जलाटनी" मेदि०।

**जलाढ्य ಜಲಾಢ್ಯ** (ವಿಂ) ನೀರಿನಿಂದ ತುಂಬಿರುವ, ಯಾವಾಗಲೂ ನೀರು ನಿಂತಿರುವ. जलैराढ्यः।

**जलाण्टक ಜಲಾಂಟಕ** (ಪುಂ) ನಕ್ರರಾಜ, ಒಂದು ದೊಡ್ಡ ಜಲಚರ ಪ್ರಾಣಿ, ದೊಡ್ಡ ಜಾತಿಯ ಮೊಸಳೆ. "ग्राहो जलकिराटश्च नक्रराजो जलाण्टकः" हारा०।

**जलाण्डक ಜಲಾಂಡಕ** (ಪುಂ) ಮೊಟ್ಟೆಯೊಡೆದು ಹೊರಕ್ಕೆ ಬಂದ ಮೀನು, ಶೀಗಡಿ. जले अण्ड इव कायति — कै (शब्दे) "कः" (३-२-३)। "पोताधानं तु स्याज्जलाण्डकम्" त्रिकाण्ड०।

**जलात्मक ಜಲಾತ್ಮಕ** (ವಿಂ)1. ಜಲಮಯವಾದ, ನೀರಿನಿಂದ ತುಂಬಿರುವ. (स्त्री०) –आत्मिका –ಆತ್ಮಿಕಾ. 2. ಜಿಗಣೆ.

**जलात्यय ಜಲಾತ್ಯಯ** (ಪುಂ) ಶರತ್ಕಾಲ. जलस्यात्ययो यत्र।

**जलाधार ಜಲಾಧಾರ** (ಪುಂ)ತಟಾಕ, ಕೆರೆ. जलानामाधारः। "तथात्मैको ह्यनेकश्च जलाधारेष्विवांशुमान्" याज्ञ० ३-१४४।

**जलाधिदैवत ಜಲಾಧಿದೈವತ** (ಪುನಂ) 1. ನೀರಿಗೆ ಅಧಿಷ್ಠಾನ ದೇವತೆ, ವರುಣ. जलस्य अधिदैवतम्। (ನಂ)2. ಜಲದೇವತಾಕವಾದ ಪೂರ್ವಾಷಾಢಾ ನಕ್ಷತ್ರ. जलमधिदैवतमस्य।

**जलाधिप ಜಲಾಧಿಪ, –अधिपतिः –ಅಧಿಪತಿಃ** (ಪುಂ) 1, ವರುಣ. जलस्याधिपः अधिपतिर्वा। "नाशक्नोदग्रतः स्थातुं विप्रचित्तेर्जलाधिपः" हरिवं०।

**जलाध्यक्ष ಜಲಾಧ್ಯಕ್ಷ** (ಪುಂ) ನೀರಿನ ಯಜಮಾನ, ವರುಣ.

**जलान्तक ಜಲಾಂತಕ** (ಪುಂ) 1. ಸಪ್ತಸಮುದ್ರಗಳಲ್ಲಿ ಒಂದಾದ ಜಲಸಮುದ್ರ. जलमेवान्तो यस्य "कप्" (५-४-१५४)। (1) लवणः, (2) इक्षुः, (3) सुरा, (4) सर्पिस्, (5) दधि, (6) दुग्धम् ಮತ್ತು (7) जलम् ಇವು ಸಪ್ತಸಮುದ್ರಗಳು. ಇವುಗಳಲ್ಲಿ ಜಲಸಮುದ್ರವೇ ಕೊನೆಯದಾದುದರಿಂದ ಈ ಹೆಸರು. "लवणेक्षुसुरासर्पिर्दधिदुग्धजलान्तकाः" त्रिकाण्ड०। 2. ಸತ್ಯಭಾಮೆಯಲ್ಲಿ ಹುಟ್ಟಿದ ಶ್ರೀಕೃಷ್ಣನ ಮಕ್ಕಳಲ್ಲೊಬ್ಬ.

**जलाम्बिका ಜಲಾಂಬಿಕಾ** (स्त्री०) ಕೂಪ, ಬಾವಿ. "प्रहिरन्धूर्जलाम्बिका" हारा०।

**जलायुका ಜಲಾಯುಕಾ** (स्त्री०) ಜಿಗಣೆ. जलमायुरस्याः "कप्" (५-४-१५४)। पृषो०।

**जलार्णव ಜಲಾರ್ಣವ** (ಪುಂ) ಸಿಹಿನೀರಿನ ಸಮುದ್ರ.

**जलार्थिन् ಜಲಾರ್ಥಿನ್** (ವಿಂ) ನೀರನ್ನು ಅಪೇಕ್ಷಿಸುವ, ಬಾಯಾರಿಕೆಯುಳ್ಳ. जलमर्थयते—अर्थ (उपयाच्ञायाम्) "णिनिः" (३-१-१३४)। स्त्रियाम् "ङीप्" (४-१-५)। –अर्थिनी –ಅರ್ಥಿನೀ.

**जलार्द्र ಜಲಾರ್ದ್ರ** (ನಂ)1. ಒದ್ದೆಬಟ್ಟೆ. जलेन आर्द्रम्। (ವಿಂ)2. ನೀರಿನಿಂದ ಒದ್ದೆಯಾದ. "पुष्पासारैः स्नपयतु भवान् व्योमगङ्गाजलार्द्रैः" मेघ० १-४३। (स्त्री०) –र्द्रा –ದ್ರ್ರಾ. 3. ನೀರು ಚಿಮುಕಿಸಲ್ಪಟ್ಟ ಬೀಸಣಿಗೆ. "सचन्दनाम्भःकणकोमलैस्तथा वपुर्जलार्द्रापवनैर्न निर्ववौ" माघ० १-६५।

**जलालुक ಜಲಾಲುಕ** (ನಂ) ತಾವರೆ ಗಡ್ಡೆ. जलस्यालुरिव कायति — कै (शब्दे) "कः" (३-२-३)।

**जलालुका ಜಲಾಲುಕಾ** (स्त्री०) ಜಿಗಣೆ.

**जलालोका ಜಲಾಲೋಕಾ** (स्त्री०) ಜಿಗಣೆ.

**जलावर्त ಜಲಾವರ್ತ** (ಪುಂ) ನೀರಿನ ಸುಳಿ. जलस्य आवर्तः।

**जलाशय ಜಲಾಶಯ** (ಪುಂ)1. ಕೆರೆ, ತಟಾಕ. 2. ಕೊಳ. 3. ಸಮುದ್ರ, ಕಡಲು. जलम् आशेतेऽत्र—शीङ् (स्वप्ने) "घः" (३-३-११८)। 4. ನೀರಿನ ಮಡು, ನೀರು

ತುಂಬಿರುವ ಪಳ್ಳ. "कुशेशयैरत्र जलाशयोषिता मुदा रमन्ते कलभा विकस्वरैः" माघ० ४-३३। 5. ಬಾವಿ. (न०) 6. ಉಶೀರ, ಲಾಮಂಚ. "जलाशयो जलाधारे स्यादुशीरे नपुंसकम्" मेदि०।

**जलाश्रय ಜಲಾಶ್ರಯ** (पुं०) 1. ಕೆರೆ. 2. ಕೊಳ. 3. ನೀರನ್ನು ಶೇಖರಿಸಿ ಇಡುವ ಸ್ಥಳ. 4. ಜೊಂಡು ಹುಲ್ಲು. 5. ಬಾವಿ.

**जलाश्व ಜಲಾಶ್ವ** (पुं०) ನೀರುಕುದುರೆ.

**जलाष्ठीली ಜಲಾಷ್ಠೀಲೀ** (स्त्री०) ಸರೋವರ, ಪುಷ್ಕರಿಣಿ. जलेनाष्ठीली। "जलकूपी जलाष्ठीली तलकं पुष्करिण्यपि" हारा०।

**जलासुका ಜಲಾಸುಕಾ** (स्त्री०) ಜಿಗಣೆ.

**जलाह्वय ಜಲಾಹ್ವಯ** (पुं०) ಪದ್ಮ, ಕಮಲ.

**जलु(लू)का ಜಲು(ಲೂ)ಕಾ** (स्त्री०) ಜಿಗಣೆ.

**जलेचर ಜಲೇಚರ** (पुं०) "जलचर" ನೋಡಿ.

**जलेज ಜಲೇಜ** (न०) "जलज" ನೋಡಿ. "उल्लासीनि जलेजानि दुन्वन्त्यदयितं जनम्" भट्टि० ६-७४।

**जलेन्द्र ಜಲೇಂದ್ರ** (पुं०) 1. ನೀರಿನ ಅಧಿಪತಿ, ವರುಣ. जलानामिन्द्रः। 2. ಸಮುದ್ರ, ಕಡಲು.

**जलेन्धन ಜಲೇಂಧನ** (पुं०) ಬಡಬಾಗ್ನಿ. जलान्येवेन्धनानि यस्य।

**जलेभ ಜಲೇಭ** (पुं०) ನೀರು ಆನೆ. जलजातः इभः। "प्रस्फुरत्तिमिजलेभजिह्मगः क्षिप्तरत्ननिकरो महोदधिः" बृहत्सं० १२-४। स्त्रियाम् जाति० "ङीष्" (४-१-६३)। **जलेभी ಜಲೇಭೀ.**

**जलेला ಜಲೇಲಾ** (स्त्री०) ಸ್ಕಂದನನ್ನು ಸಲಹಿದ ಸಪ್ತ ಮಾತೃಗಳಲ್ಲೊಬ್ಬಳು.

**जलेश ಜಲೇಶ** (पुं०) "जलेन्द्र" ನೋಡಿ. "कालं गतिं तेऽखिलदेवतात्मनो दिशश्च कर्णौ रसनं जलेशम्" भाग० ८-७-२६।

**जलेशय ಜಲೇಶಯ** (पुं०) 1. ವಿಷ್ಣು. जले शेते — शीङ् (स्वप्ने) अधि० "अच्" (३-२-१५)। अलुक् सप्तम्याः (६-३-१८)। "सप्तसामोपगीतं त्वां सप्तार्णवजलेशयम्। सप्तार्चिर्मुखमाचख्युः सप्तलोकैकसंश्रयम्" रघु० १०-२१। 2. ಮತ್ಸ್ಯ, ಮೀನು. स्त्रियाम् "टाप्"। योपधत्वात् न ङीप्। (वि०) 3. ನೀರಿನಲ್ಲಿ ಮಲಗಿರುವ, ಜಲದಲ್ಲಿರುವ. "यस्य बृंहितशब्देन कूर्मोऽप्यन्तर्जलेशयः" भा० आदि० २९-२९।

**जलेश्वर ಜಲೇಶ್ವರ** (पुं०) 1. ವರುಣ. जलानामीश्वरः। 2. ಸಮುದ್ರ, ಕಡಲು. "यमकुबेरजलेश्वरवज्रिणां समधुरं मधुरञ्चितविक्रमम्" रघु० ९-२४।

**जलोच्छ्वास ಜಲೋಚ್ಛ್ವಾಸ** (पुं०) 1. ಕೋಡಿ, ಕೆರೆಯಿಂದ ಹೆಚ್ಚು ನೀರು ಹೊರಕ್ಕೆ ಹೋಗಲು ಮಾಡಿರುವ ದಾರಿ. जलान्युच्छ्वसन्त्येभिः — उद्+श्वस (प्राणने) "घञ्" (३-३-१२१)। 2. ಹೆಚ್ಚು ನೀರು ಕೆರೆಯಿಂದ ಹೊರಕ್ಕೆ ಹೋಗುವುದು. भावे "घञ्" (३-३-१८)।

**जलोदर ಜಲೋದರ** (न०) ಹೊಟ್ಟೆಯಲ್ಲಿ ನೀರು ತುಂಬುವುದರಿಂದ ಉಂಟಾಗುವ ಒಂದು ರೋಗ. जलप्रधानमुदरं यस्मात्।

**जलोद्धतगति ಜಲೋದ್ಧತಗತಿ** (स्त्री०) ವೃತ್ತರತ್ನಾಕರೋಕ್ತವಾದ ಹನ್ನೆರಡನೆಯ ಛಂದಸ್ಸಿನ ಒಂದು ವೃತ್ತ. जलेनोद्धता गतिरस्य। **ಇದರ ಲಕ್ಷಣ:** "रसैर्जसजसा जलोद्धतगतिः" वृ० र०। ಜಗಣ ಸಗಣ ಜಗಣ ಸಗಣಗಳು ಪ್ರತಿಯೊಂದು ಪಾದದಲ್ಲಿಯೂ ಇರಬೇಕು.

**ಈ ವೃತ್ತದ ಗಣವಿನ್ಯಾಸ:**

| ज | स | ज | स |
|---|---|---|---|
| ।ऽ। | ।।ऽ | ।ऽ। | ।।ऽ |

**जलौकस् ಜಲೌಕಸ್** (स्त्री० ब० व०) 1. ಜಿಗಣೆ. जलमोको यासाम्। "स्त्रियाम् भूम्नि जलौकसः" अम०। (वि०) 2. ನೀರಿನಲ್ಲಿ ವಾಸಮಾಡುವ.

**जलौकस ಜಲೌಕಸ** (पुं०) ಜಿಗಣೆ. जलमोकः स्थानमस्त्यस्य "अच्" (५-२-१२७)।

**जलौका ಜಲೌಕಾ** (स्त्री०) ಜಿಗಣೆ. जलमोकः (अदन्तः) यस्याः।

**जल्प–व्यक्तायां वाचि** (भ्वा० पर० सक० से०)। जल्पति। जजल्प। जल्पिता। जल्पिष्यति। जल्पतु। ಇತ್ಯಾದಿ. 1. ಅಸ್ಪಷ್ಟವಾಗಿ ಮಾತನಾಡು, ಸ್ಪಷ್ಟವಾಗಿ ಉಚ್ಚಾರಣೆಯಿಲ್ಲದೆ ಮಾತನಾಡು. 2. ಹರಟು, ವಟಗುಟ್ಟು. 3. ಮಾತಾಡು, ಸಂಭಾಷಣೆಮಾಡು. 4. ಹೇಳು.

**ಈ ಧಾತುವಿಗೆ ಉಪಸರ್ಗಗಳ ಯೋಗದಿಂದ ಉಂಟಾಗುವ ಅರ್ಥಭೇದಗಳು:**

**(1) अनु+जल्प** = अनुजल्पति। ಒಬ್ಬ ಮಾತಾಡಿದ ಮೇಲೆ ಮಾತಾಡು, ಅನುಸರಿಸಿ ಮಾತಾಡು. "क्वचिद्धसन्त्यां हसति जल्पन्त्यामनुजल्पति" भाग० ४-२५-५८।

**(2) अभि+जल्प** = अभिजल्पति। ಪರಸ್ಪರ ಎದುರಾಗಿ ಮಾತಾಡು. "अन्योन्यमभिजल्पतः" रामा०।

(3) प्रति + जल्प = प्रतिजल्पति। ಎದುರು ಮಾತಾಡು, ಬದಲು ಹೇಳು, ಪ್ರತ್ಯುತ್ತರ ಹೇಳು. "भारत प्रतिजल्पन्ति सदा तूत्तमपूरुषाः" भा० सभा०।

**जल्प ಜಲ್ಪ** (पुं०) ಮಾತು, ಉಕ್ತಿ. जल्प (व्यक्तायां वाचि) भावे "घञ्" (३-३-१८)। "इति प्रियां वल्गुविचित्रजल्पैः स सान्त्वयित्वाच्युतमित्रसूतः" भाग० १-७-१७।

**जल्पक ಜಲ್ಪಕ** (वि०) ಹರಟುವವನು, ಅಸಂಬದ್ಧವಾಗಿ ಮಾತಾಡುವವನು. जल्प (व्यक्तायां वाचि) "ण्वुल्" (३-१-१३३)। "मौनान्मूकः प्रवचनपटुर्वाचिको जल्पको वा धृष्टः पार्श्वे भवति च वसन् दूरतोऽप्यप्रगल्भः" भर्तृ० १-४७।

**जल्पत् ಜಲ್ಪತ್** (वि०) ಮಾತಾಡುತ್ತಿರುವ, ಹೇಳುತ್ತಿರುವ. जल्प (व्यक्तायां वाचि) "शतृ" (३-२-१२४)। "किमपि किमपि मन्दं मन्दमासक्तियोगादविरलितकपोलं जल्पतोरक्रमेण" उ० रा० १-२७। "तत्प्रयोजककर्तृत्वमुपैति मम जल्पतः" माघ० २-७१। स्त्रियाम् "ङीप्" (४-१-६)। जल्पन्ती ಜಲ್ಪಂತೀ.

**जल्पन ಜಲ್ಪನ** (न०) 1. ಭಾಷಣ, ಮಾತು. जल्प (व्यक्तायां वाचि) भावे "ल्युट्" (३-३-११५)। "अनिमित्तभङ्गचलनस्वेदाश्रुनिपातजल्पनाद्यानि" बृहत्सं० ४६-८। (वि०) 2. ಮಾತಾಡುವ. जल्प "ल्युः" (३-१-१३४)।

**जल्पाक ಜಲ್ಪಾಕ** (पुं०) 1. ಹರಟುವವನು, ಅಸಂಬದ್ಧವಾಗಿ ಮಾತಾಡುವವನು. जल्प (व्यक्तायां वाचि) "षाकन्" (३-२-१५५)। 2. ಮಾತಾಡುತ್ತಿರುವ. स्त्रियाम् षित्वात् "ङीष्" (४-१-४१)। जल्पाकी ಜಲ್ಪಾಕೀ. "जल्पाकीभिः सहाधीनः स्त्रीभिः प्रजविना त्वया" भट्टि० ७-१९।

**जल्पित ಜಲ್ಪಿತ** (न०) 1. ಮಾತು. जल्प (व्यक्तायां वाचि) भावे "क्तः" (३-३-११४)। (वि०) 2. ಹೇಳಲ್ಪಟ್ಟ. जल्प कर्म० "क्तः" (३-२-१०२)।

**जल्पिन् ಜಲ್ಪಿನ್** (वि०) ಮಾತಾಡುತ್ತಿರುವ, ಹೇಳುತ್ತಿರುವ. जल्पति – जल्प (व्यक्तायां वाचि) "णिनिः" (३-१-१३४)।

**जल्प्य ಜಲ್ಪ್ಯ** (वि०) 1. ಹರಟೆಗೆ ಯೋಗ್ಯವಾದ. 2. ಹೇಳಲು ಯೋಗ್ಯವಾದ. जल्प (व्यक्तायां वाचि) "ण्यत्" (३-१-१२४)।

**जव ಜವ** (पुं०) 1. ವೇಗ. जु (सौत्रधातुः) "अप्" (३-३-५७)। "उपारताः पश्चिमरात्रिगोचरादपारयन्तः पतितुं जवेन गाम्" किरा० ४-१०। (वि०) 2. ವೇಗವುಳ್ಳ. जवोऽस्यास्ति "अच्" (५-२-१२७)। "एतस्मिन्नधिकपयःश्रियं वहन्त्यः संक्षोभं पवनभुवा जवेन नीताः" माघ० ४-५९।

**जवन ಜವನ** (वि०) 1. ವೇಗದ ನಡಗೆಯುಳ್ಳ. जु (सौत्रधातुः) "युच्" (३-२-१५०)। "विशिखान्तराण्यतिपपात सपदि जवनैः स वाजिभिः" माघ० १५-७०। (न०) 2. ವೇಗ. जु (सौत्रधातुः) भावे "ल्युट्" (३-३-११५)। (पुं०) 3. ವೇಗವಾಗಿ ನಡೆಯುವ ಕುದುರೆ. "जवनं तु स्यदे वेगिहये ना वेगिनि त्रिषु" मेदि०।

**जवनिका ಜವನಿಕಾ** (स्त्री) ತೆರೆ, ಪರದೆ. जवत्यस्याम्—जु "ल्युट्" (३-३-११७)। स्वार्थे "कन्"। "ङीप्" (४-१-१५)। "समीरशिशिरः शिरःसु वसतां सतां जवनिका निकामसुखिनाम्" माघ० ४-५४।

**जवनिमन् ಜವನಿಮನ್** (पुं०) ವೇಗ. जवनस्य भावः "इमनिच्" (५-१-१२३)।

**जवनी ಜವನೀ** (स्त्री०) 1. ತೆರೆ, ಪರದೆ. 2. ಯವನ ಜಾತಿಯ ಹೆಂಗಸು.

**जवस ಜವಸ** (न०) ಹುಲ್ಲು. जूयते भक्षार्थं प्राप्यते—जु "असच्" बाहु०।

**जवा ಜವಾ** (स्त्री०) ದಾಸವಾಳದ ಹೂವು.

**जविन् ಜವಿನ್** (पुं०) 1. ವೇಗವಾಗಿ ಓಡುವ ಜಿಂಕೆ. (वि०) 2. ವೇಗವುಳ್ಳ, ವೇಗದಿಂದ ಕೂಡಿದ. जवोऽस्यास्ति "इनिः" (५-२-११५)। "जविमारुताञ्चितपरस्परोपमश्लिष्टरेणुकेतुवसनाः पताकिनः" माघ० १३-४। स्त्रियाम् "ङीप्" (४-१-५)। जविनी ಜವಿನೀ.

**जसु ಜಸು** (पुं०) ಗುಣ, ಮೇಲ್ಮೆಯ ಮಟ್ಟ, ದರ್ಜೆ. "गुणे जसुः" वैज०।

**जसुरि ಜಸುರಿ** (पुं०) 1. ಅಗ್ನಿ, ಬೆಂಕಿ. 2. ಶನಿ. "जसुरिः पावके शनौ" वैज०।

**जहत् ಜಹತ್** (वि०) ತ್ಯಜಿಸುತ್ತಿರುವ, ಬಿಡುತ್ತಿರುವ. ओ हाक् (त्यागे) "शतृ" (३-२-१२४)। "पपात पूर्वां जहतो विजिह्मतां वृषोपभुक्तान्तिकसस्यसम्पदः" किरा० ४-१८। स्त्रियाम् "ङीप्" (४-१-६)।

**जहत्स्वार्था ಜಹತ್ಸ್ವಾರ್ಥಾ** (स्त्री०) ಜಹತ್ಸ್ವಾರ್ಥಲಕ್ಷಣೆ, ಲಕ್ಷಣ ಲಕ್ಷಣೆ. जहत् स्वार्थो याम्। ಪದಗಳು ಸ್ವಾರ್ಥ (ಶಕ್ಯಾರ್ಥ) ಗಳನ್ನು ಬಿಟ್ಟು ಅನ್ಯಾರ್ಥಗಳನ್ನು ಬೋಧಿಸುವುದು **"ಜಹತ್ಸ್ವಾರ್ಥ"** ವಾಗುವುದು. "आयुर्घृतम्" ಎಂಬಲ್ಲಿ आयु: ಪದವು ಸ್ವಾರ್ಥವನ್ನು ಬಿಟ್ಟು आयु: साधनम् ಎಂಬ ಅರ್ಥವನ್ನು ಬೋಧಿಸುವುದರಿಂದ "**जहत्स्वार्था**" ಎಂಬ ಲಕ್ಷಣೆ.

**जहदजहल्लक्षणा ಜಹದಜಹಲ್ಲಕ್ಷಣಾ** (स्त्री०) ವಾಚ್ಯಾರ್ಥದ ಏಕದೇಶ (ಸ್ವಲ್ಪಭಾಗ) ವನ್ನು ಬಿಟ್ಟು ಏಕದೇಶಾರ್ಥಕ್ಕೆ ಮಾತ್ರ ಅನ್ವಯವಿರುವ ಒಂದು ವಿಧ ಲಕ್ಷಣೆ. जहच्च अजहच्च स्वार्थो याम्। "सोऽयं देवदत्त:" ಎಂಬಲ್ಲಿ ಆಗಿನಕಾಲದ ಮತ್ತು ಈಗಿನಕಾಲದ ಎಂಬ ಅರ್ಥವನ್ನು ಬಿಟ್ಟು ಕೇವಲ ದೇವದತ್ತ ರೂಪವಾದ ಅರ್ಥವನ್ನು ಮಾತ್ರ ಬೋಧಿಸುವುದರಿಂದ ವಾಚ್ಯಾರ್ಥದ ಏಕದೇಶವನ್ನು ಮಾತ್ರ ಹೇಳಿದಂತಾಯಿತು. ಆದರಿಂದ ಇಲ್ಲಿ "**जहदजहल्लक्षणा**".

**जहल्लक्षणा ಜಹಲ್ಲಕ್ಷಣಾ** (स्त्री०) ಜಹತ್ಸ್ವಾರ್ಥ ಲಕ್ಷಣೆ. "जहत्स्वार्था" ನೋಡಿ.

**जह्नु ಜಹ್ನು** (पुं०) 1. ಒಬ್ಬ ರಾಜರ್ಷಿ, ಚಂದ್ರವಂಶದ ಅಜಮೀಢ ರಾಜನ ಒಬ್ಬ ಮಗ. ಈತನ ತಾಯಿ ಕೇಶಿನಿ. [ಈ ರಾಜನು ಕುಶಿಕವಂಶದ ಮೂಲಪುರುಷ. ಭಗೀರಥನು ದೇವಲೋಕದಿಂದ ಗಂಗೆಯನ್ನು ಕರೆತರುತ್ತಿದ್ದಾಗ ಈ ರಾಜನ ಯಜ್ಞಶಾಲೆಯೊಳಗೆ ಗಂಗೆಯು ನುಗ್ಗಿ ಎಲ್ಲವನ್ನು ಕೊಚ್ಚಿಕೊಂಡು ಹೋಗಲು ಕುಪಿತನಾದ ರಾಜನು ಗಂಗೆಯನ್ನು ಪಾನಮಾಡಿಬಿಟ್ಟನು. ಅದರಿಂದ ಖಿನ್ನನಾದ ಭಗೀರಥನು ರಾಜನನ್ನು ಸ್ತೋತ್ರಮಾಡಲಾಗಿ ಸಂತೋಷಗೊಂಡ ಜಹ್ನುರಾಜನು ಗಂಗೆಯನ್ನು ತನ್ನ ಕಿವಿಯಿಂದ ಹೊರಕ್ಕೆ ಬಿಟ್ಟನು. ಈ ಕಾರಣದಿಂದ ಗಂಗೆಗೆ जाह्नवी, जह्नुकन्या, जह्नुतनया ಇತ್ಯಾದಿ ಹೆಸರಾದುವು.] 2. ವಿಷ್ಣು. ओ हाक् (त्यागे) "नु:" धातो: द्वित्वं अभ्यासस्य ह्रस्व: चुत्वं च (उ० ३-३६)। "अभक्तेष्वात्ममाहात्म्यनिह्नुतेर्जह्नुरुच्यते" इति निरुक्ति:। "सत्कर्ता सत्कृत: साधुर्जह्नुर्नारायणो नर:" वि० स०।

**जह्नुकन्या ಜಹ್ನುಕನ್ಯಾ, –तनया –ತನಯಾ, –सुता –ಸುತಾ** (स्त्री०) ಗಂಗಾನದಿ. जह्नो: कन्या तनया सुता वा। "विविक्तेऽस्मिन्नगे भूय: प्लाविते जह्नुकन्यया" किरा० ११-३६।

**जह्नुसप्तमी ಜಹ್ನುಸಪ್ತಮೀ** (स्त्री०) ವೈಶಾಖ ಶುದ್ಧ ಸಪ್ತಮಿ. ಜಹ್ನುರಾಜನು ಗಂಗಾನದಿಯನ್ನು ಪಾನಮಾಡಿ ಪುನಃ ಕಿವಿಯಿಂದ ಬಿಟ್ಟ ದಿವಸವಿದು. ಈ ಸಪ್ತಮಿಯು ಗಂಗಾಪೂಜೆಗೆ ಪ್ರಶಸ್ತವಾದುದು. "वैशाखशुद्धसप्तम्यां जह्नुना मुनिना पुरा। क्रोधात् पीता पुनस्त्यक्ता कर्णरन्ध्रात्तु दक्षिणात्। तस्यां समर्चयेद्देवीं गङ्गां भुवनमेखलाम्। स्नात्वा सम्यग्विधानेन स धन्य: सुकृती नर:" वराहपु०।

**जा ಜಾ** (स्त्री०) 1. ತಾಯಿ. 2. ಮೈದುನನ ಹೆಂಡತಿ. जनी (प्रादुर्भावे) "ड:" बाहु०। 3. ದೇವತೆಗಳ ಸೇನೆ. 4. ಯೋನಿ. 5. ಸಮುದ್ರದ ತೀರಪ್ರದೇಶ. "जा स्त्रियां देववाहिन्यां योनिसागरवेलयो:" नानार्थर०।

**जागत ಜಾಗತ** (वि०) 1. ಜಗತೀಛಂದಸ್ಸಿಗೆ ಸಂಬಂಧಿಸಿದ, ಜಗತೀಛಂದಸ್ಸಿನಲ್ಲಿ ರಚಿತವಾದ. 2. ಪೃಥ್ವೀಸಂಬಂಧವಾದ, ಭೂಮಿಯಲ್ಲಿರುವ. जगत्यां भव: "अण्" (४-३-५३)।

**जागर ಜಾಗರ** (पुं०) 1. ಜಾಗರಣೆ, ನಿದ್ರೆಯಿಲ್ಲದೆ ಎಚ್ಚರದಿಂದಿರುವುದು. जागृ (निद्राक्षये) भावे "घञ्" (३-३-१८)। "आरुरोह कुमुदाकरोपमां रात्रिजागरपरो दिवाशय:" रघु० १९-३४। 2. ಯುದ್ಧಕವಚ, ಯುದ್ಧದಲ್ಲಿ ತೊಡುವ ಅಂಗಿ. "उरश्छद: कङ्कटको जागर: कवचोऽस्त्रियाम्" अम०।

**जागरक ಜಾಗರಕ** (वि०) ನಿದ್ದೆಯಿಲ್ಲದ, ಎಚ್ಚರದಿಂದಿರುವ. जागृ (निद्राक्षये) "ण्वुल्" (३-१-१३३)।

**जागरण ಜಾಗರಣ** (न०) 1. ಎಚ್ಚರ, ನಿದ್ರೆಯಿಲ್ಲದಿರುವುದು. जागृ (निद्राक्षये) भावे "ल्युट्" (३-३-११५)। 2. ಎಚ್ಚರಗೊಳಿಸುವುದು. जागृ+णिच् "ल्युट्"।

**जागरणीय ಜಾಗರಣೀಯ** (वि०) 1. ಎಚ್ಚರದಿಂದ ಇರಬೇಕಾದ. 2. ಎಚ್ಚರದಿಂದ ಇರಲು ಸಾಧ್ಯವಾದ. जागृ (निद्राक्षये) "अनीयर्" (३-१-९६)। 3. ಎಚ್ಚರಗೊಳಿಸಬೇಕಾದ. 4. ಎಚ್ಚರಗೊಳಿಸಲು ಸಾಧ್ಯವಾದ. जागृ+णिच् "अनीयर्"। जागृ "तव्य:" (३-१-९६)। **जागरितव्य: ಜಾಗರಿತವ್ಯಃ.** जागृ + णिच् "तव्य:"। **जागरयितव्य: ಜಾಗರಯಿತವ್ಯಃ.**

**जागरयत् ಜಾಗರಯತ್** (वि०) ಎಚ್ಚರಗೊಳಿಸುತ್ತಿರುವ, ಎಬ್ಬಿಸುತ್ತಿರುವ. जागृ (निद्राक्षये) + णिच् "शतृ" (३-२-१२४)। स्त्रियाम् "ङीप्" (४-१-६)। **–यन्ती –ಯಂತೀ.** "शानच्" (३-२-१२४)। **जागरयमाण: ಜಾಗರಯಮಾಣಃ.**

**जागरित ಜಾಗರಿತ** (न०) 1. ಎಚ್ಚರಗೊಳ್ಳುವುದು. जागृ (निद्राक्षये) भावे "क्तः" (३-३-११४)। 2. ಎಚ್ಚರಗೊಳಿಸುವುದು. जागृ+णिच् "क्तः"। (वि०) 3. ಎಚ್ಚರಗೊಂಡ. जागृ (निद्राक्षये) "क्तः" (३-४-७२)। 4. ಎಚ್ಚರಗೊಳಿಸಲ್ಪಟ್ಟ. जागृ + णिच् "क्तः" (३-२-१०२)।

**जागरितवत् ಜಾಗರಿತವತ್** (वि०) 1. ಎಚ್ಚರಗೊಂಡ, ನಿದ್ರೆಯಿಂದ ಎದ್ದಿರುವ. जागृ (निद्राक्षये) "क्तवतुः" (३-२-१०२)। 2. ಎಚ್ಚರಗೊಳಿಸಿದ, ನಿದ್ರೆಯಿಂದ ಎಬ್ಬಿಸಿದ. जागृ+णिच् "क्तवतुः"। स्त्रियाम् "ङीप्" (४-१-६)। **जागरितवती ಜಾಗರಿತವತೀ.**

**जागरा ಜಾಗರಾ** (स्त्री०) ಎಚ್ಚರ, ನಿದ್ರೆಯಿಲ್ಲದಿರುವುದು, ಜಾಗರಣೆ. जागृ वा "अः" (वा० ३-३-१०१)। पक्षे "शः"। "यक्" (३-१-६७)। **जागर्या ಜಾಗರ್ಯಾ.**

**जागरितृ ಜಾಗರಿತೃ** (वि०) ನಿದ್ರೆಯಿಲ್ಲದ, ಎಚ್ಚರದಿಂದಿರುವ. जागृ (निद्राक्षये) "तृन्" (३-२-१३५)। "ज्ञानाभ्यासाज्जागरिता जिज्ञासार्थमनन्तरम्" भा० शान्ति० २१८-३।

**जागरिन् ಜಾಗರಿನ್** (वि०) ಎಚ್ಚರವುಳ್ಳ, ನಿದ್ರೆಯಿಲ್ಲದ. जगरोऽस्यास्ति "इनिः" (५-२-११५)।

**जागरूक ಜಾಗರೂಕ** (वि०) ಎಚ್ಚರದಿಂದಿರುವ ಸ್ವಭಾವದ, ನಿದ್ರೆಯಿಲ್ಲದ. जागृ (निद्राक्षये) "ऊकः" (३-२-१६५)। "भुवनत्रयकार्यजागरूकः स परं तत्र परः पुमानजागः" माघ० २०-३६।

**जागर्ति ಜಾಗರ್ತಿ** (स्त्री०) ಜಾಗರಣೆ, ಎಚ್ಚರ, ನಿದ್ರೆಯಿಲ್ಲದಿರುವುದು. जागृ (निद्राक्षये) "क्तिन्" (३-३-९४)। गुणः (७-३-८५)।

**जागर्या ಜಾಗರ್ಯಾ** (स्त्री०) "जागरा" ನೋಡಿ.

**जागुड ಜಾಗುಡ** (पुं० ब० व०) 1. ಜಾಗುಡದೇಶ. 2. ಜಾಗುಡ ದೇಶದ ಜನರು. "अवनिं जागुडकुङ्कुमाभिताम्रैः" माघ० २०-३। (न०) 3. ಕುಂಕುಮಕೇಸರಿ. (वि०) 4. ಜಾಗುಡ ದೇಶದಲ್ಲಿ ಇರುವ.

**जागृ – निद्राक्षये** (अदा० पर० अक० से०)। जागर्ति जागृतः जाग्रति। जागर्षि जागृथः जागृथ। जागर्मि जागृवः जागृमः। जागरां चकार, –बभूव, –आस। जजागार जजागरतुः जजागरुः। जागरिता। जागरिष्यति। जागर्तु / जागृतात् } जागृताम् जाग्रतु। जागृहि। जागराणि। अजागः। जागृयात्। जागर्यात्। अजागरीत्। अजागरिष्यत्। ಎಚ್ಚರಹೊಂದು, ನಿದ್ದೆಯಿಂದ ಏಳು.

**भावे:**—जागर्यते। जागरांचक्रे, –बभूवे, –आसे, जजागरे। जागारिता, जागरिता। जागारिष्यते, जागरिष्यते। जागर्यताम्। अजागर्यत। ಇತ್ಯಾದಿ.

**णिचि:**—जागरयति, –ते। जागरयां चकार, –चक्रे, –बभूव, –आस। जागरयिता। जागरयिष्यति, –ते। जागरयतु, –ताम्। ಇತ್ಯಾದಿ.

**ण्यन्तात् कर्मणि:**—जागर्यते। जागरयांचक्रे, –बभूवे, –आसे। जागरयिता, जागरिता। जागरयिष्यते, जागरिष्यते। जागर्यताम्। ಇತ್ಯಾದಿ.

**कृत्सु:**—जागरितव्यम्। जागरणीयम्। जागर्यम्। जागरितः। जागरितवान्। जाग्रत्, जाग्रती। जागरितुम्। जागरितम्। जागरणम्। जागरित्वा। प्रजागर्य।

**ण्यन्तात् कृत्सु:**— जागरयितव्यः। जागरणीयः। जागर्यः। जागरितः। जागरितवान्। जागरयन्, जागरयन्ती, जागरयमाणः। जागरितुम्। जागरितम्। जागरणम्। जागरयित्वा। प्रजागर्य।

**जागृवि ಜಾಗೃವಿ** (पुं०) 1. ರಾಜ, ದೊರೆ. जागृ (निद्राक्षये) "क्विन्" (उ० ४-५४)। ರಾಜನು ತನ್ನ ಕರ್ತವ್ಯಗಳಲ್ಲಿ ಜಾಗರೂಕನಾಗಿರುವುದರಿಂದ ಈ ಹೆಸರು. 2. ಅಗ್ನಿ, ಬೆಂಕಿ. (वि०) 3. ಜಾಗರಣೆಯ ಸ್ವಭಾವದ, ನಿದ್ದೆಯಿಲ್ಲದ.

**जागृत ಜಾಗೃತ** (वि०) ಎಚ್ಚರಗೊಂಡ. जागृ (निद्राक्षये) "क्तः" (३-४-७२)।

**जाग्रत् ಜಾಗ್ರತ್** (वि०) 1. ಎಚ್ಚರದಿಂದಿರುವ, ನಿದ್ರೆಯಿಲ್ಲದಿರುವ. जागृ (निद्राक्षये) "शतृ" (३-२-१२४)। "क्षयितापदि जाग्रतोऽपि नित्यं ननु तत्रैव हि तेऽभवन्निषण्णाः" माघ० २०-३४। 2. ಎಚ್ಚರದಿಂದಿರುವ, ಜಾಗರೂಕತೆಯಿಂದಿರುವ, ಎಡೆಬಿಡದೆ ಗಮನಿಸುತ್ತಿರುವ. स्त्रियाम् "ङीप्" (४-१-६)। **जाग्रती ಜಾಗ್ರತೀ.** "अयं दरिद्रो भवितेति वैधसीं लिपिं ललाटेऽर्थिजनस्य जाग्रतीम्" नैष० १-१५।

**जाग्रिया ಜಾಗ್ರಿಯಾ** (स्त्री०) ಎಚ್ಚರ, ನಿದ್ದೆಯಿಲ್ಲದಿರುವುದು, ಜಾಗರಣೆ.

**जाघनी ಜಾಘನೀ** (स्त्री०) 1. ತೊಡೆ. जघनस्य समीपम् "अण्" (५-२-७०)। "क्षुधार्तश्चात्तुमभ्यागात् विश्वामित्रः श्वजाघनीम्" मनु० १०-१०८। 2. ಪುಚ್ಛ, ಬಾಲ.

**जाङ्गल ಜಾಂಗಲ** (पुं०) 1. ತಿತ್ತಿರಿಪಕ್ಷಿ. ಕಪಿಂಜಲಪಕ್ಷಿ. ಗೌಜಗಹಕ್ಕಿ. 2. ಅರಣ್ಯದ ಮೃಗಗಳ ಮಾಂಸ. 3. ಅರಣ್ಯದಲ್ಲಿರುವ ನೀರು. (पुं० ब० व०) 4. ಜಾಂಗಲ ದೇಶ, ಮಧ್ಯಪ್ರದೇಶದ ಒಂದು ಪ್ರಾಂತ. (वि०) 5. ಅರಣ್ಯದಲ್ಲಿ ಹುಟ್ಟಿದ, ಕಾಡಿನಲ್ಲಿರುವ. जङ्गले भवः "अण्" (४-३-५३)। (स्त्री०) –ली –ಲೀ. 6. ನಸುಗುನ್ನಿಗಿಡ.

**जाङ्गलपथिक ಜಾಂಗಲಪಥಿಕ** (वि०) 1. ಅರಣ್ಯಮಾರ್ಗದಿಂದ ತರಲ್ಪಟ್ಟ. 2. ಅರಣ್ಯಮಾರ್ಗದಿಂದ ಹೋಗುವ. जङ्गलपथेन आहृतं तेन गच्छति वा "ठक्" (वा० ५-१-७७)।

**जाङ्गुल ಜಾಂಗುಲ** (न०) ವಿಷ.

**जाङ्गुलि ಜಾಂಗುಲಿ** (पुं०) ವಿಷವೈದ್ಯ.

**जाङ्गुलिक ಜಾಂಗುಲಿಕ** (पुं०) ವಿಷವೈದ್ಯ. जाङ्गुल्या दीव्यति "ठक्" (४-४-२)।

**जाङ्गुली ಜಾಂಗುಲೀ** (स्त्री०) ವಿಷವಿದ್ಯೆ. जाङ्गुलस्य विषस्येयम् "अण्" (४-३-१२०)। "ङीप्" (४-१-१५)। "जाङ्गुली विषविद्यायाम्" मेदि०।

**जाङ्घि ಜಾಂಘಿ** (वि०) 1. ಮೊಳಕಾಲಿನಲ್ಲಿ ಉಂಟಾದ. जङ्घायां भवः "इञ्" (४-१-९६)। 2. ಮೊಳಕಾಲಿನ ಸಂಬಂಧವಾದ.

**जाङ्घिक ಜಾಂಘಿಕ** (पुं०) 1. ಉಷ್ಟ್ರ, ಒಂಟೆ. (वि०) 2. ಓಡಂವವನು, ಓಡಿನಡೆದು ಜೀವಿಸುವವನು. ಓಡಾಡುವ ಉದ್ಯೋಗವುಳ್ಳವನು. जङ्घाभ्यां जीवति "ठक्" (४-४-१२)।

**जाजल ಜಾಜಲ** (पुं० ब० व०) ಜಾಜಲಿಯ ಶಿಷ್ಯರು. जाजलेश्छात्राः।

**जाजलि ಜಾಜಲಿ** (पुं०) ಒಬ್ಬ ಋಷಿ.

**जाजिन् ಜಾಜಿನ್** (पुं०) ಯೋಧ, ಭಟ, ಸೈನಿಕ. जजति—जज (युद्धे) "णिनिः" (३-२-७८)। "जजौजोजाऽजिजिज्जाजी तं ततोऽतितताऽतितुत्" माघ० १९-३।

**जाज्वल्यमान ಜಾಜ್ವಲ್ಯಮಾನ** (वि०) ಹೆಚ್ಚು ಪ್ರಕಾಶಿಸುವ, ಅತಿಶಯವಾಗಿ ಹೊಳೆಯುವ. ज्वल (दीप्तौ)+यङ् "शानच्" (३-२-१२४)। "जाज्वल्यमाना जगतः शान्तये समुपेयुषी" माघ० २-३।

**जाठर ಜಾಠರ** (पुं०) 1. ಹೊಟ್ಟೆಯೊಳಗಿನ ಅಗ್ನಿ, ಜಾಠರಾಗ್ನಿ. जठरे भवः "अण्" (४-३-५३)। 2. ಶಿಶು, ಮಗು. "भविष्यतस्तवाभद्रावभद्रे जाठराधमौ" भाग० ३-१४-३८। (वि०) 3. ಜಠರಸಂಬಂಧವಾದ. जठरस्येदम् "अण्" (४-३-१२०)। 4. ಹೊಟ್ಟೆಯಲ್ಲಿರುವ.

**जाठराग्नि ಜಾಠರಾಗ್ನಿ** (पुं०) ಹೊಟ್ಟೆಯೊಳಗಿನ ಅಗ್ನಿ, ಆಹಾರವನ್ನು ಜೀರ್ಣಮಾಡುವ ಒಂದು ಶಕ್ತಿ.

**जाठर्य ಜಾಠರ್ಯ** (वि०) ಹೊಟ್ಟೆಯೊಳಗಿನ ರೋಗ, ಹೊಟ್ಟೆಯೊಳಗೆ ಬಾಧಿಸುವ ವ್ಯಾಧಿ. जठरे भवः "ञ्यः"।

**जाडार ಜಾಡಾರ** (पुं०) ಜಡನ ಮಗ. जडस्यापत्यम् "आरक्" (४-१-१३०)।

**जाड्य ಜಾಡ್ಯ** (न०) 1. ಶೈತ್ಯ, ಚಳಿ, ಕುಳಿರು. जडस्य भावः "ष्यञ्" (५-१-१२)। 2. ಮೂರ್ಖತನ, ದಡ್ಡತನ. "विख्याताः कवयो वसन्ति विषये यस्य प्रभोर्निर्धनाः। तज्जाड्यं वसुधाधिपस्य" भर्तृ० १-११। 3. ಜಡತೆ, ಸೋಮಾರಿತನ, ಕೆಲಸಮಾಡದಿರುವುದು, ಮೈಗಳ್ಳತನ. "आलस्यं श्रमगर्भाद्यैर्जाड्यम् जृम्भासितादिकृत्" सा० द० ३-१५५। 4. ರಸನೇಂದ್ರಿಯದ ಶಕ್ತಿಯು ಕಡಮೆಯಾಗಿರುವುದು, ನಾಲಗೆಯಲ್ಲಿ ರುಚಿತೋರದಿರುವುದು. "मुखवैरस्यदौर्गन्ध्यशोफजाड्यहरं सुखम्" सुश्रुत० ४-२४-१४। 5. ಮಂಕು, ಬುದ್ಧಿಮಾಂದ್ಯ, ಪೆದ್ದು. "जाड्यं धियो हरति सिञ्चति वाचि सत्यम्" भर्तृ० १-१९।

**जाड्यारि ಜಾಡ್ಯಾರಿ** (पुं०) ನಿಂಬೆಗಿಡ.

**जात ಜಾತ** (पुं०) 1. ಪುತ್ರ, ಮಗ. (ಸಾಮಾನ್ಯವಾಗಿ ನಾಟಕಗಳಲ್ಲಿ ಹೆಚ್ಚು ಪ್ರಯೋಗ). "अयि जात कथयितव्यं कथय" उ० रा० ४। (न०) 2. ಜನ್ಮ, ಉತ್ಪತ್ತಿ. जनी (प्रादुर्भावे) भावे "क्तः" (३-३-११४)। 3. ರಾಶಿ, ಸಮೂಹ, ಗುಂಪು. "तमध्वरे विश्वजिति क्षितीशं निःशेषविश्राणितकोशजातम्" रघु० ५-१। (वि०) 4. ಉತ್ಪನ್ನ, ಹುಟ್ಟಿದ, ಜನ್ಮವಡೆದ. "जाता निखिलवेदानामुत्तमाङ्गोपधानतः। त्वत्पादकमलादेषा त्वदेकाधीनधारणा" याद० १-७९। "कोऽर्थः पुत्रेण जातेन यो न विद्वान् न धार्मिकः। काणेन चक्षुषा किम्वा चक्षुःपीडैव केवलम्" हितो० १-१२। 5. ಉಂಟಾದ, ಹುಟ್ಟಿದ. "जातप्रीतिर्या मधुरेणानुवनान्तं कामे कान्ते सारसिकाकाकुरुतेन" माघ० ६-७६। 6. ವ್ಯಕ್ತವಾದ, ಪ್ರಕಟವಾದ.

**जातक ಜಾತಕ** (पुं०) 1. ಸದ್ಯಃ ಹುಟ್ಟಿದ ಶಿಶು. 2. ಭಿಕ್ಷು, ತಾಪಸ. (न०) 3. ಜಾತಕ, ಜನ್ಮಪತ್ರಿಕೆ, ಜನ್ಮಕಾಲದ ತಿಥಿ ವಾರ ನಕ್ಷತ್ರ ಲಗ್ನ ಮೊದಲಾದ ವಿವರಗಳನ್ನು

ತಿಳಿಸುವ ಪತ್ರಿಕೆ. 4. ಶಿಶುವಿನ ಜನ್ಮಕಾಲದ ನಕ್ಷತ್ರ ಲಗ್ನ ಮೊದಲಾದುವುಗಳಿಂದ ಶುಭಾಶುಭ ಫಲಗಳನ್ನು ತಿಳಿಸುವ ಗ್ರಂಥ. ಬೃಹಜ್ಜಾತಕ, ಜಾತಕ ಚಂದ್ರಿಕೆ, ಜಾತಕ ಫಲ ಚಿಂತಾಮಣಿ, ಜಾತಕ ಕೌಮುದಿ ಮೊದಲಾದ ಗ್ರಂಥಗಳಲ್ಲಿ ಈ ಫಲಗಳು ಹೇಳಲ್ಪಟ್ಟಿವೆ. जातं जननम्, तदधिकृत्य कृतो ग्रन्थः "अण्" (४-३-८७)। संज्ञायां "कन्"। (वि०) 5. ಹುಟ್ಟಿದ, ಜನ್ಮವೆತ್ತಿದ. "उभौ तौ नार्हतो भागं जारजातककामजौ" मनु० ९-१४३।

**जातकचक्र ಜಾತಕಚಕ್ರ** (न०) ಹುಟ್ಟಿದ ಶಿಶುವಿನ ಶುಭಾಶುಭ ಫಲಗಳನ್ನು ತಿಳಿಸುವ ಒಂದು ಚಕ್ರ. ಜನನಕಾಲದಲ್ಲಿ ಸೂರ್ಯನಿರುವ ನಕ್ಷತ್ರದಿಂದ ಪ್ರಾರಂಭಿಸಿ 27 ನಕ್ಷತ್ರಗಳನ್ನು ತಲೆಯಿಂದ ಪಾದದವರೆಗೂ ಭಾಗಿಸಿದರೆ ಆಯಾ ಅಂಗಗಳ ನಕ್ಷತ್ರಗಳ ಫಲವು ಈ ಕೆಳಗೆ ಕಂಡಂತೆ ಹೇಳಲ್ಪಟ್ಟಿದೆ. "यस्मिन् ऋक्षे स्थितो भानुः तदादि त्रीणि मस्तके। मुखे त्रीणि तथा द्वे भे स्कन्धयोरुभयोरुभे। द्वे हस्तयोः पञ्च हृदि नाभावेकं तथा गुदे। तथा जानुयुगे द्वे द्वे पादयोर्जलधिं न्यसेत्। चरणर्क्षेषु यो जातः सोऽल्पायुर्भवति प्रिये। जानुनोर्भ्रमणाशक्तो गुह्ये स्यात्पारदारिकः। नाभौ स्वल्पधनो देवि हृदये स्यान्महाधनः। पाण्योर्जातो भवेच्चौरो भुजयोर्दुःखभाजनम्। स्कन्धयोर्भोगभोगी च मुखे धर्मरतो धनी। मूर्ध्नि राजा भवेद्देवि बालानां जन्मतो वदेत्" इति युद्धजयार्णवः।

| ನಕ್ಷತ್ರಗಳಿರುವ ಅಂಗಗಳು | ನಕ್ಷತ್ರಗಳ ಸಂಖ್ಯೆ | ಫಲ |
|---|---|---|
| ತಲೆ | 3 | ರಾಜನಾಗುವನು |
| ಮುಖ | 3 | ಧರ್ಮಿಷ್ಠ ಮತ್ತು ಧನಿಕನಾಗುವನು |
| ಹೆಗಲುಗಳು | 2 | ಸುಖಿಯಾಗುವನು |
| ತೋಳುಗಳು | 2 | ದುಃಖಿಯಾಗುವನು |
| ಕೈಗಳು | 2 | ಚೋರನಾಗುವನು. |
| ಹೃದಯ | 5 | ಮಹಾಧನಿಕನಾಗುವನು |
| ಹೊಕ್ಕಳು | 1 | ಅಲ್ಪಧನವುಳ್ಳವನು |
| ಗುದ | 1 | ಪರಸ್ತ್ರೀರತನಾಗುವನು |
| ಮಂಡಿಗಳು | 4 | ತಿರುಗಾಡಲು ಅಶಕ್ತನಾಗುವನು |
| ಕಾಲುಗಳು | 4 | ಅಲ್ಪಾಯು |

**ಆಯಾ ಅಂಗಗಳ ನಕ್ಷತ್ರಗಳಲ್ಲಿ ಹುಟ್ಟಿದವರ ಆಯುಃಪ್ರಮಾಣ:**

| | | |
|---|---|---|
| ತಲೆ | 100 | ವರ್ಷಗಳು |
| ಮುಖ | 100 | ,, |
| ಹೆಗಲುಗಳು | 90 | ,, |
| ಹೃದಯ | 85 | ,, |
| ಕೈಗಳು | 70 | ,, |
| ತೋಳುಗಳು | 66 | ,, |
| ಗುದ | 66 | ,, |
| ತೊಡೆಗಳು | 50 | ,, |
| ಕಾಲುಗಳು | ಅಲ್ಪಾಯು | |

"मुखे शीर्षे शतं वर्षं नवतिः स्कन्धयोर्द्वयोः। पञ्चाशीतिः हृदि प्रोक्ता हस्तयोः सप्ततिःक्रमात्। बाह्वोः षट्षष्टिवर्षाणि गुह्ये षट्षष्टिका क्रमात्। पञ्चाशत् जङ्घयोः पादे निर्धनश्चाल्पजीवनः" इति स्वरोदयः।

**जातकर्मन् ಜಾತಕರ್ಮನ್** (वि०) ಶಿಶುವು ಜನಿಸಿದ ಕೂಡಲೆ ತಂದೆಯು ಶಿಶುವಿಗೆ ಮಾಡಬೇಕಾದ ಒಂದು ಸಂಸ್ಕಾರ, ಮನುಷ್ಯನಿಗೆ ನಡೆಯಬೇಕಾದ ಷೋಡಶ (ಹದಿನಾರು) ಸಂಸ್ಕಾರಗಳಲ್ಲೊಂದು. ["कर्मन्" ಪದದಲ್ಲಿ ನೋಡಿ]. जाते कर्तव्यं कर्म। "जन्मनोऽनन्तरं कार्यं जातकर्म यथाविधि। दैवादतीतः कालश्चेत् अतीते सूतके भवेत्"। "स जातकर्मण्यखिले तपस्विना तपोवनादेत्य पुरोधसा कृते" रघु० ३-१८।

**जातनष्ट ಜಾತನಷ್ಟ** (वि०) ಹುಟ್ಟಿ ವಿನಾಶಹೊಂದಿದ, ಹುಟ್ಟಿದ ಕೂಡಲೆ ನಾಶಹೊಂದಿದ.

**जातमात्र ಜಾತಮಾತ್ರ** (वि०) ಆಗತಾನೇ ಹುಟ್ಟಿದ, ಸದ್ಯಃ ಜನಿಸಿದ. जात एव जातमात्रः। "श्रीसंनिधानरमणीयतरोऽश्व उच्चैरुच्चैःश्रवा जलनिधेरिव जातमात्रः" माघ० ५-५७।

**जातरूप ಜಾತರೂಪ** (न०) 1. ಸ್ವರ್ಣ, ಚಿನ್ನ. प्रशस्तं जातम्-प्रशंसायां "रूपप्" (५-३-६६)। "जातरूपेण कल्याणि मणिः संयोगमर्हति" माल० ५-१८। 2. ದತ್ತೂರಿಗಿಡ. (वि०) 3. ರಮಣೀಯವಾದ, ಸುಂದರವಾದ. 4. ಸುವರ್ಣಮಯವಾದ, ಚಿನ್ನದಿಂದ ಮಾಡಲ್ಪಟ್ಟ.

**जातवेदस् ಜಾತವೇದಸ್** (पुं०) 1. ಅಗ್ನಿ, ಬೆಂಕಿ. जातं सद्योजातं विन्दति प्राप्नोति—विद्लृ (लाभे) "असुन्" (उ० ४-१८९)। "ज्वलतस्तव जातवेदसः सततं वैरि-

कृतस्य चेतसि" किरा० २-२४। 2. ಪರಮೇಶ್ವರ. जातानि सर्वाणि कारणत्वेन विन्दन्ति यम्।

**जातवेपथु ಜಾತವೇಪಥು** (वि०) ನಡುಕಹುಟ್ಟಿದ, ನಡುಗುತ್ತಿರುವ. जातो वेपथुर्यस्य।

**जातश्रम ಜಾತಶ್ರಮ** (वि०) ಬಳಲಿದ, ಆಯಾಸಗೊಂಡ. जातः श्रमो यस्य।

**जातस्पृह ಜಾತಸ್ಪೃಹ** (वि०) ಆಸೆಯುಂಟಾಗಿರುವ, ಆಸೆ ಹುಟ್ಟಿರುವ. जाता स्पृहा यस्य।

**जातहारिणी ಜಾತಹಾರಿಣೀ** (स्त्री०) ಹುಟ್ಟಿದ ಕೂಡಲೆ ಶಿಶುಗಳನ್ನು ಅಪಹರಿಸುವ ರಾಕ್ಷಸಿ.

**जातहार्द ಜಾತಹಾರ್ದ** (वि०) ಪ್ರೀತಿಯುಂಟಾಗಿರುವ, ವಿಶ್ವಾಸಹುಟ್ಟಿದ. जातं हार्दं यस्य। "अमर्षशून्येन जनस्य जन्तुना न जातहार्देन च विद्विषादरः" किरा० १-३३।

**जातापत्या ಜಾತಾಪತ್ಯಾ** (स्त्री०) ಮಕ್ಕಳನ್ನು ಹೆತ್ತ ಹೆಂಗಸು. जातानि अपत्यानि यस्याः।

**जाताभिषङ्ग ಜಾತಾಭಿಷಂಗ** (वि०) ಅವಮಾನಗೊಂಡ, ಪರಾಭವವನ್ನು ಹೊಂದಿದ. जातः अभिषङ्गः यस्य। "जाताभिषङ्गो नृपतिर्निषङ्गादुद्धर्तुमैच्छत् प्रसभोद्धृतारिः" रघु० २-३०।

**जातामर्ष ಜಾತಾಮರ್ಷ** (वि०) ಕುಪಿತನಾದ, ಕೋಪಗೊಂಡ. जातोऽमर्षो यस्य।

**जातास्थ ಜಾತಾಸ್ಥ** (वि०) ಶ್ರದ್ಧೆಯುಂಟಾಗಿರುವ, ಕಾರ್ಯದಲ್ಲಿ ವಿಶ್ವಾಸವುಳ್ಳ. जाता आस्था यस्य।

**जाति ಜಾತಿ** (स्त्री०) 1. ಜನ್ಮ, ಉತ್ಪತ್ತಿ, ಹುಟ್ಟುವುದು. जनी (प्रादुर्भावे) अधि० "क्तिन्" (३-३-९४)। "वेदाभ्यासेन सततं शौचेन तपसैव च। अद्रोहेण च भूतानां जातिं स्मरति पौर्विकीम्" मनु० ४-१४८। ಅನವರತವೇದಾಭ್ಯಾಸ ಶೌಚ ತಪಸ್ಸು ಅಹಿಂಸೆ ಇವುಗಳಿಂದ ಮನುಷ್ಯನಿಗೆ ಪೂರ್ವಜನ್ಮಗಳ ಸ್ಮರಣೆಯುಂಟಾಗುವುದು. ಹೀಗೆ ಪೂರ್ವಜನ್ಮಗಳಲ್ಲಿ ಅನುಭವಿಸಿದ ಗರ್ಭವಾಸ ಜನನ ಮರಣ ಮೊದಲಾದ ಸಂಕಷ್ಟಗಳ ಸ್ಮರಣೆಯುಂಟಾಗಿ ಸಂಸಾರದಲ್ಲಿ ವೈರಾಗ್ಯ ಹುಟ್ಟಿ ಯಾವಾಗಲೂ ವೇದಾಭ್ಯಾಸನಿರತನಾಗಿ ಬ್ರಹ್ಮಸಾಕ್ಷಾತ್ಕಾರಹೊಂದಿ ಶಾಶ್ವತವಾದ ಪರಮಾನಂದರೂಪವಾದ ಮೋಕ್ಷಸಾಮ್ರಾಜ್ಯವನ್ನು ಅನುಭವಿಸುವನು. "पौर्विकीं संस्मरन् जातिं ब्रह्मैवाभ्यस्यते पुनः। ब्रह्माभ्यासेन चाजस्रमनन्तं सुखमश्नुते" मनु० ४-१४९। 2. ಸಾಮಾನ್ಯ, ಸಮಾನಾಕಾರವಾದ ಬುದ್ಧಿ (ಜ್ಞಾನ) ಯನ್ನು ಉಂಟುಮಾಡುವ ವ್ಯಕ್ತಿಗತವಾದ ಒಂದು ಧರ್ಮ. समानप्रसवात्मिका जातिः इति गौतमः। समानः समानाकारकः प्रसवो बुद्धिजननमात्मा स्वरूपं यस्याः। 3. ಮನುಷ್ಯತ್ವ ಗೋತ್ವ ಮೊದಲಾದ ಜಾತಿ.

**ವೈಯಾಕರಣರ ಜಾತಿಲಕ್ಷಣ:**

(1) "आकृतिग्रहणा जातिः" अनुगतसंस्थानव्यङ्ग्येत्यर्थः। गृह्यतेऽनेनेति ग्रहणम्। आकृतिः ग्रहणं यस्याः। ಮನುಷ್ಯ ಗೋವು ಘಟ ಮೊದಲಾದ ಆಯಾವ್ಯಕ್ತಿಗಳಲ್ಲಿ ಏಕರೂಪವಾದ ಆಯಾ ಆಕಾರಗಳು ತೋರಿಬರುವುದರಿಂದ ಮನುಷ್ಯತ್ವ ಗೋತ್ವ ಘಟತ್ವಾದಿಗಳು ಜಾತಿಗಳು.

(2) "लिङ्गानां च न सर्वभाक्। सकृदाख्यातनिर्ग्राह्या"। असर्वलिङ्गत्वे सति एकस्यां व्यक्तौ कथनात् व्यक्त्यन्तरे कथनं विनापि जातिः सुग्रहा इत्यर्थः। ಬ್ರಾಹ್ಮಣತ್ವ ಕ್ಷತ್ರಿಯತ್ವಾದಿ ಜಾತಿಗಳು ಆಕಾರದಿಂದ ತಿಳಿಯಲು ಸಾಧ್ಯವಿಲ್ಲವಾದುದರಿಂದ ಇದು ಎರಡನೆಯ ಜಾತಿಲಕ್ಷಣ. ಲಿಂಗತ್ರಯದಲ್ಲಿಯೂ ಪ್ರಯೋಗವಿಲ್ಲದ ಒಬ್ಬ ವ್ಯಕ್ತಿಯನ್ನು ಒಂದು ಸಲ ಹೇಳಿದ ಮಾತ್ರದಿಂದಲೇ ಅಂತಹ ಎಲ್ಲಾ ವ್ಯಕ್ತಿಗಳೂ ಚೆನ್ನಾಗಿ ತಿಳಿಯಲ್ಪಡುವವರಾದುದರಿಂದ ಬ್ರಾಹ್ಮಣತ್ವ ಕ್ಷತ್ರಿಯತ್ವ ಮೊದಲಾದುವು ಜಾತಿಗಳು.

(3) "गोत्रं च चरणैः सह"। अपत्यप्रत्ययान्तः शाखाध्येतृवाची च जातिकार्यं लभते इत्यर्थः। ಸಮಾನವಾದ ಆಕಾರದಿಂದ ತಿಳಿಯಲು ಸಾಧ್ಯವಿಲ್ಲದ ಮತ್ತು ಲಿಂಗತ್ರಯದಲ್ಲಿಯೂ ಪ್ರಯೋಗವಿರುವ ಅಪತ್ಯಪ್ರತ್ಯಯಾಂತವಾದ ಮತ್ತು ಶಾಖಾಧ್ಯೇತೃವಾಚಕವಾದ ಶಬ್ದಗಳೂ ಜಾತಿಗಳು. ಈ ಮೇಲಿನ ಮೂರು ಲಕ್ಷಣಗಳಿರುವ ಶಬ್ದಗಳಿಗೆ ಜಾತಿಪ್ರಯುಕ್ತವಾದ ಕಾರ್ಯವು ಬರುವುದು.

उदा.: ಕ್ರಮವಾಗಿ ಮೊದಲನೆಯ ಲಕ್ಷಣಕ್ಕೆ तटी। ಎರಡನೆಯ ಲಕ್ಷಣಕ್ಕೆ वृषली। ಮೂರನೆಯ ಲಕ್ಷಣಕ್ಕೆ औपगवी। कठी।

**जातिकोश ಜಾತಿಕೋಶ** (न०) 1. ಜಾ (ಯಿ)ಕಾಯಿ. जातेः कोशमिव। ಇದು ಸಂಬಾರಕ್ಕೂ ಔಷಧಕ್ಕೂ ಉಪಯೋಗಿಸಲ್ಪಡುವುದು. (स्त्री०) **-कोशी -ಕೋಶೀ.** 2. ಜಾ (ಯಿ) ಪತ್ರೆ.

**जातिधर्म ಜಾತಿಧರ್ಮ** (पुं०) ಬ್ರಾಹ್ಮಣಾದಿ ಜಾತಿಗಳಿಗೆ ವಿಹಿತವಾದ ಧರ್ಮ. [ವಿವರಕ್ಕೆ "धर्म" ಪದದಲ್ಲಿ ನೋಡಿ].

**जातिध्वंस ಜಾತಿಧ್ವಂಸ** (ಪುं०) ಜಾತಿಯ ನಾಶ, ಜಾತಿಯು ಅಳಿದುಹೋಗುವುದು.

**जातिपरिवृत्ति ಜಾತಿಪರಿವೃತ್ತಿ** (स्त्री०) ಜಾತಿಯ ಬದಲಾವಣೆ, ಮತಾಂತರಹೊಂದುವುದು. जातेः परिवृत्तिः।

**जातिब्राह्मण ಜಾತಿಬ್ರಾಹ್ಮಣ** (ಪುं०) ಜನ್ಮಮಾತ್ರದಿಂದ ಬ್ರಾಹ್ಮಣನಾಗಿರುವವನು, ವೇದಾಧ್ಯಯನ ಮಾಡದಿರುವ ಬ್ರಾಹ್ಮಣ. जात्या ब्राह्मणः। ಬ್ರಾಹ್ಮಣ್ಯಕ್ಕೆ ಕಾರಣವಾದ ತಪಸ್ಸು, ವೇದಾಧ್ಯಯನ ಜನ್ಮ ಈ ಮೂರೂ ಇಲ್ಲದವನು ಜಾತಿ ಬ್ರಾಹ್ಮಣನು. "तपः श्रुतं च योनिश्च त्रयं ब्राह्मण्यकारणम्। तपःश्रुताभ्यां यो हीनः जातिब्राह्मण एव सः।

**जातिभ्रंश ಜಾತಿಭ್ರಂಶ** (ಪುं०) ಜಾತಿಯನಾಶ, ಜಾತಿಯು ಅಳಿಯುವುದು. जातेः भ्रंशः। "ब्राह्मणस्य रुजः कृत्वा घ्रातिरघ्रेयमद्ययोः। जैह्म्यं च मैथुनं पुंसि जातिभ्रंशकरं स्मृतम्" मनु० ११-६७।

**जातिभ्रष्ट ಜಾತಿಭ್ರಷ್ಟ** (वि०) ಜಾತಿಯಿಂದ ಚ್ಯುತನಾದವನು, ಜಾತಿಯನ್ನು ತ್ಯಜಿಸಿದವನು. जात्या भ्रष्टः।

**जातिमत् ಜಾತಿಮತ್** (वि०) ಉತ್ತಮಜನ್ಮವುಳ್ಳ, ಶ್ರೇಷ್ಠವಾದ ಕುಲದಲ್ಲಿ ಹುಟ್ಟಿದ. प्रशस्ता जातिर्यस्य। स्त्रियाम् "ङीप्" (४-१-६)। **–मती – ಮತೀ.**

**जातिमह ಜಾತಿಮಹ** (ಪುं०) ಜನ್ಮದಿನೋತ್ಸವ, ಹುಟ್ಟಿದ ಹಬ್ಬ.

**जातिमात्र ಜಾತಿಮಾತ್ರ** (न०) ಹುಟ್ಟು ಮಾತ್ರ, ವಿದ್ಯೆಯಿಲ್ಲದ ಜನ್ಮಮಾತ್ರ, ಜಾತಿಯ ಸಂಪ್ರದಾಯವಿಲ್ಲದ ಜನ್ಮ. जातिरेव। "जातिमात्रेण किं कश्चिद्धन्यते पूज्यते क्वचित्" हितो० १-५८।

**जातिलक्षण ಜಾತಿಲಕ್ಷಣ** (न०) ಜಾತಿಯ ಗುರುತು.

**जातिवाचक ಜಾತಿವಾಚಕ** (वि०) ಜಾತಿಯನ್ನು ಹೇಳುವ ಶಬ್ದ. जातिरुच्यतेऽनेन – वच (परिभाषणे) "ण्वुल्" (३-१-१३३)।

**जातिवैर ಜಾತಿವೈರ** (न०) ಸಹಜವಾದ ದ್ವೇಷ, ಹುಟ್ಟು ವೈರ. जात्या वैरम्।

**जातिवैलक्षण्य ಜಾತಿವೈಲಕ್ಷಣ್ಯ** (न०) ಜಾತಿಯಲ್ಲಿ ಸಮಾನತೆಯಿಲ್ಲದಿರುವುದು, ಜಾತಿಯ ಸಂಪ್ರದಾಯದಲ್ಲಿ ಏಕತೆಯಿಲ್ಲದಿರುವುದು. जातेः वैलक्षण्यम् विसंवादः।

**जातिशब्द ಜಾತಿಶಬ್ದ** (ಪುं०) ಜಾತಿಯನ್ನು ಹೇಳುವ ಶಬ್ದ.

**जातिसार ಜಾತಿಸಾರ** (ಪುं०) ಜಾ (ಯಿ) ಕಾಯಿ.

**जातिस्मर ಜಾತಿಸ್ಮರ** (वि०) ಜನ್ಮಾಂತರ ಸ್ಮರಣೆಯುಳ್ಳ, ಪೂರ್ವಜನ್ಮವನ್ನು ಸ್ಮರಿಸುವ. जातिं पूर्वजन्मवृत्तान्तं स्मरति – स्मृ (चिन्तायाम्) "अच्" (३-१-१३४)। "शुभेन कर्मणा तेन जाता जातिस्मरा मृगाः। त्रासानुत्पाद्य संविग्ना रम्ये कालञ्जरे गिरौ" हरिवं०।

**जाती ಜಾತೀ** (स्त्री०) 1. ಜಾಜಿಗಿಡ. जनी (प्रादुर्भावे) "क्तिच्" (३-३-१७४)। वा "ङीष्" (ग० ४-१-४५)। 2. ಜಾಜಿಹೂವು. "पुष्पे जातीप्रभृतयः स्वलिङ्गाः" अम०।

**जातीकोश ಜಾತೀಕೋಶ** (ಪುं०) **–फल – ಫಲ** (न०) ಜಾ (ಯಿ) ಕಾಯಿ. "जातीफलागुरुवचापिप्पल्यभ्रन्दनं च भृगोः" बृहत्सं० १६-३०।

**जातीय ಜಾತೀಯ** (वि०) ಜಾತಿಯಲ್ಲಿ ಹುಟ್ಟಿದ, ಯಾವುದಾದರೊಂದು ಪಂಗಡದಲ್ಲಿ ಹುಟ್ಟಿದ. जातौ भवः "छः" (५-४-९)। ಸಾಮಾನ್ಯವಾಗಿ ಇದು ಸಮಾಸಾಂತ್ಯದಲ್ಲಿ ಬರುವುದು. सजातीयः, विजातीयः, ब्राह्मणजातीयः, महाजातीयः ಇತ್ಯಾದಿ.

**जातीयक ಜಾತೀಯಕ** (वि०) ಒಂದು ಜಾತಿಯ, ಒಂದು ವಿಧದ, ಒಂದು ಬಗೆಯ.

**जातु ಜಾತು** (अव्य०) 1. ಒಂದುವೇಳೆ, ಯಾವುದಾದರೊಂದು ಸಮಯದಲ್ಲಿ. जनी (प्रादुर्भावे) "तुन्" बाहु०। पृषो०। "न जातु वैनायकमेकमुद्धृतं बिषाणमद्यापि पुनः प्ररोहति" माघ० १-६०। "गौरवाद्यदपि जातु मन्त्रिणां दर्शनं प्रकृतिकाङ्क्षितं ददौ" रघु० १९-७। 2. ಯಾವಾಗಲೂ, ಯಾವ ಸಮಯದಲ್ಲೂ. "तत्रानिशं निषण्णास्ते जानन्ते जातु न श्रमम्" माघ० २-७७। 3. ಗರ್ಹಣ, ನಿಂದೆ, ಬೈಗಳು. "जातु तत्रभवान् वृषलं याजयति"।

**जातुक ಜಾತುಕ** (ಪುं०) 1. ಹಿಂಗಿನಮರ, ಹಿಂಗನ್ನು ತೆಗೆಯುವ ಗಿಡ. (न०) 2. ಹಿಂಗು.

**जातुधान ಜಾತುಧಾನ** (ಪುं०) ರಾಕ್ಷಸ. "यातुधान" ಪದದ ರೂಪಾಂತರ. ಉತ್ತರದೇಶದವರ ಉಚ್ಚಾರಣೆ.

**जातुष ಜಾತುಷ** (वि०) ಅರಗಿನಿಂದ ಮಾಡಲ್ಪಟ್ಟ. जतुनो विकारः "अण्" षुगागमश्च (४-३-१३८)।

**जातेष्टि ಜಾತೇಷ್ಟಿ** (स्त्री०) ಶಿಶುವು ಹುಟ್ಟಿದ ಕೂಡಲೆ ಮಾಡುವ ಒಂದು ಯಾಗ. जाते पुत्रजनने इष्टिः।

**जातोक्ष ಜಾತೋಕ್ಷ** (ಪುं०) ಪ್ರಾಯದ ಎತ್ತು, (ಹೋರಿ), जातः प्राप्तदम्यावस्थः उक्षा "टच्" (५-४-७७)।

**जात्य ಜಾತ್ಯ** (वि०) 1. ಒಳ್ಳೆಯ ಜಾತಿಯಲ್ಲಿ ಹುಟ್ಟಿದ, ಸತ್ಕುಲಪ್ರಸೂತ. 2. ಶ್ರೇಷ್ಠ, ಉತ್ತಮ. जातौ भवः "यत्" (४-३-५४)। "कर्मोदारं कीर्तये कर्तुकामान् किं वा जात्याः स्वामिनो ह्रेपयन्ति" माघ० १८-२३। "जात्यस्तेनाभिजातेन शूरः शौर्यवता कुशः" रघु० १७-४।

**जात्यन्ध ಜಾತ್ಯಂಧ** (पुं०) ಹುಟ್ಟುಕುರುಡ. जातौ जननकाल एव अन्धः। "अनंशौ क्लीबपतितौ जात्यन्धबधिरौ तथा" मनु० ९-२०१।

**जान ಜಾನ** (पुं०) 1. ಜನ್ಮ, ಉತ್ಪತ್ತಿ, ಹುಟ್ಟು. जनी (प्रादुर्भावे) "घञ्" (३-३-१८)। (न०) 2. ಜನರ ಸಮೂಹ. जनानां समूहः "अण्" (४-२-३७)। "आजानपावनक्षीरां वृषानन्दविधायिनीम्। श्रुतिप्रणयिनीं सोऽयमापगामाप गामिव" चं० रा०। (वि०)3. ಜನರ ಸಂಬಂಧವಾದ. जनस्येदम् "अण्" (४-३-१२०)।

**जानक ಜಾನಕ** (वि०) 1. ತಂದೆಯ ಸಂಬಂಧವಾದ. जनकस्य पितुः इदम् "अण्" (४-३-१२०)। 2. ಜನಕ ಮಹಾರಾಜನ ಸಂಬಂಧವಾದ. जनकस्य तन्नामराज्ञः इदम् "अण्" (४-३-१२०)। (स्त्री०) **-की -ಕೀ.** 3. ಸೀತಾದೇವಿ, ಶ್ರೀರಾಮನ ಪತ್ನಿ, ಜನಕಮಹಾರಾಜನ ಪುತ್ರಿ. जनकस्यापत्यं स्त्री "अण्" (४-१-९२)। "ङीप्" (४-१-१५)।

**जानकीनाथ ಜಾನಕೀನಾಥ, -पति -ಪತಿ, -प्रिय -ಪ್ರಿಯ, -वल्लभ -ವಲ್ಲಭ** (पुं०) ಸೀತಾದೇವಿಯ ಪತಿ, ಜಾನಕಿಯ ಇನಿಯ. जानक्याः नाथः पतिः प्रियः वल्लभो वा।

**जानकीपरिणय ಜಾನಕೀಪರಿಣಯ** (पुं०) ಸೀತಾ ಕಲ್ಯಾಣದ ಒಂದು ನಾಟಕ.

**जानत् ಜಾನತ್** (वि०) ತಿಳಿಯುವ, ಅರಿಯುವ. ज्ञा (अवबोधने) "शतृ" (३-२-१२४)। स्त्रियाम् "ङीप्" (४-१-६)। **जानती ಜಾನತೀ.** "निजमिति रतिबन्धोर्जानतीमुत्तरीयं परिहसति सखी स्त्रीमाददानां दिनादौ" माघ० ११-५२।

**जानपद ಜಾನಪದ** (पुं०) 1. ದೇಶದ ನಿವಾಸಿ, ದೇಶದಲ್ಲಿ ವಾಸಮಾಡುವವನು, ದೇಶದಲ್ಲಿ ಹುಟ್ಟಿ ಬೆಳೆದವನು. जनपदे भवः "अञ्" (४-१-८६)। "देयं चौरहृतं द्रव्यं राज्ञा जानपदाय तु। अददद्धि समाप्नोति किल्बिषं यस्य तस्य तत्" याज्ञ० २-३६। 2. ಜನ, ಮನುಷ್ಯ. जानेन उत्पत्त्या पद्यते—पद (गतौ) "अप्"। 3. ದೇಶ. जनपद एव स्वार्थे "अण्"। "भवेज्जनपदो जानपदोऽपि जनदेशयोः" मेदि०। 4. ಕರ, ತೆರಿಗೆ. (वि०) 5. ದೇಶದಲ್ಲಿರುವ. 6. ದೇಶಕ್ಕೆ ಸಂಬಂಧಿಸಿದ. "जातिजानपदान् धर्मान् श्रेणीधर्मांश्च धर्मवित्" मनु० ८-४१। 7. ದೇಶದಿಂದ ಬಂದಿರುವ. जनपदेभ्यः आगतः "अण्" (४-३-७४)। "नीवारपाकादि कडङ्गरीयैरामृश्यते जानपदैर्न कच्चित्" रघु० ५-९। (स्त्री०) **-पदी -ಪದೀ.** 8. ದೇಶದವೃತ್ತಿ, ದೇಶದ ಜೀವನ. जनपदे भवा "ङीष्" (४-१-४२)। "जानपदी वृत्तिश्चेत्" सि० कौ०। 9. ಶರದ್ವಂತ ಋಷಿಯ ತಪೋಭಂಗಕ್ಕಾಗಿ ಇಂದ್ರನಿಂದ ಕಳುಹಲ್ಪಟ್ಟ ಒಬ್ಬ ಅಪ್ಸರಸಿ.

**जानपदिक ಜಾನಪದಿಕ** (वि०) ಜನಪದಕ್ಕೆ ಸಂಬಂಧಿಸಿದ, ದೇಶಸಂಬಂಧವಾದ.

**जानवादिक ಜಾನವಾದಿಕ** (वि०) ಜನರ ಮಾತನ್ನು ಚೆನ್ನಾಗಿ ಅರಿತಿರುವ, ಲೋಕವಾದವನ್ನು ತಿಳಿದು ಹೇಳಲು ಜಾಣನಾದ. जनवादे साधुः "ठक्" (४-४-१०२।

**जानि ಜಾನಿ** (स्त्री०) ಪತ್ನಿ. जाया ಶಬ್ದಕ್ಕೆ ಬಹುವ್ರೀಹಿ ಸಮಾಸಾಂತ್ಯದಲ್ಲಿ "निङ्" (५-४-१३४) ಆದೇಶ ಬಂದು ಈ ರೂಪವಾಗುವುದು. "अनन्यजानेः सैवासीद्यस्माज्जाया हिरण्मयी" रघु० १५-६१।

**जानु ಜಾನು** (न०) ಮಂಡಿ, ತೊಡೆ ಮತ್ತು ಮೊಳಕಾಲುಗಳ ಸಂಧಿ. जायते—जनी (प्रादुर्भावे) "ञुण्" (उ० १-३)। "प्रीत्या नियुक्तान् लिहती स्तनन्धयान् निगृह्य पारीमुभयेन जानुनोः" माघ० १२-४०।

**जानुक ಜಾನುಕ** (न०)1. ಮಂಡಿ. जानु स्वार्थे "कन्" (५-४-२९)। "जानुकपिच्छे चतुरङ्गुले च पादौ च तत्तुल्यौ" बृहत्सं० ५८-१७। (वि०)2. ಮಂಡಿಯೂರಿ ನಿಂತಿರುವವನು, ಮಂಡಿಗಳ ಮೇಲೆ ಭಾರಬಿಟ್ಟು ನಿಂತಿರುವವನು. "जानुभ्यां जानुकस्तिष्ठन् अष्टग्रासो मुनिव्रती" वैज०।

**जानुजङ्घ ಜಾನುಜಂಘ** (पुं०) ಒಬ್ಬ ರಾಜ.

**जानुदघ्न ಜಾನುದಘ್ನ** (वि०) ಮಂಡಿಯ ಪ್ರಮಾಣದ, ಮಂಡಿಯವರೆಗಿನ ಆಳತೆಯುಳ್ಳ. जानु प्रमाणमस्य "दघ्नच्" (५-२-३७)।

**जानुद्वयस ಜಾನುದ್ವಯಸ** (वि०) "जानुदघ्न" ಪದದ ಅರ್ಥ. जानु प्रमाणमस्य "द्वयसच्" (५-२-३७)। "मात्रच्" (५-२-३७)। **-मात्रम् -ಮಾತ್ರಮ್.**

**जानुप्रहृतिक ಜಾನುಪ್ರಹೃತಿಕ** (वि०) ಮಂಡಿಯ ಹೊಡೆತದಿಂದ ಉಂಟಾದ. जानुप्रहृतेन निर्वृत्तम् "ठक्" (४-४-१९)।

**जानुविजानु ಜಾನುವಿಜಾನು** (न०) ಖಡ್ಗಯುದ್ಧದ ಒಂದು ಭೇದ. ಖಡ್ಗಯುದ್ಧವು ಮೂವತ್ತೆರಡು ಬಗೆ. [ವಿವರಕ್ಕೆ ಹರಿವಂಶದಲ್ಲಿ ನೋಡಿ].

**जाबाल ಜಾಬಾಲ** (पुं०) 1. ಸತ್ಯಕಾಮನೆಂಬ ಒಬ್ಬ ಋಷಿ. जबालाया अयम् "अण्" (४-३-१२०)। 2. ಕುರುಬ, ಕುರಿಸಾಕಿ ಜೀವಿಸುವವನು. जवमलति—अल (भूषणादौ) "अण्" (३-२-१)। वबयोरभेदः। जबालोऽजः। तस्यायम्। "जाबालः स्यादजाजीवः" अम०।

**जाबालि ಜಾಬಾಲಿ** (पुं०) ಜಾಬಾಲಿ ಋಷಿ. जबालस्यापत्यं "इञ्" (४-१-९५)। [ಈ ಋಷಿಯು ದಶರಥ ಮಹಾರಾಜನ ಆಸ್ಥಾನದಲ್ಲಿ ಎಂಟು ಮಂದಿ ಪ್ರಧಾನ ಋತ್ವಿಕ್ಕುಗಳಲ್ಲೊಬ್ಬ. ಭರತನು ಶ್ರೀರಾಮನನ್ನು ಪುನಃ ಅಯೋಧ್ಯೆಗೆ ಕರೆತರುವ ಉದ್ದೇಶದಿಂದ ಚಿತ್ರಕೂಟಕ್ಕೆ ಹೋಗಿ ಅನೇಕ ವಿಧವಾಗಿ ಪ್ರಾರ್ಥಿಸಿದರೂ ಶ್ರೀರಾಮನು ಹದಿನಾಲ್ಕು ವರ್ಷಗಳಕಾಲ ಅರಣ್ಯದಲ್ಲಿದ್ದು ಪಿತೃವಾಕ್ಯ ಪರಿಪಾಲನ ಮಾಡಿದ ಹೊರತು ಊರಿಗೆ ಹಿಂತಿರುಗುವು ದಿಲ್ಲವೆಂದು ಹೇಳಿದಾಗ ಈ ಜಾಬಲಿ ಋಷಿಯೂ ದೃಢ ವಾದ ಅಭಿನಿವೇಶದಿಂದ ನಾನಾ ರೀತಿಯಲ್ಲಿ ಶ್ರೀರಾಮ ನನ್ನು ಹಿಂತಿರುಗಿಸಲು ಯತ್ನಿಸಿ ವಿಫಲನಾದನು.]

**जामदग्न्य ಜಾಮದಗ್ನ್ಯ** (पुं०) ಜಮದಗ್ನಿ ಋಷಿಯ ಮಗ, ಪರಶುರಾಮ. जमदग्नेरपत्यम् "यञ्" (४-१-१०५)। "त्रिःसप्तकृत्वो जगतीपतीनां हन्ता गुरुर्यस्य स जामदग्न्यः" किरा० ३-१८। [ವಿವರಕ್ಕೆ "परशुराम" ಪದದಲ್ಲಿ ನೋಡಿ].

**जामातृ ಜಾಮಾತೃ** (पुं०) ಅಳಿಯ, ಮಗಳ ಗಂಡ. जायां मिमीते—माङ् (माने) "तृच्" (उ० २-९५)। निपा०। "अवाप्य जामातरमादिपूरुषं जगत्प्रतीक्ष्यत्वमवाप जाम्बवान्" याद० १४-६०।

**जामि ಜಾಮಿ** (स्त्री०) 1. ಭಗಿನಿ, ತಂಗಿ, ಸಹೋದರಿ. जमु (अदने) "इण्" बाहु०। "जामिहरणजनितानुशयः समुदाचचार निज एव रुक्मिणः" माघ० १५-५३। 2. ಮಾನವತಿಯಾದ ಹೆಂಗಸು, ಗೌರವದ ಹೆಂಗಸು. "जामिः स्वसृकुलस्त्रियोः" अम०। 3. ಮಗಳು. 4. ಸಮೀಪ ಬಂಧುವಾದ ಹೆಂಗಸು. 5. ಸೊಸೆ. 6. ಪತ್ನಿ. "जामयो यत्र शोचन्ति विनश्यन्त्याशु तत्कुलम्। न शोचन्ति तु यत्रैता वर्धते तद्धि सर्वदा" मनु० ३-५७। जामयः भगिनीपत्नीदुहितृस्नुषाद्याः इति कुल्लूकभट्टः।

**जामित्र ಜಾಮಿತ್ರ** (न०) ಲಗ್ನದಿಂದ ಏಳನೆಯ ಸ್ಥಾನ. "सप्तमं द्यूनमस्तं च द्यूतं च मदनः स्मरः। कामो विवाहो जामित्रं भार्येति विनिर्दिशितम्" मुहू० दी०।

**जामित्रगुण ಜಾಮಿತ್ರಗುಣ** (पुं०) ಲಗ್ನದಿಂದ ಸಪ್ತಮ ಸ್ಥಾನದ ಶುದ್ಧಿ, ಸಪ್ತಮದಲ್ಲಿ ಯಾವ ಗ್ರಹವೂ ಇಲ್ಲದಿರುವುದು. "विवाहे स्युः सर्वे मदनसदने नैव शुभदाः"। "अथौषधीनामधिपस्य वृद्धौ तिथौ च जामित्रगुणान्वितायाम्" कुमा० ७-१।

**जामेय ಜಾಮೇಯ** (पुं०) ಸೋದರಳಿಯ, ಸಹೋದರಿಯ ಮಗ. जामि "ढक्" (४-१-१२०)।

**जाम्बव ಜಾಂಬವ** (न०) ಜಂಬೂಫಲ, ನೇರಿಳೆಹಣ್ಣು. जम्ब्वाः फलम् "अण्" (४-३-१६५)।

**जाम्बवत् ಜಾಂಬವತ್** (पुं०) ಜಾಂಬವಂತ, ಋಕ್ಷರಾಜ, ಕರಡಿಗಳ ರಾಜ. (स्त्री०) **—वती — ವತೀ.** ಜಾಂಬವಂತನ ಮಗಳಾದ ಜಾಂಬವತಿ, ಶ್ರೀಕೃಷ್ಣನ ಪತ್ನಿ. "न जाम्बवन्तं समरे कम्पयेदरिवाहिनी" रामा०। "तमपूर्वं नरं दृष्ट्वा धात्री चुक्रोश भीतवत्। तच्छ्रुत्वाभ्यद्रवत् क्रुद्धो जाम्बवान् बलिनां वरः"। "इत्युक्तः स्वां दुहितरं कन्यां जाम्बवतीं मुदा। अर्हणार्थं स मणिना कृष्णायोपजहार ह" भाग० १०-५६-२१, ३२। "जरानिरुद्धोऽपि जवेन जाम्बवान्" याद० १४-७। "जिताहितो जाम्बवतीनिषेवितः" याद० १४-६६।

**जाम्बूनद ಜಾಂಬೂನದ** (पुं०) 1. ದತ್ತೂರಿಗಿಡ. (न०) 2. ಸ್ವರ್ಣ, ಚಿನ್ನ. जम्बूनद्यां भवम् "अण्" (४-३-५३)। 3. ಸ್ವರ್ಣಾಭರಣ, ಚಿನ್ನದ ಒಡವೆ. "दधद्भिरभितस्तटी विकचवारिजाम्बू नदैर्विनोदितदिनक्लमाः कृतरुचश्च जाम्बूनदैः" माघ० ४-६६।

**जाया ಜಾಯಾ** (स्त्री०) 1. ಪತ್ನಿ, ಹೆಂಡತಿ. जायतेऽस्याम् —जनी (प्रादुर्भावे) "यक्" (उ० ४-११०)। ಪತ್ನಿಯ ಗರ್ಭವನ್ನು ಪತಿಯು ಪ್ರವೇಶಿಸಿ ಅವಳಲ್ಲಿ ತಾನು ಪುತ್ರ ರೂಪದಿಂದ ಹುಟ್ಟುವುದರಿಂದ ಈ ಹೆಸರು. "पतिर्भार्यां संप्रविश्य गर्भो भूत्वेह जायते। जायायास्तद्धि जायात्वं यदस्यां जायते पुनः" मनु० ९-८। "अथ प्रजानामधिपः प्रभाते जायाप्रतिग्राहितगन्धमाल्याम्" रघु० २-१। 2. ಕಳತ್ರಸ್ಥಾನ, ಲಗ್ನದಿಂದ ಏಳನೆಯ ಸ್ಥಾನ.

**जायाघ्न ಜಾಯಾಘ್ನ** (पुं०) 1. ಪತ್ನಿಯ ಮರಣಸೂಚಕವಾದ ಲಕ್ಷಣವುಳ್ಳ ಪುರುಷ. जायां हन्ति – हन (हिंसागत्योः) "टक्" (३-२-५२)। जायाघ्नो ना। 2. ಮೈಯಲ್ಲಿ ಕಾಣುವ ಹುಟ್ಟುಮಚ್ಚೆ, ಸಂಗಾತಿ. (वि०) 3. ಹೆಂಡತಿಯನ್ನು ಕೊಲ್ಲುವ.

**जायाजीव ಜಾಯಾಜೀವ** (पुं०) ಪತ್ನಿಯ ಸಂಪಾದನೆಯಿಂದ ಜೀವಿಸುವ ನಟ, ಹೆಂಡತಿಯ ವೃತ್ತಿಯನ್ನು ಅವಲಂಬಿಸಿರುವ ನಟ. जायया तन्नर्तनवृत्त्या जीवति– जीव (प्राणधारणे) "कः" (३-१-१३५)। ಪತ್ನಿಯ ಸಂಗೀತ ನರ್ತನ ಮೊದಲಾದುವುಗಳಿಂದ ಬಂದ ಸಂಪಾದನೆಯಿಂದ ಜೀವಿಸುವುದರಿಂದ ಈ ಹೆಸರು.

**जायानुजीविन् ಜಾಯಾನುಜೀವಿನ್** (पुं०) 1. ನಟ. 2. ಬಕಪಕ್ಷಿ. जायया अनुजीवति–अनु+जीव (प्राणधारणे) "णिनिः" (३-१-१३४)। "जायानुजीवी पुंसि स्यान्नटे च बकपक्षिणि" मेदि०। 3. ದರಿದ್ರ, ಬಡವ.

**जायापती ಜಾಯಾಪತೀ** (पुं० द्वि० व०) ದಂಪತಿಗಳು, ಪತಿ ಪತ್ನಿಯರು, ಗಂಡ ಹೆಂಡತಿಯರು. जाया च पतिश्च। "उभौ विरोधक्रियया विभिन्नौ जायापती सानुशयाविवास्ताम्" रघु० १६-४५।

**जायु ಜಾಯು** (पुं०) ಔಷಧ. जयति रोगान्–जि (जये) "उण्" (उ० १-१)।

**जार ಜಾರ** (पुं०) 1. ಉಪಪತಿ, ಮಿಂಡ, ವ್ಯಭಿಚಾರಿ. जरयति नाशयति कुलम्–जॄ (वयोहानौ) + णिच् "घञ्" (वा० ३-३-२०)। "उभौ तौ नार्हतो भागं जारजातककामजौ" मनु० ९-१४३। (न०) 2. ಕೆಂದಾವರೆ. "अथ लोहिते। अस्मिन् कोकनदं जारम्" वैज०।

**जारक ಜಾರಕ** (वि०) ಜೀರ್ಣಮಾಡುವ, ಮುಪ್ಪನ್ನು ಉಂಟುಮಾಡುವ.

**जारज ಜಾರಜ** (पुं०) ಉಪಪತಿಯಿಂದ ಹುಟ್ಟಿದವನು. जारात् जायते – जनी (प्रादुर्भावे) "डः" (३-२-९८)।

**जारजन्मन् ಜಾರಜನ್ಮನ್** (पुं०) ಉಪಪತಿಯಿಂದ ಹುಟ್ಟಿದವನು. जारात् जन्म यस्य।

**जारजात ಜಾರಜಾತ** (पुं०) ಉಪಪತಿಯಿಂದ ಹುಟ್ಟಿದವನು. जारात् जातः।

**जारजातक ಜಾರಜಾತಕ** (पुं०) ಉಪಪತಿಯಿಂದ ಹುಟ್ಟಿದವನು. "उभौ तौ नार्हतो भागं जारजातककामजौ" मनु० ९-१४३।

**जारजयोग ಜಾರಜಯೋಗ** (पुं०) ಉಪಪತಿಯಿಂದ ಹುಟ್ಟಿದವನೆಂದು ತಿಳಿಸುವ ಗ್ರಹಗಳ ಯೋಗ. जारजस्य सूचको योगः। "न लग्नमिन्दुश्च गुरुर्निरीक्षते न वा शशाङ्कं रविणा समायुतम्। स पापकोऽर्केण युतोऽथवा शशी परेण जातं प्रवदन्ति निश्चयात्"।

**जारण ಜಾರಣ** (न०) 1. ಜೀರ್ಣಮಾಡುವ ವಸ್ತು, ಅರಗಿಸುವ ಪದಾರ್ಥ. (वि०) 2. ಶೈಥಿಲ್ಯವುಂಟುಮಾಡುವ, ಮುಪ್ಪನ್ನು ಉಂಟುಮಾಡುವ. जीर्यतेऽनेन–जॄ (वयोहानौ) + णिच् करणे "ल्युट्" (३-३-११७)। जॄ+णिच् कर्त० "ल्युः" वा (३-१-१३४)। 3. ಸಂಬಾರ.

**जारतिनेय ಜಾರತಿನೇಯ** (पुं०) 1. ಮುದುಕಿಯ ಮಗ. जरत्याः अपत्यम् "ढक्" (४-१-१२०)। "इनङ्" (४-१-१२६)। 2. ಜರತಿಯೆಂಬುವವನ ಮಗ. जरतिनोऽपत्यम् "ढक्" (४-१-१२३)।

**जारभर ಜಾರಭರ** (वि०) ಜಾರನನ್ನು ಪೋಷಿಸುವವನು, ವ್ಯಭಿಚಾರಿಯನ್ನು ಕಾಪಾಡುವವನು. जारं बिभर्ति – डुभृञ् (धारणपोषणयोः) "अच्" (३-१-१३४)।

**जारिणी ಜಾರಿಣೀ** (स्त्री०) ಉಪಪತ್ನಿ, ವ್ಯಭಿಚಾರಿಣಿ, ಕಾದರಗಿತ್ತಿ. जारोऽस्या अस्ति "इनिः" (५-२-११५)। "ङीप्" (४-१-५)।

**जारित ಜಾರಿತ** (वि०) 1. ಶೋಧಿಸಲ್ಪಟ್ಟ. 2. ಪುಟಹಾಕಿ ಭಸ್ಮಮಾಡಲ್ಪಟ್ಟ (ಔಷಧ).

**जारु ಜಾರು** (पुं०) ಗರ್ಭಾಶಯ, ಹೊಟ್ಟೆಯಲ್ಲಿ ಗರ್ಭವು ನಿಲ್ಲುವ ಸ್ಥಳ. जॄ (वयोहानौ) "उण्" (उ० १-१)।

**जारुधि ಜಾರುಧಿ** (पुं०) ಒಂದು ಪರ್ವತ. "..... निषधशिनीवासकपिलशङ्खवैदूर्यजारुधिहंसर्षभनागकालञ्जरनारदादयो विंशतिगिरयो मेरोः कर्णिकाया इव केसरभूता मूलदेशे परित उपक्लृप्ताः" भाग० ५-१६-२६।

**जाल ಜಾಲ** (पुं०) 1. ನೀಪವೃಕ್ಷ. (न०) 2. ನೂಲಿನಿಂದ ತಯಾರಿಸಲ್ಪಟ್ಟ ಮೀನಿನ ಬಲೆ. जल (घातने) "णः" (३-१-१४०)। "अहं जालोद्गालादिभिर्मत्स्यबन्धनोपायैः कुटुम्बभरणं करोमि" शाकु० ६। 3. ಸಮೂಹ, ಗುಂಪು. "स्फुरत्तुषारांशुमरीचिजालैर्विनिह्नुताः स्फटिकसौधपङ्क्तीः" माघ० ३-४३। 4. ಗವಾಕ್ಷ, ಕಿಟಕಿ. "जालान्तरप्रेषितदृष्टिरन्या प्रस्थानभिन्नां न बबन्ध नीवीम्" रघु० ७-९। 5. ದಂಭ, ಕಪಟ, ಮೋಸ. 6. ಯಕ್ಷಿಣಿ, ಇಂದ್ರಜಾಲ. 7. ಜಾಲರಿ, ಕಬ್ಬಿಣದ ಅಥವಾ ಯಾವುದೇ ಲೋಹದ ಕಂಬಿ

ಗಳಿಂದ ಹೆಣೆದ ಬಲೆ. 8. ಮೊಗ್ಗು. 9. ಬೀಜಕೋಶ, ಬೀಜಾಶಯ. "जालं गवाक्ष आनाये क्षारके दम्भवृन्दयोः। जालो नीपद्रुमे" मेदि०। 10. ಜೇಡರ ಹುಳು. 11. ಹಕ್ಕಿ ಮೊದಲಾದುವನ್ನು ಹಿಡಿಯುವ ಬಲೆ. 12. ಹಕ್ಕಿಗಳ ಕಾಲು ಬೆರಳುಗಳ ನಡುವೆ ಇರುವ ಚರ್ಮದ ಪೊರೆ. 13. ಕಣ್ಣಿನ ಒಂದು ರೋಗ, ಕಣ್ಣಿನಲ್ಲಿ ಪೊರೆ ಬೆಳೆಯುವುದು.

**जालक ಜಾಲಕ** (पुं०) 1. ಕರಿ ಎಳ್ಳು. "जालकश्चूलिकस्तिलः" वैज०। (न०) 2. ಸಮೂಹ, ಗುಂಪು, ರಾಶಿ. जाल स्वार्थे "कः"। "तस्य कर्कशविहारसंभवं स्वेदमाननविलग्नजालकम्" रघु० ९-६८। 3. ಬೀಜಾಶಯ, ಬೀಜಕೋಶ. 4. ಮೊಗ್ಗು. "उद्यानानां नवजलकणैर्यूथिकाजालकानि" मेघ० १-२६। 5. ಬಿದಿರು ಕಬ್ಬಿಣದ ಸಲಾಕಿ ಮೊದಲಾದುವುಗಳಿಂದ ನಿರ್ಮಿತವಾದ ಗವಾಕ್ಷ, ಕಿಟಕಿ. "अवलम्ब्य जालकमुखोपगतानुदतिष्ठदिन्दुकिरणान्मदनः" माघ० ९-३९। 6. ದಂಭ, ಮೋಸ, ಕಪಟ. 7. ಒಂದು ವಿಧ ಶಿರೋಭೂಷಣ. "सदृशकान्तिरलक्ष्यत मञ्जरी तिलकजालकजालकमौक्तिकैः" रघु० ९-४४। 8. ಉಣ್ಣೆ, ಕುರಿಯ ತುಪ್ಪಟ. 9. ಗೂಡು. (स्त्रीन०)10. ನುಗ್ಗೆಕಾಯಿ. (स्त्री०) **जालिका ಜಾಲಿಕಾ**. 11. ಹಕ್ಕಿಗಳನ್ನು ಹಿಡಿಯುವ ಬಲೆ. 12. ಮುಖಪರದೆ, ಬುರುಕಿ, ಅವಗುಂಠನ. 13. ವಿಧವೆ, ಪತಿಯಿಲ್ಲದವಳು. 14. ಜಿಗಣೆ. 15. ಒಂದು ವಿಧ ಬಟ್ಟೆ. 16. ಕಬ್ಬಿಣದ ತಂತಿಯಿಂದ ತಯಾರಿಸಲ್ಪಟ್ಟ ಯೋಧರ ಕವಚ. "वक्षश्छदः सन्नाहकंकटौ। तत्सूत्रकं सूत्रमयं जालिका स्यादयोमयी" वैज०। 17. ಗಿರಿಸಾರ, ಲೋಹ, ಕಬ್ಬಿಣ. "जालकं कोरके दम्भे कुलायानाययोरपि। न पुंसि मोचकफले स्त्रियां तु वसनान्तरे। गिरिसारे जलौकायामपि स्याद्विधवास्त्रियाम्" मेदि०।

**जालकर्मन् ಜಾಲಕರ್ಮನ್** (न०) ಬಲೆಯ ಉದ್ಯೋಗ, ಮೀನು ಹಿಡಿಯುವುದು. "अभ्याययुश्च तं देशं निश्रिता जालकर्मणि" भा० अनु०।

**जालकारक ಜಾಲಕಾರಕ** (पुं०)1. ಬಲೆಯನ್ನು ತಯಾರಿಸುವವನು. (वि०) 2. ಮೋಸಗಾರ, ಕಪಟಿ, ವಂಚಕ.

**जालकिन् ಜಾಲಕಿನ್** (पुं०) ಕುರಿ, ಟಗರು. जालकमस्त्यस्य "इनिः" (५-२-११५)। स्त्रियाम् "ङीप्" (४-१-५)। **जालकिनी ಜಾಲಕಿನೀ**. ಹೆಣ್ಣುಕುರಿ. "मेषी स्याज्जालकिन्यविः" त्रिकाण्ड०।

**जालक्षीर्य ಜಾಲಕ್ಷೀರ್ಯ** (न०) ವಿಷದ ಹಾಲುಳ್ಳ ವೃಕ್ಷ. जाले जालके क्षीरं तत्र साधु "यत्" (४-४-९८)।

**जालगर्दभ ಜಾಲಗರ್ದಭ** (पुं०) ಮುಖದಲ್ಲಿ ಚರ್ಮದ ಮೇಲೇಳುವ ಸಣ್ಣ ಗುಳ್ಳೆ, ಮೊಡವೆ.

**जालगोणिका ಜಾಲಗೋಣಿಕಾ** (स्त्री०) ಮೊಸರು ಕಡೆಯುವ ಪಾತ್ರೆ. "कण्ठाला जालगोणिका" त्रिकाण्ड०।

**जालन्धर ಜಾಲಂಧರ** (पुं०) 1. ಒಬ್ಬ ದೈತ್ಯ, ಒಬ್ಬ ಅಸುರ. (पुं० ब० व०) 2. ತ್ರಿಗರ್ತದೇಶ. 3. ತ್ರಿಗರ್ತ ದೇಶದ ನಿವಾಸಿಗಳು. "जालन्धरास्त्रिगर्ताः स्युः" वैज०।

**जालपाद ಜಾಲಪಾದ** (पुं०) ಹಂಸಪಕ್ಷಿ. जालमिव पादावस्य। स्त्रियाम् "ङीप्" पादस्य लोपश्च (५-४-१३९)। निपा०। पादः पत् (६-४-१३०) आदेशः। **जालपदी ಜಾಲಪದೀ**.

**जालप्राया ಜಾಲಪ್ರಾಯಾ** (स्त्री०) ಲೋಹಮಯವಾದ ಯುದ್ಧಕವಚ. जालस्य प्रायो बाहुल्यं यस्याम्।

**जालमाला ಜಾಲಮಾಲಾ** (स्त्री०) ಬಲೆ.

**जालाक्ष ಜಾಲಾಕ್ಷ** (पुं०) ಗವಾಕ್ಷ, ಕಿಟಕಿ, ಮಧ್ಯಮಧ್ಯ ಕಂಡಿಗಳುಳ್ಳ ಅಡ್ಡಪಟ್ಟಿಗಳ ಚೌಕಟ್ಟು. जालमिवाक्षि यस्य "अच्" (५-४-७६)। "हेमजालाक्षनिर्गच्छद्धूमेनागुरुगन्धिना" भाग० ८-१५-१९।

**जालिक ಜಾಲಿಕ** (पुं०) 1. ಬೆಸ್ತ, ಮೀನು ಹಿಡಿಯುವವನು. 2. ಬೇಡರವನು. जालेन चरति—"ठन्" (४-४-१०)। 3. ಜೇಡರಹುಳು. (वि०) 4. ಬಲೆಯ ಆಧಾರದಿಂದ ಜೀವಿಸುವ. जालेन जीवति — "ठक्" (४-४-१२)। 5. ಮೋಸಗಾರ. 6. ಮಾಂತ್ರಿಕ, ಮಾಟಗಾರ.

**जालिका ಜಾಲಿಕಾ** (स्त्री०) "जालक" ಪದದಲ್ಲಿ ನೋಡಿ.

**जालिन् ಜಾಲಿನ್** (वि०) 1. ಬಲೆಯನ್ನು ಹಿಡಿದಿರುವ, ಬಲೆಯಿಂದ ಕೂಡಿದ. 2. ಗವಾಕ್ಷವುಳ್ಳ, ಕಿಟಕಿಯಿಂದ ಕೂಡಿದ. 3. ಮೋಸಗಾರ, ಕಪಟಿ. जालमस्यास्ति "इनिः" (५-२-११५)।

**जालिनी ಜಾಲಿನೀ** (स्त्री०) 1. ಚಿತ್ರಶಾಲೆ, ಚಿತ್ರಗಳನ್ನು ತಯಾರಿಸುವ ಶಾಲೆ. 2. ಕರಬೂಜದ ಹಣ್ಣು. 3. ಕಲ್ಲಂಗಡಿಯ ಹಣ್ಣು ಮೊದಲಾದುವು. "चित्रशाला तु जालिनी" वैज०। 4. ಜಟೆ, ಬೊಂತೆ ಕಟ್ಟಿದ ಕೂದಲು. "जालिनी गरुडाजटा" वैज०। 5. ಹಿಪ್ಪಲಿ. "जालिनी तण्डुला तन्वी" वैज०।

**जाली ಜಾಲೀ** (स्त्री०) 1. ಪಡವಲಗಿಡ. जलति–जल (धान्ये) "णः" (३-१-१४०)। "ज्योत्स्नी पटोलिका जाली" अम०। 2. ಮೊಗ್ಗು.

**जाल्म ಜಾಲ್ಮ** (वि०) 1. ಪಾಮರ, ನೀಚ, ತುಚ್ಛ. 2. ಕ್ರೂರ, ದಯೆಯಿಲ್ಲದವನು. 3. ವಿಚಾರಮಾಡದೆ ಕಾರ್ಯಮಾಡುವವನು, ಯೋಚಿಸಿ ನೋಡದೆ ಕಾರ್ಯ ಮಾಡತಕ್ಕವನು. जालयति–जल (अपवारणे) "मः" बाहु०। "त्वयि पूजनं जगति जाल्म कृतमिदमपाकृते गुणैः" माघ० १५-३३। स्वार्थे "कः"। **जाल्मकः ಜಾಲ್ಮಕಃ.**

**जाल्य ಜಾಲ್ಯ** (वि०) ಬಲೆಗೆ ಬೀಳಬಹುದಾದ, ಬಲೆಯಲ್ಲಿ ಹಿಡಿಯಬಹುದಾದ. जल (घातने) "ण्यत्" (३-१-१२४)।

**जाहक ಜಾಹಕ**(पुं०) 1. ಜಿಗಣೆ. 2. ಮಂಚ. 3. ಮುಳ್ಳಿಹ, ಇಲಿ.

**जाह्नवी ಜಾಹ್ನವೀ** (स्त्री०) ಗಂಗಾನದಿ, ಜಹ್ನುವಿನ ಮಗಳು. जह्नोरपत्यम् "अण्" (४-१-९२)। "ङीप्" (४-१-१५)। ["जह्नु" "गङ्गा" ಪದಗಳಲ್ಲಿ ನೋಡಿ.] "व्यक्तं बलीयान् यदि हेतुरागमादपूरयत् सा जलधिं न जाह्नवी" माघ० १२-६९।

**जाह्नवीय ಜಾಹ್ನವೀಯ** (वि०) ಜಾಹ್ನವಿಯ ಸಂಬಂಧವಾದ. जाह्नव्याः इदम् "छः" (४-२-११४)।

**जि–अभिभवे** (भ्वा० पर० सक० अनि०)। जयति शत्रून्।

**जि–जये** (भ्वा० पर० अक० अनि०)। जयति जयतः जयन्ति। जिगाय जिग्यतुः जिग्युः। जेता जेतारौ जेतारः। जेष्यति। जयतु। अजयत्। जयेत्। जीयात्। अजैषीत्। अजेष्यत्। ಜಯಿಸು, ಉತ್ಕರ್ಷ ಹೊಂದು, ಮೇಲ್ಮೆಯನ್ನು ಹೊಂದು. "जयत्याश्रितसंत्रासध्वांतविध्वंसनोदयः। प्रभावान् सीतया देव्या परमव्योमभास्करः" रघु० ग०।

**भावे**:–जीयते। जिग्ये। जायिता, जेता। जायिष्यते, जेष्यते। जीयताम्। अजीयत। जीयेत। जायिषीष्ट, जेषीष्ट। अजायि। अजायिष्यत, अजेष्यत।

**णिचि**:–जापयति, –ते। जापयां चकार, –चक्रे, –बभूव, –आस। जापयिता। जापयिष्यति, –ते। जापयतु, –ताम्। अजापयत्, –त। जापयेत्, –त। ಇತ್ಯಾದಿ.

**ण्यन्तात् कर्मणि**:–जाप्यते। जापयां चक्रे, –बभूवे, –आसे। जापयिता, जापिता। जापयिष्यते, जापिष्यते। जाप्यताम्। ಇತ್ಯಾದಿ.

**सनि**:–जिगीषति। जिगीषां चकार, –बभूव, –आस। जिगीषिता। जिगीषिष्यति। जिगीषतु। अजिगीषत्। ಇತ್ಯಾದಿ.

वि ಮತ್ತು परा ಪೂರ್ವಕ जि ಧಾತುವು ಆತ್ಮನೇಪದಿಯಾಗುವುದು. विजयते। पराजयते। ಇತ್ಯಾದಿ.

**कृत्सु**:–जेतव्यम्। जयनीयम्। जेतुं शक्यम् जय्यम्। जेतुं योग्यं जेयम्। भावे क्तः –जितमनेन। कर्तरि क्तः प्रजितः। जितवान्। जयन्, जयन्ती। विजयमानः। जेतुम्। जितम्। जयनम्। जित्वा। विजित्य।

**ण्यन्तात् कृत्सु**:–जापयितव्यः। जापनीयः। जाप्यः। जापितः। जापितवान्। जापयन्। जापयमानः। जापयितुम्। जापितम्। जापनम्। जापयित्वा। विजाप्य।

**ಈ ಧಾತುವಿಗೆ ಉಪಸರ್ಗಗಳ ಯೋಗದಿಂದ ಉಂಟಾಗುವ ಅರ್ಥಭೇದಗಳು:**

**(1) अधि + जि** = अधिजयति। ಅಧಿಕವಾದ ಜಯವನ್ನು ಹೊಂದು. "सपत्नांश्चाधिजीयास्म संग्रामे च मृषीमहि" भट्टि० १९-२।

**(2) अनु + जि** = अनुजयति। 1. ಅನುರೂಪವಾಗಿ ಜಯಿಸು. 2. ಅನಂತರ ಜಯಿಸು.

**(3) अप + जि** = अपजयति। अपजयः। ಅಪಜಯ ಹೊಂದು, ಸೋಲು.

**(4) अव + जि** = अवजयति। ಜಯಿಸು, ಜಯವನ್ನು ಹೊಂದು. "अस्त्रं हरादाप्तवता दुरापं येनेन्द्रलोकावजयाय दृप्तः" रघु० ६-६२।

**(5) परा + जि** = पराजयते। पराजयः। 1. ಪರಾಜಯಗೊಳಿಸು, ಸೋಲಿಸು. "त्वं पराजयमानोऽसावुन्नत्या पवनात्मजम्" भट्टि० ८-९। 2. ಅಸಹ್ಯಪಡು, ಜುಗುಪ್ಸೆ ಹೊಂದು. "तां पराजयमानां स प्रीते रक्ष्यां दशाननात्" भट्टि० ८-७१।

**(6) वि + जि** = विजयते। विजयः। ಅಧಿಕವಾದ ಜಯವನ್ನು ಹೊಂದು. "विजित्य यः प्राज्यमयच्छदुत्तरान् कुरूनकुप्यं वसु वासवोपमः" किरा० १-३५।

**जिगत्नु ಜಿಗತ್ನು** (पुं०) 1. ಪ್ರಾಣವಾಯು. गम्लृ (गतौ) "क्नुः" सन्वत् (उ० ३-३१)। (वि०) 2. ಜಾಗ್ರತೆಯಾಗಿ ಹೋಗುವ, ವೇಗವಾಗಿ ನಡೆಯುವ.

**जिगमिषत्** ಜಿಗಮಿಷತ್ (वि०) ಹೊರಡಲು ಅಪೇಕ್ಷಿಸುತ್ತಿರುವ, ಹೊರಡಲು ಆಸೆಪಡುತ್ತಿರುವ. गम्लृ (गतौ) + सन् "शतृ" (३-२-१२४)। स्त्रियाम् "ङीप्" (४-१-६)। **जिगीषन्ती** ಜಿಗೀಷಂತೀ.

**जिगमिषा** ಜಿಗಮಿಷಾ (स्त्री०) ಹೊರಡಲು ಆಸೆ. गन्तुमिच्छा—गम्लृ (गतौ) + सन् "अः" (३-३-१०२)।

**जिगमिषु** ಜಿಗಮಿಷು (वि०) ಹೊರಡಲು ಆಸೆಯುಳ್ಳ. गन्तुमिच्छुः—गम्लृ (गतौ) + सन् "उः" (३-२-१६८)। "विपुलाचलस्थलघनेन जिगमिषुभिरङ्गनाः प्रियैः" माघ० १५-८४।

**जिगीषत्** ಜಿಗೀಷತ್ (वि०) ಜಯಿಸಲು ಇಚ್ಛಿಸುತ್ತಿರುವ, ಜಯಗಳಿಸಲು ಆಸೆಪಡುತ್ತಿರುವ. जेतुमिच्छन्—जि (जये) + सन् "शतृ" (३-२-१२४)। "अजितस्य जिगीषतो मयाऽसौ विजयारम्भमहोत्सवो विधेयः" याद० १५-९।

**जिगीषा** ಜಿಗೀಷಾ (स्त्री०) 1. ಜಯಿಸಲು ಅಪೇಕ್ಷೆ, ಜಯಗಳಿಸಲು ಆಸೆ. जेतुमिच्छा—जि (जये) + सन् "अः" (३-३-१०२)। "अशेषयज्ञाग्रहरं समागतं जिगीषयाऽनुव्रतया स दीक्षितः" याद० १४-१४। 2. ಉತ್ಕರ್ಷ, ಹೆಚ್ಚುಗಾರಿಕೆ, ಹಿರಿಮೆ. 3. ವ್ಯವಸಾಯ, ಉದ್ಯಮ, ವೃತ್ತಿ. "जिगीषा जेतुमिच्छायां व्यवसायप्रकर्षयोः" मेदि०।

**जिगीषु** ಜಿಗೀಷು (वि०) ಜಯಿಸಲು ಇಚ್ಛೆಯುಳ್ಳ, ಜಯಗಳಿಸಲು ಆಸೆಯುಳ್ಳ. जेतुमिच्छुः—जि (जये) + सन् "उः" (३-२-१६८)। "जिगीषुरेको दिनकृदादित्येष्विव कल्पते" माघ० २-८१।

**जिघत्सत्** ಜಿಘತ್ಸತ್ (वि०) ತಿನ್ನಲು ಅಪೇಕ್ಷಿಸುತ್ತಿರುವ, ಊಟಮಾಡಲು ಆಸೆಪಡುತ್ತಿರುವ. अद (भक्षणे) + सन् "शतृ" (३-२-१२४)। "परिस्फुरल्लोलशिखाग्रजिह्वं जगज्जिघत्सन्तमिवान्तवह्निम्" किरा० ३-२०।

**जिघत्सन** ಜಿಘತ್ಸನ (न०) ತಿನ್ನಲು ಅಪೇಕ್ಷಿಸುವುದು.

**जिघत्सा** ಜಿಘತ್ಸಾ (स्त्री०) 1. ತಿನ್ನಲು ಅಪೇಕ್ಷೆ, ಊಟಮಾಡಲು ಆಸೆ. अत्तुमिच्छा—अद (भक्षणे) + सन् "अः" (३-३-१०२)। "विगतसस्यजिघत्समघट्टयत्" माघ० ६-४९। 2. ಹಸಿವು.

**जिघत्सित** ಜಿಘತ್ಸಿತ (वि०) ತಿನ್ನಲು ಅಪೇಕ್ಷಿಸಲ್ಪಟ್ಟ. अत्तुमिष्टम्—अद (भक्षणे) + सन् "क्तः" (३-२-१०२)।

**जिघत्सु** ಜಿಘತ್ಸು (वि०) 1. ತಿನ್ನಲು ಅಪೇಕ್ಷೆಯುಳ್ಳ, ಊಟಮಾಡಲು ಆಸೆಯುಳ್ಳ, ಹಸಿದಿರುವ. अत्तुमिच्छुः—अद (भक्षणे) + सन् "उः" (३-२-१६८)। अदो घस्लृ (२-४-३७)। 2. ಹಸಿವುಳ್ಳವನು.

**जिघांसक** ಜಿಘಾಂಸಕ (वि०) ಕೊಲ್ಲಲು ಇಚ್ಛೆಯುಳ್ಳವನು.

**जिघांसत्** ಜಿಘಾಂಸತ್ (वि०) ಕೊಲ್ಲಲು ಅಪೇಕ್ಷಿಸುತ್ತಿರುವ. हन्तुमिच्छन्—हन (हिंसागत्योः) + सन् "शतृ" (३-२-१२४)। स्त्रियाम् "ङीप्" (४-१-६)। **जिघांसन्ती** ಜಿಘಾಂಸಂತೀ.

**जिघांसन** ಜಿಘಾಂಸನ (न०) ಕೊಲ್ಲಲು ಅಪೇಕ್ಷಿಸುವುದು. हन (हिंसागत्योः) + सन् "ल्युट्" (३-३-११५)।

**जिघांसा** ಜಿಘಾಂಸಾ (स्त्री०) 1. ಕೊಲ್ಲಲು ಅಪೇಕ್ಷೆ. हन्तुमिच्छा—हन (हिंसागत्योः) + सन् "अः" (३-३-१०२)। "जिघांसया ब्राह्मणस्य नरकं प्रतिपद्यते" मनु० ११-२०६। 2. ದ್ವೇಷ, ಪೀಡಿಸುವ ಇಚ್ಛೆ, ಸೇಡು ತೀರಿಸಿಕೊಳ್ಳುವ ಆಸೆ.

**जिघांसित** ಜಿಘಾಂಸಿತ (वि०) ಕೊಲ್ಲಲು ಅಪೇಕ್ಷಿಸಲ್ಪಟ್ಟ, ಸಂಹರಿಸಲು ಇಷ್ಟನಾದ. हन (हिंसागत्योः) + सन् "क्तः" (३-२-१०२)। "जिघांसिते देव दशानने त्वया हतारिसङ्घैर्हरियूथपैर्वृतः" याद० १४-३१।

**जिघांसु** ಜಿಘಾಂಸು (पुं०) 1. ಹಗೆ, ವೈರಿ, ಶತ್ರು. "द्वेषणः प्रत्यनीको द्विट् जिघांसुर्हिंसनो रिपुः" वैज०। (वि०) 2. ಕೊಲ್ಲಲು ಅಪೇಕ್ಷೆಯುಳ್ಳ. हन्तुमिच्छुः—हन (हिंसागत्योः) + सन् "उः" (३-२-१६८)। "दत्तावधानं मधुलेहिगीतौ प्रशान्तचेष्टं हरिणं जिघांसुः" भट्टि० २-७।

**जिघृक्षत्** ಜಿಘೃಕ್ಷತ್ (वि०) ಹಿಡಿಯಲು ಅಪೇಕ್ಷಿಸುತ್ತಿರುವ, ತೆಗೆದುಕೊಳ್ಳಲು ಆಸೆಪಡುತ್ತಿರುವ. ग्रहीतुमिच्छन्—ग्रह (उपादाने) + सन् "शतृ" (३-२-१२४)। "शरार्थमेष्यत्यथ लप्स्यते गतिं शिरोमणिं दृष्टिविषाज्जिघृक्षतः" किरा० १४-२५। स्त्रियाम् "ङीप्" (४-१-६)। **जिघृक्षन्ती** ಜಿಘೃಕ್ಷಂತೀ.

**जिघृक्षा** ಜಿಘೃಕ್ಷಾ (स्त्री०) 1. ಹಿಡಿದುಕೊಳ್ಳಲು ಅಪೇಕ್ಷೆ, ತೆಗೆದುಕೊಳ್ಳಲು ಆಸೆ. ग्रहीतुमिच्छा—ग्रह (उपादाने) + सन् "अः" (३-३-१०२)। "अनुभवन्नवदोलमृतूत्सवं पटुरपि प्रियकण्ठजिघृक्षया" रघु० ९-४६। 2. ತಿಳಿದುಕೊಳ್ಳುವ ಅಪೇಕ್ಷೆ.

**जिघृक्षु** ಜಿಘೃಕ್ಷು (वि०) 1. ಹಿಡಿದುಕೊಳ್ಳಲು ಅಪೇಕ್ಷೆಯುಳ್ಳ, ತೆಗೆದುಕೊಳ್ಳಲು ಆಸೆಯುಳ್ಳ. ग्रहीतुमिच्छुः—ग्रह (उपादाने) + सन् "उः" (३-२-१६८)। "उच्छ-

श्वास प्रस्थिता तं जिघृक्षुर्व्यर्थकृता नाकनारी मुमूर्च्छ" माघ० १८-५८। 2. ತಿಳಿದುಕೊಳ್ಳಲು ಅಪೇಕ್ಷೆಯುಳ್ಳ. "तमथ प्राज्यशर: शरं जिघृक्षु:" किरा० १३-३२।

**जिघ्र ಜಿಘ್ರ** (वि०) 1. ವಾಸನೆ ನೋಡುವವನು, ಮೂಸಿ ನೋಡುವವನು. जिघ्रति—घ्रा (गन्धोपादाने) "श:" (३-१-१३७)। जिघ्रादेश: (७-३-७८)। 2. ಅಭಿಪ್ರಾಯವನ್ನು ಊಹಿಸುವವನು, ಮನೋಗತವನ್ನು ತಿಳಿಯುವವನು. "स्वामी नि:श्वसितेऽप्यसूयति मनोजिघ्र: सपत्नीजन:" सा० द० ३।

**जिघ्रत् ಜಿಘ್ರತ್** (वि०) ವಾಸನೆ ನೋಡುತ್ತಿರುವ, ಮೂಸಿನೋಡುತ್ತಿರುವ. घ्रा (गन्धोपादाने) "शतृ" (३-२-१२४)। "स्पृशन्नपि गजो हन्ति जिघ्रन्नपि भुजङ्गम:" हितो० ३-१४। स्त्रियाम् "ङीप्" (४-१-६)। **जिघ्रन्ती ಜಿಘ್ರಂತೀ.**

**जिघ्रासत् ಜಿಘ್ರಾಸತ್** (वि०) ವಾಸನೆನೋಡಲು ಅಪೇಕ್ಷಿಸುತ್ತಿರುವ, ಮೂಸಿನೋಡಲು ಆಸೆಪಡುತ್ತಿರುವ. घ्रा (गन्धोपादाने) + सन् "शतृ" (३-२-१२४)। स्त्रियाम् "ङीप्" (४-१-६)। **जिघ्रासन्ती ಜಿಘ್ರಾಸಂತೀ.**

**जिघ्रासन ಜಿಘ್ರಾಸನ** (न०) ವಾಸನೆ ನೋಡಲು ಅಪೇಕ್ಷಿಸುವುದು, ಮೂಸಿನೋಡಲು ಆಸೆಪಡುವುದು. घ्रा (गन्धोपादाने) + सन् "ल्युट्" (३-३-११५)।

**जिघ्रासित ಜಿಘ್ರಾಸಿತ** (वि०) ವಾಸನೆ ನೋಡಲು ಅಪೇಕ್ಷಿಸಲ್ಪಟ್ಟ. घ्रा (गन्धोपादाने) + सन् "क्त:" (३-२-१०२)।

**जिघ्रासितवत् ಜಿಘ್ರಾಸಿತವತ್** (वि०) ವಾಸನೆನೋಡಲು ಅಪೇಕ್ಷಿಸಿದವನು. घ्रा (गन्धोपादाने) + सन् "क्तवतु:" (३-२-१०२)।

**जिङ्गी ಜಿಂಗೀ** (स्त्री०) ಮಂಜಿಷ್ಠ. जिङ्गति—जिगि (गतौ) "अच्" (३-१-१३४)। गौरा० "ङीप्" (४-१-४१)। "मञ्जिष्ठा विकसा जिङ्गी समङ्गा कालमेशिका" अम०।

**जिजीविषण ಜಿಜೀವಿಷಣ** (न०) ಬದುಕಬೇಕೆಂದು ಅಪೇಕ್ಷಿಸುವುದು, ಬದುಕಲು ಆಸೆಪಡುವುದು. जीव (प्राणधारणे) + सन् "ल्युट्" (३-३-११५)।

**जिजीविषत् ಜಿಜೀವಿಷತ್** (वि०) ಬದುಕಲು ಅಪೇಕ್ಷಿಸುತ್ತಿರುವ, ಬದುಕಿರಲು ಆಸೆಪಡುತ್ತಿರುವ. जीव (प्राणधारणे) + सन् "शतृ" (३-२-१२४)। स्त्रियाम् "ङीप्" (४-१-६)। **जिजीविषन्ती ಜಿಜೀವಿಷಂತೀ.**

**जिजीविषा ಜಿಜೀವಿಷಾ** (स्त्री०) ಬದುಕಿರಲು ಅಪೇಕ್ಷೆ, ಜೀವಿಸಿರಲು ಆಸೆ. जीव (प्राणधारणे) + सन् "अ:" (३-३-१०२)।

**जिजीविषित ಜಿಜೀವಿಷಿತ** (वि०) ಬದುಕಿರಲು ಅಪೇಕ್ಷಿಸಿದವನು, ಜೀವಿಸಿರಲು ಆಸೆಪಟ್ಟವನು. जीव (प्राणधारणे) + सन् कर्त० "क्त:" (३-४-७२)। "क्तवतु:" (३-२-१०२)। **जिजीविषितवान् ಜಿಜೀವಿಷಿತವಾನ್.** स्त्रियाम् "ङीप्" (४-१-६)। **–वती –ವತೀ.**

**जिजीविषु ಜಿಜೀವಿಷು** (वि०) ಬದುಕಿರಲು ಅಪೇಕ್ಷಿಸುವ, ಜೀವಿಸಿರಲು ಆಸೆಪಡುವ. जीव (प्राणधारणे) + सन् "उ:" (३-२-१६८)। "सर्वे निवृत्ता: कृपणस्य जन्तोर्जिजीविषोर्जीवजलार्पणान्मे" भाग० ९-२१-१३।

**जिज्ञासक ಜಿಜ್ಞಾಸಕ** (वि०) ತಿಳಿಯಲು ಅಪೇಕ್ಷಿಸುವ, ತಿಳಿದುಕೊಳ್ಳಲು ಆಸೆಪಡುವ. ज्ञा (अवबोधने) + सन् "ण्वुल्" (३-१-१३३)।

**जिज्ञासन ಜಿಜ್ಞಾಸನ** (न०) ತಿಳಿದುಕೊಳ್ಳಲು ಆಸೆಪಡುವುದು. ज्ञा (अवबोधने) + सन् "ल्युट्" (३-३-११५)।

**जिज्ञासनीय ಜಿಜ್ಞಾಸನೀಯ** (वि०) ತಿಳಿಯಲು ಅಪೇಕ್ಷಿಸಬಹುದಾದ, ತಿಳಿದುಕೊಳ್ಳಲು ಆಸೆಪಡಬಹುದಾದ. ज्ञा (अवबोधने) + सन् "अनीयर्" (३-१-९६)। "तव्य:" (३-१-९६)। **जिज्ञासितव्य: ಜಿಜ್ಞಾಸಿತವ್ಯ:.**

**जिज्ञासमान ಜಿಜ್ಞಾಸಮಾನ** (वि०) ತಿಳಿಯಲು ಅಪೇಕ್ಷಿಸುತ್ತಿರುವ. ज्ञातुमिच्छन्—ज्ञा (अवबोधने) + सन् "शानच्" (३-२-१२४)। "अन्येद्युरात्मानुचरस्य भावं जिज्ञासमाना मुनिहोमधेनु:" रघु० २-२६।

**जिज्ञासा ಜಿಜ್ಞಾಸಾ** (स्त्री०) ತಿಳಿಯಲು ಅಪೇಕ್ಷೆ, ತಿಳಿದುಕೊಳ್ಳಲು ಆಸೆ. ज्ञातुमिच्छा—ज्ञा (अवबोधने) + सन् "अ:" (३-३-१०२)।

**जिज्ञासित ಜಿಜ್ಞಾಸಿತ** (वि०) ತಿಳಿಯಲು ಅಪೇಕ್ಷಿಸಲ್ಪಟ್ಟ, ತಿಳಿದುಕೊಳ್ಳಲು ಆಶಿಸಲ್ಪಟ್ಟ. ज्ञा (अवबोधने) + सन् "क्त:" (३-२-१०२)। "जिज्ञासितमधीतं च यत्तद्ब्रह्म सनातनम्। अथापि शोचस्यात्मानमकृतार्थ इव प्रभो" भाग० १-५-४।

**जिज्ञासु ಜಿಜ್ಞಾಸು** (वि०) 1. ತಿಳಿಯಲು ಅಪೇಕ್ಷೆಯುಳ್ಳ, ತಿಳಿದುಕೊಳ್ಳಲು ಆಸೆಯುಳ್ಳ. ज्ञातुमिच्छु:—ज्ञा (अवबोधने) + सन् "उ:" (३-२-१६८)। "एतावदेव जिज्ञास्यं तत्त्वजिज्ञासुनाऽऽत्मन:" भाग० २-९-३५। 2. ಮೋಕ್ಷವನ್ನು ಅಪೇಕ್ಷಿಸುವವನು, ಆತ್ಮಸ್ವರೂಪವನ್ನು

ಹೊಂದಲು ಇಚ್ಛಿಸುವವನು. "चतुर्विधा भजन्ते मां जनाः सुकृतिनोऽर्जुन। आर्तो जिज्ञासुरर्थार्थी ज्ञानी च भरतर्षभ" गीता ७-१६।

**जिज्ञास्य ಜಿಜ್ಞಾಸ್ಯ** (वि०) ತಿಳಿದುಕೊಳ್ಳಲು ಇಚ್ಛಿಸಲ್ಪಡುವ. ज्ञा (अवबोधने)+सन् "ण्यत्" (३-१-१२४)। "एतावदेव जिज्ञास्यं तत्त्वजिज्ञासुनाऽऽत्मनः" भाग० २-९-३५।

**जित् ಜಿತ್** (वि०) ಜಯಿಸುವವನು, ಜಯವನ್ನು ಪಡೆಯುವವನು. जयति – जि (जये) "क्विप्" (३-२-७६)।

**जित ಜಿತ** (न०) 1. ಜಯ, ಗೆಲುವು. जि (जये) भावे "क्तः" (३-३-११४)। (वि०) 2. ಜಯಿಸಲ್ಪಟ್ಟ, ಗೆಲ್ಲಲ್ಪಟ್ಟ. जि कर्म० "क्तः" (३-२-१०२)। "अन्तर्घर्मुपययुरुत्पलावलीषु प्रादुःष्यात्क इव जितः पुरः परेण" माघ० ८-१२।

**जितकाशिन् ಜಿತಕಾಶಿನ್** (वि०) ಜಯಶೀಲ, ಯುದ್ಧದಲ್ಲಿ ಜಯಹೊಂದಿದ. जितेन जयेन काशते प्रकाशते – काशृ (दीप्तौ) "णिनिः" (३-१-१३४)।

**जितकोप ಜಿತಕೋಪ, –क्रोध –ಕ್ರೋಧ** (पुं०) 1. ವಿಷ್ಣು. "मनोहरो जितक्रोधो वीरबाहुर्विदारणः" वि० स०। (वि०) 2. ಕೋಪವನ್ನು ಜಯಿಸಿದವನು, ಕೋಪವಿಲ್ಲದವನು. जितः कोपः क्रोधो वा येन। "वर्तेत याम्यया वृत्त्या जितक्रोधो जितेन्द्रियः" मनु० ८-१७३।

**जितमनस् ಜಿತಮನಸ್** (वि०) ಮನಸ್ಸನ್ನು ಜಯಿಸಿದವನು, जितं मनो येन।

**जितरिपु ಜಿತರಿಪು, –शत्रु –ಶತ್ರು** (पुं०) 1 ಬುದ್ಧದೇವ. (वि०) 2. ಶತ್ರುಗಳನ್ನು ಜಯಿಸಿದವನು. जितः रिपुः शत्रुर्वा येन।

**जितलोक ಜಿತಲೋಕ** (पुं०) 1. ಯಜ್ಞಯಾಗಾದಿಗಳಿಂದ ಸ್ವರ್ಗಾದಿಲೋಕಗಳನ್ನು ಸಂಪಾದಿಸಿದವನು. जितः संपादितः कर्मादिना लोकः स्वर्गादिः येन। (वि०) 2. ಲೋಕವನ್ನು ಜಯಿಸಿದವನು, ಜನರನ್ನು ವಶಪಡಿಸಿಕೊಂಡವನು. जितो लोको येन।

**जितवत् ಜಿತವತ್** (वि०) ಜಯಿಸಿದವನು, ಜಯವನ್ನು ಹೊಂದಿದವನು. जि (जये) कर्त० "क्तवतु" (३-२-१०२)। "अवनिमेकरथेन वरूथिना जितवतः किल तस्य धनुर्भृतः" रघु० ९-११।

**जिताक्ष ಜಿತಾಕ್ಷ** (वि०) ಇಂದ್ರಿಯಗಳನ್ನು ಜಯಿಸಿದವನು, ಇಂದ್ರಿಯಗಳನ್ನು ವಶಪಡಿಸಿಕೊಂಡವನು. जितानि अक्षानि येन।

**जिताक्षर ಜಿತಾಕ್ಷರ** (वि०) ಅಕ್ಷರಗಳನ್ನು ವಶಪಡಿಸಿಕೊಂಡಿರುವವನು, ಚೆನ್ನಾಗಿ ಓದಲೂ ಬರೆಯಲೂ ಅಭ್ಯಾಸವುಳ್ಳವನು. जितानि स्वायत्तीकृतानि अक्षराणि येन।

**जितात्मन् ಜಿತಾತ್ಮನ್** (वि०) ಆತ್ಮಸಂಯಮವುಳ್ಳ, ಇಂದ್ರಿಯಗಳನ್ನು ಜಯಿಸಿದ. जितः आत्मा येन। "अतस्तु विपरीतस्य नृपतेरजितात्मनः" मनु० ७-३४।

**जितामित्र ಜಿತಾಮಿತ್ರ** (पुं०) 1. ವಿಷ್ಣು. जिता अमित्रा एतद्रहस्यावबोधविरोधिभूताः अहंकारममकारकामक्रोधादयः अनेन। "एतद्रहस्यविज्ञानविरोधिममतादयः। जितास्तेषामनेनेति जितामित्रोऽष्टवर्णकः" इति निरुक्तिः। "अजो महार्हः स्वाभाव्यो जितामित्रः प्रमोदनः" वि० स०। (वि०) 2. ಶತ್ರುಗಳನ್ನು ಜಯಿಸಿದವನು. जिता अमित्राः येन।

**जितारि ಜಿತಾರಿ** (पुं०) 1. ಬುದ್ಧದೇವ. जिता अरयो येन। "मैत्रीबलासमजितारिसमन्तभद्राः" त्रिकाण्ड०। 2. ಅವಿಕ್ಷಿತನ ಮಗ. (वि०) 3. ಶತ್ರುಗಳನ್ನು ಜಯಿಸಿದವನು. 4. ಕಾಮಕ್ರೋಧಾದಿ ಅರಿಷಡ್ವರ್ಗವನ್ನು ಜಯಿಸಿದವನು.

**जिताष्टमी ಜಿತಾಷ್ಟಮೀ** (स्त्री०) ಆಶ್ವಯುಜ ಕೃಷ್ಣಾಷ್ಟಮಿ, ಜೀಮೂತವಾಹನನನ್ನು ಪೂಜಿಸುವ ಅಷ್ಟಮಿ. "इषे मास्यसिते पक्षे अष्टमी या तिथिर्भवेत्। पुत्रसौभाग्यदा स्त्रीणां ख्याता सा जीवपुत्रिका। शालिवाहनराजस्य पुत्रो जीमूतवाहनः। तस्यां पूज्यः स नारीभिः पुत्रसौभाग्यलिप्सया। प्रदोषसमये स्त्रीभिः पूज्यो जीमूतवाहनः। पुष्करिणीं विधायाथ प्राङ्गणे चतुरस्रिकाम्"।

**जितेन्द्रिय ಜಿತೇಂದ್ರಿಯ** (पुं०) 1. ಯಾವಕಾರಣದಿಂದಲೂ ಸಂತೋಷ ದುಃಖಗಳಿಲ್ಲದ ತಪಸ್ವಿ, ಸಕಲ ಇಂದ್ರಿಯಗಳಿಗೂ ಭೋಗ್ಯವಾದ ವಸ್ತುಗಳ ಭೋಗದಿಂದಲೂ ಯಾವನು ಹಿಗ್ಗುವುದಿಲ್ಲವೋ ಮತ್ತು ಕುಗ್ಗುವುದಿಲ್ಲವೋ ಅಂತಹ ಧೀರಪುರುಷ. "श्रुत्वा स्पृष्ट्वाथ दृष्ट्वा च भुक्त्वा घ्रात्वा च यो नरः। न हृष्यति ग्लायति वा स विज्ञेयो जितेन्द्रियः" मनु० २-९८। (वि०) 2. ಇಂದ್ರಿಯನಿಗ್ರಹವುಳ್ಳ, ಇಂದ್ರಿಯಗಳನ್ನು ಜಯಿಸಿದ. जितानि वशीकृतानि इन्द्रियाणि येन।

**जितुम ಜಿತುಮ** (पुं०) ಮಿಥುನರಾಶಿ, ಮೇಷಾದಿ ಮೂರನೆಯ ರಾಶಿ.

**जित्या ಜಿತ್ಯಾ** (स्त्री०) ಹರವೆ, ಉತ್ತಭೂಮಿಯಲ್ಲಿ ಹೆಂಟೆಗಳನ್ನು ಒಡೆದು ಭೂಮಿಯನ್ನು ಸಮಮಾಡುವ ಒಂದು ವಿಧ ದೊಡ್ಡ ನೇಗಿಲು.

**जित्वन् ಜಿತ್ವನ್** (वि०) ಜಯಶಾಲಿ, ಜಯವನ್ನು ಗಳಿಸಿದವನು. जि (जये) "क्वनिप्" (उ० ४-११३)।

**जित्वर ಜಿತ್ವರ** (वि०) ಜಯಶಾಲಿ, ಜಯವನ್ನು ಗಳಿಸಿದವನು. जि (जये) "क्वरप्" (३-२-१६३)। "करदीकृतभूपालो भ्रातृभिर्जित्वरैर्दिशाम्" माघ० २-९। स्त्रियाम् "ङीप्" (४-१-१५)। **जित्वरी ಜಿತ್ವರೀ.**

**जित्वरी ಜಿತ್ವರೀ** (स्त्री०) ಕಾಶೀನಗರ, ವಾರಣಾಸಿ. "जित्वरी तु तपस्थली। वारणासी तीर्थराजी" त्रिकाण्ड०।

**जिन ಜಿನ** (पुं०) 1. ಬುದ್ಧದೇವ. 2. ಜೈನಮತ ಪ್ರವರ್ತಕ ಜಿನದೇವ, ಅರ್ಹಂತ. जयति—जि (जये) "नक्" (उ० ३-२)। ಜೈನ ಸಿದ್ಧಾಂತವನ್ನು ಪ್ರಚಾರಮಾಡಿದವರು ಇಪ್ಪತ್ತನಾಲ್ಕು ತೀರ್ಥಂಕರರು. ಇವರಲ್ಲಿ ಮಹಾವೀರ ವರ್ಧಮಾನಜಿನೇಶ್ವರರು ಇಪ್ಪತ್ತನಾಲ್ಕನೆಯವರು. ಈ ತೀರ್ಥಂಕರರು ಮಹಾವಿರಕ್ತರಾಗಿ ಸಂನ್ಯಾಸಾಶ್ರಮದಲ್ಲಿದ್ದು ಶುಕ್ಲಧ್ಯಾನದಿಂದ ರಾಗದ್ವೇಷಾದಿಗಳನ್ನೂ ಕರ್ಮಗಳನ್ನೂ ಜಯಿಸಿದವರೆಂಬ ಅರ್ಥದಲ್ಲಿ ಇವರಿಗೆ "**ಜಿನರು**" ಎಂದು ಪ್ರಸಿದ್ಧಿಯುಂಟಾಯಿತು. 3. ವಿಷ್ಣು. "जिनोऽर्हद्बुद्धविष्णुषु" हेम०। "कृतघोराजिनश्चक्रे भुवः सरुधिरा जिनः" माघ० १९-११२। (वि०) 4. ಜಯಶಾಲಿ, ಜಯವನ್ನು ಗಳಿಸಿದವನು. "जिनोऽर्हति च बुद्धे च पुंसि स्याज्जित्वरे त्रिषु" मेदि०।

**जिनदेव ಜಿನದೇವ** (पुं०) ಅರ್ಹಂತ, ಜೈನಮತ ಪ್ರಚಾರಕ.

**जिनसद्मन् ಜಿನಸದ್ಮನ್** (न०) ಚೈತ್ಯ, ಜೈನದೇವಾಲಯ, ಜೈನಾಶ್ರಮ, ವಿಹಾರ.

**जिनेन्द्र ಜಿನೇಂದ್ರ** (पुं०) 1. ಬುದ್ಧದೇವ. जिनानामिन्द्रः। 2. ಜೈನಸಂನ್ಯಾಸಿ.

**जिनेश्वर ಜಿನೇಶ್ವರ** (पुं०) 1. ಬುದ್ಧದೇವ. 2, ಜೈನ ಸಂನ್ಯಾಸಿ.

**जिमु—अदने** (भ्वा० पर० सक० से०)। जेमति। जेमिता। अजेमीत्। ತಿನ್ನು, ಊಟಮಾಡು, ಭಕ್ಷಿಸು.

**जिष्णु ಜಿಷ್ಣು** (पुं०) 1. ವಿಷ್ಣು. जि (जये) "क्स्नुः" (३-२-१३९)। "विष्णुर्विक्रमणाद्देवो जयनाज्जिष्णुरुच्यते" भा० उद्योग० ६९-१३। 2. ಅರ್ಜುನ. "भुजङ्गपाशान् भुजवीर्यशाली प्रबन्धनाय प्रजिघाय जिष्णुः" किरा० १६-३६। ಯುದ್ಧದಲ್ಲಿ ಯಾರ ಕೈಗೂ ಸಿಕ್ಕದೆ ಯಾರಿಂದಲೂ ತಿರಸ್ಕರಿಸಲ್ಪಡದೆ ಇರುವುದರಿಂದಲೂ ಇಂದ್ರನ ಮಗನಾದುದರಿಂದಲೂ "**ಜಿಷ್ಣು**"ವೆಂಬ ಹೆಸರಾಯಿತು. "अहं दुरापो दुर्धर्षो दमनः पाकशासनिः। तेन देवमनुष्येषु जिष्णुर्नाम्नास्मि विश्रुतः" भा० विरा० ४०। 3. ಇಂದ್ರ. 4. ಸೂರ್ಯ. 5. ಅಷ್ಟವಸುಗಳು. (वि०) 6. ಜಯಶಾಲಿ, ಜಯವನ್ನು ಗಳಿಸಿದವನು. "इति जित्वा दिशो जिष्णुर्न्यवर्तत रथोद्धतम्" रघु० ४-८५। "जिष्णुः शक्रेऽर्जुने विष्णौ जित्वरेऽर्के वसुष्वपि" हेम०।

**जिहान ಜಿಹಾನ** (वि०) ಮುಂದಕ್ಕೆ ವೇಗವಾಗಿ ಹೋಗುತ್ತಿರುವ. ओ हाङ् (गतौ) "शानच्" (३-२-१२४)।

**जिहासत् ಜಿಹಾಸತ್** (वि०) ತ್ಯಜಿಸಲು ಅಪೇಕ್ಷಿಸುತ್ತಿರುವ, ಬಿಡಲು ಆಸೆಪಡುತ್ತಿರುವ. ओ हाक् (त्यागे) + सन् "शतृ" (३-२-१२४)। स्त्रियाम् "ङीप्" (४-२-६)। **जिहासन्ती ಜಿಹಾಸಂತೀ.**

**जिहासन ಜಿಹಾಸನ** (न०) ತ್ಯಜಿಸಲು ಅಪೇಕ್ಷಿಸುವುದು, ಬಿಡಲು ಆಸೆಪಡುವುದು. ओ हाक् (त्यागे) + सन् भावे "ल्युट्" (३-३-११५)।

**जिहासनीय ಜಿಹಾಸನೀಯ** (वि०) ತ್ಯಜಿಸಲು ಅಪೇಕ್ಷಿಸಲ್ಪಡುವ. ओ हाक् (त्यागे) + सन् "अनीयर्" (३-१-९६)। "तव्यः" (३-१-९६)। **जिहासितव्यः ಜಿಹಾಸಿತವ್ಯಃ.**

**जिहासमान ಜಿಹಾಸಮಾನ** (वि०) ವೇಗವಾಗಿ ಹೋಗಲು ಅಪೇಕ್ಷಿಸುತ್ತಿರುವ. ओ हाङ् (गतौ) + सन् "शानच्" (३-२-१२४)।

**जिहासा ಜಿಹಾಸಾ** (स्त्री०) ತ್ಯಜಿಸುವ ಅಪೇಕ್ಷೆ, ಬಿಡುವ ಆಸೆ. हातुमिच्छा—ओ हाक् (त्यागे) + सन् "अः" (३-३-१०२)।

**जिहासित ಜಿಹಾಸಿತ** (वि०) ತ್ಯಜಿಸಲು ಅಪೇಕ್ಷಿಸಲ್ಪಟ್ಟ. ओ हाक् (त्यागे) + सन् "क्तः" (३-२-१०२)।

**जिहासितवत् ಜಿಹಾಸಿತವತ್** (वि०) ತ್ಯಜಿಸಲು ಅಪೇಕ್ಷಿಸಿದವನು. आ हाक् (त्यागे) + सन् "क्तवतुः" (३-२-१०२)। स्त्रियाम् "ङीप्" (४-१-६)। **—वती —ವತೀ.**

**जिहासु ಜಿಹಾಸು** (वि०) ತ್ಯಜಿಸಲು ಅಪೇಕ್ಷೆಯುಳ್ಳ, ಬಿಡಲು ಆಸೆಯುಳ್ಳ. हातुमिच्छुः—ओ हाक् (त्यागे) + सन् "उः" (३-२-१६८)।

**जिहास्य ಜಿಹಾಸ್ಯ** (वि०) ತ್ಯಜಿಸಲು ಅಪೇಕ್ಷಿಸಲ್ಪಡುವ. ओ हाक् (त्यागे) + सन् "ण्यत्" (३-१-१२४)।

**जिहीर्षत् ಜಿಹೀರ್ಷತ್** (वि०) 1. ಒಯ್ಯಲು ಅಪೇಕ್ಷಿಸುತ್ತಿರುವ. हृञ् (हरणे) + सन् "शतृ" (३-२-१२४)।

2. ಅಪಹರಿಸಲು ಅಪೇಕ್ಷಿಸುತ್ತಿರುವ, ಕದಿಯಲು ಅಪೇಕ್ಷಿಸುತ್ತಿರುವ. स्त्रियाम् "ङीप्" (४-१-६)। जिहीर्षन्ती ಜಿಹೀರ್ಷಂತೀ.

**जिहीर्षण ಜಿಹೀರ್ಷಣ** (नं०) 1. ಒಯ್ಯಲು ಅಪೇಕ್ಷಿಸುವುದು. हृञ् (हरणे) + सन् भावे "ल्युट्" (३-३-११५)। 2. ಅಪಹರಿಸಲು ಅಪೇಕ್ಷಿಸುವುದು, ಕದಿಯಲು ಆಸೆಪಡುವುದು. 3. ಹೋಗಲಾಡಿಸಲು ಅಪೇಕ್ಷಿಸುವುದು.

**जिहीर्षा ಜಿಹೀರ್ಷಾ** (स्त्री०) 1. ಒಯ್ಯಲು ಅಪೇಕ್ಷೆ. हर्तुमिच्छा—हृञ् (हरणे) + सन् "अ:" (३-३-१०२)। 2. ಹೋಗಲಾಡಿಸಲು ಅಪೇಕ್ಷೆ. "तथायं चावतारस्ते भुवो भारजिहीर्षया" भाग० १-७-२५। 3. ಅಪಹರಿಸಲು ಅಪೇಕ್ಷೆ.

**जिहीर्षित ಜಿಹೀರ್ಷಿತ** (वि०) 1. ಒಯ್ಯಲು ಅಪೇಕ್ಷಿಸಲ್ಪಟ್ಟ. 2. ಹೋಗಲಾಡಿಸಲು ಅಪೇಕ್ಷಿಸಲ್ಪಟ್ಟ. 3. ಅಪಹರಿಸಲು ಅಪೇಕ್ಷಿಸಲ್ಪಟ್ಟ.

**जिहीर्षु ಜಿಹೀರ್ಷು** (वि०) 1. ಒಯ್ಯಲು ಅಪೇಕ್ಷೆಯುಳ್ಳ. हर्तुमिच्छु:—हृञ् (हरणे) + सन् "उ:" (३-२-१६८)। 2. ಅಪಹರಿಸಲು ಅಪೇಕ್ಷೆಯುಳ್ಳ. 3. ಹೋಗಲಾಡಿಸಲು ಅಪೇಕ್ಷೆಯುಳ್ಳ.

**जिहीर्ष्य ಜಿಹೀರ್ಷ್ಯ** (वि०) 1. ಒಯ್ಯಲು ಅಪೇಕ್ಷಿಸಲ್ಪಡುವ. 2. ಅಪಹರಿಸಲು ಅಪೇಕ್ಷಿಸಲ್ಪಡುವ. 3. ಹೋಗಲಾಡಿಸಲು ಇಚ್ಛಿಸಲ್ಪಡುವ. हृञ् (हरणे) + सन् "ण्यत्" (३-१-१२४)।

**जिह्म ಜಿಹ್ಮ** (नं०) 1. ಕಪಟ, ವಂಚನೆ, ಮೋಸ. ओ हाक् (त्यागे) "मन्" सन्वत् आलोपश्च (उ० १-१३८)। "तदाशु कर्तुं त्वयि जिह्ममुद्यते विधीयतां तत्र विधेयमुत्तरम्" किरा० १-२५। (वि०) 2. ಕುಟಿಲವಾದ, ವಕ್ರವಾದ, ಡೊಂಕಾದ. 3. ಅಲಸನಾದ, ಸೋಮಾರಿಯಾದ. 4. ವಂಚಕ, ಮೋಸಗಾರ. "तथापि जिह्म: स भवज्जिगीषया तनोति शुभ्रं गुणसंपदा यश:" किरा० १-८। 5. ಅಪ್ರಸನ್ನ, ಕಳೆಗುಂದಿದ, ಪ್ರಕಾಶವಿಲ್ಲದ. "विधिसमयनियोगाद्दीप्तिसंहारजिह्मं शिथिलवसुमगाधे मग्नमापत्पयोधौ" किरा० १-४६। 6. ಮುಚ್ಚಲ್ಪಟ್ಟ.

**जिह्मग ಜಿಹ್ಮಗ** (पुं०) 1. ಸರ್ಪ, ಹಾವು. जिह्मं गच्छति—गम्लृ (गतौ) "ड:" (३-२-१०१)। (वि०) 2. ಅಲಸ, ಮಂದ, ಸೋಮಾರಿ. 3. ಕುಟಿಲವಾದ ವ್ಯಾಪಾರವುಳ್ಳ, ಕಪಟವ್ಯವಹಾರವುಳ್ಳ. "निसर्गतमसस्तस्य जिह्मगस्याङ्गमुत्तमम्" याद० १६-१०६। 4. ನಾವಕಾಶವಾಗಿ ನಡೆಯುವ.

**जिह्ममेहन ಜಿಹ್ಮಮೇಹನ** (पुं०) ಮಂಡೂಕ, ಕಪ್ಪೆ.

**जिह्माशिन् ಜಿಹ್ಮಾಶಿನ್** (वि०) ನಿಧಾನವಾಗಿ ಊಟ ಮಾಡುವ. जिह्ममश्नाति—अश (भोजने) "णिनि:" (३-२-७८)।

**जिह्मित ಜಿಹ್ಮಿತ** (वि०) ವಕ್ರವಾಗಿರುವ, ಬಗ್ಗಿರುವ, ಕುಟಿಲವಾಗಿರುವ.

**जिह्मीकृत ಜಿಹ್ಮೀಕೃತ** (वि०) ಡೊಂಕಾಗಿಮಾಡಲ್ಪಟ್ಟ, ವಕ್ರವಾಗಿಮಾಡಲ್ಪಟ್ಟ.

**जिह्वल ಜಿಹ್ವಲ** (वि०) ಹೊಟ್ಟೆಬಾಕ, ಜಿಹ್ವಾಚಾಪಲ್ಯವಿರುವವನು. जिह्वाव्यापारं लाति—ला (आदाने) "क:" (३-२-३)। "श्राद्धं कृत्वा परश्राद्धे भुञ्जते ये च जिह्वला:। पतन्ति नरके घोरे लुप्तपिण्डोदकक्रिया:"।

**जिह्वा ಜಿಹ್ವಾ** (स्त्री०) 1. ನಾಲಗೆ. लिहन्त्यनया—लिह (आस्वादने) "वन्" लकारस्य जकारश्च निपा० (उ० १-१५२)। "भिन्नाकृति ज्यां ददृशु: स्फुरन्तीं क्रुद्धस्य जिह्वामिव तक्षकस्य" किरा० १७-२४। 2. ಅಗ್ನಿಯ ಜ್ವಾಲೆ, ಬೆಂಕಿಯ ಉರಿ. 3. ವಾಕ್ಕು, ಮಾತು. "जिह्वा तु वाचि ज्वालारसज्ञयो:" हेम०।

**जिह्वाग्र ಜಿಹ್ವಾಗ್ರ** (नं०) ನಾಲಗೆಯ ತುದಿ. जिह्वाया अग्रम्। "मधु तिष्ठति जिह्वाग्रे हृदि हालाहलं विषम्" हितो०।

**जिह्वाचापल्य ಜಿಹ್ವಾಚಾಪಲ್ಯ** (नं०) "जिह्वालौल्य" ಪದದ ಅರ್ಥ. जिह्वायाश्चापल्यम्।

**जिह्वाजप ಜಿಹ್ವಾಜಪ** (पुं०) ನಾಲಗೆಯಿಂದ ಮಾತ್ರ ಮಂತ್ರವನ್ನು ಉಚ್ಚರಿಸಿ ಮಾಡುವ ಜಪ, ಶಬ್ದವು ಹೊರಗೆ ಕೇಳಿಸದಂತೆ ಮಂತ್ರೋಚ್ಚಾರಣೆ ಮಾಡಿ ಜಪಿಸುವುದು. जिह्वया जप:। "जिह्वाजप: स विज्ञेयो केवलं जिह्वया बुधै:" तन्त्रसा०। "उच्चैर्जपाद्विशिष्ट: स्यादुपांशुर्दशभिर्गुणै:। जिह्वाजप: शतगुण: साहस्रो मानस: स्मृत:" तन्त्रसा०।

**जिह्वातल ಜಿಹ್ವಾತಲ** (नं०) ನಾಲಗೆಯ ಮೇಲ್ಮೈ, ನಾಲಗೆಯ ಹೊರಮೈ. जिह्वायास्तलम्।

**जिह्वानिर्लेखन ಜಿಹ್ವಾನಿರ್ಲೇಖನ** (नं०) ನಾಲಗೆಯನ್ನು ಉಜ್ಜುವ (ತಿಕ್ಕುವ) ಸಾಧನ. जिह्वा निर्लिख्यतेऽनया—निर्+लिख (अक्षरविन्यासे) कर० "ल्युट्" (३-३-११७)।

**जिह्वाप ಜಿಹ್ವಾಪ** (पुं०) ನಾಲಗೆಯಿಂದ ಕುಡಿಯುವ 1. ನಾಯಿ. 2. ಹುಲಿ. 3. ಬೆಕ್ಕು, ಮಾರ್ಜಾಲ. 4. ಕರಡಿ. जिह्वया पिबति—पा (पाने) "क:"

(३-२-४)। "जिह्वापस्तु शुनि व्याघ्रे द्वीपिबिडालयोः" हेम०। स्त्रियाम् जाति० "ङीष्" (४-१-४१)।

**जिह्वामल ಜಿಹ್ವಾಮಲ** (न०) ನಾಲಗೆಯ ಕೊಳೆ. जिह्वाया मलम्।

**जिह्वामूल ಜಿಹ್ವಾಮೂಲ** (न०) ನಾಲಗೆಯ ಬುಡ.

**जिह्वामूलीय ಜಿಹ್ವಾಮೂಲೀಯ** (वि०) ನಾಲಗೆಯ ಬುಡದಲ್ಲಿ ಹುಟ್ಟುವ (ಕವರ್ಗ) ವರ್ಣ. जिह्वामूले भवः "छः" (४-३-६२)। "जिह्वामूलीयस्य जिह्वामूलम्" सि० कौ०। "जिह्वामूले तु कुः प्रोक्तो दन्त्योष्ठ्यो वः स्मृतो बुधैः" पा० शि०। ಕವರ್ಗದ ವರ್ಣವು ಪರವಾದರೆ ವಿಸರ್ಗ (ಃ)ಕ್ಕೆ ಬರುವ ೱ ವರ್ಣ. कᳵकरोति। कᳵखनति।

**जिह्वारद ಜಿಹ್ವಾರದ** (पुं०) ಪಕ್ಷಿ, ಹಕ್ಕಿ. जिह्वा रद इव यस्य। स्त्रियाम् जाति० "ङीष्" (४-१-६३)।

**जिह्वालौल्य ಜಿಹ್ವಾಲೌಲ್ಯ** (न०) ಜಿಹ್ವಾಚಾಪಲ್ಯ, ಹೊಟ್ಟೆಬಾಕತನ. जिह्वाया लौल्यम्। "जिह्वालौल्यप्रसक्तानां जलमध्यनिवासिनाम्" पञ्चतं० २-३।

**जिह्वास्वाद ಜಿಹ್ವಾಸ್ವಾದ** (पुं०) ನಾಲಗೆಯಿಂದ ರುಚಿ ನೋಡುವುದು, ನಾಲಗೆಯಿಂದ ಸವಿಯುವುದು. जिह्वया आस्वादः।

**जिह्वास्वादन ಜಿಹ್ವಾಸ್ವಾದನ** (न०) ನಾಲಗೆಯಿಂದ ನೆಕ್ಕಿ ರುಚಿನೋಡುವುದು, ನಾಲಗೆಯಿಂದ ಸವಿಯುವುದು. जिह्वया आस्वादनम्।

**जीन ಜೀನ** (न०) 1. ಚರ್ಮದ ಚೀಲ. (वि०) 2. ವೃದ್ಧ, ಮುದುಕ. ज्या (वयोहानौ) "क्तः" (३-४-७२)। संप्रसारणम् (६-१-१६)।

**जीमूत ಜೀಮೂತ** (पुं०) 1. ಮೇಘ, ಮೋಡ. जीवनं जलं मूतं बद्धमनेन—मूङ् (बन्धने) "क्तः" (३-२-१०२)। "श्च्योतन्मदाम्भःकणकेन केनचिज्जनस्य जीमूतकदम्बकद्युता" माघ० १२-४८। 2. ಪರ್ವತ, ಬೆಟ್ಟ. 3. ಸೇವಕ, ಆಳು. 4. ಇಂದ್ರ. 5. ದೇವತಾಳೆ ಮರ. "जीमूतोऽद्रौ भृतिकरे देवताडे पयोधरे" मेदि०। 6. ವೃತ್ತರತ್ನಾಕರದಲ್ಲಿ ಉಕ್ತವಾದ ದಂಡಕದ ಒಂದು ಭೇದ. "प्रतिचरणविवृद्धरेफाः स्युरर्णार्णवव्यालजीमूतलीलाकरोद्दामशङ्खादयः" वृ० र०। 7. ಕೊನ್ನಾರಿಯ ಒಂದು ಭೇದ. 8. ಒಬ್ಬ ಋಷಿ.

**जीमूतक ಜೀಮೂತಕ** (पुं०) ದೇವತಾಳೆ ಮರ. जीमूत स्वार्थे "कः"। "जीमूतकैःकोशवतीफलैश्च दन्तीन्द्रवन्तीत्रिवृतासु चैव" सुश्रुत० चिकित्सा० १८-२०।

**जीमूतकूट ಜೀಮೂತಕೂಟ** (पुं०) ಪರ್ವತ, ಬೆಟ್ಟ.

**जीमूतकेतु ಜೀಮೂತಕೇತು** (पुं०) ಒಬ್ಬ ವಿದ್ಯಾಧರ ರಾಜ, ಜೀಮೂತವಾಹನನ ತಂದೆ.

**जीमूतमूल ಜೀಮೂತಮೂಲ** (न०) ಕಚೋರ. जीमूतस्य मूलमिव मूलमस्य।

**जीमूतवाहन ಜೀಮೂತವಾಹನ** (पुं०) 1. ಇಂದ್ರ. जीमूतो मेघो वाहनमस्य। 2. ಜೀಮೂತಕೇತುವಿನ ಮಗ, ಒಬ್ಬ ವಿದ್ಯಾಧರರಾಜಕುಮಾರ. "अथ तस्याचिरादेव राज्ञः सूनुरजायत। जीमूतवाहनं तं च नाम्ना स विदधे पिता" कथास०।

**जीर ಜೀರ** (पुं०) 1. ಜೀರಿಗೆ 2. ಖಡ್ಗ, ಕತ್ತಿ. ज्या (वयोहानौ) "रक्" (उ० २-२४)। (वि०) 3. ವೇಗವಾದ, ಚುರುಕಾದ. संज्ञायां "कन्" (५-३-७५)। जीरकः ಜೀರಕಃ.

**जीरण ಜೀರಣ** (पुं०) ಜೀರಿಗೆ. जरयति—जॄ (वयोहानौ) +णिच् "ल्युः" (३-१-१३४)। पृषो०।

**जीर्ण ಜೀರ್ಣ** (वि०) 1. ಜೀರ್ಣ, ಮುದುಕ, ವೃದ್ಧ. जीर्यति स्म—जॄष् (वयोहानौ) "क्तः" (३-४-७२)। "जीनो जीर्णो जरन्नपि" अम०। 2. ಪುರಾತನವಾದ, ಹಳೆಯದಾದ. "वासांसि जीर्णानि यथा विहाय नवानि गृह्णाति नरोऽपराणि" गीता २-२२। 3. ಜಠರಾಗ್ನಿಯಿಂದ ಅರಗಿಸಲ್ಪಟ್ಟ, ಜಠರಾಗ್ನಿಯಿಂದ ಪಕ್ವವಾದ. "जीर्णेऽन्ने वर्धते वायुर्विदग्धे पित्तमेव तु। भुक्तमात्रे कफश्चापि तस्माद्भुक्तेरितं कफम्" सुश्रुत० सूत्र० ४६-४८४। (न०) 4. ಸಾಂಬ್ರಾಣಿ. 5. ಮುಪ್ಪು, ಮುದಿತನ.

**जीर्णज्वर ಜೀರ್ಣಜ್ವರ** (पुं०) ಹಳೆಯ ಜ್ವರ, ಬಿಡಲಾರದ ಜ್ವರ, ಹನ್ನೆರಡು ದಿನಗಳಿಗೂ ಮೇಲ್ಪಟ್ಟ ಜ್ವರ, ಬಹಳ ಕಾಲದಿಂದಲೂ ಎಳೆಯುತ್ತಿರುವ ದೀರ್ಘಜ್ವರ. जीर्णश्चासौ ज्वरश्च। "यो द्वादशभ्यो दिवसेभ्य ऊर्ध्वं दोषत्रयेभ्यो द्विगुणेभ्य ऊर्ध्वम्। नृणां तनौ तिष्ठति मन्दवेगो भिषग्भिरुक्तो ज्वर एष जीर्णः" भावप्र०। "शठी तमालकीभार्गी मेदामलकपौष्करैः। क्षीरद्विगुणसंयुक्तं जीर्णज्वरमपोहति" सुश्रुत० उत्तरतं० ३९-२२५।

**जीर्णज्वरिन् ಜೀರ್ಣಜ್ವರಿನ್** (वि०) ಹಳೆಯ ಜ್ವರದಿಂದ ಕೂಡಿದ, ಬಹಳಕಾಲದಿಂದಲೂ ಪೀಡಿಸುತ್ತಿರುವ ಜ್ವರವುಳ್ಳ. जीर्णज्वरोऽस्यास्ति "इनिः" (५-२-११५)। "जीर्णज्वरी नरः कुर्यान्नोपवासं कदाचन। लङ्घनात्स भवेत् क्षीणो ज्वरस्तु स्याद्बली यतः" भावप्र०।

**जीर्णपर्ण** ಜೀರ್ಣಪರ್ಣ (पुं०) 1. ಕದಂಬವೃಕ್ಷ, ಈಚಲು ಮರ. (न०) 2. ಹಳೆಯ ಎಲೆ, ಹಣ್ಣೆಲೆ. (वि०) 3. ಹಣ್ಣೆಲೆಗಳಿಂದ ಕೂಡಿದ. जीर्णानि पर्णान्यस्य।

**जीर्णवत्** ಜೀರ್ಣವತ್ (वि०) ಮುದಿಯಾಗಿರುವ, ಮುಪ್ಪನ್ನು ಹೊಂದಿರುವ.

**जीर्णवस्त्र** ಜೀರ್ಣವಸ್ತ್ರ (न०) ಹಳೆಯ ಬಟ್ಟೆ. जीर्णं वस्त्रम्।

**जीर्णवाटिका** ಜೀರ್ಣವಾಟಿಕಾ (स्त्री०) ಹಳೆಯ ಉದ್ಯಾನವನ.

**जीर्णशक्ति** ಜೀರ್ಣಶಕ್ತಿ (स्त्री०) ಆಹಾರವನ್ನು ಅರಗಿಸುವ ಶಕ್ತಿ, ಹೊಟ್ಟೆಯಲ್ಲಿ ತಿಂದ ಆಹಾರವನ್ನು ಪಚನಮಾಡುವ ಶಕ್ತಿ.

**जीर्णा** ಜೀರ್ಣಾ (स्त्री०) ದೊಡ್ಡ ಜಾತಿಯ ಜೀರಿಗೆ.

**जीर्णि** ಜೀರ್ಣಿ (स्त्री०) 1. ಮುಪ್ಪು, ಮುದಿತನ. जॄ (वयोहानौ) "क्तिन्" (३-३-९४)। 2. ಜೀರ್ಣವಾಗುವಿಕೆ, ಆಹಾರ ಮೊದಲಾದುದು ಅರಗುವಿಕೆ.

**जीर्णोद्धार** ಜೀರ್ಣೋದ್ಧಾರ (पुं०) ಹಳೆಯ ಕಟ್ಟಡ ಮೊದಲಾದುವುಗಳ ದುರಸ್ತು, ಹಳೆಯ ಮನೆ ಮಠ ಮೊದಲಾದುವುಗಳನ್ನು ಒಳ್ಳೆಯ ಸ್ಥಿತಿಗೆ ತರುವುದು. जीर्णस्य उद्धारः।

**जीर्णोद्धृत** ಜೀರ್ಣೋದ್ಧೃತ (वि०) ದುರಸ್ತುಮಾಡಲ್ಪಟ್ಟ ಕಟ್ಟಡ ಮೊದಲಾದುದು.

**जीर्णोद्यान** ಜೀರ್ಣೋದ್ಯಾನ (न०) ಹಳೆಯ ಉಪವನ, ಸರಿಯಾದ ಸ್ಥಿತಿಯಲ್ಲಿಲ್ಲದ ಕೈತೋಟ.

**जीर्यत्** ಜೀರ್ಯತ್ (वि०) ಮುದಿಯಾಗುತ್ತಿರುವ, ಮುಪ್ಪನ್ನು ಹೊಂದುತ್ತಿರುವ. जॄष् (वयोहानौ) "शतृ" (३-२-१२४)। "जीर्यन्ते जीर्यतः केशा दन्ता जीर्यन्ति जीर्यतः। जीर्यतश्चक्षुषी श्रोत्रे तृष्णैका तरुणायते" पञ्चतं० ५-८०। स्त्रियाम् "ङीप्" (४-१-६)। **जीर्यन्ती** ಜೀರ್ಯಂತೀ.

**जीवि** ಜೀವಿ (पुं०) ಪರಶು, ಕೊಡಲಿ.

**जील** ಜೀಲ (न०) ಚರ್ಮದ ಚೀಲ, ತೊಗಲಿನ ಪಾತ್ರೆ. "जीलं चर्मपुटः" वैज०।

**जीव – प्राणधारणे** (भ्वा० पर० अक० से०)। जीवति। जिजीव। जीविता। जीविष्यति। जीवतु। अजीवत्। जीवेत्। जीव्यात्। अजीवीत्। अजीविष्यत्। ಜೀವಿಸಿರು, ಬದುಕಿರು. "यस्मिन् जीवति जीवन्ति बहवः स तु जीवतु। यस्मै जीवन्ति बहवः न स जीवतु जीवतु"।

**भावे** :–जीव्यते। जिजीवे। जीविता। जीविष्यते। जीव्यताम्। अजीव्यत। ಇತ್ಯಾದಿ.

**कर्मणि** :–जीव्यते। जीवयां चक्रे, –बभूवे, –आसे। जीवयिता, जीविता। जीवयिष्यते, जीविष्यते। जीव्यताम्। अजीव्यत। जीव्येत। ಇತ್ಯಾದಿ.

**सनि** :–जिजीविषति। जिजीविषां चकार, –बभूव, आस। जिजीविषिता। जिजीविषिष्यति। जिजीविषतु। ಇತ್ಯಾದಿ.

**कृत्सु** :–जीवितव्यम्। जीवनीयम्। जीव्यम्। जीवितः। जीवितवान्, –वती। जीवन्, जीवन्ती। जीवितुम्। जीवितम्। जीवनम्। जीवित्वा। उपजीव्य।

**ण्यन्तात् कृत्सु** :–जीवयितव्यः। जीवनीयः। जीव्यः। जीवितवान्। जीवयन्, –यन्ती। जीवयमानः। जीवयितुम्। जीवितम्। जीवनम्। जीवयित्वा। उपजीव्य।

**ಈ ಧಾತುವಿಗೆ ಉಪಸರ್ಗಗಳ ಯೋಗದಿಂದ ಉಂಟಾಗುವ ಅರ್ಥಭೇದಗಳು :**

**(1) अति + जीव** = अतिजीवति। अतिजीवनम्। ಮೀರಿಸಿ ಬದುಕು, ಮಿಗಿಲಾಗಿ ಬದುಕು, ಅತಿಶಯವಾಗಿ ಜೀವಿಸು. "प्रेमदत्तवदनानिलः पिबन्नत्यजीवदमरालकेश्वरी" रघु० १९-१५।

**(2) अनु + जीव** = अनुजीवति। अनुजीवनम्। अनुजीविन् (वी) 1. ಸಮನಾಗಿ ಬದುಕು, ಅನುರೂಪವಾಗಿ ಬದುಕು. 2. ಅನುಸರಿಸಿ ಜೀವಿಸು, ಆಶ್ರಯಿಸಿ ಬದುಕು. "जीवन्तं त्वानुजीवन्तु प्रजाः सर्वा युधिष्ठिर" भा० उद्योग०। "न वञ्चनीयाः प्रभवोऽनुजीविभिः" किरा० १-४।

**(3) आ + जीव** = आजीवति। आजीवः। 1. ಭೋಗಿಸು, ಅನುಭವಿಸು. "आजीवन् स्वेच्छया दण्डचो दाप्यस्तं चापि सोदयम्" याज्ञ० २-६७। 2. ಉದ್ಯೋಗ ಕಲ್ಪಿಸು, ಜೀವನೋಪಾಯವನ್ನು ಕಲ್ಪಿಸು. "यमाजीवन्ति पुरुषं सर्वभूतानि संजय। पक्वं द्रुममिवासाद्य तस्य जीवितमर्थवत्" भा० उद्योग० १३३-४३।

**(4) उद् + जीव** = उज्जीवति। उज्जीवनम्। ಮತ್ತೆ ಬದುಕು, ಬದುಕಿ ಉಸಿರಾಡು. "उदजीवत् सुमित्राभूर्भ्राताऽऽश्लिष्यत्तमायतम्" भट्टि० १७-९५।

**(5) उप + जीव** = उपजीवति। उपजीवनम्। ಆಶ್ರಯಿಸಿ ಜೀವಿಸು, ಒಬ್ಬನ ಆಶ್ರಯಪಡೆದು ಜೀವನಮಾಡು. "शेषास्तमुपजीवेयुः यथैव पितरं तथा" मनु० ९-१०५।

**जीव ಜೀವ** (ಪ್ರಂ) 1. ಪ್ರಾಣಿ. जीव (प्राणधारणे) "अच्" (३-१-१३४)। "अहस्तानि सहस्तानामपदानि चतुष्पदाम्। फल्गूनि तत्र महतां जीवो जीवस्य जीवनम्" ಭಾಗ० १-१३-४६। 2. ಬೃಹಸ್ಪತಿ, ದೇವತೆಗಳ ಗುರು. जीवयति – जीव + णिच् "अच्" (३-१-१३४)। "अस्माल्लिङ्गार्चनान्नित्यं जीवभूतोऽसि मे यतः। अतो जीव इति ख्यातिं त्रिषु लोकेषु यास्यसि" काशीखं०। 3. ವಿಷ್ಣು. भागवतानात्मनाशात् व्यावर्त्य स्वपरिचर्यया जीवयति – जीव + णिच् "अच्" (३-१-१३४)। "तानात्मनाशाद्व्यावर्त्य सत्वान्यश्च स्वसेवया। उज्जीवयति जीवः सः भक्तक्लेशासहो मनुः" इति निरुक्तिः। "आनन्दमूर्तिर्भगवान् हरिस्त्रैलोक्यपूजितः। द्रष्टुं न सहते देवि क्लिष्टान् स्वपरिचारकान्"। "जीवो विनयिता साक्षी" वि० स०। 4. ಕ್ಷೇತ್ರಜ್ಞ, ಜೀವಾತ್ಮ. [ನಾನಾ ದರ್ಶನಕಾರರು ಹೇಳಿರುವ ಜೀವಾತ್ಮಸ್ವರೂಪದ ವಿವರವನ್ನು "आत्मन्" ಪದದಲ್ಲಿ ನೋಡಿ]. ಎಲ್ಲಾ ದರ್ಶನಕಾರರೂ ಅಂಗೀಕರಿಸಿರುವ ಜೀವಾತ್ಮರು ಜನ್ಮ ಜರಾಮರಣರೂಪವಾದ ಕ್ಲೇಶಗಳನ್ನು ಅನುಭವಿಸಲೇ ಬೇಕು. ಜೀವನು ತನ್ನ ಕರ್ಮಾನುಸಾರ ತಿರ್ಯಕ್ ಮನುಷ್ಯಾದಿ ದೇಹವನ್ನು ಪಡೆಯಲು ಆಹಾರಾದಿಗಳ ಮೂಲಕ ಪುರುಷನ ರೇತಸ್ಸನ್ನು ಆಶ್ರಯಿಸಿ ಸ್ತ್ರೀಯರ ಗರ್ಭವನ್ನು ಸೇರುವನು. ರೇತಸ್ಸು ಹತ್ತು ದಿನಗಳ ಬಳಿಕ ಅಂಡಾಕಾರವಾಗುವುದು. ಈ ರೂಪವನ್ನು ತಾಳಿದ ಜೀವನಿಗೆ ಒಂದು ತಿಂಗಳಲ್ಲಿ ತಲೆಯೂ ಎರಡು ತಿಂಗಳಲ್ಲಿ ಶರೀರವೂ ಕರಚರಣಮೊದಲಾದ ಅವಯವಗಳೂ ಉಂಟಾಗುವುವು. ಮೂರು ತಿಂಗಳಲ್ಲಿ ನಖ ಕೂದಲು ಅಸ್ಥಿ (ಎಲುಬು) ಚರ್ಮ ಸ್ತ್ರೀಪುರುಷ ಚಿಹ್ನೆಗಳು ಹುಟ್ಟುವುವು. ನಾಲ್ಕು ತಿಂಗಳಲ್ಲಿ ರಕ್ತ ಮಾಂಸ ಮೊದಲಾದ ಸಪ್ತಧಾತು ಗಳೂ ಐದನೆಯ ತಿಂಗಳಲ್ಲಿ ಹಸಿವೂ ಬಾಯಾರಿಕೆಯೂ ಉಂಟಾಗುವುವು. ಆರನೆಯ ತಿಂಗಳಲ್ಲಿ ಗರ್ಭಾಶಯದಿಂದ ಆವರಿಸಲ್ಪಟ್ಟ ತಾಯಿಯ ಹೊಟ್ಟೆಯ ಬಲಭಾಗದಲ್ಲಿ ಚಲಿಸಲು ಆರಂಭಿಸುವುದು. ತಾಯಿ ತಿಂದ ಆಹಾರದಿಂದಲೇ ಬೆಳೆಯುತ್ತ ಮಲಮೂತ್ರಾಶಯಗಳಲ್ಲಿ ಹೊರಳಾಡುತ್ತ ಅಲ್ಲಿರುವ ಕ್ರಿಮಿಕೀಟಾದಿಗಳ ಬಾಧೆಗಳನ್ನು ತಡೆಯಲಾರದೆ ಪದೇ ಪದೇ ಪ್ರಜ್ಞಾಹೀನನಾಗುವನು. ತಾಯಿ ತಿನ್ನುವ ಹುಳಿ ಕಹಿ ಕಾರದ ಆಹಾರಗಳಿಂದ ಅವಯವಗಳಲ್ಲಿ ಬಾಧೆ ಗಳನ್ನು ಅನುಭವಿಸುತ್ತ ತಾಯಿಯ ಹೊಟ್ಟೆಯಲ್ಲಿ ಬೆನ್ನು ಕತ್ತುಗಳನ್ನು ಬಗ್ಗಿಸಿಕೊಂಡು ಅತ್ತಿತ್ತ ಚಲಿಸಲೂ ಶಕ್ತಿ ಯಿಲ್ಲದೆ ಪೇಚಾಡುವನು. ಈ ಅವಸ್ಥೆಯನ್ನು ಅನುಭವಿಸು ತ್ತಿರುವ ಜೀವನಿಗೆ ಹಿಂದಿನ ನೂರಾರು ಜನ್ಮಗಳಲ್ಲಿ ತಾನು ಮಾಡಿದ ಪುಣ್ಯಪಾಪಗಳ ಸ್ಮರಣೆಯುಂಟಾಗಿ ಅದರಿಂದ ಪರಿತಪಿಸುವನು. ಏಳನೆಯ ತಿಂಗಳಿಂದ ಸರಿಯಾದ ಜ್ಞಾನ ವುಂಟಾದರೂ ಪ್ರಸೂತಿವಾಯುವಿನಿಂದ ಒಂದು ಕಡೆ ನಿಲ್ಲದೆ ಹೊರಳಾಡುತ್ತಿರುವನು. ಹತ್ತನೆಯ ತಿಂಗಳಲ್ಲಿ ಪ್ರಸೂತಿ ವಾಯುವಿನಿಂದ ಹೊರಕ್ಕೆ ನೂಕಲ್ಪಟ್ಟು ಜನ್ಮವನ್ನು ತಾಳು ವನು. ಭೂಸ್ಪರ್ಶವಾದ ಕೂಡಲೆ ಮಾಯೆಯಿಂದ ಪೂರ್ವ ಜನ್ಮಸ್ಮರಣೆಯು ನಾಶವಾಗಿ ಕಿರುಚಿಕೊಳ್ಳುವನು. ಶಿಶು ವಾಗಿರುವಾಗ ಅವನ ಅವಸ್ಥೆಯನ್ನು ಹೇಳತೀರದು. ಹಸಿ ವನ್ನು ಹೇಳಿಕೊಳ್ಳಲು ಬಾಯಿಲ್ಲ. ನವೆಯಾದರೆ ಕೆರೆದು ಕೊಳ್ಳಲು ಶಕ್ತಿಯಿಲ್ಲ. ಹೇಸಿಗೆಯ ಹಾಸಿಗೆಯಲ್ಲಿ ಮಲಗಿ ಕೊಂಡು ಸೊಳ್ಳೆ ತಿಗಣೆ ಮೊದಲಾದುವುಗಳ ಕಡಿತದಿಂದ ಉಂಟಾಗುವ ಬಾಧೆಯನ್ನು ಅನುಭವಿಸುತ್ತ ಒದ್ದಾಡು ತ್ತಿರುವನು. ಈ ರೀತಿ ಮೂಕಪ್ರಾಣಿಯಂತೆ ಶೈಶವವನ್ನು ಕಳೆದು ಮುಂದೆ ಬಾಲ್ಯ ಯೌವನ ಮುಂತಾದ ಅವಸ್ಥೆ ಗಳಲ್ಲಿ ಇವನ ಪ್ರಾಪಂಚಿಕ ವ್ಯವಹಾರಗಳು ನಡೆಯಬೇಕು. ವಿವೇಕದಿಂದ ನಡೆದುಕೊಂಡರೆ ಶುಭಫಲ. ಅವಿವೇಕಿ ಯಾಗಿ ಅಜ್ಞಾನದಿಂದ ವ್ಯವಹರಿಸಿದರೆ ಅದರ ಫಲವನ್ನು ಮುಂದೆ ಜನ್ಮಜನ್ಮಾಂತರಗಳಲ್ಲಿಯೂ ಅನುಭವಿಸ ಬೇಕಾಗುವುದು.] ಭಾಗ० ३-३१। 5. ಕರ್ಣ. 6. ಪ್ರಾಣ ಧಾರಣ, ಬದುಕಿರುವುದು, ಜೀವಿಸಿರುವುದು. जीव भावे "घञ्" (३-३-१८)। 7. ಪ್ರಾಣವಾಯು. 8. ವೃತ್ತಿ, ಜೀವಿಕೆ, ಜೀವನೋಪಾಯ. 9. ಸೀಹಾಲೆ ಗಿಡ. 10. ಪುಷ್ಯನಕ್ಷತ್ರ. 11. (ಜೈನಮತದಲ್ಲಿ) ಜೀವಾಸ್ತಿಕಾಯ. (वि०) 12. ಜೀವದಿಂದ ಕೂಡಿರುವ, ಜೀವಸಹಿತವಾದ. "कर्षन्तो लाङ्गलैः पुंसो घ्नन्ति भूमिशयान् बहून्। जीवानन्यांश्च सुबहून् तत्र किं प्रतिभाति ते॥ धान्यबीजानि यान्याहुर्व्रीह्यादीनि द्विजोत्तम। सर्वाण्येतानि जीवानि तत्र किं प्रतिभाति ते॥ जीवा हि बहवो ब्रह्मन् वृक्षेषु च फलेषु च॥ उदके बहवश्चापि तत्र किं प्रतिभाति ते" भा० वन० २१२। **ಜೀವನ ಪ್ರಮಾಣ:** ಒಂದು ಕೂದಲಿನ ತುದಿ ಯನ್ನು ನೂರು ಭಾಗ ಮಾಡಿ ಅದರ ಒಂದು ಭಾಗವನ್ನು ಮತ್ತೆ ನೂರು ಭಾಗ ಮಾಡಿದರೆ ಆ ನೂರನೆಯ ಒಂದು ಭಾಗವು ಜೀವನ ಪ್ರಮಾಣ. "वालाग्रशतभागस्य शतधा कल्पितस्य च। भागो जीवः स विज्ञेयः स चानन्त्याय कल्पते" इति श्रुतिः।

**जीवक ಜೀವಕ** (ಪುಂ) 1. ಹೊನ್ನೆಮರ. जीवयति—जीव (प्राणधारणे)+णिच् "ण्वुल्" (३-१-१३३)। "सर्जक-

सनबन्धूकपुष्पप्रियकजीवकाः" अम०। 2. ಪ್ರಾಣಿ. 3. ಸೇವಕ, ಇತರರ ಆಶ್ರಯದಿಂದ ಜೀವಿಸುವವನು. 4. ಭಿಕ್ಷುಕ, ಯಾಚಕ. 5. ಕ್ಷಪಣಕ, ಬೌದ್ಧಸಂನ್ಯಾಸಿ. 6. ಹಾವಾಡಿಗ. 7. ಹಕ್ಕಿಸಿಳ್ಳಿಗಿಡ. "कूर्चशीर्षो मधुरकः शृङ्गह्रस्वाङ्गजीवकाः" अम०। (वि०)8. ಬಹುಕಾಲ ಬದುಕುವವನು. 9. ಬಡ್ಡಿಯ ಹಣದಿಂದ ಜೀವಿಸುವವನು. 10. ಜೀವನವನ್ನು ಕೊಡುವವನು. 11. ಶ್ರೇಷ್ಠವಾದ. "जीवकः प्रवरे जन्तौ श्रमणे वृद्धिजीविनि" वैज०। "जीवकः पीतसाले स्यात् क्षपणे वृद्धिजीविनि। सेविनि प्राणकेऽप्याहितुण्डिके पादपान्तरे" विश्व०। 12. ಜೀವಿಸಿರುವವನು, ಬದುಕಿರುವವನು, ಜೀವನ ನಡೆಸುವವನು.

**जीवकोश ಜೀವಕೋಶ** (पुं०) ಜೀವಾತ್ಮನಿಗೆ ಆವರಣವಾಗಿರುವ ಒಂದು ಕೋಶ. "दहत्यवीर्यं हृदयं जीवकोशं पञ्चात्मकं योनिमिवोत्थितोऽग्निः" भाग० ४-२२-२६।

**जीवग्राहम् ಜೀವಗ್ರಾಹಮ್** (अव्य०) ಜೀವಸಹಿತ ಹಿಡಿದು. जीवन्तं गृहीत्वा – ग्रह (उपादाने) "णमुल्" (३-४-३६)। "जीवग्राहं ग्राहयामासुरन्ये योग्येनार्थः कस्य न स्याज्जनेन" माघ० १८-६६।

**जीवजीव ಜೀವಜೀವ** (पुं०) ಚಕೋರಪಕ್ಷಿ. स्त्रियाम् जाति० "ङीष्" (४-१-६३)। **–जीवी –ಜೀವೀ.**

**जीवजीवक ಜೀವಜೀವಕ** (पुं०) ಚಕೋರಪಕ್ಷಿ, जीवजीव स्वार्थे "कः"। "हृत्वा रक्तानि वासांसि जायते जीवजीवकः" मनु० १२-६६।

**जीवञ्जीव ಜೀವಂಜೀವ** (पुं०) 1. ಚಕೋರಪಕ್ಷಿ. 2. ಒಂದು ಮರ. जीवं जीवयति – जीव (प्राणधारणे) "खच्" बाहु० (३-३-११३)। "जीवञ्जीवश्चकोरे स्यात् द्रुमभेदेऽपि पुंस्ययम्" मेदि०।

**जीवत् ಜೀವತ್** (वि०) ಬದುಕಿರುವ, ಪ್ರಾಣವನ್ನು ಹೊಂದಿರುವ. जीव (प्राणधारणे) "शतृ" (३-२-१२४)। "जीवन् पुनः शश्वदुपप्लवेभ्यः प्रजाः प्रजानाथ पितेव पासि" रघु० २-४८। स्त्रियाम् "ङीप्" (४-१-६)। **जीवन्ती ಜೀವಂತೀ.** "जीवन्तीं मां यथा रामः संभावयति कीर्तिमान्। तत्तथा हनुमन् वाच्यं वाचा धर्ममवाप्नुहि" रामा०।

**जीवत्तोका ಜೀವತ್ತೋಕಾ** (स्त्री०) ಬದುಕಿರುವ ಮಕ್ಕಳುಳ್ಳ ಹೆಂಗಸು. जीवत् तोकं यस्याः।

**जीवत्पति ಜೀವತ್ಪತಿ** (स्त्री०) ಬದುಕಿರುವ ಗಂಡನುಳ್ಳ ಹೆಂಗಸು, ಸುಮಂಗಲಿ. जीवन् पतिः यस्याः। "कप्" (५-४-१५४)। **–पतिका –ಪತಿಕಾ.**

**जीवत्पितृक ಜೀವತ್‌ಪಿತೃಕ** (पुं०) ಬದುಕಿರುವ ತಂದೆಯುಳ್ಳ ಮಗ. जीवन् पिता यस्य। "कप्" (५-४-१५४)।

**जीवथ ಜೀವಥ** (पुं०)1. ಜೀವ, ಪ್ರಾಣ. जीव (प्राणधारणे) "अथः" (उ० ३-११३)। 2. ಕೂರ್ಮ, ಆಮೆ. 3. ಮಯೂರ, ನವಿಲು. 4. ಮೇಘ, ಮೋಡ. (वि०)5. ದೀರ್ಘಾಯುಷ್ಮಂತ, ದೀರ್ಘಕಾಲ ಬದುಕಿರುವವನು. 6. ಧಾರ್ಮಿಕ, ಸದಾಚಾರಸಂಪನ್ನ.

**जीवद ಜೀವದ** (पुं०)1. ವೈದ್ಯ, ಚಿಕಿತ್ಸಕ. जीवं ददाति–डु दाञ् (दाने) "कः" (३-२-३)। 2. ಶತ್ರು. जीवं द्यति खण्डयति –दो (अवखण्डने) "कः" (३-२-३)। (वि०) 3. ಜೀವನವನ್ನು ಕೊಡುವವನು.

**जीवदातृ ಜೀವದಾತೃ** (वि०) 1. ಜೀವವನ್ನು ಕೊಡುವವನು, ಪ್ರಾಣವನ್ನು ರಕ್ಷಿಸುವವನು. जीवस्य दाता। स्त्रियाम् "ङीप्" (४-१-५)। 2. ಜೀವನವನ್ನು ಕೊಡುವವನು. **–दात्री –ದಾತ್ರೀ.** (स्त्री०)3. ಜೀವಂತೀವೃಕ್ಷ, ಸಿಹಿಹಾಲೆಗಿಡ. 4. ಮಾಚಿಪತ್ರೆ.

**जीवदान ಜೀವದಾನ** (न०)1. ಜೀವವನ್ನು ಕೊಡುವುದು, ಪ್ರಾಣವನ್ನು ಕಾಪಾಡುವುದು. जीवस्य दानम्। 2. ಜೀವಿಕೆಯನ್ನು ಕೊಡುವುದು.

**जीवधन ಜೀವಧನ** (न०) ಹಸು ಮೊದಲಾದ ಜೀವರೂಪವಾದ ಸಂಪತ್ತು. जीव एव धनम्। "गवादिकं जीवधनम्" त्रिकाण्ड०।

**जीवधानी ಜೀವಧಾನೀ** (स्त्री०) ಪೃಥಿವಿ, ಭೂಮಿ. जीवाः धीयन्तेऽस्याम् – डु धाञ् (धारणपोषणयोः) "ल्युट्" (३-३-११७)। "ङीप्" (४-१-१५)। "ददर्श गां तत्र सुषुप्सुरग्रे यां जीवधानीं स्वयमभ्यधत्त" भाग० ३-१३-३०।

**जीवन ಜೀವನ** (पुं०)1. ಪರಮೇಶ್ವರ. जीवयति–जीव (प्राणधारणे) + णिच् कर्त० "ल्युः" (३-१-१३४)। स्वहस्तेन हननात् ग्राहमपि गन्धर्वत्वेन जीवयन् जीवनः। "स्वहस्तेन हतं ग्राहं गन्धर्वत्वेन जीवयन्। पूर्वशापं निरस्याथ यस्तिष्ठति स जीवनः" इति निरुक्तिः। "वीरहा रक्षणः सन्तो जीवनः पर्यवस्थितः" वि० स०। 2. ವಾಯು, ಗಾಳಿ. 3. ಪುತ್ರ, ಮಗ. (न०) 4.

ಸದ್ಯೋಘೃತ, ಹೊಸತುಪ್ಪ. 5. ಮಜ್ಜೆ, ದೇಹಸಾರ. 6. ಜೀವಿಕೆ, ಜೀವನೋಪಾಯ, ವೃತ್ತಿ, ಕಸಬು. **ಜೀವನಕ್ಕೆ ಸಾಧನವಾದ ಉಪಾಯಗಳು:** (1) ವಿದ್ಯೆ, (2) ಶಿಲ್ಪ, (3) ಕೂಲಿ, (4) ಸೇವೆ, (5) ಪಶುಪಾಲನೆ, (6) ವಾಣಿಜ್ಯ, (7) ವ್ಯವಸಾಯ, (8) ಸಂತೋಷ (ಧೈರ್ಯ), (9) ಭಿಕ್ಷೆ ಮತ್ತು (10) ಬಡ್ಡಿಗಾಗಿ ಧನವನ್ನು ಕೊಡುವ ವ್ಯವಹಾರ ಇವು ಹತ್ತು ಜೀವನಕ್ಕೆ ಉಪಾಯಗಳು. "विद्या शिल्पं भृतिः सेवा गोरक्ष्यं विपणिः कृषिः। धृतिर्भैक्ष्यं कुसीदं च दश जीवनहेतवः" मनु० १०-११६। 7. ಜಲ, ನೀರು. जीवत्यनेन—जीव कर० "ल्युट्" (३-३-११७)। "उपचितजीवनधाराः सत्पथभाजो निरस्तसन्तापाः" चं० रा०। "तडित्वन्तो महामेघाश्चण्डश्वसनवेपिताः। प्रीणनं जीवनं ह्यस्य मुमुचुः करुणा इव" भाग० १०-२०-६। 8. ಅನ್ನ. "जीवनान्नाशनान्धांसि" वैज०। 9. ಜೀವನ, ಬದುಕು, ಬಾಳುಮೆ. जीवं भावे "ल्युट्" (३-३-११५)। (वि०)10. ಜೀವನವನ್ನು ಕೊಡುವ, ಜೀವನೋಪಾಯವನ್ನು ಕಲ್ಪಿಸುವ.

**जीवनक ಜೀವನಕ** (न०) ಆಹಾರ, ಅನ್ನ. जीवन संज्ञायां "कन्"।

**जीवना ಜೀವನಾ** (स्त्री०) ಮೇದೆಯೆಂಬ ಒಂದು ಔಷಧದ ಲತೆ. जीवयति—जीव (प्राणधारणे) + णिच् "ल्युः" (३-१-१३४)।

**जीवनाघात ಜೀವನಾಘಾತ** (पुं०) ಜೀವನವನ್ನು ನಾಶಗೊಳಿಸುವ ವಿಷ, ಪ್ರಾಣತೆಗೆಯುವ ನಂಜು. जीवनस्याघातो यस्मात्।

**जीवनावास ಜೀವನಾವಾಸ** (पुं०) 1. ವರುಣ. जीवनं जलमावासोऽस्य। 2. ಶರೀರ, ದೇಹ. जीवनस्यावासः।

**जीवनी ಜೀವನೀ** (स्त्री०) ಸಿಹಿಹಾಲೆಗಿಡ. जीवत्यनेन—जीव (प्राणधारणे) कर० "ल्युट्" (३-३-११७)। "ङीप्" (४-१-१५)। "जीवन्ती जीवनी जीवा" अम०।

**जीवनीय ಜೀವನೀಯ** (न०) 1. ಜಲ, ನೀರು. जीव्यतेऽनेन—जीव (प्राणधारणे) कर० बाहु० "अनीयर्"। "कृपीटं काण्डमस्त्री स्यात् जीवनीयं कुशं विषम्" अम०। 2. ಕ್ಷೀರ, ಹಾಲು. "ऊधस्यं जीवनीयं च धारोष्णं त्वमृतं पयः" वैज०। (स्त्री०) **-या -ಯಾ.** 3. ಸಿಹಿಹಾಲೆಗಿಡ. (वि०)4. ಬದುಕಿಸಲ್ಪಡುವ, ಜೀವನ ನಡೆಸಲ್ಪಡುವ. जीव कर्म० "अनीयर्" (३-१-९६)

**जीवनौषध ಜೀವನೌಷಧ** (न०) ಬದುಕಿಸುವ ಔಷಧ.

**जीवन्त ಜೀವಂತ** (पुं०) 1. ಪ್ರಾಣ. 2. ಔಷಧ. (वि०) 3. ಜೀವಿಸಿರುವ, ಬದುಕಿರುವ. जीव (प्राणधारणे) "झच्" (उ० ३-१२७)।

**जीवन्तिका ಜೀವಂತಿಕಾ**(स्त्री०)1. ಬದನಿಕೆಗಿಡ, ಮರದ ಮೇಲೆ ಬೆಳೆಯುವ ಬಳ್ಳಿ. 2. ಅಮೃತಬಳ್ಳಿ. जीव (प्राणधारणे) "झच्" (उ० ३-१२७)। "ङीष्" (४-१-६१)। "कन्" (५-३-७५)।

**जीवन्ती ಜೀವಂತೀ** (स्त्री०) 1. ಸಿಹಿಹಾಲೆಗಿಡ. जीव (प्राणधारणे) "शतृ" (३-२-१२४)। "ङीप्" (४-१-६)। 2. ಶಮೀವೃಕ್ಷ, ಬನ್ನಿಮರ. 3. ಬದನಿಕೆಗಿಡ, ಮರದ ಮೇಲೆ ಬೆಳೆಯುವ ಬಳ್ಳಿ. 4. ಅಮೃತಬಳ್ಳಿ. "जीवन्ती शमीवन्दयोः। जीवन्यां च गुडूच्यां च" हेम०। 5. ಅಳಲೆಗಿಡ.

**जीवन्मुक्त ಜೀವನ್ಮುಕ್ತ**(वि०)ವಿರಕ್ತ, ಜೀವಿಸಿರುವಾಗಲೇ ಬ್ರಹ್ಮಜ್ಞಾನಪಡೆದು ಸಂಸಾರದಿಂದ ಬಿಡುಗಡೆ ಹೊಂದಿದವನು. जीवन्नेव मुक्तः। ಜೀವನಿಗೆ ಬ್ರಹ್ಮಸಾಕ್ಷಾತ್ಕಾರವಾದರೂ ಪ್ರಾರಬ್ಧಕರ್ಮವು ಮುಗಿಯುವವರೆಗೆ ದೇಹಪಾತವಾಗದೆ ಹಾಗೆಯೇ ಇರುವನು. ಆಗ ರಾಗದ್ವೇಷಾದಿಗಳಿಲ್ಲದಿದ್ದರೂ ಪ್ರಾರಬ್ಧಕರ್ಮಬಲದಿಂದ ಇವನ ವ್ಯವಹಾರವೆಲ್ಲವೂ ನಡೆಯುವುವು. "उत्पन्नात्मावबोधस्य ह्यद्वेष्टृत्वादयो गुणाः। अयत्नतो भवन्त्यस्य न तु साधनरूपिणः"।

**जीवन्मुक्ति ಜೀವನ್ಮುಕ್ತಿ** (स्त्री०) ಬದುಕಿರುವಾಗಲೇ ಆತ್ಮಜ್ಞಾನ ಪಡೆದು ಸಂಸಾರಬಂಧನದಿಂದ ಬಿಡುಗಡೆ ಹೊಂದುವುದು. जीवतो मुक्तिः।

**जीवन्मृत ಜೀವನ್ಮೃತ** (वि०) ಬದುಕಿದ್ದರೂ ಮೃತನ ಸಮಾನನು, ಬದುಕಿದ್ದು ತನ್ನ ಕರ್ತವ್ಯವನ್ನು ನೆರವೇರಿಸದೆ ಕೇವಲ ತನ್ನ ಹೊಟ್ಟೆಪಾಡು ನೋಡಿಕೊಳ್ಳುವವನು. जीवन्नेव मृतः मृततुल्यः। "जीवन्तो मृतकाश्चान्ये य आत्मम्भरयो नराः"।

**जीवपति ಜೀವಪತಿ** (स्त्री०) ಸುಮಂಗಲಿ, ಜೀವಿಸಿರುವ ಪತಿಯುಳ್ಳ ಹೆಂಗಸು. जीवः जीवन् पतिर्यस्याः। "एतच्चरित्वा विधिवद्व्रतं विधोरभीप्सितार्थं लभते पुमानिह। स्त्रीत्वेतदास्थाय लभेत सौभगं श्रियं प्रजां जीवपतिं यशो गृहम्" भाग० ६-१९-२५। वा "कप्" (५-४-१५४)। **-पतिका -ಪತಿಕಾ.**

**जीवपत्नी ಜೀವಪತ್ನೀ** (स्त्री०) ಸುಮಂಗಲಿ, ಬದುಕಿರುವ ಪತಿಯುಳ್ಳ ಹೆಂಗಸು. जीवः जीवन् पतिर्यस्याः वा "नः" (४-१-३४)। "ङीप्" (४-१-५)। पक्षे **जीवपतिः ಜೀವಪತಿಃ.** "वाचं विसृजेत् जीवपत्नीं प्रजां विन्देयेति" आश्व० गृ०।

**जीवपुत्र ಜೀವಪುತ್ರ** (पुं०) 1. ಬದುಕಿರುವ ಮಗನುಳ್ಳ ತಂದೆ. जीवः जीवन् पुत्रो यस्य। (स्त्री०)2. ಬದುಕಿರುವ ಮಗನುಳ್ಳ ತಾಯಿ. जीवः पुत्रो यस्याः।

**जीवपुत्रक ಜೀವಪುತ್ರಕ** (पुं०) ಮಗನಂತೆ ಬದುಕಿಸುವ ಒಂದು ವೃಕ್ಷ, ಇಂಗುದೀ ವೃಕ್ಷ. जीवयति—जीव (प्राणधारणे) + णिच् "अच्" (३-१-१३४)। जीवः पुत्र इव हर्षहेतुत्वात्। इवार्थे "कन्" (५-३-९७)।

**जीवप्रिया ಜೀವಪ್ರಿಯಾ**(स्त्री०)1. ಅಳಲೆಗಿಡ. (वि०) 2. ಬದುಕಿರುವ ಪತ್ನಿಯುಳ್ಳ ಪುರುಷ (ಗಂಡ).

**जीवभद्रा ಜೀವಭದ್ರಾ** (स्त्री०) ಸಿಹಿಹಾಲೆಗಿಡ.

**जीवमन्दिर ಜೀವಮಂದಿರ** (न०) ಶರೀರ, ದೇಹ. जीवस्य मन्दिरम्।

**जीवमातृका ಜೀವಮಾತೃಕಾ** (स्त्री०) ಕುಮಾರಿ ಮೊದಲಾದ ಏಳು ಸ್ತ್ರೀ ದೇವತೆಗಳು. "कुमारी धनदा नन्दा विमला मङ्गला बला। पद्मा चेति च विख्याताः सप्तैता जीवमातृकाः" विधानपारिजातः।

**जीवयोनि ಜೀವಯೋನಿ** (स्त्री०) ಜೀವಸಹಿತವಾದ ಪ್ರಾಣಿ, ಬದುಕಿರುವ ಪ್ರಾಣಿ. जीवा जीवनवती योनिः। "तिर्यङ्मनुष्यविबुधादिषु जीवयोनिषु" भाग० ३-९-१९।

**जीवरक्त ಜೀವರಕ್ತ** (न०) ಹೆಂಗಸರ ರಜಸ್ಸು. जीवोत्पादकं रक्तम्। ಹೆಂಗಸರ ರಜಸ್ಸು ಪೃಥಿವಿ, ಅಪ್ಪು, ತೇಜಸ್ಸು, ವಾಯು ಮತ್ತು ಆಕಾಶ ರೂಪವಾದ ಪಂಚಭೂತಾತ್ಮಕವಾದುದು. "आर्तवं शोणितं त्वाग्नेयमग्नीषोमीयत्वात् गर्भस्य। पाञ्चभौतिकं त्वपरे जीवरक्तमाहुराचार्याः। विस्रता द्रवता रागः स्पन्दनं लघुता तथा। भूम्यादीनां गुणाह्येते दृश्यन्ते चात्र शोणिते" सुश्रुत० सूत्र० १४-७, ८, ९।

**जीवलोक ಜೀವಲೋಕ** (पुं०) 1. ಸಂಸಾರ. जीवानां जीवात्मनां लोकःभोगसाधनम्। "माता पिता गुरुजनः स्वजनो ममेति मायोपमे जगति कस्य भवेत्प्रतिज्ञा। एको यतो व्रजति कर्मपुरःसरोऽयं विश्रामवृक्षसदृशः खलु जीवलोकः"। "ममैवांशो जीवलोके जीवभूतः सनातनः" गीता १५-७। 2. ಜೀವರೂಪವಾದ ಜನ. जीवश्चासौ लोकश्च। "सुवृष्टियोगादिव जीवलोकः सस्येन संपत्तिफलोन्मुखेन" रघु० १८-२। 3. ಭೂಮಿ, ಮನುಷ್ಯಲೋಕ. "मर्त्यलोको जीवलोकः" वैज०।

**जीववृत्ति ಜೀವವೃತ್ತಿ** (स्त्री०)1. ಪಶುಪಾಲನೆ, ಗೋವು ಮೊದಲಾದ ಪ್ರಾಣಿಗಳ ಪೋಷಣೆ. जीव एव वृत्तिः। 2. ಜೀವದಲ್ಲಿರುವ ಗುಣ. जीवे वृत्तिरस्य।

**जीवसंक्रमण ಜೀವಸಂಕ್ರಮಣ** (न०) 1. ಜನ್ಮಾಂತರ, ಜೀವವು ಬೇರೆ ಜನ್ಮಹೊಂದುವುದು, ಜೀವವು ಪಾರ್ಥಿವ ಶರೀರಕ್ಕೆ ಪ್ರವೇಶಿಸುವುದು. जीवस्य पार्थिवादिशरीरे संक्रमणम्। 2. ಪರಕಾಯಪ್ರವೇಶ, ಯಾವುದಾದರೊಂದು ಕಾರ್ಯಸಾಧನೆಗಾಗಿ ಜೀವವು ಒಂದು ಶರೀರದಿಂದ ಮತ್ತೊಂದು ಶರೀರದೊಳಕ್ಕೆ ಪ್ರವೇಶಿಸುವುದು.

**जीवसाक्षिन् ಜೀವಸಾಕ್ಷಿನ್** (वि०) ಆತ್ಮಸಾಕ್ಷಿಯಾಗಿರುವ. जीवं एव साक्षी यस्य।

**जीवसाधन ಜೀವಸಾಧನ**(न०)ಧಾನ್ಯ. जीवस्य जीवनस्य साधनम्। ಧಾನ್ಯವು ಪ್ರಾಣಿಗಳ ಜೀವನಕ್ಕೆ ಮುಖ್ಯ ಕಾರಣವಾದುದರಿಂದ ಈ ಹೆಸರು.

**जीवसू ಜೀವಸೂ** (स्त्री०) ಬದುಕಿರುವ ಮಕ್ಕಳ ತಾಯಿ, ಬದುಕಿರುವ ಮಕ್ಕಳನ್ನು ಪ್ರಸವಿಸುವ ಹೆಂಗಸು. जीवं जीवन्तं सूते—षूङ् (प्राणिगर्भविमोचने) "क्विप्" (३-२-६१) "जीवसूर्वीरसूर्भद्रे बहुसौख्यगुणान्विता। सुभगा भोगसंपन्ना यज्ञपत्नी पतिव्रता" भा०आदि० २१६।

**जीवस्थान ಜೀವಸ್ಥಾನ** (न०). ಹೃದಯ, ಮರ್ಮಸ್ಥಾನ. जीवस्य स्थानम्।

**जीवहिंसा ಜೀವಹಿಂಸಾ** (स्त्री०) ಪ್ರಾಣಿಹಿಂಸೆ, ಪ್ರಾಣಿಗಳನ್ನು ಪೀಡಿಸುವುದು.

**जीवा ಜೀವಾ** (स्त्री०) 1. ಧನುಸ್ಸಿನ ಗುಣ, ಬಿಲ್ಲಿನ ಹೆದೆ, ಬಿಲ್ಲಿಗೆ ಬಿಗಿದುಕಟ್ಟುವ ತೊಗಲಿನ ಹಗ್ಗ. जीवयति—जीव (प्राणधारणे) + णिच् "अच्" (३-१-१३४)। 2. ಸಿಹಿಹಾಲೆಗಿಡ. 3. ಬಜೆ. 4. ಭೂಮಿ. 5. ಆಭರಣಗಳ ಶಬ್ದ. "जीवा जीवन्तिका मौर्वी वचा शिञ्जितभूमिषु" मेदि०। 6. ವೃತ್ತಿ, ಜೀವನೋಪಾಯ. "जीवा तु वचायां धनुषो गुणे। शिञ्जिते क्षितिजीवन्त्योर्वृत्तौ" हेम०। 7. ಜೀವನ, ಬದುಕು. जीव भावे "अः" (३-३-१०३)।

**जीवातु ಜೀವಾತು**(पुं०)1. ಬದುಕಿಸುವ ಔಷಧ, ಜೀವನದ ಔಷಧ, ಜೀವವನ್ನು ಕೊಡುವ ಔಷಧ. "अवधि दर्शनीयानामाकल्पमनघं दिवः। जीवातुं देवसैन्यानां दर्पभङ्गं

विरुन्धताम्" याद० १६-१८। 2. ಜೀವನಕ್ಕೆ ಕಾರಣವಾದ ಅನ್ನ. जीवयति – जीव (प्राणधारणे) + णिच् "आतुः" (उ०.१-७९)। जीवत्यनेन – जीव कर० "आतुः"। 3. ಜೀವಧಾರಣೆ, ಬದುಕುವುದು, ಜೀವಿಸುವುದು. जीव भावे "आतुः"। "रे हस्त दक्षिण मृतस्य शिशोर्द्विजस्य जीवातवे विसृज शूद्रमुनौ कृपाणम्" उ० रा० २-१०।

**जीवात्मन् ಜೀವಾತ್ಮನ್** (पुं०) ಜೀವ, ಆತ್ಮ, ಪ್ರಾಣಿ. जीवस्य जीवनस्य आत्मा अधिष्ठाता। जीवश्चासौ आत्मा च। "जीवात्मन् पश्य भद्रं ते मातरं पितरं च ते। सुहृदो बान्धवास्तप्ताः शुचा त्वत्कृतया भृशम्" भाग० ६-१६-२।

**जीवाधार ಜೀವಾಧಾರ** (पुं०) ಜೀವಾತ್ಮನಿಗೆ ಆಧಾರವಾದ ಹೃದಯ. जीवस्य जीवात्मनः आधारः। "हृदयं तस्मात् हृदयम्" छान्दोग्य०।

**जीवान्तक ಜೀವಾಂತಕ** (पुं०) 1. ಬೇಟೆಗಾರ, ಜೀವನಕ್ಕಾಗಿ ಹಕ್ಕಿಗಳನ್ನು ಕೊಲ್ಲುವವನು, ವ್ಯಾಧ. जीवमन्तयति– अन्त+णिच् "ण्वुल्" (३-१-१३३)। "जीवान्तकः शाकुनिकः" अम०। (वि०) 2. ಪ್ರಾಣಿಗಳನ್ನು ಹಿಂಸಿಸುವವನು.

**जीवास्तिकाय ಜೀವಾಸ್ತಿಕಾಯ** (पुं०) ಜೈನಮತದವರು ಅಂಗೀಕರಿಸಿರುವ ಜೀವದ್ರವ್ಯ. ಜ್ಞಾನಸ್ವರೂಪವಾದ ಈ ಜೀವದ್ರವ್ಯವು ಬಹುಪ್ರದೇಶ ವ್ಯಾಪ್ತಿಯುಳ್ಳದ್ದರಿಂದ ಇದಕ್ಕೆ ಅಸ್ತಿಕಾಯವೆಂದು ಹೆಸರು.

**जीविका ಜೀವಿಕಾ** (स्त्री०) ವೃತ್ತಿ, ಕಸಬು, ಜೀವನೋಪಾಯ. जीव्यतेऽनया – जीव (प्राणधारणे) "अः" (३-३-१०३)। संज्ञायाम् "कन्" (५-३-७४)।

**जीवित ಜೀವಿತ** (न०) 1. ಜೀವನ, ಪ್ರಾಣಧಾರಣೆ. जीव (प्राणधारणे) भावे "क्तः" (३-३-११४)। "द्वारि चक्षुरधिपाणि कपोलौ जीवितं त्वयि कुतः कलहोऽस्याः" किरा० ९-४३। 2. ಜೀವ, ಪ್ರಾಣ. "जीवितं धारयिष्यामि मासं दशरथात्मज। ऊर्ध्वं मासान्न जीवेयं सत्येनाहं ब्रवीमि ते"। (वि०) 3. ಜೀವಿಸಿರುವ, ಬದುಕಿರುವ. जीव कर्त० "क्तः" (३-४-७२)। "प्राङ्मत्वा सत्यमस्यान्तं जीवितास्मीति लज्जिता" रघु० १२-७५।

**जीवितकाल ಜೀವಿತಕಾಲ** (पुं०) ಆಯುಸ್ಸು, ಬದುಕಿರುವ ಕಾಲ. जीवितस्य कालः।

**जीवितनाथ ಜೀವಿತನಾಥ** (पुं०) ಪ್ರಾಣನಾಥ, ಪತಿ, ಗಂಡ. जीवितस्य नाथः। "अयि जीवितनाथ जीवसीत्यभिधायोत्थितया तया पुरः" कुमा० ४-३।

**जीवितव्य ಜೀವಿತವ್ಯ** (वि०) ಅವಶ್ಯವಾಗಿ ಜೀವಿಸಿರಬೇಕಾದ. जीव (प्राणधारणे) "अनीयर्" (३-१-९६)। "प्रवृत्तिः कुत्र कर्यव्या जीवितव्यं कथं नु वा" हितो० १-२४।

**जीवितव्यय ಜೀವಿತವ್ಯಯ** (पुं०) ಜೀವಮಾನವನ್ನು ಪೋಲುಮಾಡುವುದು, ಆಯುಸ್ಸನ್ನು ವ್ಯರ್ಥಗೊಳಿಸುವುದು, ಆಯುಸ್ಸನ್ನು ವ್ಯರ್ಥವಾಗಿ ಕಳೆಯುವುದು.

**जीवितसंशय ಜೀವಿತಸಂಶಯ** (पुं०) ಬದುಕುವುದರಲ್ಲಿ ಉಂಟಾಗುವ ಸಂದೇಹ, ಬದುಕುವುದರಲ್ಲಿ ಉಂಟಾಗುವ ಗಂಡಾಂತರ, ಜೀವಕ್ಕೆ ಒದಗುವ ಅಪಾಯ, ಪ್ರಾಣಾಪಾಯ. "यत्रायुद्धे ध्रुवं मृत्युर्युद्धे जीवितसंशयः" हितो० २-१७०।

**जीवितसम ಜೀವಿತಸಮ** (वि०) ಪ್ರಾಣಕ್ಕೆ ಸಮಾನವಾದ. "समानाः स्वर्याताः सपदि सुहृदो जीवितसमाः" भर्तृ० ३-९।

**जीवितहारिन् ಜೀವಿತಹಾರಿನ್** (वि०) 1. ಪ್ರಾಣವನ್ನು ಹೋಗಲಾಡಿಸುವ, ಜೀವವನ್ನು ಕಳೆಯುವ. 2. ಬದುಕನ್ನು ಹಾಳುಮಾಡುವ, ಜೀವನವನ್ನು ನಾಶಗೊಳಿಸುವ, ಬದುಕಿಗೆ ಧಕ್ಕೆಯುಂಟುಮಾಡುವ. जीवितं प्राणं जीवनं वा हरति – हृञ् (हरणे) "णिनिः" (३-१-१३४)।

**जीवितात्यय ಜೀವಿತಾತ್ಯಯ** (पुं०) ಜೀವಕ್ಕೆ ಒದಗುವ ಗಂಡಾಂತರ, ಪ್ರಾಣಾಪಾಯ. जीवितस्यात्ययः। "जीवितात्ययमापन्नो योऽन्नमत्ति यतस्ततः। आकाशमिव पङ्केन न स पापेन लिप्यते" मनु० १०-१०४।

**जीविताश ಜೀವಿತಾಶ** (वि०) ಜೀವನದಲ್ಲಿ ಆಸೆಯುಳ್ಳ, ಬದುಕುವುದರಲ್ಲಿ ಆಸೆಯುಳ್ಳ. जीविते आशा यस्य। (स्त्री०) **–आशा –ಆಶಾ.** ಜೀವನದಲ್ಲಿ ಆಸೆ, ಬದುಕಿನಲ್ಲಿ ಆಸೆ. जीविते आशा। "जीविताशा बलवती धनाशा दुर्बला मम। गच्छ वा तिष्ठ वा कान्त स्वावस्था तु निवेदिता" काव्या० २-१३९।

**जीवितेश ಜೀವಿತೇಶ** (पुं०) 1. ಪ್ರಾಣನಾಥ, ಪತಿ, ಗಂಡ. जीवितस्य प्राणस्य ईशः। "विपुलतरनितम्बाभोगरुद्धे रमण्याः शयितुमनधिगच्छज्जीवितेशोऽवकाशम्" माघ० ११-५। 2. ಜೀವಗಳ ಒಡೆಯನಾದ ಯಮ. "जीवितेशवसतिं जगाम सा" रघु० ११-२०। 3. ಸೂರ್ಯ,

4. ಚಂದ್ರ. ಸೂರ್ಯಚಂದ್ರರು ದೇಹದೊಳಗೆ इडा ಮತ್ತು पिङ्गला ನಾಡಿಗಳಲ್ಲಿದ್ದುಕೊಂಡು ಪ್ರಾಣವಾಯು ಸಂಚಾರಕ್ಕೆ ಕಾರಣರಾದುದರಿಂದ ಈ ಹೆಸರು. "इडायां सञ्चरेच्चन्द्रः पिङ्गलायां दिवाकरः"। 5. ಜೀವಾತು, ಜೀವನೋಪಾಯ.

**जीविन् ಜೀವಿನ್** (पुं०) 1. ಪ್ರಾಣಿ, ಜೀವಸಹಿತವಾದ ಜಂತು. जीवोऽस्यास्ति "इनिः" (५-२-११५)। "जीविनां दारुणो रोगः कर्मभोगः शुभाशुभः। भक्तो वैद्यस्तं निहन्ति हरिभक्तिरसायनम्"। (वि०) 2. ಜೀವಿಸಿರುವ, ಬದುಕಿರುವ. जीवति—जीव (प्राणधारणे) "णिनिः" (३-१-१३४)। "भूतानां प्राणिनः श्रेष्ठाः प्राणिनां बुद्धिजीविनः। बुद्धिमत्सु नराः श्रेष्ठाः नरेषु ब्राह्मणाः स्मृताः" मनु० १-९६। 3. ಜೀವನೋಪಾಯವುಳ್ಳ.

**जीवोत्सर्ग ಜೀವೋತ್ಸರ್ಗ** (पुं०) ಜೀವತ್ಯಾಗ, ಜೀವ ಬಿಡುವುದು. जीवस्य उत्सर्गः।

**जीवोपाधि ಜೀವೋಪಾಧಿ** (पुं०) ಜೀವನ ಪರಿಸ್ಥಿತಿ, ಜೀವನ ಅವಸ್ಥೆ. जीवस्य उपाधिः। ಜೀವನಿಗೆ ಸ್ವಪ್ನ ಸುಷುಪ್ತಿ ಮತ್ತು ಜಾಗರಗಳೆಂಬ ಮೂರು ಅವಸ್ಥೆಗಳುಂಟು. ಈ ಮೂರೂ ಜೀವನಿಗೆ ಉಪಾಧಿಗಳು.

**जीव्य ಜೀವ್ಯ** (वि०) 1. ಜೀವಿಸಲು ಶಕ್ಯವಾದ, ಜೀವಿಸಬಹುದಾದ. जीव (प्राणधारणे) "ण्यत्" (३-१-१२४)। 2. ಜೀವನಕ್ಕೆ ಸಾಧನವಾದ ಉಪಾಯ. जीवाय हितम्।

**जीव्या ಜೀವ್ಯಾ** (स्त्री०) 1. ಜೀವನೋಪಾಯ. 2. ಅಳಲೆ ಗಿಡ. 3. ಸಿಹಿಹಾಲೆಗಿಡ. जीवाय हिता "यत्" (५-१-५)।

**जु—गतौ वेगे च** (अयं सौत्रधातुः गतौ आत्म० वेगे पर०)। जवते। जुजुवे। अजोष्ट। 1. ನಡೆ, ಹೋಗು. 2. ವೇಗವಾಗಿ ಹೋಗು.

**जुगि—वर्जने** (भ्वा० पर० सक० से०)। जुङ्गति। जुजुङ्ग। ವರ್ಜಿಸು, ತ್ಯಜಿಸು.

**जुगुप्सन ಜುಗುಪ್ಸನ** (न०) 1. ನಿಂದೆ, ದೂಷಣೆ. गुप (निन्दायाम्)+सन् भावे "ल्युट्" (३-३-११५)। (वि०) 2. ದೂಷಣಶೀಲ, ನಿಂದಿಸುವ ಸ್ವಭಾವದ. गुप+सन् "युच्" (३-२-१४९)।

**जुगुप्सनीय ಜುಗುಪ್ಸನೀಯ** (वि०) 1. ನಿಂದೆಗೆ ಅರ್ಹನಾದ. 2. ನಿಂದಿಸಲ್ಪಡುವ, ದೂಷಿಸಲ್ಪಡುವ. गुप (निन्दायाम्)+सन् "अनीयर्" (३-१-९६)। 3. ಅಸಹ್ಯಪಡಬಹುದಾದ.

**जुगुप्सा ಜುಗುಪ್ಸಾ** (स्त्री०) 1. ನಿಂದೆ, ದೂಷಣೆ. गुप (निन्दायाम्)+सन् "अः" (३-३-१०२)। 2. ಅಸಹ್ಯ, ಹೇಸಿಗೆ. ಜುಗುಪ್ಸೆಯು ಬೀಭತ್ಸರಸದ ಸ್ಥಾಯಿಭಾವ. ಶಾಂತರಸಕ್ಕೆ ವ್ಯಭಿಚಾರಿಭಾವವಾಗುವುದು. "जुगुप्सा-स्थायिभावस्तु बीभत्सः कथ्यते रसः। "शान्ते जुगुप्सा कथिता व्यभिचारितया पुनः" सा० द०।

**जुगुप्सित ಜುಗುಪ್ಸಿತ** (न०) 1. ನಿಂದೆ, ದೂಷಣೆ. 2. ಅಸಹ್ಯ, ಹೇಸಿಗೆ, (वि०) 3. ಅಸಹ್ಯಗೊಂಡ, 4. ನಿಂದಿಸಲ್ಪಟ್ಟ.

**जुङ्ग ಜುಂಗ** (पुं०) ಅನಂತನಗೊಂಡೆ ಸೊಪ್ಪು. जुगि (वर्जने) "अच्" (३-१-१३४)। "स्यादृक्षगन्धा छगलान्त्र्यावेगी वृद्धदारकः" अम०। "ण्वुल्" (३-१-१३३)। **जुङ्गकः ಜುಂಗಕಃ.**

**जुङ्गा ಜುಂಗಾ** (स्त्री०) ಅನಂತನಗೊಂಡೆ ಸೊಪ್ಪು. जुगि (वर्जने) "अच्" (३-१-१३४)।

**जुषी—प्रीतिसेवनयोः** (तुदा० आत्म० हर्षे अक० सेवायां सक० से०)। जुषते। जुजुषे। जोषिता। जोषिष्यते। जुषताम्। अजुषत। ಇತ್ಯಾದಿ. 1. ಸಂತೋಷಪಡು, ತೃಪ್ತಿಹೊಂದು, ಪ್ರೀತಿಸು, 2. ಸೇವಿಸು, ಆರಾಧಿಸು. 3. ಅನುಭವಿಸು, ಈಡಾಗು, ಒಳಗಾಗು. "पश्यन् जनं पतितं वैतरण्यां स्वकर्मजान् परितापाञ्जुषाणम्" भाग० २-२-७। 4. ಹೊಂದು, ಪಡೆ, ಸೇರು. "उष्णीषं मुमुचे चारु रथं च जुजुषे शुभम्" भट्टि० १४-९५।

**कर्मणि :**—जुष्यते। जुजुषे। जुष्यताम्। अजुष्यत। जुष्येत। अजोषि।

**णिचि :**—जोषयति, –ते। जोषयां चकार, –चक्रे, –बभूव, –आस। जोषयिता। जोषयिष्यति, –ते। जोषयतु, –ताम्। अजोषयत्, –त। जोषयेत्, –त। ಇತ್ಯಾದಿ. "जोषयेत् सर्वकर्माणि विद्वान् युक्तः समाचरन्" गीता ३-२६।

**कृत्सु :**—जोषितव्यम्। जोषणीयम्। जुष्यः। जुष्टः। जुष्टवान्। जुषमाणः। जुष्टम्। जोषणम्। जोषित्वा, जुषित्वा। उपजुष्य।

**जुष् ಜುಷ್** (वि०) 1. ಇಷ್ಟಪಡುವ, ಪ್ರೀತಿಸುವ. 2. ಅನುಭವಿಸುವ. जुषी (प्रीतौ सेवने च) "क्विप्" (३-२-७६)। (ಉಪಪದವಿರುವಲ್ಲಿ ಮಾತ್ರ). "धर्मादयः किमगुणेन च काङ्क्षितेन सारंजुषां चरणयोरुपगायतां नः" भाग० ७-६-२५। 3. ಸೇರುವ, ಹೊಂದುವ, ಮುಟ್ಟುವ.

"वक्षःस्थलस्पर्शरुग्णमहेन्द्रवाहदन्तैर्विडम्बितककुब्जुष ऊढहासम्" भाग० २-७-२५। 4. ಸೇವಿಸು.

**जुष्ट ಜುಷ್ಟ** (न०) 1. ಉಳಿಕೆ, ಶೇಷ, ಊಟಮಾಡಿ ಉಳಿದ ಅನ್ನ. जुषी (प्रीतिसेवनयोः) कर्म० "क्तः" (३-२-१०२)। (वि०) 2. ಸೇವಿಸಲ್ಪಟ್ಟ. "श्रिया जुष्टं दिव्यैः सपटहरवैरन्वितं पुष्पवर्षैः" माघ० २०-७९। "पुण्यो महाब्रह्मसमूहजुष्टः" भट्टि० १-४। 3. ಪ್ರೀತಿಸಲ್ಪಟ್ಟ, ಅಪೇಕ್ಷಿಸಲ್ಪಟ್ಟ. 4. ಸೇರಿಕೊಂಡಿರುವ, ಕೂಡಿಕೊಂಡಿರುವ. "जुष्टं विचित्रवैतानैर्महार्हैर्हेमतोरणैः" भाग० ३-१९। 5. ಸಂತೋಷಪಡಿಸಲ್ಪಟ್ಟ.

**जुहुराण ಜುಹುರಾಣ** (पुं०) 1. ಚಂದ್ರ. हुर्च्छा (कौटिल्ये) +सन् "असानच्" (उ० २-९१)। सनो लुक् छलोपश्च। (वि०) 2. ಕುಟಿಲವಾಗಿಮಾಡುವ, ವಕ್ರವಾಗಿಮಾಡುವ.

**जुहुवाण ಜುಹುವಾಣ** (पुं०) 1. ಅಗ್ನಿ. 2. ಅಧ್ವರ್ಯು, ಯಾಗದಲ್ಲಿ ಯಜುರ್ವೇದಪಠನಮಾಡುವವನು. 3. ಚಂದ್ರ. "जुहुवाणोऽपि चाध्वर्यावपि स्याज्जातवेदसि" मेदि०।

**जुहू ಜುಹೂ** (स्त्री०) 1. ಯಾಗದಲ್ಲಿ ಆಜ್ಯಾಹುತಿಗಾಗಿ ಪಲಾಶ (ಮುತ್ತುಗದ) ಮರದಿಂದ ಮಾಡಿದ ಅರ್ಧಚಂದ್ರಾಕಾರದ ಸವುಟು. जुहोत्यनया—हु (दानादनयोः) "क्विप्" द्वित्वं दीर्घश्च (वा० ३-२-१७८)। 2. ಪೂರ್ವದಿಕ್ಕು. जुहोत्यस्यां दिशि—हु अधि० "क्विप्"।

**जुहूवत् ಜುಹೂವತ್** (पुं०) ಅಗ್ನಿ.

**जुहूषत् ಜುಹೂಷತ್** (वि०) ಹೋಮಮಾಡಲು ಅಪೇಕ್ಷಿಸುತ್ತಿರುವ. हु (दानादनयोः) + सन् "शतृ" (३-२-१२४)। स्त्रियाम् "ङीप्" (४-१-६)। -षन्ती -ಷಂತೀ.

**जुहूषा ಜುಹೂಷಾ** (स्त्री०) ಹೋಮಮಾಡಲು ಅಪೇಕ್ಷೆ. होतुमिच्छा—हु (दानादनयोः) +सन् "अः" (३-३-१०२)।

**जुहूषु ಜುಹೂಷು** (वि०) ಹೋಮಮಾಡಲು ಅಪೇಕ್ಷೆಯುಳ್ಳವನು. होतुमिच्छुः—हु (दानादनयोः) + सन् "उः" (३-२-१६८)।

**जुह्वत् ಜುಹ್ವತ್** (वि०) ಹೋಮಮಾಡುತ್ತಿರುವ. हु (दानादनयो) "शतृ" (३-२-१२४)। स्त्रियाम् "ङीप्" (४-१-६)। जुह्वती ಜುಹ್ವತೀ.

**जुह्वास्य ಜುಹ್ವಾಸ್ಯ** (पुं०) ಹೋಮದ ಅಗ್ನಿ, ಆಜ್ಯಾಹುತಿಯನ್ನು ಸ್ವೀಕರಿಸುವ ಅಗ್ನಿ. जुहूरास्यमिवास्य।

**जू ಜೂ** (स्त्री०) 1. ಸರಸ್ವತಿ. 2. ಆಕಾಶ. 3. ವೇಗ. 4. ಪಿಶಾಚಿ, ರಾಕ್ಷಸಿ. 5. ಗಮನ, ನಡಗೆ, 6. ವೇಗದ ನಡಗೆ. जु (गतौ) "क्विप्" (उ० २-५८)। "जूस्त्वरागमने प्रोक्ता सामान्यगमने स्त्रियाम्। जूराकाशसरस्वत्यां पिशाच्यां जवने स्त्रियाम्" मेदि०। (वि०) 7. ವೇಗವಾದ, ಶೀಘ್ರವಾದ.

**जूट ಜೂಟ** (पुं०) 1. ಗಂಟುಹಾಕಿದ ಜಟೆಗಳ ಸಮೂಹ. 2. ಜಟೆ. "भूतेशस्य भुजङ्गवल्लिवलयस्रङ्नद्धजूटा जटाः" मालती० १-१। "जटाजूटापीडं भुजगपतिभोगोपमभुजम्" चं० रा०। स्वार्थे "कन्"। जूटकः ಜೂಟಕಃ.

**जूत ಜೂತ** (वि०) 1. ಎಳೆಯಲ್ಪಟ್ಟ. 2. ಗತವಾದ, ಕಳೆದುಹೋದ. 3. ಕೊಡಲ್ಪಟ್ಟ.

**जूति ಜೂತಿ** (स्त्री०) 1. ವೇಗ. जु (गतौ) भावे "क्तिन्" (३-३-९७)। दीर्घश्च निपा०। 2. ನಡೆ, ಚಲನೆ, ಮುಂದೆ ಸಾಗುವುದು. "जूतिमिच्छथ चेत्तूर्णम्" भट्टि० ७-६९।

**जूर ಜೂರ** (पुं०) ಹಿಂಸೆ, ಪೀಡೆ. जूरी (हिंसायाम्) भावे "घञ्" (३-३-१८)। "रेजारिजूरजोर्जाऽर्जी" माघ० १९-१०२।

**जूर्ति ಜೂರ್ತಿ** (स्त्री०) ಜ್ವರ. ज्वर (रोगे) भावे "क्तिन्" (३-३-९४)। "ऊठ्" (३-४-२०)।

**जृभि – गात्रविनामे** (भ्वा० आत्म० अक० से०)। जृम्भते। जजृम्भे। जृम्भिता। जृम्भिष्यते। जृम्भताम्। अजृम्भिष्ट। ಇತ್ಯಾದಿ. 1. ವಿಕಾಸಹೊಂದು, ಅರಳು. 2. ಬಾಯಿ ತೆಗೆದುಕೊಂಡಿರು, ಆಕಳಿಸು. 3. ವ್ಯಾಪಿಸು, ಹರಡು. 4. ವಿಸ್ತಾರವಾಗು, ದೊಡ್ಡದಾಗು. "आत्मानमाधाय मधुर्जजृम्भे" कुमा० ३-२४। "क्षुवतीं जृम्भमाणां वा न चासीनां यथासुखम्" मनु० ४-४३।

**जृम्भ ಜೃಂಭ** (पुं०) 1. ಆಕಳಿಕೆ. जृभि (गात्रविनामे) भावे "घञ्" (३-३-१८)। "पीत्वैकमनिलोच्छ्वासमुद्वेष्टन् विवृताननः। यं मुञ्चति सनेत्रास्रं स जृम्भ इति संज्ञितः" सुश्रुत० शारीर० ४-५०। 2. ವಿಕಾಸ, ಅರಳುವುದು.

**जृम्भक ಜೃಂಭಕ** (पुं०) 1. ಕೃಶಾಶ್ವಮುನಿಯ ಮಗ. (न०) 2. ಜೃಂಭಕಾಸ್ತ್ರ. ವಿಶ್ವಾಮಿತ್ರ ಋಷಿಯು ಶ್ರೀರಾಮನಿಗೆ ಉಪದೇಶಿಸಿ ಕೊಟ್ಟ ಒಂದು ಅಸ್ತ್ರ. जृम्भयति—जृभि (गात्रविनामे) "ण्वुल्" (३-१-१३३)। "मुनिर्भृशाश्वोपज्ञानि ताटकामाथिने ददौ। अस्त्राणि जृम्भकादीनि जम्भशासनशासनात्" चं० रा०। (वि०) 3. ಆಕಳಿಸುವವನು.

**जृम्भण ಜೃಂಭಣ** (न०) 1. ವಿಕಾಸಹೊಂದುವುದು, ಅರಳುವುದು. 2. ಆಕಳಿಕೆ, ಮೈಮುರಿಯುತ್ತ ಬಾಯಿತೆಗೆದು ಗಾಳಿಯನ್ನು ಎಳೆದುಕೊಂಡು ಮತ್ತೆ ಹೊರಕ್ಕೆ ಬಿಡುವುದು. जृभि (गात्रविनामे) भावे "ल्युट्" (३-३-११५)। 3. ಬೆಳೆಯುವುದು, ದೊಡ್ಡದಾಗುವುದು. 4. ಜೃಂಭಕಾಸ್ತ್ರ. (वि०) 5. ಆಕಳಿಸುವ. 6. ಅಂಗಗಳನ್ನು ನೀಡಿ ಮೈ ಮುರಿಯುವ.

**जृम्भमाण ಜೃಂಭಮಾಣ** (वि०) 1. ಬೆಳೆಯುತ್ತಿರುವ, ದೊಡ್ಡದಾಗುತ್ತಿರುವ. जृम्भते – जृभि (गात्रविनामे) "शानच्" (३-२-१२४)। "तस्य देवपृतनाविधूतये जृम्भमाणवपुषो महौजसः" याद० १७-५७। 2. ವಿಸ್ತಾರವಾಗುತ್ತಿರುವ, ಹರಡುತ್ತಿರುವ.

**जृम्भा ಜೃಂಭಾ** (स्त्री०) ಆಕಳಿಕೆ, ಮೈಮುರಿಯುತ್ತ ಬಾಯಿತೆಗೆದು ಗಾಳಿಯನ್ನು ಎಳೆದುಕೊಂಡು ಮತ್ತೆ ಹೊರಕ್ಕೆ ಬಿಡುವುದು. जृभि (गात्रविनामे) भावे "अ:" (३-३-१०३)।

**जृम्भिका ಜೃಂಭಿಕಾ** (स्त्री०) ಆಕಳಿಕೆ. जृम्भा स्वार्थे "कन्" (५-४-५)। अत इत्वम्। ಯುದ್ಧದಲ್ಲಿ ವೃತ್ರಾಸುರನು ಇಂದ್ರನನ್ನು ನುಂಗಿಬಿಟ್ಟನು. ಅವನ ರಕ್ಷಣೆಗಾಗಿ ದೇವತೆಗಳು ಜೃಂಭಿಕೆಯೆಂಬ ಶಕ್ತಿಯೊಂದನ್ನು ಸೃಷ್ಟಿಸಿದರು. ಇದರಿಂದ ವೃತ್ರಾಸುರನ ದೇಹವು ಬೆಳೆದು ಅವನ ಬಾಯಿಯು ವಿಸ್ತಾರಗೊಂಡಿತು. ಇಂದ್ರನು ಆಗ ಬಾಯಿಂದ ಹೊರಬಂದು ಬದುಕಿದನು. ಅಂದಿನಿಂದ ಜೃಂಭಿಕೆಯು ಜನರ ಪ್ರಾಣವಾಯುವಿನೊಡನೆ ಸೇರಿಕೊಂಡಿತು. ಈಗ ಪ್ರಾಣಗಳು ಆಯಾಸಪರಿಹಾರಕ್ಕಾಗಿ ಮೈಮುರಿಯುತ್ತ ಬಾಯಿಂದ ಹೊರಕ್ಕೆ ಬಿಡುವ ಗಾಳಿಯೇ ಆಕಳಿಕೆ. ಅದೇ ಜೃಂಭಿಕೆ. "ततो जग्राह देवेन्द्रं वृत्रो वीरः शतक्रतुम्। अपावृत्याक्षिपद्वक्त्रे शक्रं कोपसमन्वितः। ग्रस्ते वृत्रेण शक्रे तु संभ्रान्तास्त्रिदिवौकसः। असृजंस्ते महासत्वा जृम्भिकां वृत्रनाशिनीम्। विजृम्भमाणस्य ततो वृत्रस्यास्यादपावृतात्। स्वान्यङ्गान्यभिसंक्षिप्य निष्क्रान्तो बलनाशनः। ततः प्रभृति लोकस्य जृम्भिका प्राणसंश्रिता। जहृषुश्च सुराः सर्वे शक्रं दृष्ट्वा विनिःसृतम्" भा० उद्योग० ९-६०-६३।

**जृम्भिणी ಜೃಂಭಿಣೀ** (स्त्री०) ರಾಕ್ಷಸಿ. जृभि (गात्रविनामे) "णिनिः" (३-१-१३४)। "ङीप्" (४-१-५)।

**जृम्भित ಜೃಂಭಿತ** (न०) 1. ಆಕಳಿಕೆ. जृभि (गात्रविनामे) भावे "क्तः" (३-३-११४)। 2. ವಿಕಾಸಹೊಂದುವುದು, ಅರಳುವುದು. 3. ಒಡೆಯುವುದು, ಸ್ಫೋಟನ, ಸಿಡಿಯುವುದು. 4. ಬೆಳೆಯುವುದು, ದೊಡ್ಡದಾಗುವುದು. (वि०) 5. ಬೆಳೆದಿರುವ, ವೃದ್ಧಿಹೊಂದಿರುವ. 6. ಅರಳಿರುವ. 7. ಸಿಡಿದಿರುವ. जृभि कर्त० "क्तः" (३-४-७२)। 8. ಬಾಯಿ ತೆರೆಯಿಸಲ್ಪಟ್ಟ. 9. ಅರಳಿಸಲ್ಪಟ್ಟ. 10. ವಿಸ್ತಾರಗೊಳಿಸಲ್ಪಟ್ಟ. 11. ಬೆಳಸಲ್ಪಟ್ಟ. जृभि कर्म० "क्तः" (३-२-१०२)।

**जृम्भिन् ಜೃಂಭಿನ್** (वि०) 1. ಆಕಳಿಸುವ. 2. ಅರಳುವ. जृभि (गात्रविनामे) "णिनिः" (३-१-१३४)।

**जॄ – वयोहानौ** (क्र्या० पर० अक० से०)। जृणाति।

जजार जजरतुः } जजरुः }
जेरतुः } जेरुः } ಇತ್ಯಾದಿ.

**जॄ – वयोहानौ** (वा चुरा० उभ० अक० से०)। जारयति, –ते। णिजभावे जरति। जजार जजरतुः जेरतुः, जजरुः जेरुः। ಇತ್ಯಾದಿ.

**जॄष् – वयोहानौ** (दिवा० पर० अक० से०)। जीर्यति। जजार जजरतुः जेरतुः, जजरुः जेरुः। जरिता जरीता। जरिष्यति जरीष्यति। जीर्यतु। अजीर्यत्। जीर्येत्। ಇತ್ಯಾದಿ.

भावे :—जीर्यते। जेरे। जारिता, जरिता, जरीता। जारिष्यते, जरिष्यते, जरीष्यते। जीर्यताम्। अजीर्यत। ಇತ್ಯಾದಿ. ಮುದಿಯಾಗು, ಮುದುಕನಾಗು, ವಯಸ್ಸನ್ನು ಕಳೆ, ಜೀವಿತಕಾಲವನ್ನು ಕಳೆದುಕೊ.

**कृत्सु** :—जरितव्यम्, जरीतव्यम्। जरणीयम्। जार्यम्। अजर्यं संगतमिति कर्तरि यदन्तो निपातितः। जीर्णः। जीर्णवान्। जीर्यन्, जीर्यन्ती। जरन्, जरती। जरितुम्, जरीतुम्। जीर्णम्। जरणम्। जरित्वा, जरीत्वा। निजीर्य।

**जेङ्गट ಜೇಂಗಟ** (पुं०) ಗರ್ಭಿಣಿಯರ ದೌಹೃದ, ಬಸಿರು ಹೆಂಗಸರ ಬಯಕೆ. "जेङ्गटो दोहदः स्मृतः" हारा०।

**जेतव्य ಜೇತವ್ಯ** (वि०) 1. ಜಯಿಸಬೇಕಾದ. 2. ಜಯಿಸಲು ಯೋಗ್ಯನಾದ. 3. ಜಯಿಸಬಹುದಾದ. जि (जये) "तव्यः" (३-१-९६)। "मा वेदि यदसावेको जेतव्यश्चेदिराडिति" माघ० २-९६।

**जेतृ ಜೇತೃ** (पुं०) 1. ವಿಷ್ಣು. जयति स्वाभिप्रायेष्ववस्थापयति। "स्वाभिप्राये स्थापयिता जेता स्याद्विधिशंकरौ" इति निरुक्तिः। "अनघो विजयो जेता विश्वयोनिः पुनर्वसुः" वि० स०। (वि०) 2. ಜಯಿಸುವ,

ಜಯಶೀಲ. जि (जये) "तृन्" (३-२-१३५)। "त्वयि प्रतिद्वन्द्विनि कस्य किं बलं क एव जेता न भवेत्त्वयेक्षितः" याद० १४-३९। स्त्रियाम् "ङीप्" (४-१-५)। **जेत्री ಜೇತ್ರೀ.**

**जेन्ताक ಜೇಂತಾಕ** (न०) ಸ್ವೇದೋತ್ಪಾದನಕ್ಕಾಗಿ ಏರ್ಪಟ್ಟಿರುವ ಶಾಖವಾಗಿರುವ ಕೊಠಡಿ, ಮೈಯಲ್ಲಿ ಚೆನ್ನಾಗಿ ಬೆವರು ಬರಲು ನಿರ್ಮಿತವಾದ ಬಹಳ ಉಷ್ಣವಾದ ಕೋಣೆ. [ವಿವರಕ್ಕೆ "ಚರಕಸಂಹಿತೆ" ಯಲ್ಲಿ ನೋಡಿ].

**जेमन ಜೇಮನ** (न०) ಆಹಾರ, ಭೋಜನ. जिमु (अदने) "ल्युट्" (३-३-११५)। "जेमनं लेप आहारः" अम०।

**जेय ಜೇಯ** (वि०) ಜಯಿಸಲು ಯೋಗ್ಯನಾದ, ಜಯಿಸಲು ಅರ್ಹನಾದ. जेतुं योग्यः – जि (जये) "यत्" (३-१-९७)। "विगृह्य शत्रून् कौन्तेय जेयः क्षितिपतिस्तदा" भा० आश्रम० ७-७।

**जेषृ – गतौ** (भ्वा० आत्म० सक० से०)। जेषते। जिजेषे। जेषिता। जेषिष्यते। जेषताम्। ಇತ್ಯಾದಿ. ಹೋದು, ಹೋಗಿಸೇರು, ತಲುಪು.

**जेहृ – प्रयत्ने** (भ्वा० आत्म० अक० से०)। जेहते। जिजेहे। जेहिता। जेहिष्यते। जेहताम्। ಇತ್ಯಾದಿ.

**जैत्र ಜೈತ್ರ** (पुं०) 1. ಪಾದರಸ. (वि०) 2. ಜಯಶೀಲ, ಗೆಲ್ಲುವಸ್ವಭಾವದ. जेतृ स्वार्थे "अण्" (५-४-३८)। "लोकं विधात्रा विहितस्य गोप्तुं क्षत्रस्य मुष्णन् वसु जैत्रमोजः" किरा० ३-४१। "वार्षिकं सञ्जहारेन्द्रो धनुर्जैत्रं रघुर्दधौ" रघु० ४-१६। स्त्रियाम् "ङीप्" (४-१-१५)। **जैत्री ಜೈತ್ರೀ.** "जगज्जिगीषोर्मदनस्य जैत्री पताकयेवाद्धृतकेतुयष्टिः" याद० १३-४९।

**जैत्ररथ ಜೈತ್ರರಥ** (वि०) ಜಯಶೀಲ, ಗೆಲ್ಲುವವನು. जैत्रो रथो यस्य।

**जैन ಜೈನ** (पुं०) 1. ಜಿನದೇವ, ಜಿನಮುನಿ. जिन एव–स्वार्थे "अण्" (५-४-३८)। (वि०) 2. ಜಿನ ಸಂಬಂಧವಾದ. जिनस्येदम् "अण्" (४-३-१२०)। 3. ಜಿನಮತಾನುಯಾಯಿ. जिनो देवताऽस्य "अण्" (४-२-२४)।

**जैनदर्शन ಜೈನದರ್ಶನ** (न०) ತತ್ತ್ವಮಾರ್ಗದಲ್ಲಿ ಹೊರಟಿರುವ ಭಾರತೀಯ ದರ್ಶನಗಳಲ್ಲಿ ಜೈನತತ್ತ್ವವಿಚಾರ ಮಾಡುವ ಒಂದು ದರ್ಶನ. ಪ್ರವಚನ ಶಾಸ್ತ್ರಪ್ರವರ್ತಕರಾದ ಇಪ್ಪತ್ತನಾಲ್ಕು ತೀರ್ಥಂಕರರು ಈ ಸಿದ್ಧಾಂತದ ಪ್ರಣೇತರು. ಈ ತೀರ್ಥಂಕರರಲ್ಲಿ ಮಹಾವೀರ ವರ್ಧಮಾನ ಜಿನೇಶ್ವರರು ಇಪ್ಪತ್ತನಾಲ್ಕನೆಯವರು. ಇವರೆಲ್ಲರೂ ಅರ್ಹಂತರಾಗಿ ಮುಕ್ತರಾದವರು. ಈ ತೀರ್ಥಂಕರರು ಪೂರ್ವಾಶ್ರಮದಲ್ಲಿ ಬಹಳ ವಿರಕ್ತರಾಗಿದ್ದು ಪರಮಹಂಸ ನಿರ್ಗ್ರಂಥ ದೀಕ್ಷೆಯನ್ನು ತೆಗೆದುಕೊಂಡು ಶುಕ್ಲಧ್ಯಾನದಿಂದ ರಾಗದ್ವೇಷಾದಿಗಳನ್ನು ಜಯಿಸಿದವರೆಂಬ ಅರ್ಥದಲ್ಲಿ ಇವರಿಗೆ "**ಜಿನ**" ರೆಂದೂ ಇವರಿಂದ ಉಪದಿಷ್ಟವಾದ ಈ ಮತಕ್ಕೆ "**ಜೈನಮತ**" ವೆಂದೂ ಪ್ರಸಿದ್ಧಿಯುಂಟಾಯಿತು. "अहिंसा परमो धर्मः" ಎಂದು ಪ್ರಾಣಿಸಾಮಾನ್ಯದಲ್ಲೂ ಆತ್ಮಪೀಡೆಯು ಕೂಡದೆಂದು ಅಹಿಂಸಾಧರ್ಮವನ್ನು ಪ್ರಚಾರಪಡಿಸಿದುದರಿಂದ ಇವರಲ್ಲಿ ಜನಾನುರಾಗವು ವೃದ್ಧಿಗೊಂಡು ಈ ಮತವು ಪ್ರಬಲವಾಯಿತು.

**ದ್ರವ್ಯ:** ಈ ಸಿದ್ಧಾಂತದಲ್ಲಿ ಉತ್ಪತ್ತಿ ವಿನಾಶ ಸ್ಥಿರತ್ವ ಈ ಸ್ವಭಾವವುಳ್ಳ ಉತ್ಪಾದವ್ಯಯಧ್ರೌವ್ಯದಿಂದ ಕೂಡಿದ ಸತ್ತೇ ದ್ರವ್ಯ. "सत् द्रव्यलक्षणम्" तत्त्वा० सू० ५-२९। "उत्पादव्ययध्रौव्ययुक्तं सत्" तत्त्वा० सू०। ದ್ರವ್ಯವು ಜೀವ ಅಜೀವ ಎಂದು ಎರಡು ವಿಧ. ಅಜೀವ ದ್ರವ್ಯವು ಧರ್ಮ ಅಧರ್ಮ ಆಕಾಶ ಕಾಲ ಮತ್ತು ಪುದ್ಗಲ ಎಂದು ಐದು ವಿಧ. ಇವುಗಳೊಡನೆ ಜೀವದ್ರವ್ಯವೂ ಸೇರಿ ದ್ರವ್ಯವು ಒಟ್ಟು ಆರು ವಿಧ. "अजीवकायाः धर्माधर्माकाशपुद्गलाः"। "द्रव्याणि"। "जीवाश्च" तत्त्वा० सू० ५-१, २, ३। ಇವುಗಳಲ್ಲಿ ಕಾಲದ್ರವ್ಯಹೊರತಾಗಿ ಉಳಿದೆಲ್ಲಾ ದ್ರವ್ಯಗಳೂ ಬಹುಪ್ರದೇಶವ್ಯಾಪ್ತಿಯುಳ್ಳವಾದುದರಿಂದ ಇವಕ್ಕೆ "ಅಸ್ತಿಕಾಯ" ವೆಂದು ವ್ಯವಹಾರವಿರುವುದು.

ಈ ಆರು ದ್ರವ್ಯಗಳಲ್ಲಿ ಜೀವದ್ರವ್ಯವು ಜ್ಞಾನಸ್ವರೂಪವಾದ್ದರಿಂದ ಚೇತನದ್ರವ್ಯವಾಯಿತು. ಉಳಿದುವು ಅಚೇತನ ದ್ರವ್ಯಗಳು. ಜೀವಪುದ್ಗಲಗಳು ಕ್ರಿಯಾಶ್ರಯದ್ರವ್ಯಗಳು. ಜೀವದ್ರವ್ಯವು ಕರ್ತೃ ಮತ್ತು ಭೋಕ್ತೃದ್ರವ್ಯವು. ಪುದ್ಗಲ ಪರಮಾಣುಗಳು ಶುಭಾಶುಭಯೋಗಗಳ ಮೂಲಕ ಜೀವನೊಡನೆ ಬೆರೆತು ಸುಖದುಃಖಗಳನ್ನು ಉಂಟುಮಾಡುತ್ತವೆ. ಜೀವನು ಶುಭಾಶುಭಯೋಗಗಳ ಮೂಲಕ ಪುಣ್ಯ ಪಾಪ ಪುದ್ಗಲಗಳನ್ನು ಎಳೆದುಕೊಂಡು ಬೆರೆಯುತ್ತಾನೆ. ಅದೇ ಬಂಧ. "सकषायत्वाज्जीवः कर्मणो योग्यान् पुद्गलानादत्ते, स बन्धः" तत्त्वा० सू० ८-२। ರಾಗದ್ವೇಷಾದಿಗಳು ಕರ್ಮಬಂಧಹೇತುಗಳು. "मिथ्यादर्शनाविरतिप्रमादकषाययोगा बन्धहेतवः" तत्त्वा० सू० ८-१।

**ತತ್ತ್ವ:** ಜೈನದರ್ಶನದಲ್ಲಿ ಜೀವ ಅಜೀವ ಆಸ್ರವ ಬಂಧ ಸಂವರ ನಿರ್ಜರೆ ಮತ್ತು ಮೋಕ್ಷಗಳೆಂದು ತತ್ತ್ವಗಳು ಏಳು. ಜ್ಞಾನಸ್ವರೂಪವಾದ ಚೇತನದ್ರವ್ಯವೇ

ಜೀವ. ಚೈತನ್ಯರಹಿತವಾದ ದ್ರವ್ಯವು ಅಜೀವ. ಕರ್ಮ ಬಂಧನದ ಆಗಮನದ್ವಾರವು ಆಸ್ರವ. ಆತ್ಮಪ್ರದೇಶ ಗಳೊಡನೆ ಕರ್ಮಪ್ರದೇಶಗಳ ಸಂಬಂಧವು ಬಂಧ. ಆಸ್ರವ ನಿರೋಧವು ಸಂವರ. ಆತ್ಮಪ್ರದೇಶದಿಂದ ಸಂಚಿತಕರ್ಮ ಗಳ ನಿರ್ಗಮನವು ನಿರ್ಜರೆ. ಆತ್ಮಪ್ರದೇಶದಿಂದ ಸಮಸ್ತ ಕರ್ಮಗಳ ಬಿಡುಗಡೆಯೇ ಮೋಕ್ಷ.

**ಜೀವ :** ಜೀವಗಳು ಸಂಸಾರಿ ಮತ್ತು ಮುಕ್ತ ಎಂದು ಎರಡು ವಿಧ. ಕರ್ಮಸಹಿತವಾದುವು ಸಂಸಾರಿ ಜೀವಗಳು. ಕರ್ಮರಹಿತವಾದುವು ಮುಕ್ತಜೀವಗಳು. "संसारिणो मुक्ताश्च" तत्वा० सू० २-१०। ಸಂಸಾರಿಜೀವಗಳು ತ್ರಸ ಸ್ಥಾವರಗಳೆಂದು ಎರಡು ವಿಧ. ಪೃಥ್ವೀಕಾಯಿಕ, ಜಲಕಾಯಿಕ, ಅಗ್ನಿಕಾಯಿಕ, ವಾಯುಕಾಯಿಕ ಮತ್ತು ವನಸ್ಪತಿ ಕಾಯಿಕಗಳು ಸ್ಥಾವರ ಜೀವಗಳು. ದ್ವೀಂದ್ರಿಯ ತ್ರೀಂದ್ರಿಯ ಚತುರಿಂದ್ರಿಯ ಮತ್ತು ಪಂಚೇಂದ್ರಿಯ ಜೀವ ಗಳು ತ್ರಸಜೀವಗಳು. "संसारिणः त्रसस्थावराः"। "पृथिव्यप्तेजोवायुवनस्पतयः स्थावराः"। "द्वीन्द्रियादयःत्रसाः" तत्वा० सू० २-१२, १३, १४। ಪ್ರತಿ ಯೊಂದು ಜೀವನಿಗೂ ಕರ್ಮಬಂಧವು ಘಾತಿಕರ್ಮ ಚತುಷ್ಟಯ ಅಘಾತಿಕರ್ಮಚತುಷ್ಟಯಗಳೆಂದು ಎಂಟು ವಿಧ.

**ಘಾತಿಕರ್ಮಗಳು :** (1) ಜ್ಞಾನಾವರಣೀಯ, (2) ದರ್ಶನಾವರಣೀಯ, (3) ಮೋಹನೀಯ ಮತ್ತು (4) ಅಂತರಾಯ.

**ಅಘಾತಿಕರ್ಮಗಳು :** (1) ಆಯುಷ್ಯ, (2) ನಾಮ, (3) ಗೋತ್ರ ಮತ್ತು (4) ವೇದನೀಯ.

ಘಾತಿಕರ್ಮಗಳು ನಾಶವಾದನಂತರ ಅರ್ಹಂತರಾಗು ವರು. ಸರ್ವಜ್ಞರಾಗುವರು. ಇವರೇ ಕೇವಲಜ್ಞಾನಿ ಗಳು. ಜೀವನ್ಮುಕ್ತರು. ಆಯುಷ್ಯದ ಕೊನೆಯ ಅವಸ್ಥೆ ಯಲ್ಲಿ ನಾಮಗೋತ್ರಾದಿಗಳನ್ನು ಶುಕ್ಲಧ್ಯಾನದಿಂದ ನಾಶ ಮಾಡಿ ಸಿದ್ಧಪರಮೇಷ್ಠಿಗಳಾಗುವರು. ಈ ಮತದಲ್ಲಿ ಅರ್ಹಂತ ಸಿದ್ಧ ಆಚಾರ್ಯ ಉಪಾಧ್ಯಾಯ ಮತ್ತು ಸಾಧುಗಳೆಂದು ಪಂಚಪರಮೇಷ್ಠಿಗಳು ಪ್ರಸಿದ್ಧರು. ಈ ಪರಮೇಷ್ಠಿಗಳಲ್ಲಿ ಅರ್ಹತ್ ಪರಮೇಷ್ಠಿಯು ನಿರವಧಿಕ ಜ್ಞಾನವೀರ್ಯಗಳಿಂದ ಪರಿಶುದ್ಧ ಔದಾರಿಕ ದೇಹವನ್ನು ಪರಿಗ್ರಹಿಸಿ ಲೋಕಾಕಾಶದಲ್ಲಿ ಲೋಕಾನುಗ್ರಹಕ್ಕಾಗಿ ಉಪ ದೇಶಮಾಡುತ್ತಿರುವವರು. ಅರ್ಹಂತರಾಗಿ ಸಿದ್ಧರಾದವರಲ್ಲಿ ಇಪ್ಪತ್ತನಾಲ್ಕು ಮಂದಿ ಮಾತ್ರ ತೀರ್ಥಂಕರರಾಗು ವರು.

**ಮೋಕ್ಷೋಪಾಯ :** ಸಮ್ಯಗ್ದರ್ಶನ ಸಮ್ಯಕ್‌ಜ್ಞಾನ ಮತ್ತು ಸಮ್ಯಕ್ಚಾರಿತ್ರವೆಂಬ ರತ್ನತ್ರಯವು ಮೋಕ್ಷಸಾಧನ.

ಜಿನೋಪದಿಷ್ಟವಾದ ದೇವ ಗುರು ಶಾಸ್ತ್ರ ಮೊದಲಾ ದುವುಗಳಲ್ಲಿ ಶ್ರದ್ಧೆಯು **ಸಮ್ಯಗ್ದರ್ಶನ.**

ಜಿನೋಕ್ತತತ್ತ್ವಗಳ ಯಥಾವತ್ತಾದ ಜ್ಞಾನವು **ಸಮ್ಯಕ್‌ಜ್ಞಾನ.**

ಮೇಲೆ ಹೇಳಿದ ಶ್ರದ್ಧೆಯುಳ್ಳ ಪುರುಷನ ರಾಗದ್ವೇಷ ರಹಿತವಾದ ವರ್ತನೆಯು **ಸಮ್ಯಕ್‌ಚಾರಿತ್ರ.** "सम्यग्दर्शनज्ञानचारित्राणि मोक्षमार्गः" तत्वा० सू० १-१।

**ಮೋಕ್ಷ :** ಬಂಧಹೇತುವಾದ ಆಸ್ರವಯೋಗದ್ವಾರದ ನಿರೋಧವೇ ಸಂವರ. ತಪಸ್ಸು ಮೊದಲಾದ ಕಾಯಕ್ಲೇಶ ಗಳಿಂದ ಸಂಚಿತಕರ್ಮಗಳನ್ನು ತಡೆಯುವುದು ನಿರ್ಜರೆ. ಈ ನಿರೋಧನಿರ್ಜರೆಗಳಿಂದ ಆತ್ಯಂತಿಕ ಕರ್ಮಕ್ಷಯವಾದರೆ ಜೀವನು ಬಂಧದಿಂದ ಮುಕ್ತನಾಗುವನು. ಇದೇ ಮೋಕ್ಷ. ಈ ರೀತಿ ಬಂಧವಿಮುಕ್ತನಾದ ಜೀವನು ಮಣ್ಣಿನಿಂದ ಮೆತ್ತಲ್ಪಟ್ಟ ಸೋರೆಕಾಯಿ ನೀರಿನ ತಳದಲ್ಲಿದ್ದು ಕ್ರಮ ವಾಗಿ ಮಣ್ಣು ಕರಗಿಹೋದರೆ ಮೇಲಕ್ಕೆ ಬರುವಂತೆ ಊರ್ಧ್ವಗತಿಯಿಂದ ತುತ್ತತುದಿಗೆ ಹೋಗಿ ಯಾವ ತ್ಕಾಲವೂ ಸ್ವಾಭಾವಿಕಸುಖಾನುಭವದಲ್ಲಿರುವನು. "आस्रवो भवहेतुः स्यात् संवरो मोक्षकारणम्। इतीयमार्हती दृष्टिः अन्यदस्याः प्रपञ्चनम्"॥ "शिवमरुजमक्षयमव्याबाधं विशोकभयशङ्कम्। काष्ठागतसुखविद्याविभवं विमलं भजन्ति दर्शनशरणाः"।

**जैनायतन ಜೈನಾಯತನ, -आश्रम -ಆಶ್ರಮ** (ಪುಂ) ಜೈನಸಂನ್ಯಾಸಿಗಳ ಮಠ, ಜೈನಭಿಕ್ಷುಗಳ ವಾಸಸ್ಥಳ.

**जैमिनि ಜೈಮಿನಿ** (ಪುಂ) ಒಬ್ಬ ಮುನಿ, ವ್ಯಾಸಮಹರ್ಷಿಯ ಒಬ್ಬ ಶಿಷ್ಯ, ವೇದವ್ಯಾಸಮಹರ್ಷಿಯಿಂದ ಈ ಋಷಿಯು ಸಾಮವೇದವನ್ನು ಗ್ರಹಿಸಿದರು. "दुर्भगांश्च जनान् वीक्ष्य मुनिर्दिव्येन चक्षुषा। सर्ववर्णाश्रमाणां यद्दध्यौ हितममोघकृत्। चातुर्होत्रं कर्म शुद्धं प्रजानां वीक्ष्य वैदिकम्। व्यदधात् यज्ञसन्तत्यै वेदमेकं चतुर्विधम्। ऋग्यजुःसामाथर्वाख्या वेदाश्चत्वार उद्धृताः। इतिहासपुराणं च पञ्चमो वेद उच्यते। तत्रर्ग्वेदधरः पैलः सामगो जैमिनिः कविः" भाग० १-४। ಈ ಋಷಿಯು ಕರ್ಮ ಕಾಂಡವೆಂಬ ಧರ್ಮಮೀಮಾಂಸೆಯನ್ನು ರಚಿಸಿರುವರು.

**जैमिनीय ಜೈಮಿನೀಯ** (ಪುಂ) 1. ಜೈಮಿನಿಮುನಿಯ ಅನುಯಾಯಿ. (ವಿಂ) 2. ಜೈಮಿನಿಯ ಸಂಬಂಧವಾದ. 3. ಜೈಮಿನಿಯಿಂದ ರಚಿತವಾದ (ಧರ್ಮಮೀಮಾಂಸಾ).

**जैमिनीयन्यायमाला ಜೈಮಿನೀಯನ್ಯಾಯಮಾಲಾ** (स्त्री०) ಜೈಮಿನಿಯಿಂದ ವಿರಚಿತವಾದ ಒಂದು ಮೀಮಾಂಸಾಶಾಸ್ತ್ರ ಗ್ರಂಥ. "जैमिनीयन्यायमालाश्लोकैः संगृह्यते स्फुटम्" माधवाचार्यः।

**जैमूत ಜೈಮೂತ** (वि०) 1. ಮೇಘಸಂಬಂಧವಾದ. 2. ಪರ್ವತಸಂಬಂಧವಾದ. 3. ಇಂದ್ರನಸಂಬಂಧವಾದ. 4. ಜೀಮೂತಋಷಿಯ ಸಂಬಂಧವಾದ. 5. ಕೊಸ್ಸಾರಿ ಗಡ್ಡೆಯ ಸಂಬಂಧವಾದ. जीमूतस्येदम् "अण्" (४-३-१२०)।

**जैयट ಜೈಯಟ** (पुं०) ಪಾತಂಜಲಮಹಾಭಾಷ್ಯದ ವ್ಯಾಖ್ಯಾನಕಾರರಾದ ಕೈಯಟರ ತಂದೆ.

**जैव ಜೈವ** (वि०) 1. ಜೀವಾತ್ಮಸಂಬಂಧವಾದ. 2. ಬೃಹಸ್ಪತಿ ಸಂಬಂಧವಾದ (ಗುರುವಿನ ಕ್ಷೇತ್ರ) (1) ಧನೂರಾಶಿ ಮತ್ತು ಮೀನರಾಶಿ. (2) ಗುರುವಾರ. (3) ಪುಷ್ಯನಕ್ಷತ್ರ. (ಬೃಹಸ್ಪತಿದೇವತಾಕವಾದುದು). जीवस्यायम् इदं वा "अण्" (४-३-१२०)।

**जैवातृक ಜೈವಾತೃಕ** (पुं०) 1. ಚಂದ್ರ. जीव (प्राणधारणे) "आतृकन्" वृद्धिश्च (उ० १-८०)। 2. ಪುತ್ರ, ಮಗ. 3. ಔಷಧ. 4. ಕೃಷೀವಲ, ರೈತ, ಬೇಸಾಯಗಾರ. 5. ಕರ್ಪೂರ. 6. ಚಿಕಿತ್ಸಕ, ವೈದ್ಯ. "जैवातृकश्चन्द्रभिषगायुष्मत्सु कृषीवले" वैज०। (वि०) 7. ದೀರ್ಘಾಯುಷ್ಮಂತ. 8. ಕೃಶವಾಗಿರುವ, ತೆಳ್ಳಗಿರುವ. "जैवातृकः कृशे चन्द्रे भैषज्यायुष्मतोरपि" विश्व०।

**जैवि ಜೈವಿ** (वि०) ಜೀವನಿಗೆ ಸಮೀಪದಲ್ಲಿರುವ. जीवस्यादूरभवः "इञ्" (४-२-८०)।

**जैवेय ಜೈವೇಯ** (पुं०) 1. ಬೃಹಸ್ಪತಿಯ ಮಗ. जीवस्य गुरोरपत्यम् "ढक्" (४-१-१२३)। (वि०) 2. ಹೆದೆಯ ಸಂಬಂಧವಾದ, ಬಿಲ್ಲಿಗೆ ಕಟ್ಟುವ ತೊಗಲಿನ ಹಗ್ಗದ ಸಂಬಂಧವಾದ. जीवाया इदम् "ढक्" (४-१-१२०)।

**जैह्म्य ಜೈಹ್ಮ್ಯ** (न०) ಕುಟಿಲವಾಗಿರುವಿಕೆ, ವಕ್ರವಾಗಿರುವಿಕೆ. ಕಪಟ. जिह्मस्य भावः "ष्यञ्" (५-१-१२४)। "जैह्म्यं च मैथुनं पुंसि जातिभ्रंशकरं स्मृतम्" मनु० ११-६७।

**जोङ्ग ಜೋಂಗ** (न०) ಅಗುರು, ಒಂದು ಸುಗಂಧ ದ್ರವ್ಯ. जुङ्गयते – जुगि (वर्जने) "अप्"। पृषो०।

**जोङ्गक ಜೋಂಗಕ** (न०) ಅಗುರು, ಒಂದು ಸುಗಂಧ ದ್ರವ್ಯ. जुगि (वर्जने) "क्वुन्" (उ० २-३२)। "वंशकागुरुराजार्हलोहं कृमिजजोङ्गकम्" अम०।

**जोङ्गट ಜೋಂಗಟ** (पुं०) ಗರ್ಭಿಣಿಯರ ದೌಹೃದ, ಬಸಿರು ಹೆಂಗಸರ ಬಯಕೆ.

**जोटिङ्ग ಜೋಟಿಂಗ** (पुं०) 1. ಪರಮೇಶ್ವರ, ಮಹಾದೇವ, ಪರಶಿವ. 2. ಉಗ್ರವಾದ ತಪಸ್ಸುಮಾಡುವ ಋಷಿ. "कण्ठेकालजयन्तगुह्यगुरवो जोटिङ्गगोपालकौ" त्रिकाण्ड०। "जोटिङ्गस्तु महाव्रती" त्रिकाण्ड०।

**जोड ಜೋಡ** (न०) ಬೇಯಿಸಲ್ಪಟ್ಟ ಅಡಕೆ. "कषायो रागवान् पूगः फले पर्कटमस्य तत्। पक्वं जोडम्" वैज०।

**जोष ಜೋಷ** (पुं०) 1. ಪ್ರೀತಿ. 2. ಸೇವನೆ. जुषी (प्रीतिसेवनयोः) "घञ्" (३-३-१८)। (न०) 3. ಸುಖ.

**जोषण ಜೋಷಣ** (न०) 1. ಪ್ರೀತಿಸುವುದು. 2. ಸೇವನೆ. जुषी (प्रीतिसेवनयोः) भावे "ल्युट्" (३-३-११५)। "तज्जोषणादाश्वपवर्गवर्त्मनि श्रद्धा रतिर्भक्तिरनुक्रमिष्यति" भाग० ३-२५-२५। जुषी+णिच् "युच्" (३-३-१०७)। –णा –ಣಾ.

**जोषम् ಜೋಷಮ್** (अव्य०) 1. ಮೌನವಾಗಿ, ಮಾತನಾಡದೆ, ಶಬ್ದವಿಲ್ಲದೆ. जुष (परितर्कणे) "अम्" बाहु०। "तत्किमिति जोषमास्यते" शाकु० ५। "इति जोषमवस्थितं द्विषः प्रणिधिं गामभिधाय सात्यकिः" माघ० १६-१६। 2. ತನ್ನ ಇಷ್ಟದಂತೆ. 3. ಪ್ರಶಂಸೆ, ಹೊಗಳಿಕೆ. 4. ಸುಖ. 5. ಲಂಘನ. "जोषम् सुखे प्रशंसायां तूष्णीं लङ्घनयोरपि" मेदि०।

**जोषा ಜೋಷಾ** (स्त्री०) ಹೆಂಗಸು, ಮಹಿಳೆ.

**ज्ञ ಜ್ಞ** (पुं०) 1. ಬುಧಗ್ರಹ. 2. ಪಂಡಿತ. जानाति–ज्ञा (अवबोधने) "कः" (३-१-१३५)। "युगे सूर्यज्ञशुक्राणां खचतुष्करदार्णवाः" सू० सि० १-२९। 3. ಜೀವಾತ್ಮ. 4. ಕುಜಗ್ರಹ. 5. ಬ್ರಹ್ಮ. (वि०) 6. ತಿಳಿದವನು, ಬಲ್ಲವನು. "ज्ञो ब्रह्मबुधविद्वत्सु स्यात्" मेदि०। "आत्मनि ज्ञातरि ज्ञः स्यात्" वैज०। "आदेशं देशकालज्ञः" रघु० १-९२। सर्वज्ञः निमित्तज्ञः ಇತ್ಯಾದಿ.

**ज्ञक ಜ್ಞಕ** (वि०) ಸ್ವಲ್ಪ ತಿಳಿದವನು. स्त्रियाम् ज्ञका ಜ್ಞಕಾ, ज्ञिका ಜ್ಞಿಕಾ. अतः वा इत् (७-३-४७)।

**ज्ञपित ಜ್ಞಪಿತ** (वि०) ಜ್ಞಾಪಿಸಲ್ಪಟ್ಟ, ತಿಳಿಸಲ್ಪಟ್ಟ. ज्ञप्यते–ज्ञप (ज्ञाने ज्ञापने च) + णिच् "क्तः" (३-२-१०२)।

**ज्ञप्त ಜ್ಞಪ್ತ** (वि०) ಜ್ಞಾಪಿಸಲ್ಪಟ್ಟ, ತಿಳಿಸಲ್ಪಟ್ಟ, ಭೋಧಿಸಲ್ಪಟ್ಟ. ज्ञप्यते – ज्ञप (ज्ञाने ज्ञापने च) + णिच् "क्तः" (३-२-१०२)। "वा दान्तेत्यादिना" (७-२-२९)। वा इडभावो निपात्यते।

**ज्ञप्ति ಜ್ಞಪ್ತಿ** (स्त्री०) 1. ಬುದ್ಧಿ. 2. ತಿಳಿವಳಿಕೆ, ಜ್ಞಾನ. ज्ञप (ज्ञाने) भावे "क्तिन्" (३-३-९४)। "तस्य जिज्ञासया ते वै भृगुं ब्रह्मसुतं नृप। तज्ज्ञप्त्यै प्रेषयामासुः सोऽभ्यगात् ब्रह्मणः सभाम्" भाग० १०-८९-२। "ज्ञप्तिः पण्डोपलब्धिस्तु संवित्तिरनुभूश्चितिः। अवगत्यनुभूती चिज्ज्ञप्तिर्ज्ञानं च बोधनम्" वैज०।

**ज्ञा – अवबोधने** (क्र्या० पर० सक० अनि०)। जानाति जानीतः जानन्ति। जज्ञौ जज्ञतुः जज्ञुः। ज्ञाता। ज्ञास्यति। जानातु। जानीहि। जानानि। अजानात् अजानीताम् अजानन्। जानीयात्। ज्ञायात्, ज्ञेयात्। अज्ञासीत्। अज्ञास्यत्। 1. ತಿಳಿ, ಅರಿತುಕೊ. "ये नाम केचिदिह नः प्रथयन्त्यवज्ञां जानन्ति ते किमपि तान् प्रति नैष यत्नः" मालती० १-८। 2. ಗ್ರಹಿಸು, ಮನವರಿಕೆಮಾಡಿಕೊ, ಅರ್ಥಮಾಡಿಕೊ. 3. ವಿಚಾರ ಮಾಡು, ವಿಮರ್ಶಿಸು. "विभाषोपपदेन प्रतीयमाने" (१-३-७७) ಸೂತ್ರದಿಂದ ವಿಕಲ್ಪವಾಗಿ ಆತ್ಮನೇಪದಿ ಯಾಗುವುದು. जानीते जानाते जानते। जज्ञे जज्ञाते जज्ञिरे। ज्ञाता। ज्ञास्यते। जानीताम् जानाताम् जनताम्। अजानीत। जानीत। ज्ञासीष्ट। अज्ञास्त। अज्ञास्यत। "जानीते नितरामसौ गुरुकुलक्लिष्टो मुरारिः कविः" अनर्घ०।

**कर्मणि** :—ज्ञायते। जज्ञे। ज्ञायिता, ज्ञाता। ज्ञायिष्यते, ज्ञास्यते। ज्ञायताम्। अज्ञायत। ज्ञायेत। ज्ञायिषीष्ट, ज्ञासीष्ट। अज्ञायि। अज्ञायिष्यत, अज्ञास्यत।

**णिचि** :—ಈ ಕೆಳಗಿನ ಅರ್ಥಗಳಲ್ಲಿ ಣ್ಯಂತ ज्ञा ಧಾತುವು मित् ಸಂಜ್ಞೆಯನ್ನು ಹೊಂದಿ ಹ್ರಸ್ವವು ಬರುವುದು. "मितां ह्रस्वः" (६-४-९२)। (1) मारणम् ಕೊಲ್ಲುವುದು. (2) तोषणम् ಸಂತೋಷಪಡಿಸುವುದು ಮತ್ತು (3) निशामनम् ನೋಡುವುದು. मारणतोषणनिशामनेषु ज्ञा (भ्वा० ८११)। ನಿಶಾಮನವೆಂದರೆ ಚಾಕ್ಷುಷಜ್ಞಾನ ವೆಂದು ಮಾಧವರೂ ಜ್ಞಾಪನಮಾತ್ರವೆಂದು ಇತರರೂ ಅರ್ಥಮಾಡುವರು. ......निशानेषु ಎಂಬ ಪಾಠಾಂತರ ದಲ್ಲಿ निशानं तीक्ष्णीकरणम् (ಹರಿತಗೊಳಿಸುವುದು) ಎಂದು ಅರ್ಥ. ಈ ಎಲ್ಲಾ ಅರ್ಥಗಳಲ್ಲೂ ज्ञा ಧಾತುವು मित् ಸಂಜ್ಞೆಯನ್ನು ಹೊಂದಿ ಹ್ರಸ್ವವಾಗುವುದು. ज्ञपयति, –ते ಇತ್ಯಾದಿ.

**सनि** :—जिज्ञासते। "ज्ञाश्रुस्मृदृशां सनः" (१-३-५७)। ಸೂತ್ರದಿಂದ ಆತ್ಮನೇಪದ ಬರುವುದು. अनु ಪೂರ್ವಕ सन्नन्त ज्ञा ಧಾತುವಿಗೆ ಆತ್ಮನೇಪದ ಬರುವುದಿಲ್ಲ. "नानोर्ज्ञः" (१-३-५८)। "पुत्रमनुजिज्ञासति।

ಅಪಲಾಪರೂಪಾರ್ಥದಲ್ಲಿ ज्ञा ಧಾತುವು ಆತ್ಮನೇಪದಿ ಯಾಗುವುದು (१-३-४४) "शतमपजानीते"।

ಅಕರ್ಮಕ ज्ञा ಧಾತುವು ಆತ್ಮನೇಪದಿಯಾಗುವುದು. (१-३-४५) "सर्पिषो जानीते"। सम् ಮತ್ತು प्रति ಪೂರ್ವಕ ज्ञा ಧಾತುವು ಆಧ್ಯಾನಭಿನ್ನಾರ್ಥದಲ್ಲಿ ಆತ್ಮನೇ ಪದಿಯಾಗುವುದು (१-३-४६)। "शतं संजानीते"। अवेक्षते इत्यर्थः। उत्कण्ठापूर्वकं स्मरणम् आध्यानम्। ಈ ಅರ್ಥದಲ್ಲಿ ज्ञा ಧಾತುವು सम् ಪೂರ್ವಕವಾಗಿದ್ದರೂ ಪರಸ್ಮೈ ಪದಿಯಾಗಿಯೇ ಇರುವುದು. "मातरं मातुर्वा संजानाति"। मातरमाध्यायतीत्यर्थः।

**कृत्सु** :—ज्ञातव्यः। ज्ञानीयः। ज्ञेयः। ज्ञातः। ज्ञातवान्। जानन्, जानती। जानानः। ज्ञातुम्। ज्ञातम्। ज्ञानम्। ज्ञात्वा। विज्ञाय।

**ಈ ಧಾತುವಿಗೆ ಉಪಸರ್ಗಗಳ ಯೋಗದಿಂದ ಉಂಟಾಗುವ ಅರ್ಥಭೇದಗಳು :**

**(1) अनु+ज्ञा**=अनुजानाति। ಅನುಮತಿಸು, ಅಪ್ಪಣೆ ಕೊಡು. "अनुजानीहि हन्यन्तां मयैताः क्षुद्रमानसाः" भट्टि० २०-२।

**(2) अप+ज्ञा** = अपजानीते। अपजानानः। ಮರೆ ಮಾಚು, ಬಚ್ಚಿಡು, ಮರಸು. "आत्मानमपजानानः शशमात्रोऽनयद्दिनम्" भट्टि० ८-२६।

**(3) अभि + ज्ञा** = अभिजानाति। अभिज्ञानम्। 1. ಗುರುತಿನಿಂದ ತಿಳಿ, ಚೆನ್ನಾಗಿ ಕಂಡುಹಿಡಿ, ಗುರುತಿನಿಂದ ಜ್ಞಾಪಿಸಿಕೊ. 2. ಚೆನ್ನಾಗಿ ತಿಳಿದುಕೊ, ಅನುಭವದಿಂದ ಜ್ಞಾಪಿಸಿಕೊ. "अभिज्ञाश्छेदपातानां क्रियन्ते नन्दनद्रुमाः" कुमा० २-४१।

**(4) प्रति+अभि+ज्ञा**=प्रत्यभिजानाति। प्रत्यभिज्ञा। ಹಿಂದಿನ ಅನುಭವದಿಂದ ಸ್ಮರಿಸು, ಪೂರ್ವದಲ್ಲಿ ನೋಡಿದ್ದ ವಸ್ತುವನ್ನು ನೋಡಿ ಅದೇ ಎಂದು ತಿಳಿ. "स एवायं घटः यो मया पूर्वमुपलब्धः" ಎಂಬ ಪೂರ್ವಾನುಭವದ ಸಂಸ್ಕಾರದಿಂದ ಉಂಟಾದ ಜ್ಞಾನವು "प्रत्यभिज्ञा" ಎನಿಸುವುದು. "तं त्वं प्रत्यभिजानीहि स्वप्ने यं दृष्टवत्यसि" हरिवं०।

**(5) अव+ज्ञा**=अवजानाति। ತಿರಸ್ಕರಿಸು, ಅನಾದರ ದಿಂದ ನೋಡು. "अवजानासि मां यस्मादतस्ते न भविष्यति। मत्प्रसूतिमनाराध्य प्रजेति त्वां शशाप सा" रघु० १-७७।

(6) आ+ज्ञा = आज्ञापयति। आज्ञापनम्। ಅಜ್ಞೆ ಮಾಡು, ಅಪ್ಪಣೆಮಾಡು. "आज्ञापय ज्ञातविशेष पुंसां लोकेषु यत्ते करणीयमस्ति" कुमा० ३-३। ಈ ಅರ್ಥದಲ್ಲಿ ಇದು ಣಿಜಂತವಾಗುವುದು.

(7) उप+ज्ञा = उपजानाति। उपज्ञा। ಮೊದಲು ತಿಳಿ, ಪ್ರಥಮತಃ ತಿಳಿ. "उपज्ञा ज्ञानमाद्यं स्यात्" अम०।

(8) परि+ज्ञा=परिजानाति। परिज्ञानम्। ಚೆನ್ನಾಗಿ ತಿಳಿ, ಸರಿಯಾಗಿ ತಿಳಿ. "अनुबन्धं परिज्ञाय देशकालौ च तत्त्वतः" मनु० ८-१२६।

(9) प्र+ज्ञा = प्रजानाति। प्रज्ञा। ಉತ್ತಮವಾಗಿ ತಿಳಿದುಕೊ, ಉತ್ತಮರೀತಿಯಲ್ಲಿ ತಿಳಿದುಕೊ. "यः सर्वत्रानभिस्नेहः तत्तत्प्राप्य शुभाशुभम्। नाभिनन्दति न द्वेष्टि तस्य प्रज्ञा प्रतिष्ठिता" गीता २-५७।

(10) प्रति + ज्ञा = प्रतिजानीते। प्रतिज्ञा। 1. ಪ್ರತಿಜ್ಞೆಮಾಡು, ಶಪಥಮಾಡು. "प्रतिजज्ञे वधं चापि सर्वक्षत्रस्य भारत" भा० वन० ११८-६। 2. ಕರ್ತವ್ಯವನ್ನು ನಿರ್ದೇಶಿಸು, ಮಾಡಬೇಕೆಂದಿರುವ ಕಾರ್ಯವನ್ನು ತೋರಿಸಿ ಹೇಳು. स्वकर्तव्यत्वेन निर्देशः प्रतिज्ञा। "साध्यनिर्देशः प्रतिज्ञा" गौतमसू०।

(11) वि+ज्ञा = विजानाति। विज्ञानम्। विज्ञाय। 1. ವಿಶೇಷ ರೀತಿಯಲ್ಲಿ ತಿಳಿದುಕೊ. "कथमेतद्विजानीयां त्वमादौ प्रोक्तवानिति" गीता ४-४। 2. ಶಿಲ್ಪಶಾಸ್ತ್ರಗಳ ಜ್ಞಾನ. "मोक्षे धीर्ज्ञानमन्यत्र विज्ञानं शिल्पशास्त्रयोः" अम०।

(12) सम् + ज्ञा = संजानीते। संजानानः। 1. ಚೆನ್ನಾಗಿ ತಿಳಿ. "संजानानान् परिहरन् रावणानुचरान् बहून्" भट्टि० ८-२७। 2. ಚೈತನ್ಯ, ಜ್ಞಾನ. 3. ಕೈ ಕಣ್ಣು ಮೊದಲಾದುವುಗಳಿಂದ ವಿಷಯವನ್ನು ಸೂಚಿಸು. "संज्ञा स्याच्चेतना नाम हस्ताद्यैश्चार्थसूचना" अम०।

**ज्ञात ಜ್ಞಾತ** (नं०) 1. ಜ್ಞಾನ, ತಿಳಿವಳಿಕೆ. ज्ञा (अवबोधने) भावे "क्तः" (३-३-११४)। (वि०) 2. ತಿಳಿಯಲ್ಪಟ್ಟ, ಅರಿಯಲ್ಪಟ್ಟ. ज्ञा कर्म० "क्तः" (३-२-१०२)। "ज्ञातो नु किं स खलु बन्धनविप्रयुक्तः" मृच्छ० ९-९। "ज्ञातसारोऽपि खल्वेकः संदिग्धे कार्यवस्तुनि" माघ० २-१२। स्वार्थे "कन्" (५-४-५)। ज्ञातकः ಜ್ಞಾತಕಃ.

**ज्ञातनन्दन ಜ್ಞಾತನಂದನ** (पुं०) ಮಹಾವೀರ ವರ್ಧಮಾನ ಜಿನೇಶ್ವರರು, ಇಪ್ಪತ್ತನಾಲ್ಕನೆಯ ತೀರ್ಥಂಕರರು. ज्ञातेन नन्दति — टुनदि (समृद्धौ) कर्त० "ल्युः" (३-१-१३४)।

**ज्ञातवत् ಜ್ಞಾತವತ್** (वि०) ತಿಳಿದವನು, ಅರಿತವನು. ज्ञा (अवबोधने) "क्तवतुः" (३-२-१०२)। स्त्रियाम् "ङीप्" (४-१-६)। -वती -ವತೀ.

**ज्ञातव्य ಜ್ಞಾತವ್ಯ** (वि०) 1. ಅವಶ್ಯವಾಗಿ ತಿಳಿಯಬೇಕಾದ. 2. ವಿಮರ್ಶಿಸಬೇಕಾದ. 3. ವಿಚಾರಮಾಡಿ ತಿಳಿಯಬೇಕಾದ. ज्ञा (अवबोधने) "तव्यः" (३-१-९६)।

**ज्ञातसार ಜ್ಞಾತಸಾರ** (वि०) ತತ್ತ್ವಾರ್ಥಗಳನ್ನು ತಿಳಿದವನು. ज्ञातः सारो येन। "ज्ञातसारोऽपि खल्वेकः संदिग्धे कार्यवस्तुनि" माघ० २-१२।

**ज्ञातसिद्धान्त ಜ್ಞಾತಸಿದ್ಧಾಂತ** (वि०) ಸಿದ್ಧಾಂತವನ್ನು ತಿಳಿದವನು, ನಿಷ್ಕೃಷ್ಟಜ್ಞಾನವುಳ್ಳವನು, ತತ್ತ್ವಾರ್ಥವನ್ನು ತಿಳಿದವನು. ज्ञातः सिद्धान्तः येन।

**ज्ञाति ಜ್ಞಾತಿ** (पुं०) 1. ತಂದೆ. 2. ತಂದೆಯ ವಂಶದಲ್ಲಿ ಹುಟ್ಟಿದ ದಾಯಾದರು. जानाति छिद्रं कुलस्थितिं वा ज्ञा (अवबोधने) कर्त० "क्तिच्" (३-३-१७४)। ज्ञायते अनेन वा ज्ञा कर० "क्तिच्" (३-३-१७४)। ತಂದೆಯ ವಂಶದಲ್ಲಿ ಹುಟ್ಟಿದ ಚಿಕ್ಕಪ್ಪ ದೊಡ್ಡಪ್ಪ ಅವರ ಮಕ್ಕಳು ಮೊಮ್ಮಕ್ಕಳು ಮೊದಲಾದವರು ಜ್ಞಾತಿಗಳಾಗುವರು. ಸಪ್ತಪುರುಷಪರ್ಯಂತ ಸಪಿಂಡರು. ಅಲ್ಲಿಂದ ಮುಂದೆ ಸಪ್ತಪುರುಷಪರ್ಯಂತ ಸಮಾನೋದಕರು. ಅಲ್ಲಿಂದ ಮುಂದೆ ಸಗೋತ್ರರು. "सपिण्डता तु पुरुषे सप्तमे विनिवर्तते। समानोदकभावस्तु निवर्तेताचतुर्दशात्। जन्मनाम्नोः स्मृतेरेके तत्परं गोत्रमुच्यते"। "ज्ञातिभ्यो द्रविणं दत्वा कन्यायै चैव शक्तितः। कन्याप्रदानं स्वाच्छन्द्यात् आसुरो धर्म उच्यते" मनु० ३-३१। "ज्ञातिसम्बन्धिभिस्त्वेते त्यक्तव्याः कृतलक्षणाः। निर्दया निर्नमस्काराः तन्मनोरनुशासनम्" मनु० ९-२३९। 3. ಬಂಧು, ನಂಟ, ಸಂಬಂಧಿ. "स्युर्ज्ञातयः सगोत्राश्च सपिण्डास्तु सनाभयः। स्वजनो बान्धवो बन्धुः" वैज०। "सगोत्रबान्धवज्ञातिबन्धुस्वस्वजनाः समाः" अम०। "ज्ञातीन् विटान् स्वभुजविक्रमलब्धवर्णान् राजापमानकुपितांश्च नरेन्द्रमुख्यान्। उत्तेजयामि सुहृदः परिमोक्षणाय यौगन्धरायण इवोदयनस्य राज्ञः" मृच्छ० ४-२६।

**ज्ञातित्व ಜ್ಞಾತಿತ್ವ** (न०) ಬಂಧುತ್ವ, ನಂಟತನ, ರಕ್ತಸಂಬಂಧ. ज्ञातेर्भावः "त्वः" (५-१-११९)। "एता-

स्तिस्त्वस्तु भार्यर्थे नोपयच्छेत्तु बुद्धिमान्। ज्ञातित्वेनानुपेयास्ताः पततिह्युपयन्नधः" मनु० ११-१७२।

**ज्ञातिदासी ಜ್ಞಾತಿದಾಸೀ** (स्त्री०) 1. ಮನೆಯಲ್ಲಿರುವ ಸೇವಕಿ, ಹೆಣ್ಣು ಆಳು, ಮನೆಯ ಕೆಲಸಮಾಡುವ ಹೆಂಗಸು. 2. ಮಗಳ ಶುಶ್ರೂಷೆಗಾಗಿ ತಾಯಿಯು ಕಳುಹಿಸಿಕೊಡುವ ಸೇವಕಿ. "ज्ञातिदासी यतो जाता" रामा०।

**ज्ञातिप्राय ಜ್ಞಾತಿಪ್ರಾಯ** (वि०) ಜ್ಞಾತಿಗಳನ್ನು ಹೊಂದುವ, ಬಂಧುಗಳಿಗೆ ಹೋಗಿ ಸೇರುವ. ज्ञातीन् प्रैति – प्र + इण् (गतौ) "अण्" (३-२-१)। "प्रक्षाल्य हस्तावाचम्य ज्ञातिप्रायं प्रकल्पयेत्" मनु० ३-२६४।

**ज्ञातिभाव ಜ್ಞಾತಿಭಾವ** (पुं०) ಬಂಧುತ್ವ, ನಂಟತನ. ज्ञातेर्भावः। "सर्वस्वं ग्रसते बन्धुराक्रम्य ज्ञातिभावतः" हितो० २-५-८।

**ज्ञातृ ಜ್ಞಾತೃ** (वि०) 1. ತಿಳಿದವನು, ಜ್ಞಾನಿ, ತಿಳಿವಳಿಕೆಯುಳ್ಳವನು. जानाति – ज्ञा (अवबोधने) "तृन्" (३-२-१३५)। 2. ಪರಿಚಯವುಳ್ಳವನು, ಗುರುತಿನವನು. 3. ವಿಷಯವನ್ನು ತಿಳಿದವನು, ವಿಷಯವನ್ನು ಚೆನ್ನಾಗಿ ಅರಿತಿರುವವನು, ಸಾಕ್ಷಿ. "ज्ञातारः सन्ति मेत्युक्त्वा दिशेत्युक्तो दिशेन्न यः" मनु० ८-५७। स्त्रियाम् "ङीप्" (४-१-५)। **ज्ञात्री ಜ್ಞಾತ್ರೀ.**

**ज्ञातृत्व ಜ್ಞಾತೃತ್ವ** (न०) ಚೆನ್ನಾಗಿ ತಿಳಿದಿರುವಿಕೆ. ज्ञातुर्भावः "त्वः" (५-१-११९)।

**ज्ञातेय ಜ್ಞಾತೇಯ** (न०) ಜ್ಞಾತಿತ್ವ, ಬಂಧುತ್ವ, ನಂಟತನ. ज्ञातेर्भावः "ढक्" (५-१-१२७)।

**ज्ञान ಜ್ಞಾನ** (न०) 1. ತಿಳಿವಳಿಕೆ. ज्ञा (अवबोधने) भावे "ल्युट्" (३-३-११५)। "ज्ञाने मौनं क्षमा शक्तौ त्यागे श्लाघाविपर्ययः" रघु० १-२२। 2. ಮೋಕ್ಷ ವಿಷಯಕವಾದ ಬುದ್ಧಿ. 3. ಪರಮಾತ್ಮಸ್ವರೂಪವನ್ನು ತಿಳಿಸುವ ಜ್ಞಾನ. ज्ञायतेऽनेनात्मा–ज्ञा कर० "ल्युट्" (३-३-११७)। ಈ ಜ್ಞಾನವು ಆತ್ಮಜ್ಞಾನಸಾಧನ. **ಆತ್ಮಜ್ಞಾನಕ್ಕೆ ಸಾಧನವಾದ ಗುಣಗಳು :**

**अमानित्वम्**—ಹಿರಿಯರನ್ನು ತಿರಸ್ಕಾರದಿಂದ ಕಾಣುವ ಅಭಿಮಾನ (ಗರ್ವ) ವಿಲ್ಲದಿರುವ ಮನೋಭಾವ.

**अदम्भित्वम्**—ಕೀರ್ತಿ ಗಳಿಸಲು ಧರ್ಮಕಾರ್ಯಾಚರಣರೂಪವಾದ ದಂಭ (ಆಷಾಢಭೂತಿತನ) ವಿಲ್ಲದಿರುವುದು.

**अहिंसा**—ತ್ರಿಕರಣ (ವಾಕ್ಕು, ಮನಸ್ಸು ಮತ್ತು ಶರೀರ) ಗಳಿಂದ ಇತರರನ್ನು ಪೀಡಿಸದಿರುವುದು.

**क्षान्तिः**—ಇತರರು ಪೀಡಿಸುತ್ತಿದ್ದರೂ ಅವರಿಗೆ ಪ್ರತೀಕಾರಮಾಡುವ ಮನಸ್ಸಿಲ್ಲದಿರುವುದು.

**आर्जवम्**—ತ್ರಿಕರಣಗಳಿಂದಲೂ ಮಾಡುವ ಕಾರ್ಯಗಳಲ್ಲಿ ಕೌಟಿಲ್ಯವಿಲ್ಲದಿರುವುದು.

**आचार्योपासनम्** — ಆತ್ಮಜ್ಞಾನವನ್ನುಂಟುಮಾಡುವ ಆಚಾರ್ಯರ ಸೇವೆಯಲ್ಲಿ ನಿರತನಾಗಿರುವುದು.

**शौचम्**—ಲೋಭ ಅನೃತ (ಸುಳ್ಳು) ನಿಷಿದ್ಧಾಹಾರ ಸೇವನಾರೂಪವಾದ ಅಶುಚಿಯಿಲ್ಲದಿರುವುದು.

**स्थैर्यम्**—ಶಾಸ್ತ್ರಗಳಲ್ಲಿ ಉಕ್ತವಾದ ವಿಷಯಗಳಲ್ಲಿ ನಂಬಿಕೆ ಮತ್ತು ಇತರರ ಉಪದೇಶದಿಂದ ಮನಸ್ಸು ಚಂಚಲವಾಗದಿರುವುದು.

**आत्मविनिग्रहः**—ಆತ್ಮಸ್ವರೂಪಕ್ಕಿಂತಲೂ ಬೇರೆಯಾದ ವಿಷಯಗಳಲ್ಲಿ ಹೋಗದಂತೆ ಮನಸ್ಸನ್ನು ತಡೆಯುವುದು.

**इन्द्रियार्थेषु वैराग्यम्**—ಆತ್ಮವ್ಯತಿರಿಕ್ತವಾದ ವಿಷಯಗಳಲ್ಲಿ ದೋಷಬುದ್ಧಿಯಿಂದ ವಿರಕ್ತಿಹೊಂದುವುದು.

**अनहङ्कारः**—ಆತ್ಮನಿಗಿಂತಲೂ ಬೇರೆಯಾದ ದೇಹದಲ್ಲಿ ಅಭಿಮಾನವನ್ನು ತೊರೆಯುವುದು, ಆತ್ಮಸಂಬಂಧವಲ್ಲದ ವಸ್ತುಗಳಲ್ಲಿ ಮಮಕಾರವನ್ನು ಬಿಡುವುದು.

**जन्ममृत्युजराव्याधिदुःखदोषानुदर्शनम्**—ಹುಟ್ಟು ಸಾವು ಮುಪ್ಪು ವ್ಯಾಧಿಗಳಿಂದ ಉಂಟಾಗುವ ದುಃಖರೂಪವಾದ ದೋಷಗಳು ಈ ಶರೀರಕ್ಕೆ ಸಹಜಗಳೆಂದೂ ಅವು ಅಪರಿಹಾರ್ಯಗಳೆಂದೂ ತಿಳಿಯುವುದು.

**असक्तिः**—ಆತ್ಮವ್ಯತಿರಿಕ್ತವಾದ ವಿಷಯಗಳಲ್ಲಿ ಆಸೆಯನ್ನು ತೊರೆದು ಅವುಗಳಲ್ಲಿ ಪ್ರೀತಿಯಿಡದೆ ಅವುಗಳ ಸಂಬಂಧವನ್ನು ತ್ಯಜಿಸುವುದು.

**पुत्रदारगृहादिषु अनभिष्वङ्गः**—ಪುತ್ರರು ಪತ್ನಿ ಮನೆ ಮುಂತಾದುವುಗಳಲ್ಲಿ ಹೆಚ್ಚು ಪ್ರೀತಿಯನ್ನು ತೊರೆಯುವುದು ಮತ್ತು ಅವರ ಸಂಬಂಧವನ್ನು ಬಿಡುವುದು.

**इष्टानिष्टोपपत्तिषु समचित्तत्वम्**—ಇಷ್ಟವಾದ ವಸ್ತುವು ಪ್ರಾಪ್ತವಾದಾಗ ಹರ್ಷದಿಂದ ಉಬ್ಬುವುದು ಅನಿಷ್ಟ ಒದಗಿದಾಗ ದುಃಖಪಡುವುದು ಈ ರೀತಿಯಾದ ಚಿತ್ತವಿಕಾರವಿಲ್ಲದೆ ಇರುವುದು.

**अनन्ययोगेन अव्यभिचारिणी भक्तिः**—ಪರಮಾತ್ಮನಲ್ಲಿ ಅನನ್ಯಚಿತ್ತನಾಗಿ ಸ್ಥಿರವಾದ ಭಕ್ತಿಯಿಡುವುದು.

**विविक्तदेशसेवित्वम्** — ನಿರ್ಜನವಾದ ಪ್ರದೇಶದಲ್ಲಿ ಏಕಾಂತವಾಗಿ ವಾಸಮಾಡುವುದು.

**अरतिर्जनसंसदि**—ಪಾಮರ ಜನರ ಗುಂಪಿನಲ್ಲಿ ಸೇರಲು ಬೇಕಾಗಿಲ್ಲದಿರುವುದು.

**अध्यात्मज्ञाननित्यत्वम्**–ಅನವರತವೂ ಬ್ರಹ್ಮಜ್ಞಾನದಲ್ಲೇ ನಿರತನಾಗಿರುವುದು.

**तत्वज्ञानार्थचिन्तनम्** – ತತ್ತ್ವಜ್ಞಾನದ ಫಲವಾದ ಮೋಕ್ಷದ ಚಿಂತನೆಯಲ್ಲಿ ನಿರತನಾಗಿರುವುದು. ಈ ಮೇಲೆ ಹೇಳಿದ ಎಲ್ಲಾ ಗುಣಗಳೂ ಸಮುದಿತವಾಗಿ ಆತ್ಮಜ್ಞಾನ ಸಾಧನವಾಗುವುದರಿಂದ ಇದೇ ಜ್ಞಾನವು. ಇದಕ್ಕೆ ವ್ಯತಿರಿಕ್ತವಾದುದೆಲ್ಲವೂ ಅಜ್ಞಾನವೆಂದು ತಿಳಿಯಬೇಕು. "एतज्ज्ञानमिति प्रोक्तमज्ञानं यदतोऽन्यथा" गीता १३-११। 3. ಕರ್ತವ್ಯಕಾರ್ಯವಿಷಯವಾದ ಜ್ಞಾನ, ಅನುಷ್ಠಿಸಬೇಕಾದ ಕಾರ್ಯದ ವಿಷಯವಾದ ತಿಳಿವಳಿಕೆ. "ज्ञानं ज्ञेयं परिज्ञाता त्रिविधा कर्मचोदना। करणं कर्म कर्तेति त्रिविधः कर्मसङ्ग्रहः" गीता १८-१८। ಈ ಜ್ಞಾನವು ಸಾತ್ತ್ವಿಕ, ರಾಜಸ ಮತ್ತು ತಾಮಸಗಳೆಂದು ಮೂರು ವಿಧ. "ज्ञानं कर्म च कर्ता च त्रिधैव गुणभेदतः। प्रोच्यते गुणसङ्ख्याने यथावत् शृणु तान्यपि" गीता १८-१९।

(1) ಬ್ರಾಹ್ಮಣ ಕ್ಷತ್ರಿಯ ಬ್ರಹ್ಮಚಾರಿ ಗೃಹಸ್ಥ ಮೊದಲಾದ ರೂಪದಿಂದ ಬೇರೆ ಬೇರೆಯಾಗಿರುವ ಕರ್ಮಾಧಿಕಾರಿಗಳಾದ ಪ್ರತಿಯೊಬ್ಬರಲ್ಲೂ ಇರುವ ಆತ್ಮನು ಜ್ಞಾನೈಕಾಕಾರನೆಂದೂ ಅವಿನಾಶಿಯೆಂದೂ ವಿಕಾರರಹಿತನೆಂದೂ ಫಲಾದಿ ಸಂಬಂಧವಿಲ್ಲದವನೆಂದೂ ತಿಳಿದು ಎಲ್ಲಾ ಆತ್ಮವಸ್ತುಗಳನ್ನೂ ಒಂದೇ ರೀತಿ ನೋಡುವುದು **"ಸಾತ್ತ್ವಿಕ"** ಜ್ಞಾನವು.

(2) ಬ್ರಾಹ್ಮಣ ಕ್ಷತ್ರಿಯ ಬ್ರಹ್ಮಚಾರಿ ಮೊದಲಾದ ರೂಪದಿಂದ ಬೇರೆ ಬೇರೆ ಕರ್ಮಾಧಿಕಾರಿಗಳಲ್ಲಿರುವ ಎಲ್ಲಾ ಆತ್ಮವಸ್ತುಗಳೂ ಬೇರೆ ಬೇರೆಯೆಂದು ತಿಳಿಯುವುದು **"ರಾಜಸ"** ಜ್ಞಾನವು.

(3) ಯಾವುದೊಂದು ಜ್ಞಾನವು ಸಮಗ್ರ ಫಲವನ್ನು ಕೊಡದಿರುವ ಯಾವುದೋ ಒಂದು ಕಾರ್ಯದಲ್ಲಿ ಸಂಪೂರ್ಣಫಲಪ್ರದವೆಂಬ ಬುದ್ಧಿಯಿಂದ ಆಸಕ್ತವಾಗಿರುವುದೋ ಅಂತಹ ಮಿಥ್ಯಾಭೂತ ಅರ್ಥವಿಷಯಕವಾದ ಮತ್ತು ಅಲ್ಪಫಲವಿಷಯಕವಾದುದರಿಂದ ತುಚ್ಛವಾದ ಜ್ಞಾನವು **"ತಾಮಸ"** ಜ್ಞಾನವು. "सर्वभूतेषु येनैकं भावमव्ययमीक्षते। अविभक्तं विभक्तेषु तज्ज्ञानं विद्धि सात्त्विकम्॥ पृथक्त्वेन तु यज्ज्ञानं नानाभावान् पृथग्विधान्। वेत्ति सर्वेषु भूतेषु तज्ज्ञानं विद्धि राजसम्॥ यत्तु कृत्स्नवदेकस्मिन् कार्ये सक्तमहेतुकम्। अतत्त्वार्थवदल्पं च तत्तामसमुदाहृतम्" गीता १८-२०, २१, २२। 4. ಚಿತ್ತವೃತ್ತಿನಿರೋಧರೂಪವಾದ ಯೋಗ. "एकत्वं बुद्धिमनसोरिन्द्रियाणां च सर्वशः। आत्मनो व्यापिनस्तात ज्ञानमेतदनुत्तमम्" मोक्षधर्मः। 5. (ಅದ್ವೈತ ಮತದಲ್ಲಿ) "ಅಹಂ ಬ್ರಹ್ಮ" ಎಂಬ ಉಪಾಸನೆ. "ब्रह्मैवाहं समः शान्तः सच्चिदानन्दलक्षणः। नाहं देहो ह्यसद्रूपो ज्ञानमित्युच्यते बुधैः"। 6. ಜೀವ ಈಶ್ವರ ಜಗತ್ತು ಈ ರೀತಿಯಾದ ಭ್ರಾಂತಿಗೆ ಅಧಿಷ್ಠಾನವಾದ ಸ್ವಯಂಪ್ರಕಾಶವಾದ ಚೈತನ್ಯ. 7. ಸಾಂಗವೇದಾಧ್ಯಯನ ಮತ್ತು ಅದರ ಅರ್ಥದ ಜ್ಞಾನ. 8. ವೇದ. ज्ञा ಕರಂ "ल्युट्" (३-३-११७)। 9. ಶಾಸ್ತ್ರ. 10. ಇಂದ್ರಿಯ. ज्ञायतेऽनेन ज्ञा ಕರಂ "ल्युट्"।

**ज्ञानकाण्ड ಜ್ಞಾನಕಾಂಡ** (ನಂ) ಬ್ರಹ್ಮಜ್ಞಾನವನ್ನುಂಟು ಮಾಡುವ ವೇದಭಾಗ, ಬ್ರಹ್ಮಜ್ಞಾನದಿಂದ ಮೋಕ್ಷವೆಂದು ಪ್ರತಿಪಾದಿಸುವ ವೇದದ ಉತ್ತರಭಾಗ (ಉಪನಿಷತ್ತುಗಳು).

**ज्ञानगम्य ಜ್ಞಾನಗಮ್ಯ** (ಪುಂ) ಪರಮಾತ್ಮ. ಪರಮೇಶ್ವರ. ज्ञानेन परया विद्यया गम्यः वेद्यः। "परया विद्यया वेद्यो ज्ञानगम्य इति स्मृतः" इति निरुक्तिः। ಜ್ಞಾನದಿಂದಲೇ ಬ್ರಹ್ಮಸ್ವರೂಪವು ತಿಳಿಯಲ್ಪಡುವುದರಿಂದ ಈ ಹೆಸರು. "उत्तरो गोपतिर्गोप्ता ज्ञानगम्यः पुरातनः" वि० स०।

**ज्ञानचक्षुस् ಜ್ಞಾನಚಕ್ಷುಸ್** (ನಂ) 1. ಜ್ಞಾನರೂಪವಾದ ನೇತ್ರ. 2. ಶಾಸ್ತ್ರರೂಪವಾದ ಕಣ್ಣು. ज्ञानरूपं चक्षुः। "सर्वं तु समवेक्ष्येदं निखिलं ज्ञानचक्षुषा" मनु० २-८। (वि०) 3. ಜ್ಞಾನಕ್ಕೆ ಸಾಧನವಾದ ಶಾಸ್ತ್ರಗಳೇ ನೇತ್ರದಂತಿರುವ. ज्ञानं ज्ञानसाधनं शास्त्रं चक्षुरिव यस्य।

**ज्ञानतस् ಜ್ಞಾನತಸ್** (अव्य०) ಜ್ಞಾನದಿಂದ. ತಿಳಿವಳಿಕೆಯಿಂದ. ज्ञान "तसिः" (वा० ५-४-४४)। "द्रव्याणि हिंस्याद्यो यस्य ज्ञानतोऽज्ञानतोऽपि वा" मनु० ८-२८८।

**ज्ञानद ಜ್ಞಾನದ**(पुं०) 1. ಬ್ರಹ್ಮಜ್ಞಾನವನ್ನುಂಟುಮಾಡುವ ಗುರು, ಆಚಾರ್ಯ, ಉಪದೇಶಕ. ज्ञानं ददाति – डुदाञ् (दाने) "कः" (३-२-३)। (वि०) 2. ಉಪದೇಶಮಾಡುವ, ತಿಳಿವಳಿಕೆಯನ್ನುಂಟುಮಾಡುವ.

**ज्ञानदग्धदेह ಜ್ಞಾನದಗ್ಧದೇಹ** (ಪುಂ) ಭಿಕ್ಷು, ಸನ್ಯಾಸಿ, ಯತಿ. ज्ञानेन दग्धो देहोऽस्य। ಯತಿಗಳು ಬದುಕಿರುವಾಗಲೇ ಅವರ ದೇಹವು ಜ್ಞಾನದಿಂದ ದಗ್ಧವಾಗಿರುವುದರಿಂದ ಮತ್ತೆ ಆ ದೇಹಕ್ಕೆ ದಹನಕ್ರಿಯೆಯು ನಡೆಯಬೇಕಾಗಿಲ್ಲ. "सर्वसङ्गनिवृत्तस्य ध्यानयोगरतस्य च। न तस्य दहनं कार्यं नैव पिण्डोदकक्रिया। निदध्यात्प्रणवेनैव बिले भिक्षोः कलेबरम्। प्रोक्षणं खननञ्चापि सर्वं तेनैव कारयेत्" इति शौनकः।

**ज्ञानदर्पण ಜ್ಞಾನದರ್ಪಣ** (ಪುಂ) ಜ್ಞಾನವೇ ಕನ್ನಡಿಯಾಗಿ ಉಳ್ಳ ಮಂಜುಘೋಷ. ज्ञानं दर्पण इव। "मञ्जुश्रीर्ज्ञानदर्पण:। मञ्जुभद्रो मञ्जुघोष:" त्रिकाण्ड०।

**ज्ञानदातृ ಜ್ಞಾನದಾತೃ** (ವಿಂ) ಗುರು, ಆಚಾರ್ಯ, ಜ್ಞಾನವನ್ನು ಉಪದೇಶಿಸುವವನು. ज्ञानस्य दाता। "पितुर्दशगुणा माता गौरवेणेति निश्चितम्। मातु: शतगुण: पूज्यो ज्ञानदाता गुरु: प्रभो" तन्त्रसा०। स्त्रियाम् "ङीप्" (४-१-५)। **-दात्री -ದಾತ್ರೀ.**

**ज्ञाननिष्ठ ಜ್ಞಾನನಿಷ್ಠ** (ವಿಂ) ಜ್ಞಾನಸಂಪಾದನೆಯಲ್ಲಿ ನಿರತನಾದ. ज्ञाने निष्ठा यस्य। "ज्ञाननिष्ठा द्विजा: केचित्तपोनिष्ठास्तथापरे" मनु० ३-१३४।

**ज्ञानमय ಜ್ಞಾನಮಯ** (ಪುಂ) ಜ್ಞಾನಸ್ವರೂಪನಾದ ಪರಮಾತ್ಮ, ಪರಬ್ರಹ್ಮ. ज्ञान "मयट्" (४-४-२१)।

**ज्ञानमुद्रा ಜ್ಞಾನಮುದ್ರಾ** (ಸ್ತ್ರೀಂ) ಒಂದು ವಿಧ ಮುದ್ರೆ, ತರ್ಜನಿ ಮತ್ತು ಅಂಗುಷ್ಠಗಳನ್ನು ಸೇರಿಸಿ ಹೃದಯದ ಮೇಲಿಟ್ಟು ಎಡಗೈಯನ್ನು ಎಡತೊಡೆಯ ತುದಿ (ಮಂಡಿ) ಯಲ್ಲಿಟ್ಟುಕೊಂಡಿರುವ ಶ್ರೀರಾಮನಿಗೆ ಪ್ರಿಯವಾದ ಒಂದು ಮುದ್ರೆ. "तर्जन्यङ्गुष्ठकौ सक्तावग्रतो विन्यसेद्धृदि। वामहस्ताम्बुजं वामजानुमूर्धनि विन्यसेत्। ज्ञानमुद्रा भवेदेषा रामचन्द्रस्य प्रेयसी" तन्त्रसा०।

**ज्ञानयज्ञ ಜ್ಞಾನಯಜ್ಞ** (ಪುಂ) 1. ಜ್ಞಾನವೆಂಬ ಯಜ್ಞ, ಜ್ಞಾನರೂಪವಾದ ಭಗವದುಪಾಸನೆ. ज्ञानमेव यज्ञ:। 2. ವೇದಾರ್ಥಜ್ಞಾನದ ಅಭ್ಯಾಸ. "स्वाध्यायज्ञानयज्ञाश्च यतय: संशितव्रता:" गीता ४-२८। "महापापवतां नृणां ज्ञानयज्ञो न रोचते। प्रत्युत ज्ञानयज्ञे तु प्रद्वेषो जायते स्वत:"।

**ज्ञानयोग ಜ್ಞಾನಯೋಗ** (ಪುಂ) ಪರಬ್ರಹ್ಮಸಾಕ್ಷಾತ್ಕಾರಕ್ಕೆ ಸಾಧನವಾದ ಭಕ್ತಿಗೆ ಉಪಾಯವಾದ ಆತ್ಮಚಿಂತನೆ, ಕರ್ಮಯೋಗದಿಂದ ಚಿತ್ತನೈರ್ಮಲ್ಯಹೊಂದಿ ಶೇಷಿಯಾದ ಪರಮಾತ್ಮನಿಗೆ ತಾನು ಶೇಷಭೂತನೆಂದು ತಿಳಿದು ಮಾಡುವ ಪ್ರಕೃತಿವಿಯುಕ್ತನಾದ ಪರಮಾತ್ಮನ ಚಿಂತನೆ, ಬ್ರಹ್ಮಜ್ಞಾನವನ್ನು ಹೊಂದುವ ಉಪಾಯ. युज्यते ब्रह्मणाऽनेन — युजिर् (योगे) कर० "घञ्" (३-३-१२१)। ज्ञानमेव योग: उपाय:। "ज्ञानयोगेन सांख्यानां कर्मयोगेन योगिनाम्" गीता ३-३। ಮೋಕ್ಷಾಭಿಲಾಷೆಯುಂಟಾದ ಮಾತ್ರಕ್ಕೆ ಜ್ಞಾನಯೋಗಕ್ಕೆ ಅಧಿಕಾರಿಯಾಗುವುದಿಲ್ಲ. ಅನೇಕ ಜನ್ಮಗಳ ಸುಕೃತದಿಂದ ಕರ್ಮಕ್ಷಯವಾಗಿ ಫಲಾಭಿಸಂಧಿರಹಿತವಾದ ಕರ್ಮಯೋಗದಿಂದ ಜ್ಞಾನಯೋಗವು ಪ್ರಾಪ್ತವಾಗುವುದು.

**ज्ञानवत् ಜ್ಞಾನವತ್** (ವಿಂ) 1. ಬುದ್ಧಿವಂತ. ज्ञानमस्यास्ति "मतुप्" (५-२-९४)। 2. ತತ್ತ್ವಜ್ಞಾನವುಳ್ಳವನು, ಪರಬ್ರಹ್ಮನೇ ಪರಮಪ್ರಾಪ್ಯನೆಂದು ತಿಳಿದಿರುವವನು. "बहूनां जन्मनामन्ते ज्ञानवान् मां प्रपद्यते" गीता ७-१९।

**ज्ञानवृद्ध ಜ್ಞಾನವೃದ್ಧ** (ವಿಂ) ಒಳ್ಳೆಯ ಜ್ಞಾನವನ್ನು ಸಂಪಾದಿಸಿರುವವನು, ಜ್ಞಾನದಿಂದ ಹಿರಿಯನಾಗಿರುವವನು. ज्ञानेन वृद्ध:।

**ज्ञानश्रेष्ठ ಜ್ಞಾನಶ್ರೇಷ್ಠ** (ವಿಂ) ಉತ್ತಮ ಜ್ಞಾನವನ್ನು ಸಂಪಾದಿಸಿರುವವನು, ಜ್ಞಾನಸಂಪಾದನೆಯಿಂದ ಶ್ರೇಷ್ಠನಾಗಿರುವವನು. ज्ञानेन श्रेष्ठ:।

**ज्ञानसागर ಜ್ಞಾನಸಾಗರ** (ವಿಂ) ಜ್ಞಾನಕ್ಕೆ ಸಮುದ್ರದಂತಿರುವವನು, ಜ್ಞಾನನಿಧಿ, ಸಂಪೂರ್ಣಜ್ಞಾನವನ್ನು ಸಂಪಾದಿಸಿರುವವನು. ज्ञानस्य सागर इव।

**ज्ञानसाधन ಜ್ಞಾನಸಾಧನ** (ನಂ) 1. ಬ್ರಹ್ಮಜ್ಞಾನಕ್ಕೆ ಸಾಧನವಾದ ಶ್ರವಣ ಮನನ ನಿದಿಧ್ಯಾಸನ ಮೊದಲಾದುವು. 2. ಆತ್ಮಜ್ಞಾನಕ್ಕೆ ಸಾಧನವಾದ ಅಮಾನಿತ್ವ ಮೊದಲಾದ ಗುಣಗಳು. ["ज्ञान" ಪದದಲ್ಲಿ ನೋಡಿ.] 3. ಇಂದ್ರಿಯ. ज्ञानस्य साधनम्।

**ज्ञानाकर ಜ್ಞಾನಾಕರ** (ವಿಂ) ಜ್ಞಾನಕ್ಕೆ ಗಣಿಯಂತಿರುವವನು, ತುಂಬಿದ ಜ್ಞಾನವುಳ್ಳವನು. ज्ञानस्य आकर:।

**ज्ञानात्मन् ಜ್ಞಾನಾತ್ಮನ್** (ಪುಂ) 1. ಜ್ಞಾನಸ್ವರೂಪನಾದ ಪರಮಾತ್ಮ. 2. ಜೀವ. (ವಿಂ) 3. ಬುದ್ಧಿವಂತ.

**ज्ञानापोह ಜ್ಞಾನಾಪೋಹ** (ಪುಂ) ವಿಸ್ಮೃತಿ, ಮರವು, ಮರೆತಿರುವುದು. ज्ञानस्यापोह:।

**ज्ञानाभ्यास ಜ್ಞಾನಾಭ್ಯಾಸ** (ಪುಂ) ಬ್ರಹ್ಮಜ್ಞಾನ ಸಾಧನವಾದ ಶ್ರವಣ ಮನನ ನಿದಿಧ್ಯಾಸನ ಮೊದಲಾದುವುಗಳ ಅಭ್ಯಾಸ (ಆವೃತ್ತಿ). ज्ञानस्य तत्साधनस्याभ्यास:। "तच्चिन्तनं तत्कथनमन्योन्यं तत्प्रबोधनम्। एतदेकपरत्वं च ज्ञानाभ्यासं विदुर्बुधा:"।

**ज्ञानिन् ಜ್ಞಾನಿನ್** (ವಿಂ) 1. ದೈವಜ್ಞ, ಜೋಯಿಸ. 2. ತತ್ತ್ವಜ್ಞಾನವುಳ್ಳವನು, ಬ್ರಹ್ಮಸಾಕ್ಷಾತ್ಕಾರವುಳ್ಳವನು, ಪರಮಾತ್ಮನೇ ಪರಮಪ್ರಾಪ್ಯನೆಂದು ತಿಳಿದಿರುವವನು, ಪರಮಾತ್ಮನಿಗೆ ತಾನು ಶೇಷನೆಂದು ತಿಳಿದಿರುವವನು. ज्ञानमस्यास्ति "इनि:" (५-२-११५)। "चतुर्विधा भजन्ते मां जना: सुकृतिनोऽर्जुन। आर्तो जिज्ञासुरर्थार्थी ज्ञानी च भरतर्षभ" गीता ७-१६। 3. ಅರ್ಥಜ್ಞಾನವುಳ್ಳವನು, ಅಧ್ಯಯನಮಾಡಿದ ಗ್ರಂಥಗಳ ಅರ್ಥವನ್ನು

ತಿಳಿದವನು. "अज्ञेभ्यो ग्रन्थिनः श्रेष्ठाः ग्रन्थिभ्यो धारिणो वराः। धारिभ्यो ज्ञानिनः श्रेष्ठाः ज्ञानिभ्यो व्यवसायिनः" मनु० १२-१०३। 4. ಬುದ್ಧಿವಂತ, ತಿಳಿದವನು, ಬಲ್ಲವನು.

**ज्ञानीय ಜ್ಞಾನೀಯ** (वि०) ತಿಳಿಯಬೇಕಾದ, ಅರಿಯಬೇಕಾದ. ज्ञा (अवबोधने) "अनीयर्" (३-१-९६)।

**ज्ञानेन्द्रिय ಜ್ಞಾನೇಂದ್ರಿಯ** (न०) ಜ್ಞಾನಸಾಧನವಾದ ಇಂದ್ರಿಯ, ತಿಳಿವಳಿಕೆಯನ್ನುಂಟುಮಾಡುವ ಇಂದ್ರಿಯ. ज्ञायतेऽनेन—ज्ञा (अवबोधने) कर० "ल्युट्" (३-३-११७)। ज्ञानसाधनमिन्द्रियम्। [ವಿವರಕ್ಕೆ "इन्द्रिय" ಪದದಲ್ಲಿ ನೋಡಿ].

**ज्ञापक ಜ್ಞಾಪಕ** (पुं०) 1. ಶಿಕ್ಷಕ, ಗುರು, ಉಪಾಧ್ಯಾಯ, ಉಪದೇಶಕ. (वि०) 2. ತಿಳಿಯಪಡಿಸುವ, ತಿಳಿಯುವಂತೆ ಮಾಡುವ. ज्ञा (अवबोधने) + णिच् "ण्वुल्" (३-१-१३३)।

**ज्ञापन ಜ್ಞಾಪನ** (न०) 1. ಜ್ಞಾಪಿಸುವುದು, ತಿಳಿಯಪಡಿಸುವುದು. 2. ಉಪದೇಶಿಸುವುದು, ಬೋಧಿಸುವುದು. ज्ञा (अवबोधने) + णिच् भावे "ल्युट्" (३-३-११५)।

**ज्ञापनीय ಜ್ಞಾಪನೀಯ** (वि०) 1. ತಿಳಿಸಬೇಕಾದ. 2. ಬೋಧಿಸಬೇಕಾದ, ಉಪದೇಶಿಸಬೇಕಾದ. ज्ञा (अवबोधने) + णिच् "अनीयर्" (३-१-९६)। "तव्यः" (३-१-९६)। **ज्ञापयितव्यः ಜ್ಞಾಪಯಿತವ್ಯಃ.**

**ज्ञापित ಜ್ಞಾಪಿತ** (वि०) ತಿಳಿಸಲ್ಪಟ್ಟ. ज्ञा (अवबोधने) + णिच् "क्तः" (३-२-१०२)।

**ज्ञाप्य ಜ್ಞಾಪ್ಯ** (वि०) ತಿಳಿಸಲ್ಪಡುವ. ಜ್ಞಾಪಿಸಲ್ಪಡುವ. ज्ञा (अवबोधने)। "नायं ज्ञाप्यः स्वसत्तायां प्रतीत्यव्यभिचारतः" सा० द० ३-२०।

**ज्ञायमान ಜ್ಞಾಯಮಾನ** (वि०) ತಿಳಿಯಲ್ಪಡುತ್ತಿರುವ, ಅರಿಯಲ್ಪಡುತ್ತಿರುವ. ज्ञा (अवबोधने) कर्म० "शानच्" (३-२-१२४)। "अनुमायां ज्ञायमानं लिङ्गं तु करणं न हि" भाषाप० ६७।

**ज्ञीप्सा ಜ್ಞೀಪ್ಸಾ** (स्त्री०) ತಿಳಿದುಕೊಳ್ಳಲು ಅಪೇಕ್ಷೆ, ಅರಿತುಕೊಳ್ಳಲು ಆಸೆ. ज्ञातुमिच्छा — ज्ञप (ज्ञाने) + सन् "अः" (३-३-१०२)।

**ज्ञीप्स्यमान ಜ್ಞೀಪ್ಸ್ಯಮಾನ** (वि०) ತಿಳಿಸಲು ಅಪೇಕ್ಷಿಸಲ್ಪಡುವ. ज्ञप (ज्ञापने) + सन् कर्म० "शानच्" (३-२-१२४)। "श्लाघह्नुङ्स्थाशपां ज्ञीप्स्यमानः" पा० सू० १-४-३४।

**ज्ञेय ಜ್ಞೇಯ** (न०) 1. ಪರಬ್ರಹ್ಮ. ज्ञातुं योग्यम्—ज्ञा (अवबोधने) "यत्" (३-१-९७)। "ज्ञानं ज्ञेयं ज्ञानगम्यं हृदि सर्वस्य विष्ठितम्" गीता १३-१७। ಪರಮಾತ್ಮನು ಅಮಾನಿತ್ವ ಮೊದಲಾದ ಜ್ಞಾನಸಾಧನವಾದ ಗುಣಗಳಿಂದ ಹೊಂದಲು ಯೋಗ್ಯನಾದುದರಿಂದ ಜ್ಞಾನಗಮ್ಯನು. ಜ್ಞಾನಸ್ವರೂಪನಾಗಿ ತಿಳಿಯಬೇಕಾದುದರಿಂದ ಜ್ಞೇಯನು. (वि०) 2. ತಿಳಿಯಲ್ಪಡುವ, ಅರಿಯಲ್ಪಡುವ. ज्ञा (अवबोधने) कर्म० "यत्"। "ज्ञेयः स नित्यसंन्यासी यो न द्वेष्टि न काङ्क्षति। निर्द्वन्द्वो हि महाबाहो सुखं बन्धात्प्रमुच्यते" गीता ५-३। "स्वात्याद्ये भश्रितये ज्ञेयश्च महार्णवोऽत्र" बृहत्सं० १४-१९।

**ज्या — वयोहानौ** (क्र्या० पर० अक० से०)। जिनाति जिनीतः जिनन्ति। जिज्यौ जिज्यतुः जिज्युः। ज्याता। ज्यास्यति। जिनातु। अजिनात्। जिनीयात्। ಇತ್ಯಾದಿ. ಮುದುಕನಾಗು, ಇಳಿವಯಸ್ಸಿನವನಾಗು, ಶಕ್ತಿಕುಂದಿದವನಾಗು.

**ज्या ಜ್ಯಾ** (स्त्री०) 1. ಮೌರ್ವಿ, ಬಿಲ್ಲಿನ ಅಂಬು, ಧನುಸ್ಸಿನ ಗುಣ. ज्या (वयोहानौ) "ङः" (३-२-१०१)। "भिन्नाकृति ज्यां ददृशुः स्फुरन्तीं क्रुद्धस्य जिह्वामिव तक्षकस्य" किरा० १७-२४। 2. ಮಾತೆ, ತಾಯಿ. 3. ಭೂಮಿ. "ज्या मातरि वसुधायां मौर्व्याम्" मेदि०। 4. ವೃತ್ತವನ್ನು ಭಾಗಿಸುವ ಸರಳರೇಖೆ, ಗೋಳದೊಳಗಿರುವ ಧನುರಾಕಾರವಾದ ಕ್ಷೇತ್ರದ ಮಧ್ಯದಿಂದ ಎರಡೂ ಕಡೆಗೂ ಹೊರಟಿರುವ ಒಂದು ರೇಖೆ.

**ज्याघातवारण ಜ್ಯಾಘಾತವಾರಣ** (न०) ಬಿಲ್ಲಿಗೆ ಕಟ್ಟಿರುವ ತೊಗಲಿನ ಹಗ್ಗವು ಕೊರೆಯದಂತೆ ಕೈಗೆ ಕಟ್ಟಿಕೊಳ್ಳುವ ತೊಗಲಿನ ಪಟ್ಟಿ. ज्याया आघातं वारयति—वृञ् (वरणे) + णिच् "ल्युः" (३-१-१३४)।

**ज्यान ಜ್ಯಾನ** (न०) ಶಕ್ತಿ ಕುಂದುವುದು. ज्या (वयोहानौ) भावे "ल्युट्" (३-३-११५)।

**ज्यानि ಜ್ಯಾನಿ** (स्त्री०) 1. ಮುಪ್ಪು, ಮುದಿತನ, ಶಿಥಿಲವಾಗುವಿಕೆ. ज्या (वयोहानौ) "निः" (वा० ३-३-९५)। 2. ಹಾನಿ, ನಾಶ. "दानज्यानिविषादमूकमधुपव्यासङ्गदीनाननः" मालती० ९-३३। 3. ನದಿ, ಹೊಳೆ. "ज्यानिर्जीर्णे च हानौ च तटिन्यामपि योषिति" मेदि०।

**ज्यायस् ಜ್ಯಾಯಸ್** (वि०) 1. ಪ್ರಶಸ್ತವಾದ, ಶ್ರೇಷ್ಠವಾದ, ಉತ್ತಮವಾದ. 2. ವೃದ್ಧ, ಮುದುಕ. अतिशयेन प्रशस्यः वृद्धो वा—प्रशस्य वृद्ध "ईयसुन्" (५-३-५७)।

"ज्य:" (५-३-६१, ६२)। आकार: (६-४-१६०)। "ज्यायो वीर्यमुपाश्रित्य न चकम्पे कपिध्वज:" किरा० १५-४४। "यस्मिन्नभूज्ज्यायसि सत्यसन्धे सन्धिर्ध्रुव: संनमतामरीणाम्" रघु० १८-३४। 3. ಹಿರಿಯವನು, ದೊಡ್ಡವನು. 4. ಹಿರಿದಾದ, ದೊಡ್ಡದಾದ. स्त्रियाम् "ङीप्" (४-१-५)। **ज्यायसी ಜ್ಯಾಯಸೀ.** "ज्यायसी चेत्कर्मणस्ते मता बुद्धिर्जनार्दन। तत्किं कर्मणि घोरे मां नियोजयसि केशव" गीता ३-१।

**ज्येष्ठ ಜ್ಯೇಷ್ಠ** (ಪುಂ) 1. ಹಿರಿಯ ಸಹೋದರ, ಹಿರಿಯಣ್ಣ. "यो ज्येष्ठो ज्येष्ठवृत्ति: स्यात् मातेव स पितेव स:" मनु० ९-११०। 2. ಜ್ಯೇಷ್ಠಮಾಸ. ज्येष्ठानक्षत्रेण ज्येष्ठानक्षत्रयुक्तचन्द्रमसा युक्ता पौर्णमासी "अण्" (४-२-३)। ज्यैष्ठी साऽस्मिन्नस्ति ज्यैष्ठो मास:। "अण्" (४-२-२१)। संज्ञापूर्वकविधेरनित्यत्वात् वृद्ध्यभावे ज्येष्ठो मास:। 3. ಪರಮಾತ್ಮ. स्वात्मना सूरिभिश्च सदानुभवेऽपि अदृष्टपारमहाविभूतितया अतिशयेन प्रशस्य: सर्वेभ्य: पूर्वभावितया अतिशयेन वृद्ध इति वा। "ईशान: प्राणद: प्राणो ज्येष्ठ: श्रेष्ठ: प्रजापति:" वि० स०। 4. ಹಂಸಪಕ್ಷಿ. "हंसो मरालो नीलाक्षश्चक्रपक्ष:सितच्छद:। सूति:संकुचित: शंकुर्ज्येष्ठ:" वैज०। (ನಂ) 5. ಪಂಚಲೋಹ. "रङ्गं वङ्गं त्रपु क्षोम्यं मृद्वङ्गं नागजीवनम्। परासं सिंहलं ज्येष्ठम्" वैज०। 6. ಕ್ಷೀರ, ಹಾಲು. "गव्यं ज्येष्ठं मधु क्षीरम्" वैज०। (ವಿ) 7. ಬಹಳ ಮುದುಕನಾದ, ಅತಿ ವೃದ್ಧನಾದ. अतिशयेन वृद्ध: "इष्ठन्" (५-३-५५)। ज्यादेश: (५-३-६२)। 8. ಎಲ್ಲರಿಗಿಂತಲೂ ಹಿರಿಯವನಾದ. "ज्येष्ठेन जातमात्रेण पुत्रीभवति मानव:" मनु० ९-१०६। 9. ಬಹಳ ಶ್ರೇಷ್ಠವಾದ, ಉತ್ತಮವಾದ. अतिशयेन प्रशस्य: "इष्ठन्"। ज्यादेशश्च। (स्त्री०) **-ष्ठा -ಷ್ಠಾ.** 10. ಜ್ಯೇಷ್ಠಾನಕ್ಷತ್ರ, ಅಶ್ವಿನಿ ಮೊದಲಾಗಿ ಹದಿನೆಂಟನೆಯ ನಕ್ಷತ್ರ. 11. ಗೌಳಿ, ಹಲ್ಲಿ. "ज्येष्ठ: श्रेष्ठेऽतिवृद्धे च त्रिषु मासान्तरे पुमान्। ज्येष्ठा तु गृहगोधाख्यजन्तुनक्षत्रभेदयो:" मेदि०। "ज्येष्ठ: स्यादग्रजे श्रेष्ठे मासभेदातिवृद्धयो:। ज्येष्ठाभे गृहगोधायाम्" हेम०। 12. ಹಿರಿಯ ಸಹೋದರಿ. 13. ಹಿರಿಯ ಹೆಂಡತಿ. 14. ಹಿರಿಯ ಮಗಳು. 15. ಮಧ್ಯದ ಬೆರಳು. 16. ಅಲಕ್ಷ್ಮೀ, ದಾರಿದ್ರ್ಯ, ಜ್ಯೇಷ್ಠಾದೇವಿ. "अलक्ष्म्यग्रजयोर्ज्येष्ठा गृहगोल्यृक्षभेदयो:" वैज०। **-ष्ठी -ಷ್ಠೀ.**

**ज्येष्ठघ्नी ಜ್ಯೇಷ್ಠಘ್ನೀ** (ಸ್ತ್ರೀ) ವಿಶಾಖಾನಕ್ಷತ್ರ, ಅಶ್ವಿನೀ ಮೊದಲಾಗಿ ಹದಿನಾರನೆಯ ನಕ್ಷತ್ರ. ವಿಶಾಖಾ ನಕ್ಷತ್ರದಲ್ಲಿ ಹುಟ್ಟಿದ ಕನ್ಯೆಯು ಜ್ಯೇಷ್ಠಸಹೋದರನಿಲ್ಲದವನನ್ನು ಮದುವೆಯಾಗಬೇಕು. ಈ ನಕ್ಷತ್ರವು ಪತಿಯ ಜ್ಯೇಷ್ಠ ಸಹೋದರನಿಗೆ ಬಾಧಕವಾದುದು. ज्येष्ठं हन्ति—हन (हिंसागत्यो:) "टक्" (३-२-५३)। ङीप् (४-१-१५)।

**ज्येष्ठतम ಜ್ಯೇಷ್ಠತಮ** (ವಿ) 1. ಎಲ್ಲರಿಗಿಂತಲೂ ಹಿರಿಯವನಾದ, ಎಲ್ಲರಿಗಿಂತಲೂ ದೊಡ್ಡವನಾದ. 2. ಎಲ್ಲರಿಗಿಂತಲೂ ಶ್ರೇಷ್ಠನಾದ. अतिशयेन ज्येष्ठ: "तमप्" (५-३-५५)। स्त्रियाम् "ङीप्" (४-१-१५)। **-तमी -ತಮೀ.** "तरप्" (५-३-५७)। **-तर: -ತರಃ.**

**ज्येष्ठतस् ಜ್ಯೇಷ್ಠತಸ್** (ಅವ್ಯ) ಹಿರಿಯವನಿಂದ. ज्येष्ठ "तसि:" (वा० ५-४-४४)।

**ज्येष्ठता ಜ್ಯೇಷ್ಠತಾ** (ಸ್ತ್ರೀ) ಹಿರಿಯವನಾಗಿರುವುದು, ಹಿರಿಯತನ. ज्येष्ठस्य भाव: "तल्" (५-१-११९)। "यमयोश्चैव गर्भेषु जन्मतो ज्येष्ठता स्मृता" मनु० ९-१२६।

**ज्येष्ठतात ಜ್ಯೇಷ್ಠತಾತ** (ಪುಂ) ತಂದೆಯ ಅಣ್ಣ, ಪಿತೃವ್ಯ, ದೊಡ್ಡಪ್ಪ. तातस्य ज्येष्ठ: परनिपात: (२-२-३१)।

**ज्येष्ठवर्ण ಜ್ಯೇಷ್ಠವರ್ಣ** (ಪುಂ) ವಿಪ್ರ, ಮೊದಲನೆಯ ವರ್ಣದವನು. वर्णानां ज्येष्ठ:। परनिपात: (२-२-३१)।

**ज्येष्ठा ಜ್ಯೇಷ್ಠಾ** (ಸ್ತ್ರೀ) "ज्येष्ठ" ಪದದಲ್ಲಿ ನೋಡಿ.

**ज्येष्ठामूलीय ಜ್ಯೇಷ್ಠಾಮೂಲೀಯ** (ಪುಂ) ಜ್ಯೇಷ್ಠ ಮಾಸ. ಜ್ಯೇಷ್ಠಮಾಸದ ಹುಣ್ಣಿಮೆಯ ದಿನ ಜ್ಯೇಷ್ಠೆ ಅಥವಾ ಮೂಲನಕ್ಷತ್ರಯೋಗವಿರುವುದರಿಂದ ಈ ಹೆಸರು.

**ज्येष्ठाम्बु ಜ್ಯೇಷ್ಠಾಂಬು** (ನಂ) ಅಕ್ಕಿತೊಳೆದ ನೀರು. ಇದರಲ್ಲಿ ಉತ್ತಮಗುಣವಿರುವುದರಿಂದ ಈ ಹೆಸರು. ज्येष्ठं श्रेष्ठमम्बु।

**ज्येष्ठाश्रम ಜ್ಯೇಷ್ಠಾಶ್ರಮ** (ಪುಂ) 1. ಗೃಹಸ್ಥಾಶ್ರಮ. ज्येष्ठ आश्रम:। (ವಿ) 2. ಗೃಹಸ್ಥಾಶ್ರಮವುಳ್ಳವನು. ज्येष्ठ आश्रमो यस्य। ಉಳಿದ ಮೂರು ಆಶ್ರಮಗಳವರನ್ನೂ ಗೃಹಸ್ಥಾಶ್ರಮದವರು ಪೋಷಿಸುವುದರಿಂದ ಈ ಹೆಸರು. "यस्मात् त्रयोऽप्याश्रमिणो ज्ञानेनान्नेन चान्वहम्। गृहस्थेनैव धार्यन्ते तस्माज्ज्येष्ठाश्रमो गृही" मनु० ३-७८।

**ज्यैष्ठ ಜ್ಯೈಷ್ಠ** (ಪುಂ) ಜ್ಯೇಷ್ಠಮಾಸ. ज्यैष्ठी पौर्णमास्यस्मिन् "अण्" (४-२-२१)।

**ज्यैष्ठिनेय ಜ್ಯೈಷ್ಠಿನೇಯ** (ಪುಂ) ಹಿರಿಯ ಹೆಂಡತಿಯ ಮಗ, ಜ್ಯೇಷ್ಠಪತ್ನಿಯ ಪುತ್ರ. ज्येष्ठाया अपत्यम् "ढक्" (४-१-१२०)। "इनङ्" (४-१-१२६) च। "कृते

कानिष्ठिनेयस्य ज्यैष्ठिनेयं विवासितम्" भट्टि० ५-८४। स्त्रियाम् "ङीप्" (४-१-१५)। –नेयी –ನೇಯೀ.

**ज्यैष्ठी ಜ್ಯೈಷ್ಠೀ** (स्त्री०) 1. ಜ್ಯೇಷ್ಠ ಅಥವಾ ಮೂಲ ನಕ್ಷತ್ರದಿಂದ ಕೂಡಿದ ಹುಣ್ಣಿಮೆ. ज्येष्ठानक्षत्रेण मूलनक्षत्रेण वा युक्ता पौर्णमासी "अण्" (४-२-३)। 2. ಹಲ್ಲಿ. ಗೌಳಿ. ज्येष्ठी स्वार्थे "अण्" (५-४-३८)। "ङीप्" (४-१-१५)।

**ज्यैष्ठ्य ಜ್ಯೈಷ್ಠ್ಯ** (न०) 1. ಶ್ರೇಷ್ಠತೆ. 2. ಹಿರಿಯವನಾಗಿರುವಿಕೆ, ಹಿರಿಯತನ. ज्येष्ठस्य भावः "ष्यञ्" (५-१-१२४)। "न मातृतो ज्यैष्ठ्यमस्ति जन्मतो ज्यैष्ठ्यमुच्यते" मनु० ९-१२५। "विप्राणां ज्ञानतो ज्यैष्ठ्यं क्षत्रियाणां तु वीर्यतः। वैश्यानां धान्यधनतः शूद्राणामेव जन्मतः" मनु० २-१५५।

**ज्योतिरात्मन् ಜ್ಯೋತಿರಾತ್ಮನ್** (पुं०) ಜ್ಯೋತಿಸ್ಸ್ವರೂಪನಾದ ಸೂರ್ಯ. ज्योतिरात्माऽस्य।

**ज्योतिरादित्य ಜ್ಯೋತಿರಾದಿತ್ಯ** (पुं०) ವಿಷ್ಣು, ಪರಮಾತ್ಮ. ज्योतिषि सावित्रे मण्डले आदित्यः। "आदित्यो ज्योतिरादित्यः सहिष्णुर्गतिसत्तमः" वि० स०।

**ज्योतिरिङ्गण ಜ್ಯೋತಿರಿಂಗಣ** (पुं०) ಮಿಂಚುಹುಳ, ಮಿಣುಕುಹುಳ. ज्योतिरिव इङ्गति–इगि (गतौ) "युच्" (३-२-१४८)। "ज्योतिरिङ्गणवत्तस्य द्युमणेरिव सन्निधौ" याद० १६-३४।

**ज्योतिर्गण ಜ್ಯೋತಿರ್ಗಣ** (पुं०) ಗ್ರಹ ನಕ್ಷತ್ರ ಮೊದಲಾದುವುಗಳ ಗುಂಪು.

**ज्योतिर्गणेश्वर ಜ್ಯೋತಿರ್ಗಣೇಶ್ವರ** (पुं०) ಪರಮಾತ್ಮ, ವಿಷ್ಣು. ज्योतिर्गणानामीश्वरः। "तमेव भान्तमनुभाति सर्वं तस्य भासा सर्वमिदं विभाति" श्रुतिः। ज्योतिःशब्दो हि सदा द्योतमानसूरिपरिकरवाचकः। तेषां नित्यसूरिगणानामीश्वरः इति वा। "नित्यसूरिगणानां य ईशो ज्योतिर्गणेश्वरः" इति निरुक्तिः। "स्वक्षः स्वङ्गः शतानन्दो नन्दिर्ज्योतिर्गणेश्वरः" वि० स०।

**ज्योतिर्ग्रन्थ ಜ್ಯೋತಿರ್ಗ್ರಂಥ** (पुं०) ಜ್ಯೋತಿಷ ಗ್ರಂಥ, ಗ್ರಹ ನಕ್ಷತ್ರಗಳ ಚಲನವಲನಗಳನ್ನು ತಿಳಿಸುವ ಗ್ರಂಥ. ज्योतिषां ग्रहनक्षत्रादीनां गतिसाधनं ग्रन्थः।

**ज्योतिर्मय ಜ್ಯೋತಿರ್ಮಯ** (वि०) ಜ್ಯೋತಿಸ್ಸ್ವರೂಪರಾದ, ಜ್ಯೋತಿಸ್ಸಿನಿಂದ ಕೂಡಿದ. ज्योतिस् प्राचुर्ये "मयट्" (५-४-२१)। "ऋषीञ्ज्योतिर्मयान् सप्त सस्मार स्मरशासनः" कुमा० ६-३।

**ज्योतिर्विद् ಜ್ಯೋತಿರ್ವಿದ್** (पुं०) ಜ್ಯೋತಿಃಶಾಸ್ತ್ರವನ್ನು ತಿಳಿದವನು, ಜೋಯಿಸ. ज्योतिषां ग्रहनक्षत्राणां गत्यादिकं वेत्ति – विद (ज्ञाने) "क्विप्" (३-२-६१)। "दृष्ट्वा ज्योतिर्विदो वैद्यान् दद्यात् गां काञ्चनं महीम्" याज्ञ० १-३३३।

**ज्योतिर्विद्या ಜ್ಯೋತಿರ್ವಿದ್ಯಾ** (स्त्री०) ಜ್ಯೋತಿಃಶಾಸ್ತ್ರ. ज्योतिषां सूर्यादिग्रहाणां गत्यादिज्ञानसाधनं विद्या।

**ज्योतिर्हस्ता ಜ್ಯೋತಿರ್ಹಸ್ತಾ** (स्त्री०) ದುರ್ಗಾದೇವಿ. "हस्तं शरीरमित्याहुः हस्तं च गगनं तथा। ज्योतिश्च ग्रहनक्षत्रं ज्योतिर्हस्ता ततः स्मृता" देवीपु०।

**ज्योतिश्चक्र ಜ್ಯೋತಿಶ್ಚಕ್ರ** (न०) ಅಶ್ವಿನಿ ಮೊದಲಾದ ಇಪ್ಪತ್ತೇಳು ನಕ್ಷತ್ರಗಳಿಂದ ಕೂಡಿದ ವರ್ತುಲಾಕಾರದ ರಾಶಿಚಕ್ರ. ज्योतिर्भिः नक्षत्रैः घटितं चक्रम्।

**ज्योतिःशास्त्र ಜ್ಯೋತಿಃಶಾಸ್ತ್ರ** (न०) ಸೂರ್ಯ ಮೊದಲಾದ ಗ್ರಹಗಳ ಚಲನವಲನಗಳನ್ನು ತಿಳಿಸುವ ಶಾಸ್ತ್ರ, ಕಾಲಜ್ಞಾನವನ್ನುಂಟುಮಾಡುವ ಒಂದು ಶಾಸ್ತ್ರ, ಆರು ವೇದಾಂಗಗಳಲ್ಲಿ ಒಂದು ಶಾಸ್ತ್ರ. ज्योतिषां सूर्यादीनां गत्यादिबोधकं शास्त्रम्। ವೇದಗಳು ಯಜ್ಞಯಾಗಾದಿಗಳ ವಿಷಯಗಳನ್ನು ಹೇಳುವುವು. ಯಜ್ಞಯಾಗಾದಿಗಳು ತಿಥಿ ನಕ್ಷತ್ರ ಮೊದಲಾದ ಕಾಲವನ್ನು ಅನುಸರಿಸಿ ಆಚರಿಸಲ್ಪಡುವುವು. ಅಂತಹ ಕಾಲಜ್ಞಾನವು ಜ್ಯೋತಿಃಶಾಸ್ತ್ರದಿಂದ ಉಂಟಾಗುವುದರಿಂದ ಜ್ಯೋತಿಷವು ವೇದಾಂಗವಾಯಿತು. "वेदास्तावद्यज्ञकर्मप्रवृत्ता यज्ञाः प्रोक्तास्ते तु कालाश्रयेण। शास्त्रादस्मात्कालबोधो यतः स्याद्वेदाङ्गत्वं ज्योतिषस्योक्तमस्मात्" सिद्धान्तशि०। ಈ ಜ್ಯೋತಿಃಶಾಸ್ತ್ರವು ವೇದಗಳಿಗೆ ನೇತ್ರಪ್ರಾಯವಾದುದು. "ज्योतिषामयनं चक्षुः" पा० शि०।

**ज्योतिष ಜ್ಯೋತಿಷ** (न०) ಜ್ಯೋತಿಃಶಾಸ್ತ್ರ. ज्योतिः सूर्यादिग्रहाणां गत्यादिकं प्रतिपाद्यतयाऽस्त्यस्य "अच्" (५-२-१२७)। ज्योतिर्नक्षत्राद्यधिकृत्य कृतो ग्रन्थः "अण्" (४-३-८७) वा।

**ज्योतिषिक ಜ್ಯೋತಿಷಿಕ** (पुं०) ಜ್ಯೋತಿಃಶಾಸ್ತ್ರವನ್ನು ತಿಳಿದವನು ಅಥವಾ ಓದುವವನು, ದೈವಜ್ಞ, ಜೋಯಿಸ. ज्योतिरधीते वेद वा "ठक्" (४-२-६०)। संज्ञापूर्वकविधेरनित्यत्वात् न वृद्धिः।

**ज्योतिषिन् ಜ್ಯೋತಿಷಿನ್** (पुं०) ಜ್ಯೋತಿಃಶಾಸ್ತ್ರವನ್ನು ತಿಳಿದವನು, ದೈವಜ್ಞ, ಜೋಯಿಸ. ज्योतिषं ज्ञेयत्वेनास्त्यस्य "इनिः" (५-२-११५)।

**ज्योतिष्क ಜ್ಯೋತಿಷ್ಕ** (पुं०) 1. ಚಿತ್ರಮೂಲದ ಗಿಡ. 2. ಮೆಂತ್ಯ. 3. ನೆಲ್ಲಿಗಿಡದ ಒಂದು ಭೇದ. (पुं० ब० व०) 4. ನಕ್ಷತ್ರಗಳು. 5. ಸೂರ್ಯಾದಿ ಗ್ರಹಗಳು. (न०) 6. ಮೇರುಪರ್ವತದ ಒಂದು ಶಿಖರ. ज्योतिरिव ज्योतिषा वा कायति—कै (शब्दे) "कः" (३-२-३)।

**ज्योतिष्कण ಜ್ಯೋತಿಷ್ಕಣ** (पुं०) ಬೆಂಕಿಯ ಕಿಡಿ. ज्योतिषः वह्नेः कणः। "ज्योतिष्कणाहतश्मश्रु कण्ठनालादपातयत्" रघु० १५-५२।

**ज्योतिष्कर ಜ್ಯೋತಿಷ್ಕರ** (पुं०) ಜ್ಯೋತಿಸ್ಸನ್ನುಂಟು ಮಾಡುವ ಸೂರ್ಯ. ज्योतिः करोति—डु कृञ् (करणे) ताच्छील्ये "टः" (३-२-२०)। "अस्यन्नरुष्करान् बाणान् ज्योतिष्करसमद्युतिः" भट्टि० ९-६५।

**ज्योतिष्कल्प ಜ್ಯೋತಿಷ್ಕಲ್ಪ** (वि०) ಬೆಂಕಿಗೆ ಸಮಾನವಾದ. "वनुष्पाशभृतः संख्ये ज्योतिष्कल्पोरुकेशरः" भट्टि० ९-६०।

**ज्योतिष्कुर्वत् ಜ್ಯೋತಿಷ್ಕುರ್ವತ್** (वि०) ಬೆಂಕಿಯನ್ನು ಉರಿಯಿಸುತ್ತಿರುವ. "ज्योतिष्कुर्वन्निवैकोऽसावाटीत्संख्ये परार्ध्यवत्" भट्टि० ९-६४।

**ज्योतिष्टम ಜ್ಯೋತಿಷ್ಟಮ** (वि०) ಹೆಚ್ಚು ಪ್ರಕಾಶವಾಗಿರುವ, ಹೆಚ್ಚು ಬೆಳಕನ್ನು ಚೆಲ್ಲುವ. अतिशयेन ज्योतिष्मान् ज्योतिस् "तमप्" (५-३-५५)। "सुधाम्नीं सर्वतेजस्सु तन्वीं ज्योतिष्टमां शुभाम्" भट्टि० ९-८५।

**ज्योतिष्टोम ಜ್ಯೋತಿಷ್ಟೋಮ** (पुं०) ಸ್ವರ್ಗಕಾಮನೆಯಿಂದ ಮಾಡುವ ಜ್ಯೋತಿಷ್ಟೋಮವೆಂಬ ಒಂದು ಯಾಗ, ಹದಿನಾರು ಜನ ಋತ್ವಿಕ್ಕುಗಳಿಂದ ನಡೆಸಲ್ಪಡುವ ಒಂದು ಯಜ್ಞ. ज्योतींषि त्रिवृदादयः स्तोमा यस्य। "बहुधा निःसृतः कायाज्ज्योतिष्टोमः क्रतुर्यथा" भा० वन० २२१-३०। "ज्योतिष्टोमेन स्वर्गकामो यजेत"।

**ज्योतिष्मत् ಜ್ಯೋತಿಷ್ಮತ್** (पुं०) 1. ರವಿ, ಸೂರ್ಯ. 2. ಪ್ಲಕ್ಷದ್ವೀಪದ ಒಂದು ಪರ್ವತ. ज्योतिरस्यास्ति "मतुप्" (५-२-९४)। (वि०) 3. ಪ್ರಕಾಶಮಾನವಾಗಿರುವ, ಕಾಂತಿಯಿಂದ ಕೂಡಿರುವ. स्त्रियाम् "ङीप्" (४-१-६)। **—ती —ತೀ.** "नक्षत्रताराग्रहसंकुलापि ज्योतिष्मती चन्द्रमसैव रात्रिः" रघु० ६-२२।

**ज्योतिष्मती ಜ್ಯೋತಿಷ್ಮತೀ** (स्त्री०) 1. ರಾತ್ರಿ. ज्योतिरस्यास्ति—"मतुप्" (५-२-९४)। "ङीप्" (४-१-६)। 2. ಯೋಗಶಾಸ್ತ್ರದಲ್ಲಿ ಹೇಳಿರುವ ಸತ್ತ್ವಪ್ರಚುರವಾದ ಒಂದು ಚಿತ್ತವೃತ್ತಿ ಭೇದ. "विशोका वा ज्योतिष्मती" पा० यो० सू०। 3. ಜ್ಯೋತಿಷ್ಮತೀಲತೆ, ಕಂಗೊಂಗೆ ಗಿಡ,

**ज्योतिस् ಜ್ಯೋತಿಸ್** (पुं०) 1. ಸೂರ್ಯ. द्योतते—द्युत (दीप्तौ) "इसिन्" आदेश्च जः (उ० २-११०)। 2. ಅಗ್ನಿ, ಬೆಂಕಿ. "ज्योतिरग्नौ दिवाकरे" मेदि०। (न०) 3. ಬೆಳಕು, ಪ್ರಕಾಶ. "उदयदहिमरोचिर्ज्योतिषाक्रान्तमन्तर्मधुन इव तथैवापूर्णमद्यापि भाति" माघ० २२-५१। 4. ದೃಷ್ಟಿ, ಕಣ್ಣು. 5. ನಕ್ಷತ್ರ. "मुक्ता वितानेन बलाहकानां ज्योतींषि रम्या इव दिग्विभागाः" किरा० १६-३४। 6. ಜ್ವಾಲೆ, ಉರಿ. 7. ಸಂಪತ್ತು, ಐಶ್ವರ್ಯ. 8. ಪುತ್ರ, ಮಗ. 9. ಜೀವಾತ್ಮ. 10. ಅಧ್ವರ, ಯಾಗ. "ज्योतिस्ताराग्निभाज्वालादृक्पुत्रार्थाध्वरात्मसु" वैज०। 11. ಸೂರ್ಯಚಂದ್ರ ಮೊದಲಾದ ಗ್ರಹ. "अमुं प्रिये नूनमतन्द्रितानि ज्योतींषि भक्त्या परियान्त्यजस्रम्" याद० १८-५। 12. ಕಾಂತಿ, ತೇಜಸ್ಸು. "उत्क्षिप्यैकं ज्योतिरेकं जगाम" शाकु० ५-३०। 13. ಪರಂಜ್ಯೋತಿ, ಸ್ವಯಂಪ್ರಕಾಶನಾದ ಪರಬ್ರಹ್ಮ. "योऽन्तःसुखोऽन्तरारामस्तथान्तर्ज्योतिरेव यः" गीता ५-२४। "स हि देवः परं ज्योतिस्तमःपारे प्रतिष्ठितम्" कुमा० २-५८। 14. ವಿಷ್ಣು. "विहायसगतिर्ज्योतिः सुरुचिर्हुतभुग्विभुः" वि० स०।

**ज्योतीरथ ಜ್ಯೋತೀರಥ** (पुं०) ಧ್ರುವ ನಕ್ಷತ್ರ. ज्योतिषां सूर्यादीनां आधारतया रथ इव। "केतुर्ज्योतीरथस्तु स्यात् ग्रहाधारो ध्रुवश्च सः" त्रिकाण्ड०।

**ज्योत्स्ना ಜ್ಯೋತ್ಸ್ನಾ** (स्त्री०) 1. ಚಂದ್ರಿಕೆ, ಬೆಳದಿಂಗಳು. ज्योतिरस्त्यस्याम् "नः" उपधालोपश्च (५-२-११४)। निपा०। "ज्योत्स्नेव कृत्स्ना सुरसिन्धुबन्धुः" नैष० २२-३८। "ज्योत्स्नापयःक्ष्मातटवास्तुवस्तुच्छायाच्छलच्छिद्रधरा धरायाम्" नैष० २२-७०। 2. ದುರ್ಗಾದೇವಿ. 3. ಬೆಳದಿಂಗಳಿಂದ ಕೂಡಿದ ರಾತ್ರಿ. "ज्योत्स्ना चन्द्रातपेऽपि स्यात् ज्योत्स्नायुक्तनिशि स्मृता" मेदि०।

**ज्योत्स्नाकाली ಜ್ಯೋತ್ಸ್ನಾಕಾಲೀ** (स्त्री०) ಚಂದ್ರನ ಮಗಳು, ವರುಣನ ಮಗನಾದ ಪುಷ್ಕರನ ಪತ್ನಿ. "एषोऽस्य पुत्रोऽभिमतः पुष्करः पुष्करेक्षणः। रूपवान् दर्शनीयश्च सोमपुत्र्या वृतः पतिः। ज्योत्स्नाकालीति यामाहुः द्वितीयां रूपतः श्रियम्" भा० उद्योग० ९८-१२, १३।

**ज्योत्स्नाप्रिय ಜ್ಯೋತ್ಸ್ನಾಪ್ರಿಯ** (पुं०) ಚಕೋರಪಕ್ಷಿ.

**ज्योत्स्नावत् ಜ್ಯೋತ್ಸ್ನಾವತ್** (वि०) ಬೆಳದಿಂಗಳಿಂದ ಕೂಡಿದ. ज्योत्स्नास्यास्ति "मतुप्" (५-२-९४)। "तमिस्रपक्षेऽपि सह प्रियाभिर्ज्योत्स्नावतो निर्विशति प्रदोषान्" रघु० ६-३४।

**ज्योत्स्नावृक्ष ಜ್ಯೋತ್ಸ್ನಾವೃಕ್ಷ** (ಪುಂ) ದೀಪದ ಕಂಬ. "शिखातरुर्दीपवृक्षो ज्योत्स्नावृक्षोऽथ लोचक:" त्रिकाण्ड० ।

**ज्योत्स्नी ಜ್ಯೋತ್ಸ್ನೀ** (स्त्री०) 1. ಚಂದ್ರಿಕೆಯಿಂದ ಕೂಡಿದ ರಾತ್ರಿ. 2. ಪಡವಲ ಗಿಡ. "ज्योत्स्नी पटोलिकायां स्याज्ज्योत्स्नायुक्तनिशि स्त्रियाम्" मेदि० ।

**ज्यौतिषिक ಜ್ಯೌತಿಷಿಕ** (ಪುಂ) 1. ದೈವಜ್ಞ, ಜೋಯಿಸ. (वि०) 2. ಜ್ಯೋತಿಷವನ್ನು ಅಧ್ಯಯನ ಮಾಡುವ ಅಥವಾ ಅದನ್ನು ತಿಳಿದಿರುವ. ज्योतिषमधीते वेद वा "ठक्" (४-२-६०) ।

**ज्यौत्स्न ಜ್ಯೌತ್ಸ್ನ** (ಪುಂ) 1. ಶುಕ್ಲಪಕ್ಷ, ಚಂದ್ರಿಕೆಯಿಂದ ಕೂಡಿದ ತಿಂಗಳ ಮೊದಲ ಅರ್ಧಭಾಗ. ज्योत्स्ना अस्यास्ति "अण्" (वा० ५-२-१०३) । (स्त्री०) **–त्स्नी –ತ್ಸ್ನೀ.** 2. ಚಂದ್ರಿಕೆಯಿಂದ ಕೂಡಿದ ರಾತ್ರಿ. "ज्यौत्स्नीर्न चेत्तत्प्रतिमा इमा वा कथं कथं तानि च वामनानि" नैष० २२-५५ ।

**ज्यौत्स्निका ಜ್ಯೌತ್ಸ್ನಿಕಾ** (स्त्री०) ಚಂದ್ರಿಕೆಯಿಂದ ಕೂಡಿದ ರಾತ್ರಿ.

**ज्वर ಜ್ವರ** (ಪುಂ) ಜ್ವರ, ಉಷ್ಣರೋಗ. ज्वरति—ज्वर (रोगे) "अच्" (३-१-१३४) । "मनसस्तदुपस्थिते ज्वरे पुनरक्लीबतया प्रकाश्यताम्" रघु० ८-८४ ।

**ಜ್ವರದ ಉತ್ಪತ್ತಿ:** ಎಲ್ಲಾ ಪ್ರಾಣಿಗಳನ್ನೂ ತಲ್ಲಣಗೊಳಿಸುವ ಮತ್ತು ಎಲ್ಲಾ ರೋಗಗಳಿಗೂ ರಾಜನಾದ ಈ ಜ್ವರವು ದಕ್ಷನ ಯಾಗವನ್ನು ಧ್ವಂಸಮಾಡಿದ ರುದ್ರನ ಕೋಪಾಗ್ನಿಯಿಂದ ಹುಟ್ಟಿದುದು. ಮನುಷ್ಯನಿಗೆ ಇದು ಬಂದಾಗ ಜ್ವರವೆನಿಸುವುದು. ಇತರ ತಿರ್ಯಕ್ ಪ್ರಾಣಿಗಳಲ್ಲಿ (ಗಜ ಅಶ್ವ ಮೊದಲಾದುವುಗಳಲ್ಲಿ) ಪಾಕಲ ಅಭಿತಾಪ ಖೋರಕ ಭ್ರಮರಕ ಮುಂತಾದ ಹೆಸರಿನಿಂದ ಕರೆಯಲ್ಪಡುವುದು. "तेषां तद्वचनं श्रुत्वा प्राब्रवीद्भिषजां वर: । ज्वरमादौ प्रवक्ष्यामि स रोगानीकराट् स्मृत: । रुद्रकोपाग्निसंभूत: सर्वभूतप्रतापन: । तैस्तैर्नामभिरन्येषां सत्वानां परिकीर्त्यते" सुश्रुत० उत्तरतं० ३९-८, ९ ।

**ಜ್ವರದ ಸ್ವರೂಪ:** ಬೆವರದಿರುವುದು ತಾಪದಬೇನೆ ಮೈಕೈಕಾಲುಗಳು ಹಿಡಿದುಕೊಳ್ಳುವುದು ಮೊದಲಾದ ವಿಕಾರಗಳು ದೇಹದಲ್ಲಿ ಏಕಕಾಲದಲ್ಲಿ ಉಂಟಾಗುವುದು ಜ್ವರದ ಲಕ್ಷಣ. "स्वेदावरोध: सन्ताप: सर्वाङ्गग्रहणं तथा । विकारा युगपद्यस्मिन् ज्वर: स परिकीर्तित:" सुश्रुत० उत्तरतं० ३९-१३ ।

ರುದ್ರನು ತನ್ನ ಕೋಪಾಗ್ನಿಯಿಂದ ಸೃಷ್ಟಿಸಿದ ಜ್ವರದಿಂದ ಕೃಷ್ಣನ ಹೊರತು ಉಳಿದೆಲ್ಲ ಯಾದವರೂ ಪೀಡಿತರಾಗಲು ಆಗ ಶ್ರೀಕೃಷ್ಣನು ರುದ್ರನ ಜ್ವರವನ್ನು ತಡೆಯಲು ವೈಷ್ಣವ ಜ್ವರವನ್ನು ಸೃಷ್ಟಿಸಿದನು. "कालाग्निरुद्र: कोपेन चिक्षेप ज्वरमुल्बणम् । बभूवुर्यादवा: सर्वे ज्वराक्रान्ता हरिं विना । तं दृष्ट्वा भगवान् कृष्ण: ससर्ज वैष्णवं ज्वरम् । तं चिक्षेप ज्वरं हन्तुं माहेशं रणमूर्धनि" ब्रह्मवै० ।

**ಜ್ವರದ ಭೇದಗಳು:** ಜ್ವರವು ವಾತಜ, ಪಿತ್ತಜ, ಕಫಜಗಳೆಂದು ಮೂರು ವಿಧ. ಈ ಮೂರರಿಂದಲೂ ಒಂದು ವಿಧ. ಈ ಮೂರರ (ವಾತ ಪಿತ್ತ ಮತ್ತು ಕಫಗಳ) ದ್ವಂದ್ವದಿಂದ ಮೂರು ವಿಧ. ಮತ್ತು ಆಗಂತು ಈ ರೀತಿ ಅನೇಕ ಕಾರಣಗಳಿಂದ ಜ್ವರವು ಎಂಟು ವಿಧ. "दोषै: पृथक् समस्तैश्च द्वन्द्वैरागन्तुरेव च । अनेककारणोत्पन्न: स्मृतस्त्वष्टविधो ज्वर:" सुश्रुत० उत्तरतं० ३९-१४ ।

ವಾತ ಪಿತ್ತ ಕಫಗಳೆಂಬ ದೋಷಗಳು ಆಯಾ ಋತುಗಳಲ್ಲಿ ಕಲಹ ಕೋಪ ದಿವಾಸ್ವಾಪ ಅಪಥ್ಯಾಹಾರಸೇವನೆ ಮೊದಲಾದ ಕಾರಣಗಳಿಂದ ಪ್ರಕೋಪಹೊಂದುವುವು. ಈ ಮೇಲಿನ ಕಾರಣಗಳಿಂದ ಕೆಟ್ಟ ತ್ರಿದೋಷಗಳು ಆಮಾಶಯವನ್ನು ಸೇರಿ ಧಾತುಗಳ ಔಷ್ಣ್ಯಸಹಿತವಾಗಿ ಹೃದಯದಲ್ಲಿ ರಸದೊಡನೆ ಬೆರೆತು ಜಾಠರಾಗ್ನಿಯನ್ನು ಮಂದಗೊಳಿಸಿ ಶರೀರವೆಲ್ಲವನ್ನೂ ವ್ಯಾಪಿಸಿ ಜ್ವರವನ್ನುಂಟುಮಾಡುವುದು. "दोषा: प्रकुपिता: स्वेषु कालेषु स्वै: प्रकोपनै: । व्याप्य देहमशेषेण ज्वरमापादयन्ति हि । दुष्टा: स्वहेतुभिर्दोषा: प्राप्यामाशयमूष्मणा । सहिता रसमागत्य रसस्वेदप्रवाहिणाम् । स्रोतसां मार्गमावृत्य मन्दीकृत्य हुताशनम् । निरस्य बहिरूष्माणं पक्तिस्थानाच्च केवलम् । शरीरं समभिव्याप्य स्वकालेषु ज्वरागमम् । जनयन्त्यथ वृद्धिं वा स्ववर्णं च त्वगादिषु" सुश्रुत० उत्तरतं० ३९-१५-१९ ।

**ಜ್ವರದ ಪೂರ್ವರೂಪ:** ಆಯಾಸ, ಯಾವುದರಿಂದಲೂ ಶರೀರಕ್ಕೆ ಸೌಖ್ಯವಿಲ್ಲದಿರುವುದು ಮುಖದಲ್ಲಿ ಒಂದು ವಿಧ ವೈವರ್ಣ್ಯ ಕಣ್ಣಿನಲ್ಲಿ ನೀರು ತುಂಬಿಕೊಳ್ಳುವುದು ತಂಗಾಳಿ ಮತ್ತು ಬಿಸಿಲುಗಳಲ್ಲಿ ಅಪೇಕ್ಷೆಯಿಲ್ಲದಿರುವುದು ಆಕಳಿಕೆ ಮೈಮುರಿತ ಮೈ ಭಾರವಾಗಿರುವುದು ರೋಮಾಂಚ ಕತ್ತಲೆಯಲ್ಲಿರಬೇಕೆಂದು ಅಪೇಕ್ಷೆ ಸಂತೋಷವಿಲ್ಲದಿರುವುದು ನೆಗಡಿ ವಾತಾಧಿಕ್ಯದಿಂದ ಆಕಳಿಕೆ ಪಿತ್ತಾಧಿಕ್ಯದಿಂದ ಕಣ್ಣುಗಳಲ್ಲಿ ಉರಿತ ಕಫಾಧಿಕ್ಯದಿಂದ ಆಹಾರದ್ವೇಷ ಮೊದಲಾದುವು ಜ್ವರಕ್ಕೆ ಮೊದಲು ಕಾಣಿಸಿಕೊಳ್ಳುವುವು.

"श्रमोऽरतिर्विवर्णत्वं वैरस्यं नयनप्लवः। इच्छाद्वेषौ मुहुश्चापि शीतवातातपादिषु॥ जृम्भाङ्गमर्दो गुरुता रोमहर्षोऽरुचिस्तमः। अप्रहर्षश्च शीतं च भवत्युत्पत्स्यति ज्वरे॥ सामान्यतो, विशेषात्तु जृम्भात्यर्थं समीरणात्। पित्तान्नयनयोर्दाहः कफान्नान्नाभिनन्दनम्" सुश्रुत० उत्तरतं० ३९-२५-२७।

**ವಾತಜ್ವರದ ಲಕ್ಷಣ:** ನಡುಕ ಗಂಟಲು ತುಟಿ ಒಣಗುವುದು ನಿದ್ರಾಭಾವ ಸೀನುವುದು ಗಾತ್ರಸ್ತಂಭ ದೇಹದಲ್ಲಿ ಉಷ್ಣತೆ ತಲೆನೋವು ಎದೆನೋವು ಮಲಮೂತ್ರ ಗಳಲ್ಲಿ ವೈವರ್ಣ್ಯ ಮಲಬದ್ಧತೆ ಆಕಳಿಕೆ ಹೊಟ್ಟೆಯುಬ್ಬರ ಮುಂತಾದುವು ವಾತಜ್ವರದ ಲಕ್ಷಣ. "वेपथुर्विषमो वेगः कण्ठौष्ठपरिशोषणम्। निद्रानाशः क्षवः स्तम्भो गात्राणां रौक्ष्यमेव च। शिरोहृद्गात्ररुग्वक्त्रवैरस्यं बद्धविट्कता। जृम्भाऽऽध्मानं तथा शूलं भवत्यनिलजे ज्वरे" सुश्रुत० उत्तरतं० ३९-२९-३०।

**ಪಿತ್ತಜ್ವರದ ಲಕ್ಷಣ:** ತೀಕ್ಷ್ಣವಾದ ಜ್ವರದ ವೇಗ, ಅತಿಸಾರ, ಅಲ್ಪನಿದ್ರೆ, ವಾಂತಿ, ಜ್ವರದವೇಗದಿಂದ ಗಂಟಲು ತುಟಿ ಮೂಗು ಮುಖಗಳು ಬಿಸಿಯಾಗಿ ಕುದಿಯುವುದು, ಬೆವರು, ಪ್ರಲಾಪ, ಮುಖದಲ್ಲಿ ಸಿಡುಕು, ಬಾಯಾರಿಕೆ ಮುಂತಾದುವು ಪಿತ್ತಜ್ವರದಲ್ಲಿ ಉಂಟಾಗುವ ಅನುಭವ ಗಳು. "वेगस्तीक्ष्णोऽतिसारश्च निद्राल्पत्वं तथा वमिः। कण्ठौष्ठमुखनासानां पाकः स्वेदश्च जायते। प्रलापः कटुता वक्त्रे मूर्च्छा दाहो मदस्तृषा। पीतविण्मूत्र-नेत्रत्वं पैत्तिके भ्रम एव च" सुश्रुत० उत्तरतं ३९-३१-३२।

**ಕಫಜ್ವರದ ಲಕ್ಷಣ:** ದೇಹವು ಭಾರವಾಗಿರುವುದು, ಶ್ಲೇಷ್ಮವನ್ನು ಕಾರುವುದು, ರೋಮಾಂಚ, ಅತಿನಿದ್ರೆ, ಉಸಿರು ತಡೆಯುವುದು, ಜೊಲ್ಲುಸುರಿಯುವುದು, ಮೈ ನೋವು, ವಾಂತಿ, ಮೈಯಲ್ಲಿ ಸಾಮಾನ್ಯವಾದ ಉಷ್ಣತೆ, ಬಾಯಿ ಸಿಹಿಯಾಗುವುದು, ಅರುಚಿ ಕೆಮ್ಮಲು ಮುಂತಾ ದುವು ಕಫಜ್ವರದ ಲಕ್ಷಣ. "गौरवं शीतमुत्क्लेशः रोमहर्षोऽतिनिद्रता। स्रोतोरोधोरुगल्पत्वं प्रसेको मधुरास्यता। नात्युष्णगात्रता छर्दिरङ्गसादोऽविपाकता। प्रतिश्यायोऽरुचिः कासः कफजेऽक्ष्णोश्च शुक्लता" सुश्रुत० उत्तरतं० ३९-३३, ३४। ಇತ್ಯಾದಿ.

ಹೀಗೆ ದ್ವಿದೋಷಾದಿಜ್ವರ ಸನ್ನಿಪಾತಜ್ವರ ಮುಂತಾ ದುವುಗಳಿಗೆ ಸುಶ್ರುತ ಉತ್ತರತಂತ್ರ 39 ನೆಯ ಅಧ್ಯಾಯ ನೋಡಿ.

ಈ ಜ್ವರವು ಮನುಷ್ಯನಿಗೆ ಮಾತ್ರವಲ್ಲದೆ ಸ್ಥಾವರ ಜಂಗಮಗಳಲ್ಲಿಯೂ ಬೇರೆಬೇರೆ ರೂಪದಿಂದಿದ್ದು ಅವನ್ನು ಪೀಡಿಸುವುದು. ಸಸ್ಯವೃಕ್ಷಗಳಲ್ಲಿ ಕೀಟರೂಪದಿಂದ ಸೇರಿ ಅವುಗಳ ಎಲೆಗಳನ್ನು ತಿನ್ನುವುದು. ಫಲಗಳನ್ನು ನಿಃಸಾರ ವನ್ನಾಗಿ ಮಾಡುವುದು.

ತಾವರೆ ಬಳ್ಳಿಗಳನ್ನು ಹಿಮದರೂಪದಿಂದ ಪೀಡಿಸು ವುದು. ನವಿಲುಗಳ ಶಿಖೆಗಳನ್ನು ಉದುರಿಸುವುದು. ಭೂಮಿ ಯಲ್ಲಿ ಊಷರ (ಕರಳು) ರೂಪದಿಂದ ಸೇರಿ ಸತ್ತ್ವವಿಲ್ಲದ್ದ ನ್ನಾಗಿ ಮಾಡುವುದು. ಪರ್ವತಗಳಲ್ಲಿ ಗೈರಿಕಾದಿ ಧಾತುರೂಪ ದಿಂದಿರುವುದು. ಇತ್ಯಾದಿ. "वृक्षेषु कीटरूपेण तथा संकोचपत्रकः। पाण्डुपत्रश्च विख्यातः फलेष्वातुर्यमेव च। पद्मिनीषु हिमो भूत्वा पृथिव्यामपि चोषरः। गैरिकः पर्वतेष्वेव मत्प्रसादाद्भविष्यसि" हरिवं०।

ಜ್ವರದ ಪ್ರಾರಂಭದಲ್ಲಿ ಲಂಘನ ಮಾಡಬೇಕು. ಜ್ವರದ ಮಧ್ಯಕಾಲದಲ್ಲಿ ಅದು ಜೀರ್ಣವಾಗಲು ಔಷಧ ಸೇವನೆ ಯಾಗಬೇಕು. ಜ್ವರವು ನಿಂತಮೇಲೆ ಒಳಹೊಟ್ಟೆಯು ಶುದ್ಧವಾಗಲು ವಿರೇಚನಮಾಡಿಸಬೇಕು. "ज्वरादौ लङ्घनं कुर्यात् ज्वरमध्ये तु पाचनम्। ज्वरान्ते रेचनं कुर्यात् कोष्ठशुद्ध्यै यथाबलम्"।

ವಾತಜ್ವರ ಮತ್ತು ಕಫಜ್ವರದಲ್ಲಿ ಬಾಯಾರಿದರೆ ಸುಖೋಷ್ಣವಾದ ಬಿಸಿನೀರನ್ನು ಕೊಡಬಹುದು. ಅದು ಅಗ್ನಿದೀಪನವಾಗುವುದು ಮತ್ತು ಕಫವನ್ನು ನಾಶಮಾಡು ವುದು. "वातश्लेष्मज्वरार्ताय हितमुष्णाम्बु तृष्यते। दीपनं स्यात् कफच्छेदि वातपित्तानुलोमनम्"।

ನಿಧಾನವಾಗಿ ಕುದಿಯಿಸಲ್ಪಟ್ಟು ನೊರೆಯಿಲ್ಲದ ಸ್ವಚ್ಛ ವಾದ ಮತ್ತು ಅರ್ಧಭಾಗ ಇಂಗಿಸಲ್ಪಟ್ಟ ಉಷ್ಣೋದಕ ವನ್ನು ಜ್ವರದವರಿಗೆ ಕೊಡಬೇಕು. "क्वथ्यमानं तु निर्वेगं निष्फेनं निर्मलं तथा। अर्धावशिष्टं यत्तोयं तदुष्णोदकमुच्यते"।

ಹಗಲು ಕಾಯಿಸಿದ ಬಿಸಿನೀರು ರಾತ್ರಿ ಗುರುವಾಗು ವುದು, ರಾತ್ರಿ ಕಾಯಿಸಿದ ನೀರು ಹಗಲು ಗುರುವಾಗು ವುದು. ಅಂತಹ ನೀರು ಅಗ್ನಿಶಕ್ತಿಯನ್ನು ಕುಂದಿಸುವುದು. ಮತ್ತು ವಾತಪಿತ್ತಕಫಗಳನ್ನು ವೃದ್ಧಿಗೊಳಿಸುವುದು. "दिवा शृतं पयो रात्रौ गुरुतामधिगच्छति। रात्रौ शृतं दिवा पीतं गुरुत्वमधिगच्छति। तत्तु पर्युषितं वह्निगुणभ्रष्टं त्रिदोषकृत्"।

ಜ್ವರವು ಬಿಟ್ಟನಂತರ ಬಹಳ ಕೃಶನಾಗಿರುವವನಿಗೆ ಅಪಥ್ಯಾಹಾರ ಸೇವನೆ ಸ್ವೇಚ್ಛಾವಿಹಾರಗಳಿಂದ (ಜ್ವರವು)

ಮರುಕಳಿಸಿ ವಾತದೋಷದಿಂದ ವೃದ್ಧಿಗೊಂಡು ಆಮಾಶಯ ಹೃದಯ ಕಂಠ ಮುಂತಾದುವುಗಳಲ್ಲಿ ಸೇರಿ ಮೂರನೆಯ ಮತ್ತು ನಾಲ್ಕನೆಯ ಜ್ವರ ಮುಂತಾದುವುಗಳಿಗೆ ಅವಕಾಶ ಮಾಡಿಕೊಳ್ಳುವುದು. "कृशानां ज्वरमुक्तानां मिथ्याहारविहारिणाम्। दोषः स्वल्पोऽपि संवृद्धः देहिनामनिलेरितः। सततान्येद्युष्कत्र्याख्यचातुर्थान् सप्रलेपकान्। कफस्थानविभागेन यथासंख्यं करोति हि। अहोरात्रादहोरात्रात् स्थानात् स्थानं प्रपद्यते। ततश्चामाशयं प्राप्य दोषः कुर्याज्ज्वरं नृणाम्" सुश्रुत० उत्तरतं० ३९-५१, ५२, ५३।

ಪಿಪ್ಪಲ್ಯಾದಿಕಷಾಯವು ಕಫಜ್ವರಕ್ಕೆ ಔಷಧ. "पिप्पल्यादिकषायं तु कफजे परिपाचनम्"।

ಕಿರಾತತಿಕ್ತಾದಿ ಕಷಾಯವು ವಾತಪಿತ್ತಜ್ವರಕ್ಕೆ ಔಷಧ. "किराततिक्काममृतां द्राक्षामामलकीं शटीम्। निष्क्वाथ्य सगुडं क्वाथं वातपित्तज्वरे पिबेत्"।

ತಲೆಯು ಹಗುರವಾಗಿರುವುದು, ಬೆವರುವುದು, ಮುಖವು ಬಿಳುಪೇರಿರುವುದು, ಕೆಮ್ಮಲು, ಅನ್ನದ ಅಪೇಕ್ಷೆ ಇವು ಜ್ವರಬಿಟ್ಟಿರುವವನ ಲಕ್ಷಣ. "लघुत्वं शिरसः स्वेदः मुखमापाण्डु पाकि च। क्षवथुश्चान्नकाङ्क्षा च ज्वरमुक्तस्य लक्षणम्" सुश्रुत० उत्तरतं० ३९-३२२।

**ज्वरघ्न ಜ್ವರಘ್ನ** (पुं०) 1. ಚಕ್ಕೋತದ ಸೊಪ್ಪು. 2. ಅಮೃತಬಳ್ಳಿ. (वि०) 3. ಜ್ವರವನ್ನು ನಾಶಮಾಡುವ. (स्त्री०) **-घ्नी-ಘ್ನೀ.** 4. ಮಂಜಿಷ್ಠೆ. ज्वरं हन्ति—हन (हिंसागत्योः) "टक्" (३-२-५३)।

**ज्वरित ಜ್ವರಿತ** (वि०) ಜ್ವರಬಂದಿರುವ, ಜ್ವರದಿಂದ ಪೀಡಿತನಾದ. ज्वरोऽस्य संजातः "इतच्" (५-२-३६)।

**ज्वरिन् ಜ್ವರಿನ್** (वि०) ಜ್ವರವುಳ್ಳ, ಜ್ವರದಿಂದ ಕೂಡಿರುವವನು. ज्वरोऽस्यास्ति "इनिः" (५-२-११५)।

**ज्वल – दीप्तौ** (भ्वा० पर० अक० से०)। ज्वलति। जज्वाल। ज्वलिता। ज्वलिष्यति। ज्वलतु। ಇತ್ಯಾದಿ. 1. ಪ್ರಕಾಶಿಸು. 2. ಉರಿ. 3. ಸುಡು. "जज्वाल लोकस्थितये स राजा" भट्टि०। "ज्वलतु गगने रात्रौ रात्रावखण्डकलः शशी दहतु मदनः किं वा मृत्योः परेण विधास्यतः" मालती० २-२।

**भावे :**—ज्वल्यते। जज्वले। ज्वलिता। ज्वलिष्यते। ज्वल्यताम्। ಇತ್ಯಾದಿ.

**णिचि :**— ज्वलयति, -ते। ज्वालयति, -ते। ज्व(ज्वा)लयां चकार, -चक्रे, -बभूव, -आस। ज्वलयिता, ज्वालयिता। ज्व(ज्वा)लयिष्यति, -ते। ज्व(ज्वा)लयतु, -ताम्। ಇತ್ಯಾದಿ.

**कृत्सु :**—ज्वलितव्यम्। ज्वलनीयम्। ज्वाल्यम्। ज्वलितः। ज्वलितवान्। ज्वलन्, -न्ती। ज्वलितुम्। ज्वलितम्। ज्वलनम्। ज्वलित्वा।

**ज्वल ಜ್ವಲ** (पुं०) 1. ದೀಪ್ತಿ, ಪ್ರಕಾಶ, ಬೆಳಕು. 2. ಅಗ್ನಿಯ ಜ್ವಾಲೆ, ಬೆಂಕಿಯ ಉರಿ. ज्वल (दीप्तौ) "अच्" (३-१-१३४)। (वि०) 3. ಪ್ರಕಾಶಿಸುವ. 4. ಉರಿಯುವ.

**ज्वलका ಜ್ವಲಕಾ** (स्त्री०) ಅಗ್ನಿಯ ಜ್ವಾಲೆ, ಬೆಂಕಿಯ ಉರಿ.

**ज्वलत् ಜ್ವಲತ್** (वि०) 1. ಹೊಳೆಯುತ್ತಿರುವ, ಪ್ರಕಾಶಿಸುತ್ತಿರುವ. ज्वल (दीप्तौ) "शतृ" (३-२-१२४)। "अथाजिनाषाढधरः प्रगल्भवाग्ज्वलन्निव ब्रह्ममयेन तेजसा" कुमा० ५-३०। 2. ಉರಿಯುತ್ತಿರುವ. "ज्वलतस्तव जातवेदसः सततं वैरिकृतस्य चेतसि" किरा० २-२४। "ज्वलदग्निमुखैर्बाणैर्नीरन्ध्रैरितरेतरम्" कुमा० १६-११। स्त्रियाम् "ङीप्" (४-१-६)। **-न्ती -ನ್ತೀ.**

**ज्वलन ಜ್ವಲನ** (पुं०) 1. ಅಗ್ನಿ, ಬೆಂಕಿ. 2. ಚಿತ್ರಮೂಲದ ಗಿಡ. ज्वलति—ज्वल (दीप्तौ) "युच्" (३-२-१५०)। "ज्वलनं त्विषः कथमिवेतरथा सुलभोऽन्यजन्मनि स एव पतिः" माघ० ९-१३। "बीजप्ररोहजननीं ज्वलनः करोति" रघु० ९-८०। (न०) 3. ಹೊಳೆಯುವುದು. 4. ಉರಿಯುವುದು. ज्वल भावे "ल्युट्" (३-३-११५)। (वि०) 5. ಪ್ರಕಾಶಿಸುವ, ಹೊಳೆಯುವ. 6. ಉರಿಯುವ.

**ज्वलनाश्मन् ಜ್ವಲನಾಶ್ಮನ್** (पुं०) ಸೂರ್ಯಕಾಂತ ಶಿಲೆ.

**ज्वलनीय ಜ್ವಲನೀಯ** (वि०) 1. ಉರಿಯಿಸಲು ಯೋಗ್ಯವಾದ. 2. ಉರಿಯಿಸಬೇಕಾದ. 3. ಉರಿಯಿಸಲ್ಪಡುವ. ज्वल (दीप्तौ) + णिच् "अनीयर्" (३-१-९६)। "तव्यः"। **ज्वलितव्यः ಜ್ವಲಿತವ್ಯಃ.**

**ज्वलयत् ಜ್ವಲಯತ್** (वि०) 1. ಪ್ರಕಾಶಗೊಳಿಸುತ್ತಿರುವ. ज्वल (दीप्तौ) + णिच् "शतृ" (३-२-१२४)। "ग्रहविमानगणानभितो दिवं ज्वलयतौषधिजेन कृशानुना" किरा० ५-१४। 2. ಉರಿಯಿಸುತ್ತಿರುವ. स्त्रियाम् "ङीप्" (४-१-६)। **-यन्ती -ಯಂತೀ.**

**ज्वलित ಜ್ವಲಿತ** (न०) 1. ಪ್ರಕಾಶ, ಬೆಳಕು. ज्वल (दीप्तौ) भावे "क्तः" (३-३-११४)। "ज्वलितेन गुहागतं

तमस्तुहिनाद्रेरिव नक्तमोषधिः" रघु० ८-५४। 2. ಜ್ವಾಲೆ, ಉರಿ. "मुहूर्तं ज्वलितं श्रेयो न च धूमायितं चिरम्" भा० उद्योग० १३३-१५। (वि०) 3. ಪ್ರಕಾಶಗೊಳಿಸಲ್ಪಟ್ಟ. ज्वल कर्म० "क्तः" (३-२-१०२)। "ज्वलितान्यगुणैर्गुर्वी स्थिता तेजसि मानिता" किरा० १५-२१। 4. ಸುಡಲ್ಪಟ್ಟ. 5. ಉರಿಯುತ್ತಿರುವ. ज्वल कर्त० "क्तः" (३-४-७२)। "ज्वलितं न हिरण्यरेतसं चयमास्कन्दति भस्मनां चयः" किरा० २-२०। "ज्वलितं दग्ध उज्ज्वले" मेदि०।

**ज्वाल ಜ್ವಾಲ** (पुंस्त्री०) 1. ಬೆಂಕಿಯ ಉರಿ, ಅಗ್ನಿಯ ಶಿಖೆ. (पुं०) 2. ಪ್ರಕಾಶ, ಬೆಳಕು. ज्वल (दीप्तौ) "णः" (३-१-१४०)। (वि०) 3. ಉರಿಯುವ. 4. ಹೊಳೆಯುವ, ಪ್ರಕಾಶಿಸುವ.

**ज्वाला ಜ್ವಾಲಾ** (स्त्री०) ಅಗ್ನಿಯ ಶಿಖೆ, ಬೆಂಕಿಯ ಉರಿ. ज्वल (दीप्तौ) "णः" (३-१-१४०)। "टाप्" (४-१-४)। "अभ्युद्यतोग्रशस्त्राणि ज्वालामालाकुलैर्मुखैः" विष्णुपु०।

**ज्वालाखरगद ಜ್ವಾಲಾಖರಗದ** (पुं०) ಒಂದು ರೋಗ, ಮುಖದ ಮೇಲೆ ಏಳುವ ಗುಳ್ಳೆ, ಮೊಡವೆ.

**ज्वालाजिह्व ಜ್ವಾಲಾಜಿಹ್ವ** (पुं०) 1. ಅಗ್ನಿ, ಬೆಂಕಿ. ज्वाला शिखैव जिह्वा यस्य। 2. ಚಿತ್ರಮೂಲದ ಗಿಡ. 3. ಒಬ್ಬ ರಾಕ್ಷಸ.

**ज्वालामालिनी ಜ್ವಾಲಾಮಾಲಿನೀ** (स्त्री०) ದೇವಿಯ ಮೂರ್ತಿಗಳಲ್ಲಿ ಒಂದು ಭೇದ. ज्वालानां मालाऽस्त्यस्याः "इनिः" (५-२-११६)। "ङीप्" (४-१-५)।

**ज्वालामुख ಜ್ವಾಲಾಮುಖ** (पुं०) 1. ಒಬ್ಬ ರಾಕ್ಷಸ. 2. ಕೊಳ್ಳಿದೆವ್ವ, ಬಾಯಿಂದ ಬೆಂಕಿಯನ್ನು ಉಗುಳುವ ಒಂದು ಪಿಶಾಚಿ. ज्वाला मुखे यस्य। ["उल्कामुख" ನೋಡಿ.]

**ज्वालामुखी ಜ್ವಾಲಾಮುಖೀ** (स्त्री०) 1. ದುರ್ಗಾದೇವಿಯ ಮೂರ್ತಿಯೆಂದು ಪೂಜಿಸಲ್ಪಡುವ ಜ್ವಾಲೆಯು ಹೊರಡುವ ಒಂದು ಸ್ಥಳ, ಪಂಜಾಬಿನ ಉತ್ತರ ಪೂರ್ವದಲ್ಲಿರುವ ಒಂದು ಪರ್ವತಪ್ರದೇಶ. ಈ ಪರ್ವತದಲ್ಲಿ ಭೂಮಿಯಿಂದ ಬೆಂಕಿಯ ಜ್ವಾಲೆಯು ಹೊರಡುವುದರಿಂದ ಈ ಹೆಸರು. ಇದೇರೀತಿ ಇತರ ಕೆಲವು ಪರ್ವತಗಳು. 2. ಒಂದು ಮಂತ್ರ.

**ज्वालावक्त्र ಜ್ವಾಲಾವಕ್ತ್ರ** (पुं०) ಪರಶಿವ, ಮಹೇಶ್ವರ.

**ज्वालिन् ಜ್ವಾಲಿನ್** (पुं०) ಪರಶಿವ, ಮಹೇಶ್ವರ.

**ज्वालेश्वर ಜ್ವಾಲೇಶ್ವರ** (पुं०) ಒಂದು ತೀರ್ಥ.

इति "ज" कारादिपदार्थनिरूपणम्।

---

# झ

**झ ಝ** ಇದು ವ್ಯಂಜನಾಕ್ಷರಗಳಲ್ಲಿ "च" ವರ್ಗದ ನಾಲ್ಕನೆಯ ಮತ್ತು ಅಭ್ಯಂತರ ಸ್ಪೃಷ್ಟ ಪ್ರಯತ್ನದಿಂದ ತಾಲುಸ್ಥಾನದಲ್ಲಿ ಹುಟ್ಟುವ ಅಕ್ಷರ. "कादयो मावसानाः स्पर्शाः"। "स्पृष्टं प्रयतनं स्पर्शानाम्" सि० कौ०। ಸಂವಾರ ನಾದ ಘೋಷ ಮತ್ತು ಮಹಾಪ್ರಾಣ ಇವು ಇದರ ಬಾಹ್ಯಪ್ರಯತ್ನಗಳು.

**झ ಝ** (पुं०) 1. ಕಿರುಗಂಟೆಯ ಶಬ್ದ. 2. ಬಿರುಗಾಳಿ. 3. ಮಳೆಯಿಂದ ಕೂಡಿದ ಗಾಳಿ. 4. ಕಳೆದುಹೋದ ವಸ್ತು. 5. ಬೃಹಸ್ಪತಿ, ದೇವಗುರು. 6. ಅಸುರರ ದೊರೆ. 7. ಝಣ ಝಣ ಶಬ್ದ. 8. ಬ್ರಹ್ಮ, ಚತುರ್ಮುಖ. 9. ಹಂಸಪಕ್ಷಿ. 10. ಪ್ರತಾಪ, ಪರಾಕ್ರಮ. 11. ಭ್ರಮಣ, ತಿರುಗಾಟ. 12. ಚೋರ, ಕಳ್ಳ. 13. ಮದ. 14. ಪರಶಿವ, ಪರಮೇಶ್ವರ. "झशब्दस्तु पुमान् धातरि हंसके। प्रतापे भ्रमणे नष्टे चोरे झञ्झानिले मदे" नानार्थर०। "झो झिण्टीशे सुरगुरौ दैत्यराजे ध्वनावपि" मेदि०।

**झकार ಝಕಾರ** (पुं०) "ಝ" ವರ್ಣ, ಝವೆಂಬ ಅಕ್ಷರ. झ "कारः" (वा० ३-३-१०८)।

**झगिति ಝಗಿತಿ** (अव्य०) ಜಾಗ್ರತೆಯಾಗಿ.

**झङ्कार ಝಂಕಾರ** (पुं०) 1. ಅಸ್ಪಷ್ಟವಾದ ಶಬ್ದ, ಭ್ರಮರದ ಧ್ವನಿ. झमित्यव्यक्तशब्दस्य कारः। "झङ्कारोन्मुखरविलासविपिनोपान्ता वसन्तोदयः" प्रबोध० ४-१३।

**झङ्कारिणी ಝಂಕಾರಿಣೀ** (स्त्री०) ಗಂಗಾನದಿ.

**झङ्कृति ಝಂಕೃತಿ** (स्त्री०) ಅವ್ಯಕ್ತವಾದ ಶಬ್ದ, ಅಸ್ಪಷ್ಟವಾದ ಧ್ವನಿ.

तडित्वती ತಡಿತ್ವತೀ. "समुदितं निचयेन तडित्वतीं लघयता शरदम्बुदसंहतिम्" किरा० ५-४।

**तडिद्गर्भ ತಡಿದ್ಗರ್ಭ** (पुं०) ಮಧ್ಯದಲ್ಲಿ ಮಿಂಚಿನಿಂದ ಕೂಡಿದ ಮೇಘ. तडित् गर्भे यस्य।

**तडिद्वासस् ತಡಿದ್ವಾಸಸ್** (वि०) ಮಿಂಚಿನಂತಿರುವ ವಸ್ತ್ರವನ್ನು ಧರಿಸಿರುವ. तडिदिव वासो यस्य। "अपीच्य-दर्शनं श्यामं तडिद्वाससमच्युतम्" भाग० १-१२-८।

**तडिन्मय ತಡಿನ್ಮಯ** (वि०) ಮಿಂಚಿನ ಸ್ವರೂಪದ. तडित् "मयट्" (५-४-२१)। "व्यलोकयन्नुन्मिषितैस्तडिन्मयै-र्महातपःसाक्ष्य इव स्थिताः क्षपाः" कुमा० ५-२५।

**तण्डक ತಂಡಕ** (पुं०) 1. ನೊರೆ. 2. ಕೆಂಬೂತದ ಹಕ್ಕಿ, ಕಾಡಿಗೆ ಸೊಗಸಿನ ಹಕ್ಕಿ. 3. ಸಮಾಸ ಭೂಯಿಷ್ಠವಾದ ವಾಕ್ಯ. 4. ಮನೆಗೆ ಆಧಾರವಾದ ಕಂಬ. 5. ತರುಸ್ಕಂಧ, ಮರದ ಬುಡದಿಂದ ರೆಂಬೆಯವರೆಗಿನ ಭಾಗ, ಬೇರಿನಿಂದ ಕೊಂಬೆಯವರೆಗೆ ಇರುವ ಮಧ್ಯದ ದೂಲ. 6. ಮಾಯಾವಿ. "तण्डकः खञ्जने फेने समासप्रायवाचि च। गृहदार-तरुस्कन्धमायाबहुलकेष्वपि" मेदि०।

**तण्डु ತಂಡು** (पुं०) ನಂದಿಕೇಶ್ವರ. "भृङ्गीभृङ्गिरिटस्तण्डु-नन्दिनौ नन्दिकेश्वरे" अम०।

**तण्डुरीण ತಂಡುರೀಣ** (पुं०) 1. ಕೀಟ, ಹುಳ. 2. ಅಕ್ಕಿ ತೊಳೆದ ನೀರು. (वि०) 3. ಬರ್ಬರ, ಪರದೇಶದವನು. "तण्डुरीणः कीटमात्रे बर्बरे तण्डुलोदके" मेदि०।

**तण्डुल ತಂಡುಲ** (पुन०) 1. ಹೊಟ್ಟಿಲ್ಲದ ಧಾನ್ಯ, ಅಕ್ಕಿ. तडि (आघाते) "उलच्" नुम् च (उ० ४-१०७)। निपा०। "शस्यं क्षेत्रगतं प्रोक्तं सतुषं धान्यमुच्यते। निस्तुषस्तण्डुलः प्रोक्तः स्विन्नमन्नमुदाहृतम्"। 2. ವಾಯಿವಿಳಂಗ. "तण्डुलः स्यात् विडङ्गे च धान्यादिनिकरे पुमान्" मेदि०।

**तण्डुला ತಂಡುಲಾ** (स्त्री०) ಹಿಪ್ಪಲಿ.

**तण्डुलाम्बु ತಂಡುಲಾಂಬು** (न०) ಅಕ್ಕಿತೊಳೆದ ನೀರು.

**तण्डुलीय ತಂಡುಲೀಯ** (पुं०) 1. ಚಿಲುಕೀರೆ. 2. ವಾಯಿವಿಳಂಗ. तण्डुलाय हितः "छः" (५-१-५)। स्वार्थे "कः"। तण्डुलीयकः ತಂಡುಲೀಯಕಃ.

**तण्डुलु ತಂಡುಲು** (पुं०) ವಾಯಿವಿಳಂಗ.

**तण्डुलौघ ತಂಡುಲೌಘ** (पुं०) 1. ಅಕ್ಕಿಯ ರಾಶಿ. 2. ಹೆಚ್ಚು ಮುಳ್ಳು ಜಾತಿಯ ಬಿದಿರು ಮೆಳೆ.

**तत ತತ** (पुं०) 1. ವಾಯು, ಗಾಳಿ. 2. ತಂದೆ. 3. ಮಗ. तन्यतेऽन्वयोऽस्मात् — तनु (विस्तारे) कर्म० "क्तः" (३-२-१०२)। (न०) 4. ವೀಣೆ ಮೊದಲಾದ ತಂತಿಯ ವಾದ್ಯ. 5. ವಿಸ್ತಾರ. तनु भावे "क्तः" (३-३-११४)। "अथ ततं व्याप्ते विस्तृते च त्रिलिङ्गकम्। क्लीबं वीणादिवाद्ये स्यात् पुल्लिङ्गस्तु समीरणे" मेदि०। (वि०) 6 ವಿಸ್ತಾರವಾದ, ದೊಡ್ಡದಾದ. "ते वीरा बद्धनिस्त्रिंशास्ततायुधकलापिनः" भा० विरा० ६-६। "वनं ततानेकतमालतालम्" माघ० ४-३९। 7. ವ್ಯಾಪ್ತವಾದ, ಆವರಿಸಲ್ಪಟ್ಟ. तनु कर्म० "क्तः" (३-२-१०२)। "यस्यान्तस्थानि भूतानि येन सर्वमिदं ततम्" गीता ८-२२।

**ततपत्री ತತಪತ್ರೀ** (स्त्री०) ಬಾಳೆಗಿಡ. ततं पत्रं यस्याः जाति० "ङीष्" (४-१-६३)।

**ततम ತತಮ** (वि०) ಬಹುಜನರಲ್ಲಿ ಅವನೊಬ್ಬ. तेषां मध्ये स एकतमः — तद् "डतमच्" (५-३-९३)।

**ततर ತತರ** (वि०) ಅವರಿಬ್ಬರಲ್ಲಿ ಅವನೊಬ್ಬ. तयोर्मध्ये स एकतरः — तद् "डतरच्" (५-३-९२)।

**ततस् ತತಸ್** (अव्य०) 1. ಅಲ್ಲಿಂದ, ಆ ಪ್ರದೇಶದಿಂದ. तत् "तसिल्" (५-३-७)। "यतो यतो यादवसैन्य-मासीत् ततस्ततो दैत्यचमूरपायात्" याद० २०-४९। 2. ಅವನಿಂದ, ಅವಳಿಂದ, ಅದರಿಂದ. "न च निम्नादिव सलिलं निवर्तते ततो हृदयम्" शाकु० ३-२। 3. ಆ ಪ್ರದೇಶದಲ್ಲಿ, ಆ ಜಾಗದಲ್ಲಿ. 4. ಅವನಲ್ಲಿ, ಅವಳಲ್ಲಿ, ಅದರಲ್ಲಿ. "न विद्यमानेष्वर्थेषु नार्त्यामपि यतस्ततः" मनु० ४-१५। 5. ಅನಂತರ, ಬಳಿಕ, ಆಮೇಲೆ. "ततः ससंमदास्तत्र निरैक्षन्त पतत्रिणः" भट्टि० ७-५९। 6. ಆ ಕಾರಣದಿಂದ. "हीनाःसत्त्वेन सूक्ष्मेण ततो वैकारिकाः स्मृताः" भा० शान्ति० ३५८-७८। 7. ಆದರೆ. "अमोच्यमश्वं यदि मन्यसे प्रभो ततः समाप्ते विधिनैव कर्मणि" रघु० ३-६५। 8. ಅದಕ್ಕಿಂತಲೂ. "यं लब्ध्वा चापरं लाभं मन्यते नाधिकं ततः" गीता ६-२२।

**ततस्त्य ತತಸ್ತ್ಯ** (वि०) ಅದರಿಂದ ಬಂದ, ಅವನಿಂದ ಬಂದ, ಅವಳಿಂದ ಬಂದ. ततः आगतः "त्यप्" (४-२-१०४)। "निशम्य सिद्धिं द्विषतामपाकृतीस्ततस्ततस्त्या विनियन्तु-मक्षमा" किरा० १-२७।

**तति ತತಿ** (स्त्री०) 1. ಪಙ್ಕ್ತಿ, ಸಾಲು. तनु (विस्तारे) "क्तिन्" (३-३-९४)। "बिभर्ति जनयन्नयं मुदमपामपाय-धवला वलाहकततीः" माघ० ४-५४। 2. ಸಮೂಹ,

ಗುಂಪು. "राजीवराजीवशलोलभृङ्गं मुष्णन्तमुष्णं ततिभिस्तरूणाम्" माघ० ४-९।

**तत्कर ತತ್ಕರ** (वि०) ಆ ಕೆಲಸವನ್ನು ಮಾಡುವವನು. तत् करोति—डु कृञ् (करणे) "अच्" (वा० ४-२-२१)। स्त्रियाम् "टाप्" (४-१-४)। -रा -ರಾ.

**तत्कर्मकारिन् ತತ್ಕರ್ಮಕಾರಿನ್** (वि०) ಅದೇ ಕಾರ್ಯವನ್ನು ಮಾಡುವ. तत्कर्म करोति — डु कृञ् (करणे) "णिनिः" (३-१-१३४)। "तान्विदित्वा सुचरितैर्गूढैस्तत्कर्मकारिभिः" मनु० ९-२६१।

**तत्काल ತತ್ಕಾಲ** (पुं०) 1. ವರ್ತಮಾನಕಾಲ, ನಡೆಯುತ್ತಿರುವಕಾಲ. स चासौ कालश्च। "तत्कालस्तु तदात्वं स्यादुत्तरः काल आयतिः" अम०। 2. ಆ ಕಾಲ, ಆ ಸಮಯ. (वि०) 3. ಆ ಕಾಲದ, ಆ ಸಮಯದ. (अव्य०) 4. ಆ ಕಾಲದಲ್ಲಿ, ಅದೇ ಸಮಯದಲ್ಲಿ.

**तत्कालधी ತತ್ಕಾಲಧೀ** (वि०) ಆ ಕಾಲದಲ್ಲಿ ಹೊಳೆಯುವ ಬುದ್ಧಿಯುಳ್ಳ, ಸಮಯೋಚಿತವಾಗಿ ಹೊಳೆಯುವ ಬುದ್ಧಿಯುಳ್ಳ. तस्मिन् यथोचिते काले धीर्यस्य।

**तत्कालीन ತತ್ಕಾಲೀನ** (वि०) ಆ ಕಾಲದ, ಆ ಕಾಲದಲ್ಲಿದ್ದ, ಸಮಕಾಲದ. तत्काल "खञ्" (४-३-११)। "कालाठ्ठञ्" (४-३-११) ಸೂತ್ರದಲ್ಲಿ कालात् ಎಂದು ಯೋಗ ವಿಭಾಗಮಾಡಿ "युष्मदस्मदोः...." (४-३-१) ಸೂತ್ರದಿಂದ "खञ्"ನ್ನು ಅನುವೃತ್ತಿಮಾಡಿ ತಂದು काल ಶಬ್ದದ ಮುಂದೆ ವಿಧಿಸಿದರೆ "कालीन" ಪದವು ನಿಷ್ಪನ್ನವಾಗುವುದು. ಇದರಿಂದ प्राक्कालीनः, उत्तरकालीनः, अर्वाक्कालीनः, समकालीनः, तत्कालीनः ಇತ್ಯಾದಿ ಪ್ರಯೋಗಗಳು ಉಪಪನ್ನವಾಗುವುವು ಎಂದು ಕೆಲವರ ಅಭಿಪ್ರಾಯ. "समासप्रत्ययविधौ प्रतिषेधो वक्तव्यः" (वा० १-१-७२) ವಾರ್ತಿಕದಿಂದ ತದಂತವಿಧಿಪರಿಭಾಷೆಗೆ ಅವಕಾಶವಿಲ್ಲವಾದುದರಿಂದ कालान्त ಶಬ್ದದ ಮುಂದೆ "खञ्" ಪ್ರತ್ಯಯವು ಬರುವುದಿಲ್ಲವೆಂದೂ "ख" ಪ್ರತ್ಯಯ ಬರುವುದೇ ಸಾಧುವೆಂದೂ ಮತ್ತೆ ಕೆಲವರ ಅಭಿಪ್ರಾಯ. ವಾಸ್ತವವಾಗಿ "तद्धिताः" (४-१-७६) ಸೂತ್ರದ ಬಹುವಚನದಿಂದ ಅನುಕ್ತ ಸ್ಥಳಗಳಲ್ಲಿ ತದ್ಧಿತ ಪ್ರತ್ಯಯಗಳು ಬರುವುವೆಂದೂ ಪ್ರಕೃತ "कालान्त" ಶಬ್ದದ ಮುಂದೆ "ख" ಪ್ರತ್ಯಯ ಬರುವುದೆಂದೂ ತಿಳಿಯಬೇಕು. ವೈಯಾಕರಣರು, ಈ ವಿಷಯವು ಭಾಷ್ಯದಲ್ಲಿ ಅನುಕ್ತವಾಗಿರುವುದರಿಂದ ಈ ಪ್ರಯೋಗವು ಅಪ್ರಾಮಾಣಿಕವೆಂದೂ ಅಪಭ್ರಂಶವೆಂದೂ ಅಭಿಪ್ರಾಯಪಡುವರು. "कथं तर्हि शार्वरस्य तमसो निषिद्धये" समानकालीनम् प्राक्कालीनमित्यादि च। "अपभ्रंशा एवैते इति प्रामाणिकाः" सि० कौ०। "ब्रह्मन् कालान्तरकृतं तत्कालीनं कथं भवेत्। यत् कौमारे हरिकृतं जगुः पौगण्डकेऽर्भकाः" भाग० १०-१२-४१।

**तत्कुलीन ತತ್ಕುಲೀನ** (वि०) ಆ ವಂಶದಲ್ಲಿ ಹುಟ್ಟಿದವನು. तत्कुलस्य अपत्यम् "खः" (४-१-१३९)।

**तत्क्रिय ತತ್ಕ್ರಿಯ** (वि०) ವೇತನವಿಲ್ಲದೆ ಆ ಕೆಲಸವನ್ನು ಮಾಡುವವನು. सा क्रिया यस्य।

**तत्क्षण ತತ್ಕ್ಷಣ** (पुं०) ಅದೇ ಸಮಯ, ಅದೇ ಕಾಲ. स चासौ क्षणश्च। "विवक्षितामर्थविदस्तत्क्षणप्रतिसंहृताम्" माघ० २-१५।

**तत्त्व ತತ್ತ್ವ** (न०) 1. ವಸ್ತುವಿನ ಸ್ವಭಾವ, ಯಾಥಾರ್ಥ್ಯ, ಅನುಗತವಾದ ಅರ್ಥ. तस्य भावः — तद् "त्वः" (५-१-११९)। "करौ व्याधुन्वत्याः पिबसि रतिसर्वस्वमधरं वयं तत्त्वान्वेषान्मधुकर हतास्त्वं खलु कृती" शाकु० १-२०। 2. ಬ್ರಹ್ಮ, ಆರೋಪಿತವಲ್ಲದ ಸ್ವರೂಪವುಳ್ಳ ಪರಬ್ರಹ್ಮ, ಪರಮಾತ್ಮ. "वदन्ति तत्तत्त्वविदस्तत्त्वं यज्ज्ञानमद्वयम्। ब्रह्मेति परमात्मेति भगवानिति शब्द्यते" भाग० १०-२-११। 3. ಚಿತ್ ಮತ್ತು ಅಚಿತ್ತುಗಳ ವ್ಯಾಪ್ತಿ ಮತ್ತು ಪ್ರಯೋಜನಗಳಿಂದ ಜಗತ್ತಿನ ಸರ್ವ ಸಾರಭೂತನಾದ ಪರಮಾತ್ಮ. "सारांशभूतो जगतो योऽसौ तत्त्वमिति स्मृतः" इति निरुक्तिः। "तत्त्वं तत्त्वविदेकात्मा जन्ममृत्युजरातिगः" वि० स०। 4. ವಸ್ತುವಿನ ಆರೋಪಿತವಲ್ಲದ ಸ್ವರೂಪ. "संन्यासस्य महाबाहो तत्त्वमिच्छामि वेदितुम्। त्यागस्य च हृषीकेश पृथक्केशिनिषूदन" गीता १८-१।

**ನಾನಾದರ್ಶನಕಾರರು ಅಂಗೀಕರಿಸಿರುವ ಪ್ರಕೃತಿ ಮೊದಲಾದ ತತ್ತ್ವಗಳು:**

**ಚಾರ್ವಾಕದರ್ಶನ:** ಪೃಥಿವಿ ಅಪ್ಪು (ಜಲ) ತೇಜಸ್ಸು ಮತ್ತು ವಾಯುಗಳೆಂಬ ನಾಲ್ಕು ತತ್ತ್ವಗಳು ಮಾತ್ರವೆಂದು ಚಾರ್ವಾಕರು ಹೇಳುತ್ತಾರೆ. "अत्र चत्वारि भूतानि भूमिवार्यनलानिलाः। चतुर्भ्यः खलु भूतेभ्यः चैतन्यमुपजायते" स० द० सं०।

**ಬೌದ್ಧದರ್ಶನ:** ಸತ್ ಅಸತ್ ಉಭಯ ಅನುಭಯಾತ್ಮಕ ಚತುಷ್ಕೋಟಿನಿರ್ಮುಕ್ತವಾದ ಶೂನ್ಯವೇ ತತ್ತ್ವವೆಂದು ಬೌದ್ಧರ ಅಭಿಪ್ರಾಯ.

**ಜೈನದರ್ಶನ:** ಜೀವ ಅಜೀವ ಆಸ್ರವ ಬಂಧ ಸಂವರ ನಿರ್ಜರ ಮತ್ತು ಮೋಕ್ಷಗಳೆಂಬ ಏಳು ತತ್ತ್ವಗಳೆಂದು ಜೈನ ದರ್ಶನಕಾರರು ಹೇಳುತ್ತಾರೆ.

**ಸಾಂಖ್ಯದರ್ಶನ:** ಜೀವಾತ್ಮ ಪ್ರಕೃತಿ ಮಹತ್ ಅಹಂಕಾರ ಪಂಚ(5)ಜ್ಞಾನೇಂದ್ರಿಯಗಳು. ಪಂಚ(5) ಕರ್ಮೇಂದ್ರಿಯಗಳು, ಪಂಚ(5)ತನ್ಮಾತ್ರಗಳು, ಪೃಥಿವ್ಯಾದಿ ಪಂಚ(5)ಭೂತಗಳು ಮತ್ತು ಮನಸ್ಸು ಸೇರಿ ಒಟ್ಟು ತತ್ತ್ವಗಳು ಇಪ್ಪತ್ತೈದು (25) ಎಂದು ನಿರೀಶ್ವರ ಸಾಂಖ್ಯರ ಅಭಿಪ್ರಾಯ.

**ಯೋಗದರ್ಶನ:** ಪಾತಂಜಲಯೋಗದರ್ಶನ (ಸೇಶ್ವರ ಸಾಂಖ್ಯದರ್ಶನ) ಕಾರರು "ತತ್ತ್ವವು ಚೇತನ ಅಚೇತನಗಳೆಂದು ಎರಡು ವಿಧ. ಚೇತನತತ್ತ್ವವು ಪುರುಷ ಈಶ್ವರನೆಂದು ಎರಡು ವಿಧ. ಈ ಪುರುಷ ಮತ್ತು ಈಶ್ವರನೊಡನೆ ಪ್ರಕೃತಿ ಮೊದಲಾದ ಇಪ್ಪತ್ತನಾಲ್ಕು (24) ತತ್ತ್ವಗಳೂ ಸೇರಿ ಒಟ್ಟು ತತ್ತ್ವಗಳು ಇಪ್ಪತ್ತಾರು (26)" ಎಂದು ಹೇಳುತ್ತಾರೆ. ಯೋಗಶಾಸ್ತ್ರದಲ್ಲಿ ಶ್ರೌತಸ್ಮಾರ್ತ ಕರ್ಮಗಳಿಂದ ಈಶ್ವರಪ್ರೀತಿಯನ್ನೂ ಅನುಗ್ರಹವನ್ನೂ ಸಂಪಾದಿಸಬೇಕೆಂದು ಉಕ್ತವಾಗಿರುವುದರಿಂದ ಈಶ್ವರ ಭಕ್ತಿಗೆ ಪ್ರಾಧಾನ್ಯವುಂಟು. ಸಾಂಖ್ಯ ಶಾಸ್ತ್ರದಿಂದ ತತ್ತ್ವ ಜ್ಞಾನ ಯೋಗಶಾಸ್ತ್ರದಿಂದ ಭಕ್ತಿಪೂರ್ವಕ ಕರ್ಮಾನುಷ್ಠಾನ ಇವುಗಳಿಂದ ಮೋಕ್ಷಸಂಪಾದನೆ. ಈ ಅಭಿಪ್ರಾಯದಿಂದ ಸಾಂಖ್ಯಯೋಗಗಳನ್ನು ಸೇರಿಸಿ ವ್ಯವಹಾರವಿರುವುದೆಂದು ತಿಳಿಯಬೇಕು.

**ದ್ವೈತದರ್ಶನ:** ಈ ದರ್ಶನಕಾರರು ಸ್ವತಂತ್ರ ಮತ್ತು ಅಸ್ವತಂತ್ರಗಳೆಂಬ ಎರಡು ತತ್ತ್ವಗಳನ್ನು ಅಂಗೀಕರಿಸಿರುತ್ತಾರೆ. "स्वतन्त्रमस्वतन्त्रं च द्विविधं तत्त्वमिष्यते। स्वतन्त्रो भगवान् विष्णुः भावाभावौ द्विधेतरत्" तत्त्व-सं०। ಪರಮಾತ್ಮನಾದ ವಿಷ್ಣುವು ಸ್ವತಂತ್ರತತ್ತ್ವ. ಅಸ್ವತಂತ್ರ ತತ್ತ್ವವು ಭಾವ ಅಭಾವಗಳೆಂದು ಎರಡು ವಿಧ.

**1. ಭಾವತತ್ತ್ವ:** ಇದು ಚೇತನ ಅಚೇತನಗಳೆಂದು ಎರಡು ವಿಧ.

(1) ಚೇತನತತ್ತ್ವವು ದುಃಖಾಸ್ಪೃಷ್ಟ ದುಃಖಸ್ಪೃಷ್ಟಗಳೆಂದು ಎರಡು ವಿಧ. ಲಕ್ಷ್ಮಿಯು ದುಃಖಾಸ್ಪೃಷ್ಟಚೇತನ. ದೇವತೆಗಳು ಋಷಿಗಳು ಪಿತೃಗಳು ನೃಪರು ಮನುಷ್ಯರು ದುಃಖಸ್ಪೃಷ್ಟ ಚೇತನರು. ಇವರಲ್ಲಿ ನಿತ್ಯಸಂಸಾರಿಗಳೂ ತಮೋಯೋಗ್ಯರೂ ಮುಕ್ತಿಗೆ ಅಯೋಗ್ಯರು.

(2) ಅಚೇತನ ತತ್ತ್ವವು ನಿತ್ಯ ನಿತ್ಯಾನಿತ್ಯ ಮತ್ತು ಅನಿತ್ಯಗಳೆಂದು ಮೂರು ವಿಧ. ವೇದಗಳು ನಿತ್ಯ. ಪುರಾಣಗಳು ಕಾಲ ಮತ್ತು ಪ್ರಕೃತಿ ಇವು ನಿತ್ಯಾನಿತ್ಯ. ಅನಿತ್ಯವು ಅಸಂಸೃಷ್ಟ ಸಂಸೃಷ್ಟಗಳೆಂದು ಎರಡು ವಿಧ. ಅಸಂಸೃಷ್ಟವು ಮಹತ್ ಅಹಂಕಾರ ಬುದ್ಧಿ ಮನಸ್ಸು ಜ್ಞಾನೇಂದ್ರಿಯಗಳು (5) ಕರ್ಮೇಂದ್ರಿಯಗಳು (5) ತನ್ಮಾತ್ರಗಳು (5) ಪೃಥಿವ್ಯಾದಿ ಭೂತಗಳು (5) ಎಂದು ಇಪ್ಪತ್ತನಾಲ್ಕು (24) ವಿಧ. ಸಂಸೃಷ್ಟವು (1) ಬ್ರಹ್ಮಾಂಡ (2) ಬ್ರಹ್ಮಾಂಡಗತ ಸಮಸ್ತ ಎಂದು ಎರಡು ವಿಧ. "संसृष्टमण्डं तद्गं च समस्तं संप्रकीर्तितम्" तत्त्वसं०।

**2. ಅಭಾವತತ್ತ್ವ:** (1) ಪ್ರಾಗಭಾವ (2) ಪ್ರಧ್ವಂಸಾಭಾವ (3) ಅತ್ಯಂತಾಭಾವಗಳೆಂದು ಮೂರು ವಿಧ. "प्राक्प्रध्वंससदात्वेन त्रिविधोऽभाव इष्यते" तत्त्वसं०। ಎಂದು ದ್ವೈತಸಿದ್ಧಾಂತ.

**ಅದ್ವೈತದರ್ಶನ:** ಚಿತ್‌ಸ್ವರೂಪವಾದ ಬ್ರಹ್ಮವೊಂದೇ ಪರಮಾರ್ಥತತ್ತ್ವವೆಂದೂ ಮತ್ತೆಲ್ಲವೂ ಮಾಯೆಯಿಂದ ಕಲ್ಪಿತವೆಂದೂ ಅದ್ವೈತ ದರ್ಶನಕಾರರ ಸಿದ್ಧಾಂತ. "अशेषविशेषप्रत्यनीकं चिन्मात्रं ब्रह्मैकमेव तत्त्वमिति ब्रह्मवादिनो वेदान्तिनः" स० द० सं०। "सर्वं खल्विदं ब्रह्म"। "ब्रह्मैवेदं सर्वम्"। "नेह नानास्ति" ಇತ್ಯಾದಿ ಶ್ರುತಿಗಳಿಂದ ತತ್ತ್ವವೊಂದೇ ಎಂದು ಇವರ ಅಭಿಪ್ರಾಯ. "आप्रलयं यत्तिष्ठति सर्वेषां भोगदायि भूतानाम्। तत्तत्त्वमिह प्रोक्तं न घटादि तत्त्वमतः" तत्त्वसंग्र०। "वेदान्ता बहुतर्ककर्कशमतिग्रस्ताः परं मायया भाट्टाः कर्मफलाकुला हतधियो ह्येते हि वैशेषिकाः। अन्ये भेदरता विवादकलहास्ते तत्त्वतो वञ्चितास्तस्मात् सिद्धमतं स्वभावकसृतं धीरः परं संश्रयेत्"।

**ವಿಶಿಷ್ಟಾದ್ವೈತದರ್ಶನ:** ಸಮಸ್ತಚಿದಚಿದ್ವಿಶಿಷ್ಟನಾದ ಶ್ರೀಮನ್ನಾರಾಯಣನೇ ಪರಮತತ್ತ್ವವೆಂದು ಇವರ ಸಿದ್ಧಾಂತ. "तत्त्वं जिज्ञासमानानां हेतुभिः सर्वतोमुखैः। तत्त्वमेको महायोगी हरिर्नारायणः परः" इति व्यासः। "तत्त्वं नारायणः परः" श्रुतिः। ಪ್ರತ್ಯಕ್ಷಾದಿ ಪ್ರಮಾಣಗಳಿಂದಲೂ ಇತರ ಶಾಸ್ತ್ರಗಳಿಂದಲೂ ತತ್ತ್ವವು ಅನೇಕವೆಂದು ಸ್ಪಷ್ಟಪಡುವುದಾದರೂ ಸಕಲ ತತ್ತ್ವಗಳೂ ವಸ್ತುಗಳೂ ಈಶ್ವರನಲ್ಲಿ ಅಡಗಿರುವುದರಿಂದ ಏಕತತ್ತ್ವವಾದಕ್ಕೂ ಅನೇಕತತ್ತ್ವವಾದಕ್ಕೂ ಪ್ರಾಮಾಣ್ಯವನ್ನು ಕೊಟ್ಟಂತಾಯಿತು. ಅನೇಕತತ್ತ್ವವಾದಿಗಳ ಮತದಂತೆ ತತ್ತ್ವ ವಿಭಾಗವು ಈ ರೀತಿಯಲ್ಲಿರುವುದು:

ಮೊದಲು ಚಿತ್ ಅಚಿತ್ ಈಶ್ವರ ಎಂದು ಮೂರು ವಿಧ. ಲೋಕದಲ್ಲಿ ವಸ್ತುಗಳು ಚೇತನ ಅಚೇತನ ಎಂದು ಎರಡು ವಿಧ. ಜ್ಞಾನವಿರುವುದು ಚೇತನ. ಅದೇ ಜೀವಾತ್ಮ. ಜೀವಾತ್ಮನನ್ನುಳಿದು ಎಲ್ಲಾ ವಸ್ತುಗಳೂ ಅಚೇತನ ಗುಂಪಿಗೆ ಸೇರಿದುವು. ಈ ಜಡವಸ್ತುಗಳು ಒಂದೇ ಮೂಲಪ್ರಕೃತಿಯಿಂದ ಬಂದಿವೆ. ಅವುಗಳ ವಿಭಾಗವು ಈ ರೀತಿಯಿರುವುದು: ಮೂಲಪ್ರಕೃತಿ ಮಹತ್ ಅಹಂಕಾರ

ಪಂಚ ಜ್ಞಾನೇಂದ್ರಿಯಗಳು (5) ಪಂಚ ಕರ್ಮೇಂದ್ರಿಯ ಗಳು (5) ಮನಸ್ಸು ಪಂಚ ತನ್ಮಾತ್ರಗಳು (5) ಪೃಥಿವ್ಯಾದಿ ಪಂಚ ಭೂತಗಳು (5). ಈ ಇಪ್ಪತ್ತನಾಲ್ಕು ತತ್ತ್ವಗಳೊಡನೆ ಜೀವಾತ್ಮ ಮತ್ತು ಈಶ್ವರ ತತ್ತ್ವಗಳು ಸೇರಿ ಒಟ್ಟು (26) ಇಪ್ಪತ್ತಾರು ತತ್ತ್ವಗಳಾಗುವುವು ಎಂದು ಇವರ ಸಿದ್ಧಾಂತ. "ईश्वरश्चिदचिच्चेति पदार्थ-त्रितयं हरिः। ईश्वरश्चिदिति प्रोक्तो जीवो दृश्य-मचित्पुनः"। चिदचिदीश्वरभेदेन भोक्तृभोग्यनियामक-भेदेन च व्यवस्थिताः त्रयः पदार्था इति रामानुज-सिद्धान्तः। "वासुदेवः परं ब्रह्म कल्याणगुणसंयुतः। भुवनानामुपादानं कर्ता जीवनियामकः"।

**ವೀರಶೈವ ದರ್ಶನ – ಶಕ್ತಿವಿಶಿಷ್ಟಾದ್ವೈತ:** ಪ್ರವೃತ್ತಿಯ ಕ್ರಿಯಾಶಕ್ತಿಯ ಮೂಲಕ ಮತ್ತು ಮಾಯಾ ಶಕ್ತಿಯ ಸಾಹಾಯ್ಯದಿಂದ ಪುರುಷ ಮತ್ತು ಪ್ರಕೃತಿ ಉತ್ಪನ್ನ ವಾಗುವುವು. ಪುರುಷನು ಚೈತನ್ಯರೂಪನು. ಪ್ರಕೃತಿಯು ಜಡರೂಪವು. ಸತ್ತ್ವರಜಸ್ತಮೋಗುಣಾತ್ಮಕವಾದ ಪ್ರಕೃತಿ ಯಿಂದ ಮಹತ್ ಅಹಂಕಾರ ಮನಸ್ಸು ಪಂಚ ಜ್ಞಾನೇಂದ್ರಿಯಗಳು (5) ಪಂಚ ಕರ್ಮೇಂದ್ರಿಯಗಳು (5) ಪಂಚ ತನ್ಮಾತ್ರಗಳು (5) ಪಂಚ ಮಹಾಭೂತಗಳು (5) ಈ ರೀತಿ ಇಪ್ಪತ್ತಮೂರು ತತ್ತ್ವಗಳು ಉತ್ಪನ್ನವಾಗು ವುವು. ಈ ಒಟ್ಟು 25 ತತ್ತ್ವಗಳ ಪರಸ್ಪರ ಸಂಯೋಗ ದಿಂದ ವಿವಿಧವಾದ ಸೃಷ್ಟಿಯೂ ಅನೇಕ ವಸ್ತುಗಳೂ ಉಂಟಾಗುವುವು. ಈ ಇಪ್ಪತ್ತೈದು ತತ್ತ್ವಗಳೊಡನೆ ಶಿವ ಶಕ್ತಿ ಸಾದಾಖ್ಯ ಈಶ್ವರ ಸದ್ವಿದ್ಯೆ ಮಾಯೆ ಕಾಲ ನಿಯತಿ ಕಲಾ ವಿದ್ಯೆ ರಾಗ ಈ ಹನ್ನೊಂದು (11) ತತ್ತ್ವಗಳನ್ನೂ ಸೇರಿಸಿದರೆ ಒಟ್ಟು ಮೂವತ್ತಾರು (3′) ತತ್ತ್ವಗಳಾಗು ವುವು ಎಂದು ಈ ದರ್ಶನಕಾರರು ಹೇಳುವರು. 5. ಸತ್ತ್ವ ರಜಸ್ಸು ಮತ್ತು ತಮಸ್ಸೆಂಬ ಮೂರು ತತ್ತ್ವಗಳು. 6. ಸ್ವಭಾವ. 7. ವಿಲಂಬಿತ ನೃತ್ಯ, ನೃತ್ಯದ ಪ್ರಾರಂಭದ ಅವಸ್ಥೆ. "तत्त्वं स्वरूपे परमात्मनि। स्याद् विलम्बित-नृत्ये च" मेदि०। "विलम्बितं द्रुतं मध्यं तत्त्वमोघो घनं क्रमात्" अम०। 8. ಚೇತಸ್ಸು, ಮನಸ್ಸು.

**तत्त्वज्ञ ತತ್ತ್ವಜ್ಞ** (वि०) 1. ನಿಜವಾದ ವಿಷಯವನ್ನು ತಿಳಿದವನು, ಯಥಾರ್ಥವನ್ನು ಅರಿತವನು. 2. ವಸ್ತುವಿನ ಸ್ವರೂಪವನ್ನು ತಿಳಿದವನು. तत्त्वं जानाति—ज्ञा (अव-बोधने) "कः" (३-२-३)। "वेदशास्त्रार्थतत्त्वज्ञो यत्रतत्राश्रमे वसन्। इहैव लोके तिष्ठन् सः ब्रह्मभूयाय कल्पते" मनु० १२-१०२। 3. ವಸ್ತುವಿನ ಸ್ವಭಾವ ವನ್ನು ಅರಿತವನು. 4. ಪರಬ್ರಹ್ಮನ ಸ್ವರೂಪವನ್ನು ತಿಳಿದವನು.

**तत्त्वज्ञान ತತ್ತ್ವಜ್ಞಾನ** (न०) 1. ಬ್ರಹ್ಮಜ್ಞಾನ, ಪರಮಾ ತ್ಮನ ಸ್ವರೂಪವನ್ನು ತಿಳಿದಿರುವುದು. 2. ಯಾಥಾರ್ಥ್ಯ ಜ್ಞಾನ. 3. ಆರೋಪಿತವಲ್ಲದ ವಸ್ತುವಿನ ಸ್ವಭಾವದ ಅರಿವು. 4. ವಸ್ತುವಿನ ನಿಜಸ್ವರೂಪದ ತಿಳಿವಳಿಕೆ. ನಿಜ ವಾಗಿ ಇರುವ ಘಟ ಮೊದಲಾದ ವಸ್ತುವಿನಲ್ಲಿ "सत्" ಎಂಬ ಜ್ಞಾನವೂ, ಇಲ್ಲದಿರುವ ಶಶಶೃಂಗ ಮೊದಲಾದುವುಗಳಲ್ಲಿ "असत्" ಎಂಬ ಜ್ಞಾನವೂ ತತ್ತ್ವಜ್ಞಾನವಾಗುವುದು. ಪರಮಾತ್ಮವಿಷಯಕವಾದ ಈ ತತ್ತ್ವಜ್ಞಾನವು ನಿಃಶ್ರೇ ಯಸ ಸಾಧನವಾಗುವುದು. ಇದನ್ನು ಇತರ ವಸ್ತುನಿವೃತ್ತಿ ಪೂರ್ವಕವಾದ ಬ್ರಹ್ಮಜ್ಞಾನವೆಂದು ಅದ್ವೈತಿಗಳೂ ಭಗವ ದ್ವಿಷಯಕವಾದ ಅಪರೋಕ್ಷಜ್ಞಾನವೆಂದು ದ್ವೈತಿಗಳೂ ಹೇಳುವರು.

**तत्त्वज्ञानिन् ತತ್ತ್ವಜ್ಞಾನಿನ್** (वि०) 1. ಬ್ರಹ್ಮಜ್ಞಾನವುಳ್ಳ ವನು. 2. ಯಥಾರ್ಥವನ್ನು ತಿಳಿದವನು. 3. ವಸ್ತುವಿನ ನಿಜಸ್ವರೂಪವನ್ನು ಅರಿತವನು. 4. ಸ್ವಭಾವವನ್ನು ತಿಳಿದ ವನು. तत्त्वज्ञानमस्यास्ति "इनिः" (५-२-११५)।

**तत्त्वतस् ತತ್ತ್ವತಸ್** (अव्य०) ನಿಜವಾಗಿ, ಯಥಾರ್ಥ ವಾಗಿ. तत्त्व "तसिः" (वा० ५-४-४४)।

**तत्त्वत्रय ತತ್ತ್ವತ್ರಯ** (न०) ಚಿತ್ ಅಚಿತ್ ಮತ್ತು ಈಶ್ವರ ಎಂಬ ಮೂರು ತತ್ತ್ವಗಳು.

**तत्त्वदृश् ತತ್ತ್ವದೃಶ್** (वि०) 1. ವಸ್ತುಸ್ಥಿತಿಯನ್ನು ತಿಳಿಯು ವವನು. 2. ಬ್ರಹ್ಮಸಾಕ್ಷಾತ್ಕಾರವುಳ್ಳವನು.

**तत्त्वमुक्ताकलाप ತತ್ತ್ವಮುಕ್ತಾಕಲಾಪ** (पुं०) ಶ್ರೀನಿಗಮಾಂತ ಮಹಾದೇಶಿಕರವರಿಂದ ರಚಿತವಾದ ಒಂದು ವೇದಾಂತ ಗ್ರಂಥ.

**तत्त्वविद् ತತ್ತ್ವವಿದ್** (पुं०) 1. ಪರಮಾತ್ಮ. तत्त्वमात्मनो वेत्ति—विद (ज्ञाने) "क्विप्" (३-२-६१)। "वेत्ति यः स्वात्मनस्तत्त्वं तत्त्ववित् स च कथ्यते" इति निरुक्तिः। "स्वयमेवात्मनात्मानं वेत्थ त्वं पुरुषोत्तम"। "तत्त्वं तत्त्वविदेकात्मा जन्ममृत्युजरातिगः" वि० स०। (वि०) 2. ವಸ್ತುವಿನ ನಿಜಸ್ವರೂಪವನ್ನು ತಿಳಿದವನು. "तत्त्ववित्तु महाबाहो गुणकर्मविभागयोः" गीता ३-२८। 3. ಸ್ವಭಾವ ವನ್ನು ಅರಿತವನು. 4. ಬ್ರಹ್ಮಸ್ವರೂಪವನ್ನು ತಿಳಿದವನು.

**तत्त्वशुद्धि ತತ್ತ್ವಶುದ್ಧಿ** (स्त्री०) ತತ್ತ್ವವಿಷಯದಲ್ಲಿ ಅನ್ಯಥಾ ಜ್ಞಾನವನ್ನು ಹೋಗಲಾಡಿಸಿ ಯಥಾರ್ಥ ಜ್ಞಾನ ವನ್ನುಂಟುಮಾಡುವುದು.

**तत्पत्री ತತ್ಪತ್ರೀ** (स्त्री०) ಹಿಂಗಿನ ಮರದ ಎಲೆ. "तत्पत्री कारवी पृथ्वी" अम०।

**तत्पर ತತ್ಪರ** (पुं०) 1. ಕಣ್ಣಿನ ರೆಪ್ಪೆಯಾಡುವ ಕಾಲದ ಮೂವತ್ತನೆಯ ಒಂದು ಭಾಗ. "अक्ष्णोर्निमेषस्य खराम (३०) भागः स तत्परः" सिद्धान्तशि०। 2. ಕೆಲಸದಲ್ಲಿ ಆಸಕ್ತನಾದ, ಕಾರ್ಯದಲ್ಲಿ ಶ್ರದ್ಧೆಯುಳ್ಳ. तत् परमुत्तमं यस्य। "अव्याहतैः स्वैरगतैश्च तस्याः सम्राट् समाराधनतत्परोऽभूत्" रघु० २-५।

**तत्परता ತತ್ಪರತಾ** (स्त्री०) ಕೆಲಸದಲ್ಲಿ ಆಸಕ್ತಿ. ಕಾರ್ಯದಲ್ಲಿ ಶ್ರದ್ಧೆ. तत्परस्य भावः "तल्" (५-१-११९)। "त्वः" (५-१-११९)। **–परत्वम् –ಪರತ್ವಮ್.**

**तत्परायण ತತ್ಪರಾಯಣ** (वि०) ಕಾರ್ಯದಲ್ಲಿ ಆಸಕ್ತನಾದ, ಕೆಲಸದಲ್ಲಿ ಶ್ರದ್ಧೆಯುಳ್ಳ. तदेव परमयनं यस्य।

**तत्पुरुष ತತ್ಪುರುಷ** (पुं०) ನಾಲ್ಕು ವಿಧ ಸಮಾಸಗಳಲ್ಲಿ ಒಂದು ಭೇದ. अव्ययीभावः तत्पुरुषः बहुव्रीहिः ಮತ್ತು द्वन्द्वः ಎಂದು ಸಮಾಸವು ನಾಲ್ಕು ವಿಧ. ತತ್ಪುರುಷ ಸಮಾಸವು ಉತ್ತರಪದಾರ್ಥಪ್ರಧಾನವಾದುದು. ಆದರೆ अर्धं पिप्पल्याः अर्धपिप्पली ಎಂಬಲ್ಲಿ ಉತ್ತರಪದಾರ್ಥಕ್ಕೆ ಪ್ರಾಧಾನ್ಯವಿಲ್ಲದಿರುವುದರಿಂದ ಇದು ಪ್ರಾಯಿಕ.

ತತ್ಪುರುಷ ಸಮಾಸವು ಪೂರ್ವಪದದ ಏಳು ವಿಭಕ್ತಿಗಳಿಂದ ಏಳು ವಿಧ ಮತ್ತು ನಞ್ ತತ್ಪುರುಷವೂ ಸೇರಿ ಎಂಟು ವಿಧ:

(1) प्रथमातत्पुरुषः = महती नवमी महानवमी।
(2) द्वितीया ,, = कृष्णं श्रितः कृष्णश्रितः।
(3) तृतीया ,, = धान्येन अर्थः धान्यार्थः।
(4) चतुर्थी ,, = यूपाय दारु यूपदारु।
(5) पञ्चमी ,, = चोरात् भयम् चोरभयम्।
(6) षष्ठी ,, = राज्ञः पुरुषः राजपुरुषः।
(7) सप्तमी ,, = स्थाल्यां पक्वः स्थालीपक्वः।
(8) नञ् ,, = न अश्वः अनश्वः।

ಕರ್ಮಧಾರಯ ಮತ್ತು ದ್ವಿಗು ಸಮಾಸಗಳೂ ತತ್ಪುರುಷಕ್ಕೆ ಸೇರಿದುವು. ಕರ್ಮಧಾರಯಸಮಾಸವು ಎಂಟು ವಿಧ:

(1) विशेषणपूर्वपदकर्मधारयः = नीलं च तत् उत्पलं च नीलोत्पलम्।
(2) विशेष्यपूर्वपद ,, = वैयाकरणश्चासौ खसूचिश्च वैयाकरणखसूचिः।
(3) विशेषणोभयपद ,, = स्नातश्चासौ अनुलिप्तश्च स्नातानुलिप्तः।
(4) उपमानपूर्वपद ,, = घन इव श्यामः घनश्यामः।
(5) उपमानोत्तरपद ,, = पुरुषो व्याघ्र इव पुरुषव्याघ्रः।
(6) संभावनापूर्वपद ,, = विन्ध्य इति पर्वतः विन्ध्यपर्वतः।
(7) अवधारणापूर्वपद ,, = विद्यैव धनम् विद्याधनम्।
(8) मध्यमपदलोपी ,, = शाकप्रियः पार्थिवः शाकपार्थिवः। ಎಂಬಲ್ಲಿ ಮಧ್ಯಮ ಪದವಾದ "प्रिय" ಪದಕ್ಕೆ ಲೋಪ ಬಂದಿರುವುದು.

ದ್ವಿಗು ಸಮಾಸವು ಮೂರು ವಿಧ:

(1) तद्धितार्थद्विगुः = पञ्चसु कपालेषु संस्कृतः पुरोडाशः पञ्चकपालः।
(2) उत्तरपदद्विगुः = पञ्च गावो धनं यस्य पञ्चगवधनः।
(3) समाहारद्विगुः = त्रयाणां भुवनानां समाहारः त्रिभुवनम्।

ಇವಲ್ಲದೆ "कुगतिप्रादयः" (२-२-१८) ಸೂತ್ರದಿಂದ ಹೇಳಲ್ಪಟ್ಟ "कु" ಎಂಬ ಅವ್ಯಯದೊಡನೆ ಮಾಡುವ ಸಮಾಸ ಗತಿಸಮಾಸ ಪ್ರಾದಿಸಮಾಸ ಮತ್ತು ಉಪಪದ ಸಮಾಸಗಳೂ ತತ್ಪುರುಷಕ್ಕೆ ಸೇರಿದುವು. कुत्सितः पुरुषः

कुपुरुषः, पयोधरीभूतः, अतीन्द्रियम्, कुम्भकारः ಇವು ಕ್ರಮವಾಗಿ ಉದಾಹರಣೆಗಳು. "द्वन्द्वो द्विगुरपि चाहं सततं मद्गृहेऽव्ययीभावः। तत्पुरुष कर्मधारय येन स्यां सदा बहुव्रीहिः" उद्भ०।

**तत्पूर्व ತತ್ಪೂರ್ವ** (वि०) 1. ಅದೇ ಮೊದಲಿನದಾದ, ಅದೇ ಪ್ರಥಮವಾದ. स एव पूर्वः। "प्रत्यब्रवीच्चैनमिषुप्रयोगे तत्पूर्वभङ्गे वितथप्रयत्नः" रघु० २-४२। (अव्य०) 2. ಅದೇ ಮೊದಲಾಗಿ, ಅದೇ ಪ್ರಥಮವಾಗಿ. तदेव पूर्वं यस्मिन् कर्मणि। "सविस्मयं रूपयतो नभश्चरान् विवेश तत्पूर्वमिवेक्षणादरः" किरा० ८-२६।

**तत्प्रकार ತತ್ಪ್ರಕಾರ** (वि०) ಆ ರೀತಿಯುದಾದ, ಆ ಪ್ರಕಾರವಾದ.

**तत्प्रथम ತತ್ಪ್ರಥಮ** (वि०) 1. ಅದೇ ಮೊದಲಿನದಾದ. तदेव प्रथमम्। "करेण शम्भोर्वलयीकृताहिना सहिष्यते तत्प्रथमावलम्बनम्" कुमा० ५-६६। (अव्य०) 2. ಅದೇ ಮೊದಲಿನದಾಗಿ. तदेव प्रथमं यस्मिन् कर्मणि। "कथंचिदापः सुरसुन्दरीजनैः सभीतिभिस्तत्प्रथमं प्रपेदिरे" किरा० ८-३०।

**तत्र ತತ್ರ** (अव्य०) 1. ಅಲ್ಲಿ, ಆ ಸ್ಥಳದಲ್ಲಿ. तद् "त्रल्" (५-३-१०)। "तत्र कार्मुकभृतं महाभुजः पश्यति स्म सहसा वनेचरम्" किरा० १३-३५। 2. ಅದರಲ್ಲಿ. "तत्र नित्यविहितोपहूतिषु प्रोषितेषु पतिषु द्युयोषिताम्" माघ० १४-३०। 3. ಆ ವಿಷಯದಲ್ಲಿ, ಅವನ ವಿಷಯದಲ್ಲಿ, ಅವಳ ವಿಷಯದಲ್ಲಿ. "पृथुधाम्नि तत्र परिबोधि च मा भवतीभिरन्यमुनिवद्विकृतिः" किरा० ६-४५। 4. ಅಲ್ಲಿಗೆ, ಆ ಪ್ರದೇಶಕ್ಕೆ. "तत्रैव गत्वा तयोः स्वबुद्धिप्रभावेण मैत्रीभेदं करोमि" पञ्चतं० १।

**तत्रतत्र ತತ್ರತತ್ರ** (अव्य०) ಅಲ್ಲಲ್ಲಿ, ಆಯಾ ಜಾಗದಲ್ಲಿ. "यत्रयत्र रघुनाथकीर्तनं तत्रतत्र कृतमस्तकाञ्जलिम्"।

**तत्रत्य ತತ್ರತ್ಯ** (वि०) ಅಲ್ಲಿರುವ. तत्र भवः "त्यप्" (४-२-१०४)। "तरीषु तत्रत्यमफल्गु भाण्डं सांयात्रिकानावपतोऽभ्यनन्दत्" माघ० ३-७६।

**तत्रभवत् ತತ್ರಭವತ್** (वि०) ಪೂಜ್ಯನಾದ, ಗೌರವಕ್ಕೆ ಅರ್ಹನಾದ. तद् प्रथमार्थे "त्रल्" (५-३-१४)। "आदिष्टोऽस्मि तत्रभवता काश्यपेन" शाकु० ४। स्त्रियाम् "ङीप्" (४-१-६)। **-भवती -ಭವತೀ.** "श्रुतं भवता ? तत्रभवती, चित्रे यथा दृष्टस्तथा न दृष्टो भवानिति मन्त्रयति" माल० ४।

**तत्रस्थ ತತ್ರಸ್ಥ** (वि०) ಅಲ್ಲಿರುವ, ಅಲ್ಲಿ ನಿಂತಿರುವ. तत्र तिष्ठति – ष्ठा (गतिनिवृत्तौ) "कः" (३-२-४)। "तत्रस्थः स तदा गन्धं पानभक्ष्यान्नसंभवम्"।

**तथा ತಥಾ** (अव्य०) 1. ಆ ಪ್ರಕಾರವಾಗಿ, ಆ ರೀತಿಯಾಗಿ. तद् प्रकारे "थाल्" (५-३-२३)। "स्वयं च दुग्धोदसुतां सुधासखीं तथा स रेमे सदृशीमवाप्य ताम्" याद० १४-७१। 2. ಸತ್ಯ, ನಿಜ. "यदात्थ राजन्यकुमार तत्तथा यशस्तु रक्ष्यं परतो यशोधनैः" रघु० ३-४८। 3. ಅಂತೆಯೇ, ಹಾಗೆಯೇ. (ಇಲ್ಲಿ ಸಮುಚ್ಚಯಾರ್ಥವನ್ನು ಕೊಡುವುದು.) "श्रुतस्य यायादयमन्तमर्भकस्तथा परेषां युधि चेति पार्थिवः" रघु० ३-२१। 4. ಅಂಗೀಕಾರ, ಒಪ್ಪಿಗೆ, ಹಾಗೆಯೇ ಆಗಲಿ. "तथेति शेषामिव भर्तुराज्ञामादाय मूर्ध्ना मदनः प्रतस्थे" कुमा० ३-२२। 5. ಪ್ರತಿವಚನ, ಕೇಳಿಕೆಗೆ ಉತ್ತರ ಕೊಡುವುದು. 6. ಸಾದೃಶ್ಯ, ಸಾಮ್ಯ. "यथा नदीनदाः सर्वे सागरे यान्ति संस्थितिम्। तथैवाश्रमिणः सर्वे गृहस्थे यान्ति संस्थितिम्" मनु० ६-९०। "तथा समुच्चये साम्ये परमार्थाभ्यनुज्ञयोः" वैज०। "तथाभ्युपगमे पृष्टप्रतिवाक्ये समुच्चये। सदृशे निश्चयेऽपि स्यात्" मेदि०।

**तथाकारम् ತಥಾಕಾರಮ್** (अव्य०) ಹಾಗೆಯೇ ಮಾಡಿ, ಹೇಳಿದಂತೆ ಮಾಡಿ. तथा – डु कृञ् (करणे) "णमुल्" (३-४-२८)। "तथाकारमहं भोक्ष्ये" सि० कौ०। ಇದು ಅಸೂಯೆಯಿಂದ ಹೇಳುವ ಪ್ರತಿವಚನ.

**तथागत ತಥಾಗತ** (पुं०) 1. ಬುದ್ಧದೇವ. तथा सत्यं गतं ज्ञानं यस्य। "काले मितं तथ्यमुदर्कपथ्यं तथागतस्येव जनः सचेताः" माघ० २०-८१। (वि०) 2. ಆ ರೀತಿಯಾಗಿರುವ, ಆ ಪ್ರಕಾರವಾಗಿರುವ. "नलं दृष्ट्वा तथागतम्" भा० वन०। "तथागतायां परिहासपूर्वं सख्यां सखी वेत्रभृदाबभाषे" रघु० ६-८२।

**तथाच ತಥಾಚ** (अव्य०) ಹಾಗೆಯೇ, ಅದರಂತೆಯೇ. "निरिन्द्रिया ह्यमन्त्राश्च स्त्रियोऽनृतमिति स्थितिः। तथा च श्रुतयो बह्व्यो निगीता निगमेष्वपि" मनु० ९-१९। ಇಲ್ಲಿ तथा च ಎಂದು ಪೂರ್ವೋಕ್ತವಾದುದನ್ನು ದೃಢೀಕರಿಸುವುದು.

**तथात्व ತಥಾತ್ವ** (न०) ಹಾಗಾಗಿರುವುದು, ಹಾಗೆ ಇರುವುದು. तथा भावे "त्वः" (५-१-११९)। "शरीरस्य न चैतन्यं मृतेषु व्यभिचारतः। तथात्वं चेदिन्द्रियाणामुपघाते कथं स्मृतिः" भाषाप० ४८।

**तथापि ತಥಾಪಿ** (अव्य०) ಹಾಗಾದರೂ, ಆ ರೀತಿಯೂ ದರೂ. तथा च अपि च। "तथापि यन्मय्यपि ते गुरुरित्यस्ति गौरवम्। तत्प्रयोजककर्तृत्वमुपैति मम जल्पतः" माघ० २-७१।

**तथाभूत ತಥಾಭೂತ** (वि०) ಆ ರೀತಿಯಾದ, ಆ ಪ್ರಕಾರವಾದ. तथा+भू (सत्तायाम्) कर्तृ० "क्तः"(३-४-७२)। "तथाभूतां दृष्ट्वा नृपसदसि पाञ्चालतनयां वने व्याधैः सार्धं सुचिरमुषितं वल्कलधरैः" वेणी० १-११।

**तथाविध ತಥಾವಿಧ** (वि०) ಆ ತೆರನಾದ, ಆ ವಿಧವಾದ. तथा विधा यस्य। "प्रविश्य हि घ्नन्ति शठास्तथाविधानसंवृताङ्गान्निशिता इवेषवः" किरा० १-३०।

**तथाहि ತಥಾಹಿ** (अव्य०) 1. ಹಾಗೆಯೇ ಸರಿ, ಅದು ಪ್ರಸಿದ್ಧವೇ ಸರಿ. 2. ನಿದರ್ಶನ. 3. ಹೇಳಿದ ವಿಷಯದ ಸಮರ್ಥನೆ. तथा च हि च। "तं वेधा विदधे नूनं महाभूतसमाधिना। तथा हि सर्वे तस्यासन् परार्थैकफला गुणाः" रघु० १-३०।

**तथैव ತಥೈವ** (अव्य०) ಹಾಗೆಯೇ, ಅದರಂತೆಯೇ. "यथा नदीनदाः सर्वे सागरे यान्ति संस्थितिम्। तथैवाश्रमिणः सर्वे गृहस्थे यान्ति संस्थितिम्" मनु० ६-९०।

**तथ्य ತಥ್ಯ** (न०) 1. ಸತ್ಯ, ನಿಜ. तथा सत्ये साधु "यत्" (४-४-९८)। "अनन्यभाजं पतिमाप्नुहीति सा तथ्यमेवाभिहिता भवेन" कुमा० ३-६३। (वि०) 2. ನಿಜವಾದ, ಯಥಾರ್ಥವಾದ. "तथ्यामुतथ्यानुजवज्जगादाग्रे गदाग्रजम्" माघ० २-६९। (अव्य०) 3. ಸತ್ಯವಾಗಿ, ನಿಜವಾಗಿ. "अनन्यभाजं पतिमाप्नुहीति सा तथ्यमेवाभिहिता भवेन" कुमा० ३-६३।

**तद् ತದ್** (त्रि०) 1. ಪರೋಕ್ಷದಲ್ಲಿರುವ ಅವನು, ಅವಳು, ಅದು. तनु (विस्तारे) "अदिः" (उ० १-१२९)। "इदमस्तु संनिकृष्टं समीपतरवर्तिचैतदो रूपम्। अदसस्तु विप्रकृष्टं तदिति परोक्षे विजानीयात्"। ಇದೊಂದು ಸರ್ವನಾಮ ಶಬ್ದ. ಆದುದರಿಂದ ಲಿಂಗತ್ರಯದಲ್ಲಿಯೂ ಇದರ ಪ್ರಯೋಗವುಂಟು. (पुं०) सः तौ ते। तं तौ तान्। "स सञ्चरिष्णुर्भुवनान्तरेषु यां यदृच्छयाशिश्रयदाश्रयः श्रियः" माघ० १-४६। (स्त्री०) सा ते ताः। तां ते ताः। "सा रामणीयकनिधेरधिदेवता वा सौन्दर्यसारसमुदायनिकेतनं वा" मालती० १-२४। (न०) तत् ते तानि। 2. ಪೂರ್ವೋಕ್ತವಾದ, ಹಿಂದೆ ಹೇಳಲ್ಪಟ್ಟ, ಹಿಂದೆ ಪ್ರಸಕ್ತವಾದ. "सोऽहमाजन्मशुद्धानामाफलोदयकर्मणाम्" रघु० १-५। "तौ गुरुर्गुरुपत्नी च प्रीत्या प्रतिननन्दतुः" रघु० १-५७। "ते चाकाशमसिश्याममुत्पत्य परमर्षयः" कुमा० ६-३६। "सा राजहंसैरिव संनताङ्गी गतेषु लीलाञ्चितविक्रमेषु" कुमा० १-३४। "तदलक्ष्यरत्नमयकुड्यमादरात् अभिधातरीत इत इत्ययो नृपे" माघ० १३-६२। 3. ಬುದ್ಧಿಗೆ ಗೋಚರವಾದ, ಮನಸ್ಸಿನಲ್ಲಿ ಸನ್ನಿಹಿತವಾದ. ಇದು ಹಿಂದೆ ಅನುಭವಿಸಿದ ವಿಷಯದ ಸಂಸ್ಕಾರವಿಶೇಷದಿಂದ ಉಂಟಾಗುವ ಸ್ಮರಣೆ. "अथ स ललितयोषिद्भ्रूलताचारुशृङ्गं रतिवलयपदाङ्के चापमासज्य कण्ठे" कुमा० २-६४। "सा रम्या नगरी महान् स नृपतिः सामन्तचक्रं च तत्पार्श्वे तस्य च सा विदग्धपरिषत्ताश्चन्द्रबिम्बाननाः" भर्तृ० ३-४१। 4. ಪ್ರಸಿದ್ಧವಾದ, ಪ್ರಖ್ಯಾತವಾದ. "कला च सा कान्तिमती कलावतः त्वमस्य लोकस्य च नेत्रकौमुदी" कुमा० ५-७१। (न०) 5. ಬ್ರಹ್ಮ, ಪರಮಾತ್ಮ. "ओं तत्सदिति निर्देशो ब्रह्मणस्त्रिविधः स्मृतः" गीता १७-२३। 6. ಈ ಶಬ್ದವು "यद्" ಶಬ್ದದ ಅರ್ಥವನ್ನು ಪೂರ್ಣಗೊಳಿಸುವುದು. "यां यां प्रियः प्रैक्षत कातराक्षी सा सा ह्रिया नम्रमुखी बभूव" माघ० ३-१६। (अव्य०) 7. ಹೇತು, ಕಾರಣ, ಆದುದರಿಂದ, ಆ ಕಾರಣದಿಂದ. "तदयं समुपैति भूपतिः पयसां पूर इवानिवारितः" माघ० १६-५३। 8. ಆಗ. "अथ तत्र समर्थतैव तन्त्रं तदसौ वीरवरेण्य एकलव्यः" याद० १५-४८। "ज्यायसी चेत् कर्मणस्ते मता बुद्धिर्जनार्दन। तत् किं कर्मणि घोरे मां नियोजयसि केशव" गीता ३-१। 9. ಆದರೆ, ಆ ರೀತಿಯಾದರೆ, ಹಾಗಾದರೆ. "यदि प्रसादीकुरुते सुधांशोरेषा सहस्रांशमपि स्मितस्य। तत्कौमुदीनां कुरुते तमेव निमिच्छच देवः सफलं स जन्म" नैष० ७-४३।

**तदनन्तर ತದನಂತರ** (वि०) 1. ಅದಕ್ಕೆ ಮುಂದಿನ, ಅದಕ್ಕೆ ಸಮೀಪದ. (अव्य०) 2. ಆಮೇಲೆ, ಅದಾದಮೇಲೆ.

**तदनु ತದನು** (अव्य०) ಅನಂತರ, ಆಮೇಲೆ, ಅದಾದಮೇಲೆ. "गन्धोदग्रं तदनु ववृषुः पुष्पमाश्चर्यमेघाः" रघु० १६-८७।

**तदन्य ತದನ್ಯ** (वि०) ಅವನಿಗಿಂತಲೂ ಬೇರೆಯಾದ, ಅದಕ್ಕಿಂತಲೂ ಬೇರೆಯಾದ. तस्मादन्यः।

**तदर्थ ತದರ್ಥ** (पुं०) 1. ಅದರ ಅರ್ಥ. तस्य अर्थः। 2. ಅದರ ಪ್ರಯೋಜನ. (वि०) 3. ಅದೇ ಉದ್ದೇಶ್ಯವಾಗಿ ಉಳ್ಳ. 4. ಅದೇ ಪ್ರಯೋಜನವಾಗಿ ಉಳ್ಳ.

5. ಅದೇ ಅರ್ಥವಾಗಿ ಉಳ್ಳ. सः अर्थः यस्य। (अव्य०) 6. ಅದಕ್ಕಾಗಿ, ಅದಕ್ಕೋಸ್ಕರ.

**तदर्थीय ತದರ್ಥೀಯ** (वि०) ಅದಕ್ಕಾಗಿ ಮಾಡುವ, ಅದೇ ಉದ್ದೇಶ್ಯದಿಂದ ಮಾಡುವ. "यज्ञे तपसि दाने च स्थितिः सदिति चोच्यते। कर्म चैव तदर्थीयं सदित्येवाभिधीयते" गीता १७-२७।

**तदर्धिक ತದರ್ಧಿಕ** (वि०) ಅದರಲ್ಲಿ ಅರ್ಧದಷ್ಟು. "तदर्धिकं पादिकं वा ग्रहणान्तिकमेव वा" मनु० ३-१।

**तदर्पण ತದರ್ಪಣ** (न०) ತನ್ನಲ್ಲಿ ಇಟ್ಟಿದ್ದ ದ್ರವ್ಯವನ್ನು ಇಟ್ಟವನಿಗೆ ಒಪ್ಪಿಸುವುದು. तस्य स्वस्मिन् निक्षिप्तस्य अर्पणम्।

**तदवधि ತದವಧಿ** (अव्य०) ಅಲ್ಲಿಯವರೆಗೆ, ಆ ಕಾಲದ ವರೆಗೆ.

**तदवधिक ತದವಧಿಕ** (वि०) ಅದೇ ಗಡುವಾಗಿ ಉಳ್ಳ, ಅದೇ ಮಾಯಿದೆಯಾಗಿ ಉಳ್ಳ. सः अवधिः यस्य "कप्" (५-४-१५४)।

**तदवस्थ ತದವಸ್ಥ** (वि०) ಅದೇ ಸ್ಥಿತಿಯಲ್ಲಿರುವ, ಪೂರ್ವದ ಸ್ಥಿತಿಯಲ್ಲಿಯೇ ಇರುವ, ಹಿಂದಿನ ನೆಲೆಯಲ್ಲೇ ಇರುವ. सा पूर्वा अवस्था यस्य। "क्वासौ गतो हुतवहः तदवस्थमेतदन्तःपुरं कथमवन्तिनृपात्मजेयम्" रत्ना० ४-१९।

**तदा ತದಾ** (अव्य०) ಆಗ, ಆ ಕಾಲದಲ್ಲಿ. तस्मिन् काले — तद् "दा" (५-३-१५)। "जिगाय जम्बूजनितश्रियः श्रियं सुमेरुशृङ्गस्य तदा तदासनम्" माघ० १-१९।

**तदात्व ತದಾತ್ವ** (न०) ಆಗಿನ ಕಾಲ, ತತ್ಕಾಲ, ವರ್ತಮಾನ ಕಾಲ. तदा इत्यस्य भावः "त्वः" (५-१-११९)। "तदात्वे नूतनं सर्वमायत्यां तु पुरातनम्"।

**तदानीम् ತದಾನೀಮ್** (अव्य०) ಆಗ, ಆ ಸಮಯದಲ್ಲಿ. तद् "दानीम्" (५-३-१९)। "अतिराघवरावणं तदानीमभवद्द्वैरथमाकुलेन्दुसूर्यम्" याद० १५-१२१।

**तदानीन्तन ತದಾನೀಂತನ** (वि०) ಆಗಿನ ಕಾಲದ, ಆ ಸಮಯದ. तदानीं भवः "ट्युल्" तुट् च (४-३-२३)। "कार्यवशादायोध्यकस्तदानीन्तनश्च संवृत्तः" उ० रा० १।

**तदाप्रभृति ತದಾಪ್ರಭೃತಿ** (अव्य०) ಅದು ಮೊದಲುಗೊಂಡು, ಆ ಕಾಲದಿಂದ. तदा ततः प्रभृति आरभ्य। "तदाप्रभृत्युन्मदना पितुर्गृहे ललाटिकाचन्दनधूसरालका" कुमा० ५-५५।

**तदीय ತದೀಯ** (वि०) ಅವನ ಸಂಬಂಧವಾದ, ಅವಳ ಸಂಬಂಧವಾದ, ಅದರ ಸಂಬಂಧವಾದ. तस्य तस्या वा इदम् "छः" (४-२-११४)। "तदीयमातङ्गघटाविघट्टनैः कटस्थलप्रोषितदानवारिभिः" माघ० १-६४।

**तद्गत ತದ್ಗತ** (वि०) 1. ಅವನಲ್ಲಿರುವ, ಅವಳಲ್ಲಿರುವ, ಅದರಲ್ಲಿರುವ. तत्र गतः। 2. ಅವನಲ್ಲಿ ಅವಳಲ್ಲಿ ಅಥವಾ ಅದರಲ್ಲಿ ಆಸಕ್ತವಾದ.

**तद्गुण ತದ್ಗುಣ** (पुं०) 1. ಅವನ ಅವಳ ಅಥವಾ ಅದರ ಗುಣ. तस्य तस्या वा गुणः। 2. ಅರ್ಥಾಲಂಕಾರದ ಒಂದು ಭೇದ. ತನ್ನ ಗುಣವನ್ನು ತ್ಯಜಿಸಿ ಮತ್ತೊಂದರ ಗುಣವನ್ನು ಸ್ವೀಕರಿಸುವುದು **ತದ್ಗುಣಾಲಂಕಾರ.** "तद्गुणः स्वगुणत्यागादन्यदीयगुणग्रहः" चन्द्रा०। उदा: "पद्मरागायते नासामौक्तिकं तेऽधरत्विषा"। ಇಲ್ಲಿ, ನಾಸಾಮೌಕ್ತಿಕ (ಬುಲಾಕಿನ ಮುತ್ತು) ದಲ್ಲಿ ಅಧರದ ಕೆಂಪು ಕಾಂತಿಯು ಪ್ರತಿಫಲಿಸಿರುವಕಾರಣ ಮೌಕ್ತಿಕದ (ಸ್ವ)ಗುಣವಾದ ಧಾವಳ್ಯವು ಹೋಗಿ ಅದು ಅಧರದ ಆರುಣ್ಯ (ಗುಣ) ವನ್ನು ಹೊಂದಿರುವುದಾಗಿ ವರ್ಣಿತವಾಗಿರುವುದರಿಂದ ತದ್ಗುಣಾಲಂಕಾರ. (वि०) 3. ಅದಕ್ಕೆ ಸಮಾನವಾದ ಗುಣವುಳ್ಳ. तस्य गुण इव गुणो यस्य।

**तद्गुणसंविज्ञान ತದ್ಗುಣಸಂವಿಜ್ಞಾನ** (पुं०) ಬಹುವ್ರೀಹಿ ಸಮಾಸದ ಒಂದು ಭೇದ. ಬಹುವ್ರೀಹಿಸಮಾಸದಲ್ಲಿ ಗುಣೀಭೂತವಾದ ವಿಶೇಷಣವು ವಿಶೇಷ್ಯಕ್ಕೆ ಅಧೀನವಾಗಿರುವಂತೆ ಬೋಧಿಸುವುದು. "तत्र बहुव्रीहौ गुणस्य गुणीभूतस्य विशेषणस्य विशेष्यपारतन्त्र्येण संविज्ञानं यत्र। "लम्बकर्णमानय" ಎಂಬಲ್ಲಿ ಗುಣೀಭೂತವಾದ ಕರ್ಣಕ್ಕೂ ಆನಯನದಲ್ಲಿ ವಿಶೇಷ್ಯ ಪಾರತಂತ್ರ್ಯದಿಂದ ಅನ್ವಯಬೋಧವಿರುವುದರಿಂದ ತದ್ಗುಣಸಂವಿಜ್ಞಾನಬಹುವ್ರೀಹಿಯಾಯಿತು.

**तद्दिन ತದ್ದಿನ** (न०) 1. ಆ ದಿವಸ. तत् दिनम्। (अव्य०) **–नम् –ನಮ್.** 2. ಪ್ರತಿದಿನವೂ. ಪ್ರತಿದಿನದಲ್ಲಿಯೂ. 3. ದಿನದ ಮಧ್ಯ. "तद्दिनं दिनमध्ये स्यात् तथैव प्रतिवासरे" मेदि०।

**तद्धन ತದ್ಧನ** (न०) 1. ಆ ಧನ, ಆ ಹಣ. (वि०) 2. ಕೃಪಣ, ಲೋಭಿ. तदेव धनं यस्य।

**तद्धर्मन् ತದ್ಧರ್ಮನ್** (वि०) ಅದೇ ಧರ್ಮವುಳ್ಳ, ಅಂತಹ ಧರ್ಮವನ್ನು ಹೊಂದಿರುವ. सः धर्मः यस्य "अनिच्" (५-४-१२४)।

**तद्धित ತದ್ಧಿತ** (न०) 1. ಅವನಿಗೆ ಹಿತ, ಅವನಿಗೆ ಕಲ್ಯಾಣ. तस्मै हितम्। "स्वधिष्ण्यमास्थाय विमृश्य तद्धितं तपस्युपादिष्ट इवादधे मनः" भाग० २-९-७। (पुं०)

2. ವ್ಯಾಕರಣದಲ್ಲಿ ಹೇಳಿರುವ ತದ್ಧಿತಪ್ರತ್ಯಯ. "तद्धिताः" (४-१-७६) ಸೂತ್ರದ ಅಧಿಕಾರದಲ್ಲಿ "यूनस्तिः" (४-१-७७) ಸೂತ್ರ ಮೊದಲುಗೊಂಡು ಐದನೆಯ ಅಧ್ಯಾಯದ ಸಮಾಪ್ತಿವರೆಗೂ ವಿಹಿತವಾದ ಪ್ರತ್ಯಯಗಳು. तिः, अण्, ण्यः, अञ्, नञ्, स्नञ्, इञ्, फक्, फिञ्, अकञ्, ष्फञ्, यञ्, ठक्, ठञ्, कः, कन्, यत्, यः, छः, खः, खञ्, ञ्यङ्, ढकञ्, ढक्, घः, त्यक्, वुञ्, छण्, ढिनुक्, ईकक्, इतच्, ष्ठन्, ष्ठल्, ष्कन् ಇತ್ಯಾದಿ ಪ್ರತ್ಯಯಗಳು "तद्धित" ಸಂಜ್ಞೆಯುಳ್ಳವು. युवन् "तिः" = युवतिः। उत्स "अण्" = औत्सः। सिन्धु "अण्" = सैन्धवः। दिति "ण्यः" = दैत्यः। इक्ष्वाकु "अञ्" = ऐक्ष्वाकः। स्त्री "नञ्" = स्त्रैणः। पुंस् "स्नञ्" = पौंस्नः। दक्ष "इञ्" = दाक्षिः। नड "फक्" = नाडायनः। कोसल "फिञ्" = कौसल्यायनिः। गर्ग "यञ्" = गार्ग्यः। वर्षा "ठक्" = वार्षिकम्। देवागार "ठञ्" = देवागारिकः। दन्त "यत्" = दन्त्यम्। सभा "यः" = सभ्यः। सोदर "यः" = सोदर्यः। सर्वधुरा "खः" = सर्वधुरीणः। माणव "खञ्" = माणवीनम्। किरातार्जुन "छः" = किरातार्जुनीयम्। कुल "ढकञ्" = कौलेयकः। ಇತ್ಯಾದಿ ಪ್ರತ್ಯಯಗಳು ಸೇರಿದರೆ ಪ್ರಾತಿಪದಿಕ ಸಂಜ್ಞೆಯನ್ನು (ನಾಮ ಸಂಜ್ಞೆಯನ್ನು) ಹೊಂದಿ सु औ जस् ಇತ್ಯಾದಿ ಪ್ರತ್ಯಯಗಳು ಬರುವುವು. "कृत्तद्धितसमासाश्च" (१-२-४६)। "उणाद्यन्तं कृदन्तं च तद्धितान्तं समासजम्। नामसंज्ञा भवेत्तेषां स्वाद्युत्पत्तिः ततः परम्"। (वि०) 3. ಅವನಿಗೆ ಹಿತವಾದ.

**तद्बल ತದ್ಬಲ** (पुं०) ಒಂದು ಬಾಣ. तस्मिन् बलं यस्मात्।

**तद्भव ತದ್ಭವ** (वि०) 1. ಅದರಲ್ಲಿ ಹುಟ್ಟಿದ, ಅದರಲ್ಲಿ ಉಂಟಾದ. तत्र भवः। 2. ಅದರಿಂದ ಉಂಟಾದ. तस्माद्भवः।

**तद्भाव ತದ್ಭಾವ** (पुं०) 1. ಅದರ ಅಸಾಧಾರಣ ಧರ್ಮ. तस्य भावः। ಘಟದಲ್ಲಿ ಅಸಾಧಾರಣ ಧರ್ಮ ಘಟತ್ವ. ಮನುಷ್ಯತ್ವವು ಮನುಷ್ಯನಲ್ಲಿರುವ ಅಸಾಧಾರಣ ಧರ್ಮ. 2. ಅವನ ಅಥವಾ ಅದರ ವಿಷಯವಾದ ಚಿಂತನೆ. तस्मिन् भावः "सदा तद्भावभावितः" गीता ८-६।

**तद्राज ತದ್ರಾಜ** (पुं०) 1. ಅವನ ದೊರೆ. तस्य राजा "टच्" (५-४-९१)। 2. ತದ್ರಾಜ ಎಂಬ ಅರ್ಥದಲ್ಲಿ ವಿಹಿತವಾದ ತದ್ಧಿತ ಪ್ರತ್ಯಯ. "जनपदशब्दात्...." (४-१-१६६) ಸೂತ್ರದಿಂದ ಪ್ರಾರಂಭಿಸಿ ವಿಹಿತವಾದ "अञ्" ಮೊದಲಾದ ಪ್ರತ್ಯಯಗಳಿಗೆ "ते तद्राजाः" (४-१-१७२) ಸೂತ್ರದಿಂದ ತದ್ರಾಜ ಸಂಜ್ಞೆಯು ವಿಹಿತವಾಗಿದೆ.

**तद्रूप ತದ್ರೂಪ** (न०) 1. ಅದರ ರೂಪ, ಅದರ ಸ್ವರೂಪ. तस्य रूपम्। (वि०) 2. ಅದರ ರೂಪವುಳ್ಳ, ಅದರ ಆಕಾರವುಳ್ಳ. तस्य रूपं यस्य।

**तनु – विस्तारे** (तना० उभ० सक० से०)। तनोति तनुतः तन्वन्ति। तनुते तन्वाते तन्वते। ततान तेनतुः तेनुः। तेने तेनाते तेनिरे। तनिता। तनिष्यति, –ते। तनोतु, तनुतात् तनुताम् तन्वन्तु। तनुताम् तन्वाताम् तन्वताम्। अतनोत्, अतनुत। तनुयात्, तन्वीत। तन्यात्, तनिषीष्ट। अतानीत्, अतनीत्; अतत, अतनिष्ट। अतनिष्यत्, –त। 1. ವಿಸ್ತರಿಸು. "तनोति शुभ्रं गुणसंपदा यशः" किरा० १-८। 2. ಹೆಚ್ಚಿಸು. "पितुर्मुदं तेन ततान सोऽर्भकः" रघु० ३-२५। 3. ಮಾಡು. "तनोषि हारं कियदस्तुणः स्रवैः" नैष० ९-१०५। 4. ಬೆಳೆಸು, (ಸಂತಾನ) ವೃದ್ಧಿಗೊಳಿಸು. "धर्मार्थमुत्तमश्लोकं तन्तुं तन्वन् पितॄन् यजेत्" भाग० २-३-८।

**कर्मणि** :—तायते, तन्यते। तायताम्, तन्यताम्। अतायत, अतन्यत। तायेत, तन्येत। ಉಳಿದುವು ಆತ್ಮನೇಪದದ ರೂಪಗಳಂತೆ ಆಗುವುವು.

**कृत्सु** :—तनितव्यम्। तननीयम्। तान्यम्। ततः। ततवान्। तन्वन्, तन्वती। तन्वानः। तनितुम्। ततम्। तननम्। तनित्वा, तत्वा। वितत्य।

**ಈ ಧಾತುವಿಗೆ ಉಪಸರ್ಗಗಳ ಯೋಗದಿಂದ ಉಂಟಾಗುವ ಅರ್ಥಭೇದಗಳು:**

**(1) वि + अति + तनु** = व्यतितनोति। ಪರಸ್ಪರ ವಿಸ್ತಾರಗೊಳ್ಳು, ಅನ್ಯೋನ್ಯ ಕಾರ್ಯಬದಲಾವಣೆಯಿಂದ ದೊಡ್ಡವನಾಗು. "वियति व्यत्यतन्वाताम् मूर्ती हरिपयोनिधी" भट्टि० ७-३।

**(2) अनु + तनु** = अनुतनोति। 1. ಯಾವಾಗಲೂ ವೃದ್ಧಿಹೊಂದಿಸು. 2. ಅನಂತರ ವಿಸ್ತಾರಮಾಡು, ಅನಂತರ ಬೆಳಸು. "परिपाल्यानुतनुयादेष धर्मः सनातनः" भा० शान्ति० १३३-२।

**(3) आ + तनु** = आतनोति। आतनुते। आतन्वानः। ಬಹಳ ದೀರ್ಘವಾಗಿ ಮಾಡು, ಬಹಳ ವಿಸ್ತಾರವಾಗಿ ಮಾಡು. "आतन्वानं भुजगशयने कामपि क्षौमगौरे निद्रामुद्रां निखिलजगतीरक्षणे जागरूकाम्" चं० रा०।

(4) उद्+तनु = उत्तानः। ಎತ್ತರವಾಗು, ಉಬ್ಬಿರು. "पत्रावलीप्रसाधनोत्तानवक्षःस्थलं" मालती० ७।

(5) प्र+तनु = प्रतायते। ಚೆನ್ನಾಗಿ ವಿಸ್ತಾರವಾಗು, ಚೆನ್ನಾಗಿ ವೃದ್ಧಿಹೊಂದು. "तद्दूरीकृत्य कृतिभिर्वाचस्पत्यं प्रतायते" माघ० २-३०।

(6) सम्+तनु = सन्तनोति। सन्ततः। सन्तानः। सन्ततिः। ಚೆನ್ನಾಗಿ ಬೆಳವಣಿಗೆ ಹೊಂದು, ಹೆಚ್ಚು ವಿಸ್ತಾರವಾಗು, ಅವಿಚ್ಛಿನ್ನವಾಗಿ ಬೆಳೆ. "सन्तता शुशुभे भूमिः" रामा०।

**तद्वत् ತದ್ವತ್** (अव्य०) 1. ಅವನಂತೆ, ಅವನಿಗೆ ಸಮಾನವಾಗಿ. तेन तुल्यम् "वतिः" (५-१-११५)। ಮಾಡುವ ಕಾರ್ಯದಲ್ಲಿ ಸಾದೃಶ್ಯವಿದ್ದರೆ ಈ "वति" ಪ್ರತ್ಯಯವು ಬರುವುದು. "तेन तुल्यं क्रिया चेद्वतिः" ಎಂಬಲ್ಲಿ ತುಲ್ಯ ಪದವು ಕ್ರಿಯಾ ಪದಕ್ಕೆ ವಿಶೇಷಣವಾಗಿರುವುದು. ब्राह्मणेन तुल्यं ब्राह्मणवत् अधीते। ಇಲ್ಲಿ ಅಧ್ಯಯನ ಕ್ರಿಯೆಯಲ್ಲಿ ಬ್ರಾಹ್ಮಣನ ಅಧ್ಯಯನ ಸಾದೃಶ್ಯವು ಉಕ್ತವಾಗಿರುವುದು. 2. ಅಲ್ಲಿಯಂತೆ. तत्रेव — तद् "वतिः" (५-१-११६)। मधुरायामिव मधुरावत्। 3. ಅವನಂತೆ. तस्येव—तद् "वतिः" (५-१-११६)। चैत्रस्येव चैत्रवत्। ಇಲ್ಲಿ ಸಪ್ತಮಿ ಮತ್ತು ಷಷ್ಠ್ಯರ್ಥಗಳಲ್ಲಿ "वति" ಪ್ರತ್ಯಯವು ಉಕ್ತವಾಗಿದೆ. (वि०) 4. ಅದರೊಡನೆ ಕೂಡಿದ, ಅದರ ಸಹಿತವಾದ. तदस्यास्ति—"मतुप्" (५-२-९४)।

**तद्विध ತದ್ವಿಧ** (वि०) 1. ಆ ರೀತಿಯಾದ, ಆ ಪ್ರಕಾರವಾದ. सा विधा प्रकारो यस्य। "धर्मार्थौ यत्र न स्यातां शुश्रूषा वापि तद्विधा" मनु० २-११२। 2. ಅದರಂತಿರುವ, ಅವನಂತಿರುವ, ಅವಳಂತಿರುವ. तस्य तस्या वा विधेव विधा यस्य। "भक्त्योपपन्नेषु हि तद्विधानां प्रसादचिह्नानि पुरःफलानि" रघु० २-२२।

**तद्विषय ತದ್ವಿಷಯ** (वि०) ಅದಕ್ಕೇ ಸಂಬಂಧಿಸಿದ ವಿಷಯವುಳ್ಳ. तैः विषयः अविनाभावः यस्य। षिञ् (बन्धने) "अच्" (३-३-५६)। विशिष्य बन्धः अविनाभाव इत्यर्थः। "छन्दोब्राह्मणानि च तद्विषयाणि" पा० सू० ४-२-६६।

**तनय ತನಯ** (पुं०) 1. ಪುತ್ರ, ಮಗ. तनोति विस्तारयति कुलम् — तनु (विस्तारे) "कयन्" (उ० ४-९९)। "भूत्वा चिराय चतुरन्तमहीसपत्नी दौष्यन्तिमप्रतिरथं तनयं निवेश्य" शाकु० ४-१९। 2. ಲಗ್ನದಿಂದ ಎಂಟನೆಯ ಸ್ಥಾನ. (स्त्री०) **-या -ಯಾ.** ಪುತ್ರಿ, ಮಗಳು. "राघवाय तनयामयोनिसां रूपिणीं श्रियमिव न्यवेदयत्" रघु० ११-४७।

**तनिका ತನಿಕಾ** (स्त्री०) ರಜ್ಜು, ಹಗ್ಗ. तन्यते बध्यतेऽनया "इन्" (उ० ४-११७)। संज्ञायां "कन्"। "मुक्तास्तृणानि परितः कटकं चरन्तः त्रुटयद्वितानतनिका व्यतिषङ्गभाजः" माघ० ५-६१।

**तनिमन् ತನಿಮನ್** (पुं०) ಕಾರ್ಶ್ಯ, ಕೃಶತೆ. तनोर्भावः "इमनिच्" (५-१-१२२)। "तनिम्ना शोभन्ते गलितविभवाश्चार्थिषु नृपाः" कुव०।

**तनिष्ठ ತನಿಷ್ಠ** (वि०) ಬಹುಮಂದಿಗಳಲ್ಲಿ ತೆಳುವಾದ ಒಬ್ಬನು. अयमेषामतिशयेन तनुः "इष्ठन्" (५-३-५५)।

**तनीयस् ತನೀಯಸ್** (वि०) ಎರಡರಲ್ಲಿ ಸಣ್ಣದಾದ ಒಂದು, ಇಬ್ಬರಲ್ಲಿ ಹೆಚ್ಚು ತೆಳುವಾದ ಒಬ್ಬ. अयमनयोरतिशयेन तनुः "ईयसुन्" (५-३-५७)। "नासाविरोकपवनोल्लसितं तनीयो रोमाञ्चतामिव जगाम रजः पृथिव्याः" माघ० ५-५४। स्त्रियाम् "ङीप्" (४-१-६)। **-यसी -ಯಸೀ.**

**तनु ತನು** (स्त्री०) 1. ಶರೀರ, ದೇಹ, ಮೈ. तनोति—तनु (विस्तारे) "उः" (उ० १-७)। "तनौ ममुस्तत्र न कैटभद्विषस्तपोधनाभ्यागमसंभवा मुदः" माघ० १-२३। 2. ಚರ್ಮ, ತೊಗಲು. (वि०) 3. ಅಲ್ಪವಾದ, ಚಿಕ್ಕದಾದ, ಸಣ್ಣದಾದ. 4. ವಿರಳವಾದ. 5. ಕೃಶವಾದ, ತೆಳ್ಳಗಿರುವ. "तनुः काये त्वचि स्त्री स्यात् त्रिष्वल्पे विरले कृशे" मेदि०। "तनुरभिलषितं कलमच्छलेन व्यवृणुत वेल्लितबाहुवल्लरीका" माघ० ७-७२। "तनुलोमकेशदशनां मृद्वङ्गीमुद्वहेत्कन्याम्" मनु० ३-१०। स्त्रियाम् वा "ङीप्" (४-१-४४)। **तन्वी ತನ್ವೀ, तनुः ತನುಃ.**

**तनुकूबर ತನುಕೂಬರ** (न०) ಗಾಡಿಯ ಮೂಕಿಯ ಕಂಬ.

**तनुक्षीर ತನುಕ್ಷೀರ** (पुं०) ಅಮಟೆಮರ. तनु अल्पं क्षीरमस्य।

**तनुच्छद ತನುಚ್ಛದ** (पुं०) ಕವಚ, ಅಂಗಿ. तनुः छाद्यतेऽनेन — छद (अपवारणे) "घः" (३-३-११८)। "ग्रथितमौलिरसौ वनमालया तरुपलाशसवर्णतनुच्छदः" रघु० ९-५१।

**तनुच्छाया ತನುಚ್ಛಾಯಾ** (स्त्री०) 1. ಸ್ವಲ್ಪ ನೆರಳು. तन्वी छाया। 2. ದೇಹಕಾಂತಿ. तनोः छाया। (पुं०)

**-छाय -ಛಾಯ.** 3. ಭಾರಂಗಿ ಗಿಡ. (वि०) 4. ಸ್ವಲ್ಪ ನೆರಳುಳ್ಳ. 5. ಸ್ವಲ್ಪ ಕಾಂತಿಯುಳ್ಳ. तन्वी अल्पा छाया यस्य।

**तनुज ತನುಜ** (पुं०) 1. ಪುತ್ರ, ಮಗ. तनोर्जायते--जनी (प्रादुर्भावे) "ड:" (३-२-९८)। "एवं स्वतनुज आत्मन्यनुरागावेशितचित्त:" भाग० ५-९-६। 2. ಲಗ್ನದಿಂದ ಐದನೆಯ ಸ್ಥಾನ. (वि०) 3. ದೇಹದಲ್ಲಿ ಹುಟ್ಟಿದ. तनौ जायते — जनी "ड:" (३-२-९७)। (स्त्री०) **-जा -ಜಾ.** 4. ಪುತ್ರಿ, ಮಗಳು.

**तनुजन्मन् ತನುಜನ್ಮನ್** (पुं०) ಪುತ್ರ, ಮಗ. तनोर्जन्म यस्य।

**तनुतर ತನುತರ** (वि०) "तनीयस्" ಪದದ ಅರ್ಥ. अनयोरतिशयेनायं तनु: "तरप्" (५-३-५७)। "तनुतर-विशिखविताडनविघटितविशरारुशरारु०" रघु० ग०।

**तनुता ತನುತಾ** (स्त्री०) ತೆಳ್ಳಗಿರುವಿಕೆ, ಕೃಶವಾಗಿರುವಿಕೆ, ಸೂಕ್ಷ್ಮವಾಗಿರುವಿಕೆ. तनोर्भाव: "तल्" (५-१-११९)। "त्व:"। **-त्वम् -ತ್ವಮ್.**

**तनुत्यज् ತನುತ್ಯಜ್** (वि०) ಶರೀರತ್ಯಾಗಮಾಡುವ, ದೇಹವನ್ನು ಬಿಟ್ಟುಹೋಗುವ. तनुं त्यजति — त्यज (हानौ) "क्विप्" (३-२-७६)। "वार्धके मुनिवृत्तीनां योगेनान्ते तनुत्यजाम्" रघु० १-८।

**तनुत्र ತನುತ್ರ** (न०) ಕವಚ, ಅಂಗಿ. तनुं त्रायते — त्रैङ् (पालने) "क:" (३-२-३)।

**तनुत्रवत् ತನುತ್ರವತ್** (वि०) ಕವಚವನ್ನು ತೊಟ್ಟಿರುವ. तनुत्रमस्यास्ति "मतुप्" (५-२-९४)।

**तनुत्राण ತನುತ್ರಾಣ** (न०) ಕವಚ, ಅಂಗಿ. तनु: त्रायतेऽनेन —त्रैङ् (पालने) "ल्युट्" (३-३-११७)।

**तनुत्रिन् ತನುತ್ರಿನ್** (वि०) ಕವಚವನ್ನು ತೊಟ್ಟಿರುವ. तनुत्रमस्यास्ति — तनुत्र "इनि:" (५-२-११५)। "अक्षितारासु विव्याध द्विषत: स तनुत्रिण:" माघ० १९-९९।

**तनुत्वच् ತನುತ್ವಚ್** (स्त्री०) 1. ಕಿರುಸೆಲ್ಲಿಗಿಡ. तनु: सूक्ष्मा त्वक् यस्या:। (वि०) 2. ಸೂಕ್ಷ್ಮವಾದ ತೊಗಟೆಯುಳ್ಳ. 3. ಸೂಕ್ಷ್ಮವಾದ ಚರ್ಮವುಳ್ಳ. तनु: त्वक् यस्य।

**तनुदान ತನುದಾನ** (न०) ದೇಹವನ್ನು ಒಪ್ಪಿಸುವುದು, ಶರೀರವನ್ನು ಒಬ್ಬನ ಅಧೀನವಾಗಿ ಮಾಡುವುದು. तनो-दानम् अर्पणम्।

**तनुभव ತನುಭವ** (पुं०) 1. ಪುತ್ರ, ಮಗ. तनोर्भवति—भू (सत्तायाम्) "अच्" (३-१-१३४)। "कार्तिकेऽश्वयुजि वा यदि मासे दृश्यते तनुभव: शिशिरांशो:" बृहत्सं० ७-१८। (वि०) 2. ಶರೀರದಲ್ಲಿ ಹುಟ್ಟಿದ. (स्त्री०) **-भवा -ಭವಾ.** ಪುತ್ರಿ, ಮಗಳು.

**तनुभस्त्रा ತನುಭಸ್ತ್ರಾ** (स्त्री०) ನಾಸಿಕೆ, ಮೂಗು. तनो: भस्त्रेव।

**तनुभृत् ತನುಭೃತ್** (पुं०) 1. ಪ್ರಾಣಿ, ಶರೀರವನ್ನು ಹೊಂದಿರುವ ಜೀವ. (वि०) 2. ದೇಹವನ್ನು ಧರಿಸಿರುವ. तनुं बिभर्ति— डु भृञ् (धारणपोषणयो:) "क्विप्" (३-२-७६)। "छाया फलं तनुभृतां शुभमादधाति" बृहत्सं० ६८-९१।

**तनुमध्या ತನುಮಧ್ಯಾ** (स्त्री०) 1. ಕೃಶವಾದ ಮಧ್ಯಪ್ರದೇಶ (ಸೊಂಟ) ವುಳ್ಳ ಹೆಂಗಸು. तनु: सूक्ष्मं मध्यं यस्या:। 2. ವೃತ್ತರತ್ನಾಕರೋಕ್ತವಾದ ಆರನೆಯ (ಗಾಯತ್ರೀ) ಛಂದಸ್ಸಿನ ಒಂದು ವೃತ್ತ. **ಇದರ ಲಕ್ಷಣ:** ಪ್ರತಿ ಪಾದದಲ್ಲಿಯೂ त ಗಣ ಮತ್ತು य ಗಣಗಳಿರಬೇಕು. "त्यौ स्त: तनुमध्या" वृ० र०। **ಈ ವೃತ್ತದ ಗಣವಿನ್ಯಾಸ:**

त य
UU। ।UU ।

**तनुरस ತನುರಸ** (पुं०) ಸ್ವೇದ, ಬೆವರು. तनो: रस इव। "स्वेद: सिप्रस्तनुरस:" हारा०।

**तनु(नू)रुह् ತನು(ನೂ)ರುಹ್** (न०) ಮೈಕೂದಲು, ರೋಮ. तनौ रोहति—रुह (बीजजन्मादौ) "क्विप्" (३-२-७६)।

**तनु(नू)रुह ತನು(ನೂ)ರುಹ** (न०) 1. ರೋಮ, ಮೈಕೂದಲು. तनौ रोहति — रुह (बीजजन्मादौ) "क:" (३-१-१३५)। "यद्बहुबहिरवाप्य विकासं व्यानशे तनुरुहाण्यपि हर्ष:" माघ० १०-५०। 2. ಗರಿ, ರೆಕ್ಕೆ. "तनुरुहाणि पुरो विजितध्वनेर्धवलपक्षविहङ्गम-कूजितै:" माघ० ६-४५।

**तनुवात ತನುವಾತ** (पुं०) ಒಂದು ನರಕ.

**तनुवार ತನುವಾರ** (पुं०) ಕವಚ, ಅಂಗಿ. तनुं शरीरं वृणोति — वृञ् (वरणे) "अण्" (३-२-१)।

**तनुस् ತನುಸ್** (न०) 1. ವಿಸ್ತಾರವಾಗುವುದು, ಹರಡುವುದು. 2. ದೇಹ, ಶರೀರ. तनु (विस्तारे) "उसि:" (उ० २-११७)। "तनुषी तनुविस्तृती" वैज०।

**तनुह्रद ತನುಹ್ರದ** (पुं०) ಗುದ, ಅಪಾನದ್ವಾರ, ಮಲ ದ್ವಾರ. "पायुस्तनुह्रदो मार्गः"।

**तनू ತನೂ** (स्त्री०) 1. ಶರೀರ, ದೇಹ. तनोति कर्म—तनु (विस्तारे) "ऊङ्" (वा० ४-१-६६)। "आननैर्विचकसे हृषिताभिर्वल्लभानभि तनूभिरभावि" माघ० १०-३६। 2. ಅರಳು, ಹಸು. 3. ಬ್ರಹ್ಮ. तनोति विस्तारयति सृष्टिम्।

**तनूकरण ತನೂಕರಣ** (न०) ಸಣ್ಣದಾಗಿ ಮಾಡುವುದು. ತೆಳುವಾಗಿ ಮಾಡುವುದು, ಸೂಕ್ಷ್ಮವಾಗಿ ಮಾಡುವುದು, ಶಿಲುವಾಗಿ ಮಾಡುವುದು.

**तनूकृत ತನೂಕೃತ** (वि०) ಕೃಶವಾಗಿ ಮಾಡಲ್ಪಟ್ಟ, ಸಣ್ಣ ದಾಗಿ ಮಾಡಲ್ಪಟ್ಟ. ಶಿಲುವಾಗಿ ಮಾಡಲ್ಪಟ್ಟ, ಸೂಕ್ಷ್ಮ ವಾಗಿ ಮಾಡಲ್ಪಟ್ಟ.

**तनूज ತನೂಜ** (पुं०) 1. ಪುತ್ರ, ಮಗ. तनोर्जायते—जनी (प्रादुर्भावे) "डः" (३-२-९८)। "अभूदभूमिः प्रतिपक्षजन्मनां भियां ततनूजस्तपनद्युतिर्दितेः" माघ० १-४२। (स्त्री०) **—जा —ಜಾ**. ಮಗಳು. "आराधयामास सखीसमेतां समादिदेश प्रयतां तनूजाम्" कुमा० १-५८। एवं **तनूजातः ತನೂಜಾತಃ, तनूजन्मन् ತನೂಜನ್ಮನ್.** ಇತ್ಯಾದಿ. (वि०) 2. ಶರೀರದಿಂದ ಹುಟ್ಟಿದ. 3. ಶರೀರ ದಲ್ಲಿ ಹುಟ್ಟಿದ.

**तनून ತನೂನ** (पुं०) 1. ವಾಯು, ಗಾಳಿ. तन्वा शरीरेण ऊनः। (वि०) 2. ಕೃಶನಾಗಿರುವ, ಇಳಿದುಹೋದ ಮೈಯುಳ್ಳ.

**तनूनप ತನೂನಪ** (न०) ಘೃತ, ತುಪ್ಪ. ಕೃಶನಾಗಿರು ವವನಿಗೆ ಪುಷ್ಟಿಯುಂಟುಮಾಡುವುದರಿಂದ ಈ ಹೆಸರು.

**तनूनपात् ತನೂನಪಾತ್** (पुं०) 1. ಅಗ್ನಿ, ಬೆಂಕಿ. तनूं न पातयति जाठररूपेण शरीरं धारयति—पत्लृ (गतौ)+णिच् "शतृ" निपा० (६-३-७५)। तन्वा ऊनं कृशं पाति। तनूनपं घृतादि अत्ति—अद (भक्षणे) "विट्" (३-२-६८)। इति वा। "बभार बाष्पैर्द्विगुणीकृतं तनुस्तनूनपाद्धूमवितानमाधिजैः" माघ० १-६२। 2. ಪ್ರಜಾಪತಿಯ ಪೌತ್ರ, ಬ್ರಹ್ಮನ ಮೊಮ್ಮಗ. तनोति विस्तारयति सृष्टिम् इति तनूः ब्रह्मा, तस्य नपात् पौत्रः। 3. ಗೋಘೃತ, ಹಸುವಿನ ತುಪ್ಪ. तनोति विस्तारयति भोगान् इति तनूः गौः, तस्याः नपात् पौत्रम् घृतम्। ಹಸುವಿನಿಂದ ಹಾಲೂ ಹಾಲಿನಿಂದ ತುಪ್ಪವೂ ಆಗುವುದರಿಂದ ತುಪ್ಪವು ಹಸುವಿಗೆ ಪೌತ್ರವಾಯಿತು.

**तनूरुह ತನೂರುಹ** (न०) 1. ರೋಮ, ಮೈಕೂದಲು. तनौ रोहति—रुह (बीजजन्मादौ) "कः" (३-१-१३५)। "रुचिरचित्रतनूरुहशालिभिर्विचलितः परितः प्रियकव्रजैः" माघ० ४-३२। 2. ರೆಕ್ಕೆ, ಗರಿ. "तनूरुहन्तु लोम्नि स्यात् पतत्रे च नपुंसकम्" मेदि०। "कुक्कुटस्त्ववृजुतनूरुहाङ्गुलिस्ताम्रवक्त्रनखचूलिकः सितः" बृहत्सं० ६३-१। (पुं०) 3. ಪುತ್ರ, ಮಗ. "तनूरुहस्तु पुत्रे गरुति लोम्नि च" हेम०।

**तन्तु ತಂತು** (पुं०) 1. ಸೂತ್ರ, ದಾರ. तन् (विस्तारे) "तुन्" (उ० १-६९)। 2. ಜೇಡನ ಬಲೆಯ ಎಳೆ. "तिरस्क्रियन्ते कृमितन्तुजालैर्विच्छिन्नधूमप्रसरा गवाक्षाः" रघु० १६-२०। 3. ನಾರು, ಎಳೆ, ನವಿರಾದ ದಾರ ದಂತಿರುವ ವಸ್ತು. "बिसतन्तुगुणस्य कारितं धनुषः पेलवपुष्पपत्रिणः" कुमा० ४-२९। 4. ಎಡೆಬಿಡದೆ ಇರುವುದು. ಅವಿಚ್ಛಿನ್ನವಾಗಿರುವುದು.

**तन्तुक ತಂತುಕ** (पुं०) 1. ಸೂತ್ರ, ದಾರ. "विच्छिन्ने नितरामनङ्गकलहक्रीडात्रुटत्तन्तुकम्" भर्तृ० १-९४। 2. ಗ್ರಾಹ, ಮೊಸಳೆ. "ग्राहस्तन्त्रस्तन्तुनागस्तन्द्रश्चामोघतन्तुकौ" वैज०। (स्त्री०) **—की —ಕೀ.** 3. ನಾಡಿ, ಧಮನಿ, ನರ.

**तन्तुकाष्ठ ತಂತುಕಾಷ್ಠ** (न०) ನೇಯ್ಗೆಕಾರನ ಕುಂಚ, ನೇಯ್ಗೆಯವನು ದಾರವನ್ನು ಶುದ್ಧಮಾಡಲು ಉಪ ಯೋಗಿಸುವ ದಂಡ. तन्तुयुक्तं काष्ठम्।

**तन्तुकीट ತಂತುಕೀಟ** (पुं०) ರೇಷ್ಮೆಹುಳ, ರೇಷ್ಮೆದಾರ ಕ್ಕಾಗಿ ಸಾಕುವ ಹುಳ.

**तन्तुनाभ ತಂತುನಾಭ** (पुं०) ಜೇಡನ ಹುಳ. तन्तुर्नाभौ यस्य।

**तन्तुनिर्यास ತಂತುನಿರ್ಯಾಸ** (पुं०) ತಾಳವೃಕ್ಷ, ಪನೆಮರ. तन्तुवत् निर्यासोऽस्य।

**तन्तुपर्वन् ತಂತುಪರ್ವನ್** (न०) ಉಪಾಕರ್ಮ, ಶ್ರಾವಣ ಮಾಸದ ಪೂರ್ಣಿಮೆ, ಯಜ್ಞೋಪವೀತವನ್ನು ದಾನ ಮಾಡುವ ಒಂದು ಹಬ್ಬ. तन्तोः यज्ञोपवीतस्य दानरूपं पर्व यत्र। "संप्राप्ते श्रावणस्यान्ते पौर्णमास्यां दिनोदये। स्नानं कुर्वीत मतिमान् श्रुतिस्मृतिविधानतः। उपाकर्मादिकं प्रोक्तम् ऋषीणां चैव तर्पणम्। शूद्राणां मन्त्ररहितं स्नानं दानं च शस्यते। उपाकर्मणि कर्तव्यमृषीणां चैव पूजनम्। ततोऽपराह्णसमये रक्षापोटलिकां शुभाम्। कारयेदक्षतैः शस्तैः सिद्धार्थैर्हेमभूषितैः" निर्णयसि०।

**तन्तुभ ತಂತುಭ** (ಪುಂ) 1. ಸರ್ಷಪ, ಸಾಸುವೆ. 2. ವತ್ಸ, ಕರು.

**तन्तुवर्धन ತಂತುವರ್ಧನ** (ಪುಂ) 1. ವಿಷ್ಣು, ಪರಮಾತ್ಮ. तन्तुं संसारतन्तुं वर्धयति सन्तनोति—वृधु (वृद्धौ) + णिच् "ल्यु:" (३-१-१३४)। "अंशुभिः पापरुचिभिरतन्तुं संसारनामकम्। यस्तनोतीति सदा तन्तुवर्धन ईरितः" इति निरुक्तिः। "शुभाङ्गो लोकसारङ्गः सुतन्तुस्तन्तुवर्धनः" वि० स०। (वि०) 2. ಸಂತತಿಯನ್ನು ವೃದ್ಧಿಗೊಳಿಸುವ. 3. ಸಂತತಿಯನ್ನು ವಿಚ್ಛಿತ್ತಿಗೊಳಿಸುವ. तन्तुं वर्धयति छिनत्ति—वर्ध (छेदने) + णिच् "ल्यु:" (३-१-१३४)। 4. ದಾರವನ್ನು ಕತ್ತರಿಸುವ.

**तन्तुवान ತಂತುವಾನ** (ನಂ) ನೇಯಿಗೆ, ನೇಯುವುದು.

**तन्तुवाप ತಂತುವಾಪ** (ಪುಂ) 1. ಕುವಿಂದ, ನೇಯಿಗೆಯವನು, ಮಗ್ಗದವನು. तन्तून् वपति—डु वप् (बीजसन्ताने) "अण्" (३-२-१)। 2. ಜೇಡನ ಹುಳ.

**तन्तुवाय ತಂತುವಾಯ** (ಪುಂ) 1. ಕುವಿಂದ, ನೇಯಿಗೆಯವನು. तन्तून् वयति—वेञ् (तन्तुसन्ताने) "अण्" (३-२-१)। "तन्तुवायो दशपलं दद्यादेकपलाधिकम्। अतोऽन्यथा वर्तमानो दाप्यो द्वादशकं दमम्" मनु० ८-३९७। 2. ಜೇಡನ ಹುಳ.

**तन्तुवायदण्ड ತಂತುವಾಯದಂಡ** (ಪುಂ) ನೇಯಿಗೆಯವನು (ನೇಯುವಾಗ) ದಾರದ ಸಿಕ್ಕನ್ನು ಬಿಡಿಸಿ ನೇಯುವ ತಂಕು ಹಲಗೆ. तन्तोर्वायस्य दण्डः।

**तन्तुशाला ತಂತುಶಾಲಾ** (ಸ್ತ್ರೀ०) ಮಗ್ಗದ ಮನೆ.

**तन्तुसन्तत ತಂತುಸಂತತ** (ನಂ) 1. ನೇದ ಬಟ್ಟೆ. 2. ಹೊಲಿಯಲ್ಪಟ್ಟ ವಸ್ತ್ರ. तन्तुभिः सन्ततम्। "ऊतं स्यूतमुतं चेति त्रितयं तन्तुसन्तते" अम०।

**तन्तुसन्तति ತಂತುಸಂತತಿ** (ಸ್ತ್ರೀ०) ನೇಯಿಗೆ, ಬಟ್ಟೆಯನ್ನು ನೇಯುವುದು.

**तन्तुसन्तान ತಂತುಸಂತಾನ** (ಪುಂ) ಬಟ್ಟೆಯನ್ನು ನೇಯುವುದು.

**तन्तुसार ತಂತುಸಾರ** (ಪುಂ) ಅಡಕೆ ಮರ. तन्तव इव सारो मज्जा यस्य।

**तन्त्र ತಂತ್ರ** (ನಂ) 1. ಸಿದ್ಧಾಂತ. तनोति तन्यते वा—तनु (विस्तारे) कर्त्रादौ "ष्ट्रन्" (उ० ४-१५८)। 2. ಶಾಸ್ತ್ರ. "अवैरज्ञमतन्त्रज्ञं बालचेष्टासमन्वितम्" देवीभा०। 3. ಕುಟುಂಬ ಭರಣದ ಕಾರ್ಯ. तत्रि (कुटुम्बधारणे) "घञ्" (३-३-१८)। "सर्वानुपायानथ संप्रधार्य समुद्धरेत् स्वस्य कुलस्य तन्त्रम्" भा० अनु० ८३-६। 4. ಪ್ರಧಾನವಾದ ವಿಷಯ. 5. ತಂತುವಾನ, ನೇಯಿಗೆ. 6. ಎರಡು ಕಾರ್ಯಗಳನ್ನು ಒಂದೇ ಪ್ರಯತ್ನದಿಂದ ಸಾಧಿಸುವಿಕೆ. 7. ರಾಷ್ಟ್ರ. 8. ಹೇತು, ಕಾರಣ. 9. ಸ್ವರಾಷ್ಟ್ರ ಚಿಂತೆ, ತನ್ನ ರಾಷ್ಟ್ರದ ವಿಷಯದಲ್ಲಿ ರಾಜನು ಮಾಡುವ ಆಲೋಚನೆ. "तन्त्रं स्वराष्ट्रचिन्तायामावापः परचिन्तने" वैज०। "तन्त्रावापविदा योगैर्मण्डलान्यधितिष्ठता" माघ० २-८८। 10. ಸೈನ್ಯ. 11. ಯಕ್ಷಿಣಿ, ಇಂದ್ರಜಾಲ. 12. ಶಪಥ, ಪ್ರತಿಜ್ಞೆ. 13. ಗೃಹ, ಮನೆ. 14. ಔಷಧ. 15. ಪರಿಜನ, ಪರಿವಾರ. 16. ಧನ, ಸಂಪತ್ತು. 17. ಇತಿ ಕರ್ತವ್ಯತೆ, ಹೀಗೆಯೇ ಮಾಡಬೇಕೆನ್ನುವುದು. 18. ತಂತು. 19. ಮಗ್ಗ, ನೇಯಿಗೆಯ ಸಾಧನ. "एवं स्तुवन्नपि नागान्यदा ते कुण्डले नालभत्तदाऽपश्यत् स्त्रियौ तन्त्रे अधिरोप्य सुवेमे पटं वयन्त्यौ" भा० आदि० ३-१४४। 20. ತಂತುವಾಯ, ನೇಯಿಗೆಯವನು. "तन्त्रं कुटुम्बकृत्ये स्यात् सिद्धान्ते चौषधोत्तमे। प्रधाने तन्तुवाये च" मेदि०। 21. ವ್ಯವಹಾರ. "श्रुत्वा त्वं प्रतिपद्यस्व प्राज्ञैः सह पुरोहितैः। आपद्धर्मार्थकुशलैर्लोकतन्त्रमवेक्ष्य च" भा० वन०। 22. ಕುಲ, ವಂಶ. 23. ಗ್ರಂಥಭಾಗ, ಅಧ್ಯಾಯ, ಸರ್ಗ ಮೊದಲಾದುದು. 24. ಉಪಾಯ. 25. ಸಂತೋಷ. 26. ರಾಶಿ, ಸಮೂಹ, ಗುಂಪು. 27. ಅಂತ್ರ, ಕರುಳು. 28. ಯಾಗದಲ್ಲಿ ನಡೆಸುವ ಪ್ರಯೋಗ. "तन्त्रं स्वराष्ट्रव्यापारे तन्तुवाने परिच्छदे। शास्त्रौषधान्त्रमुख्येषु प्रयोगेऽध्वरकर्मणाम्। एकस्यैवोभयार्थत्वे कुटुम्बव्यापृतावपि" वैज०।

**तन्त्रक ತಂತ್ರಕ** (ನಂ) ನೂತನ ವಸ್ತ್ರ, ಹೊಸದಾಗಿ ತಯಾರಿಸಲ್ಪಟ್ಟ ಬಟ್ಟೆ, ಉಪಯೋಗಿಸದಿರುವ ಒಗೆಯದಿರುವ ಮತ್ತು ಹರಿಯದಿರುವ ಬಟ್ಟೆ. तन्त्रादचिरापहृतम् "कन्" (५-२-७०)।

**तन्त्रकार ತಂತ್ರಕಾರ** (ಪುಂ) ಅರ್ಥಶಾಸ್ತ್ರಕಾರ, ಅರ್ಥಶಾಸ್ತ್ರವನ್ನು ರಚಿಸಿದವನು. "तेन ह्यवितथं तन्त्रकारवचनम्" माल० १।

**तन्त्रकाष्ठ ತಂತ್ರಕಾಷ್ಠ** (ನಂ) ಮಗ್ಗದ ದಾರವನ್ನು ಶುದ್ಧಮಾಡಲು ಉಪಯೋಗಿಸುವ ದಂಡ. तन्त्रस्थं काष्ठम्।

**तन्त्रता ತಂತ್ರತಾ** (ಸ್ತ್ರೀ०) ಅನೇಕ ಪ್ರಯೋಜನಗಳ ಉದ್ದೇಶದಿಂದ ಮಾಡುವ ಒಂದು ಪ್ರಯತ್ನ. तन्त्रस्य भावः "तल्" (५-१-११९)।

**तन्त्रवाप ತಂತ್ರವಾಪ** (पुं०) 1. ಕುವಿಂದ, ನೇಯಿಗೆಯವನು. 2. ಜೇಡನ ಹುಳ.

**तन्त्रवाय ತಂತ್ರವಾಯ** (पुं०) 1. ನೇಯಿಗೆಯವನು. 2. ಜೇಡನ ಹುಳ. तन्त्रं तन्तुं वयति—वेञ् (तन्तुसन्ताने) "अण्" (३-२-१)।

**तन्त्रा ತಂತ್ರಾ** (स्त्री०) 1. ತೂಕಡಿಕೆ. 2. ಸೋಮಾರಿತನ. 3. ಆಯಾಸ, ಬಳಲಿಕೆ, ದಣಿವು.

**तन्त्रि ತಂತ್ರಿ** (स्त्री०) 1. ತಂತಿ. 2. ಸೋಮಾರಿತನ.

**तन्त्रिका ತಂತ್ರಿಕಾ** (स्त्री०) ಅಮೃತಬಳ್ಳಿ. तन्त्रयते आयुः "ण्वुल्" (३-१-१३३)।

**तन्त्रित ತಂತ್ರಿತ** (वि०) 1. ಆಲಸ್ಯದಿಂದ ಕೂಡಿದ, ಸೋಮಾರಿತನವುಳ್ಳ. तन्त्रा जाताऽस्य "इतच्" (५-२-३६)। 2. ಆಯಾಸವುಳ್ಳ.

**तन्त्रिन् ತಂತ್ರಿನ್** (वि०) 1. ತಂತಿಯಿಂದ ಕೂಡಿದ. 2. ದಾರದಿಂದ ತಯಾರಿಸಲ್ಪಟ್ಟ. 3. ಉಪಾಯದಿಂದ ಕೂಡಿದ. 4. ತೂಕಡಿಕೆಯುಳ್ಳ.

**तन्त्री ತಂತ್ರೀ** (स्त्री०) 1. ವೀಣೆ ಮೊದಲಾದ ವಾದ್ಯಗಳ ತಂತಿ. 2. ಅಮೃತಬಳ್ಳಿ. 3. ನಾಡಿ, ರಕ್ತನಾಳ. तन्त्रि (कुटुम्बधारणे) "ईः" (उ० ३-१५८)। 4. ವೀಣೆ. "पादबद्धोऽक्षरसमस्तन्त्रीलयसमन्वितः। शोकार्तस्य प्रवृत्तो मे श्लोको भवतु नान्यथा" रामा०।

**तन्द्रा ತಂದ್ರಾ** (स्त्री०) 1. ಆಯಾಸ, ಬಳಲಿಕೆ, ದಣಿವು. तद् द्राति — द्रा (कुत्सायां गतौ) तदो नान्तत्वं निपा० (३-२-१५८)। 2. ಆಯಾಸದಿಂದ ಉಂಟಾಗುವ ತೂಕಡಿಕೆ, ಬಳಲಿಕೆಯಿಂದ ಬರುವ ನಿದ್ರೆ. 3. ಸೋಮಾರಿತನ. "विषयेन्द्रियसंरोधस्तन्द्रालस्यविवर्जनम्" याज्ञ० ३-१५८।

**तन्द्रालु ತಂದ್ರಾಲು** (वि०) 1. ಸೋಮಾರಿ, ಆಲಸ್ಯದಿಂದ ಕೂಡಿದವನು. 2. ಆಯಾಸದಿಂದ ಕೂಡಿದವನು, ಬಳಲಿದವನು. तन्द्रा "आलुच्" (३-२-१५८)। 3. ನಿದ್ರೆಯ ಸ್ವಭಾವದವನು, ತೂಕಡಿಕೆಯುಳ್ಳವನು.

**तन्द्रि ತಂದ್ರಿ** (स्त्री०) 1. ತೂಕಡಿಕೆ, ನಿದ್ರೆ. 2. ಆಯಾಸ, ಬಳಲಿಕೆ. 3. ಸೋಮಾರಿತನ, ಆಲಸ್ಯ. तद् + द्रा (कुत्सायां गतौ) निपा० (३-२-१५८)। तन्द्रा+तत्करोति "णिच्" (ग० २०४)। "इः" (उ० ४-१३९)। वा "ङीष्" (ग० ४-१-४५)। **तन्द्री ತಂದ್ರೀ.** "विभज्य नक्तंदिवमस्ततन्द्रिणा वितन्यते तेन नयेन पौरुषम्" किरा० १-९।

**तन्द्रित ತಂದ್ರಿತ** (वि०) "तन्त्रित" ಪದದ ಅರ್ಥ. तन्द्रा जाताऽस्य "इतच्" (५-२-३६)। "अतन्द्रिता सा स्वयमेव वृक्षकान् घटस्तनप्रस्रवणैर्व्यवर्धयत्" कुमा० ५-१४।

**तन्द्रिन् ತಂದ್ರಿನ್** (वि०) 1. ಸೋಮಾರಿ, ಮೈಗಳ್ಳ. तन्द्राऽस्यास्ति "इनिः" (५-२-११६)। 2. ಆಲಸ್ಯದಿಂದ ಕೂಡಿದ, ಬಳಲಿದ. 3. ತೂಕಡಿಕೆಯುಳ್ಳ.

**तन्मय ತನ್ಮಯ** (वि०) ತತ್‌ಸ್ವರೂಪವುಳ್ಳ. तद् "मयट्" (४-३-१४३)। "तल्" (५-१-११९)। **तन्मयता ತನ್ಮಯತಾ.** "त्वः" (५-१-११९)। **तन्मयत्वम् ತನ್ಮಯತ್ವಮ್.** ತಾದಾತ್ಮ್ಯ, ಅದರ ಸ್ವರೂಪವನ್ನು ತಾಳುವಿಕೆ. "पादन्यासो लयमुपगतस्तन्मयत्वं रसेषु" माल० २-८।

**तन्मात्र ತನ್ಮಾತ್ರ** (न०) 1. ಅದು ಮಾತ್ರ. सा मात्रा यस्य। 2. ಪಂಚಭೂತಗಳ ಅವ್ಯವಹಿತ ಸೂಕ್ಷ್ಮಾವಸ್ಥೆಯೊಡನೆ ಕೂಡಿದ ದ್ರವ್ಯ, ಉತ್ಕಟಾವಸ್ಥೆಯನ್ನು ಹೊಂದದ ಸೂಕ್ಷ್ಮವಾದ ರೂಪಾದಿಗುಣಗಳಿಗೆ ಆಶ್ರಯವಾದ ದ್ರವ್ಯ; ದಧಿರೂಪವಾಗಿ ಪರಿಣಮಿಸುವುದಕ್ಕೆ ಆರಂಭಿಸಿರುವ ಕ್ಷೀರಕ್ಕೆ ಕ್ಷೀರತ್ವಾವಸ್ಥೆ ದಧಿತ್ವಾವಸ್ಥೆ ಈ ಎರಡು ಅವಸ್ಥೆಗಳ ಮಧ್ಯಕಾಲದ ಅವಸ್ಥೆ (ಕ್ಷೀರತ್ವಾವಸ್ಥೆಯ ಅವಸಾನ ದಧಿತ್ವಾವಸ್ಥೆಯ ಆರಂಭ ಈ ಅವಸ್ಥೆ) ಯಂತೆ ತಾಮಸಾಹಂಕಾರಕ್ಕೆ ಅಹಂಕಾರತ್ವಾವಸ್ಥೆ ಭೂತತ್ವಾವಸ್ಥೆ ಇವುಗಳ ಮಧ್ಯಕಾಲದ ಅವಸ್ಥೆಯು ತನ್ಮಾತ್ರೆಯೆನಿಸುವುದು. ಅದರ ಸಂಬಂಧದಿಂದ ಅಂತಹ ಅವಸ್ಥೆಯೊಡನೆ ಕೂಡಿದ ದ್ರವ್ಯವೂ ತನ್ಮಾತ್ರೆಯೆನಿಸಿಕೊಳ್ಳುವುದು. ಅಂತಹ ದ್ರವ್ಯವೇ ಪಂಚಭೂತಗಳಿಗೆ ಉಪಾದಾನಕಾರಣವಾಗಿರುವುದು. ಈ ತನ್ಮಾತ್ರಗಳು ರೂಪ, ರಸ, ಗಂಧ, ಸ್ಪರ್ಶ ಮತ್ತು ಶಬ್ದಗಳೆಂದು ಐದು ಬಗೆ.

(1) ಉತ್ಕಟಾವಸ್ಥೆಯನ್ನು ಹೊಂದದ ರೂಪಗುಣವುಳ್ಳ ಮತ್ತು ರಸಶೂನ್ಯವಾದ ದ್ರವ್ಯವು **ರೂಪತನ್ಮಾತ್ರೆ.**

(2) ಉತ್ಕಟಾವಸ್ಥೆಯನ್ನು ಹೊಂದದ ರಸಗುಣವುಳ್ಳ ಮತ್ತು ಗಂಧಶೂನ್ಯವಾದ ದ್ರವ್ಯವು **ರಸತನ್ಮಾತ್ರೆ.**

(3) ಉತ್ಕಟಾವಸ್ಥೆಯನ್ನು ಹೊಂದದ ಗಂಧಗುಣವುಳ್ಳ ದ್ರವ್ಯವು **ಗಂಧತನ್ಮಾತ್ರೆ.**

(4) ಉತ್ಕಟಾವಸ್ಥೆಯನ್ನು ಹೊಂದದ ಸ್ಪರ್ಶಗುಣವುಳ್ಳ ರೂಪಶೂನ್ಯವಾದ ದ್ರವ್ಯವು **ಸ್ಪರ್ಶತನ್ಮಾತ್ರೆ.**

(5) ಉತ್ಕಟಾವಸ್ಥೆಯನ್ನು ಹೊಂದದ ಶಬ್ದಗುಣವುಳ್ಳ ಸ್ಪರ್ಶಶೂನ್ಯವಾದ ದ್ರವ್ಯವು **ಶಬ್ದತನ್ಮಾತ್ರೆ.**

**ಪಂಚ ಭೂತಗಳಿಗೂ ಉಪಾದಾನ ಕಾರಣ ವಾದ ದ್ರವ್ಯಗಳು:**

ಗಂಧತನ್ಮಾತ್ರೆಯು　ಪೃಥಿವಿಗೆ　ಉಪಾದಾನ ಕಾರಣ
ರಸತನ್ಮಾತ್ರೆಯು　ಜಲಕ್ಕೆ　"
ರೂಪತನ್ಮಾತ್ರೆಯು　ಅಗ್ನಿಗೆ　"
ಸ್ಪರ್ಶತನ್ಮಾತ್ರೆಯು　ವಾಯುವಿಗೆ　"
ಶಬ್ದತನ್ಮಾತ್ರೆಯು　ಆಕಾಶಕ್ಕೆ　"

**ಸಾಂಖ್ಯರ ಮತ:** ಪಂಚತನ್ಮಾತ್ರೆಗಳೂ ತಾಮಸಾಹಂಕಾರದಿಂದಲೇ ಸಾಕ್ಷಾತ್ತಾಗಿ ಹುಟ್ಟುವುವು. ಶಬ್ದ ತನ್ಮಾತ್ರೆಯು ಇತರ ಸಹಾಯವಿಲ್ಲದೆ ಆಕಾಶವನ್ನು ಉಂಟುಮಾಡುವುದು. ಸ್ಪರ್ಶ ಮೊದಲಾದ ಉಳಿದ ನಾಲ್ಕು ತನ್ಮಾತ್ರೆಗಳೂ ಪೂರ್ವ ಪೂರ್ವ ತನ್ಮಾತ್ರೆಗಳ ಸಹಾಯ್ಯ ಪಡೆದು ಮುಂದು ಮುಂದಿನ ವಾಯು ಮೊದಲಾದ ಭೂತ ಗಳನ್ನು ಸೃಷ್ಟಿಸುವುವು ಎಂದು ಸಾಂಖ್ಯರು ಅಭಿಪ್ರಾಯ ಪಡುವರು. ಆದರೆ ಇದು ಶ್ರೀ ಪಾಂಚರಾತ್ರಾದಿ ವಚನ ಗಳಿಗೆ ವಿರೋಧವಾಗಿರುವುದು. "शब्दतन्मात्रमभवत्तच्चाकाशमजीजनत्। स्पर्शमात्रं तथाकाशात्तस्माद्वायुरजायत। रूपमात्रमभूद्वायोस्तस्मादग्निरजायत। रसमात्रं तु जज्ञेऽग्नेस्तस्मादाप: प्रजज्ञिरे। गन्धतन्मात्रमद्भ्योऽपि गन्धमात्रात्तथा मही" पाञ्चरा०।

**तन्वत् ತನ್ವತ್** (वि०) 1. ವಿಸ್ತರಿಸುತ್ತಿರುವ. 2. ಹೆಚ್ಚಿಸುತ್ತಿರುವ. तनु (विस्तारे) "शतृ" (३-२-१२४)। 3. ಮಾಡುತ್ತಿರುವ. "मानभङ्गपटुना सुरतेच्छां तन्वता ग्रथयता दृशि रागम्" माघ० १०-२५। 4. ಬೆಳೆಸುತ್ತಿರುವ. स्त्रियाम् "ङीप्" (३-२-१२४)। **-ती-ತೀ.**

**तन्वी ತನ್ವೀ** (स्त्री०) ಕೃಶವಾದ ದೇಹವುಳ್ಳ ಹೆಂಗಸು, ತೆಳ್ಳನೆಯ ಹೆಂಗಸು. तनु वा "ङीप्" (४-१-४४)। पक्षे **तनु: ತನುಃ.** "अप्रभूतमतनीयसि तन्वी काञ्चिधाम्नि पिहितैकतरोरु" माघ० १०-८३।

**तप – सन्तापे** (भ्वा० पर० सक०/अक० अनि०)। तपति तपत: तपन्ति। तताप। तप्ता। तप्स्यति। तपतु। अतपत्। तपेत्। तप्यात्। अताप्सीत्। अतप्स्यत्। सक०-1. ತಾಪವುಂಟುಮಾಡು, ಸಂತಾಪವುಂಟುಮಾಡು, ಹಚ್ಚು ಕಾವುಂಟುಮಾಡು, ತಡೆಯಲಾಗದಷ್ಟು ಬಿಸಿ ಯುಂಟುಮಾಡು, ಸುಡು. "तपति तनुगात्रि मदनस्त्वामनिशं मां पुनर्दहत्येव" शाकु० ३-१४। "यदताप्सीच्छनैर्भानुर्यत्रावासीन्मितं मरुत्" भट्टि० ९-२। 2. ನಿಯಮದಿಂದ ದೇಹವನ್ನು ದಂಡಿಸು, ನಿಯಮದಿಂದ ವ್ರತವನ್ನು ಆಚರಿಸು, ಪರಮಾತ್ಮನ ಧ್ಯಾನವನ್ನು ಮಾಡು, ತಪಸ್ಸನ್ನು ಆಚರಿಸು. "अगणिततनूतापस्तप्त्वा तपांसि भगीरथ:" उ० रा० १-२३। 3. ನೋಯಿಸು, ವೇದನೆ ಯುಂಟುಮಾಡು. "यास्यन् सुतस्तप्स्यति मां समन्युम्" भट्टि० १-२३। अक०—4. ಪ್ರಕಾಶಿಸು. "मयूखैरश्रान्तं तपति यदि देवो दिनकर:" उ० रा० ६-१४।

**कर्मणि:**—तप्यते। तेपे। तप्ता। तप्स್यते। तप्यताम्। ಇತ್ಯಾದಿ.

**भावे:**—(ಅನುತಾಪಾರ್ಥದಲ್ಲಿ) अनुतप्यते। अनुतप्यते पापेन पुंसा। तप्यते। तप्यते तपस्तापस:। ಇತ್ಯಾದಿ.

**णिचि:**—तापयति, -ते। तापयां चकार, -चक्रे, -बभूव, -आस। तापयिता। तापयिष्यति, -ते। तापयतु, -ताम्। ಇತ್ಯಾದಿ.

**कृत्सु:**—तप्तव्यम्। तपनीयम्। तप्यम्। तप्त:। तप्तवान्, -वती। तपन्, -न्ती। तप्तम्। तपनम्। तप्तुम्। तप्त्वा। प्रतप्य।

**ण्यन्तात् कृत्सु:**—तापयितव्य:। तापनीय:। ताप्य:। तापित:। तापितवान्, -वती। तापयन्, -न्ती। तापयमान:। तापयितुम्। तापितम्। तापनम्। तापयित्वा। प्रताप्य। "रक्षोभिस्तापितास्तेऽपि सिद्धिं ध्यायन्ति तेऽधुना" भट्टि० ८-१३।

**तप – ऐश्वर्ये** (वा दिवा० आत्म० सक० अनि०)। तप्यते। तेपे। तप्ता। तप्स्यते। तप्यताम्। अतप्यत। ಇತ್ಯಾದಿ. ತಪಸ್ಸುಮಾಡು, ದೇಹವನ್ನು ನಿಯಮದಿಂದ ದಂಡಿಸಿ ಧ್ಯಾನಮಾಡು. "शम्बूको नाम वृषल: पृथिव्यां तप्यते तप:" उ० रा० २-८। पक्षे भ्वा०। तपति। तताप। ಇತ್ಯಾದಿ.

**तप – दाहे** (वा० चुरा० उभ० सक० अनि०)। तापयति, -ते। अतीतपत्, -त। पक्षे भ्वा०। तपति। तताप। तप्ता। तप्स्यति। तपतु। ಇತ್ಯಾದಿ. ದಹಿಸು, ಸುಡು. ಅಕರ್ಮಕ तप ಧಾತುವು उत् ಮತ್ತು वि ಉಪಸರ್ಗ ಯೋಗದಿಂದ ಆತ್ಮನೇಪದಿಯಾಗುವುದು. "उद्विभ्यां तप:" (१-३-२७)। उत्तपते। वितपते। दीप्यते इत्यर्थ:। "रविर्वितपतेऽत्यर्थमाश्वस्य मयि गम्यताम्"। "तीव्रमुत्तपमानोऽयमशक्य: सोढुमातप:" भट्टि० ८-१४, १५।

**तप ತಪ** (पुं०) 1. ಗ್ರೀಷ್ಮರ್ತು, ಜ್ಯೇಷ್ಠ ಮತ್ತು ಆಷಾಢ ಮಾಸಗಳಿಂದ ಕೂಡಿದ ಋತು. तपति—तप (सन्तापे)

"अच्" (३-१-१३४)। "तपेन वर्षाः शरदा हिमागमो वसन्तलक्ष्म्या शिशिरः समेत्य च" माघ० १-६६। 2. ಸೂರ್ಯ. (ಕರ್ಮಪದವು ಉಪಪದವಾದಾಗ) (वि०) 3. ತಾಪವುಂಟುಮಾಡುವ. द्विषन्तं तापयति — तप + णिच् "खच्" (३-२-३९)। ह्रस्वः (६-४-९४)। द्विषन्तपः।

**तपःक्लेशसह ತಪಃಕ್ಲೇಶಸಹ** (पुं०) ಇಂದ್ರಿಯನಿಗ್ರಹವುಳ್ಳ ತಪಸ್ವಿ, ಜಿತೇಂದ್ರಿಯನಾದ ಮುನಿ, ತಪಸ್ಸಿನ ಕಷ್ಟವನ್ನು ಸಹಿಸುವ ಮುನಿ. तपसः क्लेशः तं सहते—षह (मर्षणे) "अच्" (३-१-१३४)।

**तपत् ತಪತ್** (वि०) ತಪಿಸುತ್ತಿರುವ, ಸುಡುತ್ತಿರುವ. तप (सन्तापे) "शतृ" (३-२-१२४)। "पश्यामि त्वां दीप्तहुताशवक्त्रं स्वतेजसा विश्वमिदं तपन्तम्" गीता ११-१९। स्त्रियाम् "ङीप्" (४-१-६)। **—न्ती —ನ್ತೀ.**

**तपती ತಪತೀ** (स्त्री०) 1. ತಪತೀನದಿ. 2. ಸೂರ್ಯನ ಮಗಳು, ಸಂವರಣರಾಜನ ಪತ್ನಿ, ಕುರುರಾಜನ ತಾಯಿ. "संवरणस्तु वैवस्वतीं तपतीं नामोपयेमे। तस्यामस्य जज्ञे कुरुः" भा० आदि० ६३-४१। 3. ಛಾಯಾದೇವಿ, ಸೂರ್ಯನ ಪತ್ನಿ, ಶನಿದೇವನ ತಾಯಿ. "छाया स्यात्तपती मन्दजननी भूमयी वरी" त्रिकाण्ड०।

**तपन ತಪನ** (पुं०) 1. ಸೂರ್ಯ. तपति—तप (सन्तापे) "ल्युः" (३-१-१३४)। "पञ्चमः पञ्चतपसस्तपनो जातवेदसाम्" माघ० २-५१। 2. ಒಂದು ನರಕ. "सञ्जीवनं महावीचिं तपनं संप्रतापनम्" मनु० ४-८९। 3. ಅಗಸ್ತ್ಯ ಮಹರ್ಷಿ. "अगस्त्यः कलशीपुत्रस्तपनः पीतसागरः" वैज०। 4. ಗ್ರೀಷ್ಮರ್ತು, ಬೇಸಗೆ ಕಾಲ. "तपनो भास्करे ग्रीष्मे" वैज०। 5. ಸೂರ್ಯಕಾಂತ ಶಿಲೆ. 6. ಎಕ್ಕದ ಗಿಡ. 7. ಗೇರುಮರ. 8. ಕಿರುನೆಲ್ಲಿ ಗಿಡ. 9. ಪರಶಿವ, ಪರಮೇಶ್ವರ. "यज्ञवाहाय दान्ताय तप्याय तपनाय च" भा० शान्ति० २९०-१०७। 10. ಸ್ತ್ರೀಯರ ಯೌವನ ಕಾಲದ ಇಪ್ಪತ್ತೆಂಟು ವಿಧ ಅಲಂಕಾರಗಳಲ್ಲಿ ಒಂದು. "विहृतं तपनं मौग्ध्यं विक्षेपश्च कुतूहलम्" सा० द० ३-९२। (न०) 11. ತಾಪ, ಬಿಸಿ, ಕಾವು. तप भावे "ल्युट्" (३-३-११५)। 12. ಯಾತನೆ, ನೋವು. (वि०)13. ದಹಿಸುವ, ಸುಡುವ. 14. ತಾಪವುಂಟುಮಾಡುವ. 15. ನೋವುಂಟುಮಾಡುವ. 16. ಶಾಖವುಂಟುಮಾಡುವ.

**तपनतनय ತಪನತನಯ** (पुं०) 1. ಕರ್ಣ. 2. ಸುಗ್ರೀವ. 3. ಯಮಧರ್ಮರಾಯ. 4. ಶನಿದೇವ, ಶನೈಶ್ಚರ. तपनस्य तनयः। एवं **—सुतः —ಸುತಃ, —सूनुः —ಸೂನುಃ.** (स्त्री०) **—तनया —ತನಯಾ.** 5. ಯಮುನಾ ನದಿ. 6. ಗೋದಾವರೀ ನದಿ.

**तपनात्मज ತಪನಾತ್ಮಜ** (पुं०) 1. ಕರ್ಣ. 2. ಯಮಧರ್ಮರಾಯ. 3. ಸುಗ್ರೀವ. 4. ಶನಿದೇವ, ಶನೈಶ್ಚರ. तपनस्यात्मजः। (स्त्री०) **—आत्मजा —ಆತ್ಮಜಾ.** 5. ಯಮುನಾ ನದಿ. 6. ಗೋದಾವರೀ ನದಿ.

**तपनी ತಪನೀ** (स्त्री०) ಗೋದಾವರೀ ನದಿ.

**तपनीय ತಪನೀಯ** (न०) 1. ಸುವರ್ಣ, ಚಿನ್ನ. तप्यतेऽनेन —तप (सन्तापे) "अनीयर्" (३-३-११३)। "तस्मादधः किञ्चिदिवावतीर्णावसंस्पृशन्तौ तपनीयपीठम्" रघु० १८-४१। 2. ದತ್ತೂರಿಗಿಡ. (वि०) 3. ಶಾಖವಾಗಿ ಮಾಡಲ್ಪಡುವ, ಕಾಯಿಸಲ್ಪಡುವ, ಬಿಸಿಮಾಡಲ್ಪಡುವ. 4. ಕಾಯಿಸಬೇಕಾದ, ಬಿಸಿಮಾಡಬೇಕಾದ. तप कर्मादौ "अनीयर्" (३-१-९६)।

**तपनीयक ತಪನೀಯಕ** (न०) ಸುವರ್ಣ, ಚಿನ್ನ.

**तपनेष्ट ತಪನೇಷ್ಟ** (न०) ತಾಮ್ರಲೋಹ. ಇದು ಸೂರ್ಯನಿಗೆ ಪ್ರಿಯವಾದ ಲೋಹ.

**तपस् ತಪಸ್** (पुं०) 1. ಮಾಘಮಾಸ. तपन्त्यस्मिन्—तप (सन्तापे) "असुन्" (उ० ४-१८९)। "तपसि मन्दगभस्तिरभीषुमान्न हि महाहिमहानिकरोऽभवत्" माघ० ६-६३। 2. ಶಿಶಿರಋತು. 3. ಅಗ್ನಿ. "पञ्चमः पञ्चतपसस्तपनो जातवेदसाम्" माघ० २-५१। 4. ಗ್ರೀಷ್ಮಋತು, ಬೇಸಗೆ ಕಾಲ. 5. ತಪೋಲೋಕ, ಜನೋಲೋಕಕ್ಕೆ ಮೇಲಿನ ಲೋಕ, ಸಪ್ತ ಊರ್ಧ್ವಲೋಕಗಳಲ್ಲೊಂದು ಲೋಕ. "ग्रीवायां जनलोकश्च तपोलोकः स्तनद्वयात्" भाग० २-५-३९। 6. ಯಮಧರ್ಮರಾಯ. "विनाप्यस्मदलंभूष्णुरिज्यायै तपसः सुतः" माघ० २-९। 7. ಜಾತಕದಲ್ಲಿ ಲಗ್ನದಿಂದ ಒಂಭತ್ತನೆಯ ಸ್ಥಾನ, ಧರ್ಮಸ್ಥಾನ. (न०) 8. ತಪಸ್ಸು, ಪರಮಾತ್ಮನನ್ನು ಕುರಿತ ಧ್ಯಾನ. "निशम्य चैनां तपसे कृतोद्यमां सुतां गिरीशप्रतिसक्तमानसाम्" कुमा० ५-३। 9. ವಾನಪ್ರಸ್ಥಾಶ್ರಮದ ಅಸಾಧಾರಣವಾದ ಧರ್ಮ. ಋಷಿಗಳು ಶರೀರವಾಙ್ಮನೋನಿಯಮಗಳಿಂದ ಕೂಡಿ ಫಲಮೂಲಾಶನರಾಗಿ ತಪಸ್ಸನ್ನು ಚರಿಸಿ ಚರಾಚರಾತ್ಮಕವಾದ ಮೂರು ಲೋಕಗಳನ್ನೂ ಇದ್ದಲ್ಲಿಯೇ ನೋಡಲು ಶಕ್ತರಾಗುವರು. "ऋषयः

संयतात्मानः फलमूलानिलाशनाः। तपसैव प्रपश्यन्ति त्रैलोक्यं सचराचरम्" मनु० ११-२३६। ಈ ತಪಸ್ಸು ಶಾರೀರ ವಾಙ್ಮಯ ಮತ್ತು ಮಾನಸಗಳೆಂದು ಮೂರು ವಿಧ.

(1) ದೇವತೆಗಳು ಬ್ರಾಹ್ಮಣರು ಗುರುಗಳು ಜ್ಞಾನಿಗಳು ಇವರ ಪೂಜೆ, ಶೌಚ, ಪ್ರಾಮಾಣಿಕತೆ, ಬ್ರಹ್ಮಚರ್ಯ, ಅಹಿಂಸೆ ಇವೆಲ್ಲವೂ **"ಶಾರೀರ ತಪಸ್ಸು"**. "देवद्विजगुरुप्राज्ञपूजनं शौचमार्जवम्। ब्रह्मचर्यमहिंसा च शारीरं तप उच्यते" गीता १७-१४।

(2) ಮನಸ್ಸಿಗೆ ಉದ್ವೇಜಕವಲ್ಲದ, ಸತ್ಯವಾಗಿ ಪ್ರಿಯವಾಗಿ ಮತ್ತು ಹಿತವಾಗಿ ಆಡುವ ಮಾತು, ವೇದಾಭ್ಯಾಸ, ಜಪ ಇವೆಲ್ಲವೂ **"ವಾಙ್ಮಯ ತಪಸ್ಸು"**. "अनुद्वेगकरं वाक्यं सत्यं प्रियहितं च यत्। स्वाध्यायाभ्यसनं चैव वाङ्मयं तप उच्यते" गीता १७-१५।

(3) ಮನಃಪ್ರಸಾದ, ಕ್ರೋಧಾದಿಗಳಿಗೆ ಅವಕಾಶವಿಲ್ಲದೆ ಮನಸ್ಸು ಸೌಮ್ಯವಾಗಿರುವುದು, ಮೌನ, ಮನೋನಿಗ್ರಹ, ಭಾವಶುದ್ಧಿ (ಆತ್ಮವ್ಯತಿರಿಕ್ತವಾದ ವಿಷಯದಲ್ಲಿ ಯೋಚನೆಯಿಲ್ಲದಿರುವುದು) ಇವೆಲ್ಲವೂ **"ಮಾನಸ ತಪಸ್ಸು"**. "मनःप्रसादः सौम्यत्वं मौनमात्मविनिग्रहः। भावसंशुद्धिरित्येतत्तपो मानसमुच्यते" गीता १७-१६। ಈ ಮೂರು ವಿಧವಾದ ತಪಸ್ಸೂ ಸಾತ್ತ್ವಿಕ ರಾಜಸ ಮತ್ತು ತಾಮಸಗಳೆಂದು ಮತ್ತೆ ಮೂರು ವಿಧ.

(1) ಪರಮಪುರುಷನ ಆರಾಧನೆಯೆಂದು ತಿಳಿದು ಫಲಾಭಿಸಂಧಿಯಿಲ್ಲದೆ ಪರಮಶ್ರದ್ಧೆಯಿಂದ ಆಚರಿಸುವ ತಪಸ್ಸು **"ಸಾತ್ತ್ವಿಕ"**. "श्रद्धया परया तप्तं तपस्तत्त्रिविधं नरैः। अफलाकाङ्क्षिभिर्युक्तैः सात्त्विकं परिचक्षते" गीता १७-१७।

(2) ಸತ್ಕಾರ (ಆದರ), ವಾಕ್ಪ್ರಶಂಸೆ (ಹೊಗಳಿಕೆ), ನಮಸ್ಕಾರ (ಗೌರವ) ಇವುಗಳನ್ನು ಇತರರಿಂದ ಅಪೇಕ್ಷಿಸಿ ಡಂಭದಿಂದ ಮಾಡುವ ತಪಸ್ಸು **"ರಾಜಸ"**. ಇಂತಹ ತಪಸ್ಸಿನಿಂದ ಲಭ್ಯವಾಗುವ ಸ್ವರ್ಗಾದಿಗಳು ಅಸ್ಥಿರ ಮತ್ತು ಕ್ಷೀಣವಾಗುವುದರಿಂದ ಅಧ್ರುವ. "सत्कारमानपूजार्थं तपो दम्भेन चैव यत्। क्रियते तदिह प्रोक्तं राजसं चलमध्रुवम्" गीता १७-१८।

(3) ಅವಿವೇಕದಿಂದ ತನ್ನ ಶಕ್ತಿ ಸಾಮರ್ಥ್ಯಗಳನ್ನು ಲೆಕ್ಕಿಸದೆ ತನಗೇ ತೊಂದರೆಯನ್ನುಂಟುಮಾಡುವ ಮತ್ತು ಇತರರ ನಾಶಕ್ಕಾಗಿ ಮಾಡುವ ತಪಸ್ಸು **"ತಾಮಸ"**. "मूढग्राहेणात्मनो यत्पीडया क्रियते तपः। परस्योत्सादनार्थं वा तत्तामसमुदाहृतम्" गीता १७-१९।

10. ಚಾಂದ್ರಾಯಣ ವ್ರತ. 11. ಶಾಸ್ತ್ರೋಕ್ತ ರೀತಿಯಲ್ಲಿ ದೇಹವನ್ನು ದಂಡಿಸುವುದು, ಕ್ಷುತ್ತು ತೃಷ್ಣೆ ಶೀತ ಉಷ್ಣ ಇವುಗಳನ್ನು ಸಹಿಸುವುದು. 12. ಚಿತ್ತಶುದ್ಧಿಗಾಗಿ ವ್ರತೋಪವಾಸಾದಿಗಳ ಅನುಷ್ಠಾನ. 13. ಮೌನವ್ರತ. "तपः कृच्छ्रादिकर्मणि। धर्मे लोकप्रभेदे च तपाः शिशिरमाघयोः" हेम०। "तपो लोकान्तरेऽपि च। चान्द्रायणादौ धर्मे च पुमान् शिशिरमाघयोः" मेदि०।

**तपस ತಪಸ** (पुं०) 1. ಸೂರ್ಯ. 2. ಚಂದ್ರ. 3. ಪಕ್ಷಿ. तप (सन्तापे) "असच्" (उ० ३-१०७)। "तपसः पक्षी चन्द्रश्च" सि० कौ०। "उडुपः पर्वधिः क्लेदुः जयन्तस्तपसो हरिः" त्रिकाण्ड०।

**तपस्तक्ष ತಪಸ್ತಕ್ಷ** (पुं०) ಇಂದ್ರ. तपः तक्षति — तक्षू (तनूकरणे) "अण्" (३-२-१)। ಊರ್ವಶಿ ಮೊದಲಾದ ವೇಶ್ಯೆಯರನ್ನು ಕಳುಹಿಸಿ ತಪಸ್ವಿಗಳ ತಪಸ್ಸನ್ನು ಕೆಡಿಸುವುದರಿಂದ ಇಂದ್ರನಿಗೆ ಈ ಹೆಸರು.

**तपस्तङ्क ತಪಸ್ತಂಕ** (पुं०) ಇಂದ್ರ. "प्राचीपतिस्तपस्तङ्कः" त्रिकाण्ड०।

**तपस्य ತಪಸ್ಯ** (पुं०) 1. ಫಾಲ್ಗುನಮಾಸ. तपसि साधुः "यत्" (४-४-९८)। 2. ತಪಶ್ಚರಣೆ. "अथास्य बुद्धिरभवत्तपस्ये भरतर्षभ" भा० अनु०। 3. ಅರ್ಜುನ. ಅರ್ಜುನನಿಗೆ ಫಾಲ್ಗುನನೆಂದು ಹೆಸರಿರುವುದರಿಂದ ಈ ಹೆಸರು. 3. ತಾಮಸಮನುವಿನ ಒಬ್ಬ ಮಗ. (वि०) 4. ತಪಸ್ಸಿನಲ್ಲಿ ಉಂಟಾದ. तपसि भवः "यत्" (४-३-५३)। (न०) 5. ಕುಂದಪುಷ್ಪ, ಮೊಲ್ಲೆಹೂವು.

**तपस्यत् ತಪಸ್ಯತ್** (वि०) ತಪಸ್ಸನ್ನು ಆಚರಿಸುತ್ತಿರುವ. तपः चरति — तपस् "क्यङ्" (३-१-१५)। "शतृ" (३-२-१२४)। स्त्रियाम् "ङीप्" (४-१-६)। **—न्ती —ನ್ತೀ.** "नायास्यसि तपस्यन्ती गुरून् सम्यगतूतुषः" भट्टि० ६-६९।

**तपस्या ತಪಸ್ಯಾ** (स्त्री०) ತಪಶ್ಚರಣೆ, ತಪಶ್ಚರ್ಯೆ.

**तपस्विन् ತಪಸ್ವಿನ್** (पुं०) 1. ತಾಪಸ, ಋಷಿ, ಮುನಿ. तपोऽस्यास्ति — तपस् "विनिः" (५-२-१०२)। "तपः शरीरैः कठिनैरुपार्जितं तपस्विनां दूरमधश्चकार" कुमा० ५-२९। 2. ಶಿಶಿರಋತು, ಚಳಿಗಾಲ. 3. ಚಂದ್ರ. (वि०) 4. ಶೋಚ್ಯ, ದಯನೀಯ, ದಯೆ ತೋರಿಸಲು ಅರ್ಹನಾದ. 5. ದೀನ, ದರಿದ್ರ, ಬಡವ. 6. ಚಾಂದ್ರಾಯಣಾದಿ ವ್ರತವನ್ನಾಚರಿಸುವ. 7. ಒಳ್ಳೆಯ ತಪಸ್ಸನ್ನಾಚರಿಸುವ. स्त्रियाम् "ङीप्" (४-१-५)। **—नी —ನೀ.**

(स्त्री०) 8. ಜಟಾಮಾಂಸಿ. 9. ಪರಿವ್ರಾಜಿಕೆ, ಸಂನ್ಯಾಸಿನಿ. 10. ಕಟುಕರೋಹಿಣಿ. "तपस्विनी पुनर्मासी कटुरोहिणिकापि च" हेम०। "तपस्वी शिशिरे शोच्ये चन्द्रे मांसि तपस्विनी" वैज०।

**तपात्यय ತಪಾತ್ಯಯ** (पुं०) 1. ವರ್ಷಋತು. तपस्य ग्रीष्मस्य अत्ययोऽवसानं यत्र। "तपात्यये पुष्पधरैरुपेतं महावनं राष्ट्रपतिर्ददर्श" भा० वन० २४-१७। 2. ಗ್ರೀಷ್ಮ ಋತುವಿನ ಕೊನೆಯಕಾಲ. "तपात्यये वारिभिरुक्षिता नवैर्भुवा सहोष्माणममुञ्चदूर्ध्वगम्" कुमा० ५-२३।

**तपान्त ತಪಾಂತ** (पुं०) 1. ಗ್ರೀಷ್ಮಋತುವಿನ ಕೊನೆಯ ಕಾಲ. 2. ವರ್ಷಋತು. तपस्यान्तो यत्र। "ववर्ष शरवर्षाणि तपान्ते जलदो यथा" भा० भीष्म० ५४-२३।

**तपिष्णु ತಪಿಷ್ಣು** (पुं०) 1. ಸೂರ್ಯ. तप (सन्तापे) "इष्णुच्" (३-२-१३८)। (वि०) 2. ತಾಪವುಂಟು ಮಾಡುವ, ಸುಡುವ ಸ್ವಭಾವದ. "महता तपसा देवस्तपिष्णुः सेवितो मया" भा० शान्ति० ३२३-३।

**तपोधन ತಪೋಧನ** (पुं०) 1. ತಪಸ್ವಿ, ಮುನಿ. तपो धनं यस्य। "तनौ ममुस्तत्र न कैटभद्विषस्तपोधनाभ्यागमसंभवा मुदः" माघ० १-२३। (न०) 2. ತಪೋರೂಪವಾದ ಧನ. तप एव धनम्। (वि०) 3. ತಪಸ್ಸಿನಲ್ಲಿ ನಿರತನಾದ. 4. ತಪಸ್ಸಿನಿಂದ ಲಭಿಸುವ ಸ್ವರ್ಗ ಮೊದಲಾದುದು. तपो धनं मूल्यं यस्य।

**तपोधृति ತಪೋಧೃತಿ** (पुं०) 1. ತಪಸ್ಸಿನಲ್ಲಿ ನಿರತನಾದ ಮುನಿ, ತಪಸ್ಸಿನಲ್ಲಿ ಉತ್ಸಾಹವುಳ್ಳ ಋಷಿ. 2. ನಾಲ್ಕನೆಯ ಮನ್ವಂತರದ ಸಪ್ತಋಷಿಗಳಲ್ಲೊಬ್ಬ ಋಷಿ. "भार्गवः सप्तमस्तेषां विक्षेपस्तु तपोधृतिः" हरिवं०।

**तपोनिधि ತಪೋನಿಧಿ** (पुं०) ತಪಸ್ವಿ, ಮುನಿ, ಋಷಿ. तपो निधीयतेऽस्मिन् – नि + डु धाञ् (धारणे) "किः" (३-३-९३)। तपो निधिरिव यस्य वा। "विधेः सायन्तनस्यान्ते स ददर्श तपोनिधिम्" रघु० १-५६।

**तपोनिष्ठ ತಪೋನಿಷ್ಠ** (वि०) ತಪಸ್ಸಿನಲ್ಲಿ ಆಸಕ್ತಿಯುಳ್ಳ. तपसि निष्ठा यस्य। "ज्ञाननिष्ठा द्विजाः केचित्तपोनिष्ठास्तथापरे" मनु० ३-१३४।

**तपोबल ತಪೋಬಲ** (न०) ತಪಃಶಕ್ತಿ, ತಪಸ್ಸಿನಿಂದ ಲಭಿಸಿದ ಬಲ. तपसो बलम्।

**तपोभृत् ತಪೋಭೃತ್** (पुं०) 1. ತಪಸ್ವಿ, ಮುನಿ, ಋಷಿ. तपः बिभर्ति—डु भृञ् (धारणे) "क्विप्" (३-२-७६)। (वि०) 2. ತಪಸ್ಸನ್ನು ಅಭ್ಯಾಸಮಾಡುತ್ತಿರುವ.

**तपोमय ತಪೋಮಯ** (वि०) ತಪಸ್ಸಿನ ಸ್ವರೂಪವಾದ, ತಪಃಪ್ರಚುರವಾದ. तपसः प्रचुरः – तपस् "मयट्" (५-४-२१)।

**तपोमूर्ति ತಪೋಮೂರ್ತಿ** (पुं०) 1. ಪರಮಾತ್ಮ. 2. ತಪಸ್ವಿ.

**तपोमूल ತಪೋಮೂಲ** (वि०) ತಪಸ್ಸೇ ಕಾರಣವಾಗಿ ಉಳ್ಳ, ತಪಸ್ಸಿನಿಂದ ಲಬ್ಧವಾದ. तपो मूलं यस्य। "तपोमूलमिदं सर्वं दैवमानुषकं सुखम्" मनु० ११-२३४।

**तपोयज्ञ ತಪೋಯಜ್ಞ** (वि०) ತಪೋರೂಪವಾದ ಯಜ್ಞವುಳ್ಳ, ಕೃಚ್ಛ್ರಚಾಂದ್ರಾಯಣ ಉಪವಾಸ ಮೊದಲಾದ ತಪಸ್ಸೆಂಬ ಯಜ್ಞದಲ್ಲಿ ಆಸಕ್ತಿಯುಳ್ಳ. तपः शास्त्रीयो भोगसङ्कोचः, स एव यज्ञो यस्य। "द्रव्ययज्ञास्तपोयज्ञा योगयज्ञास्तथापरे" गीता ४-२८।

**तपोयुक्त ತಪೋಯುಕ್ತ, -रत -ರತ** (वि०) ತಪಸ್ಸಿನಲ್ಲಿ ನಿರತನಾದ, ತಪಸ್ಸನ್ನು ಆಚರಿಸುತ್ತಿರುವ.

**तपोलोक ತಪೋಲೋಕ** (पुं०) ಸಪ್ತ ಊರ್ಧ್ವಲೋಕಗಳಲ್ಲೊಂದು, ಜನೋಲೋಕದ ಮೇಲಿರುವ ಒಂದು ಲೋಕ. तपो नाम लोकः। ಈ ಲೋಕವು ಭೂಮಿಯಿಂದ ಮೇಲಕ್ಕೆ ನಾಲ್ಕು ಕೋಟಿ ಯೋಜನದಲ್ಲಿರುವುದು. "चतुःकोटिप्रमाणं तु तपोलोकोऽस्ति भूतलात्" काशीख०।

**तपोवट ತಪೋವಟ** (पुं०) ಬ್ರಹ್ಮಾವರ್ತ ದೇಶ. ಈ ದೇಶವು ಮಧ್ಯಭಾರತದಲ್ಲಿರುವುದು. "ब्रह्मावर्तस्तपोवटः" त्रिकाण्ड०।

**तपोवन ತಪೋವನ** (न०) ಮುನಿಗಳು ತಪಸ್ಸನ್ನು ಮಾಡುವ ಅರಣ್ಯ. तपसो वनम्। "नवोटजाभ्यन्तरसंभृतानलं तपोवनं तच्च बभूव पावनम्" कुमा० ५-१७।

**तप्त ತಪ್ತ** (वि०) 1. ಸುಡಲ್ಪಟ್ಟ. "अर्कोपलोल्लसितवह्निभिरह्नि तप्तास्तीव्रं महाव्रतमिवात्र चरन्ति वप्राः" माघ० ४-५८। 2. ಕಾಯಿಸಲ್ಪಟ್ಟ, ಕರಗಿಸಲ್ಪಟ್ಟ. तप (सन्तापे) "क्तः" (३-२-१०२)। "स तप्तकार्तस्वरभास्वराम्बरः कठोरताराधिपलाञ्छनच्छविः" माघ० १-२०। 3. ದುಃಖಿತ, ಸಂಕಟಕ್ಕೊಳಗಾದ.

**तप्तकुम्भ ತಪ್ತಕುಂಭ** (पुं०) ಒಂದು ನರಕ. तप्तः कुम्भो यत्र। ಪಾಪಮಾಡಿದವರನ್ನು ಇಲ್ಲಿ ತೈಲಕುಂಭದಲ್ಲಿ ಇರಿಸಿ ಬೇಯಿಸುವರು.

**तप्तकृच्छ्र ತಪ್ತಕೃಚ್ಛ್ರ** (न०) ಒಂದು ವ್ರತ. ಈ ವ್ರತವನ್ನು ಆಚರಿಸುವವನು ಮೂರು ದಿವಸ ಉಷ್ಣೋದಕ

ಮೂರು ದಿವಸ ಕಾಯಿಸಿದ ಹಾಲು ಮೂರು ದಿವಸ ಕಾಯಿಸಿದ ತುಪ್ಪ ಮೂರು ದಿವಸ ಬಿಸಿಗಾಳಿ (ಕಾಯಿಸಿದ ಹಾಲಿನ ಹಬೆ) ಇವುಗಳನ್ನು ಕುಡಿಯಬೇಕು. ಮತ್ತು ಪ್ರತಿ ದಿನವೂ ಒಂದು ಸಲ ಸ್ನಾನಮಾಡಬೇಕು. "तप्तकृच्छ्रं चरन् विप्रः जलक्षीरघृतानिलान्। प्रतित्र्यहं पिबेदुष्णान् सकृत्स्नायी समाहितः" मनु० ११-२१४।

**तप्तपाषाणकुण्ड ತಪ್ತಪಾಷಾಣಕುಂಡ** (ಪುಂ) ಒಂದು ನರಕ. ಈ ನರಕದಲ್ಲಿ ಕಲ್ಲುಗಳನ್ನು ಕೆಂಪಗೆ ಕಾಯಿಸಿ ತುಂಬಿರುವರು. ಪಾಪಮಾಡಿದವರನ್ನು ಇದರ ಮೇಲೆ ಮಲಗಿಸಿ ಶಿಕ್ಷಿಸುವರು.

**तप्तमुद्रा ತಪ್ತಮುದ್ರಾ** (ಸ್ತ್ರೀಂ) ತಪ್ತಾಂಕನ, ವೈಷ್ಣವರು ದೇಹದ ಮೇಲೆ ಧರಿಸುವ ಶಂಖ ಚಕ್ರಗಳ ಲಾಂಛನ, ತಪ್ತವಾದ ಲೋಹಮಯ ಭಗವದಾಯುಧಗಳ ಚಿಹ್ನೆ. ಇದು ವೈಷ್ಣವರಿಗೆ ಆಗಬೇಕಾದ ಪಂಚ ಸಂಸ್ಕಾರಗಳಲ್ಲೊಂದು. ಲೋಹದಿಂದ ಶಂಖಚಕ್ರಗಳನ್ನು ತಯಾರಿಸಿ ತಪ್ತವಾದ ಅವುಗಳಿಂದ ದೇಹದಲ್ಲಿ ಅಂಕನಮಾಡಿಸಿಕೊಳ್ಳಬೇಕು. "शङ्खचक्राङ्कनं कुर्याद्ब्राह्मणो बाहुमूलयोः। हुताग्निनैव सन्ताप्य सर्वपापापनुत्तये" पाद्मपु०। ತಪ್ತ ಶಂಖ ಚಕ್ರಾಂಕನದಿಂದ ಮೋಕ್ಷಪ್ರಾಪ್ತಿಯಾಗುವುದು. "अग्नितप्तं पवित्रञ्च धृत्वा वै बाहुमूलयोः। त्यक्त्वा यमपुरं घोरं याति विष्णोः परं पदम्॥ अग्नितप्तेन चक्रेण ब्राह्मणो बाहुमूलयोः। अङ्कयित्वा जपन्मन्त्रं संसारान्मोक्षभाग्भवेत्"॥ ಚಕ್ರಾಂಕನವಿಲ್ಲದವನು ಮಾಡುವ ವಿಷ್ಣು ಪೂಜೆಯು ವಿಫಲವಾಗುವುದು. "चक्रचिह्नविहीनस्तु यःपूजयति केशवम्। तत्सर्वं विफलं याति पूजामन्त्रजपादिकम्"। **ಮುದ್ರಾಧಾರಣದ ಫಲ:** "होमाग्नितप्तचक्रं तु ब्राह्मणस्य विधानतः। श्रौतस्मार्तादिसिद्ध्यर्थं ज्ञानसिद्ध्यै विशेषतः॥ हरेः पूजाधिकारार्थं चक्रं धार्यं विधानतः। वैष्णवत्वस्य सिद्ध्यर्थं ज्ञानसिद्ध्यै विशेषतः" विधिना वैष्णवं चक्रं धार्यं तु श्रुतिचोदनात्। दक्षिणे तु भुजे विप्रो बिभृयाद्वै सुदर्शनम्। सव्ये तु शङ्खं बिभृयादिति ब्रह्मविदो विदुः॥ एवं महोपनिषदि प्रोक्तं चक्रादिधारणम्" पाद्मपु०।

**तप्तरहस ತಪ್ತರಹಸ** (ನಂ) ಕಾದಿರುವ ರಹಸ್ಯವಾದ ಪ್ರದೇಶ, ಬಿಸಿಯಾದ (ಕಾವೇರಿದ) ರಹಸ್ಯವಾದ ಜಾಗ. तप्तं रहः — रहस् "अच्" (५-४-८१)।

**तप्तरूप्य ತಪ್ತರೂಪ್ಯ** (ನಂ) ಕಾಯಿಸಿದ ಬೆಳ್ಳಿ, ಪುಟಹಾಕಿ ಶುದ್ಧಮಾಡಿದ ಬೆಳ್ಳಿ. तप्तं रूप्यम् रजतम्।

**तप्तलोह ತಪ್ತಲೋಹ** (ಪುಂ) ಒಂದು ನರಕ. तप्ता लोहा यत्र।

**तप्तवालुक ತಪ್ತವಾಲುಕ** (ಪುಂ) 1. ಒಂದು ನರಕ. तप्ता वालुका यत्र। "क्षुत्तृट्परीतोऽर्कदवानलानिलैः सन्तप्यमानः पथि तप्तवालुके" भाग० ३-३०-२२। (ಪುಂ ಬಂ ವಂ) 2. ಕಾದ ಮರಳು, ಬಿಸಿಯಾದ ಮರಳು. (ವಿಂ) 3. ಬಿಸಿ ಮರಳಿನಿಂದ ಕೂಡಿದ, ಬಿಸಿ ಮರಳಿನಿಂದ ತುಂಬಿದ.

**तप्तशूर्मि ತಪ್ತಶೂರ್ಮಿ** (ಸ್ತ್ರೀಂ) ಕೆಂಡದಂತೆ ಕಾಯಿಸಿದ ಲೋಹದ ಪ್ರತಿಮೆಯುಳ್ಳ ಒಂದು ನರಕ. तप्ता शूर्मिः लोहप्रतिमा यत्र। ಈ ನರಕದಲ್ಲಿ ಅಗಮ್ಯಳಾದ ಹೆಂಗಸನ್ನು ಕಾಮಿಸುವ ಪುರುಷನನ್ನೂ ಅಗಮ್ಯನಾದ ಪುರುಷನನ್ನು ಕಾಮಿಸುವ ಹೆಂಗಸನ್ನೂ ಕೆಂಪಗೆ ಕಾಯಿಸಿದ ಲೋಹ ಪ್ರತಿಮೆಯೊಡನೆ ಆಲಿಂಗನ ಮಾಡಿಸುವರು. "यस्त्विह वा अगम्यां स्त्रियमगम्यं वा पुरुषं योषिदभिगच्छति तावमुत्र कशया ताडयन्तः तिग्मया शूर्म्या लोहमय्या पुरुषमालिङ्गयन्ति स्त्रियं च पुरुषरूपया शूर्म्या" भाग० ५-२६-२०।

**तप्तसुराकुण्ड ತಪ್ತಸುರಾಕುಂಡ** (ಪುಂ) ಕುದಿಯಿಸಿದ ಮದ್ಯದಿಂದ ತುಂಬಿದ ಒಂದು ಹಳ್ಳ, ಒಂದು ನರಕ.

**तप्यमान ತಪ್ಯಮಾನ** (ವಿಂ) ಪೀಡಿಸಲ್ಪಡುತ್ತಿರುವ. तप (सन्तापे) कर्म० "शानच्" (३-२-१२४)। "विदितं तप्यमानं च तेन मे भुवनत्रयम्" रघु० १०-३९।

**तम ತಮ** (ಪುಂ) 1. ರಾಹು. 2. ತಮಾಲವೃಕ್ಷ, ಹೊಂಗೆ ಮರ. 3. ತಮೋಗುಣ. (ನಂ) 4. ಅಂಧಕಾರ. ताम्यत्यनेन — तमु (ग्लानौ) "घः" (३-३-११८)। 5. ಪಾದಾಗ್ರ, ಕಾಲಿನ ತುದಿ. (ಸ್ತ್ರೀಂ) **-मा -ಮಾ.** 6. ರಾತ್ರಿ. **-मी -ಮೀ.** ರಾತ್ರಿ. "ददृशेऽपि भास्कररुचाह्नि न यः स तमीं तमोभिरभिगम्य तताम्" माघ० ९-२३।

**तमक ತಮಕ** (ಪುಂ) ಶ್ವಾಸರೋಗ, ಉಬ್ಬಸ, ದಮ್ಮು. ताम्यत्यत्र — तमु (ग्लानौ) "वुन्" बाहु०।

**तमत ತಮತ** (ವಿಂ) ಆಸೆಪಡುವ, ಅಪೇಕ್ಷಿಸುವ. तमु (काङ्क्षायाम्) "अतच्" (उ० ३-११०)। तमतस्तृष्णापरः सि० कौ०।

**तमस् ತಮಸ್** (ನಂ) 1. ತಮೋಗುಣ, ಅಜ್ಞಾನ, ताम्यत्यनेन—तमु (ग्लानौ) "असुन्" (उ० ४-१८९)। "सत्वं ज्ञानं तमोऽज्ञानं रागद्वेषौ रजः स्मृतम्" मनु०

१२-२६। "अदस्त्वयानुत्तमनुत्तमं तमः" माघ० १-२७। [ವಿವರಕ್ಕೆ "ತಮೋಗುಣ" ನೋಡಿ.] "स हि देवः परं ज्योतिः तमःपारे प्रतिष्ठितम्" कुमा० २-५८। "आदित्यवर्णं तमसः परस्तात्" पु० सू०। 2. ಅಂಧಕಾರ, ಕತ್ತಲೆ. "ददृशेऽपि भास्कररुचाऽह्नि न यः स तमीं तमोभिरभिगम्य तताम्" माघ० ९-२३। 3. ಮಬ್ಬು, ಸೂರ್ಯ ಚಂದ್ರರ ಗ್ರಹಣಕಾಲದಲ್ಲಿ ಅವರ ಬಿಂಬದ ಮೇಲೆ ಕವಿದಿರುವ ಕಪ್ಪು ಛಾಯೆ, ರಾಹು. "सव्यगते तमसि जमज्जलप्लुतं भवति मुदितमभयं च" बृहत्सं० ५-४४। 4. ಅವಿದ್ಯೆ, ಅಜ್ಞಾನ. 5. ಪಾಪ. "तमो राहौ गुणे पापे ध्वान्ते" हेम०।

**तमस ತಮಸ** (पुं०) 1. ಬಾವಿ, ಕೂಪ. ताम्यत्यस्मिन् – तमु (ग्लानौ) "असच्" (उ० ३-११७)। 2. ಅಂಧಕಾರ, ಕತ್ತಲೆ. तमसोऽन्धकारः सि० कौ०। (न०) 3. ನಗರ, ಪಟ್ಟಣ. (स्त्री०) **–सा –ಸಾ**. ಒಂದು ನದಿ. "पुण्यामवाप तमसां तमसां निहन्त्रीम्" चं० रा०। "ततस्तु तमसातीरं रम्यमाश्रित्य राघवः" रामा०।

**तमस्काण्ड ತಮಸ್ಕಾಂಡ** (पुं०) ಅಂಧಕಾರದ ಸಮೂಹ, ಹರಡಿರುವ ಕತ್ತಲೆ. तमसः काण्डः। "ऋते रवेः क्षालयितुं क्षमेत कः क्षपातमस्काण्डमलीमसं नभः" माघ० १-३८।

**तमस्तति ತಮಸ್ತತಿ** (स्त्री०) ಅಂಧಕಾರದ ಸಮೂಹ.

**तमस्वत् ತಮಸ್ವತ್** (वि०) ಕತ್ತಲೆಯಿಂದ ಕೂಡಿದ. तमोऽस्यास्ति "मतुप्" (५-२-९४)।

**तमस्वती ತಮಸ್ವತೀ** (स्त्री०) 1. ರಾತ್ರಿ. तमस्वत् "ङीप्" (४-१-६)। 2. ಹರಿದ್ರೆ, ಅರಿಶಿನ.

**तमस्विन् ತಮಸ್ವಿನ್** (वि०) ತಮಸ್ಸಿನಿಂದ ಕೂಡಿದ, ಅಂಧಕಾರ ಸಹಿತವಾದ. तमोऽस्यास्ति "विनिः" (५-२-१२१)।

**तमस्विनी ತಮಸ್ವಿನೀ** (स्त्री०) ರಾತ್ರಿ. तमोऽस्या अस्ति "विनिः" (५-२-१२१)। "ङीप्" (४-१-५)।

**तमाल ತಮಾಲ** (पुं०) 1. ಹೊಂಗೆಮರ. तमु (ग्लानौ) "कालन्" (उ० १-११५)। "दूरादयश्चक्रनिभस्य तन्वी तमालतालीवनराजिनीला" रघु० १३-१५। 2. ತಿಲಕ. ತಿಲಕವು ಹೊಂಗೆಯೆಲೆಯಂತಿರುವುದರಿಂದ ಈ ಹೆಸರು. 3. ಖಡ್ಗ, ಕತ್ತಿ. 4. ವರುಣವೃಕ್ಷ, ವಲಸೆ ಗಿಡ. "तमालस्तिलके खड्गे तापिञ्छे वरुणद्रुमे" मेदि०। 5. ಬಿದಿರಿನ ತೊಗಟೆ. 6. ಕರಿಯ ಕಗ್ಗಲಿಮರ.

**तमालक ತಮಾಲಕ** (न०) ಸ್ಥಲಪದ್ಮ, ಬೆಟ್ಟದಾವರೆ.

**तमालपत्र ತಮಾಲಪತ್ರ** (न०) 1. ತಿಲಕ, ಹಣೆಯ ಬೊಟ್ಟು. तमालस्येवाकारोऽस्त्यस्य "अच्" (५-२-१२७)। 2. ಹೊಂಗೆಯ ಎಲೆ. 3. ಹೊಂಗೆಯ ಮರ. "तमालपत्रं तापिञ्छे तिलके पत्रकेऽपि च" मेदि०।

**तमालिका ತಮಾಲಿಕಾ** (स्त्री०) 1. ಒಂದು ದೇಶ. 2. ಭೂಮ್ಯಾಮಲಕ ವೃಕ್ಷ.

**तमालिनी ತಮಾಲಿನೀ** (स्त्री०) ಹೊಂಗೆಮರಗಳು ಬೆಳೆದಿರುವ ಪ್ರದೇಶ. तमालाः सन्त्यत्र "इनिः" (५-२-१३५)। "ङीप्" (४-१-५)।

**तमाली ತಮಾಲೀ** (स्त्री०) ವರುಣವೃಕ್ಷ, ವಲಸೆ ಗಿಡ.

**तमि(मी) ತಮಿ(ಮೀ)** (स्त्री०) ರಾತ್ರಿ. तमु (ग्लानौ) "इन्" (उ० ४-११७)। वा "ङीष्" (ग० ४-१-४५)। "ददृशेऽपि भास्कररुचाह्नि न यः स तमीं तमोभिरभिगम्य तताम्" माघ० ९-२३।

**तमिस्र ತಮಿಸ್ರ** (न०) 1. ತಿಮಿರ, ಅಂಧಕಾರ, ಕತ್ತಲೆ. तमिस्रा रात्रिराश्रयत्वेनास्त्यस्य "अच्" (५-२-१२७)। "अनभिज्ञास्तमिस्राणां दुर्दिनेष्वभिसारिकाः" कुमा० ६-४३। 2. ಕತ್ತಲೆಯಿಂದ ಕವಿದಿರುವ ನರಕ. "अमङ्गलानां च तमिस्रमुल्बणं विपर्ययः केन तदेव कस्यचित्" भाग० ४-६-४५। 3. ಕೋಪ, ಕ್ರೋಧ. (पुं०) 4. ಕೃಷ್ಣಪಕ್ಷ. (स्त्री०) **–स्रा –ಸ್ರಾ**. 5. ಕೃಷ್ಣಪಕ್ಷದ ರಾತ್ರಿ. 6. ಕತ್ತಲೆಯ ಸಮೂಹ. तमसः उपधाया इत्वम् रश्च निपा० (५-२-११४)। "सूर्ये तपत्यावरणाय दृष्टेः कल्पेत लोकस्य कथं तमिस्रा" रघु० ५-१३। "तमिस्रं तिमिरे कोपे स्त्री तु तमस्ततौ" मेदि०।

**तमिस्रपक्ष ತಮಿಸ್ರಪಕ್ಷ** (पुं०) ಕತ್ತಲೆಯಿಂದ ಕೂಡಿದ ಕೃಷ್ಣಪಕ್ಷ. तमिस्राऽस्त्यस्य "अच्" (५-२-१२७)। तादृशः पक्षः। "चतुर्दशीं पञ्चदशीं तथाष्टमीं तमिस्रपक्षस्य तिथिं भृगोः सुतः" बृहत्सं० ९-३६।

**तमी ತಮೀ** (स्त्री०) "तमि" ಪದದಲ್ಲಿ ನೋಡಿ.

**तमोगुण ತಮೋಗುಣ** (पुं०) ಸತ್ತ್ವ ರಜಸ್ಸು ತಮಸ್ಸುಗಳೆಂಬ ಪ್ರಕೃತಿಯ ಮೂರು ಗುಣಗಳಲ್ಲೊಂದು. "सत्त्वं रजस्तम इति प्रकृतेर्गुणास्तैर्युक्तः परः पुरुष एक इहास्य धत्ते। स्थित्यादये हरिविरिञ्चिहरेति संज्ञाः श्रेयांसि तत्र खलु सत्त्वतनोर्नृणां स्युः" भाग० १-२-२३। ಪ್ರಕೃತಿ ಸಂಬಂಧವಾದ ಈ ತಮೋಗುಣವು ಪ್ರಾಣಿಸಾಮಾನ್ಯದಲ್ಲಿಯೂ ಮೋಹ ಅಜ್ಞಾನ ಕಾರ್ಪಣ್ಯ ಭ್ರಮೆ ಸ್ವಪ್ನ ಭಯ ಲೋಭ ದುಃಖ ವಿಸ್ಮೃತಿ ನಾಸ್ತಿಕತೆ ದ್ವೇಷ ಕ್ರೋಧ

ಕಪಟ ವಿಷಯಾಭಿಲಾಷೆ ಅಪಕಾರ ಅಸಹನೆ ಅಶ್ರದ್ಧೆ ಮುಂತಾದ ಕಾರ್ಯಗಳನ್ನುಂಟುಮಾಡುವುದು. "एतेषां गुणतत्त्वानि वक्ष्यन्ते तत्त्वहेतुभिः। समासव्यासयुक्तानि तत्त्वतस्तानि बोधत। संमोहोऽज्ञानमत्यागः कर्मणामविनिर्णयः। स्वप्नः स्तम्भो भयं लोभः शोकः सुकृतदूषणम्। अस्मृतिश्चाविपाकश्च नास्तिक्यं भिन्नवृत्तिता। अमैत्री विकृतो भावोऽश्रद्धा मूढभावना। सर्व एते गुणा वृत्तास्तामसाः परिकीर्तिताः। अत्यागश्चातिमानश्च मोहो मन्युस्तथाऽक्षमा। मत्सरश्चैव भूतेषु तामसं वृत्तमिष्यते" भा० आश्व० ३७। ತಮೋಗುಣದ ನಿರೋಧವಾದರೆ ರಜೋಗುಣವು ಕಾರ್ಯದಲ್ಲಿ ತೊಡಗುವುದು. ರಜೋಗುಣವು ನಿರೋಧಿಸಲ್ಪಟ್ಟಾಗ ಸತ್ತ್ವಗುಣದ ಕಾರ್ಯವು ನಡೆಯುವುದು, "नियम्यते तमो यत्र रजस्तत्र प्रवर्तते। नियम्यते रजो यत्र सत्त्वं तत्र प्रवर्तते"।

**तमोगुणिन् ತಮೋಗುಣಿನ್** (वि०) ತಮೋಗುಣದಿಂದ ಕೂಡಿದ, ಅಜ್ಞಾನ ಕಾಮ ಕ್ರೋಧ ಅಸೂಯೆ ಅಹಂಕಾರ ಇತ್ಯಾದಿಗಳಿಂದ ಕೂಡಿದ.

**तमोघ्न ತಮೋಘ್ನ** (पुं०) 1. ಸೂರ್ಯ. 2. ಚಂದ್ರ. 3. ವಿಷ್ಣು. 4. ಪರಶಿವ. 5. ಅಗ್ನಿ. 6. ಜ್ಞಾನ, ತಿಳಿವಳಿಕೆ. तमः अन्धकारं मोहमज्ञानं वा हन्ति — हन (हिंसागत्योः) "कः" (वा० ३-२-५)। 7. ಬುದ್ಧ. "तमोघ्नः सूर्यवह्नीन्दुबुद्धशङ्करविष्णुषु" मेदि०। (वि०) 8. ಅಂಧಕಾರವನ್ನು ಹೋಗಲಾಡಿಸುವ.

**तमोज्योतिस् ತಮೋಜ್ಯೋತಿಸ್** (पुं०) ಖದ್ಯೋತ, ಮಿಂಚಿನಹುಳ, ಮಿಣುಕುಹುಳ. तमसि ज्योतिरस्य।

**तमोनुद् ತಮೋನುದ್** (पुं०) 1. ಸೂರ್ಯ. 2. ಚಂದ್ರ. 3. ಅಗ್ನಿ. 4. ದೀಪ. तमो नुदति — णुद (प्रेरणे) "क्विप्" (३-२-७६)। "तमोनुदं दक्षसुता इवाबभुः" रघु० ३-३३। (वि०) 5. ಕತ್ತಲೆಯನ್ನು ಹೋಗಲಾಡಿಸುವ. 6. ಅಜ್ಞಾನವನ್ನು ನಾಶಪಡಿಸುವ. "तमोनुदोऽग्निचन्द्रार्काः" विश्व०।

**तमोनुद ತಮೋನುದ** (पुं०) 1. ವಿಷ್ಣು. 2. ಪರಶಿವ. 3. ಸೂರ್ಯ. 4. ಚಂದ್ರ. 5. ದೀಪ. तमो नुदति — णुद (प्रेरणे) "कः" (३-१-१३५)। (वि०) 6. ಕತ್ತಲೆಯನ್ನು ಹೋಗಲಾಡಿಸುವ. 7. ಅಜ್ಞಾನವನ್ನು ನಾಶಪಡಿಸುವ. "महाभूतादि वृत्तौजाः प्रादुरासीत्तमोनुदः" मनु० १-६।

**तमोऽपह ತಮೋಽಪಹ** (पुं०) 1. ಸೂರ್ಯ. 2. ಚಂದ್ರ. 3. ಅಗ್ನಿ. 4. ಜ್ಞಾನ. 5. ದೀಪ. तमोऽपहन्ति— अप+हन (हिंसागत्योः) "डः" (३-२-५०)। (वि०) 6. ಕತ್ತಲೆಯನ್ನು ಹೋಗಲಾಡಿಸುವ. 7. ಅಜ್ಞಾನವನ್ನು ಹೋಗಲಾಡಿಸುವ. "आगमादिव तमोऽपहादितः संभवन्ति मतयो भवच्छिदः" किरा० ५-२२।

**तमोभिद् ತಮೋಭಿದ್** (पुं०) 1. ಖದ್ಯೋತ, ಮಿಂಚಿನ ಹುಳ. तमो भिनत्ति— भिदिर् (विदारणे) "क्विप्" (३-२-६१)। (वि०) 2. ತಮಸ್ಸನ್ನು ಹೋಗಲಾಡಿಸುವ.

**तमोमणि ತಮೋಮಣಿ** (पुं०) 1. ಗೋಮೇದಕ ಮಣಿ. 2. ಖದ್ಯೋತ, ಮಿಂಚಿನ ಹುಳ. तमसि मणिरिव।

**तमोमय ತಮೋಮಯ** (पुं०) 1. ರಾಹು. तमः प्रचुरम् तमस् "मयट्" (५-४-२१)। "कथयन्त्यमूर्तमपरे तमोमयं सैंहिकेयाख्यम्" बृहत्सं० ५-३। (वि०) 2. ಅಂಧಕಾರಮಯವಾದ, ಕತ್ತಲೆಯಿಂದ ತುಂಬಿದ. "विससर्जात्मनः कायं नाभिनन्दंस्तमोमयम्" भाग० ३-२०-१९। 3. ಅಜ್ಞಾನಸ್ವರೂಪದ.

**तमोविकार ತಮೋವಿಕಾರ** (पुं०) 1. ರೋಗ. 2. ತೂಕಡಿಕೆ. 3. ಸೋಮಾರಿತನ. तमसो विकारः।

**तमोहर ತಮೋಹರ** (पुं०) 1. ಸೂರ್ಯ. 2. ಚಂದ್ರ. 3. ಅಗ್ನಿ. 4. ದೀಪ. तमो हरति — हृञ् (हरणे) "अच्" (३-२-९)। (वि०) 5. ಅಂಧಕಾರವನ್ನು ಹೋಗಲಾಡಿಸುವ. 6. ಅಜ್ಞಾನವನ್ನು ನಾಶಪಡಿಸುವ.

**तर ತರ** (पुं०) 1. ದಾಟುವುದು, ನೀರನ್ನು ದಾಟಿ ಮುಂದೆ ಸಾಗುವುದು. तॄ (प्लवनतरणयोः) भावे "अप्" (३-३-५७)। "पणं यानं तरे दाप्यं पौरुषोऽर्धपणं तरे। पादं पशुश्च योषिच्च पादार्धं रिक्तकः पुमान्" मनु० ८-४०४। 2. ದಾಟಿಸಿದ ಬಾಡಿಗೆ, ನದಿಯನ್ನು ದಾಟಿಸಿದ ಕೂಲಿ. तॄ करं० "अप्"। "दीर्घाध्वनि यथादेशं यथाकालं तरो भवेत्" मनु० ८-४०६। 3. ಅಗ್ನಿ, ಬೆಂಕಿ. तॄ कर्तं० "अच्" (३-१-१३४)। 4. ದೋಣಿ, ಹರಿಗೋಲು. 5. ರಸ್ತೆ, ಮಾರ್ಗ. (स्त्री०) –रिः –ರಿ, –री –ರೀ. तॄ "इः" (उ० ४-१३८)। वा "ङीष्" (ग० ४-१-४५)। 6. ಹಡಗು. "तरीषु तत्रत्यमफल्गु भाण्डं सांयात्रिकानावपतोऽभ्यनन्दत्" माघ० ३-७६। 7. ಬಟ್ಟೆಯ ಅಂಚು. 8. ಬಟ್ಟೆ ಮೊದಲಾದುವುಗಳ ನ್ನಿಡುವ ಪೆಟ್ಟಿಗೆ. "तरिर्दशायां नावि स्याद्वस्त्रादीनां च पेटके" नानार्थर०।

**तरक्षु ತರಕ್ಷು** (पुं०) ಶಿವಂಗಿ, ಕಿರುಬ. तरं मार्गं क्षिणोति—क्षिणु (हिंसायाम्) "डुः" (वा० ३-२-१८०)।

**तरङ्ग ತರಂಗ** (पुं०) 1. ಅಲೆ, ತೆರೆ. तरति—तृ (प्लवनतरणयोः) "अङ्गच्" (उ० १-११७)। "उत्तेरे तरलतरङ्गलीलानिष्णातैरथ सरसः प्रियासमूहैः" माघ० ८-६३। 2. ವಸ್ತ್ರ, ಬಟ್ಟೆ.

**तरङ्गमालिन् ತರಂಗಮಾಲಿನ್** (पुं०) ಸಮುದ್ರ. तरङ्गाः मालेव, सा अस्यास्ति "इनिः" (५-२-११६)। प्र० रा०।

**तरङ्गिणी ತರಂಗಿಣೀ** (स्त्री०) ನದಿ, ಹೊಳೆ. तरङ्गा अस्यां सन्ति—तरङ्ग "इनिः" (५-२-१३५)। "सिन्दूरितानेकपकङ्कणाङ्किता तरङ्गिणी वेणिरिवायता भुवः" माघ० १२-७५।

**तरङ्गित ತರಂಗಿತ** (वि०) 1. ಅಲೆಗಳುಂಟಾಗಿರುವ, ಅಲೆಗಳೆದ್ದಿರುವ. तरङ्गाः सञ्जाता अस्य "इतच्" (५-२-३६)। 2. ಚಂಚಲವಾದ. "सागरप्रतिमं घोरं वाहनोर्मितरङ्गितम्" भा० भीष्म० ८७-५।

**तरण ತರಣ** (पुं०) 1. ದೋಣಿ, ಹರಿಗೋಲು. तरत्यनेन—तृ (प्लवनतरणयोः) कर० "ल्युट्" (३-३-११७)। 2. ಸ್ವರ್ಗ, ದೇವಲೋಕ. तृ कर्म० "ल्युट्" (३-३-११३)। (न०) 3. ನೀರನ್ನು ದಾಟುವುದು, ನದಿಯನ್ನು ದಾಟಿ ಹೋಗುವುದು. तृ भावे "ल्युट्" (३-३-११५)। "क्षणमपि सज्जनसङ्गतिरेका भवति भवार्णवतरणे नौका" हरिवं०। 4. ದೋಣಿಯ ಹುಟ್ಟು. तृ कर्म० "ल्युट्"। 5. ತೇಲಾಡುವುದು.

**तरणि ತರಣಿ** (पुं०) 1. ಸೂರ್ಯ. तरन्त्यनेन संसारम्—तृ (प्लवनतरणयोः) "अनिः" (उ० २-१०२)। "इत्युक्त्वा तरणिः कुन्तीं तन्मनस्कां सुलज्जिताम्" देवीभा०। 2. ಎಕ್ಕದಗಿಡ. 3. ಕಿರಣ. 4. ತಾಮ್ರ. 5. ಸಾಗರ, ಸಮುದ್ರ. (स्त्री०) वा "ङीप्" (ग० ४-१-४५)। **तरणी ತರಣೀ.** 6. ಸಣ್ಣ ಗೋರಂಟಿಗಿಡ. 7. ನದಿ, ಹೊಳೆ. 8. ಹಡಗು. 9. ದೋಣಿ. "तरणिः स्त्री नावि नद्यां कुमार्याल्योषधावपि। नाल्वयं सागरे भानौ" नानार्थर०। (वि०) 10. ಜಾಗ್ರತೆಯಾಗಿ ನಡೆಯುವ.

**तरणितनय ತರಣಿತನಯ** (पुं०) ಸೂರ್ಯನ ಮಗ 1. ಕರ್ಣ. 2. ಸುಗ್ರೀವ. 3. ಶನೈಶ್ಚರ. 4. ಯಮ. 5. ಮನು. 6 ಸಾವರ್ಣ. (स्त्री०) **—तनया —ತನಯಾ.** 7. ಯಮುನಾನದಿ. एवं **—सुतः —ಸುತಃ, —सूनुः —ಸೂನುಃ** ಇತ್ಯಾದಿ.

**तरणिपोत ತರಣಿಪೋತ** (पुं०) ಮರದ ದೋಣಿ. तरणेः पोत इव।

**तरणिरत्न ತರಣಿರತ್ನ** (न०) ಮಾಣಿಕ್ಯ.

**तरणी ತರಣೀ** (स्त्री०) 1. ಹಡಗು. तरत्यनेन—तृ (प्लवनतरणयोः) "ल्युट्" (३-३-११७)। "ङीप्" (४-१-१५)। 2. ಸಣ್ಣ ಗೋರಂಟಿಗಿಡ. 3. ಬೆಟ್ಟದಾವರೆ.

**तरण्ड ತರಂಡ** (पुं०) 1. ಒಂದು ದೇಶ. (पुंन०) 2. ತೆಪ್ಪ, ಸೋರೆಬುರುಡೆ ಮೊದಲಾದುವುಗಳ ಆಧಾರದಿಂದ ತೇಲಾಡುವ ಬೊಂಬುಗಳಿಂದ ಮಾಡಿದ ತೇಲುವೆ. तृ (प्लवनतरणयोः) "अण्डन्" बाहु०। 3. ಮೀನು ಹಿಡಿಯುವ ಗಾಳದ ದಾರಕ್ಕೆ ಸಿಕ್ಕಿಸಿರುವ ಬೆಂಡು. 4. ಹಡಗು. "तरण्डो बडिशीसूत्रबद्धकाष्ठादिके प्लवे। नौकायामपि न स्त्री स्यात्" मेदि०। 5. ಹಡಗನ್ನು ನಡೆಸುವ ಗಡೆ, ಹಡಗನ್ನು ನಡೆಸುವ ಹುಟ್ಟು. 6. ಮೀನಿನ ಬಲೆ. 7. ಸೂತ್ರ, ದಾರ. 8. ವಸ್ತ್ರ, ಬಟ್ಟೆ. (वि०) 9. ಕಟ್ಟಲ್ಪಟ್ಟ ವಸ್ತು. "तरण्डो बडिशे सूत्रे बद्धवस्तुनि वाससि" नानार्थर०। (स्त्री०) **—ण्डी —ಣ್ಡೀ.** 10. ದೋಣಿ. 11. ತೆಪ್ಪ.

**तरण्डक ತರಂಡಕ** (न०) 1. ಒಂದು ಪುಣ್ಯತೀರ್ಥ. तरण्ड संज्ञायां "कन्"। "ततो गच्छेत राजेन्द्र द्वारपालं तरण्डकम्। तच्च तीर्थं सरस्वत्यां यक्षेन्द्रस्य महात्मनः" भा० वन० ८१-५२। 2. ಮೀನಿನ ಬಲೆಯ ದಾರದ ಮಧ್ಯದಲ್ಲಿ ಕಟ್ಟುವ ಬೆಂಡು.

**तरत् ತರತ್** (वि०) 1. ತೇಲಾಡುತ್ತಿರುವ. 2. ದಾಟುತ್ತಿರುವ. तृ (प्लवनतरणयोः) "शतृ" (३-२-१२४)। "आकृष्टप्रतनुवपुर्लतैस्तरद्भिस्तस्याम्भस्तदथ सरो महार्णवस्य" माघ० ८-२५। स्त्रियाम् "ङीप्" (४-१-६)। **—न्ती —ನ್ತೀ.**

**तरन्त ತರಂತ** (पुं०) 1. ಸಮುದ್ರ, ಸಾಗರ. 2. ತೆಪ್ಪ. 3. ಭೇಕ, ಕಪ್ಪೆ. 4. ರಾಕ್ಷಸ. तृ (प्लवनतरणयोः) "झच्" (उ० ३-१२८)। स च षित्। षित्त्वात् "ङीष्" (४-१-४१)। **—न्ती —ನ್ತೀ.** 5. ಹಡಗು. "तरन्तो दारदः पेरुः महाप्राचीरमद्वयोः" त्रिकाण्ड०।

**तरपण्य ತರಪಣ್ಯ** (न०) ನದಿಯನ್ನು ದಾಟಿಸಲು ಅಂಬಿಗನಿಗೆ ಕೊಡುವ ಕೂಲಿ, ದೋಣಿಯ ಬಾಡಿಗೆ. तरस्य पण्यम् शुल्कम्। "आतरस्तरपण्यं स्यात्" अम०।

**तरल ತರಲ** (पुं०) 1. ಹಾರದ ಮಧ್ಯಮಣಿ. तृ (प्लवनतरणयोः) "कलः" (उ० १-१०४)। "प्रवालमुक्ता-

स्तरलाश्च हाराः" भा० कर्ण०। 2. ಹಾರ. 3. ತಲ, ಸಮಪ್ರದೇಶದ ಮೇಲ್ಮೈ. 4. ಕಬ್ಬಿಣ. (वि०) 5. ಚಂಚಲವಾದ, ನಡುಗುವ, ಕಂಪಿಸುವ. "तारापतिस्तरलविद्युदिवाभ्रवृन्दम्" रघु० १३-७६। 6. ಚಪಲ ಚಿತ್ತನಾದ. "वैरायितारस्तरलाः स्वयं मत्सरिणः परे" माघ० २-११५। 7. ಪ್ರಕಾಶಮಾನವಾದ. "व्याधानुसार्यमाणतरलतारामृगा" काद०। 8. ಕಾಮುಕ, ಸ್ತ್ರೀಲೋಲ. 9. ವಿಸ್ತಾರವಾದ. 10. ದ್ರವೀಭೂತವಾದ. 11. ಟೊಳ್ಳಾಗಿರುವ, ಒಳಗೆ ಶೂನ್ಯವಾಗಿರುವ. (स्त्री०) **-ला -ಲಾ**. 12. ಗಂಜಿ. 13. ಮದ್ಯ. 14. ಮಾಣಿಕ್ಯ. "तरलं चञ्चले षिद्गे भास्वरेऽपि त्रिलिङ्गकम्। हारमध्यमणौ पुंसि यवागूसुरयोः स्त्रियाम्" मेदि०। "लोहे हारमणौ पुंसि यवाग्वां तरला स्त्रियाम्" त्रिकाण्ड०।

**तरलनयन ತರಲನಯನ, -लोचन -ಲೋಚನ** (न०) 1. ಚಂಚಲವಾದ ಕಣ್ಣು. तरलं नयनं लोचनं वा। (वि०)2. ಚಂಚಲವಾದ ನೇತ್ರವುಳ್ಳ. तरले नयने लोचने वा यस्य। (स्त्री०) **-नयना -ನಯನಾ, -लोचना -ಲೋಚನಾ**. ಚಂಚಲವಾದ ನೇತ್ರವುಳ್ಳ ಹೆಂಗಸು. तरले नयने लोचने वा यस्याः।

**तरलित ತರಲಿತ** (वि०) 1. ತೂಗಾಡಿಸಲ್ಪಟ್ಟ. तरल+तत्करोति णिच् "क्तः" (३-२-१०२)। 2. ನಡುಗಿಸಲ್ಪಟ್ಟ, ಕಂಪನಗೊಳಿಸಲ್ಪಟ್ಟ. "प्रेङ्खोलितस्तरलितः" त्रिकाण्ड०।

**तरवारि ತರವಾರಿ** (पुं०) ಖಡ್ಗ, ಕತ್ತಿ. तरं शत्रूणां गतिं वारयति—वृञ् (वरणे) + णिच् "इन्" (उ० ४-११७)। "ऋषिः खङ्गस्तरवारिः" त्रिकाण्ड०।

**तरस् ತರಸ್** (न०) 1. ಬಲ, ಶಕ್ತಿ. "तिष्ठतु प्रधनमेवमप्यहं तुल्यबाहुतरसा जितस्त्वया" रघु० ११-७७। 2. ವೇಗ. तॄ(प्लवनतरणयोः) "असुन्" (उ० ४-१८८)। 3. ವಾನರ, ಕಪಿ. 4. ರೋಗ, ವ್ಯಾಧಿ. "तरो बले च वेगे च" मेदि०। 5. ತೀರ, ದಡ.

**तरस ತರಸ** (न०) 1. ಮಾಂಸ. तरोऽस्यास्ति "अच्" (५-२-१२७)। "पिशितं तरसं मांसम्" अम०। (वि०) 2. ವೇಗವಾದ, ವೇಗದಿಂದ ಕೂಡಿದ.

**तरस्थान ತರಸ್ಥಾನ** (न०) 1. ದೋಣಿಯ ನಿಲ್ದಾಣ. 2. ಹಡಗು ಬಂದು ನಿಲ್ಲುವ ಜಾಗ, ಬಂದರು.

**तरस्वत् ತರಸ್ವತ್** (वि०) 1. ವೇಗದಿಂದ ಕೂಡಿದ. तरोऽस्यास्ति "मतुप्" (५-२-९४)। 2. ರೋಗಿ, ವ್ಯಾಧಿಗ್ರಸ್ತ. 3. ಓಡುತ್ತ ಸಮಾಚಾರವನ್ನು ಒಯ್ಯುವವನು, ಹರಿಕಾರ.

**तरस्विन् ತರಸ್ವಿನ್** (पुं०)1. ವಾಯು, ಗಾಳಿ. 2. ಗರುಡ. (वि०)3. ವೇಗವುಳ್ಳ, ವೇಗಶಾಲಿಯಾದ. 4. ಪರಾಕ್ರಮಿ, ಶೂರ, ಬಲಶಾಲಿ. तरोऽस्यास्ति "विनिः"(५-२-१२१)। "भयस्य पूर्वावतरस्तरस्विना" माघ० १-४३। "निर्जितेषु तरसा तरस्विनां शत्रुषु प्रणतिरेव कीर्तये" रघु० ११-८९। स्त्रियाम् "ङीप्" (४-१-५)। **तरस्विनी ತರಸ್ವಿನೀ**. "निशुम्भशुम्भयोर्देवी भद्रकाली तरस्विनी" भाग० ८-१०-३१।

**तरान्धु ತರಾಂಧು** (पुं०) ಹಡಗು. "ह्रोडस्तरान्धुर्वहनम्" त्रिकाण्ड०।

**तरालु ತರಾಲು** (पुं०) ಹಡಗು. "तरालुश्चाहिपुत्रकः" हारा०।

**तरि(री) ತರಿ(ರೀ)** (स्त्री०) 1. ಹಡಗು. तॄ (प्लवनतरणयोः) "इः" (उ० ४-१३८)। वा "ङीष्" (ग० ४-१-४५)। "जीर्णतरिः सरिदतीव गभीरनीरा" उद्भ०। "तरीषु तत्रत्यमफल्गु भाण्डं सांयात्रिकानावपतोऽभ्यनन्दत्" माघ० ३-७६। 2. ಬಟ್ಟೆಗಳನ್ನಿಡುವ ಪೆಟ್ಟಿಗೆ. 3. ಬಟ್ಟೆಯ ಅಂಚು.

**तरिक ತರಿಕ** (पुं०)1. ತೆಪ್ಪ, ಹರಿಗೋಲು. तरः तरणं कार्यतयाऽस्त्यस्य "ठन्" (५-२-११५)। 2. ತೆಪ್ಪದ ಕೂಲಿಯನ್ನು ತೆಗೆದುಕೊಳ್ಳುವವನು, ನದಿ ದಾಟಿಸಿದ ಕೂಲಿಯನ್ನು ಪಡೆಯುವವನು. तरे तरपण्यग्रहणेऽधिकृतः। "तरिकः स्थलजं शुल्कं गृह्णन् दाप्यः पणान् दश" याज्ञ० २-२६३। (स्त्री०) 3. ಹಡಗು.

**तरिणी ತರಿಣೀ** (स्त्री०) 1. ಹಡಗು. 2. ದೋಣಿ. तरः तरणं कार्यतयाऽस्त्यस्याः "इनिः" (५-२-११५)।

**तरित्र ತರಿತ್ರ** (न०) ನೌಕೆ, ಹಡಗು. तरत्यनेन—तॄ (प्लवनतरणयोः) "ष्ट्रन्" (उ० ४-१५८)।

**तरिरथ ತರಿರಥ** (पुं०) ದೋಣಿಯನ್ನು ನಡೆಸುವ ಹುಟ್ಟು ಗೋಲು. तरेः रथ इव।

**तरी ತರೀ** (स्त्री०)1. "तरि" ಪದದ ಅರ್ಥ. 2. ಧೂಮ, ಹೊಗೆ. तरि "ङीष्" (ग० ४-१-४५)।

**तरीष ತರೀಷ** (पुं०)1. ಸ್ವರ್ಗ. 2. ಸುಂದರವಾದ ಆಕಾರ. 3. ತೆಪ್ಪ, ಹರಿಗೋಲು. 4. ವ್ಯವಸಾಯ, ಉದ್ಯೋಗ, ಕಸಬು. 5. ಸಮರ್ಥನಾದ ಪುರುಷ. 6. ಸಮುದ್ರ. 7. ಒಣಗಿದ ಗೋಮಯ. तॄ(प्लवनतरणयोः) "ईषन्"

(उ० ४-२६)। (स्त्री०) -षी-ಷೀ. 7. ಇಂದ್ರನ ಮಗಳು. "तरीषः शोभनाकारे भेलेऽब्धिव्यवसाययोः। तरीषी शक्रकन्यायां पुंसि स्वर्गे" मेदि०।

**तरु ತರು**(ಪುಂ)ವೃಕ್ಷ, ಮರ. तरन्त्यनेन नरकमारोपकाः—तॄ (प्लवनतरणयोः) "उः" (उ० १-७)। "चलत्पलाशान्तरगोचरास्तरोस्तुषारमूर्तेरिव नक्तमंशवः" माघ० १-२१। "ऊङ्" (वा० ४-१-६६)। तरूः ತರೂಃ. "मन्दायमानगमनो हरितायतरूं कपिः" भट्टि० ८-६५।

**तरुजीवन ತರುಜೀವನ** (ನ०) ಮರದ ಬೇರು. तरुः जीव्यतेऽनेन—जीव (प्राणधारणे) "ल्युट्" (३-३-११७)।

**तरुण ತರುಣ** (ಪುಂ) 1. ಹರಳುಗಿಡ. 2. ದಪ್ಪಜಾತಿಯ ಜೀರಿಗೆ. 3. ಉತ್ತರಣೆ ಹೂವು. (ವಿ०)4. ಪ್ರಾಯದವನು. तॄ (प्लवनतरणयोः) "उनन्" (उ० ३-१५४)। "कुचकलशकिशोरकौ कथंचित्तरलया तरुणेन पस्पृशाते" माघ० ७-७३। 5. ಹೊಸದಾದ, ಆಗತಾನೆ ಹುಟ್ಟಿದ, ಎಳೆಯದಾದ. "तरुणं सर्षपशाकं नवोदनं पिच्छिलानि च दधीनि"। "तरुणः कुब्जपुष्पे स्यादेरण्डे यूनि नूतने" हेम०।

**तरुणता ತರುಣತಾ** (ಸ್ತ್ರೀ०) ಪ್ರಾಯ, ತಾರುಣ್ಯ. तरुणस्य भावः "तल्" (५-१-११९)। "त्वः"। -त्वम् -ತ್ವಮ್.

**तरुणज्वर ತರುಣಜ್ವರ** (ಪುಂ) ಹೊಸ ಜ್ವರ, ಏಳು ದಿನಗಳೊಳಗಿನ ಜ್ವರ. तरुणश्चासौ ज्वरश्च। "आसप्तरात्रं तरुणं ज्वरमाहुर्मनीषिणः" चक्रद०।

**तरुणदधि ತರುಣದಧಿ** (ನ०) ಎಳೆಯ ಮೊಸರು, ಸದ್ಯಃ ಹೆಪ್ಪುಗಟ್ಟಿದ ಹಾಲು, ಎಳೆಗರಣೆಯ ಮೊಸರು. "शुष्कं मांसं स्त्रियो वृद्धाः बालार्कस्तरुणं दधि। प्रभाते मैथुनं निद्रा सद्यः प्राणहराणि षट्" चाणक्यः।

**तरुणिमन् ತರುಣಿಮನ್** (ಪುಂ) ತಾರುಣ್ಯ, ಪ್ರಾಯ. तरुणस्य भावः "इमनिच्" (५-१-१२२)। "बतेन्दुवदनातनौ तरुणिमोद्गमो मोदते" काव्यप्र०।

**तरुणी ತರುಣೀ**(ಸ್ತ್ರೀ०)1. ಯುವತಿ, ಪ್ರಾಯದ ಹೆಂಗಸು. तरुण "ङीप्" (वा० ४-१-१५)। "प्राणेशानभिविदग्धविधूतहस्ताः सीत्कारं समुचितमुत्तरं तरुण्यः" माघ० ८-१३। 2. ಜಾಪಾಳದ ಗಿಡ.

**तरुतल ತರುತಲ** (ನ०) ಮರದ ಬುಡ, ಮರದ ಕೆಳಭಾಗ. तरोस्तलम्। "नोच्चैर्यदा तरुतलेषु ममुस्तदानीमाधोरणैरभिहिताः पृथुमूलशाखाः" माघ० ५-४४।

**तरुनख ತರುನಖ** (ಪುಂ) ಮುಳ್ಳು. तरोः नख इव। "कण्टकसंज्ञास्तरुनखशिताग्रदलसूचिरांकिलद्रुमराः" हारा०।

**तरुभुज् ತರುಭುಜ್** (ಪುಂ) ಬದನಿಕೆ ಗಿಡ. तरुं भुङ्क्ते—भुज (पालनाभ्यवहारयोः) "क्विप्" (३-२-७६)। ಇದು ತಾನು ಆಶ್ರಯಿಸಿದ ಮರದ ರಸವನ್ನು ಹೀರುವುದರಿಂದ ಇದಕ್ಕೆ ಈ ಹೆಸರು.

**तरुमूल ತರುಮೂಲ** (ನ०) ಮರದ ಬೇರು.

**तरुमृग ತರುಮೃಗ** (ಪುಂ) ವಾನರ, ಕಪಿ.

**तरुराज ತರುರಾಜ** (ಪುಂ) ತಾಳವೃಕ್ಷ, ತಾಳೆ ಜಾತಿಯ ಒಂದು ಮರ. तरूणां राजा।

**तरुरुहा ತರುರುಹಾ** (ಸ್ತ್ರೀ०) ಬದನಿಕೆ ಗಿಡ.

**तरुरोहिणी ತರುರೋಹಿಣೀ** (ಸ್ತ್ರೀ०) ಬದನಿಕೆ ಗಿಡ.

**तरुसार ತರುಸಾರ** (ನ०) ಕರ್ಪೂರ. "सिताभ्रं तरुसारं च वेरकं रसकेसरम्" हारा०।

**तरूट ತರೂಟ** (ಪುಂ) ಕನ್ನೈದಿಲೆಯ ಗೆಡ್ಡೆ.

**तर्क ತರ್ಕ** (ಪುಂ)1. ಆಕಾಂಕ್ಷೆ. तर्क्यते आकाङ्क्ष्यते—तर्क (भाषार्थे) "घञ्" (३-३-१९)। ಆಕಾಂಕ್ಷೆಯು ಶಬ್ದಕ್ಕೆ ಸರಿಯಾದ ಅರ್ಥವಾಗದಿರುವಲ್ಲಿ ಶಾಬ್ದಬೋಧಕ್ಕೆ ಸಹಕಾರಿಯಾಗುವುದು. ಒಂದು ಪದದ ಅರ್ಥವನ್ನು ತಿಳಿಯಲು ಅದರ ಅನ್ವಯಕ್ಕೆ ಅವಶ್ಯವಾದ ಪದದ ಅಪೇಕ್ಷೆಯು ಆಕಾಂಕ್ಷೆ. ಅಥವಾ ಒಂದು ಪದಕ್ಕೆ ಯಾವ ಪದದ ಸಂಬಂಧವಿಲ್ಲದೆ ಅರ್ಥವೇ ಆಗುವುದಿಲ್ಲವೋ ಆ ಪದದ ಅಪೇಕ್ಷೆಯು ಆಕಾಂಕ್ಷೆ. ಇದೇ ತರ್ಕ. "घटमानय" ಎಂಬಲ್ಲಿ ಕಾರಕ ಮತ್ತು ಕ್ರಿಯಾಪದಗಳಿಗೆ ಪರಸ್ಪರ ಆಕಾಂಕ್ಷೆಯಿರುವುದು. ಕೇವಲ ಘಟಮ್ ಎಂದು ಹೇಳಿದರೆ ಆನಯ ಎಂದರ್ಥವೆ ? ಪಶ್ಯ ಎಂದರ್ಥವೇ ? ಎಂಬ ಜಿಜ್ಞಾಸೆಯುಂಟಾಗುವುದು. "घटमानय" ಎಂಬಲ್ಲಿ घटकर्मकमानयनम् ಎಂದು ಅನ್ವಯ ಬೋಧವಾಗುವುದು. ಇದೇ ಕಾರಕಕ್ಕೂ ಕ್ರಿಯಾಪದಕ್ಕೂ ಇರುವ ಪರಸ್ಪರ ಆಕಾಂಕ್ಷೆ, 2. ಕಲ್ಪನೆ, ಊಹೆ, ಭಾವನೆ. तर्क भावे "घञ्" (३-३-१८)। ತತ್ತ್ವಾರ್ಥವು ತಿಳಿಯದಿರುವಾಗ ಕಾರಣೋಪನ್ಯಾಸಪೂರ್ವಕ ತತ್ತ್ವವನ್ನು ತಿಳಿಯುವುದಕ್ಕಾಗಿ ಮಾಡುವ ಊಹೆಯು ತರ್ಕವಾಗುವುದು. "अविज्ञाततत्त्वार्थे कारणोपपत्तितः तत्त्वज्ञानार्थमूहस्तर्कः" गौतमसू० १-१-४०। "नास्त्यगतिर्मनोरथानाम्, सखे प्रसन्नस्ते तर्कः" विक्र० २। 3. ತರ್ಕಶಾಸ್ತ್ರ, ಹೇತುಪೂರ್ವಕ ವಿಚಾರಮಾಡುವ ನ್ಯಾಯಶಾಸ್ತ್ರ, ಆನ್ವೀಕ್ಷಿಕೀ ವಿದ್ಯೆ

"व्याप्यारोपेण व्यापकारोपस्तर्कः"। तर्क्यन्ते प्रतिपाद्यन्ते पदार्थाः इति तर्कः। "प्रायस्तर्कमधीते तनुते कुतुकान्निबन्धमप्यत्र" दीधि०। "गदाधरविनिर्मिताविषमदुर्गतर्काटवी" गदा०। "तर्के वा भृशकर्कशे मम समं लीलायते भारती" प्र० रा०। "यत्काव्यं मधुवर्षि धर्षितपरास्तर्केषु यस्योक्तयः" नैष० २२-१५३। 4. ಕಣಾದಮುನಿಪ್ರಣೀತವಾದ ವೈಶೇಷಿಕದರ್ಶನ. 5. ಅನುಮಾನ. "तर्काप्रतिष्ठानादपि, अन्यथानुमेयमिति चेदेवमप्यनिर्मोक्षप्रसङ्गः" ब्रं० सू० २-१-११, १२। 6. ಆಗಮಕ್ಕೆ ವಿರೋಧವಲ್ಲದ ಮೀಮಾಂಸಾದಿ ನ್ಯಾಯ. "नैषा तर्केण मतिरपनेया" कठ०। "आर्षं धर्मोपदेशं च वेदशास्त्राविरोधिना। यस्तर्केणानुसन्धत्ते स धर्मं वेद नेतरः" मनु० १२-१०६। "धर्मे प्रमीयमाणे हि वेदेन करणात्मना। इतिकर्तव्यताभागं मीमांसा पूरयिष्यति"। 7. ಮೀಮಾಂಸೆ.

**तर्कक ತರ್ಕಕ** (पुं०) 1. ತಾರ್ಕಿಕ, ನೈಯಾಯಿಕ. तर्क (भाषार्थे) "ण्वुल्" (३-१-१३३)। (वि०) 2. ಊಹಿಸುವವನು. 3. ಯಾಚಕ. "कामैः सन्तर्पयामास कृपणांस्तर्ककानपि" भा० शान्ति० ४४-६।

**तर्कण ತರ್ಕಣ** (न०) ಊಹಿಸುವುದು, ವಾಸ್ತವವಾದ ವಿಷಯವನ್ನು ತಿಳಿಯಲು ಸರಿಯಾದ ಕಾರಣಗಳಿಂದ ಮಾಡುವ ಊಹೆ. तर्क (भाषार्थे) + णिच् "ल्युट्" (३-३-११५)। "परकीयात्मदोषाद्यैः शङ्कानर्थस्य तर्कणम्" स० दा० ३-१६१।

**तर्कविद्या ತರ್ಕವಿದ್ಯಾ** (स्त्री०) ಆನ್ವೀಕ್ಷಿಕೀ ವಿದ್ಯೆ, ತರ್ಕಶಾಸ್ತ್ರ, ವಿಮರ್ಶೆಮಾಡುವ ಶಾಸ್ತ್ರ, ಪ್ರಮಾಣ ಕೊಡುವ ಶಾಸ್ತ್ರ, ಪ್ರಮಾಣ ಪ್ರಮೇಯಗಳನ್ನು ತಿಳಿಸುವ ಶಾಸ್ತ್ರ.

**तर्कसंग्रह ತರ್ಕಸಂಗ್ರಹ** (पुं०) ನ್ಯಾಯದರ್ಶನದಲ್ಲಿ ದ್ರವ್ಯ ಮೊದಲಾದ ಸಪ್ತ ಪದಾರ್ಥಗಳ ವಿವೇಚನೆಗಾಗಿ ರಚಿತವಾದ ಒಂದು ಗ್ರಂಥ, ಪ್ರತ್ಯಕ್ಷಾದಿ ಪ್ರಮಾಣಗಳಿಂದ ಪದಾರ್ಥಗಳ ಸ್ವರೂಪವನ್ನು ತಿಳಿಸುವ ಒಂದು ತರ್ಕಗ್ರಂಥ. "द्रव्यगुणकर्मसामान्यविशेषसमवायाभावाः सप्त पदार्थाः" त० सं०।

**तर्कारी ತರ್ಕಾರೀ** (स्त्री०) ತಕ್ಕಿಲೆಗಿಡ. तर्कमियर्ति—ऋ (गतौ) "अण्" (३-२-१)।

**तर्कित ತರ್ಕಿತ** (वि०) 1. ಊಹಿಸಲ್ಪಟ್ಟ. 2. ಶಂಕಿಸಲ್ಪಟ್ಟ. 3. ವಿಮರ್ಶಿಸಲ್ಪಟ್ಟ. तर्क (भाषार्थे) + णिच् "क्तः" (३-२-१०२)। (न०) 4. ಊಹೆ.

**तर्किन् ತರ್ಕಿನ್** (वि०) 1. ಸಂಶಯಪಡುವವನು. 2. ಊಹಿಸುವವನು. 3. ವಿಮರ್ಶಿಸುವವನು. तर्कयति— तर्क (भाषार्थे) + णिच् "णिनिः" (३-१-१३४)। "त्रैविद्यो हेतुकस्तर्की नैरुक्तो धर्मपाठकः। त्रयश्चाश्रमिणः पूर्वे परिषत् स्याद्दशावरा" मनु० १२-१११।

**तर्कु ತರ್ಕು** (पुं०) ಕದಿರು, ಚರಕದಲ್ಲಿ ತಿರುಚುವ ಜುತ್ತು, ನೂಲನ್ನು ಸುತ್ತುವ ಕದಿರಣಿಗೆ. कृती (छेदने) "उः" (उ० १-१६)। निपा०। "कपालनालिका तर्कुः" त्रिकाण्ड०।

**तर्कुपाठी ತರ್ಕುಪಾಠೀ** (स्त्री०) ಕದಿರು ಚೆನ್ನಾಗಿ ತಿರುಗಲು ಅನುಕೂಲಿಸುವಂತೆ ಅದರ ತಳದಲ್ಲಿ ಕಟ್ಟುವ ಭಾರವಾದ ಮಣ್ಣಿನ ಗುಂಡು.

**तर्कुपिण्ड ತರ್ಕುಪಿಂಡ, -पीठ -ಪೀಠ** (पुं०) **-पीठी -ಪೀಠೀ** (स्त्री०) "तर्कुपाठी" ಪದದ ಅರ್ಥ. "वर्तुला तर्कुपीठी स्यात्" हारा०।

**तर्कुलासक ತರ್ಕುಲಾಸಕ** (पुं०) ನೂಲುವ ಕದಿರನ್ನು ತಿರುಗಿಸುವ ಯಂತ್ರ, ಚರಕ. तर्कुं लासयति—लस (श्लेषणक्रीडनयोः) + णिच् "ण्वुल्" (३-१-१३४)। "झल्लोलस्तर्कुलासकः" हारा०।

**तर्कुशाण ತರ್ಕುಶಾಣ** (पुं०) ಕದಿರನ್ನು ಚೂಪಾಗಿಮಾಡುವ ಸಾಣೆಕಲ್ಲು.

**तर्क्षु ತರ್ಕ್ಷು** (पुं०) "तरक्षु" ಪದದ ಅರ್ಥ. तरक्षु पृषो०।

**तर्ज – भर्त्सने** (भ्वा० पर० सक० से०)। तर्जति। ततर्ज। तर्जिता। तर्जिष्यति। तर्जतु। अतर्जत्। ಇತ್ಯಾದಿ. ಹೆದರಿಸು, ಭಯಪಡಿಸು, ಬೆದರಿಸು. "रणे चिक्रीड धूम्राक्षस्तं ततर्जानिलात्मजः" भट्टि० १४-८०।

**कर्मणि**:—तर्ज्यते। ततर्जे। तर्जिता। तर्जिष्यते। तर्ज्यताम्। अतर्ज्यत। ಇತ್ಯಾದಿ.

**णिचि**:—तर्जयति, –ते। तर्जयां चकार, –चक्रे, –बभूव, –आस। तर्जयिता। तर्जयिष्यति, –ते। तर्जयतु, –ताम्। ಇತ್ಯಾದಿ.

**कृत्सु**:—तर्जितव्यम्। तर्जनीयम्। तर्ज्यम्। तर्जितः। तर्जितवान्, –वती। तर्जन्, –न्ती। तर्जितुम्। तर्जितम्। तर्जनम्। तर्जित्वा। प्रतर्ज्य।

**तर्ज – तर्जने** (चुरा० आत्म० सक० से०)। तर्जयते। अततर्जत। ಇತ್ಯಾದಿ.

**तर्जक ತರ್ಜಕ** (वि०) ಹೆದರಿಸುವವನು, ಬೆದರಿಸುವವನು. तर्ज (भर्त्सने) "ण्वुल्" (३-१-१३४)।

**तर्जन** ತರ್ಜನ (न०) 1. ಹೆದರಿಸುವುದು, ಬೆದರಿಸುವುದು. तर्ज (भर्त्सने) भावे "ल्युट्" (३-३-११५)। "धूततुषारकणस्य नभस्वतस्तरुलताङ्गुलितर्जनविभ्रमाः" माघ० ६-६०। 2. ಆಕ್ಷೇಪಣೆ. 3. ನಿಂದೆ, ದೂಷಣೆ. "भ्रूभेदिभिः सकम्पोष्ठैर्ललिताङ्गुलितर्जनैः" कुमा० ६-४५।

**तर्जना** ತರ್ಜನಾ (स्त्री०) 1. ಹೆದರಿಸುವುದು, ಬೆದರಿಸುವುದು. तर्ज (भर्त्सने) + णिच् "युच्" (३-३-१०७)। "निर्धूतवीतमपि बालकमुल्ललन्तं यन्ता क्रमेण परिसान्त्वनतर्जनाभिः" माघ० ५-४७। 2. ಆಕ್ಷೇಪಣೆ. 3. ದೂಷಣೆ, ನಿಂದೆ, ಬೈಗಳು.

**तर्जनी** ತರ್ಜನೀ (स्त्री०) ಹೆದರಿಸುವ ಬೆರಳು, ಹೆಬ್ಬೆರಳಿನ ಸಮೀಪದ ಬೆರಳು. तर्ज्यतेऽनया—तर्ज (भर्त्सने) + णिच् "ल्युट्" (३-३-११७)।

**तर्जनीय** ತರ್ಜನೀಯ (वि०) 1. ಹೆದರಿಸಲ್ಪಡುವ. 2. ಹೆದರಿಸಬೇಕಾದ. 3. ಹೆದರಿಸಲು ಶಕ್ಯನಾದ. तर्ज (भर्त्सने) कर्मादौ "अनीयर्" (३-१-९६)। "तव्यः" **तर्जयितव्यः** ತರ್ಜಯಿತವ್ಯಃ.

**तर्जयत्** ತರ್ಜಯತ್ (वि०) 1. ಹೆದರಿಸುತ್ತಿರುವ, ಬೆದರಿಸುತ್ತಿರುವ. तर्ज (भर्त्सने) + णिच् "शतृ" (३-२-१२४)। 2. ಆಕ್ಷೇಪಿಸುತ್ತಿರುವ. 3. ನಿಂದಿಸುತ್ತಿರುವ. स्त्रियाम् "ङीप्" (४-१-६)। **-यन्ती - ಯಂತೀ.** "सीतां संतर्जयन्तीस्ता राक्षसीरशृणोत् कपिः" रामा०।

**तर्जा** ತರ್ಜಾ (स्त्री०) ಹೆದರಿಸುವುದು, ಬೆದರಿಸುವುದು. तर्ज (भर्त्सने) "अः" (३-३-१०३)।

**तर्जित** ತರ್ಜಿತ (वि०) 1. ಹೆದರಿಸಲ್ಪಟ್ಟ, ಬೆದರಿಸಲ್ಪಟ್ಟ. तर्ज (भर्त्सने) + णिच् "क्तः" (३-२-१०२)। "कातरोऽसि यदि वोद्गतार्चिषा तर्जितः परशुधारया मम" रघु० ११-७८। 2. ಆಕ್ಷೇಪಿಸಲ್ಪಟ್ಟ. 3. ದೂಷಿಸಲ್ಪಟ್ಟ, ನಿಂದಿಸಲ್ಪಟ್ಟ. (न०) 4. ಹೆದರಿಕೆ. 5. ನಿಂದೆ, ದೂಷಣೆ. 6. ಆಕ್ಷೇಪಣೆ.

**तर्ण** ತರ್ಣ (पुं०) 1. ಕರು, ವತ್ಸ. तृणोति—तृणु (अदने) "अच्" (३-१-१३४)। 2. ಸದ್ಯಃ ಹುಟ್ಟಿದ ಕರು.

**तर्णक** ತರ್ಣಕ (पुं०) "तर्ण" ಪದದ ಅರ್ಥ. तृणु (अदने) "ण्वुल्" (३-१-१३३)। "अभ्याजतोऽभ्यागततूर्णतर्णकानियर्णिहस्तस्य पुरो दुधुक्षतः" माघ० १२-४१।

**तर्णि** ತರ್ಣಿ (पुं०) 1. ಸೂರ್ಯ. तरत्याकाशमार्गं—तृ (प्लवनतरणयोः) "निः" बाहु०। 2. ತೆಪ್ಪ, ಹರಿಗೋಲು.

**तर्तरीक** ತರ್ತರೀಕ (न०) 1. ಹಡಗು. 2. ದೋಣಿ. तॄ (प्लवनतरणयोः) कर० "ईकन्" (उ० ४-२०)। (वि०) 3. ದಾಟಿಸುವವನು, ದಡವನ್ನು ಮುಟ್ಟಿಸುವವನು. तॄ कर्त० "ईकन्"।

**तर्तव्य** ತರ್ತವ್ಯ (वि०) 1. ದಾಟಲ್ಪಡುವ. 2. ದಾಟಬೇಕಾದ. तॄ (प्लवनतरणयोः) "तव्यः" (३-१-९६)।

**तर्द – हिंसायाम्** (भ्वा० पर० सक० से०)। तर्दति। ततर्द। तर्दिता। ಇತ್ಯಾದಿ. ಹಿಂಸಿಸು, ಪೀಡಿಸು. "सुग्रीवः प्रघसं नेभे बहून् रामस्ततर्द च" भट्टि० १४-३३।

**तर्दू** ತರ್ದೂ (स्त्री०) ಮರದ ಸೌಟು, ಮರದ ಸಟ್ಟುಗ. तर्द (हिंसायाम्) "कूः" बाहु०।

**तर्पण** ತರ್ಪಣ (न०) 1. ತೃಪ್ತಿ. तृप (प्रीणने) भावे "ल्युट्" (३-३-११५)। 2. ಸಂತೋಷಪಡಿಸುವುದು. तृप+णिच् "ल्युट्" (३-३-११५)। "यो वै स्वसृणां पितृवद्ददाति वरान् वदान्यो वरतर्पणेन" भाग० ३-१-२७। 3. ಪಿತೃಯಜ್ಞ, ಗೃಹಸ್ಥನು ಪ್ರತಿದಿನವೂ ಮಾಡಬೇಕಾದ ಪಂಚಮಹಾಯಜ್ಞಗಳಲ್ಲೊಂದು. 4. ದೇವಯಜ್ಞ. 5. ಋಷಿಯಜ್ಞ. ದೇವರ್ಷಿಪಿತೃತರ್ಪಣವು ಗೃಹಸ್ಥನಿಗೆ ಪ್ರತಿ ದಿನದ ಕರ್ತವ್ಯಗಳಲ್ಲೊಂದು. "नित्यं नैमित्तिकं काम्यं त्रिविधं स्नानमिष्यते। तर्पणन्तु भवेत्तस्य अङ्गत्वेन व्यवस्थितम्"। 6. ಪರ್ವಕಾಲಗಳಲ್ಲಿ ಪಿತೃಗಳ ಪ್ರೀತ್ಯರ್ಥ ಮಾಡುವ ಜಲತರ್ಪಣ. (वि०) 7. ತೃಪ್ತಿಪಡಿಸುವ. तृप कर्त० "ल्युः" (३-१-१३४)।

**तर्पणीय** ತರ್ಪಣೀಯ (वि०) 1. ತೃಪ್ತಿಪಡಿಸಲ್ಪಡುವ. 2. ಸಂತೋಷಪಡಿಸಲ್ಪಡುವ. 3. ತೃಪ್ತಿಪಡಿಸಬೇಕಾದ. 4. ಸಂತೋಷಪಡಿಸಬೇಕಾದ. तृप (प्रीणने) "अनीयर्" (३-१-९६)। "तव्यः"। **तर्पयितव्यः** ತರ್ಪಯಿತವ್ಯಃ.

**तर्पर** ತರ್ಪರ (पुं०) ಹಸು ಎತ್ತು ಮೊದಲಾದುವುಗಳ ಕತ್ತಿಗೆ ಕಟ್ಟುವ ಗಂಟೆ.

**तर्बट** ತರ್ಬಟ (पुं०) 1. ಸಂವತ್ಸರ. 2. ಚಕ್ರಮರ್ದವೃಕ್ಷ, ತಗಚೆಗಿಡ.

**तर्मन्** ತರ್ಮನ್ (न०) ಯೂಪದ ಅಗ್ರಭಾಗ, ಯಜ್ಞಪಶುವನ್ನು ಕಟ್ಟುವ ಕಂಬದ ತುದಿ. तरति—तॄ (प्लवनतरणयोः) "मनिन्" (३-२-७५)।

**तर्ष** ತರ್ಷ (पुं०) 1. ಇಚ್ಛೆ, ಅಭಿಲಾಷೆ, ಅಪೇಕ್ಷೆ. 2. ಪಿಪಾಸೆ, ಬಾಯಾರಿಕೆ. ञि तृषा (पिपासायाम्) "घञ्" (३-३-१८)। "तर्षो लिप्सापिपासयोः" त्रिकाण्ड०। "लवणार्णवपानेन तर्षोत्कर्षमिवोद्वहन्" राजत०। 3. ಸಮುದ್ರ.

तीर्यतेऽसौ — तॄ (प्लवनतरणयोः) कर्मं० "सः" (उ० ३-३५)। 4. ತೆಪ್ಪ, ಹರಿಗೋಲು. तीर्यतेऽनेन—तॄ "सः" (उ० ३-६५)।

**तर्षण ತರ್ಷಣ** (न०) 1. ಬಾಯಾರಿಕೆ, ನೀರಡಿಕೆ. ञि तृषा (पिपासायाम्) भावे "ल्युट्" (३-३-११५)। 2. ಇಚ್ಛೆ, ಅಪೇಕ್ಷೆ. "निर्विण्णा नितरां भूमन्नसदिन्द्रियतर्षणात्" भाग० ३-२५-७।

**तर्षणीय ತರ್ಷಣೀಯ** (वि०) 1. ಅಪೇಕ್ಷಿಸಲ್ಪಡುವ. 2. ಅಪೇಕ್ಷಿಸಲು ಯೋಗ್ಯವಾದ. 3. ಅಪೇಕ್ಷಿಸಬಹುದಾದ. ञि तृषा (पिपासायाम्) कर्मादौ "अनीयर्" (३-१-९६)। "तव्यः"। **तर्षितव्यः ತರ್ಷಿತವ್ಯಃ.**

**तर्षित ತರ್ಷಿತ** (वि०) ಬಾಯಾರಿಕೆಯುಂಟಾದ. तर्षोऽस्य सञ्जातः "इतच्" (५-२-३६)। "तृषितस्तर्षितः सतृट्" त्रिकाण्ड०। "राजा तद्यज्ञसदनं प्रविष्टो निशि तर्षितः" भाग० ९-६-२७।

**तर्हण ತರ್ಹಣ** (न०) 1. ಹಿಂಸಿಸುವುದು, ಪೀಡಿಸುವುದು. तृह (हिंसायाम्) "ल्युट्" (३-३-११५)। (वि०) 2. ಹಿಂಸಿಸುವ, ಪೀಡಿಸುವ. तृह कर्तं० "ल्युः" (३-१-१३४)।

**तर्हणीय ತರ್ಹಣೀಯ** (वि०) 1. ಹಿಂಸಿಸಲ್ಪಡುವ. 2. ಹಿಂಸಿಸಲು ಯೋಗ್ಯವಾದ. 3. ಹಿಂಸಿಸಬೇಕಾದ. तृह (हिंसायाम्) कर्मादौ "अनीयर्" (३-१-९६)। "तव्यः"। **तर्हितव्यः ತರ್ಹಿತವ್ಯಃ.**

**तर्हि ತರ್ಹಿ** (अव्य०) 1. ಆ ಕಾಲದಲ್ಲಿ, ಆ ಸಮಯದಲ್ಲಿ. तद् "र्हिल्" (५-३-२१)। 2. ಹಾಗಾದರೆ, ಆಪಕ್ಷದಲ್ಲಿ. "यद्येवं का तर्हीदानीं राजकुलस्य स्थितिः" प्रबोध०।

**तर्ह्य ತರ್ಹ್ಯ** (वि०) ಹಿಂಸಿಸಲ್ಪಡುವ.

**तल ತಲ** (पुं०) 1. ತಾಳೆಮರ, ಪನೆಮರ. तल (प्रतिष्ठायाम्) "अच्" (३-१-१३४)। 2. ಕೈಯ ಒಳಭಾಗ, ಹಸ್ತ, ಅಂಗೈ. "कुशेशयाताम्रतलेन कश्चित् करेण रेखाध्वजलाञ्छनेन" रघु० ६-१८। 3. ಖಡ್ಗದ ಮುಷ್ಟಿ, ಕತ್ತಿಯ ಹಿಡಿ. "तलोदरीं तालफलस्तनीं तां ताम्राधरां चारुनवोत्पलाक्षीम्" याद० १३-१७। 4. ಎಡಗೈಯಿಂದ ವೀಣೆ ಮೊದಲಾದ ತಂತೀವಾದ್ಯವನ್ನು ನುಡಿಸುವುದು. 5. ಹಸ್ತ, ಕೈ. "पञ्चशाखस्तलो हस्तः" वैज०। "तलप्रहारैरथमुष्टिपातनैः पदाभिघातैर्भुजयन्त्रपीडनैः" याद० १४-१५। 6. ಗರ್ತ, ಹಳ್ಳ. 7. ಕೈಗಳನ್ನು ತಟ್ಟುವುದು, ಚಪ್ಪಾಳೆ ಹೊಡೆಯುವುದು. 8. ಶೈತ್ಯ. "समीकस्सोलिकस्सोलस्स्कन्दोलो मेलकस्तलः" वैज०। (पुंन०) 9. ಸ್ವರೂಪ, ಬಾಹ್ಯರೂಪ, ಮೇಲ್ಮೈ. "अधिरुह्य पुष्पभरनम्रशिखैः परितः परिष्कृततलां तरुभिः" किरा० ६-१७। 10. ಅಧಃಪ್ರದೇಶ, ಕೆಳಪ್ರದೇಶ. "तलं यथेयुर्न तिला विकीर्णाः सैन्यैस्तथा राजपथा बभूवुः" नैष० १०-५। 11. ತಳಭಾಗ, ಕೆಳಗಿನ ಭಾಗ. "अङ्गुष्ठमूलस्य तले ब्राह्मं तीर्थं प्रचक्षते" मनु० २-५९। 12. ಮರದ ಕೆಳಭೂಮಿ. 13. ಆಲವಾಲ, ಪಾತಿ. "तल्लं विल्लं तलं च तत्। द्विजप्रपालवालं स्यात्" त्रिकाण्ड०। (न०) 14. ಬಾಣ ಪ್ರಯೋಗಿಸುವಾಗ ಬಿಲ್ಲಿನ ಹೆದೆಯು ಕೈಯನ್ನು ಕೊರೆಯದಂತೆ ಕೈಗೆ ಹಾಕಿಕೊಳ್ಳುವ ತೊಗಲಿನ ಚೀಲ. "तलं ज्याघातवारणे" अम०। 15. ಸಮಪ್ರದೇಶ. 16. ಹೊರಪ್ರದೇಶ, ಹೊರಮೈ. "भुवस्तलमिव व्योम कुर्वन् व्योमेव भूतलम्" रघु० ४-२९। 17. ಅಂಗಾಲು. 18. ಕಾನನ, ಅರಣ್ಯ, ಕಾಡು. 19. ಕಾರಣ, ಹೇತು, ಮೂಲ. "तलं स्वरूपेऽनूर्ध्वेऽस्त्री क्लीबं ज्याघातवारणे। कानने कार्यबीजे च पुंसि तालमहीरुहे। चपेटे च त्सरौ तन्त्रीघाते सव्येन पाणिना" मेदि०।

**तलक ತಲಕ** (न०) 1. ಸರಸ್ಸು, ಕೊಳ. "जलकूपी जलाष्ठीली तलकं पुष्करिण्यपि" हारा०। 2. ಮೃತ್ಪಾತ್ರೆ.

**तलकीट ತಲಕೀಟ** (पुं०) ಒಂದು ವೃಕ್ಷ.

**तलतस् ತಲತಸ್** (अव्य०) ಕೆಳಗಿನಿಂದ, ಕೆಳಭಾಗದಿಂದ.

**तलताल ತಲತಾಲ** (पुं०) ಅಂಗೈಯಿಂದ ಬಾರಿಸಲ್ಪಡುವ ಒಂದು ವಾದ್ಯ. तलेन करतलेन ताड्यते—तड (आघाते) +णिच् "घञ्" (३-३-१८)। डस्य लः।

**तलत्राण ತಲತ್ರಾಣ** (न०) ಬಾಣಪ್ರಯೋಗ ಮಾಡುವಾಗ ಬಿಲ್ಲಿನ ಹೆದೆಯು ಕೈಯನ್ನು ಕೊರೆಯದಂತೆ ಕೈಗೆ ಹಾಕಿಕೊಳ್ಳುವ ಚರ್ಮದ ಚೀಲ. तलं करतलं त्रायते — त्रैङ् (पालने) कर्तं० "ल्युः" (३-१-१३४)। "यत्रैते सतलत्राणाः सुयोधनपुरोगमाः" मा० द्रोण० ११९-२१।

**तलप्रहार ತಲಪ್ರಹಾರ** (पुं०) ಕೈಯಿಂದ ಅಪ್ಪಳಿಸುವುದು, ಕೈಯಿಂದ ಹೊಡೆಯುವುದು. तलेन प्रहारः। "तलप्रहारैरथ मुष्टिपातनैः पदाभिघातैर्भुजयन्त्रपीडनैः" याद० १४-१५।

**तलमीन ತಲಮೀನ** (पुं०) ಜಂಬುಮೀನು, ಹುಲ್ಲುಮೀನು.

**तलयुद्ध ತಲಯುದ್ಧ** (न०) ಕೈಯಿಂದ ಅಪ್ಪಳಿಸಿ ಮಾಡುವ ಯುದ್ಧ, ಕೈಯಿಂದ ಹೊಡೆದು ಮಾಡುವ ಕಾಳಗ. तलेन करतलाघातेन युद्धम्।

**तललोक ತಲಲೋಕ** (ಪುಂ०) ಪಾತಾಳಲೋಕ. तलस्थो भूमेस्तलस्थो लोकः। "स्वर्लोकपालाः खगलोकपालाः नृलोकपालास्तललोकपालाः" भाग० २-६-४२।

**तलवारण ತಲವಾರಣ** (न०) ಕೈಗಳನ್ನು ಹೆದೆಯ ಏಟಿನಿಂದ ರಕ್ಷಿಸಲು ಕೈಗೆ ಹಾಕಿಕೊಳ್ಳುವ ತೊಗಲಿನ ಚೀಲ. तले वारयति – वृञ् (वरणे) + णिच् "ल्युः" (३-१-१३४)। "जयारवक्ष्वेडितनादमूर्च्छितः शरासनज्यातलवारणध्वनिः" किरा० १४-२९।

**तलसारक ತಲಸಾರಕ** (न०) ಕುದುರೆಯ ಕತ್ತಿನ ಕೆಳಗೆ ಕಟ್ಟುವ ಚರ್ಮದ ಪಟ್ಟಿ, ಮುಖಕ್ಕೂ ಎದೆಗೂ ಮಧ್ಯೆ ಕಟ್ಟುವ ತೊಗಲಿನ ಪಟ್ಟಿ. तले सरति – सृ (गतौ) "ण्वुल्" (३-१-१३३)। "वक्त्रपट्टे तु तलिका तलसारकम्" अभि० चि०।

**तलस्थ ತಲಸ್ಥ** (वि०) ಅಧೋಭಾಗದಲ್ಲಿರುವ, ಕೆಳಭಾಗದಲ್ಲಿರುವ. तले तिष्ठति – ष्ठा (गतिनिवृत्तौ) "कः" (३-२-४)।

**तलहृदय ತಲಹೃದಯ** (न०) ಅಂಗಾಲಿನ ಮಧ್ಯಭಾಗ. तलस्य हृदयमिव। "तलहृदयं तु तलं मध्ये पादतलस्य तत्" अभि० चि०।

**तलाची ತಲಾಚೀ** (स्त्री०) ಚಾಪೆ, ಮಂದಲಿಗೆ. तलम् अञ्चति – अञ्चु (गतौ) "क्विप्" (३-२-५९)। "ङीप्" (४-१-५)। "तलाची तलपट्टिका" हारा०।

**तलातल ತಲಾತಲ** (न०) ಸಪ್ತ (ಏಳು) ಅಧೋಲೋಕಗಳಲ್ಲೊಂದು. "चतुर्दशभुवन" ಪದದಲ್ಲಿ ನೋಡಿ.

**तलिका ತಲಿಕಾ** (स्त्री०) "तलसारक" ಪದದ ಅರ್ಥ.

**तलित ತಲಿತ** (न०) ಬೇಯಿಸಿ ಕರಿಯಲ್ಪಟ್ಟ ಮಾಂಸ. "शुद्धमांसविधानेन मांसं सम्यक् प्रसाधितम्। पुनस्तदाज्ये संभृष्टं तलितं प्रोच्यते बुधैः" भावप्र०।

**तलिन ತಲಿನ** (न०) 1. ಹಾಸಿಗೆ, ಶಯ್ಯೆ. तल (प्रतिष्ठायाम्) "इनन्" (उ० २-५३)। (वि०) 2. ಕೃಶವಾದ, ದುರ್ಬಲವಾದ. 3. ಸ್ವಚ್ಛವಾದ, ನಿರ್ಮಲವಾದ. 4. ಚಿಕ್ಕದಾದ, ಸಣ್ಣದಾದ, ಸ್ವಲ್ಪವಾದ. 5. ವಿರಳವಾದ. "तलिनं विरले स्तोके स्वच्छेऽपि वाच्यलिङ्गकम्" मेदि०। "क्षामः क्षीणस्तनुश्छातस्तलिनाऽमांसपेलवाः" अभि० चि०।

**तलिम ತಲಿಮ** (न०) 1. ಜಗುಲಿ. 2. ಶಯ್ಯೆ, ಹಾಸಿಗೆ. 3. ಖಡ್ಗ, ಕತ್ತಿ. 4. ವಿತಾನ, ಬಟ್ಟೆಯಿಂದ ಮಾಡಿದ ಚಾವಣಿ. तल (प्रतिष्ठायाम्) "इमन्" बाहु०। "तलिमं कुट्टिमे तल्पे चन्द्रहासे वितानके" मेदि०।

**तलुन ತಲುನ** (पुं०) 1. ವಾಯು, ಗಾಳಿ. तृ (प्लवनतरणयोः) "उनन्" रेफस्य लकारो वा स्यात् (उ० ३-५४)। 2. ತರುಣ, ಪ್ರಾಯದವನು. स्त्रियाम् "ङीप्" (वा० ४-१-१५)। **तलुनी ತಲುನೀ.** "तलुनः पवने यूनि युवत्यां तलुनी स्मृता" मेदि०।

**तलेक्षण ತಲೇಕ್ಷಣ** (पुं०) ವರಾಹ, ಹಂದಿ. तले ईक्षणमस्य। ಹಂದಿಯು ಕೆಳದೃಷ್ಟಿಯುಳ್ಳ ಪ್ರಾಣಿ. स्त्रियाम् "ङीष्" (४-१-६३)। **तलेक्षणी ತಲೇಕ್ಷಣೀ.**

**तलोदरी ತಲೋದರೀ** (स्त्री०) ಕೃಶವಾದ ಉದರವುಳ್ಳವಳು, ತೆಳುವಾದ ಹೊಟ್ಟೆಯುಳ್ಳ ಹೆಂಗಸು. तलं खड्गमुष्टिरिव उदरं यस्याः। "ङीष्" (४-१-५५)। "तलोदरीं तालफलस्तनीं तां ताम्राधरां चारुनवोत्पलाक्षीम्" याद० १३-१७।

**तलोदा ತಲೋದಾ** (स्त्री०) ನದಿ, ಹೊಳೆ. तले उदकं यस्याः। उदकस्य उदादेशः। "समुद्रगा निर्झरिणी तलोदा जम्बालिनी शैवलिनी तरङ्गिणी" हारा०।

**तल्क ತಲ್ಕ** (न०) ಅರಣ್ಯ, ಕಾಡು. "वार्क्षं वनं तलं तल्कं गुहीनं समजं त्रसम्" त्रिकाण्ड०।

**तल्प ತಲ್ಪ** (पुंन०) 1. ಶಯ್ಯೆ, ಹಾಸಿಗೆ. तल्यतेऽस्मिन् – तल (प्रतिष्ठायाम्) "पः" (उ० ३-२८)। निपा०। "इति विरचितवाग्भिर्वन्दिपुत्रैः कुमारः सपदि विगतनिद्रस्तल्पमुज्झांचकार" रघु० ५-७५। 2. ಮಹಡಿ, ಮೇಲಿನ ಅಂತಸ್ತು, ಉಪ್ಪರಿಗೆ. "यत्रातपे दातुमिवाधितल्पं विस्तारयामास तरङ्गहस्तैः" माघ० ३-३९। 3. ಹೆಂಡತಿ, ಪತ್ನಿ. "गुरुतल्पव्रतं कुर्याद्रेतःसिक्त्वा स्वयोनिषु। सख्युः पुत्रस्य च स्त्रीषु कुमारीष्वन्त्यजासु च" मनु० ११-१७०। "तल्पमट्टे कलत्रे च शयनीये च न द्वयोः" मेदि०।

**तल्पक ತಲ್ಪಕ** (पुं०) ಹಾಸಿಗೆಯನ್ನು ಹಾಸಿ ಸಿದ್ಧಪಡಿಸುವ ಸೇವಕ.

**तल्पकीट ತಲ್ಪಕೀಟ** (पुं०) ಹಾಸಿಗೆಯ ಹುಳ, ತಿಗಣೆ. तल्पे जातः कीटः।

**तल्पन ತಲ್ಪನ** (न०) 1. ಆನೆಯ ಬೆನ್ನು. 2. ಆನೆಯ ಬೆನ್ನಿನ ಮಾಂಸಖಂಡ.

**तल्पल ತಲ್ಪಲ** (न०) ಆನೆಯ ಬೆನ್ನಿನ ಎಲುಬು. तल्पं तदाकारं लाति – ला (आदाने) "कः" (३-२-३)। "सान्द्रत्वक्कास्तल्पलाश्लिष्टकक्षाः आङ्गीं शोभामाप्नुवन्तश्चतुर्थीम्" माघ० १८-६।

**तल्ल ತಲ್ಲ** (पुं०) 1. ಜಲಾಶಯ, ಕೆರೆ. "तल्लस्तु जलाधारान्तरे पुमान्" मेदि०। (न०)2. ಬಿಲ. 3. ಆಲವಾಲ, ಗಿಡದ ಪಾತಿ.

**तल्लज ತಲ್ಲಜ** (वि०) ಪ್ರಶಸ್ತವಾದ, ಶ್ರೇಷ್ಠವಾದ. ಸಮಾಸದ ಕೊನೆಯಲ್ಲಿ ಜಾತಿವಾಚಕ ಶಬ್ದದೊಡನೆ ಇದರ ಪ್ರಯೋಗ. गोतल्लजः। ಇಲ್ಲಿ गो ಶಬ್ದವು ಸ್ತ್ರೀಲಿಂಗವಾದರೂ तल्लज ಶಬ್ದವು ನಿಯತ ಲಿಂಗವಾದುದರಿಂದ ಪುಲ್ಲಿಂಗದಲ್ಲಿ ನಿರ್ದೇಶವಿರುವುದು.

**तल्लिका ತಲ್ಲಿಕಾ** (स्त्री०) ಬೀಗದಕೈ. तस्मिन् लीयते — लीङ् (श्लेषणे) "डः"। संज्ञायां "कन्"।

**तल्ली ತಲ್ಲೀ** (स्त्री०) ತರುಣಿ, ಯುವತಿ. "तल्ली तरुण्याम्" मेदि०।

**तवक्षीर ತವಕ್ಷೀರ** (न०) ತವಕ್ಷೀರವೆಂಬ ಒಂದು ಔಷಧ.

**तवर्ग ತವರ್ಗ** (पुं०) त थ द ध न ಎಂಬ ಅಕ್ಷರಗಳ ಗುಂಪು. ಈ ಎಲ್ಲಾ ಅಕ್ಷರಗಳೂ ಒಂದೇ ಸ್ಥಾನದಲ್ಲಿ ಹುಟ್ಟುವುದರಿಂದ ಒಂದೇ ಗುಂಪಿಗೆ ಸೇರಿದುವು. "लृतुलसानां दन्ताः" सि० कौ०।

**तवर्गीय ತವರ್ಗೀಯ** (वि०) ತವರ್ಗಸಂಬಂಧವಾದ (ಅಕ್ಷರ).

**तविपुला ತವಿಪುಲಾ** (स्त्री०) ವೃತ್ತರತ್ನಾಕರೋಕ್ತವಾದ ವಿಪುಲಾವೃತ್ತದ ಒಂದು ಭೇದ. ನಾಲ್ಕು ಪಾದಗಳಲ್ಲಿಯೂ ಮೊದಲನೆಯ ನಾಲ್ಕು ವರ್ಣಗಳ ನಂತರ त ಗಣವಿದ್ದಲ್ಲಿ "**तविपुला**" ವೃತ್ತವಾಗುವುದು. "तोऽब्धेस्तत्पूर्वाऽन्या भवेत्" वृ० र०।

**तविष ತವಿಷ** (पुं०) 1. ಸಮುದ್ರ, ಕಡಲು. 2. ಸ್ವರ್ಗ. तव (सौत्रो धातुः) "टिषच्" (उ० १-४८)। (स्त्री०) **-षी-ಷೀ.** 3. ನದಿ, ಹೊಳೆ. 4. ದೇವಕನ್ಯೆ. 5. ಭೂಮಿ. सि० कौ०।

**तष्ट ತಷ್ಟ** (वि०) 1. ಕೆತ್ತಲ್ಪಟ್ಟ ಸಿಲುವಾಗಿ ಮಾಡಲ್ಪಟ್ಟ. तक्ष् (तनूकरणे) "क्तः" (३-२-१०२)। 2. ಸೀಳಲ್ಪಟ್ಟ, ಎರಡಾಗಿ ಮಾಡಲ್ಪಟ್ಟ.

**तष्टि ತಷ್ಟಿ** (स्त्री०) ಕೆತ್ತುವುದು, ಬಾಚಿಯಿಂದ ಕೆತ್ತಿ ಮರವನ್ನು ಸಿಲುವಾಗಿ ಮಾಡುವುದು. तक्ष् (तनूकरणे) "क्तिन्" (३-३-९४)।

**तष्टृ ತಷ್ಟೃ** (पुं०) 1. ಬಡಗಿ, ಮರಗೆಲಸದವನು. तक्ष् (तनूकरणे) "तृच्" (३-१-१३३)। 2. ವಿಶ್ವಕರ್ಮ, ದೇವಶಿಲ್ಪಿ. 3. ದ್ವಾದಶಾದಿತ್ಯರಲ್ಲೊಬ್ಬ.

**तसि — अलङ्कारे** (वा चुरा० उभ० सक० से०)। तंसयति, -ते। तंसति। ततंस। ಇತ್ಯಾದಿ.

**तसु — उपक्षये** (दिवा० पर० सक० से०)। तस्यति। ततास। तसिता। ಇತ್ಯಾದಿ.

**तस्कर ತಸ್ಕರ** (पुं०) 1. ಚೋರ, ಕಳ್ಳ. तत् करोति—डुकृञ् (करणे) "अच्" (वा० ३-२-२१)। सुडागमः तलोपश्च (ग० ६-१-१५७)। "मा सञ्चर मनःपान्थ तत्रास्ते स्मरतस्करः" भर्तृ० २-५४। 2. ಸ್ಪೃಕ್ಕಾ ಎಂಬ ಗಂಧದ್ರವ್ಯ. 3. ಮದನವೃಕ್ಷ, ಮುಂಗಾರೆ ಗಿಡ.

**तस्करता ತಸ್ಕರತಾ** (स्त्री०) ಚೌರ್ಯ, ಕಳ್ಳತನ. तस्करस्य भावः "तल्" (५-१-११९)। "न किलानुययुस्तस्य राजानो रक्षितुर्यशः। व्यावृत्ता यत्परस्वेभ्यो श्रुतौ तस्करता यथा" रघु० १-२७। "त्वः" (५-१-११९)। **तस्करत्वम् ತಸ್ಕರತ್ವಮ್.**

**तस्करस्नायु ತಸ್ಕರಸ್ನಾಯು** (पुं०) ಕಾಗೆತೊಂಡೆ ಗಿಡ.

**तस्थिवस् ತಸ್ಥಿವಸ್** (वि०) ಇರುವ, ನಿಂತಿರುವ. ष्ठा (गतिनिवृत्तौ) "क्वसुः" (३-२-१०७)। "तं तस्थिवांसं नगरोपकण्ठे तदागमारूढगुरुप्रहर्षः" रघु० ५-६१।

**तस्थु ತಸ್ಥು** (वि०) ಸ್ಥಿರವಾದ, ನಿಶ್ಚಲವಾದ. ष्ठा (गतिनिवृत्तौ) "कुः" बाहु० द्वित्वं च। "देहस्तु सर्वसंघातो जगत् तस्थुरिति द्विधा" भाग० ७-७-२३।

**ताक्षण्य ತಾಕ್ಷಣ್ಯ** (पुं०) ಬಡಗಿಯ ಮಗ, ಮರಗೆಲಸದವನ ಮಗ. तक्ष्णोऽपत्यम् "ण्यः" (४-१-१५२)।

**ताक्ष्ण ತಾಕ್ಷ್ಣ** (पुं०) ಬಡಗಿಯ ಮಗ, ಮರಗೆಲಸದವನ ಮಗ. तक्ष्णोऽपत्यम् "अण्" (वा० ४-१-१५३)। अनोऽल्लोपः (६-४-१३५)।

**ताच्छीलिक ತಾಚ್ಛೀಲಿಕ** (पुं०) ತಚ್ಛೀಲಾರ್ಥದಲ್ಲಿ ವಿಹಿತವಾದ ಪ್ರತ್ಯಯ. तच्छील "ठक्"।

**ताच्छील्य ತಾಚ್ಛೀಲ್ಯ** (न०) 1. ಅವನ ಸ್ವಭಾವ. 2. ಆ ಸ್ವಭಾವ. तच्छीलस्य भावः "ष्यञ्" (५-१-१२४)।

**ताटका ತಾಟಕಾ** (स्त्री०) ತಾಟಕಾಸುರಿ, ಸುಕೇತುವೆಂಬ ಯಕ್ಷನ ಮಗಳು, ಮಾರೀಚನ ತಾಯಿ, ಸುಂದನ ಪತ್ನಿ. [ಯಕ್ಷರಾಜನ ಮಗಳಾದ ತಾಟಕೆಯು ಮಾರೀಚ ಮತ್ತು ಸುಬಾಹುಗಳೆಂಬ ಮಕ್ಕಳೊಡನೆ ಅರಣ್ಯದಲ್ಲಿ ವಾಸಮಾಡುತ್ತಿದ್ದಳು. ಒಮ್ಮೆ ಇವಳು ಕಾಮಪೀಡಿತಳಾಗಿ ಮನೋಹರವಾಗಿ ಹಾಡುತ್ತಾ ಸಂಚರಿಸುತ್ತಿದ್ದುದನ್ನು ಕಂಡ ಅಗಸ್ತ್ಯಮಹರ್ಷಿಯು "ನೀನು ಕಾಮುಕರಿಗೆ ಭಯಂಕರ

ವಾದ ರೂಪವನ್ನು ತಾಳು, ನಿನ್ನ ಮಕ್ಕಳಿಬ್ಬರೂ ರಾಕ್ಷಸರಾಗಲಿ" ಎಂದು ಇವಳನ್ನು ಶಪಿಸಿದರು. ಅಂದಿನಿಂದ ಇವಳು ಅಲ್ಲಿದ್ದ ಋಷಿಗಳನ್ನೂ ಆ ದೇಶದ ಜನರನ್ನೂ ಪೀಡಿಸುತ್ತಾ ಯಜ್ಞಯಾಗಾದಿಗಳಿಗೆ ವಿಘ್ನವುಂಟುಮಾಡುತ್ತಿದ್ದಳು. ವಿಶ್ವಾಮಿತ್ರಮಹರ್ಷಿಯು ಶ್ರೀರಾಮ ಲಕ್ಷ್ಮಣರನ್ನು ಸಿದ್ಧಾಶ್ರಮಕ್ಕೆ ಕರೆದುಕೊಂಡು ಬರುತ್ತಿದ್ದಾಗ ಈ ವೃತ್ತಾಂತವನ್ನು ಅವರಿಗೆ ತಿಳಿಸಿ ಶ್ರೀರಾಮನಿಂದ ತಾಟಕೆಯನ್ನು ಕೊಲ್ಲಿಸಿದನು.]

**ताटकारि ತಾಟಕಾರಿ** (पुं०) ಶ್ರೀರಾಮಚಂದ್ರ. ताटकाया अरिः।

**ताटकेय ತಾಟಕೇಯ** (पुं०) ತಾಟಕೆಯ ಮಗ— 1. ಸುಬಾಹು. 2. ಮಾರೀಚ. ताटकाया अपत्यम् "ढक्" (४-१-१२०)। "मारीचः सुन्दपुत्रश्च ताटकायां व्यजायत" हरिवं०। "तनुतरविशिखविताडनविघटितविशरारुशरारुताटकाताटकेय" रघु० ग०।

**ताटङ्क ತಾಟಂಕ**(पुं०)1. ಓಲೆ, ಕರ್ಣಾಭರಣ. ताटयते—तट (आघाते) "घञ्" (३-३-१९)। तादृशोऽङ्कः चिह्नं यस्य। शक०। "ताटङ्के तरलमणिप्रभातरङ्गे तन्वङ्ग्या मुखमभितस्तदा व्यभाताम्" चं० भा० २। 2. ಲೋಲಾಕು.

**ताटस्थ्य ತಾಟಸ್ಥ್ಯ** (नं०) 1. ಉದಾಸೀನತೆ, ಉಪೇಕ್ಷೆ. तटस्थस्य भावः "ष्यञ्" (५-१-१२४)। 2. ಸಾಮೀಪ್ಯ, ಹತ್ತಿರ.

**ताड ತಾಡ** (पुं०) 1. ಏಟು, ಹೊಡೆತ. तड (आघाते) + णिच् "अच्" (३-३-५६)। 2. ಕೊಡುವುದು, ಸೇರಿಸುವುದು. 3. ಶಬ್ದ, ಧ್ವನಿ. तड कर्मं० "घञ्" (३-३-१९)। 4. ಪರ್ವತ, ಬೆಟ್ಟ. 5. ಒಂದು ಹಿಡಿಯಲ್ಲಿ ಹಿಡಿಯಬಹುದಾದ ಹುಲ್ಲು ಮೊದಲಾದುದು. "ताडोऽद्रौ ताडने घोषे मुष्टिमेयतृणादिषु" हेम०। (स्त्री०) **-डी -ಡೀ**. 6. ತಾಳವೃಕ್ಷ, ಪನೆಮರ. "ताडस्ताडनघोषयोः। मुष्टिमेयतृणादौ च ताडी तालीदलद्रुमे" विश्व०।

**ताडक ತಾಡಕ** (वि०) ಹೊಡೆಯುವವನು. ताडयति—तड (आघाते) + णिच् "ण्वुल्" (३-१-१३३)।

**ताडघ ತಾಡಘ** (पुं०)1. ತಾಳವನ್ನು ಹೊಡೆಯುವವನು. 2. ಜಟ್ಟಿ, ಮಲ್ಲ. तालं हन्ति ताडेन ताडनेन हन्ति वा—हन (हिंसागत्योः) "टक्" (३-२-५५)। टिलोपः घत्वं च निपात्यते।

**ताडघात ತಾಡಘಾತ** (वि०) ಹೊಡೆಯುವವನು, ಏಟು ಕೊಡುವವನು. ताडेन हन्ति—हन (हिंसागत्योः) "अण्" बाहु०।

**ताडन ತಾಡನ**(नं०) 1. ಏಟು, ಹೊಡೆತ. तड (आघाते)+ णिच् "ल्युट्" (३-३-११५)। "लालने बहवो दोषास्ताडने बहवो गुणाः" चाणक्यः। 2. ಸ್ಪರ್ಶ. (ಸೂರ್ಯಚಂದ್ರರ) ಭಾಗಶಃ ಗ್ರಹಣ. "ताडने भयमुशन्ति दारुणं छादने नृपवधोऽङ्गनाकृतः" बृहत्सं०। 3. ದೀಕ್ಷೆಯ ಅಂಗವಾದ ಒಂದು ಮಂತ್ರಸಂಸ್ಕಾರ. "मन्त्रवर्णान् समालिख्य ताडयेच्चन्दनाम्भसा। प्रत्येकं वायुना मन्त्री ताडनं तदुदाहृतम्"। (स्त्री०) **-नी -ನೀ**. 4. ಕುದುರೆ ಎತ್ತು ಮೊದಲಾದುವನ್ನು ಹೊಡೆಯುವ ಚಾವಟಿ. ताड्यतेऽनया—तड (आघाते) + णिच् कर० "ल्युट्" (३-३-११७)। "ङीप्" (४-१-१५)। (वि०) 5. ಹೊಡೆಯುವ. "गिरो वः साधुशोच्यानां गृह्णीमो मर्मताडनाः" भाग० ८-११-९।

**ताडनीय ತಾಡನೀಯ** (वि०) 1. ಹೊಡೆಯಲ್ಪಡುವ. 2. ಹೊಡೆಯಬೇಕಾದ. 3. ಹೊಡೆಯಲು ಶಕ್ಯವಾದ. तड (आघाते) + णिच् "अनीयर्" (३-१-९६)। "तव्यः" **ताडयितव्यः ತಾಡಯಿತವ್ಯಃ**.

**ताडपत्र ತಾಡಪತ್ರ** (नं०) ಓಲೆ, ಕರ್ಣಾಭರಣ, ಹೆಂಗಸರ ಕಿವಿಯ ಒಡವೆ. तालस्य पत्रमिव। लस्य डः।

**ताडयत् ತಾಡಯತ್** (वि०) ಹೊಡೆಯುತ್ತಿರುವ. तड (आघाते) + णिच् "शतृ" (३-२-१२४)। स्त्रियाम् "ङीप्" (४-१-६)। **-यन्ती -ಯಂತೀ**.

**ताडयितृ ತಾಡಯಿತೃ** (वि०) ಏಟುಕೊಡುವ, ಹೊಡೆಯುವ. तड (आघाते) + णिच् "तृच्" (३-१-१३३)। "मृताङ्गलग्नविक्रेतुर्गुरोस्ताडयितुस्तथा" याज्ञ० २-३०३। स्त्रियाम् "ङीप्" (४-१-५)। **-यित्री -ಯಿತ್ರೀ**.

**ताडाग ತಾಡಾಗ** (वि०) ತಡಾಗಸಂಬಂಧವಾದ, ಕೆರೆಯಲ್ಲಿರುವ. तडागस्येदम् "अण्" (४-३-१२०)। "हेमन्ते सारसं ताडागं वा सेवेत"। "ताडागं वातुलं स्वादु कषायं कटुपाकि च" सुश्रुत० सूत्र० ४५-८, ३१।

**ताडि ತಾಡಿ** (स्त्री०) ಪನೆಮರ, ತಾಳವೃಕ್ಷ.

**ताडचमान ತಾಡ್ಯಮಾನ** (वि०)1. ಹೊಡೆಯಲ್ಪಡುತ್ತಿರುವ. तड (आघाते) + णिच् कर्म० "शानच्" (३-२-१२४)। 2. ಬಾರಿಸಲ್ಪಡುತ್ತಿರುವ. "अप्यन्यपुष्टा प्रतिकूलशब्दा श्रोतुर्वितन्त्रीरिव ताडचमाना" कुमा० १-४५।

**ताण्ड ತಾಂಡ** (ನಂ) ನೃತ್ಯಶಾಸ್ತ್ರ.

**ताण्डव ತಾಂಡವ** (ನಂ) 1. ನೃತ್ಯ, ಭರತನಾಟ್ಯ ಶಾಸ್ತ್ರ ಕ್ರಮದಲ್ಲಿ ಮಾಡುವ ಕುಣಿತ. तण्डुना प्रोक्तम् "अण्" (४-३-१०१)। 2. ಈಶ್ವರನ ಉಗ್ರವಾದ ನರ್ತನ. ಪುರುಷರ ನೃತ್ಯವು ತಾಂಡವವೆನಿಸುವುದು. ಸ್ತ್ರೀಯರ ನೃತ್ಯಕ್ಕೆ ಲಾಸ್ಯವೆಂದು ಹೆಸರು. ನೃತ್ಯವು ಈ ರೀತಿ ಎರಡು ವಿಧ. "गण्डोड्डीनालिमालामुखरितककुभस्ताण्डवे शूलपाणेः" मालती० १-२। 3. ಒಂದು ಜಾತಿಯ ಹುಲ್ಲು. "ताण्डवोऽस्त्री तृणान्तरे। भवेदुद्धतनृत्ये च" मेदि०।

**ताण्डवतालिक ತಾಂಡವತಾಲಿಕ** (ಪುಂ) ನಂದೀಶ್ವರ.

**ताण्डवप्रिय ತಾಂಡವಪ್ರಿಯ** (ಪುಂ) 1. ಪರಶಿವ, ಪರಮೇಶ್ವರ. ताण्डवं प्रियमस्य। (ವಿಂ) 2. ನೃತ್ಯವೇ ಪ್ರಿಯವಾಗಿ ಉಳ್ಳವನು, ಕುಣಿತದಲ್ಲಿ ಇಷ್ಟವುಳ್ಳವನು.

**ताण्डविका ತಾಂಡವಿಕಾ** (ಸ್ತ್ರೀಂ) ನೃತ್ಯವನ್ನು ಕಲಿಸುವ ಹೆಂಗಸು.

**ताण्डवित ತಾಂಡವಿತ** (ವಿಂ) ಕುಣಿಯಿಸಲ್ಪಟ್ಟ. ताण्डव+तत्करोति "णिच्" कर्म० "क्तः" (३-२-१०२)। "द्वारोपान्तनिखाततातिप्रांशुवंशकाण्डताण्डवितधौतसितसूक्ष्माम्बरसहस्रम्" प्रबोध० २।

**ताण्ड्य ತಾಂಡ್ಯ** (ಪುಂ) ತಂಡಮುನಿಯ ಮಗ. तण्डस्यापत्यम् "यञ्" (४-१-१०५)। स्त्रियाम् "ङीप्" (४-१-१६)। यलोपः। **ताण्डी ತಾಂಡೀ.**

**ताण्ड्यब्राह्मण ತಾಂಡ್ಯಬ್ರಾಹ್ಮಣ** (ನಂ) ಸಾಮವೇದದ ಒಂದು ಬ್ರಾಹ್ಮಣ. ಸಾಮವೇದದ ಬ್ರಾಹ್ಮಣಗಳಲ್ಲಿ ಇದು ಮುಖ್ಯವಾದುದು. ಇದರಲ್ಲಿ ಇಪ್ಪತ್ತೈದು ಅಧ್ಯಾಯಗಳಿರುವುದರಿಂದ ಇದಕ್ಕೆ ಪಂಚವಿಂಶಬ್ರಾಹ್ಮಣವೆಂದು ಹೆಸರು. ಯಜ್ಞಾನುಷ್ಠಾನ ಸಮಯದಲ್ಲಿ ಉದ್ಗಾತೃವಿನ ಕಾರ್ಯವನ್ನು ವಿವರವಾಗಿ ಈ ಬ್ರಾಹ್ಮಣವು ತಿಳಿಸುತ್ತದೆ. ಒಂದು ದಿನದ ಯಾಗ ಮೊದಲುಗೊಂಡು ಒಂದು ಸಾವಿರ ವರ್ಷಗಳಲ್ಲಿ ನಡೆಯಬಹುದಾದ ಯಾಗಗಳ ಸ್ವರೂಪಗಳು ಈ ಬ್ರಾಹ್ಮಣದಲ್ಲಿ ಪ್ರತಿಪಾದಿತವಾಗಿವೆ.

**तात ತಾತ** (ಪುಂ) 1. ತಂದೆ, ಜನಕ. तनोति—तनु (विस्तारे) "क्तः" दीर्घश्च (उ० ३-९०)। "राजाराधनं खलु तातस्य गुरुकं न पुनर्मालती" मालती० २। 2. ಪೂಜ್ಯ, ಗೌರವಾರ್ಹ. (ಹಿರಿಯರಲ್ಲಿ ಈ ಪ್ರಯೋಗ) "तस्मान्मुच्ये यथा तात संविधातुं त्वमर्हसि" रघु० १-७२। 3. ಪ್ರೀತಿಯಿಂದ ಅಥವಾ ದಯೆಯಿಂದ ಕಿರಿಯರಲ್ಲಿ ಪ್ರಯೋಗಿಸುವ ಒಂದು ಪದ. "तदिह सुवदानायां तात मत्तः परस्मात्परिचयकरुणायाः सर्वथा मा विरंसीः" मालती० ६-१६। 4. ದಯೆ, ಕರುಣೆ. "तातो दयायां पितरि" नानार्थर०।

**तातगु ತಾತಗು** (ಪುಂ) 1. ಪಿತೃವ್ಯ, ಚಿಕ್ಕಪ್ಪ, ತಂದೆಯ ಕಿರಿಯ ಸಹೋದರ. तातस्येव गौर्वाचिकशब्दो यस्य। (ವಿಂ) 2. ತಂದೆಗೆ ಹಿತವಾದ, ತಂದೆಗೆ ಸಮ್ಮತವಾದ. "तातगुः क्षुद्रताते ना जनकस्य हिते त्रिषु" मेदि०।

**तातन ತಾತನ** (ಪುಂ) ಕಾಡಿಗೆ ಸೊಗಸಿನ ಹಕ್ಕಿ, ಕೆಂಬೂತದ ಹಕ್ಕಿ, ದಾಸರಿ ಹಕ್ಕಿ. "काकछदिः स्वञ्जलेखस्तातनो मुनिपुत्रकः" त्रिकाण्ड०। स्त्रियाम् जाति० "ङीष्" (४-१-६३)। **तातनी ತಾತನೀ.**

**तातल ತಾತಲ** (ಪುಂ) 1. ಸುತ್ತಿಗೆ, ಚಮ್ಮಟಿಗೆ. तापं लाति—ला (आदाने) "कः" (३-२-३)। पृषो०। 2. ಪಾಕ, ಅಡಿಗೆ ಮಾಡುವುದು. 3. ರೋಗ, ವ್ಯಾಧಿ. 4. ಬಿಸಿ, ಶಾಖ. 5. ಮನೋವೇಗ. "तातलो रुजि पाके च लोहकूटे मनोजवे" मेदि०। 6. ಕಾಯಿಸಲ್ಪಟ್ಟ, ಬಿಸಿಮಾಡಲ್ಪಟ್ಟ. "तातलो लोहकूटे ना त्रिषु तप्ते मनोजवे" वैज०।

**तात्कालिक ತಾತ್ಕಾಲಿಕ** (ವಿಂ) ತತ್ಕಾಲದಲ್ಲಿರುವ, ಆ ಸಮಯದಲ್ಲಿರುವ, ಆ ಕಾಲಕ್ಕೆ ಸಂಬಂಧಿಸಿದ. तस्मिन् काले भवः "ठञ्" "ञिठः" वा (४-२-११६)। "खरोष्ट्रयानहस्त्यश्वनौवृक्षेरिणरोहणे। सप्तत्रिंशदनध्यायानेतांस्तात्कालिकान्विदुः" याज्ञ० १-१५१। स्त्रियाम् ठञि "ङीप्" (४-१-१५)। **तात्कालिकी ತಾತ್ಕಾಲಿಕೀ.** ञिठि "टाप्" (४-१-४)। **तात्कालिका ತಾತ್ಕಾಲಿಕಾ.**

**तात्त्विक ತಾತ್ತ್ವಿಕ** (ವಿಂ) ನಿಜವಾದ, ಸತ್ಯವಾದ, ಯಥಾರ್ಥವಾದ. तत्त्वेन निर्वृत्तम् "ठञ्" (५-१-७९)।

**तात्पर्य ತಾತ್ಪರ್ಯ** (ನಂ) 1. ಅಭಿಪ್ರಾಯ, ಆಶಯ. तत्परस्य भावः "ष्यञ्" (५-१-१२४)। 2. ಹೇಳುವವನ ಇಚ್ಛೆ, ಮಾತನಾಡುವವನ ಅಭಿಪ್ರಾಯ. "यत्पदेन विना यस्याननुभावकता भवेत्। आकाङ्क्षा, वक्तुरिच्छा तु तात्पर्यं परिकीर्तितम्" भाषाप० ८४। ಭೋಜನ ಸಮಯದಲ್ಲಿ "सैन्धवमानय" ಎಂದು ಹೇಳುವವನಿಗೆ ಲವಣದಲ್ಲಿ ಇಚ್ಛೆಯೆಂದೂ ಪ್ರಯಾಣಸಮಯದಲ್ಲಿ ಈ ವಾಕ್ಯವನ್ನು ಹೇಳುವವನಿಗೆ ಕುದುರೆಯಲ್ಲಿ ತಾತ್ಪರ್ಯವೆಂದೂ ತಿಳಿಯಬೇಕು. 3. ಉದ್ದೇಶ, ಗುರಿ, ಮನೋಗತ.

**तादर्थ्य ತಾದರ್ಥ್ಯ** (ನಂ) 1. ಅದೇ ಉದ್ದೇಶವಾಗಿರುವಿಕೆ, ಅದೇ ಗುರಿಯಾಗಿರುವಿಕೆ. तस्मै इदम् तदर्थम्, तदर्थ

**तिन्तृणीक ತಿಂತೃಣೀಕ** (ನಂ) 1. ಹುಣಿಸೆಹಣ್ಣು. 2. ಹುಳಿ, ಅಮ್ಲರಸ. "तिन्तृणीके तु वृक्षाम्लं चुक्रं शुक्री रुचिः स्त्रियाम्" वैज०।

**तिन्त्रिणी ತಿಂತ್ರಿಣೀ** (स्त्री०) ಹುಣಿಸೆ ಮರ.

**तिन्त्रिडीक ತಿಂತ್ರಿಡೀಕ** (ನಂ) 1. ಹುಣಿಸೆಹಣ್ಣು. 2. ಹುಳಿ, ಅಮ್ಲರಸ. "तिन्त्रिडीकं तु वृक्षाम्ले चिञ्चायामम्लवेतसे" वैज०।

**तिन्दु ತಿಂದು** (पुं०) ತೂಬರೆಗಿಡ, ತುಂಬೆಗಿಡ. तिम आर्द्रीभावे "कुः" (उ० १-३७)। निपा०।

**तिन्दुक ತಿಂದುಕ** (पुं०) 1. ತೂಬರೆಗಿಡ, ತುಂಬೆಗಿಡ. तिन्दु संज्ञायां "कन्" (५-३-७५)। 2. ಕರ್ಷವೆಂಬ ಒಂದು ಅಳತೆ.

**तिमि ತಿಮಿ** (पुं०) 1. ಮತ್ಸ್ಯ, ಮೀನು. ताम्यति—तमु (काङ्क्षायाम्) "इन्" (उ० ४-१२१)। इकारादेशश्च। स्त्रियाम् वा "ङीप्" (ग० ४-१-४५)। तिमी ತಿಮೀ. "अमी शिरोभिस्तिमयः सरन्ध्रैरूर्ध्वं वितन्वन्ति जलप्रवाहान्" रघु० १३-१०। "अस्ति मत्स्यस्तिमिर्नाम तथा चास्ति तिमिङ्गिलः। तिमिङ्गिलगिलोऽप्यस्ति तद्गिलोऽप्यस्ति राघवः" रामा०। 2. ಸಮುದ್ರ, ಕಡಲು. "पायोधिसिन्धुमकरालयवारिराशिगङ्गाधरेन्दुजनकास्तिमिरूर्मिमाली" त्रिकाण्ड०।

**तिमिङ्गिल ತಿಮಿಂಗಿಲ** (पुं०) ದೊಡ್ಡ ಮೀನು, ತಿಮಿ ಮೀನನ್ನು ತಿನ್ನುವ ಮೀನು. तिमिं गिलति-गॄ (निगरणे) "कः" (वा० ३-२-५)। रस्य लः (८-२-२१)। मुमागमः (वा० ६-३-७०)। "अस्ति मत्स्यस्तिमिर्नाम तथा चास्ति तिमिङ्गिलः" रामा०।

**तिमिङ्गिलगिल ತಿಮಿಂಗಿಲಗಿಲ** (पुं०) ತಿಮಿಂಗಿಲವನ್ನು ನುಂಗುವ ದೊಡ್ಡ ಮೀನು. तिमिङ्गिलं गिलति—गॄ (निगरणे) "कः"(वा० ३-२-५)। रस्य लः(८-२-२१)। "अस्ति मत्स्यस्तिमिर्नाम तथा चास्ति तिमिङ्गिलः। तिमिङ्गिलगिलोऽप्यस्ति तद्गिलोऽप्यस्ति राघवः" रामा०।

**तिमित ತಿಮಿತ** (वि०) 1. ಒದ್ದೆಯಾದ, ತೇವವಾದ. 2. ನಿಶ್ಚಲವಾದ, ಚಲಿಸದಿರುವ, ಸ್ಥಿರವಾದ. तिम (आर्द्रीभावे) "क्तः" (३-४-७२)।

**तिमिर ತಿಮಿರ** (ನಂ) 1. ಅಂಧಕಾರ, ಕತ್ತಲೆ. तिम (आर्द्रीभावे) "किरच्" (उ० १-५१)। "लेखया विमलविद्रुमभासा सन्ततं तिमिरमिन्दुरुदासे" किरा० १९-२२। 2. ಒಂದು ವಿಧ ನೇತ್ರರೋಗ.

**तिमिरनुद् ತಿಮಿರನುದ್** (पुं०) 1. ಸೂರ್ಯ. तिमिरं नुदति—णुद (प्रेरणे) "क्विप्" (३-२-७६)। "तिमिरनुदो मण्डलं यदि स लेहः" बृहत्स० ५-४५। (वि०) 2. ಕತ್ತಲೆಯನ್ನು ಹೋಗಲಾಡಿಸುವ.

**तिमिररिपु ತಿಮಿರರಿಪು** (पुं०) ಸೂರ್ಯ. तिमिरस्य रिपुः।

**तिमिरारि ತಿಮಿರಾರಿ** (पुं०) ಸೂರ್ಯ. तिमिरस्य अरिः। "तिमिरारिस्तमो हन्ति प्रातःस्ववधभीरवः। वयं काका वयं काका इति जल्पन्ति वायसाः" उद्भ०।

**तिमिरि ತಿಮಿರಿ** (पुं०) ಒಂದು ಜಾತಿಯ ಮೀನು.

**तिम्यत् ತಿಮ್ಯತ್** (वि०) ಒದ್ದೆಯಾಗುತ್ತಿರುವ, ತೇವವಾಗುತ್ತಿರುವ. तिम (आर्द्रीभावे) "शतृ" (३-२-१२४)। "ताम्यत्स्तम्बेरमयूथवमथुतिम्यन्महामहीधरनितम्बे" हर्षच० २।

**तिरश्चीन ತಿರಶ್ಚೀನ** (वि०) 1. ಅಡ್ಡವಾಗಿರುವ. तिर्यगेव—स्वार्थे "खः" (५-४-८)। "गतं तिरश्चीनमनूरुसारथेः प्रसिद्धमूर्ध्वज्वलनं हविर्भुजः" माघ० १-२। 2. ಓರೆಯಾದ, ವಕ್ರವಾದ. "आहेक्षमाणः पापेन तिरश्चीनेन चक्षुषा" भाग० ७-८४।

**तिरस् ತಿರಸ್** (अव्य०) 1. ಅಡ್ಡವಾಗಿ. 2. ಸೊಟ್ಟಾಗಿ, ಅಂಕುಡೊಂಕಾಗಿ. 3. ಮರೆಯಾಗಿ. तॄ (प्लवनतरणयोः) "असुन्" (उ० ४-१८८)। 4. ಅಂತರ್ಧಾನ, ಮರೆಯಾಗುವುದು. 5. ರಹಸ್ಯವಾಗಿ, ಗುಟ್ಟಾಗಿ. 6. ತಿರಸ್ಕಾರ. "तिरोऽन्तर्धौ तिर्यगर्थे" अम०।

**तिरस्कर ತಿರಸ್ಕರ** (वि०) ಮುಚ್ಚುವ, ಮರೆಮಾಡುವ. तिरः करोति—डु कृञ् (करणे) "टः" (३-२-२०)। स्त्रियाम् "ङीप्" (४-१-१५)। –करी –ಕರೀ. "अहो बत स्वर्यशसस्तिरस्करी कुशस्थली पुण्ययशस्करी भुवः" भाग० १-१०-२७।

**तिरस्करिणी ತಿರಸ್ಕರಿಣೀ** (स्त्री०) ತೆರೆ, ಪರದೆ. तिरस्करोति—तिरस्+डु कृञ् (करणे) "णिनिः" (३-१-१३४)। "ङीप्" (४-१-५)। "दरीगृहद्वारविलम्बिबिम्बस्तिरस्करिण्यो जलदा भवन्ति" कुमा० १-१४।

**तिरस्करिन् ತಿರಸ್ಕರಿನ್** (वि०) ಮುಚ್ಚುವ, ಮರೆಮಾಡುವ. तिरस्करोति—तिरस्+डु कृञ् (करणे) "णिनिः" (३-१-१३४)। संज्ञापूर्वकविधेरनित्यत्वात् न वृद्धिः। "सोऽत्यासाद्यत तद्वेश्म तिरस्करिणमन्तरा" रामा०।

**तिरस्कार ತಿರಸ್ಕಾರ** (पुं०) 1. ಅನಾದರ, ಅಪಮಾನ, ಅವಮರ್ಯಾದೆ. तिरस्क्रियते – डु कृञ् (करणे) भावे "घञ्" (३-३-१८)। (वि०) 2. ಮರೆಮಾಡುವ, ಮುಚ್ಚುವ. (ಕಂಚುಕ ಮೊದಲಾದುದು). तिरस्क्रियतेऽनेन – तिरस् + डु कृञ् (करणे) कर० "घञ्" (३-३-१२१)। "मुनेर्बभूवागणितेषुराशेर्लीहस्तिरस्कार इवात्ममन्युः" किरा० १७-४९।

**तिरस्कारिन् ತಿರಸ್ಕಾರಿನ್** (वि०) 1. ಮುಚ್ಚುವ, ಮರೆಮಾಡುವ. तिरस्करोति – तिरस्+कृञ् "णिनिः" (३-१-१३४)। 2. ಅಪಮಾನಗೊಳಿಸುವ, ಅವಮಾನಪಡಿಸುವ. "देवि त्वन्मुखपङ्कजेन शशिनः शोभातिरस्कारिणा" रत्ना० १-२५। स्त्रियाम् "ङीप्" (४-१-५)। **-कारिणी -ಕಾರಿಣೀ.** ಪರದೆ, ತೆರೆ.

**तिरस्कृत ತಿರಸ್ಕೃತ** (स्त्री०) 1. ಅಪಮಾನಗೊಳಿಸಲ್ಪಟ್ಟ, ಅವಮರ್ಯಾದೆವುಂಟುಮಾಡಲ್ಪಟ್ಟ. तिरस् + डु कृञ् (करणे) "क्तः" (३-२-१०२)। "तिरस्कृतस्तस्य जनाभिभाविना मुहुर्महिम्ना महसां महीयसाम्" माघ० १-६२। 2. ಮುಚ್ಚಲ್ಪಟ್ಟ, ಮರೆಮಾಡಲ್ಪಟ್ಟ, ಆಚ್ಛಾದಿಸಲ್ಪಟ್ಟ.

**तिरस्कृति ತಿರಸ್ಕೃತಿ** (स्त्री०) ಅಪಮಾನ, ಅನಾದರ. तिरस् + कृञ् "क्तिन्" (३-३-९४)।

**तिरस्क्रिया ತಿರಸ್ಕ್ರಿಯಾ** (स्त्री०) 1. ಅಪಮಾನ, ಅನಾದರ. 2. ತಾತ್ಸಾರ, ಉಪೇಕ್ಷೆ. तिरस् + कृञ् "श:" (३-३-१००)। "हरे हिरण्याक्षपुरःसरासुरद्विपद्विषः प्रत्युत सा तिरस्क्रिया" माघ० १-३९। 3. ಆಚ್ಛಾದನ, ಮುಚ್ಚುವುದು, ಮರೆಮಾಡುವುದು.

**तिरीट ತಿರೀಟ** (पुं०) 1. ಲೋಧ್ರ ಗಿಡ. तीर्यते मलमनेन –तॄ (प्लवनतरणयोः) "कीटन्" (उ० ४-१८५)। "तिरीटस्तिल्वमार्जनौ" अम०। 2. ಸುವರ್ಣ, ಚಿನ್ನ. तिरीटं सुवर्णम् सि० कौ०।

**तिरीटक ತಿರೀಟಕ** (पुं०) ಲೋಧ್ರ.

**तिरीटिका ತಿರೀಟಿಕಾ** (स्त्री०) ಬದರೀಫಲ, ಬೋರೆ ಹಣ್ಣು, ಎಲಚಿಹಣ್ಣು. "बदर्यां कुवली कोलिः कूली क्रूरा तिरीटिका" वैजं०।

**तिरोधा ತಿರೋಧಾ** (स्त्री०) ಅಂತರ್ಧಾನ, ಮರೆಯಾಗುವುದು. तिरस् + डु धाञ् (धारणपोषणयोः) "अङ्" (३-३-१०६)।

**तिरोधान ತಿರೋಧಾನ** (न०) 1. ಅಂತರ್ಧಾನವಾಗುವುದು, ಮರೆಯಾಗುವುದು. तिरस् + डु धाञ् (धारणपोषणयोः) "ल्युट्" (३-३-११५)। "सिद्धान् विद्याधरांश्चैव तिरोधानेन सोऽसृजत्" भाग० ३-२०-४४। 2. ಮುಚ್ಚುವುದು, ಮರೆಮಾಡುವುದು.

**तिरोभाव ತಿರೋಭಾವ** (पुं०) ಮರೆಯಾಗುವುದು. तिरस् + भू (सत्तायाम्) "घञ्" (३-३-१८)।

**तिरोहित ತಿರೋಹಿತ** (वि०) 1. ಮರೆಯಾದ, ಅಂತರ್ಧಾನ ಹೊಂದಿದ. तिरस् + डु धाञ् (धारणपोषणयोः) "क्तः" (३-४-७२)। "तिरोहितात्मा शिशुपालसंज्ञया प्रतीयते संप्रति सोऽप्यसः परैः" माघ० १-६९। 2. ಮುಚ್ಚಲ್ಪಟ್ಟ, ಮರೆಮಾಡಲ್ಪಟ್ಟ. तिरस् + डु धाञ् कर्म० "क्तः" (३-२-१०२)। 3. ಮುಚ್ಚಿಡಲ್ಪಟ್ಟ, ಗೋಪ್ಯವಾಗಿ ಇಡಲ್ಪಟ್ಟ, ಬಚ್ಚಿಡಲ್ಪಟ್ಟ.

**तिरोहितता ತಿರೋಹಿತತಾ** (स्त्री०) ಮರೆಯಾಗುವುದು, ಅಂತರ್ಧಾನ ಹೊಂದಿರುವುದು. तिरस्+डु धाञ् (धारणपोषणयोः) "क्तः"। तिरोहितस्य भावः "तल्" (५-१-११९)। **-हितत्वम् -ಹಿತತ್ವಮ್.** "त्वः" (५-१-११९)।

**तिर्यक् ತಿರ್ಯಕ್** (अव्य०) 1. ಅಡ್ಡವಾಗಿ. 2. ವಕ್ರವಾಗಿ, ಸೊಟ್ಟಾಗಿ. "तिर्यगूर्ध्वं शरीरे च पातयित्वा शिरोधराम्" रामा०।

**तिर्यक्कारम् ತಿರ್ಯಕ್ಕಾರಮ್** (अव्य०) ಕಾರ್ಯವನ್ನು ಪೂರ್ತಿಯಾಗಿಮಾಡಿ. तिर्यक् + डुकृञ् (करणे) "णमुल्" (३-४-६०)।

**तिर्यक्क्षिप्त ತಿರ್ಯಕ್ಕ್ಷಿಪ್ತ** (वि०) ಓರೆಯಾಗಿಡಲ್ಪಟ್ಟ, ವಕ್ರವಾಗಿಡಲ್ಪಟ್ಟ. तिर्यक् वक्रं क्षिप्तम्। ಅಸ್ಥಿಭಂಗದ ಆರು ವಿಧ ಸಂಧಿಮುಕ್ತಗಳಲ್ಲೊಂದು. उत्पिष्टम् विश्लिष्टम् विवर्तितम् अवक्षिप्तम् अतिक्षिप्तम् ಮತ್ತು तिर्यक्क्षिप्तम् ಎಂದು ಸಂಧಿಮುಕ್ತವು ಆರು ವಿಧ. ಒಂದು ಎಲುಬು ತನ್ನ ಸ್ಥಾನವನ್ನು ಬಿಟ್ಟು ಒಂದು ಪಾರ್ಶ್ವಕ್ಕೆ ಹೋಗಿ ನಿಲ್ಲುವುದು "तिर्यक्क्षिप्त" ಎನಿಸುವುದು. "तिर्यक्क्षिप्ते तु एकास्थिपार्श्वापिगमनमत्यर्थं वेदना च" सुश्रुत० निदान० १५-५।

**तिर्यक्त्व ತಿರ್ಯಕ್ತ್ವ** (न०) ತಿರ್ಯಕ್ಪ್ರಾಣಿಗಳ ಸ್ವಭಾವ, ಪಶುಪಕ್ಷಿಗಳ ಸ್ವಭಾವ. तिरश्चां भावः "त्वः" (५-१-११९)। "तिर्यक्त्वं तामसा नित्यमित्येषा त्रिविधा गतिः" मनु० १२-४०।

**तिर्यक्पात ತಿರ್ಯಕ್ಪಾತ** (पुं०) ಒಂದು ಕೆಲಸಕ್ಕೆ ಅಡ್ಡವಾಗಿ ಬರುವುದು. तिर्यक् वक्रं पातः।

**तिर्यक्पातिन् ತಿರ್ಯಕ್‌ಪಾತಿನ್** (वि०) 1. ಕೆಲಸಕ್ಕೆ ಅಡ್ಡವಾಗಿ ಬರುವ. तिर्यक् पतति – पत्लृ (गतौ) "णिनिः" (३-२-७८)। 2. ವಕ್ರವಾಗಿ ಬೀಳುವ, ಓರೆಯಾಗಿರುವ. "यूनि रागतरलैरपि तिर्यक्पातिभिः श्रुतिगुणेन युतस्य" माघ० १०-४०।

**तिर्यक्स्रोतस् ತಿರ್ಯಕ್‌ಸ್ರೋತಸ್** (पुं०) ತಿರ್ಯಕ್ ಪ್ರಾಣಿ, ತಿರ್ಯಕ್ ಜಂತು, ಪಶು. तिर्यक् स्रोतः आहारसञ्चारो यस्य। ಪಶುಗಳು ತಿಂದ ಆಹಾರವು ಉದರದಲ್ಲಿ ವಕ್ರಗತಿಯಿಂದ ಸಂಚರಿಸುವುದರಿಂದ ಈ ಹೆಸರು.

**तिर्यग्गत ತಿರ್ಯಗ್ಗತ** (न०) 1. ತಿರ್ಯಕ್‌ಪ್ರಾಣಿ, ಪಶುಪಕ್ಷಿಗಳು. तिर्यक् कुटिलं गतं गमनं यस्य। (वि०) 2. ವಕ್ರವಾಗಿ ನಡೆಯುವ.

**तिर्यग्गति ತಿರ್ಯಗ್ಗತಿ** (स्त्री०) ವಕ್ರವಾಗಿ ನಡೆಯುವುದು.

**तिर्यग्गमन ತಿರ್ಯಗ್ಗಮನ** (न०) ವಕ್ರವಾಗಿ ಹೋಗುವುದು, ಡೊಂಕಾಗಿ ನಡೆಯುವುದು, ಸೊಟ್ಟಾಗಿ ಹೋಗುವುದು.

**तिर्यग्जाति ತಿರ್ಯಗ್‌ಜಾತಿ** (पुं०) 1. ಪಶು. (स्त्री०) 2. ಪಶುಪಕ್ಷಿಗಳ ಜಾತಿ. (वि०) 3. ಪಶುಪಕ್ಷಿಗಳ ಜಾತಿಗೆ ಸೇರಿದ.

**तिर्यग्डीन ತಿರ್ಯಗ್‌ಡೀನ** (न०) ವಕ್ರವಾಗಿ ಹಾರಾಡುವುದು. ಇದು ಪಕ್ಷಿಗಳ ಹಾರಾಟಗಳಲ್ಲಿ ಒಂದು ಭೇದ.

**तिर्यग्योनि ತಿರ್ಯಗ್ಯೋನಿ** (स्त्री०) 1. ಪಶುಪಕ್ಷಿಗಳ ಜಾತಿ. तिरश्चां योनिः। "स लिङ्गिनां हरत्येनस्तिर्यग्योनौ च जायते" मनु० ४-२००। (वि०) 2. ತಿರ್ಯಕ್ ಜಾತಿಯಲ್ಲಿ ಹುಟ್ಟಿದ.

**तिर्यङ्नास ತಿರ್ಯಙ್‌ನಾಸ** (वि०) ಸೊಟ್ಟಾದ ಮೂಗುಳ್ಳವನು, ವಕ್ರವಾದ ಮೂಗುಳ್ಳವನು. तिर्यक् नासा यस्य। "अनासा अतिनासाश्च तिर्यङ्नासा विनासिकाः" रामा०।

**तिर्यञ्च् ತಿರ್ಯಂಚ್** (पुं०) 1. ತಿರ್ಯಕ್‌ಪ್ರಾಣಿ, ಪಶುಪಕ್ಷಿಗಳು. तिरः अञ्चति–अन्चु (गतौ) "क्विन्" (३-२-५९)। तिर्यादेशः (६-३-९४)। "लज्जा तिरश्चां यदि चेतसि स्यादसंशयं पर्वतराजपुत्र्याः" कुमा० १-४८। (वि०) 2. ವಕ್ರವಾಗಿ ಸಂಚರಿಸುವ, ಅಡ್ಡವಾಗಿ ನಡೆಯುವ. **-क्-क्.** (अव्य०) 3. ಅಡ್ಡವಾಗಿ. "तिर्यगूर्ध्वमधस्ताच्च व्यापको महिमा हरेः" कुमा० ६-७१।

**तिल – गतौ** (भ्वा० पर० सक० से०)। तेलति। तितेल। तेलिता। अतेलीत्। ಇತ್ಯಾದಿ. ಹೋಗು, ನಡೆ.

**तिल – स्नेहने** (तुदा० पर० सक० से०)। तिलति। अतेलीत्।

**तिल – स्नेहे** (चुरा० उभ० सक० से०)। तेलयति, –ते। अतीतिलत्, –त। ಎಣ್ಣೆಯೊತ್ತು, ಎಣ್ಣೆ ಹಚ್ಚು.

**तिल ತಿಲ** (पुं०) 1. ಎಳ್ಳಿನ ಗಿಡ. तिल (स्नेहने) "कः" (३-१-१३५)। 2. ಎಳ್ಳು, ತಿಲ. ತಿಲವನ್ನು ಶನಿಗ್ರಹದ ಪ್ರೀತ್ಯರ್ಥ ದಾನಮಾಡುವರು. ತಿಲ ದಾನವು ಸಕಲ ಪಾಪಗಳನ್ನೂ ಪರಿಹರಿಸಿ ಶುಭಫಲವನ್ನುಂಟುಮಾಡುವುದು. "कल्यमुत्थाय यो विप्रः स्नातः शुक्लेन वाससा। तिलपात्रं प्रयच्छन् वै सर्वपापैः प्रमुच्यते" भा०। ತಿಲವನ್ನು ದಾನಮಾಡುವವನಿಗೆ ಒಳ್ಳೆಯದಾದರೂ ಅದನ್ನು ಪ್ರತಿಗ್ರಹಿಸುವುದು ನಿಷಿದ್ಧ. "ब्राह्मणः प्रतिगृह्णीयात् वृत्त्यर्थं साधुतस्तथा। अव्यश्रमपि मातङ्गतिललौहांश्च वर्जयेत्" ब्रह्मपु०। 3. ಎಳ್ಳಿನಷ್ಟು ಸಣ್ಣದು, ಚಿಕ್ಕದು, ಅಲ್ಪ. "तिलं तिलं समादाय रत्नानां यद्विनिर्मिता। तिलोत्तमेति तत्तस्या नाम चक्रे पितामहः" भा० आदि० २११-२०। 4. ದೇಹದಲ್ಲಿ ಹುಟ್ಟುವ ಎಳ್ಳಿನ ಆಕಾರದ ಕಪ್ಪು ಮಚ್ಚೆ, ಸಂಗಾತಿ, ಹುಟ್ಟು ಮಚ್ಚೆ.

**तिलक ತಿಲಕ** (पुं०) 1. ತಿಲಕದ ವೃಕ್ಷ. तिलति – तिल (स्नेहने) "क्वुन्" (उ० २-३२)। 2. ದೇಹದಲ್ಲಿ ಹುಟ್ಟುವ ಎಳ್ಳಿನ ಆಕಾರದ ಕಪ್ಪು ಮಚ್ಚೆ, ಸಂಗಾತಿ, ಹುಟ್ಟುಮಚ್ಚೆ. तिल इव "कन्" (५-३-९६)। "इति पिटकविभागः प्रोक्त आमूर्धतोऽयं व्रणतिलकविभागोऽप्येवमेव प्रकल्प्यः" बृहत्सं० ५२-१०। 3. ಒಂದು ಜಾತಿಯ ಕುದುರೆ. 4. ಒಂದು ರೋಗ. "तिलकं चित्रके प्राहुर्ललामे तिलकालके। रोगविद्रुमभेदेषु लोम्नि सौवर्चलेऽपि च" विश्व०। (पुंन०) 5. ಹಣೆ ಮೊದಲಾದುವುಗಳ ಮೇಲೆ ಇಟ್ಟುಕೊಳ್ಳುವ ಕಸ್ತೂರಿ ಚಂದನ ಕುಂಕುಮ ಮೊದಲಾದುವುಗಳ ಗುರುತು (ಪುಂಡ್ರ). "लग्नद्विरेफाञ्जनभक्तिचित्रं मुखे मधुश्रीस्तिलकं प्रकाश्य" कुमा० ३-३०। ಶೈವದೀಕ್ಷೆಯನ್ನು ಸ್ವೀಕರಿಸಿದವರು ತಿರ್ಯಕ್‌ಪುಂಡ್ರವನ್ನೂ ವೈಷ್ಣವದೀಕ್ಷೆಯನ್ನು ಸ್ವೀಕರಿಸಿದವರು ಊರ್ಧ್ವಪುಂಡ್ರವನ್ನೂ ಧರಿಸಬೇಕು. "शिवागमे दीक्षितैस्तु धार्यं तिर्यक् त्रिपुण्ड्रकम्। विष्ण्वागमे दीक्षितस्तु ऊर्ध्वपुण्ड्रं विधारयेत्" सूतपु०। ಮೊದಲು ಲಲಾಟ (ಹಣೆ) ದಲ್ಲಿ ಊರ್ಧ್ವಪುಂಡ್ರವನ್ನು ಧರಿಸಬೇಕು.

ಅನಂತರ ಉಳಿದ ಅಂಗಗಳಲ್ಲಿ ಧರಿಸಬೇಕು. "ऊर्ध्वपुण्ड्रं ललाटे तु सर्वेषां प्रथमं स्मृतम्। ललाटादिक्रमेणैव धारणं तु विधीयते"। 6. ಭೂಷಣ, ಅಲಂಕಾರ. (ಸಮಾಸಾಂತ್ಯದಲ್ಲಿ) ಶ್ರೇಷ್ಠ ಉತ್ತಮ ಎಂಬ ಅರ್ಥದಲ್ಲಿ ಇದರ ಪ್ರಯೋಗ. "विशेषको वा विशिशेष यस्याः श्रियं त्रिलोकीतिलकः स एव" माघ० ३-६३। (ನಂ) 7. ಮೂತ್ರಕೋಶ, ಹೊಟ್ಟೆಯೊಳಗಿನ ಜಲಾಶಯ. 8. ಕಪ್ಪು ಸೌವರ್ಚಲಲವಣ. 9. ರೋಮ, ಮೈ ಕೂದಲು.

**तिलकण ತಿಲಕಣ** (ಪುಂ) ಎಳ್ಳಿನ ಕಾಳು.

**तिलकल्क ತಿಲಕಲ್ಕ** (ಪುಂ) ಎಳ್ಳಿನ ಹಿಂಡಿ. तिलस्य कल्कः। "तिलकल्कः समधुको घृताक्तो व्रणरोपणः" सुश्रुत०।

**तिलका ತಿಲಕಾ** (ಸ್ತ್ರೀಂ) ಒಂದು ವಿಧ ಹಾರ. तिलं तिलपुष्पमिव कायति — कै (शब्दे) "कः" (३-२-३)।

**तिलकालक ತಿಲಕಾಲಕ** (ಪುಂ) 1. ದೇಹದಲ್ಲಿ ಹುಟ್ಟುವ ಎಳ್ಳಿನ ಆಕಾರದ ಕಪ್ಪು ಮಚ್ಚೆ, ಸಂಗಾತಿ, ಹುಟ್ಟುಮಚ್ಚೆ. तिल इव कालकः। 2. ಒಂದು ರೋಗ, ವಾತಪಿತ್ತಕಫಗಳ ಆಧಿಕ್ಯದಿಂದ ದೇಹದಲ್ಲಿ ತಿಲದ ಆಕಾರದಲ್ಲಿ ಹುಟ್ಟುವ ಕಪ್ಪು ಚುಕ್ಕಿಗಳು. ಇದು ಚರ್ಮದ ಮೇಲೆ ಉಬ್ಬಿರದೆ ಸಮವಾಗಿರುವುದು ಮತ್ತು ಇದರಿಂದ ನೋವಿರುವುದಿಲ್ಲ. "कृष्णानि तिलमात्राणि नीरुजानि समानि च। वातपित्तकफोद्रेकात् तान् विद्यात् तिलकालकान्"।

**तिलकिट्ट ತಿಲಕಿಟ್ಟ** (ನಂ) ಎಳ್ಳಿನ ಹಿಂಡಿ. तिलस्य किट्टम्।

**तिलकिन् ತಿಲಕಿನ್** (ವಿಂ) ಹಣೆಯ ಮೇಲೆ ತಿಲಕವನ್ನು ಧರಿಸಿರುವವನು तिलकमस्यास्ति "इनिः" (५-२-११५)।

**तिलतण्डुलक ತಿಲತಂಡುಲಕ** (ಪುಂ) 1. ಆಲಿಂಗನ, ಅಪ್ಪಿಕೊಳ್ಳುವುದು. तिलस्य तण्डुल इव कायति — कै "कः"। ಒಬ್ಬರನ್ನೊಬ್ಬರು ಅಪ್ಪಿಕೊಳ್ಳುವುದು ಎಳ್ಳು ಮತ್ತು ಅಕ್ಕಿಯ ಬೆರಕೆಯಂತೆ ಇರುವುದರಿಂದ ಈ ಹೆಸರು. 2. ಹೊಟ್ಟು ತೆಗೆದ (ಬಿಳಿಯ) ಎಳ್ಳು. ಉಜ್ಜಿ ಸಿಪ್ಪೆ ತೆಗೆದ ಎಳ್ಳು.

**तिलतुन्द ತಿಲತುಂದ** (ಪುಂ) ಗಾಣಗರವನು, ಎಳ್ಳನ್ನು ಹಿಂಡಿ ಎಣ್ಣೆ ತೆಗೆಯುವವನು. तिलं तुदति—तुद (व्यथने) "खश्" (वा० ३-२-२८)। मुमागमः (६-३-६६)।

**तिलतैल ತಿಲತೈಲ** (ನಂ) ಎಳ್ಳಿನ ಎಣ್ಣೆ.

**तिलधेनु ತಿಲಧೇನು** (ಸ್ತ್ರೀಂ) ದಾನಕ್ಕಾಗಿ ಎಳ್ಳಿನಿಂದ ತಯಾರಿಸಲ್ಪಟ್ಟ ಹಸು. तिलनिर्मिता धेनुः।

**तिलपर्ण ತಿಲಪರ್ಣ** (ಪುಂ) 1. ದೇವದಾರು ಮರ, ಸರಳ ವೃಕ್ಷ. (ನಂ) 2. ಎಳ್ಳಿನ ಎಲೆ. 3. ಗಂಧ.

**तिलपर्णी ತಿಲಪರ್ಣೀ** (ಸ್ತ್ರೀಂ) 1. ಕೆಂಪು ಗಂಧದ ಮರ. 2. ಗುಗ್ಗುಳ, ಧೂಪ. 3. ಒಂದು ನದಿ. स्वार्थे "कः"। —पर्णिका — ಪರ್ಣಿಕಾ. ಕೆಂಪು ಚಂದನ.

**तिलपिञ्ज ತಿಲಪಿಂಜ** (ಪುಂ) ಜಳ್ಳು ಎಳ್ಳು, ತಿರುಳಿಲ್ಲದ ಎಳ್ಳು. निष्फलः तिलः — तिल "पिञ्जः" (वा० ४-२-३६)।

**तिलपेज ತಿಲಪೇಜ** (ಪುಂ) ಜಳ್ಳು ಎಳ್ಳು, ತಿರುಳಿಲ್ಲದ ಎಳ್ಳು. निष्फलस्तिलः — तिल "पेजः" (वा० ४-२-३६)।

**तिलशस् ತಿಲಶಸ್** (ಅವ್ಯ०) ಎಳ್ಳಿನಷ್ಟು ಚಿಕ್ಕದಾಗಿ; ಎಳ್ಳಿನಷ್ಟು ಸಣ್ಣ ಸಣ್ಣದಾಗಿ. तिलं तिलं (कृत्वा) "शस्" (५-४-४३)। "तिलशस्तद्रथं चक्रे साश्वध्वजपताकिनम्" हरिवं०।

**तिलस्नेह ತಿಲಸ್ನೇಹ** (ಪುಂ) ಎಳ್ಳಿನ ಎಣ್ಣೆ.

**तिलान्न ತಿಲಾನ್ನ** (ನಂ) ಎಳ್ಳಿನ ಚಿತ್ರಾನ್ನ. तिलमिश्रितमन्नम्।

**तिलित्स ತಿಲಿತ್ಸ** (ಪುಂ) ಅಜಗರವೆಂಬ ಒಂದು ದೊಡ್ಡ ಸರ್ಪ, ಹೆಬ್ಬಾವು, ದಾಸರ ಹಾವು.

**तिलोत्तमा ತಿಲೋತ್ತಮಾ** (ಸ್ತ್ರೀಂ) ಒಬ್ಬ ಅಪ್ಸರಸ್ಸು, ಒಬ್ಬ ಸುರಾಂಗನೆ. ಪೂರ್ವದಲ್ಲಿ ಸುಂದೋಪಸುಂದರೆಂಬ ಇಬ್ಬರು ರಾಕ್ಷಸರು ಯಾರಿಂದಲೂ ತಮ್ಮ ಸಂಹಾರವಾಗಕೂಡದೆಂದು ಬ್ರಹ್ಮನಿಂದ ವರವನ್ನು ಪಡೆದು ಲೋಕವನ್ನು ಹಿಂಸಿಸುತ್ತಿದ್ದರು. ಅವರ ವಧೆಗಾಗಿ ಬ್ರಹ್ಮನು ಸೃಷ್ಟಿಸಿದ ಬಹಳ ಸುಂದರಿಯಾದ ತಿಲೋತ್ತಮೆಯೆಂಬ ಸುರಾಂಗನೆಯನ್ನು ಮೋಹಿಸಿ ಇಬ್ಬರೂ ಪರಸ್ಪರ ಹೊಡೆದಾಡಿ ಹತರಾದರು. ಇವಳಿಗೆ ಈ ಹೆಸರನ್ನಿಡಲು ಕಾರಣ. "तिलं तिलं समादाय रत्नानां यद्विनिर्मिता। तिलोत्तमेति तत्तस्या नाम चक्रे पितामहः" भा० आदि० २११-२०।

**तिलोदक ತಿಲೋದಕ** (ನಂ) ಎಳ್ಳಿನ ನೀರು, ಪಿತೃಗಳಿಗೆ ಕೊಡುವ ತಿಲಮಿಶ್ರಿತವಾದ ನೀರು. तिलमिश्रितमुदकम्। "बलिं भिक्षां तथार्घ्यं च पितॄणां च तिलोदकम्" भा०।

**तिल्य ತಿಲ್ಯ** (ನಂ) ಎಳ್ಳು ಬೆಳೆಯಲು ಯೋಗ್ಯವಾದ ಭೂಮಿ, ಎಳ್ಳಿನ ವ್ಯವಸಾಯಕ್ಕೆ ತಕ್ಕ ಭೂಮಿ. तिलानां भवनं क्षेत्रम् — तिल "यत्" (५-२-४)।

**तिल्व ತಿಲ್ವ** (ಪುಂ) ಲೋಧ್ರದ ಗಿಡ. तिल (स्नेहे) "वन्" (उ० ४-९५)।

**तिष्ठद्गु ತಿಷ್ಠದ್ಗು** (अव्य०) ಹಾಲನ್ನು ಕರೆಯುವ ಕಾಲ. ಸಾಯಂ ಸಂಧ್ಯಾಕಾಲ, ಗೋವುಗಳು ಸಾಯಂಕಾಲ ಮನೆಗೆ ಬಂದ ಸುಮಾರು ಒಂದು ಗಂಟೆಯನಂತರದ ಕಾಲ. तिष्ठन्ति गावो यस्मिन् काले स तिष्ठद्गु दोहनकालः। अव्ययीभावः (२-१-१७)। "आ तिष्ठद्गु जपन् सन्ध्यां प्रक्रान्तामायतीगवम्" भट्टि० ४-१४।

**तिष्य ತಿಷ್ಯ** (पुं०) 1. ಪುಷ್ಯನಕ್ಷತ್ರ. तुष्यन्त्यस्मिन्—तुष (तुष्टौ) "क्यप्" उपधाया इत्वं च निपा० (६-४-१४९)। "तिष्यः पुष्ये कलियुगे" अम०। "आहूय रामं विनयाभिराममाविःप्रमोदः प्रभुरेवमूचे। तवोत्तमाङ्गे मुकुटं विधातुमह्नाय तिष्ये दिवसे यतिष्ये" चं० रा०। 2. ಕಲಿಯುಗ. 3. ಪುಷ್ಯಮಾಸ. (वि०)4. ಪುಷ್ಯನಕ್ಷತ್ರದಲ್ಲಿ ಹುಟ್ಟಿದ. तिष्ये जातः "अण्" (४-३-१६)। अणो लुक् (४-३-३४)। 5. ಮಂಗಳವನ್ನುಂಟುಮಾಡುವ.

**तिष्यपुष्पा ತಿಷ್ಯಪುಷ್ಪಾ** (स्त्री०) ನೆಲ್ಲಿಗಿಡ. तिष्यं मङ्गल्यं पुष्पं यस्याः।

**तिष्यफला ತಿಷ್ಯಫಲಾ** (स्त्री०) ನೆಲ್ಲಿಗಿಡ. तिष्यं मङ्गल्यं फलमस्याः। ನೆಲ್ಲಿಕಾಯಿ ಶುಭಪ್ರದ. ಅದರಲ್ಲಿ ಲಕ್ಷ್ಮಿಯು ವಾಸಿಸುವಳು. "नित्यमामलके लक्ष्मीः नित्यं हरितगोमये। नित्यं शङ्खे च पद्मे च नित्यं शुक्ले च वाससि"।

**तिष्या ತಿಷ್ಯಾ** (स्त्री०) ನೆಲ್ಲಿಗಿಡ. तिष्यं मङ्गल्यमस्त्यस्याः हेतुत्वेन "अच्" (५-२-१२७)। "तिष्यो नक्षत्रभेदे स्यात्कलौ धात्र्यां च योषिति" मेदि०।

**तिहन् ತಿಹನ್** (पुं०) 1. ವ್ಯಾಧಿ, ರೋಗ. 2. ಧಾನ್ಯ. 3. ಧನುಸ್ಸು. 4. ಸದ್ಭಾವ, ಸಾಧುಸ್ವಭಾವ.

**तीक्ष्ण ತೀಕ್ಷ್ಣ** (पुं०) 1. ಯವಕ್ಷಾರ, ಸೋರುಪ್ಪು, ಪೆಟ್ಲುಪ್ಪು. 2. ಶ್ವೇತಕುಶ, ಬಿಳಿಯ ದರ್ಭೆ. तिज (निशाने) "क्स्नः" (उ० ३-१८)। दीर्घश्च। 3. ಮೊಕ್ಕ ಮರ. (न०)4. ಸಾಮುದ್ರಲವಣ, ಸಮುದ್ರದ ಉಪ್ಪು. 5. ಕಬ್ಬಿಣ. 6. ಉಷ್ಣತೆ, ಬಿಸುಪು. 7. ಆತ್ಮತ್ಯಾಗ. 8. ವಿಷ. 9. ಸಂಗ್ರಾಮ, ಯುದ್ಧ, ಕದನ. 10. ಶಸ್ತ್ರ, ಆಯುಧ. (वि०) 11. ಬಿಸಿಯಾದ, ಕಾವುಳ್ಳ, ಬಹಳ ಚುರುಕಾದ. 12. ಹರಿತವಾದ, ಚೂಪಾಗಿರುವ. "स्पृशन्ति शरवत्तीक्ष्णाः स्तोकमन्तर्विशन्ति च" माघ० २-७८। 13. ಸೂಕ್ಷ್ಮವಾದ, ಚುರುಕಾದ. "तीक्ष्णा नारुन्तुदा बुद्धिः कर्म शातं प्रतापवत्" माघ० २-१०९। 14. ಕ್ರೂರ, ದಯೆಯಿಲ್ಲದವನು. "तीक्ष्णश्चैव मृदुश्च स्यात् कार्यं वीक्ष्य महीपतिः। तीक्ष्णश्चैव मृदुश्चैव राजा भवति संमतः" मनु० ७-१४०। 15. ಬಹಳ ಕಠಿನವಾದ. "तीक्ष्णोपायप्राप्तिगम्योऽपि योऽर्थः तस्याप्यादौ संश्रयः साधुयुक्तः" पञ्चतं० ३-२४४। 16. ಜೀವವನ್ನು ಕಳೆದುಕೊಳ್ಳುವವನು, ಆತ್ಮತ್ಯಾಗ ಮಾಡಿಕೊಳ್ಳುವವನು. "तीक्ष्णं सामुद्रलवणे विषलोहाजिमुष्कके। क्लीबं यवाग्रजे पुंसि तिग्मात्मत्यागिनोस्त्रिषु" मेदि०। 17. ಬಹಳ ವೇಗವಾದ, ಶೀಘ್ರಪರಿಣಾಮವನ್ನುಂಟುಮಾಡುವ.

**तीक्ष्णकण्टक ತೀಕ್ಷ್ಣಕಂಟಕ** (पुं०) 1. ದತ್ತೂರಿಗಿಡ. 2. ಬಿದಿರು. तीक्ष्णः कण्टकोऽस्य। 3. ಇಂಗುದೀವೃಕ್ಷ, ಗಾರೆಗಿಡ. 4. ಚೂಪಾದ ಮುಳ್ಳು. तीक्ष्णः कण्टकः। (वि०)5. ಚೂಪಾದ ಮುಳ್ಳುಗಳುಳ್ಳ. तीक्ष्णाः कण्टकाः यस्य।

**तीक्ष्णकन्द ತೀಕ್ಷ್ಣಕಂದ** (पुं०) ಈರುಳ್ಳಿ. तीक्ष्णः कन्दो मूलमस्य।

**तीक्ष्णकर ತೀಕ್ಷ್ಣಕರ** (पुं०) 1. ಸೂರ್ಯ. तीक्ष्णाः कराः अस्य। ಹೀಗೆಯೇ तीक्ष्णकिरणः, तीक्ष्णदीधितिः, तीक्ष्णांशुः ಇತ್ಯಾದಿ. 2. ತೀಕ್ಷ್ಣವಾದ ಕಿರಣ.

**तीक्ष्णकर्मन् ತೀಕ್ಷ್ಣಕರ್ಮನ್** (पुं०) 1. ಖಡ್ಗ, ಕತ್ತಿ. तीक्ष्णं कर्म यस्य। (न०) 2. ಜಾಣತನದ ಕೆಲಸ, ಚುರುಕಾದ ಕೆಲಸ. तीक्ष्णं कर्म। (वि०) 3. ಕಾರ್ಯಪರನಾದ, ಉತ್ಸಾಹಶಾಲಿ, ಜಾಣತನದಿಂದ ಕೆಲಸಮಾಡುವವನು.

**तीक्ष्णकल्क ತೀಕ್ಷ್ಣಕಲ್ಕ** (पुं०) ಕೊತ್ತುಂಬರಿ ಬೀಜ. तीक्ष्णः कल्कोऽस्य।

**तीक्ष्णकान्ता ತೀಕ್ಷ್ಣಕಾಂತಾ** (स्त्री०) ಚಂಡಿಕೆಯ ಒಂದು ರೂಪ.

**तीक्ष्णगन्ध ತೀಕ್ಷ್ಣಗಂಧ** (पुं०)1. ನುಗ್ಗೆಮರ. तीक्ष्णो गन्धोऽस्य। वा "कप्" (५-४-१५४)। —गन्धकः —ಗಂಧಕಃ. "शोभाञ्जने शिग्रुतीक्ष्णगन्धकाक्षीवमोचकाः" अम०।

**तीक्ष्णगन्धा ತೀಕ್ಷ್ಣಗಂಧಾ** (स्त्री०) 1. ಬಜೆ. 2. ಕರಿಜೀರಿಗೆ. तीक्ष्णो गन्धो यस्याः। "तीक्ष्णगन्धा वचा-राजिकयोः शोभाञ्जने पुमान्" मेदि०।

**तीक्ष्णतण्डुला ತೀಕ್ಷ್ಣತಂಡುಲಾ** (स्त्री०) ಹಿಪ್ಪಲಿ. तीक्ष्णाः तण्डुलाः यस्याः।

**तीक्ष्णतैल ತೀಕ್ಷ್ಣತೈಲ** (न०)1. ಕಳ್ಳಿಹಾಲು. 2. ಮತ್ತಿಮರದ ಹಾಲು. 3. ಮದ್ಯ.

**तीक्ष्णदंष्ट्र ತೀಕ್ಷ್ಣದಂಷ್ಟ್ರ** (ಪುಂ) ವ್ಯಾಘ್ರ, ಹುಲಿ. तीक्ष्णा दंष्ट्रास्य। स्त्रियाम् जातिः "ङीष्" (४-१-६३)। –दंष्ट्री –ದಂಷ್ಟ್ರೀ.

**तीक्ष्णधार ತೀಕ್ಷ್ಣಧಾರ** (ಪುಂ) ಖಡ್ಗ, ಕತ್ತಿ. तीक्ष्णा धारास्य।

**तीक्ष्णपुष्प ತೀಕ್ಷ್ಣಪುಷ್ಪ** (ನಂ) 1. ಲವಂಗ. (स्त्री०) –पुष्पा –ಪುಷ್ಪಾ. 2. ಕೇತಕಿಗಿಡ, ತಾಳೆಮರ. 3. ಲವಂಗದ ಗಿಡ.

**तीक्ष्णफल ತೀಕ್ಷ್ಣಫಲ** (ಪುಂ) 1. ಕೊತ್ತುಂಬರಿ ಬೀಜ. 2. ಸಾಸುವೆ ಗಿಡ. तीक्ष्णं फलं यस्य।

**तीक्ष्णमूल ತೀಕ್ಷ್ಣಮೂಲ** (ಪುಂ) 1. ನುಗ್ಗೆಮರ. तीक्ष्णं मूलमस्य। (ನಂ) 2. ತೀಕ್ಷ್ಣಗುಣದ ಬೇರು. (वि०) 3. ತೀಕ್ಷ್ಣಗುಣದ ಬೇರುಳ್ಳ.

**तीक्ष्णरश्मि ತೀಕ್ಷ್ಣರಶ್ಮಿ** (ಪುಂ) 1. ತೀಕ್ಷ್ಣವಾದ ಕಿರಣಗಳುಳ್ಳ ಸೂರ್ಯ. तीक्ष्णा रश्मयोऽस्य। (वि०) 2. ಉಷ್ಣವಾದ ಕಿರಣಗಳುಳ್ಳ.

**तीक्ष्णा ತೀಕ್ಷ್ಣಾ** (स्त्री०) 1. ಬಜೆ. 2. ಗಂಗೊಂಗೆ ಗಿಡ. 3. ನಸುಗುನ್ನಿ ಗಿಡ.

**तीर ತೀರ** (ಪುಂ) 1. ವಂಗ, ತಗರ. "तीरं तटे त्रपौ तीरः" विश्व०। (ನಂ) 2. ನದಿ ಮೊದಲಾದುವುಗಳ ದಡ, ದಂಡೆ, ಕರೆ, ತಟ. तीरयति – तीर (कर्मसमाप्तौ) "अच्" (३-१-१३४)। "विभिद्यमाना विससार सारसानुदस्य तीरेषु तरङ्गसंहतिः" किरा० ८-३१।

**तीरित ತೀರಿತ** (वि०) ಮುಗಿಸಲ್ಪಟ್ಟ. ಪೂರ್ತಿಮಾಡಲ್ಪಟ್ಟ. "तीरितं चानुशिष्टं च यत्र क्वचन यद्भवेत्" मनु० ९-२३३।

**तीरु ತೀರು** (ಪುಂ) ಪರಶಿವ, ಪರಮೇಶ್ವರ.

**तीर्ण ತೀರ್ಣ** (वि०) 1. ದಾಟಲ್ಪಟ್ಟ. "तॄ (प्लवनतरणयोः) "क्तः" (३-२-१०२)। "तीर्णे भीष्ममहोदधौ कथमपि द्रोणानले निर्वृते" वेणी० ६-१। 2. ನೀರಿನಲ್ಲಿ ಇಳಿದು ಸ್ನಾನಮಾಡಿದ. 3. ಅಪಜಯ ಹೊಂದಿದ. तॄ कर्त० "क्तः" (३-४-७२)। "तीर्णः किमर्णोनिधिरेव नैष सुरक्षितेऽभूदिह यत्प्रवेशः" नैष० ८-२३।

**तीर्थ ತೀರ್ಥ** (ನಂ) 1. ಶಾಸ್ತ್ರ. 2. ಯಾಗ, ಯಜ್ಞ. 3. ಪುಣ್ಯಕ್ಷೇತ್ರ, ಯಾತ್ರಾಸ್ಥಳ. 4. ಉಪಾಯ, ಯುಕ್ತಿ. तॄ (प्लवनतरणयोः) "थक्" (उ० २-७)। "वासुदेवेन तीर्थेन तात गच्छस्व संशमम्" भा० उद्योग० १२५-२६। 5. ಪುಣ್ಯತೀರ್ಥ, ಪುಣ್ಯಕ್ಷೇತ್ರಗಳ ತೀರ್ಥ. (ನದಿ ಸರಸ್ಸು ಮೊದಲಾದುವು). "नदीदेवनिखातेषु तडागेषु सरस्सु च। स्नानं समाचरेन्नित्यं गर्तप्रस्रवणेषु च। निपानादुद्धृतं पुण्यं ततः प्रस्रवणादिकम्। ततोऽपि सारसं पुण्यं ततो नादेयमुच्यते। तीर्थतोयं ततः पुण्यं गङ्गातोयं ततोऽधिकम्" अग्निपु०। 6. ನದಿ ಕೆರೆ ಕೊಳ ಮೊದಲಾದುವುಗಳಲ್ಲಿ ನೀರಿಗೆ ಇಳಿಯುವುದು, ಜಲಾವತರಣ. "विषमोऽपि विगाह्यते नयः कृततीर्थः पयसामिवाशयः" किरा० २-३। 7. ಋಷಿಗಳು ಸ್ನಾನಮಾಡಿದ ನದಿ ಸರಸ್ಸು ಮೊದಲಾದುದು. "अकर्दममिदं तीर्थं भरद्वाज निशामय। रमणीयं प्रसन्नाम्बु सन्मनुष्यमनो यथा" रामा०। 8. ದಾನವನ್ನು ತೆಗೆದುಕೊಳ್ಳಲು ಯೋಗ್ಯನಾದವನು, ಸತ್ಪಾತ್ರ. "दूरादेव परीक्षेत ब्राह्मणं वेदपारगम्। तीर्थं तद्धव्यकव्यानां प्रदाने सोऽतिथिः स्मृतः" मनु० ३-१३०। 9. ಉಪಾಧ್ಯಾಯ, ಗುರು, ಶಿಕ್ಷಕ. "शिक्षितोऽसि सारथ्ये तीर्थतः पुरुषर्षभ" भा०। "मया सुतीर्थादभिनयविद्या शिक्षिता" माल० १। 10. ರಾಜನ ಮಂತ್ರಾಲೋಚನೆಯ ಸ್ಥಳ ಮೊದಲಾದ ಅಷ್ಟಾದಶ ಸ್ಥಾನಗಳು. 11. ಸಚಿವ, ಮಂತ್ರಿ. 12. ಯೋನಿ, ಸ್ತ್ರೀಯರ ಗುಹ್ಯಾಂಗ. 13. ಹೆಂಗಸರ ರಜಸ್ಸು, ಸ್ತ್ರೀಯರ ಮುಟ್ಟು. 14. ಯತಿಗಳ ಹೆಸರಿನೊಡನೆ ಸೇರಿಸುವ ಒಂದು ಪೂಜ್ಯವಾಚಕ ಪದ. आनन्दतीर्थः विश्वेशतीर्थः विद्यामान्यतीर्थः ಇತ್ಯಾದಿ. 15. ಜಲ, ನೀರು. "जलावतारो गुर्वयोन्युपायशास्त्रादि यज्ञो मुनिजुष्टतोयम्। मन्त्राद्योऽष्टादश पुण्यभूमिः पात्रं जलं स्त्रीकुसुमं च तीर्थम्" नानार्थर०। 16. ಅಗ್ನಿ, ಬೆಂಕಿ. 17. ನದಿ ಮೊದಲಾದುವುಗಳ ಸ್ನಾನಘಟ್ಟ, ನೀರಿಗೆ ಇಳಿಯುವ ದಾರಿ. 18. ಯೋಗ. ತೀರ್ಥವು ಸ್ಥಾವರ ಜಂಗಮ ಮತ್ತು ಮಾನಸಗಳೆಂದು ಮೂರು ವಿಧ.

**ಸ್ಥಾವರ ತೀರ್ಥ:** ಪುಣ್ಯಕ್ಷೇತ್ರ, ಪುಣ್ಯನದಿಗಳು ಇತ್ಯಾದಿ. "प्रथमं पुष्करं तीर्थं नैमिशारण्यमेव च। प्रयागं च प्रवक्ष्यामि धर्मारण्यं द्विजोत्तमाः। धेनुका चम्पकारण्यं सैन्धवारण्यमेव च" ಇತ್ಯಾದಿ.

**ಜಂಗಮ ತೀರ್ಥ:** ಬ್ರಾಹ್ಮಣರು. "ब्राह्मणा जङ्गमं तीर्थं निर्मलं सार्वकामिकम्। येषां वाक्योदकेनैव शुद्ध्यन्ति मलिना जनाः"।

**ಮಾನಸ ತೀರ್ಥ:** ಸತ್ಯ, ಮನಃಶುದ್ಧಿ, ಇಂದ್ರಿಯ ನಿಗ್ರಹ ಇತ್ಯಾದಿ. "सत्यं तीर्थं क्षमा तीर्थं तीर्थमिन्द्रियनिग्रहः। सर्वभूतदया तीर्थं सर्वत्रार्जवमेव च। दानं तीर्थं दमस्तीर्थं सन्तोषस्तीर्थमुच्यते। ब्रह्मचर्यं परं तीर्थं तीर्थं

च प्रियवादिता। ज्ञानं तीर्थं धृतिस्तीर्थं पुण्यं तीर्थमुदाहृतम्" ಇತ್ಯಾದಿ. ब्रह्मपु०। "यस्य हस्तौ च पादौ च मनश्चैव सुसंयतम्। विद्या तपश्च तीर्थं च स तीर्थफलमश्नुते" प्रबोध० २-१४।

**तीर्थंकर ತೀರ್ಥಕರ**(पुं०)1. ವಿಷ್ಣು. स्मरणकीर्तनादिना सर्वपावनानि तीर्थानि गङ्गादिऋषिजुष्टानि जलानि करोति, तीर्थानि श्रुतिस्मृत्यादिशास्त्राणि करोति, तीर्थानि स्वावताररूपाणि अवतारसोपानानि करोति इति वा तीर्थ + डु कृञ् (करणे) "टः" (३-२-२०)। ಗಂಗಾನದಿ ಮೊದಲಾದ ಅನೇಕ ತೀರ್ಥಗಳಿಗೆ ಕಾರಣನಾದುದರಿಂದಲೂ ಹಯಗ್ರೀವಾವತಾರವೆತ್ತಿ ಮಧುಕೈಟಭರನ್ನು ಸಂಹರಿಸಿ ಶ್ರುತಿಸ್ಮೃತಿ ಮೊದಲಾದುವುಗಳನ್ನು ಚತುರ್ಮುಖಾದಿಗಳಿಗೆ ಉಪದೇಶಿಸಿದುದರಿಂದಲೂ ಆತ್ಮಪ್ರವೇಶ ಸೌಲಭ್ಯಕ್ಕಾಗಿ ಅನೇಕ ಅವತಾರ ರೂಪವಾದ ಸೋಪಾನಗಳನ್ನು ನಿರ್ಮಿಸಿದುದರಿಂದಲೂ ವಿಷ್ಣುವು ತೀರ್ಥಕರನು. "गङ्गादितीर्थहेतुत्वात् श्रुतिस्मृत्योः प्रवर्तनात्। आत्मप्रवेशसोपानकृत्त्वात् तीर्थकरः स्मृतः" इति निरुक्तिः। "मनोजवस्तीर्थकरः वसुरेता वसुप्रदः" वि० स०। 2. ಜಿನದೇವ, ಜೈನಮತಪ್ರವರ್ತಕರು ಮತ್ತು ಈ ಸಿದ್ಧಾಂತದ ಪ್ರಣೇತರು. ಪ್ರವಚನ ಶಾಸ್ತ್ರ ಪ್ರವರ್ತಕರಾದ ಇಪ್ಪತ್ತನಾಲ್ಕು ತೀರ್ಥಂಕರರು ಈ ಸಿದ್ಧಾಂತದ ಪ್ರಣೇತರು. ಇವರಲ್ಲಿ ಮಹಾವೀರ ವರ್ಧಮಾನ ಜಿನೇಶ್ವರರು ಇಪ್ಪತ್ತನಾಲ್ಕನೆಯವರು. (वि०)3. ಶಾಸ್ತ್ರಗಳನ್ನು ಬರೆದವರು. करोति – कृञ् "अच्" (३-१-१३४)। तीर्थस्य करः।

**तीर्थकाक ತೀರ್ಥಕಾಕ** (पुं०) ಅತ್ಯಾಸೆಯುಳ್ಳ ಮನುಷ್ಯ, ಪುಣ್ಯಕ್ಷೇತ್ರಗಳಲ್ಲಿ ಕಾಗೆಗಳು ಹಾರಾಡುವಂತೆ ಹೊಟ್ಟೆಗಾಗಿ ಅಲೆದಾಡುವ ಮನುಷ್ಯ, ಹೊಟ್ಟೆಬಾಕ. तीर्थे पुण्यक्षेत्रादिस्थले काक इव।

**तीर्थकृत् ತೀರ್ಥಕೃತ್** (पुं०) 1. ಜಿನದೇವ. (वि०) 2. ಶಾಸ್ತ್ರಪ್ರವರ್ತಕ. तीर्थं करोति – डु कृञ् (करणे) "क्विप्" (३-२-६१)।

**तीर्थङ्कर ತೀರ್ಥಂಕರ** (पुं०) 1. ಜಿನದೇವ, ಜಿನೇಶ್ವರ. 2. ಶಾಸ್ತ್ರಕಾರ, ಶಾಸ್ತ್ರಪ್ರವರ್ತಕ. करोति—डु कृञ् (करणे) "अच्" (३-१-१३४)। तीर्थस्य करः। मुम् ? "शम्भुः स्वयम्भूर्भगवान् जगत्प्रभुस्तीर्थङ्करस्तीर्थकरो जिनेश्वरः" अभि० चि०। "तीर्थकर" ಪದದಲ್ಲಿ ನೋಡಿ.

**तीर्थयात्रा ತೀರ್ಥಯಾತ್ರಾ** (स्त्री०) ಪುಣ್ಯಕ್ಷೇತ್ರಗಳಿಗೆ ಮಾಡುವ ಪ್ರಯಾಣ. तीर्थं पुण्यक्षेत्रमुद्दिश्य यात्रा।

**तीर्थराज ತೀರ್ಥರಾಜ** (पुं०) ಪ್ರಯಾಗಕ್ಷೇತ್ರ. तीर्थानां राजा – "टच्" (५-४-९१)।

**तीर्थराजि(जी) ತೀರ್ಥರಾಜಿ(ಜೀ)** (स्त्री०) ಕಾಶಿ, ವಾರಾಣಸಿ. तीर्थानां राजिरत्र। वा "ङीप्"। "वाराणसी तीर्थराजी" त्रिकाण्ड०।

**तीर्थवाक ತೀರ್ಥವಾಕ**(पुं०)ತಲೆಯಕೂದಲು. तीर्थमिव वाको वचनमस्य। ಉತ್ತಮಾಂಗ (ತಲೆ) ದಲ್ಲಿರುವುದರಿಂದ ಶ್ರೇಷ್ಠವಾದುದೆಂದು ಇದು ಪ್ರಶಂಸನೀಯ.

**तीर्थशौच ತೀರ್ಥಶೌಚ**(न०) ಸ್ನಾನಘಟ್ಟ ಮೊದಲಾದುವುಗಳನ್ನು ಪರಿಷ್ಕರಿಸುವುದು. ಸೇತುವೆಗಳನ್ನು ಕಟ್ಟುವುದು ಸ್ನಾನಘಟ್ಟಗಳನ್ನು (ನೀರಿಗೆ ಇಳಿಯುವ ಸೋಪಾನಗಳನ್ನು) ಅಚ್ಚುಕಟ್ಟುಮಾಡಿಸುವುದು ಇತ್ಯಾದಿ ಬಹಳ ಶ್ರೇಯಸ್ಕರ. "सेतुबन्धरता ये च तीर्थशौचरताश्च ये। तडागकूपकर्तारो मुच्यन्ते ते तृषाभयात्" आदित्यपु०।

**तीर्थसेविन् ತೀರ್ಥಸೇವಿನ್** (पुं०) 1. ಬಕಪಕ್ಷಿ. (वि०) 2. ಪುಣ್ಯಕ್ಷೇತ್ರಗಳಲ್ಲಿ ಸಂಚರಿಸುವವನು. तीर्थं जलप्रान्तं सेवते मत्स्यग्रहणार्थं पुण्यक्षेत्रं सेवते वा – षेवृ (सेवायाम्) "णिनिः" (३-२-७८)। स्त्रियाम् "ङीप्" (४-१-५)। –सेविनी – ಸೇವಿನೀ.

**तीवर ತೀವರ** (पुं०)1. ಸಮುದ್ರ, ಕಡಲು. 2. ವ್ಯಾಧ, ಬೇಡರವನು, ಮೃಗಗಳ ಬೇಟೆಯಿಂದ ಜೀವಿಸುವವನು. तीव (स्थौल्ये) "ष्वरच्" (उ० ३-१)। निपा०। 3. ಒಬ್ಬ ಬೆರಕೆ ಜಾತಿಯವನು. ರಾಜಪುತ್ರ ಸ್ತ್ರೀಯಲ್ಲಿ ಕ್ಷತ್ರಿಯನಿಂದ ಹುಟ್ಟಿದವನು. "सद्यः क्षत्रियवीर्येण राजपुत्रस्य योषिति। बभूव तीवरश्चैव पतितो जारदोषतः"। (स्त्री०) –री – ರೀ. ಬೇಡರ ಹೆಂಗಸು.

**तीव्र ತೀವ್ರ** (वि०) 1. ಬಹಳವಾದ, ಅತ್ಯಂತವಾದ, ಹೆಚ್ಚಾದ, ಮಿತಿಮೀರಿದ. तीव (स्थौल्ये) "रक्" बाहु०। "तीव्राभिषङ्गप्रभवेण वृत्ति मोहेन संस्तम्भयतेन्द्रियाणाम्" कुमा० ३-७३। 2. ತೀಕ್ಷ್ಣವಾದ, ಬಹಳ ಚುರುಕಾದ. "अनुभवति हि मूर्ध्ना पादपस्तीव्रमुष्णम्" शाकु० ५-७। 3. ಬಹಳ ಚೂಪಾದ, ಬಹಳ ಹರಿತವಾದ. "तथैव तीव्रो हृदि शोकशङ्कुः" उ० रा० ३-३५। 4. ಕಟುವಾದ, ಕಾರವಾದ. 5. ಬಹಳ ಉಗ್ರವಾದ, ಬಹಳ ಕಷ್ಟವಾದ. "तीव्रं महाव्रतमिवात्र चरन्ति वप्राः" माघ० ४-५८। 6. ಬಹಳ ಬಿಸಿಯಾದ, 7. ಬಹಳ ಬಿರುಸಾದ, ಬಹಳ ವೇಗವಾದ. "तीव्रमत्युष्णकटुकनितान्तेष्वन्यवन्मतम्" विश्व०। 8. ಬಲವಾದ. (पुं०)

9. ಚೂಪು, ಮೊನಚು. 10. ಕಾರ. 11. ಲೋಹ, ಕಬ್ಬಿಣ. (स्त्री०) –त्रा –ತ್ರಾ. 12. ಕರಿ ಸಾಸುವೆ. 13. ಕಟುಕರೋಹಿಣಿ. 14. ಒಂದು ಜಾತಿಯ ಗರಿಕೆ ಹುಲ್ಲು. (अव्य०)15. ಬಹಳ ವೇಗವಾಗಿ. 16. ಬಹಳ ಖಾರವಾಗಿ. 17. ಬಹಳ ಚೂಪಾಗಿ. 18. ಬಹಳವಾಗಿ. "तीव्रा तु कटुरोहिण्यां राजिकामण्डदूर्वयो.। त्रिष्वत्युष्णे नितान्ते च कटौ" मेदि०। "तीव्रं कटु नितान्तं च" "त्रिकाण्ड०।

**तीव्रकण्ठ ತೀವ್ರಕಂಠ** (पुं०) ಸೂರಣಗೆಡ್ಡೆ. तीव्रः कण्ठो यस्मात्। ಇದನ್ನು ತಿಂದಾಗ ಗಂಟಲಲ್ಲಿ ತೊಂದರೆಯಾಗುವುದರಿಂದ ಈ ಹೆಸರು.

**तीव्रकन्द ತೀವ್ರಕಂದ** (पुं०) ಸೂರಣಗೆಡ್ಡೆ.

**तीव्रगन्ध ತೀವ್ರಗಂಧ** (वि०) ಉಗ್ರವಾದ ವಾಸನೆಯುಳ್ಳ.

**तीव्रगन्धा ತೀವ್ರಗಂಧಾ** (स्त्री०)1. ಅಜವಾನ, ಓಮ, ವಾದಕ್ಕಿ. 2. ಜೀರಿಗೆ. 3. ಬಜೆ.

**तीव्रवेदना ತೀವ್ರವೇದನಾ** (स्त्री०) ಯಾತನೆ, ಅತಿಯಾದ ನೋವು, ಘೋರವಾದ ಹಿಂಸೆ. तीव्रा चासौ वेदना च।

**तु ತು** (अव्य०) 1. ಶ್ಲೋಕದ ಪಾದಪೂರ್ತಿಗಾಗಿ ಉಪಯೋಗಿಸುವ ಒಂದು ಪದ (ಇದಕ್ಕೆ ಅರ್ಥವಿಲ್ಲ). तुद (व्यथने) "डुः" (वा० ३-२-१८०)। "तु हि च स्मह्वै पादपूरणे" अम०। "अवगूर्य त्वब्दशतं सहस्रमभिहत्य च। जिघांसया ब्राह्मणस्य नरकं प्रतिपद्यते" मनु० ११-२०६। "तु" ಪದವು ಈ ಕೆಳಗಿನ ಅರ್ಥಗಳಲ್ಲಿ ಉಪಯೋಗಿಸಲ್ಪಡುವುದು. 2. ಭೇದ. (ಆದರೆ ಎನ್ನುವ ಅರ್ಥ) "मृद्घटवत् सुखभेद्यो दुःसन्धानश्च दुर्जनो भवति। सुजनस्तु कनकघटवद्दुर्भेद्यश्चाशु सन्धेयः" हितो० १-३-९२। 3. ಅವಧಾರಣ, ನಿಶ್ಚಯ. 4. ಸಮುಚ್ಚಯ. "उष्ट्रयानं समारुह्य खरयानं तु कामतः" मनु० ११-२०१। 5. ಪಕ್ಷಾಂತರ. "आचाराद्विच्युतो विप्रो न वेदफलमश्नुते। आचारेण तु संयुक्तः संपूर्णफलभाग्भवेत्" मनु० १-१०९। 6. ನಿಯೋಗ, ಅಪ್ಪಣೆ. 7. ಪ್ರಶಂಸೆ, ಹೊಗಳಿಕೆ. 8. ನಿಗ್ರಹ, ಅಡಗಿಸುವಿಕೆ, ಹತೋಟಿಯಲ್ಲಿಡುವುದು. "तु पादपूरणे भेदे समुच्चयेऽवधारणे। पक्षान्तरे नियोगे च प्रशंसायां विनिग्रहे" मेदि०।

**तुगा ತುಗಾ** (स्त्री०) ತವಕ್ಷೀರ.

**तुगाक्षीरी ತುಗಾಕ್ಷೀರೀ** (स्त्री०) ತವಕ್ಷೀರ. तुगैव क्षीरी।

**तुग्र ತುಗ್ರ** (पुं०) ಅಶ್ವಿನೀದೇವತೆಗಳ ಶಿಷ್ಯನಾದ ಒಬ್ಬ ರಾಜರ್ಷಿ.

**तुङ्ग ತುಂಗ** (पुं०) 1. ಪುನ್ನಾಗವೃಕ್ಷ, ಸುರಗಿಮರ, ಸುರಹೊನ್ನೆ ಮರ. तुञ्ज्यते – तुजि (हिंसायाम्) "घञ्" (३-३-१८)। 2. ಪರ್ವತ, ಬೆಟ್ಟ. 3. ಬುಧಗ್ರಹ. 4. ಶಿವ. 5. ತೆಂಗಿನಮರ. 6. ಸಿಂಹಾಸನ. "निपात्य तुङ्गाद्रिपुयूथनाथं हृतं व्यकर्षत् व्यसुमोजसोर्व्याम्" भाग० ३-३-१। 7. ಗ್ರಹಗಳ ಉಚ್ಚರಾಶಿ. (न०) 8. ಹೂವಿನ ಕುಸುರು, ಕಿಂಜಲ್ಕ, ಕೇಸರ. (वि०)9. ಉನ್ನತವಾದ, ಎತ್ತರವಾದ. "दुःखेन भोजयितुमाशयिता शशाक तुङ्गाश्वकायमनमन्तमनादरेण" माघ० ५-५१। 10. ಪ್ರಧಾನವಾದ, ಪ್ರಮುಖವಾದ.

**तुङ्गक ತುಂಗಕ** (पुं०) 1. ಪುನ್ನಾಗವೃಕ್ಷ. ಸುರಗಿಮರ. तुङ्ग स्वार्थे "कः"। (न०) 2. ಪ್ರಸಿದ್ಧ ಪುಣ್ಯಕ್ಷೇತ್ರವಾದ ಒಂದು ಅರಣ್ಯ. "तुङ्गकारण्यमासाद्य ब्रह्मचारी जितेन्द्रियः। वेदानध्यापयत्तत्र ऋषिः सारस्वत पुरा" भा० वन० ८५-४६।

**तुङ्गबीज ತುಂಗಬೀಜ** (न०) ಪಾದರಸ. तुङ्गस्य शिवस्य बीजम्।

**तुङ्गभ ತುಂಗಭ** (न०) ಸೂರ್ಯಾದಿ ಗ್ರಹಗಳ ಉಚ್ಚರಾಶಿ.

**तुङ्गभद्र ತುಂಗಭದ್ರ** (पुं०) 1. ಮದವೇರಿದ ಆನೆ. (स्त्री०) –भद्रा –ಭದ್ರಾ. 2. ತುಂಗಭದ್ರಾನದಿ, ಕೃಷ್ಣಾನದಿಗೆ ಸೇರುವ ಒಂದು ಮಹಾನದಿ. "कावेरी वेणी पयस्विनी शर्करावती तुङ्गभद्रा कृष्णा वेण्या भीमरथी गोदावरी" ಇತ್ಯಾದಿ भाग० ५-१९-१८। "तुङ्गभद्रो मदोत्कटे। तुङ्गभद्रा नदीभेदे" हेम०।

**तुङ्गा ತುಂಗಾ** (स्त्री०) 1. ತವಕ್ಷೀರ. 2. ಶಮೀವೃಕ್ಷ, ಬನ್ನಿಮರ. 3. ತುಂಗಾನದಿ.

**तुङ्गिन् ತುಂಗಿನ್** (पुं०) 1. ಮೇಷ ಮೊದಲಾದ ಉಚ್ಚರಾಶಿಯಲ್ಲಿರುವ ಗ್ರಹ. तुङ्गं मेषादिकं उच्चत्वेनास्त्यस्य "इनिः" (५-२-११५)। (स्त्री०) –नी –ನೀ. 2. ಮಹಾಶತಾವರೀ ಗಿಡ.

**तुङ्गी ತುಂಗೀ**(स्त्री०) 1. ನಾರಂಬೇಳೆ ಗಿಡ. तुङ्ग गौरा० "ङीष्" (४-१-४१)। 2. ಅರಶಿನ. "बर्बरा कबरी तुङ्गी खरपुष्पाजगन्धिका" अम०। "तुङ्गी निशाबर्बरयोः" मेदि०। 3. ರಾತ್ರಿ. "श्यामा याम्या दोषा तुङ्गी भौती शताक्षी च" त्रिकाण्ड०।

**तुङ्गीपति ತುಂಗೀಪತಿ** (पुं०) ಚಂದ್ರ. तुङ्गयाः रात्रेः पतिः।

**तुङ्गीश ತುಂಗೀಶ** (पुं०) 1. ಶಿವ, ಈಶ್ವರ. 2. ಸೂರ್ಯ. 3. ಚಂದ್ರ. "तुङ्गीशस्तु पुमान् गौरीवल्लभे हिमदीधितौ" मेदि०।

**तुच्छ ತುಚ್ಛ** (न०) 1. ದುಃಖ. (वि०) 2. ಶೂನ್ಯವಾದ, ಬರಿದಾದ. तुदा व्यथया छयति — छो (छेदने) "क:" (वा० ३-२-५)। "तुच्छं दुःखे नपुंसकम् शून्ये त्रिषु" नानार्थर०। 3. ಹೀನ, ದುರ್ಗತಿಕ, ದರಿದ್ರ, ಬಡವ. 4. ಅಲ್ಪವಾದ, ಸಣ್ಣದಾದ, ಚಿಕ್ಕದಾದ. 5. ನೀಚ. ಕಡಮೆ ದರ್ಜೆಯ, ತಿರಸ್ಕಾರಕ್ಕೆ ಯೋಗ್ಯವಾದ.

**तुच्छद्रु ತುಚ್ಛದ್ರು** (पुं०) ಹರಳು ಗಿಡ.

**तुच्छधान्य ತುಚ್ಛಧಾನ್ಯ** (न०) ಜಳ್ಳು, ತಿರುಳಿಲ್ಲದ ಧಾನ್ಯ, ಹೊಟ್ಟು.

**तुटितुट ತುಟಿತುಟ** (पुं०) ಪರಶಿವ, ಪರಮೇಶ್ವರ. "नमस्तुण्डयाय तुटयाय नमस्तुटितुटाय च"।

**तुटुम ತುಟುಮ** (पुं०) ಇಲಿ. "उन्दुरुस्तुटुमो रन्ध्रबभ्रुः" त्रिकाण्ड०।

**तुण्ड ತುಂಡ** (न०) 1. ಮುಖ, ಬಾಯಿ. 2. ಹಕ್ಕಿಗಳ ಕೊಕ್ಕು. 3. ಬಾಣದ ತುದಿ. 4. ಹಂದಿಯ ಮೂತಿ. तुण्डति — तुडि (तोडने) "अच्" (३-१-१३४)।

**तुण्डि ತುಂಡಿ** (पुं०) 1. ಮುಖ, ಬಾಯಿ. 2. ಹಕ್ಕಿಯ ಕೊಕ್ಕು, ಮೂತಿ. 3. ಬಾಣದ ತುದಿ. 4. ಹಂದಿಯ ಮೂತಿ. 5. ಆನೆಯ ಸೊಂಡಿಲು. तुण्डति — तुडि (तोडने) "इन्" (उ० ४-११७)। (स्त्री०) 6. ನಾಭಿ, ಹೊಕ್ಕಳು. (वि०) 7. ಎತ್ತರವಾದ ಹೊಕ್ಕಳುಳ್ಳ, ಉಬ್ಬಿದ ಹೊಕ್ಕಳುಳ್ಳ. "तुण्डिरुन्नतनाभिकः" वैज०।

**तुण्डिक ತುಂಡಿಕ** (वि०) 1. ಸೊಂಡಿಲುಳ್ಳ. 2. ಮೂತಿಯುಳ್ಳ.

**तुण्डिका ತುಂಡಿಕಾ** (स्त्री०) 1. ತೊಂಡೆಗಿಡ. तुण्डं तदवयवाधरसादृश्यमस्त्यस्याः "ठन्" (५-२-११५)। 2. ನಾಭಿ, ಹೊಕ್ಕಳು. तुण्डि स्वार्थे "कः"।

**तुण्डिकेरी ತುಂಡಿಕೇರೀ** (स्त्री०) 1. ಹತ್ತಿಗಿಡ. 2. ತೊಂಡೆಗಿಡ. तुण्डिकान् शरीराणि ईरयति — ईर (गतौ कम्पने च) "अण्" (३-२-१)। "ङीप्" (४-१-१५)। तुण्डं चञ्चुरस्त्यस्य "ठन्" (५-२-११५)। तुण्डिकान् ईरयति वा। "तुण्डिकेरी समुद्रान्ता कार्पासी बदरेति च"। "तुण्डिकेरी रक्तफला बिम्बिका पीलुपर्ण्यपि" अम०।

**तुण्डिभ ತುಂಡಿಭ** (वि०) ದೊಡ್ಡ ಹೊಟ್ಟೆಯುಳ್ಳವನು. तुण्डिरस्यास्ति — तुण्डि "भः" (५-२-१३९)।

**तुण्डिल ತುಂಡಿಲ** (वि०) ದೊಡ್ಡ (ಉಬ್ಬಿದ) ಹೊಟ್ಟೆಯುಳ್ಳವನು. तुण्डिरस्यास्ति — तुण्डि "लच्" (५-२-९६)।

**तुत्थ ತುತ್ಥ** (पुं०) 1. ಅಗ್ನಿ, ಬೆಂಕಿ. तुद (व्यथने) "थक्" (उ० २-७)। तुत्थोऽग्निः सि० कौ०। 2. ಶಿಲೆ, ಕಲ್ಲು. (न०) 3. ರಸಾಂಜನ. (स्त्री०) —त्था — ತ್ಥಾ 4. ನೀಲಿಗಿಡ. 5. ಸಣ್ಣ ಜಾತಿಯ ಯಾಲಕ್ಕಿ ಗಿಡ. "तुत्थमञ्जनभेदे स्यान्नीलीसूक्ष्मैलयोः स्त्रियाम्" मेदि०।

**तुत्थाञ्जन ತುತ್ಥಾಂಜನ** (न०) ಮೈಲುತುತ್ತ, ಗಂಧಕಾಮ್ಲ.

**तुद — व्यथने** (तुदा० उभ० सक० अनि०)। तुदति —ते। तुतोद, तुतुदे। तोत्ता तोत्तारौ तोत्तारः। तोत्स्यति —ते। तुदतु, —ताम्। अतुदत्, —त। तुदेत्, —त। तुद्यात्, तुत्सीष्ट। अतौत्सीत्, अतुत्त। अतोत्स्यत्, —त। 1. ವ್ಯಥೆಪಡಿಸು, ನೋಯಿಸು. "वाक्सायकैरथ तुतोद तदा विपक्षः" माघ० २०-७७। 2. ಪೀಡಿಸು, ಬಾಧಿಸು, ಹೊಡೆ, ಏಟುಕೊಡು. "तुतोद गदया चारिं तं द्रुद्रावाद्रिणा कपिः" भट्टि० १४-८१।

कर्मणि :— तुद्यते। तुतुदे। तोत्ता। तोत्स्यते। तुद्यताम्। अतुद्यत। ಇತ್ಯಾದಿ.

कृत्सु :— तोत्तव्यम्। तोदनीयम्। तोद्यम्। तुन्नः। तुन्नवान्। तुदन्, तुदती, तुदन्ती। तुदमानः। तोत्तुम्। तुन्नम्। तुत्तम्। तोदनम्। तुत्त्वा। प्रतुद्य।

**तुन्द ತುಂದ** (न०) ಉದರ, ಹೊಟ್ಟೆ. तुदति — तुद (व्यथने) "कः" (३-१-१३५)। नुम् (७-१-९)।

**तुन्दकूपी ತುಂದಕೂಪೀ** (स्त्री०) ನಾಭಿ, ಹೊಕ್ಕಳು.

**तुन्दपरिमार्ज ತುಂದಪರಿಮಾರ್ಜ** (वि०) ಹೊಟ್ಟೆಯನ್ನು ಉಜ್ಜಿಕೊಳ್ಳುವವನು. तुन्दमुदरं परिमार्ष्टि — परि + मृजूष् (शुद्धौ) "अण्" (३-२-१)।

**तुन्दपरिमृज ತುಂದಪರಿಮೃಜ** (वि०) ಅಲಸ, ಸೋಮಾರಿ. तुन्दं परिमार्ष्टि — परि + मृजूष् (शुद्धौ) "कः" (३-२-५)।

**तुन्दवत् ತುಂದವತ್** (वि०) ದೊಡ್ಡ ಹೊಟ್ಟೆಯುಳ್ಳವನು. तुन्द "मतुप्" (५-२-९४)।

**तुन्दि ತುಂದಿ** (स्त्री०) "तुण्डि" ಪದದ ಅರ್ಥ.

**तुन्दिक ತುಂದಿಕ** (वि०) ದೊಡ್ಡ ಹೊಟ್ಟೆಯುಳ್ಳವನು. अतिशयितं तुन्दमस्त्यस्य "ठन्" (५-२-११५)।

**तुन्दिन् ತುಂದಿನ್** (वि०) ದೊಡ್ಡ ಹೊಟ್ಟೆಯುಳ್ಳವನು. अतिशयितं तुन्दमस्त्यस्य "इनिः" (५-२-११५)। स्त्रियाम् "ङीप्" (४-१-५)। -नी -ನೀ.

**तुन्दिभ (ल) ತುಂದಿಭ (ಲ)** (वि०) 1. ದೊಡ್ಡ ಹೊಟ್ಟೆಯುಳ್ಳವನು. तुन्दिरस्यास्ति—तुन्दि "भः" (५-२-१३९)। तुन्द "इलच्" (५-२-११७) वा। "तुन्दिलस्तुन्दिभस्तुन्दी बृहत्कुक्षिः पिचण्डिलः" अम०। 2. ತುಂಬಿದ ಹೊಟ್ಟೆಯುಳ್ಳ. "यदगारघटाट्टकुट्टिमस्रवदिन्दूपलतुन्दिलापया" नैष० २-८९।

**तुन्दिलित ತುಂದಿಲಿತ** (वि०) ತುಂದಿಲನಾಗಿರುವ, ತುಂಬಿದ ಹೊಟ್ಟೆಯುಳ್ಳವನಾಗಿರುವ. तुन्दिल "इतच्" (५-२-३६)।

**तुन्न ತುನ್ನ** (पुं०) 1. ನಂದಿಮರ. (वि०) 2. ನೋಯಿಸಲ್ಪಟ್ಟ, ಗಾಯಗೊಳಿಸಲ್ಪಟ್ಟ. 3. ಪೀಡಿಸಲ್ಪಟ್ಟ, ತೊಂದರೆ ಪಡಿಸಲ್ಪಟ್ಟ, ಮನನೋಯಿಸಲ್ಪಟ್ಟ. तुद्यते — तुद (व्यथने) "क्तः" (३-२-१०२)। 4. ಕತ್ತರಿಸಲ್ಪಟ್ಟ.

**तुन्नवाय ತುನ್ನವಾಯ** (पुं०) ಹೊಲಿಗೆ ಕೆಲಸದವನು, ದರ್ಜಿ, ಬಟ್ಟೆಗಳನ್ನು ಹೊಲಿದು ಜೀವಿಸುವವನು. तुन्नं छिन्नं वयति — वेञ् (तन्तुसन्ताने) "अण्" (३-२-१)। "तन्तुवायः कुविन्दः स्यात्तुन्नवायस्तु सौचिकः अम०। "शैलूषतुन्नवायान्नं कृतघ्नस्यान्नमेव च" मनु० ४-२१४।

**तुन्नसेवनी ತುನ್ನಸೇವನೀ** (स्त्री०) ಸೂಜಿ. तुन्नं छिन्नं सीव्यतेऽनेन — षिवु (तन्तुसन्ताने) करº "ल्युट्" (३-३-११७)। "ङीप्" (४-१-१५)।

**तुमुल ತುಮುಲ** (पुं०) 1. ತಾರೆಗಿಡ. (न०) 2. ದೊಂಬಿಯ ಕಾಳಗ, ಗದ್ದಲದ ಯುದ್ಧ, ಗಲಿಬಿಲಿಯ ಕದನ, ಗದ್ದಲ. तौति — तु (सौत्रधातुः) "मुलन्" बाहु०। "तुमुलः कलिवृक्षे ना क्लीबं तु रणसंकुले" मेदि०। (वि०) 3. ಗಾಬರಿಗೊಂಡ, ಕಳವಳಗೊಂಡ, ಗಲಿಬಿಲಿಯಾದ. "रामापरित्राणविहस्तयोधं सेनानिवेशं तुमुलं चकार" रघु० ५-४९। 4. ಉಗ್ರವಾದ, ಘೋರವಾದ. "बभूव युद्धं तुमुलं जयैषिणोरधोमुखैरूर्ध्वमुखैश्च पत्त्रिभिः" रघु० ३-५७।

**तुम्बी ತುಂಬೀ** (स्त्री०) ಉದ್ದದ ಸೋರೆಕಾಯಿ. तुम्बति रुचिम् — तुबि (अर्दने) "अच्" (३-१-१३४) "ङीष्" (४-१-४१)।

**तुम्बुका ತುಂಬುಕಾ** (स्त्री०) ಗುಂಡು ಸೋರೆಕಾಯಿ. "वृन्ततुम्ब्यां तु तुम्बिका" वैज०।

**तुम्बुरी ತುಂಬುರೀ** (स्त्री०) 1. ಕೊತ್ತುಂಬರಿ. 2. ಹೆಣ್ಣು ನಾಯಿ. "तुम्बुरी कुक्कुरस्त्रियाम्। धन्याकेऽपि" मेदि०।

**तुम्बुरु ತುಂಬುರು** (पुं०) 1. ಒಬ್ಬ ದೇವ ಗಂಧರ್ವ. 2. ಈಗಿನ ಅವಸರ್ಪಿಣೀಕಾಲದ 5ನೆಯ ಅರ್ಹಂತರ ಅನುಚರ.

**तुर ತುರ** (पुं०) 1. ವೇಗ. तुर (त्वरणे) "कः" (वा० ३-३-५८)। (वि०) 2. ವೇಗವಾದ.

**तुरग ತುರಗ** (पुं०) 1. ಅಶ್ವ, ಕುದುರೆ. तुर (त्वरणे) "कः" (वा० ३-३-५८)। तुरेण त्वरया गच्छति — गम्लृ (गतौ) "डः" (वा० ३-२-४८)। "ध्रुवं गुरून् मार्गरुधः करीन्द्रानुल्लङ्घ्य गन्तु तुरगास्तशीघ्रः" माघ० ३-२९। स्त्रियाम् जाति० "ङीष्" (४-१-६३)। -गी -ಗೀ. 2. ಚಿತ್ತ, ಮನಸ್ಸು. (वि०) 3. ವೇಗವಾಗಿ ಹೋಗುವವನು. (स्त्री०) गौरा० "ङीष्" (४-१-४१)। -गी -ಗೀ. 4. ಅಶ್ವಗಂಧೀಗಿಡ. "तुरगी चाश्वगन्धायां तुरगश्चित्तवाजिनोः" मेदि०।

**तुरगब्रह्मचर्य ತುರಗಬ್ರಹ್ಮಚರ್ಯ** (न०) ಕುದುರೆಯಂತೆ ಆಚರಿಸುವ ಬ್ರಹ್ಮಚರ್ಯ ವ್ರತ, ಹೆಂಗಸರ ಸಹವಾಸವು ದೊರೆಯದೆ ಇರುವುದರಿಂದ ಅವರ ಸಹವಾಸವನ್ನು ಬಿಡುವ ನಿರ್ಬಂಧದ ಬ್ರಹ್ಮಚರ್ಯ. तुरगस्येव ब्रह्मचर्यम्।

**तुरगमुख ತುರಗಮುಖ** (पुं०) 1. ಹಯಗ್ರೀವ. 2. ಕಿಂಪುರುಷ. तुरगस्येव मुखमस्य।

**तुरगवदन ತುರಗವದನ** (पुं०) 1. ಹಯಗ್ರೀವಾವತಾರವೆತ್ತಿದ ವಿಷ್ಣು. तुरगस्येव वदनमस्य। 2. ಕುದುರೆಯಂತೆ ಮುಖವುಳ್ಳ ಕಿಂಪುರುಷ. ಏವಂ तुरगाननः तुरगास्यः ಇತ್ಯಾದಿ.

**तुरगिन् ತುರಗಿನ್** (वि०) ಕುದುರೆಯೇ ವಾಹನವಾಗಿ ಉಳ್ಳವನು. तुरगो वाहनत्वेनास्त्यस्य "इनिः" (५-२-११५)।

**तुरगी ತುರಗೀ** (स्त्री०) 1. ಹೆಣ್ಣು ಕುದುರೆ. तुरग जाति० "ङीष्" (४-१-६३)। 2. ಅಶ್ವಗಂಧಿ ಗಿಡ. "तुरगी त्वश्वगन्धायाम्" हेम०।

**तुरङ्ग ತುರಂಗ** (पुं०) 1. ಅಶ್ವ, ಕುದುರೆ. तुरेण गच्छति— गम्लृ (गतौ) "खच्" (३-२-४७)। मुमागमः (६-३-६७)। वा डित्। पक्षे टिलोपः। "सयत्नसूतायतरश्मिभुग्नग्रीवाग्रसंसक्तयुगैस्तुरङ्गैः" माघ० ३-६८। 2. ಚಿತ್ತ, ಮನಸ್ಸು. (वि०) 3. ವೇಗವಾಗಿ ಹೋಗುವವನು. (स्त्री०) —ङ्गी —ಙ್ಗೀ. 4. ಅಶ್ವಗಂಧಿ ಗಿಡ. 5. ಹೆಣ್ಣು ಕುದುರೆ.

**तुरङ्गम ತುರಂಗಮ** (पुं०) ಕುದುರೆ. तुरेण वेगेन गच्छति—गम्लृ (गतौ) "खच्" (३-२-४७)। मुमागमः (६-३-६७)। "अवेहि मां प्रीतमृते तुरङ्गमात् किमिच्छसीति स्फुटमाह वासवः" रघु० ३-६३। "आमूलादुपनदि सैकतेषु लेभे सामग्रीं खुरपदवी तुरङ्गमाणाम्" किरा० ७-२१। स्त्रियाम् जाति० "ङीष्" (४-१-६३)। —तुरङ्गमी—ತುರಂಗಮಿ.

**तुरङ्गमुख ತುರಂಗಮುಖ** (पुं०) ಕುದುರೆಯಂತೆ ಮುಖವುಳ್ಳ.

**तुरङ्गवदन ತುರಂಗವದನ** (पुं०) 1. ಹಯಗ್ರೀವಾವತಾರವೆತ್ತಿದ ವಿಷ್ಣು. तुरङ्गस्येव वदनम् अस्य। 2. ಕುದುರೆಯಂತೆ ಮುಖವುಳ್ಳ ಕಿಂಪುರುಷ. ಏವಂ तुरङ्गवक्त्रः तुरङ्गास्यः ಇತ್ಯಾದಿ. "बिम्बोष्ठं बहुमनुते तुरङ्गवक्त्रः" माघ० ४-३८।

**तुरङ्गसादिन् ತುರಂಗಸಾದಿನ್** (वि०) ಕುದುರೆಯ ಸವಾರ.

**तुरङ्गिन् ತುರಂಗಿನ್** (वि०) ಕುದುರೆಯೇ ವಾಹನವಾಗಿ ಉಳ್ಳವನು, ಕುದುರೆಯ ಸವಾರ. तुरङ्गो वाहनत्वेनास्यस्य "इनिः" (५-२-११५)। "तुरङ्गी तुरगारूढं प्रासेनाहत्य वक्षसि" कुमा० १३-४१। "तुरङ्गिभिर्यत्र निरुद्धवाहनैः" माघ० ३-३०।

**तुरङ्गी ತುರಂಗೀ** (स्त्री०) 1. ಹೆಣ್ಣು ಕುದುರೆ. तुरङ्ग जाति० "ङीष्" (४-१-६३)। 2. ಅಶ್ವಗಂಧಿ ಗಿಡ. तुरङ्गस्तद्गन्धोऽस्त्यस्याः "अच्" (५-२-१२७)।

**तुरस् ತುರಸ್** (न०) ತ್ವರೆ, ವೇಗ. तुर (त्वरणे) "असुन्" (उ० ४-१८८)।

**तुरायण ತುರಾಯಣ** (न०) 1. ಒಂದು ಕಾರ್ಯಕ್ಕಾಗಿ ಆಸಕ್ತಿಯಿಂದ ವೇಗವಾಗಿ ನಡೆಯುವುದು, ಕಾರ್ಯಾಸಕ್ತಿಯಿಂದ ವೇಗವಾಗಿ ಹೋಗುವವನ ನಡಗೆ. तुरस्यायनम्। 2. ಒಂದು ಯಜ್ಞ.

**तुरासाह् ತುರಾಸಾಹ್** (पुं०) ಇಂದ್ರ, ದೇವತೆಗಳ ಒಡೆಯ. तुरं वेगवन्तं साहयति अभिभवति—षह (मर्षणे) + णिच् "क्विप्" (३-२-७६)। षत्वम् (८-३-५६)। पूर्वपददीर्घः (६-३-१३७)। तुराषाट् इति प्रथमाविभक्तौ रूपम्। "तुरासाहं पुरोधाय धाम स्वायम्भुवं ययुः" कुमा० २-१।

**तुरि ತುರಿ** (स्त्री०) ನೇಯಿಗೆಯವನ ಮಗ್ಗದ ಕೋಲು, ದಾರದ ಎಳೆಗಳುಳ್ಳ ಮಗ್ಗದ ಕೋಲು, ಮಗ್ಗದಲ್ಲಿರುವ ಹಾಸುಹೊಕ್ಕು ದಾರಗಳ ಸಂಖ್ಯೆಗಳನ್ನು ಸರಿಪಡಿಸಿ ಪ್ರತ್ಯೇಕಗೊಳಿಸುವ ಒಂದು ತಂತುಮಯ ದಂಡ. तुर (त्वरणे) "इन्" (उ० ४-११७)। वा "ङीष्" (ग० ४-१-४५)। **तुरी ತುರೀ.**

**तुरीय ತುರೀಯ** (वि०) 1. ನಾಲ್ಕನೆಯ. चतुर्णां पूरणः—चतुर् "छः" आद्यक्षरलोपश्च (वा० ५-२-५१)। ईयादेशः (७-१-२)। "तुरीयो ह्येष मेध्याग्निराम्नायः पञ्चमोऽपि वा" म० बी० १-१०। (न०) 2. ನಾಲ್ಕನೆಯ ಒಂದು ಭಾಗ.

**तुरुष्क ತುರುಷ್ಕ** (पुं०) 1. ತುರುಕಿ ದೇಶದ ಲೋಬಾನ, ಒಂದು ವಾಸನಾದ್ರವ್ಯ. 2. ತುರುಕಿ ದೇಶ. 3. ತುರುಕಿ ದೇಶದವನು, ಮ್ಲೇಚ್ಛಜಾತಿಯವನು. "तुरुष्कः सिल्हके म्लेच्छजातौ देशान्तरेऽपि च" मेदि०।

**तुर्य ತುರ್ಯ** (न०) 1. ನಾಲ್ಕನೆಯ ಒಂದು ಭಾಗ. (वि०) 2. ನಾಲ್ಕನೆಯ. चतुर्णां पूरणः—चतुर् "यत्" (वा० ५-२-५१)। आद्यक्षरलोपश्च। "एक एवेश्वरस्तुर्यः भगवान् स्वाश्रयः परः" भाग० ६-५-१२।

**तुर्वसु ತುರ್ವಸು** (पुं०) 1. ದೇವಯಾನಿಯಲ್ಲಿ ಜನಿಸಿದ ಯಯಾತಿಯ ಒಬ್ಬ ಮಗ, ಯದುವಿನ ಸಹೋದರ. [ತುರ್ವಸುವು ತಂದೆಯಾದ ಯಯಾತಿಯ ಅಪೇಕ್ಷೆಯಂತೆ ತನ್ನ ಯೌವನವನ್ನು ಅವನಿಗೆ ಕೊಟ್ಟು ಜರೆಯನ್ನು ತಾನು ಹೊಂದಲು ತಿರಸ್ಕರಿಸಿದುದರಿಂದ ರಾಜ್ಯದ ಅಧಿಕಾರವನ್ನು ಕಳೆದುಕೊಳ್ಳುವ ಶಾಪಕ್ಕೆ ಗುರಿಯಾದನು.]

**तुल—उन्माने** (वा चुरा० उभ० पक्षे भ्वा० पर० सक० से०)। तुलयति, —ते। तोलति। तुलयां चक्रे, —बभूव, —आस। तुतोल। तुलिता। तुलयतु, —ताम्। ಇತ್ಯಾದಿ.

**उद् + तुल** = उत्तोलयति। उत्तोलनम्। ಮೇಲಕ್ಕೆ ಎತ್ತಿ ತೂಗು.

**तुलन ತುಲನ** (न०) 1. ತಕ್ಕಡಿಯಲ್ಲಿ ತೂಗುವುದು, ತೂಕ ಮಾಡುವುದು. तुल (उन्माने) भावे "ल्युट्" (३-३-११५)। "सुप्तासुप्तमनुष्यवीर्यतुलने श्वा सर्पणे पन्नगः" मृच्छ० ३-२०। 2. ಮೇಲಕ್ಕೆ ಎತ್ತುವುದು. ಮೇಲಕ್ಕೆ ಏರಿಸುವುದು. "तुलनं चाद्रिराजस्य समुद्रस्य च तारणम्। ग्रहणं चानिलस्येव चारुदत्तस्य दूषणम्" मृच्छ० ९-२०। 3. ಹೋಲಿಸುವುದು, ಹೋಲಿಕೆಕೊಡುವುದು. (स्त्री०) —ना—ನಾ. 1. ತೂಗುವುದು, 2. ಹೋಲಿಸುವುದು. "तूलेन तस्यास्तुलना मृदोस्तत्" नैष० १४-५७।

**तुलनीय ತುಲನೀಯ** (वि०) 1. ತಕ್ಕಡಿಯಲ್ಲಿ ತೂಗಲ್ಪಡುವ. 2. ತೂಗಲು ಅರ್ಹವಾದ. 3. ತೂಗಬೇಕಾದ. तुल (उन्माने) + णिच् "अनीयर्" (३-१-९६)। 4. ಮೇಲಕ್ಕೆ ಎತ್ತಲ್ಪಡುವ. 5. ಎತ್ತಲು ಶಕ್ಯವಾದ. 6. ಮೇಲಕ್ಕೆ ಎತ್ತಬೇಕಾದ. 7. ಹೋಲಿಸಲ್ಪಡುವ. 8. ಹೋಲಿಸಲು ಅರ್ಹವಾದ. "तव्यः" (३-१-९६)। **तुलितव्यः ತುಲಿತವ್ಯಃ.**

**तुलयत् ತುಲಯತ್** (वि०) 1. ತಕ್ಕಡಿಯಲ್ಲಿ ತೂಗುತ್ತಿರುವ. तुल (उन्माने) + णिच् "शतृ" (३-२-१२४)। "सममेणमदैर्यदापणे तुलयन् सौरभलोभनिश्चलम्" नैष० २-९२। 2. ಮೇಲಕ್ಕೆ ಎತ್ತುತ್ತಿರುವ. 3. ಹೋಲಿಸುತ್ತಿರುವ. स्त्रियाम् "ङीप्" (४-१-६)। **-यन्ती -ಯನ್ತೀ.**

**तुलयितृ ತುಲಯಿತೃ** (वि०) 1. ತಕ್ಕಡಿಯಲ್ಲಿ ತೂಗುವವನು. 2. ಮೇಲಕ್ಕೆ ಎತ್ತುವವನು. 3. ಹೋಲಿಸುವವನು. तुल (उन्माने) + णिच् "तृच्" (३-१-१३३)। स्त्रियाम् "ङीप्" (४-१-५)। **-यित्री -ಯಿತ್ರೀ.**

**तुलसी ತುಲಸೀ** (स्त्री०) ತುಲಸೀ ಗಿಡ. तुलां सादृश्यं स्यति — षो (अन्तकर्मणि) "कः" (३-२-३)। शक०। गौरा० "ङीष्" (४-१-४१)। ಇದು ಅಮೃತಮಥನ ಸಮಯದಲ್ಲಿ ಸಮುದ್ರದಿಂದ ಹುಟ್ಟಿದುದು. ಜಗತ್ತಿನಲ್ಲಿ ಇದಕ್ಕೆ ಸಮಾನವಾದುದು ಯಾವುದೂ ಇಲ್ಲದಿರುವುದರಿಂದ ಇದಕ್ಕೆ ಈ ಹೆಸರು. "यस्या देव्यास्तुला नास्ति विश्वेषु सकलेषु च। तुलसी तेन विख्याता"। **ತುಲಸಿಯ ಮಹಿಮೆ:** "दर्शनं नर्मदायास्तु गङ्गास्नानं तथैव च। तुलसीवनसंसर्गं त्रयमेतत् स्मृतम् ॥" ತುಲಸೀಗಿಡವನ್ನು ನೆಡುವುದು ಸಾಕುವುದು ಅದಕ್ಕೆ ನೀರೆರೆಯುವುದು ಅದರ ದರ್ಶನ ಸ್ಪರ್ಶನ ಇವುಗಳಿಂದ ಶಾರೀರ ವಾಚಿಕ ಮತ್ತು ಮಾನಸಿಕವಾದ ಎಲ್ಲಾ ಪಾಪಗಳೂ ಪರಿಹಾರವಾಗುವುವು. "रोपणात् पालनात् सेकात् दर्शनात् स्पर्शनान्नृणाम्। तुलसी दहते पापं वाङ्मनःकायसञ्चितम्"। ಕಾರ್ತಿಕಮಾಸದಲ್ಲಿ ತುಲಸೀದಳಗಳಿಂದ ಮಾಡುವ ಹರಿಪೂಜೆ ಅದರ ದರ್ಶನ ಸ್ಪರ್ಶನ ಧ್ಯಾನ ನಮಸ್ಕಾರ ಅರ್ಚನೆ ಅದನ್ನು ನೆಡುವುದು ನೀರೆರೆಯುವುದು ಈ ಎಂಟು ವಿಧವಾದ ತುಲಸಿಯ ಸೇವೆಯಿಂದ ಯುಗಯುಗಾಂತರ ಪಾಪಗಳೂ ನಾಶವಾಗುವುವು. "संप्राप्तं कार्तिकं दृष्ट्वा नियमेन जनार्दनः। पूजनीयो महद्भिश्च कोमलैस्तुलसीदलैः। दृष्टा स्पृष्टा तथा ध्याता कार्तिके नमितार्चिता। रोपिता सेचिता नित्यं पापं हन्ति युगार्जितम् ॥" ತುಲಸೀದಳದಲ್ಲಿ ಪುಷ್ಕರ ಮೊದಲಾದ ಕ್ಷೇತ್ರಗಳು ಗಂಗೆ ಮೊದಲಾದ ನದಿಗಳು ವಾಸುದೇವ ಮೊದಲಾದ ದೇವತೆಗಳು ಎಲ್ಲರ ಸಾನ್ನಿಧ್ಯವೂ ಇರುವುದು. "पुष्कराद्यानि तीर्थानि गङ्गाद्याः सरितस्तथा। वासुदेवादयो देवाः वसन्ति तुलसीदले"॥ ಇತ್ಯಾದಿ. ಗಣಪತಿಗೆ ತುಲಸಿಯಿಂದ ಪೂಜೆಯು ನಿಷಿದ್ಧ. "पुष्पाणां सारभूता त्वं भविष्यसि मनोरमे। कलांशेन महाभागे स्वयं नारायणप्रिया। प्रिया त्वं सर्वदेवानां कृष्णस्य च विशेषतः। पूजा विमुक्तिदा नृणां मम त्याज्या च सर्वदा" ब्रह्मवैवर्ते गणेशखण्डे गणेशवचनम्। ಅಕ್ಷತೆಯಿಂದ ವಿಷ್ಣುಪೂಜೆಯೂ ತುಲಸಿಯಿಂದ ಗಣಪತಿ ಪೂಜೆಯೂ ಗರಿಕೆಯಿಂದ ದುರ್ಗಾದೇವಿಯ ಪೂಜೆಯೂ ದತ್ತೂರಿ ಹೂವಿನಿಂದ ಸೂರ್ಯನ ಪೂಜೆಯೂ ನಿಷಿದ್ಧ. "अक्षतैर्नार्चयेद्विष्णुं न तुलस्या विनायकम्। न दूर्वया यजेद्दुर्गां धुस्तुरेण न भास्करम्"। ತುಲಸೀ ಗಿಡಕ್ಕೆ ಹಾಲನ್ನು ಎರೆಯುವವರ ಮನೆಯಲ್ಲಿ ಲಕ್ಷ್ಮಿಯು ಯಾವತ್ತೂ ಸ್ಥಿರವಾಗಿ ನಿಲ್ಲುವಳು. "कदाचित् तुलसीं दुग्धैः सेचयेत् यो नरोत्तमः। तस्य वेश्मनि विप्रर्षे लक्ष्मीर्भवति निश्चला"।

**तुला ತುಲಾ** (स्त्री०) 1. ತಕ್ಕಡಿ, ತ್ರಾಸು. तुल (उन्माने) "अङ्" (३-३-१०४)। "अश्वमेधसहस्राणि सत्यं च तुलया धृतम्। अश्वमेधसहस्राद्धि सत्यमेवातिरिच्यते" हितो० ४-१३१। 2. ತಕ್ಕಡಿಯಲ್ಲಿ ತೂಗುವುದು, ತೂಕಮಾಡುವುದು. 3. ಸಾಮ್ಯ, ಸಾದೃಶ್ಯ, ಹೋಲಿಕೆ. "चिरोज्झितालक्तकपाटलेन ते तुलां यदारोहति दन्तवाससा" कुमा० ५-३४। 4. ಅಳತೆ, ತೂಕ, ಪ್ರಮಾಣ. 5. 100 ಪಲಗಳ ತೂಕ. (ಚಿನ್ನದ ತೂಕ)

| | |
|---|---|
| ಐದು (5) ಗುಲಗಂಜಿಗಳ ತೂಕ | .. 1 ಆದ್ಯಮಾಷಕ |
| 16 ಆದ್ಯಮಾಷಕಗಳು | .. 1 ಕರ್ಷ |
| 4 ಕರ್ಷಗಳು | .. 1 ಪಲ |
| 100 ಪಲಗಳು | .. 1 ತುಲಾ |
| 20 ತುಲೆಗಳು | .. 1 ಭಾರ |

6. ತುಲಾರಾಶಿ. "जयति तुलामधिरूढो भास्वानपि जलदपटलानि" पञ्चतं० ५-३४। 7. ಭಾಂಡ, ಬಿಂದಿಗೆ, ಕೊಡ. "तुलां लोहसहस्रस्य यत्र खादन्ति मूषिकाः। राजंस्तत्र हरेच्छ्येनो बालकं नात्र संशयः" पञ्च० १-४४७। 8. ಮನೆಯ ಚಾವಣಿಗೆ ಹಾಕುವ ತೊಲೆ. "स्तम्भसमं बाहुल्यं भारतुलानामुपर्युपर्यासाम्" बृहत्सं० ५३-३०। 9. ಗೃಹದ್ವಾರದ ಮಧ್ಯಭಾಗ. "तुला साम्ये स्तम्भपीठे" वैज०। "तुला सादृश्यमानयोः। गृहाणां दारुबन्धाय पीठिकायामपीष्यते। राशौ पलशते

भाण्डे" मेदि०। "तुला राशौ पलशते साम्येऽप्युन्मान-साधने। गृहद्वारान्तरे भाण्डे" नानार्थर०।

**तुलाकूट ತುಲಾಕೂಟ** (ನಂ) 1. ತೂಕದಲ್ಲಿ ಮಾಡುವ ಮೋಸ, ಸರಿಯಾದ ತೂಕಕ್ಕಿಂತಲೂ ಕಡಮೆ ತೂಗುವುದು. तुलायाः कूटम्। (वि०) 2. ತೂಕದಲ್ಲಿ ಮೋಸಮಾಡುವವನು. "मानकूटं तुलाकूटं कण्ठमोष्ठं निपीडय" काशीखं०।

**तुलाकोटि(टी) ತುಲಾಕೋಟಿ (ಟೀ)** (स्त्री०) 1. ತಕ್ಕಡಿಯ ತುದಿ. तुलायाः कोटिः। 2. ನೂಪುರ, ಕಾಲಿನ ಆಭರಣ, ಕಾಲಿನ ತೊಡುಗೆ. तुलया कोटयति – कूट (परितापे) "इन्" (उ० ४-११७)। वा "ङीष्" (ग० ४-१-४५)। –टी –ಟೀ. "लीलाचलत्स्त्रीचरणारुणोत्पलस्खलत्तुलाकोटिनिनादकोमलः" माघ० १२-४४।

**तुलाकोश ತುಲಾಕೋಶ** (पुं०) ತೂಗುವ ತಕ್ಕಡಿ, ಮುಂದೆ ಪೈರಿನ ಅಭಿವೃದ್ಧಿ ಅಥವಾ ನಾಶ ಇವುಗಳನ್ನು ತಿಳಿಯಲು ಬೀಜವನ್ನು ತೂಕಮಾಡುವ ತ್ರಾಸು. तुला कोश इव। ಆಷಾಢಮಾಸದ ಹುಣ್ಣಿಮೆಯ ದಿನ ಈ ತಕ್ಕಡಿಯಲ್ಲಿ ಮಂತ್ರಪೂರ್ವಕ ಬೀಜವನ್ನು ತೂಕಮಾಡಿಟ್ಟು ಮಾರನೆಯ ದಿನ ಅದು ಅಧಿಕವಾದರೆ ಮುಂದೆ ಅದರ ಪೈರು ಚೆನ್ನಾಗಿ ಬೆಳೆಯುವುದೆಂದು ತಿಳಿಯಬೇಕು. "आषाढ्यां समतुलिताधिवासितानामन्येद्युर्यदधिकतामुपैति बीजम्। तद्वृद्धिर्भवति न जायते यदूनं मन्त्रोऽस्मिन् भवति तुलाभिमन्त्रणाय" बृहत्सं० २६-१।

**तुलादान ತುಲಾದಾನ** (ನಂ) ಮನುಷ್ಯನ ದೇಹವು ತೂಗುವಷ್ಟು ಚಿನ್ನ ಅಥವಾ ಬೆಳ್ಳಿಯ ದಾನ. तुलया देहमानेन दानम्।

**तुलाघट ತುಲಾಘಟ** (पुं०) ತಕ್ಕಡಿ, ತ್ರಾಸು. तुलायै घटः।

**तुलाधर ತುಲಾಧರ** (पुं०) 1. ವರ್ತಕ, ವ್ಯಾಪಾರಿ. तुलाया मानदण्डस्य धरः। 2. ತುಲಾರಾಶಿ. "तुलाधरस्तुलाराशौ भवेद्वाणिजकेऽपि च" विश्व०। (वि०) 3. ತಕ್ಕಡಿಯನ್ನು ಹಿಡಿದಿರುವವನು.

**तुलाधार ತುಲಾಧಾರ** (पुं०) 1. ವರ್ತಕ, ವ್ಯಾಪಾರಿ. 2. ತಕ್ಕಡಿಯ ದಾರ ಅಥವಾ ಸರಪಣಿ. 3. ತಕ್ಕಡಿಯ ದಂಡಿಗೆ, –ಅಡ್ಡಕಂಬಿ. तुलां धारयति – धृ (धारणे) + णिच् "अण्" (३-२-१)। 4. ತುಲಾರಾಶಿ.

**तुलापुरुष ತುಲಾಪುರುಷ** (पुं०) ಮನುಷ್ಯನ ದೇಹವು ತೂಗುವಷ್ಟು ಚಿನ್ನದ ಅಥವಾ ಬೆಳ್ಳಿಯ ದಾನ. ಹದಿನಾರು ವಿಧ ದಾನಗಳಲ್ಲಿ ಪ್ರಧಾನವಾದುದು ಈ ದಾನ.

**तुलाप्रग्रह ತುಲಾಪ್ರಗ್ರಹ** (पुं०) ತಕ್ಕಡಿಯ ದಾರ. प्र+ग्रह (उपादाने) "अप्" (३-३-५८)। वा "घञ्" (३-३-५२)। –प्रग्राहः –ಪ್ರಗ್ರಾಹಃ.

**तुलाबीज ತುಲಾಬೀಜ** (ನಂ) ಗುಲಗಂಜಿ. तुलाया बीजं मूलम्। ಚಿನ್ನವನ್ನು ಗುಲಗಂಜಿಯಿಂದ ಪ್ರಾರಂಭಿಸಿ ತೂಗುವುದರಿಂದ ಈ ಹೆಸರು. ["तुला" ಪದದಲ್ಲಿ ನೋಡಿ.]

**तुलाभार ತುಲಾಭಾರ** (पुं०) "तुलापुरुष" ಪದದ ಅರ್ಥ.

**तुलामान ತುಲಾಮಾನ** (ನಂ) ತಕ್ಕಡಿಯ ಅಡ್ಡಕೋಲು, –ಅಡ್ಡಕಂಬಿ. मीयतेऽनेन – मा (माने) करं० "ल्युट्" (३-३-११७)। तुलार्थं मानम्।

**तुलायष्टि ತುಲಾಯಷ್ಟಿ** (स्त्री०) ತಕ್ಕಡಿಯ ಅಡ್ಡಕೋಲು.

**तुलासूत्र ತುಲಾಸೂತ್ರ** (ನಂ) ತಕ್ಕಡಿಯ ದಾರ. तुलार्थं सूत्रम्।

**तुलिका ತುಲಿಕಾ** (स्त्री०) ಕಾಡಿಗೆಸೊಗಸಿನ ಹಕ್ಕಿ, ಕೆಂಬೂತದ ಹಕ್ಕಿ. "हापुत्रिका खञ्जनिका तुलिका स्फोटिके समे" त्रिकाण्ड०।

**तुलित ತುಲಿತ** (वि०) 1. ಹೋಲಿಸಲ್ಪಟ್ಟ, ಹೋಲಿಕೆ ಕೊಡಲ್ಪಟ್ಟ. तुल (उन्माने) "क्तः" (३-२-१०२)। "स्तनौ मांसग्रन्थी कनककलशावित्युपमितौ मुखं श्लेष्मागारं तदपि च शशाङ्केन तुलितम्" भर्तृ० ३-१६। 2. ತಿರಸ್ಕರಿಸಲ್ಪಟ್ಟ, ಅವಮಾನಗೊಳಿಸಲ್ಪಟ್ಟ. "तव धन्यतेयमपि सर्वनृपतितुलितोऽपि यत्क्षणम्" माघ० १५-३०। 3. ಮೇಲಕ್ಕೆ ಎತ್ತಿ ಹಿಡಿಯಲ್ಪಟ್ಟ. "क्लान्तकरतलधृताचलकः पृथिवीतले तुलितभूभृदुच्यसे" माघ० १५-३०। 4. ಮೇಲಕ್ಕೆ ಎತ್ತಲ್ಪಟ್ಟ, ಎತ್ತಿ ಆಡಿಸಲ್ಪಟ್ಟ. "पौलस्त्यतुलितस्याद्रेरादधान इव ह्रियम्" रघु० ४-८०। 5. ಸಮಾನವಾದ. "द्वयानुरोधं तुलितं दधौ सा" नैष० १४-२०। 6. ತೂಗಲ್ಪಟ್ಟ, ತಕ್ಕಡಿಯಲ್ಲಿ ತೂಕಮಾಡಲ್ಪಟ್ಟ. 7. ಪ್ರೇರಿಸಲ್ಪಟ್ಟ, ಪ್ರಯೋಗಿಸಲ್ಪಟ್ಟ. "येऽपीन्द्रपाणितुलितायुधलूनपक्षाः" माघ० ५-३१।

**तुल्य ತುಲ್ಯ** (वि०) 1. ಸದೃಶವಾದ, ಸಮಾನವಾದ, ಒಂದೇ ತೆರನಾದ. तुलया संमितः "यत्" (४-४-९१)। "तुल्यरूपमसितोत्पलमक्ष्णोः कर्णगं निरुपकारि विदित्वा" किरा० ९-६१। 2. ಅದೇ ಆಗಿರುವ, ಒಂದೇ ಆಗಿರುವ, ಏಕರೂಪವಾದ.

**तुल्यकक्ष ತುಲ್ಯಕಕ್ಷ** (वि०) ಸಮಾನವಾದ, ಅದೇತೆರನಾದ. तुल्या कक्षा यस्य। "यदि तत्तुल्यकक्षोऽत्र भवान् धुरि न युज्यते" वेणी० ३-२६।

**तुल्यकुल्य ತುಲ್ಯಕುಲ್ಯ** (वि०) ಸಮಾನಕುಲದಲ್ಲಿ ಹುಟ್ಟಿದ, ಒಂದೇ ವಂಶದಲ್ಲಿ ಹುಟ್ಟಿದ. तुल्ये कुले भवः "यत्" (४-३-५३)।

**तुल्यता ತುಲ್ಯತಾ** (स्त्री०) ಸಮಾನತೆ, ಸಮಾನವಾಗಿರುವುದು. तुल्यस्य भावः "तल्" (५-१-११९)। "त्वः" (५-१-११९)। **–त्वम् –ತ್ವಮ್.** "तुल्यत्वे वपुषां मुखाद्यवयवैः वर्णक्रमः कीदृशः" प्रबोध० २-१८।

**तुल्यनामन् ತುಲ್ಯನಾಮನ್** (वि०) ಸಮಾನವಾದ ಹೆಸರುಳ್ಳ, ಒಂದೇ ಹೆಸರುಳ್ಳ, ಅದೇ ಹೆಸರುಳ್ಳ. तुल्यं नाम यस्य।

**तुल्यनिन्दास्तुति ತುಲ್ಯನಿಂದಾಸ್ತುತಿ** (वि०) ನಿಂದೆ ಮತ್ತು ಹೊಗಳಿಕೆ ಎರಡನ್ನೂ ಸಮಾನವಾಗಿ ಎಣಿಸುವವನು, ನಿಂದೆಯನ್ನೂ ಹೊಗಳಿಕೆಯನ್ನೂ ಗಣನೆಗೆ ತೆಗೆದುಕೊಳ್ಳದವನು. तुल्ये निन्दास्तुती यस्य। "तुल्यनिन्दास्तुतिर्मौनी सन्तुष्टो येन केनचित्" गीता १२-१९।

**तुल्यपान ತುಲ್ಯಪಾನ** (न०) ಸಹಪಾನ, ಒಟ್ಟಿಗೆ ಕುಳಿತು ಕುಡಿತ. ಒಟ್ಟಿಗೆ ಸೇರಿ ಮದ್ಯ ಕುಡಿಯುವುದು.

**तुल्यमूल्य ತುಲ್ಯಮೂಲ್ಯ** (वि०) 1. ಸಮಾನವಾದ ಬೆಲೆ. (वि०) 2. ಸಮಾನವಾದ ಬೆಲೆಯುಳ್ಳ. तुल्यं मूल्यं यस्य।

**तुल्ययोगिता ತುಲ್ಯಯೋಗಿತಾ** (स्त्री०) ಒಂದು ಅರ್ಥಾಲಂಕಾರ, ವರ್ಣ್ಯ (ಪ್ರಕೃತ) ಅಥವಾ ಅವರ್ಣ್ಯ (ಅಪ್ರಕೃತ) ವಸ್ತುಗಳಿಗೆ ಏಕಧರ್ಮಾನ್ವಯ ಹೇಳುವುದು **"ತುಲ್ಯಯೋಗಿತಾ"** ಅಲಂಕಾರವಾಗುವುದು. "संकुचन्ति सरोजानि स्वैरिणीवदनानि च" ಎಂಬಲ್ಲಿ (ಚಂದ್ರೋದಯ ಸಮಯದಲ್ಲಿ) ಕಮಲಗಳೂ, ಸ್ವೇಚ್ಛಾವಿಹಾರಕ್ಕೆ ತೊಂದರೆಯಾದುದರಿಂದ ಸ್ವೈರಿಣೀಮುಖಗಳೂ ಸಂಕೋಚ ಹೊಂದುತ್ತವೆ ಎಂದು ಪ್ರಕೃತವಾದ ಕಮಲ ಮತ್ತು ಸ್ವೈರಿಣೀಮುಖ ಎರಡರಲ್ಲೂ ಸಂಕೋಚಕ್ರಿಯಾ ರೂಪವಾದ ಒಂದೇ ಧರ್ಮದ ಅನ್ವಯವು ಹೇಳಲ್ಪಟ್ಟಿದೆ. ಇದು ಕೇವಲ **ಪ್ರಕೃತಗೋಚರಾ ತುಲ್ಯಯೋಗಿತಾ.** "त्वदङ्गमार्दवे दृष्टे कस्य चित्ते न भासते। मालतीशशभृल्लेखाकदलीनां कठोरता"। ಇಲ್ಲಿ ದೇಹ ಸೌಂದರ್ಯ ವರ್ಣನೆಯು ಪ್ರಕೃತ. ಅಪ್ರಕೃತವಾದ ಮಾಲತೀ ಮೊದಲಾದ ವಸ್ತುಗಳಲ್ಲಿ ತಿರಸ್ಕಾರ ರೂಪವಾದ ಏಕಧರ್ಮಾನ್ವಯವು ಉಕ್ತವಾಗಿರುವುದರಿಂದ **ಅಪ್ರಕೃತಗೋಚರಾ ತುಲ್ಯಯೋಗಿತಾ.** ಹೀಗೆಯೇ ಶತ್ರುಮಿತ್ರರಲ್ಲಿ ಸಮಾನವಾದ ನಡವಳಿಕೆಯೂ ಮತ್ತು ಉತ್ತಮ ವಸ್ತುಗಳೊಡನೆ ಸಮಾನತೆಯ ವರ್ಣನೆಯೂ ತುಲ್ಯಯೋಗಿತಾ ಭೇದಗಳು. "हिताहिते वृत्तितौल्यमपरा तुल्ययोगिता। प्रदीयते पराभूतिर्मित्रशात्रवयोस्त्वया"। "गुणोत्कृष्टैः समीकृत्य वचोऽन्या तुल्ययोगिता। लोकपालो यमः पाशी श्रीदः शक्रो भवानपि"।

**तुल्यरूप ತುಲ್ಯರೂಪ** (वि०) ಸಮಾನವಾದ ರೂಪವುಳ್ಳ, ಸದೃಶವಾದ. तुल्यं रूपं यस्य। "तुल्यरूपवयोवृत्तां तुल्याभिजनलक्षणाम्। राघवोऽर्हति वैदेहीम्" रामा०।

**तुल्यलक्ष्मन् ತುಲ್ಯಲಕ್ಷ್ಮನ್** (वि०) ಸಮಾನವಾದ ಲಕ್ಷಣವುಳ್ಳ. तुल्यं लक्ष्म यस्य। "मीलितं वस्तुनो गुप्तिः केनचित्तुल्यलक्ष्मणा" सा० द० १०-८९।

**तुल्याकृति ತುಲ್ಯಾಕೃತಿ** (स्त्री०) 1. ಸಮಾನರೂಪ. (वि०) 2. ಸಮಾನರೂಪವುಳ್ಳ. तुल्या आकृतिः, तुल्या आकृतिः यस्य वा।

**तुल्यार्थ ತುಲ್ಯಾರ್ಥ** (पुं०) 1. ಸಮಾನವಾದ ಅರ್ಥ, ಒಂದೇ ಅರ್ಥ. तुल्योऽर्थः। (वि०) 2. ಸಮಾನವಾದ ಅರ್ಥವುಳ್ಳ. 3. ಸಮಾನವಾದ ಐಶ್ವರ್ಯವುಳ್ಳ.

**तुल्यावस्थ ತುಲ್ಯಾವಸ್ಥ** (वि०) ಸಮಾನವಾದ ಪರಿಸ್ಥಿತಿಯುಳ್ಳ. तुल्या समाना अवस्था स्थितिः यस्य। "कुम्भकर्णः कपीन्द्रेण तुल्यावस्थः स्वसुः कृतः" रघु० १२-८०।

**तुवर ತುವರ** (पुं०) 1. ಒಗಚು, ಒಗರು ರಸ, ಕಷಾಯ ರಸ. तु (सौत्रधातुः) तवीति हिनस्ति रोगान् "ष्वरच्" (उ० ३-१)। (वि०) 2. ಕಷಾಯರಸವುಳ್ಳ. कषायोऽस्यास्ति "अच्" (५-२-१२७)।

**तुवरिका ತುವರಿಕಾ** (स्त्री०) ತೊಗರಿಗಿಡ. तुवरोऽस्त्यस्याः "ठन्" (५-२-११५)।

**तुवरी ತುವರೀ** (स्त्री०) 1. ತೊಗರಿಗಿಡ. तुवर गौरा० "ङीष्" (४-१-४१)। 2. ತೊಗರಿ.

**तुष – तुष्टौ** (दिवा० पर० अक० से०)। तुष्यति। तुतोष। तोष्टा। तोक्ष्यति। तुष्यतु। अतुष्यत्। तुष्येत्। तुष्यात्। अतुषत्। अतोक्ष्यत्। ಸಂತೋಷಪಡು, ಆನಂದ ಹೊಂದು. "तुतोष पश्यन् कलमस्य सोऽधिकं सवारिजे वारिणि रामणीयकम्" किरा० ४-४।

**भावे:**—तुष्यते। तुतुषे। तोष्टा। तुष्यताम्। अतुष्यत। ಇತ್ಯಾದಿ.

**णिचि:**—तोषयति, –ते। तोषयां चकार, –चक्रे, –बभूव, –आस। तोषयिता। तोषयिष्यति, –ते। तोषयतु, –ताम्। ಇತ್ಯಾದಿ.

सनि :—तुतुक्षति। तुतुक्षां चकार, –बभूव, –आस। तुतुक्षिता। तुतुक्षिष्यति। ಇತ್ಯಾದಿ.

कृत्सु :—तोष्टव्यम्। तोषणीयम्। तोष्यम्। तुष्टः। तुष्टवान्। तुष्यन्, –न्ती। तोष्टुम्। तुष्टम्। तोषणम्। तुष्ट्वा।

**तुष ತುಷ** (ಪುಂ) 1. ತಾರೆಗಿಡ. तुष (तुष्टौ) "कः" (३-१-१३५)। 2. ಧಾನ್ಯದ ಮೇಲಿನ ಹೊಟ್ಟು. "ध्रुवमप्रशमाय रोषवह्नेस्तुषविक्षेपमधत्त रत्नचूर्णैः" यादं १५-१०३। "तुषेणापि परित्यक्ता न प्ररोहन्ति तण्डुलाः" हितो०।

**तुषखण्डन ತುಷಖಂಡನ** (ನಂ) ಹೊಟ್ಟನ್ನು ಕುಟ್ಟಿ ಪುಡಿ ಮಾಡುವುದು. तुषस्य खण्डनम्। ಹೊಟ್ಟನ್ನು ಪುಡಿ ಮಾಡುವುದರಿಂದ ಯಾವ ಪ್ರಯೋಜನವೂ ಇಲ್ಲದಿರುವುದರಿಂದ ಪ್ರಯೋಜನವಿಲ್ಲದ ಕಾರ್ಯವೆಂಬ ಅರ್ಥದಲ್ಲಿ ಈ ಪ್ರಯೋಗ. "अविचारयतो युक्तिकथनं तुषखण्डनम्" हितो० ४-४-१२।

**तुषग्रह ತುಷಗ್ರಹ** (ಪುಂ) ಅಗ್ನಿ, ಬೆಂಕಿ. तुषेण गृह्यते—ग्रह (उपादाने) "अप्" (३-३-५८)।

**तुषधान्य ತುಷಧಾನ್ಯ** (ನಂ) ಹೊಟ್ಟಿನಿಂದಕೂಡಿದ ಧಾನ್ಯ. तुषसहितं धान्यम्।

**तुषाग्नि ತುಷಾಗ್ನಿ** / **तुषानल ತುಷಾನಲ** (ಪುಂ) ಹೊಟ್ಟಿನಿಂದ ಉಂಟಾದ ಬೆಂಕಿ. तुषस्याग्निः अनलो वा।

**तुषाम्बु ತುಷಾಂಬು** (ನಂ) ಹೊಟ್ಟಿನ ಗಂಜಿ, ಹೊಟ್ಟು ಸಹಿತವಾದ ಧಾನ್ಯವನ್ನು ಬೇಯಿಸಿದ ಗಂಜಿ.

**तुषार ತುಷಾರ** (ಪುಂ) 1. ಹಿಮ, ಮಂಜು. तुष (तुष्टौ) "आरन्" (उ० ३-१३९)। "पदं तुषारस्रुतिधौतरक्तं यस्मिन्नदृष्ट्वापि हतद्विपानाम्" कुमा० १-६। 2. ಶೀಕರ, ಹಿಮದ ತುಂತುರು, ಹಿಮದಕಣ. "तुषारस्तु शीतले शीकरे हिमे" मेदि०। "समानकान्तीनि तुषारभूषणैः सरोरुहैरस्फुटपत्रपङ्क्तिभिः" किरा० ८-२५। (वि०) 3. ಶೀತಲವಾದ, ತಣ್ಣಗಿರುವ, ಶೈತ್ಯ ಗುಣವುಳ್ಳ.

**तुषारकर –किरण ತುಷಾರಕರ –ಕಿರಣ** (ಪುಂ) 1. ಶೀತಲವಾದ ಕಿರಣವುಳ್ಳ ಚಂದ್ರ. तुषाराः शीतलाः कराः किरणा वा अस्य। "कलया तुषारकिरणस्य पुरः परिमन्दभिन्नतिमिरौघजटम्" माघ० ९-२७।

**तुषारगिरि ತುಷಾರಗಿರಿ** (ಪುಂ) ಹಿಮಾಚಲ, ಹಿಮವತ್ಪರ್ವತ.

**तुषाराचल ತುಷಾರಾಚಲ, –अद्रि –ಅದ್ರಿ** (ಪುಂ) ಹಿಮಾಚಲ, ಹಿಮವತ್ಪರ್ವತ. "आलिङ्ग्यन्ते गुणवति मया ते तुषाराद्रिवाताः" मेघ० २-४४।

**तुषित ತುಷಿತ** (ಪುಂ ಬಂ ವಂ) ಗಣದೇವತೆಗಳು. ಇವರು ಹನ್ನೆರಡು ಮಂದಿ. ಮನ್ವಂತರಭೇದದಿಂದ ಇವರ ಹೆಸರುಗಳು ಬೇರೆ ಬೇರೆಯಾಗಿವೆ. "चाक्षुषस्यान्तरे पूर्वमासन् ये तुषिताः सुराः। वैवस्वतेऽन्तरे ते वै आदित्या द्वादश स्मृताः" हरिवं०। ಸ್ವಾರೋಚಿಷದಲ್ಲಿ ಈ ಹನ್ನೆರಡು ಮಂದಿ ಆದಿತ್ಯರೆಂಬ ಗಣದೇವತೆಗಳಿವರ. "प्राणापानावुदानश्च समानो व्यान एव च। चक्षुः श्रोत्ररसाघ्राणस्पर्शो बुद्धिर्मनस्तथा। द्वादशैते तु तुषिताः देवाः स्वारोचिषेऽन्तरे"। (स्त्री०) –ता –ತಾ. 2. ವೇದಶಿರಸ್ಸಿನ ಪತ್ನಿ.

**तुषोदक ತುಷೋದಕ** (ನಂ) "तुषाम्बु" ನೋಡಿ. तुषमिश्रमुदकम्। "सिद्धजलं च गृहाम्लमवन्तिसोमं तुषोदकं शुक्तम्" हारा०।

**तुष्ट ತುಷ್ಟ** (ಪುಂ) 1. ವಿಷ್ಣು. तुष (तुष्टौ) "क्तः" (३-४-७२)। अधिकृताधिकारात् परत्वादपि अतिशयेन समस्तमनुष्याद्यधिकारयोगात् दाशरथित्वजगत्पालनयोर्लाभात् प्रीतः। "लाभाद्दाशरथित्वस्य जगतः पालनस्य च। मनुष्यत्वेऽपि यः प्रीतः स तुष्ट इति कथ्यते" इति निरुक्तिः। "पर्द्धिः परमस्पष्टः तुष्टः पुष्टः शुभेक्षणः" वि० स०। (ನಂ) 2. ಸಂತೋಷ, ತೃಪ್ತಿ. (वि०) 3. ಸಂತೋಷಗೊಂಡ, ತೃಪ್ತಿಹೊಂದಿದ.

**तुष्टवत् ತುಷ್ಟವತ್** (वि०) ಸಂತೋಷಗೊಂಡವನು, ತೃಪ್ತಿ ಹೊಂದಿದವನು.

**तुष्टि ತುಷ್ಟಿ** (स्त्री०) 1. ಸಂತೋಷ, ತೃಪ್ತಿ. तुष (तुष्टौ) "क्तिन्" (३-३-९४)। 2. ಸಾಂಖ್ಯಮತದಲ್ಲಿ ಹೇಳಿರುವ ಆಧ್ಯಾತ್ಮಿಕ ಮತ್ತು ಬಾಹ್ಯತುಷ್ಟಿ, ಅಲಂಬುದ್ಧಿ, ಭೋಗದಲ್ಲಿ ಉಂಟಾಗುವ ವೈರಾಗ್ಯ, ಇತರ ಪದಾರ್ಥಗಳಲ್ಲಿ ತುಚ್ಛತ್ವಬುದ್ಧಿ. ಈ ತುಷ್ಟಿಯು ಒಂಬತ್ತು ವಿಧ. (1) प्रकृतिः, (2) उपादानम्, (3) कालः, (4) भाग्यम् ಇವು ನಾಲ್ಕು ಆಧ್ಯಾತ್ಮಿಕತುಷ್ಟಿಗಳು. (5) अर्जनदोषदर्शनजन्यविषयोपरमजन्या, (6) रक्षणदोषदर्शनविषयोपरमजन्या, (7) क्षयदोषदर्शनजन्यविषयोपरमजन्या, (8) भोगदोषदर्शनजन्यविषयोपरमजन्या ಮತ್ತು (9) हिंसादोषदर्शनजन्यविषयोपरमजन्या ಇವು ಐದು ಬಾಹ್ಯತುಷ್ಟಿಗಳು. "आध्यात्मिक्यश्चतस्रः प्रकृत्युपादानकाल-

ವನ್ನು ಹೊಂದು" ಎಂದು ಇವನನ್ನು ಶಪಿಸಿದನು. ಆಮೇಲೆ ಶ್ವಪಾಕರ ಗುಂಪಿನಲ್ಲಿ ಇವನು ಅಲೆದಾಡುತ್ತಿರಲು ರಾಜನು ಸರಿಯಾದ ಮಗನನ್ನು ಪಡೆಯಲು ಅರಣ್ಯಕ್ಕೆ ತಪಸ್ಸಿಗಾಗಿ ಹೋದನು. ರಾಜ್ಯವು ಅರಾಜಕವಾಯಿತು. ಅನಾವೃಷ್ಟಿಯಿಂದ ಪ್ರಜೆಗಳು ತತ್ತರಿಸಿದರು. ತಂದೆಯು ತನ್ನನ್ನು ಮನೆಬಿಟ್ಟು ಓಡಿಸಿದಾಗ ವಸಿಷ್ಠರೂ ಅದಕ್ಕೆ ಸಮ್ಮತಿಯಿತ್ತಿದ್ದರಿಂದ ಅವರ ಮೇಲಿನ ಕೋಪದಿಂದ ವಿಶ್ವಾಮಿತ್ರನನ್ನು ಆಶ್ರಯಿಸಿದನು. ವಸಿಷ್ಠರ ಧೇನುವನ್ನು ಕೊಂದು ಅದರ ಮಾಂಸವನ್ನು ತಿಂದನು. ತಂದೆಗೆ ಸಮ್ಮತವಿಲ್ಲದ ಕಾರ್ಯವನ್ನು ಮಾಡಿದುದು ಒಂದು, ಆಚಾರ್ಯರ ಧೇನುವನ್ನು ಕೊಂದುದು ಒಂದು, ಅದರ ಮಾಂಸವನ್ನು ಸಂಸ್ಕರಿಸದೆ ತಿಂದುದು ಒಂದು— ಈ ಮೂರು ಪಾಪಕಾರ್ಯಗಳನ್ನು ಮಾಡಿದ್ದರಿಂದ ಪತಿತನಾದ ಇವನಿಗೆ "**ತ್ರಿಶಂಕು**" ಎಂದು ಹೆಸರಾಯಿತು.

ತ್ರಿಶಂಕುವು ಈ ದೇಹದೊಂದಿಗೆ ಸ್ವರ್ಗವನ್ನು ಹೊಂದಬೇಕೆಂದು ಅಪೇಕ್ಷಿಸಿ ವಸಿಷ್ಠರ ಬಳಿಗೆ ಬಂದು ಯಾಗ ಮಾಡಿಸಬೇಕೆಂದು ಕೇಳಿದನು. ವಸಿಷ್ಠರು ಅದು ಅಸಾಧ್ಯವೆಂದರು. ಅವರ ಮಕ್ಕಳೂ ಅದೇ ರೀತಿ ಹೇಳಲು ಅವರನ್ನು ಧಿಕ್ಕರಿಸಿ ಚಂಡಾಲನಾಗುವಂತೆ ಅವರಿಂದ ಶಾಪ ಪಡೆದನು. ಬಳಿಕ ವಿಶ್ವಾಮಿತ್ರನಲ್ಲಿಗೆ ಹೋಗಿ ತನ್ನ ಅಪೇಕ್ಷೆಯನ್ನು ತಿಳಿಸಿದನು. ವಸಿಷ್ಠರ ಮೇಲಿನ ಕೋಪದಿಂದ ವಿಶ್ವಾಮಿತ್ರನು ಅನೇಕ ಋಷಿಗಳನ್ನು ಕರೆದು ಯಾಗಮಾಡಿಸಿದನು. ಯಾಗದ ಹವಿಸ್ಸನ್ನು ಸ್ವೀಕರಿಸಲು ದೇವತೆಗಳು ಬರದಿರಲು ಕುಪಿತನಾದ ವಿಶ್ವಾಮಿತ್ರನು ಇದೇ ಶರೀರದಿಂದಲೇ ನೀನು ಸ್ವರ್ಗಕ್ಕೆ ಹೊರಡು ಎಂದು ತ್ರಿಶಂಕುವನ್ನು ಪ್ರೇರಿಸಿದನು. ತ್ರಿಶಂಕುವು ಸ್ವರ್ಗಕ್ಕೆ ಏರುತ್ತಿರುವಾಗ ಇಂದ್ರನು ಪತಿತನಾದ ಅವನನ್ನು ಸ್ವರ್ಗಕ್ಕೆ ಏರಲು ಅನುಮತಿಸದೆ "ತಲೆಕೆಳಗಾಗಿ ನೆಲದ ಮೇಲೆ ಬೀಳು" ಎಂದನು. ತ್ರಿಶಂಕುವು ಬೀಳುತ್ತಿರುವಾಗ ವಿಶ್ವಾಮಿತ್ರನು ಕೋಪದಿಂದ ಅಲ್ಲೇ ಸ್ವರ್ಗವೊಂದನ್ನು ಸೃಷ್ಟಿಸಲು ಯತ್ನಿಸಿದನು. ಆಗ ಇಂದ್ರನ ಪ್ರಾರ್ಥನೆಯಂತೆ ವಿಶ್ವಾಮಿತ್ರನು ಧ್ರುವನಕ್ಷತ್ರವಿರುವವರೆಗೆ ತ್ರಿಶಂಕುವು ಸಶರೀರನಾಗಿ ಅಲ್ಲೇ ಇರಲಿ ಎಂದನು. ಎಲ್ಲರೂ ಒಪ್ಪಿದರು. ಅಂದಿನಿಂದ ತ್ರಿಶಂಕುವು ಭೂಮಿಯಲ್ಲೂ ಸ್ವರ್ಗದಲ್ಲೂ ನಿಲ್ಲದೆ ಉಭಯ ಭ್ರಷ್ಟನಾಗಿ ಅಂತರಾಳದಲ್ಲಿ ನಿಂತನು.] 2. ಶಲಭ, ಪತಂಗದ ಹುಳ. 3. ಮಾರ್ಜಾರ, ಬೆಕ್ಕು. "त्रिशङ्कुर्ना राजभेदे शलभे वृषदंशके" मेदि०। 4. ಚಾತಕಪಕ್ಷಿ. "चातके बभ्रुवापीहघनतोलत्रिशङ्कवः" त्रिकाण्ड०। 5. ಮಿಂಚು ಹುಳು.

**त्रिशङ्कुज ತ್ರಿಶಂಕುಜ** (पुं०) ತ್ರಿಶಂಕುರಾಜನ ಮಗ, ಹರಿಶ್ಚಂದ್ರ. त्रिशङ्कोर्जायते — जनी (प्रादुर्भावे) "ड:" (३-२-९८)।

**त्रिशङ्कुयाजिन् ತ್ರಿಶಂಕುಯಾಜಿನ್** (पुं०) ತ್ರಿಶಂಕುವಿನ ಯಾಗವನ್ನು ಮಾಡಿಸಿದ ವಿಶ್ವಾಮಿತ್ರಮಹರ್ಷಿ. त्रिशङ्कुं याजयति — यज (देवपूजायाम्) + णिच् "णिनि:" (३-१-१३४)। ["त्रिशङ्कु" ಪದದಲ್ಲಿ ನೋಡಿ.]

**त्रिशत ತ್ರಿಶತ** (न०) 1. ಮುನ್ನೂರು. त्रिगुणितं शतम्। 2. ಒಂದುನೂರ ಮೂರು. त्र्यधिकं शतम्। (स्त्री०) **-शती -ಶತೀ.** ಮುನ್ನೂರು.

**त्रिशिख ತ್ರಿಶಿಖ** (पुं०) 1. ಹದಿನಾಲ್ಕು ಮಂದಿ ಇಂದ್ರರಲ್ಲಿ ನಾಲ್ಕನೆಯವನು. 2. ರಾಕ್ಷಸ, ರಾವಣನ ಒಬ್ಬ ಮಗ. (न०)3. ತ್ರಿಶೂಲವೆಂಬ ಒಂದು ಆಯುಧ. तिस्र: शिखा अस्य। 4. ಕಿರೀಟ. (वि०) 5. ಮೂರು ಶಿಖೆಯುಳ್ಳ. "त्रिशिखां भ्रुकुटीं कृत्वा सन्दश्य दशनच्छदम्" भा० आदि०। "त्रिशिखो रक्षस्त्रिशिखं स्यात् किरीटत्रिशूलयो:" हेम०।

**त्रिशिरस् ತ್ರಿಶಿರಸ್** (पुं०) 1. ಕುಬೇರ. त्रीणि शिरांसि अस्य। 2. ರಾವಣನ ಒಬ್ಬ ಮಗ. 3. ಖರನ ಒಬ್ಬ ಸೇನಾಪತಿ. 4. ವಿಶ್ವರೂಪ ನಾಮಾಂತರವುಳ್ಳ ತ್ವಷ್ಟನೆಂಬ ಬ್ರಹ್ಮನ ಮಗ, [ಈತನಿಗೆ ಮೂರು ತಲೆಗಳಿದ್ದುದರಿಂದ ಎಲ್ಲರೂ ಈ ಹೆಸರಿನಿಂದಲೇ ಇವನನ್ನು ಕರೆಯುತ್ತಿದ್ದರು. ಈತನು ಒಂದು ತಲೆಯಿಂದ ವೇದಾಧ್ಯಯನ ಮಾಡುತ್ತಿದ್ದನು. ಇನ್ನೊಂದು ತಲೆಯಿಂದ ಸೋಮಪಾನವನ್ನೂ ಮತ್ತೊಂದರಿಂದ ಸುರಾಪಾನವನ್ನೂ ಮಾಡುತ್ತಿದ್ದನು. ಇವನು ತ್ವಷ್ಟನಿಂದ ಪ್ರಹ್ಲಾದನ ಮಗಳಾದ ವಿರೋಚನೆಯಲ್ಲಿ ಹುಟ್ಟಿದುದರಿಂದ ಇವನಲ್ಲಿ ದೇವತೆಗಳ ಮತ್ತು ರಾಕ್ಷಸರ ಗುಣಗಳೆರಡೂ ಮಿಶ್ರವಾಗಿದ್ದುವು. "सर्वे सान्ताः अदन्ताः स्युः" ಈ ವಚನದಂತೆ "त्रिशिर" ಎಂದು ಅಕಾರಾಂತವೂ ಆಗುವುದು. "तस्याः खरत्रिशिरदूषणमुख्यबन्धून्" भाग० ९-१०-९। "मनुष्यधर्मैलबिल: पौलस्त्यो धनदो धनी। कैलासनाथस्त्रिशिरा धनाध्यक्षो वटाश्रयः। निधिपालो वैश्रवणो वित्तेशो नरवाहनः" वैज०। 5. ಜ್ವರ. "विद्राविते भतगणे ज्वरस्तु त्रिशिरास्त्रिपात्। अभ्यधावत दाशार्हं दहन्निव दिशो दश" भाग० १०-६३-२२।

**त्रिशूल ತ್ರಿಶೂಲ** (न०) ಚೂಪಾದ ಮೂರು ಅಗ್ರವುಳ್ಳ ಒಂದು ಆಯುಧ. त्रीणि शूलानीव अग्राणि यस्य।

**त्रिशूलिन् ತ್ರಿಶೂಲಿನ್** (पुं०) ಪರಶಿವ, ಪರಮೇಶ್ವರ, ಮಹಾದೇವ. त्रिशूलमस्त्यस्य "इनिः" (५-२-११५)। स्त्रियाम् "ङीप्" (४-१-५)। **-शूलिनी -ಶೂಲಿನೀ.** ದುರ್ಗಾದೇವಿ, ಪಾರ್ವತಿ. "त्रिशूलिनीं नमस्यामि महिषासुरघातिनीम्" हरिवं०।

**त्रिशृङ्ग ತ್ರಿಶೃಂಗ** (पुं०) 1. ತ್ರಿಕೂಟಪರ್ವತ. त्रीणि शृङ्गाण्यस्य। "त्रिशृङ्गः पर्वतश्चैव कुमारी च सरिद्वरा" हरिवं०। (न०) 2. ತ್ರಿಕೋಣ, ಮೂರು ಮೂಲೆಗಳು, ತ್ರಿಭುಜಗಳು. 3. ಮೂರು ಕೋಣಗಳುಳ್ಳ ಕ್ಷೇತ್ರ.

**त्रिशोक ತ್ರಿಶೋಕ** (पुं०) ಜೀವ, ಜೀವಾತ್ಮ. त्रयः शोका यस्य। [ಜೀವನಿಗೆ ಆಧ್ಯಾತ್ಮಿಕ ಆಧಿದೈವಿಕ ಮತ್ತು ಆಧಿಭೌತಿಕಗಳೆಂಬ ಮೂರು ತಾಪಗಳುಂಟು.]

**त्रिषवण ತ್ರಿಷವಣ** (न०) ಪ್ರಾತಃಕಾಲ ಮಧ್ಯಾಹ್ನ ಮತ್ತು ಸಾಯಂಕಾಲಗಳೆಂಬ ಮೂರು ಕಾಲ. सूयते सोमोऽत्र षु अधि० "ल्युट्" (३-३-११७)। "कुर्यात् त्रिषवणस्नायी कृच्छ्रं चान्द्रायणं तथा" याज्ञ० ३-३२५।

**त्रिषष्ट ತ್ರಿಷಷ್ಟ** (वि०) ಅರವತ್ತಮೂರನೆಯ. त्रिषष्टेः पूरणः "डट्" (५-२-४८)।

**त्रिषष्टि ತ್ರಿಷಷ್ಟಿ** (स्त्री०) ಅರವತ್ತಮೂರು. त्र्यधिका षष्टिः।

**त्रिषष्टितम ತ್ರಿಷಷ್ಟಿತಮ** (वि०) ಅರವತ್ತಮೂರನೆಯ. त्रिषष्टि डटो वा तमडागमः (५-२-६६)। स्त्रियाम् "ङीप्" (४-१-१५)। **-तमी -ತಮೀ.**

**त्रिष्टुभ् ತ್ರಿಷ್ಟುಭ್** (स्त्री०) 1. ಹನ್ನೊಂದನೆಯ ಛಂದಸ್ಸು, ಹನ್ನೊಂದು ಅಕ್ಷರಗಳುಳ್ಳ ಒಂದು ಛಂದಸ್ಸು. त्रिषु स्थानेषु स्तुभ्यते — स्तुन्भु (रोधने) "क्विप्" (३-२-७६)। "गायत्र्युष्णिगनुष्टुप् च बृहती पङ्क्तिरेव च। त्रिष्टुप् च जगती चैव" बृ० र०। "एकादशाक्षरा वै त्रिष्टुप् गायत्री क्षत्रं त्रिष्टुप् च" श्रुतिः। 2. ತ್ರಿಷ್ಟುಪ್ ಛಂದಸ್ಸಿನ ಅಭಿಮಾನಿದೇವತೆ. "इन्द्र एकादशाक्षरेण छन्दसा त्रिष्टुभं त्रिष्टुप्छन्दोऽभिमानिनीं देवतामुदजयत्" श्रुतिः।

**त्रिस् ತ್ರಿಸ್** (अव्य०) ಮೂರು ಸಲ, ಮೂರಾವೃತ್ತಿ. तिस्रः क्रियाया अभ्यावृत्तयः — त्रि "सुच्" (५-४-१८)। "त्रिःसप्तकृत्वो जगतीपतीनां हन्ता गुरुर्यस्य स जामदग्न्यः" किरा० ३-१८।

**त्रिसन्धि ತ್ರಿಸಂಧಿ** (वि०) ಮೂರು ಸಂಧಿಗಳುಳ್ಳ, ಮೂರು ಭಾಗಗಳುಳ್ಳ. त्रयः सन्धयो परिच्छेदात्मका भागा यस्य

**त्रिसन्ध्य ತ್ರಿಸಂಧ್ಯ** (न०) 1. ಪ್ರಾತಃಕಾಲ ಮಧ್ಯಾಹ್ನ ಮತ್ತು ಸಾಯಂಕಾಲಗಳೆಂಬ ಮೂರು ಸಂಧ್ಯಾಕಾಲಗಳು. तिसृणां सन्ध्यानां समाहारः। "अकारि तस्यै मुकुटोपलस्खलत्करैस्त्रिसन्ध्यं त्रिदशैर्दिशे नमः" माघ० १-४६। पाक्षिकं स्त्रीत्वम् (वा० २-४-१७)। **-सन्ध्यी -ಸಂಧ್ಯೀ.** (अव्य०) 2. ತ್ರಿಸಂಧ್ಯಾಕಾಲಗಳಲ್ಲೂ.

**त्रिसप्तत ತ್ರಿಸಪ್ತತ** (वि०) ಎಪ್ಪತ್ತಮೂರನೆಯ. त्रिसप्ततेः पूरणः "डट्" (५-२-४८)। स्त्रियाम् "ङीप्" (४-१-१५)। **-सप्तती -ಸಪ್ತತೀ.**

**त्रिसप्तति ತ್ರಿಸಪ್ತತಿ** (स्त्री०) ಎಪ್ಪತ್ತಮೂರು. त्र्यधिका सप्ततिः। त्रेः त्रयः। **त्रयःसप्ततिः ತ್ರಯಃಸಪ್ತತಿಃ.**

**त्रिसप्ततितम ತ್ರಿಸಪ್ತತಿತಮ** (वि०) ಎಪ್ಪತ್ತಮೂರನೆಯ. त्रिसप्ततेः पूरणः डटः वा तमडागमः। त्रेः त्रयः। **त्रयःसप्ततितमः ತ್ರಯಃಸಪ್ತತಿತಮಃ.** स्त्रियाम् "ङीप्" (४-१-१५)। **-सप्ततितमी -ಸಪ್ತತಿತಮೀ.**

**त्रिसप्तन् ತ್ರಿಸಪ್ತನ್** (वि०) ಎಪ್ಪತ್ತೊಂದು. त्रिगुणिताः सप्त।

**त्रिसम ತ್ರಿಸಮ** (वि०) ದೇಹದಲ್ಲಿ ಹೆಚ್ಚುಕಡಮೆಯಿಲ್ಲದೆ ಸಮವಾಗಿರುವ ಮೂರು ಅವಯವಗಳುಳ್ಳವನು. त्रिषु समः। ಕೇಶಾಗ್ರ (ತಲೆಯ ಕೂದಲಿನ ತುದಿ) ವೃಷಣಗಳು ಮತ್ತು ಮೊಳಕಾಲುಗಳು ಒಂದೇ ಅಳತೆಯಲ್ಲಿರುವುದು ರಾಜಲಕ್ಷಣ. "केशाग्रं वृषणं जानू समा यस्य स भूपतिः"। "त्रिस्थिरस्त्रिप्रलम्बश्च त्रिसमस्त्रिषु चोन्नतः" रामा०।

**त्रिसरक ತ್ರಿಸರಕ** (न०) 1. ಮೂರು ಸಲ ಮದ್ಯವನ್ನು ಕುಡಿಯುವುದು. त्रयाणां सरकाणां मधुपानानां समाहारः। पात्राद्यन्तरवात् न "ङीप्"। "प्रातिभं त्रिसरकेण गतानां वक्रवाक्यरचनारमणीयः" माघ० १०-१२। 2. ಮೂರು ಮದ್ಯದ ಪಾತ್ರೆಗಳು. त्रयाणां शीधुपात्राणां समाहारः। "सरकोऽस्त्री शीधुपाने शीधुपात्रेक्षुशीधुनोः" मेदि०।

**त्रिसर्ग ತ್ರಿಸರ್ಗ** (पुं०) ಸತ್ತ್ವ ರಜಸ್ಸು ಮತ್ತು ತಮಸ್ಸುಗಳೆಂಬ ಮೂರು ಗುಣಗಳ ಸೃಷ್ಟಿ. त्रयाणां सत्त्वरजस्तमसां सर्गः सृष्टिः। "तेजो वारिमृदां यथा विनिमयो यत्र त्रिसर्गोऽमृषा धाम्ना स्वेन सदा निरस्तकुहकं सत्यं परं धीमहि" भाग० १-१-१।

**त्रिसामन् ತ್ರಿಸಾಮನ್** (पुं०) ವಿಷ್ಣು, ಪರಮಾತ್ಮ. त्रीणि सामानि स्वगायकप्रधानानि बृहद्रथन्तरवामदेव्यान्यस्य। "प्रोक्तस्त्रिसामा यश्चासौ बृहदादित्रिसामकः" इति

निरुक्तिः। "त्रिसामा सामगःसाम निर्वाणं भेषजं भिषक्" वि० स०।

**त्रिसीत्य ತ್ರಿಸೀತ್ಯ** (न०) ಮೂರು ಸಲ ಉತ್ತ ಭೂಮಿ. त्रिवारं सीतया संमितम् "यत्" (४-४-९१)।

**त्रिसुगन्धि ತ್ರಿಸುಗಂಧಿ** (न०) ಲವಂಗಪಟ್ಟೆ (ದಾಲ್ಚಿನ್ನಿ) ಯಾಲಕ್ಕಿ ಜಾಪತ್ರೆ ಇವು ಮೂರು. त्रयाणां सुगन्धिद्रव्याणां समाहारः। "पिबेद्रसं पुष्पफलोद्भवं वा सितामधूक-त्रिसुगन्धियुक्तम्" सुश्रुत० उत्तरतं० ४७-४५।

**त्रिस्कन्ध ತ್ರಿಸ್ಕಂಧ** (न०) ಜ್ಯೋತಿಃಶಾಸ್ತ್ರ. ತಂತ್ರ ಹೋರಾ ಮತ್ತು ಅಂಗನಿರ್ಣಯಗಳೆಂಬ ಮೂರು ಭಾಗಗಳುಳ್ಳ ಶಾಸ್ತ್ರ. त्रयः स्कन्धाः अवयवाः यस्य। "ज्योतिःशास्त्र-मनेकभेदविषयं स्कन्धत्रयाधिष्ठितं तत्कात्स्न्योपनयस्य नाम मुनिभिः संकीर्त्यते संहिता। स्कन्धेऽस्मिन् गणितेन या ग्रहगतिस्तन्त्राभिधानस्त्वसौ होराऽन्योऽङ्गविनिश्चयश्च कथितः स्कन्धस्तृतीयोऽपरः"।

**त्रिस्तन ತ್ರಿಸ್ತನ** (न०) 1. ಮೂರು ದಿನಗಳಲ್ಲಿ ಮಾಡ ಬಹುದಾದ ಒಂದು ಯಾಗ. त्रयः स्तनाः दोहघा यत्र। (स्त्री०) **-स्तनी -ಸ್ತನೀ.** 2. ಮೂರು ಸ್ತನಗಳುಳ್ಳ ಒಬ್ಬ ರಾಕ್ಷಸಿ. "त्रिस्तनीमेकपादाश्च त्रिजटामेकलोचनाम्" भा० वन० २८१-४६।

**त्रिस्थली ತ್ರಿಸ್ಥಲೀ** (स्त्री०) ಕಾಶಿ ಗಯೆ ಮತ್ತು ಪ್ರಯಾಗ ಗಳೆಂಬ ಮೂರು ಪುಣ್ಯಕ್ಷೇತ್ರಗಳು. त्रयाणां स्थलानां समाहारः।

**त्रिस्थान ತ್ರಿಸ್ಥಾನ** (पुं०) 1. ಪರಮಾತ್ಮ. त्रीणि स्थानानि स्वर्गमध्यपातालाख्यानि यस्य। 2. ಜೀವಾತ್ಮ. ಜಾಗ್ರತ್ ಸುಷುಪ್ತಿ ಮತ್ತು ಸ್ವಪ್ನಗಳೆಂಬ ಮೂರು ಅವಸ್ಥೆಗಳಿರು ವುದರಿಂದ ಈ ಹೆಸರು.

**त्रिस्रोतस् ತ್ರಿಸ್ರೋತಸ್** (स्त्री०) ಗಂಗಾನದಿ. त्रीणि स्रोतांसि यस्याः। त्रिषु लोकेषु स्रोतो यस्याः इति वा। "अङ्गुष्ठनिष्ठ्यूतमिवोर्ध्वमुच्चैस्त्रिस्रोतसःसन्ततधार-मम्भः" माघ० ३-१०। **-स्रोतसी -ಸ್ರೋತಸೀ.** ಒಂದು ನದಿ.

**त्रिहल्य ತ್ರಿಹಲ್ಯ** (न०) ಮೂರಾವೃತ್ತಿ ನೇಗಿಲಿನಿಂದ ಉತ್ತ ಭೂಮಿ. त्रिः त्रिवारं हलेन कृष्टम् "यत्" (४-४-९७)।

**त्रिहायण ತ್ರಿಹಾಯಣ** (वि०) ಮೂರು ವರ್ಷ ವಯಸ್ಸುಳ್ಳ. त्रयो हायना वयो यस्य। "अथ स स्मारणं कृत्वा लक्षयित्वा त्रिहायणान्" भा० वन० २४१-६। स्त्रियाम् "ङीप्" (४-१-२७)।

**त्रिहायणी ತ್ರಿಹಾಯಣೀ** (स्त्री०) 1. ಮೂರು ವರ್ಷ ವಯಸ್ಸುಳ್ಳ ಗೋವು. त्रीणि हायनानि यस्याः। णत्वम् (वा० ४-१-२७)। 2. ದ್ರೌಪದಿ. "कृते युगे वेदवती त्रेतायां जनकात्मजा। द्वापरे द्रौपदीच्छाया तेन कृष्णा त्रिहायणी"।

**त्रीषु ತ್ರೀಷು** (वि०) ಮೂರು ಬಾಣಗಳ ಅಳತೆಯುಳ್ಳ. त्रयः इषवः परिमाणमस्य।

**त्रीषुक ತ್ರೀಷುಕ** (न०) ಮೂರು ಬಾಣಗಳಿಂದ ಕೂಡಿದ ಧನುಸ್ಸು. त्रयः इषवो यत्र "कप्" (५-४-१५४)।

**त्रुट-छेदने** (तुदा० पर० सक० से०)। त्रुटति। वा श्यन्। त्रुटयति। तुत्रोट। त्रुटिता। त्रुटिष्यति। अत्रुटीत्। ಇತ್ಯಾದಿ. ಹರಿದುಹಾಕು, ಸೀಳು, ಛಿದ್ರಮಾಡು.

**त्रुट - छेदने** (चुरा० आत्म० सक० से०)। त्रोटयते। त्रोटयां चक्रे, -बभूव, -आस। त्रोटयिता। त्रोटयिष्यते। ಇತ್ಯಾದಿ. ಹರಿದುಹಾಕು, ಸೀಳು.

**त्रुटि ತ್ರುಟಿ** (स्त्री०) 1. ಸಣ್ಣ ಜಾತಿಯ ಯಾಲಕ್ಕಿ. त्रुट (छेदने) "इन्" (उ० ४-११९)। 2. ಸ್ವಲ್ಪ, ಕೊಂಚ, ತುಸ, ಅಣು. 3. ಸಂಶಯ. 4. ಕಾಲದ ಅತಿಸೂಕ್ಷ್ಮವಾದ ಭಾಗ, ಕಾಲದ ಒಂದು ಭೇದ. "त्रुटिः संशयलेशयोः। सूक्ष्मैलायां कालमाने" हेम०। "त्रसरेणुत्रयं भुङ्क्ते यः कालः स त्रुटिः स्मृता"। 5. ಹರಿಯುವುದು, ತುಂಡುಮಾಡುವುದು. वा "ङीप्" (ग० ४-१-४५)। **-त्रुटी -ತ್ರುಟೀ.**

**त्रुटित ತ್ರುಟಿತ** (वि०) ಕಿತ್ತುಹಾಕಲ್ಪಟ್ಟ, ಹರಿಯಲ್ಪಟ್ಟ, ಸೀಳಲ್ಪಟ್ಟ, ತುಂಡುಮಾಡಲ್ಪಟ್ಟ. त्रुट (छेदने) कर्म० "क्तः" (३-२-१०२)। "प्राणेश त्रुटितं पयोधरतटे हारं पुनर्योजय" सा० द० ३।

**त्रुटयत् ತ್ರುಟ್ಯತ್** (वि०) ಹರಿಯುತ್ತಿರುವ, ತುಂಡುಮಾಡು ತ್ತಿರುವ, ಕತ್ತರಿಸುತ್ತಿರುವ. त्रुट (छेदने) "शतृ" (३-२-१२४)। स्त्रियाम् "ङीप्" (४-१-६)। **-न्ती -ನ್ತೀ.** "शानच्" (३-२-१२४)। **त्रुटयमानः ತ್ರುಟ್ಯಮಾನಃ.**

**त्रेता ತ್ರೇತಾ** (स्त्री०) 1. ದಕ್ಷಿಣಾಗ್ನಿ ಗಾರ್ಹಪತ್ಯ ಮತ್ತು ಆಹವನೀಯಗಳೆಂಬ ಮೂರು ಅಗ್ನಿಗಳು. त्रायन्ते-त्रैङ् (पालने) "क्विप्" (३-२-६१)। त्राः आहुतयः, ताभिरिता। "त्रेताग्निधूमाग्रमनिन्द्यकीर्तेस्तस्येदमाक्रान्त-विमानमार्गम्" रघु० १३-३७। 2. ಚತುರ್ಯುಗಗಳಲ್ಲೊಂದು. [ಕೃತ, ತ್ರೇತಾ, ದ್ವಾಪರ ಮತ್ತು ಕಲಿ ಗಳೆಂದು ಯುಗಗಳು ನಾಲ್ಕು.] ತ್ರೇತಾಯುಗದ (ವರ್ಷ)

ಮಾನ—ದೇವಮಾನ–3,600, ಮಾನುಷ–12,96,000 ವರ್ಷಗಳು. "त्रेतायुगे भविष्यामि रामो भृगुकुलोद्वहः" भा० शान्ति० ३४८-१५। 3. ಮೂರರ ಒಂದು ಗುಂಪು, ಮೂರರ ಒಂದು ತಂಡ. 4. ಪಗಡೆಯಾಟದಲ್ಲಿ ಮೇಲುಮುಖವಾಗಿ ಬೀಳುವ ದಾಳದ ಮೂರರ ಗರ. 5. ಕವಡೆಯಾಟದಲ್ಲಿ ಮೇಲುಮುಖವಾಗಿ ಬೀಳುವ ಮೂರರ ಗರ.

**त्रेधा ತ್ರೇಧಾ** (अव्य०) ಮೂರು ಪ್ರಕಾರವಾಗಿ, ಮೂರು ವಿಧವಾಗಿ. त्रि प्रकारे "एधाच्" (५-३-४६)। "नमो विश्वसृजे पूर्वं विश्वं तदनु बिभ्रते। अथ विश्वस्य संहर्त्रे तुभ्यं त्रेधा स्थितात्मने" रघु० १०-१६।

**त्रैककुद ತ್ರೈಕಕುದ** (न०) ತ್ರಿಕಕುತ್ ಪರ್ವತದಲ್ಲಿ ಉಂಟಾದ ಸೌರಾಂಜನ. त्रिककुत्पर्वते भवः "अण्" (४-३-५३)।

**त्रैकालिक ತ್ರೈಕಾಲಿಕ** (वि०) 1. ಭೂತ ಭವಿಷ್ಯತ್ ಮತ್ತು ವರ್ತಮಾನಕಾಲಗಳಲ್ಲಿ ಇರುವ, ಮೂರು ಕಾಲಗಳಲ್ಲಿ ಉಂಟಾದ. त्रिकाले भवः "ठञ्" (वा० ४-३-६०)। 2. ಪ್ರಾತಃಕಾಲ ಮಧ್ಯಾಹ್ನ ಸಾಯಂಕಾಲಗಳೆಂಬ ಮೂರು ಸಂಧ್ಯಾಕಾಲಗಳಲ್ಲಿ ಉಂಟಾದ. "त्रैकालिकमिदं ज्ञानं प्रादुर्भूतं यथेप्सितम्" भा० शान्ति० ३४९-२६।

**त्रैकाल्य ತ್ರೈಕಾಲ್ಯ** (न०) ಭೂತ ಭವಿಷ್ಯತ್ ಮತ್ತು ವರ್ತಮಾನಗಳೆಂಬ ಮೂರು ಕಾಲಗಳು. त्रिकाल स्वार्थे "ष्यञ्" (वा० ५-१-१२४)।

**त्रैगर्त ತ್ರೈಗರ್ತ** (पुं०) 1. ತ್ರಿಗರ್ತನ ಮಗ. त्रिगर्तस्यापत्यम् "अण्" (४-१-११४)। 2. ತ್ರಿಗರ್ತ ದೇಶದ ದೊರೆ.

**त्रैगर्तक ತ್ರೈಗರ್ತಕ** (वि०) ತ್ರಿಗರ್ತದೇಶದ ಸಮೀಪಪ್ರದೇಶ, त्रिगर्तस्य अदूरभवः "वुञ्" (४-२-८०)।

**त्रैगुणिक ತ್ರೈಗುಣಿಕ** (वि०) ತನ್ನ ದ್ರವ್ಯವು ಮೂರರಷ್ಟು ಹೆಚ್ಚಾಗಲು ದ್ರವ್ಯವನ್ನು ಸಾಲವಾಗಿ ಕೊಡುವವನು, ಹಣವು ಮುಮ್ಮಡಿಯಾಗಿ ಹೆಚ್ಚಲು ಬಡ್ಡಿಗಾಗಿ ಸಾಲವನ್ನು ಕೊಡುವವನು. त्रिगुणार्थं द्रव्यं त्रिगुणम् तत् प्रयच्छति "ठक्" (४-४-३०)।

**त्रैगुण्य ತ್ರೈಗುಣ್ಯ** (न०) 1. ಸತ್ತ್ವ ರಜಸ್ಸು ಮತ್ತು ತಮಸ್ಸುಗಳೆಂಬ ಮೂರು ಗುಣಗಳು. त्रयो गुणाः—स्वार्थे "ष्यञ्" (वा० ५-१-१२४)। 2. ಸತ್ತ್ವರಜಸ್ತಮೋಗುಣಪ್ರಚುರನಾದ ಪುರುಷ. सत्त्वरजस्तमःप्रचुराः पुरुषाः त्रैगुण्यशब्देनोच्यन्ते। "त्रैगुण्यविषया वेदा निस्त्रैगुण्यो भवार्जुन" गीता २-४५। 3. ಶೈತ್ಯ ಸೌರಭ್ಯ ಮಾಂದ್ಯಗಳೆಂಬ ಮೂರು ಗುಣಗಳು. "त्रैगुण्यललितैश्चारुमरुद्भिरुपवीजिते"।

**त्रैङ्–पालने** (भ्वा० आत्म० सक० अनि०)। त्रायते। तत्रे। त्राता। त्रास्यते। त्रायताम्। अत्रायत। त्रायेत। ಇತ್ಯಾದಿ.

कृत्सु:—त्रातव्यम्। त्राणीयम्। त्राणः, त्रातः। त्रातवान्। त्रायमाणः। त्रातुम्। त्राणम्, त्रातम्। त्रात्वा।

**त्रैदशिक ತ್ರೈದಶಿಕ** (न०) ದೈವತೀರ್ಥ, ದೇವತೆಗಳಿಗೆ ಸಂಬಂಧಿಸಿದ ತೀರ್ಥ, ಅಂಗುಲಿಯ ತುದಿಯಿಂದ ಬಿಡುವ ತೀರ್ಥ. "ब्राह्मेण विप्रस्तीर्थेन नित्यकालमुपस्पृशेत्। कायत्रैदशिकाभ्यां वा न पित्र्येण कदाचन" मनु० २-५८।

**त्रैधम् ತ್ರೈಧಮ್** (अव्य०) ಮೂರು ವಿಧವಾಗಿ, ಮೂರು ಪ್ರಕಾರವಾಗಿ. त्रि वा "धमुञ्" (५-३-४५)। पक्षे "धा"। **त्रिधा ತ್ರಿಧಾ.** "एधाच्" च। **त्रेधा ತ್ರೇಧಾ.** "सर्वमेव हठेनैके दैवेनैके वदन्त्युत। पुंसः प्रयत्नजं किञ्चित् त्रैधमेतन्निरुच्यते" भा० वन० ३२-३२।

**त्रैमातुर ತ್ರೈಮಾತುರ** (पुं०) ಲಕ್ಷ್ಮಣ, ಮೂರು ಮಂದಿ ತಾಯಿಂದಿರ ಮಗ. तिसृणां मातृणामपत्यं पुमान् "अण्" उत् आदेशश्च (४-१-११५)। ಲಕ್ಷ್ಮಣನು ಕೌಸಲ್ಯೆ ಸುಮಿತ್ರೆ ಮತ್ತು ಕೈಕಯಿ ಈ ಮೂವರ ಪ್ರೀತಿಗೂ ಪಾತ್ರನಾದುದರಿಂದ ಅವನಿಗೆ ಈ ಹೆಸರು. "त्रैमातुरः कृत्स्नजितास्त्रशस्त्रः" भट्टि० १-२५।

**त्रैमासिक ತ್ರೈಮಾಸಿಕ** (वि०) 1. ಮೂರು ತಿಂಗಳು ವಯಸ್ಸುಳ್ಳ, ಮೂರನೆಯ ತಿಂಗಳನ್ನು ಮುಟ್ಟಿರುವ. त्रिमासं तृतीयमासं भूतः स्वसत्तया प्राप्तः "ठञ्" (५-१-८०)। "तोकेन जीवहरणं यदुलूपिकायास्त्रैमासिकस्य च पदा शकटोऽपवृत्तः" भाग० २-७-२७। 2. ಮೂರು ತಿಂಗಳಲ್ಲಿ ಉಂಟಾಗುವ, ಮೂರು ತಿಂಗಳಲ್ಲಿ ಬರುವ. त्रिषु मासेषु भवः "ठञ्" (४-३-११)। स्त्रियाम् "ङीप्" (४-१-१५)। **—मासिकी —ಮಾಸಿಕೀ.**

**त्रैमास्य ತ್ರೈಮಾಸ್ಯ** (न०) ಮೂರು ತಿಂಗಳು. त्रिमास स्वार्थे "ष्यञ्" (वा० ५-१-१२४)।

**त्रैयम्बक ತ್ರೈಯಂಬಕ** (वि०) ಪರಮೇಶ್ವರನ ಸಂಬಂಧವಾದ. त्र्यम्बकस्य इदम् "अण्" (४-३-१२०)। ऐचागमः (७-३-३)। "आरोपणेन पणमप्रतिकार्यमार्यस्त्रैयम्बकस्य धनुषो यदि नाकरिष्यत्" म० वी० १-२७।

**त्रैराशिक ತ್ರೈರಾಶಿಕ** (वि०) 1. ಮೂರು ರಾಶಿಗಳನ್ನು ಕುರಿತ ಗಣಿತ. त्रीन् राशीन् अधिकृत्य कृतम्। 2. ಮೇಷ ಮೊದಲಾದ ರಾಶಿಚಕ್ರದಲ್ಲಿ ಮೂರು ರಾಶಿಗಳಿಗೆ ಸಂಬಂಧಿಸಿದ.

**त्रैलोक्य ತ್ರೈಲೋಕ್ಯ** (न०) ಸ್ವರ್ಗ ಮಧ್ಯ ಮತ್ತು ಪಾತಾಳ ಗಳೆಂಬ ಮೂರು ಲೋಕಗಳು. त्रयो लोकाः स्वार्थे "ष्यञ्" (वा० ५-१-१२४)। "त्रैलोक्यमप्यपर्याप्तं रक्षसां स्थातुमप्यदः" म० वी० ६-६०।

**त्रैलोक्याधिपत्य ತ್ರೈಲೋಕ್ಯಾಧಿಪತ್ಯ** (न०) ಮೂರು ಲೋಕಗಳ ಒಡೆತನ.

**त्रैवर्गिक ತ್ರೈವರ್ಗಿಕ** (वि०) 1. ಧರ್ಮ ಅರ್ಥ ಮತ್ತು ಕಾಮ ಇವುಗಳಿಗೆ ಅನುಕೂಲವಾದ ಕಾರ್ಯ. त्रिवर्गाय हितम् "ठञ्" बाहु०। "संस्थां विज्ञाय संन्यस्य कर्म त्रैवर्गिकं च यत्" भाग० २-४-४। 2. ಧರ್ಮ ಅರ್ಥ ಮತ್ತು ಕಾಮಗಳಲ್ಲಿ ಆಸಕ್ತಿ ಹೊಂದಿರುವವನು. "त्रैवर्गिकास्ते पुरुषा विमुखा हरिमेधसः" भाग० ३-३२-१८। 3. ಸತ್ತ್ವ ರಜಸ್ಸು ಮತ್ತು ತಮಸ್ಸುಗಳಿಗೆ ಸಂಬಂಧಿಸಿದ.

**त्रैवर्णिक ತ್ರೈವರ್ಣಿಕ** (पुं०) 1. ದ್ವಿಜಾತಿಗಳು, ಬ್ರಾಹ್ಮಣ ಕ್ಷತ್ರಿಯ ಮತ್ತು ವೈಶ್ಯರು. 2. ದ್ವಿಜಾತಿಗಳ ಧರ್ಮ.

**त्रैवर्षिक ತ್ರೈವರ್ಷಿಕ** (वि०) ಮುಂದಿನ ಮೂರು ವರ್ಷ ಗಳಲ್ಲಿ ಉಂಟಾಗುವ. त्रिवर्षं भावी "ठञ्" (५-१-८०)।

**त्रैवार्षिक ತ್ರೈವಾರ್ಷಿಕ** (वि०) ಮೂರು ವರ್ಷಗಳಲ್ಲಿ ಉಂಟಾದ, ಮೂರು ವರ್ಷಗಳಲ್ಲಿ ನಡೆದ. त्रिवर्षं भूतः "ठञ्" (५-१-८०)।

**त्रैविक्रम ತ್ರೈವಿಕ್ರಮ** (वि०) 1. ತ್ರಿವಿಕ್ರಮಾವತಾರ. "वर्धयस्व महाबाहो पुरा त्रैविक्रमे यथा" हरिवं०। 2. ತ್ರಿವಿಕ್ರಮ ಸಂಬಂಧವಾದ. त्रिविक्रमस्येदम् "अण्" (४-३-१२०)। "बलिप्रदिष्टां श्रियमाददानं त्रैविक्रमं पादमिवेन्द्रशत्रुः" रघु० ७-३५।

**त्रैविद्य ತ್ರೈವಿದ್ಯ** (पुं०) 1. ಋಗ್ಯಜುಃಸಾಮಗಳೆಂಬ ಮೂರು ವೇದಗಳನ್ನು ಅಧ್ಯಯನ ಮಾಡಿದವನು ಅಥವಾ ತಿಳಿದ ವನು. त्रिविद्यामधीते वेद वा "अण्" (४-२-५९)। "त्रैविद्यं वृत्तिमद्ब्रूयात्स्वधर्मः पाल्यतामिति" याज्ञ० २-१८५। (न०) 2. ಋಗ್ಯಜುಃಸಾಮಗಳೆಂಬ ಮೂರು ವಿದ್ಯೆಗಳು. तिसृणां विद्यानां समाहारः। स्वार्थे "अण्" (५-४-३८)।

**त्रैविध्य ತ್ರೈವಿಧ್ಯ** (न०) ಮೂರು ವಿಧ, ಮೂರು ಪ್ರಕಾರ. त्रिविधस्य भावः "ष्यञ्" (५-१-१२४)।

**त्रैविष्टप ತ್ರೈವಿಷ್ಟಪ** (पुं०) ದೇವತೆ. तृतीयं विष्टपं स्वर्गः, त्रिविष्टपे भवः "अण्" (४-३-५३)। "इष्टैस्त्रैविष्टपानां विदधतु विधिवत् प्रीणनं विप्रमुख्याः" रत्ना० ४-२१।

**त्रैविष्टपेय ತ್ರೈವಿಷ್ಟಪೇಯ** (पुं०) ದೇವತೆ. त्रिविष्टप "ढक्" बाहु०। "गन्धर्वयक्षासुरसिद्धचारणत्रैविष्टपेयादिषु नान्वविन्दत" भाग० ८-८-१९।

**त्रैशङ्कव ತ್ರೈಶಂಕವ** (पुं०) 1. ತ್ರಿಶಂಕುವಿನ ಮಗ, ಹರಿಶ್ಚಂದ್ರ. त्रिशङ्कोरपत्यम् "अण्" (४-१-९२)। 2. ತ್ರಿಶಂಕುವಿಗೆ ಸಂಬಂಧಿಸಿದ. त्रिशङ्कोरिदम् "अण्" (४-३-१२०)।

**त्रैस्वर्य ತ್ರೈಸ್ವರ್ಯ** (न०) ಉದಾತ್ತ ಅನುದಾತ್ತ ಮತ್ತು ಸ್ವರಿತಗಳೆಂಬ ಮೂರು ಸ್ವರಗಳು. त्रिस्वर स्वार्थे "ष्यञ्" (वा० ५-१-१२४)।

**त्रैहायण ತ್ರೈಹಾಯಣ** (वि०) ಮೂರು ವರ್ಷಗಳ ಸಂಬಂಧವಾದ. त्रिहायणस्येदम् "अण्" (४-३-१२०)।

**त्रोटक ತ್ರೋಟಕ** (न०) ದೃಶ್ಯಕಾವ್ಯಗಳಲ್ಲಿ ಒಂದು ಭೇದ. ಹದಿನೆಂಟು ವಿಧ ಉಪರೂಪಕಗಳಲ್ಲೊಂದು. **ಹದಿನೆಂಟು ಉಪರೂಪಕಗಳು:** (1) नाटिका, (2) त्रोटकम्, (3) गोष्ठी, (4) सट्टकम्, (5) नाटचरासकम्, (6) प्रस्थानम्। (7) उल्लाप्यम्, (8) काव्यम्, (9) प्रेङ्खणम्, (10) रासकं, (11) संलापकम्, (12) श्रीगदितम्, (13) शिल्पकम्, (14) विलासिका, (15) दुर्मल्लिका, (16) प्रकरणिका, (17) हल्लीशः ಮತ್ತು (18) भाणिका। ತ್ರೋಟಕ ರೂಪಕದಲ್ಲಿ 5, 7, 8 ಅಥವಾ 9 ಅಂಕಗಳಿರಬೇಕು. ದೇವತೆ ಮತ್ತು ಮನುಷ್ಯರು ನಾಯಕರು, ಪ್ರತಿ ಅಂಕದಲ್ಲಿಯೂ ವಿದೂಷಕನ ಸಂಬಂಧವಿರಬೇಕು. ವಿದೂಷಕನ ಸಂಬಂಧ ವಿರುವುದರಿಂದ ಶೃಂಗಾರರಸವು ಪ್ರಧಾನವಾಗಿರುವುದು. "सप्ताष्टनवपञ्चाङ्कं दिव्यमानुषसंश्रयम्। त्रोटकं नाम तत्प्राहुः प्रत्यङ्कं सविदूषकम्" सा० द० ६-२७३।

**त्रोटि ತ್ರೋಟಿ** (स्त्री०) 1. ಕೊಕ್ಕು, ಹಕ್ಕಿಯ ಮೂತಿ. त्रुट (छेदने) + णिच् "इः" (उ० ४-१३८)। 2. ಕಿರಿಯ ಶಿವನಿ ಮರ. 3. ಪಕ್ಷಿ, ಹಕ್ಕಿ. 4. ಒಂದು ಜಾತಿಯ ಮೀನು. "त्रोटिः स्त्री कट्फले चञ्च्वां खगे मीनान्तरेऽपि च" मेदि०।

**त्रोटिहस्त ತ್ರೋಟಿಹಸ್ತ** (पुं०) ಪಕ್ಷಿ, ಹಕ್ಕಿ. त्रोटिः चञ्चुः हस्त इव यस्य।

**त्र्यंश ತ್ರ್ಯಂಶ** (पुं०) 1. ಮೂರನೆಯ ಭಾಗ. तृतीयोंशः। 2. ಮೂರು ಭಾಗಗಳು. त्रिगुणितोंऽशः। "त्र्यंशं दायाद्धरेद्विप्रो द्वावंशौ क्षत्रियासुतः" मनु० ९-१५१। 3. ರಾಶಿಯ ಮೂರನೆಯ ಭಾಗ. (वि०) 4. ಮೂರು ಭಾಗಗಳನ್ನು ಹೊಂದಿರುವ.

**त्र्यक्ष ತ್ರ್ಯಕ್ಷ** (पुं०) 1. ಪರಮೇಶ್ವರ, ಮಹಾದೇವ. त्रीणि अक्षीणि अस्य। "षच्" (५-४-११३)। (वि०) 2. ಮೂರು ಕಣ್ಣುಗಳುಳ್ಳವನು. त्रीणि अक्षीणि यस्य। "चेदिराजकुले जातस्त्र्यक्ष एष चतुर्भुजः" भा० सभा०। स्त्रियाम् "ङीष्" (४-१-४१)। **त्र्यक्षी ತ್ರ್ಯಕ್ಷೀ.** "द्व्यक्षीं त्र्यक्षीं ललाटाक्षीं दीर्घजिह्वामजिह्विकाम्" भा० वन० २८१-४६।

**त्र्यक्षर ತ್ರ್ಯಕ್ಷರ** (पुं०) 1. ಪ್ರಣವ, ಓಂಕಾರ. त्रीणि अकारोकारमकाररूपाणि अक्षराणि यत्र। "आद्यं यत् त्र्यक्षरं ब्रह्म त्रयी यस्मिन् प्रतिष्ठिता। स गुह्योऽन्यस्त्रिवृद्वेदो यस्तं वेद स वेदवित्" मनु० ११-२६५। (न०) 2. ಮೂರು ಅಕ್ಷರಗಳುಳ್ಳ ಮೂರನೆಯ (ಮಧ್ಯಾ) ಛಂದಸ್ಸು. त्रीण्यक्षराणि प्रतिपादं यत्र। (वि०) 3. ಮೂರು ಅಕ್ಷರಗಳುಳ್ಳ.

**त्र्यङ्कट ತ್ರ್ಯಂಕಟ** (पुं०) 1. ಈಶ್ವರ, ಪರಶಿವ. (न०) 2. ಶಿಕ್ಯ, ಕಾವಡಿಯ ನಿಲುವು. 3. ಒಂದು ವಿಧ ಅಂಜನ.

**त्र्यङ्गुल ತ್ರ್ಯಂಗುಲ** (वि०) ಮೂರು ಬೆರಳುಗಳ ಪ್ರಮಾಣವುಳ್ಳ, ಮೂರು ಬೆರಳುಗಳ ಅಳತೆಯುಳ್ಳ. तिस्रोऽङ्गुलयः प्रमाणमस्य "अच्" (५-४-८६)।

**त्र्यधिष्ठान ತ್ರ್ಯಧಿಷ್ಠಾನ** (पुं०) ಜೀವಾತ್ಮ. त्रीणि अधिष्ठानानि मनोवाक्कायरूपाण्याश्रयस्थानानि यस्य। तिसृणां जागृदाद्यवस्थानामधिष्ठानम् वा। तत्पुरुषपक्षे न०। ಮೊದಲು ಮನಸಾ ಸಂಕಲ್ಪಿಸುವುದು, ಅನಂತರ ಮಾತಿನಿಂದ ಹೇಳುವುದು, ಬಳಿಕ ಶರೀರ ವ್ಯಾಪಾರದಿಂದ ಕಾರ್ಯವನ್ನು ಮಾಡುವುದು. ಈ ಮೂರೂ (ಮನಸ್ಸು ವಾಕ್ಕು ಮತ್ತು ಕಾರ್ಯಗಳು) ಜೀವನಿಗೆ ಆಶ್ರಯವಾಗಿರುವುದರಿಂದ (ಇವು ಮೂರೂ) ಅಧಿಷ್ಠಾನಗಳಾದುವು. "तस्मात् पुरुषो मनसाभिगच्छति तद्वाचा वदति तत्कर्मणा करोति" इति श्रुतिः। ಜಾಗ್ರತ್ ಸ್ವಪ್ನ ಮತ್ತು ಸುಷುಪ್ತಿ ಈ ಮೂರು ಅವಸ್ಥೆಗಳಿಗೂ ಜೀವನು ಆಶ್ರಯನು. "तस्येह त्रिविधस्यापि त्र्यधिष्ठानस्य देहिनः। दशलक्षणयुक्तस्य मनो विद्यात् प्रवर्तकम्" मनु० १२-४।

**त्र्यध्वगा ತ್ರ್ಯಧ್ವಗಾ** (स्त्री०) ಗಂಗಾನದಿ. त्रिभिरध्वभिः गच्छति – गम्लृ (गतौ) "डः" (वा० ३-२-४८)।

**त्र्यम्बक ತ್ರ್ಯಂಬಕ** (पुं०) 1. ಪರಶಿವ, ಪರಮೇಶ್ವರ, ಮಹಾದೇವ. त्रीणि अम्बकानि नेत्राणि यस्य। त्रीणि भूम्यन्तरिक्षद्युलोकाख्यानि अम्बकानि स्थानान्यस्य। त्रयः अकारोकारमकाराख्या अम्बाः शब्दाः प्रतिपादकाः वाचकाः यस्य इति वा। "त्र्यम्बकं देवमाचार्यमाचार्यानीं च पार्वतीम्" म० वी० ३-६। (वि०) 2. ಮೂರು ಕಣ್ಣುಗಳುಳ್ಳ. **-का -ಕಾ.** (स्त्री०) ಪಾರ್ವತಿ.

**त्र्यम्बकसख ತ್ರ್ಯಂಬಕಸಖ** (पुं०) ಈಶ್ವರನ ಗೆಳೆಯ, ಕುಬೇರ. त्र्यम्बकस्य सखा "टच्" (५-४-९१)।

**त्र्यशीत ತ್ರ್ಯಶೀತ** (वि०) ಎಂಬತ್ತಮೂರನೆಯ. त्र्यशीतेः पूरणः "डट्" (५-२-४८)। स्त्रियाम् "ङीप्" (४-१-१५)। **-ती -ತೀ.**

**त्र्यशीति ತ್ರ್ಯಶೀತಿ** (स्त्री०) ಎಂಬತ್ತಮೂರು. त्र्यधिका अशीतिः।

**त्र्यशीतितम ತ್ರ್ಯಶೀತಿತಮ** (वि०) ಎಂಬತ್ತಮೂರನೆಯ. त्र्यशीति डटः तमडागमः (५-२-५६)। स्त्रियाम् "ङीप्" (४-१-१५) **-तमी -ತಮೀ.**

**त्र्यष्टन् ತ್ರ್ಯಷ್ಟನ್** (त्रि०) ಇಪ್ಪತ್ತನಾಲ್ಕು. त्रिगुणिता अष्ट। "त्र्यष्टवर्षोऽष्टवर्षां वा धर्मे सीदति सत्वरः" मनु० ९-९४।

**त्र्यस्र ತ್ರ್ಯಸ್ರ** (वि०) ಮೂರು ಕೋಣಗಳುಳ್ಳ, ಮೂರು ಮೂಲೆಗಳುಳ್ಳ. त्रयोऽस्राः यस्य। "आयताश्चतुरस्राश्च त्र्यस्रा मण्डलिनस्तथा" सुश्रुत० चिकित्सा० २-५।

**त्र्यह ತ್ರ್ಯಹ** (पुं०) ಮೂರು ದಿನಗಳು. त्रयाणामह्नां समाहारः "टच्" (५-४-९१)। परवल्लिङ्गनपुंसकं च बाधित्वा पुंस्त्वम्। "त्र्यहं प्रातस्त्र्यहं सायं त्र्यहमद्यादयाचितम्" मनु० ११-२११।

**त्र्यहस्पृश् ತ್ರ್ಯಹಸ್ಪೃಶ್** (पुं०) ಮೂರು ದಿನಗಳ ಸಂಬಂಧವುಳ್ಳ ಒಂದು ತಿಥಿ. त्र्यहं स्पृशति – स्पृश (संस्पर्शने) "क्विन्" (३-२-५८)।

**त्र्यहीन ತ್ರ್ಯಹೀನ** (वि०) ಮೂರು ದಿವಸಗಳಲ್ಲಿ ನಡೆದ, ಮೂರು ದಿನಗಳಲ್ಲಿ ಮಾಡಿದ. त्रिभिरहोभिः निर्वृत्तः "खः" (५-१-८७)।

**त्र्यैहिक ತ್ರ್ಯೈಹಿಕ** (वि०) ಮೂರು ದಿನಗಳಿಗಾಗುವಷ್ಟು ಧನವುಳ್ಳ, ಮೂರು ದಿನಗಳ ಹೊಟ್ಟೆಪಾಡಿಗಾಗುವಷ್ಟು ಧನಧಾನ್ಯವುಳ್ಳ. ईहायां भवं ऐहिकम् धनधान्यादि –

त्र्यहपर्याप्तम् ऐहिकम् धनं यस्य। "त्र्यहैहिको वापि भवेदश्वस्तनिक एव वा" मनु० ४-७।

**त्र्यायुष ತ್ರ್ಯಾಯುಷ** (नं०) ಬಾಲ್ಯ ಯೌವನ ಮತ್ತು ಮುಪ್ಪುಗಳೆಂಬ ಮೂರು ವಿಧ ಆಯುಸ್ಸು. त्रयाणां बाल्ययौवनवार्धकानां समाहारः "अच्" (५-४-७७)। निपा०।

**त्र्याहिक ತ್ರ್ಯಾಹಿಕ** (वि०) 1. ಮೂರನೆಯ ಜ್ವರ, ಮೂರು ದಿನಗಳಿಗೊಂದಾವೃತ್ತಿ ಬರುವ ಜ್ವರ. तृतीये अह्नि भवः "ठञ्" (वा० ४-३-६०)। "ऐकाहिको द्व्याहिकश्च त्र्याहिकश्च तथापरः"। 2. ಮೂರು ದಿನಗಳಿಗಾಗುವಷ್ಟು ಧಾನ್ಯವನ್ನು ಹೊಂದಿರುವ. त्र्यहपर्याप्तं धान्यमस्यास्ति "ठन्" (५-२-११५)। "कुशूलकुम्भीधान्यो वा त्र्याहिकोऽश्वस्तनोऽपि वा" याज्ञ० १-१२८।

**त्र्यूषण ತ್ರ್ಯೂಷಣ** (नं०) ಶುಂಠಿ ಹಿಪ್ಪಲಿ ಮತ್ತು ಮೆಣಸು. त्रयाणामूषणानां समाहारः।

**त्र्यृच ತ್ರ್ಯೃಚ** (नं०) ಮೂರು ಋಕ್ಕುಗಳು. तिसृणां ऋचां समाहारः "अच्" (५-४-७५)।

**त्वक्क्षीरा ತ್ವಕ್ಕ್ಷೀರಾ** (स्त्री०) ತವಕ್ಷೀರ, ಬಿದಿರಿನ ಹಾಲಿನಿಂದ ಉಂಟಾದ ಒಂದು ಔಷಧ. त्वचः वंशत्वचः क्षीरमस्त्यस्याः "अच्" (५-२-१२७)। गौरा० "ङीष्" (४-१-४१)। **-क्षीरी -ಕ್ಷೀರೀ.** "सिताजगन्धात्वक्क्षीरीविदारीत्रिवृतः समा" सुश्रुत० १-४४-१६।

**त्वक्त्र ತ್ವಕ್ತ್ರ** (नं०) ದೇಹದ ಚರ್ಮವನ್ನು ಕಾಪಾಡುವ ಕವಚ. त्वचं त्रायते — त्रैङ् (पालने) "कः" (३-२-३)। "त्वक्त्रैः संविव्ययुर्देहान्" भट्टि० १४-७४।

**त्वक्पञ्चक ತ್ವಕ್ಪಂಚಕ** (नं०) ನ್ಯಗ್ರೋಧ (ಆಲ) ಉದುಂಬರ (ಅತ್ತಿ) ಅಶ್ವತ್ಥ (ಅರಳಿ) ಶಿರೀಷ (ಬಾಗೆ) ಮತ್ತು ಪ್ಲಕ್ಷ (ಬಸುರಿ) ವೃಕ್ಷಗಳ ತೊಗಟೆಗಳು. त्वचां पञ्चकम्।

**त्वक्पत्र ತ್ವಕ್ಪತ್ರ** (नं०) 1. ಲವಂಗ ಪಟ್ಟೆ, ದಾಲ್ಚಿನ್ನಿ. त्वगिव पत्रमस्य। (स्त्री०) **-पत्री -ಪತ್ರೀ.** 2. ಹಿಂಗಿನ ಮರದ ಎಲೆ.

**त्वक्पारुष्य ತ್ವಕ್ಪಾರುಷ್ಯ** (नं०) ಚರ್ಮವು ಒರಟಾಗಿರುವುದು, ಚರ್ಮವು ನುಣುಪಾಗಿಲ್ಲದಿರುವುದು. त्वचः पारुष्यम्।

**त्वक्पुष्प ತ್ವಕ್ಪುಷ್ಪ** (नं०) ರೋಮಾಂಚ, ಮೈನಿಲುಗೂದಲು. त्वचः पुष्पमिव। "रोमोद्भेदस्तु पुलकस्त्वक्पुष्पं च त्वगङ्कुरः" त्रिकाण्ड०।

**त्वक्सार ತ್ವಕ್ಸಾರ** (पुं०) 1. ವಂಶ, ಬಿದಿರು. त्वचि सारोऽस्य। 2. ಲವಂಗಪಟ್ಟೆ, ದಾಲ್ಚಿನ್ನಿ. त्वगेव सारोऽस्य। 3. ಹೆಮ್ಮರ, ತಿಗಡುಮರ. 4. ಟೊಳ್ಳಾದ ಬಿದಿರು, ಹೆಚ್ಚು ರಂಧ್ರವಿರುವ ಬಿದಿರು. "त्वक्साररन्ध्रपरिपूरणलब्धगीतिरस्मिन्नसौ मृदितपक्ष्मलरल्लकाङ्गः" माघ० ४-६१।

**त्वक्सुगन्ध ತ್ವಕ್ಸುಗಂಧ** (पुं०) 1. ಹೇರಿಳೆಗಿಡ. त्वचि फलत्वचि सुगन्धोऽस्य। 2. ಕಿತ್ತಳೆಗಿಡ.

**त्वगङ्कुर ತ್ವಗಂಕುರ** (पुं०) ರೋಮಾಂಚ, ಮೈನಿಲುಗೂದಲು. त्वचः अङ्कुर इव।

**त्वगाक्षीरी ತ್ವಗಾಕ್ಷೀರೀ** (स्त्री०) ತವಕ್ಷೀರ, ಬಿದಿರಿನ ತೊಗಟೆಯಿಂದ ಉಂಟಾದ ಒಂದು ಔಷಧ.

**त्वग्गन्ध ತ್ವಗ್ಗಂಧ** (पुं०) 1. ಹೇರಿಳೆ ಗಿಡ. त्वचि फलत्वचि गन्धोऽस्य। 2. ಕಿತ್ತಳೆ ಗಿಡ.

**त्वग्दोष ತ್ವಗ್ದೋಷ** (पुं०) ಕುಷ್ಠರೋಗ. त्वचं दूषयति— दुष (वैकृत्ये) + णिच् "अण्" (३-२-१)।

**त्वच् ತ್ವಚ್** (स्त्री०) 1. ಚರ್ಮ, ಸ್ಪರ್ಶವನ್ನು ತಿಳಿಸುವ ಒಂದು ಇಂದ್ರಿಯ. त्वच्यते संव्रियते देहोऽनया त्वचति संवृणोति वा देहम् — त्वच (संवरणे) "क्विप्" (३-२-१७८)। 2. ಮೃಗದ ಚರ್ಮ, ತೊಗಲು. "त्वचं स मेध्यां परिधाय रौरवीमशिक्षितास्त्रं पितुरेव मन्त्रवत्" रघु० ३-३१। 3. ಮರದ ತೊಗಟೆ, ಸಿಪ್ಪೆ. "कण्डूयमानेन कटं कदाचिद्वन्यद्विपेनोन्मथिता त्वगस्य" रघु० २-३७। 4. ಲವಂಗಪಟ್ಟೆ, ದಾಲ್ಚಿನ್ನಿ. "त्वक्स्त्री चर्मणि वल्के च गुडत्वचि विशेषतः" मेदि०। "आपं चैव हलन्तानां यथा वाचा निशा दिशा"। **त्वचा ತ್ವಚಾ.**

**त्वच ತ್ವಚ** (नं०) 1. ಲವಂಗ ಪಟ್ಟೆ, ದಾಲ್ಚಿನ್ನಿ. प्रशस्ता त्वगस्य "अच्" (५-२-१२७)। 2. ತೊಗಟೆ, ಸಿಪ್ಪೆ.

**त्वचिसार ತ್ವಚಿಸಾರ** (पुं०) ವಂಶ, ಬಿದಿರು. सप्तम्याः अलुक् (६-३-९)।

**त्वचिसुगन्धा ತ್ವಚಿಸುಗಂಧಾ** (स्त्री०) ಸಣ್ಣ ಜಾತಿಯ ಯಾಲಕ್ಕಿ. त्वचि सुगन्धोऽस्याः। सप्तम्याः अलुक् (६-३-९)।

**त्वत्तस् ತ್ವತ್ತಸ್** (अव्य०) ನಿನ್ನಿಂದ. युष्मद् "तसिल्" (५-३-७)। त्वादेशः (७-२-९८)। "त्वत्तः श्रुतं नेति नले मयातः परं वदस्वेत्युदिताथ देव्या" नैष० १४-३६।

**त्वदीय ತ್ವದೀಯ** (वि०) ನಿನ್ನ ಸಂಬಂಧವಾದ. तव इदम्— युष्मद् "छः" (४-२-११४)। त्वादेशः (७-२-९८)। "अतोऽयमश्वः कपिलानुकारिणा पितुस्त्वदीयस्य मयाप-

हारित:" रघु० ३-५०। "त्वदीयसेवावसरप्रतीक्षैर-भ्यर्थित:" कुमा० ९-९।

**त्वद्विध ತ್ವದ್ವಿಧ** (वि०) ನಿನ್ನಂತಹ, ನಿನಗೆ ಸಮಾನನಾದ. तवेव विधा प्रकारो यस्य।

**त्वरण ತ್ವರಣ** (न०) 1. ಆತುರಪಡುವುದು, ಅವಸರಪಡುವುದು. ञित्वरा (सम्भ्रमे) "ल्युट्" (३-३-११५)। (वि०) 2. ಅವಸರಪಡುವ, ಆತುರಪಡುವ. ञित्वरा कर्त० "ल्यु:" (३-१-१३४)।

**त्वरणीय ತ್ವರಣೀಯ** (वि०) 1. ಅವಸರಪಡಬೇಕಾದ. 2. ಅವಸರಪಡಲು ಯೋಗ್ಯವಾದ. ञित्वरा (सम्भ्रमे) "अनीयर्" (३-१-९६)।

**त्वरमाण ತ್ವರಮಾಣ** (वि०) ಅವಸರಪಡುತ್ತಿರುವ, ಆತುರಪಡುತ್ತಿರುವ. ञित्वरा (सम्भ्रमे) "शानच्" (३-२-१२४)। "त्वरमाणशाह्निकसवेगवदनपवनाभिपूरित:" माघ० १५-७२।

**त्वरा ತ್ವರಾ** (स्त्री०) ಆತುರ, ಅವಸರ, ವೇಗ. ञित्वरा (सम्भ्रमे) "अङ्" (३-३-१०४)। "औत्सुक्येन कृतत्वरा सहभुवा व्यावर्तमाना ह्रिया तैस्तैर्बन्धुवधूजनस्य वचनैर्नीताभिमुख्यं पुन:" रत्ना० १-२।

**त्वरि ತ್ವರಿ** (स्त्री०) ವೇಗ, ಆತುರ, ಅವಸರ.

**त्वरित ತ್ವರಿತ** (न०) 1. ವೇಗ, ಆತುರ, ಅವಸರ. ञित्वरा (सम्भ्रमे) भावे "क्त:" (३-२-१८७)। "त्वरितं प्रजवे शीघ्रे" मेदि०। (वि०) 2. ವೇಗವುಳ್ಳ, ಶೀಘ್ರವಾದ, ಅವಸರವುಳ್ಳ. स्त्रियाम् "टाप्"। **त्वरिता ತ್ವರಿತಾ.** "बह्वन्तराययुक्तस्य धर्मस्य त्वरिता गति:" पञ्चतं० ३-१००। (अव्य०) 3. ವೇಗವಾಗಿ, ಶೀಘ್ರವಾಗಿ, ಜಾಗ್ರತೆಯಾಗಿ. "दूरादपावर्तितभारवाहणा: पथोऽपसस्रुस्त्वरितं चमूचरा:" माघ० १२-३४। (स्त्री०) **-ता -ತಾ.** 4. ದುರ್ಗಾದೇವಿ.

**त्वरितोदित ತ್ವರಿತೋದಿತ** (न०) ವೇಗವಾಗಿ ಉಚ್ಚರಿಸಲ್ಪಟ್ಟ ಮಾತು. त्वरितमुदितम्।

**त्वष्ट ತ್ವಷ್ಟ** (वि०) ಕೆತ್ತಲ್ಪಟ್ಟ, ಸಿಲುವಾಗಿ ಮಾಡಲ್ಪಟ್ಟ, ತೆಳುವಾಗಿ ಮಾಡಲ್ಪಟ್ಟ. त्वक्षू (तनूकरणे) "क्त:" (३-२-१०२)।

**त्वष्टि ತ್ವಷ್ಟಿ** (पुं०) ಮರಗೆಲಸ ಮಾಡುವುದು, ಮರವನ್ನು ಕೆತ್ತುವುದು. त्वक्षू (तनूकरणे) "क्तिन्" (३-३-९४)। "मत्स्याघातो निषादानां त्वष्टिस्त्वायोगवस्य च" मनु० १०-४८।

**त्वष्टृ ತ್ವಷ್ಟೃ** (पुं०) 1. ವಿಷ್ಣು, ಪರಮಾತ್ಮ. त्वक्षति तनूकरोति नामरूपव्याकरणेन सुरनरादिवैचित्र्यविभक्तं व्यनक्ति – त्वक्षू (तनूकरणे) "तृच्" (उ० २-९३)। "नामरूपव्याकरणात् त्वष्टा सृष्टस्य गद्यते" इति निरुक्ति:। "विश्वकर्मा मनुस्त्वष्टा स्थविष्ठ: स्थविरो ध्रुव:" वि० स०। 2. ದ್ವಾದಶಾದಿತ್ಯರಲ್ಲಿ ಒಬ್ಬ. **ದ್ವಾದಶಾದಿತ್ಯರು.** "धाता मित्रोऽर्यमा रुद्र: वरुण: सूर्य एव च। भगो विवस्वान् पूषा च सविता दशम: स्मृत:। एकादशस्तथा त्वष्टा विष्णुर्द्वादश उच्यते" भा० आदि० ६६-१६। 3. ಬಡಗಿ, ಮರಗೆಲಸದವನು. 4. ದೇವತೆಗಳ ಶಿಲ್ಪಿ, ವಿಶ್ವಕರ್ಮ. 5. ತ್ವಷ್ಟೃದೇವತಾಕವಾದ ಚಿತ್ತಾನಕ್ಷತ್ರ. 6. ಮನುಷ್ಯ ಮತ್ತು ಪಶುಪ್ರಾಣಿಗಳ ಗರ್ಭವನ್ನು ಪ್ರವೇಶಿಸಿ ರೂಪವಿಕಾರಗಳನ್ನು ಮಾಡುವ ದೇವತೆ. "त्वष्टा पुमान् देवशिल्पितक्षणोरादित्यभिद्यपि" मेदि०। (वि०) 7. ಮರಗೆಲಸ ಮಾಡುವವನು.

**त्वादृश ತ್ವಾದೃಶ** (वि०) ನಿನ್ನಂತಹ, ನಿನಗೆ ಸಮಾನನಾದ. त्वमिवायं पश्यति – युष्मद् + दृशिर् (प्रेक्षणे) "कञ्" (३-२-६०)। त्वादेश: (७-२-९८) आकार: (६-३-९१)।

**त्वाष्ट्र ತ್ವಾಷ್ಟ್ರ** (पुं०) 1. ವಿಶ್ವರೂಪಾಚಾರ್ಯ, ವಿಶ್ವಕರ್ಮನ ಮಗ. त्वष्टु: अपत्यं पुमान् "अण्" (४-१-९५)। 2. ವೃತ್ರಾಸುರ. [ವಿಶ್ವರೂಪನಿಗೆ ಮೂರು ತಲೆಗಳಿದ್ದುವು, ಒಂದು ತಲೆಯಿಂದ ಸೋಮಪಾನ. ಇನ್ನೊಂದರಿಂದ ಸುರಾಪಾನ. ಮತ್ತೊಂದರಿಂದ ಆಹಾರ ಸೇವನೆ. ಇವನ ತಾಯಿ ರಾಕ್ಷಸನ ಮಗಳಾಗಿದ್ದುದರಿಂದ ಇವನಿಗೆ ರಾಕ್ಷಸ ಗುಣಗಳಿದ್ದು ರಾಕ್ಷಸರಲ್ಲಿಯೂ ಇವನಿಗೆ ಅಭಿಮಾನವಿದ್ದಿತು. ಈ ಕಾರಣದಿಂದ ಯಜ್ಞಗಳಲ್ಲಿ ರಾಕ್ಷಸರಿಗೂ ರಹಸ್ಯದಲ್ಲಿ ಆಹುತಿಗಳನ್ನು ಕೊಡುತ್ತಿದ್ದನು ಈ ರಹಸ್ಯವನ್ನು ತಿಳಿದ ಇಂದ್ರನು ವಿಶ್ವರೂಪನನ್ನು ಕೊಂದುಹಾಕಿದನು. ಇದರಿಂದ ಕೋಪಗೊಂಡ ವಿಶ್ವಕರ್ಮನು ಇಂದ್ರನನ್ನು ಜಯಿಸುವ ಮಗನನ್ನು ಪಡೆಯಲು ಯಾಗ ಮಾಡಿದನು. ಮಂತ್ರದ ಸ್ವರವ್ಯತ್ಯಾಸದಿಂದ ಇಂದ್ರನಿಗೆ ಶತ್ರುವಾದ ಮಗನಿಗೆ ಬದಲು ಇಂದ್ರನೇ ಶತ್ರುವಾಗಿ ಉಳ್ಳ (ಇಂದ್ರನಿಂದ ಸಂಹರಿಸಲ್ಪಡುವ) ಮಗನು ಹುಟ್ಟಿದನು. ಇವನೇ ವೃತ್ರಾಸುರ.] "हतपुत्रस्ततस्त्वष्टा जुहावेन्द्राय शत्रवे। इन्द्रशत्रो विवर्धस्व मा चिरं जहि विद्विषम्। येनावृता इमे लोकास्तमसा त्वाष्ट्रमूर्तिना। ......। स वै वृत्र इति प्रोक्त: पाप: परमदारुण:" भाग० ६-९। (स्त्री०) **-ष्ट्री -ಷ್ಟ್ರೀ.** 3. ಚಿತ್ತಾನಕ್ಷತ್ರ. 4. ಸೂರ್ಯನ ಪತ್ನಿ ಸಂಜ್ಞಾದೇವಿ. "त्वाष्ट्री चित्रा" अभि० चि०।

**त्विष् ತ್ವಿಷ್** (स्त्री०) 1. ಕಾಂತಿ. 2. ಪ್ರಕಾಶ, ಪ್ರಭೆ. त्विष (दीप्तौ) "क्विप्" (३-२-१७८)। "सरलासक्तमातङ्ग-ग्रैवेयस्फुरितत्विषः" रघु० ४-७५। "चयस्त्विषामित्यवधारितं पुरा" माघ० १-३। हलन्तत्वात् "आपं चैव हलन्तानां यथा वाचा निशा दिशा" इति "टाप्"। **त्विषा ತ್ವಿಷಾ.** 3. ಕಿರಣ. "त्विषं चकोराय सुधां सुराय कलामपि स्वावयवं हराय" नैष० २२-६३। 4. ವಾಕ್ಕು, ಮಾತು. 5. ಆಸೆ, ಅಪೇಕ್ಷೆ. 6. ಜಯಿಸುವ ಆಸೆ. 7. ವ್ಯವಸಾಯ, ಉದ್ಯಮ. "त्विट् कान्तौ व्यवसाये च जिगीषायां रुचौ गिरि" विश्व०।

**त्विषाम्पति ತ್ವಿಷಾಂಪತಿ** (पुं०) ಸೂರ್ಯ. त्विषां पतिः। सप्तम्या अलुक्। बाहु०।

**त्विषि ತ್ವಿಷಿ** (स्त्री०) ಕಿರಣ. त्विष (दीप्तौ) "इन्" (उ० ४-११७)।

**त्सरु ತ್ಸರು** (पुं०) ಖಡ್ಗ ಮೊದಲಾದ ಆಯುಧಗಳ ಮುಷ್ಟಿ, ಕತ್ತಿ ಮೊದಲಾದುವುಗಳ ಹಿಡಿ. त्सरति–त्सर (छद्मगतौ) "उः" (उ० १-७)। "अस्पृष्टखड्गत्सरुणापि चासीद्रक्षावती तस्य भुजेन भूमिः" रघु० १८-४८।

**त्सारुक ತ್ಸಾರುಕ** (वि०) ಖಡ್ಗಯುದ್ಧದಲ್ಲಿ ನಿಪುಣನಾದ, ಕತ್ತಿಯ ಕಾಳಗದಲ್ಲಿ ಜಾಣನಾದ. त्सरौ कुशलः "कन्" (५-२-६४)।

**इति "त" कारादिपदार्थनिरूपणम्।**

# थ

**थ ಥ** ಇದು ವ್ಯಂಜನಾಕ್ಷರಗಳಲ್ಲಿ "त" ವರ್ಗದ ಎರಡನೆಯ ಮತ್ತು ಆಭ್ಯಂತರಸ್ಪೃಷ್ಟಪ್ರಯತ್ನದಿಂದ ದಂತಸ್ಥಾನದಲ್ಲಿ ಹುಟ್ಟುವ ಮಹಾಪ್ರಾಣಾಕ್ಷರ. "लृतुलसानां दन्ताः"। "कादयो मावसानाः स्पर्शाः। स्पृष्टं प्रयतनं स्पर्शानाम्" सि० कौ०।

**थ ಥ** (पुं०) 1. ಪರ್ವತ, ಬೆಟ್ಟ. (न०) 2. ರಕ್ಷಣೆ. 3. ಭಯ. 4. ಮಂಗಳ. (वि०) 5. ಭಯದಿಂದ ಕಾಪಾಡುವವನು. "थं रक्षणे मङ्गले च साध्वसे च नपुंसकम्। शिलोच्चये पुमानेव क्वचित्तु भयरक्षणे" मेदि०।

**थकार ಥಕಾರ** (पुं०) "थ" ಎಂಬ ಅಕ್ಷರ. थ "कारः" (वा० ३-३-१०८)।

**थुड – संवरणे** (तुदा० पर० सक० से०)। थुडति। तुथोड। थुडिता। थुडिष्यति। ಇತ್ಯಾದಿ. ಆಚ್ಛಾದಿಸು, ಹೊದಿಸು, ಮುಚ್ಚು.

**थुडन ಥುಡನ** (न०) ಆಚ್ಛಾದಿಸುವುದು, ಹೊದಿಸುವುದು. थुड (संवरणे) "ल्युट्" (३-३-११५)।

**थुत्कार ಥುತ್ಕಾರ** (पुं०) ಉಗುಳುವುದು, ಉಗಿಯುವುದು. थुत् इति अव्यक्तशब्दस्य कारः।

**थुर्वी – हिंसायाम्** (भ्वा० पर० सक० से०)। थूर्वति। तुथूर्व। थूर्विता। थूर्विष्यति। थूर्वतु। ಇತ್ಯಾದಿ. ಹಿಂಸಿಸು, ಪೀಡಿಸು.

कर्मणि :—थूर्व्यते। तुथूर्वे। थूर्विता। थूर्विष्यते। थूर्व्यताम्। ಇತ್ಯಾದಿ.

कृत्सु :—थूर्वितव्यः। थूर्वणीयः। थूर्व्यः। थूर्णः। थूर्णवान्, –वती। थूर्वन्, –न्ती। थूर्वितम्। थूर्वणम्। थूर्वित्वा।

**थूत्थू ಥೂಥೂ** (अव्य०) ಉಗಿಯುವ ಅನುಕರಣಶಬ್ದ.

**थूर्ण ಥೂರ್ಣ** (वि०) ಪೀಡಿಸಲ್ಪಟ್ಟ, ಹಿಂಸಿಸಲ್ಪಟ್ಟ. थुर्वी (हिंसायाम्) "क्तः" (३-२-१०२)।

**थूर्णवत् ಥೂರ್ಣವತ್** (वि०) ಹಿಂಸಿಸಿದವನು, ಪೀಡಿಸಿದವನು. थुर्वी (हिंसायाम्) "क्तवतुः" (३-२-१०२)। स्त्रियाम् "ङीप्" (४-१-६)। **–वती –ವತೀ.**

**थूर्वण ಥೂರ್ವಣ** (न०) ಹಿಂಸಿಸುವುದು, ಪೀಡಿಸುವುದು. थुर्वी (हिंसायाम्) "ल्युट्" (३-३-११५)।

**थूर्वणीय ಥೂರ್ವಣೀಯ** (त्रि०) 1. ಹಿಂಸಿಸಲ್ಪಡುವ, ಪೀಡಿಸಲ್ಪಡುವ. 2. ಹಿಂಸಿಸಬೇಕಾದ, ಪೀಡಿಸಬೇಕಾದ.

**थूर्वत् ಥೂರ್ವತ್** (वि०) ಪೀಡಿಸುತ್ತಿರುವ, ಹಿಂಸಿಸುತ್ತಿರುವ. थुर्वी (हिंसायाम्) "शतृ" (३-२-१२४)। स्त्रियाम् "ङीप्" (४-१-६)। **–न्ती –ನ್ತೀ.**

**थैथै ಥೈಥೈ** (अव्य०) ಸಂಗೀತದ ತಾಳವನ್ನು ಅನುಸರಿಸುವ ಅನುಕರಣ ಶಬ್ದ.

**इति "थ" कारादिपदार्थनिरूपणम्।**

# द

**द** ದ ಇದು ವ್ಯಂಜನಾಕ್ಷರಗಳಲ್ಲಿ "त" ವರ್ಗದ ಮೂರನೆಯು ಮತ್ತು ಆಭ್ಯಂತರಸ್ಪೃಷ್ಟಪ್ರಯತ್ನದಿಂದ ದಂತಸ್ಥಾನದಲ್ಲಿ ಹುಟ್ಟುವ ಅಲ್ಪಪ್ರಾಣಾಕ್ಷರ. "लृतुलसानां दन्ताः"। "कादयो मावसानाः स्पर्शाः। स्पृष्टं प्रयतनं स्पर्शानाम्" सि० कौ०।

**द** ದ (पुं०) 1. ಪರ್ವತ, ಬೆಟ್ಟ. 2. ದಾನಮಾಡುವವನು. दैप् (शुद्धौ) डु दाञ् (दाने) वा "कः" (३-२-३)। (न०) 3. ಕಳತ್ರ, ಪತ್ನಿ. 4. ಪಾನ. 5. ವೈರಾಗ್ಯ. 6. ಅವಲೋಕನ, ನೋಡುವುದು. 7. ರಕ್ಷಣೆ, ಕಾಪಾಡುವುದು. 8. ಖಂಡನ, ಕತ್ತರಿಸುವುದು. दो (अवखण्डने) "कः" (३-२-३)। (वि०) 9. ಮೂಗ, ಮಾತಾಡುವ ಶಕ್ತಿಯಿಲ್ಲದವನು. 10. ಸ್ವೀಕರಿಸಲ್ಪಟ್ಟ. 11. ಕರಗಿಸುವ, ದ್ರವವಾಗಿಮಾಡುವ. 12. ಶುದ್ಧವಾದ. (स्त्री०) **दा** ದಾ. 13. ಕ್ಷಮೆ, ಕ್ಷಾಂತಿ. 14. ಶೋಧನೆ, ಶುದ್ಧಮಾಡುವುದು. 15. ದಾನ, ಕೊಡುಗೆ. 16. ರಕ್ಷಣೆ. 17. ಉಪತಾಪ. 18. ಛೇದನ, ಕತ್ತರಿಸುವುದು. "दः पुमानचले दत्ते स्त्रियाम शोधनदानयोः। छेदोपतापरक्षासु पुमांस्तु दातरि स्मृतः" मेदि०। "दः पुंसि दातरि च्छेदे दा स्त्रियाम् क्षान्तिदानयोः। दं क्लीबे पानवैराग्यकलत्रेष्ववलोकने। भेद्यलिङ्गस्त्वयं मूके गृहीते द्रावके शुचौ" नानार्थर०। "दाददो दुद्दुद्दादो दादादो दुददीददोः। दुद्दादं ददवे दुद्दे ददाददददोऽददः" माघ० १९-११४।

**दंश – दशने** (भ्वा० पर० सक० अनि०)। दशति। ददंश। दंष्टा। दंक्ष्यति। दशतु। अदशत्। दशेत्। ಇತ್ಯಾದಿ. ಹಲ್ಲಿನಿಂದ ಕಚ್ಚು.

**कर्मणि**:—दश्यते। ददंशे। दंष्टा। दंक्ष्यते। दश्यताम्। अदश्यत। दश्येत। दंक्षीष्ट। ಇತ್ಯಾದಿ.

**णिचि**:—दंशयति, –ते। दंशयां चकार, –चक्रे, –बभूव, –आस। दंशयिता। दंशयिष्यति, –ते। दंशयतु, –ताम्। अदंशयत्, –त। ಇತ್ಯಾದಿ.

**सनि**:—दिदंक्षति। दिदंक्षां चकार, –बभूव, –आस। दिदंक्षिता। दिदंक्षिष्यति। दिदंक्षतु। ಇತ್ಯಾದಿ.

**कृत्सु**:—दंष्टव्यः। दंशनीयः। दंश्यः। दष्टः। दष्टवान्, –वती। दशन्, –न्ती। दंष्टुम्। दष्टम्। दंशनम्। दष्ट्वा। विदश्य।

**ण्यन्तात् कृत्सु**:—दंशयितव्यः। दंशनीयः। दंश्यः। दंशितः। दंशितवान्, –वती। दंशयन्, –न्ती। दंशयमानः। दंशयितुम्। दंशितम्। दंशनम्। दंशयित्वा। विदंश्य।

**दंश** ದಂಶ (पुं०) 1. ಕಾಡುನೊಣ, ತೊಣಚಿ. दशति—दंश (दशने) "अच्" (३-१-१३४)। "आस्वादवद्भिः कवलैस्तृणानां कण्डूयनैर्दंशनिवारणैश्च" रघु० २-५। 2. ಕಚ್ಚುವಿಕೆ. दंश भावे "घञ्" (३-३-१८)। "सुप्तता जायते दंशे कृष्णं चातिस्रवत्यसृक्" सुश्रुत० कल्प० ७-४५। 3. ದಂತ, ಹಲ್ಲು. दश्यतेऽनेन—दंश करं० "घञ्" (३-३-१२१)। "रदना दशना दन्ता दंशखादनमल्लकाः" अभि० चि०। 4. (ರತ್ನ ಮೊದಲಾದುವುಗಳಲ್ಲಿ) ದೋಷ, ಒಡಕು, ಕುಂದಕ. 5. ಕವಚ. "परानुषक्तं तपनीयोपकल्पं महागदं काञ्चनचित्रदंशम्" भाग० ३-१८-९। 6. ಹಾವು ಕಚ್ಚಿದ ಗಾಯ. "छेदो दंशस्य दाहो वा क्षतेर्वा रक्तमोक्षणम्" माल० ४-४। 7. ಮರ್ಮಸ್ಥಾನ. "दंशो वर्मणि मर्मणि। दोषे वनमक्षिकायां खण्डने भुजगक्षते" हेम०।

**दंशक** ದಂಶಕ (पुं०) 1. ಕಾಡುನೊಣ. दशति — दंश (दशने) "ण्वुल्" (३-१-१३३)। 2. ನೊಣ. "सांशुरी दंशकः स्मृतः" हारा०। (वि०) 3. ಹಲ್ಲಿನಿಂದ ಕಚ್ಚುವ. (स्त्री०) **–शिका –ಶಿಕಾ.**

**दंशन** ದಂಶನ (न०) 1. ಹಲ್ಲಿನಿಂದ ಕಚ್ಚುವುದು. दंश (दशने) भावे "ल्युट्" (३-३-११५)। "दंशनं चाहिभिः कृष्णैः दाहश्च जतुवेश्मनि" भा० कर्ण० ८८-४। 2. ಕವಚ. दशतीव शरीरम् — दंश कर्त० "ल्युः" (३-१-१३४)। "अदंशयन्नरहितशौर्यदंशनास्तनूरयं नय इति वृष्णिभूभृतः" माघ० १७-२१।

**दंशभीरु** ದಂಶಭೀರು (पुं०) ಮಹಿಷ, ಎಮ್ಮೆ. दंशात् भीरुः।

**दंशमूल** ದಂಶಮೂಲ (पुं०) ನುಗ್ಗೆಮರ.

**दंशवदन** ದಂಶವದನ (पुं०) ಕೊಕ್ಕರೆ.

**दंशित** ದಂಶಿತ (न०) 1. ಹಲ್ಲಿನಿಂದ ಕಚ್ಚಿಸುವುದು. दंश (दशने) + णिच् भावे "क्तः" (३-३-११४)। (वि०) 2. ಕಚ್ಚಿಸಲ್ಪಟ್ಟ. 3. ಅಂಗಿ ತೊಟ್ಟಿರುವ ಅಥವಾ ಅಂಗಿ ತೊಡಿಸಲ್ಪಟ್ಟ. दंशः सञ्जातोऽस्य "इतच्" (५-२-३६)।

दंश्यते — दंश कर्म० "क्तः" (३-२-१०२)वा। "महता बलचक्रेण परराष्ट्रावमर्दिना। हस्त्यश्वरथपूर्णेन दंशितेन प्रतापवान्" भा० सभा०।

**दंशिन् ದಂಶಿನ್** (पुं०) 1. ಕಣಜದ ಹುಳು. 2. ನಾಯಿ.

**दंशी ದಂಶೀ** (स्त्री०) ಸಣ್ಣ ಜಾತಿಯ ಕಾಡುನೊಣ. दंश गौरा० "ङीष्" (४-१-४१)। "दंशी तज्जातिरल्पा स्यात्" अम०।

**दंष्ट्रा ದಂಷ್ಟ್ರಾ** (स्त्री०) ಕೋರೆಹಲ್ಲು, ಆನೆ ಹುಲಿ ಸಿಂಹ ಮೊದಲಾದುವುಗಳ ಉದ್ದದ ಹೊರಹಾಯ್ದಿರುವ ಹಲ್ಲು. दंश (दशने) "ष्ट्रन्" (३-२-१८२)। "दंष्ट्राभङ्गं मृगाणामधिपतय इव व्यक्तमानावलेपाः" मुद्रा० ३-२२।

**दंष्ट्रायुध ದಂಷ್ಟ್ರಾಯುಧ** (पुं०) 1. ಕಾಡುಹಂದಿ. दंष्ट्रा आयुधमिवास्य। (वि०) 2. ಕೋರೆಹಲ್ಲೇ ಆಯುಧವಾಗಿ ಉಳ್ಳ.

**दंष्ट्राल ದಂಷ್ಟ್ರಾಲ** (वि०) ಕೋರೆಹಲ್ಲುಗಳನ್ನು ಹೊಂದಿರುವ, ದವಡೆಯ ದೊಡ್ಡ ಹಲ್ಲುಗಳುಳ್ಳ. दंष्ट्रास्त्यस्य "लच्" (५-२-९६)।

**दंष्ट्राविष ದಂಷ್ಟ್ರಾವಿಷ** (वि०) ಹಲ್ಲಿನಲ್ಲಿ ವಿಷವುಳ್ಳ (ಸರ್ಪ).

**दंष्ट्रिन् ದಂಷ್ಟ್ರಿನ್** (पुं०) 1. ವರಾಹ, ಹಂದಿ. दंष्ट्रास्त्यस्य "इनिः" (५-२-११६)। "उपेयुषीं बिभ्रतमन्तकद्युतिं वधाददूरे पतितस्य दंष्ट्रिणः" किरा० १४-३८। 2. ಸರ್ಪ. 3. ಹುಲಿ. 4. ಕೋರೆಹಲ್ಲುಗಳುಳ್ಳ ದೊಡ್ಡ ಜಾತಿಯ ಮೀನು. (वि०) 5. ಕೋರೆಹಲ್ಲುಗಳುಳ್ಳ. "दंष्ट्रिणो वनवराहयूथपा दष्टभङ्गुरबिसाङ्कुरा इव" कुमा० ८-३५।

**दक ದಕ** (न०) ಜಲ, ನೀರು. दैप् (शोधने) "कः" (३-२-३)। संज्ञायां "कन्"। "पानीयं जीवनीयं कं जलमम्बूदकं दकम्" वैज०।

**दकार्गल ದಕಾರ್ಗಲ** (न०) ಜಲಶೋಧನೆ, ನೀರನ್ನು ಕಂಡುಹಿಡಿಯುವುದು, ಭೂಮಿಯಲ್ಲಿ ಜಲನಾಳವು ಎಷ್ಟು ಕೆಳಮಟ್ಟದಲ್ಲಿರುವುದೆಂಬುದನ್ನು ತಿಳಿಯುವುದು. "धर्म्यं यशस्यं च वदाम्यतोऽहं दकार्गलं येन जलोपलब्धिः। पुंसो यथाङ्गेषु शिरास्तथैव क्षितावपि प्रोन्नतनिम्नसंस्थाः" बृहत्सं० ५४-१। [ವಿವರಕ್ಕೆ ಬೃಹತ್ಸಂಹಿತೆಯಲ್ಲಿ 54ನೆಯ ಅಧ್ಯಾಯ ನೋಡಿ.]

**दकोदर ದಕೋದರ** (न०) ಜಲೋದರ, ಹೊಟ್ಟೆಯಲ್ಲಿ ನೀರು ತುಂಬಿಕೊಂಡು ಉಂಟಾಗುವ ಒಂದು ವ್ಯಾಧಿ.

**दक्ष ದಕ್ಷ** (पुं०) 1. ದಕ್ಷಪ್ರಜಾಪತಿ. ಸ್ವಾಯಂಭುವ ಮನ್ವಂತರದ ದಕ್ಷ ಮತ್ತು ಚಾಕ್ಷುಷಮನ್ವಂತರದ ದಕ್ಷ ಎಂದು ದಕ್ಷಪ್ರಜಾಪತಿಗಳು ಇಬ್ಬರು. (1) ಮೊದಲನೆಯ ದಕ್ಷನು ಬ್ರಹ್ಮನ ಬಲ ಹೆಬ್ಬೆರಳಿನಿಂದ ಹುಟ್ಟಿದವನು. ಬ್ರಹ್ಮನ ಎಡ ಬೆರಳಿನಿಂದ ಹುಟ್ಟಿದ ಪ್ರಸೂತಿಯು ಇವನ ಪತ್ನಿ. "दक्षस्त्वजायताङ्गुष्ठाद्दक्षिणाद्भगवान् ऋषिः। ब्रह्मणः पृथिवीपाल शान्तात्मा सुमहातपाः। वामादजायताङ्गुष्ठाद्भार्या तस्य महात्मनः" भा० आदि० ६७-१०। ಇವನಿಗೆ ಪ್ರಸೂತಿಯಲ್ಲಿ श्रद्धा लक्ष्मीः तुष्टिः पुष्टिः धृतिः मेधा ಮೊದಲಾದ 24 ಮಂದಿ ಕನ್ಯೆಯರು ಜನಿಸಿದರು. ಇವರಲ್ಲಿ ಖ್ಯಾತಿಯೆಂಬೊಬ್ಬಳು ಭೃಗುಮಹರ್ಷಿಯ ಪತ್ನಿ. ಸತಿಯೆಂಬುವಳು ಪರಶಿವನ ಪತ್ನಿ. ಒಂದು ಸಲ ದೇವಸಭೆಯಲ್ಲಿ ಪರಶಿವನು ತನ್ನನ್ನು ಗೌರವಿಸಲಿಲ್ಲವೆಂಬ ಕಾರಣದಿಂದ ದಕ್ಷನು ನಿರೀಶ್ವರಯಾಗವನ್ನು ಮಾಡಿದನು. ಪರಮೇಶ್ವರನಿಗೆ ಆಹ್ವಾನವಿಲ್ಲದಿದ್ದರೂ ಸತಿಯು ಆ ಯಾಗಕ್ಕೆ ಹೋಗಿ ತಿರಸ್ಕೃತಳಾಗಿ ಕೋಪದಿಂದ ಯೋಗಾಗ್ನಿಯಲ್ಲಿ ಶರೀರವನ್ನು ತ್ಯಜಿಸಿದಳು. ಪರಶಿವನಿಗೆ ಈ ವಿಷಯ ತಿಳಿಯಿತು. ವೀರಭದ್ರನಿಗೆ ಆಜ್ಞೆಯಿತ್ತು ದಕ್ಷನ ಯಾಗಶಾಲೆಯನ್ನು ನಾಶಪಡಿಸಿದನು. ದಕ್ಷನ ಕುತ್ತಿಗೆಯನ್ನು ಕತ್ತರಿಸಿ ವೀರಭದ್ರನು ಯಾಗಕುಂಡದಲ್ಲಿ ಹಾಕಿ ಸುಟ್ಟನು. ದೇವತೆಗಳ ಪ್ರಾರ್ಥನೆಯಂತೆ ಪರಮೇಶ್ವರನು ಟಗರಿನ ತಲೆಯೊಂದನ್ನು ಸೇರಿಸಿ ದಕ್ಷನನ್ನು ಬದುಕಿಸಿದನು.

(2) ದಕ್ಷನು ಸತಿಯ ಶಾಪದಿಂದ ಹತ್ತು ಮಂದಿ ಪ್ರಚೇತಸರಿಂದ ಚಾಕ್ಷುಷಮನ್ವಂತರದಲ್ಲಿ ಮತ್ತೆ ಜನಿಸಿದನು. ಬ್ರಹ್ಮನ ಆಜ್ಞೆಯಂತೆ ಸಂಕಲ್ಪಮಾತ್ರದಿಂದಲೇ ದೇವ ಗಂಧರ್ವ ಋಷಿ ಮೊದಲಾದವರ ಸೃಷ್ಟಿಯನ್ನು ಮಾಡಿ ಆ ಸಂತತಿಯು ಅಭಿವೃದ್ಧಿ ಹೊಂದದಿರಲು ಸ್ತ್ರೀ ಪುರುಷರ ಮೈಥುನದಿಂದ ಪ್ರಜಾವೃದ್ಧಿಯಾಗಬೇಕೆಂದು ಸಂಕಲ್ಪಿಸಿ ತಾನು ಮದುವೆಯಾದ ವೀರಿಣಿಯಲ್ಲಿ 5 ಸಾವಿರ ಮಂದಿ ಪುತ್ರರನ್ನು ಪಡೆದು ಅವರನ್ನು ಪ್ರಜಾಸೃಷ್ಟಿ ಕಾರ್ಯದಲ್ಲಿ ನಿಯಮಿಸಿದನು. ನಾರದರ ಬೋಧನೆಯಂತೆ ಅವರು ಅದರಿಂದ ವಿಮುಖರಾಗಲು ದಕ್ಷನು ದುಃಖಗೊಂಡು ಮತ್ತೆ 60 ಮಂದಿ ಹೆಣ್ಣು ಮಕ್ಕಳನ್ನು ಪಡೆದನು. ಇವರಲ್ಲಿ 10 ಮಂದಿಯನ್ನು ಧರ್ಮಋಷಿಗೂ 13 ಮಂದಿಯನ್ನು ಕಶ್ಯಪರಿಗೂ 27 ಮಂದಿಯನ್ನು ಚಂದ್ರನಿಗೂ ಉಳಿದವರನ್ನು ಅರಿಷ್ಟನೇಮಿ ಭೃಶಾಶ್ವ ಕೃಶಾಶ್ವ ಅಂಗಿರಸ್ಸು ಮುಂತಾದವರಿಗೂ ಕೊಟ್ಟು ಮದುವೆ ಮಾಡಿದನು. ಆಗಿನಿಂದಲೇ ಸ್ತ್ರೀಪುರುಷರ ಮೈಥುನದಿಂದ ಪ್ರಜಾಸೃಷ್ಟಿಯಾರಂಭವಾದುದು. "संकल्पाद्दर्शनात् स्पर्शात् पूर्वेषां

सृष्टिरुच्यते। दक्षात्प्राचेतसादूर्ध्वं सृष्टिर्मैथुनसम्भवा"। 2. ವಿಷ್ಣು. दक्षते दस्युवधे शीघ्रकारी भवति — दक्ष (वृद्धौ शीघ्रार्थे च) "अच्" (३-१-१३४)। "शीघ्रार्थत्वाद्दक्षधातोर्निमेषाद्दस्यवो हताः। येन स स्याच्छीघ्रकारी दक्ष इत्युच्यते बुधैः" इति निरुक्तिः। "उग्रः संवत्सरो दक्षः" वि० स०। 3. ಕುಕ್ಕುಟ, ಹುಂಜ, ಕೋಳಿ. 4. ದಕ್ಷಸಂಹಿತೆಯನ್ನು ಬರೆದ ಒಬ್ಬ ಋಷಿ. 5. ಈಶ್ವರನ ವೃಷಭ. 6. ಒಂದು ವೃಕ್ಷ. 7. ಅಗ್ನಿ, ಬೆಂಕಿ. 8. ಪರಶಿವ, ಪರಮೇಶ್ವರ. (वि०)9. ಸಮರ್ಥ, ಚತುರ. "यं सर्वशैलाः परिकल्प्य वत्सं मेरौ स्थिते दोग्धरि दोहदक्षे" कुमा० १-२। 10. ಅಭಿಜ್ಞ, ತಿಳಿದವನು. "दक्षः प्रजापतौ वह्नौ ताम्रचूडे हरे मुनौ। त्रिष्वभिज्ञे" नानार्थर०। (स्त्री०) —क्षा —ಕ್ಷಾ. 11. ಭೂಮಿ. "दक्षः पटौ हरवृषे ताम्रचूडे प्रजापतौ। मुनिभेदे द्रुमे वह्नौ दक्षो दक्षा भुवि स्मृता" विश्व०।

**दक्षकन्या ದಕ್ಷಕನ್ಯಾ, —तनया —ತನಯಾ, —सुता ಸುತಾ** (स्त्री०) ದಕ್ಷಪ್ರಜಾಪತಿಯ ಹೆಣ್ಣು ಮಕ್ಕಳು. ಸ್ವಾಯಂಭುವ ಮನ್ವಂತರದ ದಕ್ಷನ 24 ಮಂದಿ ಚಾಕ್ಷುಷ ಮನ್ವಂತರದ ದಕ್ಷನ 60 ಮಂದಿ ಕನ್ಯೆಯರು, ಸತೀದೇವಿ ಅಶ್ವಿನೀ ಮೊದಲಾದ 27 ಕನ್ಯೆಯರು ಮುಂತಾದವರು. दक्षस्य कन्याः। "अथावमानेन पितुः प्रयुक्ता दक्षस्य कन्या भवपूर्वपत्नी। सती सती योगविसृष्टदेहा" कुमा० १-२१। "नरेन्द्रकन्यास्तमवाप्य सत्पतिं तमोनुदं दक्षसुता इवाबभुः" रघु० ३-३३।

**दक्षक्रतु ದಕ್ಷಕ್ರತು** (पुं०) ದಕ್ಷಬ್ರಹ್ಮನು ಮಾಡಿದ ನಿರೀಶ್ವರ ಯಾಗ. [ಒಮ್ಮೆ ದೇವಲೋಕದಲ್ಲಿ ಒಂದು ಯಾಗ ನಡೆಯಿತು. ಬ್ರಹ್ಮರುದ್ರಾದಿ ದೇವತೆಗಳೆಲ್ಲರೂ ನೆರದಿದ್ದ ಸಭೆಗೆ ದಕ್ಷಬ್ರಹ್ಮನೂ ಬಂದಾಗ ಎಲ್ಲಾ ದೇವತೆಗಳೂ ಋಷಿಗಳೂ ಎದ್ದುನಿಂತು ಗೌರವಿಸಿದರು. ಬ್ರಹ್ಮನೂ ಪರಶಿವನೂ ಆಸನದಿಂದಲೇ ಏಳಲಿಲ್ಲ. ಇದರಿಂದ ಕ್ರುದ್ಧನಾದ ದಕ್ಷನು ದೇವತೆಗಳೊಡನೆ ಈಶ್ವರನು ಹವಿರ್ಭಾಗವನ್ನು ಪಡೆಯಲು ಯೋಗ್ಯನಲ್ಲವೆಂದು ಹೇಳಿ ನಿರೀಶ್ವರ ಯಾಗವನ್ನು ಮಾಡಲು ಯತ್ನಿಸಿದನು. ಈಶ್ವರನಿಗೆ ಆಹ್ವಾನವಿಲ್ಲದಿದ್ದರೂ ಸತೀದೇವಿಯು ಯಾಗಕ್ಕೆ ಹೊರಡಲು ಉದ್ಯುಕ್ತಳಾಗಿ ಈಶ್ವರನು ತಡೆದರೂ ನಿಲ್ಲದೆ ಹೋಗಿ ತಂದೆಯಿಂದ ತಿರಸ್ಕೃತಳಾಗಿ ಕೋಪದಿಂದ ಯೋಗಾಗ್ನಿಯಲ್ಲಿ ಶರೀರತ್ಯಾಗ ಮಾಡಿದಳು. ಈ ವಿಷಯವನ್ನು ತಿಳಿದ ಪರಮೇಶ್ವರನು ತನ್ನ ಜಟೆಯಿಂದ ಒಂದು ಹಿಡಿ ಕೂದಲನ್ನು ಕಿತ್ತೆಸೆದನು. ಅದರಿಂದ ಅವತರಿಸಿದ ವೀರಭದ್ರನು ಪರಿವಾರ ಸಹಿತನಾಗಿ ಪರಮೇಶ್ವರನ ಅಪ್ಪಣೆಯಂತೆ ದಕ್ಷನ ಯಾಗಶಾಲೆಯನ್ನು ನಾಶಪಡಿಸಿ ಅವನ ಶಿರಸ್ಸನ್ನು ಕತ್ತರಿಸಿ ಯಾಗಕುಂಡದಲ್ಲಿ ಹಾಕಿ ಸುಟ್ಟನು. ಅವನ ಪರಿವಾರದವರು ಸೂರ್ಯನ ಹಲ್ಲುಗಳನ್ನು ಮುರಿದರು. ಭಗನ ಕಣ್ಣನ್ನು ಕಿತ್ತರು. ಭೃಗುಋಷಿಯ ಗಡ್ಡವನು ಸುಟ್ಟರು. ಆಗ ದೇವತೆಗಳೆಲ್ಲರೂ ಬ್ರಹ್ಮನೊಡನೆ ಕೈಲಾಸಕ್ಕೆ ಹೋಗಿ ಪರಶಿವನನ್ನು ಪ್ರಾರ್ಥಿಸಲಾಗಿ "ಎಲ್ಲರೂ ಬದುಕಿ ಸುಖವಾಗಿರಲಿ, ದಕ್ಷನ ಮುಖವು ಮಾತ್ರ ಟಗರಿನ ಮುಖವಾಗಲಿ" ಎಂದು ಅನುಗ್ರಹಿಸಿದನು. "जीवताद्यजमानोऽयं प्रपद्येताक्षिणी भगः। भृगोः श्मश्रूणि रोहन्तु पूष्णो दन्ताश्च पूर्ववत्। देवानां भग्नगात्राणां ऋत्विजां चायुधाश्मभिः। भवतानुगृहीतानामाशु मन्योऽस्त्वनातुरम्" ಇತ್ಯಾದಿ. भाग० ४-६। ಈಶ್ವರನಿಗೆ ಭಾಗವಿಲ್ಲದೆ ನಡೆದ ಈ ಯಾಗದಲ್ಲಿ ತಂದೆಯಿಂದ ಉಂಟಾದ ಈ ಅವಮಾನವನ್ನು ಸಹಿಸದೆ ಸತಿ (ದಾಕ್ಷಾಯಣಿ) ಯು ಯೋಗಾಗ್ನಿಯಿಂದ ದೇಹತ್ಯಾಗ ಮಾಡಿ ಹಿಮವಂತನಿಂದ ಮೇನಕೆಯಲ್ಲಿ ಅಪರ್ಣೆಯಾಗಿ ಜನಿಸಿ ಪರಮೇಶ್ವರನನ್ನು ಮದುವೆಯಾದಳು.] भाग० ४।

**दक्षजा ದಕ್ಷಜಾ** (स्त्री०) 1. ದಕ್ಷನ ಮಗಳು, ಸತೀದೇವಿ, ಪರಶಿವನ ಸತಿ. (स्त्री० ब० व०) 2. ಅಶ್ವಿನೀ ಮೊದಲಾದ ಇಪ್ಪತ್ತೇಳು ಮಂದಿ ದಕ್ಷನ ಕನ್ಯೆಯರು, ಚಂದ್ರನ ಪತ್ನಿಯರು. **—आत्मजा —ಆತ್ಮಜಾ, —सुता —ಸುತಾ.** ಇತ್ಯಾದಿ. "नरेन्द्रकन्यास्तमवाप्य सत्पतिं तमोनुदं दक्षसुता इवाबभुः" रघु० ३-३३।

**दक्षता ದಕ್ಷತಾ** (स्त्री०) 1. ಸಾಮರ್ಥ್ಯ, ಶಕ್ತಿ. 2. ಜಾಣತನ. दक्षस्य भावः "तल्" (५-१-११९)। "स विधेयपदेषु दक्षतां नियतिं लोक इवानुरुध्यते" किरा० २-१२।

**दक्षसावर्णि ದಕ್ಷಸಾವರ್ಣಿ** (पुं०) ಹದಿನಾಲ್ಕು ಮಂದಿ ಮನುಗಳಲ್ಲಿ ಒಂಬತ್ತನೆಯವನು. ಈತನ ಆಳ್ವಿಕೆಯ ಕಾಲದಲ್ಲಿ ಸ್ವರ್ಗದಲ್ಲಿ "ಅದ್ಭುತ"ನೆಂಬ ಇಂದ್ರನು ದೇವತೆಗಳ ಒಡೆಯನಾಗಿದ್ದನು. ಈ ಇಂದ್ರನಿಗೆ "ಶ್ರುತ" ಎಂದೂ ಹೆಸರು.

**दक्षसुत ದಕ್ಷಸುತ** (पुं०) ದೇವತೆಗಳು. दक्षस्य सुताः। ದೇವತೆಗಳು ದಕ್ಷಪ್ರಜಾಪತಿಯಿಂದ ಸೃಷ್ಟಿಸಲ್ಪಟ್ಟವರು. "प्रजाः सृजेति व्यादिष्टः पूर्वं दक्षः स्वयम्भुवा। मनसा चैव भूतानि पूर्वमेवासृजत् प्रभुः। ऋषीन् देवान् सगन्धर्वान् असुरानथ राक्षसान्" हरिवं०।

**दक्षिण ದಕ್ಷಿಣ** (पुं०) 1. ವಿಷ್ಣು. दक्षते स्वदूरवासादिगर्हणमुखेन अतिसमर्थो गजेन्द्रं सान्त्वयन् तस्यानुकूलो वर्धते – दक्ष (वृद्धौ) "इनन्" (उ० २-५१)। "गजेन्द्रस्य प्रपन्नस्य यः प्रीतो दक्षिणस्तु सः" इति निरुक्तिः। "अक्रूरः पेशलो दक्षो दक्षिणः क्षमिणां वरः" वि० स०। 2. ದಕ್ಷಿಣಾಗ್ನಿ, ಯಜ್ಞದ ಮೂರು ಅಗ್ನಿಗಳಲ್ಲೊಂದು. 3. ಅನೇಕ ನಾಯಿಕೆಯರಲ್ಲಿ ಸಮಾನವಾದ ಅನುರಾಗವುಳ್ಳ ನಾಯಕ. "एषुत्वनेकमहिलासमरागो दक्षिणः कथितः" सा० द० ३-३५। 4. ದೇಹದ ಬಲಭಾಗ. (वि०) 5. ಸರಳಸ್ವಭಾವದವನು, ಕಪಟವಿಲ್ಲದವನು, ಪ್ರಾಮಾಣಿಕ. 6. ದಾಕ್ಷಿಣ್ಯದ ಸ್ವಭಾವದವನು, ಇತರರ ಮನಸ್ಸನ್ನನುಸರಿಸಿ ನಡೆಯುವವನು, ಇತರರ ಅಭಿಪ್ರಾಯದಂತೆ ವರ್ತಿಸುವವನು. 7. ಬಲಭಾಗದಲ್ಲಿರುವ, ಬಲಪಾರ್ಶ್ವದ. "ब्रह्मा विष्णुश्च रुद्रश्च सोमः सूर्योऽनलस्तथा। ते सर्वे चापि तिष्ठन्ति कर्णे विप्रस्य दक्षिणे" परा०। (स्त्री०) -णा -ಣಾ. 8. ಯಜ್ಞದ ಪತ್ನಿ. "पत्नी सुदक्षिणेत्यासीदध्वरस्येव दक्षिणा" रघु० १-३१। 9. ಉಪಾಧ್ಯಾಯರಿಗೆ ಕೊಡುವ ಗುರುದಕ್ಷಿಣೆ, ಗುರುವಿಗೆ ಕೊಡುವ ಸಂಭಾವನೆ, ವಿದ್ಯಾಶುಲ್ಕ. "उपात्तविद्यो गुरुदक्षिणार्थी कौत्सः प्रपेदे वरतन्तुशिष्यः" रघु० ५-१। 10. ಯಜ್ಞ ಮೊದಲಾದುವುಗಳ ಕೊನೆಯಲ್ಲಿ ಕೊಡುವ ದಕ್ಷಿಣೆ. 11. ದಕ್ಷಿಣ ದಿಕ್ಕು. "रत्नानुविद्धार्णवमेखलाया दिशः सपत्नी भव दक्षिणस्याः" रघु० ६-६३। "दिग्दक्षिणा गन्धवहं मुखेन व्यलीकनिश्वासमिवोत्ससर्ज" कुमा० ३-२५।

**दक्षिणतस् ದಕ್ಷಿಣತಸ್** (अव्य०) 1. ದಕ್ಷಿಣ ದಿಕ್ಕು, ದಕ್ಷಿಣ ದಿಕ್ಕಿನಿಂದ, ದಕ್ಷಿಣ ದಿಕ್ಕಿನಲ್ಲಿ. 2. ದಕ್ಷಿಣ ದೇಶ, ದಕ್ಷಿಣ ದೇಶದಿಂದ, ದಕ್ಷಿಣ ದೇಶದಲ್ಲಿ. दक्षिणा "अतसुच्" (५-३-२८)। पुंवद्भावः (वा० २-१-५१)। 3. ಬಲಭಾಗದಿಂದ. दक्षिण "तसिल्" (५-३-७)।

**दक्षिणतार ದಕ್ಷಿಣತಾರ** (न०) ನದಿ ಮೊದಲಾದುವುಗಳ ತೀರಪ್ರದೇಶ. तीरस्य वा "तारः" (वा० ६-३-१०९)। पक्षे -तीरम् -ತೀರಮ್.

**दक्षिणदिश् ದಕ್ಷಿಣದಿಶ್** (स्त्री०) ದಕ್ಷಿಣ ದಿಕ್ಕು, ಬಲಗಡೆಯ ದಿಕ್ಕು.

**दक्षिणदिक्पालक ದಕ್ಷಿಣದಿಕ್ಪಾಲಕ** (पुं०) ದಕ್ಷಿಣ ದಿಕ್ಕನ್ನು ರಕ್ಷಿಸುವವನು.

**दक्षिणदिक्पाश ದಕ್ಷಿಣದಿಕ್ಪಾಶ** (पुं०) ದಕ್ಷಿಣ ದಿಕ್ಕಿನ ಪಾಶಚಕ್ರ, ಭಾನುವಾರದಲ್ಲಿ ದಕ್ಷಿಣ ದಿಕ್ಕಿನಲ್ಲಿ ಯುದ್ಧಾದಿಗಳನ್ನು ನಿಷೇಧಿಸುವ ಪಾಶ. ["उत्तरदिक्पाश" ಪದದಲ್ಲಿ ನೋಡಿ.]

**दक्षिणदिक्शूल ದಕ್ಷಿಣದಿಕ್‌ಶೂಲ** (पुं०) ದಕ್ಷಿಣ ದಿಕ್ಕಿನಲ್ಲಿ ಪ್ರಯಾಣವನ್ನು ನಿಷೇಧಿಸುವ ಶೂಲೆ, ಗುರುವಾರ ಮತ್ತು ಪೂರ್ವಾಭಾದ್ರಪದಾ ನಕ್ಷತ್ರಗಳಲ್ಲಿ ದಕ್ಷಿಣ ದಿಕ್ಕಿನಲ್ಲಿ ಶೂಲೆ. ಈ ಶೂಲೆಗಳಿರುವ ದಿವಸ ದಕ್ಷಿಣ ದಿಕ್ಕಿಗೆ ಪ್ರಯಾಣಮಾಡಕೂಡದು. "ज्येष्ठा पूर्वाभाद्रपदा रोहिण्युत्तरफल्गुनी। पूर्वादिषु क्रमाच्छूला यात्रादौ मरणप्रदाः"।

**दक्षिणदिगीश ದಕ್ಷಿಣದಿಗೀಶ, -ईश्वर -ಈಶ್ವರ** (पुं०) ಅಂಗಾರಕ, ಕುಜಗ್ರಹ. "सूर्यः सोमः क्षमापुत्रः सैंहिकेयः शनिः शशी। सौम्यस्त्रिदशमन्त्री च प्राच्यादिदिगधीश्वराः"।

**दक्षिणदिग्द्वार ದಕ್ಷಿಣದಿಗ್ದ್ವಾರ** (न०) ದಕ್ಷಿಣ ದಿಕ್ಕಿನಲ್ಲಿ ಪ್ರಯಾಣಕ್ಕೆ ಪ್ರಶಸ್ತವಾದ ನಕ್ಷತ್ರಗಳು, ಮಖೆ, ಪೂರ್ವಫಲ್ಗುನಿ, ಉತ್ತರಫಲ್ಗುನಿ, ಹಸ್ತ, ಚಿತ್ತೆ, ಸ್ವಾತಿ ಮತ್ತು ವಿಶಾಖಾ ನಕ್ಷತ್ರಗಳು. "प्राच्यादिषु चतुर्दिक्षु सप्तसप्तानलर्क्षतः"। दक्षिणदिशि द्वारं मुखमस्य।

**दक्षिणदिग्बलिन् ದಕ್ಷಿಣದಿಗ್ಬಲಿನ್** (पुं०) 1. ಸೂರ್ಯ. 2. ಕುಜ. ಇವರು ದಕ್ಷಿಣದಿಕ್ಕಿನಲ್ಲಿ ಬಲಿಷ್ಠರು. "प्राच्यां सौम्यसुराचार्यौ याम्यां भास्करभूमिजौ। प्रत्यक् सौरिरुदीच्यां तु सितेन्दू दिग्बलान्वितौ"।

**दक्षिणपश्चिमा ದಕ್ಷಿಣಪಶ್ಚಿಮಾ** (स्त्री०) ದಕ್ಷಿಣ ಮತ್ತು ಪಶ್ಚಿಮ ದಿಕ್ಕುಗಳ ಮಧ್ಯದ ದಿಕ್ಕು, ನೈರುತ್ಯ ದಿಕ್ಕು. दक्षिणस्याश्च पश्चिमायाश्च अन्तरालं। पुंवद्भावः (वा० २-१-५१)।

**दक्षिणपूर्वा ದಕ್ಷಿಣಪೂರ್ವಾ** (स्त्री०) ದಕ್ಷಿಣ ಮತ್ತು ಪೂರ್ವದಿಕ್ಕುಗಳ ಮಧ್ಯಭಾಗ, ಆಗ್ನೇಯ ದಿಕ್ಕು. दक्षिणस्याश्च पूर्वस्याश्च दिशोऽन्तरालम् – बहुव्रीहिः (२-२-२६)। पुंवद्भावः (वा० २-१-५१)। (वि०) -पूर्व -ಪೂರ್ವ. ಆಗ್ನೇಯ ದಿಕ್ಕಿನಲ್ಲಿರುವ, ದಕ್ಷಿಣ ಪೂರ್ವ ದಿಕ್ಕುಗಳ ಮಧ್ಯಭಾಗದ.

**दक्षिणमार्ग ದಕ್ಷಿಣಮಾರ್ಗ** (पुं०) ಪಿತೃಯಾಣ, ಧೂಮಾದಿ ಮಾರ್ಗ.

**दक्षिणसमुद्र ದಕ್ಷಿಣಸಮುದ್ರ, -सागर -ಸಾಗರ** (पुं०) ದಕ್ಷಿಣ ದಿಕ್ಕಿನ ಸಮುದ್ರ, ಹಿಂದೂಮಹಾಸಾಗರ.

**दक्षिणस्थ ದಕ್ಷಿಣಸ್ಥ** (पुं०) 1. ಸೂತ, ಸಾರಥಿ, ರಥವನ್ನು ನಡೆಸುವವನು. दक्षिणे तिष्ठति – ष्ठा (गतिनिवृत्तौ)

"क:" (३-२-४)। (वि०) 2. ಬಲಭಾಗದಲ್ಲಿರುವ, ಬಲಗಡೆಯಿರುವ.

**दक्षिणा ದಕ್ಷಿಣಾ** (स्त्री०) 1. "दक्षिण" ಪದದ ಸ್ತ್ರೀಲಿಂಗದ ಅರ್ಥ. (अव्य०) 2. ದಕ್ಷಿಣ ದಿಕ್ಕು, ದಕ್ಷಿಣ ದಿಕ್ಕಿನಿಂದ, ದಕ್ಷಿಣ ದಿಕ್ಕಿನಲ್ಲಿ. दक्षिणा "आच्" (५-३-३६)।

**दक्षिणाग्नि ದಕ್ಷಿಣಾಗ್ನಿ** (पुं०) ಯಜ್ಞದ ಮೂರು ಅಗ್ನಿಗಳಲ್ಲೊಂದು. दक्षिणोऽग्निः। "दक्षिणाग्निर्गार्हपत्याहवनीयौ त्रयोऽग्नयः" अम०।

**दक्षिणाचल ದಕ್ಷಿಣಾಚಲ** (पुं०) ದಕ್ಷಿಣ ದಿಕ್ಕಿನಲ್ಲಿರುವ ಮಲಯ ಪರ್ವತ. दक्षिणस्थितोऽचलः।

**दक्षिणात् ದಕ್ಷಿಣಾತ್** (अव्य०) ದಕ್ಷಿಣ ದಿಕ್ಕು, ದಕ್ಷಿಣ ದಿಕ್ಕಿನಿಂದ, ದಕ್ಷಿಣ ದಿಕ್ಕಿನಲ್ಲಿ. दक्षिण "आतिः" (५-३-३४)।

**दक्षिणापथ ದಕ್ಷಿಣಾಪಥ** (पुं०) ನರ್ಮದಾನದಿಗೆ ದಕ್ಷಿಣ ಭಾಗದಲ್ಲಿರುವ ಭಾರತ ದೇಶದ ಒಂದು ಭಾಗ. दक्षिणा पन्थाः – "अः" (५-४-७४)। "अस्ति दक्षिणापथे विदर्भेषु पद्मपुरं नाम नगरम्" मालती० १।

**दक्षिणापथिक ದಕ್ಷಿಣಾಪಥಿಕ** (वि०) ದಕ್ಷಿಣಾಪಥಕ್ಕೆ ಸೇರಿದ. दक्षिणा पथोऽस्यास्ति "ठन्" (५-२-११५)।

**दक्षिणापरा ದಕ್ಷಿಣಾಪರಾ** (स्त्री०) ದಕ್ಷಿಣ ಮತ್ತು ಪಶ್ಚಿಮದಿಕ್ಕುಗಳ ಮಧ್ಯದ ದಿಕ್ಕು, ನಿಋತಿ ದಿಕ್ಕು. दक्षिणस्याश्च अपरायाश्च अन्तरालम्—बहुव्रीहिः (२-२-२६)।

**दक्षिणाभिमुख ದಕ್ಷಿಣಾಭಿಮುಖ** (वि०) ದಕ್ಷಿಣ ದಿಕ್ಕಿಗೆ ಎದುರಾಗಿರುವ, ದಕ್ಷಿಣ ದಿಕ್ಕಿಗೆ ಮುಖವುಳ್ಳ. दक्षिणा दक्षिणस्यामभिमुखमस्य। "आयुष्यं प्राङ्मुखो भुङ्क्ते यशस्यं दक्षिणामुखः। श्रियं प्रत्यङ्मुखो भुङ्क्ते न कदाचिदुदङ्मुखः"।

**दक्षिणामूर्ति ದಕ್ಷಿಣಾಮೂರ್ತಿ** (पुं०) ಪರಶಿವ, ಈಶ್ವರ. दक्षिणा अनुकूला मूर्तिरस्य। "नित्यशो दक्षिणामूर्तिं ध्यायेत् साधकसत्तमः। शास्त्रव्याख्यानसामर्थ्यं लभन्ते वत्सरान्तरे"।

**दक्षिणायन ದಕ್ಷಿಣಾಯನ** (न०) 1. ದಕ್ಷಿಣ ದಿಕ್ಕಿನಲ್ಲಿ ಸೂರ್ಯನ ಸಂಚಾರ. दक्षिणा दक्षिणस्यां दिशि अयनं सञ्चारः। 2. ಸೂರ್ಯನು ದಕ್ಷಿಣ ದಿಕ್ಕಿನಲ್ಲಿ ಸಂಚರಿಸುವ ಕಾಲ, ಕರ್ಕಾಟಕ ಸಂಕ್ರಾಂತಿಯಿಂದ ಮಕರಸಂಕ್ರಾಂತಿಯ ವರೆಗಿನ ಕಾಲ. "ऋतुत्रयं चाप्ययनं द्वे अयने वर्षसंज्ञिते। कर्कटादिस्थिते भानौ दक्षिणायनमुच्यते"। ಒಂದು ಮಾನುಷವರ್ಷವು ದೇವತೆಗಳಿಗೆ ಒಂದು ದಿವಸ. ಉತ್ತರಾಯಣವು ಹಗಲು. ದಕ್ಷಿಣಾಯನವು ರಾತ್ರಿ. "दैवे राज्यहनी वर्षं प्रविभागस्तयोः पुनः। अहस्तत्रोदगयनं रात्रिः स्याद्दक्षिणायनम्" मनु० १-६७।

**दक्षिणारुस् ದಕ್ಷಿಣಾರುಸ್** (पुं०) ವ್ಯಾಧನ ಬಾಣದಿಂದ ಬಲಭಾಗದಲ್ಲಿ ಗಾಯಗೊಂಡ ಮೃಗ. दक्षिणे अरुरस्य।

**दक्षिणार्ह ದಕ್ಷಿಣಾರ್ಹ** (पुं०) ದಕ್ಷಿಣೆಗೆ ಅರ್ಹನಾದ ಋತ್ವಿಕ್ಕು. दक्षिणामर्हति – अर्ह (पूजायाम्) "अच्" (३-२-१२)।

**दक्षिणावर्त ದಕ್ಷಿಣಾವರ್ತ** (वि०) 1. ದಕ್ಷಿಣ ದಿಕ್ಕಿನಲ್ಲಿರುವ. दक्षिणा दक्षिणस्यां दिशि वर्तते – वृतु (वर्तने) "अच्" (३-१-१३४)। 2. ಬಲಗಡೆಗೆ ತಿರುಗಿರುವ. (पुं०) 3. ಶಂಖ.

**दक्षिणावह ದಕ್ಷಿಣಾವಹ** (पुं०) ದಕ್ಷಿಣ ದಿಕ್ಕಿನ ಗಾಳಿ. दक्षिणा वहति – वह (प्रापणे) "अच्" (३-१-१३४)।

**दक्षिणाशा ದಕ್ಷಿಣಾಶಾ** (स्त्री०) 1. ದಕ್ಷಿಣ ದಿಕ್ಕು. 2. ದಕ್ಷಿಣೆಯಲ್ಲಿ ಆಸೆ.

**दक्षिणाहि ದಕ್ಷಿಣಾಹಿ** (अव्य०) 1. ದಕ್ಷಿಣ ದಿಕ್ಕಿನಲ್ಲಿ ದೂರದಲ್ಲಿ. 2. ಬಲಗಡೆ ದೂರದಲ್ಲಿ. दक्षिण "आहि" (५-३-३७)।

**दक्षिणीय ದಕ್ಷಿಣೀಯ** (वि०) ದಕ್ಷಿಣೆಗೆ ಅರ್ಹನಾದ (ಋತ್ವಿಕ್ಕು). दक्षिणामर्हति—दक्षिणा "छः" (५-१-६९)। "दक्षिणीयमधिगम्य पङ्क्तिशः पङ्क्तिपावनमथ द्विजव्रजम्" माघ० १४-३३।

**दक्षिणेन ದಕ್ಷಿಣೇನ** (अव्य०) 1. ದಕ್ಷಿಣ ದಿಕ್ಕಿನಲ್ಲಿ. 2. ಬಲಭಾಗದಲ್ಲಿ. दक्षिण "एनप्" (५-३-३५)। "दक्षिणेन वृक्षवाटिकामालाप इव श्रूयते" शाकु० १। "तत्रागारं धनपतिगृहान् दक्षिणेनास्मदीयम्" मेघ० २-१२।

**दक्षिणेर्मन् ದಕ್ಷಿಣೇರ್ಮನ್** (पुं०) ಬೇಟೆಗಾರನ ಬಾಣದಿಂದ ಬಲಭಾಗದಲ್ಲಿ ಗಾಯಗೊಂಡ ಮೃಗ. दक्षिणे ईर्ममस्य "अनिच्" (५-४-१२६)। निपा०। "मृगयुमिव मृगोऽथ दक्षिणेर्मा दिशमिव दाहवतीं मरावुदन्यन्" भट्टि० ४-४४।

**दक्षिण्य ದಕ್ಷಿಣ್ಯ** (वि०) ದಕ್ಷಿಣೆಗೆ ಅರ್ಹನಾದ (ಋತ್ವಿಕ್ಕು). दक्षिणा "यत्" (५-१-६९)। "दक्षिण्यदिष्टं कृतमार्त्विजीनैस्तद्यातुधानैश्चिचिते प्रसर्पन्" भट्टि० २-२९।

**दग्ध ದಗ್ಧ** (पुं०) 1. ದಗ್ಧಯೋಗ, ತಿಥಿ ಮತ್ತು ವಾರಗಳು ಸೇರುವುದರಿಂದ ಉಂಟಾಗುವ ಒಂದು ಯೋಗ ;

| | | |
|---|---|---|
| ಭಾನುವಾರ | .. | ದ್ವಾದಶಿ |
| ಸೋಮವಾರ | .. | ಏಕಾದಶಿ |
| ಮಂಗಳವಾರ | .. | ಪಂಚಮಿ |
| ಬುಧವಾರ | .. | ತೃತೀಯೆ |
| ಗುರುವಾರ | .. | ಷಷ್ಠಿ |
| ಶುಕ್ರವಾರ | .. | ಅಷ್ಟಮಿ |
| ಶನಿವಾರ | .. | ನವಮಿ |

ಈ ತಿಥಿ ವಾರಗಳ ಯೋಗದಿಂದ ದಗ್ಧಯೋಗವುಂಟಾಗುವುದು. (न०)2. ದಹಿಸುವುದು, ಸುಡುವುದು. दह भावे "क्तः" (३-३-११४)। (वि०) 3. ಸುಡಲ್ಪಟ್ಟ. दह (भस्मीकरणे) "क्तः" (३-२-१०२)। "न नूनमारूढरुषा शरीरमेतेन दग्धं कुसुमायुधस्य" कुमा० ७-६७। "दृशा दग्धं मनसिजं जीवयन्ति दृशैव याः" चन्द्रा०।

**दग्धकाक ದಗ್ಧಕಾಕ** (पुं०) ರಣಹದ್ದು. दग्ध इव काकः। स्त्रियाम् "ङीष्" (४-१-६३)। **–काकी –ಕಾಕೀ.**

**दग्धरथ ದಗ್ಧರಥ** (पुं०) ಚಿತ್ರರಥನೆಂಬ ಒಬ್ಬ ಗಂಧರ್ವ. [ಇವನು ಕಶ್ಯಪಮುನಿಯಿಂದ ಮುನಿಯೆಂಬ ಪತ್ನಿಯಲ್ಲಿ ಜನಿಸಿದನು. ಇವನಿಗೆ ಅಂಗಾರಪರ್ಣನೆಂಬುದು ನಾಮಾಂತರ. ಒಂದು ದಿನ ಈತನು ಗಂಗಾನದಿಯಲ್ಲಿ ಜಲಕ್ರೀಡೆ ಮಾಡುತ್ತಿದ್ದಾಗ ದ್ರೌಪದೀಸ್ವಯಂವರಕ್ಕಾಗಿ ಹೋಗುತ್ತಿದ್ದ ಪಾಂಡವರನ್ನು ತಡೆದು ನಿಲ್ಲಿಸಲು ಅರ್ಜುನನು ಇವನ ರಥವನ್ನು ಸುಟ್ಟು ಇವನನ್ನು ಸೋಲಿಸಿದನು. ಇದರಿಂದ ಇವನಿಗೆ "**ದಗ್ಧರಥ**" ಎಂದೂ ದಗ್ಧವಾದ ರಥವನ್ನು ತನ್ನ ಮಹಿಮೆಯಿಂದ ಚಿತ್ರರತ್ನಮಯವನ್ನಾಗಿ ಮಾಡಿದುದರಿಂದ "**ಚಿತ್ರರಥ**" ಎಂದೂ ಹೆಸರಾಯಿತು. ಅರ್ಜುನನು ಧರ್ಮರಾಜನ ಮಾತಿನಂತೆ ಇವನನ್ನು ಜೀವಸಹಿತ ಬಿಟ್ಟಿದ್ದರಿಂದ ಸಂತೋಷಗೊಂಡವನಾಗಿ ದಗ್ಧರಥನು ಅರ್ಜುನನಿಗೆ ಚಾಕ್ಷುಷೀವಿದ್ಯೆಯನ್ನು ಉಪದೇಶಿಸಿದನು.] भा० आदि० १८३।

**दग्धवत् ದಗ್ಧವತ್** (वि०) ದಹಿಸಿದವನು, ಸುಟ್ಟವನು. दह (भस्मीकरणे) "क्तवतुः" (३-२-१०२)। स्त्रियाम् "ङीप्" (४-२-६) **–वती –ವತೀ.**

**दग्धव्य ದಗ್ಧವ್ಯ** (वि०) 1. ಸುಡಲ್ಪಡುವ. दह (भस्मीकरणे) कर्मं० "तव्यः" (३-१-९६)। 2. ಸುಡಲು ಯೋಗ್ಯವಾದ. 3. ಸುಡಬೇಕಾದ.

**दग्धिका ದಗ್ಧಿಕಾ** (स्त्री०) ಸೀದುಹೋದ ಅನ್ನ.

**दण्ड ದಂಡ** (पुं०) 1. ಸೂರ್ಯನ ಪಕ್ಕದಲ್ಲಿರುವ ಒಬ್ಬ ...ಗ ದೇವತೆ, ಸೂರ್ಯನ ಒಬ್ಬ ಅನುಚರ. दण्डोऽस्यास्ति "अच्" (५-२-१२७)। "माठरः पिङ्गलो दण्डः चण्डांशोः पारिपार्श्वकाः" अम०। (पुं०) 2. ಕೋಲು, ದೊಣ್ಣೆ. "परस्य दण्डं नोद्यच्छेत् क्रुद्धो नैव निपातयेत्। अन्यत्र पुत्राच्छिष्याद्वा शिष्ट्यर्थं ताडयेत्तु तौ" मनु० ४-१६४। 3. ರಾಜನ ಪ್ರಭುತ್ವವನ್ನು ಸೂಚಿಸುವ ದಂಡ, ದೊರೆಯ ಅಧಿಕಾರವನ್ನು ಸೂಚಿಸಲು ಸೇವಕರು ಕೈಯಲ್ಲಿ ಹಿಡಿಯುವ ಚಿನ್ನದ ಅಥವಾ ಬೆಳ್ಳಿಯ ದೊಣ್ಣೆ. 4. ಸಂನ್ಯಾಸಿಗಳು ಹಿಡಿಯುವ ದಂಡ. 5. ಬ್ರಹ್ಮಚಾರಿಗಳು ಹಿಡಿಯುವ ಪಾಲಾಶಾದಿ ದಂಡ. "ब्राह्मणो बैल्वपालाशौ क्षत्रियो वटखादिरौ। पैलवौदुम्बरौ वैश्यो दण्डानर्हन्ति धर्मतः" मनु० २-४५। "पाणौ कार्मुकमक्षसूत्रवलयं दण्डोऽपरः पैप्पलः" म० वी० १-१८। 6. ಛತ್ರಿಯ ಹಿಡಿ. "राज्यं स्वहस्तधृतदण्डमिवातपत्रम्" शाकु० ५-६। 7. ಭಲ್ಯ ಮೊದಲಾದ ಆಯುಧಗಳ ಹಿಡಿ. 8. ಧ್ವಜದ ದಂಡ, ಬಾವುಟದ ಕೋಲು. 9. ಸವುಟಿನ ಕಾವು. 10. ರಾಜನ ಚತುರಂಗ ಸೈನ್ಯ. "प्रभवः खलु कोशदण्डयोः कृतपञ्चाङ्गविनिर्णयो नयः" किरा० २-१२। 11. ದಮನ, ಹತೋಟಿ, ಅಂಕೆ, ನಿರ್ಬಂಧ. "वाग्दण्डोऽथ मनोदण्डः कायदण्डस्तथैव च" मनु० १२-१०। 12. ಸೈನ್ಯ, ದಂಡು, ಪಡೆ. दण्डयते रिपुरेभिः — दण्ड (दण्डनिपातने) + णिच् "घञ्" (३-३-१२१)। "तस्य दण्डवतो दण्डः स्वदेहान्न व्यशिष्यत" रघु० १७-६२। 13. ಶಿಕ್ಷೆ, ದಂಡನೆ, ಯಮ ಮತ್ತು ಕ್ರಿಯೆಗಳ ಮಗ. "गुरूपदिष्टेन रिपौ सुतेऽपि वा निहन्ति दण्डेन स धर्मविप्लवम्" किरा० १-१३। "राजापथ्यकारिषु तीक्ष्णदण्डो राजा" मुद्रा० १। 14. ಭೂಮಿಯ ಒಂದು ಅಳತೆ, ನಾಲ್ಕು ಗುದ್ದು ಮೊಳಗಳ ಉದ್ದದ ಅಳತೆ. "हस्तैश्चतुर्भिर्भवतीह दण्डः" लीला०। 15. ಬೇರಿನಿಂದ ರೆಂಬೆಗಳವರೆಗೆ ಇರುವ ಗಿಡ ಮರಗಳ ಮಧ್ಯದ ದೂಲ. 16. ಶರಣಾಗತರಾದವರ ರಕ್ಷಣೆ ಪ್ರಾಣಿಹಿಂಸೆ ಮಾಡದಿರುವುದು ಮತ್ತು ದಾನ ಈ ಮೂರು. "शरणागतसंत्राणं भूतानामप्यहिंसनम्। बहिर्वेदि च दानञ्च दण्डमित्यभिधीयते" मोक्षधर्मः। 17. ಕೋಣ, ವೀಣೆ ಮೊದಲಾದ ತಂತೀ ವಾದ್ಯಗಳನ್ನು ನುಡಿಸುವ ಕೋಲು. 18. ಅಶ್ವ, ಕುದುರೆ. 19. ಯಮಧರ್ಮರಾಯ. 20. ಗರ್ವ, ಅಭಿಮಾನ. 21. ಕಡೆಗೋಲು. 22. ಆಕಾಶದಲ್ಲಿ ಕೋಲಿನ ಆಕಾರದ ಒಂದು ಗ್ರಹ. 23. ವ್ಯೂಹ, ಗುಂಪು. 24. ದಂಡದ ಆಕಾರವುಳ್ಳ ಸೂರ್ಯನ ಪರಿವೇಷ. 25. ದೇಹ, ಶರೀರ. दण्डयते— दण्ड + णिच् "घञ्" (३-३-१९)। 26. ಕೋಲಿ

ನಂತೆ ನೇರವಾಗಿ ನಿಲ್ಲುವುದು. दण्ड + णिच् भावे "घञ्" (३-३-१८)। 27. ಕೋಲಿನಂತೆ ನೇರವಾಗಿರುವ ಸೂರ್ಯನ ಕಿರಣಗಳ ಸಮೂಹ. "रविकिरणजलदमरुतां सङ्घातो दण्डवत् स्थितो दण्डः" बृहत्सं० ३०-१६। 28. ವಿಷ್ಣು. "वेदधर्मारिष्टतातिनृपादिमुखतः खलान्। दण्डनीत्या दाम्यतीति दण्डः स्यादृत्तुवर्णकः" इति निरुक्तिः"। "धनुर्धरो धनुर्वेदो दण्डो दमयिता दमः" वि० स०। 29. ಶಿವ, ಈಶ್ವರ. "शत्रुन्दमाय दण्डाय पर्णचीरपटाय च" भा० शान्ति० २९०-८७। 30. ರಾಜನು ಧರ್ಮದಿಂದ ಪ್ರಜಾಪರಿಪಾಲನ ಮಾಡುವುದಕ್ಕಾಗಿ ಅವನಲ್ಲಿ ಪರಮಾತ್ಮನು ಸೃಷ್ಟಿಸಿದ ಬ್ರಹ್ಮತೇಜೋಮಯವಾದ ಧರ್ಮ. "तस्यार्थे सर्वभूतानां गोप्तारं धर्ममात्मजम्। ब्रह्मतेजोमयं दण्डमसृजत्पूर्वमीश्वरः" मनु० ७-१४। ಈ ತೇಜೋರೂಪವಾದ ದಂಡವೇ ಪ್ರಜೆಗಳನ್ನು ರಕ್ಷಿಸುವುದು. ಅದೇ ಪ್ರಜೆಗಳನ್ನು ಶಿಕ್ಷಿಸುವುದು. ರಾಜನು ಅಜಾಗರೂಕನಾಗಿದ್ದರೂ ಈ ತೇಜೋರೂಪವಾದ ದಂಡವು ಯಾವಾಗಲೂ ಎಚ್ಚತ್ತಿರುವುದರಿಂದ ಪ್ರಜೆಗಳಲ್ಲಿ ಪರಸ್ಪರ ದ್ವೇಷಾಸೂಯೆಗಳಿರುವುದಿಲ್ಲ. ಹೊಡೆದಾಟವಿರುವುದಿಲ್ಲ. ಚೌರ್ಯಾದಿಭಯವೂ ಇರುವುದಿಲ್ಲ. ಈ ಕಾರಣಗಳಿಂದ ಈ ದಂಡವೇ ಧರ್ಮವೆಂದು ತಿಳಿಯುವರು. "दण्डः शास्ति प्रजाः सर्वाः दण्ड एवाभिरक्षति। दण्डः सुप्तेषु जागर्ति दण्डं धर्मं विदुर्बुधाः" मनु० ७-१८। ಈ ತೇಜೋರೂಪವಾದ ಧರ್ಮವನ್ನು ಪಾಲಿಸಲು ಅಸಂಸ್ಕೃತಮತಿಗಳಾದ ರಾಜರು ಅಸಮರ್ಥರಾಗುವರು. ಧರ್ಮವಿಹೀನರಾದ ರಾಜರನ್ನು ಇದು ನಾಶಪಡಿಸುವುದು. "दण्डो हि सुमहत्तेजो दुर्धरश्चाकृतात्मभिः। धर्माद्विचलितं हन्ति नृपमेव सबान्धवम्" मनु० ७-२८। **ಭೀಷ್ಮಾಚಾರ್ಯರು ಯುಧಿಷ್ಠಿರನಿಗೆ ಉಪದೇಶಿಸಿದ ದಂಡ ಮತ್ತು ಧರ್ಮವ್ಯವಹಾರಗಳ ಸ್ವರೂಪ:** "शृणु कौरव्य यो दण्डो व्यवहारो यथा च सः। यस्मिन् हि सर्वमायत्तं स धर्म इति केवलः"। ಜಗತ್ತಿನ ಸಕಲ ವ್ಯವಹಾರಗಳೂ ಧರ್ಮಕ್ಕೆ ಅಧೀನವಾಗಿರುವುವು. ದಂಡವೇ ಮೂರ್ತಿಯನ್ನು ತಾಳಿ ಜಗತ್ತಿನಲ್ಲಿ ಸಂಚರಿಸುತ್ತಿರುವುದು. ದಂಡವೇ ಎಲ್ಲರನ್ನೂ ಶಿಕ್ಷಿಸುವುದು. ಅದೇ ಎಲ್ಲರನ್ನೂ ಅನುಗ್ರಹಿಸುವುದು. "दण्ड एव स सर्वात्मा लोके चरति मूर्तिमान्। भिन्दन् छिन्दन् रुजन् कृन्तन् दारयन् पाटयन् तथा। घातयन् अभिधावंश्च दण्ड एव चरत्युत"। ಈ ದಂಡವೊಂದು ಲೋಕದಲ್ಲಿ ಇಲ್ಲದಿದ್ದರೆ ಜನರು ಅಧರ್ಮನಿರತರಾಗಿ ದ್ವೇಷಾಸೂಯೆಗಳಿಂದ ಪರಸ್ಪರ ಹೊಡೆದಾಡುವರು. ದಂಡದ ಭಯವಿದ್ದರೇ ಅನ್ವೀಕ್ಷಿಕೀ (ಅರ್ಥ ತತ್ತ್ವಗಳನ್ನು ಹೇತುಪೂರ್ವಕ ವಿಚಾರಮಾಡುವ ವಿದ್ಯೆ) ಮೊದಲಾದುವುಗಳಲ್ಲಿ ಪ್ರವರ್ತಿಸುವರು. ಬ್ರಹ್ಮತೇಜೋರೂಪವಾದ ರಾಜನ ದಂಡ (ಶಾಸನ) ದಿಂದ ಸುರಕ್ಷಿತರಾದ ಪ್ರಜೆಗಳು ರಾಜನನ್ನೂ ಅಭಿವೃದ್ಧಿಪಡಿಸುವರು. "न स्याद्यदीह दण्डो वै प्रमथेयुः परस्परम्। भयाद्दण्डस्य नान्योन्यं घ्नन्ति चैव युधिष्ठिर। दण्डेन रक्ष्यमाणा हि राजन्नहरहः प्रजाः। राजानं वर्धयन्तीह तस्माद्दण्डः परायणम्"। ರಾಜಶಾಸನರೂಪವಾದ ಈ ದಂಡವು ಲೋಕವನ್ನು ಒಂದು ರೀತಿ ವ್ಯವಸ್ಥೆಗೊಳಿಸಿ ಸುಸ್ಥಿತಿಯಲ್ಲಿಡುವುದು. ಸತ್ಯದಲ್ಲಿ ವ್ಯವಸ್ಥಿತವಾದ ಧರ್ಮವು ಬ್ರಾಹ್ಮಣರಲ್ಲಿ ನೆಲೆಗೊಳ್ಳುವುದು. ಧರ್ಮಪರಾಯಣರಾದ ಬ್ರಾಹ್ಮಣರು ದೇವತೆಗಳ ಪ್ರೀತ್ಯರ್ಥವಾಗಿ ಯಜ್ಞಗಳನ್ನು ಆಚರಿಸುವರು. ಯಜ್ಞದಿಂದ ಸುಪ್ರೀತರಾದ ದೇವತೆಗಳು ಲೋಕವನ್ನು ಇಂದ್ರನಿಗೆ ಒಪ್ಪಿಸುವರು. ಸಕಲ ಪ್ರಾಣಿಗಳ ಪ್ರಾಣಗಳೂ ಅನ್ನಗತವಾಗಿರುವುದರಿಂದ ಇಂದ್ರನು ಅನ್ನವನ್ನು ಕೊಟ್ಟು ಪ್ರಜೆಗಳನ್ನು ಅನುಗ್ರಹಿಸುತ್ತಾನೆ. ಇದರಿಂದ ಪ್ರಜೆಗಳೂ ಸುರಕ್ಷಿತರಾಗಿ ಅವರಲ್ಲಿ ಈ ದಂಡ (ರಾಜಶಾಸನ) ವು ಜಾಗೃತವಾಗಿ ನಿಲ್ಲುವುದು. "व्यवस्थापयते नित्यमिमं लोकं नरेश्वर। सत्ये व्यवस्थितो धर्मो ब्राह्मणेष्ववतिष्ठते। धर्मयुक्ता द्विजश्रेष्ठा देवयुक्ता भवन्ति च। बभूव यज्ञो देवेभ्यो यज्ञः प्रीणाति देवताः। प्रीताश्च देवता लोकमिन्द्रे प्रतिददत्युत। अन्नं ददाति शक्रश्चाप्यनुगृह्णन्निमाः प्रजाः। प्राणाश्च सर्वभूतानां नित्यमन्ने प्रतिष्ठिताः। तस्मात्प्रजाः प्रतिष्ठन्ते दण्डो जागर्ति तासु च" भा० शान्ति० १२१। ಆದುದರಿಂದ ಬ್ರಹ್ಮತೇಜೋರೂಪವಾದ ದಂಡ (ರಾಜಶಾಸನ) ದಲ್ಲಿ ಈ ಜಗತ್ತಿನ ಸಕಲ ವ್ಯವಹಾರಗಳೂ ಸೇರಿರುವುವು. ಈ ಲೋಕದ ವ್ಯವಹಾರಗಳು ಸುವ್ಯವಸ್ಥಿತವಾಗಿ ನಡೆಯಬೇಕಾದರೆ ರಾಜನು ಧರ್ಮದಿಂದ ಪ್ರಜಾಪರಿಪಾಲನ ಮಾಡಬೇಕು. ಈ ದಂಡವೇ ವ್ಯವಹಾರ. ವ್ಯವಹಾರವೇ ವೇದ. ವೇದವೇ ಧರ್ಮ. ಧರ್ಮವೇ ಸನ್ಮಾರ್ಗ. ಅಪರಾಧ ಮಾಡಿದವರು ತಾಯಿ ತಂದೆ ಸಹೋದರ ಪತ್ನಿ ಪುರೋಹಿತ ಯಾರೇ ಆಗಲಿ ರಾಜನ ಶಿಕ್ಷೆಗೆ ಒಳಪಡಬೇಕು. ಆ ರೀತಿ ನಿಷ್ಪಕ್ಷಪಾತಿಯಾದ ರಾಜನೇ ತನ್ನ ಧರ್ಮದಲ್ಲಿ ವಿಶ್ವಾಸವುಳ್ಳವನೆಂದು ತಿಳಿ. "यश्च दण्डः स दृष्टो नो व्यवहारः सनातनः। व्यवहारश्च दृष्टो यः स वेद इति नः श्रुतिः। यश्च वेदः स वै धर्मः यश्च धर्मः स सत्पथः॥ माता पिता च भ्राता च भार्या चैव पुरोहितः। नादण्ड्यो

विद्यते राज्ञो यः स्वधर्मेण तिष्ठति" भा० शान्ति० १२१। ಇದು ಭೀಷ್ಮಾಚಾರ್ಯರು ಧರ್ಮರಾಜನಿಗೆ ಮಾಡಿದ ದಂಡಸ್ವರೂಪದ ಉಪದೇಶಸಂಗ್ರಹ. 31. ಸಾಮ ಮೊದಲಾದ ನಾಲ್ಕು ಉಪಾಯಗಳಲ್ಲೊಂದು. ಸಾಮ ದಾನ ಭೇದ ಮತ್ತು ದಂಡ ಎಂದು ಉಪಾಯಗಳು ನಾಲ್ಕು. 32. ಅಪರಾಧಕ್ಕೆ ತಕ್ಕಂತೆ ರಾಜನು ಕೊಡುವ ಶಿಕ್ಷೆ. "यथापराधदण्डानां यथाकालप्रबोधिनाम्" रघु० १-६। ರಾಜನು ಅಪರಾಧಿಗಳಿಗೆ ವಿಧಿಸುವ ಶಿಕ್ಷೆಯು ಹತ್ತು ಸ್ಥಾನಗಳಿಗೆ ಸಂಬಂಧಿಸಿರಬೇಕು. ಇದು ಅಪರಾಧಮಾಡಿದ ಅಂಗಗಳಿಗೆ ಸಂಬಂಧಿಸಿದ ಶಿಕ್ಷೆಯಾಗಿರಬೇಕು. (1) ಉಪಸ್ಥ (ಜನನೇಂದ್ರಿಯ), (2) ಉದರ (ಹೊಟ್ಟೆ), (3) ನಾಲಗೆ, (4) ಹಸ್ತಗಳು, (5) ಪಾದಗಳು, (6) ಕಣ್ಣುಗಳು, (7) ಮೂಗು, (8) ಕಿವಿಗಳು, (9) ಧನ ಮತ್ತು (10) ದೇಹ ಇವು ಹತ್ತು ಅಪರಾಧಸ್ಥಾನಗಳು. "दश स्थानानि दण्डस्य मनुः स्वायम्भुवोऽब्रवीत्। उपस्थमुदरं जिह्वा हस्तौ पादौ च पञ्चमम्। चक्षुर्नासा च कर्णौ च धनं देहस्तथैव च" मनु० ८-१२४, २५। ಅಪರಾಧಿಗೆ ಶಿಕ್ಷೆಯನ್ನು ವಿಧಿಸುವಾಗ ಅಪರಾಧದ ದೇಶ ಕಾಲ ಅಪರಾಧವು ಅಲ್ಪವಾದುದೇ ಗುರುತರವಾದುದೇ ಅಪರಾಧಿಯು ಎಂತಹ ಶಿಕ್ಷೆಯನ್ನು ಅನುಭವಿಸಲು ಸಮರ್ಥ ಇತ್ಯಾದಿಗಳನ್ನು ಚೆನ್ನಾಗಿ ವಿವೇಚಿಸಬೇಕು. "अनुबन्धं परिज्ञाय देशकालौ च तत्त्वतः। सारापराधौ चालोक्य दण्डं दण्ड्येषु पातयेत्" मनु० ८-१२६। ಅಪರಾಧಿಯನ್ನು ಕರೆದು ಮೊದಲು ಒಳ್ಳೆಯ ಮಾತಿನಿಂದ ಹೇಳಿ ಮನ್ನಿಸಬೇಕು. ಅದಕ್ಕೆ ತಲೆಬಾಗದಿದ್ದರೆ ಬಾಯಿಮಾತಿನಿಂದ ಹೆದರಿಸಬೇಕು. ಅದಕ್ಕೂ ಹೆದರದಿದ್ದರೆ ಧನ ದಂಡವನ್ನು (ಜುಲ್ಮಾನೆ) ವಿಧಿಸಬೇಕು. ಅದಾದಮೇಲೆ ಮರಣದಂಡನೆ. ಅಪರಾಧಿಗಳಲ್ಲದವರನ್ನು ಶಿಕ್ಷಿಸುವುದೂ ಅಪರಾಧಿಗಳನ್ನು ಶಿಕ್ಷಿಸದಿರುವುದೂ ರಾಜನ ಅಪಕೀರ್ತಿಗೆ ಕಾರಣವಾಗುವುದಲ್ಲದೆ ಅದರಿಂದ ನರಕ ಪ್ರಾಪ್ತಿಯೂ ಆಗುವುದು. "वाग्दण्डं प्रथमं कुर्यात् धिग्दण्डं तदनन्तरम्। तृतीयं धनदण्डं तु वधदण्डमतःपरम्॥ अदण्ड्यान् दण्डयन् राजा दण्ड्यांश्चैवाप्यदण्डयन्। अयशो महदाप्नोति नरकं चैव गच्छति" मनु० ८। ಆದುದರಿಂದ ರಾಜನು ಅಪರಾಧಕ್ಕೆ ಅನುಗುಣವಾದ ಶಿಕ್ಷೆಯನ್ನು ವಿಧಿಸಬೇಕು. 33. ದುಷ್ಟನಿಗ್ರಹ. "दुष्टनिग्रहो दण्डः" सा० द० ३।

**दण्डक ದಂಡಕ**(पुं०) 1. ಸಣ್ಣ ಕೋಲು, ತುಂಡು ದೊಣ್ಣೆ. ह्रस्वो दण्डः "कन्" (५-३-८६)। 2. ವೃತ್ತರತ್ನಾಕರದಲ್ಲಿ ಉಕ್ತವಾದ 26ಕ್ಕಿಂತಲೂ ಅಧಿಕಾಕ್ಷರ ಪಾದಗಳುಳ್ಳ ಒಂದು ಛಂದಸ್ಸು. ಪ್ರತಿ ಪಾದದಲ್ಲಿಯೂ ಮೊದಲು ನ ಗಣದ್ವಯ ಅನಂತರ ಏಳು ರ ಗಣಗಳಿದ್ದರೆ "**चण्डवृष्टिप्रयात**" ಎಂಬ ದಂಡಕವಾಗುವುದು. "यदिह नयुगलं ततः सप्त रेफास्तदा चण्डवृष्टिप्रयातो भवेद्दण्डकः" वृ० र०। **ಇದರ ಗಣವಿನ್ಯಾಸ:**

न न र र र र र र र

।।। ।।। ऽ।ऽ ऽ।ऽ ऽ।ऽ ऽ।ऽ ऽ।ऽ ऽ।ऽ ऽ।ऽ

ಈ ಲಕ್ಷಣದ ಮುಂದೆ ಒಂದೊಂದು ರ ಗಣವು ಹೆಚ್ಚುತ್ತಾ ಬಂದರೆ ದಂಡಕದ ಹೆಸರೂ ಬೇರೆ ಬೇರೆಯಾಗಿ ಕ್ರಮವಾಗಿ अर्णः अर्णवः व्यालः जीमूतः लीलाकरः उद्दामः शङ्खः ಇತ್ಯಾದಿ ದಂಡಕಗಳಾಗುವುವು. "प्रतिचरणविवृद्धरेफाः स्युरर्णार्णवव्यालजीमूतलीलाकरोद्दामशंखादयः" वृ० र०। 3. ಇಕ್ಷ್ವಾಕುರಾಜನ ಒಬ್ಬ ಮಗ. "दण्डको नृपतिः कामात् क्रोधाच्च जनमेजयः"। (पुं० ब० व०) 4. ದಂಡಕಾರಣ್ಯ. "प्राप्तानि दुःखान्यपि दण्डकेषु सञ्चिन्त्यमानानि सुखान्यभूवन्" रघु० १४-२५। "दण्डकानध्यवात्तां यौ वीर रक्षःप्रकाण्डकौ" भट्टि० ५-६। (स्त्री०) **—का —ಕಾ.** 5. ದಂಡಕಾರಣ್ಯ, ದಂಡಕಾವನಪ್ರದೇಶ. "स दण्डकायां कृतदण्डकायां स्वसारमेनां प्रथितस्वसारः" चं० रा०।

**दण्डकर्मन् ದಂಡಕರ್ಮನ್** (न०) ಶಿಕ್ಷೆ, ದಂಡನೆ. दण्डस्य कर्म। "देशकालवयःशक्ति सञ्चिन्त्यं दण्डकर्मणि" याज्ञ० २-२७५।

**दण्डगौरी ದಂಡಗೌರೀ** (स्त्री०) ಒಬ್ಬ ಅಪ್ಸರಸ್ಸು. "उर्वशी मिश्रकेशी च दण्डगौरी वरूथिनी" भा० वन०।

**दण्डग्राह ದಂಡಗ್ರಾಹ** (वि०) ಕೋಲನ್ನು ಹಿಡಿದು ಕೊಂಡಿರುವವನು. दण्डं गृह्णाति — ग्रह (उपादाने) "अण्" (३-२-१)।

**दण्डघ्न ದಂಡಘ್ನ** (वि०) ಕೈಯಿಂದ ಮತ್ತು ಕೋಲಿನಿಂದ ಹೊಡೆದು ಹಿಂಸಿಸುವವನು. "यस्य स्तेनः पुरे नास्ति नान्यस्त्रीगो न दुष्टवाक्। न साहसिकदण्डघ्नौ स राजा शक्रलोकभाक्" मनु० ८-३८६।

**दण्डचक्र ದಂಡಚಕ್ರ** (न०) ಸೇನಾಸಮೂಹ, ಸೈನ್ಯಗಳ ಗುಂಪು.

**दण्डदास ದಂಡದಾಸ**(पुं०) ಶಿಕ್ಷೆಯ ಹಣ (ಜುಲ್ಮಾನೆ ಹಣ) ವನ್ನು ಕೊಡಲು ಶಕ್ತಿಯಿಲ್ಲದೆ ಅದರ ಬದಲು ಸೇವಕನಾಗಿರುವವನು. दण्डेन कृतो दासः। "ध्वजाहृतो भक्तदासो गृहजः क्रीतदत्त्रिमौ। पैत्रिको दण्डदासश्च सप्तैते दासयोनयः" मनु० ८-४१६।

**दण्डधर ದಂಡಧರ** (पुं०) 1. ಯಮಧರ್ಮರಾಯ. दण्डं प्राणिनां कर्मानुसारिणीं शिक्षां धरति – दण्डस्य धरः। 2. ರಾಜ, ದೊರೆ. "बलनिषूदनमर्थपतिं च तं श्रमनुदं मनुदण्डधरान्वयम्" रघु० ९-३। (वि०) 3. ಕೋಲನ್ನು ಹಿಡಿದಿರುವವನು. 4. ಕುಲಾಲ, ಕುಂಬಾರ. 5. ಶಿಕ್ಷೆಯನ್ನು ಕೊಡುವವನು, ಶಿಕ್ಷೆಯನ್ನು ವಿಧಿಸುವವನು.

**दण्डधार ದಂಡಧಾರ** (पुं०) 1. ಯಮಧರ್ಮರಾಯ. 2. ರಾಜ, ದೊರೆ. दण्डं धरति–धृञ् (धारणे) "अण्" (३-२-१)। (वि०) 3. ಕೋಲನ್ನು ಹಿಡಿದಿರುವವನು.

**दण्डन ದಂಡನ** (न०) ಶಿಕ್ಷಿಸುವುದು, ದಂಡಿಸುವುದು. दण्ड (दण्डनिपातने) + णिच् भावे "ल्युट्" (३-३-११५)।

**दण्डनायक ದಂಡನಾಯಕ** (पुं०) 1. ಸೇನಾಪತಿ. दण्डान् सैन्यानि नयति–णीञ् (प्रापणे) "ण्वुल्" (३-१-१३३)। 2. ರಾಜ, ದೊರೆ. 3. ನ್ಯಾಯಾಧಿಪತಿ.

**दण्डनीति ದಂಡನೀತಿ** (स्त्री०) 1. ರಾಜನೀತಿ, ಅರ್ಥಶಾಸ್ತ್ರ. दण्डेन नीयते–दण्डो नीयतेऽनया वा – णीञ् (प्रापणे) कर्म० कर० वा "क्तिन्" (३-३-९४)। ಸಾಮ ಮೊದಲಾದ ನಾಲ್ಕು ಉಪಾಯಗಳಲ್ಲಿ ದಂಡವು ಪ್ರಧಾನವಾದುದು. ಧರ್ಮದಿಂದ ಪ್ರಜಾಪರಿಪಾಲನೆಗಾಗಿ ರಾಜನಿಗೋಸ್ಕರ ಪರಮಾತ್ಮನು ಸೃಷ್ಟಿಸಿದ ಬ್ರಹ್ಮತೇಜೋರೂಪವಾದ ಈ ದಂಡವನ್ನು ರಾಜನು ಧರಿಸಿರುವುದರಿಂದ ರಾಜನಿಗೂ ದಂಡವೆಂದು ಹೆಸರು. ರಾಜನು, ಹೇತುಪೂರ್ವಕ ಅರ್ಥತತ್ತ್ವಗಳ ಪರೀಕ್ಷಾರೂಪವಾದ ಆನ್ವೀಕ್ಷಿಕೀ ಮೊದಲಾದುವುಗಳ ಯೋಗಕ್ಷೇಮಸಾಧನವಾದ ದಂಡವನ್ನು ತನ್ನ ರಾಜ್ಯದಲ್ಲಿ ನಯನಮಾಡಿ ಅನುಷ್ಠಾನಕ್ಕೆ ತರುವುದರಿಂದ ಇದಕ್ಕೆ **"ದಂಡನೀತಿ"** ಎಂಬ ಹೆಸರಾಯಿತು. "दमो दण्ड इति ख्यातस्तात्स्थ्याद्दण्डो महीपतिः। तस्य नीतिर्दण्डनीतिर्नयनान्नीतिरुच्यते" कामन्द०। ಮನುಷ್ಯನ ವ್ಯವಹಾರಕ್ಕೆ ಬೇಕಾದ ಭೂಮಿ ಧನ ಇವುಗಳ ಲಾಭ ಮತ್ತು ಲಬ್ಧವಾದ ಇವುಗಳ ರಕ್ಷಣೆಗೆ ಉಪಾಯಗಳನ್ನು ಹೇಳುವ ಶಾಸ್ತ್ರವು **"ಅರ್ಥಶಾಸ್ತ್ರ".** ಕೃಷಿ ವಾಣಿಜ್ಯ ಪಶುಪಾಲನೆಗಳ ಮತ್ತು ಭೂಮಿ ಧನಕನಕಾದಿಗಳ ಯೋಗಕ್ಷೇಮವು ರಾಜನಿಗೆ ಸೇರಿದುದರಿಂದ ಇದಕ್ಕೆ **"ರಾಜನೀತಿ"** ಎಂದೂ ಹೆಸರು. "आन्वीक्षिकीत्रयीवार्तानां योगक्षेमसाधनो दण्डः, तस्य नीतिः दण्डनीतिः" अर्थशा०। 2. ಸುವ್ಯವಸ್ಥಿತ ರಾಜ್ಯಪದ್ಧತಿ, ನ್ಯಾಯವಾದ ರಾಜ್ಯದ ಆಡಳಿತ. 3. ದುರ್ಗಾದೇವಿ.

**दण्डनीय ದಂಡನೀಯ** (वि०) 1. ಶಿಕ್ಷಿಸಲ್ಪಡುವ. 2. ಶಿಕ್ಷಿಸಲು ಅರ್ಹನಾದ. 3. ಶಿಕ್ಷಿಸಲು ಶಕ್ಯನಾದ. 4. ಶಿಕ್ಷಿಸಬೇಕಾದ. दण्ड (दण्डनिपातने) कर्मादौ "अनीयर्" (३-१-९६)। "तव्यः"। **–यितव्यः –ಯಿತವ್ಯಃ.**

**दण्डनेतृ ದಂಡನೇತೃ** (पुं०) ಆನ್ವೀಕ್ಷಿಕೀ ಮೊದಲಾದುವುಗಳಿಗೆ ಯೋಗಕ್ಷೇಮ ಸಾಧನವಾದ ದಂಡವನ್ನು ರಾಜ್ಯದಲ್ಲಿ ನಯನಮಾಡಿ ಅನುಷ್ಠಾನಕ್ಕೆ ತರುವ ರಾಜ. दण्डस्य आन्वीक्षिक्यादीनां योगक्षेमसाधनस्य नेता। तस्य भावः "त्वः" (५-१-११९)। **–नेतृत्वम् –ನೇತೃತ್ವಮ್.** ದಂಡವನ್ನು ರಾಜ್ಯದಲ್ಲಿ (ರಾಜ್ಯದ ಜನರಲ್ಲಿ) ಅನ್ವಯ ಮಾಡುವುದು (ಅನುಷ್ಠಾನಕ್ಕೆ ತರುವುದು). "सैनापत्यं च राज्यं च दण्डनेतृत्वमेव च। सर्वलोकाधिपत्यं च वेदशास्त्रविदर्हति" मनु० १२-१००।

**दण्डपांसुल ದಂಡಪಾಂಸುಲ** (पुं०) ದ್ವಾರಪಾಲಕ, ಬಾಗಿಲನ್ನು ಕಾಯುವವನು. दण्डेन लगुडेन पांसुलः।

**दण्डपाणि ದಂಡಪಾಣಿ** (पुं०) 1. ಯಮಧರ್ಮರಾಯ. दण्डः पाणौ यस्य। 2. ಕಾಶೀಕ್ಷೇತ್ರದಲ್ಲಿರುವ ಪರಮೇಶ್ವರ.

**दण्डपात ದಂಡಪಾತ** (पुं०) ದಂಡವು ಬೀಳುವುದು, ಶಿಕ್ಷೆಯನ್ನು ವಿಧಿಸುವುದು. दण्डस्य पातः।

**दण्डपातन ದಂಡಪಾತನ** (न०) ಶಿಕ್ಷೆಯನ್ನು ವಿಧಿಸುವುದು. दण्डस्य पातनम्।

**दण्डपारुष्य ದಂಡಪಾರುಷ್ಯ** (न०) ಹಿಂಸಿಸುವಿಕೆ, ಕೈಯಿಂದ ಹೊಡೆಯುವುದು ಕಾಲಿನಿಂದ ಒದೆಯುವುದು ದೊಣ್ಣೆ ಕತ್ತಿ ಮೊದಲಾದುವುಗಳಿಂದ ಹೊಡೆಯುವುದು ಮಣ್ಣು ಬೂದಿ ಮುಂತಾದುವನ್ನು ಎರಚುವುದು ಈ ರೀತಿ ನಾನಾ ವಿಧ ಹಿಂಸೆಯನ್ನು ಕೊಡುವುದು. दण्डेन देहेन पारुष्यं विरुद्धाचरणम्। "परगात्रेष्वभिद्रोहो हस्तपादायुधादिभिः। भस्मादिभिश्चोपघातो दण्डपारुष्यमुच्यते" नारदः।

**दण्डपाल ದಂಡಪಾಲ** (पुं०) 1. ನ್ಯಾಯಮೂರ್ತಿ, ನ್ಯಾಯಾಧಿಪತಿ. 2. ಸೇನಾಪತಿ. दण्डं पालयति–पाल (रक्षणे) "अण्" (३-२-१)। 3. ದ್ವಾರಪಾಲಕ.

**दण्डपाशिक ದಂಡಪಾಶಿಕ** (पुं०) ಮಾರಕ, ಕೊಲ್ಲುವವನು, ಕಟುಕ, ನೇಣು ಹಾಕುವವನು, ಗಲ್ಲಿಗೆ ಏರಿಸುವವನು. "शार्ङ्गरव, उच्यतां मद्वचनात् कालपाशिको दण्डपाशिकश्च" मुद्रा०।

**दण्डप्रणाम ದಂಡಪ್ರಣಾಮ** (पुं०) ದಂಡಾಕಾರವಾಗಿ ಮುಖವಡಿಯಾಗಿ ಮಲಗಿ ಮಾಡುವ ನಮಸ್ಕಾರ. दण्डवत् कृतः प्रणामः।

**दण्डभङ्ग ದಂಡಭಂಗ** (ಪುಂ) ಶಿಕ್ಷೆಯನ್ನು ರದ್ದುಮಾಡುವುದು. दण्डस्य भङ्गः। "यमस्य देवस्य न दण्डभङ्गः कुतश्चनर्षे श्रुतपूर्व आसीत्" भाग० ६-३-२।

**दण्डभृत् ದಂಡಭೃತ್** (ಪುಂ) 1. ಯಮಧರ್ಮರಾಯ. 2. ಕುಲಾಲ, ಕುಂಬಾರ. दण्डं बिभर्ति—डु भृञ् (धारणे) "क्विप्" (३-२-७६)। (ವಿಂ) 3. ದೊಣ್ಣೆಯನ್ನು ಹಿಡಿದಿರುವವನು.

**दण्डयत् ದಂಡಯುತ್** (ವಿಂ) ದಂಡಿಸುತ್ತಿರುವ, ಶಿಕ್ಷಿಸುತ್ತಿರುವ. दण्ड (दण्डनिपातने) + णिच् "शतृ" (३-२-१२४)। स्त्रियाम् "ङीप्" (४-१-६)। —यन्ती —ಯಂತೀ. "स्थित्यै दण्डयतो दण्ड्यान् परिणेतुः प्रसूतये" रघु० १-२५।

**दण्डयात्रा ದಂಡಯಾತ್ರಾ** (ಸ್ತ್ರೀಂ) 1. ಶತ್ರುಗಳನ್ನು ನಿಗ್ರಹಿಸಲು ಹೊರಡುವ ಯಾತ್ರೆ, ಶತ್ರುಗಳನ್ನು ಜಯಿಸಲು ಮಾಡುವ ಪ್ರಯಾಣ. दण्डार्थं शत्रुदमनार्थं यात्रा। 2. ಮೆರವಣಿಗೆ. 3. ಮದುವೆ ವರನ ಮೆರವಣಿಗೆ, ಮದುವಣಿಗನ ಮೆರವಣಿಗೆ. "दण्डयात्रा दिग्विजये संयानवरयात्रयोः" मेदि०।

**दण्डयाम ದಂಡಯಾಮ** (ಪುಂ) 1. ಯಮಧರ್ಮರಾಯ. 2. ಅಗಸ್ತ್ಯಮಹರ್ಷಿ. 3. ದಿವಸ. "दण्डयामस्तु कीनाशे दिवसे कुम्भसम्भवे" मेदि०।

**दण्डयितृ ದಂಡಯಿತೃ** (ವಿಂ) ದಂಡಿಸುವವನು, ಶಿಕ್ಷಿಸುವವನು. दण्ड (दण्डनिपातने) + णिच् "तृच्" (३-१-१३३)। स्त्रियाम् "ङीप्" (४-१-५)। —यित्री —ಯಿತ್ರೀ.

**दण्डवादिन् ದಂಡವಾದಿನ್** (ಪುಂ) 1. ದ್ವಾರಪಾಲಕ. दण्डेन तदुत्तोलनेन वदति—वद (व्यक्तायां वाचि) "णिनिः" (३-२-७८)। 2. ಶಿಕ್ಷೆಯನ್ನು ವಿಧಿಸಿ ಹೇಳುವ ನ್ಯಾಯಾಧಿಪತಿ. दण्ड + वद "णिनिः" (३-३-१७०)।

**दण्डवासिन् ದಂಡವಾಸಿನ್** (ಪುಂ) ದ್ವಾರಪಾಲಕ.

**दण्डविष्कम्भ ದಂಡವಿಷ್ಕಂಭ** (ಪುಂ) ಕಡೆಗೋಲಿನ ಹಗ್ಗವನ್ನು ಕಟ್ಟುವ ಕಂಬ, ಮೊಸರನ್ನು ಕಡೆಯುವ ಕೋಲಿಗೆ ಆಧಾರವಾದ ಕಂಬ. दण्डं मन्थानं विष्कम्नाति—स्कम्भु (रोधने) "अण्" (३-२-१)।

**दण्डव्यूह ದಂಡವ್ಯೂಹ** (ಪುಂ) ಸೈನ್ಯದ ವ್ಯೂಹ, ಸೈನ್ಯಗಳನ್ನು ದಂಡಾಕಾರವಾಗಿ ಸಾಲುಸಾಲಾಗಿ ನಿಲ್ಲಿಸುವುದು. दण्डसंज्ञको व्यूहः। ಮುಂಭಾಗದಲ್ಲಿ ದಳಾಧಿಪತಿ ಮಧ್ಯದಲ್ಲಿ ರಾಜ ಹಿಂಭಾಗದಲ್ಲಿ ಸೇನಾಪತಿ ಎರಡೂ ಪಾರ್ಶ್ವಗಳಲ್ಲಿ ಆನೆಗಳು ಅವುಗಳ ಸಮೀಪದಲ್ಲಿ ಕುದುರೆಗಳು ಆಮೇಲೆ ಕಾಲಾಳುಗಳು ಈ ರೀತಿ ಸುತ್ತಲೂ ವ್ಯೂಹವನ್ನು ರಚಿಸಿಕೊಂಡು ರಾಜನು ದಿಗ್ವಿಜಯಕ್ಕೆ ಹೊರಡಬೇಕು. "दण्डव्यूहेन तन्मार्गं यायात्तु शकटेन वा। वराहमकराभ्यां वा सूच्या वा गरुडेन वा" मनु० ७-१८७।

**दण्डसहाय ದಂಡಸಹಾಯ** (ಪುಂ) ರಾಜನು ದುಷ್ಟರನ್ನು ಶಿಕ್ಷಿಸುವ ಕಾರ್ಯದಲ್ಲಿ ಸಹಾಯಕ. दण्डे सहायकः। "दण्डे सुहृत्कुमाराटविकाः सामन्तसैनिकाद्याश्च" सा० द० ३-४५।

**दण्डस्थान ದಂಡಸ್ಥಾನ** (ನಂ) ಶಿಕ್ಷೆಗೆ ಅರ್ಹವಾದ ಸ್ಥಾನಗಳು, ರಾಜನು ಅಪರಾಧಿಗಳಿಗೆ ವಿಧಿಸುವ ಶಿಕ್ಷೆಯ ಸ್ಥಾನ, ಉಪಸ್ಥ ಉದರ ಮುಂತಾದುದು. ["दण्ड" ಪದದ 32 ನೆಯ ಅರ್ಥವಲ್ಲಿ ನೋಡಿ.]

**दण्डाजिन ದಂಡಾಜಿನ** (ನಂ) 1. ದಂಡ ಮತ್ತು ಅಜಿನ. दण्डश्च अजिनञ्च अनयोः समाहारः। 2. ದಂಭ, ಮೋಸ, ವಂಚನೆ. ದಂಡ ಮತ್ತು ಅಜಿನಧಾರಣೆಯಿಂದ ಜನರನ್ನು ವಂಚಿಸುವುದರಿಂದ ಈ ಹೆಸರು. दण्डाजिनं छलेन धार्यतयाऽस्त्यस्य "अच्" (५-२-१२७)। "दम्भो दण्डाजिनं कूटं दौन्दुभिश्छन्दनोपधा" वैज०।

**दण्डादण्डि ದಂಡಾದಂಡಿ** (ಅವ್ಯಂ) ದೊಣ್ಣೆಗಳ ಹೊಡೆದಾಟದಿಂದ ನಡೆಯುವ ಯುದ್ಧ. दण्डैश्च दण्डैश्च प्रहृत्येदं प्रवृत्तं युद्धम् "इच्" पूर्वपदस्य दीर्घः (५-४-१२७)।

**दण्डाधिप ದಂಡಾಧಿಪ** (ಪುಂ) ಶಿಕ್ಷೆಯನ್ನು ವಿಧಿಸುವ ನ್ಯಾಯಾಧಿಪತಿ. —अधिपतिः —ಅಧಿಪತಿಃ.

**दण्डापूप ದಂಡಾಪೂಪ** (ಪುಂ) ದಂಡವನ್ನು ಆಕರ್ಷಿಸಿದಾಗ ಆಗುವ ಅದರಲ್ಲಿರುವ ಅಪೂಪಗಳ ಆಕರ್ಷಣ. दण्डे दण्डस्याकर्षे तद्गतस्यापूपस्याप्याकर्षः। ದಂಡವನ್ನು ಎಳೆದರೆ ಅದರಲ್ಲಿ ಸೇರಿರುವ ಅಪೂಪಗಳನ್ನೂ ಆಕರ್ಷಿಸಿತು ಎಂದರ್ಥ. ಇಲಿಯು ದಂಡವನ್ನು ತಿಂದಿತೆಂದರೆ ಅದರಲ್ಲಿರುವ ಅಪೂಪಗಳನ್ನು ತಿಂದಿತೆಂಬ ಅರ್ಥಬರುವುದು. ಇದಕ್ಕೆ "दण्डापूपन्याय" ಎಂದು ಹೆಸರು. ಒಟ್ಟಿಗೆ ಸೇರಿಕೊಂಡಿರುವ ಎರಡು ವಿಷಯಗಳಲ್ಲಿ ಒಂದನ್ನು ಸಾಧಿಸಿದರೆ ಮತ್ತೊಂದನ್ನೂ ಸಾಧಿಸಿದಂತಾಯಿತು. ಇಂತಹ ವಿಷಯಗಳಲ್ಲಿ ದಂಡಾಪೂಪನ್ಯಾಯವನ್ನು ಅನ್ವಯಿಸುವರು.

**दण्डापूपिका ದಂಡಾಪೂಪಿಕಾ** (ಸ್ತ್ರೀಂ) ದಂಡಾಪೂಪನ್ಯಾಯ. "दण्डापूपिकयान्यार्थागमोऽर्थापत्तिरिष्यते" सा० द० १०-८३।

**दण्डार ದಂಡಾರ**(ಪುಂ)1. ಮದಿಸಿದ ಆನೆ. 2. ಕುಂಬಾರನ ಚಕ್ರ. 3. ಧನುಸ್ಸು. 4. ದೋಣಿ. 5. ತೆಪ್ಪ, ಹರಿಗೋಲು. 6. ರಥ. दण्डं ऋच्छति – ऋ (गतौ) "अण्" (३-२-१)। "दण्डारो वाहने मत्तवारणे शरयन्त्रके। कुम्भकारस्य चक्रे च" मेदि०।

**दण्डासन ದಂಡಾಸನ** (ನಂ)1. ನೆಲದ ಮೇಲೆ ದಂಡಾಕಾರವಾಗಿ ಮಲಗಿಕೊಂಡು ಹಾಕುವ ಒಂದು ಆಸನ, ಯೋಗಾಸನಗಳಲ್ಲಿ ಒಂದು ಭೇದ. 2. ಒಂದು ಬಾಣ. "त्रिभागशल्यनाराचो द्वौ दण्डासनदण्डिकौ" वैज०।

**दण्डाहत ದಂಡಾಹತ** (ನಂ) ಕಡೆಗೋಲಿನಿಂದ ಕಡೆಯಲ್ಪಟ್ಟ ಮೊಸರು. दण्डेन मन्थनदण्डेन आहतम्। "दण्डाहतं कालशेयमरिष्टमपि गोरसः" अम०।

**दण्डिक ದಂಡಿಕ** (ಪುಂ) 1. ಒಂದು ಜಾತಿಯ ಮೀನು. 2. ಮೂರು ಭಾಗದಷ್ಟು ಕಬ್ಬಿಣದ ಸಲಾಕಿಯುಳ್ಳ ಬಾಣ. "त्रिभागशल्यनाराचो द्वौ दण्डासनदण्डिकौ" वैज०। 3. ದ್ವಾರಪಾಲಕ, ಕಾವಲುಗಾರ. (ವಿಂ)4. ದಂಡವನ್ನು ಹಿಡಿದಿರುವ. दण्डोऽस्यास्ति "ठन्" (५-२-११५)। (स्त्री०) **–का –ಕಾ.** 5. ರಜ್ಜು, ಹಗ್ಗ. 6. ಮುಕ್ತಾಹಾರ, ಮುತ್ತಿನ ಸರ.

**दण्डित ದಂಡಿತ** (ವಿಂ) ದಂಡಿಸಲ್ಪಟ್ಟ, ಶಿಕ್ಷಿಸಲ್ಪಟ್ಟ. दण्ड (दण्डनिपातने) + णिच् "क्तः" (३-२-१०२)। "ताडितोऽपि दुरुक्तोऽपि दण्डितोऽपि महीभुजा। यो न चिन्तयते पापं स भृत्योऽर्हो महीभुजाम्" पञ्चतं०।

**दण्डिन् ದಂಡಿನ್** (ಪುಂ) 1. ದ್ವಾರಪಾಲಕ, ಕಾವಲುಗಾರ. दण्डोऽस्यास्ति "इनिः" (५-२-११५)। 2. ಯಮಧರ್ಮರಾಯ. 3. ಸೂರ್ಯನ ಒಬ್ಬ ಅನುಚರ. 4. ದಂಡಿಕವಿ, ದಶಕುಮಾರಚರಿತ ಕಾವ್ಯಾದರ್ಶ ಮೊದಲಾದುವುಗಳನ್ನು ರಚಿಸಿದ ಕವಿ. 5. ಯತಿ, ಸಂನ್ಯಾಸಿ. 6. ಶಿವ, ಪರಮೇಶ್ವರ. 7. ರಾಜ, ದೊರೆ. 8. ಧೃತರಾಷ್ಟ್ರನ ಒಬ್ಬ ಮಗ. 9. ದೋಣಿ ಹಡಗುಗಳಿಗೆ ಹುಟ್ಟುಹಾಕುವವನು. (ವಿಂ) 10. ಕೋಲು ಹಿಡಿದಿರುವವನು. स्त्रियाम् "ङीप्" (४-१-५)। **–नी –ನೀ.**

**दण्डोद्यम ದಂಡೋದ್ಯಮ** (ಪುಂ) ಕೋಲನ್ನು ಮೇಲಕ್ಕೆ ಎತ್ತುವುದು, ಒಬ್ಬನನ್ನು ಹೊಡೆಯಲು ದಂಡವನ್ನು ಹಿಡಿದೆತ್ತುವುದು. दण्डस्य उद्यमः। "विप्रदण्डोद्यमे कृच्छ्रस्त्वतिकृच्छ्रो निपातने" याज्ञ० ३-२९२।

**दण्ड्य ದಂಡ್ಯ** (ವಿಂ) 1. ಶಿಕ್ಷಿಸಲ್ಪಡುವ. दण्ड्यते–दण्ड (दण्डनिपातने) + णिच् "ण्यत्" (३-१-१२४)। 2. ಶಿಕ್ಷೆಗೆ ಅರ್ಹನಾದ, ಶಿಕ್ಷೆಯನ್ನು ವಿಧಿಸಲು ತಕ್ಕವನಾದ. दण्डमर्हति – दण्ड "यत्" (५-१-६६)। "स्थित्यै दण्डयतो दण्डयान् परिणेतुः प्रसूतये" रघु० १-२५।

**दत्त ದತ್ತ** (ಪುಂ) 1. ಹನ್ನೆರಡು ವಿಧ ಪುತ್ರರಲ್ಲೊಬ್ಬ. **ಹನ್ನೆರಡು ವಿಧ ಪುತ್ರರು:** "औरसः क्षेत्रजश्चैव दत्तः कृत्रिम एव च। गूढोत्पन्नोऽपविद्धश्च दायादा बान्धवाश्च षट्॥ कानीनश्च सहोढश्च क्रीतः पौनर्भवस्तथा। स्वयंदत्तश्च शौद्रश्च षडदायादबान्धवाः" मनु० ९-१५९, ६०। 2. ದತ್ತಾತ್ರೇಯ. ಪುತ್ರಾರ್ಥಿಯಾಗಿ ತಪಸ್ಸುಮಾಡಿದ ಅತ್ರಿಮಹರ್ಷಿಗೆ ತ್ರಿಮೂರ್ತಿ (ಬ್ರಹ್ಮವಿಷ್ಣುಮಹೇಶ್ವರರು) ಗಳು ತಮ್ಮ ಒಬ್ಬೊಬ್ಬರ ಅಂಶದಿಂದಲೂ ಒಬ್ಬೊಬ್ಬ ಮಗನು ಹುಟ್ಟುವಂತೆ ಅನುಗ್ರಹಿಸಿದರು. ಬ್ರಹ್ಮನ ಅಂಶದಿಂದ ಚಂದ್ರ, ವಿಷ್ಣುವಿನ ಅಂಶದಿಂದ ದತ್ತಾತ್ರೇಯ, ಮಹೇಶ್ವರನ ಅಂಶದಿಂದ ದುರ್ವಾಸಮುನಿ ಇವರು ಜನಿಸಿದರು. "अत्रेः पत्न्यनसूया त्रीन् जज्ञे सुयशसः सुतान्। दत्तं दुर्वाससं सोममात्मेशब्रह्मसंभवान्" भाग० ४-१-१५। 3. ಹೆಸರಿನ ಮುಂದೆ ಇಟ್ಟುಕೊಳ್ಳುವ ಒಂದು ಪದ. यज्ञदत्तः, देवदत्तः, ब्रह्मदत्तः ಇತ್ಯಾದಿ. 4. "देवदत्त" ಪದದ ಒಂದು ರೂಪ. (वा० ५-३-८३)। ["दत्तिक" ಪದದಲ್ಲಿ ನೋಡಿ]. 5. ಕಳೆದ ಉತ್ಸರ್ಪಿಣೀ ಕಾಲದ 8ನೆಯ ತೀರ್ಥಂಕರರು. (ನಂ) 6. ದಾನ, ಕೊಡುಗೆ. डु दाञ् (दाने) भावे "क्तः" (३-३-११४)। दा इत्यस्य "दथ्" आदेशः (७-४-४६)। "इदं हि पुंसस्तपसः श्रुतस्य वा स्विष्टस्य सूक्तस्य च बुद्धिदत्तयोः" भाग० १-५-२२। (ವಿಂ)7. ಕೊಡಲ್ಪಟ್ಟ, ದಾನಮಾಡಲ್ಪಟ್ಟ. "दत्तमात्तमदनं दयितेन व्याप्तमातिशयिकेन रसेन" माघ० १०-२३।

**दत्तक ದತ್ತಕ** (ಪುಂ) ಸ್ವೀಕೃತ ಪುತ್ರ, ದತ್ತಪುತ್ರ. दत्त स्वार्थे "कन्" (५-४-५)। ತಾಯಿತಂದೆಗಳಿಬ್ಬರೂ ಸಮ್ಮತಿಸಿ ಪುತ್ರನಿಲ್ಲದವನಿಗೆ ಕೊಡುವ ಪುತ್ರನು ದತ್ತಕ ಪುತ್ರನು. "दद्यान्माता पिता वा यं स पुत्रो दत्तको भवेत्" याज्ञ० २-१३०।

**दत्तात्मन् ದತ್ತಾತ್ಮನ್** (ಪುಂ) ತಾಯಿತಂದೆಗಳಿಂದ ತ್ಯಜಿಸಲ್ಪಟ್ಟು ತಾನಾಗಿಯೇ ಒಬ್ಬನಿಗೆ ದತ್ತಪುತ್ರನಾಗುವವನು, ನಾನು ನಿನಗೆ ಪುತ್ರನಾಗಿರುವೆನೆಂದು ತಾನೇ ಹೇಳಿ ಬಂದ ತಾಯಿತಂದೆಗಳಿಲ್ಲದವನು. ಇವನಿಗೆ "**ಸ್ವಯಂದತ್ತ**" ಎಂದು ಹೆಸರು. ಹನ್ನೆರಡು ಮಂದಿ ಪುತ್ರರಲ್ಲಿ ಇವನೊಬ್ಬನು. "दत्त" ಪದದಲ್ಲಿ ನೋಡಿ. "दत्तात्मा तु स्वयंदत्तो गर्भे विन्नः सहोढजः" याज्ञ० २-१३१। "माता-

पितृविहीनो यः त्यक्तो वा स्यादकारणात्। आत्मानं स्पर्शयेदस्मै स्वयंदत्तस्तु स स्मृतः" मनु० ९-१७७।

**दत्तात्रेय ದತ್ತಾತ್ರೇಯ**(पुं०)ಅತ್ರಿಮಹರ್ಷಿಗೆ ಅನಸೂಯಾ ಗರ್ಭದಲ್ಲಿ ಜನಿಸಿದ ಒಬ್ಬ ಮಗ. ["दत्त" ಪದದಲ್ಲಿ ನೋಡಿ.] ದತ್ತಾತ್ರೇಯನು ಬ್ರಹ್ಮಚಾರಿಯಾಗಿದ್ದು ಅಲರ್ಕನಿಗೆ ಆನ್ವೀಕ್ಷಿಕೀ ವಿದ್ಯೆಯನ್ನು ಹೇಳಿಕೊಟ್ಟು ಪ್ರಹ್ಲಾದಾದಿಗಳಿಗೆ ಜ್ಞಾನೋಪದೇಶ ಮಾಡಿದನು. "षष्ठमत्रेरपत्यत्वं वृतः प्राप्तोऽनसूयया। आन्वीक्षिकीमलर्काय प्रह्लादादिभ्य ऊचिवान्" भाग०।

**दत्तानपकर्मन् ದತ್ತಾನಪಕರ್ಮನ್**(न०)ದಾನಮಾಡಿದುದನ್ನು ಹಿಂತಿರುಗಿಸಿಕೊಳ್ಳುವುದು, ದಾನ ತೆಗೆದುಕೊಂಡವನು ಯೋಗ್ಯನಲ್ಲವೆಂದು ತಿಳಿದು ದಾನಮಾಡಿದುದನ್ನು ಹಿಂದಕ್ಕೆ ತೆಗೆದುಕೊಳ್ಳುವುದು. दत्तस्यानपकर्म। "सम्भूय च समुत्थानं दत्तस्यानपकर्म च" मनु० ८-४।

**दत्तापहार ದತ್ತಾಪಹಾರ** (पुं०) ದಾನಮಾಡಿದುದನ್ನು ಹಿಂದಕ್ಕೆ ಕಸಿದುಕೊಳ್ಳುವುದು. दत्तस्यापहारः।

**दत्तापहृत ದತ್ತಾಪಹೃತ** (वि०) ದಾನಮಾಡಿ ಹಿಂದಕ್ಕೆ ತೆಗೆದುಕೊಳ್ಳಲ್ಪಟ್ಟ. दत्तं च तत् अपहृतं च।

**दत्ताप्रदानिक ದತ್ತಾಪ್ರದಾನಿಕ** (न०) ದಾನ ತೆಗೆದುಕೊಂಡವನು ಯೋಗ್ಯನಲ್ಲವೆಂದಾಗಲಿ ಕೋಪದಿಂದಾಗಲಿ ದಾನಮಾಡಿದ ವಸ್ತುವನ್ನು ಹಿಂದಕ್ಕೆ ತೆಗೆದುಕೊಳ್ಳುವುದು. ಅಷ್ಟಾದಶ ವ್ಯವಹಾರಗಳಲ್ಲಿ ಇದೊಂದು ಭೇದ. दत्तस्य अशास्त्रीयमार्गेण दत्तत्वात् पुनराप्रदानं ग्रहणमस्त्यस्य "ठन्" (५-२-११५)। "दाता प्रतिग्रहीता च श्रद्धा देयं च धर्मयुक्। देशकालौ च दानानामङ्गान्येतानि षड्विदुः"। ಈ ಆರರಲ್ಲಿ ಯಾವುದೊಂದು ನ್ಯೂನವಾದರೂ ದಾನವು ಅಶಾಸ್ತ್ರೀಯವಾಗುವುದು.

**दत्ति ದತ್ತಿ** (स्त्री०) ದಾನ, ಕೊಡುಗೆ. डु दाञ् (दाने) "क्तिन्" (३-३-९४)।

**दत्तिक ದತ್ತಿಕ** (पुं०) 1. ದೇವದತ್ತ. 2. ಯಜ್ಞದತ್ತ. ಮನುಷ್ಯವಾಚಕವಾದ ಬಹ್ವಚ್ ವರ್ಣಗಳುಳ್ಳ ಶಬ್ದಗಳಿಗೆ ಈ ಕೆಳಗೆ ಕಂಡ ಪ್ರತ್ಯಯಗಳು ಬಂದು ಅನೇಕ ರೂಪಗಳಾಗುವುವು. देवदत्त यज्ञदत्त अनुकम्पायां वा "ठच्" पूर्वपदलोपश्च (वा० ५-३-७८, ५-३-८३)। पक्षे "कः" च (५-३-७६)। **दत्तकः ದತ್ತಕಃ** पक्षे "घन्" "इलच्" च (५-३-७८)। **दत्तियः ದತ್ತಿಯಃ, दत्तिलः ದತ್ತಿಲಃ.** ಠಚ್ ಮತ್ತು ಅಜಾದಿ ಪ್ರತ್ಯಯ ಪರವಾದಾಗ ದ್ವಿತೀಯ ವರ್ಣದ ಮುಂದಿನ ವರ್ಣಗಳು ಲುಪ್ತವಾಗುವುವು. (५-३-८३)। ठचि—**देविकः ದೇವಿಕಃ**, घनि —**देवियः ದೇವಿಯಃ**, इलचि—**देविलः ದೇವಿಲಃ**. ಅಜಾದಿಯಲ್ಲದ "क" ಪ್ರತ್ಯಯ ಪರವಾದಾಗ ವಿಕಲ್ಪವಾಗಿ ಲೋಪ ಬರುವುದು. (वा० ५-३-८३)। **देवदत्तकः ದೇವದತ್ತಕಃ, देवकः ದೇವಕಃ.** "ठच्" ಮೊದಲಾದ ಪ್ರತ್ಯಯಗಳು ಬಾರದಿದ್ದರೂ ವಿಕಲ್ಪವಾಗಿ ಪೂರ್ವೋತ್ತರ ಪದಗಳಿಗೆ ಲೋಪ ಬರುವುದು. **देवदत्तः ದೇವದತ್ತಃ, दत्तः ದತ್ತಃ, देवः ದೇವಃ** (वा० ५-३-८३)। ಈ ಮೇಲೆ ಹೇಳಿದ ಎಲ್ಲಾ ಪದಗಳೂ ದೇವದತ್ತ ವಾಚಕಗಳಾಗುವುವು. ಹೀಗೆಯೇ ಯಜ್ಞದತ್ತ ಪದದ ರೂಪಗಳೂ ಆಗುವುವು.

**दत्तेय ದತ್ತೇಯ** (पुं०) 1. ಇಂದ್ರ. 2. ದತ್ತಮಗಳ ಮಗ. दत्ताया अपत्यम् "ढक्" (४-१-१२०)।

**दत्तोलि ದತ್ತೋಲಿ** (पुं०) ಪುಲಸ್ತ್ಯಮಹರ್ಷಿ.

**दत्त्रिम ದತ್ತ್ರಿಮ** (पुं०)1. ದತ್ತಪುತ್ರ, ದಾನಮಾಡಲ್ಪಟ್ಟ ಪುತ್ರ. दानेन निर्वृत्तः—डु दाञ् (दाने) "क्त्रिः" (३-३-८८)। "मप्" (४-४-२०)। "माता पिता वा दद्यातां यमद्भिः पुत्रमापदि। सदृशं प्रीतिसंयुक्तं स ज्ञेयो दत्त्रिमः सुतः" मनु० ९-१६८। (वि०)2. ದಾನದಿಂದ ಲಬ್ಧವಾದ, ಕೊಡುಗೆಯಿಂದ ಉಂಟಾದ. दानेन निर्वृत्तम् — डु दाञ् (दाने) "क्त्रिः" (३-३-८८)। "मप्" (४-४-२०)। "निष्ठां गते दत्त्रिमसभ्यतोषे विहित्रिमे कर्मणि राजपत्न्यः" भट्टि० १-१३।

**दद —दाने** (भ्वा० आत्म० सक० से०)। ददते। ददढे। ददिता। ददिष्यते। ददताम्। अददत। ददेत। ಇತ್ಯಾದಿ. ಕೊಡು, ದಾನಮಾಡು. "दुद्दादं ददते दुद्दे" माघ० १९-११४।

**कर्मणि** :—दद्यते। दद्यताम्। दद्येत। अदादि। अददिष्यत। ಇತ್ಯಾದಿ.

**णिचि** :—दादयति, —ते। दादयां चकार, —चक्रे, —बभूव, —आस। दादयिता। दादयतु, —ताम्। ಇತ್ಯಾದಿ.

**कृत्सु** :—ददितव्यम्। ददनीयम्। दाद्यम्। ददितः, ददितवान्, —वती। ददमानः। ददितम्। ददनम्। ಇತ್ಯಾದಿ.

**दद ದದ** (वि०) ದಾನಮಾಡುವವನು, ಕೊಡುವವನು. दद (दाने) "शः" (३-१-१३९)। "दुद्दादं ददद्दे दुद्दे ददादददादोऽददः" माघ० १९-११४।

**ददत् ದದತ್** (वि०) ಕೊಡುವ, ದಾನಮಾಡುವ. डु दाञ् (दाने) "शतृ" (३-२-१२४)। "ददतमन्तरिता-

हिमदीधिति खगकुलस्य कुलायनिलायिताम्" माघ० ६-४१। स्त्रियाम् "ङीप्" (४-१-६)। **ददती ದದತೀ.**

**ददन ದದನ** (न०) ದಾನ, ಕೊಡುವುದು. दद (दाने) "ल्युट्" (३-३-११५)।

**ददमान ದದಮಾನ** (वि०) ಕೊಡುತ್ತಿರುವ, ದಾನಮಾಡು ತ್ತಿರುವ. दद (दाने) "शानच्" (३-२-१२४)।

**ददान ದದಾನ**(वि०)ಕೊಡುತ್ತಿರುವ, ದಾನಮಾಡುತ್ತಿರುವ. डु दाञ् (दाने) "शानच्" (३-२-१२४)। "ददानया दिक्सरितां प्रसादं प्रसक्तहंसागमया स्वकान्त्या" याद० २-७६।

**ददितृ ದದಿತೃ** (वि०) ದಾನಮಾಡುವವನು, ಕೊಡುವವನು. दद (दाने) "तृच्" (३-१-१३३)।

**ददृत् ದದೃತ್** (वि०) ಒಡೆದುಹಾಕುವ, ಭೇದಿಸುವ. दीर्यति — दृ (भये) "क्विप्" (वा० ३-२-१७८)। ह्रस्वश्च।

**दद्रु ದದ್ರು** (पुं०) ನವೆಯನ್ನುಂಟುಮಾಡುವ ಹುಳುಕಡ್ಡಿ ಯೆಂಬ ಒಂದು ವ್ರಣ. ददते कण्डूम् — दद (दाने) "रु:" बाहु०।

**दद्रुक ದದ್ರುಕ** (पुं०) ಹುಳುಕಡ್ಡಿಯೆಂಬ ವ್ರಣ. दद्रु स्वार्थे "कन्" (५-४-५)।

**दद्रुघ्न ದದ್ರುಘ್ನ** (पुं०) ತಗಟೆ ಗಿಡ, ತಗಸಿಕೆ ಗಿಡ. दद्रुं हन्ति — हन (हिंसागत्योः) "टक्" (३-२-५३)। "दद्रुघ्नश्चक्रमर्दकः" अम०।

**दद्रुण ದದ್ರುಣ** (वि०) ದದ್ರು ರೋಗವುಳ್ಳವನು, ಹುಳು ಕಡ್ಡಿಯ ರೋಗದಿಂದ ಕೂಡಿದವನು. दद्रुरस्यास्ति—दद्रु / पामादि० "न:" (५-२-१००)।

**दद्रू ದದ್ರೂ** (स्त्री०) ಹುಳುಕಡ್ಡಿ. दरिद्रा (दुर्गतौ) "ऊ:" (उ० १-९०)। इकाराकारलोपश्च।

**दधत् ದಧತ್** (वि०) ಧರಿಸಿರುವ, ಹೊಂದಿರುವ, ಹೊತ್ತಿ ರುವ. डु धाञ् (धारणपोषणयोः) "शतृ" (३-२-१३४)। "दधत्सन्ध्यारुणव्योमस्फुरत्तारानुकारिणी:" माघ० २-१८। स्त्रियाम् "ङीप्" (४-१-६) **दधती ದಧತೀ.** "गतया पुरः प्रति गवाक्षमुखं दधती रतेन भृशमुत्सुकताम्" माघ० ९-२।

**दधान ದಧಾನ** (वि०) ಧರಿಸಿರುವ, ಹೊಂದಿರುವ. डु धाञ् (धारणपोषणयोः)"शानच्"(३-२-१२४)। "दधानमम्भोरुहकेसरद्युतीर्जटाः शरच्चन्द्रमरीचिरोचिषम्" माघ० १-५। स्त्रियाम् "टाप्" (४-१-४)। **दधाना ದಧಾನಾ.** "दधानया नेत्रसुखैकसत्रं पुत्रं पवित्रं सुतया तयाद्रेः" कुमा० ११-२९।

**दधि ದಧಿ** (न०) 1. ಗಟ್ಟಿ ಮೊಸರು, ಹೆಪ್ಪುಗಟ್ಟಿದ ಮೊಸರು. दधाति — डु धाञ् (धारणपोषणयोः) "कि:" (वा० ३-२-१७१)। "तरुणं सर्षपशाकं नवोदनं पिच्छिलानि च दधीनि" वृ० र०। 2. ಹಾಲುಮಡ್ಡಿ, 3. ವಸ್ತ್ರ, ಬಟ್ಟೆ. "दधि गोरसभेदे स्यात्तथा श्रीवासवासयो:" हेम०। (वि०) 4. ಧರಿಸಿರುವ, ಧಾರಣ ಮಾಡಿರುವ.

**दधिकूर्चिका ದಧಿಕೂರ್ಚಿಕಾ** (स्त्री०) ಮೊಸರಿನೊಡನೆ ಸೇರಿಸಿ ಪಕ್ವಮಾಡಿದ ಹಾಲು. "दध्ना सह पय: पक्वं यत् स्यात् सा दधिकूर्चिका"।

**दधिचार ದಧಿಚಾರ** (पुं०) ಮಂತು, ಕಡೆಗೋಲು. दधि चारयति — चर (गतौ) + णिच् "अण्" (३-२-१)।

**दधिज ದಧಿಜ** (न०) ಬೆಣ್ಣೆ. दध्नो जायते — जनी (प्रादुर्भावे) "ड:" (३-१-९८)।

**दधित्थ ದಧಿತ್ಥ** (पुं०)ಬೇಲದ ಮರ. दधिवर्णस्तिष्ठत्यत्र— ष्ठा (गतिनिवृत्तौ) "क:" (३-२-४)। पृषो०।

**दधिफल ದಧಿಫಲ** (पुं०) ಬೇಲದ ಮರ. दधीव द्रव: फलेऽस्य।

**दधिमण्ड ದಧಿಮಂಡ** (पुं०) ಮೊಸರಿನ ಕೆನೆ.

**दधिमुख ದಧಿಮುಖ** (पुं०) ಸುಗ್ರೀವನ ಮಧುವನವನ್ನು ರಕ್ಷಿಸುತ್ತಿದ್ದ ಒಬ್ಬ ವಾನರ.

**दधिवामन ದಧಿವಾಮನ** (पुं०) ಸಾಲಗ್ರಾಮ ಮೂರ್ತಿ ಗಳಲ್ಲಿ ವಾಮನ ಮೂರ್ತಿ. "अतिक्षुद्रं द्विचक्रं च नवीननीरदोपमम्। दधिवामनकं ज्ञेयम् गृहिणाञ्च सुखप्रदम्"।

**दधिशोण ದಧಿಶೋಣ** (पुं०) ವಾನರ, ಕಪಿ.

**दधिसक्तु ದಧಿಸಕ್ತು** (पुं० ब० व०) ಮೊಸರಿನೊಡನೆ ಬೆರೆತಿರುವ ಹುರಿಹಿಟ್ಟು, ಮೊಸರಿನಲ್ಲಿ ಕಲೆಸಿದ ಹುರಿಹಿಟ್ಟು. दध्युपसिक्ता: सक्तव:।

**दधिसमुद्र ದಧಿಸಮುದ್ರ** (पुं०) ಸಪ್ತಸಮುದ್ರಗಳಲ್ಲಿ ಒಂದು.

**दधिसार: ದಧಿಸಾರಃ** (पुं०) ನವನೀತ, ಬೆಣ್ಣೆ. दध्न सार:।

**दधीच ದಧೀಚ**(पुं०) ದಧೀಚಮಹರ್ಷಿ, ಅಥರ್ವಋಷಿಯ ಮಗ. [ಈ ಮಹರ್ಷಿಯು ಇಂದ್ರನ ಪ್ರಾರ್ಥನೆಯಂತೆ ಪ್ರಾಣವನ್ನು ತ್ಯಜಿಸಿ ತನ್ನ ಎಲುಬುಗಳನ್ನು ಅವನಿಗೆ ಕೊಟ್ಟನು. ಇಂದ್ರನು ಅವುಗಳಿಂದ ವಜ್ರಾಯುಧವನ್ನು

ತಯಾರಿಸಿ ಎಲ್ಲಾ ಅಸುರರನ್ನೂ ಸಂಹರಿಸಿದನು. "ऋतेऽस्थिभिर्दधीचस्य न हन्तुं त्रिदशद्विषः। तस्माद्गत्वा ऋषिश्रेष्ठो याच्यतां सुरसत्तमाः। दधीचास्थीनि देहीति तैर्वधिष्यामहे रिपून्। स च तैर्याचितोऽस्थीनि यत्नात् ऋषिवरस्तदा। साहाय्यं नः कुरुष्वेति चकारैवाविचारयन्। तस्यास्थिभिरथो शक्रः संप्रहृष्टमनास्तदा। कारयामास दिव्यानि नानाप्रहरणान्युत। गदा वज्राणि चक्राणि गुरून् दण्डांश्च पुष्कलान्। तेन वज्रेण भगवान् मन्त्रयुक्तेन भारत। दैत्यदानववीराणां जघान नवतीर्नव" भा० शल्य० ५२।

**दधृक् ದಧೃಕ್** (वि०) ಧೃಷ್ಟನಾದ, ಧೈರ್ಯಶಾಲಿಯಾದ. धृष (प्रसहने) "क्विन्" (३-२-५९)। "अभ्यभून्निलयं भ्रातुः सुग्रीवो निनदन् दधृक्" भट्टि० ६-११७।

**दध्यन्न ದಧ್ಯನ್ನ** (न०) ಮೊಸರಿನಲ್ಲಿ ಕಲಸಿದ ಅನ್ನ. दध्ना (उपसिक्तम्) अन्नम्—"अन्नेन व्यञ्जनम्" (२-१-३४)। इति समासः। ಹೀಗೆಯೇ **दध्योदनम् ದಧ್ಯೋದನಮ್.** ಇತ್ಯಾದಿ.

**दध्याकर ದಧ್ಯಾಕರ** (पुं०) ದಧಿಸಮುದ್ರ.

**दनायु ದನಾಯು** (पुं०) ಒಬ್ಬ ದಾನವ. ದನುವಿನ ಮಗ.

**दनायुस् ದನಾಯುಸ್** (स्त्री०) ದಕ್ಷಪ್ರಜಾಪತಿಯ ಒಬ್ಬ ಮಗಳು, ಕಶ್ಯಪನ ಪತ್ನಿ. विक्षरः बलः वीरः वृत्रः ಎಂಬ ನಾಲ್ವರು ಇವಳ ಮಕ್ಕಳು. "दनायुषः पुनः पुत्राश्चत्वारोऽसुरपुङ्गवाः। विक्षरो बलवीरौ च वृत्रश्चैव महासुराः" भा० आदि० ६६-३३।

**दनु ದನು** (पुं०) 1. ಶ್ರೀ ಎಂಬ ಒಬ್ಬ ಅಪ್ಸರಸ್ಸಿನ ಮಗ. [ಈತನು ಸ್ಥೂಲಶಿರಸ್ಸೆಂಬ ಋಷಿಯ ಶಾಪದಿಂದ ರಾಕ್ಷಸನಾದನು. ಇಂದ್ರನ ಬಾಣಪ್ರಹಾರದಿಂದ ಕಬಂಧನಾದನು. ಅನಂತರ ಇವನಿಗೆ "ದನುಕಬಂಧ" ಎಂದು ಹೆಸರಾಯಿತು. "दनुर्नाम श्रियः पुत्रः शापाद्राक्षसतां गतः। इन्द्रास्त्रकृतकाबन्ध्यः पूतोऽस्मि भवदाश्रयात्" म० वी० ५-३४। "तदनु दनुकबन्धेनादरादर्थितौ तौ" चं० रा० ३। (स्त्री०) 2. ದಕ್ಷಬ್ರಹ್ಮನ ಒಬ್ಬ ಮಗಳು, ಕಶ್ಯಪನ ಪತ್ನಿ. ದಕ್ಷಪ್ರಜಾಪತಿಯ ಹದಿಮೂರು ಮಂದಿ ಹೆಣ್ಣು ಮಕ್ಕಳಲ್ಲಿ ಇವಳೊಬ್ಬಳು. ಇವಳು ದಾನವರ ತಾಯಿ. "प्रजज्ञिरे महाभागा दक्षकन्यास्त्रयोदश। अदितिर्दितिर्दनुः काला दनायुः सिंहिका तथा। क्रोधा प्राधा च विश्वा च विनता कपिला मुनिः। कद्रूश्च मनुजव्याघ्र दक्षकन्यैव भारत" भा० आदि० ६६।

**दनुज ದನುಜ** (पुं०) ದನುವಿನ ಮಗ ದಾನವ. दनोर्जायते—जनी (प्रादुर्भावे) "डः" (३-२-९८)। "जगदेकहितेन जन्मनासौ दनुजैराक्रमणं भुवो निरुन्धन्" याद० १५-६।

**दनुजद्विष् ದನುಜದ್ವಿಷ್** (पुं०) ದೇವತೆ. दनुजान् द्वेष्टि—द्विष (अप्रीतौ) "क्विप्" (३-२-७६)। **-अरिः -ಅರಿಃ, -रिपुः -ರಿಪುಃ, -शत्रुः -ಶತ್ರುಃ,** ಇತ್ಯಾದಿ. "मुषिताम्बरमस्त्रशस्त्रभूम्ना दनुजारेर्दमघोषजन्मनश्च" याद० १५-१२१।

**दनुतनय ದನುತನಯ, -सुतः -ಸುತಃ, -सूनुः -ಸೂನುಃ** (पुं०) ದನುವಿನ ಮಗ, ಅಸುರ.

**दन्त ದಂತ** (पुं०) 1. ರದನ, ಹಲ್ಲು. दाम्यति—दमु (उपशमे) "तन्" (उ० ३-८६)। "दन्तानामधरमयावकं पदानि प्रत्यग्रास्तनुमविलेपनां नखाङ्काः" माघ० ८-५५। 2. ಆನೆಯ ದಂತ, ಆನೆಯ ಕೊಂಬು, ಗಜದಂತ. "दन्ता दन्तैराहताः सामजानां भङ्गं जग्मुर्न स्वयं सामजाताः" माघ० १८-३३। 3. ಗಿಡ ಬಳ್ಳಿಗಳ ಪೊದರು. "दन्तोज्ज्वलासु विमलोपलमेखलान्ताः सद्रत्नचित्रकटकासु बृहन्नितम्बाः" माघ० ४-४०। 4. ಪರ್ವತದ ನಿತಂಬಪ್ರದೇಶ, ಬೆಟ್ಟದ ತಪ್ಪಲು ಪ್ರದೇಶ. 5. ಪರ್ವತದ ಶೃಂಗ, ಬೆಟ್ಟದ ಶಿಖರ. 6. ಮೂವತ್ತೆರಡು ಸಂಖ್ಯೆ. (स्त्री०) 7. ಓಷಧಿಯ ಒಂದು ಭೇದ. "दशने शैलशृङ्गे च दन्तः स्याद्दोषधौ स्त्रियाम्" त्रिकाण्ड०। "दन्तोऽद्रिकटके कुञ्जे" मेदि०।

**दन्तक ದಂತಕ** (पुं०) 1. ದಂತ, ಹಲ್ಲು. ಮೊದಲಾದ "दन्त" ಪದದ ಅರ್ಥ. दन्त स्वार्थे "कः"। 2. ಶೈಲದ ಶೃಂಗ, ಪರ್ವತದ ಶಿಖರ, ಬೆಟ್ಟದ ತುದಿ. 3. ಮುಂದಕ್ಕೆ ಚಾಚಿಕೊಂಡಿರುವ ಬಂಡೆ. (वि०) 4. ದಂತಗಳ ವಿಷಯದಲ್ಲಿ ಹೆಚ್ಚು ಗಮನಕೊಡುವ, ಹಲ್ಲುಗಳ ರಕ್ಷಣೆಯಲ್ಲಿ ಉತ್ಸುಕನಾದ. दन्तेषु प्रसितः "कन्" (५-१-६६)।

**दन्तकर्षण ದಂತಕರ್ಷಣ** (पुं०) ನಿಂಬೆಹಣ್ಣು.

**दन्तकार ದಂತಕಾರ** (पुं०) ದಂತದ ಕೆಲಸಮಾಡುವವನು.

**दन्तकाष्ठ ದಂತಕಾಷ್ಠ** (न०) ಹಲ್ಲನ್ನು ಉಜ್ಜಿ ಶುದ್ಧ ಮಾಡುವ ಕಡ್ಡಿ. दन्तधावनार्थं काष्ठम्।

**दन्तच्छद ದಂತಚ್ಛದ** (पुं०) ಅಧರ. ತುಟಿ. दन्ताश्छाद्यन्तेऽनेन—छद (संवरणे) + णिच् "घः" (३-३-११८)। "दन्तच्छदारुणिमरञ्जितदन्तमालम्" मालती० ९-३१।

**दन्तजात ದಂತಜಾತ** (पुं०) ಹಲ್ಲು ಹುಟ್ಟಿದ ಶಿಶು. जातो दन्तोऽस्य। परनिपा०। "दन्तजातेऽनुजाते च कृतचूडे च संस्थिते" मनु० ५-५८।

**दन्तजाह ದಂತಜಾಹ** (न०) ಹಲ್ಲಿನ ಬುಡ, ಹಲ್ಲಿನ ಬೇರು; दन्तस्य मूलम् "जाहच्" (५-२-२४)।

**दन्तधावन ದಂತಧಾವನ** (पुं०) 1. ಕಗ್ಗಲಿಮರ, ಖದಿರ ವೃಕ್ಷ. दन्तान् धावयति – धावु (गतिशुद्धयो:) + णिच् "ल्यु:" (३-१-१३४)। "खदिरो दन्तधावन:" अम०। 2. ಹೊಂಗೆಮರ. 3. ವಕುಳವೃಕ್ಷ (न०) 4. ಹಲ್ಲನ್ನು ಉಜ್ಜಿ ಶುದ್ಧಮಾಡುವುದು. दन्तानां धावनम् – धावु भावे "ल्युट्" (३-३-११५)।

**दन्तपत्र ದಂತಪತ್ರ** (न०) ದಂತಾಕಾರದ ಪತ್ರವುಳ್ಳ ಒಂದು ಕಿವಿಯ ಆಭರಣ. दन्त इव पत्रमस्य। "विलासिनीविभ्रमदन्तपत्रम्" रघु०। "कर्णविसक्तामलदन्तपत्रं माता तदीयं मुखमुन्नमय्य" कुमा० ७-२३।

**दन्तपत्रक ದಂತಪತ್ರಕ** (न०) ಕುಂದಪುಷ್ಪ, ಮೊಲ್ಲೆಹೂವು. दन्त इव पत्रमस्य।

**दन्तपत्रिका ದಂತಪತ್ರಿಕಾ** (स्त्री०) ದಂತದ ಆಕಾರದ ಎಲೆಗಳುಳ್ಳ ಒಂದು ಕಿವಿಯ ಆಭರಣ. "विदग्धलीलोचितदन्तपत्रिकाविधित्सया नूनमनेन मानिना" माघ० १-६०।

**दन्तपवन ದಂತಪವನ** (न०) 1. ಹಲ್ಲನ್ನು ಉಜ್ಜುವ ಕಡ್ಡಿ. दन्तं पुनात्यनेन—पूञ् (पवने) कर० "ल्युट्" (३-३-११७)। 2. ಹಲ್ಲನ್ನು ಉಜ್ಜಿ ಶುದ್ಧಮಾಡುವುದು. दन्तस्य पवनम्—पूञ् भावे "ल्युट्" (३-३-११५)।

**दन्तपात ದಂತಪಾತ** (पुं०) ಹಲ್ಲು ಬೀಳುವುದು. दन्तस्य पात:।

**दन्तपाली ದಂತಪಾಲೀ** (स्त्री०) ಬಾಯಲ್ಲಿ ಹಲ್ಲುಗಳು ನಿಂತಿರುವ ಗಟ್ಟಿ ಮಾಂಸ, ಒಸಡು. दन्तानां पाली। ಹಲ್ಲಿನ ಬುಡದ ಒಸಡು ಕೆಂಪಗಿದ್ದರೆ ಪುರುಷನು ಯಾವಾಗಲೂ ಸಂತೋಷವುಳ್ಳವನಾಗಿಯೂ ಐಶ್ವರ್ಯವಂತನಾಗಿಯೂ ಪತ್ನೀಪುತ್ರರುಳ್ಳವನಾಗಿಯೂ ಇರುವನು. "तालवोष्ठदन्तपालीजिह्वानेत्रान्तपायुकरचरणै:। रक्ते तु रक्तसारा बहुसुखवनितार्थपुत्रयुता:" बृहत्सं० ६८-९७।

**दन्तपुप्पुट ದಂತಪುಪ್ಪುಟ** (पुं०) ಒಂದು ವಿಧ ದಂತ ರೋಗ. ಹಲ್ಲಿನ ಒಸಡು ಊದುವುದು ಒಸಡು ಹುಣ್ಣಾಗುವುದು ಇವು ದಂತಪುಪ್ಪುಟಕದ ಲಕ್ಷಣ. ಈ ರೋಗವು ಕಫ ಮತ್ತು ರಕ್ತ ಇವುಗಳ ದೋಷದಿಂದ ಬರುವುದು. "दन्तयोस्त्रिषु वा यस्य श्वयथु: सरुजो महान्। दन्तपुप्पुटको ज्ञेय: कफरक्तनिमित्तज:" सुश्रुत० निदान० १६-१६।

**दन्तपुष्प ದಂತಪುಷ್ಪ** (न०) 1. ಮೊಲ್ಲೆಗಿಡ. दन्त इव शुभ्रं पुष्पमस्य। 2. ಚಿಲ್ಲದ ಬೀಜ, ಅಂಟುವಾಳದ ಕಾಯಿ. 3. ಮೊಲ್ಲೆಹೂವು.

**दन्तप्रक्षालन ದಂತಪ್ರಕ್ಷಾಲನ** (न०) ಹಲ್ಲನ್ನು ಉಜ್ಜಿ ತೊಳೆಯುವುದು.

**दन्तफल ದಂತಫಲ** (पुं०) 1. ಕಪಿತ್ಥವೃಕ್ಷ, ಬೇಲದಮರ. दन्त इव शुभ्रं फलमस्य। (न०) 2. ಚಿಲ್ಲದ ಬೀಜ. (स्त्री०) –फला –ಫಲಾ. 3. ಹಿಪ್ಪಲಿ.

**दन्तभाग ದಂತಭಾಗ** (पुं०) 1. ಆನೆಯ ಕೊಂಬಿರುವ ಭಾಗ, ಆನೆಯ ಮುಖದಿಂದ ಕತ್ತಿನವರೆಗಿನ ಭಾಗ. 2. ದಂತದ ಭಾಗ.

**दन्तमांस ದಂತಮಾಂಸ** (न०) ಹಲ್ಲುಗಳ ಕೆಳಗಿನ ಗಟ್ಟಿ ಮಾಂಸ, ಒಸಡು.

**दन्तमूल ದಂತಮೂಲ** (न०) ಹಲ್ಲುಗಳ ಬುಡದಲ್ಲಿ ಉಂಟಾಗುವ ಒಂದು ರೋಗ.

**दन्तरोग ದಂತರೋಗ** (पुं०) ಮುಖರೋಗಗಳಲ್ಲೊಂದು ಭೇದ, ಒಸಡು ರೋಗ, ಒಸಡಿನ ಊತ.

**दन्तवक्त्र ದಂತವಕ್ತ್ರ** (पुं०) ಹಿರಣ್ಯಕಶಿಪುವಿನ ಮುಂದಿನ ಜನ್ಮದಲ್ಲಿ ಶ್ರುತದೇವಿಯಲ್ಲಿ ಹುಟ್ಟಿದ ಕರೂಷದೇಶದ ಒಬ್ಬ ರಾಜ. [ಇವನು ಶಿಶುಪಾಲನಿಗೆ ಆಪ್ತಮಿತ್ರ. ರಾಜಸೂಯಯಾಗದಲ್ಲಿ ಶಿಶುಪಾಲನು ಶ್ರೀಕೃಷ್ಣನಿಗೆ ನಡೆದ ಅಗ್ರಪೂಜೆಯನ್ನು ಸಹಿಸದೆ ಶ್ರೀಕೃಷ್ಣನನ್ನು ದೂಷಿಸಿ ಆವನ ಚಕ್ರಾಯುಧಕ್ಕೆ ಅಸುವನ್ನು ಅರ್ಪಿಸಿದನು. ಇದನ್ನು ಕೇಳಿದ ದಂತವಕ್ತ್ರನು ದ್ವಾರಕೆಯ ಮೇಲೆ ದಂಡೆತ್ತಿ ಬಂದು ಧಾಳಿಮಾಡುತ್ತ ರಾಜಸೂಯಯಾಗದಿಂದ ಹಿಂತಿರುಗಿ ಬಂದ ಶ್ರೀಕೃಷ್ಣನೊಡನೆ ಯುದ್ಧಮಾಡಿ ಕೌಮೋದಕಿಗೆ ಆಹುತಿಯಾಗಿ ಶ್ರೀಕೃಷ್ಣನಲ್ಲಿ ಐಕ್ಯನಾದನು.] भाग० १०-७८।

**दन्तवस्त्र ದಂತವಸ್ತ್ರ** (न०) ಅಧರ, ತುಟಿ, ಓಷ್ಠ. दन्तस्य वस्त्रमिव।

**दन्तवासस् ದಂತವಾಸಸ್** (न०) ಓಷ್ಠ, ತುಟಿ. दन्तस्य वास इव। "चिरोज्झितालक्तकपाटलेन तुलां यदारोहति दन्तवाससा" कुमा० ५-३४।

**दन्तवेष्ट ದಂತವೇಷ್ಟ** (पुं०) 1. ಒಸಡು, ದಂತಮೂಲ. "दन्तवेष्टेषु नेत्रेषु कुम्भेषु च कटेषु च" भा० कर्ण० ४६-४६। 2. ಆನೆಯ ಕೊಂಬಿಗೆ ಹಾಕುವ ಬಳೆ. 3. ದಂತ ರೋಗದ ಒಂದು ಭೇದ, ರಕ್ತ ಮತ್ತು ಕೀವು ಸುರಿಯುವ ಹಲ್ಲಿನ ಒಂದು ರೋಗ. "स्रवन्ति पूयरुधिरं चला दन्ता

भवन्ति च। दन्तवेष्टः स विज्ञेयो दुष्टशोणितसंभवः" सुश्रुत० निदान० १६-१७।

**दन्तशठ ದಂತಶಠ** (पुं०) 1. ನಿಂಬೆಗಿಡ. दन्तानां शठ इव। "स्युर्जम्बीरे दन्तशठजम्भजम्बीरजम्भलाः" अम०। 2. ಬೇಲದ ಮರ, ಕಪಿತ್ಥವೃಕ್ಷ. "तस्मिन् दधिफलः पुष्पफलदन्तशठावपि" अम०। 3. ಗಜನಿಂಬೆ ಗಿಡ. 4. ಹುಳಿಗಿಡ. (स्त्री०) **-शठा -ಶಠಾ** 5. ಪುಲ್ಲಂಪುರಿಚೆಗಿಡ. "दन्तशठः स्याज्जम्बीरे कपित्थे कर्मरङ्गके। नागरङ्गेऽपि चाङ्गेयाँ स्मृता दन्तशठा बुधैः" विश्व०।

**दन्तशर्करा ದಂತಶರ್ಕರಾ** (स्त्री०) ಹಲ್ಲಿನ ಪಾಚಿ, ದಂತ ಮಲ, ಹಲ್ಲಿನ ಕೊಳೆ.

**दन्तशाण ದಂತಶಾಣ** (पुं०) ಹಲ್ಲುಪುಡಿ, ದಂತಧಾವನ ಚೂರ್ಣ. दन्तस्य शाण इव।

**दन्तशूल ದಂತಶೂಲ** (न०) ಹಲ್ಲುನೋವು. दन्तस्य शूलमिव। "शीर्षरोगेऽक्षिरोगे च दन्तशूले गलग्रहे" भा० शान्ति० ३०९-५।

**दन्तशोफ ದಂತಶೋಫ** (पुं०) ಒಸಡಿನ ಊದಲು.

**दन्तहर्ष ದಂತಹರ್ಷ** (पुं०) ದಂತರೋಗದ ಒಂದು ಭೇದ, ಶೀತೋಷ್ಣಗಳೆರಡನ್ನೂ ತಡೆಯಲಾರದ ಮತ್ತು ಮುಟ್ಟಲೂ ಆಗದಂತಹ ಹಲ್ಲಿನ ಒಂದು ವ್ಯಾಧಿ. "दशनाः शीतमुष्णं च सहन्ते स्पर्शनं न च। यस्य तं दन्तहर्षन्तु व्याधिं विद्यात् समीरणात्" सुश्रुत० निदान० १६-३०।

**दन्तहर्षक ದಂತಹರ್ಷಕ** (पुं०) ನಿಂಬೆಗಿಡ. दन्तान् हर्षयति—हृष (हृष्टौ) + णिच् "ण्वुल्" (३-१-१३३)।

**दन्ताग्र ದಂತಾಗ್ರ** (न०) ಹಲ್ಲಿನ ತುದಿ.

**दन्ताग्रीय ದಂತಾಗ್ರೀಯ** (वि०) ದಂತದ ತುದಿಯಲ್ಲಿ ರುವ, ಹಲ್ಲಿನ ತುದಿಯಲ್ಲಿ ಉಂಟಾದ. दन्ताग्र "छः" (४-२-१३८)।

**दन्ताघात ದಂತಾಘಾತ** (पुं०) ಹಲ್ಲಿನ ಏಟು, ಹಲ್ಲಿನಿಂದ ಕಚ್ಚುವುದು. दन्तैराहन्यते—आ+हन (हिंसागत्योः) भावे "घञ्" (३-३-१८)। "स्तनयोर्गण्डयोश्चैव ओष्ठे चैव तथाधरे। दन्ताघातः प्रकर्तव्यः कामिनीनां सुखावहः"।

**दन्ताद ದಂತಾದ** (पुं०) ಹಲ್ಲುಗಳನ್ನು ಕೊರೆದು ತಿನ್ನುವ ಒಂದು ಜಾತಿಯ ಕ್ರಿಮಿ. दन्तान् अत्ति — अद (भक्षणे) "अण्" (३-२-१)। "केशरोमनखादाश्च दन्तादाः चिक्कशास्तथा" सुश्रुत०।

**दन्तादन्ति ದಂತಾದಂತಿ** (अव्य०) ಹಲ್ಲುಗಳಿಂದ ಕಚ್ಚಿ ಮಾಡುವ ಯುದ್ಧ. दन्तैश्च दन्तैश्च प्रहृत्येदं प्रवृत्तं युद्धम् "इच्" (५-४-१२७)। पूर्वपदान्तस्य दीर्घश्च।

**दन्तायुध ದಂತಾಯುಧ** (पुं०) 1. ಸೂಕರ, ವರಾಹ, ಹಂದಿ. दन्ता आयुधमिवास्य। "शूकरे वनाहिरदन्तायुधचक्रवज्रदीर्घरदाः" त्रिकाण्ड०। (वि०) 2. ದಂತವೇ ಆಯುಧವಾಗಿ ಉಳ್ಳ. स्त्रियाम् "ङीष्" (४-१-६३)। **-आयुधी -ಆಯುಧೀ.**

**दन्तार्बुद ದಂತಾರ್ಬುದ** (पुं०) ಒಂದು ವಿಧ ದಂತರೋಗ.

**दन्तालिका ದಂತಾಲಿಕಾ** (स्त्री०) ಕುದುರೆಯ ಕಡಿವಾಣ. दन्तान् अलति भूषयति — अल (भूषणादौ) "ण्वुल्" (३-१-१३३)। "दन्तालिकाधरणनिश्चलपाणियुग्मर्धोदितो हरिरिवोदयशैलमूर्ध्नः" माघ० ५-५६। "अण्" (३-२-१)। "ङीष्" (४-१-४१)। **दन्ताली ದಂತಾಲೀ.** "मुखरज्जुस्तु दन्ताली" वैज०।

**दन्तावल ದಂತಾವಲ** (पुं०) ಗಜ, ಆನೆ. अतिशयितौ दन्तौ स्तोऽस्य — दन्त "वलच्" (५-२-११३)। पूर्वपददीर्घः। "सिंहः प्रबलमतिस्थूलमपि दन्तावलं हन्तुमाक्रमते"।

**दन्तिका ದಂತಿಕಾ** (स्त्री०) ಜಾಪಾಳದ ಗಿಡ. दम्यते—दमु (उपशमे) "तन्" (उ० ३-८६)। संज्ञायाम् "कन्" (५-३-७५)। "निकुम्भो दन्तिका प्रत्यक्श्रेण्युदुम्बरपर्ण्यपि" अम०।

**दन्तिन् ದಂತಿನ್** (पुं०) ಗಜ, ಆನೆ. अतिशयितौ दन्तावस्य "इनिः" (५-२-११५)। "यद्दन्तिनः कटकटाहतटान्मिमङ्क्षोर्मङ्क्षूदपाति परितः पटलैरलीनाम्" माघ० ५-३७।

**दन्तिनी ದಂತಿನೀ** (स्त्री०) ಜಾಪಾಳದ ಗಿಡ.

**दन्तिमूलिका ದಂತಿಮೂಲಿಕಾ** (स्त्री०) ಜಾಪಾಳದ ಗಿಡ.

**दन्तुर ದಂತುರ** (वि०) 1. ಎತ್ತರವಾದ ಹಲ್ಲುಗಳುಳ್ಳ, ಮೇಲಕ್ಕೆ ಚಾಚಿದ ಹಲ್ಲುಗಳುಳ್ಳ. दन्ता उन्नताः सन्त्यस्य "उरच्" (५-२-१०६)। "अकलयन् मुदितामिव सर्वतः स शरदं शरदन्तुरदिङ्मुखम्" माघ० ६-५४। 2. ಸಮ ವಲ್ಲದ, ವಿಷಮವಾದ, ಹಳ್ಳತಿಟ್ಟಾಗಿರುವ. "दन्तुरं वाच्यवद्विद्यात् विषमोन्नतदन्तयोः" विश्व०। "करयन्त्रणदन्तुरान्तरे व्यलिखच्चञ्चुपुटेन पक्षती" नैष० २-२। 3. ವ್ಯಾಪ್ತವಾದ, ಹರಡಿರುವ. "शशाङ्कशङ्खसंभिन्नतारामौक्तिकदन्तुरा" चं० रा०।

**दन्तुरच्छद ದಂತುರಚ್ಛದ** (ಪುಂ) ಮಾದಳದ ಗಿಡ.

**दन्तोलूखलिक ದಂತೋಲೂಖಲಿಕ** (ಪುಂ) ವಾನಪ್ರಸ್ಥ, ತೃತೀಯಾಶ್ರಮಿ. दन्ता एव उलूखलं कण्डनसाधनं विद्यतेऽस्य "ठन्" (५-२-११५)। ವಾನಪ್ರಸ್ಥಾಶ್ರಮದವನು ಧಾನ್ಯದ ಹೊಟ್ಟುಗಳನ್ನು ಹಲ್ಲಿನಿಂದಲೇ ತೆಗೆದು ಆಹಾರವನ್ನು ತೆಗೆದುಕೊಳ್ಳುವುದರಿಂದ ಈ ಹೆಸರು. "अश्मकुट्टो भवेद्वापि दन्तोलूखलिकोऽपि वा" मनु० ६-१७।

**दन्तोष्ठ ದಂತೋಷ್ಠ** (ನಂ) ಹಲ್ಲು ಮತ್ತು ತುಟಿಗಳು. दन्ताश्च ओष्ठौ च एषां समाहारः (२-४-२)।

**दन्तोष्ठक ದಂತೋಷ್ಠಕ** (ವಿಂ) ಹಲ್ಲು ಮತ್ತು ತುಟಿಗಳ ವಿಷಯದಲ್ಲಿ ಹೆಚ್ಚು ಗಮನಕೊಡುವುದರಲ್ಲಿ ಉತ್ಸುಕನಾದ. दन्तोष्ठे प्रसितः "कन्" (५-२-६६)।

**दन्त्य ದಂತ್ಯ** (ಪುಂ) 1. ಹಲ್ಲು ಮತ್ತು ಅವುಗಳ ಮೂಲಭಾಗದಲ್ಲಿ ಹುಟ್ಟುವ ವರ್ಣ. ऌ तवर्ग (त थ द ध न) ल स ವರ್ಣಗಳು. "ऌतुलसानां दन्ताः" सि० कौ०। दन्ते दन्तमूले भवः "यत्" (५-१-६)। (ವಿಂ) 2. ಹಲ್ಲುಗಳಿಗೆ ಹಿತವನ್ನುಂಟುಮಾಡುವ. दन्तेभ्यो हितः "यत्" (५-१-५)। 3. ಹಲ್ಲಿನಲ್ಲಿರುವ. दन्ते भवम् "यत्" (४-३-५५)।

**दन्दशूक ದಂದಶೂಕ** (ಪುಂ) 1. ಸರ್ಪ, ಹಾವು. गर्हितं दशति — दंश (दशने) "यङ्" (३-१-२४)। नुक् (७-४-८६)। "ऊकः" (३-२-१६६)। "दन्दशूकः पतङ्गो वा भवेत्कीटोऽथवा कृमिः" याज्ञ० ३-१९७। 2. ರಾಕ್ಷಸ. "दन्दशूकस्तु पुल्लिङ्गो राक्षसे च सरीसृपे" मेदि०। "इषुमति रघुसिंहे दन्दशूकान् जिघांसौ" भट्टि० १-२६। 3. ಕಚ್ಚುವ ಪ್ರಾಣಿ, ನಾಯಿ ಮೊದಲಾದುದು. "दन्दशूकास्तु दंशकाः" वैज०।

**दभ्र ದಭ್ರ** (ಪುಂ) 1. ಸಮುದ್ರ, ಸಾಗರ, ಕಡಲು. (ನಂ) 2. ಸ್ವಲ್ಪ, ಅಲ್ಪ. दम्भ् (दम्भने) "रक्" (उ० २-१३)। दभ्रः समुद्रः स्वल्पं च सि० कौ०। (ವಿಂ) 3. ಸ್ವಲ್ಪವಾದ, ಕೊಂಚವಾದ. "अदभ्रदर्भामधिशय्य स स्थलीम्" किरा० १-३८।

**दम ದಮ** (ಪುಂ) 1. ನಿಗ್ರಹ, ಹತೋಟಿ, ಅಂಕೆ, ಬಹಿರಿಂದ್ರಿಯ ವ್ಯಾಪಾರಗಳನ್ನು ಅಂಕೆಯಲ್ಲಿಡುವುದು. दमु (उपशमे) "घञ्" (३-३-१८)। "निग्रहो बाह्यवृत्तीनां दम इत्यभिधीयते"। "बुद्धिर्ज्ञानमसंमोहः क्षमा सत्यं दमः शमः" गीता १०-४। 2. ದಂಡನೆ, ಶಿಕ್ಷೆ, ದಂಡೋಪಾಯ. "निक्षेपस्यापहर्तारं तत्समं दापयेद्दमम्" मनु० ८-१९२। "साहसं तु दमो दण्डः" अम०। 3. ಚಿತ್ತಸ್ಥೈರ್ಯ ಮನಸ್ಸು ವಿಕಾರಹೊಂದದಿರುವುದು. 4. ಅಡಗಿಸುವುದು, ಹತೋಟಿಯಲ್ಲಿಡುವುದು. 5. ಕರ್ದಮಮಹರ್ಷಿ. 6. ತಪಸ್ವಿನ ಕ್ಲೇಶವನ್ನು ಸಹಿಸಿಕೊಳ್ಳುವುದು. "दमस्तु दमथे दण्डे कर्दमे दमनेऽपि च" मेदि०।

**दमक ದಮಕ** (ವಿಂ) ದಮನಮಾಡುವವನು, ಅಂಕೆಯಲ್ಲಿಇಡುವವನು. दमयति—दमु (उपशमे) + णिच् "ण्वुल्" (३-१-१३३)। "हस्तिगोऽश्वोष्ट्रदमको नक्षत्रैर्यश्च जीवति" मनु० ३-१६२।

**दमघोष ದಮಘೋಷ** (ಪುಂ) ಚೇದಿದೇಶದ ದೊರೆ, ಶಿಶುಪಾಲನ ತಂದೆ. "दमघोषश्चेदिराजः श्रुतश्रवसमग्रहीत्" भाग० ९-२४-३९।

**दमघोषज ದಮಘೋಷಜ** (ಪುಂ) ಶಿಶುಪಾಲ, ದಮಘೋಷನ ಮಗ. दमघोषाज्जायते — जनी (प्रादुर्भावे) "डः" (३-२-९८)। "चिरस्य मित्रव्यसनी सुदमो दमघोषजः" माघ० २-६०।

**दमघोषसुत ದಮಘೋಷಸುತ, –सूनु –ಸೂನು** (ಪುಂ) ಶಿಶುಪಾಲ. दमघोषस्य सुतः सूनुर्वा। "दमघोषसुतेन कश्चन प्रतिशिष्टः प्रतिभानवानथ" माघ० १६-१।

**दमथ ದಮಥ** (ಪುಂ) 1. ಬಹಿರಿಂದ್ರಿಯ ನಿಗ್ರಹ, ಬಹಿರಿಂದ್ರಿಯವ್ಯಾಪಾರಗಳನ್ನು ಅಂಕೆಯಲ್ಲಿಡುವುದು. दमु (उपशमे) "अथः" (उ० ३-११३)। 2. ದಂಡ, ಶಿಕ್ಷೆ. 3. ತಪಸ್ವಿನ ಕಷ್ಟವನ್ನು ಸಹಿಸುವಿಕೆ. "दमथस्तु पुमान् दण्डे दमे च परिकीर्तितः" मेदि०।

**दमन ದಮನ** (ಪುಂ) 1. ವಿಷ್ಣು. कान्तिमन्दाकिनीभिः भवतापं दमयति — दमु (उपशमे) + णिच् "ल्युट्" (३-३-११३)। बाहुलकात्। "भवतापस्य दमनात् कान्त्या दमन ईरितः" इति निरुक्तिः। "मरीचिर्दमनो हंसः" वि० स०। 2. ವೀರ, ಪರಾಕ್ರಮಿ. 3. ಮೊಲ್ಲೆಗಿಡ. (ನಂ) 4. ನಿಗ್ರಹ, ಅಡಗಿಸುವಿಕೆ. 5. ಶಿಕ್ಷಿಸುವುದು. दमु भावे "ल्युट्" (३-३-११५)। "दुर्दान्तानां दमनविषयः क्षत्रियेष्वायतन्ते दुर्दान्तिस्त्वं वयमपि च ते क्षत्रियाः शासितारः" म० वी० ३-३४। 6. ಬಹಿರಿಂದ್ರಿಯ ನಿಗ್ರಹ, ಬಹಿರಿಂದ್ರಿಯ ವ್ಯಾಪಾರಗಳನ್ನು ತಡೆಯುವುದು. (ವಿಂ) 7. ನಿಗ್ರಹಿಸುವ, ಅಡಗಿಸುವ. 8. ಶಾಂತಚಿತ್ತನಾದ, ಸಮಾಧಾನಹೊಂದಿದ ಮನಸ್ಸುಳ್ಳ.

**दमनीय ದಮನೀಯ** (ವಿಂ) 1. ಅಡಗಿಸಲ್ಪಡುವ, ನಿಗ್ರಹಿಸಲ್ಪಡುವ. 2. ನಿಗ್ರಹಿಸಲು ಶಕ್ಯವಾದ. 3. ನಿಗ್ರಹಿಸ

ಬೇಕಾದ. 4. ಶಿಕ್ಷಿಸಲ್ಪಡುವ. 5. ಶಿಕ್ಷಿಸಲು ಯೋಗ್ಯವಾದ. 6. ಶಿಕ್ಷಿಸಲು ಶಕ್ಯವಾದ. 7. ಶಿಕ್ಷಿಸಬೇಕಾದ. दमु (उपशमे) "अनीयर्" (३-१-९६)। "तव्यः"। **दमितव्यम् ದಮಿತವ್ಯವ್.**

**दमयत् ದಮಯತ್** (वि०) 1. ನಿಗ್ರಹಿಸುತ್ತಿರುವ, ಅಡಗಿಸುತ್ತಿರುವ. दमु (उपशमे) + णिच् "शतृ" (३-२-१२४)। 2. ಶಿಕ್ಷಿಸುತ್ತಿರುವ. स्त्रियाम् "ङीप्" (४-१-६)। **-यन्ती -ಯಂತೀ.**

**दमयन्ती ದಮಯಂತೀ** (स्त्री०) ವಿದರ್ಭದೇಶದ ರಾಜನಾದ ಭೀಮನ ಮಗಳು, ನಳಚಕ್ರವರ್ತಿಯ ಪತ್ನಿ. [ಭೀಮಭೂಪಾಲನು ಪುತ್ರಾರ್ಥಿಯಾಗಿ ಅನೇಕ ವ್ರತಗಳನ್ನು ಆಚರಿಸಿದನು. ದಮನೆಂಬ ಋಷಿಯ ವರದಿಂದ ದಮಯಂತಿಯೆಂಬ ಕನ್ಯೆಯನ್ನೂ ದಮ ದಾಂತ ಮತ್ತು ದಮನನೆಂಬ ಪುತ್ರರನ್ನೂ ಪಡೆದನು. ದಮಯಂತಿಯು ನಿಷಧಾಧಿಪತಿಯಾದ ನಳಚಕ್ರವರ್ತಿಯನ್ನು ಮದುವೆಯಾಗಿ ಇಂದ್ರಸೇನನೆಂಬ ಮಗನನ್ನು ಪಡೆದಳು.] [ವಿವರಕ್ಕೆ "नल" ಪದದಲ್ಲಿ ನೋಡಿ.]

**दमयितृ ದಮಯಿತೃ**(वि०)1. ಅಂಕೆಯಲ್ಲಿಡುವ, ಹತೋಟಿಯಲ್ಲಿಡುವ. 2. ನಿಗ್ರಹಿಸುವ. 3. ದಂಡಿಸುವ, ಶಿಕ್ಷಿಸುವ. 4. ಶಿಕ್ಷಿಸುವ, ಪಳಗಿಸುವ. दमु (उपशमे) "तृच्" (३-१-१३३)। (पुं०) 5. ವಿಷ್ಣು. दमु + णिच् ताच्छील्ये "तृन्" (३-२-१३५)। "ताच्छील्याद्रावणादीनां हर्ता दमयिता स्वयम्" इति निरुक्तिः। "धनुर्धरो धनुर्वेदो दण्डो दमयिताऽदमः" वि० स०। स्त्रियाम् "ङीप्" (४-१-५)। **-यित्री -ಯಿತ್ರೀ.**

**दमित ದಮಿತ** (वि०) 1. ಅಡಗಿಸಲ್ಪಟ್ಟ, ನಿಗ್ರಹಿಸಲ್ಪಟ್ಟ. 2. ಶಿಕ್ಷಿಸಲ್ಪಟ್ಟ, ದಂಡಿಸಲ್ಪಟ್ಟ. "दमितं रघुवीरेण ददर्शाब्धि स दक्षिणम्" याद० २२-१७७। 3. ಪಳಗಿಸಲ್ಪಟ್ಟ. दमु (उपशमे) + णिच् "क्तः" (३-२-१०२)।

**दमितवत् ದಮಿತವತ್** (वि०) 1. ಅಡಗಿಸಿದವನು, ನಿಗ್ರಹಿಸಿದವನು. 2. ಪಳಗಿಸಿದವನು. 3. ಶಿಕ್ಷಿಸಿದವನು. दमु (उपशमे) "क्तवतुः" (३-२-१०२)।

**दमिन् ದಮಿನ್** (वि०)1. ನಿಗ್ರಹಿಸುವ ಸ್ವಭಾವದ, ಅಂಕೆಯಲ್ಲಿಡುವ ಸ್ವಭಾವದ. दमयति—दमु (उपशमे) + णिच् "घिनुण्" (३-२-१४१)। 2. ಬಹಿರಿಂದ್ರಿಯ ವ್ಯಾಪಾರವನ್ನು ತಡೆಯುವ.

**दमुनस् ದಮುನಸ್** (पुं०) ಅಗ್ನಿ, ಬೆಂಕಿ. दाम्यति— दमु (उपशमे) अन्तर्भावितण्यर्थः "उनसिः" (उ० ४-२३४)। "सप्तार्चिर्दमुनाः शुक्रः" अम०।

**दम्पती ದಂಪತೀ** (पुं० द्विव०) ಪತ್ನಿ ಮತ್ತು ಪತಿ, ಹೆಂಡತಿ ಮತ್ತು ಗಂಡ. जाया च पतिश्च—जायाशब्दस्य वा दम् भावो निपात्यते (२-२-३१)। "तौ दम्पती वसिष्ठस्य गुरोर्जग्मतुराश्रमम्" रघु० १-३५। "तौ दम्पती त्रिः परिणीय वह्निमन्योन्यसंस्पर्शनिमीलिताक्षौ" कुमा० ७-८०।

**दम्भ ದಂಭ** (पुं०)1. ಮೋಸ, ವಂಚನೆ, ಠಕ್ಕು. 2. ಗರ್ವ, ಅಹಂಕಾರ. 3. ಕಪಟ, ಇತರರನ್ನು ಮೆಚ್ಚಿಸುವ ಕರ್ಮಾಚರಣೆ. दम्यते—दम्भु (दम्भने) "घञ्" (३-३-१८)। 4. ಇತರರಿಂದ ಗೌರವ ಸಂಪಾದಿಸಲು ಹಾಕುವ ವೇಷ, ತಾನು ಮಹಾವ್ಯಕ್ತಿಯೆಂದು ತೋರಿಸಿಕೊಳ್ಳುವುದು. "सत्कारमानपूजार्थं तपो दम्भेन चैव यत्। क्रियते तदिह प्रोक्तं राजसं चलमध्रुवम्" गीता १७-१८। 5. ಮೂರ್ಖತನ, ದುರುಳತನ, ದುರ್ವರ್ತನೆ. "दम्भस्तु कैतवे कल्के" मेदि०।

**दम्भक ದಂಭಕ** (वि०) ಮೋಸಗಾರ, ವಂಚಕ, ಠಕ್ಕ. दम्भु (दम्भने) "ण्वुल्" (३-१-१३३)। "धर्मध्वजी सदा लुब्धश्छाद्मिको लोकदम्भकः" मनु० ४-१९५।

**दम्भन ದಂಭನ** (न०) ವಂಚನೆ, ಮೋಸಮಾಡುವುದು. दम्भु (दम्भने) भावे "ल्युट्" (३-३-११५)।

**दम्भिन् ದಂಭಿನ್** (वि०) 1. ಕಪಟಿ, ವೇಷಹಾಕುವವನು. ಇತರರ ಮೆಚ್ಚಿಗೆಗಾಗಿ ಕರ್ಮಾಚರಣೆಯುಳ್ಳವನು. दम्भोऽस्यास्ति "इनिः" (५-२-११५)। 2. ಮೋಸಗಾರ, ವಂಚಕ. दम्भु (दम्भने) "णिनिः" (३-२-७८)। "दम्भिहैतुकपाखण्डिबकवृत्तींश्च वर्जयेत्" याज्ञ० १-१३०।

**दम्भोलि ದಂಭೋಲಿ** (पुं०) 1. ಇಂದ್ರನ ವಜ್ರಾಯುಧ. दम्भ (दम्भने) "असुन्" (उ० ४-१८८)। दम्भसि रोधने अलिः समर्थः—अल (भूषणादौ) "इन्" (उ० ४-११७)। 2. ವಜ್ರ.

**दम्य ದಮ್ಯ** (पुं०) 1. ಪಳಗಿಸಲು ಯೋಗ್ಯವಾದ ವಯಸ್ಸಿನ ಹೋರಿ, ಭಾರಹೊರಲು ಯೋಗ್ಯವಾದ ವಯಸ್ಸಿನ ಎತ್ತು. दमु (उपशमे) "यत्" (३-१-९८)। 2. ಶಿಕ್ಷಣ ಹೊಂದಲು ಯೋಗ್ಯ ವಯಸ್ಸುಳ್ಳ. "गुर्वीं धुरं यो भुवनस्य पित्रा धुर्येण दम्यः सदृशं बिभर्ति" रघु० ६-७८। 3. ಶಿಕ್ಷೆಗೆ ಅರ್ಹನಾದ, ಶಿಕ್ಷಿಸಬಹುದಾದ. 4. ಶಿಕ್ಷಿಸಲು ಶಕ್ಯನಾದ.

**दयमान ದಯಮಾನ** (वि०) ದಯೆತೋರಿಸುವ, ಕನಿಕರ ತೋರಿಸುವ, ಕರುಣೆಯುಳ್ಳ. दयते—दय (दानगति-

रक्षणादिषु) कर्तं० "शानच्" (३-२-१२४)। "अवतंसयन्ति दयमानाः प्रमदाः शिरीषकुसुमानि" शाकु० १-४।

**दया ದಯಾ** (स्त्री०) 1. ಕರುಣೆ, ಕನಿಕರ, ಅನುಕಂಪ. दयते रक्षत्यनया—दय (दानगतिरक्षणादिषु) "अङ्" (३-३-१०४)। "दया वा स्नेहो वा भगवति निजेऽस्मिन् शिशुजने" मालती० ४-६। 2. ಇತರರ ಕಷ್ಟವನ್ನು ಪರಿಹರಿಸುವ ಇಚ್ಛೆ, ಇತರರ ಕಷ್ಟವನ್ನು ನೋಡಿ ಸಹಿಸದಿರುವುದು. "यत्नादपि परक्लेशं हर्तुं या हृदिजायते। इच्छा भूमिसुरश्रेष्ठ सा दया परिकीर्तिता"। "प्राणा यथात्मनोऽभीष्टा भूतानामपि ते तथा। आत्मौपम्येन सर्वत्र दयां कुर्वन्ति साधवः"। ದಯೆಯು ಮೋಹದ ಪತ್ನಿ. ಮೋಹವಿದ್ದೆಡೆ ದಯೆಯೂ ಇರುವುದು. "मोहपत्नी दया साध्वी पूजिता च जगत्प्रिया। सर्वलोकाश्च सर्वत्र निष्फलाश्च यया विना"। 3. ದಕ್ಷಪ್ರಜಾಪತಿಯ ಒಬ್ಬ ಮಗಳು, ಧರ್ಮಪ್ರಜಾಪತಿಯ ಪತ್ನಿ. "श्रद्धा मैत्री दया तुष्टिः शान्तिः पुष्टिः क्रिया उन्नतिः बुद्धिः मेधा तितिक्षा ह्रीः मूर्तिः" ಇವರು ದಕ್ಷಬ್ರಹ್ಮನ ಮಕ್ಕಳು. ಧರ್ಮಪುರುಷನ ಪತ್ನಿಯರು.

**दयानिधि ದಯಾನಿಧಿ** (वि०) ದಯೆಗೆ ವಾಸಸ್ಥಾನವಾದ, ಬಹಳ ದಯೆಯುಳ್ಳ. दयाया निधिः।

**दयान्वित ದಯಾನ್ವಿತ** (वि०) ದಯೆಯಿಂದ ಕೂಡಿದ. दयया अन्वितः।

**दयाम्बुधि ದಯಾಂಬುಧಿ, -अम्भोधि -ಅಂಭೋಧಿ, -सागरः -ಸಾಗರಃ** (पुं०) ದಯೆಗೆ ಸಮುದ್ರದಂತಿರುವ.

**दयालु ದಯಾಲು** (वि०) ಕನಿಕರದ ಸ್ವಭಾವದ, ದಯೆಯುಳ್ಳ. दय(दानगतिरक्षणादौ)"आलुच्"(३-२-१५८)। "किमप्यहिंस्यस्तव चेन्मतोऽहं यशःशरीरे भव मे दयालुः" रघु० २-५७।

**दयावत् ದಯಾವತ್** (वि०) ದಯೆಯಿಂದ ಕೂಡಿದ, ಕನಿಕರವುಳ್ಳ. दयास्यास्ति "मतुप्" (५-२-९४)। "उदारकीर्तेरुदयं दयावतः प्रशान्तबाधं दिशतोऽभिरक्षया" किरा० १-१८।

**दयावीर ದಯಾವೀರ** (पुं०) 1. ಕರುಣೆಯಿಂದ ಕೂಡಿದ ವೀರರಸ. 2. ಕರುಣೆಯಿಂದಕೂಡಿದ ವೀರನಾಯಕ. दयावीरः। ವೀರರಸವು दानवीरः धर्मवीरः युद्धवीरः ಮತ್ತು दयावीरः ಎಂದು ನಾಲ್ಕು ವಿಧ. "स च दानधर्मयुद्धैर्दयया च समन्वितश्चतुर्धा स्यात्" सा० द० ३-२३४।

**दयित ದಯಿತ** (पुं०) 1. ಪತಿ, ಗಂಡ. दय (दानगतिरक्षणादौ) "क्तः" (३-२-१०२)। "करुद्धनीविदयितोपगतौ गलितं त्वराविरहितासनया" माघ० ९-७५। "सङ्गमश्च दयितैः स्म नयन्ति" किरा० ९-७१। "जहीहि कोपं दयितोऽनुगम्यताम्" किरा० ८-८। (वि०) 2. ಇಷ್ಟವಾದ, ಪ್ರಿಯವಾದ. "न गजा नगजा दयिता दयिता विगतं विगतं ललितं ललितम्" भट्टि० १०-९। (स्त्री०) **-ता -ತಾ.** 3. ಪತ್ನಿ, ಹೆಂಡತಿ. "प्रत्यासन्ने नभसि दयिताजीवितालम्बनार्थी" मेघ० १-४। "लोलदृष्टि वदनं दयितायाः" किरा० ८-४७।

**दर ದರ** (पुंन०) 1. ಭಯ, ಹೆದರಿಕೆ. दीर्यते—दृ (भये) "अप्" (३-३-५७)। "अमर्षशून्येन जनस्य जन्तुना न जातहार्देन च विद्विषादरः" किरा० १-३३। "सा दरं पृतना निन्ये हीयमाना रसादरम्" माघ० १९-२३। 2. ಹಳ್ಳ, ಗುಳಿ, ಗರ್ತ. "दरोऽस्त्री साध्वसे गर्ते" मेदि०। 3. ಶಂಖ. (अव्य०) 4. ಸ್ವಲ್ಪವಾಗಿ, ಕೊಂಚವಾಗಿ. "वाताङ्कूराजिह्वीर्षादरविवृतफणाशृङ्गभूषाभुजङ्गम्" चं० भा०। "दरो भये च गर्ते च किञ्चिदर्थे दराव्ययम्" शाश्व०। (स्त्री०) **-री -ರೀ.** ಗವಿ, ಗುಹೆ. "दरोऽस्त्री शङ्खभययोर्गर्तेऽपि च गुहा दरी। दरं त्वव्ययमल्पार्थे" नानार्थर०।

**दरक ದರಕ** (वि०) ಭಯದ ಸ್ವಭಾವದ, ಭೀರು. दृ (भये) "क्वुन्" (उ० २-३८)।

**दरण ದರಣ** (न०) ಒಡೆಯುವುದು, ಸೀಳುವುದು, ಕತ್ತರಿಸುವುದು. दृ (विदारणे) "ल्युट्" (३-३-११५)।

**दरणि ದರಣಿ** (पुं०) ಬಂಡೆಗಳ ಮೇಲೆ ನೀರಿನ ಅಲೆಗಳು ಬಡಿದು ಏಳುವ ನೊರೆ, ತೆರೆನೊರೆ. दृ (विदारणे) "अनिः" (उ० २-१०३)।

**दरथ ದರಥ** (पुं०) ಕಂದರ, ಗುಹೆ, ಗವಿ. दृ (विदारणे) "अथः" बाहु०।

**दरद् ದರದ್**(स्त्री०)1. ಹೃದಯ, ಅಂತಃಕರಣ 2. ತೀರ, ದಡ. "दरद्हृदयकूलयोः" सि० कौ०। 3. ಭಯ, 4. ಪ್ರಪಾತ, ಬೆಟ್ಟದ ಕಡಿದಾದ ಪ್ರದೇಶ. 5. ಪರ್ವತ, ಬೆಟ್ಟ. दृ (विदारणे) "अदिः" (उ० १-१२७)। "दरत् स्त्रियां प्रपातेऽपि भयपर्वतयोरपि" मेदि०।

**दरद ದರದ** (वि०) 1. ಭಯವನ್ನುಂಟುಮಾಡುವ. दरं भयं ददाति—डु दाञ् (दाने) "कः" (३-२-३)। (पुं०) 2. ಮ್ಲೇಚ್ಛಜಾತಿಯವನು. "पारदाः पह्लवाश्चीनाः किराता दरदाः खशाः" मनु० १०-४४।

**दरवर ದರವರ** (पुं०) ಶ್ರೀವಿಷ್ಣುವಿನ ಪಾಂಚಜನ್ಯವೆಂಬ ಶಂಖ. दरेषु शङ्खेषु वरः। "दध्मौ दरवरं तेषां विषादं शमयन्निव" भाग० १-११-१।

**दरित ದರಿತ** (वि०) ಭಯವುಂಟಾಗಿರುವ, ಹೆದರಿರುವ. दरोऽस्य सञ्जातः "इतच्" (५-२-३६)।

**दरितव्य ದರಿತವ್ಯ** (वि०) 1. ಸೀಳಲ್ಪಡುವ, ಎರಡಾಗಿ ಮಾಡಲ್ಪಡುವ. 2. ಎರಡು ತುಂಡಾಗಿ ಮಾಡಲು ಶಕ್ಯವಾದ. 3. ಸೀಳಬೇಕಾದ, ತುಂಡುಮಾಡಬೇಕಾದ. दृ (विदारणे) "तव्यः" (३-१-९६)।

**दरिद्र ದರಿದ್ರ** (पुं०) 1. ಭಿಕ್ಷುಕ, ಹೊಟ್ಟೆಬಟ್ಟೆಗಳಿಗಿಲ್ಲದೆ ಕಷ್ಟದಲ್ಲಿರುವವನು. "स्त्रीबालोन्मत्तवृद्धानां दरिद्राणां च रोगिणाम्" मनु० ९-२३०। 2. ಬಡವ, ಧನವಿಲ್ಲದವನು, ಗತಿಯಿಲ್ಲದವನು. दरिद्रा (दुर्गतौ) "अच्" (३-१-१३४)। "मनसि च परितुष्टे कोऽर्थवान् को दरिद्रः" भर्तृ० ३-५३।

**दरिद्रा — दुर्गतौ** (अदा० पर० अक० से०)। दरिद्राति दरिद्रितः दरिद्रति। दरिद्रां चकार, –बभूव, –आस। दरिद्रिता। दरिद्रिष्यति। दरिद्रातु। अदरिद्रात्। ಇತ್ಯಾದಿ. ದರಿದ್ರನಾಗು, ಕೆಟ್ಟಸ್ಥಿತಿಹೊಂದು, ಧನಹೀನನಾಗು.

**भावे** :—दरिद्र्यते। दरिद्रां चक्रे, –बभूवे, –आसे। दरिद्रिता। दरिद्र्यताम्। ಇತ್ಯಾದಿ.

**कृत्सु** :—दरिद्रितव्यम्। दरिद्रणीयम्। दरिद्रितः। दरिद्रितवान्, –वती। दरिद्रत्, –द्रती। दरिद्रितम्। दरिद्राणम्।

**दरिद्रायक ದರಿದ್ರಾಯಕ** (वि०) ದರಿದ್ರ, ಬಡವ. दरिद्राति — दरिद्रा (दुर्गतौ) "ण्वुल्" (३-१-१३३)।

**दरिद्रित ದರಿದ್ರಿತ** (वि०) ದಾರಿದ್ರ್ಯದಿಂದಕೂಡಿದ, ಬಡತನದಿಂದ ಕೂಡಿರುವ, ಬಡವನಾಗಿರುವ. दरिद्रा (दुर्गतौ) "क्तः" (३-४-७२)।

**दरिद्रितृ ದರಿದ್ರಿತೃ** (वि०) ದರಿದ್ರ, ಬಡವ. दरिद्रा (दुर्गतौ) कर्तं० "तृन्" (३-२-१३५)।

**दरी ದರೀ** (स्त्री०) ಗುಹೆ, ಗವಿ. दृ (विदारणे) "इन्" (उ० ४-११७)। वा "ङीप्" (ग० ४-१-४५)। पक्षे **दरिः ದರಿಃ**. "वनेचराणां वनितासखानां दरीगृहोत्सङ्ग-निषक्तभासः" कुमा० १-१०।

**दरीगृह ದರೀಗೃಹ** (न०) ಗುಹೆಯೆಂಬ ಮನೆ. दर्येव गृहम्। "वनेचराणां वनितासखानां दरीगृहोत्सङ्गनिषक्त-भासः" कुमा० १-१०।

**दरीमुख ದರೀಮುಖ** (न०) ಗುಹೆಯೆಂಬ ಬಾಯಿ, ಗುಹೆಯ ರೂಪವಾದ ಬಾಯಿ. दर्येव मुखम्। "यः पूरयन् कीचकरन्ध्रभागान् दरीमुखोत्थेन समीरणेन" कुमा० १-८।

**दर्दर ದರ್ದರ** (पुं०) 1. ಪರ್ವತ, ಬೆಟ್ಟ. (त्रि०) 2. ಸ್ವಲ್ಪ ಒಡೆದಿರುವ ಪಾತ್ರೆ. "दर्दरः पर्वते पुंसि त्रिष्वीषद्भग्नभाजने" मेदि०।

**दर्दुर ದರ್ದುರ** (पुं०) 1. ಮಂಡೂಕ, ಕಪ್ಪೆ. दृणाति कर्णौ शब्दैः—दृ (विदारणे) "उरच्" द्वित्वं अभ्यासस्य रुक् टिलोपश्च निपात्यते (उ० १-४०)। "कौशेयं तित्तिरिर्हृत्वा क्षौमं हृत्वा तु दर्दुरः" मनु० १२-६४। 2. ಒಂದು ಪರ್ವತ. "स्तनाविव दिशस्तस्याः शैलौ मलयदर्दुरौ" रघु० ४-५१। 3. ಮೇಘ, ಮೋಡ. 4. ಒಂದು ವಾದ್ಯ. "दर्दुरस्तोयदे भेके वाद्यभाण्डाद्रि-भेदयोः" मेदि०। "पर्यन्तवर्त्मसु विचक्रमिरे महाश्वाः शैलस्य दर्दुरपुटानिव वादयन्तः" माघ० ५-९। (स्त्री०) **–रा –ರಾ.** 5. ಚಂಡಿಕೆ, ದುರ್ಗಾದೇವಿ. (न०) 6. ಹಳ್ಳಿಗಳ ಗುಂಪು, ಜಿಲ್ಲೆ, ಮಂಡಲ. "दर्दुरा चण्डिकायां स्यात् ग्रामजाले नपुंसकम्" मेदि०।

**दर्द्रुघ्न ದರ್ದ್ರುಘ್ನ** (पुं०) ತಗಟೆಗಿಡ. दर्द्रुं हन्ति—हन (हिंसागत्योः) "टक्" (३-२-५३)। "दर्द्रुघ्नश्चक्रमर्दकः" अम०।

**दर्द्रुण ದರ್ದ್ರುಣ** (वि०) ಹುಳುಕಡ್ಡಿರೋಗವುಳ್ಳವನು. दर्द्रूरस्यास्ति "नः" ह्रस्वश्च (ग० ५-२-१००)। "दर्द्रुणो दर्द्रुरोगी स्यात्" अम०।

**दर्द्रू ದರ್ದ್ರೂ** (पुं०) ದದ್ದು, ಹುಳುಕಡ್ಡಿ. दरिद्रा (दुर्गतौ) "ऊः" इकारस्य आकारस्य च लोपः (उ० १-९०)।

**दर्प ದರ್ಪ** (पुं०) 1. ಸೊಕ್ಕು, ಕೊಬ್ಬು, ಗರ್ವ. दृप (हर्षमोहनयोः) "घञ्" (३-३-१८)। "दर्पोदयोल्लसितफेन-जलानुसारसंलक्ष्यपल्ययनवर्ध्रपदास्तुरङ्गाः" माघ० ५-५३। 2. ದುಡುಕು, ಉತಾವಳಿ, ಹಿರಿಯರನ್ನು ತಿರಸ್ಕಾರದಿಂದ ಕಾಣುವ ಬುದ್ಧಿ. 3. ಅಹಂಕಾರ, ಹೆಮ್ಮೆ. "दर्पः स्यादमृतेन चेदिह तदप्यस्त्येव बिम्बाधरे" रत्ना० ३-१३। 4. ಕಸ್ತೂರಿ. "दर्पोऽहङ्कारकस्तूर्योः" नानार्थर०। 5. ಕಾವು, ಬಿಸುಪು, ಉಷ್ಣತೆ. 6. ಉತ್ಸಾಹ. "तेजोविहीनं विजहाति दर्पः" किरा० १७-१६।

**दर्पक ದರ್ಪಕ** (पुं०) 1. ಮನ್ಮಥ, ಕಾಮ. दर्पयति—दृप (हर्षमोहनयोः) + णिच् "ण्वुल्" (३-१-१३३)।

(वि०) 2. ಅಹಂಕಾರವನ್ನೂ ಕೊಬ್ಬನ್ನೂ ಉಂಟು ಮಾಡುವ. "कन्दर्पो दर्पकोऽनङ्गः" अम०।

**दर्पण ದರ್ಪಣ** (पुं०) 1. ಕನ್ನಡಿ. दर्पयति—दृप (हर्षमोहनयोः)+णिच् "ल्युः" (३-१-१३४)। "नवं नवक्षौमनिवासिनी सा भूयो बभौ दर्पणमादधाना" कुमा० ७-२६। 2. ಕುಬೇರನ ವಾಸಸ್ಥಾನವಾದ ಪರ್ವತ. 3. ನೇತ್ರ, ಕಣ್ಣು. "ततः पूर्वं महाराज दर्पणो नाम पर्वतः। कुबेरो यत्र वसति धनपालैः समं सदा"।

**दर्पणिका ದರ್ಪಣಿಕಾ** (स्त्री०) ಕನ್ನಡಿ. "यन्मतौ विमल दर्पणिकायाम्" नैषं० ५-१०६।

**दर्पद ದರ್ಪದ** (पुं०) 1. ವಿಷ್ಣು. दर्पं यादवानां मधुपानमदं ददाति—डु दाञ् (दाने) "कः" (३-२-३)। "मधुरायां यादवेभ्यो मधुपानादिना ततः। दर्पं च दत्तवान् योऽसौ दर्पदः परिकीर्तितः" इति निरुक्तिः। "दर्पहा दर्पदोऽदृप्तः" वि० स०। (वि०) 2. ಅಹಂಕಾರವನ್ನುಂಟುಮಾಡುವ.

**दर्पहन् ದರ್ಪಹನ್** (पुं०) 1. ವಿಷ್ಣು. दर्पं गोवर्धनोद्धरण पारिजाताहरणादौ देवानां गर्वं हतवान्—हन (हिंसागत्योः) उपपदनियमस्य प्रायिकत्वात् "क्विप्"। "गोवर्धनस्योद्धरणे पारिजातपरिग्रहे। बाणदोर्दण्डषण्डानां खण्डनादौ तदा तदा। देवानां वै दर्पमात्रं हतवान् यः स दर्पहा" इति निरुक्तिः। "दर्पहा दर्पदोऽदृप्तः" वि० स०। 2. ಕೊಬ್ಬನ್ನು ಅಡಗಿಸುವ, ಸೊಕ್ಕನ್ನು ಮುರಿಯುವ.

**दर्पित ದರ್ಪಿತ** (वि०) 1. ಅಹಂಕಾರವುಂಟಾಗಿರುವ. 2. ಕೊಬ್ಬಿರುವ. दर्पोऽस्य सञ्जातः "इतच्" (५-२-३६)।

**दर्पिन् ದರ್ಪಿನ್** (वि०) 1. ಕೊಬ್ಬಿರುವ. 2. ಅಹಂಕಾರದಿಂದ ಕೂಡಿದ. दर्पोऽस्यास्ति "इनिः" (५-२-११५)।

**दर्भ ದರ್ಭ** (पुं०) ಕುಶ, ದರ್ಭೆಹುಲ್ಲು. दृभ्यते—दृभी (ग्रन्थे) "घञ्" (३-३-१९)। "अदभ्रदर्भामधिशय्य स स्थलीं जहासि निद्रामशिवैः शिवारुतैः" किरा० १-३८।

**दर्भट ದರ್ಭಟ** (न०) ಗುಪ್ತಗೃಹ, ರಹಸ್ಯ ಗೃಹ, ಏಕಾಂತ ಗೃಹ. दृभी (ग्रन्थे) "अटन्" (उ० ४-८१)। "दर्भटं निभृतं गृहम्" त्रिकाण्ड०।

**दर्भपत्र ದರ್ಭಪತ್ರ** (पुं०) ಕಾಶತೃಣ, ಜಂಬುಹುಲ್ಲು.

**दर्भपुष्प ದರ್ಭಪುಷ್ಪ** (पुं०) ಒಂದು ಜಾತಿಯ ಹಾವು.

**दर्भमुष्टि ದರ್ಭಮುಷ್ಟಿ** (पुंस्त्री०) ಒಂದು ಹಿಡಿ ದರ್ಭೆ.

**दर्व ದರ್ವ** (पुं०) 1. ರಾಕ್ಷಸ. 2. ಹಿಂಸೆ. 3. ಸವಟು. 4. ದುಷ್ಟಪ್ರಾಣಿ. (वि०) 5. ವಂಚಿಸಿ ಸುಲಿಗೆ ಮಾಡುವವನು, ದೋಚಿಕೊಳ್ಳುವವನು, ಹಿಂಸಿಸುವವನು.

**दर्वट ದರ್ವಟ** (पुं०) ಶಿಕ್ಷೆಯನ್ನು ವಿಧಿಸಿ ಹೇಳುವ ನ್ಯಾಯಾಧಿಪತಿ. "दर्वटो दण्डवादी स्यात्" हारा०।

**दर्वरीक ದರ್ವರೀಕ** (पुं०) 1. ಇಂದ್ರ. दृ (विदारणे) "ईकन्" (उ० ४-२०)। निपा०। 2. ವಾತ, ಗಾಳಿ.

**दर्वि ದರ್ವಿ** (स्त्री०) 1. ಸವಟು, ಮಿಳ್ಳೆ, ಸಟ್ಟುಗ. दृङ् (आदरे) "विन्" (उ० ४-५३)। 2. ಹಾವಿನ ಹೆಡೆ. "पृथुदर्विभृतस्ततः फणीन्द्राः विषमाशीभिरनारतं वमन्तः" माघ० २०-४२। वा "ङीष्" (ग० ४-१-४५)। —र्वी —ರ್ವೀ.

**दर्विभृत् ದರ್ವಿಭೃತ್** (पुं०) 1. ಸರ್ಪ, ಹಾವು. दर्विं बिभर्ति—डु भृञ् (धारणपोषणयोः) "क्विप्" (३-२-७६)। (वि०) 2. ಹೆಡೆಯನ್ನು ಧರಿಸಿರುವ. "पृथुदर्विभृतस्ततः फणीन्द्राः विषमाशीर्भिरमारतं वमन्तः" माघ० २०-४२।

**दर्वीकर ದರ್ವೀಕರ** (पुं०) ಸರ್ಪ, ಹಾವು. दर्व्याकारः फण एव करो यस्य। "दर्वीकरा दीपकाश्च तेषूक्ताः कट्टपाकिनः" सुश्रुत० सूत्र० ४६-८४।

**दर्वीसंक्रमण ದರ್ವೀಸಂಕ್ರಮಣ** (न०) ಒಂದು ಪುಣ್ಯ ತೀರ್ಥ.

**दर्श ದರ್ಶ** (पुं०) 1. ಸೂರ್ಯ ಚಂದ್ರರು ಒಂದು ಕಡೆ ಸೇರುವ ಕಾಲ, ಅಮಾವಾಸ್ಯೆ. दृश्यते शास्त्रेण सूर्यचन्द्रौ एकत्र यत्र—दृशिर् (प्रेक्षणे) "घः" (३-३-११८)। "एकत्रस्थौ सूर्यचन्द्रौ दर्शनात् दर्श उच्यते" मत्स्यपु०। 2. ಅಮಾವಾಸ್ಯೆಯ ದಿನ ಮಾಡಬೇಕಾದ ಯಾಗ. दर्शः कारणत्वेनास्त्यस्य "अच्" (५-२-१२७)। "दर्शश्च पौर्णमासश्च यागौ पक्षान्तयोः पृथक्" अम०। 3. ನೋಟ, ನೋಡುವುದು, ದರ್ಶನ. "दर्शस्तु स्यादमावास्या यागभेदावलोकने" मेदि०।

**दर्शक ದರ್ಶಕ** (पुं०) 1. ದ್ವಾರಪಾಲಕ. पश्यति—दृशिर् (प्रेक्षणे) "ण्वुल्" (३-१-१३३)। दर्शयति राजानम्—दृशिर्+णिच् "ण्वुल्" वा। (वि०) 2. ನೋಡುವವನು. 3. ತೋರಿಸುವವನು. "विधिप्रयुक्तसत्कारैः स्वयं मार्गस्य दर्शकः" कुमा० ६-५२। 4. ಪ್ರವೀಣ, ನಿಪುಣ, ಜಾಣ. "दर्शकः स्यात् प्रतीहारे दर्शयितृ प्रवीणयोः" मेदि०।

**दर्शत ದರ್ಶತ** (पुं०) 1. ಸೂರ್ಯ. 2. ಚಂದ್ರ. दृशिर् (प्रेक्षणे) "अतच्" (उ० ३-१००)। "दर्शतः सोमसूर्ययोः" सि० कौ०।

**ದರ್ಶನ ದರ್ಶನ** (ನಂ) 1. ನೋಡುವುದು, ಅವಲೋಕನ. दृशिर् (प्रेक्षणे) भावे "ल्युट्" (३-३-११५)। "दर्शनानुपदमेव कामतः स्वं वनीपकजनेऽधिगच्छति" माघ० १४-४८। 2. ನಯನ, ನೇತ್ರ, ಕಣ್ಣು. दृशिर् कर० "ल्युट्" (३-३-११७)। 3. ಬುದ್ಧಿ, ಜ್ಞಾನ. 4. ತಿಳಿವಳಿಕೆ, ಅರಿವು. "दर्शनेन विहीनस्तु संसारं प्रतिपद्यते" मनु० ६-७४। 5. ತೋರಿಸುವುದು. 6. ಯಾಗ. 7. ಸ್ವಪ್ನ, ಕನಸು. 8. ಚಿಂತಿಸುವುದು, ಆಲೋಚಿಸುವುದು. "यथा राजा न कुर्यात्तु नृपतिः कर्यदर्शनम्" मनु० ८-९। 9. ತೀರ್ಮಾನ, ನಿರ್ಣಯ. "न हि स्वाभिप्रायेण मे दर्शनम्" शाकु० ३। 10. ಪರೀಕ್ಷಿಸಿ ನೋಡುವುದು. "बलानां दर्शनं कृत्वा सेनान्या सह चिन्तयेत्" याज्ञ० १-३२९। 11. ವರ್ಣ, ಬಣ್ಣ. 12. ದರ್ಪಣ, ಕನ್ನಡಿ. 13. ಧರ್ಮ. 14. ಶಾಸ್ತ್ರ. "दर्शनं नयनं स्वप्नबुद्धिधर्मोपलब्धिषु। शास्त्रदर्पणयोश्च" मेदि०। 15. ತತ್ತ್ವಶಾಸ್ತ್ರ, ಅಯಾ (ದಾರ್ಶನಿಕರ) ತತ್ತ್ವಗಳನ್ನು ತಿಳಿಸುವ ಶಾಸ್ತ್ರ. दृश्यते ज्ञायते आत्मा अनेन — दृशिर् कर० "ल्युट्" (३-३-११७)। ಇಂತಹ ದರ್ಶನಗಳು (1) ವೈಶೇಷಿಕ, (2) ನ್ಯಾಯ, (3) ವೇದಾನ್ತ, (4) ಸಾಂಖ್ಯ, (5) ಯೋಗ ಮತ್ತು (6) ಮೀಮಾಂಸಾ ಎಂದು ಆರು ವಿಧ. ಇವು ಆರೂ ಆಸ್ತಿಕ ದರ್ಶನಗಳು. "कणादस्याक्षपादस्य व्यासस्य कपिलस्य च। पतञ्जलेर्जैमिनेश्च दर्शनानि षडेव हि"। ಸಾಂಖ್ಯವು ಸೇಶ್ವರ ನಿರೀಶ್ವರ ಭೇದಗಳಿಂದ ಎರಡು ವಿಧ. ವೇದಾನ್ತವೂ ದ್ವೈತ, ಅದ್ವೈತ, ವಿಶಿಷ್ಟಾದ್ವೈತ, ಶಕ್ತಿ ವಿಶಿಷ್ಟಾದ್ವೈತ ಮೊದಲಾಗಿ ಅನೇಕ ವಿಧಗಳಾಗಿರುವುದು. ಇವಲ್ಲದೆ ಚಾರ್ವಾಕ ಬೌದ್ಧ ಮತ್ತು ಜೈನಗಳೆಂಬ ಮೂರು ದರ್ಶನಗಳಿರುವುವು. ಇವಿಷ್ಟೂ ಹಿಂದೂ ದರ್ಶನಗಳು. ದರ್ಶನವೆಂದರೆ ತತ್ತ್ವ ಮಾರ್ಗವೆಂದೂ ಮತವೆಂದರೆ ಭಕ್ತಿಮಾರ್ಗವೆಂದೂ ಹೆಸರು. ಪ್ರತ್ಯಕ್ಷ ಪರೋಕ್ಷವಾದ ಸಕಲ ವಸ್ತುಗಳ ವಿಚಾರವೇ ತತ್ತ್ವ ಮಾರ್ಗವು. ಮತವೆಂದರೆ ಮನೋಭಾವಕ್ಕೆ ಗೋಚರವಾದುದು. ಈ ಮನೋಭಾವವನ್ನು ಶ್ರದ್ಧಾ ಭಕ್ತಿ ವಿಶ್ವಾಸ ನಂಬಿಕೆ ಮೊದಲಾದ ಶಬ್ದಗಳಿಂದ ವ್ಯವಹರಿಸುವರು. ಒಂದು ವಸ್ತುಸ್ವಭಾವ ವಿಷಯವಾದುದು. ಮತ್ತೊಂದು ಸಾಂಪ್ರದಾಯಿಕಮನೋಭಾವವಿಷಯವಾದುದು. (1) ಶೈವ, (2) ವೈಷ್ಣವ, (3) ಶಾಕ್ತ, (4) ಸೌರ, (5) ಗಾಣಾಪತ್ಯ ಮತ್ತು (6) ಸ್ಕಾಂದಗಳೆಂದು ಆರು ಭಕ್ತಿ ಮಾರ್ಗದ ದರ್ಶನಗಳು. "शैवं च वैष्णवं शाक्तं सौरं वैनायकं तथा। स्कान्दं च भक्तिमार्गस्य दर्शनानि षडेव हि"। ಈ ಷಣ್ಮತಗಳೂ ಪೂಜ್ಯ ದೇವತಾವಿಭಾಗದಿಂದ ಬೇರೆ ಬೇರೆಯಾಗಿರುವುವು.

**ದರ್ಶನಗೃಹ ದರ್ಶನಗೃಹ** (ನಂ) ಅಭ್ಯಾಗತ ಮೊದಲಾದವರನ್ನು ನೋಡುವ ಕೊಠಡಿ.

**ದರ್ಶನಪ್ರತಿಭೂ ದರ್ಶನಪ್ರತಿಭೂ** (ಪುಂ) ಜಾಮೀನುದಾರ, ಅವಶ್ಯವಾದಾಗ ಆಪಾದಿತನನ್ನು ತಂದು ತೋರಿಸುವ ಹೊಣೆಯನ್ನು ಹೊತ್ತಿರುವವನು. दर्शनाय प्रतिभूः। ಜಾಮೀನು ನಾಲ್ಕು ವಿಧ. (1) ಅಪೇಕ್ಷಿಸಿದಾಗ ಒಬ್ಬನನ್ನು ತಂದು ತೋರಿಸುವುದು. (2) ನಂಬಿಕೆಯಿಡುವುದು. (3) ಒಬ್ಬನಿಗಾಗಿ ಹಣವನ್ನು ಕೊಡುವುದು. (4) ಒಬ್ಬನ ಸಾಲವನ್ನು ತೀರಿಸುವುದು. "दर्शने प्रत्यये दाने ऋणद्रव्यार्पणे तथा। चतुःप्रकारः प्रतिभूः शास्त्रे दृष्टो मनीषिभिः"।

**ದರ್ಶನಪ್ರಾತಿಭಾವ್ಯ ದರ್ಶನಪ್ರಾತಿಭಾವ್ಯ** (ನಂ) ಅವಶ್ಯವಾದಾಗ/ಅಪೇಕ್ಷಿಸಿದಾಗ (ಒಬ್ಬನನ್ನು) ತಂದು ತೋರಿಸುವ ಹೊಣೆಗಾರಿಕೆ, ಜಾಮೀನು. "दर्शनप्रातिभाव्ये तु विधिः स्यात्पूर्वचोदितः" मनुः ८-१६०।

**ದರ್ಶನಲಾಲಸ ದರ್ಶನಲಾಲಸ** (ವಿಂ) ನೋಡುವ ಅಪೇಕ್ಷೆಯುಳ್ಳವನು. दर्शने लालसः।

**ದರ್ಶನವಿಷಯ ದರ್ಶನವಿಷಯ** (ವಿಂ) ದೃಷ್ಟಿಗೆ ಗೋಚರವಾದ, ನೋಟಕ್ಕೆ ವಿಷಯವಾದ.

**ದರ್ಶನಾರ್ಥಿನ್ ದರ್ಶನಾರ್ಥಿನ್** (ವಿಂ) ದರ್ಶನವನ್ನು ಅಪೇಕ್ಷಿಸುವವನು, ಭೇಟಿಗಾಗಿ ಬಂದಿರುವವನು. दर्शनमर्थयते— अर्थ (उपयाच्ञायाम्) "णिनिः" (३-१-१३४)।

**ದರ್ಶನೀಯ ದರ್ಶನೀಯ** (ವಿಂ) 1. ಸುಂದರವಾದ, ಮನೋಹರವಾದ. दृशिर् (प्रेक्षणे) "अनीयर्" (३-१-९६)। "अहो दर्शनीयान्यक्षराणि" मुद्रा० १। "प्रसभमुड्गणोऽसौ दर्शनीयोऽप्यपास्तः" माघ० ११-५७। 2. ನೋಡಲ್ಪಡುವ. 3. ನೋಡಲು ಅರ್ಹವಾದ. 4. ನೋಡಲು ಶಕ್ಯವಾದ. 5. ನೋಡಬೇಕಾದ.

**ದರ್ಶಪ ದರ್ಶಪ** (ಪುಂ) ದೇವತೆ. दर्शं अवलोकनेन पिबति — पा (पाने) "कः" (३-२-४)। ದೇವತೆಗಳು ಯಾವುದನ್ನೂ ತಿನ್ನುವುದೂ ಇಲ್ಲ, ಕುಡಿಯುವುದೂ ಇಲ್ಲ. ದರ್ಶನಮಾತ್ರದಿಂದಲೇ ತೃಪ್ತಿಹೊಂದುವರು. "न वै देवा अश्नन्ति पिबन्ति एतदेवामृतं दृष्ट्वा तृप्यन्ति" छान्दोग्य०। "शुद्धाश्च निर्माणरताश्च देवाः स्पर्शाशिना दर्शपा आज्यपाश्च" भा० अनु० ४९-७५।

**ದರ್ಶಯತ್ ದರ್ಶಯತ್** (ವಿಂ) ತೋರಿಸುತ್ತಿರುವ. दृशिर् (प्रेक्षणे) + णिच् "शतृ" (३-२-१२४)। "दर्शयंस्तदनु

रामणीयकं नन्दनस्य वसुदेवनन्दनः" याद० १७-११। स्त्रियाम् "ङीप्" (४-१-६)। -यन्ती -ಯಂತೀ.

**दर्शयामिनी ದರ್ಶಯಾಮಿನೀ** (स्त्री०) ಕತ್ತಲೆಯಿಂದ ಕೂಡಿದ ಅಮಾವಾಸ್ಯೆಯ ರಾತ್ರಿ.

**दर्शयितव्य ದರ್ಶಯಿತವ್ಯ** (वि०) 1 ತೋರಿಸಲ್ಪಡುವ. 2. ತೋರಿಸಲು ಯೋಗ್ಯವಾದ. 3. ತೋರಿಸಬೇಕಾದ. दृशिर् (प्रेक्षणे) + णिच् "तव्यः" (३-१-९६)।

**दर्शयितृ ದರ್ಶಯಿತೃ** (पुं०) 1. ದ್ವಾರಪಾಲಕ. (वि०) 2. ತೋರಿಸುವವನು, ಪ್ರದರ್ಶಿಸುವವನು. दृशिर् (प्रेक्षणे) + णिच् "तृच्" (३-१-१३३)। 3. (ದಾರಿ) ತೋರಿಸುವವನು, ಸಲಹೆಗಾರ. "पथः श्रुतेर्दर्शयितार ईश्वरा मलीमसामाददते न पद्धतिम्" रघु० ३-४६। स्त्रियाम् "ङीप्" (४-१-५)। -यित्री -ಯಿತ್ರೀ.

**दर्शविपद् ದರ್ಶವಿಪದ್** (पुं०) ಚಂದ್ರ. दर्शे अमावास्यायां विपत् नाशो यस्य।

**दर्शित ದರ್ಶಿತ** (वि०) 1. ತೋರಿಸಲ್ಪಟ್ಟ. दृशिर् (प्रेक्षणे) "क्तः" (३-२-१०२)। "इति दर्शितविक्रियं सुतं मरुतः कोपपरीतमानसम्" किरा० २-२५। 2 ಪ್ರಕಟಿಸಲ್ಪಟ್ಟ, ಹೊರಗೆಡಹಲ್ಪಟ್ಟ. "क्षणमेष राजसतयैव जगदुदयदर्शितोद्यतिः" माघ० १५-१३। 3. ತೋರಿಸಲ್ಪಟ್ಟ, ಪ್ರಕಾಶಗೊಳಿಸಲ್ಪಟ್ಟ, ಕಣ್ಣಿಗೆ ಕಾಣುವಂತೆ ಮಾಡಲ್ಪಟ್ಟ. "यत्रौषधिप्रकाशेन नक्तं दर्शितसञ्चराः" कुमा० ६-४३। 4. ವಿವರಿಸಲ್ಪಟ್ಟ, ವಿವರವಾಗಿ ತಿಳಿಸಲ್ಪಟ್ಟ. 5. ಹಾಜರುಪಡಿಸಲ್ಪಟ್ಟ, ತಂದು ತೋರಿಸಲ್ಪಟ್ಟ.

**दर्शितवत् ದರ್ಶಿತವತ್** (वि०) 1. ತೋರಿಸಿದ. 2. ಪ್ರಕಾಶಪಡಿಸಿದ. 3. ಪ್ರಕಟಿಸಿದ. 4. ವಿವರಿಸಿದ. 5. ಹಾಜರುಪಡಿಸಿದ. दृशिर् (प्रेक्षणे) "क्तवतुः" (३-२-१०२)।

**दर्शिन् ದರ್ಶಿನ್** (वि०) 1. ನೋಡುವ. दृशिर् (प्रेक्षणे) "णिनिः" (३-१-१३४)। "तद्दर्शिनमुदासीनं त्वामेव पुरुषं विदुः" कुमा० २-१३। 2. ತಿಳಿಯುವ, ಮನವರಿಕೆ ಮಾಡಿಕೊಳ್ಳುವ, ಅರ್ಥಮಾಡಿಕೊಳ್ಳುವ. "तस्यै मुनिर्दोहदलिङ्गदर्शी" रघु० १४-७२। 3. ವಿವೇಚನೆ ಮಾಡುವ. 4. ಸಂಪಾದಿಸುವ, ಗಳಿಸುವ. "नृपतिरिव निकाममायदर्शी विभववता समुपास्यते जनेन" मृच्छ० २-७। 5. ಸಾಕ್ಷಾತ್ಕರಿಸುವ. "यो ह्यग्निः स द्विजो विप्रैः मन्त्रदर्शिभिरुच्यते" मनु० ३-२१२। ಸಾಮಾನ್ಯವಾಗಿ ಈ ಪದವು ಸಮಾಸಾಂತ್ಯದಲ್ಲಿ ಬರುವುದು.

**दल – विशरणे** (भ्वा० पर० अक० से०)। दलति। ददाल। दलिता। दलिष्यति। दलतु। अदलत्। ಇತ್ಯಾದಿ. 1. ಅರಳು, ವಿಕಾಸಹೊಂದು. 2. ಒಡೆ, ಎರಡಾಗು, ಸೀಳಾಗು, ಬಿರುಕುಬಿಡು.

कर्मणि :—दल्यते। देले। दलिता। दलिष्यते। दल्यताम्। अदल्यत। ಇತ್ಯಾದಿ.

णिचि :—दलयति। दलयां चकार, -बभूव, -आस। दलयिता। दलयिष्यति। दलयतु। अदलयत्। ಇತ್ಯಾದಿ.

कृत्सु :—दलितव्यम्। दलनीयम्। दल्यम्। दलितः। दलितवान्, -वती। दलन्, -न्ती। दलितम्। दलनम्। दलितुम्। दलित्वा।

**दल – विदारणे** (चुरा० उभ० सक० से०)। दालयति, -ते। दालयां चकार, -चक्रे, -बभूव, -आस। ಇತ್ಯಾದಿ. ಸೀಳುವಮಾಡು, ಒಡೆ, ಭೇದಿಸು.

**दल ದಲ** (न०) 1. ಪತ್ರ, ಎಲೆ. दलति – दल (विशरणे) "अच्" (३-१-१३४)। "ताम्बूलीनां दलैस्तत्र रचितापानभूमयः" रघु० ४-४२। 2. ಖಂಡ, ಶಕಲ, ಚೂರು. "वापीष्वन्तर्लीनमहानीलदलासु" माघ० ४-४४। "दलं खण्डे दलं पत्रे" शाश्व०। 3. ಒಂದು ಭಾಗ, ಅರ್ಧಭಾಗ. "त्रिष्वंशकेषु पादो दलयोराद्येषु दृश्यते यस्याः" वृ० र०। 4. ಹಕ್ಕಿಗಳ ಗರಿ. "अर्धे पत्रे छदे दलम्" त्रिकाण्ड०। 5. ಸಣ್ಣ ಕತ್ತಿ. 6. ಎತ್ತರ, ಔನ್ನತ್ಯ. 7. ಶುದ್ಧಮಾಡಿದ ಲೋಹ. "दलमुत्सेधखण्डयोः। शस्त्रीच्छेदेऽप्यपद्रव्ये पत्रेऽपि" मेदि०।

**दलकोश ದಲಕೋಶ** (पुं०) ಮೊಲ್ಲೆಗಿಡ.

**दलत् ದಲತ್** (वि०) 1. ಅರಳುತ್ತಿರುವ, ವಿಕಾಸಹೊಂದುತ್ತಿರುವ. दल (विशरणे) "शतृ" (३-२-१२४)। "तनुतरङ्गततिं सरसां दलत्कुवलयं वलयन् मरुदाववौ" माघ० ६-३। 2. ಒಡೆಯುತ್ತಿರುವ, ಪುಡಿಯಾಗುತ್ತಿರುವ, ಚೂರಾಗುತ್ತಿರುವ. "दृष्ट्वा रथं प्रलयवातचलद्गिरीन्द्रकल्पं दलद्बलविरावविशेषरौद्रम्" कुमा० १७-११।

**दलन ದಲನ** (न०) 1. ವಿಕಾಸಹೊಂದುವಿಕೆ, ಅರಳುವಿಕೆ. दल (विशरणे) भावे "ल्युट्" (३-३-११५)। 2. ನಾಶಪಡಿಸುವುದು, ಹೋಗಲಾಡಿಸುವುದು. "स्यादस्या नलदं विना न दलने तापस्य कोऽपि क्षमः" नैष० ४-११६। 3. ಒಡೆಯುವಿಕೆ, ಸೀಳುವಿಕೆ, ಚೂರುಮಾಡುವಿಕೆ. (वि०) 4. ಒಡೆಯುವ, ಸೀಳುವ, ಹೋಳುಮಾಡುವ. दल कर०

"ल्युट्" (३-३-११७)। "उत्तस्थुर्मेघदलना वैद्युता इव वल्लयः" भाग० ७-१०-६०। स्त्रियाम् "ङीप्" (४-१-१५)। –नी –ನೀ.

**दलप ದಳಪ** (पुं०) 1. ಆಯುಧ. दल (विदारणे) "कपन्" (उ० ३-१४२)। दलपः प्रहरणम्–सि० कौ०। 2. ಸೇನಾಪತಿ. 3. ಸ್ವರ್ಣ, ಚಿನ್ನ. ಹೀಗೆಯೇ **दलपतिः ದಳಪತಿಃ, दलाधिपतिः ದಳಾಧಿಪತಿಃ, दलाधीश्वरः ದಳಾಧೀಶ್ವರಃ** ಇತ್ಯಾದಿ.

**दलपुष्पा ದಳಪುಷ್ಪಾ** (स्त्री०) ಕೇತಕೀವೃಕ್ಷ, ತಾಳೆಮರ. दल इव पुष्पमस्याः।

**दलसू(चि)ची ದಳಸೂ(ಚಿ)ಚೀ** (स्त्री०) ಕಂಟಕ, ಮುಳ್ಳು. दलस्य सूचिरिव। "कण्टकसंज्ञास्तरुनखशिनाग्रदलसूचिराङ्किलद्रुमराः" हारा०।

**दलाढक ದಲಾಢಕ** (पुं०) 1. ಕಾಡು ಎಳ್ಳಿನ ಗಿಡ. 2. ನಾಗಕೇಸರ. 3. ಫೇನ, ನೊರೆ. 4. ಕಾಲುವೆ. 5. ಕಂದಕ. 6. ಸಿಂದೂರ, ಚಂದ್ರವೆಂಬ ಒಂದು ಗೈರಿಕ ಧಾತು. 7. ವೊಲ್ಲೆ ಗಿಡ. 8. ಆನೆಯ ಕಿವಿ. 9. ಶಿರೀಷ ವೃಕ್ಷ, ಬಾಗೆಮರ. 10. ಚಂಡಮಾರುತ, ಬಿರುಗಾಳಿ. "दलाढकोऽरण्यतिले गैरिके नागकेसरे। कुन्दे महत्तरे फेने करिकर्णशिरीषयोः" हैम०।

**दलाढ्य ದಲಾಢ್ಯ** (पुं०) ಪಂಕ, ಕೆಸರು.

**दलामल ದಲಾಮಲ** (न०) 1. ಮರುಗದ ಗಿಡ. 2. ಮದನ ವೃಕ್ಷ, ಮಂಗಾರೆಗಿಡ. दलेन अमलम्।

**दलाम्ल ದಲಾಮ್ಲ** (न०) ಹುಳಿಪಟ್ಟೆ, ನುಚ್ಚುಗೋಣೀ ಮರ.

**दलि ದಲಿ** (स्त्री०) ಮಣ್ಣು ಹೆಂಟೆ. दल (विशरणे) "इन्" (उ० ४-११७)।

**दलित ದಲಿತ** (वि०) 1. ಒಡೆಯಲ್ಪಟ್ಟ, ಸೀಳಲ್ಪಟ್ಟ, ತುಂಡು ಮಾಡಲ್ಪಟ್ಟ. दल (विशरणे) "क्तः" (३-२-१०२)। 2. ನಾಶಪಡಿಸಲ್ಪಟ್ಟ. "चण्डश्चचाल दलिताखिलशत्रुसैन्यमांसास्थिशोणितविपङ्कविलुप्तचक्रः" कुमा० १७-१०। 3. ಪುಡಿಮಾಡಲ್ಪಟ್ಟ, ಅರೆಯಲ್ಪಟ್ಟ. "दलितमौक्तिकचूर्णविपाण्डवः" माघ० ६-३५। 4. ಅರಳಿಸಲ್ಪಟ್ಟ, ವಿಕಾಸಹೊಂದಿಸಲ್ಪಟ್ಟ. "दलितकोमलपाटलकुड्मले निजवधूश्वसितानुविधायिनि। मरुति वाति विलासिभिरुन्मदभ्रमदलौ मदलौल्यमुपाददे" माघ० ६-२३।

**दलिन् ದಲಿನ್** (वि०) ದಳಗಳಿಂದಕೂಡಿದ. दल "इनिः" (५-२-१३१)।

**दल्मि ದಲ್ಮಿ** (पुं०) 1. ಇಂದ್ರ. दल (विशरणे) "मिः" (उ० ४-४७)। 2. ಇಂದ್ರಾಯುಧ, ವಜ್ರ. दल्मिरिन्द्रायुधम् सि० कौ०।

**दव ದವ** (पुं०) 1. ಅರಣ್ಯ, ಕಾಡು. दवति – दु (गतौ) "अच्" (३-१-१३४)। "विकचकिंशुकसंहतिरुच्चकैरुदवहद्दवहव्यवहश्रियम्" माघ० ६-२१। 2. ಕಾಡುಗಿಚ್ಚು. "दृष्ट्वा गता निर्वृतिमद्य सर्वे गजा दवार्ता इव गाङ्गमम्भः" भाग० ८-६-१३। 3. ಅಗ್ನಿ, ಬೆಂಕಿ. 4. ಉಪತಾಪ.

**दवथु ದವಥು** (पुं०) 1. ಯಾತನೆ, ನೋವು. टुदु (उपतापे) "अथुच्" (३-३-८९)। "केचिद्वेपथुमासेदुरन्ये दवथुमुत्तमम्" भट्टि० ४-४३। 2. ಉರಿತ.

**दवदहन ದವದಹನ** (पुं०) ಕಾಡುಗಿಚ್ಚು. दवजातो दहनः अग्निः। एवं **दवाग्निः ದವಾಗ್ನಿಃ, दवानलः ದವಾನಲಃ** ಇತ್ಯಾದಿ.

**दविष्ठ ದವಿಷ್ಠ** (वि०) ಬಹಳ ದೂರವಾದ. इदमेषामतिशयेन दूरम् "इष्ठन्" (५-३-५५)। रस्य लोपः पूर्वस्य च गुणः (६-४-१५६)।

**दवीयस् ದವೀಯಸ್** (वि०) ದೂರದಲ್ಲಿರುವ, ಬಹಳ ದೂರವಾದ. इदमनयोरतिशयेन दूरम् "ईयसुन्" (५-३-५७)। रस्य लोपः। "तेजस्विमध्ये तेजस्वी दवीयानपि गण्यते" माघ० २-५१। स्त्रियाम् "ङीप्" (४-१-६)। –यसी –ಯಸೀ.

**दशक ದಶಕ** (न०) ಹತ್ತು. दश परिमाणमस्य "कन्" (५-१-५८)।

**दशकण्ठ ದಶಕಂಠ** (पुं०) ರಾವಣ. दश कण्ठा यस्य। ["रावण" ಪದದಲ್ಲಿ ನೋಡಿ.]

**दशकण्ठजित् ದಶಕಂಠಜಿತ್** (पुं०) ಶ್ರೀರಾಮ. दशकण्ठं जितवान् – जि (जये) "क्विप्" (३-२-७६)।

**दशकण्ठरिपु ದಶಕಂಠರಿಪು, –शत्रु –ಶತ್ರು** (पुं०) ಶ್ರೀರಾಮ. दशकण्ठस्य रिपुः शत्रुर्वा।

**दशकन्धर ದಶಕಂಧರ** (पुं०) ರಾವಣ. दश कन्धरा यस्य। "ततः परिव्राड्‍रूपो दशकन्धरोऽयम्" म० वी० ५-१६।

**दशकर्मन् ದಶಕರ್ಮನ್** (न०) ದ್ವಿಜರಿಗೆ ವಿಹಿತವಾದ ಗರ್ಭಾಧಾನ ಮೊದಲಾದ ಹತ್ತು ಸಂಸ್ಕಾರ ಕರ್ಮಗಳು.

**दशकर्मपद्धति ದಶಕರ್ಮಪದ್ಧತಿ** (स्त्री०) ದ್ವಿಜರಿಗೆ ವಿಹಿತವಾದ ಹತ್ತು ಸಂಸ್ಕಾರ ಕರ್ಮಗಳನ್ನು ಹೇಳುವ ಒಂದು ಗ್ರಂಥ.

**दशकुमारचरित्र ದಶಕುಮಾರಚರಿತ್ರ** (ನ೦) ಹತ್ತು ಮಂದಿ ರಾಜಕುಮಾರರ ಸಾಹಸಕಾರ್ಯಗಳನ್ನು ವರ್ಣಿಸುವ ದಂಡಿಮಹಾಕವಿಕೃತವಾದ ಒಂದು ಗದ್ಯಗ್ರಂಥ.

**दशक्षीर ದಶಕ್ಷೀರ** (ನ೦) ಹತ್ತು ಪ್ರಾಣಿಗಳ ಹಾಲು. (1) ಹಸು, (2) ಎಮ್ಮೆ, (3) ಕುದುರೆ, (4) ಆಡು, (5) ಒಂಟೆ, (6) ಕುರಿ, (7) ಆನೆ, (8) ಹೆಂಗಸು, (9) ಜಿಂಕೆ ಮತ್ತು (10) ಕತ್ತೆ ಇವುಗಳ ಈ ಹತ್ತು ವಿಧ ಹಾಲುಗಳು. दशविधं क्षीरम्। "गव्यमाजं तथा चौष्ट्रमाविकं माहिषञ्च यत्। अश्वायाश्चैव नार्याश्च करेणूनां च यत्पय:" सुश्रुत० सूत्र० ४५-४७। ಜಿಂಕೆ ಮತ್ತು ಕತ್ತೆಗಳ ಹಾಲೂ ಸೇರಿ ಹತ್ತು ವಿಧ ಕ್ಷೀರ.

**दशग्रामपति ದಶಗ್ರಾಮಪತಿ** (ಪುಂ) ಹತ್ತು ಗ್ರಾಮಗಳ ಯಜಮಾನ, ಹತ್ತು ಹಳ್ಳಿಗಳ ಒಡೆಯ, ಹತ್ತು ಗ್ರಾಮಗಳ ಯೋಗಕ್ಷೇಮಗಳನ್ನು ನೋಡಿಕೊಳ್ಳುವ ಅಧಿಕಾರಿ. दशानां ग्रामाणां पति:। "ग्रामस्याधिपतिं कुर्यात् दशग्रामपतिं तथा। विंशतीशं शतेशं च सहस्रपतिमेव च। ग्रामे दोषान् समुत्पन्नान् ग्रामिक: शनकै: स्वयम्। शंसेद् ग्रामदशेशाय दशेशो विंशतीशिने। विंशतीशस्तु तत्सर्वं शतेशाय निवेदयेत्। शंसेद् ग्रामशतेशस्तु सहस्रपतये स्वयम्" मनु० ७-११५, १६, १७। ಹತ್ತು ಹಳ್ಳಿಗಳಿಗೊಬ್ಬ ಅಧಿಕಾರಿ. ಅಂತಹ ಇಪ್ಪತ್ತು ಗ್ರಾಮಗಳಿಗೊಬ್ಬ. ನೂರು ಗ್ರಾಮಗಳಿಗೊಬ್ಬ. ಸಾವಿರ ಗ್ರಾಮಗಳಿಗೊಬ್ಬ. ಈ ರೀತಿ ನಿಯಮಿತರಾದ ಅಧಿಕಾರಿಗಳು ತಮ್ಮ ಮೇಲು ಮೇಲಿನ ಅಧಿಕಾರಿಗಳಿಗೆ ತಮ್ಮ ಕುಂದುಕೊರತೆಗಳನ್ನು ನಿವೇದಿಸಿಕೊಳ್ಳಬೇಕು. ಅವರಿಂದ ಪರಿಹಾರಗಳನ್ನು ಪಡೆಯಬೇಕು.

**दशग्रामिक ದಶಗ್ರಾಮಿಕ** (ಪುಂ) ಹತ್ತು ಗ್ರಾಮಗಳ ಅಧಿಕಾರಿ. दश ग्रामा: सन्त्यस्य "ठन्" (५-२-११५)। "इनि:" (५-२-११५)। **–ग्रामिन् –ಗ್ರಾಮಿನ್.**

**दशग्रीव ದಶಗ್ರೀವ** (ಪುಂ) 1. ರಾವಣ. दश ग्रीवा अस्य। "पुष्पोत्कटायां जज्ञाते द्वौ पुत्रौ राक्षसेश्वरौ। कुम्भकर्णदशग्रीवौ बलेनाप्रतिमौ भुवि" भा० वन०। 2. ದಮಘೋಷನ ಒಬ್ಬ ಮಗ. "शिशुपालो दशग्रीवो रैभ्योऽथोपदिशो बली। सर्वास्त्रकुशला वीरा वीर्यवन्तो महाबला:" हरिवं०।

**दशत् ದಶತ್** (ಸ್ತ್ರೀ೦) 1. ಹತ್ತು, ಹತ್ತರ ಗುಂಪು. दश परिमाणमस्य वर्गस्य – दशन् "डति:" (५-१-६०)। (ವಿ೦) 2. ಕಚ್ಚುತ್ತಿರುವ. दंश (दशने) "शतृ" (३-२-१२४)। "दन्तैर्दशन्तो वसुधां शेरते क्षतजोक्षिता:" भा० कर्ण० ८५-३०।

**दशतय ದಶತಯ** (ವಿ೦) ಹತ್ತು, ಹತ್ತರಿಂದ ಕೂಡಿದ ಒಂದು ಗುಂಪು. दश अवयवा: अस्य "तयप्" (५-२-४२)। स्त्रियाम् "ङीप्" (४-१-१५)। **–तयी –ತಯೀ.**

**दशदिश् ದಶದಿಶ್** (ಸ್ತ್ರೀ೦) ಹತ್ತು ದಿಕ್ಕುಗಳು. ಊರ್ಧ್ವ ಮತ್ತು ಅಧರ ಎರಡೂ ಸೇರಿ ಹತ್ತು ದಿಕ್ಕುಗಳು.

**दशधर्म ದಶಧರ್ಮ** (ಪುಂ) ಎಲ್ಲಾ ಪಂಗಡದವರಿಗೂ ಸಮಾನವಾದ ಹತ್ತು ಧರ್ಮಗಳು. (1) धृति:–ಸಂತೋಷ. (2) क्षमा–ಇತರರಿಂದ ಆಗುವ ಅಪಕಾರಕ್ಕೆ ಪ್ರತಿಯಾಗಿ ಮಾಡದಿರುವುದು. (3) दम:–ಚಿತ್ತಸ್ಥೈರ್ಯ. (4) अस्तेयम्–ಕದಿಯದಿರುವುದು. (5) शौचम्–ಶುಚಿಯಾಗಿರುವುದು. (6) इन्द्रियनिग्रह:–ಇಂದ್ರಿಯಗಳ ಜಯ. (7) धी:–ಶಾಸ್ತ್ರಜ್ಞಾನ. (8) विद्या–ಆತ್ಮಜ್ಞಾನ. (9) सत्यम्–ನಿಜ ಹೇಳುವುದು ಮತ್ತು (10) अक्रोध:–ಕೋಪವಿಲ್ಲದಿರುವುದು. ಇವು ಹತ್ತು ಸಾಮಾನ್ಯ ಧರ್ಮಗಳು.

**दशधा ದಶಧಾ** (ಅವ್ಯ೦) ಹತ್ತು ವಿಧವಾಗಿ, ಹತ್ತು ಪ್ರಕಾರವಾಗಿ. दशानां प्रकार: –दशन् "धा" (५-३-४२)। "दैवो न: शुभमातनोतु दशधा निर्वर्तयन् भूमिकाम्" दशावतार०।

**दशन् ದಶನ್** (ವಿ೦ಬ೦ವ೦) ಹತ್ತು. दश दश दशभि: दशभ्य: दशभ्य: दशानाम् दशसु।

**दशन ದಶನ** (ಪುಂ) 1. ದಂತ, ಹಲ್ಲು. दश्यतेऽनेन—दंश (दशने) कर० "ल्युट्" (३-३-११७)। "स्मरदायिन: स्मरयति स्म भृशं दयिताधरस्य दशनांशुभृत:" किरा० ६-१३। "मिश्रं दधद्दशनचर्चुरशब्दमश्व:" माघ० ५-५८। 2. ಶಿಖರ, ತುದಿ, ಅಗ್ರಭಾಗ. (ನ೦) 3. ಕವಚ, ಅಂಗಿ. "दशन: शिखरे दन्ते कवचे तु नपुंसकम्" मेदि०। 4. ಕಚ್ಚುವುದು, ಕಡಿಯುವುದು. दंश भावे "ल्युट्" (३-३-११५)। "दशनं दंशवर्मणो:" नानार्थर०।

**दशनक्षत ದಶನಕ್ಷತ** (ನ೦) ಹಲ್ಲಿನಿಂದ ಕಚ್ಚಿದ ಗಾಯ.

**दशनच्छद ದಶನಚ್ಛದ** (ಪುಂ) ಅಧರ, ತುಟಿ. दशना श्छाद्यन्तेऽनेन — छद (संवरणे) + णिच् "घ:" (३-३-११८)। ह्रस्व: (६-४-९६)।

**दशनपद ದಶನಪದ** (ನ೦) ಹಲ್ಲಿನಿಂದ ಕಚ್ಚಿದ ಜಾಗ, ದಂತಕ್ಷತ. दशनस्य दन्त(क्षत)स्य पदम्।

**दशनबीज ದಶನಬೀಜ** (ಪುಂ) ದಾಡಿಮವೃಕ್ಷ, ದಾಳಿಂಬೆ ಗಿಡ. दशन इव बीजमस्य।

**दशनवासस् ದಶನವಾಸಸ್** (नं०) ಅಧರ, ತುಟಿ. दशनानां वास इव। "दन्तवाससि समानगुणश्रीः संमुखेऽपि परभागमवाप" माघ० १०-८६।

**दशनाङ्क ದಶನಾಂಕ** (पुं०) ಹಲ್ಲಿನಿಂದ ಕಚ್ಚಿದ ಗುರುತು, ದಂತಕ್ಷತ. दशनस्य दन्तस्य अङ्कः। "भातु नाम सुदृशां दशनाङ्कः" माघ० १०-८६।

**दशनोच्छिष्ट ದಶನೋಚ್ಛಿಷ್ಟ** (पुं०) 1. ಚುಂಬನ, ಮುತ್ತಿಕ್ಕುವುದು. दशनस्योच्छिष्टं यत्र। "रेवतीदशनोच्छिष्टपरिपूतपुटे दृशौ" माघ० २-१६। 2. ನಿಶ್ವಾಸ, ನಿಟ್ಟುಸಿರು. "दशनोच्छिष्टः पुंसि स्यान्निश्वासाधरचुम्बयोः" मेदि०।

**दशप ದಶಪ** (पुं०) ಹತ್ತು ಗ್ರಾಮಗಳ ಯಜಮಾನ, ಹತ್ತು ಹಳ್ಳಿಗಳ ಅಧಿಕಾರಿ. दश ग्रामान् पाति – पा (रक्षणे) "कः" (३-२-३)। "दशपस्तेन भर्तव्यस्तेनापि द्विगुणाधिपः" भा० शान्ति० ८७-६।

**दशपूर ದಶಪೂರ** (नं०) ಕೈವರ್ತೀಮುಸ್ತೆ, ತುಂಗಮುಸ್ತೆ, ಕೊನ್ನಾರಿಯ ಒಂದು ಭೇದ.

**दशपूरुष ದಶಪೂರುಷ** (पुं०) ಹತ್ತು ತಲೆಮೊರೆಯವರು, ತಂದೆಯಿಂದ ಹಿಡಿದು ಹಿಂದಿನ ಹತ್ತು ತಲೆಯವರೆಗಿನ ಪುರುಷರು. दशगुणितः पुरुषः।

**दशबल ದಶಬಲ** (पुं०) ಬುದ್ಧದೇವ. दश बलानि यस्य। "दानशीलक्षमावीर्यध्यानप्रज्ञाबलानि च। उपायः प्रणिधिर्ज्ञानं दश बुद्धबलानि वै"।

**दशभुजा ದಶಭುಜಾ** (स्त्री०) ದುರ್ಗಾದೇವಿ, ಪಾರ್ವತಿ. दश भुजा यस्याः। "इतिवृत्तं पुरा कल्पे मनोः स्वायम्भुवेऽन्तरे। आविर्भूता दशभुजा देवी देवहिताय वै" कालिकापु०।

**दशभूमीश ದಶಭೂಮೀಶ** (पुं०) ಬುದ್ಧದೇವ. दशानां दानादीनां भूमीनामीशः। "त्रिमूर्तिर्दशभूमीशः पञ्चज्ञानो बहुक्षमः" त्रिकाण्ड०।

**दशम ದಶಮ** (वि०) 1. ಹತ್ತನೆಯ. दशानां पूरणः "डट्" (५-२-४८)। डटो मडागमः (५-२-४९)। "प्रभुर्बुभूषुर्भुवनत्रयस्य यः शिरोऽतिरागाद्दशमं चिकर्तिषुः" माघ० १-४९। "स्थापितो दशमो मूर्धा लभ्यांश इव रक्षसा" रघु० १०-४१। स्त्रियाम् "ङीप्" (४-१-१५)।

**दशमी ದಶಮೀ.** 2. ಪುರುಷಾಯುಸ್ಸಿನ (ನೂರು ವರ್ಷಗಳ) ಹತ್ತನೆಯ ಒಂದು ಭಾಗ, ತೊಂಬತ್ತೊಂಬತ್ತನೆಯ ವರ್ಷದಿಂದ ನೂರು ವರ್ಷಗಳವರೆಗಿನ ಕಾಲ. दशमी अवस्था। "पञ्चानां त्रिषु वर्णेषु भूयांसि गुणवन्ति च। यत्र स्युः सोऽत्र मानार्हः शूद्रोऽपि दशमीं गतः" मनु० २-१३७। 3. ದಶಮೀ ತಿಥಿ, ಎರಡು ಪಕ್ಷಗಳ ಹತ್ತನೆಯ ತಿಥಿ. 4. ಹತ್ತನೆಯ ಮನ್ಮಥಾವಸ್ಥೆ.

**दशमभाव ದಶಮಭಾವ** (पुं०) ತನ್ವಾದಿ ಹನ್ನೆರಡು ಭಾವಗಳಲ್ಲಿ ಹತ್ತನೆಯ ಭಾವ. ಹತ್ತನೆಯ ಭಾವದಿಂದ ಪ್ರವೃತ್ತಿ, ಆಜ್ಞೆ, ಕೀರ್ತಿ, ವೃಷ್ಟಿ, ಪ್ರವಾಸ, ಪೂರ್ತ (ಬಾವಿ ಕೆರೆ ತೋಪು ಮುಂತಾದ ಧರ್ಮಕಾರ್ಯಗಳು), ಮಾನ, ಕರ್ಮ, ಆಜೀವ (ಜೀವನೋಪಾಯ) ಜಾನುಸ್ಥಾನ (ಮಂಡಿ) ಇವುಗಳನ್ನು ಕುರಿತು ಹೇಳಬೇಕು.

**दशमिन् ದಶಮಿನ್** (वि०) ಹತ್ತನೆಯ ಅವಸ್ಥೆಯುಳ್ಳವನು, ತೊಂಬತ್ತೊಂದು ವರ್ಷಗಳ ನಂತರ ನೂರು ವರ್ಷಗಳೊಳಗಿನ ವಯಸ್ಸಿನಲ್ಲಿರುವನು. दशमोऽवस्थाविशेषोऽस्यास्ति "इनिः" (५-२-१३०)।

**दशमीस्थ ದಶಮೀಸ್ಥ** (वि०) 1. ಹತ್ತನೆಯ ಅವಸ್ಥೆಯಲ್ಲಿರುವವನು, ತೊಂಬತ್ತಕ್ಕಿಂತಲೂ ಹೆಚ್ಚು ವಯಸ್ಸುಳ್ಳ ಮುದುಕ. दशम्यामवस्थायां तिष्ठति – ष्ठा (गतिनिवृत्तौ) "कः" (३-२-४)। "चक्रिणो दशमीस्थस्य रोगिणो भारिणः स्त्रियाः। स्नातकस्य च राज्ञश्च पन्था देयो वरस्य च" मनु० २-१३८। 2. ಹತ್ತನೆಯ ಮನ್ಮಥಾವಸ್ಥೆಯಲ್ಲಿರುವವನು, ಅಂತ್ಯಾವಸ್ಥೆಯಲ್ಲಿರುವವನು.

**दशमुख ದಶಮುಖ** (पुं०) ರಾವಣ. दशमुखान्यस्य। "जीवातवे दशमुखोरगपीडितानां गर्भच्छलेन वसता प्रथमेन पुंसा" चं० रा०।

**दशमुखरिपु ದಶಮುಖರಿಪು** (पुं०) ಶ್ರೀರಾಮ. दशमुखस्य रिपुः। "सीतां हित्वा दशमुखरिपुर्नोपयेमे यदन्याम्" रघु० १४-८७।

**दशमूल ದಶಮೂಲ** (नं०) ಹತ್ತು ವಿಧ ಔಷಧ ಮೂಲಿಕೆಗಳಿಂದ ತಯಾರಿಸಲ್ಪಟ್ಟ ಮತ್ತು ಬಲವನ್ನು ವೃದ್ಧಿಪಡಿಸುವ ಒಂದು ಔಷಧ. दशानां मूलानां समाहारः। पात्राद्यन्तत्वात् न ङीप् (वा० २-४-१७)। ಬಿಲ್ವ, ಹೆಮ್ಮರ, ಗಂಭಾರಿ (ತಗ್ಗಿ ಗಿಡ), ಕರಿಯ ಗಜ್ಜುಗ, ಅಗ್ನಿಮಂಥ (ನರುವಲುಗಿಡ), ಶಾಲಪರ್ಣೀ (ಒಂದೆಲೆಹೊನ್ನೆ), ಪೃಶ್ನಿಪರ್ಣೀ (ನರಿಹೊನ್ನೆ ಗಿಡ), ಬೃಹತೀದ್ವಯ (ಹೆಗ್ಗುಳ್ಳ, ನೆಲಗುಳ್ಳಗಳು), ಗೋಕ್ಷುರ (ಆನೆ ನೆಗ್ಗಿಲು ಗಿಡ) ಇವು ಹತ್ತು ವಿಧ ಮೂಲಿಕೆಗಳು. "बिल्वश्योनाकगाम्भारी पाटलागणिकारिका। दीपनं कफवातघ्नं पञ्चमूलमिदं महत्। शालपर्णी-

पृश्निपर्णीबृहतीद्वयगोक्षुरम्। वातपित्तहरं वृष्यं कनीयः पञ्चमूलकम्। उभयं दशमूलं तु सन्निपातज्वरापहम्। कासे श्वासे च तन्द्रायां पार्श्वशूले च शस्यते। पिप्पलीचूर्णसंयुक्तं कण्ठहृद्ग्रहनाशनम्" चक्रद०।

**दशरथ ದಶರಥ** (पुं०) ಸೂರ್ಯವಂಶದ ಪ್ರಸಿದ್ಧನಾದ ಒಬ್ಬ ದೊರೆ, ಅಜಮಹಾರಾಜನ ಮಗ, ಶ್ರೀರಾಮಚಂದ್ರನ ತಂದೆ. दशसु दिक्षु अप्रतिहतो रथोऽस्य।

**दशरथतनय ದಶರಥತನಯ, –तनूज –ತನೂಜ** (पुं०) ಶ್ರೀರಾಮ.

**दशरथपुत्र ದಶರಥಪುತ್ರ** (पुं०) ಶ್ರೀರಾಮಚಂದ್ರ. दशरथस्य पुत्रः सुतो वा।

**दशरश्मिशत ದಶರಶ್ಮಿಶತ** (पुं०) ಸಹಸ್ರ ಕಿರಣಗಳುಳ್ಳ ಸೂರ್ಯ. दश रश्मिशतान्यस्य। "दशरश्मिशतोपमद्युति यशसा दिक्षु दशस्वपि श्रुतम्। दशपूर्वरथं यमाख्यया दशकण्ठारिगुरुं विदुर्बुधाः" रघु० ८-१९।

**दशरात्र ದಶರಾತ್ರ** (पुं०) 1. ಹತ್ತು ದಿನಗಳಲ್ಲಿ ನಡೆಸಬಹುದಾದ ಯಾಗ. दशभिः रात्रिभिः निर्वृत्तः। (न०) 2. ಹತ್ತು ರಾತ್ರಿಗಳು, ಹತ್ತು ದಿನಗಳು. दशानां रात्राणां समाहारः "अच्" (५-४-८७)। संख्यापूर्वं रात्रंक्लीबम्। "प्रतिषेधैः समं तत्र दशरात्रमशुध्यति। यच्छेषं दशरात्रस्य तावदेवाशुचिर्भवेत्" मनु०।

**दशरूपक ದಶರೂಪಕ** (न०) ನಾಟಕ ಮೊದಲಾದ ಹತ್ತು ದೃಶ್ಯ ಕಾವ್ಯಗಳ ಲಕ್ಷಣಗಳನ್ನು ಹೇಳುವ ಒಂದು ಲಕ್ಷಣ ಗ್ರಂಥ. दश रूपकाणि दृश्यकाव्यानि प्रतिपाद्यतया सन्त्यत्र "अच्" (५-२-१२७)। **ಹತ್ತು ರೂಪಕಗಳು:** "नाटकं सप्रकरणं भाणः प्रहसनं डिमः। व्यायोगसमवाकारौ वीथ्यङ्केहामृगा दश"।

**दशरूपभृत् ದಶರೂಪಭೃತ್** (पुं०) ಹತ್ತು ವಿಧ ರೂಪಗಳನ್ನು ಸ್ವೀಕರಿಸಿ ಅವತರಿಸಿದ ವಿಷ್ಣು. दश मत्स्यादीनि रूपाणि बिभर्ति — डु भृञ् (धारणपोषणयोः) "क्विप्" (३-२-७६)।

**दशलक्षणक ದಶಲಕ್ಷಣಕ** (वि०) ಹತ್ತು ವಿಧ ಲಕ್ಷಣಗಳುಳ್ಳ (ಧರ್ಮ). दश लक्षणान्यस्य "कप्" (५-४-१५४)। "दशलक्षणको धर्मः सेवितव्यः प्रयत्नतः" मनु० ६-९१। क्षमा ಮತ್ತು दशधर्म ಪದಗಳಲ್ಲಿ ನೋಡಿ.

**दशवर्ष ದಶವರ್ಷ** (वि०) 1. ಹತ್ತು ವರ್ಷ ವಯಸ್ಸುಳ್ಳ. दश वर्षाणि यस्य। "ब्राह्मणं दशवर्षं तु शतवर्षं तु भूमिपम्" मनु० २-३५। 2. ಹತ್ತು ವರ್ಷಗಳಿಂದ ನಡೆದ, ಹತ್ತು ವರ್ಷಗಳ ಕಾಲದಲ್ಲಿ ನಡೆದ. दशभिः वर्षैः निर्वृत्तः वा "खः" (५-१-८८)। **दशवर्षीणः ದಶವರ್ಷೀಣಃ.** पक्षे "ठञ्" (५-१-१८)। उत्तरपदवृद्धिः (७-३-१६)। **दशवार्षिकः ದಶವಾರ್ಷಿಕಃ.** वा लुक्। **दशवर्षः ದಶವರ್ಷಃ.** 3. ಹತ್ತು ವರ್ಷಗಳ ಕಾಲ ವೇತನ ಕೊಟ್ಟು ಕ್ರಯಕ್ಕೆ ಕೊಳ್ಳಲ್ಪಟ್ಟ. दशभिः वर्षैः भृतः। 4. ಹತ್ತು ವರ್ಷಗಳ ಕಾಲ ಉಪಚರಿಸಿ ಕೆಲಸಮಾಡಿಸಲ್ಪಟ್ಟ. दशभिः वर्षैः अधीष्टः सत्कृत्य व्यापारितः। 5. ಹತ್ತು ವರ್ಷಗಳ ಕಾಲ ಇದ್ದ. दशभिः वर्षैः भूतः। ಈ ಎಲ್ಲಾ ಅರ್ಥಗಳಲ್ಲೂ खः ठञ् ಮತ್ತು ಇವುಗಳಿಗೆ ವಿಕಲ್ಪವಾಗಿ ಲುಕ್ ಬಂದು **दशवर्षीणः ದಶವರ್ಷೀಣಃ, दशवार्षिकः ದಶವಾರ್ಷಿಕಃ, दशवर्षः ದಶವರ್ಷಃ** ಎಂದು ಮೂರು ರೂಪಗಳಾಗುವುವು.

**दशवाजिन् ದಶವಾಜಿನ್** (पुं०) ಚಂದ್ರ. दश वाजिनोऽस्य रथे। "दशाश्वं श्वेतपद्मस्थं विचिन्त्योमाधिदैवतम्"।

**दशवार्षिक ದಶವಾರ್ಷಿಕ** (वि०) "दशवर्ष" ಪದದಲ್ಲಿ ನೋಡಿ.

**दशविध ದಶವಿಧ** (वि०) ಹತ್ತು ವಿಧವಾದ, ಹತ್ತು ಪ್ರಕಾರವಾದ. दश विधा प्रकारा यस्य।

**दशशत ದಶಶತ** (न०) 1. ಒಂದು ಸಹಸ್ರ, ಒಂದು ಸಾವಿರ. दशगुणितं शतम्। "दशशतनयनेऽपि वीक्ष्यमाणे दशरथपुत्रसिषेविषैव जाता" चं० रा०। 2. ಹತ್ತು ಅಧಿಕವಾದ ಒಂದು ನೂರು, ಒಂದುನೂರ ಹತ್ತು. दशाधिकं शतम्। (वि०) 3. ಒಂದು ಸಾವಿರ. दश शतानि येषाम्। "दशशतदलभेदं कौतुकेनाशु कृत्वा" माघ० ११-६१।

**दशसाहस्र ದಶಸಾಹಸ್ರ** (न०) ಹತ್ತು ಸಾವಿರ, ಅಯುತ. दशगुणितं सहस्रं परिमाणमस्य "अण्" (५-२-१०३)।

**दशसाहस्रिक ದಶಸಾಹಸ್ರಿಕ** (वि०) ಹತ್ತು ಸಹಸ್ರದ ಒಂದು ಭಾಗ. दशसहस्राणाम् परिमाणम् "ठञ्" (५-१-१८)। उत्तरपदवृद्धिः (७-३-१७)।

**दशा ದಶಾ** (स्त्री०) 1. ಅವಸ್ಥೆ, ಸ್ಥಿತಿ, ಇರಿಕೆ. दश्यते—दश (दशने) "अङ्" (३-३-१०४)। "द्विषन्निमित्ता यदियं दशा ततः समूलमुन्मूलयतीव मे मनः" किरा० १-४१। 2. ಜೀವಮಾನದ ಒಂದು ಕಾಲ, ಬಾಲ್ಯ ಯೌವನ ಕೌಮಾರ ಮತ್ತು ವಾರ್ಧಕ ರೂಪವಾದ ಅವಸ್ಥೆ, ವಯಸ್ಸಿನ ಧರ್ಮ. 3. ದೀಪದ ಬತ್ತಿ. "प्रदीपः स्नेहमादत्ते दशयाभ्यन्तरस्थया" माघ० २-८५। 4. ಮನ್ಮಥಾವಸ್ಥೆ,

ಮನ್ಮಥನ ವ್ಯಾಪಾರದಿಂದ ಉಂಟಾಗುವ ದರ್ಶನ ಮೊದಲಾದ ಅವಸ್ಥೆಗಳು. "दृङ्मन:सङ्गसंकल्पा जागर: कृशतारति:। ह्रीत्यागोन्मादमूर्च्छान्ता इत्यनङ्गदशा दश"। 5. ಸೂರ್ಯಾದಿ ನವಗ್ರಹಗಳ ದಶೆಗಳು. ಜಾತಕನ ಜನ್ಮ ನಕ್ಷತ್ರಾನುಸಾರವಾಗಿ ಸೂರ್ಯ ಮೊದಲಾದ ಗ್ರಹಗಳು ಅಧಿಪತಿಗಳಾಗಿದ್ದುಕೊಂಡು ಫಲಕೊಡುವ ಕಾಲ.

ಈ ಕೆಳಗೆ ಕಂಡಂತೆ ಆಯಾನಕ್ಷತ್ರಗಳಲ್ಲಿ ಜನಿಸಿದವನಿಗೆ ಆಯಾಗ್ರಹಗಳ ದಶೆಗಳು ಆರಂಭವಾಗಿ ನಡೆಯುವುವು:

| ನಕ್ಷತ್ರಗಳು | ದಶಾನಾಥ | ವರ್ಷಗಳು |
|---|---|---|
| 1. ಕೃತ್ತಿಕಾ<br>ಉತ್ತರಫಲ್ಗುನೀ<br>ಉತ್ತರಾಷಾಢಾ | ರವಿ | 6 |
| 2. ರೋಹಿಣೀ<br>ಹಸ್ತಃ<br>ಶ್ರವಣಾ | ಚಂದ್ರ | 10 |
| 3. ಮೃಗಶೀರ್ಷಮ್<br>ಚಿತ್ರಾ<br>ಧನಿಷ್ಠಾ | ಕುಜ | 7 |
| 4. ಆರ್ದ್ರಾ<br>ಸ್ವಾತೀ<br>ಶತಭಿಷಕ್ | ರಾಹು | 18 |
| 5. ಪುನರ್ವಸುಃ<br>ವಿಶಾಖಾ<br>ಪೂರ್ವಾಭಾದ್ರಾ | ಗುರು | 16 |
| 6. ಪುಷ್ಯಃ<br>ಅನೂರಾಧಾ<br>ಉತ್ತರಾಭಾದ್ರಾ | ಶನಿ | 19 |
| 7. ಆಶ್ಲೇಷಾ<br>ಜ್ಯೇಷ್ಠಾ<br>ರೇವತೀ | ಬುಧ | 17 |
| 8. ಮಖಾ<br>ಮೂಲಮ್<br>ಅಶ್ವಿನೀ | ಕೇತು | 7 |
| 9. ಪೂರ್ವಫಲ್ಗುನೀ<br>ಪೂರ್ವಾಷಾಢಾ<br>ಭರಣೀ | ಶುಕ್ರ | 20 |
| | ಒಟ್ಟು ವರ್ಷಗಳು | 120 |

[ಇವುಗಳ ಅಂತರ್ದಶಾವಿವರಕ್ಕೆ "भुक्ति" ಪದದಲ್ಲಿ ನೋಡಿ.] (स्त्री० ಬಂ ವಂ) 6. ಬಟ್ಟೆಯ ತುದಿ, ಸೆರಗು, ಅಂಚು. "दशावस्थादीपवर्त्योर्वस्त्रान्ते भूम्नि योषिति" मेदि०।

**दशांश ದಶಾಂಶ** (पुं०) ಹತ್ತನೆಯ ಒಂದು ಭಾಗ.

**दशाकर्ष ದಶಾಕರ್ಷ** (पुं०) 1. ದೀಪ. दशया तैलमाकर्षति — आ + कृष (विलेखने) "अच्" (३-१-१३४)। 2. ಬಟ್ಟೆಯ ಸೆರಗು.

**दशाक्षर ದಶಾಕ್ಷರ** (नं०) 1. ಒಂದು ಪಾದದಲ್ಲಿ ಹತ್ತು ಅಕ್ಷರಗಳುಳ್ಳ "ಪಙ್ಕ್ತಿ" ಛಂದಸ್ಸು. (स्त्री०) **–अक्षरी –ಅಕ್ಷರೀ.** 2. ತಂತ್ರೋಕ್ತವಾದ ಒಂದು ಸ್ತ್ರೀ ದೇವತೆಯ ಮಂತ್ರ. "एषा दशाक्षरी विद्या सर्वसंपत्प्रदायिनी" तन्त्रसा०।

**दशाङ्गधूप ದಶಾಂಗಧೂಪ** (पुं०) 1. ಅಪಗ್ರಹ ಮತ್ತು ಪಿಶಾಚಗಳನ್ನು ನಾಶಪಡಿಸುವ ಒಂದು ವಿಧ ಧೂಪ. "वासयेद्वा दशाङ्गेन त्रिदोषघ्नेन चार्भकम्। नश्यन्ति यस्य धूपेन अवग्रहपिशाचका:"। 2. ದೇವರ ಪೂಜಾ ಸಮಯದಲ್ಲಿ ಸಮರ್ಪಿಸುವ ಒಂದು ವಿಧ ಧೂಪ. "मधु मुस्तं घृतं गन्धो गुग्गुल्वगुरुशैलजम्। सरलं सिह्लसिद्धार्थं दशाङ्गधूप उच्यते"।

**दशाङ्गुल ದಶಾಂಗುಲ** (नं०) 1. ಖರ್ಬೂಜದಹಣ್ಣು. (वि०) 2. ಹತ್ತು ಅಂಗುಲಿಗಳ ಪ್ರಮಾಣವುಳ್ಳ. दश अङ्गुलय: प्रमाणं यस्य। "द्वयसच्" (५-२-३७)। तस्य लुक् (वा० ५-२-३७)। तत: "अच्" (५-४-८६)। "निक्षेप्योऽयोमय: शङ्कु: ज्वलन्नास्ये दशाङ्गुल:" मनु० ८-२७१।

**दशाधिपति ದಶಾಧಿಪತಿ** (पुं०) ಸೂರ್ಯಾದಿ ಗ್ರಹಗಳ ದಶೆಗಳಿಗೆ ಅಧಿಪತಿಗಳಾದ ಸೂರ್ಯ ಚಂದ್ರ ಕುಜ ರಾಹು ಗುರು ಶನಿ ಬುಧ ಮೊದಲಾದ ಗ್ರಹಗಳು.

**दशानन ದಶಾನನ** (पुं०) ಹತ್ತು ಮುಖಗಳುಳ್ಳ, ರಾವಣ. दश आननानि यस्य। "दशाननतिरस्कारप्रशस्तिमिव लक्ष्मण:" म० वी० ५-२२।

**दशानाथ ದಶಾನಾಥ** (पुं०) "दशाधिपति" ಪದದ ಅರ್ಥ.

**दशान्त ದಶಾಂತ** (पुं०) 1. ವಾರ್ಧಕ, ಮುಪ್ಪು, ಕೊನೆಯ ಅವಸ್ಥೆ. 2. ದೀಪದ ಬತ್ತಿಯ ಕೊನೆ. दशाया: जीवितान्तिमावस्थाया: अन्त: वर्त्या वा अन्त:।

**दशार्ण ದಶಾರ್ಣ** (पुं० ಬಂ ವಂ) 1. ಒಂದು ದೇಶ. दश ऋणानि यत्र। दशार्णो देश: सि० कौ०। "संपत्स्यन्ते

कतिपयदिनस्थायिहंसा दशार्णाः" मेघ० १-२३। ಈ ದೇಶವು ಮಧ್ಯದೇಶಕ್ಕೆ ಆಗ್ನೇಯದಿಕ್ಕಿನಲ್ಲಿರುವುದು. "आग्नेय्यां दिशि कोसलकलिङ्गवङ्गोपवङ्गजठराङ्गाः। ........................। किष्किन्धकण्टकस्थलनिषादराष्ट्राणिपुरिकदाशार्णाः" बृहत्सं० १४-१०। (स्त्री०) **–र्णा –ರ್ಣಾ.** 2. ಒಂದು ನದಿ. दश ऋणानि जलानि यत्र। "ऋणं देये जले दुर्गे" हेम०।

**दशावतार ದಶಾವತಾರ** (पुं०) ವಿಷ್ಣು. दश अवतारा मत्स्यादयो यस्य। **ವಿಷ್ಣುವಿನ ಹತ್ತು ಅವತಾರಗಳು:** (1) ಮತ್ಸ್ಯ, (2) ಕೂರ್ಮ, (3) ವರಾಹ, (4) ನೃಸಿಂಹ, (5) ವಾಮನ, (6) ಜಾಮದಗ್ನ್ಯ, (7) ಶ್ರೀರಾಮ, (8) ಶ್ರೀಕೃಷ್ಣ, (9) ಬುದ್ಧ ಮತ್ತು (10) ಕಲ್ಕಿ.

(1) ಕಲ್ಪಾಂತ್ಯದಲ್ಲಿ ಬ್ರಹ್ಮನು ನಿದ್ರೆಮಾಡುತ್ತಿದ್ದಾಗ ಅವನ ಮುಖದಿಂದ ಹೊರಟ ವೇದಗಳನ್ನು ಹಯಗ್ರೀವ ನೆಂಬ ರಾಕ್ಷಸನು ಅಪಹರಿಸಲಾಗಿ ಶ್ರೀ ವಿಷ್ಣುವು ಮತ್ಸ್ಯ ರೂಪದಿಂದ ಅವತರಿಸಿ ರಾಕ್ಷಸನನ್ನು ಸಂಹರಿಸಿ ವೇದವನ್ನು ಉದ್ಧರಿಸಿದನು. "प्रलयपयसि धातुः सुप्तशक्तेर्मुखेभ्यः श्रुतिगणमपनीतं प्रत्युपादत्त हत्वा। दितिजमकथयद्यो ब्रह्म सत्यव्रतानां तमहमखिलहेतुं जिह्ममीनं नतोऽस्मि" भाग० ८-२४-६१। ವಿಷ್ಣುವಿನ ಈ **ಮತ್ಸ್ಯಾವತಾರವು** ಬ್ರಹ್ಮನ ಇಪ್ಪತ್ತೈದನೆಯ ರಾತ್ರಿಯಲ್ಲಿ ನಡೆಯಿತು.

(2) ಒಂದು ಕಾಲದಲ್ಲಿ ರಾಕ್ಷಸರು ದೇವತೆಗಳಿಗಿಂತಲೂ ಬಲಿಷ್ಠರಾಗಿದ್ದರು. ಆಗ ದೇವತೆಗಳು ನಿರ್ವೀರ್ಯರಾಗಿದ್ದು ದನ್ನು ಕಂಡು ವಿಷ್ಣುವು "ರಾಕ್ಷಸರೊಂದಿಗೆ ನೀವು ಸ್ನೇಹ ಮಾಡಿಕೊಂಡು ಕ್ಷೀರಸಮುದ್ರವನ್ನು ಕಡೆದು ಅಮೃತವನ್ನು ಸಂಪಾದಿಸುವರೆ ನಿಮಗೆ ಕ್ಷೇಮವುಂಟು" ಎಂದು ದೇವತೆಗಳಿಗೆ ಹೇಳಲು ದೇವತೆಗಳು ರಾಕ್ಷಸರೊಡನೆ ಸ್ನೇಹ ಬೆಳಸಿ ಕೊಂಡು ಸಮುದ್ರಮಥನ ಮಾಡುತ್ತಿದ್ದಾಗ ಕಡೆಗೋಲಾಗಿದ್ದ ಮಂದರಪರ್ವತವು ಸಮುದ್ರದ ತಳದಲ್ಲಿ ಕುಳಿತು ಕೊಂಡಿತು. ಆಗ ದೇವತೆಗಳ ಅನುಗ್ರಹಕ್ಕಾಗಿ ವಿಷ್ಣುವು ಕೂರ್ಮರೂಪವನ್ನು ತಾಳಿ ತನ್ನ ಬೆನ್ನಿನ ಮೇಲೆ ಪರ್ವತ ವನ್ನು ಹೊತ್ತು ಸಮುದ್ರಮಥನಕ್ಕೆ ಸೌಕರ್ಯಮಾಡಿ ಕೊಟ್ಟನು. ಈ **ಕೂರ್ಮಾವತಾರವು** ಈಗಿನ ಶ್ವೇತ ವರಾಹಕಲ್ಪದ ಚಾಕ್ಷುಷಮನ್ವಂತರದಲ್ಲಿ ನಡೆಯಿತು. "मेघश्यामः कनकपरिधिः कर्णविद्योतविद्युन्मूर्ध्नि भ्राजद्विलुलितकचः स्रग्धरो रक्तनेत्रः। जैत्रैर्दोर्भिर्जगदभयदैर्दन्दशूकं गृहीत्वा मथ्नन् मथ्ना प्रतिगिरिरिवाशोभताथोद्धृताद्रिः" भाग० ८-७-१७।

(3) **ವರಾಹಾವತಾರವು** ವಿಷ್ಣುವಿನ ಹತ್ತು ಅವತಾರ ಗಳಲ್ಲಿ ಮೂರನೆಯದು. ಪ್ರಳಯಾರ್ಣವದಲ್ಲಿ ಮುಳುಗಿ ಹೋಗಿದ್ದ ಭೂಮಿಯನ್ನು ಉದ್ಧರಿಸಲು ಮತ್ತು ಲೋಕ ಕಂಟಕನಾಗಿದ್ದ ಹಿರಣ್ಯಾಕ್ಷನನ್ನು ಸಂಹರಿಸಲು ವಿಷ್ಣುವು ವರಾಹಾವತಾರ ತಾಳಿದನು. ಈ ಅವತಾರವು ಈಗಿನ ಶ್ವೇತವರಾಹಕಲ್ಪದ ವೈವಸ್ವತ ಮನ್ವಂತರದಲ್ಲಿ ನಡೆಯಿತು. मत्स्यपु०।

(4) ಮಹಾವಿಷ್ಣುವಿನ ದಶಾವತಾರಗಳಲ್ಲಿ **ನೃಸಿಂಹಾವತಾರವು** ನಾಲ್ಕನೆಯದು. ಬ್ರಹ್ಮನಿಂದ ವರವನ್ನು ಪಡೆದ ಹಿರಣ್ಯಕಶಿಪುವು ಲೋಕಕಂಟಕನಾಗಿ ಎಲ್ಲರನ್ನೂ ಪೀಡಿಸುತ್ತಲೂ ವಿಷ್ಣುಭಕ್ತನಾದ ತನ್ನ ಮಗ ಪ್ರಹ್ಲಾದ ನನ್ನು ಅನೇಕವಿಧವಾಗಿ ಹಿಂಸಿಸುತ್ತಲೂ ಇದ್ದಾಗ ವಿಷ್ಣುವು ಅವನ ಸಭಾಂಗಣದ ಕಂಬದಿಂದ ನೃಸಿಂಹರೂಪದಿಂದ ಅವತಾರಹೊಂದಿ ಹಿರಣ್ಯಕಶಿಪುವನ್ನು ಸಂಹರಿಸಿದನು. ಈ ಅವತಾರವು ಈಗಿನ ವೈವಸ್ವತ ಮನ್ವಂತರದ ನಾಲ್ಕನೆಯ "ಕೃತ" ಯುಗದಲ್ಲಿ ನಡೆಯಿತು.

(5) **ವಾಮನಾವತಾರವು** ವಿಷ್ಣುವಿನ ಐದನೆಯ ಅವತಾರ. ಇದು ಈಗಿನ ವೈವಸ್ವತಮನ್ವಂತರದ ಏಳನೆಯ "ತ್ರೇತಾ" ಯುಗದಲ್ಲಿ ನಡೆಯಿತು. ಬಲಿಚಕ್ರವರ್ತಿಯು ಇಂದ್ರನೊಡನೆ ಯುದ್ಧಮಾಡಿ ಸ್ವರ್ಗವನ್ನು ಸ್ವಾಧೀನ ಪಡಿಸಿಕೊಂಡು ನರ್ಮದಾ ತೀರದಲ್ಲಿ ಅಶ್ವಮೇಧ ಯಾಗ ವನ್ನು ಮಾಡತೊಡಗಿದನು. ಆಗ ವಿಷ್ಣುವು ಅದಿತಿಯಲ್ಲಿ ವಾಮನರೂಪದಿಂದ ಅವತರಿಸಿ ಬಲಿಚಕ್ರವರ್ತಿಯಲ್ಲಿಗೆ ಬಂದು ಮೂರಡಿ ಭೂಮಿಯನ್ನು ಬೇಡಿ ತ್ರಿವಿಕ್ರಮನಾಗಿ ಬೆಳೆದು ಬಲಿಯ ತಲೆಯ ಮೇಲೆ ಕಾಲಿಟ್ಟು ಪಾತಾಳಕ್ಕೆ ಮೆಟ್ಟಿ ನಿಗ್ರಹಿಸಿದನು.

(6) **ಪರಶುರಾಮಾವತಾರವು** ವಿಷ್ಣುವಿನ ಆರನೆಯ ಅವತಾರ. ಇದು ಈಗಿನ ವೈವಸ್ವತ ಮನ್ವಂತರದ ಹತ್ತೊಂಬತ್ತನೆಯ "ತ್ರೇತಾ" ಯುಗದಲ್ಲಿ ನಡೆಯಿತು. ವಿಷ್ಣುವು ಜಮದಗ್ನಿ ಮಹರ್ಷಿಯ ಮಗನಾಗಿ ಅವತರಿಸಿ ದುಷ್ಟ ಕ್ಷತ್ರಿಯರನ್ನು ಧ್ವಂಸಮಾಡಿದನು. "एकोनविंश्यां त्रेतायां सर्वक्षत्रान्तकृद्विभुः। जामदग्न्यस्तथा षष्ठो विश्वामित्रपुरस्सरः" मत्स्यपु०।

(7) **ಶ್ರೀರಾಮಾವತಾರವು** ವಿಷ್ಣುವಿನ ಹತ್ತು ಅವತಾರಗಳಲ್ಲಿ ಏಳನೆಯದು. ಲೋಕಕಂಟಕರಾಗಿದ್ದ ರಾವಣ ಕುಂಭಕರ್ಣರ ನಿಗ್ರಹಕ್ಕಾಗಿ ವಿಷ್ಣುವು ದಶರಥನಿಗೆ ಕೌಸಲ್ಯೆಯಲ್ಲಿ ಪುತ್ರನಾಗಿ ಅವತರಿಸಿದನು. [ವಿವರಕ್ಕೆ "राम" ಪದದಲ್ಲಿ ನೋಡಿ]. ಇಪ್ಪತ್ತನಾಲ್ಕನೆಯ "ತ್ರೇತಾ" ಯುಗ ದಲ್ಲಿ ಈ ಅವತಾರ ನಡೆಯಿತು. "चतुर्विंशे युगे रामो

वसिष्ठेन पुरोधसा। सप्तमो रावणस्यार्थे जज्ञे दशरथात्मजः" मत्स्यपु०।

(8) **ಶ್ರೀಕೃಷ್ಣಾವತಾರವು** ವಿಷ್ಣುವಿನ ಹತ್ತು ಅವತಾರಗಳಲ್ಲಿ ಎಂಟನೆಯದು. ವಸುದೇವನ ಪತ್ನಿ ದೇವಕಿಯ ಗರ್ಭದಲ್ಲಿ ವಿಷ್ಣುವು ಶಿಶುಪಾಲ ದಂತವಕ್ತ್ರರ ಸಂಹಾರಕ್ಕಾಗಿ ಶ್ರೀಕೃಷ್ಣನಾಗಿ ಅವತರಿಸಿದನು. ಈ ಅವತಾರವು ಈಗ ನಡೆಯುತ್ತಿರುವ ವೈವಸ್ವತ ಮನ್ವಂತರದ ಇಪ್ಪತ್ತೆಂಟನೆಯ "ದ್ವಾಪರ"ಯುಗದ ಕೊನೆಯಲ್ಲಿ ನಡೆಯಿತು. ["कृष्ण" ಪದದಲ್ಲಿ ನೋಡಿ.]

(9) **ಬುದ್ಧಾವತಾರವು** ವಿಷ್ಣುವಿನ ಒಂಬತ್ತನೆಯ ಅವತಾರ. ದೇವತೆಗಳನ್ನು ದ್ವೇಷಿಸುವವರ ಬುದ್ಧಿಯನ್ನು ಮೋಹಗೊಳಿಸಲು ಕೀಟಕ ದೇಶದಲ್ಲಿ ಜಿನನೆಂಬುವನ ಮನೆಯಲ್ಲಿ ಅವತರಿಸಿದನು. "ततः कलौ सम्प्रवृत्ते सम्मोहाय सुरद्विषाम्। बुद्धो नाम्ना जिनसुतः कीटकेषु भविष्यति" भाग० १-३-२४।

(10) **ಕಲ್ಕಿ ಅವತಾರವು** ವಿಷ್ಣುವಿನ ಹತ್ತು ಅವತಾರಗಳಲ್ಲಿ ಹತ್ತನೆಯದು. ಲೋಕವೆಲ್ಲಾ ಅಧರ್ಮ ಭೂಯಿಷ್ಠವಾಗಿ ದುಷ್ಟರಾಜರ ಪೀಡೆಯನ್ನು ತಡೆಯಲಾರದೆ ಭೂದೇವಿಯು ಬ್ರಹ್ಮಾದಿ ದೇವತೆಗಳೊಡನೆ ವಿಷ್ಣುವಿನಲ್ಲಿ ಮೊರೆಯಿಡಲು ವಿಷ್ಣುವು ವಿಷ್ಣುಯಶನೆಂಬ ಬ್ರಾಹ್ಮಣನ ಮನೆಯಲ್ಲಿ ಕಲ್ಕಿಯೆಂಬ ಹೆಸರಿನಿಂದ ಅವತರಿಸಿ ದುಷ್ಟನಿಗ್ರಹ ಮಾಡಿ ಜಗತ್ತಿನಲ್ಲಿ ಶಾಂತಿ ಸೌಖ್ಯಗಳು ನೆಲೆಸುವಂತೆ ಮಾಡುವನು. "अथासौ युगसन्ध्यायां दस्युप्रायेषु राजसु। जनिता विष्णुयशसो नाम्ना कल्किर्जगत्पतिः" भाग० १-३-२५।

**दशाश्व ದಶಾಶ್ವ** (पुं०) 1. ಚಂದ್ರ. दश अश्वा रथेऽस्य। "रथस्त्रिचक्रः सोमस्य कुन्दाभास्तस्य वाजिनः। वामदक्षिणतो युक्ता दश तेन चरत्यसौ। वीथ्याश्रयाणि ऋक्षाणि ध्रुवाधारेण वेगिना। ह्रासवृद्धिक्रमस्तस्य रश्मीनां सवितुर्यथा। अर्कस्येव स्थितस्याश्वाः सकृद्युक्ता वहन्ति ते। कल्पमेकं मुनिश्रेष्ठ वारिगर्भसमुद्भवाः" विष्णुपु० २-१२। 2. ಇಕ್ಷ್ವಾಕುರಾಜನ ಒಬ್ಬ ಮಗ.

**दशाश्वमेध ದಶಾಶ್ವಮೇಧ** (न०) ಕಾಶೀಕ್ಷೇತ್ರದಲ್ಲಿರುವ ಒಂದು ಪುಣ್ಯ ತೀರ್ಥ.

**दशास्य ದಶಾಸ್ಯ** (पुं०) ಹತ್ತು ಮುಖಗಳುಳ್ಳ ರಾವಣ.

**दशाह ದಶಾಹ** (पुं०) ಹತ್ತು ದಿವಸಗಳು. दशानामह्नां समाहारः "टच्" (५-४-९१)। पुंस्त्वम् (२-४-२९)।

**दशिन् ದಶಿನ್** (पुं०) ಹತ್ತು ಗ್ರಾಮಗಳ ಅಧಿಕಾರಿ, ಹತ್ತು ಹಳ್ಳಿಗಳ ಯೋಗಕ್ಷೇಮವನ್ನು ನೋಡಿಕೊಳ್ಳುವ ಅಧಿಕಾರಿ. दश ग्रामाः सन्त्यस्य "इनिः" (५-२-११६)। "दशी कुलं तु भुञ्जीत विंशी पञ्च कुलानि च" मनु० ७-११९।

**दशेन्धन ದಶೇಂಧನ** (पुं०) ದೀಪ. दशा वर्तिकैव इन्धनं यस्य। "दीपस्तु स्नेहाशः कज्जलध्वजः। दशेन्धनो गृहमणिः दोषातिलक इत्यपि" त्रिकाण्ड०।

**दशेरक ದಶೇರಕ** (पुं० ब० व०) ಮರುಭೂಮಿ. "मरवस्तु दशेरकाः" वैज०।

**दशेश ದಶೇಶ** (पुं०) 1. "दशानाथ" ಪದದ ಅರ್ಥ. दशानामीशः। 2. ಹತ್ತು ಗ್ರಾಮಗಳ ಅಧಿಪತಿ, ಹತ್ತು ಹಳ್ಳಿಗಳ ಅಧಿಕಾರಿ. दशानां ग्रामाणामीशः। "शंसेद् ग्रामदशेशाय दशेशो विंशतीशिने" मनु० ८-११६।

**दशैकादशिक ದಶೈಕಾದಶಿಕ** (वि०) ಹನ್ನೊಂದು ರೂಪಾಯಿಗಳನ್ನು ತೆಗೆದುಕೊಳ್ಳಲು ಹತ್ತು ರೂಪಾಯಿಗಳನ್ನು ಸಾಲವಾಗಿ ಕೊಡುವವನು, ಶೇಕಡ 10 ರಂತೆ ಬಡ್ಡಿಗಾಗಿ ಸಾಲ ಕೊಡುವವನು. एकादशार्थत्वात् एकादश ते च ते वस्तुतो दश च दशैकादशाः। पूर्वनिपातः (२-२-३४)। समासान्तोऽकारः निपा०। दशैकादशान् प्रयच्छति "ष्ठच्" (४-४-३१)। स्त्रियाम् "ङीष्" (४-१-४१)। **दशैकादशिकी ದಶೈಕಾದಶಿಕೀ.**

**दशौषधकाल ದಶೌಷಧಕಾಲ** (पुं०) ಹತ್ತು ವಿಧ ಔಷಧ ಸೇವನೆಯ ಕಾಲ. दशविधः औषधकालः। (1) अभक्तम्, (2) प्राग्भक्तम्, (3) अधोभक्तम्, (4) मध्येभक्तम्, (5) अन्तराभक्तम्, (6) सभक्तम्, (7) सामुद्गम्, (8) मुहुर्मुहुः, (9) ग्रासम् ಮತ್ತು (10) ग्रासान्तरम् ಎಂದು ಹತ್ತು ವಿಧ.

(1) ಆಹಾರವಿಲ್ಲದೆ ಕೇವಲ ಔಷಧಸೇವನೆಯು **ಅಭಕ್ತವು.** "तत्राभक्तं तु यत् केवलमेवौषधमुपयुज्यते" सुश्रुत० उत्तरतं० ६४-६६। "वीर्याधिकं भवति भेषजमन्नहीनं हन्यात्तथाऽऽमयमसंशयमाशु चैव। तद्बालवृद्धवनितामृदवस्तु पीत्वा ग्लानिं परां समुपयान्ति बलक्षयं च" ६४-६७।

(2) ಆಹಾರಕ್ಕೆ ಮೊದಲು ಔಷಧಸೇವನೆಯು "**ಪ್ರಾಗ್ಭಕ್ತ**". "प्राग्भक्तं नाम यत् प्राग्भक्तस्योपयुज्यते"। "शीघ्रं विपाकमुपयाति बलं न हिंस्यादन्नावृतं न च मुहुर्वदनान्निरेति। प्राग्भक्तसेवितमथौषधमेतदेव दद्याच्च वृद्धशिशुभीरुकृशाङ्गनाभ्यः" सुश्रुत० उत्तरतं० ६४-६८, ६९।

(3) ಊಟವಾದನಂತರ ಔಷಧಸೇವನೆಯು **"ಅಧೋಭಕ್ತ".** "अधोभक्तं नाम यदधो भक्तस्येति"।

(4) ಊಟದ ಮಧ್ಯದಲ್ಲಿ ಔಷಧಸೇವನೆಯು **"ಮಧ್ಯೇಭಕ್ತ".** "मध्येभक्तं नाम यन्मध्ये भक्तस्य पीयते"। "पीतं यदन्नमुपयुज्य तदूर्ध्वकाये हन्यादुगदान् बहुविधांश्च बलं ददाति। मध्ये तु पीतमपहन्त्यविसारिभावाच्चे मध्यदेहमभिभूय भवन्ति रोगाः" सुश्रुत० उत्तरतं० ६४-७०, ७१, ७२।

(5) ಹಗಲಿನ ಮತ್ತು ರಾತ್ರಿಯ ಊಟಗಳ ಮಧ್ಯದಲ್ಲಿ ಔಷಧಸೇವನೆಯು **"ಅಂತರಾಭಕ್ತ".** "अन्तराभक्तं नाम यदन्तरा पीयते पूर्वापरयोर्भक्तयोः"।

(6) ಊಟದೊಡನೆ ಔಷಧಸೇವನೆಯು **"ಸಭಕ್ತ".** "सभक्तं नाम यत् सहभक्तेन"। "पथ्यं सभक्तमबलाबलयोर्हि नित्यं तद्द्वेषिणामपि तथा शिशुवृद्धयोश्च। हृद्यं मनोबलकरं त्वथ दीपनं च पथ्यं सदा भवति चान्तरभक्तकं यत्" ६४-७३, ७४, ७५।

(7) ಊಟಕ್ಕೆ ಮೊದಲು ಮತ್ತು ಅನಂತರ ಔಷಧ ಸೇವನೆಯು **"ಸಾಮುದ್ಗ".** "सामुद्गं नाम यद्भक्तस्यादावन्ते च पीयते"। "दोषे द्विधा प्रविसृते तु समुद्गसंज्ञमाद्यन्तयोर्यदशनस्य निषेव्यते तु" ६४-७६-७७।

(8) ಊಟದ ಜೊತೆಯಲ್ಲಾಗಲಿ ಊಟವಿಲ್ಲದೆಯಾಗಲಿ ಮತ್ತೆ ಮತ್ತೆ ಮಾಡುವ ಔಷಧಸೇವನೆಯು **"ಮುಹುರ್ಮುಹುಃ"** (ಮತ್ತೆಮತ್ತೆ). "मुहुर्मुहुर्नाम सभक्तमभक्तं वा यदौषधं मुहुर्मुहुरुपयुज्यते"। ಈ ರೀತಿ ಔಷಧಸೇವನೆಯು ಶ್ವಾಸ ಕಾಸ ಬಿಕ್ಕಳಿಕೆ ಮತ್ತು ವಾಂತಿ ಈ ಉಪದ್ರವಗಳಲ್ಲಿ ಹಿತವಾದುದು. "श्वासे मुहुर्मुहुरतिप्रसृते च कासे हिक्कावमीषु स वदन्त्युपयोज्यमेतत्" ६४-७८-७९।

(9) ಆಹಾರದೊಡನೆ ಬೆರಸಿ ಮಾಡುವ ಔಷಧ ಸೇವನೆಯು **"ಗ್ರಾಸ"** ವೆನಿಸುವುದು. "ग्रासं तु यत्पिण्डव्यामिश्रम्"।

(10) ಊಟದ ಸಮಯದಲ್ಲಿ ಒಂದೊಂದು ಕವಳದ (ತುತ್ತಿನ) ಮಧ್ಯದಲ್ಲಿ ಔಷಧವನ್ನು ಸೇವಿಸುವುದು **"ಗ್ರಾಸಾಂತರ"** ವಾಗುವುದು. "ग्रासान्तरं तु यद् ग्रासान्तरेषु"। "ग्रासेषु चूर्णमबलाग्निषु दीपनीयं वाजीकराण्यपि तु योजयितुं यतेत। ग्रासान्तरेषु वितरेद्वमनीयधूमान् श्वासादिषु प्रथितदृष्टगुणांश्च लेहान्" सुश्रुत० उत्तरत० ६४-८०, ८१, ८२।

**दष्ट ದಷ್ಟ** (ನಂ) 1. ಕಡಿತ, ಕಚ್ಚುಗಾಯ. दंश (दशने) भावे "क्तः" (३-३-११४)। 2. ಕಚ್ಚಲ್ಪಟ್ಟ, ಕಡಿಯಲ್ಪಟ್ಟ. दंश (दशने) "क्तः" (३-२-१०२)। "नवनखपदमङ्गं गोपयस्यंशुकेन स्थगयसि पुनरोष्ठं पाणिना दन्तदष्टम्" माघ० ११-३४।

**दष्टवत् ದಷ್ಟವತ್** (वि०) ಕಚ್ಚಿದವನು, ಕಡಿದವನು. दंश (दशने) "क्तवतुः" (३-२-१०२)। "पल्लवोपमितिसाम्यसपक्षं दष्टवत्यधरबिम्बमभीष्टे" माघ० १०-५३। स्त्रियाम् "ङीप्" (४-१-६)। **–वती – ವತೀ.**

**दस्म ದಸ್ಮ** (पुं०) 1. ಯಜಮಾನ. 2. ಅಗ್ನಿ, ಬೆಂಕಿ. 3. ಚೋರ, ಕಳ್ಳ. दसु (उपक्षये) "मक्" (उ० १-१४२)। "दस्मस्तु हव्यवाहे स्याद्यजमाने मलिम्लुचे" हेम०।

**दस्यु ದಸ್ಯು** (पुं०) 1. ಚೋರ, ಕಳ್ಳ, ತಸ್ಕರ. दस्यति–दसु (उपक्षये) "युः" (उ० ३-२०)। "पात्रीकृतो दस्युरिवासि येन" शाकु० ५-२०। 2. ರಿಪು, ಶತ್ರು, ಹಗೆ. "दस्युश्चौरे रिपौ पुंसि" मेदि०।

**दस्र ದಸ್ರ** (पुं०) 1. ಗರ್ದಭ, ಕತ್ತೆ. दस्यति पांसून् "रक्"। (पुं० द्विव०) 2. ಅಶ್ವಿನೀದೇವತೆಗಳು, ದೇವ ವೈದ್ಯರು. दस्यतः क्षिपतः रोगान्–दसु (उपक्षये) "रक्" (उ० २-१३)। "विजयश्रिया वृतमिवार्कमारुतानुसस्रतुस्तमथ दस्रयोः सुतौ" माघ० १३-२३। "दस्रः खरेऽश्विनीसुते" मेदि०। नासत्यः दस्रः ಎಂದು ಅಶ್ವಿನೀ ಕುಮಾರರ ಇಬ್ಬರ ಹೆಸರು. ಈ ಎರಡು ಪದಗಳನ್ನು ದ್ವಿವಚನದಲ್ಲಿ ಪ್ರಯೋಗಿಸುವುದು ಗೌಣವೆಂದು ಅಮರ ಸುಧಾವ್ಯಾಖ್ಯಾನ. ಇವರಿಬ್ಬರೂ ಅವಿನಾಭೂತರಾಗಿ ಯಾವಾಗಲೂ ಜೊತೆಯಲ್ಲೇ ಇರುವುದರಿಂದ ಈ ದ್ವಿವಚನ ಪ್ರಯೋಗವು ಕಂಡುಬರುವುದು. "नासत्यश्चैव दस्रश्च स्मृतौ द्वावश्विनावपि। मार्तण्डस्यात्मजावेतौ अष्टमस्य बृहस्पतेः" भा० शान्ति० २०७-१९। 3. ಶಿಶಿರಋತು. 4. ಅಶ್ವಿನೀನಕ್ಷತ್ರ. 5. ಎರಡು ಸಂಖ್ಯೆ.

**दस्रसू ದಸ್ರಸೂ** (स्त्री०) ಸೂರ್ಯನ ಪತ್ನಿಯಾದ ಸಂಜ್ಞಾ ದೇವಿ. "संज्ञा तु यमकालिन्दीरेवन्तमनुदस्रसूः" त्रिकाण्ड०।

**दह – भस्मीकरणे** (भ्वा० पर० सक० अनि०)। दहति। ददाह। दग्धा। धक्ष्यति। दहतु। अदहत्। दहेत्। ಇತ್ಯಾದಿ. ದಹಿಸು, ಸುಡು. "एकमेव दहत्यग्निर्नरं दुरुपसर्पिणम्। कुलं दहति राजाग्निः सपशुद्रव्यसञ्चयम्" मनु० ७-९।

**कर्मणि** :—दह्यते। देहे। दग्धा। धक्ष्यते। दह्यताम्। अदह्यत। ಇತ್ಯಾದಿ. "दह्येऽहं मधुनो लेहैर्दावैरुग्रैर्यथा गिरि:" भट्टि० ६-८२।

**णिचि** :—दाहयति, –ते। दाहयां चकार, –चक्रे, –बभूव, –आस। दाहयिता। दाहयिष्यति, –ते। दाहयतु, –ताम्। ಇತ್ಯಾದಿ.

**सनि** :—दिधक्षति। दिधक्षां चकार, –बभूव, –आस। दिधक्षिता। दिधक्षिष्यति। दिधक्षतु। ಇತ್ಯಾದಿ.

**कृत्सु** :—दग्धव्य:। दहनीय:। दाह्य:। दग्ध:। दग्धवान्, –वती। दहन्, –न्ती। दग्धुम्। दग्धम्। दहनम्। दग्ध्वा। विदह्य।

**ण्यन्तात् कृत्सु** :—दाहयितव्य:। दाहनीय:। दाह्य:। दाहित:। दाहितवान्, –वती। दाहयन्, –न्ती। दाहयमान:। दाहयितुम्। दाहितम्। दाहनम्। दाहयित्वा। विदाह्य।

**दहत् ದಹತ್** (वि०) ದಹಿಸುತ್ತಿರುವ, ಸುಡುತ್ತಿರುವ. दह (भस्मीकरणे) "शतृ" (३-२-१२४)। "तथा समक्षं दहता मनोभवम्" कुमा० ५-१। स्त्रियाम् "ङीप्" (४-१-६)। **–न्ती –ತ್ತೀ.**

**दहदहा ದಹದಹಾ** (स्त्री०) ಕುಮಾರಸ್ವಾಮಿಯ ಸೇವೆ ಮಾಡುವ ಮಾತೃಗಳಲ್ಲಿ ಒಬ್ಬಳು.

**दहन ದಹನ** (पुं०) 1. ಅಗ್ನಿ, ಬೆಂಕಿ. दहति—दह (भस्मीकरणे) "ल्यु:" (३-१-१३४)। "द्यामियाय दहनस्य केतन: कीर्तयन्निव दिवौकसां प्रियम्" माघ० १४-२८। 2. ಕಪೋತ, ಪಾರಿವಾಳದ ಹಕ್ಕಿ. 3. ಗೇರುಮರ. 4. ಚಿತ್ರಮೂಲದ ಗಿಡ. 5. ದುರ್ವ್ಯಾಪಾರ, ಕೆಟ್ಟಕೆಲಸ. "दहनश्चित्रके भल्लातकेऽग्नौ दुष्टचेष्टिते" मेदि०। 6. ಕೃತ್ತಿಕಾನಕ್ಷತ್ರ. (न०) 7. ಸುಡುವುದು. दह भावे "ल्युट्" (३-३-११५)। (वि०) 8. ಸುಡುವ. ದಹಿಸುವ. दह कर्त० "ल्यु:"।

**दहनकेतन ದಹನಕೇತನ** (पुं०) ಧೂಮ, ಹೊಗೆ. दहनस्याग्ने: केतन इव।

**दहनप्रिया ದಹನಪ್ರಿಯಾ** (स्त्री०) ಅಗ್ನಿಯ ಪತ್ನಿ, ಸ್ವಾಹಾದೇವಿ.

**दहनर्क्ष ದಹನರ್ಕ್ಷ** (न०) ಅಗ್ನಿ ದೇವತಾಕವಾದ ಕೃತ್ತಿಕಾ ನಕ್ಷತ್ರ. दहनस्य ऋक्षम्। ಕೃತ್ತಿಕಾನಕ್ಷತ್ರದಲ್ಲಿ ಶನಿಗ್ರಹವು ಸಂಚರಿಸುವಾಗ ಪ್ರಜೆಗಳಲ್ಲಿ ಅನೀತಿಯು ಉಲ್ಬಣಾವಸ್ಥೆಯನ್ನು ಹೊಂದುವುದು. "यदा विशाखासु महेन्द्रमन्त्री सुतश्च भानोर्दहनर्क्षयात:। तदा प्रजानामनयोऽतिघोर: पुरप्रभेदो गतयोर्भमेकम्" बृहत्सं० १०-१९।

**दहनसारथि ದಹನಸಾರಥಿ** (पुं०) ವಾಯು, ಗಾಳಿ. दहनस्य सारथि:। "दक्षिणदहनसारथिरयाहतचञ्चलचूतकलिके" दशकु०।

**दहनाराति ದಹನಾರಾತಿ** (पुं०) ಜಲ, ನೀರು.

**दहनीय ದಹನೀಯ** (वि०) "दग्धव्य" ಪದದ ಅರ್ಥ. दह (भस्मीकरणे) "अनीयर्" (३-१-९६)।

**दहनोपल ದಹನೋಪಲ** (पुं०) ಸೂರ್ಯಕಾಂತ ಶಿಲೆ. दहनाय हित: उपल:।

**दहनोल्का ದಹನೋಲ್ಕಾ** (स्त्री०) ಉರಿಯುವ ಕೊಳ್ಳಿ. "अथाग्निकुक्कुट:। संकिलो दहनोल्का च" त्रिकाण्ड०।

**दहर ದಹರ** (पुं०) 1. ಬಾಲಕ, ಹುಡುಗ. दह (भस्मीकरणे) "अर:" बाहु०। 2. ಕಿರಿಯ ಸಹೋದರ, ತಮ್ಮ, ಅನುಜ. 3. ಹೆಗ್ಗಣ, ಉದ್ದದ ಮೈಯುಳ್ಳ ಇಲಿ. (वि०) 4. ಅಲ್ಪವಾದ, ಬಹಳ ಸೂಕ್ಷ್ಮವಾದ, ಬಹಳ ಚಿಕ್ಕದಾದ, ಕಿರಿದಾದ. 5. ತಿಳಿಯಲು ಸಾಧ್ಯವಿಲ್ಲದ. "अथ यदिदं दहरं पुण्डरीकं वेश्म दहरोऽस्मिन्नन्तराकाशस्तस्मिन् यदन्तस्तदन्वेष्टव्यं तद्वाव विजिज्ञासितव्यम्" छान्दोग्य०। "उदरमुपासते य ऋषिवर्त्मसु कूर्पदृश: परिसरपद्धति हृदयमारुणयो दहरम्" भाग० १०-८७-१८। "दहरो भ्रातरि स्वल्पे मूषिकायाश्च बालके" मेदि०।

**दहराकाश ದಹರಾಕಾಶ** (पुं०) ಸೂಕ್ಷ್ಮವಾದ ಹೃದಯಾಕಾಶ.

**दह्यमान ದಹ್ಯಮಾನ** (वि०) ಸುಡಲ್ಪಡುತ್ತಿರುವ, ದಹಿಸಲ್ಪಡುತ್ತಿರುವ. दह (भस्मीकरणे) कर्म० "शानच्" (३-२-१२४)। "रौद्रेण दह्यमानस्य महसातिमहीयसा" कुमा० १०-१४।

**दह्र ದಹ್ರ** (पुं०) 1. ದವಾಗ್ನಿ, ಕಾಡುಕಿಚ್ಚು. दह (भस्मीकरणे) "रक्" (उ० २-१३)। दह्रोऽग्नि: सि० कौ०। (न०) 2. ಜಠರ, ಹೊಟ್ಟೆ. "सोऽन्यजन्मनि दह्राग्नि: विश्रवाश्च महातपा:" भाग० ४-१-३६।

**दा ದಾ** (स्त्री०) ಶುದ್ಧಿ. दैप् (शोधने) "क्विप्" (३-२-१७८)।

**डु दाञ् – दाने** (जुहो० उभ० सक० अनि०)। ददाति दत्त: ददति ; दत्ते ददाते ददते। ददौ ददतु: ददु: ; ददे ददाते ददिरे। दाता। दास्यति, –ते। ददातु, दत्तात् दत्ताम् ददतु ; दत्ताम् ददाताम् ददताम्। अददात् अदत्ताम् अददु: ; अदत्त अददाताम् अददत। दद्यात्; ददीत।

देयात् ; दासीष्ट । अदात्; अदित । अदास्यत्, –त । ಕೊಡು, ದಾನಮಾಡು. "ददाति प्रतिगृह्णाति गुह्यमाख्याति पृच्छति । भुङ्क्ते भोजयते चैव षड्विधं प्रीतिलक्षणम्" पञ्चतं० २-५१ ।

**कर्मणि** :–दीयते । सन्दीयते । ददे । दायिता, दाता । दायिष्यते, दास्यते । दीयताम् । अदीयत । दीयेत । ಇತ್ಯಾದಿ.

**णिचि** :–दापयति, –ते । दापयां चकार, –चक्रे । दापयिता । दापयिष्यति, दापयिष्यते । दापयतु, –ताम् । अदापयत्, –त । दापयेत् –त । ಇತ್ಯಾದಿ.

**ण्यन्तात् कर्मणि** :–दाप्यते । दापयां चक्रे, –बभूवे, –आसे । दापयिता, दापिता । दापयिष्यते, दापिष्यते । दाप्यताम् । अदाप्यत । ಇತ್ಯಾದಿ.

**सनि** :–दित्सति । दित्सां चकार । दित्सिता । दित्सिष्यति । दित्सतु । अदित्सत् । दित्सेत् । ಇತ್ಯಾದಿ.

**आत्म०** :–दित्सते । दित्सां चक्रे । दित्सिता । ಇತ್ಯಾದಿ.

**कृत्सु** :–दातव्यम् । दानीयम् । दानीयो विप्रः । कृत्यल्युटो बहुलम् इति सम्प्रदानेऽप्यनीयर् । देयम् । दत्तः । दत्तवान्, –वती । ददत्, –ती, ददानः । दातुम् । दत्तम् । दानम् । दत्त्वा । प्रदाय । "दातव्यमिति यद्दानं दीयतेऽनुपकारिणे" गीता १७-२० ।

**ಈ ಧಾತುವಿಗೆ ಉಪಸರ್ಗಗಳ ಯೋಗದಿಂದ ಉಂಟಾಗುವ ಅರ್ಥ ಭೇದಗಳು :**

**(1) अति + दाञ्** = अतिददाति । 1. ಅತಿಯಾಗಿ ದಾನಮಾಡು. 2. ಅತಿಕ್ರಮಿಸಿ (ಮೀರಿ) ದಾನಮಾಡು.

**(2) अनु + दाञ्** = अनुददाति । 1. ಪ್ರದಾನ, ಅನುದಾನಮಾಡು. 2. ಅನುರೂಪವಾಗಿ ಕೊಡು, ಸಮಾನವಾಗಿ ಕೊಡು.

**(3) अभि + दाञ्** = अभिददाति । ಎದುರಾಗಿ ಕೊಡು. ಅಭಿಮುಖವಾಗಿ ದಾನಮಾಡು. "तथैव चैनमुक्त्वा वामपार्ष्णिमभ्यदात् अथ प्रायात् पुनरपि चान्योऽप्यर्थार्थी ब्राह्मण आगच्छत्" भा० वन० २०१-८ ।

**(4) अव + दाञ्** = अवददाति । अवत्तम्, अवदत्तम् । "अवदत्तं विदत्तं च प्रदत्तं चादिकर्मणि । सुदत्तमनुदत्तं च निदत्तमिति चेष्यते" सि० कौ० । ಕೆಳಮುಖವಾಗಿಕೊಡು.

**(5) आ + दाञ्** = आददाति । आददानः । आदानम् । ತೆಗೆದುಕೊ, ಪ್ರತಿಗ್ರಹಿಸು, ಸ್ವೀಕರಿಸು. "आदानं हि विसर्गाय सतां वारिमुचामिव" रघु० ४-८६ ।

**(6) उप + आ + दाञ्** = उपाददाति । उपात्तम् । उपादानम् । ಸಮೀಪದಿಂದ ಸ್ವೀಕರಿಸು, ಹತ್ತಿರದಲ್ಲಿದ್ದು ತೆಗೆದುಕೊ. "उपात्तविद्यो गुरुदक्षिणार्थी कौत्सः प्रपेदे वरतन्तुशिष्यः" रघु० ५-१ ।

**(7) प्रति + आ + दाञ्** = प्रत्याददाति । प्रत्यादानम् । ಕೊಟ್ಟುದನ್ನು ಹಿಂದಕ್ಕೆ ತೆಗೆದುಕೊ. "न चाहं शक्तः शापं प्रत्यादातुम्" भा० आदि० ३-१२२ ।

**(8) वि + आ + दाञ्** = व्याददाति । व्यात्तम् । व्यादानम् । ಅಗಲವಾಗಿ ತೆರೆ, ಅಗಲವಾಗಿ ಬಿಚ್ಚು. "नभःस्पृशं दीप्तमनेकवर्णं व्यात्ताननं दीप्तविशालनेत्रम्" गीता ११-२४ ।

**(9) सम् + प्र + दाञ्** = सम्प्रदानम् । संप्रदाय । ಚೆನ್ನಾಗಿ ಗೌರವಿಸಿ ಕೊಡು. "अहन्यहनि चाप्येवं याचतां सम्प्रदीयते" भा० वन० ।

**दाण्–दाने** (भ्वा० पर० सक० अनि०) । यच्छति । प्रणियच्छति । ददौ ददतुः ददुः । दाता । दास्यति । यच्छतु । अयच्छत् । यच्छेत् । देयात् । अदात् । अदास्यत् । ದಾನಮಾಡು, ಕೊಡು. "फलं दास्यति ते यत्तु दाने परमिहोच्यते" भा० अनु० १३०-४५ ।

**कर्मणि** :–दीयते । सन्दीयते । ददे । दायिता, दाता । दायिष्यते, दास्यते । दीयताम् । अदीयत । दीयेत । ಇತ್ಯಾದಿ.

**णिचि** :–दापयति, –ते । दापयां चकार, –चक्रे । दापयिता । दापयिष्यति, –ते । दापयतु, –ताम् । ಇತ್ಯಾದಿ.

**कर्मणि सनि च** :–"दाञ्" ಧಾತುವಿನ ರೂಪಗಳಂತಾಗುವುವು.

**कृत्सु** :–दातव्यः । दानीयः । देयम् । दत्तः । दत्तवान्, –वती । प्रत्तः । अवत्तः । घोरचः तादेशे चर्त्वम् (७-४-४७) । नीत्तम् । सूत्तम् । दीर्घः (६-३-१२४) । अवदत्तम् । विदत्तम् । सुदत्तम् । ಇತ್ಯಾದಿ. यच्छन्, यच्छन्ती । दातुम् । दानम् । दत्तम् । दत्त्वा । प्रदाय ।

**दाक ದಾಕ** (पुं०) 1. ಯಾಗಮಾಡುವವನು, ಯಜಮಾನ. ददाति यज्ञे हविरादिकं–दाञ् (दाने) "कः" (उ० ३-४०) । बाहु० इत्संज्ञा न । 2. ದಾನಿ, ದಾನಮಾಡುವವನು.

**दाक्ष ದಾಕ್ಷ** (पुं० ब० व०) 1. ದಕ್ಷನ ಮಗನಾದ ದಾಕ್ಷಿಯ ಶಿಷ್ಯರು. दक्षस्य गोत्रापत्यं दाक्षिः, दाक्षेश्छात्राः "अण्"

(४-२-११२)। (पुं०) 2. ದಕ್ಷನ ಮಕ್ಕಳ ಗುಂಪು. ದಾಕ್ಷಿಗಳ ಸಮುದಾಯ. 3. ದಾಕ್ಷಿಯ ಗುರುತು. 4. ದಾಕ್ಷಿಯ ಲಕ್ಷಣ. दाक्षीणां सङ्घः अङ्कः लक्षणं वा "अण्" (४-३-१२७)। ಹಸು ಮೊದಲಾದ ಪ್ರಾಣಿಗಳ ಮೈಮೇಲೆ ದಾಕ್ಷಿಯ ಹೆಸರಿನ ಮುದ್ರೆಯನ್ನು ಕಾಯಿಸಿ (ಬರೆ) ಹಾಕಿದರೆ ಅದು ಪರಂಪರಾ ಸಂಬಂಧದಿಂದ ಅಂಕವೆನಿಸುವುದು. ದೇವದತ್ತಾದಿ ಶಿಷ್ಯರಲ್ಲಿ ವಿದ್ಯೆಯು ಸಂಬಂಧಿಸಿರುವುದರಿಂದ ಅದು ಸಾಕ್ಷಾತ್ ಸಂಬಂಧದಿಂದ ಲಕ್ಷಣವೆನಿಸುವುದು. ಆದುದರಿಂದ ಪರಂಪರಾಸಂಬಂಧವು ಇರುವಲ್ಲಿ ಅಂಕವೆಂದೂ ಸಾಕ್ಷಾತ್ ಸಂಬಂಧವಿದ್ದಲ್ಲಿ ಲಕ್ಷಣವೆಂದೂ ಹೇಳಲ್ಪಡುವುದು. "परम्परासम्बन्धोऽङ्कः यथा गवादिनिष्ठः तप्तमुद्राविशेषः। तस्य गोद्वारा स्वामिसम्बन्धः। साक्षात्सम्बन्धो लक्षणम्। यथा देवदत्तादौ विद्यादेः साक्षाद्विद्यमानत्वात् तस्य लक्षणम्" सि० कौ०। (वि०) 5. ದಾಕ್ಷಿಯಿಂದ ಬಂದ. दाक्षेरागतः "अण्" (४-३-८०)। 6. ದಕ್ಷನ ಸಂಬಂಧವಾದ. दक्षस्येदम् "अण्" (४-३-१२०)। "दाक्षे कोपः शिवस्येव समेधितमहा हवे" माघ० १९-५४।

**दाक्षक ದಾಕ್ಷಕ** (पुं०) 1. ದಾಕ್ಷಿಯ ಸಂಬಂಧವಾದ. दाक्षेरिदम् "वुञ्" (४-३-१२६)। ಶಿಷ್ಯವಾಚಕವಾದ ಈ ಶಬ್ದಕ್ಕೆ "अण्" (४-२-११२) ಪ್ರತ್ಯಯ ಬಂದು दाक्षाः ಎಂದು ರೂಪವಾಗುವುದು. 2. ದಾಕ್ಷಿಗಳು ವಾಸಮಾಡುವ ದೇಶ. "वुञ्" (४-२-५३)।

**दाक्षायण ದಾಕ್ಷಾಯಣ** (पुं०) 1. ದಕ್ಷನ ಗೋತ್ರಾಪತ್ಯ, ದಕ್ಷನ ಗೋತ್ರದಲ್ಲಿ ಹುಟ್ಟಿದವನು, ದಾಕ್ಷಿಯ ಮಗ (ಯುವಸಂಜ್ಞೆಯುಳ್ಳವನು). दक्षस्य गोत्रापत्यम् "इञ्" (४-१-९५)। दाक्षिः। दाक्षेरपत्यं युवा "फक्" (४-१-१०१)। स्त्रियाम् दाक्षेरपत्यं स्त्री "फक्"। "ङीष्" (४-१-४१)। **–यणी –ಯಣೀ.** (न०) 2. ಸುವರ್ಣ, ಚಿನ್ನ. "दाक्षायणं श्रीमकुटं गारुडं तारजीवनम्। अग्रबीजं रत्नवरं गैरिकं हेम कर्बुरम्" वैज०।

**दाक्षायणी ದಾಕ್ಷಾಯಣೀ** (स्त्री०) 1. ದಾಕ್ಷಿಯ ಮಗಳು. दाक्षेरपत्यं स्त्री "फक्" (४-१-१०१)। "ङीष्" (४-१-४१)। 2. ಸತೀದೇವಿ, ಪರಮೇಶ್ವರನ ಪತ್ನಿ, ದಕ್ಷಬ್ರಹ್ಮನ ಮಗಳು. दक्षस्यापत्यं स्त्री "इञ्" (४-१-९५), "फक्" (४-१-१०१)। "ङीष्" (४-१-४१)। "प्रसूतिं मानवीं दक्षः उपयेमे ह्यजात्मजः। तस्यां ससर्ज दुहितॄः षोडशामललोचनाः। त्रयोदशादाद्धर्माय तथैकामग्नये विभुः। पितृभ्य एकां युक्तेभ्यो भवायैकां भवच्छिदे" भाग० ४-१। 3. ಕಶ್ಯಪನ ಪತ್ನಿ, ದಿತಿದೇವಿ, ದೈತ್ಯರ ತಾಯಿ. 4. ಅದಿತಿದೇವಿ, ದೇವತೆಗಳ ತಾಯಿ. 5. ಕದ್ರೂ. 6. ವಿನತಾದೇವಿ. 7. ದಕ್ಷನಿಗೆ ವೀರಿಣಿಯಲ್ಲಿ ಹುಟ್ಟಿದ ಅಶ್ವಿನೀ ಮೊದಲಾದ ಇಪ್ಪತ್ತೇಳು ಕನ್ಯೆಯರು. "दाक्षायण्योऽश्विनीत्यादि ताराः" अम०। 8. ಲಕ್ಷ್ಮೀ. 9. ಭೂಮಿ. 10. ರೋಹಿಣೀ ದೇವಿ. "दाक्षायणी भवान्यां भुव्यश्विन्याद्युडुषु श्रियाम्" वैज०। "दाक्षायणीत्वपर्णायां रोहिण्यां तारकासु च" विश्व०। 11. ದಂತೀ ವೃಕ್ಷ, ಜಾಪಾಳದ ಗಿಡ.

**दाक्षाय्य ದಾಕ್ಷಾಯ್ಯ** (पुं०) ಹದ್ದು. दक्षते — दक्ष (वृद्धौ शीघ्रार्थे च) "आय्यः" (उ० ३-९६)। दक्षाय्यस्यायम् "अण्" (४-३-१२०)।

**दाक्षि ದಾಕ್ಷಿ** (पुं०) ದಕ್ಷನ ಮಗ. दक्षस्य गोत्रापत्यं पुमान् "इञ्" (४-१-९५)। स्त्रियाम् "ङीष्" (४-१-६५)। **दाक्षी ದಾಕ್ಷೀ.**

**दाक्षिणक ದಾಕ್ಷಿಣಕ** (वि०) 1. ಯಾಗವಾದನಂತರ ದಕ್ಷಿಣೆಯಲ್ಲಿ ನಿರತನಾದ. 2. ಧರ್ಮಕಾರ್ಯಮಾಡಿ ದಕ್ಷಿಣ ಮಾರ್ಗದಿಂದ ಚಂದ್ರಲೋಕಕ್ಕೆ ಹೋಗುವ.

**दाक्षिणशाल ದಾಕ್ಷಿಣಶಾಲ** (वि०) ದಕ್ಷಿಣ ದಿಕ್ಕಿನ ಮಂದಿರ (ಹಜಾರ) ದಲ್ಲಿರುವ. दक्षिणशालायां भवः "ञः" (४-२-१०७)।

**दाक्षिणात्य ದಾಕ್ಷಿಣಾತ್ಯ** (पुं०) 1. ತೆಂಗಿನಮರ. दक्षिणा (आजन्तमव्ययम्) भवः "त्यक्" (४-२-९८)। (वि०) 2. ದಕ್ಷಿಣದಲ್ಲಿ ಹುಟ್ಟಿದ, ದಕ್ಷಿಣದಲ್ಲಿರುವ. "दाक्षिणात्यो नारिकेले त्रिषु दक्षिणदिग्भवे" मेदि०। "दाक्षिणात्यांश्च भोजांश्च शूरान् संग्रामकर्कशान्" भा० कर्ण० ५६-११।

**दाक्षिणपथक ದಾಕ್ಷಿಣಪಥಕ** (वि०) ದಕ್ಷಿಣಾಪಥದಲ್ಲಿ ಹುಟ್ಟಿದ. दक्षिणापथे भवः "वुञ्" (४-२-१२७)।

**दाक्षिण्य ದಾಕ್ಷಿಣ್ಯ** (न०) 1. ಸರಳತೆ, ಸೌಜನ್ಯ. दक्षिणस्य भावः "ष्यञ्" (५-१-१२४)। 2. ಪಟುತ್ವ, ಸಾಮರ್ಥ್ಯ. 3. ಅನುಕೂಲ್ಯ, ಅನುಕೂಲವಾಗಿರುವಿಕೆ. "स्फुरता वामकेनापि दाक्षिण्यमवलम्बते" मालती० १-११। 4. ಪರಚ್ಛಂದಾನುವರ್ತನ, ಇತರರ ಮನಸ್ಸನ್ನು ಅನುಸರಿಸಿ ನಡೆಯುವುದು; ಇದೊಂದು 36 ವಿಧ ನಾಟಕಲಕ್ಷಣಗಳಲ್ಲೊಂದು. "दाक्षिण्यं चेष्टया वाचा परच्छन्दानुवर्तनम्" सा० द०। "तस्य दाक्षिण्यरूढेन नाम्ना मगधवंशजा" रघु० १-३१। 5. ಎಲ್ಲರಲ್ಲಿಯೂ ಸಮಾನವಾಗಿರುವಿಕೆ, ಸರ್ವ

ಸಮಾವರ್ತನೆ. "दाक्षिण्यं नाम बिम्बोष्ठि नायकानां कुलव्रतम्" माल० ४-१४।

**दाक्षी ದಾಕ್ಷೀ** (स्त्री०) 1. ದಕ್ಷನ ಮಗಳು, दक्षस्यापत्यं स्त्री "इञ्" (४-१-९५)। 2. ಪಾಣಿನಿ ಮಹರ್ಷಿಯ ತಾಯಿ.

**दाक्षीपुत्र ದಾಕ್ಷೀಪುತ್ರ** (पुं०) ಪಾಣಿನಿಮಹರ್ಷಿ. दाक्ष्याः पुत्रः।

**दाक्षेय ದಾಕ್ಷೇಯ** (पुं०) ಪಾಣಿನಿಮಹರ್ಷಿ. दाक्ष्या अपत्यम् "ढक्" (४-१-१२०)।

**दाक्ष्य ದಾಕ್ಷ್ಯ** (न०) ದಕ್ಷತೆ, ಸಾಮರ್ಥ್ಯ, ಕುಶಲತೆ. दक्षस्य भावः "ष्यञ्" (५-१-१२४)। "दाक्ष्यं हि सद्यः फलदं यदग्रतश्चखाद दासेरयुवा वनावलीः" माघ० १२-३२।

**दाघ ದಾಘ** (पुं०) ದಾಹ, ಸುಡುವಿಕೆ. दह (भस्मीकरणे) भावे "घञ्" (३-३-१८)। कुत्वम् (७-३-५३)।

**दाडिम ದಾಡಿಮ** (वि०) 1. ದಾಳಿಂಬೆ ಗಿಡ, ದಾಡಿಮವೃಕ್ಷ. दल (विशरणे) भावे "घञ्" (३-३-१८)। दलेन निर्वृत्तः "इमप्" (वा० ४-४-२०)। डलयोरभेदः। 2. ಯಾಲಕ್ಕಿ ಗಿಡ. "दाडिमस्तु त्रिलिङ्गः स्यादेलायां करके त्रिषु" मेदि०। (न०) ದಾಳಿಂಬೆಹಣ್ಣು. "काम्पिल्यकप्रसवपाटलगण्डपालिपाकारुणस्फुटितदाडिमकान्तिवक्त्रम्" मालती० ९-३१।

**दाडिमपत्रक ದಾಡಿಮಪತ್ರಕ** (पुं०) ಮುಳ್ಳುಮುತ್ತುಗದ ಗಿಡ. दाडिमस्य पत्रमिव पत्रमस्य "कप्" (५-४-१५४)।

**दाडिमपुष्पक ದಾಡಿಮಪುಷ್ಪಕ** (पुं०) ಮುಳ್ಳುಮುತ್ತುಗದ ಗಿಡ. दाडिमस्य पुष्पमिव पुष्पमस्य "कप्" (५-४-१५४)।

**दाडिमप्रिय ದಾಡಿಮಪ್ರಿಯ** (पुं०) 1. ಶುಕ, ಗಿಣಿ. दाडिमं तत्फलं प्रियमस्य। (वि०) 2. ದಾಳಿಂಬೆಹಣ್ಣು ಪ್ರಿಯವಾಗಿರುವ.

**दाडिमभक्षण ದಾಡಿಮಭಕ್ಷಣ** (पुं०) 1. ಶುಕ, ಗಿಣಿ. दाडिमं दाडिमफलं भक्षयति — भक्ष (अदने) "ल्युः" (३-१-१३४)। (न०) 2. ದಾಳಿಂಬೆಹಣ್ಣನ್ನು ತಿನ್ನುವುದು. (वि०) 3. ದಾಳಿಂಬೆ ಹಣ್ಣನ್ನು ತಿನ್ನುವ.

**दाडिम्ब ದಾಡಿಂಬ** (पुं०) ದಾಳಿಂಬೆ ಗಿಡ.

**दाडी ದಾಡೀ** (स्त्री०) 1. ದಾಳಿಂಬೆ ಗಿಡ. दल्यते फलेऽसौ— दल (विशरणे) कर्म० "घञ्" (३-३-१९)। गौरा० "ङीष्" (४-१-४१)। लडयोरभेदः। 2. ದಾಳಿಂಬೆ ಹಣ್ಣು. दाड्याः फलम् "अण्" (४-३-१३५)। अणो लुप् (४-३-१६७)। प्रकृतिवल्लिङ्गं च।

**दाढा ದಾಢಾ** (स्त्री०) 1. ಕೋರೆಹಲ್ಲು. 2. ಅಪೇಕ್ಷೆ, ಅಭಿಲಾಷೆ. "दाढा दंष्ट्राभिलाषयोः" हैम०। 3. ಪ್ರಾರ್ಥನೆ, ಬೇಡಿಕೆ. 4. ಸಮೂಹ, ಗುಂಪು.

**दाढिका ದಾಢಿಕಾ** (स्त्री०) 1. ಗಡ್ಡ. ಗಂಡಸರ ಮುಖದಲ್ಲಿ ಬೆಳೆಯುವ ಕೂದಲು. "केशेषु गृह्णतो हस्तौ छेदयेदविचारयन्। पादयोर्दाढिकायां च ग्रीवायां वृषणेषु च" मनु० ८-२७३। 2. ಕೋರೆಹಲ್ಲು.

**दाण्ड ದಾಂಡ** (न०) 1. ದಂಡಗಳ ಸಮೂಹ, ದೊಣ್ಣೆಗಳ ರಾಶಿ. दण्डानां समूहः "अण्" (४-२-३७)। (वि०) 2. ದಂಡ ಸಂಬಂಧವಾದ. 3. ಶಿಕ್ಷೆಗೆ ಸಂಬಂಧಿಸಿದ. दण्डस्येदम् "अण्" (४-३-१२०)।

**दाण्डा ದಾಂಡಾ** (स्त्री०) ದಂಡವೇ ಆಯುಧವಾಗಿ ಉಳ್ಳ ಒಂದು ವಿಧ ಆಟ. दण्डः प्रहरणमस्यां क्रीडायाम् "णः" (४-२-५७)।

**दाण्डपाता ದಾಂಡಪಾತಾ** (स्त्री०) ಕೋಲನ್ನು ಎಸೆದು ಆಟವಾಡುವ ಒಂದು ತಿಥಿ. दण्डः पातोऽस्यां तिथौ "णः" (४-२-५८)।

**दाण्डाजिनिक ದಾಂಡಾಜಿನಿಕ** (वि०) ಮೋಸಗಾರ, ಕಪಟಿ, ವೇಷದಿಂದ ಹಣವನ್ನು ಸಂಪಾದಿಸಲು ದಂಡ ಮತ್ತು ಅಜಿನಗಳನ್ನು ಧರಿಸಿರುವವನು. दण्डाजिनं दम्भः तेन धनमन्विच्छति "ठञ्" (५-२-७६)। ದಂಡ ಮತ್ತು ಅಜಿನಗಳನ್ನು ಮೋಸದ ವೇಷಕ್ಕಾಗಿ ಧರಿಸುವವನಲ್ಲಿ ದಂಡಾಜಿನ ಪದವು "ದಂಭ" ಎಂಬ ಅರ್ಥದಲ್ಲಿ ಲಾಕ್ಷಣಿಕ. ಅವನ್ನು ಧರಿಸಿ ಕಪಟದಿಂದ ಹಣವನ್ನು ಸಂಪಾದಿಸುವವನು ದಾಂಡಾಜಿನಿಕನು.

**दाण्डिक ದಾಂಡಿಕ** (वि०) 1. ದಂಡವನ್ನು ಹಿಡಿದು ಜೀವಿಸುವವನು, ದೊಣ್ಣೆಯನ್ನು ಹಿಡಿದು ನಿಲ್ಲುವ ಪಹರೆಯವನು. दण्डेन तद्धारणेन जीवति — "ठक्" (४-४-१२)। 2. ಶಿಕ್ಷೆಯನ್ನು ವಿಧಿಸುವವನು, ಶಿಕ್ಷೆ ಕೊಡುವವನು.

**दाण्डिन् ದಾಂಡಿನ್** (पुं० ब० व०) ದಂಡ ಋಷಿಯಿಂದ ಪ್ರೋಕ್ತವಾದ ಗ್ರಂಥವನ್ನು ಅಧ್ಯಯನ ಮಾಡುವವರು. दण्डेन प्रोक्तमधीयते "णिनिः" (४-३-१०६)।

**दाण्डिनायन ದಾಂಡಿನಾಯನ** (पुं०) ದಂಡಿಯ ಗೋತ್ರದಲ್ಲಿ ಹುಟ್ಟಿದವನು. दण्डिनो गोत्रापत्यम् "फक्" (४-१-९९)। टिलोपाभावो निपात्यते (६-४-१७४)।

**दात ದಾತ** (वि०) 1. ಕತ್ತರಿಸಲ್ಪಟ್ಟ. दाप् (लवने) "क्तः" (३-२-१०२)। 2. ಕೊಯ್ಯಲ್ಪಟ್ಟ. 3. ತುಂಡುಮಾಡಲ್ಪಟ್ಟ. 4. ತೊಳೆಯಲ್ಪಟ್ಟ, ಶುದ್ಧಮಾಡಲ್ಪಟ್ಟ. दैप् (शोधने) "क्तः" (३-२-१०२)।

**दाति ದಾತಿ**(स्त्री०) 1. ಶುದ್ಧಿ. 2. ಛೇದನ, ಕತ್ತರಿಸುವುದು. दैप् (शोधने) दाप् (लवने) वा "क्तिन्" (३-३-९४)। 3. ಕೊಯ್ಯುವುದು. 4. ತುಂಡುಮಾಡುವುದು.

**दातृ ದಾತೃ**(वि०) 1. ದಾನಮಾಡುವವನು, ಕೊಡುವವನು. डु दाञ् (दाने) "तृच्" (३-१-१३३)। "यत्र दाता ग्रहीता च स्वयं कुशिकनन्दनः" उ० रा० १-१७। 2. ದಾನಮಾಡುವ ಸ್ವಭಾವದವನು. स्त्रियाम् "ङीप्" (४-१-५)। -त्री -ತ್ರೀ.

**दात्यूह ದಾತ್ಯೂಹ** (पुं०) 1. ನೀರುಕೋಳಿ. दाप् (लवने) "क्तिन्" (३-३-९४)। दातिमूहते —ऊह (वितर्के) "अण्" (३-२-१)। 2. ಚಾತಕಪಕ್ಷಿ. "दात्यूहः पुमान् कालकण्ठचातकपक्षिणोः" मेदि०। स्त्रियाम् जाति० "ङीष्" (४-१-४१)। दात्यूही ದಾತ್ಯೂಹೀ.

**दात्यौह ದಾತ್ಯೌಹ** (पुं०) "दात्यूह" ಪದದ ಅರ್ಥ. दात्यूह पृषो०।

**दात्र ದಾತ್ರ** (न०) ಕುಡುಗೋಲು, ಕೊಯ್ಯುವ ಒಂದು ಆಯುಧ. दाप् (लवने) "ष्ट्रन्" (३-२-१८२)।

**दाद ದಾದ** (पुं०) ದಾನ, ಕೊಡುಗೆ. दद्यते — दद (दाने) कर्म० "घञ्" (३-३-१९)। "दाददो दुद्दुद्दादी दादादो दुददीददोः" माघ० १९-११४।

**दाधिक ದಾಧಿಕ** (वि०) 1. ಮೊಸರಿನಲ್ಲಿ ಉಪ್ಪು ಖಾರ ಹಾಕಿ ಒಗ್ಗರಿಸಲ್ಪಟ್ಟ ವಸ್ತು, ರಾಯತ. दध्नि संस्कृतम् "ठक्" (४-२-१८)। 2. ಮೊಸರಿನಿಂದ ನೆನೆಸಲ್ಪಟ್ಟ ಪುರಿ, ಹುರಿಹಿಟ್ಟು ಮೊದಲಾದುದು. दध्ना संस्कृतम् "ठक्" (४-४-३)। 3. ಮೊಸರಿನಲ್ಲಿ ಊಟಮಾಡುವವನು. दध्ना भक्षयति — "ठक्" (४-४-८)।

**दाधित्थ ದಾಧಿತ್ಥ** (न०) ಬೇಲದಹಣ್ಣಿನ ರಸಾಯನ. दधित्थस्यावयवो विकारो वा "अञ्" (४-३-१४०)।

**दान ದಾನ** (न०) 1. ದಾನ, ಕೊಡುಗೆ. डु दाञ् (दाने) भावे "ल्युट्" (३-३-११५)। "निरत्ययं साम न दानवर्जितं न भूरि दानं विरहय्य सत्क्रियाम्" किरा० १-१२। ದಾನವು (1) ಸಾತ್ತ್ವಿಕ, (2) ರಾಜಸ ಮತ್ತು (3) ತಾಮಸ ಎಂದು ಮೂರು ವಿಧ.

(1) ದೇಶಕಾಲಪಾತ್ರಗಳನ್ನರಿತು ಪ್ರತ್ಯುಪಕಾರ ಮೊದಲಾದ ಯಾವ ಫಲವನ್ನೂ ಅಪೇಕ್ಷಿಸದೆ ಮಾಡುವ ದಾನವು **"ಸಾತ್ತ್ವಿಕ".** "दातव्यमिति यद्दानं दीयतेऽनुपकारिणे। देशे काले च पात्रे च तद्दानं सात्त्विकं स्मृतम्" गीता १७-२०।

(2) ಪ್ರತ್ಯುಪಕಾರ ರೂಪವಾದ ಫಲವನ್ನು ಅಪೇಕ್ಷಿಸಿ ಬಹಳ ಕಷ್ಟದಿಂದ ಮಾಡುವ ದಾನವು **"ರಾಜಸ".** "यत्तु प्रत्युपकारार्थं फलमुद्दिश्य वा पुनः। दीयते च परिक्लिष्टं तद्राजसमुदाहृतम्" गीता १७-२१।

(3) ಕಾಲದೇಶಗಳನ್ನೂ ಯೋಚಿಸದೆ ಅಪಾತ್ರರಿಗೆ (ವಂಚಕ, ಕಪಟಿ, ತಸ್ಕರ ಮೊದಲಾದವರಿಗೆ) ತಿರಸ್ಕಾರದಿಂದ ಮಾಡುವ ದಾನವು **"ತಾಮಸ".** "अदेशकाले यद्दानमपात्रेभ्यश्च दीयते। असत्कृतमवज्ञातं तत्तामसमुदाहृतम्" गीता १७-२२। 2. ಆನೆಯ ಮದೋದಕ, ಆನೆಯ ಕುಂಭಸ್ಥಳದಿಂದ ಸುರಿಯುವ ರಸಿಗೆ. द्यत्यनेन — दो (अवखण्डने) "ल्युट्" (३-३-११७)। "स्तम्भं महान्तमुचितं सहसा मुमोच दानं ददावतितरां सरसाग्रहस्तः" माघ० ५-४८। 3. ಧನ, ಹಣ. दीयते—डु दाञ् (दाने) कर्म० "ल्युट्" (३-३-११३)। 4. ಸಾಮ ಮೊದಲಾದ ನಾಲ್ಕು ಉಪಾಯಗಳಲ್ಲೊಂದು, ಶತ್ರು ಮೊದಲಾದವರನ್ನು ಗೆಲ್ಲಲು (ಅಡಗಿಸಲು) ಹಣ ಮೊದಲಾದುದನ್ನು ಕೊಡುವುದು. "सामदाने भेददण्डावित्युपायचतुष्टयम्" अम०। "साम्ना दानेन भेदेन समस्तैरथवा पृथक्। विजेतुं प्रयतेतारीन् न युद्धेन कदाचन" मनु० ७-१९८। 5. ಪಾಲನೆ, ಕಾಪಾಡುವುದು. 6. ಛೇದನ, ಕತ್ತರಿಸುವುದು, ತುಂಡುಮಾಡುವುದು. 7. ಶುದ್ಧಿ. "दानं गजमदे त्यागे पालनच्छेदशुद्धिषु" मेदि०।

**दानक ದಾನಕ** (न०) ಅಯೋಗ್ಯದಾನ, ಹೀನವಾದ ದಾನ, ಅಪಾತ್ರದಲ್ಲಿ ಮಾಡುವ ಅಶಾಸ್ತ್ರೀಯವಾದ ದಾನ. कुत्सितं दानम् "कन्" (५-४-२९)।

**दानपात्र ದಾನಪಾತ್ರ** (न०) ದಾನಕ್ಕೆ ಅರ್ಹನಾದವನು, ದಾನವನ್ನು ತೆಗೆದುಕೊಳ್ಳಲು ಯೋಗ್ಯನಾದವನು. दानस्य पात्रम्। "साङ्गांस्तु चतुरो वेदान् योऽधीते वै द्विजर्षभः। षड्भ्योऽनिवृत्तः कर्मभ्यस्तं पात्रमृषयो विदुः"। "श्रोत्रियाय दरिद्राय अर्थिने च विशेषतः। यद्दानं दीयते तस्मै तद्दानं शुभकारकम्"।

**दानफल ದಾನಫಲ** (न०) ದಾನಮಾಡಿದುದರಿಂದ ಅನುಭವಿಸುವ ಫಲ. दानस्य फलम्। ಕೋಪದಿಂದಲೂ ಭಯದಿಂದಲೂ ಕೂಡಿ ಮಾಡುವ ದಾನದ ಫಲವನ್ನು ಗರ್ಭದಲ್ಲಿ ಇರುವಾಗಲೇ ಅನುಭವಿಸುತ್ತಾನೆ. "तमोवृतस्तु यो दद्यात् भयात् क्रोधात्तथैव च। नृप दानन्तु तत् सर्वं भुङ्क्ते गर्भस्थ एव हि"। ಅಸೂಯೆ ಮತ್ತು ಕೋಪಗಳಿಂದ ಕೂಡಿ ಸಂಪಾದನೆಗಾಗಿಯೂ ದಂಭಕ್ಕಾಗಿಯೂ ಕಪಟದಿಂದ

ಮಾಡುವ ದಾನದ ಫಲವನ್ನು ಬಾಲ್ಯಾವಸ್ಥೆಯಲ್ಲಿ ಅನು ಭವಿಸುತ್ತಾನೆ. "ईर्ष्यामन्युमनाश्चैव दम्भार्थं चार्थकारणात्। यो ददाति द्विजातिभ्यः स बाल्ये तु तदश्नुते"। ಇತ್ಯಾದಿ.

**दानव ದಾನವ**(पुं०)ಕಶ್ಯಪನಿಗೆ ದನುವಿನಲ್ಲಿ ಜನಿಸಿದ ಮಕ್ಕಳು, ದಕ್ಷಬ್ರಹ್ಮನ ಮಗಳಾದ ದನುವಿನ ಮಕ್ಕಳು. दनोरपत्यम् "अण्" (४-१-९२)। "उद्धतानधिकमेधितौजसो दानवांश्च विबुधा विजिग्यिरे" माघ० १४-३१। "तमस्त्रमायाभ्यधिका दानवाः पर्यवारयन्" याद० १६-७९। ವಿಪ್ರಚಿತ್ತಿ ಶಂಬರ ನಮುಚಿ ಪುಲೋಮ ಅಸಿಲೋಮ ಕೇಶಿ ದುರ್ಜಯ ಅಯಃಶಿರಸ್ಸು ಅಶ್ವಶಿರಸ್ಸು ಅಶ್ವಶಂಕು ಮುಂತಾದ ನಲವತ್ತು ಮಂದಿ ದಾನವರು ದನುವಿನ ಮಕ್ಕಳು. "चत्वारिंशद्दनोः पुत्राः ख्याताः सर्वत्र भारत। तेषां प्रथमतो राजा विप्रचित्तिर्महायशाः। शम्बरो नमुचिश्चैव पुलोमा चेति विश्रुतः। असिलोमा च केशी च दुर्जयश्चैव दानवः"। ಇತ್ಯಾದಿ भा० आदि० ६६।

**दानवगुरु ದಾನವಗುರು** (पुं०) ದಾನವರಿಗೆ ಆಚಾರ್ಯರಾದ ಶುಕ್ರಾಚಾರ್ಯರು.

**दानवरिपु ದಾನವರಿಪು** (पुं०) 1. ವಿಷ್ಣು. 2. ದೇವತೆ. दानवानां रिपुः।

**दानवारि ದಾನವಾರಿ**(पुं०)1. ವಿಷ್ಣು. 2. ದೇವತೆ. दानवानामरिः। "बर्हिर्मुखाः क्रतुभुजो गीर्वाणा दानवारयः" अम०। (न०)3. ಆನೆಯ ಮದೋದಕ, ಆನೆಯ ಗಂಡಸ್ಥಲದಲ್ಲಿ ಹೊರಡುವ ಮದಜಲ. "तदीयमातङ्गघटाविघट्टितैः कटस्थलप्रोषितदानवारिभिः" माघ० १-६४।

**दानवीर ದಾನವೀರ** (पुं०)1. ವೀರರಸದ ಒಂದು ಭೇದ. ವೀರರಸವು ದಾನವೀರ ಧರ್ಮವೀರ ಯುದ್ಧವೀರ ಮತ್ತು ದಯಾವೀರ ಎಂದು ನಾಲ್ಕು ವಿಧ. 2. ದಾನವೀರರಸಕ್ಕೆ ಆಶ್ರಯನಾದ ನಾಯಕ. "स च दानधर्मयुद्धैः दयया च समन्वितश्चतुर्धा स्यात्" सा० द० ३-२३४। "त्यागः सप्तसमुद्रमुद्रितमहीनिर्व्याजदानावधिः"। ಇಲ್ಲಿ ಪರಶುರಾಮನು ದಾನಮಾಡುವುದರಲ್ಲಿ ತೋರಿದ ಉತ್ಸಾಹವು ಸ್ಥಾಯಿಭಾವ. ಬ್ರಾಹ್ಮಣರು ಆಲಂಬನವಿಭಾವ. ಸತ್ತ್ವಗುಣದ ಉದ್ರೇಕವು ಉದ್ದೀಪನ ವಿಭಾವ. ಸರ್ವಸ್ವತ್ಯಾಗವು ಅನುಭಾವ. ಹರ್ಷ ಧೃತಿ ಮೊದಲಾದುವು ಸಂಚಾರಿಭಾವಗಳು. ಈ ವಿಭಾವಾದಿಗಳಿಂದ ಪರಿಪುಷ್ಟವಾದ ಸ್ಥಾಯಿಭಾವವು ರಸವಾಗಿ ಪರಿಣಮಿಸಿ "**ದಾನವೀರ**"ವೆಂಬ ಭೇದವನ್ನು ಹೊಂದುವುದು.

**दानवेय ದಾನವೇಯ** (पुं०) ದನುವಿನ ಮಕ್ಕಳು. दन्वा अपत्यम् — दनु स्त्रियाम् "ऊङ्" (४-१-६६)। "ढक्" (४-१-१२०)। "विष्णुना निहतेष्वेव दानवेयेषु देवताः" भा० कर्ण० ७७-५९।

**दानशील ದಾನಶೀಲ** (वि०) ದಾನಮಾಡುವ ಸ್ವಭಾವದವನು. दानं शीलं यस्य। "यत् फलं दानशीलस्य क्षमाशीलस्य यत् फलम्" भा० उद्योग० १२२-५।

**दानशौण्ड ದಾನಶೌಂಡ** (वि०) ಹೆಚ್ಚು ದಾನಮಾಡುವವನು, ಉದಾರ ಸ್ವಭಾವದವನು, ದಾನಮಾಡುವುದರಲ್ಲಿ ಪ್ರಸಿದ್ಧನಾದವನು. दाने शौण्डः।

**दानीय ದಾನೀಯ** (वि०) ದಾನಮಾಡಲು ಉದ್ದೇಶಿಸಲ್ಪಟ್ಟವನು, ದಾನ ತೆಗೆದುಕೊಳ್ಳುವವನು. दीयतेऽस्मै—डु दाञ् (दाने) सम्प्रदाने "अनीयर्" (३-३-११३)।

**दानु ದಾನು** (वि०) 1. ದಾನಮಾಡುವವನು. डु दाञ् (दाने) "नुः" (उ० ३-३२)। दानुर्दाता सि० कौ०। 2. ಪರಾಕ್ರಮಿ, ಬಲಶಾಲಿ. "दानुर्दातरि विक्रान्ते" मेदि०। 3. ವಾಯು, ಗಾಳಿ. 4. ತೃಪ್ತಿ, ತಣಿವು.

**दान्त ದಾಂತ** (वि०) 1. ಬಹಿರಿಂದ್ರಿಯಗಳನ್ನು ನಿಗ್ರಹಿಸಿದವನು, ತಪಸ್ಸಿನ ಕಷ್ಟವನ್ನು ಸಹಿಸುವವನು. दाम्यति स्म — दमु (उपशमे) कर्त० "क्तः" (३-४-७२)। दीर्घः (६-४-१५)। 2. ಅಡಗಿಸಲ್ಪಟ್ಟ, ನಿಗ್ರಹಿಸಲ್ಪಟ್ಟ. दम्यते स्म — दमु + णिच् "क्तः" (३-२-१०२)। "वा दान्तशान्त........." (७-२-२७)। इति निपा०। पक्षे **दमितः ದಮಿತಃ.**

**दान्ति ದಾಂತಿ** (स्त्री०) 1. ತಪಸ್ಸಿನ ಕಷ್ಟವನ್ನು ಸಹಿಸಿಕೊಳ್ಳುವುದು. 2. ಬಹಿರಿಂದ್ರಿಯ ನಿಗ್ರಹ. 3. ಶಿಕ್ಷಣ, ಪಳಗಿಸುವುದು. दमु (उपशमे) "क्तिन्" (३-३-९४)। दीर्घः (६-४-१५)।

**दापन ದಾಪನ** (न०) ಕೊಡಿಸುವುದು. डु दाञ् (दाने) + णिच् "ल्युट्" (३-३-११५)।

**दापनीय ದಾಪನೀಯ**(वि०)1. ಕೊಡಿಸಲು ಯೋಗ್ಯನಾದ. 2. ಕೊಡಿಸಲ್ಪಡುವ. डु दाञ् (दाने) + णिच् "अनीयर्" (३-१-९६)। "तव्यः"। **दापयितव्यः ದಾಪಯಿತವ್ಯಃ.**

**दापयत् ದಾಪಯತ್** (वि०) ಕೊಡಿಸುತ್ತಿರುವ. डु दाञ् (दाने) + णिच् "शतृ" (३-२-१२४)। स्त्रियाम् "ङीप्" (४-१-६)। **–यन्ती –ಯಂತೀ.**

**दापयमान ದಾಪಯಮಾನ** (वि०) ಕೊಡಿಸುತ್ತಿರುವ. डु दाञ् (दाने) कर्त० "शानच्" (३-२-१२४)।

**दापयितृ ದಾಪಯಿತೃ** (वि०) 1. ಕೊಡಿಸುವ. 2. ದಾನ ಮಾಡಿಸುವ. डु दाञ् (दाने) + णिच् "तृच्" (३-१-१३३)। स्त्रियाम् "ङीप्" (४-१-५)। -यित्री -ಯಿತ್ರೀ.

**दापित ದಾಪಿತ** (न०) 1. ಕೊಡಿಸುವುದು. 2. ದಾನ ಮಾಡಿಸುವುದು. डु दाञ् (दाने) + णिच् "क्तः" (३-३-११४)। (वि०) 3. ಕೊಡಿಸಲ್ಪಟ್ಟ (ಧನ). दाञ् + णिच् कर्म० "क्तः" (३-२-१०२)। 4. ಶಿಕ್ಷಿಸಲ್ಪಟ್ಟ. 5. ದಂಡ ಕೊಡಿಸಲ್ಪಟ್ಟ (ಪ್ರತಿವಾದಿ).

**दापितवत् ದಾಪಿತವತ್** (वि०) 1. ಕೊಡಿಸಿದವನು. 2. ದಾನಮಾಡಿಸಿದವನು. डु दाञ् (दाने) + णिच् "क्तवतु:" (३-२-१०२)। स्त्रियाम् "ङीप्"(४-१-६)।

**दाप्य ದಾಪ್ಯ** (वि०) 1. ಕೊಡಿಸಲ್ಪಡುವವನು. 2. ಶಿಕ್ಷಿಸಲ್ಪಡುವವನು. डु दाञ् (दाने) + णिच् "यत्" (३-१-९७)। "यदि संसाधयेत्तत्तु दर्पाल्लोभेन वा पुनः। राज्ञा दाप्यः सुवर्णं स्यात् तस्य स्तेयस्य निष्कृतिः" मनु० ७-२१३।

**दामग्रन्थि ದಾಮಗ್ರಂಥಿ**(पुं०) ವಿರಾಟರಾಜನ ಒಬ್ಬ ಅಶ್ವಾಧ್ಯಕ್ಷ. "अथ मात्स्योऽब्रवीद्राजा शतानीकं जघन्यजम्। कङ्कश्च वललःसूदो दामग्रन्थिश्च वीर्यवान्" भा० विरा० ३३-३१। ಇದು ವಿರಾಟನಗರದಲ್ಲಿದ್ದಾಗ ನಕುಲನ ಹೆಸರು.

**दामचन्द्र ದಾಮಚಂದ್ರ**(पुं०) ದ್ರುಪದರಾಜನ ಒಬ್ಬ ಮಗ. "वसुचन्द्रो दामचन्द्रः सिंहचद्रः सुतेजनः" भा० द्रोण० १५९-३९।

**दामन् ದಾಮನ್** (स्त्रीन०)1. ರಜ್ಜು, ಹಗ್ಗ. दो (अवखण्डने) "मनिन्" (उ० ४-१४४)। "चण्डी चण्डं हन्तुमभ्युद्यता मां विद्युद्दाम्ना मेघराजीव विन्ध्यम्" माल० ३-२१। 2. ಪುಷ್ಪಮಾಲೆ, ಹೂವಿನ ಸರ. "क्षणमलघुविलम्बिपिच्छदाम्नः" माघ० ४-५०। 3. ಹಸುವನ್ನು ಕರೆಯುವಾಗ ಅದರ ಕಾಲಿಗೆ ಕಟ್ಟುವ ಹಗ್ಗ. 4. ಹಾರ, ಸರ, "मुक्तामयं सारसनावलम्बि भाति स्म दामाप्रपदीनमस्य" माघ० ३-१०। स्त्रियाम् वा "डाप्" (४-१-१३)। दामा दामे दामाः पक्षे दामा दामानौ दामानः।

**दामनी ದಾಮನೀ** (स्त्री०) ಹಸುವನ್ನು ಕಟ್ಟುವ ಹಗ್ಗ. दामैव स्वार्थे "अण्" (५-४-३८)। प्रकृतिभावः (अनो लोपाभावः) (६-४-१६७)। "ङीप्" (४-१-१५)। "पशुरज्जुस्तु दामनी" अम०।

**दामाञ्चल ದಾಮಾಂಚಲ**(न०) ಕುದುರೆ ಮೊದಲಾದುವುಗಳ ಕಾಲಿಗೆ ಕಟ್ಟುವ ಹಗ್ಗ. "दामाञ्चलं पादपाशः" वैज०। "सस्नुः सरोषपरिचारकवार्यमाणदामाञ्चलस्खलितलोलपदं तुरङ्गाः" माघ० ५-६१।

**दामिनी ದಾಮಿನೀ** (स्त्री०) ವಿದ್ಯುತ್ತು, ಮಿಂಚು. दामन् "इनिः" (५-२-१३७)। टिलोपः। "ङीप्"(४-१-५)।

**दामोदर ದಾಮೋದರ** (पुं०)1. ಶ್ರೀಕೃಷ್ಣ, ವಾಸುದೇವ. दाम उदरे यस्य। सकललोकाधारतया दामानि लोकाः उदरे अस्य इति वा। "दामानि लोकनामानि ह्युदरे यस्य सन्ति सः। दामोदर इति ख्यातो यशोदादामबन्धनात्। देवानां सुखशंसित्वात् दामाद्दामोदरोऽपि वा" इति निरुक्तिः। "हेतुर्दामोदरः सहः" वि० स०। ಯಶೋದೆಯು ಕೋಪಿಸಿಕೊಂಡು ಕೃಷ್ಣನನ್ನು ಹಗ್ಗದಿಂದ ಕಟ್ಟಿಹಾಕಿದುದರಿಂದ ಈ ಹೆಸರು. 2. ದಾಮೋದರವೆಂಬ ಒಂದು ಗಂಡುಹೊಳೆ, ನದ. 3. ಕಳೆದ ಉತ್ಸರ್ಪಿಣೀಕಾಲದಲ್ಲಿದ್ದ 9 ನೆಯ ಅರ್ಹಂತ.

**दाम्पत्य ದಾಂಪತ್ಯ** (न०)1. ದಂಪತಿಗಳ (ಪತಿಪತ್ನಿಯರ) ಪರಸ್ಪರ ಪ್ರೀತಿ, ಅನ್ಯೋನ್ಯ ಅನುರಾಗ. दम्पत्योर्भावः "यक्" (५-१-१२८)। 2. ದಂಪತಿಗಳ ಸಂಬಂಧವಾದ ಅಗ್ನಿಹೋತ್ರಾದಿ ಕಾರ್ಯಾಚರಣೆ.

**दाम्भिक ದಾಂಭಿಕ** (वि०) 1. ವೇಷಧಾರಿ, ಕಪಟಿ, ಕೀರ್ತಿ ಪಡೆಯಲು ವೇಷಹಾಕಿ ಧರ್ಮವನ್ನು ಆಚರಿಸುವವನು. दम्भेन चरति—"ठक्" (४-४-८)। "पर्यायग्रथिताक्षसूत्रवलयप्रत्येकबीजग्रहव्यग्राग्राङ्गुलयो हरन्ति धनिनां वित्तान्यहो दाम्भिकाः" प्रबोध० २-५। 2. ಅಹಂಕಾರದಿಂದ ಕೂಡಿದವನು. 3. ವಂಚಕ, ಮೋಸಗಾರ. 4. ಆಡಂಬರದಿಂದ ಮೆರೆಯುವವನು, ಟೊಳ್ಳು ಠೀವಿಯುಳ್ಳವನು.

**दाय ದಾಯ** (पुं०) 1. ಪಿತ್ರಾರ್ಜಿತವಾದ ಆಸ್ತಿ, ಭಾಗ ಮಾಡಿಕೊಳ್ಳಬೇಕಾದ ತಂದೆಯ ಆಸ್ತಿ. डु दाञ् (दाने) "घञ्" (३-३-१९)। "औरसो विभजन् दायं पित्र्यं पञ्चममेव वा" मनु० ९-१६४। 2. ದಾನ, ಕೊಡುಗೆ. दाञ् भावे "घञ्" (३-३-१८)। "अस्वामिना कृतो यस्तु दायो विक्रय एव वा। अकृतः स तु विज्ञेयो व्यवहारे यथा स्थितिः" मनु० ८-१९९। 3. ಭಾಗಮಾಡಿಕೊಡಲು ಅರ್ಹವಾದ ಆಸ್ತಿ. "संवत्सरं प्रतीक्षेत द्विषन्तीं योषितं पतिः। ऊर्ध्वं संवत्सरात्त्वेनां दायं हृत्वा न संवसेत्" मनु० ९-७७। 4. ಉಪಹಾಸದಿಂದ ಕೂಡಿದ ಮಾತು.

5. ಕನ್ಯಾದಾನಸಮಯದಲ್ಲಿ ಅಳಿಯನಿಗೂ ಮಗಳಿಗೂ ಕೊಡುವ ಬಳುವಳಿ. 6. ಸ್ಥಾನ, ಜಾಗ. 7. ಖಂಡನ, ಕತ್ತರಿಸುವುದು. दो (अवखण्डने) "घञ्" (३-३-११५)। (वि०) 8. ದಾನಮಾಡುವ, ಕೊಡುವ. ददाति—डु दाञ् (दाने)। "शः" (३-१-१४१)। "दायो दाने यौतकादिधने सोल्लुण्ठभाषणे। विभक्तव्यपितृद्रव्ये" हेम०।

**दायक ದಾಯಕ**(वि०)1. ದಾನಮಾಡುವವನು. 2. ಕೊಡುವವನು. डु दाञ् (दाने) "ण्वुल्" (३-१-१३३)। "तावतां गोसहस्राणां फलं प्राप्नोति दायकः" भा० वन० १९६-३३। 2. ಕತ್ತರಿಸುವವನು, ಒಡೆಯುವವನು, ಸೀಳುವವನು. दो (अवखण्डने) "ण्वुल्" (३-१-१३३)। 3. ದಾಯಾದ, ಜ್ಞಾತಿ.

**दायबन्धु ದಾಯಬಂಧು** (पुं०) ಪಿತ್ರಾರ್ಜಿತವಾದ ಆಸ್ತಿಯಲ್ಲಿ ಭಾಗಹೊಂದುವ ಸಹೋದರ. दाये बन्धुः।

**दायभाग ದಾಯಭಾಗ** (पुं०) ಪಿತ್ರಾರ್ಜಿತವಾದ ಆಸ್ತಿಯ ವಿಭಾಗ, ತಂದೆಯ ಆಸ್ತಿಯ ಪಾಲು. दायस्य भागः। "विभागोऽर्थस्य पित्र्यस्य पुत्रैर्यत्र प्रकल्प्यते। दायभाग इति प्रोक्तं तद्विवादपदं बुधैः" इति नारदः। "एष स्त्रीपुंसयोरुक्तो धर्मो वो रतिसंहितः। आपद्यपत्यप्राप्तिश्च दायभागं निबोधत" मनु० ९-१०३।

**दायाद ದಾಯಾದ** (पुं०) 1. ಪಿತ್ರಾರ್ಜಿತವಾದ ಆಸ್ತಿಯ ಭಾಗ ಪಡೆಯುವವನು, ತಂದೆಯ ಆಸ್ತಿಯಲ್ಲಿ ಪಾಲು ಹೊಂದುವವನು, ಪುತ್ರ, ಮಗ. दायमत्ति—अद (भक्षणे) "अण्" (३-२-१)। दायमादत्ते—आ+दाञ् (दाने) "कः" (३-१-१३६) इति वा। "पुरुणा न कृतं वाक्यं मानितं च विशेषतः। कनीयान् मम दायादो धृता येन जरा मम" भा० आदि० ६९-३२। 2. ಜ್ಞಾತಿ, ಬಂಧು. "क्षत्रियस्तनयः पाण्डोरहं पार्थो धनञ्जयः। स्थितः प्रास्तस्य दायादैर्भ्रातुर्ज्येष्ठस्य शासने" किरा० ११-४५। "तेषामिदानीं दायादो वृद्धः सीरध्वजो नृपः" म० वी० १-१४। (वि०) 3. ಭಾಗವನ್ನು ಪಡೆಯಲು ಯೋಗ್ಯನಾದವನು. "औरसः क्षेत्रजश्चैव दत्तः कृत्रिम एव च। गूढोत्पन्नोऽपविद्धश्च दायादा बान्धवाश्च षट्" मनु० ९-१५९। (स्त्री०) **-दा -ದಾ, -दी -ದೀ.** ಕನ್ಯೆ, ಮಗಳು.

**दायाद्य ದಾಯಾದ್ಯ** (न०) 1. ಭಾಗಹೊಂದುವ ಹಕ್ಕು, ಪಾಲು ಪಡೆಯುವ ಹಕ್ಕು. दायादस्य भावः "ष्यञ्" (५-१-१२४)। 2. ಪಿತ್ರಾರ್ಜಿತವಾದ ಆಸ್ತಿ, ಪಾಲಿಗೆ ಬರಬೇಕಾದ ತಂದೆಯ ಆಸ್ತಿ. "स एष पाण्डोर्दायाद्यं यदि प्राप्नोति पाण्डवः" भा० आदि० १५२-१६।

**दायार्ह ದಾಯಾರ್ಹ** (वि०) ತಂದೆಯ ಆಸ್ತಿಯನ್ನು ಹೊಂದಲು ಅರ್ಹನಾದವನು.

**दार ದಾರ** (पुं० ब० व०) 1. ಪತ್ನಿ, ಹೆಂಡತಿ. दारयति भ्रातॄन्—दॄ(विदारणे) + णिच् "घञ्" (वा० ३-३-२०)। "एते वयममी दाराः कन्येयं कुलजीवितम्" कुमा० ६-६३। "इच्छतीशश्च्युताचारान् दारानिव निगोपितुम्" किरा० १५-१९। (पुं०) 2. ಒಡೆಯುವುದು, ಭೇದಿಸುವುದು, ಸೀಳುವುದು. दॄ भावे "घञ्" (३-३-१८)।

**दारक ದಾರಕ**(पुं०)1. ಬಾಲಕ, ಹುಡುಗ. दॄ (विदारणे) "ण्वुल्" (३-१-१३३)। "प्रकृत्या पुण्यलक्ष्मीकौ कावेतौ ज्ञायते त्विदम्। राजन्यदारकौ नूनं कृतोपनयनाविति" म० वी० १-१६। 2. ಕುಮಾರ, ಪುತ್ರ. "युवराजस्तु कुमारो भर्तृदारकः" अम०। (वि०)3. ಒಡೆಯುವವನು, ಸೀಳುವವನು, ಭೇದಿಸುವವನು. "दारको बालकेऽपि स्याद्भेदकेऽप्यभिधेयवत्" मेदि०। (स्त्री०) **-रिका -ರಿಕಾ.** ಮಗಳು.

**दारकर्मन् ದಾರಕರ್ಮನ್** (न०) ವಿವಾಹ, ಮದುವೆ, ಪತ್ನಿಯಾಗುವ ಕಾರ್ಯ. दारत्वसम्पादकं कर्म। "सवर्णाग्रे द्विजातीनां प्रशस्ता दारकर्मणि" मनु० ३-१२। **-क्रिया -ಕ್ರಿಯಾ.** "तं श्लाघ्यसम्बन्धमसौ विचिन्त्य दारक्रियायोग्यदशं च पुत्रम्" रघु० ५-४०।

**दारगव ದಾರಗವ** (न०) ಪತ್ನಿ ಮತ್ತು ಹಸು. दाराश्च गावश्च "अच्" (५-४-७७) निपा०।

**दारग्रहण ದಾರಗ್ರಹಣ**(न०) ವಿವಾಹ, ಮದುವೆ. दाराणां ग्रहणम्।

**दारपरिग्रह ದಾರಪರಿಗ್ರಹ** (पुं०) ವಿವಾಹ, ಮದುವೆ. दाराणां परिग्रहः। "अतः परं समावृत्तः कुर्याद्दारपरिग्रहम्" मनु०।

**दारण ದಾರಣ** (न०)1. ಭೇದನ, ಒಡೆಯುವುದು, ತುಂಡು ಮಾಡುವುದು. दॄ (विदारणे) + णिच् "ल्युट्" (३-३-११५)। "कपिकुलपतिहृदयविशालशिलातलदारणदारुणशिलीमुख" रघु० ग०। 2. ಕತಕದಬೀಜ, ಚಿಲ್ಲದಬೀಜ. (वि०) 3. ಸೀಳುವ ಸಾಧನ, ಒಡೆಯುವ ಆಯುಧ, ಕತ್ತರಿಸುವ ಆಯುಧ. दीर्यतेऽनेन—दॄ (विदारणे) कर० "ल्युट्" (३-३-११७)। 4. ಭೇದಿ

सುವ, ಒಡೆಯುವ, ತುಂಡುಮಾಡುವ. दृ कर्तृ० "ल्यु:" (३-१-१३४)। "समाघत्त शितं बाणं गिरीणामपि दारणम्" मा० कर्ण० ४४-२०। 5. ವ್ರಣವನ್ನು ಮಾಗಿಸಿ ಒಡೆಯುವಂತೆ ಮಾಡುವ ಒಂದು ಔಷಧ. "चिरबिल्वोऽग्निको दन्ती चित्रको हयमारकः। कपोतगृध्रकङ्कानां पुरीषाणि च दारणम्। क्षारद्रव्याणि वा यानि क्षारो वा दारणं परम्" सुश्रुत०।

**दारद ದಾರದ** (पुं०) 1. ವಿಷದ ಭೇದ. दरदि देशे भवः "अण्" (४-३-९३)। "दारदो वत्सनाभश्च विषभेदा अमी नव" अम०। 2. ಪಾದರಸ. 3. ಹಿಂಗುಲ, ಇಂಗಲೀಕ. "दारदो विषभेदे स्यात्पारदे हिङ्गुले पुमान्" मेदि०। 4. ಸಮುದ್ರ, ಕಡಲು. "पारावारमहाकच्छो महीप्राचीरदारदौ" हारा०।

**दारव ದಾರವ** (वि०) ಮರದಿಂದ ತಯಾರಿಸಲ್ಪಟ್ಟ, ಮರದಿಂದ ಮಾಡಲ್ಪಟ್ಟ. दारुणो विकारः "अञ्" (४-३-१५४)।

**दारिका ದಾರಿಕಾ** (स्त्री०) ಕನ್ಯೆ, ಮಗಳು, ಪುತ್ರಿ. दारक स्त्रियाम् "टाप्" (४-१-४)। इत्वम् (७-३-४४)।

**दारित ದಾರಿತ** (वि०) ಭೇದಿಸಲ್ಪಟ್ಟ, ಸೀಳಲ್ಪಟ್ಟ, ಕತ್ತರಿಸಲ್ಪಟ್ಟ. दृ (विदारणे) + णिच् "क्तः" (३-२-१०२)। "प्रथमं पातयामासुरसिना दारितानरीन्" कुमा० १६-२६।

**दारिद्र्य ದಾರಿದ್ರ್ಯ** (न०) ಬಡತನ. दरिद्रस्य भावः "ष्यञ्" (५-१-१२४)। "मृषा न चक्रेऽल्पितकल्पपादपः प्रणीय दारिद्र्यदरिद्रतां नलः" नैष० १-१५।

**दारिन् ದಾರಿನ್** (पुं०) ಬಹು ಪತ್ನಿಯರನ್ನು ಹೊಂದಿರುವವನು, ಅನೇಕ ಮಂದಿ ಮಡದಿಯರುಳ್ಳವನು. दाराः सन्त्यस्य भूमार्थे "इनिः" (५-२-११५)। "दारी दरदरिद्रोऽरिदारूदारोऽद्रिदूरदः" माघ० १९-१०६।

**दारु ದಾರು** (पुं०) 1. ಮರದ ದಿಮ್ಮಿ. 2. ಕಾಷ್ಠ, ಸೌದೆ. दीर्यते—दृ (विदारणे) "ञुण्" (उ० १-३)। (न०) 3. ದೇವದಾರುವೃಕ್ಷ. (वि०) 4. ದಾನಶೀಲ, ದಾನ ಮಾಡುವ ಸ್ವಭಾವದವನು. 5. ಶಿಲ್ಪಿ. 6. ಸೀಳುವವನು, ಕತ್ತರಿಸುವವನು.

**दारुक ದಾರುಕ** (पुं०) 1. ಶ್ರೀಕೃಷ್ಣನ ಸಾರಥಿ. दारु संज्ञायां "कन्"। "उत्कं धरं द्रष्टुमवेक्ष्य शौरिमुत्कन्धरं दारुक इत्युवाच" माघ० ४-१८। 2. ದೇವದಾರು ವೃಕ್ಷ. दारु स्वार्थे "कः"।

**दारुकदली ದಾರುಕದಲೀ** (स्त्री०) 1. ಕಾಡುಬಾಳೆ. 2. ಮರಬಾಳೆ.

**दारुका ದಾರುಕಾ** (स्त्री०) ಮರದ ಬೊಂಬೆ. दारुणा कायति—कै (शब्दे) "कः" (३-२-३)।

**दारुण ದಾರುಣ** (पुं०) 1. ವಿಷ್ಣು. दारयति बाह्यानाभ्यन्तरांश्चारीन् विदारयति—दृ (विदारणे) + णिच् "उनन्" (उ० ३-५३)। "बाह्याभ्यन्तरशत्रूणां दारणादपि दारुणः" इति निरुक्तिः। "सुधन्वा खण्डपरशुः दारुणो द्रविणप्रदः" वि० स०। 2. ಭಯಾನಕ ರಸ. (वि०) 3. ಭಯಂಕರವಾದ, ಭಯವನ್ನುಂಟುಮಾಡುವ. "मूर्ताः प्राणा नूनमद्याप्यवेक्षामासुः कायं त्याजिता दारुणास्त्रैः" माघ० १८-७३। 4. ಕ್ರೂರನಾದ, ದುರುಳನಾದ. "प्रसीद नाथ, साहसिक, दारुणः खलु हताशः। परित्रायस्व माम्" मालती० ५।

**दारुनिशा ದಾರುನಿಶಾ** (स्त्री०) ಮರದರಿಶಿನ. दारुप्रधाना निशा।

**दारुपात्र ದಾರುಪಾತ್ರ** (न०) ಮರದಪಾತ್ರೆ, ಮರದಿಂದ ತಯಾರಿಸಲ್ಪಟ್ಟ ಪಾತ್ರೆ, ಚೊಂಬು, ತೊಟ್ಟಿ ಮೊದಲಾದುವು. दारुणः पात्रम्।

**दारुपीता ದಾರುಪೀತಾ** (स्त्री०) ಮರದರಿಶಿನ. दारुणा काष्ठेन पीता।

**दारुपुत्रिका ದಾರುಪುತ್ರಿಕಾ** (स्त्री०) ಮರದ ಬೊಂಬೆ. दारुमयी पुत्रिका।

**दारुमुख्याह्वया ದಾರುಮುಖ್ಯಾಹ್ವಯಾ** (स्त्री०) ಹಲ್ಲಿ, ಗೌಳಿ.

**दारुयन्त्र ದಾರುಯಂತ್ರ** (न०) ಮರದಿಂದ ತಯಾರಿಸಲ್ಪಟ್ಟ ಯಂತ್ರ. दारुमयं यन्त्रम्। "अस्वतन्त्रो हि पुरुषः कार्यते दारुयन्त्रवत्" भा० उद्योग० १५९-१४।

**दारुसार ದಾರುಸಾರ** (पुं०) ಚಂದನ, ಶ್ರೀಗಂಧ.

**दारुसिता ದಾರುಸಿತಾ** (स्त्री०) ದಾಲ್ಚಿನ್ನಿ.

**दारुस्त्री ದಾರುಸ್ತ್ರೀ** (स्त्री०) ಸಾಲಭಂಜಿಕೆ, ಮರದ ಬೊಂಬೆ.

**दारुहरिद्रा ದಾರುಹರಿದ್ರಾ** (स्त्री०) ಮರದರಿಶಿನ. दारुमयी हरिद्रा।

**दारुहस्तक ದಾರುಹಸ್ತಕ** (पुं०) ಮರದ ಸವಟು, ಮರದ ಸಟ್ಟುಗ. दारुहस्त इव प्रतिकृतिः "कन्" (५-३-९६)।

**दार्घसत्र ದಾರ್ಘಸತ್ರ** (वि०) ದೀರ್ಘಕಾಲದ ಯಾಗದಲ್ಲಿರುವ. दीर्घसत्रे भवः "अण्" (४-३-५३)। आदेरचः आत् (७-३-१)।

**दार्ढ्य ದಾರ್ಢ್ಯ** (न०) 1. ದೃಢವಾಗಿರುವುದು. ಗಟ್ಟಿಯಾಗಿರುವುದು. 2. ಸ್ಥಿರವಾಗಿರುವುದು. 3. ಬಲದಿಂದ ಕೂಡಿರುವುದು. दृढस्य भावः "ष्यञ्" (५-१-१२४)। "उत्साहो वाग्मिता दार्ढ्यमापत्क्लेशसहिष्णुता" कामन्द०।

**दार्तेय ದಾರ್ತೇಯ** (वि०) ಚರ್ಮದ ಚೀಲದಲ್ಲಿರುವ. दृतौ भवम् "ढञ्" (४-३-५६)।

**दार्दुर ದಾರ್ದುರ** (पुं०) 1. ದಕ್ಷಿಣಾವರ್ತ ಶಂಖ, ಬಲಗಡೆ ವದನವುಳ್ಳ ಶಂಖ. दर्दुरः तदाकारोऽस्त्यस्य "णः" (५-२-१०१)। (वि०) 2. ದರ್ದುರಸಂಬಂಧವಾದ, ಕಪ್ಪೆಯಸಂಬಂಧವಾದ. दर्दुरस्येदम् "अण्" (४-३-१२०)। 3. ಮೇಘಸಂಬಂಧವಾದ. स्त्रियाम् "ङीप्" (४-१-१५)। -री -ರೀ.

**दार्दुरिक ದಾರ್ದುರಿಕ** (वि०) ಕುಲಾಲ, ಕುಂಬಾರ. दर्दुरं करोति "ठक्" (४-४-३४)।

**दार्भ ದಾರ್ಭ** (वि०) ದರ್ಭೆಯ ಸಂಬಂಧವಾದ. दर्भस्येदम् "अण्" (४-३-१२०)।

**दार्वट ದಾರ್ವಟ** (न०) ಮಂತ್ರಾಲೋಚನೆಯ ಗೃಹ. दारु इव निश्चलतया अटन्त्यत्र — अट (गतौ) घञर्थे "कः" (वा० ३-३-५८)।

**दार्वण्ड ದಾರ್ವಂಡ** (पुं०) ಮಯೂರ, ನವಿಲು.

**दार्वाघाट ದಾರ್ವಾಘಾಟ** (पुं०) ಮರಕುಟಕ ಹಕ್ಕಿ. दारु आहन्ति — आ+हन (हिंसागत्योः) "अण्" अन्त्यस्य च "टः" (वा० ३-२-४९)। स्त्रियाम् जाति० "ङीष्" (४-१-६३)। दार्वाघाटी ದಾರ್ವಾಘಾಟೀ.

**दार्विका ದಾರ್ವಿಕಾ** (स्त्री०) ರಸಾಂಜನ, ಮರದರಿಶಿನವನ್ನು ಕುದಿಯಿಸಿ ಮಾಡಿದ ಒಂದು ಅಂಜನ. दीर्वी दारुहरिद्रा — तद्विकारोऽपि दार्वी स्वार्थे "कन्" (५-४-५)।

**दार्वी ದಾರ್ವೀ** (स्त्री०) ಮರದರಿಶಿನ. दीर्यते — दृ (विदारणे) "ञुण्" (उ० १-३)। "ङीप्" (४-१-४४)।

**दार्श ದಾರ್ಶ** (पुं०) 1. ದರ್ಶಯಾಗ, ಅಮಾವಾಸ್ಯೆಯ ದಿನದ ಯಾಗ. "दार्शमस्कन्दयन् पर्व पौर्णमासं च योगतः" मनु० ६-९। (वि०) 2. ದರ್ಶದಲ್ಲಿ ಉಂಟಾದ, ಅಮಾವಾಸ್ಯೆಯ ದಿನ ಉಂಟಾದ. दर्शे भवम् "अण्"। 3. ಕಣ್ಣಿನಲ್ಲಿ ಉಂಟಾದ. दृशि भवम् "अण्"।

**दार्शनिक ದಾರ್ಶನಿಕ** (पुं०) ದರ್ಶನಗಳ ಸ್ವರೂಪವನ್ನು ತಿಳಿದಿರುವ, ತತ್ತ್ವಗಳನ್ನು ಚೆನ್ನಾಗಿ ತಿಳಿದಿರುವ.

**दार्षद ದಾರ್ಷದ** (वि०) ಕಲ್ಲಿನಲ್ಲಿ ಅರೆಯಲ್ಪಟ್ಟ. दृषदि पिष्टः — दृषद् "अण्" (४-२-९२)। दार्षदाः सक्तवः सि० कौ०।

**दार्ष्टान्तिक ದಾರ್ಷ್ಟಾಂತಿಕ** (वि०) ದೃಷ್ಟಾಂತದೊಡನೆ ಕೂಡಿದ, ದೃಷ್ಟಾಂತದಿಂದ ವಿವರಿಸಲ್ಪಟ್ಟ.

**दाल ದಾಲ** (न०) ಮಕರಂದ, ಪುಷ್ಪಪರಾಗ.

**दालन ದಾಲನ** (पुं०) ವಾತದೋಷದಿಂದ ಉಂಟಾದ ಹಲ್ಲಿನ ಸೆಳೆತ, ಒಂದು ವಿಧ ದಂತರೋಗ. दालयति — दल (विशरणे) + णिच् "ल्युः" (३-१-१३४)। "दाल्यन्ते बहुधा दन्ता यस्मिंस्तीव्ररुगन्विताः। दालनः स हि विज्ञेयः सदागतिनिमित्तजः"।

**दालिम ದಾಲಿಮ** (पुं०) ದಾಳಿಂಬೆ ಗಿಡ.

**दाल्मिन् ದಾಲ್ಮಿನ್** (पुं०) ಇಂದ್ರ.

**दाव ದಾವ** (पुं०) 1. ಅರಣ್ಯ, ಕಾಡು. दुनोति — टु दु (उपतापे) "णः" (३-१-१४२)। "लताप्रतानोद्ग्रथितैः स केशैरधिज्यधन्वा विचचार दावम्" रघु० २-८। 2. ಕಾಡುಕಿಚ್ಚು, ಕಾಡಿನಲ್ಲಿ ಉಂಟಾದ ಬೆಂಕಿ. "दावदग्धस्थलीमसीमलिनमलिनाः" हर्षच०।

**दावाग्नि ದಾವಾಗ್ನಿ** (पुं०) ಕಾಡುಕಿಚ್ಚು, ಕಾಡಿನಲ್ಲಿ ಉಂಟಾದ ಬೆಂಕಿ. दावस्य अग्निः।

**दाविका ದಾವಿಕಾ** (स्त्री०) ದೇವಿಕಾ ನದಿಯಲ್ಲಿರುವ, ದೇವಿಕಾನದಿಯಲ್ಲಿ ಉಂಟಾದ. देविकायां भवम् — देविका "अण्" (४-३-५३)। आदेरचः आत् (७-३-१)।

**दाविकाकूल ದಾವಿಕಾಕೂಲ** (वि०) ದೇವಿಕಾ ನದಿಯ ತೀರದಲ್ಲಿ ಹುಟ್ಟಿದ, ದೇವಿಕಾನದಿಯ ತೀರದಲ್ಲಿ ಬೆಳೆದ. देविकाकूले भवम् "अण्" (४-३-५३)। आदेरचः आत् (७-३-१)।

**दाश ದಾಶ** (पुं०) 1. ಬೆಸ್ತರಜಾತಿಯುವನು, ಮೀನು ಹಿಡಿಯುವವನು, ಮೊಗೆಯವನು. दशति मत्स्यान् — दंश (दशने) "टः" धातोर्नकारस्याकारश्च (उ० ५-११)। दाश्यते मूल्यमस्मै — दाशृ (दाने) कर्म० "घञ्" (३-३-१९) वा। ಇವನು ಅಂಬಿಗ (ದೋಣಿಯನ್ನು ನಡೆಸುವವನು.) "एष नौयायिनामुक्तो व्यवहारस्य निर्णयः। दाशापराधतस्तोये दैविके नास्ति निग्रहः" मनु० ८-४०९। स्त्रियाम् जाति० "ङीष्" (४-१-६३)। -शी -ಶೀ. 2. ಭೃತ್ಯ, ಸೇವಕ, ಆಳು. दाश्यते भृतिरस्मै। 3. ದಾನ.

**दाशकन्या ದಾಶಕನ್ಯಾ** (स्त्री०) 1. ಬೆಸ್ತನ ಮಗಳು. 2. ಸತ್ಯವತಿ, ವ್ಯಾಸಮಹರ್ಷಿಯ ತಾಯಿ.

**दाशग्राम ದಾಶಗ್ರಾಮ** (पुं०) ಬೆಸ್ತರ ಹಳ್ಳಿ. दाशप्रधानो ग्रामः।

**दाशपुर ದಾಶಪುರ** (न०) ತುಂಗಮುಸ್ತೆ, ಕೊನ್ನಾರಿಯ ಭೇದ. दाशान् कैवर्तान् पिपर्ति पालयति—पृ (पालन-पूरणयोः) "कः" (वा० ३-२-५)।

**दाशरथ ದಾಶರಥ** (पुं०) 1. ದಶರಥನ ಮಗ. दशरथस्यायम्—"अण्" (४-३-१२०)। "प्रदीयतां दाशरथाय मैथिली" हनु० ना०। (वि०) 2. ದಾಶರಥಿಯ (ಶ್ರೀರಾಮನ) ಸಂಬಂಧವಾದ. दाशरथेरिदम् "अण्" (४-३-१२०)। "अजीगणद्दाशरथं न वाक्यं यदा स दर्पेण तदा कुमारः" भट्टि० २-५३।

**दाशरथि ದಾಶರಥಿ** (पुं०) 1. ಶ್ರೀರಾಮ. 2. ದಶರಥನ ಮಗ. दशरथस्यापत्यम् "इञ्" (४-१-९५)। "सोऽहं दाशरथिर्भूत्वा रणभूमेर्बलिक्षमम्" रघु० १०-४४। [ಶ್ರೀರಾಮ ಲಕ್ಷ್ಮಣ ಭರತ ಶತ್ರುಘ್ನ ಎಲ್ಲರೂ ದಾಶರಥಿಗಳು.]

**दाशरात्रिक ದಾಶರಾತ್ರಿಕ** (वि०) ಹತ್ತು ರಾತ್ರಿಗಳಲ್ಲಿ ಮಾಡಬಹುದಾದ (ಯಾಗ). दशरात्रेण निर्वृत्तः "ठञ्" (५-१-८७)।

**दाशार्ह ದಾಶಾರ್ಹ** (पुं०) 1. ವಿಷ್ಣು. दशं भक्तकर्तृक स्वसंप्रदानकस्वात्मनिवेदनरूपं दानम् अर्हति, दाशन्ति यस्मै भक्ताः स्वात्मनः कर्म, सचासावर्हः पूज्यश्च इति वा, कृष्णत्वे दशार्हापत्यमिति वा। "आत्मनो वार्पणं भक्तैः तेभ्यो वा स्वात्मनोऽर्पणम्। दाशस्तमर्हति च यः दाशार्हः स तु कीर्तितः" इति निरुक्तिः। "विनयो जयः सत्यसन्धो दाशार्हः सात्वतां पतिः" वि० स०। (पुं० ब० व०) 2. ಯಾದವರು. "उपरुन्धन्तु दाशार्हाः पुरीं माहिष्मतीं द्विषः" माघ० २-६४।

**दाशेय ದಾಶೇಯ** (पुं०) ಬೆಸ್ತರವಳ ಮಗ. दाश्या अपत्यम् "ढक्" (४-१-१२१)। स्त्रियाम् "ङीप्" (४-१-१५)।
**—यी —ಯೀ.**

**दाशेर ದಾಶೇರ** (पुं०) ಬೆಸ್ತರವಳ ಮಗ. दाश्या अपत्यम् "ढ्रक्" (४-१-१३१)। स्त्रियाम् "टाप्" (४-१-४)।
**—रा —ರಾ.**

**दाशेरक ದಾಶೇರಕ** (पुं०) 1. ಮಾಲವದೇಶ, ಬೆಸ್ತರು ಅಧಿಕವಾಗಿರುವ ದೇಶ, ಬೆಸ್ತರೇ ಪ್ರಧಾನವಾಗಿರುವ ದೇಶ. (पुं० ब० व०) 2. ಆ ದೇಶದ ದೊರೆಗಳು. 3. ಆ ದೇಶದ ಜನರು.

**दाश्वस् ದಾಶ್ವಸ್** (वि०) ಕೊಡುವವನು, ದಾನಮಾಡುವವನು. दाशृ (दाने) "क्वसुः" (६-१-१२)। "तस्यै मुनिर्दोहदलिङ्गदर्शी दाश्वान् सुपुत्राशिषमित्युवाच" रघु० १४-७१।

**दासृ — दाने** (भ्वा० उभ० सक० से०)। दासति, —ते। अदासीत्, अदासिष्ट। ಇತ್ಯಾದಿ. ಕೊಡು, ದಾನಮಾಡು.

**दास ದಾಸ** (पुं०) 1. ಸೇವಕ, ಆಳು. दास्यते — दासृ (दाने) "घञ्" (३-३-१९)। दसि (भाषार्थे) "टः" (उ० ५-१०)। धातोर्नकारस्य आकारश्च इति वा। "अद्य प्रभृत्यवनताङ्गि तवास्मि दासः" कुमा० ५-८६। 2. ಶೂದ್ರ, ನಾಲ್ಕನೆಯ ವರ್ಣದವನು. 3. ಬೆಸ್ತರವನು. 4. ದಾನಪಾತ್ರ, ದಾನಕ್ಕೆ ಅರ್ಹನಾದವನು, ದಾನತೆಗೆದುಕೊಳ್ಳಲು ಯೋಗ್ಯನಾದವನು. "दासः शूद्रे दानपात्रे भृत्यधीवरयोरपि" विश्व०। 5. ವೃತ್ರಾಸುರ. 6. ಶೂದ್ರವರ್ಣದವನ ಹೆಸರಿಗೆ ಸೇರಿಸುವ ಪದ. "शर्मान्तं ब्राह्मणस्य स्यात् वर्मान्तं क्षत्रियस्य च। गुप्त-दासान्तकं नाम प्रशस्तं वैश्यशूद्रयोः"। 7. ಆತ್ಮಜ್ಞಾನವುಳ್ಳವನು. 8. ಅಶಿಕ್ಷಿತ, ಕಾಡುಮನುಷ್ಯ, ಕಿರಾತ. "दासो भृत्ये च शूद्रे च ज्ञातात्मनि च धीवरे" मेदि०।

**दासजन ದಾಸಜನ** (पुं०) ಸೇವಕ, ಆಳು.

**दासजीवन ದಾಸಜೀವನ** (न०) 1. ಸೇವಕನ ಜೀವನ, ಸೇವಕನ ಬಾಳು. (वि०) 2. ಸೇವಕನಂತೆ ಜೀವನವುಳ್ಳ. दासस्येव जीवनं यस्य।

**दासभाव ದಾಸಭಾವ** (पुं०) ದಾಸ್ಯ, ಅಡಿಯಾಳಾಗಿರುವುದು, ಪರರಿಗೆ ಅಧೀನನಾಗಿರುವುದು.

**दासमीय ದಾಸಮೀಯ** (पुं०) ಮನೆಯಲ್ಲಿರುವ ಶೂದ್ರನನ್ನು ಕಾಮಿಸುವ ಹೆಂಗಸಿನಲ್ಲಿ ಹುಟ್ಟಿದ ಮಗ. दासं शूद्रं मिमीते मानयति मैथुनार्थिनी सा दासमी, दासम्या अयम् "छः" (४-२-११४)। "व्रात्यानां दासमी-यानां वाहीकानामयज्वनाम्" भा० कर्ण० ४५-२०।

**दासी ದಾಸೀ** (स्त्री०) 1. ಸೇವಕಿ, ಪರಿಚಾರಿಕೆ. 2. ಶೂದ್ರನ ಪತ್ನಿ. 3. ಸೇವಕನ ಪತ್ನಿ. 4. ಬೆಸ್ತರವನ ಹೆಂಡತಿ. 5. ನೀಲಿ ಗೋರಂಟಿ, ಕರಿ ಗೋರಂಟಿ. स्वार्थे "कः"।
**—सिका — ಸಿಕಾ.**

**दासीजन ದಾಸೀಜನ** (पुं०) ಸ್ತ್ರೀಸೇವಕಿ, ಹೆಣ್ಣಾಳು.

**दासीत्वम् ದಾಸೀತ್ವಮ್** (न०) ದಾಸೀಭಾವ, ಸೇವಕಿಯಾಗಿರುವುದು. दास्या भावः कर्म वा "त्वः" (५-१-११९)।

**दासीमाणवक ದಾಸೀಮಾಣವಕ** (पुं०) ಸೇವಕಿ ಮತ್ತು ಬಾಲಕರು.

**दासेय ದಾಸೇಯ** (पुं०) ದಾಸಿಯ ಮಗ. दास्या अपत्यम् "ढक्" (४-१-१२१)। स्त्रियाम् "ङीप्" (४-१-१५)। **-यी -ಯೀ.**

**दासेर ದಾಸೇರ** (पुं०) 1. ದಾಸಿಯ ಮಗ, ಪರಿಚಾರಿಕೆಯ ಮಗ. दास्या अपत्यम् "ढ्रक्" (४-१-१३१)। स्त्रियाम् "टाप्" (४-१-४)। **-रा -ರಾ.** 2. ಉಷ್ಟ್ರ, ಒಂಟೆ. जाति० "ङीप्" (४-१-६३)। **-री -ರೀ.** "दासेरो दासिकापत्ये त्रिषु पुंसि क्रमेलके" मेदि०। "दाक्ष्यं हि सद्यः फलदं यदग्रतः चखाद दासेरयुवा वनावलीः" माघ० १२-३२। स्वार्थे "कः"। **-रकः -ರಕಃ.** "दासेरकः सपदि संवलितं निषादैर्विप्रं पुरा पतगराडिव निर्जगाम" माघ० ५-६६।

**दास्य ದಾಸ್ಯ** (न०) 1. ದಾಸತ್ವ, ಆಡಿಯಾಳಾಗಿರುವುದು "या दास्यमप्यस्य लभेत नारी सा स्यात् कृतार्था किमुताङ्कशय्याम्" कुमा० ७-६५। 2. ಸೇವೆ, ಚಾಕರಿ. दासस्य भावः कर्म वा "ष्यञ्" (५-१-१२४)। "पतिकुले तव दास्यमपि क्षमम्" शाकु० ५-२७।

**दास्र ದಾಸ್ರ** (न०) ಅಶ್ವಿನೀನಕ್ಷತ್ರ. दस्रौ देवते अस्य "अण्" (४-२-२४)।

**दाह ದಾಹ** (पुं०) 1. ಸುಡುವುದು, ಭಸ್ಮವಾಗಿಮಾಡುವುದು. दह (भस्मीकरणे) "घञ्" (३-३-१८)। "मुहुरनुस्मरयन्तमनुक्षपं त्रिपुरदाहमुमापतिसेविनः" किरा० ५-१४। "छेदो दंशस्य दाहो वा क्षतेर्वा रक्तमोक्षणम्" माल० ४-४। 2. ದೇಹದೊಳಗೆ ಉಂಟಾಗುವ ಸಂತಾಪ. 3. ಉರಿತ.

**दाहक ದಾಹಕ** (पुं०) 1. ಅಗ್ನಿ, ಬೆಂಕಿ. दहति — दह (भस्मीकरणे) कर्त० "ण्वुल्" (३-१-१३३)। 2. ಚಿತ್ರಮೂಲದ ಗಿಡ. (वि०) 3. ದಹಿಸುವ. ಸುಡುವ. स्त्रियाम् "टाप्" (४-१-४)। **-हिका -ಹಿಕಾ.**

**दाहघ्न ದಾಹಘ್ನ** (न०) ಮೈಯೊಳಗಿನ ಉರಿತವನ್ನು ಹೋಗಲಾಡಿಸುವ ಔಷಧ. दाहं हन्ति—हन (हिंसागत्योः) "टक्" (३-२-५३)।

**दाहज्वर ದಾಹಜ್ವರ** (पुं०) ಮೈಯಲ್ಲಿ ಉರಿತವುಂಟು ಮಾಡುವ ಜ್ವರದ ಒಂದು ಭೇದ. दाहप्रधानो ज्वरः।

**दाहन ದಾಹನ** (न०) ಸುಡಿಸುವುದು, ಸುಡುವಂತೆಮಾಡುವುದು. दह(भस्मीकरणे)+णिच् "ल्युट्"(३-३-११५)।

**दाहनीय ದಾಹನೀಯ** (वि०) 1. ಸುಡಿಸಲ್ಪಡುವ. 2. ದಹಿಸಲು ಯೋಗ್ಯವಾದ, ಸುಡಿಸಲು ಯೋಗ್ಯವಾದ. 3. ಸುಡಿಸಲು ಶಕ್ಯವಾದ. दह (भस्मीकरणे) + णिच् "अनीयर्" (३-१-९६)। "तव्यः"। **-यितव्यः -ಯಿತವ್ಯಃ.**

**दाहयत् ದಾಹಯತ್** (वि०) ಸುಡಿಸುತ್ತಿರುವ. दह (भस्मीकरणे) + णिच् "शतृ" (३-२-१२४)। स्त्रियाम् "ङीप्" (४-१-६)। **-यन्ती- ಯನ್ತೀ.**

**दाहयमान ದಾಹಯಮಾನ** (वि०) ಸುಡಿಸುತ್ತಿರುವ. दह (भस्मीकरणे) + णिच् "शानच्" (३-२-१२४)।

**दाहहरण ದಾಹಹರಣ** (न०) 1. ಲಾಮಂಚದ ಬೇರು. दाहो ह्रियतेऽनेन—हृञ् (हरणे) "ल्युट्" (३-३-११७)। (वि०) 2. ಉರಿತವನ್ನು ಹೋಗಲಾಡಿಸುವ. दाहं हरति—हृञ् (हरणे) कर्त० "ल्युः" (३-१-१३४)।

**दाहित ದಾಹಿತ** (न०) 1. ಸುಡುವಂತೆ ಮಾಡುವುದು. दह (भस्मीकरणे) + णिच् भावे "क्तः" (३-३-११४)। (वि०) 2. ಸುಡುವಂತೆ ಮಾಡಲ್ಪಟ್ಟ, ಸುಡಿಸಲ್ಪಟ್ಟ. दह + णिच् कर्म० "क्तः" (३-२-१०२)।

**दाहितवत् ದಾಹಿತವತ್** (वि०) ಸುಡುವಂತೆಮಾಡಿದವನು. दह (भस्मीकरणे) + णिच् "क्तवतुः" (३-२-१०२)। स्त्रियाम् "ङीप्" (४-१-६)। **-वती -ವತೀ.**

**दाहिन् ದಾಹಿನ್** (वि०) ಸುಡುವ, ದಹಿಸುವ. दह (भस्मीकरणे) "णिनिः" (३-१-१३४)।

**दाह्य ದಾಹ್ಯ** (वि०) 1. ಸುಡಲ್ಪಡುವ, ದಹಿಸಲ್ಪಡುವ. 2. ದಹಿಸಲು ಶಕ್ಯವಾದ. "अच्छेद्योऽयमदाह्योऽयमक्लेद्योऽशोष्य एव च" गीता २-२४। 3. ದಹಿಸಲು ಯೋಗ್ಯವಾದ. 4. ದಹಿಸಬೇಕಾದ. दह (भस्मीकरणे) कर्मणि "ण्यत्" (३-१-१२४)। "दाह्याभावान्न खेदात् ज्वलन इव वने शाम्यति क्रोधवह्निः" मुद्रा० १-११।

**दिक्कन्या ದಿಕ್ಕನ್ಯಾ** (स्त्री०) ದಿಕ್ಕುಗಳೆಂಬ ಕನ್ಯೆಯರು, ಬ್ರಹ್ಮನ ಕನ್ಯೆಯರು. दिश एव कन्याः। [ಜಗತ್ತಿನ ಸೃಷ್ಟಿಯ ಪ್ರಾರಂಭದಲ್ಲಿ ಚತುರ್ಮುಖಬ್ರಹ್ಮನ ಕಿವಿಗಳಿಂದ ಹತ್ತು ಮಂದಿ ಕನ್ಯೆಯರು ಜನಿಸಿದರು. ಇವರೆಲ್ಲರೂ ತಮಗೆ ಇರಲು ಅವಕಾಶವನ್ನೂ ತಮಗೆ ಪತಿಗಳನ್ನೂ ಕೇಳಲು ಇಂದ್ರ ಅಗ್ನಿ ಯಮ ನಿರ್ಋತಿ ವರುಣ ವಾಯು ಕುಬೇರ ಮತ್ತು ಈಶಾನರೆಂಬ ಎಂಟು ಮಂದಿ ಲೋಕಪಾಲಕರನ್ನೂ ಸೃಷ್ಟಿಸಿ ಅವರಿಗೆ ಎಂಟು ಮಂದಿ ಕನ್ಯೆಯರನ್ನೂ ಕೊಟ್ಟು ವಿವಾಹಮಾಡಿ ಊರ್ಧ್ವದಲ್ಲಿ ತಾನಿದ್ದು

ಕೊಂಡು ಅಧೋಲೋಕಕ್ಕೆ ಆದಿಶೇಷನನ್ನು ಪತಿಯನ್ನಾಗಿ ಮಾಡಿ ತನ್ನ ಹತ್ತು ಮಂದಿ ಕನ್ಯೆಯರಿಗೂ ಹತ್ತು ದಿಕ್ಕುಗಳ ಹೆಸರನ್ನೂ ಕೊಟ್ಟನು.] वराहपु० ।

**दिक्कर ದಿಕ್ಕರ** (पुं०) 1. ತರುಣ, ಪ್ರಾಯದವನು. दिशं स्त्रीमुखदर्शनं करोति – डु कृञ् (करणे) "ट:" (३-२-२०)। 2. ಶಿವ, ಪರಮೇಶ್ವರ.

**दिक्करिका ದಿಕ್ಕರಿಕಾ** (स्त्री०) 1. ಒಂದು ನದಿ. "अस्ति नाटकशैले तु सरो मानससन्निभम्। तस्य पश्चिमभागे तु नदी दिक्करिकाह्वया" कालिकापु० । 2. ಯುವತಿ, ಪ್ರಾಯದ ಹೆಂಗಸು. दिक् दन्तदंशनं करिका नखक्षत-रेखा च यस्याः। "सततमसुमतामगम्यरूपाः परिणत-दिक्करिकास्तटीर्बिभर्ति" माघ० ४-२९। "दिग्दष्टे वर्तुलाकारे करिका नखरेखिका" वैज०। (वि०) 3. (ಬಹುವ್ರೀಹಿಸಮಾಸಾಂತ್ಯದಲ್ಲಿ) ದಿಗ್ಗಜಗಳುಳ್ಳ, ದಿಗ್ಗಜಗಳಿರುವ. "परिणतदिक्करिकास्तटीर्बिभर्ति" माघ० ४-२९। परिणताः तिर्यग्दन्तप्रहारिणो दिक्करिणो यासु ताः "कप्" (५-४-१५२)।

**दिक्करिन् ದಿಕ್ಕರಿನ್** (पुं०) ದಿಗ್ಗಜ, ದಿಕ್ಕುಗಳಲ್ಲಿರುವ ಆನೆಗಳು, ಐರಾವತ ಮೊದಲಾದ ದಿಗ್ಗಜಗಳು. दिक्षु स्थिताः करिणः। (स्त्री०) –करिणी – ಕರಿಣೀ. ದಿಗ್ಗಜಗಳ ಪತ್ನಿಯರು. "दिग्गज" ಪದದಲ್ಲಿ ನೋಡಿ.

**दिक्करी ದಿಕ್ಕರೀ** (स्त्री०) ಯುವತಿ, ತರುಣಿ, ಪ್ರಾಯದ ಹೆಂಗಸು. दिक्करस्य यूनः स्त्री "ङीष्" (वा० ४-१-२०)।

**दिक्कामिनी ದಿಕ್ಕಾಮಿನೀ** (स्त्री०) "दिक्कन्या" ಪದದ ಅರ್ಥ.

**दिक्कुञ्जर ದಿಕ್ಕುಂಜರ** (पुं०) ದಿಗ್ಗಜ.

**दिक्चक्र ದಿಕ್ಚಕ್ರ** (न०) ದಿಙ್ಮಂಡಲ, ದಿಕ್ಕುಗಳ ಪರಿಧಿ. दिशां चक्रम्। "व्याकृष्यावस्थितोऽस्तक्षितिभृति नयतीवैष दिक्चक्रमर्कः" रत्ना० ३-५।

**दिक्चक्रवाल ದಿಕ್‌ಚಕ್ರವಾಲ** (न०) ದಿಙ್ಮಂಡಲ, ವರ್ತುಲಾಕಾರದ ದಿಕ್ಕುಗಳ ಸಮೂಹ. दिशां चक्रवालम्। "खेलल्लोलम्बकोलाहलमुखरितदिक्चक्रवालान्तरालम्" चं० भा०।

**दिक्पति ದಿಕ್ಪತಿ** (पुं०) 1. ದಿಕ್ಕುಗಳ ಪತಿಗಳು, ಇಂದ್ರ ಅಗ್ನಿ ಯಮ ನಿರ್ಋತಿ ಮೊದಲಾದವರು. ಬ್ರಹ್ಮನು ಇಂದ್ರಾದಿ ದೇವತೆಗಳಿಗೆ ತನ್ನ ಹತ್ತು ಮಂದಿ ಕನ್ಯೆಯರನ್ನು ಕೊಟ್ಟು ಮದುವೆ ಮಾಡಿದ್ದರಿಂದ ಇವರು ದಿಕ್‌ಪತಿಗಳಾದರು. "एकामिन्द्राय च प्रादादग्नयेऽन्यां यमाय च। निर्ऋताय च देवाय वरुणाय महात्मने। वायवे धनदेशाय ईशानाय च सुव्रतः। ऊर्ध्वं स्वयमधिष्ठाय शेषायाधो व्यवस्थिताम्। एवं दत्वा पुनर्ब्रह्मा तिथिं प्रादाद्दिशां पुनः। ततः प्रभृति ता देव्यः सेन्द्राद्याः परिकीर्तिताः" वराहपु०। 2. ದಿಗಧೀಶ್ವರರಾದ ಸೂರ್ಯ ಮೊದಲಾದ ಗ್ರಹಗಳು, ದಿಕ್ಕುಗಳ ಒಡೆಯರು.

| ದಿಕ್ಕು | | ಅಧಿಪತಿ |
|---|---|---|
| ಪೂರ್ವ | .. | ರವಿ |
| ಆಗ್ನೇಯ | .. | ಶುಕ್ರ |
| ದಕ್ಷಿಣ | .. | ಕುಜ |
| ನಿರ್ಋತಿ | .. | ರಾಹು |
| ಪಶ್ಚಿಮ | .. | ಶನಿ |
| ವಾಯು | .. | ಚಂದ್ರ |
| ಉತ್ತರ | .. | ಬುಧ |
| ಈಶಾನ್ಯ | .. | ಬೃಹಸ್ಪತಿ |

"सूर्यस्सितो भूमिसुतोऽथ राहुः शनिः शशी ज्ञश्च बृहस्पतिश्च। प्राच्यादितो दिक्षु विदिक्षु चापि दिशाम-धीशाः क्रमतः प्रदिष्टाः" मु० चिं०।

**दिक्पाल ದಿಕ್ಪಾಲ** (पुं०) ಇಂದ್ರ ಮೊದಲಾದ ಹತ್ತು ಮಂದಿ ಲೋಕಪಾಲಕರು. दिशः पालयन्ति – पाल (रक्षणे) + णिच् "अण्" (३-२-१)। "ण्वुल्" (३-१-१३३)। –पालकः – ಪಾಲಕಃ.

| ದಿಕ್ಕು | | ದಿಕ್ಪಾಲಕ |
|---|---|---|
| ಪೂರ್ವ | .. | ಇಂದ್ರ |
| ಆಗ್ನೇಯ | .. | ಅಗ್ನಿ |
| ದಕ್ಷಿಣ | .. | ಯಮ |
| ನೈರುತ್ಯ | .. | ನಿರ್ಋತ |
| ಪಶ್ಚಿಮ | .. | ವರುಣ |
| ವಾಯು | .. | ಮರುತ್ |
| ಉತ್ತರ | .. | ಕುಬೇರ |
| ಈಶಾನ್ಯ | .. | ಈಶ್ವರ |
| ಊರ್ಧ್ವ | .. | ಬ್ರಹ್ಮ |
| ಅಧೋಲೋಕ | .. | ಅನಂತ |

"यत्रार्चयन्ति विधिना दिक्पालादींस्तु कर्मिणः। तत्र प्रपूजयेदेनं विधिं भागवतं शुकम्" पद्मपु०।

**दिक्शब्द ದಿಕ್‌ಶಬ್ದ** (पुं०) ದಿಕ್ಕುಗಳ ಹೆಸರನ್ನು ಹೇಳುವ ಪೂರ್ವ ಮೊದಲಾದ ಪ್ರಸಿದ್ಧ ಶಬ್ದಗಳು. दिशि दृष्टः शब्दः।

**दिक्शूल ದಿಕ್‌ಶೂಲ** (ನಂ) ಪೂರ್ವ ಮೊದಲಾದ ದಿಕ್ಕುಗಳಲ್ಲಿ ಪ್ರಯಾಣಕ್ಕೆ ನಿಷಿದ್ಧವಾದ (ದೋಷವಿರುವ) ವಾರಗಳು. दिशि शूलमिव ।

| ದಿಕ್ಕು | ನಿಷಿದ್ಧವಾರ |
|---|---|
| ಪೂರ್ವ | .. ಸೋಮ, ಶನಿ |
| ದಕ್ಷಿಣ | .. ಗುರು |
| ಪಶ್ಚಿಮ | .. ಭಾನು, ಶುಕ್ರ |
| ಉತ್ತರ | .. ಮಂಗಳ, ಬುಧ |

"शुक्रादित्यदिने न वारुणदिशं न ज्ञे कुजे चोत्तरां मन्देन्द्वोश्च दिने न शक्रककुभं याम्यां गुरौ न व्रजेत् । शूलानीति विलङ्घ्य यान्ति मनुजा ये वित्तलाभाशया भ्रष्टाशाः पुनरापतन्ति यदि ते शक्रेण तुल्या अपि" ज्योतिःसारसङ्ग्रहः । ಶೂಲ (ದೋಷ) ವಿರುವ ಆಯಾ ವಾರಗಳಲ್ಲಿ ಆಯಾ ದಿಕ್ಕುಗಳಿಗೆ ಪ್ರಯಾಣವು ನಿಷಿದ್ಧ.

**दिगङ्गना ದಿಗಂಗನಾ** (स्त्री०) ದಿಕ್ಕನ್ಯೆ.

**दिगधिपति ದಿಗಧಿಪತಿ –अधीश्वर –ಅಧೀಶ್ವರ** (ಪುಂ) "दिक्पति" ಪದದ ಅರ್ಥ.

**दिगन्त ದಿಗಂತ** (ಪುಂ) ದಿಕ್ಕುಗಳ ಕೊನೆಯ ಭಾಗ. दिशामन्तः । "व्यतिकरितदिगन्ताः श्वेतमानैर्यशोभिः सुकृतविलसितानां स्थानमूर्जस्वलानाम्" मालती० २-९ ।

**दिगन्तर ದಿಗಂತರ** (ನಂ) 1. ದಿಕ್ಕುಗಳ ಮಧ್ಯಭಾಗ, ಆಕಾಶ, ಗಗನ. दिशामन्तरम् अवकाशः । व्यवहित- रतिविग्रहैर्वितेने जलगुरुभिः स्तनितैर्दिगन्तरेषु" किरा० १०-१९ । 2. ಬೇರೆ ದಿಕ್ಕು. अन्या दिक् ।

**दिगम्बर ದಿಗಂಬರ** (ಪುಂ) 1. ಪರಶಿವ, ಪರಮೇಶ್ವರ. दिक् शून्यमम्बरं यस्य । 2. ಕ್ಷಪಣಕ, ಜೈನಸಂನ್ಯಾಸಿ. 3. ತಮಸ್ಸು, ಕತ್ತಲೆ, ಅಂಧಕಾರ. (वि०) 4. ಬೆತ್ತಲೆಯ, ನಗ್ನ, ವಸ್ತ್ರವನ್ನು ಧರಿಸದಿರುವ. "एकाकी निःस्पृहः शान्तः पाणिपात्रो दिगम्बरः । कदा शम्भो भविष्यामि कर्मनिर्मूलनक्षमः" भर्तृ० ३-८९ । "दिगम्बरः स्यात् क्षपणे नग्ने तमसि शङ्करे" मेदि० । स्त्रियाम् "ङीष्" (४-१-४१)। **दिगम्बरी ದಿಗಂಬರೀ.** ದುರ್ಗಾದೇವಿ.

**दिगीश ದಿಗೀಶ –ईश्वर –ಈಶ್ವರ** (ಪುಂ) 1. ಇಂದ್ರ ಮೊದಲಾದ ದಿಕ್ಪಾಲಕರು. दिशामीशाः ईश्वरा वा । "दिगीशवृन्दांशविभूतिरीशिता दिशां स कामप्रसरा- वरोधिनीम्" नैष० १-६ । 2. ಸೂರ್ಯ ಮೊದಲಾದ ಗ್ರಹಗಳು. "दिक्पति" ಪದದಲ್ಲಿ ನೋಡಿ.

**दिग्गज ದಿಗ್ಗಜ** (ಪುಂ) ಭೂಮಿಯನ್ನು ಹೊತ್ತಿರುವ ಐರಾವತ ಮೊದಲಾದ ಎಂಟು ಆನೆಗಳು. दिक्षु स्थिताः गजाः । **ಅಷ್ಟದಿಗ್ಗಜಗಳು:** (1) ऐरावतः, (2) पुण्डरीकः, (3) वामनः, (4) कुमदः, (5) अञ्जनः, (6) पुष्पदन्तः, (7) सार्वभौमः ಮತ್ತು (8) सुप्रतीकः । **ಅಷ್ಟದಿಗ್ಗಜಗಳ ಪತ್ನಿಯರು:** (1) अभ्रमुः, (2) कपिला, (3) पिङ्गला, (4) अनुपमा, (5) ताम्रपर्णी, (6) शुभ्रदन्ती, (7) अङ्गना ಮತ್ತು (8) अञ्जनावती । "गृहीतदिक्कर- पुनर्निवृत्तिभिः चिराय याथार्थ्यमलम्भि दिग्गजैः" माघ० १-६४ ।

**दिग्ज्ञान ದಿಗ್‌ಜ್ಞಾನ** (ನಂ) ಪೂರ್ವ ಮೊದಲಾದ ದಿಕ್ಕುಗಳನ್ನು ತಿಳಿಯುವ ರೀತಿ.

**दिग्दन्तिन् ದಿಗ್ದಂತಿನ್** (वि०) 1. ದಿಗ್ಗಜ. दिक्षु स्थितो दन्ती । 2. ಪಾಂಡಿತ್ಯ ಮೊದಲಾದ ಅನೇಕ ಪ್ರಭಾವಗಳಿಂದ ದಿಗ್ಗಜಗಳಿರುವ ಎಲ್ಲಾ ದಿಕ್ಕುಗಳಲ್ಲಿಯೂ ಕೀರ್ತಿಯನ್ನು ಪಡೆದಿರುವ ಮತ್ತು ದಿಗ್ಗಜಗಳಂತೆ ಬಲಿಷ್ಠನಾದ ಮಹಾಪುರುಷ.

**दिग्दर्शन ದಿಗ್ದರ್ಶನ** (ನಂ) 1. ದಿಕ್ಕುಗಳ ತಿಳಿವಳಿಕೆಯನ್ನು ಉಂಟುಮಾಡುವ ಯಂತ್ರ. दिशो दृश्यन्तेऽनेन – दृशिर् (प्रेक्षणे) "ल्युट्" (३-३-११७) । 2. ಎಲ್ಲಾ ದಿಕ್ಕುಗಳನ್ನು ನೋಡುವುದು. दिशां दर्शनम् ।

**दिग्दर्शिन् ದಿಗ್ದರ್ಶಿನ್** (वि०) 1. ದಿಕ್ಕುಗಳನ್ನು ತಿಳಿಸುವ. 2. ದಿಕ್ಕುಗಳನ್ನು ನೋಡುವ. दिशः दर्शयति पश्यति वा ।

**दिग्दाह ದಿಗ್ದಾಹ** (ಪುಂ) ದಿಕ್ಕುಗಳಲ್ಲಿ ಅಸ್ವಾಭಾವಿಕವಾಗಿ ಕಾಣಿಸಿಕೊಳ್ಳುವ ಬೆಂಕಿ, ದಿಕ್ಕುಗಳನ್ನು ಸುಡುವ ಬೆಂಕಿ. दिशां दाहः । ಈ ರೀತಿ ಕಾಣಿಸಿಕೊಳ್ಳುವ ಬೆಂಕಿಯು ರಾಜಭಯ ದೇಶನಾಶ ಮುಂತಾದುವುಗಳಿಗೆ ಕಾರಣವಾಗುವುದು ಮತ್ತೆ ಮೇಘವು ಗರ್ಭಪಾತ ಹೊಂದುವುದು. "दाहो दिशां राजभयाय पीतो देशस्य नाशाय हुताशवर्णः । यश्चारुणः स्यादपसव्यवायुः शस्यस्य नाशं स करोति दृष्टः" बृहत्सं० ३१-१ । "गर्भोपघातलिङ्गान्युल्काशनिपांसुपात- दिग्दाहाः । क्षितिकम्पखपुरकीलककेतुग्रहयुद्धनिर्घाताः । रुधिरादिवृष्टिवैकृतपरिघेन्द्रधनूंषि दर्शनं राहोः । इत्यु- त्पातैरेतैस्त्रिविधैश्चान्यैर्हतो गर्भः" बृहत्सं० २१-२५, २६ ।

**दिग्देवता ದಿಗ್ದೇವತಾ** (स्त्री०) ದಿಕ್ಕುಗಳ ಎಲ್ಲೆಗಳಲ್ಲಿರುವ ದೇವತೆ, ದಿಕ್ಕುಗಳನ್ನು ರಕ್ಷಿಸುವ ದೇವತೆ. दिशां तन्मर्यादानां देवता ।

**दिग्घ ದಿಗ್ಧ** (ಪುಂ) 1. ವಿಷಬಳಿಯಲ್ಪಟ್ಟ ಬಾಣ. दिह (उपचये) "क्तः" (३-२-१०२)। 2. ತೈಲ, ಎಣ್ಣೆ. 3. ಅಗ್ನಿ, ಬೆಂಕಿ. (वि०) 4. ಲೇಪನಮಾಡಲ್ಪಟ್ಟ, ಬಳಿಯಲ್ಪಟ್ಟ. "अथ तैः परिदेविताक्षरैर्हृदये दिग्घशरैरिवाहतः" कुमा० ४-२५। 5. ಬೆಳೆದಿರುವ, ವೃದ್ಧಿ ಹೊಂದಿರುವ. दिह कर्त० "क्तः" (३-४-७२)। "दिग्घो विषप्रलिप्तेषौ लिप्ते स्नेहप्रवृद्धयोः" वैज०।

**दिग्बल ದಿಗ್ಬಲ** (ನಂ) ಲಗ್ನ ಮೊದಲಾದ ದ್ವಾದಶ (ಹನ್ನೆರಡು) ರಾಶಿಗಳಲ್ಲಿರುವ ಗ್ರಹಗಳ ಬಲ, ದ್ವಾದಶ ರಾಶಿಗಳಲ್ಲಿ ಆಯಾ ದಿಕ್ಕುಗಳಲ್ಲಿರುವ ಗ್ರಹಗಳ ಬಲ. दिङ्निमित्तं ग्रहाणां बलम्। **ಗ್ರಹಗಳಿಗೆ ಬಲವಿರುವ ದಿಕ್ಕುಗಳು :**

| ಗ್ರಹಗಳು | | ದಿಕ್ಕು |
|---|---|---|
| ಬುಧ, ಗುರು | .. | ಪೂರ್ವ |
| ರವಿ, ಕುಜ | .. | ದಕ್ಷಿಣ |
| ಶನಿ | .. | ಪಶ್ಚಿಮ |
| ಶುಕ್ರ, ಚಂದ್ರ | .. | ಉತ್ತರ |

ಈ ರೀತಿ ದಿಕ್ಕುಗಳಲ್ಲಿ ಗ್ರಹಗಳಿಗೆ ಬಲವಿರುವುದು.

**दिग्बलिन् ದಿಗ್ಬಲಿನ್** (ಪುಂ) ಪೂರ್ವ ಮೊದಲಾದ ದಿಕ್ಕುಗಳಲ್ಲಿ ಬಲವಿರುವ ಗ್ರಹ. दिग्बलमस्त्यस्य "इनिः" (५-२-११५)। **ದಿಕ್ಕುಗಳಲ್ಲಿ ಬಲವಿರುವ ಗ್ರಹಗಳು :**

| ದಿಕ್ಕು | | ಗ್ರಹ |
|---|---|---|
| ಪೂರ್ವ ದಿಕ್ಕಿನಲ್ಲಿ | .. | ಬುಧ, ಗುರು |
| ದಕ್ಷಿಣ ,, | .. | ರವಿ, ಕುಜ |
| ಪಶ್ಚಿಮ ,, | .. | ಶನಿ |
| ಉತ್ತರ ,, | .. | ಶುಕ್ರ, ಚಂದ್ರ |

"प्राच्यां सौम्यसुराचार्यौ याम्यां भास्करभूमिजौ। प्रत्यक् सौरिरुदीच्यां तु सितेन्दू दिग्बलान्वितौ"।

**दिग्भाग ದಿಗ್ಭಾಗ** (ಪುಂ) ದಿಕ್ಕಿನ ಪ್ರದೇಶ. दिशो भागः। "कौबेरदिग्भागमपास्य मार्गमागस्त्यमुष्णांशुरिवावतीर्णः" माघ० ३-१।

**दिग्वदन ದಿಗ್ವದನ** (ನಂ) ಪೂರ್ವ ಮೊದಲಾದ ದಿಕ್ಕುಗಳಿಗೆ ಅಭಿಮುಖವಾಗಿರುವ ರಾಶಿ. दिशि वदनं यस्य।

| ರಾಶಿ | | ಅಭಿಮುಖ ದಿಕ್ಕು |
|---|---|---|
| ಮೇಷ | .. | ಪೂರ್ವ |
| ವೃಷಭ | .. | ದಕ್ಷಿಣ |
| ಮಿಥುನ | .. | ಪಶ್ಚಿಮ |
| ಕರ್ಕಾಟಕ | .. | ಉತ್ತರ |
| ಸಿಂಹ | .. | ಪೂರ್ವ |
| ಕನ್ಯಾ | .. | ದಕ್ಷಿಣ |
| ತುಲಾ | .. | ಪಶ್ಚಿಮ |
| ವೃಶ್ಚಿಕ | .. | ಉತ್ತರ |
| ಧನುಸ್ಸು | .. | ಪೂರ್ವ |
| ಮಕರ | .. | ದಕ್ಷಿಣ |
| ಕುಂಭ | .. | ಪಶ್ಚಿಮ |
| ಮೀನ | .. | ಉತ್ತರ |

**दिग्वलय ದಿಗ್ವಲಯ** (ನಂ) ದಿಙ್ಮಂಡಲ, ದಿಕ್‌ಚಕ್ರ. दिशां वलयम्। "कुरुविन्ददलप्रतिबद्धमध्यमिव दिग्वलयम्" माघ० ९-८।

**दिग्वसन ದಿಗ್ವಸನ, –वस्त्र –ವಸ್ತ್ರ** (ಪುಂ) "दिगम्बर" ಪದದ ಅರ್ಥ.

**दिग्वारण ದಿಗ್ವಾರಣ** (ಪುಂ) ದಿಗ್ಗಜಗಳು, ಅಷ್ಟದಿಕ್ಕುಗಳಲ್ಲಿರುವ ಆನೆಗಳು. दिक्षु स्थिता वारणाः। "मन्दाकिन्याः पयःशेषं दिग्वारणमदाविलम्" कुमा० २-४४।

**दिग्विजय ದಿಗ್ವಿಜಯ** (ಪುಂ) ನಾನಾ ದಿಕ್ಕುಗಳಲ್ಲಿರುವ ರಾಜರನ್ನು ಯುದ್ಧದಲ್ಲಿ ಜಯಿಸುವುದು. दिशां तत्रत्यानां नृपाणां विजयः।

**दिङ्क ದಿಂಕ** (ಪುಂ) ಹೇನಿನ ಮೊಟ್ಟೆ, ಸೀರು.

**दिङ्नक्षत्र ದಿಙ್ನಕ್ಷತ್ರ** (ನಂ) ಪೂರ್ವ ಮೊದಲಾದ ದಿಕ್ಕುಗಳಲ್ಲಿರುವ ಕೃತ್ತಿಕಾ ಮೊದಲಾದ ನಕ್ಷತ್ರಗಳು. ಪೂರ್ವ ಮೊದಲಾದ ದಿಕ್ಕುಗಳಲ್ಲಿ ಕೃತ್ತಿಕಾ ಮೊದಲಾದ ಏಳು ಏಳು ನಕ್ಷತ್ರಗಳನ್ನು ಸೇರಿಸಿದರೆ ಯಾರ ನಕ್ಷತ್ರವು ಯಾವ ದಿಕ್ಕಿನಲ್ಲಿರುವುದೋ ಆಯಾ ದಿಕ್ಕುಗಳಲ್ಲಿ ಅವರವರಿಗೆ ಶುಭವೆಂದು ತಿಳಿಯಬೇಕು. "कृत्तिकाद्यास्तु पूर्वादौ सप्त सप्तोदिताः क्रमात्। यद्दिश्यं यस्य नक्षत्रं तत्र तस्य शुभं गृहम्"।

**दिङ्नाग ದಿಙ್ನಾಗ** (ಪುಂ) ದಿಗ್ಗಜಗಳು, ಎಂಟು ದಿಕ್ಕುಗಳಲ್ಲಿರುವ ಆನೆಗಳು. दिक्षु स्थिता नागाः। "दिङ्नागानां पथि परिहरन् स्थूलहस्तावलेपान्" मेघ० १-१४।

**दिङ्मण्डल ದಿಙ್ಮಂಡಲ** (ನಂ) 1. ದಿಕ್ಕುಗಳ ಸಮೂಹ, ಮಂಡಲಾಕಾರವಾದ ದಿಕ್ಕುಗಳ ಗುಂಪು. 2. ದಿಕ್ಕುಗಳ ವಲಯ. दिशां मण्डलम्। "उन्नादाम्बुदवर्षितान्धतमसप्रभ्रष्टदिङ्मण्डले" उद्भ०।

**दिङ्मात्र ದಿಙ್ಮಾತ್ರ** (ನಂ) 1. ಕೇವಲ ದಿಕ್ಕು, ಏಕದೇಶ, ಸ್ವಲ್ಪಭಾಗ. 2. ಸೂಚನೆ, ಲಕ್ಷಣ ಮಾತ್ರ ಹೇಳುವುದು, ಸ್ವರೂಪವನ್ನು ಮಾತ್ರ ತಿಳಿಸುವುದು.

**दिङ्मूढ ದಿಙ್ಮೂಢ** (वि०) 1. ದಿಗ್ಭ್ರಮೆ ಹಿಡಿದವನು, ದಿಕ್ಕುಗಳ ಪರಿಜ್ಞಾನವಿಲ್ಲದವನು, ಪೂರ್ವಾದಿ ದಿಕ್ಕುಗಳನ್ನು ತಿಳಿಯದವನು. दिशि मूढः। 2. ದಿಕ್ಕುಗಳ ವಿಷಯದಲ್ಲಿ ಸಂಶಯವಿರುವವನು. "प्रागुत्तरोन्नते धनसुतक्षयः सुतवधश्च दुर्गन्धे। वक्रे बन्धुविनाशो न सन्ति गर्भाश्च दिङ्मूढे" बृहत्सं० ५३-११५।

**दित ದಿತ** (वि०) ಕತ್ತರಿಸಲ್ಪಟ್ಟ, ಎರಡಾಗಿ ಮಾಡಲ್ಪಟ್ಟ, ತುಂಡುಮಾಡಲ್ಪಟ್ಟ. दो (अवखण्डने) "क्तः" (३-२-१०२)। इत्वम् (७-४-४०)। "छिन्नं छातं लूनं कृत्तं दातं दितं छितं वृक्णम्" अम०। "पुनः प्रसाद्य तं सोमः कला लेभे क्षये दिताः" भाग० ६-६-२४।

**दिति ದಿತಿ** (स्त्री०) 1. ಕಶ್ಯಪನ ಪತ್ನಿ, ದಕ್ಷನ ಮಗಳು, ದೈತ್ಯರ ತಾಯಿ. दो (अवखण्डने) "क्तिच्" (३-३-१७४)। "प्रजज्ञिरे महाभागा दक्षकन्यास्त्रयोदश। अदितिर्दितिः दनुः काला दनायुः सिंहिका तथा। क्रोधा प्राधा च विश्वा च वनिता कपिला मुनिः। कद्रूश्च मनुजव्याघ्र दक्षकन्यैव भारत" भा० आदि० ६६-१२, १३। 2. ಕತ್ತರಿಸುವುದು, ತುಂಡುಮಾಡುವುದು. दो (अवखण्डने) भावे "क्तिन्" (३-३-९४)।

**दितिज ದಿತಿಜ, –तनय –ತನಯ, –सुत –ಸುತ** (पुं०) ದೈತ್ಯ, ದಿತಿಯ ಮಗ. दितेर्जायते — जनी (प्रादुर्भावे) "डः" (३-२-९८)। दितेस्तनयः सुतो वा। "कर्णान्तमेत्य दितिजेन विकृष्यमाणम्" कुमा० १७-२०।

**दितिजन्मन् ದಿತಿಜನ್ಮನ್** (पुं०) ದೈತ್ಯ, ದಿತಿಯ ಮಗ. दितेर्जन्म यस्य। "मुदितैस्तदेति दितिजन्मनां रिपौ" माघ० १३-२४।

**दित्सत् ದಿತ್ಸತ್** (वि०) ಕೊಡಲು ಅಪೇಕ್ಷಿಸುತ್ತಿರುವ. डु दाञ् (दाने) + सन् "शतृ" (३-२-१२४)।

**दित्सनीय ದಿತ್ಸನೀಯ** (वि०) 1. ಕೊಡಲು ಅಪೇಕ್ಷಿಸಲ್ಪಡುವ. 2. ಕೊಡಲು ಅಪೇಕ್ಷಿಸಬೇಕಾದ. डु दाञ् (दाने) + सन् "अनीयर्" (३-१-९६)। "तव्यः" (३-१-९६)। **–त्सितव्यः –ತ್ಸಿತವ್ಯಃ.**

**दित्सा ದಿತ್ಸಾ** (स्त्री०) ಕೊಡಲು ಅಪೇಕ್ಷೆ, ದಾನಮಾಡುವ ಇಚ್ಛೆ. डु दाञ् (दाने) + सन् "अः" (३-३-१०२)। "दित्सया तदपि पार्थिवोऽर्थिनं गुण्यगुण्य इति न व्यजीगणत्" माघ० १४-४७।

**दित्सित ದಿತ್ಸಿತ** (वि०) ಕೊಡಲು ಅಪೇಕ್ಷಿಸಲ್ಪಟ್ಟ, डु दाञ् (दाने) + सन् "क्तः" (३-२-१०२)।

**दित्सु ದಿತ್ಸು** (वि०) ದಾನಮಾಡಲು ಅಪೇಕ್ಷಿಸುವ, ಕೊಡಲು ಇಚ್ಛಿಸುವ. डु दाञ् (दाने) + सन् "उः" (३-२-१६८)।

**दिदृक्षमाण ದಿದೃಕ್ಷಮಾಣ** (वि०) ನೋಡಲು ಆಸೆ ಪಡುವ. दृशिर् (प्रेक्षणे) + सन् "शानच्" (३-२-१२४)। "दिदृक्षमाणाः प्रतिरथ्यमीयुर्मुरारिमारादनघं जनौघाः" माघ० ३-३१।

**दिदृक्षा ದಿದೃಕ್ಷಾ** (स्त्री०) ನೋಡಲು ಆಸೆ, ನೋಡಲು ಅಪೇಕ್ಷೆ. दृशिर् (प्रेक्षणे) + सन् "अः" (३-३-१०२)। "अधिरुक्ममन्दिरगवाक्षमुल्लसत्सुदृशो रराज मुरजिद्दिदृक्षया" माघ० १३-३५। "एकस्थसौन्दर्यदिदृक्षयेव" कुमा० १-४९।

**दिदृक्षु ದಿದೃಕ್ಷು** (वि०) ನೋಡಲು ಆಸೆಪಡುವ, ನೋಡಲು ಅಪೇಕ್ಷಿಸುವ. दृशिर् (प्रेक्षणे) + सन् "उः" (३-२-१६८)। "संकथेच्छुरभिधातुमनीशा संमुखी न च बभूव दिदृक्षुः" माघ० १०-४१।

**दिद्युत् ದಿದ್ಯುತ್** (वि०) 1. ಹೊಳೆಯುವ, ಪ್ರಕಾಶಿಸುವ. (पुं०) 2. ವಜ್ರಾಯುಧ.

**दिधक्षत् ದಿಧಕ್ಷತ್** (वि०) ಸುಡಲು ಅಪೇಕ್ಷಿಸುತ್ತಿರುವ, ಸುಡಲು ಆಸೆಪಡುತ್ತಿರುವ. दह (भस्मीकरणे) + सन् "शतृ" (३-२-१२४)। स्त्रियाम् "ङीप्" (४-१-६)। **–न्ती –ನ್ತೀ.**

**दिधक्षा ದಿಧಕ್ಷಾ** (स्त्री०) ಸುಡಲು ಅಪೇಕ್ಷೆ, ದಹಿಸಲು ಆಸೆ. दग्धुमिच्छा — दह (भस्मीकरणे) + सन् "अः" (३-३-१०२)।

**दिधक्षु ದಿಧಕ್ಷು** (वि०) ಸುಡಲು ಅಪೇಕ್ಷಿಸುವ. दग्धुमिच्छुः—दह (भस्मीकरणे) + सन् "उः" (३-२-१६८)।

**दिधि ದಿಧಿ** (स्त्री०) ಧೈರ್ಯ, ಸ್ಥಿರತೆ, ದೃಢವಾಗಿರುವಿಕೆ.

**दिधिक्षत् ದಿಧಿಕ್ಷತ್** (वि०) ಲೇಪನ ಮಾಡಲು ಅಪೇಕ್ಷಿಸುತ್ತಿರುವ, ಬಳಿಯಲು ಆಸೆಪಡುತ್ತಿರುವ. दिह (उपचये) + सन् "शतृ" (३-२-१२४)।

**दिधिक्षा ದಿಧಿಕ್ಷಾ** (स्त्री०) ಬಳಿಯಲು ಅಪೇಕ್ಷೆ, ಲೇಪಿಸಲು ಆಸೆ. देग्धुमिच्छा—दिह (उपचये) + सन् "अः" (३-३-१०२)।

**दिधिक्षु ದಿಧಿಕ್ಷು** (वि०) ಲೇಪಿಸಲು ಅಪೇಕ್ಷಿಸುವ, ಬಳಿಯಲು ಆಸೆಪಡುವ. दिह (उपचये) + सन् "उः" (३-२-१६८)।

**दिधिषु ದಿಧಿಷು** (पुं०) 1. ಎರಡು ಸಲ ಮದುವೆಯಾದವಳ ಗಂಡ, ಎರಡನೆಯ ಗಂಡ. दिधिषूमात्मन इच्छति —

"क्यच्" (३-१-८)। "क्विप्" (३-२-१७८)। ह्रस्वः बाहु०। 2. ಪತಿ, ಗಂಡ. "ब्राह्मणी वीक्ष्य दिधिषुं पुरुषादेन भक्षितम्" भाग० ९-९-३४। (स्त्री०) 3. ಅರತಿ, ಬೇಸರ. 4. ಎರಡುಸಲ ಮದುವೆ ಯಾದವಳು. 5. ಅಕ್ಕನಿಗಿಂತಲೂ ಮೊದಲು ಮದುವೆ ಯಾದ ತಂಗಿ. 6. ಚಿಕ್ಕ ಹೆಂಡತಿ. "कनिष्ठपत्न्यामरतौ पुनर्भूपरिविन्नयोः। स्त्री पुनर्भ्वास्तु पत्यौ ना दिधिषुर्दिधिषूरपि"।

**दिधिषू ದಿಧಿಷೂ** (स्त्री०) "दिधिषु" ಪದದ ಅರ್ಥ. दिधिं धैर्यं स्यति त्यजति। निपा० (उ० १-९३)।

**दिधिषूपति ದಿಧಿಷೂಪತಿ** (पुं०) ಸಹೋದರನು ಮೃತ ನಾದನಂತರ ಅವನ ಪತ್ನಿಯನ್ನು ಕಾಮಿಸುವವನು. दिधिष्वाः पतिः। "भ्रातुर्मृतस्य भार्यायां योऽनुरज्येत कामतः। धर्मेणापि नियुक्तायां स ज्ञेयो दिधिषूपतिः" मनु० ३-१७३।

**दिन ದಿನ** (न०) 1. ದಿವಸ, ಹಗಲು, ಸೂರ್ಯನಿರುವ ಕಾಲ. द्यति तमः—दो (अवखण्डने) "इनच्" (उ० २-४९)। "दिनेनास्या मुखस्येन्दुः सखा यदि तिरस्कृतः। तत्कृता शतपत्राणां तन्मित्राणामपि श्रियः" नैष० २०-५५। 2. ಒಂದು ದಿವಸ, ಹಗಲು ರಾತ್ರಿಗಳಿಂದ ಕೂಡಿದ ಕಾಲ. "सप्त व्यतीयुस्त्रिगुणानि तस्य दिनानि दीनोद्धरणोचितस्य" रघु० २-२५। "दिने दिने सा परिवर्धमाना लब्धोदया चान्द्रमसीव लेखा" कुमा० १-२५। 3. ತಿಥಿ, ಚಂದ್ರನ ಸಂಚಾರಕಾಲ. ಪಿತೃಗಳಿಗೆ ಒಂದು ಚಾಂದ್ರಮಾಸವು ಒಂದು ದಿನ. ಶುಕ್ಲಪಕ್ಷ ಹಗಲು, ಕೃಷ್ಣ ಪಕ್ಷವು ರಾತ್ರಿ. ಉತ್ತರಾಯಣ ಮತ್ತು ದಕ್ಷಿಣಾಯನ ಗಳಿಂದ ಕೂಡಿದ ಒಂದು ವರ್ಷವು ದೇವತೆಗಳಿಗೆ ಒಂದು ದಿನ. ಬ್ರಹ್ಮನಿಗೆ ಒಂದು ಕಲ್ಪವು ಒಂದು ದಿನವಾಗುವುದು. ಬ್ರಹ್ಮನ ಒಂದು ಹಗಲು ಮತ್ತು ಒಂದು ರಾತ್ರಿಗಳಿಂದ ಕೂಡಿದ ಕಲ್ಪ (ಒಂದು ದಿನ)ಕ್ಕೆ 8,64,00,00,000 ಸೌರವರ್ಷಗಳಾಗುವುವು. 4. ಸಿಂಹ, ಕನ್ಯಾ, ತುಲಾ, ವೃಶ್ಚಿಕ, ಕುಂಭ ಮತ್ತು ಮೀನ ರಾಶಿಗಳು. "अजगोपति-युग्मञ्च कर्किधन्विमृगास्तथा। निशासंज्ञाः स्मृताश्चैव शेषाश्चान्ये दिनाख्यकाः"।

**दिनकर ದಿನಕರ** (पुं०) 1. ಸೂರ್ಯ. करोति—डु कृञ् (करणे) "अच्" (३-१-१३४)। दिनस्य करः। "गतवत्यराजत जपाकुसुमस्तबकद्युतौ दिनकरेऽवनतिम्" माघ० ९-८। 2. ಅರ್ಕವೃಕ್ಷ, ಎಕ್ಕದ ಗಿಡ.

**दिनकरतनय ದಿನಕರತನಯ, —सुत —ಸುತ, —सूनु —ಸೂನು** (पुं०) ಸೂರ್ಯನ ಮಗ. 1. ಶನಿ. 2. ಯಮ. 3. ಸುಗ್ರೀವ. 4. ಕರ್ಣ. (स्त्री०) **—तनया —ತನಯಾ, —सुता —ಸುತಾ.** 5. ತಪತೀನದಿ. 6. ಯಮುನಾನದಿ.

**दिनकर्तव्य ದಿನಕರ್ತವ್ಯ** (न०) ಪ್ರತಿ ದಿನವೂ ಮಾಡ ಬೇಕಾದ ಕಾರ್ಯ. दिने कर्तव्यम्।

**दिनकर्तृ ದಿನಕರ್ತೃ** (पुं०) 1. ಸೂರ್ಯ. 2. ಅರ್ಕವೃಕ್ಷ, ಎಕ್ಕದ ಗಿಡ. दिनं करोति — डु कृञ् (करणे) "तृच्" (३-१-१३३)। "क्विप्" (३-२-७६)। **—कृत् —ಕೃತ್.** "जिगीषुरेको दिनकृदादित्येष्विव कल्पते" माघ० २-८१। "दिनकृतमिव लक्ष्मीस्त्वां समभ्येतु भूयः" किरा० १-४६।

**दिनकृत्य ದಿನಕೃತ್ಯ** (न०) ಪ್ರತಿದಿನದ ಕರ್ತವ್ಯ, ಪ್ರತಿ ನಿತ್ಯವೂ ಮಾಡಬೇಕಾದ ಕಾರ್ಯ. दिने कृत्यम्।

**दिनकेशर ದಿನಕೇಶರ** (पुं०) ಅಂಧಕಾರ, ಕತ್ತಲೆ. दिनस्य केसर इव।

**दिनक्षय ದಿನಕ್ಷಯ** (पुं०) ಅವಮ ದಿನ, ಮೂರು ತಿಥಿ ಗಳು ಸೇರಿದ ಒಂದು ದಿನ. दिनस्य तिथेः क्षयः। ಮೂರು ತಿಥಿಗಳು ಒಂದು ದಿನದಲ್ಲಿ ಸೇರಿದರೆ ಮುಂದಿನ ತಿಥಿಯು ಕ್ರಮವಾಗಿ ಕಡಮೆಯಾಗುತ್ತಾ ಲುಪ್ತವಾಗು ವುದು. "एकस्मिन् सावने त्वह्नि तिथीनां त्रितयं यदा। तदा दिनक्षयः प्रोक्तस्तत्र साहस्रिकं फलम्"।

**दिनचर्या ದಿನಚರ್ಯಾ** (स्त्री०) ದಿನಕೃತ್ಯ, ಪ್ರತಿದಿನದಲ್ಲೂ ಅವಶ್ಯವಾಗಿ ಮಾಡಬೇಕಾದ ಕಾರ್ಯ. दिने चर्या। ಮನುಷ್ಯನು ಪ್ರತಿದಿನ ಹಗಲಿನಲ್ಲಿ ರಾತ್ರಿಕಾಲದಲ್ಲಿ ಮತ್ತು ಆಯಾ ಋತುಗಳಲ್ಲಿ ವಿಹಿತವಾದ ಕಾರ್ಯಗಳನ್ನು ಆಚರಿ ಸುತ್ತ ಇದ್ದರೆ ಅವನ ಮನಸ್ಸಿಗೆ ಸರ್ವವಿಧದಲ್ಲೂ ನೆಮ್ಮದಿ ಸೌಖ್ಯಗಳುಂಟು. ತ್ರಿದೋಷಗಳ ಸಮತೆ ಸಮಸ್ಥಿತಿಯಲ್ಲಿ ರುವ ಅಗ್ನಿಶಕ್ತಿ ಧಾತು ಮತ್ತು ಮಲಮೂತ್ರಾದಿಗಳ ಕಾರ್ಯವು ಏರುಪೇರಿಲ್ಲದಿರುವುದು ಇಂದ್ರಿಯ ಮನಸ್ಸು ಮತ್ತು ಆತ್ಮನು ಯಾವಾಗಲೂ ಹರ್ಷದಿಂದಿರುವುದು ಇವೆಲ್ಲವೂ ನೆಮ್ಮದಿ ಮತ್ತು ಸೌಖ್ಯಗಳಿಗೆ ಕಾರಣಗಳು. ಇವೆಲ್ಲಕ್ಕೂ ವಿಹಿತವಾದ ಕಾರ್ಯಾಚರಣೆಯು ಕಾರಣ. "दिनचर्यां निशाचर्यां ऋतुचर्यां यथोदिताम्। आचरन् पुरुषः स्वस्थः सदा भवति नान्यथा"। "समदोषः समाग्निश्च समधातुमलक्रियः। प्रसन्नात्मेन्द्रियमनाः स्वस्थ इत्यभिधीयते" सुश्रुत०। **दिनचर्या:** ಪ್ರತಿದಿನವೂ ಬ್ರಾಹ್ಮ ಮುಹೂರ್ತದಲ್ಲಿ ಎದ್ದು ಪರಮಾತ್ಮನ ಸ್ಮರಣೆಮಾಡಬೇಕು. ಇದರಿಂದ ಆಯುರ್ವೃದ್ಧಿಯೂ ದುಃಖಪ್ರಶಮನವೂ

ಆಗುವುದು. "ब्राह्मे मुहूर्ते बुध्येत स्वस्थो रक्षार्थमायुषः। तत्र दुःखप्रशान्त्यर्थं स्मरेद्धि मधुसूदनम्"। ಹಾಸಿಗೆಯಿಂದೆದ್ದು ಮಂಗಳ ವಸ್ತುಗಳನ್ನು ನೋಡಬೇಕು. ಬಳಿಕ ಮಲಮೂತ್ರಾದಿ ವಿಸರ್ಜನೆ. ಅನಂತರ ದಂತಧಾವನ, ಸ್ನಾನ, ಆಹ್ನಿಕ, ದೇವತಾರ್ಚನೆ, ಭೋಜನ ಭೋಜನದ ತರುವಾಯು ಸ್ವಲ್ಪ ಸಂಚಾರ. "भुक्त्वा शतपदं गच्छेच्छनैस्तेन तु जायते। अङ्गसङ्घातशैथिल्यं ग्रीवाजानुकटीमुखम्"। ಭೋಜನಮಾಡಿ ಕೂತರೆ ಸೋಮಾರಿತನ. ಮಲಗಿದರೆ ದೇಹಪುಷ್ಟಿ. ಸಂಚಾರದಿಂದ ಆಯುರ್ವೃದ್ಧಿ. "भुक्त्वोपविशतस्तन्द्रा शयानस्य तु पुष्टता। आयुश्चङ्क्रममाणस्य मृत्युर्धावति धावतः"। ಇತ್ಯಾದಿ.

**दिनज्योतिस् ದಿನಜ್ಯೋತಿಸ್** (नं०) ಆತಪ. ಬಿಸಿಲು. दिनस्य ज्योतिः।

**दिनदुःखित ದಿನದುಃಖಿತ** (पुं०) ಚಕ್ರವಾಕಪಕ್ಷಿ. दिने दुःखितः विरहात्।

**दिननाथ ದಿನನಾಥ** (पुं०) ಹಗಲಿನ ಒಡೆಯ, ಸೂರ್ಯ. दिनस्य नाथः। "उदयाद्रिमूर्ध्नि युगपच्चकासतोर्दिननाथपूर्णशशिनोरसम्भवाम्" माघ० १३-६४।

**दिननिश् ದಿನನಿಶ್** (स्त्री० द्विव०) ಹಗಲು ಮತ್ತು ರಾತ್ರಿ. "प्राग्द्वित्रिचतुर्भागेषु दिननिशोः कम्पयिष्यन्ति" बृहत्सं० ३२-७।

**दिनप ದಿನಪ** (पुं०) 1. ಸೂರ್ಯ. दिनं पाति – पा (रक्षणे) "कः" (३-२-३)। 2. ವಾರಾಧಿಪತಿಯಾದ ಸೂರ್ಯ ಮೊದಲಾದ ಗ್ರಹ. 3. ಅರ್ಕವೃಕ್ಷ, ಎಕ್ಕದ ಗಿಡ.

**दिनपति ದಿನಪತಿ** (पुं०) 1. ಸೂರ್ಯ. 2. ರವಿ ಮೊದಲಾದ ವಾರಾಧಿಪತಿ, 3. ಅರ್ಕವೃಕ್ಷ, ಎಕ್ಕದ ಗಿಡ. 4. ಆಯಾ ದಿವಸದ ಉದಯ ಲಗ್ನದ ಅಧಿಪತಿ. दिनस्य पतिः।

**दिनपात ದಿನಪಾತ** (पुं०) ದಿನಕ್ಷಯ, ತಿಥಿಯ ಪ್ರಮಾಣವು ಕಡಮೆಯಾದಂತೆ ತಿಥಿಯು ಲುಪ್ತವಾಗುವುದು. दिनस्य चान्द्रतिथेः पातः क्षयः। "अधिवासे दिनपाते धनुषि रवौ भानुलङ्घिते मासि। चक्रिणि सुप्ते कुर्यान्न माङ्गल्यं विवाहश्च"।

**दिनप्रणी ದಿನಪ್ರಣೀ** (पुं०) 1. ಸೂರ್ಯ. दिनं प्रणयति— प्र + णीञ् (प्रापणे) "क्विप्" (३-२-७६)। 2. ಅರ್ಕವೃಕ್ಷ, ಎಕ್ಕದ ಗಿಡ.

**दिनप्रभा ದಿನಪ್ರಭಾ** (स्त्री०) ಆತಪ, ಬಿಸಿಲು.

**दिनबन्धु ದಿನಬಂಧು** (पुं०) 1. ಸೂರ್ಯ. 2. ಎಕ್ಕದ ಗಿಡ.

**दिनबल ದಿನಬಲ** (पुं०) 1. ಹಗಲಿನಲ್ಲಿ ಬಲವುಳ್ಳ ರಾಶಿ, 5, 6, 7, 8, 11 ಮತ್ತು 12 ನೆಯ ರಾಶಿಗಳು. दिने बलं यस्य। 2. ಹಗಲಿನಲ್ಲಿ ಬಲವುಳ್ಳ ಗ್ರಹಗಳು, ಸೂರ್ಯ ಗುರು ಮತ್ತು ಶುಕ್ರ. "निशि शशिकुजसौराः सर्वदा ज्ञोऽह्नि चान्ये" बृहज्जा०।

**दिनमणि ದಿನಮಣಿ** (पुं०) 1. ಸೂರ್ಯ. दिने मणिरिव। 2. ಅರ್ಕವೃಕ್ಷ, ಎಕ್ಕದ ಗಿಡ.

**दिनमान ದಿನಮಾನ** (नं०) ಹಗಲಿನ ಪ್ರಮಾಣ, ಸೂರ್ಯ ನಿರುವ ಕಾಲದ ಪ್ರಮಾಣ. दिनस्य सूर्यदर्शनकालस्य मानम्।

**दिनमुख ದಿನಮುಖ** (नं०) ಹಗಲಿನ ಪ್ರಾರಂಭಕಾಲ, ಪ್ರಾತಃಕಾಲ. दिनस्य मुखं प्रारम्भः। "आययावहरिदश्वविपाण्डुस्तुल्यतां दिनमुखेन दिनान्तः" किरा० ९-८।

**दिनमूर्धन् ದಿನಮೂರ್ಧನ್** (पुं०) ಉದಯ ಪರ್ವತ. दिनस्य मूर्धेव।

**दिनयौवन ದಿನಯೌವನ** (नं०) ಮಧ್ಯಾಹ್ನ. दिनस्य यौवनमिव।

**दिनरत्न ದಿನರತ್ನ** (नं०) 1. ದಿನಮಣಿ, ಸೂರ್ಯ. दिनस्य रत्नमिव। 2. ಅರ್ಕವೃಕ್ಷ, ಎಕ್ಕದ ಗಿಡ.

**दिनांश ದಿನಾಂಶ** (पुं०) 1. ಹಗಲಿನ ಒಂದು ಭಾಗ; ಪ್ರಾತಃಕಾಲ, ಮಧ್ಯಾಹ್ನ ಮತ್ತು ಸಾಯಂಕಾಲಗಳೆಂಬ ಹಗಲಿನ ಮೂರು ಭಾಗಗಳಲ್ಲಿ ಒಂದು ಭಾಗ. दिनस्य अंशः। 2. ಪ್ರಾತಃಕಾಲ ಸಂಗವಕಾಲ ಮಧ್ಯಾಹ್ನ ಅಪರಾಹ್ಣ ಮತ್ತು ಸಾಯಂಕಾಲಗಳೆಂಬ ಹಗಲಿನ ಐದು ಭಾಗಗಳಲ್ಲೊಂದು. "प्रातःकालो मुहूर्तांस्त्रीन् सङ्गवस्तावदेव तु। मध्याह्नस्त्रिमुहूर्तः स्यादपराह्णस्ततः परम्। सायाह्नस्त्रिमुहूर्तःस्यात् श्राद्धं तत्र न कारयेत्"।

**दिनागम ದಿನಾಗಮ** (पुं०) ಪ್ರಾತಃಕಾಲ.

**दिनात्यय ದಿನಾತ್ಯಯ** (पुं०) ಸಾಯಂಕಾಲ.

**दिनादि ದಿನಾದಿ** (पुं०) ದಿವಸದ ಆದಿಭಾಗ, ಪ್ರಾತಃಕಾಲ. दिनस्यादिः। "रिपुतिमिरमुदस्योदीयमानं दिनादौ दिनकृतमिव लक्ष्मीस्त्वां समभ्येतु भूयः" किरा० १-४६।

**दिनान्त ದಿನಾಂತ** (पुं०) ಹಗಲಿನ ಕೊನೆಯಭಾಗ, ಸಾಯಂಕಾಲ. दिनस्यान्तः। "दिनान्ते निहितं तेजः सवित्रेव हुताशनः" रघु० ४-१।

**दिनान्तक ದಿನಾಂತಕ** (पुं०) ಅಂಧಕಾರ, ತಮಸ್ಸು, ಕತ್ತಲೆ. दिनमन्तयति – अन्त + णिच् "ण्वुल्" (३-१-१३३)।

**दिनारम्भ ದಿನಾರಂಭ** (पुं०) ಪ್ರಾತಃಕಾಲ. दिनस्यारम्भः।

**दिनार्घ ದಿನಾರ್ಧ** (पुं०) ಹಗಲಿನ ಅರ್ಧಭಾಗ. दिनस्यार्धम्।

**दिनिका ದಿನಿಕಾ** (स्त्री०) ದಿನದ ಕೂಲಿ, ಪ್ರತಿದಿನ ಮಾಡಿದ ಕಾರ್ಯದ ಕೂಲಿ. दिनं दिने कृतं कर्म हेतुतया अस्त्यत्र भृतौ "ठन्" (५-२-११५)।

**दिनेश ದಿನೇಶ** (पुं०) 1. ಸೂರ್ಯ. 2. ಸೂರ್ಯ ಮೊದಲಾದ ವಾರಾಧಿಪತಿ. दिनस्य ईशः। 3. ಅರ್ಕವೃಕ್ಷ, ಎಕ್ಕದ ಗಿಡ.

**दिरिपक ದಿರಿಪಕ** (पुं०) ಕಂದುಕ, ಚೆಂಡು.

**दिलीप ದಿಲೀಪ** (पुं०) ಸೂರ್ಯವಂಶದ ಪ್ರಸಿದ್ಧನಾದ ಒಬ್ಬ ದೊರೆ. ಸೂರ್ಯವಂಶದಲ್ಲಿ ದಿಲೀಪರು ಇಬ್ಬರು. ಒಬ್ಬನು ಅಂಶುಮಂತನ ಮಗ. ಭಗೀರಥನ ತಂದೆ. ಇನ್ನೊಬ್ಬನು ರಘುಮಹಾರಾಜನ ತಂದೆ. ಅಜಮಹಾರಾಜನ ತಾತ.

**दिलीर ದಿಲೀರ** (न०) ನಾಯಿಕೊಡೆ. दल (विशरणे) "ईरः" बाहु०। पृषो०। "गोमयच्छत्रिकामाहुः दिलीरं च शिलीन्ध्रकम्" हारा०।

**दिव् ದಿವ್** (स्त्री०) 1. ಸ್ವರ್ಗ, ದೇವಲೋಕ. दीव्यन्त्यत्र—दिवु (क्रीडादौ) "दिविः" बाहु० (३-३-१)। ಇದು ವಕಾರಾಂತ ಸ್ತ್ರೀಲಿಂಗ ಶಬ್ದ.

| | | |
|---|---|---|
| द्यौः | दिवौ | दिवः। |
| दिवं | दिवौ | दिवः। |
| दिवा | द्युभ्यां | द्युभिः। |
| दिवे | द्युभ्यां | द्युभ्यः। |
| दिवः | द्युभ्यां | द्युभ्यः। |
| दिवः | दिवोः | दिवाम्। |
| दिवि | दिवोः | द्युषु। |

"दिवमिच्छन् युधा गन्तुं कोमलामलसम्पदाम्" माघ० १९-२१। 2. ಆಕಾಶ, ಗಗನ, ಅಂತರಿಕ್ಷ. "दिवः पृथिव्याः ककुभां नु मण्डलात् पतन्ति बिम्बादुत तिग्मतेजसः" किरा० १४-५३। "द्यौः स्वर्गे नभसि स्याता" शाश्वत०। "द्यौः स्त्री स्वर्गे च गगने" मेदि०। 3. ದಿನ, ಹಗಲು. "सौरेण द्युनिशोर्मानं षडशीति मुखानि च" सू० सि० १४-३।

**दिव ದಿವ** (न०) 1. ಸ್ವರ್ಗ, ದೇವಲೋಕ. दीव्यन्त्यत्र—दिवु (क्रीडादौ) घञर्थे "कः" (वा० ३-३-५८)। "लोकपालैर्महाभागैर्दिवं देववरैरिव" भा० वन० १६२-८। 2. ಆಕಾಶ, ಗಗನ, ಅಂತರಿಕ್ಷ. 3. ದಿನ, ಹಗಲು. "शुशुभेऽभ्यधिकं राजन् दिवं ज्योतिर्गणैरिव" हरिवं०। 4. ಅರಣ್ಯ, ಕಾಡು. "दिवं खे त्रिदिवे दिने" हेम०।

**दिवङ्गम ದಿವಂಗಮ** (वि०) 1. ಗಗನಕ್ಕೆ ಹೋಗುತ್ತಿರುವ. ಆಕಾಶದಲ್ಲಿ ನಡೆಯುವ. 2. ಸ್ವರ್ಗಕ್ಕೆ ಹೋಗುವ. दिवमाकाशं स्वर्गं वा गच्छति—गम्लृ (गतौ) "खच्" (३-२-४७)। "दिवङ्गमं रुरोधाथ मार्गं भीमस्य कारणात्" भा० वन० १४८-७१।

**दिवस ದಿವಸ** (पुं०) 1. ಹಗಲು, ಸೂರ್ಯನಿರುವ ಕಾಲ. दीव्यत्यत्र—दिवु (क्रीडादौ) "असच्" (उ० ३-१२१)। "प्रच्छायसुलभनिद्राः दिवसाः परिणामरमणीयाः" शाकु० १-३। 2. ಹಗಲು ಮತ್ತು ರಾತ್ರಿ ಕೂಡಿದ ಒಂದು ದಿನ. "तपति प्रावृषि नितरामभ्यर्णजलागमो दिवसः" रत्ना० ३-१०। ಅರವತ್ತು ಘಳಿಗೆಗಳ ಪ್ರಮಾಣದ ಒಂದು ದಿವಸಕ್ಕೆ **ಸಾವನದಿನ**ವೆಂದು ಹೆಸರು. ಸೂರ್ಯನಿರುವ ರಾಶಿಯ ಮೂವತ್ತನೆಯ ಒಂದು ಭಾಗವು **ಸೌರದಿನ**ವಾಗುವುದು. ಪ್ರತಿಪದಾದಿ ಒಂದೊಂದು ತಿಥಿಯೂ ಒಂದು **ಚಾಂದ್ರದಿವಸ**ವೆನಿಸುವುದು.

**दिवसकर ದಿವಸಕರ** (पुं०) 1. ಸೂರ್ಯ. करोति—डुकृञ् (करणे) "अच्" (३-१-१३४)। दिवसस्य करः। "बहिरपि विलसन्त्यः काममानिन्यिरे यद्दिवसकररुचोऽन्तं ध्वान्तमन्तर्गृहेषु" माघ० ११-५९। 2. ಅರ್ಕವೃಕ್ಷ, ಎಕ್ಕದ ಗಿಡ. "क्विप्" (३-२-७६)। -कृत् - ಕೃತ್.

**दिवस्पति ದಿವಸ್ಪತಿ** (पुं०) ಇಂದ್ರ, ಸ್ವರ್ಗಲೋಕದ ಒಡೆಯ. दिवः पतिः। सत्वं षष्ठ्या अलुक् च (८-३-५३)। कस्कादित्वात् वा। "इन्द्राणीमानयिष्यामो यथेच्छसि दिवस्पते" भा० उद्योग० १२-९।

**दिवा ದಿವಾ** (अव्य०) ಹಗಲಿನಲ್ಲಿ. दीव्यन्त्यत्र — दिवु (क्रीडादौ) "का"। "प्रियमाप दिवापि कोकिले स्त्री परितस्ताररवे रसत्यवश्यम्" माघ० ६-७०।

**दिवाकर ದಿವಾಕರ** (पुं०) 1. ಸೂರ್ಯ. दिवा दिनं करोति —डुकृञ् (करणे) "टः" (३-२-२१)। 'दिवा' इति आकारान्तमव्ययमधिकरणशक्तिप्रधानम्। तथापि वृत्तिविषये कर्मत्वम्। "दिवाकराद्रक्षति यो गुहासु लीनं दिवाभीतमिवान्धकारम्" कुमा० १-१२। 2. ಅರ್ಕವೃಕ್ಷ, ಎಕ್ಕದ ಗಿಡ. 3. ಗರುಡನ ಒಬ್ಬ ಮಗ. "मालयो मातरिश्वा च निशाकरदिवाकरौ" भा० उद्योग० १०१-१४।

**दिवाकरतनय ದಿವಾಕರತನಯ, -तनूज -ತನೂಜ** (पुं०) ಸೂರ್ಯನ ಮಗ 1. ಶನಿ. 2. ಯಮ. 3. ಸುಗ್ರೀವ. 4. ಕರ್ಣ. (स्त्री०) **-तनया -ತನಯಾ, -तनूजा -ತನೂಜಾ.** ಸೂರ್ಯನ ಮಗಳು 1. ತಪತೀನದಿ. 2. ಯಮುನಾನದಿ. ಏವಂ **-सुतः -ಸುತಃ -ता -ತಾ, -सूनुः -ಸೂನುಃ.** ಇತ್ಯಾದಿ. "गङ्गादिवाकरसुताजलचारुहाराम्" बृहत्सं० ४३-३२।

**दिवाकीर्ति ದಿವಾಕೀರ್ತಿ** (पुं०) 1. ನಾಪಿತ, ನಾಯಿಂದ, ಕ್ಷೌರಕ. दिवा कीर्तिरस्य। 2. ಚಂಡಾಲ. 3. ಉಲೂಕ, ಗೂಬೆ. दिवा अकीर्तिर्यस्य। "दिवाकीर्तिस्तु चण्डाले नापितोलूकयोरपि" विश्व०।

**दिवाचर ದಿವಾಚರ** (पुं०) 1. ಚಂಡಾಲ. दिवा दिवसे चरति — चर (गतौ) "टः" (३-२-१६)। स्त्रियाम् "ङीप्" (४-१-१५)। **-चरी -ಚರೀ.** 2. ಹಗಲಿನಲ್ಲಿ ಮಾತ್ರ ಸಂಚರಿಸುವ ಪಕ್ಷಿಗಳು ಮತ್ತು ಇತರ ಪ್ರಾಣಿಗಳು ; ಗೀಜಗನ ಹಕ್ಕಿ, ಚಕ್ರವಾಕ, ನವಿಲು, ಗುಬ್ಬಚ್ಚಿ, ಹಂಗನ ಹಕ್ಕಿ, ಭಾರದ್ವಾಜಪಕ್ಷಿ, ಕೋಳಿ, ಹಾರೀತಪಕ್ಷಿ, ಪಾರಿವಾಳ (ಕಪೋತ), ಗಿಣಿ, ಕಾಗೆ, ಹದ್ದು ಮುಂತಾದ ಪಕ್ಷಿಗಳೂ ಕಪಿ ಮುಂತಾದ ಪ್ರಾಣಿಗಳೂ ಹಗಲಲ್ಲಿ ಮಾತ್ರ ಸಂಚರಿಸುವುವು. "दिवाचरो न शर्वर्यां न च नक्तञ्चरो दिवा"।

**दिवाटन ದಿವಾಟನ** (पुं०) 1. ವಾಯಸ, ಕಾಗೆ. दिवा अटति — अट (गतौ) "ल्युः" (३-१-१३४)। स्त्रियाम् जाति० "ङीष्" (४-१-६३)। (वि०) 2. ಹಗಲಲ್ಲಿ ಸಂಚರಿಸುವ.

**दिवातन ದಿವಾತನ** (वि०) ಹಗಲಲ್ಲಿರುವ. दिवा भवः "ट्युः" (४-३-२३)। तुट् च। "शशिन इव दिवातनस्य लेखा किरणपरिक्षयधूसरा प्रदोषम्" कुमा० ४-४६।

**दिवान्ध ದಿವಾಂಧ** (पुं०) 1. ಉಲೂಕ, ಗೂಬೆ. दिवा दिवसे अन्धः। "वैनतेये स्वामिनि स्थिते किमेष दिवान्धः क्रियते राजा" पञ्चतं० ३। 2. ಹಗಲಲ್ಲಿ ಕುರುಡಾಗಿರುವ ಪ್ರಾಣಿ. "दिवान्धाः प्राणिनः केचिद्रात्रावन्धास्तथापरे"।

**दिवाभीत ದಿವಾಭೀತ** (पुं०) 1. ಉಲೂಕ, ಗೂಬೆ. दिवा दिवसे भीतः। "दिवाकराद्रक्षति यो गुहासु लीनं दिवाभीतमिवान्धकारम्" कुमा० १-१२। स्त्रियाम् जाति० "ङीष्"। 2. ಚೋರ, ಕಳ್ಳ. 3. ಕುಮುದಾಕರ, ಬಿಳಿ ತಾವರೆಯ ಕೊಳ. "दिवाभीतः कुम्भिले स्यादुलूके कुमुदाकरे" मेदि०।

**दिवाभीति ದಿವಾಭೀತಿ** (पुं०) 1. ಉಲೂಕ, ಗೂಬೆ. (वि०) 2. ಹಗಲಲ್ಲಿ ಹೆದರುವ. दिवा भीतिरस्य।

**दिवामणि ದಿವಾಮಣಿ** (पुं०) 1. ಸೂರ್ಯ. दिवा मणिरिव। 2. ಅರ್ಕವೃಕ್ಷ, ಎಕ್ಕದ ಗಿಡ.

**दिवावसु ದಿವಾವಸು** (पुं०) 1. ಸೂರ್ಯ. दिवा वसु किरणोऽस्य। 2. ಅರ್ಕವೃಕ್ಷ, ಎಕ್ಕದ ಗಿಡ.

**दिवाशय ದಿವಾಶಯ** (वि०) ಹಗಲಲ್ಲಿ ನಿದ್ದೆ ಮಾಡುವವನು. ಹಗಲಲ್ಲಿ ಮಲಗುವವನು. दिवा दिवसे शेते — शीङ् (स्वप्ने) "अच्" (३-२-१५)। "आरुरोह कुमुदाकरोपमां रात्रिजागरपरो दिवाशयः" रघु० १९-३४।

**दिवासञ्चर ದಿವಾಸಂಚರ** (वि०) ಹಗಲಲ್ಲಿ ಸಂಚರಿಸುವ (ಪ್ರಾಣಿ). दिवा दिवसे सञ्चरति — सम् + चर (गतौ) "टः" (३-२-१६)। [ಹಗಲಲ್ಲಿ ಸಂಚರಿಸುವ ಪ್ರಾಣಿಗಳ ವಿವರಕ್ಕೆ "दिवाचर" ಪದದಲ್ಲಿ ನೋಡಿ.]

**दिवास्वप्न ದಿವಾಸ್ವಪ್ನ** (पुं०) 1. ಹಗಲು ನಿದ್ರೆ. दिवा दिवसे स्वप्नः। **-स्वापः -ಸ್ವಾಪಃ.** ಗ್ರೀಷ್ಮಋತು ಹೊರತು ಇತರ ಕಾಲಗಳಲ್ಲಿ ಹಗಲು ನಿದ್ರೆಯು ನಿಷಿದ್ಧ. "सर्वर्तुषु दिवास्वापः प्रतिषिद्धोऽन्यत्र ग्रीष्मात्" सुश्रुत०। "मृगयाक्षो दिवास्वप्नः परीवादः स्त्रियो मदः। तौर्यत्रिकं वृथाटया च कामजो दशको गणः" मनु०। 2. ಉಲೂಕ, ಗೂಬೆ. दिवा स्वापो यस्य।

**दिवि ದಿವಿ** (पुं०) ಹಂಗನ ಹಕ್ಕಿ.

**दिविचर ದಿವಿಚರ** (वि०) ಆಕಾಶದಲ್ಲಿ ಸಂಚರಿಸುವ. दिवि चरति चर (गतौ) "टः" (३-२-१६)। अलुक् (६-३-१४)। "णिनिः" (३-१-१३४)। **-चारिन् -ಚಾರಿನ್.**

**दिविज ದಿವಿಜ** (पुं०) 1. ದೇವತೆ. दिवि जायते—जनी (प्रादुर्भावे) "डः" (३-२-९७)। अलुक् (६-३-१५)। (वि०) 2. ಸ್ವರ್ಗದಲ್ಲಿ ಹುಟ್ಟಿದ. 3. ಆಕಾಶದಲ್ಲಿ ಹುಟ್ಟಿದ.

**दिविरथ ದಿವಿರಥ** (पुं०) ಭುಮನ್ಯು ರಾಜನ ಮಗ, ಪೂರು ವಂಶದ ಒಬ್ಬ ದೊರೆ.

**दिविषद् ದಿವಿಷದ್** (पुं०) ದೇವತೆ. दिवि सीदति—षद्लृ (विशरणादौ) "क्विप्" (३-२-६१)। अलुक् (वा० ८-३-९५)। "समये परिषत्सभाजनार्हे दिविषत्पूज्यपदोऽपि दैत्यहन्ता" याद० १५-३४। "रामस्य त्रिपुरान्तकृद्दिविषदां तेजोभिरिद्धं धनुः" म० वी० १-५३।

**दिविष्ठ ದಿವಿಷ್ಠ** (वि०) 1. ಸ್ವರ್ಗದಲ್ಲಿರುವ. 2. ಆಕಾಶದಲ್ಲಿರುವ. दिवि तिष्ठति – ष्ठा (गतिनिवृत्तौ) "कः" (३-२-४)। अलुक् (वा० ८-३-९५)।

**दिविस्पृश् ದಿವಿಸ್ಪೃಶ್** (पुं०) 1. ಪರಮಾತ್ಮ. परविद्यया दिवि च परमपदे स्थितं स्वतत्त्वं रहः स्पृशति – स्पृश (संस्पर्शने) "क्विन्" (३-२-५८)। अलुक् (वा० ८-३-९५)। "परया विद्यया यः स्वं स्पृशतीति परे पदे। दिविस्पृक् सोच्यते नित्यम्" इति निरुक्तिः। "दिविस्पृक् सर्वदृक् व्यासः" वि० स०। (वि०) 2. ಗಗನವನ್ನು ಮುಟ್ಟುವ. "हेमशृङ्गैर्दिविस्पृग्भिः स्फाटिकाट्टालगोपुरैः" भाग० १०-५०-५२।

**दिवी ದಿವೀ** (स्त्री०) ಗೆದ್ದಲು ಹುಳು. "उपजिह्विकोत्पातिका च वटरुद्देहिका दिवी" हारा०।

**दिवोकस् ದಿವೋಕಸ್** (पुं०) 1. ದೇವತೆ. 2. ಚಾತಕ ಪಕ್ಷಿ. द्यौः स्वर्गः आकाशो वा ओको यस्य। "दिवोकाश्च दिवौकाश्च पुंसि देवे च चातके" मेदि०।

**दिवोदास ದಿವೋದಾಸ** (पुं०) 1. ಕಾಶಿರಾಜನಾದ ಭೀಮಸೇನನ ಮಗ. ಯಯಾತಿಯ ಮಗಳಾದ ಮಾಧವಿಯ ಪತಿ, ಪ್ರತರ್ದನನ ತಂದೆ. ಹೈಹಯ ರಾಜನಾದ ವೀತಹವ್ಯನು ಭೀಮಸೇನನನ್ನು ಕೊಂದನೆಂಬ ಕಾರಣದಿಂದ ಈತನ ಮಗನಾದ ಪ್ರತರ್ದನನು ವೀತಹವ್ಯನನ್ನು ಯುದ್ಧದಲ್ಲಿ ಸೋಲಿಸಿದನು. "महावीर्यो महीपालः काशीनामीश्वरः प्रभुः। दिवोदास इति ख्यातो भैमसेनिर्नराधिपः" भा० उद्योग० ११७-१। 2. ವಧ್ರ್ಯಶ್ವನ ಮಗ, ಅಹಲ್ಯಾದೇವಿಯ ಸಹೋದರ. 3. ಧನ್ವಂತರಿ. "धन्वन्तरिर्दिवोदासः" त्रिकाण्ड०।

**दिवोद्भव ದಿವೋದ್ಭವ** (वि०) 1. ಆಕಾಶದಲ್ಲಿ ಹುಟ್ಟಿದ. 2. ಸ್ವರ್ಗದಲ್ಲಿ ಹುಟ್ಟಿದ. (स्त्री०) –उद्भवा – ಉದ್ಭವಾ. 3. ಯಾಲಕ್ಕಿಕಾಯಿ. दिवे उद्भवति—उद्+भू "अप्" (३-३-५८)।

**दिवोल्का ದಿವೋಲ್ಕಾ** (स्त्री०) ಹಗಲಲ್ಲಿ ಆಕಾಶದಿಂದ ಬಿದ್ದ ಕೊಳ್ಳಿ. दिवा दिवसे जाता उल्का।

**दिवौकस् ದಿವೌಕಸ್** (पुं०) 1. ದೇವತೆ. दिवमोको यस्य। "प्रसादाभिमुखो वेधाः प्रत्युवाच दिवौकसः" कुमा० २-१६। 2. ಚಾತಕ ಪಕ್ಷಿ. "दिवोकाश्च दिवौकाश्च पुंसि देवे च चातके" मेदि०। (वि०) 3. ಸ್ವರ್ಗದಲ್ಲಿ ವಾಸಮಾಡುವ. "ददर्श पथि गच्छन्ती वसून् देवान् दिवौकसः" भा० आदि० १०२-१०।

**दिवौकस ದಿವೌಕಸ** (पुं०) ದೇವತೆ. दिवमोकसो यस्य। (ओकसशब्दः अदन्तः)। "वसुधामिह संप्राप्तैः सर्वैरेव दिवौकसैः" हरिवं०।

**दिव्य ದಿವ್ಯ** (पुं०) 1. ತತ್ತ್ವಜ್ಞಾನಿ, ಆತ್ಮಸ್ವರೂಪವನ್ನು ಅರಿತ ವೇದಾಂತಿ. दिवि द्योतस्वरूपे आदित्ये ब्रह्मणि वा स्वस्वरूपे भवः "यत्" (४-३-५४)। "दिव्यश्च देवताप्रायः शुद्धान्तःकरणः सदा। द्वन्द्वातीतो वीतरागः सर्वभूतसमः क्षमी"। 2. ಗುಗ್ಗುಳ. 3. ಯವ. 4. ಉತ್ಪಾತ, ಅಶುಭಸೂಚಕ ಚಿಹ್ನೆ, ಸಾಮೂಹಿಕ ವಿಪತ್ತನ್ನು ಸೂಚಿಸುವ ಉಲ್ಕಾಪಾತ ಬಾಲಚುಕ್ಕಿ ಮುಂತಾದುವು. ಉತ್ಪಾತವು (1) दिव्यः, (2) आन्तरिक्षः ಮತ್ತು (3) भौमः ಎಂದು ಮೂರು ವಿಧ. ಜನರು ಮಾಡುವ ಅಕಾರ್ಯ ಮತ್ತು ಪಾಪಕೃತ್ಯಗಳ ಫಲವಾಗಿ ಈ ಉತ್ಪಾತಗಳು ಕಾಣಿಸಿಕೊಳ್ಳುವುವು. ಜನರ ಪಾಪಕೃತ್ಯಗಳಿಂದ ಕೋಪಗೊಂಡ ದೇವತೆಗಳು ಈ ಉತ್ಪಾತಗಳನ್ನು ಸೃಷ್ಟಿಸುವರು. ಅದರ ನಿವಾರಣೆಗಾಗಿ ರಾಜನು ಶಾಂತಿಯನ್ನು ಮಾಡಿಸಬೇಕು. "अपचारेण नराणामुपसर्गः पापसञ्चयाद्भवति। संसूचयन्ति दिव्यान्तरिक्षभौमास्त उत्पाताः। मनुजानामपचारादपरक्ता देवताः सृजन्त्येतान्। तत्प्रतिघाताय नृपः शान्तिं राष्ट्रे प्रयुञ्जीत" बृहत्सं० ४६-७, ८।

(1) ಗ್ರಹಗಳೂ ನಕ್ಷತ್ರಗಳೂ ವಿಕಾರವಾದ (ವಿಪರೀತ) ರೀತಿಯಲ್ಲಿ ಕಾಣಿಸಿಕೊಳ್ಳುವುದು, ಧೂಮಕೇತು, ಉಲ್ಕಾಪಾತ, ಸಿಡಿಲು, ಬಿರುಗಾಳಿ, ಸೂರ್ಯಚಂದ್ರರ ಸುತ್ತಲೂ ಕಟ್ಟುವ ಪ್ರಭೆಯ ಮಂಡಲ ಮುಂತಾದುವು ದಿವ್ಯ ಉತ್ಪಾತ.

(2) ಅಂತರಿಕ್ಷದಲ್ಲಿ ನಗರಗಳು ಇಂದ್ರಧನುಸ್ಸು ಕಾಣಿಸಿಕೊಳ್ಳುವುದು ಮುಂತಾದುವು ಅಂತರಿಕ್ಷ ಉತ್ಪಾತ.

(3) ಸ್ಥಾವರ ಜಂಗಮಗಳಿಂದ ಉಂಟಾಗುವುದು ಭೌಮ ಉತ್ಪಾತ. "दिव्यं ग्रहर्क्षवैकृतमुल्कानिर्घातपवनपरिवेषाः। गन्धर्वपुरपुरन्दरचापादि यदान्तरिक्षं तत्॥ भौमं चरस्थिरभवं तच्छान्तिभिराहतं शममुपैति। नाभसमुपैति मृदुतां शाम्यति नो दिव्यमित्येके" बृहत्सं० ४६-४, ५। 5. ಜಲ, ನೀರು. ಇದು (1) धाराजम्, (2) करकाभवम् (3) तौषारम् ಮತ್ತು (4) हैमम् ಎಂದು ನಾಲ್ಕು ವಿಧ. "दिव्यं चतुर्विधं प्रोक्तं धाराजं करकाभवम्। तौषारं च तथा हैमं तेषु धारं गुणाधिकम्" भावप्र०। (न०) 6. ಆಕಾಶ, ಅಂತರಿಕ್ಷ. "वियद्विष्णुपदं दिव्यं वायुवर्त्म विहायसम्" वैज०। 7. ಬೆಳ್ಳುಳ್ಳಿ. "कामाङ्ग

लशुनं दिव्यं महाकन्दामृतोद्भवे" वैज०। 8. ಲವಂಗ. 9. ದೇವತೆಗಳ ಕಾಲಮಾನ. 10. ಕಠಿನವಾದ ಒಂದು ಪರೀಕ್ಷೆ, ಲೌಕಿಕವಾದ ಪ್ರಮಾಣವು ದೊರೆಯದಿರುವಾಗ ನಡೆಸುವ ಶಾಸ್ತ್ರೋಕ್ತವಾದ ಒಂದು ಪರೀಕ್ಷೆ, ಸತ್ಯ ಪ್ರಮಾಣಗಳನ್ನು ಮಾಡಿಸುವುದು. "युक्तिष्वप्यसमर्थासु शपथैरेनमर्दयेत्। अर्थकालबलापेक्षमग्न्यम्बुसुकृतादिभिः। घटोऽग्निरुदकं चैव विषं कोशश्च पञ्चमः। उक्तान्येतानि दिव्यानि विशुद्ध्यर्थं महात्मभिः"। ಸರಿಯಾದ ಸಾಕ್ಷಿಗಳು ದೊರಕದೆ ವಾದಿ ಪ್ರತಿವಾದಿಗಳು ಜಗಳವಾಡುತ್ತಿರುವಾಗ ಮಧ್ಯಸ್ಥಗಾರರು ಅಗ್ನಿ ನೀರು ಮೊದಲಾದುವುಗಳ ಮೂಲಕ ಪ್ರಮಾಣ ಮಾಡಿಸಬೇಕು. "असाक्षिकेषुत्वर्थेषु मिथो विवदमानयोः। अविदंस्तत्त्वतः सत्यं शपथेनापि लम्भयेत्। अग्निं वाहारयेदेनमप्सु चैनं निमज्जयेत्। पुत्रदारस्य वाप्येनं शिरांसि स्पर्शयेत् पृथक्। यस्माद्देवैः प्रयुक्तानि पुष्करार्थे महात्मभिः। परस्परविशुद्ध्यर्थं तस्माद्दिव्यानि नामतः" मनु०। 11. ಸಪ್ತವಿಧ ಸ್ನಾನಗಳಲ್ಲಿ ಒಂದು ವಿಧ. ಶರೀರದ ಅನಾರೋಗ್ಯದಿಂದಲೂ ಕಾಲದೇಶಗಳಿಗೆ ಅನುಸಾರವಾಗಿಯೂ ಸರಿಯಾದ ಸ್ನಾನ ಮಾಡಲು ಅವಕಾಶವಿಲ್ಲದಿರುವಾಗಲೂ ಉಪಾಯದಿಂದ ಸಪ್ತವಿಧ ಸ್ನಾನಗಳು ಉಕ್ತವಾಗಿವೆ. (1) मान्त्रम्, (2) भौमम्, (3) आग्नेयम्, (4) वायव्यम्, (5) दिव्यम्, (6) वारुणम् ಮತ್ತು (7) मानसम् ಎಂದು ಸ್ನಾನವು ಏಳು ವಿಧ.

(1) आपोहिष्ठेति मान्त्रं स्नानम्।
(2) मृदालम्भं पार्थिवम् (भौमम्) } स्नानम्।
(3) भस्मना आग्नेयम् स्नानम्।
(4) गोरजसा वायव्यम् स्नानम्।
(5) सातपवर्षेण दिव्यम् स्नानम्।
(6) सलिलेऽवगाह्य वारुणम् स्नानम्।
(7) विष्णुचिन्तनेन मानसम् स्नानम्।

"समस्तं स्नानमुद्दिष्टं मन्त्रस्नानक्रमेण तु। कालदोषादसामर्थ्यात् सर्वं तस्य फलं स्मृतम्" योगियाज्ञवल्क्यः। (वि०) 12. ಸ್ವರ್ಗದಲ್ಲಿ ಹುಟ್ಟಿದ, ಸ್ವರ್ಗದಲ್ಲಿರುವ. 13. ಆಕಾಶದಲ್ಲಿ ಹುಟ್ಟಿದ, ಆಕಾಶದಲ್ಲಿರುವ. दिवि भवः "यत्" (४-२-१०१)। "अथ ते मुनयो दिव्याः प्रेक्ष्य हैमवतं पुरम्" कुमा० ६-४७। 14. ಆಕಾಶದಲ್ಲಿ ಉಂಟಾದ. "अनुजगुरथ दिव्यं दुन्दुभिध्वानमाशाः सुरकुसुमनिपातैः व्योम्नि लक्ष्मीर्वितेने" किरा० ३-६०। 15. ಭವ್ಯವಾದ, ಪ್ರಶಸ್ತವಾದ. "दिव्यामस्त्रोपनिषदमृषेर्यः कृशाश्वस्य शिष्यात् विश्वामित्राद्विजयजननीमप्रमेयः प्रपेदे" म० वि० २-२। 16. ರಮಣೀಯವಾದ, ಮನೋಹರವಾದ, ಸುಂದರವಾದ. "अमुष्य दूरादसिताक्षि दृष्टि दिव्ये गिरौ दातुमिहार्हसि त्वम्" याद० १८-२९। 17. ಅಮಾನುಷವಾದ, ಅಲೌಕಿಕವಾದ. "सहजान्धदृशः स्वदुर्नये परदोषेक्षणदिव्यचक्षुषः" माघ० १६-२९। 18. ಅದ್ಭುತವಾದ, ಆಶ್ಚರ್ಯಕರವಾದ. (स्त्री०) -व्या -ವ್ಯಾ. 19. ಆಮಲಕವೃಕ್ಷ, ನೆಲ್ಲಿಗಿಡ. 20. ಶತಾವರಿ, ಹಿಲ್ಲಹಿಚ್ಚರ. 21. ಹೊನಗೊನ್ನೆಸೊಪ್ಪು. 22. ಅಳಲೆ ಗಿಡ. 23. ಬಿಳಿ ಗರಿಕೆ.

**दिव्यगन्ध ದಿವ್ಯಗಂಧ** (पुं०) 1. ಸುವಾಸನೆ, ಮನೋಹರವಾದ ವಾಸನೆ. (न०) 2. ಲವಂಗ. 3. ಗಂಧಕ. (स्त्री०) **-गन्धा -ಗಂಧಾ.** 4. ದೊಡ್ಡ ಜಾತಿಯ ಯಾಲಕ್ಕಿ. दिव्यो गन्धोऽस्याः।

**दिव्यचक्षुस् ದಿವ್ಯಚಕ್ಷುಸ್** (पुं०) 1. ವಾನರ, ಕಪಿ. दिव्यं चक्षुर्यस्मात्। 2. ಸುಗಂಧದ್ರವ್ಯ. 3. ಸುಲೋಚನ, ಕನ್ನಡಕ. 4. ಅಂಧ, ಕುರುಡ. "दिव्यचक्षुः सुगन्धस्य भेदे नाऽन्धे सुलोचने" मेदि०। (न०) 5. ಚರ್ಮ ಚಕ್ಷುಸ್ಸಿನಿಂದ ಕಾಣಲಾಗದ ವಸ್ತುವನು ನೋಡುವ ಅಪ್ರಾಕೃತಚಕ್ಷುಸ್ಸು. "न तु मां शक्यसे द्रष्टुमनेनैव स्वचक्षुषा। दिव्यं ददामि ते चक्षुः पश्य मे योगमैश्वरम्" गीता ११-८। (वि०) 6. ಚರ್ಮಚಕ್ಷುಸ್ಸಿನಿಂದ ನೋಡಲಾಗದ ವಸ್ತುವನ್ನು ನೋಡುವ ಶಕ್ತಿಯುಳ್ಳವನು. दिव्यं चक्षुर्यस्य। "त्रिलोकनाथेन सदा मखद्विषस्त्वया नियम्या ननु दिव्यचक्षुषा" रघु० ३-४५।

**दिव्यज्ञान ದಿವ್ಯಜ್ಞಾನ** (न०) 1. ಉತ್ಕೃಷ್ಟವಾದ ಜ್ಞಾನ, ಸಕಲ ಚರಾಚರವಸ್ತುಗಳನ್ನು (ಜಗತ್ತನ್ನು) ಕರತಲಾಮಲಕವಾಗಿ ತಿಳಿಯುವ ಜ್ಞಾನ. 2. ಅಧ್ಯಾತ್ಮಜ್ಞಾನ. 3. ಅಲೌಕಿಕವಸ್ತುಜ್ಞಾನ. (वि०) **-ज्ञानिन् -ಜ್ಞಾನಿನ್.** ಅಲೌಕಿಕ ವಸ್ತುವಿನ ಜ್ಞಾನವುಳ್ಳ.

**दिव्यतेजस् ದಿವ್ಯತೇಜಸ್** (स्त्री०) 1. ಬ್ರಾಹ್ಮೀಲತೆ, ಹೊನಗೊನ್ನೆಸೊಪ್ಪು. दिव्यं तेजो यस्याः। (वि०) 2. ದಿವ್ಯವಾದ ತೇಜಸ್ಸುಳ್ಳ, ಅದ್ಭುತವಾದ ತೇಜಸ್ಸುಳ್ಳ. दिव्यं तेजो यस्य।

**दिव्यदर्शन ದಿವ್ಯದರ್ಶನ** (न०) ಅಲೌಕಿಕ ವಸ್ತುವನ್ನು ನೋಡುವುದು, ಇಂದ್ರಿಯಗಳಿಗೆ ಗೋಚರವಾಗದ ವಸ್ತುವನ್ನು ಜ್ಞಾನದೃಷ್ಟಿಯಿಂದ ನೋಡುವುದು.

**दिव्यदर्शिन् ದಿವ್ಯದರ್ಶಿನ್** (वि०) ಅಲೌಕಿಕ ವಸ್ತುವನ್ನು ನೋಡುವ, ಇಂದ್ರಿಯಗಳಿಗೆ ಗೋಚರವಾಗದ ವಸ್ತುವನ್ನು ಜ್ಞಾನದೃಷ್ಟಿಯಿಂದ ನೋಡುವ. दिव्यमलौकिकवस्तु पश्यति – दृशिर् (प्रेक्षणे) "णिनिः" (३-२-७८)।

**दिव्यदिन ದಿವ್ಯದಿನ** (न०) ದೇವತೆಗಳ ಒಂದು ದಿನ, ಮನುಷ್ಯರ ಒಂದು ವರ್ಷ. दिव्यं दिनम्। "मासैर्द्वादशभिर्वर्षं दिव्यं तदहरुच्यते" सू० सि० १-१३।

**दिव्यदोहद ದಿವ್ಯದೋಹದ** (न०) ಇಷ್ಟಸಿದ್ಧಿಗಾಗಿ ದೇವತೆಗಳಿಗೆ ಕೊಡುವ ಉಪಹಾರ, ದೇವತೆಗಳಿಗೆ ಕೊಡುವ ಬಲಿ. "यद्दीयते तु देवेभ्यो मनोराज्यस्य सिद्धये। उपयाचितकं दिव्यदोहदं तद्विदुर्बुधाः" हारा०।

**दिव्यनदी ದಿವ್ಯನದೀ** (स्त्री०) ದೇವನದಿ, ಆಕಾಶಗಂಗೆ.

**दिव्यनारी ದಿವ್ಯನಾರೀ** (स्त्री०) ಸ್ವರ್ಗಲೋಕದ ಹೆಂಗಸು, ದೇವತೆಗಳ ವೇಶ್ಯೆ, ಅಪ್ಸರಸ್ಸು.

**दिव्यपञ्चामृत ದಿವ್ಯಪಂಚಾಮೃತ** (न०) ಪಂಚಾಮೃತ, ಹಸುವಿನ ತುಪ್ಪ ಹಾಲು ಮೊಸರು ಜೇನುತುಪ್ಪ ಮತ್ತು ಕಲ್ಲುಸಕ್ಕರೆ ಇವುಗಳ ಬೆರಕೆ. पञ्चानाममृतानां तत्तुल्यवस्तूनां समाहारः।

**दिव्यपुरुष ದಿವ್ಯಪುರುಷ** (पुं०) 1. ಜೀವ. 2. ಪರಮಾತ್ಮ.

**दिव्यपुष्प ದಿವ್ಯಪುಷ್ಪ** (न०) ಗಣಿಗಿಲೆ ಹೂವು. दिव्यं मनोहरं पुष्पम्।

**दिव्यप्रश्न ದಿವ್ಯಪ್ರಶ್ನ** (पुं०) ಭವಿಷ್ಯದ ಪ್ರಶ್ನೆ, ಮುಂದೇನಾಗುವುದೆಂಬ ಪ್ರಶ್ನೆ.

**दिव्यमान ದಿವ್ಯಮಾನ** (न०) ದೇವತೆಗಳ ಕಾಲಮಾನ, ಒಂಬತ್ತು ವಿಧ ಕಾಲಮಾನಗಳಲ್ಲಿ ಒಂದು ವಿಧ. (1) ब्राह्मम्, (2) दिव्यम्, (3) पित्र्यम्, (4) प्राजापत्यम्, (5) बार्हस्पत्यम्, (6) सौरम्, (7) सावनम्, (8) चान्द्रम् ಮತ್ತು (9) आर्क्षम् ಎಂದು ಕಾಲಮಾನವು ಒಂಬತ್ತು ವಿಧ. [ವಿವರಕ್ಕೆ "अब्द" ಪದದಲ್ಲಿ ನೋಡಿ.]

**दिव्यरत्न ದಿವ್ಯರತ್ನ** (न०) ಚಿಂತಾಮಣಿ.

**दिव्यरथ ದಿವ್ಯರಥ** (पुं०) ಆಕಾಶದಲ್ಲಿ ಸಂಚರಿಸುವ ರಥ, ವಿಮಾನ.

**दिव्यरस ದಿವ್ಯರಸ** (पुं०) 1. ಪಾದರಸ. 2. ಉತ್ತಮವಾದ ನೀರು, ಶ್ರೇಷ್ಠವಾದ ಜಲ. (वि०) 3. ಶ್ರೇಷ್ಠವಾದ ಜಲದಿಂದ ಕೂಡಿದ.

**दिव्यवस्त्र ದಿವ್ಯವಸ್ತ್ರ** (पुं०) 1. ಆತಪ, ಬಿಸಿಲು. दिव्यं वस्त्रं यस्मात्। (न०) 2. ಉತ್ತಮವಾದ ವಸ್ತ್ರ, ಶ್ರೇಷ್ಠವಾದ ಬಟ್ಟೆ. (वि०) 3. ಶ್ರೇಷ್ಠವಾದ ವಸ್ತ್ರವುಳ್ಳ.

**दिव्यसरित् ದಿವ್ಯಸರಿತ್** (स्त्री०) ದೇವನದಿ, ಗಂಗಾನದಿ. दिव्या सरित्।

**दिव्यस्त्री ದಿವ್ಯಸ್ತ್ರೀ** (स्त्री०) ದೇವಲೋಕದ ಹೆಂಗಸು, ಅಪ್ಸರಸ್ಸು. "दिव्यस्त्रीकरचारुचामररवैः संवीज्यमानः कदा"। "दिव्यस्त्रीजघनवरांशुके विवृत्तिम्" किरा० ७-१४।

**दिव्येलक ದಿವ್ಯೇಲಕ** (पुं०) ಎರಡು ತಲೆಯುಳ್ಳ ಉರಿಶಿಂಗಿ ಯೆಂಬ ಹಾವು. "दिव्येलकः सर्पराजः किकीसाद इतीदृशाः" वैज०।

**दिव्योदक ದಿವ್ಯೋದಕ** (न०) ಅಂತರಿಕ್ಷದ ನೀರು, ಆಕಾಶದಲ್ಲಿ ಉಂಟಾದ ನೀರು, ಮಳೆಯ ನೀರು. ದಿವ್ಯ ಜಲವು (1) धाराजम्, (2) करकाभवम्, (3) तौषारम् ಮತ್ತು (4) हैमम् ಎಂದು ನಾಲ್ಕು ವಿಧ.

**दिव्योपपादुक ದಿವ್ಯೋಪಪಾದುಕ** (पुं०) ದೇವತೆ. उपपद्यते मातृपित्रादिदृष्टकारणानपेक्षम् अदृष्टसहकृतेभ्योऽणुभ्यो जायते – उप + पद (गतौ) "उकञ्" (३-२-१५५)। दिव्याश्च ते उपपादुकाश्च। "दिव्योपपादुका देवा नृगवाद्या जरायुजाः" अम०।

**दिश् ದಿಶ್** (स्त्री०) 1. ಪೂರ್ವ ಪಶ್ಚಿಮ ಮೊದಲಾದ ದಿಕ್ಕು, ದಿಶೆ. दिशति ददात्यवकाशम्–दिश (अतिसर्जने) "क्विन्" (३-२-५९)। (1) ಪೂರ್ವ, (2) ಆಗ್ನೇಯ, (3) ದಕ್ಷಿಣ, (4) ನಿರ್ಋತಿ, (5) ಪಶ್ಚಿಮ, (6) ವಾಯುವ್ಯ, (7) ಉತ್ತರ, (8) ಈಶಾನ್ಯ, (9) ಊರ್ಧ್ವ ಮತ್ತು (10) ಅಧಃ ಎಂದು ದಿಕ್ಕುಗಳು ಹತ್ತು. "कुबेरगुप्तां दिशमुष्णरश्मौ गन्तुं प्रवृत्ते समयं विलङ्घ्य। दिग्दक्षिणा गन्धवहं मुखेन व्यलीकनिश्वासमिवोत्ससर्ज" कुमा० ३-२५। 2. ದಂತಕ್ಷತ, ಹಲ್ಲಿನಿಂದ ಕಚ್ಚಿದ ಗಾಯ. 3. ಆಜ್ಞೆ, ಅಪ್ಪಣೆ. 4. ದಾನ, ಕೊಡುಗೆ. दिश भावे "क्विप्" (वा० ३-३-९४)। 5. ಹತ್ತು ಸಂಖ್ಯೆ (ದಿಕ್ಕುಗಳು 10). 6. ರೀತಿ, ಪ್ರಕಾರ. "मुनेः पाठोक्तदिशा"। 7. ಅವಕಾಶ, ಅಂತರಾಳ ಪ್ರದೇಶ. 8. ಸೂಚನೆಕೊಡು, ಸೂಕ್ಷ್ಮವಾಗಿ ಮಾರ್ಗತೋರಿಸು. "इति दिक्; इति दिङ्मात्रप्रदर्शनम्" ಇತ್ಯಾದಿ.

**दिश – अतिसर्जने** (तुदा० उभ० सक० अनि०)। दिशति दिशतः दिशन्ति। दिशते दिशेते दिशन्ते। दिदेश दिदिशतुः दिदिशुः। दिदिशे दिदिशाते दिदिशिरे। देष्टा। देक्ष्यति, –ते। दिशतु, –ताम्। अदिशत्, –त। दिशेत्, दिशेत। दिक्ष्यात्, दिक्षीष्ट। अदिक्षत्, अदिक्षत। अदेक्ष्यत्,

अदेक्षत। 1. ದಾನಮಾಡು, ಕೊಡು. "दिदेश कौत्साय समस्तमेव पादं सुमेरोरिव वज्रभिन्नम्" रघु० ५-३०। 2. ತೋರಿಸು, ಒಪ್ಪಿಸು, ಹಾಜರುಪಡಿಸು. "साक्षिणः सन्ति मेत्युक्त्वा दिशेत्युक्तो दिशेन्न यः" मनु० ८-५७। 3. ಒಪ್ಪಿಗೆಕೊಡು, ಸಮ್ಮತಿಸು. "भृत्यभावि दुहितुः परिग्रहाद्दिश्यतां कुलमिदं निमेरिति" रघु० ११-४९। 4. ಆಜ್ಞೆ ಕೊಡು, ಅಪ್ಪಣೆಮಾಡು. "महोत्सवाय प्रमथप्रमुख्यान् पृथून् गणान् शम्भुरथादिदेश" कुमा० ११-३०। 5. ಅನುಮತಿಸು, ಎಡೆಮಾಡಿಕೊಡು, ಅವಕಾಶಕೊಡು. "अस्मिन् रतिश्रमनुदश्च सरोजवाताः स्मर्तुं दिशन्ति न दिवः सुरसुन्दरीभ्यः" किरा० ५-२८। 6. ತೋರಿಸು, ಸೂಚಿಸು.

**कर्मणि**:—दिश्यते। दिदिशे। देष्टा। देक्ष्यते। दिश्यताम्। अदिश्यत। दिश्येत। ಇತ್ಯಾದಿ.

**णिचिः**—देशयति, –ते। देशयां –चकार, –चक्रे, –बभूव, –आस। देशयिता। देशयिष्यति, –ते। देशयतु, –ताम्। अदेशयत्, –त। ಇತ್ಯಾದಿ.

**सनि**:—दिदिक्षति, –ते। दिदिक्षां चकार, –बभूव, आस। दिदक्षां चक्रे, –बभूवे, –आसे। ಇತ್ಯಾದಿ.

**कृत्सु**:—देष्टव्यम्। देशनीयम्। देश्यम्। दिष्टः। दिष्टवान्। दिशन्, –ती, –न्ती। दिशमानः। देष्टुम्। दिष्टम्। देशनम्। दिष्ट्वा। निर्दिश्य।

**ಈ ಧಾತುವಿಗೆ ಉಪಸರ್ಗಗಳ ಯೋಗದಿಂದ ಉಂಟಾಗುವ ಅರ್ಥಭೇದಗಳು:**

**(1) अति + दिश** = अतिदिशति। अतिदेशः। ಒಂದರ ಧರ್ಮವನ್ನು ಮತ್ತೊಂದರಲ್ಲಿ ಹೇಳು, ಒಂದು ಕಡೆ ವಿಧಿಸುವ ಕಾರ್ಯವನ್ನು ಮತ್ತೊಂದು ಕಡೆ ವಿಧಿಸು. "अन्यत्रैव प्रणीतायाः कृत्स्नाया धर्मसंहतेः। अन्यत्र कार्यतः प्राप्तिरतिदेशः स उच्यते"। ["अतिदेश" ಪದದಲ್ಲಿ ನೋಡಿ.]

**(2) अप+दिश** =अपदिशति। अपदिशन्। अपदेशः। 1. ವ್ಯಾಜ, ನೆಪ. "रक्षापदेशान्मुनिहोमधेनोर्वन्यान्विनेष्यन्निव दुष्टसत्त्वान्" रघु० २-८। 2. ಉದ್ದೇಶ, ಗುರಿ. "सितच्छदानामपदिश्य धावतां रुतैरमीषां ग्रथिताः पतत्रिणाम्" किरा० ४-३०।

**(3) वि + अप + दिश** = व्यपदिशति। व्यपदेशः। ಮುಖ್ಯವಲ್ಲದ ವಸ್ತುವಿನಲ್ಲಿ ಮುಖ್ಯ ಧರ್ಮವನ್ನು ಹೇಳು. "निमित्तसद्भावात् विशिष्टोऽपदेशः अमुख्यव्यवहारो व्यपदेशः" परिभा० शे०।

**(4) आ+दिश** = आदिशति। आदेशः। 1. ಆಜ್ಞೆ ಮಾಡು. "आदेशं देशकालज्ञः शिष्यः शासितुरानतः" रघु० १-९२। "आदिक्षदादीप्तकृशानुकल्पम्" भट्टि० ३-३। 2. ಉಪದೇಶ, ಬೋಧನೆ. "न चास्योपदिशेद्धर्मं न चास्य व्रतमादिशेत्" मनु० ४-८०। 3. ಒಂದರ ಸ್ಥಾನದಲ್ಲಿ ಇನ್ನೊಂದು ಬಂದು ಕೂರುವುದು. "धातोः स्थान इवादेशं सुग्रीवं सन्न्यवेशयत्" रघु० १२-५८। 4. ಕಥನ, ಹೇಳುವುದು, ನುಡಿಯುವುದು. "सिद्धादेशप्रत्ययप्रार्थितायाः सिंहलेश्वरदुहितुः समुद्रे प्रवहणभङ्गनिमग्नायाः फलकासादनम्" रत्ना० १।

**(5) अनु+आ+दिश** = अन्वादिशति। अन्वादेशः। 1. ಅನಂತರ ಆಜ್ಞೆಮಾಡು. 2. ಒಂದು ಕಾರ್ಯವನ್ನು ಬೋಧಿಸಲು ಹೇಳಿರುವುದನ್ನು ಮತ್ತೊಂದು ಕಾರ್ಯಕ್ಕಾಗಿ ಮತ್ತೆ ಹೇಳು. "किञ्चित् कार्यं विधातुमुपात्तस्य कार्यान्तरं विधातुं पुनरुपादानम् अन्वादेशः"।

**(6) प्रति+आ+दिश** = प्रत्यादिशति। प्रत्यादेशः। 1. ತಿರಸ್ಕರಿಸು, ನಿರಾಕರಿಸು. "प्रत्यादिष्टविशेषमण्डनविधिः वामप्रकोष्ठार्पितम्" शाकु० ६-६। 2. ವಿಸರ್ಜಿಸು, ಬಿಟ್ಟುಬಿಡು. "ऋजुप्रमाणक्रिययैव तन्वी प्रत्यादिदेशैनमभाषमाणा" रघु० ६-२५।

**(7) वि + आ + दिश** = व्यादिशति। ವಿಶೇಷರೀತಿಯಿಂದ ಹೇಳು. "समीरणो नोदयिता भवेति व्यादिश्यते केन हुताशनस्य" कुमा० ३-२१।

**(8) सम्+आ+दिश** = समादिशति। समादिदेश। 1. ಚೆನ್ನಾಗಿ ಆಜ್ಞೆಮಾಡು, ಸರಿಯಾಗಿ ಆಜ್ಞಾಪಿಸು. "आराधनायास्य सखीसमेतां समादिदेश प्रयतां तनूजाम्" कुमा० १-५८। 2. ಹೇಳು, ತಿಳಿಸು, ನುಡಿ. "समादिदेशैकवधूं भवित्रीं प्रेम्णा शरीरार्धहरां हरस्य" कुमा० १-५०।

**(9) उद्+दिश**=उद्दिशति। उद्देशः। 1. ಸೂಚಿಸು, ತಿಳಿಸು, ಹೇಳು. "भगवानपि संप्राप्तः प्रथमोद्दिष्टमास्पदम्" कुमा० ६-३५। 2. ಸ್ಪಷ್ಟವಾಗಿ ನಿರೂಪಿಸು, ಸ್ಪಷ್ಟವಾಗಿ ಹೇಳು. "त्वं साधुभिरुद्दिष्टः प्रथममेव चक्रवर्तिनं पुत्रं जनयिष्यसीति" शाकु० ५। 3. ಗುರಿಯಿಡು, ಲಕ್ಷ್ಯವಿಡು. "यत्तु प्रत्युपकारार्थं फलमुद्दिश्य वा पुनः" गीता १७-२५। 4. ಸಂಕಲ್ಪಿಸು, ಮನಸ್ಸಿನಲ್ಲಿ ನಿಶ್ಚಯಿಸು. "चामुण्डे, भगवति मन्त्रसाधनादावुद्दिष्टामुपनिहितां भजस्व पूजाम्" मालती० ५-२५। 5. ಉಪದೇಶಿಸು, ಹೇಳಿಕೊಡು. "सतां केनोद्दिष्टं विषममसिधाराव्रतमिदम्" भर्तृ० १-५६।

**(10) उप+दिश**=उपदिशति। उपदेशः। 1. ಉಪದೇಶಿಸು, ಬೋಧಿಸು, ಕಲಿಸು. 2. ಬೋಧಿಸು, ಸಲಹೆ ಕೊಡು, ಬುದ್ಧಿ ಹೇಳು. "इत्यनेक उपदेश इव स्म स्वाद्यते युवतिभिर्मधुवारः" किरा० ९-५३।

**(11) प्रति+उप+दिश**=प्रत्युपदिशति। प्रत्युपदेशः। ಪ್ರತಿಯಾಗಿ ಉಪದೇಶಿಸು, ಹೇಳಿಕೊಟ್ಟವನಿಗೆ ಪ್ರತಿಯಾಗಿ ಹೇಳಿಕೊಡು. "यद्यत् प्रयोगविषये भाविकमुपदिश्यते मया तस्यै। तत्तद्विशेषकरणात् प्रत्युपदिशतीव मे बाला" माल० १-५।

**(12) निर्+दिश**=निर्दिशति। निर्देशः। 1. ನಿಶ್ಚಯವಾಗಿ ಹೇಳು, ನಿರ್ಣಯಮಾಡಿ ತೋರಿಸು. "अतुषत् पीठमासन्ने निरदिक्षच्च काञ्चनम्" भट्टि० १५-८।

**(13) सम्+दिश**=सन्दिशति। सन्देशः। 1. ಚೆನ್ನಾಗಿ ಹೇಳು, ಸ್ಪಷ್ಟವಾಗಿ ಹೇಳು. "निपुणं तथैनमुपगम्य वदेरभिदूति काचिदिति सन्दिदिशे" माघ० ९-५६। 2. ಬಾಯಿಮಾತಿನಿಂದ ಹೇಳಿಕಳುಹಿಸು. "ननु सन्दिशेति सुदृशोदितया त्रपया न किञ्चन किलाभिदधे" माघ० ९-६१।

**दिश ದಿಶ** (पुं०) 1. ವಿಷ್ಣು, ಪರಮಾತ್ಮ. ग जेन्द्रमोक्षण दृष्ट्वा विस्मितान् ब्रह्मादीन् वन्दमानान् नान्तरङ्गीकरोति गजेन्द्रवत् किन्तु दिशति आज्ञापयति—दिश (अतिसर्जने) "कः" (३-१-१३५)। "ब्रात्रादीन् सर्वकृत्येषु स्वाज्ञापयति यः सदा। दिशः स तु समाख्यातः षडर्णो मनुरुत्तमः" इति निरुक्तिः। "चतुरश्रो गभीरात्मा विदिशो व्यादिशो दिशः" वि० स०। (वि०) 2. ಕೊಡುವವನು. 3. ಆಜ್ಞೆ ಮಾಡುವವನು.

**दिशत् ದಿಶತ್** (वि०) 1. ಕೊಡುತ್ತಿರುವ, ದಾನಮಾಡುತ್ತಿರುವ. दिश (अतिसर्जने) "शतृ" (३-२-१२४)। "कालीयकक्षोदविलेपनश्रियं दिशद्दिशामुल्लसदंशुमद्द्युति" माघ० १२-१४। स्त्रियाम् "ङीप्" (४-१-६)। **–ती, –न्ती –ತೀ, –ನ್ತೀ.** "अभ्यूर्मिराजि प्रतिबिम्बिताभिर्मुदं दिशन्तीं व्रजतां जनानाम्" कुमा० १३-२८। 2. ಆಜ್ಞೆ ಮಾಡುತ್ತಿರುವ.

**दिशमान ದಿಶಮಾನ** (वि०) "दिशत्" ಪದದ ಅರ್ಥ. दिश (अतिसर्जने) "शानच्" (३-२-१२४)। स्त्रियाम् "टाप्" (४-१-४)। **–माना –ಮಾನಾ.**

**दिशा ದಿಶಾ** (स्त्री०) ಪೂರ್ವ ಪಶ್ಚಿಮ ಮೊದಲಾದ ದಿಕ್ಕು, ದಿಶೆ. दिश (अतिसर्जने) "कः" (३-१-१३५)। "टाप्" (४-१-४)। "वष्टि भागुरिरल्लोपमवाप्योरुपसर्गयोः। आपं चैव हलन्तानां यथा वाचा निशा दिशा"। विभूषयामास विभूतिवैभवं दिशाभिरष्टाभिरिवात्मनः पदम्" याद० १४-७६।

**दिशागज ದಿಶಾಗಜ** (पुं०) ದಿಗ್ಗಜ, ದಿಕ್ಕುಗಳಲ್ಲಿರುವ ಆನೆ. दिशायां स्थितो गजः।

**दिशाचक्षुस् ದಿಶಾಚಕ್ಷುಸ್** (पुं०) ಗರುತ್ಮಂತನ ಒಬ್ಬ ಮಗ.

**दिशापाल ದಿಶಾಪಾಲ** (पुं०) 1. ಇಂದ್ರ ಮೊದಲಾದ ದಿಕ್ಪಾಲಕರು. दिशाः पालयति — पाल (रक्षणे) "अण्" (३-२-१)। 2. ಬ್ರಹ್ಮನಿಂದ ದಿಕ್ಪಾಲಕರಾಗಿ ನೇಮಿಸಲ್ಪಟ್ಟ ವೈರಾಜ ಮೊದಲಾದ ಪ್ರಜಾಪತಿಗಳ ಮಕ್ಕಳು. ಇವರು ಪೂರ್ವ ಮೊದಲಾದ ನಾಲ್ಕು ದಿಕ್ಕುಗಳ ಪಾಲಕರು.

| | |
|---|---|
| ವೈರಾಜ ಪ್ರಜಾಪತಿಯ ಮಗ ಸುಧನ್ವನು | ಪೂರ್ವ ದಿಕ್ಪಾಲಕ. |
| ಕರ್ದಮ ಪ್ರಜಾಪತಿಯ ಮಗ ಶಂಖಪದನು | ದಕ್ಷಿಣ ದಿಕ್ಪಾಲಕ. |
| ರಜಸ್ಸಿನ ಮಗ ಕೇತುಮಂತನು | ಪಶ್ಚಿಮ ದಿಕ್ಪಾಲಕ. |
| ಪರ್ಜನ್ಯ ಪ್ರಜಾಪತಿಯ ಮಗ ಹಿರಣ್ಯರೋಮನು | ಉತ್ತರ ದಿಕ್ಪಾಲಕ. |

**दिश्य ದಿಶ್ಯ** (वि०) ದಿಕ್ಕಿನಲ್ಲಿರುವ. ದಿಕ್ಕಿನಲ್ಲಿ ಹುಟ್ಟಿದ, ದಿಕ್ಕಿನಲ್ಲಿ ಉಂಟಾದ. दिशि भवम् "यत्" (४-३-५४)। "विक्रीय दिश्यानि धनान्युरूणि द्वैप्यानसावुत्तमलाभभाजः" माघ० ३-७६।

**दिष्ट ದಿಷ್ಟ** (पुं०) 1. ಕಾಲ, ಸಮಯ. दिश (अतिसर्जने) संज्ञायां "क्तः" (३-३-१७४)। "कालो दिष्टोऽप्यनेहापि" अम०। 2. ವೈವಸ್ವತಮನುವಿನ ಒಬ್ಬ ಮಗ. "नरिष्यन्तोऽथ नाभागः सप्तमो दिष्ट उच्यते" भाग० ८-१३-३। (न०) 3. ಭಾಗ್ಯ, ಅದೃಷ್ಟ. दिश कर्त० "क्तः" (३-४-७२)। "न दिष्टमिष्टं कुरुते न तिष्ठति तु पौरुषे" विष्णुपु०। 4. ಮೃತ್ತಿಕಾಸ್ನಾನ. "यन्मृत्तिकाम्भसा स्नानं दिष्टं देशनिकं च तत्" वैज०। 5. ಸಂದೇಶ, ಹೇಳಿಕಳುಹಿದ ಬಾಯಿಮಾತು. "आख्यायनी तु सन्देशो दिष्टं संवदनञ्च तत्" वैज०। 6. ಆನಂದ, ಸಂತೋಷ. 7. ಪರಿಣಾಮ. "दिष्टं दैवपरीणामानन्देषु समये तु ना" नानार्थर०। (वि०) 8. ಉಪದೇಶಿಸಲ್ಪಟ್ಟ, ಬೋಧಿಸಲ್ಪಟ್ಟ. 9. ಹೇಳಲ್ಪಟ್ಟ.

**दिष्टान्त ದಿಷ್ಟಾಂತ** (ಪುಂ॰) 1. ಅದೃಷ್ಟದ ಕೊನೆ. 2. ಅವಸಾನ, ಮರಣ. दिष्टस्यान्तः। "ततो दिष्टान्तमापन्नः सर्वेषां दुःखमावहन्" भा॰ आदि॰। "दिष्टान्तमाप्स्यति भवानपि पुत्रशोकात्" रघु॰ ९-७९।

**दिष्टि ದಿಷ್ಟಿ** (स्त्री॰) 1. ಹರ್ಷ, ಸಂತೋಷ. दिश (अतिसर्जने) भावे "क्तिन्" (३-३-९४)। "राजकुले दिष्टिवृद्धिसम्भ्रमो महानभूत्" काद॰। 2. ಒಂದು ಪರಿಮಾಣ, ಎಂಟು ಅಂಗುಲಿಗಳ ಅಳತೆ. "दिष्टिर्मृत्परिमाणयोः" मेदि॰। "धनुर्ग्रहश्च दिष्टिश्च स्यातामष्टाङ्गुलावुभौ" वैज॰। 3. ಸೌಖ್ಯ. 4. ಧ್ಯಾನ. 5. ಪರಿಣಾಮ. "दिष्टिर्ध्यानसुखानन्दपरिणामेषु" नानार्थर॰। 6. ದಾನ, ಕೊಡುಗೆ. "दिष्टिः सुखे च दाने च" वैज॰। 7. ಭಾಗ್ಯ, ಅದೃಷ್ಟ. "दिष्टिवृद्धिमिव शुश्राव" काद॰। 8. ಉಪದೇಶ, ಬೋಧನೆ.

**दिष्टचा ದಿಷ್ಟ್ಯಾ** (अव्य॰) 1. ಕಲ್ಯಾಣ, ಮಂಗಳ. दिशं देशनं स्त्यायति — ष्टचै (शब्दसंघातयोः) "क्विप्" (३-२-१७८)। 2. ಹರ್ಷ, ಆನಂದ. "दिष्टचा हर्षे मङ्गले च" मेदि॰। "अनेन सम्बन्धमुपेत्य दिष्टचा मनोरथप्रार्थितमीश्वरेण" कुमा॰ ७-६८। 3. ಅದೃಷ್ಟದಿಂದ, ಭಾಗ್ಯವಿಶೇಷದಿಂದ. ಇದು ವಿಭಕ್ತಿಪ್ರತಿರೂಪಕಾವ್ಯಯ. "दिष्टचा त्वमसि मे धात्रा भीतेनेवोपपादितः" रघु॰ १५-१८। "वत्स माधव, दिष्टचा वर्धितोऽसि मालत्या। सोऽयमवसरः प्रीतिदानस्य" मालती॰ ४।

**दिष्णु ದಿಷ್ಣು** (वि॰) ದಾನಮಾಡುವವನು.

**दिह् – उपचये** (अदा॰ उभ॰ सक॰ अनि॰)। देग्धि, दिग्धे। दिदेह, दिदिहे। देग्धा। धेक्ष्यति, –ते। देग्धु, दिग्धाम्। अधेक्, अदिग्ध। ಇತ್ಯಾದಿ. 1. ಬೆಳೆ, ವೃದ್ಧಿಹೊಂದು. 2. ಬಳಿ, ಲೇಪನಮಾಡು, ಹಚ್ಚು. "अदिहंश्चन्दनैः शुभ्रैर्विचित्रं समवस्त्रयन्" भट्टि॰ १७-५४।

**कर्मणि** :—दिह्यते। दिग्धे। देग्धा। धेक्ष्यते। दिह्यताम्। अदिह्यत। दिह्येत। अदेहि। ಇತ್ಯಾದಿ.

**कृत्सु** :—देग्धव्यम्। देहनीयम्। देह्यम्। दिग्धः। दिग्धवान्। दिहन्, –ती। दिहानः। देग्धुम्। दिग्धम्। देहनम्। दिग्ध्वा। प्रदिह्य।

**दीङ् – क्षये** (दिवा॰ आत्म॰ अक॰ अनि॰)। दीयते। दिग्ये। अदास्त। ಇತ್ಯಾದಿ. ಕ್ಷಯಹೊಂದು, ನಾಶವಾಗು.

**दीक्ष–मौण्डचेज्योपनयननियमव्रतादेशेषु** (भ्वा॰ आत्म॰ अक॰ से॰)। दीक्षते। दिदीक्षे। दीक्षिता। दीक्षिष्यते। दीक्षताम्। अदीक्षत। ಇತ್ಯಾದಿ. 1. ಮುಂಡನಮಾಡು, ಕ್ಷೌರಮಾಡು. 2. ಯಾಗಮಾಡು. 3. ವೇದಾಧ್ಯಯನಕ್ಕಾಗಿ ಬಾಲಕನಿಗೆ ಉಪನಯನ ಸಂಸ್ಕಾರಮಾಡಿ ಗುರುವಿನಲ್ಲಿಗೆ ಕಳುಹಿಸು. 4. ನಿಯಮದಲ್ಲಿರು, ಕಟ್ಟುಪಾಡಿನಲ್ಲಿರು, ನಿರ್ಬಂಧದಲ್ಲಿರು. 5. ಪವಿತ್ರವಾದ ಕಾರ್ಯಕ್ಕಾಗಿ ಪ್ರಾರಂಭದಲ್ಲಿ ಸಂಸ್ಕಾರಹೊಂದು, ಮಂತ್ರಗ್ರಹಣ ಮೊದಲಾದುದಕ್ಕಾಗಿ ಉಪದೇಶಹೊಂದು. 6. ಆಜ್ಞೆಯಂತೆ ನಡೆ, ಅಪ್ಪಣೆಯ ಮೇರೆಗೆ ಇರು.

**भावे** :—दीक्ष्यते। दिदीक्षे। दीक्षिता। दीक्ष्यताम्। अदीक्ष्यत। दीक्ष्येत। ಇತ್ಯಾದಿ.

**कृत्सु** :—दीक्षितव्यः। दीक्षणीयः। दीक्ष्यः। दीक्षितः। दीक्षितवान्। दीक्षमाणः। दीक्षितुम्। दीक्षितम्। दीक्षणम्। दीक्षित्वा।

**दीक्षक ದೀಕ್ಷಕ** (पुं॰) ದೀಕ್ಷೆಯನ್ನು ಕೊಡುವವನು, ಆಚಾರ್ಯ, ಮಂತ್ರೋಪದೇಶ ಮಾಡುವವನು. दीक्ष (मौण्डचेज्यादिषु) "ण्वुल्" (३-१-१३३)।

**दीक्षण ದೀಕ್ಷಣ** (न॰) ಯಾಗ ಮೊದಲಾದ ಕಾರ್ಯಕ್ಕಾಗಿ ಕೈಗೊಳ್ಳುವ ನಿಯಮ, ಪ್ರಾರಂಭದ ಸಂಸ್ಕಾರ. दीक्ष (मौण्डचेज्यादिषु) भावे "ल्युट्" (३-३-११५)।

**दीक्षणीय ದೀಕ್ಷಣೀಯ** (वि॰) 1. ನಿಯಮದಲ್ಲಿರಬೇಕಾದ. 2. ನಿಯಮದಲ್ಲಿರಿಸಲ್ಪಡುವ. 3. ನಿಯಮದಲ್ಲಿರಲು ಶಕ್ಯನಾದ. दीक्ष (मौण्डचेज्यादिषु) "अनीयर्" (३-१-९६)। 4. ಕ್ಷೌರಮಾಡಿಸಬೇಕಾದ, ಮುಂಡನಮಾಡಿಸಬೇಕಾದ. 5. ಯಾಗ ಮೊದಲಾದ ಕಾರ್ಯಕ್ಕಾಗಿ ಸಂಸ್ಕಾರ ಹೊಂದಬೇಕಾದ, ಪವಿತ್ರಕಾರ್ಯಕ್ಕಾಗಿ ಪ್ರಾರಂಭದಲ್ಲಿ ಮಂಗಳಕಾರ್ಯ ಮಾಡಬೇಕಾದ. 6. ಮಂತ್ರಗ್ರಹಣ ಮೊದಲಾದುದಕ್ಕಾಗಿ ಆಚಾರ್ಯರಿಂದ ಉಪದೇಶಹೊಂದಬೇಕಾದ. "तव्यः" (३-१-९६)। –**क्षितव्यः** –ಕ್ಷಿತವ್ಯಃ.

**दीक्षा ದೀಕ್ಷಾ** (स्त्री॰) 1. ನಿಯಮವನು ಹಿಡಿಯುವುದು, ವ್ರತಧಾರಣೆ. 2. ಒಂದು ಪವಿತ್ರ ಕಾರ್ಯಕ್ಕಾಗಿ (ಪ್ರಾರಂಭದಲ್ಲಿ) ನಡೆಸುವ ಸಂಸ್ಕಾರ. दीक्ष (मौण्डचेज्यादिषु) "अः" (३-३-१०३)। "अजस्रदीक्षाप्रयतः स मद्गुरुः क्रतोरशेषेण फलेन युज्यताम्" रघु॰ ३-६५। 3. ಉಪನಯನ ಸಂಸ್ಕಾರ. 4. ಮಂತ್ರ ಸ್ವೀಕಾರ, ಉಪದೇಶ. ಇಂತಹ ಸಂಸ್ಕಾರದಿಂದ ನಿರ್ಮಲ ಜ್ಞಾನವು ರಕ್ಷಿಸಲ್ಪಡುವುದು. ಕರ್ಮವಾಸನೆಯು ನಾಶವಾಗುವುದು. ಆದುದ

ರಿಂದ ಇದಕ್ಕೆ ದೀಕ್ಷೆಯೆಂದು ಹೆಸರು. "दीयते विमलं ज्ञानं क्षीयते कर्मवासना। तेन दीक्षेति सा प्रोक्ता मुनिभिस्तन्त्रवेदिभिः"। ಯಜ್ಞ, ವಿವಾಹ, ತಪಸ್ಸು, ಜಪ ಮೊದಲಾದ ಪವಿತ್ರಕಾರ್ಯಗಳ ಪ್ರಾರಂಭದಲ್ಲಿಯೂ ಎಲ್ಲಾ ಆಶ್ರಮಗಳಲ್ಲಿಯೂ ಎಲ್ಲಾ ಕಾರ್ಯಗಳಿಗೂ ದೀಕ್ಷೆಯು ಅವಶ್ಯವಾದುದು. "दीयते ज्ञानसंभारः क्षालनात्पापसंहतेः। ततो दीक्षेति सा प्रोक्ता मुनिभिस्तन्त्रवेदिभिः। दीक्षामूलं जपं सर्वं दीक्षामूलं परं तपः। दीक्षामाश्रित्य निवसेत् यत्रकुत्राश्रमे वसन्" तन्त्रसा०। ದೀಕ್ಷೆಯಿಲ್ಲದೆ ಆಚರಿಸಲ್ಪಡುವ ಕರ್ಮವು ನಿಷ್ಫಲ. "अदीक्षिता ये कुर्वन्ति जपपूजादिकाः क्रियाः। न भवन्ति श्रियै तेषां शिलायामुप्तबीजवत्। देवि दीक्षाविहीनस्य न सिद्धिर्न च सद्गतिः। तस्मात्सर्वप्रयत्नेन गुरुणा दीक्षितो भवेत्" तन्त्रसा०। 5. ಯಾಗಕ್ಕೆ ಮೊದಲು ಆಚರಿಸಲ್ಪಡುವ ಒಂದು ಕರ್ಮ, ಯಜ್ಞದೀಕ್ಷೆ, ದೇವತಾಪ್ರತಿಷ್ಠಾದಿಕಾರ್ಯ. 6. ಪ್ರತಿಜ್ಞೆ, ದೃಢಸಂಕಲ್ಪ. 7. ಶುಭಕಾರ್ಯ, ವಿವಾಹಸಂಸ್ಕಾರ. "समेतबन्धुर्हिमवान् सुतायाः विवाहदीक्षाविधिमन्वतिष्ठत्" कुमा० ७-१।

**दीक्षागुरु ದೀಕ್ಷಾಗುರು** (पुं०) ದೀಕ್ಷೆಯನ್ನು ಕೊಡುವ ಆಚಾರ್ಯ, ಮಂತ್ರೋಪದೇಶ ಮಾಡುವ ಆಚಾರ್ಯ. दीक्षायां गुरुः।

**दीक्षान्त ದೀಕ್ಷಾಂತ** (पुं०) ಪ್ರಧಾನಯಾಗದ ಅನಂತರ ಮಾಡುವ ಯಾಗ, ಅವಭೃಥಸ್ನಾನವೆಂಬ ಯಾಗ. दीक्षायाः प्रधानयागस्य अन्तः समापको यागः। "दीक्षान्तोऽवभृथो यज्ञे" अम०।

**दीक्षित ದೀಕ್ಷಿತ**(पुं०)1. ಸೋಮಯಾಜಿ, ಸೋಮಯಾಗ ಮೊದಲಾದ ಯಾಗಾಂಗವಾದ ವ್ರತವನ್ನು ಹಿಡಿದಿರುವವನು. दीक्षते — दीक्ष (मौण्ड्येज्यादिषु) "क्तः" (३-४-७२)। 2. ತಂತ್ರೋಕ್ತವಾದ ಯಾಗ ದೀಕ್ಷೆಯನ್ನು ಸ್ವೀಕರಿಸಿರುವವನು. "वर्णानां ब्राह्मणश्चासि विप्रेण दीक्षितो द्विजः" भा० अनु०। "चत्वारो वयमृत्विजः स भगवान् कर्मोपदेष्टा हरिः संग्रामाध्वरदीक्षितो नरपतिः पत्नी गृहीतव्रता" वेणी० १-२५। "आपन्नाभयसत्रेषु दीक्षिताः खलु पौरवाः" शाकु० २-१६। 3. ಮಂತ್ರಗ್ರಹಣರೂಪವಾದ ದೀಕ್ಷೆಯನ್ನು ಸ್ವೀಕರಿಸಿದವನು. दीक्षा अस्य सञ्जाता "इतच्" (५-२-३६)। 4. ಪ್ರತಿಜ್ಞೆ ಮಾಡಿದವನು, ಯಾವುದಾದರೂ ಕಾರ್ಯಕ್ಕಾಗಿ ದೃಢಸಂಕಲ್ಪಮಾಡಿದವನು. "तं पितुर्वधभवेन मन्युना राजवंश निधनाय दीक्षितम्" रघु० ११-६७। 5. ಪಟ್ಟಾಭಿಷೇಕ ಮೊದಲಾದ ಶುಭ ಸಂಸ್ಕಾರವನ್ನು ಹೊಂದಿದವನು. "पद्मा पद्मातपत्रेण भेजे साम्राज्यदीक्षितम्" रघु० ४-५।

**दीक्षितवत् ದೀಕ್ಷಿತವತ್** (वि०) ದೀಕ್ಷೆಯನ್ನು ಕೈಗೊಂಡವನು. दीक्ष "क्तवतुः" (३-२-१०२)।

**दीक्षितृ ದೀಕ್ಷಿತೃ**(वि०) ದೀಕ್ಷೆಯನ್ನು ಹಿಡಿಯುವ ಸ್ವಭಾವದವನು, ವ್ರತವನ್ನು ಕೈಗೊಳ್ಳುವ ಸ್ವಭಾವದವನು. दीक्ष (मौण्ड्येज्यादिषु) "तृन्" (३-२-१५३)।

**दीदिवि ದೀದಿವಿ** (पुं०)1. ಗುರು, ಬೃಹಸ್ಪತಿ, ದೇವತೆಗಳ ಆಚಾರ್ಯ. दिवु (क्रीडादिषु) "क्विन्" द्वित्वम् अभ्यासस्य दीर्घश्च (उ० ४-५५)। 2. ಸ್ವರ್ಗ, ದೇವಲೋಕ. 3. ಮೋಕ್ಷ. (पुंन०) 4. ಅನ್ನ. "पुंसि स्वर्गे दीदिविर्ना धिषणेऽन्ने तदस्त्रियाम्" मेदि०। (वि०)5. ಪ್ರಕಾಶಿಸುವ, ಹೊಳೆಯುವ. पुनः पुनः भृशं वा दीव्यति।

**दीधिति ದೀಧಿತಿ** (स्त्री०) 1. ಕಿರಣ, ರಶ್ಮಿ, ಕದಿರು. दीधीते दीप्यते—दीधीङ् (दीप्तिदेवनयोः) "क्तिच्" (३-३-१७४)। "अन्तिकान्तिकगतेन्दुविसृष्टे जिह्मतां दधति दीधितिजाले" किरा० ९-२१। 2. ಅಂಗುಳಿ, ಬೆರಳು.

**दीधितिमत् ದೀಧಿತಿಮತ್**(पुं०)1. ಸೂರ್ಯ. दीधितयोऽस्य सन्ति—"मतुप्" (५-२-९४)। "तत्रावतीर्याच्युतदत्तहस्तः शरद्घनाद्दीधितिमानिवोक्ष्णः" कुमा० ७-७०। (वि०) 2. ಪ್ರಕಾಶಿಸುವ, ಹೊಳೆಯುವ.

**दीधीङ् – दीप्तिदेवनयोः** (अदा० आत्म० अक० से०)। दीधीते। दीध्ये। दीध्यां चक्रे, –बभूव, –आस। दीधिता। दीधिष्यते। दीधीताम्। ಇತ್ಯಾದಿ. 1. ಪ್ರಕಾಶಿಸು, ಹೊಳೆ. 2. ಆಟವಾಡು, ಕ್ರೀಡಿಸು. 3. ವ್ಯವಹರಿಸು.

**दीन ದೀನ** (वि०)1. ಬಡವ, ದರಿದ್ರ. दीयते स्म — दीङ् (क्षये) "क्तः" (३-४-७२)। तस्य नत्वम् (८-२-४५)। "दीनो वा राज्यहीनो वा यो मे भर्ता स मे गुरुः। तं नित्यमनुरक्तास्मि यथा सूर्यं सुवर्चला" रामा०। 2. ಭಯಗೊಂಡವನು. "सप्त व्यतीयुः त्रिगुणानि तस्य दिनानि दीनोद्धरणोचितस्य" रघु० २-२५। 3. ಕಷ್ಟದಲ್ಲಿರುವವನು, ದುಃಖಪಡುತ್ತಿರುವವನು. (स्त्री०) –ना –ನಾ. 4. ಹೆಣ್ಣು ಇಲಿ. "दीना स्त्री मूषिकस्त्रियाम्। वाच्यवत् दुर्गते भीते" मेदि०।

**दीनचित्त ದೀನಚಿತ್ತ** (वि०) ದೈನ್ಯದಿಂದ ಕೂಡಿದ ಮನಸ್ಸುಳ್ಳವನು, ದುಃಖಿಗೊಂಡ ಮನಸ್ಸುಳ್ಳವನು. दीनं चित्तं यस्य ।

**दीनता ದೀನತಾ** (स्त्री०) ಬಡತನ, ದಾರಿದ್ರ್ಯ. दीनस्य भावः "तल्" (५-१-११९) ।

**दीनदयालु ದೀನದಯಾಲು** (वि०) ಕಷ್ಟದಲ್ಲಿರುವವರಲ್ಲಿ ದಯೆಯುಳ್ಳವನು, ಕಷ್ಟಪಡುತ್ತಿರುವವರಲ್ಲಿ ಕನಿಕರವುಳ್ಳವನು. दीनेषु दयालुः । "दीनदयालुतयावनिपालः" ।

**दीननाथ ದೀನನಾಥ** (पुं०) ಬಡವರನ್ನು ಕಾಪಾಡುವವನು, ಗತಿಯಿಲ್ಲದವರನ್ನು ಪಾಲಿಸುವವನು. दीनानां नाथः ।

**दीनमनस् ದೀನಮನಸ್** (वि०) ದುಃಖಪಡುತ್ತಿರುವವನು.

**दीनमानस ದೀನಮಾನಸ** (वि०) ದುಃಖಿಗೊಂಡ ಮನಸ್ಸುಳ್ಳವನು. दीनं मानसं यस्य ।

**दीनार ದೀನಾರ** (पुं०) 1. ಸುವರ್ಣಾಭರಣ. 2. ಸುವರ್ಣದ ಒಂದು ನಾಣ್ಯ. 3. ಚಿನ್ನದ ಒಂದು ತೂಕ, 28 ರೋಪಕಗಳ ತೂಕ.

| | |
|---|---|
| 5 ಗುಲಗಂಜಿಗಳ ತೂಕ | 1 ಆದ್ಯಮಾಷಕ |
| 16 ಆದ್ಯಮಾಷಕಗಳ ತೂಕ | 1 ಅಕ್ಷ. |
| 1 ಚಿನ್ನದ ಅಕ್ಷ | 1 ಸುವರ್ಣ ಅಥವಾ ಬಿಸ್ತ |
| 70 ನೆಯ ಒಂದು ಸುವರ್ಣ | 1 ರೋಪಕ |
| 28 ರೋಪಕಗಳು | 1 ದೀನಾರ. |

(ಹಿಂದಿನ ಕಾಲದಲ್ಲಿದ್ದ ಚಿನ್ನದ ಒಂದು ನಾಣ್ಯ). "दीनारो रोपकैरष्टाविंशत्या परिकीर्तितः। सुवर्णसप्ततितमो भागो रोपक उच्यते" । 4. ಮುದ್ರೆ, ಮೊಹರು.

**दीप ದೀಪ** (पुं०) 1. ದೀಪ, ದೀವಿಗೆ, ಎಣ್ಣೆ ಮತ್ತು ಬತ್ತಿಯ ಸಹಾಯ್ಯದಿಂದ ಬೆಳಕನ್ನು ಕೊಡುವ ಒಂದು ಜ್ವಾಲೆ. [ಇದು ಪೂರ್ವಕಾಲದ ದೀಪ. ಈಗಿನ ವಿದ್ಯುದ್ದೀಪಕ್ಕೆ ಎಣ್ಣೆ ಬತ್ತಿಗಳ ಆವಶ್ಯಕತೆಯಿಲ್ಲ.] दीपयति – दीपी (दीप्तौ) + णिच् "अच्" (३-१-१३४) । "सुकृतः परिशुद्ध आगमः कुरुते दीप इवार्थदर्शनम्" किरा० २-३३। "रतौ ह्रिया यत्र निशाम्य दीपान्" माघ० ३-४५। ದೇವರ ಪೂಜಾಸಮಯದಲ್ಲಿ ಅಭಿಷೇಕ ಧೂಪ ದೀಪ ಸಮರ್ಪಣೆ ನೈವೇದ್ಯ ಅಲಂಕಾರ ಮಂಗಳಾರತಿ ಇವುಗಳನ್ನು ಘಂಟಾನಾದ ಪೂರ್ವಕ ಮಾಡಬೇಕು. "स्नाने धूपे तथा दीपे नैवेद्ये भूषणे तथा। घण्टानादं प्रकुर्वीत तथा नीराजनेऽपि च" । ಪುರುಷರು ದೀಪವನ್ನು ಆರಿಸಕೂಡದು. "दीपनिर्वापणात्पुंसः कूष्माण्डच्छेदनात् स्त्रियः। अचिरेणैव कालेन वंशच्छेदो भवेद्ध्रुवम्" । ದೇವರ ಸನ್ನಿಧಿಯಲ್ಲಿರುವ ದೀಪವನ್ನು ನಾವಾಗಿ ಆರಿಸಕೂಡದು. "नैव निर्वापयेद्दीपं कदाचिदपि यत्नतः। सततं लक्षणोपेतं देवार्थमुपकल्पितम्" । 2. ದೀಪನ.

**दीपक ದೀಪಕ** (पुं०) 1. ದೀಪ, ದೀವಿಗೆ. दीपयति – दीपी (दीप्तौ) + णिच् "ण्वुल्" (३-१-१३३) । 2. ಶ್ಯೇನ, ಗಿಡುಗ, ಬೇಟೆಯ ಹಕ್ಕಿ. ಈ ಹಕ್ಕಿಯ ನೆರವಿನಿಂದ ಬೇಟೆಗಾರರು ಇತರ ಹಕ್ಕಿಗಳನ್ನು ಹಿಡಿಯುತ್ತಾರೆ. "पक्षिणा येन गृह्यन्ते पक्षिणोऽन्ये स दीपकः" वैजं० । (न०) 3. ದೀಪಕಾಲಂಕಾರ, ಅರ್ಥಾಲಂಕಾರದ ಒಂದು ಭೇದ. ವರ್ಣ್ಯ (ಪ್ರಕೃತ) ಮತ್ತು ಅವರ್ಣ್ಯ (ಅಪ್ರಕೃತ) ಇವುಗಳಿಗೆ ಏಕಧರ್ಮಾನ್ವಯವಿರುವಲ್ಲಿ "**ದೀಪಕಾಲಂಕಾರ**". "वदन्ति वर्ण्यावर्ण्यानां धर्मैक्यं दीपकं बुधाः" चन्द्रा० । **उदा.** : "मदेन भाति कलभः प्रतापेन महीपतिः" । ಇಲ್ಲಿ ಪ್ರಕೃತನಾದ ರಾಜನಿಗೂ ಅಪ್ರಕೃತವಾದ ಕಲಭಕ್ಕೂ ಶೋಭಾರೂಪವಾದ ಏಕಧರ್ಮಾನ್ವಯವಿರುವುದರಿಂದ ದೀಪಕಾಲಂಕಾರ. 4. ಕುಂಕುಮಕೇಸರಿ. 5. ಓಮ. 6. ಮಾತ್ರಾವೃತ್ತದ ಒಂದು ಭೇದ. (वि०) 7. ಪ್ರಕಾಶಗೊಳಿಸುವ, ಬೆಳಗುವ. स्वार्थे "कः" स्त्रियाम् "टाप्" (४-१-४) । **दीपिका ದೀಪಿಕಾ.** 8. ಸಣ್ಣ ದೀಪ. "दीपिकाचपलया तमोवने" नैष० १८-९२ ।

**दीपकलिका ದೀಪಕಲಿಕಾ** (स्त्री०) ದೀಪದ ಶಿಖೆ, ದೀವಿಗೆಯ ಜ್ವಾಲೆ. दीपस्य कलिका ।

**दीपकिट्ट ದೀಪಕಿಟ್ಟ** (न०) ಕಾಡಿಗೆ, ಹೊಗೆಯ ಮಸಿ, ದೀಪದ ಹೊಗೆಯ ಕರಿ.

**दीपकूपी ದೀಪಕೂಪೀ** (स्त्री०) ದೀಪದ ಬತ್ತಿ. दीपस्य कूपीव ।

**दीपध्वज ದೀಪಧ್ವಜ** (पुं०) ದೀಪದ ಮಸಿ, ಕಾಡಿಗೆ, ದೀಪದ ಹೊಗೆಯ ಕರಿ. दीपस्य ध्वज इव ।

**दीपन ದೀಪನ** (पुं०) 1. ಈರುಳ್ಳಿ. 2. ಕಾಸಮರ್ದ ವೃಕ್ಷ. (न०) 3. ಬೆಳಗುವಿಕೆ, ಪ್ರಕಾಶಗೊಳಿಸುವಿಕೆ. दीप्यते– दीपी (दीप्तौ) भावे "ल्युट्" (३-३-११५) । 4. ಉರಿಸುವುದು, ಬೆಂಕಿ ಹೊತ್ತಿಸುವುದು. 5. ಕುಂಕುಮಕೇಸರಿ. दीपयति – दीपी + णिच् "ल्युः" (३-१-१३४) । "जागुडं दीपनं घस्रं सौरभं घुसृणं च तत्" त्रिकाण्ड० । (वि०) 6. ಜೀರ್ಣಶಕ್ತಿಯನ್ನುಂಟುಮಾಡುವ, ಆಹಾರ ವಸ್ತುಗಳನ್ನು ಉದರದಲ್ಲಿ ಜೀರ್ಣಗೊಳಿಸುವ.. 7. ರೇಗಿ

ಸುವ, ಉದ್ರೇಕಗೊಳಿಸುವ, ಪ್ರೇರಿಸುವ, ಹುರಿದುಂಬಿಸುವ. 8. ಬೆಳಗುವ, ಪ್ರಕಾಶಗೊಳಿಸುವ. दीप्यतेऽनेन—दीपी करं० "ल्युट्" (३-३-११७)। स्त्रियाम् "ङीप्" (४-१-१५)। **दीपनी ದೀಪನೀ.** "नृपस्य मन्युव्यवसायदीपनीरुदाजहार द्रुपदात्मजा गिरः" किरा० १-२७।

**दीपनी ದೀಪನೀ**(स्त्री०)1. ಮೆಂತ್ಯ. 2. ಅಗುಳು ಶುಂಠಿ, 3. ಓಮ.

**दीपनीय ದೀಪನೀಯ** (पुं०) 1. ಓಮ. दीपनाय हितः "छः" (५-१-५)। (वि०) 2. ಉರಿಸಲ್ಪಡುವ. 3. ಉರಿಸಲು ಅರ್ಹವಾದ. 4. ಉರಿಸಲು ಶಕ್ಯವಾದ. 5. ಉರಿಸಬೇಕಾದ. 6. ರೇಗಿಸಲ್ಪಡುವ. 7. ರೇಗಿಸಲು ಅರ್ಹನಾದ. 8. ರೇಗಿಸಬೇಕಾದ. 9. ರೇಗಿಸಲು ಶಕ್ಯನಾದ. दीपी (दीप्तौ)+णिच् कर्मादौ "अनीयर्" (३-१-९६)।

**दीपपादप ದೀಪಪಾದಪ** (पुं०) ದೀಪದ ಕಂಬ. दीपस्य पादप इव।

**दीपपुष्प ದೀಪಪುಷ್ಪ** (पुं०) ಸಂಪಿಗೆ ಮರ. दीपस्य दीपकलिकाबा इव पुष्पमस्य।

**दीपभाजन ದೀಪಭಾಜನ** (न०) ದೀಪದ ಬಟ್ಟಲು, ದೀಪಕ್ಕೆ ಎಣ್ಣೆ ತುಂಬುವ ಪಾತ್ರೆ. दीपस्य भाजनम्। "राज्ञि तत्कुलमभूत्क्षयातुरे वामनार्चिरिव दीपभाजनम्" रघु० १९-५१।

**दीपमाला ದೀಪಮಾಲಾ** (स्त्री०) ದೀಪಗಳ ಪಙ್ಕ್ತಿ, ದೀಪಗಳ ಸಾಲು. दीपानां माला।

**दीपवत् ದೀಪವತ್** (वि०) ದೀಪಗಳಿಂದ ಕೂಡಿದ. दीप "मतुप्" (५-२-९४)।

**दीपशत्रु ದೀಪಶತ್ರು** (पुं०) ಶಲಭ, ಪತಂಗದ ಹುಳು.

**दीपशिखा ದೀಪಶಿಖಾ** (स्त्री०)1. ದೀಪದ ಜ್ವಾಲೆ, ದೀಪದ ಉರಿ. 2. ಕಾಡಿಗೆ.

**दीपशृङ्खला ದೀಪಶೃಂಖಲಾ** (स्त्री०) ದೀಪಗಳ ಸಾಲು. दीपानां शृङ्खलेव। "दीपाली दीपशृङ्खला" हारा०।

**दीपित ದೀಪಿತ** (वि०) 1. ಪ್ರಕಾಶಗೊಳಿಸಲ್ಪಟ್ಟ, ಬೆಳಗಲ್ಪಟ್ಟ. दीपी (दीप्तौ)+णिच् "क्तः" (३-२-१०२)। "तेनाम्भसा सारमयः पयोधेर्दध्रे मणिर्दीधितिदीपिताशः" माघ० ३-९। 2. ಬೆಂಕಿ ಹೊತ್ತಿಸಲ್ಪಟ್ಟ. 3. ಉರಿಸಲ್ಪಟ್ಟ. 4. ರೇಗಿಸಲ್ಪಟ್ಟ, ಉದ್ರೇಕಗೊಳಿಸಲ್ಪಟ್ಟ. 5. ಪ್ರಕಟಿಸಲ್ಪಟ್ಟ, ತಿಳಿಸಲ್ಪಟ್ಟ. "नखपदलिपयोऽपि दीपितार्थाः प्रणिदधिरे दयितैरनङ्गलेखाः" माघ० ७-३९।

**दीपीय ದೀಪೀಯ** (वि०) ದೀಪಕ್ಕೆ ಹಿತವಾದ, ದೀಪ ಉರಿಯಲು ಅನುಕೂಲವಾದ. दीपाय हितम्—वा "छः" (५-१-५)। पक्षे "यत्" (५-१-४)। **दीप्यम् ದೀಪ್ಯಮ್.**

**दीपोत्सव ದೀಪೋತ್ಸವ**(पुं०)1. ದೀಪಾರಾಧನೆ, ಕೃತ್ತಿಕಾ ದೀಪೋತ್ಸವ. दीपैरुत्सवः। 2. ದೀಪದಿಂದ ಕೂಡಿದ ಅಮಾವಾಸ್ಯೆ.

**दीप्त ದೀಪ್ತ**(वि०)1. ಪ್ರಕಾಶಮಾನವಾದ, ಹೊಳೆಯುವ. दीपी (दीप्तौ) "क्तः" (३-४-७२)। "ये दीप्तस्य श्रेयसः पारकामाः चत्वारोऽपि ब्रह्मचर्यं चरन्ति" म० वी० १-२४। 2. ಉರಿಯುವ, ಜ್ವಲಿಸುವ. 3. ರೇಗಿದ, ಉದ್ರೇಕಗೊಂಡ. 4. ಉರಿಸಲ್ಪಟ್ಟ. 5. ಸುಡಲ್ಪಟ್ಟ. 6. ಪ್ರಕಾಶಗೊಳಿಸಲ್ಪಟ್ಟ. दीपी कर्मं० "क्तः" (३-२-१०२)। "दीप्तं निर्भासिते दग्धे ज्वलिते" मेदि०। "दग्धे विभासिते दीप्तं दृष्टं ज्वलितवद्बुधैः" विश्व०। (न०) 7. ಸುವರ್ಣ, ಚಿನ್ನ. 8. ಹಿಂಗು. (पुं०)9. ಸಿಂಹ. स्त्रियाम् जाति० "ङीष्" (४-१-४१)। (स्त्री०) **दीप्ता ದೀಪ್ತಾ.** 10. ಜ್ಯೋತಿಷ್ಮತೀಲತೆ, ಕಂಗೊಂಗೆ ಗಿಡ. 11. ನೀರುಹಿಪ್ಪಲಿ.

**दीप्तकीर्ति ದೀಪ್ತಕೀರ್ತಿ**(पुं०)1. ಕಾರ್ತಿಕೇಯ, ಷಣ್ಮುಖ. दीप्ता कीर्तिरस्य। (स्त्री०)2. ಪ್ರಕಾಶಗೊಂಡ ಕೀರ್ತಿ, ಬೆಳಕಿಗೆ ಬಂದ ಯಶಸ್ಸು. दीप्ता कीर्तिः। (वि०) 3. ಪ್ರಕಾಶಗೊಂಡ ಕೀರ್ತಿಯುಳ್ಳ, ಬೆಳಕಿಗೆ ಬಂದ ಯಶಸ್ಸುಳ್ಳ. दीप्ता कीर्तिर्यस्य।

**दीप्तजिह्वा ದೀಪ್ತಜಿಹ್ವಾ** (स्त्री०) ಹೆಣ್ಣು ನರಿ. दीप्ता जिह्वा अस्याः। ರಾತ್ರಿಕಾಲದಲ್ಲಿ ಹೆಣ್ಣು ನರಿಯ ಬಾಯಿಂದ ಕಿಡಿಯು ಹೊರಡುವುದು. [ಈ ಪದವು ಕೋಪಸ್ವಭಾವದ ಮತ್ತು ಜಗಳಗಂಟಿ ಹೆಂಗಸಿನಲ್ಲಿ ಲಾಕ್ಷಣಿಕ.] "लोमाशिका दीप्तजिह्वा किखिरुल्कामुखी च सा" त्रिकाण्ड०।

**दीप्तमूर्ति ದೀಪ್ತಮೂರ್ತಿ** (पुं०)1. ವಿಷ್ಣು. यत्किञ्चित् केनचिद्गुणेन दीप्तं तदस्य विशेषेण मूर्तिः अस्य। "यत्किञ्चित्केनचिद्दीप्रं गुणेनात्र विशेषतः। तत्सर्वं मूर्तिरस्येति दीप्तमूर्तिरसौ स्मृतः" इति निरुक्तिः। (वि०) 2. ಪ್ರಕಾಶಮಾನವಾದ ದೇಹವುಳ್ಳವನು.

**दीप्तरश्मि ದೀಪ್ತರಶ್ಮಿ** (पुं०) ಸೂರ್ಯ.

**दीप्तरस ದೀಪ್ತರಸ** (पुं०) ಕೆಸರಿನಲ್ಲಿರುವ ಎರುಬು ಹುಳು. दीप्तो रसोऽस्य।

**दीप्तलोचन ದೀಪ್ತಲೋಚನ** (पुं०) ಮಾರ್ಜಾರ, ಬೆಕ್ಕು. दीप्तं प्रकाशमानं लोचनं यस्य।

**दीप्तलोह ದೀಪ್ತಲೋಹ** (न०) 1. ಕಂಚು. 2. ಪ್ರಕಾಶಮಾನವಾದ ಲೋಹ.

**दीप्तवर्ण ದೀಪ್ತವರ್ಣ** (पुं०) 1. ಕಾರ್ತಿಕೇಯ, ಷಣ್ಮುಖ. (वि०) 2. ಪ್ರಕಾಶಮಾನವಾದ ಬಣ್ಣವುಳ್ಳ.

**दीप्तशक्ति ದೀಪ್ತಶಕ್ತಿ** (पुं०) 1. ಕಾರ್ತಿಕೇಯ, ಷಣ್ಮುಖ. दीप्ता शक्तिरस्त्रं यस्य। (वि०) 2. ಪ್ರಕಾಶವಾದ ಶಕ್ತಿಯುಳ್ಳ. दीप्ता शक्तिः सामर्थ्यं यस्य।

**दीप्तांशु ದೀಪ್ತಾಂಶು** (पुं०) 1. ಸೂರ್ಯ. दीप्ता अंशवोऽस्य। 2. ಅರ್ಕವೃಕ್ಷ, ಎಕ್ಕದ ಗಿಡ.

**दीप्ताक्ष ದೀಪ್ತಾಕ್ಷ** (पुं०) 1. ಮಾರ್ಜಾರ, ಬೆಕ್ಕು. दीप्ते अक्षिणी अस्य "षच्" (५-४-११३)। स्त्रियाम् "ङीष्" (४-१-४१)। **-क्षी -ಕ್ಷೀ.** (वि०) 2. ಪ್ರಕಾಶಮಾನವಾದ ಕಣ್ಣುಗಳುಳ್ಳ.

**दीप्ताग्नि ದೀಪ್ತಾಗ್ನಿ** (पुं०) 1. ಅಗಸ್ತ್ಯಮುನಿ. दीप्तोऽग्निरस्य। ವಾತಾಪಿಯೆಂಬ ದಾನವನನ್ನು ಆ ಕೂಡಲೆ ಉದರದಲ್ಲಿ ಜೀರ್ಣಗೊಳಿಸಿದ್ದರಿಂದ ಅಗಸ್ತ್ಯರಿಗೆ ಈ ಹೆಸರು. 2. ಉರಿಯುತ್ತಿರುವ ಬೆಂಕಿ. (वि०) 3. ಶಕ್ತಿಯುತವಾದ ಜಾಠರಾಗ್ನಿಯಿಂದ ಕೂಡಿದ, ಜಠರಾಗ್ನಿಶಕ್ತಿಯುಳ್ಳ. "दीप्ताग्निरौर्वशेयश्च समुद्रचुलकः" त्रिकाण्ड०।

**दीप्ताङ्ग ದೀಪ್ತಾಂಗ** (पुं०) 1. ಮಯೂರ, ನವಿಲು. दीप्तं प्रकाशमानमङ्गमस्य। स्त्रियाम् "ङीष्"(४-१-४१)। **-ङ्गी -ಙ್ಗೀ.** (वि०) 2. ಪ್ರಕಾಶಮಾನವಾದ ದೇಹವುಳ್ಳ.

**दीप्ति ದೀಪ್ತಿ** (स्त्री०) 1. ಪ್ರಕಾಶ, ಬೆಳಕು. दीपी (दीप्तौ) "क्तिन्" (३-३-९४)। "त्वां धूरियं योग्यतयाधिरूढा दीप्त्या दिनश्रीरिव तिग्मरश्मिम्" किरा० ३-५०। 2. ವೃದ್ಧಿ ಹೊಂದಿದ ಹೆಂಗಸರ ಲಾವಣ್ಯ, ಮನ್ಮಥೋನ್ಮೇಷದಿಂದ ವಿಸ್ತಾರಗೊಂಡ ಸ್ತ್ರೀಯರ ದೇಹಕಾಂತಿ. "कान्तिरेवातिविस्तीर्णा दीप्तिरित्यभिधीयते" सा० द०। 3. ಅಭಿವ್ಯಕ್ತಿ, ಪ್ರಕಾಶವಾಗುವುದು, ಪ್ರಕಟವಾಗುವುದು. 4. ಅರಗು. 5. ಕಂಚು.

**दीप्तिमत् ದೀಪ್ತಿಮತ್** (पुं०) 1. ಶ್ರೀಕೃಷ್ಣನ ಒಬ್ಬ ಮಗ. (वि०) 2. ಕಾಂತಿಯಿಂದ ಕೂಡಿದ, ಪ್ರಕಾಶದಿಂದ ಕೂಡಿದ. दीप्तिरस्त्यस्य "मतुप्" (५-२-९४)। "तद्वचोम्भिः शतधा भिन्नं ददृशे दीप्तिमन्मुखम्" रघु० १२-९८। स्त्रियाम् "ङीप्" (४-१-६)। **-मती -ಮತೀ.**

**दीप्य ದೀಪ್ಯ** (पुं०) 1. ನೀರುಹಿಪ್ಪಲಿ. दीपे दीपने साधुः "यत्" (४-४-९८)। 2. ಓಮ, ವಾದಕ್ಕಿ. 3. ಜೀರಿಗೆ. (वि०) 4. ದೀಪಕ್ಕೆ ಹಿತವಾದ, ದೀಪ ಉರಿಯಲು ಅನುಕೂಲವಾದ. दीपाय हितम् वा "यत्" (५-१-४)। पक्षे "छः" (५-१-५)। **दीपीयम् ದೀಪೀಯಮ್.**

**दीप्यक ದೀಪ್ಯಕ** (पुं०) 1. ಓಮ, ವಾದಕ್ಕಿ. दीप्य संज्ञायां "कन्" (५-३-७५)। 2. ನವಿಲಿನ ಜುಟ್ಟು. "दीप्यकं चाजमोदायां यवानीबर्हिचूडयोः" मेदि०। 3. ನೀರುಹಿಪ್ಪಲಿ.

**दीप्र ದೀಪ್ರ** (पुं०) 1. ಅಗ್ನಿ, ಬೆಂಕಿ. (वि०) 2. ಪ್ರಕಾಶಿಸುವ ಸ್ವಭಾವದ. दीपी (दीप्तौ) "रः" (३-२-१६७)। 3. ಜ್ವಲಿಸುವ, ಉರಿಯುವ.

**दीर्घ ದೀರ್ಘ** (पुं०) 1. ದೀರ್ಘವರ್ಣ, ಎರಡು ಮಾತ್ರೆಗಳುಳ್ಳ ಅಕ್ಷರ. दॄ (विदारणे) "घक्" बाहु०। "एकमात्रो भवेद्ध्रस्वो द्विमात्रो दीर्घ उच्यते। त्रिमात्रस्तु प्लुतो ज्ञेयः व्यञ्जनं त्वर्धमात्रकम्"। 2. ಉಷ್ಟ್ರ, ಒಂಟೆ. 3. ಸಿಂಹ ಕನ್ಯಾ ತುಲಾ ಮತ್ತು ವೃಶ್ಚಿಕ ರಾಶಿಗಳು. "वृश्चिककन्यामृगपतिवणिजो दीर्घाः"। 4. ಶ್ರೀರಾಮನ ಬಾಣ. (वि०) 5. ದೀರ್ಘವಾದ, ಉದ್ದವಾದ. (ಕಾಲ ಮತ್ತು ದೇಶಗಳಲ್ಲಿ). "संक्षिप्येत क्षण इव कथं दीर्घयामा त्रियामा" मेघ० २-४५। "मुखैः सरोजानि च दीर्घलोचनैः सुरस्त्रियः साम्यगुणा निरासिरे" किरा० ८-२९। "अपाङ्गयोः केवलमस्य दीर्घयोः" कुमा० ५-२१। (अव्य०) 6. ಬಹಳ ಕಾಲ. 7. ಬಹಳ ಉದ್ದವಾಗಿ. 8. ಬಹಳ ವಿಸ್ತಾರವಾಗಿ. स्त्रियाम् "टाप्" (४-१-४)।

**दीर्घकणा ದೀರ್ಘಕಣಾ** (स्त्री०) ಬಿಳಿ ಜೀರಿಗೆ.

**दीर्घकण्ठ ದೀರ್ಘಕಂಠ** (पुं०) 1. ಬಕಪಕ್ಷಿ, ಕೊಕ್ಕರೆ. दीर्घः कण्ठोऽस्य। स्त्रियाम् जाति० "ङीष्" (४-१-६३)। **-कण्ठी -ಕಂಠೀ.** 2. ಉದ್ದವಾದ ಕುತ್ತಿಗೆ. दीर्घः कण्ठः। (वि०) 3. ಉದ್ದವಾದ ಕುತ್ತಿಗೆಯುಳ್ಳ. दीर्घः कण्ठो यस्य।

**दीर्घकन्द ದೀರ್ಘಕಂದ** (न०) ಮೂಲಂಗಿ. दीर्घः कन्दोऽस्य।

**दीर्घकन्धर ದೀರ್ಘಕಂಧರ** (पुं०) 1. ಬಕಪಕ್ಷಿ, ಕೊಕ್ಕರೆ. दीर्घा कन्धराऽस्य। (वि०) 2. ಉದ್ದವಾದ ಕುತ್ತಿಗೆಯುಳ್ಳ. दीर्घा कन्धरा यस्य।

**दीर्घकेश ದೀರ್ಘಕೇಶ** (पुं०) 1. ಭಲ್ಲೂಕ, ಕರಡಿ. दीर्घः केशः लोमाऽस्य। स्त्रियाम् जाति० "ङीष्"(४-१-६३)। **-केशी -ಕೇಶೀ.** (वि०) 2. ಉದ್ದವಾದ ಕೂದಲುಳ್ಳ.

**दीर्घकोशिका ದೀರ್ಘಕೋಶಿಕಾ** (स्त्री०) ಆನೆಯ ರಕ್ತವನ್ನು ಹೀರುವ ದೊಡ್ಡಜಾತಿಯ ಜಿಗಣೆ. दीर्घः कोशोऽस्याः। जाति० "ङीष्" (४-१-६३)। **–कोशी –ಕೋಶೀ**. संज्ञायां "कन्" (५-३-७५)।

**दीर्घगति ದೀರ್ಘಗತಿ** (पुं०) ಉಷ್ಟ್ರ, ಒಂಟೆ. दीर्घा गतिरस्य। ಒಂಟೆಯು ದೂರದೂರಕ್ಕೆ ಕಾಲಿಟ್ಟು ನಡೆಯುವುದರಿಂದ ಈ ಹೆಸರು.

**दीर्घग्रन्थि ದೀರ್ಘಗ್ರಂಥಿ** (पुं०) ಗಜಹಿಪ್ಪಲಿ.

**दीर्घग्रीव ದೀರ್ಘಗ್ರೀವ** (पुं०) ಉಷ್ಟ್ರ, ಒಂಟೆ. दीर्घा ग्रीवाऽस्य।

**दीर्घघाटिक ದೀರ್ಘಘಾಟಿಕ**(पुं०)ಉಷ್ಟ್ರ, ಒಂಟೆ. दीर्घा घाटा कृकाटिकाऽस्य "ठन्" (५-२-११६)।

**दीर्घजङ्घ ದೀರ್ಘಜಂಘ** (पुं०) 1. ಉಷ್ಟ್ರ, ಒಂಟೆ. दीर्घा जङ्घाऽस्य। 2. ಬಕಪಕ್ಷಿ, ಕೊಕ್ಕರೆ. स्त्रियाम् वा "ङीष्" (४-१-५५)। **–जङ्घी –ಜಂಘೀ, –जङ्घा –ಜಂಘಾ.** (वि०) 3. ಉದ್ದವಾದ ಮೊಳಕಾಲುಗಳುಳ್ಳವನು.

**दीर्घजिह्व ದೀರ್ಘಜಿಹ್ವ** (पुं०) 1. ಸರ್ಪ, ಹಾವು. दीर्घा जिह्वाऽस्य। स्त्रियाम् जाति० "ङीष्" (४-१-६३)। 2. ಒಬ್ಬ ದಾನವ.

**दीर्घजीविन् ದೀರ್ಘಜೀವಿನ್** (वि०) ಬಹಳ ಕಾಲ ಬದುಕುವ.

**दीर्घतपस् ದೀರ್ಘತಪಸ್** (पुं०) 1. ಗೌತಮಮಹರ್ಷಿ. दीर्घं तपोऽस्य। "येषु दीर्घतपसः परिग्रहो वासवक्षणकलत्रतां ययौ" रघु० ११-३३। 2. ಆಯುವಂಶದ ಒಬ್ಬ ದೊರೆ.

**दीर्घतम ದೀರ್ಘತಮ** (वि०) ಬಹಳ ದೀರ್ಘವಾದ.

**दीर्घतमस् ದೀರ್ಘತಮಸ್** (पुं०) ಆಂಗಿರಸಮಹರ್ಷಿಯ ಮಗನಾದ ಉಚಥ್ಯ (ಉತಥ್ಯ) ಮಹರ್ಷಿಯ ಮಗ, ಮಮತೆಯೆಂಬುವಳು ಈತನ ತಾಯಿ. [ಮಮತೆಯು ಗರ್ಭಿಣಿಯಾಗಿದ್ದಾಗ ಬೃಹಸ್ಪತಿಯು ಈಕೆಯನ್ನು ಮಾನ ಭಂಗಗೊಳಿಸಿದ್ದರಿಂದ ಗರ್ಭದಲ್ಲಿ ಶಿಶುವು ಬೃಹಸ್ಪತಿಯನ್ನು ನಿಂದಿಸಿ ಅವನ ಶಾಪದಿಂದ ಹುಟ್ಟು ಕುರುಡನಾಗಿ ಜನಿಸಿತು. ಅದರಿಂದ ಈ ಋಷಿಗೆ ದೀರ್ಘತಮಸ್ಸೆಂಬ ಹೆಸರಾಯಿತು. ತಂದೆಯ ಅನುಗ್ರಹದಿಂದ ಸರ್ವಜ್ಞನಾದನು. ಈ ಋಷಿಯ ಪತ್ನಿ ಪ್ರದ್ವೇಷಿಣಿಯೆಂಬುವಳು ಬಹುಪುತ್ರವತಿ. ತಾನೇ ಸಂಸಾರನಿರ್ವಹಣೆ ಮಾಡಬೇಕಾಗಿ ಬಂದು ಕೋಪದಿಂದ ಪತಿಯನ್ನು ಮಕ್ಕಳ ಮೂಲಕ ನದಿಗೆ ತಳ್ಳಿಸಿದಳು. ಬಲಿಯೆಂಬ ರಾಜನೊಬ್ಬನು ಈತನನ್ನು ಬದುಕಿಸಿ ಅರಮನೆಗೆ ಕರೆತಂದು ಪೋಷಿಸುತ್ತಿದ್ದನು. ಸಂತಾನವಿಲ್ಲದ ಈ ರಾಜನ ಪತ್ನಿಯು ಈ ಋಷಿಯಿಂದ ಮಕ್ಕಳನ್ನು ಪಡೆದಳು.]

**दीर्घतुण्ड ದೀರ್ಘತುಂಡ** (पुं०) 1. ಉದ್ದವಾದ ಮುಖ. (वि०) 2. ಉದ್ದವಾದ ಮುಖವುಳ್ಳ. (स्त्री०) **–तुण्डा –ತುಂಡಾ.** 3. ಮೂಗಿಲಿ.

**दीर्घदण्ड ದೀರ್ಘದಂಡ** (पुं०) 1. ಏರಂಡವೃಕ್ಷ, ಹರಳು ಗಿಡ. 2. ತಾಳವೃಕ್ಷ, ಪನೆಮರ. 3. ತೆಂಗಿನಮರ. 4. ಅಡಕೆಮರ.

**दीर्घदर्शिन् ದೀರ್ಘದರ್ಶಿನ್** (पुं०) 1. ಗೃಧ್ರ, ಹದ್ದು. 2. ಪಂಡಿತ. 3. ಭಲ್ಲೂಕ, ಕರಡಿ. (वि०)4. ವಿಚಾರ ಮಾಡುವ ಶಕ್ತಿಯುಳ್ಳವನು. ದೀರ್ಘಾಲೋಚನೆಮಾಡುವವನು. दीर्घं पश्यति — दृशिर् (प्रेक्षणे) "णिनिः" (३-२-७८)। 5. ದೂರದಿಂದ ನೋಡುವವನು. "दीर्घदर्शिभिरकारि वप्रूनां लङ्घनं न नयनैः श्रवणस्य" माघ० १०-४०। 6. ಭವಿಷ್ಯತ್ತನ್ನು ತಿಳಿಯುವವನು ಮುಂದಿನದನ್ನು ಕಾಣುವವನು.

**दीर्घदृष्टि ದೀರ್ಘದೃಷ್ಟಿ** (पुं०)1. ಪಂಡಿತ. 2. ದೂರದರ್ಶಕ ಯಂತ್ರ, ದೂರದ ವಸ್ತುವನ್ನು ನೋಡುವ ಯಂತ್ರ, ದುರ್ಬೀನು. दीर्घा दृष्टिर्यस्य येन वा।

**दीर्घद्रुम ದೀರ್ಘದ್ರುಮ, –वृक्ष –ವೃಕ್ಷ** (पुं०)1. ತಾಳವೃಕ್ಷ, ಪನೆಮರ. 2. ಅಡಕೆಮರ. 3. ತೆಂಗಿನಮರ. 4. ಉದ್ದವಾದ ಮರ. दीर्घो द्रुमः वृक्षो वा।

**दीर्घनाद ದೀರ್ಘನಾದ**(पुं०)1. ಶಂಖ. 2. ಕಂಚಿನ ಗಂಟೆ. दीर्घो नादोऽस्य। 3. ದೀರ್ಘವಾದ ಧ್ವನಿ, ಬಹುಕಾಲದ ವರೆಗೂ ಇರುವ ಶಬ್ದ. दीर्घो नादः।

**दीर्घनिद्रा ದೀರ್ಘನಿದ್ರಾ** (स्त्री०) 1. ಬಹಳ ಕಾಲ ಮಾಡುವ ನಿದ್ರೆ. 2. ಮರಣ. दीर्घा निद्रा। "रामेषुभिरितीवासौ दीर्घनिद्रां प्रवेशितः" रघु० १२-८१।

**दीर्घपत्र ದೀರ್ಘಪತ್ರ** (पुं०) 1. ತೆಂಗಿನಮರ. 2. ತಾಳವೃಕ್ಷ, ಪನೆಮರ. 3. ಬಿದಿರು ಗಿಡ. 4. ಗಣಿಗಿಲೆ ಗಿಡ. 5. ರಾಜೀರುಳ್ಳಿ. 6. ಹರಳು ಗಿಡ. दीर्घं पत्रं यस्य।

**दीर्घपर्णी ದೀರ್ಘಪರ್ಣೀ** (स्त्री०) ನರಿಹೊನ್ನೆ ಗಿಡ.

**दीर्घपाद ದೀರ್ಘಪಾದ**(पुं०)1. ಬಕಪಕ್ಷಿ, ಕೊಕ್ಕರೆ. दीर्घः पादोऽस्य। (वि०) 2. ಉದ್ದವಾದ ಕಾಲುಗಳುಳ್ಳ.

**दीर्घपादप ದೀರ್ಘಪಾದಪ** (पुं०) "दीर्घद्रुम" ಪದದ ಅರ್ಥ.

**दीर्घपृष्ठ ದೀರ್ಘಪೃಷ್ಠ** (पुं०) ಸರ್ಪ, ಹಾವು. दीर्घं पृष्ठमस्य। स्त्रियाम् "ङीष" (४-१-६३)।

**दीर्घप्रज्ञ ದೀರ್ಘಪ್ರಜ್ಞ** (पुं०) 1. ಒಬ್ಬ ರಾಜ. "वृषपर्वेति विख्यात: श्रीमान् यस्तु महासुर:। दीर्घप्रज्ञ इति ख्यात: पृथिव्यां सोऽभवन्नृप:" भा० आदि०। (वि०) 2. ದೀರ್ಘ ಕಾಲ ಆಲೋಚನೆ ಮಾಡುವವನು, ವಿಚಾರಮಾಡುವ ಶಕ್ತಿಯುಳ್ಳವನು. दीर्घा प्रज्ञा यस्य। "काममूर्तिधर: क्रूर: कालकल्पो व्यदृश्यत। तमुवाच ततो राजा दीर्घप्रज्ञो युधिष्ठिर:" भा० वन० ११-२१।

**दीर्घबाहु ದೀರ್ಘಬಾಹು** (पुं०) 1. ಧೃತರಾಷ್ಟ್ರನ ಒಬ್ಬ ಮಗ. 2. ಪರಶಿವನ ಒಬ್ಬ ಅನುಚರ. (वि०) 3. ಉದ್ದವಾದ ತೋಳುಗಳುಳ್ಳ. दीर्घौ बाहू यस्य।

**दीर्घमारुत ದೀರ್ಘಮಾರುತ** (पुं०) ಗಜ, ಆನೆ. दीर्घो मारुतो वायुरस्य। "हस्ती महामृग: पीलु: सिन्धुरो दीर्घमारुत:" त्रिकाण्ड०।

**दीर्घमूल ದೀರ್ಘಮೂಲ** (पुं०) 1. ಕುರಟಿಗೆ ಗಿಡ. 2. ಲಾಮಂಚ. 3. ಮೂಲಂಗಿ. 4. ಗಜ್ಜುಗದ ಗಿಡ. दीर्घं मूलमस्य। 5. ಶೀಟಕಸಂಧಿ.

**दीर्घयज्ञ ದೀರ್ಘಯಜ್ಞ** (पुं०) 1. ಅಯೋಧ್ಯಾನಗರಿಯಲ್ಲಿದ್ದ ಒಬ್ಬ ದೊರೆ. "अयोध्यायां तु धर्मज्ञं दीर्घयज्ञं महाबलम्। अजयत् पाण्डवश्रेष्ठो नातितीव्रेण कर्मणा" भा०। (वि०) 2. ಬಹಳ ದೀರ್ಘಕಾಲದ ಯಜ್ಞವನ್ನು ಮಾಡುವವನು. दीर्घ: दीर्घकालव्यापी यज्ञो यस्य।

**दीर्घरद ದೀರ್ಘರದ, -रदन -ರದನ** (पुं०) ವರಾಹ, ಹಂದಿ. दीर्घा रदा रदना अस्य।

**दीर्घरसन ದೀರ್ಘರಸನ** (पुं०) ಸರ್ಪ, ಹಾವು. दीर्घा रसना यस्य।

**दीर्घरागा ದೀರ್ಘರಾಗಾ** (स्त्री०) ಅರಿಶಿನ. दीर्घो रागो रञ्जनं यस्या:।

**दीर्घरात्र ದೀರ್ಘರಾತ್ರ** (न०) ಚಿರಕಾಲ, ಬಹಳಕಾಲ.

**दीर्घरोमन् ದೀರ್ಘರೋಮನ್** (पुं०) 1. ಭಲ್ಲೂಕ, ಕರಡಿ. दीर्घाणि रोमाण्यस्य। 2. ಧೃತರಾಷ್ಟ್ರನ ಒಬ್ಬ ಮಗ. 3. ಈಶ್ವರನ ಒಬ್ಬ ಅನುಚರ.

**दीर्घलोचन ದೀರ್ಘಲೋಚನ** (पुं०) 1. ಪರಶಿವನ ಒಬ್ಬ ಅನುಚರ. 2. ಧೃತರಾಷ್ಟ್ರನ ಒಬ್ಬ ಮಗ. दीर्घं लोचनं यस्य। (न०) 3. ಉದ್ದವಾದ ಕಣ್ಣು. दीर्घमायतं लोचनम्।

**दीर्घवृन्त ದೀರ್ಘವೃಂತ** (पुं०) ಹೆಮ್ಮರ, ಶಿಗಡುಮರ. दीर्घं वृन्तमस्य।

**दीर्घव्याधि ದೀರ್ಘವ್ಯಾಧಿ** (पुं०) ಬಹಳ ಕಾಲದ ರೋಗ.

**दीर्घशाख ದೀರ್ಘಶಾಖ** (पुं०) ಸಾಲವೃಕ್ಷ, ಮತ್ತಿಮರ. दीर्घा शाखा यस्य।

**दीर्घश्रवस् ದೀರ್ಘಶ್ರವಸ್** (पुं०) 1. ದೀರ್ಘತಮಸ್ಸೆಂಬ ಋಷಿಯ ಒಬ್ಬ ಮಗ. दीर्घं श्रवोऽस्य। (न०) 2. ಉದ್ದವಾದ ಕಿವಿ. (वि०) 3. ಉದ್ದವಾದ ಕಿವಿಯುಳ್ಳ.

**दीर्घसत्र ದೀರ್ಘಸತ್ರ** (न०) 1. ಬಹುಕಾಲ ನಡೆಯುವ ಯಾಗ. (वि०) 2. ಬಹುಕಾಲದ ಯಾಗಮಾಡುವವನು. दीर्घं सत्रं चिरकालसाध्यो याग: यस्य। "हविषे दीर्घसत्रस्य सा चेदानीं प्रचेतस:। भुजङ्गपिहितद्वारं पातालमधितिष्ठति" रघु० १-८०।

**दीर्घसत्त्रिन् ದೀರ್ಘಸತ್ರಿನ್** (वि०) ಬಹುಕಾಲ ನಡೆಯುವ ಯಾಗಮಾಡುವವನು. दीर्घं सत्रमस्त्यस्य "इनि:" (५-२-११५)।

**दीर्घसुरत ದೀರ್ಘಸುರತ** (पुं०) 1. ನಾಯಿ. दीर्घं बहुकालं सुरतमस्य। "कुक्कुरे दीर्घसुरतवान्तादो रसनालिह:" त्रिकाण्ड०। स्त्रियाम् जाति० "ङीष्" (४-१-६३)। (न०) 2. ದೀರ್ಘಕಾಲದ ಸಂಭೋಗ. दीर्घं सुरतम्।

**दीर्घसूत्र ದೀರ್ಘಸೂತ್ರ** (न०) 1. ಉದ್ದವಾದ ದಾರ. दीर्घं सूत्रम्। (वि०) 2. ಸಾವಕಾಶವಾಗಿ ಕೆಲಸಮಾಡುವವನು, ಬಹಳಕಾಲ ಕೆಲಸಮಾಡುವವನು. दीर्घं सूत्रं कार्यव्यवस्था यस्य। ವಿಲಂಬದಿಂದ ಕಾರ್ಯಮಾಡುವವನು ಕಷ್ಟವನ್ನು ಅನುಭವಿಸುವನು. "अनागतविधाता च प्रत्युत्पन्नमतिश्च य:। द्वावेव सुखमेधेते दीर्घसूत्रो विनश्यति" भा० शान्ति०। 3. ಉದ್ದವಾದ ದಾರವುಳ್ಳ (ವಸ್ತ್ರ). "मेखलागुणविलग्नमसूयां दीर्घसूत्रमकरोत्परिधानम्" माघ० १०-६१।

**दीर्घसूत्रिन् ದೀರ್ಘಸೂತ್ರಿನ್** (वि०) ಸಾವಕಾಶವಾಗಿ ಕೆಲಸಮಾಡುವವನು, ವಿಲಂಬದಿಂದ ಕೆಲಸಮಾಡುವವನು. दीर्घं चिरकालं सूत्रं कार्यव्यवस्थास्त्यस्य "इनि:" (५-२-११५)।

**दीर्घाक्ष ದೀರ್ಘಾಕ್ಷ** (वि०) ಉದ್ದವಾದ ಕಣ್ಣುಗಳುಳ್ಳ. दीर्घे आयते अक्षिणी यस्य। "दीर्घाक्षं शरदिन्दुकान्ति वदनम्" माल० २-३।

**दीर्घाध्वग ದೀರ್ಘಾಧ್ವಗ** (पुं०) 1. ಉಷ್ಟ್ರ, ಒಂಟೆ. 2. ಬಹಳ ದೂರ ದಾರಿ ನಡೆಯುವವನು, ದೂತ, ವಾರ್ತಾವಾಹಕ, ಊರಿಂದೂರಿಗೆ ಕಾಗದವನ್ನು ಒಯ್ಯುವವನು. दीर्घमध्वानं मार्गं गच्छति — गम्लृ (गतौ) "ड:" (वा० ३-२-४८)।

**दीर्घायु ದೀರ್ಘಾಯು** (वि०) ದೀರ್ಘಕಾಲದ ಆಯುಸ್ಸುಳ್ಳವನು, ಬಹಳಕಾಲ ಬದುಕುವವನು. ಇದು ವೈದಿಕ ಪ್ರಯೋಗ.

**दीर्घायुध ದೀರ್ಘಾಯುಧ** (पुं०) 1. ಸೂಕರ, ಹಂದಿ. दीर्घं दन्तरूपमायुधं यस्य। 2. ಕುಂತವೆಂಬ ಒಂದು ಆಯುಧ. "दीर्घायुधः शलः कुन्तः शल्यः शङ्कुर्विषाङ्कुरः" त्रिकाण्ड०।

**दीर्घायुष्य ದೀರ್ಘಾಯುಷ್ಯ** (पुं०) 1. ಮಾರ್ಕಂಡೇಯ ಋಷಿ. (न०) 2. ದೀರ್ಘಕಾಲದ ಆಯುಸ್ಸು. (वि०) 3. ದೀರ್ಘಕಾಲದ ಆಯುಸ್ಸುಳ್ಳ. दीर्घमायुष्यं दीर्घमायुष्यं यस्य वा।

**दीर्घायुस् ದೀರ್ಘಾಯುಸ್** (पुं०) 1. ಮಾರ್ಕಂಡೇಯ ಋಷಿ. 2. ಶಾಲ್ಮಲಿವೃಕ್ಷ, ಬೂರುಗದ ಮರ. 3. ಹೊನ್ನೆ ಮರ. 4. ವಾಯಸ, ಕಾಗೆ. (वि०) 5. ಬಹಳ ಕಾಲ ಬದುಕುವವನು. दीर्घमायुर्यस्य। "दीर्घायुः शाल्मलीवृक्षे वायसे जीवकद्रुमे। मार्कण्डेये च पुंसि स्यात् चिरजीविनि वाच्यवत्" मेदि०। (न०) 6. ದೀರ್ಘಕಾಲದ ಆಯುಸ್ಸು. दीर्घमायुः।

**दीर्घास्य ದೀರ್ಘಾಸ್ಯ** (पुं०) 1. ಗಜ, ಆನೆ. दीर्घमायतमास्यमस्य। 2. ಭಾರತದ ವಾಯುವ್ಯ ದಿಕ್ಕಿನಲ್ಲಿರುವ ಒಂದು ದೇಶ. "एकविलोचनशूलिकदीर्घग्रीवास्यकोशाश्च" बृहत्सं० १४-२३।

**दीर्घाह ದೀರ್ಘಾಹ** (पुं०) ದೀರ್ಘವಾದ ಹಗಲು. दीर्घमहः "टच्" (५-४-९१)।

**दीर्घिका ದೀರ್ಘಿಕಾ** (स्त्री०) ಸರಸ್ಸು, ಕೊಳ, ಕಲ್ಯಾಣಿ, ಉದ್ದವಾದ ಕೊಳ. दीर्घैव संज्ञायां "कन्" (५-३-७५)। "दीर्घिकाकमलोन्मेषो यावन्मात्रेण साध्यते" कुमा० २-३३।

**दीर्ण ದೀರ್ಣ** (वि०) 1. ಸೀಳಲ್ಪಟ್ಟ, ಒಡೆಯಲ್ಪಟ್ಟ. दॄ (विदारणे) कर्म० "क्तः" (३-२-१०२)। 2. ಹೆದರಿದ, ಭಯಗೊಂಡ. दॄ कर्त० "क्तः" (३-४-७२)। (न०) 3. ಸೀಳುವಿಕೆ, ಒಡೆಯುವಿಕೆ. दॄ भावे "क्तः" (३-३-११४)। 4. ಭಯ. "दीर्णं विदारिते भीते" मेदि०।

**दीव्यत् ದೀವ್ಯತ್** (वि०) ಕ್ರೀಡಿಸುತ್ತಿರುವ, ಆಟವಾಡುತ್ತಿರುವ. दिव् (क्रीडादौ) "शतृ" (३-२-१२४)। "दुरक्षान् दीव्यता राज्ञा राज्यमात्मा वयं वधूः" किरा० ११-४७। "दीव्यताक्षैस्तदानेन नूनं तदपि हारितम्" वेणी० १-१३।

**दु – गतौ** (भ्वा० पर० अक० अनि०)। दवति। दुदाव। दोता। दोष्यति। दवतु। अदवत्। ಇತ್ಯಾದಿ. ಹೋಗು, ಚಲಿಸು.

**भावे** :—दूयते। दुदुवे। दाविता, दोता। दाविष्यते, दोष्यते। दूयताम्। अदूयत। दूयेत। ಇತ್ಯಾದಿ.

**कृत्सु** :—दोतव्यम्। दवनीयम्। दाव्यम्। दुतम्। दुतवान्, –वती। दवन्, –न्ती। दुतम्। दवनम्।

**टुदु – उपतापे** (भ्वा० पर० सक० अनि०)। दुनोति। दुदाव, दुदुवतुः। दोता। दोष्यति। दुनोतु। ಇತ್ಯಾದಿ. 1. ಉಪತಾಪಹೊಂದಿಸು, ಸಂಕಟವುಂಟುಮಾಡು. "इदमुच्छ्वसितालकं मुखं तव विश्रान्तकथं दुनोति माम्" रघु० ८-५५। 2. ನೋವುಂಟುಮಾಡು, ಪೀಡಿಸು. "उद्भासीनि जलेजानि दुन्वन्त्यदयितं जनम्" भट्टि० ६-७४। 3. ದಹಿಸು, ಸುಡು. "स भस्मसात् चकारारीन् दुदाव च कृतान्तवत्" भट्टि० १४-८५।

**कृत्सु** :—दोतव्यम्। दवनीयम्। दव्यम्। दुतः। दुतवान्, –वती। दुन्वन् –ती। दुतम्। दवनम्।

**दुःख ದುಃಖ** (न०) 1. ದುಃಖ, ವ್ಯಥೆ, ಕೊರಗು, ಶೋಕ. दुष्टानि खानि सन्त्यस्मिन् दुर् निन्दितं खनति — खनु (अवदारणे) "डः" (३-२-१०१)। दुःखयति — दुःख (तत्क्रियायाम्) + णिच् "अच्" (३-१-१३४) वा। "मा जीवन् यः परावज्ञादुःखदग्धोऽपि जीवति" माघ० २-४५। ಸಾಂಖ್ಯರು ರಜೋಗುಣದಿಂದ ಉಂಟಾದ ಒಂದು ಚಿತ್ತಧರ್ಮವೇ ದುಃಖವೆಂದು ಹೇಳುತ್ತಾರೆ. ನೈಯಾಯಿಕರು ಇದೊಂದು **ಆತ್ಮಧರ್ಮ**ವೆಂದು ಹೇಳುತ್ತಾರೆ. "इच्छाद्वेषप्रयत्नसुखदुःखज्ञानान्यात्मनो लिङ्गम्"। 2. ಯಾತನೆ, ನೋವು. "यदेवोपनतं दुःखात्सुखं तद्रसवत्तरम्" विक्र० ३-२१। 3. ಕಷ್ಟ, ತೊಂದರೆ. "अर्थानामर्जने दुःखमर्जितानां च रक्षणे। आये दुःखं व्यये दुःखं धिगर्थाः कष्टसंश्रयाः" पञ्चतं० १-१७४। (क्रि० वि०) 4. ಕಷ್ಟದಿಂದ. "स्वादुभिस्तु विषयैर्हृतस्ततो दुःखमिन्द्रियगणो निवार्यते" रघु० १९-४९। (वि०) 5. ದುಃಖವುಳ್ಳ, ಶೋಕವುಳ್ಳ, ಸಂಕಟವುಳ್ಳ. "सुखं दुःखं मलं छिद्रं किलासं सिध्ममर्मरौ। रभसः पलितं भित्रमेतेऽपि त्रिषु धर्मिणि" वैज०।

**दुःखकर ದುಃಖಕರ** (वि०) ದುಃಖವನ್ನು ಉಂಟುಮಾಡುವ. दुःखं करोति — डु कृञ् (करणे) "टः" (३-२-२०)।

**दुःखग्राम ದುಃಖಗ್ರಾಮ** (ಪುಂ) 1. ಸಂಸಾರ. दुःखानां ग्रामोऽत्र। 2. ದುಃಖಗಳ ಸಮುದಾಯ. दुःखानां ग्रामःसमूहः।

**दुःखजात ದುಃಖಜಾತ** (ನಂ) 1. ದುಃಖಗಳ ಸಮುದಾಯ. दुःखानां जातम्। (वि०) 2. ದುಃಖವುಂಟಾಗಿರುವ. दुःखं जातं यस्य (वा० २-२-३६)।

**दुःखत्रय ದುಃಖತ್ರಯ** (ನಂ) ಆಧ್ಯಾತ್ಮಿಕ ಆಧಿದೈವಿಕ ಮತ್ತು ಆಧಿಭೌತಿಕಗಳೆಂಬ ಮೂರು ದುಃಖಗಳು. ["आधिदैविक" ಪದದಲ್ಲಿ ನೋಡಿ.]

**दुःखदोह्या ದುಃಖದೋಹ್ಯಾ** (स्त्री०) ಆಕಳು, ಹಸು. दुःखेन दोह्या।

**दुःखप्राय ದುಃಖಪ್ರಾಯ** (वि०) 1. ಶೋಕಮಯವಾದ. 2. ಕಷ್ಟದಿಂದ ತುಂಬಿದ.

**दुःखबोध ದುಃಖಬೋಧ** (वि०) ಕಷ್ಟದಿಂದ ತಿಳಿಯಲ್ಪಡುವ.

**दुःखभागिन् ದುಃಖಭಾಗಿನ್** (वि०) ಸುಖವಿಲ್ಲದ, ದುಃಖವನ್ನು ಅನುಭವಿಸುವ, ಕಷ್ಟದಿಂದ ಕೂಡಿದ. "दुःखभागी च सततं व्याधितोऽल्पायुरेव च" मनु० ४-१५७।

**दुःखभाज् ದುಃಖಭಾಜ್** (वि०) ದುಃಖದಲ್ಲಿರುವ, ವ್ಯಥೆಯುಂಟಾಗಿರುವ, ಸುಖವಿಲ್ಲದ. दुःखं भजते — भज (सेवायाम्) "ण्विः" (३-२-६२)।

**दुःखशील ದುಃಖಶೀಲ** (वि०) ದುಃಖಪಡುವ ಸ್ವಭಾವದ. दुःखं शीलयति — शील (समाधौ) "अण्" (३-२-१)। "कामेकपत्नीव्रतदुःखशीलां लोलं मनश्चारुतया प्रविष्टाम्" कुमा० ३-७।

**दुःखसंस्थिति ದುಃಖಸಂಸ್ಥಿತಿ** (स्त्री०) 1. ಬಹಳ ಕಷ್ಟದ ಪರಿಸ್ಥಿತಿ, ಬಹಳ ತೊಂದರೆಯಲ್ಲಿರುವುದು. (वि०) 2. ಕಷ್ಟದ ಪರಿಸ್ಥಿತಿಯಲ್ಲಿರುವ, ಬಹಳ ತೊಂದರೆಯಲ್ಲಿರುವ.

**दुःखित ದುಃಖಿತ** (वि०) 1. ಕೊರಗುವ, ಸಂಕಟಪಡುವ. ದುಃಖವುಂಟಾದ. दुःखं सञ्जातमस्य "इतच्" (५-२-३६)। "दुःखिता यत्र दृश्येरन् विकृताः पापकारिणः" मनु० ९-२८८। 2. ಕಷ್ಟಪಡುವ, ತೊಂದರೆಪಡುವ. "सेहिरे न किरणा हिमरश्मेर्दुःखिते मनसि सर्वमसह्यम्" किरा० ९-३१।

**दुःखिन् ದುಃಖಿನ್** (वि०) ದುಃಖದಿಂದ ಕೂಡಿದ. दुःखमस्त्यस्य "इनिः" (५-२-१३१)।

**दुःशक ದುಃಶಕ** (वि०) ಶಕ್ತಿಯಿಲ್ಲದ, ಸಾಮರ್ಥ್ಯವಿಲ್ಲದ.

**दुःशकुन ದುಃಶಕುನ** (ನಂ) ಅಪಶಕುನ, ಕೆಟ್ಟ ಸೂಚನೆ. दुष्टं शकुनम्। ಬಾಜೆ, ತೊಗಲು, ಹೊಟ್ಟು, ಎಲುಬು, ಸರ್ಪ, ಬೆಂಕಿ, ಸೌದೆ, ಷಂಡ, ವೈಶ್ಯ, ಎಣ್ಣೆ, ಹುಚ್ಚ, ಔಷಧ, ಶತ್ರು, ಸನ್ಯಾಸಿ, ಹುಲ್ಲು, ರೋಗಿ, ನಗ್ನ, ಅಂಗವಿಕಲ, ಮೈಗೆ ಎಣ್ಣೆ ಸವರಿಕೊಂಡವನು, ಹಸಿದಿರುವವನು, ಎಮ್ಮೆ ಕಾಳಗ ಇತ್ಯಾದಿಗಳ ದರ್ಶನವು ಪ್ರಯಾಣಾದಿಗಳಲ್ಲಿ ಅಪಶಕುನವೆಂದು ತಿಳಿಯಬೇಕು.

**दुःशला ದುಃಶಲಾ** (स्त्री०) ಧೃತರಾಷ್ಟ್ರನ ಮಗಳು, ಜಯದ್ರಥನ ಹೆಂಡತಿ.

**दुःशासन ದುಃಶಾಸನ** (ಪುಂ) 1. ಧೃತರಾಷ್ಟ್ರನ ಒಬ್ಬ ಮಗ, ದುರ್ಯೋಧನನ ತಮ್ಮ. ದುರ್ಯೋಧನನ ಮಾತಿನಂತೆ ಇವನು ಜೂಜಿನಲ್ಲಿ ಸೋತ ಪಾಂಡವರ ಪತ್ನಿ ದ್ರೌಪದಿಯನ್ನು ರಾಜಸಭೆಗೆ ಎಳೆತಂದು ಅವಳ ವಸ್ತ್ರಾಪಹಾರ ಮಾಡಲು ಯತ್ನಿಸಿ ಶ್ರೀಕೃಷ್ಣನ ಅನುಗ್ರಹದಿಂದ ಲಬ್ಧವಾದ ಅಕ್ಷಯ ವಸ್ತ್ರವನ್ನು ಪೂರ್ತಿಯಾಗಿ ಎಳೆಯಲಾರದೆ ಜಾರಿಬಿದ್ದು ಪರಾಭವಗೊಂಡನು. ಉತ್ತರ ಗೋಗ್ರಹಣ ಸಮಯದಲ್ಲಿ ಅರ್ಜುನನಿಂದ ಪರಾಜಿತನಾದನು. ಯುದ್ಧದಲ್ಲಿ ಸಾತ್ಯಕಿಗೆ ಹೆದರಿ ಓಡುತ್ತಿದ್ದಾಗ ದ್ರೋಣಾಚಾರ್ಯನು ಇವನನ್ನು ಹೀಯಾಳಿಸಿದನು. ಭೀಮಸೇನನು ಎಲ್ಲಾ ರಾಜರ ಎದುರಿಗೆ ಇವನ ತೋಳುಗಳನ್ನು ಮುರಿದು ಎದೆಯನ್ನು ಸೀಳಿಹಾಕಿದನು. (वि०) 2. ಕಷ್ಟದಿಂದ ಶಿಕ್ಷಿಸಲ್ಪಡುವವನು.

**दुःशील ದುಃಶೀಲ** (वि०) ಕೆಟ್ಟ ಸ್ವಭಾವದವನು. दुष्टं शीलं यस्य। "पूर्वमप्यतिदुःशीलो न धैर्यं कर्तुमर्हति" भा० सभा०।

**दुःषम ದುಃಷಮ** (ಪುಂ) 1. ಜೈನ ಸಿದ್ಧಾಂತದಲ್ಲಿ ಹೇಳಿರುವ ಅವಸರ್ಪಿಣೀ ಮತ್ತು ಉತ್ಸರ್ಪಿಣೀ ಕಾಲಗಳ ಒಂದು ಭಾಗ. ["अवसर्पिणी" ಮತ್ತು "उत्सर्पिणी" ಪದಗಳಲ್ಲಿ ನೋಡಿ.] (अव्य०) 2. ನಿಂದ್ಯವಾದ. दुष्टं सममत्र। "निःषमं दुःषमं गर्ह्ये" अम०।

**दुःसह ದುಃಸಹ** (वि०) ಸಹಿಸಲು ಅಶಕ್ಯವಾದ, ಬಹಳ ಕಷ್ಟದಿಂದ ಸಹಿಸಲ್ಪಡುವ. दुःखेन सह्यते—षह (मर्षणे) "खल्" (३-३-१२६)। "भवत्यनिष्टादपि नाम दुःसहान्मनस्विनीनां प्रतिपत्तिरीदृशी" कुमा० ५-४२।

**दुःसा(ध)ध्य ದುಃಸಾ(ಧ)ಧ್ಯ** (वि०) ಸಾಧಿಸಲು ಕಷ್ಟವಾದ, ಸಾಧಿಸಲು ಅಶಕ್ಯವಾದ. दुःखेन साध्यते- साध (संसिद्धौ) "खल्" (३-३-१२६)। "ण्यत्" (३-१-१२४)। वा। "छन्दानुवृत्तिदुःसाध्याः सुहृदो विमनीकृताः" माघ० २-१०५।

**दुःस्थ ದುಃಸ್ಥ** (वि०) 1. ದರಿದ್ರ, ಬಡವ. दुःखेन तिष्ठति—ष्ठा (गतिनिवृत्तौ) "कः" (३-२-४)। 2 ಮೂರ್ಖ. 3. ಬಹಳ ಕಷ್ಟದಿಂದ ಇರುವ. "दुःस्थो मूर्खे दुर्गते स्यात् दुःखेन तिष्ठति त्रिषु" मेदि०। 4. ಲುಬ್ಧ, ಕೃಪಣ, ಜಿಪುಣ.

**दुःस्पर्श ದುಃಸ್ಪರ್ಶ** (पुं०) 1. ಶೀತಕಸಂಧಿ. दुःखेन स्पृश्यते—स्पृश (संस्पर्शने) "खल्" (३-३-१२६)। (स्त्री०) **-र्शा -ರ್ಶಾ.** 2. ಹೆಗ್ಗುಳ್ಳ, ಮುಳ್ಳುಬದನೆಕಾಯಿ. "दुःस्पर्शो धन्वयासे ना कण्टकार्यां स्त्रियाम्" मेदि०।

**दुःस्वप्न ದುಃಸ್ವಪ್ನ** (पुं०) ಅಶುಭಸೂಚಕವಾದ ಕನಸು. दुष्टःस्वप्नः। ಸ್ವಪ್ನದಲ್ಲಿ ಸಂತೋಷದಿಂದ ನಗುವುದು ವಿವಾಹವನ್ನು ನೋಡುವುದು ನರ್ತನ ನೋಡುವುದು ಸಂಗೀತವನ್ನು ಕೇಳುವುದು ತನ್ನ ಹಲ್ಲುಗಳು ಬಿದ್ದಂತೆ ಕಾಣುವುದು ಅಭ್ಯಂಗ ಮಾಡಿದಂತೆ ಕಾಣುವುದು ಬೆತ್ತಲೆಯಾಗಿರುವ ಕಪ್ಪು ಬಣ್ಣದ ಶೂದ್ರವಿತಂತುವನ್ನು ಕಾಣುವುದು ಕೋಪಿಸಿಕೊಂಡ ಬ್ರಾಹ್ಮಣನನ್ನೂ ಬ್ರಾಹ್ಮಣ ಸ್ತ್ರೀಯನ್ನೂ ನೋಡುವುದು ಹತ್ತಿ ಕೆಂಪುವಸ್ತ್ರ ಮರ್ಕಟ ಇವನ್ನು ಕಾಣುವುದು ಮುಂತಾದುವು ದುಃಸ್ವಪ್ನಗಳು. ब्रह्मवै०। "दुःस्वप्नदोषनाशाय भयार्ता भयमोहिता। तमेव शरणं विष्णुं जगाम जनकात्मजा" रामा०।

**दुकूल ದುಕೂಲ** (न०) 1. ರೇಷ್ಮೆವಸ್ತ್ರ, ಪಟ್ಟೆವಸ್ತ್ರ. दुष्टं कूलति—कूल (आवरणे) "कः" (३-१-१३५)। "नारीणां विमलतरौ समुल्लसन्त्या भासान्तर्दधतुरुरू दुकूलमेव" माघ० ८-६५। 2. ನುಣುಪಾದ ಬಟ್ಟೆ, ಮೃದುವಾದ ವಸ್ತ್ರ. "दुकूलं श्लक्ष्णवस्त्रे स्यात् क्षौमे च" मेदि०। 3. ಸೂಕ್ಷ್ಮವಸ್ತ್ರ, ತೆಳುವಾದ ಬಟ್ಟೆ. "क्षौमे दुकूलमिच्छन्ति दुकूलं सूक्ष्मवाससि" शाश्व०। "दुकूलं तु क्षौमे सूक्ष्मांशुके च तत्" नानार्थर०।

**दुगूल ದುಗೂಲ** (न०) 1. ರೇಷ್ಮೆವಸ್ತ್ರ. 2. ನುಣುಪಾದ ಬಟ್ಟೆ. 3. ತೆಳುವಾದ ಬಟ್ಟೆ. दुकूल पृषो०।

**दुग्ध ದುಗ್ಧ** (न०) 1. ಕ್ಷೀರ, ಹಾಲು. दुह्यते स्म—दुह (प्रपूरणे) "क्तः" (३-२-१०२)। 2. ಮರದ ರಸ, ಮರದ ಹಾಲು. 3. ಹಾಲು ಕರೆಯುವುದು. दुह भावे "क्तः" (३-३-११४)। 4. ತುಂಬುವಿಕೆ. "दुग्धं प्रपूरणे क्षीरे" विश्व०। (वि०) 5. ತುಂಬಲ್ಪಟ್ಟ. (स्त्री०) **-ग्धा -ಗ್ಧಾ.** 6. ಹಾಲು ಕರೆಯಲ್ಪಟ್ಟ ಹಸು. दुह कर्म० "क्तः" (३-२-१०२)। "दुग्धं प्रपूरिते क्षीरे" मेदि०।

**दुग्धतालीय ದುಗ್ಧತಾಲೀಯ** (न०) 1. ಹಾಲಿನ ನೊರೆ. 2. ಹಾಲಿನಲ್ಲಿ ಪಕ್ವವಾದ ಮಾವಿನಹಣ್ಣು.

**दुग्धपाचन ದುಗ್ಧಪಾಚನ** (न०) ಹಾಲು ಕಾಯಿಸುವ ಪಾತ್ರೆ. दुग्धं पाच्यतेऽनेन—डु पचष् (पाके) + णिच् "ल्युट्" (३-३-११७)।

**दुग्धपात्र ದುಗ್ಧಪಾತ್ರ** (न०) ಹಾಲಿನ ಪಾತ್ರೆ.

**दुग्धफेन ದುಗ್ಧಫೇನ** (पुं०) 1. ಹಾಲಿನ ನೊರೆ. 2. ಹಾಲಿನ ಕೆನೆ.

**दुग्धबन्ध ದುಗ್ಧಬಂಧ** (पुं०) ಹಾಲು ಕರೆಯಲು ಹಸುವನ್ನು ಕಟ್ಟುವುದು. दुग्धार्थं बन्धः।

**दुग्धसमुद्र ದುಗ್ಧಸಮುದ್ರ** (पुं०) ಕ್ಷೀರಸಮುದ್ರ, ಹಾಲಿನ ಸಮುದ್ರ, ಪಾಲ್ಗಡಲು.

**दुग्धसिन्धु ದುಗ್ಧಸಿಂಧು** (पुं०) ಕ್ಷೀರಸಮುದ್ರ, ಪಾಲ್ಗಡಲು. "दुग्धसिन्धुदुहितुः सहोदरे" याद० १७-४३।

**दुग्धाम्बुधि ದುಗ್ಧಾಂಬುಧಿ, -अम्भोधि -ಅಂಭೋಧಿ** (पुं०) ಕ್ಷೀರಸಮುದ್ರ, ಪಾಲ್ಗಡಲು.

**दुग्धाम्बुराशि ದುಗ್ಧಾಂಬುರಾಶಿ** (पुं०) ಕ್ಷೀರಸಮುದ್ರ, ಹಾಲಿನ ಸಮುದ್ರ. "दुग्धाम्बुराशिपृषतैरिव रूपमग्र्यम्" याद० १९-७।

**दुग्धाम्र ದುಗ್ಧಾಮ್ರ** (न०) ಹಾಲಿನಲ್ಲಿ ಪಕ್ವವಾದ ಮಾವಿನ ಹಣ್ಣು. दुग्धपक्वमाम्रम्।

**दुग्धिका ದುಗ್ಧಿಕಾ** (स्त्री०) ಹಾಲುತೊಟ್ಟಿನ ಗಿಡ. दुग्धमस्त्यस्याः "ठन्" (५-२-११५)। "क्षीरावी दुग्धिका समे" अम०।

**दुग्धी ದುಗ್ಧೀ** (स्त्री०) ಹಾಲುತೊಟ್ಟಿನ ಗಿಡ. दुग्धमस्त्यस्याः "अच्" (५-२-१२७)। "ङीष्" (४-१-४१)।

**दुग्धोद ದುಗ್ಧೋದ** (पुं०) ಕ್ಷೀರಸಮುದ್ರ. "देवस्य दुग्धोदशयस्य दैत्याद्वैरोचनाद्धालभुजोपनीतः" याद० ४-८१। **-उदधिः -ಉದಧಿಃ.**

**दुण्डुक ದುಂಡುಕ** (वि०) ಕೆಟ್ಟ ಮನಸ್ಸುಳ್ಳವನು, ವಂಚಕ. ಮೋಸಗಾರ.

**दुण्डुभ ದುಂಡುಭ** (पुं०) ರಾಜಿಲವೆಂಬ ಒಂದು ಜಾತಿಯ ಸರ್ಪ, ಎರಡು ತಲೆಗಳುಳ್ಳ ಉರಿಶಿಂಗಿ ಹಾವು. "समौ राजिलदुण्डुभौ" अम०।

**दुत ದುತ** (वि०) ಪೀಡಿಸಲ್ಪಟ್ಟ, ತೊಂದರೆಪಡಿಸಲ್ಪಟ್ಟ. टुदु (उपतापे) "क्तः" (३-२-१०२)। "स्फुटमिवावरणं हिममारुतैर्मृदुतया दुतयाऽधरलेखया" माघ० ६-५९।

**दुद ದುದ** (पुं०) ಒಂದು ಪರ್ವತ.

**दुद्रुम ದುದ್ರುಮ** (पुं०) ಹಸುರು ಈರುಳ್ಳಿ.

**दुध्र ದುಧ್ರ** (पुं०) 1. ಕಾಮಂಚಿಹುಲ್ಲು. "सहरक्षा दवो दुध्रः" वैजं०। (वि०) 2. ಹಿಂಸಿಸುವವನು, ಪೀಡಿಸುವವನು.

**दुन्दु ದುಂದು** (पुं०) ವಸುದೇವ, ಶ್ರೀಕೃಷ್ಣನ ತಂದೆ. "वसुदेवोऽस्य जनको दुन्दुरानकदुन्दुभिः" वैजं०।

**दुन्दुभि ದುಂದುಭಿ** (पुं०) 1. ಭೇರಿ, ನಗಾರಿ. दुन्दु इति शब्देन उभति—उभ (पूरणे) "इन्" (उ० ४-११९)। "राजन्योपनिमन्त्रणाय रसति स्फीतं यशोदुन्दुभिः" वेणी० १-२५। 2. ದುಂದುಭಿಯೆಂಬ ಒಬ್ಬ ರಾಕ್ಷಸ. 3. ವರುಣ. (स्त्री०) 4. ಪಗಡೆಯಾಟದಲ್ಲಿ ಇತ್ತಿಗದ ಗರ. "दुन्दुभिः पुमान्। वरुणे दैत्यभेर्योश्च स्त्र्यक्षबिन्दुत्रिकद्वये" मेदि०। "पुमान् भेर्यां दुन्दुभिः स्त्रीत्वक्षबिन्दुषु" नानार्थर०। 5. ವಿಷ.

**दुन्दुभिस्वन ದುಂದುಭಿಸ್ವನ** (पुं०) 1. ನಗಾರಿಯ ಶಬ್ದ, ಭೇರಿಯ ಧ್ವನಿ. दुन्दुभेः स्वनः। 2. ವಿಷಚಿಕಿತ್ಸೆ.

**दुन्दुम्य ದುಂದುಮ್ಯ** (पुं०) ರುದ್ರ.

**दुर्(स्) ದುರ್(ಸ್)** (अव्य०) ಈ ಉಪಸರ್ಗವು ಈ ಕೆಳಗೆ ಕಂಡ ಅರ್ಥಗಳಿಗೆ ದ್ಯೋತಕವಾಗುವುದು. 1. ನಿಷೇಧ, ತಡೆ. 2. ಕಷ್ಟ, ತೊಂದರೆ, ಶ್ರಮ. "दुर्विषह्येण तेनाहं तेजसा दह्यनात्मना। निर्दग्धमात्मनो देहं दुर्वहं वोढुमक्षमः" कुमा० १०-१३। 3. ಕೆಟ್ಟದ್ದು, ಅಶುಭ, ಅಮಂಗಳ. "दुःस्वप्नदोषनाशाय भयार्ता भयमोहिता" रामा०। 4. ನಿಂದೆ. "दुश्चेष्टिते देवरिपौ सरोषः" कुमा० १३-३७। 5. ಕೆಟ್ಟ, ದುಷ್ಟ, ಅಸಭ್ಯ. "दुर्जनं प्रथमं वन्दे सज्जनं तदनन्तरम्"। 6. ಅಶಕ್ಯ, ಅಸಾಧ್ಯ.

**दुरक्ष ದುರಕ್ಷ** (पुं०) 1. ಮೋಸದ ಪಗಡೆಯಾಟ. दुष्टोऽक्षः। "दुरक्षान् दीव्यता राज्ञा राज्यमात्मा वयं वधूः" किरा० ११-४७। (वि०) 2. ದುರ್ಬಲವಾದ ಕಣ್ಣುಳ್ಳ. दुष्टमक्षि यस्य "षच्" (५-४-११३)।

**दुरतिक्रम ದುರತಿಕ್ರಮ** (पुं०) 1. ವಿಷ್ಣು. दुर्+अति+क्रमु (पादविक्षेपे) "खल्" (३-३-१२६)। सर्वेषामपि स्वपादमूलमतिक्रम्य गत्यन्तरविरहात् तैरतिक्रमितुमशक्यः। "अतिक्रम्य स्वपन्मूलं सर्वेषां प्रापकान्तरम्। नास्तीति सर्वपापघ्नं स स्मृतो दुरतिक्रमः" इति निरुक्तिः। "समावर्तो निवृत्तात्मा दुर्जयो दुरतिक्रमः" वि० स०। (वि०) 2. ಮೀರಲು ಆಗದ, ಅತಿಕ್ರಮಿಸಿ ಹೋಗಲು ಸಾಧ್ಯವಿಲ್ಲದ. 3. ದಾಟಲು ಅಶಕ್ಯವಾದ, ಕಷ್ಟದಿಂದ ದಾಟಬಹುದಾದ.

**दुरदृष्ट ದುರದೃಷ್ಟ** (न०) ಕೆಟ್ಟ ಅದೃಷ್ಟ, ದೌರ್ಭಾಗ್ಯ, ಅದೃಷ್ಟಹೀನತೆ. दुष्टमदृष्टम्।

**दुरधिगम ದುರಧಿಗಮ** (वि०) 1. ಹೊಂದಲು ಅಶಕ್ಯವಾದ, ಕಷ್ಟದಿಂದ ಹೊಂದಬಹುದಾದ. दुःखेन अधिगम्यते—दुर्+अधि+गम्लृ (गतौ) "खल्" (३-३-१२६)। "दुरधिगमसिद्धावप्यस्मिन्नारम्भे वयं त्वाऽऽश्रास्महे" माल० १। 2. ತಿಳಿಯಲು ಕಷ್ಟವಾದ, ಕಷ್ಟದಿಂದ ತಿಳಿಯಬಹುದಾದ. "इह दुरधिगमैः किञ्चिदेवागमैः सततमसुतरं वर्णयन्त्यन्तरम्" किरा० ५-१८।

**दुरधीत ದುರಧೀತ** (वि०) ಕೆಟ್ಟಕ್ರಮದಲ್ಲಿ ಅಧ್ಯಯನ ಮಾಡಲ್ಪಟ್ಟ, ತಪ್ಪುತಪ್ಪಾಗಿ ಅಧ್ಯಯನ ಮಾಡಲ್ಪಟ್ಟ. दुष्टमधीतम्।

**दुरध्यय ದುರಧ್ಯಯ** (वि०) ಕಷ್ಟದಿಂದ ಓದಲು ಸಾಧ್ಯವಾದ, ಓದಲು ಕಷ್ಟವಾದ. दुर्+अधि+इङ् (अध्ययने) "खल्" (३-३-१२६)।

**दुरध्व ದುರಧ್ವ** (पुं०) 1. ಕೆಟ್ಟ ದಾರಿ, ಕಷ್ಟದ ದಾರಿ. दुष्टोऽध्वा "अच्" (५-४-८५)। 2. ಕೆಟ್ಟ ದಾರಿ, ಅಸಭ್ಯವಾದ ಮಾರ್ಗ. "स्वयं दुरध्वार्णवनाविकाः कथं स्पृशन्तु विज्ञाय हृदापि तादृशीम्" नैष० ९-३३।

**दुरन्त ದುರಂತ** (वि०) ಕೆಟ್ಟ ಪರಿಣಾಮವುಳ್ಳ, ಕೊನೆಯಲ್ಲಿ ಕೆಟ್ಟದಾಗಿರುವ. दुष्टोऽन्तोऽवसानं यत्र। "व्यसनानि दुरन्तानि प्रयत्नेन विवर्जयेत्" मनु० ७-४५। "अहो दुरन्ता बलवद्विरोधिता" किरा० १-२३।

**दुरन्वय ದುರನ್ವಯ** (पुं०) 1. ತಪ್ಪು ಅನ್ವಯ, ತಪ್ಪಾದ ಹೊಂದಿಕೆ. (वि०) 2. ತಪ್ಪು ಸಂಬಂಧವುಳ್ಳ. 3. ಕಷ್ಟದಿಂದ ಸಂಬಂಧವನ್ನು ಕಲ್ಪಿಸಬಹುದಾದ, ಕಷ್ಟದಿಂದ ಅನ್ವಯಿಸಬಹುದಾದ. दुःखेन अन्वीयते—दुर्+अनु+इण् "खल्" (३-३-१२६)। 4. ಕಷ್ಟದಿಂದ ಅನುಸರಿಸಬಹುದಾದ.

**दुरन्वेष्य ದುರನ್ವೇಷ್ಯ** (वि०) ಹುಡುಕಲು ಕಷ್ಟವಾದ, ಕಷ್ಟದಿಂದ ಹುಡುಕಬಹುದಾದ.

**दुरभिग्रह ದುರಭಿಗ್ರಹ** (वि०) 1. ಎದುರಾಗಿ ಹಿಡಿಯಲು ಕಷ್ಟವಾದ, ಕಷ್ಟದಿಂದ ಹಿಡಿಯಲು ಸಾಧ್ಯವಾದ. दुःखेनाभिमुख्येन गृह्यते—दुर्+अभि+ग्रह (उपादाने) "खल्" (३-३-१२६)। (स्त्री०) **-ग्रहा -ಗ್ರಹಾ.** 2. ಶೀಟಕಸಂಧಿ. 3. ನಸುಗುನ್ನಿ ಗಿಡ.

**दुरभिप्राय ದುರಭಿಪ್ರಾಯ** (ಪುಂ) 1. ಕೆಟ್ಟ ಆಶಯ, ಕೆಟ್ಟ ಮನೋಭಾವ. दुष्टः अभिप्रायः। (ವಿ) 2. ಕೆಟ್ಟ ಉದ್ದೇಶವುಳ್ಳ, ದುಷ್ಟವಾದ ಆಶಯವುಳ್ಳ. दुष्ट आशयो यस्य। "अथ तान् दुरभिप्रायान् विलोक्य बलकेशवौ। क्रुद्धौ धन्वन आदाय शकले तांश्च जघ्नतुः" भाग० १०-४२-२०।

**दुरभिमान ದುರಭಿಮಾನ** (ಪುಂ) ಕೆಟ್ಟ ಅಹಂಕಾರ, ಒಣ ಹೆಮ್ಮೆ, ಸಲ್ಲದ ಆತ್ಮಗೌರವಬುದ್ಧಿ. दुष्टः अभिमानः।

**दुरभिमानिन् ದುರಭಿಮಾನಿನ್** (ವಿ) ಅಹಂಕಾರವುಳ್ಳವನು, ಸಲ್ಲದ ಆತ್ಮಗೌರವಬುದ್ಧಿಯುಳ್ಳವನು, ಬಡಾಯಿ ಕೊಚ್ಚಿಕೊಳ್ಳುವವನು. "प्रिये, एनं दुरभिमानिनं भिक्षुं तावद्गृहाण" प्रबोध० ३।

**दुरभिसन्धि ದುರಭಿಸಂಧಿ** (ಪುಂ) ಕೆಟ್ಟ ಉದ್ದೇಶ, ಕೆಟ್ಟ ಅಭಿಪ್ರಾಯ. दुष्ट अभिसन्धिः।

**दुरवगम ದುರವಗಮ** (ವಿ) ತಿಳಿಯಲು ಅಶಕ್ಯವಾದ, ಕಷ್ಟದಿಂದ ತಿಳಿಯಬಹುದಾದ. दुःखेनावगम्यते—दुर्+अव+गम्लृ (गतौ) "खल्" (३-३-१२६)। "अथ तदेवैतद्दुरवगमं समवेतानुकल्पेन निर्दिश्यतामिति" भाग० ५-१३-२६।

**दुरवगाह ದುರವಗಾಹ** (ವಿ) ನೀರಿನೊಳಕ್ಕೆ ಇಳಿಯಲು ಅಸಾಧ್ಯವಾದ, ಕಷ್ಟದಿಂದ ಇಳಿಯಬಹುದಾದ. दुःखेन अवगाह्यते—दुर्+अव+गाहू (विलोडने) "खल्" (३-३-१२६)।

**दुरवस्थ ದುರವಸ್ಥ** (ವಿ) 1. ಕಷ್ಟಸ್ಥಿತಿಯಲ್ಲಿರುವ. (स्त्री०) **-अवस्था -ಅವಸ್ಥಾ.** 2. ಕಷ್ಟದ ಪರಿಸ್ಥಿತಿ, ಕೆಟ್ಟ ಸನ್ನಿವೇಶ, ಕಷ್ಟದಶೆ. दुष्टा अवस्था। "पुत्रि, तथा दुरवस्थागतेनापि महामोहहतकेन स्वामिनः प्ररोचनाय मधुमत्या विद्यया सहोपसर्गाः प्रेषिताः" प्रबोध० ६।

**दुरवाप ದುರವಾಪ** (ವಿ) ಕಷ್ಟದಿಂದ ಹೊಂದಬಹುದಾದ, ಹೊಂದಲು ಅಶಕ್ಯವಾದ. दुःखेनावाप्यते—दुर्+अव+आप्लृ (व्याप्तौ) "खल्" (३-३-१२६)। "मर्त्यलोकदुरवापमवाप्तरसोदयम्" माघ० १३-६९। "न दुरवापेयं प्रार्थना" शाकु० १।

**दुराक्रमण ದುರಾಕ್ರಮಣ** (ನ) ಅನ್ಯಾಯದ ಆಕ್ರಮಣ, ನ್ಯಾಯವಲ್ಲದ ಮುತ್ತಿಗೆ, ನ್ಯಾಯವಿಲ್ಲದೆ ಮೇಲೆ ಬೀಳುವುದು. दुष्टमाक्रमणम्।

**दुराक्रान्त ದುರಾಕ್ರಾಂತ** (ನ) 1. ಅನ್ಯಾಯದಿಂದ ಆಕ್ರಮಿಸುವುದು. (ವಿ) 2. ಅನ್ಯಾಯದಿಂದ ಆಕ್ರಮಿಸಲ್ಪಟ್ಟ.

**दुराग्रह ದುರಾಗ್ರಹ** (ಪುಂ) ಛಲ, ಹಟ, ಹಟಮಾರಿತನ. दुष्ट आग्रहः। "यत्सानुबन्धेऽसति देहगेहे ममाहमित्यूढदुराग्रहाणाम्" भाग० ३-५-४३।

**दुराचर ದುರಾಚರ** (ವಿ) 1. ಕಷ್ಟದಿಂದ ಆಚರಿಸಬಹುದಾದ, ಆಚರಿಸಲು ಅಶಕ್ಯವಾದ. दुःखेन आचर्यते—दुर्+आ+चर (गतौ) "खल्" (३-३-१२६)। "सोऽयं चतुर्णामेतेषामाश्रमाणां दुराचरः" भा० शान्ति० २३-६। 2. ಗುಣಪಡಿಸಲು ಕಷ್ಟವಾದ, ಚಿಕಿತ್ಸೆ ನಡೆಸಲು ಅಶಕ್ಯವಾದ.

**दुराचार ದುರಾಚಾರ** (ಪುಂ) 1. ಕೆಟ್ಟ ನಡವಳಿಕೆ, ದುರ್ವರ್ತನೆ, ಕೆಟ್ಟ ಚಾಳಿ. दुष्ट आचारः। "प्राप्ते कलियुगे घोरे नराः पुण्यविवर्जिताः। दुराचाररताः सर्वे सत्यवार्तापराङ्मुखाः"। (ವಿ) 2. ಕೆಟ್ಟ ನಡವಳಿಕೆಯುಳ್ಳ, ದುರ್ವರ್ತನೆಯುಳ್ಳ. "दुराचारो हि पुरुषो लोके भवति निन्दितः" मनु० ४-१५७। "दुराचारा सदाचारां दुर्दर्शा प्रियदर्शनाम्" प्रबोध० ३-७।

**दुरात्मन् ದುರಾತ್ಮನ್** (ವಿ) ಕೆಟ್ಟ ಮನಸ್ಸುಳ್ಳ, ಕೆಟ್ಟ ಸ್ವಭಾವವುಳ್ಳ, ನೀಚ. दुष्ट आत्मा यस्य। "ये च प्राहुर्दुरात्मानो दुराराध्या महीभुजः" पञ्चत० १-४०।

**दुराधर्ष ದುರಾಧರ್ಷ** (ಪುಂ) 1. ವಿಷ್ಣು. गाम्भीर्यातिशयेन अम्भोधिवत् अनभिभवनीयतया आधर्षितुमशक्यः। दुर्+आ+ञि धृषा (प्रागल्भ्ये) "खल्" (३-३-१२६)। "अपांनिधिवदक्षोभ्यः दुराधर्ष इतीरितः" इति निरुक्तिः। "अनुत्तमो दुराधर्षः" वि० स०। 2. ಬಿಳಿ ಸಾಸವೆ. दुष्टान् आधर्षति—दुर्+आ+धृष (प्रसहने) "अच्" (३-१-१३४)। (ವಿ) 3. ತಡೆಯಲು ಅಶಕ್ಯವಾದ, ಅಡಗಿಸಲು ಕಷ್ಟವಾದ. 4. ಮೇಲೆ ಬೀಳಲು ಸಾಧ್ಯವಲ್ಲದ, ಆಕ್ರಮಿಸಲು ಕಷ್ಟವಾದ. दुःखेन आधर्षितुं शक्यः—दुर्+आ+ञि धृषा (प्रागल्भ्ये) "खल्" (३-३-१२६)।

**दुराधि ದುರಾಧಿ** (ಪುಂ) ಕೆಟ್ಟ ಮನೋವ್ಯಾಧಿ, ಕೆಟ್ಟ ಮನೋವ್ಯಥೆ. दुष्ट आधिः। "तथापि वक्तुं व्यवसाययन्ति मां निरस्तनारीसमया दुराधयः" किरा० १-२८।

**दुरानम ದುರಾನಮ** (ವಿ) ಬಗ್ಗಿಸಲು ಅಶಕ್ಯವಾದ, ಕಷ್ಟದಿಂದ ಬಗ್ಗಿಸಬಹುದಾದ. दुःखेन आनम्यते—दुर्+आ+णम (प्रह्वत्वे शब्दे च)+णिच् "खल्" (३-३-१२६)। "स्वं विचिन्त्य च धनुर्दुरानमं पीडितो दुहितृशुल्कसंस्थया" रघु० ११-३८।

**दुराप ದುರಾಪ** (ವಿ) ಹೊಂದಲು ಅಶಕ್ಯವಾದ, ಪಡೆಯಲು ಕಷ್ಟವಾದ. दुःखेन आप्तुं शक्यम्—दुर्+आप्लृ

(व्याप्तौ) "खल्" (३-३-१२६)। "एते दुरापं समवाप्य वीर्यमुन्मूलितारः कपिकेतनेन" किरा० ३-२२। "दुराराध्याः श्रियो राज्ञां दुरापाः दुष्परिग्रहाः" पञ्चतं० १-७३।

**दुराराध्य ದುರಾರಾಧ್ಯ** (वि०) ಆರಾಧಿಸಲು ಅಶಕ್ಯವಾದ, ಒಲಿಸಲು ಅಸಾಧ್ಯವಾದ, ಕಷ್ಟದಿಂದ ಒಲಿಸಬಹುದಾದ. दुःखेनाराध्यते—दुर्+आ+राध (संसिद्धौ) "ण्यत्" (३-१-१२४)। "दुराराध्या हि राजानः पर्वता इव सर्वदा" पञ्चतं० १-६८। "ये च प्राहुर्दुरात्मानो दुराराध्या महीभुजः। प्रमादालस्यजाड्यानि ख्यापितानि निजानि तैः" पञ्चतं० १-४०।

**दुरारिहन् ದುರಾರಿಹನ್** (पुं०) 1. ವಿಷ್ಣು. दुर्मार्गगामिनो दुरारयः। तान् त्रयीधर्मत्याजनादिभिः तैस्तैरुपायैर्हतवान्" इति निरुक्तिः। "दुरावासो दुरारिहा" वि० स०।

**दुरारोह ದುರಾರೋಹ** (पुं०) 1. ಕಷ್ಟದಿಂದ ಮೇಲಕ್ಕೆ ಹತ್ತುವುದು. दुर् + आ + रुह (बीजजन्मादौ) भावे "खल्"(३-३-१२६)। 2. ತೆಂಗಿನಮರ. 3. ಖರ್ಜೂರದ ಗಿಡ. (वि०) 4. ಕಷ್ಟದಿಂದ ಹತ್ತಬಹುದಾದ, ಹತ್ತಲು ಕಷ್ಟವಾದ. "दुरारोहं पदं राज्ञां सर्वलोकनमस्कृतम्" पञ्चतं० १-७२।

**दुरालक्ष्य ದುರಾಲಕ್ಷ್ಯ** (वि०) ನೋಡಲು ಅಶಕ್ಯವಾದ, ನೋಡಲು ಕಷ್ಟವಾದ. दुर्+आ+लक्ष (दर्शनाङ्कनयोः) "ण्यत्" (३-१-१२४)। "द्रुहिणहरवलमथनदुरालक्ष्यशरलक्ष्यदण्डकातपोवनजङ्गमपारिजात" रघु० ग०।

**दुरालभा ದುರಾಲಭಾ** (स्त्री०) ತೀಟಕಸಂಧಿ. दुःखेनालभ्यते—दुर् + आ + डु लभष् (प्राप्तौ) "खल्" (३-३-१२६)। "रोदनी कच्छुरानन्ता समुद्रान्ता दुरालभा" अम०।

**दुरालाप ದುರಾಲಾಪ** (पुं०) 1. ಕೆಟ್ಟಮಾತು, ನಿಂದೆ. 2. ಶಾಪ, ಬೈಗಳು. दुष्टः आलापः।

**दुरालोक ದುರಾಲೋಕ** (पुं०) 1. ಕಣ್ಣು ಕೋರೈಸುವ ಬೆಳಕು, ಅತಿಯಾದ ಪ್ರಕಾಶ. (वि०) 2. ನೋಡಲು ಬಹಳ ಕಷ್ಟವಾದ, ಬಹಳ ಕಷ್ಟದಿಂದ ನೋಡಬಹುದಾದ. दुःखेन आलोक्यते "खल्" (३-३-१२६)।

**दुरावास ದುರಾವಾಸ** (पुं०) ವಿಷ್ಣು. दुर् + आ + वस (निवासे) "घञ्" (३-३-१२१)। "दुष्करावासभूमित्वात् दुरावास इतीरितः" इति निरुक्तिः। "दुरावासो दुरारिहा" वि० स०।

**दुराश ದುರಾಶ** (वि०) 1. ಕೆಟ್ಟ ಆಸೆಯುಳ್ಳ, ಸಲ್ಲದ ವಿಷಯದಲ್ಲಿ ಆಸೆಯಿಟ್ಟಿರುವ. दुष्टा आशा यस्य। (स्त्री०) –शा – ಶಾ. 2. ಕೆಟ್ಟ ಆಸೆ, ಈಡೇರದ ಆಸೆ, ಕೆಟ್ಟ ವಿಷಯದಲ್ಲಿ ಆಸೆ. दुष्टा आशा। "अम्बामनुसरत्येषा दुराशा न कथंचन" प्रबोध० ३-७।

**दुराशय ದುರಾಶಯ** (पुं०)1. ಕೆಟ್ಟ ಅಭಿಪ್ರಾಯ, ದುರುದ್ದೇಶ, ಕೆಟ್ಟ ಮನೋಭಾವ. दुष्ट आशयः। (वि०)2. ಕೆಟ್ಟ ಮನೋಭಾವವುಳ್ಳ, ಕೆಟ್ಟ ಉದ್ದೇಶವುಳ್ಳ, ಕೆಟ್ಟ ಅಭಿಪ್ರಾಯವುಳ್ಳ. दुष्ट आशयो यस्य। "परवृद्धिभिराहितव्यथः स्फुटनिर्भिन्नदुराशयोऽधमः" माघ० १६-२३।

**दुरास ದುರಾಸ** (न०) ಕಷ್ಟದಿಂದ ಕುಳಿತುಕೊಳ್ಳುವುದು. दुःखेनास्यते—दुर्+आस (उपवेशने) भावे "खल्" (३-३-१२६)। "प्रादुद्रवत् सपदि चन्द्रकवान् द्रुमाग्रात् संघर्षिणा सह गुणाभ्यधिकैर्दुरासम्" माघ० ५-१९।

**दुरासद ದುರಾಸದ**(पुं०)1. ಅಗ್ನಿ, ಬೆಂಕಿ. दुःखेनासाद्यते—दुर् +आ+षद्लृ (विशरणादौ) "खल्" (३-३-१२६)। "हिरण्यरेताः सप्तार्चिर्वसुरेता हुताशनः। कृपीटयोनिरर्चिष्मान् धूमकेतुर्दुरासदः" वैज०। (वि०) 2. ಹೊಂದಲು ಅಶಕ್ಯವಾದ, ಸೇರಲು ಕಷ್ಟವಾದ, ಕಷ್ಟದಿಂದ ಹತ್ತಿರಕ್ಕೆ ಹೋಗಬಹುದಾದ. "दुरासदानरीनुग्रान् धृतेर्विश्वासजन्मनः" किरा० ११-२३। 3. ಹೊಂದಲು ಕಷ್ಟವಾದ, ಪಡೆಯಲು ಅಶಕ್ಯವಾದ. 4. ತಡೆಯಲು ಕಷ್ಟವಾದ, ಸಹಿಸಲು ಅಶಕ್ಯವಾದ. "तव दुरासदवीर्यविभावसौ शलभतां लभतामसुहृद्गणः" माघ० २-११७।

**दुरासिका ದುರಾಸಿಕಾ** (स्त्री०) ಮರ್ಯಾದೆಯಿಲ್ಲದೆ ಕುಳಿತುಕೊಳ್ಳುವುದು. "दुरीश्वरद्वारबहिर्वितर्दिकादुरासिकायै रचितोऽयमञ्जलिः" वैराग्यपं०।

**दुरित ದುರಿತ** (न०) ಪಾಪ, ಪಾತಕ. दुष्टमितं नरकादिगमनं यस्मात्। "संदूषितेन च मया सकृदीक्षितश्चेद्वत्सस्य भार्गवशिशोर्दुरितं हि तत्स्यात्" म० वी० ३-४२।

**दुरिष्ट ದುರಿಷ್ಟ** (न०) ಮಾಟ, ಶೂನ್ಯ ಮೊದಲಾದುವುಗಳಿಗಾಗಿ ಮಾಡುವ ಹೋಮ. दुष्टमिष्टं यज्ञः।

**दुरिष्टि ದುರಿಷ್ಟಿ** (स्त्री०) ಅಶಾಸ್ತ್ರೀಯವಾದ ಯಾಗ. दुष्टा इष्टिः।

**दुरीश ದುರೀಶ, –ईश्वर –ಈಶ್ವರ** (पुं०) ಅಯೋಗ್ಯನಾದ ಯಜಮಾನ. दुष्ट ईशः ईश्वरो वा। "दुरीश्वरद्वारबहिर्वितर्दिकादुरासिकायै रचितोऽयमञ्जलिः" वैराग्यपं०।

**दुरीषणा ದುರೀಷಣಾ** (स्त्री०) ಶಾಪ, ಕೇಡನ್ನು ಬಯಸು ವುದು.

**दुरुक्त ದುರುಕ್ತ** (न०) 1. ಕೆಟ್ಟ ಮಾತು, ನಿಂದೆ. 2. ಕಠಿನವಾದ ಮಾತು, ಬಿರುಸಾದ ಮಾತು, ಬೈಗಳು. दुष्टमुक्तम्। (वि०) 3. ಕಠಿನವಾಗಿ ಆಡಲ್ಪಟ್ಟ, ಬಿರುಸಾಗಿ ಹೇಳಲ್ಪಟ್ಟ. 4. ನಿಂದಿಸಲ್ಪಟ್ಟ. "दुरुक्तभाषाभिहितैः प्राप्नुवन्ति सुदुष्कृतम्" भा० अनु० ३१-७१।

**दुरुच्छेद ದುರುಚ್ಛೇದ** (वि०) ನಿವಾರಿಸಲು ಅಶಕ್ಯವಾದ, ನಾಶಪಡಿಸಲು ಅಸಾಧ್ಯವಾದ. दुर् + उद् + छिदिर् (द्वैधीकरणे) "खल्" (३-३-१२६)। "तौ हि तत्त्वावबोधस्य दुरुच्छेदावुपप्लवौ" किरा० ११-२०।

**दुरुत्तर ದುರುತ್ತರ** (न०) 1. ಕೆಟ್ಟ ಉತ್ತರ, ಅಯೋಗ್ಯ ವಾದ ಉತ್ತರ. दुष्टमुत्तरम्। (पुं०) 2. ಕಷ್ಟದಿಂದ ದಾಟುವುದು. दुःखेन तरः तरणम्—तॄ (प्लवनतरणयोः) भावे "खल्" (३-३-१२६)। (वि०) 3. ಉತ್ತರ ಕೊಡಲು ಅಶಕ್ಯವಾದ. 4. ದಾಟಲು ಅಶಕ್ಯವಾದ, ಕಷ್ಟ ದಿಂದ ದಾಟಬಹುದಾದ. "दुरुत्तरे पङ्क इवान्धकारे मग्नं जगत्सन्ततरश्मिरज्जुः" भट्टि० ११-२०।

**दुरुदाहर ದುರುದಾಹರ** (वि०) ಕಷ್ಟದಿಂದ ಉದಾಹರಿಸ ಲ್ಪಡುವ, ಹೇಳಲು ಅಶಕ್ಯವಾದ. दुःखेन उदाह्रियते— दुर्+उद्+आ+हृञ् (हरणे) "खल्" (३-३-१२६)। "अनुज्झितार्थसम्बन्धः प्रबन्धो दुरुदाहरः" माघ० २-७३।

**दुरुदर्क ದುರುದರ್ಕ** (पुं०) 1. ಕೆಟ್ಟ ಭವಿಷ್ಯ, ಒಳ್ಳೆಯ ದಲ್ಲದ ಮುಂದಿನ ಕಾಲ. दुष्ट उदर्कः। (वि०) 2. ಕೆಟ್ಟ ಭವಿಷ್ಯವುಳ್ಳ, ನಿಷ್ಫಲವಾದ. "त्वां गतस्य हृदि मे दुरुदर्कः क्ष्मातलद्वयभटाजिवितर्कः" नैष० ५-४१।

**दुरुद्वह ದುರುದ್ವಹ** (वि०) ವಹಿಸಲು ಅಶಕ್ಯವಾದ, ಹೊರಲು ಕಷ್ಟವಾದ, ಬಹಳ ಭಾರವಾದ. दुर्+उद्+वह (प्रापणे) "खल्" (३-३-१२६)। "दुरुद्वहाः क्षणमपरैस्तदन्तरे रणश्रवादुपचयमाशु बिभ्रति" माघ० १७-२२।

**दुरुधरा ದುರುಧರಾ** (स्त्री०) ಜನನಕಾಲದಲ್ಲಿ ಸೂರ್ಯನ ಹೊರತು ಇತರ ಎಲ್ಲಾ ಗ್ರಹಗಳೂ ಚಂದ್ರನಿಗೆ ದ್ವಿತೀಯ ಮತ್ತು ದ್ವಾದಶದಲ್ಲಿರುವುದರಿಂದ ಉಂಟಾಗುವ ಒಂದು ಯೋಗ. "रविवर्जं द्वादशगैरनफा चन्द्रात् द्वितीयगैः सुनफा। उभयस्थितैर्दुरुधरा केमद्रुमसंज्ञितोऽन्यः"। **ಈ ಯೋಗದ ಫಲ:** "बहुभृत्यकुटुम्बारम्भमुद्विग्नचित्तमपि दौरुधरे"।

**दुरुपपाद ದುರುಪಪಾದ** (वि०) ತೋರಿಸಿಕೊಡಲು ಅಶಕ್ಯ ವಾದ, ವಿವರಿಸಲು ಕಷ್ಟವಾದ.

**दुरुपसद ದುರುಪಸದ** (वि०) ಹತ್ತಿರಕ್ಕೆ ಸೇರಲು ಕಷ್ಟ ವಾದ, ಕಷ್ಟದಿಂದ ಹತ್ತಿರಕ್ಕೆ ಹೋಗಬಹುದಾದ. दुःखेन उपसद्यते—दुर् + उप + षद्लृ (विशरणादौ) "खल्" (३-३-१२६)। "अत्यर्थं दुरुपसदादुपेत्य दूरं पर्यन्ता- दहिमभयूखमण्डलस्य" किरा० ७-९।

**दुरूह ದುರೂಹ** (वि०) ಊಹಿಸಲು ಕಷ್ಟವಾದ, ತಿಳಿಯಲು ಅಶಕ್ಯವಾದ. दुःखेन ऊह्यते—दुर्+ऊह् (वितर्के) "खल्" (३-३-१२६)। "जानीते जयदेव एव शरणः श्लाघ्ये दुरूहद्रुते" गीतगो०।

**दुरोदर ದುರೋದರ** (पुं०) 1. ಜೂಜುಗಾರ, ಜೂಜಾಡು ವವನು. दुष्टमासमन्तात् उदरमस्य। 2. ಪಣ, ಪಂದ್ಯ. "दुरोदरं द्यूतभेदे द्यूतकृत्पणयोः पुमान्" मेदि०। "दुरोदरच्छद्मजितां समीहते नयेन जेतुं जगतीं सुयोधनः" किरा० १-७। (न०) 3. ಜೂಜು, ದ್ಯೂತ.

**दुर्ग ದುರ್ಗ** (पुं०) 1. ವಿಷ್ಣು. दुःखेन गच्छन्त्यत्र—दुर्+ गम्लृ (गतौ) "डः" (वा० ३-२-४७)। ಅವಿದ್ಯೆ ಮೊದ ಲಾದ ಆವರಣಗಳಿಂದ ಕೂಡಿದ ಪಾಪಾತ್ಮರಿಗೆ ಹೊಂದಲು ಅಶಕ್ಯನಾದುದರಿಂದ ಈ ಹೆಸರು. "दुष्प्रवेशतया दुर्गः पापिभिस्तु कदाचन" इति निरुक्तिः। "दुर्लभो दुर्गमो दुर्गः" वि० स०। (न०) 2. ಕೋಟೆ, ಕೊತ್ತಲು, ಪ್ರಾಕಾರ, ಕಂದಕ, ಬೆಟ್ಟ, ಗುಡ್ಡ ಮೊದಲಾದುದು. ಇದು ಏಳು ರಾಜ್ಯಾಂಗಗಳಲ್ಲಿ ಒಂದು. "स्वाम्यमात्यसुहृत्कोश- राष्ट्रदुर्गबलानि च" अम०। "दुर्गाणि दुर्ग्रहाण्यासन् तस्य रोद्धुमपि द्विषाम्" रघु० १७-५२। ದೇಶದ ಅಂಚಿ ನಲ್ಲಿ ಸ್ವಭಾವವಾಗಿ ನಿಮ್ನೋನ್ನತವಾಗಿರುವ ನಾಲ್ಕು ದಿಕ್ಕು ಗಳಿಗೂ ವ್ಯಾಪಿಸಿರುವ ಸ್ಥಳವನ್ನು ದುರ್ಗವನ್ನಾಗಿ ಮಾಡಿ ಕೊಳ್ಳಬೇಕು. ಈ ದುರ್ಗವು ಯುದ್ಧಕ್ಕೆ ಅನುಕೂಲವಾಗಿರ ಬೇಕು. ಇದು औदकम् पार्वतम् धान्वनम् ಮುಂತಾಗಿ ಆರು ವಿಧ. (1) ಸುತ್ತಲೂ ನದಿಯಿಂದ ಆವೃತವಾದ ಅಥವಾ ದೊಡ್ಡ ಸರೋವರಗಳಿಂದ ಆವೃತವಾದ ಸ್ಥಳವು **ಔದಕ ದುರ್ಗವು.** "अन्तर्द्वीपं स्थलं वा निम्नावरुद्ध- मौदकम्"। "नद्यादिस्वाभाविक जलाशयपरिवृतद्वीप- मध्यगतमित्येकम्, कृत्रिमजलाशयपरिवृतभूभागरूपमित्य- परम् औदकं दुर्गम्" अर्थशा०।

(2) ಬೆಟ್ಟ ಗುಡ್ಡಗಳು ಅಥವಾ ಸ್ವಾಭಾವಿಕವಾದ ಗುಹೆ ಗಳಿಂದ ಕೂಡಿರುವುದು **ಪಾರ್ವತ ದುರ್ಗ.** "प्रास्तरं गुहां वा पार्वतम्"।

(3) ನೀರು ಹುಲ್ಲು ಯಾವುದೂ ಇಲ್ಲದೆ ಕೇವಲ ಮರುಭೂಮಿಯಿಂದ ಆವೃತಪ್ರದೇಶವು **ಧಾನ್ವನ ದುರ್ಗ.** "निरुदकस्तम्बं इरिणं वा धान्वनम्"।

(4) ಕೇವಲ ಪಂಕಮಯವಾಗಿ ಸಂಚರಿಸಲೂ ಅಸಾಧ್ಯವಾಗಿರುವುದು ಮತ್ತು ದಟ್ಟವಾಗಿ ಬೆಳೆದಿರುವ ಮರಗಳಿಂದ ಕೂಡಿರುವುದು **ವನದುರ್ಗ.** "खञ्जनोदकं स्तम्बगहनं वा वनदुर्गम्"। ಇವುಗಳಲ್ಲಿ ಔದಕ (ನದೀ) ದುರ್ಗ ಮತ್ತು ಪರ್ವತದುರ್ಗಗಳು ಆಪತ್ಸಮಯದಲ್ಲಿ ದೇಶವನ್ನು ರಕ್ಷಿಸುವುವು. ಧಾನ್ವನ ಮತ್ತು ವನದುರ್ಗಗಳು ಆಪತ್ಕಾಲದಲ್ಲಿ ಅರಣ್ಯಸೈನ್ಯದ ರಕ್ಷಣೆಗೂ ಸಮಯದಲ್ಲಿ ಯುದ್ಧದಿಂದ ಹಿಮ್ಮೆಟ್ಟಿ ಓಡಿಹೋಗುವುದಕ್ಕೂ ಉಪಕಾರಕವಾಗಿರುವುವು. "तेषां नदीपर्वतदुर्गं जनपदरक्षस्थानम्। धान्वनवनदुर्गं अटवीस्थानं आपद्यपसरो वा" अर्थशा०। ದುರ್ಗದಲ್ಲಿ ಅನೇಕ ಸೇನಾಪತಿಗಳುಳ್ಳ ಚತುರಂಗ ಬಲವನ್ನಿರಿಸಬೇಕು. ಸೇನಾಪತಿಯು ಒಬ್ಬನೇ ಆದರೆ ಪ್ರಲೋಭನೆಗಳಿಂದ ಶತ್ರುಗಳ ಭೇದೋಪಾಯಕ್ಕೆ ಒಳಗಾಗಿ ಸೈನ್ಯವನ್ನು ಶತ್ರುಗಳ ಪಕ್ಷಕ್ಕೆ ತಿರುಗಿಸಬಹುದು. ಆದುದರಿಂದ ಶತ್ರುಗಳಿಗೆ ಅಭೇದ್ಯವಾದ ಅನೇಕ ಸೇನಾಪತಿಗಳಿಂದ ಕೂಡಿದ ಸೈನ್ಯವನ್ನು ಇಡಬೇಕು. "हस्त्यश्वरथपादातं अनेकमुख्यं अवस्थापयेत्। अनेकमुख्यं हि परस्परभयात् परोपजापं नोपैति" अर्थशा०। 3. ನರಕ. 4. ಪಟ್ಟಣ. 5. ಹೋಗಲು ಕಷ್ಟವಾದ, ಪ್ರವೇಶಿಸಲು ಅಶಕ್ಯವಾದ. "पुराणि दुर्गाणि निशातमायुधं बलानि शूराणि घनाश्च कञ्चुकाः" माघ० १-४५। (स्त्री०) **-र्गा -ರ್ಗಾ.** 6. ದುರ್ಗಾದೇವಿ, ಪಾರ್ವತಿ. 7. ಕಾಳಿಕಾದೇವಿ. "दुर्गा तु गौर्यां काल्यां च दुर्गं तु नरके पुरे। शैलादिदुर्गमस्थाने त्रिषुत्वेष दुरासदे" नानार्थर०।

**दुर्गकर्मन् ದುರ್ಗಕರ್ಮನ್** (न०) ಕೋಟೆಯನ್ನು ಕಟ್ಟಿ ಬಲಪಡಿಸುವುದು.

**दुर्गकारक ದುರ್ಗಕಾರಕ** (पुं०) 1. ಬೇಲಿಗಾಗಿ ಹಾಕುವ ಮುಳ್ಳುಗಿಡ, ಮುಂಡಕಳ್ಳಿ. (वि०) 2. ಕೋಟೆಯನ್ನು ನಿರ್ಮಿಸುವ, ಬೇಲಿಯನ್ನು ಹಾಕುವ. दुर्गं करोति—डुकृञ् (करणे) "ण्वुल्" (३-१-१३३)।

**दुर्गत ದುರ್ಗತ** (वि०) ದರಿದ್ರ, ಬಡವ. दुर्गच्छति—दुर्+गम्लृ (गतौ) "क्तः" (३-४-७२)। "समाश्वसिमि केनाहं कथं प्राणिमि दुर्गतः" भट्टि० १८-१०।

**दुर्गति ದುರ್ಗತಿ** (स्त्री०) 1. ದಾರಿದ್ರ್ಯ, ಬಡತನ. दुष्टा गतिः। 2. ಅಧೋಗತಿ, ನರಕ. 3. ಅನಿಷ್ಟ, ಕೇಡು. "पार्थ नैवेह नामुत्र विनाशस्तस्य विद्यते। न हि कल्याणकृत् कश्चिद्दुर्गतिं तात गच्छति" गीता ६-४०। (वि०) 4. ದಾರಿದ್ರ್ಯವುಳ್ಳವನು, ಬಡತನವುಳ್ಳವನು. दुष्टा गतिर्यस्य। "दुर्गतिर्नरके निःस्वे" मेदि०।

**दुर्गतिनाशिनी ದುರ್ಗತಿನಾಶಿನೀ** (स्त्री०) ದುರ್ಗಾದೇವಿ. दुर्गतिं नाशयति—णश (अदर्शने) "णिनिः" (३-२-७८)। "ङीप्" (४-१-५)। "ब्रह्माण्डविजयस्यास्य कवचस्य प्रजापतिः। ऋषिश्छन्दश्च गायत्री देवी दुर्गतिनाशिनी" ब्रह्मवै०।

**दुर्गन्ध ದುರ್ಗಂಧ** (पुं०) 1. ಕೆಟ್ಟವಾಸನೆ. दुष्टो गन्धः। 2. ಸೌವರ್ಚಲವಣ. (वि०) 3. ಕೆಟ್ಟ ವಾಸನೆಯುಳ್ಳ. दुःस्थितो गन्धो यस्य।

**दुर्गन्धिन् ದುರ್ಗಂಧಿನ್** (वि०) ಕೆಟ್ಟವಾಸನೆಯುಳ್ಳ. दुर्गन्धोऽस्त्यस्य "इनिः" (५-२-११५)। "चर्मावनद्धं दुर्गन्धि पूर्णं मूत्रपुरीषयोः" मनु० ६-७६।

**दुर्गपति ದುರ್ಗಪತಿ** (पुं०) ದುರ್ಗಪಾಲಕ, ಕೋಟೆಯ ರಕ್ಷಕ, ಕೋಟೆಯ ರಕ್ಷಣಾಧಿಕಾರಿ. दुर्गस्य पतिः। "वयं जयेम हेलाभिर्दस्यून् दुर्गपतिर्यथा" भाग० ३-१४-१९।

**दुर्गपाल ದುರ್ಗಪಾಲ** (पुं०) ಕೋಟೆಯ ರಕ್ಷಕ, ಕೋಟೆಯನ್ನು ಕಾಪಾಡುವವನು. दुर्गं पालयति—पाल (रक्षणे) "अण्" (३-२-१)। "ण्वुल्" (३-१-१३३)। **-पालकः -ಪಾಲಕಃ.**

**दुर्गम ದುರ್ಗಮ** (पुं०) 1. ವಿಷ್ಣು. दुःखेन गन्तुं शक्यः गन्तुं प्रधर्षयितुमशक्यः—दुर्+गम्लृ (गतौ) "खल्" (३-३-१२६)। "नेत्रदुर्बलवृत्तीनां मध्याह्नद्युमणेर्यथा। प्राप्तिर्दुष्करतेजस्त्वात् दुर्गमः परिकीर्तितः" इति निरुक्तिः। "दुर्लभो दुर्गमो दुर्गः" वि० स०। (वि०) 2. ಕಷ್ಟದಿಂದ ಸಂಚರಿಸಬಹುದಾದ, ಸಂಚರಿಸಲು ಅಶಕ್ಯವಾದ. "पिष्टाद्रिपृष्ठास्तरसा च दन्तिनश्चलत्रिजाङ्गाचलदुर्गमा भुवः" माघ० १२-४९। 3. ತಿಳಿಯಲು ಅಶಕ್ಯವಾದ, ಕಷ್ಟದಿಂದ ತಿಳಿಯಬಹುದಾದ. 4. ಹೊಂದಲು ಕಷ್ಟವಾದ, ಹೊಂದಲು ಅಶಕ್ಯವಾದ. "अभीक्ष्णमक्षुण्णतयातिदुर्गमम्" माघ० १-३२।

**दुर्गलङ्घन ದುರ್ಗಲಂಘನ** (पुं०) 1. ಕೋಟೆಯನ್ನು ದಾಟಿಹೋಗುವ ಉಷ್ಟ್ರ, ಒಂಟೆ. दुर्गं लङ्घ्यतेऽनेन—लघि (गतौ) "ल्युट्" (३-३-११७)। (न०) 2. ಕೋಟೆಯನ್ನು ದಾಟುವುದು. दुर्गस्य लङ्घनम्।

**दुर्गसंस्कार ದುರ್ಗಸಂಸ್ಕಾರ** (पुं०) ಕೋಟೆಯ ಕಾಮಗಾರಿ, ಕೋಟೆಯನ್ನು ಭದ್ರಪಡಿಸುವುದು, ಶಿಥಿಲವಾದ

ಕೋಟೆಯನ್ನು ಸರಿಪಡಿಸಿ ಬಲಪಡಿಸುವುದು. दुर्गस्य संस्कारः। "अतो दुर्गसंस्कारे आरब्धव्ये किं कौमुदी-महोत्सवेनेति प्रतिषिद्धः" मुद्रा० ३।

**दुर्गसञ्चर ದುರ್ಗಸಂಚರ** (पुं०) ನದಿ ಕಂದಕ ಬೆಟ್ಟ ಕೋಟೆ ಮೊದಲಾದುವನ್ನು ಸುಲಭವಾಗಿ ದಾಟುವ ಕಟ್ಟೆ ಸೇತುವೆ ಮುಂತಾದ ಉಪಾಯ (ಮಾರ್ಗ). दुर्गं सञ्चरन्त्यनेन — सम्+चर (गतौ) "घः" (३-३-११९)। निपा०।

**दुर्गा ದುರ್ಗಾ** (स्त्री०) 1. ದುರ್ಗಾದೇವಿ, ಪಾರ್ವತಿ. 2. ಕಾಳಿಕಾದೇವಿ. 3. ನೀಲಿಗಿಡ. "दुर्गामानील्योः स्त्री दुर्गमे त्रिषु" मेदि०। "दुर्गा तु गौर्यां काल्यां च दुर्गं तु नरके पुरे" नानार्थर०।

**दुर्गाढ ದುರ್ಗಾಢ** (वि०) 1. ಕಷ್ಟದಿಂದ ಇಳಿಯಲು ಸಾಧ್ಯವಾದ, ಪ್ರವೇಶಿಸಲು ಅಶಕ್ಯವಾದ. 2. ತಿಳಿಯಲು ಅಶಕ್ಯವಾದ, ಕಷ್ಟದಿಂದ ತಿಳಿಯಬಹುದಾದ. दुर् + गाहू (विलोडने) "क्तः" (३-२-१०२)।

**दुर्गाधिकारिन् ದುರ್ಗಾಧಿಕಾರಿನ್, -अध्यक्ष -ಅಧ್ಯಕ್ಷ** (पुं०) ಕೋಟೆಯನ್ನು ಕಾಪಾಡುವ ಅಧಿಕಾರಿ.

**दुर्गानवमी ದುರ್ಗಾನವಮೀ** (स्त्री०) ಕಾರ್ತಿಕ ಶುಕ್ಲ ನವಮಿ. दुर्गाप्रिया नवमी। "कार्तिकस्य सिते पक्षे नवम्यां जगदम्बिकाम्। दुर्गां प्रपूजयेद् भक्त्या धर्मकामार्थसिद्धये"।

**दुर्गुण ದುರ್ಗುಣ** (पुं०) ಕೆಟ್ಟಗುಣ, ಅಸೂಯೆ ದ್ವೇಷ ಮೊದಲಾದ ಆತ್ಮಧರ್ಮ. दुष्टो गुणः।

**दुर्गुणिन् ದುರ್ಗುಣಿನ್** (वि०) ಕೆಟ್ಟ ಗುಣಗಳುಳ್ಳವನು. दुष्टाः गुणाः सन्ति यस्य "इनिः" (५-२-११५)।

**दुर्ग्रह ದುರ್ಗ್ರಹ** (वि०) 1. ಹಿಡಿಯಲು ಕಷ್ಟವಾದ. 2. ತಿಳಿಯಲು ಕಷ್ಟವಾದ. 3. ಹೊಂದಲು ಅಶಕ್ಯವಾದ. दुःखेन गृह्यतेऽसौ — दुर् + ग्रह (उपादाने) "खल्" (३-३-१२६)। "दुर्गाणि दुर्ग्रहाण्यासन् तस्य रोद्धुमपि द्विषाम्" रघु० १७-५२।

**दुर्ग्राह्य ದುರ್ಗ್ರಾಹ್ಯ** (वि०) ಹಿಡಿಯಲು ಕಷ್ಟವಾದ, ಹಿಡಿದುಕೊಳ್ಳಲು ಅಶಕ್ಯವಾದ. दुःखेन गृह्यतेऽसौ कर्म० "ण्यत्" (३-१-१२४)। "जग्राह तद्धनूरत्नं दुर्ग्राह्यं दैवतैरपि" हरिवं०।

**दुर्घट ದುರ್ಘಟ** (वि०) ಸೇರಿಸಲು ಅಶಕ್ಯವಾದ, ಹೊಂದಿಸಲು ಕಷ್ಟವಾದ. दुर्+घट (चेष्टायाम्) कर्म० "खल्" (३-३-१२६)।

**दुर्घोष ದುರ್ಘೋಷ** (पुं०) 1. ಭಲ್ಲೂಕ, ಕರಡಿ. दुष्टो घोषोऽस्य। 2. ಕಠಿನವಾದ ಶಬ್ದ. (वि०) 3. ಕಠಿನವಾದ ಶಬ್ದವುಳ್ಳ, ವಿಕಾರವಾಗಿ ಕೂಗುವ.

**दुर्जन ದುರ್ಜನ** (पुं०) ಕೆಟ್ಟ ಮನುಷ್ಯ, ನೀಚ, ದುರುಳ. दुष्टो जनः। "दुर्जनः परिहर्तव्यो विद्ययालंकृतोऽपि सन्"। "शाम्येत् प्रत्यपकारेण नोपकारेण दुर्जनः" कुमा० २-४०।

**दुर्जय ದುರ್ಜಯ** (पुं०) 1. ವಿಷ್ಣು. जेतुमशक्यः। दुर्+जि (जये) "खल्" (३-३-१२६)। ದೇವತೆಗಳಿಂದಲೂ ಮನುಷ್ಯರಿಂದಲೂ ವಶಪಡಿಸಿಕೊಳ್ಳಲು ಶಕ್ಯನಲ್ಲದುದರಿಂದ ಪರಮಾತ್ಮನು ದುರ್ಜಯನು. "शक्त्या देवमनुष्याद्यैः वशीकर्तुं न शक्यते। अन्वेष्टुं वापि यः स स्यात् दुर्जयः सप्तवर्णकः" इति निरुक्तिः। "समावर्तो निवृत्तात्मा दुर्जयो दुरतिक्रमः" वि० स०। 2. ಧೃತರಾಷ್ಟ್ರನ ಒಬ್ಬ ಮಗ. (वि०) 3. ಜಯಿಸಲಾಗದ, ಅಜೇಯನಾದ, ಕಷ್ಟದಿಂದ ಜಯಿಸಬಹುದಾದ. दुःखेन जीयते — जि "खल्" (३-३-१२६)। "जीयन्तां दुर्जया देहे रिपवश्चक्षुरादयः" किरा० ११-३२। "दुर्जयोऽपि विजिगीषितो विभुः सस्मितः समरसम्मुखोऽभवत्" माघ० १७-५०।

**दुर्जर ದುರ್ಜರ** (वि०) ಜೀರ್ಣವಾಗಲು ಕಷ್ಟವಾದ, ಕಷ್ಟದಿಂದ ಜೀರ್ಣವಾಗುವ. दुःखेन जीर्यति — दुर्+जॄष् (वयोहानौ) "अच्" (३-१-१३४)। "स्वादु पाकरसं शाकं दुर्जरं हरिमन्थजम्" सुश्रुत० सूत्र० (४६-२७७)।

**दुर्जात ದುರ್ಜಾತ** (पुं०) 1. ಕೆಟ್ಟ ಮಗ, ಅಸಭ್ಯನಾದ ಮಗ. "दुर्जातमत्र विमले भरतान्वये वः किं मां सुतक्षयकरं सुत इत्यवैषि" वेणी० ५-२। (न०) 2. ವ್ಯಸನ, ವಿಪತ್ತು, ದುರ್ಘಟನೆ, ಕಷ್ಟ. दुष्टं जातम्। "इमां परीप्सुर्दुर्जाति पराभिभवकातराम्" माल० ५-११। "दुर्जातबन्धुरयमृक्षहरीश्वरो मे पौलस्त्य एष समरेषु पुरःप्रहर्ता" रघु० १३-७२। (वि०) 3. ಅಯೋಗ್ಯತನದಿಂದ ಉಂಟಾದ, ಅಸಭ್ಯತೆಯಿಂದ ಉಂಟಾದ. 4. ಅಸಮಂಜಸವಾದ. "दुर्जातं व्यसने क्लीबमसम्यग्जातेऽन्यवत्" मेदि०। 5. ನೀಚ, ಅಸಭ್ಯ.

**दुर्जाति ದುರ್ಜಾತಿ** (स्त्री०) 1. ಕೆಟ್ಟ ಜಾತಿ, ದುಷ್ಟ ಜಾತಿ. 2. ನೀಚವಂಶ. (वि०) 3. ನೀಚ, ಅಸಭ್ಯ. 4. ನಿಂದಿತವಾದ ಜನ್ಮವುಳ್ಳ, ಕ್ರೂರವಾಗಿ ಹುಟ್ಟಿದ, ನಿಕೃಷ್ಟವಾಗಿ ಹುಟ್ಟಿದ.

**दुर्जीव ದುರ್ಜೀವ** (वि०) 1. ಕಷ್ಟದಲ್ಲಿ ಜೀವಿಸುವ, ಪರರ ಆಶ್ರಯದಲ್ಲಿ ಬದುಕುವ. दुःखेन जीवति — जीव (प्राणधारणे) "अच्" (३-१-१३४)। (न०) 2. ನಿಂದಿತವಾದ ಜೀವನ, ಕಷ್ಟದ ಜೀವನ. "सुजीवं निरुपशस्तस्य यः परैरुपजीव्यते। राम तस्य तु दुर्जीवं यः परानुपजीवति" रामा०।

**दुर्ज्ञेय ದುರ್ಜ್ಞೇಯ** (वि०) ತಿಳಿಯಲು ಅಶಕ್ಯವಾದ, ಕಷ್ಟದಿಂದ ತಿಳಿಯಬಹುದಾದ. दुःखेन ज्ञायते — ज्ञा (अवबोधने) "यत्" (३-१-९७)। "उच्चावचेषु भूतेषु दुर्ज्ञेयामकृतात्मभिः" मनु० ६-७३।

**दुर्दम ದುರ್ದಮ** (पुं०) 1. ವಸುದೇವನಿಗೆ ರೋಹಿಣಿಯಲ್ಲಿ ಹುಟ್ಟಿದ ಒಬ್ಬ ಮಗ. (वि०) 2. ಅಡಗಿಸಲು ಅಶಕ್ಯವಾದ, ಹತೋಟಿಗೆ ತರಲು ಕಷ್ಟವಾದ. दुःखेन दम्यते— दुर्+दमु (उपशमे) "खल्" (३-३-१२६)। "सङ्कल्पाशावकीर्णास्ते न भविष्यन्ति दुर्दमाः" भा० शान्ति० ८८-९।

**दुर्दमन ದುರ್ದಮನ** (पुं०) 1. ಶತಾನೀಕ ರಾಜನ ಒಬ್ಬ ಮಗ. (वि०) 2. ಕಷ್ಟದಿಂದ ಅಡಗಿಸಲ್ಪಡುವ, ಅಡಗಿಸಲು ಅಶಕ್ಯನಾದ. दुःखेन दमनं यस्य।

**दुर्दम्य ದುರ್ದಮ್ಯ** (वि०) ಬಹಳ ಕಷ್ಟದಿಂದ ಅಡಗಿಸಲ್ಪಡುವ, ಕಷ್ಟದಿಂದ ಅಡಗಿಸಲು ಅರ್ಹವಾದ. दुर्+दमु (उपशमे) "यत्" (३-१-९८)।

**दुर्दर्श ದುರ್ದರ್ಶ** (वि०) ಭಯಂಕರವಾದ, ನೋಡಲು ಅಶಕ್ಯವಾದ, ಕಷ್ಟದಿಂದ ನೋಡಬಹುದಾದ. दुःखेन दृश्यते—दृशिर् (प्रेक्षणे) कर्म० "खल्" (३-३-१२६)। "दुराचारा सदाचारां दुर्दर्शा प्रियदर्शनाम्" प्रबोध० ३-७।

**दुर्दर्शन ದುರ್ದರ್ಶನ** (न०) 1. ಭಯಂಕರವಾದ ನೋಟ. दुष्टं दर्शनम्। (वि०) 2. ಭಯಂಕರವಾದ, ನೋಡಲು ಅಶಕ್ಯವಾದ, ಕಷ್ಟದಿಂದ ನೋಡಲ್ಪಡುವ. दुःखेन दृश्यते— दृशिर् (प्रेक्षणे) "युच्" (वा० ३-३-१२८)। "विशेषतश्चात्र दुर्दर्शनानि परुषाणि" सुश्रुत०।

**दुर्दशा ದುರ್ದಶಾ** (स्त्री०) ಕಷ್ಟದ ಪರಿಸ್ಥಿತಿ. दुष्टा दशा।

**दुर्दान्त ದುರ್ದಾಂತ** (पुं०) 1. ವತ್ಸ, ಕರು. 2. ಯುದ್ಧ, ಕಾಳಗ. 3. ಶಿವ, ಈಶ್ವರ. (वि०) 4. ಅಡಗಿಸಲು ಕಷ್ಟವಾದ, ಕಷ್ಟದಿಂದ ಅಡಗಿಸಲ್ಪಡುವ. दुःखेन दम्यते— दमु (उपशमे) + णिच् "क्तः" (३-२-१०२)। "दुर्दान्तानां दमनविधयः क्षत्रियेष्वायतन्ते दुर्दान्तस्त्वं वयमपि च ते क्षत्रियाः शासितारः" म० वी० ३-३४।

**दुर्दिन ದುರ್ದಿನ** (न०) 1. ಕೆಟ್ಟ ದಿವಸ, ಕಷ್ಟದ ದಿವಸ. दुष्टं दिनम्। "यदच्युतकथालापरसपीयूषवर्जितम्। तद्दिनं दुर्दिनं प्रोक्तं मेघाच्छन्नं न दुर्दिनम्"। 2. ಮೇಘದಿಂದ ಮುಚ್ಚಲ್ಪಟ್ಟ ದಿವಸ, ಸೂರ್ಯರಶ್ಮಿಯು ಇಲ್ಲದ ದಿವಸ. "यत्रौषधिप्रकाशेन नक्तं दर्शितसञ्चराः। अनभिज्ञास्तमिस्राणां दुर्दिनेष्वभिसारिकाः" कुमा० ६-४३। 3. ಕಗ್ಗತ್ತಲೆ, ನಿಬಿಡವಾದ ಅಂಧಕಾರ. 4. ವೃಷ್ಟಿ, ಮಳೆ. (ಇದು ಲಾಕ್ಷಣಿಕ ಪ್ರಯೋಗ). "द्विषां विषह्य काकुत्स्थस्तत्र नाराचदुर्दिनम्" रघु० ४-४१। "घनान्धकारे वृष्टौ च दुर्दिनं कवयो विदुः"।

**दुर्दृष्ट ದುರ್ದೃಷ್ಟ** (वि०) 1. ತಪ್ಪಾಗಿ ನೋಡಲ್ಪಟ್ಟ. 2. ನ್ಯಾಯವಲ್ಲದ ರೀತಿಯಲ್ಲಿ ತೀರ್ಮಾನಿಸಲ್ಪಟ್ಟ. दुष्टं दृष्टम्। "दुर्दृष्टांस्तु पुनर्दृष्ट्वा व्यवहारान्नृपेण तु। सभ्याः सजयिनो दण्ड्याः विवादाद्द्विगुणं दमम्" याज्ञ० २-३०५।

**दुर्दैव ದುರ್ದೈವ** (न०) ದೌರ್ಭಾಗ್ಯ, ಕೆಟ್ಟ ಅದೃಷ್ಟ ದುರದೃಷ್ಟ, ಪಾಪ. दुष्टं दैवम्।

**दुर्द्यूत ದುರ್ದ್ಯೂತ** (न०) ಕಪಟದ ದ್ಯೂತ, ಮೋಸದಿಂದ ಆಡುವ ಜೂಜು. दुष्टं द्यूतम्।

**दुर्द्रुम ದುರ್ದ್ರುಮ** (पुं०) ಈರುಳ್ಳಿ. दुष्टो द्रुमः।

**दुर्धर ದುರ್ಧರ** (पुं०) 1. ವಿಷ್ಣು, ಪರಮಾತ್ಮ. धर्तुमशक्यः—दुर्+धृञ् (धारणे) कर्म० "खल्" (३-३-१२६)। बाललीलादिषु अतिचञ्चलचेष्टितया नन्दयशोदाभ्यां धर्तुमशक्यः। "बाललीलाप्रसङ्गेषु यशोदानन्दलालनात्। दृप्तो मत्तो भवेत्ताभ्यां दुर्ग्रहो दुर्धरो मतः" इति निरुक्तिः। "दर्पहा दर्पदो दृप्तो दुर्धरः" वि० स०। 2. ಪಾದರಸ. 3. ಒಂದು ನರಕ. 4. ಹೆಂಗೆಹಾಲೆ. (वि०) 5. ತಡೆಯಲಾಗದ, ಎದುರಿಸಲು ಕಷ್ಟವಾದ. 6. ಹೊರಲು ಕಷ್ಟವಾದ. 7. ಹಿಡಿಯಲಾಗದ, ಹಿಡಿಯಲು ಕಷ್ಟವಾದ. "वन्येभदानानिलगन्धदुर्धराः" माघ० १२-२८।

**दुर्धर्ष ದುರ್ಧರ್ಷ** (पुं०) 1. ಧೃತರಾಷ್ಟ್ರನ ಒಬ್ಬ ಮಗ. "विन्दानुविन्दौ दुर्धर्षः सुबाहुर्दुष्प्रधर्षणः" भा० आदि० ६८-९४। 2. ಒಬ್ಬ ರಾಕ್ಷಸ. 3. ಒಂದು ಪರ್ವತ. (वि०) 4. ಎದುರಿಸಲಾಗದ, ಮೇಲೆ ಬೀಳಲು ಅಶಕ್ಯನಾದ, ಪ್ರತಿಭಟಿಸಲಾಗದ. दुर्+धृषा (प्रागल्भ्ये) "खल्" (३-३-१२६)। 5. ಕೊಬ್ಬಿದ, ಸೊಕ್ಕಿನಿಂದ ಕೂಡಿದ. "युच्" (वा० ३-३-१२८)। **दुर्धर्षणः**

ದುರ್ಧರ್ಷಣಃ. "स हि दुर्धर्षणो वाली नित्यं समरकर्मसु" रामा० ।

**दुर्धार्य ದುರ್ಧಾರ್ಯ** (वि०) ಧರಿ (ಗ್ರಹಿ)ಸಲು ಕಷ್ಟವಾದ, ಕಷ್ಟದಿಂದ ಮನದಟ್ಟುಮಾಡಿಕೊಳ್ಳಬಹುದಾದ. दुःखेन धार्यते—धृञ् (धारणे) "ण्यत्" (३-३-१२४)। "दुर्धार्यमेतन्मनसा गच्छावतर पद्मिनीम्" भा० अनु० १४२-२६।

**दुर्धी ದುರ್ಧೀ**(वि०)ಕೆಟ್ಟ ಬುದ್ಧಿಯುಳ್ಳ, ಅವಿವೇಕಿ. दुष्टा धीर्यस्य। "अनुत्थानवता चापि दुर्विनीतेन दुर्धिया" भा० उद्योग० १३५-११।

**दुर्नय ದುರ್ನಯ** (पुं०) 1. ಕೆಟ್ಟ ನೀತಿ, ಕೆಟ್ಟ ನಡತೆ. दुष्टो नयः। "अम्बिके तव पौत्रस्य दुर्नयात् किल भारताः। सानुबन्धा विनङ्क्ष्यन्ति पौराश्चैवेति नः श्रुतम्" भा० आदि० १३७-१०। (वि०)2. ಕೆಟ್ಟ ನಡತೆಯುಳ್ಳ. दुष्टो नयो यस्य। "अनुगतनयमार्गामर्गलां दुर्नयस्य" माघ० २-११८।

**दुर्नामन् ದುರ್ನಾಮನ್** (पुं०) 1. ಅರ್ಶೋರೋಗ, ಮೂಲವ್ಯಾಧಿ. (स्त्री०)2. ಆನೆಯ ರಕ್ತವನ್ನು ಹೀರುವ ದೊಡ್ಡ ಜಾತಿಯ ಜಿಗಣೆ.

**दुर्नामारि ದುರ್ನಾಮಾರಿ** (पुं०) ಸೂರಣ ಗೆಡ್ಡೆ.

**दुर्निमित ದುರ್ನಿಮಿತ** (वि०)ಅವಸರದಲ್ಲಿ ಅಜಾಗರೂಕತೆಯಿಂದ ಇಡಲ್ಪಟ್ಟ, ಕಷ್ಟದಿಂದ ಇಡಲ್ಪಟ್ಟ. दुःखेन निमितम्— दुर्+नि+डुमिञ् (प्रक्षेपणे) कर्म० "क्तः" (३-२-१०२)। "अर्घाचिता सत्वरमुत्थितायाः पदे पदे दुर्निमिता गलन्ती" रघु० ७-१०।

**दुर्निमित्त ದುರ್ನಿಮಿತ್ತ** (न०) ಅನಿಷ್ಟದ ಸೂಚನೆ, ಕೆಡಕಿನ ಸೂಚನೆ. दुष्टं निमित्तम्। "दृष्ट्वा तु दुर्निमित्तानि जरासन्धमदर्शयन्" भा० सभा० २१-२६।

**दुर्निवार ದುರ್ನಿವಾರ** (वि०) ತಡೆಯಲು ಕಷ್ಟವಾದ, ನಿವಾರಿಸಲು ಕಷ್ಟವಾದ. दुःखेन निवारयितुं शक्यम्— दुर्+नि+वृञ् (वरणे) + णिच् "खल्" (३-३-१२६)। "यत्" (३-१-९७)। -निवार्यः -ನಿವಾರ್ಯಃ.

**दुर्नीत ದುರ್ನೀತ** (न०) 1. ದುರಾಚಾರ, ಕೆಟ್ಟ ನಡತೆ, ದುರ್ವರ್ತನೆ. दुर्+णीञ् (प्रापणे) भावे "क्तः" (३-३-११४)। (वि०) 2. ಕೆಟ್ಟ ನಡತೆಯುಳ್ಳವನು, ನ್ಯಾಯಕ್ಕೆ ವಿರುದ್ಧವಾದ ವರ್ತನೆಯುಳ್ಳವನು.

**दुर्नीति ದುರ್ನೀತಿ** (स्त्री०)ಕೆಟ್ಟ ನಡತೆ, ನ್ಯಾಯಕ್ಕೆ ವಿರುದ್ಧವಾದ ನಡವಳಿಕೆ. दुष्टा नीतिः।

**दुर्बल ದುರ್ಬಲ** (वि०) 1. ಬಲಹೀನ, ಶಕ್ತಿಯಿಲ್ಲದವನು, ಶಕ್ತಿಕುಂದಿದವನು. दुःस्थितं बलं यस्य। "तक्रं नैव क्षते दद्यात् नोष्णकाले न दुर्बले" सुश्रुत०। 2. ಕೃಶವಾದ, ತೆಳುವಾದ. 3. ಚಿಕ್ಕದಾದ, ಕಡಮೆಯಾದ. "स्वार्थोपपत्तिं प्रति दुर्बलाशस्तमित्यवोचद्वरतन्तुशिष्यः" रघु० ५-१२।

**दुर्बुद्धि ದುರ್ಬುದ್ಧಿ** (पुं०) 1. ಧೃತರಾಷ್ಟ್ರನ ಒಬ್ಬ ಮಗ. (स्त्री०) 2. ಕೆಟ್ಟ ಬುದ್ಧಿ, ಮೂರ್ಖತನ, ಅವಿವೇಕ. (वि०) 3. ಕೆಟ್ಟ ಬುದ್ಧಿಯುಳ್ಳ, ಅವಿವೇಕಿ, ಮೂರ್ಖ. दुष्टा बुद्धिः यस्य।

**दुर्बोध ದುರ್ಬೋಧ** (पुं०) ತಿಳಿಯಲು ಅಶಕ್ಯವಾದ, ಅರಿಯಲು ಕಷ್ಟವಾದ. दुःखेन बोद्धुं शक्यम्—दुर्+बुध (अवगमने) "खल्" (३-३-१२६)। "निसर्गदुर्बोधमबोधविक्लवाः क्व भूपतीनां चरितं क्व जन्तवः" किरा० १-६।

**दुर्ब्राह्मण ದುರ್ಬ್ರಾಹ್ಮಣ** (पुं०) ನಿಂದ್ಯನಾದ ಬ್ರಾಹ್ಮಣ, ಬ್ರಾಹ್ಮಣ್ಯವಿಲ್ಲದ ಬ್ರಾಹ್ಮಣ. दुष्टो ब्राह्मणः। ಮೂರು ತಲೆಗಳಿಂದ ವೇದಾಧ್ಯಯನ ಮಾಡದವನಲ್ಲಿ ಬ್ರಾಹ್ಮಣ್ಯವಿರುವುದಿಲ್ಲ. ಅಂತಹವನು ದುರ್ಬ್ರಾಹ್ಮಣ. "यस्य वेदश्च वेदी च उत्सन्ना च त्रिपौरुषी। स वै दुर्ब्राह्मणो ज्ञेयः"।

**दुर्भग ದುರ್ಭಗ** (वि०) 1. ಅದೃಷ್ಟಹೀನ, ದುರದೃಷ್ಟದ. दुःस्थितं भगमैश्वर्यं यस्य। "दुर्भगोऽयं जनस्तत्र किमर्थमनुशब्दितः"। (स्त्री०) -गा -ಗಾ. 2. ಅದೃಷ್ಟಹೀನಳಾದ ಹೆಂಗಸು, ಪತಿಯು ಪ್ರೀತಿಸದ ಹೆಂಗಸು. "कर्मभिः स्वकृतैः सा तु दुर्भगा समपद्यत" भा० आदि० १८४-७।

**दुर्भर ದುರ್ಭರ** (वि०) ತಾಳಲಾಗದ, ದುಃಸಹವಾದ, ಹೊರಲಾಗದ. दुःखेन भ्रियते—भृञ् (भरणे) "खल्" (३-३-१२६)।

**दुर्भाग्य ದುರ್ಭಾಗ್ಯ** (न०) 1. ಕೆಟ್ಟ ಭಾಗ್ಯ, ದುರದೃಷ್ಟ. दुष्टं भाग्यम्। (वि०) 2. ಅದೃಷ್ಟಹೀನ, ದುರದೃಷ್ಟದವನು. दुष्टं भाग्यं यस्य।

**दुर्भावना ದುರ್ಭಾವನಾ** (स्त्री०) ಕೆಟ್ಟ ಆಲೋಚನೆ, ಕೆಟ್ಟ ಅಭಿಪ್ರಾಯ, ಕೆಟ್ಟ ಮನಸ್ಸು. दुष्टा भावना।

**दुर्भाषा ದುರ್ಭಾಷಾ** (स्त्री०) ಕೆಟ್ಟ ಮಾತು, ನೋಯಿಸುವ ಮಾತು, ಕಠಿನವಾದ ಮಾತು.

**दुर्भाषित ದುರ್ಭಾಷಿತ**(न०)1. ದುರ್ಭಾಷೆ, ಕೆಟ್ಟ ಮಾತು, ಮನನೋಯಿಸುವ ಮಾತು. दुष्टं भाषितम्। (वि०)2. ಕಟುವಾಗಿ ಆಡಲ್ಪಟ್ಟ, ಮನನೋಯುವಂತೆ ಆಡಲ್ಪಟ್ಟ.

**दुर्भाषिन् ದುರ್ಭಾಷಿನ್** (वि०) ಕೆಟ್ಟ ಮಾತನ್ನಾಡುವವನು, ಕಠಿನವಾಗಿ ಮಾತನಾಡುವವನು. दुष्टं भाषते — भाष (व्यक्तायां वाचि) "णिनिः" (३-२-७८)।

**दुर्भिक्ष ದುರ್ಭಿಕ್ಷ** (अव्य०) 1. ಕ್ಷಾಮ, ಬರ, ತುಟ್ಟಿ. भिक्षाया अभावः। "सौराष्ट्रे मालवे देशे दक्षिणे कोङ्कणे तथा। दुर्भिक्षं जायते घोरं क्षये संवत्सरे प्रिये"। (वि०) 2. ದುರ್ಭಿಕ್ಷವುಳ್ಳ (ದೇಶ). "एकग्रामे चतुःशाले दुर्भिक्षे राष्ट्रविप्लवे। पतिना नीयमानायाः पुरःशुक्रो न दुष्यति"।

**दुर्मति ದುರ್ಮತಿ** (पुं०) 1. ಧೃತರಾಷ್ಟ್ರನ ಒಬ್ಬ ಮಗ. (स्त्री०) 2. ಕೆಟ್ಟ ಬುದ್ಧಿ, ಮೂರ್ಖತನ. दुष्टा मतिः। 3. ಅರವತ್ತು ಸಂವತ್ಸರಗಳಲ್ಲಿ ಒಂದು, ದುರ್ಮತಿ ಸಂವತ್ಸರ, ಪ್ರಭವ ಮೊದಲಾದ ಸಂವತ್ಸರಗಳಲ್ಲಿ ಐವತ್ತೈದನೆಯದು. "दुर्भिक्षं मध्यमं प्रोक्तं व्यवहारो न वर्तते। भवेद्वै मध्यमा वृष्टिर्दुर्मतौ समुपस्थिते"। (वि०) 4. ದುಷ್ಟಬುದ್ಧಿಯುಳ್ಳ, ಮೂರ್ಖ. दुष्टा बुद्धिर्यस्य।

**दुर्मद ದುರ್ಮದ** (पुं०) 1. ಧೃತರಾಷ್ಟ್ರನ ಒಬ್ಬ ಮಗ. "दुर्मदो दुष्प्रधर्षश्च विवित्सुर्विकटाननः" भा० आदि० ६८-९६। (वि०) 2. ಉನ್ಮತ್ತ, ಮದಿಸಿದವನು. "कुमारान् क्रीडमानांस्तान् दृष्ट्वा राजा च दुर्मदान्" भा० आदि० १२९-४१।

**दुर्मनस् ದುರ್ಮನಸ್** (न०) 1. ಕೆಟ್ಟ ಮನಸ್ಸು, ಸಿಡುಕಿನ ಮನಸ್ಸು. दुष्टं मनः। 2. ದುಃಖಗೊಂಡ ಮನಸ್ಸು. 3. ಕುಗ್ಗಿದ ಮನಸ್ಸು. दुःस्थितं मनः। (वि०) 4. ಕೆಟ್ಟ ಮನಸ್ಸುಳ್ಳ. 5. ದುಃಖಗೊಂಡ ಮನಸ್ಸುಳ್ಳ. 6. ಕುಗ್ಗಿದ ಮನಸ್ಸುಳ್ಳ. दुःस्थितं मनो यस्य।

**दुर्मन्त्र ದುರ್ಮಂತ್ರ** (पुं०) ದುರಾಲೋಚನೆ, ಸಲಹೆ ಪಡೆಯುವ ಉದ್ದೇಶದಿಂದ ಸ್ನೇಹಿತರೊಡನೆ ಕಲೆತು ಮಾಡುವ ಕೆಟ್ಟ ಸಮಾಲೋಚನೆ. दुष्टो मन्त्रः। "दुर्मन्त्रान्नृपतिर्विनश्यति यतिः सङ्गात् सुतो लालनात् विप्रोऽनध्ययनात् कुलं कुतनयात् शीलं खलोपासनात्" पञ्चतं० १-१८०।

**दुर्मन्त्रिन् ದುರ್ಮಂತ್ರಿನ್** (पुं०) ಕೆಟ್ಟ ಮಂತ್ರಿ, ಕೆಟ್ಟ ಸಲಹೆ ಕೊಡುವ ಸಚಿವ. दुष्टो मन्त्री। "सन्तापयन्ति कमपथ्यभुजं न रोगा दुर्मन्त्रिणं कमुपयान्ति न नीतिदोषाः" पञ्चतं० ३-२३०।

**दुर्मरण ದುರ್ಮರಣ** (न०) ಬಲಾತ್ಕಾರದ ಮರಣ, ಅಸ್ವಾಭಾವಿಕವಾದ ಸಾವು. दुष्टमस्वाभाविकं मरणम्। ಹಸು ಮೊದಲಾದ ಶೃಂಗವುಳ್ಳ ಪ್ರಾಣಿಗಳು ಕೋರೆಹಲ್ಲುಗಳುಳ್ಳ ಹಂದಿ ವ್ಯಾಘ್ರ ಮೊದಲಾದ ಮೃಗಗಳು ನಖರಾಯುಧಗಳಾದ ಪ್ರಾಣಿಗಳು ಆನೆ ವಿಷ ಅಗ್ನಿ ಸರ್ಪ ಜಲ ವಿದ್ಯುತ್ತು ಯಂತ್ರ ಇವುಗಳಿಂದ ಸಂಭವಿಸುವುದು ದುರ್ಮರಣ.

**दुर्मर्ष ದುರ್ಮರ್ಷ** (वि०) ಕಷ್ಟದಿಂದ ಸಹಿಸಲ್ಪಡುವ, ಸಹಿಸಲು ಅಶಕ್ಯವಾದ. दुर् + मृष (तितिक्षायाम्) "खल्" (३-३-१२६)।

**दुर्मर्षण ದುರ್ಮರ್ಷಣ** (पुं०) 1. ವಿಷ್ಣು. दुष्करं मर्षणमस्य। "दुष्करं मर्षणं यस्य परैर्दुर्मर्षणः स्मृतः" इति निरुक्तिः। "अजो दुर्मर्षणः शास्ता" वि० स०। 2. ಧೃತರಾಷ್ಟ್ರನ ಒಬ್ಬ ಮಗ. (वि०) 3. ಕಷ್ಟದಿಂದ ಸಹಿಸಲ್ಪಡುವ, ಸಹಿಸಿಕೊಳ್ಳಲು ಅಶಕ್ಯವಾದ. दुर्+मृष (तितिक्षायाम्) "युच्" (वा० ३-३-१२८)।

**दुर्मल्ली ದುರ್ಮಲ್ಲೀ, -ल्लिका -ಲ್ಲಿಕಾ** (स्त्री०) ನಾಟಿಕಾ ತ್ರೋಟಕ ಮೊದಲಾದ ಹದಿನೆಂಟು ಉಪರೂಪಕಗಳಲ್ಲೊಂದು. ["उपरूपक" ಪದದಲ್ಲಿ ನೋಡಿ.] ಈ ಉಪರೂಪಕದಲ್ಲಿ ನಾಲ್ಕು ಅಂಕಗಳಿರಬೇಕು. ಕೈಶಿಕೀ ಮತ್ತು ಭಾರತೀ ವೃತ್ತಿಗಳಿಂದ ಕೂಡಿರಬೇಕು. ಇದರಲ್ಲಿ ಗರ್ಭಸಂಧಿಯಿರುವುದಿಲ್ಲ. ಕೆಳಮಟ್ಟದ ನಾಯಕ. ಮೊದಲನೆಯ ಅಂಕವು ವಿಟಪುರುಷನ ಆಟಪಾಟಗಳಿಂದ ಮೂರು ಘಳಿಗೆಗಳಲ್ಲಿ ಆಡುವಂತೆಯೂ ಎರಡನೆಯ ಅಂಕವು ಐದು ಘಳಿಗೆಗಳಲ್ಲಿ ವಿದೂಷಕನ ವಿಲಾಸಗಳಿಂದ ಕೂಡಿ ಆಡುವಂತೆಯೂ ಮೂರನೆಯ ಅಂಕವು ಆರು ಘಳಿಗೆಗಳಲ್ಲಿ ಆಡುವಂತೆಯೂ ನಾಲ್ಕನೆಯ ಅಂಕವು ಹತ್ತು ಘಳಿಗೆಗಳಲ್ಲಿ ಆಡುವಂತೆಯೂ ಇರಬೇಕು. "दुर्मल्ली चतुरङ्का स्यात् कैशिकीभारतीयुता। अगर्भा नागरनरा न्यूननायकभूषिता। त्रिनालिः प्रथमोऽङ्कोऽस्यां विटक्रीडामयो भवेत्। पञ्चनालिर्द्वितीयोऽङ्को विदूषकविलासवान्" ಇತ್ಯಾದಿ. सा० द०।

**दुर्मुख ದುರ್ಮುಖ** (पुं०) 1. ಅಶ್ವ, ಕುದುರೆ. 2. ಒಂದು ಸರ್ಪ. 3. ವಾನರ, ಕಪಿ. 4. ಒಬ್ಬ ರಾಕ್ಷಸ. 5. ಶ್ರೀರಾಮನ ಅಂತಃಪುರದ ಒಬ್ಬ ಸೇವಕ. "शुद्धान्तचारी दुर्मुखः स मया पौरजानपदानपसर्पितुं प्रयुक्तः" उ० रा० १। 6. ಪರಮೇಶ್ವರ. 7. ಧೃತರಾಷ್ಟ್ರನ ಒಬ್ಬ ಮಗ. 8. ಪ್ರಭವ ಮೊದಲಾದ ಸಂವತ್ಸರಗಳಲ್ಲಿ ಮೂವತ್ತನೆಯ ಸಂವತ್ಸರ. (वि०) 9. ಅಪ್ರಿಯವಾಗಿ ಮಾತಾಡುವವನು, ದುರ್ಭಾಷೆಯನ್ನಾಡುವವನು. दुष्टं मुखं यस्य। 10. ಗಂಟುಹಾಕಿದ ಮುಖವುಳ್ಳವನು,

ಭಯಂಕರವಾದ ಮುಖವುಳ್ಳವನು. "दुर्मुखो मुखरे नागभेदे वाजिनि वानरे" हेम०।

**दुर्मुहूर्त ದುರ್ಮುಹೂರ್ತ** (पुं०) ಕೆಟ್ಟ ಸಮಯ, ಪ್ರಶಸ್ತ ವಲ್ಲದ ಕಾಲ, ಕೆಟ್ಟ ಘಳಿಗೆ. दुष्टो मुहूर्तः।

**दुर्मेधस् ದುರ್ಮೇಧಸ್** (वि०) 1. ಮಂದಬುದ್ಧಿಯುಳ್ಳವನು, ದಡ್ಡ. दुष्टा मेधा यस्य "असिच्" (५-४-१२२)। "ग्रन्थानधीत्य व्याकर्तुमिति दुर्मेधसोऽप्यलम्" माघ० २-२६। 2. ದುರ್ಬುದ್ಧಿಯುಳ್ಳವನು, ಮೂರ್ಖ, ಅವಿವೇಕಿ.

**दुर्योग ದುರ್ಯೋಗ** (पुं०) ಕೆಟ್ಟ ಯೋಗ, ಅಶುಭ ಯೋಗ, ಅನಿಷ್ಟವನ್ನು ಸೂಚಿಸುವ ಪಾಪಗ್ರಹಗಳ ಸಂಬಂಧ. दुष्टो योगः। "दासीभूतास्मि दुर्योगात् सपत्न्याः पतगोत्तम" भा० आदि० २७-१३।

**दुर्योध ದುರ್ಯೋಧ** (वि०) ಕಷ್ಟದಿಂದ ಯುದ್ಧಮಾಡಲು ಶಕ್ಯನಾದ, ಯುದ್ಧಮಾಡಲು ಅಶಕ್ಯನಾದ. दुःखेन युध्यते—दुर्+युध (संप्रहारे) "खल्" (३-३-१२६)।

**दुर्योधन ದುರ್ಯೋಧನ** (पुं०) 1. ಧೃತರಾಷ್ಟ್ರನ ಹಿರಿಯ ಮಗ, ಕೌರವರ ಯಜಮಾನ. दुर्+युध (संप्रहारे) "युच्" (वा० ३-३-१२८)। [ದುರ್ಯೋಧನನು ಜನಿಸಿದಾಗ ಕತ್ತೆಯಂತೆ ಕಿರುಚಿಕೊಂಡನು. ಅದನ್ನು ಕೇಳಿದ ಕತ್ತೆಗಳೂ ಕಿರುಚಿದವು. ಆಗ ಧೃತರಾಷ್ಟ್ರನು ಹೆದರಿ ಬ್ರಾಹ್ಮಣರನ್ನೂ ಭೀಷ್ಮಾಚಾರ್ಯರನ್ನೂ ಕರೆದು ಭವಿಷ್ಯವನ್ನು ಕೇಳಲಾಗಿ ಅವರು "ಈ ಪುತ್ರನು ಜನಿಸಿದ ಕೂಡಲೆ ಅನೇಕ ದುರ್ನಿಮಿತ್ತಗಳು ಕಂಡುಬಂದದ್ದರಿಂದ ಇವನಿಂದ ವಂಶವೇ ನಿರ್ಮೂಲವಾಗುವುದು. ಆದುದರಿಂದ ಇವನನ್ನು ಪರಿತ್ಯಜಿಸುವುದೊಳ್ಳೆಯದು" ಎಂದರು. ಆದರೆ ಪುತ್ರಪ್ರೇಮದಿಂದ ಧೃತರಾಷ್ಟ್ರನು ಹಾಗೆ ಮಾಡಲಿಲ್ಲ. "स जातमात्र एवाथ धृतराष्ट्रसुतो नृप। रासभारावसदृशं रुराव च ननाद च। तं खराः प्रत्यभाषन्त गृध्रगोमायुवायसाः। वाताश्च प्रववुश्चापि दिग्दाहश्चाभवत्तदा। ततस्तु भीतवद्राजा धृतराष्ट्रोऽब्रवीदिदम्। समानीय बहून् विप्रान् भीष्मं विदुरमेव च। अस्मिन् जाते निमित्तानि शंसन्ती ह्यशिवं महत्। क्रव्यादाः प्राणदन् घोराः शिवाश्चाशिवनिस्वनाः। तेऽब्रुवन् ब्राह्मणा राजन् विदुरश्च महामतिः। व्यक्तं कुलान्तकरणो भवितैष सुतस्तव। त्यजैनमेकं शान्तिं चेत्कुलस्येच्छसि भारत। स तथा विदुरेणोक्तस्तैश्च सर्वैर्द्विजोत्तमैः। न चकार तथा राजा पुत्रस्नेहसमन्वितः" भा० आदि० १२९। ದುರ್ಯೋಧನನು ಕಲಿಯ ಅಂಶದಿಂದ ಹುಟ್ಟಿದವನು. "कलेरंशस्तु संजज्ञे भुवि दुर्योधनो नृपः। दुर्बुद्धिर्दुर्मतिश्चैव कुरूणामयशस्करः" भा० आदि० ६८-८७। ಇವನು ಬಾಲ್ಯದಿಂದಲೂ ಪಾಂಡವರನ್ನು ದ್ವೇಷಿಸುತ್ತಾ ಅವರನ್ನು ರಾಜ್ಯಭ್ರಷ್ಟರನ್ನಾಗಿ ಮಾಡಿದನು. ಪಾಂಡುರಾಜನು ಕಾಲವಾದನಂತರ ಧರ್ಮರಾಜನು ತಮ್ಮಂದಿರೊಡನೆ ಧೃತರಾಷ್ಟ್ರನಲ್ಲಿ ಬಂದು ಸೇರಿದನು. ಆಟಪಾಟಗಳಲ್ಲಿ ಭೀಮನು ಜಯ ಗಳಿಸುತ್ತಿರಲು ಇದನ್ನು ಸಹಿಸದೆ ದುರ್ಯೋಧನನು ಭೀಮನನ್ನು ಕೊಲ್ಲಿಸಬೇಕೆಂದು ವಿಷಹಾಕಿಸಿದನು. ಕೈಕಾಲು ಕಟ್ಟಿ ನದಿಯಲ್ಲಿ ಹಾಕಿಸಿದನು. ಅರಗಿನ ಮನೆಯಲ್ಲಿ ಸೇರಿಸಿ ಸುಡಲು ಏರ್ಪಾಡುಮಾಡಿದನು. ದ್ರೌಪದೀ ಸ್ವಯಂವರಕ್ಕೆ ಹೋಗಿ ಅಲ್ಲಿ ಧರ್ಮರಾಜನಿಂದ ಪರಾಜಿತನಾದನು. "छित्वा राजा धनुः सज्यं धार्तराष्ट्रस्य संयुगे। अभ्यवर्षच्छरौघैस्तं स हित्वा प्राद्रवद्रणम्" भा० आदि० २०५-४२। ಪಾಂಡವರು ದ್ರೌಪದಿಯನ್ನು ಮದುವೆಯಾಗಿ ಸುಖವಾಗಿರುವುದನ್ನು ಕೇಳಿ ಶಕುನಿ ಮತ್ತು ಕರ್ಣನ ಮಾತಿನಂತೆ ಅವರನ್ನು ನಿರ್ಮೂಲ ಮಾಡುವ ಉದ್ದೇಶದಿಂದ ದ್ರುಪದನ ರಾಜ್ಯಕ್ಕೆ ಹೋಗಿ ಅಲ್ಲಿ ದುರ್ಯೋಧನನು ಭೀಮಸೇನನಿಂದ ಸೋತನು. आदि० २१८। ಧರ್ಮರಾಜನ ರಾಜಸೂಯ ಯಾಗಕ್ಕೆ ಹೋಗಿ ಮಯನಿಂದ ನಿರ್ಮಿತವಾದ ಸಭಾಭವನವನ್ನು ನೋಡಿ ಮರುಗಿದ ದುರ್ಯೋಧನನು ಜಲವಿಲ್ಲದ ಪ್ರದೇಶದಲ್ಲಿ ಜಲವಿರುವುದೆಂದೂ ಜಲವಿರುವ ಪ್ರದೇಶದಲ್ಲಿ ಜಲವಿಲ್ಲವೆಂದೂ ಭ್ರಾಂತಿಯಿಂದ ನಡೆದು ಮುಗ್ಗರಿಸಿ ಭೀಮ ದ್ರೌಪದಿ ಮೊದಲಾದವರ ಹಾಸ್ಯಕ್ಕೆ ಗುರಿಯಾದನು. ಪಾಂಡವರನ್ನು ಪರಾಕ್ರಮದಿಂದ ಗೆಲ್ಲಲು ಸಾಧ್ಯವಿಲ್ಲವಾದುದರಿಂದ ತಂತ್ರದಿಂದ ಗೆದ್ದು ಅವರನ್ನು ಓಡಿಸಬೇಕೆಂದು ಯೋಚಿಸಿ ಶಕುನಿಯ ತಂತ್ರದಿಂದ ದ್ಯೂತದಲ್ಲಿ ಅವರನ್ನು ಗೆದ್ದು ಸಭೆಯಲ್ಲಿ ದ್ರೌಪದಿಯು ತನ್ನ ತೊಡೆಯ ಮೇಲೆ ಕುಳಿತುಕೊಳ್ಳಬೇಕೆಂದು ಹೇಳಿದನು. ಆಗ ಭೀಮನು ಅವನ ತೊಡೆಯನ್ನು ಮುರಿದು ಕೊಲ್ಲುವುದಾಗಿ ಪ್ರತಿಜ್ಞೆ ಮಾಡಿದನು. "एवमुक्त्वा तु कौन्तेयमपोह्य वचनं स्वकम्। द्रौपद्याः प्रेक्षमाणायाः सव्यमूरुमदर्शयत्। भीमसेनस्तमालोक्य नेत्रे उत्फाल्य लोहिते। प्रोवाच राजमध्ये तं सभां विश्रावयन्निव। पितृभिः सह सालोक्यं मा स्म गच्छेद् वृकोदरः। यद्येतमूरुं गदया न भिन्द्यां ते महाहवे" सभा० ९२। ತೊಡೆಯನ್ನು ತೋರಿದ ದುರ್ಯೋಧನನಿಗೆ ತೊಡೆಯೇ ಮೃತ್ಯುವಾಗುವುದೆಂದೂ ಸೀರೆಯನ್ನು ಹಿಡಿದೆಳೆದ ಪಾಪಿ ದುಃಶಾಸನನ ಎದೆ

ಯನ್ನು ಭೀಮಸೇನನು ಸೀಳಿ ರಕ್ತ ಪಾನಮಾಡುವನೆಂದೂ ದ್ರೌಪದಿಯು ಶಪಿಸಿದಳು. "यस्माच्चोरुं दर्शयसे यस्माच्चोरुं निरीक्षसे। तस्मात्तवहाधर्मिष्ठ ऊरौ मृत्युर्भविष्यति। यस्माच्चैवं क्लेशयति भ्राता ते मां दुरात्मवान्। तस्माद्रुधिरमेवास्य पास्यते वै वृकोदरः" सभा० ९२। ಜೂಜಿನಲ್ಲಿ ಸೋತ ಪಾಂಡವರಿಗೆ ಅರ್ಧ ರಾಜ್ಯವನ್ನು ಕೊಡುವಂತೆ ದುರ್ಯೋಧನನಿಗೆ ಉಪದೇಶಿಸಲು ವ್ಯಾಸ ಮಹರ್ಷಿಯು ಮೈತ್ರೇಯ ಋಷಿಯನ್ನು ಕಳುಹಿಸಿದಾಗ ದುರ್ಯೋಧನನು ಮೈತ್ರೇಯರನ್ನು ತಿರಸ್ಕರಿಸಿ ಮಾತನಾಡಿದ್ದರಿಂದ ಭೀಮಸೇನನ ಗದೆಯಿಂದ ಅವನ ತೊಡೆಗಳು ತುಂಡಾಗಲಿ ಎಂದು ಅವರು ಶಪಿಸಿದರು. वन० १०। ಪಾಂಡವರು ದ್ವೈತವನದಲ್ಲಿದ್ದಾಗ ಅವರನ್ನು ಅವಮಾನಗೊಳಿಸಬೇಕೆಂದು ದುರ್ಯೋಧನನು ಸಕಲ ಪರಿವಾರ ಸಮೇತ ಅಲ್ಲಿಗೆ ಹೋಗಿ ಅಲ್ಲಿದ್ದ ಗಂಧರ್ವರೊಡನೆ ಯುದ್ಧಮಾಡಿ ಸೋತನು. ಗಂಧರ್ವರು ಇವನ ಕೈಕಾಲುಗಳನ್ನು ಕಟ್ಟಿ ಒಯ್ಯುತ್ತಿರಲು ಯುಧಿಷ್ಠಿರನ ಮಾತಿನಂತೆ ಅರ್ಜುನನು ಇವನನ್ನು ಬಿಡಿಸಿದನು. वन० २४१। ಪಾಂಡವರು ಅಜ್ಞಾತವಾಸದಲ್ಲಿದ್ದಾಗ ಅವರನ್ನು ಕಂಡುಹಿಡಿದು ಪುನಃ ಕಾಡಿಗೆ ಓಡಿಸಬೇಕೆಂದು ಗೂಢಚಾರರನ್ನು ಕಳುಹಿಸಿ ಅವರ ಮೂಲಕ ಕೀಚಕವಧೆಯ ವೃತ್ತಾಂತವನ್ನು ಕೇಳಿ ಅದು ಭೀಮಸೇನನ ಕೆಲಸವೆಂದು ಊಹಿಸಿ ಭೀಷ್ಮಾದಿಗಳೊಡನೆ ವಿರಾಟನಗರಕ್ಕೆ ಹೋಗಿ ವಿರಾಟನ ಗೋವುಗಳನ್ನು ತಡೆದು ಹಿಡಿದನು. ಅಲ್ಲಿ ಅರ್ಜುನನಿಂದ ಇವನಿಗೆ ಪರಾಜಯವಾಯಿತು. विरा० ३७, ६६। ಪಾಂಡವರೊಡನೆ ಸಂಧಿಮಾಡಿಕೊಳ್ಳಬೇಕೆಂಬ ಶ್ರೀಕೃಷ್ಣನ ಮತ್ತು ಭೀಷ್ಮಾಚಾರ್ಯರ ಮಾತನ್ನು ಕೇಳದೆ ದುರ್ಯೋಧನನು ತಾನು ಅಪರಾಧಿಯಲ್ಲವೆಂದೂ ಪಾಂಡವರಿಗೆ ಸೂಜಿಯ ಮೊನೆಯಷ್ಟು ಭೂಮಿಯನ್ನು ಕೊಡುವುದಿಲ್ಲವೆಂದೂ ಹೇಳಿದನು. ದುರ್ಯೋಧನನು ಕೊನೆಗೆ ಪಾಂಡವರೊಡನೆ ಸಂಧಿಮಾಡಿಕೊಳ್ಳಬೇಕೆಂಬ ಧೃತರಾಷ್ಟ್ರನ ಮತ್ತು ಗಾಂಧಾರಿಯ ಮಾತನ್ನೂ ಲಕ್ಷ್ಯಮಾಡದೆ ಶ್ರೀಕೃಷ್ಣನನ್ನು ಬಂಧಿಸಲು ಯತ್ನಿಸಿದಾಗ ಶ್ರೀಕೃಷ್ಣನು ವಿಶ್ವರೂಪವನ್ನು ತೋರಿಸಿ ಎಲ್ಲರನ್ನೂ ಆಶ್ಚರ್ಯಗೊಳಿಸಿ ಹೊರಟುಹೋದನು. उद्योग० १३१। ದುರ್ಯೋಧನನು ಕರ್ಣಾದಿಗಳ ಮೂಲಕ ಯುದ್ಧಸಿದ್ಧತೆಗಳನ್ನು ಮಾಡಿಕೊಂಡು ಕೃಪಾಚಾರ್ಯ ದ್ರೋಣಾಚಾರ್ಯ ಮೊದಲಾದವರನ್ನು ಹನ್ನೊಂದು ಅಕ್ಷೌಹಿಣೀ ಸೈನ್ಯಕ್ಕೂ ಸೇನಾಪತಿಗಳನ್ನಾಗಿ ಮಾಡಿ ಭೀಷ್ಮಾಚಾರ್ಯರನ್ನು ಎಲ್ಲಾ ಸೇನೆಗಳಿಗೂ ಅಧಿಪತಿಯನ್ನಾಗಿ ಮಾಡಿ ಯುದ್ಧದ ವಿಷಯವನ್ನು ಕರ್ಣನ ಮೂಲಕ ಡಂಗುರ ಹೊಡೆಸಿದನು. "प्रतियाते तु दाशार्हे राजा दुर्योधनस्तदा। कर्णं दुःशासनं चैव शकुनिं चाब्रवीदिदम्। अकृतेनैव कार्येण गतः पार्थानधोक्षजः। स एनान्मन्युनाविष्टः ध्रुवं धक्ष्यत्यसंशयम्। इष्टो हि वासुदेवस्य पाण्डवैर्मम विग्रहः। भविता विग्रहः सोऽयं तुमुलो रोमहर्षणः। तस्मात्सांग्रामिकं सर्वं कारयध्वमतन्द्रिताः। शिबिराणि कुरुक्षेत्रे क्रियन्तां वसुधाधिपाः। प्रयाणं घुष्यतामद्य श्वोभूत इति माचिरम्" उद्योग० १५३। ಭೀಷ್ಮನು ದುರ್ಯೋಧನನಿಗೆ ಶ್ರೀಕೃಷ್ಣನ ಮಹಿಮೆಯನ್ನು ತಿಳಿಸಿ ಅವನನ್ನು ಆಶ್ರಯಿಸಿರುವ ಪಾಂಡವರಿಗೇ ಜಯ ಲಭಿಸುವುದೆಂದು ಹೇಳಿ ಪಾಂಡವರ ಜೊತೆ ಸಂಧಿಮಾಡಿಕೊಳ್ಳುವಂತೆ ಉಪದೇಶಿಸಿದನು. "तमब्रवीन्महाराज भीष्मः शान्तनवः पुनः। माहात्म्यं ते श्रुतं राजन् केशवस्य महात्मनः। प्रीतिमान् हि दृढं कृष्णः पाण्डवेषु यशस्विषु। तस्मादब्रवीमि राजेन्द्र शमो भवतु पाण्डवैः" भीष्म० ६८। ಕರ್ಣನ ಅನುಮತಿಯಂತೆ ದುರ್ಯೋಧನನು ದ್ರೋಣಾಚಾರ್ಯರಿಗೆ ಸೇನಾಧಿಕಾರವನ್ನು ವಹಿಸಿದನು. द्रोण० ५। ಯುಧಿಷ್ಠಿರನನ್ನು ಜೀವಸಹಿತ ಹಿಡಿದು ತರಬೇಕೆಂದು ದುರ್ಯೋಧನನು ಹೇಳಲು ಅದಕ್ಕಾಗಿ ಯತ್ನಿಸಿದ ದ್ರೋಣಾಚಾರ್ಯರಿಗೆ ಅದು ಅಸಾಧ್ಯವಾಯಿತು. द्रोण० ३३। ಅರ್ಜುನ ಮತ್ತು ಯುಧಿಷ್ಠಿರರೊಡನೆ ಯುದ್ಧಮಾಡಿ ಸೋತನು. "ततो दुर्योधनः कृष्णौ नवभिर्नवभिः शरैः। अविध्यत रणे राजन् शरैराशीविषोपमैः॥ ततः क्रुद्धो रणे पार्थः सृक्विणी परिसंलिहन्। धनुरस्याच्छिनत्तूर्णं हस्तावपि च वीर्यवान्। दुर्योधनं च बाणाभ्यां तीक्ष्णाभ्यां विरथीकृतम्। अविद्धचद्धस्ततलयोरुभयोरर्जुनस्तदा। स वेदनाभिराविग्नः पलायनपरायणः" द्रोण० १०३। "तं तपन्तमिवादित्यं कुरुराजं महाहवे। नाशकन्वीक्षितुं राजन् पाण्डुपुत्रस्य सैनिकाः। ततो युधिष्ठिरो राजा कुपितो राजसत्तम। अभ्यधावत्कुरुपतिं तव पुत्रं जिघांसया। ततो दुर्योधनः क्रुद्धः शरैः सन्नतपर्वभिः। विव्याध दशभिस्तूर्णं ध्वजं चिच्छेद चेषुणा। ततो युधिष्ठिरो राजा तव पुत्रस्य मारिष। शरं च सूर्यरश्म्याभमत्युग्रमनिवारणम्। हा हतोऽसीति राजानमुक्त्वाऽमुञ्चद्युधिष्ठिरः। स तेना कर्णमुक्तेन विद्धो बाणेन कौरवः। निषसाद रथोपस्थे भृशं संमूढचेतनः"। ಧೃಷ್ಟದ್ಯುಮ್ನನಿಂದ ಪರಾಜಿತನಾದ ದುರ್ಯೋಧನನು ಕುದುರೆಯನ್ನು ಏರಿ ಓಡಿಹೋದನು. ಸೈನ್ಯವೆಲ್ಲವೂ ನಾಶವಾದುದನ್ನು ಕಂಡ ದುರ್ಯೋಧನನು

ಗದೆಯೊಡನೆ ಒಂದು ಮಡುವಿನಲ್ಲಿ ಅವಿತುಕೊಂಡು ಜಲ ಸ್ತಂಭನಮಾಡಿ ಕುಳಿತನು. ಆಗ ಆ ವಿಷಯವನ್ನು ತಿಳಿದ ಪಾಂಡವರು ದುರ್ಯೋಧನನನ್ನು ಅನೇಕ ವಿಧವಾಗಿ ಮೂದಲಿಸಲು ಅವನು ಗದೆಯೊಡನೆ ಮಡುವಿನಿಂದ ಮೇಲಕ್ಕೆ ಎದ್ದು ಬಂದನು. ಭೀಮ ದುರ್ಯೋಧನರಿಗೆ ಗದಾಯುದ್ಧ ನಡೆದು ಭೀಮನು ದುರ್ಯೋಧನನ ತೊಡೆಯನ್ನು ಮುರಿದು ಪ್ರತಿಜ್ಞೆಯನ್ನು ಪೂರ್ತಿಮಾಡಿದನು. "दुर्योधनो हते सैन्ये विद्रुतेषु पदातिषु। ह्रदं द्वैपायनं नाम विवेश भृशदुःखितः। शयानं धार्तराष्ट्रं तु सलिले स्तम्भिते तदा। पाण्डवाः सह कृष्णेन वाग्भिरुग्राभिरार्दयन्। स तुद्यमानो बलवान् वाग्भी राम समन्ततः। उत्थितः स ह्रदाद्वीरः प्रगृह्य महतीं गदाम्। स चाप्युपागतो योद्धुं भीमेन सह साम्प्रतम्। आजघ्ने मूर्ध्नि कौन्तेयं गदया भीमवेगया। तयात्वभिहतो भीमः पुत्रेण तव पाण्डवः। नाकम्पत महाराज तदद्भुतमिवाभवत्। ऊरुभ्यां प्राहिणोद्राजन् गदां वेगेन पाण्डवः। सा वज्रनिष्पेषसमा प्रहिता भीमकर्मणा। ऊरू दुर्योधनस्याथ बभञ्ज प्रियदर्शनौ। स पपात नरव्याघ्रः वसुधामनुनादयन्" शल्य० ५९।

**दुर्योनि ದುರ್ಯೋನಿ** (स्त्री०) 1. ನೀಚಜಾತಿ. (वि०) 2. ನೀಚಜಾತಿಯಲ್ಲಿ ಹುಟ್ಟಿದ. "न कथंचन दुर्योनिः प्रकृतिं स्वां नियच्छति" मनु० १०-५९।

**दुर्लक्ष्य ದುರ್ಲಕ್ಷ್ಯ** (वि०) 1. ತಿಳಿಯಲು ಕಷ್ಟವಾದ, ತಿಳಿಯಲು ಅಶಕ್ಯವಾದ. दुःखेन लक्ष्यते — दुर् + लक्ष (आलोचने) "ण्यत्" (३-१-१२४)। "मनश्चलं प्रकृत्यैव दुर्लक्ष्यं च तथापि मे" रत्ना० ३-२। 2. ನೋಡಲು ಕಷ್ಟವಾದ, ಕಷ್ಟದಿಂದ ನೋಡಬಹುದಾದ. दुर् + लक्ष (दर्शने) "ण्यत्"।

**दुर्लङ्घ्य ದುರ್ಲಂಘ್ಯ** (वि०) 1. ದಾಟಲು ಅಶಕ್ಯವಾದ, ಕಷ್ಟದಿಂದ ದಾಟಬಹುದಾದ. 2. ಮೀರಲಾಗದ, ಅತಿಕ್ರಮಿಸಲಾಗದ. दुःखेन लङ्घ्यते — दुर् + लघि (गतौ) "यत्" (३-१-९७)।

**दुर्लभ ದುರ್ಲಭ** (पुं०) 1. ವಿಷ್ಣು. दुःखेन लभ्यते — दुर् + डु लभष् (प्राप्तौ) "खल्" (३-३-१२६)। ಇಂದ್ರಿಯ ಜಯವಿಲ್ಲದವರಿಗೆ ಲಭಿಸುವುದಿಲ್ಲವಾದುದರಿಂದ ಪರಮಾತ್ಮನು ದುರ್ಲಭನು. "अजितेन्द्रियदुष्प्राप्यो दुर्लभः स च कथ्यते" इति निरुक्तिः। "दुर्लभो दुर्गमो दुर्गः" वि० स०। 2. ಕಠೋರ. (वि०) 3. ಹೊಂದಲು ಅಶಕ್ಯವಾದ, ಪಡೆಯಲು ಅಸಾಧ್ಯವಾದ. "दुर्लभः प्रियो मे भव हृदय निराशम्" माल० २-४। "हितं मनोहारि च दुर्लभं वचः" किरा० १-४। 4. ಉತ್ತಮವಾದ, ಶ್ರೇಷ್ಠವಾದ, ಪ್ರಶಸ್ತವಾದ. "सर्वत्र सुलभा गङ्गा त्रिषु स्थानेषु दुर्लभा। हरिद्वारे प्रयागे च गङ्गा सागरसङ्गमे" कूर्मपु०। 5. ಪ್ರಿಯವಾದ, ಇಷ್ಟವಾದ. (स्त्री०) **दुर्लभा ದುರ್ಲಭಾ**. 6. ತೀಟಕಸಂಧಿ. 7. ಹೆಗ್ಗುಳ್ಳ.

**दुर्ललित ದುರ್ಲಲಿತ** (न०) 1. ಮೊಂಡುತನ, ಹಟಮಾರಿತನ. दुर्+लल (ईप्सायाम्) भावे "क्तः" (३-३-११४)। 2. ದುರ್ವ್ಯಾಪಾರ, ದುಷ್ಟಕೃತ್ಯ, ಪುಂಡಾಟ. (वि०) 3. ಮೊಂಡುತನದ, ಹಟಮಾರಿತನದ. "स्पृहयामि खलु दुर्ललितायास्मै" शाकु० ७। 4. ಬಹಳ ಮುದ್ದಾಗಿ ಪ್ರೀತಿಸಲ್ಪಟ್ಟ, ಬಹಳ ಪ್ರೀತಿಯಿಂದ ಕಾಣಲ್ಪಟ್ಟ. "बहु कुसुमितास्वपि सखे नोपवनलतासु नम्रविटपासु। चक्षुर्बध्नाति धृतिं तदङ्गनालोकदुर्ललितम्" विक्र० २-८। "हा वत्स वृषसेन, हा मदङ्कदुर्ललित, हा गदायुद्धप्रिय प्रयच्छ मे" वेणी० ४।

**दुर्वच ದುರ್ವಚ** (वि०) 1. ಹೇಳಲಾಗದ, ಹೇಳಲೂ ಕಷ್ಟವಾದ, ಬಹಳ ಕಷ್ಟದಿಂದ ಹೇಳಬಹುದಾದ. दुर्+वच (परिभाषणे) "खल्" (३-३-१२६)। "अपि वागधिपस्य दुर्वचं वचनं तद्विदधीत विस्मयम्" किरा० २-२। 2. ವಿವರಿಸಲಾಗದ, ವರ್ಣಿಸಲಶಕ್ಯವಾದ, ಹೇಳಬಾರದಾದ, ಅವಾಚ್ಯವಾದ. "दुर्वचं तदथ मा स्म भून्मृगस्त्वय्यसौ यदकरिष्यदोजसा" किरा० १३-४९।

**दुर्वचन ದುರ್ವಚನ** (न०) ಕೆಟ್ಟಮಾತು, ಬೈಗಳು.

**दुर्वचस् ದುರ್ವಚಸ್** (न०) 1. ದುರ್ಭಾಷೆ, ಕೆಟ್ಟಮಾತು, ಬೈಗಳು. दुष्टं वचः। "असह्यं दुर्वचो ज्ञातेर्मेघास्तरितरौद्रवत्" उद्भ०। (वि०) 2. ದುರ್ಭಾಷೆಯಾಡುವ, ಕೆಟ್ಟಮಾತುಗಳನ್ನಾಡುವ, ಬಿರುಸುಮಾತನ್ನಾಡುವ. दुष्टं वचोऽस्य।

**दुर्वर्ण ದುರ್ವರ್ಣ** (पुं०) 1. ಕೆಟ್ಟಬಣ್ಣ. दुष्टो वर्णः। (न०) 2. ರಜತ, ಬೆಳ್ಳಿ. दुष्टो वर्णोऽस्य। [ಬಣ್ಣದಲ್ಲಿ ಚಿನ್ನಕ್ಕಿಂತಲೂ ಬೆಳ್ಳಿಯು ಕಿರಿದಾದುದು.] "उच्चैर्महारजतराजिविराजितासौ दुर्वर्णभित्तिरिह सान्द्रसुधासवर्णा" माघ० ४-२८। (वि०) 3. ಕೆಟ್ಟಬಣ್ಣವುಳ್ಳ, ಕಂದುಬಣ್ಣದ.

**दुर्वह ದುರ್ವಹ** (वि०) ವಹಿಸಲಶಕ್ಯವಾದ. ಹೊರಲಾಗದ, ಬಹಳ ಭಾರವಾದ. दुःखेन उह्यते—दुर् + वह (प्रापणे)

"खल्" (३-३-१२६)। "प्राप्य मन्मथरसादतिभूमिं दुर्वहस्तनभरा: सुरतस्य" माघ० १०-८०।

**दुर्वाक्य ದುರ್ವಾಕ್ಯ** (न०) ಕೆಟ್ಟ ಮಾತು, ಬೈಗಳು. दुष्टं वाक्यम्।

**दुर्वाच् ದುರ್ವಾಚ್** (स्त्री०) 1. ಕೆಟ್ಟ ಮಾತು. दुष्टा वाक्। (वि०) 2. ಕೆಟ್ಟ ಮಾತುಳ್ಳ, ದುರ್ಭಾಷೆಯನ್ನಾಡುವ. दुष्टा वागस्य। "अतीव जल्पन् दुर्वाचो भवतीह" भा०।

**दुर्वाच्य ದುರ್ವಾಚ್ಯ** (न०) 1. ಅಪವಾದ, ನಿಂದೆ. 2. ಅಕೀರ್ತಿ. "क्रीडानिमित्तं दुर्वाच्यं श्रुत्वा स न भविष्यति" रामा०। (वि०) 3. ಕಷ್ಟದಿಂದ ಹೇಳಲ್ಪಡುವ.

**दुर्वाद ದುರ್ವಾದ** (पुं०) 1. ಕೆಟ್ಟ ಮಾತು, ದುರ್ಭಾಷೆ. 2. ಅಕೀರ್ತಿ, ಅಪಯಶಸ್ಸು. दुष्टो वाद:। 3. ಅಸಮಂಜಸವಾದ ಮಾತು.

**दुर्वादिन् ದುರ್ವಾದಿನ್** (वि०) 1. ಕೆಟ್ಟ ಮಾತುಗಳನ್ನಾಡುವವನು. 2. ಅಸಂಬದ್ಧವಾಗಿ ಮಾತಾಡುವವನು, ಅಸಮಂಜಸವಾಗಿ ಮಾತಾಡುವವನು. दुष्टं वदति—दुर् + वद (व्यक्तायां वाचि) "णिनि:" (३-२-७८)। स्त्रियाम् "ङीप्" (४-१-५)। **-वादिनी -ವಾದಿನೀ.**

**दुर्वार ದುರ್ವಾರ** (वि०) 1. ತಡೆಯಲು ಅಶಕ್ಯವಾದ, ಕಷ್ಟದಿಂದ ತಡೆಯಬಹುದಾದ, ಅಡಗಿಸಲಾಗದ. "किं चायमरिदुर्वार: पाणौ पाश: प्रचेतस:" कुमा० २-२१। 2. ಕಷ್ಟದಿಂದ ನಿವಾರಿಸಬಹುದಾದ. दुर्+वृञ् (वरणे) "खल्" (३-३-१२६)।

**दुर्वारण ದುರ್ವಾರಣ** (वि०) ಕಷ್ಟದಿಂದ ತಡೆಯಲ್ಪಡುವ. दु:खेन वारणं यस्य। "संरब्धश्च शरानस्यन् द्रोणं दुर्वारणं रणे" भा० द्रोण० १९३-३०।

**दुर्वार्ता ದುರ್ವಾರ್ತಾ** (स्त्री०) ಕೆಟ್ಟ ಸಮಾಚಾರ. दुष्टा वार्ता।

**दुर्वासना ದುರ್ವಾಸನಾ** (स्त्री०) ಕೆಟ್ಟ ಬುದ್ಧಿ, ಕೆಟ್ಟ ಒಲವು. दुष्टा वासना। "त्वत्संनिकर्षात् दुर्वासनोपहतैरस्मदन्तेवासिभि: कर्मसु श्लथादरैर्भवितव्यम्" प्रबोध० ६।

**दुर्वासस् ದುರ್ವಾಸಸ್** (पुं०) 1. ದುರ್ವಾಸಮುನಿ, ಅತ್ರಿಮಹರ್ಷಿಯ ಪುತ್ರ. [ಈ ಋಷಿಯು ಪರಶಿವನ ಅಂಶದಿಂದ ಅತ್ರಿಮಹರ್ಷಿಗೆ ಅನಸೂಯಾ ಗರ್ಭದಲ್ಲಿ ಜನಿಸಿದನು. "ममांशस्तु क्षितितले महाभागो द्विजोत्तम:। दुर्वासा इति विख्यात: स हि त्वां याजयिष्यति" भा० आदि० २४९-५४। "अत्रे: पत्न्यनसूया त्रीन् जज्ञे सुयशस: सुतान्। दत्तं दुर्वाससं सोममात्मेशब्रह्मसंभवान्" भाग० ४-१-१५। ರುದ್ರಾಂಶ ಸಂಭೂತನಾದ ದುರ್ವಾಸಋಷಿಯು ಬಹಳ ಕೋಪದ ಸ್ವಭಾವದವನು. ಒಂದು ದಿನ ದೇವಲೋಕದಲ್ಲಿ ದೊರೆತ ಒಂದು ಪುಷ್ಪಮಾಲೆಯನ್ನು ಐರಾವತದ ಮೇಲೆ ಹೋಗುತ್ತಿದ್ದ ಇಂದ್ರನಿಗೆ ಕೊಟ್ಟಾಗ ಇಂದ್ರನು ಅದನ್ನು ಆನೆಯ ತಲೆಯ ಮೇಲೆ ಎಸೆದನು. ಆನೆಯು ಅದನ್ನು ತೆಗೆದು ನೆಲಕ್ಕೆ ಎಸೆಯಲು ಋಷಿಯು ಕೋಪಗೊಂಡು ಇಂದ್ರನ ಸಂಪತ್ತೆಲ್ಲವೂ ನಾಶವಾಗಲಿ ಎಂದು ಶಾಪವಿತ್ತನು. विष्णुपु०। ಒಂದು ಸಲ ಕುಂತಿಯ ಸೇವೆಯಿಂದ ಸಂತುಷ್ಟನಾದ ದುರ್ವಾಸ ಋಷಿಯು ಅವಳಿಗೆ ಮಂತ್ರೋಪದೇಶ ಮಾಡಿದನು. ಅದರಿಂದ ಕುಂತಿಯು ಧರ್ಮರಾಜ ಭೀಮ ಅರ್ಜುನರನ್ನೂ ಮಾದ್ರಿಯು ನಕುಲ ಸಹದೇವರನ್ನೂ ಪಡೆದರು. भा० आदि०। ಏಕಾದಶೀ ವ್ರತವನ್ನು ಆಚರಿಸುತ್ತಿದ್ದ ಅಂಬರೀಷ ಮಹಾರಾಜನ ನಿಯಮವನ್ನು ಭಂಗಗೊಳಿಸಬೇಕೆಂದು ಯೋಚಿಸಿ ದುರ್ವಾಸ ಋಷಿಯು ಅವನಲ್ಲಿ ಅಪರಾಧಮಾಡಿ ವಿಷ್ಣುವಿನ ಚಕ್ರಾಯುಧಕ್ಕೆ ಸಿಕ್ಕಿಕೊಂಡು ಕೊನೆಗೆ ಅಂಬರೀಷನನ್ನೇ ಮರೆಹೊಕ್ಕು ತಪ್ಪಿಸಿಕೊಂಡನು. भाग० ९-४। ಪಾಂಡವರು ವನವಾಸಕಾಲದಲ್ಲಿ ಅಕ್ಷಯಪಾತ್ರೆಯ ಮಹಿಮೆಯಿಂದ ಸೌಖ್ಯವಾಗಿರುವುದನ್ನು ತಿಳಿದು ದುರ್ಯೋಧನನು ದ್ರೌಪದಿಯ ಭೋಜನವಾದನಂತರ ಭಿಕ್ಷೆ ಬೇಡಿ ಅವರಿಗೆ ಶಾಪಕೊಟ್ಟು ಬರಬೇಕೆಂದು ದುರ್ವಾಸ ಋಷಿಯನ್ನು ಕಳುಹಿಸಿದನು. ಆದರೆ ಆಪದ್ಬಾಂಧವನಾದ ಶ್ರೀಕೃಷ್ಣನ ಕರುಣೆಯಿಂದ ಶಿಷ್ಯರೊಡನೆ ಹೋಗಿದ್ದ ಈ ಋಷಿಗೆ ಭೋಜನ ಸಂತೃಪ್ತಿಯುಂಟಾಗಿ ಈ ಕಷ್ಟದಿಂದ ಪಾಂಡವರೂ ಪಾರಾದರು. भा० वन०।] ಇತ್ಯಾದಿ. (वि०) 2. ಮಲಿನವಾದ ಮತ್ತು ಹರುಕುವಸ್ತ್ರವನ್ನು ಧರಿಸಿರುವ.

**दुर्विगाह ದುರ್ವಿಗಾಹ** (पुं०) 1. ಧೃತರಾಷ್ಟ್ರನ ಒಬ್ಬ ಮಗ. "दुर्मदो दुर्विगाहश्च विवित्सुर्विकृताननः" भा० आदि०। (वि०) 2. ಕಷ್ಟದಿಂದ ಇಳಿಯಲ್ಪಡುವ, ಇಳಿಯಲು ಬಹಳ ಕಷ್ಟವಾದ (ನದಿ ಕೆರೆ ಮುಂತಾದುವು). दु:खेन विगाह्यते—दुर्+वि+गाहू (विलोडने) "खल्" (३-३-१२६)।

**दुर्विगाह्य ದುರ್ವಿಗಾಹ್ಯ** (वि०) "दुर्विगाह" ಪದದ ಅರ್ಥ. दुर् + वि + गाहू (विलोडने) "ण्यत्" (३-१-१२४)।

**दुर्विचिन्तित ದುರ್ವಿಚಿಂತಿತ** (न०) ಕೆಟ್ಟ ಆಲೋಚನೆ, ಕೆಡಕುಮಾಡುವ ಯೋಚನೆ. दुष्टं विचिन्तितम्। "दु:स्वप्नदुर्विचिन्तितदुष्प्रेक्षितदुष्कृतानि कर्माणि" बृहत्सं० २-२१।

**दुर्विचिन्त्य ದುರ್ವಿಚಿಂತ್ಯ** (वि०) ಊಹಿಸಲಾಗದ, ಕಲ್ಪನೆಗೂ ಸಿಲುಕದ, ಯೋಚಿಸಲೂ ಕಷ್ಟವಾದ.

**दुर्विदग्ध ದುರ್ವಿದಗ್ಧ** (वि०) 1. ಅವಿವೇಕಿ, ಮೂರ್ಖ. 2. ಗರ್ವದಿಂದ ಕೊಬ್ಬಿರುವ. "ज्ञानलवदुर्विदग्धं ब्रह्मापि नरं न रञ्जयति" भर्तृ० १-३। 3. ವ್ಯರ್ಥವಾಗಿ ಅಹಂಕಾರಪಡುವ. "अरे रे वाचाट, वृथाशस्त्रग्रहण-दुर्विदग्ध" वेणी० ३।

**दुर्विध ದುರ್ವಿಧ** (वि०) 1. ದರಿದ್ರ, ಬಡವ. दुःस्था विधा प्रकारः समृद्धिर्वा यस्य। "अपि खञ्जनमञ्जनाञ्चिते विदधाते रुचिगर्वदुर्विधम्" नैष० २-२३। 2. ನೀಚ, ದುಷ್ಟ, ದುರ್ಜನ. 3. ಮೂರ್ಖ, ಅಜ್ಞ, ತಿಳಿಗೇಡಿ. "शास्त्रेष्वन्येषु मुख्येषु विद्यमानेषु दुर्विधाः। बुद्धिमान्वीक्षिकीं प्राप्य निरर्थान् प्रवदन्ति ते" रामा०। "दुर्विधो वाच्यलिङ्गः स्यात् दुर्गतेऽपि खलेऽपि च" मेदि०।

**दुर्विनय ದುರ್ವಿನಯ** (पुं०) ಅವಿವೇಕ, ಉದ್ಧಟತನ. दुर्+वि+णीञ् (प्रापणे) भावे "अच्" (३-३-५६)। स्त्रियाम् "क्तिन्" (३-३-९४)। **–विनीतिः –ವಿನೀತಿಃ.**

**दुर्विनीत ದುರ್ವಿನೀತ** (पुं०) 1. ಪಳಗಿಸದ ಕುದುರೆ, ಅವಿಧೇಯ ಕುದುರೆ. दुःखेन विनीयते–दुर्+वि+णीञ् (प्रापणे) "क्तः" (३-२-१०२)। स्त्रियाम् जाति० "ङीष्" (४-१-६३)। (वि०) 2. ಅವಿಧೇಯ, ವಿನಯವಿಲ್ಲದವನು. "अनुत्थानवता चापि दुर्विनीतेन दुर्धिया" भा० उद्योग० १३५-११।

**दुर्विभाव ದುರ್ವಿಭಾವ** (वि०) ಯೋಚಿಸಲೂ ಸಾಧ್ಯವಿಲ್ಲದ, ಊಹಿಸಲೂ ಅಶಕ್ಯವಾದ. दुःखेन विभाव्यते–दुर्+वि+भू+णिच् "खल्" (३-३-१२६)। "असद्वृत्तेरहोवृत्तं दुर्विभावं विधेरिव" किरा० ११-५६।

**दुर्विमोचन ದುರ್ವಿಮೋಚನ** (पुं०) 1. ಧೃತರಾಷ್ಟ್ರನ ಒಬ್ಬ ಮಗ. "चित्रबाहुश्चित्रवर्मा सुवर्मा दुर्विमोचनः" भा० आदि०। (वि०) 2. ಬಹಳ ಕಷ್ಟದಿಂದ ಬಿಡಿಸಲ್ಪಡುವ, ಬಿಡಿಸಲು ಅಶಕ್ಯವಾದ.

**दुर्विलसित ದುರ್ವಿಲಸಿತ** (न०) ದುಷ್ಟತನ, ಪುಂಡುತನ, ಕೀಟಲೆ. दुष्टं विलसितम्। "सर्वमेतन्महामोहस्य दुर्विलसितम्" प्रबोध० ६।

**दुर्विवाह ದುರ್ವಿವಾಹ** (पुं०) ನಿಂದಿತವಾದ ವಿವಾಹ, ಅಸುರ ರಾಕ್ಷಸ ಗಾಂಧರ್ವ ಮತ್ತು ಪೈಶಾಚ ವಿವಾಹ. दुष्टः निन्दितः विवाहः। "जायन्ते दुर्विवाहेषु ब्रह्मधर्मद्विषः सुताः" मनु० ३-४१। ಅಷ್ಟವಿಧ ವಿವಾಹಗಳಲ್ಲಿ ಬ್ರಾಹ್ಮ ದೈವ ಆರ್ಷ ಮತ್ತು ಪ್ರಾಜಾಪತ್ಯ ಈ ನಾಲ್ಕು ಮಾತ್ರ ಪ್ರಶಸ್ತ ಮತ್ತು ಶಾಸ್ತ್ರೀಯ. ಉಳಿದ ನಾಲ್ಕು ದುರ್ವಿವಾಹಗಳು.

**दुर्विष ದುರ್ವಿಷ** (पुं०) ಪರಶಿವ, ಪರಮೇಶ್ವರ. दुःस्थितं विषमस्य। "दुर्धर्षो दुष्प्रकाशश्च दुर्विषो दुर्जयोऽजयः" भा० शान्ति० २१०-१५७।

**दुर्विषह ದುರ್ವಿಷಹ** (पुं०) 1. ಧೃತರಾಷ್ಟ್ರನ ಒಬ್ಬ ಮಗ. "दुर्योधनो दुर्विषहो दुर्मुखो दुष्प्रधर्षणः" भा० आदि० २०१-१। 2. ಪರಶಿವ, ಪರಮೇಶ್ವರ. "दुर्वारणो दुर्विषहो दुस्सहो दुरतिक्रमः" भा० शान्ति०। (वि०) 3. ಸಹಿಸಲು ಕಷ್ಟವಾದ, ಕಷ್ಟದಿಂದ ಸಹಿಸಬಹುದಾದ. दुर्+वि+षह (मर्षणे) "खल्" (३-३-१२६)।

**दुर्वृत्त ದುರ್ವೃತ್ತ** (न०) 1. ದುರಾಚಾರ, ಕೆಟ್ಟ ನಡವಳಿಕೆ, ಅಯೋಗ್ಯ ಕೆಲಸ, ಅಸಭ್ಯ ವ್ಯಾಪಾರ. दुष्टं वृत्तम्। "दुर्वृत्तं धार्तराष्ट्राणामुक्तवान् भगवानृषिः" भा० आदि० १-७६। (वि०) 2. ನೀಚ, ಅಸಭ್ಯ, ದುರ್ಜನ. दुष्टं वृत्तं यस्य। "चाटतस्करदुर्वृत्तमहासाहसिकादिभिः" याज्ञ० १-३३६।

**दुर्हण ದುರ್ಹಣ** (वि०) ಕೊಲ್ಲಲು ಅಶಕ್ಯನಾದ, ಕಷ್ಟದಿಂದ ಕೊಲ್ಲಲ್ಪಡುವ. दुःखेन हन्यते — हन (हिंसागत्योः) "खल्" (३-३-१२६)। "प्रकल्पयति च तस्यार्थो निकुम्भे दुर्हणे हते" भट्टि० १६-११।

**दुर्हुत ದುರ್ಹುತ** (न०) ಅಶಾಸ್ತ್ರೀಯವಾಗಿ ಮಾಡಿದ ಹೋಮ, ಯಾವ ಫಲವನ್ನೂ ಕೊಡದ ಹೋಮ. दुष्टं निन्दितं हुतम्। "एतेषु दक्षिणा दत्ता दावाग्नाविव दुर्हुतम्" भा० शान्ति० १८-२५।

**दुर्हृद् ದುರ್ಹೃದ್** (पुं०) 1. ವೈರಿ, ಶತ್ರು. ಹಗೆ. दुष्टं हृदयमस्य — हृदयस्य हृद्भावः (५-४-१५०)। निपा०। "कीर्तिं सूते दुर्हृदो निष्प्रलान्ति" उ० रा० ५-३०। (वि०) 2. ಕೆಟ್ಟ ಮನಸ್ಸುಳ್ಳ, ನೀಚವಾದ ಮನಸ್ಸುಳ್ಳ. दुष्टं हृदस्य। "अश्मसारमयं नूनं हृदयं मम दुर्हृदः" भा० वन० ३१४-१२।

**दुर्हृदय ದುರ್ಹೃದಯ** (न०) 1. ಕೆಟ್ಟ ಮನಸ್ಸು. दुष्टं हृदयम्। (वि०) 2. ಕೆಟ್ಟ ಮನಸ್ಸುಳ್ಳ, ನೀಚವಾದ ಹೃದಯವುಳ್ಳ. दुष्टं हृदयं यस्य।

**दुल – उत्क्षेपे** (चुरा० उभ० सक० से०)। दोलयति, –ते। **दोलयेत्**, –त। अदूदुलत्, –त। ಇತ್ಯಾದಿ. 1. ಮೇಲಕ್ಕೆ

ಎತ್ತು. 2. ಅಲ್ಲಿಂದಿಲ್ಲಿಗೆ ಚಲಿಸು, ಆಕಡೆಯಿಂದ ಈಕಡೆಗೆ ಆಡುತ್ತಿರು.

**दुलि ದುಲಿ** (पुं०) 1. ಒಬ್ಬ ಋಷಿ. (स्त्री०) 2. ಹೆಣ್ಣು ಆಮೆ. (वि०) 3. ಮೇಲಕ್ಕೆ ಎತ್ತುವ. दुल (उत्क्षेपे) "इन्" (उ० ४-१२०)। "दुलिः स्त्रियाम्। कमठयां ना मुनौ" मेदि०।

**दुश्चर ದುಶ್ಚರ** (पुं०) 1. ಭಲ್ಲೂಕ, ಕರಡಿ. 2. ಕಪ್ಪೆಚಿಪ್ಪು. दुष्टं चरति — दुस्+चर (गतिभक्षणयोः) "अच्" (३-१-१३४)। (वि०) 3. ಆಚರಿಸಲು ಅಶಕ್ಯವಾದ, ಮಾಡಲು ಕಷ್ಟವಾದ. दुःखेन चर्यते—दुस्+चर "खल्" (३-३-१२६)। "स्थाने तपो दुश्चरमेतदर्थमपर्णया पेलवयापि तप्तम्" कुमा० ७-६५।

**दुश्चरित ದುಶ್ಚರಿತ** (न०) 1. ಕೆಟ್ಟ ಕಾರ್ಯ, ಅಕಾರ್ಯ, ಪಾಪಕಾರ್ಯ. दुष्टं चरितम्। "इह दुश्चरितैः केचित् केचित् पूर्वकृतैस्तथा। प्राप्नुवन्ति दुरात्मानो नरा रूपविपर्ययम्" मनु० ११-४८। (वि०) 2. ಕಷ್ಟದಿಂದ ಮಾಡಲ್ಪಟ್ಟ. दुःखेन चरितम्। 3. ಪಾಪಕಾರ್ಯವುಳ್ಳ, ಕೆಟ್ಟ ಕೆಲಸಮಾಡಿದ. दुष्टं चरितं यस्य। "उपागमे दुश्चरिता इवापदां गतिं न निश्चेतुमलं शिलीमुखाः" किरा० ४-३५।

**दुश्चर्मक ದುಶ್ಚರ್ಮಕ** (न०) ಕುಷ್ಠರೋಗ.

**दुश्चर्मन् ದುಶ್ಚರ್ಮನ್** (पुं०) 1. ಕುಷ್ಠರೋಗ, ಶ್ವಿತ್ರ. (वि०) 2. ಮೇಲಿನ ಚರ್ಮವಿಲ್ಲದ ಲಿಂಗವುಳ್ಳವನು. "हेमहारी तु कुनखी दुश्चर्मा गुरुतल्पगः" याज्ञ० ३-२०९।

**दुश्चारित्र ದುಶ್ಚಾರಿತ್ರ** (न०) "दुश्चरित्र" ಪದದ ಅರ್ಥ. चरित्रमेव—स्वार्थे "अण्" (५-४-३८)। दुष्टं चारित्रम्। (वि०) दुष्टं चारित्रमस्य वा।

**दुश्चिकित्स्य ದುಶ್ಚಿಕಿತ್ಸ್ಯ** (वि०) ಕಷ್ಟದಿಂದ ಚಿಕಿತ್ಸೆಮಾಡಲ್ಪಡುವ, ಚಿಕಿತ್ಸೆ (ರೋಗ ಪ್ರತೀಕಾರ) ಮಾಡಲು ಕಷ್ಟವಾದ. दुस् + कित (निवासे रोगापनयने च) + सन् कर्म० "ण्यत्" (३-१-१२४)।

**दुश्चिक्य ದುಶ್ಚಿಕ್ಯ** (न०) ಲಗ್ನದಿಂದ ಮೂರನೆಯ ರಾಶಿ. "त्रि त्रिकोणश्च नवधा दुश्चिक्यं स्यात् तृतीयकम्"।

**दुश्चेष्टित ದುಶ್ಚೇಷ್ಟಿತ** (न०) 1. ಕೆಟ್ಟ ಕೆಲಸ, ಅಯೋಗ್ಯ ಕೆಲಸ. दुष्टं चेष्टितम्। (वि०) 2. ಕೆಟ್ಟ ಕೆಲಸವುಳ್ಳ, ಅಯೋಗ್ಯ ಕೆಲಸಮಾಡುವ, ಹಿಂಸೆಯ ಕಾರ್ಯವುಳ್ಳ. दुष्टं चेष्टितं यस्य। "दुश्चेष्टिते देवरिपौ सरोषस्तस्याविषण्णः समराय चोलकः" कुमा० १३-३७।

**दुश्च्यवन ದುಶ್ಚ್ಯವನ** (पुं०) 1. ಇಂದ್ರ. दुष्टेषु च्यवनमस्य, दुःखेन च्यवनं चालनमस्य वा। ಬಹಳ ದೀರ್ಘಕಾಲದ ಪದವಿಯಾದುದರಿಂದ ಆ ಪದವಿಯಲ್ಲಿರುವ ಇಂದ್ರನಿಗೆ ಈ ಹೆಸರು. (वि०) 2. ಕದಲಿಸಲು ಅಶಕ್ಯವಾದ, ಕಷ್ಟದಿಂದ ಕದಲಿಸಬಹುದಾದ. दुस्+च्युङ् (गतौ) "ल्युः" (३-१-१३४)।

**दुश्च्याव ದುಶ್ಚ್ಯಾವ** (पुं०) 1. ಪರಶಿವ, ಪರಮೇಶ್ವರ. (वि०) 2. ಕಷ್ಟದಿಂದ ಕದಲಿಸಲ್ಪಡುವ, ಕಷ್ಟದಿಂದ ಕದಲಿಸಬಹುದಾದ. दुःखेन च्याव्यते — दुस् + च्युङ् (गतौ) + णिच् कर्म० "खल्" (३-३-१२६)।

**दुःश्रव ದುಃಶ್ರವ** (पुं०) ಒಂದು ವಿಧ ಕಾವ್ಯದೋಷ, ಕೇಳಲು ಕಷ್ಟವಾದ ಕಠಿನ ವರ್ಣಗಳಿಂದ ಕೂಡಿದ ಕಾವ್ಯದ ಒಂದು ದೋಷ. दुस्+श्रु (श्रवणे) "खल्" (३-३-१२६)। "परुषवर्णतया श्रुतिदुःखावहत्वं दुःश्रवत्वम्" सा० द०। "स्मरार्त्यन्धः कदा लप्स्ये कार्तार्थ्यं विरहे तव" ಈ ವಾಕ್ಯವು ಅನೇಕ ಪರುಷವರ್ಣಗಳಿಂದ ಕೂಡಿರುವುದರಿಂದ ಇಲ್ಲಿ ದುಃಶ್ರವತ್ವರೂಪವಾದ ಕಾವ್ಯದೋಷವಿರುವುದು.

**दुष — वैकृत्ये** (दिवा० पर० अक० अनि०)। दुष्यति। दुदोष। दोष्टा। दोक्ष्यति। दुष्यतु। अदुष्यत्। दुष्येत्। दुष्यात्। ಇತ್ಯಾದಿ. 1. ವಿಕಾರಹೊಂದು, ಕೆಟ್ಟುಹೋಗು. "दुरारोहं पदं राज्ञां सर्वलोकनमस्कृतम्। स्वल्पेनाप्यपकारेण ब्राह्मण्यमिव दुष्यति" पञ्चतं० १-७२। 2. ಅಶುದ್ಧವಾಗು, ಅಪವಿತ್ರವಾಗು. "पवित्रं दुष्यतीत्येतद्धर्मतो नोपपद्यते" मनु० १०-१०२।

**भावे :**—दुष्यते। दुदुषे। दोष्टा। दोक्ष्यते। दुष्यताम्। ಇತ್ಯಾದಿ.

**णिचि :**—दूषयति, –ते। ಚಿತ್ತವಿರಾಗ (ಅಪ್ರೀತಿ) ರೂಪಾರ್ಥದಲ್ಲಿ ವಿಕಲ್ಪವಾಗಿ ಉಪಧಾದೀರ್ಘಬರುವುದು. चित्तं दूषयति दोषयति वा कामः।

**कृत्सु :**—दोष्टव्यम्। दोषणीयम्। दोष्यम्। दुष्टम्। दुष्टवान्, –वती। दुष्यन्, –न्ती। दोष्टुम्। दुष्टम्। दोषणम्। दुष्ट्वा। प्रदुष्य।

(ऊत्वपक्षे) **ण्यन्तात् कृत्सु :**—दूषयितव्यः। दूषणीयः। दूष्यः। दूषितः। दूषितवान्, –वती। दूषयन्, –न्ती। दूषयमानः। दूषयितुम्। दूषितम्। दूषणम्। दूषयित्वा।

**दुष्कर ದುಷ್ಕರ** (न०) 1. ಬಹಳ ಕಷ್ಟದಿಂದ ಕೆಲಸಮಾಡುವುದು. दुस्+डुकृञ् (करणे) भावे "खल्" (३-३-१२६)।

(ವಿ०) 2. ಮಾಡಲು ಅಶಕ್ಯವಾದ, ಕಷ್ಟದಿಂದ ಮಾಡ ಬಹುದಾದ. दुःखेन क्रियते — दुस् + डु कृञ् (करणे) "खल्" (३-३-१२६)। "दुष्करं कृतवान् रामो हीनो यदनया प्रभुः" रामा०।

**दुष्कर्ण ದುಷ್ಕರ್ಣ** (ಪುं०) ಧೃತರಾಷ್ಟ್ರನ ಒಬ್ಬ ಮಗ.

**दुष्कर्मन् ದುಷ್ಕರ್ಮನ್** (ನ०) 1. ಕೆಟ್ಟಕೆಲಸ, ಪಾಪ ಕಾರ್ಯ, ಅಕಾರ್ಯ. दुष्टं कर्म। "दुष्कर्मजा नृणां रोगाः यान्ति चैव क्रमाच्छमम्। जपैः सुरार्चनैर्होमैः दानैस्तेषां क्षयो भवेत्"। (ವಿ०) 2. ಪಾಪಕಾರ್ಯ ವನ್ನು ಮಾಡುವವನು. दुष्टं कर्म यस्य। "ततो वसति दुष्कर्मा नरके शाश्वतीः समाः" भा० उद्योग० १३२-२०।

**दुष्काल ದುಷ್ಕಾಲ** (ಪುं०) 1. ಕೆಟ್ಟಕಾಲ, ಕಷ್ಟದ ಕಾಲ. दुष्टः कालः। "दुष्कालेऽपि कलावसज्जनरुचौ प्राणैः परं रक्षता" मुद्रा० ७-५। 2. ಪರಶಿವ, ಪರಮೇಶ್ವರ. 3. ಪ್ರಳಯ.

**दुष्कीर्ति ದುಷ್ಕೀರ್ತಿ** (ಸ್ತ್ರೀ०) 1. ಅಪಕೀರ್ತಿ, ಅಪ ಯಶಸ್ಸು, ಕೆಟ್ಟ ಹೆಸರು. दुष्टा कीर्तिः। (ವಿ०) 2. ಅಪ ಕೀರ್ತಿಯುಳ್ಳವನು, ಕೆಟ್ಟ ಹೆಸರು ಪಡೆದವನು. दुष्टा कीर्तिर्यस्य।

**दुष्कुल ದುಷ್ಕುಲ** (ನ०) 1. ಕೆಟ್ಟವಂಶ, ಕೆಟ್ಟ ಮನೆತನ. दुष्टं कुलम्। "अन्त्यादपि परं धर्मं स्त्रीरत्नं दुष्कुलादपि" मनु० २-२३८। (ವಿ०) 2. ನೀಚವಂಶದಲ್ಲಿ ಹುಟ್ಟಿ ದವನು. दुष्टं कुलं यस्य।

**दुष्कुलीन ದುಷ್ಕುಲೀನ** (ವಿ०) ಕೆಟ್ಟವಂಶದಲ್ಲಿ ಹುಟ್ಟಿ ದವನು, ನೀಚವಂಶದಲ್ಲಿ ಹುಟ್ಟಿದವನು. दुष्कुले जातः वा "खः" (४-१-१३९)। पक्षे "ढक्" (४-१-१४२)। **दौष्कुलेयः ದೌಷ್ಕುಲೇಯಃ.** "दुष्कुलीनः कुलीनो वा मर्यादां यो न लङ्घयेत्। धर्मापेक्षी मृदुर्ह्रीमान् स कुलीनशताद्वरः" भा० उद्योग० ३९-४७।

**दुष्कृत ದುಷ್ಕೃತ** (ನ०) 1. ಕೆಟ್ಟ ಕೆಲಸ, ನೀಚಕಾರ್ಯ, ಪಾಪಕಾರ್ಯ. दुष्टं कृतम्। "यथा यथा मनस्तस्य दुष्कृतं कर्म गर्हति। तथा तथा शरीरं तत्तेनाधर्मेण मुच्यते" मनु० ११-२२९। 2. ಪಾಪ. "बुद्धियुक्तो जहातीह उभे सुकृतदुष्कृते" गीता २-५०। "सुकृतं दुष्कृतं लोके गच्छन्तमनुगच्छति"।

**दुष्कृति ದುಷ್ಕೃತಿ** (ಸ್ತ್ರೀ०) 1. ಕೆಟ್ಟ ಕೆಲಸ, ನೀಚಕಾರ್ಯ, ಪಾಪಕಾರ್ಯ. दुष्टा कृतिः। (ವಿ०) 2. ಪಾಪಕಾರ್ಯ ವನ್ನು ಮಾಡುವ. दुष्टा कृतिर्यस्य।

**दुष्कृतिन् ದುಷ್ಕೃತಿನ್** (ವಿ०) ಪಾಪಕಾರ್ಯವುಳ್ಳ. दुष्कृत-मस्यास्ति "इनिः" (५-२-११५)।

**दुष्कृत्य ದುಷ್ಕೃತ್ಯ** (ನ०) ಕೆಟ್ಟಕೆಲಸ, ನೀಚಕಾರ್ಯ, ಪಾಪ ಕಾರ್ಯ.

**दुष्क्रम ದುಷ್ಕ್ರಮ** (ಪುं०) 1. ಕೆಟ್ಟ ಪದ್ಧತಿ, ವ್ಯವಸ್ಥೆ ಯಿಲ್ಲದಿರುವುದು. (ವಿ०) 2. ಅಕ್ರಮವಾದ, ಕ್ರಮಬದ್ಧ ವಲ್ಲದ, ಕ್ರಮಾನುಸರಣೆಯಿಲ್ಲದ.

**दुष्क्रिया ದುಷ್ಕ್ರಿಯಾ** (ಸ್ತ್ರೀ०) ಕೆಟ್ಟ ಕೆಲಸ, ಪಾಪ ಕಾರ್ಯ, ಅಕಾರ್ಯ. दुष्टा क्रिया।

**दुष्क्रीत ದುಷ್ಕ್ರೀತ** (ವಿ०) ಪರೀಕ್ಷಿಸದೆ ಕೊಳ್ಳಲ್ಪಟ್ಟ. ವಸ್ತುವಿನ ಯೋಗ್ಯತೆ ಮತ್ತು ಕ್ರಯದ ಮೊಬಲಗು ಇವನ್ನು ಸರಿಯಾಗಿ ತಿಳಿದುಕೊಳ್ಳದೆ ಕೊಳ್ಳುವುದು ದುಷ್ಕ್ರೀತವಾಗುವುದು. दुष्टं क्रीतम्। "क्रीत्वा मूल्येन यो द्रव्यं दुष्क्रीतं मन्यते क्रयी"।

**दुष्ट ದುಷ್ಟ** (ವಿ०) 1. ಕೆಟ್ಟವನಾದ, ಕೆಟ್ಟದಾದ, ದೋಷ ದಿಂದ ಕೂಡಿದ. दुष (वैकृत्ये) "क्तः" (३-४-७२)। "त्याज्यो दुष्टः प्रियोऽप्यासीदङ्गुलीवोरगक्षता" रघु० १-२८। 2. ನೀಚ, ಅಧಮ. 3. ಅಪರಾಧಿ, ತಪ್ಪು ಮಾಡಿದವನು. 4. ಕೊರತೆಯುಳ್ಳ, ದೋಷವುಳ್ಳ. 5. ವ್ಯಭಿಚಾರ ವಿರೋಧ ಸತ್ಪ್ರತಿಪಕ್ಷ ಅಸಿದ್ಧಿ ಮತ್ತು ಬಾಧೆ ರೂಪವಾದ ದೋಷಗಳಿಂದ ಕೂಡಿದ (ಹೇತು, ಹೇತ್ವಾಭಾಸ). (ನ०) 6. ಕುಷ್ಠರೋಗದ ಒಂದು ಭೇದ.

**दुष्टचारिन् ದುಷ್ಟಚಾರಿನ್** (ವಿ०) ಕೆಟ್ಟಕೆಲಸ ಮಾಡುವ. दुष्टं चरति — चर (गतौ) "णिनिः" (३-१-१३४)। स्त्रियाम् "ङीप्" (४-१-५)। **–चारिणी – ಚಾರಿಣೀ.**

**दुष्टचेतस् ದುಷ್ಟಚೇತಸ್** (ವಿ०) 1. ಕೆಟ್ಟ ಮನಸ್ಸುಳ್ಳ, ಕೆಡಕುಮಾಡುವ ಮನಸ್ಸುಳ್ಳ. दुष्टं चेतो यस्य। (ನ०) 2. ಕೆಟ್ಟ ಮನಸ್ಸು, ಕೆಡಕಿನ ಮನಸ್ಸು. दुष्टं चेतः।

**दुष्टता ದುಷ್ಟತಾ** (ಸ್ತ್ರೀ०) 1. ದೋಷದಿಂದ ಕೂಡಿರುವಿಕೆ. 2. ನೀಚವಾಗಿರುವಿಕೆ. 3. ಅಪರಾಧದಿಂದ ಕೂಡಿರುವಿಕೆ. 4. ಪಾಪಕಾರ್ಯದಿಂದ ಕೂಡಿರುವಿಕೆ. दुष्टस्य भावः "तल्" (५-१-११९)।

**दुष्टबुद्धि ದುಷ್ಟಬುದ್ಧಿ, –मति – ಮತಿ** (ಸ್ತ್ರೀ०) 1. ಕೆಟ್ಟ ಬುದ್ಧಿ, ಕೆಡಕಿನ ಬುದ್ಧಿ. दुष्टा बुद्धिः मतिर्वा। (ಪುं०) 2. ಕುಂತಲದೇಶದ ರಾಜನ ಮಂತ್ರಿ. (ವಿ०) 3. ಕೆಡಕು ಮಾಡುವ ಬುದ್ಧಿಯುಳ್ಳ. दुष्टा बुद्धिः मतिर्वा यस्य।

**दुष्टयोग ದುಷ್ಟಯೋಗ** (ಪುं०) ವಿಷ್ಕಂಭ ಮೊದಲಾದ ಇಪ್ಪತ್ತೇಳು ಯೋಗಗಳಲ್ಲಿ ವೈಧೃತಿ ವ್ಯತೀಪಾತ ಮೊದ

ಲಾದ ಕೆಟ್ಟ ಯೋಗಗಳು. ಈ ದುಷ್ಟಯೋಗಗಳಲ್ಲಿ ಶುಭಕಾರ್ಯಗಳು ನಿಷಿದ್ಧ.

**दुष्टात्मन् ದುಷ್ಟಾತ್ಮನ್** (वि०) ಕೆಡುಕಿನ ಬುದ್ಧಿಯುಳ್ಳ, ಇನ್ನೊಬ್ಬರಿಗೆ ಕೇಡೆಣಿಸುವ ಬುದ್ಧಿಯುಳ್ಳ. दुष्टः आत्मा यस्य।

**दुष्ठु ದುಷ್ಠು** (अव्य०) 1. ನಿಂದೆ, ದೂಷಣೆ. दुस्+ष्ठा (गतिनिवृत्तौ) "कुः" (उ० १-२५)। (वि०) 2. ಕೆಟ್ಟ ಸ್ಥಿತಿಯಲ್ಲಿರುವ, ಕಷ್ಟ ದೆಸೆಯಲ್ಲಿರುವ. "कथं दुष्ठुः स्वयं धर्मे प्रजास्त्वं पालयिष्यसि" भट्टि० ६-१३२। 3. ಅವಿನೀತ.

**दुष्पच ದುಷ್ಪಚ** (वि०) ಜೀರ್ಣವಾಗಲು ಕಷ್ಟವಾದ, ಕಷ್ಟದಿಂದ ಪಚನವಾಗುವ. दुःखेन पच्यते — दुस् + डु पचष् (पाके) "खल्" (३-३-१२६)।

**दुष्पतन ದುಷ್ಪತನ** (न०) 1. ಕಷ್ಟದಿಂದ ಬೀಳುವಿಕೆ. दुःखेन पतनम्। 2. ಅಪಶಬ್ದ, ವ್ಯಾಕರಣವಿರುದ್ಧವಾದ ಶಬ್ದ. दुष्टं पतत्यनेन — दुस् + पत्लृ (गतौ) कर० "ल्युट्" (३-३-११७)। ಅಪಶಬ್ದ ಪ್ರಯೋಗದಿಂದ ಪಾಪವುಂಟಾಗುವುದು. "नाप भाषित वै न म्लेच्छित वै म्लेच्छो ह वा नाम यदपशब्दः" श्रुतिः।

**दुष्पत्र ದುಷ್ಪತ್ರ** (पुं०) ಕರಿಯ ಚೋರ. दुष्टं पत्रमस्य। "चण्डा धनहरी क्षेमदुष्पत्रगणहासकाः" अम०।

**दुष्पराजय ದುಷ್ಪರಾಜಯ** (पुं०) 1. ಧೃತರಾಷ್ಟ್ರನ ಒಬ್ಬ ಮಗ. "उग्रश्रवा उग्रसेनः सेनानीर्दुष्पराजयः" भा० आदि० १३१-९। (वि०) 2. ಕಷ್ಟದಿಂದ ಜಯಿಸಲ್ಪಡುವ, ಜಯಿಸಲು ಅಶಕ್ಯವಾದ. दुःखेन पराजीयते — दुस् + परा + जि (जये) "खल्" (३-३-१२६)।

**दुष्परिग्रह ದುಷ್ಪರಿಗ್ರಹ** (पुं०) 1. ಕೆಟ್ಟ ಹೆಂಡತಿ, ದುಷ್ಟ ಭಾರ್ಯೆ. दुष्टः परिग्रहः। (वि०) 2. ಅಯೋಗ್ಯಳಾದ ಪತ್ನಿಯುಳ್ಳವನು. दुष्टः परिग्रहो यस्य। 3. ಪರಿಗ್ರಹಿಸಲು ಕಷ್ಟವಾದ, ಸ್ವೀಕರಿಸಲು ಅಶಕ್ಯವಾದ. 4. ರಕ್ಷಿಸಲು ಕಷ್ಟವಾದ. 5. ಹಿಡಿದುಕೊಳ್ಳಲು ಕಷ್ಟವಾದ. दुःखेन परिगृह्यते — दुस् + परि + ग्रह (उपादाने) "खल्" (३-३-१२६)। "दुराराध्याः श्रियो राज्ञां दुरापा दुष्परिग्रहाः" पञ्चतं० १-७३।

**दुष्पान ದುಷ್ಪಾನ** (न०) 1. ಕಷ್ಟದಿಂದ ಕುಡಿಯುವುದು. दुःखेन पानम्। (वि०) 2. ಕಷ್ಟದಿಂದ ಕುಡಿಯಲ್ಪಡುವ. दुःखेन पीयते—दुस्+पा (पाने) "युच्" (३-३-१२८)। "दुष्पानः पुनरेतेन कपिना भृङ्गसंभृतः" भट्टि० १-१०८।

**दुष्पुरुष ದುಷ್ಪುರುಷ** (पुं०) ಕೆಟ್ಟ ಮನುಷ್ಯ.

**दुष्पूर ದುಷ್ಪೂರ** (वि०) 1. ಪೂರಯಿಸಲು ಕಷ್ಟವಾದ, ಪೂರಯಿಸಲು ಅನರ್ಹವಾದ. दुःखेन पूर्यते—दुस्+पूरी (आप्यायने) "खल्" (३-३-१२६)। "आवृतं ज्ञानमेतेन ज्ञानिनो नित्यवैरिणा। कामरूपेण कौन्तेय दुष्पूरेणानलेन च" गीता ३-३९। 2. ವಿಷಯಗಳಿಂದ ತೃಪ್ತಿ ಪಡಿಸಲು ಕಷ್ಟವಾದ, ವಿಷಯೋಪಭೋಗದಿಂದ ತೃಪ್ತಿ ಪಡಿಸಲು ಅಶಕ್ಯವಾದ. "काममाश्रित्य दुष्पूरं दम्भमानमदान्विताः" गीता १६-१०।

**दुष्प्रकाश ದುಷ್ಪ್ರಕಾಶ** (वि०) ಅಂಧಕಾರಮಯ, ಕತ್ತಲೆಯಿಂದ ಕೂಡಿದ. दुष्टः प्रकाशो यत्र। "पापस्य लोको निरयो दुष्प्रकाशो नित्यं दुःखं शोकभूयिष्ठमेव" भा० शान्ति० ७३-६५।

**दुष्प्रकृति ದುಷ್ಪ್ರಕೃತಿ** (स्त्री०) 1. ಕೆಟ್ಟ ಸ್ವಭಾವ. दुष्टा प्रकृतिः। (वि०) 2. ಕೆಟ್ಟ ಸ್ವಭಾವವುಳ್ಳ. दुष्टा प्रकृतिर्यस्य। "त्वं तु दुष्प्रकृतिर्मूढो महायुद्धेष्वकोविदः" भा० कर्ण० ३४-१५।

**दुष्प्रजस् ದುಷ್ಪ್ರಜಸ್** (वि०) ಕೆಟ್ಟ ಮಕ್ಕಳುಳ್ಳ, ಅಯೋಗ್ಯ ಸಂತಾನವುಳ್ಳ. दुष्टा प्रजा यस्य "असिच्" (५-४-१२२)।

**दुष्प्रजा ದುಷ್ಪ್ರಜಾ** (स्त्री०) ಕೆಟ್ಟ ಸಂತಾನ, ದುಷ್ಟ ಸಂತತಿ.

**दुष्प्रज्ञान ದುಷ್ಪ್ರಜ್ಞಾನ** (न०) 1. ತಪ್ಪು ತಿಳಿವಳಿಕೆ. 2. ಮಂದಬುದ್ಧಿ. दुष्टं प्रज्ञानम्। (वि०) 3. ತಪ್ಪು ತಿಳಿವಳಿಕೆಯುಳ್ಳ. 4. ಮಂದಬುದ್ಧಿಯುಳ್ಳ. दुष्टं प्रज्ञानं यस्य। 5. ತಿಳಿಯಲು ಅಶಕ್ಯವಾದ, ಅರಿಯಲು ಕಷ್ಟವಾದ.

**दुष्प्रधर्ष ದುಷ್ಪ್ರಧರ್ಷ** (पुं०) 1. ಧೃತರಾಷ್ಟ್ರನ ಒಬ್ಬ ಮಗ. (वि०) 2. ಎದುರಿಸಲು ಕಷ್ಟವಾದ, ಮೇಲೆ ಬೀಳಲು ಅಶಕ್ಯವಾದ. दुस् + प्र + ञिधृषा (प्रागल्भ्ये) "खल्" (३-३-१२६)। "सा दुष्प्रधर्षा मनसापि हिंस्रैरित्यद्रिशोभाप्रहितेक्षणेन" रघु० २-२७। 3. ಪರಾಭವಗೊಳಿಸಲು ಸಾಧ್ಯವಲ್ಲದ.

**दुष्प्रधर्षण ದುಷ್ಪ್ರಧರ್ಷಣ** (पुं०) 1. ಧೃತರಾಷ್ಟ್ರನ ಒಬ್ಬ ಮಗ. (वि०) 2. ಎದುರಿಸಲು ಅಶಕ್ಯವಾದ, ಮೇಲೆ ಬೀಳಲು ಸಾಧ್ಯವಿಲ್ಲದ. 3. ಪರಾಭವಗೊಳಿಸಲು ಸಾಧ್ಯವಿಲ್ಲದ. दुस् + प्र + ञिधृषा प्रागल्भ्ये "युच्" (वा० ३-३-१२८)।

**दुष्प्रधर्षिणी ದುಷ್ಪ್ರಧರ್ಷಿಣೀ** (स्त्री०) 1. ಬದನೆ ಗಿಡ. 2. ಹೆಗ್ಗುಳ್ಳದ ಗಿಡ, ಮುಳ್ಳುಬದನೆ ಗಿಡ. दुःखेन

प्रधर्षणमस्याः अस्ति "इनिः" (५-२-११५)। "ङीप्" (४-१-५)।

**दुष्प्रयुक्त ದುಷ್ಪ್ರಯುಕ್ತ** (वि०) ತಪ್ಪಾಗಿ ಪ್ರಯೋಗಿಸಲ್ಪಟ್ಟ (ಪದ), ವ್ಯಾಕರಣವಿರುದ್ಧವಾಗಿ ಉಪಯೋಗಿಸಲ್ಪಟ್ಟ (ಶಬ್ದ). दारवं पात्रम् ಎಂಬಲ್ಲಿ "वृद्धाच्छः" (೪-೨-೧೧೪) ಸೂತ್ರದಿಂದ "छः" ಪ್ರತ್ಯಯ ಬರಬೇಕಲ್ಲದೆ ದಾರು ಶಬ್ದಕ್ಕೆ ಸಂಬಂಧಾರ್ಥದಲ್ಲಿ "अण्" (४-३-१२०) ಪ್ರತ್ಯಯಬರಲು ಅವಕಾಶವಿಲ್ಲವಾದುದರಿಂದ ಈ ಪ್ರಯೋಗವು ದುಷ್ಪ್ರಯುಕ್ತ. "दारवशब्दो दुष्प्रयुक्तः" काव्या० सू० ५-२-५३।

**दुष्प्रवृत्ति ದುಷ್ಪ್ರವೃತ್ತಿ** (स्त्री०) ಕೆಟ್ಟ ಸಮಾಚಾರ, ಕೆಟ್ಟ ವಾರ್ತೆ. दुष्टा प्रवृत्तिर्वार्ता। "तेषां शूर्पणखैवैका दुष्प्रवृत्तिहराऽभवत्" रघु० १२-५१।

**दुष्प्रवेश ದುಷ್ಪ್ರವೇಶ** (वि०) ಪ್ರವೇಶಿಸಲು ಕಷ್ಟವಾದ, ಪ್ರವೇಶಿಸಲು ಅಶಕ್ಯವಾದ. दुष्करः प्रवेशो यत्र। "महर्षिगणसम्बाधं ब्राह्म्या लक्ष्म्या समन्वितम्। दुष्प्रवेशं महाराज नरैर्धर्मबहिष्कृतैः" भा० वन० १४७-३१।

**दुष्प्रहर्ष ದುಷ್ಪ್ರಹರ್ಷ** (पुं०) ಧೃತರಾಷ್ಟ್ರನ ಒಬ್ಬ ಮಗ.

**दुष्प्राप ದುಷ್ಪ್ರಾಪ** (वि०) ಹೊಂದಲು ಅಶಕ್ಯನಾದ, ಕಷ್ಟದಿಂದ ಹೊಂದಲು ಸಾಧ್ಯನಾದ. दुःखेन प्राप्यते — दुस् + प्र+आप्लृ (व्याप्तौ) "खल्" (३-३-१२६)। "समीक्षितस्यापि सहत्वसङ्गाद्दुष्प्रापलोभादपि दूयमाना" याद० १३-५९।

**दुष्प्रेक्षित ದುಷ್ಪ್ರೇಕ್ಷಿತ** (न०) ಕೆಟ್ಟ ನೋಟ, ಕೆಟ್ಟದನ್ನು ನೋಡುವುದು, ನೋಡಬಾರದುದನ್ನು ನೋಡುವುದು. दुस्+प्र+ईक्ष (दर्शने) भावे "क्तः" (३-३-११४)। "दुःस्वप्नदुर्विचिन्तितदुष्प्रेक्षितदुष्कृतानि कर्माणि। क्षिप्रं प्रयान्ति नाशं शशिनः श्रुत्वा भसंवादम्" बृहत्सं० २-२१।

**दुष्प्रेक्ष्य ದುಷ್ಪ್ರೇಕ್ಷ್ಯ** (वि०) ನೋಡಲು ಕಷ್ಟವಾದ, ಕಷ್ಟದಿಂದ ನೋಡಲ್ಪಡುವ. दुस्+प्र+ईक्ष (दर्शने) "ण्यत्" (३-१-१२४)। "तपःपरामर्शविवृद्धमन्योर्भ्रूभङ्गदुष्प्रेक्ष्यमुखस्य तस्य" कुमा० ३-७१।

**दुष्यत् ದುಷ್ಯತ್** (वि०) 1. ಕೆಡುತ್ತಿರುವ, ವಿಕಾರಹೊಂದುತ್ತಿರುವ. दुष (वैकृत्ये) "शतृ" (३-२-१२४)। 2. ಅಪವಿತ್ರವಾಗುತ್ತಿರುವ, ಅಶುದ್ಧವಾಗುತ್ತಿರುವ.

**दुष्यन्त ದುಷ್ಯಂತ** (पुं०) ಇಲಿಲನ ಪುತ್ರ, ಚಂದ್ರವಂಶದಲ್ಲಿ ಪುರುಸಂತತಿಯಲ್ಲಿ ಜನಿಸಿದ ಒಬ್ಬ ದೊರೆ, ಶಕುಂತಲೆಯ ಪತಿ, ಭರತ ಚಕ್ರವರ್ತಿಯ ತಂದೆ. [ದುಷ್ಯಂತ ರಾಜನು ಒಂದು ದಿನ ಬೇಟೆಗಾಗಿ ಅರಣ್ಯಕ್ಕೆ ಹೋಗಿ ಮೃಗಗಳ ಮೇಲೆ ಬಾಣವನ್ನು ಪ್ರಯೋಗಿಸಲು ಯತ್ನಿಸಿದಾಗ ಋಷಿಗಳು ಬಂದು ತಡೆದು ಕಣ್ವಮಹರ್ಷಿಯ ಆಶ್ರಮಕ್ಕೆ ಕರೆದುಕೊಂಡು ಹೋದರು. ಅಲ್ಲಿ ಅತಿಥಿಸತ್ಕಾರದಲ್ಲಿ ನಿಯುಕ್ತಳಾಗಿದ್ದ ಶಕುಂತಲೆಯಿಂದ ಆತಿಥ್ಯವನ್ನು ಸ್ವೀಕರಿಸಿ ಶಕುಂತಳೆಯನ್ನು ಗಾಂಧರ್ವರೀತಿಯಿಂದ ಮದುವೆಯಾದನು. ತಪಸ್ಸಿಗೆ ತೆರಳಿದ್ದ ಕಣ್ವಮಹರ್ಷಿಯು ಬಂದು ಸಂತೋಷಗೊಂಡು ಶಕುಂತಲೆಯನ್ನು ಶಿಷ್ಯರೊಡನೆ ಪತಿಗೃಹಕ್ಕೆ ಕಳುಹಿಸಿಕೊಡಲು ದುಷ್ಯಂತನು ಶಕುಂತಲೆಯ ವಿಷಯವನ್ನೇ ಮರೆತವನಂತೆ ನಟಿಸಿ ಅವಳನ್ನು ತಿರಸ್ಕರಿಸುತ್ತಾನೆ. ಕೊನೆಗೆ ಆಕಾಶವಾಣಿಯನ್ನು ಕೇಳಿ ಶಕುಂತಲೆಯನ್ನು ಅಂಗೀಕರಿಸುತ್ತಾನೆ. ಇದು ಮಹಾಭಾರತದ ಕಥೆ. भा० आदि०। ಶಾಕುಂತಲ ನಾಟಕದಲ್ಲಿ ಕಾಳಿದಾಸನು ರಸಪರಿಪುಷ್ಟಿಗಾಗಿ ದುಷ್ಯಂತನ ವಿಸ್ಮೃತಿಗೆ ದುರ್ವಾಸಋಷಿಯ ಶಾಪವನ್ನು ಕಾರಣವಾಗಿ ಕಲ್ಪಿಸಿರುತ್ತಾನೆ.]

**दुस् ದುಸ್** (अव्य०) ಈ ಕೆಳಗಿನ ಅರ್ಥಗಳಿಗೆ ದ್ಯೋತಕವಾದ ಒಂದು ಉಪಸರ್ಗ. दुस् ಉಪಸರ್ಗದ "स" ಕಾರವು क ಮತ್ತು प ಕಾರಗಳು ಪರವಾದರೆ "ष" ಕಾರವಾಗಿಯೂ च ಮತ್ತು छ ಕಾರಗಳು ಪರವಾದರೆ "श" ಕಾರವಾಗಿಯೂ श ष स ह ಗಳು ಪರವಾದರೆ ವಿಸರ್ಗ (:) ವಾಗಿಯೂ ಬದಲಾವಣೆ ಹೊಂದುವುದು. 1. ದೋಷ, ತಪ್ಪು. "दुःस्वप्नदुर्विचिन्तितदुष्प्रेक्षितदुष्कृतानि कर्माणि" बृहत्सं० २-२१। 2. ಕೇಡು, ಕೆಡಕು. 3. ಕಷ್ಟ. "दुष्करं कृतवान् रामो हीनो यदनया प्रभुः" रामा०। 4. ಕಠಿನ, ಕ್ಲಿಷ್ಟ. 5. ನೀಚ, ಅಧಮ, ಕೀಳು.

**दुस्तर ದುಸ್ತರ** (वि०) ದಾಟಲು ಅಶಕ್ಯವಾದ. दुस् + तॄ (प्लवनतरणयोः) "खल्" (३-३-१२६)। "तितीर्षुर्दुस्तरं मोहादुडुपेनास्मि सागरम्" रघु० १-२।

**दुस्तरण ದುಸ್ತರಣ** (न०) ಕಷ್ಟದಿಂದ ದಾಟುವುದು. दुःखेन तरणम्।

**दुस्तर्क ದುಸ್ತರ್ಕ** (पुं०) 1. ಅಸಮಂಜಸವಾಗಿ ವಾದಿಸುವುದು, ತಪ್ಪು ಕಾರಣಗಳನ್ನು ತೋರಿಸಿ ವಾದಿಸುವುದು. 2. ತಪ್ಪಾಗಿ ಊಹಿಸುವುದು. ಸರಿಯಾದ ಕಾರಣವಿಲ್ಲದೆ ಊಹಿಸುವುದು.

**दुस्तर्क्य ದುಸ್ತರ್ಕ್ಯ** (वि०) ಊಹಿಸಲು ಸಾಧ್ಯವಿಲ್ಲದ, ಊಹಿಸಲು ಕಷ್ಟವಾದ. दुस् + तर्क (भाषार्थे) "ण्यत्" (३-१-१२४)।

**दुस्त्याज्य ದುಸ್ತ್ಯಾಜ್ಯ** (वि०) ತ್ಯಜಿಸಲು ಸಾಧ್ಯವಿಲ್ಲದ, ತ್ಯಜಿಸಲು ಕಷ್ಟವಾದ. दुःखेन त्यज्यते – दुस् + त्यज (हानौ) "ण्यत्" (३-१-१२४)।

**दुस्पर्श ದುಸ್ಪರ್ಶ** (पुं०) 1. ತೀಟಕಸಂಧಿ. दुःखेन स्पृश्यते – स्पृश (स्पर्शने) "घञ्" (३-३-१९)। "खल्" वा (३-३-१२६)। 2. ಹೆಗ್ಗುಳ್ಳ, ಮುಳ್ಳು ಬದನೆ.

**दुह–प्रपूरणे** (अदा० उभ० द्विकर्म० अनि०)। दोग्धि, दुग्धे दुहाते दुहते। दुदोह, दुदुहे। दोग्धा। धोक्ष्यति, –ते। दोग्धु दुग्धात् दुग्धाम् दुहन्तु, दुग्धाम् दुहाताम् दुहताम्। अधोक्, अदुग्ध। दुह्यात्, धुक्षीष्ट। अधुक्षत्, अधुक्षत। अधोक्ष्यत्, –त। 1. ಹಾಲು ಕರೆ. "पयो घटोघ्नीरपि गा दुहन्ति मन्दं विवर्णं विरसं च गोपाः" भट्टि० १२-७३। 2. ಹಿಂಡು, ಹಿಸುಕು, ಹಿಂಡಿಸಾರವನ್ನು ತೆಗೆ. "यं सर्वशैलाः परिकल्प्य वत्सं मेरौ स्थिते दोग्धरि दोहदक्षे। भास्वन्ति रत्नानि महौषधीश्च पृथूपदिष्टां दुदुहुर्धरित्रीम्" कुमा० १-२०। 3. ಎಳೆದುಕೊ, ಎಳೆದು ಬರಿದಾಗಿ ಮಾಡು. "दुदोह गां स यज्ञाय सस्याय मघवा दिवम्। सम्पद्विनिमयेनोभौ दधतुर्भुवनद्वयम्" रघु० १-२६। 4. ಇಷ್ಟಾರ್ಥವನ್ನು ಪೂರ್ತಿಮಾಡು, ಬೇಡಿದುದನ್ನು ಕೊಡು. "कामं दुग्धे विप्रकर्षत्यलक्ष्मीं कीर्तिं सूते दुर्हृदो निष्प्रलान्ति" उ० रा० ५-३०।

**कर्मणि :**—दुह्यते। दुदुहे। दोग्धा। धोक्ष्यते। दुह्यताम्। अदुह्यत। दुह्येत। अदोहि। अधोक्ष्यत।

**णिचि :**—दोहयति, –ते। दोहयां चकार, –चक्रे, –बभूव, –आस। दोहयिता। दोहयिष्यति, –ते। दोहयतु, –ताम्। ಇತ್ಯಾದಿ.

**सनि :**—दुधुक्षति, –ते। ಇತ್ಯಾದಿ. "राजन् दुधुक्षसि यदि क्षितिधेनुमेनाम्" भर्तृ० १-३६।

**कृत्सु :**—दोग्धव्यम्। दोहनीयम्। दोह्यम्। दुह्यम्। दुग्धम्। दुग्धवान्, –वती। दुहन् –ती। दुहानः। दोग्धुम्। दुग्धम्। दोहनम्। दुग्ध्वा। प्रदुह्य।

**दुहत् ದುಹತ್** (वि०) 1. ಹಾಲು ಕರೆಯುತ್ತಿರುವ. 2. ಸಾರವನ್ನು ಹಿಂಡುತ್ತಿರುವ. 3. ಇಷ್ಟಾರ್ಥವನ್ನು ಪೂರ್ತಿಮಾಡುತ್ತಿರುವ. दुह (प्रपूरणे) "शतृ" (३-२-१२४)। स्त्रियाम् "ङीप्" (४-१-६)। **दुहती ದುಹತೀ.** "शानच्" (३-२-१२४)। **दुहानः ದುಹಾನಃ.**

**दुहितुःपति ದುಹಿತುಃಪತಿ** (पुं०) ಮಗಳಗಂಡ, ಅಳಿಯ. दुहितुः पतिः – षष्ठ्याः वा अलुक् (६-३-२४)। पक्षे **दुहितृपतिः ದುಹಿತೃಪತಿಃ.**

**दुहितृ ದುಹಿತೃ** (स्त्री०) ಕುಮಾರಿ, ಮಗಳು. दुह (प्रपूरणे) "तृच्" (उ० २-९५)। इडागमः गुणाभावश्च निपात्यते। "तया दुहित्रा सुतरां सवित्री स्फुरत्प्रभामण्डलया चकासे" कुमा० १-२४। "मात्रा स्वस्रा दुहित्रा वा न विविक्तासनो भवेत्" मनु० २-२१५।

**दुहितृमत् ದುಹಿತೃಮತ್** (वि०) ಹೆಣ್ಣು ಮಕ್ಕಳುಳ್ಳವನು. दुहितास्यास्ति "मतुप्" (५-२-९४)।

**दुह्य ದುಹ್ಯ** (वि०) 1. ಹಾಲು ಕರೆಯಲ್ಪಡುವ. 2. ಹಾಲು ಕರೆಯಲು ಯೋಗ್ಯವಾದ. 3. ಹಾಲು ಕರೆಯಲು ಶಕ್ಯವಾದ (ಹಸು). दुह (प्रपूरणे) वा "क्यप्" (वा० ६-१-७१)। पक्षे "ण्यत्" (३-१-१२४)। **दोह्यम् ದೋಹ್ಯಮ್.** 4. ಕರೆಯಲ್ಪಡುವ. 5. ಕರೆಯಲು ಯೋಗ್ಯವಾದ. 6. ಕರೆಯಲು ಶಕ್ಯವಾದ (ಹಾಲು).

**दुह्यमान ದುಹ್ಯಮಾನ** (वि०) 1. ಕರೆಯಲ್ಪಡುತ್ತಿರುವ. 2. ಹಿಂಡಲ್ಪಡುತ್ತಿರುವ, ಹಿಸುಕಲ್ಪಡುತ್ತಿರುವ. दुह (प्रपूरणे) कर्म० "शानच्" (३-२-१२४)। स्त्रियाम् "टाप्" (४-१-४)। **–माना –ಮಾನಾ.** 1. ಹಸು. 2. ಭೂಮಿ ಮೊದಲಾದವು.

**दूत ದೂತ** (पुं०) 1. ಸಮಾಚಾರವನ್ನು ಒಯ್ಯುವವನು, ವಾರ್ತಾವಾಹಕ, ರಾಯಭಾರಿ, ಹರಿಕಾರ. दु (गतौ) "क्तः" (उ० ३-९०) दीर्घश्च। ಇತರರ ಮನೋಭಿಪ್ರಾಯವನ್ನು ತಿಳಿಯುವ ಶಕ್ತಿಯುಳ್ಳವನೂ ವ್ಯಂಗ್ಯವಾದ ಮಾತನ್ನು ಅರ್ಥಮಾಡಿಕೊಳ್ಳುವ ಸಾಮರ್ಥ್ಯವುಳ್ಳವನೂ ಪ್ರತಿಭಾಶಾಲಿಯಾದವನೂ ಧೈರ್ಯಶಾಲಿಯಾದವನೂ ದೂತನಾಗಿರಲು ಅರ್ಹನು. "परेङ्गितज्ञो परवाग्व्यङ्ग्यार्थस्यापि तत्त्ववित्। सद्योत्पन्नमतिर्धीरो दूतः स्यात् पृथिवीपतेः"। "चारेक्षणो दूतमुखः पुरुषः कोऽपि पार्थिवः माघ० २-८२। ದೂತನು (1) निसृष्टार्थः (2) मितार्थः ಮತ್ತು (3) सन्देशहारकः ಎಂದು ಮೂರು ವಿಧ. (1) ಅಮಾತ್ಯಗುಣಸಂಪನ್ನನು ನಿಸೃಷ್ಟಾರ್ಥನು. "अमात्यसम्पदोपेतो निसृष्टार्थः"। (2) ಅವುಗಳಲ್ಲಿ ಕಾಲುಭಾಗ ಕಡಮೆಯಾದವನು ಮಿತಾರ್ಥನು. "पादगुणहीनः परिमितार्थः"। (3) ಅರ್ಧ ಗುಣ ಕಡಮೆಯಾದವನು ಸಂದೇಶಹರನು. "अर्धगुणहीनः शासनहरः" अर्थशा०। ಇಬ್ಬರ ಅಭಿಪ್ರಾಯಗಳನ್ನು ತಿಳಿದು ಚಾತುರ್ಯ

ದಿಂದ ತಾನೇ ಉತ್ತರವನ್ನು ಕೊಟ್ಟು ಜಾಣತನದಿಂದ ಕಾರ್ಯವನ್ನು ಮಾಡಿಕೊಂಡು ಬರುವವನು. **"ನಿಸೃಷ್ಟಾರ್ಥ"** ದೂತನಾಗುವನು. "उभयोर्भावमुन्नीय स्वयं वदति चोत्तरम्। सुश्लिष्टं कुरुते कार्यं निसृष्टार्थस्तु स स्मृतः" सा० द० ३-४८। ಅಧಿಕೋಕ್ತಿಯಿಲ್ಲದೆ ಹೇಳಿಕಳುಹಿಸಿದ ಮಾತನ್ನು ಮಾತ್ರ ಹೇಳಿ ಕಾರ್ಯವನ್ನು ಸಾಧಿಸಿಕೊಂಡು ಬರುವವನು **"ಮಿತಾರ್ಥ"** ದೂತನಾಗುವನು. "मितार्थभाषी कार्यस्य सिद्धकारी मितार्थकः"। ಹೇಳಿ ಕಳುಹಿಸಿದ ಮಾತನ್ನು ಮಾತ್ರ ಹೇಳಿ ಬರುವವನು **"ಸಂದೇಶಹಾರಕ"** ದೂತನು. "मितार्थभाषी कार्यस्य सिद्धकारी मितार्थकः। यावद्भाषितसन्देशहारः सन्देशहारकः" सा० द० ३-४९। स्त्रियाम् "ङीप्" (४-१-४१)। **दूती ದೂತೀ.** ಸಮಾಚಾರವನ್ನು ತಲುಪಿಸುವ ಹೆಂಗಸು. ದೂತಿಯೂ ಮೂರು ವಿಧ. "निसृष्टार्थो मितार्थश्च तथा सन्देशहारकः। कार्यप्रेष्यस्त्रिधा दूतः दूत्यश्चापि तथाविधाः" सा० द० ३-४७। 2. ಸೇವಕ, ಆಳು. "तत्कृतानुग्रहापेक्षी तं मुहुर्दूतहारितैः" कुमा० २-३९।

**दूतकर्मन् ದೂತಕರ್ಮನ್** (ನ೦) ರಾಜನಿಂದ ಕಳುಹಿಸಲ್ಪಟ್ಟ ದೂತನ ಕಾರ್ಯ. ಶತ್ರು ರಾಜ್ಯಕ್ಕೆ ಕಳುಹಿಸಲ್ಪಟ್ಟ ದೂತನು ಮಾಡಬೇಕಾದ ಕಾರ್ಯಗಳಿವು: ಶತ್ರುವಿಗೆ ರಾಜನ ಸಂದೇಶವನ್ನು ತಿಳಿಸುವುದಕ್ಕೂ ಶತ್ರುವಿನ ವಿಷಯವನ್ನು ರಾಜನಿಗೆ ತಿಳಿಸುವುದಕ್ಕೂ ಶತ್ರು ರಾಜ್ಯಕ್ಕೆ ಹೋಗಿ ಬರುವುದು, ಮಾಡಿದ ಸಂಧಿಯನ್ನು ರಕ್ಷಿಸುವುದು, ಸಮಯಕ್ಕೆ ತಕ್ಕಂತೆ ಶತ್ರುವಿನಲ್ಲಿ ಶಕ್ತಿಪ್ರದರ್ಶನ, ಅಲ್ಲಿ ಸ್ನೇಹಿತರ ಸಂಪಾದನೆ, ಅಲ್ಲಿ ಭೇದೋಪಾಯವನ್ನು ಪ್ರಯೋಗಿಸುವುದು, ಸ್ನೇಹಿತರಲ್ಲಿ ಭೇದವನ್ನು ಕಲ್ಪಿಸುವುದು, ಸೈನ್ಯವನ್ನೂ ಗೂಢಚಾರರನ್ನೂ ಕಳುಹಿಸಿಕೊಡುವುದು, ಬಂಧು ಮತ್ತು ರತ್ನಗಳ ಅಪಹರಣ, ಗೂಢಚಾರರು ಮಾಡುವ ಕೆಲಸವನ್ನು ರಹಸ್ಯವಾಗಿ ತಿಳಿದುಕೊಳ್ಳುವುದು, ಸಮಯದಲ್ಲಿ ಪರಾಕ್ರಮವನು ತೋರಿಸುವುದು, ಸಮಾಧಿ ಮೋಚನ, (ಸಂಧಿಯಲ್ಲಿ ನಂಬಿಕೆಹುಟ್ಟಿಸಲು ಶತ್ರುಪಕ್ಷದವರನ್ನು ಬಂಧನದಿಂದ ಬಿಡುಗಡೆ ಮಾಡಿಸುವುದು). ಮಾರಣ ಮೊದಲಾದ ಆಭಿಚಾರಿಕ ಕೃತ್ಯಗಳನ್ನು ನಡೆಸುವುದು ಇವೆಲ್ಲಾ ದೂತನ ಕಾರ್ಯಗಳು. "प्रेषणं सन्धिपालत्वं प्रतापो मित्रसङ्ग्रहः। उपजापः सुहृद्भेदः गूढदण्डातिसारणम्॥ बन्धुरत्नापहरणं चारज्ञानं पराक्रमः। समाधिमोक्षो दूतस्य कर्म योगस्य चाश्रयः" अर्थशा० १२-१६-२३, ३४।

**दूतमुख ದೂತಮುಖ** (ವಿ೦) ದೂತನನ್ನೇ ಮುಖವಾಗಿ ಉಳ್ಳ (ರಾಜ). दूतः मुखं मुखस्थानं यस्य। ದೂತನ ಮೂಲಕ ಶತ್ರು ರಾಜನಿಗೆ ಹೇಳಿಕಳುಹಿಸುವುದು ಅವನಿಂದ ಶತ್ರುವಿನ ವಿಷಯವನ್ನು ತಿಳಿದುಕೊಳ್ಳುವುದು ಈ ರೀತಿ ವ್ಯವಹಾರವಿರುವುದರಿಂದ ರಾಜನು ದೂತಮುಖನಾಗುವನು. "चारेक्षणो दूतमुखः पुरुषः कोऽपि पार्थिवः" माघ० २-८२।

**दूतसम्प्रेषण ದೂತಸಂಪ್ರೇಷಣ** (ನ೦) ಗುಪ್ತ ಪತ್ರಗಳನ್ನು ಬರೆದು ಪರರಾಷ್ಟ್ರಗಳಿಗೆ ದೂತನನ್ನು ಕಳುಹಿಸುವುದು. ಇದು ರಾಜನ ಪ್ರತಿದಿನದ ಕರ್ತವ್ಯಗಳಲ್ಲೊಂದು. दूतस्य सम्प्रेषणम्। "दूतसम्प्रेषणं चैव कार्यशेषं तथैव च। अन्तःपुरप्रचारं च प्रणिधीनां च चेष्टितम्" मनु० ७-१५३।

**दूताङ्गद ದೂತಾಂಗದ** (ನ೦) 1. ಸುಭಟಕವಿವಿರಚಿತವಾದ ಒಂದು ಛಾಯಾ ನಾಟಕ. 2. ಹನುಮನ್ನಾಟಕದ ಒಂದು ಅಂಕ.

**दूति ದೂತಿ** (स्त्री०) 1. ಸೇವಕಿ, ಹೆಣ್ಣು ಆಳು. दु (गतौ) "तिः" बाहु०। "क्लृप्तपुष्पशयनाँल्लतागृहानेत्य दूतिकृतमार्गदर्शनः" रघु० १९-२३। 2. ಸ್ತ್ರೀ ರಾಯಭಾರಿ.

**दूत्य ದೂತ್ಯ** (ನ೦) ದೂತಭಾವ ಮತ್ತು ದೂತನ ಕೆಲಸ, ರಾಯಭಾರ. दूतस्य भावः कर्म वा "यत्" (वा० ५-१-१२६)। "सचनां विरचनाहितशोभैरागतप्रियकथैरपि दूत्यम्" किरा० ९-३४। [ವಿವರಕ್ಕೆ "दूतकर्मन्" ಪದದಲ್ಲಿ ನೋಡಿ.]

**दून ದೂನ** (ವಿ೦) 1. ಕಾಯಿಸಲ್ಪಟ್ಟ. टुदु (उपतापे) "क्तः" (३-२-१०२)। दीर्घः नत्वं च (वा० ८-२-४४)। "सन्तापितसन्तप्तौ धूपितधूपायितौ च दूनश्च" अम०। 2. ಪೀಡಿಸಲ್ಪಟ್ಟ, ಹಿಂಸಿಸಲ್ಪಟ್ಟ. 3. ಮಾರ್ಗಸಂಚಾರದಿಂದ ಬಳಲಿದ. 4. ಸಂತಾಪಹೊಂದಿದ, ಬೇನೆ ಹೊಂದಿದ. दु (गतौ) कर्त० "क्तः" (३-४-७२)। "दूनास्तेऽरिबलादूना निरेभा बहु मेनिरे" किरा० १५-३१।

**दूयमान ದೂಯಮಾನ** (ವಿ೦) ಪೀಡಿಸಲ್ಪಡುತ್ತಿರುವ, ಹಿಂಸಿಸಲ್ಪಡುತ್ತಿರುವ. टुदु (उपतापे) कर्म० "शानच्" (३-२-१२४)। "बलवत्तु दूयमानं प्रत्याययतीव मे हृदयम्" शाकु० ५-३१।

**दूर ದೂರ** (ನ೦) 1. ದೂರ, ಹೆಚ್ಚಿನ ಅಂತರ. (ಪ್ರದೇಶ ಮತ್ತು ಕಾಲಗಳಲ್ಲಿ). दुःखेन ईयते प्राप्यते—दुर्+इण् (गतौ) "रक्" धातोर्लोपश्च (उ० २-२०)। "दूरो-

त्क्षिप्तक्षिप्रचक्रेण कृत्तं मत्तो हस्तं हस्तिराजः स्वमेव" माघ० १८-४५। (वि०)2. ದೂರದ, ದೂರದಲ್ಲಿರುವ, ದೂರವಾದ, ಹೆಚ್ಚು ಅಂತರವುಳ್ಳ. "द्वारकापरिषदं प्रयास्यतो दूरवर्त्मपथिकस्य मे दृशा" याद० १७-३९। (अव्य०)3. ಬಹಳವಾಗಿ, ಅತ್ಯಂತವಾಗಿ. "तपः शरीरैः कठिनैरुपार्जितं तपस्विनां दूरमधश्चकार" कुमा० ५-२९। "नेत्रे दूरमनञ्जने पुलकिता तन्वी तवेयं तनुः" सा० द०। (अव्य०)4. ಸಂಪೂರ್ಣವಾಗಿ, ಪೂರ್ತಿಯಾಗಿ. "यस्मिन् दृष्टे करणविगमाद्दूरमुद्भूतपापाः" मेघ० १-५५।

**दूरतस् ದೂರತಸ್** (अव्य०)1. ದೂರದಿಂದ, ದೂರದಲ್ಲಿ. दूर "तसिः" (वा० ५-४-४४)। "यदर्थं भ्रातरः पुत्रा अपि वाञ्छन्ति ये निजाः। वधं राज्यकृतां राज्ञां तद्राज्यं दूरतस्त्यजेत्" पञ्चतं० ५-६८। 2. ದೂರಕ್ಕೆ. "त्यक्त्वा जनयितारं स्वं निःस्वं गच्छति दूरतः" पञ्चतं० १-९।

**दूरदर्शन ದೂರದರ್ಶನ** (पुं०) 1. ಪಂಡಿತ, ವಿದ್ವಾಂಸ. 2. ಗೃಧ್ರ, ರಣಹದ್ದು. दूरात्पश्यति—दृशिर् (प्रेक्षणे) "ल्युः" (३-१-१३४)। (न०) 3. ದೂರಾಲೋಚನೆ, ಮುಂದಿನ ದೃಷ್ಟಿ, ದೀರ್ಘವಾದ ಆಲೋಚನೆ. 4. ದೂರದ ನೋಟ, ದೂರದಿಂದ ನೋಡುವಿಕೆ. दृशिर् भावे "ल्युट्" (३-३-११५)। 5. ದೂರದರ್ಶಕ ಯಂತ್ರ, ದೂರದಿಂದ ವಸ್ತುವನ್ನು ನೋಡುವ ಯಂತ್ರ. दूरात् दृश्यतेऽनेन—दृशिर् कर० "ल्युट्" (३-३-११७)। (वि०) 6. ಬಹಳ ದೂರದಲ್ಲಿರುವ, ಹೊಂದಲು ಅಶಕ್ಯವಾದ. "त्रैविष्टपानामपि दूरदर्शनम्" भाग० १-११-८।

**दूरदर्शिन् ದೂರದರ್ಶಿನ್** (पुं०) 1. ಪಂಡಿತ, ವಿದ್ವಾಂಸ. दूरात् पश्यति—दृशिर् (प्रेक्षणे) "णिनिः" (३-१-१३४)। (वि०) 2. ದೂರಾಲೋಚನೆಯುಳ್ಳ, ದೀರ್ಘವಾಗಿ ಮುಂದಿನದನ್ನು ಯೋಚಿಸುವ. स्त्रियाम् "ङीप्" (४-१-५)। **-दर्शिनी -ದರ್ಶಿನೀ.**

**दूरदृश् ದೂರದೃಶ್** (पुं०) 1. ಪಂಡಿತ, ವಿದ್ವಾಂಸ, ಸೂಕ್ಷ್ಮದೃಷ್ಟಿಯುಳ್ಳ ಜ್ಞಾನಿ. 2. ಗೃಧ್ರ, ರಣಹದ್ದು. दूरात् पश्यति—दृशिर् (प्रेक्षणे) "क्विप्" (३-२-७६)। (वि०) 3. ದೂರದ ಆಲೋಚನೆ ಮಾಡುವ, ಮುಂದಿನದನ್ನು ಆಲೋಚಿಸುವ. 4. ದೂರದಲ್ಲಿರುವುದನ್ನು ನೋಡುವ, ದೂರದಿಂದ ನೋಡುವ.

**दूरदृष्टि ದೂರದೃಷ್ಟಿ** (स्त्री०) 1. ಮುಂದಿನ ದೃಷ್ಟಿ, ದೂರದ ಆಲೋಚನೆ. 2. ದೂರದ ನೋಟ.

**दूरवर्तिन् ದೂರವರ್ತಿನ್** (वि०) ದೂರದಲ್ಲಿರುವ. दूरे वर्तते—वृतु (वर्तने) "णिनिः" (३-१-१३४)। स्त्रियाम् "ङीप्" (४-१-५)। **-वर्तिनी -ವರ್ತಿನೀ.**

**दूरवेधिन् ದೂರವೇಧಿನ್** (वि०) ದೂರದಿಂದ ಗುರಿಯಿಟ್ಟು ಹೊಡೆಯುವವನು. दूरात् वेधोऽस्यास्ति "इनिः" (५-२-११५)।

**दूरसंस्थ ದೂರಸಂಸ್ಥ** (वि०) ದೂರದಲ್ಲಿರುವ. दूरे संस्था स्थितिर्यस्य। "कण्ठाश्लेषप्रणयिनि जने किं पुनर्दूरसंस्थे" मेघ० १-३।

**दूरस्थ ದೂರಸ್ಥ** (वि०) ದೂರದಲ್ಲಿರುವ. दूरे तिष्ठति—ष्ठा (गतिनिवृत्तौ) "कः" (३-२-४)।

**दूरस्थायिन् ದೂರಸ್ಥಾಯಿನ್** (वि०) ದೂರದಲ್ಲಿ ನಿಂತಿರುವ. दूरे तिष्ठति—ष्ठा (गतिनिवृत्तौ) "णिनिः" (३-१-१३४)। स्त्रियाम् "ङीप्" (४-१-५)। **-स्थायिनी -ಸ್ಥಾಯಿನೀ.**

**दूरस्थित ದೂರಸ್ಥಿತ** (वि०) ದೂರದಲ್ಲಿರುವ. दूरे स्थितः।

**दूरारूढ ದೂರಾರೂಢ** (वि०) ದೂರದವರೆಗೂ ಹೋಗಿರುವ. दूरमारूढः। "असहना खलु सा। दूरारूढश्चास्याः प्रणयः" विक्र० ४।

**दूरारोहण ದೂರಾರೋಹಣ** (न०) ದೂರದವರೆಗೂ ಹತ್ತುವುದು, ದೂರದವರೆಗೂ ಹೋಗುವುದು. दूरमारोहणम्।

**दूरारोहिन् ದೂರಾರೋಹಿನ್** (वि०) ದೂರದವರೆಗೂ ಹೋಗಿರುವ, ದೂರದವರೆಗೂ ಹತ್ತಿರುವ. दूरमारोहति—आ+रुह (बीजजन्मादौ) "णिनिः" (३-१-१३४)।

**दूरालोक ದೂರಾಲೋಕ** (पुं०)1. ದೂರದಿಂದ ನೋಡುವುದು. 2. ದೂರದವರೆಗೂ ನೋಡುವುದು. दूरतः आलोकः। "स्थिरयौवना स्थिता ते दूरालोके सुखालोका" विक्र० ४-४६।

**दूरावस्थित ದೂರಾವಸ್ಥಿತ** (वि०) ದೂರದಲ್ಲಿರುವ, ದೂರದಲ್ಲಿ ನಿಂತಿರುವ. दूरे अवस्थितः।

**दूरीकरण ದೂರೀಕರಣ** (न०) 1. ದೂರವಾಗಿ ಮಾಡುವುದು, ದೂರಕ್ಕೆ ಕಳುಹಿಸುವುದು. 2. ಬೇರ್ಪಡಿಸುವುದು, ಪ್ರತ್ಯೇಕ ಮಾಡುವುದು. 3. ತಿರಸ್ಕರಿಸುವುದು.

**दूरीकृत ದೂರೀಕೃತ** (वि०) 1. ಬೇರ್ಪಡಿಸಲ್ಪಟ್ಟ, ಪ್ರತ್ಯೇಕಪಡಿಸಲ್ಪಟ್ಟ. "गरुत्मतः पक्षमरुत्प्रचारात् दूरीकृतो वारुणनागपाशः" याद० २०-३९। 2. ತಿರಸ್ಕರಿಸ

ಲ್ಪಟ್ಟ, ಅವಮಾನಗೊಳಿಸಲ್ಪಟ್ಟ. "दूरीकृताः खलु गुणैरुद्यानलता वनलताभिः" शाकु० १-१५। 3. ದೂರವಾಗಿ ಮಾಡಲ್ಪಟ್ಟ, ದೂರಕ್ಕೆ ಕಳುಹಿಸಲ್ಪಟ್ಟ.

**दूरीभूत ದೂರೀಭೂತ** (वि०) ದೂರದಲ್ಲಿರುವ, ದೂರವಾಗಿರುವ. "दूरीभूते मयि सहचरे चक्रवाकीमिवैकाम्" मेघ० २-२०।

**दूरोत्सारण ದೂರೋತ್ಸಾರಣ** (न०) ದೂರಕ್ಕೆ ಓಡಿಸುವುದು.

**दूरोत्सारित ದೂರೋತ್ಸಾರಿತ**(वि०)1. ದೂರಕ್ಕೆ ಓಡಿಸಲ್ಪಟ್ಟ, ದೂರಕ್ಕೆ ಕಳುಹಿಸಲ್ಪಟ್ಟ. 2. ದೂರದಿಂದ ತಳ್ಳಲ್ಪಟ್ಟ. दूरेण उत्सारितः। "दूरोत्सारितहृदयानन्दः अम्बरमानेन भ्रमति गजेन्द्रः" विक्र० ४-२३।

**दूर्वा ದೂರ್ವಾ** (स्त्री०) ಗರಿಕೆಹುಲ್ಲು. दूर्वति—दुर्वी (हिंसायाम्) "अच्" (३-१-१३४)। दीर्घः (८-२-७८)। "सा गौरसिद्धार्थनिवेशवद्भिः दूर्वाप्रवालैः प्रतिभिन्नशोभम्" कुमा० ७-७।

**दूर्वाष्टमी ದೂರ್ವಾಷ್ಟಮೀ** (स्त्री०) ಭಾದ್ರಪದ ಶುಕ್ಲಾಷ್ಟಮಿ. दूर्वाप्रिया अष्टमी। [ಭಾದ್ರಪದ ಶುಕ್ಲಾಷ್ಟಮಿಯ ದಿನ ದೂರ್ವಾಪೂಜೆಯನ್ನು ಮಾಡುವ ಪದ್ಧತಿ.]

**दूलिका ದೂಲಿಕಾ** (स्त्री०) ನೀಲಿ ಗಿಡ.

**दूली ದೂಲೀ** (स्त्री०) ನೀಲಿ ಗಿಡ.

**दूषक ದೂಷಕ** (वि०) 1. ಕೆಡಿಸುವ, ದೋಷವನ್ನುಂಟುಮಾಡುವ. 2. ದೂಷಿಸುವ, ನಿಂದಿಸುವ. दुष (वैकृत्ये) + णिच् "ण्वुल्" (३-१-१३३)। "कूटशासनकर्तृंश्च प्रकृतीनां च दूषकान्" भा० अनु० ९-२३२। "वेदविक्रयिणश्चैव वेदानां चैव दूषकाः" भा० अनु०। 3. ನೀಚ, ದುಷ್ಟ, ದುರ್ಜನ. "दूषकपांसनौ" त्रिकाण्ड०।

**दूषण ದೂಷಣ** (पुं०) 1. ರಾವಣನ ಒಬ್ಬ ಸೇನಾಪತಿ. ದಂಡಕಾರಣ್ಯದಲ್ಲಿದ್ದ ಒಬ್ಬ ರಾಕ್ಷಸ. (न०) 2. ಕೆಡಿಸುವುದು, ದೋಷವುಂಟುಮಾಡುವುದು. दुष (वैकृत्ये)+ णिच् भावे "ल्युट्" (३-३-११५)। 3. ದೋಷ, ತಪ್ಪು, ಅಪರಾಧ. "रहस्यभेदो याच्ञा च नैष्ठुर्यं चलचित्तता। क्रोधो निःसत्यता द्यूतमेतन्मित्रस्य दूषणम्" हितो० १-९८। 4. ದೂಷಣೆ, ನಿಂದಿಸುವುದು, ಬಯ್ಯುವುದು. "असज्जनेन काकुत्स्थः प्रयुक्तमथ दूषणम्। न चक्षमे शुभाचारः स दूषणमिवात्मनः" रघु० १२-४६। 5. ಖಂಡಿಸುವುದು, ತಪ್ಪೆಂದು ಹೇಳುವುದು. (वि०) 6. ದೋಷವನ್ನುಂಟುಮಾಡುವ. ಕೆಡಿಸುವ. दुष (वैकृत्ये)+ णिच् "ल्युः" (३-१-१३४)। "पानं दुर्जनसंसर्गः पत्या च विरहोऽटनम्। स्वप्नोऽन्यगेहवासश्च नारीसंदूषणानि षट्" मनु० ९-१३।

**दूषणीय ದೂಷಣೀಯ** (वि०) 1. ದೂಷಿಸಲ್ಪಡುವ, ನಿಂದಿಸಲ್ಪಡುವ. 2. ದೂಷಿಸಲು ಅರ್ಹನಾದ. 3. ಕೆಡಿಸಲ್ಪಡುವ. 4. ಅಶುದ್ಧಗೊಳಿಸಲ್ಪಡುವ. दुष (वैकृत्ये)+ णिच् "अनीयर्" (३-१-९६)।

**दूषयत् ದೂಷಯತ್** (वि०) 1. ದೂಷಿಸುತ್ತಿರುವ, ನಿಂದಿಸುತ್ತಿರುವ. 2. ಕೆಡಿಸುತ್ತಿರುವ. 3. ಅಶುದ್ಧಗೊಳಿಸುತ್ತಿರುವ. दुष (वैकृत्ये) + णिच् "शतृ" (३-२-१२४)। स्त्रियाम् "ङीप्" (४-१-६)। **–यन्ती –ಯಂತೀ.**

**दूषयितृ ದೂಷಯಿತೃ**(वि०)1. ನಿಂದಿಸುವವನು, ದೂಷಿಸುವವನು. 2. ಕೆಡಿಸುವವನು. 3. ಅಶುದ್ಧಗೊಳಿಸುವವನು. दुष (वैकृत्ये) + णिच् "तृच्" (३-१-१३३)। स्त्रियाम् "ङीप्" (४-१-५)। **–यित्री –ಯಿತ್ರೀ.**

**दूषि ದೂಷಿ** (स्त्री०) ನೇತ್ರಮಲ, ಕಣ್ಣಿನೊಳಗಿನ ಕೊಳೆ. दुष (वैकृत्ये)+ णिच् "इः" (उ० ४-१३९)। वा "ङीष्" (ग० ४-१-४५)। **–षी –ಷೀ.**

**दूषिका ದೂಷಿಕಾ** (स्त्री०) 1. ನೇತ್ರಮಲ, ಕಣ್ಣಿನೊಳಗಿನ ಕೊಳೆ. दूषि स्वार्थे "कन्" (५-४-५)। "दूषिका नेत्रयोर्मलम्" अम०। 2. ಬಣ್ಣ ಹಾಕುವ ಕುಂಚ, ತೂಲಿಕೆ. 3. ದೂಷಿಸುವ ಹೆಂಗಸು.

**दूषित ದೂಷಿತ** (वि०) 1. ಕೆಡಿಸಲ್ಪಟ್ಟ, ಅಶುದ್ಧಗೊಳಿಸಲ್ಪಟ್ಟ. 2. ದೂಷಿಸಲ್ಪಟ್ಟ, ನಿಂದಿಸಲ್ಪಟ್ಟ. दुष (वैकृत्ये) + णिच् "क्तः" (३-२-१०२)। ऊत् (६-४-९०)। 3. ಮಿಥ್ಯಾಪವಾದಕ್ಕೆ ಗುರಿಯಾದ. "संभवन्ति यददोषदूषिते सार्व सर्वगुणसंपदस्त्वयि" माघ० १४-४। (स्त्री०) **–ता –ತಾ.** 4. ಅಪವಾದಕ್ಕೆ ಒಳಗಾದ ಕನ್ಯೆ.

**दूष्य ದೂಷ್ಯ** (न०)1. ಬಟ್ಟೆಯಿಂದ ತಯಾರಿಸಲ್ಪಟ್ಟ ಮನೆ, ಡೇರೆ, ಪಟಮಂಟಪ. 2. दूष्यते—दुष (वैकृत्ये) + णिच् "यत्" (३-१-९७)। दीर्घः (६-४-९०)। "दूष्यैरिव क्षितिभृतां द्विरदैरुदारतारावलीविरचनैर्व्यरुचन्निवासाः" माघ० ५-२१। 3. ವಸ್ತ್ರ, ಬಟ್ಟೆ. (वि०) 4. ನಿಂದೆಗೆ ಅರ್ಹನಾದವನು, ದೂಷಿಸಲ್ಪಡುವವನು, ಅಪವಾದಕ್ಕೆ ಒಳಗಾದವನು. "अमात्यव्यञ्जना राज्ञां दूष्यास्ते शत्रुसंज्ञिताः" माघ० २-५६।

**दृक्पथ ದೃಕ್‌ಪಥ** (ಪುಂ) ದರ್ಶನಮಾರ್ಗ, ನೋಡಲು ಯೋಗ್ಯವಾದ ಸ್ಥಾನ. दृशः पन्थाः "अः" (೫-೪-೭೪)।

**दृक्प्रिया ದೃಕ್‌ಪ್ರಿಯಾ** (स्त्री०) ಕಾಂತಿ, ಸೌಂದರ್ಯ. दृशं प्रीणाति—प्रीञ् (तर्पणे) "कः" (३-१-१३५)।

**दृक्शक्ति ದೃಕ್‌ಶಕ್ತಿ** (स्त्री०) 1. ಪ್ರಕಾಶರೂಪವಾದ ಒಂದು ಶಕ್ತಿ, ಚೈತನ್ಯ. 2. ಚೇತನ, ಎಲ್ಲವನ್ನೂ ಪ್ರಕಾಶ ಗೊಳಿಸುವ ಒಂದು ಶಕ್ತಿ. "दृग्दर्शनशक्त्योरेकात्मते वास्मिता" पा० यो० सू०।

**दृक्श्रुति ದೃಕ್‌ಶ್ರುತಿ** (ಪುಂ) ಸರ್ಪ, ಹಾವು. दृगेव श्रुतिः श्रवणमस्य।

**दृगध्यक्ष ದೃಗಧ್ಯಕ್ಷ** (ಪುಂ) ಸೂರ್ಯ. दृशः अध्यक्षः "रश्मिमाली दृगध्यक्षः कर्मसाक्षी त्रयीतनुः" वैज०।

**दृग्गोल ದೃಗ್ಗೋಲ** (न०) ಮಂಡಲಾಕಾರವಾಗಿರುವ ಭೂಮಿಯ ದೊಡ್ಡ ವೃತ್ತರೇಖೆಯೊಳಗಿನ ಅಕ್ಷರೇಖೆಯಲ್ಲಿ ರುವ ಸಣ್ಣ ವೃತ್ತರೇಖೆ, ಖಗೋಳದೊಳಗಿನ ಒಂದು ಸಣ್ಣ ವೃತ್ತರೇಖೆ.

**दृग्विष ದೃಗ್ವಿಷ** (ಪುಂ) ಸರ್ಪ, ಹಾವು. दृशि विषमस्य।

**दृग्लम्बन ದೃಗ್‌ಲಂಬನ** (न०) ನೆತ್ತಿಯ ಮೇಲೆ ದೃಷ್ಟಿ ಸ್ಥಾನದ ಬದಲಾವಣೆಯಿಂದ ವಸ್ತುಸ್ಥಾನದಲ್ಲಿಯೂ ಆದಂತೆ ತೋರುವ ಬದಲಾವಣೆ.

**दृग्वृत्त ದೃಗ್‌ವೃತ್ತ** (न०) ವೃತ್ತಾಕಾರದ ದೃಷ್ಟಿಯ ಪ್ರಸರಣ ಸ್ಥಳ. दृशः प्रचारस्थानं वृत्तमिव।

**दृङ्मण्डल ದೃಙ್‌ಮಂಡಲ** (न०) ಖಮಧ್ಯದಿಂದ ಕ್ಷಿತಿಜ (ದಿಗಂತ)ದ ವರೆಗೆ ವ್ಯಾಪಿಸಿರುವ ವೃತ್ತಭಾಗ. दृशः तत्प्रचारस्य मण्डलमिव।

**दृढ ದೃಢ** (ಪುಂ) 1. ವಿಷ್ಣು. दृह (वृद्धौ) "क्तः" (३-४-७२)। निपा० (७-२-२०)। "स्थूलत्वात् बलवत्त्वाच्च दृढ इत्यभिधीयते" इति निरुक्तिः। "वेधाः स्वाङ्गोऽजितः कृष्णो दृढः संकर्षणोऽच्युतः" वि० स०। 2. ಹದಿಮೂರನೆಯ ಮನುವಾದ ರುಚಿಯ ಒಬ್ಬ ಮಗ. "त्रयोदशस्य पुत्रास्ते विज्ञेयास्तु रुचेः सुताः। सुनेत्रः क्षत्रबुद्धिश्च सुतपा निर्भयो दृढः" हरिवं०। 3. ಧೃತರಾಷ್ಟ್ರನ ಒಬ್ಬ ಮಗ. "दृढः सुहस्तो विरजाः प्रमाथश्चोग्रयाय्यपि" भा० द्रोण०। 4. ರೂಪಕತಾಳದ ಒಂದು ಭೇದ. (न०) 5. ಕಬ್ಬಿಣ. 6. ಲಾಮಂಚದ ಬೇರು. 7. ಅತಿ ಶಯ, ಆಧಿಕ್ಯ. 8. ಕಾಠಿನ್ಯ. (वि०) 9. ಅಧಿಕವಾದ, ದೃಢವಾದ, ಬಲವಾದ. "यस्याः करिष्यामि दृढानुतापं प्रवालशय्याशरणं शरीरम्" कुमा० २-८। 10. ದೃಢ ವಾದ, ಬಲವಾದ, ಭದ್ರವಾದ. 11. ಕಠಿನವಾದ, ಗಟ್ಟಿ ಯಾದ, ಬಗ್ಗಿಸಲಾಗದ. 12. ದೃಢವಾದ, ಸ್ಥಿರವಾದ, ಅಚಲವಾದ. "लङ्केश्वरप्रणतिभङ्गदृढव्रतं तद्वन्द्यं युगं चरणयोर्जनकात्मजायाः" रघु० १३-७८। 13. ಸ್ಥೂಲ ವಾದ, ದಪ್ಪವಾದ. "क्षीणं क्षामं विलिष्टं स्यात् स्थूलं तु बहलं दृढम्" वैज०। 14. ಶಕ್ತ, ಸಮರ್ಥ, ಬಲಶಾಲಿ. "दृढः स्थूले नितान्ते च प्रगाढे बलवत्यपि" मेदि०। "कठोरनिष्ठुरक्रूरदृढदारुणकक्खटाः" वैज०। (क्रि० वि०) 15. ಅಧಿಕವಾಗಿ, ಹೆಚ್ಚಾಗಿ. 16. ಕಠಿನ ವಾಗಿ. 17. ದೃಢವಾಗಿ, ಬಲವಾಗಿ. "अशिथिलमपराऽवसज्य कण्ठे दृढपरिरम्भबृहद्वहिःस्तनेन" माघ० ७-१६।

**दृढकाण्ड ದೃಢಕಾಂಡ** (ಪುಂ) ಬಿದಿರುಮೆಳೆ, ವಂಶವೃಕ್ಷ.

**दृढकाय ದೃಢಕಾಯ** (वि०) ದೃಢವಾದ ದೇಹವುಳ್ಳ, ಗಟ್ಟಿಯಾದ ಶರೀರವುಳ್ಳ. दृढः कायो यस्य। दृढदेहः दृढशरीरः ಇತ್ಯಾದಿ.

**दृढक्षात्र ದೃಢಕ್ಷಾತ್ರ** (ಪುಂ) ಧೃತರಾಷ್ಟ್ರನ ಒಬ್ಬ ಮಗ. "दृढवर्मा दृढक्षात्रः सोमकीर्तिरनूदरः" भा० आदि०।

**दृढगात्रिका ದೃಢಗಾತ್ರಿಕಾ** (स्त्री०) ಕಾಕಂಬಿ, ಜೋನು ಬೆಲ್ಲ.

**दृढग्रन्थि ದೃಢಗ್ರಂಥಿ** (ಪುಂ) 1. ಬಿದಿರು, ವಂಶವೃಕ್ಷ. 2. ಗಟ್ಟಿಯಾದ ಗಂಟು. 3. ಗಟ್ಟಿಯಾದ ಗಿಣ್ಣು. (वि०) 4. ಗಟ್ಟಿಯಾದ ಗಂಟುಗಳುಳ್ಳ. 5. ಗಟ್ಟಿಯಾದ ಗಿಣ್ಣುಗಳುಳ್ಳ. दृढा ग्रन्थयो यस्य।

**दृढतम ದೃಢತಮ** (वि०) ಬಹು ಮಂದಿಗಳಲ್ಲಿ ಅಥವಾ ಬಹು ವಸ್ತುಗಳಲ್ಲಿ 1. ಹೆಚ್ಚು ಬಲಶಾಲಿಯಾದ. 2. ಹೆಚ್ಚು ಕಠಿನವಾದ. 3. ಹೆಚ್ಚು ಭದ್ರವಾದ. 4. ಹೆಚ್ಚು ಸ್ಥಿರ ವಾದ. 5. ಹೆಚ್ಚು ದಪ್ಪವಾದ. 6. ದೊಡ್ಡದಾದ ಒಂದು ವಸ್ತು ಅಥವಾ ಒಬ್ಬ ಮನುಷ್ಯ. अयमेतेषामतिशयेन दृढः "तमप्" (५-३-५५)। ಹೀಗೆಯೇ अयमनयोरतिशयेन दृढः "तरप्" (५-३-५७)। ಇಬ್ಬರಲ್ಲಿ ಒಬ್ಬನು ಹೆಚ್ಚು ಸಮರ್ಥ ಅಥವಾ ಎರಡು ವಸ್ತುಗಳಲ್ಲಿ ಒಂದು ಅಧಿಕ ಇತ್ಯಾದಿ. -तरः -ತರಃ.

**दृढदंशक ದೃಢದಂಶಕ** (ಪುಂ) ಮೊಸಳೆಯಾಕಾರದ ಒಂದು ಮೀನು. दृढं दशति—दंश (दशने) "ण्वुल्" (३-१-१३३)।

**दृढधन ದೃಢಧನ** (ಪುಂ) ಶಾಕ್ಯಮುನಿ.

**दृढधन्वन् ದೃಢಧನ್ವನ್** (ಪುಂ) 1. ಪೂರುವಂಶದ ಒಬ್ಬ ದೊರೆ. "सुदक्षिणश्च काम्भोजो दृढधन्वा च पौरवः"

भा० आदि० २०१-१५। (वि०) 2. ದೃಢವಾದ ಧನುಸ್ಸುಳ್ಳವನು. दृढं धनुर्यस्य "अनङ्" (५-४-१३२)।

**दृढनिश्चय ದೃಢನಿಶ್ಚಯ** (वि०) ಅಚಲವಾದ ನಿರ್ಧಾರವುಳ್ಳವನು, ಸಂಶಯಲೇಶವೂ ಇಲ್ಲದವನು, ಯಾರಿಂದಲೂ ಬದಲಾಯಿಸಲು ಅಶಕ್ಯವಾದ ನಿಶ್ಚಯಬುದ್ಧಿಯುಳ್ಳವನು. दृढः स्थिरः निश्चयः अध्यवसायो यस्य।

**दृढनीर ದೃಢನೀರ** (पुं०) ನಾರಿಕೇಳವೃಕ್ಷ, ತೆಂಗಿನಮರ.

**दृढनेत्र ದೃಢನೇತ್ರ** (पुं०) ವಿಶ್ವಾಮಿತ್ರಋಷಿಯ ಒಬ್ಬ ಮಗ.

**दृढपत्र ದೃಢಪತ್ರ** (पुं०) 1. ಬಿದಿರು ಮೆಳೆ, ವಂಶವೃಕ್ಷ. (स्त्री०) -पत्री -ಪತ್ರೀ. 2. ಕರಡಿಹುಲ್ಲು.

**दृढपाद ದೃಢಪಾದ** (पुं०) 1. ಚತುರ್ಮುಖಬ್ರಹ್ಮ. "बहुत्वाद् दृढपादश्च विश्वात्मा जगतां पतिः" हरिवं०। (वि०) 2. ದೃಢವಾದ ನಿಶ್ಚಯವುಳ್ಳ, ಸ್ಥಿರವಾದ ನಿಶ್ಚಯಬುದ್ಧಿಯುಳ್ಳ.

**दृढप्रत्यय ದೃಢಪ್ರತ್ಯಯ** (पुं०) 1. ದೃಢವಾದ ನಂಬಿಕೆ. (वि०) 2. ದೃಢವಾದ ನಂಬಿಕೆಯುಳ್ಳವನು. दृढः प्रत्ययः विश्वासः यस्य।

**दृढप्ररोह ದೃಢಪ್ರರೋಹ** (पुं०) ವಟವೃಕ್ಷ, ಆಲದಮರ. दृढः प्ररोहोऽस्य।

**दृढफल ದೃಢಫಲ** (पुं०) ತೆಂಗಿನಮರ.

**दृढबीज ದೃಢಬೀಜ** (पुं०) 1. ಬೋರೆಗಿಡ, ಎಲಚಿಮರ. 2. ತಗಚಿಗಿಡ. दृढं बीजमस्य। (न०) 3. ಗಟ್ಟಿಯಾದ ಬೀಜ, ಕಠಿನವಾದ ಬೀಜ.

**दृढभक्ति ದೃಢಭಕ್ತಿ** (वि०) ಸ್ಥಿರವಾದ ಭಕ್ತಿಯುಳ್ಳವನು, ಅಚಲವಾದ ಭಕ್ತಿಯುಳ್ಳವನು. दृढा भक्तिर्यस्य।

**दृढमुष्टि ದೃಢಮುಷ್ಟಿ** (पुं०) 1. ಖಡ್ಗ, ಕತ್ತಿ. 2. ಮಚ್ಚು. 3. ಕುಡುಗೋಲು ಮುಂತಾದುವು. दृढा मुष्टिः यस्य। (स्त्री०) 4. ಬಲವಾದ ಮುಷ್ಟಿ. (वि०) 5. ಕೃಪಣ, ಜಿಪುಣ.

**दृढमूल ದೃಢಮೂಲ** (पुं०) 1. ಮುಂಜತೃಣ, ಮೌಂಜಿ ಹುಲ್ಲು. 2. ತೆಂಗಿನಮರ. दृढं मूलमस्य।

**दृढरङ्गा ದೃಢರಂಗಾ** (स्त्री०) ಪಟಿಕ.

**दृढरथ ದೃಢರಥ** (पुं०) ಧೃತರಾಷ್ಟ್ರನ ಒಬ್ಬ ಮಗ. "अभयो रौद्रकर्मा च तथा दृढरथश्च यः" भा० आदि०।

**दृढलोमन् ದೃಢಲೋಮನ್** (पुं०) 1. ವರಾಹ, ಹಂದಿ. दृढानि लोमान्यस्य। 2. ದೃಢವಾದ ಕೂದಲು, ಒರಟು ಕೂದಲು. दृढं लोम। (वि०) 3. ಒರಟು ಕೂದಲುಳ್ಳ, दृढानि लोमानि यस्य। स्त्रियाम् वा "डाप्" (४-१-१३)। दृढलोमा ದೃಢಲೋಮಾ. पक्षे "ङीप्". (४-१-५)। -लोम्नी -ಲೋಮ್ನೀ.

**दृढवर्मन् ದೃಢವರ್ಮನ್** (पुं०) 1. ಧೃತರಾಷ್ಟ್ರನ ಒಬ್ಬ ಮಗ. "दृढवर्मा दृढक्षात्रः सोमकीर्तिरनूदरः" भा० आदि०। (वि०) 2. ದೃಢವಾದ ಕವಚವುಳ್ಳ, ಅಭೇದ್ಯವಾದ ಕವಚವುಳ್ಳ. दृढं वर्म यस्य।

**दृढवल्कल ದೃಢವಲ್ಕಲ** (पुं०) 1. ಅಡಕೆಮರ. दृढं वल्कलं त्वगस्य। (वि०) 2. ಗಟ್ಟಿಯಾದ ತೊಗಟೆಯುಳ್ಳ.

**दृढव्रत ದೃಢವ್ರತ** (वि०) 1. ಸ್ಥಿರಸಂಕಲ್ಪವುಳ್ಳ, ದೃಢನಿಶ್ಚಯವುಳ್ಳ, ಫಲವು ದೊರಕುವವರೆಗೂ ಪ್ರಯತ್ನವನ್ನು ಬಿಡದಿರುವ ಸ್ವಭಾವದ. दृढं व्रतं यस्य। "स्थेयान्निगूढमानो धीरोदात्तो दृढव्रतः कथितः" सा० द०। 2. ಯಾರಿಂದಲೂ ಭಂಗಪಡಿಸಲು ಅಶಕ್ಯವಾದ ಸಂಕಲ್ಪವುಳ್ಳ. दृढं चालयितुमशक्यं व्रतं यस्य। "एवं दृढव्रतो नित्यं ब्रह्मचारी समाहितः" मनु० ११-८१।

**दृढसन्ध ದೃಢಸಂಧ** (पुं०) 1. ಧೃತರಾಷ್ಟ್ರನ ಒಬ್ಬ ಮಗ. "जरासन्धो दृढसन्धः सत्यसन्धः सहस्रवाक्" भा० आदि०। (वि०) 2. ಸ್ಥಿರವಾದ ಪ್ರತಿಜ್ಞೆಯುಳ್ಳವನು. दृढा सन्धा यस्य।

**दृढसन्धि ದೃಢಸಂಧಿ** (वि०) ಚೆನ್ನಾಗಿ ಸೇರಿಕೊಂಡಿರುವ, ಭದ್ರವಾಗಿ ಅಂಟಿಕೊಂಡಿರುವ. दृढः सन्धिः सन्धानं यस्य।

**दृढहस्त ದೃಢಹಸ್ತ** (पुं०) 1. ಧೃತರಾಷ್ಟ್ರನ ಒಬ್ಬ ಮಗ. 2. ದೃಢವಾದ ಹಸ್ತವ್ಯಾಪಾರವುಳ್ಳ, ಶಸ್ತ್ರಾಸ್ತ್ರಗಳನ್ನು ಭದ್ರವಾಗಿ ಹಿಡಿದು ಯುದ್ಧಮಾಡುವ ಸೈನಿಕ. दृढः हस्तः हस्तव्यापारो यस्य।

**दृढाङ्ग ದೃಢಾಂಗ** (वि०) 1. ದೃಢವಾದ ಅಂಗವುಳ್ಳವನು, ಗಟ್ಟಿ ದೇಹವುಳ್ಳವನು, ಬಲಶಾಲಿ. दृढानि अङ्गानि यस्य। (न०) 2. ವಜ್ರ.

**दृढायु ದೃಢಾಯು** (पुं०) 1. ಮೂರನೆಯ ಮನುವಾದ ಸಾವರ್ಣನ ಒಬ್ಬ ಮಗ. "क्षेत्रधन्वा दृढायुश्च आदर्शः पण्डको मनुः। सावर्णस्य तु पुत्रा वै तृतीयस्य नव स्मृताः" हरिवं०। 2. ಊರ್ವಶಿಯಲ್ಲಿ ಜನಿಸಿದ ಪುರೂರವಸ್ಸಿನ ಒಬ್ಬ ಮಗ. "षट्सुता जज्ञिरे चैलादायुर्धीमानमावसुः। दृढायुश्च वनायुश्च शतायुश्चोर्वशीसुताः" भा० आदि ६९-२८।

**दृढायुध ದೃಢಾಯುಧ** (पुं०) 1. ಧೃತರಾಷ್ಟ್ರನ ಒಬ್ಬ ಮಗ. "उग्रायुधो भीमशरः कनकायुर्दृढायुधः" भा०

आदि० ६८-९९। (वि०) 2. ಬಲವಾದ ಆಯುಧ ವ್ಯಾಪಾರವುಳ್ಳ ಸೈನಿಕ.

**दृति** ದೃತಿ (स्त्री०) 1. ಚರ್ಮದ ಪಾತ್ರೆ, ತೊಗಲಿನ ಚೀಲ. दृङ् (आदरे) "क्तिच्" (३-३-१७४)। "इन्द्रियाणां तु सर्वेषां यद्येकं क्षरतीन्द्रियम्। तेनास्य क्षरति प्रज्ञा दृतेः पादादिवोदकम्" मनु० २-९९। (पुं०) 2. ಮತ್ಸ್ಯ, ಮೀನು. "दृतिश्चर्मपुटे मत्स्ये ना" मेदि०। 3. ಗರಗೆ ದೊಗಲು. "सवत्सां पीवरीं दत्वा दृतिकण्ठामलङ्कृताम्" भा० अनु० ११४-१८।

**दृत्य** ದೃತ್ಯ (न०) 1. ಆದರ, ಗೌರವ. दृङ् (आदरे) "क्यप्" (३-१-११०)। (वि०) 2. ಆದರಿಸಲ್ಪಡುವ, ಗೌರವಿಸಲ್ಪಡುವ. दृङ् कर्म० "क्यप्"।

**दृन्** ದೃನ್ (अव्य०) ಹಿಂಸೆ, ಬಾಧೆ, ತೊಂದರೆ. "दृन् इति हिंसार्थे अव्ययम्" सि० कौ०।

**दृन्भू** ದೃನ್‌ಭೂ (पुं०) 1. ವಜ್ರಾಯುಧ. 2. ಸೂರ್ಯ. दृन् हिंसायां भवति – भू (सत्तायाम्) "कू:" (उ० १-९३)। निपा०। 3. ರಾಜ, ದೊರೆ. 4. ಚಕ್ರ, ಗಾಲಿ. 5. ಸರ್ಪ, ಹಾವು. "दृन्भूः स्त्री सर्पचक्रयोः" मेदि०।

**दृप – हर्षमोहनयोः** (दिवा० पर० अक० वे०)। दृप्यति। ददर्प। दर्पिता, दर्प्ता, द्रप्ता। दर्पिष्यति, दर्प्स्यति, द्रप्स्यति। दृप्यतु। अदृप्यत्। दृप्येत्। दृप्यात्। ಇತ್ಯಾದಿ. 1. ಹರ್ಷಹೊಂದು, ಸಂತೋಷಪಡು. 2. ಗರ್ವ ಹೊಂದು, ಅಹಂಕಾರಪಡು. "दृप्तारिसंत्रासखिलीकृतात्स कथंचिदम्भोदविहारमार्गात्" कुमा० १२-२। "को न दृप्यति वित्तेन कुकृत्ये को न पण्डितः" हितो०।

**भावे :**—दृप्यते। ददृपे। दर्पिता, द्रप्ता, दर्प्ता। दर्पिष्यते, द्रप्स्यते, दर्प्स्यते। दृप्यताम्। अदृप्यत। ಇತ್ಯಾದಿ.

**कृत्सु :**—दर्पितव्यम्, द्रप्तव्यम्, दर्प्तव्यम्। दर्पणीयम्। दृप्तः। दृप्तवान्, –वती। दृप्यन्, –न्ती। दर्पितुम्, द्रप्तुम्, दर्प्तुम्। दृप्तम्। दर्पणम्। दृप्त्वा।

**दृप्त** ದೃಪ್ತ (पुं०) 1. ವಿಷ್ಣು. "दर्पहा दर्पदो दृप्तः" वि० स०। "अदृप्तः" इति वा। (वि०) 2. ಕೊಬ್ಬಿದವನು, ಅಹಂಕಾರದಿಂದ ಕೂಡಿದವನು. 3. ಸಂತೋಷಗೊಂಡವನು, ಹರ್ಷದಿಂದ ಕೂಡಿದವನು. दृप (हर्षमोहनयोः) कर्त० "क्तः" (३-४-७२)।

**दृप्यत्** ದೃಪ್ಯತ್ (वि०) 1. ಅಹಂಕಾರಪಡುತ್ತಿರುವ, ಗರ್ವಪಡುತ್ತಿರುವ. दृप (हर्षमोहनयोः) "शतृ" (३-२-१२४)। "दृप्यतामथ दैत्यानां ध्वनिरुत्कम्पयन् दिवम्। पाञ्चजन्यप्रणादेन पर्यभूयत भूयसा" याद० १६-८३। 2. ಹರ್ಷಗೊಳ್ಳುತ್ತಿರುವ, ಸಂತೋಷಪಡುತ್ತಿರುವ.

**दृप्र** ದೃಪ್ರ (वि०) ಬಲಶಾಲಿ, ಪರಾಕ್ರಮಿ. दृप (हर्षमोहनयोः) "रक्" (उ० २-१३) दृप्रो बलवान्—सि० कौ०।

**दृब्ध** ದೃಬ್ಧ (न०) 1. ಭಯ, ಹೆದರಿಕೆ. दृभी (भये) भावे "क्तः" (३-३-११४)। 2. ಕಟ್ಟುವುದು, ಪೋಣಿಸುವುದು. दृभी (ग्रन्थे) भावे "क्तः" (३-३-११४)। (वि०) 3. ಕಟ್ಟಲ್ಪಟ್ಟ, ಪೋಣಿಸಲ್ಪಟ್ಟ. दृभी (ग्रन्थे) "क्तः" (३-२-१०२)। 4. ಭಯಗೊಂಡ, ಹೆದರಿದ. दृभी (भये) कर्त० "क्तः" (३-४-७२)।

**दृश्** ದೃಶ್ (स्त्री०) 1. ನೇತ್ರ, ಕಣ್ಣು. दृश्यतेऽनया—दृशिर् (प्रेक्षणे) "क्विप्" (वा० ३-३-९४)। "दृशा दग्धं मनसिजं जीवयन्ति दृशैव याः। विरूपाक्षस्य जयिनीस्ताः स्तुवे वामलोचनाः"। 2. ದರ್ಶನ, ನೋಟ, ಅವಲೋಕನ. दृशिर् भावे "क्विप्"। "पदं दृशः स्याः कथमीशमादृशाम्" माघ० १-३७। 3. ಬುದ್ಧಿ, ಜ್ಞಾನ. 4. ಎರಡು ಸಂಖ್ಯೆ. (वि०) 5. ನೋಡುವ, ಅವಲೋಕಿಸುವ. "वायुभक्षो दिवा तिष्ठन् रात्रिं नीत्वाप्सु सूर्यदृक्" याज्ञ० ३-३११। "दृक् स्त्रियाम् दर्शने नेत्रे बुद्धौ च त्रिषु वीक्षके" मेदि०।

**दृशा** ದೃಶಾ (स्त्री०) ನೇತ್ರ, ಕಣ್ಣು. दृश् "टाप्"। "आपं चैव हलन्तानां यथा वाचा निशा दिशा"।

**दृशान** ದೃಶಾನ (पुं०) 1. ಆಚಾರ್ಯ. 2. ಉಪಾಧ್ಯಾಯ. 3. ಲೋಕಪಾಲಕ. 4. ಬ್ರಾಹ್ಮಣ. 5. ವಿರೋಚನ, ಸೂರ್ಯ. दृशिर् (प्रेक्षणे) "आनच्" (उ० २-९०)। (न०) 6. ಜ್ಯೋತಿಸ್ಸು, ಪ್ರಕಾಶ, ಬೆಳಕು. "दृशानं ज्योतिषि क्लीबं पुंलिङ्गः स्याद्विरोचने" मेदि०।

**दृशिर् – प्रेक्षणे** (भ्वा० पर० सक० अनि०)। पश्यति। ददर्श। द्रष्टा। द्रक्ष्यति। पश्यतु। अपश्यत्। पश्येत्। दृश्यात्। अदर्शत्, अद्राक्षीत्। अद्रक्ष्यत्। ಅವಲೋಕಿಸು, ನೋಡು. "वसन्ददर्शावतरन्तमम्बराद्धिरण्यगर्भाङ्गभुवं मुनिं हरिः" माघ० १-१।

**कर्मणि :**—दृश्यते। ददृशे। दर्शिता, द्रष्टा। दर्शिष्यते, द्रक्ष्यते। दृश्यताम्। अदृश्यत। दृश्येत। दर्शिशीष्ट, द्रक्षीष्ट। ಇತ್ಯಾದಿ.

णिचि :—दर्शयति, –ते। दर्शयां चकार, –चक्रे, –बभूव, –आस। दर्शयिता। दर्शयिष्यति, –ते। दर्शयतु, –ताम्। ಇತ್ಯಾದಿ.

सनि :—दिदृक्षते। दिदृक्षां चक्रे, –बभूव, –आस। दिदृक्षिता। दिदृक्षिष्यते। दिदृक्षताम्। ಇತ್ಯಾದಿ.

कृत्सु :—द्रष्टव्यः। दर्शनीयः। दृश्यः। दृष्टः। दृष्टवान्। पश्यन्, न्ती। द्रष्टुम्। दृष्टम्। दर्शनम्। दृष्ट्वा। सन्दृश्य।

**ಈ ಧಾತುವಿಗೆ ಉಪಸರ್ಗಗಳ ಯೋಗದಿಂದ ಉಂಟಾಗುವ ಅರ್ಥಭೇದಗಳು :**

(1) अनु + दृशिर् = अनुपश्यति। अनुददर्श। 1. ಆಲೋಚಿಸಿ ನೋಡು, ಯೋಚಿಸಿ ನೋಡು. "बहुविधमनुदृश्य चार्थहेतोः कृपणमिहार्यमनार्यमाश्रयं तम्" भा० शान्ति० १७७-२९। 2. ಅನುಸಂಧಾನಮಾಡು. ದೀರ್ಘ ಕಾಲ ಮನನಮಾಡು. "जन्ममृत्युजराव्याधिदुःखदोषानुदर्शनम्" गीता १३-८।

(2) अभि + दृशिर् = अभिदर्शनम्। अभिदृष्टः। ಅಭಿಮುಖವಾಗಿ ನೋಡು, ಎದುರಾಗಿ ನೋಡು. "तदाप्रभृति कौन्तेय नरा गिरिमिमं सदा। नाशक्नुवन्नभिद्रष्टुं कुत एवाधिरोहणम्" भा० वन०।

(3) आ+दृशिर्=आदृश्यते। आदर्शः। ಎದುರಾಗಿ ನೋಡು, ಚೆನ್ನಾಗಿ ನೋಡು. "उत्कलादर्शितपथः कलिङ्गाभिमुखो ययौ" रघु० ४-३८।

(4) नि + दृशिर् = निदर्शयति। निदर्शनम्। 1. ದೃಷ್ಟಾಂತವಾಗಿ ತೋರಿಸಿಕೊಡು. "स्वयं प्रणमतेऽल्पेपि परवायावुपेयुषि। निदर्शनमसाराणां लघुर्बहुतृणं नरः" माघ० २-५०। 2. ಎದುರಿಗೆ ತೋರಿಸು. "द्रष्टुमिच्छामि ते रूपमैश्वरं त्वं निदर्शय" भा० आश्रम०।

(5) प्र+दृशिर् = प्रददर्श। प्रदर्शयति। प्रदर्शनम्। ಚೆನ್ನಾಗಿ ನೋಡು. "प्रददृशुरुरुमुक्तशीकरौघान् विमलमणिद्युतिसंभृतेन्द्रचापान्" भट्टि० १०-५६।

(6) सम्+दृशिर् = संददर्श। ಸರಿಯಾಗಿ ನೋಡು, ಚೆನ್ನಾಗಿ ನೋಡು. "संददर्शोन्नमद्ग्रीवः श्रीबहुत्वकृताद्भुतान्" नैष० १७-११०।

**दृशि ದೃಶಿ** (स्त्री०) ನೇತ್ರ, ಕಣ್ಣು. दृशिर् "इन्" (उ० ४-११९)।

**दृश्य ದೃಶ್ಯ** (वि०) 1. ನೋಡಲು ಯೋಗ್ಯವಾದ. 2. ನೋಡಬಹುದಾದ. दशिर् (प्रेक्षणे) "क्यप्" (३-१-११०)। "दृश्यं तमसि न पश्यति दीपेन विना सचक्षुरपि" माल० १-९। 3. ರಮಣೀಯವಾದ, ಸುಂದರವಾದ, ಮನೋಹರವಾದ. "निदर्शयामास विशेषदृश्यमिन्दुं नवोत्थानमिवेन्दुमत्यै" रघु० ६-३१। (न०)4. ಆಭರಣ, ಒಡವೆ. 5. ಕಾವ್ಯದ ಒಂದು ಭೇದ. ಕಾವ್ಯವು ದೃಶ್ಯ ಮತ್ತು ಶ್ರವ್ಯ ಎಂದು ಎರಡು ವಿಧ. ಅಭಿನಯಯೋಗ್ಯವಾದುದು ದೃಶ್ಯಕಾವ್ಯ. "दृश्यश्रव्यत्वभेदेन पुनः काव्यं द्विधा मतम्। दृश्यं तत्राभिनेयम्" सा० द० ६-१। (अव्य०) 6. ನೋಡಿ. "दृष्ट्वा" ಪದದ ಅರ್ಥದಲ್ಲಿ ಆರ್ಷಪ್ರಯೋಗ. (स्त्री०) **–श्या –ಶ್ಯಾ**. 7. ಸೈನ್ಯ, ದಂಡು. "दृश्या स्त्री पृतना दृश्यं दर्शनीये विभूषणे" वैज०।

**दृश्यादृश्य ದೃಶ್ಯಾದೃಶ್ಯ** (वि०) 1. ಕಣ್ಣಿಗೆ ಕಾಣುವ ಮತ್ತು ಕಾಣದಿರುವ. दृश्यं चादृश्यं च। "दृश्यादृश्यतनुर्वीरः तदा चन्द्रायतेऽम्बरे" रामा०। (स्त्री०) **–श्यादृश्या –ಶ್ಯಾದೃಶ್ಯಾ**. 2. ಸಿನೀವಾಲಿ, ಚತುರ್ದಶೀ ಸಂಬಂಧವಿರುವ ಅಮಾವಾಸ್ಯೆ. ಸೂರ್ಯೋದಯ ಕಾಲ ದಲ್ಲಿ ಚತುರ್ದಶೀ ಯೋಗವಿರುವ ಅಮಾವಾಸ್ಯೆಯ ದಿನ ಚಂದ್ರಕಲಾದರ್ಶನವಿರುವುದು. ಈ ಅಮಾವಾಸ್ಯೆಗೆ "**ಸಿನೀವಾಲಿ**" ಎಂದು ಹೆಸರು. "सा दृष्टेन्दुः सिनीवाली" अम०।

**दृश्वन् ದೃಶ್ವನ್** (वि०) (ಸಮಾಸಾಂತ್ಯದಲ್ಲಿ) ವೀಕ್ಷಿಸಿದ, ನೋಡಿದ. दृशिर् (प्रेक्षणे) "क्वनिप्" (३-२-९४)। पारं दृष्टवान् पारदृश्वा ಇತ್ಯಾದಿ. "अनाकृष्टस्य विषयैर्विद्यानां पारदृश्वनः" रघु० १-२३।

**दृषद् ದೃಷದ್** (स्त्री०) 1. ಶಿಲೆ, ಕಲ್ಲು. दृणाति—दृ (विदारणे) "अदिः" षुगागमः ह्रस्वश्च (उ० १-१२८)। "गुर्वीरजस्रं दृषदः समन्तादुपर्युपर्यम्बुमुचां वितानैः" माघ० ४-२। 2. ಅರೆಯುವ ಕಲ್ಲು, ಪುಡಿಮಾಡುವ ಅಡಿಗಲ್ಲು. 3. ಬೀಸುವ ಕಲ್ಲಿನ ಕೆಳಗಿನ ಅಥವಾ ಮೇಲಿನ ಹೋಳು. "दृषन्निष्पेषणशिलापट्टप्रस्तरयोः स्त्रियाम्" मेदि०। "दृषन्निष्पेषणशिला केवलापि शिला दृषत्" शाश्व०।

**दृषदिमाषक ದೃಷದಿಮಾಷಕ** (पुं०) ಅರೆಯುವ ಕಲ್ಲಿನ ಸುಂಕ, ಅರೆಯುವ ಕಲ್ಲಿನ ಯಂತ್ರಕ್ಕಾಗಿ ಸರ್ಕಾರಕ್ಕೆ ಕೊಡ ಬೇಕಾದ ಮಾಷರೂಪವಾದ ಸುಂಕ. माषः शुल्कत्वेन

दीयते "कन्"। दृषदिमाषकः—सप्तम्या अलुक् (६-३-१०)।

**दृषद्वत् ದೃಷದ್ವತ್** (वि०) ಕಲ್ಲುಗಳಿಂದ ಕೂಡಿದ, ಬಂಡೆಗಳಿಂದ ತುಂಬಿದ. दृषदः भूम्ना सन्त्यत्र "मतुप्" (५-२-९४)। स्त्रियाम् "ङीप्" (४-१-६)। **दृषद्वती ದೃಷದ್ವತೀ.**

**दृषद्वती ದೃಷದ್ವತೀ** (स्त्री०) 1. ವಿಶ್ವಾಮಿತ್ರಋಷಿಯ ಪತ್ನಿ. "दृषद्वतीसुतश्चापि विश्वामित्रात्तथाष्टकः" हरिवं०। 2. ಒಂದು ನದಿ. 3. ದುರ್ಗಾದೇವಿ. "दृषद्वती नदीभेदे कात्यायन्यामपि स्त्रियाम्" मेदि०।

**दृष्ट ದೃಷ್ಟ** (न०) 1. ನೋಟ, ದರ್ಶನ. दृशिर् (प्रेक्षणे) भावे "क्तः" (३-३-१२४)। "अकृत्रिमप्रेमरसाभिरामं रामार्पितं दृष्टिविलोभि दृष्टम्" किरा० ३-३७। 2. ರಾಜರಿಗೆ ತಮ್ಮ ರಾಷ್ಟ್ರದಲ್ಲಿ ಕಳ್ಳಕಾಕರಿಂದ ಉಂಟಾಗುವ ಭಯ. 3. ಪರರಾಷ್ಟ್ರಗಳವರಿಂದ ಉಂಟಾಗುವ ಭಯ. "दृष्टं स्वपरचक्रजम्" अम०। (वि०) 4. ನೋಡಲ್ಪಟ್ಟ. "दृष्टोऽपि शैलः स मुहुर्मुरारेरपूर्ववद्विस्मयमाततान" माघ० ४-१७। 5. ತಿಳಿಯಲ್ಪಟ್ಟ, ಅರಿಯಲ್ಪಟ್ಟ. दृशिर् कर्म० "क्तः" (३-२-१०२)। 6. ಸಾಕ್ಷಾತ್ಕಾರ ಹೊಂದಿದ, ಪ್ರತ್ಯಕ್ಷವಾಗಿ ತೋರಿಸಿಕೊಂಡ. दृशिर् कर्त० "क्तः" (३-४-७२)।

**दृष्टचर ದೃಷ್ಟಚರ** (वि०) ಮೊದಲೇ ನೋಡಲ್ಪಟ್ಟ. पूर्वं दृष्टः "चरट्" (५-३-५३)।

**दृष्टदोष ದೃಷ್ಟದೋಷ** (वि०) 1. ತಪ್ಪುಮಾಡಿದುದನ್ನು ತಿಳಿದಿರುವ, ದೋಷವನ್ನು ತಿಳಿದಿರುವ. दृष्टः दोषः येन। 2. ತಿಳಿಯಲ್ಪಟ್ಟ ದೋಷವುಳ್ಳ, ಅಪರಾಧಿ, ತಪ್ಪುಮಾಡಿದವನು. दृष्टो दोषो यस्य। 3. ದೋಷವನ್ನೇ ಹುಡುಕುವ (ಶತ್ರು).

**दृष्टिपथ ದೃಷ್ಟಿಪಥ** (पुं०) ನೋಟದದಾರಿ, ದೃಷ್ಟಿಮಾರ್ಗ. दृष्टेः पन्थाः "अः" (५-४-७४)। "देवो दष्टिपथं गतः" याद० १६-१३९।

**दृष्टप्रत्यय ದೃಷ್ಟಪ್ರತ್ಯಯ** (वि०) ದರ್ಶನದಿಂದ ನಂಬಿಕೆ ಹೊಂದಿದವನು. दृष्टेन दर्शनेन प्रत्ययो यस्य।

**दृष्टरजस् ದೃಷ್ಟರಜಸ್** (स्त्री०) 1. ರಜಸ್ವಲೆ, ಪುಷ್ಪವತಿಯಾದ ಹೆಂಗಸು. दृष्टं रजः आर्तवं यस्याः। 2. ತರುಣಿ, ಪ್ರಾಯದ ಹೆಂಗಸು. "स्यान्मध्यमा दृष्टरजाः" अम०।

**दृष्टवत् ದೃಷ್ಟವತ್** (वि०) ನೋಡಿದವನು. दृशिर् (प्रेक्षणे) "क्तवतुः" (३-२-१०२)। स्त्रियाम् "ङीप्" (४-१-६)। **-वती -ವತೀ.**

**दृष्टान्त ದೃಷ್ಟಾಂತ** (पुं०) 1. ಉದಾಹರಣೆ, ನಿದರ್ಶನ, ನಿರ್ಣಯಕ್ಕಾಗಿ ಸಮಾನ ವಿಷಯವನ್ನು ನಿರೂಪಿಸುವುದು. दृष्टोऽन्तो निश्चयो यत्र। "पूर्णश्चन्द्रोदयाकाङ्क्षी दृष्टान्तोऽत्र महार्णवः" माघ० २-३१। 2. ದೃಷ್ಟಾಂತಾಲಂಕಾರ, ಅರ್ಥಾಲಂಕಾರದ ಒಂದು ಭೇದ. ಪ್ರಕೃತ ಮತ್ತು ಅಪ್ರಕೃತ ವಾಕ್ಯಗಳಲ್ಲಿ ಬಿಂಬ ಪ್ರತಿಬಿಂಬಭಾವದಿಂದ ಭಿನ್ನಧರ್ಮಗಳು ಭಿನ್ನಪದಗಳಿಂದ ಉಕ್ತವಾಗಿದ್ದರೂ ಪರಸ್ಪರ ಸಾದೃಶ್ಯದಿಂದ ಅಭಿನ್ನವಾದ ಆ ಧರ್ಮಗಳನ್ನು ಸಾಮಾನ್ಯ ಧರ್ಮವಾಗಿ ವರ್ಣಿಸುವುದು **"ದೃಷ್ಟಾಂತಾಲಂಕಾರ".** "चेद्बिम्बप्रतिबिम्बत्वं दृष्टान्तस्तदलङ्कृतिः। त्वमेव कीर्तिमान् राजन् विधुरेव हि कान्तिमान्" चन्द्रा०। ಈ ಉಪಮೇಯ ಮತ್ತು ಉಪಮಾನ ವಾಕ್ಯಗಳಲ್ಲಿ ಬಿಂಬ ಪ್ರತಿಬಿಂಬಭಾವದಿಂದ ಕೂಡಿದ ಕೀರ್ತಿ ಕಾಂತಿರೂಪವಾದ ಧರ್ಮಗಳು ಭಿನ್ನವಾಗಿದ್ದರೂ ಸಾದೃಶ್ಯದಿಂದ ಅಭಿನ್ನವಾದ ಅವುಗಳನ್ನು ಸಾಮಾನ್ಯ ಧರ್ಮವಾಗಿ ವರ್ಣಿಸಿರುವುದರಿಂದ ದೃಷ್ಟಾಂತಾಲಂಕಾರ. 3. ಶಾಸ್ತ್ರ. 4. ಮರಣ, ಸಾವು. "दृष्टान्त उदाहृतौ। शास्त्रे च मरणे" मेदि०।

**दृष्टि ದೃಷ್ಟಿ** (स्त्री०) 1. ನೋಟ, ದರ್ಶನ. दृशिर् (प्रेक्षणे) भावे "क्तिन्" (३-३-९४)। "दृष्टिपूतं न्यसेत्पादं वस्त्रपूतं जलं पिबेत्। सत्यपूतां वदेद्वाचं मनःपूतां समाचरेत्" मनु० ६-४६। 2. ನೇತ್ರ, ಕಣ್ಣು. दृशिर् कर० "क्तिन्"। "महीभृतः पुत्रवतोऽपि दृष्टिस्तस्मिन्नपत्ये न जगाम तृप्तिम्" कुमा० १-२७। "चलापाङ्गां दृष्टिं स्पृशसि बहुशो वेपथुमतीं रहस्याख्यायीव स्वनसि मृदु कर्णान्तिकचरः" शाकु० १-२०। 3. ಜ್ಞಾನ, ಅರಿವು, ತಿಳುವಳಿಕೆ, ಪ್ರಜ್ಞೆ, ವಿವೇಕ, "विदितबन्धकारणस्य दृष्ट्या तद्रूपम्" सां० सू०। 4. ಗ್ರಹಗಳ ದೃಷ್ಟಿ, ಗ್ರಹಗಳು ತಾವಿರುವ ರಾಶಿಯಿಂದ ಇತರ ರಾಶಿಗಳನ್ನೂ ಅಲ್ಲಿರುವ ಗ್ರಹಗಳನ್ನೂ ನೋಡುವುದು. [ವಿವರಕ್ಕೆ "ग्रह" ಪದದಲ್ಲಿ ನೋಡಿ]. "दृष्टिर्धीदर्शनाक्षिषु" वैज०।

**दृष्टिकृत् ದೃಷ್ಟಿಕೃತ್** (वि०) 1. ನೋಡುವವನು. दृष्टिं करोति—डु कृञ् (करणे) "क्विप्" (३-२-७६)। (न०) 2. ಸ್ಥಲಪದ್ಮ, ನೆಲದಾವರೆ.

**दृष्टिक्षेप ದೃಷ್ಟಿಕ್ಷೇಪ -पात -ಪಾತ** (पुं०) ದೃಷ್ಟಿಯನ್ನು ಬೀರುವುದು, ನೋಡುವುದು, ದರ್ಶನ. दृष्टेः क्षेपः पातो वा। "रजःकणैर्विघ्नितदृष्टिपाताः" कुमा० ३-३१।

**दृष्टिगुण ದೃಷ್ಟಿಗುಣ** (ಪುಂ) ಲಕ್ಷ್ಯ, ಗುರಿ. दृष्ट्या गुण्यऽत्र — गुण (आमन्त्रणे) "अच्" (३-१-९७)।

**दृष्टिगोचर ದೃಷ್ಟಿಗೋಚರ** (वि०) ಕಣ್ಣಿಗೆ ಕಾಣುವ, ದೃಷ್ಟಿಗೆ ವಿಷಯವಾದ.

**दृष्टिदोष ದೃಷ್ಟಿದೋಷ** (ಪುಂ) ನೋಟದಿಂದ ಉಂಟಾಗುವ ಕೆಡಕು, ನೋಡುವುದರಿಂದ ಉಂಟಾಗುವ ಕೆಟ್ಟ ಪರಿಣಾಮ.

**दृष्टिपूत ದೃಷ್ಟಿಪೂತ** (वि०) ನೋಟದಿಂದ ಶುದ್ಧವಾದ. दृष्ट्या पूतः। "दृष्टिपूतं न्यसेत्पादं वस्त्रपूतं जलं पिबेत्" मनु० ६-४६।

**दृष्टिविक्षेप ದೃಷ್ಟಿವಿಕ್ಷೇಪ** (ಪುಂ) ಕಟಾಕ್ಷದರ್ಶನ, ಕಡೆಗಣ್ಣಿನ ನೋಟ, ಅರೆನೋಟ. दृष्टेः तदेकदेशस्य विक्षेपः।

**दृष्टिविभ्रम ದೃಷ್ಟಿವಿಭ್ರಮ** (ಪುಂ) ದೃಷ್ಟಿಯವಿಲಾಸ, ಶೃಂಗಾರರಸವನ್ನು ಸೂಚಿಸುವ ನೋಟ, ಮೋಹಗೊಳಿಸುವ ನೋಟ. दृष्टेः विभ्रमः।

**दृष्टिविष ದೃಷ್ಟಿವಿಷ** (ಪುಂ) ಸರ್ಪ, ಹಾವು. दृष्टौ विषमस्य। स्त्रियाम् "ङीष्" (४-१-६३)।

**दृष्टिसंभेद ದೃಷ್ಟಿಸಂಭೇದ** (ಪುಂ) ನೋಟಗಳ ಪರಸ್ಪರ ಮೇಳನ, ಪರಸ್ಪರ ನೋಟ. दृष्टेः संभेदः। "वैदग्ध्य-मुग्धमनोहराः मया न निरूपिता एतयोर्दृष्टिसंभेदाः" मालती० ७।

**दृष्टेन्दु ದೃಷ್ಟೇಂದು** (स्त्री०) ಸಿನೀವಾಲಿ, ಚತುರ್ದಶೀಯೋಗದಿಂದ ಚಂದ್ರನು ಕಾಣುವ ಅಮಾವಾಸ್ಯೆ. दृष्टः इन्दुः यस्याम्। "सा दृष्टेन्दुः सिनीवाली" अम०।

**दॄ — विदारणे** (क्र्या० पर० सक० से०)। दृणाति। ददार। दरिता, दरीता। दरिष्यति, दरीष्यति। दरतु। अदरत्। दरेत्। ಇತ್ಯಾದಿ. ಸೀಳು, ಒಡೆ, ಕತ್ತರಿಸು.

**कर्मणि :**—दीर्यते। देरे। दारिता, दरिता, दरीता। दारिष्यते, दरिष्यते, दरीष्यते। दीर्यताम्। ಇತ್ಯಾದಿ.

**देङ् — रक्षणे** (भ्वा० आत्म० सक० अनि०)। दयते। दिग्ये। दाता। दास्यते। दयताम्। अदयत। ಇತ್ಯಾದಿ. ರಕ್ಷಿಸು, ಕಾಪಾಡು.

**कर्मणि :**—दीयते। दिग्ये। दाता, दायिता। दायिष्यते, दास्यते। दीयताम्। ಇತ್ಯಾದಿ.

**णिचि :**—दापयति, —ते। दापयां चकार, —चक्रे। दापयिता। दापयिष्यति, —ते। दापयतु, —ताम्। ಇತ್ಯಾದಿ.

**देदीप्यमान ದೇದೀಪ್ಯಮಾನ** (वि०) ಬಹಳ ಪ್ರಕಾಶಿಸುತ್ತಿರುವ, ಬಹಳ ಹೊಳೆಯುತ್ತಿರುವ. अतिशयेन दीप्यते— दीपी (दीप्तौ) + यङ् (३-१-२२) + "शानच्" (३-२-१२४)।

**देय ದೇಯ** (वि०) 1. ದಾನಮಾಡಲ್ಪಡುವ, ಕೊಡಲ್ಪಡುವ. डु दाञ् (दाने) "यत्" (३-१-९७)। "तथापः सर्वदा देयाः पेयाश्चैव न संशयः" भा० अनु० १०३-१९। 2. ದಾನಮಾಡಲು ಅರ್ಹವಾದ, ದಾನಮಾಡಬಹುದಾದ. "देयाः किलक्षणा गावः काश्चापि परिवर्जयेत्" भा० अनु० १०४-१४। 3. ರಕ್ಷಿಸಲ್ಪಡುವ, ಕಾಪಾಡಲ್ಪಡುವ. देङ् (रक्षणे) "यत्" (३-१-९७)। 4. ರಕ್ಷಿಸಲು ಅರ್ಹವಾದ. 5. ಬಿಟ್ಟುಕೊಡಲ್ಪಡುವ. 6. ಬಿಟ್ಟುಕೊಡಬೇಕಾದ. "स्नातकस्य च राज्ञश्च पन्था देयो वरस्य च" मनु० २-१३८। 7. ಹಿಂದಕ್ಕೆ ಕೊಡಲ್ಪಡುವ, ಹಿಂತಿರುಗಿಸಲ್ಪಡುವ. "हंस प्रयच्छ मे कान्तां गतिरस्यास्त्वया हृता। विभावितैकदेशेन देयं यदभियुज्यते" विक्र० ४-३३। 8. ಪ್ರತ್ಯರ್ಪಣಮಾಡಲ್ಪಡುವ, ಒಪ್ಪಿಸಲ್ಪಡುವ. "निक्षेपोपनिधी नित्यं न देयौ प्रत्यनन्तरे। नश्यतो विनिपाते तावनिपाते त्वनाशिनौ" मनु० ८-१८५।

**देव ದೇವ** (ಪುಂ) 1. ವಿಷ್ಣು, ಪರಮಾತ್ಮ. दीव्यति मायापाशेन जीवान् बद्ध्वा क्रीडति—दिवु (क्रीडादौ) "अच्" (३-१-१३४)। "व्याघ्रादिवज्जीवततेर्मायापाशेन बन्धनम्। कृत्वा नित्यं क्रीडति यः स देवः परिकीर्तितः" इति निरुक्तिः। "उद्भवः क्षोभणो देवः" वि० स०। "भवदोषार्यमा यासां देवो दृष्टिपथं गतः" याद० १६-१३९। 2. ದೇವತೆ. "देवानामिदमामनन्ति मुनयः कान्तं क्रतुं चाक्षुषम्" माल० १-४। 3. ರಾಜ, ದೊರೆ. "देवौ सुरमहीभुजौ" शाश्व०। "देवाकर्णय सुश्रुतेन चरकस्योक्तेन जानेऽखिलम्" नैष० ४-११६। 4. ಮೇಘ, ಮೋಡ. 5. ಪಾದರಸ. 6. (ನಾಟಕಗಳಲ್ಲಿ) ರಾಜ. "विजयतां देवः। देव, अमात्यो विज्ञापयति" माल० ५। 7. ದೇವದಾರು. 8. ಖಡ್ಗ, ಕತ್ತಿ. "धर्मो विशसनो देवो मनुष्येष्टश्शिवंकरः। श्रीगर्भो विजयश्शास्ता कृपाणासङ्करिष्टयः" वैज०। 9. ವಿಪ್ರನ ಹೆಸರಿಗೆ ಸೇರಿಸುವ ಒಂದು ಪದ. वल्लभदेवः, कृष्णदेवः, गोविन्ददेवः ಇತ್ಯಾದಿ. 10. ಮೂವತ್ತಮೂರು ಸಂಖ್ಯೆ. 11. ಇಂದ್ರ. 12. ಕ್ರೀಡೆ, ಆಟ. 13. "देवदत्त" ಪದದ ಒಂದು ರೂಪ (वा० ५-३-८३)। (न०)14.

ಇಂದ್ರಿಯ. (ವಿಂ)15. ಪೂಜ್ಯ, ಗೌರವಕ್ಕೆ ಅರ್ಹನಾದವನು. 16. ಹೊಳೆಯುವ, ಪ್ರಕಾಶಿಸುವ. (स्त्रीං) -वी -ವೀ. 17. ಪಟ್ಟಾಭಿಷಿಕ್ತಳಾದ ರಾಣಿ, ಪಟ್ಟಮಹಿಷಿ. 18. ಕುರಟಿಗೆ ಗಿಡ. 19. ಪೃಕ್ಕಾ ಎಂಬ ಗಂಧದ್ರವ್ಯ. "देवं हृषीके देवस्तु नृपतौ तोयदे सुरे। देवी कृताभिषेकायां तेजनीपृक्कयोरपि" हेम०।

**देवक ದೇವಕ** (ಪುಂ) 1. ದೇವಕಿಯ ತಂದೆ, ಉಗ್ರಸೇನ ರಾಜನ ಸಹೋದರ. ಆಹುಕ ರಾಜನ ಒಬ್ಬ ಮಗ, ಶ್ರೀಕೃಷ್ಣನ ತಾತ. ಪೂರ್ವಜನ್ಮದಲ್ಲಿ ಇವನು ಗಂಧರ್ವ ರಾಜನಾಗಿದ್ದನು. "यस्त्वासीद्देवको नाम देवराजसमद्युतिः। स गन्धर्वपतिर्मुख्यः क्षितौ जज्ञे नराधिपः" भा० आदि० ६८-६८। ಇವನಿಗೆ ದೇವಕಿ ಮೊದಲಾದ ಏಳು ಮಂದಿ ಕನ್ಯೆಯರಿದ್ದರು. ಎಲ್ಲರನ್ನೂ ವಸುದೇವನು ಮದುವೆಯಾದನು. 2. "देवदत्त" ಪದದ ಒಂದು ರೂಪ. (५-३-८३)। (ವಿಂ) 3. ಕ್ರೀಡಿಸುವ, ಆಟವಾಡುವ.

**देवकात्मजा ದೇವಕಾತ್ಮಜಾ** (स्त्री०) ದೇವಕ ರಾಜನ ಮಗಳು, ದೇವಕಿ.

**देवकार्य ದೇವಕಾರ್ಯ** (ನಂ) 1. ದೇವತೆಗಳಿಗೆ ಪ್ರಿಯವಾದ ಕೆಲಸ, ಪೂಜೆ ಹೋಮ ಮೊದಲಾದ ಕಾರ್ಯ, ದೇವತೆಗಳನ್ನು ಉದ್ದೇಶಿಸಿ ಮಾಡುವ ಕಾರ್ಯ. देवप्रियं कार्यम्। "देवकार्यात् द्विजातीनां पितृकार्यं विशिष्यते" मनु० ३-२०३। 2. ದೇವತೆಗಳು ಅಪೇಕ್ಷಿಸುವ ಕಾರ್ಯ. "यन्ता हरेः सपदि संहृतकार्मुकज्यमापृच्छ्य राघवमनुष्ठितदेवकार्यम्" रघु० १२-१०३।

**देवकाष्ठ ದೇವಕಾಷ್ಠ** (ನಂ) ದೇವದಾರು ಮರ.

**देवकी ದೇವಕೀ** (स्त्री०) ದೇವಕೀ ದೇವಿ, ದೇವಕರಾಜನ ಮಗಳು, ಶ್ರೀಕೃಷ್ಣನ ತಾಯಿ, ವಸುದೇವನ ಪತ್ನಿ. ದೇವಕಿಯು ಕಶ್ಯಪನ ಪತ್ನಿಯಾದ ಅದಿತಿಯ ಅವತಾರ. ಕಶ್ಯಪಪತ್ನಿಯಾದ ಅದಿತಿಯು ದೇವಕಿಯಾಗಿಯೂ ಸುರಭಿಯು ರೋಹಿಣಿಯಾಗಿಯೂ ಜನಿಸಿದರು. "तस्य नारीद्वयं चैव अदितिः सुरभिस्तथा। देवकी रोहिणी चैव वसुदेवस्य धीमतः" हरिवं०।

**देवकीतनय ದೇವಕೀತನಯ, -नन्दन -ನಂದನ, -सुत -ಸುತ, -सूनु -ಸೂನು** (ಪುಂ) ದೇವಕಿಯ ಮಗ, ಶ್ರೀಕೃಷ್ಣ. देवक्याः तनयः नन्दनः सुतः सूनुर्वा। "देवकीनन्दनः स्रष्टा क्षितीशः पापनाशनः" वि० स०। "न्यधायिषातामभिदेवकीसुतं सुतेन धातुश्चरणौ भुवस्तले" माघ० १-१३।

**देवकुल ದೇವಕುಲ** (ನಂ) 1. ದೇವರ ಮನೆ, ದೇವಾಲಯ, ಗುಡಿ. 2. ದೇವತೆಗಳ ವಂಶ. 3. ದೇವತೆಗಳ ಗುಂಪು.

**देवकुल्या ದೇವಕುಲ್ಯಾ** (स्त्री०) ದೇವನದಿ, ದೇವಗಂಗೆ, ಗಂಗಾನದಿ.

**देवकुसुम ದೇವಕುಸುಮ** (ನಂ) ಲವಂಗ.

**देवखात ದೇವಖಾತ** (ನಂ) 1. ಅಕೃತ್ರಿಮವಾದ ಡೊಗರು, ಗವಿ, ಗುಹೆ. 2. ಅಕೃತ್ರಿಮವಾದ ಜಲಾಶಯ, ಸ್ವಭಾವವಾದ ಸರೋವರ, ಕೆರೆ ಮುಂತಾದುವು. देवेन खातम्। 3. ದೇವಾಲಯಕ್ಕೆ ಸಮೀಪದಲ್ಲಿರುವ ಜಲಾಶಯ. "नदीषु देवखातेषु तडागेषु सरस्सु च। स्नानं समाचरेन्नित्यं गर्तप्रस्रवणेषु च" मनु० ४-२०३।

**देवगण ದೇವಗಣ** (ಪುಂ) 1. ದೇವತೆಗಳ ಸಮೂಹ. देवानां गणः। 2. ದೇವವರ್ಗಕ್ಕೆ ಸೇರಿದ ನಕ್ಷತ್ರಗಳ ಗುಂಪು. ಅಶ್ವಿನಿ, ಮೃಗಶೀರ್ಷ, ಪುನರ್ವಸು, ಪುಷ್ಯ, ಹಸ್ತ, ಸ್ವಾತಿ, ಅನೂರಾಧೆ, ಶ್ರವಣ ಮತ್ತು ರೇವತಿ ಇವು ದೇವಗಣದ ನಕ್ಷತ್ರಗಳು.

**देवगणिका ದೇವಗಣಿಕಾ** (स्त्री०) ಅಪ್ಸರಸ್ಸು, ದೇವತೆಗಳ ವೇಶ್ಯೆ.

**देवगन्धर्व ದೇವಗಂಧರ್ವ** (ಪುಂ) ದೇವತೆಗಳ ಸಂಗೀತಗಾರ, ದೇವಗಾಯಕ. देवानां गन्धर्वः गायनः।

**देवगायन ದೇವಗಾಯನ** (ಪುಂ) ಗಂಧರ್ವ, ದೇವತೆಗಳ ಸಂಗೀತಗಾರ.

**देवगिरि ದೇವಗಿರಿ** (ಪುಂ) ಒಂದು ಪರ್ವತ. "सह्यो देवगिरिर्ऋष्यमुखः श्रीशैलः" भाग० ५-१९-१७।

**देवगुरु ದೇವಗುರು** (ಪುಂ) ದೇವತೆಗಳ ಆಚಾರ್ಯ, ಬೃಹಸ್ಪತಿ. देवानां गुरुः।

**देवगुह्य ದೇವಗುಹ್ಯ** (ನಂ) ದೇವತೆಗಳಿಗೆ ಮಾತ್ರ ತಿಳಿದಿರುವ ರಹಸ್ಯ.

**देवगृह ದೇವಗೃಹ** (ನಂ) ದೇವರ ಮನೆ, ದೇವಾಲಯ, ಗುಡಿ.

**देवचर्या ದೇವಚರ್ಯಾ** (स्त्री०) ದೇವತೆಗಳನ್ನು ಉದ್ದೇಶಿಸಿ ಮಾಡುವ ಪೂಜೆ, ಹೋಮ ಮುಂತಾದುವು.

**देवचिकित्सक ದೇವಚಿಕಿತ್ಸಕ** (ಪುಂ द्विव०) ದೇವತೆಗಳ ವೈದ್ಯರಾದ ಅಶ್ವಿನೀಕುಮಾರರು.

**देवच्छन्द ದೇವಚ್ಛಂದ** (ಪುಂ) 1. ಎಂಬತ್ತೊಂದು ಎಳೆಗಳುಳ್ಳ ಹಾರ, ಒಂದು ವಿಧ ಮುತ್ತಿನ ಹಾರ. "शतमष्टयुतं हारो देवच्छन्दो ह्यशीतिरेकयुता" बृहत्सं० ८१-३२।

2. ನೂರೆಳೆಗಳ ಮುತ್ತಿನ ಸರ. "देवच्छन्दोऽसौ शतयष्टिकः" अम० ।

**देवजाघ ದೇವಜಗ್ಧ** (न०) 1. ಕಾಚಿಹುಲ್ಲು. (वि०) 2. ದೇವತೆಗಳಿಂದ ತಿನ್ನಲ್ಪಟ್ಟ. देवैर्जग्धम् । अल्पार्थे "कन्"। –जाघकम् –ಜಗ್ಧಕವಜ.

**देवट ದೇವಟ** (पुं०) ಶಿಲ್ಪಿ. दिवु (क्रीडादौ) "अटन्" (उ० ४-८१) ।

**देवतरु ದೇವತರು** (पुं०) ದೇವತೆಗಳ ವೃಕ್ಷಗಳು, ಸ್ವರ್ಗದ ವೃಕ್ಷಗಳು, ಮಂದಾರ ಪಾರಿಜಾತ ಸಂತಾನ ಕಲ್ಪವೃಕ್ಷ ಮತ್ತು ಹರಿಚಂದನ ಇವು ಐದು ದೇವತರುಗಳು.

**देवता ದೇವತಾ** (स्त्री०) 1. ದೇವತೆ. 2. ದೇವತ್ವ, ದೇವರಾಗಿರುವುದು. देव एव—स्वार्थे "तल्" (५-४-२७)। क्वचित् स्वार्थिका अपि प्रत्ययाः प्रकृतितो लिङ्गवचनान्यतिवर्तन्ते ಎಂಬ ಭಾಷ್ಯ ವಚನದಿಂದ ಇಲ್ಲಿ ಸ್ತ್ರೀತ್ವವು ಬಂದಿರುವುದು. ದೇವತಾಪದವು ಇಂದ್ರಾದಿ ದೇವತೆಗಳನ್ನು ಹೇಳುವುದು. "याज्यया यजनकर्मिणोऽत्यजन् द्रव्यजातमपदिश्य देवताम्" माघ० १४-२० । 3. ದೇವರ ವಿಗ್ರಹ, ದೇವತೆಗಳ ಪ್ರತಿಮೆ. "देवतानां गुरो राज्ञः स्नातकाचार्ययोस्तथा । नाक्रामेत् कामतश्छायां बभ्रुणो दीक्षितस्य च" मनु० ४-१३० । ಮಂತ್ರದಿಂದ ಪ್ರಕಾಶಿಸಲ್ಪಡುವುದರಿಂದ ದೇವತೆಗಳಲ್ಲಿ ದೇವತ್ವವು ಉಕ್ತವಾಯಿತು. दीव्यतीति देवः मन्त्रेण द्योत्यते इति यावत् । "देवनाद्वै देवोऽभूदिति तद्देवानां देवत्वम्"। ಯಾವ ಮಂತ್ರದಿಂದ ಯಾವ ದೇವತೆಯನ್ನು ಆವಾಹನೆ ಮಾಡುವರೋ ಆ ದೇವತೆಯು ಅಲ್ಲಿ ಸಾನ್ನಿಧ್ಯಹೊಂದುವುದರಿಂದ ಆ ದೇವತೆಯು ರೂಪವು ಬರುವುದು. "यस्य यस्य तु मन्त्रस्य उद्दिष्टा देवता तु या । तदाकारं भवेत्तस्य देवत्वं देवतोच्यते"। ಪ್ರಧಾನ ದೇವತೆಗಳು (ಇಂದ್ರಾದಿಗಳು) ಮೂವತ್ತಮೂರು ಮಂದಿಗಳು. ಇವರ ಗಣದೇವತೆಗಳೊಡನೆ ಸೇರಿ ಇವರು ಮೂವತ್ತಮೂರು ಕೋಟಿಗಳಷ್ಟಾಗುವರು. "सदारा विबुधाः सर्वे स्वानां स्वानां गणैः सह । त्रैलोक्ये ते त्रयस्त्रिंशत्कोटिसंख्यतयाऽभवन्" ।

**देवतागृह ದೇವತಾಗೃಹ** (न०) ದೇವರಮನೆ, ದೇವಾಲಯ, ಗುಡಿ. देवताया गृहम् ।

**देवताड ದೇವತಾಡ** (पुं०) 1. ದೇವತಾಳಿವೃಕ್ಷ. देवमिन्द्रियं ताडयति—तड (आघाते) + णिच् "अण्" (३-२-१)। 2. ರಾಹು. 3. ಅಗ್ನಿ, ಬೆಂಕಿ. "देवताडः सैंहिकेये जीमूते च हुताशने" मेदि० ।

**देवतात ದೇವತಾತ** (पुं०) 1. ಮರೀಚಿ ಮೊದಲಾದ ಹತ್ತು ಮಂದಿ ಪ್ರಜಾಪತಿಗಳು. ದೇವತೆಗಳು ಇವರಿಂದ ಸೃಷ್ಟಿಸಲ್ಪಟ್ಟವರಾದುದರಿಂದ ಇವರು ದೇವತೆಗಳಿಗೆ ತಂದೆಯಾದರು. "एते मनूंस्तु सप्तान्यानसृजन् भूरितेजसः । देवान् देवनिकायांश्च महर्षींश्चामितौजसः" मनु० १-३६ । 2. ಕಶ್ಯಪ, ಇಂದ್ರಾದಿ ದೇವತೆಗಳ ತಂದೆ.

**देवताप्रतिमा ದೇವತಾಪ್ರತಿಮಾ** (स्त्री०) ದೇವತೆಯ ವಿಗ್ರಹ, ದೇವತೆಯ ಮೂರ್ತಿ. देवतायाः प्रतिमा ।

**देवताप्रतिष्ठा ದೇವತಾಪ್ರತಿಷ್ಠಾ** (स्त्री०) ವಿಗ್ರಹಗಳಲ್ಲಿ ದೇವತೆಗಳ ಸಾನ್ನಿಧ್ಯವುಂಟಾಗಲು ಮಾಡುವ ಶಾಸ್ತ್ರೋಕ್ತವಾದ ಸಂಸ್ಕಾರ, ವಿಗ್ರಹಗಳಲ್ಲಿ ದೇವತ್ವಸಿದ್ಧಿಗಾಗಿ ಮಾಡುವ ಮಂತ್ರಪೂರ್ವಕವಾದ ಸಂಪ್ರೋಕ್ಷಣ ಆವಾಹನಾದಿಗಳು. देवतायाः प्रतिष्ठा । ದೇವತಾಪ್ರತಿಷ್ಠೆಯು ಶುಭದಿವಸದಲ್ಲಿ ನಡೆಯಬೇಕು. "प्रतिष्ठा सर्वदेवानां केशवस्य विशेषतः । उत्तरायणमापन्ने शुक्लपक्षे शुभे दिने । कृष्णपक्षे च पञ्चम्यामष्टम्यां चैव शस्यते"। ವಿಗ್ರಹಗಳಲ್ಲಿ ದೇವತ್ವ ಸಿದ್ಧಿಸಲು ಪ್ರಾಣಪ್ರತಿಷ್ಠಾಕಾರ್ಯವು ಅವಶ್ಯವಾದುದು. "प्रतिमायाः कपोलौ द्वौ स्पृष्ट्वा दक्षिणपाणिना । प्राणप्रतिष्ठां कुर्वीत तस्या देवस्य वा हरेः । अकृतायां प्रतिष्ठायां प्राणानां प्रतिमासु च । यथापूर्वं तथाभावः स्वर्णादीनां न विष्णुता । अन्येषामपि देवानां प्रतिमासु च पार्थिव । प्राणप्रतिष्ठा कर्तव्या तस्यां देवत्वसिद्धये"।

**देवत्रा ದೇವತ್ರಾ** (अव्य०) 1. ದೇವತೆಗಳನ್ನು. 2. ದೇವತೆಗಳಲ್ಲಿ. द्वितीयान्तात् सप्तम्यन्ताच्च देवशब्दात् "त्रा" (५-४-५६) । देवत्रा वन्दे । देवत्रा रमे ।

**देवदत्त ದೇವದತ್ತ** (पुं०) 1. ಅರ್ಜುನನ ಶಂಖ. पाञ्चजन्यं हृषीकेशो देवदत्तं धनञ्जयः" गीता १-१५ । 2. ದೇಹದೊಳಗಿನ ಪಂಚಪ್ರಾಣವಾಯುಗಳಲ್ಲೊಂದು. ಈ ವಾಯುವು ಆಕಳಿಕೆಯ ಸಮಯದಲ್ಲಿ ಬಾಯನ್ನು ಅಗಲಿಸುವುದು. "कृकराच्च क्षुतं ज्ञेयं देवदत्ताद्विजृम्भणम्" अम० । 3. ಉದಾಸೀನನಾದ ಒಬ್ಬ ಮನುಷ್ಯನಲ್ಲಿ ಪ್ರಯೋಗಿಸುವ ಒಂದು ಪದ. ಒಬ್ಬ ಅನಿರ್ದಿಷ್ಟ ವ್ಯಕ್ತಿಯಲ್ಲಿ देवदत्तः यज्ञदत्तः ಮುಂತಾದ ಪ್ರಯೋಗಗಳುಂಟು. "पीनो देवदत्तो दिवा न भुङ्क्ते" ಇತ್ಯಾದಿ. (वि०) 4. ದೇವರಿಂದ ಕೊಡಲ್ಪಟ್ಟ. देवेन दत्तम् । "देवदत्तां पतिर्भार्यां विन्दते नेच्छयात्मनः । तां साध्वीं बिभृयान्नित्यं देवानां प्रियमाचरन्" मनु० ९-९५ । 5. ದೇವರಿಗೆ ಕೊಡಲ್ಪಟ್ಟ,

ದೇವರ ಪೂಜಾದಿಗಳಿಗಾಗಿ ದಾನಮಾಡಲ್ಪಟ್ಟ. देवाय दत्तम्।

**देवदत्तक ದೇವದತ್ತಕ** (पुं० ಬ० ವ०) 1. ದೇವದತ್ತನೇ ಮುಖ್ಯವಾಗಿರುವವರು, ದೇವದತ್ತನೇ ಪ್ರಧಾನನಾಗಿರುವವರು. देवदत्तो मुख्यो एषाम् "कन्" (५-२-७८)। 2. "देवदत्त" ಪದದ ಒಂದು ರೂಪ (वा० ५-३-८३)। ["दत्तिक" ಪದದಲ್ಲಿ ನೋಡಿ.]

**देवदत्तीय ದೇವದತ್ತೀಯ** (वि०) "दैवदत्त" ಪದದಲ್ಲಿ ನೋಡಿ.

**देवदर्श ದೇವದರ್ಶ** (वि०) 1. ದೇವರನ್ನು ನೋಡುವವನು. देवं पश्यति – दृशिर् (प्रेक्षणे) "अण्" (३-२-१)। (अव्य०) 2. ದೇವರನ್ನು ನೋಡಿ. देवं दृष्ट्वा "णमुल्" (३-४-२९)। कर्त० "ल्युः" (३-१-१३४)। -दर्शनः -ದರ್ಶನಃ.

**देवदारु ದೇವದಾರು** (न०) ದೇವದಾರು ಮರ. देवानां प्रियं दारु। ಇದರ ಪುಲ್ಲಿಂಗ ಪ್ರಯೋಗವೂ ಉಂಟು. "अमुं पुरः पश्यसि देवदारुं पुत्रीकृतोऽसौ वृषभध्वजेन" रघु० २-३६।

**देवदास ದೇವದಾಸ** (पुं०) 1. ದೇವಸ್ಥಾನದ ಸೇವಕ. 2. ದೇವತೆಗಳ ದಾಸ.

**देवदासी ದೇವದಾಸೀ** (स्त्री०) 1. ವೇಶ್ಯೆ. देवाय क्रीडायै दासी। 2. ದೇವಾಲಯದ ಸೇವಕಿ. ದೇವಸ್ಥಾನದ ಕೆಲಸಕ್ಕಾಗಿ ಇರುವ ಹೆಂಗಸು.

**देवदुन्दुभि ದೇವದುಂದುಭಿ** (पुं०) 1. ಕೆಂಪು ತುಲಸಿ. 2. ದೇವತೆಗಳ ನಗಾರಿ.

**देवदेव ದೇವದೇವ** (पुं०) 1. ಬ್ರಹ್ಮ. 2. ವಿಷ್ಣು, ವಾಸುದೇವ. "द्रौपद्याः सङ्कटं ज्ञात्वा देवदेवो जगत्पतिः। पार्श्वस्थां रुक्मिणीं त्यक्त्वा केशवः शयने प्रभुः" भा० वन० २६४-१६। 3. ಪರಶಿವ, ಪರಮೇಶ್ವರ. देवानां देवः। "अयाचितारं न हि देवदेवमद्रिः सुतां ग्राहयितुं शशाक" कुमा० १-५२।

**देवदेवेश ದೇವದೇವೇಶ** (पुं०) 1. ವಿಷ್ಣು, ವಾಸುದೇವ. 2. ಪರಶಿವ, ಪರಮೇಶ್ವರ. 3. ಇಂದ್ರ.

**देवद्रोणी ದೇವದ್ರೋಣೀ** (स्त्री०) 1. ದೇವರ ಉತ್ಸವ. 2. ದೇವಯಾತ್ರೆ, ದೇವರ ದರ್ಶನಕ್ಕಾಗಿ ಪುಣ್ಯಕ್ಷೇತ್ರಗಳ ಯಾತ್ರೆ. "देवद्रोणी देवयात्रा" हारा०।

**देवद्र्यञ्च् ದೇವದ್ರ್ಯಂಚ್** (वि०) 1. ದೇವರನ್ನು ಕುರಿತು ಹೋಗುವವನು. 2. ದೇವರನ್ನು ಪೂಜಿಸುವವನು. देवान् अञ्चति—अञ्चु (गतिपूजनयोः) "क्विन्" (३-२-५९)। टेः अद्रि आदेशः (६-३-९२)। "देवानञ्चति देवद्र्यङ्" अम०।

**देवधन ದೇವಧನ** (न०) ದೇವರ ಪೂಜೆಗಾಗಿ ಕೊಡಲ್ಪಟ್ಟ ಹಣ.

**देवधानी ದೇವಧಾನೀ** (स्त्री०) ಇಂದ್ರನ ನಗರ, ಅಮರಾವತೀ ನಗರ. देवा धीयन्तेऽत्र— डु धाञ् (धारण-पोषणयोः) अधि० "ल्युट्" (३-३-११७)। "ङीप्" (४-१-१५)।

**देवधूप ದೇವಧೂಪ** (पुं०) ಗುಗ್ಗುಳ. देवानां प्रियो धूपः।

**देवन् ದೇವನ್** (पुं०) ಪತಿಯ ಕಿರಿಯ ಸಹೋದರ.

**देवन ದೇವನ** (पुं०) 1. ಪಗಡೆಕಾಯಿ. दीव्यत्यनेन—दिवु (क्रीडादौ) कर० "ल्युट्" (३-३-११७)। (न०) 2. ಕ್ರೀಡೆ, ಆಟ. 3. ದೀಪ್ತಿ, ಪ್ರಕಾಶ. 4. ಜೂಜಾಟ, ಪಂದ್ಯ. 5. ವ್ಯವಹಾರ, ಉದ್ಯೋಗ, ಕಸಬು. दिवु भावे "ल्युट्" (३-३-११५)। 6. ಗತಿ, ಗಮನ. 7. ಸ್ಪರ್ಧೆ, ಪೈಪೋಟಿ, ವಿಜಿಗೀಷೆ. 8. ಪದ್ಮ, ಕಮಲ, ತಾವರೆ. "देवनं व्यवहारे स्याज्जिगीषाक्रीडयोरपि। देवनोऽक्षेषु पुंसि स्यात्" मेदि०। 9. ಉದ್ಯಾನವನ, ವಿಹಾರಭೂಮಿ. दिवु अधि० "ल्युट्" (३-३-११७)।

**देवनदी ದೇವನದೀ** (स्त्री०) ಗಂಗಾನದಿ. देवानां नदी। "असम्बाधा देवनदी स्वर्गसम्पादनी शुभा" भा० आदि० १८६-२३।

**देवनन्दिन् ದೇವನಂದಿನ್** (पुं०) ಇಂದ್ರನ ದ್ವಾರಪಾಲಕ. देवमिन्द्रं नन्दयति – टु नदि (समृद्धौ) "णिनिः" (३-१-१३४)। "सुतो जयो जयन्तश्च जयदत्तोऽप्यथो सुता। जयन्ती देवनन्दी तु द्वार्स्थः सूतस्तु मातलिः" वैज०।

**देवना ದೇವನಾ** (स्त्री०) 1. ಕ್ರೀಡೆ, ಆಟ. 2. ವಿಲಾಪ, ರೋದನ. दिवु (क्रीडादौ)+णिच् "युच्" (३-३-१०७)।

**देवनागरी ದೇವನಾಗರೀ** (स्त्री०) ಸಂಸ್ಕೃತಲಿಪಿ, ಸಂಸ್ಕೃತ ಗ್ರಂಥಗಳನ್ನು ಬರೆದು ಮುದ್ರಿಸುವ ಒಂದು ಜಾತಿಯ ಅಕ್ಷರ.

**देवपथ ದೇವಪಥ** (पुं०) 1. ದೇವತೆಗಳ ಮಾರ್ಗ, ಸ್ವರ್ಗ. देवानां पन्थाः "अः" (५-४-७४)। 2. ಒಂದು ಪುಣ್ಯತೀರ್ಥ. 3. ದೇವಾಲಯದ ಮಾರ್ಗ.

**देवपात्र ದೇವಪಾತ್ರ** (न०) ಅಗ್ನಿ.

**देवपुरी ದೇವಪುರೀ** (स्त्री०) ಇಂದ್ರನ ನಗರ, ಅಮರಾವತಿ.

**देवपुरोहित ದೇವಪುರೋಹಿತ** (पुं०) ಬೃಹಸ್ಪತಿ.

**देवपुष्प ದೇವಪುಷ್ಪ** (न०) ಲವಂಗ.

**देवपूजक ದೇವಪೂಜಕ** (पुं०) ದೇವರನ್ನು ಪೂಜಿಸು ವವನು. देवानां पूजकः।

**देवपूजा ದೇವಪೂಜಾ** (स्त्री०) ದೇವರ ಪೂಜೆ, ದೇವತಾ ರ್ಚನೆ. देवस्य पूजा।

**देवपूजित ದೇವಪೂಜಿತ** (वि०) ದೇವತೆಗಳಿಂದ ಪೂಜಿಸ ಲ್ಪಟ್ಟ. देवैः पूजितः।

**देवपूज्य ದೇವಪೂಜ್ಯ** (वि०) ದೇವತೆಗಳಿಗೆ ಪೂಜ್ಯನಾದ ಬೃಹಸ್ಪತಿ, ದೇವತೆಗಳ ಆಚಾರ್ಯ.

**देवप्रतिमा ದೇವಪ್ರತಿಮಾ** (स्त्री०) ದೇವರ ವಿಗ್ರಹ, ಅರ್ಚಾವಿಗ್ರಹ, ಅರ್ಚಾಮೂರ್ತಿ. "कुर्वन्त्येताः पतिता देवप्रतिमासु राजराष्ट्रभयम्। शक्रोपरि नृपतीनां गृहेषु तत्स्वामिनां पीडाम्" बृहत्सं० ३३-२०।

**देवप्रतिष्ठा ದೇವಪ್ರತಿಷ್ಠಾ** (स्त्री०) ದೇವರಪ್ರತಿಷ್ಠೆ, ವಿಗ್ರಹಗಳಲ್ಲಿ ದೇವರಸಾನ್ನಿಧ್ಯವುಂಟಾಗಲು ಮಾಡುವ ಶಾಸ್ತ್ರೋಕ್ತವಾದ ಸಂಸ್ಕಾರ, ವಿಗ್ರಹದಲ್ಲಿ ದೇವತ್ವಸಿದ್ಧಿ ಗಾಗಿ ಮಾಡುವ ಸಂಪ್ರೋಕ್ಷಣ ಆವಾಹನಾದಿಗಳು. देवस्य प्रतिष्ठा।

**देवब्राह्मण ದೇವಬ್ರಾಹ್ಮಣ** (पुं०) ದೇವಲಕ, ದೇವರ ಪೂಜೆಯಿಂದ ಜೀವಿಸುವವನು. देवपूजको ब्राह्मणः।

**देवभाग ದೇವಭಾಗ** (पुं०) ವಸುದೇವನ ಚಿಕ್ಕ ಸಹೋದರ.

**देवभिषज् ದೇವಭಿಷಜ್** (पुं०) ದೇವತೆಗಳ ವೈದ್ಯ, ಅಶ್ವಿನೀ ದೇವತೆ.

**देवभू ದೇವಭೂ** (स्त्री०) 1. ಸ್ವರ್ಗ, ದೇವಲೋಕ. देवानां भूः। 2. ದೇವತೆಯಾಗಿ ಆಗುವುದು, ದೇವತ್ವ ವನ್ನು ಹೊಂದುವುದು.

**देवभूत ದೇವಭೂತ** (वि०) ದೇವತೆಯಾಗಿರುವ, ದೇವತ್ವ ವನ್ನು ಹೊಂದಿರುವ.

**देवभूति ದೇವಭೂತಿ** (स्त्री०) 1. ಗಂಗಾನದಿ, ದೇವನದಿ. देवेषु भूतिरस्याः। 2. ದೇವತೆಗಳ ಐಶ್ವರ್ಯ. देवानां भूतिः।

**देवभूमि ದೇವಭೂಮಿ** (स्त्री०) ಸ್ವರ್ಗ, ದೇವಲೋಕ.

**देवभूय ದೇವಭೂಯ** (न०) ದೇವತ್ವ, ದೇವಭಾವ. देवस्य भावः—भू भावे "क्यप्" (३-१-१०७)।

**देवभृत् ದೇವಭೃತ್** (पुं०) 1. ವಿಷ್ಣು, ವಾಸುದೇವ. देवान् बिभर्ति—डु भृञ् (धारणपोषणयोः) "क्विप्" (३-२-७६)। "ब्रह्मशक्रयमादीनां भरणाद् देवभृत् स्मृतः" इति निरुक्तिः। "आदिदेवो महादेवो देवेशो देवभृद्गुरुः" वि० स०। 2. ಇಂದ್ರ.

**देवमणि ದೇವಮಣಿ** (पुं०) 1. ಸೂರ್ಯ. देव इव मणिः। 2. ಕುದುರೆಯ ಕತ್ತಿನ ಮೇಲಿರುವ ಒಂದು ಸುಳಿ. 3. ಕೌಸ್ತುಭಮಣಿ. "आवर्तिनः शुभफलप्रदशुक्तियुक्ताः सम्पन्नदेवमणयो भृतरन्ध्रभागाः" माघ० ५-४। "अथ देवमणिर्भर्गेऽश्वावर्ते कौस्तुभेऽपि च" मेदि०।

**देवमातृ ದೇವಮಾತೃ** (स्त्री०) ದೇವತೆಗಳ ತಾಯಿ, ಅದಿತಿ ದೇವಿ. देवानां माता।

**देवमातृक ದೇವಮಾತೃಕ** (पुं०) ಮಳೆಯನೀರಿನಿಂದ ಬೆಳೆ ಯಾಗುವ ಭೂಮಿ. देवः पर्जन्यः मातेव यस्य "कप्" (५-४-१५४)। "वितन्वति क्षेममदेवमातृकाश्चिराय तस्मिन् कुरवश्चकासति" किरा० १-१७।

**देवमान ದೇವಮಾನ** (न०) ದೇವತೆಗಳ ಕಾಲದ ಪರಿ ಮಾಣ. देवानां मानम्। ಮನುಷ್ಯರ ಒಂದು ವರ್ಷವು ದೇವತೆಗಳಿಗೆ ಒಂದು ದಿನವಾಗುವುದು. ದಕ್ಷಿಣಾಯನವು ರಾತ್ರಿ, ಉತ್ತರಾಯಣವು ಹಗಲು. ಈ ರೀತಿ ದೇವ ಮಾನದಲ್ಲಿ ಮಾಸವರ್ಷಾದಿಗಳನ್ನು ಗಣನೆಮಾಡಬೇಕು. "ब्राह्मं दिव्यं तथा पित्र्यं प्राजापत्यं गुरोस्तथा। सौरं च सावनं चान्द्रमार्क्षं मानानि वै नव" सू० सि०। ಎಂದು ಕಾಲಮಾನವು ಒಂಬತ್ತು ವಿಧ. [ವಿವರಕ್ಕೆ "अब्द" ಪದದಲ್ಲಿ ನೋಡಿ.]

**देवमाया ದೇವಮಾಯಾ** (स्त्री०) ಅವಿದ್ಯೆ, ಬಂಧನಕ್ಕೆ ಕಾರಣವಾದ ಈಶ್ವರನ ಮಾಯೆ "ते दुस्तरामतितरन्ति च देवमायां नैषां ममाहमिति धीः श्वशृगालभक्ष्ये" भाग० २-७-४२।

**देवमुनि ದೇವಮುನಿ** (पुं०) ದೇವರ್ಷಿ, ನಾರದಮಹರ್ಷಿ.

**देवयजन ದೇವಯಜನ** (न०) ಯಜ್ಞವೇದಿಕೆ, ಯಾಗ ಭೂಮಿ. देवाः इज्यन्तेऽत्र—यज (देवपूजायाम्) अधि० "ल्युट्" (३-३-११७)।

**देवयजि ದೇವಯಜಿ** (पुं०) ದೇವತೆಗಳನ್ನು ಕುರಿತು ಯಾಗಮಾಡುವವನು. देवान् यजते—यज (देवपूजायाम्) "इन्" (उ० ४-११७)।

**देवयज्ञ ದೇವಯಜ್ಞ** (पुं०) ದೇವತೆಗಳ ಪೂಜೆ, ದೇವತೆ ಗಳನ್ನು ಕುರಿತು ಮಾಡುವ ಹೋಮ, ಗೃಹಸ್ಥನು ಪ್ರತಿ ದಿನವೂ ಮಾಡಬೇಕಾದ ಪಂಚಯಜ್ಞಗಳಲ್ಲೊಂದು. देवानां यज्ञः। "देवयज्ञो भूतयज्ञः पितृयज्ञो ब्रह्मयज्ञो

मनुष्ययज्ञः" ಎಂದು ಪಂಚಮಹಾಯಜ್ಞಗಳು ಗೃಹಸ್ಥನ ಪ್ರತಿದಿನದ ಕರ್ತವ್ಯಗಳು. (1) ಅಗ್ನಿಯಲ್ಲಿ ಹೋಮ ಮಾಡುವುದು ದೇವಯಜ್ಞವು. (2) ಬಲಿಹಾಕುವುದು ಭೂತಯಜ್ಞವು. (3) ಪಿತೃಗಳನ್ನು ಉದ್ದೇಶಿಸಿಕೊಡುವುದು (ತರ್ಪಣ ಮೊದಲಾದುದು) ಪಿತೃಯಜ್ಞವು. (4) ವೇದಾಧ್ಯಯನವು ಬ್ರಹ್ಮಯಜ್ಞವು. (5) ಅತಿಥಿ ಸತ್ಕಾರವು ಮನುಷ್ಯಯಜ್ಞವು. "अध्यापनं ब्रह्मयज्ञः पितृयज्ञस्तु तर्पणम्। होमो दैवो बलिर्भौतो नृयज्ञोऽतिथिपूजनम्" मनु० ३-७०।

**देवयात्रा ದೇವಯಾತ್ರಾ** (स्त्री०) ದೇವರ ಉತ್ಸವ.

**देवयान ದೇವಯಾನ** (न०) 1. ದೇವತೆಗಳು ಸಂಚರಿಸುವ ರಥ, ವಿಮಾನ. यान्त्यनेन—या (प्रापणे) कर० "ल्युट्" (३-३-११७)। देवानां यानम्। (पुं०)2. ಅರ್ಚಿರಾದಿ ಮಾರ್ಗ. "य एतान् ब्रह्म गमयतीत्येषः देवयानः पन्थाः" छान्दोग्य०।

**देवयानी ದೇವಯಾನೀ** (स्त्री०) ಶುಕ್ರಾಚಾರ್ಯರ ಮಗಳು, ಯಯಾತಿ ರಾಜನ ಪತ್ನಿ. [ಶುಕ್ರಾಚಾರ್ಯರಲ್ಲಿ ಮೃತ ಸಂಜೀವಿನೀ ವಿದ್ಯೆಯನ್ನು ಕಲಿಯಲು ಬಂದಿದ್ದ ಕಚನನ್ನು ಇವಳು ಮೋಹಿಸಿ ತನ್ನನ್ನು ಮದುವೆಯಾಗಬೇಕೆಂದು ಕೇಳಿಕೊಂಡಳು. ಗುರುಪುತ್ರಿಯನ್ನು ಮದುವೆಯಾಗುವುದು ಧರ್ಮವಲ್ಲವೆಂದು ಕಚನು ಹೇಳಲು "ಕಲಿತ ವಿದ್ಯೆಯು ನಿನಗೆ ಫಲಿಸದಿರಲಿ" ಎಂದು ಕಚನಿಗೆ ಶಾಪವಿತ್ತಳು. "ಬ್ರಾಹ್ಮಣ ಪುತ್ರಿಯಾದ ನೀನು ಧರ್ಮವಿರುದ್ಧವಾಗಿ ವರ್ತಿಸಿದುದರಿಂದ ನೀನು ಕ್ಷತ್ರಿಯುನನ್ನು ಮದುವೆಯಾಗು" ಎಂದು ಕಚನೂ ಇವಳಿಗೆ ಪ್ರತಿ ಶಾಪವನ್ನು ಕೊಟ್ಟನು. ಇದರಿಂದ ದೇವಯಾನಿಯು ಯಯಾತಿರಾಜನನ್ನು ಮದುವೆಯಾಗಿ ಯದು ಮತ್ತು ತುರ್ವಸುಗಳೆಂಬ ಇಬ್ಬರು ಮಕ್ಕಳನ್ನು ಪಡೆದಳು.] [ವಿವರಕ್ಕೆ "ययाति" ಪದದಲ್ಲಿ ನೋಡಿ.] "ययातिर्देवयान्यां तु पुत्रावजनयन्नृपः। यदुं च तुर्वसुं चैव शक्रविष्णू इवापरौ" भा० आदि० ७७-१२।

**देवयु ದೇವಯು** (पुं०)1. ದೇವತೆ. (वि०)2. ಧಾರ್ಮಿಕ, ಧರ್ಮಕಾರ್ಯಾಚರಣೆಯುಳ್ಳವನು. देवं याति — या (प्रापणे) "कुः" (उ० १-३७)। 3. ಲೋಕಯಾತ್ರೆಯನ್ನು ನಡೆಸುವವನು, ಲೋಕವ್ಯವಹಾರವುಳ್ಳವನು. "देवयुर्वाच्यलिङ्गः स्याद्धार्मिके लोकयात्रिके" मेदि०।

**देवयुग ದೇವಯುಗ** (पुं०) 1. ಸತ್ಯಯುಗ, ಕೃತಯುಗ. देवानां देवप्रियं वा युगम्। "पुरा देवयुगे ब्रह्मन् प्रजापतिसुते शुभे। आस्तां भगिन्यौ रूपेण समुपेतेऽद्भुतेऽनघ" भा० आदि० १६-५। 2. ಮನುಷ್ಯರ ನಾಲ್ಕು ಯುಗಗಳ ಕಾಲ, ದೇವತೆಗಳ ಹನ್ನೆರಡುಸಾವಿರ ವರ್ಷಗಳ ಕಾಲ.

**देवयोनि ದೇವಯೋನಿ** (पुं०) ದೇವತೆಗಳೇ ಉತ್ಪತ್ತಿಗೆ ಕಾರಣವಾಗಿ ಉಳ್ಳ ವಿದ್ಯಾಧರರು ಅಪ್ಸರಸ್ಸುಗಳು ಯಕ್ಷರು ಗಂಧರ್ವರು ಮೊದಲಾದವರು, ದೇವತೆಗಳ ಅಂಶದಿಂದ ಹುಟ್ಟಿದವರು. देवाः योनिरेषाम्। "विद्याधरोऽप्सरोयक्षरक्षोगन्धर्वकिन्नराः। पिशाचो गुह्यकः सिद्धो भूतोऽमी देवयोनयः" अम०।

**देवर ದೇವರ** (पुं०) 1. ಪತಿಯ ಸಹೋದರ, ಗಂಡನ ಒಡಹುಟ್ಟಿದವನು. देवृ (देवने) "अरः" (उ० ३-१३२)। "देवराद्वा सपिण्डाद्वा स्त्रिया सम्यङ्नियुक्तया। प्रजेप्सिताऽधिगन्तव्या सन्तानस्य परिक्षये" मनु० ९-५९। 2. ಪತಿ, ಗಂಡ. "का देवरं वशगतं कुसुमास्त्रवेगविस्रस्तपौंस्नमुशती न भजेत कृत्ये" भाग० ४-२६-२६।

**देवरक्षित ದೇವರಕ್ಷಿತ** (पुं०) 1. ದೇವಕನ ಒಬ್ಬ ಮಗ. "देवकस्याभवन् पुत्राश्चत्वारस्त्रिदशोपमाः। देववानुपदेवश्च संदेवो देवरक्षितः। कुमार्यः सप्त चास्यासन् वसुदेवाय ता ददौ। देवकी शान्तिदेवी च संदेवा देवरक्षिता। वृकदेव्युपदेवी च सुनाम्नी चैव सप्तमी" हरिवं०। (वि०) 2. ದೇವತೆಗಳಿಂದ ರಕ್ಷಿಸಲ್ಪಟ್ಟ. देवैः रक्षितः।

**देवरथ ದೇವರಥ** (पुं०) 1. ದೇವತೆಗಳ ರಥ, ವಿಮಾನ. देवानां रथः। 2. ಸೂರ್ಯನ ರಥ.

**देवरहस्य ದೇವರಹಸ್ಯ** (न०) ಬಹಳ ಗುಟ್ಟು, ಅತಿರಹಸ್ಯ. देवानामपि रहस्यम्। "श्रुतं देवरहस्यं ते नारदाद्देवदर्शनात्" भा० आश्रम० ३८-८।

**देवराज् ದೇವರಾಜ್** (पुं०) ದೇವೇಂದ್ರ, ದೇವತೆಗಳ ಒಡೆಯ. देवेषु राजते — राजृ (दीप्तौ) "क्विप्" (३-२-६१)।

**देवराज ದೇವರಾಜ** (पुं०) ದೇವತೆಗಳ ರಾಜ, ಮಹೇಂದ್ರ. देवानां राजा "टच्" (५-४-९१)। "तं देवराजप्रतिमं मत्तवारणधूर्गतम्" भा० आदि० ९०-१३।

**देवरात ದೇವರಾತ** (पुं०) ವಿಶ್ವಾಮಿತ್ರ ಮಹರ್ಷಿಯ ಒಬ್ಬ ಮಗ.

**देवर्षि ದೇವರ್ಷಿ** (पुं०) ದೇವತೆಗಳ ಗುಂಪಿಗೆ ಸೇರಿದ ಋಷಿ, ದೇವತೆಗಳಿಗೆ ಪೂಜ್ಯನಾದ ಋಷಿ—ನಾರದ ಮೊದಲಾದವರು. देव इव ऋषिः। ಅತ್ರಿ ಭೃಗು ಕುತ್ಸ ವಸಿಷ್ಠ

ಗೌತಮ ಕಾಶ್ಯಪ ಮತ್ತು ಅಂಗಿರಸ್ಸು ಇವರೆಲ್ಲರೂ ದೇವರ್ಷಿಗಳು. "एवं वादिनि देवर्षौ पार्श्वे पितुरधोमुखी" कुमा० ६-८४।

**देवल ದೇವಲ** (पुं०) 1. ದೇವರ ಪೂಜೆಯಿಂದ ಜೀವಿಸುವವನು. 2. ಜೀವಿಕೆಗಾಗಿ ದೇವಸ್ಥಾನದಲ್ಲಿ ಕೆಲಸಮಾಡುವವನು. देवृ (देवने) "कल:" (उ० १-१-६)। 3. ನಾರದ ಮಹರ್ಷಿ. 4. ಪತಿಯ ಸಹೋದರ, ಗಂಡನ ಒಡಹುಟ್ಟಿದವನು. 5. ಸ್ಮೃತಿಕಾರರಾದ ಒಬ್ಬ ಋಷಿ. "असितो देवलो व्यास:"। (वि०) 6. ಧರ್ಮಕಾರ್ಯಾಚರಣೆಯುಳ್ಳವನು. 7. ಅಷ್ಟವಸುಗಳಲ್ಲಿ ಒಬ್ಬನಾದ ಪ್ರತ್ಯೂಷನ ಒಬ್ಬ ಮಗ, ಬ್ರಹ್ಮರ್ಷಿ.

**देवलक ದೇವಲಕ** (पुं०) "देवल" ಪದದ ಅರ್ಥ. देवल स्वार्थे "क:"। ದೇವಲಕನು ಹವ್ಯಕವ್ಯಾದಿಕಾರ್ಯಗಳಲ್ಲಿ ನಿಷಿದ್ಧನು. "चिकित्सका देवलका मांसविक्रयिणस्तथा। विपणेन च जीवन्तो वर्ज्याः स्युर्हव्यकव्ययोः" मनु० ३-१५२।

**देवलता ದೇವಲತಾ** (स्त्री०) 1. ನವಮಲ್ಲಿಕೆ, ವೀರಜಾಜಿಗಿಡ, ಹೆಜ್ಜಾಜಿಗಿಡ. देवप्रिया लता। 2. ದೇವಲತ್ವ, ದೇವರ ಕೆಲಸವನ್ನು ಜೀವನಕ್ಕಾಗಿ ಮಾಡುವಿಕೆ. देवलस्य भाव: "तल्" (५-१-११९)।

**देवलोक ದೇವಲೋಕ** (पुं०) 1. ದೇವತೆಗಳ ಲೋಕ, ಸ್ವರ್ಗ. देवानां लोक:। "आचार्यो ब्रह्मलोकेश: प्राजापत्ये पिता प्रभु:। अतिथिस्त्विन्द्रलोकेशो देवलोकस्य चर्त्विज:" मनु० ४-१८२। 2. ಭೂರಾದಿ ಸಪ್ತಲೋಕಗಳು. "भूर्लोकोऽथ भुवर्लोक: स्वर्लोकोऽथ महर्जन:। तप: सत्यं च सप्तैते देवलोका: प्रकीर्तिता:" मत्स्यपु०।

**देववर्त्मन् ದೇವವರ್ತ್ಮನ್** (न०) ದೇವತೆಗಳ ಮಾರ್ಗ, ಆಕಾಶ. देवानां सुराणां वर्त्म।

**देववर्धकि ದೇವವರ್ಧಕಿ** (पुं०) ದೇವತೆಗಳ ಶಿಲ್ಪಿ, ವಿಶ್ವಕರ್ಮ.

**देववल्लभ ದೇವವಲ್ಲಭ** (पुं०) 1. ಸುರಗಿಮರ, ಸುರಹೊನ್ನೆಮರ. (वि०) 2. ದೇವತೆಗಳಿಗೆ ಪ್ರಿಯವಾದ. देवानां वल्लभ:।

**देववाहन ದೇವವಾಹನ** (पुं०) 1. ಅಗ್ನಿ, ಅಗ್ನಿಪುರುಷ. (न०) 2. ದೇವತೆಗಳ ವಾಹನ.

**देवविद्या ದೇವವಿದ್ಯಾ** (स्त्री०) ನಿರುಕ್ತ.

**देववृक्ष ದೇವವೃಕ್ಷ** (पुं०) 1. ದೇವತರು, ಇಂದ್ರನ ಉದ್ಯಾನದಲ್ಲಿರುವ ಮಂದಾರ ಪಾರಿಜಾತ ಸಂತಾನ ಕಲ್ಪವೃಕ್ಷ ಹರಿಚಂದನ ವೃಕ್ಷಗಳು. 2. ಏಳೆಲೆ ಬಾಳೆಗಿಡ. 3. ಗುಗ್ಗುಳ. "देववृक्ष: सप्तपर्णे मन्दारादिषु गुग्गुले" मेदि०।

**देवव्रत ದೇವವ್ರತ** (पुं०) 1. ಭೀಷ್ಮಾಚಾರ್ಯ. 2. ಕಾರ್ತಿಕೇಯ, ಷಣ್ಮುಖ. "नमो वरदाय कुमारकार्तिकेयाय नम: कनकशक्त्यै ब्रह्मण्यदेवाय देवव्रताय" मृच्छ० ३। (न०) 3. ದೇವತ್ವವನ್ನು ಹೊಂದಲು ಮಾಡುವ ಒಂದು ವ್ರತ.

**देवशत्रु ದೇವಶತ್ರು** (पुं०) ದೇವತೆಗಳ ವೈರಿ, ಅಸುರ, ರಾಕ್ಷಸ. "स देवशत्रूनिव देवराज: किरीटमाली व्यधमत्सपत्नान्" भा० द्रोण० १४७-८०।

**देवशिल्पिन् ದೇವಶಿಲ್ಪಿನ್** (पुं०) ದೇವತೆಗಳ ಶಿಲ್ಪಿ, ವಿಶ್ವಕರ್ಮ. देवानां शिल्पी।

**देवशुनी ದೇವಶುನೀ** (स्त्री०) ಸರಮೆಯೆಂಬ ಒಂದು ನಾಯಿ. देव इव महिमान्विता शुनी।

**देवशेखर ದೇವಶೇಖರ** (पुं०) ದಮನಕವೃಕ್ಷ.

**देवश्रवस् ದೇವಶ್ರವಸ್** (पुं०) 1. ವಸುದೇವನ ಒಬ್ಬ ಸಹೋದರ. "वसुदेवं देवभागं देवश्रवसमानकम्। सृञ्जयं श्यामकं कङ्कं शमीकं वत्सकं वृकम्" भाग० ९-२४-२९। 2. ವಿಶ್ವಾಮಿತ್ರನ ಒಬ್ಬ ಮಗ.

**देवश्री ದೇವಶ್ರೀ** (स्त्री०) ದೇವತೆಗಳ ಸಂಪತ್ತು.

**देवश्रुत ದೇವಶ್ರುತ** (पुं०) 1. ವಿಷ್ಣು. 2. ಪರಮೇಶ್ವರ. 3. ನಾರದ. 4. ಜಿನದೇವ. 5. ಶಾಸ್ತ್ರ.

**देवसभा ದೇವಸಭಾ** (स्त्री०) 1. ದೇವತೆಗಳ ಸಭೆ, ಸುಧರ್ಮ. 2. ಆಟದ ಮನೆ, ಜೂಜಿನ ಮನೆ.

**देवसभ्य ದೇವಸಭ್ಯ** (पुं०) 1. ಕ್ರೀಡಾಗೋಷ್ಠಿಯಲ್ಲಿರುವವನು. 2. ಆಟಗಾರ, ಜೂಜಾಟದವನು. 3. ದೇವತೆಗಳ ಅನುಚರ, ದೇವತೆಗಳ ಸೇವಕ.

**देवसायुज्य ದೇವಸಾಯುಜ್ಯ** (न०) ದೇವತೆಯಾಗುವಿಕೆ, ದೇವತ್ವವನ್ನು ಹೊಂದುವಿಕೆ, ದೇವತೆಗಳೊಡನೆ ಸೇರಿಕೊಳ್ಳುವುದು. युजिर् (योगे) भावे "क्विप्" (वा० ३-३-९४)। युजा सह वर्तते सयुक्, तस्य भाव: "ष्यञ्" (५-१-१२४)। देवस्य सायुज्यम्।

**देवसावर्णि ದೇವಸಾವರ್ಣಿ** (पुं०) ಹದಿಮೂರನೆಯ ಮನು. "मनुस्त्रयोदशो भाव्यो देवसावर्णिरात्मवान्। चित्रसेनविचित्राद्या: देवसावर्णिदेहजा:" भाग० ८-१३-३०।

**देवसुषि ದೇವಸುಷಿ** (पुं०) ಹೃದಯದ ಒಂದು ದ್ವಾರ. देवै: रक्ष्यमाण: सुषि: द्वारम्। ಈ ಸುಷಿಯು ಐದಂ ವಿಧ.

"तस्य ह वा हृदयस्य पञ्च देवसुषय: स योऽस्य प्राङ्सुषि: स प्राणस्तच्चक्षु: स आदित्यस्तदेतत्तेजोऽन्नाद्यमित्युपासीत तेजस्व्यन्नादो भवति य एवं वेद" ಇತ್ಯಾದಿ ಛಾಂದೋಗ್ಯ। ಹೃದಯದ ಪೂರ್ವದಲ್ಲಿರುವ ಸುಷಿಯು ಪ್ರಾಣವಾಯು. ಹೃದಯದ ದಕ್ಷಿಣಭಾಗದಲ್ಲಿರುವುದು ವ್ಯಾನವಾಯು. "अथ योऽस्य दक्षिण: सुषि: स व्यान:"। ಪಶ್ಚಿಮದಲ್ಲಿರುವ ಸುಷಿಯು ಅಪಾನವಾಯು. "अथ योऽस्य प्रत्यङ्सुषि: सोऽपान:"। ಉತ್ತರಭಾಗದಲ್ಲಿರುವ ಸುಷಿಯು ಸಮಾನವಾಯು. "अथ योऽस्योदङ्सुषि: स समान:"। ಹೃದಯದ ಊರ್ಧ್ವಭಾಗದ ಸುಷಿಯು ಉದಾನವಾಯು. "अथ योऽस्योर्ध्व: सुषि: स उदान:"। ಪೂರ್ವದ ಸುಷಿಯಿಂದ ತೇಜಸ್ವಿಯಾಗುವನು. ದಕ್ಷಿಣದ ಸುಷಿಯಿಂದ ಶ್ರೀಮಂತ ಮತ್ತು ಯಶಸ್ವಿಯಾಗುವನು. ಪಶ್ಚಿಮದ ಸುಷಿಯಿಂದ ಬ್ರಹ್ಮವರ್ಚಸ್ವಿಯಾಗುವನು. ಉತ್ತರದ ಸುಷಿಯಿಂದ ಕೀರ್ತಿಶಾಲಿಯಾಗುವನು. ಊರ್ಧ್ವ ಸುಷಿಯಿಂದ ಓಜಸ್ವಿಯಾಗುವನು. ಛಾಂದೋಗ್ಯ।

**देवसू ದೇವಸೂ** (ಪುಂ) ನಾನಾ ವಿಧ ಅಧಿಕಾರಗಳಲ್ಲಿ ಅನುಜ್ಞೆ ಕೊಡುವ ದೇವತೆಗಳು. ಈ ದೇವತೆಗಳು 8 ಮಂದಿ. (1) ಅಗ್ನಿ, (2) ಸೋಮ, (3) ಸವಿತೃ, (4) ರುದ್ರ, (5) ಬೃಹಸ್ಪತಿ, (6) ಇಂದ್ರ, (7) ಮಿತ್ರ ಮತ್ತು (8) ವರುಣ.

| ದೇವತೆ | | ಕೊಡುವ ಅಧಿಕಾರ |
|---|---|---|
| ಅಗ್ನಿ | .. | ಗೃಹಸ್ಥಾಧಿಕಾರ |
| ಸೋಮ | .. | ವನಸ್ಪತಿಯ ಅಧಿಕಾರ (ಆಧಿಪತ್ಯ) |
| ಸವಿತೃ | .. | ಯಾಗಾಧಿಕಾರ |
| ರುದ್ರ | .. | ಪಶುಪತಿತ್ವ |
| ಬೃಹಸ್ಪತಿ | .. | ವಾಗಧಿಕಾರ (ಪಾಂಡಿತ್ಯ) |
| ಇಂದ್ರ | .. | ಜ್ಯೇಷ್ಠಭಾವ |
| ಮಿತ್ರ | .. | ಸತ್ಯವಚನ |
| ವರುಣ | .. | ಧರ್ಮೇಶ್ವರಾಧಿಕಾರ (ಧರ್ಮಾಧಿಪತ್ಯ) |

"सविता त्वा सवानां सुवतामग्निर्गृहपतीनां सोमो वनस्पतीनाम्। बृहस्पतिर्वाच इन्द्रो ज्यैष्ठ्याय रुद्र: पशुभ्यो मित्र: सत्यो वरुणो धर्मपतीनाम्"।

**देवसेना ದೇವಸೇನಾ** (स्त्री०) 1. ದೇವತೆಗಳ ಸೈನ್ಯ. देवानां सेना। "गुरुतरपरिमृज्जद्भूभृतो देवसेना ववृवुरपि सुपूर्णा व्योमभूम्यन्तराले" कुमा० १४-५१। 2. ಷಣ್ಮುಖನ ಪತ್ನಿ. "अथोपयन्त्रा सदृशेन युक्तां स्कन्देन साक्षादिव देवसेनाम्" रघु० ७-१।

**देवसेनापति ದೇವಸೇನಾಪತಿ** (ಪುಂ) 1. ದೇವತೆಗಳ ಸೇನೆಯ ಅಧಿಪತಿ. 2. ದಕ್ಷಬ್ರಹ್ಮನ ಮಗಳಾದ ದೇವಸೇನೆಯ ಪತಿ, ಸ್ಕಂದ. देवसेनाया: पति:।

**देवस्थान ದೇವಸ್ಥಾನ** (ಪುಂ) 1. ಒಬ್ಬ ಋಷಿ. देवानां स्थानमिव स्थानमस्य। (ನಂ) 2. ದೇವಾಲಯ. 3. ದೇವತೆಗಳ ಸ್ಥಾನ, ಸ್ವರ್ಗ. "द्वैपायनो नारदश्च देवलश्च महानृषि:। देवस्थानश्च कण्वश्च तेषां शिष्याश्च सत्तमा:" भा० शान्ति० १-४।

**देवस्व ದೇವಸ್ವ** (ನಂ) ದೇವರ ಧನ, ದೇವರ ಆಸ್ತಿ, ದೇವರ ಪೂಜಾದಿಗಳಿಗೆ ಕೊಟ್ಟಿರುವ ಸ್ವತ್ತು. देवस्य पूजाद्यर्थं दत्तं स्वम्। "देवस्वं ब्राह्मणस्वं वा लोभेनोपहिनस्ति य:। स पापात्मा परं लोके गृध्रोच्छिष्टेन जीवति" मनु० ११-२६।

**देवहूति ದೇವಹೂತಿ** (स्त्री०) 1. ಸ್ವಾಯಂಭುವ ಮನುವಿನ ಒಬ್ಬ ಮಗಳು, ಕರ್ದಮನ ಪತ್ನಿ, ಕಪಿಲಮಹರ್ಷಿಯ ತಾಯಿ. "एवं निशम्य कपिलस्य वचो जनित्री सा कर्दमस्य दयिता किल देवहूति:" भाग० ३-३३-१। 2. ದೇವತೆಗಳನ್ನು ಕರೆಯುವುದು. देवानां हूति: आकारणम्।

**देवाक्रीड ದೇವಾಕ್ರೀಡ** (ಪುಂ) ದೇವತೆಗಳ ಕ್ರೀಡಾಸ್ಥಾನ, ದೇವತೆಗಳ ಉದ್ಯಾನವನ. देवा आक्रीडन्त्यत्र—आ+क्रीड् (विहारे) अधि० "घञ्" (३-३-१२१)।

**देवागारिक ದೇವಾಗಾರಿಕ** (ಪುಂ) ದೇವಸ್ಥಾನದಲ್ಲಿ ಕೆಲಸಕ್ಕೆ ನೇಮಿಸಲ್ಪಟ್ಟವನು. देवागारे नियुक्त: "ठन्" (४-४-७०)।

**देवाजीव ದೇವಾಜೀವ** (ಪುಂ) ದೇವಸ್ಥಾನದಲ್ಲಿ ಕೆಲಸ ಮಾಡಿ ಜೀವಿಸುವವನು. देवमाजीवति — आ + जीव (प्राणधारणे) "क:" (३-१-१३५)। "णिनि:" (३-२-७८)। –आजीवी – ಆಜೀವೀ.

**देवाट ದೇವಾಟ** (ಪುಂ) ಒಂದು ಪುಣ್ಯಕ್ಷೇತ್ರ, ಹರಿಹರಕ್ಷೇತ್ರ. देवा अटन्त्यत्र।

**देवातिथि ದೇವಾತಿಥಿ** (ಪುಂ) ಚಂದ್ರವಂಶದ ಕ್ರೋಧನರಾಜನ ಮಗ. "ततश्च क्रोधनस्तस्माद्देवातिथिरमुष्य च" भाग० ९-२२-११।

**देवात्मन् ದೇವಾತ್ಮನ್** (वि०) 1. ದೇವಸ್ವರೂಪನಾದ. देव: आत्मा यस्य। 2. ದೇವತೆಗಳ ಸ್ವಭಾವದ. (ಪುಂ) 3. ಅಶ್ವತ್ಥವೃಕ್ಷ.

**देवाधिदेव ದೇವಾಧಿದೇವ** (ನಂ) ಸರ್ವೇಶ್ವರ, ಪರಮಾತ್ಮ. देवानामधिदेव:।

**देवाधिप ದೇವಾಧಿಪ**(ಪುಂ) 1. ಸರ್ವೇಶ್ವರ, ಪರಮೇಶ್ವರ. 2. ಇಂದ್ರ, ದೇವತೆಗಳ ರಾಜ. देवानामधिपः। **-अधिपतिः -ಅಧಿಪತಿ.**

**देवानांप्रिय ದೇವಾನಾಂಪ್ರಿಯ** (ಪುಂ) ಮೂರ್ಖ, ದಡ್ಡ, ಪಶುಸಮಾನನು. देवानां प्रियः "अलुक्" (वा० ६-३-२१)। [ಯಾಗದಲ್ಲಿ ಪಶುಗಳು ದೇವತೆಗಳಿಗೆ ಸಂತೋಷವುಂಟು ಮಾಡುವುದರಿಂದ ಪಶುಸಮಾನತೆಯು ತೋರುವುದರ ಮೂಲಕ ಈ ಪದಕ್ಕೆ ಮೂರ್ಖನೆಂದರ್ಥವನ್ನು ಹೇಳುವ ಭಾವ.] ದೇವತೆಗಳು ಕ್ರೀಡಾಸಕ್ತರಾದುದರಿಂದ ಅವರು ಮೂರ್ಖರು, ಅವರಿಗೆ ಪ್ರೀತಿಪಾತ್ರನಾದವನೂ ಮೂರ್ಖ.

**देवानीक ದೇವಾನೀಕ** (ಪುಂ) 1. ಸೂರ್ಯವಂಶದ ಒಬ್ಬ ರಾಜ. "क्षेमधन्वसुतस्त्वासीद्देवानीकः प्रतापवान्" हरिवं०। (न०) 2. ದೇವತೆಗಳ ಸೈನ್ಯ.

**देवानुचर ದೇವಾನುಚರ** (ಪುಂ) ದೇವತೆಗಳ ಕಿಂಕರ; ವಿದ್ಯಾಧರ ಅಪ್ಸರಸ್ಸು ಯಕ್ಷ ಗಂಧರ್ವ ಮೊದಲಾದವರು. देवाननुचरति—अनु+चर (गतौ) "अच्" (३-१-१३४)।

**देवानुयायिन् ದೇವಾನುಯಾಯಿನ್** (ಪುಂ) ದೇವತೆಗಳ ಕಿಂಕರ.

**देवान्धस् ದೇವಾಂಧಸ್** (ನಂ) ದೇವತೆಗಳ ಅನ್ನದಂತಿರುವ ಅಮೃತ. देवानामन्ध इव प्रीतिकरम्।

**देवान्न ದೇವಾನ್ನ** (ನಂ) 1. ಅಮೃತ. देवानामन्नमिव। 2. ದೇವರ ನೈವೇದ್ಯಕ್ಕಾಗಿ ಮಾಡಿದ ಅನ್ನ. "अनुपाकृत-मांसानि देवान्नानि हवींषि च" मनु० ५-६।

**देवापि ದೇವಾಪಿ** (ಪುಂ) ಪ್ರತೀಪ ರಾಜನ ಮಗ, ಶಂತನು ರಾಜನ ಸಹೋದರ. "प्रतीपस्य त्रयः पुत्राः जज्ञिरे भरतर्षभ। देवापिः शन्तनुश्चैव बाह्लीकश्च महारथः" भा० आदि० १०१-४९।

**देवाभीष्ट ದೇವಾಭೀಷ್ಟ** (वि०) 1. ದೇವತೆಗಳಿಗೆ ಇಷ್ಟವಾದ. देवानामभीष्टः। (स्त्री०) **-ष्टा -ಷ್ಟಾ.** 2. ತಾಂಬೂಲೀಲತೆ, ವೀಳ್ಯದೆಲೆಯ ಬಳ್ಳಿ.

**देवायतन ದೇವಾಯತನ**(ನಂ) ದೇವಾಲಯ, ದೇವಸ್ಥಾನ, ದೇವರ ಗುಡಿ. "न देवायतनं गच्छेत् कदाचिद्वाप्रदक्षिणम्" कूर्मपु०।

**देवायुध ದೇವಾಯುಧ** (ನಂ) 1. ಇಂದ್ರನ ಧನುಸ್ಸು. ಮಳೆಯು ಬೀಳುತ್ತಿರುವಾಗ ಸೂರ್ಯನ ಕಿರಣಗಳು ಮೇಘದ ಮೇಲೆ ಬಿದ್ದಾಗ ಧನುಸ್ಸಿನ ಆಕಾರದಲ್ಲಿ ಕಾಣುವುದು. ಇದಕ್ಕೆ ಕಾಮನಬಿಲ್ಲು ಎಂದು ಹೆಸರು. 2. ಇಂದ್ರನ ವಜ್ರಾಯುಧ.

**देवारि ದೇವಾರಿ** (ಪುಂ) ದೇವತೆಗಳ ಶತ್ರು, ಅಸುರ. देवानामरिः। "येन देवारयः सर्वे महायुधि निपातिताः" भा० द्रोण०।

**देवालय ದೇವಾಲಯ** (ಪುಂ) 1. ದೇವರ ಗುಡಿ, ದೇವಸ್ಥಾನ. 2. ಸ್ವರ್ಗ, ದೇವತೆಗಳ ವಾಸಸ್ಥಾನ. देवानामालयः।

**देवावास ದೇವಾವಾಸ** (ಪುಂ) 1. ಅಶ್ವತ್ಥವೃಕ್ಷ, ಅರಳಿ ಮರ. 2. ದೇವಸ್ಥಾನ, ದೇವರಗುಡಿ. 3. ಸ್ವರ್ಗ, ದೇವಲೋಕ. 4. ಸುಮೇರು ಪರ್ವತ. देवानामावासः।

**देवाश्व ದೇವಾಶ್ವ** (ಪುಂ) ಇಂದ್ರನ ಕುದುರೆ, ಉಚ್ಚೈಃಶ್ರವಸ್ಸು. देवस्य इन्द्रस्य अश्वः।

**देविक ದೇವಿಕ** (ಪುಂ) ದಯೆಯಿಂದ ಕೂಡಿದ ದೇವದತ್ತ. अनुकम्पितो देवदत्तः—देवदत्त "ठच्" (५-३-७८)। द्वितीयादचः परं लोपः (५-३-८३)। इकः (७-३-५०)। (स्त्री०) **-का -ಕಾ.** ಒಂದು ನದಿ.

**देविन् ದೇವಿನ್** (वि०) ಆಟವಾಡುವವನು, ಜೂಜಾಟದವನು. दिवु (क्रीडादौ) "णिनिः" (३-२-७८)। "राज्ञा सचिह्नं निर्वास्याः कूटाक्षोपधिदेविनः" याज्ञ० २-२०२।

**देविय ದೇವಿಯ** (ಪುಂ) ದಯೆಯಿಂದ ಕೂಡಿದ ದೇವದತ್ತ. अनुकम्पितो देवदत्तः—देवदत्त "घन्" (५-३-७९)। द्वितीयादचः परं लोपः (५-३-८३)। इयादेश (७-१-२)।

**देविल ದೇವಿಲ** (ಪುಂ) 1. ದಯೆಯಿಂದ ಕೂಡಿದ ದೇವದತ್ತ. अनुकम्पतो देवदत्तः—देवदत्त "इलच्" (५-३-७९)। द्वितीयादचः परं लोपः (५-३-८३)। (वि०) 2. ಧಾರ್ಮಿಕ. दीव्यति आनन्देन—दिवु (क्रीडादौ) "इलच्" (उ० १-५७)।

**देवी ದೇವೀ** (स्त्री०) 1. ದುರ್ಗಾದೇವಿ. दीव्यति—दिवु (क्रीडादौ) "अच्" (३-१-१३४)। "ङीप्" (४-१-१५)। ಪಚಾದಿಗಣದಲ್ಲಿ देवट् ಎಂದು ಹೇಳಿರುವುದರಿಂದ "ङीप्" ಬಂದಿರುವುದು. "देव्या यया ततमिदं जगदात्मशक्त्या निःशेषदेवगणशक्तिसमूहमूर्त्या" मार्कं०। 2. ಮಹಿಷಿ, ಪಟ್ಟಾಭಿಷಿಕ್ತಳಾದ ರಾಜನ ಪತ್ನಿ (ನಾಟಕಗಳಲ್ಲಿ ಈ ಪ್ರಯೋಗ). "शपे देव्याश्चरणैर्यदि कस्यापि पुरतः प्रकाशयामि" रत्ना० ३। "प्रेष्यभावेन नामेयं देवीशब्दक्षमा सती" माल० ५-१२। 3. ಸ್ತ್ರೀದೇವತೆ. "देवीं वाचमुपासते हि बहवः सारं तु सारस्वतं जानीते नितरामसौ गुरुकुलक्लिष्टो मुरारिः कविः"

अनर्थ०। 4. ದೇವಾಂಗನೆ, ದೇವತೆಗಳ ಪತ್ನಿ. "आरुह्य नार्यः क्षणदासु यत्र नभोगता देव्य इव व्यराजन्" माघ० ३-४३। 5. ಕುರಟಗೆ ಗಿಡ. "मूर्वा देवी मधुरसा" अम०। 6. ಸ್ಪೃಕ್ಕಾ ಎಂಬ ಗಂಧದ್ರವ್ಯ. 7. ಅಗುಳ ಶುಂಠಿ. 8. ಅಗಸೆ ಗಿಡ. 9. ಅಳಲೆ ಗಿಡ. 10. ಮದ್ಯ, ಸುರೆ, ಹೆಂಡ. "शीधु कश्यमिरा कल्या शुण्डा देवी परिस्रुता" वैज०।

**देवीकोट ದೇವೀಕೋಟ** (पुं०) ಬಾಣಾಸುರನ ನಗರ, ಶೋಣಿತಪುರ. "देवीकोटो बाणपुरं कोटीवर्षमुषावनम्" त्रिकाण्ड०।

**देवृ ದೇವೃ** (पुं०) ಗಂಡನ ಒಡಹುಟ್ಟಿದವನು, ಪತಿಯ ಸಹೋದರ. दीव्यति — दिवु (क्रीडादौ) "ऋः" (उ० २-९९)।

**देवेज्य ದೇವೇಜ್ಯ** (पुं०) ಬೃಹಸ್ಪತಿ, ದೇವತೆಗಳ ಆಚಾರ್ಯ (ಗುರು). देवानामिज्यः।

**देवेन्द्र ದೇವೇಂದ್ರ** (पुं०) ದೇವತೆಗಳ ಪ್ರಭು, ಇಂದ್ರ. देवानामिन्द्रः।

**देवेश ದೇವೇಶ -ईश्वर -ಈಶ್ವರ** (पुं०) 1. ವಿಷ್ಣು, ಪರಮಾತ್ಮ. देवानां ब्रह्मादीनां ईशः स्वामी। "ब्रह्मादीनां च देवेशः यथार्हविनियोगतः" इति निरुक्तिः। "देवेशो देवभृद्गुरुः" वि० स०। 2. ಮಹಾದೇವ, ಪರಶಿವ. "भगवांश्चापि देवेशो यत्र देवी च कीर्त्यते" भा० आदि० ६२-३७। 3. ಬ್ರಹ್ಮ, ಚತುರ್ಮುಖ. 4. ಇಂದ್ರ. (स्त्री०) -शी -ಶೀ. ದುರ್ಗಾದೇವಿ.

**देवेशय ದೇವೇಶಯ** (पुं०) 1. ವಿಷ್ಣು. देवे शेते—शीङ् (स्वप्ने) "अच्" (३-२-१५)। सप्तम्या अलुक् (६-३-१८)। 2. ಪರಶಿವ, ಮಹಾದೇವ. "परमज्ञेय परमयाज्ञिक सांख्ययोग सांख्यमूर्ते अमृतेशय हिरण्येशय वेदेशय देवेशय कुशेशय ब्रह्मेशय पद्मेशय" भा० शान्ति० ३४६-४।

**देवेष्ट ದೇವೇಷ್ಟ** (पुं०) 1. ಗುಗ್ಗುಳ. (वि०) 2. ದೇವತೆಗಳಿಗೆ ಇಷ್ಟವಾದ. देवानामिष्टः।

**देवोद्यान ದೇವೋದ್ಯಾನ** (न०) ದೇವತೆಗಳ ಉದ್ಯಾನವನ. ದೇವೋದ್ಯಾನವು (1) ನಂದನ, (2) ಚೈತ್ರರಥ, (3) ವೈಭ್ರಾಜ ಮತ್ತು (4) ಸರ್ವತೋಭದ್ರವೆಂಬ ನಾಲ್ಕು ವನಗಳಿಂದ ಕೂಡಿರುವುದು.

**देवौकस् ದೇವೌಕಸ್** (न०) ದೇವತೆಗಳ ಗೃಹ, ಸುಮೇರು ಪರ್ವತ. देवानामोकः।

**देश ದೇಶ** (पुं०) 1. ಪ್ರದೇಶ, ಜಾಗ, ಸ್ಥಳ. दिश (अतिसर्जने) "अच्" (३-१-१३४)। "देशः सोऽयमराति-शोणितजलैर्यस्मिन् ह्रदाः पूरिताः" वेणी० ३-३३। 2. ಜನಪದ, ನಾಡು, ಸೀಮೆ, ರಾಷ್ಟ್ರ. "को वीरस्य मनस्विनः स्वविषयः को वा विदेशस्तथा यं देशं श्रयते तमेव कुरुते बाहुप्रतापार्जितम्" हितो० १-१७५। 3. ಅಸಾಧಾರಣವಾದ ಆಜ್ಞೆ, ಶಾಸನ. दिश्यते — दिश कर्म० "घञ्" (३-३-१९)। 4. ಉಪದೇಶ, ಶಿಕ್ಷಣ, ಬೋಧನೆ. दिश भावे "घञ्" (३-३-१८)।

**देशक ದೇಶಕ** (वि०) 1. ಉಪದೇಶಮಾಡುವವನು, ಬೋಧಿಸುವವನು, ಶಿಕ್ಷಣ ಕೊಡುವವನು. 2. ಶಾಸನ ಮಾಡುವವನು, ಕಟ್ಟಳೆ ವಿಧಿಸುವವನು. दिश (अतिसर्जने) "ण्वुल्" (३-१-१३३)। 3. ತೋರಿಸಿಕೊಡುವವನು, ಸೂಚಿಸುವವನು.

**देशधर्म ದೇಶಧರ್ಮ** (पुं०) ದೇಶಕ್ಕೆ ಅನುಕೂಲವಾದ ಧರ್ಮ, ದೇಶಾಚಾರ, ವಂಶಪರಂಪರೆಯಾಗಿ ಬಂದ ದೇಶದ ಸಂಪ್ರದಾಯ. देशस्य अनुकूलो धर्मः। "देशधर्मान् जातिधर्मान् कुलधर्मांश्च शाश्वतान्। पाषण्डगणधर्मांश्च शास्त्रेऽस्मिन्नुक्तवान् मनुः" मनु० १-११८।

**देशन ದೇಶನ** (न०) 1. ಉಪದೇಶ, ಶಿಕ್ಷಣ, ಬೋಧನೆ. दिश (अतिसर्जने) भावे "ल्युट्" (३-३-११५)। 2. ತೋರಿಸುವುದು. 3. ಆಜ್ಞೆಮಾಡುವುದು.

**देशनिक ದೇಶನಿಕ** (न०) ಮೃತ್ತಿಕಾಸ್ನಾನ, ಮಣ್ಣು ಹಚ್ಚಿಕೊಂಡು ಮಾಡುವ ಸ್ನಾನ. "यन्मृत्तिकाम्भसा स्नान दिष्टं देशनिकं स्मृतम्" वैज०।

**देशनीय ದೇಶನೀಯ** (वि०) 1. ಉಪದೇಶಮಾಡಲು ಯೋಗ್ಯನಾದ. 2. ಉಪದೇಶಿಸಲ್ಪಡುವ. दिश (अति-सर्जने) "अनीयर्" (३-१-९६)। 3. ತೋರಿಸಲ್ಪಡುವ. 4. ಆಜ್ಞಾಪಿಸಲ್ಪಡುವ. "तव्यः" (३-१-९६)। **देष्टव्यः ದೇಷ್ಟವ್ಯಃ.**

**देशभाषा ದೇಶಭಾಷಾ** (स्त्री०) ಆಯಾದೇಶದಲ್ಲಿ ವ್ಯವಹರಿಸುವ ಭಾಷೆ, ಮಾತೃಭಾಷೆ. ಆಯಾದೇಶದ ಜನರು ತಮ್ಮ ದೇಶದಲ್ಲಿ ಆಡುವ ಭಾಷೆಯು ದೇಶಭಾಷೆ. "कुशला देशभाषासु जल्पन्तोऽन्योन्यमीश्वराः" भा० शल्य० ४६-१०३।

**देशरूप ದೇಶರೂಪ** (न०) ಯುಕ್ತತೆ, ಔಚಿತ್ಯ, ಹೊಂದಿಕೆ, ನ್ಯಾಯಮಾರ್ಗದಿಂದ ತಪ್ಪದಿರುವಿಕೆ. दिश्यते — दिश (अतिसर्जने) "घञ्" (३-३-१९)। देशो रूपमस्य।

दिश्यमानस्य उचितस्य रूपम्। प्रशस्तं देशनम्—देश प्रशंसायां "रूपप्" (५-३-६६) वा। "अन्नेषन्याय-कल्पास्तु देशरूपं समञ्जसम्" अम०।

**देशवासिन् ದೇಶವಾಸಿನ್** (वि०) ನಿರಂತರವಾಗಿ ಒಂದು ದೇಶದಲ್ಲಿ ವಾಸಮಾಡುವವನು. देशे वसति—वस (निवासे) "णिनिः" (३-२-७८)।

**देशाचार ದೇಶಾಚಾರ** (पुं०) ಆಯಾದೇಶದ ಸಂಪ್ರದಾಯ, ಆಯಾದೇಶದ ಪದ್ಧತಿ.

**देशाटन ದೇಶಾಟನ** (न०) ದೇಶದಲ್ಲಿ ಸಂಚರಿಸುವುದು.

**देशान्तर ದೇಶಾಂತರ** (न०) ಬೇರೆ ದೇಶ, ಭಾಷಾಭೇದ ದಿಂದಲೂ ಬೆಟ್ಟ ಮತ್ತು ನದಿಗಳ ವ್ಯವಧಾನದಿಂದಲೂ ದೇಶವು ಬೇರೆಯಾಗುವುದು. "वाचो तत्र विभिद्यन्ते गिरिर्वा व्यवधायकः। महानद्यन्तरं यत्र तद्देशान्तर-मुच्यते"।

**देशिक ದೇಶಿಕ** (पुं०) 1. ಮಂತ್ರವನ್ನು ಉಪದೇಶಿಸುವ ಆಚಾರ್ಯ. 2. ಗುರು, ಧರ್ಮವನ್ನು ಉಪದೇಶಿಸುವವನು. देशे उपदेशे नियुक्तः "ठन्" (४-४-६९)। "धर्माणां देशिकः साक्षात् स भविष्यति धर्मभाक्। धर्मविद्भिः सदैवेशो नमस्कार्यः सदोद्यतैः" भा० अनु०। 3. ಪಥಿಕ, ಯಾತ್ರಿಕ, ದೇಶಸಂಚಾರದಲ್ಲಿ ಆಸಕ್ತನಾದವನು. देशे प्रसितः। 4. ಸದಸ್ಯ, ಸಭಿಕ, ಸಭೆಯಲ್ಲಿರುವವನು. "सदस्या देशिकास्स्थेयास्सभास्तारास्सभासदः" वैज०।

**देशित ದೇಶಿತ** (वि०) 1. ಹೇಳಲ್ಪಟ್ಟ. 2. ತಿಳಿಸಲ್ಪಟ್ಟ. 3. ತೋರಿಸಲ್ಪಟ್ಟ. दिश (अतिसर्जने) + णिच् "क्तः" (३-२-१०२)।

**देशिन् ದೇಶಿನ್** (वि०) 1. ಉಪದೇಶಕ, ಭೋಧಕ, ಶಿಕ್ಷಣ ಕೊಡುವವನು. दिशति—दिश (अतिसर्जने) "णिनिः" (३-१-१३४)। (स्त्री०) -शिनी—ಶಿನೀ. 2. ತರ್ಜನಿ ಬೆರಳು, ಹೆಬ್ಬೆರಳಿನ ಪಕ್ಕದ ಬೆರಳು, ತೋರು ಬೆರಳು.

**देशी ದೇಶೀ** (स्त्री०) 1. ದೀಪಕರಾಗದ ಪತ್ನಿ, ರಾಗಿಣಿ. 2. ಸಂಸ್ಕೃತ ಭಾಷೆಯಿಂದ ಉಂಟಾದ ಪ್ರಾಕೃತಭಾಷೆಯ ಒಂದು ಭೇದ. "संस्कृतं नाम दैवी वागन्वाख्याता महर्षिभिः। तद्भवस्तत्समो देशीत्यनेकः प्राकृतक्रमः" काव्या० १-३३।

**देशीय ದೇಶೀಯ** (वि०) 1. ದೇಶ ಸಂಬಂಧವಾದ. 2. ದೇಶದಲ್ಲಿರುವ. 3. ದೇಶದಲ್ಲಿ ಹುಟ್ಟಿದ. देश "छः" (४-२-१३८)। "सुरते कर्णमूले तु यच्च देशीयभाषया। दम्पत्योर्जल्पितं मन्दं मन्मनं तद्विदुर्बुधाः"।

**देश्य ದೇಶ್ಯ** (वि०) 1. ಉಪದೇಶಿಸಲ್ಪಡುವ. 2. ತೋರಿಸಲ್ಪಡುವ. दिश (अतिसर्जने) "ण्यत्" (३-१-१२४)। 3. ದೇಶದಲ್ಲಿರುವ, ದೇಶದಲ್ಲಿ ವಾಸಮಾಡುವ. देश "यत्" (४-३-५४)। "अभियोक्ता दिशेद्देश्यं कारणं वान्यदुद्दिशेत्" मनु० ८-५२। 4. ಪೂರ್ವಪಕ್ಷ.

**देष्टव्य ದೇಷ್ಟವ್ಯ** (वि०) 1. ಉಪದೇಶಿಸಲ್ಪಡುವ. 2. ಉಪದೇಶಿಸಲು ಯೋಗ್ಯನಾದ. 3. ಉಪದೇಶಿಸಲು ಶಕ್ಯನಾದ, 4. ಉಪದೇಶಿಸಬೇಕಾದ. दिश (अतिसर्जने) कर्मादौ "तव्यः" (३-१-९६)। 5. ತೋರಿಸಲ್ಪಡುವ. 6. ತೋರಿಸಲು ಯೋಗ್ಯನಾದ. 7. ತೋರಿಸಲು ಶಕ್ಯನಾದ. 8. ತೋರಿಸಬೇಕಾದ. 9. ಆಜ್ಞಾಪಿಸಲ್ಪಡುವ. 10. ಆಜ್ಞೆ ಮಾಡಲು ಯೋಗ್ಯನಾದ.

**देष्टृ ದೇಷ್ಟೃ** (वि०) 1. ಉಪದೇಶಿಸುವವನು. 2. ಆಜ್ಞೆ ಮಾಡುವವನು. 3. ತೋರಿಸುವವನು. दिश (अतिसर्जने) "तृन्" (३-२-१३५)। "तेषां कुपथदेष्टॄणां पततां तमसि ह्यधः। ये श्रद्दध्युर्वचस्ते वै मज्जन्त्यश्मप्लवा इव" भाग० ६-७-१४। स्त्रियाम् "ङीप्" (४-१-५)। -ष्ट्री—ಷ್ಟ್ರೀ.

**देष्णु ದೇಷ್ಣು** (वि०) ದಾನಶೀಲ, ದಾನಮಾಡುವ ಸ್ವಭಾವ ದವನು. डु दाञ् (दाने) "इष्णुच्"।

**देह ದೇಹ** (पुं०) ಶರೀರ, ಮೈ. दिह्यते—दिह (उपचये) "घञ्" (३-३-१९)। ದೇಹವು ದಿನೇ ದಿನೇ ಬೆಳೆಯು ವುದರಿಂದ ಈ ಹೆಸರು. "आत्मकर्मक्षमं देहं क्षात्रो धर्म इवाश्रितः" रघु० १-१३। ದೇಹವು ಸ್ಥೂಲ ಸೂಕ್ಷ್ಮ ಕಾರಣಗಳೆಂದು ಮೂರು ವಿಧ. [ವಿವರಕ್ಕೆ "शरीर" ಪದದಲ್ಲಿ ನೋಡಿ.]

**देहकर्तृ ದೇಹಕರ್ತೃ** (पुं०) 1. ಪರಮಾತ್ಮ, ಪರಮೇಶ್ವರ. देहं करोति—डु कृञ् (करणे) "तृच्" (३-१-१३३)। 2. ಸೂರ್ಯ. "देहकर्ता प्रशान्तात्मा विश्वात्मा विश्वतोमुखः" भा० वन० ३-८०। 3. ತಂದೆ. 4. ಪೃಥಿವಿ ಮೊದಲಾದ ಪಂಚಭೂತಗಳು. कृञ् "क्विप्" (३-२-७३)। -कृत्—ಕೃತ್.

**देहकोश ದೇಹಕೋಶ** (पुं०) 1. ದೇಹಕ್ಕೆ ಕೋಶ (ಮುಚ್ಚಳ) ದಂತಿರುವ ಚರ್ಮ. 2. ಪಕ್ಷಿಗಳ ರೆಕ್ಕೆ (ಗರಿ). देहस्य कोश इव।

**देहक्षय ದೇಹಕ್ಷಯ** (पुं०) 1. ರೋಗ, ವ್ಯಾಧಿ. देहस्य क्षयो यस्मात्। 2. ದೇಹದ ನಾಶ.

**देहच्युत ದೇಹಚ್ಯುತ** (वि०) ದೇಹದಿಂದ ಹೊರಕ್ಕೆ ಬಂದು ಬಿದ್ದಿರುವ. देहात् च्युतः।

**देहज ದೇಹಜ** (पुं०) 1. ಕಾಮ, ಮನ್ಮಥ. 2. ಪುತ್ರ, ಮಗ. (वि०) 3. ಶರೀರದಲ್ಲಿ ಹುಟ್ಟಿದ. देहात् देहे वा जायते—जनी (प्रादुर्भावे) "डः" (३-२-९७, ९८)। "अहितो देहजो व्याधिः हितमारण्यमौषधम्" उद्भ०। (स्त्री०) **-जा -ಜಾ.** ಪುತ್ರಿ, ಮಗಳು.

**देहत्याग ದೇಹತ್ಯಾಗ** (पुं०) ಶರೀರವನ್ನು ತ್ಯಜಿಸುವುದು, ಶರೀರವನ್ನು ಬಿಟ್ಟು ಹೋಗುವುದು, ಮರಣ. देहस्य त्यागः। "देहत्यागकृतोद्योगैरदृश्यत पुरः पुमान्" माघ० १९-८७।

**देहद ದೇಹದ** (पुं०) 1. ಪಾದರಸ. देहं शरीरं दायति शोधयति — दैप् (शोधने) देहं देहपुष्टिं ददाति—डु दाञ् (दाने) वा "कः" (३-२-३)। (वि०)2. ದೇಹವನ್ನು ಕೊಡುವ.

**देहधर्म ದೇಹಧರ್ಮ** (पुं०) ಶರೀರದ ಚಲನವಲನಾದಿಗಳು, ಶರೀರದ ವ್ಯಾಪಾರ.

**देहधारक ದೇಹಧಾರಕ** (न०) 1. ಶರೀರವನ್ನು ಹೊತ್ತಿರುವ ಎಲುಬು. (वि०) 2. ಶರೀರವನ್ನು ಹೊತ್ತಿರುವ (ಜೀವ). देहं धारयति — धृ (धारणे) + णिच् "ण्वुल्" (३-१-१३३)। "णिनिः" (३-१-१३४)। **-धारिन् -ಧಾರಿನ್.** स्त्रियाम् "ङीप्" (४-१-५)। **-धारिणी -ಧಾರಿಣೀ.**

**देहधि ದೇಹಧಿ** (पुं०) ಹಕ್ಕಿಗಳ ರೆಕ್ಕೆ. देहो धीयतेऽत्र—डु धाञ् (धारणे) "किः" (३-३-९३)।

**देहधृक् ದೇಹಧೃಕ್** (पुं०)1. ಪ್ರಾಣವಾಯು. धृज (गतौ) "क्विप्" (३-२-१७८)। "वायुर्यो वक्त्रसञ्चारी स प्राणो नाम देहधृक्" सुश्रुत० निदान० १-१३। 2. ದೇಹವನ್ನು ಹೊತ್ತಿರುವ ಜೀವ.

**देहभुज् ದೇಹಭುಜ್** (पुं०)1. ಜೀವ. देहे भुङ्क्ते—भुज (पालनादौ) "क्विप्" (३-२-१७८)। 2. ಸೂರ್ಯ.

**देहभृत् ದೇಹಭೃತ್** (पुं०)1. ಜೀವ, ಕರ್ಮಾನುಗುಣವಾದ ಶರೀರವನ್ನು ಹೊಂದಿರುವ ಜೀವಾತ್ಮ. देहं बिभर्ति—डु भृञ् (धारणपोषणयोः) "क्विप्" (३-२-१७८)। "कर्मात्मा त्वपरो योऽसौ बन्धमोक्षैः संयुज्यते"। "धिगिमां देहभृतामसारताम्" रघु० ८-५१। 2. ಅವಿದ್ಯೆಯಿಂದ ವಿವೇಕಶೂನ್ಯನಾಗಿ ದುರಭಿಮಾನದಿಂದ ಕೂಡಿದವನು.

**देहयात्रा ದೇಹಯಾತ್ರಾ** (स्त्री०)1. ದೇಹಸಂರಕ್ಷಣೆಗಾಗಿ ಮಾಡುವ ಉಪಚಾರ, ಭೋಜನ ಮೊದಲಾದುದು. देहरक्षणार्थं यात्रा। 2. ಮರಣ, ನಿಧನ. "देहयात्रा यमपुरीगमने भोजनेऽपि च" मेदि०।

**देहली ದೇಹಲೀ** (स्त्री०)1. ಬಾಗಿಲ ಹೊಸ್ತಿಲು, ಬಾಗಿಲ ಚೌಕಟ್ಟಿನ ಕೆಳಗಿನ ಅಡ್ಡಪಟ್ಟಿ. देहं लेपनं लाति—ला (आदाने) "कः" (३-२-३)। "ङीष्" (४-१-४१)। "विन्यस्यन्ती भुवि गणनया देहलीदत्तपुष्पैः" मेघ० २-२४। "शुकाङ्गनीलोपलनिर्मितानां लिप्तेषु भासा गृहदेहलीनाम्" माघ० ३-४८। 2. ಹಳೆಯ ದೇಹಲಿ ನಗರ, ಈಗಿನ ಡೆಲ್ಲಿ ನಗರ. [ದೇಹಲಿಯು ಯುಧಿಷ್ಠಿರನ ರಾಜಧಾನಿಯಾಗಿದ್ದಿತು. ಹಳೆಯ ದೇಹಲಿಗೆ (1) ಇಂದ್ರಪ್ರಸ್ಥ, (2) ಖಾಂಡವಪ್ರಸ್ಥ, (3) ಬೃಹತ್‌ಸ್ಥಲ ಮತ್ತು (4) ದೇಹಲಿ ಎಂಬ ನಾಲ್ಕು ಹೆಸರುಗಳಿದ್ದುವು. ಪುರಾಣಕೀಲವೆಂಬ ಕೋಟೆಯು ಈಗಲೂ ಪಾಂಡವರ ಕೋಟೆಯೆಂದು ಪ್ರಸಿದ್ಧವಾಗಿದೆ. ಇದು, ಪಾಂಡವರಿಗಾಗಿ ಶ್ರೀಕೃಷ್ಣನು ದುರ್ಯೋಧನನನ್ನು ಕೇಳಿದ ಪಂಚಗ್ರಾಮಗಳಲ್ಲೊಂದಾದ ತಿಲಪ್ರಸ್ಥವೆಂಬ ಪರಗಣದ ಒಂದು ಭಾಗವನ್ನೊಳಗೊಂಡಿದೆ. ಈ ಹಳೆಯ ದೇಹಲಿಯು ಹಸ್ತಿನಾಪುರಕ್ಕೆ ಸಮೀಪದಲ್ಲಿ ಯಮುನಾನದಿಯ ತೀರದಲ್ಲಿರುವುದು.] Geographical Dictionary by Nandu Lal DEY.

**देहवत् ದೇಹವತ್** (वि०) ಶರೀರವನ್ನು ಹೊಂದಿರುವ. देहोऽस्यास्ति "मतुप्" (५-२-९४)।

**देहवायु ದೇಹವಾಯು** (पुं०) ಶರೀರದೊಳಗಿನ ಪ್ರಾಣವಾಯು. देहवर्ती वायुः।

**देहसार ದೇಹಸಾರ** (पुं०) ಮಜ್ಜೆ, ದೇಹದೊಳಗಿನ ರಸ. देहस्य सारः।

**देहातीत ದೇಹಾತೀತ** (पुं०) ಶರೀರಾಭಿಮಾನವನ್ನು ತೊರೆದ ಜ್ಞಾನಿ. देहं देहाध्यासमतीतः।

**देहात्मवाद ದೇಹಾತ್ಮವಾದ** (पुं०) ದೇಹವೇ ಆತ್ಮನೆಂಬ ವಾದ, ಚಾರ್ವಾಕತತ್ತ್ವ (ಸಿದ್ಧಾಂತ).

**देहात्मवादिन् ದೇಹಾತ್ಮವಾದಿನ್** (पुं०) ದೇಹವೇ ಆತ್ಮನೆಂದು ಹೇಳುವ ಚಾರ್ವಾಕ. देहमात्मानं वदति — वद (व्यक्तायां वाचि) "णिनिः" (३-२-७८)।

**देहाध्यास ದೇಹಾಧ್ಯಾಸ** (पुं०) ದೇಹವೇ ಆತ್ಮನೆಂಬ ಜ್ಞಾನ, ದೇಹದಲ್ಲಿ ಆತ್ಮತ್ವಭ್ರಾಂತಿ. देहस्याध्यासः आत्मतया भ्रान्तिः।

**देहान्तर ದೇಹಾಂತರ** (ನಂ) ಬೇರೆ ಶರೀರ. अन्यो देहः। ಜೀವನು ಮೋಕ್ಷಸಿದ್ಧಿಸುವವರೆಗೂ ಕರ್ಮಾನುಸಾರ ತಿರ್ಯಙ್ ಮನುಷ್ಯಾದಿ ಜನ್ಮಪಡೆದು ಬೇರೆಬೇರೆ ದೇಹಗಳನ್ನು ಪಡೆಯುವನು. ಇವಲ್ಲದೆ ಸ್ಥೂಲ ಸೂಕ್ಷ್ಮ ಕಾರಣಗಳೆಂಬ ಮೂರು ದೇಹಗಳನ್ನು ಪಡೆಯುವನು. ["शरीर" ಪದದಲ್ಲಿ ನೋಡಿ.]

**देहिका ದೇಹಿಕಾ**(स्त्री०)ಗದ್ದಲು ಹುಳು. "वटिरुपादिको देहिका स्यात्" त्रिकाण्ड०।

**देहिन् ದೇಹಿನ್** (पुं०) 1. ಜೀವ, ಪ್ರಾಣಿ, ಮನುಷ್ಯ. देहोऽस्यास्ति "इनिः" (५-२-११५)। "सा किमावेद्यते तुभ्यमन्तरात्मासि देहिनाम्" कुमा० ६-२१। "स्वस्थादेवापमानेऽपि देहिनस्तद्वरं रजः" माघ० २-४६। (वि०)2. ಶರೀರವನ್ನು ಹೊಂದಿರುವ. "तथा शरीराणि विहाय जीर्णान्यन्यानि संयाति नवानि देही" गीता २-२२। स्त्रियाम् "ङीप्" (४-१-५)। **देहिनी ದೇಹಿನೀ.** "देहिनीमिव जयश्रियं निजाम्" याद० १७-७।

**दैतेय ದೈತೇಯ** (पुं०) ದಿತಿಯಮಕ್ಕಳಾದ ದೈತ್ಯರು, ಅಸುರರು. दितेरपत्यानि पुमांसः — दिति "ढक्" (४-१-१२०)। "दैतेयदन्त्यावलिदन्तघातैः क्षुण्णान्तराः स्फाटिकहर्म्यपङ्क्तीः" कुमा० १३-३८।

**दैतेयगुरु ದೈತೇಯಗುರು** (पुं०) ಅಸುರರ ಆಚಾರ್ಯ., ಶುಕ್ರಾಚಾರ್ಯ.

**दैत्य ದೈತ್ಯ** (पुं०) ದಿತಿಯ ಮಕ್ಕಳು, ಅಸುರರು. दितेरपत्यानि पुमांसः — दिति "ण्यः" (४-१-८५)। "इतः स दैत्यः प्राप्तश्रीर्नेत एवार्हति क्षयम्" कुमा० २-५५।

**दैत्यकुल ದೈತ್ಯಕುಲ** (नं०) ಅಸುರರ ವಂಶ. दैत्यानां कुलम्। "ऋषिवंशजः स यदि दैत्यकुले यदि वान्वये महति भूमिभृताम्" किरा० ६-३६।

**दैत्यगुरु ದೈತ್ಯಗುರು** (पुं०) ಅಸುರರ ಆಚಾರ್ಯ, ಶುಕ್ರಾಚಾರ್ಯ. दैत्यानां गुरुः। "आज्ञार्थमानास्पदभूतिवस्त्रशत्रुक्षयान् दैत्यगुरुस्तृतीये" बृहत्सं० १०४-३४।

**दैत्यदेव ದೈತ್ಯದೇವ** (पुं०) 1. ವರುಣ. 2. ವಾಯು. "मेघनादस्तु वरुणो वः परञ्जयः। दैत्यदेवश्च" त्रिकाण्ड०।

**दैत्यद्विष् ದೈತ್ಯದ್ವಿಷ್** (पुं०) ವಿಷ್ಣು, ಪರಮಾತ್ಮ. "दैत्यद्विषा देवि मरुत्वदाद्याः" याद० १८-१०१।

**दैत्यद्वीप ದೈತ್ಯದ್ವೀಪ** (पुं०) ಗರುತ್ಮಂತನ ಒಬ್ಬ ಮಗ.

**दैत्यपति ದೈತ್ಯಪತಿ** (पुं०) ದೈತ್ಯರ ರಾಜ, ಅಸುರರ ದೊರೆ, ಹಿರಣ್ಯಕಶಿಪು. दैत्यानां पतिः। "प्राणच्छिदां दैत्यपतेर्नखानामुपेयुषां भूषणतां क्षतेन" माघ० ३-१४।

**दैत्यपुरोधस् ದೈತ್ಯಪುರೋಧಸ್, -पूज्य -ಪೂಜ್ಯ** (पुं०) ದೈತ್ಯರ ಪುರೋಹಿತ, ಅಸುರರ ಆಚಾರ್ಯ. ಶುಕ್ರಾಚಾರ್ಯ. दैत्यानां पुरोधाः पूज्यश्च। "जिगीषया ततो देवा वव्रिरेऽङ्गिरसं मुनिम्। पौरोहित्येन याज्यार्थे काव्यं तूशनसं परे" भा० आदि०। "कनकनिकषगौरे व्याधयो देवपूज्ये" बृहत्सं० ९-४४।

**दैत्यमातृ ದೈತ್ಯಮಾತೃ** (स्त्री०) ದೈತ್ಯರ ತಾಯಿ, ಕಶ್ಯಪನ ಪತ್ನಿ, ದಿತಿದೇವಿ. दैत्यानां माता।

**दैत्यमेदज ದೈತ್ಯಮೇದಜ** (पुं०)1. ಗುಗ್ಗುಳ. (स्त्री०) 2. ಪೃಥಿವಿ, ಭೂಮಿ.

**दैत्ययुग ದೈತ್ಯಯುಗ** (नं०) ದೇವತೆಗಳ ಹನ್ನೆರಡು ಸಾವಿರ ವರ್ಷಗಳ ಕಾಲ, ಮನುಷ್ಯರ ನಾಲ್ಕು ಯುಗಗಳ ಕಾಲ.

**दैत्या ದೈತ್ಯಾ** (स्त्री०) 1. ಮುರೆಯೆಂಬ ಒಂದು ಗಂಧ ದ್ರವ್ಯ. 2. ಮದ್ಯ, ಹೆಂಡ. 3. ಕರಿಯ ಕಟೋರ, ಚಂಡೌಷಧಿ. दितेरियम् "ण्यः" (४-१-८५)। "सुरायान्तु दैत्या चण्डौषधावपि" मेदि०। "दैत्योऽसुरे दैत्या मुरौषधौ" हेम०।

**दैत्यारि ದೈತ್ಯಾರಿ** (पुं०) 1. ವಿಷ್ಣು, ಪರಮಾತ್ಮ. दैत्यानामरिः। 2. ದೇವತೆಗಳು. "दैत्यारिः पुंसि सामान्यदेवे च गरुडध्वजे" मेदि०। "दैत्यारिः कमलाकपोलमकरीलेखाङ्कितोरःस्थलः शेतेऽब्धावितरेषु जन्तुषु पुनः का नाम शान्तेः कथा" प्रबोध० २-२८।

**दैत्येज्य ದೈತ್ಯೇಜ್ಯ**(पुं०)ದೈತ್ಯಗುರುವಾದ ಶುಕ್ರಾಚಾರ್ಯ. दैत्यानामिज्यः।

**दैन ದೈನ**(वि०)1. ದಿನಸಂಬಂಧವಾದ. दिनस्येदम् "अण्" (४-३-१२०)। 2. ಹಗಲಲ್ಲಿರುವ, ಹಗಲಲ್ಲಿ ಉಂಟಾದ. दिने भवम् "अण्" (४-३-५३)। 3. ದೀನಸಂಬಂಧವಾದ. दीनस्येदम् "अण्"। 4. ದೀನತ್ವ. 5. ಬಡತನ. 6. ಕಷ್ಟದ ಅವಸ್ಥೆ. दीनस्य भावः वा "अण्" (५-१-१२२)। पक्षे "ष्यञ्" (५-१-१२४)। **दैन्यम् ದೈನ್ಯಮ್.**

**दैनन्दिन ದೈನಂದಿನ** (वि०) ಪ್ರತಿದಿನದ. ಪ್ರತಿದಿನದಲ್ಲೂ ಉಂಟಾಗುವ. दिने दिने भवम् — वीप्सायां द्विर्भावः। "अण्" (४-३-५३)। "एष दैनन्दिनः सर्गो ब्राह्मस्त्रैलोक्यवर्तनः। तिर्यङ्नृपितृदेवानां संभवो यत्र कर्मभिः" भाग० ३-११-२५।

**दैनन्दिनप्रलय ದೈನಂದಿನಪ್ರಲಯ** (ಪುಂ) ಬ್ರಹ್ಮನ ಪ್ರತಿದಿನದ (ಹಗಲಿನ) ಕೊನೆಯಲ್ಲಾಗುವ ಅವಾಂತರ ಪ್ರಳಯ. ಹದಿನಾಲ್ಕು ಮಂದಿ ಇಂದ್ರರ ಕಾಲವು ಬ್ರಹ್ಮನ ಒಂದು ಹಗಲು. ಅಷ್ಟೇ ಕಾಲವು ರಾತ್ರಿ. ಅದಕ್ಕೆ **"ಕಾಲರಾತ್ರಿ"** ಎಂದು ಹೆಸರು. ಈ ರಾತ್ರಿ ಕಾಲದಲ್ಲಿ ಬ್ರಹ್ಮಲೋಕದ ಕೆಳಗಿನ ಲೋಕಗಳೆಲ್ಲವೂ ಸಂಕರ್ಷಣಮುಖೋತ್ಪನ್ನವಾದ ಅಗ್ನಿಯಿಂದ ದಗ್ಧವಾಗುವುವು. ಆಗ ಸೂರ್ಯ ಚಂದ್ರ ವಂತು ಬ್ರಹ್ಮನ ಪುತ್ರರೆಲ್ಲರೂ ಬ್ರಹ್ಮಲೋಕಕ್ಕೆ ತೆರಳುವರು. ಬ್ರಹ್ಮನ ಈ ರಾತ್ರಿ ಕಾಲದಲ್ಲಿ ಕ್ಷುದ್ರಪ್ರಳಯ ವುಂಟಾಗುವುದು. ಬ್ರಹ್ಮನ ರಾತ್ರಿಯು ಕಳೆದನಂತರ ಪುನಃ ಜಗತ್ತಿನ ಸೃಷ್ಟಿಕಾರ್ಯವು ಆರಂಭವಾಗುವುದು. ಈ ರೀತಿ ಮೂವತ್ತು ದಿನಗಳು ಕಳೆದರೆ ಬ್ರಹ್ಮನಿಗೆ ಒಂದು ತಿಂಗಳು. ಇಂತಹ ಹನ್ನೆರಡು ತಿಂಗಳು ಕಳೆದರೆ ಒಂದು ವರ್ಷವೂ ಆಗುವುದು. ಇಂತಹ ನೂರು ವರ್ಷಗಳು ಬ್ರಹ್ಮನ ಪರಮಾಯುಸ್ಸಿನ ಕಾಲ. "चतुर्दशेन्द्रावच्छिन्नं ब्रह्मणो दिनमुच्यते। तावती ब्रह्मणो रात्रिः सा च ब्राह्मी निशा नृप। कालरात्रिश्च सा ज्ञेया वेदेषु परिकीर्तिता। ब्रह्मलोकादधः सर्वे लोका दग्धाश्च तत्र वै। उत्थितेनैव सहसा संकर्षणमुखाग्निना। चन्द्रार्कब्रह्मपुत्राश्च ब्रह्मलोकं गता द्रुतम्। ब्रह्मरात्रे व्यतीते तु पुनश्च ससृजे विधिः। तस्य ब्राह्मयां निशायां च क्षुद्रप्रलयसंभवः। एवं त्रिंशद्दिवारात्रैः ब्रह्मणो मास एव च। वर्षं द्वादशमासैश्च ब्रह्मसम्बन्धि चैव हि। तत्र सर्वे प्रणष्टाश्च चन्द्रार्कादिदिगीश्वराः। आदित्या वसवो रुद्राः मन्विन्द्रा मानवादयः। ऋषयो मुनयश्चैव गन्धर्वा राक्षसादयः। ब्रह्मलोकादधः सर्वे लोका नागालयास्तथा। ब्रह्मलोकं ययुः सर्वे ब्रह्मलोकादधस्तथा। गते दैनन्दिने ब्रह्मा लोकांश्च ससृजे पुनः। एवं शतायुःपर्यन्तः परमायुश्च ब्रह्मणः" ब्रह्मवै०।

**दैनिक ದೈನಿಕ** (वि०) 1. ದಿನದಲ್ಲಿ ಉಂಟಾಗುವ, ಒಂದು ದಿನದ. दिने भवः "ठञ्" (४-३-११)। (स्त्री०) **–की –ಕೀ.** 2. ಒಂದು ದಿನದ ಕೂಲಿ.

**दैन्य ದೈನ್ಯ** (न०) 1. ದೀನತೆ, ಬಡತನ ಅಪರಾಧ ಮುಂತಾದುವುಗಳಿಂದ ಮುಖದಲ್ಲಿ ಕಂಡುಬರುವ ತೇಜೋಹೀನತೆ, ಪೆಚ್ಚು ಮೋರೆಯಿಂದಕೂಡಿರುವಿಕೆ. 2. ಕಷ್ಟದ ಪರಿಸ್ಥಿತಿ, ದಯೆ ತೋರಿಸಬಹುದಾದ ಅವಸ್ಥೆ. दीनस्य भावः "ष्यञ्" (५-१-१२४)। "मन्त्रेण हतवीर्यस्य फणिनो दैन्यमाश्रितः" कुमा० २-२१। "दौर्गत्यादेरनौजस्यं दैन्यं मलिनतादिकृत्" सा० द०। "वृद्धोन्धः पतिरेष मञ्चकगतः स्थूणावशेषं गृहं कालोऽभ्यर्णजलागमः कुशलिनी वत्सस्य वार्तापि नो। यत्नात्सञ्चिततैलबिन्दुघटिका भग्नेति पर्याकुला दृष्ट्वा गर्भभरालसां निजवधूं श्वश्रूश्चिरं रोदिति" सा० द०।

**दैर्घ्य ದೈರ್ಘ್ಯ** (न०) ಉದ್ದ, ನೀಳ. दीर्घस्य भावः "ष्यञ्" (५-१-१२४)। "अपरस्यां चलकेतुः शिखया याम्याग्रयाङ्गुलोच्छ्रितया। गच्छेद्यथा यथोदक् तथा तथा दैर्घ्यमायाति" बृहत्सं० ११-२३।

**दैव ದೈವ** (पुं०) 1. ಎಂಟು ವಿಧ ವಿವಾಹಗಳಲ್ಲೊಂದು. "ब्राह्मो दैवस्तथैवार्षः प्राजापत्यस्तथासुरः। गान्धर्वो राक्षसश्चैव पैशाचश्चाष्टमोऽधमः" मनु० ३-२१। (न०) 2. ಭಾಗ್ಯ, ಅದೃಷ್ಟ, ಜನ್ಮಾಂತರದ ಶುಭಾಶುಭ ಕರ್ಮ. देवादागतम् "अण्" (४-३-७४)। "दैवायत्तं कुले जन्म मदायत्तं तु पौरुषम्" वेणी० ३-३७। "दैवे पुरुषकारे च किंज्यायस्तद्ब्रवीहि मे। अत्र मे संशयो देव छेत्तुमर्हस्यशेषतः" मत्स्यपु०। 3. ದೇವತೀರ್ಥ. देवस्येदम् "अण्" (४-३-१२०)। ಬೆರಳುಗಳ ತುದಿಯಿಂದ ಬಿಡುವ ತೀರ್ಥವು ದೇವತೀರ್ಥವು. "अङ्गुल्यग्रे दैवं तीर्थम्" अम०। (वि०) 4. ದೇವತೆಗಳ ಸಂಬಂಧವಾದ. देवस्येदम् "अण्" (४-३-१२०)। 5. ದೇವತೆಗಳಿಂದ ಉಂಟಾದ. देवेभ्यः आगतः "अण्" (४-३-७४)। 6. ಆಕಾಶದಲ್ಲಿ ಉಂಟಾದ, ಆಕಾಶದಲ್ಲಿರುವ. दिवि भवम् "अण्" (४-३-५३)। स्त्रियाम् "ङीप्" (४-१-१५)। **–वी –ವೀ.** देवेन क्रीडाप्रवृत्तेन (परमात्मना) निर्मिता दैवी। "दैवी ह्येषा गुणमयी मम माया दुरत्यया" गीता ७-१४।

**दैवकृत ದೈವಕೃತ** (वि०) ದೇವತೆಗಳಿಂದ ಮಾಡಲ್ಪಟ್ಟ. दैवेन कृतम्।

**दैवकोविद ದೈವಕೋವಿದ** (पुं०) ದೈವಜ್ಞ, ಶುಭಾಶುಭ ಕರ್ಮಫಲಗಳನ್ನು ತಿಳಿದವನು. दैवे कोविदः।

**दैवचिन्तक ದೈವಚಿಂತಕ** (पुं०) ದೈವಜ್ಞ, ಜೋಯಿಸ. दैवं शुभाशुभकर्मफलं चिन्तयति— चिति (स्मृत्याम्) "ण्वुल्" (३-१-१३३)।

**दैवचिन्तन ದೈವಚಿಂತನ** (न०) ಅದೃಷ್ಟವನ್ನು ನಂಬಿರುವಿಕೆ, ಎಲ್ಲವೂ ಅದೃಷ್ಟದ ಮೇಲೆ ನಡೆಯುವುದೆಂಬ ನಂಬಿಕೆ.

**दैवज्ञ ದೈವಜ್ಞ** (पुं०) 1. ಅದೃಷ್ಟವನ್ನು ಬಲ್ಲವನು, ಶುಭಾಶುಭ ಕರ್ಮಫಲವನ್ನು ತಿಳಿದವನು, ಜೋಯಿಸ. दैवं जानाति— ज्ञा (अवबोधने) "कः" (३-२-३)। (स्त्री०) **–ज्ञा –ಜ್ಞಾ.** ಕಣಿ ಹೇಳುವ ಹೆಂಗಸು, ಶಕುನ ಹೇಳುವ

ಹೆಂಗಸು. "दैवज्ञो गणके पुमान्। दैवज्ञेक्षणिकायां स्त्री" मेदि०।

**दैवत ದೈವತ** (न०) 1. ದೇವತೆ, ದೇವರು. देवतैव—स्वार्थे "अण्" (५-४-३८)। "दैवाधीनं जगत्सर्वं मन्त्राधीनं तु दैवतम्। तन्मन्त्रं ब्राह्मणाधीनं ब्राह्मणो मम दैवतम्"। 2. ದೇವತೆಗಳ ಸಮೂಹ. देवतानां समूहः "अण्" (४-२-३७)। 3. ಯಾಸ್ಕರ ನಿರುಕ್ತದ ಮೂರನೆಯ ಕಾಂಡ. (वि०) 4. ದೇವತಾಸಂಬಂಧವಾದ. देवताया इदम् "अण्" (४-३-१२०)। "अनन्यसाधारणसिद्ध-मुच्चैस्तद्दैवतं धाम निकामरम्यम्" कुमा० १२-३८।

**दैवतन्त्र ದೈವತಂತ್ರ** (वि०) ದೈವಾಧೀನವಾದ, ಅದೃಷ್ಟಕ್ಕೆ ಅಧೀನವಾದ. दैवस्य भाग्यस्य अधीनम्। दैवं भाग्यं प्रधानं यस्य वा।

**दैवत्य ದೈವತ್ಯ** (न०) ದೇವತೆ. देवता स्वार्थे "ष्यञ्" (५-१-१२४)।

**दैवदत्त ದೈವದತ್ತ** (पुं० ब० व०) 1. ದೇವದತ್ತನ ಶಿಷ್ಯರು. देवदत्तस्य छात्राः—वृद्धत्वाभावपक्षे "अण्" (४-२-९२)। वृद्धत्वपक्षे "छः" (४-२-११४)। **देवदत्तीयः ದೇವದತ್ತೀಯಃ.** (वि०) 2. ದೇವದತ್ತವಾದ, ದೇವತೆಗಳಿಂದ ಕೊಡಲ್ಪಟ್ಟ 3. ಅದೃಷ್ಟದಿಂದ ಕೊಡಲ್ಪಟ್ಟ, ಸ್ವಾಭಾವಿಕವಾದ.

**दैवदत्ति ದೈವದತ್ತಿ** (पुं०) ದೇವದತ್ತನ ಮಗ. देवदत्तस्या-पत्यम् "इञ्" (४-१-९५)।

**दैवदत्तिक ದೈವದತ್ತಿಕ** (वि०) ದೇವದತ್ತಗ್ರಾಮದಲ್ಲಿ ರುವ. देवदत्ते भवः "ठञ्" "ञिठः" च। स्त्रियाम् ठञि "ङीप्" (४-१-१५)। **-दत्तिकी -ದತ್ತಿಕೀ.** ञिठप्रत्यये "टाप्" (४-१-४)। **-दत्तिका -ದತ್ತಿಕಾ.**

**दैवदारव ದೈವದಾರವ** (वि०) ದೇವದಾರು ಮರದಿಂದ ತಯಾರಿಸಲ್ಪಟ್ಟ. देवदारोर्विकारः — देवदारु "अञ्" (४-३-१३९)

**दैवदीप ದೈವದೀಪ** (पुं०) ನೇತ್ರ, ಕಣ್ಣು.

**दैवप्रश्न ದೈವಪ್ರಶ್ನ** (पुं०) ಉಪಶ್ರುತಿ, ಶುಭಾಶುಭಗಳನ್ನು ಸೂಚಿಸುವ ಆಕಾಶವಾಣಿ. दिवि भवः दैवः—दैवः प्रश्नः। "नक्तं निर्गत्य यत्किञ्चित् शुभाशुभकरं वचः। श्रूयते तद्विदुर्धीराः दैवप्रश्नमुपश्रुतिम्" हारा०।

**दैवमानुषक ದೈವಮಾನುಷಕ** (वि०) ದೇವತೆಗಳಿಗೂ ಮನುಷ್ಯರಿಗೂ ಸಂಬಂಧಿಸಿದ. "तपोमूलमिदं सर्वं दैव-मानुषकं सुखम्" मनु० ११-१३५।

**दैवयुग ದೈವಯುಗ** (न०) ದೇವಮಾನದಲ್ಲಿ ಹನ್ನೆರಡು ಸಾವಿರ ವರ್ಷಗಳ ಕಾಲ, ದಿವ್ಯಯುಗ. (ಮನುಷ್ಯರ 360 ದಿನಗಳು ದೇವತೆಗಳ ಒಂದು ದಿನ. ಅಂತಹ 360 ದಿನಗಳು ದೇವತೆಗಳಿಗೆ ಒಂದು ವರ್ಷ). दैवं च तत् युगं च।

| | | ಮಾನುಷ ವರ್ಷಗಳು | ದೈವ ವರ್ಷಗಳು |
|---|---|---|---|
| ಕೃತಯುಗ | .. | 1728000 | 4800 |
| ತ್ರೇತಾಯುಗ | .. | 1296000 | 3600 |
| ದ್ವಾಪರಯುಗ | .. | 864000 | 2400 |
| ಕಲಿಯುಗ | .. | 432000 | 1200 |
| ಚತುರ್ಯುಗಮಾನ | .. | 4320000 | 12000 |

ಈ 12000 ದೇವಮಾನದ ವರ್ಷಗಳು ಒಂದು ದೈವ ಯುಗವಾಗುವುದು. ದೇವತೆಗಳ ಹಗಲು ದೈತ್ಯರಿಗೆ ರಾತ್ರಿಯಾಗಿಯೂ ರಾತ್ರಿಯು ಹಗಲಾಗಿಯೂ ಇರುವುದರಿಂದ ಅಷ್ಟುಮಾತ್ರ ಅಹೋರಾತ್ರಗಳ ವಿಷಯದಲ್ಲಿ ಭೇದ. ಉಳಿದೆಲ್ಲವೂ ಸಮಾನವಾದುದರಿಂದ ಇದೇ ಕಾಲವು ದೈತ್ಯಯುಗವೂ ಆಗುವುದು. ಇಂತಹ 2000 ದೈವಯುಗಗಳು ಬ್ರಹ್ಮನ ಒಂದು ಹಗಲು ಮತ್ತು ರಾತ್ರಿ (ಒಂದು ದಿನ). "दैवे युगसहस्रे द्वे ब्राह्मः कल्पौ तु तौ नृणाम्" अम०।

**दैवयोग ದೈವಯೋಗ** (पुं०) ಅದೃಷ್ಟದ ಸಂಬಂಧ, ಜನ್ಮಾಂತರದ ಪುಣ್ಯ ಪಾಪ ಕರ್ಮಗಳ (ಫಲಕೊಡುವ) ಸಂಬಂಧ. दैवस्य भाग्यस्य फलोन्मुखतया संबन्धः।

**दैवरक्षित ದೈವರಕ್ಷಿತ** (वि०) ದೇವತೆಗಳಿಂದ ರಕ್ಷಿಸಲ್ಪಟ್ಟ. दैवेन रक्षितम्। "अरक्षितं तिष्ठति दैवरक्षितं सुरक्षितं दैवहतं विनश्यति" हितो० २-१८।

**दैवराति ದೈವರಾತಿ** (पुं०) 1. ದೇವರಾತನ ಮಗ. देवरातस्य अपत्यम् "इञ्" (४-१-९५)। 2. ಜನಕಮಹಾರಾಜ. "याज्ञवल्क्यमृषिश्रेष्ठं दैवरातिर्महायशाः। पप्रच्छ जनको राजा प्रश्नं प्रश्नविदां वरम्" भा० शान्ति० ३१५-४।

**दैवलेखक ದೈವಲೇಖಕ** (पुं०) ದೈವಜ್ಞ, ಜೋಯಿಸ, ಅದೃಷ್ಟದ ವಿಷಯವನ್ನು ಬರೆಯುವವನು. दैवं भाग्यं लिखति—लिख (अक्षरविन्यासे) "ण्वुल्" (३-१-१३३)। "मौहूर्तो दैवलेखकः" त्रिकाण्ड०।

**दैववाणी ದೈವವಾಣೀ** (स्त्री०) 1. ಉಪಶ್ರುತಿ. ಆಕಾಶವಾಣಿ, ಶುಭಾಶುಭಗಳನ್ನು ಸೂಚಿಸುವ ಅಶರೀರವಾಕ್ಕು. 2. ಸಂಸ್ಕೃತ ಭಾಷೆ. "संस्कृतं नाम दैवी वाक्" काव्या०।

**दैवसृष्टि ದೈವಸೃಷ್ಟಿ** (स्त्री०) ಬ್ರಹ್ಮನು ಮಾಡಿದ ದೇವತೆಗಳ ಸೃಷ್ಟಿ. दैवी सृष्टि:।

**दैवहीन ದೈವಹೀನ** (वि०) ಅದೃಷ್ಟವಿಲ್ಲದವನು. दैवेन हीन:। "दैवहीनं रिपुं जेतुं यायाद्दैवान्वितो नृप:"।

**दैवाकरि ದೈವಾಕರಿ** (पुं०) ಸೂರ್ಯನ ಮಗ 1. ಶನಿ. 2. ಸುಗ್ರೀವ. 3. ಕರ್ಣ. दिवाकरस्य अपत्यम् "इञ्" (४-१-९५)।

**दैवात् ದೈವಾತ್** (अव्य०) ಅನಿರೀಕ್ಷಿತವಾಗಿ, ಅದೃಷ್ಟ ವಿಶೇಷದಿಂದ.

**दैवात्यय ದೈವಾತ್ಯಯ** (पुं०) ಅನಿರೀಕ್ಷಿತವಾದ ತೊಂದರೆ, ಆಕಸ್ಮಿಕ ಪ್ರಳಯ.

**दैवासुर ದೈವಾಸುರ** (पुं०) 1. ದೇವತೆಗಳು ಮತ್ತು ಅಸುರರನ್ನು ಕುರಿತ ಅಧ್ಯಾಯ, ದೇವತೆ ಮತ್ತು ಅಸುರ ಪದಗಳು ಬರುವ ಅನುವಾಕ. देवासुरशब्दोऽस्मिन्नस्ति "अण्" (५-२-६१)। देवासुराद्यधिकृत्य कृतमाख्यानम्। (न०) 2. ದೇವತೆಗಳಿಗೂ ಅಸುರರಿಗೂ ಇರುವ ವೈರ. देवाश्च असुराश्च देवासुरा: — तेषां वैरम् "अण्" (४-३-१२०)।

**दैवाहोरात्र ದೈವಾಹೋರಾತ್ರ** (पुं०) ದೇವತೆಗಳ ಒಂದು ದಿನ (ಹಗಲು ಮತ್ತು ರಾತ್ರಿ), ಮನುಷ್ಯರ ಒಂದು ವರ್ಷ. ಮನುಷ್ಯರ 360 ದಿನಗಳು ದೇವತೆಗಳಿಗೆ ಒಂದು ದಿನ. दैव: देवसम्बन्धी अहोरात्र:।

**दैविक ದೈವಿಕ** (वि०) 1. ದೇವತೆಗಳ ಸಂಬಂಧವಾದ. देवस्येदम् "ठक्" (४-३-७२)। "अहोरात्रे विभजते सूर्यो मानुषदैविके" मनु० १-६५। 2. ದೇವತೆಗಳಿಂದ ಉಂಟಾದ. "दाशापराधतस्तोये दैविके नास्ति निग्रह:" मनु० ८-४०९। (न०) 3. ದೇವತೆಗಳನ್ನು ಉದ್ದೇಶಿಸಿ ಮಾಡುವ ಕಾರ್ಯ.

**दैवी ದೈವೀ** (स्त्री०) 1. ದೇವತೆಯ ಸಂಬಂಧವಾದ (ಸಂಪತ್ತು). देवस्येयम् "अण्" (४-३-१२०)। "ङीप्" (४-१-१५)। "दैवी सम्पद्विमोक्षाय निबन्धायासुरी मता" गीता १६-५। ದೇವತೆಗಳು ಭಗವದಾಜ್ಞೆಯಂತೆ ನಡೆದುಕೊಳ್ಳುವ ಸ್ವಭಾವದವರು. ಭಗವದಾಜ್ಞಾನುವರ್ತನವೇ ದೈವೀಸಂಪತ್ತು. 2. ದೈವಧರ್ಮದಿಂದ ವಿವಾಹವಾದ ಹೆಂಗಸು. 3. ಮೂರು ವಿಧ ಚಿಕಿತ್ಸೆಗಳಲ್ಲೊಂದು. "आसुरी मानुषी दैवी चिकित्सा त्रिविधा मता"।

**दैव्य ದೈವ್ಯ** (वि०) 1. ದೇವತೆಯ ಸಂಬಂಧವಾದ. (न०) 2. ಭಾಗ್ಯ, ಅದೃಷ್ಟ. देवस्येदम् "यञ्" (वा० ४-१-८५)।

**दैशिक ದೈಶಿಕ** (वि०) 1. ದೇಶಕ್ಕೆ ಸಂಬಂಧಿಸಿದ. देशस्येदम् "ठक्" (४-३-७२)। 2. ದೇಶದಿಂದ ಉಂಟಾದ. 3. ದೇಶದಲ್ಲಿರುವ. देशे भव: "ठक्" (४-३-७२)।

**दैष्टिक ದೈಷ್ಟಿಕ** (वि०) ಅದೃಷ್ಟವನ್ನು ನಂಬಿರುವವನು, ದೈವವುಂಟೆಂದು ತಿಳಿದಿರುವವನು. दिष्टमिति मतिर्यस्य "ठक्" (४-४-६०)।

**दैष्टिकता ದೈಷ್ಟಿಕತಾ** (स्त्री०) ಅದೃಷ್ಟವನ್ನೇ ನಂಬಿರುವುದು. दैष्टिकस्य भाव: "तल्" (५-१-११९)। "नालम्बते दैष्टिकतां न निषीदति पौरुषे" माघ० २-८६।

**दैहिक ದೈಹಿಕ** (वि०) 1. ದೇಹಸಂಬಂಧವಾದ. 2. ದೇಹದಲ್ಲಿರುವ. 3. ದೇಹದಲ್ಲಿ ಉಂಟಾದ. देहस्येदम् देहे भवो वा "ठक्" (४-३-७२)।

**दैह्य ದೈಹ್ಯ** (पुं०) 1. ಜೀವಾತ್ಮ. देहे भव:। "सूर्योऽग्नि: खं मरुद्गाव: सोम: सन्ध्याहनी दिश:। कं कु: कालो धर्म इति ह्येते दैह्यस्य साक्षिण:" भाग० ६-१-४२। (वि०) 2. ದೇಹದಲ್ಲಿರುವ. "तथापि बत मे दैह्यो ह्यात्मा चैवात्मना विभु:" भाग० १-४-३०।

**दो – अवखण्डने** (दिवा० पर० सक० अनि०)। द्यति। ददौ। दाता। दास्यति। द्यतु। अद्यत्। द्येत्। ಇತ್ಯಾದಿ. ಕತ್ತರಿಸು, ತುಂಡುಮಾಡು.

**कर्मणि** :—दीयते। ददे। दायिता, दाता। दायिष्यते, दास्यते। दीयताम्। अदीयत। ಇತ್ಯಾದಿ.

**णिचि** :—दापयति, –ते। ಇತ್ಯಾದಿ. "दाण्" ಧಾತುವಿನ ರೂಪಗಳಂತಾಗುವುವು.

**कृत्सु** :— दातव्यम्। दानीयम्। देयम्। दित:। दितवान्, –वती। द्यन्, द्यन्ती। दातुम्। दितम्। दानम्। दित्वा। प्रदाय।

**दोग्धव्य ದೋಗ್ಧವ್ಯ** (वि०) 1. ಕರೆಯಲ್ಪಡುವ. 2. ಹಾಲು ಮೊದಲಾದುವನ್ನು ಕರೆಯಲು ಯೋಗ್ಯವಾದ. दुह (प्रपूरणे) "तव्य:" (३-१-९६)।

**दोग्धृ ದೋಗ್ಧೃ** (पुं०) 1. ವತ್ಸ, ಕರು. 2. ಗೊಲ್ಲ, ಗೋಪಾಲಕ, ಕವಾಡಿಗ. दुह (प्रपूरणे) "तृन्" (३-२-१३५)। 3. ದ್ರವ್ಯಸಂಪಾದನೆಗಾಗಿ ಗ್ರಂಥಗಳನ್ನು ಬರೆಯುವ ಕವಿ. (वि०) 4. ಹಾಲು ಕರೆಯುವವನು. "यं सर्वशैला: परिकल्प्य वत्सं मेरौ स्थिते दोग्धरि

दोहदक्षे" कुमा० १-२। स्त्रियाम् "ङीप्" (४-१-५)। **दोग्ध्री ದೋಗ್ಧ್ರೀ.** 5. ಧೇನು, ಆಕಳು, ಹಸು. "दोहावसाने पुनरेव दोग्ध्रीं भेजे भुजोच्छिन्नरिपुर्निषण्णाम्" रघु० २-२३। "दोग्धाऽर्थोपजीविकवौ वत्सगोपालयोः पुमान्" मेदि०।

**दोधक ದೋಧಕ** (न०) ವೃತ್ತರತ್ನಾಕರೋಕ್ತವಾದ ಹನ್ನೊಂದನೆಯ ಛಂದಸ್ಸಿನ ಒಂದು ವೃತ್ತ. **ಇದರ ಲಕ್ಷಣ:** ಪ್ರತಿ ಪಾದದಲ್ಲೂ ಮೂರು "भ" ಗಣಗಳೂ ಎರಡು ಗುರು ವರ್ಣಗಳೂ ಇರಬೇಕು. "दोधकवृत्तमिदं भभभा गौ" वृ० १०। **ಇದರ ಗಣವಿನ್ಯಾಸ:**

भ भ भ गु गु।
ऽ।। ऽ।। ऽ।। ऽ ऽ

**दोधूयमान ದೋಧೂಯಮಾನ** (वि०) ಮತ್ತೆ ಮತ್ತೆ ಅಥವಾ ಅತಿಶಯವಾಗಿ ನಡುಗುತ್ತಿರುವ, ಚಲಿಸುತ್ತಿರುವ. "दोधूयमानं विविधोर्मियोगात् छायागरुत्मन्तमवेक्ष्य भीताः" याद० १८-९६।

**दोर्ग्रह ದೋರ್ಗ್ರಹ** (पुं०) 1. ತೋಳುಗಳನ್ನು ಆಡಿಸಲಾಗದಂತೆ ಮಾಡುವ ಒಂದು ವಾತರೋಗ. (वि०) 2. ಬಲಶಾಲಿಯಾದ ಪುರುಷ. "कैरातो दोर्ग्रहक्षामाः" हारा०।

**दोर्दण्ड ದೋರ್ದಂಡ** (पुं०) ದಂಡಾಕಾರವಾದ ಬಾಹು, ಕೋಲಿನಂತೆ ಉದ್ದವಾದ ತೋಳು. दोर्दण्ड इव।

**दोर्मूल ದೋರ್ಮೂಲ** (न०) ಬಾಹುಮೂಲ, ಕಂಕಳು, ಕಕ್ಷ. दोषः मूलम्।

**दोल ದೋಲ** (पुं०) 1. ತೂಗಾಡುವುದು, ಜೋಲಾಡುವುದು, ಓಲಾಡುವುದು. दुल (उत्क्षेपे) "घञ्" (३-३-१८)। 2. ಫಾಲ್ಗುನಮಾಸದ ಹುಣ್ಣಿಮೆಯ ಪ್ರಾತಃಕಾಲ ಮಾಡುವ ಶ್ರೀಕೃಷ್ಣನ ಡೋಲೋತ್ಸವ, ಉಯ್ಯಾಲೆ ಉತ್ಸವ. दोल्यते अस्मिन् कृष्णेन—दुल अधि० "घञ्" (३-३-१२१)। "विशेषतः कलियुगे दोलोत्सवो विधीयते। फाल्गुने च चतुर्दश्यामष्टमे यामसंज्ञके॥ अथवा पौर्णमास्यां तु प्रतिपत्सन्धिसम्मितौ। पूजयेद्विधिवद्भक्त्या फल्गुचूर्णैश्चतुर्विधैः"॥

**दोला ದೋಲಾ** (स्त्री०) 1. ಉಯ್ಯಾಲೆ, ತೂಗುಮಂಚ. दुल (उत्क्षेपे) + णिच् "अच्" (३-१-१३४)। "इत्येकपक्षाश्रयविक्लवत्वादासीत्स दोलाचलचित्तवृत्तिः" रघु० १४-३४। 2. ಶಿಬಿಕೆ, ಪಲ್ಲಕ್ಕಿ. "दोला नील्यां यानान्तरेऽपि च" मेदि०। स्वार्थे "कः"। **दोलिका ದೋಲಿಕಾ.** ತೊಟ್ಟಿಲು. 3. ನೀಲಿ ಗಿಡ.

**दोली ದೋಲೀ** (स्त्री०) 1. ತೊಟ್ಟಿಲು. 2. ಉಯ್ಯಾಲೆ. दुल (उत्क्षेपे) "इन्" (उ० ४-११७)।

**दोष ದೋಷ** (पुं०) 1. ತಪ್ಪು, ಅಪರಾಧ. दुष (वैकृत्ये) + णिच् "घञ्" (३-३-१८)। "नात्र कुलपतिर्दोषं ग्रहीष्यति" शाकु०। "अदाता वंशदोषेण कर्मदोषाद्दरिद्रता। उन्मादो मातृदोषेण पितृदोषेण मूर्खता"। 2. ಪಾಪ. दुष्यत्यनेन—दुष करण० "घञ्" (३-३-१२१)। "किमात्मनिर्वादकथामुपेक्षे जायामदोषामुत सन्त्यजामि" रघु० १४-३४। 3. ಅವಗುಣ, ಕೆಟ್ಟಗುಣ, ದುರ್ಗುಣ. "मूलं दोषस्य हिंसादेरर्थकामौ स्म मा पुषः" किरा० ११-२०। 4. ಅಹಿತವಾದ ಗುಣ, ಕೆಡಕನ್ನು ಉಂಟುಮಾಡುವ ಧರ್ಮ. "परस्य मर्माविधमुज्झतां निजं द्विजिह्वतादोषमजिह्मगामिभिः" माघ० १-६३। 5. ಅಪರಾಧ, ಅಪಚಾರ, ಅಪಕಾರ. "नाल्पीयान् बहु सुकृतं हिनस्ति दोषः" किरा० ७-१५। 6. ದೂಷಣೆ, ನಿಂದೆ, ತೆಗಳುವಿಕೆ. "विवक्षता दोषमपि च्युतात्मना त्वयैकमीशं प्रति साधु भाषितम्" कुमा० ५-८१। 7. ಅನರ್ಥ, ಕೆಡಕು. "असन्मैत्री हि दोषाय कूलच्छायेव सेविता" किरा० ११-५५। 8. ಕೊರತೆ, ನ್ಯೂನತೆ, ಅಪಕರ್ಷವನ್ನುಂಟುಮಾಡುವ ವಸ್ತುಗತವಾದ ಒಂದು ಧರ್ಮ.

(क) **ಕಾವ್ಯದೋಷ:** ಕಾವ್ಯಗಳಲ್ಲಿ ರಸಕ್ಕೆ ಅಪಕರ್ಷವನ್ನುಂಟುಮಾಡುವ ಧರ್ಮವು ದೋಷವೆನಿಸುವುದು. ಇದು (1) ಪದ. (2) ಪದಾಂಶ. (3) ವಾಕ್ಯ. (4) ಅರ್ಥ ಮತ್ತು (5) ರಸದೋಷಗಳೆಂದು ಐದು ವಿಧ. "रसापकर्षका दोषास्ते पुनः पञ्चधा मताः। पदे तदंशे वाक्येऽर्थे सम्भवन्ति रसेऽपि यत्" सा० द० ७-१।

**(1) ಪದದೋಷಗಳು:**

1. **दुःश्रवत्वम्**—ಕರ್ಕಶವರ್ಣಗಳಿಂದ ಕೂಡಿರುವುದು. "कार्तार्थ्यं यातु तन्वङ्गी कदानङ्गवशंवदा"।

2. **अप्रयुक्तत्वम्**—ಶಾಸ್ತ್ರಸಮ್ಮತವಾಗಿದ್ದರೂ ಕವಿಗಳು ಹೆಚ್ಚಾಗಿ ಪ್ರಯೋಗಿಸದಿರುವುದು. "भाति पद्मः सरोवरे"। "पद्म" ಪದಕ್ಕೆ ಪುಂಲಿಂಗದಲ್ಲಿ ಪ್ರಯೋಗವು ಕಡಮೆಯಾದುದರಿಂದ ಅಪ್ರಯುಕ್ತತ್ವ ದೋಷ.

3. **ग्राम्यत्वम्**—ಅನಾಗರಿಕ ಪದಪ್ರಯೋಗ. "कटिस्ते हरते मनः" ಇಲ್ಲಿ ಕಟಿಪದವು ಗ್ರಾಮ್ಯ.

4. **नेयार्थता**—ರೂಢಿಪ್ರಯೋಜನಗಳಾವುವೂ ಇಲ್ಲದೆ ಲಕ್ಷಣೆಯಿಂದ ಹೇಳುವುದು. "कमले चरणाघातं मुखं सुमुखि तेऽकरोत्" ಇಲ್ಲಿ "चरणाघात" ಪದಕ್ಕೆ "ಜಯ"

ಎಂಬ ಅರ್ಥದಲ್ಲಿ ಲಕ್ಷಣೆ. ಆದರೆ ರೂಢಿ ಪ್ರಯೋಜನಗಳಾವುವೂ ಇಲ್ಲದಿರುವುದರಿಂದ ನೇಯಾರ್ಥತ್ವರೂಪವಾದ ದೋಷವು. ಇತ್ಯಾದಿ.

(2) ಹೀಗೆಯೇ ಕೆಲವು ದೋಷಗಳು ಪದಾಂಶಗಳಲ್ಲಿಯೂ ಕಂಡುಬರುವುವು.

**(3) ವಾಕ್ಯ ದೋಷಗಳು:**

1. **अधिकपदता:**—ಅವಶ್ಯವಿಲ್ಲದ ಪದಗಳ ಪ್ರಯೋಗ. "सदाशिवं नौमि पिनाकपाणिनम्" ಇಲ್ಲಿ "पिनाकपाणि" ಪದವು ಅಧಿಕ.

2. **न्यूनपदता:**—ಅವಶ್ಯವಾಗಿ ಇರಬೇಕಾದ ಪದದ ಪ್ರಯೋಗವಿಲ್ಲದಿರುವುದು. "यदि मय्यर्पिता दृष्टि: किं ममेन्द्रतया तदा" ಇಲ್ಲಿ "त्वया" ಎಂಬ ಪದದ ಪ್ರಯೋಗವು ಅವಶ್ಯವಾಗಿರಬೇಕು. ಇತ್ಯಾದಿ.

**(4) ಅರ್ಥದೋಷಗಳು:**

1. **अपुष्टत्वम्**—ಮುಖ್ಯಾರ್ಥಕ್ಕೆ ಸಂಬಂಧಿಸದ ಪದ ಪ್ರಯೋಗವು ಅಪುಷ್ಟವಾಗುವುದು. "विलोक्य वितते व्योम्नि विधुं मुञ्च रुषं प्रिये"। ಇಲ್ಲಿ "वितत" ಪದ ವಿಶೇಷಣದಿಂದ "व्योम" ಪದಕ್ಕೆ ಪ್ರಯೋಜನವೇನೂ ಇಲ್ಲದಿರುವುದರಿಂದ ಇದು ಅಪುಷ್ಟವಾಗುವುದು.

2. **दुष्क्रमता**—ಕ್ರಮತಪ್ಪಿ ಹೇಳುವುದು. "देहि मे वाजिनं राजन् गजेन्द्रं वा मदालसम्" ಇಲ್ಲಿ ಮುಖ್ಯವಾದ ಗಜೇಂದ್ರನ ಯಾಚನೆಯನ್ನು ಮೊದಲು ಹೇಳದೆ ಕೊನೆಯಲ್ಲಿ ಹೇಳಿರುವುದು ಅಕ್ರಮ. ಇತ್ಯಾದಿ.

**(5) ರಸದೋಷಗಳು:**

1. **रसस्य स्वशब्दवाच्यत्वम्**—ಶೃಂಗಾರಾದಿ ರಸಪದಗಳನ್ನು ತದ್ವಾಚಕಪದಗಳಿಂದ ಹೇಳುವುದು ದೋಷವಾಗುವುದು. "तामुद्वीक्ष्य कुरङ्गाक्षीं रसो न: कोऽप्यजायत। चन्द्रमण्डलमालोक्य शृङ्गारे मग्नमन्तरम्"।

2. **स्थायिभावस्य स्वशब्दवाच्यत्वम्**—ಸ್ಥಾಯಿಭಾವಗಳನ್ನು ತದ್ವಾಚಕಪದಗಳಿಂದ ಹೇಳುವುದು ದೋಷ. "अजायत रतिस्तस्याम्"।

3. **अङ्गिरसस्याननुसन्धानम्**—ಪ್ರಧಾನವಾದುದನ್ನೇ ಮರೆತುಬಿಡುವುದು "ರತ್ನಾವಳಿ"ಯಲ್ಲಿ ಬಾಭ್ರವ್ಯನು ಬಂದಾಗ ಸಾಗರಿಕೆಯನ್ನೇ ಮರೆತುಬಿಡುವುದು ರಸದೋಷವಾಗುವುದು. ಇತ್ಯಾದಿ.

**(ख) ತರ್ಕಶಾಸ್ತ್ರದಲ್ಲಿ ಉಕ್ತವಾದ ಲಕ್ಷಣ ದೋಷಗಳು ಮತ್ತು ಹೇತು ದೋಷಗಳು:**

**(1) ಲಕ್ಷಣ ದೋಷಗಳು:**

**अव्याप्ति:**—ಲಕ್ಷ್ಯದ ಏಕದೇಶದಲ್ಲಿ ಲಕ್ಷಣವಿಲ್ಲದಿರುವುದು. "लक्ष्यैकदेशावृत्तित्वम्"। लक्ष्यतावच्छेदकसामानाधिकरण्ये सति लक्ष्यतावच्छेदकसमानाधिकरणात्यन्ताभावप्रतियोगित्वम् इत्यर्थ:। "गोर्नीलरूपवत्त्वं लक्षणम्" ಎಂದು ಲಕ್ಷಣ ಹೇಳಿದರೆ ಶ್ವೇತಗೋವಿನಲ್ಲಿ (ಬಿಳಿಯ ಹಸುವಿನಲ್ಲಿ) ನೀಲರೂಪವಿಲ್ಲದಿರುವುದರಿಂದ ಈ ಲಕ್ಷಣಕ್ಕೆ "अव्याप्ति" ರೂಪದೋಷ ಬರುವುದು.

**अतिव्याप्ति:**—ಅಲಕ್ಷ್ಯದಲ್ಲಿ ಲಕ್ಷಣವಿರುವುದು. "लक्ष्यवृत्तित्वे सति अलक्ष्यवृत्तित्वम्"। लक्ष्यतावच्छेदकसामानाधिकरण्ये सति लक्ष्यतावच्छेदकावच्छिन्नप्रतियोगिताकभेदसामानाधिकरण्यम् इत्यर्थ:। "गो: शृङ्गित्वं लक्षणम्" ಈ ಲಕ್ಷಣಕ್ಕೆ ಲಕ್ಷ್ಯಭೂತವಾದ ಗೋವಿಗಿಂತಲೂ ಇತರವಾದ ಮಹಿಷದಲ್ಲಿ (ಅಲಕ್ಷ್ಯದಲ್ಲಿ) ಶೃಂಗಿತ್ವವಿರುವುದರಿಂದ "अतिव्याप्ति" ರೂಪವಾದ ದೋಷವಿರುವುದು.

**असम्भव:**—ಲಕ್ಷ್ಯಸಾಮಾನ್ಯದಲ್ಲೂ ಲಕ್ಷಣವಿಲ್ಲದಿರುವುದು. "लक्ष्यमात्रे लक्षणावृत्तित्वम्"। लक्ष्यतावच्छेदकव्यापकीभूताभावप्रतियोगित्वम् इत्यर्थ:। "गोरेकशफवत्त्वं लक्षणम्" ಈ ಲಕ್ಷಣಕ್ಕೆ, ಲಕ್ಷ್ಯಭೂತವಾದ ಗೋಸಾಮಾನ್ಯಕ್ಕೂ ಶಫದ್ವಯ (ಎರಡು ಗೊರಸುಗಳು) ಇರುವುದರಿಂದ ಇಲ್ಲಿ "असम्भव" ರೂಪ ದೋಷವು.

**आत्माश्रय:** ಮತ್ತು **अन्योन्याश्रय:** ಆಯಾಪದಗಳಲ್ಲಿ ನೋಡಿ.

**(2) ಹೇತುದೋಷಗಳು:** (1) व्यभिचार:. (2) विरोध:. (3) सत्प्रतिपक्ष:. (4) असिद्धि: ಮತ್ತು (5) बाध: ಇವು ಐದು ಹೇತುದೋಷಗಳು. [ವಿವರಕ್ಕೆ ಆಯಾಪದಗಳಲ್ಲಿ ನೋಡಿ.] 9. ವೈದ್ಯಶಾಸ್ತ್ರದಲ್ಲಿ ಹೇಳಿರುವ ದೋಷಗಳು. (1) वात: (2) पित्तम् ಮತ್ತು (3) कफ:। दुष्यन्त्येभि:—दुष कर० "घञ्" (३-३-१९)। "धातवश्च मलाश्चापि दुष्यन्त्येभिर्यतस्तत:। वातपित्तकफा एते त्रयो दोषा इति स्मृता:"। ಈ ಮೂರು ದೋಷಗಳೂ ಸಮವಾಗಿದ್ದರೆ ದೇಹದ ಬೆಳವಣಿಗೆ ಕಾರಣವಾಗುವುವು. ವಿಕಾರಹೊಂದಿ ಏರುಪೇರಾದರೆ ದೇಹಕ್ಷಯಕ್ಕೆ ಕಾರಣವಾಗುವುವು. "वात: पित्तं कफश्चेति त्रयो दोषा:समासत:। विकृता अविकृता देहं घ्नन्ति ते वर्धयन्ति च। ते व्यापिनोऽपि हृन्नाभ्योरधोमध्योर्ध्वसंश्रया:। वयोऽहोरात्रभुक्तानामन्तमध्यादिगा: क्रमात्" भावप्र०। 10. ವಾತಪಿತ್ತಕಫಗಳ ವಿಕಾರ. 11. ಮನುಷ್ಯನು ಪುಣ್ಯ

ಪಾಪಕಾರ್ಯಗಳಲ್ಲಿ ಪ್ರವರ್ತಿಸುವಂತೆ ಮಾಡುವ ರಾಗದ್ವೇಷ ಮೋಹರೂಪವಾದ ಒಂದು ಧರ್ಮ. 12. ವತ್ಸ, ಕರು.

**दोषकल्पन ದೋಷಕಲ್ಪನ** (न०) ದೋಷದ ಆರೋಪಣೆ, ದೋಷವಿಲ್ಲದ ಕಡೆ ದೋಷವನ್ನು ಹೇಳುವುದು, ತಪ್ಪು ಹೊರಿಸುವುದು.

**दोषग्रस्त ದೋಷಗ್ರಸ್ತ** (वि०) 1. ಅಪರಾಧಿ, ತಪ್ಪು ಮಾಡಿದವನು. 2. ದೋಷಗಳಿಂದ ಕೂಡಿದವನು, ದುರ್ಗುಣಗಳಿಂದ ಕೂಡಿದವನು. दोषैः ग्रस्तः।

**दोषग्राहिन् ದೋಷಗ್ರಾಹಿನ್** (वि०) ದುರ್ಜನ, ಕೆಟ್ಟವನು, ದೋಷವನ್ನೇ ಕಂಡುಹಿಡಿಯುವವನು. दोषं गृह्णाति—ग्रह (उपादाने) "णिनिः" (३-२-७८)। "विसृज्य शूर्पवद्दोषान् गुणान् गृह्णन्ति साधवः। दोषग्राही गुणत्यागी चालिनीव हि दुर्जनाः" उद्भ०।

**दोषघ्न ದೋಷಘ್ನ** (वि०) ವಾತಪಿತ್ತಕಫಗಳ ವಿಕಾರವನ್ನು ಹೋಗಲಾಡಿಸುವ, ಧಾತುಗಳ ದೋಷವನ್ನು ನಾಶಪಡಿಸುವ. दोषं हन्ति—हन (हिंसागत्योः) "टक्" (३-२-५३)। "दोषघ्ना ग्रहणीपाण्डुरोगार्शःकुष्ठनाशनाः" सुश्रुत०।

**दोषच्छिद् ದೋಷಚ್ಛಿದ್** (वि०) 1. ವಾತಾದಿ ದೋಷಗಳನ್ನು ಹೋಗಲಾಡಿಸುವ. 2. ಪಾಪ ದುಃಖ ಮೊದಲಾದ ದೋಷಗಳನ್ನು ನಾಶಪಡಿಸುವ. दोषान् छिनत्ति—छिदिर् (द्वैधीकरणे) "क्विप्" (३-२-७६)।

**दोषज्ञ ದೋಷಜ್ಞ** (पुं०) 1. ಪಂಡಿತ, ವಿದ್ವಾಂಸ. दोषं जानाति—ज्ञा (अवबोधने) "कः" (३-२-३)। "जातानुनादा जगतां त्रयाणां दोषच्छिदो दुन्दुभयः प्रणेदुः" याद० १३-८०। "अथ प्रदोषे दोषज्ञः संविवेश विशांपतिः" रघु० १-९३। (स्त्री०) -ज्ञा -ಜ್ಞಾ. ವಿದುಷಿ, ಪಂಡಿತೆ. (वि०) 2. ಇತರರ ದೋಷವನ್ನು ತಿಳಿದಿರುವ. "अज्ञातदोषैर्दोषज्ञैरुद्दूष्योभयवेतनैः" माघ० २-११३।

**दोषत्रय ದೋಷತ್ರಯ** (न०) ವಾತ ಪಿತ್ತ ಕಫಗಳೆಂಬ ಮೂರು ದೋಷಗಳು. दोषाणां वातपित्तकफानां त्रयम्।

**दोषा ದೋಷಾ** (अव्य०) 1. ರಾತ್ರಿಯಲ್ಲಿ. दुष्यत्यत्र—दुष (वैकृत्ये) "आ" (१-१-३७)। सप्तम्यर्थे अव्ययम्। "दोषापि नूनमहिमांशुरसौ किलेति व्याकोशकोकनदतां दधते नलिन्यः" माघ० ४-४६। (स्त्री०) 2. ಬಾಹು, ತೋಳು. दोस् स्त्रियाम् "टाप्" भागुरिः।

**दोषाकर ದೋಷಾಕರ** (पुं०) 1. ಚಂದ್ರ. दोषा रात्री करोस्य। 2. ದೋಷಗಳ ರಾಶಿ, -ಸಮೂಹ. (वि०) 3. ದೋಷಗಳಿಗೆ ಗಣಿಯಾಗಿರುವ. दोषाणामाकरः।

**दोषातन ದೋಷಾತನ** (वि०) ರಾತ್ರಿಯಲ್ಲಿರುವ. दोषा "ट्युः" तस्य तुट् अनादेशश्च (४-३-२३)। "दोषातनं बुधबृहस्पतियोगदृश्यस्तारापतिस्तरलविद्युदिवाभ्रवृन्दम्" रघु० १३-७६।

**दोषातिलक ದೋಷಾತಿಲಕ** (पुं०) ರಾತ್ರಿಗೆ ಅಲಂಕಾರವಾದ ದೀಪ. दोषा रात्रेस्तिलक इव। "दशेन्धनो गृहमणिर्दोषातिलक इत्यपि" त्रिकाण्ड०।

**दोषामन्य ದೋಷಾಮನ್ಯ** (वि०) ರಾತ್ರಿಯೆಂದು ತಿಳಿಯುವ. दोषा रात्रिमात्मानं मन्यते— मन (ज्ञाने) "खश्" (३-२-८३)। "दोषामन्यं विदधति सुरतक्रीडायासश्रमशमपटवः" माघ० ४-६२।

**दोषिन् ದೋಷಿನ್** (वि०) 1. ದೋಷದಿಂದ ಕೂಡಿದ, ಕೆಟ್ಟ ಗುಣವುಳ್ಳ. 2. ತಪ್ಪುಮಾಡಿದವನು, ಅಪರಾಧಿ. 3. ಪಾಪ ಮಾಡಿದವನು. दोषोऽस्यास्ति "इनिः" (५-२-११५)। दुष (वैकृत्ये) "णिनिः" (३-१-१३४) वा।

**दोषैकदृश् ದೋಷೈಕದೃಶ್** (वि०) ದೋಷವನ್ನೇ ಮುಖ್ಯವಾಗಿ ನೋಡುವವನು, ದುರ್ಜನ. दोषे एकस्मिन्नेव दृक् ज्ञानं यस्य। दोषमेवैकं पश्यति—दृशिर् (प्रेक्षणे) "क्विप्" वा।

**दोस् ದೋಸ್** (पुं०) ಭುಜ, ತೋಳು. दाम्यत्यनेन—दमु (उपशमे) "डोसिः" (उ० २-७०)। "इत्युक्तवन्तं परिरभ्य दोर्भ्यां तनूजमाविष्कृतदिव्यमूर्तिः" किरा० ११-८०। "ककुद्दोषणी" ಎಂದು ಮಹಾಭಾಷ್ಯಕಾರರ ಪ್ರಯೋಗವಿರುವುದರಿಂದ ನಪುಂಸಕತ್ವವೂ ಉಂಟು. "तमुपाद्रवदुद्यम्य दक्षिणं दोर्निशाचरः" रघु० १५-२३।

**दोस्थ ದೋಸ್ಥ** (पुं०) 1. ಕ್ರೀಡೆ, ಆಟ. 2. ಸೇವೆ, ಶುಶ್ರೂಷೆ, ಉಪಚಾರ. (वि०) 3. ಆಟವಾಡುವವನು. 4. ಸೇವಕ, ಆಳು. "क्रीडाक्रीडकयोर्दोस्थः सेवायां सेवके च सः" त्रिकाण्ड०। 5. ತೋಳಿನಲ್ಲಿರುವ. दोषि तिष्ठति—ष्ठा (गतिनिवृत्तौ) "कः" (३-२-४)।

**दोह ದೋಹ** (पुं०) 1. ಹಾಲು ಕರೆಯುವುದು. दुह (प्रपूरणे) भावे "घञ्" (३-३-१८)। "दोहावसाने पुनरेव दोग्ध्रीं भेजे भुजोच्छिन्नरिपुर्निषण्णाम्" रघु० २-२३। 2. ಹಾಲು, ಕ್ಷೀರ. दुह्यते—दुह कर्म० "घञ्" (३-३-१९)। 3. ಹಾಲು ಕರೆಯುವ ಪಾತ್ರೆ. दुह्यत्यत्र—दुह अधि० "घञ्" (३-३-१२१)।

**दोहद ದೋಹದ** (पुंन०) 1. ಬಯಕೆ, ಇಚ್ಛೆ, ಅಭಿಲಾಷೆ. दोषमाकर्षं ददाति—डु दाञ (दाने) "कः" (३-२-३)।

ಸ್ತ್ರೀಯರ ಪಾದಾಘಾತ ಮತ್ತು ಮುಖಾಸವಗಳಿಂದ ಗಿಡ ಲತೆಗಳು ಪುಷ್ಪಿಸುವುವೆಂದು ಕವಿಸಮಯಸಿದ್ಧ. ಇದಕ್ಕೆ ದೋಹದವೆಂದು ಹೆಸರು. ಇದೇ ಗಿಡಲತೆಗಳ ಬಯಕೆ. "ताभिरप्युपहृतं मुखासवं सोऽपिबद्बकुलतुल्यदोहदः" रघु० १९-१२। 2. ಗರ್ಭಿಣಿಯರ ಬಯಕೆ, ಗರ್ಭದ ಲಕ್ಷಣವನ್ನು ತಿಳಿಸುವ ಬಯಕೆ. "प्रजावती दोहदशंसिनी ते तपोवनेषु स्पृहयालुरेव" रघु० १४-४५। 3. ಗರ್ಭ, ಬಸಿರು. "दोहदो गर्भलक्षणे। अभिलाषे तथा गर्भे" हेम०। ["खञ्ज" "गर्भिणीदोहद" ಪದಗಳಲ್ಲಿ ನೋಡಿ.]

**दोहदवती ದೋಹದವತೀ** (स्त्री०) ಬಯಕೆಯುಳ್ಳ ಗರ್ಭಿಣಿ, ಬಸಿರಾಗಿ ಬಯಕೆಯುಳ್ಳ ಹೆಂಗಸು. दोहदमस्त्यस्याः "मतुप्" (५-२-९४)।

**दोहन ದೋಹನ** (न०) 1. ಹಾಲು ಕರೆಯುವುದು. दुह (प्रपूरणे) भावे "ल्युट्" (३-३-११५)। (वि०) 2. ಹಾಲು ಕರೆಯುವವನು. दुह कर्त० "ल्युः" (३-१-१३४)। (स्त्री०) **-नी -ನೀ.** दुह अधि० "ल्युट्" (३-३-११७)। "ङीप्" (४-१-१५)। ಹಾಲು ಕರೆಯುವ ಪಾತ್ರೆ.

**दोहनीय ದೋಹನೀಯ** (वि०) 1. ಹಾಲು ಕರೆಯಲ್ಪಡುವ. 2. ಹಾಲು ಕರೆಯಲು ಯೋಗ್ಯವಾದ. 3. ಹಾಲು ಕರೆಯಬೇಕಾದ. दुह (प्रपूरणे) कर्मादौ "अनीयर्" (३-१-९६)।

**दोहल ದೋಹಲ** (न०) 1. ಇಚ್ಛೆ, ಬಯಕೆ, ಗರ್ಭಿಣಿಯರ ಅಪೇಕ್ಷೆ. दोहमाकर्षं लाति — ला (आदाने) "कः" (३-२-३)। "गर्भिण्याः पुनरिच्छायां श्रद्धा दोहलदौहृदे" वैज०। 2. ಬೆರಣಿ, ಒಣಗಿದ ಸಗಣಿ. "दोहलं तु करीषोऽस्त्री गोग्रन्थिः शुष्कगोमयः" वैज०।

**दोहापनय ದೋಹಾಪನಯ** (पुं०) ಕ್ಷೀರ, ಹಾಲು. दोहमपनयति—अप+णीञ् (प्रापणे) "अच्" (३-३-५६)।

**दोह्य ದೋಹ್ಯ** (वि०) 1. ಹಾಲು ಕರೆಯಲ್ಪಡುವ. दुह (प्रपूरणे) "ण्यत्" (३-१-१२४)। (न०) 2. ಕ್ಷೀರ, ಹಾಲು. (स्त्री०) **-ह्या -ಹ್ಯಾ.** ಆಕಳು, ಹಸು, ಎಮ್ಮೆ ಮೊದಲಾದುವು. "बीजायोवाह्यरत्नस्त्रीदोह्यपुंसां परीक्षणम्" याज्ञ० २-१७७।

**दौत्य ದೌತ್ಯ** (न०) 1. ದೂತತ್ವ, ದೂತಭಾವ, ರಾಯಭಾರ. 2. ದೂತನ ಕೆಲಸ. दूतस्य भावः कर्म वा "ष्यञ्" (५-१-१२४)। "ननु सर्वमेवेदानीं प्रतिहतममङ्गलम् स्वयं प्रतिपन्नदौत्येन सन्धिकारिणा श्रीकृष्णेन" वेणी० १।

**दौरात्म्य ದೌರಾತ್ಮ್ಯ** (न०) 1. ದುರುಳತನ, ಕೆಟ್ಟತನ, ದುರ್ನೀತಿ. 2. ದುಷ್ಟಸ್ವಭಾವ, ಕೇಡಿಗತನ. दुष्टः आत्मा बुद्धिः स्वभावो वा यस्य — दुरात्मा, तस्य भावः "ष्यञ्" (५-१-१२४)। "दौरात्म्याद्रक्षसस्तां तु नात्रत्याः श्रद्दधुः प्रजाः" रघु० १५-७२। "दौरात्म्यादरिभिर्निजार्जवशुचौ मायाविभिर्वञ्चिते" म० वी० ५-४६।

**दौर्ग ದೌರ್ಗ** (वि०) 1. ದುರ್ಗಸಂಬಂಧವಾದ, ಕೋಟೆಗೆ ಸಂಬಂಧಿಸಿದ. दुर्गस्य इदम् "अण्" (४-३-१२०)। 2. ದುರ್ಗಾದೇವಿಯ ಸಂಬಂಧವಾದ. दुर्गाया इदम् "अण्"।

**दौर्गत्य ದೌರ್ಗತ್ಯ** (न०) 1. ದಾರಿದ್ರ್ಯ, ಬಡತನ. दुर्गतस्य भावः "ष्यञ्" (५-१-१२४)। 2. ಬಡತನ ಮೊದಲಾದುವುಗಳಿಂದ ಉಂಟಾಗುವ ದುರವಸ್ಥೆ, ಕೆಟ್ಟಸ್ಥಿತಿ, ಸಂಕಟ. "दौर्गत्याद्वैरनौजस्यं दैन्यम्" सा० द०।

**दौर्गन्ध्य ದೌರ್ಗಂಧ್ಯ** (न०) ಕೆಟ್ಟವಾಸನೆ. दुष्टो गन्धोऽस्य दुर्गन्धः, तस्य भावः "ष्यञ्" (५-१-१२४)।

**दौर्जन्य ದೌರ್ಜನ್ಯ** (न०) ದುರುಳತನ, ದುರ್ನೀತಿ, ಕೆಟ್ಟತನ. दुर्जनस्य भावः "ष्यञ्" (५-१-१२४)।

**दौर्बल्य ದೌರ್ಬಲ್ಯ** (न०) ಬಲಹೀನತೆ, ಅಶಕ್ತತೆ दुर्बलस्य भावः "ष्यञ्" (५-१-१२४)।

**दौर्भागिनेय ದೌರ್ಭಾಗಿನೇಯ** (पुं०) ಅದೃಷ್ಟಹೀನಳ ಮಗ, ಬಡಹೆಂಗಸಿನ ಮಗ. ಗಂಡನು ತೊರೆದು ಗತಿಯಿಲ್ಲದವಳ ಮಗ. दुर्भगाया अपत्यम् "ढक्" इनङ् च (४-१-१२६)। उभयपदवृद्धिः (७-३-१९)। स्त्रियाम् "ङीप्" (४-१-१५)। **दौर्भागिनेयी ದೌರ್ಭಾಗಿನೇಯೀ.**

**दौर्भाग्य ದೌರ್ಭಾಗ್ಯ** (न०) 1. ಅದೃಷ್ಟಹೀನತೆ. 2. ಬಡತನ, ದಾರಿದ್ರ್ಯ. दुर्भगस्य भावः "ष्यञ्" (५-१-१२४)। "अद्य कैकेयि दौर्भाग्यं राज्ञा ते ख्यापितं महत्" भा० वन० २७८-१८।

**दौर्भ्रात्र ದೌರ್ಭ್ರಾತ್ರ** (न०) ಕೆಟ್ಟ ಸಹೋದರತ್ವ, ಕೆಟ್ಟ ಸೋದರನಾಗಿರುವಿಕೆ. दुष्टो भ्राता, तस्य भावः "अण्" (५-१-१३०)।

**दौर्मनस्य ದೌರ್ಮನಸ್ಯ** (न०) ದುಃಖಗೊಂಡ ಮನಸ್ಸಿನಿಂದ ಕೂಡಿರುವಿಕೆ, ವಿಷಾದದಿಂದ ಕೂಡಿರುವಿಕೆ. ಚಿಂತೆಯಿಂದ ಕೂಡಿರುವಿಕೆ. दुर्मनसो भावः "ष्यञ्" (५-१-१२४)। "तन्मित्रपूजा तदरिद्विषत्वं कृतस्मृतिः प्रोषितदौर्मनस्यम्" बृहत्सं० ७८-६।

**दौर्मन्त्य ದೌರ್ಮಂತ್ರ್ಯ** (न०) ಕೆಟ್ಟ ಸಲಹೆ, ದುರುಪದೇಶ, ಕಾಲದೇಶಗಳಿಗನುಗುಣವಲ್ಲದ ಮಂತ್ರಾಲೋಚನೆ. दुष्टो मन्त्रः यस्य-तस्य भावः "ष्यञ्" (५-१-१२४)। "दौर्मन्त्र्यान्नृपतिर्विनश्यति यतिः सङ्गात् सुतो लालनात्" भर्तृ० १-३३।

**दौर्लभ्य ದೌರ್ಲಭ್ಯ** (न०) ಹೊಂದಲು ಅಶಕ್ಯವಾಗಿರುವಿಕೆ, ಕಷ್ಟದಿಂದ ಪಡೆಯಬೇಕಾಗುವಿಕೆ. दुर्लभस्य भावः "ष्यञ्" (५-१-१२४)।

**दौर्हार्द ದೌರ್ಹಾರ್ದ** (न०) 1. ವೈರ, ದ್ವೇಷ, ಶತ್ರುತ್ವ. 2. ನೀಚತನ. दुर्हृदो भावः "अण्" (५-१-१३०)।

**दौलेय ದೌಲೇಯ** (पुं०) 1. ದುಲಿಋಷಿಯ ಮಗ. दुलेरपत्यम् "ढक्" (४-१-१२२)। 2. ಆಮೆಯ ಮರಿ. दुल्याः कमठ्याः अपत्यम् "ढक्" (४-१-१२२)।

**दौल्मि ದೌಲ್ಮಿ** (पुं०) ಇಂದ್ರ.

**दौवारिक ದೌವಾರಿಕ** (पुं०) ದ್ವಾರಪಾಲಕ, ಬಾಗಿಲು ಕಾಯುವವನು. द्वारि नियुक्तः "ठक्" (४-४-६९)। ऐजागमः (७-३-४)। स्त्रियाम् **दौवारिकी ದೌವಾರಿಕೀ.** "अथोरगाख्यस्य पुरस्य नाथं दौवारिकी देवसरूपमेत्य" रघु० ६-५९।

**दौश्चर्म्य ದೌಶ್ಚರ್ಮ್ಯ** (न०) ಮೇಲಿನ ಚರ್ಮವಿಲ್ಲದ ಲಿಂಗದಿಂದ ಕೂಡಿರುವುದು. ಇದೊಂದು ರೋಗ. दुश्चर्मणो भावः "ष्यञ्" (५-१-१२४)। "ब्रह्महा क्षयरोगित्वं दौश्चर्म्यं गुरुतल्पगः" मनु० ११-४९।

**दौष्क ದೌಷ್ಕ** (वि०) 1. ತೋಳುಗಳಿಂದ ನದಿ ಮೊದಲಾದುವನ್ನು ದಾಟುವವನು. दोषा तरति—दोस् "ठक्" (४-४-५)। ठस्य "कः" (वा० ७-३-५१)। 2. ತೋಳುಗಳಿಂದ ಸಂಚರಿಸುವವನು. दोषा चरति—"ठक्" (४-४-८)। "कः" (वा० ७-३-५१)।

**दौष्कुल ದೌಷ್ಕುಲ** (वि०) ನೀಚವಂಶದಲ್ಲಿ ಹುಟ್ಟಿದವನು. दुष्टं कुलमस्य दुष्कुलः—स्वार्थे "अण्" (५-४-३८)। "न दुर्जने दौष्कुले वा व्रतैर्यो वा न संस्कृतः" भा० शान्ति० ३५-३८।

**दौष्कुलेय ದೌಷ್ಕುಲೇಯ** (पुं०) ನೀಚವಂಶದಲ್ಲಿ ಹುಟ್ಟಿದವನ ಮಗ. दुष्कुलस्यापत्यम् "ढक्" (४-१-१४२)। "कुले जाताश्च क्लिश्यन्ते दौष्कुलेयवशानुगाः" भा० वन० १९६-२३।

**दौष्कुल्य ದೌಷ್ಕುಲ್ಯ** (न०) ದುಷ್ಕುಲದಲ್ಲಿ ಹುಟ್ಟಿರುವಿಕೆ. दुष्कुलस्य भावः "ष्यञ्" (६-१-१२४)। "दौष्कुल्यमाधि विधुनोति शीघ्रं महत्तमानामभिधानयोगः" भाग० १-१८-१८।

**दौष्ट्य ದೌಷ್ಟ್ಯ** (न०) ದುಷ್ಟತನ, ನೀಚತನ. दुष्टस्य भावः "ष्यञ्" (५-१-१२४)।

**दौष्यन्ति ದೌಷ್ಯಂತಿ** (पुं०) ದುಷ್ಯಂತನ ಮಗ, ಭರತ ಚಕ್ರವರ್ತಿ. दुष्यन्तस्य अपत्यम् "इञ्" (४-१-९५)। "दौष्यन्तिमप्रतिरथं तनयं निवेश्य" शाकु० ४-१९।

**दौहिक ದೌಹಿಕ** (वि०) ನಿತ್ಯವೂ ಕರೆಯಲು ಯೋಗ್ಯವಾದ, ಪ್ರತಿದಿನವೂ (ಹಾಲು) ಕರೆಯಲು ಅರ್ಹವಾದ (ಹಸು ಮೊದಲಾದುದು). दोहं नित्यमर्हति—दोह "ठञ्" (५-१-६४)।

**दौहित्र ದೌಹಿತ್ರ** (पुं०) 1. ಮೊಮ್ಮಗ, ಮಗಳ ಮಗ. दुहितुरपत्यं पुमान् "अञ्" (४-१-१०४)। "पौत्रदौहित्रयोर्लोके विशेषो नास्ति कश्चन। तयोर्हि मातापितरौ सम्भूतौ तस्य देहतः" मनु० ९-१३३। स्त्रियाम् "ङीप्" (४-१-१५)। **-त्री -ತ್ರೀ.** ಮೊಮ್ಮಗಳು, ಮಗಳ ಮಗಳು. (न०) 2. ತಿಲ, ಎಳ್ಳು. 3. ಖಡ್ಗ, ಕತ್ತಿ. 4. ಕಪಿಲವರ್ಣದ ಹಸುವಿನ ತುಪ್ಪ. "दौहित्रं खड्गमित्याहुरपत्यं दुहितुस्तिलाः। कपिलाया घृतं चैव दौहित्रमिति चोच्यते"।

**दौहित्रायण ದೌಹಿತ್ರಾಯಣ** (पुं०) ದೌಹಿತ್ರನ ಮಗ, ಮಗಳ ಮಗನ ಮಗ. दुहितुरनन्तरापत्यम् "अञ्" (४-१-१०४)। यूनि "फक्" (४-१-१००)।

**द्यावाक्षामा(मे) ದ್ಯಾವಾಕ್ಷಾಮಾ(ಮೇ)** (स्त्री० द्विव०) ಸ್ವರ್ಗ ಮತ್ತು ಭೂಮಿ. द्यौश्च क्षामा च—दिवो द्यावादेशः (६-३-२९)। "ಕ್ಷಾಮಾ" ಪದಕ್ಕೆ ವೇದದಲ್ಲಿ ಭೂಮಿ ಎಂದು ಅರ್ಥ.

**द्यावापृथिवी(व्यौ) ದ್ಯಾವಾಪೃಥಿವೀ (ವ್ಯೌ)** (स्त्री० द्विव०) ಸ್ವರ್ಗ ಮತ್ತು ಭೂಮಿ. द्यौश्च पृथिवी च—दिवो द्यावादेशः (६-३-३०)। दिवो दिवसादेशश्च। **दिवस्पृथिव्यौ ದಿವಸ್ಪೃಥಿವ್ಯೌ.**

**द्यावाभूमी ದ್ಯಾವಾಭೂಮೀ** (स्त्री० द्विव०) ಸ್ವರ್ಗ ಮತ್ತು ಭೂಮಿ. द्यौश्च भूमिश्च—दिवो द्यावादेशः (६-३-२९)।

**द्यु—अभिगमने** (अदा० पर० अक० अनि०)। द्यौति। द्योता। अद्यौषीत्। ಇತ್ಯಾದಿ. ಎದುರಾಗಿ ಹೋಗು.

**द्यु ದ್ಯು** (पुं०) 1. ಅಗ್ನಿ, ಬೆಂಕಿ. द्यु (अभिगमने) "क्विप्" (३-२-७६)। (न०) 2. ದಿವಸ, ಹಗಲು.

"पद्मबन्धुः कोकहितो द्युश्च क्ली स्यादहर्दिनम्" वैजं। 3. ಗಗನ, ಆಕಾಶ. "आकाशे दिवसे च द्युः" वैजं। ಮೇದಿನೀಕೋಶದಲ್ಲಿ ಅಗ್ನಿಯೆಂಬ ಅರ್ಥದಲ್ಲಿ ಪುಂಲಿಂಗವಾಗಿಯೂ ಹಗಲು ಮತ್ತು ಆಕಾಶವೆಂಬ ಅರ್ಥದಲ್ಲಿ ನಪುಂಸಕಲಿಂಗವಾಗಿಯೂ ಉಕ್ತವಾಗಿದೆ. "द्यु क्लीबमह्नि गगनेऽपि च। ना ज्वलने" मेदिं।

**द्युग ದ್ಯುಗ** (पुं०) 1. ಪಕ್ಷಿ, ಹಕ್ಕಿ. द्युनि गगने गच्छति—गम्लृ (गतौ) "डः" (३-२-९७)। (वि०) 2. ಆಕಾಶದಲ್ಲಿ ಸಂಚರಿಸುವ.

**द्युचर ದ್ಯುಚರ** (पुं०) 1. ಪಕ್ಷಿ, ಹಕ್ಕಿ. 2. ಗ್ರಹ. 3. ವಿದ್ಯಾಧರ. द्युनि चरति — चर (गतौ) "टः" (३-२-१६)। (वि०) 4. ಆಕಾಶದಲ್ಲಿ ಸಂಚರಿಸುವ. स्त्रियाम् "ङीप्" (४-१-१५)। **-चरी -ಚರೀ.**

**द्युत् ದ್ಯುತ್** (स्त्री०) 1. ಕಿರಣ. 2. ಪ್ರಕಾಶ, ಬೆಳಕು. द्योतते — द्युत (दीप्तौ) "क्विप्" (३-२-१७७)।

**द्युत — दीप्तौ** (भ्वा० आत्म० अक० से०)। द्योतते। दिद्युते। द्योतिता। द्योतिष्यते। द्योतताम्। अद्योतत। ಇತ್ಯಾದಿ. ಪ್ರಕಾಶಿಸು, ಹೊಳೆ.

**कृत्सु**:—द्योतितव्यम्। द्योतनीयम्। द्योत्यम्। द्युतितम्, द्योतितम्। द्युतितवान्, द्योतितवान्, -वती। द्योतमानः। द्योतितुम्। द्युतितम्, द्योतितम्। द्योतनम्। द्युतित्वा। प्रद्युत्य। द्योतित्वा। प्रद्योत्य।

**द्युति ದ್ಯುತಿ** (स्त्री०) 1. ಕಾಂತಿ, ಹೊಳಪು. द्युत (दीप्तौ) "इन्" (उ० ४-१२०)। "लेभे परां द्युतिममर्त्यवधूसमूहः" किरा० ६-४६। 2. ಪ್ರಕಾಶ, ಬೆಳಕು. "सुवर्णपुङ्खद्युतिरञ्जिताङ्गुलिम्" रघुं ३-६४। 3. (ಸೂರ್ಯನ) ಪ್ರಭೆ. "उष्णांशुद्युतिजनितः कपोलरागः" किरा० ७-३।

**द्युतित ದ್ಯುತಿತ** (नं०) 1. ಪ್ರಕಾಶ. ಬೆಳಕು. द्युत (दीप्तौ) भावे "क्तः" (३-३-११४)। वा किरवाभावः। पक्षे **द्योतितम् ದ್ಯೋತಿತಮ್.** (वि०) 2. ಪ್ರಕಾಶಿಸುವ. द्युत कर्तं० "क्तः" (३-४-७२)।

**द्युतिधर ದ್ಯುತಿಧರ** (पुं०) 1. ವಿಷ್ಣು. द्युतिं तारुण्येऽपि इन्द्राभिभावुकां दीप्तिं धरति — धृञ् (धारणे) "अच्" (३-१-१३४)। षष्ठीतत्पुरुषः। "अमानुषीं यो धृतवान् द्युतिमैन्द्राभिभावुकाम्। स्यातः स हि द्युतिधरः वस्वर्णः कान्तिदो मनुः" इति निरुक्तिः। "तेजोवृषो द्युतिधरः" वि० स०।

**द्युतिमत् ದ್ಯುತಿಮತ್** (पुं०) 1. ಸಾಲ್ವದೇಶದ ಒಬ್ಬ ದೊರೆ. 2. ಮದಿರಾಶ್ವನ ಒಬ್ಬ ಮಗ. 3. ಮದ್ರದೇಶದ ಒಬ್ಬ ದೊರೆ, ಸಹದೇವನ ಮಾವ. "सहदेवस्तु माद्रीमेव स्वयंवरे विजयां नामोपयेमे मद्रराजस्य द्युतिमतो दुहितरम्" भा० आदि० ६४। 4. ಅಧಿಕಕಾಂತಿಯಿಂದ ಕೂಡಿದ, ಪ್ರಕಾಶಮಾನವಾದ. द्युतिरस्यास्ति—"मतुप्" (५-२-९४)। "नवविनिद्रजपाकुसुमत्विषां द्युतिमतां निकरेण महाश्मनाम्" किरा० ५-८। स्त्रियाम् "ङीप्" (४-१-६)। **-मती -ಮತೀ.**

**द्युन ದ್ಯುನ** (नं०) ಲಗ್ನದಿಂದ ಏಳನೆಯ ಸ್ಥಾನ.

**द्युधुनी ದ್ಯುಧುನೀ** (स्त्री०) ದೇವನದಿ, ಗಂಗಾನದಿ.

**द्युनिवास ದ್ಯುನಿವಾಸ** (पुं०) ದೇವತೆ. द्युनि निवासोऽस्य।

**द्युनिवासभूय ದ್ಯುನಿವಾಸಭೂಯ** (नं०) ದೇವತ್ವ, ದೇವಭಾವ. द्युनिवासस्य भावः—भू "क्यप्" (३-१-१०७)। "शोकाग्निनाऽगाद्द्युनिवासभूयम्" भट्टिं ३-२१।

**द्युपति ದ್ಯುಪತಿ** (पुं०) 1. ಇಂದ್ರ. 2. ಸೂರ್ಯ.

**द्युपथ ದ್ಯುಪಥ** (पुं०) ಆಕಾಶ.

**द्युमणि ದ್ಯುಮಣಿ** (पुं०) 1. ರವಿ, ಸೂರ್ಯ. दिवो मणिरिव। 2. ಎಕ್ಕದ ಗಿಡ. "ज्योतिरिङ्गणवत्तस्य द्युमणेरिव सन्निधौ" याद० १६-३४।

**द्युमत्सेन ದ್ಯುಮತ್ಸೇನ** (पुं०) ಸಾಲ್ವದೇಶದ ದೊರೆ, ಸತ್ಯವಂತನ ತಂದೆ, ಸಾವಿತ್ರಿಯ ಮಾವ. [ದ್ಯುಮತ್ಸೇನನು ರಾಜ್ಯವಾಳುತ್ತಿದ್ದಾಗ ಅಕಸ್ಮಾತ್ತಾಗಿ ಇವನು ಕುರುಡನಾಗಲು ಶತ್ರುಗಳು ಇವನನ್ನು ರಾಜ್ಯಭ್ರಷ್ಟನನ್ನಾಗಿ ಮಾಡಿ ಅರಣ್ಯಕ್ಕೆ ಓಡಿಸಿದರು. ಈತನ ಮಗನಾದ ಸತ್ಯವಂತನು ಒಂದು ದಿನ ಅರಣ್ಯದಲ್ಲಿ ಸೌದೆಯನ್ನು ಒಡೆಯುತ್ತಿದ್ದಾಗ ತಂದೆಯಿಂದ ಪ್ರೇರಿತಳಾಗಿ ತನಗೆ ಯೋಗ್ಯನಾದ ಪತಿಯನ್ನು ಹುಡುಕಲು ಹೊರಟಿದ್ದ ಅಶ್ವಪತಿಯ ಮಗಳಾದ ಸಾವಿತ್ರಿಯು ಈತ (ಸತ್ಯವಂತ)ನನ್ನು ಕಂಡು ಇವನೇ ತನಗೆ ಯೋಗ್ಯಪತಿಯೆಂದು ತಂದೆಗೆ ತಿಳಿಸಿ ಅವನನ್ನು ಮದುವೆಯಾದಳು. ಅಲ್ಪಾಯುವಾದ ಸತ್ಯವಂತನು ಪಂಚತ್ವ (ಮರಣ) ಹೊಂದಲು ಸತೀಮಣಿಯಾದ ಸಾವಿತ್ರಿಯ ಪ್ರಾರ್ಥನೆಯಂತೆ ಯಮಧರ್ಮರಾಯನು ಸತ್ಯವಂತನಿಗೆ ದೀರ್ಘಾಯುಸ್ಸನ್ನೂ ದ್ಯುಮತ್ಸೇನನಿಗೆ ಕಣ್ಣು ಮತ್ತು ರಾಜ್ಯಗಳನ್ನೂ ಅನುಗ್ರಹಿಸಿದನು.] 2. ಸಾಲ್ವದೇಶದ ಇನ್ನೊಬ್ಬ ದೊರೆ. [ಈತನು ರಾಜಸೂಯ ಯಾಗದ ಸಮಯದಲ್ಲಿ ದಿಗ್ವಿಜಯಕ್ಕೆ ಹೊರಟಿದ್ದ ಅರ್ಜುನನಿಂದ ಜಯಿಸಲ್ಪಟ್ಟನು.]

**द्युमयी ದ್ಯುಮಯೀ** (स्त्री०) ವಿಶ್ವಕರ್ಮನ ಮಗಳು, ಸೂರ್ಯನ ಪತ್ನಿ. "स्वरेणुर्द्युमयी त्वाष्ट्री प्रिये चैते विभावसोः" त्रिकाण्ड० ।

**द्युम्न ದ್ಯುಮ್ನ** (न०) 1. ಧನ, ಹಣ. दिवं मनति—म्ना (अभ्यासे) "कः" (३-२-३) । 2. ಬಲ, ಶಕ್ತಿ, ಪರಾಕ್ರಮ. "द्युम्नं वित्ते पराक्रमे" नानार्थर० ।

**द्युलोक ದ್ಯುಲೋಕ** (पुं०) ದೇವಲೋಕ, ಸ್ವರ್ಗಲೋಕ. द्यौरेव लोकः ।

**द्युसद् ದ್ಯುಸದ್** (पुं०) 1. ದೇವತೆ. 2. ಸೂರ್ಯಾದಿ ಗ್ರಹಗಳು. दिवि सीदति—षद्लृ (विशरणादौ) "क्विप्" (३-२-६१) । "भयस्य पूर्वावतरस्तरस्विना मनस्सु येन द्युसदां न्यधीयत" माघ० १-४३ ।

**द्यू ದ್ಯೂ** (वि०) ಆಟವಾಡುವವನು. दीव्यति—दिव् (क्रीडादौ) "क्विप्" (३-२-७६) । ऊठ् (६-४-१९) ।

**द्यूत ದ್ಯೂತ** (पुंन०) 1. ಜೂಜು, ಆಟ. दिव् (क्रीडादौ) भावे "क्तः" (३-३-११४) । 2. ಪಗಡೆಯಾಟ. "किं ते द्यूतेन राजेन्द्र बहुदोषेण मानद । देवने बहवो दोषास्तस्मात्तत्परिवर्जयेत् । श्रुतो वा यदि वा दृष्टो धर्मराजो युधिष्ठिरः । स राज्यं धनमक्षय्यं पणमेकममन्यत" भा० विरा० ७०-७, ८ ।

**द्यूतकर ದ್ಯೂತಕರ** (पुं०) 1. ಆಟಗಾರ, ಜೂಜಾಟದವನು. द्यूतं करोति—डु कृञ् (करणे) "टः" (३-२-२०) । स्त्रियाम् "ङीप्" (४-१-१५) । —करी—ಕರೀ.

**द्यूतकार ದ್ಯೂತಕಾರ** (वि०) ಜೂಜಾಡುವವನು, ಆಟವಾಡುವವನು. द्यूतं करोति—डु कृञ् (करणे) "अण्" (३-२-१) ।

**द्यूतकारक ದ್ಯೂತಕಾರಕ** (वि०) 1. ಜೂಜಾಡುವವನು, ಆಟವಾಡುವವನು. द्यूतं करोति—डु कृञ् (करणे) "ण्वुल्" (३-१-१३३) । 2. ಜೂಜನ್ನು ಆಡಿಸುವವನು. द्यूतं कारयति—डु कृञ्+णिच् "ण्वुल्" (३-१-१३३) ।

**द्यूतकृत् ದ್ಯೂತಕೃತ್** (वि०) ಜೂಜಾಡುವವನು, ಆಟವಾಡುವವನು. द्यूतं करोति—डु कृञ् (करणे) "क्विप्" (३-२-७६) ।

**द्यूतदास ದ್ಯೂತದಾಸ** (पुं०) ಜೂಜಿನಲ್ಲಿ ಗೆಲ್ಲಲ್ಪಟ್ಟು ದಾಸನಾಗಿರುವವನು, ಜೂಜಿನಲ್ಲಿ ಸೋತು ಸೇವಕನಾಗಿರುವವನು. द्यूते जितो दासः । (स्त्री०) —दासी—ದಾಸೀ. "प्रत्यक्षं भूपतीनां मम भुवनपतेराज्ञया द्यूतदासी" वेणी० ५-३० ।

**द्यूतधर्म ದ್ಯೂತಧರ್ಮ** (पुं०) ಜೂಜಿಗೆ ಸಂಬಂಧಿಸಿದ ಧರ್ಮ, ಜೂಜಾಟದ ವ್ಯವಸ್ಥೆ. द्यूतस्य धर्मः । "क्रमशः क्षेत्रजादीनां द्यूतधर्मं निबोधत" मनु० ९-२२० ।

**द्यूतपूर्णिमा ದ್ಯೂತಪೂರ್ಣಿಮಾ** (स्त्री०) ಆಶ್ವಯುಜ ಮಾಸದ ಹುಣ್ಣಿಮೆ. [ಲಕ್ಷ್ಮೀದೇವಿಯ ಪ್ರೀತ್ಯರ್ಥವಾಗಿ ಈ ಹುಣ್ಣಿಮೆಯ ದಿನ ಜನರು ರಾತ್ರಿಯೆಲ್ಲಾ ಆಟದಲ್ಲೇ ಕಾಲ ಕಳೆಯುತ್ತಾರೆ. ಇದಕ್ಕೆ "कोजागरपूर्णिमा" ಎಂದೂ ಹೆಸರು.]

**द्यूतप्रतिपद् ದ್ಯೂತಪ್ರತಿಪದ್** (स्त्री०) ಕಾರ್ತಿಕ ಶುದ್ಧ ಪಾಡ್ಯ. द्यूतार्था प्रतिपत् । [ಈ ಪಾಡ್ಯದ ದಿವಸ ಜನರು ಜೂಜಾಡುವ ಪದ್ಧತಿ.]

**द्यूतप्रिय ದ್ಯೂತಪ್ರಿಯ** (पुं०) ಜೂಜಾಟದಲ್ಲಿ ಇಷ್ಟವುಳ್ಳವನು.

**द्यूतवृत्ति ದ್ಯೂತವೃತ್ತಿ** (पुं०) ಜೂಜನ್ನೇ ಕಸಬನ್ನಾಗಿಟ್ಟುಕೊಂಡಿರುವವನು, ಜೂಜಿನಿಂದ ಜೀವಿಸುವವನು, ಜೂಜು ಕಟ್ಟೆಯಲ್ಲಿ ಕುಳಿತು ಆಟವಾಡಿ ಅದರಿಂದ ಬಂದ ಹಣದಿಂದ ಜೀವನ ನಡೆಸುವವನು. द्यूतं वृत्तिर्जीविका यस्य । "मित्रध्रुक् द्यूतवृत्तिश्च पुत्राचार्यस्तथैव च" मनु० ३-१६० ।

**द्यूतशाला ದ್ಯೂತಶಾಲಾ** (स्त्री०) ಜೂಜಿನ ಮನೆ. द्यूतस्य शाला ।

**द्यूताधिकारिन् ದ್ಯೂತಾಧಿಕಾರಿನ್** (पुं०) ಜೂಜಿನ ಮನೆಯ ಯಜಮಾನ, ಜೂಜಿನ ಕಟ್ಟೆಯನ್ನು ನಡೆಸುವವನು.

**द्यूताध्यक्ष ದ್ಯೂತಾಧ್ಯಕ್ಷ** (पुं०) ಜೂಜಿನ ಯಜಮಾನ, ಜೂಜನ್ನು ನಡೆಸುವವನು.

**द्यून ದ್ಯೂನ** (न०) ಲಗ್ನದಿಂದ ಏಳನೆಯ ಸ್ಥಾನ. "द्यूनजन्मरिपुलाभखत्रिगश्चन्द्रमाः शुभफलप्रदस्तथा" ।

**द्यो ದ್ಯೋ** (स्त्री०) 1. ಸ್ವರ್ಗ, ದೇವಲೋಕ. द्योतन्तेऽस्याम्—द्युत (दीप्तौ) "डोः" बाहु० । द्यौः द्यावौ द्यावः ಇತ್ಯಾದಿ ಗೋ ಶಬ್ದದಂತೆ ರೂಪಗಳು. 2. ಗಗನ, ಆಕಾಶ. "द्यौः स्वर्गसुरवर्त्मनोः" विश्व० । "द्यौरुवाह परिवृत्तिविलोलां हारयष्टिमिव वासरलक्ष्मीम्" किरा० ९-२ ।

**द्योत ದ್ಯೋತ** (पुं०) 1. ಸೂರ್ಯನ ಪ್ರಕಾಶ, ಬಿಸಿಲು. 2. ಪ್ರಕಾಶ, ಬೆಳಕು. द्युत (दीप्तौ) भावे "घञ्" (३-३-१८) ।

**द्योतक ದ್ಯೋತಕ** (वि०) 1. ಪ್ರಕಾಶಗೊಳಿಸುವ. 2. ಸ್ಪಷ್ಟಪಡಿಸುವ. 3. ವಿವರಿಸಿ ತೋರಿಸುವ. 4. ಸೂಚಿಸುವ. ಹೊರಗೆಡಹುವ. द्युत (दीप्तौ) "ण्वुल्" (३-१-१३३) ।

**द्योतन ದ್ಯೋತನ** (ಪುಂ) 1. ದೀಪ. द्युत (दीप्तौ) "युच्" (उ० २-७९)। (नं०) 2. ಪ್ರಕಾಶ, ಬೆಳಕು. द्युत भावे "ल्युट्" (३-३-११५)। 3. ಪ್ರಕಾಶಗೊಳಿಸು ಎಕೆ. द्युत+णिच् भावे "ल्युट्" (३-३-११५)। (वि०) 4. ಪ್ರಕಾಶಗೊಳಿಸುವ. द्युत+णिच् "ल्युः" (३-१-१३४)। 5. ಪ್ರಕಾಶಿಸುವ. द्युत "युच्" (३-२-१४९)। "विलोक्य द्योतनं चन्द्रं लक्ष्मणं शोचनोऽवदत्" भट्टि० ७-१५। 6. ಸ್ಪಷ್ಟಪಡಿಸುವ. 7. ಸೂಚಿಸುವ. 8. ವಿವರಿಸಿ ತೋರಿಸುವ.

**द्योतनिका ದ್ಯೋತನಿಕಾ** (स्त्री०) ವಿವರಣೆ, ವ್ಯಾಖ್ಯಾನ.

**द्योतमान ದ್ಯೋತಮಾನ** (वि०) ಪ್ರಕಾಶಿಸುತ್ತಿರುವ. द्युत (दीप्तौ) "शानच्" (३-२-१२४)।

**द्योतयत् ದ್ಯೋತಯತ್** (वि०) ಪ್ರಕಾಶಪಡಿಸುತ್ತಿರುವ. द्युत (दीप्तौ)+णिच् "शतृ" (३-२-१२४)। "ते प्रभामण्डलैर्व्योम द्योतयन्तस्तपोधनाः" कुमा० ६-४। स्त्रियाम् "ङीप्" (४-१-६)। -यन्ती -ಯಂತೀ.

**द्योतयमान ದ್ಯೋತಯಮಾನ** (वि०) ಪ್ರಕಾಶಪಡಿಸುತ್ತಿರುವ. द्युत (दीप्तौ)+णिच् "शानच्" (३-२-१२४)। "दिशो द्योतयमानाभिर्दिव्यनारीभिराकुलम्" भट्टि० ८-४६।

**द्योतित ದ್ಯೋತಿತ** (त्रि०) ಪ್ರಕಾಶಗೊಳಿಸಲ್ಪಟ್ಟ. द्युत (दीप्तौ)+णिच् "क्तः" (३-२-१०२)। "द्योतितान्तःसभैः कुन्दकुड्मलाग्रदतः स्मितैः" माघ० २-७।

**द्योभूमि ದ್ಯೋಭೂಮಿ** (पुं०) ಪಕ್ಷಿ, ಹಕ್ಕಿ. द्यौराकाशो भूमिर्गतिस्थानं यस्य। (स्त्री० द्विव०) 2. ಆಕಾಶ ಮತ್ತು ಭೂಮಿ.

**द्रगड ದ್ರಗಡ** (पुं०) ಭೇರಿ, ನಗಾರಿ. द्र इति गडति—गड (सेचने) "अच्" (३-१-१३४)। "द्रगडः प्रतिपत्तूर्यम्" त्रिकाण्ड०।

**द्रङ्ग ದ್ರಂಗ** (पुं०) ಸಣ್ಣ ಪಟ್ಟಣ. "कर्वटादधमो द्रङ्गः पत्तनादुत्तमश्च सः"।

**द्रढिमन् ದ್ರಢಿಮನ್** (पुं०) "ದಾರ್ಢ್ಯ" ಪದದ ಅರ್ಥ. दृढस्य भावः "इमनिच्" (५-१-१२२)। "हृदयमरिवधोदयादुदूढद्रढिम दधातु पुनः पुरन्दरस्य" माघ० १-७४।

**द्रढिष्ठ ದ್ರಢಿಷ್ಠ** (वि०) ಬಹು ಮಂದಿಗಳಲ್ಲಿ ಹೆಚ್ಚು ದೃಢನಾದ, ಅನೇಕ ವಸ್ತುಗಳಲ್ಲಿ ಹೆಚ್ಚು ದೃಢವಾದ, -ಸ್ಥಿರವಾದ. अयमेषामतिशयेन दृढः "इष्ठन्" (५-३-५५)।

**द्रढीयस् ದ್ರಢೀಯಸ್** (वि०) ಇಬ್ಬರಲ್ಲಿ ಹೆಚ್ಚು ಬಲಶಾಲಿಯಾದ, ಎರಡು ವಸ್ತುಗಳಲ್ಲಿ ಹೆಚ್ಚು ದೃಢವಾದ, -ಸ್ಥಿರವಾದ. अयमनयोरतिशयेन दृढः "ईयसुन्" (५-३-५७)। "शार्ङ्गं धनुर्मित्रमिव द्रढीयः" माघ० ३-२०। स्त्रियाम् "ङीप्" (४-१-६)। -यसी -ಯಸೀ.

**द्रप्स ದ್ರಪ್ಸ** (नं०) ತೆಳುವಾದ ಮೊಸರು, ಮಜ್ಜಿಗೆ, ನೀರು ಬೆರಸದ ಗಟ್ಟಿಯಲ್ಲದ ಮೊಸರು. दृप्यन्त्यनेन—दृप (हर्षादौ) "अम्" (६-१-५९)। बाहु० सः। "द्रप्सं दधि घनेतरत्" अम०।

**द्रमिड ದ್ರಮಿಡ** (पुं०) ಮೊದಲು ವೈಶ್ಯನ ಪತ್ನಿಯಾಗಿದ್ದ ಕ್ಷತ್ರಿಯ ಸ್ತ್ರೀಯಲ್ಲಿ ಸಂಸ್ಕಾರಹೀನನಾದ ಕ್ಷತ್ರಿಯನಿಂದ ಜನಿಸಿದವನು. "लिच्छिवि क्षत्रिया व्रात्याज्जल्लं सा विप्रपूर्विका। सा वैश्यपूर्वा द्रमिडम्" वैज०।

**द्रम्म ದ್ರಮ್ಮ** (पुं०) ಹದಿನಾರು ಪಣಗಳು.

| | | |
|---|---|---|
| 20 ಕವಡೆಗಳು | .. | 1 ಕಾಕಿಣಿ |
| 4 ಕಾಕಿಣಿಗಳು | .. | 1 ಪಣ |
| 16 ಪಣಗಳು | .. | 1 ದ್ರಮ್ಮ. |

"वराटकानां दशकद्वयं यत् सा काकिणी ताश्च पणश्चतस्रः। ते षोडश द्रम्म इहापि कीर्तितो द्रम्मैस्तथा षोडशभिश्च निष्कः"।

**द्रव ದ್ರವ** (पुं०) 1. ರಸ, ಹಣ್ಣು ಮೊದಲಾದುವುಗಳ ಸಾರ. द्रु (गतौ) "अप्" (३-३-५७)। 2. ಪ್ರವಹಿಸುವ ಸ್ವಭಾವದ ವಸ್ತು. 3. ಪಲಾಯನ, ಓಡುವುದು. "ततो दैत्यद्रवकरं पौराणां शङ्खमुत्तमम्" हरिवं०। 4. ಸ್ತ್ರೀಪುರುಷರ ಪರಿಹಾಸ, ಕಾಮುಕ ಕಾಮುಕಿಯರ ಕ್ರೀಡೆ. 5. ವೇಗ. 6. ಗತಿ, ಗಮನ, ಚಲನ. 7 ಮದ್ಯ, ಹೆಂಡ. (वि०) 8. ದ್ರವವಾದ, ನೀರಾದ, ಹರಿಯುವ ಸ್ವಭಾವದ. "द्रवः संघातकठिनः स्थूलः सूक्ष्मः लघुर्गुरुः" कुमा० २-११। 9. ಸೋರುವ ಸ್ವಭಾವದ. 10. ಒದ್ದೆಯಾದ, ತೇವವಾದ. "प्रसाधिकालम्बितमग्रपादमाक्षिप्य काचिद्द्रवरागमेव" रघु० ७-७। 11. ವೇಗವಾದ, ಓಡುತ್ತಿರುವ.

**द्रवक ದ್ರವಕ** (वि०) 1. ಓಡುವ ಸ್ವಭಾವದ. 2. ಸೋರುವ ಸ್ವಭಾವದ.

**द्रवज ದ್ರವಜ** (पुं०) 1. ಬೆಲ್ಲ. 2. ಕಾಕಂಬಿ. (वि०) 3. ದ್ರವವಸ್ತುವಿನಿಂದ ಉಂಟಾದ. द्रवात् जायते—जनी (प्रादुर्भावे) "डः" (३-२-९८)।

**द्रवत् ದ್ರವತ್** (वि०) 1. ಓಡುತ್ತಿರುವ. 2. ಸುರಿಯುತ್ತಿರುವ, ಸೋರುತ್ತಿರುವ. द्रु (गतौ) "शतृ"

(३-२-१२४)। स्त्रियाम् "ङीप्" (४-१-६)। -न्ती -न्ति।

**द्रवन्ती ದ್ರವಂತೀ** (स्त्री०) 1. ನದಿ, ಹೊಳೆ. 2. ಇಲಿಯಾಲದ ಗಿಡ. द्रवति—द्रु (गतौ) "शतृ" (३-२-१२४)। "ङीप्" (४-१-६)। "स्रवन्ती च द्रवन्त्यपि। नद्या-मोषधिभेदे च" हेम०।

**द्रवाधार ದ್ರವಾಧಾರ** (पुं०) 1. ದ್ರವವಸ್ತುವಿಗೆ ಆಧಾರವಾದ ಪಾತ್ರೆ. 2. ಚುಲಕ, ನೀರು ನಿಲ್ಲುವಂತೆ ಗುಳಿಯಾಗಿರುವ ಅಂಗೈ. द्रवस्याधारः।

**द्रविड ದ್ರವಿಡ** (पुं० ब० व०) 1. ದ್ರವಿಡದೇಶ. 2. ದ್ರವಿಡದೇಶದ ಜನರು. ಆಂಧ್ರರು ಕನ್ನಡಿಗರು ಗುರ್ಜರರು ದ್ರವಿಡರು ಮಹಾರಾಷ್ಟ್ರದವರು ಇವರು ದ್ರವಿಡದೇಶದವರು. "आन्ध्राः कर्णाटकाश्चैव गुर्जरा द्रविडास्तथा। महाराष्ट्रा इति ख्याताः पञ्चैते द्रविडाः स्मृताः"। 3. ಕ್ಷತ್ರಿಯ ಹೆಂಗಸಿನಲ್ಲಿ ವ್ರಾತ್ಯಕ್ಷತ್ರಿಯನಿಂದ ಹುಟ್ಟಿದವನು. 4. ಪರಶುರಾಮನ ಭಯದಿಂದ ಕ್ಷತ್ರಿಯ ಧರ್ಮವನ್ನು ತ್ಯಜಿಸಿದ ಕ್ಷತ್ರಿಯ. "ततस्तु क्षत्रिया: केचिज्जामदग्न्यभयार्दिताः। विविशुर्गिरिदुर्गाणि मृगाः सिंहार्दिता इव"॥

**द्रविण ದ್ರವಿಣ** (न०) 1. ಧನ, ಹಣ. द्रवति—द्रु (गतौ) "इनन्" (उ० २-५०)। "द्रविणं परिमितममितव्ययिनं जनमाकुलीकुरुते। क्षीणाञ्चलमिव पीनस्तनजघनायाः कुलीनायाः"। 2. ಸುವರ್ಣ, ಚಿನ್ನ. "तेषां सदश्वभूयिष्ठास्तुङ्गा द्रविणराशयः" रघु० ४-७०। 3. ಬಲ, ಶಕ್ತಿ, ಸಾಮರ್ಥ್ಯ. 4. ಗೃಹ, ಮನೆ. 5. ಸ್ವರ್ಗ, ದೇವಲೋಕ. 6. ಶೌರ್ಯ, ಪರಾಕ್ರಮ. "द्रविणं गेहे वित्ते स्वर्गे पराक्रमे" नानार्थर०। "बभूवतुस्ततस्तस्य पक्षौ द्रविणवत्तरौ" भा० उद्योग० ११३-२०।

**द्रविणक ದ್ರವಿಣಕ** (पुं०) ಅಗ್ನಿಯ ಒಬ್ಬ ಮಗ. "अग्नेर्भार्या वसोर्धारा पुत्रा द्रविणकादयः" भाग० ६-६-१३।

**द्रविणनाशन ದ್ರವಿಣನಾಶನ** (पुं०) ನುಗ್ಗೆಗಿಡ. द्रविणं नाशयति — णश (अदर्शने) "ल्युः" (३-१-१३४)। ನುಗ್ಗೆಸೊಪ್ಪನ್ನು ತಿನ್ನುವುದರಿಂದ ಧನಹಾನಿ ಸಂಭವಿಸುವ ಕಾರಣ ಈ ಹೆಸರು.

**द्रविणप्रद ದ್ರವಿಣಪ್ರದ** (पुं०) 1. ವಿಷ್ಣು. द्रविणं तद्व्याख्यानविधिना समग्रं शास्त्रतदर्थरूपं धनं प्रददाति — प्र + डुदाञ् (दाने) "कः" (३-२-६)। "शास्त्रं तदर्थं द्रविणं प्रददाति जनाय यः। व्यासो भूत्वा हरिः साक्षात् द्रविणप्रद उच्यते" इति निरुक्तिः। "दारुणो द्रविणप्रदः" वि० स०। 2. ಧನವನ್ನು ಕೊಡುವ, ಐಶ್ವರ್ಯವನ್ನು ಕೊಡುವ.

**द्रविणाधिप ದ್ರವಿಣಾಧಿಪ, -अधिपति -ಅಧಿಪತಿ** (पुं०) ಕುಬೇರ.

**द्रविणोदय ದ್ರವಿಣೋದಯ** (पुं०) ಧನಾಗಮ, ಧನಪ್ರಾಪ್ತಿ. द्रविणस्योदयः। "पराङ्मुखे विधौ चेत्स्यात् कथंचिद्द्रविणोदयः" पञ्चतं०।

**द्रव्य ದ್ರವ್ಯ** (न०) 1. ಧನ, ವಿತ್ತ, ಹಣ. द्रुरिव कल्पवृक्ष इव "यः" (५-३-१०४)। "एकमेव दहत्यग्निर्नरं दुरुपसर्पिणम्। कुलं दहति राजाग्निः सपशुद्रव्यसञ्चयम्" मनु० ७-९। 2. ವಸ್ತು, ಪದಾರ್ಥ. 3. ಮಂಗಳವಸ್ತು, ಶುಭಸೂಚಕವಸ್ತು, ಹರ್ಷವುಂಟುಮಾಡುವ ಸಂಪತ್ತು. "न किञ्चिदपि कुर्वाणः सौख्यैर्दुःखान्यपोहति। तत्तस्य किमपि द्रव्यं यो हि यस्य प्रियो जनः" उ० रा० २-१९। 4. ವಿಲೇಪನ, ಹಚ್ಚುವ ಮುಲಾಮು. 5. ಮದ್ಯ, ಹೆಂಡ. 6. ಔಷಧಿ, ಮೂಲಿಕೆ. 7. ಕಾಂಸ್ಯ, ಕಂಚು. 8. (क) **ನೈಯಾಯಿಕ ಮತದಲ್ಲಿ** ಸಪ್ತ ಪದಾರ್ಥಗಳಲ್ಲೊಂದು. "द्रव्यं गुणस्तथा कर्म सामान्यं सविशेषकम्। समवायस्तथाऽभावः पदार्थाः सप्त कीर्तिताः" भाषाप०। ಈ ದ್ರವ್ಯಪದಾರ್ಥವು (1) पृथिवी, (2) जलम् (ನೀರು), (3) तेजः, (4) वायुः, (5) आकाशः, (6) कालः, (7) दिक्, (8) आत्मा ಮತ್ತು (9) मनः ಎಂದು ಒಂಬತ್ತು ವಿಧ. "क्षित्यप्तेजोमरुद्व्योमकालदिग्देहिनो मनः। द्रव्याणि" भाषाप०। (ख) **ವೈದ್ಯಶಾಸ್ತ್ರದಲ್ಲಿ** (1) रसः, (2) गुणः, (3) वीर्यम्, (4) विपाकः ಮತ್ತು (5) शक्तिः ಎಂದು ಈ ಐದೂ ಸೇರಿ ದ್ರವ್ಯವೆನಿಸುವುದು. "रसो गुणस्तथा वीर्यं विपाकः शक्तिरेव वा। पञ्चानां यः समाहारः तद्द्रव्यमिति कीर्त्यते। (ग) **ದ್ವೈತಮತದಲ್ಲಿ** (1) परमात्मा, (2) लक्ष्मीः, (3) जीवात्मा, (4) अव्याकृताकाशः, (5) प्रकृतिः, (6) गुणत्रयम्, (7) महत्तत्त्वम्, (8) अहङ्कारतत्त्वम्, (9) बुद्धिः, (10) मनः, (11) इन्द्रियम्, (12) मात्रा, (13) भूतम्, (14) ब्रह्माण्डम्, (15) अविद्या, (16) वर्णः, (17) अन्धकारः, (18) कालः, (19) वासना ಮತ್ತು (20) प्रतिबिम्बः ಎಂದು ಇಪ್ಪತ್ತು ವಿಧ. (घ) **ವಿಶಿಷ್ಟಾದ್ವೈತಮತದಲ್ಲಿ** (1) प्रकृतिः, (2) कालः, (3) शुद्धसत्त्वम्, (4) धर्मभूतज्ञानम्, (5) जीवः ಮತ್ತು

(6) ಈಶ್ವರ: ಎಂದು ಆರು ವಿಧ. (ಇ) **ಜೈನದರ್ಶನದಲ್ಲಿ** (1) जीव:, (2) धर्म:, (3) अधर्म:, (4) आकाश:, (5) काल: ಮತ್ತು (6) पुद्गल: ಎಂದು ಆರು ವಿಧ. 9. ಮರದ ಸಾರ, ಗೋಂದು. (वि०) 10. ಮರದ ಸಂಬಂಧವಾದ, ಮರದಿಂದ ತಯಾರಾದ. द्रु॒ क्ष:—तस्य विकार: अवयवो वा—द्रु "यत्" (४-३-१६१)।

**द्रव्यक ದ್ರವ್ಯಕ** (वि०) 1. ದ್ರವ್ಯವನ್ನು ಒಯ್ಯುವ. 2. ದ್ರವ್ಯವನ್ನು ಹೊರುವ. 3. ದ್ರವ್ಯವನ್ನು ತರುವ. द्रव्यं हरति वहति आवहति वा "कन्" (५-१-५१)।

**द्रव्यगण ದ್ರವ್ಯಗಣ** (पुं०) ವೈದ್ಯಶಾಸ್ತ್ರದಲ್ಲಿ ಉಕ್ತವಾದ ಔಷಧಿ (ಮೂಲಿಕೆ) ಗಳ ಗಣ (ಗುಂಪು). ಈ ಗಣಗಳು ಮೂವತ್ತೇಳು. (1) विदारीगन्धादिगण: (2) आरग्वधादि० (3) सालसारादि० (4) वरुणादि० (5) वीरतर्वादि० (6) रोध्रादि० (7) अर्कादि० (8) सुरसादि० (9) मुष्ककादि० (10) पिप्पल्यादि० (11) शलादि० (12) वचादि० (13) हरिद्रादि० (14) श्यामादि० (15) बृहत्यादि० (16) पटोलादि० (17) काकोल्यादि० (18) ऊषकादि० (19) सारिवादि० (20) अञ्जनादि० (21) परूषकादि० (22) प्रियङ्ग्वादि० (23) अम्बष्ठकादि० (24) न्यग्रोधादि० (25) गुडूच्यादि० (26) उत्पलादि० (27) मुस्तादि० (28) हरीतक्यादि० (29) आमलक्य ादि० (30) त्रप्वादि० (31) लाक्षादि० (32) लघुपञ्चमूल० (33) बृहत्पञ्चमूल० (34) दशमूल० (35) विदार्यादि० (36) करमर्दादि० ಮತ್ತು (37) कुशादि० सुश्रुत० सूत्र० ३८। ದೋಷಗಳ ಬಲಾಬಲಗಳನ್ನು ಚೆನ್ನಾಗಿ ತಿಳಿದುಕೊಂಡು ಇವುಗಳಿಂದ ಲೇಪಗಳು ಕಷಾಯ ತೈಲ ಘೃತ ಪಾನಕ (ಗಂಜಿ ಮೊದಲಾದುವು) ಗಳನ್ನು ಆಯಾ ಚಿಕಿತ್ಸೆಗನುಗುಣವಾಗಿ ತಯಾರಿಸಿ ಉಪಯೋಗಿಸಬೇಕು. "समासेन सप्तत्रिंशद्द्रव्यगणा भवन्ति"। "ज्ञात्वा दोषबलाबलम्। एभिर्लेपान् कषायांश्च तैलं सर्पींषि पानकान्। प्रविभज्य यथान्यायं कुर्वीत मतिमान् भिषक्" सुश्रुत० सूत्र० ३८-७९, ८०।

**द्रव्यगुण ದ್ರವ್ಯಗುಣ** (पुं०) 1. ದ್ರವ್ಯ (ವಸ್ತು) ಗಳ ಗುಣಗಳನ್ನು ತಿಳಿಸುವ ಗ್ರಂಥ. द्रव्याणां गुणा: प्रतिपाद्यन्ते यत्र। 2. ದ್ರವ್ಯಗಳಲ್ಲಿರುವ ಗುಣ. ಎಲ್ಲಾ ದ್ರವ್ಯಗಳೂ ಪೃಥಿವೀ ಮೊದಲಾದ ಪಂಚಭೂತಗಳಿಂದ ಉಂಟಾಗಿದ್ದರೂ पार्थिवद्रव्यम् आप्यद्रव्यम् तैजसद्रव्यम् वायव्यद्रव्यम् आकाशीयद्रव्यम् ಎಂದು ಆಯಾ ಭೂತಗಳ ಆಧಿಕ್ಯದಿಂದ ವ್ಯವಹರಿಸಲ್ಪಡುವುದು. "पृथिव्यप्तेजोवाय्वाकाशानां समुदायात् द्रव्याभिनिर्वृत्ति:। उत्कर्षस्त्वभिव्यञ्जको भवति" सुश्रुत० सूत्र० ४१-३।

(1) **पार्थिवद्रव्यम्**—ಇದರಲ್ಲಿ ಗಂಧ ಗುಣವು ಅಧಿಕವಾಗಿರುವುದು. ಕಷಾಯರಸವೂ ಮಧುರರಸವೂ ಸ್ವಲ್ಪವಾಗಿರುವುದು. ಈ ದ್ರವ್ಯವು ಸ್ಥೂಲ ಸಾಂದ್ರ (ನಿಬಿಡ) ಮಂದ ಸ್ಥಿರ ಗುರು ಮತ್ತು ಕಠಿನ.

(2) **आप्यद्रव्यम्**—ಇದು ರಸಭೂಯಿಷ್ಠವಾದುದು. ಕಷಾಯ ಅಮ್ಲ ಲವಣ ಮತ್ತು ಮಧುರ ರಸಗಳೂ ಇರುವುವು. ಇದು ಶೀತ ಜಡ ಮಂದ ಗುರು ಮತ್ತು ಮೃದು.

(3) **तैजसद्रव्यम्**—ಇದು ರೂಪಬಹುಲವಾದುದು. ಇದು ಉಷ್ಣ ತೀಕ್ಷ್ಣ ಸೂಕ್ಷ್ಮ ರೂಕ್ಷ ಲಘು ಮತ್ತು ವಿಶದವಾದುದು.

(4) **वायव्यद्रव्यम्**—ಸ್ಪರ್ಶಬಹುಲವಾದುದು. ಇದು ಸೂಕ್ಷ್ಮ ರೂಕ್ಷ ಖರ ಶೀತಲ ಲಘು ಮತ್ತು ವಿಶದವಾದುದು.

(5) **आकाशीयद्रव्यम्**—ಶಬ್ದಬಹುಲವಾದುದು. ಇದು ಶ್ಲಕ್ಷ್ಣ (ನುಣುಪು) ಸೂಕ್ಷ್ಮ ಮೃದು ವಿಶದ ವಿವಿಕ್ತ (ಪ್ರತ್ಯೇಕ) ಮತ್ತು ಅವ್ಯಕ್ತವಾದುದು.

**द्रव्यपति ದ್ರವ್ಯಪತಿ** (पुं०) ವಸ್ತುಗಳಿಗೆ ಅಧಿಪತಿಯಾದ ಮೇಷ ಮೊದಲಾದ ರಾಶಿಗಳು. द्रव्याणां पति:।

| ದ್ರವ್ಯಗಳು | ಅಧಿಪತಿಯಾದ ರಾಶಿ |
|---|---|
| ವಸ್ತ್ರ, ಕುರಿಯ ಉಣ್ಣೆ, ಕಡಲೆ, ಗೋಧಿ, ಅರಗು, ಯವ, ಮೂಲಿಕೆಗಳು ಮತ್ತು ಸ್ವರ್ಣ .. | ಮೇಷ. |
| ವಸ್ತ್ರ, ಪುಷ್ಪ, ಗೋಧಿ, ಬತ್ತ, ಯವ, ಎಮ್ಮೆ ಮತ್ತು ಎತ್ತು. .. | ವೃಷಭ. |
| ಧಾನ್ಯ, ಶರದೃತುವಿನ ಲತೆಗಳು, ತಾವರೆಯಗೆಡ್ಡೆ ಮತ್ತು ಹತ್ತಿ .. | ಮಿಥುನ. |
| ಹಾರಕ, ಬಾಳೆ, ಗರಿಕೆಹುಲ್ಲು, ಹಣ್ಣು, ಗೆಡ್ಡೆ, ಪತ್ರ, ಲವಂಗಪಟ್ಟೆ (ದಾಲ್ಚಿನ್ನಿ) .. | ಕರ್ಕಾಟಕ. |
| ಹೊಟ್ಟಿನ ಧಾನ್ಯ, ಹಣ್ಣಿನ ರಸ, ಸಿಂಹ ಮೊದಲಾದುವುಗಳ ಚರ್ಮ ಮತ್ತು ಬೆಲ್ಲ .. | ಸಿಂಹ. |
| ಅಗಸೆ, ಹುರುಳಿ, ಗೋಧಿ, ಹೆಸರು ಮತ್ತು ಅವರೆ .. | ಕನ್ಯಾ. |
| ಉದ್ದು, ಯವ, ಗೋಧಿ ಮತ್ತು ಸಾಸವೆ .. | ತುಲಾ. |

| ದ್ರವ್ಯಗಳು | ಅಧಿಪತಿಯಾದ ರಾಶಿ |
|---|---|
| ಕಬ್ಬು, ಕಬ್ಬಿಣ, ಕುರಿಯ ಮತ್ತು ಆಡಿನ ತುಪ್ಪಟ .. | ವೃಶ್ಚಿಕ. |
| ಕುದುರೆ, ಲವಣ, ವಸ್ತ್ರ, ಅಸ್ತ್ರ, ಎಳ್ಳು, ಧಾನ್ಯ ಮತ್ತು ಗೆಣಸು .. | ಧನುಸ್ಸು. |
| ವೃಕ್ಷ, ಲತೆಗಳ ಪೊದರು, ನೀರಿನಿಂದ ಬೆಳೆಯುವ ಸಸ್ಯಗಳು, ಕಬ್ಬು ಚಿನ್ನ ಮತ್ತು ಕಬ್ಬಿಣ .. | ಮಕರ. |
| ನೀರಿನಿಂದ ಉಂಟಾದ ವಸ್ತುಗಳು, ಹಣ್ಣು, ಹೂವು, ರತ್ನ ಮತ್ತು ಹೊಳೆಯುವ ವಸ್ತುಗಳು .. | ಕುಂಭ. |
| ಚಿಪ್ಪಿನಿಂದ ಉಂಟಾದ ಮುತ್ತು, ನೀರಿನಿಂದ ಉಂಟಾದ ವಸ್ತುಗಳು, ವಜ್ರ, ತೈಲಗಳು ಮೀನಿನಿಂದ ತಯಾರಾದ ವಸ್ತುಗಳು .. | ಮೀನ. |

**द्रव्ययज्ञ ದ್ರವ್ಯಯಜ್ಞ** (पुं०) ದ್ರವ್ಯದಿಂದ ಮಾಡುವ ಯಜ್ಞ. ಕೆಲವರು ದ್ರವ್ಯವನ್ನು ದೇವರ ಪೂಜೆಗಾಗಿ ಉಪಯೋಗಿಸುವರು. ಕೆಲವರು ದಾನಮಾಡುವರು. ಕೆಲವರು ಯಾಗಕ್ಕಾಗಿ ವಿನಿಯೋಗಿಸುವರು. ಇವೆಲ್ಲವೂ ದ್ರವ್ಯಯಜ್ಞಗಳು. "द्रव्ययज्ञास्तपोयज्ञा योगयज्ञास्तथापरे। स्वाध्यायज्ञानयज्ञाश्च यतयः संशितव्रताः" गीता ४-२८।

**द्रव्यसञ्चय ದ್ರವ್ಯಸಂಚಯ** (पुं०) ಧನಸಂಗ್ರಹ, ಧನವನ್ನು ಕೂಡಿಡುವುದು. द्रव्यस्य सञ्चयः।

**द्रव्यार्जन ದ್ರವ್ಯಾರ್ಜನ** (न०) ದ್ರವ್ಯಸಂಪಾದನೆ, ಹಣವನ್ನು ಸಂಪಾದಿಸುವುದು. द्रव्यस्यार्जनम्।

**द्रष्टव्य ದ್ರಷ್ಟವ್ಯ** (वि०) 1. ನೋಡಲ್ಪಡುವ. 2. ನೋಡಲು ಯೋಗ್ಯನಾದ. 3. ನೋಡಬೇಕಾದ. दृशिर् (प्रेक्षणे) "तव्यः" (३-१-९६)। 4. ಸಾಕ್ಷಾತ್ಕರಿಸಲ್ಪಡುವ. "आत्मा वा अरे द्रष्टव्यः श्रोतव्यो मन्तव्यो निदिध्यासितव्यः"।

**द्रष्टुकाम ದ್ರಷ್ಟುಕಾಮ** (वि०) ನೋಡಲು ಅಪೇಕ್ಷೆಯುಳ್ಳ, ನೋಡಲು ಆಸೆಪಡುವ. द्रष्टुं कामो यस्य। "ततो भर्तृदारिकां द्रष्टुकामया प्रवृत्तिनिमित्तमवलोकिताऽनुप्रेषिता" मालती० २।

**द्रष्टुमनस् ದ್ರಷ್ಟುಮನಸ್** (वि०) ನೋಡಲು ಮನಸ್ಸುಳ್ಳ. द्रष्टुं मनो यस्य। "ललिताभिनयं तमद्य भर्ता मरुतां द्रष्टुमनाः सलोकपालः" विक्र० २-१७।

**द्रष्टृ ದ್ರಷ್ಟೃ** (वि०) 1. ನೋಡುವವನು. दृशिर् (प्रेक्षणे) "तृच्" (३-१-१३३)। 2. ಸಾಕ್ಷಾತ್ಕರಿಸುವವನು, ಎದುರಿಗೆ ಸಾಕ್ಷಾತ್ತಾಗಿ ನೋಡುವವನು. "द्रष्टारो व्यवहाराणां साक्षिणश्च त एव हि" याज्ञ० २-२०२। स्त्रियाम् "ङीप्" (४-१-५)। **द्रष्ट्री ದ್ರಷ್ಟ್ರೀ.**

**द्रा — कुत्सायां गतौ** (अदा० पर० अक० अनि०)। द्राति। दद्रौ। द्राता। द्रास्यति। द्रातु। अद्रात्। द्रायात्। ಇತ್ಯಾದಿ. ಓಡಿಹೋಗು, ವೇಗವಾಗಿ ಹೋಗು. ಪಲಾಯನಮಾಡು.

**द्राक् ದ್ರಾಕ್** (अव्य०) ಜಾಗ್ರತೆಯಾಗಿ, ಶೀಘ್ರವಾಗಿ, ಬೇಗ. द्रा कुत्सायां (गतौ) "कुः" बाहु०। "द्राङ्निष्पेषविशीर्णवज्रशकलप्रत्युप्तरूढव्रणग्रन्थ्युद्भासिनि" म० वी० १-३४।

**द्राक्षा ದ್ರಾಕ್ಷಾ** (स्त्री०) 1. ದ್ರಾಕ್ಷಾಲತೆ, ದ್ರಾಕ್ಷಿಯ ಬಳ್ಳಿ. द्राक्षि (द्राक्षायाम्) "घञ्" (३-३-१९)। "आस्तीर्णाजिनरत्नासु द्राक्षावलयभूमिषु" रघु० ४-६५। 2. ದ್ರಾಕ್ಷಿಯ ಹಣ್ಣು. द्राक्षायाः फलम् "अण्" (४-३-१६४)। अणो लुप् (४-३-१६७)।

**द्राक्षारस ದ್ರಾಕ್ಷಾರಸ** (पुं०) ದ್ರಾಕ್ಷಿಯ ಹಣ್ಣಿನ ರಸ, ಮದ್ಯ. "पुन्नागतालीबहुलं द्राक्षारसघनं क्वचित्" हरिवं०।

**द्राघिमन् ದ್ರಾಘಿಮನ್** (पुं०) ದೈರ್ಘ್ಯ, ಉದ್ದ, ನೀಳ. दीर्घस्य भावः "इमनिच्" (५-१-१२२)। दीर्घशब्दस्य द्राघादेशः (६-४-१५७)।

**द्राघिष्ठ ದ್ರಾಘಿಷ್ಠ** (वि०) ಬಹಳ ಉದ್ದವಾದ, ಬಹಳ ದೀರ್ಘವಾದ. अतिशयेनायं दीर्घः — दीर्घ "इष्ठन्" (५-३-५५)। दीर्घशब्दस्य द्राघादेशः (६-४-१५७)।

**द्राघीयस् ದ್ರಾಘೀಯಸ್** (वि०) ಹೆಚ್ಚು ದೀರ್ಘವಾದ. अयमेनयोरतिशयेन दीर्घः-दीर्घ "ईयसुन्" (५-३-५७)। दीर्घशब्दस्य द्राघादेशः (६-४-१५७)। "द्राघीयसा वयोऽतीतः परिक्लान्तः किलाध्वना" किरा० ११-२। स्त्रियाम् "ङीप्" (४-१-६)। **-यसी — ಯಸೀ.** "द्राघीयसी दृढतरा गुणवागुरात्वम्" दयाश०। "द्राघीयसीं दारुकसारथिस्ताम्" याद० १३-३९।

**द्राण ದ್ರಾಣ** (वि०) 1. ನಿದ್ರೆಮಾಡಿದ. 2. ಓಡಿಹೋದ, ಪಲಾಯನಮಾಡಿದ. द्रा (कुत्सायां गतौ) कर्त० "क्तः" (३-४-७२)। 3. ನಿದ್ರೆ. 4. ಓಟ, ಪಲಾಯನ. द्रा भावे "क्तः" (३-३-११४)।

**द्राप ದ್ರಾಪ** (पुं०) 1. ಪಂಕ, ಕೆಸರು. द्रा (कुत्सायां गतौ) + णिच् "अच्" (३-१-१३४)। 2. ಆಕಾಶ. 3. ಮೂರ್ಖ. 4. ಪರಮೇಶ್ವರ.

**द्रामिल ದ್ರಾಮಿಲ** (पुं०) 1. ಚಾಣಕ್ಯ. (पुं० ब० व०) 2. ದ್ರವಿಡದೇಶದ ನಿವಾಸಿಗಳು.

**द्राव ದ್ರಾವ** (पुं०) 1. ಗಮನ, ಸಂಚಾರ. द्रु (गतौ) भावे "घञ्" (३-३-१८)। 2. ಸೋರುವುದು. 3. ಅನುತಾಪ.

**द्रावक ದ್ರಾವಕ** (पुं०) 1. ಚಂದ್ರಕಾಂತಶಿಲೆ. द्रवति—द्रु (गतौ) "ण्वुल्" (३-१-१३३)। 2. ಚೋರ, ಕಳ್ಳ. 3. ಬುದ್ಧಿವಂತ, ಜಾಣ. 4. ವಿಟ, ಕಾಮುಕ, ಸ್ತ್ರೀಲೋಲ. "द्रावकस्तु शिलाभेदे स्यान्मोषकविदग्धयोः" हेम०। 5. ಬಳಿಗಾರ, ಚಿನ್ನವನ್ನು ಕರಗಿಸುವ ಒಂದು ಕ್ಷಾರ. (न०) 6. ಜೇನುಮೇಣ. (वि०) 7. ಕರಗಿಸುವ, ದ್ರವವಾಗಿ ಮಾಡುವ. द्रु (गतौ) + णिच् "ण्वुल्" (३-१-१३३)। 8. ಮನೋಹರವಾದ. 9. ಓಡಿಸುವ.

**द्रावण ದ್ರಾವಣ** (न०) 1. ಚಿಲ್ಲದ ಬೀಜ. द्रु (गतौ) + णिच् "ल्युः" (३-१-१३४)। 2. ಕರಗಿಸುವುದು, ದ್ರವವಾಗಿ ಮಾಡುವುದು. द्रु+णिच् भावे "ल्युट्" (३-३-११५)। 3. ಓಡಿಸುವುದು. (वि०) 4. ಓಡಿಸುವ, ಪಲಾಯನಮಾಡಿಸುವ. द्रु+णिच् "ल्युः" (३-१-१३४)। "सदैवयुक्तो रथसत्तमो वै दुराधर्षे द्रावणः शात्रवाणाम्" भा० कर्ण० २७-७। 5. ಕರಗಿಸುವ, ದ್ರವವಾಗಿ ಮಾಡುವ.

**द्रावयत् ದ್ರಾವಯತ್** (वि०) 1. ಕರಗಿಸುತ್ತಿರುವ, ದ್ರವವಾಗಿ ಮಾಡುತ್ತಿರುವ. द्रु (गतौ) + णिच् "शतृ" (३-२-१२४)। 2. ಓಡಿಸುತ್ತಿರುವ, ಓಡುವಂತೆ ಮಾಡುತ್ತಿರುವ. स्त्रियाम् "ङीप्" (४-१-६)। -यन्ती -ಯಂತೀ.

**द्रावयितृ ದ್ರಾವಯಿತೃ** (वि०) 1. ಕರಗಿಸುವ, ದ್ರವವಾಗಿ ಮಾಡುವ. 2. ಓಡಿಸುವ. द्रु (गतौ) + णिच् "तृच्" (३-१-१३३)।

**द्राविड ದ್ರಾವಿಡ** (पुं०) ದ್ರವಿಡದೇಶದಲ್ಲಿ ವಂಶಪರಂಪರೆಯಾಗಿ ವಾಸಿಸುವವನು. द्रविडदेशोऽभिजनोऽस्य "अण्" (४-३-९०)। "कर्णाटाश्चैव तैलङ्गा गुर्जरा राष्ट्रवासिनः। आन्ध्राश्च द्राविडाः पञ्च विन्ध्यदक्षिणवासिनः" स्कान्द०।

**द्राविडक ದ್ರಾವಿಡಕ** (पुं०) ಕಚೋರ. द्रविडदेशे जातः "अण्" (४-३-२५)। "कन्" (५-३-७५)। (न०) 2. ವಿಡ್ಲವಣ, ಒಂದು ವಿಧ ಉಪ್ಪು.

**द्राविडी ದ್ರಾವಿಡೀ** (स्त्री०) 1. ದ್ರವಿಡದೇಶದ ಹೆಂಗಸು. 2. ಸಣ್ಣ ಜಾತಿಯ ಯಾಲಕ್ಕಿ. द्रविडे भवा "अण्" (४-३-५३)। "ङीप्" (४-१-१५)।

**द्रावित ದ್ರಾವಿತ** (वि०) 1. ಕರಗಿಸಲ್ಪಟ್ಟ, ದ್ರವವಾಗಿ ಮಾಡಲ್ಪಟ್ಟ. द्रु (गतौ) + णिच् "क्तः" (३-२-१०२)। "क्षालितं नु शमितं नु वधूनां द्रावितं नु हृदयं मधुवारैः" माघ० १०-१४। 2. ಓಡಿಸಲ್ಪಟ್ಟ, ಓಡುವಂತೆ ಮಾಡಲ್ಪಟ್ಟ.

**द्रु – गतौ** (भ्वा० पर० अक० अनि०)। द्रवति। दुद्राव। द्रोता। द्रोष्यति। द्रवतु। अद्रवत्। द्रवेत्। ಇತ್ಯಾದಿ. 1. ಓಡು, ವೇಗವಾಗಿ ಹೋಗು. 2. ಪಲಾಯನಮಾಡು, ಓಡಿಹೋಗು. "रक्षांसि भीतानि दिशो द्रवन्ति सर्वे नमस्यन्ति च सिद्धसंघाः" गीता ११-३६। 3. ದ್ರವವಾಗು, ಕರಗು. "विकसति हि पतङ्गस्योदये पुण्डरीकं द्रवति च हिमरश्मावुद्गते चन्द्रकान्तः" उ० रा० ६-१२।

भावे :—द्रूयते। दुद्रुवे। द्राविता, द्रोता। द्राविष्यते, द्रोष्यते। द्रूयताम्। ಇತ್ಯಾದಿ.

णिचि :—द्रावयति। द्रावयां चकार, -बभूव, -आस। द्रावयिता। द्रावयिष्यति। द्रावयतु। अद्रावयत्। द्रावयेत्। ಇತ್ಯಾದಿ.

कृत्सु :—विद्रोतव्यम्। विद्रवणीयम्। द्राव्यम्, विद्राव्यम्। विद्रुतम्। विद्रुतवान्, -वती। विद्रवन्, -वन्ती। विद्रोतुम्। विद्रुतम्। विद्रवणम्। द्रुत्वा। विद्रुत्य।

**द्रु ದ್ರು** (पुं०) 1. ವೃಕ್ಷ, ಮರ. द्रवत्यूर्ध्वम्— द्रु (गतौ) "डुः" (वा० ३-२-१८०)। "आददीताथ षड्भागं द्रुमांसमधुसर्पिषाम्" मनु० ७-१३१। 2. ಕೊಂಬೆ, ರೆಂಬೆ, ಶಾಖೆ. "समुदाये विद्यमानाः शब्दाः अवयवेष्वपि दृश्यन्ते" इति न्यायः। (स्त्री०) 3. ಚಲನ, ಗಮನ. (न०) 4. ಮರ. 5. ಮರದಿಂದ ತಯಾರಾದ ಪದಾರ್ಥ.

**द्रुकिलिम ದ್ರುಕಿಲಿಮ** (न०) ದೇವದಾರು ವೃಕ್ಷ. किलति— किल (श्वैत्यक्रीडनयोः) "किमच्"। बाहु०। द्रुश्चासौ किलिमं च।

**द्रुग्ध ದ್ರುಗ್ಧ** (न०) 1. ತೊಂದರೆ, ಕೇಡು, ಹಿಂಸೆ. द्रुह (जिघांसायाम्) भावे "क्तः" (३-३-११४)। (वि०) 2. ದ್ರೋಹಮಾಡಿದ, ತೊಂದರೆಪಡಿಸಿದ. द्रुह कर्तृ० "क्तः" (३-४-७२)।

**द्रुग्धवत् ದ್ರುಗ್ಧವತ್** (वि०) ದ್ರೋಹಮಾಡಿದವನು, ತೊಂದರೆಪಡಿಸಿದವನು, द्रुह (जिघांसायाम्) "क्तवतुः"

(३-२-१०२)। स्त्रियाम् "ङीष्" (४-१-६)। -वती - ವತೀ.

**द्रुघण(न) ದ್ರುಘಣ(ನ)** (ಪುಂ) 1. ಮುದ್ಗರವೆಂಬ ಒಂದು ಆಯುಧ, ಕಬ್ಬಿಣದ ಗುದಿಗೆ. 2. ಮರದಿಂದ ಮಾಡಿದ ಕೊಡಲಿ. 3. ಪರಶು, ಕೊಡಲಿ. द्रुर्वृक्षः हन्यतेऽनेन। 4. ಬ್ರಹ್ಮ, ಚತುರ್ಮುಖ. द्रुः संसारगतिः हन्यतेऽनेन—हन (हिंसागत्योः) "अप्" घनादेशश्च (३-३-८२)।

**द्रुघ्नी ದ್ರುಘ್ನೀ** (स्त्री०) 1. ಕೈಕೊಡಲಿ, ಚಿಕ್ಕ ಕೊಡಲಿ. 2. ಮಚ್ಚುಕತ್ತಿ.

**द्रुण ದ್ರುಣ** (ಪುಂ) 1. ಭೃಂಗ, ಭ್ರಮರ, ದುಂಬಿ. द्रुणति—द्रुण (हिंसागतिकौटिल्येषु) "कः" (३-१-१३५)। 2. ವೃಶ್ಚಿಕ, ಚೇಳು. (स्त्री०) जातिं "ङीष्"। -णी - ಣೀ. (ನಂ) 3. ಖಡ್ಗ, ಕತ್ತಿ. 4. ಧನುಸ್ಸು, ಬಿಲ್ಲು. "द्रुणं चापे च खड्गे च द्रुणो वृश्चिकभृङ्गयोः" विश्व०। (ವಿಂ) 5. ಪಿಶುನ ದುರ್ಜನ. (स्त्री०) -णा - ಣಾ. 6. ಮೌರ್ವಿ, ಬಿಲ್ಲಿನ ಅಂಬು. -णी - ಣೀ. 7. ಹೆಣ್ಣು ಆವೆ. 8. ನೀರಿನ ತೊಟ್ಟಿ. "द्रुण्यम्बुद्रोणीकच्छप्योः" मेदि०।

**द्रुणस ದ್ರುಣಸ** (ವಿಂ) ಮರದಂತೆ ಉದ್ದವಾದ ಮೂಗುಳ್ಳವನು. द्रुरिव दीर्घा नासिकाऽस्य "अच्" (५-४-११८)। नासिकाया नसादेशश्च। णत्वम् (८-४-३)।

**द्रुणह ದ್ರುಣಹ** (ಪುಂ) ಖಡ್ಗದ ಕೋಶ, ಕತ್ತಿಯ ಒರೆ. द्रुणं खड्गं हन्ति गच्छति—हन (हिंसागत्योः) "डः"।

**द्रुत ದ್ರುತ** (ವಿಂ) 1. ಕರಗಿರುವ, ದ್ರವವಾಗಿರುವ. द्रु (गतौ) "क्तः" (३-४-७२)। "यस्या महानीलतटीरिव द्रुताः प्रयान्ति पीत्वा हिमपिण्डपाण्डुराः" माघ० १२-६८। 2. ಬೆಂಕಿಯಲ್ಲಿ ಕಾದು ಕರಗಿರುವ. "द्रुतशातकुम्भनिभमंशुमतो वपुरर्धमग्नवपुषः पयसि" माघ० ९-९। 3. ವೇಗದಿಂದ ಕೂಡಿದ. "उत्तेरुरुत्तालखुरारवं द्रुताः श्लथीकृतप्रग्रहमर्वतां व्रजाः" माघ० १२-३१। 4. ಪಲಾಯನಮಾಡಿದ, ಓಡಿಹೋದ. "पयः स्फुरच्छालिशिखापिशङ्गितं द्रुतं धनुष्खण्डमिवाहिविद्विषः" किरा० ४-२७। (ನಂ) 5. ಗಾನದ ವೇಗವಾದ ಕಾಲ (ದ್ರುತಕಾಲ). (अव्य०) 6. ವೇಗವಾಗಿ, ಶೀಘ್ರವಾಗಿ. "अपदान्तरं च परितः क्षितिक्षितामपतन् द्रुतभ्रमितहेमनेमयः" माघ० १३-४।

**द्रुतपद ದ್ರುತಪದ** (ನಂ) 1. ವೇಗವಾಗಿ ನಡೆಯುವ ಕಾಲು. द्रुतं शीघ्रगामि पदम्। (ವಿಂ) 2. ವೇಗವಾಗಿ ನಡೆಯುವ ಕಾಲುಗಳುಳ್ಳ.

**द्रुतविलम्बित ದ್ರುತವಿಲಂಬಿತ** (ನಂ) ವೃತ್ತರತ್ನಾಕರದಲ್ಲಿ ಉಕ್ತವಾದ ಹನ್ನೆರಡನೆಯ ಛಂದಸ್ಸಿನ ಒಂದು ವೃತ್ತ. ಪ್ರತಿಪಾದದಲ್ಲಿಯೂ न ಗಣ भ ಗಣ भ ಗಣ ಮತ್ತು र ಗಣಗಳಿರುವುದು "ದ್ರುತವಿಲಂಬಿತ" ವೃತ್ತವಾಗುವುದು. ಇದರ ಲಕ್ಷಣ: "द्रुतविलम्बितमाह नभौ भरौ" वृ० र०। ಇದರ ಗಣವಿನ್ಯಾಸ:

न भ भ र
III UII UII UIU ।

**द्रुति ದ್ರುತಿ** (स्त्री०) 1. ಕರಗುವುದು, ದ್ರವವಾಗುವುದು. 2. ಗತಿ, ಗಮನ. द्रु (गतौ) "क्तिन्" (३-३-९४)।

**द्रुनख ದ್ರುನಖ** (ಪುಂ) ಕಂಟಕ, ಮುಳ್ಳು. द्रोर्नख इव। "कण्टके पत्रसूचिद्रुनखवङ्किलाः" त्रिकाण्ड०।

**द्रुपद ದ್ರುಪದ** (ಪುಂ) 1. ಪಾಂಚಾಲ ದೇಶದ ದೊರೆ, ದ್ರುಪದರಾಜ. "गच्छतो नस्तु पाञ्चालान् द्रुपदस्य पुरं प्रति। इच्छामो भवतो ज्ञातुं परं कौतूहलं हि नः" भा० आदि० १८५-५। [ದ್ರುಪದರಾಜನೂ ದ್ರೋಣಾಚಾರ್ಯರೂ ದ್ರೋಣಾಚಾರ್ಯರ ತಂದೆಯಾದ ಭರದ್ವಾಜರಲ್ಲಿ ಧನುರ್ವಿದ್ಯೆಯನ್ನು ಕಲಿತರು. ದ್ರುಪದನು, ತಾನು ರಾಜನಾದನಂತರ ದ್ರೋಣಾಚಾರ್ಯರಿಗೂ ಅರ್ಧ ರಾಜ್ಯವನ್ನು ಕೊಡುವುದಾಗಿ ಪ್ರತಿಜ್ಞೆ ಮಾಡಿದ್ದನು. ವಿದ್ಯಾಭ್ಯಾಸ ಮುಗಿದು ದೊರೆಯಾದನಂತರ ದ್ರುಪದನ ಆಸ್ಥಾನಕ್ಕೆ ಹೋಗಿದ್ದ ದ್ರೋಣಾಚಾರ್ಯರನ್ನು ಇವನು ಗರ್ವದಿಂದ ತಿರಸ್ಕರಿಸಿ ಮಾತನಾಡಿದನು. ಆಚಾರ್ಯರು ಇದರಿಂದ ಕುಪಿತರಾಗಿ ತಮ್ಮ ಶಿಷ್ಯರಾದ ಪಾಂಡವರ ಮೂಲಕ ದ್ರುಪದನನ್ನು ಸೆರೆಹಿಡಿಯಿಸಿ ಅವಮಾನಗೊಳಿಸಿದರು. ದ್ರುಪದನು ಬಹಳ ದುಃಖಿತನಾಗಿ ಈ ಸೇಡನ್ನು ತೀರಿಸಿಕೊಳ್ಳಲು ಒಂದು ಯಾಗವನ್ನು ಮಾಡಿ ದ್ರೋಣಾಚಾರ್ಯರನ್ನು ಜಯಿಸುವ ಒಬ್ಬ ಪುತ್ರನನ್ನು ಪಡೆದನು. ಈತನೇ ದ್ರೋಣಾಚಾರ್ಯರ ಶಿರಸ್ಸನ್ನು ಕಡಿದ ಧೃಷ್ಟದ್ಯುಮ್ನನು. ಈ ಧೃಷ್ಟದ್ಯುಮ್ನನ ಜೊತೆಯಲ್ಲಿ ಅಗ್ನಿಕುಂಡದಿಂದ ಯಾಜ್ಞಸೇನಿ (ದ್ರೌಪದಿ) ಯೂ ಆವಿರ್ಭವಿಸಿದಳು. ದ್ರುಪದನಿಗೆ ಇವರಿಬ್ಬರಲ್ಲದೆ ಸುಮಿತ್ರ, ಪ್ರಿಯದರ್ಶನ, ವೀರಕೇತು, ಸುರಥ, ಶತ್ರುಂಜಯ ಮತ್ತು ಧ್ವಜಕೇತು ಎಂಬ ಮಕ್ಕಳೂ ಇದ್ದರು. ಇದಕ್ಕೆ ಮುಂಚೆ ಸ್ತ್ರೀರೂಪದಿಂದ ಶಿಖಂಡಿಯೂ ಹುಟ್ಟಿದ್ದನು.]

**द्रुपदात्मज ದ್ರುಪದಾತ್ಮಜ**(ಪುಂ) ಧೃಷ್ಟದ್ಯುಮ್ನ. (स्त्री०) **–आत्मजा –ಆತ್ಮಜಾ.** ದ್ರೌಪದಿ.

**द्रुपदी ದ್ರುಪದೀ** (स्त्री०) ಮರದಂತೆ ಉದ್ದವಾದ ಕಾಲುಗಳುಳ್ಳ ಹೆಂಗಸು. द्रुरिव दीर्घौ पादौ यस्याः—पादस्य लोपो "ङीष्" च निपा० (५-४-१३९)।

**द्रुम ದ್ರುಮ** (ಪುಂ) 1. ವೃಕ್ಷ, ಮರ. द्रुः शाखाऽस्यास्ति "मः" (५-२-१०८)। "द्रुमेषु सख्या कृतजन्मसु स्वयं फलं तपःसाक्षिषु दृष्टमेष्वपि" कुमा० ५-६०। 2. ಪಾರಿಜಾತದ ಗಿಡ. 3. ಕಿನ್ನರರ ರಾಜ. "द्रुमो महीरुहे पारिजाते किंपुरुषेश्वरे" मेदि०। "किंपुरुषाधिराज्यमिव मुनिजनगृहीतजलकलशपरिषिच्यमानद्रुमम्" काद०। 4. ಶ್ರೀಕೃಷ್ಣನಿಗೆ ರುಕ್ಮಿಣಿಯಲ್ಲಿ ಜನಿಸಿದ ಒಬ್ಬ ಮಗ.

**द्रुमनख ದ್ರುಮನಖ** (ಪುಂ) ಕಂಟಕ. ಮುಳ್ಳು.

**द्रुमव्याधि ದ್ರುಮವ್ಯಾಧಿ** (ಪುಂ) 1. ಲಾಕ್ಷೆ, ಅರಗು. द्रुमस्य व्याधिरिव।

**द्रुमश्रेष्ठ ದ್ರುಮಶ್ರೇಷ್ಠ** (ಪುಂ) ತಾಳವೃಕ್ಷ, ಪನೆಮರ.

**द्रुमषण्ड ದ್ರುಮಷಂಡ** (ಪುಂ) ಮರಗಳ ಸಮೂಹ.

**द्रुमसेन ದ್ರುಮಸೇನ** (ಪುಂ) ಗವಿಷ್ಠನೆಂಬ ಅಸುರನ ಅಂಶದಿಂದ ಹುಟ್ಟಿದ ಒಬ್ಬ ದೊರೆ.

**द्रुमामय ದ್ರುಮಾಮಯ** (ಪುಂ) 1. ಲಾಕ್ಷೆ, ಅರಗು. द्रुमस्यामय इव। 2. ಮರಗಳಿಗೆ ಬರುವ ರೋಗ.

**द्रुमारि ದ್ರುಮಾರಿ** (ಪುಂ) ಗಜ, ಆನೆ. द्रुमाणामरिः।

**द्रुमाश्रय ದ್ರುಮಾಶ್ರಯ** (ಪುಂ) 1. ಓತಿಕೇತ, ಹೆಂಟೆಗೊದ್ದ. (ವಿ೦) 2. ಮರವನ್ನು ಆಶ್ರಯಿಸಿರುವ, ಮರದ ಆಸರೆಯುಳ್ಳ. द्रुमा आश्रयो यस्य।

**द्रुमोत्पल ದ್ರುಮೋತ್ಪಲ** (ನಂ) ಬೆಟ್ಟಗಣಗಿಲೆ ಗಿಡ. द्रुमे उत्पलमिव पुष्पमस्य।

**द्रुवय ದ್ರುವಯ**(ನಂ) ಅಳತೆ. द्रु "वयः" (४-३-१६२)। "यौतवं द्रुवयं पाय्यमिति मानार्थकं त्रयम्" अम०।

**द्रुसल्लक ದ್ರುಸಲ್ಲಕ** (ಪುಂ) ಪ್ರಿಯಾಲವೃಕ್ಷ. द्रुषु सल्लक इव।

**द्रुह – जिघांसायाम्** (दिवा० पर० सक० वेट्)। द्रुह्यति। दुद्रोह। द्रोहिता, द्रोग्धा। द्रोहिष्यति, ध्रोक्ष्यति। द्रुह्यतु। अद्रुह्यत्। द्रुह्येत्। ಇತ್ಯಾದಿ. ದ್ರೋಹಮಾಡು, ಹಿಂಸಿಸು, ತೊಂದರೆಪಡಿಸು, ಕೇಡನ್ನು ಬಯಸು. "यान्वेति मां द्रुह्यति मह्यमेव" नैष० ३-७।

**कर्मणि :**—द्रुह्यते। दुद्रुहे। द्रोहिता, द्रोग्धा, द्रोढा। दोहिष्यते, ध्रोक्ष्यते। द्रुह्यताम्। ಇತ್ಯಾದಿ.

**कृत्सु :**—द्रोहितव्यम्, द्रोग्धव्यम्, द्रोढव्यम्। द्रोहणीयम्। द्रोह्यम्। द्रुघः, द्रूढः। द्रुग्धवान्, द्रूढवान्। द्रुह्यन्, द्रुह्यन्ती। द्रोहितुम्, द्रोग्धुम्, द्रोढुम्। द्रुग्धम्, द्रूढम्। द्रोहित्वा, द्रुहित्वा, द्रुग्ध्वा, द्रूढ्वा। अनुद्रुह्य।

**द्रुह् ದ್ರುಹ್** (ವಿ೦) ದ್ರೋಹಮಾಡುವ, ಹಿಂಸಿಸುವ, ತೊಂದರೆಪಡಿಸುವ. द्रुह (जिघांसायाम्) "क्विप्" (३-२-६१)। ಇದರ ಪ್ರಥಮಾವಿಭಕ್ತಿಯ ರೂಪಗಳು (८-२-३३)।

ध्रुक्
ध्रुग्
ध्रुट्
ध्रुड्
} द्रुहौ द्रुहः।

"निजौजसोज्जासयितुं जगद्द्रुहामुपाजहीथा न महीतलं यदि" माघ० १-३७।

**द्रुह ದ್ರುಹ** (ಪುಂ) 1. ಶೂದ್ರನಿಗೆ ದ್ರವಿಡಸ್ತ್ರೀಯಲ್ಲಿ ಜನಿಸಿದವನು. "नटी श्राणञ्जकं वाटी विभण्डं द्रविडी द्रुहम्" वैज०। 2. ಪುತ್ರ, ಮಗ. (ವಿ೦) 3. ದ್ರೋಹಮಾಡುವ, ತೊಂದರೆಕೊಡುವ, ಹಿಂಸಿಸುವ, ಕೇಡನ್ನು ಬಯಸುವ. (स्त्री०) **–ही –ಹೀ.** ಪುತ್ರಿ, ಮಗಳು.

**द्रुहिण ದ್ರುಹಿಣ**(ಪುಂ) 1. ಬ್ರಹ್ಮ, ಚತುರ್ಮುಖ. द्रुह्यति सुरेभ्यः दुष्टेभ्यो वा—द्रुह (जिघांसायाम्) "इनच्" बाहु०। "द्रुहिणे सृष्टिशक्तिश्च हरौ पालनशक्तिता"। 2. ವಿಷ್ಣು. 3. ಈಶ್ವರ, ಪರಶಿವ. "द्रुहिणौ हरिधातारौ" वैज०।

**द्रुह्यत् ದ್ರುಹ್ಯತ್** (ವಿ೦) ತೊಂದರೆಪಡಿಸುತ್ತಿರುವ. द्रुह (जिघांसायाम्) "शतृ" (३-२-१२४)। स्त्रियाम् "ङीप्" (४-१-६)। **–न्ती –ನ್ತೀ.**

**द्रुह्यु ದ್ರುಹ್ಯು** (ಪುಂ) ಯಯಾತಿರಾಜನಿಗೆ ಶರ್ಮಿಷ್ಠೆಯಲ್ಲಿ ಹುಟ್ಟಿದ ಒಬ್ಬ ಮಗ. ಈತನು ತನ್ನ ತಂದೆಯ ಮುಪ್ಪನ್ನು ತೆಗೆದುಕೊಂಡು ತನ್ನ ಯೌವನವನ್ನು ಅವನಿಗೆ ಕೊಡಲು ಸಮ್ಮತಿಸಲಿಲ್ಲವಾದುದರಿಂದ ತನಗೂ ತನ್ನ ವಂಶದವರಿಗೂ ತಂದೆಯ ಶಾಪದಿಂದ ರಾಜ್ಯದ ಅಧಿಕಾರವಿಲ್ಲವಾಯಿತು.

**द्रू – हिंसायाम्** (क्र्या० उभ० सक० से०)। द्रूणाति, द्रूणीते। दुद्राव। द्रविता। द्रविष्यति, –ते। ಇತ್ಯಾದಿ. ಹಿಂಸಿಸು, ತೊಂದರೆಪಡಿಸು.

**द्रू ದ್ರೂ** (ಪುಂ) ಸುವರ್ಣ, ಚಿನ್ನ. द्रुङ् (गतौ) "क्विप्" दीर्घश्च (उ० २-५८)।

**द्रूढ ದ್ರೂಢ** (ವಿಂ) 1. ಹಿಂಸಿಸಲ್ಪಟ್ಟ, ತೊಂದರೆಪಡಿಸಲ್ಪಟ್ಟ. (ನಂ) 2. ಹಿಂಸೆ, ತೊಂದರೆ, ಕೇಡು.

**द्रूण ದ್ರೂಣ** (ಪುಂ) ವೃಶ್ಚಿಕ, ಚೇಳು.

**द्रेकृ – शब्दोत्साहयोः** (भ्वा० आत्म० अक० से०)। द्रेकते। दिद्रेके। अद्रेकिष्ट। 1. ಶಬ್ದಮಾಡು. 2. ಬೆಳೆ, ವೃದ್ಧಿಹೊಂದು.

**द्रेक्क ದ್ರೇಕ್ಕ** (ಪುಂ) ರಾಶಿಯ ಮೂರನೆಯ ಒಂದು ಭಾಗ. द्रेक्काण — पृषो०।

**द्रेक्काण ದ್ರೇಕ್ಕಾಣ** (ಪುಂ) ರಾಶಿಯ ಮೂರನೆಯ ಒಂದು ಭಾಗ. ಲಗ್ನರಾಶಿಯ ಪ್ರಮಾಣವನ್ನು ಮೂರು ಭಾಗ ಮಾಡಿದರೆ ಪ್ರತಿಯೊಂದಕ್ಕೂ "**ದ್ರೇಕ್ಕಾಣ**" ಎಂದು ಹೆಸರು. 12 ರಾಶಿಗಳಲ್ಲೂ 36 ದ್ರೇಕ್ಕಾಣಗಳಿವೆ.

**द्रेष्काण ದ್ರೇಷ್ಕಾಣ** (ಪುಂ) ದ್ರೇಕ್ಕಾಣ, ರಾಶಿಯ ಮೂರನೆಯ ಒಂದು ಭಾಗ.

**द्रोग्धव्य ದ್ರೋಗ್ಧವ್ಯ** (ವಿಂ) 1. ಹಿಂಸಿಸಲ್ಪಡುವ, ತೊಂದರೆ ಪಡಿಸಲ್ಪಡುವ. 2. ಹಿಂಸಿಸಲು ಶಕ್ಯನಾದ. 3. ಹಿಂಸಿಸಲು ಯೋಗ್ಯನಾದ. द्रुह (जिघांसायाम्) "तव्यः" (३-१-९६)। इडभावे वा द्रुहमुह० (८-२-३३) इति घः। पक्षे ढः **द्रोढव्यम् ದ್ರೋಢವ್ಯಮ್.** इट् पक्षे **द्रोहितव्यम् ದ್ರೋಹಿತವ್ಯಮ್.** "अनीयर्" (३-१-९६)। **द्रोहणीयम् ದ್ರೋಹಣೀಯಮ್.**

**द्रोण ದ್ರೋಣ** (ಪುಂ) 1. ದ್ರೋಣಾಚಾರ್ಯ. द्रोणः कलशः उत्पत्तिस्थानमस्य "अच्" (५-२-१२७)। [ಭರದ್ವಾಜಮಹರ್ಷಿಯು ಒಂದು ದಿನ ಗಂಗಾನದಿಗೆ ಸ್ನಾನಕ್ಕೆ ಹೋಗಿದ್ದಾಗ ಘೃತಾಚಿಯೆಂಬ ಅಪ್ಸರಸಿಯನ್ನು ಕಂಡು ಮೋಹಿಸಿದ್ದರಿಂದ ವೀರ್ಯಸ್ಖಲನವಾಯಿತು. ಅದನ್ನು ಒಂದು ದ್ರೋಣದಲ್ಲಿಡಲು ಅಲ್ಲಿಯೇ ಒಂದು ಗಂಡುಮಗು ಹುಟ್ಟಿತು. ಈ ಮಗುವೇ ದ್ರೋಣಾಚಾರ್ಯರು. ದ್ರೋಣದಲ್ಲಿ ಹುಟ್ಟಿದುದರಿಂದ ಈ ಹೆಸರು ಬಂದಿತು. ಪರಶುರಾಮನಲ್ಲಿ ಅಸ್ತ್ರವಿದ್ಯಾಭ್ಯಾಸಮಾಡಿ ಆಚಾರ್ಯ ಪದವಿಯನ್ನು ಪಡೆದರು. ಶರದ್ವತನ ಮಗಳಾದ ಕೃಪಿಯು ಇವರ ಪತ್ನಿ. ಅಪ್ರತಿಮ ಪರಾಕ್ರಮಿಯಾದ ಅಶ್ವತ್ಥಾಮನೇ ಇವರ ಪುತ್ರ. ಕೌರವರೂ ಪಾಂಡವರೂ ಇವರಲ್ಲಿ ಅಸ್ತ್ರವಿದ್ಯಾಭ್ಯಾಸಮಾಡಿದರು. ಇವರು ದ್ರುಪದ ರಾಜನಿಂದ ಅರ್ಧರಾಜ್ಯವನ್ನು ಗೆದ್ದು ಅದಕ್ಕೆ "ಅಹಿಚ್ಛತ್ರ" ಎಂದು ಹೆಸರಿಟ್ಟರು. ಇವರ ಪರಾಕ್ರಮಕ್ಕೆ ಮೆಚ್ಚಿದ ದುರ್ಯೋಧನನು ಇವರನ್ನು ತನ್ನ ಸೇನಾಪತಿಯನ್ನಾಗಿ ಮಾಡಿಕೊಂಡನು. ಇವರು ಪಾಂಡವರೊಡನೆ ಸಂಧಿಮಾಡಿಕೊಳ್ಳಲು ದುರ್ಯೋಧನನಿಗೆ ಬೋಧನೆಮಾಡಿದರೂ ಅದಕ್ಕೆ ಅವನು ಸಮ್ಮತಿಸಲಿಲ್ಲ. ಇದರಿಂದ ಅರ್ಜುನನೊಡನೆ ಯುದ್ಧಮಾಡಬೇಕಾಗಿ ಬಂದದ್ದರಿಂದ ಬಹಳ ವಿಷಾದಿಸಿದರು. ಧರ್ಮರಾಜನನ್ನು ಸೆರೆಹಿಡಿದು ತರಬೇಕೆಂಬ ದುರ್ಯೋಧನನ ಪ್ರಾರ್ಥನೆಯಂತೆ ದ್ರೋಣಾಚಾರ್ಯರು ಅದಕ್ಕಾಗಿ ಹೋಗಿ ಅರ್ಜುನನಿಂದ ಸೋತು ಓಡಿಹೋದರು. ಭೀಮನು ದ್ರೋಣಾಚಾರ್ಯರ ಸಾರಥಿಯನ್ನು ಕೊಂದು ಅವರ ಎಂಟು ರಥಗಳನ್ನು ಮುರಿದನು. ದ್ರೋಣಾಚಾರ್ಯರು ಯುದ್ಧದಲ್ಲಿದ್ದಾಗ "अश्वत्थामा हतः ......" ಎಂಬ ಧರ್ಮರಾಜನ ವಾಕ್ಯವನ್ನು ಕೇಳಿದ ಕೂಡಲೆ ಪುತ್ರಪ್ರೇಮಿಯಾದ ಇವರು ತಮ್ಮ ಪುತ್ರ ಹತನಾದನೆಂದು ತಿಳಿದು ಶಸ್ತ್ರಾಸ್ತ್ರಗಳನ್ನು ಕೆಳಗಿಟ್ಟು ಯುದ್ಧವನ್ನು ನಿಲ್ಲಿಸಿ ಕೆಳಕ್ಕೆ ಬೀಳಲು ದ್ರುಪದಪುತ್ರನಾದ ಧೃಷ್ಟದ್ಯುಮ್ನನು ಇವರ ತಲೆಯನ್ನು ಕಡಿದು ಕೊಂದನು. ಮಹಾಭಾರತ ಯುದ್ಧದಲ್ಲಿ ಇವರು ಪ್ರಧಾನ ಪಾತ್ರವನ್ನು ವಹಿಸಿದ್ದರು.] भा० द्रोण०। 2. ದೊಡ್ಡ ಜಾತಿಯ ಕಾಗೆ, ಹೊಲೆಕಾಗೆ, ಮಂಡಕಾಗೆ. (ಪುಂನಂ) 3. ಆಢಕ. ಕೊಳಗ, ಎಂಟು ಸೇರು. 4. ನಾಲ್ಕು ಆಢಕಗಳ ಅಳತೆ, ಮೂವತ್ತೆರಡು ಸೇರು. 5. ನೀರು ತುಂಬಿಡುವ ಮರದ ಪಾತ್ರೆ. (ಪುಂ) 6. ವೃಶ್ಚಿಕ, ಚೇಳು. "द्रोणोऽस्त्रियामाढके स्यादाढकानां चतुष्टये। पुमान् कृपीपतौ दग्धकाके" मेदि०। "परिमाणे दारुपात्रे द्रोणोऽस्त्री वायसे पुमान्" वैज०। "अलिद्रोणौ तु वृश्चिके" अम०। 7. ತುಂಬೆ ಗಿಡ. 8. ನಾಲ್ಕು ಧನುಸ್ಸುಗಳ ಅಳತೆಯುಳ್ಳ ಒಂದು ಜಲಾಶಯ. "शतेन धनुर्भिः पुष्करिणी त्रिभिः दीर्घिका चतुर्भिः द्रोणः"। 9. ಭೇಕ, ಮಂಡೂಕ, ಕಪ್ಪೆ. "द्रोणः कृपीपतौ काके भेकवृश्चिकयोश्च ना" नानार्थर०।

**द्रोणक ದ್ರೋಣಕ** (ವಿಂ) 1. ಬೆಟ್ಟಗಳ ಮಧ್ಯದಲ್ಲಿ ವಾಸ ಮಾಡುವವರು. 2. ಮರದ ತೊಟ್ಟಿ. 3. ನೀಲಿಗಿಡ.

**द्रोणकाक ದ್ರೋಣಕಾಕ** (ಪುಂ) ಮಂಡಕಾಗೆ, ದೊಡ್ಡ ಜಾತಿಯ ಕಾಗೆ.

**द्रोणक्षीरा ದ್ರೋಣಕ್ಷೀರಾ** (ಸ್ತ್ರೀಂ) ಒಂದು ದ್ರೋಣದಷ್ಟು ಹಾಲು ಕರೆಯುವ ಹಸು. द्रोणपरिमितं क्षीरमस्याः।

**द्रोणगन्धिका ದ್ರೋಣಗಂಧಿಕಾ** (ಸ್ತ್ರೀಂ) ಸಣ್ಣರಾಶ್ಮೆ.

**द्रोणदुग्धा ದ್ರೋಣದುಗ್ಧಾ** (ಸ್ತ್ರೀಂ) ದ್ರೋಣದಷ್ಟು ಹಾಲು ಕರೆಯುವ ಹಸು. द्रोणमितं दुग्धं यस्याः।

**द्रोणदुघा ದ್ರೋಣದುಘಾ** (स्त्री०) ದ್ರೋಣದಷ್ಟು ಹಾಲು ಕರೆಯುವ ಹಸು. द्रोणपरिमितं दोग्धि — दुह (प्रपूरणे) "कप्" घश्चान्तादेश: (३-२-७०)।

**द्रोणपदी ದ್ರೋಣಪದೀ** (स्त्री०) ದ್ರೋಣದಂತೆ ಕಾಲುಗಳುಳ್ಳ ಹೆಂಗಸು. द्रोण इव पादावस्या: "ङीप्" (५-४-१३९)। पादस्यान्त्यलोपो पद्भावश्च।

**द्रोणमुख ದ್ರೋಣಮುಖ** (न०) ನಾಲ್ಕು ನೂರು ಗ್ರಾಮಗಳನ್ನೊಳಗೊಂಡ ಒಂದು ಮುಖ್ಯ ಪಟ್ಟಣ. ಒಂದು ಜಿಲ್ಲೆಯ ಮುಖ್ಯ ಪಟ್ಟಣ. "कर्वटोऽस्त्री द्रोणमुखं पट्टणं पुटभेदनम्" वैज०।

**द्रोणा ದ್ರೋಣಾ** (स्त्री०) 1. ದ್ರೋಣಿ, ನೀರಿನ ತೊಟ್ಟಿ, ಜಲಾಶಯ, ನೀರು ತುಂಬುವ ಪಾತ್ರೆ. 2. ಒಂದು ವಿಧ ಮದ್ಯ.

**द्रोणाचार्य ದ್ರೋಣಾಚಾರ್ಯ** (पुं०) ಭರದ್ವಾಜ ಮಹರ್ಷಿಯ ಮಗ, ಕೌರವ ಪಾಂಡವರ ಅಸ್ತ್ರವಿದ್ಯಾಚಾರ್ಯರು. ["द्रोण" ಪದದಲ್ಲಿ ನೋಡಿ.]

**द्रोणाहाव ದ್ರೋಣಾಹಾವ** (पुं०) ಹಸು ಎತ್ತು ಕುದುರೆ ಮೊದಲಾದುವುಗಳಿಗೆ ಕುಡಿಯುವ ನೀರನ್ನು ತುಂಬಿಡುವ ಮರದ ತೊಟ್ಟಿ, ನೀರು ತುಂಬಿಡುವ ಮರದ ದೊಡ್ಡ ಪಾತ್ರೆ. आह्वयन्त्यत्र जलपानार्थं पशून् आहावो जलाशय: —द्रोणमय: आहाव:।

**द्रोणी ದ್ರೋಣೀ** (स्त्री०) 1. ಮರದ ದೋಣಿ, ನೀರನ್ನು ದಾಟುವ ಹರಿಗೋಲು. द्रवति गच्छति जलम् — द्रु (गतौ) "नि:" (उ० ४-५१)। "ङीष्" (ग० ४-१-४५)। 2. ಜಲಾಧಾರ, ನೀರು ತುಂಬಿಡುವ ಮರದ ಪಾತ್ರೆ. 3. ಮರದಿಂದ ಮಾಡಿದ ಸ್ನಾನದ ತೊಟ್ಟಿ. 4. ಗೋವುಗಳಿಗೆ ಹುಲ್ಲುಹಾಕುವ ಮರದ ದೋಣಿ. 5. ಒಂದು ದೇಶ. "स्त्री नीवृदन्तरे। तथा काष्ठाम्बुवाहिन्यां गवादन्यामपीष्यते" मेदि०। 6. ಎರಡು ಬೆಟ್ಟಗಳ ಮಧ್ಯಪ್ರದೇಶ, ಪರ್ವತಗಳ ಸಂಧಿ ಪ್ರದೇಶ. "द्रोणी तु नीवृति। नौभेदे शैलसन्धौ च" हेम०। 7. ದ್ರೋಣಾಚಾರ್ಯರ ಪತ್ನಿ ಕೃಪಿ. द्रोणस्य पत्नी। 8. ನೀಲಿಗಿಡ. 9. ಬಾಳೆಗಿಡ.

**द्रोणीदल ದ್ರೋಣೀದಲ** (पुं०) ಕೇತಕೀವೃಕ್ಷ, ತಾಳೆಮರ. द्रोणीव दलमस्य।

**द्रोह ದ್ರೋಹ** (पुं०) ಹಿಂಸೆ, ತೊಂದರೆ, ದ್ರೋಹ, ಕೇಡಕು, ಅನಿಷ್ಟ. द्रुह (जिघांसायाम्) "घञ्" (३-३-१८)। "देवद्रोहाद्गुरोर्द्रोह: कोटिकोटिगुणाधिक:" कूर्मपु०।

**द्रोहचिन्तन ದ್ರೋಹಚಿಂತನ** (न०) ಕೇಡನ್ನು ಬಯಸುವುದು, ತೊಂದರೆಕೊಡಲು ಅಪೇಕ್ಷಿಸುವುದು. द्रोहस्य अनिष्टस्य चिन्तनम्।

**द्रोहवचन ದ್ರೋಹವಚನ** (न०) ಕೆಡಕಿನ ಮಾತು, ಅನಿಷ್ಟದ ಮಾತು.

**द्रोहाट ದ್ರೋಹಾಟ** (वि०) 1. ಮಾರ್ಜಾರವ್ರತವುಳ್ಳವನು, ಇತರರನ್ನು ವಂಚಿಸಿ ಹಿಂಸಿಸಲು ವೇಷಹಾಕಿರುವವನು. 2. ಬೇಡರವನು, ಕಿರಾತ, ಬೇಟೆಗಾರ. द्रोहेणाटति—अट (गतौ) "अच्"। (पुं०) 3. ಛಂದಸ್ಸಿನ ಒಂದು ಭೇದ. "द्रोहाटो मृगलुब्धके। चतुष्पदीप्रभेदे च बैडालव्रतिकेऽपि च" हेम०।

**द्रोहिन् ದ್ರೋಹಿನ್** (वि०) ದ್ರೋಹಮಾಡುವವನು, ಕೆಡಕುಮಾಡುವವನು. द्रुह्यति — द्रुह "णिनि:" (३-१-१३४)।

**द्रौण ದ್ರೌಣ** (वि०) ಒಂದು ದ್ರೋಣದಷ್ಟು ಧಾನ್ಯವನ್ನು ಹೊಂದಿರುವ, –ಒಯ್ಯುವ, –ಬೇಯಿಸುವ. द्रोणं सम्भवति अवहरति पचति वा — वा "अण्" (वा० ५-१-५२)। पक्षे "ठञ्" (५-१-१५)। द्रौणिक: ದ್ರೌಣಿಕ:.

**द्रौणायन ದ್ರೌಣಾಯನ** (पुं०) ದ್ರೋಣಾಚಾರ್ಯರ ಪುತ್ರ, ಅಶ್ವತ್ಥಾಮ. द्रोणस्यापत्यं पुमान् वा "फक्" (४-१-१०३)। पक्षे "इञ्" (४-१-९५)। द्रौणायनि: ದ್ರೌಣಾಯನಿ:. ಇಲ್ಲಿ ಮಹಾಭಾರತದ ದ್ರೋಣಾಚಾರ್ಯರಿಗಿಂತಲೂ ಭಿನ್ನನಾದ ದ್ರೋಣನ ಗೋತ್ರಾಪತ್ಯ ಎಂಬ ಅರ್ಥದಲ್ಲಿ "फक्" ಪ್ರತ್ಯಯ ವಿಹಿತವಾಗಿರುವುದರಿಂದ "ಅಶ್ವತ್ಥಾಮ" ಎಂಬ ಅರ್ಥದಲ್ಲಿ ಗೌಣ.

**द्रौणायनि ದ್ರೌಣಾಯನಿ** (पुं०) ದ್ರೋಣಾಚಾರ್ಯರ ಮಗ, ಅಶ್ವತ್ಥಾಮ. द्रोणस्यापत्यं पुमान् "फिञ्"। "सकर्णदुर्योधनशाल्वशल्यद्रौणायनिक्राथसुनीथवक्रा:" भा० आदि० २०२-१५।

**द्रौणि ದ್ರೌಣಿ** (पुं०) ದ್ರೋಣಾಚಾರ್ಯರ ಮಗ, ಅಶ್ವತ್ಥಾಮ. द्रोणस्यापत्यं पुमान् "इञ्" (४-१-९५)।

**द्रौणिक ದ್ರೌಣಿಕ** (वि०) 1. ಒಂದು ಕೊಳಗ ಧಾನ್ಯವನ್ನು ಬಿತ್ತಬಹುದಾದ ಕ್ಷೇತ್ರ. द्रोणस्य वाप: क्षेत्रम् — द्रोण "ठञ्" (५-१-४५)। 2. ಒಂದು ಕೊಳಗ ಧಾನ್ಯದಿಂದ ಕೊಳ್ಳಲ್ಪಟ್ಟ. द्रोणेन क्रीतम् "ठक्" (५-१-२०)।

**द्रौपद ದ್ರೌಪದ** (पुं०) ದ್ರುಪದರಾಜನ ಮಗ. द्रुपदस्यापत्यम् "अण्" (४-१-११२)।

**द्रौपदायनि ದ್ರೌಪದಾಯನಿ** (पुं०) 1. ದ್ರುಪದನ ಮಗ. द्रुपदस्यापत्यम् "फिञ्" (४-१-१५४)। 2. ದ್ರುಪದನು ವಾಸಿಸುವ ದೇಶ. द्रुपदस्य निवासो देशः "फिञ्"। (वि०) 3. ದ್ರುಪದನಿಂದ ಮಾಡಲ್ಪಟ್ಟ. द्रुपदेन निर्वृत्तम् "फिञ्" (४-२-८०)।

**द्रौपदी ದ್ರೌಪದೀ** (स्त्री०) ದ್ರುಪದರಾಜನ ಮಗಳು, ಪಾಂಡವರ ಪತ್ನಿ. द्रुपदस्यापत्यं स्त्री "अण्" (४-१-११२)। "ङीप्" (४-१-१५)। [ದ್ರೌಪದಿಯು ಧೃಷ್ಟದ್ಯುಮ್ನನೊಡನೆ ದ್ರುಪದನ ಯಜ್ಞಕುಂಡದಿಂದ ಆವಿರ್ಭವಿಸಿದಳು. ಇವಳಿಗೆ ಕೃಷ್ಣಾ, ಯಾಜ್ಞಸೇನೀ, ಪಾಂಚಾಲೀ ಎಂದೂ ನಾಮಾಂತರಗಳುಂಟು. ಇವಳ ಸ್ವಯಂವರಕ್ಕೆ ಪಣವಾಗಿಟ್ಟಿದ್ದ ಮತ್ಸ್ಯಯಂತ್ರವನ್ನು ಅರ್ಜುನನು ಭೇದಿಸಿದ್ದರಿಂದ ವರಣಮಾಲೆಯನ್ನು ಅರ್ಜುನನಿಗೆ ಹಾಕಿದಳು. ತಾಯಿಯ ಮಾತಿನಂತೆ ಪಾಂಡವರು ಐವರೂ ದ್ರೌಪದಿಯ ಪಾಣಿಗ್ರಹಣಕ್ಕೆ ಬಂದರು. ಒಬ್ಬ ಮಗಳನ್ನು ಐದು ಮಂದಿಗೆ ವಿವಾಹಮಾಡಿಕೊಡಲು ಸಂಶಯಪಡುತ್ತಿದ್ದ ದ್ರುಪದನಿಗೆ ವ್ಯಾಸಮಹರ್ಷಿಯು ದ್ರೌಪದಿಯ ಪಂಚಪತ್ನಿತ್ವಕ್ಕೆ ಕಾರಣವನ್ನು ತಿಳಿಸಲಾಗಿ [ಕಾರಣವನ್ನು "नालायनी" ಪದದಲ್ಲಿ ನೋಡಿ.] ಧರ್ಮರಾಜ ಮೊದಲಾದ ಐದು ಮಂದಿ ಪಾಂಡವರಿಗೂ ಕೊಟ್ಟು ಮದುವೆಮಾಡಿದನು. ದ್ರೌಪದಿಯು ಧರ್ಮರಾಜ, ಭೀಮಸೇನ, ಅರ್ಜುನ, ನಕುಲ ಮತ್ತು ಸಹದೇವ ಇವರಿಂದ ಕ್ರಮವಾಗಿ ಪ್ರತಿವಿಂಧ್ಯ, ಶ್ರುತಸೋಮ, ಶ್ರುತಕೀರ್ತಿ, ಶತಾನೀಕ ಮತ್ತು ಶ್ರುತಸೇನ ಎಂಬ ಮಕ್ಕಳನ್ನು ಪಡೆದಳು. ಧರ್ಮರಾಜನ ರಾಜಸೂಯ ಯಾಗದಲ್ಲಿ ಮಯನಿರ್ಮಿತವಾದ ಯಾಗಮಂಟಪದಲ್ಲಿ ದುರ್ಯೋಧನನು ಭ್ರಾಂತನಾಗಿ ತಬ್ಬಿಬ್ಬಾಗಿ ನಡೆಯುತ್ತಿದ್ದುದನ್ನು ನೋಡಿ ದ್ರೌಪದಿಯು ನಗಲಾಗಿ ಅದೇ ಕ್ರೋಧದಿಂದ ಧರ್ಮರಾಜನನ್ನು ದ್ಯೂತದಲ್ಲಿ ಸೋಲಿಸಿ ದ್ರೌಪದಿಯನ್ನು ಸಭೆಯಲ್ಲಿ ಅವಮಾನಗೊಳಿಸಿದನು. ಅರಣ್ಯವಾಸದಲ್ಲಿದ್ದಾಗ ದ್ರೌಪದಿಯ ಭೋಜನಾನಂತರ ದುರ್ಯೋಧನನ ಪ್ರೇರಣೆಯಿಂದ ಬಂದ ದುರ್ವಾಸ ಮಹರ್ಷಿಯು ದ್ರೌಪದಿಯ ಮಹಿಮೆಯನ್ನು ಕಂಡು ಶಿಷ್ಯರೊಡನೆ ಪಲಾಯನಮಾಡಿದರು. ದ್ರೌಪದಿಯು ಅಜ್ಞಾತವಾಸದ ಸಮಯದಲ್ಲಿ "ಮಾಲಿನಿ" ಎಂಬ ಹೆಸರನ್ನು ಇಟ್ಟುಕೊಂಡಿದ್ದಳು. ವಿರಾಟನಗರದಲ್ಲಿ ತನ್ನನ್ನು ಮೋಹಿಸಿ ವಶಪಡಿಸಿಕೊಳ್ಳಲು ಯತ್ನಿಸಿದ ಕೀಚಕನನ್ನು ಭೀಮಸೇನನಿಂದ ಕೊಲ್ಲಿಸಿದಳು. ಧರ್ಮರಾಜನ ಅಭಿಪ್ರಾಯದಂತೆ ಶ್ರೀಕೃಷ್ಣನು ದುರ್ಯೋಧನನಲ್ಲಿಗೆ ಸಂಧಿಗಾಗಿ ಹೊರಟಾಗ ದ್ರೌಪದಿಯು ದುರ್ಯೋಧನನ ಸಭೆಯಲ್ಲಿ ತನಗಾದ ಪರಾಭವವನ್ನು ಸ್ಮರಿಸಿಕೊಂಡು ಅಳುತ್ತಿರಲು ಶ್ರೀಕೃಷ್ಣನು ದುರ್ಯೋಧನನ ಸಂಹಾರಕ್ಕಾಗಿ ಪ್ರತಿಜ್ಞೆಮಾಡಿ ದ್ರೌಪದಿಯನ್ನು ಸಮಾಧಾನಪಡಿಸಿದನು. ಮಹಾಭಾರತದ ಯುದ್ಧ ಮುಗಿದ ದಿವಸವೇ ರಾತ್ರಿ ಶಿಬಿರದಲ್ಲಿ ಮಲಗಿದ್ದ ಉಪಪಾಂಡವರನ್ನು ಅಶ್ವತ್ಥಾಮನು ಕೊಂದುಹಾಕಲು ದ್ರೌಪದಿಯು ಅಶ್ವತ್ಥಾಮನನ್ನು ಕೊಂದುಬರುವಂತೆ ಭೀಮಸೇನನನ್ನು ಪ್ರೇರಿಸಲು ಭೀಮಸೇನನು ಅವನನ್ನು ಕೊಲ್ಲುವ ಬದಲು ಅವನ ತಲೆಯಲ್ಲಿದ್ದ ರತ್ನವನ್ನು ತಂದುಕೊಟ್ಟು ದ್ರೌಪದಿಯನ್ನು ಸಮಾಧಾನಪಡಿಸಿದನು. ದ್ರೌಪದಿಯು ತನ್ನ ಕರ್ತವ್ಯದೃಷ್ಟಿಯಿಂದ ಕೊನೆಯವರಿಗೂ ಗಾಂಧಾರಿಯನ್ನು ಉಪಚರಿಸುತ್ತ ಪ್ರಜಾಪರಿಪಾಲನೆಯು ಕ್ಷತ್ರಿಯನ ಕರ್ತವ್ಯವೆಂದು ಧರ್ಮರಾಜನಿಗೆ ಹೇಳುತ್ತಿದ್ದಳು.]

**द्रौपदेय ದ್ರೌಪದೇಯ** (पुं०) ದ್ರೌಪದಿಯ ಮಕ್ಕಳು. ಉಪಪಾಂಡವರು.

| | | |
|---|---|---|
| ಧರ್ಮರಾಜನಿಗೆ | ದ್ರೌಪದಿಯಲ್ಲಿ | ಪ್ರತಿವಿಂಧ್ಯ |
| ಭೀಮಸೇನನಿಗೆ | ,, | ಶ್ರುತಸೋಮ |
| ಅರ್ಜುನನಿಗೆ | ,, | ಶ್ರುತಕೀರ್ತಿ |
| ನಕುಲನಿಗೆ | ,, | ಶತಾನೀಕ |
| ಸಹದೇವನಿಗೆ | ,, | ಶ್ರುತಸೇನ |

ಎಂಬ ಮಕ್ಕಳು ಜನಿಸಿದರು. द्रौपद्याः अपत्यम् "ढक्" (४-१-१२०)।

**द्रौहिक ದ್ರೌಹಿಕ** (वि०) ದ್ರೋಹಕ್ಕೆ ಅರ್ಹನಾದವನು. ಯಾವಾಗಲೂ ದ್ರೋಹಮಾಡಲು ಯೋಗ್ಯನಾದವನು. द्रोहं नित्यमर्हति "ठञ्" (५-१-६४)।

**द्रौह्य ದ್ರೌಹ್ಯ** (वि०) ದ್ರುಹ್ಯನ ಮಗ. द्रुह्यस्यापत्यम् "अण्" (४-१-११२)।

**द्वन्द्व ದ್ವಂದ್ವ** (न०) 1. ಜೊತೆ, ಜೋಡಿ. द्विशब्दस्य द्वित्वं — द्वौ द्वौ — पूर्वपदस्य अम्भावः अत्वं चोत्तरपदस्य नपुंसकत्वं च निपा० (८-१-१५)। "मृगद्वन्द्वेषु पश्यन्तौ स्यन्दनाबद्धदृष्टिषु" रघु० १-४०। 2. ವಿರುದ್ಧವಾದ ಎರಡು ವಸ್ತುಗಳ ಜೊತೆ—ಸುಖ-ದುಃಖ, ಶೀತ-ಉಷ್ಣ, ಸ್ಥಾವರ-ಜಂಗಮ ಇತ್ಯಾದಿ. "द्वन्द्वैरयोजयच्चेमाः सुख-दुःखादिभिः प्रजाः" मनु० १-२६। "न द्वन्द्वदुःखमिह किञ्चिदकिञ्चनोऽपि" माघ० ४-६४। "काष्ठागतस्नेह-रसानुविद्धं द्वन्द्वानि भावं क्रियया विवव्रुः" कुमा० ३-३५। 3. ಕಲಹ, ಜಗಳ. "शतं दद्यान्न विवदेदिति प्राज्ञस्य लक्षणम्। विना हेतुमपि द्वन्द्वमेतन्मूर्खस्य

लक्षणम्" हितो०। 4. ರಹಸ್ಯ, ಗುಟ್ಟು. 5. ಸ್ತ್ರೀ ಪುರುಷರ ಜೋಡಿ. 6. ದ್ವಂದ್ವಯುದ್ಧ, ಜಟ್ಟಿಕಾಳಗ. "द्वन्द्वं रहस्ये कलहे तथा मिथुनयुग्मयोः" मेदि०। "द्वन्द्वं द्वयहिमोष्णादि कलहो मिथुनं रहः" नानार्थर०। (पुं०) 7. ದ್ವಂದ್ವಸಮಾಸ. ಬೇರೆ ಬೇರೆ ಅರ್ಥಗಳುಳ್ಳ ಪದಗಳಿಗೆ ಹೇಳುವ ಸಮಾಸ. रामश्च कृष्णश्च रामकृष्णौ हरिश्च हरश्च हरिहरौ। अन्वाचयः समाहारः इतरेतरयोगः समुच्चयः ಎಂಬ ನಾಲ್ಕು ಅರ್ಥಗಳ ಪೈಕಿ ಸಮಾಹಾರ ಮತ್ತು ಇತರೇತರಯೋಗಗಳೆಂಬ (ಚ ಕಾರದ) ಅರ್ಥಗಳಲ್ಲಿ ಈ ದ್ವಂದ್ವಸಮಾಸವು ಬರುವುದು. 8. ದುರ್ಗ, ಕೋಟೆ. "राज्ञो बलं न हि बलं द्वन्द्वमेव बलं बलम्। अप्यल्पबलवान् राजा स्थिरो द्वन्द्वबलाद्भवेत्"। 9. ಒಂದು ವಿಧ ರೋಗ.

**द्वन्द्वगद ದ್ವಂದ್ವಗದ** (पुं०) ರಾಗ-ದ್ವೇಷ ಕಾಮ-ಕ್ರೋಧ ರೂಪವಾದ ರೋಗ. द्वन्द्वरूपो गदः।

**द्वन्द्वचर ದ್ವಂದ್ವಚರ** (पुं०) 1. ಚಕ್ರವಾಕಪಕ್ಷಿ. द्वन्द्वीभूय चरति—चर (गतौ) "अच्" (३-१-१३४)। "शशिना पुनरेति शर्वरी दयिता द्वन्द्वचरं पतत्रिणम्" रघु० ८-५६। स्त्रियाम् "ङीष्" (४-१-६३)। **—चरी —ಚರೀ** (वि०) 2. ಜೊತೆಯಲ್ಲಿ ಸಂಚರಿಸುವ. स्त्रियाम् "ङीप्" (४-१-१५)।

**द्वन्द्वचारिन् ದ್ವಂದ್ವಚಾರಿನ್** (वि०) ಜೊತೆಯಲ್ಲಿ ಸಂಚರಿಸುವ ಸ್ವಭಾವದ. द्वन्द्वीभूय चरति — चर "णिनिः" (३-२-७८)। स्त्रियाम् "ङीप्" (४-१-५)। **—चारिणी —ಚಾರಿಣೀ.**

**द्वन्द्वज ದ್ವಂದ್ವಜ** (वि०) 1. ಕಲಹದಿಂದ ಉಂಟಾದ. द्वन्द्वाज्जायते — जनी (प्रादुर्भावे) "डः" (३-२-९८)। 2. ವಾತಪಿತ್ತಕಫಗಳಲ್ಲಿ ಯಾವುದಾದರೊಂದರಿಂದ ಉಂಟಾದ ರೋಗ.

**द्वन्द्वयुद्ध ದ್ವಂದ್ವಯುದ್ಧ** (नं०) ಇಬ್ಬಿಬ್ಬರ ಜಗಳ. द्वयोर्द्वयो युद्धम्। "कैराते द्वन्द्वयुद्धे च तदिदं मयि वर्तते" भा० उद्योग० १९४-१२।

**द्वय ದ್ವಯ** (नं०) 1. ಎರಡು, ಒಂದು ಜೊತೆ. ಎರಡು ಅವಯವಗಳ ಸಮುದಾಯ. द्वि अवयवे "तयप्" (५-२-४२)। वा "अयच्" (५-२-४३)। "सेना परिच्छदस्तस्य द्वयमेवार्थसाधनम्" रघु० १-१९। "शब्दार्थौ सत्कविरिव द्वयं विद्वानपेक्षते" माघ० २-८६। 2. ಎರಡು ವಿಧವಾದ, ಎರಡು ಬಗೆಯಾದ. "जनैरजातस्खलनैर्न जातु द्वयेऽप्यमुच्यन्त विनीतमार्गाः" माघ० ३-५७। स्त्रियाम् "ङीप्" (४-१-१५)। द्वयी ದ್ವಯೀ. "पुनर्ग्रहीतुं नियमस्थया तया द्वयीषु निक्षेप इवार्पितं द्वयम्" कुमा० ५-१३।

**द्वयातिग ದ್ವಯಾತಿಗ** (वि०) ರಜಸ್ಸು ಮತ್ತು ತಮಸ್ಸುಗಳೆಂಬ ಎರಡು ಗುಣಗಳನ್ನು ಮೀರಿದವನು, ಸತ್ತ್ವಗುಣ ಪ್ರಚುರನು. द्वयमतिगच्छति —गम्लृ (गतौ) "डः" (वा० ३-२-४८)।

**द्वाःस्थ ದ್ವಾಃಸ್ಥ** (पुं०) ದ್ವಾರಪಾಲಕ, ಬಾಗಿಲು ಕಾಯುವವನು. द्वारि तिष्ठति — ष्ठा (गतिनिवृत्तौ) "कः" (३-२-४)। "ते सद्मनि गिरेर्वेगादुन्मुखद्वाःस्थवीक्षिताः" कुमा० ६-४८।

**द्वाःस्थित ದ್ವಾಃಸ್ಥಿತ** (पुं०) ದ್ವಾರಪಾಲಕ, ಬಾಗಿಲಲ್ಲಿ ನಿಂತು ಕಾಯುವವನು. द्वारि स्थितः।

**द्वाःस्थितदर्शक ದ್ವಾಃಸ್ಥಿತದರ್ಶಕ** (पुं०) ದ್ವಾರಪಾಲಕ.

**द्वाचत्वारिंश ದ್ವಾಚತ್ವಾರಿಂಶ** (वि०) ನಲವತ್ತೆರಡನೆಯ. द्वाचत्वारिंशतः पूरणः "डट्" (५-२-४८)। स्त्रियाम् "ङीप्" (४-१-१५)। **—चत्वारिंशी —ಚತ್ವಾರಿಂಶೀ.** डटः वा "तमट्" (५-२-५६)। **—चत्वारिंशत्तमः —ಚತ್ವಾರಿಂಶತ್ತಮಃ.** स्त्रियाम् "ङीप्" **—तमी —ತಮೀ.**

**द्वाचत्वारिंशत् ದ್ವಾಚತ್ವಾರಿಂಶತ್** (स्त्री०) ನಲವತ್ತೆರಡು. द्वयधिका चत्वारिंशत्। द्विशब्दस्य वा "आत्" (६-३-४९)।

**द्वात्रिंश ದ್ವಾತ್ರಿಂಶ** (वि०) ಮೂವತ್ತೆರಡನೆಯ. द्वात्रिंशतः पूरणः "डट्" (५-२-४८)। स्त्रियाम् "ङीप्" (४-१-१५)। **—त्रिंशी —ತ್ರಿಂಶೀ.** डटः वा "तमट्" (५-२-५६)। **—त्रिंशत्तमः —ತ್ರಿಂಶತ್ತಮಃ.** स्त्रियाम् "ङीप्" (४-१-१५)। **—तमी —ತಮೀ.**

**द्वात्रिंशत् ದ್ವಾತ್ರಿಂಶತ್** (स्त्री०) ಮೂವತ್ತೆರಡು. द्वयधिका त्रिंशत्।

**द्वात्रिंशदपराध ದ್ವಾತ್ರಿಂಶದಪರಾಧ** (पुं०) ದೇವರ ಸನ್ನಿಧಿಯಲ್ಲಿ ನಡೆಯಬಹುದಾದ ಮೂವತ್ತೆರಡು ವಿಧ ಅಪಚಾರಗಳು. ದೇವಸ್ಥಾನದಲ್ಲಿ ವಾಹನದಲ್ಲಿ ಕುಳಿತು ಸಂಚರಿಸುವುದು, ಪಾದರಕ್ಷೆಯನ್ನು ಹಾಕಿಕೊಂಡು ಹೋಗುವುದು, ಉತ್ಸವಕಾಲದಲ್ಲಿ ದೇವರ ಸೇವೆ ಮಾಡದಿರುವುದು, ದೇವರನ್ನು ನಮಸ್ಕರಿಸದಿರುವುದು, ಅಶೌಚಕಾಲದಲ್ಲಿ ದೇವರನ್ನು ನಮಸ್ಕರಿಸುವುದು, ಒಂದು ಕೈಯಿಂದ ದೇವರನ್ನು ನಮಸ್ಕರಿಸುವುದು, ದೇವರ ಮುಂದೆ ಕಾಲುಚಾಚಿ ಕೂಡು

ವುದು, ಮಲಗುವುದು, ತಿನ್ನುವುದು, ಗಟ್ಟಿಯಾಗಿ ಮಾತಾಡು ವುದು, ಪರಸ್ಪರ ಸಲ್ಲಾಪ, ರೋದನ, ಅನವಶ್ಯವಾದ ಮಾತು, ಅಮಂಗಲಭಾಷಣ, ಅಪಾನವಾಯು ಬಿಡುವುದು, ದೇವರ ನಿಂದೆ ಇತ್ಯಾದಿ ದೇವರ ಸನ್ನಿಧಿಯಲ್ಲಿ ಮಹಾಪ ರಾಧಗಳು.

**द्वात्रिंशल्लक्षण ದ್ವಾತ್ರಿಂಶಲ್ಲಕ್ಷಣ** (ಪುಂ) ಮೂವತ್ತೆರಡು ಶುಭಲಕ್ಷಣಗಳುಳ್ಳ ಮಹಾಪುರುಷ. **ಮಹಾಪುರುಷನ ಮೂವತ್ತೆರಡು ಲಕ್ಷಣಗಳು :**

**पञ्चदीर्घ :**—ಬಾಹುಗಳು ನೇತ್ರಗಳು ಕೆನ್ನೆಗಳ ಮೇಲು ಭಾಗಗಳು ಮೂಗು ಮತ್ತು ಎದೆ ಇವು ಐದೂ ದೀರ್ಘ ವಾಗಿಯೂ

**पञ्चसूक्ष्म :**—ಚರ್ಮ ತಲೆಯ ಕೂದಲು ಬೆರಳುಗಳು ಹಲ್ಲುಗಳು ಮತ್ತು ಬೆರಳುಗಳ ಗಿಣ್ಣುಗಳು ಇವು ಐದೂ ಸೂಕ್ಷ್ಮವಾಗಿಯೂ

**सप्तरक्त :**—ಅಂಗೈಗಳು ಅಂಗಾಲುಗಳು ಕಡೆಗಣ್ಣುಗಳು ದವಡೆ ನಾಲಿಗೆ ಕೆಳತುಟಿ ಮತ್ತು ಉಗುರು(ನಖ) ಇವು ಏಳೂ ರಕ್ತವಾಗಿಯೂ

**षडुन्नत :**—ಕಕ್ಷ (ಕಂಕಳು)ಗಳು ಉದರ ಹಣೆ ಭುಜಗಳು ಕೈ ಮತ್ತು ಮುಖ ಇವು ಆರೂ ಉನ್ನತ (ಉಬ್ಬಿದವು) ಗಳಾಗಿಯೂ

**त्रिपृथु :**—ಹಣೆ ಕಟಿ (ಪಿರ್ರ) ಮತ್ತು ಎದೆ ಇವು ಮೂರೂ ವಿಸ್ತಾರವಾಗಿಯೂ

**त्रिलघु :**—ಕಂಠ (ಕುತ್ತಿಗೆ) ಮೊಳಕಾಲು ಮತ್ತು ಮೇಹನ (ಶಿಶ್ನ) ಇವು ಮೂರೂ ಹ್ರಸ್ವವಾಗಿಯೂ

**त्रिगभीर :**—ಸ್ವರ ಸತ್ತ್ವ ಮತ್ತು ನಾಭಿ ಇವು ಮೂರೂ ಗಭೀರವಾಗಿಯೂ ಇರುವವನು ಮಹಾಪುರುಷನು.

**द्वादश ದ್ವಾದಶ** (ವಿಂ) ಹನ್ನೆರಡನೆಯ. द्वादशानां पूरणः द्वादशन् "डट्" (५-२-४८)। स्त्रियाम् "ङीप्" (४-१-१५)। **–शी –ದಶೀ.**

**द्वादशक ದ್ವಾದಶಕ** (ವಿಂ) ಹನ್ನೆರಡರಿಂದ ಕೂಡಿದ, ಹನ್ನೆರಡು ಸಂಖ್ಯೆಯುಳ್ಳ. द्वादशसंख्यास्यास्ति "कन्"। "वैश्ये स्याद्दर्पञ्चाशच्छूद्रे द्वादशको दमः" मनु० ८-२६८।

**द्वादशकर ದ್ವಾದಶಕರ** (ಪುಂ) ಕಾರ್ತಿಕೇಯ, ಷಣ್ಮುಖ. द्वादश करा यस्य।

**द्वादशन् ದ್ವಾದಶನ್** (ವಿಂ) ಹನ್ನೆರಡು. द्वौ च दश च। द्विशब्दस्य "आत्" (६-३-४७)।

**द्वादशपुत्र ದ್ವಾದಶಪುತ್ರ** (ಪುಂ ಕಂ ಕಂ) ಔರಸ ಮೊದಲಾದ ಹನ್ನೆರಡು ವಿಧ ಪುತ್ರರು. (1) औरसः, (2) क्षेत्रजः, (3) दत्तः, (4) कृत्रिमः, (5) गूढोत्पन्नः, (6) अपविद्धः, (7) कानीनः, (8) सहोढः, (9) क्रीतः, (10) पौनर्भवः, (11) स्वयंदत्तः ಮತ್ತು (12) शौद्रः ಇವರು ಹನ್ನೆರಡು ವಿಧ ಪುತ್ರರು.

(1) ಶಾಸ್ತ್ರೋಕ್ತವಾಗಿ ಮದುವೆಯಾದ ಪತ್ನಿಯಲ್ಲಿ ಜನಿಸಿದವನು **ಔರಸ**ಪುತ್ರ.

(2) ತನ್ನ ಪತ್ನಿಯಲ್ಲಿ ತನಗೆ ಮಕ್ಕಳಾಗದೆ ನಿಯುಕ್ತ ನಾದವನಿಂದ ಜನಿಸಿದವನು **ಕ್ಷೇತ್ರಜ**.

(3) ಆಪತ್ಕಾಲದಲ್ಲಿ ತಾಯಿತಂದೆಗಳು ತಮ್ಮ ಸಮ್ಮತಿ ಯಿಂದ ಶಾಸ್ತ್ರೋಕ್ತವಾಗಿ ದಾನಮಾಡಿದ ಪುತ್ರಗುಣ ಸಂಪನ್ನನಾದ ಮಗನು **ದತ್ತ**ಪುತ್ರನು.

(4) ಗುಣದೋಷಗಳನ್ನು ಚೆನ್ನಾಗಿ ತಿಳಿದ ಮತ್ತು ಪುತ್ರಗುಣಗಳಿಂದ ಕೂಡಿದ ಒಬ್ಬನನ್ನು ತನ್ನ ಪುತ್ರನನ್ನಾಗಿ ಪರಿಗಣಿಸಿದರೆ ಅವನು **ಕೃತ್ರಿಮ**ಪುತ್ರ.

(5) ಪತಿಯು ಮನೆಯಲ್ಲಿಲ್ಲದಿರುವಾಗ ಗೂಢವಾಗಿ ಪರಪುರುಷಸಂಗದಿಂದ ಜನಿಸಿದ ಪುತ್ರನು **ಗೂಢೋತ್ಪನ್ನನು.**

(6) ಹೆತ್ತ ತಾಯಿತಂದೆಗಳಿಂದ ಓಡಿಸಲ್ಪಟ್ಟವನನ್ನು ಪುತ್ರನನ್ನಾಗಿ ಸಾಕಿದರೆ ಅವನು **ಅಪವಿದ್ಧ.**

(7) ಪಿತೃಗೃಹದಲ್ಲಿರುವಾಗಲೇ ವಿವಾಹವಾಗದ ಕನ್ಯೆ ಯಲ್ಲಿ ಜನಿಸಿದವನು **ಕಾನೀನ.**

(8) ಗರ್ಭಿಣಿಯಾದನಂತರ ಮದುವೆಯಾದ ಹೆಂಗಸಿ ನಲ್ಲಿ ಜನಿಸಿದವನು **ಸಹೋಢನು.**

(9) ಹೆತ್ತ ತಾಯಿತಂದೆಗಳಿಂದ ಕ್ರಯಕ್ಕೆ ಪಡೆದ ಮಗನು **ಕ್ರೀತ**ಪುತ್ರ.

(10) ಪತಿಯಿಂದ ಪರಿತ್ಯಜಿಸಲ್ಪಟ್ಟ ಸ್ತ್ರೀಯಲ್ಲಿ ಅಥವಾ ವಿಧವೆಯಲ್ಲಿ ಪರಪುರುಷನಿಂದ ಜನಿಸಿದ ಮಗನು **ಪೌನರ್ಭವ.**

(11) ತಾಯಿತಂದೆಗಳಿಲ್ಲದವನು ಅಥವಾ ಕಾರಣವಿಲ್ಲದೆ ದ್ವೇಷದಿಂದ ಅವರು ತ್ಯಜಿಸಿದಕಾರಣ ಮಗನಾಗುವೆನೆಂದು ತಾನಾಗಿ ಬಂದ ಮಗನು **ಸ್ವಯಂದತ್ತ**ಪುತ್ರ.

(12) ಕ್ಷೇತ್ರನಿಯಮವಿಲ್ಲದೆ ಯಾವಳಾದರೊಬ್ಬ ಶೂದ್ರಸ್ತ್ರೀಯಲ್ಲಿ ಬ್ರಾಹ್ಮಣನಿಗೆ ಜನಿಸಿದ ಮಗನು **ಶೌದ್ರ.** ಈ 12 ವಿಧ ಪುತ್ರರಲ್ಲಿ ಹಿಂದು ಮುಂದಿನವನಿಗಿಂತ ಹಿಂದಿನವನು ಶ್ರೇಷ್ಠ.

**द्वादशभाव ದ್ವಾದಶಭಾವ** (ಪುಂ) ಜ್ಯೋತಿಃಶಾಸ್ತ್ರದಲ್ಲಿ ಹೇಳಿರುವ ಜನನಕಾಲದ ಲಗ್ನ ಮೊದಲಾದ ಹನ್ನೆರಡು ಭಾವಗಳು.

(1) **ಲಗ್ನ: ತನುಭಾವ:**—ಇದರಿಂದ ಜಾತಕನ ರೂಪ, ವರ್ಣ, ಶರೀರ ಸಂಪತ್ತು, ಚಿಹ್ನೆ, ಜಾತಿ, ಆಯುಷ್ಯ, ಪ್ರಮಾಣ, ಸುಖ, ದುಃಖ, ಸಾಹಸ, ಇತ್ಯಾದಿಗಳನ್ನು ತಿಳಿಯಬಹುದು.

(2) **ದ್ವಿತೀಯಭಾವ:**—ಇದರಿಂದ ಕುಟುಂಬ, ಧನ, ಮೃತ್ಯು, ಗಂಡ, ವೈರ ಲೋಹ, ಮುಖ, ವಾಕ್ಕು, ವಿದ್ಯೆ, ಮಿತ್ರರು ಮುಂತಾದುವನ್ನು ತಿಳಿಯಬಹುದು.

(3) **ತೃತೀಯಭಾವ:**—ಭ್ರಾತೃ, ಭಗಿನಿ, ವಿಕ್ರಮ, ಧೈರ್ಯ, ಭೃತ್ಯ, ದಕ್ಷಿಣಕರ್ಣ, ಪ್ರಯಾಣ, ಔಷಧ, ಕಂಠಸ್ಥಾನ, ಇತ್ಯಾದಿ ವಿಷಯಗಳನ್ನು ತಿಳಿಯಬಹುದು.

(4) **ಚತುರ್ಥಭಾವ:**—ಇದು ಮಾತೃ, ಸುಖ, ಗೃಹ, ಕ್ಷೇತ್ರ, ವಾಹನ, ಬಂಧು, ನಿಧಿ, ಪ್ರಾಸಾದ, ಧರ್ಮ, ಸಿಂಹಾಸನ, ಶಯನಸುಖ ಇತ್ಯಾದಿ ವಿಷಯಗಳನ್ನು ತಿಳಿಸುವುದು.

(5) **ಪಂಚಮಭಾವ:**—ಇದು ಪುತ್ರ, ಬುದ್ಧಿ, ಮಂತ್ರ, ವಿನಯ, ನೀತಿ, ಭೋಜನ, ಉದರ, ವಿವೇಕ, ಶಕ್ತಿ, ರೇತಸ್ಸು ಇತ್ಯಾದಿಗಳನ್ನು ತಿಳಿಸುವುದು.

(6) **ಷಷ್ಠಭಾವ:**—ಇದು ಜ್ಞಾತಿಗಳು, ಮಾತುಲ, ಸಪತ್ನೀಮಾತೃ, ಚೋರ, ರೋಗ, ರಿಪು, ಋಣ, ವಿಘ್ನ, ಕ್ಲೇಶ, ನಾಭಿ ಇತ್ಯಾದಿಗಳನ್ನು ತಿಳಿಸುವುದು.

(7) **ಸಪ್ತಮಭಾವ:**—ಇದರಿಂದ ಕಳತ್ರ (ಪತ್ನಿ), ಭರ್ತೃ (ಪತಿ), ವಿವಾಹ, ಕಾಮ, ಪ್ರಯಾಣ ಇತ್ಯಾದಿಗಳನ್ನು ತಿಳಿಯಬಹುದು.

(8) **ಅಷ್ಟಮಭಾವ:**—ಆಯುಷ್ಯ, ಮೃತಿ, ಉಪಜೀವನ ಇವುಗಳನ್ನು ತಿಳಿಸುವುದು.

(9) **ನವಮಭಾವ:**—ಪಿತೃಭಾಗ್ಯ, ಆಚಾರ, ಧರ್ಮಬುದ್ಧಿ, ದೇವತೋಪಾಸನೆ ಮುಂತಾದುವುಗಳನ್ನು ತಿಳಿಸುವುದು.

(10) **ದಶಮಭಾವ:**—ಇದು ಜೀವನೋಪಾಯ, ವೃತ್ತಿ, ಕರ್ಮ, ಗೌರವ, ಕೀರ್ತಿ ಇತ್ಯಾದಿಗಳನ್ನು ತಿಳಿಸುವುದು.

(11) **ಏಕಾದಶಭಾವ:**—ಇದು ಲಾಭ, ವಾಹನ, ಜ್ಯೇಷ್ಠ ಸಹೋದರ, ಜಯ, ರತ್ನಪ್ರಾಪ್ತಿ ಇತ್ಯಾದಿಗಳನ್ನು ತಿಳಿಸುವುದು.

(12) **ದ್ವಾದಶಭಾವ:**—ಇದು ವ್ಯಯ, ಅಪವರ್ಗ ಮುಂತಾದುವನ್ನು ತಿಳಿಸುವುದು.

**द्वादशमद्य ದ್ವಾದಶಮದ್ಯ** (ನಂ) ಹನ್ನೆರಡು ವಿಧ ಮದ್ಯಗಳು. (1) पानसम्, (2) द्राक्षम्, (3) माधूकम्, (4) खार्जूरम्, (5) तालम्, (6) ऐक्षवम्, (7) माध्वीकम्, (8) टाङ्कम्, (9) टङ्कमार्द्वीकम्, (10) मैरेयम्, (11) नारिकेलजम् ಮತ್ತು (12) सुरामद्यम्। ಇವು ಹನ್ನೆರಡು ವಿಧ ಮದ್ಯಗಳು.

**द्वादशमल ದ್ವಾದಶಮಲ** (ಪುಂ) ಮನುಷ್ಯನ ದೇಹದಲ್ಲಿರುವ ಹನ್ನೆರಡು ವಿಧ ಮಲಗಳು. (1) ಕೊಬ್ಬು, (2) ವೀರ್ಯ (ಶುಕ್ರ), (3) ರಕ್ತ, (4) ಮಜ್ಜೆ (ದೇಹ ಸಾರ), (5) ಮೂತ್ರ, (6) ವಿಷ್ಠೆ, (7) ಕಿವಿಯ ಗುಗ್ಗೆ, (8) ನಖ, (9) ಕಫ, (10) ಅಸ್ಥಿ (ಎಲುಬು), (11) ಕಣ್ಣಿನ ಪಿಸುರು ಮತ್ತು (12) ಬೆವರು ಇವು ಹನ್ನೆರಡು ಮಲಗಳು. "वसाशुक्रमसृङ्मज्जं मूत्रविट्कर्णविड्नखाः। श्लेष्मास्थिदूषिका स्वेदो द्वादशैते नृणां मलाः" अत्रिसं।

**द्वादशमास ದ್ವಾದಶಮಾಸ** (ಪುಂ) 1. ಚೈತ್ರ ಮೊದಲಾದ ಹನ್ನೆರಡು ತಿಂಗಳು. (1) ಚೈತ್ರ, (2) ವೈಶಾಖ, (3) ಜ್ಯೇಷ್ಠ, (4) ಆಷಾಢ, (5) ಶ್ರಾವಣ, (6) ಭಾದ್ರಪದ, (7) ಆಶ್ವಯುಜ, (8) ಕಾರ್ತಿಕ, (9) ಮಾರ್ಗಶಿರ, (10) ಪುಷ್ಯ, (11) ಮಾಘ ಮತ್ತು (12) ಫಾಲ್ಗುನ ಇವು ಹನ್ನೆರಡು ತಿಂಗಳುಗಳು. 2. ಹನ್ನೆರಡು ತಿಂಗಳುಗಳಿಂದ ಕೂಡಿದ ಒಂದು ವರ್ಷ.

**द्वादशलोचन ದ್ವಾದಶಲೋಚನ** (ಪುಂ) ಷಣ್ಮುಖ, ಕಾರ್ತಿಕೇಯ. द्वादश लोचनानि यस्य।

**द्वादशसङ्ग्राम ದ್ವಾದಶಸಂಗ್ರಾಮ** (ಪುಂ) ದೇವದಾನವರಿಗೆ ನಡೆದ ಹನ್ನೆರಡು ವಿಧ ಯುದ್ಧ.

(1) ಹಿರಣ್ಯಕಶಿಪುವಿನೊಡನೆ ..ನಾರಸಿಂಹ ಸಂಗ್ರಾಮ
(2) ಬಲಿಯೊಡನೆ ..ವಾಮನ ,,
(3) ಹಿರಣ್ಯಾಕ್ಷನೊಡನೆ ..ವರಾಹ ,,
(4) ದಾನವರೊಡನೆ ..ಅಮೃತಮಂಥನ
(5) ದೇವತೆಗಳ ರಕ್ಷಣೆಗಾಗಿ ..ತಾರಕಾಮಯ ,,
(6) ,, ..ಆಜೀವಕ ,,
(7) ತ್ರಿಪುರಾಸುರವಧೆಗಾಗಿ ..ತ್ರೈಪುರ ,,
(8) ಅಂಧಕಾಸುರ ಸಂಹಾರಕ್ಕಾಗಿ ಅಂಧಕವಧ ,,
(9) ವೃತ್ರವಧೆಗಾಗಿ ..ವೃತ್ರಘಾತಕ ,,
(10) ದುಷ್ಟಕ್ಷತ್ರಿಯ ವಧೆಗಾಗಿ ..ಜಿತ ,,
(11) ಹಾಲಾಹಲದೈತ್ಯನಿಗಾಗಿ . ಹಾಲಾಹಲ ,,
(12) ಕೋಲಾಹಲ ದೈತ್ಯವಧೆಗಾಗಿ ಕೋಲಾಹಲ ,,

**द्वादशसप्तमीव्रत ದ್ವಾದಶಸಪ್ತಮೀವ್ರತ** (ನಂ) ಮಾಘ ಮಾಸ ಮೊದಲುಗೊಂಡು ಪುಷ್ಯಮಾಸದವರೆಗೆ ಪ್ರತಿ ಶುಕ್ಲ ಸಪ್ತಮೀ ದಿನ ಮಾಡುವ ಒಂದು ಸೂರ್ಯವ್ರತ. "माघमासात् समारभ्य शुक्लपक्षे युधिष्ठिर। सप्तम्यां कृतसंकल्पो वर्षमेकं व्रती भवेत्" भविष्यपु०।

**द्वादशसाहस्र ದ್ವಾದಶಸಾಹಸ್ರ** (ವಿಂ) ಹನ್ನೆರಡುಸಾವಿರ ಪರಿಮಾಣವುಳ್ಳ. द्वादश सहस्राणि परिमाणमस्य "अण्" (५-२-१०३)। उत्तरपदवृद्धिः। "यत्प्राग्द्वादशसाहस्रमुदितं दैविकं युगम्" मनु० १-७९।

**द्वादशाक्ष ದ್ವಾದಶಾಕ್ಷ** (ಪುಂ) 1. ಷಣ್ಮುಖ, ಕಾರ್ತಿಕೇಯ. द्वादश अक्षीणि अस्य "षच्" (५-४-११३)। 2. ಬುದ್ಧ. द्वादश मनोबुद्धिसहितानि ज्ञानेन्द्रियाणि कर्मेन्द्रियाणि च अक्षीणीव अस्य "षच्"।

**द्वादशाक्षर ದ್ವಾದಶಾಕ್ಷರ** (ಪುಂ) ವಿಷ್ಣುದ್ವಾದಶಾಕ್ಷರ ಮಂತ್ರ. द्वादश अक्षराणि अस्य।

**द्वादशाङ्ग ದ್ವಾದಶಾಂಗ** (ಪುಂ) 1. ದ್ವಾದಶ ಅಂಗಗಳಿಂದ ಕೂಡಿದ ಧೂಪ. द्वादश अङ्गान्यस्य। (1) ಗುಗ್ಗುಳ, (2) ಚಂದನ, (3) ಪತ್ರ, (4) ಜಂಗಲುಕೋಷ್ಠ, (5) ಅಗುರು, (6) ಕುಂಕುಮಕೇಸರಿ, (7) ಜಾಯಿಕಾಯಿ, (8) ಕರ್ಪೂರ, (9) ಜಟಾಮಾಂಸಿ, (10) ಮುಡಿವಾಳ, (11) ಲವಂಗಪಟ್ಟೆ ಮತ್ತು (12) ಲಾಮಂಚದ ಬೇರು. ಇವು ಧೂಪದ ಹನ್ನೆರಡು ಅಂಗಗಳು. (ಸ್ತ್ರೀಂ) –ङ्गी –ಙ್ಗೀ. 2. ಜೈನಾಗಮದಲ್ಲಿ ಅಂಗಪ್ರವಿಷ್ಟವೆಂಬ ಒಂದು ಭೇದದ ಹನ್ನೆರಡು ಅಂಗಗಳು. ["आगम" ಪದದಲ್ಲಿ "ಜೈನಾಗಮ" ನೋಡಿ.] द्वादशानाम् अङ्गानां समाहारः "ङीप्" (४-१-२१)।

**द्वादशाङ्गुल ದ್ವಾದಶಾಂಗುಲ** (ಪುಂ) ಹನ್ನೆರಡು ಅಂಗುಲಿಗಳ ಅಳತೆಯುಳ್ಳ ಒಂದು ಗೇಣು. द्वादश अङ्गुलयः प्रमाणमस्य "मात्रच्" (५-२-३७)। तस्य लुक् (वा० ५-२-३७)। "अच्" (५-४-८६)।

**द्वादशात्मन् ದ್ವಾದಶಾತ್ಮನ್** (ಪುಂ) ಹನ್ನೆರಡು ಮೂರ್ತಿಗಳುಳ್ಳ ಸೂರ್ಯ. द्वादश आत्मानो मूर्तयः यस्य। धाता मित्रः अर्यमा रुद्रः वरुणः सूर्यः भगः विवस्वान् पूषा सविता त्वष्टा ಮತ್ತು विष्णुः ಇವು ಸೂರ್ಯನ ಹನ್ನೆರಡು ಮೂರ್ತಿಗಳು.

**द्वादशादित्य ದ್ವಾದಶಾದಿತ್ಯ** (ಪುಂ) ಹನ್ನೆರಡು ಮಂದಿ ಸೂರ್ಯರು. ["द्वादशात्मन्" ಪದದಲ್ಲಿ ನೋಡಿ.]

**द्वादशायतन ದ್ವಾದಶಾಯತನ** (ನಂ) ಬೌದ್ಧಮತದಲ್ಲಿ ಉಕ್ತವಾದ ಹನ್ನೆರಡು ಪೂಜಾಸ್ಥಾನಗಳು. ಪಂಚ ಜ್ಞಾನೇಂದ್ರಿಯಗಳು ಪಂಚ ಕರ್ಮೇಂದ್ರಿಯಗಳು ಮನಸ್ಸು ಮತ್ತು ಬುದ್ಧಿ ಇವು ಹನ್ನೆರಡು ಪೂಜಾಸ್ಥಾನಗಳು. "ज्ञानेन्द्रियाणि पञ्चैव तथा कर्मेन्द्रियाण्यपि। मनो बुद्धिरिति प्रोक्तं द्वादशायतनं बुधैः"।

**द्वादशायुस् ದ್ವಾದಶಾಯುಸ್** (ಪುಂ) ಹನ್ನೆರಡು ವರ್ಷ ವಯಸ್ಸುಳ್ಳ ನಾಯಿ, ಸಿಂಹ ಮತ್ತು ಮಾರ್ಜಾರ. द्वादशवर्षाः आयुःकालो यस्य।

**द्वादशार ದ್ವಾದಶಾರ** (ನಂ) ಮೇಷ ಮೊದಲಾದ ಹನ್ನೆರಡು ರಾಶಿಗಳ ಚಕ್ರ. द्वादश अराः रथाङ्गाङ्गानीव यस्य।

**द्वानवति ದ್ವಾನವತಿ** (ಸ್ತ್ರೀಂ) ತೊಂಬತ್ತೆರಡು. द्व्यधिका नवतिः। वा आत् (६-३-४९)। पक्षे **द्विनवतिः ದ್ವಿನವತಿ.**

**द्वानवतितम ದ್ವಾನವತಿತಮ** (ವಿಂ) ತೊಂಬತ್ತೆರಡನೆಯ. द्वानवतेः पूरणः "तमट्" (५-२-५६)। स्त्रियाम् "ङीप्" (४-१-१५)। –तमी –ತಮೀ.

**द्वापञ्चाश ದ್ವಾಪಂಚಾಶ** (ವಿಂ) ಐವತ್ತೆರಡನೆಯ. द्वापञ्चाशतः पूरणः "डट्" (५-२-४८)। स्त्रियाम् "ङीप्" (४-१-१५)। –पञ्चाशी –ಪಂಚಾಶೀ.

**द्वापञ्चाशत् ದ್ವಾಪಂಚಾಶತ್** (ಸ್ತ್ರೀಂ) ಐವತ್ತೆರಡು. द्व्यधिका पञ्चाशत्। द्विशब्दस्य वा आत् (६-३-४९)।

**द्वापञ्चाशत्तम ದ್ವಾಪಂಚಾಶತ್ತಮ** (ವಿಂ) ಐವತ್ತೆರಡನೆಯ. द्वापञ्चाशतः पूरणः "डट्"। तस्य वा "तमट्" (५-२-५६)। स्त्रियाम् "ङीप्" (४-१-१५)। –तमी –ತಮೀ.

**द्वापर ದ್ವಾಪರ** (ಪುಂ) 1. ಸಂಶಯ, ಸಂದೇಹ. द्वौ परौ प्रकारौ यस्य। पृषो०। 2. ಕೃತ ಮೊದಲಾದ ನಾಲ್ಕು ಯುಗಗಳಲ್ಲೊಂದು. द्वाभ्यां कृतत्रेताभ्यां परः। **ದ್ವಾಪರ ಯುಗದ ಮಾನ:** ದೇವಮಾನದಲ್ಲಿ 2400 ವರ್ಷಗಳು. ಮಾನುಷಮಾನದಲ್ಲಿ 864000 ವರ್ಷಗಳು. "द्वापरः संशये युगे" शाश्व०। "द्वापरौ युगसन्देहौ" नानार्थर०।

**द्वार् ದ್ವಾರ್** (ಸ್ತ್ರೀಂ) 1. ದ್ವಾರ, ಬಾಗಿಲು. द्वारयति—द्वृ (संवरणे)+णिच् "विच्" (३-२-७५)। "द्वारि चक्षुरधिपाणि कपोलौ जीवितं त्वयि कुतः कलहोऽस्याः" किरा० ९-४३। 2. ಉಪಾಯ, ಮಾರ್ಗ, ದಾರಿ.

**द्वार ದ್ವಾರ** (ನಂ) 1. ಬಾಗಿಲು, ಮನೆಯಿಂದ ಹೊರಕ್ಕೂ ಹೊರಗಿನಿಂದ ಮನೆಗೂ ಹೋಗುವ ಜಾಗ. द्वारयति—द्वृ (संवरणे)+णिच् "अच्" (३-१-१३४)। "आकीर्णमृषिपत्नीनामुटजद्वाररोधिभिः" रघु० १-५०। ಮನೆಯ

ಹೊರಬಾಗಿಲನ್ನು ಸರಿಮಧ್ಯದಲ್ಲಿಡಕೂಡದು. ಸ್ವಲ್ಪ ಹೆಚ್ಚು ಕಡಮೆ ಒಂದು ಪಾರ್ಶ್ವಕ್ಕೆ ಸೇರಿದಂತಿಡಬೇಕು. "गृहिणां शुभदं द्वारं प्राकारस्य गृहस्य च। न मध्यदेशे कर्तव्यं किञ्चिन्न्यूनाधिकं शुभम्" ब्रह्मवैवर्ते श्रीकृष्णजन्मखण्डम्। 2. ಉಪಾಯ, ಮಾರ್ಗ, ದಾರಿ. "द्वारं तु द्वार्युपाये च" नानार्थर०। 3. ಹೊರಬಾಗಿಲು. "वराविमौ देवमहीधराणां द्वारे पुरस्योद्घटितापिधाने" कुमा० ७-५३। 4. ಮಹಾದ್ವಾರ. 5. ದೇಹದ ನವರಂಧ್ರಗಳು. "मनो नवद्वारनिषिद्धवृत्ति हृदि व्यवस्थाप्य समाधिवश्यम्" कुमा० ७-५०।

**द्वारकण्टक ದ್ವಾರಕಂಟಕ** (पुन०) ಕವಾಟ, ಕದ. द्वारस्य कण्टक इव। "कपाटो द्वारकण्टकः" त्रिकाण्ड०।

**द्वारका ದ್ವಾರಕಾ** (स्त्री०) ದ್ವಾರಕಾನಗರ, ಶ್ರೀಕೃಷ್ಣನ ಪ್ರಧಾನನಗರ. प्रशस्तेन द्वारेण कायति – कै (शब्दे) "कः" (३-२-३)। [ಕಂಸವಧೆಯಿಂದ ಕುಪಿತನಾದ ಜರಾಸಂಧನು ಪದೇ ಪದೇ ಮಧುರೆಯನ್ನು ಮುತ್ತಿ ಜನರನ್ನು ಪೀಡಿಸುತ್ತಿರಲು ಶ್ರೀಕೃಷ್ಣನು ಸಮುದ್ರತೀರದಲ್ಲಿ ವಿಶ್ವಕರ್ಮನಿಂದ ಈ ನಗರ ನಿರ್ಮಾಣಮಾಡಿಸಿದನು. ಇದು ಗುಜರಾತಿನ ಪಶ್ಚಿಮಭಾಗದಲ್ಲಿರುವುದು.]

**द्वारकानाथ ದ್ವಾರಕಾನಾಥ, -पति -ಪತಿ** (पुं०) ಶ್ರೀಕೃಷ್ಣ.

**द्वारगोप ದ್ವಾರಗೋಪ** (पुं०) ದ್ವಾರಪಾಲಕ, ಬಾಗಿಲು ಕಾಯುವವನು. द्वारं गोपायति—गुपू (रक्षणे) "अच्" (३-१-१३४)।

**द्वारप ದ್ವಾರಪ** (पुं०) ದ್ವಾರಪಾಲಕ, ಬಾಗಿಲು ಕಾಯುವವನು. द्वारं पाति—पा (रक्षणे) "कः" (३-२-३)।

**द्वारपाल ದ್ವಾರಪಾಲ** (पुं०) ದ್ವಾರಪಾಲಕ. द्वारं पालयति – पाल (रक्षणे) + णिच् "अण्" (३-२-१)। स्त्रियाम् "ङीप्" (४-१-१५)। **-पाली -ಪಾಲೀ.** "ण्वुल्" (३-१-१३३)। **-पालकः -ಪಾಲಕಃ.** स्त्रियाम् "टाप्" (४-१-४)। अत इत्वम्। **-पालिका -ಪಾಲಿಕಾ.**

**द्वारपालिक ದ್ವಾರಪಾಲಿಕ** (पुं०) ದ್ವಾರಪಾಲಿಯ ಮಗ, द्वारपाल्या अपत्यम् "ठक्" (४-१-१४६)। स्त्रियाम् "ङीप्" (४-१-१५)। **-पालिकी -ಪಾಲಿಕೀ.**

**द्वारपिण्डी ದ್ವಾರಪಿಂಡೀ** (स्त्री०) ದೇಹಳಿ, ಹೊಸ್ತಿಲು.

**द्वारपिधान ದ್ವಾರಪಿಧಾನ** (न०) ಬಾಗಿಲನ್ನು ಮುಚ್ಚುವುದು. द्वारस्य पिधानम्। "द्वारपिधानमिव धृतेर्मन्ये तस्यास्तिरस्करिणीम्" माल० २-११।

**द्वारबाहु ದ್ವಾರಬಾಹು** (पुं०) ದ್ವಾರಬಂಧದ ಕಂಬ, ಬಾಗಿಲಿಗೆ ಅಗುಳಿಹಾಕುವ ಕಂಬ.

**द्वारयन्त्र ದ್ವಾರಯಂತ್ರ** (न०) ಬಾಗಿಲಿನ ತಾಪಾಳು, ಬಾಗಿಲಿಗೆ ಹಾಕುವ ಅಗುಳಿ. द्वारे स्थितं यन्त्रम्।

**द्वाररक्षक ದ್ವಾರರಕ್ಷಕ** (पुं०) ಬಾಗಿಲನ್ನು ಕಾಯುವವನು, ದ್ವಾರಪಾಲಕ. द्वारं रक्षति—रक्ष (पालने) "ण्वुल्" (३-१-१३३)।

**द्वारवती ದ್ವಾರವತೀ** (स्त्री०) ದ್ವಾರಕಾನಗರ, ಶ್ರೀಕೃಷ್ಣನ ಮುಖ್ಯ ನಗರ. द्वाराणि चतुर्वर्णमोक्षद्वाराणि प्रशस्तान्यस्य "मतुप्" (५-२-९४)। मस्य वः। ["द्वारका" ಪದದಲ್ಲಿ ನೋಡಿ.]

**द्वारशाखा ದ್ವಾರಶಾಖಾ** (स्त्री०) ಬಾಗಿಲಿನ ಪಕ್ಕದ ಹಲಗೆ, ಒಂದು ಪಕ್ಕದ ಕದ.

**द्वारस्थ ದ್ವಾರಸ್ಥ** (पुं०) ದ್ವಾರಪಾಲಕ. द्वारे तिष्ठति—ष्ठा (गतिनिवृत्तौ) "कः" (३-२-४)।

**द्वाराध्यक्ष ದ್ವಾರಾಧ್ಯಕ್ಷ** (पुं०) ದ್ವಾರಪಾಲಕ. द्वारे अध्यक्षः।

**द्वारिक ದ್ವಾರಿಕ** (पुं०) ದ್ವಾರಪಾಲಕ. द्वारं पाल्यतया अस्त्यस्य "ठन्" (५-२-११५)।

**द्वारिन् ದ್ವಾರಿನ್** (पुं०) ದ್ವಾರಪಾಲಕ. द्वार "इनिः" (५-२-११५)।

**द्वाविंश ದ್ವಾವಿಂಶ** (वि०) ಇಪ್ಪತ್ತೆರಡನೆಯ. द्वाविंशतेः पूरणः "डट्" (५-२-४८)। स्त्रियाम् "ङीप्" (४-१-१५)। **-विंशी -ವಿಂಶೀ.**

**द्वाविंशति ದ್ವಾವಿಂಶತಿ** (स्त्री०) ಇಪ್ಪತ್ತೆರಡು. द्व्यधिका विंशतिः। आत् (६-३-४७)।

**द्वाविंशतितम ದ್ವಾವಿಂಶತಿತಮ** (वि०) ಇಪ್ಪತ್ತೆರಡನೆಯ. द्वाविंशतेः पूरणः—डटः "तमट्" (५-२-५५)। स्त्रियाम् "ङीप्" (४-१-१५)। **-तमी -ತಮೀ.**

**द्वाषष्ट ದ್ವಾಷಷ್ಟ** (वि०) ಅರವತ್ತೆರಡನೆಯ. द्वाषष्टेः पूरणः "डट्" (५-२-४८)। वा आत् (६-३-४९)।

**द्वाषष्टि ದ್ವಾಷಷ್ಟಿ** (स्त्री०) ಅರವತ್ತೆರಡು. द्व्यधिका षष्टिः। वा आत् (६-३-४९)।

**द्वाषष्टितम ದ್ವಾಷಷ್ಟಿತಮ** (वि०) ಅರವತ್ತೆರಡನೆಯ. द्वाषष्टि—डटः वा "तमट्" (५-२-५६)। स्त्रियाम् "ङीप्" (४-१-१५)। **-तमी -ತಮೀ.** वा आत् (६-३-४९)।

**द्वासप्तत ದ್ವಾಸಪ್ತತ** (वि०) ಎಪ್ಪತ್ತೆರಡನೆಯ. द्वासप्ततेः पूरणः "डट्" (५-२-४८)। वा आत् (६-३-४९)।

**द्वासप्तति ದ್ವಾಸಪ್ತತಿ** (स्त्री०) ಎಪ್ಪತ್ತೆರಡು. द्वयधिका सप्ततिः। वा आत् (६-३-४९)।

**द्वासप्ततितम ದ್ವಾಸಪ್ತತಿತಮ** (वि०) ಎಪ್ಪತ್ತೆರಡನೆಯ. द्वासप्तति डटः वा "तमट्" (५-२-५६)। स्त्रियाम् "ङीप्" (४-१-१५)। **-तमी -ತಮೀ.**

**द्वास्स्थ ದ್ವಾಸ್ಸ್ಥ** (पुं०) ದ್ವಾರಪಾಲಕ, ಬಾಗಿಲು ಕಾಯುವವನು. द्वारि तिष्ठति—ष्ठा (गतिनिवृत्तौ) "कः" (३-२-४)। वा विसर्गलोपः (वा० ८-३-३६)।

**द्वास्स्थित ದ್ವಾಸ್ಸ್ಥಿತ** (पुं०) ದ್ವಾರಪಾಲಕ, ಬಾಗಿಲು ಕಾಯುವವನು. द्वारि स्थितः। वा विसर्गलोपः (वा० ८-३-३६)।

**द्वास्स्थितदर्शक ದ್ವಾಸ್ಸ್ಥಿತದರ್ಶಕ** (पुं०) ದ್ವಾರಪಾಲಕ. द्वास्थितः सन् पश्यति—दृशिर् (प्रेक्षणे) "ण्वुल्" (३-१-१३३)।

**द्वि ದ್ವಿ** (त्रि० द्विव०) ಎರಡು. ಇದೊಂದು ಸರ್ವನಾಮ ಶಬ್ದ. ಇದರ ಲಿಂಗತ್ರಯದ ರೂಪಗಳು. (पुं०) द्वौ द्वौ द्वाभ्याम् द्वाभ्याम् द्वाभ्याम् द्वयोः द्वयोः।

(स्त्री०) द्वे द्वे ಮತ್ತು (न०) द्वे द्वे } ತೃತೀಯಾದಿ ವಿಭಕ್ತಿಗಳಲ್ಲಿ ಪುಂಲಿಂಗದ ರೂಪಗಳಂತಾಗುವುವು. "एको नव द्वौ दश पञ्च सप्तेत्यजीगणन्नातममुखं प्रसार्य" कुमा० ११-४५। "तद्बल्गुना युगपदुन्मिषितेन तावत्सद्यः परस्परतुलामधिरोहतां द्वे" रघु० ५-६८। द्वि ಶಬ್ದಕ್ಕೆ दशन् विंशति ಮತ್ತು त्रिंशत् ಇವು ಪರವಾದರೆ ಆತ್ವವು ಬಂದು (६-३-४७) द्वादश द्वाविंशतिः द्वात्रिंशत् ಎಂದು ರೂಪಗಳಾಗುವುವು. (द्वि ಶಬ್ದಕ್ಕೆ) चत्वारिंशत् पञ्चाशत् षष्टिः सप्ततिः ಮತ್ತು नवतिः ಇವು ಪರವಾದರೆ ವಿಕಲ್ಪವಾಗಿ ಆತ್ವವು ಬಂದು द्वाचत्वारिंशत् द्विचत्वारिंशत् द्वापञ्चाशत् द्विपञ्चाशत् द्वाषष्टिः द्विषष्टिः द्वासप्ततिः द्विसप्ततिः द्वानवतिः द्विनवतिः ಇತ್ಯಾದಿ ರೂಪಗಳಾಗುವುವು. अशीति ಪದವು ಪರವಾದರೆ ಆತ್ವವು ಬರುವುದಿಲ್ಲ. द्वयशीतिः द्वयशीतितमः ಇತ್ಯಾದಿ ರೂಪಗಳಾಗುವುವು. (अव्य०) 2. द्विः—ಎರಡು ಸಲ, ಎರಡಾವೃತ್ತಿ.

**द्विक ದ್ವಿಕ** (पुं०) 1. ಕಾಗೆ, ವಾಯಸ. 2. ಚಕ್ರವಾಕಪಕ್ಷಿ. द्वौ कौ ककारौ यस्य। काकः कोकः ಈ ಶಬ್ದಗಳಲ್ಲಿ ಎರಡು ಕಕಾರಗಳು ಇರುವುದರಿಂದ ಈ ಹೆಸರು. 3. ಎರಡು ಸಂಖ್ಯೆ. द्वाभ्यां कायति—कै (शब्दे) "कः" (३-२-४)। 4. ಎರಡನೆಯವನಾಗಿ ತೆಗೆದುಕೊಳ್ಳುವುದು. द्वितीय "कन्" पूरणप्रत्ययस्य तीयस्य वा लुक् च (५-२-७७)। द्वितीयकं द्विकं वा ग्रहणं देवदत्तस्य। सि० कौ०। गृह्णाति इत्यर्थे पूरणप्रत्ययस्य नित्यं लुक् (वा० ५-२-७७)। षष्ठेन रूपेण गृह्णाति षट्को देवदत्तः।

**द्विककार ದ್ವಿಕಕಾರ** (पुं०) 1. ವಾಯಸ, ಕಾಗೆ. 2. ಚಕ್ರವಾಕಪಕ್ಷಿ. द्वौ ककारौ यस्य। काकः, कोकः।

**द्विककुद् ದ್ವಿಕಕುದ್** (पुं०) ಉಷ್ಟ್ರ, ಒಂಟೆ. द्वे ककुदे यस्य।

**द्विकर ದ್ವಿಕರ** (न०) 1. ಎರಡು ಕೈಗಳು. द्वयोः करयोः समाहारः। "बुभुक्षितः किं द्विकरेण भुङ्क्ते"। (वि०) 2. ಎರಡು ಕೆಲಸಗಳನ್ನು ಮಾಡುವ. द्वौ करोति—डु कृञ् (करणे) "टः" (३-२-२१)।

**द्विकार्षापण ದ್ವಿಕಾರ್ಷಾಪಣ** (वि०) ಎರಡು ಕಾರ್ಷಾಪಣ (ನಾಣ್ಯ)ಗಳಿಂದ ಕೊಳ್ಳಲ್ಪಟ್ಟ. द्वाभ्यां कार्षापणाभ्यां क्रीतम् "ठञ्" (५-१-३७)। ठञो वा लुक् (५-१-२९)। पक्षे (लुगभावे) द्विकार्षापणिकम् ದ್ವಿಕಾರ್ಷಾಪಣಿಕಮ್.

**द्विगु ದ್ವಿಗು** (पुं०) 1. ಸಮಾಸಗಳಲ್ಲಿ ಒಂದು ಭೇದ. ತತ್ಪುರುಷ ಸಮಾಸದ ಒಂದು ಭೇದ. "संख्यापूर्वो द्विगुः" (२-१-५२)। पञ्चानां गवां समाहारः "टच्" (५-४-९२)। पञ्चगवम्। एकवचनम् (२-४-१)। (वि०) 2. ಎರಡು ಹಸುಗಳನ್ನು ಹೊಂದಿರುವ. द्वौ गावौ यस्य। ह्रस्वः (१-२-४८)।

**द्विगुण ದ್ವಿಗುಣ** (वि०) ಎರಡರಷ್ಟಾದ. ಇಮ್ಮಡಿಯಾದ. द्वौ गुणौ आवृत्ती यस्य। "एतच्छौचं गृहस्थानां द्विगुणं ब्रह्मचारिणाम्" मनु० ५-१३७।

**द्विगुणाकृत ದ್ವಿಗುಣಾಕೃತ** (न०) ಎರಡು ಸಲ ಉಳಲ್ಪಟ್ಟ ಭೂಮಿ. द्विगुणं कृतम् "डाच्" (५-४-५९)।

**द्विगुणित ದ್ವಿಗುಣಿತ** (वि०) ಎರಡರಿಂದ ಗುಣಿಸಲ್ಪಟ್ಟ, ಇಮ್ಮಡಿಯಾಗಿ ಮಾಡಲ್ಪಟ್ಟ, ಎರಡರಷ್ಟಾದ. ಎರಡರಷ್ಟು ಅಧಿಕಗೊಳಿಸಲ್ಪಟ್ಟ. द्वाभ्यां गुणितः। "वैरोचनैर्द्विगुणिताः सहसा मयूखैः" किरा० ५-४६।

**द्विगुणीकृत ದ್ವಿಗುಣೀಕೃತ** (वि०) ಇಮ್ಮಡಿಯಾಗಿ ಮಾಡಲ್ಪಟ್ಟ. ಎರಡರಷ್ಟು ಮಾಡಲ್ಪಟ್ಟ. द्वौ गुणावावृत्ती यस्य द्विगुणः—अद्विगुणः द्विगुणः कृतः "च्विः" (वा० ५-४-५०)। "बभार बाष्पैर्द्विगुणं कृतं तनुस्तनूनपाद्धूमवितानमाधिजैः" माघ० १-६२।

**द्विचत्वारिंश ದ್ವಿಚತ್ವಾರಿಂಶ** (ವಿ०) ನಲವತ್ತೆರಡನೆಯ. द्विचत्वारिंशतः पूरणः "डट्" (५-२-४८)।

**द्विचत्वारिंशत् ದ್ವಿಚತ್ವಾರಿಂಶತ್** (स्त्री०) ನಲವತ್ತೆರಡು. द्व्यधिका चत्वारिंशत्।

**द्विचत्वारिंशत्तम ದ್ವಿಚತ್ವಾರಿಂಶತ್ತಮ**(ವಿ०)ನಲವತ್ತೆರಡನೆಯ. द्विचत्वारिंशत् "डट्"। डटः वा "तमट्" (५-२-५६)। स्त्रियाम् "ङीप्" (४-१-१५)। **–तमी – ತಮೀ.**

**द्विचरण ದ್ವಿಚರಣ** (ಪುं०) 1. ಮನುಷ್ಯ. द्वौ चरणौ यस्य। "गतः कालो यत्र द्विचरणपशूनां क्षितिभुजां पुरःस्वस्तीत्युक्ता विषयसुखमास्वादितमहो"। 2. ಎರಡು ಪಾದಗಳುಳ್ಳ ರಾಶಿ. (ನ०) 3. ಎರಡು ಕಾಲುಗಳು.

**द्विज ದ್ವಿಜ** (ಪುं०) 1. ಉಪನಯನ ಮೊದಲಾದ ಸಂಸ್ಕಾರ ಹೊಂದಿದ ಬ್ರಾಹ್ಮಣ. द्विर्जायते — जनी (प्रादुर्भावे) "डः" (३-२-१०१)। "जन्मना जायते शूद्रः कर्मणा जायते द्विजः"। "वटुमात्रेण शक्यं हि सज्यं कर्तुं धनुर्द्विजाः। अवहास्या भविष्यन्ति ब्राह्मणाः सर्वराजसु" भा० आदि० २०३-५। 2. ಮೊದಲನೆಯ ಮೂರು ವರ್ಣಗಳಲ್ಲಿ ಹುಟ್ಟಿದವನು. (ಬ್ರಾಹ್ಮಣ ಕ್ಷತ್ರಿಯ ಮತ್ತು ವೈಶ್ಯ). 3. ಮೊಟ್ಟೆಯಿಂದ ಹುಟ್ಟುವ (1) ಪಕ್ಷಿ, ಹಕ್ಕಿ. (2) ಸರ್ಪ, ಹಾವು. (3) ಮತ್ಸ್ಯ, ಮೀನು ಮುಂತಾದುವು. 4. ದಂತ, ಹಲ್ಲು. "द्विजावलिव्याजनिशाकरांशुभिः शुचिस्मितां वाचमवोचदच्युतः" माघ० १-२५। "द्विजः स्याद्ब्राह्मणक्षत्रवैश्यदन्ताण्डजेषु ना" मेदि०। (ವಿ०) 5. ಎರಡು ಸಲ ಹುಟ್ಟುವ.

**द्विजत्व ದ್ವಿಜತ್ವ** (ನ०) ಬ್ರಾಹ್ಮಣತ್ವ, ದ್ವಿಜನಾಗಿರುವಿಕೆ. द्विजस्य भावः "त्वः" (५-१-११९)।

**द्विजन्मन् ದ್ವಿಜನ್ಮನ್** (ಪುं०) 1. "द्विज" ಪದದ ಅರ್ಥ. द्वे जन्मनी यस्य। "वैदिकैः कर्मभिः पुण्यैर्निषेकादिर्द्विजन्मनाम् मनु० २-२६। "इति प्रविश्याभिहिता द्विजन्मना" कुमा० ५-५१। "द्विजातिश्च द्विजन्मा च ब्राह्मणादिपतत्रिणोः" वैज०। "द्विजन्मा दशने विप्रे" मेदि०। 2. ಮೊದಲು ಶೂದ್ರನಿಗೆ ಮದುವೆಯಾಗಿದ್ದ ವೈಶ್ಯ ಹೆಂಗಸಿನಲ್ಲಿ ವ್ರಾತ್ಯ (ಸಂಸ್ಕಾರಹೀನ) ನಾದ ವೈಶ್ಯನಿಂದ ಹುಟ್ಟಿದ ಮಗ. "शूद्रपूर्वा दिजन्मानम्" वैज०।

**द्विजपति ದ್ವಿಜಪತಿ** (ಪುं०) 1. ಬ್ರಾಹ್ಮಣೋತ್ತಮ, ಶ್ರೇಷ್ಠನಾದ ಬ್ರಾಹ್ಮಣ. 2. ಚಂದ್ರ. 3. ಪಕ್ಷಿರಾಜ, ಗರುಡ. दिजानां पतिः।

**द्विजपोत ದ್ವಿಜಪೋತ** (ಪುं०) ಪತಿತನಾದ ಬ್ರಾಹ್ಮಣ. "शूद्रोऽन्त्यवर्णो वृषलो द्विजपोतो जघन्यजः" वैज०।

**द्विजप्रपा ದ್ವಿಜಪ್ರಪಾ** (स्त्री०) 1. ಮರದ ಕೆಳಗಡೆ ಮಾಡಿರುವ ಪಾತಿ. 2. ಹಕ್ಕಿಗಳು ನೀರು ಕುಡಿಯಲು ಬಾವಿಯ ಹತ್ತಿರ ಮಾಡಿರುವ ನೀರಿನ ತೊಟ್ಟಿ. "द्विजप्रपालवालं स्यात्" त्रिकाण्ड०।

**द्विजबन्धु ದ್ವಿಜಬಂಧು** (ಪುं०) ಪತಿತನಾದ ಬ್ರಾಹ್ಮಣ, ಜನ್ಮ ಮತ್ತು ಹೆಸರಿನಿಂದ ಮಾತ್ರ ಬ್ರಾಹ್ಮಣನಾಗಿರುವವನು, ಬ್ರಾಹ್ಮಣನ ಕರ್ತವ್ಯವನ್ನು ಬಿಟ್ಟಿರುವವನು.

**द्विजब्रुव ದ್ವಿಜಬ್ರುವ** (ಪುं०) ಕರ್ಮಭ್ರಷ್ಟನಾದ ಬ್ರಾಹ್ಮಣ. ಜಾತಿಮಾತ್ರದಿಂದ ಬ್ರಾಹ್ಮಣನೆಂದುಕೊಳ್ಳುವವನು. द्विजमात्मानं ब्रूते — ब्रूञ् (व्यक्तायां वाचि)। "कः" (३-१-१३५)।

**द्विजराज ದ್ವಿಜರಾಜ** (ಪುं०) 1. ಚಂದ್ರ. द्विजानां राजा "टच्" (५-४-९१)। "इत्थं द्विजेन द्विजराजकान्तिरावेदितो वेदविदां वरेण" रघु० ५-२३। 2. ಬ್ರಾಹ್ಮಣೋತ್ತಮ, ಶ್ರೇಷ್ಠನಾದ ಬ್ರಾಹ್ಮಣ. 3. ಪಕ್ಷಿರಾಜ, ಗರುಡ. 4. ಅನನ್ತ, ಸರ್ಪರಾಜ. "द्विजराजः शशधरे सुपर्णेऽनन्तभोगिनि" विश्व०। 5. ಕರ್ಪೂರ.

**द्विजर्षभ ದ್ವಿಜರ್ಷಭ** (ಪುं०) ಉತ್ತಮನಾದ ಬ್ರಾಹ್ಮಣ, ಶ್ರೇಷ್ಠ ಬ್ರಾಹ್ಮಣ. द्विजेषु ऋषभः श्रेष्ठः।

**द्विजलिङ्गिन् ದ್ವಿಜಲಿಂಗಿನ್** (ಪುं०) 1. ಕ್ಷತ್ರಿಯ. द्विजस्य लिङ्गमस्यास्ति "इनिः" (५-२-११५)। (ವಿ०) 2. ಬ್ರಾಹ್ಮಣನ ವೇಷವನ್ನು ಹಾಕಿರುವ. "तान् सर्वान् घातयेद्राजा शूद्रांस्तु द्विजलिङ्गिनः" मनु० ९-२४४।

**द्विजवर ದ್ವಿಜವರ, –वर्य –ವರ್ಯ** (ಪುं०) ಶ್ರೇಷ್ಠ ಬ್ರಾಹ್ಮಣ, ಉತ್ತಮನಾದ ಬ್ರಾಹ್ಮಣ.

**द्विजवाहन ದ್ವಿಜವಾಹನ** (ಪುं०) ವಿಷ್ಣು, ನಾರಾಯಣ. द्विजो गरुडो वाहनमस्य।

**द्विजव्रण ದ್ವಿಜವ್ರಣ** (ನ०) ದಂತರೋಗದ ಒಂದು ಭೇದ.

**द्विजशप्त ದ್ವಿಜಶಪ್ತ** (ಪುं०) ರಾಜಮಾಷ, ಕಾರಾಮಣಿ, ಅಲಸಂದೆ. द्विजैःशप्तः।

**द्विजश्रेष्ठ ದ್ವಿಜಶ್ರೇಷ್ಠ** (ಪುं०) ಉತ್ತಮ ಬ್ರಾಹ್ಮಣ.

**द्विजा ದ್ವಿಜಾ** (स्त्री०) 1. ರೇಣುಕ ಎಂಬ ಒಂದು ಗಂಧಿಗರ ವಸ್ತು. द्विर्जायते—जनी (प्रादुर्भावे) "डः" (३-२-१०१)। 2. ಭಾರಂಗಿ ಗಿಡ. "द्विजा भार्ग्यां हरेणौ च" मेदि०।

**द्विजाग्र्य ದ್ವಿಜಾಗ್ರ್ಯ** (ಪುं०) ಬ್ರಾಹ್ಮಣೋತ್ತಮ. द्विजेषु अग्र्यः। "अद्भिरेव द्विजाग्र्याणां कन्यादानं विशिष्यते" मनु० ३-३५।

**द्विजाति ದ್ವಿಜಾತಿ** (ಪುಂ०) 1. ಬ್ರಾಹ್ಮಣ. द्वे जाती जन्मनी यस्य । "पुरोपनीतं नृप रामणीयकं द्विजातिशेषेण यदेतदन्धसा" किरा० १-३९ । 2. ಮೊದಲನೆಯ ಮೂರು ವರ್ಣಗಳಲ್ಲಿ ಹುಟ್ಟಿದವನು, ಬ್ರಾಹ್ಮಣ ಕ್ಷತ್ರಿಯ ಮತ್ತು ವೈಶ್ಯ. "ब्राह्मणःक्षत्रियो वैश्यस्त्रयो वर्णा द्विजातयः" मनु० १०-४ । 3. ಮೊಟ್ಟೆ (ತತ್ತಿ) ಯಿಂದ ಹುಟ್ಟುವ (1) ಪಕ್ಷಿ. ಹಕ್ಕಿ. (2) ಸರ್ಪ, ಹಾವು. (3) ಮತ್ಸ್ಯ, ಮೀನು ಮುಂತಾದುವು. "द्विजातिविप्राण्डजयोस्तु पुंलिङ्गः" मेदि० । "द्विजातिश्च द्विजन्मा च ब्राह्मणादिपतत्रिणोः" वैज० । 4. ದಂತ. ಹಲ್ಲು.

**द्विजायनी ದ್ವಿಜಾಯನೀ** (स्त्री०) ಬ್ರಹ್ಮಸೂತ್ರ, ಯಜ್ಞೋಪವೀತ. द्विजः अय्यते ज्ञायतेऽनया—अय (गतौ) "ल्युट्" (३-३-११७)। गत्यर्थानां ज्ञानार्थकत्वात् । "ङीप्" (४-१-१५) । "पवित्रं यज्ञोपवीतं ब्रह्मसूत्रं द्विजायनी" त्रिकाण्ड० ।

**द्विजालय ದ್ವಿಜಾಲಯ** (ಪುಂ०) 1. ಪಕ್ಷಿಗಳ ವಾಸಸ್ಥಾನ, ಮರದ ಪೊಟರೆ. 2. ಹಕ್ಕಿಗಳ ಗೂಡು. 3. ದ್ವಿಜರ ಮನೆ. द्विजानामालयः वासस्थानम् ।

**द्विजावलि ದ್ವಿಜಾವಲಿ** (स्त्री०) 1. ದ್ವಿಜರ ಪಙ್ಕ್ತಿ. 2. ಹಕ್ಕಿಗಳ ಸಾಲು. 3. ದಂತಪಙ್ಕ್ತಿ, ಹಲ್ಲುಗಳ ಸಾಲು. द्विजानामावलिः । "द्विजावलिव्याजनिशाकरांशुभिः" माघ० १-२५ ।

**द्विजिह्व ದ್ವಿಜಿಹ್ವ** (ಪುಂ०) 1. ಸರ್ಪ, ಹಾವು. द्वे जिह्वे अस्य । स्त्रियाम् जाति० "ङीष्" (४-१-६३) । **ಸರ್ಪಗಳಿಗೆ ಎರಡು ನಾಲಿಗೆಗಳಾಗಲು ಕಾರಣ:** ಸರ್ಪಮಾತೆಯಾದ ಕದ್ರೂವಿಗೂ ಗರುತ್ಮಂತನ ತಾಯಿಯಾದ ವಿನತೆಗೂ ಉಚ್ಚೈಃಶ್ರವಸ್ಸಿನ ಬಣ್ಣದ ವಿಷಯದಲ್ಲಿ ಪಂದ್ಯವುಂಟಾಗಿ ಕದ್ರೂವಿನ ಮೋಸದಿಂದ ವಿನತೆಯು ಸೋತು ಅವಳಿಗೆ ದಾಸಿಯಾದಳು. ಈ ದಾಸ್ಯವಿಮೋಚನೆಗಾಗಿ ವಿನತಾಪುತ್ರನಾದ ಗರುತ್ಮಂತನು ಕದ್ರೂಪುತ್ರರಾದ ಸರ್ಪಗಳಿಗೆ ಅಮೃತವನ್ನು ತಂದುಕೊಡುವುದಾಗಿ ಮಾತು ಕೊಟ್ಟು ಇಂದ್ರನ ಮನೆಯಿಂದ ಅಮೃತವನ್ನು ತಂದು ಸ್ನಾನಮಾಡಿ ಈ ಅಮೃತವನ್ನು ಪಾನಮಾಡಬೇಕೆಂದೂ ತನ್ನ ತಾಯಿ ವಿನತೆಗೆ ದಾಸ್ಯವು ಹೋಗಬೇಕೆಂದೂ ಸರ್ಪಗಳಿಗೆ ಹೇಳಿ ಅಮೃತವನ್ನು ದರ್ಭೆಯ ಮೇಲಿಟ್ಟು ಹೊರಟು ಹೋದನು. ಸರ್ಪಗಳು ಸ್ನಾನಕ್ಕೆ ಹೋಗಿದ್ದಾಗ ಇಂದ್ರನು ಬಂದು ಆ ಅಮೃತವನ್ನು ಅಪಹರಿಸಿಕೊಂಡು ಹೋದನು. ಸರ್ಪಗಳು ಬಂದು ನೋಡಿದಾಗ ಅಲ್ಲಿ ಅಮೃತವಿಲ್ಲದಿರಲು ದರ್ಭೆಯನ್ನೇ ನಾಲಿಗೆಯಿಂದ ನೆಕ್ಕಿದುವು. ಆಗ ನಾಲಿಗೆಯು ಸೀಳಿಹೋಗಿ ಅಂದಿನಿಂದ ಸರ್ಪಗಳಿಗೆ ಎರಡು ನಾಲಿಗೆಗಳಾದುವು. ಅಮೃತವನ್ನಿಟ್ಟದ್ದರಿಂದ ಅಂದಿನಿಂದ ದರ್ಭೆಯೂ ಪವಿತ್ರವಾಯಿತು. "अथ सर्पानुवाचेदं सर्वान् परमहृष्टवत् । इदमानीतममृतं निक्षेप्स्यामि कुशेषु वः । स्नाता मङ्गलसंयुक्तास्ततः प्राश्नीत पन्नगाः । भवद्भिरिदमासीनैर्यदुक्तं तद्वचस्तदा । अदासी चैव मातेयमद्यप्रभृति चास्तु मे । ततः स्नातुं गताः सर्पाः प्रत्युक्त्वा तं तथेत्युत । शक्रोऽप्यमृतमाक्षिप्य जगाम त्रिदिवं पुनः । अथागतास्तमुद्देशं सर्पाः सोमार्थिनस्तदा । स्नाताश्च कृतजप्याश्च प्रहृष्टाः कृतमङ्गलाः । यत्रैतदमृतं चापि स्थापितं कुशसंस्तरे । तद्विज्ञाय हृतं सर्पाः प्रतिमायाकृतं च तत् । सोमस्थानमिदं चेति दर्भांस्ते लिलिहुस्तदा । तदा द्विधाकृता जिह्वा सर्पाणां तेन कर्मणा । अभवंश्चामृतस्पर्शात् दर्भास्तेऽथ पवित्रिणः" भा० आदि० ३४ । "अमर्षणः शोणितकाङ्क्षया किं पदा स्पृशन्तं दशति द्विजिह्वः" रघु० १४-४१ । 2. ಖಲ, ದುರ್ಜನ. ಚಾಡಿಕೋರ. "द्विजिह्वौ सर्पसूचकौ" अम० ।

**द्विजेन्द्र ದ್ವಿಜೇಂದ್ರ** (ಪುಂ०) 1. ಬ್ರಾಹ್ಮಣೋತ್ತಮ, ಶ್ರೇಷ್ಠ ಬ್ರಾಹ್ಮಣ. द्विजः इन्द्र इव । 2. ಚಂದ್ರ. द्विजानामिन्द्रः । "हस्तस्थिताखण्डितचक्रशालिनं द्विजेन्द्रकान्तं श्रितवक्षसं श्रिया" माघ० १२-३ । 3. ಗರುಡ, ಪಕ್ಷಿರಾಜ. 4. ಕರ್ಪೂರ.

**द्विजेश ದ್ವಿಜೇಶ** (ಪುಂ०) 1. ಪಕ್ಷಿರಾಜ, ಗರುಡ. 2. ಚಂದ್ರ. 3. ಕರ್ಪೂರ. **–ईश्वरः –ಈಶ್ವರः.**

**द्विजोत्तम ದ್ವಿಜೋತ್ತಮ** (ಪುಂ०) ವಿಪ್ರ. ಬ್ರಾಹ್ಮಣ. द्विजेषु उत्तमः ।

**द्वित ದ್ವಿತ** (ಪುಂ०) ಗೌತಮ ಋಷಿಯ ಒಬ್ಬ ಮಗ. ಏಕತ ತ್ರಿತರೆಂಬುವರು ಈತನ ಸಹೋದರರು. ["त्रित" ಪದದಲ್ಲಿ ನೋಡಿ.]

**द्वितन्त्र ದ್ವಿತಂತ್ರ** (ಪುಂ०) ಎರಡು ಶಾಸ್ತ್ರಗಳನ್ನು ಅಧ್ಯಯನ ಮಾಡಿದವನು ಅಥವಾ ತಿಳಿದವನು. द्वे तन्त्रे अधीते वेद वा "अण्" (४-२-५९)। अणो "लुक्" (४-१-८८)।

**द्वितय ದ್ವಿತಯ** (न०) 1. ಎರಡು, ಎರಡು ಅವಯವಗಳುಳ್ಳ ಸಮುದಾಯ. द्वौ अवयवौ यस्य "तयप्" (५-२-४२) । तयस्य वा "अयच्" (५-२-४३) । पक्षे **द्वयम् ದ್ವಯಮ್.** "अधिकं शुशुभे शुभंयुना द्वितयेन द्वयमेव सङ्गतम्" रघु० ८-६ । (वि०) 2. ಎರಡು

ವಿಧವಾದ, ಎರಡು ಪ್ರಕಾರವಾದ. "द्रुमसानुमतां किमन्तरं यदि वायौ द्वितयेऽपि ते चलाः" रघु० ८-९० ।

**द्वितीय ದ್ವಿತೀಯ** (ಪುಂ) 1. ಪುತ್ರ, ಮಗ. "पुत्रो द्वितीयःकुलधारकः" त्रिकाण्ड० । 2. ಮಿತ್ರ, ಜೊತೆಗಾರ, ಸಹಾಯ. "रतिद्वितीये मदने प्रपन्ने" कुमा० ३-३५ । "अध्यास्य प्रयतपरिग्रहद्वितीयः" रघु० १-९५ । 3. (ವ್ಯಾಕರಣದಲ್ಲಿ) ಕ್ರಿಯಾಪದದ ಎರಡನೆಯ (ಮಧ್ಯಮ) ಪುರುಷ. (ವಿ०) 4. ಎರಡನೆಯ. द्वयोः पूरणः—द्वि "तीयः" (५-२-५४) । "प्रभवेण द्वितीयेन तथैवो-च्छिरसा त्वया" कुमा० ६-७० । स्त्रियाम् "टाप्" (४-१-४) । **द्वितीया ದ್ವಿತೀಯಾ.** 5. ಭಾರ್ಯೆ, ಪತ್ನಿ, ಹೆಂಡತಿ. 6. ದ್ವಿತೀಯಾ ತಿಥಿ, ಪಕ್ಷದ ಎರಡನೆಯ ತಿಥಿ. 7. (ವ್ಯಾಕರಣದಲ್ಲಿ) ಶಬ್ದದ ಎರಡನೆಯ ವಿಭಕ್ತಿ. **द्वितीया-विभक्तिः ದ್ವಿತೀಯಾವಿಭಕ್ತಿಃ.**

**द्वितीयक ದ್ವಿತೀಯಕ** (ನ०) 1. ಎರಡನೆಯವನಾಗಿ ತೆಗೆದುಕೊಳ್ಳುವುದು. द्वितीयेन रूपेण ग्रहणम्—द्वितीय "कन्" (५-२-७७) । पूरणप्रत्ययस्य वा लुक् । पक्षे **द्विकम् ದ್ವಿಕಮ್.** 2. ಎರಡನೆಯ ದಿನ ಬರುವ ಜ್ವರ.

**द्वितीयाकृत ದ್ವಿತೀಯಾಕೃತ** (ವಿ०) ಎರಡನೆಯ ಸಲ ಉಳಲ್ಪಟ್ಟ (ಭೂಮಿ). द्वितीयं कर्षणं कृतम् "डाच्" (५-४-५९) ।

**द्वितीयाश्रम ದ್ವಿತೀಯಾಶ್ರಮ** (ಪುಂ) ಎರಡನೆಯ ಆಶ್ರಮ, ಗೃಹಸ್ಥಾಶ್ರಮ. द्वितीयः आश्रमः । "कालोह्ययं संक्रमितुं द्वितीयं सर्वोपकारक्षममाश्रमं ते" रघु० ५-१० । ಈ ಗೃಹಸ್ಥಾಶ್ರಮದಲ್ಲಿ ಪತ್ನೀಸಮೇತನಾಗಿ ಮನೆಗೆ ಬಂದ ಅತಿಥಿ ಅಭ್ಯಾಗತರುಗಳನ್ನು ಸತ್ಕರಿಸುತ್ತ ಯಜ್ಞಯಾಗಾದಿಗಳನ್ನು ಆಚರಿಸುತ್ತ ಧರ್ಮಕಾರ್ಯನಿರತನಾಗಿರಬೇಕು. ಮನುಷ್ಯನ ಧಾರ್ಮಿಕ ಜೀವಮಾನದಲ್ಲಿ ಇದು ಎರಡನೆಯ ಅವಸ್ಥೆ.

**द्वितीयिक ದ್ವಿತೀಯಿಕ** (ವಿ०) ಎರಡನೆಯ ಸಲ ಬಡ್ಡಿ ಲಾಭ ತೆರಿಗೆ ಮುಂತಾದುವನ್ನು ಕೊಡುವ ಕಾಲ ಮುಂತಾದುದು. द्वितीयो वृद्ध्यादिरस्मिन् दीयते—द्वितीय "ठन्" (५-१-४८) ।

**द्वितीयिन् ದ್ವಿತೀಯಿನ್** (ವಿ०) ಎರಡನೆಯ ಅರ್ಧಭಾಗವನ್ನು ತೆಗೆದುಕೊಳ್ಳುವವನು. द्वितीयो भागो ग्राह्यतयाऽस्त्यस्य "इनिः" (५-२-११५) ।

**द्वित्र ದ್ವಿತ್ರ** (ವಿ० ಬ० ವ०) ಇಬ್ಬರು ಅಥವಾ ಮೂವರು, ಎರಡು ಅಥವಾ ಮೂರು. द्वौ वा त्रयो वा "डच्" (५-४-७३) । "द्वित्राण्यहान्यर्हसि सोढुमर्हन्यावद्यते साधयितुं त्वदर्थम्" रघु० ५-२५ ।

**द्वित्व ದ್ವಿತ್ವ** (ನ०) 1. ಎರಡು ರೂಪವಾಗಿರುವಿಕೆ, ಎರಡಾಗಿರುವಿಕೆ. द्वयोर्भावः "त्वः" (५-१-११९) । ಎರಡು ವಸ್ತುನಿಷ್ಠವಾದ ಗುಣವು ದ್ವಿತ್ವದಲ್ಲಿ ಸಮವಾಯ ಸಂಬಂಧದಿಂದ ಪ್ರತ್ಯೇಕವಾಗಿರುವುದು. ಆದರೆ ಎರಡನ್ನೂ ಒಟ್ಟಿಗೆ ಹೇಳುವಾಗ ಸಮುದಾಯದಲ್ಲಿರುವುದು. ಪ್ರತ್ಯೇಕವಾಗಿ ಹೇಳಲಾಗುವುದಿಲ್ಲ. ಈ ದ್ವಿತ್ವದಲ್ಲಿ ಎರಡೂ ಸಮಾನ ಜಾತೀಯವಾದುದರಿಂದ ಪ್ರತ್ಯೇಕ ವ್ಯವಹಾರವಿಲ್ಲ.

**द्विदण्डि ದ್ವಿದಂಡಿ** (ಅವ್ಯ०) ಎರಡು ಕೋಲುಗಳಿಂದ ನಡೆಯುವ ಹೊಡೆದಾಟ, ಎರಡು ದಂಡಗಳಿಂದ ನಡೆಯುವ ಯುದ್ಧ. द्वौ दण्डौ यस्मिन् प्रहरणे "इच्" (५-४-१२८) ।

**द्विदत् ದ್ವಿದತ್** (ಪುಂ) ಎರಡು ಹಲ್ಲುಗಳು ಹುಟ್ಟುವ ವಯಸ್ಸಿನ ಎತ್ತು ಮೊದಲಾದುದು. द्वौ दन्तावस्य—दन्तस्य "दतृ" (५-४-१४१) ।

**द्विदन्त ದ್ವಿದಂತ** (ಪುಂ) ಎರಡು ದಂತಗಳುಳ್ಳ ಆನೆ. द्वौ दन्तावस्य ।

**द्विदल ದ್ವಿದಲ** (ಪುಂ) 1. ದ್ವಿದಳ ಧಾನ್ಯ, ಎರಡು ಭಾಗವಾಗಿ ಬೇಳೆಯಾಗುವ ಧಾನ್ಯ, ತೊಗರಿ ಕಡಲೆ ಅವರೆ ಹೆಸರು ಉದ್ದು ಇತ್ಯಾದಿ. द्वे दले यस्य । 2. ಎರಡು ಭಾಗವಾಗುವ ದರ್ಭೆ.

**द्विदश ದ್ವಿದಶ** (ವಿ० ಬ० ವ०) ಎರಡು ಹತ್ತು, ಇಪ್ಪತ್ತು. द्विरावृत्ताः दश द्विदशाः—द्वि+दशन् "डच्" (५-४-७३) ।

**द्विदाम्नी ದ್ವಿದಾಮ್ನೀ** (ಸ್ತ್ರೀ०) ಎರಡು ಹಗ್ಗಗಳಿಂದ ಕಟ್ಟಬೇಕಾದ ದುಷ್ಟ ಹಸು. द्वे दामनी सन्दाने यस्याः—"ङीप्" (४-१-२७) ।

**द्विदेह ದ್ವಿದೇಹ** (ಪುಂ) ಗಣಪತಿ, ವಿನಾಯಕ.

**द्विद्वादश ದ್ವಿದ್ವಾದಶ** (ಪುಂ) ವಧೂವರರ ರಾಶಿಗಳಲ್ಲಿನ ಒಂದು ದೋಷ, ಎರಡನೆಯ ಮತ್ತು ಹನ್ನೆರಡನೆಯ ರಾಶಿಗಳಾಗುವುದರಿಂದ ಉಂಟಾಗುವ ಒಂದು ದೋಷ. द्वितीयः द्वादशश्च । त्रिभागवत् द्विशब्दस्य पूरणार्थत्वम् । ವಧೂವರರ ಜಾತಕಗಳಲ್ಲಿ ವಧುವಿನ ರಾಶಿಯಿಂದ ವರನ ರಾಶಿಯು ಎರಡನೆಯದಾಗಿಯೂ ವರನ ರಾಶಿಯಿಂದ ವಧುವಿನ ರಾಶಿಯು ಹನ್ನೆರಡನೆಯದಾಗಿಯೂ ಇರುವುದು ದೋಷವಾಗುವುದು. "द्विके द्वादशके मृत्युरायुर्द्विदशके द्विके । तृतीयैकादशे दुःखं सुखमेकादशत्रिके" मुहू० द० ।

**द्विधा ದ್ವಿಧಾ** (ಅವ್ಯ०) ಎರಡು ವಿಧವಾಗಿ, ಎರಡು ಪ್ರಕಾರವಾಗಿ. द्वि प्रकारे "धा" (५-३-४२) । "द्विधा

प्रयुक्तेन च वाङ्मयेन सरस्वती तन्मिथुनं नुनाव" ಕುಮಾ೦ ೭-೯೦ ।

**द्विधागति ದ್ವಿಧಾಗತಿ** (ಪುಂ) 1. ಏಡಿ, ಏಳ್ಳಿ, ಕುಳೀರ. द्विधा गतिर्गमनमस्य । ಏಡಿಯು ಹಿಂದುಮುಂದಾಗಿಯೂ ಸಂಚರಿಸುವುದರಿಂದ ಈ ಹೆಸರು. 2. ಮೊಸಳೆ. ಇದು ನೀರಿನಲ್ಲೂ ನೆಲದಮೇಲೆಯೂ ಸಂಚರಿಸುವುದು. (ವಿಂ) 3. ಎರಡು ರೀತಿಯಲ್ಲಿ ಸಂಚರಿಸುವ.

**द्विनवति ದ್ವಿನವತಿ** (ಸ್ತ್ರೀಂ) ತೊಂಬತ್ತಮೂರು. द्वयधिका नवतिः । "द्वि" ಪದದಲ್ಲಿ ನೋಡಿ.

**द्विनवतितम ದ್ವಿನವತಿತಮ** (ವಿಂ) ತೊಂಬತ್ತಮೂರನೆಯ. द्विनवतेः पूरणः—डटो वा "तमट्" (५-२-५६)। स्त्रियाम् "ङीप्" (४-१-१५) । -तमी - ತಮೀ.

**द्विनाव ದ್ವಿನಾವ** (ನಂ) ಎರಡು ಹಡಗುಗಳು. द्वयोर्नावोः समाहारः "टच्" (५-४-९९) ।

**द्विनिष्क ದ್ವಿನಿಷ್ಕ** (ವಿಂ) ಎರಡು ನಿಷ್ಕಗಳಿಂದ ಕ್ರಯಕ್ಕೆ ಕೊಳ್ಳಲ್ಪಟ್ಟ. द्वाभ्यां निष्काभ्यां क्रीतम् "ठञ्" (५-१-३७)। तस्य वा लुक् (५-१-३०)। लुगभावे उत्तरपदवृद्धिः (७-३-१५)। द्विनैष्किकः ದ್ವಿನೈಷ್ಕಿಕಃ.

**द्विप ದ್ವಿಪ** (ಪುಂ) ಗಜ, ಆನೆ. द्वाभ्यां पिबति—पा (पाने) "कः" (३-२-४) । "वप्रं द्विपानां विरुवन्त उच्चकैर्वनेचरेभ्यश्चिरमाचचक्षिरे" माघ० १२-६४। ಸೊಂಡಿಲು ಮತ್ತು ಬಾಯಿ ಎರಡರಿಂದಲೂ ನೀರು ಕುಡಿಯುವುದರಿಂದ ಆನೆಗೆ ಈ ಹೆಸರು.

**द्विपक्ष ದ್ವಿಪಕ್ಷ** (ಪುಂ) 1. ಮಾಸ, ತಿಂಗಳು. द्वौ पक्षौ स्तोऽस्य । 2. ಪಕ್ಷಿ, ಹಕ್ಕಿ.

**द्विपञ्चाश ದ್ವಿಪಂಚಾಶ** (ವಿಂ) ಐವತ್ತೆರಡನೆಯ. द्विपञ्चाशतः पूरणः "डट्" (५-१-४८)। स्त्रियाम् "ङीप्" (४-१-१५)। -पञ्चाशी - ಪಂಚಾಶೀ. ["द्वि" ಪದದಲ್ಲಿ ನೋಡಿ.]

**द्विपञ्चाशत् ದ್ವಿಪಂಚಾಶತ್** (ಸ್ತ್ರೀಂ) ಐವತ್ತೆರಡು. द्वयधिका पञ्चाशत् । ["द्वि" ಪದದಲ್ಲಿ ನೋಡಿ.]

**द्विपञ्चाशत्तम ದ್ವಿಪಂಚಾಶತ್ತಮ** (ವಿಂ) ಐವತ್ತೆರಡನೆಯ. द्विपञ्चाशतः पूरणः—डटः वा "तमट्" (५-२-५६)। स्त्रियाम् "ङीप्" (४-१-१५) । -तमी - ತಮೀ.

**द्विपण्य ದ್ವಿಪಣ್ಯ** (ವಿಂ) ಎರಡು ಪಣಗಳಿಂದ ಕೊಳ್ಳಲ್ಪಟ್ಟ. द्वाभ्यां पणाभ्यां क्रीतम् "यत्" (५-१-३४) ।

**द्विपथ ದ್ವಿಪಥ** (ಪುಂ) ಎರಡು ಮಾರ್ಗಗಳು, ಎರಡು ದಾರಿಗಳು. द्वयोः पथोः समाहारः समासान्तः "अः" (५-४-७४)।

**द्विपद ದ್ವಿಪದ** (ಪುಂ) 1. ಎರಡು ಕಾಲುಗಳುಳ್ಳ (1) ಮನುಷ್ಯ, (2) ದೇವತೆ, (3) ರಾಕ್ಷಸ ಮತ್ತು (4) ಪಕ್ಷಿ. द्वे पदे यस्य । 2. ದ್ವಿಪದಸಮಾಸ, ಎರಡು ಪದಗಳ ಸಮಾಸ. (ನಂ) 3. ಎರಡು ಪಾದಗಳು, ಎರಡು ಕಾಲುಗಳು. द्वयोः पादयोः समाहारः । -

**द्विपदराशि ದ್ವಿಪದರಾಶಿ** (ಪುಂ) ಮಿಥುನ ಕನ್ಯಾ ತುಲಾ ಮತ್ತು ಕುಂಭ ರಾಶಿಗಳು ಮತ್ತು ಧನುಸ್ಸಿನ ಪೂರ್ವಾರ್ಧ. "मिथुनतुलाघटकन्या द्विपदाख्याश्चापपूर्वभागश्च" ।

**द्विपाद्य ದ್ವಿಪಾದ್ಯ** (ಪುಂ) 1. ಎರಡರಷ್ಟು ಶಿಕ್ಷೆ, ಶಾಸ್ತ್ರದಲ್ಲಿ ಹೇಳಿರುವುದಕ್ಕಿಂತಲೂ ಇಮ್ಮಡಿಯಾದ ಶಿಕ್ಷೆ. द्वौ पादौ गुणौ परिमाणमस्य "यत्" (५-१-३४)। "द्विपाद्यो द्विगुणो दण्डः" अम०। (ವಿಂ) 2. ಎರಡು ಪಾದ (ಕಾಲುಭಾಗ)ಗಳಿಂದ ಕೊಳ್ಳಲ್ಪಟ್ಟ. द्वाभ्यां पादाभ्यां चतुर्थांशाभ्यां क्रीतम् "यत्" (५-१-३४) ।

**द्विपाधिप ದ್ವಿಪಾಧಿಪ** (ಪುಂ) 1. ಐರಾವತ, ಇಂದ್ರನ ಆನೆ. 2. ಗಜಶ್ರೇಷ್ಠ, ಸಲಗ, ಆನೆಗಳ ಹಿಂಡಿನ ಯಜಮಾನ. द्विपानामधिपः। "तत्पूर्वमंसद्वयसं द्विपाधिपाः क्षणं सहेलाः परितो जगाहिरे" माघ० १२-७२।

**द्विपानन ದ್ವಿಪಾನನ** (ಪುಂ) ಗಣಪತಿ, ವಿನಾಯಕ. द्विपस्य आननं यस्य।

**द्विपायिन् ದ್ವಿಪಾಯಿನ್** (ಪುಂ) ಗಜ, ಆನೆ. द्वाभ्यां शुण्डामुखाभ्यां पिबति — पा (पाने) "णिनिः" (३-२-७८) ।

**द्विपास्य ದ್ವಿಪಾಸ್ಯ** (ಪುಂ) ಗಣಪತಿ, ವಿನಾಯಕ. द्विपस्य आस्यं यस्य ।

**द्विपुरुष ದ್ವಿಪುರುಷ** (ವಿಂ) ಎರಡು ಪುರುಷಪ್ರಮಾಣವುಳ್ಳ, ಎರಡು ಆಳು ಉದ್ದದ ಆಳತೆಯುಳ್ಳ. द्वौ पुरुषौ प्रमाणमस्य—द्विपुरुष "मात्रच्" (५-२-३७)। तस्य लुक् (वा० ५-१-३७)। स्त्रियाम् वा "ङीप्" (४-१-२४)। द्विपुरुषी द्विपुरुषा वा परिखा।

**द्विबिन्दु ದ್ವಿಬಿಂದು** (ಪುಂ) ಎರಡು ಬಿಂದುಗಳಿರುವ ವಿಸರ್ಗ. द्वौ बिन्दू यस्य।

**द्विभूम ದ್ವಿಭೂಮ** (ವಿಂ) ಎರಡು ಭೂಮಿಗಳುಳ್ಳ ಉಪ್ಪರಿಗೆ (ಮಹಡಿ) ಮನೆ ಮೊದಲಾದುದು. द्वे भूमी यस्य "अच्" (वा० ५-४-७५)।

**द्विमातृ ದ್ವಿಮಾತೃ** (ಪುಂ) 1. ಗಣಪತಿ. द्वौ मातरौ अस्य। समासान्तविधेरनित्यत्वात् न कप्। 2. ಜರಾಸಂಧ.

**द्विमातृज ದ್ವಿಮಾತೃಜ**(पुं०) 1. ಗಣಪತಿ. 2. ಜರಾಸಂಧ. द्वाभ्यां मातृभ्यां जायते — जनी (प्रादुर्भावे) "ड:" (३-२-९८)।

**द्विमात्र ದ್ವಿಮಾತ್ರ** (पुं०) ದೀರ್ಘಸ್ವರ. द्वे मात्रे उच्चारण-कालोऽस्य। आ ई ऊ ಇತ್ಯಾದಿ. "एकमात्रो भवेद्ह्रस्वो द्विमात्रो दीर्घ उच्यते। त्रिमात्रस्तु प्लुतो ज्ञेय: व्यञ्जनं त्वर्धमात्रकम्" पा० शि०।

**द्विमास्य ದ್ವಿಮಾಸ್ಯ** (वि०) ಎರಡು ತಿಂಗಳು ವಯಸ್ಸುಳ್ಳ, ಹುಟ್ಟಿ ಎರಡು ತಿಂಗಳಾಗಿರುವ. द्वौ मासौ भूत: "यप्" (५-१-८२)।

**द्विमुख ದ್ವಿಮುಖ** (पुं०) 1. ಎರಡು ಮುಖಗಳುಳ್ಳ ಒಂದು ಜಾತಿಯ ಸರ್ಪ. द्वे मुखे अस्य। 2. ಒಂದು ವಿಧ ಕ್ರಿಮಿ. "चूरवो द्विमुखाश्चैव सप्तैवैते पुरीषजा:" सुश्रुत० उत्तरतं० ५४-८। (वि०) 3. ಎರಡು ಮುಖಗಳುಳ್ಳ. (स्त्री०) —मुखा – ಮುಖಾ. 4. ಜಿಗಣೆ.

**द्विमुनि ದ್ವಿಮುನಿ** (अव्य०) ವ್ಯಾಕರಣವಿದ್ಯಾಪ್ರವರ್ತಕರಾದ ಪಾಣಿನಿ ಮತ್ತು ಕಾತ್ಯಾಯನ ಋಷಿಗಳು. "द्वे मुनी वंश्यौ द्विमुनि व्याकरणस्य" सि० कौ०। अव्ययीभाव: (२-१-१९)। ಈ ಮುನಿಗಳಿಬ್ಬರೂ ಸಮಾನ ವಿದ್ಯಾವಂತರಾದುದರಿಂದ ಸಮಾನವಂಶ್ಯರಾದರು. ವಿದ್ಯೆಗೂ ವಿದ್ಯಾವಂತರಿಗೂ ಅಭೇದವಿವಕ್ಷೆಯಿಂದ द्विमुनि व्याकरणम् ಎಂದೂ ಹೇಳಬಹುದು.

**द्विमुसलि ದ್ವಿಮುಸಲಿ** (अव्य०) ಎರಡು ಒನಕೆ (ಮುಸಲ) ಗಳಿಂದ ನಡೆಯುವ ಯುದ್ಧ. द्वौ मुसलौ यस्मिन् प्रहरणे "इच्" (५-४-१२८)।

**द्विमूर्ध ದ್ವಿಮೂರ್ಧ** (वि०) ಎರಡು ತಲೆಗಳುಳ್ಳ. द्वौ मूर्धानौ यस्य "ष:" (५-४-११५)। स्त्रियाम् "ङीष्" (४-१-४१)।

**द्विर ದ್ವಿರ** (पुं०) ಭ್ರಮರ, ದ್ವಿರೇಫ, ದುಂಬಿ. द्वौ रौ रेफौ यस्य। ಭ್ರಮರಶಬ್ದದಲ್ಲಿ ಎರಡು ರೇಫಗಳಿರುವುದರಿಂದ ಈ ಹೆಸರು.

**द्विरद ದ್ವಿರದ** (पुं०) ಗಜ, ಆನೆ. द्वौ रदौ यस्य। "उपालब्धेवोच्चैर्गिरिपतिरिति श्रीपतिमसौ बलाक्रान्त: क्रीडद्द्विरदमथितोर्वीरुहरवै:" माघ० ५-६९।

**द्विरदरिपु ದ್ವಿರದರಿಪು, —शत्रु – ಶತ್ರು** (पुं०) ಆನೆಗೆ ಶತ್ರುವಾದ ಸಿಂಹ. द्विरदस्य रिपु:शत्रुर्वा।

**द्विरदान्तक ದ್ವಿರದಾಂತಕ, —अराति – ಅರಾತಿ** (पुं०) ಸಿಂಹ. द्विरदस्य अन्तक: अरातिर्वा।

**द्विरसन ದ್ವಿರಸನ** (पुं०) ಸರ್ಪ, ಹಾವು. द्वे रसने यस्य। स्त्रियाम् जाति० "ङीष्" (४-१-६३)।

**द्विरागमन ದ್ವಿರಾಗಮನ** (न०) ಮದುವೆಯಾದನಂತರ ತಂದೆಯ ಮನೆಯಿಂದ ಪತಿಯ ಗೃಹಕ್ಕೆ ಎರಡನೆಯ ಸಲ ಬರುವುದು. द्वि: द्विवारमागमनम्। "वृत्ते पाणिग्रहे गेहात् पितु: पतिगृहं प्रति। पुनरागमनं वध्वास्तद्द्विरागमनं विदु:"। ತಂದೆಯ ಮನೆಯಿಂದ ಪತಿಗೃಹಕ್ಕೆ ಎರಡನೆಯ ಸಲ ಬರುವುದಕ್ಕೆ ಶುಭ ದಿನಗಳು. ವಿಷಮ (ಒಂದು ಮೂರು ಐದು ಇತ್ಯಾದಿ) ವರ್ಷಗಳಲ್ಲಿ ಮೇಷ ವೃಶ್ಚಿಕ ಅಥವಾ ಕುಂಭಮಾಸದಲ್ಲಿ ರವಿ ಗುರುಗಳ ಯೋಗವಿರುವಾಗ ಶುಭಗ್ರಹಗಳ ವಾರ (ಸೋಮ ಬುಧ ಗುರು ಶುಕ್ರ)ಗಳಲ್ಲಿ ವೃಷಭ ಮಿಥುನ ಕನ್ಯಾ ತುಲಾ ಅಥವಾ ಮೀನಲಗ್ನದಲ್ಲಿ ಅಶ್ವಿನಿ ಪುಷ್ಯ ಹಸ್ತ ಶ್ರವಣ ಧನಿಷ್ಠ ಶತಭಿಷಕ್ ಈ ನಕ್ಷತ್ರಗಳಲ್ಲಿ ದ್ವಿರಾಗಮನವು ಪ್ರಶಸ್ತವು. ಶುಕ್ರನು ಅಭಿಮುಖನಾಗಿರುವಾಗಲೂ ಹೊರಡುವವರಿಗೆ ದಕ್ಷಿಣಭಾಗದಲ್ಲಿರುವಾಗಲೂ ಶಿಶು ಗರ್ಭಿಣಿ ಮತ್ತು ನೂತನ ವಧು ಇವರು ಪ್ರಯಾಣ ಮಾಡಕೂಡದು.

**द्विरात्र ದ್ವಿರಾತ್ರ** (न०) ಎರಡು ರಾತ್ರಿಗಳು. द्वयो: रात्र्यो: समाहार:। नपुंसकत्वम् (लिङ्गा० २-४-२९)।

**द्विरात्रीण ದ್ವಿರಾತ್ರೀಣ** (वि०) 1. ಎರಡು ರಾತ್ರಿಗಳಲ್ಲಿ ನಡೆದ. द्वाभ्यां रात्रिभ्यां निर्वृत्त: वा "ख:" (५-१-८७)। ईनादेश: (७-१-२)। 2. ಎರಡು ರಾತ್ರಿಗಳಲ್ಲಿ ಪ್ರೀತಿಸಿಕೊಳ್ಳಲ್ಪಟ್ಟ. 3. ಎರಡು ರಾತ್ರಿಗಳ ಕಾಲದ. 4. ಮುಂದಿನ ಎರಡು ರಾತ್ರಿಗಳಲ್ಲಿ ನಡೆಯುವ. पक्षे "ठञ्" (५-१-७८)। द्वैरात्रिक: ದ್ವೈರಾತ್ರಿಕ:.

**द्विराषाढ ದ್ವಿರಾಷಾಢ** (पुं०) ಎರಡು ಅಮಾವಾಸ್ಯೆಗಳು ಬರುವ ಮಿಥುನಮಾಸ; ಮಿಥುನಮಾಸದಲ್ಲಿ ಎರಡು ಅಮಾವಾಸ್ಯೆಗಳು ಬಂದರೆ ಅದಕ್ಕೆ "ದ್ವಿರಾಷಾಢ" ಎಂದು ಹೆಸರು. "मिथुनस्थो यदा भानुरमावास्याद्वयं स्पृशेत्। द्विराषाढ: स विज्ञेय: विष्णु: स्वपिति कर्कटे"।

**द्विरुक्त ದ್ವಿರುಕ್ತ** (पुं०) 1. ಅಭ್ಯಾಸ ಸಂಜ್ಞೆಯನ್ನು ಹೊಂದಿ ದ್ವಿತ್ವಹೊಂದಿದ ಧಾತು. (वि०) 2. ಎರಡು ಸಲ ಹೇಳಲ್ಪಟ್ಟ. द्वि: द्विवारमुक्त:।

**द्विरूढा ದ್ವಿರೂಢಾ** (स्त्री०) ಎರಡು ಸಲ ಮದುವೆಯಾದ ಹೆಂಗಸು. द्विवारमूढा।

**द्विरेतस् ದ್ವಿರೇತಸ್** (पुं०) 1. ಹೇಸರಗತ್ತೆ. द्वे रेतसी (रासभाश्वयो:) कारणमस्य। 2. ಗರ್ದಭ, ಕತ್ತೆ.

**द्विरेफ ದ್ವಿರೇಫ** (पुं०) ಭ್ರಮರ, ದುಂಬಿ. **द्वौ रेफौ यस्य** वाचकशब्दे। ಭ್ರಮರ ಶಬ್ದದಲ್ಲಿ ಎರಡು ರೇಫಗಳಿರುವುದರಿಂದ ಈ ಹೆಸರು. "निवेशयामास मधुर्द्विरेफान्" कुमा० ३-२७। "सुगन्धिनिश्वासविवृद्धतृष्णं बिम्बाधरासन्नचरं द्विरेफम्" कुमा० ३-५६।

**द्विर्वचन ದ್ವಿರ್ವಚನ** (न०) 1. ಅಭ್ಯಾಸಸಂಜ್ಞೆ ಹೊಂದಿದ ಧಾತು. (वि०) 2. ಎರಡು ಸಲ ಹೇಳಲ್ಪಟ್ಟ. द्विरुच्यते— वच (परिभाषणे) कर्म० "ल्युट्" (३-३-११३)।

**द्विवक्त्र ದ್ವಿವಕ್ತ್ರ** (पुं०) ಎರಡು ತಲೆಗಳುಳ್ಳ ಉರಿಶಿಂಗಿಯೆಂಬ ಹಾವು. द्वे वक्त्रे यस्य।

**द्विवचन ದ್ವಿವಚನ** (न०) ಎರಡು ವಸ್ತುಗಳನ್ನು ಅಥವಾ ಇಬ್ಬರನ್ನು ಹೇಳುವ ಪ್ರತ್ಯಯ. द्वौ द्वित्वमुच्यतेऽनेन— वच (परिभाषणे) करण० "ल्युट्" (३-३-११७)। औ औट् भ्याम् ಇತ್ಯಾದಿ ದ್ವಿವಚನ ಪ್ರತ್ಯಯಗಳು.

**द्विवज्रक ದ್ವಿವಜ್ರಕ** (पुं०) ಹದಿನಾರು ಕೋಣ (ಮೂಲೆ) ಗಳುಳ್ಳ ಮನೆ. "वज्रोऽष्टास्त्रिद्विवज्रको द्विगुणः"।

**द्विवर्ष ದ್ವಿವರ್ಷ** (पुं०) 1. ಎರಡು ವರ್ಷ ವಯಸ್ಸುಳ್ಳ ವೃಷಭ ಮೊದಲಾದುದು. द्वे वर्षे वयोमानमस्य "ठञ्" (५-१-८८)। तस्य वा लुक् (५-१-२८)। स्त्रियाम् "टाप्" (४-१-४)। **—वर्षा —ವರ್ಷಾ.** ಎರಡು ವರ್ಷ ವಯಸ್ಸಿನ ಹಸು. 2. ಎರಡು ವರ್ಷ ವಯಸ್ಸುಳ್ಳ ಬಾಲಕ. द्विवर्षो दारकः। खस्य ठञ्प्रत्ययस्य च चित्तवति नित्यं लुक् (५-१-८९)। 3. ಎರಡು ವರ್ಷಗಳ ಕಾಲ ಸಲಿಂ ಕ್ರಯಕ್ಕೆ ಕೊಳ್ಳಲ್ಪಟ್ಟ ಸೇವಕ, —ಸತ್ಕರಿಸಿ ಕೆಲಸ ಮಾಡಿಸಲ್ಪಟ್ಟ. द्वे वर्षे अधीष्टो भृतश्च "ठञ्" (५-१-८०)। वा खः (५-१-८८)। तयोः वा लुक् (५-१-८८)। द्विवर्षीणः, द्विवर्षः। 4. ಎರಡು ವರ್ಷಗಳ ಕಾಲದ, ಎರಡು ವರ್ಷಗಳ ಕಾಲ ಕಳೆದಿರುವ. द्वे वर्षे भूतः वा "खः" (५-१-८८)। पक्षे "ठञ्" (५-१-८०)। तयोः वा लुक् (५-१-८८)। द्विवर्षीणः द्विवर्षः। 5. ಎರಡು ವರ್ಷಗಳಲ್ಲಿ ಆಗುವ. द्वे वर्षे भावी— द्विवर्षीणः द्विवर्षः। 6. ಎರಡು ವರ್ಷಗಳಲ್ಲಿ ನಡೆದ. द्वाभ्यां वर्षाभ्यां निर्वृत्तः। द्विवर्षीणः द्विवर्षः। ಅಧೀಷ್ಟ ಮತ್ತು ಭೃತ ಈ ಅರ್ಥಗಳಲ್ಲಿ ಭವಿಷ್ಯದರ್ಥದಲ್ಲೂ ಉತ್ತರಪದವೃದ್ಧಿಯು ಬರುವುದು. द्वे वर्षे अधीष्टो भृतो वा कर्म करिष्यति **द्विवार्षिकः ದ್ವಿವಾರ್ಷಿಕಃ.**

**द्विविंशतिकीन ದ್ವಿವಿಂಶತಿಕೀನ** (वि०) ಎರಡು ವಿಂಶತಿಗಳಿಂದ ಕೊಳ್ಳಲ್ಪಟ್ಟ, ಎರಡು ವಿಂಶತಿಗಳ ಬೆಲೆ ಬಾಳುವ. द्वाभ्यां विंशतिभ्यां क्रीतम्—द्विविंशति "खः" (५-१-३२)। "कन्" (५-१-२४)। **द्वाविंशतिकः ದ್ವಾವಿಂಶತಿಕಃ.**

**द्विविद ದ್ವಿವಿದ** (पुं०) ಶ್ರೀರಾಮನ ಸೈನ್ಯದಲ್ಲಿದ್ದ ಒಬ್ಬ ವಾನರ. "मैन्दश्च द्विविदश्चैव हनूमांश्चानिलात्मजः"।

**द्विविध ದ್ವಿವಿಧ** (वि०) ಎರಡು ವಿಧವಾದ, ಎರಡು ಪ್ರಕಾರವಾದ. द्वे विधे यस्य। "निकामतप्ता द्विविधेन वह्निना" कुमा० ५-२३।

**द्विवेद ದ್ವಿವೇದ** (पुं०) ಎರಡು ವೇದಗಳನ್ನು ಅಧ್ಯಯನ ಮಾಡಿದವನು ಅಥವಾ ತಿಳಿದವನು. द्वौ वेदावधीते वेद वा "अण्" (४-२-५९)। तस्य लुक् (४-१-८८)। द्विवेदोऽस्यास्ति "इनिः" (५-२-११५)। **—वेदिन् —ವೇದಿನ್.**

**द्विवेशरा ದ್ವಿವೇಶರಾ** (स्त्री०) ಕೈಗಾಡಿ, ಮನುಷ್ಯರಿಂದ ಎಳೆಯಲ್ಪಡುವ "ರಿಕ್ಷಾ" ಎಂಬ ಗಾಡಿ. द्वौ वेशौ यानस्थानरूपौ राति ददाति — रा (दाने) "कः" (३-२-३)।

**द्विव्रण ದ್ವಿವ್ರಣ** (पुं०) ದೇಹಕ್ಕೆ ಸಂಬಂಧಿಸಿದ ಎರಡು ವಿಧ ವ್ರಣ. ಪ್ರಾಣಿಗಳ ಶರೀರವಲ್ಲಿ ಎರಡು ವಿಧವಾದ ವ್ರಣಗಳುಂಟಾಗುವುವು. ಒಂದು ಶಾರೀರ. ಇದು ಶರೀರದೊಳಗಿನದು. ಇನ್ನೊಂದು ಶರೀರದ ಮೇಲುಗಡೆ ಸಂಭವಿಸುವುದು. ಇದು ಆಗಂತುಕವು. ವಾತ ಪಿತ್ತ ಕಫಾದಿ ದೋಷಗಳಿಂದ ಉಂಟಾಗುವುದು ಶಾರೀರವ್ರಣ. ಮನುಷ್ಯ ಪಶು ಪಕ್ಷಿ ಸರ್ಪ ಇತ್ಯಾದಿಗಳಿಂದಲೂ ಪತನ ಪ್ರಹಾರ ಅಗ್ನಿ ವಿಷ ಬಾಣ ಆಯುಧ ಇತ್ಯಾದಿಗಳಿಂದಲೂ ಉಂಟಾಗುವುದು ಆಗಂತುಕವ್ರಣ. "द्वौ व्रणौ भवतः शारीर आगन्तुकश्चेति। तयोः शारीरः पवनपित्तकफशोणितसन्निपातनिमित्तः। आगन्तुरपि पुरुषपशुपक्षिव्यालसरीसृपप्रपतनपीडनप्रहाराग्निक्षारविषपरशुशक्तिकुन्ताद्यायुधाभिघातनिमित्तजः" सुश्रुत० चिकित्सा० १-३।

**द्विशत ದ್ವಿಶತ** (न०) ಇನ್ನೂರು, ಎರಡು ನೂರು. द्विगुणितं शतम्।

**द्विशतक ದ್ವಿಶತಕ** (वि०) ಎರಡು ನೂರುಗಳಿಂದ ಕೊಳ್ಳಲ್ಪಟ್ಟ. द्विशतेन क्रीतम् "कन्" (५-१-२२)।

**द्विशततम ದ್ವಿಶತತಮ** (वि०) ಇನ್ನೂರನೆಯ. द्विशत पूरणे डट्— तस्य नित्यं तमडागमः (५-२-५७)। स्त्रियाम् "ङीप्" (४-१-१५)। **—शततमी —ಶತತಮೀ.**

**द्विशतिका ದ್ವಿಶತಿಕಾ** (स्त्री०) ಎರಡೆರಡುನೂರು. द्विशत वीप्सायां "वुन्" (५-४-१)। टाप् (४-१-४)। अत इत्वम् (७-३-४४)।

**द्विशती ದ್ವಿಶತೀ** (स्त्री०) ಎರಡುನೂರು. द्वयोः शतयोः समाहारः।

**द्विशत्य ದ್ವಿಶತ್ಯ** (न०) ಇನ್ನೂರರಿಂದ ಕ್ರಯಕ್ಕೆ ಕೊಳ್ಳಲ್ಪಟ್ಟ. द्विशतेन क्रीतम् "यत्" (५-१-३४)।

**द्विशफ ದ್ವಿಶಫ** (पुं०) 1. ಎರಡು (ಸೀಳಿದ) ಗೊರಸುಗಳುಳ್ಳ ಹಸು ಎಮ್ಮೆ ಮೊದಲಾದ ಪ್ರಾಣಿ. द्वौ शफौ यस्य। ಹಸು ಆಡು ಎಮ್ಮೆ ಜಿಂಕೆ ಹಂದಿ ಗವಯ ಈ ಪ್ರಾಣಿಗಳ ಕಾಲಿನ ಗೊರಸು ಎರಡಾಗಿ ಸೀಳಿದೆ.

**द्विशरीर ದ್ವಿಶರೀರ** (पुं०) ಚರಸ್ಥಿರ ರೂಪವಾದ ದ್ವಿಸ್ವಭಾವದ ರಾಶಿ. द्वे चरस्थिरात्मके शरीरे यस्य। ಮಿಥುನ ಕನ್ಯಾ ಧನುಸ್ಸು ಮತ್ತು ಮೀನ ಇವು ದ್ವಿಸ್ವಭಾವದ ರಾಶಿಗಳು.

**द्विशस् ದ್ವಿಶಸ್** (अव्य०) ಎರಡೆರಡಾಗಿ (ಕೊಡು), ಎರಡೆರಡಾಗಿ (ಮಾಡು). द्वौ द्वौ ददाति करोति वा द्वि "शस्" (४-४-४३)।

**द्विशाण ದ್ವಿಶಾಣ** (वि०) ಎರಡು ಶಾಣಗಳಿಂದ ಕೊಳ್ಳಲ್ಪಟ್ಟ. द्वाभ्यां शाणाभ्यां क्रीतम् वा "ठञ्" (५-१-३६)। तस्य लुक् (५-१-२८)। पक्षे वा "यत्" (५-१-३५)। द्विशाण्यम् ದ್ವಿಶಾಣ್ಯಮ್. पक्षे "अण्" (५-१-३६)। द्वैशाणम् ದ್ವೈಶಾಣಮ್.

**द्विशिरस् ದ್ವಿಶಿರಸ್** (पुं०) 1. ಅಗ್ನಿ. द्वे शिरसी अस्य। वा "कप्" (५-४-१५४)। **-शिरस्कः -ಶಿರಸ್ಕಃ.** (वि०) 2. ಎರಡು ತಲೆಗಳುಳ್ಳ.

**द्विशीर्ष ದ್ವಿಶೀರ್ಷ** (पुं०) 1. ಅಗ್ನಿ. द्वे शीर्षे अस्य। वा "कप्" (५-४-१५४)। **-शीर्षकः -ಶೀರ್ಷಕಃ.** (वि०) 2. ಎರಡು ತಲೆಗಳುಳ್ಳ.

**द्विशूर्प ದ್ವಿಶೂರ್ಪ** (वि०) ಎರಡು ಶೂರ್ಪಗಳಿಂದ ಕೊಳ್ಳಲ್ಪಟ್ಟ. द्वाभ्यां शूर्पाभ्यां क्रीतम् वा "अञ्" (५-१-२६)। पक्षे "ठञ्" (५-१-३७)। तयोर्लोपः (५-१-२८)।

**द्विशौर्पिकम् ದ್ವಿಶೌರ್ಪಿಕಮ್** (वि०) ಎರಡು ಶೂರ್ಪಗಳಿಂದ ಕೊಳ್ಳಲ್ಪಟ್ಟ. द्वयोः शूर्पयोः समाहारः द्विशूर्पं तेन क्रीतम् "ठञ्" (५-१-३७)। अत्र द्विगुनिमित्तत्वाभावात् ठञो न लुक्।

**द्विष् ದ್ವಿಷ್** (पुं०) ಶತ್ರು, ವೈರಿ, ಹಗೆ. द्विष (अप्रीतौ) "क्विप्" (३-२-६१)। "उपरुन्धन्तु दाशार्हाः पुरीं माहिष्मतीं द्विषः" माघ० २-६४।

**द्विष — अप्रीतौ** (अदा० उभ० सक० अनि०)। द्वेष्टि, द्विष्टे। दिद्वेष, दिद्विषे। द्वेष्टा। द्वेक्ष्यति, -ते। द्वेष्टु द्विष्टात्, द्विष्टाम् द्विषाताम्। अद्वेट्, अद्विष्ट। द्विष्यात्, द्विषीत। द्विष्यात्, द्विक्षीष्ट। अद्विक्षत्, अद्विक्षत। अद्वेक्ष्यत्, -त। ದ್ವೇಷಿಸು, ಅಪ್ರೀತಿಯನ್ನು ತೋರಿಸು. "मम पुत्रा इति मतास्ते पुत्रा अपि शत्रवः। द्विषन्ति प्रतिकुर्वन्ति न ते वचनकारिणः" भा० आदि० ९८-३६।

**कर्मणि :—** द्विष्यते। द्विष्यताम्। अद्विष्यत। द्विष्येत। ಇತ್ಯಾದಿ.

**कृत्सु :—** द्वेष्टव्यः। द्वेषणीयः। द्वेष्यः। द्विष्टः। द्विष्टवान्, -वती। द्विषन्, -न्ती। द्विषाणः। द्वेष्टुम्। द्विष्टम्। द्वेषणम्। द्विष्ट्वा। विद्विष्य।

**द्विषत् ದ್ವಿಷತ್** (वि०) 1. ವೈರಿ, ಶತ್ರು, ಹಗೆ. द्विष (अप्रीतौ) "शतृ" (३-२-१३१)। "द्विषतामुदयः सुमेधसा गुरुरस्वन्ततरः सुमर्षणः" किरा० २-८। (वि०) 2. ದ್ವೇಷಿಸುವ, ಶತ್ರುತ್ವವನ್ನು ತೋರಿಸುವ. स्त्रियाम् "ङीप्" (४-१-६)। **-द्विषन्ती -ದ್ವಿಷಂತೀ.**

**द्विषन्तप ದ್ವಿಷಂತಪ** (वि०) ಶತ್ರುಗಳನ್ನು ಬಳಲಿಸುವ, ಹಗೆಯನ್ನು ನರಳಾಡಿಸುವ. द्विषन्तं तापयति — तप (सन्तापे) + णिच् "खच्" (३-२-३९)। मुमागमः (६-३-६७)।

**द्विषष् ದ್ವಿಷಷ್** (वि०) ಎರಡು ಆರು, ಹನ್ನೆರಡು. द्विगुणिताः षट्। (द्विषट्)।

**द्विषष्ट ದ್ವಿಷಷ್ಟ** (वि०) ಅರವತ್ತೆರಡನೆಯ. द्विषष्टेः पूरणः तमडभावे "डट्" (५-२-४८)। वा तमट् (५-२-५८)। **-षष्टितमः -ಷಷ್ಟಿತಮಃ.** स्त्रियाम् "ङीप्" (४-१-१५)। **-तमी -ತಮೀ.** ["द्वि" ಪದದಲ್ಲಿ ನೋಡಿ.]

**द्विषष्टि ದ್ವಿಷಷ್ಟಿ** (स्त्री०) ಅರವತ್ತೆರಡು. द्व्यधिका षष्टिः। ["द्वि" ಪದದಲ್ಲಿ ನೋಡಿ.]

**द्विषाष्टिक ದ್ವಿಷಾಷ್ಟಿಕ** (वि०) 1. ನೂರ ಇಪ್ಪತ್ತು ದಿನಗಳ ಕಾಲ ಸಲಹಿ ಕೆಲಸಮಾಡಿಸಲ್ಪಟ್ಟ. 2. ನೂರ ಇಪ್ಪತ್ತು ದಿನಗಳ ಕಾಲ ವೇತನದಿಂದ ಕ್ರಯಕ್ಕೆ ಕೊಳ್ಳಲ್ಪಟ್ಟ (ಸೇವಕ, ಆಳು). 3. ನೂರ ಇಪ್ಪತ್ತು ದಿನಗಳ, ನೂರ ಇಪ್ಪತ್ತು ದಿನಗಳು ಕಳೆದಿರುವ. 4. ನೂರ ಇಪ್ಪತ್ತು ದಿನಗಳಲ್ಲಾಗುವ. द्वे षष्टी दिनानि अधीष्टो भृतः भूतः भावी वा "ठञ्" (५-१-८०)। उत्तरपदवृद्धिः (७-३-१५)।

**द्विष्ट ದ್ವಿಷ್ಟ** (न०) 1. ತಾಮ್ರಲೋಹ. 2. ದ್ವೇಷ. (वि०) 3. ದ್ವೇಷಿಸಲ್ಪಟ್ಟ. द्विष (अप्रीतौ) कर्तृ० कर्म० वा "क्तः" (३-४-७२, ३-२-१०२)।

**द्विष्ठ ದ್ವಿಷ್ಠ** (ವಿಂ) 1. ಎರಡರಲ್ಲಿರುವ, ಇಬ್ಬರಲ್ಲಿರುವ. 2. ಎರಡು ಸ್ಥಳಗಳಲ್ಲಿರುವ. द्वयोःतिष्ठति – ष्ठा (गतिनिवृत्तौ) "कः" (३-२-४)।

**द्विस् ದ್ವಿಸ್** (ಅವ್ಯಂ) ಎರಡು ಸಲ, ಎರಡಾವೃತ್ತಿ. द्वि "सुच्" (५-४-१८)। द्विः। "द्विरिव प्रतिशब्देन व्याजहार हिमालयः" कुमा० ६-६४।

**द्विसंवत्सरीण ದ್ವಿಸಂವತ್ಸರೀಣ** (ವಿಂ) 1. ಎರಡು ವರ್ಷಗಳಲ್ಲಿ ನೆರವೇರಿಸಲ್ಪಟ್ಟ, ಎರಡು ವರ್ಷಗಳಲ್ಲಿ ಸಾಧಿಸಲ್ಪಟ್ಟ, –ಪೂರಯಿಸಲ್ಪಟ್ಟ. 2. ಎರಡು ವರ್ಷಗಳಲ್ಲಿ ವೇತನದಿಂದ ಕ್ರಯಕ್ಕೆ ಕೊಳ್ಳಲ್ಪಟ್ಟ (ಸೇವಕ). 3. ಎರಡು ವರ್ಷಗಳ ಕಾಲದ, ಎರಡು ವರ್ಷಗಳು ಕಳೆದಿರುವ. 4. ಮುಂದಿನ ಎರಡು ವರ್ಷಗಳಲ್ಲಿ ಆಗುವ. द्वाभ्यां संवत्सराभ्यां निर्वृत्तः द्वौ संवत्सरौ अधीष्टो भृतः भूतः भावी च वा "खः" (५-१-८७)। पक्षे "ठञ्" (५-१-७)। उत्तरपदवृद्धिः (७-३-१५)। **–सांवत्सरिकः –ಸಾಂವತ್ಸರಿಕಃ.**

**द्विसप्तत ದ್ವಿಸಪ್ತತ** (ವಿಂ) ಎಪ್ಪತ್ತೆರಡನೆಯ. द्विसप्ततेः पूरणः "डट्" (५-२-४८)।

**द्विसप्तति ದ್ವಿಸಪ್ತತಿ** (ಸ್ತ್ರೀಂ) ಎಪ್ಪತ್ತೆರಡು. द्व्यधिका सप्ततिः।

**द्विसप्ततितम ದ್ವಿಸಪ್ತತಿತಮ** (ವಿಂ) ಎಪ್ಪತ್ತೆರಡನೆಯ. द्विसप्ततेः पूरणः डटः वा तमट् (५-२-५६)। स्त्रियाम् "ङीप्" (४-१-१५)। **–तमी –ತಮೀ.**

**द्विसमीन ದ್ವಿಸಮೀನ** (ವಿಂ) 1. ಎರಡು ವರ್ಷಗಳ ಕಾಲ ಪ್ರೀತಿಸಿ ಕೆಲಸಮಾಡಿಸಲ್ಪಟ್ಟ. 2. ಎರಡು ವರ್ಷಗಳ ಕಾಲ ವೇತನದಿಂದ ಕ್ರಯಕ್ಕೆ ಕೊಳ್ಳಲ್ಪಟ್ಟ. 3. ಎರಡು ವರ್ಷಗಳ ಕಾಲ ಕಳೆದಿರುವ. 4. ಎರಡು ವರ್ಷಗಳಲ್ಲಿ ಪೂರೈಯಿಸಿದ. 5. ಎರಡು ವರ್ಷಗಳಲ್ಲಿ ನಡೆಯಲಿರುವ. द्वे समे अधीष्टो भृतो भूतो भावी वा द्वाभ्यां समाभ्यां निर्वृत्तो वा–वा "खः" (५-१-८६)। पक्षे "ठञ्" (५-१-७८)। **द्वैसमिकः ದ್ವೈಸಮಿಕಃ.**

**द्विसांवत्सरिक ದ್ವಿಸಾಂವತ್ಸರಿಕ** (ವಿಂ) ["द्विसंवत्सरीण" ಪದದಲ್ಲಿ ನೋಡಿ.]

**द्विसाहस्र ದ್ವಿಸಾಹಸ್ರ** (ವಿಂ) 1. ಎರಡು ಸಾವಿರಗಳಿಂದ ಕೊಳ್ಳಲ್ಪಟ್ಟ. द्वाभ्यां सहस्राभ्यां क्रीतम् "अण्" (५-१-२७)। अणो वा लुक् (५-१-२९)। पक्षे **द्विसहस्रम् ದ್ವಿಸಹಸ್ರಮ್.** (ನಂ) 2. ಎರಡು ಸಾವಿರ.

**द्विसीत्य ದ್ವಿಸೀತ್ಯ** (ವಿಂ) ಎರಡು ಸಲ ಉಳಲ್ಪಟ್ಟ (ಭೂಮಿ). द्विवारं सीतया संमितम् "यत्" (४-४-९१)।

**द्विसुवर्ण ದ್ವಿಸುವರ್ಣ** (ವಿಂ) 1. ಎರಡು ಸುವರ್ಣಗಳಿಂದ ಕೊಳ್ಳಲ್ಪಟ್ಟ. द्वाभ्यां सुवर्णाभ्यां क्रीतम् "ठक्" (५-१-३७)। तस्य लुक् (५-१-२८)। द्विसुवर्णेन क्रीतमिति विग्रहे तु ठको द्विगुनिमित्तत्वाभावात् न लुक्। उत्तरपदवृद्धिः (७-३-१७)। **द्विसौवर्णिकः ದ್ವಿಸೌವರ್ಣಿಕಃ.**

**द्विस्वभाव ದ್ವಿಸ್ವಭಾವ** (ವಿಂ) 1. ಎರಡು ಸ್ವಭಾವಗಳುಳ್ಳ. द्वौ स्वभावौ यस्य। (ಪುಂ) 2. ಮೇಷ ಮೊದಲಾದ ರಾಶಿಗಳಲ್ಲಿ ಚರ ಮತ್ತು ಸ್ಥಿರ ಸ್ವಭಾವದ ರಾಶಿಗಳು. ಮಿಥುನ ಕನ್ಯಾ ಧನುಸ್ಸು ಮತ್ತು ಮೀನ ಇವು ದ್ವಿಸ್ವಭಾವದ ರಾಶಿಗಳು.

**द्विहल्य ದ್ವಿಹಲ್ಯ** (ವಿಂ) ಎರಡು ಸಲ ಉಳಲ್ಪಟ್ಟ (ಕ್ಷೇತ್ರ). द्विवारं हलेन कृष्टम् "यत्" (४-४-९७)।

**द्विहायन ದ್ವಿಹಾಯನ** (ಪುಂ) 1. ಎರಡು ವರ್ಷ ವಯಸ್ಸುಳ್ಳ ಎತ್ತು ಎಮ್ಮೆ ಮೊದಲಾದ ಪ್ರಾಣಿ. द्वौ हायनौ यस्य। स्त्रियाम् "ङीप्" (४-१-२७)। **–हायनी –ಹಾಯನೀ.** ಎರಡು ವರ್ಷ ವಯಸ್ಸಿನ ಹಸು. "द्विहायनी द्विवर्षा गौः" अम०। (ನಂ) 2. ಎರಡು ವರ್ಷಗಳು. द्वयोर्हायनयोः समाहारः। पात्रादित्वात् न "ङीप्"। "शुके द्विहायनं वत्सं क्रौञ्चं हत्वा त्रिहायनम्" मनु० ११-१३४।

**द्विहीन ದ್ವಿಹೀನ** (ವಿಂ) 1. ಎರಡರಿಂದ ಹೀನವಾದ, ಎರಡರಿಂದ ವರ್ಜಿತವಾದ. 2. ಪುಂಲಿಂಗ ಮತ್ತು ಸ್ತ್ರೀಲಿಂಗ ಹೀನವಾದ. द्वाभ्यां स्त्रीपुंसाभ्यां हीनम्। ನಪುಂಸಕಲಿಂಗ. "द्विहीनं प्रसवे सर्वम् हरीतक्यादयः स्त्रियाम्" अम०।

**द्विहृदया ದ್ವಿಹೃದಯಾ** (ಸ್ತ್ರೀಂ) ಗರ್ಭಿಣಿ ಹೆಂಗಸು, ಬಸುರಾಗಿರುವ ಹೆಂಗಸು. द्वे हृदये यस्याः। "द्विहृदयां च नारीं दौहृदिनीमाचक्षते" सुश्रुत०।

**द्वीप ದ್ವೀಪ** (ಪುಂನಂ) 1. ನೀರಿನ ಮಧ್ಯದಲ್ಲಿರುವ ಪ್ರದೇಶ, ಸುತ್ತಲೂ ನೀರಿನಿಂದ ಕೂಡಿದ ಭೂಮಿ. द्विर्गता आपोऽत्र "ईत्" (६-३-९७)। समासान्तः "अः" (५-४-७४)। "द्वीपोऽस्त्रियामन्तरीपं यदन्तर्वारिणस्तटम्" अम०। "द्वीपादन्यस्मादपि मध्यादपि जलनिधेर्दिशोऽप्यन्तात्" रत्ना० १-६। ಜಲಮಧ್ಯಪ್ರದೇಶಗಳು ಅನೇಕವಾಗಿದ್ದರೂ (1) ಜಂಬೂದ್ವೀಪ, (2) ಶಾಕದ್ವೀಪ, (3) ಶಾಲ್ಮಲಿದ್ವೀಪ, (4) ಕುಶದ್ವೀಪ, (5) ಕ್ರೌಂಚದ್ವೀಪ, (6) ಗೋಮೇದಕ

(ಪ್ಲಕ್ಷ) ದ್ವೀಪ ಮತ್ತು (7) ಪುಷ್ಕರದ್ವೀಪಗಳೆಂದು ಸಪ್ತ ದ್ವೀಪಗಳು ಪ್ರಧಾನವಾದುವು. ನಮ್ಮ ಭಾರತ ದೇಶವು ಜಂಬೂದ್ವೀಪದ ಮಧ್ಯದಲ್ಲಿರುವುದು. ಒಟ್ಟು ಭೂಭಾಗದ ಅರ್ಧಭಾಗವು ಲವಣಸಮುದ್ರದ ಉತ್ತರ ಭಾಗದಲ್ಲಿರುವುದು. ಅದೇ ಜಂಬೂದ್ವೀಪ. ಉಳಿದ ಆರು ದ್ವೀಪಗಳೂ ಉಳಿದ ಅರ್ಧಭಾಗದಲ್ಲಿರುವುವು. ಈ ಸಪ್ತದ್ವೀಪಗಳೂ ಸಪ್ತಸಮುದ್ರಗಳಿಂದ ಸುತ್ತಲ್ಪಟ್ಟಿರುವುವು. [ಸ್ವಾಯಂಭುವ ಮನುವಿನ ಮಗನಾದ ಪ್ರಿಯವ್ರತರಾಜನು ವಿಶ್ವಕರ್ಮನ ಮಗಳಾದ ಬರ್ಹಿಷ್ಮತಿಯನ್ನು ಮದುವೆಯಾಗಿ ಆಗ್ನೀಧ್ರ, ಇಧ್ಮಜಿಹ್ವ, ಯಜ್ಞಬಾಹು, ಮಹಾವೀರ, ಹಿರಣ್ಯರೇತ, ಘೃತಪೃಷ್ಠ, ಸವನ, ಮೇಧಾತಿಥಿ, ವೀತಿಹೋತ್ರ ಮತ್ತು ಕವಿಗಳೆಂಬ ಹತ್ತು ಮಂದಿ ಮಕ್ಕಳನ್ನು ಪಡೆದನು. ಇವರಲ್ಲಿ ಮಹಾವೀರ, ಸವನ ಮತ್ತು ಕವಿ ಎಂಬುವರು ವೈರಾಗ್ಯಹೊಂದಿ ಅರಣ್ಯಕ್ಕೆ ಹೋದರು. ಪ್ರಿಯವ್ರತನು ತನ್ನ ರಥದ ಚಕ್ರದ ರೇಖೆಯಿಂದ ಸಪ್ತ ಸಮುದ್ರಗಳನ್ನೂ ಸಪ್ತ ದ್ವೀಪಗಳನ್ನಾಗಿ ಮಾಡಿ ಏಳು ಮಂದಿ ಮಕ್ಕಳಿಗೂ ಹಂಚಿಕೊಟ್ಟು ತಾನು ನಾರದರಿಂದ ತತ್ತ್ವೋಪದೇಶ ಪಡೆದು ಮುಕ್ತಿಹೊಂದಿದನು.] "ये वा उह तद्रथचरणनेमिकृतपरिखातास्ते सप्त सिन्धव आसन् यत एव कृताः सप्त भुवो द्वीपाः" भाग० ५-१। "भूमेरर्धं क्षारसिन्धोरुदक्स्थं जम्बूद्वीपं प्राहुराचार्यवर्याः। अर्धेऽन्यस्मिन् द्वीपषट्कस्य याम्ये क्षारक्षीराद्यम्बुधीनां निवेशः। शाकं ततः शाल्मलमत्र कौशं क्रौञ्चञ्च गोमेदकपुष्करे च" सिद्धान्तशि०। "जम्बुप्लक्षाह्वयौ द्वीपौ शाल्मलिश्चापरो द्विज। कुशः क्रौञ्चस्तथा शाकः पुष्करश्चैव सप्तमः। एते द्वीपा समुद्रैस्तु सप्त सप्तभिरावृताः। लवणेक्षुसुरा सर्पिर्दधिदुग्धजलैः समम्। जम्बूद्वीपः समस्तानामेतेषां मध्यसंस्थितः। तस्यापि मेरुर्मैत्रेय मध्ये कनकपर्वतः" विष्णुपु०। ಈ ದ್ವೀಪಗಳೊಡನೆ ಉಪದ್ವೀಪಗಳೂ ಸೇರಿ ಒಟ್ಟು ಹದಿನೆಂಟು ದ್ವೀಪಗಳಾಗುವುವು. "सङ्ग्रामनिर्विष्टसहस्रबाहुरष्टादशद्वीपनिखातयूपः" रघु० ६-३८। "अगाहताष्टादशतां जिगीषया नवद्वयद्वीपपृथग्जयश्रियाम्" नैष० १-५। 2. ಹುಲಿಯ ಚರ್ಮ. 3. ಮರಳು.

**द्वीपवत् ದ್ವೀಪವತ್** (वि०) 1. ಸಮುದ್ರ. द्वीपोऽस्यास्ति "मतुप्" (५-२-९४)। 2. ನದ, ಗಂಡುಹೊಳೆ. (स्त्री०) **-वती -ವತೀ**. "ङीप्" (४-१-६)। 3. ನದಿ, ಹೊಳೆ.

**द्वीपशत्रु ದ್ವೀಪಶತ್ರು** (पुं०) ಶತಾವರಿಗಿಡ, ಪಿಲ್ಲಪಿಚ್ಚರ. द्वीपस्य शत्रुरिव।

**द्वीपिका ದ್ವೀಪಿಕಾ** (स्त्री०) ಶತಾವರಿಗಿಡ, ಪಿಲ್ಲಪಿಚ್ಚರ.

**द्वीपिन् ದ್ವೀಪಿನ್** (पुं०) ವ್ಯಾಘ್ರ, ಹುಲಿ. द्वी वर्णो ईयते—ईङ् (गतौ) "पः" बाहु०। द्वीपं चर्म (द्वीपाकाररेखावत्वात्) तदस्यास्ति "इनिः" (५-२-११५)।

**द्वीपिनख ದ್ವೀಪಿನಖ** (पुं०) ಹುಲಿಯುಗುರು ಗಿಡ. द्वीपिनो नख इव।

**द्वीप्य ದ್ವೀಪ್ಯ** (वि०) ದ್ವೀಪದಲ್ಲಿರುವ, ಜಲಮಧ್ಯ ಪ್ರದೇಶದಲ್ಲಿರುವ. द्वीपे भवः "यत्" (४-३-५४)।

**द्वेधा ದ್ವೇಧಾ** (अव्य०) ಎರಡು ವಿಧವಾಗಿ, ಎರಡು ಪ್ರಕಾರವಾಗಿ. द्वि+धा "एधाच्" आदेशः (५-३-४६)। "वेधा द्वेधा भ्रमं चक्रे कान्तासु कनकेषु च। तासु तेष्वप्यनासक्तः साक्षाद्भर्गो नराकृतिः" कुव०।

**द्वेष ದ್ವೇಷ** (पुं०) 1. ವೈರ, ಹಗೆತನ, ವಿರೋಧ. द्विष (अप्रीतौ) "घञ्" (३-३-१८)। "द्विषद्द्वेषोपरक्ताङ्गसङ्गिनीः स्वेदविप्रुषः" माघ० २-१८। ನ್ಯಾಯಮತದಲ್ಲಿ ಇದೊಂದು ಆತ್ಮಧರ್ಮ. ಯಾವ ವಿಷಯದಿಂದ ಆತ್ಮನು ಕಷ್ಟಕ್ಕೆ ಒಳಗಾಗುವನೋ ಆ ವಿಷಯವನ್ನು ಪರಿತ್ಯಜಿಸುವ ಇಚ್ಛೆಯು ದ್ವೇಷವೆನಿಸುವದು. "इच्छाद्वेषप्रयत्नसुखदुःखज्ञानान्यात्मनो लिङ्गम्" गौतमसू०। 2. ಅರುಚಿ, ಅಪ್ರೀತಿ, ಜುಗುಪ್ಸೆ. 3. ಕ್ರೋಧ, ಕೋಪ.

**द्वेषण ದ್ವೇಷಣ** (पुं०) 1. ಶತ್ರು, ಹಗೆ, ವೈರಿ. द्विष (अप्रीतौ) "युच्" (३-२-१५१)। (न०) 2. ದ್ವೇಷ, ಹಗೆತನ, ಶತ್ರುತ್ವ. द्विष भावे "ल्युट्" (३-३-११५)।

**द्वेषणीय ದ್ವೇಷಣೀಯ** (वि०) 1. ದ್ವೇಷಿಸಲು ಅರ್ಹನಾದ. 2. ದ್ವೇಷಿಸಲ್ಪಡುವ. द्विष (अप्रीतौ) "अनीयर्" (३-१-९६)। "तव्यः"। **द्वेष्टव्यः ದ್ವೇಷ್ಟವ್ಯಃ**.

**द्वेषिन् ದ್ವೇಷಿನ್** (पुं०) ಶತ್ರು, ಹಗೆ, ವೈರಿ. द्वेष्टि—द्विष (अप्रीतौ) "घिनुण्" (३-२-१४२)। "तथापि ववृधे तस्य तत्कारिद्वेषिणो यशः" रघु० १७-७३।

**द्वेष्टृ ದ್ವೇಷ್ಟೃ** (वि०) ದ್ವೇಷಿಸುವವನು, ಹಗೆಕಾರುವವನು. द्विष (अप्रीतौ) "तृच्" (३-१-१३३)। "द्वेष्टारस्तस्य नैवासन् स च द्वेष्टि न कञ्चन" भा० आदि० ४९-९। स्त्रियाम् "ङीप्" (४-१-५)। **-ष्ट्री -ಷ್ಟ್ರೀ**.

**द्वेष्य ದ್ವೇಷ್ಯ** (वि०) "द्वेषणीय" ಪದದ ಅರ್ಥ. द्विष (अप्रीतौ) "ण्यत्" (३-१-१२४)। 2. ಅಪ್ರಿಯ, ವಿರೋಧವುಳ್ಳವನು. "द्वेष्योऽपि संमतः शिष्टस्तस्यार्तस्य यथौषधम्" रघु० १-२८। (पुं०) 3. ಶತ್ರು, ಹಗೆ,

ವೈರಿ. "यथा यमः प्रियद्वेष्यौ प्राप्ते काले नियच्छति" मनु० ९-३०७।

**द्वैगुणिक ದ್ವೈಗುಣಿಕ** (वि०) ಎರಡರಷ್ಟಾಗಲು ದ್ರವ್ಯ (ಹಣ) ವನ್ನು ಸಾಲವಾಗಿ ಕೊಡುವವನು, ತನ್ನ ಹಣವು ಎರಡರಷ್ಟು ಬೆಳೆಯಲು ಬಡ್ಡಿಗಾಗಿ ಸಾಲವನ್ನು ಕೊಡುವವನು. द्विगुणार्थं द्रव्यं द्विगुणम्—तत्प्रयच्छति "ठक्" (४-४-३०)।

**द्वैगुण्य ದ್ವೈಗುಣ್ಯ** (न०) ಎರಡರಷ್ಟು ಆಗಿರುವಿಕೆ, ದ್ವಿಗುಣವಾಗಿರುವಿಕೆ. द्विगुणस्य भावः "ष्यञ्" (५-१-१२४)।

**द्वैत ದ್ವೈತ** (न०) 1. ಎರಡು, ಒಂದು ಜೊತೆ. द्विधा इतं द्वीतम् — स्वार्थे "अण्" (५-४-३८)। 2. ದ್ವಿತ್ವ, ಭೇದ. द्वीतस्य भावः "अण्" (५-१-१३०)। 3. ಜೀವೇಶ್ವರ ಭೇದವನ್ನು ಹೇಳತಕ್ಕ ಒಂದು ಮತ. ವಿವರಕ್ಕೆ "द्वैतदर्शन" ಪದದಲ್ಲಿ ನೋಡಿ.

**द्वैतदर्शन ದ್ವೈತದರ್ಶನ** (न०) ಆಸ್ತಿಕದರ್ಶನಗಳಲ್ಲೊಂದಾದ ವೇದಾನ್ತದರ್ಶನದ ಒಂದು ಭೇದ. ಜೀವಾತ್ಮ ಮತ್ತು ಈಶ್ವರ ಇವರಿಗಿರುವ ಅತ್ಯಂತ ಭೇದವನ್ನು ಹೇಳುವ ಪೂರ್ಣಪ್ರಜ್ಞರ ದರ್ಶನ.

ಈ ಮತದಲ್ಲಿ ಮಹಾವಿಷ್ಣುವಿಗೆ ಸರ್ವೋತ್ಕರ್ಷವನ್ನು ಪ್ರತಿಪಾದಿಸಿ ಈ ಉತ್ಕರ್ಷಜ್ಞಾನವೇ ಮೋಕ್ಷಸಾಧನವೆಂದು ಸಿದ್ಧಾನ್ತಮಾಡಿರುವುದರಿಂದಲೂ ವಿಷ್ಣುಭಕ್ತಿಯೇ ಮುಖ್ಯವೆಂದು ನಿರ್ಣಯಿಸಿರುವುದರಿಂದಲೂ ಈ ದರ್ಶನಕ್ಕೆ ವೈಷ್ಣವಸಿದ್ಧಾನ್ತವೆಂದು ಪ್ರಸಿದ್ಧಿಯಿರುವುದು. "द्वाविमौ पुरुषौ लोके क्षरश्चाक्षर एव च। क्षरः सर्वाणि भूतानि कूटस्थोऽक्षर उच्यते। उत्तमः पुरुषस्त्वन्यः परमात्मेत्युदाहृतः। यो लोकत्रयमाविश्य बिभर्त्यव्यय ईश्वरः॥ यस्मात् क्षरमतीतोऽहमक्षरादपि चोत्तमः। अतोऽस्मि लोके वेदे च प्रथितः पुरुषोत्तमः॥ यो मामेवमसंमूढो जानाति पुरुषोत्तमम्। स सर्वविद्भजति मां सर्वभावेन भारत" गीता १५-१६, १७, १८, १९।

ಈ ಮತವು ಮಹಾವಿಷ್ಣುವಿಗೆ ಸರ್ವೋತ್ಕರ್ಷವನ್ನು ಹೇಳಿ ವಿಷ್ಣುವಿಗೂ ಲಕ್ಷ್ಮಿಗೂ ತಾರತಮ್ಯವನ್ನು ಹೇಳಿರುವುದಲ್ಲದೆ ಬ್ರಹ್ಮ-ಸರಸ್ವತಿ ವಾಯುದೇವರು—ವಾಯುಪತ್ನಿ ಇತ್ಯಾದಿ ದೇವತೆಗಳಿಗೂ ಉಚ್ಚನೀಚ ಭಾವವೆಂಬ ತಾರತಮ್ಯವನ್ನು ಪ್ರತಿಪಾದಿಸಿರುವುದು.

ಹೀಗೆಯೇ ಮನುಷ್ಯರಲ್ಲೂ ಪಶುಪಕ್ಷ್ಯಾದಿಗಳಲ್ಲೂ ಬಾಹ್ಯಸ್ವರೂಪದಲ್ಲಿ ಭೇದವಿದ್ದು ತಾರತಮ್ಯವಿರುವಂತೆ ಆತ್ಮಸ್ವರೂಪದಲ್ಲೂ ತಾರತಮ್ಯವನ್ನು ಪ್ರತಿಪಾದಿಸಿರುವುದು.

ಈ ಮತದಲ್ಲಿ ತತ್ತ್ವವು ಸ್ವತಂತ್ರ ಮತ್ತು ಪರತಂತ್ರಗಳೆಂದು ಎರಡು ವಿಧ. ಈಶ್ವರನು ಸ್ವತಂತ್ರ. ಜೀವಾತ್ಮನು ಪರತಂತ್ರ. "स्वतन्त्रं परतन्त्रं च द्विविधं तत्त्वमिष्यते। स्वतन्त्रो भगवान् विष्णुः निर्दोषोऽशेषसद्गुणः" तत्त्ववि०। ವಿಶಿಷ್ಟಾದ್ವೈತಸಿದ್ಧಾನ್ತದಲ್ಲಿ ಶರೀರಾತ್ಮಭಾವದಿಂದ ಪಾರತಂತ್ರ್ಯವಿರುವುದು. ಈ ಸಿದ್ಧಾನ್ತದಲ್ಲಿ ಅದಕ್ಕಿಂತಲೂ ಅತಿಶಯವಾಗಿ ಜೀವಾತ್ಮಪಾರತಂತ್ರ್ಯವು ನಿರೂಪಿಸಲ್ಪಟ್ಟಿರುವುದು.

ಸೇವ್ಯ ಸೇವಕಭಾವವಿರುವ ರಾಜ ಮತ್ತು ಭೃತ್ಯರಂತೆ ಸೇವ್ಯನಾದ ಪರಮಾತ್ಮನು ಸೇವಕನಾದ ಜೀವನಿಗಿಂತಲೂ ಭಿನ್ನನು ಎಂದು ಇವರ ಸಿದ್ಧಾನ್ತ. ಈ ರೀತಿ ಭೇದವನ್ನು ನಿರೂಪಿಸಿ ಜೀವೇಶ್ವರ ಭೇದ, ಪರಸ್ಪರ ಜೀವಭೇದ, ಜಡೇಶ್ವರಭೇದ, ಜಡಜೀವಭೇದ ಮತ್ತು ಪರಸ್ಪರ ಜಡಭೇದಗಳೆಂದು ಪ್ರಪಂಚವು ಐದು ಪ್ರಕಾರವೆಂದು ಇವರ ಸಿದ್ಧಾನ್ತ. "जीवेश्वरभिदा चैव जडेश्वरभिदा तथा। जीवभेदो मिथश्चैव जडजीवभिदा तथा। मिथश्च जडभेदोऽयं प्रपञ्चो भेदपञ्चकः। सोऽयं सत्योऽप्यनादिश्च सादिश्चेन्नाशमाप्नुयात्। न च नाशं प्रयात्येष न चासौ भ्रान्तिकल्पितः। कल्पितश्चेन्निवर्तेत न चासौ विनिवर्तते। द्वैतं न विद्यत इति तस्मादज्ञानिनां मतम्। मतं हि ज्ञानिनामेतत् मितं त्रातं हि विष्णुना"।

**ಈ ರೀತಿ ಭೇದನಿರೂಪಣಕ್ಕೆ ಕಾರಣ:—** ಜೀವೇಶ್ವರ ಜ್ಞಾನವಿಲ್ಲದೆ ತಾನೇ ಈಶ್ವರನೆಂದು ತಿಳಿದರೆ ರಾಜವೇಷವನ್ನು ಧರಿಸಿ ತಾನೇ ರಾಜನೆಂದು ತಿಳಿದು ಕೆಲಸ ಮಾಡುವ ರಾಜಭೃತ್ಯನ ಗತಿಯು ಈ ಜೀವನಿಗೂ ಉಂಟಾಗುವುದು.

ರಾಜಸೇವಕನಾದ ಭೃತ್ಯನು ತಾನು ಸೇವಕನೆಂದು ತಿಳಿದು ರಾಜಾನುಗ್ರಹಕ್ಕೆ ಪಾತ್ರನಾಗುವಂತೆ ಜೀವನು ಪರಮಾತ್ಮನ ಭೃತ್ಯನೆಂದು ತಿಳಿದು ಅವನನ್ನು ಆರಾಧಿಸುತ್ತಿದ್ದರೆ ಸಕಲ ಸಂಪತ್ತುಗಳನ್ನೂ ಅನುಭವಿಸುತ್ತಾನೆ. ಇದಕ್ಕೆ ಈ ಭೇದಜ್ಞಾನವೇ ಕಾರಣ. "घातयन्ति हि राजानो राजाऽहमिति वादिनः। ददत्यखिलमिष्टं च स्वगुणोत्कर्षवादिनाम्"। ಮುಖ್ಯವಾಗಿ ಈ ಸಿದ್ಧಾನ್ತದಲ್ಲಿರುವ ಅಂಶವು ತಾರತಮ್ಯ, ಅಂದರೆ ಉಚ್ಚನೀಚಭಾವವು. ಇದು ಜೀವಾತ್ಮರಲ್ಲಿ ಶಾಶ್ವತವಾಗಿರುವುದು. ಈ ಜ್ಞಾನವು ಪ್ರತಿಜೀವನೂ ತನ್ನ ಯೋಗ್ಯತೆಯಿಷ್ಟೇ ಎಂದು ತಿಳಿದು ಅದರಲ್ಲೇ ತೃಪ್ತನಾಗಿ ಕಾಮಕ್ರೋಧಾದಿಗಳಿಗೆ ಅವಕಾಶವಿಲ್ಲದೆ ಶಾಂತನಾಗಿರುವುದಕ್ಕೆ ಕಾರಣವಾಗುವುದು ಎಂದು ತಾತ್ಪರ್ಯ.

**ಪರಮಾತ್ಮ :**—ಪರಮಾತ್ಮನು ಸರ್ವಜ್ಞನು. ಸರ್ವಶಕ್ತನು. ಸರ್ವವ್ಯಾಪಕನು. ನಿರತಿಶಯಜ್ಞಾನಾನಂದ ಕಲ್ಯಾಣಗುಣಗಣಪರಿಪೂರ್ಣನು. ಭಕ್ತವತ್ಸಲನು. ಸೃಷ್ಟಿಸ್ಥಿತಿ ಸಂಹಾರನಿಯಮನಜ್ಞಾನಾಜ್ಞಾನಬಂಧಮೋಕ್ಷ ವ್ಯಾಪಾರಗಳಿರುವುದರಿಂದ ಜಗತ್ಕಾರಣನು. "उत्पत्तिस्थितिसंहारा नियतिर्ज्ञानमावृतिः। बन्धमोक्षौ च पुरुषाद्यस्मात्स हरिरेकराट्" ಸ್ಕಾಂದಂ। "यतो वा इमानि भूतानि जायन्ते। येन जातानि जीवन्ति" श्रुतिः। ಸರ್ವದೇಶ ಸರ್ವಕಾಲ ಸರ್ವಗುಣಗಳಿಂದ ವ್ಯಾಪ್ತನಾಗಿರುವುದರಿಂದ ಅನಂತನು. ಸರ್ವಶಬ್ದವಾಚ್ಯನು. ಅಮೋಘವಾದ ಶಕ್ತಿಯಿಂದ ಯಾವರೀತಿಯಿಂದ ಬೇಕಾದರೂ ಇರುವನು. ಸಾಲಗ್ರಾಮ ಪ್ರತಿಮೆ ಮೊದಲಾದ ಅರ್ಚಾರೂಪಗಳೂ ಭಗವನ್ತನಿಗೆ ಇರುವುವಾದರೂ ಅವು ಸಾಕ್ಷಾದ್ರೂಪಗಳಲ್ಲ. ಪರಮಾತ್ಮನ ಸಾನ್ನಿಧ್ಯದಿಂದ ಅವನ ರೂಪವೆಂದು ವ್ಯವಹಾರ ಮಾತ್ರ. ಆ ರೂಪಗಳ ಮೂಲಕ ಪೂಜಕರು ಅವನ ಆರಾಧನೆಯಿಂದ ಇಷ್ಟಾರ್ಥಗಳನ್ನು ಹೊಂದಬಹುದು. ಕೆಲವು ಪುರುಷಶ್ರೇಷ್ಠರಿಗೆ ಪ್ರತಿಮಾ ಮೂಲಕ ಉಪಾಸನೆಯೇ ಮೋಕ್ಷಸಾಧನವಾದ ಅಪರೋಕ್ಷ ಜ್ಞಾನಕ್ಕೆ ಉಪಾಯವಾಗುವುದು. ಸಂಕರ್ಷಣ ಅನಿರುದ್ಧ ಪ್ರದ್ಯುಮ್ನ ಕೇಶವಾದಿ ನಾಮಭೇದದಿಂದ ಅನೇಕ ರೂಪಗಳಿರುವುವು. ರಾಮಕೃಷ್ಣಾದಿ ಅವತಾರಗಳು ಅಜ್ಞರ ದೃಷ್ಟಿಗೆ ಪಾಂಚಭೌತಿಕವಾಗಿ ಕಂಡರೂ ಪ್ರಾಜ್ಞರ ದೃಷ್ಟಿಯಿಂದ ಅವು ಜ್ಞಾನಾನಂದಮಯವಾಗಿಯೇ ತೋರುವುವು.

ಪರಮಾತ್ಮನು ನಿತ್ಯಮುಕ್ತ. ಪರಮಾತ್ಮನಿಗೆ ಬಂಧವೇ ಯಾವಾಗಲೂ ಇಲ್ಲ. ಪ್ರಪಂಚದ ಸೃಷ್ಟಿ ಮೊದಲಾದುವು ಪರಮಾತ್ಮನ ವ್ಯಾಪಾರಗಳು. ಸೃಷ್ಟಿಸಲ್ಪಟ್ಟ ಪ್ರಪಂಚವನ್ನು ನಾನಾರೂಪಗಳಿಂದ ಪೋಷಿಸುವುದು ಸ್ಥಿತಿ. ಪ್ರಪಂಚದ ಸಂಹಾರವೇ ಪ್ರಲಯ.

**ಜೀವಾತ್ಮ :**—ಜೀವಾತ್ಮರು ಅಸಂಖ್ಯಾತರು. ಇವರು ಅಜ್ಞಾನಾದಿದೋಷಗಳಿಂದ ಸಂಸಾರಿಗಳಾಗಿರುವರು. ಜೀವಾತ್ಮರು ಸ್ತ್ರೀಪುರುಷಭೇದವುಳ್ಳವರು. ನಪುಂಸಕ ಜೀವರಿರುವುದಿಲ್ಲ. ಸ್ತ್ರೀ ಜೀವರಿಗೆ ಪುರುಷದೇಹ ಪ್ರಾಪ್ತಿಯೇ ಇಲ್ಲ.

ಜೀವಾತ್ಮರು ಉತ್ತಮ ಮಧ್ಯಮ ಮತ್ತು ಅಧಮ ಭೇದದಿಂದ ಮುಕ್ತಿಯೋಗ್ಯರು ತಮೋಯೋಗ್ಯರು ಮತ್ತು ನಿತ್ಯಸಂಸಾರಿಗಳೆಂದು ಮೂರು ವಿಧವಾಗಿರುವರು. ಮುಕ್ತಿಯೋಗ್ಯರಲ್ಲಿ ದೇವ ಋಷಿ ಪಿತೃ ಚಕ್ರವರ್ತಿ ಮನುಷ್ಯೋತ್ತಮ ಎಂದು ಐದು ವಿಧ. ಇವರು ಸಾಧನಾನುಷ್ಠಾನದಿಂದ ಮುಕ್ತರಾಗಿ ಸ್ವರೂಪಭೂತವಾದ ನಿತ್ಯಾನಂದವನ್ನು ಅನುಭವಿಸುವರು. ದೈತ್ಯ ರಾಕ್ಷಸ ಪಿಶಾಚ ಮನುಷ್ಯಾಧಮರೆಂಬ ನಾಲ್ಕು ವಿಧ ತಮೋಯೋಗ್ಯರು ನಿತ್ಯನರಕವೆಂಬ ತಮೋಲೋಕವನ್ನು ಹೊಂದಲು ಮಾರ್ಗವನ್ನು ಸಂಪಾದಿಸಿ ನಿತ್ಯ ದುಃಖವನ್ನು ಅನುಭವಿಸುವರು. ನಿತ್ಯ ಸಂಸಾರಿಗಳು ಸಾಧನಾನುಷ್ಠಾನದಿಂದ ನಿತ್ಯವಾದ ಸುಖದುಃಖ ಮಿಶ್ರಾನುಭವಕ್ಕೆ ಸಿದ್ಧರಾಗುವರು.

ಜೀವಾತ್ಮರಿಗೆ ಸಂಸಾರದಶೆಯಲ್ಲಿಯೂ ಮುಕ್ತದಶೆಯಲ್ಲಿಯೂ ವಿಚಿತ್ರವಾದ ಗುಣಕ್ರಿಯೆಗಳಿರುವುವು. ಇವುಗಳಲ್ಲಿ ಕೆಲವು ನಿತ್ಯ ಕೆಲವು ಅನಿತ್ಯ.

ಸಾಮಾನ್ಯವಾಗಿ ಜೀವಾತ್ಮರಿಗೆ ಜಾಗ್ರತ್‌ಸ್ವಪ್ನ ಸುಷುಪ್ತಿ ಮೋಹ ಮತ್ತು ತುರೀಯಗಳೆಂಬ ಐದು ಅವಸ್ಥೆಗಳಿರುವುವು. ತುರೀಯವೇ ಮುಕ್ತಾವಸ್ಥೆ.

ಪುರುಷಾರ್ಥ ಚತುಷ್ಟಯದಲ್ಲಿ ಧರ್ಮಾರ್ಥಕಾಮಗಳು ಮೂರೂ ಅನಿತ್ಯ. ಮೋಕ್ಷವು ಮಾತ್ರ ನಿತ್ಯವಾದುದು. "धर्मार्थकामाः सर्वेऽपि न नित्या मोक्ष एव हि। नित्यस्तस्मात्तदर्थाय यतेत मतिमान्नरः"।

**ಮೋಕ್ಷ ಸಾಧನ :**—ಅಪರೋಕ್ಷಜ್ಞಾನವು ಮೋಕ್ಷ ಸಾಧನವಾಗುವುದು. ಈ ಅಪರೋಕ್ಷಜ್ಞಾನಕ್ಕೆ ಗುರುಕುಲವಾಸ, ಗುರುಭಕ್ತಿ, ಅಧ್ಯಯನ, ಶಾಸ್ತ್ರಶ್ರವಣ, ವೈರಾಗ್ಯ, ನಿಷಿದ್ಧಕರ್ಮಗಳ ಪರಿತ್ಯಾಗ, ತಾರತಮ್ಯಜ್ಞಾನ, ಪ್ರಕೃತಿ ಪುರುಷವಿವೇಕ, ಹರಿನಾಮ ಸಂಕೀರ್ತನ, ಹರಿಪೂಜೆ, ಧ್ಯಾನ ಪರಮಾತ್ಮನಲ್ಲಿ ಮಹಾವಿಶ್ವಾಸದಿಂದ ಆತ್ಮಸಮರ್ಪಣ (ಶರಣಾಗತಿ) ಇವೆಲ್ಲವೂ ಕಾರಣ.

**ಮೋಕ್ಷ :**—ಅಪರೋಕ್ಷ ಜ್ಞಾನದಿಂದ ಉಂಟಾಗುವ ಭಗವತ್ಪ್ರಸಾದದ ಮೂಲಕ ಪ್ರಕೃತಿಸಂಬಂಧ ವಿನಾಶರೂಪವಾದ ಮೋಕ್ಷವು ಲಭಿಸುವುದು. ಪ್ರಕೃತಿಸಂಬಂಧದೊಡನೆ ಅಪರೋಕ್ಷಜ್ಞಾನವೆಂಬ ಸ್ವರೂಪಜ್ಞಾನವು ಪ್ರಕಾಶವಾಗಿ ಸ್ವರೂಪಭೂತಜ್ಞಾನಾನಂದಸ್ವರೂಪವನ್ನು ಸಾಕ್ಷಾತ್ಕರಿಸುತ್ತ ಭಗವದ್ಗುಣಾನುಭವದಲ್ಲಿ ಜೀವನು ಮಗ್ನನಾಗುವನು. ಇದೇ ಮೋಕ್ಷವೆಂದು ಇವರ ಸಿದ್ಧಾಂತ. "यस्य प्रसादात्परमार्तिरूपादस्मात्संसाराऩ्मुच्यते नापरेण। नारायणोऽसौ परमो विचिन्त्यो मुमुक्षुभिः कर्मपाशादमुष्मात्"।

ಮೋಕ್ಷವು ಯೋಗ್ಯತೆಯ ತಾರತಮ್ಯಾನುಗುಣವಾಗಿ ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ ಮತ್ತು ಸಾಯುಜ್ಯಗಳೆಂದು ನಾಲ್ಕು ವಿಧ. ದೇವತೆಗಳು ಸ್ವೋತ್ತಮದೇವತೆಗಳ ಶರೀರದಲ್ಲಿ ಅನುಪ್ರವೇಶಪೂರ್ವಕ ಪರಮಾತ್ಮನ ಶರೀರವಲ್ಲಿ ಅನುಪ್ರವೇಶಮಾಡಿ ಆನಂದವನ್ನು ಅನುಭವಿಸುವುದು ಸಾಯುಜ್ಯವು. ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ

ಭೋಗಗಳು ಭಗವತ್ಸ್ವರೂಪಸಾಕ್ಷಾತ್ಕಾರಸಹಿತವಾಗಿ ಅವರವರ ಅಪೇಕ್ಷಾನುಗುಣವಾಗಿ ತಾರತಮ್ಯಾನುಗುಣ ಗಳಾಗಿರುವುವು.

ಈ ಮತದ ಒಂಬತ್ತು ಪ್ರಮೇಯಗಳು ಈ ಶ್ಲೋಕದಲ್ಲಿ ಉಕ್ತವಾಗಿವೆ.

"श्रीमन्मध्वमते हरिः परतरः सत्यं जगत् तत्त्वतो भिन्ना जीवगणा हरेरनुचराः नीचोच्चभावं गताः। मुक्तिः नैजसुखानुभूतिरमला भक्तिश्च तत्साधनं ह्यक्षादित्रितयं प्रमाणमखिलाम्नायैकवेद्यो हरिः"।

**द्वैतवन ದ್ವೈತವನ** (ನಂ) 1. ಒಂದು ತಪೋವನ. द्वे शोकमोहादिके इते गते यस्मात्। ಶೋಕಮೋಹಾದಿ ಗಳಿಂದ ವರ್ಜಿತವಾದುದರಿಂದ ಈ ವನಕ್ಕೆ ಈ ಹೆಸರು. "स वर्णिलिङ्गी विदितः समाययौ युधिष्ठिरं द्वैतवने वनेचरः" किरा० १-१। 2. ಈ ವನದಿಂದ ಕೂಡಿದ ಒಂದು ಸರೋವರ. "गच्छामः पुण्यविख्यातं महद्द्वैतवनं सरः" भा० वन० २४-१२।

**द्वैतवाद ದ್ವೈತವಾದ** (ಪುಂ) 1. ಜೀವ ಮತ್ತು ಈಶ್ವರನಿಗೆ ಭೇದವನ್ನು ನಿರ್ಣಯಿಸುವ ವಾದ. द्वैतमधिकृत्य वादः। 2. ಜೀವರ ನಾನಾತ್ವವನ್ನು ಹೇಳುವ ಸಾಂಖ್ಯರ ವಾದ. "जन्ममरणकरणानां प्रतिनियमादयुगपत्प्रवृत्तेश्च। पुरुषबहुत्वं सिद्धं त्रैगुण्यविपर्ययाच्चैव" सां० का०। "जन्मादिव्यवस्थातः पुरुषबहुत्वम्" सा० सू०।

**द्वैतवादिन् ದ್ವೈತವಾದಿನ್** (ಪುಂ) 1. ಜೀವಾತ್ಮರ ಭೇದವನ್ನು ಹೇಳುವ ಸಾಂಖ್ಯಮತಾನುಯಾಯಿ. 2. ಜೀವೇಶ್ವರ ಭೇದವನ್ನು ಹೇಳುವ ದ್ವೈತಮತಾನುಯಾಯಿ. 3. ಜೀವೇಶ್ವರ ಭೇದವನ್ನು ಪ್ರತಿಪಾದಿಸುವ ನೈಯಾಯಿಕ ಮೊದಲಾದವರು. द्वैतं जीवभेदं जीवेश्वरभेदं वा वदति—वद (व्यक्तायां वाचि) "णिनिः" (३-२-७८)।

**द्वैतिन् ದ್ವೈತಿನ್** (ವಿಂ) 1. ದ್ವೈತಮತಾನುಯಾಯಿ, ಜೀವೇಶ್ವರಭೇದವನ್ನು ಹೇಳುವ ಪೂರ್ಣಪ್ರಜ್ಞರಮತಾನುಯಾಯಿ. 2. ಜೀವರ ನಾನಾತ್ವವನ್ನು ಹೇಳುವ ಸಾಂಖ್ಯಮತಾನುಯಾಯಿ. 3. ಜೀವೇಶ್ವರ ಭೇದವನ್ನು ಪ್ರತಿಪಾದಿಸುವ ನೈಯಾಯಿಕ ಮೊದಲಾದವರು. द्वैतं प्रतिपाद्यतया अस्त्यस्य "इनिः" (५-२-११५)।

**द्वैतीयीक ದ್ವೈತೀಯೀಕ** (ವಿಂ) ಎರಡನೆಯ. द्वितीयः स्वार्थे वा "ईकक्" (वा० ५-३-४८)। "द्वैतीयीकतया मितोऽयमगमत्तस्य प्रबन्धे महाकाव्ये" नैष० २-११०। पक्षे द्वितीयः ದ್ವಿತೀಯಃ.

**द्वैध ದ್ವೈಧ** (ನಂ) 1. ರಾಜನ ಸಂಧಿವಿಗ್ರಹ ಮೊದಲಾದ ಆರು ಗುಣಗಳಲ್ಲೊಂದು, ಕಪಟಾಚರಣೆಯಿಂದ ಎರಡು ರೀತಿಯಾಗಿ ವರ್ತಿಸುವಿಕೆ. "सन्धिर्ना विग्रहो यानमासनं द्वैधमाश्रयः" अम०। ಈ ದ್ವೈಧವು ನಾಲ್ಕು ವಿಧ. "द्वैधीभाव" ಪದದಲ್ಲಿ ನೋಡಿ. 2. ವ್ಯತ್ಯಾಸ, ಪರಸ್ಪರ ವಿರೋಧ, ಭಿನ್ನತೆ. "श्रुतिद्वैधं तु यत्र स्यात्तत्र धर्मावुभौ स्मृतौ। उभावपि हितौ धर्मौ सम्यगुक्तौ मनीषिभिः" मनु० २-१४। 3. ಬೇರೆಯಾಗಿರುವಿಕೆ, ಎರಡು ವಿಧವಾಗಿರುವಿಕೆ. (ವಿಂ) 4. ಎರಡು ರೀತಿಯಾದ, ಎರಡು ಪ್ರಕಾರವಾದ. द्वि+धा+धमुञ् "ङः" (वा० ५-३-४५)। "बहुत्वं परिगृह्णीयात् साक्षिद्वैधे नराधिपः" मनु० ८-७३। (अव्य०) 5. ಎರಡು ರೀತಿಯಾಗಿ, ಎರಡು ಪ್ರಕಾರವಾಗಿ. द्वि+(प्रकारे) धा (५-३-४२)। तस्य "धमुञ्" (५-३-४५)।

**द्वैधीभाव ದ್ವೈಧೀಭಾವ** (ಪುಂ) 1. ಬೇರೆಬೇರೆಯಾಗಿರುವಿಕೆ, ಎರಡಾಗಿರುವಿಕೆ. अद्वैधस्य द्वैधस्य भावः—द्वैध + भू "च्विः" (५-४-५०)। ततो भावे "घञ्" (३-३-१८)। 2. ಸಂಶಯ, ಸಂದೇಹ. "सख्याः परिहासोवाहृतां वरप्रार्थनां श्रुत्वा धृतद्वैधीभावकातरं मे मनः" शाकु० १। 3. ವಿರೋಧ, ವ್ಯತ್ಯಾಸ. 4. ಸಂಧಿವಿಗ್ರಹ ಮೊದಲಾದ ರಾಜನ ಆರು ಗುಣಗಳಲ್ಲೊಂದು. ಈ ಗುಣವು ನಾಲ್ಕು ವಿಧ. (1) ಪ್ರಬಲರಾದ ಇಬ್ಬರು ಶತ್ರುಗಳ ಮಧ್ಯೆ ಅವರೊಬ್ಬರಿಗೂ ತಿಳಿಯದಂತೆ ಇಬ್ಬರಲ್ಲಿಯೂ ಸಮನಾಗಿರುವಂತೆ ನಟಿಸುತ್ತಾ ಕಪಟದಿಂದ ವ್ಯವಹರಿಸುತ್ತಿರುವುದು. (2) ಪ್ರಬಲನಾದ ಶತ್ರುವಿನೊಡನೆ ಸಂಧಿಮಾಡಿಕೊಂಡು ದುರ್ಬಲನೊಡನೆ ಯುದ್ಧಮಾಡುವುದು. (3) ಶತ್ರುವಿನ ಸೈನ್ಯವನ್ನು ಬೇರ್ಪಡಿಸಿ ಮೂಲಬಲದೊಡನೆ ಸ್ನೇಹಮಾಡಿಕೊಂಡು ಶತ್ರುವಿನೊಡನೆ ಯುದ್ಧಮಾಡುವುದು. (4) ಸಂಧಿಗಾಗಲಿ ಯುದ್ಧಕ್ಕಾಗಲಿ ಬಲಾಧಿಷ್ಠಿತನಾದ ರಾಜನು ದುರ್ಗಪ್ರದೇಶದಲ್ಲಿದ್ದುಕೊಂಡು ಆತ್ಮರಕ್ಷಣೆ ಮಾಡಿಕೊಳ್ಳುವುದು. ಈ ರೀತಿಯಾಗಿ ದ್ವೈಧವು ನಾಲ್ಕು ವಿಧ.

**द्वैप ದ್ವೈಪ** (ನಂ) 1. ವ್ಯಾಘ್ರದ ಚರ್ಮ, ಹುಲಿಯ ತೊಗಲು. द्वीपिनो व्याघ्रस्य विकारः "अञ्" (४-३-१५४)। (ಪುಂ) 2. ಹುಲಿಯ ಚರ್ಮದಿಂದ ಹೊದಿಸಲ್ಪಟ್ಟ ರಥ. द्वैपेन द्वीपिचर्मणा परिवृतो रथः "अञ्" (४-२-१२)। (ವಿಂ) 3. ಹುಲಿಯ ಸಂಬಂಧವಾದ. द्वीपिनः इदम् "अण्" (४-३-१२०)।

**द्वैपक ದ್ವೈಪಕ** (वि०) ದ್ವೀಪದಲ್ಲಿರುವ, ದ್ವೀಪದಲ್ಲಿ ವಾಸಮಾಡುವ. द्वीपे भवः "वुञ्" (४-२-१२७)।

**द्वैपायन ದ್ವೈಪಾಯನ**(पुं०) ವ್ಯಾಸಮಹರ್ಷಿ. द्वीपः अयनं जन्मभूमिरस्य द्वीपायनः—स्वार्थे "अण्" (५-४-३८)। ಪರಾಶರರಿಂದ ಸತ್ಯವತಿಯ ಗರ್ಭದಲ್ಲಿ ಯಮುನಾ ನದಿಯ ದ್ವೀಪದಲ್ಲಿ ಇವರು ಜನಿಸಿದುದರಿಂದ ಇವರಿಗೆ "**ದ್ವೈಪಾಯನ**"ರೆಂದು ಹೆಸರಾಯಿತು. "इति सत्यवती हृष्टा लब्ध्वा वरमनुत्तमम्। पराशरेण संयुक्ता सद्यो गर्भं सुषाव सा। जज्ञे च यमुनाद्वीपे पाराशर्यः स वीर्यवान्। स मातरमनुज्ञाय तपस्येव मनो दधे। एवं द्वैपायनो जज्ञे सत्यवत्यां पराशरात्। न्यस्तो द्वीपे स यद्बालस्तस्माद्द्वैपायनः स्मृतः" भा० आदि० ६०। "उदारचेता गिरमित्युदारां द्वैपायनेनाभिदधे नरेन्द्रः किरा० ३-१०।

**द्वैप्य ದ್ವೈಪ್ಯ** (वि०) ಸಮುದ್ರಕ್ಕೆ ಸಮೀಪದಲ್ಲಿರುವ, ದ್ವೀಪದಲ್ಲಿ ಹುಟ್ಟಿದ. द्वीपे जातः "यञ्" (४-३-१०)।

**द्वैमातुर ದ್ವೈಮಾತುರ** (पुं०) 1. ಗಣಪತಿ. द्वयोर्मात्रोरपत्यं पुमान् "अण्" (४-१-११५)। उदादेशश्च। [ಗಣಪತಿಯು ವರೇಣ್ಯನೆಂಬ ರಾಜನಿಗೆ ಪುಷ್ಪಕೆಯೆಂಬ ಪತ್ನಿಯಲ್ಲಿ ಪುತ್ರನಾಗಿ ಜನಿಸಿದನು. ಜನಿಸಿದ ಕೂಡಲೆ ಚತುರ್ಭುಜಗಳನ್ನೂ ಆನೆಯ ಮುಖವನ್ನೂ ನೋಡಿ ಭೀತಳಾದ ಪುಷ್ಪಕೆಯು ಶಿಶುವನ್ನು ಒಂದು ಸರೋವರದಲ್ಲಿ ಬಿಡಲಾಗಿ ಪಾರ್ಶ್ವನೆಂಬ ಮಹರ್ಷಿಯು ಆ ಶಿಶುವನ್ನು ತನ್ನ ಆಶ್ರಮಕ್ಕೆ ಎತ್ತಿಕೊಂಡು ಹೋದನು. ಋಷಿಪತ್ನಿಯಾದ ದೀಪವತ್ಸಲೆಯೂ ಆ ಶಿಶುವನ್ನು ಸಲಹಿದುದರಿಂದ ಗಣಪತಿಗೆ "**ದ್ವೈಮಾತುರ**"ನೆಂಬ ಹೆಸರಾಯಿತು.] स्कान्द० गणेशखण्डः। 2. ಜರಾಸಂಧ. ["जरासन्ध" ಪದದಲ್ಲಿ ನೋಡಿ.] "हते हिडिम्बरिपुणा राज्ञि द्वैमातुरे युधि" माघ० २-६०।

**द्वैमातृक ದ್ವೈಮಾತೃಕ** (पुं०) ನದಿ ಮತ್ತು ಮಳೆಯ ನೀರಿನಿಂದ ಬೆಳೆಯಾಗತಕ್ಕ ದೇಶ. द्वे मातृके इव अस्य। स्वार्थे "अण्" (५-४-३८)।

**द्वैयह्निक ದ್ವೈಯಹ್ನಿಕ** (वि०) 1. ಎರಡು ದಿನಗಳಲ್ಲಿ ಉಂಟಾದ. द्वाभ्यामहोभ्यां निर्वृत्तः "ठञ्" (५-१-१८)। 2. ಎರಡು ದಿನಗಳು ಸತ್ಕರಿಸಿ ಕೆಲಸಮಾಡಿಸಲ್ಪಟ್ಟ. 3. ಎರಡು ದಿನಗಳು ವೇತನಕೊಟ್ಟು ಕೊಳ್ಳಲ್ಪಟ್ಟ. 4. ಎರಡು ದಿನಗಳು ಕಳೆದಿರುವ. 5. ಎರಡು ದಿನಗಳಲ್ಲಿ ಉಂಟಾಗುವ. द्वे अहनी अधीष्टः भृतः भूतो भावी वा "ठञ्" (५-१-७८) वा "ख:" (५-१-८७)। द्व्यहीनः ದ್ವ್ಯಹೀನಃ.

**द्वैरथ ದ್ವೈರಥ** (न०) ಎರಡು ರಥಗಳಿಂದ ಮಾತ್ರ ನಡೆಯುವ ಯುದ್ಧ. द्वौ रथौ यत्र युद्धे। स्वार्थे "अण्" (५-४-३८)।

**द्वैरात्रिक ದ್ವೈರಾತ್ರಿಕ** (वि०) "द्विरात्रीण" ಪದದ ಅರ್ಥ.

**द्वैविध्य ದ್ವೈವಿಧ್ಯ** (न०) ಎರಡು ಪ್ರಕಾರ, ಎರಡು ವಿಧ. द्विविधस्य भावः "ष्यञ्" (५-१-१२४)।

**द्वैसमिक ದ್ವೈಸಮಿಕ** (वि०) "द्विसमीन" ಪದದ ಅರ್ಥ.

**द्व्यंश ದ್ವ್ಯಂಶ** (न०) ಎರಡು ಭಾಗಗಳು. द्वयोरंशयोः समाहारः।

**द्व्यक्ष ದ್ವ್ಯಕ್ಷ** (वि०) ಎರಡು ಕಣ್ಣುಗಳುಳ್ಳ. द्वे अक्षिणी यस्य "षच्" (५-४-११३)। स्त्रियाम् "ङीष्" (४-१-४१)। द्व्यक्षी ದ್ವ್ಯಕ್ಷೀ.

**द्व्यक्षर ದ್ವ್ಯಕ್ಷರ** (पुं०) 1. ಎರಡು ಅಕ್ಷರಗಳುಳ್ಳ ಶಬ್ದ. द्वे अक्षरे यत्र। 2. ಎರಡು ಅಕ್ಷರಗಳುಳ್ಳ ಮಂತ್ರ. स्त्रियाम् "ङीष्" (४-१-४१)। द्व्यक्षरी ದ್ವ್ಯಕ್ಷರೀ.

**द्व्यङ्गुल ದ್ವ್ಯಂಗುಲ** (न०) 1. ಎರಡು ಬೆರಳುಗಳು. द्वयोरङ्गुल्योः समाहारः। (वि०) 2. ಎರಡು ಅಂಗುಲಿಗಳ ಪ್ರಮಾಣವುಳ್ಳ. द्वे अङ्गुली प्रमाणमस्य समासान्तः "अच्" (५-४-८६)।

**द्व्यञ्जल ದ್ವ್ಯಂಜಲ** (न०) ಎರಡು ಅಂಜಲಿಗಳು, ಎರಡು ಬೊಗಸೆಗಳು. द्वयोरञ्जल्योः समाहारः वा "टच्" (५-४-१०२)। टजभावे द्व्यञ्जलि ದ್ವ್ಯಂಜಲಿ. "मध्येजलात् राघवलक्ष्मणाभ्यां प्रत्तं जलं द्व्यञ्जलमन्तिकेऽपाम्" भट्टि० ३-५०।

**द्व्यञ्जलि ದ್ವ್ಯಂಜಲಿ** (वि०) ಎರಡು ಬೊಗಸೆಗಳಿಂದ ಕೊಳ್ಳಲ್ಪಟ್ಟ. द्वाभ्यामञ्जलिभ्यां क्रीतः "ठञ्" (५-१-३७)। तस्य लुक् (५-१-२८)।

**द्व्यणुक ದ್ವ್ಯಣುಕ** (न०) ಎರಡು ಪರಮಾಣುಗಳಿಂದ ಕೂಡಿದ ದ್ರವ್ಯ, ಪರಮಾಣು ದ್ವಯದ ಸಮಾವೇಶ. द्वौ अणू कारणे यस्य "कप्" (५-४-१५४)। "विषयो द्व्यणुकादिस्तु ब्रह्माण्डान्त उदाहृतः" भाषाप०।

**द्व्यन्य ದ್ವ್ಯನ್ಯ** (वि०) ಇಬ್ಬರಿಗಿಂತಲೂ ಬೇರೆಯಾದ, ಎರಡಕ್ಕಿಂತಲೂ ಬೇರೆಯಾದ. द्वाभ्यामन्यः।

**द्व्यर्थ ದ್ವ್ಯರ್ಥ** (वि०) 1. ಎರಡು ಅರ್ಥಗಳುಳ್ಳ (ಶಬ್ದ). द्वौ अर्थौ यस्य। "द्व्यर्थमपि सदसि चेदिपतेस्तदतोऽ-

पराधगणनामगाद्द्वचः" माघ० १५-३४। 2. ಎರಡು ಪ್ರಯೋಜನಗಳುಳ್ಳ (ಕಾರ್ಯ). "आम्राश्च सिक्ताः पितरश्च तृप्ता एका क्रिया द्व्यर्थकरी बभूव"। (न०) 3. ಎರಡು ಕಾರ್ಯಗಳು. द्वयोरर्थयोः कार्ययोः समाहारः।

**द्व्यशीत ದ್ವ್ಯಶೀತ** (वि०) ಎಂಬತ್ತೆರಡನೆಯ. द्व्यशीतेः पूरणः "डट्" (५-२-४८)।

**द्व्यशीति ದ್ವ್ಯಶೀತಿ** (स्त्री०) 1. ಎಂಬತ್ತೆರಡು. द्व्यधिका अशीतिः। (वि०) 2. ಎಂಬತ್ತೆರಡು ಸಂಖ್ಯೆಯುಳ್ಳ, ಎಂಬತ್ತೆರಡು ಎಣಿಕೆಯುಳ್ಳ.

**द्व्यशीतितम ದ್ವ್ಯಶೀತಿತಮ** (वि०) ಎಂಬತ್ತೆರಡನೆಯ. द्व्यशीतेः पूरणः "डट्"—तस्य "तमट्" (५-२-५६)। स्त्रियाम् "ङीप्" (४-१-१५)। **-तमी -ತಮೀ.**

**द्व्यष्ट ದ್ವ್ಯಷ್ಟ** (न०) ತಾಮ್ರಲೋಹ. द्वे हेमरूप्ये कारणतया अश्नुते—अशू (व्याप्तौ) "क्तः" (३-४-७२)।

**द्व्यह ದ್ವ್ಯಹ** (पुं०) ಎರಡು ದಿನಗಳು. द्वयो रात्र्योः समाहारः "टच्" (५-४-९१)। पुंस्त्वम् (२-४-२९)।

**द्व्यहीन ದ್ವ್ಯಹೀನ** (वि०) "द्वैयह्निक" ಪದದ ಅರ್ಥ. द्वि+अहन् "खः" (५-१-८७)।

**द्व्यह्नजात ದ್ವ್ಯಹ್ನಜಾತ** (वि०) 1. ಹುಟ್ಟಿ ಎರಡು ದಿನಗಳಾಗಿರುವ, ಎರಡು ದಿನಗಳ ಹಿಂದೆ ಹುಟ್ಟಿರುವ. द्वे अहनी जातस्य यस्य। "टच्" (५-४-९१)। अह्नादेशः (५-४-८८)।

**द्व्याचित ದ್ವ್ಯಾಚಿತ** (वि०) 1. ಎರಡು ಆಚಿತದಷ್ಟು ಹಿಡಿಸುವ. 2. ಎರಡು ಆಚಿತಕ್ಕೆ ಸಮವಾದ. 3. ಎರಡು ಆಚಿತದಷ್ಟು ಬೇಯಿಸುವ. द्वौ आचितौ सम्भवत्यवहरति पचति वा—द्वि+आचित "ठञ्" (५-१-१८)। ठञो लुक् (५-१-२८)। स्त्रियाम् "ङीप्" न (४-१-२२)। किन्तु "टाप्" (४-१-४)। **द्व्याचिता ದ್ವ್ಯಾಚಿತಾ.**

**द्व्याचितिकी ದ್ವ್ಯಾಚಿತಿಕೀ** (स्त्री०) "द्व्याचित" ಪದದ ಅರ್ಥ. द्वौ आचितौ सम्भवत्यवहरति पचति वा—वा "ष्ठन्" (५-१-५४)। स्त्रियाम् "ङीष्" (४-१-४१)। पक्षे "खः" (५-१-५४)। **द्व्याचितीना ದ್ವ್ಯಾಚಿತೀನಾ.**

**द्व्याढक ದ್ವ್ಯಾಢಕ** (वि०) 1. ಎರಡು ಆಢಕದಷ್ಟು ಹಿಡಿಸುವ. 2. ಎರಡು ಆಢಕದಷ್ಟು ಅಳೆಯುವ. 3. ಎರಡು ಆಢಕದಷ್ಟು ಬೇಯಿಸುವ. द्वौ आढकौ सम्भवत्यवहरति पचति वा "ठञ्" (५-१-१८)। ठञो लुक् (५-१-२८)। स्त्रियाम् "ङीप्" (४-१-२१)। **द्व्याढकी ದ್ವ್ಯಾಢಕೀ.**

**द्व्याढकिकी ದ್ವ್ಯಾಢಕಿಕೀ** (स्त्री०) "द्व्याढक" ಪದದ ಅರ್ಥ. द्वौ आढकौ सम्भवत्यवहरति पचति वा—वा "ष्ठन्" (५-१-५४)। स्त्रियाम् "ङीष्" (४-१-४१)। पक्षे "खः" (५-१-५४)। **द्व्याढकीना ದ್ವ್ಯಾಢಕೀನಾ.**

**द्व्यात्मक ದ್ವ್ಯಾತ್ಮಕ** (पुं०) ಚರಸ್ಥಿರಗಳೆಂಬ ದ್ವಿಸ್ವಭಾವದ ರಾಶಿ. द्वौ द्विविधौ आत्मानौ स्वरूपौ यस्य "कप्" (५-४-१५४)। ಮೇಷಾದಿ ದ್ವಾದಶರಾಶಿಗಳಲ್ಲಿ ಮಿಥುನ ಕನ್ಯಾ ಧನುಸ್ಸು ಮತ್ತು ಮೀನ ಈ ನಾಲ್ಕು ದ್ವಿಸ್ವಭಾವದ ರಾಶಿಗಳು. "चरस्थिरद्व्यात्मकनामधेया मेषादयोऽमी क्रमशः प्रदिष्टाः"। ಈ ನಾಲ್ಕು ರಾಶಿಗಳ ಹಿಂದಿನ ರಾಶಿಗಳು ಸ್ಥಿರರಾಶಿಗಳಾದುದರಿಂದ ಅವುಗಳ ಸಾಮೀಪ್ಯದಿಂದ ಪೂರ್ವಾರ್ಧವು ಸ್ಥಿರಾತ್ಮಕ. ಮುಂದಿನ ರಾಶಿಗಳು ಚರರಾಶಿಗಳಾದುದರಿಂದ ಉತ್ತರಾರ್ಧವು ಚರಾತ್ಮಕ. ಈ ಕಾರಣದಿಂದ ಇವು ದ್ವಿಸ್ವಭಾವದ ರಾಶಿಗಳು.

**द्व्यामुष्यायण ದ್ವ್ಯಾಮುಷ್ಯಾಯಣ** (पुं०) ಜನಕ ಮತ್ತು ಸ್ವೀಕಾರಪಡೆದ ತಂದೆ ಇಬ್ಬರಿಗೂ ಮಗನಾಗಿರುವವನು. अमुष्य जनकपितुः अपत्यम् "फक्" (४-१-९९)। द्वयोरमुष्यायणः। ಜನಕ ಮತ್ತು ಸ್ವೀಕಾರ ಪಡೆದವನು ಇವರಿಬ್ಬರಿಗೂ ಪುತ್ರನಾಗಿರಬೇಕೆಂಬ ಆಡುಮಾತಿನಂತೆ ನಡೆದುಕೊಳ್ಳುವವನು ದ್ವ್ಯಾಮುಷ್ಯಾಯಣನು.

**द्व्यायुष ದ್ವ್ಯಾಯುಷ** (न०) ಎರಡರಷ್ಟು ಆಯುಸ್ಸು, ಆಯುಸ್ಸಿನ ಎರಡರಷ್ಟು ಕಾಲ. द्वयोरायुषोः समाहारः। "अच्" निपा० (५-४-७७)।

**द्व्याहिक ದ್ವ್ಯಾಹಿಕ** (वि०) 1. ಎರಡು ದಿನಗಳಲ್ಲಿ ಉಂಟಾಗುವ, ಎರಡು ದಿನಗಳಿಗೊಂದು ಸಲ ಉಂಟಾಗುವ. 2. ಎರಡು ದಿನಗಳಿಗೊಂದು ಸಲ ಬರುವ (ಜ್ವರ). द्व्यह्ने जातः "ठञ्" (४-३-११)।

**द्व्येक ದ್ವ್ಯೇಕ** (वि०) ಎರಡು ಅಥವಾ ಒಂದು, ಇಬ್ಬರು ಅಥವಾ ಒಬ್ಬ. द्वौ वा एको वा। "द्व्येकान्तरासु जातानां धर्म्यं विद्यादिमं विधिम्" मनु० १०-७।

**इति "द" कारादिपदार्थनिरूपणम्।**

# ध

**ध ಧ** ಇದು ವ್ಯಂಜನಾಕ್ಷರಗಳಲ್ಲಿ "त" ವರ್ಗದ ನಾಲ್ಕನೆಯ ಮತ್ತು ಅಭ್ಯಂತರಸ್ಪೃಷ್ಟ ಪ್ರಯತ್ನದಿಂದ ದಂತಸ್ಥಾನದಲ್ಲಿ ಹುಟ್ಟುವ ಮಹಾಪ್ರಾಣಾಕ್ಷರ. "लृतुलसानां दन्ताः"। "कादयो मावसानाः स्पर्शाः। स्पृष्टं प्रयतनं स्पर्शानाम्" सि० कौ०।

**ध ಧ** (पुं०) 1. ಧರ್ಮ. 2. ಕುಬೇರ. 3. ಬ್ರಹ್ಮ, ಚತುರ್ಮುಖ. 4. ಧನ್ವಂತರಿ. 5. ಘಟ, ಕಲಶ. 6. ಧ್ಯಾನ. 7. ಧ್ವನಿ. 8. ಮನು. 9. ಇಂದ್ರ. (न०)10. ಧನ, ಹಣ. 11. ಮನೆ, ಗೃಹ. 12. ಧಾನ್ಯ. "धो ना धर्मे कुबेरे च क्लीबं तु वसुनि स्मृतम्" मेदि०। "धःपुंसीन्द्रे ध्वनौ ध्याने श्रीदे धन्वन्तरौ घटे। धं वेश्मनि धने धान्ये" नानार्थर०। "धं धने सदने धः स्याद्विधातरि मनावपि" एका०।

**धकार ಧಕಾರ** (पुं०) "ध" ಎಂಬ ಅಕ್ಷರ. ध "कारः" (वा० ३-३-१०८)।

**धट ಧಟ** (पुं०)1. ತಕ್ಕಡಿ, ತ್ರಾಸು. धं धनं अटति गच्छति प्राप्नोति — अट (गतौ) "अच्" (३-१-१३४)। 2. ತಕ್ಕಡಿಯಿಂದ ಮಾಡುವ ಪರೀಕ್ಷೆ. 3. ತುಲಾರಾಶಿ. "सिंहो वृषश्च मेषश्च कन्या धन्वी घटो घटः। अर्कादीनां त्रिकोणानि मूलानि राशयः क्रमात्"। (स्त्री०) —टी —ಟೀ. 4. ಚಿಂದಿಬಟ್ಟೆ, ಹರುಕುಬಟ್ಟೆ. 5. ಕೌಪೀನ. "धटो दिव्यतुलायां स्यात् धटी चीरे च वाससः" मेदि०।

**धटक ಧಟಕ** (पुं०) ನಲವತ್ತೆರಡು ಗುಲಗಂಜಿಗಳ ತೂಕ. "तुल्या यवाभ्यां कथितात्र गुञ्जा वल्लस्त्रिगुञ्जो धरणं च तेऽष्टौ। गद्यानकस्तद्द्वयमिन्द्रतुल्यैर्वल्लैस्तथैवो धटकः प्रदिष्टः" लीला०।

**धटकर्कट ಧಟಕರ್ಕಟ** (पुं०) ತಕ್ಕಡಿಯ ಅಡ್ಡಕೋಲು, ತ್ರಾಸಿನ ಎರಡು ಉರಿಗಳನ್ನು ತೂಗುಹಾಕುವ ಅಡ್ಡಪಟ್ಟಿ.

**धटिका ಧಟಿಕಾ** (स्त्री०) 1. ಹರುಕುಬಟ್ಟೆ, ಚಿಂದಿಬಟ್ಟೆ. 2. ಕೌಪೀನ, ಖಂಡವಸ್ತ್ರ. धटी स्वार्थे "कः"। 3. ಪಂಚೇರು, ವೀಸೆ. [ಇದೊಂದು ಹಿಂದಿನಕಾಲದ ತೂಕ.] "द्व्यक्षेन्दुसंख्यैर्धटकैस्तु सेरस्तैः पञ्चभिः स्याद्धटिका च ताभिः" लीला०।

**धटिन् ಧಟಿನ್** (पुं०) 1. ತುಲಾರಾಶಿ. 2. ಈಶ್ವರ. (वि०)3. ತಕ್ಕಡಿಯನ್ನು ಹಿಡಿದಿರುವವನು. धटोऽस्यास्ति "इनिः" (५-२-११५)।

**धटिनी ಧಟಿನೀ** (स्त्री०) ಕಟಿಸೂತ್ರ, ಉಡುದಾರ. "मौञ्जी तु मेखलाक्षोणी मौर्वीत्वेकलमात्रिका। सौत्री तु धटिनी" वैज०।

**धटी ಧಟೀ** (स्त्री०) 1. ಖಂಡವಸ್ತ್ರ, ಕೌಪೀನ. 2. ಹರುಕು ಬಟ್ಟೆ, ಚಿಂದಿಬಟ್ಟೆ. "कच्छा कच्छटिका कक्षा धटी कौपीनमित्यपि" त्रिकाण्ड०।

**धत्तूर ಧತ್ತೂರ** (पुं०) ದತ್ತೂರಿ ಗಿಡ. धयति धातून् — धेट् (पाने) "ऊरच्" बाहु०। पृषो०। "उन्मत्तः कितवो धूर्तः धत्तूरः कनकाह्वयः" अम०।

**धन ಧನ** (न०)1. ಹಣ, ಐಶ್ವರ್ಯ. धनति—धन(धान्ये) "अच्" (३-१-१३४)। "गृहमध्यनिखातेन धनेन धनिनो यदि। भवामः किं न तेनैव धनेन धनिनो वयम्" पञ्चतं० २-१५४। 2. ಆಸ್ತಿ, ಸ್ವತ್ತು. 3. ಗೋಧನ, ಗೋರೂಪವಾದ ಆಸ್ತಿ (ಐಶ್ವರ್ಯ). "धनं स्याद्गोधने वित्ते" मेदि०। ಧನವು (1) ಸಾತ್ತ್ವಿಕ, (2) ರಾಜಸ ಮತ್ತು (3) ತಾಮಸಗಳೆಂದು ಮೂರು ವಿಧ. "धनं तु त्रिविधं ज्ञेयं शुक्लं शवलमेव च। कृष्णं च तस्य विज्ञेयो विभागः सप्तधा पृथक्"॥ (1) ವೇದ ಮತ್ತು ಶಾಸ್ತ್ರಾಭ್ಯಾಸದಿಂದಲೂ ಪರಾಕ್ರಮದಿಂದಲೂ ತಪಸ್ಸಿನಿಂದಲೂ ಶಿಷ್ಯರಿಂದ ಗುರುದಕ್ಷಿಣೆ ಮೂಲಕವಾಗಿಯೂ ಕನ್ಯೆಯೊಡನೆ ಮಾವನಮನೆಯಿಂದಲೂ ಯಜ್ಞಯಾಗಾದಿಗಳಿಂದಲೂ ವಂಶಪರಂಪರೆಯಾಗಿಯೂ ಬಂದ ಧನವು **"ಸಾತ್ತ್ವಿಕ"** ಧನ. "श्रुतशौर्यतपःकन्याशिष्ययाज्यान्वयागतम्। धनं सप्तविधं शुद्धं मुनिभिः समुदाहृतम्"। (2) ಲೇಣೆ ದೇಣೆಗಳಿಂದ, ವ್ಯವಸಾಯ, ವ್ಯಾಪಾರ, ಸುಂಕ, ಸಂಗೀತ, ಇತರರ ಸೇವೆ ಇವುಗಳಿಂದ ಸಂಪಾದಿಸಿದ ಧನವೂ ಮಾಡಿದ ಉಪಕಾರಕ್ಕೆ ಪ್ರತ್ಯುಪಕಾರ ರೂಪವಾಗಿ ಬಂದ ಧನವೂ **"ರಾಜಸ"** ಧನ. "कुसीदकृषिवाणिज्यशुल्कगानानुवृत्तिभिः। कृतोपकारादाप्तं च राजसं समुदाहृतम्"। (3) ಒಂದು ಪಕ್ಷವನ್ನು ಸೇರಿ ಅದರಿಂದ ಸಂಪಾದಿಸಿದ ಮತ್ತು ಜೂಜು, ಕಳ್ಳತನ, ಪರಹಿಂಸೆ, ವಂಚನೆಯ ವ್ಯಾಪಾರ, ಸಾಹಸಕಾರ್ಯ, ಮೋಸ ಇವುಗಳಿಂದ ಸಂಪಾದಿಸಿದ ಧನವು **"ತಾಮಸ"** ಧನ. "पार्श्विकद्यूतचौर्यार्तिप्रतिरूपकसाहसैः। व्याजेनोपार्जितं यत्तु तत्कृष्णं समुदाहृतम्"। 4. ಜನ್ಮಲಗ್ನದಿಂದ ಎರಡನೆಯ ಸ್ಥಾನ, ಧನಸ್ಥಾನ. 5. ಸ್ನೇಹಪಾತ್ರ, ವಿಶ್ವಾಸಕ್ಕೆ ಪಾತ್ರನಾದವನು.

"गुरोरपीदं धनमाहिताग्नेर्नश्यत्पुरस्तादनुपेक्षणीयम्" रघु० २-४४। 6. ಶಬ್ದ, ಧ್ವನಿ. 7. ಜೀವನೋಪಾಯ, ಜೀವಿಕೆ.

**धनक ಧನಕ** (पुं०) ಧನದ ಆಸೆ, ಐಶ್ವರ್ಯದ ಬಯಕೆ. धने कामः "कन्" (५-२-६५)।

**धनकेलि ಧನಕೇಲಿ** (पुं०) ಕುಬೇರ. धनेन केलिरस्य।

**धनजित् ಧನಜಿತ್** (वि०) ಧನವನ್ನು ಸಂಪಾದಿಸಿದವನು, ಐಶ್ವರ್ಯವನ್ನು ಗಳಿಸಿದವನು. धनं जितवान्।

**धनञ्जय ಧನಂಜಯ** (पुं०) 1. ಅಗ್ನಿ, ಬೆಂಕಿ. धनं जयति–जि (जये) "खच्" (३-२-४६)। "आरोग्यं भास्करादिच्छेत् धनमिच्छेद्धुताशनात्"। 2. ಅರ್ಜುನ, ಪಾರ್ಥ. ದೇಶವೆಲ್ಲವನ್ನೂ ಗೆದ್ದು ಧನವನ್ನು ಸಂಪಾದಿಸಿದ್ದರಿಂದ ಅರ್ಜುನನಿಗೆ ಧನಂಜಯನೆಂಬ ಹೆಸರಾಯಿತು. "सर्वान् जनपदान् जित्वा वित्तमादाय केवलम्। मध्ये धनस्य तिष्ठामि तेनाहुर्मां धनञ्जयम्" भा० विरा० ४४। "विजित्य यः प्राज्यमयच्छदुत्तरान् कुरूनकुप्यं वसु वासवोपमः। स वल्कवासांसि तवाधुनाहरन् करोति मन्युं न कथं धनञ्जयः" किरा० १-३५। 3. ವಿಷ್ಣು. धनं हेमरत्नादिकं द्रव्यं जयति अधःकरोति। "मणिमौक्तिकरत्नानि हेमरौप्यादिकं धनम्। योऽधःकरोति सततं धनञ्जय इतीरितः" इति निरुक्तिः। 'अनिर्देश्यवपुर्विष्णुर्वीरोऽनन्तो धनञ्जयः" वि० स०। 4. ಒಂದು ಸರ್ಪ. "शेषः प्रथमतो जातो वासुकिस्तदनन्तरम्। ऐरावतस्तक्षकश्च कर्कोटकधनञ्जयौ" भा० आदि० ३५-५। 5. ದೇಹದೊಳಗಿನ ಒಂದು ವಾಯು. ಶರೀರದಲ್ಲಿರುವ ಪಂಚವಾಯುಗಳಲ್ಲೊಂದಾದ ಈ ವಾಯುವು ಶರೀರದ ಎಲ್ಲಾಕಡೆಯಲ್ಲೂ ವ್ಯಾಪಿಸಿರುವುದು. "वाग्द्वारे नाग आख्यातः कूर्म उन्मीलने स्मृतः। कृकराच्च क्षुतं ज्ञेयं देवदत्ताद्विजृम्भणम्। न जहाति मृतश्चापि सर्वव्यापी धनञ्जयः"। "धनञ्जयस्तथा घोषे महारजतवर्णकः। ललाटे चोरसि स्कन्धे हृदि नाभौ त्वगस्थिषु"। 6. ಇಂದ್ರ. "धनञ्जयोऽर्जुने वह्निनागभिद्देहमारुते" मेदि०। "पार्थाग्नीन्द्राः धनञ्जयाः" वैज०। 7. ದಶರೂಪಕವನ್ನು ಬರೆದ ಒಬ್ಬ ಪಂಡಿತ.

**धनद ಧನದ** (पुं०) 1. ಕುಬೇರ. धनं ददाति–डु दाञ् (दाने) "कः" (३-२-३)। 2. ದೇಹದೊಳಗಿನ ಒಂದು ವಾಯು, ಧನಂಜಯ ವಾಯು. 3. ಅಗ್ನಿ, ಬೆಂಕಿ. "धनमिच्छेद्धुताशनात्"। 4. ಚಿತ್ರಕವೃಕ್ಷ. (वि०)5. ಹಣವನ್ನು ಕೊಡುವವನು. "धनदस्तु कुबेरे स्यात् पुंलिङ्गो दातरि त्रिषु" मेदि०।

**धनदण्ड ಧನದಂಡ** (पुं०) ಧನರೂಪವಾದ ಶಿಕ್ಷೆ, ಜುಲ್ಮಾನೆ. धनरूपो दण्डः। "वाग्दण्डं प्रथमं कुर्यात् धिग्दण्डं तदनन्तरम्। तृतीयं धनदण्डं तु वधदण्डमतः परम्" मनु० ८-१२९। ಅಪರಾಧಿಯನ್ನು ಮೊದಲು ಮೃದುವಾದ ಮಾತಿನಿಂದಲೂ ಅನಂತರ ಬಿರುಸುಮಾತಿನಿಂದಲೂ ಬೆದರಿಸಬೇಕು. ಅದಕ್ಕೆ ಹೆದರದಿದ್ದರೆ ಧನದಂಡವನ್ನು ವಿಧಿಸಬೇಕು. ಅದರಿಂದಲೂ ಸನ್ಮಾರ್ಗಕ್ಕೆ ಬರದಿದ್ದರೆ ವಧದಂಡವನ್ನು ವಿಧಿಸಬೇಕು.

**धनदर्प ಧನದರ್ಪ** (पुं०) ಧನಮದ, ಐಶ್ವರ್ಯದಿಂದ ಉಂಟಾಗುವ ಅಹಂಕಾರ, –ಕೊಬ್ಬು.

**धनदानुज ಧನದಾನುಜ** (पुं०) ಕುಬೇರನ ತಮ್ಮನಾದ– 1. ರಾವಣ. 2. ಕುಂಭಕರ್ಣ. 3. ವಿಭೀಷಣ. धनदस्य अनुजः। "भुजमूर्धोरुबाहुल्यादेकोऽपि धनदानुजः" रघु० १२-८८।

**धनदायिन् ಧನದಾಯಿನ್** (पुं०) 1. ಅಗ್ನಿ, ಬೆಂಕಿ. धनं ददाति–डु दाञ् (दाने) "णिनिः" (३-१-१३४)। "आरोग्यं भास्करादिच्छेत् धनमिच्छेद्धुताशनात्। ज्ञानं महेश्वरादिच्छेन्मोक्षमिच्छेज्जनार्दनात्"। (वि०) 2. ಹಣವನ್ನು ಕೊಡುವವನು.

**धनधानी ಧನಧಾನೀ** (स्त्री०) ಧನವನ್ನೂ ಬೆಲೆಬಾಳುವ ವಸ್ತುಗಳನ್ನೂ ಇಡುವ ಗೃಹ, ಖಜಾನೆ, ಬೊಕ್ಕಸ. धनानि धीयन्ते अस्याम्–डु धाञ् (धारणपोषणयोः) "ल्युट्" (३-३-११७)। "ङीप्" (४-१-१५)।

**धनपति ಧನಪತಿ** (पुं०) 1. ಕುಬೇರ. धनस्य पतिः। "तत्रागारं धनपतिगृहानुत्तरेणास्मदीयं दूराल्लक्ष्यं सुरपतिधनुश्चारुणा तोरणेन" मेघ० २-१२। 2. ದೇಹದೊಳಗಿರುವ ಧನಂಜಯವೆಂಬ ಒಂದು ವಾಯು. 3. ಧನಾಧ್ಯಕ್ಷ, ಬೊಕ್ಕಸದ ಅಧಿಕಾರಿ.

**धनपाल ಧನಪಾಲ** (पुं०) 1. ಕುಬೇರ. धनं पालयति–पाल (रक्षणे) + णिच् "अण्" (३-२-१)। (वि०)2. ಧನವನ್ನು ರಕ್ಷಿಸುವವನು.

**धनपिशाचिका ಧನಪಿಶಾಚಿಕಾ** (स्त्री०) ಧನದ ಆಸೆ, ಧನದ ವಿಷಯದಲ್ಲಿ ಅತಿಯಾದ ಆಸೆ. धने पिशाचिकेव।

**धनप्रयोग ಧನಪ್ರಯೋಗ** (पुं०) ಧನವು ವೃದ್ಧಿ ಹೊಂದಲು ಬಡ್ಡಿಗಾಗಿ ಸಾಲಕೊಡುವುದು. धनस्य वृद्ध्यर्थं प्रयोगः। ಬಡ್ಡಿಯ ಸಂಪಾದನೆಗಾಗಿ ಹಣವನ್ನು ಸಾಲಕೊಡಲು

ಅಶ್ವಿನಿ, ಮೃಗಶೀರ್ಷ, ಪುನರ್ವಸು, ಪುಷ್ಯ, ಚಿತ್ತೆ, ಸ್ವಾತಿ, ವಿಶಾಖೆ, ಅನೂರಾಧೆ, ಶ್ರವಣ, ಧನಿಷ್ಠೆ, ಶತಭಿಷೆ ಈ ಹನ್ನೊಂದು ನಕ್ಷತ್ರಗಳೂ ಮೇಷ, ಕರ್ಕಾಟಕ, ತುಲಾ ಮತ್ತು ಮಕರ ಲಗ್ನಗಳೂ ಪ್ರಶಸ್ತವಾದುವು. "स्वात्यादित्यमृदुद्विदैवगुरुभे कर्णत्रयाश्वे चरे लग्ने धर्मसुताष्टशुद्धिसहिते द्रव्यप्रयोगः शुभः। नारे ग्राह्यमृणं तु संक्रमदिने वृद्धौ करेऽर्केऽह्नि यत्तद्वंशेषु भवेदृणं न च बुधे देयं कदाचिद्धनम्" मु० चि०।

**धनमद ಧನಮದ** (पुं०) ಧನದಿಂದ ಉಂಟಾಗುವ ಅಹಂಕಾರ, ಐಶ್ವರ್ಯದ ಕೊಬ್ಬು. धनस्य मदः।

**धनवत् ಧನವತ್** (वि०) ಐಶ್ವರ್ಯವಂತ, ಹಣವಂತ. धनमस्यास्ति—"मतुप्" (५-२-९४)। मस्य वः (८-२-९)। "नाराजके जनपदे धनवन्तः सुरक्षिताः" रामा०।

**धनवती ಧನವತೀ** (स्त्री०) ಧನಿಷ್ಠಾನಕ್ಷತ್ರ. ಈ ನಕ್ಷತ್ರವು ಧನದೇವತಾಕವಾದುದರಿಂದ ಈ ಹೆಸರು.

**धनवृद्धि ಧನವೃದ್ಧಿ** (स्त्री०) ಐಶ್ವರ್ಯದ ಬೆಳವಣಿಗೆ.

**धनस्थान ಧನಸ್ಥಾನ** (न०) ಜನ್ಮಲಗ್ನದಿಂದ ಎರಡನೆಯ ಸ್ಥಾನ, ಧನದ ವಿಷಯವನ್ನು ನೋಡುವ ರಾಶಿ. धनचिन्तनार्थं स्थानम्।

**धनाधिकारिन् ಧನಾಧಿಕಾರಿನ್** (पुं०) ಧನಾಧ್ಯಕ್ಷ, ಕೋಶಾಧಿಕಾರಿ. धनमधिकरोति—अधि+कृञ् "णिनिः" (३-१-१३४)।

**धनाधिप ಧನಾಧಿಪ, -अधिपति -ಅಧಿಪತಿ** (पुं०) 1. ಕುಬೇರ. 2. ಧನಾಧ್ಯಕ್ಷ, ಕೋಶಾಧಿಕಾರಿ. धनस्य अधिपः अधिपतिर्वा। "पुरां विजेतुर्धृतये धनाधिपः" किरा० ५-३५। "अनुचरेण धनाधिपतेरथो नगविलोकनविस्मितमानसः" किरा० ५-१६। 3. ಐಶ್ವರ್ಯವಂತ.

**धनाध्यक्ष ಧನಾಧ್ಯಕ್ಷ** (पुं०) 1. ಕುಬೇರ. "ततः क्रुद्धो दशग्रीवो जगाम धनदालयम्। विनिर्जित्य धनाध्यक्षं जहारोत्तमपुष्पकम्" अध्यात्म०। 2. ಧನಾಧ್ಯಕ್ಷ, ಕೋಶಾಧಿಕಾರಿ.

**धनार्थिन् ಧನಾರ್ಥಿನ್** (वि०) ಧನವನ್ನು ಅಪೇಕ್ಷಿಸುವ, ಧನ ಸಂಪಾದನೆಗಾಗಿ ಆಸೆಪಡುವ. धनमर्थयते—अर्थ (उपयाच्ञायाम्) "णिनिः" (३-२-७८)। "न तादृशं भवत्येनो मृगहन्तुर्धनार्थिनः। यादृशं भवति प्रेत्य वृथामांसानि खादतः" मनु० ५-३४। स्त्रियाम् "ङीप्" (४-१-५)। **-अर्थिनी -ಅರ್ಥಿನೀ.**

**धनाशा ಧನಾಶಾ** (स्त्री०) ಹಣದ ಆಸೆ, ಹಣವನ್ನು ಸಂಪಾದಿಸುವ ಅತಿಯಾಸೆ. धनस्याशा। "जीर्यन्ति जीर्यतः केशा दन्ता जीर्यन्ति जीर्यतः। धनाशा जीविताशा च जीर्यतोऽपि न जीर्यति" हरिवं०।

**धनिक ಧನಿಕ** (वि०) 1. ಐಶ್ವರ್ಯವಂತ, ಹಣವಂತ. धनमस्त्यस्य "ठन्" (५-२-११५)। 2. ಉತ್ತಮರ್ಣ, ಸಾಲಕೊಡುವವನು. "दापयेद्धनिकस्यार्थं दण्डलेशं च शक्तितः" मनु० ८-५१। (पुं०) 3. ಪತಿ, ಗಂಡ. 4. ದಶರೂಪಕವ್ಯಾಖ್ಯಾಕಾರನಾದ ಒಬ್ಬ ಪಂಡಿತ. 5. ಧನಿಯ, ಕೊತ್ತುಂಬರಿ. 6. ಸಾಧುವಾದ ವರ್ತಕ. (स्त्री०) **-का -ಕಾ.** 7. ಉತ್ತಮ ಹೆಂಗಸು, ಸಾಧುವಾದ ಹೆಂಗಸು, ಸದಾಚಾರಸಂಪನ್ನಳಾದ ಹೆಂಗಸು. "धनिकः साधुधन्याकधवेषु धनिका स्त्रियाम्" विश्व०। "धनिका साधुनार्यां ना धन्याके त्रिषु साधुधनिनोश्च" मेदि०। 8. ಯುವತಿ, ಪ್ರಾಯದ ಹೆಂಗಸು. 9. ಪ್ರಿಯಂಗು ವೃಕ್ಷ, ಪ್ರೇಂಕಣ ಗಿಡ.

**धनिन् ಧನಿನ್** (वि०) 1. ಹಣವಂತ, ಐಶ್ವರ್ಯವಂತ. धनमस्यास्ति "इनिः" (५-२-११५)। "गृहमध्यनिखातेन धनेन धनिनो यदि। भवामः किं न तेनैव धनेन धनिनो वयम्" पञ्चतं० २-१५४। "कुलजे वृत्तसम्पन्ने धर्मज्ञे सत्यवादिनि। महापक्षे धनिन्यार्ये निक्षेपं निक्षिपेद्बुधः" मनु० ८-१७९। 2. ಸಾಲಕೊಡುವವನು, ಬಡ್ಡಿಗಾಗಿ ಧನಪ್ರಯೋಗಮಾಡುವವನು. "यादृशा धनिभिः कार्या व्यवहारेषु साक्षिणः। तादृशान् संप्रवक्ष्यामि यथा वाच्यमृतं च तैः" मनु० ८-६१।

**धनिष्ठ ಧನಿಷ್ಠ** (वि०) ಅಧಿಕ ಧನವುಳ್ಳವನು, ದೊಡ್ಡ ಐಶ್ವರ್ಯವಂತ. अतिशयेन धनी "इष्ठन्" (५-३-५५)। स्त्रियाम् "टाप्" (४-१-४)। **-ष्ठा -ಷ್ಠಾ.**

**धनिष्ठा ಧನಿಷ್ಠಾ** (स्त्री०) ಧನಿಷ್ಠಾನಕ್ಷತ್ರ, ಅಶ್ವಿನಿ ಮೊದಲಾದ ಇಪ್ಪತ್ತೇಳು ನಕ್ಷತ್ರಗಳಲ್ಲಿ ಇಪ್ಪತ್ತಮೂರನೆಯ ನಕ್ಷತ್ರ. ಧನಿಷ್ಠಾನಕ್ಷತ್ರವು ವಸುದೇವತಾಕವಾದುದರಿಂದ ಈ ಹೆಸರು. ಇದರ ಮೊದಲು ಎರಡು ಪಾದಗಳು ಮಕರ ರಾಶಿಗೂ ಮುಂದಿನ ಎರಡು ಪಾದಗಳು ಕುಂಭರಾಶಿಗೂ ಸೇರಿದುವು. ಇದು ರಾಕ್ಷಸಗಣಕ್ಕೂ ಸಿಂಹಯೋನಿಗೂ ಸೇರಿದುದು. ಈ ನಕ್ಷತ್ರದಲ್ಲಿ ಹುಟ್ಟಿದವರಿಗೆ ಜನ್ಮಕಾಲದಲ್ಲಿ ಕುಜದಶೆ ಪ್ರಾರಂಭವಾಗುವುದು. ಈ ದಶೆಯ ಪ್ರಮಾಣ ಏಳು ವರ್ಷಗಳು. ಭಾನುವಾರದೊಡನೆ ಸೇರಿದ ಈ ನಕ್ಷತ್ರವು ಪ್ರಯಾಣಕ್ಕೆ ಪ್ರಶಸ್ತವಾದುದು.

**धनीयक ಧನೀಯಕ** (नं०) ಸಣ್ಣ ಜಾತಿಯ ಕೊತ್ತುಂಬರಿ ಬೀಜ, ಧನಿಯ. धनाय हितम् "छ:" (५-१-५)। संज्ञायां "कन्" (५-३-८७)।

**धनीयिका ಧನೀಯಿಕಾ** (स्त्री०) ಕೊತ್ತುಂಬರಿಬೀಜ, ಧನಿಯಾ. "छत्रा कुस्तुम्बरी धान्या धन्या धाना धनीयिका" वैज०।

**धनु ಧನು** (पुं०) 1. ಪ್ರಿಯಾಲವೃಕ್ಷ, ಮೊರಟೆ ಗಿಡ. धन (धान्ये) "उ:" (उ० १-७)। 2. ಧನುಸ್ಸು, ಬಿಲ್ಲು. 3. ಧನೂರಾಶಿ. "धनु: पुमान् प्रियालद्रौ राशिभेदे शरासने" मेदि०। (पुंस्त्री०) 4. ಮೌರ್ವಿ, ಬಿಲ್ಲಿನದಾರ. (स्त्री०) 5. ಒಳ್ಳೆಯ ಹೆಂಗಸು. "धनु: सुस्त्रीधनुर्ज्यासु" वैज०। (वि०) 6. ಧನುರ್ಧರ, ಬಿಲ್ಲುಗಾರ.

**धनुर्गुण ಧನುರ್ಗುಣ** (पुं०) 1. ಮೌರ್ವಿ, ಬಿಲ್ಲಿನಹೆದೆ, ಬಿಲ್ಲನ್ನು ಎಳೆದುಕಟ್ಟುವ ತೊಗಲಿನ ಹಗ್ಗ. धनुषो गुण:। 2. ಕುರಟಗೆ ಗಿಡ.

**धनुर्ग्रह ಧನುರ್ಗ್ರಹ** (पुं०) 1. ಧನುರ್ಧರ, ಬಿಲ್ಲುಗಾರ. धनु: गृह्णाति—ग्रह (उपादाने) अनुद्यमने "अच्" (वा० ३-२-९)। 2. ಧೃತರಾಷ್ಟ್ರನ ಒಬ್ಬ ಮಗ. "कवची निषङ्गी दण्डी दण्डधारो धनुर्ग्रह:" भा० आदि० ६८-१०३। 3. ಎಂಟು ಅಂಗುಲಿಗಳ ಅಳತೆ. "धनुर्ग्रहश्च दिष्टिश्च स्यातामष्टाङ्गुलावुभौ" वैज०। 4. ಧನುರ್ವಿದ್ಯೆ. धनुषो ग्रह:—ग्रह (उपादाने) भावे "अप्" (३-३-५८)।

**धनुर्दण्ड ಧನುರ್ದಂಡ** (पुं०) ನಾಲ್ಕು ಹಸ್ತಗಳ ಅಳತೆ, ನಾಲ್ಕು ಮೊಳಗಳ ಅಳತೆ. "चतुर्हस्तो धनुर्दण्ड: धनु-र्धन्वन्तरं युगम्" वैज०।

**धनुर्द्रुम ಧನುರ್ದ್ರುಮ** (पुं०) ವಂಶವೃಕ್ಷ, ಬಿದಿರು ಮೆಳೆ. धनुष: साधनं द्रुम:। ಧನುಸ್ಸನ್ನು ಬಿದಿರಿನಿಂದ ತಯಾರಿಸುವುದರಿಂದ ಈ ಹೆಸರು.

**धनुर्धर ಧನುರ್ಧರ** (पुं०) 1. ಬಿಲ್ಲುಗಾರ, ಧನುಸ್ಸನ್ನು ಹಿಡಿದಿರುವವನು. धनुर्धरति—धृञ् (धारणे) "अच्" (३-१-१३४)। धनुषो धर:। "स पाटलायां गवि तस्थिवांसं धनुर्धर: केसरिणं ददर्श" रघु० २-२९। 2. ವಿಷ್ಣು. उपासकानां कण्टकोद्धरणाय स्वयमेव धनु: कार्मुकं धरति। "उपासकानां भक्तेर्य: प्रत्यूहविनिवृत्तये। धनुषो धारको नित्यं स्वयं स स्याद्धनुर्धर:" इति निरुक्ति:। "धनुर्धरो धनुर्वेदो दण्डो दमयिताऽदम:" वि० स०। 3. ಧೃತರಾಷ್ಟ್ರನ ಒಬ್ಬ ಮಗ.

**धनुर्धारिन् ಧನುರ್ಧಾರಿನ್** (पुं०) ಧನುರ್ಧರ, ಬಿಲ್ಲುಗಾರ. धनु: धरति—धृञ् (धारणे) "णिनि:" (३-२-७८)। "शूरश्च रणदक्षश्च गजाश्वरथकोविद:। धनुर्धारी भवेद्राज्ञ: सर्वक्लेशसह: शुचि:"।

**धनुर्भृत् ಧನುರ್ಭೃತ್** (पुं०) ಬಿಲ್ಲುಗಾರ. धनु: बिभर्ति—डु भृञ् (धारणपोषणयो:) "क्विप्" (३-२-७६)। "महौजसो मानधना धनार्चिता धनुर्भृत: संयति लब्ध-कीर्तय:" किरा० १-१९।

**धनुर्मध्य ಧನುರ್ಮಧ್ಯ** (नं०) ಬಿಲ್ಲಿನ ಮಧ್ಯಭಾಗ. धनुषो मध्यम्। "लस्तकस्तु धनुर्मध्यम्" अम०।

**धनुर्मास ಧನುರ್ಮಾಸ** (पुं०) ಸೂರ್ಯನು ಧನೂರಾಶಿಯಲ್ಲಿ ಸಂಚರಿಸುವ ತಿಂಗಳು.

**धनुर्विद्या ಧನುರ್ವಿದ್ಯಾ** (स्त्री०) ಧನುಸ್ಸನ್ನು ಹಿಡಿದು ಬಾಣವನ್ನು ಪ್ರಯೋಗಿಸುವ ಮತ್ತು ಉಪಸಂಹರಿಸುವ ವಿದ್ಯೆ. धनुषो विद्या।

**धनुर्वृक्ष ಧನುರ್ವೃಕ್ಷ** (पुं०) 1. ಧನುಸ್ಸನ್ನು ತಯಾರಿಸುವ ವೃಕ್ಷ, ಬಿದಿರುಮೆಳೆ. धनुषो वृक्ष:। 2. ಗೇರು ಮರ. 3. ಅರಳಿ ಮರ.

**धनुर्वेद ಧನುರ್ವೇದ** (पुं०) 1. ಧನುರ್ವಿದ್ಯೆಯನ್ನು ತಿಳಿಸುವ ಶಾಸ್ತ್ರ, ಯಜುರ್ವೇದದ ಉಪವೇದ. धनूंषि विद्यन्ते ज्ञायन्तेऽनेन—विद (ज्ञाने) कर० "घञ्" (३-३-१२१)। "लब्ध्व धनुर्वेदमनङ्गविद्विषस्त्रि:सप्त-कृत्व: समरे महीभुजाम्" कुमा० १५-३६। 2. ವಿಷ್ಣು. सुरनरेन्द्रादय: धनुरादिकं तत्तच्छास्त्रप्रवर्तकेऽस्मिन् विन्दन्ति लभन्ते—विद्लृ (लाभे) अधि० "घञ्" (३-३-१२१)। "सुरेन्द्राद्या धनु:शास्त्रं यस्माद्विन्दन्ति स श्रुत:। धनुर्वेदो ह्यष्टवर्णो धनुर्वेदप्रदायक:" इति निरुक्ति:। "धनुर्धरो धनुर्वेदो दण्डो दमयिताऽदम:" वि० स०। (वि०) 3. ಧನುಸ್ಸಿನ ಪ್ರಯೋಗ ಮತ್ತು ಉಪಸಂಹಾರಗಳನ್ನು ತಿಳಿದವನು. धनूंषि धनुष: प्रयोगोप-संहारौ वेत्ति—विद (ज्ञाने) "अण्" (३-२-१)।

**धनुर्वेदिन् ಧನುರ್ವೇದಿನ್** (वि०) ಧನುರ್ವೇದವನ್ನು ಅಭ್ಯಾಸಮಾಡಿದವನು.

**धनुष्कर ಧನುಷ್ಕರ** (वि०) 1. ಧನುಸ್ಸನ್ನು ತಯಾರಿಸುವವನು. धनु: करोति—डु कृञ् (करणे) "ट:" (३-२-२१)। षत्वम् (वा० ३-२-२१)। 2 ಕೈಯಲ್ಲಿ ಧನುಸ್ಸನ್ನು ಹಿಡಿದಿರುವ. धनु: करे यस्य।

**धनुष्पाणि ಧನುಷ್ಪಾಣಿ** (वि०) ಕೈಯಲ್ಲಿ ಬಿಲ್ಲನ್ನು ಹಿಡಿದಿರುವ. धनुः पाणौ यस्य। "युवजानिर्धनुष्पाणिर्भूमिष्ठः खविचारिणः" भट्टि० ५-१३।

**धनुष्मत् ಧನುಷ್ಮತ್** (वि०) ಧನುರ್ಧರ, ಧನುಸ್ಸನ್ನು ಹಿಡಿದಿರುವವನು. धनुः धार्यत्वेनास्त्यस्य "मतुप्" (५-२-९४)। "एकः पदातिः पुरुषो धनुष्मान् योऽनेकमायानि वियद्गतानि" भट्टि० १२-५६।

**धनुस् ಧನುಸ್** (पुंन०) 1. ಧನುಸ್ಸು, ಬಿಲ್ಲು. धनति—धन (शब्दे) "उसिः" (उ० २-११७)। "धनुः प्रबन्ध ध्वनितं रुषेव सकृद्विकृष्टा विततेव मौर्वी" किरा० १६-२०। "द्विषेव कुर्वन् धनुषः प्रणादैः" १६-१९। "धनुष्यमोघं समधत्त बाणम्" कुमा० ३-६६। 2. ಧನೂರಾಶಿ, ಮೇಷಾದಿಯಾಗಿ ಒಂಬತ್ತನೆಯ ರಾಶಿ. (पुं०) 3. ಪ್ರಿಯಾಲವೃಕ್ಷ, ಮೊರಟೆ ಗಿಡ. "धनुः प्रियाले ना नस्त्री राशिभेदे शरासने। धनुर्धरे त्रिषु" मेदि०। 4. ನಾಲ್ಕು ಹಸ್ತಗಳ ಅಳತೆ, ನಾಲ್ಕು ಮೊಳಗಳ ಪ್ರಮಾಣ. "चतुर्हस्तो धनुर्दण्डो धनुर्धन्वन्तरं युगम्" वैज०। (वि०) 5. ಧನುರ್ಧರ, ಬಿಲ್ಲನ್ನು ಹಿಡಿದಿರುವವನು.

**धनेच्छा ಧನೇಚ್ಛಾ** (स्त्री०) ಧನದ ಆಸೆ, ಹಣವನ್ನು ಸಂಪಾದಿಸುವ ಬಯಕೆ. धनस्येच्छा।

**धनेश ಧನೇಶ, -ईश्वर -ಈಶ್ವರ** (पुं०) 1. ಕುಬೇರ, ಧನಾಧಿಪತಿ, ಐಶ್ವರ್ಯದ ಒಡೆಯ. धनस्य ईशः ईश्वरो वा। "अक्षया राजराजस्य धनेशस्य महात्मनः" हरिवं०। 2. ವಿಷ್ಣು. क्षिप्रकारितया धनस्य तत्तदिष्टविभवस्य ईश्वरः दाने आशुकारी। अशू (व्याप्तौ) आशुकर्मणि "वरट्" उपधाया ईत्वं च (उ० ५-५७)। "तत्तदिष्टद्रव्यदाने शीघ्रकारी धनेश्वरः" इति निरुक्तिः। "वत्सरो वत्सलो वत्सी रत्नगर्भो धनेश्वरः" वि० स०। 3. ಲಗ್ನದಿಂದ ದ್ವಿತೀಯಸ್ಥಾನದ ಅಧಿಪತಿ, ಧನಸ್ಥಾನಾಧಿಪತಿ. 4. ಕೋಶಾಧ್ಯಕ್ಷ, ಬೊಕ್ಕಸದ ಅಧಿಕಾರಿ.

**धन्य ಧನ್ಯ** (वि०) 1. ಪುಣ್ಯಶಾಲಿ, ಅದೃಷ್ಟವಂತ. धनं लब्धा "यत्" (४-४-८४)। "धन्यं पुण्यवति त्रिषु" मेदि०। "धन्या केयं स्थिता ते शिरसि शशिकला किन्नु नामैतदस्याः" मुद्रा० १-१। 2. ಹಣವಂತ, ಐಶ್ವರ್ಯವಂತ. "धन्यो धनवति स्मृतः" विश्व०। 3. ಧನಕ್ಕೆ ಕಾರಣವಾದ, ಧನಲಾಭಕ್ಕೆ ನಿಮಿತ್ತವಾದ. धनस्य निमित्तम् "यत्" (५-१-३९)। 4. ಧನಕ್ಕೆ ಹಿತವಾದ. धनाय हितम् "यत्" (५-१-५)। "धन्यं यशस्यमायुष्यं स्वर्ग्यं वातिथिपूजनम्" मनु० ३-१०६। 5. ಕೃತಕೃತ್ಯನಾದ, ಕೃತಾರ್ಥನಾದ, ಕರ್ತವ್ಯವನ್ನು ನೆರವೇರಿಸಿದ. 6. ಉದಾರ, ದೊಡ್ಡ ಮನಸ್ಸುಳ್ಳವನು, ಮಹಾತ್ಮ. "उदारोदीर्णधन्यास्तु महात्मा सुकृतीति च" वैज०। 7. ಶ್ಲಾಘ್ಯವಾದ, ಉತ್ತಮವಾದ, ಶ್ರೇಷ್ಠವಾದ. (पुं०) 8. ವಿಷ್ಣು. धनं लब्धा देवकीजन्मधनलाभात्—"यत्" (४-४-८४)। "धन्यस्तु देवकीजन्मधनलाभादिति स्मृतः" इति निरुक्तिः। "सुमेधा मेधजो धन्यः सत्यमेधा धराधरः" वि० स०। (स्त्री०) **-न्या -ನ್ಯಾ.** 9. ಧಾತ್ರಿ, ಉಪಮಾತೆ, ದಾದಿ. 10. ನೆಲ್ಲಿಮರ. "धन्या धात्र्यामलक्योः स्यात्" मेदि०। 11. ಧನಿಯ, ಕೊತ್ತುಂಬರಿ ಬೀಜ. "छत्रा कुस्तुम्बरी धन्या धाना धान्या धनीयिका" वैज०। 12. ಧ್ರುವನ ಪತ್ನಿ.

**धन्यता ಧನ್ಯತಾ** (स्त्री०) 1. ಅದೃಷ್ಟ, ಭಾಗ್ಯ. धन्यस्य भावः "तल्" (५-१-११९)। 2. ಐಶ್ವರ್ಯವಂತನಾಗಿರುವಿಕೆ. "त्वः" (५-१-११९)। **-त्वम् -ತ್ವಮ್.**

**धन्यम्मन्य ಧನ್ಯಮ್ಮನ್ಯ** (वि०) ತನ್ನನ್ನು ಧನ್ಯನನ್ನಾಗಿ ತಿಳಿದುಕೊಂಡಿರುವವನು. धन्यमात्मानं मन्यते—मन (ज्ञाने) "खश्" (३-२-८३)।

**धन्यवाद ಧನ್ಯವಾದ** (पुं०) 1. ಕೃತಜ್ಞತೆಯನ್ನು ಹೇಳುವುದು, ವಂದನಾರ್ಪಣೆ. 2. ಪ್ರಶಂಸೆ, ಶ್ಲಾಘನೆ, ಮೆಚ್ಚಿಗೆ. धन्यस्य वादः।

**धन्या ಧನ್ಯಾ** (स्त्री०) "धन्य" ಪದದಲ್ಲಿ ನೋಡಿ

**धन्याक ಧನ್ಯಾಕ** (पुं०) 1. ಧನಿಯದ ಗಿಡ, ಕೊತ್ತುಂಬರಿ ಗಿಡ. (न०) 2. ಕೊತ್ತುಂಬರಿ ಬೀಜ. धन (धान्ये) "आकः" (उ० ४-१५)। निपा०।

**धन्येय ಧನ್ಯೇಯ** (न०) ಧನಿಯ, ಕೊತ್ತುಂಬರಿ ಬೀಜ. "सुचरित्रा च धन्याकधन्येयकतकानि च" वैज०।

**धन्वदुर्ग ಧನ್ವದುರ್ಗ** (न०) ನಾಲ್ಕು ದಿಕ್ಕುಗಳಲ್ಲೂ ಐದು ಯೋಜನಗಳ ದೂರ ಮರುಪ್ರದೇಶದಿಂದ ಆವೃತವಾದ ದೇಶ. धन्वना आवृतं दुर्गम्।

**धन्वन् ಧನ್ವನ್** (पुं०) 1. ಮರುಭೂಮಿ, ಮರಳುಕಾಡು. (न०) 2. ಸ್ಥಳ, ಭೂಮಿ. 3. ಧನುಸ್ಸು, ಬಿಲ್ಲು. धन्व्यते—धवि (गतौ) "कनिन्" (उ० १-१५४)। "धन्वा तु मरुदेशे ना क्लीबं चापे स्थलेऽपि च" मेदि०।

**धन्वन्तर ಧನ್ವಂತರ** (न०) ನಾಲ್ಕು ಹಸ್ತಗಳ ಪರಿಮಾಣ, ನಾಲ್ಕು ಮೊಳಗಳ ಅಳತೆ. "वितस्तिः स्यादतो द्वाभ्यां

हस्तः स्यात्तच्चतुष्टयम्। दण्डो धन्वन्तरं तस्य सहस्र-द्वितयेन तु। क्रोशः" त्रिकाण्ड०।

**धन्वन्तरि ಧನ್ವಂತರಿ**(ಪುಂ)1. ದೇವತೆಗಳ ವೈದ್ಯ. ಅಮೃತಕ್ಕಾಗಿ ದೇವತೆಗಳೂ ದಾನವರೂ ಸೇರಿ ಕ್ಷೀರಸಮುದ್ರವನ್ನು ಮಥನಮಾಡಿದಾಗ ಈತನು ಕ್ಷೀರಸಮುದ್ರದಿಂದ ಅಮೃತಕಲಶವನ್ನು ಹಿಡಿದುಕೊಂಡು ಆವಿರ್ಭವಿಸಿದನು. ಧನ್ವಂತರಿಯು ವಿಷ್ಣುವಿನ ಅಂಶಾವತಾರ. "अथोदधेर्मथ्यमानात् काश्यपैरमृतार्थिभिः। उदतिष्ठन्महाराज पुरुषः परमाद्भुतः। दीर्घपीवरदोर्दण्डः कम्बुग्रीवोऽरुणेक्षणः। अमृतापूर्णकलशं बिभ्रद्वलयभूषितः। स वै भगवतः साक्षाद्विष्णोरंशांशसंभवः। धन्वन्तरिरिति ख्यात आयुर्वेददृगिज्यभाक्" भाग० ८-८। ಧನ್ವಂತರಿಯು ಈ ಲೋಕದಲ್ಲಿ ಆಯುರ್ವೇದವನ್ನು ಪ್ರಚಾರಕ್ಕೆ ತಂದನು.

ಬ್ರಹ್ಮನು ಆಯುರ್ವೇದವನ್ನು ಮೊದಲು ದಕ್ಷಪ್ರಜಾಪತಿಗೆ ಉಪದೇಶಿಸಿದನು. ದಕ್ಷಪ್ರಜಾಪತಿಯಿಂದ ಅಶ್ವಿನೀದೇವತೆಗಳು ಕಲಿತರು. ಅವರಿಂದ ಇಂದ್ರನೂ ಇಂದ್ರನಿಂದ ಧನ್ವಂತರಿಯೂ ಉಪದೇಶಹೊಂದಿ ಧನ್ವಂತರಿಯಿಂದ ಪ್ರಜೆಗಳ ಹಿತಕ್ಕಾಗಿ ಆಯುರ್ವೇದವು ಭೂಲೋಕದಲ್ಲಿ ಪ್ರಚಾರವಾಯಿತು. "ब्रह्मा प्रोवाच ततः प्रजापतिरधिजगे। तस्मादश्विनौ, अश्विभ्यामिन्द्रः इन्द्रादहं मयात्विह प्रदेयमर्थिभ्यः प्रजाहितहेतोः। अहं हि धन्वन्तरिरादिदेवो जरारुजामृत्युहरोऽमराणाम्। शल्याङ्गमङ्गैरपरैरुपेतं प्राप्तोऽस्मि गां भूय इहोपदेष्टुम्" सुश्रुत० सूत्र० १-२०, २१। 2. ವಿಕ್ರಮಾದಿತ್ಯನ ಆಸ್ಥಾನದಲ್ಲಿದ್ದ ನವರತ್ನಗಳಲ್ಲೊಬ್ಬ ಕವಿ. "धन्वन्तरिक्षपणकामरसिंहशङ्कुवेतालभट्टघटकर्परकालिदासाः। ख्यातो वराहमिहिरो नृपतेःसभायां रत्नानि वै वररुचिर्नव विक्रमस्य"। 3. ಸೂರ್ಯ. "धन्वन्तरिरिनेऽपि च" नानार्थर०।

**धन्वयास ಧನ್ವಯಾಸ** (ಪುಂ) ತೀಟಕಸಂಧಿ.

**धन्विन् ಧನ್ವಿನ್** (ವಿ೦) 1. ಧನುರ್ಧರ, ಬಿಲ್ಲುಗಾರ. धन्व अस्यास्ति "इनिः" (५-२-११६)। "कुर्यां हरस्यापि पिनाकपाणेः धैर्यच्युतिं के मम धन्विनोऽन्ये" कुमा० ३-१०। "धन्विनस्तुरगारूढा गजारोहान् शरैः क्षतान्" कुमा० १६-३७। (ಪುಂ) 2. ಪಾರ್ಥ, ಅರ್ಜುನ. 3. ವಿದಗ್ಧ, ನಿಪುಣ, ಬುದ್ಧಿವಂತ. 4. ಕಕುಭವೃಕ್ಷ, ಕೆಂಪುಮತ್ತಿಮರ. "धन्वी धनुर्धरे पार्थे विदग्धे ककुभद्रुमे" विश्व०। 5. ವಿಷ್ಣು. ನಿರತಿಶಯವಾದ ಪೌರುಷಕ್ಕೆ ಅನುಗುಣವಾದ ಸಕಲ ದಿವ್ಯಾಯುಧಗಳನ್ನೂ ಶಾರ್ಙ್ಗವನ್ನೂ ಧರಿಸಿರುವುದರಿಂದ ಈ ಹೆಸರು. ईदृशनिरतिशयपौरुषानुरूपं सर्वदिव्यायुधोपलक्षकं शार्ङ्गं धनुः नित्यमस्यास्ति "इनिः" (५-२-११६)। "शरा नानाविधाकाराः धनुरायतविग्रहम्। अनुव्रजन्ति काकुत्स्थं सर्वे पुरुषविग्रहाः"। "पौरुषानुगुणं शार्ङ्गं यस्य धन्वी स उच्यते" इति निरुक्तिः। "ईश्वरो विक्रमी धन्वी" वि० स०। 6. ಧನೂರಾಶಿ.

**धम ಧಮ**(ವಿ೦)ಶಬ್ದ ಮಾಡುವ, ಸದ್ದುಮಾಡುವ. धमति—धम (शब्दे) "अच्" (३-१-१३४)।

**धमक ಧಮಕ** (ಪುಂ) ಕಮ್ಮಾರ, ಕಬ್ಬಿಣದ ಕೆಲಸಮಾಡುವವನು, ಗೆಜ್ಜುಗಾರ. ध्मा (शब्दाग्निसंयोगयोः) "क्वुन्" धातोः धमादेशश्च (उ० २-३६)। धमकः कर्मकारः सि० कौ०।

**धमन ಧಮನ** (ಪುಂ)1. ನಾಸಾರಂಧ್ರ, ಮೂಗಿನ ಹೊಳ್ಳೆ. धम (शब्दे) "युच्" (उ० २-७९)। "धमनौ नासिकापुटौ" वैज०। 2. ಲಾಳದಗಿಡ, ದೇವನಾಳ. "नडस्तु धमनः पोटगलः" अम०। 3. ಅಗ್ನಿ. (ವಿ೦) 4. ತಿದಿಯನ್ನು ಒತ್ತುವವನು. 5. ಕ್ರೂರ. "धमनो नाजले भस्त्राध्मापकक्रूरयोस्त्रिषु" मेदि०।

**धमनि ಧಮನಿ** (स्त्री०) 1. ನರ, ಸಿರೆ. धम (शब्दे) "अनिः" (उ० २-१०२)। "नाडी तु धमनिः सिरा" अम०। 2. ಹರಿದ್ರ, ಅರಿಶಿನ. 3. ಕುತ್ತಿಗೆ, ಕತ್ತು. "धमनी तु हरिद्रायां कन्धराशिरयोरपि" विश्व०। 4 ಹಟ್ಟವಿಲಾಸಿನಿ (ನಖ) ಎಂಬ ಗಂದಿಗೆರ ಒಂದು ವಸ್ತು. 5. ನರಿಹೊನ್ನೆಗಿಡ. 6. ವಾಕ್ಯ, ಮಾತು. वा "ङीष्" (ग० ४-१-४५)। —नी —ನೀ.

**धमनील ಧಮನೀಲ** (ವಿ೦) ಧಮನಿಗಳಿಂದಕೂಡಿದ, ನಾಡಿಗಳನ್ನು ಹೊಂದಿರುವ. धमनी "लच्" (५-२-९७)।

**धम्मिल्ल ಧಮ್ಮಿಲ್ಲ** (ಪುಂ) ಒಟ್ಟುಗೂಡಿಸಿದ ಕೂದಲು, ಗಂಟುಹಾಕಿದ ಕೂದಲು, ಮುಡಿಗಂಟು, ಹೂವನ್ನು ಮುಡಿದು ಅಲಂಕರಿಸಿದ ಗಂಟು. धम (शब्दे) "विच्" (३-२-७५)। मिलति—मिल (संगमे) "कः" (३-१-१३५)। धम् चासौ मिलश्च। पृषो०। "धम्मिल्ले नवमल्लिकासमुदयो हस्ते सिताम्भोरुहम्" सा० द०।

**धयत् ಧಯತ್** (ವಿ೦) ಪಾನಮಾಡುತ್ತಿರುವ, ಹಾಲು ಮೊದಲಾದುವನ್ನು ಕುಡಿಯುತ್ತಿರುವ. धेट् (पाने) "शतृ" (३-२-१२४)। स्त्रियाम् "ङीप्" (४-१-६)। —न्ती —ನ್ತೀ.

**धयन ಧಯನ** (नं०) ಪಾನಮಾಡುವುದು. ಹಾಲು ಮೊದಲಾದುವನ್ನು ಕುಡಿಯುವುದು. धेट् (पाने) भावे "ल्युट्" (३-३-११५)।

**धर ಧರ** (पुं०) 1. ಪರ್ವತ, ಬೆಟ್ಟ. धरति—धृञ् (धारणे) "अच्" (३-१-१३४)। "नासुरोऽयं न वा नागो धरसंस्थो न राक्षसः" किरा० १५-१२। "धरस्योद्धर्तासि त्वमिति सर्वत्र जगति प्रतीतः" माघ० ५-६९। 2. ಕೂರ್ಮರಾಜ, ಕೂರ್ಮಾವತಾರವನ್ನೆತ್ತಿದ ಮಹಾವಿಷ್ಣು. 3. ಅಷ್ಟವಸುಗಳಲ್ಲೊಬ್ಬ. 4. ಹತ್ತಿ. "धरो गिरौ। कार्पासतूलके कूर्मराजे वस्वन्तरेऽपि च" मेदि०। (वि०) 5. ಹೊತ್ತಿರುವ, ಧರಿಸಿರುವ. [ಸಮಾಸದ ಕೊನೆಯಲ್ಲಿ] चक्रधरः, गदाधरः, महीधरः ಇತ್ಯಾದಿ. "रथचरणधराङ्गनाकराब्जव्यतिकरसम्पदुपात्तसौमनस्याः" माघ० ७-२८।

**धरण ಧರಣ** (पुं०) 1. ಸೂರ್ಯ. 2. ಲೋಕ, ಜಗತ್ತು, 3. ಸ್ತನ. 4. ಧಾನ್ಯ. 5. ಸರ್ಪರಾಜ. धृञ् (धारणे) "ल्युः" (३-१-१३४)। "धरणोऽह्रिपतौ लोके स्तने धान्ये दिवाकरे" हेम०। 6. ಸೇತುವೆ. "धरणः पिण्डिलः सेतुः" त्रिकाण्ड०। (नं०) 7. ಧರಿಸುವುದು, ಹೊತ್ತಿರುವುದು. धृञ् भावे "ल्युट्" (३-३-११५)। "यज्ञाङ्गयोनित्वमवेक्ष्य यस्य सारं धरित्रीधरणक्षमं च" कुमा० १-१७। 8. ಹದಿನಾರು ಮಾಷಗಳ ತೂಕ. "रूप्यमाषौ द्विगुञ्जो वा धरणं षोडशैव ते" वैज०। 9. ಹತ್ತು ಪಲಗಳ ತೂಕ. "पलं सुवर्णाश्चत्वारः पलानि धरणं दश" मनु० ८-१३५। (वि०) 10. ಹೊತ್ತಿರುವ, ಧರಿಸಿರುವ.

**धरणि ಧರಣಿ** (स्त्री०) 1. ಭೂಮಿ, ಪೃಥಿವಿ. धृञ् (धारणे) "अनिः" (उ० २-१०२)। "नासुरोऽयं न वा नागः धरसंस्थो न राक्षसः। ना सुरोऽयं नवाभोगो धरणिस्थो हि राजसः" किरा० १५-१२। 2. ಧರಣಿದಾಸವಿರಚಿತವಾದ "ಧರಣಿ" ಎಂಬ ಒಂದು ಕೋಶ.

**धरणिज ಧರಣಿಜ, -जात -ಜಾತ** (पुं०) 1. ಅಂಗಾರಕ ಗ್ರಹ. 2. ನರಕಾಸುರ. धरणेर्जायते जातो वा। 3. ವೃಕ್ಷ, ಮರ. (वि०) 4. ಭೂಮಿಯಲ್ಲಿ ಹುಟ್ಟಿದ. धरण्यां जायते जातो वा। (स्त्री०) **-जा -ಜಾ, -जाता -ಜಾತಾ.** 1. ಸೀತಾದೇವಿ. 2. ಗೋದಾದೇವಿ.

**धरणिधर ಧರಣಿಧರ** (पुं०) 1. ಪರ್ವತ, ಬೆಟ್ಟ. धरण्या धरः। 2. ಕೂರ್ಮ, ಆಮೆ. 3. ವಿಷ್ಣು. 4. ಆದಿಶೇಷ.

**धरणिभृत् ಧರಣಿಭೃತ್** (पुं०) 1. ಪರ್ವತ, ಬೆಟ್ಟ. 2. ಆದಿಶೇಷ. 3. ಕೂರ್ಮ, ಆಮೆ. 4. ವಿಷ್ಣು. धरणिं बिभर्ति—डु भृञ् (धारणपोषणयोः) "क्विप्" (३-२-७६)।

**धरणिरुह् ಧರಣಿರುಹ್, -रुह -ರುಹ** (पुं०) ವೃಕ್ಷ, ಮರ. धरण्यां रोहति — रुह (बीजजन्मादौ) "क्विप्" (३-२-७६) "कः" (३-१-१३५) वा।

**धरणी ಧರಣೀ** (स्त्री०) ಪೃಥಿವಿ, ಭೂಮಿ. धृञ् (धारणे) "अनिः" (उ० २-१०२)। वा "ङीष्" (ग० ४-१-४५)। पक्षे **धरणिः ಧರಣಿಃ.**

**धरणीज ಧರಣೀಜ, -जात -ಜಾತ, -तनय -ತನಯ, -सुत -ಸುತ, -सूनु -ಸೂನು** (पुं०) 1. ಅಂಗಾರಕ ಗ್ರಹ. 2. ನರಕಾಸುರ. धरण्यां जायते जातो वा, धरण्याः तनयः सुतः सूनुर्वा।

**धरणीतल ಧರಣೀತಲ** (नं०) ಭೂಮಿಯ ಮೇಲುಭಾಗ, ಭೂಮಿಯ ಮೇಲುಮೈ. धरण्यास्तलम्।

**धरणीधर ಧರಣೀಧರ** (पुं०) 1. ಪರ್ವತ, ಬೆಟ್ಟ. धरति—धृञ् (धारणे) "अच्" (३-१-१३४)। धरण्या धरः। 2. ಕೂರ್ಮ, ಆಮೆ. 3. ಆದಿಶೇಷ. 4. ವಿಷ್ಣು. धरणीं धारकान्तरोपलक्षणीं भुवं धरति। धरण्या धरः। "भूतधात्र्याश्च धरणेर्धारणात् धरणीधरः" इति निरुक्तिः। "अहस्संवर्तको वह्निरनिलो धरणीधरः" वि० स०।

**धरणीधरेन्द्र ಧರಣೀಧರೇಂದ್ರ** (पुं०) ಪರ್ವತರಾಜನಾದ ಹಿಮವಂತ. धरणीधराणामिन्द्रः। "धरणीधरेन्द्रदुहितुर्भयादसौ विषमेक्षणः स्फुटममूनं पश्यति" माघ० १३-३९।

**धरणीमण्डल ಧರಣೀಮಂಡಲ** (नं०) ಭೂಮಂಡಲ, ಗೋಳಾಕಾರವಾದ ಭೂಮಿ. धरण्या मण्डलम्।

**धरणीरुह ಧರಣೀರುಹ** (पुं०) ವೃಕ್ಷ, ಮರ. धरण्यां रोहति — रुह (बीजजन्मादौ) "कः" (३-१-१३५)।

**धरणीश्वर ಧರಣೀಶ್ವರ** (पुं०) 1. ರಾಜ, ದೊರೆ. 2. ಪರಶಿವ, ಪರಮೇಶ್ವರ. 3. ವಿಷ್ಣು. धरण्या ईश्वरः।

**धरा ಧರಾ** (स्त्री०) 1. ಭೂಮಿ, ಪೃಥಿವಿ. धरति विश्वम्—धृञ् (धारणे) "अच्" (३-१-१३४)। "निपतन्तमिवोष्णरश्मिमुर्व्यां वलयीभूततरं धरां च मेने" किरा० १३-३०। 2. ಹೆಂಗಸರ ಗರ್ಭಾಶಯ, ಬಸುರು ಚೀಲ, ಗರ್ಭಕೋಶ. 3. ಮೇದಸ್ಸು, ಕೊಬ್ಬು. "धरा विश्वम्भरायां च स्त्री गर्भाशयमेदसोः" मेदि०। 4. ಸಿರೆ,

ನಾಡಿ. 5. ದಾನಮಾಡಲು ಇಟ್ಟಿರುವ ಸುವರ್ಣದ ರಾಶಿ. 6. ಅಮೃತಬಳ್ಳಿ. "छन्ना छिन्नरुहा धरा" वैजं।

**धराकदम्ब ಧರಾಕದಂಬ** (पुं०) ನೀಪವೃಕ್ಷ, ಕಡವಲು ಮರ. धराजात: कदम्ब:। "नीपो धराकदम्ब: स्यात्" हारा०।

**धरात्मज ಧರಾತ್ಮಜ, -तनय -ತನಯ, -सुत -ಸುತ, -सूनु -ಸೂನು** (पुं०) 1. ಅಂಗಾರಕ, ಕುಜಗ್ರಹ. 2. ನರಕಾಸುರ. धराया आत्मज: तनय: सुत: सूनुर्वा। (स्त्री०) **-आत्मजा -ಆತ್ಮಜಾ, -तनया -ತನಯಾ, -सुता -ಸುತಾ.** 1. ಸೀತಾದೇವಿ. 2. ಗೋದಾದೇವಿ.

**धराधर ಧರಾಧರ**(पुं०)1. ಪರ್ವತ, ಬೆಟ್ಟ. 2. ಆದಿಶೇಷ. 3. ಕೂರ್ಮರಾಜ. धराया धर:। 4. ವಿಷ್ಣು. गोवर्धनस्य परित्राणाय धरं गोवर्धनगिरिं धैर्यादाधरति। "धरं गोवर्धनं शीघ्रं धृतवान् स धराधर:" इति निरुक्ति:। "सुमेधा मेधजो धन्य: सत्यमेधा धराधर:" वि० स०।

**धराधिनाथ ಧರಾಧಿನಾಥ, -अधिप -ಅಧಿಪ** (पुं०) ರಾಜ, ದೊರೆ. धराया अधिनाथ: अधिपो वा।

**धरामर ಧರಾಮರ, -सुर -ಸುರ** (पुं०) ಭೂದೇವ, ಬ್ರಾಹ್ಮಣ. धरायाममर: सुर इव वा।

**धराशय ಧರಾಶಯ** (वि०) ಭೂಮಿಯ ಮೇಲೆ ಮಲಗಿರುವ. धरायां शेते-शीङ् (स्वप्ने) "अच्"(३-२-१५)। "अप्रयत्न: सुखार्थेषु ब्रह्मचारी धराशय:" मनु० ६-२६।

**धरित्री ಧರಿತ್ರೀ** (स्त्री०) ಭೂಮಿ, ಪೃಥಿವಿ. धृञ् (धारणे) "इत्र:" (उ० ४-१७३)। गौरा० "ङीष्" (४-१-४१)। "लभ्या धरित्री तव विक्रमेण ज्यायांश्च वीर्यास्त्रबलैर्विपक्ष:" किरा० ३-१७। "गुरुर्धरित्री क्रियतेतरां त्वया" माघ० १-३६।

**धरिमन् ಧರಿಮನ್** (पुं०) 1. ತೂಕದ ಅಳತೆ, ತೂಕದ ಪರಿಮಾಣ. धृञ् (धारणे) "इमनिच्" (उ० ४-१४७)। 2. ರೂಪ, ಆಕಾರ. धरिमा रूपम् सि० कौ०। "तथा धरिममेयानां शतादभ्यधिके वध:" मनु० ८-३२१।

**धरुण ಧರುಣ** (पुं०) 1. ಸ್ವರ್ಗಲೋಕ. 2. ಜಲ, ನೀರು. धृञ् (धारणे) "उनन्" बाहु०। 3. ಅಗ್ನಿ, ಬೆಂಕಿ. 4. ಸೂರ್ಯ. 5. ಲೋಕ. 6. ಸ್ತನ. 7. ಬ್ರಹ್ಮ. (वि०) 8. ಸಮ್ಮತವಾದ, ಇಷ್ಟವಾದ. "धरुण: सम्मते नीरे स्वर्लोके परमेष्ठिनि" मेदि०। "धरुणा: स्तनधातृलोकार्का:" वैज०।

**धर्तृ ಧರ್ತೃ** (वि०) ಧರಿಸಿರುವ, ಹೊತ್ತಿರುವ. धृ धाञ् (धारणपोषणयो:) "तृच्" (३-१-१३३)। "यत: स भर्ता जगतां जगाम धर्त्रा धरित्र्या: फणिना ततोऽध:" माघ० ३-२५। स्त्रियाम् "ङीप्" (४-१-५)। **-र्त्री -ರ್ತ್ರೀ.**

**धर्त्र ಧರ್ತ್ರ** (न०)1. ಗೃಹ, ಮನೆ. धृञ् (धारणे) "त्र:" (उ० ४-१६६)। धर्त्रं गृहम् सि० कौ०। 2. ಯಜ್ಞ. 3. ಧರ್ಮ. (वि०) 4. ಧರಿಸಿರುವ, ಹೊತ್ತಿರುವ.

**धर्म ಧರ್ಮ** (पुं०)1. ವಿಶ್ವಧರ್ಮ, ಜಗತ್ತಿನ ಸ್ಥಿತಿ ಮತ್ತು ಅದರ ಅಭ್ಯುದಯ ಮತ್ತು ನ್ಯಾಯಸಮ್ಮತವ್ಯವಹಾರಗಳು ಯಾವುದನ್ನು ಅವಲಂಬಿಸಿರುವುದೋ ಅಂತಹ ಒಂದು ಗುಣ. ध्रियतेऽनेन लोक:— धरति विश्वं वा धृञ् (धारणे) "मन्" (उ० १-१३७)। "धारणाद्धर्म इत्याहु:" भा०। ಜಗತ್ತಿನ ಅಭ್ಯುದಯ ಮತ್ತು ನಿಃಶ್ರೇಯಸಗಳಿಗೆ ಕಾರಣಭೂತವಾದ ಗುಣವೇ ಧರ್ಮವು. "धर्म: श्रेय: समुद्दिष्टं श्रेयोऽभ्युदयसाधनम्"। "धर्मो विश्वस्य जगत: प्रतिष्ठा लोके धर्मिष्ठं प्रजा उपसर्पन्ति" "यतोऽभ्युदयनि:श्रेयससिद्धि: स धर्म:" वै० सू०। ಜಗತ್ತಿನ ಶ್ರೇಯಸ್ಸಿಗೆ ಕಾರಣವಾದ ಈ ಧರ್ಮವು ಮನುಷ್ಯಸಾಮಾನ್ಯನಲ್ಲೂ ಅವಶ್ಯವಾಗಿ ಇರಬೇಕು. ಇದು ಹತ್ತು ವಿಧ. "धृति: क्षमा दमोऽस्तेयं शौचमिन्द्रियनिग्रह:। धीर्विद्या सत्यमक्रोधो दशकं धर्मलक्षणम्"। **ಧರ್ಮಸ್ವರೂಪ:** ಸದಾಚಾರಸಂಪನ್ನರಾದ ಹಿರಿಯರು ಸರಿ ಎಂದು ಪ್ರಶಂಸೆಮಾಡುವ ಮನುಷ್ಯನ ಆಚಾರವೇ ಧರ್ಮ. "यमार्या: क्रियमाणं हि शंसन्त्यागमवेदिन:। स धर्म: यं विगर्हन्ति तमधर्मं प्रचक्षते"। ಈ ಧರ್ಮವು ಯುಗಪ್ರಮಾಣಗಳನ್ನು ಅನುಸರಿಸಿ ಬೇರೆ ಬೇರೆಯಾಗಿರುವುದು. "अन्ये कृतयुगे धर्मास्त्रेतायां द्वापरेऽपरे। अन्ये कलियुगे नृणां युगह्रासानुसारत:" मनु० १-८५। ವ್ಯವಹಾರ ನಿಬಂಧನೆಗಳಿಗನುಗುಣವಾಗಿ ಮನುಷ್ಯನು ತನ್ನ ಆಚರಣೆಗಳಿಂದ ಈ ಧರ್ಮವನ್ನು ರಕ್ಷಿಸುತ್ತ ಬಂದರೆ ಅದೂ ಮನುಷ್ಯನನ್ನು ರಕ್ಷಿಸುವುದು. "धर्मो रक्षति रक्षित:"। 2. ಆಚಾರ, ಸಂಪ್ರದಾಯ, ವಾಡಿಕೆಯಾಗಿ ಬಂದ ಮತಸಂಬಂಧವಾದ ಅನುಷ್ಠಾನ. "आचार: प्रथमो धर्म: धर्मस्य प्रभुरच्युत:"। "आचार: प्रथमो धर्म: श्रुत्युक्त: स्मार्त एव च। तस्मादस्मिन् सदा युक्त: नित्यं स्यादात्मवान् द्विज:" मनु० १-१०८। 3. ಮೋಕ್ಷಧರ್ಮ, ಮೋಕ್ಷಕ್ಕೆ ಸಾಧನವಾದ ಅನುಷ್ಠಾನ, -ಕಾರ್ಯಾಚರಣೆ. "न ज्ञातं तात यत्नस्य पौर्वापर्यममुष्य ते। शासितु

येन मां धर्मं मुनिभिस्तुल्यमिच्छसि" किरा० ११-४२। 4. ವೇದವಿಹಿತವಾದ ಕರ್ಮಾಚರಣೆ, ವೈದಿಕ ಕರ್ಮಾನುಷ್ಠಾನ, ಯಾಗಾದಿ ಕರ್ಮಾನುಷ್ಠಾನ. "श्रुतिः स्त्री वेद आम्नायः त्रयीधर्मस्तु तद्विधिः" अम०। "चोदनालक्षणोऽर्थो धर्मः"। "विहितक्रियया साध्यो धर्मः पुंसो गुणो मतः। प्रतिषिद्धक्रियासाध्यः स गुणोऽधर्म उच्यते"। 5. ಮನುಷ್ಯನು ಇಹಪರಸೌಖ್ಯಕ್ಕಾಗಿ ಮಾಡಬೇಕಾದ ಕಾರ್ಯ, ಪುಣ್ಯಕಾರ್ಯಾಚರಣೆ. ಇದು ಚತುರ್ವಿಧ ಪುರುಷಾರ್ಥಗಳಲ್ಲೊಂದು. ಇದು ವೇದದಲ್ಲಿ ಹೇಳಲ್ಪಟ್ಟಿದೆ. ಈ ಧರ್ಮವು ಪ್ರವೃತ್ತ ಮತ್ತು ನಿವೃತ್ತ ಗಳೆಂದು ಎರಡು ವಿಧ. ಅಭ್ಯುದಯಕ್ಕೆ ಸಾಧನಭೂತವಾದುದು ಪ್ರವೃತ್ತಧರ್ಮ. ಮೋಕ್ಷಸಾಧನಭೂತವಾದುದು ನಿವೃತ್ತಧರ್ಮ. ಪ್ರವೃತ್ತಧರ್ಮವು ಸಾತ್ತ್ವಿಕ ರಾಜಸ ಮತ್ತು ತಾಮಸ ಎಂದು ಮೂರು ವಿಧ. "प्रवृत्तं च निवृत्तं च द्विविधं कर्म वैदिकम्। सर्गादौ सृजता सृष्टं ब्रह्मणा वेदरूपिणा। प्रवृत्तसंज्ञको धर्मो गुणतस्त्रिविधो भवेत्। सात्त्विको राजसश्चैव तामसश्चेति भेदतः" भृगु०। [ಈ ಭೇದಗಳಿಗೆ "ಕರ್ಮನ್" ಪದದಲ್ಲಿ ನೋಡಿ.] "आस्तिक्यशुद्धमवतः प्रियधर्म धर्मं धर्मात्मजस्य विहितागसि शत्रुवर्गे" किरा० १८-४३। 6. ಅವಶ್ಯ ಕರ್ತವ್ಯದ ಆಚರಣೆ. ಈ ಧರ್ಮವು (1) वर्णधर्मः, (2) आश्रमधर्मः, (3) वर्णाश्रमधर्मः, (4) गौणधर्मः ಮತ್ತು (5) नैमित्तिकधर्मः ಎಂದು ಐದು ವಿಧ.

(1) ವರ್ಣವನ್ನು ಮಾತ್ರ ಉದ್ದೇಶಿಸಿ ಹೇಳುವ ಧರ್ಮವು **ವರ್ಣಧರ್ಮ.** ದ್ವಿಜರಿಗೆ ವಿಹಿತವಾದ ಉಪನಯನವು ವರ್ಣಧರ್ಮ. "वर्णत्वमेकमाश्रित्य यो धर्मः संप्रवर्तते। वर्णधर्मः स उक्तस्तु यथोपनयनं नृप"॥

(2) ಆಶ್ರಮವನ್ನು ಮಾತ್ರ ಉದ್ದೇಶಿಸಿ ಹೇಳುವ ಧರ್ಮವು **ಆಶ್ರಮಧರ್ಮ.** ದಂಡಧಾರಣೆ ಭಿಕ್ಷಾಚರಣೆ ಇತ್ಯಾದಿ ಬ್ರಹ್ಮಚರ್ಯಾಶ್ರಮಧರ್ಮ. ಪಂಚಯಜ್ಞಗಳು ಅತಿಥಿಸತ್ಕಾರ ದಾನ ಯಜ್ಞಯಾಗಾದಿಗಳು ಗೃಹಸ್ಥಾಶ್ರಮಧರ್ಮ. ತಪಸ್ಸು ವಾನಪ್ರಸ್ಥಾಶ್ರಮಧರ್ಮ. ಜ್ಞಾನಸಂಪಾದನೆಯೂ ಮೋಕ್ಷೋಪಾಯವೂ ಸಂನ್ಯಾಸಾಶ್ರಮಕ್ಕೆ ವಿಹಿತವಾದ ಧರ್ಮಗಳು. "आश्रमं च समाश्रित्य यो धर्मः संप्रवर्तते। स खल्वाश्रमधर्मस्तु भिक्षादण्डादिको यथा"।

(3) ವರ್ಣ ಮತ್ತು ಆಶ್ರಮಗಳನ್ನು ಕುರಿತು ಹೇಳುವ ಧರ್ಮವು **ವರ್ಣಾಶ್ರಮಧರ್ಮ.** "वर्णत्वमाश्रमत्वं च योऽधिकृत्य प्रवर्तते। स वर्णाश्रमधर्मस्तु स्यान्मौञ्जीमेखला यथा"।

(4) ಗುಣವನ್ನು ಕುರಿತು ಹೇಳುವ ಧರ್ಮವು **ಗೌಣಧರ್ಮ.** ಪಟ್ಟಾಭಿಷಿಕ್ತನಾದ ರಾಜನಿಗೆ ಪ್ರಜಾಪರಿಪಾಲನೆ ಯಜ್ಞಯಾಗಾದಿ ಸಂರಕ್ಷಣೆ ಇತ್ಯಾದಿ. "यो गुणेन प्रवर्तेत गौणधर्मः स उच्यते। यथा मूर्धाभिषिक्तस्य प्रजानां परिपालनम्"। "षष्ठांशवृत्तेरपि धर्म एषः" शाकु०।

(5) ಯಾವುದಾದರೊಂದು ನಿಮಿತ್ತದಿಂದ ಉಕ್ತವಾದ ಧರ್ಮವು **ನೈಮಿತ್ತಿಕಧರ್ಮ.** ಜ್ಞಾನಾಜ್ಞಾನಕೃತವಾದ ಪಾಪಪರಿಹಾರಕ್ಕಾಗಿ ಮಾಡುವ ಪ್ರಾಯಶ್ಚಿತ್ತ ಮೊದಲಾದುದು. "निमित्तमेकमाश्रित्य यो धर्मः संप्रवर्तते। नैमित्तिकः स विज्ञेयः प्रायश्चित्तविधिर्यथा"। 7. ಧರ್ಮಪುರುಷ, ಧರ್ಮಾಧಿಷ್ಠಾತೃದೇವತೆ, ಧರ್ಮದೇವತೆ.

**ಧರ್ಮಪುರುಷನ ಉತ್ಪತ್ತಿ:** ಚತುರ್ಮುಖನು ತಾನು ಸೃಷ್ಟಿಸಲಿರುವ ಪ್ರಜೆಗಳ ಪಾಲನೆಯ ವಿಷಯದಲ್ಲಿ ಚಿಂತಿಸುತ್ತಿದ್ದಾಗ ಅವನ ದೇಹದ ಬಲಭಾಗದಿಂದ ದಿವ್ಯಪುಷ್ಪಮಾಲೆಯನ್ನು ಧರಿಸಿ ಚತುಷ್ಪಾದಗಳಿಂದಲೂ ವೃಷಭಾಕೃತಿಯಿಂದಲೂ ಪುರುಷನೊಬ್ಬನು ಹುಟ್ಟಿದನು. ಬ್ರಹ್ಮನು ಲೋಕಕ್ಕೆಲ್ಲಾ ಹಿರಿಯ ಪ್ರಜೆಯಾದ ಆ ಪುರುಷನಿಗೆ ಪ್ರಜಾರಕ್ಷಣೆಯ ಕಾರ್ಯವನ್ನು ಒಪ್ಪಿಸಿದನು. ಈತನೇ ಧರ್ಮಪುರುಷ.

ಧರ್ಮಪುರುಷನು ಕೃತಯುಗದಲ್ಲಿ ನಾಲ್ಕು ಪಾದಗಳನ್ನೂ ತ್ರೇತಾಯುಗದಲ್ಲಿ ಮೂರು ಪಾದಗಳನ್ನೂ ದ್ವಾಪರಯುಗದಲ್ಲಿ ಎರಡು ಪಾದಗಳನ್ನೂ ಕಲಿಯುಗದಲ್ಲಿ ಒಂದೇ ಪಾದವನ್ನೂ ಭೂಮಿಯಲ್ಲಿಟ್ಟುಕೊಂಡು ಪ್ರಜೆಗಳನ್ನು ಪಾಲಿಸುತ್ತಿರುವನು. ಕಲಿಯುಗಾಂತ್ಯದಲ್ಲಿ ಆ ಒಂದು ಪಾದವನ್ನು ಮೇಲಕ್ಕೆ ಎಳೆದುಕೊಂಡಾಗ ಧರ್ಮವು ಭೂಲೋಕದಲ್ಲಿ ಸಂಪೂರ್ಣವಾಗಿ ಅಳಿದುಹೋಗಿ ಪ್ರಳಯವಾಗುವುದು. "पूर्वं ब्रह्माव्ययः शुद्धः परादपरसंज्ञितः। स सिसृक्षुः प्रजास्त्वादौ पालनं तास्वचिन्तयत्। तस्य चिन्तयतस्त्वङ्गाद्दक्षिणाख्यात् सुकुण्डलः। प्रादुर्बभूव पुरुषः श्वेतमाल्यानुलेपनः। तं दृष्ट्वोवाच भगवांश्चतुष्पादं वृषाकृतिम्। पालयेमाः प्रजाः पुत्र त्वं ज्येष्ठो जगतो भव। इत्युक्तः स समुत्तस्थौ चतुष्पादः कृते युगे। त्रेतायां स त्रिभिः पादैः द्वाभ्यां वै द्वापरेऽभवत्। कलावेकेन पादेन प्रजाः पालयते प्रभुः" वराहपु०।

**ಧರ್ಮಪುರುಷನ ಪತ್ನಿಯರು ಮತ್ತು ಮಕ್ಕಳು:** ದಕ್ಷಪ್ರಜಾಪತಿಯ ಹದಿಮೂರು ಮಂದಿ ಕನ್ಯೆಯರು ಧರ್ಮಪುರುಷನ ಪತ್ನಿಯರು:

| ಪತ್ನಿಯರು | ಮಕ್ಕಳು |
|---|---|
| 1. श्रद्धा | ·· धृतिः (ಧೈರ್ಯ) |
| 2. मैत्री | ·· प्रसादः (ಅನುಗ್ರಹ) |
| 3. दया | ·· अभयम् (ಅಭಯ) |
| 4. शान्तिः | ·· सुखम् (ಸೌಖ್ಯ) |
| 5. तुष्टिः | ·· मुद् (ಸಂತೋಷ) |
| 6. पुष्टिः | ·· स्मयः (ಗರ್ವ) |
| 7. क्रिया | ·· योग (ಯೋಗ) |
| 8. उन्नतिः | ·· दर्पः (ಅಹಂಕಾರ, ಕೊಬ್ಬು) |
| 9. बुद्धिः | ·· अर्थः (ಕಾರ್ಯ) |
| 10. मेधा | ·· स्मृतिः (ಸ್ಮರಣೆ) |
| 11. तितिक्षा | ·· क्षेमम् (ಕ್ಷೇಮ) |
| 12. ह्रीः | ·· प्रश्रयः (ವಿನಯ) |
| 13. मूर्तिः | ·· नरनारायणौ (ನರ ಮತ್ತು ನಾರಾಯಣ) |

"त्रयोदशादाद्धर्माय तथैकामग्नये विभुः। पितृभ्य एकां युक्तेभ्यो भवायैकां भवच्छिदे। श्रद्धा मैत्री दया शान्तिः तुष्टिः पुष्टिः क्रियोन्नतिः। बुद्धिर्मेधा तितिक्षा ह्रीः मूर्तिर्धर्मस्य पत्नयः" ಇತ್ಯಾದಿ भाग० ४-१। 8. ಈಗಿನ (ವೈವಸ್ವತ) ಮನ್ವಂತರದಲ್ಲಿ ಬ್ರಹ್ಮನ ಮಾನಸ ಪುತ್ರರಲ್ಲೊಬ್ಬ. ಉತ್ತಾನಪಾದವಂಶದ ಪ್ರಾಚೇತಸದಕ್ಷನ ಹತ್ತುಮಂದಿ ಕನ್ಯೆಯರು ಈತನ ಪತ್ನಿಯರು. 9. ಯಮ. 10. ಯುಧಿಷ್ಠಿರ. 11. ದ್ರವ್ಯಗತವಾದ ಒಂದು ಗುಣ. "द्रव्यं गुणवत्" ಎಂಬಲ್ಲಿ ಗುಣವು ಧರ್ಮ. ಘಟದಲ್ಲಿ ಘಟತ್ವವು ಧರ್ಮ. 12. ವಿಹಿತಕರ್ಮಾಚರಣೆಯಿಂದ ಉಂಟಾಗುವ ಅದೃಷ್ಟವಿಶೇಷ (ಪುಣ್ಯ). "एक एव सुहृद्धर्मो निधनेऽप्यनुयाति यः। शरीरेण समं नाशं सर्वमन्यत्तु गच्छति" मनु०। ಇದು ಕಾಯ ವಾಕ್ಕು ಮತ್ತು ಮನಸ್ಸು ಇವುಗಳಿಂದ ಉಂಟಾಗುವುದರಿಂದ ಮೂರು ವಿಧ. ದಾನ ಆರ್ತಪರಿತ್ರಾಣ ಇತ್ಯಾದಿ ಶರೀರವ್ಯಾಪಾರದಿಂದ ಲಬ್ಧವಾಗುವ ಪುಣ್ಯ. ಹಿತವಾದ ನುಡಿ ಸತ್ಯವಚನ ಇತ್ಯಾದಿ ವಾಗ್ವ್ಯಾಪಾರದಿಂದ ಲಬ್ಧವಾಗುವ ಪುಣ್ಯ. "अहिंसा परमो धर्मः हिंसा चाधर्मलक्षणम्" ಎಂಬ ವಚನದಂತೆ ಪರಹಿಂಸಾಪರಿಹಾರವು ಮನೋವ್ಯಾಪಾರದಿಂದ ಬರುವ ಪುಣ್ಯ(ಧರ್ಮ). 13. ಧನುಸ್ಸು, ಬಿಲ್ಲು. 14. ಸೋಮ ಪಾನ ಮಾಡುವವನು. 15. ಉತ್ತಮಮನ್ವಂತರದ ಒಬ್ಬ ಬ್ರಹ್ಮರ್ಷಿ. 16. ಪರಮಾತ್ಮ. 17. ಜೀವಾತ್ಮ. 18. ಯಜ್ಞ. 19. ಭಾಗ್ಯಸ್ಥಾನ, ಲಗ್ನದಿಂದ ಒಂಬತ್ತನೆಯ ಸ್ಥಾನ. 20. ಆಗಮ, ವೇದ. (पुंन०)21. ಉಪಮಾ, ಸಾದೃಶ್ಯ, ಹೋಲಿಕೆ. 22. ಸಮಾನವಾದ ಗುಣ. "वदन्ति वर्ण्यावर्ण्यानां धर्मैक्यं दीपकं बुधाः"। 23. ಸ್ವಭಾವ, ಮನೋಧರ್ಮ. 24. ಉಪನಿಷತ್ತು. 25. ಅಹಿಂಸೆ. 26. ನೀತಿ, ನ್ಯಾಯ. 27. ಪುಣ್ಯ, ಸುಕೃತ. "धर्मोऽस्त्री पुण्य आचारे स्वभावोपमयोः क्रतौ। अहिंसोपनिषन्न्याये ना धनुर्यमसोमपे" मेदि०। "स्वभावन्याययागादियमाचारेषु सोमपे। प्रचक्षते धर्मशब्दमहिंसागमयोरपि" शाश्व०।

**धर्मकर्मन् ಧರ್ಮಕರ್ಮನ್** (न०) 1. ವೇದ ವಿಹಿತವಾದ ಯಜ್ಞಯಾಗಾದಿಗಳ ಆಚರಣೆ. 2. ಸಂಪ್ರದಾಯದ ಕಾರ್ಯ, ವಾಡಿಕೆಯಾಗಿ ಬಂದ ಕರ್ಮಾನುಷ್ಠಾನ. 3. ಇಹ ಪರ ಸೌಖ್ಯಕ್ಕಾಗಿ ಆಚರಿಸುವ ಪುಣ್ಯಕಾರ್ಯ. धर्मस्य धर्मार्थं वा कर्म।

**धर्मकथादरिद्र ಧರ್ಮಕಥಾದರಿದ್ರ** (पुं०) ಕಲಿಯುಗದಲ್ಲಿ ಹುಟ್ಟಿದ ಮನುಷ್ಯ. धर्मकथायां दरिद्रः। ಕಲಿಯುಗದಲ್ಲಿ ಹುಟ್ಟಿದವನಿಗೆ ಧರ್ಮಕಥೆಗಳಲ್ಲಿ ಆಸಕ್ತಿಯಿರುವುದಿಲ್ಲ.

**धर्मकाम ಧರ್ಮಕಾಮ** (पुं०) ಫಲವನ್ನು ಅಪೇಕ್ಷಿಸದೆ ಧರ್ಮಕಾರ್ಯದಲ್ಲಿ ಶ್ರದ್ಧೆಯುಳ್ಳವನು. धर्मं कामयते — कमु (कान्तौ) + णिच् "अण्" (३-२-१)।

**धर्मकाय ಧರ್ಮಕಾಯ** (पुं०) ಬುದ್ಧದೇವ. धर्मस्य धर्मार्थं वा कायोऽस्य। "विश्वबोधो धर्मकायः संगुप्तोऽर्हन् सुनिश्चितः" त्रिकाण्ड०।

**धर्मकील ಧರ್ಮಕೀಲ** (पुं०) ರಾಜಶಾಸನ, ರಾಜನ ಆಜ್ಞೆ, ಆಜ್ಞಾಪತ್ರ. धर्मस्य कील इव।

**धर्मकृत् ಧರ್ಮಕೃತ್** (पुं०) 1. ವಿಷ್ಣು. सर्वान् धार्मिकयन् अकारणादनुग्रहदेहं धर्मं करोति — डु कृञ् (करणे) "क्विप्" (३-२-७६)। "सर्वं जनं धार्मिकयन् लीलानुग्रहलक्षणम्। धर्मं करोति यस्माद्धि तस्माद्धर्मकृदुच्यते" इति निरुक्तिः। "धर्मगुप् धर्मकृद्धर्मी" वि० स०। (वि०) 2. ಧರ್ಮಕಾರ್ಯವನ್ನು ಮಾಡುವವನು. धर्मं धर्मसाधनं कर्म करोति—कृञ् "क्विप्"। "ज्येष्ठासु च न बहुमित्रः सन्तुष्टो धर्मकृत् प्रचुरकोपः" बृहत्सं० १०१-१०।

**धर्मकेतु ಧರ್ಮಕೇತು** (पुं०) 1. ಬುದ್ಧದೇವ. धर्मः अहिंसारूपं कर्म केतुर्यस्य। 2. ಸುಕೇತುರಾಜನ ಒಬ್ಬ ಮಗ.

**धर्मकोश ಧರ್ಮಕೋಶ** (पुं०) ಧರ್ಮದ ಸಮೂಹ. धर्मस्य कोशः समूहः। "ब्राह्मणो जायमानो हि

पृथिव्यामधिजायते। ईश्वरः सर्वभूतानां धर्मकोशस्य गुप्तये" मनु० १-९९।

**धर्मक्षेत्र ಧರ್ಮಕ್ಷೇತ್ರ** (न०) 1. ಧರ್ಮಸಂಪಾದನೆಗೆ ಯೋಗ್ಯವಾದ ಭಾರತದೇಶ. धर्मार्जनार्थं क्षेत्रम्। 2. ಧರ್ಮದ ಬೆಳವಣಿಗೆಗೆ ಯೋಗ್ಯವಾದ ಭೂಮಿ, ಧರ್ಮಕ್ಕೆ ಸ್ಥಾನವಾಗಿರುವ ಭೂಮಿ. धर्मस्य क्षेत्रम्। "धर्मक्षेत्रे कुरुक्षेत्रे समवेता युयुत्सवः। मामकाः पाण्डवाश्चैव किमकुर्वत सञ्जय" गीता १-१। ಎಂತಹ ಪಾಪಾತ್ಮರಿಗೂ ಚಿತ್ತಪ್ರಸಾದವುಂಟಾಗಿ ಸನ್ಮಾರ್ಗದಲ್ಲಿ ಪ್ರವರ್ತಿಸುವಂತೆ ಪ್ರೇರಿಸುವ ಪುಣ್ಯಭೂಮಿಯಾದುದರಿಂದ ಕುರುಕ್ಷೇತ್ರವು ಧರ್ಮಕ್ಷೇತ್ರವಾಯಿತು.

**धर्मगुप् ಧರ್ಮಗುಪ್** (पुं०) 1. ವಿಷ್ಣು. अर्थकामौ दत्वापि दुर्विषयान्निवर्त्य ताभ्यां हितधर्मरक्षणात् धर्मं गोपायति रक्षति—गुपू (रक्षणे) "क्विप्" (३-२-७६)। "कामं दत्वाप्यर्थकामौ निवर्त्य विषयान्तरात्। ताभ्यां हि तस्य धर्मस्य रक्षणाद्धर्मगुप् स्मृतः" इति निरुक्तिः। "धर्मगुप् धर्मकृद्धर्मी" वि० स०। (वि०) 2. ಧರ್ಮವನ್ನು ರಕ್ಷಿಸುವವನು.

**धर्मचक्र ಧರ್ಮಚಕ್ರ** (न०) 1. ಧರ್ಮಸಮೂಹ. धर्मस्य चक्रम्। "भीष्मेण विहितं राष्ट्रे धर्मचक्रमवर्तत" भा० आदि० ११८-१४। 2. ಬುದ್ಧ. "बुद्धो कनिष्ठगमहामुनिधर्मचक्रराणाशनित्रिशरणाः खसमो दशार्हः" त्रिकाण्ड०।

**धर्मचारिन् ಧರ್ಮಚಾರಿನ್** (वि०) 1. ಧರ್ಮಕಾರ್ಯವನ್ನು ಆಚರಿಸುವವನು, ಪುಣ್ಯಕಾರ್ಯವನ್ನು ನಡೆಸುವವನು. धर्मं चरति —चर (गतिभक्षणयोः) "णिनिः" (३-२-७८)। "स चेत्स्वयं कर्मसु धर्मचारिणां त्वमन्तरायो भवसि च्युतो विधिः" रघु० ३-४५। स्त्रियाम् "ङीप्" (४-१-५)। **–चारिणी –ಚಾರಿಣೀ.** 2. ಜೊತೆಯಲ್ಲಿ ಧರ್ಮಕಾರ್ಯವನ್ನು ನಡೆಸುವ ಹೆಂಗಸು, ಸಹಧರ್ಮಚಾರಿಣಿ, ಪತ್ನಿ. "ज्येष्ठायां धर्मचारिण्यां महिष्यां गर्भमादधे" भा० वन०।

**धर्मचिन्तक ಧರ್ಮಚಿಂತಕ** (वि०) ಧರ್ಮವನ್ನು ಅನುಸಂಧಾನಮಾಡುವವನು, ಧರ್ಮವನ್ನು ಪರ್ಯಾಲೋಚಿಸುವವನು, ಧರ್ಮದ ವಿಚಾರಮಾಡುವವನು. धर्मं चिन्तयति —चिति (स्मृत्याम्) "ण्वुल्" (३-१-१३३)।

**धर्मचिन्तन ಧರ್ಮಚಿಂತನ** (न०) ಧರ್ಮದ ವಿಷಯವಾಗಿ ಯೋಚಿಸುವುದು, ಧರ್ಮದ ವಿಚಾರಮಾಡುವುದು. धर्मस्य चिन्तनम्।

**धर्मचिन्ता ಧರ್ಮಚಿಂತಾ** (स्त्री०) ಧರ್ಮದ ಚಿಂತನೆ, ಧರ್ಮದ ವಿಷಯವಾಗಿ ಯೋಚಿಸುವುದು, ಅವಶ್ಯ ಕರ್ತವ್ಯವಾದ ಧರ್ಮಕಾರ್ಯಗಳ ಪರ್ಯಾಲೋಚನೆ. धर्मस्य चिन्ता।

**धर्मज ಧರ್ಮಜ** (पुं०) 1. ಔರಸಪುತ್ರ, ಹನ್ನೆರಡು ವಿಧ ಪುತ್ರರಲ್ಲೊಬ್ಬ, ಧರ್ಮದಿಂದ ಜನಿಸಿದ ಪುತ್ರ, ಧರ್ಮಕಾರ್ಯಾಚರಣೆಗಾಗಿ ಧರ್ಮಪತ್ನಿಯಲ್ಲಿ ಜನಿಸಿದ ಪುತ್ರ. धर्मेण जायते—जनी (प्रादुर्भावे) "डः" (३-२-१०१)। "यस्मिन्नृणं संनयति येन चानन्त्यमश्नुते। स एव धर्मजः पुत्रः कामजानितरान् विदुः" मनु० ९-१०७। ಯಾವ ಪುತ್ರನು ಜನಿಸಿದ ಕೂಡಲೆ ಪಿತೃಗಳ ಋಣವನ್ನು ತೀರಿಸಿ ಅವರು ಮೋಕ್ಷಹೊಂದಲು ಕಾರಣನಾಗುವನೋ ಅತನೇ ಧರ್ಮಜನು. 2. ಧರ್ಮರಾಜ, ಯುಧಿಷ್ಠಿರ. धर्माज्जायते — जनी "डः" (३-२-९८)। "एवं सञ्चिन्त्य भगवान् स्वराज्ये स्थाप्य धर्मजम्। नन्दयामास सुहृदः साधूनां वर्त्म दर्शयन्" भाग० ३-३-१६। (वि०) 3. ಧರ್ಮದಿಂದ ಉಂಟಾದ.

**धर्मजन्मन् ಧರ್ಮಜನ್ಮನ್** (पुं०) 1. ಯುಧಿಷ್ಠಿರ, ಧರ್ಮರಾಜ. धर्माज्जन्म यस्य। "इत्थमत्र विततक्रमे क्रतौ वीक्ष्य धर्ममथ धर्मजन्मना" माघ० १४-५३।

**धर्मजन्य ಧರ್ಮಜನ್ಯ** (वि०) ಧರ್ಮದಿಂದ ಉಂಟಾದ. धर्मेण जन्यम्। ಸುಖ ಮೊದಲಾದುದು. "सुखं तु जगतामेव काम्यं धर्मेण जन्यते"।

**धर्मजिज्ञासा ಧರ್ಮಜಿಜ್ಞಾಸಾ** (स्त्री०) ವೇದೋಕ್ತಕರ್ಮಾನುಷ್ಠಾನಕ್ಕಾಗಿ ಧರ್ಮವನ್ನು ತಿಳಿದುಕೊಳ್ಳುವ ಅಪೇಕ್ಷೆ, ವೇದೋಕ್ತ ವಿಷಯಗಳನ್ನು ತಿಳಿಯಲು ಮಾಡುವ ವಿಮರ್ಶೆ, ವೇದಾರ್ಥವಿಚಾರ. धर्मार्थं धर्मानुष्ठानाय जिज्ञासा। "अथातो धर्मजिज्ञासा"।

**धर्मजीवन ಧರ್ಮಜೀವನ** (पुं०) ಧರ್ಮಕಾರ್ಯಗಳಿಂದ ಜೀವಿಸುವ ಬ್ರಾಹ್ಮಣ, ಯಾಜನ (ಯಜ್ಞಮಾಡಿಸುವುದು) ಅಧ್ಯಾಪನ (ವಿದ್ಯೋಪದೇಶ) ಇವುಗಳಿಂದ ಜೀವನ ನಡೆಯಿಸುವ ಬ್ರಾಹ್ಮಣ. धर्मेण धर्मोत्पादनेन जीवति — जीव (प्राणधारणे) "ल्युः" (३-१-१३४)। "यश्चापि धर्मसमयात् प्रच्युतो धर्मजीवनः। दण्डेनैव तमप्योषेत् स्वकाद्धर्माद्धि विच्युतम्" मनु० ९-२७३।

**धर्मज्ञ ಧರ್ಮಜ್ಞ** (वि०) ಧರ್ಮವನ್ನು ತಿಳಿದವನು, ಧರ್ಮದ ಸ್ವರೂಪವನ್ನು ಅರಿತವನು. धर्मं जानाति—ज्ञा (अवबोधने) "कः" (३-२-३)। "अमात्यमुख्यं धर्मज्ञं

प्राज्ञं दान्तं कुलोद्भवम्। स्थापयेदासने तस्मिन् खिन्नः कार्येक्षणे नृणाम्" मनु० ७-१४१।

**धर्मदान ಧರ್ಮದಾನ** (न०) ಯಾವ ಪ್ರಯೋಜನವನ್ನೂ ಅಪೇಕ್ಷಿಸದೆ ಸತ್ಪಾತ್ರದಲ್ಲಿ ಮಾಡುವ ದಾನ. "पात्रेभ्यो दीयते नित्यमनपेक्ष्य प्रयोजनम्। केवलं धर्मबुद्ध्या यत् धर्मदानं प्रचक्षते" देवलः।

**धर्मदार ಧರ್ಮದಾರ** (पुं० ब० व०) ಧರ್ಮಪತ್ನಿ, ಪುಣ್ಯ ಕಾರ್ಯಗಳನ್ನು ಮಾಡಲು ಸಹಾಯಳಾದ ಪತ್ನಿ. धर्मार्थम् अग्न्याधानाद्यर्थं दाराः। "स्त्रीणां भर्ता धर्मदाराश्च पुंसामित्यन्योन्यं वत्सयोर्ज्ञातमस्तु" मालती० ६-१८।

**धर्मदेश ಧರ್ಮದೇಶ** (पुं०) ಧರ್ಮಕಾರ್ಯಗಳಿಗೆ ಅನು ಕೂಲವಾದ ದೇಶ. धर्मसाधनं देशः। ಜಂತುಗಳು ಭಯ ವಿಲ್ಲದೆ ಸ್ವೇಚ್ಛೆಯಿಂದ ಸಂಚರಿಸುವ ದೇಶವು ಧರ್ಮದೇಶ. ಕ್ರೂರಮೃಗಗಳು ಘಾತುಕರು ಕಳ್ಳಕಾಕರು ಇವರ ಸಂಚಾರ ವಿಲ್ಲದೆ ಪ್ರಶಾಂತವಾದ ಪ್ರದೇಶ. ಇದು ಧರ್ಮಾಚರಣೆಗೆ ಹಿತವಾದ ಪ್ರದೇಶವು. "स्वभावाद्यत्र चरति कृष्णसारः सदा मृगः। धर्मदेशः स विज्ञेयो द्विजानां धर्मसाधनम्"।

**धर्मद्रवी ಧರ್ಮದ್ರವೀ** (स्त्री०) ಗಂಗಾನದಿ. धर्मजनको द्रवोऽस्याः। "विष्णुपादाग्रसम्भूते गङ्गे त्रिपथगामिनि। धर्मद्रवीति विख्याते पापं मे हर जाह्नवि"।

**धर्मद्रोहिन् ಧರ್ಮದ್ರೋಹಿನ್** (वि०) ಧರ್ಮಕಾರ್ಯ ಗಳಿಗೆ ತೊಂದರೆ ಕೊಡುವವನು, ರಾಕ್ಷಸವೃತ್ತಿಯುಳ್ಳ ವನು. धर्माय द्रुह्यति—द्रुह (जिघांसायाम्) "णिनिः" (३-२-७८)।

**धर्मध्वजिन् ಧರ್ಮಧ್ವಜಿನ್** (पुं०) ಧಾರ್ಮಿಕವೇಷಧರಿಸಿ ಜೀವಿಸುವವನು, ವೇಷಧಾರಿ, ಲೋಕದ ವಂಚನೆಗಾಗಿ ಧರ್ಮವನ್ನು ಆಚರಿಸುವವನು. धर्मो ध्वजः चिह्नमिवास्यास्ति "इनिः" (५-२-११५)। "धर्मध्वजी सदा लुब्धः छाद्मिको लोकदम्भकः" मनु० ४-१९५।

**धर्मतनय ಧರ್ಮತನಯ, -नन्दन -ನಂದನ, -पुत्र -ಪುತ್ರ, -सुत -ಸುತ, -सूनु -ಸೂನು** (पुं०) ಧರ್ಮರಾಜ, ಯುಧಿಷ್ಠಿರ. धर्मस्य तनयः नन्दनः पुत्रः सुतः सूनुर्वा। "निजगृहमथ गत्वा सादरं पाण्डुपुत्रो धृतगुरुजयलक्ष्मीर्धर्मसूनुं ननाम" किरा० १८-४८।

**धर्मपत्तन ಧರ್ಮಪತ್ತನ** (न०) 1. ಪೂರ್ವದಲ್ಲಿ ಉತ್ತರ ಕೋಸಲದ ಒಂದು ರಾಜಧಾನಿ, ಶ್ರಾವಸ್ತಿನಗರ. "श्रावस्ती धर्मपत्तनम्" त्रिकाण्ड०। ಈಗ ಇದು ಸಾಹೆತ್-ಮಾಹೆತ್ ಎಂಬ ಹೆಸರಿನ ಒಂದು ಗ್ರಾಮ. 2. ಮೆಣಸು. ಇದು ಉತ್ತರ ಕೋಸಲದೇಶದಲ್ಲಿ ಹುಟ್ಟಿದುದರಿಂದ ಈ ಹೆಸರು. "मरिचं कोलकं कृष्णमूषणं धर्मपत्तनम्" अम०।

**धर्मपत्नी ಧರ್ಮಪತ್ನೀ** (स्त्री०) 1. ಧರ್ಮಕಾರ್ಯಾಚರಣೆಗೆ ಸಹಾಯಳಾದ ಪತ್ನಿ, ಶಾಸ್ತ್ರೋಕ್ತವಾಗಿ ಮದುವೆಯಾದ ಹೆಂಡತಿ. धर्मार्थं धर्मकार्यानुष्ठानाय पत्नी। "मार्गं मनुष्येश्वरधर्मपत्नी श्रुतेरिवार्थं स्मृतिरन्वगच्छत्" रघु० २-२। 2. ಧರ್ಮಪುರುಷನ ಪತ್ನಿಯರು, ದಕ್ಷಕನ್ಯೆಯರು. ಇವರು ಹದಿಮೂರು ಮಂದಿ. (1) श्रद्धा, (2) मैत्री, (3) दया, (4) शान्तिः, (5) तुष्टिः (6) पुष्टिः, (7) क्रिया, (8) उन्नतिः, (9) बुद्धिः, (10) मेधा, (11) तितिक्षा, (12) ह्रीः ಮತ್ತು (13) मूर्तिः "त्रयोदशादाद्धर्माय तथैकामग्नये विभुः। पितृभ्य एकां युक्तेभ्यो भवायैकां भवच्छिदे" भाग० ४-१। ["धर्म" ಪದದಲ್ಲಿ ನೋಡಿ.]

**धर्मपाठक ಧರ್ಮಪಾಠಕ** (पुं०) ಧರ್ಮಶಾಸ್ತ್ರವನ್ನು ಓದಿ ತಿಳಿದಿರುವವನು. धर्मं धर्मशास्त्रं पठति — पठ (व्यक्तायां वाचि) "ण्वुल्" (३-१-१३३)। "त्रैविद्यो हेतुकस्तर्की नैरुक्तो धर्मपाठकः" मनु० १२-१११।

**धर्मपाल ಧರ್ಮಪಾಲ** (पुं०) 1. ದಂಡ, ಶಿಕ್ಷೆ. धर्मं पालयति—पाल (रक्षणे) + णिच् "अण्" (३-२-१)। ಶಿಕ್ಷೆಯ ಭಯದಿಂದ ಜನರು ಧರ್ಮವನ್ನಾಚರಿಸುವುದರಿಂದ ಈ ಹೆಸರು. 2. ಖಡ್ಗ, ಕತ್ತಿ. "ऋषिः खड्गः प्रचारोऽसिर्धर्मपालः प्रजागरः" वैज०। 3. ದಶರಥ ಚಕ್ರವರ್ತಿಯ ಒಬ್ಬ ಮಂತ್ರಿ. (वि०) 4. ಧರ್ಮವನ್ನು ಕಾಪಾಡುವವನು. "दण्ड एव च धर्मात्मा लोके चरति मूर्तिमान्। भिन्दन् छिन्दन् रुजन् कृन्तन् दारयन् पाटयंस्तथा। घातयन्नभिधावंश्च दण्ड एव चरत्युत" भा० शान्ति० १२१-१८, १९।

**धर्मपुत्र ಧರ್ಮಪುತ್ರ** (पुं०) 1. ಯುಧಿಷ್ಠಿರ, ಧರ್ಮರಾಜ. 2. ಧರ್ಮಪತ್ನಿಯಲ್ಲಿ ಹುಟ್ಟಿದ ಮಗ, ಔರಸಪುತ್ರ. 3. ಧರ್ಮಕಾರ್ಯಾಚರಣೆಗಾಗಿ ಪುತ್ರನಾಗಿ ಮಾಡಲ್ಪಟ್ಟ ವನು. 4. ಧರ್ಮದೇವತೆಯ ಪುತ್ರ.

**धर्मप्रतिरूपक ಧರ್ಮಪ್ರತಿರೂಪಕ** (पुं०) ಧರ್ಮಾಭಾಸ, ಧರ್ಮದಂತೆ ತೋರುವ ದಾನ. धर्मस्य प्रतिरूपमिव कायति — कै (शब्दे) "कः" (३-२-३)। ದೊಡ್ಡ ಐಶ್ವರ್ಯವಂತನಾಗಿದ್ದು ತಾಯಿತಂದೆಗಳನ್ನೂ ಮತ್ತು ದಾರಿದ್ರ್ಯದಿಂದ ಕಷ್ಟಪಡುತ್ತಿರುವ ಬಂಧುಗಳನ್ನೂ ಬಿಟ್ಟು ಇತರರಿಗೆ ಮಾಡುವ ದಾನವು ಧರ್ಮದಂತೆ ತೋರುವುದೇ

ಹೊರತು ಸರಿಯಾದ ಧರ್ಮವಲ್ಲ. ಈ ದಾನವು ತತ್ಕಾಲದಲ್ಲಿ ಕೀರ್ತಿಯನ್ನುಂಟುಮಾಡುವುದಾದರೂ ಕೊನೆಯಲ್ಲಿ ನರಕಪ್ರದವಾದುದರಿಂದ ಇದು ಧರ್ಮಪ್ರತಿರೂಪಕವಾಗುವುದು. "शक्तः परजने दाता स्वजने दुःखजीविनि। मध्वापातो विषास्वादः स धर्मप्रतिरूपकः" मनु० ११-९।

**धर्मप्रवक्तृ ಧರ್ಮಪ್ರವಕ್ತೃ** (पुं०) ಧರ್ಮೋಪದೇಶ ಮಾಡುವವನು. ಧರ್ಮಾಧಿಕಾರಿ, ಧರ್ಮದ ವಿಷಯವನ್ನು ತಿಳಿಸುವವನು. धर्मं प्रवक्ति—प्र+वच (परिभाषणे) "तृच्" (३-१-१३३)। "जातिमात्रोपजीवी वा कामं स्याद्ब्राह्मणब्रुवः। धर्मप्रवक्ता नृपतेः" मनु० ८-२०।

**धर्मप्रस्थ ಧರ್ಮಪ್ರಸ್ಥ** (पुं०) ಒಂದು ಪುಣ್ಯಕ್ಷೇತ್ರ, ಒಂದು ಯಾತ್ರಾಸ್ಥಳ.

**धर्मभगिनी ಧರ್ಮಭಗಿನೀ** (स्त्री०) 1. ಆಚಾರ್ಯಪುತ್ರಿ, ಗುರುವಿನ ಮಗಳು. 2. ಧರ್ಮಕಾರ್ಯದಿಂದ ತಂಗಿಯಾಗಿ ಮಾಡಲ್ಪಟ್ಟವಳು. धर्मतः कृता भगिनी।

**धर्मभिक्षुक ಧರ್ಮಭಿಕ್ಷುಕ** (पुं०) ಧರ್ಮಕಾರ್ಯಕ್ಕಾಗಿ ಭಿಕ್ಷೆಬೇಡುವವನು. धर्मार्थं भिक्षुकः। ಧರ್ಮಪ್ರಜೆಗಾಗಿ ವಿವಾಹಮಾಡಿಕೊಳ್ಳುವ ಅಪೇಕ್ಷೆಯುಳ್ಳವನು, ಯಾಗ ಮಾಡುವ ಅಪೇಕ್ಷೆಯುಳ್ಳವನು, ಪಥಿಕ, ಸಕಲಧನವನ್ನೂ ದಕ್ಷಿಣೆಯಾಗಿ ಕೊಡುವ ವಿಶ್ವಜಿದ್ಯಾಗವನ್ನು ಮಾಡುವವನು, ಆಚಾರ್ಯನ ಊಟ ಉಪಚಾರಾದ್ಯರ್ಥವಾಗಿ ಭಿಕ್ಷೆಬೇಡುವವನು, ತಾಯಿತಂದೆಗಳ ಉಪಚಾರಗಳಿಗಾಗಿ ಭಿಕ್ಷೆಬೇಡುವವನು, ವೇದಾಧ್ಯಯನಮಾಡುವವನು, ರೋಗಗ್ರಸ್ತನಾದವನು ಇವರೆಲ್ಲರೂ ಧರ್ಮಭಿಕ್ಷುಕರು. "सान्तानिकं यक्ष्यमाणमध्वगं सर्ववेदसम्। गुर्वर्थं पितृमात्रर्थं स्वाध्यायार्थ्युपतापिनः। नवैतान् स्नातकान् विद्याद्ब्राह्मणान् धर्मभिक्षुकान्" मनु० ११-१, २।

**धर्मभृत् ಧರ್ಮಭೃತ್** (वि०) 1. ಧರ್ಮಕಾರ್ಯಗಳನ್ನು ಆಚರಿಸುವವನು, ಪುಣ್ಯಕಾರ್ಯಗಳನ್ನು ಮಾಡುವವನು. धर्मं बिभर्ति—डु भृञ् (धारणपोषणयोः) "क्विप्" (३-२-७६)। 2. ಧರ್ಮವನ್ನು ರಕ್ಷಿಸುವವನು. "एष धर्मभृतां श्रेष्ठो भविष्यति नरोत्तमः" भा० वन०।

**धर्मभृत ಧರ್ಮಭೃತ** (पुं०) 1. ಹದಿಮೂರನೆಯ ಮನುವಿನ ಒಬ್ಬ ಮಗ. (वि०) 2. ಧರ್ಮವನ್ನು ರಕ್ಷಿಸಿದವನು. धर्मो भृतो येन।

**धर्मभ्रातृ ಧರ್ಮಭ್ರಾತೃ** (पुं०) 1. ಗುರುಪುತ್ರ, ಆಚಾರ್ಯರ ಮಗ. धर्मतः कृतो भ्राता। 2. ಸಹಾಧ್ಯಾಯಿ, ಒಬ್ಬ ಗುರುವಿನಲ್ಲಿ ಸಂಗಡ ವಿದ್ಯಾಭ್ಯಾಸಮಾಡಿದವನು. "धर्मभ्राता सहाध्यायी" वैज०।

**धर्ममार्ग ಧರ್ಮಮಾರ್ಗ** (पुं०) ನ್ಯಾಯವಾದ ಮಾರ್ಗ.

**धर्ममूल ಧರ್ಮಮೂಲ** (न०) ವೇದ, ಧರ್ಮಕಾರ್ಯವನ್ನು ಆಚರಿಸುವುದರಲ್ಲಿ ಪ್ರಮಾಣವಚನ. धर्मे मूलम्। "वेदोऽखिलो धर्ममूलं स्मृतिशीले च तद्विदाम्। आचारश्चैव साधूनामात्मनस्तुष्टिरेव च" मनु० २-६। "श्रुतिः स्मृतिः सदाचारः स्वस्य च प्रियमात्मनः। सम्यक्संकल्पजः कामो धर्ममूलमिदं स्मृतम्" याज्ञ० १-७।

**धर्ममेघ ಧರ್ಮಮೇಘ** (पुं०) ಅಸಂಪ್ರಜ್ಞಾತ ಸಮಾಧಿ. धर्मान् मेहति—मिह (सेचने) कुत्वम् (७-३-५३)। "प्रसंख्यानेऽप्यकुसीदस्य सर्वथा विवेकख्यातेर्धर्ममेघः" पा० यो० सू०।

**धर्मयुग ಧರ್ಮಯುಗ** (न०) ಸತ್ಯಯುಗ, ಕೃತಯುಗ. धर्मप्रधानं युगम्।

**धर्मयुज् ಧರ್ಮಯುಜ್** (वि०) 1. ಧರ್ಮದಿಂದ ಕೂಡಿದ, ನ್ಯಾಯದಿಂದ ನಡೆಯುವ. धर्मेण युज्यते—युजिर् (योगे) "क्विप्" (३-२-६१)। (न०) 2. ಧರ್ಮದಿಂದ ಸಂಪಾದಿಸಿದ ದ್ರವ್ಯ, ನ್ಯಾಯದಿಂದ ಸಂಪಾದಿಸಿದ ಧನ. ಇದು ದಾನಮಾಡಲು ಮುಖ್ಯವಾದ ಆರು ಅಂಗಗಳಲ್ಲೊಂದು.

**ಆರು ಅಂಗಗಳು:** (1) ದಾನಮಾಡುವವನು. (2) ದಾನತೆಗೆದುಕೊಳ್ಳಲು ಯೋಗ್ಯ (ಸತ್ಪಾತ್ರ)ನಾದವನು. (3) ದಾನಮಾಡುವುದರಲ್ಲಿ ಶ್ರದ್ಧೆ. (4) ನ್ಯಾಯದಿಂದ ಸಂಪಾದಿಸಿದ ದ್ರವ್ಯ. (5) ದಾನಮಾಡಲು ಸರಿಯಾದ ದೇಶ ಮತ್ತು (6) ದಾನಮಾಡಲು ಸರಿಯಾದ ಕಾಲ. "दाता प्रतिग्रहीता च श्रद्धा देयं च धर्मयुक्। देशकालौ च दानानामङ्गान्येतानि षड्विदुः"। "देशे काले तथा पात्रे धनं न्यायार्जितं तथा। यद्दत्तं ब्राह्मणश्रेष्ठास्त्वनन्तं तत् प्रकीर्तितम्" वि० ध०।

**धर्मयूप ಧರ್ಮಯೂಪ** (पुं०) ವಿಷ್ಣು. धर्मं धर्मतत्त्वं शिरोऽवयवतया यौति मिश्रयति "पः" (उ० ३-२७)। "उत्तमाङ्गतया धर्मतत्त्वं यौतीति सर्वदा। धर्मयूपः समाख्यातोऽष्टार्णो धर्मदायकः" इति निरुक्तिः। "अनिर्विण्णः स्थविष्ठो भूर्धर्मयूपो महामखः" वि० स०। धर्मे यूप इव वा। ಯೂಪಸ್ತಂಭದಲ್ಲಿ ಯಾಗಪಶುವನ್ನು ಕಟ್ಟುವಂತೆ ಭಗವದಾರಾಧನರೂಪವಾದ ಧರ್ಮಗಳನ್ನು ಪರಮಾತ್ಮನಲ್ಲಿ ಸೇರಿಸುವುದರಿಂದ ಧರ್ಮಗಳಿಗೆ ಅವನು ಯೂಪದಂತಾದನು.

"अरुन्धती भवेज्जिह्वा ध्रुवो नासाग्रमुच्यते। विष्णोः पदानि भ्रूमध्ये नेत्रयोर्मातृमण्डलम्" काशीखं०। 12. ಎಲ್ಲಾ ನಕ್ಷತ್ರಗಳಿಗೂ ಆಧಾರವಾಗಿರುವ ದಕ್ಷಿಣೋತ್ತರ ಧ್ರುವ ನಕ್ಷತ್ರಗಳು. "मेरोरुभयतो मध्ये ध्रुवतारे नभःस्थिते। निरक्षदेशसंस्थानामुभये क्षितिजाश्रये" सू० सि०। 13. ಅಶ್ವದ ದೇಹದ ಮೇಲಿರುವ ರೋಮದ ಸುಳಿ. ಈ ಸುಳಿಗಳು ವಕ್ಷಸ್ಥಳಗಳಲ್ಲಿ ಎರಡು. ತಲೆಯಲ್ಲಿ ಎರಡು. ರಂಧ್ರೋಪರಂಧ್ರಗಳಲ್ಲಿ ಎರಡೆರಡು. ಹಣೆಯಲ್ಲಿ ಒಂದು. ನೆತ್ತಿಯ ಮೇಲೆ ಒಂದು ಈ ರೀತಿ ಹತ್ತು ವಿಧ. (न०) 14. ಗಗನ, ಅಂತರಿಕ್ಷ. 15. ಉತ್ತರಫಲ್ಗುನೀ ಉತ್ತರಾಷಾಢ ಉತ್ತರಾಭಾದ್ರಾ ಮತ್ತು ರೋಹಿಣೀ ಈ ನಕ್ಷತ್ರಗಳು. ಈ ಧ್ರುವಯೋಗ ಜಾತಕ ಫಲ:—"नरीनर्ति वाणी सदा वक्त्रमध्ये चरीकर्ति काव्यं बरीभर्ति बन्धून्। ध्रुवाख्ये प्रसूतिर्ध्रुवा तस्य कीर्तिर्दिगन्ते नितान्तं भवेच्चारुमूर्तिः"। 16. ವಿತರ್ಕ, ಉತ್ಪ್ರೇಕ್ಷೆ. "ध्रुवं स नीलोत्पलपत्रधारया समिल्लतां छेत्तुमृषिर्व्यवस्यति" शाकु० १-१६। (वि०) 17. ಸ್ಥಿರವಾದ, ಶಾಶ್ವತವಾದ, ಅಚಲವಾದ. "ध्रुवेण भर्त्रा ध्रुवदर्शनाय प्रयुज्यमाना प्रियदर्शनेन" कुमा० ७-८५। "ध्रुवमपायेऽपादानम्" पा०सू० १-४-२४। अपायो विश्लेषः। ವಿಶ್ಲೇಷವೆಂದರೆ ಒಟ್ಟಿಗೆ ಸೇರಿಕೊಂಡಿರುವ ಎರಡು ವಸ್ತುಗಳಲ್ಲಿ ಒಂದು ಬೇರೆಯಾಗುವಿಕೆ, ಕದಲುವಿಕೆ. ಅವುಗಳಲ್ಲಿ ಚಲನವಾಗದಿರುವುದು ಧ್ರುವವೆನಿಸುವುದು. "ग्रामादायाति" ಎಂಬಲ್ಲಿ ಧ್ರುವವಾದ "ग्राम" ಪದಕ್ಕೆ ಅಪಾದಾನಸಂಜ್ಞೆ ಬಂದು ಪಂಚಮೀ ಬಂದಿರುವುದು. "यो ध्रुवाणि परित्यज्य अध्रुवाणि निषेवते। ध्रुवाणि तस्य नश्यन्ति अध्रुवं नष्टमेव च" हितो०। 18. ನಿಶ್ಚಿತವಾದ, ಸಂಶಯವಿಲ್ಲದೆ ಕರಗತವಾದ. 19. ನಿತ್ಯವಾದ, ನಿತ್ಯಸಿದ್ಧವಾದ. "जातस्य हि ध्रुवो मृत्युः ध्रुवं जन्म मृतस्य च" गीता २-२७। (स्त्री०) **ध्रुवा ಧ್ರುವಾ.** 20. ಒಂದು ಯಜ್ಞಪಾತ್ರೆ. 21. ಕುರಟಗೆ ಗಿಡ. 22. ಶಾಲಿಪರ್ಣೀಗಿಡ, ಮೂರಲೆ ಹೊನ್ನೆಗಿಡ. (अव्य०) **-वम् -ವಮ್.** 23. ಸ್ಥಿರವಾಗಿ, ಶಾಶ್ವತವಾ . 24. ನಿಶ್ಚಯವಾಗಿ.

**ध्रुवक ಧ್ರುವಕ** (पुं०) 1. ಸಂಗೀತದ ಒಂದು ಅಂಗ. "उत्तमः षट्पदः प्रोक्तो मध्यमः पञ्चमः स्मृतः। कनिष्ठश्च चतुर्भिः स्यात् ध्रुवकोऽयं मयोदितः" सं०दा०। 2. "ध्रुव" ಪದದ ಅರ್ಥ. ध्रुव स्वार्थे "कन्" (५-४-५)।

**ध्रुवतारा ಧ್ರುವತಾರಾ** (स्त्री०) ಧ್ರುವನಕ್ಷತ್ರ.

**ध्रुवमण्डल ಧ್ರುವಮಂಡಲ** (न०) ಧ್ರುವಚಕ್ರ.

**ध्रुवलोक ಧ್ರುವಲೋಕ** (पुं०) ಸತ್ಯಲೋಕದಲ್ಲಿರುವ ಧ್ರುವ ನಕ್ಷತ್ರದ ನೆಲೆ, ಧ್ರುವಮಂಡಲ. ध्रुवाधिष्ठितो लोकः।

**ध्रुवा ಧ್ರುವಾ** (स्त्री०) 1. ಯಜ್ಞದ ಒಂದು ಪಾತ್ರೆ. 2. ಮೂರೆಲೆ ಹೊನ್ನೆಮರ. 3. ಕುರಟಗೆ ಗಿಡ.

**ध्रुवावर्त ಧ್ರುವಾವರ್ತ** (पुं०) ಕುದುರೆಯ ಮೈಯಲ್ಲಿರುವ ರೋಮಗಳ ಸುಳಿ.

**ध्रौव्य ಧ್ರೌವ್ಯ** (न०) 1. ಸ್ಥಿರವಾಗಿರುವಿಕೆ, ಚಲಿಸದಿರುವಿಕೆ. ध्रुवस्य भावः "ष्यञ्" (५-१-१२४)। (वि०) 2. ಸ್ಥಿರವಾದ, ಅಚಲವಾದ. ध्रुव स्वार्थे "ष्यञ्" (वा० ५-१-१२४)।

**ध्वंस ಧ್ವಂಸ** (पुं०) 1. ನಾಶ, ಅಳಿವು. ध्वंसु (अवस्रंसने) भावे "घञ्" (३-३-१८)। 2. ಕೆಳಕ್ಕೆ ಬೀಳುವುದು.

**ध्वंसक ಧ್ವಂಸಕ** (वि०) ನಾಶಪಡಿಸುವ. ध्वंसु (अवस्रंसने) कर्त० "ण्वुल्" (३-१-१३३)।

**ध्वंसत् ಧ್ವಂಸತ್** (वि०) ನಾಶವಾಗುತ್ತಿರುವ, ಅಳಿದು ಹೋಗುತ್ತಿರುವ. ध्वंसु (अवस्रंसने) "शतृ" (३-२-१२४)। स्त्रियाम् "ङीप्" (४-१-६)। **-न्ती -ನ್ತೀ.**

**ध्वंसन ಧ್ವಂಸನ** (न०) 1. ನಾಶಪಡಿಸುವುದು. ध्वंसु (अवस्रंसने) + णिच् भावे "ल्युट्" (३-३-११५)। 2. ಕೆಳಕ್ಕೆ ಬೀಳುವುದು. ध्वंसु भावे "ल्युट्" (३-३-११५)। (वि०) 3. ನಾಶಪಡಿಸುವ. ध्वंसु + णिच् "ल्युः" (३-१-१३४)। "महेन्द्रमिव शत्रूणां ध्वंसनं शरवृष्टिभिः" भा० उद्योग० १५७-३।

**ध्वंसनीय ಧ್ವಂಸನೀಯ** (वि०) 1. ನಾಶವಾಗಬೇಕಾದ. ध्वंसु (अवस्रंसने) "अनीयर्" (३-१-९६)। 2. ನಾಶಪಡಿಸಲ್ಪಡುವ. 3. ನಾಶಪಡಿಸಲು ಯೋಗ್ಯವಾದ. 4. ನಾಶಪಡಿಸಲು ಶಕ್ಯವಾದ. ध्वंसु+णिच् "अनीयर्" (३-१-९६)। "तव्यः" (३-१-९६)। **-यितव्यः -ಯಿತವ್ಯಃ.**

**ध्वंसयत् ಧ್ವಂಸಯತ್** (वि०) ನಾಶಪಡಿಸುತ್ತಿರುವ. ध्वंसु (अवस्रंसने) + णिच् "शतृ" (३-२-१२४)। स्त्रियाम् "ङीप्" (४-१-६)। **-यन्ती -ಯಂತೀ.**

**ध्वंसित ಧ್ವಂಸಿತ** (वि०) 1. ನಾಶಪಡಿಸಲ್ಪಟ್ಟ. ध्वंसु (अवस्रंसने) + णिच् "क्तः" (३-२-१०२)। (न०) 2. ನಾಶ. ध्वंसु भावे "क्तः" (३-३-११४)। 3. ಖಂಡಿಸಲ್ಪಟ್ಟ, ತಳ್ಳಿಹಾಕಲ್ಪಟ್ಟ. "प्रस्थिताभिरधिनाथनिवासं ध्वंसितप्रियसखीवचनाभिः" किरा० ९-३६।

**ध्वंसितवत् ಧ್ವಂಸಿತವತ್** (वि०) ನಾಶಪಡಿಸಿದವನು. ध्वंसु (अवस्रंसने) "क्तवतु:" (३-२-१०२)। स्त्रियाम् "ङीप्" (४-१-६)। **-वती -ವತೀ.**

**ध्वंसिन् ಧ್ವಂಸಿನ್** (वि०) 1. ನಾಶಹೊಂದುವ, ಅಳಿದು ಹೋಗುವ. ध्वंसु (अवस्रंसने) "णिनि:" (३-१-१३४)। "स्नेहानाहु: किमपि विरहे ध्वंसिनस्ते त्वभोगात्" मेघ० २-४९। 2. ನಾಶಪಡಿಸುವ. ध्वंसु+णिच् "णिनि:" (३-१-१३४)।

**ध्वज ಧ್ವಜ** (पुंन०) 1. ಪತಾಕೆ, ಬಾವುಟ. ध्वजति—ध्वज (गतौ) "अच्" (३-१-१३४)। "ध्वजेषु नागेषु रथेषु वाजिषु क्षणेन तस्थौ सुरसैन्यजं रज:" कुमा० १४-३४। 2. ಚಿಹ್ನೆ, ಗುರುತು. 3. ಖಟ್ವಾಂಗ, ಪರಮೇಶ್ವರನ ಒಂದು ಆಯುಧ. 4. ಶಿಶ್ನ, ಪುರುಷರ ಜನನೇಂದ್ರಿಯ. (पुं०) 5. ಮದ್ಯವನ್ನು ತಯಾರಿಸಿ ಮಾರುವವನು. "ध्वज: स्यात् शौण्डिके पुमान्। न स्त्रियां तु पताकायां खट्वाङ्गे मेढ्रचिह्नयो:" मेदि०। 6. ಪೂರ್ವದಿಕ್ಕಿನ ಮನೆ. "ध्वज: पूर्वदिशो गृहे। शिश्ने चिह्ने पताकायां खट्वाङ्गे शौण्डिकेऽपि च" हेम०। 7. ಬಾವುಟದ ಕೋಲು. 8. ಮದ್ಯವನ್ನು ತಯಾರಿಸುವ ಒಂದು ವಸ್ತು.

**ध्वजगृह ಧ್ವಜಗೃಹ** (न०) ಧ್ವಜಗಳನ್ನು ಇಡುವ ಮನೆ.

**ध्वजग्रीव ಧ್ವಜಗ್ರೀವ** (पुं०) ಒಬ್ಬ ರಾಕ್ಷಸ. ध्वज इव ग्रीवा यस्य।

**ध्वजद्रुम ಧ್ವಜದ್ರುಮ** (पुं०) ತಾಳವೃಕ್ಷ, ಪನಮರ, ತಾಟಿ ಮರ. ध्वज इव दीर्घकाण्डो द्रुम:।

**ध्वजप्रहरण ಧ್ವಜಪ್ರಹರಣ** (पुं०) ವಾಯು, ಗಾಳಿ. ध्वजं प्रहरति—प्र+हृञ् (हरणे) "ल्यु:" (३-१-१३४)।

**ध्वजभङ्ग ಧ್ವಜಭಂಗ** (पुं०) ನಪುಂಸಕತ್ವಕ್ಕೆ ಕಾರಣವಾದ ಒಂದು ರೋಗ. **ಧ್ವಜಭಂಗ ರೋಗಕ್ಕೆ ಕಾರಣಗಳು:** "अत्यम्ललवणक्षारविरुद्धाजीर्णभोजनात्। अत्यम्बुपानाद्विषमातिपिष्टान्नगुरुभोजनात्। कन्यानां चैव गमनादयोनिगमनादपि। दीर्घरोगां चिरोत्सृष्टां तथैव च रजस्वलाम्। दुर्गन्धां दुष्टयोनिं च तथैव च परिस्रुताम्। अधावनाद्वा मेढ्रस्य शस्त्रदन्तनखक्षतात्। रेतसश्च प्रतीघातात् ध्वजभङ्ग: प्रवर्तते" चरक० चिकित्सा० ३०।

**ध्वजवत् ಧ್ವಜವತ್** (पुं०) 1. ಮದ್ಯವನ್ನು ಮಾಡಿ ಮಾರುವವನು. ध्वज: शुण्डिकोपकरणं अस्त्यस्य "मतुप्" (५-२-९४)। "सूनाचक्रध्वजवतां वेशेनैव च जीवताम्" मनु० ४-८४। 2. ಒಬ್ಬ ಬ್ರಾಹ್ಮಣನನ್ನು ಕೊಂದು ಅವನ ಶಿರಃಕಪಾಲವನ್ನು ತನ್ನ ಧ್ವಜವನ್ನಾಗಿಟ್ಟುಕೊಂಡು ತಪಸ್ಸುಮಾಡುವ ಬ್ರಾಹ್ಮಣ. "शिर:कपाली ध्वजवान् भिक्षाशी कर्म वेदयन्" याज्ञ० ३-२४३। (वि०) 3. ಚಿಹ್ನೆಯಿಂದ ಕೂಡಿದ, ಗುರುತುಳ್ಳ. ध्वज: चिह्नं यस्य "मतुप्" (५-२-९४)। स्त्रियाम् "ङीप्" (४-१-६)। **-वती -ವತೀ.**

**ध्वजांशुक ಧ್ವಜಾಂಶುಕ** (न०) ಬಾವುಟದ ಬಟ್ಟೆ. ध्वजस्यांशुकम्। "ध्वजांशुकैर्ध्रुवमनुकूलमारुतप्रसारितै: प्रसभकृतोपहूतय:" माघ० १७-४९।

**ध्वजारोपण ಧ್ವಜಾರೋಪಣ** (न०) ಪತಾಕೆ (ಬಾವುಟ) ಯನ್ನು ಮೇಲಕ್ಕೆ ಏರಿಸುವುದು, ಬಾವುಟ ಹಾರಿಸುವುದು. ध्वजस्यारोपणम्।

**ध्वजाहृत ಧ್ವಜಾಹೃತ** (पुं०) ಯುದ್ಧದಲ್ಲಿ ಗೆದ್ದು ಕರೆತಂದ ದಾಸ, ಧ್ವಜದಿಂದ ಕೂಡಿದ ಯುದ್ಧದಲ್ಲಿ ಎದುರಾಳಿ ಯಜಮಾನನನ್ನು ಗೆದ್ದು ಕರೆತಂದ ಅವನ ಸೇವಕ. ध्वजेन ध्वजोपलक्षितसंग्रामेणाहृत:। "ध्वजाहृतो भक्तदास: गृहज: क्रीतदत्त्रिमौ" मनु० ८-४१५।

**ध्वजिन् ಧ್ವಜಿನ್** (पुं०) 1. ವಿಪ್ರ. 2. ರಥ. 3. ಪರ್ವತ, ಬೆಟ್ಟ. 4. ಸರ್ಪ, ಹಾವು. 5. ಅಶ್ವ, ಕುದುರೆ. 6. ಮಯೂರ, ನವಿಲು. "ध्वजी तु पृथिवीवरे। रथब्राह्मणयोश्चापि भुजङ्गमतुरङ्गयो:" मेदि०। 7. ಮದ್ಯವನ್ನು ತಯಾರಿಸಿ ಮಾರುವವನು. "प्रतिग्रहे सूनिचक्रिध्वजिवेश्यानराधिपा" याज्ञ० १-१४१। (वि०) 8. ಧ್ವಜದಿಂದ ಕೂಡಿದ. ध्वजोऽस्त्यस्य "इनि:" (५-२-११५)। 9. ಬಾವುಟ ಹಿಡಿದಿರುವ. स्त्रियाम् "ङीप्" (४-१-५)। **ध्वजिनी ಧ್ವಜಿನೀ.**

**ध्वजिनी ಧ್ವಜಿನೀ** (स्त्री०) ಸೈನ್ಯ, ದಂಡು, ಪಡೆ. ध्वजोऽस्या अस्ति "इनि:" (५-२-११५)। "ङीप्" (४-१-५)। "ययौ समीपं ध्वजिनीमुपेयुष: प्रसन्नरूपस्य विरूपचक्षुष:" किरा० १४-२६।

**ध्वजोत्थान ಧ್ವಜೋತ್ಥಾನ** (न०) ಇಂದ್ರನ ಸಂತೋಷಾರ್ಥವಾಗಿ ನಡೆಸುವ ಒಂದು ಉತ್ಸವ, ಹಬ್ಬ. ध्वजस्य इन्द्रध्वजस्य उत्थानं यत्र।

**ध्वन - शब्दे** (भ्वा० पर० अक० से०)। ध्वनति। दध्वान। ध्वनिता। ध्वनिष्यति। ध्वनतु। अध्वनत्। ಇತ್ಯಾದಿ. 1. ಶಬ್ದಮಾಡು, ಸದ್ದುಮಾಡು. 2. ಸೂಚನೆ ಕೊಡು, ಸುಳಿವು ಕೊಡು. 3. ವ್ಯಂಜನಾವೃತ್ತಿಯಿಂದ ತಿಳಿಸು, ವ್ಯಂಗ್ಯವಾಗಿ ತಿಳಿಸು.

**भावे :**—ध्वन्यते। दध्वने। ಇತ್ಯಾದಿ.

रूपाणि :—ध्वनितव्यम्। ध्वननीयम्। ध्वन्यम्। ध्वनितः। ध्वनितवान्, -वती। ध्वनन्, -न्ती। ध्वनितुम्। ध्वनित्वम्। ध्वननम्। ध್ವನಿತ್ವಾ।

**ध्वनत् ಧ್ವನತ್** (वि०) ಶಬ್ದಮಾಡುತ್ತಿರುವ, ಸದ್ದು ಮಾಡುತ್ತಿರುವ. ध्वन (शब्दे) "शतृ" (३-२-१२४)। "ध्वनतो नितरां रयेण गुर्व्यस्तडिदाकारचलद्गुणा-दसंख्याः" माघ० २०-२१। स्त्रियाम् "ङीप्" (४-१-६)। **-न्ती -ನ್ತೀ.**

**ध्वनन ಧ್ವನನ** (न०) 1. ಶಬ್ದಮಾಡುವುದು, ಸದ್ದುಮಾಡುವುದು. ध्वन (शब्दे) भावे "ल्युट्" (३-३-११५)। 2. ಸೂಚನೆ ಕೊಡುವುದು, ಸುಳಿವು ಕೊಡುವುದು. 3. ವ್ಯಂಜನಾವೃತ್ತಿ, ವಾಚ್ಯ ಮತ್ತು ಲಕ್ಷ್ಯ (ಅಭಿಧಾ ಮತ್ತು ಲಕ್ಷಣಾವೃತ್ತಿಗಳಿಂದ ತಿಳಿಸುವ) ಅರ್ಥಕ್ಕಿಂತಲೂ ಭಿನ್ನವಾದ ಅರ್ಥವನ್ನು ತಿಳಿಸುವ ವ್ಯಂಜನಾವ್ಯಾಪಾರ. ध्वन्यते व्यज्यतेऽर्थोऽनेन-ध्वन करः "ल्युट्" (३-३-११७)।

**ध्वननीय ಧ್ವನನೀಯ** (वि०) 1. ಶಬ್ದಮಾಡಬೇಕಾದ. 2. ವ್ಯಂಗ್ಯವಾಗಿ ಸೂಚಿಸಬೇಕಾದ. ध्वन (शब्दे) "अनीयर्" (३-१-९६)। "तव्यः"। **ध्वनितव्यम् ಧ್ವನಿತವ್ಯಮ್.**

**ध्वनयत् ಧ್ವನಯತ್** (वि०) ಶಬ್ದಮಾಡಿಸುತ್ತಿರುವ, ಸದ್ದು ಮಾಡಿಸುತ್ತಿರುವ. ध्वन (शब्दे) + णिच् "शतृ" (३-१-१२४)। "भिन्नजलधिजलनादगुरु ध्वनयन् दिशां विवरमन्धकान्तकः" किरा० १२-३२। "दध्वान ध्वनयन्नाशाः स्फुटन्निव धराधरः" किरा० १५-३४। स्त्रियाम् "ङीप्" (४-१-६)। **-यन्ती -ಯನ್ತೀ.**

**ध्वनि ಧ್ವನಿ** (पुं०) 1. ಶಬ್ದ, ಸದ್ದು, ಅಸ್ಪಷ್ಟವಾದ ಶಬ್ದ. ध्वन (शब्दे) "इः" (उ० ४-१३९)। "मुदमस्य माङ्गलिक-तूर्यकृतां ध्वनयः प्रतेनुरनुवप्रमपाम्" किरा० ६-४। 2. ಮೃದಂಗ ಮೊದಲಾದ ವಾದ್ಯಗಳ ಶಬ್ದ. "शब्दो ध्वनिश्च वर्णश्च मृदङ्गादिभवध्वनिः। कण्ठसंयोगजन्मानो वर्णास्ते कादयो मताः" भाषाप०। "उषसि स गजयूथकर्णतालैः पटुपटहध्वनिभिर्विनीतनिद्रः" रघु० ९-७१। ಶಬ್ದವು ಬುದ್ಧಿಹೇತುಕ ಮತ್ತು ಅಬುದ್ಧಿಹೇತುಕಗಳೆಂದು ಎರಡು ವಿಧ. ಮೇಘ ಮೊದಲಾದುವುಗಳ ಶಬ್ದವು ಅಬುದ್ಧಿಹೇತುಕವಾದುದು. ಬುದ್ಧಿಹೇತುಕವಾದ ಶಬ್ದವು ಸ್ವಾಭಾವಿಕ ಮತ್ತು ಕಾಲ್ಪನಿಕಗಳೆಂದು ಎರಡು ವಿಧ. ವರ್ಣಗಳ ಉಚ್ಚಾರಣೆಯಿಂದ ತೋರದಿರುವ ನಗುವುದು ಅಳುವುದು ಮುಂತಾದುವು ಸ್ವಾಭಾವಿಕ ಧ್ವನಿ. ಇದು ಸಕಲ ಪ್ರಾಣಿಗಳಿಗೂ ಸಮಾನವಾದುದು. ವಾದ್ಯರೂಪ ಸಂಗೀತರೂಪ ಮತ್ತು ವರ್ಣೋಚ್ಚಾರಣರೂಪ ಶಬ್ದಗಳೆಂದು ಕಾಲ್ಪನಿಕ ಶಬ್ದವು ಮೂರು ವಿಧ. ವಾದ್ಯರೂಪವಾದುದು ನಗಾರಿ ಮೊದಲಾದ ಶಬ್ದ. ರಾಗಾಭಿವ್ಯಂಜಕ ಶಬ್ದವು ಸಂಗೀತ ರೂಪವಾದುದು. ಕಂಠ ತಾಲು ದಂತಮೂಲ ಮುಂತಾದ ಸ್ಥಾನಗಳಲ್ಲಿ ಹುಟ್ಟುವ ವರ್ಣಗಳಿಂದ ಉಂಟಾದುದು ವರ್ಣೋಚ್ಚಾರಣ ರೂಪವಾದುದು. ವರ್ಣಗಳು ಅನಿತ್ಯವಾದುದರಿಂದ ವಾಚಕತ್ವವು ಅನುಪಪನ್ನವಾಗಿ ಈ ವರ್ಣೋಚ್ಚಾರಣೆಗನುಸಾರವಾಗಿ ತತ್ತದ್ವ್ಯಂಜಕ ವಾಯುಸಂಯೋಗದಿಂದ ವ್ಯಂಗ್ಯವಾದ ಮತ್ತು ನಿತ್ಯವಾದ ಧ್ವನಿಯನ್ನು ವೈಯಾಕರಣರು **"ಸ್ಫೋಟ"**ವೆಂದು ಹೇಳುತ್ತಾರೆ. "वर्णानां वाचकत्वानुपपत्तौ यद्बलादर्थप्रतिपत्तिः स स्फोटः। वर्णातिरिक्तो वर्णाभिव्यङ्ग्यः अर्थप्रत्यायकः नित्यः शब्दः स्फोटः इति तद्विदो वदन्ति" स० द० स०। ಈ ಸ್ಫೋಟವೇ ಸಕಲ ಜಗತ್ತಿಗೂ ಕಾರಣವಾದ ಬ್ರಹ್ಮವೆಂದು ಇವರ ಮತ. "जगन्निदानं स्फोटाख्यो निरवयवो नित्यः शब्दो ब्रह्मैव" "अनादिनिधनं ब्रह्म शब्दतत्त्वं तदक्षरम्। विवर्ततेऽर्थभावेन प्रक्रिया जगतो यतः" वाक्यप०। 3. ಶಬ್ದಾರ್ಥಗಳ ಸಮುದಾಯ. ध्वनति व्यञ्जनया रसादीन् प्रत्याययति। 4. ವ್ಯಂಜನೆ, ಅನುರಣನ, ವ್ಯಂಜನಾವೃತ್ತಿ, ವಾಚ್ಯಾರ್ಥ ಮತ್ತು ಲಕ್ಷ್ಯಾರ್ಥಗಳಿಗಿಂತಲೂ ಅತಿರಿಕ್ತವಾದ ಅರ್ಥವನ್ನು ಬೋಧಿಸುವ ಒಂದು ವೃತ್ತಿ (ವ್ಯಾಪಾರ). ध्वन्यतेऽनया। 5. ವ್ಯಂಜನೆಯಿಂದ ಉಂಟಾಗುವ ರಸಾದಿಗಳ ಪ್ರತೀತಿ. ध्वन भावे "इः"। 6. ರಸಾದಿಗಳು. ध्वन्यतेऽसौ। 7. ಉತ್ತಮ ಕಾವ್ಯ. ವಾಚ್ಯವಾದ (ಅಭಿಧಾವೃತ್ತಿ ಪ್ರತಿಪಾದ್ಯವಾದ) ಅರ್ಥಕ್ಕಿಂತಲೂ ಗಂಟೆ ಮೊದಲಾದುವುಗಳ ತಾಡನದಿಂದ ಉಂಟಾಗುವ ಶಬ್ದವನ್ನು ಅನುಸರಿಸಿ ದೀರ್ಘವಾಗಿ ಹೊರಡುವ ನಾದದಂತೆ ಉಂಟಾಗುವ ವ್ಯಂಗ್ಯಾರ್ಥವು (ವ್ಯಂಜನಾವೃತ್ತಿಯಿಂದ ಪ್ರತಿಪಾದ್ಯವಾದ ಅರ್ಥವು) ಅಧಿಕವಾಗಿ ಚಮತ್ಕಾರಜನಕವಾಗಿರುವಲ್ಲಿ ಅದು ಉತ್ತಮ ಕಾವ್ಯವಾಗುವುದು. ध्वन्यते व्यज्यतेऽस्मात् इति ध्वनिः। "काव्यं ध्वनिर्गुणीभूतव्यङ्ग्यं चेति द्विधा मतम्। वाच्यातिशायिनि व्यङ्ग्ये ध्वनिस्तत्काव्यमुत्तमम्" सा० द० ४-१। **ಧ್ವನಿಯ ಭೇದಗಳು :** ಈ ಧ್ವನಿಯು (1) ಲಕ್ಷಣಾಮೂಲ ಮತ್ತು (2) ಅಭಿಧಾಮೂಲ ಎಂದು ಎರಡು ವಿಧ. (1) ವಾಚ್ಯಾರ್ಥಕ್ಕೆ ವಿವಕ್ಷೆಯಿಲ್ಲದ (ವಾಚ್ಯಾರ್ಥವು ಅನ್ವಯಾಯೋಗ್ಯವಾಗಿ ಅನುಪಯುಕ್ತವಾಗುವ) ಕಾರಣ ಧ್ವನಿಯು ಲಕ್ಷಣೆಯಿಂದ ಉಂಟಾಗು

ವುದರಿಂದ ಅಲ್ಲಿ ಧ್ವನಿಯು **ಲಕ್ಷಣಾಮೂಲ**ವಾಗುವುದು. (2) ವಾಚ್ಯಾರ್ಥವು ಸ್ವಸ್ವರೂಪದಿಂದಲೇ ವ್ಯಂಗ್ಯಾರ್ಥಕ್ಕೆ ಕಾರಣವಾಗುವಲ್ಲಿ ಧ್ವನಿಯು **ಅಭಿಧಾಮೂಲ**ವೆನಿಸುವುದು. "भेदौ ध्वनेरपि द्वावुदीरितौ लक्षणाभिधामूलौ । अविवक्षितवाच्योऽन्यो विवक्षितान्यपरवाच्यश्च" ಸಾ೦ದ೦ ೪-೨। **ಲಕ್ಷಣಾಮೂಲಧ್ವನಿಯ ಭೇದಗಳು:** ಲಕ್ಷಣಾಮೂಲಧ್ವನಿಯು (1) ಅರ್ಥಾಂತರ ಸಂಕ್ರಮಿತ ವಾಚ್ಯ ಮತ್ತು (2) ಅತ್ಯಂತ ತಿರಸ್ಕೃತ ವಾಚ್ಯಗಳೆಂದು ಎರಡು ವಿಧ. "अर्थान्तरं संक्रमिते वाच्येऽत्यन्तं तिरस्कृते । अविवक्षितवाच्योऽपि ध्वनिर्द्वैविध्यमृच्छति" ಸಾ೦ದ೦ ೪-೩। (1) ವಾಚ್ಯಾರ್ಥವು ಪ್ರಕೃತ ಸಂದರ್ಭದಲ್ಲಿ ಅನುಪಯುಕ್ತವಾಗಿ ವಿಶೇಷವಾದ ಅರ್ಥಾಂತರದಲ್ಲಿ ಪರಿಣಮಿಸುವುದಾದರೆ ಅಲ್ಲಿ ಧ್ವನಿಯು ಅರ್ಥಾಂತರ ಸಂಕ್ರಮಿತ ವಾಚ್ಯವಾಗುವುದು. "कदली कदली करभः करभः करिराजकरः करिराजकरः" ಇಲ್ಲಿ ಎರಡನೆಯ "ಕದಲೀ" ಮೊದಲಾದ ಶಬ್ದಗಳು ಮುಖ್ಯಾರ್ಥವನ್ನು ಹೇಳದೆ ಲಕ್ಷಣೆಯಿಂದ ಜಾಡ್ಯ ಮೊದಲಾದ ಅತಿಶಯ ಗುಣದಿಂದ ಕೂಡಿದ ಕದಳ್ಯಾದಿ ರೂಪವಾದ ಅರ್ಥವನ್ನು ಬೋಧಿಸುವುವು. ಇಲ್ಲಿ ಜಾಡ್ಯ ಮೊದಲಾದ ಅತಿಶಯವಾದ ಅರ್ಥವು ವ್ಯಂಗ್ಯ. ಆದುದರಿಂದ ಈ ಧ್ವನಿಯು "**ಅರ್ಥಾಂತರಸಂಕ್ರಮಿತ ವಾಚ್ಯ**"ವಾಗುವುದು. (2) ವಾಚ್ಯಾರ್ಥವು ಎಲ್ಲಿ ಸ್ವಾರ್ಥವನ್ನು ಸರ್ವಥಾ ಬಿಟ್ಟು ಅರ್ಥಾಂತರದಲ್ಲಿಯೇ ಪರಿಣಮಿಸುವುದೋ ಅಲ್ಲಿ ಧ್ವನಿಯು ಅತ್ಯಂತ ತಿರಸ್ಕೃತ ವಾಚ್ಯವಾಗುವುದು. "निःश्वासान्ध इवादर्शश्चन्द्रमा न प्रकाशते" ಎಂಬಲ್ಲಿ "अन्ध" ಶಬ್ದವು ಮುಖ್ಯಾರ್ಥದಲ್ಲಿ ಬಾಧಿತವಾಗಿ ಲಕ್ಷಣೆಯಿಂದ ಅಪ್ರಕಾಶ ರೂಪವಾದ ಅರ್ಥವನ್ನು ಬೋಧಿಸುವುದರಿಂದ ಧ್ವನಿಯು "**ಅತ್ಯಂತ ತಿರಸ್ಕೃತ ವಾಚ್ಯ**"ವಾಗುವುದು.

**ಅಭಿಧಾಮೂಲ ಧ್ವನಿಯ ಭೇದಗಳು:** ಅಭಿಧಾ ಮೂಲಧ್ವನಿಯು ಮೊದಲು (1) ಅಸಂಲಕ್ಷ್ಯಕ್ರಮ ಮತ್ತು (2) ಸಂಲಕ್ಷ್ಯಕ್ರಮಗಳೆಂದು ಎರಡು ವಿಧ. "विवक्षिताभिधेयोऽपि द्विभेदः प्रथमं ततः । असंलक्ष्यक्रमो यत्र व्यङ्ग्यो लक्ष्यक्रमस्तथा" ಸಾ೦ದ೦ ೪-೪। (1) ವ್ಯಂಗ್ಯಾರ್ಥ ಪ್ರತೀತಿಗೆ ವಿಭಾವಾನುಭಾವವ್ಯಭಿಚಾರಿಭಾವಗಳ ಪ್ರತೀತಿಯು ಕಾರಣವಾದುದರಿಂದ ಈ ಕಾರ್ಯಕಾರಣಗಳ ಪೌರ್ವಾಪರ್ಯವು ಸರಿಯಾಗಿ ತಿಳಿಯಲಾಗದ ಪ್ರಕರಣದಲ್ಲಿ ಧ್ವನಿಯು "**ಅಸಂಲಕ್ಷ್ಯಕ್ರಮ**"ವಾಗುವುದು. सम्यक् न लक्षयितुं शक्यः क्रमः पौर्वापर्यं यस्य तादृशो व्यङ्ग्यो यस्मिन् सः। (2) ಯಾವ ಪ್ರಕರಣದಲ್ಲಿ ವಿಭಾವಾನುಭಾವಾದಿಗಳ ಪ್ರತೀತಿಯು ವಿಲಂಬವಾಗಿ ವ್ಯಂಗ್ಯಾರ್ಥಪ್ರತೀತಿಯು ಸಾವಕಾಶವಾಗಿ ಉಂಟಾಗುವುದೋ ಅಲ್ಲಿ ಧ್ವನಿಯು "**ಸಂಲಕ್ಷ್ಯಕ್ರಮ**"ವಾಗುವುದು. ಸಂಲಕ್ಷ್ಯಕ್ರಮ (ವ್ಯಂಗ್ಯ) ಧ್ವನಿಯು (1) ಶಬ್ದಶಕ್ತಿಯಿಂದ (2) ಅರ್ಥಶಕ್ತಿಯಿಂದ ಮತ್ತು (3) ಶಬ್ದಾರ್ಥಶಕ್ತಿಗಳಿಂದ ಉಂಟಾಗುವುದಾಗಿ ಮೂರು ವಿಧ. "शब्दार्थोभयशक्त्युत्थे व्यङ्ग्येऽनुस्वानसंनिभे । ध्वनिर्लक्ष्यक्रमव्यङ्ग्यस्त्रिविधः कथितो बुधैः" ಸಾ೦ ದ೦ ೪-೬। ಶಬ್ದಶಕ್ತಿಯಿಂದ ಉಂಟಾಗುವ ಧ್ವನಿಯು (1) ವಸ್ತುರೂಪ ಮತ್ತು (2) ಅಲಂಕಾರ ರೂಪಗಳೆಂದು ಎರಡು ವಿಧ. "वस्त्वलङ्काररूपत्वाच्छब्दशक्त्युद्भवो द्विधा" ಸಾ೦ದ೦ ೪-೭। ಅರ್ಥಶಕ್ತಿಯಿಂದ ಉಂಟಾಗುವ ಧ್ವನಿಯು ವಸ್ತು ಮತ್ತು ಅಲಂಕಾರರೂಪವ್ಯಂಗ್ಯಭೇದದಿಂದ ಎರಡು ವಿಧವಾಗಿ (1) ಸ್ವತಃಸಂಭವಿ (2) ಕವಿಪ್ರೌಢೋಕ್ತಿಸಿದ್ಧ ಮತ್ತು (3) ಕವಿನಿಬದ್ಧನಾಯಕಾದಿಪ್ರೌಢೋಕ್ತಿಸಿದ್ಧಗಳೆಂಬ ಭೇದದಿಂದ ಆರು ವಿಧ. ಈ ಆರು ವಿಧಗಳೂ ವಸ್ತುವಿನಿಂದ ವಸ್ತುವ್ಯಂಗ್ಯ ವಸ್ತುವಿನಿಂದ ಅಲಂಕಾರವ್ಯಂಗ್ಯಗಳೆಂಬ ಭೇದದಿಂದ ಹನ್ನೆರಡು ವಿಧಗಳಾಗುವುವು. "वस्तुवालंकृतिर्वापि द्विधार्थः संभवी स्वतः । कवेः प्रौढोक्तिसिद्धो वा तन्निबद्धस्य चेति षट् । षड्भिस्तैर्व्यज्यमानस्तु वस्त्वलंकाररूपकः । अर्थशक्त्युद्भवो व्यङ्ग्यो याति द्वादशभेदताम्" ಸಾ೦ ದ೦ ೪-೭, ೮। ಶಬ್ದಾರ್ಥ ಶಕ್ತಿಗಳಿಂದ ಉಂಟಾಗುವ ಧ್ವನಿಯು (ವ್ಯಂಗ್ಯವು) ಒಂದು. ಸಂಲಕ್ಷ್ಯಕ್ರಮ ಧ್ವನಿಯು ಈ ರೀತಿ ಹದಿನೈದು ವಿಧವಾಗಿ ಧ್ವನಿಯು ಹದಿನೆಂಟು ವಿಧವಾಗುವುದು. "एकः शब्दार्थशक्त्युत्थे तदष्टादशधा ध्वनिः" ಸಾ೦ದ೦ ೪-೯। ಇವೆಲ್ಲವೂ ಪದಗತ ಮತ್ತು ವಾಕ್ಯಗತ ಮೊದಲಾದ ಭೇದಗಳಿಂದ ಐವತ್ತೊಂದು ವಿಧ. "वाक्ये शब्दार्थशक्त्युत्थस्तदन्ये पदवाक्ययोः । तदेवमेकपञ्चाशद्भेदास्तस्य ध्वनेर्मताः" ಸಾ೦ದ೦ ೪-೧೧। ಈ ಐವತ್ತೊಂದು ಭೇದಗಳೂ ತ್ರಿರೂಪ ಸಂಕರ (ಅಂಗಾಂಗಿಭಾವಸಂಕರ ಏಕಾಶ್ರಯಸಂಕರ ಮತ್ತು ಸಂದೇಹಸಂಕರ) ಸಂಸೃಷ್ಟಿಭೇದಗಳಿಂದ ಸಜಾತೀಯ ವಿಜಾತೀಯ ಮೇಳನದಿಂದ ಐದುಸಾವಿರದ ಮುನ್ನೂರ ನಾಲ್ಕು (5304) ಭೇದಗಳಾಗುವುವು. ಇವುಗಳೊಡನೆ ಸಂಕರ ಮತ್ತು ಸಂಸೃಷ್ಟಿರಹಿತವಾದ ಶುದ್ಧವಾದ ಐವತ್ತೊಂದು ಭೇದಗಳೂ ಸೇರಿ ಧ್ವನಿಯು ಒಟ್ಟು ಐದುಸಾವಿರದ ಮುನ್ನೂರ ಐವತ್ತೈದು (5355) ವಿಧವಾಗುವುದು. "संकरेण त्रिरूपेण संसृष्टया चैकरूपया । वेदखाग्निशराः (५३०४) शुद्धैरिषुबाणाग्निसायकाः (५३५५)" ಸಾ೦ದ೦ ೪-೧೨।

**ध्वनिकार ಧ್ವನಿಕಾರ** (ಪುಂ) ಧ್ವನ್ಯಾಲೋಕವನ್ನು ರಚಿಸಿದ ಆನಂದವರ್ಧನಾಚಾರ್ಯರು. ध्वनिं तत्प्रतिपादकं ग्रन्थं करोति—डु कृञ् (करणे) "अण्" (३-२-१)। "क्विप्" (३-२-७६)। **-कृत् -ಕೃತ್.**

**ध्वनिकाव्य ಧ್ವನಿಕಾವ್ಯ** (ನಂ) ಉತ್ತಮ ಕಾವ್ಯ. ["काव्य" ಮತ್ತು "ध्वनि" ಪದಗಳಲ್ಲಿ ನೋಡಿ.]

**ध्वनिग्रह ಧ್ವನಿಗ್ರಹ** (ಪುಂ) ಕರ್ಣ, ಕಿವಿ, ಶ್ರೋತ್ರೇಂದ್ರಿಯ. ध्वनिः गृह्यतेऽनेन—ग्रह (उपादाने) करं "अप्" (३-३-५८)। "कर्णस्तु श्रोत्रं क्लीबे ध्वनिग्रहः" हारा०।

**ध्वनित ಧ್ವನಿತ** (ನಂ) 1. ಧ್ವನಿ, ಶಬ್ದ. ध्वन (शब्दे) भावे "क्तः" (३-३-११४)। "गम्भीरभेरीध्वनितैर्भयङ्करैर्महागुहान्तप्रतिनादमेदुरैः" कुमा० १४-२७। (वि०) 2. ವ್ಯಂಗ್ಯವಾಗಿ ಸೂಚಿಸಲ್ಪಟ್ಟ, ವ್ಯಂಜನಾವೃತ್ತಿಯಿಂದ ತಿಳಿಸಲ್ಪಟ್ಟ. 3. ಶಬ್ದಮಾಡಲ್ಪಟ್ಟ.

**ध्वनिनाला ಧ್ವನಿನಾಲಾ** (ಸ್ತ್ರೀಂ) 1. ಕಹಳೆ, ಕೊಂಬು. 2. ಕೊಳಲು, ವೇಣುವಾದ್ಯ. 3. ವೀಣೆ. 4. ವಂಶ, ಬಿದಿರು. ध्वनेः नालेव। "ध्वनिनाला तु वीणायां वेणुकाहलयोरपि" मेदि०।

**ध्वनिविकार ಧ್ವನಿವಿಕಾರ** (ಪುಂ) 1. ಕಾಕು, ದುಃಖ ಭಯ ಮುಂತಾದುವುಗಳಿಂದ ಉಂಟಾಗುವ ವಿಕಾರಸ್ವರ. ध्वनेविकारः। 2. ವಿಕಾರವಾದ ಶಬ್ದ.

**ध्वन्य ಧ್ವನ್ಯ** (ವಿಂ) ಧ್ವನಿತವಾಗುವ, ವ್ಯಂಗ್ಯವಾಗಿ ಸೂಚಿಸಲ್ಪಡುವ. ध्वन (शब्दे) "ण्यत्" (३-१-१२४)। मित्त्वात् ह्रस्वः।

**ध्वस्त ಧ್ವಸ್ತ** (ವಿಂ) 1. ಕೆಳಕ್ಕೆ ಬಿದ್ದಿರುವ. 2. ಕೆಳಕ್ಕೆ ಜಾರಿರುವ. ध्वंसु (अवस्रंसने) कर्तं "क्तः" (३-४-७२)। "करालवाचालमुखाश्रमूस्वनैः ध्वस्ताम्बरा वीक्ष्य दिशो रजस्वलाः" कुमा० १४-४८। 3. ನಾಶವಾದ. "मनोभिः सोद्वेगैः प्रणयविहतिध्वस्तरुचयः सगन्धर्वा धाम त्रिदशवनिताः स्वं प्रतिययुः" किरा० १०-६३। 4. ನಾಶಪಡಿಸಲ್ಪಟ್ಟ. ध्वंसु (अन्तर्भावितण्यन्तः) कर्मं "क्तः" (३-२-१०२)। "येन ध्वस्तमनोभवेन बलिजित्कायः पुरास्त्रीकृतः" सा० द०।

**ध्वस्ति ಧ್ವಸ್ತಿ** (ಸ್ತ್ರೀಂ) ನಾಶ, ಅಳಿವು. ध्वंसु (अवस्रंसने) "क्तिन्" (३-३-९४)।

**ध्वाङ्क्ष ಧ್ವಾಂಕ್ಷ** (ಪುಂ) 1. ವಾಯಸ, ಕಾಗೆ. ध्वाक्षि (घोरवाशिते) "अच्" (३-१-१३४)। 2. ಬಕಪಕ್ಷಿ. 3. (ಜ್ಯೋತಿಷದಲ್ಲಿ) ಭಾನು ಮೊದಲಾದ ವಾರಗಳಲ್ಲಿ ನಕ್ಷತ್ರಗಳ ಯೋಗದಿಂದ ಉಂಟಾಗುವ (ಪ್ರಯಾಣಕ್ಕೆ ಸಂಬಂಧಿಸಿದ) ಆನಂದ ಮೊದಲಾದ ಯೋಗಗಳಲ್ಲೊಂದು. ಭಾನು–ಆರ್ದ್ರಾ, ಸೋಮ–ಮಘಾ, ಮಂಗಳ–ಚಿತ್ರಾ, ಬುಧ–ಜ್ಯೇಷ್ಠಾ, ಗುರು–ಅಭಿಜಿತ್, ಶುಕ್ರ–ಪೂರ್ವಾಭಾದ್ರಾ, ಶನಿ–ಭರಣೀನಕ್ಷತ್ರಗಳ ಯೋಗದಿಂದ ಈ (ಧ್ವಾಂಕ್ಷ) ಯೋಗವುಂಟಾಗುವುದು. 4. ಯಾಚಕ, ಭಿಕ್ಷುಕ. 5. ಗೃಹ, ಮನೆ. (ಸ್ತ್ರೀಂ) **-क्षी -ಕ್ಷೀ.** 6. ಒಂದು ಔಷಧದ ಮೂಲಿಕೆ. "ध्वाङ्क्षः काके बकेऽर्थिनि। गृहे ध्वाङ्क्षी तु काकोल्याम्" हेम०।

**ध्वाङ्क्षतुण्डी ಧ್ವಾಂಕ್ಷತುಂಡೀ, -दन्ती -ದಂತೀ, -नखी -ನಖೀ** (ಸ್ತ್ರೀಂ) ಕಾಗೆತೊಂಡೆ ಗಿಡ.

**ध्वाङ्क्षनाम्नी ಧ್ವಾಂಕ್ಷನಾಮ್ನೀ** (ಸ್ತ್ರೀಂ) ಕಲ್ಲುತ್ತಿ ಗಿಡ, ಬ್ರಹ್ಮದಂಡಿ ಗಿಡ.

**ध्वाङ्क्षनासिका ಧ್ವಾಂಕ್ಷನಾಸಿಕಾ** (ಸ್ತ್ರೀಂ) ಕಾಗೆತೊಂಡೆ ಗಿಡ.

**ध्वाङ्क्षपुष्ट ಧ್ವಾಂಕ್ಷಪುಷ್ಟ** (ಪುಂ) ಕೋಗಿಲೆ, ಪರಾವಲಪಕ್ಷಿ.

**ध्वाङ्क्षमाची ಧ್ವಾಂಕ್ಷಮಾಚೀ** (ಸ್ತ್ರೀಂ) ಗರಗದ ಸೊಪ್ಪು.

**ध्वान ಧ್ವಾನ** (ಪುಂ) ಶಬ್ದ, ಧ್ವನಿ, ಸದ್ದು. ध्वन (शब्दे) भावे "घञ्" (३-३-१८)। "शशामाक्रन्दितध्वानो न च चौरो व्यभाव्यत" राजत०।

**ध्वानित ಧ್ವಾನಿತ** (ವಿಂ) ಶಬ್ದಮಾಡಿಸಲ್ಪಟ್ಟ, ಪ್ರತಿಧ್ವನಿಯುಂಟುಮಾಡಲ್ಪಟ್ಟ. ध्वन (शब्दे)+णिच् "क्तः" (३-२-१०२)। "घोरारावैर्ध्वानिताशेषदिक्के विष्के नागः पर्यणंसीत् स्व एव" माघ० १८-२७।

**ध्वान्त ಧ್ವಾಂತ** (ನಂ) ಕತ್ತಲೆ. ध्वन (शब्दे) "क्तः" (७-२-१८)। निपा०। "एवंविधमूलं तदशर्म कृष्णां विभावरीं ध्वान्तमिव प्रपेदे" किरा० ३-३५।

**ध्वान्तशत्रु ಧ್ವಾಂತಶತ್ರು, -शात्रव -ಶಾತ್ರವ** (ಪುಂ) 1. ಅಗ್ನಿ, ಬೆಂಕಿ. 2. ಸೂರ್ಯ. 3. ಚಂದ್ರ. 4. ಬೆಳುವು. ध्वान्तस्य शत्रुः शात्रवो वा। एवं **ध्वान्ताराति: ಧ್ವಾಂತಾರಾತಿ:, ध्वान्तारि: ಧ್ವಾಂತಾರಿ:.** ಇತ್ಯಾದಿ. "ध्वान्तारिं सर्वपापघ्नम्"।

**ध्वान्तोन्मेष ಧ್ವಾಂತೋನ್ಮೇಷ** (ಪುಂ) ಮಿಂಚುಹುಳ. ध्वान्ते उन्मिषति—उद्+ मिष (स्पर्धायाम्) "अच्" (३-१-१३४)। "ज्योतिर्बीजं च खद्योतः ध्वान्तोन्मेषस्तमोमणिः" हारा०।

इति "ध" कारादिपदार्थनिरूपणम्।

# न

**न ನ** ಇದು ವ್ಯಂಜನಾಕ್ಷರಗಳಲ್ಲಿ "ತ" ವರ್ಗದ ಐದನೆಯ ಮತ್ತು ಆಭ್ಯಂತರಸ್ಪೃಷ್ಟಪ್ರಯತ್ನದಿಂದ ನಾಸಿಕೆ ಮತ್ತು ದಂತಮೂಲಗಳಲ್ಲಿ ಹುಟ್ಟುವ ಅಕ್ಷರ. "कादयो मावसानाः स्पर्शाः"। "स्पृष्टं प्रयतनं स्पर्शानाम्" सि० कौ०। "लृतुलसानां दन्ताः"। "ञमङणनानां नासिका च"।

**न ನ** (पुं०) 1. ಗಣಪತಿ, ವಿನಾಯಕ. 2. ಬುದ್ಧದೇವ. 3. ಬುದ್ಧಿ. 4. ಸ್ತುತಿ, ಸ್ತೋತ್ರ. 5. ವೃಕ್ಷ, ಮರ. "नकारः सौगते बुद्धौ स्तुतौ वृक्षे प्रकीर्तितः" एक०। 6. "न" ವರ್ಣ, "न" ಎಂಬ ಅಕ್ಷರ. 7. ಬಂಧ. (न०)8. ಜ್ಞಾನ. 9. ವಾದ್ಯ. (वि०)10. ಸೂಕ್ಷ್ಮವಾದ, ತೆಳ್ಳಗಿರುವ. 11. ಶೂನ್ಯ, ಅಭಾವ. 12. ಸಮಾನವಾದ. 13. ಸ್ತುತಿಸಲ್ಪಟ್ಟ. (अव्य०) 14. ನಿಷೇಧ, ತಡೆಯುವುದು. ಬೇಡವೆನ್ನುವುದು. "अतिवादांस्तितिक्षेत नावमन्येत कञ्चन। न चेमं देहमाश्रित्य वैरं कुर्वीत केनचित्" मनु० ६-४७। 15. ಕೂಡದು, ಆಗಬಾರದು. "क्षत्रियैर्धार्यते शस्त्रं नार्तशब्दो भवेदिति" रामा०। 16. ಇಲ್ಲ, ಅಲ್ಲ. "नादण्ड्यो नाम राज्ञोऽस्ति" मनु० ८-३३५। नञ् ಸಂಬಂಧವಾದ "न"ಕಾರವು ಉತ್ತರಪದವು ಪರವಾದಾಗ ಲೋಪಹೊಂದುವುದು. न ब्राह्मणः अब्राह्मणः। ಉತ್ತರಪದವು ಅಜಾದಿಯಾದರೆ "नुट्" ಆಗಮ ಬರುವುದು. न अश्वः अनश्वः। नञ् ಸಂಬಂಧವಾದ "अ"ಕಾರವು ಆರು ವಿಧ ಅರ್ಥಗಳನ್ನು ತಿಳಿಸುವುದು. ["अ" ಪದದಲ್ಲಿ ನೋಡಿ]. ಎರಡು नञ् ಪ್ರಯೋಗವಿರುವ ಕಡೆ ಪ್ರಕೃತವಾದ ಅರ್ಥವನ್ನು ದೃಢಪಡಿಸುವುದು. "निरस्तगाम्भीर्यमपास्तपुष्पकं प्रकम्पयामास न मानसं न सः" माघ० १-५५। 17 ಸಾದೃಶ್ಯ. (स्त्री०) **ना ನಾ.** 18. ನಾಭಿ, ಹೊಕ್ಕಳು. "हेरम्बे नः पुमान् ना स्त्री नाभौ नं ज्ञानबाधयोः" नानार्थर०।

**नंष्टृ ನಂಷ್ಟೃ** (वि०) ನಾಶವಾಗುವ, ನಾಶಹೊಂದುವ. णश (अदर्शने) "तृच्" (३-१-१३३)। नुमागमः (७-१-६०)। स्त्रियाम् "ङीप्" (४-१-५)। **-ष्ट्री -ಷ್ಟ್ರೀ.**

**नकार ನಕಾರ** (पुं०) "न" ವರ್ಣ, "न" ಎಂಬ ಅಕ್ಷರ. न "कारः" (वा० ३-३-१०८)।

**नकिञ्चन ನಕಿಂಚನ** (वि०) ದರಿದ್ರ, ಬಡವ. नास्ति किञ्चन यस्य। "सर्वकामरसैर्हीनाः स्थानभ्रष्टा नकिञ्चनाः" भा० उद्योग०।

**नकुट ನಕುಟ** (न०) ನಾಸಿಕೆ, ಮೂಗು.

**नकुल ನಕುಲ** (पुं०)1. ಮುಂಗುಸಿ, ಕೀರ. नास्ति कुलमस्य (६-३-७५)। 2. ಪಾಂಡುರಾಜನ ಪತ್ನಿ ಮಾದ್ರಿಯಲ್ಲಿ ಜನಿಸಿದ ಒಬ್ಬ ಮಗ, ಮಾದ್ರಿಯಲ್ಲಿ ಅಶ್ವಿನೀ ದೇವತೆಗಳಿಂದ ಹುಟ್ಟಿದ ಮಗ. "ततो माद्री विचार्यैवं जगाम मनसाऽश्विनौ। तावागम्य सुतावस्यां जनयामासतुर्यमौ। नकुलं सहदेवं च रूपेणाप्रतिमं भुवि" भा० आदि० १२३-१८। (स्त्री०)**-कुली -ಕುಲೀ.** 3. ಜಟಾಮಾಂಸಿ. 4. ಕುಂಕುಮಕೇಸರಿ. 5. ಹೆಣ್ಣು ಮುಂಗುಸಿ.

**नकुलेष्टा ನಕುಲೇಷ್ಟಾ** (स्त्री०) ಸರ್ಪಾಕ್ಷಿ, ಈಶ್ವರಿಹಂಬು. नकुलानामिष्टा।

**नक्त ನಕ್ತ** (न०) ರಾತ್ರಿ.

**नक्तक ನಕ್ತಕ** (पुं०) ಹರುಕುಬಟ್ಟೆ. नक्तं कं सुखमस्मात्। "समौ नक्तककर्पटौ" अम०।

**नक्तचारिन् ನಕ್ತಚಾರಿನ್** (पुं०)1. ಮಾರ್ಜಾರ, ಬೆಕ್ಕು. 2. ಉಲೂಕ, ಗೂಬೆ. 3. ರಾಕ್ಷಸ. (वि०)4. ರಾತ್ರಿಯಲ್ಲಿ ಸಂಚರಿಸುವ. नक्ते चरति—चर (गतौ) "णिनिः" (३-२-७८)। स्त्रियाम् "ङीप्" (४-१-५)। **-चारिणी -ಚಾರಿಣೀ.**

**नक्तञ्चर ನಕ್ತಂಚರ** (पुं०) 1. ರಾಕ್ಷಸ. नक्तं रात्रौ चरति—चर (गतौ) "टः" (३-२-१६)। स्त्रियाम् "ङीप्" (४-१-१५)। **-चरी -ಚರೀ.** 2. ಚೋರ, ಕಳ್ಳ. 3. ಉಲೂಕ, ಗೂಬೆ. 4. ಮಾರ್ಜಾರ, ಬೆಕ್ಕು. (वि०) 5. ರಾತ್ರಿಯಲ್ಲಿ ಸಂಚರಿಸುವ.

**नक्तञ्चारिन् ನಕ್ತಂಚಾರಿನ್** (पुं०) 1. ರಾಕ್ಷಸ. नक्तं रात्रौ चरति—चर (गतौ) "णिनिः" (३-२-७८)। 2. ಮಾರ್ಜಾರ, ಬೆಕ್ಕು. 3. ಉಲೂಕ, ಗೂಬೆ. 4. ಚೋರ, ಕಳ್ಳ. (वि०)5. ರಾತ್ರಿಯಲ್ಲಿ ಸಂಚರಿಸುವ. "दिवाचरेभ्यो भूतेभ्यो नक्तञ्चारिभ्य एव च" मनु०। स्त्रियाम् "ङीप्" (४-१-५)। **-चारिणी -ಚಾರಿಣೀ.**

**नक्तञ्जात ನಕ್ತಂಜಾತ** (वि०) ರಾತ್ರಿಯಲ್ಲಿ ಹುಟ್ಟಿದ. नक्तं रात्रौ जातः।

**नक्तन्तन ನಕ್ತಂತನ** (वि०) ರಾತ್ರಿಯಲ್ಲಿರುವ. नक्तं रात्रौ भवः "ट्युल्" तुडागमश्च (४-३-२३)। "इदं नक्तन्तनं दाम पौष्पमेतद्वितानम्" भट्टि० ६-१३।

**नक्तन्दिवम् ನಕ್ತಂದಿವಮ್** (अव्य०) ರಾತ್ರಿ ಮತ್ತು ಹಗಲು. नक्तं च दिवा च "अच्" (५-४-७७)। निपा०। अव्ययीभावश्च। "विभज्य नक्तन्दिवमस्ततन्द्रिणा वितन्यते तेन नयेन पौरुषम्" किरा० १-९।

**नक्तम् ನಕ್ತಮ್** (अव्य०) ರಾತ್ರಿಯಲ್ಲಿ. सप्तम्यर्थेऽव्ययम्। "रथाङ्गपाणेः पटलेन रोचिषामृषित्विषः संवलिता विरेजिरे। चलत्पलाशान्तरगोचरास्तरोः तुषारमूर्तेरिव नक्तमंशवः" माघ० १-२१।

**नक्तमाल ನಕ್ತಮಾಲ** (पुं०) ಕರಂಜವೃಕ್ಷ, ಹೊಂಗೆಮರ. नक्तम् आ अलति—अल (भूषणादौ) "अच्" (३-१-१३४)। "स नर्मदारोधसि सीकरार्द्रैर्मरुद्भिरानर्तितनक्तमाले" रघु० ५-४२।

**नक्तव्रत ನಕ್ತವ್ರತ** (न०) ಹಗಲು ಉಪವಾಸವಿದ್ದು ರಾತ್ರಿ ಭೋಜನಮಾಡುವ ಒಂದು ವ್ರತ. "मार्गशीर्षे सिते पक्षे प्रतिपद्या तिथिर्भवेत्। तस्यां नक्तं प्रकुर्वीत रात्रौ विष्णुं प्रपूजयेत्" वराहपु०।

**नक्तान्ध्य ನಕ್ತಾಂಧ್ಯ** (न०) ಇರುಳು ಕಣ್ಣು ಕಾಣಿಸದಿರುವಿಕೆ, ರಾತ್ರಿಕಾಲದಲ್ಲಿ ಕುರುಡಾಗಿರುವಿಕೆ. नक्ते आन्ध्यम्। ಶ್ಲೇಷ್ಮವು ದೃಷ್ಟಿಯಲ್ಲಿ ಹೆಚ್ಚಾಗಿ ಸೇರಿಕೊಂಡು ರಾತ್ರಿಯಲ್ಲಿ ಕುರುಡನನ್ನಾಗಿ ಮಾಡುವುದು. ಹಗಲು ವೇಳೆಯಲ್ಲಿ ಸೂರ್ಯನ ಕಿರಣದಿಂದ ಶ್ಲೇಷ್ಮವು ಕಡಮೆಯಾಗಿ ಕಣ್ಣು ಕಾಣಿಸುವುದು. "त्रिषु स्थितो यः पटलेषु दोषो नक्तान्ध्यमापादयति प्रसह्य। दिवा स सूर्यप्रगृहीतदृष्टिः पश्येत्तु रूपाणि कफाल्पभावात्" भावप्र०।

**नक्र ನಕ್ರ** (पुं०) 1. ಮೊಸಳೆ. न क्रामति दूरस्थलम्—क्रमु (पादविक्षेपे) "डः" (वा० ३-२-४८)। नञः प्रकृतिभावः (६-३-७५)। "लिङ्गैर्मुदः संवृतविक्रियास्ते ह्रदाः प्रसन्ना इव गूढनक्राः" रघु० ७-३०। 2. ಮತ್ಸ್ಯ, ಮೀನು. "तथा चेन्नाचरेयं नयेत नक्रकेतनः क्षणेनैकेनाकीर्तनीयां दशां जनञ्चैनम्" काद०। (न०) 3. ಬಾಗಿಲಿನ ಮೇಲುಭಾಗದ ಪಟ್ಟಿ. 4. ನಾಸಿಕೆ, ಮೂಗು. "नक्रं स्यादग्रदारुणि। नासायां पुंसि कुम्भीरे" मेदि०।

**नक्रराज ನಕ್ರರಾಜ** (पुं०) ದೊಡ್ಡ ಆಕಾರದ ಮೀನು, ತಿಮಿಂಗಿಲ. नक्राणां राजा "टच्" (५-४-९१)।

**नक्षत्र ನಕ್ಷತ್ರ** (न०) 1. ತಾರೆ, ಚುಕ್ಕಿ. न क्षरति—क्षर (सञ्चलने) निपा० (६-३-७५)। 2. ಅಶ್ವಿನಿ ಮೊದಲಾದ ಇಪ್ಪತ್ತೇಳು ನಕ್ಷತ್ರಗಳು, ದಕ್ಷಬ್ರಹ್ಮನ ಕನ್ಯೆಯರು. "सप्तविंशतिः सोमस्य पत्न्यो लोकस्य विश्रुताः। कालस्य नयने युक्ताः सोमपत्न्यः शुचिव्रताः। सर्वा नक्षत्रयोगिन्यो लोकयात्राविधानतः" भा० आदि० ६७। **ನಕ್ಷತ್ರಗಳು ಮತ್ತು ನಕ್ಷತ್ರಾಧಿಪತಿಗಳು :**

| | ನಕ್ಷತ್ರ | | ಅಧಿಪತಿ |
|---|---|---|---|
| (1) | ಅಶ್ವಿನಿ | .. | ಅಶ್ವಿನೀ ದೇವತೆಗಳು |
| (2) | ಭರಣಿ | .. | ಯಮ |
| (3) | ಕೃತ್ತಿಕೆ | .. | ಅಗ್ನಿ |
| (4) | ರೋಹಿಣಿ | .. | ಬ್ರಹ್ಮ |
| (5) | ಮೃಗಶೀರ್ಷ | .. | ಚಂದ್ರ |
| (6) | ಆರಿದ್ರೆ | .. | ರುದ್ರ |
| (7) | ಪುನರ್ವಸು | .. | ಅದಿತಿ |
| (8) | ಪುಷ್ಯ | .. | ಗುರು |
| (9) | ಆಶ್ಲೇಷೆ | .. | ಸರ್ಪ |
| (10) | ಮಖೆ | .. | ಪಿತೃಗಳು |
| (11) | ಪೂರ್ವಫಲ್ಗುನಿ | .. | ಭಗ |
| (12) | ಉತ್ತರಫಲ್ಗುನಿ | .. | ಅರ್ಯಮ |
| (13) | ಹಸ್ತ | .. | ರವಿ |
| (14) | ಚಿತ್ತೆ | .. | ತ್ವಷ್ಟ |
| (15) | ಸ್ವಾತಿ | .. | ವಾಯು |
| (16) | ವಿಶಾಖೆ | .. | ಇಂದ್ರಾಗ್ನಿ |
| (17) | ಅನೂರಾಧೆ | .. | ಮಿತ್ರ |
| (18) | ಜ್ಯೇಷ್ಠೆ | .. | ಇಂದ್ರ |
| (19) | ಮೂಲ | .. | ರಾಕ್ಷಸ |
| (20) | ಪೂರ್ವಾಷಾಢ | .. | ಜಲ |
| (21) | ಉತ್ತರಾಷಾಢ | .. | ವಿಶ್ವೇದೇವತೆಗಳು |
| (22) | ಅಭಿಜಿತ್ | .. | ಬ್ರಹ್ಮ |
| (23) | ಶ್ರವಣ | .. | ವಿಷ್ಣು |
| (24) | ಧನಿಷ್ಠೆ | .. | ಅಷ್ಟವಸುಗಳು |
| (25) | ಶತಭಿಷೆ | .. | ವರುಣ |
| (26) | ಪೂರ್ವಾಭಾದ್ರೆ | .. | ಅಜೈಕಪಾತ್ |
| (27) | ಉತ್ತರಾಭಾದ್ರೆ | .. | ಅಹಿರ್ಬುಧ್ನ್ಯ |
| (28) | ರೇವತಿ | .. | ಪೂಷ |

**ನಕ್ಷತ್ರಗಳಿಗೆ ಕ್ಷಿಪ್ರಾದಿ ಸಂಜ್ಞೆಗಳು :**

| ನಕ್ಷತ್ರ | ಸಂಜ್ಞೆ |
|---|---|
| ಅಶ್ವಿನಿ, ಪುಷ್ಯ, ಹಸ್ತ. | .. ಕ್ಷಿಪ್ರ (ಲಘು) |
| ಮೂಲ, ಆರ್ದ್ರೆ, ಜ್ಯೇಷ್ಠೆ, ಆಶ್ಲೇಷೆ. | .. ದಾರುಣ (ತೀಕ್ಷ್ಣ) |
| ಮೃಗಶೀರ್ಷ, ಚಿತ್ತೆ, ಅನೂರಾಧೆ, ರೇವತಿ, | .. ಮೃದು |

| ನಕ್ಷತ್ರ | ಸಂಜ್ಞೆ |
|---|---|
| ರೋಹಿಣಿ, ಉತ್ತರಫಲ್ಗುನಿ, ಉತ್ತರಾಷಾಢ, ಉತ್ತರಾಭಾದ್ರೆ. | ಸ್ಥಿರ (ಧ್ರುವ) |
| ಭರಣಿ, ಮಖೆ, ಪೂರ್ವಫಲ್ಗುನಿ, ಪೂರ್ವಾಷಾಢ, ಪೂರ್ವಾಭಾದ್ರೆ. | ಉಗ್ರ |
| ಕೃತ್ತಿಕೆ, ವಿಶಾಖೆ. | ಸಾಧಾರಣ |
| ಸ್ವಾತಿ, ಪುನರ್ವಸು, ಶ್ರವಣ, ಧನಿಷ್ಠೆ, ಶತಭಿಷೆ. | ಚರ. |

**नक्षत्रगण ನಕ್ಷತ್ರಗಣ** (पुं०) ಕ್ಷಿಪ್ರ ಮೊದಲಾದ ಸಂಜ್ಞೆಗಳುಳ್ಳ ನಕ್ಷತ್ರಗಳ ಸಮೂಹ. ["नक्षत्र" ಪದದಲ್ಲಿ ನೋಡಿ.]

**नक्षत्रचक्र ನಕ್ಷತ್ರಚಕ್ರ** (न०) ರಾಶಿಚಕ್ರ. नक्षत्राणां चक्रं यत्र।

**नक्षत्रदर्श ನಕ್ಷತ್ರದರ್ಶ** (पुं०) 1. ನಕ್ಷತ್ರಗಳನ್ನು ನೋಡಿ ಫಲವನ್ನು ಹೇಳುವ ಜೋಯಿಸ. नक्षत्रं तत्फलं दर्शयति—दृशिर् (प्रेक्षणे)+णिच् "अण्" (३-२-१)। (वि०)2. ನಕ್ಷತ್ರವನ್ನು ನೋಡುವವನು नक्षत्रं पश्यति—दृशिर् "अण्" (३-२-१)।

**नक्षत्रनाथ ನಕ್ಷತ್ರನಾಥ** (पुं०) ನಕ್ಷತ್ರಗಳ ಒಡೆಯನಾದ ಚಂದ್ರ. नक्षत्राणाम् अश्विन्यादीनां नाथः। "दिवाकरादर्शनबद्धकोशे नक्षत्रनाथांशुरिवारविन्दे" रघु० ६-६६।

**नक्षत्रनेमि ನಕ್ಷತ್ರನೇಮಿ** (पुं०) 1. ಧ್ರುವನಕ್ಷತ್ರ. नक्षत्रस्य नक्षत्रचक्रस्य नेमिरिव। 2. ವಿಷ್ಣು. नक्षत्राणि ज्योतींषि नयति निर्वहति—णीञ् (प्रापणे) "मिः" (उ० ४-४३)। "यन्नक्षत्रात्मकं चक्रं ज्योतीरूपमनामयम्। यस्तन्नित्यं भ्रामयति भ्रमन्तमनुयाति च। नक्षत्रनेमिर्विज्ञेयो नवार्णो भ्रमनायकः" इति निरुक्तिः। "नक्षत्रनेमिर्नक्षत्री" वि०स०। 3. ಚಂದ್ರ. (स्त्री०)4. ರೇವತಿ. "नक्षत्रनेमिः शीतांशुरेवत्यौत्तानपादिषु" हेम०।

**नक्षत्रपति ನಕ್ಷತ್ರಪತಿ** (पुं०) ಚಂದ್ರ. नक्षत्राणां पतिः।

**नक्षत्रपथ ನಕ್ಷತ್ರಪಥ** (पुं०) ನಕ್ಷತ್ರಗಳು ಸಂಚರಿಸುವ ಮಾರ್ಗ.

**नक्षत्रमाला ನಕ್ಷತ್ರಮಾಲಾ** (स्त्री०) 1. ನಕ್ಷತ್ರಗಳ ಸಾಲು. नक्षत्राणां माला। 2. ಇಪ್ಪತ್ತೇಳು ಮುತ್ತುಗಳಿಂದ ರಚಿತವಾದ ಹಾರ. नक्षत्राणामश्विन्यादीनां मालेव।

**नक्षत्रयाजक ನಕ್ಷತ್ರಯಾಜಕ** (पुं०) ದ್ರವ್ಯಾಶೆಯಿಂದ ನಕ್ಷತ್ರಗಳಲ್ಲಿ ಇಲ್ಲದ ದೋಷಗಳನ್ನು ಹೇಳಿ ಅದಕ್ಕಾಗಿ ಶಾಂತಿಯನ್ನು ಮಾಡಿಸುವ ಬ್ರಾಹ್ಮಣಾಧಮ. नक्षत्रनिमित्तं वृत्त्यर्थं याजयति—यज (देवपूजायाम्) + णिच् "ण्वुल्" (३-१-१३३)।

**नक्षत्रराज ನಕ್ಷತ್ರರಾಜ** (पुं०) ಚಂದ್ರ. नक्षत्राणां राजा—"टच्" (५-४-९१)।

**नक्षत्रलोक ನಕ್ಷತ್ರಲೋಕ** (पुं०) ನಭೋಮಂಡಲ. ಅಂತರಿಕ್ಷ, ಆಕಾಶ. नक्षत्राणां लोकः। "ज्योतिश्चक्रे समस्तेऽस्मिन् अग्रगण्या भविष्यथ। मेषादीनां च राशीनां योनयो यूयमुत्तमाः। ओषधीनां सुधायाश्च ब्राह्मणानां च यः पतिः। पतिमत्यो भवत्योऽपि तेन पत्या शुभाननाः। भवतीनामिदं लिङ्गं नक्षत्रेश्वरसंज्ञितम्। पूजयित्वा नरो गन्ता नक्षत्रलोकमुत्तमम्। उपरिष्टान्मृगाङ्कस्य लोको यस्तु भविष्यति। सर्वासां तारकाणां च मध्ये मान्या भविष्यथ" काशीखं०। ಈ ನಕ್ಷತ್ರಲೋಕವು ಚಂದ್ರಲೋಕಕ್ಕಿಂತಲೂ ಮೇಲಿರುವುದು.

**नक्षत्रविद्या ನಕ್ಷತ್ರವಿದ್ಯಾ** (स्त्री०) ನಕ್ಷತ್ರಗಳಲ್ಲಿ ಸಂಚರಿಸುವ ಗ್ರಹಗಳ ಚಾರವನ್ನು ತಿಳಿಸುವ ಜ್ಯೋತಿಷವಿದ್ಯೆ, ಜ್ಯೋತಿಃಶಾಸ್ತ್ರ. नक्षत्राणां तत्र स्थितानां ग्रहाणां चारज्ञानाय विद्या। "न चोत्पातनिमित्ताभ्यां न नक्षत्राङ्गविद्यया। नानुशासनवादाभ्यां भिक्षां लिप्सेत कर्हिचित्" मनु० ६-५०।

**नक्षत्रव्यूह ನಕ್ಷತ್ರವ್ಯೂಹ** (पुं०) ನಕ್ಷತ್ರಗಳ ಗುಂಪು. ಚೇತನ ಮತ್ತು ಅಚೇತನ ವಸ್ತುಗಳ ಶುಭಾಶುಭಗಳನ್ನು ಸೂಚಿಸುವ ನಕ್ಷತ್ರಗಳ ಸಮೂಹ.

**नक्षत्रशूल ನಕ್ಷತ್ರಶೂಲ** (पुं०) ಪೂರ್ವ ಮೊದಲಾದ ದಿಕ್ಕುಗಳಲ್ಲಿ ಪ್ರಯಾಣಕ್ಕೆ ನಿಷಿದ್ಧವಾದ ನಕ್ಷತ್ರ.

| ದಿಕ್ಕು | | ನಿಷಿದ್ಧ ನಕ್ಷತ್ರ |
|---|---|---|
| ಪೂರ್ವದಿಕ್ಕಿನ ಪ್ರಯಾಣಕ್ಕೆ | .. | ಜ್ಯೇಷ್ಠೆ ಮತ್ತು ಧನಿಷ್ಠೆ |
| ದಕ್ಷಿಣದಿಕ್ಕಿನ ,, | .. | ಅಶ್ವಿನಿ ಮತ್ತು ಶ್ರವಣ |
| ಪಶ್ಚಿಮದಿಕ್ಕಿನ ,, | .. | ರೋಹಿಣಿ ಮತ್ತು ಪುಷ್ಯ |
| ಉತ್ತರದಿಕ್ಕಿನ ,, | .. | ಉತ್ತರಫಲ್ಗುನಿ ಮತ್ತು ಹಸ್ತ. |

"पूर्वे ज्येष्ठधनिष्ठे च श्रवणाश्विनिदक्षिणे। पश्चिमे पुष्यरोहिण्यौ हस्ताफल्गुनिचोत्तरे" मुहू० द०।

**नक्षत्रसन्धि ನಕ್ಷತ್ರಸಂಧಿ** (पुं०) ಒಂದು ನಕ್ಷತ್ರದಿಂದ ಮುಂದಿನ ನಕ್ಷತ್ರಕ್ಕೆ ಗ್ರಹಗಳ ಪ್ರವೇಶದ ಕಾಲ. नक्षत्रयोः सन्धिः।

**नक्षत्रसूचक ನಕ್ಷತ್ರಸೂಚಕ** (पुं०) ಶಾಸ್ತ್ರಜ್ಞಾನವಿಲ್ಲದ ಜೋಯಿಸ, ಜ್ಯೋತಿಃಶಾಸ್ತ್ರವನ್ನು ತಿಳಿದುಕೊಳ್ಳದೆ

ಜೋಯಿಸನೆಂದು ಹೇಳಿಕೊಳ್ಳುವವನು. नक्षत्राणि शुभाशुभतया सूचयति – सूच (पैशुन्ये) "ण्वुल्" (३-१-१३३)। "अविदित्वैव यः शास्त्रं दैवज्ञत्वं प्रपद्यते। स पङ्क्तिदूषकः पापो ज्ञेयो नक्षत्रसूचकः" बृहत्सं० २-१६।

**नक्षत्रिन् ನಕ್ಷತ್ರಿನ್** (पुं०) 1. ವಿಷ್ಣು. शिशुमाराकृतिज्योतीरूपं नक्षत्रमस्मिन्नस्ति "इनिः" (५-२-११५)। "शिशुमाराकृति प्रोक्तं यद्रूपं ज्योतिषां दिवि। तदस्यास्ति स नक्षत्री सप्तार्णो लोकपावनः" इति निरुक्तिः। "नक्षत्रनेमिर्नक्षत्री" वि०स०। 2. ಚಂದ್ರ.

**नक्षत्रेश ನಕ್ಷತ್ರೇಶ** (पुं०) ಚಂದ್ರ. नक्षत्राणामीशः। "नक्षत्रेशकृतेक्षणो गिरिगुरौ गाढां रुचिं धारयन्" सा० द०।

**नख ನಖ** (पुंन०) 1. ನಖ, ಉಗುರು. न खमस्य। प्रकृत्या भवति (६-३-७५)। "कामिनामनिभृतान्यपि रम्भास्तम्भकोमलतलेषु नखानि" माघ० १०-६६। 2. ಷಂಡ. (न०) 3. ಒಂದು ಗಂಧದ್ರವ್ಯ. 'नखं तु गन्धद्रव्ये स्यान्नखः करजषण्डयोः" विश्व०।

**नखकुट्ट ನಖಕುಟ್ಟ** (पुं०) ನಾಪಿತ, ಉಗುರನ್ನು ಕತ್ತರಿಸುವವನು, ಕ್ಷೌರಿಕ. नखं कुट्टयति—कुट्ट (छेदने) "अण्" (३-२-१)।

**नखक्षत ನಖಕ್ಷತ** (न०) ಉಗುರಿನಿಂದಾದ ಗಾಯ.. नखैः क्षतम्। "सद्यो वसन्तेन समागतानां नखक्षतानीव वनस्थलीनाम्" कुमा० ३-२९।

**नखदारण ನಖದಾರಣ** (न०) ಉಗುರನ್ನು ಕತ್ತರಿಸುವ ನಾಪಿತನ ಒಂದು ಆಯುಧ, ಚೀರಣ. नखं दार्यतेऽनेन—दृ (विदारणे) + णिच् "ल्युट्" (३-३-११७)।

**नखनिकृन्तन ನಖನಿಕೃಂತನ** (न०) ಚೀರಣ, ನಾಪಿತನು ಉಗುರನ್ನು ಕತ್ತರಿಸುವ ಒಂದು ಆಯುಧ. नखं निकृत्यते अनेन—कृती (छेदने) "ल्युट्" (३-३-११७)। मुम्। बाहु०।

**नखपद ನಖಪದ** (न०) ನಖಕ್ಷತ. नखस्य पदम्।

**नखम्पच ನಖಂಪಚ** (वि०) ಉಗುರನ್ನು ಸುಡುವ, ಉಗುರನ್ನು ಬಿಸಿಯಾಗಿ ಮಾಡುವ. नखं पचति – डु पचष् (पाके) "खश्" (३-२-३४)। मुम् (६-३-६७)।

**नखर ನಖರ** (पुंन०) ಉಗುರು. नखं राति—रा (दाने) "कः" (३-२-३)। "किं पुनरलंकृतस्त्वं संप्रति नखरक्षतैस्तस्याः" सा० द०।

**नखरञ्जनी ನಖರಂಜನೀ** (स्त्री०) ನಾಪಿತನು ಉಗುರನ್ನು ತೆಗೆಯುವ ಒಂದು ಆಯುಧ, ಚೀರಣ. नखं रञ्जयति—रञ्ज (रागे) + णिच् "ल्युः" (३-१-१३४)। गौरा० "ङीष्" (४-१-४१)। "पुनर्भवच्छेदकरी गङ्गेव नखरञ्जनी" उद्भ०।

**नखरायुध ನಖರಾಯುಧ** (पुं०) 1. ಸಿಂಹ. 2. ವ್ಯಾಘ್ರ, ಹುಲಿ. 3. ನಾಯಿ. नखर एवायुधमस्य। स्त्रियाम् जाति० "ङीष्" (४-१-६३)।

**नखराह्व ನಖರಾಹ್ವ** (पुं०) ಗನ್ನೇರಳೆ ಗಿಡ. नखरमाह्वयते स्पर्धते आकारेण।

**नखविष ನಖವಿಷ** (पुं०) ಮನುಷ್ಯ. नखे विषमस्य। "नागाः स्युर्दृग्विषा लूनविषास्तु वृश्चिकादयः। व्याघ्रादयो लोमविषा नखविषा नरादयः। लालाविषास्तु लूताद्याः कालान्तरविषाः पुनः। मूषिकाद्याः"।

**नखाघात ನಖಾಘಾತ** (पुं०) ನಖಗಳಿಂದ ಹೊಡೆಯುವುದು. नखैराघातः। ಸುರತ ಸಮಯದಲ್ಲಿ ನಾಯಿಕಾ ನಾಯಕರ ಅಂಗಗಳಲ್ಲಿ ಬೀಳುವ ನಖಗಳ ಏಟು. "नखाघातः प्रदातव्यो यथास्थानानि नर्मसु। पार्श्वयोः स्तनयोश्चैव ऊरौ चैव नितम्बके। कक्षस्थले च कक्षान्ते कपाले बाहुमूलके। ग्रीवायां कण्ठदेशे च नखाघातं समाचरेत्"।

**नखानखि ನಖಾನಖಿ** (अव्य०) ಪರಸ್ಪರ ನಖಗಳಿಂದ ಹೊಡೆದು ಮಾಡುವ ಯುದ್ಧ. नखैश्च नखैश्च प्रहृत्य प्रवृत्तं युद्धम् कर्मव्य० "इच्" समासान्तः (५-४-१२७)।

**नखायुध ನಖಾಯುಧ** (पुं०) 1. ಸಿಂಹ. 2. ವ್ಯಾಘ್ರ, ಹುಲಿ. 3. ನಾಯಿ. नख एवायुधमस्य।

**नखालु ನಖಾಲು** (पुं०) ನಿಲಿ ಗಿಡ.

**नखाशिन् ನಖಾಶಿನ್** (पुं०) ಉಲೂಕ, ಗೂಬೆ. नखमश्नाति—अश (भोजने) "णिनिः" (३-२-७८)।

**नखिन् ನಖಿನ್** (पुं०) 1. ಸಿಂಹ. 2. ವ್ಯಾಘ್ರ, ಹುಲಿ. 3. ನಾಯಿ. नखोऽस्त्यस्य प्राशस्त्येन "इनिः"(५-२-११५)। "नदीनां शस्त्रपाणीनां नखिनां शृङ्गिणां तथा। विश्वासो नैव कर्तव्यः स्त्रीषु राजकुलेषु च" चाणक्यः। (वि०) 4. ನಖವೇ ಪ್ರಧಾನವಾಗಿ ಉಳ್ಳವನು.

**नखी ನಖೀ** (स्त्री०) ನಖಿಯೆಂಬ ಒಂದು ಗಂಧದ್ರವ್ಯ. नखः आकारत्वेनास्त्यस्य "अच्" (५-२-१२७)। गौरा० "ङीष्" (४-१-४१)।

**नग** **ನಗ** (पुं०) 1. ಪರ್ವತ, ಬೆಟ್ಟ. न गच्छति—गम्लृ (गतौ) "ड:" (वा० ३-२-४८)। वा नञो नलोप: (६-३-७७)। "अनुचरेण धनाधिपतेरथो नगविलोकनविस्मितमानसः" किरा० ५-१६। 2. ವೃಕ್ಷ, ಮರ. "वनं बबाधे विषपावकोत्था विपन्नगानामविपन्नगानाम्" माघ० ४-१५।

**नगज** **ನಗಜ** (वि०) 1. ಬೆಟ್ಟದಲ್ಲಿ ಹುಟ್ಟಿದ. नगे जायते—जनी (प्रादुर्भावे) "ड:" (३-२-९७)। "न गजा नगजा दयिता दयिता विगतं विगतं ललितं ललितम्" भट्टि० १०-९। (स्त्री०) **–जा –ಜಾ.** 2. ಪಾರ್ವತಿ. ಪರ್ವತರಾಜನ ಪುತ್ರಿ.

**नगनिम्नगा** **ನಗನಿಮ್ನಗಾ** (स्त्री०) ಗಿರಿನದಿ, ಬೆಟ್ಟದಲ್ಲಿ ಹುಟ್ಟಿದ ನದಿ.

**नगपति** **ನಗಪತಿ** (पुं०) 1. ಪರ್ವತರಾಜ, ಹಿಮವಂತ. नगानां पतिः। 2. ಚಂದ್ರ. नगानामोषधीनां (वृक्षाणाम्) पतिः।

**नगभू** **ನಗಭೂ** (स्त्री०) 1. ಪರ್ವತಪ್ರದೇಶ. नगस्य भूः। (वि०) 2. ಬೆಟ್ಟದಲ್ಲಿ ಹುಟ್ಟಿದ. नगे भवति—भू "क्विप्"।

**नगर** **ನಗರ** (न०) 1. ಪುರ, ಪಟ್ಟಣ. नगाः सन्त्यत्र "र:" (वा० ५-२-१०७)। ವಾಣಿಜ್ಯದಲ್ಲಿ ನಿಪುಣರಾದ ವರ್ತಕರಿಂದಲೂ ಚಾತುರ್ವರ್ಣ್ಯದಿಂದಲೂ ನಾನಾಜಾತಿಯ ಜನರಿಂದಲೂ ಅನೇಕ ಶಿಲ್ಪಿಗಳಿಂದಲೂ ಸಕಲ ದೇವತೆ (ದೇವರ ಗುಡಿ) ಗಳಿಂದಲೂ ಕೂಡಿದ ಊರು ನಗರವೆನಿಸುವುದು. "पण्यक्रियादिनिपुणैश्चातुर्वर्ण्यजनैर्युतम्। अनेकजातिसम्बद्धं नैकशिल्पिसमाकुलम्। सर्वदैवतसम्बद्धं नगरन्त्वभिधीयते"। गौरा० "ङीष्" (४-१-४१)। नगरी ನಗರೀ.

**नगरकाक** **ನಗರಕಾಕ** (पुं०) ಪಟ್ಟಣದ ಕಾಗೆ. ಕಾಗೆಯಂತೆ ನಡವಳಿಕೆಯುಳ್ಳ ಮನುಷ್ಯನಲ್ಲಿ ಈ ಪ್ರಯೋಗ.

**नगरगामिन्** **ನಗರಗಾಮಿನ್** (वि०) ನಗರಕ್ಕೆ ಹೋಗುವ, ಪಟ್ಟಣಕ್ಕೆ ಹೋಗಿ ಸೇರುವ (ದಾರಿ). नगरं गच्छति गम्लृ (गतौ) "णिनिः" (३-१-१३४)। "गजवधूमारुह्य नगरगामिनं मार्गमिन्दुवदनालंकृतवती" मालती० १।

**नगरघात** **ನಗರಘಾತ** (पुं०) ಗಜ, ಆನೆ. नगरं हन्ति—हन (हिंसागत्योः) "अण्" बाहु०। नगरघातो हस्ती सि० कौ०।

**नगरमार्ग** **ನಗರಮಾರ್ಗ** (पुं०) ಪಟ್ಟಣದ ರಸ್ತೆ, ನಗರದೊಳಗಿನ ರಸ್ತೆ, ರಾಜಮಾರ್ಗ. ರಾಜಮಾರ್ಗವು ರಾಜನ ಅರಮನೆಯ ಸುತ್ತಲೂ (ನಾಲ್ಕು ದಿಕ್ಕುಗಳಲ್ಲಿಯೂ) ಇರಬೇಕು. ಮೊದಲನೆಯ ದರ್ಜೆಯ ಮಾರ್ಗವು ಮೂವತ್ತು ಹಸ್ತಗಳ (ಮೊಳಗಳ) ಅಗಲವಾಗಿಯೂ ಎರಡನೆಯ ದರ್ಜೆಯದು ಇಪ್ಪತ್ತು ಹಸ್ತ (ಮೊಳ) ಗಳ ಅಗಲವಾಗಿಯೂ ಇರಬೇಕು. ಅಧಮವಾದುದು ಹದಿನೈದು ಮೊಳ ಅಗಲದ್ದಾಗಿರಬೇಕು. "राजमार्गास्तु कर्तव्याश्चतुर्दिक्षु नृपालयात्। उत्तमो राजमार्गस्तु त्रिंशद्धस्तमितो भवेत्। मध्यमो विंशतिकरो दशपञ्चकरोऽधमः"।

**नगरन्ध्रकर** **ನಗರಂಧ್ರಕರ** (पुं०) ಷಣ್ಮುಖ. ಕಾರ್ತಿಕೇಯ, ಸ್ಕಂದ. नगस्य क्रौञ्चस्य रन्ध्रं करोति—डु कृञ् (करणे) "ट:" (३-२-२०)। "अभवदस्य ततो गुणवत्तरं सनगरं नगरन्ध्रकरौजसः" रघु० ९-२।

**नगराध्यक्ष** **ನಗರಾಧ್ಯಕ್ಷ** (पुं०) ನಗರಸಭೆಯ ಅಧ್ಯಕ್ಷ, ರಾಜನಿಂದ ಅಥವಾ ಪ್ರಜೆಗಳಿಂದ ಚುನಾಯಿಸಲ್ಪಟ್ಟ ನಗರದ ಪ್ರಥಮ ಪ್ರಜೆ. नगरे अध्यक्षः। ನಗರಗಳಲ್ಲಿ ಪ್ರಜೆಗಳ ಸಕಲ ಹಿತಗಳನ್ನೂ ಚಿಂತಿಸಲು ಮತ್ತು ಅವರಿಗೆ ತಕ್ಕ ಸೌಕರ್ಯ ಸೌಲಭ್ಯಗಳನ್ನೂ ಕಲ್ಪಿಸಲು ಒಬ್ಬನನ್ನು ಅಧ್ಯಕ್ಷನನ್ನಾಗಿ ಚುನಾಯಿಸಬೇಕು. "नगरे नगरे वा स्यादेकः सर्वार्थचिन्तकः। उच्चैः स्थाने घोररूपो नक्षत्राणामिव ग्रहः। भवेत्स तान् परिक्रामेत् सर्वानेव सभासदः" भा० शान्ति० ८७-१०, ११।

**नगाटन** **ನಗಾಟನ** (पुं०) 1. ವಾನರ, ಕಪಿ. नगे वृक्षे अटनमस्य। "गोलाङ्गूले कपिरथास्यदधिशोणनगाटनाः" त्रिकाण्ड०। (न०) 2. ಪರ್ವತ ಮತ್ತು ವೃಕ್ಷಗಳಲ್ಲಿ ಸಂಚಾರ. नगे गिरौ वृक्षे वा अटनम्।

**नगाधिप** **ನಗಾಧಿಪ** (पुं०) 1. ಪರ್ವತಗಳ ರಾಜ. नगानामधिपः। 2. ಸುಮೇರು ಪರ್ವತ.

**नगाधिराज** **ನಗಾಧಿರಾಜ** (पुं०) ಪರ್ವತಗಳ ರಾಜ, ಹಿಮವಂತ. नगानामधिराजः। "अस्त्युत्तरस्यां दिशि देवतात्मा हिमालयो नाम नगाधिराजः" कुमा० १-१।

**नगारि** **ನಗಾರಿ** (पुं०) ಪರ್ವತಗಳ ಶತ್ರು, ಇಂದ್ರ. नगानामरिः। ಪರ್ವತಗಳ ರೆಕ್ಕೆಗಳನ್ನು ಕತ್ತರಿಸಿದುದರಿಂದ ಇಂದ್ರನು ಪರ್ವತಗಳಿಗೆ ಶತ್ರುವಾದನು. "नदीज, लङ्केशवनारिकेतुर्नगाह्वयो नाम नगारिसूनुः" भा० विरा० ४०-११।

**नगाश्रय ನಗಾಶ್ರಯ** (वि०) ಪರ್ವತ ಮತ್ತು ವೃಕ್ಷಗಳಲ್ಲಿ ವಾಸಮಾಡುವ. नगः पर्वतः वृक्षो वा आश्रयो यस्य।

**नगेन्द्र ನಗೇಂದ್ರ** (पुं०) 1. ಪರ್ವತಗಳ ಒಡೆಯ, ಹಿಮವಂತ. नगानामिन्द्रः। "रश्मिष्विवादाय नगेन्द्रसक्तां विवर्तयामास नृपस्य दृष्टिम्" रघु० २-२८। 2. ಶ್ರೇಷ್ಠವಾದ ಪರ್ವತ.

**नगौकस् ನಗೌಕಸ್** (पुं०) 1. ಪಕ್ಷಿ, ಹಕ್ಕಿ. नगो वृक्षः नगे वृक्षे वा ओकोऽस्य। 2. ಸಿಂಹ. 3. ಶರಭಮೃಗ. 4. ವ್ಯಾಘ್ರ, ಹುಲಿ. नगः पर्वतः ओको यस्य। (वि०) 5. ಬೆಟ್ಟ ಮತ್ತು ವೃಕ್ಷಗಳಲ್ಲಿ ವಾಸಮಾಡುವ. "नगौकाः पुंसि शरभे पक्षिपञ्चास्ययोरपि" मेदि०।

**नग्न ನಗ್ನ** (पुं०) 1. ದಿಗಂಬರ ಜೈನಸಂನ್ಯಾಸಿ. 2. ಸ್ತುತಿ ಪಾಠಕ, ಹೊಗಳುಭಟ. (वि०) 3. ಬಟ್ಟೆಯನ್ನು ಧರಿಸದಿರುವವನು, ಬೆತ್ತಲೆಯವನು. नजते—ओ नजी (लज्जायाम्) "क्तः" (३-४ ७२)। नत्वम् (८-२-४५)। "नग्नो विवाससि। मागधे च क्षपणके" हेम०। ನಗ್ನರು ಐದು ವಿಧ. (1) द्विकच्छः (ಎರಡು ಕಚ್ಚೆಗಳನ್ನು ಹಾಕಿರುವವನು). (2) कच्छशेषः (ಬಟ್ಟೆಯ ತುದಿಯನ್ನು ಬಿಟ್ಟು ಕಚ್ಚೆ ಹಾಕಿರುವವನು). (3) मुक्तकच्छः। (4) एकवासाः (ಒಂದೇ ವಸ್ತ್ರವನ್ನು ಉಟ್ಟಿರುವವನು). ಮತ್ತು (5) अवासाः (ಬೆತ್ತಲೆಯಾಗಿರುವವನು) ಇವರೆಲ್ಲರೂ ನಗ್ನರು. ನಗ್ನರಾಗಿರುವ ಪುರುಷರನ್ನೂ ಹೆಂಗಸರನ್ನೂ ನೋಡಕೂಡದು. "न नग्नां स्त्रियमीक्षेत पुरुषं वा कदाचन"। 4. ವೇದಶಾಸ್ತ್ರಾಭ್ಯಾಸಗಳಿಲ್ಲದ ವಂಶದಲ್ಲಿ ಹುಟ್ಟಿದವನು. ಇವನ ಅನ್ನವು ನಿಷಿದ್ಧ. "येषां कुले न वेदोऽस्ति न शास्त्रं नैव च श्रुतम्। ते नग्नाः कीर्तिताः सद्भिस्तेषामन्नं विगर्हितम्" मार्कं०।

**नग्नजित् ನಗ್ನಜಿತ್** (पुं०) 1. ಒಬ್ಬ ರಾಜ. ಈತನ ಮಗಳಾದ ಸತ್ಯೆ ಎಂಬುವಳನ್ನು ಶ್ರೀಕೃಷ್ಣನು ಮದುವೆಯಾದನು. भाग० १०-५८। 2. ವಾಸ್ತುಶಿಲ್ಪ ಗ್ರಂಥವನ್ನು ಬರೆದ ಒಬ್ಬ ಪಂಡಿತ. "आस्यं सकेशनिचयं षोडश दैर्घ्येण नग्नजित्प्रोक्तम्" बृहत्सं० ५८-१५।

**नग्नता ನಗ್ನತಾ** (स्त्री०) ಬೆತ್ತಲೆಯಾಗಿರುವಿಕೆ. नग्न "तल्" (५-१-११९)।

**नग्नमुषित ನಗ್ನಮುಷಿತ** (वि०) ಧನ ಮತ್ತು ಆಸ್ತಿಗಳನ್ನು ಕಸಿದುಕೊಂಡುದರಿಂದ ನಗ್ನನಾಗಿರುವವನು. मुषितो नग्नः। परनिपातः (२-२-३१)। "को नग्नमुषितप्रख्यं बहु मन्येत राघवम्" भट्टि० ५-८४।

**नग्नम्भविष्णु ನಗ್ನಂಭವಿಷ್ಣು** (वि०) ನಗ್ನನಾಗಿ ಆಗುವ ಸ್ವಭಾವದ, ಬೆತ್ತಲೆಯಾಗಿ ಆಗುವ ಸ್ವಭಾವದ. अनग्नो नग्नो भवति—भू "खिष्णुच्" (३-२-५७)। "खुकञ्" (३-२-५७)। —भावुक—ಭಾವುಕ. मुम् (६-३-६७)।

**नग्नहू ನಗ್ನಹೂ** (पुं०) ಮದ್ಯ ತಯಾರಿಸಲು ಬೇಕಾದ ಅನೇಕ ವಸ್ತುಗಳಿಂದ ಕೂಡಿದ ಗಟ್ಟಿಪದಾರ್ಥ. ह्वयते—ह्वेञ् (स्पर्धायां शब्दे च) "क्विप" (वा० ३-३-१०८)। नग्नस्य हूः। ಈ ವಸ್ತುವು ಇದನ್ನು ಸೇವಿಸುವವನನ್ನು ನಗ್ನನನ್ನಾಗಿ ಮಾಡುವುದರಿಂದ ಈ ಹೆಸರು.

**नग्नाट ನಗ್ನಾಟ** (पुं०) ದಿಗಂಬರನಾಗಿ ಸಂಚರಿಸುವ ಜೈನ ಸಂನ್ಯಾಸಿ. नग्नः सन् अटति—अट (गतौ) "अच्" (३-१-१३४)। "ण्वुल्" (३-१-१३३)। —अटकः —ಅಟಕಃ.

**नग्निका ನಗ್ನಿಕಾ** (स्त्री०) 1. ಪುಷ್ಪವತಿಯಾಗದಿರುವ ಹೆಂಗಸು, ಮೈ ನೆರೆಯದಿರುವ ಹೆಂಗಸು (ಕನ್ಯೆ). नजते—ओनजी (लज्जायाम्) "क्तः" (३-४-७२)। नत्वम् (८-२-४५)। स्वार्थे "कन्" (५-३-७५)। 2. ಬೆತ್ತಲೆಯ ಹೆಂಗಸು.

**नग्नीकरण ನಗ್ನೀಕರಣ** (न०) ಬೆತ್ತಲೆಯಾಗಿ ಮಾಡುವುದು.

**नग्नीकृत ನಗ್ನೀಕೃತ** (वि०) ಬೆತ್ತಲೆಯಾಗಿ ಮಾಡಲ್ಪಟ್ಟ. अनग्नः नग्नः कृतः।

**नग्नीभवन ನಗ್ನೀಭವನ** (न०) ಬೆತ್ತಲೆಯಾಗಿ ಆಗುವುದು.

**नग्नीभूत ನಗ್ನೀಭೂತ** (वि०) ಬೆತ್ತಲೆಯಾಗಿ ಆಗಿರುವ. अनग्नः नग्नो भूतः।

**नङ्ग ನಂಗ** (पुं०) ಜಾರ, ವ್ಯಭಿಚಾರಿ.

**नचिकेत(स्) ನಚಿಕೇತ(ಸ್)** (पुं०) ಆರುಣಿಯೆಂಬ ಉದ್ದಾಲಕಋಷಿಯ ಮಗ. [ಉದ್ದಾಲಕನು ಯಾಗವಲ್ಲಿ ಬ್ರಾಹ್ಮಣರಿಗೆ ದಕ್ಷಿಣೆಗೆ ಬದಲಾಗಿ ಮುದಿ ಹಸುಗಳನ್ನು ಕೊಡುತ್ತಿದ್ದನು. ಇದನ್ನು ನೋಡುತ್ತಿದ್ದ ನಚಿಕೇತನು ನನ್ನನ್ನು ಯಾರಿಗೆ ಕೊಡುವೆಯೆಂದು ತಂದೆಯನ್ನು ಕೇಳಿದನು. ಇದರಿಂದ ಕೋಪಗೊಂಡ ಉದ್ದಾಲಕನು ನಿನ್ನನ್ನು ಮೃತ್ಯುವಿಗೆ ಕೊಡುತ್ತೇನೆಂದು ಹೇಳಿದನು. ನಚಿಕೇತನು ಯಮನಲ್ಲಿಗೆ ಹೋದನು. ಯಮನು ಮನೆಯಲ್ಲಿಲ್ಲದಿರಲು ಬರುವವರೆಗೂ ಕಾದಿದ್ದನು. ಯಮನು ಬಂದು ನಚಿಕೇತನನ್ನು ಸತ್ಕರಿಸಿದನಂತರ ಇಬ್ಬರಿಗೂ ವಾದ ಪ್ರತಿವಾದಗಳು ನಡೆದವು. ನಚಿಕೇತನು ತನ ಬುದ್ಧಿಶಕ್ತಿಯಿಂದ

ಯಮನನ್ನು ಮೆಚ್ಚಿಸಿ ಒಳ್ಳೆಯ ಜ್ಞಾನವನ್ನು ಪಡೆದು ಮತ್ತೆ ತಂದೆಯಲ್ಲಿಗೆ ಬಂದು ಸೇರಿದನು.] "मृत्युप्रोक्तां नचिकेतोऽथ लब्ध्वा विद्यामेतां योगविधिं च कृत्स्नम्" कठो०।

**नचिर ನಚಿರ** (अव्य०) ಬೇಗ, ಶೀಘ್ರವಾಗಿ, ಕ್ಷಿಪ್ರವಾಗಿ. न चिरम्। चिर ಶಬ್ದಕ್ಕೆ न ಶಬ್ದದೊಡನೆ "सह सुपा" (२-१-४) ಸೂತ್ರದಿಂದ ಸಮಾಸ ಬಂದಿರುವುದು. ಹೀಗೆಯೇ नचिरेण नचिरात् ಇತ್ಯಾದಿ. "तेषामहं समुद्धर्ता मृत्युसंसारसागरात्। भवामि नचिरात् पार्थ मय्यावेशितचेतसाम्" गीता १२-७।

**ओ नजी – लज्जायाम्** (भ्वा० आत्म० अक० से०)। नजते। अनजिष्ट। ಇತ್ಯಾದಿ.

**नञ् ನಞ್** (अव्य०) ಇದು ಈ ಕೆಳಗಿನ ಅರ್ಥಗಳನ್ನು ಕೊಡುವ ಒಂದು ಅವ್ಯಯ. (ಸಮಾಸದಲ್ಲಿ) ಉತ್ತರ ಪದವು ಪರವಾದಾಗ ಇದರ न ಕಾರಕ್ಕೆ ಲೋಪ ಬರುವುದು. ಉತ್ತರ ಪದವು ಅಜಾದಿಯಾಗಿದ್ದಲ್ಲಿ नुट् ಆಗಮವು ಬರುವುದು. न ब्राह्मणः अब्राह्मणः। न अश्वः अनश्वः। **ನಞರ್ಥಗಳು:** 1. ಅಭಾವ. "अपापम्"। "भूतले घटो नास्ति" ಇತ್ಯಾದಿ. 2. ನಿಷೇಧ. "न कुर्वीत वृथाचेष्टां न वार्यञ्जलिना पिबेत्। नोत्सङ्गे भक्षयेद्भक्ष्यान् न जातु स्यात् कुतूहली" मनु० ४-६३। 3. ಸ್ವರೂಪ. "न" इति नकारस्वरूपो वर्णः। 4. ಅತಿಕ್ರಮ, ಮೀರುವುದು, ಉಲ್ಲಂಘಿಸುವುದು. 5. ಈಷತ್, ಸ್ವಲ್ಪ. "अनुदरा कन्या"। 6. ಸಾದೃಶ್ಯ. "अब्राह्मणः"— ब्राह्मणसदृशः। 7. ವಿರುದ್ಧ. "अधर्मेण च यः प्राह यश्चाधर्मेण पृच्छति" मनु० २-१११। 8. ಅನ್ಯತ್ವ, ಭೇದ. "अनश्वः"। "नञभावे निषेधे च स्वरूपार्थेऽप्यतिक्रमे। ईषदर्थे च सादृश्ये तद्विरुद्धतदन्ययोः" मेदि०। "तत्सादृश्यमभावश्च तदन्यत्वं तदल्पता। अप्राशस्त्यं विरोधश्च नञर्थाः षट् प्रकीर्तिताः। नञ् ದ್ವಯವು ಪ್ರಕೃತಾರ್ಥವನ್ನು ದೃಢಪಡಿಸುವುದು. "न कश्चिन्नापराध्यति"।

**नट – नृत्तौ** (भ्वा० पर० अक० से०)। नटति। ननाट। नटिता। नटिष्यति। नटतु। अनटत्। नटेत्। ಇತ್ಯಾದಿ. ಕುಣಿದಾಡು, ಸಂಗೀತ ಮತ್ತು ವಾದ್ಯಗಳ ಸಮೇತ ಕುಣಿದಾಡು.

**भावे:**—नट्यते। नेटे। नटिता। नटिष्यते। नट्यताम्। ಇತ್ಯಾದಿ.

**णिचि:**—नाटयति, –ते। नाटयां चकार, –चक्रे, –बभूव, –आस। नाटयिता। नाटयिष्यति, –ते। नाटयतु, –ताम्। ಇತ್ಯಾದಿ.

**कृत्सु:**—नटितव्यम्। नटनीयम्। नाट्यम्। नटितः। नटितवान्, –वती। नटन्, –न्ती। नटितुम्। नटितम्। नटनम्। नटित्वा। प्रणट्य।

**नट – अवस्यन्दने** (चुरा० उभ० सक० से०)। नाटयति, –ते। अनीनटत्, –त। ಇತ್ಯಾದಿ. ಸ್ವಲ್ಪ ಚಲಿಸು, ಸ್ವಲ್ಪ ಅಲುಗಾಡು.

**नट ನಟ** (पुं०) 1. ಶೈಲೂಷ, ಅಭಿನಯಪೂರ್ವಕ ಸಂಗೀತ ಮೇಳಗಳೊಡನೆ ಕುಣಿದಾಡುವವನು. नट (नृत्तौ) "अच्" (३-१-१३४)। 2. ವ್ರಾತ್ಯ (ಸಂಸ್ಕಾರಹೀನ) ನಾದ ಕ್ಷತ್ರಿಯನಿಗೆ ಸವರ್ಣ ಸ್ತ್ರೀಯಲ್ಲಿ ಹುಟ್ಟಿದ ಮಗ. "झल्लो मल्लश्च राजन्याद्व्रात्यान्निच्छिविरेव च। नटश्च करणश्चैव खसो द्रविड एव च" मनु० १०-२२। 3. ಹೆಮ್ಮರ, ಶಿಗಡುಮರ. 4. ದೃಶ್ಯಕಾವ್ಯಗಳ ಅರ್ಥವನ್ನು ಶರೀರ ಮತ್ತು ಮಾತುಗಳಿಂದ ಅಭಿನಯಿಸಿ ತೋರಿಸುವ ನರ್ತಕ. 5. ಅಶೋಕವೃಕ್ಷ. 6. ಲಾಳದ ಗಿಡ. (स्त्री०) **–टी –ಟೀ.** 7. ನರ್ತಕಿ. "नटी विदूषको वापि पारिपार्श्वक एव वा" सा० द०। 8. ಒಂದು ಗಂದಿಗರ ಸರಕು.

**नटचर्या ನಟಚರ್ಯಾ** (स्त्री०) ನಟನಕಾರ್ಯ, ವಾಕ್ಯಾರ್ಥಗಳನ್ನು ಅಭಿನಯದಿಂದ ತೋರಿಸುವುದು. नटस्य चर्या। "नामानि रूपाणि मनोवचोभिः सन्तन्वतो नटचर्यामिवाज्ञः" भाग० १-३-३७।

**नटत् ನಟತ್** (वि०) ನರ್ತನಮಾಡುತ್ತಿರುವ, ಕುಣಿದಾಡುತ್ತಿರುವ. नट (नृत्तौ) "शतृ" (३-२-१२४)। स्त्रियाम् "ङीप्" (४-१-६)। **–न्ती –ನ್ತೀ.**

**नटन ನಟನ** (न०) 1. ನರ್ತನ, ಕುಣಿದಾಟ. नट (नृत्तौ) भावे "ल्युट्" (३-३-११५)। 2. ಶರೀರ ಮತ್ತು ವಾಕ್ಕು ಇವುಗಳಿಂದ ರಾಮ ಕೃಷ್ಣ ಮೊದಲಾದವರ ಅನುಕರಣ.

**नटनीय ನಟನೀಯ** (वि०) 1. ನರ್ತನಮಾಡಬೇಕಾದ. 2. ಅಭಿನಯಿಸಬೇಕಾದ. नट (नृत्तौ) "अनीयर्"।

**नटभूषण ನಟಭೂಷಣ** (पुं०) ಹರಿದಳ. नटान् भूषयति— भूष (अलङ्कारे) + णिच् "ल्युः" (३-१-१३४)।

**नटमण्डन ನಟಮಂಡನ** (न०) ಹರಿದಳ. नटान् मण्डयति — मडि (भूषायाम्) + णिच् "ल्युः" (३-१-१३४)।

**नटसूत्र ನಟಸೂತ್ರ** (नं०) ನಟನ ಅಭಿನಯಾದಿ ವಿಷಯಗಳನ್ನು ತಿಳಿಸುವ ಶಿಲಾಲಿಯಿಂದ ರಚಿತವಾದ ಒಂದು ಗ್ರಂಥ. नटस्य तद्व्यापारस्य अभिनयादेः प्रतिपादकं सूत्रम्। "पाराशर्यशिलालिभ्यां भिक्षुनटसूत्रयोः" पा० सू० ४-३-११०।

**नटान्तिका ನಟಾಂತಿಕಾ** (स्त्री०) ಲಜ್ಜೆ, ನಾಚಿಕೆ. नटस्य तद्व्यापारस्य अन्तो यस्याः "कप्" (५-४-१५४)।

**नटेश ನಟೇಶ, -ईश्वर -ಈಶ್ವರ** (पुं०) ನಟರಾಜ, ಪರಮೇಶ್ವರ.

**नट्या ನಟ್ಯಾ** (स्त्री०) ನಟರ ಸಮೂಹ. नटानां समूहः "यः" (४-२-४९)।

**नड(ल) ನಡ(ಲ)** (पुं०) 1. ಲಾಳದ ಗಿಡ, ಒಂದು ಜಾತಿಯ ಹುಲ್ಲು, ಜೊಂಡುಹುಲ್ಲು. 2. ಗೋತ್ರ ಪ್ರವರ್ತಕರಾದ ಒಬ್ಬ ಋಷಿ.

**नडक ನಡಕ** (नं०) ಎರಡು ಹೆಗಲುಗಳ ಮಧ್ಯದಲ್ಲಿರುವ ಒಂದು ಮೂಳೆ.

**नड(ल)कीय ನಡ(ಲ)ಕೀಯ** (वि०) ಲಾಳದ ಗಿಡಗಳಿಂದ ತುಂಬಿರುವ. नडाः सन्त्यत्र "छः" कुक् च (४-२-९१)।

**नड(ल)कूबर ನಡ(ಲ)ಕೂಬರ** (पुं०) ಕುಬೇರನ ಮಗ.

**नड(ल)प्राय ನಡ(ಲ)ಪ್ರಾಯ** (पुं०) ಲಾಳದ ಗಿಡದಿಂದ ತುಂಬಿದ ಪ್ರದೇಶ.

**नड(ल)मीन ನಡ(ಲ)ಮೀನ** (पुं०) ಜಂಬುಮೀನು, ಹುಲ್ಲುಮೀನು. ಜಂಬುಹುಲ್ಲಿನ ಮಧ್ಯದಲ್ಲಿ ವಾಸಮಾಡುವ ಮೀನು. नड(ल)वनस्थितो मीनः।

**नड्या ನಡ್ಯಾ** (स्त्री०) ನಡಸಮೂಹ, ಜಂಬುಹುಲ್ಲಿನ ಸಮುದಾಯ, ಜಂಬುಹುಲ್ಲಿನ ರಾಶಿ. नडानां समूहः "यः" (४-२-४९)।

**नड्वत् ನಡ್ವತ್** (वि०) ಜಂಬುಹುಲ್ಲು ಹೆಚ್ಚಾಗಿರುವ ದೇಶ. नडाः सन्त्यत्र "ड्मतुप्" (४-२-८७)।

**नड्वल ನಡ್ವಲ** (वि०) ಜಂಬುಹುಲ್ಲು ಹೆಚ್ಚಾಗಿರುವ ದೇಶ. नडाः सन्त्यत्र "वलच्" (४-२-८८)। "नड्वान्नड्वल इत्यपि" अम०। "यो नड्वलानीव गजः परेषां बलान्य मृद्नान्नलिनाभवक्त्रः" रघु० १८-५।

**नत ನತ** (नं०) 1. ನಮಸ್ಕಾರ, ಪ್ರಣಾಮ. (वि०) 2. ವಕ್ರವಾಗಿರುವ, ಡೊಂಕಾಗಿರುವ. 3. ಬಗ್ಗಿರುವ. णम (प्रह्वत्वे शब्दे) "क्तः" (३-४-७२)। "नतेन धनुषा नाकं वपुषा च वसुन्धराम्" याद० २२-१४४। 4. ನಮಸ್ಕರಿಸಿದ. "तथापि मुह्यन्ति तवाज मायया सुविस्मितं कृत्यमजं नतोऽस्मि तम्" भाग० ५-१८-४। 5. ನಮಸ್ಕರಿಸಲ್ಪಟ್ಟ. णम कर्म० "क्तः" (३-२-१०२)। 6. ಆಳವಾಗಿರುವ. "तस्याः प्रविष्टा नतनाभिरन्ध्रं रराज तन्वी नवलोमराजिः" कुमा० १-३८। 7. ಚಪ್ಪಟೆಯಾದ.

**नतकन्धर ನತಕಂಧರ** (वि०) ಬಗ್ಗಿದ ಕುತ್ತಿಗೆಯುಳ್ಳವನು, ಕತ್ತನ್ನು ಬಗ್ಗಿಸಿದವನು. नता कन्धरा यस्य।

**नतनासिक ನತನಾಸಿಕ** (वि०) ಚಪ್ಪಟೆಯಾದ ಮೂಗುಳ್ಳವನು. नता नासिका यस्य।

**नतभ्रू ನತಭ್ರೂ** (स्त्री०) ವಕ್ರವಾದ ಹುಬ್ಬುಗಳುಳ್ಳ ಹೆಂಗಸು. नता कुटिला भ्रूः यस्याः। "नतभ्रुवः स्वच्छनखानुबिम्बनच्छलेन कोऽपि स्फुटकम्पकण्टकः" नैष० १६-६०।

**नताङ्गी ನತಾಂಗೀ** (स्त्री०) ಬಗ್ಗಿದ ದೇಹವುಳ್ಳ ಹೆಂಗಸು. नतमङ्गमस्याः "ङीष्" (वा० ४-१-५५)। "तामीषत्प्रचलविलोचनां नताङ्गीमालिङ्गन् पवन मम स्पृशाङ्गमङ्गम्" मालती० १-४१।

**नति ನತಿ** (स्त्री०) 1. ನಮಸ್ಕಾರ. णम (प्रह्वत्वे शब्दे) "क्तिन्" (३-३-९४)। 2. ಬಗ್ಗಿರುವಿಕೆ.

**नतोन्नत ನತೋನ್ನತ** (वि०) ಹಳ್ಳತಿಟ್ಟಾಗಿರುವ. नतं च तदुन्नतं च। "अस्मिन्नलक्षितनतोन्नतभूमिभागे मार्गे पदानि खलु ते विषमीभवन्ति" शाकु० ४-१४।

**नद ನದ** (पुं०) 1. ಗಂಡುಹೊಳೆ, ಪಶ್ಚಿಮಾಭಿಮುಖವಾಗಿ ಹರಿಯುವ ಹೊಳೆ. नदति—णद (अव्यक्ते शब्दे) "अच" (३-१-१३४)। "यथा नदीनदाः सर्वे सागरे यान्ति संस्थितिम्। तथैवाश्रमिणः सर्वे गृहस्थे यान्ति संस्थितिम्" मनु० ६-९०। 2. ಸಮುದ್ರ.

**नदत् ನದತ್** (वि०) ಶಬ್ದಮಾಡುತ್ತಿರುವ. णद (अव्यक्ते शब्दे) "शतृ" (३-२-१२४)। स्त्रियाम् "ङीप्" (४-१-६)। **-न्ती -ನ್ತೀ.**

**नदन ನದನ** (नं०) ಶಬ್ದಮಾಡುವುದು. णद (अव्यक्ते शब्दे) "ल्युट्" (३-३-११५)।

**नदनीय ನದನೀಯ** (वि०) 1. ಶಬ್ದಮಾಡಬೇಕಾದ. णद (अव्यक्ते शब्दे) "अनीयर्" (३-१-९६)। 2. ಶಬ್ದ ಮಾಡಲು ಯೋಗ್ಯವಾದ. "तव्यः" (३-१-९६)। **-दितव्यः -ದಿತವ್ಯಃ.**

**नदर ನದರ** (वि०) 1. ಭಯವಿಲ್ಲದ, ಹೆದರಿಕೆಯಿಲ್ಲದ. नास्ति दरो भयं यस्य। 2. ನದದ ಸಮೀಪಪ್ರದೇಶ. नदस्यादूरभवः "रः" (४-२-८०)। 3. ನದದಿಂದ ಉಂಟಾದ. नदेन निर्वृत्तम् "रः" (४-२-८०)।

**नदराज ನದರಾಜ** (पुं०) ನದಗಳ ಪತಿಯಾದ ಸಮುದ್ರ. नदानां राजा "टच्" (५-४-९१)।

**नदित ನದಿತ** (न०) 1. ಶಬ್ದ, ಧ್ವನಿ. णद (अव्यक्ते शब्दे) भावे "क्तः" (३-३-११४)। (वि०) 2. ಶಬ್ದಮಾಡಿದ. ಸದ್ದುಮಾಡಿದ. णद कर्तं० "क्तः" (३-४-७२)।

**नदितवत् ನದಿತವತ್** (वि०) ಶಬ್ದಮಾಡಿದ. णद (अव्यक्ते शब्दे) "क्तवतुः" (३-२-१०२)। स्त्रियाम् "ङीप्" (४-१-६)। **-वती -ವತೀ.**

**नदी ನದೀ** (स्त्री०) ನದಿ, ಹೊಳೆ. नदति—णद (अव्यक्ते शब्दे) "अच्" (३-१-१३४)। ಪಚಾದಿಗಣದಲ್ಲಿ "नदट्" ಎಂದು ಟಕಾರಾಂತವಾಗಿರುವುದರಿಂದ "ङीप्" (४-१-१५)। "नदी सरिति शोणादौ ना" मेदि०। ಎಂಟು ಸಾವಿರ ಧನುಃಪ್ರಮಾಣಕ್ಕೆ ಕಡಮೆಯಿಲ್ಲದಷ್ಟು ದೂರ ಪ್ರವಹಿಸುವ ಜಲಪ್ರವಾಹಕ್ಕೆ "ನದಿ"ಯೆಂದು ಹೆಸರು. "धनुः सहस्राण्यष्टौ च गतिर्यासां न विद्यते। न ता नदीशब्दवहा गर्तास्ते परिकीर्तिताः"। "विविध-कामहिता महिताम्भसः स्फुटसरोजवना जवना नदीः" किरा० ५-७।

**नदीकान्त ನದೀಕಾಂತ** (पुं०) 1. ನದಿಗಳಿಗೆ ಪತಿಯಾದ ಸಮುದ್ರ. नदीनां कान्तः। 2. ನೀರುಹಲಸಿನ ಗಿಡ. नदी कान्ता यस्य। 3. ಲಕ್ಕಿಗಿಡ. (स्त्री०) **-कान्ता -ಕಾಂತಾ.** 4. ಜಂಬೂವೃಕ್ಷ, ನೇರಳೆಮರ. 5. ಲತೆ, ಬಳ್ಳಿ. 6. ಕಾಕಜಂಘೆಯೆಂಬ ಗಿಡ. "नदीकान्तः समुद्रे स्यात् हिज्जले सिन्दुवारके। नदीकान्ता स्त्रियाम् जम्ब्वां काकजङ्घौषधावपि" मेदि०।

**टुनदि -समृद्धौ** (भ्वा० पर० अक० से०)। नन्दति। ननन्द। नन्दिता। नन्दिष्यति। नन्दतु। अनन्दत्। ಇತ್ಯಾದಿ. ಸಂತೋಷಪಡು, ಹರ್ಷಹೊಂದು. "ननन्द स्वभटान् दृष्ट्वा नखरश्रितमौक्तिकान्" याद० २२-१५६।

**भावे**:—नन्द्यते। ननन्दे। नन्दिता। नन्दिष्यते। नन्द्यताम्। अनन्द्यत। ಇತ್ಯಾದಿ.

**णिचि**:—नन्दयति, -ते। नन्दयां चकार, -बभूव, -आस। नन्दयिता। नन्दयिष्यति, -ते। नन्दयतु, -ताम्। अनन्दयत्, -त।

**सनि**:—निनन्दिषति। निनन्दिषां चकार, -बभूव, -आस। निनन्दिष्यति। निनन्दिषतु। अनिनन्दिषत्।

**कृत्सु**:—नन्दितव्यः। नन्दनीयः। नन्द्यः। नन्दितः। नन्दितवान्, -वती। नन्दन्, -न्ती। नन्दितुम्। नन्दनम्। नन्दित्वा।

**नदीकूल ನದೀಕೂಲ** (न०) ನದಿಯ ತೀರ, ಹೊಳೆಯ ತೊರೆ. नद्याः कूलम्।

**नदीज ನದೀಜ** (पुं०) 1. ಭೀಷ್ಮಾಚಾರ್ಯ. नद्यां गङ्गायां जायते—जनी (प्रादुर्भावे) "डः" (३-२-९७)। "नदीज. लङ्केशवनारिकेतुर्नगाह्वयो नाम नगारिसूनुः" भा० विरा० ४०-११। 2. ಅರ್ಜುನವೃಕ್ಷ, ಕೆಂಪುಮತ್ತಿ ಮರ. 3. ನೀರುಹಲಸಿನ ಮರ. (न०) 4. ಸೌವೀರಾಂಜನ. (वि०) 5. ನದಿಯಲ್ಲಿ ಹುಟ್ಟಿದ. 6. ಅಗ್ನಿಮಂಥ ವೃಕ್ಷ. (स्त्री०) **-जा -ಜಾ.**

**नदीधर ನದೀಧರ** (पुं०) ಪರಮೇಶ್ವರ. ಪರಶಿವ. नद्या धरः।

**नदीन ನದೀನ** (पुं०) 1. ಸಾಗರ, ಸಮುದ್ರ, ಕಡಲು. नदीनाम् इनः। "तरन्तो दारदः पेरुः महाप्राचीर-मद्वयोः। नदीनश्च" त्रिकाण्ड०। "रत्नैरलंकरण-भावमितैर्नदीनः" नैष० १३-२३। 2. ವರುಣ. (वि०) 3. ದೀನನಲ್ಲದವನು. ಬಡವನಲ್ಲದವನು.

**नदीपति ನದೀಪತಿ** (पुं०) 1. ಸಮುದ್ರ, ಸಾಗರ. नदीनां पतिः। 2. ವರುಣ.

**नदीमातृक ನದೀಮಾತೃಕ** (वि०) ನದಿಯ ನೀರಿನಿಂದ ಬೆಳೆಯತಕ್ಕ (ಪ್ರದೇಶ). नदी मातेव यस्य।

**नदीमुख ನದೀಮುಖ** (न०) ನದಿಗಳು ಸಮುದ್ರಕ್ಕೆ ಹೋಗಿ ಸೇರುವ ಮಾರ್ಗ. नदी मुखमिव। "वृद्धो नदीमुखेनैव प्रस्थानं लवणाम्भसः" रघु० १७-५४।

**नदीष्ण ನದೀಷ್ಣ** (वि०) ನದಿಯಲ್ಲಿ ಜಾಣನಾಗಿ ಸ್ನಾನ ಮಾಡುವವನು. नद्यां कुशलं स्नाति—ष्णा (शौचे) "कः" (३-२-४)। षत्वम् (८-३-८९)।

**नदीसर्ज ನದೀಸರ್ಜ** (पुं०) ಅರ್ಜುನವೃಕ್ಷ, ಕೆಂಪು ಮತ್ತಿ ಮರ. सर्ज्यते - षर्ज (अर्जने) + णिच् "अच्" (३-३-५६)। नद्याः सर्जः। "नदीसर्जो वीरतरुः इन्द्रद्रुः ककुभोऽर्जुनः" अम०।

**नद्ध ನದ್ಧ** (वि०) ಬಂಧಿಸಲ್ಪಟ್ಟ, ಕಟ್ಟಲ್ಪಟ್ಟ. णह (बन्धने) "क्तः" (३-२-१०२)। "खर्जूरीस्कन्धनद्धानां मदोद्गार-सुगन्धिषु" रघु० ४-५७।

**नद्ध्री ನದ್ಧ್ರೀ** (वि०) ಚರ್ಮದ ಹಗ್ಗ, ಮಿಳಿಯ ಹಗ್ಗ. नह्यतेऽनया—णह (बन्धने) कर० "ष्ट्रन्" (३-२-१८२)। "नद्ध्री वर्ध्री वरत्रा स्यात्" अम०।

**नद्यावर्तक ನದ್ಯಾವರ್ತಕ** (पुं०) ಪ್ರಯಾಣಸಂಬಂಧವಾದ ಒಂದು ಯೋಗ. ಜನ್ಮರಾಶಿಯಲ್ಲಿ ಬುಧ ಪ್ರಯಾಣದ ಲಗ್ನದಲ್ಲಿ ಗುರು ಅಥವಾ ಶುಕ್ರ ಇರುವಾಗ ಪ್ರಯಾಣ ಮಾಡಿದರೆ ಇಷ್ಟಸಿದ್ಧಿಯಾಗುವುದು. "स्वराशिगे बुधे लग्ने सिते वा सुरवन्दिते। नद्यावर्तकयोगोऽयं यातुरिष्टार्थसिद्धिदः"।

**ननन्दृ ನನಂದೃ** (स्त्री०) ಪತಿಯ ಸಹೋದರಿ, ಗಂಡನ ಒಡಹುಟ್ಟಿದವಳು. न नन्दति न तुष्यति, न नन्दयति भ्रातृजायां वा—टुनदि (समृद्धौ) "ऋन्" (उ० २-९८)। "ननन्दा तु स्वसा पत्युः" अम०।

**ननु ನನು** (अव्य०) 1. ಅನುಜ್ಞೆ, ಅನುಮತಿ. न नुदति—णुद (प्रेरणे) "डुः" (वा० ३-२-१८०)। "ननु संदिशेति सुदृशोदितया त्रपया न किञ्चन किलाभिदधे" माघ० ९-६१। 2. ಆಮಂತ್ರಣ, ಕರೆ, ಸಂಬೋಧನ. "विधुरां ज्वलनातिसर्जनान्ननु मां प्रापय पत्युरन्तिकम्" कुमा० ४-३२। 3. ಅವಧಾರಣ, ನಿಶ್ಚಯ. "उपपन्नं ननु शिवं सप्तस्वङ्गेषु यस्य मे। दैवीनां मानुषीणां च प्रतिहर्ता त्वमापदाम्" रघु० १-६०। 4. ಪ್ರಶ್ನೆ, ಕೇಳಿಕೆ. 5. ಪ್ರತ್ಯುಕ್ತಿ. 6. ಆಕ್ಷೇಪ. 7. ವಾಕ್ಯಾರಂಭ. 8. ಅನುನಯ, ಅನುಸರಣೆ. "नन्वाक्षेपे परिप्रश्ने प्रत्युक्तावधारणे। वाक्यारम्भेऽप्यनुनयामन्त्रणानुज्ञयोरपि" हेम०। 9. ಉತ್ಪ್ರೇಕ್ಷೆ. "मन्ये शङ्के ध्रुवं नूनं किंवा प्रायोऽनुवेधि च। ननु नाम हि जानामि उत्प्रेक्षाव्यञ्जकानि च"।

**ननुच ನನುಚ** (अव्य०) 1. ಪ್ರಶ್ನೆ. 2. ಕೆಟ್ಟ ಮಾತು. 3. ಸರಿಯಾದ ಮಾತು. 4. ಸ್ತುತಿ, ಹೊಗಳಿಕೆ. "ननुच प्रश्ने दुष्टोक्तौ सम्यग्वादे स्तुतावपि" हेम०।

**नन्तव्य ನಂತವ್ಯ** (वि०) 1. ನಮಸ್ಕರಿಸಲ್ಪಡುವ. 2. ನಮಸ್ಕರಿಸಬೇಕಾದ. णम (प्रह्वत्वे शब्दे) "तव्यः" (३-१-९६)।

**नन्तृ ನಂತೃ** (वि०) 1. ನಮಸ್ಕರಿಸುವವನು. 2. ತಲೆಬಾಗಿಸುವವನು. णम (प्रह्वत्वे शब्दे) "तृच्" (३-१-१३३)। स्त्रियाम् "ङीप्" (४-१-५)। -त्री –ತ್ರೀ.

**नन्द ನಂದ** (पुं०) 1. ಹರ್ಷ, ಸಂತೋಷ. टुनदि (समृद्धौ) भावे "घञ्" (३-३-१८)। 2. ವಿಷ್ಣು. टुनदि अधि० "घञ्" (३-३-१२१)। ಭೋಗ ಭೋಗೋಪಕರಣ ಭೋಗ್ಯ ಭೋಕ್ತೃ ಸಮೃದ್ಧಿಯಿರುವುದರಿಂದ ಪರಮಾತ್ಮನಿಗೆ ಈ ಹೆಸರು. "भोग्यैर्भोगोपकरणैर्भोगैर्भोक्तृभिरेव च। तस्मिन् समृध्यते नित्यमिति नन्दः प्रकीर्तितः" इति निरुक्तिः। "आनन्दो नन्दनो नन्दः" वि० स०। 3. ಒಬ್ಬ ಕ್ಷತ್ರಿಯ, ಕುಸುಮಪುರದ ಒಬ್ಬ ದೊರೆ, ನಂದರ ತಂದೆ. "नवनन्दान् द्विजः कश्चित् प्रपन्नानुद्धरिष्यति" भाग० १२। 4. ಭೇಕ, ಕಪ್ಪೆ. 5. ನಂದಗೋಪ, ಶ್ರೀಕೃಷ್ಣನ ಸಾಕುತಂದೆ. 6. ಧೃತರಾಷ್ಟ್ರನ ಒಬ್ಬ ಮಗ. 7. ಕ್ರೌಂಚದ್ವೀಪದ ಒಂದು ಪರ್ವತ. 8. ಒಂಬತ್ತು ಸಂಖ್ಯೆ.

**नन्दक ನಂದಕ** (पुं०) 1. ವಿಷ್ಣುವಿನ ಖಡ್ಗ. नन्दयति—टुनदि (समृद्धौ) + णिच् "ण्वुल्" (३-१-१३३)। "अत्यर्थमुद्वेजयिता परेषां नाम्नापि तस्यैव स नन्दकोऽभूत्" माघ० ३-१९। 2. ಭೇಕ, ಮಂಡೂಕ, ಕಪ್ಪೆ. "व्यङ्गस्तु नन्दको भेको गूढवर्चाः कृतालयः" त्रिकाण्ड०। 3. ನಂದಗೋಪ. नन्द स्वार्थे "कः"। 4. ಖಡ್ಗ, ಕತ್ತಿ. 5. ಧೃತರಾಷ್ಟ್ರನ ಒಬ್ಬ ಮಗ. 6. ಸ್ಕಂದನ ಒಬ್ಬ ಅನುಚರ. (वि०) 7. ಸಂತೋಷವನ್ನುಂಟುಮಾಡುವ. 8. ಕುಲಪಾಲಕ.

**नन्दकि ನಂದಕಿ** (पुं०) ಹಿಪ್ಪಲಿ.

**नन्दकिन् ನಂದಕಿನ್** (पुं०) ವಿಷ್ಣು. नन्दको विद्यामयोऽसिरस्यास्ति "इनिः" (५-२-११५)।

**नन्दकिशोर ನಂದಕಿಶೋರ** (पुं०) ನಂದಗೋಪನ ಮಗು, ಶ್ರೀಕೃಷ್ಣ. नन्दस्य किशोरः।

**नन्दकुमार ನಂದಕುಮಾರ** (पुं०) ಶ್ರೀಕೃಷ್ಣ, ನಂದಗೋಪನ ಮಗ. नन्दस्य कुमारः।

**नन्दगोप ನಂದಗೋಪ** (पुं०) ಗೋಪಾಲಕರ ಯಜಮಾನ, ಗೊಲ್ಲರ ಪಾಳೆಯಗಾರ, ವಸುದೇವನ ಆಪ್ತಮಿತ್ರ. ಪೂರ್ವಜನ್ಮದಲ್ಲಿ ಇವನು ಅಷ್ಟವಸುಗಳಲ್ಲಿ ಒಬ್ಬನಾದ ದ್ರೋಣನಾಗಿದ್ದನು. ಈತನ ಪತ್ನಿ ಯಶೋದಾದೇವಿ. ಶ್ರೀಕೃಷ್ಣನು ತನ್ನ ಬಾಲಲೀಲೆಗಳನ್ನು ಇವನ ಮನೆಯಲ್ಲಿರುವಾಗಲೇ ತೋರಿಸಿದನು.

**नन्दथु ನಂದಥು** (पुं०) ಆನಂದ, ಸಂತೋಷ. टुनदि (समृद्धौ) "अथुच्" (३-३-८९)। "सारोऽसाविन्द्रियार्थानां यस्यासौ तस्य नन्दथुः" भट्टि० ५-२०।

**नन्दन ನಂದನ** (पुं०) 1. ಪುತ್ರ, ಮಗ. नन्दयति—टुनदि (समृद्धौ) + णिच् "ल्युः" (३-१-१३४)। "अतीन्द्रि-

येष्वप्युपपन्नदर्शनो बभूव भावेषु दिलीपनन्दनः" रघु० ३-४१। 2. ಮಂಡೂಕ, ಕಪ್ಪೆ. 3. ಪ್ರಭವ ಮೊದಲಾದ ಅರವತ್ತು ಸಂವತ್ಸರಗಳಲ್ಲಿ ಇಪ್ಪತ್ತಾರನೆಯದು. "सुभिक्षं क्षेममारोग्यं शस्यं भवति शोभनम्। बहुक्षीरास्तथागावो नन्दन्ते नन्दने प्रिये" भविष्यपु०। 4. ವಿಷ್ಣು. आनन्दं मुक्तौ प्रापय्य नन्दयति तान्—टु नदि "ल्युः" (३-१-१३४)। "तमानन्दं यथोक्तायां मुक्तौ प्रापय्य यः सदा। मुक्तान्नित्यान्नन्दयते नन्दनः स तु कीर्तितः" इति निरुक्तिः। "आनन्दो नन्दनो नन्दः" वि० स०। 5. ಪರಮೇಶ್ವರ, ಪರಶಿವ. 6. ಒಂದು ಪರ್ವತ. (न०) 7. ಇಂದ್ರನ ಉದ್ಯಾನವನ. "पुरीमवस्कन्द लुनीहि नन्दनं मुषाण रत्नानि हरामराङ्गनाः" माघ० १-५१। (वि०) 8. ಸಂತೋಷಪಡಿಸುವ.

**नन्दनन्दन ನಂದನಂದನ** (पुं०) 1. ಶ್ರೀಕೃಷ್ಣ. नन्दस्य नन्दनः। ವಸುದೇವನು ಶ್ರೀಕೃಷ್ಣನ ಮಾತಿನಂತೆ ಯಶೋದೆಯ ಗರ್ಭದಲ್ಲಿ ಜನಿಸಿದ ಯೋಗಮಾಯೆಯನ್ನು ತಂದು ದೇವಕಿಯ ಹತ್ತಿರ ಮಲಗಿಸಿ ಕಂಸನ ಭಯದಿಂದ ಶ್ರೀಕೃಷ್ಣನನ್ನು ಯಶೋದೆಯ ಬಳಿ ಯೋಗಮಾಯೆಯ ಸ್ಥಾನದಲ್ಲಿ ಇಟ್ಟದ್ದರಿಂದ ತನ್ನ ಮಗನೆಂದು ತಿಳಿದ ನಂದನ ವಿಶ್ವಾಸಾಭಿಮಾನಗಳಿಗೆ ಪಾತ್ರನಾದ ಶ್ರೀಕೃಷ್ಣನು ನಂದನ ಪುತ್ರನಾದನು. "ततश्च शौरिर्भगवत्प्रचोदितः सुतं समादाय स सूतिकागृहात्। यदा बहिर्गन्तुमियेष तर्ह्यजा या योगमायाऽजनि नन्दजायया। शिशुं यशोदाशयने निधाय तत्सुतां समादाय पुनर्गृहानगात्। देवक्याः शयने न्यस्य वसुदेवोऽथ दारिकाम्। प्रतिमुच्य पदोर्लोहमास्ते पूर्ववदावृतः। यशोदा नन्दपत्नी च जातं पुत्रमबुध्यत। न तल्लिङ्गं परिश्रान्ता निद्रयापगतस्मृतिः" भाग० १०-३। (स्त्री०) –नन्दना –ನಂದನಾ. 2. ಯೋಗಮಾಯೆ.

**नन्दन्त ನಂದಂತ** (पुं०) ಪುತ್ರ, ಮಗ. नन्दत्यनेन—टु नदि (समृद्धौ) "झच्" (उ० ३-१२७)।

**नन्दपाल ನಂದಪಾಲ** (पुं०) ವರುಣ. नन्दं हर्षं पालयति—पाल (रक्षणे)+णिच् "अण्" (३-२-१)।

**नन्दसुत ನಂದಸುತ, –सूनु –ಸೂನು** (पुं०) 1. ನಂದಗೋಪನ ಮಗ, ಶ್ರೀಕೃಷ್ಣ. नन्दस्य नन्दगोपस्य सुतः सूनुर्वा। (स्त्री०) –सुता –ಸುತಾ. 2. ದುರ್ಗಾದೇವಿ.

**नन्दा ನಂದಾ** (स्त्री०) 1. ದುರ್ಗಾದೇವಿ. "नन्दते सुरलोकेषु नन्दने वसतेऽथवा। हिमाचले महापुण्ये नन्दा देवी ततः स्मृता" देवीपु०। 2. ನಂದಾತಿಥಿ, ಶುಕ್ಲ ಮತ್ತು ಕೃಷ್ಣಪಕ್ಷಗಳ ಪಾಡ್ಯ, ಷಷ್ಠಿ ಮತ್ತು ಏಕಾದಶೀ ತಿಥಿಗಳು. "नन्दा भद्रा जया रिक्ता पूर्णा च प्रतिपत्क्रमात्"। 3. ಧರ್ಮಪುರುಷನ ಪುತ್ರನಾದ ಹರ್ಷನ ಪತ್ನಿ. "नन्दा तु भार्या हर्षस्य यासु लोकाः प्रतिष्ठिताः" भा० आदि० ६७-३३। 4. ಪತಿಯ ಸಹೋದರಿ. 5. ಮಣ್ಣಿನ ಗುಡಾಣ. "नन्दा स्यादलिञ्जरे। गौर्यां तिथिविशेषे स्त्री निधिराजभिदोः पुमान्" मेदि०। 6. ಸಂಪತ್ತು, ಐಶ್ವರ್ಯ. "नन्दा सम्पद्यलिञ्जरे। तिथिभेदे च" हेम०।

**नन्दात्मज ನಂದಾತ್ಮಜ** (पुं०) 1. ನಂದಗೋಪನ ಪುತ್ರ, ಶ್ರೀಕೃಷ್ಣ. नन्दस्यात्मजः। –आत्मजा –ಆತ್ಮಜಾ. 2. ಯೋಗಮಾಯೆ, ದುರ್ಗಾದೇವಿ.

**नन्दि ನಂದಿ** (पुं०) 1. ವಿಷ್ಣು. सर्वदा सर्वत्र सर्वथा च नन्दति समृद्ध्यति—टु नदि (समृद्धौ) "इन्" (उ० ४-२७७)। "नन्दिः सर्वत्र नित्यं सः श्रिया ऋद्ध्यति सर्वदा" इति निरुक्तिः। "स्वक्षः स्वङ्गः शतानन्दो नन्दिर्ज्योतिर्गणेश्वरः" वि० स०। 2. ಪರಶಿವ, ಈಶ್ವರ. 3. ಪರಮೇಶ್ವರನ ಒಬ್ಬ ಅನುಚರ, ನಂದಿಕೇಶ್ವರ. 4. ಈಶ್ವರನ ವಾಹನವಾದ ವೃಷಭ. 5 ಆನಂದ, ಹರ್ಷ, ಸಂತೋಷ. 6. ದ್ಯೂತ, ಜೂಜು. "नन्दिस्तु प्रतीहारे पिनाकिनः। आनन्दने च द्यूते च" हेम०। (स्त्री०) 7. ಆನಂದ, ಸಂತೋಷ, ಹರ್ಷ. "अतो मे भूयसी नन्दिर्यदेवमनुपश्यसि" भा० उद्योग० १३५-२०। (वि०) 8. ಆನಂದಜನಕವಾದ, ಹರ್ಷವನ್ನುಂಟು ಮಾಡುವ.

**नन्दिक ನಂದಿಕ** (पुं०) 1. ನಂದಿಮರ. 2. ಆನಂದ, ಸಂತೋಷ. 3. ಮಣ್ಣಿನ ಗುಡಾಣ. 4. ಈಶ್ವರನ ಒಬ್ಬ ಅನುಚರ. (स्त्री०) नन्दिका ನಂದಿಕಾ. 5. ನಂದಾತಿಥಿ, ಶುಕ್ಲ ಮತ್ತು ಕೃಷ್ಣಪಕ್ಷಗಳ ಪಾಡ್ಯ, ಷಷ್ಠಿ ಮತ್ತು ಏಕಾದಶೀ ತಿಥಿಗಳು.

**नन्दिकेश्वर ನಂದಿಕೇಶ್ವರ** (पुं०) 1. ಪರಮೇಶ್ವರನ ದ್ವಾರಪಾಲಕ. 2. ಈಶ್ವರನ ವಾಹನವಾದ ವೃಷಭ, 3. ನಂದೀಶ್ವರನಿಂದ ಪ್ರೋಕ್ತವಾದ ಶಿವಧರ್ಮವೆಂಬ ಒಂದು ಉಪಪುರಾಣ.

**नन्दिग्राम ನಂದಿಗ್ರಾಮ** (पुं०) ಶ್ರೀರಾಮನ ವನವಾಸದ ಕಾಲದಲ್ಲಿ ಭರತನು ಆವನ ಪಾದುಕೆಗಳನ್ನು ಆರಾಧಿಸುತ್ತಾ, ಪಾದುಕೆಗಳ ಹೆಸರಿನಲ್ಲಿ ರಾಜ್ಯಾಡಳಿತ ನಡೆಸುತ್ತಿದ್ದ ಒಂದು ಗ್ರಾಮ. "विसर्जितः स रामेण पितुर्वचनकारिणा। नन्दिग्रामेऽकरोद्राज्यं पुरस्कृत्यास्य पादुके" भा० वन०

२७८-४५। ಈಗ ಇದರ ಹೆಸರು "ದೌಲತಾಬಾದ್" ಎಂದಾಗಿದೆ.

**नन्दिघोष ನಂದಿಘೋಷ** (ಪುಂ) 1. ಅರ್ಜುನನ ರಥ. नन्दिरानन्दजनको घोषोऽस्य। 2. ಆನಂದದಿಂದ ಕೂಡಿದ ಶಬ್ದ. 3. ಹೊಗಳುಭಟರ ಹೊಗಳಿಕೆ, ಹೊಗಳಿಕೆಯ ಶಬ್ದ. "नन्दिघोषोऽर्जुनरथे घोषे वन्दिजनस्य च" मेदि०। (वि०) 4. ಹರ್ಷವನ್ನುಂಟುಮಾಡುವ ಶಬ್ದದಿಂದ ಕೂಡಿದ.

**नन्दिन् ನಂದಿನ್** (ಪುಂ) 1. ಈಶ್ವರನ ಒಬ್ಬ ಅನುಚರ. ಪರಮೇಶ್ವರನ ದ್ವಾರಪಾಲಕ, ನಂದಿಕೇಶ್ವರ. 2. ಪರಮೇಶ್ವರನ ವಾಹನವಾದ ವೃಷಭ. "लतागृहद्वारगतोऽथ नन्दी वामप्रकोष्ठार्पितहेमवेत्रः" कुमा० ३-४१। (वि०) 3 ಸಂತೋಷದಿಂದ ಕೂಡಿದ. नन्दते—टु नदि (समृद्धौ) "णिनिः" (३-१-१३४)।

**नन्दिनी ನಂದಿನೀ** (स्त्री०) 1. ದುರ್ಗಾದೇವಿ, ಪಾರ್ವತಿ. टु नदि (समृद्धौ) "णिनिः" (३-१-१३४)। "ङीप्" (४-१-५)। 2. ಮಗಳು. "नन्दगोपस्य नन्दिनी"। "तेषां वधूस्त्वमसि नन्दिनि पार्थिवानाम्" उ० रा० १-९। 3. ಪತಿಯ ಸಹೋದರಿ, ಗಂಡನ ಒಡಹುಟ್ಟಿದವಳು. 4. ನಂದಿನೀಧೇನು, ವಸಿಷ್ಠಮಹರ್ಷಿಯ ಹೋಮಧೇನು. "इति वादिन एवास्य होतुराहुतिसाधनम्। अनिन्द्या नन्दिनी नाम धेनुराववृते वनात्" रघु० १-८२। 5. ಗಂಗಾನದಿ. "नन्दिन्युमायां गङ्गायां ननन्दृधेनुभेदयोः" मेदि०। 6. ಸುರಸುರಕೆ ಗಿಡ. 7. ವ್ಯಾಡಿಯ ತಾಯಿ. 8. ಜಟಾಮಾಂಸಿ.

**नन्दिनीतनय ನಂದಿನೀತನಯ, –सुत –ಸುತ** (ಪುಂ) ವ್ಯಾಡಿಮುನಿ, ಉಪವರ್ಷಋಷಿಯ ಶಿಷ್ಯ. नन्दिन्यास्तनयः। ವರರುಚಿ ಪಾಣಿನಿ ಮತ್ತು ವ್ಯಾಡಿ ಈ ಮೂವರೂ ಉಪವರ್ಷಋಷಿಯ ಶಿಷ್ಯರು. ಪಾಣಿನಿ ಮುನಿಯು ತನ್ನ ಸಹಪಾಠಿಗಳಿಂದ ಪರಾಜಿತನಾಗಿ ಪರಮೇಶ್ವರನ ಅನುಗ್ರಹದಿಂದ ವ್ಯಾಕರಣಸೂತ್ರಗಳನ್ನು ರಚಿಸಿದನು. ಅದಕ್ಕೆ ಪೂರಕವಾಗಿ ವರರುಚಿಯು ವಾರ್ತಿಕಗಳನ್ನು ರಚಿಸಿದನು. ಇವರಿಬ್ಬರ ಗ್ರಂಥಗಳಲ್ಲಿ ಉಕ್ತವಾದ ಅರ್ಥಗಳ ನ್ಯಾಯಪರಿಶೀಲನರೂಪವಾದ ಒಂದು ಗ್ರಂಥವನ್ನು ವ್ಯಾಡಿಮುನಿಯು ಬರೆದನು. ಇದೊಂದು ಕೋಶಾತ್ಮಕವಾಗಿದೆ.

**नन्दिवर्धन ನಂದಿವರ್ಧನ** (ಪುಂ) 1. ಪುತ್ರ, ಮಗ. नन्दिमानन्दं वर्धयति—वृधु (वृद्धौ) "ल्युः" (३-१-१३४)। 2. ಪರಶಿವ, ಪರಮೇಶ್ವರ. 3. ಪಕ್ಷದ ಕೊನೆ. ಹುಣ್ಣಿಮೆ ಅಥವಾ ಅಮಾವಾಸ್ಯೆ. 4. ಮಿತ್ರ, ಗೆಳೆಯ. (वि०) 5. ಸಂತೋಷವನ್ನುಂಟುಮಾಡುವ. "स्यान्नन्दिवर्धनो भर्गे पक्षान्ते तनयेऽपि च" मेदि०।

**नन्दिवृक्ष ನಂದಿವೃಕ್ಷ** (ಪುಂ) ನಂದಿಮರ. नन्द्या वृक्षः।

**नन्दीश ನಂದೀಶ, –ईश्वर –ಈಶ್ವರ** (ಪುಂ) 1. ಪರಶಿವ, ಪರಮೇಶ್ವರ. 2. ಈಶ್ವರನ ಅನುಚರರ ಯಜಮಾನ.

**नन्द्यावर्त ನಂದ್ಯಾವರ್ತ** (ಪುಂ) 1. ಪಶ್ಚಿಮದ ಬಾಗಿಲಿಲ್ಲದೆ ಉಳಿದ ಮೂರು ಬಾಗಿಲುಗಳುಳ್ಳ ಮನೆ. "नन्द्यावर्तमलिन्दैः शालाकुड्यात् प्रदक्षिणान्तगतैः। द्वारं पश्चिममस्मिन् विहाय शेषाणि कार्याणि" बृहत्सं ५३-३२। 2. ಒಂದು ಜಾತಿಯ ಮೀನು. 3. ಪ್ರಯಾಣ ಸಂಬಂಧವಾದ ಒಂದು ಯೋಗ. ["नद्यावर्तक" ಪದದಲ್ಲಿ ನೋಡಿ.]

**नपात् ನಪಾತ್** (वि०) 1. ರಕ್ಷಿಸದೆ ಇರುವವನು. न पाति—पा (रक्षणे) "शतृ" (३-२-१२४)। नपान् नपान्तौ नपान्तः। 2. ತಳ್ಳದಿರುವವನು. न पातयति—पत्लृ (गतौ) + णिच् "क्विप्" (३-२-७६)। नपात् नपातौ नपातः। (ಪುಂ) 3. ಪುತ್ರ, ಮಗ. निपा० (६-३-७५)। ನರಕವನ್ನು ತಪ್ಪಿಸಿ ಸದ್ಗತಿಗೆ ಕಾರಣನಾದುದರಿಂದ ಈ ಹೆಸರು.

**नपुंसक ನಪುಂಸಕ** (ಪುಂನ०) ಷಂಡ, ಪುಂಸ್ತ್ವವಿಲ್ಲದವನು, ಪುರುಷನ ಅಥವಾ ಸ್ತ್ರೀಲಕ್ಷಣವಿಲ್ಲದವನು. नस्त्रीपुमान्। स्त्रीपुंसयोः पुंसकभावो निपा० (६-३-७५)।

**नप्तृ ನಪ್ತೃ** (ಪುಂ) ಮೊಮ್ಮಗ. 1. ಮಗನ ಮಗ. 2. ಮಗಳ ಮಗ. न पतत्यनेन पिता नरके—पत्लृ (गतौ) "तृच्" (उ० २-९५)। निपा०। "पुत्रेण लोकान् जयति पौत्रेणानन्त्यमश्नुते" मनु० ९-१३७। "यदि नात्मनि पुत्रेषु न चेत् पुत्रेषु नप्तृषु। न त्वेव तु कृतो धर्मः कर्तुर्भवति निष्फलः" मनु० ४-१७४। स्त्रियाम् "ङीप्" (४-१-५)। **नप्त्री ನಪ್ತ್ರೀ**. 3. ಮಗನ ಮಗಳು. 4. ಮಗಳ ಮಗಳು.

**नभ ನಭ** (ಪುಂ) 1. ಶ್ರಾವಣಮಾಸ. नभते हिनस्ति कीटादीन्—णभ (हिंसायाम्) "अच्" (३-१-१३४)। 2. ಸ್ವಾರೋಚಿಷ (ಎರಡನೆಯ) ಮನುವಿನ ಒಬ್ಬ ಮಗ. 3. ನಳಮಹಾರಾಜನ ಮಗ.

**नभःकान्तिन् ನಭಃಕ್ರಾಂತಿನ್** (ಪುಂ) ಸಿಂಹ. नभः क्रान्तमयस्त्यस्य "इनिः" (५-२-११५)।

**नभःप्राण ನಭಃಪ್ರಾಣ** (पुं०) ವಾಯು, ಗಾಳಿ. नभसः प्राण इव। "दैत्यदेवश्च वातस्तु नभःप्राणो जगद्बलः" त्रिकाण्ड०।

**नभःश्रित् ನಭಃಶ್ರಿತ್** (वि०) ಆಕಾಶವನ್ನು ಆಶ್ರಯಿಸಿರುವ. नभःश्रयते—श्रिञ् (सेवायाम्) "क्विप्" (३-२-७६)।

**नभःसद् ನಭಃಸದ್** (पुं०) 1. ದೇವತೆ. नभसि सीदति षद्लृ (विशरणादौ) "क्विप्" (३-२-६१)। "निवर्त्य सोऽनुव्रजतः कृतानतीनतीन्द्रियज्ञाननिधिर्नभःसदः" माघ० १-११। 2. ಪಕ್ಷಿ, ಹಕ್ಕಿ. विसर्गस्य सत्वे **नभस्सद् ನಭಸ್ಸದ್.**

**नभःसरित् ನಭಃಸರಿತ್** (स्त्री०) ಗಂಗಾನದಿ, ಆಕಾಶ ಗಂಗೆ.

**नभःस्थ ನಭಃಸ್ಥ** (वि०) ಆಕಾಶದಲ್ಲಿರುವ ಅಂತರಿಕ್ಷದಲ್ಲಿ ನಿಂತಿರುವ. नभसि तिष्ठति—ष्ठा (गतिनिवृत्तौ) "कः" (३-२-४)। विसर्गस्य लोपे **नभस्थः ನಭಸ್ಥಃ.** सत्वे **नभस्स्थः ನಭಸ್ಸ್ಥಃ.**

**नभःस्थल ನಭಃಸ್ಥಲ** (पुं०) 1. ಪರಶಿವ, ಪರಮೇಶ್ವರ. नभः स्थलमिवास्य। "उर्ध्वरेता ऊर्ध्वलिङ्ग ऊर्ध्वशायी नभःस्थलः" भा० अनु० ४८-४६। (स्त्रीन०) 2. ಗಗನಮಂಡಲ, ಬಾಂದಳ. नभसः स्थलम्। विसर्गस्य वा लोपः। **नभस्थलम् ನಭಸ್ಥಲಮ್.** विसर्गस्य सत्वे **नभस्स्थलम् ನಭಸ್ಸ್ಥಲಮ್.** स्त्रियाम् "ङीष्" (४-१-४२)। **नभःस्थली ನಭಃಸ್ಥಲೀ.** विसर्गलोपे **नभस्थली ನಭಸ್ಥಲೀ.** विसर्गस्य सत्वे **नभस्स्थली ನಭಸ್ಸ್ಥಲೀ.** "निवारिताशावितितिस्तदासीत् नभस्स्थली नाकिभिरप्यदृश्यत" याद० २०-२५।

**नभःस्थित ನಭಃಸ್ಥಿತ** (वि०) ಆಕಾಶದಲ್ಲಿರುವ, ಅಂತರಿಕ್ಷದಲ್ಲಿ ನಿಂತಿರುವ, नभसि स्थितः। विसर्गस्य लोपे **नभस्थितः ನಭಸ್ಥಿತಃ.**

**नभःस्पृश् ನಭಃಸ್ಪೃಶ್** (वि०) ಗಗನವನ್ನು ಮುಟ್ಟುವ. ಆಕಾಶದವರೆಗೂ ಹೋಗಿರುವ. नभः स्पृशति—स्पृश (संस्पर्शने) "क्विन्" (३-२-५८)।

**नभश्चर ನಭಶ್ಚರ** (पुं०) 1. ದೇವತೆ. 2. ಗಂಧರ್ವ. 3. ಸೂರ್ಯ ಮೊದಲಾದ ಗ್ರಹ 4. ಪಕ್ಷಿ, ಹಕ್ಕಿ. नभसि चरति—चर (गतौ) "टः" (३-२-१६)। 5. ಮೇಘ, ಮೋಡ. "निकामतप्ता विविधेन वह्निना नभश्चरेणेन्धनसंभृतेन सा" कुमा० ५-२३।

**नभस् ನಭಸ್** (न०) 1. ಗಗನ, ಆಕಾಶ. नह्यते मेघैः—णह (बन्धने) "असुन्" भश्चान्तादेशः (उ० ४-२१०)। "नेक्षेतोद्यन्तमादित्यं नास्तं यन्तं कदाचन। नोपसृष्टं न वारिस्थं न मध्यं नभसो गतम्" मनु० ४-३७। (पुं०) 2. ಶ್ರಾವಣಮಾಸ. नभते हिनस्ति विरहिणः—णभ (हिंसायाम्) "असुन्" (उ० ४-१८९)। "निवारितावग्रहनीरनिर्झरे नभोनभस्यत्वमलम्भयद्दृशौ" नैष० १-८४। 3. ಮೂಗು, ನಾಸಿಕೆ. 4. ಮೇಘ, ಮೋಡ. 5. ವರ್ಷಾಕಾಲ, ಮಳೆಗಾಲ. 6 ತಾವರೆದಂಟಿನ ದಾರ. 7. ಪಡಿಗೆ, ಪೀಕದಾನಿ. "नभः क्लीबं व्योम्नि पुमान् घने। घ्राणश्रावणवर्षासु बिसतन्तौ पतद्ग्रहे" मेदि०।

**नभस ನಭಸ** (पुं०) 1. ಗಗನ, ಆಕಾಶ. 2. ವರ್ಷಾಕಾಲ, ಮಳೆಗಾಲ. 3. ಸಮುದ್ರ. "नभसस्तु नदीपतौ। गगने ऋतुभेदे च" हेम०।

**नभसंगम ನಭಸಂಗಮ** (पुं०) ಪಕ್ಷಿ, ಹಕ್ಕಿ. नभसं गच्छति—गम्लृ (गतौ) "खच्" (३-२-४७)। मुम् (६-३-६७)।

**नभस्तल ನಭಸ್ತಲ** (न०) ಗಗನಮಂಡಲ, ಅಂತರಿಕ್ಷ. नभसः तलम्। "छदहेम कषन्निवालसत् कषपाषाणनिभे नभस्तले" नैष० २-६९।

**नभस्तस् ನಭಸ್ತಸ್** (अव्य०) ಆಕಾಶದಿಂದ.

**नभस्य ನಭಸ್ಯ** (पुं०) 1. ಭಾದ್ರಪದಮಾಸ. नभसि मेघे साधुः "यत्" (४-४-९८)। "नभो नभस्यत्वमलम्भयद्दृशौ" नैष० ९-८४। "नभोनभस्ययोर्वृष्टिमवग्रह इवान्तरे" रघु० १२-२९। 2. ಸ್ವಾರೋಚಿಷ ಮನುವಿನ ಮಗ. "प्रथितश्च नभस्यश्च नभ ऊर्जस्तथैव च" हरिवं०।

**नभस्वत् ನಭಸ್ವತ್** (पुं०) ವಾಯು, ಗಾಳಿ. नभः आश्रयत्वेनास्त्यस्य "मतुप्" (५-२-९४)। "आकाशाद्वायुः। वायोरग्निः" श्रुतिः। "आददे नातिशीतोष्णो नभस्वानिव दक्षिणः" रघु० ४-८।

**नभोग ನಭೋಗ** (पुं०) 1. ಹತ್ತನೆಯ ಮನ್ವಂತರದ ಸಪ್ತರ್ಷಿಗಳಲ್ಲಿ ಒಬ್ಬ ಋಷಿ. (वि०) 2. ಅಂತರಿಕ್ಷದಲ್ಲಿ ಸಂಚರಿಸುವ. नभसि गच्छति – गम्लृ (गतौ) "डः" (वा० ३-२-४८)।

**नभोगज ನಭೋಗಜ** (पुं०) ಮೇಘ, ಮೋಡ. नभसि गज इव। "मदयित्नुर्बायुदारुःव्योमधूमो नभोगजः" त्रिकाण्ड०।

**नभोगत ನಭೋಗತ** (वि०) ಗಗನಕ್ಕೆ ಹೋಗಿರುವ, ಆಕಾಶಕ್ಕೆ ಹೋಗಿ ಸೇರಿರುವ. नभः गतः।

**नभोगति ನಭೋಗತಿ** (स्त्री०) 1. ಆಕಾಶದಲ್ಲಿ ಸಂಚರಿಸುವುದು. नभसि गतिः। (वि०) 2. ಆಕಾಶದಲ್ಲಿ ಸಂಚರಿಸುವ (1) ಪಕ್ಷಿ, ಹಕ್ಕಿ. (2) ಗ್ರಹ. (3) ಗಂಧರ್ವ. (4) ದೇವತೆ. नभसि गतिरस्य।

**नभोधूम ನಭೋಧೂಮ** (पुं०) ಮೇಘ, ಮೋಡ. नभसि धूम इव।

**नभोनदी ನಭೋನದೀ** (स्त्री०) ಆಕಾಶಗಂಗೆ, ಗಂಗಾನದಿ. "नभोनदीव्यतिकरधौतमूर्तिभिर्वियद्गतैरनधिगतानि लेभिरे" माघ० १७-६४।

**नभोमणि ನಭೋಮಣಿ** (पुं०) ಸೂರ್ಯ. नभसि मणिरिव।

**नभोमण्डल ನಭೋಮಂಡಲ** (न०) ಆಕಾಶಮಂಡಲ, ಬಾಂದಳ. नभसो मण्डलमिव।

**नभोमण्डलदीप ನಭೋಮಂಡಲದೀಪ** (पुं०) ಚಂದ್ರ. नभोमण्डले दीप इव। "नभोमण्डलदीपाय शिरोरत्नाय धूर्जटेः"।

**नभोऽम्बुप ನಭೋಽಂಬುಪ** (पुं०) ಚಾತಕಪಕ್ಷಿ, ಮಳೆಗುಟುಕಿನ ಹಕ್ಕಿ. नभसि अम्बु पिबति—पा (पाने) "कः" (३-२-३)।

**नभोरजस् ನಭೋರಜಸ್** (न०) ಅಂಧಕಾರ, ಕತ್ತಲೆ. नभसि रज इव।

**नभोलय ನಭೋಲಯ**(पुं०)1. ಧೂಮ, ಹೊಗೆ. नभसि लीयते—लीङ् (श्लेषणे) "अच्" (३-३-५६)। (वि०)2. ಆಕಾಶದಲ್ಲೇ ಲೀನವಾಗಿರುವ, ಅಂತರಿಕ್ಷದಲ್ಲೇ ಸೇರಿಕೊಂಡಿರುವ. नभसि लीनः।

**नभोवीथी ನಭೋವೀಥೀ**(स्त्री०) ಆಕಾಶಮಾರ್ಗ. नभोरूपा वीथी। "अथ च यावतार्धेन नभोवीथ्यां प्रचरति तं कालमयनमाचक्षते" भाग० ५-२२-७।

**नभौकस् ನಭೌಕಸ್** (वि०) ಆಕಾಶದಲ್ಲಿ ವಾಸಿಸುವ, ಆಕಾಶವೇ ವಾಸಸ್ಥಾನವಾಗಿ ಉಳ್ಳ. नभः ओकः वासस्थानं यस्य। "अन्ये च विविधा जीवा जलस्थलनभौकसः" भाग० २-४-१४।

**नभ्य ನಭ್ಯ** (वि०) 1. ಅಕ್ಷಪುಟಕ್ಕೆ ಹಿತವಾದ ತೈಲ, ಗಾಡಿಯ ಚಕ್ರದ ಮಧ್ಯದ ರಂಧ್ರಕ್ಕೆ ಹಾಕುವ ಎಣ್ಣೆ ಮೊದಲಾದುದು. नाभये—रथचक्रावयवाय हितम् "यत्" (ग० ५-१-२)। नाभेर्नभादेशश्च। 2. ಗಾಡಿಯ ದೂರಿ, ಇರಚಿ.

**नमत् ನಮತ್**(वि०)1. ನಮಸ್ಕರಿಸುತ್ತಿರುವ. "घनमतो नमतोऽनुमतान् प्रियाः" माघ० ६-६५। 2. ಬಗ್ಗುತ್ತಿರುವ. "यस्यामसेवन्त नमद्वलिकाः" माघ० ३-५३। 3. ವಕ್ರವಾಗುತ್ತಿರುವ, ಡೊಂಕಾಗುತ್ತಿರುವ. णम (प्रह्वत्वे शब्दे) "शतृ" (३-२-१२४)। स्त्रियाम् "ङीप्" (४-१-६)। —न्ती —ನ್ತೀ. "नमन्तीं सैन्यभारेण शनैरनुजगाम गाम्" याद० २२-७२।

**नमत ನಮತ** (वि०)1. ಬಗ್ಗಿರುವ. 2. ವಿಧೇಯನಾಗಿರುವ. (पुं०) 3. ನಟ, ಅಭಿನಯಕಾರ. 4. ಯಜಮಾನ. णम (प्रह्वत्वे शब्दे) "अतच्" (उ० ३-११०)।

**नमन ನಮನ** (न०)1. ನಮಸ್ಕರಿಸುವುದು. णम (प्रह्वत्वे शब्दे) "ल्युट्" (३-३-११५)। 2. ಬಗ್ಗುವುದು, ಡೊಂಕಾಗುವುದು. (वि०)3. ನಮಸ್ಕರಿಸುವ, ಪ್ರಣಾಮ ಮಾಡುವ. णम (प्रह्वत्वे शब्दे) "ल्युः" (३-१-१३४)। "नमयति स्म वनानि मनस्विनीजनमनोनमनो घनमारुतः" माघ० ६-३०। 4. ಬಗ್ಗುವ, ಡೊಂಕಾಗುವ.

**नमनीय ನಮನೀಯ** (वि०) 1. ನಮಸ್ಕರಿಸಲ್ಪಡುವ. 2. ನಮಸ್ಕರಿಸಬೇಕಾದ. 3. ನಮಸ್ಕರಿಸಲು ಯೋಗ್ಯನಾದ. णम (प्रह्वत्वे शब्दे) "अनीयर्" (३-१-९६)। "तव्यः" (३-१-९६)। —मितव्यः —ಮಿತವ್ಯಃ.

**नमयत् ನಮಯತ್** (वि०) 1. ಬಗ್ಗಿಸುತ್ತಿರುವ. 2. ನಮಸ್ಕಾರ ಮಾಡಿಸುತ್ತಿರುವ. 3. ತಲೆ ಬಾಗಿಸುತ್ತಿರುವ. णम (प्रह्वत्वे) + णिच् "शतृ" (३-२-१२४)। स्त्रियाम् "ङीप्" (४-१-६)। —यन्ती —ಯಂತೀ. "शानच्" (३-२-१२४)। नमयमानः ನಮಯಮಾನಃ.

**नमस् ನಮಸ್** (अव्य०)1. ನಮಸ್ಕಾರ. 2. ತಲೆಬಗ್ಗಿಸುವುದು. णम (प्रह्वत्वे) "असुन्" (उ० ४-१८८)। "नमस्त्रिमूर्तये तुभ्यं प्राक्सृष्टेः केवलात्मने" कुमा० २-४। ನಪುಂಸಕಲಿಂಗದಲ್ಲಿಯೂ ಪ್ರಯೋಗವುಂಟು. "विधेम चास्यै नमसा सह त्वया" भाग० ३-१३-४२। (न०) 3. ತ್ಯಾಗ, ದಾನ. 4. ಅನ್ನ. 5. ವಜ್ರಾಯುಧ 6. ಯಜ್ಞ.

**नमस ನಮಸ** (वि०) ಅನುಕೂಲವಾದ. णम (प्रह्वत्वे शब्दे) "असच्"।

**नमसित ನಮಸಿತ**(वि०)ನಮಸ್ಕರಿಸಲ್ಪಟ್ಟ. नमस्+क्यच् "क्तः" (३-२-१०२)। वा यलोपः (६-४-५०)। पक्षे नमस्यितः ನಮಸ್ಯಿತಃ.

**नमस्कर्तृ ನಮಸ್ಕರ್ತೃ** (वि०) ನಮಸ್ಕಾರಮಾಡುವವನು. नमः करोति—कृञ् "तृच्" (३-१-१३३)। स्त्रियाम् "ङीप्" (४-१-५)। —कर्त्री —ಕರ್ತ್ರೀ.

श्रीः

# शब्दार्थकौस्तुभः

## (प्रायौगिक संस्कृत-कर्णाटक शब्दकोशः)

# ಸಂಸ್ಕೃತ-ಕನ್ನಡ ಶಬ್ದಕೋಶ

ಸಂಪುಟ ೪

ಪದಗಳು : नमस्कार-बहुवीर्य

ಸಾಹಿತ್ಯ ವಿದ್ವಾನ್

ಚಕ್ರವರ್ತಿ ಶ್ರೀನಿವಾಸ ಗೋಪಾಲಾಚಾರ್ಯ

ಬಾಪ್ಕೊ ಪ್ರಕಾಶನ

ಬೆಂಗಳೂರು ಪ್ರೆಸ್, ಬೆಂಗಳೂರು

।। श्रीः ।।

श्रीमते हयग्रीवाय नमः।

# शब्दार्थकौस्तुभः।

## (संस्कृत-कर्णाटक शब्दकोशः)

## ಸಂಸ್ಕೃತ-ಕನ್ನಡ ಶಬ್ದಕೋಶ

### ತುರೀಯ ಭಾಗ

लक्ष्मीं तनोतु व्यवधूय चित्ते वितर्कडोलां विविधार्थराशेः।
लक्ष्मीहयास्यः स्फुरिताक्षमालो लक्ष्मीलसद्वत्सतलः सदा नः ।।

नत्वा लक्ष्मीहयग्रीवौ गुरुवन्दनपूर्वकम्।
शब्दार्थकौस्तुभस्यास्य तुरीयं भागमारभे ।।

---

**नमस्कार ನಮಸ್ಕಾರ** (ಪುಂ०) ಪ್ರಣಾಮ, ವಂದನೆ. नमस्+कृञ् "घञ्" (३-३-१८)।

**ನಮಸ್ಕಾರಕ್ಕೆ ಅರ್ಹರಾದವರು:** ಉಪಾಧ್ಯಾಯ ತಂದೆ ಜ್ಯೇಷ್ಠಸಹೋದರ ರಾಜ ಮಾತುಲ (ಸೋದರ ಮಾವ) ಶ್ವಶುರ (ಪತ್ನಿಯ ತಂದೆ) ರಕ್ಷಕ ಮಾತಾಮಹ ಪಿತಾಮಹ ಬಂಧುಗಳಲ್ಲಿ ಹಿರಿಯನಾದವನು ತಂದೆಯ ಸಹೋದರ ಇಷ್ಟುಮಂದಿ ಗುರುಜನರು ನಮಸ್ಕಾರಾರ್ಹರು. ತಾಯಿ ಮಾತಾಮಹಿ ಗುರುಪತ್ನಿ ತಾಯಿ ತಂದೆಗಳ ಸಹೋದರಿಯರು ಶ್ವಶ್ರು (ಪತ್ನಿಯ ತಾಯಿ) ಪಿತಾಮಹಿ ಜ್ಯೇಷ್ಠಸಹೋದರಿ ದಾದಿ (ಉಪಮಾತೃ) ಈ ಹೆಂಗಸರೂ ನಮಸ್ಕಾರಾರ್ಹರು. "उपाध्यायः पिता ज्येष्ठो भ्राता चैव महीपतिः। मातुलः श्वशुरस्त्राता मातामहपितामहौ। बन्धुज्येष्ठः पितृव्यश्च पुंस्येते गुरवः स्मृताः। माता मातामही गुर्वी पितुर्मातुश्च सोदरा। श्वश्रूः पितामही ज्येष्ठा धात्री च गुरवः स्त्रियाम्। ದೇವರು ಗುರು ಬ್ರಾಹ್ಮಣ ಇವರನ್ನು ಕಂಡು ನಮಸ್ಕರಿಸದವನು ಮಹಾಪಾಪಿಯಾಗಿ ಕಾಲಸೂತ್ರವೆಂಬ ನರಕವನ್ನು ಹೊಂದುತ್ತಾನೆ. "देवं विप्रं गुरुं दृष्ट्वा न नमेद्यस्तु सम्भ्रमात्। स कालसूत्रं व्रजति यावच्चन्द्रदिवाकरौ" ब्रह्मवै०।

**ನಮಸ್ಕಾರಕ್ಕೆ ಅರ್ಹರಲ್ಲದವರು:** ತಾಯಿ ಮತ್ತು ತಂದೆಯ ಕಿರಿಯ ಸಹೋದರರನ್ನು ವಯಸ್ಸಿನಲ್ಲಿ ಹಿರಿಯನಾದವನು ನಮಸ್ಕರಿಸಕೂಡದು. ಆದರೆ ಗುರು ಪತ್ನಿ ಹಿರಿಯಸಹೋದರನ ಪತ್ನಿ ಮಲತಾಯಿ ಇವರು ವಯಸ್ಸಿನಲ್ಲಿ ಕಿರಿಯವರಾದರೂ ನಮಸ್ಕಾರಾರ್ಹರು. "मातुः पितुः कनीयांसं न नमेद्वयसाधिकः। नमस्कुर्यात् गुरोः पत्नीं भ्रातृजायां विमातरम्"।

**नमस्कारी ನಮಸ್ಕಾರೀ** (ಸ್ತ್ರೀ०) ಮುಟ್ಟಿದರೆ ಮುನಿವ ಗಿಡ. नमस्+डु कृञ् (करणे) "णिनिः" (३-२-७८)।

**नमस्कार्य ನಮಸ್ಕಾರ್ಯ** (ವಿ०) 1. ನಮಸ್ಕಾರಕ್ಕೆ ಯೋಗ್ಯನಾದವನು. 2. ನಮಸ್ಕರಿಸಲ್ಪಡುವವನು. 3. ನಮಸ್ಕರಿಸಬೇಕಾದವನು. नमस्+डु कृञ् (करणे) "ण्यत्" (३-१-१२४)। "नमस्कार" ಪದದಲ್ಲಿ ನೋಡಿ.

**नमस्कृति ನಮಸ್ಕೃತಿ** (ಸ್ತ್ರೀ०) ಪ್ರಣಾಮ, ನಮಸ್ಕಾರ.

**नमस्क्रिया ನಮಸ್ಕ್ರಿಯಾ** (ಸ್ತ್ರೀ०) ಪ್ರಣಾಮ, ನಮಸ್ಕಾರ. नमस्+डु कृञ् (करणे) "शः" (३-३-१००)।

**नमस्य ನಮಸ್ಯ** (ವಿ०) ನಮಸ್ಕಾರಕ್ಕೆ ಅರ್ಹನಾದ, ಗೌರವಕ್ಕೆ ಯೋಗ್ಯನಾದ.

**नमस्या ನಮಸ್ಯಾ** (स्त्री०) 1. ಪ್ರಣಾಮ, ನಮಸ್ಕಾರ. 2. ಪೂಜೆ. नमस् + क्यच् (३-१-१९)। "अ:" (३-३-१०२)। "पूजा नमस्यापचिति:" अम०।

**नमस्यित ನಮಸ್ಯಿತ** (वि०) ನಮಸ್ಕರಿಸಲ್ಪಟ್ಟ. नमस्+क्यच् "क्त:" (३-२-१०२)। वा यलोप: (६-४-५०)। नमसित: ನಮಸಿತಃ.

**नमित ನಮಿತ** (वि०) 1. ನಮಸ್ಕಾರ ಮಾಡಿಸಲ್ಪಟ್ಟ. णम (प्रह्वत्वे)+णिच् "क्त:" (३-२-१०२)। 2. ಬಗ್ಗಿಸಲ್ಪಟ್ಟ. "यत्तस्थे नमितमुखेन्दु मानवत्या" माघ० ९-८४।

**नमुचि ನಮುಚಿ** (पुं०) 1. ಒಬ್ಬ ಅಸುರ. 2. ಮನ್ಮಥ. न मुञ्चति नञ् प्रकृत्या भवति (६-३-७५)। "नमुचिस्तु पुमान् दैत्यभेदे कुसुमकार्मुके" मेदि०।

**नमुचिद्विष् ನಮುಚಿದ್ವಿಷ್** (पुं०) ನಮುಚಿಯ ಶತ್ರುವಾದ ಇಂದ್ರ. नमुचिं द्वेष्टि—द्विष (अप्रीतौ) "क्विप्" (३-२-६१)। "विगृह्य चक्रे नमुचिद्विषा बली य इत्थमस्वास्थ्यमहर्दिवं दिव:" माघ० १-५१।

**नमुचिसूदन ನಮುಚಿಸೂದನ** (पुं०) ನಮುಚಿಯನ್ನು ಸಂಹರಿಸಿದ ಇಂದ್ರ. नमुचिं सूदयति—षूद (क्षरणे) "ल्यु:" (३-१-१३४)।

**नमेरु ನಮೇರು** (पुं०) ಪುನ್ನಾಗವೃಕ್ಷ, ಸುರಗಿ ಮರ, ಸುರಹೊನ್ನೆ ಮರ. णम (प्रह्वत्वे शब्दे) "एरु:" बाहु०। "गणा नमेरुप्रसवावतंसा भूर्जत्वच: स्पर्शवतीर्दधाना:" कुमा० १-५५।

**नमोगुरु ನಮೋಗುರು** (पुं०) ವಿಪ್ರ, ಬ್ರಾಹ್ಮಣ.

**नमोवाक ನಮೋವಾಕ** (पुं०) ನಮಸ್ಕಾರದ ಮಾತು. नम: नमस्काराय वाक:। "इदंकविभ्य: पूर्वेभ्यो नमोवाकमधीमहे" उ०रा० १-१।

**नमोवृध् ನಮೋವೃಧ್** (पुं०) ಯಾಗ. नमसोऽन्नस्य वृध् वर्धनं यस्मात्। ಯಾಗದ ಅಗ್ನಿಯಲ್ಲಿ ಮಾಡಿದ ಆಹುತಿಯು ಆದಿತ್ಯನನ್ನು ಸೇರುವುದು. ಆದಿತ್ಯನಿಂದ ಮಳೆಯುಂಟಾಗುವುದು. ಮಳೆಯಿಂದ ಪ್ರಜೆಗಳಿಗೆ ಅನ್ನವು ಲಭಿಸುವುದು. ಆದುದರಿಂದ ಯಜ್ಞವು ಅನ್ನಕ್ಕೆ ಕಾರಣವಾಗುವುದು. "अग्नौ प्रास्ताहुति: सम्यगादित्यमुपतिष्ठते। आदित्याज्जायते वृष्टिर्वृष्टेरन्नं तत: प्रजा:" मनु० ३-७६।

**नम्य ನಮ್ಯ** (वि०) ನಮಸ್ಕರಿಸಲ್ಪಡುವ. णम (प्रह्वत्वे शब्दे) कर्म० "यत्" (३-१-९८)।

**नम्र ನಮ್ರ** (वि०) 1. ವಿಧೇಯ, ವಿನಯದಿಂದ ಕೂಡಿದವನು. णम (प्रह्वत्वे शब्दे) "र:" (३-२-१६७)। "अभूच्च नम्र: प्रणिपातशिक्षया पितुर्मुदं तेन ततान सोऽर्भक:" रघु० ३-२५। 2. ಬಗ್ಗಿರುವ. "शश्वत्सिद्धैरुपचितबलिं भक्तिनम्र: परीया:" मेघ० १-५५।

**नम्रक ನಮ್ರಕ** (पुं०) 1. ಲಕ್ಕಿಗಿಡ. नम्र इव कायति—कै (शब्दे) "क:" (३-२-३)। 2. ಬಗ್ಗಿರುವ. नम्र एव स्वार्थे "कन्" (५-४-५)।

**नम्रता ನಮ್ರತಾ** (स्त्री०) 1. ವಿಧೇಯತೆ, ವಿನಯದಿಂದ ಕೂಡಿರುವಿಕೆ. नम्रस्य भाव: "तल्" (५-१-११९)। 2. ಬಗ್ಗಿರುವಿಕೆ. "त्व:" (५-१-११९)। नम्रत्वम् ನಮ್ರತ್ವಮ್. "मयि स्थितिर्नम्रतयैव लभ्यते दिगेव तु स्तब्धतया विलङ्घ्यते" नैष० १२-३४।

**नम्रमुख ನಮ್ರಮುಖ** (वि०) ತಗ್ಗಿದ ಮುಖವುಳ್ಳವನು, ತಲೆ ತಗ್ಗಿಸಿರುವವನು. नम्रं मुखं यस्य। स्त्रियां "ङीप्"। –मुखी –ಮುಖೀ. "सा सा ह्रिया नम्रमुखी बभूव" माघ० ३-१६।

**नय ನಯ** (पुं०) 1. ನೀತಿ, ಒಳ್ಳೆಯ ನಡತೆ, ವಿವೇಕಯುಕ್ತ ವ್ಯವಹಾರ. णीञ् (प्रापणे) "अच्" (३-३-५६)। "कथंचिन्न विकल्पन्ते विद्वद्भिश्चिन्तिता नया:" पञ्चतं० १-३७०। 2. ನೀತಿಶಾಸ್ತ್ರ, ಧರ್ಮಶಾಸ್ತ್ರ. "विषमोऽपि विगाह्यते नय: कृततीर्थ: पयसामिवाशय:" किरा० २-३। 3. ರಾಜನೀತಿ, ವಿವೇಕದಿಂದ ಕೂಡಿದ ಆಪಳಿತ ನೈಪುಣ್ಯ, ರಾಜಕೀಯ ಚತುರತೆ, "विक्रान्तैर्नयशालिभि: सुसचिवै: श्रीर्वक्रनासादिभि: नन्दे जीवति या तदा न गमिता स्थैर्यं चलन्ती मुहु:" मुद्रा० १-२३। 4. ವಿಷ್ಣು. नीयन्ते नित्यमस्मिन्-णीञ् अधि० "अच्"। "यस्मिन् तपोधना नित्यं नीयन्ते इति वै नय:" इति निरुक्ति:। "रामो विरामो विरजो मार्गो नेयो नयोऽनय:" वि०स०। 5. ಸಿದ್ಧಾಂತ, ತತ್ತ್ವ, "तत्रापि परमाणौ स्यात् पाको वैशेषिके नये" भाषाप०। 6. ಒಂದು ವಿಧ ದ್ಯೂತ. (वि०) 7. ನಾಯಕ, ಮುಂದಾಳು. 8. ನ್ಯಾಯವಾದ, ಕ್ರಮಬದ್ಧವಾದ. "नयो नीतिद्यूतविशेषयो:" मेदि०।

**नयक ನಯಕ** (वि०) ನೀತಿಯಲ್ಲಿ ಚತುರನಾದವನು, ರಾಜನೀತಿಯಲ್ಲಿ ಕುಶಲನಾದವನು. नये कुशल: "कन्" (५-२-६४)।

**नयत् ನಯತ್** (वि०) 1. ಒಯ್ಯುತ್ತಿರುವ. "तामेकत: क्षितिपतेरपरं नयन्त:" नैष० ११-७१। 2. ಮಾರ್ಗದರ್ಶನ ಮಾಡುತ್ತಿರುವ, ಸೂಚನೆ ಕೊಡುತ್ತಿರುವ. णीञ् (प्रापणे) "शतृ" (३-२-१२४)। 3. ಹೊಂದಿಸು

ತ್ತಿರುವ. "नयन् मधुलिहः श्वैत्यमुदग्रदशनांशुभिः" माघ० २-२१। स्त्रियां "ङीप्" (४-१-६)। -न्ती -ನ್ತಿ.

**नयन ನಯನ** (न०) 1. ನೇತ್ರ. ಕಣ್ಣು. नीयतेऽनेन—णीञ् (प्रापणे) "ल्युट्" (३-३-११७)। "तमेकदृश्यं नयनैः पिबन्त्यो नार्यो न जग्मुर्विषयान्तराणि" कुमा० ७-६४। 2. ಒಯ್ಯುವುದು, ಸಾಗಿಸುವುದು. 3. (ಕಾಲ) ಕಳೆಯುವುದು. "कालस्य नयने युक्ताः सोमपत्न्यः शुचिव्रताः" भा० आदि० ६७-१६।

**नयनगोचर ನಯನಗೋಚರ** (वि०) ದೃಷ್ಟಿಗೆ ಗೋಚರವಾದ, ನೋಟಕ್ಕೆ ವಿಷಯವಾದ, ಕಣ್ಣಿಗೆ ಕಾಣಿಸುವ. नयनस्य गोचरः।

**नयनच्छद ನಯನಚ್ಛದ** (पुं०) ಕಣ್ಣಿನ ರೆಪ್ಪೆ. नयनं छाद्यतेऽनेन—छद (संवरणे)+णिच् "घः" (३-३-११८)।

**नयनपथ ನಯನಪಥ** (पुं०) ದೃಷ್ಟಿಯ ಮಾರ್ಗ, ನೋಟವು ಹರಡುವ ಪ್ರದೇಶ. नयनस्य पन्थाः "अः" (५-४-७४)।

**नयनवत् ನಯನವತ್** (वि०) ನೇತ್ರಗಳುಳ್ಳವನು, ನೇತ್ರಗಳಿಂದ ಕೂಡಿದವನು. नयनेऽस्य स्तः "मतुप्" (५-२-९४)। "इह जगति महोत्सवस्य हेतुर्नयनवतामुदियाय बालचन्द्रः" मालती० २-१०। स्त्रियां "ङीप्" (४-१-६)। -वती -ವತೀ.

**नयनानन्द ನಯನಾನಂದ** (पुं०) ಕಣ್ಣಿಗೆ ಉಂಟಾಗುವ ಆಹ್ಲಾದ, नयनयोरानन्दः। "किं पद्मस्य रुचिं न हन्ति नयनानन्दं विधत्ते न किम्" रत्ना० ३-१३।

***नयनाभिराम ನಯನಾಭಿರಾಮ** (पुं०) 1. ಚಂದ್ರ. नयनमभिरमयति — अभि + रमु (क्रीडायाम्) + णिच् "अण्" (३-२-१)। (वि०) 2. ಕಣ್ಣಿಗೆ ಮನೋಹರವಾಗಿ ತೋರುವ, ಕಣ್ಣಿಗೆ ಪ್ರೀತಿಯನ್ನುಂಟುಮಾಡುವ.

**नयनीय ನಯನೀಯ** (वि०) 1. ಒಯ್ಯಲ್ಪಡುವ, ಸಾಗಿಸಲ್ಪಡುವ. 2. ಒಯ್ಯಲು ಶಕ್ಯವಾದ. 3. ಒಯ್ಯಬೇಕಾದ. 4. ಒಯ್ಯಲು ಅರ್ಹವಾದ. णीञ् (प्रापणे) "अनीयर्" (३-१-९६)।

**नयनोत्सव ನಯನೋತ್ಸವ** (पुं०) ಕಣ್ಣಿಗೆ ಉಂಟಾಗುವ ಹಬ್ಬ, ಸುಂದರ ವಸ್ತುವನ್ನು ನೋಡುವುದರಿಂದ ಉಂಟಾಗುವ ಸಂತೋಷ. नयनयोरुत्सवः।

**नयमान ನಯಮಾನ** (वि०) ಒಯ್ಯುತ್ತಿರುವ, ಸಾಗಿಸುತ್ತಿರುವ. णीञ् (प्रापणे) कर्त० "शानच्" (३-२-१२४)।

**नयवत् ನಯವತ್** (वि०) 1. ನೀತಿಯುಳ್ಳವನು. 2. ವಿವೇಕಶಾಲಿ. 3. ಒಳ್ಳೆಯ ವ್ಯವಹಾರವುಳ್ಳವನು. 4. ರಾಜನೀತಿಯನ್ನು ತಿಳಿದವನು. नयोऽस्यास्ति "मतुप्" (५-२-९४)। स्त्रियां "ङीप्" (४-१-६)। -वती -ವತೀ.

**नयवर्त्मन् ನಯವರ್ತ್ಮನ್** (न०) ನೀತಿಮಾರ್ಗ, ರಾಜನೀತಿಯ ನೈಪುಣ್ಯ, ರಾಜ್ಯಾಡಳಿತದಲ್ಲಿ ಸಂಧಿವಿಗ್ರಹ ಮೊದಲಾದ ಆರು ಗುಣಗಳನ್ನು ಪ್ರಯೋಗಿಸುವುದು. नयस्य वर्त्म। "तवानुभावोऽयमवेदि यन्मया निगूढतत्त्वं नयवर्त्म विद्विषाम्" किरा० १-६।

**नयविद् ನಯವಿದ್** (वि०) ನೀತಿಶಾಸ್ತ್ರವನ್ನು ತಿಳಿದವನು, ರಾಜನೀತಿಯನ್ನು ಬಲ್ಲವನು. नयं वेत्ति — विद (ज्ञाने) "क्विप्" (३-२-६१)। "नयविद्भिर्नवे राज्ञि सदसच्चोपदर्शितम्" रघु० ४-१०।

**नयविशारद ನಯವಿಶಾರದ** (वि०) ರಾಜನೀತಿಯಲ್ಲಿ ನಿಪುಣನಾದವನು. नये विशारदः। "सान्धिविग्रहिकः कार्यो राज्ञा नयविशारदः"।

**नयवेदिन् ನಯವೇದಿನ್** (वि०) "नयविद्" ಪದದ ಅರ್ಥ. नयं वेत्ति—विद (ज्ञाने) "णिनिः" (३-१-१३४)।

**नयशास्त्र ನಯಶಾಸ್ತ್ರ** (न०) ರಾಜನೀತಿಶಾಸ್ತ್ರ.

**नयसिद्धि ನಯಸಿದ್ಧಿ** (स्त्री०) ರಾಜನೀತಿಯ ಫಲ, ರಾಜನೀತಿಶಾಸ್ತ್ರ ಪ್ರಯೋಗದ ಫಲ. नयस्य सिद्धिः।

**नर ನರ** (पुं०) 1. ಮನುಷ್ಯ. नरति—नॄ (नये) "अच्" (३-१-१३४)। "वानराणां नराणां च कथमासीत्समागमः" रामा०। 2. ವಿಷ್ಣು, ಪರಮಾತ್ಮ. "रः क्षयो यस्य नास्ति स नरः समुदाहृतः" इति निरुक्तिः। "जह्नुर्नारायणो नरः" वि०स०। 3. ಪುರುಷ. 4. ಅರ್ಜುನ. [ಸಹಸ್ರಕವಚನೆಂಬ ರಾಕ್ಷಸನು ಲೋಕವನ್ನು ಪೀಡಿಸುತ್ತಿರಲು ಅವನ ಸಂಹಾರಕ್ಕಾಗಿ ವಿಷ್ಣುವಿನ ಅಂಶದಿಂದ ನರ ನಾರಾಯಣರೆಂಬ ಇಬ್ಬರು ಮುನಿಗಳು ಧರ್ಮಪುರುಷನ ಪುತ್ರರಾಗಿ ಜನಿಸಿದರು. ಸಾವಿರ ವರ್ಷಗಳ ಕಾಲ ತಪಸ್ಸುಮಾಡಿದವರಿಂದ ಮಾತ್ರ ತನಗೆ ಮರಣವುಂಟಾಗಬೇಕೆಂಬ ವರವನ್ನು ಸಹಸ್ರಕವಚನು ಪಡೆದದ್ದರಿಂದ ಈ ಮುನಿಗಳು ಬದರಿಕಾಶ್ರಮದಲ್ಲಿ ತಪಸ್ಸು ಮಾಡತೊಡಗಿ ಇಬ್ಬರೂ ಸರದಿಯಂತೆ ಈ ರಾಕ್ಷಸನೊಡನೆ ಯುದ್ಧಮಾಡಿ ಒಂಬೈನೂರ ತೊಂಬತ್ತೊಂಬತ್ತು ಕವಚಗಳನ್ನು ಭೇದಿಸಿದರು. ಇಷ್ಟರಲ್ಲಿ ಈ ರಾಕ್ಷಸನು ಮೃತಿಹೊಂದಿ ಒಂದು ಕವಚದೊಡನೆ ಕರ್ಣನಾಗಿ ಹುಟ್ಟಿದನು. ಆಗ ಈ ಮುನಿಗಳೂ ಕೃಷ್ಣಾರ್ಜುನರಾಗಿ ಹುಟ್ಟಿ ತನ್ನ

ಸರದಿಯಾಗಿದ್ದ ಯುದ್ಧದಲ್ಲಿ ನರ (ಅರ್ಜುನ)ನು ಕರ್ಣನನ್ನು ಸಂಹರಿಸಿದನು.] (ನಂ) 5. ರಾಮಕರ್ಪೂರವೆಂಬ ಒಂದು ತೃಣ. "नरोऽर्जे मनुजेऽर्जुने। क्लीबन्तु रामकर्पूरे" मेदि०।

**नरक ನರಕ** (पुं०) 1. ಜೀವಾತ್ಮನು ತಾನು ಮಾಡಿದ ಪಾಪಕಾರ್ಯಗಳ ಫಲವನ್ನು ಯಮಲೋಕದಲ್ಲಿ ಅನುಭವಿಸುವ ಸ್ಥಳ. नरति नयति पापिलोकम्—नृ (नये) "वुन्" (उ० ५-३५)। ನಾನಾವಿಧ ಪಾಪಕಾರ್ಯಗಳಿಗೆ ಶಿಕ್ಷೆಯನ್ನು ಅನುಭವಿಸುವ ನರಕಗಳು ಇಪ್ಪತ್ತೆಂಟು. (1) तामिस्रः, (2) अन्धतामिस्रः, (3) रौरवः, (4) महारौरवः, (5) कुम्भीपाकः, (6) कालसूत्रम्, (7) असिपत्रवनम्, (8) सूकरमुखम्, (9) अन्धकूपः, (10) कृमिभोजनः, (11) सन्दंशः, (12) तप्तसूर्मिः, (13) वज्रकण्टकः, (14) शाल्मलिः, (15) वैतरणी, (16) पूयोदः, (17) प्राणरोधः, (18) विशसनम्, (19) लालाभक्षः, (20) सारमेयादनम्, (21) अवीचिः, (22) अयःपानम्, (23) क्षारकर्दमः, (24) रक्षोगणभोजनः, (25) शूलप्रोतः, (26) दन्दशूकः, (27) पर्यावर्तनः ಮತ್ತು (28) सूचीमुखम्। ಪಾಪಕಾರ್ಯಗಳಿಗನುಗುಣವಾಗಿ ಮೇಲೆ ಹೇಳಿರುವ ನರಕಗಳಲ್ಲಿ ಶಿಕ್ಷೆಗಳನ್ನು ಅನುಭವಿಸಬೇಕಾಗುವುದು. [ವಿವರಗಳಿಗೆ भाग० ५-२६ ಅಧ್ಯಾಯದಲ್ಲಿ ನೋಡಿ.] 2. ನರಕಾಸುರ. [ಮಹಾವಿಷ್ಣುವಿನ ವರಾಹಾವತಾರಕಾಲದಲ್ಲಿ ವಿಷ್ಣುವಿನ ದೇಹದಿಂದ ಭೂಮಿಯಲ್ಲಿ ಬಿದ್ದ ಬೆವರಿನಿಂದ ಹುಟ್ಟಿದುದರಿಂದ ಇವನಿಗೆ ಭೌಮಾಸುರನೆಂದೂ ಹೆಸರಾಯಿತು. ಭೂದೇವಿಯು ಈ ಅಸುರನಿಗೆ ವೈಷ್ಣವಾಸ್ತ್ರವನ್ನು ಸಂಪಾದಿಸಿ ಕೊಟ್ಟಳು. ಅದರಿಂದ ಕೊಬ್ಬಿದ ಇವನು ಲೋಕವೆಲ್ಲವನ್ನೂ ಪೀಡಿಸುತ್ತಿರಲು ಇಂದ್ರನು ಶ್ರೀಕೃಷ್ಣನಲ್ಲಿಗೆ ಹೋಗಿ ಈ ವೃತ್ತಾಂತವನ್ನು ತಿಳಿಸಲಾಗಿ ಶ್ರೀಕೃಷ್ಣನು ನರಕಾಸುರನ ರಾಜಧಾನಿಯಾದ ಪ್ರಾಗ್ಜ್ಯೋತಿಷಪುರಕ್ಕೆ ಹೋಗಿ ಅವನೊಡನೆ ಯುದ್ಧಮಾಡಿ ಅವನನ್ನು ಸಂಹರಿಸಿದನು. ಬಳಿಕ ನರಕಾಸುರನ ಮಗನಾದ ಭಗದತ್ತನಿಗೆ ಅಭಯಪ್ರದಾನಮಾಡಿ ನರಕನು ಸೆರೆಯಲ್ಲಿಟ್ಟಿದ್ದ ರಾಜಕನ್ಯೆಯರೆಲ್ಲರನ್ನೂ ಬಿಡಿಸಿ ನರಕನಿಂದ ಅಪಹೃತವಾದ ಅದಿತಿಯ ಕುಂಡಲಗಳನ್ನೂ ಮೇರುಶಿಖರವನ್ನೂ ಇಂದ್ರನ ಛತ್ರವನ್ನೂ ಕೊಡಿಸಿದನು.] भाग० १०-५९।

**नरककुण्ड ನರಕಕುಂಡ** (ನಂ) ಯಮಲೋಕದಲ್ಲಿ ಜೀವಾತ್ಮನು ತನ್ನ ಪಾಪಕೃತ್ಯಗಳಿಗೆ ಶಿಕ್ಷೆಯನ್ನು ಅನುಭವಿಸುವ ಯಾತನಾಸ್ಥಾನ. ಕ್ರೂರವಾದ ಮಾತುಗಳಿಂದ ಬಂಧುಗಳನ್ನು ಪೀಡಿಸುವವನಿಗೆ ವಹ್ನಿಕುಂಡದಲ್ಲಿ ಶಿಕ್ಷೆ. ಬ್ರಾಹ್ಮಣರು ಬಂದಾಗ ಆತಿಥ್ಯವನ್ನು ಮಾಡದವನಿಗೆ ತಪ್ತಕುಂಡದಲ್ಲಿ ಶಿಕ್ಷೆ. ಬ್ರಾಹ್ಮಣನ ವೃತ್ತಿಯನ್ನು ಅಪಹರಿಸುವವನಿಗೆ ವಿಟ್‌ಕುಂಡದ ಶಿಕ್ಷೆ. ಇತರರ ತಟಾಕಗಳನ್ನು ಒಡೆದುಹಾಕುವವನಿಗೆ ಮೂತ್ರಕುಂಡದಲ್ಲಿ ಶಿಕ್ಷೆ. ಏಕಾಕಿಯಾಗಿ ಮಿಷ್ಟಾನ್ನ ಭುಜಿಸುವವನಿಗೆ ಶ್ಲೇಷ್ಮಕುಂಡದಲ್ಲಿ ಶಿಕ್ಷೆ. ತಾಯಿ ತಂದೆ ಗುರು ಮತ್ತು ಪತ್ನಿ ಇವರನ್ನು ಪೋಷಿಸದವನಿಗೆ ಗರಕುಂಡದ ಶಿಕ್ಷೆ. ಅತಿಥಿಯನ್ನು ಕಂಡು ದೃಷ್ಟಿಯನ್ನು ವಕ್ರವಾಗಿ ಮಾಡುವವನಿಗೆ ದೂಷಿಕಾ (ನೇತ್ರಮಲ) ಕುಂಡದಲ್ಲಿ, ಬ್ರಾಹ್ಮಣನೊಬ್ಬನಿಗೆ ಕೊಡುವುದಾಗಿ ವಾಗ್ದಾನಮಾಡಿ ಮತ್ತೊಬ್ಬನಿಗೆ ಕೊಡುವವನಿಗೆ ವಸಾಕುಂಡದಲ್ಲಿ, ಪರಸ್ತ್ರೀಸಂಗಮ ಮಾಡುವ ಪುರುಷನಿಗೆ ಮತ್ತು ಪರಪುರುಷನ ಸಂಗ ಮಾಡುವ ಹೆಂಗಸಿಗೆ ಶುಕ್ರಕುಂಡದಲ್ಲಿ ಶಿಕ್ಷೆ. ತಾಯಿ ತಂದೆ ಆಚಾರ್ಯ ಇವರನ್ನು ಹೊಡೆದು ಅವರ ಮೈಯಿಂದ ರಕ್ತ ಸುರಿಸುವವನು ರಕ್ತಕುಡದಲ್ಲಿ ಬಿದ್ದು ಯಾತನೆಯನ್ನು ಅನುಭವಿಸುವನು. ಗರ್ಭಿಣಿಯ ಸಂಗದಿಂದ ತಾಮ್ರಕುಂಡದಲ್ಲಿ ಶಿಕ್ಷೆ. ವಿಷಪ್ರಯೋಗದಿಂದ ಪ್ರಾಣ ತೆಗೆಯುವವನು ವಿಷಕುಂಡದಲ್ಲಿ ಯಾತನೆಯನ್ನು ಅನುಭವಿಸುವನು. ಬ್ರಾಹ್ಮಣರ ಮತ್ತು ದೇವರ ದ್ರವ್ಯವನ್ನು ಅಪಹರಿಸುವವನು ವಜ್ರಕುಂಡದಲ್ಲಿ ಯಾತನೆಯನ್ನು ಅನುಭವಿಸಬೇಕು. ದ್ರವ್ಯದ ಆಸೆಯಿಂದ ಪ್ರಜೆಗಳನ್ನು ಶಿಕ್ಷಿಸುವ ರಾಜನಿಗೆ ವೃಶ್ಚಿಕಕುಂಡದಲ್ಲಿ ಶಿಕ್ಷೆ. ಇತ್ಯಾದಿ ನಾನಾವಿಧವಾದ ಅಪರಾಧಗಳಿಗೆ ಎಂಬತ್ತಾರು ಕುಂಡಗಳಲ್ಲಿ ಶಿಕ್ಷೆಯು ವಿಧಿಸಲ್ಪಟ್ಟಿದೆ. ब्रह्मवै० प्रकृतिखण्डः।

**नरकजित् ನರಕಜಿತ್** (ಪುಂ) ವಿಷ್ಣು, ಶ್ರೀಕೃಷ್ಣ. नरकं जितवान्—जि (जये) "क्विप्" (३-२-६१)। एवं -भिद्-ಭಿದ್. "नरकजिता निरपायवैभवेन" याद० २४-२३।

**नरकभूमि ನರಕಭೂಮಿ** (स्त्री०) ಪಾಪಿಗಳು ಯಮಲೋಕದಲ್ಲಿ ಶಿಕ್ಷೆಯನ್ನು ಅನುಭವಿಸುವ ಪ್ರದೇಶ. नरकस्य भोगयोग्या भूमिः।

**नरकमुक्त ನರಕಮುಕ್ತ** (ಪುಂ) ನರಕಯಾತನೆಗಳನ್ನು ಅನುಭವಿಸಿದನಂತರ ಬಿಡುಗಡೆಹೊಂದಿದವನು. ನರಕದಿಂದ ಮುಕ್ತನಾದ ಜೀವನು ತನ್ನ ಪಾಪಕರ್ಮಾನುಗುಣವಾಗಿ ನಾನಾವಿಧವಾದ ಜನ್ಮಗಳನ್ನು ಪಡೆಯಬೇಕಾಗುವುದು. ಉಪಾಧ್ಯಾಯನಲ್ಲಿ ಅಪರಾಧಮಾಡಿದ ಬ್ರಾಹ್ಮಣನು ನಾಯಿಜನ್ಮವನ್ನು ಪಡೆಯುವನು. ಗುರುಪತ್ನಿಯನ್ನೂ ಗುರುವಿನ ದ್ರವ್ಯವನ್ನೂ ಅಪೇಕ್ಷಿಸಿದವನು ಗರ್ದಭವಾಗಿ ಹುಟ್ಟುವನು. ತನ್ನಲ್ಲಿಟ್ಟಿದ್ದ ವಸ್ತು ಧನ ಮೊದಲಾ[illegible]

ವನ್ನು ಅಪಹರಿಸಿದವನು ನರಕದಿಂದ ಮುಕ್ತನಾಗಿ ಕೃಮಿಯಾಗಿ ಹುಟ್ಟುವನು. ಪರರ ಅಭಿವೃದ್ಧಿಯನ್ನು ಕಂಡು ಅಸೂಯೆಪಡುವವನು ರಾಕ್ಷಸನಾಗಿ ಹುಟ್ಟುವನು. ಒಬ್ಬನ ಊಟವನ್ನು ಕದ್ದು ತಿನ್ನುವವನು ಮಕ್ಷಿಕ (ನೊಣ) ವಾಗಿ ಹುಟ್ಟುವನು. ಕಾಂಸ್ಯ (ಕಂಚು) ವನ್ನು ಅಪಹರಿಸುವವನು ಕಪೋತ (ಪಾರಿವಾಳ) ವಾಗಿ ಜನಿಸುವನು. ಒಬ್ಬನ ಮನೆಯನ್ನು ಮೋಸದಿಂದ ಅಪಹರಿಸುವವನು ರೌರವ ನರಕವನ್ನು ಹೊಂದುವನು. ಸುವರ್ಣಕಲಶಚೋರನಿಗೆ ಕೃಮಿಜನ್ಮವು ಬರುವುದು. ಇತ್ಯಾದಿ ಇತ್ಯಾದಿ. "उपाध्याय व्यलीकन्तु कृत्वा श्वा भवति द्विजः। तज्जायां मनसा वाञ्छन् तद्द्रव्यं वाप्यसंशयम्। गर्दभो जायते जन्तु- मित्रस्यैवापमानकृत्। असूयकश्च नरकान्मुक्तो भवति राक्षसः। भोजनं चोरयित्वा तु मक्षिको जायते नरः" ಇತ್ಯಾದಿ.

**नरकान्तक ನರಕಾಂತಕ** (पुं०) ನರಕಾಸುರನನ್ನು ಸಂಹರಿಸಿದ ಶ್ರೀಕೃಷ್ಣ. नरकस्य अन्तकः। "नरके वा नरकान्तक प्रकामम्" मु० मा०।

**नरकार्णव ನರಕಾರ್ಣವ** (पुं०) ನರಕರೂಪವಾದ ಸಮುದ್ರ. नरक एव अर्णवः।

**नरकेसरिन् ನರಕೇಸರಿನ್** (पुं०) 1. ನರಸಿಂಹಾವತಾರ ಮಾಡಿದ ಮಹಾವಿಷ್ಣು. 2. ಪುರುಷಶ್ರೇಷ್ಠ.

**नरजाङ्गल ನರಜಾಂಗಲ** (न०) ರಕ್ತಸಹಿತವಾದ ನರಮಾಂಸ. नरस्य जाङ्गलम्।

**नरता ನರತಾ** (स्त्री०) ಮನುಷ್ಯತ್ವ, ಮನುಷ್ಯನಾಗಿರುವಿಕೆ. नरस्य भावः "तल्" (५-१-११९)। "त्वः" (५-१-११९)। **-त्वम् -ತ್ವಮ್.** "नरत्वं दुर्लभं लोके विद्या तत्र सुदुर्लभा"।

**नरदेव ನರದೇವ** (पुं०) ರಾಜ, ದೊರೆ. नरो देव इव। "भवन्तमेतर्हि मनस्विगर्हिते विवर्तमानं नरदेव वर्त्मनि" किरा० १-३२।

**नरद्विष् ನರದ್ವಿಷ್** (पुं०) ಮನುಷ್ಯನ ಶತ್ರುವಾದ ರಾಕ್ಷಸ. नरान् द्वेष्टि—द्विष (अप्रीतौ) "क्विप्" (३-२-६१)।

**नरनाथ ನರನಾಥ** (पुं०) ರಾಜ, ದೊರೆ.

**नरनारायण ನರನಾರಾಯಣ** (पुं०द्वि०) ಮಹಾವಿಷ್ಣುವಿನ ಅಂಶದಿಂದ ಅವತರಿಸಿದ ನರ ಮತ್ತು ನಾರಾಯಣ ಮುನಿಗಳು. ಇವರು ಧರ್ಮಪುರುಷನ ಪುತ್ರರಾಗಿ ಜನಿಸಿದರು. ["नर" ಪದದಲ್ಲಿ ನೋಡಿ.] नरश्च नारायणश्च।

**नरप ನರಪ** (पुं०) ರಾಜ, ದೊರೆ. नरान् पाति—पा (रक्षणे) "कः" (३-२-३)।

**नरपति ನರಪತಿ** (पुं०) ರಾಜ, ದೊರೆ. नराणां पतिः। "नरपतिकुलभूत्यै गर्भमाधत्त राज्ञी गुरुभिरभिनिविष्टं लोकपालानुभावैः" रघु० २-७५।

**नरपशु ನರಪಶು** (पुं०) ಪಶುವಿನಂತಿರುವ ಮನುಷ್ಯ, ಅಜ್ಞಾನಿ, ತಿಳಿವಳಿಕೆಯಿಲ್ಲದವನು. नरः पशुरिव।

**नरपाल ನರಪಾಲ** (पुं०) ರಾಜ, ದೊರೆ. नरान् पालयति—पाल (रक्षणे) + णिच् "अण्" (३-२-१)।

**नरपुङ्गव ನರಪುಂಗವ** (पुं०) ಶ್ರೇಷ್ಠನಾದ ಮನುಷ್ಯ, ಉತ್ತಮ ಗುಣಗಳಿಂದ ಕೂಡಿದ ಮನುಷ್ಯ. पुमांश्चासौ गौश्च "टच्" (५-४-९२)। नरः पुङ्गव इव। "पुरुजित्कुन्तिभोजश्च शैब्यश्च नरपुङ्गवः" गीता १-५।

**नरप्रिय ನರಪ್ರಿಯ** (वि०) ಮನುಷ್ಯನಿಗೆ ಇಷ್ಟವಾದ, ಮನುಷ್ಯನಿಗೆ ಪ್ರೀತಿಪಾತ್ರವಾದ. नरस्य प्रियः।

**नरबलि ನರಬಲಿ** (पुं०) ಮನುಷ್ಯನನ್ನು ಉಪಾಹಾರವಾಗಿ ಕೊಡುವ ಒಂದು ಯಾಗ.

**नरभुज् ನರಭುಜ್** (पुं०) ನರಭಕ್ಷಕ, ಮನುಷ್ಯರನ್ನು ತಿನ್ನುವ ಪ್ರಾಣಿ. नरं भुङ्क्ते—भुज (परिपालनाभ्यवहारयोः) "क्विप्" (३-२-७६)।

**नरभू ನರಭೂ** (स्त्री०) 1. ಭಾರತವರ್ಷ. नराणां भूः भूमिः। 2. ಮನುಷ್ಯರ ಉತ್ಪತ್ತಿ. **-भूमिः -ಭೂಮಿಃ.** "भारतं नरभूः किंपूरुषम् हरिवर्षं ततः" त्रिकाण्ड०।

**नरमानिनी ನರಮಾನಿನೀ** (स्त्री०) ಪುರುಷನಂತಿರುವ ಹೆಂಗಸು, ಪುರುಷಲಕ್ಷಣಗಳಿಂದ ಕೂಡಿದ ಹೆಂಗಸು, ಪುರುಷನೆಂದು ತಿಳಿದುಕೊಂಡಿರುವ ಹೆಂಗಸು. नरं मन्यते — मन (ज्ञाने) "णिनिः" (३-२-१३४)। "ङीप्" (४-१-५)। "मरुण्डोच्चललाटा स्यात्सश्मश्रुर्नरमानिनी" त्रिकाण्ड०।

**नरमाला ನರಮಾಲಾ** (स्त्री०) ಮನುಷ್ಯರ ಮುಂಡಗಳಿಂದ ಕೂಡಿದ ಮಾಲೆ. नराणां नरमुण्डानां माला।

**नरमालिनी ನರಮಾಲಿನೀ** (स्त्री०) 1. ಮನುಷ್ಯರ ಮುಂಡಗಳ ಮಾಲೆಯಿಂದ ಕೂಡಿದ ಹೆಂಗಸು. 2. ಪುರುಷರಂತೆ ಗಡ್ಡ ಮೀಸೆಗಳಿಂದ ಕೂಡಿದ ಹೆಂಗಸು. नरस्येव माला केशमाला मुखेऽस्त्यस्याः "इनिः" (५-१-११६)।

**नरमेध ನರಮೇಧ** (पुं०) ಮನುಷ್ಯನನ್ನು ಬಲಿಯಾಗಿ ಕೊಡುವ ಒಂದು ಯಾಗ. नरो मेध्यते हिंस्यतेऽत्र—मेधृ (मेधाहिंसनयोः) "घञ्" (३-३-१२१)। "ब्राह्मण- राजन्ययोरतिष्ठाकामयोः पुरुषमेधसंज्ञको यज्ञो भवति।

सर्वभूतान्यतिक्रम्य स्थानमतिष्ठा। चैत्रशुक्लदशम्यामारम्भः"। "राजसूयाश्वमेधौ च सर्वमेधं च भारत। नरमेधं च नृपते त्वमाहर युधिष्ठिर" भा० आश्व० ३-८। ನರಮೇಧವು ಕಲಿಯುಗದಲ್ಲಿ ನಿಷಿದ್ಧ. "समुद्रयात्रास्वीकारः कमण्डलुविधारणम्। देवरेण सुतोत्पत्तिः मधुपर्के पशोर्वधः। दत्तायाश्चैव कन्यायाः पुनर्दानं वरस्य च। दीर्घकालं ब्रह्मचर्यं नरमेधाश्वमेधकौ। इमान् धर्मान् कलियुगे वर्ज्यानाहुर्मनीषिणः" उद्वाहत०।

**नरम्मन्य ನರಮ್ಮನ್ಯ** (पुं०) ತನ್ನನ್ನು ಮನುಷ್ಯನೆಂದು ತಿಳಿದುಕೊಂಡಿರುವವನು. आत्मानं नरं मन्यते – मन (ज्ञाने) "खश्" (३-२-८३)। मुमागमः (६-३-६७)।

**नरयन्त्र ನರಯಂತ್ರ** (नं०) ನೆರಳಿನ ಮೂಲಕ ಕಾಲವನ್ನು ತಿಳಿಯಲು ಮಾಡಿರುವ ಹನ್ನೆರಡು ಅಂಗುಲ ಪ್ರಮಾಣದ ನೆರಳು ಗಡಿಯಾರದ ಕಂಬ, ಹನ್ನೆರಡು ಅಂಗುಲಗಳ ಉದ್ದದ ಒಂದು ಸರಳು. "नरयन्त्रं तथा साधु दिने च विमले रवौ। छायासंसाधनैः प्रोक्तं कालसाधनमुत्तमम्" सू०सि० १३-२४। विमले मेघादिव्यवधानरूपमलेन रहिते सूर्ये एतद्रूपे दिने। ಮೇಘಾದಿಗಳಿಂದ ಸೂರ್ಯನು ಆಚ್ಛಾದಿತನಾಗದಿರುವ ಹಗಲಲ್ಲಿ ಕಾಲಜ್ಞಾನಕ್ಕಾಗಿ ಈ ಯಂತ್ರವನ್ನು ಉಪಯೋಗಿಸಬೇಕು.

**नरयान ನರಯಾನ** (नं०) ಮನುಷ್ಯರಿಂದ ಎಳೆಯಲ್ಪಡುವ ಗಾಡಿ. नरेण वाह्यं यानम्। "नरयानेन तु ज्येष्ठः पिता पार्थस्य भारत। अग्रतो धर्मराजस्य गान्धारीसहितो ययौ" भा०।

**नरर्षभ ನರರ್ಷಭ** (पुं०) ಮನುಷ್ಯಶ್ರೇಷ್ಠ. ಉತ್ತಮ ಗುಣಗಳಿಂದ ಕೂಡಿದ ಮನುಷ್ಯ. नरेषु ऋषभः नरो ऋषभ इव वा।

**नरलोक ನರಲೋಕ** (पुं०) ಮನುಷ್ಯಲೋಕ. ಮನುಷ್ಯರು ವಾಸಿಸುವ ಭೂಲೋಕ. नराधिष्ठितो लोकः। "तथा तवामी नरलोकवीरा विशन्ति वक्त्राण्यभिविज्वलन्ति" गीता ११-२८।

**नरवाहन ನರವಾಹನ** (पुं०) 1. ಕುಬೇರ. नरो वाहनमस्य। "विजयदुन्दुभितां ययुरर्णवा घनरवा नरवाहनसम्पदः" रघु० ९-११। (नं०) 2. ಮನುಷ್ಯರಿಂದ ಎಳೆಯಲ್ಪಡುವ ವಾಹನ. (वि०) 3. ಮನುಷ್ಯರು ಎಳೆಯುವ ಗಾಡಿಯಲ್ಲಿ ಸಂಚರಿಸುವವನು.

**नरवाहिन् ನರವಾಹಿನ್** (वि०) ಮನುಷ್ಯರಿಂದ ಒಯ್ಯಲ್ಪಡುವವನು.

**नरविष्वण ನರವಿಷ್ವಣ** (पुं०) 1. ರಾಕ್ಷಸ. नरं विष्वणति हिनस्ति—वि+स्वन (शब्दे) "अच्" (३-१-१३४)। (वि०) 2. ಮನುಷ್ಯರನ್ನು ಹಿಂಸಿಸುವವನು. "कीलालपाः पलाशी च क्षपाटो नरविष्वणः" त्रिकाण्ड०।

**नरव्याघ्र ನರವ್ಯಾಘ್ರ** (पुं०) ಮನುಷ್ಯಶ್ರೇಷ್ಠ, ಉತ್ತಮ ಗುಣಗಳಿಂದ ಕೂಡಿದ ಮನುಷ್ಯ. नरेषु व्याघ्रः नरो व्याघ्र इव वा।

**नरशार्दूल ನರಶಾರ್ದೂಲ** (पुं०) ಮನುಷ್ಯಶ್ರೇಷ್ಠ, ಉತ್ತಮ ಗುಣಗಳಿಂದ ಕೂಡಿದ ಮನುಷ್ಯ. नरेषु शार्दूलः नरः शार्दूल इव वा। "उत्तिष्ठ नरशार्दूल कर्तव्यं दैवमाह्निकम्" रामा०।

**नरसिंह ನರಸಿಂಹ** (पुं०) ಮನುಷ್ಯನ ಮತ್ತು ಸಿಂಹದ ಆಕಾರವುಳ್ಳ ಮಹಾವಿಷ್ಣುವಿನ ಒಂದು ಅವತಾರ. नरश्च सिंहश्च आकारेऽस्त्यस्य "अच्" (५-२-१२७)। ಹಿರಣ್ಯಕಶಿಪುವು ಬ್ರಹ್ಮಸೃಷ್ಟವಾದ ಪಶು ಪಕ್ಷಿ ಮನುಷ್ಯ ಮೊದಲಾದ ಯಾರಿಂದಲೂ ತನಗೆ ಮೃತ್ಯುವು ಸಂಭವಿಸ ಕೂಡದೆಂದು ಚತುರ್ಮುಖನಿಂದ ವರವನ್ನು ಪಡೆದು ದರ್ಪದಿಂದ ಲೋಕವೆಲ್ಲವನ್ನೂ ಪೀಡಿಸುತ್ತಿರಲು ಇವನ ಕ್ರೂರವಾದ ಶಿಕ್ಷೆಗಳಿಗೆ ಪಾತ್ರನಾಗಿದ್ದ ಪ್ರಹ್ಲಾದಕುಮಾರನನ್ನು ರಕ್ಷಿಸಲೂ ಲೋಕವನ್ನು ಇವನ ಹಿಂಸೆಯಿಂದ ಪಾರು ಮಾಡಲೂ ತಾನು ಸರ್ವವ್ಯಾಪಿಯೆಂಬುದನ್ನು ಪ್ರಕಟಿಸಲೂ ಪರಮಾತ್ಮನು ಕಂಬವನ್ನು ಭೇದಿಸಿಕೊಂಡು ನರಸಿಂಹ ರೂಪದಿಂದ ಅವತರಿಸಿ ಇವನನ್ನು ಸಂಹರಿಸಿದನು. "यस्त्वया मन्दभाग्योक्तो मदन्यो जगदीश्वरः। क्वासौ यदि स सर्वत्र कस्मात् स्तम्भे न दृश्यते। सोऽहं विकत्थमानस्य शिरः कायाद्धरामि ते। गोपायेत हरिस्त्वाद्य यस्ते शरणमीप्सितम्। एवं दुरुक्तैर्मुहुरर्दयन् रुषा सुतं महाभागवतं महासुरः। खड्गं प्रगृह्योत्पतितो वरासनात् स्तम्भं तताडातिबलः स्वमुष्टिना। तदैव तस्मिन् निनदोऽतिभीषणो बभूव येनाण्डकटाहमस्फुटत्। यं वै स्वधिष्ण्योपगतं त्वजादयः श्रुत्वा स्वधामाप्ययमङ्ग मेनिरे। स विक्रमन् पुत्रवधेप्सुरोजसा निशम्य निर्ह्रादमपूर्वमद्भुतम्। अन्तःसभायां न ददर्श तत्पदं वितत्रसुर्येन सुरारियूथपाः। सत्यं विधातुं निजभृत्यभाषितं व्याप्तिं च भूतेष्वखिलेषु चात्मनः। अदृश्यतात्यद्भुतरूपमुद्वहन् स्तम्भे सभायां न मृगं न मानुषम्" भाग० ७-८।

**नरसिंहपुराण ನರಸಿಂಹಪುರಾಣ** (नं०) ನರಸಿಂಹಾವತಾರದ ವಿಷಯವನ್ನು ವರ್ಣಿಸುವ ಒಂದು ಪುರಾಣ.

ಇದೊಂದು ಉಪಪುರಾಣ. "पाद्मे पुराणे यत्रोक्तं नरसिंहोपवर्णनम्। तच्चाष्टादशसाहस्रं नारसिंह-मिहोच्यते" मत्स्यपु०।

**नरहरि ನರಹರಿ** (पुं०) "नरसिंह" ಪದದ ಅರ್ಥ.

**नराङ्ग ನರಾಂಗ** (पुं०) 1. ಪುರುಷನ ಜನನೇಂದ್ರಿಯ. 2. ಒಂದು ವಿಧ ಮುಖದ ರೋಗ.

**नराधम ನರಾಧಮ** (पुं०) ಕೆಟ್ಟ ಮನುಷ್ಯ, ನೀಚ ಮನುಷ್ಯ. "अज्ञानोपहितो बाल्ये यौवने वनिताहृतः। शेषे कलत्र-चिन्तार्तः किं करोति नराधमः"।

**नराधिप ನರಾಧಿಪ** (पुं०) ರಾಜ, ದೊರೆ. नराणामधिपः। "गुणानुरक्तामनुरक्तसाधनः कुलाभिमानी कुलजां नरा-धिपः" किरा० १-३१। **-अधिपतिः -ಅಧಿಪತಿಃ.**

**नरान्तक ನರಾನ್ತಕ** (पुं०) 1. ಮನುಷ್ಯನನ್ನು ಕೊಲ್ಲುವ ರಾಕ್ಷಸ. नरस्यान्तकः। 2. ರಾವಣನ ಒಬ್ಬ ಮಗ. (वि०) 3. ಮನುಷ್ಯನನ್ನು ಕೊಲ್ಲುವ. नरमन्तयति।

**नरायण ನರಾಯಣ** (पुं०) ವಿಷ್ಣು, ಪರಮಾತ್ಮ. नरा-णामयनमाश्रयस्थानम्। "नराणामयनं यस्मात् तेन नरायणः स्मृतः" ब्रह्मवै०।

**नराश ನರಾಶ** (पुं०) ರಾಕ್ಷಸ. नरमश्नाति—अश (भोजने) "अण्" (३-२-१)। "यावन्नराशैनं रिपुः शवाशान् सन्तर्पयत्यानम तावदस्मै" भट्टि० १२-७५।

**नरिष्यन्त ನರಿಷ್ಯಂತ** (पुं०) ವೈವಸ್ವತ ಮನುವಿನ ಒಬ್ಬ ಮಗ. "वेनं धृष्णुं नरिष्यन्तं नाभागेक्ष्वाकुमेव च" भा० आदि० ६१-१८।

**नरी ನರೀ** (स्त्री०) ಮನುಷ್ಯನ ಪತ್ನಿ. नरस्य पत्नी।

**नरेन्द्र ನರೇಂದ್ರ** (पुं०) 1. ರಾಜ, ದೊರೆ. नराणामिन्द्रः। "तदनुमतमलंचकार पश्चात् प्रशम इव श्रुतमासनं नरेन्द्रः" किरा० २-५८। 2. ವಿಷವೈದ್ಯ. "सुनिग्रहा नरेन्द्रेण फणीन्द्रा इव शत्रवः" माघ० २-८८।

**नरेश ನರೇಶ** (पुं०) ರಾಜ, ದೊರೆ. नराणामीशः। **-ईश्वरः -ಈಶ್ವರಃ.** नराणामीश्वरः।

**नरोत्तम ನರೋತ್ತಮ** (पुं०) 1. ಪುರುಷಶ್ರೇಷ್ಠ, ಉತ್ತಮ ಗುಣಗಳಿಂದ ಕೂಡಿದ ಮನುಷ್ಯ. नरेषूत्तमः। 2. ಪುರುಷೋತ್ತಮನಾದ ವಿಷ್ಣು.

**नर्कुटक ನರ್ಕುಟಕ** (पुं०) ನಾಸಿಕೆ, ಮೂಗು. नरस्य कुटकमिव। पृषो०।

**नर्त, ನರ್ತ** (पुं०) 1. ನರ್ತನ, ಕುಣಿತ, ಅಭಿನಯದಿಂದ ಕೂಡಿದ ಕುಣಿತ, नृती (गात्रविक्षेपे) "घञ्"(३-३-१८)। (वि०) 2. ನರ್ತಕ, ಅಭಿನಯಪೂರ್ವಕ ಕುಣಿದಾಡುವವನು. नृत्यति — नृती (गात्रविक्षेपे) "अच्" (३-१-१३४)। "नृत्यप्रियो नित्यनर्तो नर्तकः सर्वलालसः" भा० अनु० ४८-५०।

**नर्तक ನರ್ತಕ** (पुं०) 1. ನಟ, ದೃಶ್ಯಕಾವ್ಯಗಳ ಅರ್ಥವನ್ನು ಶರೀರ ಮತ್ತು ಮಾತುಗಳಿಂದ ಅಭಿನಯಿಸಿ ತೋರಿಸುವವನು. 2. ಗಜ, ಆನೆ. 3. ಜಂಬುಹುಲ್ಲು. 4. ಪರಶಿವ, ನಟರಾಜ. 5. ಅಭಿನಯದೊಡನೆ ನರ್ತನ ಮಾಡುವವನು, नृत्यति — नृती (गात्रविक्षेपे) "ष्वुन्" (३-१-१४५)। 6. ಸ್ತುತಿಪಾಠಕ, ಹೊಗಳುಭಟ. (वि०) 7. ನರ್ತನ ಮಾಡಿಸುವವನು, ಕುಣಿದಾಡಿಸುವವನು. नर्तयति — नृती (गात्रविक्षेपे) + णिच् "ण्वुल्" (३-१-१३३)। स्त्रियाम् "ङीप्" (४-१-४१)। **नर्तकी ನರ್ತಕೀ.** (स्त्री०) **-की -ಕೀ.** 8. ಹೆಣ್ಣು ಆನೆ. 9. ನರ್ತನ ಮಾಡುವವಳು, ಅಭಿನಯದೊಡನೆ ಕುಣಿದಾಡುವವಳು. "नर्तकः केलके नटे। द्विपे गोटगले चापि नर्तकी लासिका द्विपी" हेम०। "नर्तकीरभिनयातिलङ्घिनीः" रघु० १९-१४।

**नर्तन ನರ್ತನ** (न०) 1. ನೃತ್ಯ, ಕುಣಿತ. नृती (गात्रविक्षेपे) भावे "ल्युट्" (३-३-११५)। "कामं क्रोधं च लोभं च नर्तनं गीतवादनम्" मनु० २-१७८। 2. ಕುಣಿದಾಡಿಸುವುದು. नृती + णिच् भावे "ल्युट्" (३-३-११५)। (वि०) 3. ನರ್ತನಮಾಡಿಸುವವನು, ಕುಣಿದಾಡಿಸುವವನು.

**नर्तनशाला ನರ್ತನಶಾಲಾ** (स्त्री०) ನರ್ತನ ಮಾಡಿಸುವ ಮನೆ, ನೃತ್ಯವನ್ನು ಕಲಿಸುವ ಗೃಹ. नर्तनस्य शाला। "यैषा नर्तनशालेह मत्स्यराजेन कारिता" भा० विरा० २५-३।

**नर्तनीय ನರ್ತನೀಯ** (वि०) ಕುಣಿಯಬೇಕಾದ, ನರ್ತನ ಮಾಡಬೇಕಾದ. नृती (गात्रविक्षेपे) "अनीयर्" (३-१-९६)। 2. ನರ್ತನ ಮಾಡಿಸಲ್ಪಡುವ, ಕುಣಿದಾಡಿಸಲ್ಪಡುವ. 3. ನರ್ತನ ಮಾಡಿಸಲು ಯೋಗ್ಯವಾದ. 4. ನರ್ತನ ಮಾಡಿಸಬೇಕಾದ. नृती + णिच् "अनीयर्" (३-१-९६)। "तव्यः" (३-१-९६)। **-यितव्यः -ಯಿತವ್ಯಃ.**

**नर्तयत् ನರ್ತಯತ್** (वि०) ನರ್ತನ ಮಾಡಿಸುತ್ತಿರುವ, ಕುಣಿದಾಡಿಸುತ್ತಿರುವ. नृती (गात्रविक्षेपे) + णिच् "शतृ" (३-२-१२४)। स्त्रियाम् "ङीप्" (४-१-६)। **-यन्ती -ಯಂತೀ.** "नर्तयन्तमसत्यानां नेत्रकौतुकसूति-काम्" याद० १६-१०।

**नर्तयितव्य ನರ್ತಯಿತವ್ಯ** (वि०) 1. ನರ್ತನ ಮಾಡಿಸಲ್ಪಡುವ, ಕುಣಿಯಿಸಲ್ಪಡುವ. 2. ನರ್ತನ ಮಾಡಿಸಲು ಯೋಗ್ಯವಾದ. 3. ನರ್ತನ ಮಾಡಿಸಬೇಕಾದ, ಕುಣಿಯಿಸಬೇಕಾದ. नृती (गात्रविक्षेपे) + णिच् "अनीयर्" (३-१-९६)।

**नर्तयितृ ನರ್ತಯಿತೃ** (वि०) 1. ನರ್ತನ ಮಾಡಿಸುವವನು, ಕುಣಿದಾಡಿಸುವವನು. नृती (गात्रविक्षेपे) + णिच् "तृच्" (३-१-१३३)। 2. ನೃತ್ಯಾಚಾರ್ಯ, ನರ್ತನವನ್ನು ಕಲಿಸುವ ಗುರು. "छन्दो नर्तयितुर्यथैव मनसः श्लिष्टं तथास्या वपुः" माल० २-३। स्त्रियाम् "ङीप्" (४-१-५)। **-यित्री -ಯಿತ್ರೀ.**

**नर्तित ನರ್ತಿತ** (न०) 1. ನೃತ್ಯ, ನರ್ತನ, ಕುಣಿತ. नृती (गात्रविक्षेपे) भावे "क्तः" (३-३-११४)। (वि०) 2. ನರ್ತನ ಮಾಡಿಸಲ್ಪಟ್ಟ, ಕುಣಿದಾಡಿಸಲ್ಪಟ್ಟ. नृती+णिच् कर्म० "क्तः" (३-२-१०२)। "वयस्य नर्तितोऽस्मि, नहि नहि क्रीडित्वा पलायितोऽस्मि" रत्ना० १। 3. ಆಡಿಸಲ್ಪಟ್ಟ, ಚಲಿಸುವಂತೆ ಮಾಡಲ್ಪಟ್ಟ. "गुरुतर कलनूपुरानुनादं सललितनर्तितवामपादपद्मा" माघ० ७-१८।

**नर्तितवत् ನರ್ತಿತವತ್** (वि०) ನರ್ತನ ಮಾಡಿದವನು, ಕುಣಿದಾಡಿದವನು. नृती (गात्रविक्षेपे) "क्तवतुः" (३-२-१०२)। स्त्रियाम् "ङीप्" (४-१-६)। **-वती -ವತೀ.**

**नर्तू ನರ್ತೂ** (स्त्री०) 1. ನರ್ತಕಿ, ನರ್ತನ ಮಾಡುವ ಹೆಂಗಸು. (पुं०) 2. ಕತ್ತಿಯ ಅಲುಗಿನ ಮೇಲೆ ನಿಂತು ನರ್ತನ ಮಾಡುವವನು. "लयपुत्री नटी नर्तूः खड्गधारादिनर्तके" त्रिकाण्ड०।

**नर्द – शब्दे** (भ्वा० पर० अक० से०)। नर्दति। ननर्द। नर्दिता। नर्दिष्यति। नर्दतु। अनर्दत्। नर्देत्। नर्द्यात्। अनर्दीत्। अनर्दिष्यत् 1. ಗರ್ಜಿಸು. 2. ಶಬ್ದಮಾಡು, ಕೂಗು. "अनर्दिषुः कपिव्याघ्राः सम्यक् चायुत्सताहवे" भट्टि० १५-३५।

**भावे** :—नर्द्यते। ननर्दे। नर्दिता। नर्दिष्यते। नर्द्यताम्। ಇತ್ಯಾದಿ.

**णिचि** :—नर्दयति, –ते। नर्दयां चकार, –चक्रे, –बभूव, –आस। नर्दयिता। नर्दयिष्यति, –ते। नर्दयतु, –ताम्। ಇತ್ಯಾದಿ.

**कर्मणि** :—नर्द्यते। नर्दयां चक्रे, –बभूवे, –आसे। नर्दयिता, नर्दिता। नर्दयिष्यते, नर्दिष्यते। नर्द्यताम्। अनर्द्यत। ಇತ್ಯಾದಿ.

**कृत्सु** :—नर्दितव्यम्। नर्दनीयम्। नर्द्यम्। नर्दितः। नर्दितवान्, –वती। नर्दन्, –न्ती। नर्दितम्। नर्दनम्। नर्दित्वा। प्रणर्द्य।

**नर्द ನರ್ದ** (वि०) 1. ಕೂಗಿ ಶಬ್ದಮಾಡುವ. 2. ಗರ್ಜಿಸುವ. 3. ಅರಚುವ. 4. ಮೊಳಗುವ. नर्द (शब्दे) "अच्" (३-१-१३४)।

**नर्दत् ನರ್ದತ್** (वि०) 1. ಶಬ್ದಮಾಡುತ್ತಿರುವ. 2. ಗರ್ಜಿಸುತ್ತಿರುವ. 3. ಮೊಳಗುತ್ತಿರುವ. 4. ಅರಚುತ್ತಿರುವ. नर्द (शब्दे) "शतृ" (३-२-१२४)। स्त्रियाम् "ङीप्" (४-१-६)। **-न्ती -ನ್ತೀ.** "नर्दतां कपिमुख्यानामचिरात् श्रोष्यसि स्वनम्" रामा०।

**नर्दन ನರ್ದನ** (न०) 1. ಶಬ್ದ ಮಾಡುವುದು, ಕೂಗುವುದು. 2. ಅರಚುವುದು. 3. ಗರ್ಜಿಸುವುದು. 4. ಮೊಳಗುವುದು. नर्द (शब्दे) भावे "ल्युट्" (३-३-११५)।

**नर्दनीय ನರ್ದನೀಯ** (वि०) 1. ಶಬ್ದಮಾಡಲು ಯೋಗ್ಯವಾದ. 2. ಶಬ್ದ ಮಾಡಲು ಶಕ್ಯವಾದ. 3. ಶಬ್ದಮಾಡಬೇಕಾದ. नर्द (शब्दे) "अनीयर्" (३-१-९६)। "तव्यः" (३-१-९६)। **-दितव्यः -ದಿತವ್ಯಃ.**

**नर्दमान ನರ್ದಮಾನ** (वि०) 1. ಶಬ್ದಮಾಡುತ್ತಿರುವ, ಸದ್ದುಮಾಡುತ್ತಿರುವ. नर्द (शब्दे) "शानच्" (३-२-१२४)। 2. ಗದ್ದಲಮಾಡುತ್ತಿರುವ, ಅಬ್ಬರಿಸುತ್ತಿರುವ, ಆರ್ಭಟಿಸುತ್ತಿರುವ. "अनुक्रमं विक्रमसत्त्वयुक्ता बलेन वीर्येण च नर्दमानाः" भा० आदि० २०२-१७।

**नर्दित ನರ್ದಿತ** (न०) 1. ಶಬ್ದ. 2. ಕೂಗು. 3. ಮೊಳಗುವುದು. 4. ಗರ್ಜನೆ. नर्द (शब्दे) भावे "क्तः" (३-३-११४)। (वि०) 5. ಶಬ್ದಮಾಡಿದ. 6. ಕೂಗಿದ. 7. ಮೊಳಗಿದ. 8. ಅರಚಿದ. नर्द कर्त० "क्तः" (३-४-७२)।

**नर्दिन् ನರ್ದಿನ್** (वि०) 1. ಶಬ್ದಮಾಡುವ. 2. ಕೂಗುವ, 3. ಮೊಳಗುವ. 4. ಗರ್ಜಿಸುವ. नर्दति — नर्द (शब्दे) "णिनिः" (३-१-१३४)। ಸಮಾಸದಲ್ಲಿ ನರ್ದಿನ್ ಶಬ್ದವು ಪರವಾದರೆ ಸಪ್ತಮೀವಿಭಕ್ತಿಗೆ ಲೋಪ ಬರುವುದಿಲ್ಲ (ನಿಂದಾರ್ಥದಲ್ಲಿ). गेहेनर्दी (२-१-४८)।

**नर्मकील ನರ್ಮಕೀಲ** (पुं०) ಪತಿ, ಗಂಡ. नर्मणः परिहासस्य कील इव। "भर्ता भरनर्मकीलः प्राणनाथः सुखोत्सवः" त्रिकाण्ड०।

**नर्मगर्भ ನರ್ಮಗರ್ಭ** (ಪುಂ) ಪ್ರಚ್ಛನ್ನರೂಪದಿಂದ ನಾಯಕನು ನಡೆಸುವ ವ್ಯವಹಾರ, ನಾಯಕನು ವೇಷ ಮರೆಸಿಕೊಂಡು ವ್ಯವಹರಿಸುವುದು. "नर्मगर्भो व्यवहृतिर्नेतुः प्रच्छन्नवर्तिनः" सा० द० ६-१२८।

**नर्मठ ನರ್ಮಠ** (ಪುಂ) 1. ಗಡ್ಡ. 2. ವಿಟ, ಸ್ತ್ರೀಲೋಲ, ವ್ಯಭಿಚಾರಿ. 3. ಚೂಚುಕ, ಕುಚದ ಅಗ್ರಭಾಗ, ಸ್ತನದ ತುದಿ. 4. ಸಂಭೋಗ, ಮೈಥುನ. 5. ನಕಲಿ. ಹಾಸ್ಯಗಾರ. "नर्मठश्चिबुके षिड्गे" मेदि०। "नर्मठौ षिड्गचूचुकौ" हेम०।

**नर्मद ನರ್ಮದ** (वि०) 1. ನರ್ಮಸಚಿವ. ಹಾಸ್ಯದ ಮಾತುಗಳಿಂದ ಸಂತೋಷಗೊಳಿಸುವವನು. (वि०) 2. ಸಂತೋಷವುಂಟುಮಾಡುವ. (स्त्री०) —दा —ದಾ. 3. ನರ್ಮದಾ ನದಿ. "नर्मदः केलिसचिवे नर्मदा सरिदन्तरे" मेदि०।

**नर्मन् ನರ್ಮನ್** (ನಂ) 1. ಪರಿಹಾಸ, ತಮಾಷೆ, ವಿನೋದ. 2. ಕ್ರೀಡೆ, ಆಟ. 3. ಆನಂದ, ಸಂತೋಷ. नृ (नये) "मनिन्" (३-२-७५)। "दर्पणेषु परिभोगदर्शिनीर्नर्मपूर्वमनुपृष्ठसंस्थितः" रघु० १९-२८। 4. ಕೈಶಿಕೀ ವೃತ್ತಿಯ ಒಂದು ಅಂಗ. (1) नर्म (2) नर्मस्फूर्जः (3) नर्मस्फोटः ಮತ್ತು (4) नर्मगर्भः ಇವು ನಾಲ್ಕು ಕೈಶಿಕೀ ವೃತ್ತಿಯ ಅಂಗಗಳು. ಜಾಣತನದಿಂದ ಮಿತ್ರನೊಡನೆ ಆಟವಾಡುವುದು ವಿನೋದವಾಗಿ ಮಾತನಾಡುವುದು ಇತ್ಯಾದಿ ನರ್ಮವೆನಿಸುವುದು. "वैदग्ध्यक्रीडितं नर्म" सा० द० ६-१२५। ಈ ನರ್ಮವು (1) ಶುದ್ಧಹಾಸ್ಯ (2) ಶೃಂಗಾರಸಹಿತಹಾಸ್ಯ ಮತ್ತು (3) ಭಯಸಹಿತಹಾಸ್ಯಗಳೆಂದು ಮೂರು ವಿಧ. "विहितं शुद्धहास्येन सशृङ्गारभयेन च". सा० द० ६-१२६।

**नर्मरा ನರ್ಮರಾ** (स्त्री०) 1. ದರಿ, ಡೊಗರು. 2. ವಯಸ್ಸಾದ ಹೆಂಗಸು, ಮುಟ್ಟು ನಿಂತುಹೋದ ಹೆಂಗಸು. 3. ಚರ್ಮದಿಂದ ಮಾಡಿದ ತಿದಿ, ಬೆಂಕಿಗೆ ಗಾಳಿಯನ್ನೂದುವ ಚರ್ಮದ ಚೀಲ. 4. ಕೆಂಪುತಿಗಡೆ ಮರ. "नर्मरा तु दरीभस्त्रासरलानिष्कलासु च" मेदि०।

**नर्मवत् ನರ್ಮವತ್** (वि०) 1. ಪರಿಹಾಸ್ಯದಿಂದ ಕೂಡಿದ. 2. ಕ್ರೀಡಾಸಕ್ತ, ಆಟವಾಡುವ ಸ್ವಭಾವದ. नर्मास्यास्ति "मतुप्" (५-२-१२७)। 3. ಸಂತೋಷದಿಂದ ಕೂಡಿದ. स्त्रियाम् "ङीप्" (४-१-६)। **—वती —ವತೀ.**

**नर्मसचिव ನರ್ಮಸಚಿವ** (ಪುಂ) ವಿನೋದವನ್ನುಂಟುಮಾಡುವ ಜೊತೆಗಾರ, ಪರಿಹಾಸ್ಯವಚನಗಳಿಂದ ಮನಸ್ಸಿಗೆ ಹರ್ಷವನ್ನುಂಟುಮಾಡುವ ರಾಜನ ಸಹಾಯಪುರುಷ, ಆಟಪಾಟಗಳಿಂದ ರಾಜನನ್ನು ಸಂತೋಷಗೊಳಿಸುವ ಮಿತ್ರ. ನರ್ಮಸು ಸಚಿವಃ। ವಿಟ ಚೇಟ ವಿದೂಷಕ ಮೊದಲಾದವರು ರಾಜನಿಗೆ ಶೃಂಗಾರ ಸಹಾಯರು. "शृङ्गारेऽस्य सहाया विटचेटविदूषकाद्याः स्युः। भक्ता नर्मसु निपुणाः कुपितवधूमानभञ्जनाः शुद्धाः" सा० द० ३-४०।

**नर्मसाचिव्य ನರ್ಮಸಾಚಿವ್ಯ** (ನಂ) ನರ್ಮಸಚಿವನ ಅಧಿಕಾರ, ಪರಿಹಾಸ್ಯವಚನಗಳಿಂದ ರಾಜನಿಗೆ ವಿನೋದವುಂಟುಮಾಡುವುದು, ಆಟಪಾಟಗಳಿಂದ ರಾಜನನ್ನು ಸಂತೋಷಗೊಳಿಸುವುದು. नर्मसचिवस्य कर्म "ष्यञ्" (५-१-१२४)। "विलासिनस्तस्य वितन्वता रतिं न नर्मसाचिव्यमकारि नेन्दुना" माघ० १-५९।

**नर्मस्फूर्ज ನರ್ಮಸ್ಫೂರ್ಜ** (ಪುಂ) ಸುಖದಲ್ಲಿ ಪ್ರಾರಂಭವಾಗಿ ಭಯದಲ್ಲಿ ಕೊನೆಗೊಳ್ಳುವ ನಾಯಿಕಾ ನಾಯಕರ ಪ್ರಥಮ ಸಂಗಮ. "नर्मस्फूर्जः सुखारम्भो भयान्तो नवसंगमः" सा० द० ६-१२७। "भर्तः, देव्या भयेनात्मनोऽपि प्रियं कर्तुं न पारयामि" माल० ४।

**नर्मस्फोट ನರ್ಮಸ್ಫೋಟ** (ಪುಂ) ಅನೇಕ ವಿಧ ಭಾವಗಳಿಂದ ಕಂಡುಬರುವ ರಸದ ಸೂಚನೆ. "नर्मस्फोटो भावलेशैः सूचिताल्परसो मतः" सा० द० ६-१२७।

**नल ನಲ** (ಪುಂ) 1. ಲಾಳದ ಹುಲ್ಲು, ಜೊಂಡು ಹುಲ್ಲು. णल (गन्धे) "अच्" (३-१-१३४)। 2. ಪ್ರಭವ ಮೊದಲಾದ ಅರವತ್ತು ಸಂವತ್ಸರಗಳಲ್ಲಿ ಐವತ್ತನೆಯ ಸಂವತ್ಸರ. 3. ಸುಗ್ರೀವನ ಒಬ್ಬ ಸೇನಾಪತಿ, ರಾಮಸೇತುವೆಯನ್ನು ಕಟ್ಟಿದ ಒಬ್ಬ ವಾನರ. 4. ನಿಷಧ ದೇಶದ ದೊರೆಯಾದ ವೀರಸೇನನ ಮಗ, ನಳ ಚಕ್ರವರ್ತಿ. [ನಳ ಚಕ್ರವರ್ತಿಯ ಪತ್ನಿ ವಿದರ್ಭರಾಜನ ಮಗಳಾದ ದಮಯಂತಿ, ಇವನಿಗೆ ಇಂದ್ರಸೇನನೆಂಬ ಮಗನೂ ಇಂದ್ರಸೇನೆಯೆಂಬ ಮಗಳೂ ಇದ್ದರು. ಒಂದು ದಿನ ನಳನು ಉದ್ಯಾನವನದಲ್ಲಿ ವಿಹರಿಸುತ್ತಿದ್ದಾಗ ಸುವರ್ಣದ ಗರಿಗಳಿಂದ ಕೂಡಿದ ಹಂಸವೊಂದನ್ನು ಕಂಡು ವಿನೋದಕ್ಕಾಗಿ ಅದನ್ನು ಹಿಡಿದುಕೊಂಡನು. ಎಷ್ಟು ಪ್ರಯತ್ನಪಟ್ಟರೂ ತನ್ನಿಂದ ಬಿಡಿಸಿಕೊಳ್ಳಲಾರದ ಹಂಸವು ಖೇದಗೊಂಡುದನ್ನು ಕಂಡ ದೀನದಯಾಳುವಾದ ನಳನು ಅದನ್ನು ಬಿಟ್ಟುಬಿಡುವನು. ಅದರಿಂದ ಸಂತೋಷಗೊಂಡ ಹಂಸವು ನಳನಲ್ಲಿ ದಮಯಂತಿಗೆ ಅನುರಾಗವು ಹುಟ್ಟುವಂತೆ ಮಾಡಿತು. ನಳನು ದಮಯಂತಿಯ ಸ್ವಯಂವರಕ್ಕಾಗಿ ಹೊರಟಾಗ ಮಾರ್ಗಮಧ್ಯದಲ್ಲಿ ಇಂದ್ರ ಅಗ್ನಿ ಯಮ ಮತ್ತು ವರುಣರು ನಳನನ್ನು ಸಂಧಿಸಿ ದಮಯಂತಿಯು ತಮ್ಮಲ್ಲೊಬ್ಬರನ್ನು ವರಿಸುವಂತೆ ಮಾಡಲು ದೂತನಾಗಿ ಹೋಗಬೇಕೆಂದು

ಹೇಳಿದರು. ಅವರ ಆದೇಶದಂತೆ ನಳನು ತನ್ನ ಕರ್ತವ್ಯವನ್ನು ಮಾಡಿದನು. ಸ್ವಯಂವರಮಂಟಪದಲ್ಲಿ ದಮಯಂತಿಯು ಸಕಲಗುಣಸಂಪನ್ನನಾದ ನಳನಿಗೆ ಪುಷ್ಪಮಾಲಿಕೆಯನ್ನು ಹಾಕಿ ಅವನನ್ನೇ ವರಿಸಿದಳು. ನಳನ ಸದ್ವರ್ತನೆಗೆ ಮೆಚ್ಚಿದ ಇಂದ್ರನು ಯಾಗದಲ್ಲಿ ತನ್ನ ಸಾಕ್ಷಾದ್ದರ್ಶನ ಅಗ್ನಿಯು ಅಪೇಕ್ಷಿಸಿದ ಕಡೆ ತನ್ನ ಸಾನ್ನಿಧ್ಯ ಯಮನು ಅನ್ನರಸ ಮತ್ತು ಧರ್ಮಬುದ್ಧಿ ವರುಣನು ಅಪೇಕ್ಷಿಸಿದ ಕಡೆ ಜಲ ಸಮೃದ್ಧಿ ಮುಂತಾದ ವರಗಳನ್ನು ಅನುಗ್ರಹಿಸಿದರು. ನಳನು ದಮಯಂತಿಯನ್ನು ಮದುವೆಯಾಗಿ ಸುಖದಿಂದ ರಾಜ್ಯವಾಳುತ್ತಿರಲು ಈ ವಿವಾಹದಿಂದ ಕುಪಿತನಾದ ಕಲಿಯು ಸಮಯವನ್ನು ಪ್ರತೀಕ್ಷಿಸುತ್ತ ಒಂದು ದಿನ ನಳನು ಅಶುಚಿಯಾಗಿದ್ದಾಗ ಅವನಲ್ಲಿ ಪ್ರವೇಶಿಸಿ ಪುಷ್ಕರನೊಡನೆ ಜೂಜಾಡಲು ಪ್ರೇರಿಸಿದನು. ಜೂಜಿನಲ್ಲಿ ನಳನು ಸೋತು ದಮಯಂತಿಯೊಡನೆ ಅರಣ್ಯಕ್ಕೆ ಹೋದನು. ಅಲ್ಲಿ ಒಂದು ಪಕ್ಷಿಯು ಇವನ ವಸ್ತ್ರವನ್ನು ಅಪಹರಿಸಿಕೊಂಡು ಹೋಗಲು ತನ್ನ ಪತ್ನಿಯ ಸೀರೆಯನ್ನು ಅರ್ಧ ಕತ್ತರಿಸಿ ಉಟ್ಟುಕೊಂಡು ಅವಳು ನಿದ್ರಿಸುತ್ತಿದ್ದಾಗ ಬಹಳ ದುಃಖದಿಂದ ಓಡಿಹೋದನು. ಪತಿಯ ವಿರಹದಿಂದ ದುಃಖಿತಳಾದ ದಮಯಂತಿಯು ಅರಣ್ಯದಲ್ಲಿ ಅವನನ್ನು ಹುಡುಕುತ್ತ ಹೋಗುತ್ತಿರುವಾಗ ಕ್ಷಿಪ್ರದಲ್ಲೇ ಪತಿಯೊಡನೆ ಸೇರಿ ಸುಖಸಂತೋಷಗಳನ್ನು ಅನುಭವಿಸುವಂತಾಗುವುದೆಂದು ಅಲ್ಲಿದ್ದ ತಪಸ್ವಿಗಳಿಂದ ಆಶ್ವಾಸನೆ ಪಡೆದು ಒಂದು ವರ್ತಕರ ಗುಂಪಿನೊಡನೆ ಚೇದಿರಾಜನ ಪಟ್ಟಣವನ್ನು ಸೇರಿ ರಾಜಮಾತೆಯ ವಿಶ್ವಾಸ ಸಂಪಾದಿಸಿ ಅಂತಃಪುರದಲ್ಲಿ ಪತಿಧ್ಯಾನಪರಾಯಣೆಯಾಗಿ ಕಾಲ ಕಳೆಯುತ್ತಿದ್ದಳು. ಇತ್ತ ನಳನು ಬಾಹುಕನೆಂಬ ಹೆಸರಿನಿಂದ ಋತುಪರ್ಣನ ನಗರಕ್ಕೆ ಬಂದು ಅಲ್ಲಿ ಅವನ ಸಾರಥಿಯಾಗಿ ಸೇರಿದನು. ನಳನು ಋತುಪರ್ಣನಿಗೆ ಅಶ್ವವಿದ್ಯೆಯನ್ನು ಹೇಳಿಕೊಟ್ಟು ಅವನಿಂದ ಅಕ್ಷವಿದ್ಯೆಯನ್ನು ಕಲಿತನು. ದಮಯಂತಿಯ ಪುನಃ ಸ್ವಯಂವರ ವಾರ್ತೆಯನ್ನು ಕೇಳಿ ಅದಕ್ಕಾಗಿ ಹೊರಟ ಋತುಪರ್ಣನೊಡನೆ ನಳನು ವಿದರ್ಭ ರಾಜಧಾನಿಯನ್ನು ಸೇರಿದನು. ಮತ್ತೆ ಪುಷ್ಕರನನ್ನು ಜೂಜಿನಲ್ಲಿ ಸೋಲಿಸಿ ರಾಜ್ಯವನ್ನು ಪಡೆದು ದಮಯಂತಿಯೊಡನೆ ಸುಖವಾಗಿ ರಾಜ್ಯವಾಳುತ್ತಿದ್ದನು.] (नं०) 5. ಕಮಲ, ಪದ್ಮ. "अथ नलं स्यात्पद्मे" हेम०।

**नलकिनी ನಲಕಿನೀ** (स्त्री०) ಮೊಣಕಾಲು. नलकं नलाकारमस्थि विद्यतेऽत्र "इनिः" (५-२-११५)।

**नलकील ನಲಕೀಲ** (पुं०) ಮಂಡಿ. नल इव कीलोऽत्र।

**नलकूबर ನಲಕೂಬರ** (पुं०) ಕುಬೇರನ ಮಗ. ಮಣಿಗ್ರೀವನೆಂಬುವನು ಇವನ ಸಹೋದರ. [ಇವರಿಬ್ಬರೂ ಕೈಲಾಸ ಪರ್ವತದಲ್ಲಿ ವಿಲಾಸಿನಿಯರೊಡನೆ ವಿಹರಿಸುತ್ತ ಗಂಗಾನದಿಯಲ್ಲಿ ಜಲಕ್ರೀಡೆಯಾಡುತ್ತಿದ್ದರು. ಅಲ್ಲಿಗೆ ನಾರದ ಮುನಿಯು ಬಂದುದನ್ನು ಕಂಡೂ ಅವರು ಅದೇ ಅವಸ್ಥೆಯಲ್ಲಿದ್ದುದರಿಂದ ಮತ್ತಿಯ ಮರಗಳಾಗಿ ಹುಟ್ಟುವಂತೆ ನಾರದರು ಅವರನ್ನು ಶಪಿಸಿದರು. ಅಪರಾಧವನ್ನು ಕ್ಷಮಿಸಬೇಕೆಂದು ಅವರು ಬೇಡಿಕೊಳ್ಳಲು ನೂರು ವರ್ಷಗಳ ನಂತರ ಶ್ರೀಕೃಷ್ಣನಿಂದ ಶಾಪವಿಮೋಚನೆಯಾಗುವುದೆಂದು ಹೇಳಿದರು. ಇಬ್ಬರೂ ಮತ್ತಿಮರಗಳಾಗಿ ನಂದಗೋಕುಲದಲ್ಲಿ ಹುಟ್ಟಿದರು. ಶ್ರೀಕೃಷ್ಣಾವತಾರಕಾಲದಲ್ಲಿ ಶ್ರೀಕೃಷ್ಣನ ಬಾಲಚೇಷ್ಟೆಯಿಂದ ಕುಪಿತಳಾದ ಯಶೋದೆಯು ಅವನನ್ನು ಒಂದು ಒರಳುಕಲ್ಲಿಗೆ ಕಟ್ಟಿಹಾಕಿರಲು ಒರಳನ್ನು ಎಳೆದುಕೊಂಡು ಆ ಎರಡು ಮತ್ತಿಮರಗಳ ಮಧ್ಯೆ ಕೃಷ್ಣನು ಹೋದಾಗ ಆ ಮರಗಳು ಬಿದ್ದು ಅವೆರಡರಿಂದಲೂ ಇಬ್ಬರು ಪುರುಷರು ಹೊರಕ್ಕೆ ಬಂದರು. ಅವರು ಶ್ರೀಕೃಷ್ಣನನ್ನು ಸ್ತೋತ್ರಮಾಡಿ ವಿಮಾನವನ್ನು ಹತ್ತಿ ಅಲಕಾನಗರಿಗೆ ಹೋದರು.]

**नलद ನಲದ** (पुंन०) 1. ಲಾಮಂಚದ ಬೇರು. नलं द्यति — दो (अवखण्डने) "कः" (३-२-३)। "इति सिन्धवश्च वरणावरणाः करिणां मुदे सनलदानलदाः" किरा० ५-२५। 2. ಪುಷ್ಪರಸ. 3. ಜಟಾಮಾಂಸಿ. (वि०) 4. ನಳನನ್ನು ಕೊಡುವ. नलं नलनामानं राजानं ददाति — डुदाञ् (दाने) "कः" (३-२-३)। "देवाकर्णय सुश्रुतेन चरकस्योक्तेन जानेऽखिलं स्यादस्या नलदं विना न दलने तापस्य कोऽपि क्षमः" नैष० ४-११६।

**नलदिक ನಲದಿಕ** (वि०) ಲಾಮಂಚದ ವ್ಯಾಪಾರ ಮಾಡುವವನು. नलदं पण्यमस्य "ठन्" (४-४-५३)।

**नलमीन ನಲಮೀನ** (पुं०) ಜಂಬುಮೀನು, ಜೊಂಡು ಹುಲ್ಲಿನ ಮಧ್ಯೆ ಇರುವ ಮೀನು. नलवनस्थितो मीनः।

**नलसेतु ನಲಸೇತು** (पुं०) ನಲನೆಂಬ ವಾನರನಿಂದ ನಿರ್ಮಿತವಾದ ಸೇತು. नलनिर्मितः सेतुः। ನಲನು ದೇವತೆಗಳ ಬಡಗಿಯಾದ ವಿಶ್ವಕರ್ಮನ ಮಗ. ಇವನು ನೀರಿನಲ್ಲಿ ಹಾಕಿದ ಮರ ಕಲ್ಲುಗಳೆಲ್ಲವೂ ಮುಳುಗದೆ ತೇಲುವಂತೆ ವರವನ್ನು ಪಡೆದಿದ್ದನು. ಶ್ರೀರಾಮನು ಸಮುದ್ರಕ್ಕೆ ಸೇತುವನ್ನು ಕಟ್ಟುವಂತೆ ಇವನಿಗೆ ಹೇಳಲು ಸಮುದ್ರವನ್ನು ದಾಟಲು ಇವನು ಹತ್ತು ಯೋಜನ ವಿಸ್ತಾರದ ಮತ್ತು ನೂರು ಯೋಜನ ಉದ್ದದ ಸೇತುವನ್ನು ನಿರ್ಮಿಸಿದನು. ಇದಕ್ಕೆ "ನಲಸೇತು" ವೆಂದು ಹೆಸರಾಯಿತು.

**नलिका ನಳಿಕಾ** (स्त्री०) 1. ನಳಿಯೆಂಬ ಗಂದಿಗರ ಒಂದು ದಿನಸು, ಒಂದು ಸುಗಂಧದ್ರವ್ಯ. नल इवाकृतिरस्त्यस्याः "ठन्" (५-२-११५)। "नलिका विद्रुमलता कपोतचरणा नटी। धमन्यञ्जनकेशी च निर्मथ्या सुषिरा नली। नलिका शीतला लघ्वी चक्षुष्या कफपित्तनुत्" भावप्र०। 2. ಒಳಗೆ ಟೊಳ್ಳಾಗಿರುವ ಕೊಳವೆಯ ಅಸ್ತ್ರ, ಬಂದೂಕ ಮೊದಲಾದುದು. "नलिका ऋजुदेहा स्यात्त्वङ्गी मध्यरन्ध्रिका"। 3. ನಲ್ಲಿ, ನೀರು ಹರಿಯಲು ಮಾಡಿರುವ ಲೋಹದ ಅಥವಾ ಮರದ ಕೊಳವೆ, ಕೊಳಾಯಿ. "वेदाङ्गुलं मस्तकोर्ध्वं कार्यं तोयस्य धारणे। समर्थो तत्र नलिकां कुर्यात्तोयविमोचनीम्"।

**नलिन ನಲಿನ** (न०) 1. ಪದ್ಮ, ತಾವರೆ ಹೂವು, ಕಮಲ. णल (गन्धे) "इनच्" (उ० २-४९)। "नलिनान्तिकोपहितपल्लवश्रिया व्यवधाय चारु मुखमेकपाणिना" माघ० १३-४३। 2. ನೀಲಿಗಿಡ. 3. ಜಲ, ನೀರು. (स्त्री०)-नी -ನೀ. 4. ಕಮಲಗಳಿಂದ ಕೂಡಿದ ಪ್ರದೇಶ, ಸರೋವರ. नलानि कमलानि सन्त्यत्र "इनिः" (५-२-१३५)। 5. ಕಮಲಗಳ ಸಮೂಹ. नलानां पद्मानां समूहः "इनिः" (वा० ४-२-५१)। 6. ಕಮಲಲತೆ, ತಾವರೆಯ ಬಳ್ಳಿ. नलान्यत्र सन्ति "इनिः" (५-२-१३५)। "ङीप्" (४-१-५)। "दोषापि नूनमहिमांशुरसौ किलेति व्याकोशकोकनदतां दधते नलिन्यः" माघ० ४-४६। 7. ಕಮಲ, ಪದ್ಮ. "हा हन्त हन्त नलिनीं गज उज्जहार"। 8. ಗಂಗಾನದಿಯ ಒಂದು ಶಾಖೆ, ಸಪ್ತಪ್ರಕಾರವಾಗಿ ಹರಿದ ಗಂಗಾನದಿಯ ಒಂದು ಪ್ರವಾಹ, ಪೂರ್ವ ದಿಕ್ಕಿಗೆ ಹರಿದ ಗಂಗಾನದಿಯ ಒಂದು ಪ್ರವಾಹ. "नलिनी ह्लादिनी चैव पावनी चैव प्राच्यगा"। 9. ಮೂಗಿನ ಎಡಭಾಗ. "नलिनी नालिनी च प्राक् द्वारावेकत्र निर्मिते" भाग० ४-२५-४८। 10. ತೆಂಗಿನ ಮರದ ಮದ್ಯ. "नलिनी नारिकेलस्य सुरा" त्रिकाण्ड०। "नलिनं नीलिकातोयाम्बुजेषु नलिनी पुनः। पद्माकरे गङ्गाब्जिन्योः" हेम०।

**नलिनी ನಲಿನೀ** (स्त्री०) "नलिन" ಪದದಲ್ಲಿ ನೋಡಿ.

**नलिनीखण्ड ನಲಿನೀಖಂಡ** (पुं०) ಕಮಲಗಳ ಸಮೂಹ, ತಾವರೆಹೂವುಗಳ ರಾಶಿ.

**नलिनीदल ನಲಿನೀದಲ** (न०) ತಾವರೆಯ ಎಲೆ.

**नलिनीनन्दन ನಲಿನೀನಂದನ** (न०) ಕುಬೇರನ ಉದ್ಯಾನವನ. नलिन्या नन्दयति — टुनदि (समृद्धौ) + णिच् "ल्युः" (३-१-१३४)। "वनं चैत्ररथं दिव्यं नलिनीनन्दनं वनम्। यो विनाशितवान् क्रोधात् देवोद्यानानि वीर्यवान्" रामा०।

**नलिनीरुह ನಲಿನೀರುಹ** (पुं०) 1. ಬ್ರಹ್ಮ, ಚತುರ್ಮುಖ. 2. ಮೃಣಾಳ, ತಾವರೆಯ ದಂಟು.

**नलिनेशय ನಲಿನೇಶಯ** (पुं०) ವಿಷ್ಣು, ನಾರಾಯಣ. नलिने चतुर्मुखनाभिकमले शेते—शीङ् (स्वप्ने) "अच्" (३-२-१५)। अलुक् (६-३-१४)।

**नली ನಲೀ** (स्त्री०) 1. ನಲ್ಲಿ, ಕೊಳಾಯಿ, ನೀರು ಹರಿಯಲು ಮಾಡಿರುವ ಲೋಹದ ಅಥವಾ ಮರ ಮೊದಲಾದುವುಗಳ ಟೊಳ್ಳಾದ ಕೊಳವೆ. 2. ಮಣಶಿಲೆ.

**नलोदय ನಲೋದಯ** (पुं०) ಕಾಳಿದಾಸವಿರಚಿತವಾದ ಒಂದು ಕಾವ್ಯ.

**नल्व ನಲ್ವ** (पुं०) ನಾಲ್ಕುನೂರು ಮೊಳಗಳ ಉದ್ದದ ಮಾರ್ಗ, ಸುಮಾರು ಒಂದು ಫರ್ಲಾಂಗು. णल (बन्धने) "वः" (उ० ४-९५)। "रावणस्य शरीरं तु पञ्चनल्वानुविस्तृतम्" रामा०।

**नल्ववर्त्मगा ನಲ್ವವರ್ತ್ಮಗಾ** (स्त्री०) 1. ಕಾಕಾಕ್ಷೀಲತೆ. (वि०) 2. ನಾಲ್ಕುನೂರು ಮೊಳಗಳ ಉದ್ದದ ದಾರಿ ನಡೆಯುವವನು. नल्वमितं मार्गं गच्छति — गम्लृ (गतौ) "डः" (वा० ३-२-४८)।

**नव ನವ** (पुं०) 1. ಸ್ತುತಿ, ಸ್ತೋತ್ರ, ಹೊಗಳಿಕೆ. णु (स्तुतौ) भावे "अप्" (३-३-५७)। 2. ಕೆಂಪು ಕೊಮ್ಮೆಗಿಡ. (वि०) 3. ನವೀನ, ನೂತನ, ಹೊಸದಾದ. "उरोभुवा कुम्भयुगेन जृम्भितं नवोपहारेण वयःकृतेन" नैषं० १-४८।

**नवक ನವಕ** (न०) 1. ಒಂಬತ್ತು ಸಂಖ್ಯೆ. नव परिमाणमस्य — "कन्" (५-१-५८)। (वि०) 2. ಒಂಬತ್ತು ಸಂಖ್ಯೆಯುಳ್ಳ.

**नवकारिका ನವಕಾರಿಕಾ** (स्त्री०) 1. ಹೊಸದಾಗಿ ಮದುವೆಯಾದ ಯುವತಿ. नवं करोति—डुकृञ् (करणे) "ण्वुल्" (३-१-१३४)। 2. ಹೊಸದಾಗಿ ರಚಿತವಾದ ಕಾರಿಕೆ. 3. ಹೊಸ ಕಾರ್ಯವನ್ನು ಮಾಡುವ ಹೆಂಗಸು.

**नवग्रह ನವಗ್ರಹ** (पुं०) ಸೂರ್ಯ ಚಂದ್ರ ಮೊದಲಾದ ಒಂಬತ್ತು ಗ್ರಹಗಳು. "सूर्यचन्द्रौ मङ्गलश्च बुधश्चापि बृहस्पतिः। शुक्रः शनैश्चरो राहुः केतवश्च नवग्रहाः" [ವಿವರಕ್ಕೆ "ग्रह" ಪದದಲ್ಲಿ ನೋಡಿ.]

**नवच्छात्र ನವಚ್ಛಾತ್ರ** (ಪುಂ) ಮೊದಲನೆಯದಾಗಿ ವಿದ್ಯಾಭ್ಯಾಸ ಪ್ರಾರಂಭಿಸಿರುವ ವಿದ್ಯಾರ್ಥಿ.

**नवच्छिद्र ನವಚ್ಛಿದ್ರ** (ನಂ) ಶರೀರ, ದೇಹ, ಮೈ. नव छिद्राणि यत्र। ದೇಹದಲ್ಲಿ ಒಂಬತ್ತು ದ್ವಾರಗಳಿರುವುದರಿಂದ ಈ ಹೆಸರು.

**नवज्वर ನವಜ್ವರ** (ಪುಂ) ಹೊಸದಾಗಿ ಬಂದ ಜ್ವರ, ತರುಣಜ್ವರ. नवो ज्वरः। ತರುಣ ಜ್ವರವನ್ನು ಲಂಘನ (ಉಪವಾಸ) ದಿಂದ ವಾಸಿಮಾಡಿಕೊಳ್ಳಬೇಕು. "तरुणं तु ज्वरं पूर्वं लङ्घनेन क्षयं नयेत्" भावप्र०।

**नवत ನವತ** (ಪುಂ) 1. ಆನೆಯ ಬೆನ್ನಿನ ಮೇಲೆ ಹಾಸುವ ರತ್ನಗಂಬಳಿ, णु (स्तुतौ) "अतच्" बाहु०। "कुथे वर्णः परिस्तोमः प्रवेणीनवतास्तरः" अभि० चि०। (वि०) 2. ತೊಂಬತ್ತನೆಯ. नवतेः पूरणः "डट्" (५-२-४८)। स्त्रियाम् "ङीप्" (४-१-१५)।

**नवता ನವತಾ** (स्त्री०) ಹೊಸದಾಗಿರುವಿಕೆ. नवस्य नूतनस्य भावः "तल्" (५-१-११९)। "क्षणे क्षणे यन्नवता-मुपैति तदेव रूपं रमणीयतायाः" माघ० ४-१७। "त्वः" (५-१-११९)। **-नवत्वम् -ನವತ್ವಮ್.**

**नवति ನವತಿ** (स्त्री०) ತೊಂಬತ್ತು. नवदशतः परिमाणमस्य सङ्ख्यस्य — "ति" प्रत्ययो निपात्यते (५-१-५९)। "इति क्षितीशो नवतिं नवाधिकां महाक्रतूनां महनीय-शासनः" रघु० ३-६९।

**नवतितम ನವತಿತಮ** (वि०) ತೊಂಬತ್ತನೆಯ. नवतेः पूरणः — डटो वा "तमट्" (५-१-५९)। स्त्रियाम् "ङीप्" (५-१-१५)। **-तमी -ತಮೀ.**

**नवदण्डक ನವದಂಡಕ** (ನಂ) ರಾಜರ ಛತ್ರಿಗಳಲ್ಲಿ ಒಂದು ವಿಧ. (1) ಮನೋಹರ. (2) ತ್ರಿಕನಕದಂಡ ಮತ್ತು (3) ನವದಂಡಕಗಳೆಂದು ರಾಜರ ಛತ್ರಿಗಳು ಮೂರು ವಿಧ. "मनोहरं त्रिकनकदण्डं च नवदण्डकम्। छत्रं तु त्रिविधं ज्ञेयं त्रिविधानां महीभुजाम्"।

**नवदल ನವದಲ** (ನಂ) 1. ಕಮಲದ ಕಿಂಜಲ್ಕಗಳ ಎಳೆಯ ದಳ, ತಾವರೆಯ ಕುಸುರುಗಳ ಎಳೆಯ ರೇಕುಗಳು. नवं च तद्दलं च। 2. ಹೊಸದಾದ ಚಿಗುರು.

**नवदीधिति ನವದೀಧಿತಿ** (ಪುಂ) ಅಂಗಾರಕ ಗ್ರಹ. नव दीधितयोऽस्य।

**नवदुर्गा ನವದುರ್ಗಾ** (स्त्री०) ಒಂಬತ್ತು ರೂಪಗಳುಳ್ಳ ದುರ್ಗಾದೇವಿ. नवसङ्ख्यान्विता दुर्गा। ದೇವಿಯ ಒಂಬತ್ತು ಹೆಸರುಗಳು, (1) शैलपुत्री, (2) ब्रह्मचारिणी, (3) चन्द्रघण्टा, (4) कुश्माण्डी, (5) स्कन्दमाता, (6) कात्यायनी, (7) कालरात्रिः, (8) महागौरी ಮತ್ತು (9) सिद्धिदा। "प्रथमं शैलपुत्री च द्वितीयं ब्रह्मचारिणी। तृतीयं चन्द्रघण्टेति कुश्माण्डीति चतुर्थकम्। पञ्चमं स्कन्दमातेति षष्ठं कात्यायनीति च। सप्तमं कालरात्रिश्च महागौरीति चाष्टमम्। नवमं सिद्धिदा प्रोक्ता नव दुर्गाः प्रकीर्तिताः। उक्तान्येतानि नामानि ब्रह्मणैव महात्मना" ब्रह्मवै०।

**नवद्वार ನವದ್ವಾರ** (ನಂ) ಶರೀರ, ದೇಹ, ಮೈ. नव द्वाराणि यत्र। ದೇಹದಲ್ಲಿ ಒಂಬತ್ತು ರಂಧ್ರಗಳಿರುವುದರಿಂದ ದೇಹಕ್ಕೆ ಈ ಹೆಸರು. "नवद्वारे पुरे देही हंसो लेलायते बहिः। वशी सर्वस्य लोकस्य स्थावरस्य चरस्य च" श्वेताश्व० उ० ३-१८। ಚರಾಚರಾತ್ಮಕವಾದ ಸಕಲ ಲೋಕಗಳನ್ನೂ ವಶಮಾಡಿಕೊಂಡಿರುವ ಹಂಸ (ಪರಮಾತ್ಮ) ನು ಜೀವಭಾವ ಹೊಂದಿ ನವದ್ವಾರಗಳುಳ್ಳ ದೇಹರೂಪವಾದ ಪುರದಲ್ಲಿದ್ದು ಹೊರಗಿನ ವಿಷಯಗಳನ್ನು ಗ್ರಹಿಸಲು ಹೊರಗೆ ಸಂಚರಿಸುತ್ತಾನೆ.

**ನವದ್ವಾರಗಳು:** ಎರಡು ನೇತ್ರಗಳು, ಎರಡು ಕಿವಿಗಳು, ಎರಡು ನಾಸಾರಂಧ್ರಗಳು, ಬಾಯಿ, ಗುದ ಮತ್ತು ಉಪಸ್ಥ.

**नवद्वीप ನವದ್ವೀಪ** (ಪುಂ) ನಾಡಿಯಾ ಎಂಬ ಒಂದು ನಗರ. ನಾಡಿಯಾ ನಗರವು ಬಂಗಾಳದ ಒಂದು ಜಿಲ್ಲಾ ಕೇಂದ್ರ. ಇದು ಚೈತನ್ಯರ ಜನ್ಮಸ್ಥಳ. ಚೈತನ್ಯರ ನವದ್ವೀಪವು ಈಗಿನ ನವದ್ವೀಪಕ್ಕೆ ಎದುರಾಗಿ ಗಂಗಾನದಿಯ ಆಚೆ ದಡದಲ್ಲಿದ್ದಿತೆಂದು ತಿಳಿದುಬಂದಿದೆ. ಈಗಿನ ನವದ್ವೀಪವು ಪೂರ್ವದ ಕುಲಿಯಾ ಗ್ರಾಮವಿದ್ದ ಜಾಗದಲ್ಲಿರುವುದು. (*Vide* Nando Lal Day's *Geographical Dictionary*, p. 139.)

**नवधा ನವಧಾ** (अव्य०) ಒಂಬತ್ತು ವಿಧವಾಗಿ, ಒಂಬತ್ತು ಪ್ರಕಾರವಾಗಿ. नवन् "धा" (५-३-४२)।

**नवन् ನವನ್** (त्रि०ब०व०) 1. ಒಂಬತ್ತು. 2. ಒಂಬತ್ತು ಸಂಖ್ಯೆಯಿಂದ ಕೂಡಿದ, ಒಂಬತ್ತು ಸಂಖ್ಯೆಯುಳ್ಳ.

**नवनी ನವನೀ** (स्त्री०) ನವನೀತ, ಬೆಣ್ಣೆ. नवं नीयते — णीञ् (प्रापणे) "डः" (वा० ३-२-४८)। "हैय्यङ्ग-वीनानां नवनीनां परतरं मुदा। लड्डुकानां शर्कराणां स्वस्तिकानां च यत्नतः" ब्रह्मवै०।

**नवनीत ನವನೀತ** (ನಂ) ನವನೀತ, ಬೆಣ್ಣೆ. नवं नीयते— णीञ् (प्रापणे) "क्तः" (३-२-१०२)। नवं च तन्नीतं

च इति वा। "त्रस्यन्मुकुन्दो नवनीतचौर्यान्निर्भुग्नगात्रो निभृतं शयान:" याद० ४-२९।

**नवनीतक ನವನೀತಕ** (ನ०) ಬೆಣ್ಣೆ. नवनीत स्वार्थे "क:"।

**नवपञ्चम ನವಪಂಚಮು** (ಪುं०) ಕನ್ಯೆ ಮತ್ತು ವರ ಇವರ ರಾಶಿಗಳಿಂದ ಪರಸ್ಪರ ಒಂಬತ್ತು ಮತ್ತು ಐದನೆಯ ರಾಶಿಗಳಾಗಿರುವ ಒಂದು ಯೋಗ. नव नवमं च पञ्चमं च यत्र। ಕನ್ಯೆಯ ಜನ್ಮರಾಶಿಯಿಂದ ವರನ ಜನ್ಮರಾಶಿಯು ಐದನೆಯದಾಗಿಯೂ ವರನ ರಾಶಿಯಿಂದ ಕನ್ಯೆಯ ರಾಶಿಯು ಒಂಬತ್ತನೆಯದಾಗಿಯೂ ಇರುವ ಒಂದು ಯೋಗ. ಈ ಯೋಗವು ರಾಕ್ಷಸಗಣದ ಕನ್ಯೆಯರಿಗೆ ಶುಭಪ್ರದವಾದುದು. "द्विद्वादशे वा नवपञ्चमे वा षष्ठाष्टके राक्षसकन्यकाया:। एकाधिपत्येप्युभयो: सुहृत्त्वे पाणिग्रहो मङ्गलमातनोति" मुहू०द०।

**नवफलिका ನವಫಲಿಕಾ** (स्त्री०) 1. ನವೀನವಾದ, ಹೊಸದಾದ. नवं फलं यस्या:—"कप्" (५-४-१५४)। अत इत्वम् (७-३-४४)। 2. ಹೊಸದಾಗಿ ಪುಷ್ಪವತಿಯಾಗಿರುವ ಹೆಂಗಸು. "नवफलिका स्त्री नव्ये नवजातरजोऽङ्गनायां च" मेदि०।

**नवभाग ನವಭಾಗ** (ಪುं०) 1. ಮೂವತ್ತು ಭಾಗಗಳುಳ್ಳ ರಾಶಿಯ ಒಂಬತ್ತನೆಯ ಒಂದು ಭಾಗ, ನವಾಂಶ. 2. ಒಂಬತ್ತನೆಯ ಭಾಗ.

**नवम ನವಮು** (वि०) ಒಂಬತ್ತನೆಯ. नवानां पूरण: "डट्" (५-२-४८)। डटो मडागम: (५-२-४९)। स्त्रियाम् "ङीप्" (४-१-१५)। **-मी -ಮಿ.** ಒಂಬತ್ತನೆಯ ತಿಥಿ.

**नवमल्लिका ನವಮಲ್ಲಿಕಾ** (स्त्री०) 1. ಏರಜಾಜಿ ಗಿಡ, ಹೆಜ್ಜಾಜಿ ಗಿಡ. नवा स्तुत्या मल्लिका। 2. ಏರಜಾಜಿ ಹೂವು. "उपययौ विदधन्नवमल्लिका: शुचिरसौ चिरसौरभसम्पद:" माघ० ६-२२।

**नवमालिका ನವಮಾಲಿಕಾ** (स्त्री०) 1. ಏರಜಾಜಿ ಗಿಡ, ಹೆಜ್ಜಾಜಿ ಗಿಡ. नवा स्तुत्या मालिका। 2. ಏರಜಾಜಿ ಹೂವು.

**नवयज्ञ ನವಯಜ್ಞ** (ಪುं०) ಹೊಸ ಧಾನ್ಯದಿಂದ ಮಾಡುವ ಯಜ್ಞ, ಹೊಸ ಧಾನ್ಯವು ಬಂದಾಗ ಮೊದಲು ದೇವತೆಗಳ ಪ್ರೀತ್ಯರ್ಥ ಮಾಡುವ ಯಜ್ಞ. नवधान्यनिमित्तो यज्ञ:।

**नवयौवन ನವಯೌವನ** (ನ०) ಹೊಸ ತಾರುಣ್ಯ, ಹೊಸ ಪ್ರಾಯ. (स्त्री०) **-यौवना -ಯೌವನಾ.** ತರುಣಿ, ಪ್ರಾಯಕ್ಕೆ ಬಂದಿರುವ ಹೆಂಗಸು. नवं यौवनं यस्या:।

**नवरत्न ನವರತ್ನ** (ನ०) 1. ಒಂಬತ್ತು ವಿಧ ರತ್ನಗಳು. (1) ಮಾಣಿಕ್ಯ, (2) ಮುತ್ತು, (3) ಹವಳ, (4) ಪಚ್ಚೆ, (5) ಪುಷ್ಪರಾಗ, (6) ವಜ್ರ, (7) ನೀಲ, (8) ಗೋಮೇದಕ ಮತ್ತು (9) ವೈಡೂರ್ಯ ಇವು ನವರತ್ನಗಳು. 2. ವಿಕ್ರಮಾದಿತ್ಯನ ಆಸ್ಥಾನದಲ್ಲಿದ್ದ ನವಮಣಿಗಳು. (1) ಧನ್ವಂತರಿ, (2) ಕ್ಷಪಣಕ, (3) ಅಮರಸಿಂಹ, (4) ಶಂಕು, (5) ವೇತಾಳಭಟ್ಟ, (6) ಘಟಕರ್ಪರ, (7) ಕಾಳಿದಾಸ, (8) ವರರುಚಿ ಮತ್ತು (9) ವರಾಹಮಿಹಿರ. ಇವರು ನವಮಣಿಗಳು. "धन्वन्तरिक्षपणकामरसिंहशङ्कुवेतालभट्टघटकर्परकालिदासा:। ख्यातो वराहमिहिरो नृपते: सभायां रत्नानि वै वररुचिर्नव विक्रमस्य" ज्योतिर्वि०।

**नवरस ನವರಸ** (ಪುं०) ಅಲಂಕಾರ ಶಾಸ್ತ್ರದಲ್ಲಿ ಹೇಳಿರುವ ಶೃಂಗಾರ ಮೊದಲಾದ ಒಂಬತ್ತು ರಸಗಳು. (1) शृङ्गार:, (2) हास्य:, (3) करुण:, (4) रौद्र:, (5) वीर:, (6) भयानक:, (7) बीभत्स:, (8) अद्भुत: ಮತ್ತು (9) शान्त: ಇವು ಒಂಬತ್ತು ರಸಗಳು. "शृङ्गारहास्यकरुणरौद्रवीरभयानका:। बीभत्सोऽद्भुत इत्यष्टौ रसा: शान्तस्तथा मत:" सा० द०। ಇವುಗಳಿಗೆ ಕ್ರಮವಾಗಿ रति: हास: शोक: क्रोध: उत्साह: भयम् जुगुप्सा विस्मय: ಮತ್ತು शम: ಇವು ಒಂಬತ್ತು ರಸಗಳ ಸ್ಥಾಯಿಭಾವಗಳು. "रतिर्हासश्च शोकश्च क्रोधोत्साहौ भयं तथा। जुगुप्सा विस्मयश्चेवमष्टौ प्रोक्ता: शमोऽपि च" सा० द०।

**नवरात्र ನವರಾತ್ರ** (ನ०) 1. ಒಂಬತ್ತು ರಾತ್ರಿಗಳು. नवानां रात्रीणां समाहार: "अच्" (५-४-८७)। संख्यापूर्वं रात्रं क्लीबम्" (लिङ्गा० १३१) इति क्लीबत्वम्।

**नवराष्ट्र ನವರಾಷ್ಟ್ರ** (ನ०) ಉಶೀನರ ರಾಜನ ದೇಶ. "नवराष्ट्रं च निर्जित्य कुन्तिभोजमुपाद्रवत्" भा० सभा० ३२-६।

**नववधू ನವವಧೂ** (ಸ್ತ್ರೀ०) ಹೊಸದಾಗಿ ಮದುವೆಯಾದ ಕನ್ಯೆ.

**नववधूप्रवेश ನವವಧೂಪ್ರವೇಶ** (ಪುं०) ಮದುವೆಯಾದ ನಂತರ ಕನ್ಯೆಯು ಮೊದಲನೆಯ ಸಲ ಪತಿಗೃಹಕ್ಕೆ ಬರುವುದು, ಮೊದಲನೆಯದಾಗಿ ಪತಿ ಗೃಹಕ್ಕೆ ಪ್ರವೇಶಿಸುವುದು.

**ನವವಧೂಪ್ರವೇಶಕ್ಕೆ ಪ್ರಶಸ್ತವಾದ ಕಾಲ:—** ವಿವಾಹದಿವಸ ಮೊದಲುಗೊಂಡು ಸಮದಿವಸಗಳು (2, 4, 6, 8, 10, 12, 14 ಮತ್ತು 16 ನೆಯ ದಿವಸಗಳು)

ವಿಷಮದಿವಸಗಳಲ್ಲಿ 5, 7 ಮತ್ತು 9 ನೆಯ ದಿವಸಗಳು ಪ್ರಶಸ್ತವಾದುವು. ಹದಿನಾರು ದಿವಸಗಳ ನಂತರ ವಿಷಮ ವರ್ಷ ವಿಷಮ ಮಾಸ ವಿಷಮ ದಿವಸಗಳಲ್ಲಿ ಶುಭಕರ. "समाद्विपश्चाङ्कदिने विवाहात् वधूप्रवेशोष्टिदिनान्तराले। शुभः परस्तात् विषमाब्दमासदिनेऽक्षवर्षात्परतो यथेष्टम्"।

**नववरिका ನವವರಿಕಾ** (स्त्री०) ಹೊಸದಾಗಿ ಮದುವೆಯಾದ ಕನ್ಯೆ. नवो वरोऽस्याः "ठन्" (५-२-११५)।

**नववस्त्र ನವವಸ್ತ್ರ** (न०) ಹೊಸದಾದ ಮತ್ತು ಸಲವೆ ಮಾಡದಿರುವ ಬಟ್ಟೆ.

**नवविध ನವವಿಧ** (वि०) ಒಂಬತ್ತು ವಿಧವಾದ, ಒಂಬತ್ತು ಪ್ರಕಾರವಾದ, ಒಂಬತ್ತು ರೀತಿಯಾದ. नव विधाः यस्य।

**नवव्यूह ನವವ್ಯೂಹ** (पुं०) ವಿಷ್ಣು. नव व्यूहा यस्य। ಅಷ್ಟದಳ ಪದ್ಮದಲ್ಲಿ ಸಂಕರ್ಷಣ ಪ್ರದ್ಯುಮ್ನ ಅನಿರುದ್ಧಾದಿ ರೂಪದಿಂದಲೂ ಮಧ್ಯೆ ಕೇಸರಸ್ಥಾನದಲ್ಲಿ ಪರವಾಸುದೇವ ರೂಪದಿಂದಲೂ ಪರಮಾತ್ಮನು ಇರುವುದರಿಂದ ಈ ಹೆಸರು.

**नवशक्ति ನವಶಕ್ತಿ** (स्त्री०) ಒಂಬತ್ತು ಶಕ್ತಿಗಳು. नवगुणिता शक्तिः। "प्रभा माया जया सूक्ष्मा विशुद्धा नन्दिनी पुनः। सुप्रभा विजया सर्वसिद्धिदा नव शक्तयः" तन्त्रसा०।

**नवशस्य ನವಶಸ್ಯ** (न०) ಹೊಸದಾಗಿ ಬೆಳೆದು ಬಂದ ಧಾನ್ಯ, ಹೊಸ ವರ್ಷದಲ್ಲಿ ಮೊದಲನೆಯ ಸಲ ಬಂದ ಧಾನ್ಯ.

**नवशस्येष्टि ನವಶಸ್ಯೇಷ್ಟಿ** (स्त्री०) ಹೊಸ ಧಾನ್ಯದಿಂದ ದೇವತೆಗಳಿಗೆ ಮಾಡುವ ಯಾಗ. नवशस्यनिमित्ता इष्टिः। "शस्यन्ते नवशस्येष्टया तथर्त्वन्ते द्विजोऽध्वरैः। पशुनाप्ययनस्यादौ समान्ते सौमिकैर्मखैः" मनु० ४-२६।

**नवशायक ನವಶಾಯಕ** (पुं०) ಒಂಬತ್ತು ವಿಧ ಮಿಶ್ರಜಾತಿಯವರು. (1) ಗೋಪಾಲಕ (ಗೊಲ್ಲ), (2) ಉದ್ಯಾನಪಾಲಕ, (3) ಗಾಣಿಗ, (4) ನೇಯ್ಗೆಯವನು, (5) ಆಪೂಪಿಕ, (ಭಕ್ಷ್ಯಗಳನ್ನು ತಯಾರಿಸುವವನು), (6) ನೀರು ಹೊರುವವನು, (7) ಕುಂಬಾರ, (8) ಕಮ್ಮಾರ ಮತ್ತು (9) ನಾಪಿತ (ನಾಯಿಂದ) ಇವರು ಒಂಬತ್ತು ವಿಧ ಮಿಶ್ರಜಾತಿಯವರು.

**नवसू ನವಸೂ** (स्त्री०) ಹೊಸದಾಗಿ ಕರು ಹಾಕಿದ ಹಸು ಮೊದಲಾದುದು. नवं सूते—षूङ् (प्राणिगर्भविमोचने) "क्विप्" (३-२-६१)।

**नवसूतिका ನವಸೂತಿಕಾ** (स्त्री०) 1. ಹೊಸದಾಗಿ ಕರು ಹಾಕಿದ ಹಸು. नवं सूतं प्रसवोऽस्याः "कप्" (५-४-१५४)। 2. ಹೊಸದಾಗಿ ಪ್ರಸವಿಸಿದ ಹೆಂಗುಸು.

**नवांश ನವಾಂಶ** (पुं०) ಒಂಬತ್ತನೆಯ ಒಂದು ಭಾಗ. नवमोंऽशः। ಮೂವತ್ತು ಭಾಗಗಳುಳ್ಳ ರಾಶಿಯ ಒಂಬತ್ತನೆಯ ಒಂದು ಭಾಗವು ನವಾಂಶ.

**नवाङ्ग ನವಾಂಗ** (पुं०) 1. ಒಂಬತ್ತು ಅಂಗಗಳಿಂದ ಕೂಡಿದ ಕಷಾಯ. नवविधमङ्गं यस्य। (स्त्री०) नवाङ्गी ನವಾಂಗೀ. 2. ಯುವತಿ, ಪ್ರಾಯದ ಹೆಂಗುಸು.

**नवान्न ನವಾನ್ನ** (न०) 1. ಹೊಸದಾದ ಅನ್ನ. 2. ಹೊಸ ಧಾನ್ಯ. 3. ಹೊಸದಾದ ಫಲ. नवं च तदन्नं च। 4. ಹೊಸ ಧಾನ್ಯವು ಬರುವ ಕಾಲ. नवान्नं प्राप्यतयाऽस्ति "अच्" (५-२-१२७)।

**नवाम्बु ನವಾಂಬು** (न०) 1. ಹೊಸ ನೀರು, ಬಾವಿ ಮೊದಲಾದುವನ್ನು ತೋಡಿದಾಗ ಬರುವ ಹೊಸ ನೀರು. नवमुत्थितमम्बु। 2. ಅಂತರಿಕ್ಷದಿಂದ ಬಿದ್ದ ಮಳೆಯ ನೀರು.

**नवायस ನವಾಯಸ** (न०) ಸುಶ್ರುತಸಂಹಿತೆಯಲ್ಲಿ ಉಕ್ತವಾದ ಒಂದು ಚೂರ್ಣ. नव भागा आयसा यत्र। ತ್ರಿಫಲಾ (ಅಳಲೆ ತಾರೆ ಮತ್ತು ನೆಲ್ಲಿಕಾಯಿ) ಚಿತ್ರಕ (ಚಿತ್ರಮೂಲ) ತ್ರಿಕಟು (ಶುಂಠಿ ಹಿಪ್ಪಲಿ ಮೆಣಸು) ವಿಡಂಗ (ವಾಯಿವಿಳಂಗ) ಮತ್ತು ಮುಸ್ತೆ (ಕೊನ್ನಾರಿ) ಇವುಗಳ ಒಂಬತ್ತು ಭಾಗ ಇದಕ್ಕೆ ಸಮವಾಗಿ ಲೋಹಚೂರ್ಣ ಇವುಗಳನ್ನು ಬೆರಸಿ ತುಪ್ಪ ಅಥವಾ ಜೇನುತುಪ್ಪದಲ್ಲಿ ಸೇವಿಸಬೇಕು. ಇದರಿಂದ ಉದರವ್ಯಾಧಿ ಪಾಂಡುರೋಗ ಕುಷ್ಠರೋಗ ಕಾಸ ಶ್ವಾಸ ಪ್ರಮೇಹ ಮೊದಲಾದ ವ್ಯಾಧಿಗಳು ವಾಸಿಯಾಗುವುವು.

**नवाह ನವಾಹ** (पुं०) 1. ಹೊಸದಿವಸ, ತಿಂಗಳಿನ ಮೊದಲನೆಯ ದಿನವಾದ ಪ್ರತಿಪತ್ತು. 2. ಒಂಬತ್ತು ದಿನಗಳಲ್ಲಿ ಮಾಡಬಹುದಾದ ಒಂದು ಯಾಗ. नवभिरहोभिः निर्वृत्तः "ठञ्" (५-१-७९)। ठञो लुक् (५-१-२८)। "अच्" (५-४-७५)।

**नवीकरण ನವೀಕರಣ** (न०) ಹೊಸದನ್ನಾಗಿ ಮಾಡುವುದು. नव + कृञ् "च्विः" (५-४-५०)। "ल्युट्" (३-३-११५)।

**नवीकरणीय ನವೀಕರಣೀಯ** (वि०) ಹೊಸದಾಗಿ ಮಾಡಬೇಕಾದ. नवीकृ "अनीयर्" (३-१-९६)।

**नवीकृत ನವೀಕೃತ** (वि०) ಹೊಸದಾಗಿ ಮಾಡಲ್ಪಟ್ಟ, ಹಳೆಯದನ್ನು ಕೆರಳುವುದರಿಂದ ಹೊಸದಾಗಿ ತೋರುವಂತೆ ಮಾಡಲ್ಪಟ್ಟ. "उदीरितां तामिति याज्ञसेन्या नवीकृतोद्ग्राहितविप्रकाराम्" किरा० ३-५५।

**नवीन ನವೀನ** (वि०) ನೂತನವಾದ, ಹೊಸದಾದ. नव "ख:" प्रकृते: नूभावश्च (वा० ५-४-२५)। गुण: अवादेशश्च। "दिवौकसं कामयते न मानवी नवीनमश्रावि तवाननादिदम्" नैष० ९-४१।

**नवोढा ನವೋಢಾ** (स्त्री०) 1. ಹೊಸದಾಗಿ ಮದುವೆಯಾದ ಹೆಂಗುಸು. नवम् ऊढा। "स्मरशास्त्रविदा सेयं नवोढा नस्त्वया सखी" नैष० २०-३९। 2. ನಾಯಿಕೆಯರಲ್ಲಿ ಒಂದು ಭೇದ. ಲಜ್ಜೆಯಿಂದ ರತಿಕ್ರೀಡೆಯಲ್ಲಿ ಹಿಂಜರಿಯುವ ನಾಯಿಕೆ, ಮುಗ್ಧನಾಯಿಕೆ. लज्जाभरपराधीनरतिर्नवोढा। "दृष्ट्वा दृष्टिमधो ददाति कुरुते नालापमाभाषिता शय्यायां परिवृत्य तिष्ठति बलादालिङ्गिता वेपते। निर्यान्तीषु सखीषु वासभवनान्निर्गन्तुमेवेहते जाता वामतयैव संप्रति मम प्रीत्यै नवोढा प्रिया" सा० द०।

**नवोदक ನವೋದಕ** (न०) 1. ಹೊಸ ನೀರು. ಬಾವಿ ಮೊದಲಾದುವನ್ನು ತೋಡಿದಾಗ ಬರುವ ಹೊಸ ನೀರು. नवमुत्थितमुदकम्। 2. ಅಂತರಿಕ್ಷದಿಂದ ಬಿದ್ದ ಮಳೆಯ ನೀರು. नवं पतितमुदकम्।

**नवोदित ನವೋದಿತ** (वि०) 1. ಹೊಸದಾಗಿ ಹುಟ್ಟಿರುವ, ಹೊಸದಾಗಿ ಕಾಣಿಸಿಕೊಂಡಿರುವ. 2. ಹೊಸದಾಗಿ ಹೇಳಲ್ಪಟ್ಟ.

**नवोद्यत् ನವೋದ್ಯತ್** (वि०) ಹೊಸದಾಗಿ ಹುಟ್ಟುತ್ತಿರುವ. "नवोद्यदम्भोवरघोरदर्शने युद्धाय रूढो मकरे महत्तरे" कुमा० १४-९।

**नवोद्धृत ನವೋದ್ಧೃತ** (न०) 1. ನವನೀತ, ಹೊಸದಾಗಿ ತೆಗೆಯಲ್ಪಟ್ಟ ಬೆಣ್ಣೆ. नवमुद्धृतम्। "नवनीतं नवोद्धृतम्" अम०। 2. ಕೆಳಗಿನಿಂದ ಮೇಲಕ್ಕೆ ಎತ್ತಲ್ಪಟ್ಟ.

**नव्य ನವ್ಯ** (पुं०) 1. ಕೆಂಪುಕೊಮ್ಮೆಗಿಡ. (न०) 2. ಸ್ತುತಿ, ಸ್ತೋತ್ರ, ಹೊಗಳಿಕೆ. (वि०) 3. ಹೊಸದಾದ, ನೂತನವಾದ. णु (स्तुतौ) "यत्" (३-२-९७)। 4. ಸ್ತೋತ್ರಕ್ಕೆ ಅರ್ಹನಾದ, ಹೊಗಳಲು ಯೋಗ್ಯನಾದ.

**नशन ನಶನ** (न०) 1. ನಾಶವಾಗುವಿಕೆ, ಮರೆಯಾಗುವಿಕೆ. णश (अदर्शने) भावे "ल्युट्" (३-३-११५)। 2. ನಾಶ, ನಷ್ಟ.

**नशनीय ನಶನೀಯ** (वि०) 1. ನಾಶವಾಗಬೇಕಾದ. 2. ನಾಶವಾಗಲು ಯೋಗ್ಯವಾದ. णश (अदर्शने) "अनीयर्" (३-१-९६)। "तव्य:" (३-१-९६)। **नशितव्यम् ನಶಿತವ್ಯತ್.**

**नश्यत् ನಶ್ಯತ್** (वि०) ನಾಶಹೊಂದುತ್ತಿರುವ. णश (अदर्शने) "शतृ" (३-१-१२४)।

**नश्वर ನಶ್ವರ** (वि०) ನಾಶವಾಗುವ ಸ್ವಭಾವದ. णश (अदर्शने) "क्वरप्" (३-२-१६३)।

**नष्ट ನಷ್ಟ** (वि०) ನಾಶವಾದ, ಅದೃಶ್ಯವಾದ. णश (अदर्शने) "क्त:" (३-४-७२)।

**नसा ನಸಾ** (स्त्री०) ನಾಸಿಕೆ, ಮೂಗು. नस् हलन्तत्वात् "टाप्"। "नसा नस्या च नासिका" त्रिकाण्ड०।

**नस्त ನಸ್ತ** (पुं०) ಮೂಗಿನ ಹೊಳ್ಳೆ.

**नस्तस् ನಸ್ತಸ್** (अव्य०) ನಾಸಿಕೆಯಿಂದ, ಮೂಗಿನಿಂದ. नासिका "तसि:" (वा० ५-४-४४)।

**नस्य ನಸ್ಯ** (वि०) 1. ಮೂಗಿಗೆ ಹಿತವಾದ. नासिकायै हितम् "यत्" नस् आदेशश्च (वा० ५-१-६)। 2. ಮೂಗಿನಲ್ಲಿರುವ. नासिकायां भव: "यत्" नस् आदेशश्च। 3. ಸುಶ್ರುತದಲ್ಲಿ ಉಕ್ತವಾದ ಮೂಗಿಗೆ ಹಿತಕರವಾದ ಔಷಧಸೇಚನೆ. "नस्यस्यात: प्रवक्ष्यामि विधिं निरवशेषत:" सुश्रुत० चिकित्सा० ४०-२०। "औषधमौषधसिद्धो वा स्नेहो नासिकाभ्यां दीयते इति नस्यम्। तद्द्विविधम् शिरोविरेचनं स्नेहनञ्च। तद्द्विविधमपि पञ्चधा (1) नस्यम् (2) शिरोविरेचनम् (3) प्रतिमर्श: (4) अवपीड: ಮತ್ತು (5) प्रधमनं च। सुश्रुत० चिकित्सा० ४०-३३।

**नस्योत ನಸ್ಯೋತ** (पुं०) ಮೂಗುದಾರ ಹಾಕಲ್ಪಟ್ಟ ಎತ್ತು. नसि नासिकायां ओत:—ओ + वेञ् (तन्तुसन्ताने) "क्त:" (३-२-१०२)। "मणि: सूत्र इव प्रोतो नस्योत इव गोवृष:" भा० वन० ३०-२६।

**नहि ನಹಿ** (अव्य०) 1. ನಿಷೇಧ. 2. ಅಭಾವ. नह्यति—णह (बन्धने) "इन्" (उ० ४-११८)।

**नहुष ನಹುಷ** (पुं०) ಚಂದ್ರವಂಶದ ಒಬ್ಬ ದೊರೆ, ಪುರೂರವಸ್ಸಿನ ಮಗನಾದ ಆಯುವಿನ ಮಗ. ವಿರಜೆಯೆಂಬುವಳು ಈತನ ಪತ್ನಿ. ಈ ರಾಜನಿಗೆ ವಿರಜೆಯಲ್ಲಿ ಯತಿ ಯಯಾತಿ ಸಂಯಾತಿ ಆಯತಿ ಅಯತಿ ಮತ್ತು ಧ್ರುವರೆಂಬ ಆರು ಮಂದಿ ಮಕ್ಕಳು ಜನಿಸಿದರು. ಇಂದ್ರನು ಬ್ರಹ್ಮಹತ್ಯಾ ದೋಷದಿಂದ ಪದಚ್ಯುತನಾಗಿದ್ದ ಸಮಯದಲ್ಲಿ ದೇವತೆಗಳ ಪ್ರಾರ್ಥನೆಯಂತೆ ನಹುಷನು ಇಂದ್ರಲೋಕದ ಆಧಿಪತ್ಯವನ್ನು ಸ್ವೀಕರಿಸಿದನು. ಅಷ್ಟರಲ್ಲಿ ಇಂದ್ರನು ಮಹಾವಿಷ್ಣುವಿನ ಮಾತಿನಂತೆ ಅಶ್ವಮೇಧಯಾಗ ಮಾಡಿ ಬ್ರಹ್ಮಹತ್ಯಾ ದೋಷವನ್ನು ಪರಿಹರಿಸಿಕೊಂಡನು. ಅದಕ್ಕೆ ಸರಿ

ಯಾಗಿ ನಹುಷನಿಗೆ ತನ್ನ ದೌರ್ಭಾಗ್ಯದಿಂದ ಶಚೀದೇವಿಯಲ್ಲಿ ಮೋಹವುಂಟಾಗಿ ಅವಳನ್ನು ಕರೆತರಲು ಸೇವಕರನ್ನು ಕಳುಹಿಸಿದನು. ನಹುಷನು ಅಪೂರ್ವವಾದ ವಾಹನವೊಂದರಲ್ಲಿ ಕುಳಿತು ಬಂದರೆ ತಾನು ಅವನಲ್ಲಿಗೆ ಬರುವುದಾಗಿ ಹೇಳಿಕಳುಹಿಸಿದಳು. ನಹುಷನು ಸಪ್ತಋಷಿಗಳು ಹೊತ್ತ ಪಲ್ಲಕ್ಕಿಯಲ್ಲಿ ಕುಳಿತು ಹೋಗುತ್ತಿದ್ದಾಗ ಅಗಸ್ತ್ಯಮಹರ್ಷಿಯನ್ನು ಕಾಲಿನಿಂದ ಒದ್ದು "ಸರ್ಪ ಸರ್ಪ" ಎಂದು ಹೇಳಿದನು. ಇದರಿಂದ ಕುಪಿತರಾದ ಅಗಸ್ತ್ಯರು "ಸರ್ಪೋ ಭವ" ಎಂದು ನಹುಷನನ್ನು ಶಪಿಸಿದರು. ಆ ಕೂಡಲೆ ನಹುಷನು ಸರ್ಪವಾಗಿ ಕೆಳಗೆ ಬಿದ್ದನು. ಈ ಸರ್ಪವು ಪಾಂಡವರು ವನವಾಸದಲ್ಲಿದ್ದ ಸಮಯದಲ್ಲಿ ಧರ್ಮರಾಜನಿಂದ ತನ್ನ ಪ್ರಶ್ನೆಗಳಿಗೆಲ್ಲಾ ಉತ್ತರವನ್ನು ಪಡೆದು ಸರ್ಪದೇಹವನ್ನು ಬಿಟ್ಟು ನಹುಷ ರೂಪವನ್ನು ತಾಳಿತು. ಬಳಿಕ ನಹುಷನು ಸ್ವರ್ಗಕ್ಕೆ ತೆರಳಿದನು. "ब्रह्मर्षीणां सहस्रं हि उवाह शिबिकां मम। स मामपनयो राजन् भ्रंशयामास वै श्रियः। तत्र ह्यगस्त्यः पादेन वहन् स्पृष्टो महामुनिः। अगस्त्येन ततोऽस्म्युक्तो ध्वंस सर्पेसि वै रुषा। ततस्तस्माद्विमानाग्रयात् प्रच्युतश्च्युतलक्षणः। प्रपतन् बुबुधेऽऽत्मानं व्यालीभूतमधोमुखम्। अयाचं तमहं विप्रं शापस्यान्तो भवेदिति। प्रमादात्संप्रमूढस्य भगवन् क्षन्तुमर्हसि। ततः स मामुवाचेदं प्रपतन्तं कृपान्वितः। युधिष्ठिरो धर्मराजः शापात्त्वां मोक्षयिष्यति। स चायं पुरुषव्याघ्र कालः पुण्य उपागतः। तदस्मात् कारणात् पार्थ कार्यं तन्मे महत् कृतम्। इत्युक्त्वाऽऽजगरं देहं मुक्त्वा स नहुषो नृपः। दिव्यं वपुः समास्थाय गतस्त्रिदशमेव ह" भा० वन० १८३। 2. ವಿಷ್ಣು. नह्यति बध्नाति जीवान् स्वमायया– णह (बन्धने) "उषच् (उ० ४-७५)। "जीवान् स्वमायया नित्यं नहुषो नह्यतीति यः" इति निरुक्तिः। "इष्टो विशिष्टः शिष्टेष्टः शिखण्डी नहुषो वृषः" वि० स०। 3. ಒಂದು ಸರ್ಪ.

**नह्यमान** ನಹ್ಯಮಾನ (वि०) ಕಟ್ಟಲ್ಪಡುತ್ತಿರುವ, ಬಂಧಿಸಲ್ಪಡುತ್ತಿರುವ. णह (बन्धने) कर्म० "शानच्" (३-२-१२४)। "अस्या मुखेनैव विजित्य नित्यस्पर्धी मिलत्कुङ्कुमरोषभासा। प्रसह्य चन्द्रः खलु नह्यमानः स्यादेव तिष्ठत्परिवेषपाशः" नैष० ७-५८।

**नाक** ನಾಕ (पुं०) 1. ಸ್ವರ್ಗ, ದೇವಲೋಕ. कं सुखम्—अकं तद्विरुद्धं दुःखम्। नास्ति अकं दुःखमत्र। "यन्न दुःखेन संभिन्नं न च ग्रस्तमनन्तरम्। अभिलाषोपनीतं च तत्सुखं स्वःपदास्पदम्"। "नाकेऽपि दीव्यत्तमदिव्यवाचि वचःस्रगाचार्यकवित् कवियः" नैष० १०-५९। 2. ಒಬ್ಬ ದೊರೆ. 3. ಗಗನ, ಆಕಾಶ. (वि०) 4. ದುಃಖವಿಲ್ಲದ, "नाकस्तु त्रिदिवेऽम्बरे" मेदि०।

**नाकचर** ನಾಕಚರ (पुं०) 1. ದೇವತೆ. 2. ಸೂರ್ಯ ಚಂದ್ರ ಮೊದಲಾದ ಗ್ರಹ. नाके स्वर्गे गगने वा चरति–चर (गतौ) "टः" (३-२-१६)।

**नाकद्विप** ನಾಕದ್ವಿಪ (पुं०) ದೇವಲೋಕದ ಆನೆ, ಐರಾವತ. नाकस्य द्विपः। "पादेषु भान्ति स्फटिकाः प्रभूता नाकद्विपस्येव नखेन्दुबिम्बाः" याद० १८-२१।

**नाकनदी** ನಾಕನದೀ (स्त्री०) ದೇವಲೋಕದ ನದಿ, ಗಂಗಾನದಿ.

**नाकनाथ** ನಾಕನಾಥ **–पति** –ಪತಿ (पुं०) ದೇವಲೋಕದ ಒಡೆಯ, ಇಂದ್ರ. नाकस्य नाथः पतिर्वा।

**नाकनायक** ನಾಕನಾಯಕ (पुं०) ದೇವಲೋಕದ ಒಡೆಯ, ಇಂದ್ರ. नाकस्य नायकः। "स व्यतीत्य वियदन्तरगाध्रं नाकनायकनिकेतनमाप" नैष० ५-८।

**नाकनारी** ನಾಕನಾರೀ (स्त्री०) ದೇವಲೋಕದ ಹೆಂಗಸು, ಅಪ್ಸರಸ್ಸು. नाकस्य नारी।

**नाकपाल** ನಾಕಪಾಲ (पुं०) ಇಂದ್ರ. नाकं पालयति–पाल (रक्षणे) "अण्" (३-२-१)। "ण्वुल्" (३-१-१३३)। **–पालकः** –ಪಾಲಕಃ.

**नाकपृष्ठ** ನಾಕಪೃಷ್ಠ (न०) ಸ್ವರ್ಗತಲ. नाकस्य पृष्ठम्। "आयुष्मन्, इतः पश्य नाकपृष्ठप्रतिष्ठितस्य सौभाग्यमात्मयशसः" शाकु० ७।

**नाकलोक** ನಾಕಲೋಕ (पुं०) ಸ್ವರ್ಗ, ದೇವಲೋಕ. "नाकलोकभिषजोः सुषमा या पुष्पचापमपि चुम्बति सैव" नैष० ५-४६।

**नाकसद्** ನಾಕಸದ್ (पुं०) 1. ದೇವತೆ. नाके सीदति—षद्लृ (विशरणादौ) "क्विप्" (३-२-६१)। "पुण्यो महाब्रह्मसमूहजुष्टः सन्तर्पणो नाकसदां वरेण्यः" भट्टि० १-४। (वि०) 2. ಸ್ವರ್ಗದಲ್ಲಿ ವಾಸಮಾಡುವ.

**नाकाधिप** ನಾಕಾಧಿಪ (पुं०) ದೇವಲೋಕದ ಒಡೆಯ, ಇಂದ್ರ. नाकस्याधिपः। "अभ्यर्च्य पूर्वं विभवादधिकैः प्रदिष्टैः नाकाधिपानिव नवोपहृतान्नरेन्द्रान्" याद० २२-२४२।

**नाकापगा** ನಾಕಾಪಗಾ (स्त्री०) ದೇವಲೋಕದ ನದಿ ಗಂಗಾನದಿ.

**नाकिन् ನಾಕಿನ್** (ಪುಂ०) ಸ್ವರ್ಗದಲ್ಲಿ ವಾಸಮಾಡುವ ದೇವತೆ. नाकः वासस्थानत्वेनास्त्यस्य "इनिः" (५-२-११५)। "सप्रसादमभिनन्द्य सन्नतान् नाकिनो नरकभीतिवर्जितान्" याद० १७-८।

**नाकु ನಾಕು** (ಪುಂ०)1. ವಲ್ಮೀಕ, ಹುತ್ತ. नम्यतेऽनेन—णम (प्रह्वत्वे शब्दे) "उः" (उ० १-१८)। 2. ಪರ್ವತ, ಬೆಟ್ಟ. 3. ಒಬ್ಬ ಮುನಿ. "नाकुर्मुन्यन्तरे पृथ्वीधर-वल्मीकयोः पुमान्" मेदि०।

**नाकुल ನಾಕುಲ** (ಪುಂ०) 1. ನಕುಲನ ಮಗ. नकुलस्य अपत्यम् "अण्" (४-१-११४)। "शबराः उद्भसाश्चैव वत्साश्च सह नाकुलैः। नकुलः सहदेवश्च वामं पक्षं समाश्रिताः" "भा० भीष्म० ५०-५३। (ವಿ०) 2. ನಕುಲನಂತಿರುವ, ನಕುಲನಿಗೆ ಸದೃಶವಾದ. नकुल इव "अण्" (५-३-१०७)। 3. ನಕುಲನ ಸಂಬಂಧವಾದ. नकुलस्येदम् "अण्" (४-३-१२०)। 4. ಮುಂಗುಸಿಯ ಸಂಬಂಧವಾದ. (स्त्री०) **–ली –ಲೀ.** 5. ಸರ್ಪಾಕ್ಷಿ, ಈಶ್ವರೀಹಂಬು. 6. ಸಣ್ಣ ರಾಶ್ಮೆ. 7. ಚವ್ಯ. "नाकुली चव्यरास्नयोः" हेम०।

**नाकौकस् ನಾಕೌಕಸ್** (ಪುಂ०) ಸ್ವರ್ಗಲೋಕದಲ್ಲಿ ವಾಸ ಮಾಡುವ ದೇವತೆ. नाकः ओको यस्य।

**नाक्षत्र ನಾಕ್ಷತ್ರ** (ವಿ०) 1. ನಕ್ಷತ್ರಸಂಬಂಧವಾದ, ನಕ್ಷತ್ರಕ್ಕೆ ಸಂಬಂಧಿಸಿದ. नक्षत्रस्येदम् "अण्" (४-३-१२०)। "भचक्रभ्रमणं नित्यं नाक्षत्रं दिन-मुच्यते" सू० सि०। ನಕ್ಷತ್ರಸಮೂಹವು ಒಂದು ಸಲ ಸುತ್ತಿ ಬಂದರೆ ಅದು ನಾಕ್ಷತ್ರದಿನವಾಗುವುದು. (ಪುಂ०) 2. ಇಪ್ಪತ್ತೇಳು ನಕ್ಷತ್ರಗಳಿಂದ ಕೂಡಿದ ಒಂದು ತಿಂಗಳು, ಇಪತ್ತೇಳು ನಕ್ಷತ್ರಗಳು ಸಂಚರಿಸುವ ಕಾಲ. "नक्षत्र-सत्राण्ययनानि चेन्दोर्मानेन कुर्याद्भगणात्मकेन" वि० ध०। 3. (ಅರವತ್ತು ಘಳಿಗೆಗೆ ಒಂದು ದಿನ.) ಮೂವತ್ತು ದಿನಗಳ ಕಾಲದ ಒಂದು ತಿಂಗಳು, ಸಾವನಮಾಸ. "नाडी षष्ट्या तु नाक्षत्रमहोरात्रं प्रकीर्तितम्। तत्त्रिंशता भवेन्मासः सावनोऽर्कोदयैस्तथा" सू० सि० १-१२। ಸೂರ್ಯೋದಯದಿಂದ ಮರುದಿನದ ಸೂರ್ಯೋದಯದ ವರೆಗೆ 60 ಘಳಿಗೆಗಳ ಕಾಲವು ಸಾವನ ದಿನವಾಗುವುದು. ಮೂವತ್ತು ಸಾವನ ದಿನಗಳ ಕಾಲ ಒಂದು ಸಾವನ ಮಾಸ. "उदयादुदयं भानोः सावनं तत्प्रकीर्तितम्। सावनानि स्युरेतेन यज्ञकालविधिस्तु तैः" सू० सि० १४-१८।

**नाग ನಾಗ** (ಪುಂ०) 1. ಸರ್ಪ, ಹಾವು. नगे भवः "अण्" (४-३-५३)। "नागेषु सानुरागेषु पश्यत्सु दिविषत्सु च। भूमिपालं नरं भैमी वरं साञ्ववरद्वरम्" नैष० १७-१११। 2. ಗಜ, ಆನೆ. "नागं पुनर्मृदु सलील-निमीलिताक्षं सर्वः प्रियः खलु भवत्यनुरूपचेष्टः" माघ० ५-६। 3. ನಾಗಕೇಸರ ವೃಕ್ಷ, ನಾಗಸಂಪಿಗೆ ಮರ. 4. ಮುಸ್ತಾಕ, ಕೊನ್ನಾರಿ ಗೆಡ್ಡೆ. 5. ಮೇಘ, ಮೋಡ, 6. ಪುನ್ನಾಗವೃಕ್ಷ, ಸುರಗಿಮರ. 7. ನಾಗದಂತವೃಕ್ಷ. 8. ಶರೀರದೊಳಗಿರುವ ಪಂಚವಾಯುಗಳಲ್ಲೊಂದು. 9. ಸಮಾಸದಲ್ಲಿ ಉತ್ತರಪದವಾದಾಗ ಶ್ರೇಷ್ಠ ವಾಚಕವಾದ ಒಂದು ಪದ. "सिंहशार्दूलनागाद्याः पुंसि श्रेष्ठार्थ गोचराः" अम०। (न०) 10. ಸೀಸಲೋಹ. 11. ತಗರ. 12. (ಜ್ಯೋತಿಷದಲ್ಲಿ) ಬವ ಬಾಲವ ಮೊದಲಾದ ಹನ್ನೊಂದು ಕರಣಗಳಲ್ಲೊಂದು. ಇದು ತಿಥಿಯ ಅರ್ಧ ಭಾಗವನ್ನು ವ್ಯಾಪಿಸಿರುವ ಒಂದು ಕಾಲವಿಶೇಷ. (ವಿ०) 13. ಕ್ರೂರವಾದ ಕೆಲಸವನ್ನು ಮಾಡುವವನು, ದಯೆಯಿಲ್ಲ ದವನು. "नागं नपुंसकं रङ्गे सीसके करणान्तरे। नागः पन्नगमातङ्गक्रूराचारिषु तोयदे। नागकेसरपुन्नाग-नागदन्तकमुस्तके। देहानिलप्रभेदे च श्रेष्ठे स्यादुत्तर-स्थितः" मेदि०।

**नागकर्ण ನಾಗಕರ್ಣ** (ಪುಂ०) ಕೆಂಪು ಹರಳು ಗಿಡ.

**नागकेसर ನಾಗಕೇಸರ** (ಪುಂ०) ನಾಗಸಂಪಿಗೆ ಮರ. नागस्येव केसरोऽस्य।

**नागगन्धा ನಾಗಗಂಧಾ** (स्त्री०) ಸರ್ಪಾಕ್ಷಿ, ಈಶ್ವರೀ ಹಂಬು. नागस्य गन्ध इव गन्धोऽस्याः।

**नागगर्भ ನಾಗಗರ್ಭ** (न०) ಸಿಂದೂರವೆಂಬ ಒಂದು ಧಾತು. नागः सीसकं गर्भः कारणं यस्य।

**नागज ನಾಗಜ** (न०) 1. ಸಿಂದೂರವೆಂಬ ಒಂದು ಧಾತು. नागात् सीसकात् जायते—जनी (प्रादुर्भावे) "डः" (३-२-९७)। 2. ತಗರ. (ವಿ०) 3. ನಾಗದಿಂದ ಉಂಟಾದ, ಆನೆಯಿಂದ ಉಂಟಾದ.

**नागजिह्वा ನಾಗಜಿಹ್ವಾ** (स्त्री०) 1. ಅನಂತನಗೊಂಡೆ ಗಿಡ. 2. ಸೊಗದೆ ಗಿಡ. नागस्य सर्पस्य जिह्वेवाकारोऽस्य।

**नागजिह्विका ನಾಗಜಿಹ್ವಿಕಾ** (स्त्री०) ಮಣಿಶಿಲೆ. नागस्य हस्तिनो जिह्वेव—स्वार्थे "कन्" (५-४-५)। "मनः-शिला मनोगुप्ता मनोह्वा नागजिह्विका" अम०।

**नागजीवन ನಾಗಜೀವನ** (न०) ತಗರ. नागेन सीसकेन जीवनं यस्य।

**नागदत्त ನಾಗದತ್ತ** (ಪುಂ०) ಧೃತರಾಷ್ಟ್ರನ ಒಬ್ಬ ಮಗ.

**नागदन्त ನಾಗದಂತ** (ಪುಂ०) 1. ಆನೆಯ ಕೊಂಬು, ದಂತ. 2. ಪದಾರ್ಥಗಳನ್ನು ತೂಗುಹಾಕಲು ಗೋಡೆಗೆ ಹೊಡೆದಿರುವ ಮರದ ಅಥವಾ ಲೋಹದ ಗೂಟ. नागस्य हस्तिनो दन्त इवाकारोऽस्य। "नागदन्तो द्विपरदे गृहान्निर्गतदारुणि" मेदि०। (स्त्री०) **–दन्ती –ದಂತೀ.** ಹಣ್ಣೇಮರ, ಗುರುಗುಲು ಗಿಡ. "नागदन्ती श्रीहस्तिन्याम्" मेदि०।

**नागद्वीप ನಾಗದ್ವೀಪ** (ಪುಂ०) ಭಾರತವರ್ಷದಲ್ಲಿರುವ ಒಂದು ದ್ವೀಪ. "पार्श्वे शशस्य द्वे वर्षे उक्ते ये दक्षिणोत्तरे। कर्णौ तु नागद्वीपस्य कश्यपद्वीप एव च। ताम्रपर्णी शिला राजन् श्रीमान् मलयपर्वतः" भा० भीष्म० ६-५६, ५७।

**नागनक्षत्र ನಾಗನಕ್ಷತ್ರ** (ನ०) ಆಶ್ಲೇಷಾ ನಕ್ಷತ್ರ, ಸರ್ಪದೇವತಾಕನಕ್ಷತ್ರ. नागाधिष्ठितं नक्षत्रम्। ಇದು ಸರ್ಪದೇವತಾಕವಾದುದರಿಂದ ಈ ಹೆಸರು.

**नागनामन् ನಾಗನಾಮನ್** (ಪುಂ०) ತುಲಸಿ.

**नागनिर्यूह ನಾಗನಿರ್ಯೂಹ** (ಪುಂ०) ಗೋಡೆಗೆ ಹೊಡೆದಿರುವ ಮರದ ಅಥವಾ ಲೋಹದ ಗೂಟ.

**नागपञ्चमी ನಾಗಪಂಚಮೀ** (ಸ್ತ್ರೀ०) ಶ್ರಾವಣಶುಕ್ಲ ಪಂಚಮಿ.

**नागपति ನಾಗಪತಿ** (ಪುಂ०) 1. ಗಜಪತಿ, ಆನೆಗಳ ಯಜಮಾನ, ಸಲಗ. 2. ಐರಾವತ. 3. ಆದಿಶೇಷ ಮೊದಲಾದ ಎಂಟು ಸರ್ಪಗಳ ಅಧಿಪತಿಗಳು. नागानां पतिः।

**नागपद ನಾಗಪದ** (ಪುಂ०) 1. ಒಂದು ವಿಧ ರತಿಬಂಧ. "पादौ स्कन्धे तथा हस्ते क्षिपेल्लिगं भगे लघु। कामयेत्कामुको नारीं बन्धो नागपदो मतः" रतिमं०। (ನ०) 2. ಆನೆಯ ಕಾಲು.

**नागपाश ನಾಗಪಾಶ** (ಪುಂ०) 1. ವರುಣದೇವನ ಆಯುಧ. नागः पाश इव। 2. ಯುದ್ಧ ಮೊದಲಾದುವುಗಳಲ್ಲಿ ಉಪಯೋಗಿಸಲ್ಪಡುವ ಒಂದು ವಿಧ ಕಣಿಕೆಯಿರುವ ಪಾಶ (ಹಗ್ಗ), ಜೀರುಗುಣಿಕೆಯ ಹಗ್ಗ. 3. ಸರ್ಪಾಸ್ತ್ರ. ಈ ಸರ್ಪಾಸ್ತ್ರಗಳಿಂದ ಇಂದ್ರಜಿತ್ತು ರಾಮಲಕ್ಷ್ಮಣರಿಬ್ಬರನ್ನೂ ಮೂರ್ಚ್ಛೆಗೊಳಿಸಿದನು. ಅನಂತರ ಇದನ್ನು ತಿಳಿದ ಗರುತ್ಮಂತನು ಬಂದು ಈ ಪಾಶಗಳನ್ನು ಬಿಡಿಸಿದನು.

**नागपाशक ನಾಗಪಾಶಕ** (ಪುಂ०) 1. ಒಂದುವಿಧ ರತಿಬಂಧ. "स्वजङ्घाद्वयमध्यस्थां हस्ताभ्यां धारयन् कुचौ। रमेन्निःशङ्कितः कामी बन्धोऽयं नागपाशकः" रतिमं०। 2. ನಾಗಪಾಶ, ಸರ್ಪಾಸ್ತ್ರ.

**नागपुर ನಾಗಪುರ** (ನ०) 1. ಪಾತಾಳಲೋಕ. 2. ಹಸ್ತಿನಾಪುರ. "तत्सर्वं प्रतिजग्राह राजा नागपुराधिपः" भा० आदि० १२२-३५।

**नागपुष्प ನಾಗಪುಷ್ಪ** (ಪುಂ०) 1. ಪುನ್ನಾಗವೃಕ್ಷ, ಸುರಗಿ ಮರ. 2. ನಾಗಕೇಸರ, ನಾಗಸಂಪಿಗೆ ಮರ. 3. ಚಂಪಕವೃಕ್ಷ, ಸಂಪಿಗೆ ಮರ. "नागपुष्पस्तु पुन्नागे चम्पके नागकेसरे" हेम०।

**नागबन्धु ನಾಗಬಂಧು** (ಪುಂ०) ಅಶ್ವತ್ಥವೃಕ್ಷ, ಅರಳಿ ಮರ. नागस्य गजस्य बन्धुरिव।

**नागबल ನಾಗಬಲ** (ಪುಂ०) 1. ಭೀಮಸೇನ. नागानां गजानामयुतस्य बलमस्य। ಆನೆಗೆ ಸಮಾನವಾದ ಬಲವುಳ್ಳವನಾದುದರಿಂದ ಭೀಮಸೇನನಿಗೆ ಈ ಹೆಸರು. [ಭೀಮಸೇನನ ಪರಾಕ್ರಮವನ್ನು ಕಂಡು ಸಹಿಸಲಾರದ ದುರ್ಯೋಧನನು ಇವನನ್ನು ಹೇಗಾದರೂ ಮಾಡಿ ತೀರಿಸಬೇಕೆಂದು ಯೋಚಿಸಿ ಅನೇಕ ವಿಧವಾದ ತೊಂದರೆಗಳನ್ನು ಕೊಡುತ್ತ ಒಂದು ದಿನ ಇವನ ಕೈಕಾಲುಗಳನ್ನು ಕಟ್ಟಿ ಗಂಗಾನದಿಯ ಒಂದು ಮಡುವಿನಲ್ಲಿ ಶೂಲಗಳನ್ನು ನೆಡಸಿ ಅದರ ಮೇಲೆ ತಳ್ಳಿಸಿದನು. ದೈವಬಲದಿಂದ ಆ ವಿಪತ್ತಿನಿಂದ ಪಾರಾಗಿ ಪಾತಾಳ ಲೋಕವನ್ನು ಪ್ರವೇಶಿಸಿದನು. ಅಲ್ಲಿ ವಾಸುಕಿಯ ಅನುಮತಿ ಪಡೆದು ಸಹಸ್ರಾರು ಆನೆಗಳ ಬಲವನ್ನು ಉಂಟುಮಾಡುವ ಅಲ್ಲಿನ ಕುಂಡಗಳ ರಸವನ್ನು ಪಾನಮಾಡಿ ಭೀಮಸೇನನು ಹತ್ತುಸಹಸ್ರ ಆನೆಗಳ ಬಲವುಳ್ಳವನಾಗಿ ತಾಯಿ ಮತ್ತು ಸಹೋದರರಿದ್ದಲ್ಲಿಗೆ ಬಂದು ನಡೆದ ವೃತ್ತಾಂತವನ್ನೆಲ್ಲಾ ತಿಳಿಸಿದನು. "ततो बद्ध्वा लतापाशैर्भीमं दुर्योधनः स्वयम्। लतापाशैर्दृढं बद्धं स्थलाज्जलमपातयत्। पपात यत्र तत्रास्य शूलं नासीद्यदृच्छया। स निःसंज्ञो जलस्यान्तमवाग्वै पाण्डवोऽविशत्। आक्रमन्नागभवने तदा नागकुमारकान्। ततो वासुकिरभ्येत्य नागैरनुगतस्तदा। पश्यति स्म महाबाहुं भीमं भीमपराक्रमम्। ततो भीमस्तदा नागैः कृतस्वस्त्ययनः शुचिः। एकोच्छ्वासात्तदा कुण्डं पिबति स्म महाबलः। ततस्तु शयने दिव्ये नागदत्ते महाभुजः। अशेत भीमसेनस्तु यथासुखमरिन्दमः। ........ ..............ततोऽष्टमे तु दिवसे प्रत्यबुध्यत पाण्डवः। तं दृष्ट्वा प्रतिबुध्यन्तं पाण्डवं ते भुजङ्गमाः। सान्त्वयामासुरव्यग्रा वचनं चेदमब्रुवन्। यत्ते पीतो महाबाहो रसोऽयं वीर्यसंयुतः। तस्मान्नागायुतबलो रणेऽधृष्यो भविष्यसि। ततो नागस्य भवने कृतकौतुक-

मङ्गलः। दिव्याभरणसञ्छन्नो नागानामन्त्य पाण्डवः। उदतिष्ठत्प्रहृष्टात्मा नागलोकादरिन्दमः। तस्मिन्नेव वनोद्देशे स्थापितः कुरुनन्दनः। तत उत्थाय कौन्तेयो भीमसेनो महाबलः। आजगाम महाबाहुर्मातुरन्तिकमञ्जसा। ततोऽभिवाद्य जननीं ज्येष्ठं भ्रातरमेव च। कनीयसः समाघ्राय शिरःस्वरिविमर्दनः। ततस्तत्सर्वमाचष्ट दुर्योधनविचेष्टितम्। नागलोके च यद्वृत्तं गुणदोषमशेषतः" भा० आदि०। (स्त्री०) **-बला -ಬಲಾ.** ಬೋಳಂಗಡಲೆ. "गाङ्गेरुकी नागबला झषा ह्रस्वगवेधुका" अम०।

**नागभगिनी ನಾಗಭಗಿನೀ** (स्त्री०) ಮನಸಾದೇವಿ, ವಾಸುಕಿಯ ತಂಗಿಯಾದ ಜರತ್ಕಾರು, ಜರತ್ಕಾರುಋಷಿಯ ಪತ್ನಿ.

**नागभूषण ನಾಗಭೂಷಣ** (पुं०) ಪರಶಿವ, ಮಹಾದೇವ, ಪರಮೇಶ್ವರ. नागा भूषणमस्य। ಪರಶಿವನಿಗೆ ಸರ್ಪಗಳು ಆಭರಣವಾಗಿರುವುದರಿಂದ ಈ ಹೆಸರು.

**नागमल्ल ನಾಗಮಲ್ಲ** (पुं०) ಆನೆಗಳ ಗುಂಪಿನಲ್ಲಿ ಬಲಶಾಲಿಯಾದ ಐರಾವತ.

**नागमातृ ನಾಗಮಾತೃ** (स्त्री०) 1. ಮಣಿಶಿಲೆ. 2. ಸುರಸಾದೇವಿ. 3. ಮನಸಾದೇವಿ.

**नागयष्टि ನಾಗಯಷ್ಟಿ** (स्त्री०) ಕೆರೆ ಕೊಳ ಮೊದಲಾದುವುಗಳ ದಡದಲ್ಲಿ ನೆಟ್ಟಿರುವ ವಲಸೆ ಮೊದಲಾದ ಮರದ ಕಂಬ. नागाधिष्ठिता यष्टिः।

**नागर ನಾಗರ** (पुं०) 1. ದೇವರ, ಭಾವಮೈದುನ, ಪತಿಯ ಸಹೋದರ. "नागरो देवरः" त्रिकाण्ड०. 2. ಒಬ ಪೌರ, ಪಟ್ಟಣಿಗ, ಪಟ್ಟಣದಲ್ಲಿ ವಾಸಿಸುವವನು. 3. ಹೇರಿಳೆ ಗಿಡ. 4. ನಾಗರದೇಶ. (न०) 5. ಶುಂಠಿ. 6. ಮುಸ್ತಕ, ಕೊನ್ನಾರಿ ಗೆಡ್ಡೆ. 7. ಒಂದುವಿಧ ರತಿಬಂಧ. 8. ನಾಗರದೇಶದ ಲಿಪಿ, ನಾಗರ ಲಿಪಿ, ನಾಗರಾಕ್ಷರ. (वि०) 9. ನಗರಕ್ಕೆ ಸಂಬಂಧಿಸಿದ, ನಗರಸಂಬಂಧವಾದ. नगर "अण्" (४-३-१२०)।

**नागरक ನಾಗರಕ** (पुं०) 1. ನಗರಕಾರ್ಯಗಳಲ್ಲಿ ಕುಶಲನಾದವನು, ಪಟ್ಟಣದಲ್ಲಿ ಪ್ರವೀಣನಾದವನು. 2. ಚೋರ, ಕಳ್ಳ. नगर "वुञ्" (४-२-१२८)। 3. ಒಂದು ವಿಧ ರತಿಬಂಧ. "ऊरुमूलोपरि स्थित्वा योषिदूरुद्वयं रमेत्। ग्रीवां धृत्वा कराभ्यां च बन्धो नागरको मतः"।

**नागरक्त ನಾಗರಕ್ತ** (न०) ಸಿಂದೂರವೆಂಬ ಒಂದು ಗೈರಿಕ ಧಾತು.

**नागरखण्ड ನಾಗರಖಂಡ** (पुं०) ಸ್ಕಾಂದಪುರಾಣದಲ್ಲಿ ಆರನೆಯ ಖಂಡ. ಈ ಖಂಡದಲ್ಲಿ ಲಿಂಗೋತ್ಪತ್ತಿ, ಹರಿಶ್ಚಂದ್ರನ ಕಥೆ, ವಿಶ್ವಾಮಿತ್ರಋಷಿಯ ಮಾಹಾತ್ಮ್ಯ, ತ್ರಿಶಂಕುವಿನ ಸ್ವರ್ಗಗಮನ ಮುಂತಾದ ವಿಷಯಗಳು ಉಕ್ತವಾಗಿವೆ.

**नागरङ्ग ನಾಗರಂಗ** (पुं०) ಹೇರಿಳೆ ಗಿಡ. नागा रज्यन्त्यत्र — रञ्ज (रागे) "घञ्" (३-३-१२१)।

**नागरमुस्ता ನಾಗರಮುಸ್ತಾ** (स्त्री०) ಒಂದು ಜಾತಿಯ ಕೊನ್ನಾರಿ ಗೆಡ್ಡೆ. नागरी चासी मुस्ता च।

**नागराज ನಾಗರಾಜ** (पुं०) 1. ಆದಿಶೇಷ, ಸರ್ಪಗಳ ದೊರೆ. नागानां राजा "टच्" (५-४-९१)। 2. ದೊಡ್ಡ ಆನೆ. 3. ಛಂದಃಶಾಸ್ತ್ರಪ್ರವರ್ತಕನಾದ ಒಬ್ಬ ಪಂಡಿತ.

**नागराह्व ನಾಗರಾಹ್ವ** (न०) ಶುಂಠಿ.

**नागरिक ನಾಗರಿಕ** (वि०) 1. ಪೌರ, ಪಟ್ಟಣಿಗ, ನಗರದಲ್ಲಿ ವಾಸಮಾಡುವವನು. 2. ಸುಸಂಸ್ಕೃತ, ಮರ್ಯಾದೆಯಿಂದ ವರ್ತಿಸುವವನು. "गच्छ नागरिकवृत्त्या संज्ञापयैनम्" शाकु० ५। 3. ನಗರರಕ್ಷಕ, ನಗರರಕ್ಷಣೆಯ ಅಧಿಕಾರಿ. नगरं रक्षति—"ठक्" (४-४-३३)।

**नागरी ನಾಗರೀ** (स्त्री०) 1. ಕಳ್ಳಿಗಿಡ. 2. ಜಾಣೆಯಾದ ಹೆಂಗಸು.

**नागरेणु ನಾಗರೇಣು** (पुं०) ಸಿಂದೂರ, ಒಂದು ಗೈರಿಕ ಧಾತು.

**नागरेयक ನಾಗರೇಯಕ** (वि०) 1. ನಗರಿಯಲ್ಲಿ ಹುಟ್ಟಿದ. 2. ನಗರಿಯಲ್ಲಿರುವ, ಪಟ್ಟಣಿಗ. नगर्यां जातो भवो वा "ढकञ्" (४-२-९५)।

**नागर्य ನಾಗರ್ಯ** (न०) ನಾಗರಿಕತೆ, ಸಂಸ್ಕೃತಿಯಿಂದ ಕೂಡಿರುವಿಕೆ. नागरस्य भावः "ष्यञ्" (५-१-१२८)।

**नागलता ನಾಗಲತಾ** (स्त्री०) 1. ವೀಳ್ಯದೆಲೆಯ ಬಳ್ಳಿ. 2. ಪುರುಷನ ಜನನೇಂದ್ರಿಯ. "स्मरस्तम्भश्च कन्दर्पमुसलो ध्वज इत्यपि। स्त्रियां नागलता" त्रिकाण्ड०।

**नागलोक ನಾಗಲೋಕ** (पुं०) ಸರ್ಪಗಳ ಲೋಕ, ಪಾತಾಳ ಲೋಕ. नागाधिष्ठितो लोकः। ಈ ಲೋಕವು ಭೂಲೋಕದ ಕೆಳಭಾಗದಲ್ಲಿರುವುದು. ಇದು ಸಪ್ತ (7) ಅಧೋಲೋಕಗಳಲ್ಲೊಂದು. [ವಿವರಕ್ಕೆ "पाताल" ಪದದಲ್ಲಿ ನೋಡಿ.]

**नागवल्लरी ನಾಗವಲ್ಲರೀ** (स्त्री०) ವೀಳ್ಯದೆಲೆಯ ಬಳ್ಳಿ. नाग इव दीर्घा वल्लरी। **-वल्ली -ವಲ್ಲೀ.** ಇದೇ ಅರ್ಥದಲ್ಲಿ. ಇದರಲ್ಲಿ ದೇಶ ಭೂಮಿ ಇವುಗಳ ಗುಣವಿಶೇಷ

ದಿಂದ ಶ್ರೀವಾटी अम्लवाटी ಮುಂತಾದ ನಾನಾ ಭೇದ ಗಳುಂಟು.

**नागवारिक ನಾಗವಾರಿಕ** (पुं०) 1. ಗರುಡ. 2. ನವಿಲು. 3. ಮಾವಟಿಗ. 4. ರಾಜನ ಆನೆಯ ಮಾವಟಿಗ. 5. ಆನೆಯ ಗುಂಪಿನಲ್ಲಿರುವ ಸಲಗ. नागस्य सर्पस्य गजस्य वा वारी वारणं प्रयोजनमस्य "ठञ्" (५-२-१०१)। "नागवारिक उद्दिष्टो राजकुञ्जरहस्तिपे। गणस्थराजे गरुडे चित्रमेखलकेऽपि च" मेदि०।

**नागवृक्ष ನಾಗವೃಕ್ಷ** (पुं०) ನಾಗಕೇಸರ ವೃಕ್ಷ.

**नागसंभव ನಾಗಸಂಭವ** (न०) ಸಿಂದೂರ.

**नागसाह्वय ನಾಗಸಾಹ್ವಯ** (न०) ಹಸ್ತಿನಾಪುರ. नागेन गजेन समानः आह्वयो यस्य। "जगाम तक्षकस्तूर्णं नगरं नागसाह्वयम्" भा० आदि०।

**नागसुगन्धा ನಾಗಸುಗಂಧಾ** (स्त्री०) ಈಶ್ವರಿ ಬಳ್ಳಿ, ಸರ್ಪಾಕ್ಷೀಲತೆ.

**नागाख्य ನಾಗಾಖ್ಯ** (पुं०) ನಾಗಕೇಸರ ವೃಕ್ಷ. नाग इति आख्या यस्य। "सुपर्णभनाग ख्यो नागकेसरः" त्रिकाण्ड०।

**नागाञ्जना ನಾಗಾಂಜನಾ** (स्त्री०) 1. ಹೆಣ್ಣು ಆನೆ. 2. ನಾಗಯಷ್ಟಿ. "नागाञ्जनेभसुन्दर्यां नागयष्टौ च योषिति" मेदि०।

**नागाधिप ನಾಗಾಧಿಪ** (पुं०) 1. ಅನಂತ, ಆದಿಶೇಷ. 2. ಆನೆಗಳ ಗುಂಪಿನ ಸಲಗ. 3. ಸರ್ಪಗಳ ರಾಜ. नागानामधिपः। एवं नागाधिपतिः नागाधिराजः ಇತ್ಯಾದಿ.

**नागानन ನಾಗಾನನ** (पुं०) ಗಣಪತಿ, ವಿನಾಯಕ. नागस्याननं यस्य।

**नागानन्द ನಾಗಾನಂದ** (न०) ಶ್ರೀಹರ್ಷಕವಿ ರಚಿತವಾದ ಒಂದು ನಾಟಕ.

**नागान्तक ನಾಗಾಂತಕ** (पुं०) 1. ಗರುಡ. 2. ನವಿಲು 3. ಸಿಂಹ. नागानां सर्पाणां गजानां वा अन्तकः। "नागान्तको विष्णुरथः सुपर्णः पन्नगाशनः" अम०।

**नागाराति ನಾಗಾರಾತಿ** (पुं०) 1. ಗರುಡ. 2. ನವಿಲು. 3. ಸಿಂಹ. नागानां सर्पाणां गजानां वा अरातिः।

**नागालाबू ನಾಗಾಲಾಬೂ** (स्त्री०) ಆನೆಯ ಕುಂಭಸ್ಥಳದ ಆಕಾರದ ಸೋರೆಕಾಯಿ ಗಿಡ.

**नागाशन ನಾಗಾಶನ** (पुं०) 1. ಗರುಡ. 2. ನವಿಲು, ಮಯೂರ. 3. ಸಿಂಹ. नागान् अश्नाति—अश (भोजने) "ल्युः" (३-१-१३४)।

**नागाह्व ನಾಗಾಹ್ವ** (पुं०) ಹಸ್ತಿನಾಪುರ. नागयुक्ता आह्वा यस्य। **–आह्वयः –ಆಹ್ವಯಃ.**

**नागिन् ನಾಗಿನ್** (पुं०) ಸರ್ಪಭೂಷಣನಾದ ಪರಮೇಶ್ವರ, ಪರಶಿವ. नागा आभरणत्वेनास्त्यस्य "इनिः" (५-२-११५)। "नागोपवीतिनं नग्नं नागिनमग्निवर्चसम्" हरिवं०।

**नागेन्द्र ನಾಗೇಂದ್ರ** (पुं०) 1. ಸರ್ಪಗಳ ರಾಜ. नागानामिन्द्रः। 2. ಶ್ರೇಷ್ಠವಾದ ಆನೆ. नागः इन्द्र इव। "नागेन्द्रहस्तास्त्वचि कर्कशत्वादेकान्तशैत्यात्कदलीविशेषाः" कुमा० १-३६।

**नागेश ನಾಗೇಶ** (पुं०) 1. ಅನಂತ, ಆದಿಶೇಷ. नागानां सर्पाणामीशः। 2. ಒಬ್ಬ ವ್ಯಾಕರಣಪಂಡಿತ, ಲಘು ಶಬ್ದೇಂದುಶೇಖರವನ್ನು ರಚಿಸಿದ ಒಬ್ಬ ವೈಯಾಕರಣ. "नागेशभट्टस्तनुते लघुशब्देन्दुशेखरम्"। एवं **नागेश्वरः** ನಾಗೇಶ್ವರಃ. (स्त्री०) **–ईश्वरी –ಈಶ್ವರೀ.** ಮನಸಾದೇವಿ.

**नागोद(र) ನಾಗೋದ(ರ)** (न०) 1. ಉದರದ ಒಂದು ರಕ್ಷಾಕವಚ, ಹೊಟ್ಟೆಯ ರಕ್ಷಣೆಗಾಗಿ ಹಾಕಿಕೊಳ್ಳುವ ಒಂದು ಕವಚ. 2. ವಾತದೋಷದಿಂದ ಹೆಂಗಸರ ಗರ್ಭಕ್ಕೆ ಒದಗುವ ಒಂದು ಉಪದ್ರವ. "शुक्रशोणितं वायुनाऽभिप्रपन्नमवक्रान्तजीवमाध्मापयत्युदरम्, तं कदाचिद्यदृच्छयोपशान्तं नैगमेषापहृतमिति भाषन्ते, तमेव कदाचित् प्रलीयमानं नागोदरमित्याहुः, तत्रापि लीनवत् प्रतीकारः" सुश्रुत० शारीर० १०-५७।

**नागोद्भेद ನಾಗೋದ್ಭೇದ** (पुं०) ಅಂತರ್ವಾಹಿನಿಯಾದ ಸರಸ್ವತೀನದಿಯು ಭೂಮಿಯ ಮೇಲೆ ಪ್ರಕಾಶವಾಗಿ ಪ್ರವಹಿಸಿ ಕಾಣಿಸಿಕೊಳ್ಳುವ ಪ್ರದೇಶ. "गच्छन्त्यन्तर्हिता यत्र मेरुपृष्ठे सरस्वती। चमसेऽथ शिवोद्भेदे नागोद्भेदे च दृश्यते। नागोद्भेदे नरः स्नात्वा नागलोकमवाप्नुयात्" भा० वन० ८०-१११, १२।

**नाचिकेत ನಾಚಿಕೇತ** (पुं०) 1. ಅಗ್ನಿ, ಬೆಂಕಿ. 2. ಒಬ್ಬ ಋಷಿ, ಉದ್ದಾಲಕ ಋಷಿಯ ಮಗ. [ವಿವರಕ್ಕೆ "नचिकेत" ಪದದಲ್ಲಿ ನೋಡಿ.]

**नाट ನಾಟ** (पुं०) 1. ನೃತ್ಯ, ನರ್ತನ, ಕುಣಿತ. नट (नृत्तौ) "घञ्" (३-३-१८)। 2. ಒಂದು ದೇಶ. 3. ಆ ದೇಶದ ದೊರೆ. "व्यावृत्य चोलकर्णाटनाटादींश्च नरेश्वरान्"।

**नाटक ನಾಟಕ** (न०) 1. ದೃಶ್ಯಕಾವ್ಯ, ಹತ್ತು ವಿಧ ರೂಪಕಗಳಲ್ಲೊಂದು. ಗದ್ಯ ಪದ್ಯ ಮತ್ತು ಪ್ರಾಕೃತ ಮೊದಲಾದ ಭಾಷೆಗಳಿಂದ ಕೂಡಿದ ದೃಶ್ಯಕಾವ್ಯ. नाटयति—

नट (नृत्तौ) + णिच् "ण्वुल्" (३-१-१३३)। (1) नाटकम्, (2) प्रकरणम्, (3) भाण:, (4) प्रहसनम्, (5) डिम:, (6) व्यायोग:, (7) समवकार:, (8) वीथी, (9) अङ्क: ಮತ್ತು (10) ईहामृग: ಇವು ಹತ್ತು ರೂಪಕಗಳು. **ನಾಟಕ ಲಕ್ಷಣ:** ನಾಟಕದಲ್ಲಿ ಇತಿವೃತ್ತವು (ವರ್ಣಿಸಲ್ಪಡುವ ವೃತ್ತಾಂತವು) ಪ್ರಖ್ಯಾತ (ಪ್ರಸಿದ್ಧ) ವಾಗಿರಬೇಕು. ಮುಖಾದಿ ಪಂಚಸಂಧಿಗಳಿಂದಲೂ ವಿಲಾಸ (ಧೀರದೃಷ್ಟಿ ಧೀರವಾದ ಉದ್ಧತನಡಗೆ ಸ್ಮಿತಪೂರ್ವಕ ಭಾಷಣ ಮುಂತಾದ ನಾಯಕನ ಗುಣ) ಗಾಂಭೀರ್ಯ ಅಭ್ಯುದಯ ಮುಂತಾದ ಗುಣಗಳಿಂದಲೂ ಪರಿಶೋಭಿತವಾಗಿರಬೇಕು. ಸುಖದುಃಖಾದಿಗಳಿಂದ ಸಂಭವಿಸುವ ನಾನಾ ರಸಗಳಿಂದ ಉಜ್ವಲವಾಗಿರಬೇಕು. ಅಂಕಗಳು ಐದರಿಂದ ಒಂಬತ್ತರವರೆಗೆ ಇರಬಹುದು. ಪ್ರಖ್ಯಾತ ವಂಶದವನೂ ಧೀರೋದಾತ್ತಗುಣದಿಂದ ಶೋಭಿತನೂ ಆಗಿರುವ ದಿವ್ಯ ಅಥವಾ ದಿವ್ಯಾದಿವ್ಯರಾಜನು ನಾಯಕ. ಶೃಂಗಾರ ಅಥವಾ ವೀರರಸವು ಪ್ರಧಾನವಾಗಿಯೂ ಇತರ ರಸಗಳು ಅಂಗರಸಗಳಾಗಿಯೂ ಇರಬೇಕು. ನಿರ್ವಹಣಸಂಧಿಯಲ್ಲಿ ಅದ್ಭುತರಸವು ಪ್ರಧಾನರಸಕ್ಕೆ ಪರಿಪೋಷಕವಾಗಿರಬೇಕು. ಸಾಂದಂ ೬। "भावशुद्धिसहितैर्मुदं जनो नाटकैरिव बभार भोजनै:" माघ० १४-५०। 2. ಒಂದು ಪರ್ವತ. "ऐशान्यां नाटके शैले शङ्करस्य महाश्रमम्। नित्यं वसति तत्रेशस्तदधीना तु पार्वती" कालिकापु०। (वि०) 3. ನರ್ತಕ, ಕುಣಿಯಿಸುವವನು. नट + णिच् "ण्वुल्" (३-१-१३३)।

**नाटकीय ನಾಟಕೀಯ** (वि०) ನಾಟಕಕ್ಕೆ ಸಂಬಂಧಿಸಿದ ನಾಟಕದಲ್ಲಿ ಬರುವ, ನಾಟಕದಲ್ಲಿ ವರ್ಣಿಸಲ್ಪಡುವ. नाटके भवम् — नाटक "छ:" (४-२-११४)। ईयादेश: (७-१-२)। "भवद्गिरामवसरप्रदानाय वचांसि न:। पूर्वरङ्ग: प्रसङ्गाय नाटकीयस्य वस्तुन:" माघ० २-८।

**नाटयितव्य ನಾಟಯಿತವ್ಯ** (वि०) ಅಭಿನಯಿಸಲ್ಪಡಬೇಕಾದ, ಅಭಿನಯದಿಂದ ಪ್ರದರ್ಶಿಸಲ್ಪಡಬೇಕಾದ. नट (नृत्तौ) + णिच् कर्म० "तव्यत्" (३-१-९६)। "तत्तस्यैव राज्ञ: सकलजनहृदयाह्लादिनो बहुमानात् अस्मासु चानुग्रहबुद्ध्या यथावत्प्रयोगेण त्वया नाटयितव्या" रत्ना० १।

**नाटाम्र ನಾಟಾಮ್ರ** (पुं०) ಕರಬೂಜ ಕಲ್ಲಂಗಡಿ ಮೊದಲಾದ ಗಿಡ, ಲತಾಪನಸ. नटानां प्रिय: नाटोऽम्रो रसोऽत्र। "लतापनसनाटाम्रौ सेदुरूर्व्वासितस्तु य:" त्रिकाण्ड०।

**नाटार ನಾಟಾರ** (पुं०) ನಟನ ಅಥವಾ ನಟಿಯ ಮಗ, नटस्य नट्या वा अपत्यम्—वा "आरक्" (४-१-१३०)।

**नाटिका ನಾಟಿಕಾ** (स्त्री०) ಅಷ್ಟಾದಶ (ಹದಿನೆಂಟು) ವಿಧ ಉಪರೂಪಕಗಳಲ್ಲೊಂದು, ಒಂದು ದೃಶ್ಯಕಾವ್ಯ. **ನಾಟಿಕಾಲಕ್ಷಣ:** ನಾಟಿಕೆಯಲ್ಲಿ ಕಥಾವಸ್ತುವು ಕವಿಕಲ್ಪಿತ. ಅಂಕಗಳು ನಾಲ್ಕು. ಲೋಕಪ್ರಸಿದ್ಧನೂ ಧೀರಲಲಿತನೂ ಆದ ರಾಜನು ನಾಯಕ. ಪುರುಷರಿಗಿಂತ ಸ್ತ್ರೀಪಾತ್ರಗಳು ಹೆಚ್ಚು. ಸಾಮಾನ್ಯವಾಗಿ ಯಾವಾಗಲೂ ಅಂತಃಪುರದಲ್ಲೇ ಇದ್ದು ಸಂಗೀತದಲ್ಲಿ ಆಸಕ್ತಳಾದ ಅಥವಾ ನವಾನುರಾಗದಿಂದ ಕೂಡಿದ ರಾಜಕುಲದ ಕನ್ಯೆಯು ನಾಯಿಕೆ. ನಾಯಕನ ಪ್ರತಿಯೊಂದು ಕಾರ್ಯವೂ ರಾಣಿಯ ಅಧೀನವಾಗಿದ್ದು ಇವನು ಅವಳಿಗೆ ಹೆದರಿ ನಡೆಯುವವನು. ರಾಜಮನೆತನದಲ್ಲಿ ಹುಟ್ಟಿದ ಪ್ರಗಲ್ಭಳಾದ ಜ್ಯೇಷ್ಠ ನಾಯಿಕೆಯು ರಾಣಿಯಾಗಿರುವಳು. ನಾಯಿಕಾ ನಾಯಕರ ಪರಸ್ಪರ ಸಮಾಗಮವು ಇವಳ ಅಧೀನವಾಗಿರುವುದು. ಇದರಲ್ಲಿ ಶೃಂಗಾರರಸವು ಪ್ರಧಾನ. ಕೈಶಿಕೀ ವೃತ್ತಿ. ಪಂಚಸಂಧಿಗಳಿದ್ದರೂ ವಿಮರ್ಶಸಂಧಿಯು ಸೂಕ್ಷ್ಮವಾಗಿರುವುದು. "नाटिका क्लृप्तवृत्ता स्यात् स्त्रीप्राया चतुरङ्किका। प्रख्यातो धीरललितस्तत्र स्यान्नायको नृप:। स्यादन्त:-पुरसम्बद्धा संगीतव्यापृताऽथवा। नवानुरागा कन्यात्र नायिका नृपवंशजा। संप्रवर्तेत नेतास्यां देव्यास्त्रासेन शङ्कित:। देवी भवेत्पुनर्ज्येष्ठा प्रगल्भा नृपवंशजा। पदे पदे मानवती तद्वश: संगमो द्वयो:। वृत्ति: स्यात्कैशिकी स्वल्पविमर्शा: सन्धय: पुन:" सा० द० ६।

**नाटित ನಾಟಿತ** (न०) 1. ಅಭಿನಯ. नट (नृत्तौ) + णिच् भावे "क्त:" (३-३-११४)। (वि०) 2. ಅಭಿನಯಿಸಲ್ಪಟ್ಟ. नट + णिच् कर्म० "क्त:" (३-२-१०२)।

**नाटेय ನಾಟೇಯ** (पुं०) ನಟಿಯ ಮಗ. नट्या अपत्यम् "ढक्" (४-१-१२०)। स्त्रियां "ङीप्" (४-१-१५)। -यी – ಯೀ.

**नाटेर ನಾಟೇರ** (पुं०) ನಟಿಯ ಮಗ. नट्या अपत्यम् "ढ्रक्" (४-१-१३१)।

**नाट्य ನಾಟ್ಯ** (न०) 1. ಭರತನಾಟ್ಯ, ಶಾಸ್ತ್ರರೀತಿಯಿಂದ ಕುಣಿಯುವುದು, नटस्य कर्म "ष्यञ्" (५-१-१२४)। नटस्य धर्म: "ञ्य:" (४-३-१२९) वा। 2. ನರ್ತನ ಮಾಡುವುದು (ಕುಣಿಯುವುದು), ಹಾಡುವುದು ಮತ್ತು ವಾದ್ಯ ಬಾರಿಸುವುದು ಈ ಮೂರರ ಮೇಳನ. "तौर्यत्रिकं नृत्तगीतं वाद्यं नाट्यमिदं त्रयम्" अम०। "नाट्यं तौर्यत्रिके लास्ये" मेदि०।

**ನಾಟ್ಯದ ಉತ್ಪತ್ತಿ** : ದೇವೇಂದ್ರನ ಪ್ರಾರ್ಥನೆಯಂತೆ ಚತುರ್ಮುಖಬ್ರಹ್ಮನು ನಾಲ್ಕು ವೇದಗಳಿಂದ ಉದ್ಧರಿಸಿ ಐದನೆಯ ವೇದವಾದ ಗಾಂಧರ್ವವೇದವನ್ನು ನಿರ್ಮಿಸಿದನು. ಈ ಭರತನಾಟ್ಯಶಾಸ್ತ್ರವು ಸಕಲಶಾಸ್ತ್ರಾರ್ಥಗಳಿಂದ ಕೂಡಿದುದು. ಮತ್ತು ಋಗ್ವೇದದಿಂದ ನಾಟ್ಯಶಾಸ್ತ್ರವಿಷಯವನ್ನೂ ಸಾಮವೇದದಿಂದ ಗೀತವನ್ನೂ ಯಜುರ್ವೇದದಿಂದ ಅಭಿನಯವನ್ನೂ ಅಥರ್ವವೇದದಿಂದ ರಸಗಳನ್ನೂ ತೆಗೆದುಕೊಂಡು ರಚಿಸಿದುದರಿಂದ ಚತುರ್ವೇದ ಸಾರಭೂತವಾದುದು. "देवदानवगन्धर्वैरक्षोयक्षमहोरगैः। जम्बूद्वीपे समाक्रान्ते लोकपालप्रतिष्ठिते। महेन्द्रप्रमुखैर्देवैरुक्तः किल पितामहः। क्रीडनीयकमिच्छामो दृश्यं श्रव्यं च यद्भवेत्। तस्मात्सृजापरं वेदं पञ्चमं सार्ववर्णिकम्। एवमस्त्विति तानुक्त्वा देवराजं विसृज्य च। सस्मार चतुरो वेदान् योगमास्थाय तत्त्ववित्। सर्वशास्त्रार्थसम्पन्नं सर्वशिल्पप्रदर्शकम्। नाट्यसंज्ञमिमं वेदं सेतिहासं करोम्यहम्। एवं संकल्प्य भगवान् सर्ववेदाननुस्मरन्। नाट्यवेदं ततश्चक्रे चतुर्वेदाङ्गसम्भवम्। जग्राह पाठ्यमृग्वेदात् सामभ्यो गीतमेव च। यजुर्वेदादभिनयान् रसानाथर्वणादपि। वेदोपवेदसंबद्धो नाट्यवेदो महात्मना। एवं भगवता सृष्टो ब्रह्मणा ललितात्मना। उत्पाद्य नाट्यवेदं तु ब्रह्मोवाच सुरेश्वरम्"।

ಈ ನಾಟ್ಯವು ಲಾಸ್ಯ ಮತ್ತು ತಾಂಡವಗಳೆಂದು ಎರಡು ವಿಧ. ಹೆಂಗಸರ ನೃತ್ಯವು ಲಾಸ್ಯವೆನಿಸುವುದು. ಪುರುಷರ ನೃತ್ಯಕ್ಕೆ ತಾಂಡವವೆಂದು ಹೆಸರು. ಈ ಎರಡು ವಿಧ ನೃತ್ಯಗಳೂ ಅರ್ಧನಾರೀಶ್ವರರಾದ ಪಾರ್ವತೀ ಪರಮೇಶ್ವರರ ದೇಹದಲ್ಲಿ ಲಾಸ್ಯತಾಂಡವರೂಪದಿಂದ ಬೇರೆ ಬೇರೆಯಾಗಿ ಸೇರಿಕೊಂಡಿರುವುವು. ನಾನಾ ರಸಸಂಪನ್ನವಾದ ಈ ನಾಟ್ಯವು ಭಿನ್ನ ಭಿನ್ನ ರಸಾಸ್ವಾದ ಮಾಡುವ ಜನರಿಗೆ ದೊಡ್ಡ ರಸದೌತಣವನ್ನುಂಟುಮಾಡುವುದು. "देवानामिदमामनन्ति मुनयः कान्तं क्रतुं चाक्षुषं रुद्रेणेदमुमाकृतव्यतिकरे स्वाङ्गे विभक्तं द्विधा। त्रैगुण्योद्भवमत्र लोकचरितं नानारसं दृश्यते नाट्यं भिन्नरुचेर्जनस्य बहुधाप्येकं समाराधकम्" माल० १।

ನಾಟ್ಯಶಾಸ್ತ್ರವು ಬೋಧಪ್ರದವಾದುದು. ಶಿಲ್ಪ ವಿದ್ಯೆ ಕಲೆ ಯೋಗ ಇತ್ಯಾದಿಗಳಿಗೆಲ್ಲಾ ಆಕರವಾದುದು, ಇದರಲ್ಲಿಲ್ಲದ ಶಿಲ್ಪ ವಿದ್ಯೆ ಕಲೆ ಯೋಗ ಮುಂತಾದುವು ಮತ್ತಾವ ಶಾಸ್ತ್ರಗಳಲ್ಲೂ ಇಲ್ಲ. "न तज्ज्ञानं न तच्छिल्पं नासौ विद्या न सा कला। नासौ योगो न तत्कर्म नाट्येऽस्मिन् यन्न दृश्यते"।

**ನಾಟ್ಯಾರಂಭಕ್ಕೆ ಶುಭನಕ್ಷತ್ರಗಳು :** ಪುಷ್ಯ ಹಸ್ತ ಚಿತ್ತಾ ಸ್ವಾತಿ ಅನೂರಾಧಾ ಜ್ಯೇಷ್ಠಾ ಧನಿಷ್ಠಾ ಶತಭಿಷೆ ಮತ್ತು ರೇವತಿ ಈ ನಕ್ಷತ್ರಗಳು ನಾಟ್ಯಾರಂಭಕ್ಕೆ ಪ್ರಶಸ್ತವಾದವು.

**नाट्यधर्मिका ನಾಟ್ಯಧರ್ಮಿಕಾ** (ಸ್ತ್ರೀ೦) ಪ್ರೇಕ್ಷಕರ ಸಮಾರಾಧನೆಗಾಗಿ ಶಾಸ್ತ್ರರೀತಿಯಲ್ಲಿ ಪ್ರದರ್ಶಿಸಲ್ಪಡುವ ನಾಟ್ಯ. नाट्यधर्मोऽस्त्यस्याम् क्रियायाम् "ठन्" (೫-೨-೧೧೫)। "गीतवाद्यनृत्यत्रयं नाट्यं तौर्यत्रिकं च तत्। संगीतं प्रेक्षणार्थेऽस्मिन् शास्त्रोक्ते नाट्यधर्मिका"।

**नाट्यपरिभाषा ನಾಟ್ಯಪರಿಭಾಷಾ** (ಸ್ತ್ರೀ೦) ನಾಟ್ಯದಲ್ಲಿ ರಾಜ ರಾಣಿ ಅಮಾತ್ಯ ಸೇವಕ ಮುಂತಾದವರು ಪರಸ್ಪರ ಸಂಬೋಧಿಸಿ ಕರೆಯುವ ಪಾರಿಭಾಷಿಕ ಪದ. ರಾಜನನ್ನು ಭೃತ್ಯ(ಸೇವಕ)ರು "ಸ್ವಾಮಿನ್" "ದೇವ" ಎಂದೂ ರಾಜರ್ಷಿಗಳು ಮತ್ತು ವಿದೂಷಕನು "ವಯಸ್ಯ" ಎಂದೂ ಋಷಿಗಳು "ರಾಜನ್" ಎಂದೂ ಮತ್ತು ಅಪತ್ಯ ಪ್ರತ್ಯಯಾಂತ "ದಾಶರಥೇ", "ಪಾಂಡವ", "ಪೌರವ" ಮುಂತಾದ ಪದಗಳಿಂದಲೂ ವಿಪ್ರನು ವಿಪ್ರನನ್ನು ಅವನ ಹೆಸರಿನಿಂದಲೂ ಅಥವಾ "ಆರ್ಯ" ಪದದಿಂದಲೂ ಸಂಬೋಧಿಸಬೇಕು. ರಾಜನು ವಿದೂಷಕನನ್ನು ಅವನ ಹೆಸರಿನಿಂದಲೂ ಅಥವಾ "ವಯಸ್ಯ" ಎಂದೂ ನಟಿಸೂತ್ರಧಾರರು ಪರಸ್ಪರ "ಆರ್ಯ" "ಆರ್ಯೆ" ಎಂದೂ ಪಾರಿಪಾರ್ಶ್ವಕನು ಸೂತ್ರಧಾರನನ್ನು "ಭಾವ" ಎಂದೂ ಸೂತ್ರಧಾರನು ಅವನನ್ನು "ಮಾರಿಷ" ಎಂದೂ ಕರೆಯಬೇಕು. ದೇವತೆಗಳು ಋಷಿಗಳು ಮತ್ತು ಯತಿಗಳನ್ನು ಎಲ್ಲರೂ "ಭಗವನ್" ಎಂದು ಸಂಬೋಧಿಸಬೇಕು. ವಿದೂಷಕನು ರಾಣಿಯನ್ನೂ ಚೇಟಿಯನ್ನೂ "ಭವತಿ" ಎಂದು ಸಂಬೋಧಿಸಬೇಕು. ಸಾರಥಿಯು ರಾಜನನ್ನು "ಆಯುಷ್ಮನ್" ಎನ್ನಬೇಕು. ಮಗನು "ವತ್ಸ" "ಪುತ್ರ" "ತಾತ" ಮುಂತಾದ ಪದಗಳಿಂದ ಸಂಬೋಧಿಸಲ್ಪಡಬೇಕು. ಇತ್ಯಾದಿ. ಸಾ೦ ದ೦ ೬।

**नाट्यप्रिय ನಾಟ್ಯಪ್ರಿಯ** (ಪು೦) ಮಹಾದೇವ, ನಟರಾಜ, ಪರಶಿವ. नाट्यं प्रियमस्य।

**नाट्यभाषा ನಾಟ್ಯಭಾಷಾ** (ಸ್ತ್ರೀ೦) ನಾಟ್ಯದಲ್ಲಿ ಪಾತ್ರಗಳು ಉಪಯೋಗಿಸಬೇಕಾದ ಭಾಷೆಗಳು. **ಭಾಷಾವಿಭಾಗ :** ಉತ್ತಮ ಮತ್ತು ಮಧ್ಯಮ ಪಾತ್ರಗಳು ಮತ್ತು ವಿದ್ವಾಂಸರಿಗೆ ಸಂಸ್ಕೃತ ಭಾಷೆ (ರಾಜ ಅಮಾತ್ಯ ರಾಜಪುರೋಹಿತ ರಾಜಕುಮಾರ ಇತ್ಯಾದಿ), ಉತ್ತಮ

ಸ್ತ್ರೀ ಪಾತ್ರಗಳಿಗೆ ಶೌರಸೇನೀ ಭಾಷೆ. ಇದೇ ಸ್ತ್ರೀಪಾತ್ರಗಳಿಗೆ ಶ್ಲೋಕಗಳಲ್ಲಿ ಮಹಾರಾಷ್ಟ್ರಭಾಷೆ. ರಾಜನ ಅಂತಃಪುರದಲ್ಲಿರುವ ವಾಮನ ಷಂಡ ಕಂಚುಕಿಗಳಿಗೆ ಮಾಗಧೀ ಭಾಷೆ. ಚೇಟ (ಭೃತ್ಯ) ರಿಗೆ ಅರ್ಧಮಾಗಧಿ. ವಿದೂಷಕನಿಗೆ ಗೌಡೀ ಭಾಷೆ. ಧೂರ್ತ (ಜೂಜುಗಾರ ಮುಂತಾದವ) ರಿಗೆ ಅವಂತೀಭಾಷೆ. ಯೋಧರು ಮತ್ತು ಪಟ್ಟಣಿಗರಿಗೆ ವೈದರ್ಭೀಭಾಷೆ. ಶಬರರಿಗೆ ಶಾಬರೀ ಭಾಷೆ. ಇತ್ಯಾದಿ. "पुरुषाणामनीचानां संस्कृतं स्यात्कृतात्मनाम्। शौरसेनी प्रयोक्तव्या तादृशीनां च योषिताम्। आसामेव तु गाथासु महाराष्ट्रीं प्रयोजयेत्। अत्रोक्ता मागधी भाषा राजान्तःपुरचारिणाम्। चेटानां राजपुत्राणां श्रेष्ठानां चार्धमागधी। प्राच्या विदूषकादीनां धूर्तानां स्यादवन्तिजा। योधनागरिकादीनां दाक्षिणात्या हि दीव्यताम्। शबराणां शकादीनां शाबरीं संप्रयोजयेत्" सा० द० ६।

**नाटचरासक ನಾಟ್ಯರಾಸಕ** (न०) ಹದಿನೆಂಟು ವಿಧ ಉಪರೂಪಕಗಳಲ್ಲೊಂದು. **ಇದರ ಲಕ್ಷಣ:** ನಾಟ್ಯ ರಾಸಕವು ಒಂದು ಏಕಾಂಕಉಪರೂಪಕ. ಅನೇಕ ವಿಧ ತಾಳ ಮತ್ತು ಲಯಗಳಿಂದ ಕೂಡಿರುವುದು. ಇದರಲ್ಲಿ ನಾಯಕನು ಉದಾತ್ತಗುಣವುಳ್ಳವನು ಮತ್ತು ಪೀಠ ಮರ್ದನು ಉಪನಾಯಕನಾಗಿರುವನು. ಶೃಂಗಾರರಸ ಮಿಶ್ರವಾದ ಹಾಸ್ಯರಸವು ಪ್ರಧಾನವಾದುದು. ವಾಸಕ ಸಜ್ಜಿಕೆಯು ನಾಯಿಕೆ. ಮುಖ ಮತ್ತು ನಿರ್ವಹಣ ಎರಡು ಮಾತ್ರ ಸಂಧಿಗಳು. ಇತ್ಯಾದಿ. "नाटचरासकमेकाङ्कं बहुताललयस्थिति। उदात्तनायकं तद्वत् पीठमर्दोपनायकम्। हास्योऽङ्ग्यत्र सशृङ्गारो नारी वासकसज्जिका। मुखनिर्वहणे सन्धी लास्याङ्गानि दशापि च" ಇತ್ಯಾದಿ. सा० द० ६।

**नाटचशाला ನಾಟ್ಯಶಾಲಾ** (स्त्री०) ನಾಟಕಮಂದಿರ, ನಾಟ್ಯವನ್ನು ಪ್ರದರ್ಶಿಸುವ ಗೃಹ, ಕಲಾಹವ್ಯಾಸಿಗಳ ರಂಗ ಮಂದಿರ. नाटचार्थं शाला।

**नाटचाङ्ग ನಾಟ್ಯಾಂಗ** (न०) ಲಾಸ್ಯದ ಹತ್ತು ವಿಧ ಅಂಗಗಳು. (1) गेयपदम्, (2) स्थितिपाठचम्, (3) आसीनम्, (4) पुष्पगण्डिका, (5) प्रच्छेदकः, (6) त्रिगूढकम्, (7) सैन्धवम्, (8) द्विगूढकम्, (9) उत्तमोत्तमकम् ಮತ್ತು (10) उक्तिप्रत्युक्तिकम् ಇವು ಹತ್ತು ವಿಧ ಲಾಸ್ಯಾಂಗಗಳು.

(1) **गेयपदम्** — ಆಸನದಲ್ಲಿ ಕುಳಿತು ಮುಂಭಾಗದಲ್ಲಿರುವ ವೀಣೆಯನ್ನು ನುಡಿಸುತ್ತ ಹಾಡುವುದು "ಗೇಯಪದ". "तन्त्रीभाण्डं पुरस्कृत्योपविष्टस्यासने पुरः। शुष्कं गानं गेयपदम्" सा० द० ६-२१४।

(2) **स्थितिपाठचम्** — ಮನ್ಮಥಬಾಧೆಯಿಂದ ಪೀಡಿತಳಾಗಿ ನಿಂತು ಪ್ರಾಕೃತವನ್ನು ಓದುವುದು "ಸ್ಥಿತಿಪಾಠ್ಯ". "स्थितिपाठचं तदुच्यते। मदनोत्तापिता यत्र पठति प्राकृतं स्थिता" सा० द० ६-२१५।

(3) **आसीनम्**—ವೀಣಾ ವೇಣು ಮೃದಂಗ ಮೊದಲಾದ ಯಾವ ವಿಧವಾದ ವಾದ್ಯವೂ ಇಲ್ಲದೆ ಯಾವ ಅಲಂಕಾರವನ್ನೂ ಮಾಡಿಕೊಳ್ಳದೆ ದುಃಖ ಮತ್ತು ಚಿಂತಾಕ್ರಾಂತಳಾಗಿ ಕೂಡುವುದು "ಆಸೀನ". "निखिलातोद्यरहितं शोकचिन्ताकुलाबला। अप्रसाधितगात्रं यदासीनासीनमेव तत्" सा० द० ६-२१६।

(4) **पुष्पगण्डिका** — ವೀಣಾ ವೇಣು ಮೃದಂಗ ವಾದ್ಯಗಳೊಡನೆ ಹೆಂಗಸರು ಪುರುಷನಂತೆಯೂ ಪುರುಷರು ಹೆಂಗಸಿನಂತೆಯೂ ಅಭಿನಯ ಮಾಡುತ್ತಾ ಹಾಡುವುದು "ಪುಷ್ಪಗಂಡಿಕೆ". "आतोद्यमिश्रितं गेयं छन्दांसि विविधानि च। स्त्रीपुंसयोर्विपर्यासचेष्टितं पुष्पगण्डिका" सा० द० ६-२१७।

(5) **प्रच्छेदकः**—ಪತಿಯು ಪರಸ್ತ್ರೀಯಲ್ಲಿ ಆಸಕ್ತನಾಗಿರುವುದನ್ನು ತಿಳಿದು ದುಃಖಗೊಂಡು ನಾಯಿಕೆಯು ವೀಣೆಯೊಡನೆ ತಾನೂ ಹಾಡುವುದು "ಪ್ರಚ್ಛೇದಕ". "अन्यासक्तं पतिं मत्वा प्रेमविच्छेदमन्युना। वीणापुरःसरं गानं स्त्रियाः प्रच्छेदको मतः" सा० द० ६-२१८।

(6) **त्रिगूढकम्** — ಪುರುಷರು ಸ್ತ್ರೀವೇಷವನ್ನು ಧರಿಸಿ ನಾಟ್ಯವಾಡುವುದು "ತ್ರಿಗೂಢಕ". "स्त्रीवेषधारिणां पुंसां नाटचं श्लक्ष्णं त्रिगूढकम्" सा० द० ६-२१९।

(7) **सैन्धवम्** — ಸಂಕೇತಸ್ಥಾನವನ್ನು ಗೊತ್ತುಮಾಡಿ ಅಲ್ಲಿಗೆ ಬರದೆ ತಪ್ಪಿಸಿಕೊಂಡ ನಾಯಕನು ವೀಣಾದಿ ವಾದ್ಯಗಳೊಡನೆ ಪ್ರಾಕೃತದಲ್ಲಿ ಮಾತನಾಡುವುದು "ಸೈಂಧವ". "कश्चन भ्रष्टसंकेतः सुव्यक्तकरणान्वितः। प्राकृतं वचनं वक्ति यत्र तत्सैन्धवं मतम्" सा० द० ६-२२०।

(8) **द्विगूढम्** — ಉಕ್ತಿಪ್ರತ್ಯುಕ್ತಿಗಳಿಂದ ಕೂಡಿ ರಸ ಭಾವ ಪರಿಪೂರ್ಣವಾದ ಸಪ್ತಸ್ವರಸಹಿತವಾದ ಸಂಗೀತವು "ದ್ವಿಗೂಢ". "चतुरस्रपदं गीतं मुखप्रतिमुखान्वितम्। द्विगूढं रसभावाढचम्" सा० द० ६-२२१।

(9) **उत्तमोत्तमकम्** — ಕೋಪ ಮತ್ತು ಪ್ರಸನ್ನತೆಗಳಿಂದ ಉಂಟಾದ ಮತ್ತು ತಿರಸ್ಕಾರದಿಂದ ಕೂಡಿದ ಹಾಗೂ ರಸಭಾವಗರ್ಭಿತವಾದ ಮತ್ತು ಹಾವಲೀಲೆಗಳಿಂದಲೂ ಚಿತ್ರಶ್ಲೋಕ ಬಂಧಗಳಿಂದಲೂ ಮನೋಹರ

ವಾದ ಗಾನವು "ಉತ್ತಮೋತ್ತಮಕ". "उत्तमोत्तमकं पुन:। कोपप्रसादजमधिक्षेपयुक्तं रसोत्तरम्। हावहेलान्वितं चित्रश्लोकबन्धमनोहरम्" सा० द० ६-२२२।

(10) **उक्तिप्रत्युक्तम्** — ಉಕ್ತಿಪ್ರತ್ಯುಕ್ತಿಗಳಿಂದಲೂ ನಿಂದೆಯೊಡಗೂಡಿದ ಅಪ್ರಿಯ ವಚನಗಳಿಂದಲೂ ವಿಲಾಸದಿಂದಲೂ ಕೂಡಿದ ಗೀತಾರ್ಥವು "ಉಕ್ತಿಪ್ರತ್ಯುಕ್ತ". "उक्तिप्रत्युक्तिसंयुक्तं सोपालम्भमलीकवत्। विलासान्वितगीतार्थमुक्तप्रत्युक्तमुच्यते" सा० द० ६-२२३।

**नाट्यालङ्कार ನಾಟ್ಯಾಲಂಕಾರ** (ಪುಂ) ನಾಟ್ಯದ ಅಲಂಕಾರ, ನಾಟ್ಯದ ಸೊಗಸಿಗೆ ಕಾರಣವಾದ ಸಂದರ್ಭ. ನಾಟ್ಯಾಲಂಕಾರವು ಮೂವತ್ತಮೂರು (33) ವಿಧ. (1) आशी:, (2) आक्रन्द:, (3) कपटम्, (4) अक्षमा, (5) गर्व:, (6) उद्यम:, (7) आश्रय:, (8) उत्प्रासनम्, (9) स्पृहा, (10) क्षोभ:, (11) पश्चात्ताप:, (12) उपपत्ति:, (13) आशंसा, (14) अध्यवसाय:, (15) विसर्प:, (16) उल्लेख:, (17) उत्तेजनम्, (18) परीवाद:, (19) नीति:, (20) अर्थविशेषणम्, (21) प्रोत्साहनम्, (22) साहाय्यम्, (23) अभिमान:, (24) अनुवर्तनम्, (25) उत्कीर्तनम्, (26) याच्ञा, (27) परिहार:, (28) निवेदनम्, (29) प्रवर्तनम्, (30) आख्यानम्, (31) युक्ति:, (32) प्रहर्ष: ಮತ್ತು (33) उपदेशनम्। सा० द० ६।

**आशी:** — ಬಂಧುಜನರ ಶುಭಾಶಂಸನ, ಒಳ್ಳೆಯದಾಗಬೇಕೆಂಬ ಬಂಧುಗಳ ಕೋರಿಕೆ. "आशीरिष्टजनाशंसा" सा० द० ६-१९९। "ययातेरिव शर्मिष्ठा भर्तुर्बहुमता भव। सुतं त्वमपि सम्राजं सेव पूरुमवाप्नुहि" शाकु० ४-६।

**आक्रन्द:** — ದುಃಖದಿಂದ ಅಳುವುದು. "आक्रन्द: प्रलपितं शुचा" सा० द० ६-१९९। "हा देवि कुन्तिभोजराजभवनपताके" वेणी० ६।

**कपटम्** — ಮಾಯೆಯಿಂದ ರೂಪವನ್ನು ಬದಲಾಯಿಸಿಕೊಂಡು ಮೋಸಗೊಳಿಸುವುದು. "कपटं मायया यत्र रूपमन्यद्विभाव्यते" सा० द० ६-१९९। "मृगरूपं परित्यज्य विधाय कपटं वपु:। नीयते रक्षसा तेन"।

**अक्षमा** — ಸ್ವಲ್ಪವೂ ಅವಮಾನವನ್ನು ಸಹಿಸದಿರುವಿಕೆ. "अक्षमा सा परिभव: स्वल्पोऽपि न विषह्यते" सा० द० ६-२००। "भो: सत्यवादिन् किं पुनरिमामतिसन्धाय लभ्यते। शार्ङ्गरव:—विनिपात:" शाकु० ५।

**गर्व:** — ಅಹಂಕಾರದ ಮಾತು. "गर्वोऽवलेपजं वाक्यम्" सा० द० ६-२००। "ममापि नाम सत्त्वैरभिभूयन्ते गृहा:" शाकु० ६।

**उद्यम:** — ಕಾರ್ಯದ ಪ್ರಾರಂಭ. "कार्यस्यारम्भ उद्यम:" सा० द० ६-२००। "पश्यामि शोकविवशोऽन्तकमेव तावत्" ಇಲ್ಲಿ ರಾವಣನಲ್ಲಿ ಯುದ್ಧದ ಮನೋಭಾವವು ಸೂಚಿಸಲ್ಪಟ್ಟಿದೆ.

**आश्रय:** — ತನ್ನ ಶ್ರೇಯಸ್ಸಿಗಾಗಿ ಸಜ್ಜನರನ್ನು ಸೇರುವುದು. "ग्रहणं गुणवत्कार्यहेतोराश्रय उच्यते" सा० द० ६-२०१। "विभीषण: — राममेवाश्रयामि"।

**उत्प्रासनम्** — ತಾನೇ ಉತ್ತಮನೆಂದು ತಿಳಿದಿರುವ ಅನುತ್ತಮನ ವಿಷಯದಲ್ಲಿ ಮಾಡುವ ಅಪಹಾಸ್ಯ. "उत्प्रासनं तूपहासो योऽसाधौ साधुमानिनि" सा० द० ६-२०१। "यदा तु पूर्ववृत्तमन्यसङ्गाद्विस्मृतो भवान् तदा कथमधर्मभीरु:" शाकु० ५।

**स्पृहा** — ಸುಂದರವಾದ ವಸ್ತುವನ್ನು ಹೊಂದುವ ಆಸೆ. "आकाङ्क्षा रमणीयत्वाद्वस्तुनो या स्पृहा तु सा" सा० द० ६-२०२। "चारुणा स्फुरितेनायमपरिक्षतकोमल:। पिपासतो ममानुज्ञां ददातीव प्रियाधर:"।

**क्षोभ:** — ತಿರಸ್ಕಾರ ಮತ್ತು ದೂಷಣೆಗಳಿಂದ ಆಗುವ ಮನೋವ್ಯಥೆ. "अधिक्षेपवच:कारी क्षोभ: प्रोक्त: स एव तु" सा० द० ६-२०२। "त्वया तपस्विचण्डालप्रच्छन्नवधवर्तिना। न केवलं हतो वाली स्वात्मा च परलोकत:"।

**पश्चात्ताप:** — ಅಜ್ಞಾನದಿಂದ ತಿರಸ್ಕರಿಸಲ್ಪಟ್ಟ ವಿಷಯದಲ್ಲಿ ಅನಂತರ ಪರಿತಪಿಸುವುದು. "मोहावधीरितार्थस्य पश्चात्ताप: स एव तु" सा० द० ६-२०३। "किं देव्या न विचुम्बितोऽस्मि बहुशो मिथ्याभिशप्तस्तदा"।

**उपपत्ति:** — ಕಾರ್ಯಸಿದ್ಧಿಗಾಗಿ ಅದಕ್ಕೆ ಅನುಕೂಲವಾದ ಉಪನ್ಯಾಸ. "उपपत्तिर्मता हेतोरुपन्यासोऽर्थसिद्धये" सा० द० ६-२०३। "म्रियते म्रियमाणे या त्वयि जीवति जीवति। तां यदीच्छसि जीवन्तीं रक्षात्मानं ममासुभि:"।

**आशंसा** — ತನ್ನ ಇಷ್ಟಾರ್ಥವು ಕೈಗೂಡುವ ಅಪೇಕ್ಷೆ. "आशंसनं स्यादाशंसा" सा० द० ६-२०४। "तत्पश्येय-मनङ्गमङ्गलगृहं भूयोऽपि तस्या मुखम्" मालती० ५-९।

**अध्यवसाय:** — ಉತ್ಸಾಹದಿಂದ ಮಾಡುವ ಪ್ರತಿಜ್ಞೆ, ದೃಢಸಂಕಲ್ಪ. "प्रतिज्ञाध्यवसायक:" सा० द० ६-२०४। "अस्य वक्ष: क्षणेनैव निर्मथ्य गदयाऽनया। लीलयोन्मूलयाम्येष भुवनद्वयमद्य व:"।

**विसर्प:** — ಅನಿಷ್ಟಫಲವನ್ನು ಕೊಡುವ ಕಾರ್ಯ. "विसर्पो यत्समारब्धं कर्मानिष्टफलप्रदम्" सा० द० ६-२०४।

"एकस्य तावत्पाकोऽयं दारुणो भुवि वर्तते। केशग्रहे द्वितीयेऽस्मिन् नूनं निःशेषिताः प्रजाः" वेणी० ३-१४।

**उल्लेखः** — ಕಾರ್ಯವನ್ನು ನಿರ್ದೇಶಮಾಡಿ ಹೇಳು ವುದು. "कार्यदर्शनमुल्लेखः" सा० द० ६-२०५। "राजन् समिदाहरणाय प्रस्थिता वयम्। एष कुलपतेः कण्वस्याश्रमो दृश्यते। न चेदन्यकार्यातिपातः प्रविश्य प्रतिगृह्यतामातिथेयः सत्कारः" शाकु० १।

**उत्तेजनम्** — ತನ್ನ ಕಾರ್ಯಸಿದ್ಧಿಗಾಗಿ ಮತ್ತೊಬ್ಬನನ್ನು ಹುರಿದುಂಬಿಸಲು ಆಡುವ ಕಠಿನವಾದ ಮಾತು. "उत्तेजनमितीष्यते। स्वकार्यसिद्धयेऽन्यस्य प्रेरणाय कठोरवाक्" सा० द० ६-२०५। "इन्द्रजिच्चण्डवीर्योऽसि नाम्नैव बलवानसि। धिक् धिक् प्रच्छन्नरूपेण युध्यसेऽस्मद्भयाकुलः"।

**परीवादः** — ಬೆದರಿಸಿ ಮಾತಾಡುವುದು. "भर्त्सना तु परीवादः" सा० द० ६-२०६। "धिक् धिक् सूत किं कृतवानसि। वत्सस्य मे प्रकृतिदुर्ललितस्य पापो पापं व्यवस्यति समक्षमुदायुधोऽसौ" वेणी० ४-५।

**नीतिः** — ಶಾಸ್ತ್ರದಂತೆ ನಡೆಯುವುದು. "नीतिः शास्त्रेण वर्तनम्" सा० द० ६-२०६। "विनीतवेषेण प्रवेष्टव्यानि तपोवनानि नाम। इदं तावद्गृह्यताम्" शाकु० १।

**अर्थविशेषणम्** — ಒಬ್ಬನು ಪ್ರತಿಕೂಲವಾಗಿ ಹೇಳಿದ ಮಾತನ್ನು ಖಂಡಿಸಿ ತಾನು ಮೊದಲು ಹೇಳಿದ ಮಾತನ್ನೇ ಅನೇಕ ಸಲ ಹೇಳಿ ಸ್ಥಿರಪಡಿಸುವುದು. "उक्तस्यार्थस्य यत्तु स्यादुत्कीर्तनमनेकधा। उपालम्भविशेषेण तत्स्यादर्थविशेषणम्" सा० द० ६-२०७। "आः कथमिदं नाम। ननु भवानेव नितरां लोकवृत्तान्तनिष्णातः। सतीमपि ज्ञातिकुलैकसंश्रयां जनोऽन्यथा भर्तृमतीं विशङ्कते। अतः समीपे परिणेतुरिष्यते प्रियाप्रिया वा प्रमदा स्वबन्धुभिः" शाकु० ५-१७।

**प्रोत्साहनम्** — ಪ್ರೋತ್ಸಾಹದ ಮಾತು ಹೇಳಿ ಕಾರ್ಯವನ್ನು ಮಾಡಿಸುವುದು. "प्रोत्साहनं स्यादुत्साहगिरा कस्यापि योजनम्" सा० द० ६-२०७। "कालरात्रिकरालेयं स्त्रीति किं विचिकित्स्यसि। तज्जगत्त्रितयं त्रातुं तात ताडय ताटकाम्" बालरा०।

**साहाय्यम्** — ಇತರರ ಕಷ್ಟಕಾಲದಲ್ಲಿ ಅವರಿಗೆ ಅನುಕೂಲವಾಗಿ ವರ್ತಿಸುವುದು. "साहाय्यं संकटे यत् स्यात्सानुकूल्यं परस्य च" सा० द० ६-२०८। "अश्वत्थामा — त्वमपि तावद्राज्ञः पार्श्ववर्ती भव। कृपः — गच्छाम्यहमत्र प्रतिविधातुम्" वेणी० ३।

**अभिमानः** — ಗರ್ವ, ಅಹಂಕಾರ. "अभिमानः स एव स्यात्" सा० द० ६-२०८। "दुर्योधनः — मातः किमप्यसदृशं कृपणं वचस्ते सुक्षत्रिया क्व भवती क्व च दीनतैषा" वेणी० ५-३।

**अनुवर्तनम्** — ವಿನಯದಿಂದ ಅನುಸರಿಸಿ ನಡೆದುಕೊಳ್ಳುವುದು. "प्रश्रयादनुवर्तनम्" सा० द० ६-२०८। "राजा — अपि तपो वर्धते। अनसूया — इदानीमतिथिविशेषलाभेन" शाकु० १।

**उत्कीर्तनम्** — ಹಿಂದೆ ನಡೆದ ವೃತ್ತಾಂತವನ್ನು ಹೇಳು ವುದು. "भूतकार्याख्यानमुत्कीर्तनम्" सा० द० ६-२०९। "अत्रासीत्फणिपाशबन्धनविधिः शक्त्या भवद्देवरे गाढं वक्षसि ताडिते हनुमता द्रोणाद्रिरत्राहृतः" बालरा०।

**याच्ञा** — ತಾನು ನೇರವಾಗಿ ಅಥವಾ ದೂತನ ಮೂಲಕ ಯಾಚಿಸುವುದು. "याच्ञा तु क्वापि याच्ञा या स्वयं दूतमुखेन वा" सा० द० ६-२०९। "भो लङ्केश्वर दीयतां जनकजा रामः स्वयं याचते"। "अद्यापि देहि वैदेहीं दयालुस्त्वयि राघवः। शिरोभिः कन्दुकक्रीडां किं कारयसि वानरान्।

**परिहारः** — ಅಕಾರ್ಯ ಮಾಡಿದವನ ಅಪರಾಧವನ್ನು ಮನ್ನಿಸುವುದು. "परिहार इति प्रोक्तः कृतानुचितमार्जनम्" सा० द० ६-२१०। "प्राणप्रयाणदुःखार्त उक्तवानस्म्यनक्षरम्। तत्क्षमस्व विभो किं च सुग्रीवस्ते समर्पितः"।

**निवेदनम्** — ತಿರಸ್ಕೃತವಾದ ಕರ್ತವ್ಯವನ್ನು ಹೇಳು ವುದು. "अवधीरितकर्तव्यकथनं तु निवेदनम्" सा० द० ६-२१०। "आर्य, समुद्राभ्यर्थनया गन्तुमुद्यतोऽसि। तत्किमेतत्" राघवाभ्यु०।

**प्रवर्तनम्** — ಕರ್ತವ್ಯವನ್ನು ಸರಿಯಾದ ರೀತಿಯಲ್ಲಿ ಚೆನ್ನಾಗಿ ಮಾಡುವಂತೆ ಹೇಳುವುದು. "प्रवर्तनं तु कार्यस्य यत्स्यात्साधुप्रवर्तनम्" सा० द० ६-२११। "राजा — कञ्चुकिन् देवस्य देवकीनन्दनस्य बहुमानात् वत्सस्य मे भीमसेनस्य विजयमङ्गलाय प्रवर्तन्तां तदुचिताः समारम्भाः" वेणी० ६।

**आख्यानम्** — ಪೂರ್ವವೃತ್ತಾಂತವನ್ನು ಹೇಳುವುದು. "आख्यानं पूर्ववृत्तोक्तिः" सा० द० ६-२११। "देशः सोऽयमरातिशोणितजलैः यस्मिन् ह्रदाः पूरिताः" वेणी० ३-३३।

**युक्तिः** — ಕಾರ್ಯವನ್ನು ಅವಶ್ಯವಾಗಿ ಮಾಡಬೇಕೆಂಬ ನಿರ್ಧಾರ. "युक्तिरर्थविचारणम्" सा० द० ६-२११।

"यदि समरमपास्य नास्ति मृत्योः भयमिति युक्तमितोऽन्यतः प्रयातुम्" वेणी० ३-६।

**प्रहर्षः**— ಅತಿಶಯುವಾದ ಅನಂದ. "प्रहर्षः प्रमदाधिक्यम्" सा० द० ६-२१२। "राजा—कथमिव संपूर्णमपि मे मनोरथं नाभिनन्दामि" शाकु० ७।

**उपदेशनम्** — ಉಪದೇಶದ ಮಾತು, ಅವಶ್ಯ ಕರ್ತವ್ಯದಲ್ಲಿ ತೊಡಗುವಂತೆ (ಮಾಡುವುದು) ಬೋಧಿಸುವುದು. "शिक्षा स्यादुपदेशनम्" सा० द० ६-२१२। "सखि न युक्तमाश्रमवासिनो जनस्य अकृतसत्कारमतिथिविशेषं विसृज्य स्वच्छन्दतो गमनम्" शाकु० १।

**नाटचोक्ति ನಾಟ್ಯೋಕ್ತಿ** (स्त्री०) 1. ನಾಟ್ಯದಲ್ಲಿ ಉಪಯೋಗಿಸುವ ಪಾರಿಭಾಷಿಕ ಶಬ್ದ. नाटचे नृत्तगीतादौ उक्तिः। ನಾಟಕಗಳಲ್ಲಿ ನಟನು ತಾನೊಬ್ಬನೇ ಮಾತನಾಡಿಕೊಳ್ಳುವಾಗ स्वगतम् ಎಂದೂ ಎಲ್ಲರಿಗೂ ಕೇಳಿಸುವಂತೆ ಇತರರೊಡನೆ ಮಾತನಾಡುವಾಗ प्रकाशम् ಎಂದೂ ರಹಸ್ಯವಾಗಿ ಮಾತನಾಡುವಾಗ अपवारितम् ಎಂದೂ ಪಕ್ಕದಲ್ಲಿರುವವರೊಡನೆ ಮಾತನಾಡುವಾಗ जनान्तिकम् ಎಂದೂ ಯಾವ ಪಾತ್ರವೂ ಇಲ್ಲದೆ ಯಾರೂ ಮಾತನಾಡದಿದ್ದರೂ ಮಾತು ಕೇಳಿಸಿದಂತೆ ನಟಿಸಿ ಆಕಾಶದ ಕಡೆಗೆ ಉತ್ತರ ಕೊಟ್ಟು ಮಾತನಾಡುವಾಗ आकाशभाषितम् ಎಂದೂ ಪಾರಿಭಾಷಿಕ ಶಬ್ದಗಳನ್ನು ಉಪಯೋಗಿಸಬೇಕು. "अश्राव्यं खलु यद्वस्तु तदिह स्वगतं मतम्। सर्वश्राव्यं प्रकाशं स्यात्तद्भवेदपवारितम्। रहस्यं तु यदन्यस्य परावृत्य प्रकाश्यते। त्रिपताकाकरेणान्यानपवार्यान्तिरा कथाम्। अन्योन्यामन्त्रणं यत्स्यात्तज्जनान्ते जनान्तिकम्। किं ब्रवीषीति यन्नाटचे विना पात्रं प्रयुज्यते। श्रुत्वेवानुक्तमप्यर्थं तत्स्यादाकाशभाषितम्" सा० द० ६-१३७-४०। 2. ನಾಟಕಗಳಲ್ಲಿ ನಟರು ಪರಸ್ಪರ ಸಂಬೋಧಿಸಿ ಕರೆಯುವ ಪಾರಿಭಾಷಿಕ ಶಬ್ದ. "नाटचपरिभाषा" ಪದದಲ್ಲಿ ನೋಡಿ.

**नाड ನಾಡ** (पुं०) ಒಳಗೆ ಟೊಳ್ಳಾಗಿರುವ ದಂಟು, ಸಸ್ಯದ ಟೊಳ್ಳು ದಂಟು. णल (बन्धे) "णः" (३-१-१४०)। डस्य लः।

**नाडायन ನಾಡಾಯನ** (पुं०) ನಡನ ಗೋತ್ರದಲ್ಲಿ ಹುಟ್ಟಿದವನು. नडस्य गोत्रापत्यम् "फक्" (४-१-९९)।

**नाडि ನಾಡಿ** (पुं०) 1. ನಡನ ಮಗ. (स्त्री०) 2. ನಾಡಿ, ಶರೀರದೊಳಗಿನ ಧಮನಿ. नल (भाषार्थे) +णिच् "अच्" (३-१-१३४)। "इः" (उ० ४-१३९)।

**नाडिका ನಾಡಿಕಾ** (स्त्री०) ಘಳಿಗೆ, ಅಹೋರಾತ್ರರೂಪವಾದ ಕಾಲದ ಅರವತ್ತನೆಯ ಒಂದು ಭಾಗ.

**नाडिचीर ನಾಡಿಚೀರ** (न०) ನೆಯ್ಗೆಯಲ್ಲಿ ಹಾಸು ಎಳೆಗಳ ನಡುವೆ ಹೊಕ್ಕು ಎಳೆಗಳನ್ನು ಹಾಯಿಸುವ ಲಾಳಿ. नाडी चीरमिव।

**नाडिन्धम ನಾಡಿಂಧಮ** (पुं०) 1. ಸ್ವರ್ಣಕಾರ, ಚಿನ್ನದ ಕೆಲಸದವನು, ಅಕ್ಕಸಾಲಿಗ. नाडीं धमति—ध्मा (शब्दाग्निसंयोगयोः) "खश्" (३-२-३०)। ह्रस्वः (६-३-६६)। (वि०)2. ಕೊಳವೆಯನ್ನು ಊದುವವನು.

**नाडिन्धय ನಾಡಿಂಧಯ** (वि०) ಕೊಳವೆಯ ಮೂಲಕ ಕುಡಿಯುವವನು. नडीं धयति—धेट् (पाने) "खश्" (३-२-३०)। ह्रस्वः (६-३-६६)।

**नाडी ನಾಡೀ** (स्त्री०) ಸಿರೆ, ಶರೀರದೊಳಗಿನ ಧಮನಿ. णल (गन्धे) + णिच् "अच्" (३-१-१३४)। "ङीष्" (४-१-४१)। "नाडीनामुदयक्रमेण जगतः पञ्चामृताकर्षणात्" मालती० ५-२। ಶರೀರದಲ್ಲಿ ಏಳುನೂರು (700) ನಾಡಿಗಳಿರುವುವು. ನೀರನ್ನು ಹಾಯಿಸುವ ದೊಡ್ಡ ಕೊಳಾಯಿಗಳಿಂದ ತೋಟವೂ ಸಣ್ಣ ಕಾಲುವೆಗಳಿಂದ ಗದ್ದೆಗಳೂ ಪುಷ್ಟಿಗೊಳ್ಳುವಂತೆ ಶರೀರವು ಈ ರಸವಾಹಿನಿಯಾದ ನಾಡಿಗಳಿಂದ ಪುಷ್ಟಿಗೊಳ್ಳುವುದು. ಇದರಿಂದ ಕರಚರಣಾದಿ ಅವಯವಗಳ ಆಕುಂಚನ ಪ್ರಸಾರಣ ಭಾಷಣ ಸ್ವಾಪ ಮುಂತಾದ ಕಾರ್ಯಗಳಿಗೆ ಸೌಕರ್ಯವಾಗುವುದು. ಈ ಎಲ್ಲಾ ನಾಡಿಗಳಿಗೂ ನಾಭಿಯು (ಹೊಕ್ಕಳು) ಮೂಲಸ್ಥಾನವಾಗಿರುವುದು. ಅಲ್ಲಿಂದ ಮೇಲಕ್ಕೂ ಕೆಳಭಾಗಕ್ಕೂ ಪಾರ್ಶ್ವಗಳಿಗೂ ಹರಡಿಕೊಂಡಿರುವುವು. "सप्त सिराशतानि भवन्ति, याभिरिदं शरीरमाराम इव जलहारिणीभिः केदार इव च कुल्याभिरुपस्निह्यतेऽनुगृह्यते चाकुञ्चनप्रसारणाभिर्विशेषैः। द्रुमपत्रसेवनीनामिव तासां प्रतानाः। तासां नाभिर्मूलम्। ततश्च प्रसरन्त्यूर्ध्वमधस्तिर्यक् च" सुश्रुत० शारीर० ७-३। "यावत्यस्तु सिराः काये संभवन्ति शरीरिणाम्। नाभ्यां सर्वा निबद्धास्ताः प्रतन्वन्ति समन्ततः" सुश्रुत० शारीर० ७-४। "व्याप्नुवन्त्यभितो देहं नाभितः प्रसृताः सिराः। प्रतानाः पद्मिनीकन्दाद्विसादीनां यथा जलम्" सुश्रुत० शारीर० ७-२३। ಪ್ರಾಣಿಗಳ ಪ್ರಾಣಗಳೆಲ್ಲಾ ನಾಭಿಯಲ್ಲಿ ಸೇರಿಕೊಂಡಿರುವುವು. ನಾಭಿಯು ಪ್ರಾಣಗಳನ್ನು ಆಶ್ರಯಿಸಿಕೊಂಡಿರುವುದು. ಚಕ್ರದ ಅರೆಕಾಲುಗಳು ಗುಂಬವನ್ನು

ಆಶ್ರಯಿಸಿರುವಂತೆ ಸಿರೆ (ನಾಡಿ) ಗಳೆಲ್ಲಾ ನಾಭಿಯಲ್ಲಿ ಸೇರಿಕೊಂಡಿರುವುವು. ಆದುದರಿಂದ ನಾಡಿಗಳಿಗೂ ಪ್ರಾಣಗಳಿಗೂ ಆಧಾರಾಧೇಯ ಭಾವವಿರುವುದು. "नाभिस्था: प्राणिनां प्राणाः प्राणान्नाभिर्व्युपाश्रिता। सिराभिरावृता नाभिश्चक्रनाभिरिवारकैः" सुश्रुत० शारीर० ७-५। ಇವುಗಳಲ್ಲಿ ಮೂಲ ಸಿರೆ (ನಾಡಿ)ಗಳು ನಲವತ್ತು (40). ವಾತವು ಸಂಚರಿಸುವ ನಾಡಿಗಳು ಹತ್ತು (10). ಪಿತ್ತವು ಹರಿಯುವ ನಾಡಿಗಳು ಹತ್ತು (10). ಕಫ ಹರಿಯುವ ನಾಡಿಗಳು ಹತ್ತು (10). ರಕ್ತವು ಪ್ರವಹಿಸುವ ನಾಡಿಗಳು ಹತ್ತು (10).

ವಾತಸ್ಥಾನಗಳಲ್ಲಿ ನೂರ ಎಪ್ಪತ್ತೈದು (175) ವಾತನಾಡಿಗಳೂ ಪಿತ್ತಸ್ಥಾನಗಳಲ್ಲಿ ನೂರ ಎಪ್ಪತ್ತೈದು (175) ಪಿತ್ತನಾಡಿಗಳೂ ಕಫಸ್ಥಾನಗಳಲ್ಲಿ ನೂರ ಎಪ್ಪತ್ತೈದು (175) ಕಫನಾಡಿಗಳೂ ಯಕೃತ್ತು (ಉದರದ ಬಲಗಡೆಯ ದೊಡ್ಡ ಮಾಂಸ ಗ್ರಂಥಿ) ಮತ್ತು ಗುಲ್ಮ (ಉದರದ ಎಡ ಭಾಗದಲ್ಲಿ ಅನ್ನಕೋಶದ ಹಿಂದಿರುವ ಮಾಂಸ ಗ್ರಂಥಿ)ಗಳಲ್ಲಿ ರಕ್ತವು ಪ್ರವಹಿಸುವ ನೂರ ಎಪ್ಪತ್ತೈದು (175) ರಕ್ತನಾಡಿಗಳೂ ಇವೆ. "तासां मूलसिराश्चत्वारिंशत्। तासां वातवाहिन्यो दश। पित्तवाहिन्यो दश। कफवाहिन्यो दश। दश रक्तवाहिन्यः। तासां तु वातवाहिनीनां वातस्थानगतानां पञ्चसप्ततिशतं भवति। तावत्य एव पित्तवाहिन्यः पित्तस्थाने। कफवाहिन्यश्च कफस्थाने। रक्तवाहिन्यश्च यकृत्प्लीह्नोः। एवमेतानि सप्त सिराशतानि" सुश्रुत० शारीर० ७-६।

**ಈ ಎಲ್ಲಾ ನಾಡಿಗಳೂ ಶರೀರದಲ್ಲಿ ವ್ಯಾಪಿಸಿರುವ ಸ್ಥಾನಗಳ ವಿವರ:**

| ಸ್ಥಾನ | | ನಾಡಿಗಳ ಸಂಖ್ಯೆ |
|---|---|---|
| **ಒಂದು ತೊಡೆಯಲ್ಲಿ:** | | |
| ವಾತವಾಹಿನಿ | 25 | |
| ಪಿತ್ತವಾಹಿನಿ | 25 | |
| ಕಫವಾಹಿನಿ | 25 | |
| ರಕ್ತವಾಹಿನಿ | 25 | 100 |
| **ಇನ್ನೊಂದು ತೊಡೆಯಲ್ಲಿ:** | | |
| ವಾತವಾಹಿನಿ | 25 | |
| ಪಿತ್ತವಾಹಿನಿ | 25 | |
| ಕಫವಾಹಿನಿ | 25 | |
| ರಕ್ತವಾಹಿನಿ | 25 | 100 |
| **ಒಂದು ತೋಳಿನಲ್ಲಿ:** | | |
| ವಾತವಾಹಿನಿ | 25 | |
| ಪಿತ್ತವಾಹಿನಿ | 25 | |
| ಕಫವಾಹಿನಿ | 25 | |
| ರಕ್ತವಾಹಿನಿ | 25 | 100 |
| **ಇನ್ನೊಂದು ತೋಳಿನಲ್ಲಿ:** | | |
| ವಾತವಾಹಿನಿ | 25 | |
| ಪಿತ್ತವಾಹಿನಿ | 25 | |
| ಕಫವಾಹಿನಿ | 25 | |
| ರಕ್ತವಾಹಿನಿ | 25 | 100 |
| **ಒಳ ಹೊಟ್ಟೆಯ ಭಾಗ: ಗುದಪ್ರದೇಶ ಮತ್ತು ಜನನೇಂದ್ರಿಯ ಸೇರಿರುವ ಪಿರ್ರೆಯಲ್ಲಿ** | | |
| ವಾತವಾಹಿನಿ | 8 | |
| ಪಿತ್ತವಾಹಿನಿ | 8 | |
| ಕಫವಾಹಿನಿ | 8 | |
| ರಕ್ತವಾಹಿನಿ | 8 | 32 |
| **ಪಾರ್ಶ್ವಗಳಲ್ಲಿ:** | | |
| ವಾತವಾಹಿನಿ | 2+2 | |
| ಪಿತ್ತವಾಹಿನಿ | 2+2 | |
| ಕಫವಾಹಿನಿ | 2+2 | |
| ರಕ್ತವಾಹಿನಿ | 2+2 | 16 |
| **ಪೃಷ್ಠದಲ್ಲಿ:** | | |
| ವಾತವಾಹಿನಿ | 6 | |
| ಪಿತ್ತವಾಹಿನಿ | 6 | |
| ಕಫವಾಹಿನಿ | 6 | |
| ರಕ್ತವಾಹಿನಿ | 6 | 24 |
| **ಉದರದಲ್ಲಿ:** | | |
| ವಾತವಾಹಿನಿ | 6 | |
| ಪಿತ್ತವಾಹಿನಿ | 6 | |
| ಕಫವಾಹಿನಿ | 6 | |
| ರಕ್ತವಾಹಿನಿ | 6 | 24 |
| **ವಕ್ಷಸ್ಸಿನಲ್ಲಿ:** | | |
| ವಾತವಾಹಿನಿ | 10 | |
| ಪಿತ್ತವಾಹಿನಿ | 10 | |
| ಕಫವಾಹಿನಿ | 10 | |
| ರಕ್ತವಾಹಿನಿ | 10 | 40 |

| ಸ್ಥಾನ | | ನಾಡಿಗಳ ಸಂಖ್ಯೆ |
|---|---|---|
| **ಹೆಗಲ ಸಂಧಿಯ ಮೇಲುಭಾಗ :** | | |
| **ಕಂಠದಲ್ಲಿ :** | | |
| ವಾತವಾಹಿನಿ | 14 | |
| ಪಿತ್ತವಾಹಿನಿ | 14 | |
| ಕಫವಾಹಿನಿ | 14 | |
| ರಕ್ತವಾಹಿನಿ | 14 | 56 |
| **ಕಿವಿಗಳಲ್ಲಿ :** | | |
| ವಾತವಾಹಿನಿ | 4 | |
| ಪಿತ್ತವಾಹಿನಿ | 4 | |
| ಕಫವಾಹಿನಿ | 4 | |
| ರಕ್ತವಾಹಿನಿ | 4 | 16 |
| **ನಾಲಗೆಯಲ್ಲಿ :** | | |
| ವಾತವಾಹಿನಿ | 9 | |
| ಪಿತ್ತವಾಹಿನಿ | 9 | |
| ಕಫವಾಹಿನಿ | 9 | |
| ರಕ್ತವಾಹಿನಿ | 9 | 36 |
| **ನಾಸಿಕೆಯಲ್ಲಿ :** | | |
| ವಾತವಾಹಿನಿ | 6 | |
| ಪಿತ್ತವಾಹಿನಿ | 6 | |
| ಕಫವಾಹಿನಿ | 6 | |
| ರಕ್ತವಾಹಿನಿ | 6 | 24 |
| **ನೇತ್ರಗಳಲ್ಲಿ :** | | |
| ವಾತವಾಹಿನಿ | 8 | |
| ಪಿತ್ತವಾಹಿನಿ | 8 | |
| ಕಫವಾಹಿನಿ | 8 | |
| ರಕ್ತವಾಹಿನಿ | 8 | 32 |
| | | 700 |

तत्र वातवाहिन्य: सिरा: एकस्मिन् सक्थ्नि पञ्चविंशति:; एतेन इतरसक्थिबाहू च व्याख्यातौ। विशेषतस्तु कोष्ठे चतुस्त्रिंशत् ; तासां गुदमेढ्राश्रिता: श्रोण्यामष्टौ, द्वे द्वे पार्श्वयो:, षट् पृष्ठे, तावत्य एवोदरे, दश वक्षसि। एवं चत्वारिंशज्जत्रुण ऊर्ध्वम् ; तासां चतुर्दश ग्रीवायाम्, कर्णयोश्चतस्र:, नव जिह्वायाम्, षट् नासिकायाम्, अष्टौ नेत्रयो:। एवमेतत् पञ्चसप्ततिशतं वातवाहिनीनां सिराणां व्याख्यातं भवति। एष एव विभाग: शेषाणामपि। एवमेतानि सप्तसिराशतानि व्याख्यातानि" सुश्रुत० शारीर० ७-७।

ಈ ನಾಲ್ಕು ವಿಧ ನಾಡಿಗಳೂ ಶರೀರವನ್ನು ಸಂರಕ್ಷಿಸುವುವು. "चतुर्विधा यास्तु सिरा: शरीरे प्रायेण ता मर्मसु सन्निविष्टा:। स्नाय्वस्थिमांसानि तथैव सन्धीन् सन्तर्प्य देहं प्रतियापयन्ति" सुश्रुत० शारीर० ६-१८।

ಆದರೆ ಉಪನಿಷತ್ತುಗಳಲ್ಲಿ ಎಲ್ಲಾ ನಾಡಿಗಳಿಗೂ ಹೃದಯವು ಮೂಲಸ್ಥಾನವೆಂದೂ ಹೃದಯದಲ್ಲಿ ನೂರ ಒಂದು ನಾಡಿಗಳು ಆಶ್ರಯ ಹೊಂದಿರುವುವೆಂದೂ ಜೀವಾತ್ಮನು ಉತ್ಕ್ರಮಣಸಮಯದಲ್ಲಿ ನೂರೊಂದನೆಯದಾದ ಸುಷುಮ್ನಾನಾಡಿಯ ಮೂಲಕ ಊರ್ಧ್ವಮುಖವಾಗಿ ಶಿರಸ್ಸನ್ನು ಭೇದಿಸಿಕೊಂಡು ಹೊರಟು ಮೋಕ್ಷಸಾಮ್ರಾಜ್ಯವನ್ನು ಪಡೆಯುವನೆಂದೂ ಉಕ್ತವಾಗಿದೆ. "शतं चैका (सुषुम्णा) च हृदयस्य नाड्य:। तासां मूर्धानमभिनि:सृतैका (सुषुम्णा)। तयोर्ध्वमायन्नमृतत्वमेति। विष्वङ्ङन्या उत्क्रमणे भवन्ति" कठ०।

"अत्रैतत् एकशतं नाडीनाम् ; तासां शतंशतमेकैकस्यां द्वासप्ततिर्द्वासप्तति:। प्रतिशाखं नाडीसहस्राणि भवन्ति। आसु व्यान: चरति" प्रश्नोप०। हृदये नाडीनामेकशताधिकं वर्तते। तासां नाडीनां मध्ये एकैकस्या: द्वासप्ततिप्रभेदा भवन्ति। एकैकं द्वासप्ततिप्रभेदं प्रतिशाखाभूतनाडीसहस्राणि शतं शतं भवन्ति" रङ्गरा० भा०। "ನಾಡೀಪ್ರಕಾಶ" ಗ್ರಂಥದಲ್ಲಿ ನಾಡಿಗಳು ಮೂರೂವರೆ ಕೋಟಿಗಳಿರುವುವೆಂದು ಉಕ್ತವಾಗಿದೆ. "सार्धत्रिकोट्यो नाड्यो हि स्थूला: सूक्ष्माश्च देहिनाम्। नाभिकन्दनिबद्धास्तास्तिर्यगूर्ध्वमध: स्थिता:"। ನಾಡಿಗಳು ಈ ರೀತಿ ಅಸಂಖ್ಯಾತವಾಗಿದ್ದರೂ ಪ್ರಧಾನವಾದ ನಾಡಿಗಳು ಹದಿನಾರು (16). (1) इडा, (2) पिङ्गला, (3) सुषुम्णा, (4) गान्धारी, (5) हस्तिजिह्वा, (6) पूषा, (7) वसुवशा, (8) अलम्बुषा, (9) कुहू:, (10) शङ्खिनी, (11) तालुजिह्वा, (12) इभजिह्वा, (13) विजया, (14) कामदा, (15) अमृता ಮತ್ತು (16) बहुला। "इडा च पिङ्गला चैव सुषुम्णा चापरा स्मृता। गान्धारी हस्तिजिह्वा च पूषा वसुवशा तथा। अलम्बुषा कुहूश्चैव शङ्खिनी दशमी स्मृता। तालुजिह्वेभजिह्वा च विजया कामदा परा। अमृता बहुला नाम नाड्यो वायुसमीरिता:"। "षडधिकदशनाडीचक्रमध्यस्थितात्मा हृदि विनिहितरूप: सिद्धिदस्तद्विदां य:। अविचलितमनोभि: साधकैर्मृग्यमाण: स जयति परिणद्ध: शक्तिभि: शक्तिनाथ:" मालती० ५-१।

ಅಪರಿಮಿತವಾದ ಸೂಕ್ಷ್ಮನಾಡಿಗಳಿಂದ ಕೂಡಿದ ಹದಿನಾರು ಪ್ರಧಾನ ನಾಡಿಗಳ ಸಮೂಹವೇ ರಕ್ತ ಮೇದಸ್ಸು ಮಾಂಸ ಮೊದಲಾದ ಧಾತುಗಳಿಂದ ತುಂಬಿ ಚರ್ಮದಿಂದ ಆಚ್ಛನ್ನವಾಗಿರುವ ಶರೀರ ಎಂದು ಯೋಗಿಗಳ ಅಭಿಪ್ರಾಯ. "अपरिमितसूक्ष्मनाडीसहितप्रधानषोडशनाडीसमूह एव रुधिरवसामांसादिधातुपरिपूरितं त्वगाच्छन्नं पिण्डशब्दवाच्यं शरीरमिति योगमार्गः"।

ರೋಗಿಗಳ ರೋಗಸ್ವರೂಪವನ್ನು ವೈದ್ಯನು ಪುರುಷನ ಬಲಗೈ ನಾಡಿಗಳ ಮೂಲಕವೂ ಹೆಂಗಸಿನ ಎಡಗೈ ನಾಡಿಗಳ ಮೂಲಕವೂ ಪರೀಕ್ಷಿಸಿ ತಿಳಿದುಕೊಳ್ಳಬೇಕು. ಆಗತಾನೆ ಸ್ನಾನಮಾಡಿರುವ, ನಿದ್ದೆಯಿಂದ ಎದ್ದಿರುವ, ಹಸಿವು ಬಾಯಾರಿಕೆಗಳಿಂದ ಕೂಡಿರುವ ಮತ್ತು ವ್ಯಾಯಾಮದಿಂದ ಆಯಾಸಗೊಂಡಿರುವವನ ನಾಡಿಗಳು ದೇಹಸ್ಥಿತಿಯನ್ನು ಸರಿಯಾಗಿ ತಿಳಿಸುವುದಿಲ್ಲ. "पुंसो दक्षिणहस्तस्य स्त्रियो वामकरस्य तु। अङ्गुष्ठमूलजां नाडीं परीक्षेत भिषग्वरः। अङ्गुलीभिस्तु त्रिसृभिर्नाडीमवहितः स्पृशेत्। तच्चेष्टया सुखं दुःखं जानीयात् कुशलोऽखिलम्। सद्यः स्नातस्य सुप्तस्य क्षुत्तृष्णातपशीलिनः। व्यायामशान्तदेहस्य सम्यङ्नाडी न बुध्यते" भावप्र०।

ವೈದ್ಯನು ಪ್ರಾತಃಕಾಲದ ಕರ್ತವ್ಯಗಳನ್ನು ನೆರವೇರಿಸಿಕೊಂಡು ಸುಖಾಸೀನನಾಗಿರುವ ರೋಗಿಯನ್ನು ಪರೀಕ್ಷಿಸಬೇಕು. "प्रातः कृतसमाचारः कृताचारपरिग्रहम्। सुखासीनः सुखासीनं परीक्षार्थमुपाचरेत्"। "वातं पित्तं कफं द्वन्द्वं सन्निपातं तथैव च। साध्यासाध्यविवेकं च सर्वं नाडी प्रकाशयेत्"। 2. ಕೊಳವೆಯಂತೆ ಉದ್ದವಾದ ವ್ರಣ, ಭಗಂದರ. 3. ನಾಳ, ಕೊಳವೆ, 4. ಒಂದು ಜಾತಿಯ ಗರಿಕೆ ಹುಲ್ಲು. 5. ವೇಣು ವಾದ್ಯ. 6. ಒಂದು ಘಳಿಗೆ. 7. ವಂಚನೆ, ಮೋಸ. "नाडी नाले व्रणान्तरे। शिरायां गण्डदूर्वायां चर्यायां कुहनस्य च। तथा षट्क्षणकालेऽपि" मेदि०।

**नाडीक ನಾಡೀಕ** (ಪುಂ०) ಕೀರೆದಂಟು. नाड्या कायति—कै (शब्दे) "कः" (३-२-४)।

**नाडीकूट ನಾಡೀಕೂಟ** (ನಂ०) (ವಿವಾಹಕ್ಕಾಗಿ) ವಧೂವರರ ನಕ್ಷತ್ರಗಳ ಹೊಂದಿಕೆಗಾಗಿ ನೋಡುವ ದ್ವಾದಶ (ದಿನ, ಗಣ ಮೊದಲಾದ ಹನ್ನೆರಡು) ಕೂಟಗಳಲ್ಲೊಂದು, ನಾಡೀ ಚಕ್ರದಲ್ಲಿ ಸೂಚಿಸಲ್ಪಟ್ಟ ನಕ್ಷತ್ರಗಳ ಗುಂಪು.

ಅಶ್ವಿನಿ ಆರ್ದ್ರಾ ಪುನರ್ವಸು ಉತ್ತರಫಲ್ಗುನಿ ಹಸ್ತ ಜ್ಯೇಷ್ಠಾ ಮೂಲ ಶತಭಿಷೆ ಪೂರ್ವಾಭಾದ್ರಾ ಇವು ಪ್ರಥಮ ಪಾರ್ಶ್ವನಾಡಿ.

ಭರಣಿ ಮೃಗಶಿರೆ ಪುಷ್ಯ ಪೂರ್ವಫಲ್ಗುನಿ ಚಿತ್ರಾ ಅನೂರಾಧಾ ಪೂರ್ವಾಷಾಢಾ ಧನಿಷ್ಠಾ ಉತ್ತರಾಭಾದ್ರಾ ಇವು ಮಧ್ಯನಾಡಿ.

ಕೃತ್ತಿಕಾ ರೋಹಿಣಿ ಆಶ್ಲೇಷಾ ಮಖಾ ಸ್ವಾತೀ ವಿಶಾಖಾ ಉತ್ತರಾಷಾಢಾ ಶ್ರವಣ ರೇವತಿ ಇವು ತೃತೀಯಪಾರ್ಶ್ವನಾಡಿ. ವಧೂವರರ ನಕ್ಷತ್ರಗಳು ಒಂದೇ ನಾಡಿಗೆ ಸೇರಿರಕೂಡದು. ಒಂದೇ ನಾಡಿಯಾದರೂ ಒಂದೇ ರಾಶಿಯಾಗಿ ಬೇರೆ ನಕ್ಷತ್ರವಾಗಿದ್ದರೂ ಅಥವಾ ಒಂದೇ ನಕ್ಷತ್ರವಾಗಿದ್ದು ಬೇರೆ ರಾಶಿಯಾಗಿದ್ದರೂ ನಾಡೀದೋಷವಿಲ್ಲವೆಂದು ಕೆಲವರ ಅಭಿಪ್ರಾಯ.

**नाडीकेल ನಾಡೀಕೇಲ** (ಪುಂ०) ತೆಂಗಿನಮರ.

**नाडीचक्र ನಾಡೀಚಕ್ರ** (ನಂ०) 1. ನಾಭಿಪ್ರದೇಶದಲ್ಲಿರುವ ಒಂದು ಚಕ್ರ. ಸಕಲ ನಾಡಿಗಳೂ ನಾಭಿಯಿಂದ ಹೊರಟು ದೇಹದ ಎಲ್ಲಾ ಭಾಗಗಳಿಗೂ ಹರಡಿಕೊಳ್ಳುವುದರಿಂದ ನಾಭಿ ಮಂಡಲದಲ್ಲಿ ಒಂದು ಚಕ್ರದಂತಿರುವುದು. ಇದು ಒಂದು ಕುಕ್ಕುಟಾಂಡದಂತಿರುವುದು. "नाभिमण्डलमासाद्य कुक्कुटाण्डमिव स्थितम्। नाडीचक्रमिह प्राहुस्तस्मान्नाड्यः समुद्गताः"। 2. (ವಿವಾಹಕ್ಕಾಗಿ) ವಧೂವರರ ನಕ್ಷತ್ರಗಳ ಹೊಂದಿಕೆಗಾಗಿ ನೋಡಬೇಕಾದ ನಕ್ಷತ್ರಗಳ (ಒಂದು ಚಕ್ರ) ಸಮೂಹ.

**नाडीचरण ನಾಡೀಚರಣ** (ಪುಂ०) ಪಕ್ಷಿ, ಹಕ್ಕಿ. नाडी नालमिव चरणौ यस्य। "पक्षी तु नाडीचरणः स्यात्" त्रिकाण्ड०।

**नाडीजङ्घ ನಾಡೀಜಂಘ** (ಪುಂ०) 1. ವಾಯಸ, ಕಾಗೆ. नाडीव नालमिव जङ्घास्य। "अपकृष्णो नगरीबकः। ऐन्द्रिश्च नाडीजङ्घोऽथ" त्रिकाण्ड०। 2. ಬಕಪಕ್ಷಿ. "अस्ति खल्विन्द्रद्युम्नं नाम सरस्तस्मिन्नाडीजङ्घो नाम बकः प्रतिवसति सोऽस्मत्तश्चिरजाततरः तं पृच्छ" भा० वन० २०२-७।

**नाडीतिक्त ನಾಡೀತಿಕ್ತ** (ಪುಂ०) ಒಂದು ಜಾತಿಯ ಬೇವಿನ ಮರ.

**नाडीदेह ನಾಡೀದೇಹ** (ಪುಂ०) ಪರಶಿವನ ಒಬ್ಬ ಅನುಚರ.

**नाडीनक्षत्र ನಾಡೀನಕ್ಷತ್ರ** (ನಂ०) ವಿವಾಹೋಪಯುಕ್ತವಾದ ನಾಡಿಗಳನ್ನು ತಿಳಿಸುವ ನಕ್ಷತ್ರ.

**नाडीयन्त्र ನಾಡೀಯಂತ್ರ** (ನಂ०) ಶಸ್ತ್ರಚಿಕಿತ್ಸೆಗೆ ಬೇಕಾದ ಒಂದು ಕೊಳವೆಯಾಕಾರದ ಉಪಕರಣ; —ಸಲಕರಣೆ, —ಆಯುಧ. नाडीव नालीव यन्त्रम्। नाडीवत् मध्यसुषिरं यन्त्रम्। ಶಸ್ತ್ರಚಿಕಿತ್ಸೆಗೆ ಬೇಕಾದ ಯಂತ್ರಗಳು

ಆರು ವಿಧ. (1) स्वस्तिकयन्त्राणि, (2) सन्दंशयन्त्राणि, (3) तालयन्त्राणि, (4) नाडीयन्त्राणि, (5) शलाकायन्त्राणि ಮತ್ತು (6) उपयन्त्राणि चेति सुश्रुत० सूत्र० ७-५। ನಾಡೀಯಂತ್ರಗಳು ಇಪ್ಪತ್ತು ಬಗೆ. ಇವುಗಳೂ ಅನೇಕ ರೀತಿಯಲ್ಲಿರುವುವು. "नाडीयन्त्राणि अनेकप्रकाराणि अनेकप्रयोजनानि एकतोमुखानि उभयतोमुखानि च; तानि स्रोतोगतशल्योद्धरणार्थं रोगदर्शनार्थम् आचूषणार्थं क्रियासौकर्यार्थं चेति; तानि स्रोतोद्वारपरिणाहानि यथायोगदीर्घाणि च" सुश्रुत० सूत्र० ७-१३।

**नाडीवलय ನಾಡೀವಲಯ** (न०) ಕಾಲಪರಿಜ್ಞಾನಕ್ಕಾಗಿ ವಲಯಾಕಾರವಾಗಿ ಮಾಡಿರುವ ಒಂದು ಯಂತ್ರ. नाड्या घटिकाया ज्ञानार्थं वलयं वलयाकारं यन्त्रम्।

**नाडीव्रण ನಾಡೀವ್ರಣ** (पुंन०) ಕೊಳವೆಯಾಕಾರದ ಒಂದು ವ್ರಣ, ಭಗಂದರ. (Fistula) नाड्यां व्रणम्। ಇದೊಂದು ಗುದದ್ವಾರದಲ್ಲಿ ಉಂಟಾಗುವ ವ್ರಣ. ಇದಕ್ಕೆ ಪ್ರಾರಂಭದಲ್ಲೇ ಚಿಕಿತ್ಸೆ ನಡೆಯಬೇಕು. ಇದು ಕೇವಲ ಊದಲು ಎಂದು ಉಪೇಕ್ಷೆ ಮಾಡಿದರೆ ಒಳಗೆ ಕೀವು ತುಂಬಿಕೊಂಡು ಅವಧ್ಯದಿಂದ ಒಳಭಾಗಕ್ಕೂ ಹರಡಿ ಕೊಳವೆಯಾಕಾರದ ದೊಡ್ಡ ವ್ರಣವಾಗುವುದು. ಇದರಿಂದ ಇದಕ್ಕೆ "ನಾಡೀವ್ರಣ" ಎಂದು ಹೆಸರು. "शोफं न पक्वमिति पक्वमुपेक्षते यो यो वा व्रणं प्रचुरपूयमसाधुवृत्तः। अभ्यन्तरं प्रविशति प्रविदार्य तस्य स्थानानि पूर्वविहितानि ततः स पूयः। तस्यातिमात्रगमनाद्गतिरित्यतश्च नाडीव यद्वहति तेन मता तु नाडी" सुश्रुत० निदान० १०-९, १०।

**नाडीशाक ನಾಡೀಶಾಕ** (पुं०) ದಂಟುಕೀರೆ. नाडीप्रधानः शाकः।

**नाणक ನಾಣಕ** (वि०) 1. ಕೃತ್ರಿಮ ಮುದ್ರೆ ಒತ್ತಿದ ಒಂದು ನಾಣ್ಯ, ವ್ಯವಹಾರದಲ್ಲಿಲ್ಲದ ಕೃತ್ರಿಮವಾದ ನಾಣ್ಯ. न आणकः, नशब्देन "सहसुपा" (२-१-४) इति समासः। "तुलाशासनमानानां कूटकृन्नाणकस्य च" याज्ञ० २-२४०। 2. ಕುತ್ಸಿತವಲ್ಲದ.

**नाथ ನಾಥ** (पुं०) 1. ಸ್ವಾಮಿ, ಯಜಮಾನ, ಪ್ರಭು. नाथति ईश्वरो भवति नाथृ (याच्ञोपतापैश्वर्याशीःषु) "अच्" (३-१-१३४)। "नाथे श्रीपुरुषोत्तमे त्रिजगतामेकाधिपे चेतसा" मु० मा०। 2. ಪತಿ, ಗಂಡ, "नाथो मे विपणिं गतो न गणयत्येषा सपत्नी च मां त्यक्त्वा मामिह पुष्पिणीति गुरवः प्राप्ता गृहाभ्यन्तरम्"।

**नाथनीय ನಾಥನೀಯ** (वि०) 1. ಪ್ರಾರ್ಥಿಸಬೇಕಾದ, ಯಾಚಿಸಬೇಕಾದ. 2. ಪ್ರಾರ್ಥಿಸಲ್ಪಡುವ, ಯಾಚಿಸಲ್ಪಡುವ. 3. ಪ್ರಾರ್ಥಿಸಲು ಯೋಗ್ಯವಾದ, ಬೇಡಲು ಯೋಗ್ಯವಾದ. नाथृ (याच्ञोपतापैश्वर्याशीःषु) "अनीयर्" (३-१-९६)। "नातः परं किमपि मे त्वयि नाथनीयं मातर्दये मयि कुरुष्व तथा प्रसादम्" द०श०। 4. ಅಪೇಕ್ಷಿಸಬೇಕಾದ. 5. ಅಪೇಕ್ಷಿಸಲ್ಪಡುವ. 6. ಅಪೇಕ್ಷಿಸಲು ಯೋಗ್ಯವಾದ.

**नाथमान ನಾಥಮಾನ** (वि०) ಅಪೇಕ್ಷಿಸುತ್ತಿರುವ. नाथृ (याच्ञोपतापैश्वर्याशीःषु) "शानच्" (३-२-१२४)।

**नाथवत् ನಾಥವತ್** (वि०) 1. ಪರತಂತ್ರ, ಒಬ್ಬನಿಗೆ ಅಧೀನನಾಗಿರುವವನು, ಒಬ್ಬನ ಆಶ್ರಯದಲ್ಲಿರುವವನು. नाथोऽस्यास्ति "मतुप्" (५-२-९४)। 2. ರಕ್ಷಕನುಳ್ಳ. "नाथवन्तस्त्वया लोकास्त्वमनाथा विपत्स्यसे" उ० रा० १-४३। स्त्रियां "ङीप्" (४-१-६)। **-वती -ವತೀ.** ಪತಿಯನ್ನು ಹೊಂದಿರುವವಳು, ಗಂಡನುಳ್ಳ ಹೆಂಗಸು.

**नाथित ನಾಥಿತ** (न०) 1. ಪ್ರಾರ್ಥನೆ, ಯಾಚನೆ, ಬೇಡಿಕೆ. 2. ಅಪೇಕ್ಷೆ. नाथृ भावे "क्तः"। (वि०) 3. ಪ್ರಾರ್ಥಿಸಲ್ಪಟ್ಟ, ಬೇಡಲ್ಪಟ್ಟ, ಯಾಚಿಸಲ್ಪಟ್ಟ. 4. ಅಪೇಕ್ಷಿಸಲ್ಪಟ್ಟ. नाथृ (यच्ञोपतापैश्वर्याशीःषु) "क्तः" (३-२-१०२)।

**नाथ्यमान ನಾಥ್ಯಮಾನ** (वि०) 1. ಪ್ರಾರ್ಥಿಸಲ್ಪಡುತ್ತಿರುವ, ಯಾಚಿಸಲ್ಪಡುತ್ತಿರುವ. 2. ಅಪೇಕ್ಷಿಸಲ್ಪಡುತ್ತಿರುವ. नाथृ (याच्ञोपतापैश्वर्याशीःषु) कर्म० "शानच्" (३-२-१२४)।

**नाद ನಾದ** (पुं०) 1. ಶಬ್ದ, ಧ್ವನಿ. णद (अव्यक्ते शब्दे) "घञ्" (३-३-१८)। "नादस्तावद्विकलकुररीकूजितस्निग्धतारश्चित्ताकर्षी परिचित इव श्रोत्रसंवादमेति" मालती० ५-२०। ವರ್ಣಗಳ ಉಚ್ಚಾರಣೆಯ ಹನ್ನೊಂದು ವಿಧ ಬಾಹ್ಯ ಪ್ರಯತ್ನಗಳಲ್ಲೊಂದು. बाह्यप्रयत्नस्त्वेकादशधा—(1) विवारः, (2) संवारः, (3) श्वासः, (4) नादः (5) घोषः, (6) अघोषः, (7) अल्पप्राणः, (8) महाप्राणः (9) उदात्तः, (10) अनुदात्तः, (11) स्वरितः इति 3. ಪರಬ್ರಹ್ಮಸ್ವರೂಪವಾದ ಒಂದು ಘೋಷ, ನಾದ ಬ್ರಹ್ಮ. ಸಚ್ಚಿದಾನಂದಸ್ವರೂಪನಾದ ಪರಮೇಶ್ವರನಿಂ ಒಂದು ಶಕ್ತಿಯುಂಟಾಗಿ ಅದರಿಂದ ನಾದವೂ ಅದರಿಂ ಬಿಂದುವೂ ಹುಟ್ಟಿದುವು. ಅದು ನಾದ, ಬಿಂದು ಮತ್ತು ಬೀಜಗಳೆಂದು ಮೂರು ವಿಧ. ನಾಭಿಯ ಮೇಲುಭಾ ದಲ್ಲಿ ಹೃದಯದಲ್ಲಿರುವ ಪ್ರಾಣವಾಯುವು ಬ್ರಹ್ಮರಂಧ್ರ ಕೊನೆಯಲ್ಲಿ ಅವ್ಯಕ್ತ ಶಬ್ದ ಮಾಡುವುದರಿಂದ "ನಾದ ವೆಂದು ಹೆಸರಾಯಿತು. "नाभेरूर्ध्वं हृदि स्थानान् मारु

प्राणसंज्ञकः। नदति ब्रह्मरन्ध्रान्ते तेन नादः प्रकीर्तितः"। ನಾಭಿಯ ಮೇಲುಭಾಗದಲ್ಲಿ ಆಕಾಶ, ಅಗ್ನಿ ಮತ್ತು ವಾಯು ಗಳಿಂದ ಹುಟ್ಟಿ ಮುಖದಲ್ಲಿ ವ್ಯಕ್ತವಾಗಿ ಹೊರಡುವ ಒಂದು ಶಬ್ದವು ನಾದವೆನಿಸುವುದು. "आकाशाग्निमरुज्जातो नाभेरूर्ध्वं समुच्चरन्। मुखेऽतिव्यक्तमायाति यः स नाद इतीरितः"। ಇದು ಪ್ರಾಣಿಗಳಿಂದ ಮತ್ತು ಅಪ್ರಾಣಿಗಳಿಂದ ಮತ್ತು ಎರಡರಿಂದಲೂ ಹೊರಡುವುದ ರಿಂದ ಮೂರು ವಿಧ. ಶರೀರದಿಂದ ಹೊರಡುವ ಶಬ್ದ ಪ್ರಾಣಿಭವ. ವೀಣೆ ಪಿಟೀಲು ಮೊದಲಾದವುಗಳಿಂದ ಹೊರ ಡುವ ಶಬ್ದ ಅಪ್ರಾಣಿಭವ. ಕೊಳಲು ವಾದ್ಯದಿಂದ ಹೊರ ಡುವ ಶಬ್ದ ಉಭಯಭವ. "स च प्राणिभवोऽप्राणिभवश्चोभयसम्भवः। आद्यः कायभवो वीणादिभवस्तु द्वितीयकः। तृतीयोऽपि च वंशादिभव इत्थं त्रिधा मतः"। ಬ್ರಹ್ಮನ ಸ್ಥಾನವಾದ ಬ್ರಹ್ಮಗ್ರಂಥಿಯ ಮಧ್ಯಭಾಗದಲ್ಲಿ ಪ್ರಾಣವಿರುವುದು. ಅದರಿಂದ ಅಗ್ನಿಯು ಉತ್ಪನ್ನವಾಗು ವುದು. ಅಗ್ನಿ ಮತ್ತು ವಾಯುಸಂಯೋಗದಿಂದ ನಾದವು ಹುಟ್ಟುವುದು. ನಾದವಿಲ್ಲದೆ ಸಂಗೀತವಿಲ್ಲ. ನಾದವಿಲ್ಲದೆ ಸ್ವರವಿಲ್ಲ. ನಾದವಿಲ್ಲದೆ ಯಾವ ರಾಗವೂ ಇಲ್ಲ. ಆದುದ ರಿಂದ ಜಗತ್ತು ನಾದಮಯವಾದುದು. ನಾದವಿಲ್ಲದೆ ಜ್ಞಾನವಿಲ್ಲ. ಜ್ಞಾನ ಸಂಪಾದಿಸಿದ ಹೊರತು ಪರಶಿವನ ಸಾಕ್ಷಾತ್ಕಾರವಿಲ್ಲ. ಜ್ಯೋತಿಯು ನಾದರೂಪವಾದುದು. ಶ್ರೀ ಹರಿಯೂ ನಾದಸ್ವರೂಪನು. "यदुक्तं ब्रह्मणः स्थानं ब्रह्मग्रन्थिश्च यो मतः। तन्मध्ये संस्थिताः प्राणाः प्राणाद्वह्निसमुद्भवः। वह्निमारुतसंयोगान्नादः समुपजायते। न नादेन विना गीतं न नादेन विना स्वरः। न नादेन विना रागस्तस्मान्नादात्मकं जगत्। न नादेन विना ज्ञानं न नादेन विना शिवः। नादरूपं परं ज्योति र्नादरूपी परं हरिः" सं० दा०। 4. ಒಂದು ಯೋಗದ ಹೆಸರು. नकारं प्राणनामानं दकारमनलं विदुः। जातः प्राणाग्निसंयोगात् तेन नादोऽभिधीयते"।

**नादन ನಾದನ** (न०) 1. ಶಬ್ದ ಮಾಡಿಸುವುದು. 2. ಸದ್ದು ಮಾಡಿಸುವುದು. 3. ಧ್ವನಿ ಹೊರಡಿಸುವುದು. णद (अव्यक्ते शब्दे)+णिच् "ल्युट्" (३-३-११५)।

**नादनीय ನಾದನೀಯ** (वि०) 1. ಶಬ್ದ ಮಾಡಿಸಲ್ಪಡುವ. 2. ಧ್ವನಿ ಹೊರಡಿಸಲ್ಪಡುವ. णद (अव्यक्ते शब्दे)+णिच् "अनीयर्" (३-१-९६)। 3. ಶಬ್ದ ಮಾಡಿಸಬೇಕಾದ.

**नादयत् ನಾದಯತ್** (वि०) 1. ಶಬ್ದ ಮಾಡಿಸುತ್ತಿರುವ. 2. ಧ್ವನಿ ಹೊರಡಿಸುತ್ತಿರುವ. णद (अव्यक्ते शब्दे)+णिच् "शतृ" (३-२-१२४)। स्त्रियां "ङीप्" (४-१-६)। **–यन्ती –ಯಂತೀ.** "नादयन्तो दिशः सर्वाः कर्णत्रस्ता विचेतसः" भा० कर्ण० ४४-७२।

**नादयितव्य ನಾದಯಿತವ್ಯ** (वि०) 1. ಶಬ್ದ ಮಾಡಿಸ ಲ್ಪಡುವ. 2. ಧ್ವನಿ ಹೊರಡಿಸಲ್ಪಡುವ. णद (अव्यक्ते शब्दे)+णिच् "तव्यः" (३-१-९६)।

**नादित ನಾದಿತ** (न०) 1. ನಾದ, ಶಬ್ದ. 2. ಧ್ವನಿ. णद (अव्यक्ते शब्दे)+णिच् भावे "क्तः" (३-३-११४)। (वि०) 3. ಶಬ್ದ ಮಾಡಿಸಲ್ಪಟ್ಟ. 4. ಧ್ವನಿ ಹೊರಡಿ ಸಲ್ಪಟ್ಟ. णद (अव्यक्ते शब्दे)+णिच् "क्तः" (३-२-१०२)।

**नादितवत् ನಾದಿತವತ್** (वि०) 1. ಶಬ್ದ ಮಾಡಿಸಿದವನು. 2. ಧ್ವನಿ ಹೊರಡಿಸಿದವನು. णद (अव्यक्ते शब्दे)+णिच् "क्तवतुः" (३-२-१०२)।

**नाद्य ನಾದ್ಯ** (वि०) 1. ಶಬ್ದ ಮಾಡಿಸಲ್ಪಡುವ. 2 ಧ್ವನಿ ಹೊರಡಿಸಲ್ಪಡುವ. णद (अव्यक्ते शब्दे)+ण्यत् (३-१-१२४)।

**नादवत् ನಾದವತ್** (पुं०) 1. ನಾದರೂಪವಾದ ಬಾಹ್ಯ ಪ್ರಯತ್ನದಿಂದ ಉಚ್ಚರಿಸಲ್ಪಡುವ ವರ್ಣ. नादो बाह्यप्रयत्नभेदोऽस्यास्ति "मतुप्" (५-२-९४)। (वि०) 2. ಶಬ್ದದಿಂದ ಕೂಡಿದ, 3. ಧ್ವನಿ ಸಹಿತವಾದ.

**नादिन् ನಾದಿನ್** (वि०) 1. ಶಬ್ದ ಮಾಡುತ್ತಿರುವ. णद (अव्यक्ते शब्दे) "णिनिः" (३-१-१३४)। स्त्रियां "ङीप्" (४-१-५)। **–नादिनी –ನಾದಿನೀ.** "ततः प्रकोष्ठे हरिचन्दनाङ्किते प्रमथ्यमानार्णवधीरनादिनीम्" रघु० ३-५९। 2. ಜಿಂಕೆಯ ಜನ್ಮವನ್ನು ಪಡೆದ ಒಬ್ಬ ಬ್ರಾಹ್ಮಣ. ಗುರುವಿನ ಧೇನುವನ್ನು ಕೊಂದು ಪಿತೃ ಶ್ರಾದ್ಧವನ್ನು ಮಾಡಿದ ಅಪರಾಧಕ್ಕಾಗಿ ಗರ್ಗಮಹರ್ಷಿಯ ಶಿಷ್ಯರಿಗೆ ಮೃಗಜನ್ಮವು ಪ್ರಾಪ್ತವಾಯಿತು. ಅವರಲ್ಲಿ ಏಳನೆಯವನು ನಾದಿ. "उन्मुखो नित्यवित्रस्तः स्तब्धकर्णो विलोचनः। पण्डितो घस्मरो नादी नामतस्तेऽभवन्मृगाः"। (वि०) 3. ಶಬ್ದದಿಂದ ಕೂಡಿದ. नादोऽस्यास्ति "इनिः" (५-२-११५)।

**नादेय ನಾದೇಯ** (पुं०) 1. ಹಬ್ಬೆ ಗಿಡ. नद्यां भवः "ढक्" (४-२-९७)। 2. ನಾಗರಂಗವೃಕ್ಷ, ಹೇರಿಳೆ ಗಿಡ. 3. ಕಾಶತೃಣ, ಜಂಬುಹುಲ್ಲು. (न०) 4. ಸೈಂಧವ ಲವಣ. 5. ಸೌವೀರಾಂಜನ. (वि०) 6. ಸ್ವೀಕರಿಸಲು ಯೋಗ್ಯವಲ್ಲದ, ಅಗ್ರಾಹ್ಯವಾದ. 7. ಕೊಡಲು ಯೋಗ್ಯ ವಾದ. न आदेयम् अदेयं वा। "नादेयं नादेयं शरदि

वसन्ते च नादेयम्"। 8. ನದಿಯಲ್ಲಿ ಹುಟ್ಟಿದ. 9. ನದಿಯ ಸಂಬಂಧವಾದ. नद्यां जातः नद्या इदं वा "ढक्" (४-२-९७)। 10. ನದಿಯಲ್ಲಿರುವ. नद्यां भवः "ढक्" (४-२-९७)। (स्त्री०) -यी -ಯೀ. 11. ನೀರು ಹಬ್ಬೆ ಗಿಡ. 12. ತಕ್ಕಿಲೆ ಗಿಡ. 13. ಭೂಮಿ ಜಂಬು, ಕಾಗೆ ಹೇರಿಳೆ. 14. ದಾಸಿವಾಳದ ಗಿಡ. "नादेयी नागरङ्गे स्याज्जयायामम्बुवेतसे" मेदि०। "नादेयी जलवेतसे। तर्कार्यां भूमिजम्ब्वां च जपायां नागरङ्गके। नादेयं सिंधुलवणे त्रिषुत्वेष नदीभवे" नानार्थर०।

**नादेश्वर ನಾದೇಶ್ವರ** (पुं०) ಕಾಶಿಯಲ್ಲಿರುವ ಒಂದು ಶಿವ ಲಿಂಗ. "नादेश्वरं समभ्यर्च्य कैः कैर्नापि सुचिन्तितम्। तस्मात्काश्यां प्रयत्नेन सेव्यो नादेश्वरो नृभिः" काशीखं०।

**नाधृ – याच्ञोपतापैश्वर्याशीःषु** (भ्वा० आत्म० सक० से०)। नाधते। ननाधे। नाधिता। अनाधिष्ट। ಇತ್ಯಾದಿ.

**नाना ನಾನಾ** (अव्य०) 1. ವಿನಾ, ಹೊರತು, ಬಿಟ್ಟು, ಇಲ್ಲದೆ. न "नाञ्" (५-२-२७)। "नाना नारीनिष्फला लोकयात्रा"। 2. ಅನೇಕವಾಗಿ, ಬಹಳವಾಗಿ, ಬಗೆ ಬಗೆಯಾಗಿ. 3. ಬೇರೆ ಬೇರೆಯಾಗಿ, ಎರಡಾಗಿ. (वि०) 4. ಬಗೆ ಬಗೆಯಾದ, ಅನೇಕ ವಿಧವಾದ. "नानाशस्त्रप्रहरणाः सर्वे युद्धविशारदाः" गीता १-९। "नानाजावजानाना सा जनौघघनौजसा" माघ० १९-४०। "नानाशब्दो विनार्थे स्यात् तथानेकोभयार्थयोः" मेदि०। ಇದು ಉಪಪದವಾದಲ್ಲಿ "च्वि" ಪ್ರತ್ಯಯಾರ್ಥದಲ್ಲಿ "कृञ्" ಮತ್ತು "भू" ಧಾತುಗಳಿಗೆ "क्त्वा" ಮತ್ತು "णमुल्" ಪ್ರತ್ಯಯಗಳು ಬರುವುವು (३-४-६२)। ಸಮಾಸದಲ್ಲಿ **नानाकृत्य ನಾನಾಕೃತ್ಯ.** ಅಸಮಾಸದಲ್ಲಿ **नानाकृत्वा ನಾನಾಕೃತ್ವಾ. नानाकारम् ನಾನಾಕಾರಮ್.** ಹೀಗೆಯೇ **नानाभूय ನಾನಾಭೂಯ, नानाभूत्वा ನಾನಾಭೂತ್ವಾ, नानाभावम् ನಾನಾಭಾವಮ್** ಎಂದು ರೂಪಗಳಾಗುವುವು. ಅನೇಕ ವಿಧವಾಗಿ ಮಾಡಿ. ಅನೇಕ ವಿಧವಾಗಿ ಆಗಿ.

**नानाजातीय ನಾನಾಜಾತೀಯ** (वि०) ಭಿನ್ನವಾದ, ಸಾಮ್ಯವಿಲ್ಲದ, ಬಗೆ ಬಗೆಯಾದ, ಬೇರೆ ಬೇರೆಯ. नाना+जाति "छः" (५-४-९)।

**नानान्द्र ನಾನಾಂದ್ರ** (पुं०) ನಾದಿನಿಯ ಮಗ, ಗಂಡನ ಸಹೋದರಿಯ ಮಗ. ननान्दुरपत्यं पुमान् "अञ्" (४-१-१०४)।

**नानान्द्रायण ನಾನಾಂದ್ರಾಯಣ** (पुं०) ನಾದಿನಿಯ ಮೊಮ್ಮಗನ ಮಗ. ननान्दुः अपत्यं युवा—नानान्द्र "अञ्" (४-१-१०४)। ततो हरितादि० "फक्" (४-१-१००)।

**नानारस ನಾನಾರಸ** (वि०) 1. ಅನೇಕ ವಿಧ ಅಭಿರುಚಿಯುಳ್ಳ, ಅನೇಕ ವಿಧ ರುಚಿಯುಳ್ಳ. 2. ಅನೇಕ ವಿಧ (ಶೃಂಗಾರಾದಿ) ರಸಗಳುಳ್ಳ. नाना अनेकप्रकारा रसा यत्र। "त्रैगुण्योद्भवमत्र लोकचरितं नानारसं दृश्यते" माल० १-४।

**नानारूप ನಾನಾರೂಪ** (न०) 1. ಅನೇಕ ರೂಪಗಳು, ಬಹುವಿಧ ರೂಪ. नाना रूपाणि। "नानारूपैर्विरूपास्ते रूक्षैरशुभदर्शनाः" रामा०। (वि०) 2. ಅನೇಕ ವಿಧ ರೂಪಗಳುಳ್ಳ, ಅನೇಕ ಬಗೆಯ ಆಕಾರವುಳ್ಳ. नाना रूपाणि यस्य। "नानारूपाणि जायन्ते बीजानीह स्वभावतः" मनु० ९-३८।

**नानार्थ ನಾನಾರ್ಥ** (पुं०) 1. ಅನೇಕ ಅರ್ಥ. 2. ಅನೇಕ ಕಾರ್ಯ, ಅನೇಕ ಪ್ರಯೋಜನ. (वि०) 3. ಅನೇಕ ಕಾರ್ಯವುಳ್ಳ, ಅನೇಕ ರೀತಿಯ ಪ್ರಯೋಜನವುಳ್ಳ, ಅನೇಕ ಉದ್ದೇಶವುಳ್ಳ. 4. ಅನೇಕ ಅರ್ಥಗಳುಳ್ಳ. नाना अर्थाः प्रयोजनानि अभिधेयानि वा यस्य। "नानार्थाः केऽपि कान्तादिवर्गेष्वेवात्र कीर्तिताः" अम०। "हरि" ಪದವು ಯಮ, ವಾಯು, ಇಂದ್ರ, ಚಂದ್ರ, ಸೂರ್ಯ, ವಿಷ್ಣು, ಸಿಂಹ, ಕಿರಣ, ಕುದುರೆ ಮುಂತಾದ ನಾನಾರ್ಥಗಳುಳ್ಳದ್ದು. ಈ ರೀತಿ ಅನೇಕಾರ್ಥಗಳುಳ್ಳ ಪದಗಳು ನಾನಾರ್ಥ ಪದಗಳು.

**नानार्थकोश ನಾನಾರ್ಥಕೋಶ** (पुं०) ಅನೇಕ ಅರ್ಥಗಳುಳ್ಳ ಪದಗಳ ನಿಘಂಟು. एवम् नानार्थमञ्जरी नानार्थरत्नमाला, नानार्थशब्दकोशः ಇತ್ಯಾದಿ. "क्षीरे पयस्यपि पदे द्वयवाचिभूयं नानार्थकोशविषयोऽद्य मृषोद्यमस्तु" नैष० ११-७८।

**नानावर्ण ನಾನಾವರ್ಣ** (वि०) ಅನೇಕ ವಿಧ ಬಣ್ಣಗಳುಳ್ಳ, ಚಿತ್ರವರ್ಣವುಳ್ಳ. नाना वर्णाः शुक्लादिगुणाः यस्य।

**नानाविध ನಾನಾವಿಧ** (वि०) 1. ಅನೇಕ ವಿಧವಾದ ಅನೇಕ ಬಗೆಯ, ಅನೇಕ ರೀತಿಯ. नाना अनेके विधाः प्रकारा यस्य। "नानारत्नज्योतिषां संनिपातैश्छन्नेष्वन्तःसानु वप्रान्तरेषु" किरा० ५-३६। (अव्य०) 2. ಅನೇಕ ವಿಧವಾಗಿ, ಅನೇಕ ಪ್ರಕಾರವಾಗಿ, ಅನೇಕ ಬಗೆಯಾಗಿ. "नानाविधाविष्कृतसामजस्वरः सहस्रवत्मा चपलैर्दुरध्ययः" माघ० १२-११।

**नान्तरीयक ನಾಂತರೀಯಕ** (वि०) ಅವಿನಾಭೂತವಾದ ಒಂದನ್ನು ಇನ್ನೊಂದು ಬಿಟ್ಟು ಇಲ್ಲದಿರುವ. न अन्तरं विना भवः "छः" (४-२-१३८)। ततः स्वार्थे "कः"। तदभावे तदभावः ಅದಿದ್ದರೆ ಅದೂ ಇರುವುದು

ಅದಿಲ್ಲದೆ ಅದೂ ಇಲ್ಲ ಎಂಬ ವ್ಯಾಪ್ತಿಯುಳ್ಳದ್ದು. तत्सत्तानियतसत्ताकः। "प्रतिबन्धकाभावे नान्तरीयका अर्थोत्पत्तिः" ಇತ್ಯಾದಿ.

**नान्त्र ನಾಂತ್ರ** (ನಂ) ಸ್ತುತಿ, ಸ್ತೋತ್ರ, ಹೊಗಳಿಕೆ. णम (प्रह्वत्वे शब्दे) "ष्ट्रन्" (उ० ४-१५९)। आदिवृद्धिश्च।

**नान्दिकर ನಾಂದಿಕರ** (ಪುಂ) ನಾಟಕಗಳಲ್ಲಿ ನಾಂದಿಯನ್ನು (ಮಂಗಳವನ್ನು) ಪಠಿಸುವ ಸೂತ್ರಧಾರ. नान्दीं करोति—डु कृञ् (करणे) "टः" (३-२-२१)। षष्ठीतत्पुरुषः। पूर्वपदस्य वा ह्रस्वः (६-३-६३)। पक्षे नान्दीकरः **ನಾಂದೀಕರಃ.**

**नान्दी ನಾಂದೀ** (ಸ್ತ್ರೀಂ) 1. ನಾಟಕದ ಪ್ರಾರಂಭದಲ್ಲಿ ಪಠಿಸುವ ಮಂಗಳ ಶ್ಲೋಕ, ನಾಟಕದ ಪ್ರಾರಂಭದಲ್ಲಿ ಆಶೀರ್ವಾದ ಸಮೇತವಾಗಿ ಪಠಿಸುವ ದೇವತೆಗಳು ದ್ವಿಜರು ಮತ್ತು ನೃಪರು ಮೊದಲಾದವರ ಸ್ತೋತ್ರರೂಪವಾದ ಮಂಗಳ ಪದ್ಯ. नन्दन्ति देवादयः अत्र—टु नदि (समृद्धौ) "घञ्" (३-३-१२१)।

ರಂಗಸ್ಥಳದಲ್ಲಿ ಸಂಭವಿಸಬಹುದಾದ ವಿಘ್ನಗಳ ಪರಿಹಾರಕ್ಕಾಗಿ ಮೊದಲು ಸೂತ್ರಧಾರನು ನಾಂದೀಪಠನ ಮಾಡಬೇಕು. "आशीर्वचनसंयुक्ता स्तुतिर्यस्मात् प्रयुज्यते। देवद्विजनृपादीनां तस्मान्नान्दीति संज्ञिता" सा० द० ६-२४।

ಸಭಾಪತಿ ಪ್ರೇಕ್ಷಕರು ಗಾಯಕರು ನಟನಟಿಯರು ಎಲ್ಲರೂ ಪರಸ್ಪರ ಪ್ರೀತಿ ವಿಶ್ವಾಸಗಳಿಂದ ಕಲೆತು ಸಂತೋಷಪಡುವುದರಿಂದ ಇದಕ್ಕೆ ರಂಗವೆಂದೂ ಇದು ನಾಟಕದ ಪ್ರಾರಂಭದಲ್ಲಿ ನಡೆಯುವುದರಿಂದ ಇದಕ್ಕೆ ಪೂರ್ವರಂಗವೆಂದೂ ಹೆಸರು. "सभापतिः सभासभ्याः गायका वादका अपि। नटी नटश्च मोदन्ते यत्रान्योन्यानुरञ्जनात्। अतो रङ्ग इति ज्ञेयः पूर्वं यत्स प्रकल्पते। तस्मादयं पूर्वरङ्गः इति विद्वद्भिरुच्यते" भावप्रका०।

ಅನಂತರ ಸಭಾಪತಿ ಮತ್ತು ಸಾಮಾಜಿಕರ ಪೂಜೆ ನಡೆದು ಕವಿ ಮತ್ತು ಕಾವ್ಯದ ಪ್ರಶಂಸೆಯಾಗಬೇಕು. ಪೂರ್ವರಂಗಾಂಗಗಳಾದ ಇವೆಲ್ಲವೂ ನಡೆದರೂ ವಿಘ್ನಪ್ರಶಮನಕ್ಕಾಗಿ ನಾಂದಿಯನ್ನು ಅವಶ್ಯವಾಗಿ ಪಠಿಸಬೇಕು. "प्रत्याहारादिकान्यङ्गान्यस्य भूयांसि यद्यपि। तथाप्यवश्यं कर्तव्या नान्दी विघ्नोपशान्तये" सा० द० ६-२३।

ವಿಘ್ನಶಾಂತಿಗಾಗಿ ಪ್ರಾರಂಭದಲ್ಲಿ ಮಾಡುವ ಆಶೀರ್ವಚನಗಳಿಂದ ಕೂಡಿದ ದೇವದ್ವಿಜನೃಪಾದಿಗಳ ಸ್ತುತಿಯು ಸ್ತೋತ್ರದಿಂದ ದೇವತೆಗಳನ್ನೂ ಆಶೀರ್ವಾದಗಳಿಂದ ಸಾಮಾಜಿಕರನ್ನೂ ಆನಂದಪಡಿಸುವುದರಿಂದ ಇದಕ್ಕೆ ನಾಂದಿಯೆಂದು ಹೆಸರು. नन्दयति आनन्दयति स्तवेन देवान् आशीर्वचनेन सामाजिकान् इति नान्दी। "आशीर्वचनसंयुक्ता स्तुतिर्यस्मात्प्रयुज्यते। देवद्विजनृपादीनां तस्मान्नान्दीति संज्ञिता" सा० द० ६-२४। "आशीर्नमस्क्रियारूपः श्लोकः काव्यार्थसूचकः। नान्दीति कथ्यते" भरतः।

ಸೂತ್ರಧಾರನು ನಾಂದಿಯನ್ನು ಪಠಿಸಿ ನಿರ್ಗಮಿಸಿದ ನಂತರ ಅವನಂತೆಯೇ ಮತ್ತೊಬ್ಬನು ಪ್ರವೇಶಿಸಿ ಕವಿ ಕಾವ್ಯಗಳ ಪ್ರಶಂಸೆಮಾಡಿ ನಾಟ್ಯವಸ್ತುವನ್ನು ಸೂಚಿಸುವನು. ಇವನು ಕಾವ್ಯಾರ್ಥವನ್ನು ಸೂಚಿಸುವುದರಿಂದ ಇವನಿಗೆ ಸ್ಥಾಪಕನೆಂದು ಹೆಸರು. "नान्दीं प्रयुज्य निष्क्रामेत् सूत्रधारः सहानुगः। स्थापकः प्रविशत्पश्चात्सूत्रधारगुणाकृतिः। पूर्वरङ्गं विधायादौ सूत्रधारे विनिर्गते। प्रविश्य तद्वदपरः काव्यमास्थापयेन्नटः।

ನಾಂದಿಯನ್ನು ಪಠಿಸಿ ಸೂತ್ರಧಾರನು ನಿರ್ಗಮಿಸಿದರೂ नान्द्यन्ते सूत्रधारः ಎಂದು ಸ್ಥಾಪಕನಲ್ಲಿ ಸೂತ್ರಧಾರ ಪದ ಪ್ರಯೋಗವು ಸೂತ್ರಧಾರನ ಸಾಮ್ಯದಿಂದ. ನಾಂದೀ ಪದ್ಯದಲ್ಲಿ ಎಂಟು ಹನ್ನೆರಡು ಹದಿನೆಂಟು ಅಥವಾ ಇಪ್ಪತ್ತೆರಡು ಪದಗಳಿರಬೇಕೆಂಬ ನಿಯಮವಿದೆ. "यत्राष्टभिर्द्वादशभिरष्टादशभिरेव वा। द्वाविंशत्या पदैर्वापि सा नान्दी परिकीर्तिता"।

ನಾಂದೀಪದ್ಯದ ಅರ್ಥದ ಮೂಲಕ ಅಥವಾ ಶಬ್ದಗಳ ಮೂಲಕ ಕಾವ್ಯಾರ್ಥವು ಸೂಚಿತವಾಗಿರಬೇಕು. "अर्थतः शब्दतो वापि मनाक्काव्यार्थसूचनम्" प्र० रु०। ವೇಣೀಸಂಹಾರದ ನಾಂದೀಶ್ಲೋಕದಲ್ಲಿ "निषिद्धैरप्येभिः" ಇತ್ಯಾದಿ ಪದಗಳಿಂದ ಆಚಾರ್ಯರು ಮತ್ತು ಮಿತ್ರರು ಎಲ್ಲಾ ಸಮಯದಲ್ಲೂ ಎಷ್ಟೇ ತಡೆದರೂ ದುರ್ಯೋಧನಾದಿಗಳು ದರ್ಪದಿಂದ ತಮ್ಮ ಹಟವನ್ನು ಬಿಡದೆ ಯುದ್ಧದ ಸನ್ನಾಹದಲ್ಲಿ ತೊಡಗಿದರೆಂಬ ವಿಷಯ ಮತ್ತು "संभिन्नमुकुलः" ಪದದಿಂದ ಧರ್ಮರಾಜ ಮೊದಲಾದವರು ವನವಾಸದಲ್ಲಿ ಅನುಭವಿಸಿದ ಕಷ್ಟ ಅನಂತರ ಅವರು ಜಯಗಳಿಸಿ ಅನುಭವಿಸಿದ ಸುಖ ಸಂತೋಷ ಇತ್ಯಾದಿ ಕಥಾವಸ್ತು ಸೂಚಿತವಾಯಿತು.

ನಾಂದೀಶ್ಲೋಕವು ಅಷ್ಟಪದಾತ್ಮಕ ದ್ವಾದಶ ಪದಾತ್ಮಕ ಅಷ್ಟಾದಶಪದಾತ್ಮಕ ಅಥವಾ ದ್ವಾವಿಂಶತಿಪದಾತ್ಮಕವಾಗಿರಬೇಕು. "यत्राष्टभिर्द्वादशभिरष्टादशभिरेव वा। द्वाविंशत्या पदैर्वापि"।

ಕೆಲವರು ಸುಬಂತ ಮತ್ತು ತಿಙನ್ತಗಳು ಪದವೆಂದೂ ಇನ್ನು ಕೆಲವರು ಶ್ಲೋಕದ ಒಂದು ಪಾದವು ಪದವೆಂದೂ ಮತ್ತೆ ಕೆಲವರು ಅವಾಂತರವಾಕ್ಯಗಳು ಪದವೆಂದೂ ಹೇಳುವರು. "श्लोकपादः पदं केचित् सुप्तिङन्तमथापरे। परेऽवान्तरवाक्यैकस्वरूपं पदमूचिरे" नाट्यप्र०। 2. ಸಂತೋಷ. 3. ದೇವತಾ ಪ್ರಾರ್ಥನೆ. 4. ಅಭಿವೃದ್ಧಿ, ಏಳಿಗೆ. 5. ಮಂಗಳ.

**नान्दीक ನಾಂದೀಕ** (ಪುಂ) ಮನೆಯ ಬಾಗಿಲಲ್ಲಿರುವ ಮಂಗಳ ಸೂಚಕವಾದ ತೋರಣಸ್ತಂಭ. नान्दीं कायति — कै (शब्दे) "कः" (३-२-४)।

**नान्दीकर ನಾಂದೀಕರ** (ಪುಂ) ನಾಟಕದ ಪ್ರಾರಂಭದಲ್ಲಿ ನಾಂದೀಶ್ಲೋಕವನ್ನು ಪಠಿಸುವ ಸೂತ್ರಧಾರ. नान्दीं करोति — डु कृञ् (करणे) "टः" (३-२-२१)। षष्ठीतत्पुरुषः।

**नान्दीघोष ನಾಂದೀಘೋಷ** (ಪುಂ) ಮಂಗಳಕರವಾದ ನಗಾರಿ ಮೊದಲಾದವುಗಳ ಶಬ್ದ. नान्द्यै घोषः।

**नान्दीपट ನಾಂದೀಪಟ** (ಪುಂ) ಬಾವಿಯ ಬಾಯನ್ನು ಮುಚ್ಚುವ ಕವಾಟ. नान्द्याः वृद्ध्यर्थः पटः। "नान्दीमुखो नान्दीपटो वीनाहो मुखबन्धने" अभि० चि०।

**नान्दीमुख ನಾಂದೀಮುಖ** (ಪುಂ) 1. ತಾಯಿ ತಂದೆ ಮೊದಲಾದವರು. ವೃದ್ಧಿಶ್ರಾದ್ಧದಲ್ಲಿ ಉದ್ದೇಶಿಸಲ್ಪಟ್ಟ ತಂದೆ, ತಾತ, ಪ್ರಪಿತಾಮಹ ಮೊದಲಾದ ಪಿತೃಗಣ. ಮಾತೃ ಪಿತಾಮಹೀ ಪ್ರಪಿತಾಮಹಿ (ತಾಯಿ ತಂದೆಯ ತಾಯಿ ಮತ್ತು ತಂದೆಯ ಪಿತಾಮಹಿ), ಪಿತೃ ಪಿತಾಮಹ ಪ್ರಪಿತಾಮಹ (ತಂದೆ ತಾತ ತಂದೆಯ ತಾತ), ಸಪತ್ನೀಕರಾದ ಮಾತಾಮಹ ಮಾತೃಪಿತಾಮಹ ಮಾತೃಪ್ರಪಿತಾಮಹ (ಪತ್ನೀ ಸಹಿತರಾದ ತಾಯಿಯ ತಂದೆ ತಾಯಿಯ ತಂದೆಯ ತಂದೆ, ಅವರ ತಂದೆ) ಇವರೆಲ್ಲರೂ ನಾಂದೀಮುಖರಾದ ಪಿತೃಗಣ. ಜಾತಕರ್ಮ, ನಾಮಕರಣ, ಚೂಡಾಕರ್ಮ, ಉಪನಯನ, ಪುತ್ರೀ ಮತ್ತು ಪುತ್ರನ ವಿವಾಹ, ಸೀಮಂತ, ಗೃಹಪ್ರವೇಶ ಮೊದಲಾದ ಸಂದರ್ಭಗಳಲ್ಲಿ ಪಿತೃಗಣದ ಪ್ರೀತ್ಯರ್ಥವಾಗಿ ಮತ್ತು ಎಲ್ಲರ ಅಭ್ಯುದಯಕ್ಕಾಗಿ ನಾಂದೀಮುಖವನ್ನು ಆಚರಿಸಬೇಕು. "कन्यापुत्रविवाहे च प्रवेशे नववेश्मनः। नामकर्मणि बालानां चूडाकर्मादिके तथा। सीमन्तोन्नयने चैव पुत्रादिमुखदर्शने। नान्दीमुखं पितृगणं पूजयेत् प्रयतो गृही" विष्णुपु० १३। (ನಂ) 2. ಅಭ್ಯುದಯಸಾಧನವಾದ ಒಂದು ಶ್ರಾದ್ಧ, ವೃದ್ಧಿ ಶ್ರಾದ್ಧ. नान्द्या वृद्धेर्मुखम्। (ವಿಂ) 3. ಸಂತೋಷದ ಮುಖವುಳ್ಳ, ನಗುಮುಖವುಳ್ಳ. (ಸ್ತ್ರೀಂ) –मुखी –ಮುಖೀ. 4. ನಾಂದೀ ಶ್ರಾದ್ಧದಲ್ಲಿ ಭಾಗಿಯಾದ ಹೆಂಗಸು.

**नान्दीवादिन् ನಾಂದೀವಾದಿನ್** (ಪುಂ) 1. ನಾಂದೀ (ಮಂಗಳ) ಶ್ಲೋಕವನ್ನು ಪಠಿಸುವವನು. नान्दीं वदति— वद (व्यक्तायां वाचि) "णिनिः" (३-१-१३४)। 2. ಭೇರಿ (ನಗಾರಿ) ಯನ್ನು ಬಾರಿಸುವವನು.

**नान्दीश्राद्ध ನಾಂದೀಶ್ರಾದ್ಧ** (ನಂ) ನಾಂದಿಗಾಗಿ ಮಾಡುವ ಶ್ರಾದ್ಧ, ಅಭ್ಯುದಯ ಶ್ರಾದ್ಧ, ಪಿತೃಗಣದ ಪ್ರೀತ್ಯರ್ಥವಾಗಿ ಮತ್ತು ಎಲ್ಲರ ಅಭ್ಯುದಯಕ್ಕಾಗಿ ಮಾಡಬೇಕಾದ ಶ್ರಾದ್ಧ. नान्दीनिमित्तं श्राद्धम्।

**नापित ನಾಪಿತ** (ಪುಂ) ದಿವಾಕೀರ್ತಿ, ಕ್ಷೌರಿಕ, ನಾಯಿಂದ. न+आप्लृ (व्याप्तौ) "तन्" इडागमश्च (उ० ३-८७)। ಇವನು ಕ್ಷತ್ರಿಯನಿಂದ ಶೂದ್ರಸ್ತ್ರೀಯಲ್ಲಿ ಹುಟ್ಟಿದ ಬೇರೆ ಜಾತಿಯವನು. "नराणां नापितो धूर्तः पक्षिणां चैव वायसः। दंष्ट्रिणां च सृगालस्तु श्वेतभिक्षुस्तपस्विनाम्" पञ्चतं०।

**नापितशाला ನಾಪಿತಶಾಲಾ** (ಸ್ತ್ರೀಂ) ಕ್ಷೌರದ ಮನೆ.

**नापितभाण्ड ನಾಪಿತಭಾಂಡ** (ನಂ) ನಾಪಿತನ ಕ್ಷೌರದ ಸಾಮಾನುಗಳ ಪೆಟ್ಟಿಗೆ.

**नाभ ನಾಭ** (ಪುಂ) ಸೂರ್ಯವಂಶದ ಒಬ್ಬ ದೊರೆ. "श्रुतो भगीरथाज्जज्ञे तस्य नाभोऽपरोऽभवत्" भाग० ९-९-१६।

**नाभस ನಾಭಸ** (ಪುಂ) 1. ಜಾತಕದಲ್ಲಿ ಲಗ್ನದಿಂದ ಬೇರೆ ಬೇರೆ ರಾಶಿಗಳಲ್ಲಿರುವ ಗ್ರಹಗಳ ಸಂಬಂಧದಿಂದ ಉಂಟಾಗುವ ಯೋಗಗಳಲ್ಲೊಂದು. (ವಿಂ) 2. ನಭಸ್ಸಿಗೆ ಸಂಬಂಧಿಸಿದ, ಆಕಾಶಸಂಬಂಧವಾದ. नभसः इदम् "अण्" (४-३-१२०)।

**नाभाग ನಾಭಾಗ** (ಪುಂ) 1. ವೈವಸ್ವತ ಮನುವಿನ ಒಬ್ಬ ಪುತ್ರ. 2. ಶ್ರುತನೆಂಬ ರಾಜನ ಮಗ. "भगीरथसुतो राजा श्रुत इत्यभिविश्रुतः। नाभागस्तु श्रुतस्यासीत् पुत्रः परमधार्मिकः। अम्बरीषस्तु नाभागिः सिन्धुद्वीपपिताऽभवत्" हरिवं०।

**नाभि ನಾಭಿ** (ಪುಂಸ್ತ್ರೀಂ) 1. ಉದರಾವರ್ತ, ಹೊಕ್ಕುಳು. णह (बन्धने) "इञ्" भश्चान्तादेशः (उ० ४-१२५)। "नृपं तमावर्तमनोज्ञनाभिः सा व्यत्यगादन्यवधूर्भवित्री" रघु० ६-५२। ಸುಷುಮ್ನಾನಾಡಿಯೊಳಗಿರುವ ಈ ನಾಭಿ ಸ್ಥಾನದಲ್ಲಿ ಮಣಿಪೂರವೆಂಬ ದಶದಳಪದ್ಮವಿರುವುದು. "तदूर्ध्वे नाभिदेशे तु मणिपूरं महाप्रभम्। मेघाभं विद्युदाभं च बहुतेजोमयं ततः। दशभिश्च दलैर्युक्तं

डादिफान्ताक्षरान्वितम्। शिवेनाधिष्ठितं पर्च विश्वा- लोकनकारणम्" तन्त्रसा०। 2. ಬಂಡಿಯ ಚಕ್ರದ ತೂಬು, ಚಕ್ರದ ಮಧ್ಯಭಾಗ. "अरैः सन्धार्यते नाभिः नाभौ चाराः प्रतिष्ठिताः" पञ्चतं० १-८९। 3. ಒಬ್ಬ ಕ್ಷತ್ರಿಯ. 4. ಪ್ರಧಾನ, ಮುಖ್ಯ. "कृत्स्नस्य नाभिर्नृप- मण्डलस्य" रघु० १८-२०। 5. ಚಕ್ರವರ್ತಿ. 6. ಸಮೀಪದ ಬಂಧುತ್ವ, ಹತ್ತಿರದ ನೆಂಟು. 7. ಆಗ್ನೀಧ್ರ ರಾಜನ ಒಂಬತ್ತು ಮಂದಿ ಮಕ್ಕಳಲ್ಲೊಬ್ಬ. "आग्नीध्रो नाभि- किम्पुरुषहरिवर्षेलावृतरम्यकहिरण्मयकुरुभद्राश्वकेतुमाल- संज्ञान्नव पुत्रानजनयत्" भाग० ५-२-१९।

**नाभिकण्टक ನಾಭಿಕಂಟಕ** (पुं०) ಉಬ್ಬಿರುವ ಹೊಕ್ಕುಳು, ಮುಂದಕ್ಕೆ ಚಾಚಿಕೊಂಡಿರುವ ಹೊಕ್ಕುಳು. नाभिः कण्टक इव।

**नाभिकूप ನಾಭಿಕೂಪ** (पुं०) ಬಾವಿಯಂತೆ ಆಳವಾಗಿರುವ ನಾಭಿ, ಕುಳಿಯಾಗಿರುವ ಹೊಕ್ಕುಳು. नाभिः कूप इव। "रोमावलीरज्जुमुरोजकुम्भौ गम्भीरमासाद्य च नाभि- कूपम्" नैष० ७-८४।

**नाभिगन्ध ನಾಭಿಗಂಧ** (पुं०) ಕಸ್ತೂರಿ ಮೃಗದ ಮದ.

**नाभिगोलक ನಾಭಿಗೋಲಕ** (पुं०) ಉಬ್ಬಿರುವ ಹೊಕ್ಕುಳು, ಮುಂದಕ್ಕೆ ಚೆಂಡಿನಂತೆ ಚಾಚಿಕೊಂಡಿರುವ ಹೊಕ್ಕುಳು. नाभिः गोलक इव।

**नाभिज ನಾಭಿಜ** (पुं०) 1. ನಾಭಿಯಲ್ಲಿ ಹುಟ್ಟಿದ ಚತುರ್ಮುಖ, ಬ್ರಹ್ಮ. नाभौ विष्णोर्नाभौ जायते — जनी (प्रादुर्भावे) "डः" (३-२-९७)। (वि०) 2. ನಾಭಿಯಲ್ಲಿ ಹುಟ್ಟಿದ.

**नाभिजन्मन् ನಾಭಿಜನ್ಮನ್** (पुं०) 1. ವಿಷ್ಣುವಿನ ನಾಭಿಯಲ್ಲಿ ಹುಟ್ಟಿದ ಬ್ರಹ್ಮ. नाभौ विष्णोर्नाभौ जन्म यस्य। (वि०) 2. ಹೊಕ್ಕುಳಲ್ಲಿ ಹುಟ್ಟಿದ.

**नाभिजात ನಾಭಿಜಾತ** (पुं०) 1. ವಿಷ್ಣುವಿನ ನಾಭಿಯಲ್ಲಿ ಹುಟ್ಟಿದ ಬ್ರಹ್ಮ. नाभौ जातः। (वि०) 2. ಹೊಕ್ಕುಳಲ್ಲಿ ಹುಟ್ಟಿದ.

**नाभिदघ्न ನಾಭಿದಘ್ನ** (वि०) ಹೊಕ್ಕುಳಿನ ಪ್ರಮಾಣದ, ಹೊಕ್ಕುಳಿನವರೆಗಿನ ಆಳತೆಯ. नाभिः प्रमाणमस्य — "दघ्नच्" (५-२-३७)।

**नाभिनाडी ನಾಭಿನಾಡೀ** (स्त्री०) ಹೊಕ್ಕುಳು ಕುಡಿ. नाभेर्नाडी।

**नाभिनाल ನಾಭಿನಾಲ** (न०) ಹೊಕ್ಕುಳು ಕುಡಿ. नाभे- र्नालम्। "तदङ्कशय्याच्युतनाभिनाला कच्चिन्मृगीणा- मनघा प्रसूतिः" रघु० ५-७।

**नाभिभू ನಾಭಿಭೂ** (पुं०) ವಿಷ್ಣುವಿನ ನಾಭಿಯಲ್ಲಿ ಹುಟ್ಟಿದ ಚತುರ್ಮುಖ, ಬ್ರಹ್ಮ. नाभौ भवति — भू (सत्तायाम्) "क्विप्" (३-२-१७९)।

**नाभिमात्र ನಾಭಿಮಾತ್ರ** (वि०) ಹೊಕ್ಕುಳಿನವರೆಗಿನ ಆಳತೆಯ, ಹೊಕ್ಕುಳಿನವರೆಗಿನ ಪ್ರಮಾಣದ. नाभिः प्रमाणमस्य "मात्रच्" (५-२-३७)।

**नाभिल ನಾಭಿಲ** (वि०) ಪ್ರಶಸ್ತವಾದ ನಾಭಿಯುಳ್ಳ, ಉದ್ದದ ಹೊಕ್ಕುಳುಳ್ಳ. प्रशस्ता नाभिरस्यास्ति "लच्" (५-२-९७)।

**नाभील ನಾಭೀಲ** (न०) 1. ಹೆಂಗಸರ ತೊಡೆಗಳ ಸಂದು, ಹೊಟ್ಟೆಯ ಕೆಳಭಾಗಕ್ಕೂ ತೊಡೆಗಳ ಮೇಲುಭಾಗಕ್ಕೂ ಮಧ್ಯೆ ಇರುವ ಗುಳಿ. 2. ಕಷ್ಟ, ತೊಂದರೆ.

**नाभिवर्धन ನಾಭಿವರ್ಧನ** (न०) ಹೊಕ್ಕುಳು ಕುಡಿಯನ್ನು ಕತ್ತರಿಸುವುದು. नाभेः तत्रत्यनाड्याः वर्धनम्। "प्राङ्नाभिवर्धनात् पुंसो जातकर्म विधीयते" मनु० २-२९।

**नाभिवर्ष ನಾಭಿವರ್ಷ** (न०) ಜಂಬೂದ್ವೀಪದ ಒಂಬತ್ತು ವರ್ಷ (ಭೂಭಾಗ) ಗಳಲ್ಲೊಂದು, ಆಗ್ನೀಧ್ರನು ತನ್ನ ಒಂಬತ್ತು ಮಕ್ಕಳಿಗೆ ಹಂಚಿಕೊಟ್ಟ ಒಂಬತ್ತು ವರ್ಷಗಳಲ್ಲೊಂದು. नाभेः आग्नीध्रपुत्रस्य वर्षः। ಸ್ವಾಯಂಭುವ ಮನುವಿನ ಮಗನಾದ ಪ್ರಿಯವ್ರತ ರಾಜನು ತನ್ನ ರಥದ ಚಕ್ರದ ಕೊನೆಯಿಂದ ಗೆರೆಯೆಳೆದು ಸಪ್ತ ಸಮುದ್ರಗಳನ್ನೂ ಸಪ್ತದ್ವೀಪಗಳನ್ನಾಗಿ ಮಾಡಿ ತನ್ನ ಏಳು ಮಂದಿ ಮಕ್ಕಳಿಗೂ ಭಾಗಮಾಡಿಕೊಟ್ಟನು. ಹಿರಿಯ ಮಗನಾದ ಆಗ್ನೀಧ್ರನು ತನ್ನ ಪಾಲಿಗೆ ಬಂದ ಜಂಬೂದ್ವೀಪವನ್ನು ಒಂಬತ್ತು ಭಾಗಮಾಡಿ ನಾಭಿ ಮೊದಲಾದ ತನ್ನ ಒಂಬತ್ತು ಮಂದಿ ಮಕ್ಕಳಿಗೂ ಹಂಚಿದನು. ಹಿರಿಯ ಮಗನಾದ ನಾಭಿಯ ಪಾಲಿಗೆ ಬಂದ ಅಜನಾಭ ದೇಶಕ್ಕೆ "ನಾಭಿವರ್ಷ" ಎಂದು ಹೆಸರಾಯಿತು. ನಾಭಿಯ ಮಗ ಋಷಭ. ಋಷಭ ರಾಜನ ಅನಂತರ ಅವನ ಮಗನಾದ ಭರತನು ರಾಜ್ಯವಾಳಿದನು. ಇವನ ಕಾಲದಲ್ಲಿ ನಾಭಿವರ್ಷಕ್ಕೆ **"ಭಾರತವರ್ಷ"** ಎಂದು ಹೆಸರಾಯಿತು. "आग्नीध्रसुतास्ते पित्रा विभक्ताः आत्मतुल्यनामानि यथाभागं जम्बूद्वीपवर्षाणि बुभुजुः" भाग० ५-२-२१। ಸಮುದ್ರಕ್ಕೆ ಉತ್ತರದ ಮತ್ತು ಹಿಮಾಚಲದ ದಕ್ಷಿಣದ ಭೂಭಾಗವು ಭಾರತವರ್ಷವಾಯಿತು. "उत्तरं यत्समुद्रस्य हिमाद्रेश्चैव दक्षिणम्। वर्षं तद्भारतं नाम भारती यत्र सन्ततिः" विष्णुपु० २-३-१।

**नाम्य ನಾಭ್ಯ** (पुं०) 1. ಮಹಾದೇವ, ಪರಶಿವ. "नमो नाभाय नाम्याय नमः कटकटाय च" भा० शान्ति० २९०-९०। (वि०) 2. ನಾಭಿಗೆ ಹಿತವಾದ. नाभये हितम् "यत्" (४-३-५५)।

**नाम ನಾಮ** (अव्य०) 1. ಅಂಗೀಕಾರ, ಒಪ್ಪಿಗೆ. नाम्यतेऽनेन — णम (प्रह्वत्वे शब्दे) "ड:" (३-२-१०१)। "एवं नामास्तु"। 2. ಕುತ್ಸನ, ನಿಂದೆ, ದೂಷಣೆ. "को नामायं सवितुरुदये स्वापमेवं विधत्ते"। 3. ಪ್ರಸಿದ್ಧಿ. "हिमालयो नाम नगाधिराजः" कुमा० १-१। 4. ಕ್ರೋಧ, ಕೋಪ. "ममापि नाम दशाननस्य परैरभिभवः"। 5. ವಿಸ್ಮಯ, ಆಶ್ಚರ್ಯ. "अन्धो नाम गिरिमारोहति"। 6. ಮಿಥ್ಯೆ, ಸುಳ್ಳು. "अहं च भीतो नामावप्लुतः"। 7. ಸ್ಮರಣೆ. 8. ವಿಕಲ್ಪ. 9. ಊಹೆ, ಸಂಭಾವನೆ. "नाम कोपेऽभ्युपगमे विस्मये स्मरणेऽपि च। संभाव्यकुत्साप्राकाश्यविकल्पेऽपि च दृश्यते" मेदि०।

**नामकरण ನಾಮಕರಣ** (नं०) ಶಿಶುವು ಹುಟ್ಟಿದನಂತರ ಅದಕ್ಕೆ ಹೆಸರಿಡುವುದು, ಯಾವುದಾದರೊಂದು ಹೆಸರಿಟ್ಟು ಕರೆಯುವುದು. ಇದು ಮನುಷ್ಯನಿಗೆ ನಡೆಯಬೇಕಾದ ಷೋಡಶ (ಹದಿನಾರು) ಸಂಸ್ಕಾರಗಳಲ್ಲೊಂದು. नाम्नः करणं यत्र। ಜನಿಸಿದ ಶಿಶುವಿಗೆ ಹತ್ತು ದಿನಗಳು ಕಳೆದು ಹನ್ನೊಂದನೆಯ ಅಥವಾ ಹನ್ನೆರಡನೆಯ ದಿವಸ ನಾಮಕರಣ ಮಾಡಬೇಕು. "एकादशे द्वादशे वा अहनि पिता नाम कुर्यात्" श्रुतिः। ಬ್ರಾಹ್ಮಣನಿಗೆ "ಶರ್ಮ" ಎಂದೂ ಕ್ಷತ್ರಿಯನಿಗೆ "ವರ್ಮ" ಎಂದೂ ವೈಶ್ಯನಿಗೆ "ಗುಪ್ತ" ಎಂದೂ ಶೂದ್ರನಿಗೆ "ದಾಸ" ಎಂದೂ ಹೆಸರಿನ ಮುಂದೆ ಸೇರಿಸಬೇಕು. "शर्मेति ब्राह्मणस्योक्तं वर्मेति क्षत्रसंश्रयम्। गुप्तदासात्मकं नाम प्रशस्तं वैश्यशूद्रयोः"। ಅರ್ಥವಿಲ್ಲದ ಅಪ್ರಶಸ್ತವಾದ ಅಪಶಬ್ದದಿಂದ ಕೂಡಿದ ಅಶುಭವಾದ ಜುಗುಪ್ಸಾವಹವಾದ ಹೆಸರುಗಳನ್ನು ಇಡಕೂಡದು. "नार्थहीनं नचाशस्तं नापशब्दयुतं तथा। नामाङ्गल्यं जुगुप्स्यं वा नाम कुर्यात् समाक्षरम्" विष्णुपु०। ಹನ್ನೊಂದನೆಯ ದಿವಸ ನಾಮಕರಣ ನಡೆಯದಿದ್ದರೆ ಶುಭ ದಿವಸ ಶುಭನಕ್ಷತ್ರದಲ್ಲಿ ನಾಮಕರಣ ನಡೆಯಬೇಕು. **ಶುಭ ನಕ್ಷತ್ರಗಳು :** ಅಶ್ವಿನಿ, ರೋಹಿಣಿ, ಮೃಗಶಿರ, ಪುನರ್ವಸು, ಉತ್ತರಫಲ್ಗುನಿ, ಸ್ವಾತಿ, ಅನೂರಾಧಾ, ಉತ್ತರಾಷಾಢಾ, ಶ್ರವಣ, ಧನಿಷ್ಠಾ, ಶತಭಿಷೆ, ಉತ್ತರಾಭಾದ್ರಾ ಮತ್ತು ರೇವತಿ.

**नामकर्मन् ನಾಮಕರ್ಮನ್** (नं०) ಹುಟ್ಟಿದ ಶಿಶುವಿಗೆ ಹೆಸರಿಡುವ ಒಂದು ಸಂಸ್ಕಾರ.

**नामग्राहम् ನಾಮಗ್ರಾಹಮ್** (अव्य०) ಹೆಸರು ಹಿಡಿದು. नाम गृहीत्वा — नाम + ग्रह (उपादाने) "णमुल्" (३-४-५८)। "नामग्राहं कपिभिरशनैः स्तूयमानः समन्तात्" भट्टि० ६-१४३।

**नामचौर ನಾಮಚೌರ** (पुं०) ಇನ್ನೊಬ್ಬನ ಹೆಸರನ್ನು ಕದಿಯುವವನು. ಒಬ್ಬನು ತನ್ನ ಪ್ರಸಿದ್ಧಿಗಾಗಿ ಪ್ರಸಿದ್ಧ ಪುರುಷನೊಬ್ಬನ ಹೆಸರನ್ನು ಇಟ್ಟುಕೊಳ್ಳುವುದು ಚೌರ್ಯರೂಪವಾದ ಅಪರಾಧವಾಗುವುದು.

**नामद्वादशी ನಾಮದ್ವಾದಶೀ** (स्त्री०) 1. ಪಾರ್ವತಿಯ ಹನ್ನೆರಡು ಹೆಸರುಗಳು. (1) गौरी, (2) काली, (3) उमा, (4) भद्रा, (5) दुर्गा, (6) कान्तिः, (7) सरस्वती, (8) मङ्गला, (9) वैष्णवी, (10) लक्ष्मीः, (11) शिवा ಮತ್ತು (12) नारायणी— ಇವು ಪಾರ್ವತಿಯ ಹನ್ನೆರಡು ಹೆಸರುಗಳು. 2. ದುರ್ಗಾದೇವಿಯ ಹನ್ನೆರಡು ಹೆಸರುಗಳಿಂದ ನಡೆಸುವ ಪೂಜೆ.

**नामधातु ನಾಮಧಾತು** (पुं०) ಸುಬಂತ ಪದಗಳ ಮುಂದೆ ಬರುವ ಪ್ರತ್ಯಯಗಳಿಂದ ಸಿದ್ಧವಾದ ಧಾತು. पुत्रमात्मनः इच्छति ಎಂಬಲ್ಲಿ ಸುಬಂತವಾದ पुत्र ಪದಕ್ಕೆ "क्यच्" (३-१-८) ಪ್ರತ್ಯಯವೂ "अ" ಕಾರಕ್ಕೆ "ई" ಕಾರವೂ ಬಂದು पुत्रीय ಎಂದಾಗುವುದು. ಇದಕ್ಕೆ "सनाद्यन्ता धातवः (३-१-३२) ಎಂಬ ಸೂತ್ರದಿಂದ ಧಾತು ಸಂಜ್ಞೆ ಬಂದು ಇದು ನಾಮಧಾತುವಾಗುವುದು. पुत्रीय ಎಂಬ ಈ ನಾಮಧಾತುವಿಗೆ तिप् ಮೊದಲಾದ ಪ್ರತ್ಯಯಗಳು ಬಂದು पुत्रीयति ಇತ್ಯಾದಿ ರೂಪಗಳಾಗುವುವು.

**नामधारक ನಾಮಧಾರಕ** (वि०) ಅರ್ಥವಿಲ್ಲದ ಹೆಸರನ್ನು ಮಾತ್ರ ಹೊಂದಿರುವವನು. ಮನುಷ್ಯನು ತನ್ನ ಹೆಸರಿಗೆ ತಕ್ಕ ಕರ್ತವ್ಯಗಳನ್ನು ಆಚರಿಸುತ್ತಿದ್ದರೆ ಅವನ ಹೆಸರು ಅರ್ಥವತ್ತಾಗುವುದು. ಕರ್ತವ್ಯ ವಿಹೀನನಾದವನ ಹೆಸರು ಅಪ್ರಯೋಜಕವಾಗಿ ಅವನು ಅಂತಹ ಅರ್ಥವಿಲ್ಲದ ಹೆಸರನ್ನು ಮಾತ್ರ ಹೊಂದಿದಂತಾಗುವುದು. नाममात्रं धरति न तदर्थं करोति— धृञ् (धारणे) "ण्वुल्" (३-१-१३३)। ಕಾಷ್ಠಮಯವಾದ ಆನೆಯು ಯುದ್ಧಾದಿಕಾರ್ಯಗಳಿಗೆ ಉಪಯೋಗವಾಗದೆ ಕೇವಲ ಆನೆ ಎಂಬ ಹೆಸರನ್ನು ಹೊಂದಿರುವಂತೆ ವೇದಾಧ್ಯಯನ ಮಾಡದಿರುವ ಬ್ರಾಹ್ಮಣನು ಕೇವಲ ಬ್ರಾಹ್ಮಣನೆಂಬ ಸಂಜ್ಞೆಯನ್ನು ಹೊಂದಿರುವನೇ ಹೊರತು ಯಾವ ಕಾರ್ಯಕ್ಕೂ ಅರ್ಹನಲ್ಲ.

"यथा काष्ठमयो हस्ती यथा चर्ममयो मृगः। यश्च विप्रोऽनधीयानस्त्रयस्ते नाम बिभ्रति" मनु० २-१५७। ಅಂತೆಯೇ ಅರ್ಥ (ಧನ) ವಿಹೀನನಾದ ಪುರುಷನೂ ಸಮಾಜದಲ್ಲಿ ಯಾವ ಕಾರ್ಯಕ್ಕೂ ಸಮರ್ಥನಾಗುವುದಿಲ್ಲ. "दंष्ट्राविरहितः सर्पो मदहीनो यथा गजः। तथार्थेन विहीनोऽत्र पुरुषो नामधारकः" पञ्चतं० २-९१।

**नामधारिन् ನಾಮಧಾರಿನ್** (वि०) ಹೆಸರನ್ನು ಹೊಂದಿರುವವನು, ಹೆಸರಿನಿಂದ ಕರೆಯಲ್ಪಡುವವನು. नाम धरति — धृञ् (धारणे) "णिनिः" (३-१-१३४)।

**नामधेय ನಾಮಧೇಯ** (न०) ಹೆಸರು, ಅಭಿಧಾನ. नामन् स्वार्थे "धेयः" (वा० ५-४-२५)। "हय्यंगवीनमादाय घोषवृद्धानुपस्थितान्। नामधेयानि पृच्छन्तौ वन्यानां मार्गशाखिनाम्" रघु० १-४५।

**नामन् ನಾಮನ್** (न०) 1. ಹೆಸರು, ಅಭಿಧಾನ, ಒಬ್ಬ ವ್ಯಕ್ತಿಯನ್ನು ಕರೆಯುವ ಅಥವಾ ಒಂದು ವಸ್ತುವನ್ನು ಹೇಳುವ ಸಂಜ್ಞಾಶಬ್ದ. नम्यते अभिधीयते अर्थोऽनेन— णम (प्रह्वत्वे शब्दे) "मनिन्" (उ० ४-१५१) निपा०। ನಾಮಪದಗಳು ಸತ್ತ್ವ (ದ್ರವ್ಯ) ಪ್ರಧಾನವಾದುವು. "सत्त्वप्रधानानि नामानि" नमन्त्याख्यातशब्दे गुणभावेन इति नामानि। ಯಾವ ಒಂದು ಶಬ್ದವನ್ನು ಉಚ್ಚರಿಸಿದ ಕೂಡಲೆ ಯಾವನೊಬ್ಬ ವ್ಯಕ್ತಿಯ ಅಥವಾ ಯಾವುದಾದರೊಂದು ವಸ್ತುವಿನ ಬೋಧವಾಗುವುದೋ ಆ ಶಬ್ದವು "ನಾಮ" ವಾಗುವುದು. "शब्देनोच्चरितेनेह येन द्रव्यं प्रतीयते। तदक्षरविधौ युक्तं नामेत्याहुर्मनीषिणः" निरु०। 2. ವಾಚಕಶಬ್ದ, ಒಂದು ವಸ್ತುವಿನ ಅಥವಾ ವ್ಯಕ್ತಿಯ ಅರ್ಥವನ್ನು ತಿಳಿಸುವ ಶಬ್ದ. "हरेर्नाम हरेर्नाम हरेर्नामैव केवलम्। कलौ नास्त्येव नास्त्येव नास्त्येव गतिरन्यथा"। ಇದು ಪೌರಾಣಿಕಮತ. 3. ಪ್ರಾತಿಪದಿಕರೂಪವಾದ ಒಂದು ಶಬ್ದ, ಅರ್ಥವತ್ತಾದ ಧಾತುಭಿನ್ನವಾದ ಯಾವ ಪ್ರತ್ಯಯವೂ ಸೇರದಿರುವ ಶಬ್ದರೂಪ. "घटोऽस्ति" ಎಂಬಲ್ಲಿ घट ಎಂಬ ಶಬ್ದರೂಪವು ಪ್ರಾತಿಪದಿಕ. ಇದು ಪಾಣಿನೀಯರ ಮತ. ನಾಮಪದವು (1) ರೂಢ, (2) ಲಕ್ಷಕ, (3) ಯೋಗರೂಢ ಮತ್ತು (4) ಯೌಗಿಕ ಎಂದು ನಾಲ್ಕು ವಿಧ. ಅವಯವ ಶಕ್ತಿಯಿಲ್ಲದೆ ಕೇವಲ ಸಮುದಾಯ ಶಕ್ತಿಯಿಂದ ಅರ್ಥವು ಬೋಧವಾಗುವಲ್ಲಿ ಅಂತಹ ಪದವು **ರೂಢವು.** "गौः" ಎಂಬಲ್ಲಿ "गमेर्डोः" (उ० २-६८) ಸೂತ್ರದಿಂದ ವಿಹಿತವಾದ ಪ್ರತ್ಯಯಕ್ಕೆ ಯಾವ ಅರ್ಥದಲ್ಲಿಯೂ ಶಕ್ತಿಯಿಲ್ಲದೆ ಯೌಗಿಕವಾಗುವುದಿಲ್ಲವಾದುದರಿಂದ "गो" ಪದವು ರೂಢವು. ಇದು ಪ್ರಕೃತಿ ಪ್ರತ್ಯಯ ಸಮುದಾಯದಿಂದ "ಹಸು" ಎಂಬ ಅರ್ಥವನ್ನು ಬೋಧಿಸುವುದು. ಯಾವ ಪದವು ತನ್ನ ಮುಖ್ಯಾರ್ಥಕ್ಕೆ ಬಾಧೆಯುಂಟಾಗಿ ಅನ್ವಯವಿಲ್ಲದೆ ಮುಖ್ಯಾರ್ಥದ ಸಂಬಂಧದಿಂದ ಪ್ರಕೃತವಾದ ಮತ್ತೊಂದು ಅರ್ಥವನ್ನು ಬೋಧಿಸುವುದೋ ಅದು **ಲಕ್ಷಕ.** "गङ्गायां घोषः" ಎಂಬಲ್ಲಿ ಜಲಮಯವಾದ ಗಂಗೆಯಲ್ಲಿ ವಾಸವು ಅನುಪಪನ್ನವಾದುದರಿಂದ ಮುಖ್ಯಾರ್ಥಕ್ಕೆ ಬಾಧೆಯುಂಟಾಗಿ ತನ್ನ ಸಂಬಂಧದಿಂದ ತನ್ನ ಸಮೀಪದಲ್ಲಿರುವ ತೀರರೂಪವಾದ ಅರ್ಥವನ್ನು ಲಕ್ಷಣೆಯಿಂದ ಬೋಧಿಸುವುದರಿಂದ ಇಲ್ಲಿ "गङ्गा" ಪದವು ಗಂಗಾತೀರರೂಪವಾದ ಅರ್ಥಕ್ಕೆ ಲಕ್ಷಕವಾಗುವುದು.

ಯೋಗ (ಅವಯವ ಶಕ್ತಿ) ಮತ್ತು ರೂಢ (ಸಮುದಾಯ ಶಕ್ತಿ) ಎರಡರಿಂದಲೂ ಅರ್ಥಬೋಧವಾಗುವಲ್ಲಿ ಆ ಪದವು **"ಯೋಗರೂಢ".** "पङ्कज" ಪದವು पङ्काज्जायते ಎಂಬ ಅವಯವಶಕ್ತಿಯಿಂದಲೂ ಅದು ಕಮಲದಲ್ಲಿ ಮಾತ್ರ ರೂಢವಾದುದರಿಂದ ಸಮುದಾಯ ಶಕ್ತಿಯಿಂದಲೂ ಕಮಲ ರೂಪವಾದ ಅರ್ಥವನ್ನು ಬೋಧಿಸುವುದರಿಂದ ಯೋಗರೂಢ. ಅವಯವ ಶಕ್ತಿಯಿಂದ ತನ್ನ ಮುಖ್ಯಾರ್ಥವನ್ನು ಬೋಧಿಸುವ ಪದವು **ಯೌಗಿಕ.** डुपचष् (पाके) + "ण्वुल्" ಎಂಬ ವ್ಯುತ್ಪತ್ತಿಯಿಂದ ನಿಷ್ಪನ್ನವಾದ "पाचक" ಪದವು ಅವಯವಶಕ್ತಿಯಿಂದ पाककर्ता (ಬೇಯಿಸುವವನು, ಅಡಿಗೆಯವನು) ಎಂಬ ಮುಖ್ಯಾರ್ಥವನ್ನು ಬೋಧಿಸುವುದರಿಂದ ಯೌಗಿಕ.

**नामनामिक ನಾಮನಾಮಿಕ** (पुं०) ಪರಮಾತ್ಮ, ಮಹಾವಿಷ್ಣು. नाम्नि नामो नमनं प्रह्वताऽस्य। "वैकुण्ठ अपराजित मानसिक नावमिक नामनामिक परस्वामिन्" भा० शान्ति० ३४६-४।

**नामनिर्देश ನಾಮನಿರ್ದೇಶ** (पुं०) ಹೆಸರು ಹಿಡಿದು ಹೇಳುವುದು. नाम्ना निर्देशः।

**नामपद ನಾಮಪದ** (न०) ಒಬ್ಬ ಮನುಷ್ಯನ ಅಥವಾ ವಸ್ತುವಿನ ಹೆಸರನ್ನು ಹೇಳುವ ಪದ.

**नाममात्र ನಾಮಮಾತ್ರ** (वि०) 1. ಹೆಸರನ್ನು ಮಾತ್ರ ಹೊಂದಿರುವ, ಅರ್ಥವಿಲ್ಲದ ಹೆಸರನ್ನು ಹೊಂದಿರುವ, ಹೆಸರಿನ ಅರ್ಥಕ್ಕೆ ತಕ್ಕ ಕೆಲಸಮಾಡಲು ಅಸಮರ್ಥನಾದ. नाम संज्ञैव मात्रा यस्य। (न०) 2. ಹೆಸರು ಮಾತ್ರ. (अव्य०) 3. ಹೆಸರಿನಿಂದ ಮಾತ್ರ.

**नाममाला ನಾಮಮಾಲಾ** (स्त्री०) ಒಂದು ಕೋಶ, ಒಂದು ನಿಘಂಟು.

**नाममुद्रा ನಾಮಮುದ್ರಾ** (स्त्री०) ಹೆಸರನ್ನು ಕೆತ್ತಿರುವ ಉಂಗುರ. नामाक्षरस्य मुद्रा। "भो:. इयं नाममुद्रा केनोद्घातेन तत्रभवत्या हस्ताभ्याशं प्रापिता" शाकु० ६।

**नामयज्ञ ನಾಮಯಜ್ಞ** (पुं०) ಹೆಸರಿಗೆ ಮಾತ್ರ ಮಾಡುವ ಯಾಗ, ದಂಭದಿಂದ ಕೀರ್ತಿಯನ್ನು ಪಡೆಯಲು ಮಾಡುವ ಯಜ್ಞ. नामसम्बन्धी यज्ञ:। "आत्मसम्भाविता: स्तब्धा: धनमानमदान्विता:। यजन्ते नामयज्ञैस्ते दम्भेनाविधिपूर्वकम्" गीता १६-१७।

**नामलिङ्ग ನಾಮಲಿಂಗ** (न०) 1. ಶಬ್ದದ ಲಿಂಗ, ಶಬ್ದದ ಪುಂಲಿಂಗ, ಸ್ತ್ರೀಲಿಂಗ ಅಥವಾ ನಪುಂಸಕಲಿಂಗ, ಪುರುಷ ಸ್ತ್ರೀ ಮತ್ತು ನಪುಂಸಕಗಳನ್ನು ಸೂಚಿಸುವ ಚಿಹ್ನೆ. नाम्नो लिङ्गम्। (न० द्विव०) 2. ಹೆಸರು ಮತ್ತು ಲಿಂಗ. नाम च लिङ्गं च। "नामलिङ्गानुशासनम्" अम०। "स्त्रीलिङ्गमपि पुंलिङ्गं क्लीबलिङ्गमिति त्रिधा। शब्दसंस्कारसिद्ध्यर्थं भाषया नाम भिद्यते"।

**नामलिङ्गानुशासन ನಾಮಲಿಂಗಾನುಶಾಸನ** (न०) ಹೆಸರು ಮತ್ತು ಲಿಂಗಗಳನ್ನು ತಿಳಿಸುವ (ಕೋಶ) ನಿಘಂಟು. नामानि लिङ्गानि स्त्रीपुंनपुंसकानि अनुशिष्यन्ते विविच्य बोध्यन्तेऽत्र — अनु + शासु (अनुशिष्टौ) "ल्युट्" (३-३-११७)।

**नामशेष ನಾಮಶೇಷ** (वि०) ಹೆಸರು ಮಾತ್ರ ಉಳಿದಿರುವ, ಜೀವಿಸಿಲ್ಲದ, ಮೃತನಾದ. नाममात्रं शेषोऽस्य।

**नामाख्यात ನಾಮಾಖ್ಯಾತ** (वि०) ಹೆಸರು ಮತ್ತು ಆಖ್ಯಾತ ಪ್ರತ್ಯಯಗಳನ್ನು ಹೇಳುವ ಗ್ರಂಥದ ವ್ಯಾಖ್ಯಾನ. नाम च आख्यातं च नामाख्याते, नामाख्यातयोर्व्याख्यानो ग्रन्थ: "ठक्" (४-३-७२)।

**नामाङ्क ನಾಮಾಂಕ** (वि०) ಹೆಸರಿನ ಗುರುತುಳ್ಳ, ಹೆಸರಿನ ಅಕ್ಷರಗಳಿಂದ ಅಂಕಿತವಾದ. नाम नामाक्षरम् अङ्को यस्य। "नामाङ्करावणशराङ्कितकेतुयष्टिम्" रघु० १२-१०३।

**नामादेशम् ನಾಮಾದೇಶಮ್** (अव्य०) ಹೆಸರನ್ನು ಹಿಡಿದು ಹೇಳಿ, ಒಬ್ಬನ ಹೆಸರನ್ನು ನಿರ್ದೇಶಿಸಿ ಕರೆದು. नाम आदिश्य — नामन्+आ+दिश (अतिसर्जने) "णमुल्" (३-४-५८)।

**नामानुशासन ನಾಮಾನುಶಾಸನ** (न०) ಶಬ್ದಗಳ ಅರ್ಥಗಳನ್ನು ತಿಳಿಸುವ ಕೋಶ, ನಿಘಂಟು, ನಾಮಪದಗಳ ಅರ್ಥಗಳನ್ನು ವಿವರಿಸುವ ಕೋಶ. नामानि अनुशिष्यन्तेऽत्र — अनु + शासु (अनुशिष्टौ) "ल्युट्" (३-३-११७)।

**नामापराध ನಾಮಾಪರಾಧ** (पुं०) ಭಗವಂತನ ಮತ್ತು ಅವನ ಭಕ್ತರ ಹೆಸರನ್ನು ಹೇಳಿ ನಿಂದಿಸುವುದು, ದೂಷಿಸುವುದು, ಇಲ್ಲದ ಸಲ್ಲದ ನಾನಾ ದೋಷಗಳನ್ನು ಹೇಳಿ ಅವಮಾನಗೊಳಿಸುವುದು. नाम्नि तद्विषये अपराध:। "सतां निन्दां नाम्नां परममपराधं वितनुते यत: ख्यातिं यातस्तमुपहसते गर्हयति च। तथा विष्णोरिष्टं य इह गुणनामादि सकलं धिया भिन्नं पश्येत् स खलु हरिनामाहितकर:" पाद्मपु०।

**नामापराधिन् ನಾಮಾಪರಾಧಿನ್** (वि०) ಭಗವದ್ಭಕ್ತರ ಹೆಸರನ್ನು ಹೇಳಿ ನಿಂದಿಸಿದ ಅಪರಾಧವುಳ್ಳವನು, ಅವರ ಹೆಸರಿನಲ್ಲಿ ದೋಷಗಳನ್ನು ಹೇಳಿ ಅವಮಾನಗೊಳಿಸಿದ ಅಪರಾಧವುಳ್ಳವನು.

**नामिक ನಾಮಿಕ** (वि०) 1. ಹೆಸರಿನಲ್ಲಿರುವ. नाम्नि भव: "ठक्" (४-३-७२)। 2. ಹೆಸರಿಗೆ ಸಂಬಂಧಿಸಿದ.

**नामित ನಾಮಿತ** (वि०) ಬಗ್ಗಿಸಲ್ಪಟ್ಟ. णम (प्रह्वत्वे शब्दे) + णिच् "क्त:" (३-२-१०२)। "फुल्लां नाम्यति वायसोऽपि हि लतां या नामिता बर्हिणा" मृच्छ० १-३२।

**नाम्य ನಾಮ್ಯ** (वि०) 1. ಬಗ್ಗಿಸಲ್ಪಡುವ. 2. ಬಗ್ಗಿಸಲು ಶಕ್ಯವಾದ. 3. ಬಗ್ಗಿಸಲು ಯೋಗ್ಯವಾದ. णम (प्रह्वत्वे शब्दे) "ण्यत्" (३-१-१२४)।

**नाय ನಾಯ** (पुं०) 1. ಒಯ್ಯುವುದು, ಸಾಗಿಸುವುದು. णीञ् (प्रापणे) "घञ्" (३-३-१८)। 2. ಉಪಾಯ. "नाय: कोऽत्र स येन स्यां बताहं विगतज्वर:" भट्टि० ६-८२। 3. ನೀತಿ. "यात यूयं यमश्रायं दिशं नायेन दक्षिणाम्" भट्टि० ७-३६। (वि०) 4. ಒಯ್ಯುವವನು, ಸಾಗಿಸುವವನು. णीञ् कर्त० "ण:" (३-१-१४२)।

**नायक ನಾಯಕ** (पुं०) 1. ಪ್ರಧಾನ, ಮುಖ್ಯ, ಪ್ರಮುಖ, ಅಗ್ರಗಣ್ಯ. नयति—णीञ् (प्रापणे) "ण्वुल्" (३-१-१३३)। 2. ಪತಿ, ಗಂಡ. "नायकस्य शयनादहर्मुखे निर्गता मुदमुदीक्ष्य सुभ्रुवाम्" नैष० १८-६७। 3. ಹಾರದ ಮಧ್ಯದ ಮಣಿ. "तवाङ्गहारे रुचिमेति नायक: शिखामणिश्च द्विजराड्विदूषक:" नैष० ९-११८। 4. ಪ್ರಭು, ದೊರೆ. "बहुतरगुणदर्शनादम्युपेताल्पदोष: कृती तव वरद करोतु सुप्रातमह्नामयं नायक:" माघ० ११-६७। 5. (ನಾಟಕಗಳಲ್ಲಿ) ಶೃಂಗಾರಾದಿರಸಗಳ ಸ್ಥಾಯಿಭಾವಗಳಾದ ರತ್ಯಾದಿಗಳಿಗೆ ಆಲಂಬನನಾದವನು. ಸ್ತ್ರೀಪುರುಷ (ನಾಯಿಕಾ-ನಾಯಕ) ರಲ್ಲಿ ಪರಸ್ಪರ ಉತ್ಪನ್ನವಾಗುವ

ಪ್ರೇಮವೆಂಬ ಚಿತ್ತವೃತ್ತಿಯು ರತಿಯೆನಿಸುವುದು. ಹೀಗೆಯೇ ವೀರರಸಸ್ಥಾಯಿಭಾವವಾದ ಉತ್ಸಾಹಕ್ಕೆ ಆಲಂಬನನಾದವನು ವೀರನಾಯಕ. **ನಾಯಕನ ಲಕ್ಷಣ:** "त्यागी कृती कुलीनः सुश्रीको रूपयौवनोत्साही । दक्षोऽनुरक्तलोकस्तेजोवैदग्ध्यशीलवान्नेता" सा० द० ३-३० । ನಾಯಕನು (1) धीरोदात्तः, (2) धीरोद्धतः, (3) धीरललितः ಮತ್ತು (4) धीरशान्तः ಎಂದು ನಾಲ್ಕು ವಿಧ. "धीरोदात्तो धीरोद्धतस्तथा धीरललितश्च । धीरप्रशान्त इत्ययमुक्तः प्रथमश्चतुर्भेदः" सा० द० ३-३१ । [ವಿವರಗಳಿಗೆ ಆಯಾ ಪದಗಳಲ್ಲಿ ನೋಡಿ.] ಈ ನಾಲ್ಕು ವಿಧ ನಾಯಕರೂ (1) दक्षिणः, (2) धृष्टः, (3) अनुकूलः ಮತ್ತು (4) शठः ಎಂಬ ನಾಲ್ಕು ಭೇದಗಳಿಂದ ಹದಿನಾರು ವಿಧವಾಗುವರು, "एभिर्दक्षिणधृष्टानुकूलशठरूपिभिस्तु षोडशधा" सा० द० ३-३५ । ಈ ಎಲ್ಲಾ ನಾಯಕರೂ (1) उत्तमः, (2) मध्यमः ಮತ್ತು (3) अधमः ಎಂಬ ಮೂರು ಭೇದಗಳಿಂದ ಒಟ್ಟು ನಲವತ್ತೆಂಟು ವಿಧವಾಗುವರು. "एषां च त्रैविध्यादुत्तममध्याधमत्वेन । उक्ता नायकभेदाश्चत्वारिंशत्तथाष्टौ च" सा० द० ३-३८ । 6. ಆದರ್ಶ, ಮಾದರಿ. "रामो हरिः करी भूभृत्कारः कर्ता च चन्द्रमाः । तस्थिवान् भगवानात्मा दर्शते पुंसि नायकाः" । (ವಿ०) 7. ಒಯ್ಯುವವನು, ಮುಂದಕ್ಕೆ ಸಾಗಿಸುವವನು.

**नायिका ನಾಯಿಕಾ** (स्त्री०) (ನಾಟಕಗಳಲ್ಲಿ) 1. ಶೃಂಗಾರ ರಸದ ಸ್ಥಾಯಿಭಾವವಾದ ರತಿಗೆ ಆಲಂಬನ (ಆಶ್ರಯ) ಳಾದ ಹೆಂಗಸು. णीञ् (प्रापणे) "ण्वुल्" (३-१-१३३)। "टाप्" (४-१-४)। ನಾಯಕನ ಸಾಮಾನ್ಯ ಗುಣಗಳಿಂದ ಕೂಡಿದ ಹೆಂಗಸು ನಾಯಿಕೆ. "अथ नायिका त्रिभेदा स्वान्या साधारणी स्त्रीति। नायकसामान्यगुणैर्भवति यथासंभवैर्युक्ता" सा० द० ३-५६। ನಾಯಿಕೆಯು (1) स्वस्त्री, (2) अन्यस्त्री ಮತ್ತು (3) साधारणस्त्री ಎಂದು ಮೂರು ವಿಧ.

**स्वस्त्री**—ವಿನಯ ಋಜುತ್ವ ಮೊದಲಾದ ಗುಣಗಳಿಂದ ಕೂಡಿ ಗೃಹಕೃತ್ಯದಲ್ಲಿ ನಿರತಳಾದ ಪತಿವ್ರತೆಯು **ಸ್ವಸ್ತ್ರೀ.** ಇವಳು (1) मुग्धा, (2) मध्या ಮತ್ತು (3) प्रगल्भा ಎಂದು ಮೂರು ವಿಧ. "विनयार्जवादियुक्ता गृहकर्मपरा पतिव्रता। सापि कथिता त्रिभेदा मुग्धा मध्या प्रगल्भेति" सा० द० ३-५७।

**मुग्धा**—ಮೊದಲನೆಯದಾಗಿ ಹೊರಚಿಮ್ಮಿದ ಪ್ರಾಯ ಮತ್ತು ಕಾಮವಿಕಾರಗಳಿಂದ ಕೂಡಿದ ಮತ್ತು ನವಸಮಾಗಮದಲ್ಲಿ ಲಜ್ಜೆಯಿಂದ ಪ್ರತಿಕೂಲಳಾದ ತರುಣಿಯು **"ಮುಗ್ಧಾ"** ನಾಯಿಕೆ. "प्रथमावतीर्णयौवनमदनविकारा रतौ वामा। कथिता मृदुश्च माने समधिकलज्जावती मुग्धा" सा० द० ३-५८।

**मध्या**—ಚೆನ್ನಾಗಿ ಬೆಳೆದುಬಂದ ಪ್ರಾಯ ಮತ್ತು ಮದನವಿಕಾರಗಳಿಂದ ಕೂಡಿ ವಿವಿಧವಾದ ಭಂಗಿಗಳಿಂದ ರತಿಕ್ರೀಡೆಯಲ್ಲಿ ಚತುರೆಯಾದವಳೂ ಸ್ವಲ್ಪ ಧೈರ್ಯದಿಂದ ಮಾತಾಡುವವಳೂ ಸಾಧಾರಣ ಲಜ್ಜೆಯಿಂದ ಕೂಡಿದವಳೂ ಆದ ಯುವತಿಯು **"ಮಧ್ಯಾ"** ನಾಯಿಕೆ. "मध्या विचित्रसुरता प्ररूढस्मरयौवना। ईषत्प्रगल्भवचना मध्यमव्रीडिता मता" सा० द० ३-५९।

**प्रगल्भा**—ಅತಿಶಯವಾದ ಕಾಮವಿಕಾರದಿಂದ ಮೈಮರೆತವಳೂ ತುಂಬಿದ ತಾರುಣ್ಯವುಳ್ಳವಳೂ ಸಕಲ ವಿಧ ರತಿಕ್ರೀಡೆಯಲ್ಲಿಯೂ ನಿಪುಣೆಯೂ ಸ್ತ್ರೀಸಹಜವಾದ ಲಜ್ಜೆಯಿಂದ ಕೂಡಿದವಳೂ ನಾಯಕನಲ್ಲಿ ಸಲಿಗೆಯುಳ್ಳವಳೂ ಆದ ಹೆಂಗಸು **"ಪ್ರಗಲ್ಭಾ"** ನಾಯಿಕೆ. "स्मरान्धा गाढतारुण्या समस्तरतकोविदा। भावोन्नता दरव्रीडा प्रगल्भाक्रान्तनायका" सा० द० ३-६०। ಮಧ್ಯಾ ಪ್ರಗಲ್ಭೆಯರಿಬ್ಬರೂ (1) धीरा, (2) अधीरा ಮತ್ತು (3) धीराधीरा ಎಂದು ಮೂರು ವಿಧ. ಇದರಿಂದ (1) मध्या धीरा, (2) मध्या अधीरा ಮತ್ತು (3) मध्या धीराधीरा, (4) प्रगल्भा धीरा, (5) प्रगल्भा अधीरा ಮತ್ತು (6) प्रगल्भा धीराधीरा ಎಂದು ಆರು ವಿಧ. "ते धीरा चाप्यधीरा च धीराधीरेति षड्विधे" सा० द० ३-६१।

**मध्या धीरा**—ಮುಗುಳುನಗೆಯಿಂದ ಕೂಡಿದ ವಕ್ರೋಕ್ತಿ (ಶ್ಲೇಷೆ ಮತ್ತು ಕಾಕುಗಳಿಂದ ಅರ್ಥಾಂತರ ತೋರುವ ಮನಚುಚ್ಚುವ ಮಾತು) ಯಿಂದ ನಾಯಕನ ಮನಸ್ಸಿಗೆ ಸಂತಾಪವುಂಟುಮಾಡುವವಳು **"ಮಧ್ಯಾ ಧೀರಾ"** ನಾಯಿಕೆ.

**मध्या अधीरा**—ಕೋಪಗೊಂಡು ಕಠಿನವಾದ ಮಾತುಗಳಿಂದ ಮನಸ್ಸಿಗೆ ಸಂತಾಪವುಂಟುಮಾಡುವವಳು **"ಮಧ್ಯಾ ಅಧೀರಾ"** ನಾಯಿಕೆ.

**मध्या धीराधीरा**—ಪ್ರಿಯನ ಅಪರಾಧವನ್ನು ಕಂಡು ಹೇಳಿ ಮೂದಲಿಸುವ ಧೈರ್ಯ ಸಾಲದೆ ಕಣ್ಣೀರಿಟ್ಟು ಅತ್ತು ತನ್ನ ಅಸಮಾಧಾನವನ್ನು ಸೂಚಿಸುವವಳು **"ಮಧ್ಯಾ ಧೀರಾಧೀರಾ"** ನಾಯಿಕೆ. "प्रियं सोत्प्रासवक्रोक्त्या मध्या धीरा दहेद्रुषा। धीराधीरा तु रुदितैरधीरा परुषोक्तिभिः" सा० द० ३-६२। "बाले, नाथ, विमुञ्च

मानिनि रुषं, रोषान्मया किं कृतं, खेदोऽस्मासु नमेऽपराध्यति भवान्, सर्वेऽपराधा मयि। तत्किं रोदिषि गद्गदेन वचसा, कस्याग्रतो रुद्यते, नन्वेतन्मम, का तवास्मि, दयिता, नास्मीत्यतो रुद्यते"।

**प्रगल्भा धीरा:** — ಕೋಪವನ್ನು ಒಳಗೇ ಅಡಗಿಸಿಕೊಂಡು ಹೊರಗೆ ಮಾತ್ರ ಆದರವನ್ನು ತೋರಿಸುತ್ತಾ ಸುರತಕ್ರೀಡೆಯಲ್ಲಿ ಉದಾಸೀನಳಾಗಿರುವವಳು "**ಪ್ರಗಲ್ಭಾ ಧೀರಾ**" ನಾಯಿಕೆ. "प्रगल्भा यदि धीरा स्यात् छन्नकोपाकृतिस्तदा। उदास्ते सुरते तत्र दर्शयन्त्यादरान् बहिः" सा० द० ३-६३।

**प्रगल्भा अधीरा:** — ನಾಯಕನ ಅಪರಾಧವನ್ನು ಕಂಡು ಅವನನ್ನು ಹೆದರಿಸಿ ಹೊಡೆದು ಕೋಪವನ್ನು ತೀರಿಸಿಕೊಳ್ಳುವವಳು "**ಪ್ರಗಲ್ಭಾ ಅಧೀರಾ**" ನಾಯಿಕೆ.

**प्रगल्भा धीराधीरा:** — ಮುಗುಳುನಗೆಯಿಂದ ಕೂಡಿದ ಮಾತುಗಳಿಂದಲೇ ನಾಯಕನ ಮನಸ್ಸನ್ನು ನೋಯಿಸುವವಳು "**ಪ್ರಗಲ್ಭಾಧೀರಾಧೀರಾ**" ನಾಯಿಕೆ. "धीराधीरा तु सोल्लुण्ठभाषितैः खेदयत्यमुम्। तर्जयेत्ताडयेदन्या प्रत्येकं ता अपि द्विधा। कनिष्ठज्येष्ठरूपत्वान्नायकप्रणयं प्रति" सा० द० ३-६४। ಈ ಮೇಲಿನ ಆರುವಿಧ ನಾಯಿಕೆಯರೂ (1) कनिष्ठा ಮತ್ತು (2) ज्येष्ठा ಭೇದದಿಂದ ಒಟ್ಟು ಹನ್ನೆರಡು ವಿಧವಾಗುವರು. ಇವರೊಡನೆ ಮುಗ್ಧಾ ನಾಯಿಕೆಯೂ ಸೇರಿ ಸ್ವಸ್ತ್ರೀ ನಾಯಿಕೆಯು ಹದಿಮೂರು ವಿಧ. "मध्याप्रगल्भयोर्भेदास्तस्माद्द्वादश कीर्तिताः। मुग्धा त्वेकैव तेन स्युः स्वीयाभेदास्त्रयोदश" सा० द० ३-६५।

**अन्यस्त्री** — ಪರಕೀಯ (ಅನ್ಯಸ್ತ್ರೀ) ನಾಯಿಕೆಯು (1) परोढा ಮತ್ತು (2) कन्यका ಎಂದು ಎರಡು ವಿಧ.

**परोढा** — ಉತ್ಸವಾದಿಗಳ ನಿಮಿತ್ತ ಪರಸ್ಥಳ ಯಾತ್ರೆ, ಮನೆಯ ಬಾಗಿಲಲ್ಲಿ ನಿಂತು ಬೀದಿಯಲ್ಲಿ ಹೋಗುತ್ತಿರುವವರನ್ನೆಲ್ಲಾ ನೋಡುತ್ತಿರುವುದು, ಬೀದಿ ಬೀದಿಗಳಲ್ಲಿ ಅಲೆಯುವುದು, ಅಕ್ಕಪಕ್ಕದ ತರುಣರ ಮನೆ ಮನೆಗಳಿಗೂ ಲಜ್ಜೆಯಿಲ್ಲದೆ ಹೋಗುವುದು ಇತ್ಯಾದಿಗಳಲ್ಲಿ ಆಸಕ್ತಿಯುಳ್ಳವಳು "**ಪರೋಢಾ**" ನಾಯಿಕೆ. "यात्रादिनिरतान्योढा कुलटा गलितत्रपा" सा० द० ३-६६।

**कन्यका** — ಮದುವೆಯಾಗದ ಸ್ತ್ರೀಸಹಜವಾದ ಲಜ್ಜೆಯಿಂದ ಕೂಡಿದ ನವಯುವತಿಯು "**ಕನ್ಯಾ**" ನಾಯಿಕೆ. "कन्यात्वजातोपयमा सलज्जा नवयौवना" सा०द० ३-६७।

**साधारणी** — ರತಿಕ್ರೀಡೆಯಲ್ಲಿ ಅತಿನಿಪುಣೆಯೂ ಚತುಃಷಷ್ಟಿ ಕಲೆಗಳಲ್ಲೂ ಚತುರೆಯೂ ಆಗಿರುವ ವೇಶ್ಯೆಯು "**ಸಾಧಾರಣೀ**" ನಾಯಿಕೆ. ಇವಳು ಕೇವಲ ಧನಾರ್ಜನೆಯಲ್ಲೇ ನಿರತಳಾಗಿ ಗುಣಹೀನರನ್ನು ದ್ವೇಷಿಸುವುದೂ ಇಲ್ಲ. ಗುಣಶಾಲಿಗಳನ್ನು ಹೆಚ್ಚು ಪ್ರೀತಿಸುವುದೂ ಇಲ್ಲ. ಅವರಿಂದ ಧನವನ್ನು ಸುಲಿಯಲು ಮಾತ್ರ ಪ್ರೀತಿಸುವವಳಂತೆ ನಟಿಸುತ್ತಾಳೆ. "धीरा कलाप्रगल्भा स्याद्वेश्या सामान्यनायिका। निर्गुणानपि न द्वेष्टि न रज्यति गुणिष्वपि। वित्तमात्रं समालोक्य सा रागं दर्शयेद्बहिः" सा० द० ३-६७, ६८। ಈ ಹದಿನಾರು ವಿಧ ನಾಯಿಕೆಯರೂ (1) स्वाधीनपतिका, (2) खण्डिता, (3) अभिसारिका, (4) कलहान्तरिता, (5) विप्रलब्धा, (6) प्रोषितभर्तृका, (7) वासकसज्जा ಮತ್ತು (8) विरहोत्कण्ठिता ಎಂಬ ಎಂಟು ಅವಸ್ಥಾಭೇದಗಳಿಂದ ಒಟ್ಟು ನೂರ ಇಪ್ಪತ್ತೆಂಟು (128) ವಿಧವಾಗುವರು. ಇವರೆಲ್ಲರೂ (1) उत्तमा, (2) मध्यमा ಮತ್ತು (3) अधमा ಭೇದಗಳಿಂದ ಒಟ್ಟು ಮುನ್ನೂರ ಎಂಬತ್ತುನಾಲ್ಕು (384) ವಿಧವಾಗುವರು. "इति साष्टाविंशतिशतमुत्तममध्याधमस्वरूपेण। चतुरधिकाशीतियुतं शतत्रयं नायिकाभेदाः" सा० द० ३-८७। ಮತ್ತೆ (1) दिव्या, (2) अदिव्या ಮತ್ತು (3) दिव्यादिव्या ಎಂಬ ಮೂರು ಭೇದಗಳಿಂದಲೂ (1) उद्धता, (2) उदात्ता, (3) ललिता ಮತ್ತು (4) शान्तिका ಎಂಬ ನಾಲ್ಕು ಭೇದಗಳಿಂದಲೂ ಈ ಎಲ್ಲಾ ನಾಯಿಕೆಯರೂ (1) पद्मिनी, (2) चित्रिणी, (3) शङ्खिनी ಮತ್ತು (4) हस्तिनी ಎಂಬ ನಾಲ್ಕು ಭೇದಗಳಿಂದಲೂ ಅಸಂಖ್ಯಾತರಾಗುವರು. ಗ್ರಂಥ ವಿಸ್ತರ ಭಯದಿಂದ ಇಷ್ಟಕ್ಕೇ ನಿಲ್ಲಿಸಲಾಗಿದೆ. "इतरा अप्यसंख्यास्ता नोक्ता विस्तरशङ्कया" सा० द० ३-८८। 2. ಶ್ರೇಷ್ಠ ಹೆಂಗಸು, ಕುಲೀನ ಹೆಂಗಸು.

**नायन ನಾಯನ** (वि०) ನಯನಸಂಬಂಧವಾದ, ಕಣ್ಣುಗಳಿಗೆ ಸಂಬಂಧಿಸಿದ. नयनस्येदम् "अण्" (४-३-१२०)।

**नार ನಾರ** (पुं०) 1. ಸದ್ಯಃ ಜನಿಸಿದ ಹಸುವಿನ ಕರು, ಆಗ ತಾನೆ ಹುಟ್ಟಿದ ಕರು. (पुं०ब०व०) 2. ಜಲ, ನೀರು. "आपो नारा इति प्रोक्ता आपो वै नरसूनवः" मनु० १-१०। (न०) 3. ಮನುಷ್ಯರ ಸಮೂಹ. नराणां समूहः "अण्" (४-२-३७)। (वि०) 4. ನರಸಂಬಂಧವಾದ, ಮನುಷ್ಯಸಂಬಂಧವಾದ. "घोरां नारकपालकुण्डलवतीं विद्युच्छटां दृष्टिभिर्मुञ्चन्तीम्" प्रबोध० ४-१। नरस्येदम् "अण्" (४-३-१२०)। 5. ಮನುಷ್ಯನ ಧರ್ಮಕ್ಕೆ ವಿರುದ್ಧವಲ್ಲದ. नर "अञ्" (वा० ४-४-४९)।

**नारक ನಾರಕ** (पुं०) 1. ನರಕ. नरक एव "अण्" (५-४-३८)। "नाहं वन्दे तव चरणयोर्द्वन्द्वमद्वन्द्वहेतो

कुम्भीपाकं गुरुमपि हरे नारकं नापनेतुम्" मु० मा० ४।
2. ನರಕದಲ್ಲಿ ಯಾತನೆಯನ್ನು ಅನುಭವಿಸುತ್ತಿರುವ ಜೀವ. "सत्त्वास्तु नारकाः" अम० । (वि०) 3. ನರಕಸಂಬಂಧವಾದ. नरकस्येदम् "अण्" (४-३-१२०)।

**नारकपाल ನಾರಕಪಾಲ** (न०) ತಲೆಯೆಲುಬಿನ ಚಿಪ್ಪು. नारं च तत् कपालं च। "घोरां नारकपालकुण्डलवतीं विद्युच्छटां दृष्टिभिर्मुञ्चन्तीं विकरालमूर्तिमनलज्वाला-पिशङ्गैः कचैः" प्रबोध० ४-१।

**नारकिन् ನಾರಕಿನ್** (वि०) ನರಕಯಾತನೆಯನ್ನು ಅನುಭವಿಸುವ. नरको भोग्यतयाऽस्त्यस्य "इनिः"(५-२-११५)।

**नारङ्ग ನಾರಙ್ಗ** (पुं०) 1. ಕಿತ್ತಳೆಯ ಗಿಡ. नृ (नये) "अङ्गच्" उ० बाहु०। 2. ಹಿಪ್ಪಲಿಯ ರಸ. 3. ವಿಟ, ಕಾಮುಕ, ಸ್ತ್ರೀಲೋಲ. 4. ಯಮಳ, ಅವಳಿ. 5. ಕೆಂಪು ಮಾಲಂಗಿ.

**नारद ನಾರದ** (पुं०) 1. ನಾರದಮುನಿ, ದೇವಋಷಿ. नारं नरसमूहं द्यति खण्डयति कलहेन—दो (अवखण्डने) "कः" (३-२-३)। नारं नरस्य धर्म्यं ददाति—डु दाञ् (दाने) "कः" (३-२-३)। नुरिदं नारम् अज्ञानम्, तत् द्यति ज्ञानोपदेशेन—दो (अवखण्डने) "कः" (३-२-३)। नारं पानीयं ददाति पितृभ्यः इति वा। "नारं पानीय-मित्युक्तं तत् पितृभ्यः सदा भवान्। ददाति तेन ते नाम नारदेति भविष्यति"। "नारदाद्याः सुरर्षयः" अम०। 2. ಸ್ವಾಯಂಭುವ ಮನ್ವಂತರದಲ್ಲಿ ಬ್ರಹ್ಮನ ಹತ್ತು ಮಂದಿ ಮಾನಸ ಪುತ್ರರಲ್ಲೊಬ್ಬ. "मरीचिरत्र्यङ्गिरसौ पुलस्त्यः पुलहः क्रतुः। भृगुर्वसिष्ठो दक्षश्च दशमस्तत्र नारदः। उत्सङ्गान्नारदो जज्ञे दक्षोऽङ्गुष्ठात् स्वयम्भुवः" भाग० ३-१२। ಪುರಾಣ ಮತ್ತು ಇತಿಹಾಸಗಳಲ್ಲಿ ಪ್ರಸಿದ್ಧನಾದ ಈ ಋಷಿಯು ಪರ್ವತಋಷಿಯ ಸೋದರಮಾವ. "नारदो मातुलस्तत्र भागिनेयश्च पर्वतः। तावुभौ तपसो-पेताववनीतलचारिणौ" भा० शान्ति० २९-६। ಲೋಕದಲ್ಲಿ ತೊಂದರೆಗೆ ಸಿಲುಕಿ ಕಷ್ಟಪಡುತ್ತಿರುವವರೆಲ್ಲರಿಗೂ ನಿವಾರಣೋಪಾಯವನ್ನು ತೋರಿಸಿಕೊಟ್ಟು ಉಪಕಾರ ಮಾಡುತ್ತ ಅವರಿಗೆ ಮಂಗಳವನ್ನುಂಟುಮಾಡುವುದೇ ಈ ಋಷಿಯ ಮುಖ್ಯ ಕಾರ್ಯವಾಗಿತ್ತು. ಇಂದ್ರಾದಿ ದೇವತೆಗಳ ಮತ್ತು ಬ್ರಹ್ಮ ವಿಷ್ಣು ಮಹೇಶ್ವರರ ಸಭೆಗಳಿಗೆ ಹೋಗಿ ಬರುವುದಲ್ಲದೆ ಭೂಲೋಕದಲ್ಲಿಯೂ ವಿಶೇಷವಾಗಿ ಈ ಋಷಿಯು ಸಂಚರಿಸುತ್ತಿದ್ದನು. ಸೃಷ್ಟಿಕಾರ್ಯದಲ್ಲಿ ನಿಯುಕ್ತರಾಗಿದ್ದ ದಕ್ಷನ ಪುತ್ರರಾದ ಹರ್ಯಶ್ವ ಶಬಲಾಶ್ವರಿಗೆ ಉಪದೇಶಮಾಡಿ ಅವರನ್ನು ಸೃಷ್ಟಿಯ ಕಾರ್ಯದಿಂದ ವಿಮುಖರನ್ನಾಗಿ ಮಾಡಿದುದರಿಂದ ನಾರದನಿಗೆ ದಕ್ಷನು ನಿಲ್ಲಲು ಎಲ್ಲಿಯೂ ನೆಲೆಯಿಲ್ಲದಿರುವಂತೆಯೂ ಕಲಹಪ್ರಿಯನಾಗಿರುವಂತೆಯೂ ಶಾಪ ಕೊಟ್ಟನು. ಇದರಿಂದ ನಾರದನು ತ್ರಿಲೋಕಸಂಚಾರಿಯಾದನು. "तांश्चापि नष्टान् विज्ञाय पुत्रान् दक्षः प्रजापतिः। क्रोधं चक्रे महाभागो नारदं तं शशाप च" विष्णुपु० १-१५-१०१। "तन्तुकृन्तन यन्नस्त्वमभद्रमचरः पुनः। तस्माल्लोकेषु ते मूढ न भवेद्भ्रमतः पदम्" भाग० ६-५-४३। ವಾಲ್ಮೀಕಿ ಮಹರ್ಷಿಗೆ ಶ್ರೀರಾಮನ ಮಹಿಮೆಯನ್ನೂ ರಾಮಾಯಣ ಕಥೆಯನ್ನೂ ಬೋಧಿಸಿ ರಾಮಾಯಣವನ್ನು ರಚಿಸುವಂತೆ ಹೇಳಿದನು. ದ್ರೌಪದೀಸ್ವಯಂವರವಾದನಂತರ ಪಾಂಡವರು ವಾರಣಾವತದಲ್ಲಿದ್ದಾಗ ನಾರದನು ಅಲ್ಲಿಗೆ ಹೋಗಿ ಸುಂದೋಪಸುಂದರ ಕಥೆಯನ್ನು ಹೇಳಿ ಐದು ಮಂದಿಯೂ ದ್ರೌಪದಿಯೊಡನೆ ಕ್ರಮವಾಗಿ ಒಂದೊಂದು ವರ್ಷಕಾಲ ಸಂಸಾರ ಮಾಡಿಕೊಂಡಿರುವಂತೆಯೂ ಆ ಕಟ್ಟುಪಾಡಿಗೆ ತಪ್ಪಿದರೆ ಒಂದು ವರ್ಷ ವನವಾಸಮಾಡುವಂತೆಯೂ ಪ್ರತಿಜ್ಞೆಮಾಡಿಸಿದನು. "धृतराष्ट्राभ्यनुज्ञाता इन्द्रप्रस्थं प्रविश्य तत्। रेमिरे पुरुषव्याघ्राः कृष्णया सह पाण्डवाः। प्राप्य राज्यं महातेजाः सत्यसन्धो युधिष्ठिरः। पालयामास धर्मेण पृथिवीं भ्रातृभिः सह। ........आययौ धर्मराजं तु द्रष्टुकामोऽथ नारदः। ........तमागतमृषिं दृष्ट्वा प्रत्युद्गम्याभिवाद्य च। आसनं रुचिरं तस्मै प्रददौ स युधिष्ठिरः। देवर्षेरुपविष्टस्य स्वयमर्घ्यं यथाविधि। प्रादाद्युधिष्ठिरो धीमान् राज्यं तस्मै न्यवेदयत्। प्रतिगृह्य तु तां पूजामृषिः प्रीतमनास्तदा। ........विविक्ते पाण्डवान् सर्वानुवाच भगवानृषिः। पाञ्चाली भवतामेका धर्मपत्नी यशस्विनी। यथा वो नात्र भेदः स्यात् तथा नीतिर्विधीयताम्। सुन्दोपसुन्दौ हि पुरा भ्रातरौ सहिता वुभौ। आस्तामवध्यावन्येषां त्रिषु लोकेषु विश्रुतौ। तिलोत्तमायास्तौ हेतोरन्योन्यमभिजघ्नतुः। रक्ष्यतां सौहृदं तस्मादन्योन्यप्रीतिभावकम्। ....एवमुक्ता महात्मानो नारदेन महर्षिणा। समयं चक्रिरे राजंस्तेऽन्योन्यवश-मागताः। समक्षं तस्य देवर्षेर्नारदस्यामितौजसः। एकैकस्य गृहे कृष्णा वसेद्वर्षमकल्मषा। द्रौपद्या नः सहासीनानन्योन्यं योऽभिदर्शयेत्। स नो द्वादश मासानि ब्रह्मचारी वने वसेत्" भा० आदि० २२८-२३२। ಅಶ್ವಪತಿರಾಜನ ಮಗಳಾದ ಸಾವಿತ್ರಿಯು ಸತ್ಯವಂತನನ್ನು ಮದುವೆಯಾದ

ವಿಷಯ ತಿಳಿದು ಒಂದು ವರ್ಷಕ್ಕೆ ಸರಿಯಾಗಿ ಅವನಿಗೆ ಅವಸಾನಕಾಲ ಪ್ರಾಪ್ತವಾಗುವುದೆಂದು ತಿಳಿಯಪಡಿಸಿ ಸಾವಿತ್ರಿಯು ತಕ್ಕ ವ್ರತಾಚರಣೆಯ ಮೂಲಕ ತನ್ನ ಪತಿಯನ್ನು ಬದುಕಿಸಿಕೊಳ್ಳಲು ಸೌಕರ್ಯವನ್ನು ಕಲ್ಪಿಸಿ ಕೊಟ್ಟನು. "गणयन्त्याश्च सावित्र्या दिवसे दिवसे गते। यद्वाक्यं नारदेनोक्तं वर्तते हृदि नित्यशः। चतुर्थेऽहनि मर्तव्यमिति सञ्चिन्त्य भामिनी। व्रतं त्रिरात्रमुद्दिश्य दिवारात्रं स्थिताऽभवत्। त्रयोदश्यां चोपवासं प्रतिपत्सु च पारणाम्। आयुष्यं वर्धते भर्तुर्व्रतेनानेन भारत। .... अस्तं गते मयाऽऽदित्ये भोक्तव्यं कृतकामया। एष मे हृदि संकल्पः समयश्च कृतो मया" भा० वन० २९७। ಶ್ರೀಕೃಷ್ಣನ ಮಹಿಮೆಯನ್ನು ತಿಳಿಯಲು ನಾರದನು ದ್ವಾರಕೆಯಲ್ಲಿ ಹದಿನಾರು ಸಹಸ್ರ ಪತ್ನಿಯರೊಡನೆ ಸಂಸಾರ ಮಾಡಿಕೊಂಡಿದ್ದ ಶ್ರೀಕೃಷ್ಣನ ಪ್ರತಿಯೊಂದು ಮನೆಗೂ ಏಕಕಾಲದಲ್ಲಿ ಹೋಗಿ ನೋಡಿದಾಗ ಎಲ್ಲಾ ಕಡೆಯಲ್ಲೂ ನಾರದನಿಗೆ ದರ್ಶನ ಕೊಟ್ಟು ತನ್ನ ಮಹಿಮೆಯನ್ನು ಪ್ರದರ್ಶಿಸಿದನು. "नरकं निहतं श्रुत्वा तथोद्वाहं च योषिताम्। कृष्णेनैकेन बह्वीनां तद्दिदृक्षुः स्म नारदः। चित्रं बतैतदेकेन वपुषा युगपत् पृथक्। गृहेषु द्व्यष्टसाहस्रं स्त्रिय एक उदावहत्। इत्युत्सुको द्वारवतीं देवर्षिर्द्रष्टुमागमत्। ....तत्र षोडशभिः सद्मसहस्रैः समलंकृतम्। विवेशैकतमं शौरेः पत्नीनां भवनं महत्। ... तस्मिन् समानगुणरूपवयस्सुवेषदासीसहस्रयुतयानुसवं गृहिण्या। विप्रो ददर्श चमरव्यजनेन रुक्मदण्डेन सात्वतपतिं परिवीजयन्त्या। ततोऽन्यदाविशद्गेहं कृष्णपत्न्याः स नारदः। योगेश्वरस्याङ्ग योगमायाविवित्सया। दीव्यन्तमक्षैः तत्रापि प्रियया चोद्धवेन च। पूजितः परया भक्त्या प्रत्युत्थानासनादिभिः। पृष्टश्चैवाविदुषेवासौ कदायातो भवानिति। ......स तु विस्मित उत्थाय तूष्णीमन्यदगात् गृहम्। तत्राप्याचष्ट गोविन्दं लालयन्तं सुतान् शिशून्। ततोऽन्यस्मिन् गृहेऽपश्यन्मज्जनाय कृतोद्यमम्। जुह्वन्तं च वितानाग्नीन् यजन्तं पञ्चभिर्मखैः। भोजयन्तं द्विजान् क्वापि भुञ्जानमवशेषितम्। क्वापि सन्ध्यामुपासीनं जपन्तं ब्रह्म वाग्यतम्" ಇತ್ಯಾದಿ. ಭಾಗ० १०-६९। 2. ವೈವಸ್ವತ ಮನ್ವಂತರದಲ್ಲಿ ಕಶ್ಯಪ ಋಷಿಯಿಂದ ಮುನಿಯೆಂಬ ಪತ್ನಿಯಲ್ಲಿ ಜನಿಸಿದ ಒಬ್ಬ ದೇವ ಗಂಧರ್ವ. "कलिः पञ्चदशस्तेषां नारदश्चैव षोडशः। इत्येते देवगन्धर्वाः मौनेयाः परिकीर्तिताः" भा० आदि० ६६-४४। 3. ವಿಶ್ವಾಮಿತ್ರ ಮಹರ್ಷಿಯ ಒಬ್ಬ ಮಗ. "तस्य पुत्रा महात्मानो ब्रह्मवंशविवर्धनाः। तपस्विनो ब्रह्मविदो गोत्रकर्तार एव च। ......लीलाढ्यो नारदश्चैव तथा कूर्चामुखः स्मृतः" भा० अनु० ७। 4. ಒಂದು ಪರ್ವತ.

**नारदपञ्चरात्र ನಾರದಪಂಚರಾತ್ರ** (न०) ನಾರದಋಷಿಯಿಂದ ರಚಿತವಾದ ಒಂದು ತಂತ್ರಗ್ರಂಥ. ಈ ಗ್ರಂಥದಲ್ಲಿ (1) ಅಭಿಗಮನ, (2) ಉಪಾದಾನ, (3) ಇಜ್ಯೆ, (4) ಸ್ವಾಧ್ಯಾಯ ಮತ್ತು (5) ಯೋಗಗಳೆಂದು ಐದು ವಿಷಯಗಳು ಪ್ರತಿಪಾದಿಸಲ್ಪಟ್ಟಿವೆ. **ಅಭಿಗಮನ**—ದೇವಾಲಯದ ಮಾರ್ಗವನ್ನು ಚೆನ್ನಾಗಿ ಗುಡಿಸಿ ಸಾರಿಸಿ ಅಲಂಕರಿಸುವುದು. **ಉಪಾದಾನ**—ಗಂಧ ಪುಷ್ಪ ಮೊದಲಾದ ಪೂಜಾಸಾಮಗ್ರಿಗಳನ್ನು ಸಂಪಾದಿಸುವುದು. **ಇಜ್ಯಾ**—ದೇವರಪೂಜೆ. **ಸ್ವಾಧ್ಯಾಯ**—ಮಂತ್ರಜಪ ಸ್ತೋತ್ರಪಠನ ಭಗವನ್ನಾಮಸಂಕೀರ್ತನ ಮತ್ತು ತತ್ತ್ವಶಾಸ್ತ್ರಾವಲೋಕನ. **ಯೋಗ**—ದೇವತಾನುಸಂಧಾನ.

**नारदशिक्षा ನಾರದಶಿಕ್ಷಾ** (स्त्री०) ವರ್ಣೋಚ್ಚಾರಣ ವಿಷಯವನ್ನು ತಿಳಿಸುವ ನಾರದರಚಿತವಾದ ಒಂದು ಗ್ರಂಥ.

**नारदी ನಾರದೀ** (स्त्री०) ಸ್ತ್ರೀರೂಪವನ್ನು ಪಡೆದ ನಾರದ. ನಾರದನು ಶ್ವೇತದ್ವೀಪಕ್ಕೆ ಹೋಗಿದ್ದಾಗ ಅಲ್ಲಿ ಸೌಂದರ್ಯಭರಿತರಾದ ಅನೇಕ ತರುಣರನ್ನು ಕಂಡು ಆಶ್ಚರ್ಯಚಕಿತನಾದನು. ಮಾಯಾಸ್ವರೂಪವೆಂತಹುದೆಂದು ತಿಳಿಯಲು ಶ್ರೀವಿಷ್ಣುವನ್ನು ಕೇಳಲಾಗಿ ಶ್ರೀವಿಷ್ಣುವು ನಾರದನನ್ನು ಗರುಡನ ಮೇಲೆ ಕುಳ್ಳಿರಿಸಿಕೊಂಡು ಹೋಗಿ ಕನ್ಯಾಕುಬ್ಜದ ಸರೋವರದಲ್ಲಿ ಸ್ನಾನಮಾಡಿಸಿದ ಮೇಲೆ ನಾರದನು ಮೋಹಿನೀ ರೂಪವನ್ನು ಪಡೆದನು. ಕನ್ಯಾಕುಬ್ಜದ ದೊರೆಯಾದ ತಾಲಧ್ವಜನು ನಾರದಿಯನ್ನು ಕರೆದೊಯ್ದು ಮದುವೆಯಾದನು. ನಾರದಿಯು ಇಪ್ಪತ್ತು ಮಂದಿ ಮಕ್ಕಳನ್ನು ಪಡೆದಳು. ಶತ್ರುಗಳು ಬಂದು ತಾಲಧ್ವಜನನ್ನೂ ಅವನ ಮಕ್ಕಳನ್ನೂ ಸಂಹರಿಸಲು ನಾರದಿಯು ಶೋಕಸಂತಪ್ತಳಾದಾಗ ಶ್ರೀವಿಷ್ಣುವು ಅಲ್ಲಿಗೆ ಬಂದು ಪುಂತೀರ್ಥದಲ್ಲಿ ಸ್ನಾನಮಾಡಿಸಲಾಗಿ ನಾರದನು ತನ್ನ ಪೂರ್ವರೂಪವನ್ನು ಪಡೆದನು.

**नारदीय ನಾರದೀಯ** (वि०) 1. ನಾರದನಿಗೆ ಸಂಬಂಧಿಸಿದ. 2. ನಾರದನಿಂದ ರಚಿತವಾದ.

**नारदीयपुराण ನಾರದೀಯಪುರಾಣ** (न०) ನಾರದನಿಗೆ ಸನಕ ಸನಂದನ ಮೊದಲಾದವರು ಮಾಡಿದ ಉಪದೇಶ ರೂಪವಾದ ಒಂದು ಪುರಾಣ. ಇದರಲ್ಲಿ 25,000 ಗ್ರಂಥಗಳಿರುವುವು. ಈ ಪುರಾಣದಲ್ಲಿ ಪ್ರತಿಪಾದ್ಯ ವಿಷಯಗಳಿವು.

ಸೃಷ್ಟಿಯ ವರ್ಣನೆ. ನಾನಾಧರ್ಮಗಳ ವರ್ಣನೆ. ಮೋಕ್ಷ ಧರ್ಮದಲ್ಲಿ ಮೋಕ್ಷೋಪಾಯ ನಿರೂಪಣೆ, ವೇದಾಂಗಗಳು, ಶುಕೋತ್ಪತ್ತಿ, ಪುರಾಣಲಕ್ಷಣ, ಚೈತ್ರ ಮೊದಲಾದ ಮಾಸಗಳಲ್ಲಿ ಪ್ರತಿಪದಾದಿ ತಿಥಿಗಳಲ್ಲಿ ಮಾಡಬೇಕಾದ ವ್ರತಗಳು ಮುಂತಾದ ವಿಷಯಗಳು ಪ್ರತಿಪಾದಿತವಾಗಿವೆ.

**नारसिंह ನಾರಸಿಂಹ** (ಪುಂ) ನರಸಿಂಹಪುರಾಣ, ನರಸಿಂಹಾವತಾರದ ಚರಿತ್ರೆಯನ್ನು ವರ್ಣಿಸುವ ಒಂದು ಉಪಪುರಾಣ. ಇದರಲ್ಲಿ ಹದಿನೆಂಟು ಸಹಸ್ರ ಶ್ಲೋಕಗಳಿರುವುವು. "पाद्मे पुराणे यत्प्रोक्तं नरसिंहोपवर्णनम्। तच्चाष्टादशसाहस्रं नारसिंहमिहोच्यते" मत्स्यपु०।

**नारसिंहकल्प ನಾರಸಿಂಹಕಲ್ಪ** (ಪುಂ) ಚತುರ್ಮುಖ ಬ್ರಹ್ಮನ ತಿಂಗಳಲ್ಲಿ ಹದಿನಾರನೆಯ ದಿನ. ಬ್ರಹ್ಮನ ತಿಂಗಳಲ್ಲಿ ಮೂವತ್ತು ದಿನಗಳಿಗೂ ಒಂದೊಂದು ಕಲ್ಪವೆಂದು ಹೆಸರು. ಈ ಮೂವತ್ತು ಕಲ್ಪಗಳಲ್ಲಿ ನಾರಸಿಂಹಕಲ್ಪವು ಹದಿನಾರನೆಯದು. ಈಗ ನಡೆಯುತ್ತಿರುವ (ವೈವಸ್ವತ ಮನ್ವಂತರದ) ಚತುರ್ಮುಖನ ತಿಂಗಳಿನ ಹದಿನಾರನೆಯ ದಿನ ನರಸಿಂಹಾವತಾರ ನಡೆಯಿತು.

**नारा ನಾರಾ** (ಸ್ತ್ರೀಂ) ಜಲ, ನೀರು. नरस्येदम् "अण्" (४-३-१२०)। "आपो नारा इति प्रोक्ता आपो वै नरसूनवः" मनु० १-१०। ನರರೂಪಿಯಾದ ಪರಮಾತ್ಮನ ಅಪತ್ಯವೆಂದು ಪರಿಗಣಿಸಿರುವುದರಿಂದ ನೀರಿಗೆ ಈ ಹೆಸರು.

**नाराच ನಾರಾಚ** (ಪುಂ) 1. ಲೋಹಮಯವಾದ ಬಾಣ. नारं नरसमूहमाचामति— आ + चम् (अदने) "डः" (३-२-१०१)। "नाराचक्षेपणीयाश्मनिष्पेषोत्पतितानलम्" रघु० ४-७७। 2. ನೀರಿನ ಆನೆ. (ಸ್ತ್ರೀಂ) -ची -ಚೀ. 3. ಅಕ್ಕಸಾಲಿಗನ ತಕ್ಕಡಿ. "नाराचो लोहसायके। जलेभे नाराच्येषण्याम्" हेम०।

**नाराचिका ನಾರಾಚಿಕಾ** (ಸ್ತ್ರೀಂ) ಅಕ್ಕಸಾಲಿಗನು ಚಿನ್ನ ಬೆಳ್ಳಿ ತೂಗುವ ತಕ್ಕಡಿ. नाराचस्तदाकारोऽस्त्यस्याः "ठन्" (५-२-११५)।

**नारायण ನಾರಾಯಣ** (ಪುಂ) ಮಹಾವಿಷ್ಣು, ಪರಮಾತ್ಮ, ಪರಬ್ರಹ್ಮ. नराणां समूहो नारम्, तदयनमस्य—णत्वम् (८-४-३)। नाराः ईयन्तेऽनेन "ल्युट्" (३-३-११७)। नराज्जातानि तत्त्वानि अयनमस्य इति वा। ತನ್ನಿಂದ ಉಂಟಾದ ತತ್ತ್ವಗಳೆಲ್ಲಕ್ಕೂ ತಾನೇ ಆಶ್ರಯನಾದುದರಿಂದ ಪರಮಾತ್ಮನು ನಾರಾಯಣನು. ಇದರಿಂದ ನಾರಾಯಣನು ಸರ್ವವ್ಯಾಪಿಯಾಗಿರುವನು. "नराज्जातानि तत्त्वानि नाराणीति विदुर्बुधाः। तान्येवचायनं तस्य तेन नारायणः स्मृतः"। ಬ್ರಹ್ಮಸೃಷ್ಟಿಗೆ ಪೂರ್ವದಲ್ಲಿ ಮಹಾಜಲೌಘಮಧ್ಯದಲ್ಲಿ ಪರಬ್ರಹ್ಮನಿಗೆ ಅಪ್ಪು (ಜಲ) ಆಶ್ರಯವಾಗಿದ್ದುದರಿಂದ ಪರಮಾತ್ಮನು ನಾರಾಯಣನು. नरः अक्षयः निर्विकारः परमात्मा, तस्माज्जाता नारा आपः अस्य परमात्मनो अयनमिति असौ नारायणः। "आपो नारा इति प्रोक्ता आपो वै नरसूनवः। ता यदस्यायनं पूर्वं तेन नारायणः स्मृतः" विष्णुपु० १-४-६। "जह्नुर्नारायणो नरः" वि० स०। नराः स्वरूपप्रवाहनित्यवस्तूनि, तेषां समूहा नाराः, ते अयनमाश्रयोऽस्य तेषामयनमिति वा नारायणः। "नान्यः पन्था विद्यतेऽयनाय"। ನಾರಾಯಣನೇ ಪರಮಾತ್ಮನು, ನಾರಾಯಣನೇ ಪರಬ್ರಹ್ಮ. ಪರಮಾತ್ಮನು ಸರ್ವವ್ಯಾಪಿ. "नारायणपरं ब्रह्म तत्त्वं नारायणः परः। यच्च किञ्चिज्जगत्यस्मिन् दृश्यते श्रूयतेऽपि वा। अन्तर्बहिश्च तत्सर्वं व्याप्य नारायणः स्थितः"। "एको ह वै नारायण आसीत्"। "चक्षुश्च द्रष्टव्यं च नारायणः"। "अथ दिव्यो देव एको नारायणः"। ಈ ರೀತಿ ಪರಮಾತ್ಮನಿಗೆ ಸರ್ವದೇಶವ್ಯಾಪಿತ್ವ ಸರ್ವಾಂತರ್ಯಾಮಿತ್ವ ಸರ್ವಾತ್ಮಕತ್ವ ಮೊದಲಾದುವು ಪ್ರತಿಪಾದಿತವಾಗಿವೆ. ಮತ್ತು ಪ್ರತಿಶಾಖೆಯಲ್ಲೂ ಮೂರ್ತ್ಯಂತರವ್ಯಾವರ್ತಕವಾದ ಹೆಸರು ಉಕ್ತವಾಗಿದೆ.

ಸಮಸ್ತ ಜಗತ್ತಿನ ಸೃಷ್ಟಿಸ್ಥಿತಿಲಯಗಳೆಲ್ಲಕ್ಕೂ ನಾರಾಯಣನೇ ಕಾರಣನು. ತಾನೊಬ್ಬನೇ ಬ್ರಹ್ಮ ವಿಷ್ಣು ಮಹೇಶ್ವರರೆಂಬ ನಾಮರೂಪಗಳನ್ನು ಹೊಂದಿ ಈ ಕಾರ್ಯಗಳನ್ನು ನಡೆಸುವನು. "सृष्टिस्थित्यन्तकरणीं ब्रह्मविष्णुशिवात्मिकाम्। स संज्ञां याति भगवानेक एव जनार्दनः" विष्णुपु० १-२-६६।

ಬ್ರಹ್ಮಸೃಷ್ಟಿಗೆ ಪೂರ್ವದಲ್ಲಿದ್ದ ಸ್ಥೂಲ ಚೇತನಾಚೇತನ ಶರೀರಿಯಾದ ಪರಮಾತ್ಮನಿಂದ ಅಭಿವ್ಯಕ್ತನಾಮರೂಪಾತ್ಮಕವಾದ ಜಗತ್ತು ಉತ್ಪನ್ನವಾಯಿತು. "असद्वा इदमग्र आसीत्। ततो वै सदजायत। तदात्मानं स्वयमकुरुत" तै० उ०।

ಬ್ರಹ್ಮಾದಿ ಸ್ತಂಬಪರ್ಯಂತವಾದ ಈ ಜಗತ್ತು ಯಾರಿಂದ ಉತ್ಪನ್ನವಾಯಿತೋ ಯಾರಿಂದ ಜೀವಿಸಿರುವುದೋ ಮತ್ತು ಯಾರಿಂದ ಪ್ರಲಯ ಹೊಂದುವುದೋ ಅದೇ ಪರಬ್ರಹ್ಮ. "यतो वा इमानि भूतानि जायन्ते। येन जातानि जीवन्ति। यत्प्रयन्त्यभिसंविशन्ति। तद्विजिज्ञासस्व। तद्ब्रह्मेति" तै० उ०। "यस्मादिदं जगदजायत यत्र तिष्ठत्यन्ते समस्तमिदमस्तमुपैति यत्र। तस्मै

नमः सदसदादिविकल्पशून्यचैतन्यमात्रवपुषे पुरुषोत्तमाय" विष्णुपु० १-१-१।

ಜಗತ್ತಿನ ಸೃಷ್ಟಿಗೆ ಪೂರ್ವದಲ್ಲಿ ಚತುರ್ಮುಖ, ಪರಶಿವ, ಭೂಮಿ, ಅಂತರಿಕ್ಷ, ನಕ್ಷತ್ರಗಳು, ಅಗ್ನಿ, ಚಂದ್ರ ಸೂರ್ಯರು ಮೊದಲಾದವರಾರೂ ಇರಲಿಲ್ಲ. ಇವರೆಲ್ಲರ ಸೃಷ್ಟಿಗೆ ಪೂರ್ವದಲ್ಲಿ ಏಕಾಕಿಯಾಗಿ ಧ್ಯಾನಾಸಕ್ತನಾಗಿದ್ದ ನಾರಾಯಣ ನಿಂದ ಒಬ್ಬ ಕನ್ಯೆಯ ಮತ್ತು ದಶೇಂದ್ರಿಯಗಳ ಉತ್ಪತ್ತಿ ಯಾಯಿತು. ಅನಂತರ ಮತ್ತೆ ಧ್ಯಾನಮಾಡಲು ಲಲಾಟ ದಿಂದ ಸ್ವೇದವು ಬಿದ್ದು ಆ ನೀರು ಹಿರಣ್ಮಯವಾದ ಅಂಡ ವಾಯಿತು. ಅದರಿಂದ ಚತುರ್ಮುಖನು ಜನಿಸಿದನು. "एको ह वै नारायण आसीत् न ब्रह्मा नेशानो नेमे द्यावा-पृथिवी न नक्षत्राणि नापो नाग्निर्न सोमो न सूर्यः स एकाकी न रमेत तस्य ध्यानान्तस्थस्य एका कन्या दशेन्द्रियाणि....". "अथ पुनरेव नारायणः सोऽन्यं कामं मनसा ध्यायत तस्य ध्यानान्तस्थस्य ललाटात् स्वेदोऽपतत् ता इमा आपः तद्धिरण्मयमण्डमभवत् तत्र चतुर्मुखोऽजायत"।

ಮತ್ತೆ ಧ್ಯಾನಾಸಕ್ತನಾದ ನಾರಾಯಣನ ಲಲಾಟದಿಂದ ಸ್ವೇದಜಲವು ಬಿದ್ದು ಅದು ನೊರೆಯಾಯಿತು. ಅದರಿಂದ ಫಾಲಾಕ್ಷನಾದ ಪರಮೇಶ್ವರನು ಜನಿಸಿದನು. "अथ पुनरेव नारायणस्सोऽन्यं कामं मनसा ध्यायत तस्य ध्यानान्तस्थस्य ललाटात् स्वेदोऽपतत् स्वेदाद्बुद्बुदमभवत् बुद्बुदात् त्र्यक्षः शूलपाणिः पुरुषोऽजायत" महोप०।

ಆನಂದಸ್ವರೂಪನಾದ ಶ್ರೀಮನ್ನಾರಾಯಣನು ಮೊದಲು ದೇವ ಮನುಷ್ಯಾದಿ ರೂಪದಿಂದ ಅನೇಕ ನಾಮ ರೂಪಗಳನ್ನು ಅಪೇಕ್ಷಿಸಿ ಜಗತ್ತಿನ ಸೃಷ್ಟಿಗಾಗಿ ಸಂಕಲ್ಪಿಸಿ ದನು. "सोऽकामयत। बहुस्यां प्रजायेयेति। स तपोऽतप्यत। स तपस्तप्त्वा। इदगं सर्वमसृजत" तै० उ०।

ಚೇತನಾಚೇತನಾತ್ಮಕವಾದ ಸಕಲ ಜಗತ್ತೂ ಪರಮ ಪುರುಷನಾದ ನಾರಾಯಣನ ಶರೀರವಾಗಿದೆ. ಪರಮಾತ್ಮ ನಿಗೆ ಭೂಮಿಯೇ ಪಾದಗಳು. ಆಕಾಶವೇ ನಾಭಿ (ಹೊಕ್ಕಳು). ವಾಯುವೇ ಉಸಿರು. ಚಂದ್ರ ಸೂರ್ಯರೇ ನೇತ್ರಗಳು. ದಿಕ್ಕುಗಳೇ ಕರ್ಣಗಳು. ಅಂತರಿಕ್ಷವೇ ಶಿರಸ್ಸು. ಅಗ್ನಿಯೇ ವದನ. ಸಮುದ್ರವೇ ವಾಸಸ್ಥಾನ. ಈ ರೀತಿ ಯಾದ ಪರಮಾತ್ಮನ ಶರೀರದೊಳಗೆ ಸಕಲ ಪ್ರಪಂಚವೂ ಅಡಗಿರುವುದು. "भूः पादौ यस्य नाभिर्वियदसुरनिलः चन्द्रसूर्यौ च नेत्रे कर्णावाशाः शिरो द्यौर्मुखमपि दहनो यस्य वास्तेयमब्धिः। अन्तस्थं यस्य विश्वं सुरनरखगगो भोगिगन्धर्वदैत्यैश्चित्रं रंरम्यते तं त्रिभुवनवपुषं विष्णुमीशं नमामि"।

ಪರಮಪುರುಷನಾದ ಶ್ರೀಮನ್ನಾರಾಯಣನು ಸಮಷ್ಟಿ ಪುರುಷನೆನಿಸಿದ ಬ್ರಹ್ಮನನ್ನು ತನಗೆ ಶರೀರವನ್ನಾಗಿ ಮಾಡಿ ಕೊಂಡು ಅವನಲ್ಲೇ ಅಂತರಾತ್ಮನಾಗಿ ಕಾಲಕರ್ಮ ಸ್ವಭಾವ ಗಳನ್ನನುಸರಿಸುತ್ತ ಬ್ರಹ್ಮಾಂಡವನ್ನು ಪ್ರವೇಶಿಸಿ ಅದನ್ನು ಜೀವಸಹಿತವನ್ನಾಗಿ ಮಾಡಿದಾಗ ಆ ಅಂಡದಿಂದ ಸಾವಿರ ತೊಡೆಗಳು, ಸಾವಿರ ಕಾಲುಗಳು, ಸಾವಿರ ತೋಳುಗಳು ಮತ್ತು ಸಾವಿರ ಮುಖಗಳಿಂದ ಕೂಡಿದ ಒಂದು ಪುರುಷಾ ಕಾರವು ಹೊರಟಿತು. ಅವನೇ ಸರ್ವಾಂತರ್ಯಾಮಿಯಾದ ಪರಮಾತ್ಮನು. "वर्षपूगसहस्रान्ते तदण्डमुदकेशयम्। कालकर्मस्वभावस्थो जीवो जीवमजीवयत्॥ स एव पुरुषस्तस्मादण्डं निर्भिद्य निर्गतः। सहस्रोर्वङ्घ्रिबाह्वक्षः सहस्राननशीर्षवान्" भाग० २-५-३४, ५। "सहस्रशीर्षा पुरुषः सहस्राक्षः सहस्रपात्। स भूमिं विश्वतो वृत्वा" श्रुतिः।

ಸಕಲ ಲೋಕಗಳೂ ಶರೀರವಾಗಿಉಳ್ಳ ಪರಮಪುರುಷನ ಕಟಿಭಾಗದಿಂದ ಕೆಳಗಿನ ಅವಯವಗಳನ್ನು ಪಾತಾಳಾದಿ ಸಪ್ತ ಅಧೋಲೋಕಗಳನ್ನಾಗಿಯೂ ಜಘನಕ್ಕೆ ಮೇಲಿನ ಅವಯವಗಳನ್ನು ಸಪ್ತ ಊರ್ಧ್ವ ಲೋಕಗಳನ್ನಾಗಿಯೂ ಕಲ್ಪಿಸಿ ಧ್ಯಾನಮಾಡುವರು. "यस्येहावयवैर्लोकान् कल्पयन्ति मनीषिणः। कट्यादिभिरधः सप्त सप्तोर्ध्वं जघनादिभिः" भाग० २-५-३६। "भूर्लोकः कल्पितः पद्भ्यां भुवर्लोकोऽस्य नाभितः। हृदा स्वर्लोक उरसा महर्लोको महात्मनः। ग्रीवायां जनलोकश्च तपोलोकः स्तनद्वयात्। मूर्धभिः सत्यलोकस्तु ब्रह्मलोकः सनातनः। तत्कट्यां चातलं क्लृप्तमूरुभ्यां वितलं विभोः। जानुभ्यां सुतलं शुद्धं जङ्घाभ्यां तु तलातलम्। महातलं तु गुल्फाभ्यां प्रपदाभ्यां रसातलम्। पातालं पादतलतः इति लोकमयः पुमान्" भाग० २-५-३८, ३९, ४०, ४१।

**ವಿರಾಟ್ ಪುರುಷನ ವಿಭೂತಿಗಳು** — ವಾಗಿಂದ್ರಿಯಕ್ಕೂ ಅದರ ಅಧಿಷ್ಠಾನದೇವತೆಯಾದ ಅಗ್ನಿಗೂ ಪರಮ ಪುರುಷನ ವದನವೇ ಆಶ್ರಯ. ಹವ್ಯ ಕವ್ಯ ಮತ್ತು ಅಮೃತರೂಪವಾದ ಮೂರು ವಿಧವಾದ ಅನ್ನಗಳಲ್ಲಿರುವ ಷಡ್ರಸಗಳಿಗೂ ಮತ್ತು ರಸನೇಂದ್ರಿಯಕ್ಕೂ ಅದರ ಅಧಿದೇವತೆಯಾದ ವರುಣನಿಗೂ ಪರಮಪುರುಷನ ನಾಲಗೆಯೇ ಸ್ಥಾನ. ಸಕಲ ಜೀವರಾಶಿಗಳ ಪ್ರಾಣಗಳಿಗೂ ಅವುಗಳ ಅಧಿದೇವತೆಯಾದ ವಾಯುವಿಗೂ ಪರಮಾತ್ಮನ ನಾಸಾರಂಧ್ರ (ಮೂಗಿನ ಹೊಳ್ಳೆ) ಗಳೇ ಆಶ್ರಯ ಸ್ಥಾನ.

ಓಷಧಿಗಳಿಗೂ ಅಶ್ವಿನೀದೇವತೆಗಳಿಗೂ ಇಷ್ಟವಸ್ತುವಿನ ಪ್ರಾಪ್ತಿಯಿಂದುಂಟಾಗುವ ಸಂತೋಷಕ್ಕೂ ಪರಮಾತ್ಮನ ಘ್ರಾಣೇಂದ್ರಿಯವೇ ಆಶ್ರಯಸ್ಥಾನ. ಶುಕ್ಲ ಕೃಷ್ಣಾದಿ ವರ್ಣಗಳಿಗೂ ತೇಜಸ್ಸಿಗೂ ಅವನ ನೇತ್ರೇಂದ್ರಿಯವೂ ದ್ಯುಲೋಕಕ್ಕೂ ಸೂರ್ಯನಿಗೂ ಅವನ ನೇತ್ರಗಳೂ ಆಕಾಶ ಮತ್ತು ಶಬ್ದಗಳಿಗೆ ಅವನ ಶ್ರೋತ್ರೇಂದ್ರಿಯವೂ ಲೋಕಕ್ಷೇಮಕರರಾದ ಇಂದ್ರಾದಿಲೋಕಪಾಲಕರಿಗೆ ಬಾಹುಗಳೂ ಭೂರ್ಭುವಃ ಸ್ವರ್ಲೋಕಗಳಿಗೆ ಪರಮಾತ್ಮನ ಮೂರಡಿಗಳೂ ಸಕಲಲೋಕಕ್ಷೇಮ ಅನಿಷ್ಟನಿವಾರಣೆ ಮತ್ತು ಇಷ್ಟಪ್ರಾಪ್ತಿಗೆ ಪರಮಪುರುಷನ ಪಾದವೂ ಆಶ್ರಯಸ್ಥಾನಗಳು. ಸಮಸ್ತ ನದಿಗಳಿಗೂ ಆತನ ನಾಡಿಗಳೂ ಪರ್ವತಗಳಿಗೆ ಅವನ ಅಸ್ಥಿಪಂಜರವೂ ಸ್ಥಾನವಾಗಿರುವುದು. ಧರ್ಮಕ್ಕೂ ಸನಕಾದಿಗಳಿಗೂ ರುದ್ರನಿಗೂ ಮಹತ್ತತ್ತ್ವಕ್ಕೂ ಪರಮಪುರುಷನ ಮನಸ್ಸೇ ಆಶ್ರಯಸ್ಥಾನ. ಈ ರೀತಿ ಪರಮಪುರುಷನಾದ ಶ್ರೀಮನ್ನಾರಾಯಣನಿಂದ ಉತ್ಪನ್ನವಾದ ಜಗತ್ತೆಲ್ಲವೂ ಅವನ ವಿಭೂತಿಗಳಾಗಿ ಅವನಿಗೆ ಶರೀರವಾಗಿರುವದರಿಂದ ಅವನಿಗಿಂತಲೂ ಅತಿರಿಕ್ತವಾದ ವಸ್ತುವು ಬೇರೆ ಯಾವುದೂ ಇಲ್ಲ. "वाचां वह्नेर्मुखं क्षेत्रं छन्दसां सप्त धातवः। हव्यकव्यामृतान्नानां जिह्वा सर्वरसस्य च। सर्वासूनां च वायोश्च तन्नासे परमायने। अश्विनोरोषधीनां च घ्राणो मोदप्रमोदयोः। रूपाणां तेजसां चक्षुः दिवः सूर्यस्य चाक्षिणी। कर्णौ दिशां च तीर्थानां श्रोत्रमाकाशशब्दयोः। बाहवो लोकपालानां प्रायशः क्षेमकर्मणाम्। विक्रमो भूर्भुवः स्वश्च क्षेमस्य शरणस्य च। सर्वकामवरस्यापि हरेश्चरण आस्पदम्। नाड्यो नदनदीनां तु गोत्राणामस्थिसंहतिः। धर्मस्य मम तुभ्यं च कुमाराणां भवस्य च। विज्ञानस्य च सत्वस्य परस्यात्मा परायणम्। सर्वं पुरुष एवेदं भूतं भव्यं भवच्च यत्। तेनेदमावृतं विश्वं वितस्तिमधितिष्ठति" भाग० २-६। "पुरुष एवेदं सर्वम्। यद्भूतं यच्च भव्यम्"। सर्वं खल्विदं ब्रह्म। अयमात्मा ब्रह्म" श्रुतिः।

ನಾಭಿಯಿಂದ ಒಂದು ಗೇಣಳತೆಗೆ ಮೇಲೆ ನೆಲೆಸಿರುವ ನಮ್ಮ ಹೃದಯಕಮಲದಲ್ಲಿ ಸೇರಿಕೊಂಡಿರುವ ಆ ಪಮಾತ್ಮನಿಂದಲೇ ಈ ಸಕಲ ಜಗತ್ತೂ ಆವರಿಸಲ್ಪಟ್ಟಿರುವುದು. "अधो निष्ट्या वितस्त्यां तु नाभ्यामुपरि तिष्ठति। हृदयं तद्विजानीयाद्विश्वस्यायतनं महत्" श्रुतिः।

ಜಗದ್ರಕ್ಷಣಾರ್ಥವಾಗಿ ಅನೇಕ ರೂಪಗಳನ್ನು ಕೈಗೊಂಡರೂ ಜೀವಾತ್ಮನ ವ್ಯಾಪಾರಗಳಂತೆ ಪರಮಾತ್ಮನಿಗೆ ಜಗದ್ವ್ಯಾಪಾರವು ಕರ್ಮಾಧೀನವಾದುದಲ್ಲ. ಪರಮಾತ್ಮನು ಕೇವಲ ಜ್ಞಾನಸ್ವರೂಪನು. ಜನ್ಮಜರಾದಿಗಳಿಲ್ಲದವನಾದುದರಿಂದ ನಾಶರಹಿತನು ಮತ್ತು ನಿತ್ಯನು. ಅವನು ಅವಾಪ್ತಸಮಸ್ತಕಾಮನು. ಪ್ರಕೃತಿಸಂಬಂಧವಾದ ಯಾವ ಗುಣಗಳೂ ಅವನಲ್ಲಿಲ್ಲ. ಸದಾ ಏಕಸ್ವರೂಪನು. ಪರಬ್ರಹ್ಮಶಬ್ದವಾಚ್ಯನು. ಕಾಮ ಕ್ರೋಧ ಮೋಹಾದಿಗಳು ಯಾವುದೂ ಇಲ್ಲದುದರಿಂದ ನಿರ್ಮಲನು. "तद्ब्रह्म परमं नित्यमजमक्षयमव्ययम्। एकस्वरूपं तु सदा हेयाभावाच्च निर्मलम्" विष्णुपु०।

ಸಮಸ್ತ ಜಗತ್ತಿಗೂ ನಿಮಿತ್ತಕಾರಣನೂ ಉಪಾದಾನಕಾರಣನೂ ಆಗಿರುವದರಿಂದ ಶ್ರೀಮನ್ನಾರಾಯಣನು ಸಕಲಕ್ಕೂ ಮೂಲಕಾರಣನು. "नमो नमस्तेऽखिलकारणाय निष्कारणायाद्भुतकारणाय। सर्वागमाम्नायमहार्णवाय नमोऽपवर्गाय परायणाय" भाग० ८-३-१५।

ವಾಯುವು ಸ್ಥಾವರಜಂಗಮಾತ್ಮಕವಾದ ಸಮಸ್ತಭೂತಗಳಲ್ಲಿಯೂ ಪ್ರವೇಶಿಸಿ ಅವುಗಳನ್ನು ಕದಲಿಸುವಂತೆ ಪರವಾಸುದೇವನಾದ ಶ್ರೀಮನ್ನಾರಾಯಣನು ಜೀವಾತ್ಮನಲ್ಲಿ ವ್ಯಾಪಿಸಿ ಅವುಗಳಿಂದ ಕೆಲಸಮಾಡಿಸುತ್ತಿರುವನು. "यथानिलः स्थावरजङ्गमानामात्मस्वरूपेण निविष्ट ईशेत्। एवं परो भगवान् वासुदेवः क्षेत्रज्ञ आत्मेदमनुप्रविष्टः" भाग० ५-११।

"यमन्तः समुद्रे कवयो वयन्ति" ಎಂಬ ಶ್ರುತಿಯಿಂದ ಪರಮಾತ್ಮನಿಗೆ ಸಮುದ್ರಶಾಯಿತ್ವವೂ "यदेकमव्यक्तमनन्तरूपं विश्वं पुराणं तमसः परस्तात्" ಎಂಬ ಶ್ರುತಿವಾಕ್ಯದಿಂದ ಅಜ್ಞಾನಕ್ಕಿಂತಲೂ ದೂರವರ್ತಿತ್ವವೂ "य एनं विदुरमृतास्ते भवन्ति" ಎಂಬ ವಾಕ್ಯದಿಂದ ಮೋಕ್ಷಪ್ರಾಪ್ತಿಹೇತುತ್ವವೂ "विश्वतश्चक्षुरुत विश्वतोमुखः" ಇತ್ಯಾದಿ ವಾಕ್ಯಗಳಿಂದ ಸಹಸ್ರಾಕ್ಷತ್ವ ಸಹಸ್ರಶೀರ್ಷತ್ವ ಮೊದಲಾದುವೂ ಸಿದ್ಧವು.

ಚಿದಚಿದಾತ್ಮಕವಾದ ಸಕಲಜಗತ್ತಿಗೂ ಪರಮಪುರುಷನೇ ಕಾರಣನು. ಪರಮಪುರುಷನಿಂದಲೇ ಎಲ್ಲವೂ ಪ್ರವರ್ತಿಸುವುದು ಎಂದು ಜ್ಞಾನಿಗಳು ಪರಮಾತ್ಮನ ಸ್ವಾಭಾವಿಕವಾದ ಐಶ್ವರ್ಯ ಸೌಹಾರ್ದ ಸೌಶೀಲ್ಯ ವಾತ್ಸಲ್ಯ ಮೊದಲಾದ ಅನಂತಕಲ್ಯಾಣಗುಣಗಳನ್ನು ತಿಳಿದುಕೊಂಡು ಭಜಿಸುವರು. "अहं सर्वस्य प्रभवः मत्तः सर्वं प्रवर्तते। इति मत्वा भजन्ते मां बुधा भावसमन्विताः" गीता १०-८।

ಯೋಗಮಾಯೆಯಿಂದ ಆವೃತನಾದ ಪರಮಪುರುಷನನ್ನು ಯಾರೂ ಸಾಕ್ಷಾತ್ತಾಗಿ ಕಾಣಲಾರರು. ಮೂಢನಾದವನು ಪರಮಾತ್ಮನನ್ನು ಅಜನೆಂದೂ ಅವ್ಯಯನೆಂದೂ

ತಿಳಿಯಲಾರನು. "नाहं प्रकाशः सर्वस्य योगमायासमावृतः। मूढोऽयं नाभिजानाति लोको मामजमव्ययम्" गीता ९-२३।

ಪರಮಪುರುಷನಾದ ಶ್ರೀಮನ್ನಾರಾಯಣನು ತನಗೆ ಶರೀರಭೂತವಾದ ಮಹಾಮಾಯಾರೂಪವಾದ ಪ್ರಕೃತಿಯಿಂದ ಆ ಪ್ರಕೃತಿಗೆ ವಶವಾದ ಸಕಲಪ್ರಾಣಿವರ್ಗವನ್ನೂ ಸೃಷ್ಟಿಸುತ್ತಿರುವನು. ಕರ್ಮಗಳಲ್ಲಿ ಅಸಕ್ತನಾದ ಅವನನ್ನು ಆ ಕರ್ಮಗಳು ಬಂಧಿಸುವುದಿಲ್ಲ. ಸಕಲ ಭೂತಗಳಿಗೂ ಈಶ್ವರನಾಗಿರುವ ಮತ್ತು ಲೋಕ ಸಂರಕ್ಷಣಾರ್ಥವಾಗಿ ಮಾನುಷದೇಹವನ್ನು ಆಶ್ರಯಿಸಿದ ಪರಮಪುರುಷನ ಪರತ್ವವನ್ನು ಅರಿಯದ ಮೂಢರು ಅವನನ್ನು ತಿರಸ್ಕಾರ ಬುದ್ಧಿಯಿಂದ ಕಾಣುತ್ತಾರೆ. "प्रकृतिं स्वामवष्टभ्य विसृजामि पुनः पुनः। भूतग्राममिमं कृत्स्नमवशं प्रकृतेर्वशात्। न च मां तानि कर्माणि निबध्नन्ति धनञ्जय। उदासीनवदासीनमसक्तं तेषु कर्मसु। मयाध्यक्षेण प्रकृतिः सूयते सचराचरम्। हेतुनानेन कौन्तेय जगद्विपरिवर्तते। अवजानन्ति मां मूढा मानुषीं तनुमाश्रितम्। परं भावमजानन्तो मम भूतमहेश्वरम्" गीता ९। "अस्मान्मायी सृजते विश्वमेतत् तस्मिंश्चान्यो मायया संनिरुद्धः। मायां तु प्रकृतिं विद्यात् मायिनं तु महेश्वरम्" श्वेता० उप०।

ಅನೇಕಜನ್ಮಗಳಿಂದ ಆಚರಿಸಿದ ಪುಣ್ಯಕರ್ಮಗಳಿಂದ ಮೋಕ್ಷವಿರೋಧಿಯಾದ ಪಾಪಗಳನ್ನು ಕಳೆದುಕೊಂಡವರು ಸುಖದುಃಖಾದಿ ದ್ವಂದ್ವಗಳ ಮೋಹದಿಂದ ವಿಮುಕ್ತರಾಗಿ ಮೋಕ್ಷಪ್ರಾಪ್ತಿಗಾಗಿ ಪರಮಾತ್ಮನನ್ನು ಭಜಿಸುತ್ತಾರೆ. "येषामन्तगतं पापं जनानां पुण्यकर्मणाम्। ते द्वन्द्वमोहनिर्मुक्ताः भजन्ते मां दृढव्रताः" गीता ७-२७।

ದೇವ ತಿರ್ಯಕ್ ಮನುಷ್ಯ ಸ್ಥಾವರ ರೂಪವಾದ ಮತ್ತು ಜಾತಿ ಆಕಾರ ಸ್ವಭಾವ ಮತ್ತು ಜ್ಞಾನ ಇವುಗಳಿಂದ ಉತ್ಕೃಷ್ಟ ಮತ್ತು ಅಪಕೃಷ್ಟವಾಗಿರುವ ಸಕಲ ಭೂತಗಳ ವಿಷಯದಲ್ಲಿಯೂ ಪರಮಾತ್ಮನು ಸಮಾನನು. ಜಾತ್ಯಾಕಾರಾದಿಗಳಿಂದ ಉತ್ಕೃಷ್ಟ ಅಥವಾ ನಿಕೃಷ್ಟವೆಂಬ ಭಾವವೂ ಪರಮಾತ್ಮನಿಗಿಲ್ಲ. ಅವನಿಗೆ ದ್ವೇಷಿಯೂ ಮಿತ್ರನೂ ಯಾರೂ ಇಲ್ಲ. "समोऽहं सर्वभूतेषु न मे द्वेष्योऽस्ति न प्रियः" गीता ९-२९।

ಲೋಕದಲ್ಲಿ ಬಹಳ ಕಷ್ಟಕಾರ್ಪಣ್ಯಗಳಿಗೆ ಸಿಲುಕಿ ನರಳುತ್ತಿರುವ ಆರ್ತನೂ ಪರತತ್ತ್ವ (ಪ್ರಕೃತಿವಿಯುಕ್ತ ಆತ್ಮಸ್ವರೂಪ) ವನ್ನು ತಿಳಿಯಲು ಅಪೇಕ್ಷಿಸುವವನೂ ಧನಾಪೇಕ್ಷಿಯೂ ಪರಮಾತ್ಮತತ್ತ್ವವನ್ನು ಚೆನ್ನಾಗಿ ತಿಳಿದಿರುವ ಜ್ಞಾನಿಯೂ ಆದ ಪುಣ್ಯಶಾಲಿಗಳು ಪರಮಾತ್ಮನನ್ನು ಸೇವಿಸುವರು. ಅವರಲ್ಲಿ ನಿರಂತರವಾಗಿ ಪರಮಭಕ್ತಿಯಿಂದ ಪರಮಾತ್ಮನ ಕೃಪೆಯನ್ನು ಅಪೇಕ್ಷಿಸುವ ಜ್ಞಾನಿಯೇ ಪರಮಾತ್ಮನಿಗೆ ಪ್ರಿಯನಾದವನು. "चतुर्विधा भजन्ते मां जनाः सुकृतिनोऽर्जुन। आर्तो जिज्ञासुरर्थार्थी ज्ञानी च भरतर्षभ। तेषां ज्ञानी नित्ययुक्त एकभक्तिर्विशिष्यते" गीता ७।

ವೇದಾಧ್ಯಯನ ತಪಸ್ಸು, ದಾನ ಯಾಗ ಈ ಯಾವುದರಿಂದಲೂ ಆ ವಿರಾಟ್‌ಸ್ವರೂಪನಾದ ಪರಮಾತ್ಮನ ಸ್ವರೂಪವನ್ನು ತಿಳಿಯಲೂ ಸಾಕ್ಷಾತ್ಕರಿಸಲೂ ಸಾಧ್ಯವಾಗಲಾರದು. ಮನಃಶುದ್ಧಿ ಹೊಂದಿ ಅನನ್ಯವಾದ ಭಕ್ತಿಯಿಂದ ಸೇವಿಸುವವರಿಗೆ ಮಾತ್ರ ಪರಮಾತ್ಮನ ಸ್ವರೂಪವನ್ನು ತಿಳಿಯಲೂ ಸಾಕ್ಷಾತ್ಕರಿಸಲೂ ಮೋಕ್ಷವನ್ನು ಹೊಂದಲೂ ಸಾಧ್ಯವು. "नाहं वेदैर्न तपसा न दानेन न चेज्यया। शक्य एवंविधो द्रष्टुं दृष्टवानसि मां यथा।। भक्त्या त्वनन्यया शक्यः अहमेवंविधोऽर्जुन। ज्ञातुं द्रष्टुं च तत्त्वेन प्रवेष्टुं च परन्तप" गीता ११-५३, ५४। "नायमात्मा प्रवचनेन लभ्यो न मेधया न बहुना श्रुतेन। यमेवैष वृणुते तेन लभ्यस्तस्यैष आत्मा विवृणुते तनूं स्वाम्" कठ० १-२-२३।

ಮನುಷ್ಯನು, ತಾನು ಪರವಾಸುದೇವನಿಗೆ ಶೇಷಭೂತನು, ತನ್ನ ಸ್ವರೂಪಸ್ಥಿತಿ ವ್ಯಾಪಾರಗಳೆಲ್ಲವೂ ಅವನ ಅಧೀನ ಮತ್ತು ಅಸಂಖ್ಯಾತ ಕಲ್ಯಾಣಗುಣಗಳಿಂದ ಅವನೇ ಪರತರನು ಎಂಬ ಜ್ಞಾನವನ್ನು ಅನೇಕ ಜನ್ಮಗಳಲ್ಲಿ ಸಂಪಾದಿಸಿ, ವಾಸುದೇವನೇ ಪರಮಪ್ರಾಪ್ಯನು ಮತ್ತು ಪ್ರಾಪಕನು ಎಂದು ತಿಳಿದು ಕೊನೆಗೆ ಪರಮಾತ್ಮನನ್ನು ಹೊಂದುತ್ತಾನೆ. ಅಂತಹವನು ವಿರಳ. "बहूनां जन्मनामन्ते ज्ञानवान् मां प्रपद्यते। वासुदेवः सर्वमिति स महात्मा सुदुर्लभः" गीता ७-१९।

ಪರವಾಸುದೇವನಾದ ಶ್ರೀಮನ್ನಾರಾಯಣನೇ ಪರಮಪ್ರಾಪ್ಯನೆಂದು ತಿಳಿದು ಪ್ರಯೋಜನಾಂತರಾಪೇಕ್ಷೆಯಿಲ್ಲದೆ ಸತತವೂ ಅವನನ್ನು ಪೂಜಿಸುತ್ತಾ ಅವನ ನಿರಂತರ ಸಾಯುಜ್ಯವನ್ನು ಅಪೇಕ್ಷಿಸುವವರಿಗೆ ಅವನು ಅಪುನರಾವೃತ್ತಿರೂಪವಾದ ಮೋಕ್ಷಸಾಮ್ರಾಜ್ಯವನ್ನು ಅನುಗ್ರಹಿಸುವನು. "अनन्याश्चिन्तयन्तो मां ये जनाः पर्युपासते। तेषां नित्याभियुक्तानां योगक्षेमं वहाम्यहम्" गीता ९-२२।

ಸಮಸ್ತಭೂತಗಳಿಗೂ ಅಂತರಾತ್ಮನಾಗಿ ಅವುಗಳನ್ನು ಆಯಾ ಕಾರ್ಯಗಳಲ್ಲಿ ನಿಯಮಿಸುವವನು ಪರಮಾತ್ಮನೇ ಹೊರತು ಬೇರೆ ಯಾರಿಗೂ ಯಾವ ವಿಧದಲ್ಲೂ ಸಾಧ್ಯವಿಲ್ಲ. ಸಮಸ್ತಭೂತಗಳಿಗೂ ಅವನು ಸುಹೃತ್ತು. ಎಲ್ಲವೂ ಅವನ ಸ್ವರೂಪವಾದುದರಿಂದ ಸಮಸ್ತಭೂತಗಳೂ

ಅವನೇ ಎಂದು ತಿಳಿಯಬೇಕು. "अहमात्मोद्भवामीषां भूतानां सुहृदीश्वरः। अहं सर्वाणि भूतानि तेषां स्थित्युद्भवाप्ययः" भाग० ११-१६।

ಮುಮುಕ್ಷುಗಳು ತಿಳಿಯಬೇಕಾಗಿರುವ ಅಕ್ಷರನೂ ಜಗತ್ತಿಗೆ ಶ್ರೇಷ್ಠನಾದ ಆಧಾರನೂ ಅವ್ಯಯನೂ ಶಾಶ್ವತವಾದ ಧರ್ಮಗಳನ್ನು ಕಾಪಾಡುವವನೂ ಸನಾತನನಾದ ಪುರುಷನೂ ಆದವನು ಶ್ರೀಮನ್ನಾರಾಯಣನು. "त्वमक्षरं परमं वेदितव्यं त्वमस्य विश्वस्य परं निधानम्। त्वमव्ययः शाश्वतधर्मगोप्ता सनातनस्त्वं पुरुषो मतो मे" गीता ११-१८।

ಪರಮಾತ್ಮನು ಅಚಿಂತ್ಯಸ್ವರೂಪನು. ಅವನ ಮಹಿಮೆಯು ಇಷ್ಟೇ ಎಂದು ಹೇಳಲು ಯಾರಿಂದಲೂ ಸಾಧ್ಯವಿಲ್ಲ. ಸರ್ವಜ್ಞನಾದ ಪರಮಾತ್ಮನಿಗೂ ತನ್ನ ಮಹಿಮೆಯನ್ನು ಲೆಕ್ಕಹಾಕಿ ಎಣಿಸಲು ಸಾಧ್ಯವಿಲ್ಲ. "यतो वाचो निवर्तन्ते। अप्राप्य मनसा सह" श्रुतिः। "संख्यानं परमाणूनां कालेन क्रियते मया। न तथा मे विभूतीनां सृजतोऽण्डानि कोटिशः" भाग० ११-१६-३९।

ಸರ್ವಲೋಕಶರಣ್ಯನೂ ಆಶ್ರಿತವಾತ್ಸಲ್ಯೈಕಜಲಧಿಯೂ ಆದ ಶ್ರೀಮನ್ನಾರಾಯಣನು ಮೋಕ್ಷಪ್ರದನು ಮಾತ್ರವಲ್ಲದೆ ಅವನೇ ಶರಣ್ಯನೆಂದು ತಿಳಿದ ಅವನ ಭಕ್ತಕೋಟಿಗೆ ಆಯುಸ್ಸು ಆರೋಗ್ಯ ಐಶ್ವರ್ಯ ಮತ್ತು ಸಕಲ ಭೋಗಗಳನ್ನೂ ಅನುಗ್ರಹಿಸುವನು. "शरीरारोग्यमर्थांश्च भोगांश्चैवानुषङ्गिकान्। ददाति ध्यायतां नित्यमपवर्गप्रदो हरिः"।

ಅನನ್ತಕಲ್ಯಾಣಗುಣಗಣಪರಿಪೂರ್ಣನೂ ಅಚಿಂತ್ಯಸ್ವರೂಪನೂ ಅಚಿಂತ್ಯಮಹಿಮನೂ ಆದ ಪರವಾಸುದೇವನಾದ ಜಗತ್ಪ್ರಭು ಶ್ರೀಮನ್ನಾರಾಯಣನಿಗೆ ಪರಮವ್ಯೋಮವೆಂಬ ಶ್ರೀವೈಕುಂಠವೇ ಆವಾಸಸ್ಥಾನ. ಅಲ್ಲಿ ಶ್ರೀಮಹಾಲಕ್ಷ್ಮೀಸಮೇತನಾಗಿ ಶೇಷಶಾಯಿಯಾಗಿ ಅನನ್ತ ಗರುಡ ವಿಷ್ವಕ್ಸೇನಾದಿ ನಿತ್ಯಮುಕ್ತರಿಂದಲೂ ಪರಮಭಕ್ತರಾದ ಭಾಗವತೋತ್ತಮರಿಂದಲೂ ಅನವರತವೂ ಸೇವಿಸಲ್ಪಡುತ್ತಿರುವನು. "वैकुण्ठे तु परे लोके श्रिया सार्धं जगत्पतिः। आस्ते विष्णुरचिन्त्यात्मा भक्तैर्भागवतैः सह"। "तया सहासीनमनन्तभोगिनि प्रकृष्टविज्ञानबलैकधामनि। फणामणिव्रातमयूखमण्डलप्रकाशमानोदरदिव्यधामनि" स्तो० र०।

**ಧ್ಯಾನಶ್ಲೋಕ**—"ध्येयः सदा सवितृमण्डलमध्यवर्ती नारायणः सरसिजासनसंनिविष्टः। केयूरवान् मकरकुण्डलवान् किरीटी हारी हिरण्मयवपुः धृतशङ्खचक्रः"। "सव्यं पादं प्रसार्य श्रितदुरितहरं दक्षिणं कुञ्चयित्वा जानुन्याधाय सव्येतरमितरभुजं नागभोगे निधाय। पश्चाद्बाहुद्वयेन प्रतिभटशमने धारयन् शङ्खचक्रे देवीभूषादिजुष्टो जनयतु जगतां शर्म वैकुण्ठनाथः"।

"शान्ताकारं भुजगशयनं पद्मनाभं सुरेशं विश्वाकारं गगनसदृशं मेघवर्णं शुभाङ्गम्। लक्ष्मीकान्तं कमलनयनं योगिभिर्ध्यानगम्यं वन्दे विष्णुं भवभयहरं सर्वलोकैकनाथम्"॥

"मेघश्यामं पीतकौशेयवासं श्रीवत्साङ्कं कौस्तुभोद्भासिताङ्गम्। पुण्योपेतं पुण्डरीकायताक्षं विष्णुं वन्दे सर्वलोकैकनाथम्"।

**नारायणक्षेत्र ನಾರಾಯಣಕ್ಷೇತ್ರ** (न०) ಗಂಗಾತೀರದಲ್ಲಿರುವ ಒಂದು ಕ್ಷೇತ್ರ. ಗಂಗಾಪ್ರವಾಹಕ್ಕೆ ಸಮೀಪದಲ್ಲಿ ನಾಲ್ಕು ಹಸ್ತ ಪ್ರಮಾಣದ ದೂರದವರೆಗೂ ಇರುವ ಪ್ರದೇಶವು ನಾರಾಯಣಕ್ಷೇತ್ರ. "प्रवाहमवधिं कृत्वा यावद्धस्तचतुष्टयम्। तत्र नारायणःस्वामी नान्यः स्वामी कथञ्चन" ब्रह्मपु०।

**नारायणी ನಾರಾಯಣೀ** (स्त्री०) 1. ನಾರಾಯಣನ ಶಕ್ತಿ. नारायणस्येयम् "अण्" (४-३-१२०)। "यशसा तेजसा रूपैर्नारायणसमा गुणैः। शक्तिर्नारायणस्येयं तेन नारायणी स्मृता" ब्रह्मवै०। 2. ಲಕ್ಷ್ಮಿ. "नारायणार्धाङ्गभूता तेन तुल्या च तेजसा। तथा तस्य शरीरस्था तेन नारायणी स्मृता"। 3. ದುರ್ಗಾದೇವಿ. 4. ಶತಾವರೀ ಗಿಡ. "ऋष्यप्रोक्ताभीरुपत्रीनारायण्यः शतावरी" अम०।

**नारायणीय ನಾರಾಯಣೀಯ** (वि०) 1. ನಾರಾಯಣ ಸಂಬಂಧವಾದ. 2. ನಾರದ ಮತ್ತು ನಾರಾಯಣಋಷಿಗಳ ಸಂವಾದ ರೂಪವಾದ ಒಂದು ಉಪಾಖ್ಯಾನ. "नारदस्य च संवादमृषेर्नारायणस्य च। नारायणीयमाख्यानमेतत्ते कथितं तव" भा० शान्ति०। 3. ಒಂದು ಉಪನಿಷತ್ತು. ಈ ನಾರಾಯಣೋಪನಿಷತ್ತು ಕೃಷ್ಣಯಜುರ್ವೇದಾನ್ತರ್ಗತವಾದ ಮೂವತ್ತೆರಡು (32) ಉಪನಿಷತ್ತುಗಳಲ್ಲೊಂದು.

**नारिकेल ನಾರಿಕೇಲ** (पुं०) 1. ತೆಂಗಿನಮರ. किल (श्वैत्ये क्रीडने च) भावे "घञ्" (३-३-१८)। नार्याः वनितायाः केल इव केलो यस्य पृषो०। (न०) 2. ತೆಂಗಿನಕಾಯಿ.

**नारिकेलक्षीरी ನಾರಿಕೇಲಕ್ಷೀರೀ** (स्त्री०) ಕಲ್ಲುಸಕ್ಕರೆ ಮತ್ತು ಹಸುವಿನ ತುಪ್ಪ ಕಲಸಿದ ತೆಂಗಿನಕಾಯಿನ ತುರಿಯನ್ನು ಹಸುವಿನ ಹಾಲಿನಲ್ಲಿ ಪಕ್ವಮಾಡಿದ ಒಂದು

ನಾರಿಕೇಲಪಾಕ. "नारिकेलं तनूकृत्य छिन्नं पयसि गो: क्षिपेत्। सिताग्व्याज्यसंयुक्तं तत्पचेन्मृदुनाग्निना"। **ಇದರ ಗುಣ:** ಶೀತಕರ, ಪುಷ್ಟಿಕರ, ಮಧುರವಾದುದು, ವೀರ್ಯವನ್ನು ಹೆಚ್ಚಿಸುವುದು, ರಕ್ತಪಿತ್ತವಾಯುಹರವಾದುದು. "नारिकेलोद्भवा क्षीरी स्निग्धा शीतातिपुष्टिदा। गुर्वी सुमधुरा वृष्या रक्तपित्तानिलापहा" भावप्र०। "ते नारिकेलान्तरप: पिबन्त:" माघ० ३-८१।

**नारी ನಾರೀ** (स्त्री०) 1. ಮನುಷ್ಯಜಾತಿಯ ಹೆಂಗಸು. नृ ಅಥವಾ नर जाति० "ङीन्" (ग० ५४, ४-१-७३)। वृद्धिश्च। "नारीभिर्गुरुजघनस्थलाहतानामास्यश्रीविजितविकासिवारिजानाम्" माघ० ८-४७। (1) पद्मिनी, (2) चित्रिणी, (3) शङ्खिनी ಮತ್ತು (4) हस्तिनी ಎಂದು ನಾಲ್ಕು ಜಾತಿಯ ಹೆಂಗಸರಿರುವರು. "पद्मिनी चित्रिणी चैव शङ्खिनी हस्तिनी तथा। चतस्रो जातयो नार्या रतौ ज्ञेया विशेषत:" रसमं०। ಇವರಲ್ಲದೆ (1) साध्वी, (2) भोग्या ಮತ್ತು (3) कुलटा ಎಂದು ಹೆಂಗಸು ಮತ್ತೆ ಮೂರು ವಿಧ. "योषितस्त्रिविधा ब्रह्मन् गृहिणां मूढचेतसाम्। साध्वी भोग्या च कुलटा ता: सर्वा: स्वार्थतत्परा:" ब्रह्मवै०।

(1) ಪರಲೋಕಭಯದಿಂದಲೂ ಯಶಸ್ಸಿಗಾಗಿಯೂ ಕಾಮದ ಸ್ನೇಹದಿಂದಲೂ ನಿರಂತರವೂ ಪತಿಯ ಸೇವೆಯನ್ನು ಮಾಡುವ ಹೆಂಗಸು "**ಸಾಧ್ವಿ**".

(2) ಯಾವಾಗಲೂ ಭೋಗವನ್ನು ಅಪೇಕ್ಷಿಸುತ್ತ ಪತಿಸೇವೆಯನ್ನು ಮಾಡುವವಳೂ ಅಲಂಕಾರ ಮತ್ತು ರಸಭೋಜನ ದೊರಕುವವರೆಗೆ ಮಾತ್ರ ಪತಿಗೆ ಅಧೀನಳಾಗಿರುವವಳೂ ಆದ ಹೆಂಗಸು "**ಭೋಗ್ಯಳು**".

(3) ಕಪಟದಿಂದ ಪತಿಯ ಸೇವೆಯನ್ನು ಮಾಡುತ್ತ ಯಾವಾಗಲೂ ಕಾಮುಕಳಾಗಿ ಪರಪುರುಷನನ್ನೇ ಹುಡುಕುತ್ತ ಹೊಸ ಹೊಸ ಜಾರಪುರುಷನನ್ನು ಅಪೇಕ್ಷಿಸುತ್ತ ಈ ಕಾರ್ಯಕ್ಕಾಗಿ ಮನೆ ಮನೆಗೂ ಅಲೆದಾಡುತ್ತ ಇರುವ ಹೆಂಗಸು "**ಕುಲಟೆ**" (ಸ್ವೈರಿಣಿ). 2. ಮೂರು ಗುರುವರ್ಣಗಳುಳ್ಳ ಛಂದಸ್ಸಿನ ಒಂದು ವೃತ್ತ. "मो नारी" वृ० र०।

**नारीकवच ನಾರೀಕವಚ** (पुं०) ಸೂರ್ಯವಂಶದ ಅಶ್ಮಕರಾಜನ ಮಗನಾದ ಮೂಲಕನೆಂಬ ಒಬ್ಬ ದೊರೆ. "अश्मकान्मूलको जज्ञे य: स्त्रीभि: परिरक्षित:। नारीकवच इत्युक्तो नि:क्षत्रे मूलकोऽभवत्" भाग० ९-९-४०। ಕ್ಷತ್ರಿಯನಿರ್ಮೂಲನಕ್ಕಾಗಿ ಹೊರಟಿದ್ದ ಪರಶುರಾಮನಿಗೆ ಹೆದರಿ ಈ ರಾಜನು ಸ್ತ್ರೀವೇಷ ಧರಿಸಿ ಸ್ತ್ರೀಯರ ಮಧ್ಯೆ ಸೇರಿಕೊಂಡು ಅವರಿಂದ ರಕ್ಷಿಸಲ್ಪಟ್ಟವನಾದುದರಿಂದ ಇವನಿಗೆ ನಾರೀಕವಚನೆಂದು ಹೆಸರಾಯಿತು. ಸೂರ್ಯವಂಶದ ಮುಂದಿನ ಅಭಿವೃದ್ಧಿಗೆ ಇವನೇ ಕಾರಣನಾದುದರಿಂದ ಇವನಿಗೆ "ಮೂಲಕ" ಎಂದೂ ಹೆಸರಾಯಿತು.

**नारीकेल ನಾರೀಕೇಲ** (पुं०) ತೆಂಗಿನಮರ. नारिकेल—पृषो०।

**नारीतरङ्गक ನಾರೀತರಂಗಕ** (पुं०) ಕಾಮುಕ, ಸ್ತ್ರೀಲೋಲ, ಜಾರ. नारीं तरङ्गयति—तरङ्ग + णिच् "ण्वुल्" (३-१-१३३)। ಹೆಂಗಸರ ಮನಸ್ಸನ್ನು ಚಂಚಲಗೊಳಿಸುವುದರಿಂದ ಜಾರನಿಗೆ ಈ ಹೆಸರು.

**नारीदूषण ನಾರೀದೂಷಣ** (न०) ಹೆಂಗಸರ ಚಾರಿತ್ರ್ಯವನ್ನು ಕೆಡಿಸುವ ಪಾಪಕಾರ್ಯ. ಮದ್ಯಪಾನ, ದುರ್ಜನರ ಸಹವಾಸ, ಪತಿಯನ್ನು ಅಗಲಿ ದೂರದಲ್ಲಿರುವಿಕೆ, ಮನೆಯಲ್ಲಿ ನಿಲ್ಲದೆ ಹೊರಗೇ ಅಲೆಯುತ್ತಿರುವುದು, ಅಕಾಲದಲ್ಲಿ ಮಲಗಿ ನಿದ್ರಿಸುವುದು ಮತ್ತು ಪರಗೃಹವಾಸ ಇವು ಆರೂ ಹೆಂಗಸರಿಗೆ ವ್ಯಭಿಚಾರದೋಷಗಳನ್ನು ಉಂಟುಮಾಡುವುವು. "पानं दुर्जनसंसर्ग: पत्या च विरहोऽटनम्। स्वप्नोऽन्यगेहवासश्च नारीसंदूषणानि षट्" मनु० ९-१३।

**नारीनाथ ನಾರೀನಾಥ** (वि०) ಹೆಂಗಸೇ ಒಡೆಯಳಾಗಿ ಉಳ್ಳ. नारी नाथ: यस्य। "क्वचिदपि गृहं नारीनाथं निरीक्ष्य विवर्जितम्" मृच्छ० ४-३।

**नारीमय ನಾರೀಮಯ** (वि०) ಸ್ತ್ರೀಯರಿಂದ ತುಂಬಿದ, ಕೇವಲ ಹೆಂಗಸರಿಂದ ಕೂಡಿದ.

**नारीरत्न ನಾರೀರತ್ನ** (न०) ಉತ್ತಮ ಹೆಂಗಸು, ಶ್ರೇಷ್ಠಳಾದ ಹೆಂಗಸು.

**नारीष्ट ನಾರೀಷ್ಟ** (वि०) 1. ಹೆಂಗಸರಿಗೆ ಪ್ರಿಯವಾದ, ಸ್ತ್ರೀಯರ ಪ್ರೀತಿಗೆ ಪಾತ್ರವಾದ. (स्त्री०) **–ष्टा –ಷ್ಟಾ.** 2. ಮಲ್ಲಿಗೆ ಹೂವು.

**नारीष्ठ ನಾರೀಷ್ಠ** (वि०) ಹೆಂಗಸರಲ್ಲೇ ಆಸಕ್ತಿ ತೋರುವ, ಸ್ತ್ರೀಲೋಲನಾದ, ಸ್ತ್ರೀಯರನ್ನೇ ಪ್ರೀತಿಸುವ.

**नारेय ನಾರೇಯ** (पुं०) ಸತ್ರಾಜಿತ್ತಿನ ಮೊಮ್ಮಗ.

**नार्यङ्ग ನಾರ್ಯಂಗ** (पुं०) 1. ನಾಗರಂಗ ವೃಕ್ಷ, ಕಿತ್ತಳೆಗಿಡ. (न०) 2. ಹೆಂಗಸರ ಅವಯವ.

**नाल ನಾಲ** (न०) 1. ತಾವರೆ ಮೊದಲಾದುವುಗಳ ದಂಡ, ತಾವರೆ ಮೊದಲಾದ ಹೂವುಗಳ ಕಾವು, ವೃಂತ, ತೊಟ್ಟು. नलति—णल (बन्धे) "ण:" (३-१-१०९)। "कश्चित्

कराभ्यामुपगूढनालमालोलपत्राभिहतद्विरेफम्" रघु० ६-१३। "हेमैश्छन्ना विकचकमलैः स्निग्धवैडूर्यनालैः" मेघ० २-१३। 2. ಹರಿದಳ. (स्त्री०) -ला -ಲಾ. 3. ಕೊಳಾಯಿ, ಕೊಳವೆ, ದ್ರವವಸ್ತುವು ಪ್ರವಹಿಸಲನು ಕೂಲಿಸುವಂತೆ ಒಳಗೆ ರಂಧ್ರವಿರುವ ಲೋಹ ಮೊದಲಾದುವುಗಳ ನಳಿಕೆ. "यथा तोयार्थिनस्तोयं यन्त्रनालादिभिः शनैः। आपिबेयुस्तथा वायुं पिबेद्योगी जितश्रमः"। नलति जलादिः निर्गच्छत्यनया — नल कर० "घञ्"। 4. ತಾವರೆ ಮೊದಲಾದುವುಗಳ ದಂಟು. "स्वर्गापगाहेममृणालिनीनां नालामृणालाग्रभुजो भवामः" नैष० ३-१७। 5. ಹೊಕ್ಕುಳು ಕುಡಿ. -ली -ಲೀ. 6. ಒಳಗೆ ಪೊಳ್ಳಾಗಿರುವ ಗಿಡಗಳ ದಂಟು. 7. ತರಕಾರಿಯ ಕಾವು. 8. ಆನೆಯ ಕಿವಿಯನ್ನು ಚುಚ್ಚುವ ಒಂದು ಆಯುಧ. 9. ಒಂದು ಘಳಿಗೆ. 10. ಕಮಲ, ಪದ್ಮ. 11. ಕೋಳಾಯಿ. 12. ಕೊಳಲು ವಾದ್ಯ. "नालं काण्डे मृणाले च नाली शाककलम्बयोः" हेम०। "नाला न ना पद्मदण्डे नाली शाककलम्बके" मेदि०।

**नालायनी ನಾಲಾಯನೀ** (स्त्री०) ಮೌದ್ಗಲ್ಯ ಮಹರ್ಷಿಯ ಪತ್ನಿ. ಇದು ದ್ರೌಪದಿಯ ಹಿಂದಿನ ಜನ್ಮದ ಹೆಸರು. ಇವಳಿಗೆ ಇಂದ್ರಸೇನೆಯೆಂದೂ ಹೆಸರು. ನಾಲಾಯನಿಯು ಮೌದ್ಗಲ್ಯ ಋಷಿಯನ್ನು ಪತಿಯನ್ನಾಗಿ ಹೊಂದಿ ಬಹಳ ಭಕ್ತಿಯಿಂದ ಅವನ ಶುಶ್ರೂಷೆ ಮಾಡುತ್ತಿದ್ದಳು. ಕುಷ್ಠರೋಗಿಯಾಗಿದ್ದು ದುರ್ಗಂಧ ಶರೀರವುಳ್ಳವನೂ ಕ್ರೂರನೂ ಬಹಳ ಕೋಪ ಸ್ವಭಾವದವನೂ ವಿಕಾರ ರೂಪವುಳ್ಳವನೂ ಆದ ತನ್ನನ್ನು ಪ್ರೀತಿಸಿ ಭಕ್ತಿಯಿಂದ ಮಾಡಿದ ಶುಶ್ರೂಷೆಯಿಂದ ಸುಪ್ರೀತನಾದ ಋಷಿಯು ಇವಳ ಅಪೇಕ್ಷೆಯಂತೆ ಐದು ಸುಂದರವಾದ ದೇಹಗಳನ್ನು ಧರಿಸಿ ಬಹಳಕಾಲ ಇವಳೊಡನೆ ಕ್ರೀಡಿಸುತ್ತ ಇದ್ದನು. ಕೊನೆಗೆ ಋಷಿಯು ಇದರಿಂದ ವೈರಾಗ್ಯ ಹೊಂದಿ ಇವಳನ್ನು ತ್ಯಜಿಸಿ ತಪಸ್ಸಿಗೆ ಹೊರಡಲಾಗಿ ತನ್ನನ್ನು ಬಿಟ್ಟು ಹೋಗಕೂಡದೆಂದು ಕೇಳಿಕೊಂಡಳು. ನನ್ನ ತಪಸ್ಸಿಗೆ ವಿಘ್ನವುಂಟುಮಾಡುತ್ತಿರುವುದರಿಂದ "ನೀನು ಭೂಲೋಕದಲ್ಲಿ ಪಾಂಚಾಲರಾಜನ ಪುತ್ರಿಯಾಗಿ ಜನಿಸಿ ಐವರು ಪತಿಗಳೊಡನೆ ಸೌಖ್ಯವನ್ನನುಭವಿಸುವೆ" ಎಂದು ಹೇಳಿದನು. ಆಗ ನಾಲಾಯನಿಯು ಮೌದ್ಗಲ್ಯನೊಡನೆ ಅನುಭವಿಸಿದ ಕಾಮಸೌಖ್ಯದಿಂದ ತೃಪ್ತಿ ಹೊಂದದೆ ಪರಮೇಶ್ವರನನ್ನು ತಪಸ್ಸಿನಿಂದ ಸಂತೋಷಗೊಳಿಸಿ "पतिं देहि पतिं देहि" ಎಂದು ಐದು ಸಲ ಪರಮೇಶ್ವರನನ್ನು ಪ್ರಾರ್ಥಿಸಲಾಗಿ ಮುಂದಿನ ಜನ್ಮದಲ್ಲಿ ಐವರು ಪತಿಗಳೊಡನೆ ಕೂಡಿ ಸುಖ ಸಂತೋಷಗಳನ್ನನುಭವಿಸುವಂತೆ ಶಿವನು ವರವನ್ನಿತ್ತನು. ಇವಳೇ ಮರುಜನ್ಮದಲ್ಲಿ ದ್ರುಪದನ ಯಾಗಕುಂಡದಲ್ಲಿ ದ್ರೌಪದಿಯಾಗಿ ಜನಿಸಿದಳು. ["पञ्चेन्द्रोपाख्यान" ಪದದಲ್ಲಿ ನೋಡಿ] "इन्द्रसेनेति विख्याता पुरा नालायनी शुभा। मौद्गल्यं पतिमासाद्य चचार विगतज्वरा। मौद्गल्यस्य महर्षेश्च रममाणस्य वै तया। संवत्सरगणा राजन् व्यतीयुः क्षणवत्तदा। ततः कदाचिद्धर्मात्मा तृप्तः कामैर्व्यरज्यत। उत्ससर्ज स तां विप्रः सा तदा चापतद्भुवि।

नालायन्युवाच — प्रसीद भगवन्मह्यं न मामुत्स्रष्टुमर्हसि। अवितृप्तास्मि ब्रह्मर्षे कामानां कामसेवनात्।

मौद्गल्यः — "यस्मात्त्वं मामनिःशङ्का ह्यवक्तव्यं प्रभाषसे। आचरन्ती तपोविघ्नं तस्माच्छृणु वचो मम। भविष्यसि नृलोके त्वं राजपुत्री यशस्विनी। पञ्चालराजस्य सुता द्रुपदस्य महात्मनः। भवितारस्तत्र तव पतयः पञ्च विश्रुताः। तैः सार्धं मधुराकारैश्चिरं रतिमवाप्स्यसि। सैवं शप्ता तु विमना वनं प्रागाद्यशस्विनी। भोगैरतृप्ता देवेशं तपसाराधयत्तदा। तीव्रेण तपसा तस्यास्तुष्टः पशुपतिः स्वयम्। वरं प्रादात्तदा रुद्रः सर्वलोकेश्वरः प्रभुः। भविष्यति परं जन्म भविष्यसि वराङ्गना। भविष्यन्ति परं भद्रे पतयः पञ्च विश्रुताः। पञ्चकृत्वस्त्वया चोक्तः पतिं देहीत्यहं पुनः। पञ्च ते पतयो भद्रे भविष्यन्ति सुखावहाः" भा० आदि० २१३।

**नालि ನಾಲಿ** (स्त्री०) ನಾಡಿ, ಸಿರೆ, ಧಮನಿ. नालयति — णल (बन्धे) + णिच् "इन्" (उ० ४-११७)।

**नालिक ನಾಲಿಕ** (पुं०) 1. ಪದ್ಮ, ಕಮಲ, ತಾವರೆ. नालमस्त्यस्य "ठन्" (५-२-११५)। 2. ಮಹಿಷ, ಎಮ್ಮೆ. नल एव नालः तृणविशेषः, स भोक्तव्यत्वेनास्त्यस्य "ठन्" (५-२-११५)। (न०) 3. ಒಂದು ವಿಧ ಅಸ್ತ್ರ, ಬಂದೂಕ. नालः साधनत्वेनास्त्यस्य "ठन्" (५-२-११५)। ಅಸ್ತ್ರವು मान्त्रिकम् (ಮಾಂತ್ರಿಕ) ಮತ್ತು नालिकम् (ನಾಲಿಕ) ಎಂದು ಎರಡು ವಿಧ. "अस्त्रं तु द्विविधं ज्ञेयं नालिकं मान्त्रिकं तथा। यदा तु मान्त्रिकं नास्ति नालिकं तत्र धारयेत्" शुक्रनी०। ಮಂತ್ರದಿಂದ ಪ್ರಯೋಜ್ಯವಾದ ಅಸ್ತ್ರವು ಮಾಂತ್ರಿಕ. ನಾಲಗಳಲ್ಲಿ ಮದ್ದು ಹೂಡಿ ಪ್ರಯೋಗಿಸುವ ಅಸ್ತ್ರವು ನಾಲಿಕ. ನಾಲಿಕಾಸ್ತ್ರವು ಬೃಹನ್ನಾಲಿಕ ಕ್ಷುದ್ರನಾಲಿಕಗಳೆಂದು ಎರಡು ವಿಧ. ಫಿರಂಗಿಯು ಬೃಹನ್ನಾಲಿಕವೆನಿಸುವುದು. ಬಂದೂಕ ಮೊದಲಾದುವು ಕ್ಷುದ್ರನಾಲಿಕವೆನಿಸುವುವು. "नालिकं द्विविधं ज्ञेयं बृहत्क्षुद्रप्रभेदतः"।

**नालिका ನಾಲಿಕಾ** (स्त्री०) 1. ಆನೆಯ ಕಿವಿಯನ್ನು ಚುಚ್ಚುವ ಒಂದು ಆಯುಧ. "गजा: सङ्कुलकरतललोलनालिकाहता:" माघ० १७-३५। 2. ಕೊಳಲು ವಾದ್ಯ. 3. ತಾವರೆ ಹೂವಿನ ಕಾವು. 4. ಒಂದು ಘಳಿಗೆ.

**नालिकेर ನಾಲಿಕೇರ** (पुं०) 1. ತೆಂಗಿನಮರ. नारिकेल: रलयोरभेद:। 2. ಒಂದು ದೇಶ. ಈ ದೇಶವು ಮಧ್ಯ ದೇಶಕ್ಕೆ ಆಗ್ನೇಯ ದಿಕ್ಕಿನಲ್ಲಿರುವುದು.

**नालिकेल ನಾಲಿಕೇಲ** (पुं०) ತೆಂಗಿನಮರ. नालिकेर—पृषो० रस्य ल:।

**नालिजङ्घ ನಾಲಿಜಂಘ** (पुं०) ಒಂದು ಬಕಪಕ್ಷಿ.

**नाली ನಾಲೀ** (स्त्री०) 1. ತರಕಾರಿಯ ಕಾವು, ತಿನ್ನಲು ಯೋಗ್ಯವಾದ ತರಕಾರಿಯ ತೊಟ್ಟು. 2. ಆನೆಯ ಕಿವಿಯನ್ನು ಚುಚ್ಚುವ ಒಂದು ಆಯುಧ. 3. ಪದ್ಮ, ಕಮಲ. 4. ತಾವರೆಯ ದಂಟು. 5. ಕೊಳವೆ, ಕೊಳಾಯಿ. 6. ಕಹಳೆ ವಾದ್ಯ. 7. ಒಂದು ಘಳಿಗೆ. 8. ನಾಡಿ, ಸಿರೆ.

**नालीक ನಾಲೀಕ** (पुं०) 1. ಹಗುರವಾಗಿ ಎಸೆಯುವಂತಹ ಈಟಿ. 2. ಬಾಣ. 3. ಪದ್ಮ, ಕಮಲ. 4. ಎಳೆಯ ತಂತುಗಳಿಂದ ಕೂಡಿದ ತಾವರೆ ಹೂವಿನ ಕಾವು,–ವೃಂತ, (न०) 5. ಕಮಲಗಳ ಸಮೂಹ. (वि०) 6. ಸತ್ಯವಾದ, ನಿಜವಾದ. "तन्नालीकनले चलेतरमना: साम्यान्मनागप्यभूत्" नैष० १२-१११।

**नालीकिनी ನಾಲೀಕಿನೀ** (स्त्री०) ಕಮಲಗಳಿಂದ ಕೂಡಿದ ಪ್ರದೇಶ, ಸರೋವರ. नालीक "इनि:" (५-२-१३५)।

**नावमिक ನಾವಮಿಕ** (वि०) ಒಂಬತ್ತನೆಯ.

**नाविक ನಾವಿಕ** (पुं०) 1. ಕರ್ಣಧಾರ, ಹಡಗನ್ನು ನಡೆಯಿಸುವವನು. नावा तरति—नौ "ठन्" (४-४-७)। "महावातसमुद्धूतामपरीक्षितनाविकाम्। अन्यनौप्रतिबद्धां वा नोपेयान्नावमातुराम्" कामन्द०। 2. ಸಮುದ್ರದಲ್ಲಿ ಸಂಚಾರ ಮಾಡುವವನು.

**नावोपजीवन ನಾವೋಪಜೀವನ** (पुं०) ಹಡಗನ್ನು ನಡೆಯಿಸಿ ಜೀವನಮಾಡುವವನು. नावा उपजीवनमस्य। "निषादो मद्गुरं सूते दासं नावोपजीवनम्" भा० अनु० ८३-२१।

**नाव्य ನಾವ್ಯ** (वि०) 1. ಹಡಗಿನಿಂದ ಹೋಗಿ ಸೇರಬೇಕಾದ ದೇಶ. नावा तार्यम् "यत्" (४-४-९१)। 2. ಹಡಗಿನಿಂದ ದಾಟಬಹುದಾದ ನದಿ. "मरुपृष्ठान्युदम्भांसि नाव्या: सुप्रतरा नदी:" रघु० ४-३१। (न०) 3. ಹೊಸದಾಗಿರುವಿಕೆ. नवस्य भाव: "ष्यञ्" (५-१-१२४)।

**नाश ನಾಶ** (पुं०) 1. ಅದರ್ಶನ, ಮರೆಯಾಗುವುದು, ಕಾಣಿಸದಿರುವುದು. णश (अदर्शने) भावे "घञ्" (३-३-१८)। "गता नाशं तारा उपकृतमसाधाविव जने वियुक्ता: कान्तेन स्त्रिय इव न राजन्ति ककुभ:" मृच्छ० ५-२५। 2. ನಿಧನ, ಮರಣ. "अविदित्वाऽऽत्मन: शक्तिं परस्य च समुत्सुक:। गच्छन्नभिमुखो नाशं याति वह्नौ पतङ्गवत्" पञ्चतं० १-३५४। 3. ಧ್ವಂಸ, ಅಳಿವು. "कृत्रिमं नाशमभ्येति वैरं द्राक् कृत्रिमैर्गुणै:" पञ्चतं० २-३३। "क्रोधाद्भवति संमोह: संमोहात्स्मृतिविभ्रम:। स्मृतिभ्रंशाद्बुद्धिनाश: बुद्धिनाशात्प्रणश्यति" गीता २-६३। "दानं भोगो नाशस्तिस्रो गतयो भवन्ति वित्तस्य"। 4. ಪಲಾಯನ, ಓಡಿಹೋಗುವುದು. 5. ಅನುಪಲಂಭ, ಇಂದ್ರಿಯಗಳಿಂದ ತಿಳಿಯಲ್ಪಡದಿರುವುದು. "नाश: पलायनेऽपि स्यान्निधनानुपलम्भयो:" मेदि०। 6. (ಗಣಿತದಲ್ಲಿ) ಸಮಾಂಕಗಳನ್ನು ತೆಗೆದುಬಿಡುವುದು, ಪರಿಗಣಿಸದಿರುವುದು.

**नाशक ನಾಶಕ** (वि०) ಧ್ವಂಸಮಾಡುವ, ಹಾಳುಮಾಡುವ, ನಾಶಪಡಿಸುವ. णश (अदर्शने) + णिच् "ण्वुल्" (३-१-१३३)। "ये परस्वापहर्तार: परस्वानां च नाशका:" भा० अनु०।

**नाशन ನಾಶನ** (वि०) 1. ನಾಶಪಡಿಸುವ, ಧ್ವಂಸಮಾಡುವ, ಹಾಳುಮಾಡುವ. णश (अदर्शने) + णिच् "ल्यु:" (३-१-१३४)। "त्रिविधं नरकस्येदं द्वारं नाशनमात्मन:" गीता १६-२१। (न०) 2. ನಾಶಪಡಿಸುವುದು, ಧ್ವಂಸಮಾಡುವುದು. णश + णिच् "ल्युट्" (३-३-११५)।

**नाशनीय ನಾಶನೀಯ** (वि०) 1. ನಾಶಪಡಿಸಲು ಅರ್ಹವಾದ. 2. ನಾಶಪಡಿಸಬೇಕಾದ. 3. ನಾಶಪಡಿಸಲು ಶಕ್ಯವಾದ. 4. ನಾಶಪಡಿಸಲ್ಪಡುವ. णश (अदर्शने) + णिच् "अनीयर्" (३-१-९६)। "तव्य:" (३-१-९६)। **–यितव्य: –ಯಿತವ್ಯ.**

**नाशयत् ನಾಶಯತ್** (वि०) ನಾಶಪಡಿಸುತ್ತಿರುವ, ಹಾಳುಮಾಡುತ್ತಿರುವ. णश (अदर्शने) + णिच् "शतृ" (३-२-१२४)। स्त्रियां "ङीप्" (४-१-६)। **–यन्ती –ಯಂತೀ.**

**नाशयितृ ನಾಶಯಿತೃ** (वि०) ನಾಶಪಡಿಸುವ. णश (अदर्शने) + णिच् "तृच्" (३-१-१३३)। स्त्रियां "ङीप्" (४-१-५)। **–यित्री –ಯಿತ್ರೀ.**

**नाशित ನಾಶಿತ** (वि०) 1. ನಾಶಪಡಿಸಲ್ಪಟ್ಟ, ಅಳಿಸಲ್ಪಟ್ಟ, ಇಲ್ಲದಂತೆ ಮಾಡಲ್ಪಟ್ಟ. णश (अदर्शने) + णिच् "क्तः" (३-२-१०२)। (न०) 2. ನಾಶ, ಧ್ವಂಸ, ಅಳಿವು. णश भावे "क्तः" (३-३-११४)।

**नाशितवत् ನಾಶಿತವತ್** (वि०) ನಾಶಪಡಿಸಿದವನು. णश (अदर्शने) + णिच् "क्तवतुः" (३-२-१०२)।

**नाशिन् ನಾಶಿನ್** (वि०) ನಾಶಹೊಂದುವ, ಅಳಿದು ಹೋಗುವ. णश (अदर्शने) "णिनिः" (३-१-१३४)। "अनाशिनोऽप्रमेयस्य तस्माद्युद्धयस्व भारत" गीता २-१८।

**नाश्य ನಾಶ್ಯ** (वि०) 1. ನಾಶಪಡಿಸಲ್ಪಡುವ. णश (अदर्शने) "ण्यत्" (३-१-१२४)। 2. ನಾಶಪಡಿಸಲು ಅರ್ಹವಾದ.

**नाष्टिक ನಾಷ್ಟಿಕ** (वि०) ನಷ್ಟವಾದ ವಸ್ತುವಿನ ಯಜಮಾನ, ಕಳೆದುಹೋದ ಪದಾರ್ಥದ ಒಡೆಯ, ನಷ್ಟವಾದ ವಸ್ತುವನ್ನು ಹೊಂದಲು ಅರ್ಹನಾದ ಒಡೆಯ. नष्टं द्रव्यमर्हति — "ठञ्" (५-१-६३)। "अथ मूलमनाहार्यं प्रकाशक्रयशोधितः। अदण्ड्यो मुच्यते राज्ञा नाष्टिको लभते धनम्" मनु० ८-२०२।

**नासत्य ನಾಸತ್ಯ** (द्विव०) ಅಶ್ವಿನೀ ಕುಮಾರರು. न सत्यं ययोः असत्यौ, न असत्यौ नासत्यौ। नञः प्रकृतिभावः (६-३-७५)। ಹರಿವಂಶದಲ್ಲಿ नासत्यः, दस्रः ಎಂದು ಪ್ರತ್ಯೇಕವಾಗಿ ಇಬ್ಬರನ್ನು ಹೇಳಿರುವುದರಿಂದ ಏಕವಚನ ಪ್ರಯೋಗವೂ ಉಂಟು. ಇಬ್ಬರೂ ಸೇರಿ ಆಶ್ವಿನೇಯರಾದರು. "देवौ तस्यामजायेतामश्विनौ भिषजां वरौ। नासत्यश्चैव दस्रश्च स्मृतौ तावश्विनावुभौ" हरिवं०। "नोभाविलाभूः किमु दर्पकश्च भवन्ति नासत्ययुतौ भवन्तः" नैष० १०-४५। ಇಂದ್ರನು ಅಶ್ವಿನೀಕುಮಾರರ ಅದ್ಭುತ ಕಾರ್ಯಗಳನ್ನು ನೋಡಿ ಅವರಲ್ಲಿ ಆಯುರ್ವೇದವನ್ನು ಬೇಡಿದನು. ಇವರು ತಾವು ಅಧ್ಯಯನ ಮಾಡಿದ ಆಯುರ್ವೇದವನ್ನು ಇಂದ್ರನಿಗೆ ಹೇಳಿಕೊಟ್ಟರು. ಇಂದ್ರನು ಆತ್ರೇಯ ಮೊದಲಾದವರಿಗೆ ಆಯುರ್ವೇದವನ್ನು ಬೋಧಿಸಿದನು. "नासत्यौ सत्यसन्धेन शक्रेण किल याचितौ। आयुर्वेदं यथाधीतं ददतुः शतमन्यवे॥ नासत्याभ्यामधीत्यैषः आयुर्वेदं शतक्रतुः। अध्यापयामास बहूनात्रेयप्रमुखान् मुनीन्" भावप्र०।

**नासन्धि ನಾಸಂಧಿ** (स्त्री०) ಸ್ತ್ರೀಯರ ಜನನೇಂದ್ರಿಯ, ಭಗ, ಯೋನಿ. "नासन्धिरधरोऽवाच्यदेशः" त्रिकाण्ड०।

**नासा ನಾಸಾ** (स्त्री०) 1. ನಾಸಿಕೆ, ಮೂಗು. नासतेऽनया— णासृ (शब्दे) "घञ्" (३-३-१२१)। "नासादसीया तिलपुष्पतूणं जगत्त्रयव्यस्तशरत्रयस्य" नैष० ७-३६। 2. ದ್ವಾರದ ಮೇಲುಗಡೆಯ ಮರ. "नासा तु नासिकायां च द्वारोर्ध्वदारुणि स्त्रियाम्" मेदि०।

**नासाग्र ನಾಸಾಗ್ರ** (न०) ಮೂಗಿನ ತುದಿ. नासाया अग्रम्। ಘ್ರಾಣೇಂದ್ರಿಯವಿರುವ ಜಾಗ. "इन्द्रियं गन्धग्राहकं घ्राणम्। तच्च नासाग्रवर्ति" त० सं०।

**नासाच्छिद्र ನಾಸಾಚ್ಛಿದ್ರ** (न०) ಮೂಗಿನ ಹೊಳ್ಳೆ.

**नासादारु ನಾಸಾದಾರು** (न०) ದ್ವಾರದ ಮೇಲುಗಡೆ ಮುಂದಕ್ಕೆ ಚಾಚಿಕೊಂಡಿರುವ ಮರ. नासार्थं दारु।

**नासानाह ನಾಸಾನಾಹ** (पुं०) ಒಂದು ವಿಧ ಮೂಗಿನ ರೋಗ.

**नासापुट ನಾಸಾಪುಟ** (पुं०) ಮೂಗಿನ ಹೊಳ್ಳೆ.

**नासारन्ध्र ನಾಸಾರಂಧ್ರ** (न०) ಮೂಗಿನ ಹೊಳ್ಳೆ.

**नासावंश ನಾಸಾವಂಶ** (पुं०) ಮೂಗಿನ ದಿಂಡು, ಮೂಗಿನ ಮೇಲುಭಾಗದ ಅಸ್ಥಿ, ದೋಣಿಯಂತಿರುವ ಮೂಗಿನ ಮಧ್ಯಭಾಗ. नासा वंश इव।

**नासाविरोक ನಾಸಾವಿರೋಕ** (पुं०) ಮೂಗಿನ ರಂಧ್ರ, ಮೂಗಿನ ಹೊಳ್ಳೆ. नासाया विरोकः। "नासाविरोकपवनोल्लसितं तनीयो रोमाञ्चतामिव जगाम रजः पृथिव्याः" माघ० ५-५४।

**नासाविवर ನಾಸಾವಿವರ** (पुं०) ಮೂಗಿನ ಹೊಳ್ಳೆ, ಮೂಗಿನ ರಂಧ್ರ. नासाया विवरः।

**नासावेध ನಾಸಾವೇಧ** (पुं०) ಮೂಗು ಚುಚ್ಚಿ ರಂಧ್ರ ಮಾಡುವುದು, ಹೆಂಗಸರು ಮೂಗುತಿಯನ್ನು ಧರಿಸಲೂ ಎತ್ತುಗಳಿಗೆ ಮೂಗುದಾರ ಹಾಕುವುದಕ್ಕೂ ಮೂಗನ್ನು ಚುಚ್ಚುವುದು. नासाया वेधः।

**नासिकन्धम ನಾಸಿಕಂಧಮ** (वि०) ಮೂಗಿನಿಂದ ಊದುವವನು, ಮೂಗಿನಿಂದ ಊದಿ ಶಬ್ದವನ್ನು ಮಾಡುವವನು. नासिकां धमति — ध्मा (शब्दाग्निसंयोगयोः) "खश्" (३-२-२९)। ह्रस्वः (६-३-६६)। मुम् (६-३-६७)।

**नासिकन्धय ನಾಸಿಕಂಧಯ** (वि०) ಮೂಗಿನಿಂದ ಕುಡಿಯುವವನು. नासिकां धयति तत्स्थजलं पिबति — धेट् (पाने) "खश्" (३-२-२९)। ह्रस्वः (६-३-६६)। मुम् (६-३-६७)।

**नासिका ನಾಸಿಕಾ** (स्त्री०) 1. ಮೂಗು. 2. ಘ್ರಾಣೇಂದ್ರಿಯ. नासते शब्दायते — णासृ (शब्दे) "ण्वुल्" (३-१-१३३)। "श्रोत्रं त्वक् चक्षुषी जिह्वा नासिका चैव पञ्चमी। पायूपस्थं हस्तापादं वाक् चैव दशमी

स्मृता" मनु० २-९०। 3. ಆನೆಯ ಸೊಂಡಿಲು. 4. ದ್ವಾರದ ಮೇಲುಭಾಗದ ಮರ. 5. ಅಶ್ವಿನೀ ದೇವತೆ.

**नासिकामल ನಾಸಿಕಾಮಲ** (न०) ಮೂಗಿನಿಂದ ಹೊರ ಡುವ ದೇಹದೊಳಗಿನ ಕಶ್ಮಲ, ಸಿಂಬಳ. नासिकाया मलम्।

**नासिक्य ನಾಸಿಕ್ಯ** (न०) 1. ಮೂಗು. नासिका स्वार्थे "ष्यञ्" (वा० ५-१-१२४)। (वि०) 2. ಮೂಗಿನ ಸಮೀಪದಲ್ಲಿರುವ. 3. ಮೂಗಿನಿಂದ ಉಂಟಾದ. नासिकाया अदूरभवम् नासिकया निर्वृत्तं वा "ण्य:" (४-२-८०)। 4. ಮೂಗಿನಲ್ಲಿರುವ. नासिकायां भवम् "यत्" (५-२-५५)। (पुं० द्विव०) 5. ಅಶ್ವಿನೀಕುಮಾರರು, ದೇವವೈದ್ಯರು. "नासिक्यौ युजौ दस्रौ गदागदौ" त्रिकाण्ड०।

**नासीर ನಾಸೀರ** (न०) 1. ಮುಂಭಾಗದಲ್ಲಿ ನಿಂತು ಹೋರಾ ಡುವ ಸೈನ್ಯ, ಸೇನಾಮುಖ. नासा शब्देन ईर्ते गच्छति — नास् + ईर् (गतौ) "क:" (३-२-४)। "एतन्नासीरवाजिव्रजखुरजरजोराजिराजिस्थलीषु" नैष० १२-७३। 2. ಅಗ್ರೇಸರ, ಮುಂದಾಳು. "नलस्य नासीरसृजां महीभुजां किरीटरत्नै: पुनरुक्तदीपया" नैष० १६-४।

**नास्ति ನಾಸ್ತಿ** (अव्य०) ಅಭಾವ, ಇಲ್ಲದಿರುವಿಕೆ. न अस्ति। नशब्देन समास:। अस्ति ಎಂಬುದು ಒಂದು ವಿಭಕ್ತಿ ಪ್ರತಿರೂಪಕ ಅವ್ಯಯ. न ಶಬ್ದದೊಡನೆ ಸಮಾಸ ಬಂದು "नास्ति" ರೂಪವಾಗಿರುವುದು. नास्तिक्षीरा। "अस्ति नास्ति न जानाति देहि देहि पुन: पुन:"।

**नास्तिक ನಾಸ್ತಿಕ** (वि०) ಈಶ್ವರನೂ ಪರಲೋಕವೂ ಇಲ್ಲ ವೆಂಬ ಬುದ್ಧಿಯುಳ್ಳವನು. नास्ति परलोक: इति मतिर्यस्य "ठक्" (४-४-६०)। "योऽवमन्येत ते मूले हेतुशास्त्राश्रयाद्द्विज:। स साधुभिर्बहिष्कार्यो नास्तिको वेदनिन्दक:" मनु० २-११। ವೇದ ಅದೃಷ್ಟ ಈಶ್ವರ ಯಾವುದನ್ನೂ ನಂಬದಿರುವವರು ನಾಸ್ತಿಕರು. ಚಾರ್ವಾಕ ಮಾಧ್ಯಮಿಕ ಯೋಗಾಚಾರ ಸೌತ್ರಾಂತಿಕ ವೈಭಾಷಿಕ ದಿಗಂಬರ ಇವರು ನಾಸ್ತಿಕರು.

**नास्तिकता ನಾಸ್ತಿಕತಾ, –त्व –ತ್ವ.** (स्त्री० न०) ಮಿಥ್ಯಾ ದೃಷ್ಟಿ, ವೇದ ಪರಲೋಕ ಈಶ್ವರ ಅದೃಷ್ಟ ಯಾವು ದನ್ನೂ ನಂಬದಿರುವುದು. नास्तिकस्य भाव: "त्वतलौ" (५-१-११९)। ಪರಲೋಕವೂ ಈಶ್ವರನೂ ಇಲ್ಲವೆಂಬ ಜ್ಞಾನವು ಮಿಥ್ಯೆಯಾದುದರಿಂದ ನಾಸ್ತಿಕತೆಯು ಮಿಥ್ಯಾ ದೃಷ್ಟಿಯಾಯಿತು. ಕಾಮಕ್ರೋಧಗಳಿಂದ ಮನುಷ್ಯನ ಬುದ್ಧಿಯು ನಾಶವಾಗಿ ವಿವೇಕಶೂನ್ಯನಾಗುವನು. ಇದೇ ಮೋಹವು. ಇದರಿಂದ ಧರ್ಮಾರ್ಥಗಳ ನಾಶವಾಗುವುದು. ಇದರಿಂದ ನಾಸ್ತಿಕತೆಯುಂಟಾಗುವುದು. ಮನುಷ್ಯನಲ್ಲಿ ದುರಾಚಾರವೂ ಉಂಟಾಗುವುದು. "प्रज्ञानाशात्मको मोह: तथा धर्मार्थनाशक:। तस्मान्नास्तिकता चैव दुराचारश्च जायते" भा० शान्ति० १२३-१६।

**नास्तिक्य ನಾಸ್ತಿಕ್ಯ** (न०) ಈಶ್ವರ ಮತ್ತು ಪರಲೋಕ ಗಳನ್ನು ನಂಬದಿರುವುದು. नास्तिकस्य भाव: "ष्यञ्" (५-१-१२४)। "नास्तिक्यं वेदनिन्दां च देवतानां च कुत्सनम्" मनु० ४-१६३।

**नास्तिमूर्ति ನಾಸ್ತಿಮೂರ್ತಿ** (वि०) ಶರೀರವಿಲ್ಲದ, ದೇಹ ವಿಲ್ಲದ, ರೂಪವಿಲ್ಲದ. नास्ति मूर्तिर्यस्य। नास्तीत्यव्ययम् अभावेऽर्थे। "न मन्मथस्त्वं स हि नास्तिमूर्ति: न चाश्विनेय: स हि नाद्वितीय:" नैष० ८-२९।

**नास्तिवाद ನಾಸ್ತಿವಾದ** (पुं०) ಇಲ್ಲವೆಂದು ಹೇಳುವುದು. ಪರಲೋಕ ಈಶ್ವರ ಯಾವುದೂ ಇಲ್ಲವೆಂದು ವಾದಿಸು ವುದು. नास्ति इति वाद:।

**नास्य ನಾಸ್ಯ** (न०) 1. ಎತ್ತುಗಳಿಗೆ ಹಾಕುವ ಮೂಗು ದಾರ. नासायां भवम् "यत्" (५-३-५५)। "छिन्ननास्ये भग्नयुगे तिर्यक् प्रतिमुखागते। अक्षभङ्गे च यानस्य चक्रभङ्गे तथैव च" मनु० ८-२९१। 2. ಮೂಗಿಗೆ ಸಮೀಪದಲ್ಲಿರುವ. नासा चतुरर्थ्यां "ण्य:" (४-२-८०)।

**नाह ನಾಹ** (पुं०) 1. ಬಂಧನ, ಕಟ್ಟುವುದು. णह (बन्धने) भावे "घञ्" (३-३-१८)। 2. ಹಕ್ಕಿ ಮತ್ತು ಮೃಗ ಗಳನ್ನು ಹಿಡಿಯುವ ಬಲೆ ಅಥವಾ ಬೋನು. 3. ಮಲ ಬದ್ಧತೆ, ಹೊಟ್ಟೆ ಕಟ್ಟುವುದು. "नाहस्तु बन्धने कूटे" मेदि०।

**नाहल ನಾಹಲ** (पुं०) ಮ್ಲೇಚ್ಛ ಜನಾಂಗದವನು.

**नाहुष ನಾಹುಷ** (पुं०) ನಹುಷರಾಜನ ಮಗ ಯಯಾತಿ. नहुषस्यायं "अण्" (४-३-१२०)। "ययातिर्नाहुष: सम्राडासीत् सत्यपराक्रम:" भा० आदि० ६९-३५।

**नाहुषि ನಾಹುಷಿ** (पुं०) ನಹುಷರಾಜನ ಮಗ ಯಯಾತಿ. नहुषस्यापत्यम् "इञ्" (४-१-९५)।

**नि ನಿ** (अव्य०) ಇದೊಂದು ಉಪಸರ್ಗ. ಇದು ಈ ಕೆಳಗಿನ ಅರ್ಥಗಳಿಗೆ ದ್ಯೋತಕವಾಗುವುದು. 1. ಸಮೂಹ, ಗುಂಪು, ರಾಶಿ. "ज्वालाकणारुणरुचा निकरेण रेणो:" माघ० ५-५५। 2. ಅಧೋಭಾವ, ಕೆಳಮುಖವಾಗುವುದು. "निपतिता: परित: पथिकव्रजानुपरि ते परितेपुरतो भृशम्" माघ० ६-६। 3. ಅತಿಶಯ, ಅಧಿಕ್ಯ. निकाम:।

"निकामतप्ता विविधेन वह्निना नभश्चरेणेन्धनसंभृतेन सा" कुमा० ५-२३। 4. ಆದೇಶ. ಅಪ್ಪಣೆ, ಆಜ್ಞೆ. "यावद्भवत्याहितसायकस्य मत्कार्मुकस्यास्य निदेशवर्ती" कुमा० ३-४। 5. ಕುಶಲತೆ, ಜಾಣತನ. "वयस्य, निसर्गनिपुणाः स्त्रियः" माल० ३। 6. ಬಂಧನ, ತಡೆ, ಅಂಕೆ, ಅಡ್ಡಿ. 7. ಸಮೀಪ. "हिरण्यकः निकटवर्तिनं शरस्तम्बं प्रविष्टः" पञ्चतं० २। 8. ನಿತ್ಯ, ಶಾಶ್ವತ, ಸ್ಥಿರ. 9. ದರ್ಶನ, ತೋರಿಸುವುದು. निदर्शनम्। 10. ನಿವೃತ್ತಿ, ವಿಶ್ರಾಂತಿ, ನಿಲುಗಡೆ, ಬಿಡುವು. "निर्वर्तितं वैरिजनोपमर्दात् न्यस्तं रथे चक्रमुपाददानः" याद० २३-४०। 11. ಆಶ್ರಯ, ರಕ್ಷಣಾಸ್ಥಾನ. निलयः। 12. ಅಂತರ್ಭಾವ, ಒಳಗೆ ಸೇರಿಕೊಳ್ಳುವುದು. 13. ಸಂಶಯ, ಸಂದೇಹ. 14. ವಿನ್ಯಾಸ. 15. ಎಸೆಯುವುದು. 16. ಮೋಕ್ಷ. 17. ದಾನ, ಕೊಡುಗೆ. "नि स्यात्क्षेपे भृशार्थे च नित्यार्थे दानकर्मणि। संनिधानोपरमयोः संशयाश्रयराशिषु। मोक्षेऽन्तर्भविऽघोभावे बन्धने कौशलेऽपि च" हेम०। 18. ನಿಷೇಧ.

**नि:क्षत्रिय ನಿಃಕ್ಷತ್ರಿಯ** (वि०) ಕ್ಷತ್ರಿಯರಿಲ್ಲದ, ಕ್ಷತ್ರಿಯಶೂನ್ಯವಾದ. निर्गताः क्षत्रिया यस्मात्।

**नि:शङ्क ನಿಃಶಂಕ** (वि०) 1. ಸಂದೇಹವಿಲ್ಲದ. 2. ಭಯವಿಲ್ಲದ. निर्गता शङ्का संशयो भयं वा यस्मात्। "भो भगवन् इदानीं स्वपिहि निःशङ्कः। अस्योष्मणा मूषकस्ते जागरणं संपादयति" पञ्चतं० २। (क्रि० वि०) 3. ಸಂದೇಹವಿಲ್ಲದೆ. "मां घ्नता भवताऽकारि निःशङ्कं पापदृश्वना" भट्टि० ६-१२९। 4. ಭಯವಿಲ್ಲದೆ. "निःशङ्कमङ्कुरिततां रतिवल्लभस्य देवः स्वचन्द्रकिरणामृतसेचनेन" नैष० ११-९१।

**नि:शब्द ನಿಃಶಬ್ದ** (वि०) 1. ಶಬ್ದವಿಲ್ಲದ, ಸದ್ದಿಲ್ಲದ. निर्गतः शब्दो यस्मात्। "निःशब्दं कारयित्वा तत् सदः प्राह महामुने" मार्क०। (क्रि० वि०) 2. ಶಬ್ದವಿಲ್ಲದೆ, ಸದ್ದಿಲ್ಲದೆ.

**नि:शरण्य ನಿಃಶರಣ್ಯ** (वि०) ರಕ್ಷಕನಿಲ್ಲದ, ಕಾಪಾಡುವವನಿಲ್ಲದ. निर्गतः शरण्यो यस्मात्। "भवद्वियोगाच्छिदुरातिधारायमस्वसुर्मज्जति निःशरण्यः" नैष० ३-११३।

**नि:शलाक ನಿಃಶಲಾಕ** (वि०) ರಹಸ್ಯವಾದ. ನಿರ್ಜನವಾದ. निर्गतः शलाकायाः। "गिरिपृष्ठं समारुह्य प्रासादं वा रहोगतः। अरण्ये निःशलाके वा मन्त्रयेदविभावितः" मनु० ७-१४७।

**नि:शल्क ನಿಃಶಲ್ಕ** (वि०) 1. ತೊಗಟೆಯಿಲ್ಲದ. 2. ಮೈಮೇಲಿನ ಪೊರೆಯಿಲ್ಲದ ಮೀನು.

**नि:शल्य ನಿಃಶಲ್ಯ** (वि०) 1. ಬಾಣವಿಲ್ಲದ. 2. ಮುಳ್ಳುಗಳಿಲ್ಲದ. 3. ಅಡ್ಡಿ ಆತಂಕಗಳಿಲ್ಲದ. निर्गतं शल्यं यस्मात्। (क्रि० वि०) 4. ಬಾಣವಿಲ್ಲದೆ. 5. ಅಡ್ಡಿಯಿಲ್ಲದೆ, ತಡೆಯಿಲ್ಲದೆ. 6. ಮುಳ್ಳುಗಳಿಲ್ಲದೆ.

**नि:शस्त्र ನಿಃಶಸ್ತ್ರ** (वि०) 1. ಶಸ್ತ್ರಗಳಿಲ್ಲದ. 2. ಆಯುಧಗಳಿಲ್ಲದ, ಮದ್ದು ಗುಂಡುಗಳಿಲ್ಲದ, ಬಂದೂಕ ಫಿರಂಗಿ ಮೊದಲಾದುವುಗಳಿಲ್ಲದ. निर्गतं शस्त्रं यस्मात्।

**नि:शस्त्रीकरण ನಿಃಶಸ್ತ್ರೀಕರಣ** (न०) ಆಯುಧ ಮದ್ದು ಗುಂಡು ಫಿರಂಗಿಗಳಿಲ್ಲದೆ ಮಾಡುವುದು.

**नि:शस्त्रीकृत ನಿಃಶಸ್ತ್ರೀಕೃತ** (वि०) ಆಯುಧ ಗುಂಡು ಮೊದಲಾದುವುಗಳಿಲ್ಲದೆ ಮಾಡಲ್ಪಟ್ಟ.

**नि:शूक ನಿಃಶೂಕ** (पुं०) ಊಬಿಲ್ಲದ ಧಾನ್ಯ, ತೀಕ್ಷ್ಣವಾದ (ಚೂಪಾದ) ಅಗ್ರಭಾಗವಿಲ್ಲದ ಧಾನ್ಯ, ಮುಂಡಧಾನ್ಯ. निर्गतः शूकोऽस्मात्।

**नि:शेष ನಿಃಶೇಷ** (वि०) 1. ಶೇಷವಿಲ್ಲದ, ಸಮಗ್ರವಾದ, ಸಂಪೂರ್ಣವಾದ. निर्गतः शेषो यस्मात्। निष्क्रान्तं शेषात् वा। "पारेपरार्घं गणितं यदि स्यात् गणेयनिःशेषगुणोऽपि स स्यात्" नैष० ३-४०। (क्रि० वि०) 2. ಸಂಪೂರ್ಣವಾಗಿ, ಸಮಗ್ರವಾಗಿ, ಉಳಿಕೆಯಿಲ್ಲದೆ. "निःशेषच्युतचन्दनं स्तनतटं निर्मृष्टरागोऽधरः" काव्यप्र०। "तमध्वरे विश्वजिति क्षितीशं निःशेषविश्राणितकोशजातम्" रघु० ५-१।

**नि:शेषता ನಿಃಶೇಷತಾ** (स्त्री०) ಶೇಷವಿಲ್ಲದಿರುವಿಕೆ, ಉಳಿಕೆಯಿಲ್ಲದಿರುವಿಕೆ. निःशेषस्य भावः "तल्" (५-१-११९)। "एवं शत्रून्निःशेषतां नीत्वा भूयोऽपि मेघवर्णः तदेव पादपदुर्गं जगाम" पञ्चतं० ३।

**नि:शेषयत् ನಿಃಶೇಷಯತ್** (वि०) ಶೇಷವಿಲ್ಲದೆ ಮಾಡುತ್ತಿರುವ. निस् + शिष (असर्वोपयोगे) + णिच् "शतृ" (३-२-१२४)। स्त्रियां "ङीप्" (४-१-६)। "नैशं तमिस्रमरुणेन विलुप्ततारं निःशेषयन्नयमुदेति मयूखमाली" याद० २९-४७। **–यन्ती –ಯಂತೀ.**

**नि:शेषयितृ ನಿಃಶೇಷಯಿತೃ** (वि०) ಶೇಷವಿಲ್ಲದೆ ಮಾಡುವವನು, ಶೂನ್ಯವಾಗಿ ಮಾಡುವವನು. निस् + शिष (असर्वोपयोगे) + णिच् "तृच्" (३-१-१३३)। स्त्रियां "ङीप्" (४-१-५)। **–यित्री –ಯಿತ್ರೀ.**

**निःशेषित ನಿಃಶೇಷಿತ** (वि०) 1. ಶೇಷವಿಲ್ಲದೆ ಮಾಡಲ್ಪಟ್ಟ. ಶೂನ್ಯವಾಗಿ ಮಾಡಲ್ಪಟ್ಟ. निस्+शिष (असर्वोपयोगे)+णिच् "क्तः" (३-२-१०२)। "नूनं सद्यःफलानि नीतिशास्त्राणि, यस्त्वयाऽनुकूल्येनानुप्रविश्यारिमर्दनः सपरिवारो निःशेषितः" पञ्चतं० ३। "भद्र, निःशेषितास्ते रिपवः" पञ्चतं० ४। 2. ಸಂಪೂರ್ಣವಾಗಿ ಮಾಡಲ್ಪಟ್ಟ, ಉಳಿಕೆಯಿಲ್ಲದೆ ಮಾಡಲ್ಪಟ್ಟ.

**निःशोध्य ನಿಃಶೋಧ್ಯ** (वि०) ಚೆನ್ನಾಗಿ ಶೋಧಿಸಲ್ಪಟ್ಟ. ನಿರ್ಮಲವಾಗಿ ಮಾಡಲ್ಪಟ್ಟ, ಕಶ್ಮಲವಿಲ್ಲದಂತೆ ಮಾಡಲ್ಪಟ್ಟ. निष्क्रान्तं शोध्यमस्मात्। निष्क्रान्तं शोध्यात् इति वा। "निःशोध्यमनवस्करम्" अम०।

**निःश्रयणी ನಿಃಶ್ರಯಣೀ** (स्त्री०) ಮನೆ ಮೊದಲಾದುವುಗಳನ್ನು ಹತ್ತಲು ಸಾಧನವಾದ ಏಣಿ, ನಿಚ್ಚಣಿಗೆ. निश्चितं श्रीयते आश्रीयतेऽनया—श्रिञ् (सेवायाम्) कर० "ल्युट्" (३-३-११७)।

**निःश्रयिणी ನಿಃಶ್ರಯಿಣೀ** (स्त्री०) ಏಣಿ, ನಿಚ್ಚಣಿಗೆ. निःश्रयति—श्रिञ् (सेवायाम्) "णिनिः" (३-१-१३४)। "ङीप्" (४-१-५)।

**निःश्रेणि ನಿಃಶ್ರೇಣಿ** (स्त्री०) 1. ಮನೆ ಮೊದಲಾದುವುಗಳ ಮೇಲೆ ಹತ್ತಲು ಸಾಧನವಾದ ಏಣಿ, ನಿಚ್ಚಣಿಗೆ. निश्रिता श्रेणिरत्र। "निःश्रेणिस्त्वधिरोहिणी" अम०। 2. ಖರ್ಜೂರದ ಮರ. "निःश्रेणिस्त्वधिरोहिण्यां खर्जूरीपादपे स्त्रियाम्" मेदि०। "चक्रे त्रिदिवनिःश्रेणिः सरयूरनुयायिनाम्" रघु० १५-१००।

**निःश्रेयस् ನಿಃಶ್ರೇಯಸ್** (वि०) ಬಹಳ ಶ್ರೇಷ್ಠನಾದ ಮನುಷ್ಯ, ಉತ್ತಮ ಗುಣಗಳಿಂದ ಕೂಡಿದ ಮನುಷ್ಯ. निश्चितं श्रेयो यस्य।

**निःश्रेयस ನಿಃಶ್ರೇಯಸ** (पुं०) 1. ಶಂಕರ, ಪರಮೇಶ್ವರ, ಪರಶಿವ. "निःश्रेयसन्तु कल्याणमोक्षयोः शङ्करे पुमान्" मेदि०। (न०) 2. ಮೋಕ್ಷ, ಆತ್ಯಂತಿಕ ಸುಖ, ಶಾಶ್ವತವಾದ ಸುಖ. निश्चितं श्रेयः, अजन्तो निपातितः (५-४-७७)। "निःश्रेयसप्रतिपदेन निजेन धाम्ना" याद० १९-५१। 3. ಕಲ್ಯಾಣ, ಮಂಗಳ, ಶುಭ. "इदं भागवतं नाम पुराणं ब्रह्मसम्मितम्। उत्तमश्लोकचरितं चकार भगवान् ऋषिः। निःश्रेयसाय लोकस्य धन्यं स्वस्त्ययनं महत्" भाग० १-३-४०, १।

**निःश्वसत् ನಿಃಶ್ವಸತ್** (वि०) ನಿಟ್ಟುಸಿರು ಬಿಡುತ್ತಿರುವ. निस्+श्वस (प्राणने) "शतृ" (३-२-१२४)। "गुरु निःश्वसन्नथ विलोलसदवथुवपुर्वचोविषम्" माघ० १५-६२।

**निःश्वसित ನಿಃಶ್ವಸಿತ** (न०) ನಿಟ್ಟುಸಿರು, ಮೇಲಿನ ಉಸಿರು. निस्+श्वस (प्राणने) भावे "क्तः" (३-३-११४)। "स्तनकम्पक्रियालक्ष्यैर्न्यस्तं निश्वसितैरिव" विक्र० २-१८।

**निःश्वास ನಿಃಶ್ವಾಸ** (पुं०) ನಿಟ್ಟುಸಿರು, ವಾಯುವು ಮೂಗಿನಿಂದ ವೇಗವಾಗಿ ಹೊರಕ್ಕೆ ಬರುವುದು. निस्+श्वस (प्राणने) भावे "घञ्" (३-३-१८)। "निःश्वासधूमैः स्थगितांशुजालं फणावतामुत्फणमण्डलानाम्" किरा० १६-३९। "सखीजनप्रयत्नप्रतिपन्नमूर्च्छाविच्छेदसमयसंगलितदीर्घनिःश्वासजनितजीविताशा" मालती० ३।

**निःषम ನಿಃಷಮ** (अव्य०) 1. ನಿಂದೆ, ದೂಷಣೆ, ತೆಗಳುವುದು. 2. ಆಕ್ಷೇಪಿಸುವುದು. निर्गतं सममत्र। अव्ययी० (२-१-१७)। षत्वम् (८-३-८८)।

**निःसंशय ನಿಃಸಂಶಯಃ** (वि०) 1. ಸಂಶಯವಿಲ್ಲದ, ಸಂದೇಹವಿಲ್ಲದ. निर्गतः संशयो यस्मात्। "कृते निःसंशये पापे न भुञ्जीतानुपस्थितः"। (अव्य०) 2. ಸಂದೇಹವಿಲ್ಲದೆ, ಸಂಶಯವಿಲ್ಲದೆ.

**निःसङ्ग ನಿಃಸಂಗ** (वि०) 1. ಸಂಗವಿಲ್ಲದ, ಕರ್ಮಸಂಬಂಧವಿಲ್ಲದ. निर्गतः सङ्गो यस्मात्। ಜೀವನಿಗಿರುವಂತೆ ಪುರುಷನಿಗೆ ಕರ್ಮಸಂಬಂಧವಿರುವುದಿಲ್ಲ. "निःसङ्गः पुरुषः क्रियासु स कथं कर्तेति संभाव्यते" प्रबोध० ६-१९। 2. ಕರ್ಮಫಲ ಸಂಬಂಧವಿಲ್ಲದ, ಕರ್ಮಫಲವನ್ನು ಅಪೇಕ್ಷಿಸದಿರುವ, ಆತ್ಮಪ್ರಯೋಜನಸಾಧನವಾದ ಕರ್ಮಫಲ ಸಂಬಂಧವಿಲ್ಲದ. "यज्ञार्थात् कर्मणोऽन्यत्र लोकोऽयं कर्मबन्धनः। तदर्थं कर्म कौन्तेय मुक्तसङ्गः समाचर" गीता ३-९। "वेदोक्तमेव कुर्वाणो निःसङ्गोऽर्पितमीश्वरे"। 3. ಸಂಬಂಧವಿಲ್ಲದ, ಬೇರೆಯಾಗಿರುವ, ಸೇರಿಕೊಂಡಿಲ್ಲದ. (क्रि० वि०) 4. ಸಂಬಂಧವಿಲ್ಲದೆ, ಸಹವಾಸವಿಲ್ಲದೆ. 5. ಕರ್ಮಫಲ ಸಂಬಂಧವಿಲ್ಲದೆ. 6. ಸೇರಿಕೊಂಡಿಲ್ಲದೆ.

**निःसञ्चार ನಿಃಸಂಚಾರ** (पुं०) ಸಂಚಾರವಿಲ್ಲದಿರುವುದು, ಓಡಾಟವಿಲ್ಲದಿರುವುದು. निर्गतः सञ्चारः। "अहो निशीथनिःसञ्चाररमणीयता राजमार्गस्य" मालती० ७।

**निःसंज्ञ ನಿಃಸಂಜ್ಞ** (वि०) 1. ಪ್ರಜ್ಞೆಯಿಲ್ಲದ, ಜ್ಞಾನವಿಲ್ಲದ, ಮೈಮೇಲೆ ಎಚ್ಚರವಿಲ್ಲದ. निर्गता संज्ञा यस्मात्। 2. ಮೈಮರೆತಿರುವ, ಅಹಂಕಾರದಿಂದ ವಿವೇಕಶೂನ್ಯವಾದ. "यदाढ्यानामग्रे द्रविणमदनिःसंज्ञमनसां कृतं मानव्रीडैर्निजगुणकथापातकमपि" भर्तृ० ३-५।

**निःसत्त्व ನಿಃಸತ್ತ್ವ** (वि०) ಶಕ್ತಿಯಿಲ್ಲದ, ಸಾಮರ್ಥ್ಯವಿಲ್ಲದ. निर्गतं सत्त्वं यस्मात्। "कथं नामातिभीषणविभीषिकाविकारैर्झडित्यपक्रान्तं पिशाचैः। अहो निःसत्त्वाः सर्वे" मालती० ५।

**निःसन्तति ನಿಃಸಂತತಿ** (वि०) ಸಂತಾನವಿಲ್ಲದ, ಮಕ್ಕಳಿಲ್ಲದ. निर्गता सन्ततिः यस्मात्। ಇದೇ ಅರ್ಥದಲ್ಲಿ **निःसन्तानः ನಿಃಸಂತಾನಃ.**

**निःसन्दिग्ध ನಿಃಸಂದಿಗ್ಧ** (वि०) 1. ಸಂದೇಹವಿಲ್ಲದ, ಸಂಶಯವಿಲ್ಲದ, ನಿಶ್ಚಯವಾದ. (क्रि० वि०) 2. ಸಂದೇಹವಿಲ್ಲದೆ, ಸಂಶಯವಿಲ್ಲದೆ, ನಿಶ್ಚಯವಾಗಿ.

**निःसन्देह ನಿಃಸಂದೇಹ** (वि०) 1. ಸಂಶಯವಿಲ್ಲದ. (क्रि० वि०) 2. ಸಂಶಯವಿಲ್ಲದೆ.

**निःसपत्न ನಿಃಸಪತ್ನ** (वि०) 1. ಶತ್ರುಗಳಿಲ್ಲದ, ದ್ವೇಷಿಗಳಿಲ್ಲದ. निर्गतः सपत्नः यस्मात्। "घनरुचिरकलापो निःसपत्नोऽस्य जातः" विक्र० ४-२२। 2. ಪ್ರತಿಸ್ಪರ್ಧಿಯಿಲ್ಲದ, ಎದುರಾಳಿಯಿಲ್ಲದ. "ऊर्जस्वलेन सुरभीरनु निःसपत्नम्"। 3. ಪಾಲುದಾರರಿಲ್ಲದ.

**निःसम्बाध ನಿಃಸಂಬಾಧ** (वि०) 1. ಗುಂಪಿಲ್ಲದ, ಸಂದಣಿಯಿಲ್ಲದ. 2. ಒಂಟಿಯಾದ, ಏಕಾಂತವಾಗಿರುವ. निर्गता संबाधा यस्मात्।

**निःसरण ನಿಃಸರಣ** (न०) 1. ನಿರ್ಗಮನ, ಹೊರಕ್ಕೆ ಹೊರಡುವುದು. निर् + सृ (गतौ) भावे "ल्युट्" (३-३-११५)। "गर्भवासे महद्दुःखं दशमासनिवासनम्। तथा निःसरणे दुःखम्"। 2. ಮನೆಯ ಮುಂಭಾಗ. निःसरत्यनेन — निर् + सृ (गतौ) कर० "ल्युट्" (३-३-११७)। 3. ಮೋಕ್ಷ, ಮುಕ್ತಿ. 4. ಮರಣ. 5. ಉಪಾಯ, ಯುಕ್ತಿ.

**निःसरत् ನಿಃಸರತ್** (वि०) ಹೊರಕ್ಕೆ ಹೊರಡುತ್ತಿರುವ. निर् + सृ (गतौ) "शतृ" (३-२-१२४)। स्त्रियां "ङीप्" (४-१-६)। **-न्ती -ನ್ತೀ.** "एतद्भीतारिनारीगिरिबिलविगलद्वासरा निःसरन्ती" नैष० १२-२८।

**निःसलिल ನಿಃಸಲಿಲ** (वि०) ಜಲವಿಲ್ಲದ, ನೀರಿಲ್ಲದ. निर्गतं सलिलं यस्मात्।

**निःसह ನಿಃಸಹ** (वि०) 1. ಶಕ್ತಿಯಿಲ್ಲದ, ಸಾಮರ್ಥ್ಯವಿಲ್ಲದ. "अयि, विरम विरम। निःसहा जातासि" मालती० ३। "उपशमयुपयान्तं निःसहेऽङ्गेऽङ्गनानाम्" माघ० ११-१७। 2. ಎದುರಿಸಲಾಗದ, ಪ್ರತಿಭಟಿಸಲಾಗದ.

**निःसहता ನಿಃಸಹತಾ** (स्त्री०) ಶಕ್ತಿಯಿಲ್ಲದಿರುವಿಕೆ, ಸಾಮರ್ಥ್ಯವಿಲ್ಲದಿರುವಿಕೆ. निःसहस्य भावः "तल्" (५-१-११९)। "त्वः" (५-१-११९)। **निःसहत्वम् ನಿಃಸಹತ್ವಮ್.**

**निःसहाय ನಿಃಸಹಾಯ** (वि०) ಸಹಾಯವಿಲ್ಲದ, ಬೆಂಬಲಿಗನಿಲ್ಲದ. निर्गतः सहायो यस्मात्।

**निःसार ನಿಃಸಾರ** (पुं०) 1. ಶಾಖೋಟಕ ವೃಕ್ಷ, ಕಾರೆಗಿಡ. (वि०) 2. ಸಾರವಿಲ್ಲದ, ಸತ್ತ್ವವಿಲ್ಲದ, ತಿರುಳಿಲ್ಲದ. निर्गतः सारो यस्मात्। "निःसारस्य पदार्थस्य प्रायेणाडम्बरो महान्"। "जगत्सर्वं तु निःसारमनित्यं दुःखभाजनम्। उत्पद्यते क्षणादेतत् क्षणादेतद्विपद्यते" कालिकापु०। (स्त्री०) **-रा -ರಾ.** 3. ಬಾಳೆಗಿಡ.

**निःसारता ನಿಃಸಾರತಾ** (स्त्री०) ಸಾರವಿಲ್ಲದಿರುವಿಕೆ, ಸತ್ತ್ವವಿಲ್ಲದಿರುವಿಕೆ. निःसारस्य भावः "तल्" (५-१-११९)। "विहाय निःसारतयैव भूरुहान् पदं वनश्रीर्वनितासु सन्दधे" किरा० ८-२०। "त्वः"। **-त्वम् -ತ್ವಮ್.** किरा० ११-५९।

**निःसारण ನಿಃಸಾರಣ** (न०) 1. ಹೊರಕ್ಕೆ ಕಳುಹಿಸುವುದು. निर् + सृ (गतौ) + णिच् "ल्युट्" (३-३-११५)। 2. ಮನೆಯ ಮುಂಭಾಗ. निःसार्यतेऽनेन—कर० "ल्युट्" (३-३-११७)।

**निःसारित ನಿಃಸಾರಿತ** (वि०) ಹೊರಕ್ಕೆ ಕಳುಹಿಸಲ್ಪಟ್ಟ. निर् + सृ (गतौ) + णिच् "क्तः" (३-२-१०२)। "एवं विमृश्य सविषादया तया निःसारितोऽसौ" पञ्चतं०।

**निःसार्यमाण ನಿಃಸಾರ್ಯಮಾಣ** (वि०) ಹೊರಕ್ಕೆ ಕಳುಹಿಸಲ್ಪಡುತ್ತಿರುವ. निर्+सृ (गतौ)+णिच् कर्म० "शानच्" (३-२-१२४)।

**निःसीमन् ನಿಃಸೀಮನ್** (वि०) ಎಲ್ಲೆಯಿಲ್ಲದ, ಅವಧಿಯಿಲ್ಲದ, ಅಪರಿಮಿತವಾದ, ಅಪಾರವಾದ. निर्गता सीमा यस्मात्। "साकेतजनपदजनितजङ्गमतदितरजन्तुजातदिव्यगतिदानदर्शितनित्यनिःसीमवैभव" रघु० ग०। "निःसीमानन्दमासीदुपनिषदुपमातत्परीभूय भूयः" नैष० ११-१२९।

**निःसूत्र ನಿಃಸೂತ್ರ** (वि०) 1. ತಂತುವಿಲ್ಲದ, ದಾರವಿಲ್ಲದ. निर्गतं सूत्रं यस्मात्। 2. ವ್ಯವಸ್ಥೆಯಿಲ್ಲದ, ಉಪಾಯ ತೋರದಿರುವ. "निःसूत्रमास्ते घनपङ्कमूर्त्सु मूर्तासु नाकीर्तिषु तन्निमग्नम्" नैष० ७-६९।

**निःस्नेह ನಿಃಸ್ನೇಹ** (वि०) 1. ಸ್ನೇಹವಿಲ್ಲದ, ಸಖ್ಯವಿಲ್ಲದ. 2. ಪ್ರೀತಿಯಿಲ್ಲದ, ವಿಶ್ವಾಸವಿಲ್ಲದ. "यदर्थे स्वकुलं त्यक्तं जीवितार्धं च हारितम्। सा मां त्यजति निःस्नेहा कः स्त्रीणां विश्वसेन्नरः" पञ्चतं० ४-४५। (स्त्री०) **-हा -ಹಾ**. 3. ಅಗಸೆಗಿಡ.

**निःस्पृह ನಿಃಸ್ಪೃಹ** (वि०) ಆಸೆಯಿಲ್ಲದವನು, ಅಪೇಕ್ಷೆಯಿಲ್ಲದವನು, ಆಸೆಯನ್ನು ತೊರೆದಿರುವವನು. निर्गता स्पृहा यस्य। "व्रजन्ति शत्रूनवधूय निःस्पृहाः शमेन सिद्धिं मुनयो न भूभृतः" किरा० १-४२। "निःस्पृहो नाधिकारी स्यात्" पञ्चतं० १-१७५।

**निःस्पृहता ನಿಃಸ್ಪೃಹತಾ** (स्त्री०) ಆಸೆಯಿಲ್ಲದಿರುವಿಕೆ, ಆಸೆಯನ್ನು ತೊರೆದಿರುವಿಕೆ. निःस्पृहस्य भावः "तल्" (५-१-११९)। "त्वः"। **-त्वम् -ತ್ವಮ್.**

**निःस्रव ನಿಃಸ್ರವ** (पुं०) ಅವಶೇಷ, ಉಳಿಕೆ. निर्गतः स्रवः। "राजनि स्थाप्यते योऽर्घः प्रत्यहं तेन विक्रयः। क्रयो वा निःस्रवस्तस्मात् वणिजां लाभकृत्स्मृतः" याज्ञ० २-२५१। ರಾಜನು ಸ್ವದೇಶದಿಂದ ಪರದೇಶಕ್ಕೆ ಕಳುಹಿಸಲ್ಪಡುವ ಮತ್ತು ಪರದೇಶದಿಂದ ಅಮದು ಮಾಡಲ್ಪಡುವ ವಸ್ತುಗಳ ಬೆಲೆ, ಅವುಗಳ ಖರ್ಚು ಇತ್ಯಾದಿಗಳನ್ನು ಪರ್ಯಾಲೋಚಿಸಿ ಕ್ರಯ ವಿಕ್ರಯಗಳ ಬೆಲೆಗಳನ್ನು ನಿಗದಿಮಾಡಬೇಕು. ಅದರಂತೆ ವರ್ತಕರು ವ್ಯಾಪಾರಗಳನ್ನು ಮಾಡಬೇಕು. ಐದೈದು ದಿನಗಳಿಗೊಂದಾವೃತ್ತಿ ಅಥವಾ ಹದಿನೈದು ದಿನಗಳಿಗೊಂದಾವೃತ್ತಿ ಈ ರೀತಿ ವಸ್ತುಗಳನ್ನು ಪರೀಕ್ಷಿಸಿ ಬೆಲೆಯನ್ನು ರಾಜನು ವ್ಯವಸ್ಥೆಗೊಳಿಸಬೇಕು. "आगमं निर्गमं स्थानं तथा वृद्धिक्षयावुभौ। विचार्य सर्वपण्यानां कारयेत्क्रयविक्रयौ॥ पञ्चरात्रे पञ्चरात्रे पक्षे पक्षेऽथवा गते। कुर्वीत चैषां प्रत्यक्षमर्घसंस्थापनं नृपः" मनु० ८-४०१, २। ರಾಜನಿಂದ ನಿಗದಿಮಾಡಲ್ಪಟ್ಟ ದರಕ್ಕೆ ವಿಕ್ರಯಮಾಡಿದ ನಂತರ ಉಳಿಯುವುದೇ ವರ್ತಕನ ಲಾಭಾಂಶವಾಗುವುದು.

**निःस्राव ನಿಃಸ್ರಾವ** (पुं०) 1. ಅನ್ನದ ಮೇಲಿನ ಗಂಜಿ. निःस्राव्यते — निर् + स्रु (गतौ) + णिच् "घञ्" (३-३-१९)। 2. ವ್ಯಯ, ಖರ್ಚು. "बह्वादानोऽल्पनिस्रावः ख्यातः पूजितदैवतः। ईप्सितद्रव्यसम्पूर्णः हृद्यस्वाप्तैरधिष्ठितः" कामन्द० ४-६२।

**निःस्व ನಿಃಸ್ವ** (वि०) ದರಿದ್ರ, ಅಕಿಂಚನ, ಬಡವ. निर्गतं स्वमस्य। "निःस्वो वष्टि शतं शती दशशतं लक्षं सहस्राधिपो लक्षेशः क्षितिपालतां क्षितिपतिश्चक्रेशतां वाञ्छति"।

**निःस्वता ನಿಃಸ್ವತಾ** (स्त्री०) ದಾರಿದ್ರ್ಯ, ಬಡತನ. निःस्वस्य भावः "तल्" (५-१-११९)। "त्वः"। **-त्वम् -ತ್ವಮ್.**

**निःस्वन ನಿಃಸ್ವನ** (वि०) ಶಬ್ದವಿಲ್ಲದ. निर्गतः स्वनः यस्मात्।

**निःस्वभाव ನಿಃಸ್ವಭಾವ** (वि०) ಸ್ವಭಾವಶೂನ್ಯವಾದ. निर्गतः स्वभावो यस्य। ಬೌದ್ಧಮತದಲ್ಲಿ ವಸ್ತುಸಾಮಾನ್ಯಕ್ಕೂ ಸ್ವಭಾವವೆಂಬುದು ಇಲ್ಲವಾದುದರಿಂದ ವಸ್ತುಗಳೆಲ್ಲವೂ ಸ್ವಭಾವಶೂನ್ಯವಾದುವು. "बुद्धया विविच्यमानानां स्वभावो नावधार्यते। अतो निरभिलप्यास्ते निःस्वभावाश्च दर्शिताः"।

**निकट ನಿಕಟ** (वि०) 1. ಸಮೀಪದ, ಹತ್ತಿರದ. नि समीपे कटति — कटे (वर्षावरणयोः) "अच्" (३-१-१३४)। "हिरण्यकः निकटवर्तिनं शरस्तम्बं प्रविष्टः" पञ्चतं० २। (पुंन०) 2. ಹತ್ತಿರ, ಸಮೀಪ. "नापेक्षते स्म निकटोपगतां करेणुम्" माघ० ५-५०।

**निकर ನಿಕರ** (पुं०) 1. ಸಮೂಹ, ಗುಂಪು, ರಾಶಿ. निकीर्यते — नि + कॄ (विक्षेपे) "अप्" (३-३-५७)। "नवविनिद्रजपाकुसुमत्विषां द्युतिमतां निकरेण महाश्मनाम्" किरा० ५-८। 2. ಸಾರ, ಸ್ಥಿರಾಂಶ. 3. ನ್ಯಾಯವಾಗಿ ಕೊಡಬೇಕಾದ ಧನ. 4. ನಿಧಿ, ಕುಬೇರನ ಬೊಕ್ಕಸ. "निकरो निवहे सारे न्यायदेयधने निधौ" मेदि०।

**निकर्तन ನಿಕರ್ತನ** (न०) 1. ಕತ್ತರಿಸುವುದು. "निकर्तनमिवात्युग्रं लाङ्गूलस्य महाहरिः" भा० द्रोण० १७१-२५। 2. ಚೂರುಮಾಡುವುದು, ತುಂಡುಮಾಡುವುದು. नि+कृती (छेदने) भावे "ल्युट्" (३-३-११५)। (वि०) 3. ಕತ್ತರಿಸುವ. 4. ತುಂಡುಮಾಡುವ. नि+कृती कर्त० "ल्युः" (३-१-१३४)।

**निकर्ष ನಿಕರ್ಷ** (पुं०) ನ್ಯೂನತೆ, ಕೊರತೆ, ಕೆಳದರ್ಜೆ.

**निकर्षण ನಿಕರ್ಷಣ** (न०) 1. ಪಟ್ಟಣದೊಳಗೆ ಅಥವಾ ಹೊರಗಡೆ ಇರುವ ಮೈದಾನ, ಆಟದ ಬಯಲು. 2. ಉಳದೆ ಇರುವ ಜಮೀನು. 3. ಮನೆಯ ಮುಂಭಾಗದ ಅಂಗಳ. नि नास्ति कर्षणं यस्य।

**निकष ನಿಕಷ** (पुं०) 1. ಒರೆಗಲ್ಲು, ಚಿನ್ನ ಮೊದಲಾದುವನ್ನು ಉಜ್ಜಿ ಪರೀಕ್ಷಿಸುವ ಕಲ್ಲು. निकष्यतेऽत्र—नि+कष (हिंसायाम्) "घः" (३-३-११९)। "निकषे हेमरेखेव श्रीरासीदनपायिनी" रघु० १७-४६। 2. ಸಾಣೆಕಲ್ಲು, ಮಸೆಯುವ ಕಲ್ಲು. 3. ಉಜ್ಜುವುದು, ತಿಕ್ಕುವುದು.

"पङ्कच्छिदः फलस्येव निकषेणाविलं पयः" माल० २-७। (स्त्री०) -षा - ಷಾ. 4. ರಾಕ್ಷಸರ ತಾಯಿ. निकषति हिनस्ति — नि + कष "अच्" (३-१-१३४)। ಇವಳು ಸುಮಾಲಿಯ ಮಗಳು. ವಿಶ್ರವಸ್ಸಿನ ಪತ್ನಿ. "निकषः शाणफलके निकषा यातुमातरि" मेदि०।

**निकषण ನಿಕಷಣ** (पुं०) 1. ಉಜ್ಜುವ ಕಲ್ಲು. 2. ಮಸೆಯುವ ಕಲ್ಲು. (न०) 3. ಉಜ್ಜುವುದು. 4. ಮಸೆಯುವುದು.

**निकषा ನಿಕಷಾ** (अव्य०) 1. ಸಮೀಪದಲ್ಲಿ, ಹತ್ತಿರದಲ್ಲಿ. नि + कष (हिंसायाम्) "आ" (उ० ४-१७४)। "पयोधिमाबद्धचलज्जलाविलं विलङ्घ्य लङ्कां निकषा हनिष्यति" माघ० १-६८। 2. ಮಧ್ಯದಲ್ಲಿ. "निकषान्तिकमध्ययोः" मेदि०।

**निकषात्मज ನಿಕಷಾತ್ಮಜ** (पुं०) ರಾಕ್ಷಸ. निकषाया आत्मजः।

**निकषोपल ನಿಕಷೋಪಲ** (पुं०) 1. ಸಾಣೆಕಲ್ಲು, ಮಸೆಯುವ ಕಲ್ಲು. 2. ಒರೆಗಲ್ಲು.

**निकाम ನಿಕಾಮ** (न०) 1. ಯಥೇಷ್ಟ, ಪರ್ಯಾಪ್ತ, ಅತಿಶಯ. नि + कमु (कान्तौ) "घञ्" (३-३-१८)। (अव्य०) 2. ಯಥೇಷ್ಟವಾಗಿ, ಅತಿಶಯವಾಗಿ, ಬಹಳವಾಗಿ. "निकामं क्षामाङ्गी सरसकदलीगर्भसुभगा कलाशेषा मूर्तिः शशिन इव नेत्रोत्सवकरी" मालती० २-३। 3. ನೆಮ್ಮದಿಯಾಗಿ, ಸುಖವಾಗಿ, ತೃಪ್ತಿಕರವಾಗಿ, ಸಮಾಧಾನದಿಂದ. "तुरगानुधावनकण्डितसन्धेः रात्रौ निकामं शयितव्यमपि नास्ति" शाकु० २। (वि०) 4. ಯಥೇಷ್ಟವಾದ, ಸಮೃದ್ಧವಾದ, ಸಂಪೂರ್ಣವಾದ. "स्रोतोवहां पथि निकामजलामतीत्य" शाकु० ६-१६।

**निकाय ನಿಕಾಯ** (पुं०) 1. ಮನೆ, ವಾಸಸ್ಥಳ. निचीयतेऽत्र — नि + चिञ् (चयने) "घञ्" (३-३-४२)। आदेः कश्च। "देवान् देवनिकायांश्च महर्षींश्चामितौजः" मनु० १-३६। 2. ಸಮೂಹ, ಸಜಾತೀಯ ಅನೇಕ ವಸ್ತುಗಳ ಗುಂಪು. नि + चिञ् "घञ्" (३-३-४२)। "निमज्जत्सकलनखनिकायवज्रपञ्जरप्रहारो मारितश्च स दुष्टश्वापदमहाराक्षसः" मालती० ७। 3. ಪರಮಾತ್ಮ. 4. ಸಜಾತೀಯ ಪ್ರಾಣಿಗಳ ಸಮೂಹ. भिक्षुनिकायः। "तथा देवनिकायानां सेन्द्राणाञ्च दिवौकसाम्" भा० आदि० १२२-४८। 5. ಲಕ್ಷ್ಯ. "निकायस्तु पुमान् लक्ष्ये सधर्मिप्राणिसंहतौ। समुच्चये संहतानां निलये परमात्मनि" मेदि०।

**निकाय्य ನಿಕಾಯ್ಯ** (पुं०) ಗೃಹ, ಮನೆ, ವಾಸಸ್ಥಳ. निचीयते धान्यादिकमस्मिन् — नि + चिञ् (चयने) अधि० "ण्यत्" आय् धात्वादेः कुत्वं च निपात्यते (३-१-१२९)। "न प्रणाय्यो जनः कश्चित् निकाय्यं तेऽधितिष्ठति" भट्टि० ६-६६।

**निकार ನಿಕಾರ** (पुं०) 1. ಪರಾಭವ, ಅವಮಾನ. नि+कृञ् (करणे) "घञ्" (३-३-१८)। "पुरःसरा धामवतां यशोधनाः सुदुःसहं प्राप्य निकारमीदृशम्" किरा० १-४३। 2. ಧಾನ್ಯವನ್ನು ತೂರಿ ರಾಶಿ ಹಾಕುವುದು, ಕಾಳುಗಳನ್ನು ರಾಶಿಗೆ ಎರಚುವುದು. "निकारः स्यात् परिभवे धान्यस्योत्क्षेपणेऽपि च" मेदि०। 3. ನೀಚತನ, ಹಗೆ ಸಾಧಿಸುವುದು, ದ್ವೇಷ ಕಾರುವುದು. 4. ಬೆದರಿಕೆ, ಹೆದರಿಸುವುದು. 5. ಧಿಕ್ಕರಿಸುವುದು, ತೇಜೋವಧೆ ಮಾಡುವುದು. 6. ಅಪಕಾರ, ತೊಂದರೆ ಕೊಡುವುದು.

**निकारण ನಿಕಾರಣ** (न०) ವಧೆ, ಕೊಲ್ಲುವುದು. नि+कृञ् (हिंसायाम्) + स्वार्थे णिच् "ल्युट्" (३-३-११५)।

**निकाश ನಿಕಾಶ** (पुं०) 1. ಪ್ರಕಾಶ, ಬೆಳಕು. निकाशते शोभतेऽनेन—नि+काशृ (दीप्तौ) "घञ्" (३-३-१२१)। 2. ಸಮೀಪ, ಹತ್ತಿರ. (वि०) 3. (ಸಮಾಸದ ಕೊನೆಯಲ್ಲಿ) ಸದೃಶವಾದ, ಸಮಾನವಾದ. "विद्युत्पुञ्जनिकाशकेशनयनभ्रूश्मश्रुजालैः" मालती० ५-१३।

**निकाष ನಿಕಾಷ** (पुं०) ಕಷಣ, ಉಜ್ಜುವುದು. नि+कष (हिंसायाम्) "घञ्" (३-३-१८)। "तेजोभिः कनकनिकाषराजिगौरैरायामः क्रियत इव स्म सातिरेकः" किरा० ७-६।

**निकुञ्चक ನಿಕುಂಚಕ** (पुं०) 1. (ಹಳೆಯ ಅಳತೆಯ) ಒಂದು ಸೊಲಿಗೆ, ಒಂದು ಪಾವಿನ ನಾಲ್ಕನೆಯ ಒಂದು ಭಾಗ. ಒಂದು ಸೇರಿನ ಹದಿನಾರನೆಯ ಒಂದು ಭಾಗ. नि+कुञ्च (कौटिल्ये) "ण्वुल्" (३-१-१३३)। "अस्त्रियामाढकद्रोणौ खारी वाहो निकुञ्चकः। कुडवः प्रस्थ इत्याद्याः परिमाणार्थकाः पृथक्" अम०। 2. ನೀರುಹಬ್ಬೆ.

**निकुञ्ज ನಿಕುಂಜ** (पुंन०) 1. ಲತಾಗೃಹ, ಮೇಲೆ ಬಳ್ಳಿಗಳು ಹಬ್ಬಿ ಮುಚ್ಚಲ್ಪಟ್ಟಿರುವ ಪ್ರದೇಶ. नितरां कौ पृथिव्यां जायते — जनी (प्रादुर्भावे) "डः" (३-२-९७)। पृषो०। "तिरोहितश्वभ्रनिकुञ्जरोधसः समश्नुवानाः सहसातिरिक्तताम्" किरा० १४-३३। 2. ಮಹಡಿಮನೆಯ ಮಧ್ಯಭಾಗ. "दधानः सौधानामलघुषु निकुञ्जेषु घनतामसौ सन्ध्याशङ्खध्वनिरनिभृतः खे

विचरति" मालती० २-१२। 3. ಕುಹರ, ದೊಡ್ಡ ಬಿಲ, ನೆಲದೊಳಗಿನ ಪೊಳ್ಳು. "पर्यन्तभूधरनिकुञ्जविजृम्भणेन हेरम्बकण्ठरसितप्रतिमानमेति" मालती० ९-३।

**निकुम्भ ನಿಕುಂಭ** (पुं०) 1. ಜಾಪಾಳದ ಗಿಡ. कुं भूमिं बिभर्ति — भृञ् (भरणे) "खच्" (३-२-४६)। नियत: कुम्भ:। "निकुम्भो दन्तिका प्रत्यक्श्रेण्युदुम्बरपर्ण्यपि" अम०। 2. ಪರಶಿವನ ಒಬ್ಬ ಅನುಚರ. "अवेहि मां किंकरमष्टमूर्तेः कुम्भोदरं नाम निकुम्भमित्रम्" रघु० २-३५। 3. ಸುಂದ ಮತ್ತು ಉಪಸುಂದರ ತಂದೆ. ಪ್ರಹ್ಲಾದನ ಒಬ್ಬ ಮಗ. "निकुम्भो नाम दैत्येन्द्रस्तेजस्वी बलवानभूत्। तस्य पुत्रौ महावीर्यौ जातौ भीमपराक्रमौ। सुन्दोपसुन्दौ दैत्येन्द्रौ दारुणौ क्रूरमानसौ" भा० आदि० २२९। 4. ಕುಂಭಕರ್ಣನ ಒಬ್ಬ ಮಗ. "स कुम्भश्च निकुम्भश्च कुम्भकर्णात्मजावुभौ" रामा०। 5. ಹರ್ಯಶ್ವ ರಾಜನ ಒಬ್ಬ ಮಗ. "हर्यश्वस्य निकुम्भोऽभूत् क्षात्रधर्मरतः सदा" हरिवं०।

**निकुम्भित ನಿಕುಂಭಿತ** (न०) ನೃತ್ಯದಲ್ಲಿ ಅಭಿನಯಕ್ಕಾಗಿ ಮಾಡುವ ನೂರೆಂಟು ವಿಧ ಅಂಗಾಂಗಗಳ ಚೇಷ್ಟೆಗಳಲ್ಲಿ ಒಂದು. "करणानां तु सर्वेषां सामान्यं लक्षणं त्विदम्। प्रायो वामकरो वक्षःस्थितोऽन्यः पुरतोऽनुगः। पादाभ्यां करणं ज्ञेयं तदिहाष्टोत्तरं शतम्। निकुम्भितं पार्श्वक्रान्तं अतिक्रान्तं विवर्तकम्। विद्युद्भ्रान्तं गजक्रीडं क्रान्तं च गरुडप्लुतम्" सं० दा०।

**निकुम्भिला ನಿಕುಂಭಿಲಾ** (स्त्री०) 1. ಲಂಕಾಪಟ್ಟಣದ ಪಶ್ಚಿಮದಿಕ್ಕಿನಲ್ಲಿರುವ ಒಂದು ತೋಪು. 2. ಆ ತೋಪಿನಲ್ಲಿರುವ ಒಂದು ದೇವತೆ, ಮಹಾಕಾಳಿ, ಭದ್ರಕಾಳಿ. "मानुषं मांसमास्वाद्य नृत्यामोऽथ निकुम्भिलाम्" रामा०। ಇಂದ್ರಜಿತ್ತು ಶತ್ರುಗಳ ವಿಜಯಕ್ಕಾಗಿ ನಿಕುಂಭಿಲಾ ಯಾಗ ಮಾಡತೊಡಗಿದ ಸ್ಥಳವಾದುದರಿಂದ ಈ ಪ್ರದೇಶಕ್ಕೆ ದೇವತೆಯ ಹೆಸರು ಬಂದಿತು. ಈ ಯಾಗದ ಸುಳಿವು ತಿಳಿದ ವಿಭೀಷಣನು ವಾನರ ಸೈನ್ಯಗಳಿಂದ ಯಾಗಕ್ಕೆ ವಿಘ್ನವುಂಟುಮಾಡಿಸಿ ಯಾಗವನ್ನು ಕೆಡಿಸಿದನು.

**निकुरम्ब ನಿಕುರಂಬ** (न०) ಸಮೂಹ, ಗುಂಪು. निकुरति — नि + कुर (शब्दे) "अम्बच्" बाहु०। "किञ्च उद्दामशशिमयूखनिकुरम्बचुम्बितप्रवृत्तनिष्यन्दचन्द्रमणिहारधारिणी" मालती० ३।

**निकुलीनिका ನಿಕುಲೀನಿಕಾ** (स्त्री०) ನಿಪತನ, ಕೆಳಕ್ಕೆ ಬೀಳುವುದು.

**निकूल ನಿಕೂಲ** (पुं०) ನರಮೇಧದಲ್ಲಿ ಪಶುವಿಶಸನಕ್ಕಾಗಿ ಏರ್ಪಟ್ಟಿರುವ ಒಂದು ಪ್ರದೇಶ.

**निकृत ನಿಕೃತ** (वि०) 1. ಪರಾಭವಗೊಳಿಸಲ್ಪಟ್ಟ, ಅಪಮಾನಗೊಳಿಸಲ್ಪಟ್ಟ, ತಿರಸ್ಕರಿಸಲ್ಪಟ್ಟ. नि + कृञ् (करणे) "क्त:" (३-२-१०२)। 2. ಅಪಕಾರಮಾಡಲ್ಪಟ್ಟ, ಪೀಡಿಸಲ್ಪಟ್ಟ. 3. ವಂಚಿಸಲ್ಪಟ್ಟ, ಮೋಸಗೊಳಿಸಲ್ಪಟ್ಟ. 4. ಮೂರ್ಖ. 5. ನೀಚ, ಅಧಮ. निकृन्तति — नि + कृती (छेदने) "क:" (३-१-१३५)। "निकृतं विप्रलम्भे स्यात् नीचे विप्रकृतेऽपि च" मेदि०।

**निकृति ನಿಕೃತಿ** (स्त्री०) 1. ಭರ್ತ್ಸನ. ಹೆದರಿಸುವಿಕೆ. नि + कृञ् (करणे) भावे "क्तिन्" (३-३-९४)। 2. ತಿರಸ್ಕಾರ. ಅಪಮಾನ, ಪರಾಭವ. "देवस्य येन पृथिवीतलवासवस्य साऽग्रधासनापनयजा निकृतिर्न सोढा" मुद्रा० ४-११। 3. ನಿಂದೆ, ದೂಷಣೆ. 4. ಮೂರ್ಖತನ, ಶಾಠ್ಯ. 5. ಅಪಕಾರ, ತೊಂದರೆ ಕೊಡುವುದು. "न समयपरिरक्षणं क्षमं ते निकृतिपरेषु परेषु भूरिधाम्न:" किरा० १-४५। 6. ದೈನ್ಯ, ಕಷ್ಟದ ಪರಿಸ್ಥಿತಿ, ದಯೆ ತೋರಿಸಬಹುದಾದ ಅವಸ್ಥೆ. "निकृत्यां कामये नाहं सुखान्युत धनानि वा" भा० सभा०। 7. ಮೋಸಮಾಡುವುದು, ವಂಚಿಸುವುದು. 8. ಅಷ್ಟವಸುಗಳಲ್ಲೊಬ್ಬ. 9. ದಾರಿದ್ರ್ಯ, ಬಡತನ.

**निकृत्त ನಿಕೃತ್ತ** (वि०) 1. ಕತ್ತರಿಸಲ್ಪಟ್ಟ, ಸೀಳಲ್ಪಟ್ಟ. नि + कृती (छेदने) "क्त:" (३-२-१०२)। "निकृत्तमत्तद्विपकुम्भमांसैः संपृक्तमुक्तैर्हरयोऽग्रपादैः" भट्टि० ११-४२। 2. ಒಡೆಯಲ್ಪಟ್ಟ, ತುಂಡುಮಾಡಲ್ಪಟ್ಟ.

**निकृन्तत् ನಿಕೃನ್ತತ್** (वि०) ಕತ್ತರಿಸುತ್ತಿರುವ, ಸೀಳುತ್ತಿರುವ, ಛೇದಿಸುತ್ತಿರುವ. नि + कृती (छेदने) "शतृ" (३-२-१२४)। "निकृन्तन्मर्माणि क्रकच इव मन्युर्विरमति" उ० रा० ४-३।

**निकृन्तन ನಿಕೃಂತನ** (न०) ಛೇದಿಸುವುದು, ಕತ್ತರಿಸುವುದು, ಕಡಿಯುವುದು. नि + कृती (छेदने) "ल्युट्" (३-३-११५)। "विजानता भावि शिरोनिकृन्तनं प्रज्ञेन शोकादिव तस्य मौलिना" कुमा० १५-२८।

**निकृष्ट ನಿಕೃಷ್ಟ** (वि०) 1. ಅಧಮ, ನೀಚ. निकृष्यते स्म — नि + कृष (विलेखने) "क्त:" (३-२-१०२)। 2. ಹತ್ತಿರದ, ಸಮೀಪದ. (न०) 3. ಸಮೀಪ, ಹತ್ತಿರ.

**निकेचाय ನಿಕೇಚಾಯ** (पुं०) ಪುನಃಪುನಃ ರಾಶಿ ಹಾಕುವುದು, ಮತ್ತೆ ಮತ್ತೆ ಸೇರಿಸಿ ಗುಪ್ಪೆ ಹಾಕುವುದು. नि + चिञ् (चयने) + यङ्; यङो लुक् "घञ्" (३-३-१८)।

**निकेत ನಿಕೇತ** (पुं०) ಗೃಹ, ವಾಸದ ಮನೆ. निकेतत्यत्र— नि+कित (निवासे) "घञ्" (३-३-१२१)। "तत्तस्मिन् विनिमज्ज्य बाहुजभटैरारम्भिरम्भापरीरम्भानन्दनिकेतनन्दनवनक्रीडादराडम्बरः" नैष० १२-१२। "क्षितिनभःसुरलोकनिवासिभिः कृतनिकेतमदृष्टपरस्परैः" किरा० ५-३। "अधिरूढया निजनिकेतमुच्चकैः" माघ० १३-३६।

**निकेतन ನಿಕೇತನ** (पुं०) 1. ಈರುಳ್ಳಿ. (न०) 2. ಗೃಹ. ಮನೆ. ವಾಸಸ್ಥಳ. नि+कित (निवासे) अधि० "ल्युट्" (३-३-११७)। "सा रामणीयकनिधेरधिदेवता वा सौन्दर्यसारसमुदायनिकेतनं वा" मालती० १-२४।

**निकोचक ನಿಕೋಚಕ** (पुं०) 1. ಅಂಕೋಲೆ ಗಿಡ. निकुच्यते —नि + कुच (शब्देतारे) "वुन्" (उ० ५-३५)। "अङ्कोटे तु निकोचकः" अम०। (न०) 2. ಅಂಕೋಲೆ ಹಣ್ಣು.

**निकोचन ನಿಕೋಚನ** (न०) ಸಂಕೋಚಮಾಡಿಕೊಳ್ಳುವುದು. ಚಿಕ್ಕದಾಗಿ ಮಾಡಿಕೊಳ್ಳುವುದು. नि + कुच (संकोचने) भावे "ल्युट्" (३-३-११५)। "एतद्गुणश्रवणकालविजृम्भमाणतल्लोचनाञ्चलनिकोचनसूचितस्य" नैष० ११-७१। "घञ्" (३-३-१८)। **निकोचः ನಿಕೋಚಃ.**

**निकोठक ನಿಕೋಠಕ** (पुं०) 1. ಅಂಕೋಲೆ ಗಿಡ. (न०) 2. ಅಂಕೋಲೆ ಹಣ್ಣು.

**निक्त ನಿಕ್ತ** (न०) 1. ಶುದ್ಧ ಮಾಡುವುದು, ತೊಳೆಯುವುದು. णिजिर् (शौचपोषणयोः) भावे "क्तः" (३-३-११४)। 2. ಪೋಷಿಸುವುದು. (वि०) 3. ಶುದ್ಧಮಾಡಲ್ಪಟ್ಟ, ತೊಳೆಯಲ್ಪಟ್ಟ. णिजिर् कर्म० "क्तः" (३-२-१०२)। 4. ಪೋಷಿಸಲ್ಪಟ್ಟ.

**निक्तवत् ನಿಕ್ತವತ್** (वि०) 1. ಶುದ್ಧಮಾಡಿದವನು, ತೊಳೆದವನು. 2. ಪೋಷಿಸಿದವನು. णिजिर् (शौचपोषणयोः) "क्तवतुः" (३-२-१०२)।

**निक्वण ನಿಕ್ವಣ** (पुं०) 1. ಶಬ್ದ, ವೀಣೆ ಮೊದಲಾದುವುಗಳ ನಾದ, ಧ್ವನಿ. नि + क्वण (शब्दे) वा "अप्" (३-३-६५)। 2. ಭೂಷಣಗಳ ಶಬ್ದ. ಒಡವೆಗಳ ಶಬ್ದ. "क्वणो वीणायां च" ಸೂತ್ರದಿಂದ ವೀಣೆಯ ಶಬ್ದದ ಅರ್ಥದಲ್ಲೂ ವಿಕಲ್ಪವಾಗಿ "अप्" ಬರುವುದು. पक्षे "घञ्" (३-३-१८)। **-क्वाणः -ಕ್ವಾಣಃ.** "वाणीगुणोदयतृणीकृतपाणिवीणानिक्वाणया पुनरभाणि मृगेक्षणा सा" नैष० ११-८२। ಅಗ್ನಿಪುರಾಣದ ಶಬ್ದಾನುಶಾಸನದಲ್ಲಿ "भूषणानां तु शिञ्जितम्। वीणाया निक्वणः क्वाणः" ಎಂದಿರುವುದರಿಂದ ವೀಣಾನಾದದ ಅರ್ಥದಲ್ಲೇ निक्वणः निक्वाणः ಎಂದೂ ಹೇಳಬಹುದು.

**निक्षिपत् ನಿಕ್ಷಿಪತ್** (वि०) 1. ಅರ್ಪಿಸುತ್ತಿರುವ, ಒಪ್ಪಿಸುತ್ತಿರುವ. नि + क्षिप (प्रेरणे) "शतृ" (३-२-१२४)। "मयापि चैनां देवीहस्ते सगौरवं निक्षिपता युक्तमेवानुष्ठितम्" रत्ना० १। 2. ಇಡುತ್ತಿರುವ. ಇರಿಸುತ್ತಿರುವ. 3. ಎಸೆಯುತ್ತಿರುವ, ಬಿಸಾಡುತ್ತಿರುವ. स्त्रियां "ङीप्" (४-१-६)। **-क्षिपती -ಕ್ಷಿಪತೀ. -क्षिपन्ती -ಕ್ಷಿಪಂತೀ.** "भर्तृषूपसखि निक्षिपतीनामात्मनो मधुमदोद्यमितानाम्" किरा० ९-६६।

**निक्षिपमाण ನಿಕ್ಷಿಪಮಾಣ** (वि०) "निक्षिपत्" ಪದದ ಅರ್ಥ. नि + क्षिप (प्रेरणे) "शानच्" (३-२-१२४)।

**निक्षिप्त ನಿಕ್ಷಿಪ್ತ** (वि०) 1. ಅರ್ಪಿಸಲ್ಪಟ್ಟ, ಒಬ್ಬನಿಗೆ ಒಪ್ಪಿಸಲ್ಪಟ್ಟ. नि+क्षिप (प्रेरणे) "क्तः" (३-२-१०२)। "ततस्तयोद्वेगविनोदनं माधवप्रतिच्छन्दकमभिलिखितं लवङ्गिकया मन्दारिकाहस्तेऽद्य निक्षिप्तं तावत्" मालती० १। 2. ಇಡಲ್ಪಟ್ಟ, ಇರಿಸಲ್ಪಟ್ಟ. "निक्षिप्तकर्तव्यभरा बभूवुः सत्त्वाधिका सात्वतयूथनाथे" याद० २३-१०। 3. ಎಸೆಯಲ್ಪಟ್ಟ. ಬಿಸಾಡಲ್ಪಟ್ಟ. 4. ತಿರಸ್ಕರಿಸಲ್ಪಟ್ಟ, ತಳ್ಳಿಹಾಕಲ್ಪಟ್ಟ, ಕೈಬಿಡಲ್ಪಟ್ಟ, ಪರಿತ್ಯಜಿಸಲ್ಪಟ್ಟ. 5. ಒತ್ತೆ ಇಡಲ್ಪಟ್ಟ. 6. ಭದ್ರವಾಗಿಟ್ಟಿರಲು ಒಬ್ಬನಲ್ಲಿ ಇಡಲ್ಪಟ್ಟ. 7. ಪ್ರಯೋಗಿಸಲ್ಪಟ್ಟ (ಬಾಣ).

**निक्षिप्यमाण ನಿಕ್ಷಿಪ್ಯಮಾಣ** (वि०) 1. ಅರ್ಪಿಸಲ್ಪಡುತ್ತಿರುವ, ಒಪ್ಪಿಸಲ್ಪಡುತ್ತಿರುವ. नि + क्षिप (प्रेरणे) कर्म० "शानच्" (३-२-१२४)। 2. ಎಸೆಯಲ್ಪಡುತ್ತಿರುವ. 3. ತಿರಸ್ಕರಿಸಲ್ಪಡುತ್ತಿರುವ. 4. ಒತ್ತೆ ಇಡಲ್ಪಡುತ್ತಿರುವ. 5. ಭದ್ರತೆಗಾಗಿ ಇಡಲ್ಪಡುತ್ತಿರುವ. 6. ಪ್ರಯೋಗಿಸಲ್ಪಡುತ್ತಿರುವ (ಬಾಣ). 7. ಇಡಲ್ಪಡುತ್ತಿರುವ.

**निक्षुभा ನಿಕ್ಷುಭಾ** (स्त्री०) 1. ಸೂರ್ಯನ ಪತ್ನಿ. 2. ಬ್ರಾಹ್ಮಣ ಹೆಂಗಸು.

**निक्षेप ನಿಕ್ಷೇಪ** (पुं०) 1. ಅರ್ಪಿಸುವುದು, ಒಬ್ಬನಲ್ಲಿ ಒಪ್ಪಿಸುವುದು. नि+क्षिप (प्रेरणे) "घञ्" (३-३-१८)। 2. ನಂಬಿಕೆಯಿಂದ ಒಬ್ಬನಲ್ಲಿ ವಸ್ತುವನ್ನು ಅಥವಾ ಹಣವನ್ನು ಕೊಟ್ಟಿಟ್ಟಿರುವುದು. ಇದು ಹದಿನೆಂಟು ವಿಧ ಋಣಾದಾನಾದಿ ವ್ಯವಹಾರಗಳಲ್ಲಿ ಒಂದು. "तेषामाद्यमृणादानं निक्षेपोऽस्वामिविक्रयः। संभूय च समुत्थानं

दत्तस्यानपकर्म च" मनु० ८-४। "स्वद्रव्यं यत्र विस्रम्भाधिक्षिपत्यविशङ्कितः। निक्षेपो नाम तत्प्रोक्तं व्यवहारपदं बुधैः"। "पुनर्ग्रहीतुं नियमस्थया तया द्वयेऽपि निक्षेप इवार्पितं द्वयम्" कुमा० ५-१३। 3. ಒತ್ತೆಯಿಡುವುದು, ಗಿರವಿಯಿಡುವುದು. ಇದು ಏಳು ವಿಧ ದ್ರವ್ಯ ಸಂಪಾದನೆಯ ಮಾರ್ಗಗಳಲ್ಲೊಂದು. (1) गान्धिकव्यवहारः, (2) निक्षेपप्रवेशः, ( ) गौष्ठिककर्म, (4) परिचितग्राहकागमः, (5) मिथ्याक्रयकथनम्, (6) कूटतुलामानम् ಮತ್ತು (7) देशान्तराद्भाण्डानयनम् ಇವು ಏಳು ವಿಧ ಧನ ಸಂಪಾದನೆಯ ಮಾರ್ಗಗಳು. "निक्षेपे पतिते हर्म्ये श्रेष्ठी स्तौति स्वदेवताम्" पञ्चतं० १-१४। 4. ಎಸೆಯುವುದು, ಬಿಸಾಡುವುದು. 5. ಇಡುವುದು, ಇರಿಸುವುದು. "अन्वेष्टव्यैः कनकसिकतामुष्टिनिक्षेपगूढैः संक्रीडन्ते मणिभिरमरप्रार्थिता यत्र कन्याः" मेघ० २-४। 6. ವರ್ಜಿಸುವುದು, ತೊರೆದುಬಿಡುವುದು.

**निक्षेपण ನಿಕ್ಷೇಪಣ** (नं०) 1. ಇಡುವುದು, ಇರಿಸುವುದು. नि + क्षिप (प्रेरणे) भावे "ल्युट्" (३-३-११५)। "अभ्युन्नताङ्गुष्ठनखप्रभाभिर्निक्षेपणाद्रागमिवोद्गिरन्तौ" कुमा० १-३३। 2. ಎಸೆಯುವುದು, ಬಿಸಾಡುವುದು.

**निक्षेप्तृ ನಿಕ್ಷೇಪ್ತೃ** (वि०) 1. ಇಡುವವನು, ಇರಿಸುವವನು. नि + क्षिप (प्रेरणे) "तृच्" (३-१-१३३)। 2. ನಂಬಿಕೆಯಿಂದ ಒಬ್ಬನಲ್ಲಿ ವಸ್ತುವನ್ನು ಅಥವಾ ಧನವನ್ನು ಕೊಟ್ಟಿಟ್ಟಿರುವವನು. "यो निक्षेपं याच्यमानो निक्षेप्तुर्न प्रयच्छति। स याच्यः प्राड्विवाकेन तन्निक्षेप्तुरसन्निधौ" मनु० ८-१८१। 3. ಒತ್ತೆ ಇಡುವವನು, ಗಿರವಿ ಇಡುವವನು. 4. ಎಸೆಯುವವನು, ಬಿಸಾಡುವವನು. स्त्रियां "ङीप्" (४-१-५)। **-क्षेप्त्री - ಕ್ಷೇಪ್ತ್ರೀ.**

**नि + खनु – अवदारणे** (भ्वा० उभ० सक० से०)। 1. ಭೂಮಿಯನ್ನು ಅಗೆದು ನೆಡು, ನೆಲವನ್ನು ತೋಡಿ ಇಡು. "खनु" ನೋಡಿ. ಪುಟ 886. "निचखान जयस्तम्भान् गङ्गास्रोतोन्तरेषु सः" रघु० ४-३६। 2. ಒಳಕ್ಕೆ ಸೇರಿಸು. "निचखानाधिकक्रोधः शरं सव्येतरे भुजे" रघु० १२-९०।

**निखनत् ನಿಖನತ್** (वि०) 1. ನೆಲವನ್ನು ತೋಡಿ ನೆಡುತ್ತಿರುವ. 2. ಒಳಕ್ಕೆ ಸೇರಿಸುತ್ತಿರುವ. नि+खनु (अवदारणे) "शतृ" (३-२-१२४)। स्त्रियां "ङीप्" (४-१-६)। **-खनन्ती – ಖನಂತೀ.** "शानच्" (३-२-१२४)। **-खनमानः – ಖನಮಾನಃ.**

**निखनन ನಿಖನನ** (नं०) ಭೂಮಿಯನ್ನು ಅಗೆದು ನೆಡುವುದು, ನೆಲವನ್ನು ತೋಡಿ ಇಡುವುದು. नि + खनु (अवदारणे) भावे "ल्युट्" (३-३-११५)। "आक्षेपपूर्विका हि परिहारोक्तिर्विवक्षितेऽर्थे स्थूणानिखननन्यायेन दृढां बुद्धिमुत्पादयति" शां० भा०।

**निखननीय ನಿಖನನೀಯ** (वि०) ನೆಡಬೇಕಾದ, ನೆಲವನ್ನು ತೋಡಿ ಇಡಬೇಕಾದ. नि+खनु (अवदारणे) "अनीयर्" (३-१-९६)। "तव्यः"। **निखनितव्यः ನಿಖನಿತವ್ಯಃ.**

**निखर्व ನಿಖರ್ವ** (नं०) 1. ಹತ್ತು ಸಹಸ್ರ ಕೋಟಿ. (वि०) 2. ವಾಮನ, ಕುಳ್ಳ, ಗಿಡ್ಡ.

**निखात ನಿಖಾತ** (वि०) 1. ನೆಡಲ್ಪಟ್ಟ, ನೆಲವನ್ನು ತೋಡಿ ಇಡಲ್ಪಟ್ಟ. नि + खनु (अवदारणे) कर्म० "क्तः" (३-२-१०२)। "जलानि या तीरनिखातयूपा वहत्ययोध्यामनुराजधानीम्" रघु० १३-६१। 2. ನಾಟಲ್ಪಟ್ಟ, ಒಳಕ್ಕೆ ಸೇರಿಸಲ್ಪಟ್ಟ. "तौ दम्पती बहु विलप्य शिशोः प्रहर्त्रा शल्यं निखातमुदहारयतामुरस्तः" रघु० ९-७८। "गाढं निखात इव मे हृदये कटाक्षः" मालती० १-३२।

**निखातवत् ನಿಖಾತವತ್** (वि०) 1. ಭೂಮಿಯಲ್ಲಿ ನೆಟ್ಟವನು, ನೆಲವನ್ನು ತೋಡಿ ಇಟ್ಟವನು. नि + खनु (अवदारणे) "क्तवतुः" (३-२-१०२)।

**निखिल ನಿಖಿಲ** (वि०) ಸಮಸ್ತವಾದ, ಸಕಲ, ಪೂರ್ತಿ. निवृत्तं खिलमस्य। "प्रवसते भरतार्जुनवैन्यवत् स्मृतिधृतोऽपि नल त्वमभीष्टदः। स्वगमनाफलतां यदि शङ्कसे तदफलं निखिलं खलु मङ्गलम्" नैष० ४-१३४।

**निगड ನಿಗಡ** (पुं०) 1. ಸರಪಣಿ. "निगडमिव चक्षुरक्षिपत्" माघ० १५-८६। 2. ಸಂಕೋಲೆ, ಬೇಡಿ. निर्गतो गडोऽस्मात्। 3. ಆನೆಯ ಕಾಲಿಗೆ ಕಟ್ಟುವ ಕಬ್ಬಿಣದ ಸರಪಣಿ. "बद्धापराणि परितो निगडान्यलावीत् स्वातन्त्र्यमुज्ज्वलमवाप करेणुराजः" माघ० ५-४८। डस्य लः। **निगलः ನಿಗಲಃ** ಎಂದೂ ಆಗುವುದು.

**निगडन ನಿಗಡನ** (नं०) 1. ಸರಪಣಿಯಿಂದ ಕಟ್ಟುವುದು. 2. ಬೇಡಿ ಹಾಕುವುದು. नि+गड (सेचने) भावे "ल्युट्" (३-३-११५)।

**निगडित ನಿಗಡಿತ** (वि०) 1. ಸರಪಣಿಯಿಂದ ಕಟ್ಟಲ್ಪಟ್ಟ. 2. ಬೇಡಿ ಹಾಕಲ್ಪಟ್ಟ. निगडोऽस्य सञ्जातः "इतच्" (५-२-३६)।

**निगण ನಿಗಣ** (पुं०) ಹೋಮದ ಧೂಮ, ಹೋಮಾಗ್ನಿಯ ಹೊಗೆ. "होमधूमस्तु निगणः" त्रिकाण्ड०।

**नि + गद – व्यक्तायां वाचि** (भ्वा० पर० सक० से०)। निगदति। निजगाद। ಇತ್ಯಾದಿ. ಸ್ಪಷ್ಟವಾಗಿ ಮಾತಾಡು, ಚೆನ್ನಾಗಿ ಹೇಳು.

**निगद ನಿಗದ** (पुं०) 1. ಚೆನ್ನಾಗಿ ಹೇಳುವುದು, ಸ್ಪಷ್ಟವಾಗಿ ಮಾತಾಡುವುದು. नि + गद (व्यक्तायां वाचि) वा "अप्" (३-३-६४)। 2. ಹೇಳುವುದು, ಉಚ್ಚರಿಸುವುದು. "निगमान्तेषु निगदव्याख्यातनिजवैभवः" याद० १६-४९। 3. ಮಂತ್ರ. ಯಾಗದಲ್ಲಿ ಉಚ್ಚಸ್ವರದಿಂದ ಹೇಳುವ ಮಂತ್ರ. 4. ಜಪ. 5. ಅರ್ಥಜ್ಞಾನವಿಲ್ಲದೆ ಕೇವಲ ಬಾಯಿಪಾಠ ಮಾಡುವುದು. "यदधीतमविज्ञातं निगदेनैव शब्द्यते" निरु०।

**निगदत् ನಿಗದತ್** (वि०) ಹೇಳುತ್ತಿರುವ, ಸ್ಪಷ್ಟವಾಗಿ ಮಾತಾಡುತ್ತಿರುವ. नि+गद (व्यक्तायां वाचि) "शतृ" (३-२-१२४)। "दम्पत्योर्निशि जल्पतोर्गृहशुकेनाकर्णितं यद्वचस्तत्प्रातर्गुरुसन्निधौ निगदतः श्रुत्वैव तारं वधूः" अमरु० १६।

**निगदन ನಿಗದನ** (न०) 1. ಚೆನ್ನಾಗಿ ಹೇಳುವುದು, ಸ್ಪಷ್ಟವಾಗಿ ಮಾತಾಡುವುದು. 2. ಹೇಳುವುದು, ಉಚ್ಚರಿಸುವುದು. नि+गद(व्यक्तायां वाचि) "ल्युट्"(३-३-११५)।

**निगदित ನಿಗದಿತ** (न०) 1. ಮಾತು, ಭಾಷಣ. नि + गद (व्यक्तायां वाचि) भावे "क्तः" (३-३-११४)। (वि०) 2. ಹೇಳಲ್ಪಟ್ಟ. नि + गद कर्म० "क्तः" (३-२-१०२)।

**निगदितवत् ನಿಗದಿತವತ್** (वि०) ಹೇಳಿದವನು, ಮಾತನಾಡಿದವನು. नि + गद (व्यक्तायां वाचि) "क्तवतुः" (३-२-१०२)। "इति निगदितवन्तं राघवस्तं जगाद व्रज भरत गृहीत्वा पादुके त्वं मदीये" भट्टि० ३-५६। स्त्रियां "ङीप्" (४-१-६)। **–वती –ವತೀ.**

**निगन्तव्य ನಿಗಂತವ್ಯ** (वि०) ಅಧ್ಯಯನಮಾಡಬೇಕಾದ, ಕಲಿಯಬೇಕಾದ, ತಿಳಿಯಬೇಕಾದ. नि + गम्लृ (गतौ) "तव्यः" (३-१-९६)। "आऽविचिकित्सायां ब्रह्म निगन्तव्यमिति हारीतः" आप० ध० १-४-१३-११।

**निगम ನಿಗಮ** (पुं०) 1. ವೇದ, ಆಮ್ನಾಯ. निगच्छन्त्यनेन — नि + गम्लृ (गतौ) "घः" (३-३-११९)। निपा०। "निगमकल्पतरोर्गलितं फलं शुकमुखादमृतद्रवसंयुतम्" भाग० १-१-३। 2. ನಗರ, ಪಟ್ಟಣ. निगच्छन्त्यत्र — नि + गम्लृ "घः" (३-३-११९)। "परिमितफलसंगात्प्राणिनः किम्पचाना निगमविपणिमध्ये नित्यमुक्तानुषक्तम्" दयाश०। 3. ಉಪದೇಶ. "इति स्वनिगमं ब्रह्मन्नवेत्य मदनुष्ठितम्। अदान्मे ज्ञानमैश्वर्यं स्वस्मिन् भावञ्च केशवः" भाग० १-५-३९। 4. ವರ್ತಕ, ವ್ಯಾಪಾರಿ. निगमे भवः "अण्" (४-३-५३)। संज्ञापूर्वकत्वात् न वृद्धिः। 5. ಅಂಗಡಿಬೀದಿ, ಮಾರುಕಟ್ಟೆ ಚೌಕ. "निगमेष्वध्ययनं वर्जयेत्" आप० ध० १-२-९-४। 6. ನಿಶ್ಚಯ, ನಿರ್ಧಾರ. "तस्या एव प्रतिज्ञाया हेतुभिः दृष्टान्तोपनयनिगमैः स्थापना" चरक०। 7. ಮಾರ್ಗ, ದಾರಿ, ರಸ್ತೆ. "निगमाः पूर्वणिग्भेदनिश्चयाध्ववणिक्पथाः" हेम०। 8. ನ್ಯಾಯಶಾಸ್ತ್ರ. 9. ವೇದಾರ್ಥಗಳನ್ನು ತಿಳಿಸುವ ಗ್ರಂಥ. "बुद्धिवृद्धिकराण्याशु धन्यानि च हितानि च। नित्यं शास्त्राण्यवेक्षेत निगमांश्चैव वैदिकान्" मनु० ४-१९। 10. ವೇದವಾಕ್ಯ. 11. ವೇದದಲ್ಲಿ ಹೇಳಿರುವ ಆಜ್ಞಾರೂಪವಾದ ಬೋಧನೆ, ವಿಧಿ. 12. ಕ್ರಯವಿಕ್ರಯ ರೂಪವಾದ ವ್ಯಾಪಾರ, ವಾಣಿಜ್ಯ. 13. ವರ್ತಕರ ತಂಡ, ವ್ಯಾಪಾರಿಗಳ ಗುಂಪು. 14. ಶಾಸ್ತ್ರಾಧ್ಯಯನದಿಂದ ಉಂಟಾದ ಜ್ಞಾನ.

**निगमन ನಿಗಮನ** (न०) (ನ್ಯಾಯಶಾಸ್ತ್ರದಲ್ಲಿ) ವ್ಯಾಪ್ತಿವಿಶಿಷ್ಟ ಪಕ್ಷಧರ್ಮರೂಪವಾದ ಹೇತುನಿರೂಪಣ ಪೂರ್ವಕ ಸಾಧ್ಯವಿಶಿಷ್ಟಪಕ್ಷರೂಪವಾದ ಪ್ರತಿಜ್ಞಾತವಾದ ಅರ್ಥವನ್ನು ಹೇಳುವುದು. निगम्यते अनेन—नि+गम्लृ (गतौ) कर० "ल्युट्" (३-३-११७)। ಇದು ನ್ಯಾಯದ ಐದು ಅವಯವಗಳಲ್ಲೊಂದು. (1) प्रतिज्ञा, (2) हेतुः, (3) उदाहरणम्, (4) उपनयः ಮತ್ತು (5) निगमनम् ಇವು ನ್ಯಾಯದ ಐದು ಅವಯವಗಳು. शब्दोऽनित्यः (ಶಬ್ದವು ಅನಿತ್ಯವಾದುದು) ಎಂಬುದು ಪ್ರತಿಜ್ಞೆ. उत्पत्तिधर्मकत्वात् ಎಂಬುದು ಹೇತು. स्थाल्यादिद्रव्यमुत्पत्तिधर्मकं अनित्यं दृष्टम् ಎಂಬುದು ಉದಾಹರಣೆ. उत्पत्तिधर्मकः शब्दः ಎಂದು ಉಪನಯ, ಉತ್ಪತ್ತಿ ಧರ್ಮಕವಾದುದರಿಂದ ಶಬ್ದವು ಅನಿತ್ಯ. उत्पत्तिधर्मकत्वादनित्यः शब्दः ಎಂದು ನಿಗಮನ. ಈ ರೀತಿ ವ್ಯಾಪ್ತಿವಿಶಿಷ್ಟವಾದ ಪಕ್ಷಧರ್ಮರೂಪಹೇತುಕಥನಪೂರ್ವಕ ಪ್ರತಿಜ್ಞಾರೂಪವಾದ ಅರ್ಥವನ್ನು ಸಮರ್ಥಿಸಿರುವುದು ನಿಗಮನವಾಯಿತು. "हेत्वपदेशात् प्रतिज्ञायाः पुनर्वचनं निगमनम्" गौ० सू० १-१-३९।

**निगमान्त ನಿಗಮಾಂತ** (पुं०) ವೇದಾಂತ, ಬ್ರಹ್ಮಜ್ಞಾನಪ್ರದವಾದ ಉಪನಿಷತ್ತು. निगमस्य अन्तः। "तेभ्योऽधिगन्तुं निगमान्तविद्यां वाल्मीकिपार्श्वादिह पर्यटामि" उ० रा० २-३।

**निगर ನಿಗರ** (पुं०) ಊಟಮಾಡುವುದು, ತಿನ್ನುವುದು, ನುಂಗುವುದು. नि+गृ (निगरणे) "अप्" (३-३-५७)।

**निगरण ನಿಗರಣ** (पुं०) 1. ಗಲ, ಗಂಟಲು, ಕೊರಲು. निगीर्यतेऽनेन — नि + गृ (निगरणे) करं० "ल्युट्" (३-३-११७)। 2. ಹೋಮದ ಧೂಮ. (नं०) 3. ತಿನ್ನುವುದು, ಊಟಮಾಡುವುದು, ನುಂಗುವುದು. नि+गृ भावे "ल्युट्" (३-३-११५)।

**निगल ನಿಗಲ** (पुं०) 1. ತಿನ್ನುವುದು, ನುಂಗುವುದು. नि + गृ (निगरणे) "अप्" (३-३-५७)। (पुंनं०) 2. ಆನೆಯನ್ನು ಕಟ್ಟುವ ಸರಪಣಿ. निगलति — नि + गल (अदने) "अच्" (३-१-१३४)। "अन्दुको निगलोऽस्त्री स्यात्" अम०।

**निगलन ನಿಗಲನ** (नं०) ತಿನ್ನುವುದು, ನುಂಗುವುದು, ಊಟ ಮಾಡುವುದು. नि + गल (अदने) भावे "ल्युट्" (३-३-११५)।

**निगाद ನಿಗಾದ** (पुं०) ಹೇಳುವುದು. नि + गद (व्यक्तायां वाचि) पक्षे "घञ्" (३-३-१८)।

**निगादन ನಿಗಾದನ** (नं०) ಹೇಳಿಸುವುದು, ಮಾತಾಡಿಸುವುದು. नि + गद (व्यक्तायां वाचि) + णिच् "ल्युट्" (३-३-११५)।

**निगादनीय ನಿಗಾದನೀಯ** (वि०) 1. ಹೇಳಿಸಲ್ಪಡುವ, ಸ್ಪಷ್ಟವಾಗಿ ಮಾತಾಡಿಸಲ್ಪಡುವ. नि + गद (व्यक्तायां वाचि) + णिच् "अनीयर्" (३-१-९६)। 2. ಮಾತಾಡಿಸಲು ಯೋಗ್ಯನಾದ. 3. ಮಾತಾಡಿಸಲು ಶಕ್ಯನಾದ. 4. ಮಾತಾಡಿಸಬೇಕಾದ. "तव्यः"। **–यितव्यः –ಯಿತವ್ಯಃ.**

**निगादयत् ನಿಗಾದಯತ್** (वि०) ಸ್ಪಷ್ಟವಾಗಿ ಮಾತಾಡಿಸುತ್ತಿರುವ, ಹೇಳಿಸುತ್ತಿರುವ. नि+गद (व्यक्तायां वाचि) + णिच् "शतृ" (३-२-१२४)। स्त्रियां "ङीप्" (४-१-६)। **–यन्ती –ಯನ್ತೀ.**

**निगादयमान ನಿಗಾದಯಮಾನ** (वि०) ಸ್ಪಷ್ಟವಾಗಿ ಮಾತಾಡಿಸುತ್ತಿರುವ, ಹೇಳಿಸುತ್ತಿರುವ. नि + गद (व्यक्तायां वाचि) + णिच् "शानच्" (३-२-१२४)।

**निगादित ನಿಗಾದಿತ** (नं०) 1. ಸ್ಪಷ್ಟವಾಗಿ ಹೇಳಿಸುವುದು, ಮಾತಾಡಿಸುವುದು. नि + गद (व्यक्तायां वाचि) + णिच् भावे "क्तः" (३-३-११४)। (वि०) 2. ಸ್ಪಷ್ಟವಾಗಿ ಹೇಳಿಸಲ್ಪಟ್ಟ, ಮಾತಾಡಿಸಲ್ಪಟ್ಟ. नि + गद + णिच् कर्मं० "क्तः" (३-२-१०२)।

**निगादितवत् ನಿಗಾದಿತವತ್** (वि०) ಸ್ಪಷ್ಟವಾಗಿ ಮಾತಾಡಿಸಿದವನು, ಸ್ಪಷ್ಟವಾಗಿ ಹೇಳಿಸಿದವನು. नि+गद (व्यक्तायां वाचि) + णिच् "क्तवतुः" (३-२-१०२)। स्त्रियां "ङीप्" (४-१-६)। **–वती –ವತೀ.**

**निगाद्य ನಿಗಾದ್ಯ** (वि०) 1. ಸ್ಪಷ್ಟವಾಗಿ ಹೇಳಿಸಲ್ಪಡುವ. 2. ಹೇಳಿಸಲು ಯೋಗ್ಯನಾದ. 3. ಹೇಳಿಸಲು ಶಕ್ಯನಾದ. नि+गद (व्यक्तायां वाचि) +णिच् "ण्यत्" (३-१-१२४)। 4. ಹೇಳಲು ಯೋಗ್ಯವಾದ. 5. ಹೇಳಲ್ಪಡುವ. नि+गद "ण्यत्" (३-१-१२४)। "मया निगाद्यं जगतीपतीनां गोत्रं चरित्रं च विचित्रमेषाम्" नैष० १०-८१।

**निगार ನಿಗಾರ** (पुं०) ಭಕ್ಷಣ, ತಿನ್ನುವುದು, ನುಂಗುವುದು. नि+गृ (निगरणे) "घञ्" (३-३-२९)। रस्य "लः"। **निगालः ನಿಗಾಲಃ** ಎಂದೂ ಆಗುವುದು. नि + गल (अदने) "घञ्" (३-३-१८) वा।

**निगारक ನಿಗಾರಕ** (वि०) ತಿನ್ನುವವನು, ನುಂಗುವವನು, नि + गृ (निगरणे) "ण्वुल्" (३-१-१३३)।

**निगाल ನಿಗಾಲ** (पुं०) 1. ಕುದುರೆಯ ಕತ್ತಿನ ಸಮೀಪದ ಭಾಗ. निगलत्यनेन — नि + गल (अदने) "घञ्" (३-३-१२१)। "घण्टाबन्धसमीपस्थो निगलः परिकीर्तितः। अधस्ताच्च निगालस्य गलमाहुर्मनीषिणः"। 2. ತಿನ್ನುವುದು, ನುಂಗುವುದು. नि + गल "घञ्" (३-३-१८)।

**निगालवत् ನಿಗಾಲವತ್** (पुं०) ಅಶ್ವ, ಕುದುರೆ. निगालोऽस्यास्ति "मतुप्" (५-२-९४)। मस्य वः (८-२-९)।

**निगीत ನಿಗೀತ** (वि०) ಉಕ್ತವಾದ, ಹೇಳಲ್ಪಟ್ಟ. "तथा च श्रुतयो बह्वचो निगीता निगमेष्वपि" मनु० ९-१९।

**निगीर्ण ನಿಗೀರ್ಣ** (वि०) 1. ನುಂಗಲ್ಪಟ್ಟ, ತಿನ್ನಲ್ಪಟ್ಟ. नि + गृ (निगरणे) "क्तः" (३-२-१०२)। "तमो निगीर्णं सकृदेव पुंसामासीदतामाश्रमहव्यवाहाः। इहौषधादीनि हवींषि भुक्त्वा धूमोपलक्ष्यं ध्रुवमुद्गिरन्ति" याद० १८-५१।

**निगु ನಿಗು** (पुं०) 1. ಅಂತಃಕರಣ, ಮನಸ್ಸು. निगृह्यते ज्ञायते पदार्थोऽनेन — नि+ग्रह (उपादाने) "डुः" बाहु० रलोपश्च। "अन्तःकरणं तु मनो निगुः" त्रिकाण्ड०। 2. ಕಶ್ಮಲ, ಕೊಳೆ. 3. ಮೂಲ, ಬುಡ. 4. ಚಿತ್ರಕೆಲಸ.

**निगूढ ನಿಗೂಢ** (नं०) 1. ರಹಸ್ಯ, ಗುಟ್ಟು. (वि०) 2. ರಹಸ್ಯವಾದ, ಗುಟ್ಟಾಗಿರುವ, ದೃಷ್ಟಿಗೆ ಗೋಚರವಲ್ಲದ.

नि + गुह् (संवरणे) "क्तः" (३-४-७२)। "नलिनी निगूढसलिला च यत्र सा स्थलमित्यधः पतति या सुयोधने" माघ० १३-५१। "तद्गुरुं प्रति च तैरुपहाराः संख्यसौख्यकपटेन निगूढाः" नैष० ५-५६। 3. ಗುಪ್ತವಾದ, ರಹಸ್ಯವಾಗಿಡಲ್ಪಟ್ಟ, ಬಚ್ಚಿಡಲ್ಪಟ್ಟ. नि + गुह् कर्म० "क्तः" (३-२-१०२)। "न दृष्टेः शैथिल्यं मिलन इति चेतो दहति मे निगूढान्तःकोपा कठिनहृदये संवृतिरियम्" अमरु० १४। (क्रि० वि०) 4. ರಹಸ್ಯವಾಗಿ, ಗುಟ್ಟಾಗಿ.

**निगूढक ನಿಗೂಢಕ** (पुं०) ಕಾಡುಹೆಸರು. "वनमुद्गे तुवरकनिगूढककुलीनकाः" अभि० चि०।

**निगूहत् ನಿಗೂಹತ್** (वि०) ರಹಸ್ಯವಾಗಿಡುತ್ತಿರುವ, ಮುಚ್ಚಿಡುತ್ತಿರುವ. नि + गुह् (संवरणे) "शतृ" (३-२-१२४)। "द्विषेव कृत्वा हृदयं निगूहतः स्फुरन्नसाधोर्विवृणोति वागसिः" किरा० १४-१२। स्त्रियां "ङीप्" (४-१-६)। **—न्ती —ನ್ತೀ.**

**निगूहन ನಿಗೂಹನ** (न०) ರಹಸ್ಯವಾಗಿಡುವುದು, ಬಚ್ಚಿಡುವುದು. नि+गुह् (संवरणे) भावे "ल्युट्" (३-३-११५)।

**निगूहनीय ನಿಗೂಹನೀಯ** (वि०) 1. ರಹಸ್ಯವಾಗಿಡಲ್ಪಡುವ, ಬಚ್ಚಿಡಲ್ಪಡುವ. 2. ರಹಸ್ಯವಾಗಿಡಬೇಕಾದ, ಗುಟ್ಟಾಗಿಡಬೇಕಾದ. 3. ರಹಸ್ಯವಾಗಿಡಲು ಯೋಗ್ಯವಾದ, ಗುಟ್ಟಾಗಿಡಲು ಯೋಗ್ಯವಾದ. नि+गुह् (संवरणे) "अनीयर्" (३-१-९६)। "तव्यः" (३-१-९६)। **—गूहितव्यः —ಗೂಹಿತವ್ಯಃ.**

**निगूहमान ನಿಗೂಹಮಾನ** (वि०) ರಹಸ್ಯವಾಗಿಡುತ್ತಿರುವ, ಮುಚ್ಚಿಡುತ್ತಿರುವ, नि + गुह् (संवरणे) "शानच्" (३-२-१२४)।

**निगूहयमान ನಿಗೂಹಯಮಾನ** (वि०) ರಹಸ್ಯವಾಗಿರಿಸುತ್ತಿರುವ, ಗುಟ್ಟಾಗಿರಿಸುತ್ತಿರುವ. नि+गुह् (संवरणे)+णिच् "शानच्" (३-२-१२४)।

**निगूहित ನಿಗೂಹಿತ** (वि०) ಬಚ್ಚಿಡಲ್ಪಟ್ಟ, ರಹಸ್ಯವಾಗಿಡಲ್ಪಟ್ಟ, ಗುಟ್ಟಾಗಿಡಲ್ಪಟ್ಟ. नि + गुह् (संवरणे) कर्म० "क्तः" (३-२-१०२)।

**निगृहीत ನಿಗೃಹೀತ** (वि०) 1. ನಿಗ್ರಹಿಸಲ್ಪಟ್ಟ, ದಂಡಿಸಲ್ಪಟ್ಟ. नि + ग्रह (उपादाने) "क्तः" (३-२-१०२)। "यदि मे निगृहीताः स्युस्त्वयैव यदुनन्दन" भाग० १०-५८-४४। 2. ಹಿಡಿಯಲ್ಪಟ್ಟ, ಆಕ್ರಮಿಸಲ್ಪಟ್ಟ. 3. ಬಂಧಿಸಲ್ಪಟ್ಟ, ಸೆರೆಹಿಡಿಯಲ್ಪಟ್ಟ. 4. ದಮನಮಾಡಲ್ಪಟ್ಟ, ಅಡಗಿಸಲ್ಪಟ್ಟ. "लघुप्रयत्नं निगृहीतवीर्यस्त्रिमार्गगावेग इवेश्वरेण" किरा० १७-५। 5. ಪೀಡಿಸಲ್ಪಟ್ಟ, ನೋಯಿಸಲ್ಪಟ್ಟ, "तमार्यगृह्यं निगृहीतधेनुर्मनुष्यवाचा मनुवंशकेतुम्" रघु० २-३३। 6. ನಿರೋಧಿಸಲ್ಪಟ್ಟ, ತಡೆಯಲ್ಪಟ್ಟ. "उदासितारं निगृहीतमानसैर्गृहीतमध्यात्मदृशा कथंचन" माघ० १-३३। 7. ಅಂಕೆಯಲ್ಲಿಡಲ್ಪಟ್ಟ. 8. ವಾದದಲ್ಲಿ ಪರಾಜಯಗೊಳಿಸಲ್ಪಟ್ಟ, ಸೋಲಿಸಲ್ಪಟ್ಟ. "भो, निगृहीतोऽसि" उ० रा० ४। 9. ತ್ಯಜಿಸಲ್ಪಟ್ಟ, ಬಿಡಲ್ಪಟ್ಟ, "एवमालि निगृहीतसाध्वसं शंकरो रहसि सेव्यतामिति" कुमा० ८-५।

**निगृहीतवत् ನಿಗೃಹೀತವತ್** (वि०) 1. ತಡೆದವನು 2. ಅಡಗಿಸಿದವನು, ದಮನಮಾಡಿದವನು. 3. ವಾದದಲ್ಲಿ ಸೋಲಿಸಿದವನು. 4. ಸೆರೆಹಿಡಿದವನು, ಬಂಧಿಸಿದವನು. 5. ಪೀಡಿಸಿದವನು. 6. ಹಿಡಿದವನು, ಆಕ್ರಮಿಸಿದವನು. 7. ಶಿಕ್ಷಿಸಿದವನು. 8. ಅಂಕೆಯಲ್ಲಿಟ್ಟವನು. नि + ग्रह (उपादाने) "क्तवतुः" (३-२-१०२)। स्त्रियां "ङीप्" (४-१-६)। **—वती —ವತೀ.**

**निगृहीति ನಿಗೃಹೀತಿ** (स्त्री०) ನಿಗ್ರಹ, ದಂಡಿಸುವುದು, ಶಿಕ್ಷಿಸುವುದು. नि+ग्रह (उपादाने) "क्तिन्" (३-३-९४)। "अन्यथा तु निगृहीतिरलङ्घ्या राजभावतृषितैरिव भृत्यैः" याद० २१-१९।

**निगृह्णत् ನಿಗೃಹ್ಣತ್** (वि०) 1. ತಡೆಯುತ್ತಿರುವ, ವಿರೋಧಿಸುತ್ತಿರುವ. 2. ಪೀಡಿಸುತ್ತಿರುವ. 3. ಸೆರೆಹಿಡಿಯುತ್ತಿರುವ. 4. ಆಕ್ರಮಿಸುತ್ತಿರುವ. 5. ವಾದದಲ್ಲಿ ಸೋಲಿಸುತ್ತಿರುವ, ಪರಾಜಯಗೊಳಿಸುತ್ತಿರುವ. 6. ದಂಡಿಸುತ್ತಿರುವ, ಶಿಕ್ಷಿಸುತ್ತಿರುವ. 7. ಅಡಗಿಸುತ್ತಿರುವ. "शीधुपानविधुरासु निगृह्णन् मानमाशु शिथिलीकृतलज्जः" किरा० ९-४२। 8. ಅಂಕೆಯಲ್ಲಿಡುತ್ತಿರುವ. नि + ग्रह (उपादाने) "शतृ" (३-२-१२४)। "शानच्" (३-२-१२४)। **निगृह्णानः ನಿಗೃಹ್ಣಾನಃ.**

**निगृह्य ನಿಗೃಹ್ಯ** (वि०) 1. ಸೋಲಿಸಲು ಯೋಗ್ಯನಾದ. 2. ತಡೆಯಲು ಯೋಗ್ಯನಾದ, 3. ದಂಡಿಸಲು ಅರ್ಹನಾದ. 4. ಆಕ್ರಮಿಸಲು ಅರ್ಹನಾದ. 5. ಅಂಕೆಯಲ್ಲಿಡಲ್ಪಡುವ. 6. ತಡೆಯಲ್ಪಡುವ. 7. ಶಿಕ್ಷಿಸಲ್ಪಡುವ. 8. ಆಕ್ರಮಿಸಲ್ಪಡುವ. नि + ग्रह (उपादाने) "क्यप्" (३-१-११९)।

**निगृह्यमाण ನಿಗೃಹ್ಯಮಾಣ** (वि०) 1. ಶಿಕ್ಷಿಸಲ್ಪಡುತ್ತಿರುವ, ದಂಡಿಸಲ್ಪಡುತ್ತಿರುವ. नि + ग्रह (उपादाने) कर्म० "शानच्" (३-२-१२४)। "ततो भवदपथ्यकारिषु चन्दनदासप्रभृतिषु निगृह्यमाणेषु स्वदोषाशङ्कया अपक्रम्य

मलयकेतुमाश्रितः" मुद्रा० ३। 2. ಸೋಲಿಸಲ್ಪಡು ತ್ತಿರುವ. 3. ತಡೆಯಲ್ಪಡುತ್ತಿರುವ. 4. ಆಕ್ರಮಿಸ ಲ್ಪಡುತ್ತಿರುವ.

**निग्रन्थन ನಿಗ್ರಂಥನ** (न०) ಮಾರಣ, ಕೊಲ್ಲುವುದು. नि + ग्रन्थ (बन्धने) "ल्युट्" (३-३-११५)।

**निग्रह ನಿಗ್ರಹ** (पुं०) 1. ಹೆದರಿಸುವುದು, ಬೆದರಿಸುವುದು. नि + ग्रह (उपादाने) "अप्" (३-३-५८)। "निग्रहः सीम्नि भर्त्सने" नानार्थर०। 2. ವಶಪಡಿಸಿಕೊಳ್ಳುವುದು, ಸ್ವಾಧೀನಪಡಿಸಿಕೊಳ್ಳುವುದು, ಅಂಕೆಯಲ್ಲಿಟ್ಟುಕೊಳ್ಳು ವುದು. "चञ्चलं हि मनः कृष्ण प्रमाथि बलवद्दृढम्। तस्याहं निग्रहं मन्ये वायोरिव सुदुष्करम्" गीता ६-३४। 3. ನಿರೋಧಿಸುವುದು, ತಡೆಗಟ್ಟುವುದು. "तथेन्द्रियाणां दह्यन्ते दोषाः प्राणस्य निग्रहात्" मनु० ६-७१। 4. ಹಿಡಿಯುವುದು, ಆಕ್ರಮಿಸುವುದು. "वेगादहं प्रविसृतः पवनं न रुन्ध्यां त्वन्निग्रहे तु वरगात्रि न मे प्रयत्नः" मृच्छ० १-२२। 5. ಶಿಕ್ಷಿಸುವುದು, ದಂಡಿಸುವುದು. "निग्रहं प्रकृतीनां च कुर्याद्योऽरिबलस्य च। उपसेवेत तं नित्यं सर्वयत्नैर्गुरुं यथा" मनु० ७-१७५। "निग्रहात्स्वसुराप्तानां वधाच्च धनदानुजः" रघु० १२-५२। 6. ಬಂಧಿಸು ವುದು, ಸೆರೆಹಿಡಿಯುವುದು, ಕಟ್ಟಿಹಾಕುವುದು. "यदाश्रौषं कर्णदुर्योधनाभ्यां बुद्धिं कृतां निग्रहे केशवस्य। तं चात्मानं बहुधा दर्शयानं तदा नाशंसे विजयाय सञ्जय" भा० आदि० १-२००। 7. ದೂರಮಾಡುವುದು, ಓಡಿಸುವುದು, ಹೋಗಲಾಡಿಸುವುದು, ನಾಶಪಡಿಸುವುದು. "आदिदेशाथ शत्रुघ्नं तेषां क्षेमाय राघवः। करिष्यन्निव नामास्य यथार्थमरिनिग्रहात्" रघु० १५-६। 8. ವಿಷ್ಣು, ನಾರಾಯಣ. ಅರ್ಜುನನ ಪರಾಕ್ರಮವನ್ನು ಅಪೇಕ್ಷಿಸದೆ ತನ್ನ ಸಾರಥ್ಯದ ವೈಚಿತ್ರ್ಯದಿಂದ ಶತ್ರುಗಳನ್ನು ನಿಗ್ರಹಿಸಿದುದರಿಂದ ಪರಮಾತ್ಮನಿಗೆ ಈ ಹೆಸರು. अर्जुनपौरुषनिरपेक्षेण सारथ्य-वैचित्र्येण निगृह्यन्ते शत्रवः। "येन सारथ्यवैचित्र्यान्नि-गृह्यन्तेऽत्र शत्रवः। स निग्रहः समाख्यातः सप्तार्णः शत्रु-नाशकः" इति निरुक्तिः। सर्वं प्रलये निगृह्णातीति निग्रहः इति शां० भा०। "प्रग्रहो निग्रहो व्यग्रः" वि० स०। 9. ರೋಗಕ್ಕೆ ಚಿಕಿತ್ಸೆ ಮಾಡುವುದು, ರೋಗ ವನ್ನು ತಡೆಯುವುದು. "तेषां संशोधनसंशमनाहारा-चाराः सम्यक्प्रयुक्ता निग्रहहेतवः" सुश्रुत० सूत्र० १-२७। 10. ಪರಾಜಯ ಹೊಂದುವುದು, ನೈಯಾಯಿಕನು ವಾದ ದಲ್ಲಿ ದೋಷಯುಕ್ತವಾಗಿ ವಾದಿಸಿ ಸೋಲನ್ನು ಅನುಭವಿ ಸುವುದು. "साध्ये निश्चितमन्वयेन घटितं बिभ्रत् सपक्षे स्थितिं व्यावृत्तं च विपक्षतो भवति यत् तत्साधनं सिद्धये। यत्साध्यं स्वयमेव तुल्यमुभयोः पक्षे विरुद्धं च यत् तस्याङ्गीकरणेन वादिन इव स्यात् स्वामिनो निग्रहः" मुद्रा० ५-१०। 11. ಎಲ್ಲೆ, ಗಡಿ. 12. ಜುಗುಪ್ಸೆ, ಅಸಹ್ಯತೆ, ಅರುಚಿ, ಇಷ್ಟವಿಲ್ಲದಿರುವಿಕೆ. 13. ಆಕ್ಷೇಪಿಸು ವುದು, ತಪ್ಪಿಗಾಗಿ ತೆಗಳುವುದು.

**निग्रहण ನಿಗ್ರಹಣ** (न०) "निग्रह" ಪದದ ಅರ್ಥ. नि+ग्रह (उपादाने) भावे "ल्युट्" (३-३-११५)।

**निग्रहणीय ನಿಗ್ರಹಣೀಯ** (वि०) 1. ಶಿಕ್ಷಿಸಲ್ಪಡುವ, ದಂಡಿಸಲ್ಪಡುವ. 2. ಪರಾಜಯಗೊಳಿಸಲ್ಪಡುವ, ಸೋಲಿಸ ಲ್ಪಡುವ. 3. ಅಡಗಿಸಲ್ಪಡುವ. 4. ಬಂಧಿಸಲ್ಪಡುವ. 5. ಶಿಕ್ಷಿಸಬೇಕಾದ. 6. ಸೋಲಿಸಬೇಕಾದ. 7. ಅಡಗಿಸ ಬೇಕಾದ. 8. ಸೆರೆಹಿಡಿಯಬೇಕಾದ. नि+ग्रह (उपादाने) "अनीयर्" (३-१-९६)। "तव्यः" (३-१-९६)। —ग्रहीतव्यः –ಗ್ರಹೀತವ್ಯಃ.

**निग्रहीतृ ನಿಗ್ರಹೀತೃ** (वि०) 1. ಶಿಕ್ಷಿಸುವವನು. 2. ಸೋಲಿ ಸುವವನು. 3. ತಡೆಯುವವನು. 4. ದಮನಮಾಡು ವವನು, ಅಡಗಿಸುವವನು. 5. ಆಕ್ರಮಿಸುವವನು. 6. ಬಂಧಿಸುವವನು, ಸೆರೆಹಿಡಿಯುವವನು. नि + ग्रह (उपादाने) "तृच्" (३-१-१३३)। "निग्रहीता कलेरेष भुवो धर्मस्य कारणात्" भाग० १-१२-२६।

**निग्राह ನಿಗ್ರಾಹ** (पुं०) ಅನಿಷ್ಟ, ಬಾಧೆ, ಪೀಡೆ, ತೊಂದರೆ. नि + ग्रह (उपादाने) "घञ्" (३-३-४५)। ಕೋಪ ದಿಂದ ಹೇಳುವ ಸಮಯದಲ್ಲಿ ಈ ಪದಪ್ರಯೋಗ. "आक्रोशे अवन्योर्ग्रहः" (३-३-४५)। "सन्दष्टायां तु वैदेह्यां निग्राहो वोऽर्थवानरेः" भट्टि० ७-४३।

**निग्राहक ನಿಗ್ರಾಹಕ** (वि०) 1. ಪೀಡಿಸುವವನು, ತೊಂದರೆ ಪಡಿಸುವವನು. नि + ग्रह (उपादाने) "ण्वुल्" (३-१-१३३)। 2. ಸೋಲಿಸುವವನು. 3. ತಿರಸ್ಕರಿಸು ವವನು. 4. ಬಂಧಿಸುವವನು. 5. ತಡೆಯುವವನು. 6. ದಮನಮಾಡುವವನು.

**निग्राह्य ನಿಗ್ರಾಹ್ಯ** (वि०) 1. ಶಿಕ್ಷಿಸಲ್ಪಡುವವನು. 2. ಸೋಲಿಸಲ್ಪಡುವವನು. 3. ಪೀಡಿಸಲ್ಪಡುವವನು. 4. ಬಂಧಿಸಲ್ಪಡುವ. 5. ದಮನಮಾಡಲ್ಪಡುವ, ಅಡಗಿಸ ಲ್ಪಡುವ. 6. ತಡೆಯಲ್ಪಡುವ. नि + ग्रह (उपादाने) "ण्यत्" (३-१-१२४)। "न पद्मस्येन्दुनिग्राह्यस्येन्दु-लज्जाकरी द्युतिः" काव्या० २-२७।

**निघ ನಿಘ** (ಪುಂ) 1. ವಿಸ್ತಾರ ಮತ್ತು ಉದ್ದ (ಎತ್ತರ) ದಲ್ಲಿ ಸಮವಾಗಿರುವಿಕೆ. निविशेषं हन्यते ज्ञायते — नि+हन (हिंसागत्योः) "अप्" (३-३-८७)। टिलोपः घत्वं च निपा०। (ವಿ०) 2. ಅಗಲ ಮತ್ತು ಎತ್ತರದಲ್ಲಿ ಸಮನಾಗಿರುವ. निघा वृक्षाः सि० कौ०।

**निघण्टु ನಿಘಂಟು** (ಪುಂ) ಶಬ್ದಗಳ ಕೋಶ, ಏಕಾರ್ಥವನ್ನು ಬೋಧಿಸುವ ಪರ್ಯಾಯಶಬ್ದಗಳನ್ನೂ ಅನೇಕಾರ್ಥಗಳನ್ನು ಕೊಡುವ ಶಬ್ದಗಳನ್ನೂ ಒಂದೇ ಕಡೆ ಸೇರಿಸಿ ಅರ್ಥ ವಿವರಣೆ ಕೊಡುವ ಶಬ್ದಗಳ ಸಂಗ್ರಹ. नि+घटि (भाषार्थे)+णिच् "कुः" (ಉ० १-३७)। "अर्थान् निघण्टयत्यस्मात् निघण्टुः परिकीर्तितः"। ಲೋಕ ವ್ಯವಹಾರದಲ್ಲಿರುವ ಸಮಸ್ತಶಬ್ದಗಳೂ ವೇದಶಬ್ದಗಳಿಂದಲೇ ಬಂದು ಕಾಲಕ್ರಮದಲ್ಲಿ ಲೌಕಿಕ ಶಬ್ದಗಳಾಗಿ ಪರಿವರ್ತನೆ ಹೊಂದಿದುವು. ಈ ಲೌಕಿಕ ಶಬ್ದಗಳ ಅರ್ಥವನ್ನು ಚೆನ್ನಾಗಿ ತಿಳಿಯಲು ವೇದಮಂತ್ರಗಳ ಅರ್ಥಜ್ಞಾನವುಂಟಾಗಬೇಕು. ಈ ವೇದಮಂತ್ರಗಳ ಅರ್ಥಪರಿಜ್ಞಾನವು ಬಹಳ ಕ್ಲಿಷ್ಟವಾಗಿ ಕಂಡುಬಂದುದರಿಂದ ಎಲ್ಲವನ್ನೂ ಬೇರ್ಪಡಿಸಿ ಒಂದು ಕಡೆ ಸಂಗ್ರಹಿಸಿರುವುದರಿಂದ ಈ ಸಂಗ್ರಹಕ್ಕೆ ನಿಘಂಟು ಎಂದು ಹೆಸರಾಯಿತು. ಆದುದರಿಂದ ನಿಘಂಟುಗಳಲ್ಲಿ ಪ್ರಥಮತಃ ರಚಿತವಾದುದು ವೈದಿಕ ನಿಘಂಟು. ಯಾಸ್ಕರು ರಚಿಸಿದ ನಿರುಕ್ತವು ಈ ವೈದಿಕ ನಿಘಂಟುವಿನ ಭಾಷ್ಯ. "तमिमं समाम्नायं निघण्टव इत्याचक्षते" ಎಂದು ಯಾಸ್ಕರು ನಿರುಕ್ತದಲ್ಲಿ ಹೇಳಿರುವುದರಿಂದ ಯಾಸ್ಕರಿಗಿಂತಲೂ ಪೂರ್ವದಲ್ಲೇ ಈ ನಿಘಂಟು ರಚಿತವಾಗಿದ್ದಿತೆಂದು ತಿಳಿಯಬಹುದಾಗಿದೆ. ಈ ವೈದಿಕ ನಿಘಂಟುವಿನಲ್ಲಿ ಐದು ಅಧ್ಯಾಯಗಳಿವೆ. (1) नैघण्टुककाण्डः, (2) नैगमकाण्डः ಮತ್ತು (3) दैवतकाण्डः ಎಂದು ಮೂರು ಕಾಂಡಗಳಿವೆ. ನೈಘಂಟುಕ ಕಾಂಡದಲ್ಲಿ ಏಕಾರ್ಥವನ್ನು ಕೊಡುವ ಅನೇಕ ಶಬ್ದಗಳ ಗಣಗಳೂ ನೈಗಮಕಾಂಡದಲ್ಲಿ ಏಕಾರ್ಥವಾಚಕಗಳಾದ ಅನೇಕ ಬಿಡಿ ಶಬ್ದಗಳೂ ದೈವತ ಕಾಂಡದಲ್ಲಿ ಅನೇಕ ದೇವತೆಗಳ ಹೆಸರುಗಳೂ ಸಂಗ್ರಹಿಸಲ್ಪಟ್ಟಿವೆ. ಯಾಸ್ಕರು ಈ ನಿಘಂಟುವಿನ ಕ್ರಮದಲ್ಲೇ ನಾಮಪದಗಳು ಕ್ರಿಯಾಪದಗಳು ನಿಪಾತಗಳು ಏಕಾರ್ಥ ಮತ್ತು ಅನೇಕಾರ್ಥಗಳು ಇತ್ಯಾದಿ ವಿವರಣೆಯೊಡನೆ ಭಾಷ್ಯವನ್ನು ರಚಿಸಿ ಈ ಭಾಷ್ಯಕ್ಕೆ "ನಿರುಕ್ತ" ಎಂದು ಹೆಸರಿಟ್ಟಿದ್ದಾರೆ. ಈ ಎಲ್ಲಾ ವೈದಿಕ ಶಬ್ದಗಳಿಗೂ ಅರ್ಥವನ್ನು ನಿಶ್ಚಯಿಸಿ ಹೇಳಿರುವುದರಿಂದ ಇದು "ನಿರುಕ್ತ" ವಾಯಿತು. निरुच्यतेऽनेन इति निरुक्तम्। ಈ ನಿರುಕ್ತವು ವೇದಗಳ ಅರ್ಥ ಪರಿಜ್ಞಾನಕ್ಕೆ ಸಹಾಯಕವಾಗಿದ.

ಹೀಗೆಯೇ ಲೌಕಿಕ ಶಬ್ದಗಳಿಗೂ ಅನೇಕ ವಿದ್ವಾಂಸರು ಅನೇಕ ರೀತಿಯಲ್ಲಿ ನಿಘಂಟುಗಳನ್ನು ರಚಿಸಿರುತ್ತಾರೆ. ಶಬ್ದಗಳನ್ನು ವರ್ಗಗಳಾಗಿ ವಿಂಗಡಿಸಿ ಆಯಾ ವರ್ಗಗಳಿಗೆ ಸಂಬಂಧಿಸಿದ ಪರ್ಯಾಯಶಬ್ದಗಳನ್ನು ಲಿಂಗನಿರ್ದೇಶದೊಡನೆ ಸಂಗ್ರಹಿಸಿ ರಚಿಸಿರುವುದು ಒಂದು ವಿಧ. अमरकोशः अभिधानचिन्तामणिः हारावलिः त्रिकाण्डशेषः कल्पद्रुकोशः ಇತ್ಯಾದಿ. ವರ್ಗಗಳ ಕ್ರಮವಿಲ್ಲದೆ "क" ಕಾರಾದಿ ವರ್ಣಾಂತ ಅನೇಕಾರ್ಥ ಪದಗಳನ್ನು ಸಂಗ್ರಹಿಸಿ ककम् कद्विकम् कत्रिकम् ಈ ರೀತಿ "ह" ಕಾರಾಂತ ಪರ್ಯಂತ ಲಿಂಗನಿರ್ದೇಶದೊಡನೆ ನಿಘಂಟುಗಳನ್ನು ರಚಿಸಿರುವುದು ಒಂದು ವಿಧ. मेदिनीकोशः विश्वप्रकाशः नानार्थरत्नमाला अनेकार्थसंग्रहः अनेकार्थसमुच्चयः ಇತ್ಯಾದಿ. ಪರ್ಯಾಯ ಪದಗಳ ವರ್ಗೀಕರಣ ಮತ್ತು ಅನೇಕಾರ್ಥ ಶಬ್ದಗಳ ಸಂಗ್ರಹ ಈ ರೀತಿ ಉಭಯಾತ್ಮಕವಾದ ನಿಘಂಟುಗಳನ್ನೂ ಕೆಲವು ವಿದ್ವಾಂಸರು ರಚಿಸಿರುತ್ತಾರೆ. ಯಾದವಪ್ರಕಾಶರ वैजयन्ती ಮುಂತಾದುದು. ಇವೆಲ್ಲವೂ ಪ್ರಾಚೀನ ಪಂಡಿತರು ಅನುಸರಿಸಿರುವ ಕ್ರಮ. ಈ ಕಾಲದ ವ್ಯಾಸಂಗಿಗಳಿಗೆ ಸೌಕರ್ಯವಾಗುವಂತೆ ಆಧುನಿಕ ಪಂಡಿತರು "अ" ಕಾರಾದಿ ಕ್ರಮದಲ್ಲಿ ಶಬ್ದಗಳನ್ನು ಸಂಗ್ರಹಿಸಿ ಆಯಾ ದೇಶ ಭಾಷೆಗಳಲ್ಲಿ ಅರ್ಥ ಮತ್ತು ಇತರ ಮುಖ್ಯ ವಿಷಯಗಳ ವಿವರಣೆಯೊಡನೆ ಶಬ್ದಕೋಶಗಳನ್ನು ರಚಿಸಿರುತ್ತಾರೆ.

**ಸಂಸ್ಕೃತ–ಸಂಸ್ಕೃತ** — शब्दस्तोममहानिधिः वाचस्पत्यम् शब्दकल्पद्रुमः शब्दार्थकल्पतरुः (ಸಂಸ್ಕೃತ–ಸಂಸ್ಕೃತ–ಆಂಧ್ರ) ಇತ್ಯಾದಿ.

**ಸಂಸ್ಕೃತ–ಹಿಂದೀ**—पद्मचन्द्रकोशः अभिधानराजेन्द्रकोशः ಇತ್ಯಾದಿ.

**ಸಂಸ್ಕೃತ–ಇಂಗ್ಲಿಷ್** —

(1) *Samskrita-English Dictionary*
By V. S. Apte.

(2) *Samskrita-English Dictionary*
By Monior Williams.

(3) *Samskrita-English Dictionary*
By Macdonell.

**ಸಂಸ್ಕೃತ–ಆಂಧ್ರ ನಿಘಂಟು** —

**ಸಂಸ್ಕೃತ–ದ್ರಾವಿಡ ನಿಘಂಟು** —

**ಸಂಸ್ಕೃತ–ಗುಜರಾತೀ ಶಬ್ದಕೋಶ** — ನರ್ಮದಾ ಶಂಕರಶಾಸ್ತ್ರಿ ರಚಿತ.

**ಸಂಸ್ಕೃತ–ಪಾರಸೀಕ ಪದಪ್ರಕಾಶ** — ಮಹಾಕವಿ ಕರ್ಣಪೂರ ವಿರಚಿತ. ಇತ್ಯಾದಿ ಅನೇಕ ನಿಘಂಟುಕಾರರು ನಾನಾರೀತಿಯಲ್ಲಿ ನಿಘಂಟುಗಳನ್ನು ರಚಿಸಿ ಸಂಸ್ಕೃತ

ವ್ಯಾಸಂಗಕ್ಕೆ ಬಹುಮುಖವಾಗಿ ಉಪಕಾರಮಾಡಿರುತ್ತಾರೆ. ಇವುಗಳಲ್ಲಿ ಮುಖ್ಯವಾದ ಕೆಲವು ನಿಘಂಟುಗಳ ಮತ್ತು ಅವುಗಳ ನಿರ್ಮಾತೃಗಳ ವಿಷಯಗಳನ್ನು ಸಂಗ್ರಹವಾಗಿ ಈ ಕೆಳಗೆ ಕೊಡಲಾಗಿದೆ.

**नामलिङ्गानुशासनम्**—ಅಮರಸಿಂಹ ಕೃತ. ತ್ರಿಕಾಂಡ ಉತ್ಪಲಿನೀ ಮೊದಲಾದ ನಾಮಮಾತ್ರ ತಂತ್ರಗಳನ್ನೂ ವ್ಯಾಡಿ ವರರುಚಿ ಮೊದಲಾದವರ ಲಿಂಗಮಾತ್ರ ತಂತ್ರಗಳನ್ನೂ ಒಟ್ಟುಗೂಡಿಸಿ ರಚಿಸಿರುವುದರಿಂದ ಅಮರಸಿಂಹನು ಈ ಅಮರಕೋಶಕ್ಕೆ **नामलिङ्गानुशासनम्** ಎಂದು ಹೆಸರಿಟ್ಟು ಇದರಿಂದ ಈ ಕೋಶವು ಸಂಪೂರ್ಣವಾಯಿತೆಂದು ಹೇಳಿರುತ್ತಾನೆ. "समाहृत्यान्यतन्त्राणि संक्षिप्तैः प्रतिसंस्कृतैः। संपूर्णमुच्यते वर्गैर्नामलिङ्गानुशासनम्" ಅಮ०। ಇದರ ಮೊದಲನೆಯ ಕಾಂಡದಲ್ಲಿ ಸ್ವರ್ಗವರ್ಗ ವ್ಯೋಮವರ್ಗ ದಿಗ್ವರ್ಗ ಕಾಲವರ್ಗ ಧೀವರ್ಗ ವಾಗ್ವರ್ಗ ಶಬ್ದಾದಿವರ್ಗ ನಾಟ್ಯವರ್ಗ ಪಾತಾಳವರ್ಗ ಭೋಗಿವರ್ಗ ನರಕವರ್ಗ ಮತ್ತು ವಾರಿವರ್ಗಗಳಾಗಿಯೂ ದ್ವಿತೀಯ ಕಾಂಡದಲ್ಲಿ ಭೂವರ್ಗ ಪುರವರ್ಗ ಶೈಲವರ್ಗ ವನೌಷಧಿವರ್ಗ ಸಿಂಹಾದಿವರ್ಗ ಮನುಷ್ಯವರ್ಗ ಬ್ರಹ್ಮವರ್ಗ ಕ್ಷತ್ರಿಯವರ್ಗ ವೈಶ್ಯವರ್ಗ ಮತ್ತು ಶೂದ್ರವರ್ಗಗಳಾಗಿಯೂ ತೃತೀಯಕಾಂಡದಲ್ಲಿ ವಿಶೇಷ್ಯನಿಘ್ನವರ್ಗ ಸಂಕೀರ್ಣವರ್ಗ ನಾನಾರ್ಥವರ್ಗ ನಾನಾರ್ಥಾವ್ಯಯವರ್ಗ ಅವ್ಯಯ ಮತ್ತು ಲಿಂಗಾದಿಸಂಗ್ರಹವರ್ಗಗಳಾಗಿಯೂ ವಿಂಗಡಿಸಿ ಆಯಾ ವರ್ಗಗಳಿಗೆ ಸಂಬಂಧಪಟ್ಟ ಪದಗಳನ್ನು ಲಿಂಗಾನುಶಾಸನಪೂರ್ವಕ ಶೇಖರಿಸಿರುತ್ತಾನೆ. ಅಮರಸಿಂಹನು ಬೌದ್ಧಮತಾನುಯಾಯಿ. ಇವನು ವಿಕ್ರಮಾದಿತ್ಯನ ಆಸ್ಥಾನದಲ್ಲಿದ್ದ ನವಮಣಿಗಳಲ್ಲೊಬ್ಬನಾಗಿದ್ದನೆಂದು ಇತಿಹಾಸದಿಂದ ತಿಳಿಯಬಹುದಾಗಿದೆ. ಇದರಿಂದ ಅಮರಸಿಂಹನು ಕ್ರಿ.ಶ. ಆರನೆಯ ಶತಮಾನಕ್ಕಿಂತಲೂ ಹಿಂದಿನವನೆಂದು ಹೇಳಬಹುದು.

ಈ ಅಮರಕೋಶಕ್ಕೆ ಭಟ್ಟಕ್ಷೀರಸ್ವಾಮಿ ಸರ್ವಾನಂದ ಸುಭೂತಿಚಂದ್ರ ಬೃಹಸ್ಪತಿ ಭಾನುಜೀದೀಕ್ಷಿತ ನಾರಾಯಣ ಶರ್ಮ ಮುಂತಾದ ಅನೇಕ ವಿದ್ವಾಂಸರು ಸುಮಾರು ನಲವತ್ತಕ್ಕಿಂತಲೂ ಹೆಚ್ಚು ವ್ಯಾಖ್ಯಾನಗಳನ್ನು ರಚಿಸಿರುತ್ತಾರೆ.

**त्रिकाण्डशेषः** — ಪುರುಷೋತ್ತಮದೇವವಿರಚಿತ. ಈ ನಿಘಂಟುಕಾರನು, ಅಮರಸಿಂಹನು ಅಮರಕೋಶದಲ್ಲಿ ಅಲೌಕಿಕವೆಂದು ಬಿಟ್ಟಿರುವ ಪದಗಳು ಈಗ ಪ್ರಯೋಗದಲ್ಲಿರುವುದರಿಂದ ಅವನ್ನು ಈ ಕೋಶದಲ್ಲಿ ಸೇರಿಸುವ ಪ್ರಯತ್ನವು ನಡೆದಿದೆಯೆಂದು ಗ್ರಂಥಾರಂಭದಲ್ಲಿ ಹೇಳಿರುತ್ತಾನೆ. ಮತ್ತು ವರ್ಗಕ್ರಮ ನಾಮಲಿಂಗಗಳ ನಿರ್ದೇಶ ಪರಿಭಾಷೆಗಳು ಎಲ್ಲವೂ ಅಮರಕೋಶದಂತೆಯೇ ಇರುವುದೆಂದೂ ತಿಳಿಸಿರುತ್ತಾನೆ. "अलौकिकत्वादमरः स्वकोशे न यानि नामानि समुल्लिलेख। विलोक्य तैरप्यधुना प्रचारमयं प्रयत्नः पुरुषोत्तमस्य। वर्गक्रमस्तथा नामलिङ्गयोस्तूपदेशता। परिभाषादिकं सर्वमत्राप्यमरकोशवत्" त्रिकाण्ड० २, ३।

**हारावली** — ಪುರುಷೋತ್ತಮದೇವವಿರಚಿತ. ಅಭಿಧಾನ ಕೋಶಗಳು ಅನೇಕ ವಿದ್ವಾಂಸರಿಂದ ರಚಿತವಾಗಿದ್ದರೂ ಅವುಗಳೆಲ್ಲವೂ ಪ್ರಸಿದ್ಧ ವಿಷಯಗಳ ವ್ಯವಹಾರಕ್ಕೆ ಸಂಬಂಧಿಸಿದುವಾದುದರಿಂದ ಸಭೆಗಳಲ್ಲಿ ಎಲ್ಲರಿಗೂ ವೈದಗ್ಧ್ಯವನ್ನುಂಟುಮಾಡುವ ಕೋಶವೊಂದನ್ನು ತಾನು ರಚಿಸುವುದಾಗಿ ಗ್ರಂಥಾರಂಭದಲ್ಲಿ ಈ ಕವಿಯು ಹೇಳಿರುತ್ತಾನೆ. "किं नैव सन्ति सुधियामभिधानकोशाः किन्तु प्रसिद्धविषयव्यवहारभाजः। गोष्ठीषु वादपरमोहफलासु केषां हारावली न विदधाति विदग्धिमानम्" हारा० ५। ಪುರುಷೋತ್ತಮದೇವಕವಿಯು ಈ ಎರಡು ಕೋಶಗಳಲ್ಲದೆ "वर्णदेशना" ಎಂಬ ಗ್ರಂಥವನ್ನೂ ಪಾಣಿನಿಯ ಅಷ್ಟಾಧ್ಯಾಯಿಗೆ "भाषावृत्तिः" ಎಂಬ ವ್ಯಾಖ್ಯಾನವೊಂದನ್ನೂ ರಚಿಸಿರುತ್ತಾನೆ. ಮತ್ತು ಏಕಾಕ್ಷರಕೋಶ ಮತ್ತು ದ್ವಿರೂಪಕೋಶಗಳೆಂಬ ಎರಡು ಗ್ರಂಥಗಳೂ ಇವನಿಂದ ರಚಿತವೆಂದು ತಿಳಿಯಬರುವುದು.

**अनेकार्थसमुच्चयः** (शाश्वतकोशः) — ಈ ಕೋಶವು ಶಾಶ್ವತಕವಿರಚಿತವಾದುದು. ಇತರ ಕೋಶಗಳಂತೆ ಈ ಕೋಶದಲ್ಲಿ ಯಾವುದೊಂದು ನಿಯಮವನ್ನೂ ಅನುಸರಿಸಿಲ್ಲ. ಆದರೂ ಇದನ್ನು ಆರು ಭಾಗಗಳಾಗಿ ವಿಂಗಡಿಸಿ ಮೊದಲನೆಯ ಭಾಗದಲ್ಲಿ ಪೂರ್ಣಶ್ಲೋಕಗಳಿಂದಲೂ ಎರಡನೆಯ ಭಾಗದಲ್ಲಿ ಅರ್ಧಶ್ಲೋಕಗಳಿಂದಲೂ ಮೂರನೆಯ ಭಾಗದಲ್ಲಿ ಶ್ಲೋಕಪಾದದಿಂದಲೂ ಅರ್ಥವನ್ನು ವಿವರಿಸಿ ಈ ಮೂರು ಭಾಗಗಳಲ್ಲಿಯೂ ಬಿಟ್ಟಿರುವ ಕೆಲವು ಶಬ್ದಗಳನ್ನು ನಾಲ್ಕನೆಯ ಭಾಗ (ಪರಿಶಿಷ್ಟ) ದಲ್ಲಿ "अपि" ಶಬ್ದದ ಸಮುಚ್ಚಯದಿಂದ ಸೇರಿಸಿ ಅರ್ಥ ವಿವರಿಸಲಾಗಿದೆ. "अपिशब्देन साध्यन्ते पूर्वाचार्यानुसारतः। विस्मृता ये प्रमादेन कथ्यन्ते तेऽधुना पुनः" ಎಂದು ನಾಲ್ಕನೆಯ ಭಾಗದ ಪ್ರಾರಂಭದಲ್ಲಿ ಕವಿಯ ಉಕ್ತಿಯಿರುವುದು. ಐದು ಮತ್ತು ಆರನೆಯ ಭಾಗಗಳಲ್ಲಿ ಅವ್ಯಯಶಬ್ದಗಳನ್ನು ಶ್ಲೋಕಾರ್ಧ ಮತ್ತು ಶ್ಲೋಕಪಾದಗಳಲ್ಲಿ ಕೊಡಲಾಗಿದೆ. "अथाव्यया निबध्यन्ते श्लोकार्धेन सविस्तरम्" ಎಂದು ಐದನೆಯ ಭಾಗದ ಪ್ರಾರಂಭದಲ್ಲೂ "श्लोक-

पादैरितो वक्ष्ये स्वित् स्यात्प्रश्नवितर्कयोः" ಎಂದು ಆರನೆಯ ಭಾಗದ ಪ್ರಾರಂಭದಲ್ಲೂ ಕವಿಯು ಹೇಳಿರುತ್ತಾನೆ. ಈ ಕವಿಯು ಸುಮಾರು ಆರನೆಯ ಶತಮಾನಕ್ಕೆ ಪೂರ್ವದಲ್ಲಿದ್ದನೆಂದು ತಿಳಿಯಬಹುದಾಗಿದೆ.

ಹಲಾಯುಧ, ವೈಜಯನ್ತಿ, ವಿಶ್ವಪ್ರಕಾಶ, ಮೇದಿನೀ ಕೋಶ ಮುಂತಾದ ಮುಖ್ಯ ಕೋಶಗಳ ವಿವರಕ್ಕೆ "अनुबन्धः" २ ನೋಡಿ.

**निघर्ष ನಿಘರ್ಷ** (पुं०) ಉಜ್ಜುವಿಕೆ, ತಿಕ್ಕುವಿಕೆ. नि + घृषु (संघर्षे) "घञ्" (३-३-१८)। "अखिलं हि हिनस्ति भधरं तरुशाखान्तनिघर्षजोऽनलः" किरा० २-५१।

**निघर्षण ನಿಘರ್ಷಣ** (न०) 1. ಉಜ್ಜುವಿಕೆ, ತಿಕ್ಕುವಿಕೆ. नि+घृषु (संघर्षे) "ल्युट्" (३-३-११५)। 2. ಅರೆಯುವುದು, ಪುಡಿಮಾಡುವುದು. "यथा हि कनकं शुद्धं तापच्छेदनिघर्षणैः" भा० शान्ति०।

**निघर्षणीय ನಿಘರ್ಷಣೀಯ** (वि०) 1. ಚೆನ್ನಾಗಿ ಉಜ್ಜಲ್ಪಡುವ, ಚೆನ್ನಾಗಿ ತಿಕ್ಕಲ್ಪಡುವ. 2. ಚೆನ್ನಾಗಿ ಉಜ್ಜಲು ಯೋಗ್ಯವಾದ. 3. ಚೆನ್ನಾಗಿ ಉಜ್ಜಬೇಕಾದ. नि+घृषु (संघर्षे) "अनीयर्" (३-१-९६)। "तव्यः" (३-१-९६)। **-घर्षितव्यः - ಘರ್ಷಿತವ್ಯಃ.**

**निघर्षत् ನಿಘರ್ಷತ್** (वि०) ಉಜ್ಜುತ್ತಿರುವ, ಚೆನ್ನಾಗಿ ತಿಕ್ಕುತ್ತಿರುವ. नि+घृषु (संघर्षे) "शतृ" (३-२-१२४)। स्त्रियां "ङीप्" (४-१-६)। **-न्ती - ನ್ತೀ.**

**निघर्ष्य ನಿಘರ್ಷ್ಯ** (वि०) ಉಜ್ಜಲ್ಪಡುವ, ತಿಕ್ಕಲ್ಪಡುವ. नि + घृषु (संघर्षे) "ण्यत्" (३-१-१२४)।

**निघस ನಿಘಸ** (पुं०) 1. ಭೋಜನ, ಊಟ. नि + अद (भक्षणे) "अप्" (३-३-६०)। घस्लृ आदेशः (२-४-३८)। "जग्धिस्तु भोजनम्। जेमनं लेह आहारो निघसो न्याद इत्यपि" अम०। 2. ಆಹಾರವಸ್ತು.

**निघात ನಿಘಾತ** (पुं०) 1. ಏಟು, ಹೊಡತ. नि + हन (हिंसागत्योः) भावे "घञ्" (३-३-१८)। तकारादेशः (७-३-३२)। "ज्यानिघातकठिनाङ्गुलिर्वृथा बध्यतामभययाचनाञ्जलिः" रघु० ११-७८। 2. ಒಂದು ಸ್ವರದಿಂದ ಇನ್ನೊಂದು ಸ್ವರವನ್ನು ನಿರೋಧಿಸುವುದು, ಉದಾತ್ತ ಮೊದಲಾದ ಸ್ವರವನ್ನು ತಡೆದು ಅನುದಾತ್ತ ಸ್ವರವನ್ನು ಹೇಳುವುದು. "उदात्तादिहननपूर्वकमनुदात्तकरणं निघातः" मनो०। 3. ಅನುದಾತ್ತ ಸ್ವರ. "समानवाक्ये निघातयुष्मदस्मदादेशाः वक्तव्याः" (वा० ८-१-२३)।

**निघाति ನಿಘಾತಿ** (स्त्री०) ಕಬ್ಬಿಣದ ಸುತ್ತಿಗೆ, ಚಮಟಿಗೆ. निहन्यतेऽनया — नि + हन (हिंसागत्योः) "इन्" (उ० ४-१२४)।

**निघुष्ट ನಿಘುಷ್ಟ** (न०) 1. ಶಬ್ದ, ಸದ್ದು. 2. ಘೋಷಣೆ, ಗಟ್ಟಿಯಾಗಿ ಕೂಗಿ ಹೇಳುವುದು. नि + घुषिर् (शब्दे) "क्तः" (३-३-११४)। (वि०) 3. ಗಟ್ಟಿಯಾಗಿ ಕೂಗಿ ಹೇಳಲ್ಪಟ್ಟ. कर्म० "क्तः" (३-२-१०२)।

**निघृष्ट ನಿಘೃಷ್ಟ** (वि०) 1. ಚೆನ್ನಾಗಿ ಉಜ್ಜಲ್ಪಟ್ಟ. नि+घृषु (संघर्षे) "क्तः" (३-२-१०२)। 2. ಚೆನ್ನಾಗಿ ಅರೆಯಲ್ಪಟ್ಟ, ಪುಡಿಮಾಡಲ್ಪಟ್ಟ. 3. ಅಡಗಿಸಲ್ಪಟ್ಟ, ಶಕ್ತಿ ಕುಗ್ಗಿಸಲ್ಪಟ್ಟ, ದಮನಮಾಡಲ್ಪಟ್ಟ. (न०) 4. ಚೆನ್ನಾಗಿ ಉಜ್ಜುವಿಕೆ. 5. ಚೆನ್ನಾಗಿ ಪುಡಿಮಾಡುವಿಕೆ. नि + घृषु भावे "क्तः" (३-३-११४)।

**निघृष्व ನಿಘೃಷ್ವ** (पुं०) 1. ಕಾಲಿನ ಗೊರಸು. 2. ಗರ್ದಭ, ಕತ್ತೆ. 3. ಹಂದಿ. 4. ಮಾರ್ಗ, ದಾರಿ. नि + घृषु (संघर्षे) "क्वन्" (उ० १-१५१)। निपा०।

**निघ्न ನಿಘ್ನ** (पुं०) 1. ಅನರಣ್ಯರಾಜನ ಒಬ್ಬ ಮಗ. "अनरण्यसुतो निघ्नो निघ्नपुत्रौ बभूवतुः" हरिवं०। (वि०) 2. ಒಬ್ಬನ ಅಧೀನದಲ್ಲಿರುವವನು, ಇನ್ನೊಬ್ಬನನ್ನು ಆಶ್ರಯಿಸಿರುವವನು. निहन्यते — नि + हन (हिंसागत्योः) "कः" (वा० ३-३-५८)। "निघ्नस्य मे भर्तृनिदेशरौक्ष्यं देवि क्षमस्वेति बभूव नम्रः" रघु० १४-५८। 3. ಗುಣಿಸಲ್ಪಟ್ಟ, ಹೆಚ್ಚಿಸಲ್ಪಟ್ಟ, ಅಧಿಕಗೊಳಿಸಲ್ಪಟ್ಟ. "पुनर्द्वादशनिघ्नाच्च लभ्यते यत्फलं बुधैः" सूर्यसि० ३-२८। 4. ವಿಧೇಯ, ನಮ್ರ, ಹೇಳಿದಂತೆ ನಡೆಯುವವನು.

**निघ्नत् ನಿಘ್ನತ್** (वि०) ಹೊಡೆಯುತ್ತಿರುವ, ಬಡಿಯುತ್ತಿರುವ. नि+हन (हिंसागत्योः) "शतृ" (३-२-१२४)। "बाढं वपूंषि निर्भिद्य धन्विनां निघ्नतां मिथः" कुमा० १६-९। "निघ्नतः परनिबर्हितं मृगम्" किरा० १३-४६। स्त्रियां "ङीप्" (४-१-६)। **-घ्नती - ಘ್ನತೀ.**

**निघ्नता ನಿಘ್ನತಾ** (स्त्री०) ಪರಾಧೀನತೆ, ಇನ್ನೊಬ್ಬನಿಗೆ ಅಧೀನನಾಗಿರುವಿಕೆ. निघ्नस्य भावः "तल्" (५-१-११९)। "शीधुपानविधुरेषु वधूनां निघ्नतामुपगतेषु वपुःषु" किरा० ९-७३।

**निघ्नान ನಿಘ್ನಾನ** (वि०) 1. ಹೊಡೆಯುವ ಸ್ವಭಾವದ. 2. ಕೊಲ್ಲುವ ಸ್ವಭಾವದ. 3. ಸಂಹರಿಸಲು ಶಕ್ತನಾದ. नि + हन (हिंसागत्योः) "चानश्" (३-२-१२९)।

"निघ्नानं शात्रवान् रामं कथं त्वं नावगच्छसि" भट्टि० ५-८१।

**निचय ನಿಚಯ** (पुं०) 1. ಸಮೂಹ, ಗುಂಪು, ರಾಶಿ. नि + चिञ् (चयने) "अच्" (३-३-५६)। "विगलित-जलभारशुक्लभासां निचय इवाम्बुमुचां नगाधिराज:" किरा० ४-३७। 2. ನಿಶ್ಚಯ,

**निचयक ನಿಚಯಕ** (वि०) ರಾಶಿ ಹಾಕುವುದರಲ್ಲಿ ಚತುರನಾದ, ಗುಡ್ಡೆ ಹಾಕುವುದರಲ್ಲಿ ನಿಪುಣನಾದ, ಒಟ್ಟುಗೂಡಿಸುವುದರಲ್ಲಿ ಜಾಣನಾದ. निचये कुशल: "कन्" (५-२-६४)।

**निचयिन् ನಿಚಯಿನ್** (वि०) ತುಂಬಿರುವ, ಸಮೃದ್ಧವಾದ, ಹೇರಳವಾದ. निचयोऽस्यास्ति—"इनि:" (५-२-११५)। "निचयिनि लवलीलताविकासे जनयति लोध्रसमीरणे च हर्षम्" किरा० १०-२९।

**निचाय ನಿಚಾಯ** (पुं०) ಧಾನ್ಯದ ರಾಶಿ. नि + चिञ् (चयने) "घञ्" (३-३-२०)। तण्डुलानां निचाय: राशि:। एकस्तण्डुलनिचाय: सि० कौ०।

**निचिकी ನಿಚಿಕೀ** (स्त्री०) ಉತ್ತಮವಾದ ಆಕಳು.

**निचित ನಿಚಿತ** (वि०) 1. ರಾಶಿ ಹಾಕಲ್ಪಟ್ಟ, ಗುಡ್ಡೆ ಹಾಕಲ್ಪಟ್ಟ, ಒಟ್ಟುಗೂಡಿಸಲ್ಪಟ್ಟ. नि + चिञ् (चयने) "क्त:" (३-२-१०२)। 2. ವ್ಯಾಪ್ತವಾದ. "बभौ चिरं निचित इवासृजां लवै:" माघ० १७-१४। 3. ತುಂಬಲ್ಪಟ್ಟ. "अद्यैवेन्दुमयूखखण्डनिचितं पीतं निशीथोत्सवे यैर्लीलापरिरम्भदायिदयितागण्डूषशेषं मधु" मालती० ८-१०। (स्त्री०) **–ता – ತಾ.** 4. ಒಂದು ನದಿ. "कौशिकीं त्रिदिवां कृत्यां निचितां लोहितारणीम्" भा० भीष्म० ९-१८।

**निचीयमान ನಿಚೀಯಮಾನ** (वि०) ಚೆನ್ನಾಗಿ ಅಭಿವೃದ್ಧಿ ಹೊಂದಿಸಲ್ಪಡುತ್ತಿರುವ, ಚೆನ್ನಾಗಿ ಬೆಳೆಸಲ್ಪಡುತ್ತಿರುವ, ದೊಡ್ಡದಾಗಿ ಬೆಳೆಸಲ್ಪಡುತ್ತಿರುವ. नि + चिञ् (चयने) कर्म० "शानच्" (३-२-१२४)। "निचीयमानो नारीभि-र्माल्यदध्यक्षताङ्कुरै:" भाग० १०-५०-४०।

**निचुल ನಿಚುಲ** (पुं०) 1. ನೀರು ಹಲಸಿನ ಗಿಡ. निचोलति — नि + चुल (समुच्छ्राये) "क:" (३-१-१३५)। 2. ಮೇಲುಹೊದಿಕೆ. 3. ಹಾಸಿಗೆಯ ಮೇಲೆ ಹಾಸುವ ಬಟ್ಟೆ, ದುಪಟಿ. निचोल्यते — नि + चुल "घञ्" (३-३-१९)। "निचुलस्तु निचोले स्यादिज्जलाख्य-महीरुहे" मेदि०।

**निचुलक ನಿಚುಲಕ** (न०) 1. ಮೇಲಿನ ಅಂಗಿ, ಹೆಂಗಸರ ಕುಪ್ಪಸದ ಆಕಾರದ ಕವಚ (ಅಂಗಿ). नि + चुल "क्वुन्" बाहु०। 2. ಮೇಲಿನ ಹೊದಿಕೆ.

**निचुलित ನಿಚುಲಿತ** (वि०) 1. ಹೊದಿಸಲ್ಪಟ್ಟ, ಆಚ್ಛಾದಿಸಲ್ಪಟ್ಟ. नि + चुल (समुच्छ्राये) "क्त:" (३-२-१०२)। "मौग्ध्यादाचूडमोर्घैर्निचुलितमिव तं भूषणानां मणीनाम्" नैष० १५-८२। 2. ಮುಚ್ಚಲ್ಪಟ್ಟ, ರಹಸ್ಯವಾಗಿಡಲ್ಪಟ್ಟ. "कुर्वती निचुलितं ह्रिया कियत्सौहृदाद्विवृतसौरभं कियत्" नैष० १८-५२।

**निचोल ನಿಚೋಲ** (पुं०) 1. ಮೇಲಿನ ಹೊದಿಕೆ, ಹಾಸಿಗೆಯ ಮೇಲೆ ಹಾಸುವ ದುಪಟಿ. नि + चुल (समुच्छ्राये) + णिच् "घञ्" (३-३-१९)। 2. ತೊಟ್ಟಿಲಿನ ಮೇಲೆ ಮುಚ್ಚುವ ಬಟ್ಟೆ, ತೊಟ್ಟಿಲಿನ ಸುತ್ತಲೂ ಕಟ್ಟುವ ಬಟ್ಟೆ. 3. ಪೆಟ್ಟಿಗೆ. "निचोल: प्रच्छदपटो निचुलश्चोत्तरच्छद:" अभि० चि०।

**निचोलक ನಿಚೋಲಕ** (पुं०) 1. ಹೆಂಗಸರ ಕುಪ್ಪಸದ ಆಕಾರದ ಕವಚ, ಮೇಲಿನ ಅಂಗಿ. निचुल इव कायति—कै (शब्दे) "क:" (३-२-४)। 2. ಪೆಟ್ಟಿಗೆ. "निचोलक: स्यात् कूर्पासो वारवाणश्च कञ्चुक:" अभि० चि०।

**निच्छवि ನಿಚ್ಛವಿ** (पुं०) ತೀರಭುಕ್ತ ದೇಶ, ತಿರ್ಹೂತವೆಂಬ ಒಂದು ಜಿಲ್ಲೆ. ನಿಚ್ಛವಿಯು "ಲಿಚ್ಛವಿ" ಪದದ ಅಪಭ್ರಂಶ. ತಿರ್ಹೂತವು "ತೀರಭುಕ್ತ" ಪದದ ಅಪಭ್ರಂಶ.

**निज ನಿಜ** (वि०) 1. ತನ್ನದಾದ, ಸ್ವಕೀಯ. नितरां जायते — नि + जनी (प्रादुर्भावे) "ड:" (३-२-९९)। "अयं निज: परो वेति गणना लघुचेतसाम्। उदार-चरितानां तु वसुधैव कुटुम्बकम्" पञ्चतं० ५-३८। "निजरज: पटवासमिवाकिरत् धृतपटोपमवारिमुचां दिशाम्" माघ० ६-३७। "निजच्छायानुकारिणी" याद० १६-१२२। 2. ನಿಸರ್ಗವಾದ, ಸ್ವಭಾವಸಿದ್ಧವಾದ. "निजेन नीतं विजितान्यगौरवं गभीरतां धैर्यगुणेन भूयसा" किरा० १४-३१। 3. ನಿತ್ಯವಾದ, ಸ್ಥಿರವಾದ, ಅಚಲವಾದ. "निजं स्वीये च नित्ये च" मेदि०।

**निजपक्ष ನಿಜಪಕ್ಷ** (पुं०) ತನ್ನ ಪಂಗಡ, ತನ್ನ ಕಕ್ಷಿ. निज: स्वकीय: पक्ष:।

**निजस्व ನಿಜಸ್ವ** (न०) ಸ್ವಂತ ಆಸ್ತಿ, ಸ್ವಂತ ಸ್ವತ್ತು.

**निजिघृक्षा ನಿಜಿಘೃಕ್ಷಾ** (स्त्री०) ನಿಗ್ರಹಿಸುವ ಅಪೇಕ್ಷೆ, ಶಿಕ್ಷಿಸುವ ಅಪೇಕ್ಷೆ. नि + ग्रह (उपादाने) + सन् "अ:" (३-३-१०२)।

**निजिघृक्षु ನಿಜಿಘೃಕ್ಷು** (वि०) ನಿಗ್ರಹಿಸುವ ಅಪೇಕ್ಷೆಯುಳ್ಳ, ಶಿಕ್ಷಿಸಲು ಇಚ್ಛೆವುಳ್ಳ. नि+ग्रह (उपादाने)+सन् "उः" (३-२-१६८)।

**निटल ನಿಟಲ** (न०) 1. ಫಾಲ, ಹಣೆ. 2. ಅರಿಶಿನ. नि + टल (वैक्लव्ये) "अच्" (३-१-१३४)। "राजा निटलतटचुम्बितनिजचरणाम्बुजैः" दशकु०। **निटाल ನಿಟಾಲ, निटिल ನಿಟಿಲ** ರೂಪಗಳೂ ಉಂಟು.

**निटलाक्ष ನಿಟಲಾಕ್ಷ** (पुं०) ಪರಶಿವ, ಪರಮೇಶ್ವರ. निटले अक्षि अस्य "षच्" (५-४-११३)। "रोषरूक्षेण निटलाक्षेण दूरीकृतचेतने मकरकेतने" दशकु०। **निटिलाक्षः ನಿಟಿಲಾಕ್ಷಃ, निटिलेक्षणः ನಿಟಿಲೇಕ್ಷಣಃ** ಇತ್ಯಾದಿ ರೂಪಗಳೂ ಆಗುವುವು.

**निडीन ನಿಡೀನ** (न०) ಆಹಾರವಸ್ತುವನ್ನು ನೋಡಿ ಪಕ್ಷಿಗಳು ಅದಕ್ಕಾಗಿ ಮೇಲಿನಿಂದ ಕೆಳಕ್ಕೆ ಹಾರುವುದು. नीचैर्डीनम् —पृषो०। ಪಕ್ಷಿಗಳ ನೂರ ಒಂದು ವಿಧ ಹಾರಾಟಗಳಲ್ಲಿ ಇದು ಒಂದು ವಿಧ. प्रडीनम् उड्डीनम् अवडीनम् डीनम् निडीनम् तिर्यग्डीनम् विडीनम् परिडीनम् ಮುಂತಾದುವು ಪಕ್ಷಿಗಳ ಹಾರಾಟದ ಪ್ರಭೇದಗಳು.

**नितम्ब ನಿತಂಬ** (पुं०) 1. ಸ್ತ್ರೀಯರ ಕಟಿಪಶ್ಚಾದ್ಭಾಗ, ಹೆಂಗಸರ ಪಿರ್ರೆ. नितम्बति--नि+तबि (गतौ) "अच्" (३-१-१३४)। "तरुण्यालिङ्गितः कण्ठे नितम्बस्थानमाश्रितः"। 2. ಸೊಂಟ. "व्रीडया सह विनीवि नितम्बादंशुकं शिथिलतामुपपेदे" किरा० ९-४७। 3. ಪರ್ವತದ ತಪ್ಪಲು ಪ್ರದೇಶ. "सनाकवनितं नितम्बरुचिरं चिरं सुनिनदैर्नदैर्वृतममुम्" किरा० ५-२७। 4. ನದಿಯ ತೀರ ಪ್ರದೇಶ. 5. ಹೆಗಲು, ಸ್ಕಂಧ. "नितम्बः स्कन्धरोधसोः। स्त्रियाः पश्चात्कटावद्रेः कटके कटिमात्रके" मेदि०।

**नितम्बिन् ನಿತಂಬಿನ್** (वि०) 1. ಪ್ರಶಸ್ತಪಿರ್ರೆಗಳಿಂದ ಕೂಡಿದ. नितम्बोऽस्यास्ति "इनिः" (५-२-११५)। "लोभ्यमाननयनः श्लथांशुकैर्मेखलागुणपदैर्नितम्बिभिः" रघु० १९-२६। "कलत्रभारः पुलिनं नितम्बिभिः" किरा० ८-२९। (स्त्री०) **नितम्बिनी ನಿತಂಬಿನೀ.** 2. ಪ್ರಶಸ್ತಪಿರ್ರೆಗಳಿಂದ ಕೂಡಿದ ಹೆಂಗಸು. प्रशस्तो नितम्बोऽस्त्यस्याः "इनिः" (५-२-११५)। "ङीप्" (४-१-५)। "नितम्बिनीनां भृशमादधे धृतिं नभः प्रयाणादवनौ परिक्रमः" किरा० ८-३। 3. ಹೆಂಗಸು.

**नितराम् ನಿತರಾಮ್** (अव्य०) 1. ಅತಿಶಯವಾಗಿ, ಅಧಿಕವಾಗಿ. नि + तरप् "आमुः" (५-४-११)। "सद्यः स्विद्यदग्रमविरतोत्कम्पलोलाङ्गुलीकः पाणिर्लेखाविधिषु नितरां वर्तते किं करोमि" मालती० १-३८। 2. ಸಂಪೂರ್ಣವಾಗಿ, ಸಮಗ್ರವಾಗಿ. "हृदि लुठन्ति कला नितराममूर्विरहिणीवधपङ्ककलङ्किताः" नैष० ४-४७।

**नितल ನಿತಲ** (न०) ಸಪ್ತ ಪಾತಾಳಲೋಕಗಳಲ್ಲೊಂದು. निकृष्टं तलमधोभागः। "अतलं वितलं चैव नितलं च गभस्तिमत्। महाख्यं सुतलं चाग्र्यं पातालं चापि सप्तमम्" विष्णुपु०।

**नितान्त ನಿತಾಂತ** (वि०) 1. ಅತಿಶಯವಾದ, ಬಹಳ ಹೆಚ್ಚಾದ. नितान्यति स्म — नि + तमु (काङ्क्षायाम्) कर्त० "क्तः" (३-४-७२)। "निद्राविनोदितनितान्तरतिक्लमानामायामिमङ्गलनिनादविबोधितानाम्" किरा० ९-७५। (अव्य०) 2. ಬಹಳವಾಗಿ, ಅತಿಶಯವಾಗಿ ಹೆಚ್ಚಾಗಿ. "नितान्तकठिनां रुजं मम न वेद सा मानसीम्" विक्र० २-११। "नितान्तमीर्ष्याकलुषा दृगन्ताः" नैष० १०-४०।

**नित्य ನಿತ್ಯ** (पुं०) 1. ಸಮುದ್ರ. (वि०) 2. ಸಂತತವಾದ, ನಿರಂತರವಾದ, ಎಡೆಬಿಡದೆ ನಡೆಯುತ್ತಿರುವ, ಯಾವಾಗಲೂ ನಡೆಯುತ್ತಿರುವ. नियतं भवः — नि "त्यप्" (वा० ४-२-१०४)। "विद्यागुरुष्वेतदेव नित्या वृत्तिः स्वयोनिषु" मनु० २-२०६। 3. ನಿಯತವಾದ, ಕಟ್ಟಳೆಯ ಪ್ರಕಾರದ, ಐಚ್ಛಿಕವಲ್ಲದ, ಬಿಡದೆ ಅವಶ್ಯವಾಗಿ ಮಾಡಬೇಕಾದ (ನಿತ್ಯಕರ್ಮ). "अहरहः सन्ध्यामुपासीत" ಎಂಬ ವಾಕ್ಯದಿಂದ ವಿಹಿತವಾದ ಸಂಧ್ಯಾವಂದನೆಯು ಪ್ರತಿದಿನವೂ ಅವಶ್ಯ ಕರ್ತವ್ಯವಾದುದರಿಂದ ನಿತ್ಯಕರ್ಮವಾಯಿತು. ಅದನ್ನು ಆಚರಿಸದಿದ್ದರೆ ಪ್ರತ್ಯವಾಯ (ದೋಷ) ವುಂಟೆಂದು ಈ ವಿಧಿವಾಕ್ಯವು ಹೇಳುವುದು. ಗೃಹಸ್ಥನಿಗೆ ವಿಹಿತವಾದ ಕರ್ಮವು नित्यम् नैमित्तिकम् ಮತ್ತು नित्यनैमित्तिकम् ಎಂದು ಮೂರು ವಿಧ. ಸಂಧ್ಯಾವಂದನೆ, ಪಂಚಯಜ್ಞಗಳು, ಏಕಾದಶಿ ಉಪವಾಸ ಮುಂತಾದುವು ನಿತ್ಯಕರ್ಮಗಳು. ಮಕ್ಕಳ ಜಾತಕರ್ಮ ನಾಮಕರಣಾದಿಗಳು ನೈಮಿತ್ತಿಕ. ಪರ್ವಶ್ರಾದ್ಧ ಮೊದಲಾದುವು ನಿತ್ಯನೈಮಿತ್ತಿಕ. "नित्यं नैमित्तिकं चैव नित्यनैमित्तिकं तथा। गृहस्थस्य त्रिधा कर्म तन्निशामय पुत्रक। पञ्चयज्ञाश्रितं नित्यं यदेतत्कथितं तव। नैमित्तिकं तथा चान्यत् पुत्रजन्मक्रियादिकम्। नित्यनैमित्तिकं ज्ञेयं पर्वश्राद्धादि पण्डितैः" मार्क०। 4. ಯಾವಾಗಲೂ ಇರುವ, ಉತ್ಪತ್ತಿ ಮತ್ತು ವಿನಾಶವಿಲ್ಲದ, ಸದಾತನವಾದ. यथा—वर्णाः, गगनम् इत्यादि। 5. ಶಾಶ್ವತವಾದ, ಸ್ಥಿರ

ವಾಗಿರುವ. "दमो दानं क्षमा बुद्धिर्ह्रीर्धृतिस्तेज उत्तमम्। नित्यान्यासन् महासत्त्वे शान्तनौ पुरुषर्षभे" भा० आदि० १०७-२। "शाश्वतानश्वरे नित्यं ध्रुवम्" अभि० चि०। "नित्यौ सततशाश्वतौ" नानार्थर०। (अव्य०) 6. ಯಾವಾಗಲೂ, ಸರ್ವಕಾಲದಲ್ಲಿಯೂ. "तं नित्यमनुरक्तास्मि यथा सूर्यं सुवर्चला" रामा०।

**नित्यकर्मन् ನಿತ್ಯಕರ್ಮನ್** (न०) ಪ್ರತಿದಿನವೂ ಅವಶ್ಯವಾಗಿ ಆಚರಿಸಬೇಕಾದ ಕಾರ್ಯ. "नित्य" ಪದದಲ್ಲಿ ನೋಡಿ.

**नित्यकाल ನಿತ್ಯಕಾಲ** (अव्य०) ಯಾವಾಗಲೂ, ಸರ್ವಕಾಲದಲ್ಲಿಯೂ. "ब्राह्मेण विप्रस्तीर्थेन नित्यकालमुपस्पृशेत्" मनु० २-५८।

**नित्यकिङ्कर ನಿತ್ಯಕಿಂಕರ** (पुं०) 1. ನಿತ್ಯಮುಕ್ತನಾಗಿ ಪರಮಾತ್ಮನ ನಿರವಧಿಕ ಕೈಂಕರ್ಯ ಸಾಮ್ರಾಜ್ಯವನ್ನು ಅನುಭವಿಸುತ್ತಿರುವ ಜೀವ. नित्यं किङ्करः उत्तरावधिरहितकैङ्कर्यसाम्राज्यवान्। 2. ಸರ್ವಕಾಲದಲ್ಲಿಯೂ ದಾಸ (ಸೇವಕ) ನಾಗಿರುವವನು.

**नित्यकृत्य ನಿತ್ಯಕೃತ್ಯ** (न०) ಪ್ರತಿದಿನವೂ ಆಚರಿಸಬೇಕಾದ ಕಾರ್ಯ, ಸಂಧ್ಯಾವಂದನೆ, ಪಂಚಯಜ್ಞಗಳು ಮುಂತಾದುವು.

**नित्यक्षौर ನಿತ್ಯಕ್ಷೌರ** (न०) ಶಾಸ್ತ್ರೋಕ್ತಕಾಲ ಬಿಟ್ಟು ಮಾಡಿಸಿಕೊಳ್ಳುವ ಕ್ಷೌರ, ಸೌಂದರ್ಯವೃದ್ಧಿಗಾಗಿ ನಡೆಯುವ ಕ್ಷೌರ. ಇಂತಹ ಕ್ಷೌರವು ಚೂಡಾಕರ್ಮಕ್ಕೆ ವಿಹಿತವಾದ ತಿಥಿ, ನಕ್ಷತ್ರ ಮತ್ತು ವಾರಗಳಲ್ಲಿ ನಡೆಯಬೇಕು. "चूडोदिते तिथावृक्षे बुधेन्द्वोर्दिवसे नरः। नित्यक्षौरं प्रकुर्वीत जन्ममासे न तु क्वचित्"।

**नित्यगति ನಿತ್ಯಗತಿ** (पुं०) ಯಾವಾಗಲೂ ಸಂಚರಿಸುತ್ತಿರುವ ವಾಯು. नित्यं गतिरस्य। "यथा वायुर्नित्यगतिर्जलदान् शतशोऽम्बरे" भा० सभा०।

**नित्यत्व ನಿತ್ಯತ್ವ** (न०) 1. ಶಾಶ್ವತವಾಗಿರುವಿಕೆ, ಯಾವಾಗಲೂ ಇರುವಿಕೆ. 2. ಅವಿಚ್ಛಿನ್ನವಾಗಿರುವಿಕೆ, ಎಡೆಬಿಡದೆ ಇರುವಿಕೆ.

**नित्यदा ನಿತ್ಯದಾ** (अव्य०) ಯಾವಾಗಲೂ, ಸರ್ವಕಾಲದಲ್ಲಿಯೂ. नित्य "दा"। "त्वमग्ने सर्वभूतानामन्तश्चरसि नित्यदा" भा० आदि० ५-२८।

**नित्यदान ನಿತ್ಯದಾನ** (न०) ಪ್ರತಿದಿನವೂ ಮಾಡಬೇಕಾದ ದಾನ. नित्यम्, नैमित्तिकं ಮತ್ತು काम्यम् ಎಂದು ದಾನವು ಮೂರು ವಿಧ. ಪ್ರತಿಫಲಾಪೇಕ್ಷೆಯಿಲ್ಲದೆ ಪ್ರತಿದಿನವೂ ಮಾಡುವುದು ನಿತ್ಯದಾನ. "नित्यं नैमित्तिकं काम्यं त्रिविधं दानमिष्यते। अहन्यहनि यद्विप्र! दीयतेऽनुपकारिणे। अनुद्दिश्य फलं तत्स्यात् ब्राह्मणस्य तु नित्यकम्"।

**नित्यनैमित्तिक ನಿತ್ಯನೈಮಿತ್ತಿಕ** (वि०) ನಿತ್ಯವಾದ ಮತ್ತು ನೈಮಿತ್ತಿಕವೂ ಆದ ಕರ್ಮ, ಪರ್ವಶ್ರಾದ್ಧ ಮೊದಲಾದ ಕರ್ಮ. ಪರ್ವಕಾಲವು ನಿಮಿತ್ತವಾದುದರಿಂದ ಪರ್ವಶ್ರಾದ್ಧವು ನೈಮಿತ್ತಿಕ. ಅದು ಅವಶ್ಯಕರ್ತವ್ಯವಾದುದರಿಂದ ನಿತ್ಯ. ಆದುದರಿಂದ ಪರ್ವಶ್ರಾದ್ಧಾದಿಗಳು ನಿತ್ಯನೈಮಿತ್ತಿಕಗಳು. "नित्यनैमित्तिकं ज्ञेयं पर्वश्राद्धादि पण्डितैः"।

**नित्यपुष्ट ನಿತ್ಯಪುಷ್ಟ** (वि०) 1. ಯಾವಾಗಲೂ ಸಮೃದ್ಧಿಯನ್ನು ಹೊಂದಿರುವ, ಸರ್ವಕಾಲದಲ್ಲಿಯೂ ಪರಿಪೂರ್ಣವಾಗಿರುವ. नित्यं पुष्टः। (स्त्री०) **-पुष्टा -ಪುಷ್ಟಾ.** 2. ಮಹಾಲಕ್ಷ್ಮಿ. ವಿಭೂತ್ಯಾದಿ ಗುಣಗಳಿಂದ ಸರ್ವದಾ ಪರಿಪೂರ್ಣಳಾಗಿರುವುದರಿಂದ ಲಕ್ಷ್ಮಿಯು ನಿತ್ಯಪುಷ್ಟಳು. "गन्धद्वारां दुराधर्षां नित्यपुष्टां करीषिणीम्" श्रुतिः।

**नित्यप्रलय ನಿತ್ಯಪ್ರಲಯ** (पुं०) ನಾಲ್ಕು ವಿಧ ಪ್ರಳಯಗಳಲ್ಲೊಂದು. नित्यः प्रलयः। नैमित्तिकः, प्राकृतिकः, आत्यन्तिकः ಮತ್ತು नित्यः ಎಂದು ಪ್ರಳಯವು ನಾಲ್ಕು ವಿಧ. "नैमित्तिकः प्राकृतिकस्तथैवात्यन्तिको द्विज। नित्यश्च सर्वभूतानां प्रलयोऽयं चतुर्विधः" विष्णुपु० १-७-४१। ಬ್ರಹ್ಮಾದಿ ಸಮಸ್ತ ಶರೀರಗಳಲ್ಲೂ ಯಾವಾಗಲೂ ಪರಿಣಾಮವುಂಟಾಗುತ್ತಿರುವುದರಿಂದ ಪೂರ್ವಾವಸ್ಥೆಯನ್ನು ಬಿಡುವುದು ನಿತ್ಯಪ್ರಳಯ. ಉತ್ತರಾವಸ್ಥೆಯನ್ನು ಪಡೆಯುವುದು ನಿತ್ಯೋತ್ಪತ್ತಿ. ಆದುದರಿಂದ ನಿರಂತರವಾಗಿ ಹುಟ್ಟಿ ಬೆಳೆಯುತ್ತಿರುವ ಸಮಸ್ತ ಭೂತಗಳಲ್ಲಿಯೂ ಹಗಲು ರಾತ್ರಿ ನಡೆಯುತ್ತಿರುವ ವಿನಾಶವೇ ನಿತ್ಯಪ್ರಳಯ. "नित्यः सदैव जातानां यो विनाशो दिवानिशम्" विष्णुपु० १-७-४३। "नित्यदा सर्वभूतानां ब्रह्मादीनां परन्तप। उत्पत्तिप्रलयावेके सूक्ष्मज्ञाः सम्प्रचक्षते" भाग० १२-४-३५।

**नित्यमुक्त ನಿತ್ಯಮುಕ್ತ** (पुं०) 1. ಯಾವಾಗಲೂ ಪ್ರಕೃತಿ ಸಂಬಂಧವಿಲ್ಲದ ಶುದ್ಧಸತ್ತ್ವನಾದ ಪರಮಾತ್ಮ. नित्यं मुक्तः। 2. ಸಂಸಾರ ಬಂಧನಕ್ಕೆ ಒಳಗಾಗದೆ ಅನವರತವೂ ಪರಮಾತ್ಮನ ಕೈಂಕರ್ಯದಲ್ಲಿ ನಿರತನಾಗಿರುವ ಜೀವ.

**नित्ययुक्त ನಿತ್ಯಯುಕ್ತ** (वि०) ಅನವರತವೂ ಪರಮಾತ್ಮನಲ್ಲಿಯೇ ನಿಷ್ಠೆಯುಳ್ಳವನು, ಜ್ಞಾನಿ. नित्यं युक्तः। ಜ್ಞಾನಿಯಾದವನಿಗೆ ಶುದ್ಧಾತ್ಮಾನುಭವರೂಪವಾದ ಜ್ಞಾನವು ನಿರಂತರವೂ ಇರುವುದರಿಂದ ನಿತ್ಯಯುಕ್ತನು. ಇತರರಿಗೆ

ಅಭೀಷ್ಟಫಲಪ್ರಾಪ್ತಿಪರ್ಯಂತ ಮಾತ್ರ ಯೋಗವಿರುವುದರಿಂದ ಅವರಲ್ಲಿ ನಿತ್ಯಯುಕ್ತನಾದ ಜ್ಞಾನಿಯೇ ಪರಮಾತ್ಮನಿಗೆ ಪರಮಪ್ರಿಯನು. "तेषां ज्ञानी नित्ययुक्त: एकभक्तिर्विशिष्यते। प्रियो हि ज्ञानिनोऽत्यर्थमहं स च मम प्रिय:" गीता ७-१७। "तस्याहं सुलभ: पार्थ नित्ययुक्तस्य योगिन:" गीता ८-१४।

**नित्ययौवन ನಿತ್ಯಯೌವನ** (वि०) 1. ಯಾವಾಗಲೂ ತಾರುಣ್ಯವುಳ್ಳವನು, ಎಂದೆಂದಿಗೂ ಪ್ರಾಯದವನಾಗಿರುವವನು. नित्यं यौवनं यस्य। (स्त्री०) **-यौवना -ಯೌವನಾ**. 2. ದ್ರೌಪದಿ. "पाञ्चाली पार्षती कृष्णा वेदिजा नित्ययौवना" त्रिकाण्ड०। (न०) 3. ಸರ್ವಕಾಲದಲ್ಲಿಯೂ ಇರುವ ಯೌವನ.

**नित्यवैकुण्ठ ನಿತ್ಯವೈಕುಂಠ** (पुं०) ಪರಮಪದ, ಮಹಾವಿಷ್ಣುವಿನ ಸ್ಥಾನ, ವೈಕುಂಠಲೋಕ. नित्य: सदातन: वैकुण्ठ:। ಈ ಲೋಕವು ಅಂತರಿಕ್ಷದಲ್ಲಿ ಊರ್ಧ್ವಭಾಗದಲ್ಲಿರುವುದು. ಅನರ್ಘರತ್ನರಾಶಿಗಳಿಂದ ನಿರ್ಮಿತವಾದ ಈ ಲೋಕವು ಆಕಾಶದಷ್ಟು ವಿಸ್ತಾರವಾಗಿರುವುದು. ಇಲ್ಲಿ ವನಮಾಲಿಯೂ ಚತುರ್ಭುಜನೂ ಆದ ಶ್ರೀ ಮಹಾವಿಷ್ಣುವು ಮಹಾಲಕ್ಷ್ಮೀ ಸರಸ್ವತೀ ಗಂಗಾ ತುಲಸೀ ಸಮೇತನಾಗಿಯೂ ಸುನಂದ ನಂದ ಕುಮುದಾದಿಗಳಿಂದಲೂ ಭಕ್ತಾಗ್ರೇಸರರಾದ ಭಾಗವತರಿಂದಲೂ ಸೇವಿಸಲ್ಪಡುವವನಾಗಿಯೂ ಭಕ್ತಾನುಗ್ರಹಕಾರಕನಾಗಿಯೂ ವಿರಾಜಿಸುತ್ತಿರುವನು. "वैकुण्ठे तु परे लोके श्रिया सार्धं जगत्पति:। आस्ते विष्णुरचिन्त्यात्मा भक्तैर्भागवतै: सह"। "ऊर्ध्वं नभसि संविष्टो नित्यवैकुण्ठ एव च। आत्माकाशसमो नित्यो विस्तृतश्चन्द्रबिम्बवत्। ईश्वरेच्छासमुद्भूतो निर्लक्ष्यश्च निराश्रय:। आकाशवत् सुविस्तारश्चामूल्यरत्ननिर्मित:। तत्र नारायण: श्रीमान् वनमाली चतुर्भुज:। लक्ष्मीसरस्वतीगङ्गातुलसीपतिरीश्वर:। सुनन्दनन्दकुमुदपार्षदादिभिरन्वित:। सर्वेश: सर्वसिद्धीशो भक्तानुग्रहकारक:" ब्रह्मवै०।

**नित्यशस् ನಿತ್ಯಶಸ್** (अव्य०) ಯಾವಾಗಲೂ, ಎಂದೆಂದಿಗೂ. नित्य "शस्" (५-४-४३)। "तेभ्योऽधिगच्छेद्विनयं विनीतात्मापि नित्यश:" मनु० ७-३९।

**नित्यसत्त्वस्थ ನಿತ್ಯಸತ್ತ್ವಸ್ಥ** (वि०) 1. ಸರ್ವದಾ ಸತ್ತ್ವಗುಣದಿಂದ ಕೂಡಿದವನು, ರಜಸ್ಸು ಮತ್ತು ತಮೋಗುಣಗಳ ಸಂಬಂಧವಿಲ್ಲದೆ ಶುದ್ಧಸತ್ತ್ವದ ಪ್ರಾಚುರ್ಯವುಳ್ಳವನು. नित्यं सत्त्वे सत्त्वगुणे तिष्ठति—ष्ठा (गतिनिवृत्तौ) "क:" (३-२-४)। "निर्द्वन्द्वो नित्यसत्त्वस्थो निर्योगक्षेम आत्मवान्" गीता २-४५। 2. ಯಾವಾಗಲೂ ಧೈರ್ಯಶಾಲಿಯಾಗಿರುವ. नित्यं सत्त्वे धैर्ये तिष्ठति—ष्ठा "क:"।

**नित्यसमास ನಿತ್ಯಸಮಾಸ** (पुं०) ವ್ಯಾಕರಣಶಾಸ್ತ್ರದಲ್ಲಿ ಉಕ್ತವಾದ ಸಮಾಸಗಳಲ್ಲಿ ಒಂದು ವಿಧ. मक्षिकाया नि:, न सुर: ಇತ್ಯಾದಿ ವಿಗ್ರಹ ವಾಕ್ಯಗಳಲ್ಲಿ ವಿಭಕ್ತಿಗಳನ್ನು ಮಾತ್ರ ತೋರಿಸುವುದರಿಂದ ಸಮಸ್ತಪದದ ಅರ್ಥ ಬೋಧವಾಗದಿರುವುದರಿಂದ निर्मक्षिक: असुर: ಎಂದು ನಿತ್ಯಸಮಾಸವಿರಬೇಕು.

**नित्यहोतृ ನಿತ್ಯಹೋತೃ** (वि०) ಯಾವಾಗಲೂ ಹೋಮಮಾಡುವವನು, ಎಂದೆಂದಿಗೂ ಯಾಗ ಮಾಡುವವನು.

**नित्यहोम ನಿತ್ಯಹೋಮ** (पुं०) ಪ್ರತಿದಿನವೂ ಮಾಡಬೇಕಾದ ಹೋಮ, ಅಗ್ನಿಹೋತ್ರ, ಅಗ್ನಿಕಾರ್ಯ. नित्यं प्रत्यहं कर्तव्यो होम:।

**नित्या ನಿತ್ಯಾ** (स्त्री०) 1. ಮನಸಾದೇವಿ, ಕಶ್ಯಪನ ಮಗಳು, ಅನಂತನಾಗರಾಜನ ಸಹೋದರಿ, ಜರತ್ಕಾರು ಮಹರ್ಷಿಯ ಪತ್ನಿ, ಆಸ್ತೀಕ ಮಹರ್ಷಿಯ ತಾಯಿ. 2. ಪಾರ್ವತಿ.

**नित्यानध्याय ನಿತ್ಯಾನಧ್ಯಾಯ** (पुं०) ವೇದಪಾಠಕ್ಕೆ ಸರ್ವಥಾ ನಿಷಿದ್ಧವಾದ ಕಾಲ.

**नित्याभियुक्त ನಿತ್ಯಾಭಿಯುಕ್ತ** (वि०) ಸರ್ವಕಾಲದಲ್ಲಿಯೂ ಆಸಕ್ತಿಯನ್ನು ಹೊಂದಿರುವ, ಸರ್ವದಾ ನಿಷ್ಠೆಯಿಂದ ಕೂಡಿರುವ. नित्यं सर्वदा अभि समन्तात् युक्त: योगे व्यापृत:। "अनन्याश्चिन्तयन्तो मां ये जना: पर्युपासते। तेषां नित्याभियुक्तानां योगक्षेमं वहाम्यहम्" गीता ९-२२।

**निदधत् ನಿದಧತ್** (वि०) ಇಡುತ್ತಿರುವ, ಇರಿಸುತ್ತಿರುವ. नि+डु धाञ् (धारणपोषणयो:) "शतृ" (३-२-१२४)। स्त्रियां "ङीप्" (४-१-६)। **-दधती -ದಧತೀ**. "शानच्" (३-२-१२४)। **-दधान: -ದಧಾನಃ**. "वसान: कौपीनं शिरसि निदधानोऽञ्जलिपुटम्" भर्तृ० ३-८७।

**निदर्शन ನಿದರ್ಶನ** (न०) 1. ಉದಾಹರಣೆ, ದೃಷ್ಟಾಂತ. नि+दृशिर् (प्रेक्षणे) "ल्युट्" (३-३-११७)। "निदर्शनमसाराणां लघुर्बहुतृणं नर:" माघ० २-५०। (स्त्री०) **-दर्शना -ದರ್ಶನಾ**. 2. ಅರ್ಥಾಲಂಕಾರದ ಒಂದು ಭೇದ, ನಿದರ್ಶನಾಲಂಕಾರ. ಸಮಾನವಾದ ಎರಡು ವಾಕ್ಯಾರ್ಥಗಳಿಗೆ ಅಭೇದಾರೋಪವು ನಿದರ್ಶನಾಲಂಕಾರವಾಗುವುದು. **ಇದರ ಲಕ್ಷಣ:** "वाक्यार्थयो: सदृशयोरैक्यारोपो निदर्शना"। "यद्दातु: सौम्यता सेयं पूर्णेन्दोरकलङ्कता"। ಇಲ್ಲಿ ದಾನಮಾಡುವವನಲ್ಲಿ ಸೌಮ್ಯತ್ವ ಮತ್ತು ಪೂರ್ಣ

ಚಂದ್ರನಲ್ಲಿ ಕಳಂಕಶೂನ್ಯತ್ವರೂಪವಾದ ಎರಡು ವಾಕ್ಯಾರ್ಥಗಳಿಗೂ ಯತ್ ತತ್ ಶಬ್ದಗಳಿಂದ ಅಭೇದಾರೋಪವಿರುವುದರಿಂದ **ನಿದರ್ಶನಾಲಂಕಾರ.** ಇದು **ವಾಕ್ಯಾರ್ಥವೃತ್ತಿ.** ಒಂದು ಪದಾರ್ಥದಲ್ಲಿ ಮತ್ತೊಂದರ ಧರ್ಮಾರೋಪವು **ಪದಾರ್ಥವೃತ್ತಿನಿದರ್ಶನಾಲಂಕಾರ.** "त्वन्नेत्रयुगलं धत्ते लीलां नीलाम्बुजन्मनोः" ಇಲ್ಲಿ ನೇತ್ರಯುಗಳದಲ್ಲಿ ನೀಲೋತ್ಪಲದ ಲೀಲಾರೂಪವಾದ ಧರ್ಮಾರೋಪ ವರ್ಣಿತವಾಗಿರುವುದರಿಂದ ಪದಾರ್ಥವೃತ್ತಿ ನಿದರ್ಶನಾಲಂಕಾರ. ಯಾವುದಾದರೊಂದು ವಿಶಿಷ್ಟ ವ್ಯಾಪಾರದಿಂದ ಸದರ್ಥ ಅಥವಾ ಅಸದರ್ಥ ಬೋಧನೆಯಾಗುವಲ್ಲಿಯೂ ನಿದರ್ಶನಾಲಂಕಾರವಾಗುವುದು. "अपरां बोधनं प्राहुः क्रिययाऽसत्सदर्थयोः। नश्येद्राजविरोधीति क्षीणं चन्द्रोदये तमः। उदयन्नेव सविता पद्मेष्वर्पयति श्रियम्। विभावयन् समृद्धीनां फलं सुहृदनुग्रहः" चन्द्रा०। ಹೀಗೆ ನಿದರ್ಶನಾಲಂಕಾರ ಮೂರು ವಿಧ.

**निदर्शनीय ನಿದರ್ಶನೀಯ** (वि०) 1. ಉದಾಹರಣೆ ಕೊಡಲು ಯೋಗ್ಯವಾದ, ದೃಷ್ಟಾಂತ ಹೇಳಲು ಅರ್ಹವಾದ. 2. ಚೆನ್ನಾಗಿ ನೋಡಲು ಯೋಗ್ಯವಾದ. नि+ दृशिर् (प्रेक्षणे) "अनीयर्" (३-१-९६)। "अनर्घमाद्यं हरिनीलरत्नं लक्ष्मीदृशा नित्यनिदर्शनीयम्" याद० १८-१०६। "तव्यः"। **-दर्शयितव्यः -ದರ್ಶಯಿತವ್ಯಃ.**

**निदर्शयत् ನಿದರ್ಶಯತ್** (वि०) ಚೆನ್ನಾಗಿ ತೋರಿಸುತ್ತಿರುವ. नि + दृशिर् (प्रेक्षणे) + णिच् "शतृ" (३-२-१२४)। "युगपदखिलमादरेण साक्षाद्युवतिजनस्य निदर्शयन् मुकुन्दः" याद० २४-२२।

**निदर्शित ನಿದರ್ಶಿತ** (वि०) 1. ದೃಷ್ಟಾಂತ ಕೊಡಲ್ಪಟ್ಟ. ಉದಾಹರಣೆಯಾಗಿ ಎತ್ತಿ ಹೇಳಲ್ಪಟ್ಟ. नि + दृशिर् (प्रेक्षणे) "क्तः" (३-२-१०२)। "निदध्यौ कन्यकास्तत्र निर्दशितपरस्पराः। अमुद्राभङ्गसुभगा नीवीरिव रतेः शुभः" याद० १६-१३६।

**निदाघ ನಿದಾಘ** (पुं०) 1. ಗ್ರೀಷ್ಮಕಾಲ. ಬೇಸಿಗೆಕಾಲ. नितरां दह्यतेऽत्र — नि + दह (भस्मीकरणे) अधि० "घञ्" (३-३-१२१)। "क्लान्तजलरुहलताः सरसीर्विदधे निदाघ इव सत्वसंप्लवः" किरा० १२-५१। 2. ಉಷ್ಣ, ಬಿಸಿ, ಕಾವು. "निदाघमिव पर्जन्यो निरासे सात्यकिः परम्" याद० २२-२००। 3. ಸ್ವೇದೋದಕ, ಬೆವರು. "निर्वापयिष्यन्निव रोषतप्तं प्रस्नापयामास मुखं निदाघः" किरा० १७-८। (वि०) 4. ಉಷ್ಣವಾದ, ಬಿಸಿಯಾದ.

**निदाघकर ನಿದಾಘಕರ** (पुं०) 1. ಸೂರ್ಯ. निदाघाः उष्णाः कराः अस्य। "खगपतङ्गवियन्मणिभानवो हरिभगेननिदाघकराद्रयः" हारा०। 2. ಅರ್ಕವೃಕ್ಷ, ಎಕ್ಕದ ಗಿಡ.

**निदाघकाल ನಿದಾಘಕಾಲ** (पुं०) ಗ್ರೀಷ್ಮಋತು, ಬೇಸಿಗೆ ಕಾಲ.

**निदाघधामन् ನಿದಾಘಧಾಮನ್** (पुं०) 1. ಸೂರ್ಯ. निदाघमुष्णं धाम यस्य। "निदाघधामानमिवाधिदीधितिं मुदा विकासं मुनिमभ्युपेयुषी" माघ० १-२४। (वि०) 2. ಉಷ್ಣವಾದ ಕಿರಣಗಳುಳ್ಳ.

**निदाघावधि ನಿದಾಘಾವಧಿ** (पुं०) ಗ್ರೀಷ್ಮಕಾಲ, ಗ್ರೀಷ್ಮಋತು. निदाघस्य अवधिः। "संबध्नता कामिजनेषु दोषाः सर्वे निदाघावधिना प्रमृष्टाः" रघु० १६-५२।

**निदान ನಿದಾನ** (न०) 1. ಮುಖ್ಯಕಾರಣ, ಆದಿಕಾರಣ, ಮೂಲಕಾರಣ. नितरां दीयतेऽसाधारणतया जन्यतेऽनेन —डु दाञ् (दाने) कर० "ल्युट्" (३-३-११७)। "भूतभव्यभवदात्मनः प्रभो यन्निदानमखिलस्य शाश्वतम्" याद० १७-१०३। 2. ಕಾರಣ, ಹೇತು. 3. ಕರುವನ್ನು ಕಟ್ಟಿಹಾಕುವ ಹಗ್ಗ. 4. ಕಾರಣಕ್ಷಯ, ಕಾರಣನಾಶ. 5. (ವೈದ್ಯ ಶಾಸ್ತ್ರದಲ್ಲಿ) ರೋಗದ ಕಾರಣ. 6. ಅಂತ್ಯ, ಕೊನೆ, ಅವಸಾನ. "निदानं कारणे वत्सदामादिकारणक्षये" मेदि०। 7. ಶುದ್ಧಿ. 8. ರೋಗನಿರ್ಣಯ. "निदानं कारणे रोगनिर्णये वत्सदामनि" विश्व०।

**निदानस्थान ನಿದಾನಸ್ಥಾನ** (न०) ಹೇತುಲಕ್ಷಣ (ಕಾರಣದ ಸ್ವರೂಪ) ಗಳನ್ನು ತಿಳಿಸುವ ಪ್ರಕರಣ. निदानं हेतुलक्षणनिर्देशः तस्य स्थानम्। ಚರಕ ಮತ್ತು ಸುಶ್ರುತ ಸಂಹಿತೆಗಳಲ್ಲಿ ರೋಗಕಾರಣಗಳ ಲಕ್ಷಣಗಳನ್ನು ತಿಳಿಸುವ ಪ್ರಕರಣಕ್ಕೆ "ನಿದಾನಸ್ಥಾನ" ಎಂದು ಹೆಸರು. ಈ ಪ್ರಕರಣದಲ್ಲಿ ಸಕಲ ವ್ಯಾಧಿಗಳಿಗೂ ಕಾರಣಗಳನ್ನೂ ಮತ್ತು ಅವುಗಳ ಸ್ವರೂಪಗಳನ್ನೂ ತಿಳಿಸಲಾಗಿದೆ. "वातव्याधिकमर्शांसि साश्मरिश्च भगन्दरः। कुष्ठमेहोदरं मूढो विद्रधिः परिसर्पणम्। ग्रन्थिवृद्धिक्षुद्रशूकभग्नाश्च मुखरोगिकम्। हेतुलक्षणनिर्देशान्निदानानीति षोडश" सुश्रुत० सूत्र० ३-१३, १४। ಶರೀರದಲ್ಲಿ (1) ಪ್ರಾಣ, (2) ಅಪಾನ, (3) ಸಮಾನ, (4) ಉದಾನ ಮತ್ತು (5) ವ್ಯಾನಗಳೆಂದು ಪಂಚ (5) ವಾಯುಗಳಿರುವುವು. "प्राणोदानौ समानश्च व्यानश्चापान एव च। स्थानस्था मारुताः पञ्च यापयन्ति शरीरिणम्" सुश्रुत० निदान० १-१२। ವಕ್ತ್ರ, ತಲೆ, ಎದೆ, ಕಂಠ ಮತ್ತು ಮೂಗುಗಳಲ್ಲಿ ಸಂಚರಿಸುವುದು ಪ್ರಾಣ

ವಾಯು. ಈ ವಾಯುವು ಅನ್ನವು ಕಂಠದ ಒಳಕ್ಕೆ ಹೋಗುವಂತೆ ಮಾಡುವುದು. ಮತ್ತು ಪ್ರಾಣಗಳನ್ನೂ ಆಶ್ರಯಿಸಿಕೊಂಡಿರುವುದು. ಇದು ಕೆಟ್ಟರೆ ಬಿಕ್ಕಳಿಕೆ ಶ್ವಾಸ ಮೊದಲಾದ ರೋಗಗಳು ಉಂಟಾಗುವುವು.

**निदिग्ध ನಿದಿಗ್ಧ** (वि०) 1. ರಾಶಿ ಹಾಕಲ್ಪಟ್ಟ, ವೃದ್ಧಿಪಡಿಸಲ್ಪಟ್ಟ. नि + दिह (उपचये) "क्तः" (३-२-१०२)। 2. ಲೇಪನಮಾಡಲ್ಪಟ್ಟ, ಬಳಿಯಲ್ಪಟ್ಟ. (स्त्री०) **–ग्धा –ಗ್ಧಾ.** 3. ಯಾಲಕ್ಕಿ.

**निदिग्धिका ನಿದಿಗ್ಧಿಕಾ** (स्त्री०) ಹೆಗ್ಗುಳ್ಳದ ಗಿಡ. नि+दिह (उपचये) "क्तः" (३-२-१०२)। "टाप्" (४-१-४)। स्वार्थे "कन्" (५-३-७५)। "निदिग्धिका स्पृशी व्याघ्री बृहती कण्टकारिका" अम०।

**निदिध्यासत् ನಿದಿಧ್ಯಾಸತ್** (वि०) ತಿಳಿದ ವಿಷಯವನ್ನು ನಿರಂತರ ಧ್ಯಾನಮಾಡುತ್ತಿರುವ. नि+ध्यै (चिन्तायाम्) +सन् "शतृ" (३-२-१२४)। स्त्रियां "ङीप्" (४-१-६)। **–न्ती –ನ್ತೀ.**

**निदिध्यासन ನಿದಿಧ್ಯಾಸನ** (न०) ತಿಳಿದುಕೊಂಡ ವಿಷಯವನ್ನು ನಿರಂತರವಾಗಿ ಅನುಸಂಧಾನ ಮಾಡುವುದು, ನಿರಂತರ ಭಾವನಾರೂಪವಾದ ಸ್ಮೃತಿ ಪರಂಪರೆ. नि+ध्यै (चिन्तायाम्) + सन् भावे "ल्युट्" (३-३-११५)। ಗುರುವಿನ ಮುಖದಿಂದ ಕೇಳಿ ತಿಳಿದುಕೊಂಡ ವಿಷಯವನ್ನು ಏಕಾಗ್ರತೆಯಿಂದ ನಿರಂತರವಾಗಿ ಮಾಡುವ ಅನುಸಂಧಾನಕ್ಕೆ ನಿದಿಧ್ಯಾಸನವೆಂದು ಹೆಸರು. "निरन्तरं विचारो यः श्रुतार्थस्य गुरोर्मुखात्। तन्निदिध्यासनं प्रोक्तं तच्चैकाग्र्येण लभ्यते"। "ताभ्यां निर्विचिकित्सेऽर्थे चेतसः स्थापितस्य यत्। एकतानत्वमेतद्धि निदिध्यासनमुच्यते" पञ्चद०।

**निदिध्यासनीय ನಿದಿಧ್ಯಾಸನೀಯ** (वि०) 1. ನಿರಂತರವಾಗಿ ಧ್ಯಾನಮಾಡಲ್ಪಡುವ. 2. ನಿರಂತರವಾಗಿ ಧ್ಯಾನ ಮಾಡಲು ಅರ್ಹವಾದ. नि + ध्यै (चिन्तायाम्) + सन् "अनीयर्" (३-१-९६)। "तव्यः" (३-१-९६)। **निदिध्यासितव्यः ನಿದಿಧ್ಯಾಸಿತವ್ಯಃ.** "आत्मा वारे द्रष्टव्यः श्रोतव्यो मन्तव्यो निदिध्यासितव्यः" श्रुतिः।

**निदिध्यासित ನಿದಿಧ್ಯಾಸಿತ** (न०) 1. ಏಕಾಗ್ರತೆಯಿಂದ ಧ್ಯಾನಮಾಡುವುದು. नि + ध्यै (चिन्तायाम्) + सन् भावे "क्तः" (३-३-११४)। (वि०) 2. ಏಕಾಗ್ರತೆಯಿಂದ ಧ್ಯಾನಮಾಡಲ್ಪಟ್ಟ. नि + ध्यै (चिन्तायाम्) + सन् कर्म० "क्तः" (३-२-१०२)।

**निदिध्यासितवत् ನಿದಿಧ್ಯಾಸಿತವತ್** (वि०) ಏಕಾಗ್ರತೆಯಿಂದ ನಿರಂತರವಾಗಿ ಧ್ಯಾನಮಾಡಿದವನು. नि + ध्यै (चिन्तायाम्) + सन् "क्तवतुः" (३-२-१०२)। स्त्रियां "ङीप्" (४-१-६)। **–वती –ವತೀ.**

**निदिध्यास्य ನಿದಿಧ್ಯಾಸ್ಯ** (वि०) ನಿರಂತರವಾಗಿ ಏಕಾಗ್ರತೆಯಿಂದ ಧ್ಯಾನಮಾಡಲ್ಪಡುವ.

**नि + दिश — अतिसर्जने** (तुदा० उभ० सक० अनि०)। ಆಜ್ಞೆಮಾಡು, ಅಪ್ಪಣೆಮಾಡು.

**निदेश ನಿದೇಶ** (पुं०) 1. ಆಜ್ಞೆ, ಅಪ್ಪಣೆ. नि + दिश (अतिसर्जने) "घञ्" (३-३-१८)। "सूननायकनिदेशविभ्रमैरप्रतीतचरवेदनोदयम्" नैष० १८-१२६। "वाक्येनेयं स्थापिता स्वे निदेशे स्थाने प्राणाः कामिनां दूत्यधीनाः" माल० ३-१४। 2. ಸಂಭಾಷಣೆ, ಮಾತಾಡುವುದು. 3. ಸಾಮೀಪ್ಯ, ಹತ್ತಿರ. "निदेशः शासनेऽपि स्यात् कथनोपान्तयोरपि" मेदि०।

**निदेशकारिन् ನಿದೇಶಕಾರಿನ್** (वि०) 1. ಆಜ್ಞೆಯನ್ನು ಪಾಲಿಸುವವನು, ಅಪ್ಪಣೆಯಂತೆ ನಡೆಯುವವನು, ವಿಧೇಯ, निदेशं करोति — डु कृञ् (करणे) "णिनिः" (३-१-१३४)। 2. ಭೃತ್ಯ, ಸೇವಕ. "पुरोपकण्ठोपवनं किलेक्षिता दिदेश यानाय निदेशकारिणः" नैष० १-५६। स्त्रियां "ङीप्" (४-१-५)। **–कारिणी –ಕಾರಿಣೀ.**

**निदेशिन् ನಿದೇಶಿನ್** (वि०) 1. ಆಜ್ಞೆಮಾಡುವವನು, ಅಪ್ಪಣೆಮಾಡುವವನು. नि+दिश (अतिसर्जने) "णिनिः" (३-१-१३४)। स्त्रियां "ङीप्" (४-१-५)। **–शिनी –ಶಿನೀ.** 2. ದಿಕ್ಕು, ದಿಶೆ.

**निदेश्य ನಿದೇಶ್ಯ** (वि०) 1. ಆಜ್ಞಾಪಿಸಲ್ಪಡುವವನು. 2. ಆಜ್ಞೆಗೆ ಅರ್ಹನಾದವನು. नि + दिश (अतिसर्जने) "ण्यत्" (३-१-१२४)।

**निदेष्टृ ನಿದೇಷ್ಟೃ** (वि०) 1. ಆಜ್ಞಾಪಿಸುವವನು, ಅಪ್ಪಣೆ ಮಾಡುವವನು. नि + दिश (अतिसर्जने) "तृच्" (३-१-१३३)। स्त्रियां "ङीप्" (४-१-५)। **निदेष्ट्री ನಿದೇಷ್ಟ್ರೀ.**

**निद्रा ನಿದ್ರಾ** (स्त्री०) ಸುಪ್ತಿ, ನಿದ್ದೆ. नि+द्रा (कुत्सायां गतौ) "अङ्" (३-३-१०६)। णिदि (कुत्सायाम्) "रक्" (उ० २-१७) इति वा। "निमीलितादक्षियुगाच्च निद्रया हृदोऽपि बाह्येन्द्रियमौनमुद्रितात्" नैष० १-४०। ನಿದ್ರೆಯು ಕಾಲಾಗ್ನಿರುದ್ರನ ಪತ್ನಿ. "कालाग्निरुद्रपत्नी

च निद्रा सा सिद्धयोगिनी। सर्वलोकाः समाच्छन्ना यया योगेन रात्रिषु"। ಸಕಾಲದಲ್ಲಿ ನಿದ್ರೆ ಮಾಡುವುದರಿಂದ ಉಂಟಾಗುವ ಗುಣಗಳು : ಧಾತುಗಳು ಸಮಸ್ಥಿತಿಯಲ್ಲಿರುವುವು. ಸೋಮಾರಿತನವಿಲ್ಲದೆ ಕಾರ್ಯಗಳಲ್ಲಿ ಪಟುತ್ವವುಂಟಾಗುವುದು. ಪುಷ್ಟಿ ಬಲ ಉತ್ಸಾಹ ಅಗ್ನಿಶಕ್ತಿಗಳುಂಟಾಗುವುವು. ದರಿದ್ರನಿಗೂ ಪರರ ಸೇವೆಯಲ್ಲಿರುವವನಿಗೂ ಪರಸ್ತ್ರೀಲೋಲುಪನಿಗೂ ಪರರ ದ್ರವ್ಯವನ್ನು ಅಪಹರಿಸುವವನಿಗೂ ನಿದ್ರೆಯು ಬರುವುದಿಲ್ಲ. "कुतो निद्रा दरिद्रस्य परप्रेष्यकरस्य च। परनारीप्रसक्तस्य परद्रव्यहरस्य च"। **ಸುಖವಾಗಿ ನಿದ್ರಿಸುವವರು :** "सुखं स्वपित्यनृणवान् व्याधिमुक्तश्च यो नरः। सावकाशस्तु यो भुङ्क्ते यस्तु दारैर्न शङ्कितः"। ಪದ್ಮಾಕಾರದ ಹೃದಯವು ಅಧೋಮುಖವಾಗಿರುವುದು. ಎಚ್ಚರದಿಂದಿರುವಾಗ ಅದು ವಿಕಸಿತವಾಗಿರುವುದು. ನಿದ್ರಾವಸ್ಥೆಯಲ್ಲಿ ಮುಕುಳಿತವಾಗುವುದು. "पुण्डरीकेण सदृशं हृदयं स्यादधोमुखम्। जाग्रतस्तद्विकसति स्वपतश्च निमीलति" सुश्रुत० शारीर० ४-३२। ಸಂಜ್ಞಾವಹವಾದ ಸ್ರೋತಸ್ಸುಗಳಲ್ಲಿ ತಮಃಪ್ರಚುರವಾದ ಶ್ಲೇಷ್ಮವು ಪ್ರವೇಶಿಸಿದರೆ ತಾಮಸ ಗುಣವುಂಟಾಗುವುದು. ಅದೇ ನಿದ್ರೆ. ಪ್ರಾಣಿಗಳಿಗೆ ಚೇತನಾಸ್ಥಾನವಾದ ಹೃದಯವು ತಮಸ್ಸಿನಿಂದ ಆಕ್ರಾಂತವಾದಾಗ ನಿದ್ರೆಯು ಪ್ರವೇಶಿಸುವುದು. "हृदयं चेतनास्थानमुक्तं सुश्रुत देहिनाम्। तमोऽभिभूते तस्मिंस्तु निद्रा विशति देहिनम्" सुश्रुत० शारीर० ४-३४। ಆದುದರಿಂದ ನಿದ್ರೆಗೆ ತಮೋಗುಣವು ಕಾರಣ. ಸತ್ತ್ವಗುಣವು ಜಾಗ್ರದವಸ್ಥೆಗೆ ಕಾರಣ. ವಸ್ತುತಃ ಇಂದ್ರಿಯಗಳು ಬಳಲಿದಾಗ ಸಕಲೇಂದ್ರಿಯವ್ಯಾಪಾರಗಳೂ ನಿಂತುಹೋಗುವುವು. ಇದೇ ನಿದ್ರೆ.

**निद्राण ನಿದ್ರಾಣ** (वि०) ನಿದ್ರಿಸುತ್ತಿರುವ, ನಿದ್ದೆಮಾಡುತ್ತಿರುವ. नि+द्रा (कुत्सायां गतौ) "क्तः" (३-४-७२)। निष्ठातस्य नः (८-२-४३)। "लभते कुतः प्रबोधं स जागरित्वैव निद्राणः" आर्यासप्त०। "निद्राणवद्दरनिमीलितनेत्रपद्मम्" याद० १९-१।

**निद्रालु ನಿದ್ರಾಲು** (वि०) 1. ನಿದ್ರೆಯ ಸ್ವಭಾವದ. नि+द्रा (कुत्सायां गतौ) "आलुच्" (३-२-१५८)। "कासयुक्तस्त्यजेच्चौर्यं निद्रालुश्चेत्स पुंश्चलीम्। जिह्वालौल्यं रुजाक्रान्तः जीवितं योऽत्र वाञ्छति" पञ्चतं० ५-५१। 2. ಸಂಕೋಚ ಸ್ವಭಾವದ. "कृत्वेन्दुरस्या मुखमात्मनाभून्निद्रालुना दुर्घटमम्बुजेन" नैष० १०-१२९। (स्त्री०) 3. ನಾರಂಬೇಳೆ ಗಿಡ.

**निद्रावृक्ष ನಿದ್ರಾವೃಕ್ಷ** (पुं०) ಅಂಧಕಾರ, ಕತ್ತಲೆ. निद्राया वृक्ष इव।

**निद्रासञ्जनन ನಿದ್ರಾಸಂಜನನ** (न०) ಕಫ, ಶ್ಲೇಷ್ಮ. निद्रां सञ्जनयति — सम् + जनी (प्रादुर्भावे) "ल्युः" (३-१-१३४)।

**निद्रित ನಿದ್ರಿತ** (वि०) ಮಲಗಿ ನಿದ್ರಿಸುತ್ತಿರುವ, ನಿದ್ರೆ ಮಾಡುತ್ತಿರುವ. निद्राऽस्य सञ्जाता "इतच्" (५-२-३६)। "मेखलातरुषु निद्रितानमून्" कुमा० ८-६७।

**निधन ನಿಧನ** (पुंन०) 1. ಮರಣ, ಸಾವು. नि + डु धाञ् (धारणपोषणयोः) "क्युः" (उ० २-८२)। "लोक एष परलोकमुपेता हा विहाय निधने धनमेकः" नैष० ५-९१। 2. ನಾಶ, ಅಳಿವು. "कल्पान्तेष्वपि न प्रयाति निधनं विद्याख्यमन्तर्धनम्" भर्तृ० १-१२। 3. (ಜಾತಕದಲ್ಲಿ) ಜನ್ಮಲಗ್ನದಿಂದ ಎಂಟನೆಯ ಸ್ಥಾನ. "अष्टमं निधनं रन्ध्रं मृतिनशिश्च नैधनम्" मुहू० दी०। 4. ಜನ್ಮನಕ್ಷತ್ರದಿಂದ 7, 16 ಮತ್ತು 25ನೆಯ ನಕ್ಷತ್ರಗಳು ನಿಧನತಾರೆಗಳು. (वि०)5. ದರಿದ್ರ, ಬಡವ. निवृत्तं धनं यस्मात्। (न०) 6. ವಂಶ, ಕುಲ. "निधनं स्यात् कुले नाशे" मेदि०।

**निधनता ನಿಧನತಾ** (स्त्री०) ದಾರಿದ್ರ್ಯ, ಬಡತನ. निधनस्य भावः "तल्" (५-१-११९)। "निर्बुद्धिः क्षयमेत्यहो निधनता सर्वापदामास्पदम्" मृच्छ० १-१४।

**निधा ನಿಧಾ** (स्त्री०) 1. ಇಡುವುದು, ಇರಿಸುವುದು. 2. ಅರ್ಪಣ, ಒಪ್ಪಿಸುವುದು. नि + डु धाञ् (धारणपोषणयोः) "अङ्" (३-३-१०६)।

**निधातव्य ನಿಧಾತವ್ಯ** (वि०) 1. ಅರ್ಪಿಸಲ್ಪಡುವ, ಕೊಡಲ್ಪಡುವ. 2. ಅರ್ಪಿಸಬೇಕಾದ. 3. ಇಡಲ್ಪಡುವ. 4. ಇಡಬೇಕಾದ. नि + डु धाञ् (धारणपोषणयोः) "तव्यः" (३-१-९६)। "आसनानि च दिव्यानि यानानि शयनानि च। निधातव्यानि पाण्डूनां यथा तुष्येच्च मे पिता" भा० आदि० १५६-१६। "अनीयर्" (३-१-९६)। **—धानीयः** — ಧಾನೀಯಃ.

**निधान ನಿಧಾನ** (न०) 1. ಇಡುವುದು, ಇರಿಸುವುದು. नि+डु धाञ् (धारणपोषणयोः) "ल्युट्" (३-३-११५)। 2. ಆಧಾರ, ಆಶ್ರಯ. निधियतेऽत्र — अधि० "ल्युट्" (३-३-११७)। 3. ಮೂಲಕಾರಣ. "एतन्नानावताराणां निधानं बीजमव्ययम्" भाग० १-३-६। 4. ನಿಧಿ,

ಐಶ್ವರ್ಯ. "सन्तोष एव पुरुषस्य परं निधानम्" पञ्चतं० २-१५९। 5. ಭೂಮಿಯಲ್ಲಿ ಹೂತಿಟ್ಟ ಧನ, ಯಾರದೆಂದು ತಿಳಿಯದ ಭೂಮಿಯೊಳಗಿರುವ ಧನ. "निधानगर्भामिव सागराम्बरां शमीमिवाभ्यन्तरलीनपावकाम्" रघु० ३-९।

**निधारिन् ನಿಧಾರಿನ್** (वि०) ಧಾರಾಕಾರವಾಗಿ ಸುರಿಯುತ್ತಿರುವ. नितरां धारां धारारूपं करोति — तत्करोति० "णिच्"। "णिनिः" (३-१-१३४)। "प्रीत्या सुधासारनिधारिणेव ततोऽनुजग्राह विलोकनेन" कुमा० १२-२८।

**निधि ನಿಧಿ** (पुं०) 1. (क) ಐಶ್ವರ್ಯ, ಸಂಪತ್ತು, ಬೊಕ್ಕಸ. नितरां दधाति पोषयत्यनेन — नि + डु धाञ् (धारणपोषणयोः) "किः" (३-३-९२)। (ख) ಪುದಿವಟ್ಟು, ಅವಶ್ಯವಾದಾಗ ಉಪಯೋಗಿಸಿಕೊಳ್ಳಲು ಅನುಕೂಲವಾದ ಧನ. 2. ಒಂದು ವಸ್ತುವಿನ ಆಧಾರ, ಆಶ್ರಯ. "सदोपयोगेऽपि गुरुस्त्वमक्षयो निधिः श्रुतीनां धनसम्पदामिव" माघ० १-२८। 3. ವಿಷ್ಣು, ಪರಮಾತ್ಮ. आपद्धनवन्निधीयते इति निधिः। "यः सदापद्धनमिव निधेयत्वान्निधिः स्मृतः" इति निरुक्तिः। "सर्वः शर्वः शिवः स्थाणुः भूतादिर्निधिरव्ययः" वि० स०। 4. ಯಾರಿಗೂ ತಿಳಿಯದೆ ಭೂಮಿಯೊಳಗೆ ಹೂತಿಟ್ಟಿರುವ ಧನ. ಇಂತಹ ಧನವು ರಾಜನಿಗೆ ಲಬ್ಧವಾದರೆ ಅದರ ಅರ್ಧಭಾಗವನ್ನು ಬ್ರಾಹ್ಮಣರಿಗೆ ದಾನಮಾಡಿ ಉಳಿದುದನ್ನು ತನ್ನ ಬೊಕ್ಕಸಕ್ಕೆ ಸೇರಿಸಿಕೊಳ್ಳಬೇಕು. "राजा लब्ध्वा निधिं दद्यात् द्विजेभ्योऽर्धं द्विजः पुनः। विद्वानशेषमादद्यात् सर्वस्यासौ प्रभुर्यतः। इतरेण निधौ लब्धे राजा षष्ठांशमाहरेत्। अनिवेदितविज्ञातो दाप्यस्तं दण्डमेव च" याज्ञ० २-३४, ३५। ಭೂಮಿಯನ್ನು ಅಗೆದು ರಹಸ್ಯವಾಗಿ ಇಡಲ್ಪಟ್ಟ ಧನವು ನೂರಾರು ವರ್ಷ ಕಾಲ ಯಾರಿಗೂ ಗೋಚರಿಸದಿರಬಹುದು. ಇಷ್ಟು ಕಾಲ ಕಳೆದು ದೊರೆತ ಹಣಕ್ಕೆ ರಾಜನು ಅಧಿಕಾರಿಯಾಗುವನು. "निध्यधिगमो राजधनम्" गौतमध० १०-४२। 5. ಕುಬೇರನ ಒಂಬತ್ತು ವಿಧ ರತ್ನಗಳು. (1) महापद्मः, (2) पद्मः, (3) शङ्खः, (4) मकरः, (5) कच्छपः, (6) मुकुन्दः, (7) कुन्दः, (8) नीलः ಮತ್ತು (9) खर्वः ಇವು ಕುಬೇರನ ನವನಿಧಿಗಳು. "निधिगणमुखवान्तनिष्कराशिः प्रचितगुणा मणिभिः स्यमन्तकाद्यैः" याद० २४-५। 6. ಸಮುದ್ರ, ಕಡಲು. 7. ನಳಿಕೆಯೆಂಬ ಒಂದು ಸುಗಂಧದ್ರವ್ಯ. 8. ವೇದ. 9. ಪೌರವ ವಂಶದ ಒಬ್ಬ ದೊರೆ. "बुभुजे पृथिवीमेनां दण्डपाणिर्महाबलः। राजासने ततः सोऽपि स्थापयित्वा निधिं सुतम्"।

**निधिगोप ನಿಧಿಗೋಪ** (पुं०) 1. ಅನೂಚಾನ, ಗುರುವಿನಲ್ಲಿ ಸಾಂಗವೇದಾಧ್ಯಯನ ಮಾಡಿದವನು. निधिः ऋषीणां ऋणभूतो वेदः, तं गोपायति — गुपू (रक्षणे) "अण्" (३-२-१)। 2. ಧನವನ್ನು ರಕ್ಷಿಸುವವನು, ಬೊಕ್ಕಸವನ್ನು ಕಾಪಾಡುವವನು. निधिं धनं गोपायति।

**निधित्सत् ನಿಧಿತ್ಸತ್** (वि०) ಇಡಲು ಅಪೇಕ್ಷಿಸುತ್ತಿರುವ, ಇರಿಸಲು ಇಚ್ಛಿಸುತ್ತಿರುವ. नि + डु धाञ् (धारणपोषणयोः)+सन् "शतृ" (३-२-१२४)। "विवृतोरुबाहुपरिघेण सरभसपदं निधित्सता" माघ० १५-५७।

**निधित्सा ನಿಧಿತ್ಸಾ** (स्त्री०) ಇಡಲು ಅಪೇಕ್ಷೆ, ಇರಿಸಲು ಇಚ್ಛೆ. नि + डु धाञ् (धारणपोषणयोः) + सन् "अः" (३-३-१०२)।

**निधित्सु ನಿಧಿತ್ಸು** (वि०) ಇಡಲು ಅಪೇಕ್ಷಿಸುವ, ಇರಿಸಲು ಇಷ್ಟಪಡುತ್ತಿರುವ. नि+डु धाञ् (धारणपोषणयोः)+ सन् "उः" (३-२-१६८)।

**निधिनाथ ನಿಧಿನಾಥ** (पुं०) ಕುಬೇರ, ಧನಾಧಿಪತಿ. निधीनां नाथः। निधिपतिः निधीशः ಇತ್ಯಾದಿ.

**निधुवन ನಿಧುವನ** (न०) 1. ಸುರತಕ್ರೀಡೆ, ಸ್ತ್ರೀಸಂಗ, ಸಂಭೋಗ. नितरां धुवनं हस्तपादादिचालनमत्र। "चक्रतुर्निधुवनेऽधरामृतैस्तत्र साधु मधुपानविभ्रमम्" नैष० १८-१०३। 2. ಕಂಪನ, ನಡುಕ. "भवेन्निधुवनं कम्पे सुरते च नपुंसकम्" मेदि०। 3. ಕ್ರೀಡೆ, ಆಟ.

**निधेय ನಿಧೇಯ** (वि०) 1. ಇಡಲ್ಪಡುವ, ಇರಿಸಲ್ಪಡುವ. 2. ಇಡಲು ಯೋಗ್ಯವಾದ. 3. ಇಡಬೇಕಾದ. नि+डु धाञ् (धारणपोषणयोः) "यत्" (३-१-९७)।

**निध्यात ನಿಧ್ಯಾತ** (वि०) ಚೆನ್ನಾಗಿ ಧ್ಯಾನಮಾಡಲ್ಪಟ್ಟ, ಏಕಾಗ್ರತೆಯಿಂದ ಧ್ಯಾನಮಾಡಲ್ಪಟ್ಟ. नितरां ध्यातः।

**निध्यातवत् ನಿಧ್ಯಾತವತ್** (वि०) 1. ಚೆನ್ನಾಗಿ ಧ್ಯಾನ ಮಾಡಿದವನು. 2. ಚೆನ್ನಾಗಿ ನೋಡಿದವನು, ಜ್ಞಾನದೃಷ್ಟಿಯಿಂದ ನೋಡಿದವನು. नि + ध्यै (चिन्तायाम्) "क्तवतुः" (३-२-१०२)। स्त्रियां "ङीप्" (४-१-६)। -वती -ವತೀ.

**निध्यातव्य ನಿಧ್ಯಾತವ್ಯ** (वि०) 1. ಚೆನ್ನಾಗಿ ನೋಡಲ್ಪಡುವ, ಜ್ಞಾನದೃಷ್ಟಿಯಿಂದ ಅವಲೋಕಿಸಲ್ಪಡುವ. नि + ध्यै (चिन्तायाम्) "तव्यः" (३-१-९६)। 2. ಚೆನ್ನಾಗಿ

ಧ್ಯಾನಮಾಡಲ್ಪಡುವ. "अनीयर्" (३-१-९६)। -ध्यानीयः -ಧ್ಯಾನೀಯಃ.

**निध्यान ನಿಧ್ಯಾನ** (ನಂ) ದರ್ಶನ, ನೋಡುವುದು. नि+ध्यै (चिन्तायाम्) "ल्युट्" (३-३-११५)। "निर्वर्णनं तु निध्यानं दर्शनालोकनेक्षणम्" अम०।

**निध्यायत् ನಿಧ್ಯಾಯತ್** (ವಿಂ) 1. ಜ್ಞಾನ ದೃಷ್ಟಿಯಿಂದ ವೀಕ್ಷಿಸುತ್ತಿರುವ, ಚೆನ್ನಾಗಿ ನೋಡುತ್ತಿರುವ. नि+ध्यै (चिन्तायाम्) "शतृ" (३-२-१२४)। "निध्यायन्तस्त्वरितमतरन् दुस्तरां तस्य मायाम्" याद० २४-९६। 2. ಚೆನ್ನಾಗಿ ಧ್ಯಾನಮಾಡುತ್ತಿರುವ. स्त्रियां "ङीप्" (४-१-६)। -यन्ती -ಯಂತೀ.

**निध्वनत् ನಿಧ್ವನತ್** (ವಿಂ) 1. ಶಬ್ದಮಾಡುತ್ತಿರುವ, ಧ್ವನಿಮಾಡುತ್ತಿರುವ. नि + ध्वन (शब्दे) "शतृ" (३-२-१२४)। 2. ಗರ್ಜನೆಮಾಡುತ್ತಿರುವ. "निध्वनज्जवहारीभा भेजे रागरसात्तमः" माघ० १९-३४।

**निध्वान ನಿಧ್ವಾನ** (ಪುಂ) 1. ಶಬ್ದ, ಸದ್ದು. नि + ध्वन (शब्दे) "घञ्" (३-३-१८)। "मन्दानिलापूरकृतं दधानो निध्वानमश्रूयत पाञ्चजन्यः" माघ० ३-२१। 2. ಗರ್ಜನೆ, ಆನೆಯ ಕೂಗಾಟ.

**निनङ्क्षा ನಿನಂಕ್ಷಾ** (ಸ್ತ್ರೀಂ) ನಾಶಹೊಂದಲು ಅಪೇಕ್ಷೆ. णश (अदर्शने) + सन् "अः" (३-३-१०२)।

**निनङ्क्षु ನಿನಂಕ್ಷು** (ವಿಂ) ನಾಶಹೊಂದಲು ಇಚ್ಛೆಯುಳ್ಳ. नम्ष्टुमिच्छुः—णश (अदर्शने) +सन् "उः" (३-२-१६८)। "अपिस्फवच्च बन्धूनां निनङ्क्षुर्विक्रमं मुहुः" भट्टि० ४-३३।

**निनद ನಿನದ** (ಪುಂ) 1. ಶಬ್ದ, ಸದ್ದು. नि+णद (अव्यक्ते शब्दे) "अप्" (३-३-६४)। "कुम्भपूरणभवः पटुरुच्चैरुच्चचार निनदोऽम्भसि तस्याः" रघु० ९-७३। 2. ಭ್ರಮರದ ಧ್ವನಿ. 3. ರಥದ ಶಬ್ದ.

**निनर्तिषा ನಿನರ್ತಿಷಾ** (ಸ್ತ್ರೀಂ) ನರ್ತನಮಾಡಲು ಇಚ್ಛೆ, ಕುಣಿಯಲು ಅಪೇಕ್ಷೆ. नर्तितुमिच्छा — नृती (गात्रविक्षेपे) + सन् "अः" (३-३-१०२)।

**निनर्तिषु ನಿನರ್ತಿಷು** (ವಿಂ) ನರ್ತನಮಾಡಲು ಇಚ್ಛಿಸುವ, ಕುಣಿಯಲು ಅಪೇಕ್ಷಿಸುವ. नर्तितुमिच्छुः — नृती (गात्रविक्षेपे) + सन् "उः" (३-२-१६८)।

**निनाद ನಿನಾದ** (ಪುಂ) 1. ಶಬ್ದ, ಸದ್ದು. नि+णद (अव्यक्ते शब्दे) "घञ्" (३-३-१८)। "युगान्तवाताभिहतेव कुर्वती निनादमम्भोनिधिवीचिसंहतिः" किरा० १४-२७। 2. ಭ್ರಮರದ ಧ್ವನಿ, ದುಂಬಿಯ ಝೇಂಕಾರ.

**निनादित ನಿನಾದಿತ** (ವಿಂ) 1. ಶಬ್ದದಿಂದ ತುಂಬಿದ, ಸದ್ದಿನಿಂದ ಕೂಡಿದ. निनादोऽस्य सञ्जातः "इतच्" (५-२-३६)। 2. ಶಬ್ದಮಾಡಿಸಲ್ಪಟ್ಟ. नि+णद+णिच् "क्तः" (३-२-१०२)।

**निनादिन् ನಿನಾದಿನ್** (ವಿಂ) ಶಬ್ದಮಾಡುತ್ತಿರುವ, ಸದ್ದು ಮಾಡುತ್ತಿರುವ. नि + णद (अव्यक्ते शब्दे) "णिनिः" (३-१-१३४)।

**निनिन्दिषा ನಿನಿಂದಿಷಾ** (ಸ್ತ್ರೀಂ) ದೂಷಿಸಲು ಇಚ್ಛೆ, ತೆಗಳಲು ಅಪೇಕ್ಷೆ. निन्दितुमिच्छा—णिदि (कुत्सायाम्) +सन् "अः" (३-३-१०२)।

**निनिन्दिषु ನಿನಿಂದಿಷು** (ವಿಂ) ದೂಷಿಸಲು ಅಪೇಕ್ಷಿಸುವ, ತೆಗಳಲು ಇಚ್ಛಿಸುವ. निन्दितुमिच्छुः—णिदि (कुत्सायाम्) +सन् "उः" (३-२-१६८)।

**निनीषत् ನಿನೀಷತ್** (ವಿಂ) ಒಯ್ಯಲು ಅಪೇಕ್ಷಿಸುತ್ತಿರುವ. णीञ् (प्रापणे) + सन् "शतृ" (३-२-१२४)।

**निनीषा ನಿನೀಷಾ** (ಸ್ತ್ರೀಂ) ಒಯ್ಯಲು ಅಪೇಕ್ಷೆ, ಸಾಗಿಸಲು ಇಚ್ಛೆ. णीञ् (प्रापणे) + सन् "अः" (३-३-१०२)।

**निनीषु ನಿನೀಷು** (ವಿಂ) ಒಯ್ಯಲು ಅಪೇಕ್ಷಿಸುವವನು, ಸಾಗಿಸಲು ಇಚ್ಛಿಸುವವನು. णीञ् (प्रापणे)+सन् "उः" (३-२-१६८)। "मुनिमभिमुखतां निनीषवो याः समुपययुः कमनीयतागुणेन" किरा० १०-४०।

**निन्दक ನಿಂದಕ** (ವಿಂ) ದೂಷಿಸುವವನು, ನಿಂದಿಸುವವನು. निन्दति — णिदि (कुत्सायाम्) "वुञ्" (३-२-१४६)। "परीवादात् खरो भवति श्वा वै भवति निन्दकः" मनु० २-२०१।

**निन्दत् ನಿಂದತ್** (ವಿಂ) ದೂಷಿಸುತ್ತಿರುವ, ತೆಗಳುತ್ತಿರುವ. णिदि (कुत्सायाम्) "शतृ" (३-२-१२४)। "निनिन्द तेषु निन्दत्सु स्तुवत्सु स्तुतवान्न किम्" नैष० १७-६५। स्त्रियां "ङीप्" (४-१-६)। -न्ती -ನ್ತೀ. "सा निन्दन्ती स्वानि भाग्यानि बाला बाहूत्क्षेपं क्रन्दितुं च प्रवृत्ता" शाकु० ५-३०।

**निन्दन ನಿಂದನ** (ನಂ) ದೂಷಣೆ, ತೆಗಳುವುದು. णिदि (कुत्सायाम्) "ल्युट्" (३-३-११५)।

**निन्दनीय ನಿಂದನೀಯ** (ವಿಂ) 1. ದೂಷಿಸಲ್ಪಡುವ, ತೆಗಳಲ್ಪಡುವ. 2. ದೂಷಣೆಗೆ ಅರ್ಹನಾದ. णिदि (कुत्सायाम्) "अनीयर्" (३-१-९६)। "तव्यः" (३-१-९६)। निन्दितव्यः ನಿಂದಿತವ್ಯಃ.

**निन्दा ನಿಂದಾ** (स्त्री०) 1. ದೂಷಣೆ, ತೆಗಳುವುದು. 2. ಆಕ್ಷೇಪಿಸುವುದು. णिदि (कुत्सायाम्) "अः" (३-३-१०३)। "गुरोर्यत्र परीवादो निन्दा वापि प्रवर्तते। कर्णौ तत्र पिधातव्यौ गन्तव्यं वा ततोऽन्यतः" मनु० २-२००। 3. ತಿರಸ್ಕಾರ, ಧಿಕ್ಕಾರ. भावे "ल्युट्" (३-३-११५)। निन्दनम् ನಿಂದನಮ್.

**निन्दास्तुति ನಿಂದಾಸ್ತುತಿ** (स्त्री०) ನಿಂದೆಯ ವ್ಯಾಜದಿಂದ ಮಾಡುವ ಸ್ತುತಿ, ದೂಷಣೆಯ ನೆಪದಿಂದ ಹೊಗಳುವುದು. निन्दाव्याजेन स्तुतिः। ಇದು "ವ್ಯಾಜಸ್ತುತಿ" ಎಂಬ ಅಲಂಕಾರವಾಗುವುದು. "उक्तिर्व्याजस्तुतिर्निन्दास्तुतिभ्यां स्तुतिनिन्दयोः"। उदा० "कः स्वर्धुनि विवेकस्ते नयसे पापिनो दिवम्" चन्द्रा०। ಗಂಗೆಯು ಪಾಪಾತ್ಮರನ್ನೂ ಸ್ವರ್ಗಕ್ಕೆ ಏರಿಸುವುದು ಎಂತಹ ವಿವೇಕ ಎಂಬ ನಿಂದಾವರ್ಣನದಿಂದ ಅಂತಹವರಿಗೂ ಸ್ವರ್ಗವನ್ನು ತೋರಿಸುವ ಗಂಗೆಯ ಪ್ರಭಾವವು ಅಸದೃಶವಾದುದೆಂಬ ಸ್ತುತಿಯು ತೋರುವುದು.

**निन्दित ನಿಂದಿತ** (वि०) 1. ದೂಷಿಸಲ್ಪಟ್ಟ, ತೆಗಳಲ್ಪಟ್ಟ. णिदि (कुत्सायाम्) "क्तः" (३-२-१०२)। "अथ मुहुर्बहुनिन्दितचन्द्रया स्तुतविधुन्तुदया च तया मुहुः" नैष० ४-४३। 2. ಆಕ್ಷೇಪಿಸಲ್ಪಟ್ಟ. 3. ಧಿಕ್ಕರಿಸಲ್ಪಟ್ಟ, ತಿರಸ್ಕರಿಸಲ್ಪಟ್ಟ. "विहितस्याननुष्ठानान्निन्दितस्य च सेवनात्। अनिग्रहाच्चेन्द्रियाणां नरः पतनमृच्छति" याज्ञ० ३-२१९।

**निन्दिन् ನಿಂದಿನ್** (वि०) ದೂಷಿಸುವ ಸ್ವಭಾವದ, ತೆಗಳುವ ಬುದ್ಧಿಯುಳ್ಳ. णिदि (कुत्सायाम्) "णिनिः" (३-२-७८)। "देवानां नन्दनो देवो नोदनो वेदनिन्दिनः" काव्या० ३-९३।

**निपठ ನಿಪಠ** (पुं०) ಅಧ್ಯಯನ, ಕಂಠಪಾಠ. नि + पठ वा "अप्" (३-३-६४)। पक्षे "घञ्" (३-३-१८)। निपाठः ನಿಪಾಠಃ.

**निपठित ನಿಪಠಿತ** (न०) 1. ಅಧ್ಯಯನ, ಕಂಠಪಾಠ ಮಾಡುವುದು, ಓದುವುದು. नि + पठ (व्यक्तायां वाचि) भावे "क्तः" (३-३-११४)। (वि०) 2. ಕಂಠಪಾಠ ಮಾಡಲ್ಪಟ್ಟ, ಅಧ್ಯಯನ ಮಾಡಲ್ಪಟ್ಟ. नि+पठ कर्मं० "क्तः" (३-२-१०२)।

**निपठितिन् ನಿಪಠಿತಿನ್** (वि०) ಅಧ್ಯಯನ ಮಾಡಿದವನು, ಕಂಠಪಾಠ ಮಾಡಿದವನು. निपठितमनेन "इनिः" (५-२-८८)।

**निपतत् ನಿಪತತ್** (वि०) 1. ಬೀಳುತ್ತಿರುವ. 2. ಮೇಲಿನಿಂದ ಇಳಿಯುತ್ತಿರುವ. नि + पत्लृ (गतौ) "शतृ" (३-२-१२४)। "निपततापि न मन्दरभूभृता त्वमुदधौ शशलाञ्छन चूर्णितः" नैष० ४-५१। स्त्रियां "ङीप्" (४-१-६)। –पतन्ती – ಪತನ್ತೀ.

**निपतन ನಿಪತನ** (न०) 1. ಮೇಲಿನಿಂದ ಕೆಳಕ್ಕೆ ಬೀಳುವುದು. नि + पत्लृ (गतौ) "ल्युट्" (३-३-११५)। 2. ಮೇಲಿನಿಂದ ಇಳಿಯುವುದು. 3. ಗರ್ಭಿಣಿಯ ಗರ್ಭಪಾತ. "दृष्टे क्षुतेऽप्यशकुने गोधामत्स्यामिषं वदेद्भुक्तम्। गर्भिण्या गर्भस्य च निपतनमेवं प्रकल्पयेत्प्रश्ने" बृहत्सं० ५१-३५।

**निपतित ನಿಪತಿತ** (वि०) 1. ಕೆಳಕ್ಕೆ ಇಳಿದ, ಮೇಲಿನಿಂದ ಕೆಳಕ್ಕೆ ಪ್ರವಹಿಸಿದ. नि + पत्लृ (गतौ) "क्तः" (३-४-७२)। "सष्वानं निपतितनिर्झरासु मन्द्रैः संमूर्च्छत्प्रतिनिनदैरधित्यकासु" किरा० ७-२२। 2. ಮೇಲಿನಿಂದ ಕೆಳಕ್ಕೆ ಬಿದ್ದ. "निपतितं वदने कथमन्यथा बलिकरम्भनिभं निजमुज्झति" नैष० ४-६४। 3. ಕೆಳಕ್ಕೆ ಉದುರಿದ, ಕೆಳಕ್ಕೆ ಬಿದ್ದ. "यदृच्छया निरन्तरनिपतितानि विकसितानि कुसुमान्यादाय" मालती० १।

**निपाक ನಿಪಾಕ** (पुं०) 1. ಪಕ್ವವಾಗುವುದು, ಮಾಗುವುದು, ಹಣ್ಣಾಗುವುದು. नि + डु पचष् (पाके) "घञ्" (३-३-१८)। 2. ಸ್ವೇದ, ಬೆವರು. 3. ದುಷ್ಕರ್ಮದ ಫಲ, ಪಾಪಕಾರ್ಯದ ಫಲ. "निपाकः पचने स्वेदासत्कर्मफलयोरपि" हेम०।

**निपाठ ನಿಪಾಠ** (पुं०) ಓದುವುದು, ಅಧ್ಯಯನ, ಕಂಠಪಾಠ. नि + पठ (व्यक्तायां वाचि) "घञ्" (३-३-१८)।

**निपात ನಿಪಾತ** (पुं०) 1. ಕೆಳಕ್ಕೆ ಬೀಳುವುದು, ಮೇಲಿನಿಂದ ಕೆಳಕ್ಕೆ ಧುಮುಕುವುದು. नि + पत्लृ (गतौ) "घञ्" (३-३-१८)। "विरलमपजहार बद्धबिन्दुः सरजसतामवनेरपां निपातः" किरा० १०-२०। "स्थिताः क्षणं पक्ष्मसु ताडिताधराः पयोधरोत्सेधनिपातचूर्णिताः" कुमा० ५-२४। 2. ನಾಶ, ಮರಣ. "निपातो भूमिलाभश्च मृत्युरपि" त्रिकाण्ड०। 3. ಬಾಣ ಮೊದಲಾದುವುಗಳ ಪ್ರಯೋಗ, ಎಸೆಯುವುದು, ಬೀರುವುದು. "स च त्वदेकेषुनिपातसाध्यो ब्रह्माङ्गभूर्ब्रह्मणि योजितात्मा" कुमा० ३-१५। 4. (ವ್ಯಾಕರಣ ಶಾಸ್ತ್ರದಲ್ಲಿ) ವರ್ಣಾಗಮ ವರ್ಣವ್ಯತ್ಯಾಸ ವರ್ಣವಿಕಾರ ಮತ್ತು ವರ್ಣಲೋಪಗಳಿಂದ ನಿಷ್ಪನ್ನವಾದ ಮತ್ತು ಯಾವ ಸೂತ್ರದಿಂದಲೂ ಅನಿಷ್ಪನ್ನ

ವಾದ ಶಬ್ದ, ಯಾಸ್ಕರು ವಿಂಗಡಿಸಿರುವ ನಾಲ್ಕು ವಿಧ ಪದಗಳ ಸಮೂಹಗಳಲ್ಲಿ ಒಂದು. "तद्यान्येतानि चत्वारि पदजातानि नामाख्याते चोपसर्गनिपाताश्च तानीमानि भवन्ति" निरु० १-१-८। निपतन्ति स्वावयववर्णविनाशादिना अन्यथा निष्पद्यन्ते—नि+पत्लृ "णः" (३-१-१४०)। "भवेद्वर्णागमाद्धंसः सिंहो वर्णविपर्ययात्। गूढोत्मा वर्णविकृतेर्वर्णलोपे पृषोदरम्"। "हन्" ಧಾತುವಿಗೆ सक् ಆಗಮ ಬಂದು हंसः ಎಂದೂ "हिंसि" ಧಾತುವಿಗೆ अच् ಪ್ರತ್ಯಯ ಬಂದು ವರ್ಣ ವಿಪರ್ಯಯದಿಂದ सिंहः ಎಂದೂ गूढः आत्मा ಎಂಬಲ್ಲಿ ವರ್ಣವಿಕಾರ ಹೊಂದುವುದರಿಂದ गूढोत्मा ಎಂದೂ पृषत् उदरम् ಎಂಬಲ್ಲಿ त ಲೋಪ ಬಂದು पृषोदरम् ಎಂದೂ ರೂಪಗಳಾಗುವುವು. ಇಂತಹ ಪದಗಳು ಯಾವ ಅನುಶಾಸನದಿಂದಲೂ ನಿಷ್ಪನ್ನವಾಗದಿರುವುದರಿಂದ ನಿಪಾತಗಳು. 5. ಅನೇಕಾರ್ಥಗಳನ್ನು ಕೊಡುವ "च" ಮೊದಲಾದ ಶಬ್ದ, च वा ह अह एव एवम् नूनम् शश्वत् भूयस् कूपत् कुवित् कच्चित् यत्र ಇತ್ಯಾದಿ ಅವ್ಯಯಗಳು. निपतन्ति उच्चावचेष्वर्थेषु — नि + पत्लृ "णः" (३-१-१४०)। "निपाताः उच्चावचेष्वर्थेषु निपतन्तीति उपमार्थे वा कर्मोपसंग्रहार्थे पादपूरणार्थे वा" निरु०। "प्राग्रीश्वरान्निपाताः" (१-४-५६)। "चादयोऽसत्त्वे" (१-४-५७)। "प्रादयः" (१-४-५८)। ಮೊದಲಾದ ಸೂತ್ರಗಳಲ್ಲಿ ಉಕ್ತವಾದ ಶಬ್ದಗಳು ನಿಪಾತ ಸಂಜ್ಞೆಯುಳ್ಳವು. ಉಪಸರ್ಗಗಳಿಗೆ ಅರ್ಥದ್ಯೋತಕತ್ವವನ್ನೂ ಉಪಸರ್ಗವ್ಯತಿರಿಕ್ತವಾದ ನಿಪಾತಗಳಿಗೆ ದ್ಯೋತಕತ್ವ ಮತ್ತು ವಾಚಕತ್ವ ಎರಡನ್ನೂ ಅಂಗೀಕರಿಸಿರುವರು.

**निपातन ನಿಪಾತನ** (न०) 1. ಎಸೆಯುವುದು, ಎತ್ತಿಹಾಕುವುದು, ಮೇಲಿನಿಂದ ಹೊಡೆಯುವುದು. नि + पत्लृ (गतौ) + णिच् "ल्युट्" (३-३-११५)। "अवगूर्य चरेत्कृच्छ्रमतिकृच्छ्रं निपातने। कृच्छ्रातिकृच्छ्रौ कुर्वीत विप्रस्योत्पाद्य शोणितम्" मनु० ११-२०८। 2. ಕೆಳಕ್ಕೆ ಇಳಿಸುವುದು, ಕೆಳಕ್ಕೆ ತಳ್ಳುವುದು. 3. ಕೆಳಕ್ಕೆ ನೂಕುವುದು. 4. ಸಂಹರಿಸುವುದು, ಕೊಲ್ಲುವುದು. "परिचयं चललक्ष्यनिपातने भयरुषोश्च तदिङ्गितबोधनम्" रघु० ९-४९। 5. ವ್ಯಾಕರಣಲಕ್ಷಣಗಳಿಂದ ನಿಷ್ಪನ್ನವಾಗದ ಶಬ್ದಗಳ ಸಾಧನೆಯ ಒಂದು ಉಪಾಯ. निपात्यतेऽनेन— नि+पत्लृ कर० "ल्युट्" (३-३-११७)। "यल्लक्षणेनानुत्पन्नं तत्सर्वं निपातनात्सिद्धम्" महाभा०।

**निपातनीय ನಿಪಾತನೀಯ** (वि०) 1. ಕೆಳಕ್ಕೆ ತಳ್ಳಲ್ಪಡುವ. 2. ಕೆಳಕ್ಕೆ ಎಸೆಯಲ್ಪಡುವ. 3. ಕೊಲ್ಲಲ್ಪಡುವ, ಸಂಹರಿಸಲ್ಪಡುವ. 4. ಕೊಲ್ಲಲು ಅರ್ಹನಾದ. नि+पत्लृ (गतौ)+णिच् "अनीयर्" (३-१-९६)। "शुभेतराचारविपक्त्रिमापदो निपातनीया हि सतामसाधवः" माघ० १-७३।

**निपातयत् ನಿಪಾತಯತ್** (वि०) 1. ಕೆಳಕ್ಕೆ ತಳ್ಳುತ್ತಿರುವ, ಕೆಳಕ್ಕೆ ಬೀಳಿಸುತ್ತಿರುವ. 2. ಕೆಳಕ್ಕೆ ಎಸೆಯುತ್ತಿರುವ. 3. ಕೊಲ್ಲುತ್ತಿರುವ, ಸಂಹರಿಸುತ್ತಿರುವ. नि + पत्लृ (गतौ) + णिच् "शतृ" (३-२-१२४)। स्त्रियां "ङीप्" (४-१-६)। **—यन्ती —ಯನ್ತೀ.**

**निपातित ನಿಪಾತಿತ** (वि०) 1. ಕೆಳಕ್ಕೆ ತಳ್ಳಲ್ಪಟ್ಟ, ಕೆಳಕ್ಕೆ ಕೆಡವಲ್ಪಟ್ಟ. नि + पत्लृ (गतौ) + णिच् "क्तः" (३-२-१०२)। "निपातितसुहृत्स्वामिपितृव्यभ्रातृमातुलम्" माघ० १९-७५। "ताण्डवं ग्राहयामास निपातितशिरोधरान्" याद० २२-१०६। 2. ಕೆಳಕ್ಕೆ ಎಸೆಯಲ್ಪಟ್ಟ. 3. ಕೊಲ್ಲಲ್ಪಟ್ಟ, ಸಂಹರಿಸಲ್ಪಟ್ಟ. 4. ವ್ಯಾಕರಣ ಲಕ್ಷಣಗಳಿಂದ ನಿಷ್ಪನ್ನವಾಗದೆ ಉಪಾಯಾಂತರದಿಂದ ಸಾಧಿಸಲ್ಪಟ್ಟ ಶಬ್ದ. 5. ಇಡಲ್ಪಟ್ಟ. "नयनसलिलच्छन्ना दृष्टिः सखीषु निपातिता" अमरु० २०।

**निपातितवत् ನಿಪಾತಿತವತ್** (वि०) 1. ಕೆಳಕ್ಕೆ ತಳ್ಳಿದವನು, ಕೆಳಕ್ಕೆ ಕೆಡವಿದವನು. नि+पत्लृ (गतौ)+णिच् "क्तवतुः" (३-२-१०२)। 2. ಕೆಳಕ್ಕೆ ಎಸೆದವನು. 3. ಸಂಹರಿಸಿದವನು. स्त्रियां "ङीप्" (४-१-६)। **—वती —ವತೀ.**

**निपातिन् ನಿಪಾತಿನ್** (वि०) 1. ಬೀಳುತ್ತಿರುವ, ಕೆಳಕ್ಕೆ ಬಂದು ಸೇರುತ್ತಿರುವ. नि + पत्लृ (गतौ) "णिनिः" (३-१-१३४)। "अलिभिरञ्जनबिन्दुमनोहरैः कुसुमपङ्क्तिनिपातिभिरङ्कितः" रघु० ९-४१। 2. ನಾಶಪಡಿಸುವ. नि + पत्लृ + णिच् "णिनिः" (३-१-१३४)। "ज्योतिरिन्धननिपाति भास्करात्सूर्यकान्त इव ताडकान्तकः" रघु० ११-२१।

**निपात्यमान ನಿಪಾತ್ಯಮಾನ** (वि०) 1. ಕೆಳಕ್ಕೆ ತಳ್ಳಲ್ಪಡುತ್ತಿರುವ. 2. ಕೆಳಕ್ಕೆ ಎಸೆಯಲ್ಪಡುತ್ತಿರುವ. 3. ಕೊಲ್ಲಲ್ಪಡುತ್ತಿರುವ. नि + पत्लृ (गतौ) + णिच् "शानच्" (३-२-१२४)। "पुनरपि तेष्वेव तथैव विषमविषयाङ्गारेषु निपात्यमानमात्मानं नावबुध्यसे" प्रबोध० ६।

**निपान ನಿಪಾನ** (न०) 1. ಬಾವಿಯ ಪಕ್ಕದಲ್ಲಿ ಪಶುಗಳು ನೀರು ಕುಡಿಯಲು ಏರ್ಪಡಿಸಿರುವ ನೀರಿನ ತೊಟ್ಟಿ. नियतं पिबन्त्यस्मिन् — नि + पा (पाने) अधि० "ल्युट्" (३-३-११७)। "आहावश्च निपानञ्च कूपपार्श्वंजला-

श्रय:" वैज०। 2. ಜಲಾಶಯ, ಕೊಳ, ನೀರಿನ ಮಡು. "गाहन्तां महिषा निपानसलिलं शृङ्गैर्मुहुस्ताडितं छायाबद्धकदम्बकं मृगकुलं रोमन्थमभ्यस्यतु" शाकु० २-६। 3. ಬಾವಿ. 4. ಪಾನಮಾಡುವುದು, ಕುಡಿಯುವುದು. 5. ಹಾಲು ಕರೆಯುವ ಪಾತ್ರೆ, ಹಿಡಿಯಿರುವ ಮರದ ಅಥವಾ ಲೋಹದ ಪಾತ್ರೆ. "पारी तु दोहनी। निपानं स्त्री गवी तुम्बा निलिम्पा रोहिणी च सा" त्रिकाण्ड०।

**निपीडन ನಿಪೀಡನ** (न०) 1. ಪೀಡಿಸುವುದು, ಹಿಂಸಿಸುವುದು. नि + पीड (अवगाहने) + णिच् भावे "ल्युट्" (३-३-११५)। "निपीडनं यन्निबिडं विषह्यते मयाऽल्पसत्त्वेन तवैव तद्बलम्" याद० १४-४०। 2. ಹಿಂಡುವುದು, ಹಿಸುಕುವುದು, ಕಿವಿಚುವುದು. "घनपुलकपुलोमजाकुचाग्रद्रुतपरिरम्भनिपीडनक्षमत्वम्" माघ० १-७४। 3. ಅಪ್ಪುವುದು, (ಪರಸ್ಪರ) ತಿಕ್ಕಾಡುವುದು. "निपीडनादिव मिथो दानतोयमनारतम्" माघ० १९-६८। "युच्" (३-३-१०७)। **–पीडना –ಪೀಡನಾ.** "कृत्वा दीननिपीडनां निजजने बद्ध्वा वचोविग्रहं नैवालोच्य गरीयसीरपि चिरादामुष्मिकीर्यतिना:" सा० द० ३।

**निपीडयत् ನಿಪೀಡಯತ್** (वि०) 1. ಹಿಂಸಿಸುತ್ತಿರುವ, ಪೀಡಿಸುತ್ತಿರುವ. नि+पीड (अवगाहने)+णिच् "शतृ" (३-२-१२४)। 2. ಹಿಂಡುತ್ತಿರುವ, ಹಿಸುಕುತ್ತಿರುವ. 3. ಉಜ್ಜುತ್ತಿರುವ, ತಿಕ್ಕುತ್ತಿರುವ, ಒತ್ತುತ್ತಿರುವ.

**निपीडित ನಿಪೀಡಿತ** (वि०) 1. ಹಿಂಸಿಸಲ್ಪಟ್ಟ, ಪೀಡಿಸಲ್ಪಟ್ಟ. नि + पीड (अवगाहने) + णिच् "क्त:" (३-२-१०२)। "देवदानवगन्धर्वा रक्षांसि पतगोरगा:। तेऽपि भोगाय कल्पन्ते दण्डेनैव निपीडिता:" मनु० ७-२३। 2. ಒತ್ತಲ್ಪಟ್ಟ, ಅದುಮಲ್ಪಟ್ಟ. "प्रविकर्षनिनादभिन्नरन्ध्र: पदविष्टम्भनिपीडितस्तदानीम्" किरा० १३-१६। 3. ಉಜ್ಜಲ್ಪಟ್ಟ, ತಿಕ್ಕಲ್ಪಟ್ಟ. "तं कर्णभूषणनिपीडितपीवरांसं शय्योत्तरच्छदविमर्दकृशाङ्गरागम्" रघु० ५-६५। 4. ನೋಯಿಸಲ್ಪಟ್ಟ, ಕ್ಲೇಶಪಡಿಸಲ್ಪಟ್ಟ, ಶ್ರಮಪಡಿಸಲ್ಪಟ್ಟ. "तपसा निपीडितकृशस्य विरहितसहायसम्पद:" किरा० १२-३९। 5. ಹಿಂಡಲ್ಪಟ್ಟ, ಹಿಸುಕಲ್ಪಟ್ಟ, ಕಿವುಚಲ್ಪಟ್ಟ.

**निपीत ನಿಪೀತ** (वि०) 1. ಚೆನ್ನಾಗಿ ಕುಡಿಯಲ್ಪಟ್ಟ. नि + पा (पाने) "क्त:" (३-२-१०२)। "नियतं हेतयस्तेषां निपीते वह्निवारिणी। निदधु: शत्रुनारीणां चित्तेषु नयनेषु च" याद० २२-८७। 2. ಚೆನ್ನಾಗಿ ಗ್ರಹಿಸಲ್ಪಟ್ಟ, ಮನದಟ್ಟುಮಾಡಲ್ಪಟ್ಟ. "निपीतदूतालपितस्ततो नलं विदर्भभर्तागमयांबभूव स:" नैष० १५-११। 3. ಚೆನ್ನಾಗಿ ಹೀರಲ್ಪಟ್ಟ, ಕಬಳಿಸಲ್ಪಟ್ಟ. "अङ्ग त्वदङ्गानि निपीतपीतदर्पाणि पाणि: खलु याचते न:" नैष० ८-९८।

**निपीतवत् ನಿಪೀತವತ್** (वि०) 1. ಚೆನ್ನಾಗಿ ಕುಡಿದವನು. नि+पा (पाने) "क्तवतु:" (३-२-१०२)। 2. ಚೆನ್ನಾಗಿ ಗ್ರಹಿಸಿಕೊಂಡವನು, ಚೆನ್ನಾಗಿ ಮನದಟ್ಟು ಮಾಡಿಕೊಂಡವನು. 3. ಚೆನ್ನಾಗಿ ದೃಷ್ಟಿಯಿಂದ ಎಳೆದುಕೊಂಡವನು, ಚೆನ್ನಾಗಿ ನೋಡಿದವನು. (लाक्ष०)। स्त्रियां "ङीप्" (४-१-६)। **–वती –ವತೀ.** "यदुल्लसितविभ्रमा बत निपीतवत्य: पुरा नवप्रणयविभ्रमाकुलितमालतीदृष्टय:" मालती० ९-३८।

**निपीति ನಿಪೀತಿ** (स्त्री०) 1. ಕುಡಿಯುವುದು. 2. ಗ್ರಹಣ ಮಾಡುವುದು. 3. ನೋಡುವುದು. (लाक्ष०)।

**निपीयमान ನಿಪೀಯಮಾನ** (वि०) ಕುಡಿಯಲ್ಪಡುತ್ತಿರುವ, ಪಾನಮಾಡಲ್ಪಡುತ್ತಿರುವ. नि + पा (पाने) कर्म० "शानच्" (३-२-१२४)। "निपीयमानस्तबका शिलीमुखैरशोकयष्टिश्चलबालपल्लवा" किरा० ८-६। "चित्राय तत्र तव नेत्रनिपीयमान:" नैष० ११-५९।

**निपुण ನಿಪುಣ** (वि०) 1. ಸಮರ್ಥ, ಪ್ರವೀಣ, ಕುಶಲ, ಚತುರ. निपुणति — नि + पुण (कर्मणि शुभे) "क:" (३-१-१३५)। "इति प्रियं काञ्चिदुपैतुमिच्छतीं पुरोऽनुनिन्ये निपुण: सखीजन:" किरा० ८-८। "श्रीहर्षो निपुण: कवि: परिषदप्येषा गुणग्राहिणी" रत्ना० १-५। 2. ಬುದ್ಧಿಶಾಲಿ, ಜಾಣ, ಸೂಕ್ಷ್ಮಬುದ್ಧಿಯುಳ್ಳ. "निपुणैरतिबालवृद्धवाक्यं न परिग्राह्यमिति ब्रुवन्ति सन्त:" याद० १५-७४। 3. ತಿಳಿದವನು, ಬಲ್ಲವನು, ವಿವೇಕಶಾಲಿ. "असदप्यद: सहितुमर्हसि न: क्व वनेचरा: क्व निपुणा यतय:" किरा० ६-३७। (अव्य०) 4. ಜಾಣತನದಿಂದ, ಬುದ್ಧಿವಂತಿಕೆಯಿಂದ. "निपुणमन्विष्यन् उपलब्धवान्"।

**निपुणता ನಿಪುಣತಾ** (स्त्री०) 1. ಬುದ್ಧಿವಂತಿಕೆ, ಜಾಣತನ. निपुणस्य भाव: "तल्" (५-१-११९)। 2. ಸಾಮರ್ಥ್ಯ, ದಕ್ಷತೆ.

**निपेय ನಿಪೇಯ** (वि०) 1. ಪಾನಮಾಡಲ್ಪಡುವ. नि+पा (पाने) "यत्" (३-१-९७)। 2. ಪಾನಮಾಡಲು ಅರ್ಹವಾದ. 3. ಪಾನಮಾಡಲು ಶಕ್ಯವಾದ. (लाक्ष०) 4. ನೋಡಲ್ಪಡುವ. 5. ನೋಡಲು ಶಕ್ಯವಾದ. 6. ನೋಡಲು ಅರ್ಹವಾದ. "भवन्तु तावत्तव लोचनाञ्चला निपेयनेपालनृपालपालय:" नैष० १२-४३।

**निफला ನಿಫಲಾ** (स्त्री०) ಜ್ಯೋತಿಷ್ಮತೀಲತೆ, ಕಂಗೊಂಗೆ ಗಿಡ.

**निबद्ध ನಿಬದ್ಧ** (वि०) 1. ಕಟ್ಟಲ್ಪಟ್ಟ, ಬಂಧಿಸಲ್ಪಟ್ಟ. नि + बन्ध (बन्धने) "क्तः" (३-२-१०२)। "अद्य यावदपि येन निबद्धो न प्रभू विचलितुं बलिविन्ध्यौ" नैष० ५-१३०। "प्रियांशुकग्रन्थिनिबद्धवाससं तदा पुरोधा विदधे विदर्भजाम्" नैष० १६-३७। 2. ಉಂಟು ಮಾಡಲ್ಪಟ್ಟ. "शान्तिः कुतस्तस्य भुजङ्गशत्रोर्यस्मिन् निबद्धानुशया सदैव" मालती० ३-१। 3. ಅಡ್ಡಿಪಡಿಸಲ್ಪಟ್ಟ, ಅಡಚಣೆ ಉಂಟುಮಾಡಲ್ಪಟ್ಟ. 4. ಒಳಗೆ ಇಡಲ್ಪಟ್ಟ. 5. ರಚಿಸಲ್ಪಟ್ಟ (ಗ್ರಂಥ). 6. ಮುಚ್ಚಲ್ಪಟ್ಟ, ಮರಸಲ್ಪಟ್ಟ, ಆಚ್ಛಾದಿಸಲ್ಪಟ್ಟ. 7. ತಡೆಯಲ್ಪಟ್ಟ, ನಿರೋಧಿಸಲ್ಪಟ್ಟ. "निबद्धनिःश्वासविकम्पिताधरा लता इव प्रस्फुरितैकपल्लवाः" किरा० ४-१५। 8. ಬೀರಲ್ಪಟ್ಟ, ಇಡಲ್ಪಟ್ಟ. "प्रियेऽपरा यच्छति वाचमुन्मुखी निबद्धदृष्टिः शिथिलाकुलोच्चयाः" किरा० ८-१५।

**निबध्यमान ನಿಬಧ್ಯಮಾನ** (वि०) ಬಂಧಿಸಲ್ಪಡುತ್ತಿರುವ, ಕಟ್ಟಲ್ಪಡುತ್ತಿರುವ, ಸಂಕೋಲೆಯಲ್ಲಿ ಸಿಕ್ಕಿಸಲ್ಪಡುತ್ತಿರುವ. नि + बन्ध (बन्धने) कर्म० "शानच्" (३-२-१२४)। "अकर्मतन्त्रस्य जगन्ति कर्मभिर्निबध्यमानानि विमुञ्चतस्तव" याद० १४-५२।

**निबन्ध ನಿಬಂಧ** (पुं०) 1. ವಾಯಿದೆಯ ಸಮಯದಲ್ಲಿ ಕೊಡುವುದಾಗಿ ಹೇಳಿದ ವಸ್ತು. नि + बन्ध (बन्धने) "घञ्" (३-३-१८)। 2. ಕರಾರು, ನಿಯಮ. "दत्त्वा भूमिं निबन्धं वा कृत्वा लेख्यं तु कारयेत्" याज्ञ० १-३१८। 3. ಭದ್ರಪಡಿಸುವ ಸಾಧನ, ಕಟ್ಟು. 4. ಶೃಂಖಲೆ, ಬಂಧನ, ಸಂಕೋಲೆ. "दैवी सम्पद्विमोक्षाय निबन्धायासुरी मता" गीता १६-५। 5. ಆಶಯ, ಉದ್ದೇಶ. 6. ಅಡ್ಡಿ, ತಡೆ, ಅಡಚಣೆ. 7. ಮೂತ್ರ ಕಟ್ಟುವುದು, ಮೂತ್ರವಿಸರ್ಜನೆಯಾಗದಿರುವುದು. 8. ಮೂಲಾಧಾರ, ಮೂಲವಸ್ತು. 9. ಗ್ರಂಥರಚನೆ. 10. ನಿಂಬವೃಕ್ಷ, ಬೇವಿನ ಮರ.

**निबन्धन ನಿಬಂಧನ** (न०) 1. ಹೇತು, ಕಾರಣ. निबध्यतेऽनेन —नि+बन्ध (बन्धने) कर० "ल्युट्" (३-३-११७)। "यो हि कपोलपाण्डुतादिचिह्नः सूचितः प्रागनुरागस्तस्याः कामाभिषङ्गः सोऽपि त्वन्निबन्धन इति व्यक्तमेतत्" मालती० १। 2. ವೀಣೆಯ ತಂತಿಯನ್ನು ಕಟ್ಟುವ ಬಿರಡೆ. "उपनाहो निबन्धनम्" अम०। 3. ಗ್ರಂಥರಚನೆ. "अनुत्सूत्रपदन्यासा सद्वृत्तिः सन्निबन्धना" माघ० २-११२। 4. ಬಂಧನ, ಕಟ್ಟುವುದು. नि + बन्ध भावे "ल्युट्" (३-३-११५)। 5. ತಡೆಯುವುದು, ಅಡ್ಡಿಮಾಡುವುದು. 6. ಕಟ್ಟಳೆ, ನಿಯಮ. 7. ಆವಾಸಸ್ಥಾನ, ಆಶ್ರಯ. "सहजविलासनिबन्धनं शरीरम्" मालती० २-६। 8. ರಚನೆ, ಜೋಡಣೆ. "संस्कारपूतेन वरं वरेण्यं वधूं सुखग्राह्यनिबन्धनेन" कुमा० ७-९०। 9. ಆಸರೆ, ಆಧಾರ. "आशानिबन्धनं जाता जीवलोकस्य" उ० रा० ३। 10. ಅಧೀನತೆ, ಪರಾವಲಂಬನ. "तन्मे दीर्घाक्षि ये प्राणास्ते त्वदाशानिबन्धनाः" माल० ४-१४। (वि०) 11. ಬಂಧಿಸುವ, ಕಟ್ಟುವ. नि + बन्ध कर्त० "ल्युः" (३-१-१३४)। (स्त्री०) –नी –ನೀ. 12. ಬಂಧನ, ಕಟ್ಟು, ಸಂಕೋಲೆ.

**निबन्धनता ನಿಬಂಧನತಾ** (स्त्री०) ಹೇತುಭಾವ, ಕಾರಣತ್ವ. निबन्धनस्य भावः "तल्" (५-१-११९)। "दैवे निरुन्धति निबन्धनतां वहन्ति हन्त प्रयासपरुषाणि न पौरुषाणि" नैष० ११-५५।

**निबन्धृ ನಿಬಂಧೃ** (वि०) 1. ಬಂಧಿಸುವವನು, ಕಟ್ಟುವವನು. नि + बन्ध (बन्धने) "तृच्" (३-१-१३३)। 2. (ಗ್ರಂಥ) ರಚಿಸುವವನು.

**निबर्हण ನಿಬರ್ಹಣ** (न०) 1. ಕೊಲ್ಲುವುದು, ವಧಿಸುವುದು. नि+बर्ह (हिंसायाम्) "ल्युट्" (३-३-११५)। "विगर्हितं धर्मधनैर्निबर्हणं विशिष्य विश्वासजुषां द्विषामपि" नैष० १-१३१। (वि०) 2. ಕೊಲ್ಲುವ, ವಧಿಸುವ. 3. ನಾಶಪಡಿಸುವ. नि + बर्ह "ल्युः" (३-१-१३४)। "अनपायि निबर्हणं द्विषां न तितिक्षासममस्ति साधनम्" किरा० २-४३।

**निबर्हणीय ನಿಬರ್ಹಣೀಯ** (वि०) 1. ವಧಿಸಲ್ಪಡುವ, ಕೊಲ್ಲಲ್ಪಡುವ. नि + बर्ह (हिंसायाम्) "अनीयर्" (३-१-९६)। 2. ವಧಿಸಲು ಅರ್ಹನಾದ. "नियमेन मया निबर्हणीयः परमं लाभमरातिभङ्गमाहुः" किरा० १३-१२। 3. ನಾಶಪಡಿಸಲು ಅರ್ಹವಾದ.

**निबर्हित ನಿಬರ್ಹಿತ** (वि०) 1. ನಾಶಪಡಿಸಲ್ಪಟ್ಟ. नि+बर्ह (हिंसायाम्) "क्तः" (३-२-१०२)। "विलोकनेनैव तवामुना मुने कृतः कृतार्थोऽस्मि निबर्हितांहसा" माघ० १-२९। 2. ಕೊಲ್ಲಲ್ಪಟ್ಟ, ವಧಿಸಲ್ಪಟ್ಟ. "निघ्नतः परनिबर्हितं मृगं व्रीडितव्यमपि ते सचेतसः" किरा० १३-४६।

**निबिड ನಿಬಿಡ** (न०) 1. ಮೂಗು ಬಗ್ಗಿರುವಿಕೆ, ಮೂಗು ನಾಟಿಕೊಂಡಿರುವಿಕೆ. नि नासिकाया नतेऽर्थे "बिडच्" (५-२-३२)। (वि०) 2. ಸಾಂದ್ರವಾದ, ದಟ್ಟವಾದ, ನಿರಂತರವಾದ. "घनपोत्रविदीर्णशालिमूलो निबिडस्कन्धनिकाषरुग्णवप्रः" किरा० १३-३। 3. ದೃಢವಾದ, ಬಲವಾದ. "शनैः कृतप्राणविमुक्तिरीशः पर्यङ्कबन्धं निबिडं बिभेद" कुमा० ३-५९। 4. ಅಧಿಕವಾದ, ಬಹಳವಾದ. "यद्भार निबिडं जडभूयम्" नैष० ५-६१। (अव्य०) 5. ಬಲವಾಗಿ, ದೃಢವಾಗಿ. 6. ಅಧಿಕವಾಗಿ. "नीविसीम्नि निबिडं पुरारुणत् पाणिनाथ शिथिलेन तत्करम्" नैष० १८-७८। 7. ಸಾಂದ್ರವಾಗಿ, ದಟ್ಟವಾಗಿ. "निबिडा वृक्षा इति तु उपमानात् इत्याहुः" सि० कौ।

**निबिडित ನಿಬಿಡಿತ** (वि०) ದಟ್ಟವಾಗಿರುವ, ಸಾಂದ್ರವಾಗಿರುವ, ಒತ್ತಾಗಿರುವ. निबिडोऽस्य संजातः "इतच्" (५-२-३६)। "याचकश्रेणीवर्जनदुर्यशोनिबिडितव्रीडस्तु रत्नाचलः" नैष० १२-६७।

**निबिरीस ನಿಬಿರೀಸ** (वि०) "निबिड" ಪದದ ಅರ್ಥ. नि नासिकाया नतेऽर्थे "बिरीसच्" (५-२-३२)। "जघनमलघुपीवरोरु कृच्छ्रादुरुनिबिरीसनितम्बभारखेदि" माघ० ७-२०।

**निभ ನಿಭ** (पुं०) 1. ವ್ಯಾಜ, ನೆಪ. नि + भा (दीप्तौ) "कः" (३-१-१३६)। "त्रपामपाकृत्य निभान्निभालय क्षितिक्षितं मालयमालयं रुचः" नैष० १२-५३। (त्रि०) 2. ಸದೃಶವಾದ, ಸಮಾನವಾದ. नियतं भाति—नि+भा (दीप्तौ) "कः" (३-१-१३६)। ಈ ಪದವು ಸಮಾಸದಲ್ಲಿ ಉತ್ತರ ಪದವಾಗಿದ್ದಲ್ಲಿ ಮಾತ್ರ ಸದೃಶಾರ್ಥಕವಾಗುವುದು. "स्युरुत्तरपदे त्वमी। निभसङ्काशनीकाशप्रतीकाशोपमादयः" अम०। "भ्रुकुटीफणिनीनादनिभ निःश्वासफूत्कृतः" नैष० १७-२०। "निभस्तु कथितो व्याजे पुंल्लिङ्गः सदृशे त्रिपु" मेदि०।

**निभालन ನಿಭಾಲನ** (न०) ವೀಕ್ಷಿಸುವುದು, ನೋಡುವುದು. नि + भल (आभण्डने) + णिच् "ल्युट्" (३-३-११५)।

**निभालयत् ನಿಭಾಲಯತ್** (वि०) ನೋಡುತ್ತಿರುವ. नि + भल (आभण्डने) + णिच् "शतृ" (३-२-१२४)। स्त्रियां "ङीप्" (४-१-६)। —यन्ती —ಯಂತೀ. "तां देवतामिव मुखेन्दुवसत्प्रसादामक्ष्णा रसादनिमिषेण निभालयन्तीम्" नैष० ११-१।

**निभालित ನಿಭಾಲಿತ** (वि०) ನೋಡಲ್ಪಟ್ಟ. नि + भल (आभण्डने) + णिच् "क्तः" (३-२-१०२)। "नम्रयांशुकविकर्षिणि प्रिये वक्त्रवातहतदीप्तदीपया। भर्तृमौलिमणिदीपितास्तया विस्मयेन ककुभो निभालिताः" नैप० १८-८५।

**निभूत ನಿಭೂತ** (वि०) 1. ಭಯಗೊಂಡಿರುವ, ಬಹಳ ಹೆದರಿದ. नितरां निश्चलं भूतः। 2. ಕಳೆದುಹೋದ.

**निभृत ನಿಭೃತ** (वि०) 1. ನಿಗೂಢವಾದ, ರಹಸ್ಯವಾದ, ಗುಟ್ಟಾದ. नि+भृञ् (भरणे) "क्तः" (३-२-१०२)। "चरणपतनप्रत्याख्यानप्रसादपराङ्मुखे निभृतकितवाचारेत्युक्ते रुषा परुषीकृते" अमरु० २०। 2. ವಿನೀತನಾದ, ವಿಧೇಯನಾದ. "निभृतैरपि पूर्वमेकमत्याद्विकृतस्याथ विरुद्धचेष्टितानि" याद० १५-१०७। 3. ನಿಃಶಬ್ದವಾದ, ಸದ್ದಿಲ್ಲದ, ಪ್ರಶಾಂತವಾದ. 4. ನಿರ್ಜನವಾದ, ವಿವಿಕ್ತವಾದ. "निभृतनिकुञ्जगृहं गतया निशि रहसि निलीय वसन्तम्" गीतगो० २। 5. ನೆಟ್ಟಮನಸ್ಸುಳ್ಳ, ಆಸಕ್ತವಾದ. "तया व्याहृतसन्देशा सा बभौ निभृता प्रिये" कुमा० ६-२। 6. ನಿಶ್ಚಲವಾದ, ಸ್ಥಿರವಾದ, ಚಲಿಸದಿರುವ. "निष्कम्पवृक्षं निभृतद्विरेफं मूकाण्डजं शान्तमृगप्रचारम्" कुमा० ३-४२। 7. ಮೃದುವಾದ, ಸೌಮ್ಯವಾದ, ತೀಕ್ಷ್ಣವಲ್ಲದ. "निभृतविशिखदंष्ट्रश्चापदण्डोऽपि धत्ते प्रशमितविषवह्नेः साम्यमाशीविषस्य" म० वी० ३-१४। 8. ಮರೆಯಾಗಿರುವ, ಕಾಣಿಸದಿರುವ. "नभसा निभृतेन्दुना तुलामुदिताकेंण समारुरोह तत्" रघु० ८-१५। 9. ತೆಳಗೆ ಇಡಲ್ಪಟ್ಟ. 10. ತುಂಬಿರುವ. (अव्य०) 11. ರಹಸ್ಯವಾಗಿ, ಗುಟ್ಟಾಗಿ. "नलाय वालव्यजनं विधुन्वती दमस्य दास्या निभृतं पदेऽर्पितात्" नैष० १६-५२। 12. ನಿಶ್ಶಬ್ದವಾಗಿ, ಸದ್ದಿಲ್ಲದೆ, ಮಾತನಾಡದೆ. "सुतनु, यदि मदीयेन वचसा तव त्रपा वितन्यते तदयमहं स्थितो निभृतम्" काद० १३९।

**निभृतात्मन् ನಿಭೃತಾತ್ಮನ್** (वि०) ಸ್ಥಿರಚಿತ್ತನಾದ, ದೃಢಸಂಕಲ್ಪವುಳ್ಳ. निभृतः आत्मा यस्य।

**निमग्न ನಿಮಗ್ನ** (वि०) 1. ಮುಳುಗಿರುವ, ಮುಳುಗಡೆಯಾಗಿರುವ. नि+टु मस्जो (शुद्धौ) "क्तः" (३-४-७२)। "मणिजालमम्भसि निमग्नमपि स्फुरितं मनोगतमिवाकृतयः" किरा० ६-९। 2. ಒಳಗಡೆ ಸೇರಿಕೊಂಡಿರುವ, ಒಳಭಾಗದಲ್ಲಿ ಅಡಗಿರುವ. "वल्मीकार्धनिमग्नमूर्तिरुरसा संदष्टसर्पत्वचा" शाकु० ७-११।

**निमग्नवत् ನಿಮಗ್ನವತ್** (वि०) ನೀರಿನಲ್ಲಿ ಮುಳುಗಿದವನು, ನೀರಿನೊಳಗೆ ಸೇರಿಕೊಂಡಿರುವವನು. नि + टु मस्जो (शुद्धौ) "क्तवतुः" (३-२-१०२)।

**निमज्जत् ನಿಮಜ್ಜತ್** (वि०) 1. ಸ್ನಾನಮಾಡುತ್ತಿರುವ. 2. ಮುಳುಗುತ್ತಿರುವ, ನೀರಿನೊಳಗೆ ಮುಳುಗಡೆಯಾಗುತ್ತಿರುವ. नि+टु मस्जो (शुद्धौ) "शतृ" (३-२-१२४)। "निमज्जतोऽनन्त भवार्णवान्तश्चिराय मे कूलमिवासि लब्धः" स्तो० र० २४। स्त्रियां "ङीप्" (४-१-६)। **–मज्जती – ಮಜ್ಜತೀ.** "निमज्जतीनां श्वसितोद्धतस्तनः श्रमो नु तासां मदनो नु पप्रथे" किरा० ८-५३।

**निमज्जथु ನಿಮಜ್ಜಥು** (पुं०) 1. ನೀರಿನಲ್ಲಿ ಮುಳುಗುವುದು, ನೀರಿನೊಳಗೆ ಪ್ರವೇಶಿಸುವುದು. नि+टु मस्जो (शुद्धौ) "अथुच्" (३-३-८९)। 2. ಹಾಸಿಗೆಗೆ ಹೋಗುವುದು, ಹಾಸಿಗೆಯಲ್ಲಿ ಮಲಗುವುದು. "तल्पे कान्तान्तरैः सार्धं मन्येऽहं धिङ् निमज्जथुम्" भट्टि० ५-२०।

**निमज्जन ನಿಮಜ್ಜನ** (न०) ನೀರಿನಲ್ಲಿ ಮುಳುಗುವುದು, ನೀರಿನಲ್ಲಿ ಮುಳುಗಿ ಸ್ನಾನಮಾಡುವುದು. नि + टु मस्जो (शुद्धौ) "ल्युट्" (३-३-११५)। "वीक्ष्य वः खलु तनूममृतादां दृङ्निमज्जनमुपैति सुधायाम्" नैष० ५-९४।

**निमज्जनीय ನಿಮಜ್ಜನೀಯ** (वि०) 1. ಸ್ನಾನಮಾಡಲು ಅರ್ಹನಾದ. नि + टु मस्जो (शुद्धौ) "अनीयर्" (३-१-९६)। 2. ಅವಶ್ಯವಾಗಿ ಮುಳುಗಿ ಸ್ನಾನಮಾಡಬೇಕಾದ.

**निमज्जयत् ನಿಮಜ್ಜಯತ್** (वि०) ಮುಳುಗಿಸುತ್ತಿರುವ, ಒಳಗೆ ಅದುಮುತ್ತಿರುವ. नि + टु मस्जो (शुद्धौ) + णिच् "शतृ" (३-२-१२४)। "प्रिया मनोभूशरदावदाहे देवीस्त्वदर्थेन निमज्जयद्भिः" (लाक्ष०) नैष० ८-८८। स्त्रियां "ङीप्" (४-१-६)। **–यन्ती – ಯಂತೀ.** "स्थितस्य रात्रावधिशय्य शय्यां मोहे मनस्तस्य निमज्जयन्ती" नैष० ३-१०८। (लाक्ष०)।

**निमज्ज्यमान ನಿಮಜ್ಜ್ಯಮಾನ** (वि०) ಮುಳುಗಿಸಲ್ಪಡುತ್ತಿರುವ. नि + टु मस्जो (शुद्धौ) कर्म० "शानच्" (३-२-१२४)। "जगदेतन्निरालम्बं कामलोभादिभिर्बलात्। निमज्ज्यमानं निरये राज्ञा दण्डेन धार्यते" कामन्द० ४१।

**निमन्त्रक ನಿಮಂತ್ರಕ** (वि०) ಆಹ್ವಾನ ಕೊಡುವವನು, ಕರೆಯುವವನು. नि + मत्रि (गुप्तभाषणे) "ण्वुल्" (३-१-१३३)।

**निमन्त्रण ನಿಮಂತ್ರಣ** (न०) 1. ಆಹ್ವಾನ, ಕೊಡುವುದು, ಕರೆಯುವುದು. नि + मत्रि (गुप्तभाषणे) "ल्युट्" (३-३-११५)। 2. ಶ್ರಾದ್ಧಭೋಜನಕ್ಕಾಗಿ ಕರೆಯುವುದು.

**निमन्त्रित ನಿಮಂತ್ರಿತ** (वि०) 1. ಕರೆಯಲ್ಪಟ್ಟ, ಆಹ್ವಾನ ಕೊಡಲ್ಪಟ್ಟ. नि + मत्रि (गुप्तभाषणे) "क्तः" (३-२-१०२)। "निमन्त्रितस्तेन विदेहनाथः स प्राहिणोद्भ्रातरमात्तदीक्षः" म० वी० १-९। 2. ಶ್ರಾದ್ಧಭೋಜನಕ್ಕಾಗಿ ಕರೆಯಲ್ಪಟ್ಟ. "निमन्त्रितो द्विजः पित्र्ये नियतात्मा भवेत्सदा" मनु० ३-१८८। 3. ಮಂತ್ರಿಸಲ್ಪಟ್ಟ.

**निमय ನಿಮಯ** (पुं०) ಪರಿವರ್ತನೆ, ವಿನಿಮಯ, ಬದಲಾವಣೆ, ಒಂದು ವಸ್ತುವನ್ನು ಕೊಟ್ಟು ಮತ್ತೊಂದು ವಸ್ತುವನ್ನು ಪಡೆಯುವುದು, ಅದಲು ಬದಲು. नि + मीङ् (हिंसायाम्) "अच्" (३-३-५६)। ಮಾರಲು ಅರ್ಹವಲ್ಲದ ವಸ್ತುಗಳನ್ನು ಮಾತ್ರ ವಿನಿಮಯ ಮಾಡಿಕೊಳ್ಳಬೇಕು. "पक्वेनामस्य निमयं न प्रशंसन्ति साधवः। निमयेत् पक्वमामेन भोजनार्थाय भारत" भा० शान्ति० ७८-७।

**निमातव्य ನಿಮಾತವ್ಯ** (वि०) 1. ಅಳೆಯಲ್ಪಡುವ. 2. ಅಳೆಯಲು ಯೋಗ್ಯವಾದ. 3. ಚೆನ್ನಾಗಿ ಅಳೆಯಬೇಕಾದ. नि + माङ् (माने) कर्मादौ "तव्यः" (३-१-९६)। "अनीयर्" (३-१-९६)। **–मानीयः –ಮಾನೀಯಃ.**

**निमान ನಿಮಾನ** (न०) 1. ಮೌಲ್ಯ, ಬೆಲೆ. नि + माङ् (माने) "ल्युट्" (३-३-११७)। "यवानां द्वौ भागौ निमानमस्योदश्विद्भागस्य" सि० कौ०। 2. ಅಳತೆ. भावे "ल्युट्" (३-३-११५)।

**निमानीय ನಿಮಾನೀಯ** (वि०) 1. ಅಳೆಯಲ್ಪಡುವ. 2. ಅಳೆಯಬೇಕಾದ. 3. ಅಳೆಯಲು ಯೋಗ್ಯವಾದ. नि + माङ् (माने) कर्मादौ "अनीयर्" (३-१-९६)।

**निमि ನಿಮಿ** (पुं०) 1. ಸೂರ್ಯವಂಶದ ಇಕ್ಷ್ವಾಕು ಮಹಾರಾಜನ ಒಬ್ಬ ಮಗ, ಇಕ್ಷ್ವಾಕುರಾಜನ ಅನೇಕ ಮಂದಿ ಪುತ್ರರಲ್ಲಿ ಹನ್ನೆರಡನೆಯವನು. "आसीद्राजा निमिर्नाम इक्ष्वाकूणां महात्मनाम्। पुत्रो द्वादशमो वीर्ये धर्मे च परिनिष्ठितः" रामा०। ಈ ರಾಜನು ವೈಜಯಂತವೆಂಬ ಪಟ್ಟಣವನ್ನು ನಿರ್ಮಿಸಿ ರಾಜ್ಯಪಾಲನ ಮಾಡುತ್ತಿದ್ದು ಒಂದು ದಿನ ವಸಿಷ್ಠರಲ್ಲಿಗೆ ಹೋಗಿ ಯಜ್ಞ ಮಾಡಬೇಕೆಂಬ ತನ್ನ ಸಂಕಲ್ಪವನ್ನು ತಿಳಿಸಲಾಗಿ ಇಂದ್ರನ ಯಾಗವನ್ನು

ನಡೆಯಿಸಲು ಒಪ್ಪಿಕೊಂಡಿರುವುದರಿಂದ ಅದು ಮುಗಿದ ನಂತರ ಬರುವುದಾಗಿ ವಸಿಷ್ಠರು ಹೇಳಿದರು. ಅಷ್ಟರಲ್ಲಿ ನಿಮಿಯು ಗೌತಮನ ಮೂಲಕ ಯಾಗವನ್ನು ಪ್ರಾರಂಭಿಸಿ ಯಾಗವು ಪೂರ್ತಿಯಾಗುವ ಪರಿಸ್ಥಿತಿಯಲ್ಲಿದ್ದಾಗ ಇಂದ್ರನ ಯಾಗವನ್ನು ಮಾಡಿಸಿ ವಸಿಷ್ಠರೂ ಬಂದರು. ನಿಮಿಯು ತನ್ನನ್ನು ತಿರಸ್ಕರಿಸಿ ಯಾಗ ಮಾಡುತ್ತಿದ್ದುದರಿಂದಲೂ ಆ ಸಮಯದಲ್ಲಿ ಹಗಲು ವೇಳೆಯಲ್ಲಿ ನಿದ್ರಿಸುತ್ತಿದ್ದುದರಿಂದಲೂ ವಸಿಷ್ಠರು ಕೋಪಗೊಂಡು ದೇಹತ್ಯಾಗ ಮಾಡುವಂತೆ ನಿಮಿಗೆ ಶಾಪವಿತ್ತರು. ನಿಮಿಯು ಈ ಶಾಪದಿಂದ ದೇಹತ್ಯಾಗ ಮಾಡಿದ ಬಳಿಕ ದೇಶವು ಅರಾಜಕವಾದುದನ್ನು ಕಂಡು ಪ್ರಜೆಗಳು ನಿಮಿಯ ಬಲತೋಳನ್ನು ಮಥನಮಾಡಿ ಅದರಿಂದ ಜನಿಸಿದ ಪುರುಷನಿಗೆ विदेह:, मिथि: ಮತ್ತು जनक: ಎಂದು ಹೆಸರನ್ನಿಟ್ಟರು. ಮುಂದೆ ಈ ವಂಶದವರಿಗೆ वैदेह:, मैथिल:, जनक: ಎಂಬ ಹೆಸರಾದುವು. "यस्मात्त्वमन्यं वृतवान् मामवज्ञाय पार्थिव। चेतनेन विनाभूतो देहस्ते पार्थिवैष्यति" रामा०। ನನ್ನೊಡನೆ ಮಾತನ್ನೂ ಆಡದೆ ನನಗೆ ತಿಳಿಯದೆ ಶಾಪ ಕೊಟ್ಟದ್ದರಿಂದ ನೀನೂ ದೇಹತ್ಯಾಗಮಾಡೆಂದು ನಿಮಿಯೂ ವಸಿಷ್ಠರನ್ನು ಶಪಿಸಿದನು. ನಿಮಿಯ ಯಾಗಾಂತ್ಯದಲ್ಲಿ ಹವಿರ್ಭಾಗವನ್ನು ಸ್ವೀಕರಿಸಲು ಬಂದ ದೇವತೆಗಳನ್ನು ಕುರಿತು ಋತ್ವಿಕ್ಕುಗಳು ಯಜಮಾನನಿಗೆ ವರವನ್ನು ಕೊಡಬೇಕೆಂದು ಕೇಳಿದರು. ನಿಮಿಯೂ ಪುನಃ ಶರೀರಗ್ರಹಣ ಮಾಡದೆ ಎಲ್ಲರ ಕಣ್ಣುಗಳಲ್ಲಿಯೂ ತಾನು ವಾಸಮಾಡುವಂತೆ ವರವನ್ನು ದೇವತೆಗಳಲ್ಲಿ ಕೇಳಿಕೊಂಡನು. ದೇವತೆಗಳೂ ಈ ವರವನ್ನು ಅನುಗ್ರಹಿಸಿದರು. ಅನಂತರ ಸಕಲ ಪ್ರಾಣಿಗಳ ಕಣ್ಣುಗಳಲ್ಲಿಯೂ ಉನ್ಮೇಷ ನಿಮೇಷಗಳು ಪ್ರಾರಂಭವಾದುವು. "यस्मान्मासंभाष्याजानत एव शयानस्य शापोत्सर्गमसौ दुष्टगुरुश्चकार तस्मात्तस्यापि देह: पतिष्यतीति प्रतिशापं दत्वा देहमत्यजत्। तच्छापाच्च मित्रावरुणयोस्तेजसि वसिष्ठचेत: प्रविष्टम्। यज्ञसमाप्तौ च भागग्रहणाय देवानागतानृत्विज ऊचु: यजमानाय वरो दीयतामिति। देवैश्छन्दितोऽसौ निमिराह नह्येतादृगन्यद्दु:खमस्ति यच्छरीरात्मनोर्वियोगे भवति। तदहमिच्छामि सकललोकलोचनेषु वस्तुं न पुन: शरीरग्रहणं कर्तुम् इत्येवमुक्तैर्देवैरसावशेषभूतानां नेत्रेष्ववतारित:। ततो भूतान्युन्मेषनिमेषं चक्रु:" विष्णुपु० ४-५। 2. ದತ್ತಾತ್ರೇಯನ ಪುತ್ರ.

**निमित ನಿಮಿತ** (वि०) 1. ಅಳೆಯಲ್ಪಟ್ಟ. नि + माङ् (माने) "क्त:" (३-२-१०२)। 2. ಅಗಲ ಮತ್ತು ಎತ್ತರಗಳಲ್ಲಿ ಸಮವಾಗಿರುವ. (न०) 3. ಅಳತೆ. भावे "क्त:" (३-३-११४)।

**निमितवत् ನಿಮಿತವತ್** (वि०) ಅಳೆದವನು, ಅಳತೆಮಾಡಿದವನು. नि + माङ् (माने) "क्तवतु:" (३-२-१०२)।

**निमित्त ನಿಮಿತ್ತ** (न०) 1. ಹೇತು, ಕಾರಣ. नि + ञि मिदा (स्नेहने) "क्त:" (३-२-१८७)। "स्वेच्छोपसर्पणमपि प्रतिमाभिमाने भेदभ्रमे पुनरमीषु न मे निमित्तम्" नैष० १३-४२। 2. ಚಿಹ್ನೆ, ಗುರುತು, ಲಕ್ಷಣ. "निमित्तं हेतुलक्ष्मणो:" मेदि०। 3. ನೆಪ, ವ್ಯಾಜ. "निमित्तमात्रं भव सव्यसाचिन्" गीता ११-३३। 4. ಶಕುನ, ಒಳ್ಳೆಯದನ್ನು ಅಥವಾ ಕೆಟ್ಟದ್ದನ್ನು ಸೂಚಿಸುವ ಒಂದು ಘಟನೆ. "निमित्तानि च पश्यामि विपरीतानि केशव" गीता १-३१। "तां पुण्यदर्शनां दृष्ट्वा निमित्तज्ञस्तपोनिधि:" रघु० १-८६। 5. ಲಕ್ಷ್ಯ, ಗುರಿ. "निमित्तादपराद्धेषोर्धानुष्कस्येव वल्गितम्" माघ० २-२७।

**निमित्तकारण ನಿಮಿತ್ತಕಾರಣ** (न०) (ನೈಯಾಯಿಕ ಮತದಲ್ಲಿ) ಮೂರು ವಿಧ ಕಾರಣಗಳಲ್ಲೊಂದು. (1) समवायिकारणम्, (2) असमवायिकारणम् ಮತ್ತು (3) निमित्तकारणम् ಎಂದು ಕಾರಣವು ಮೂರು ವಿಧ. (1) ಸಮವಾಯ ಸಂಬಂಧದಿಂದ ಕಾರ್ಯವನ್ನು ಉಂಟುಮಾಡುವ ಕಾರಣವು ಸಮವಾಯಿಕಾರಣ. **ಉದಾ:** "तन्तव: पटस्य"। ತಂತುಗಳಲ್ಲಿ ಸಮವಾಯಸಂಬಂಧದಿಂದ ಪಟಾತ್ಮಕ ಕಾರ್ಯವುಂಟುಮಾಡುವುದರಿಂದ ತಂತುಗಳು ಸಮವಾಯಿಕಾರಣ. (2) ಕಾರ್ಯದೊಡನೆ ಅಥವಾ ಕಾರಣದೊಡನೆ ಸಮವಾಯಸಂಬಂಧದಿಂದ ಇರುವ ಕಾರಣವು ಅಸಮವಾಯಿ ಕಾರಣ. **ಉದಾ:** "तन्तुसंयोग: पटस्य, तन्तुरूपं पटगतरूपस्य च"। ಕಾರಣವಾದ ತಂತುವಿನಲ್ಲಿ ಸಮವಾಯಸಂಬಂಧದಿಂದ ಇರುವ ತಂತುಸಂಯೋಗವು ಪಟಾತ್ಮಕ ಕಾರ್ಯಕ್ಕೆ ಕಾರಣ. ತಂತುರೂಪವು ಸಮವಾಯಿಕಾರಣವಾದ ಪಟದೊಡನೆ ಇದ್ದು ಕಾರ್ಯವುಂಟುಮಾಡುವುದರಿಂದ ಪಟಗತರೂಪಕ್ಕೆ ಅಸಮವಾಯಿಕಾರಣ. (3) ಇವೆರಡಕ್ಕೂ ಭಿನ್ನವಾದ ಕಾರಣವು ನಿಮಿತ್ತಕಾರಣ. **ಉದಾ:** "तुरीवेमादिकं पटस्य"। ನೇಯಿಗೆಯವನು ಪಟ (ವಸ್ತ್ರ) ವನ್ನು ನೇಯಲು ಉಪಯೋಗಿಸುವ ಮಗ್ಗದ ಕೋಲು ಮೊದಲಾದುವು ಪಟಾತ್ಮಕ ಕಾರ್ಯದಲ್ಲಿ ಸಮವಾಯಿ ಮತ್ತು ಅಸಮವಾಯಿಕಾರಣಗಳಿಗಿಂತಲೂ ಭಿನ್ನವಾದ ಕಾರಣವಾದುದರಿಂದ ನಿಮಿತ್ತಕಾರಣ.

**निमित्तकृत् ನಿಮಿತ್ತಕೃತ್** (पुं०) ವಾಯಸ, ಕಾಗೆ. निमित्तं शकुनं रुतेन करोति—डु कृञ् (करणे) "क्विप्" (३-२-७६)। ಕಾಗೆಯು ಶಬ್ದದಿಂದ ಶುಭಾಶುಭಗಳನ್ನು ಸೂಚಿಸುವುದರಿಂದ ಈ ಹೆಸರು.

**निमित्तज्ञ ನಿಮಿತ್ತಜ್ಞ** (वि०) ಶುಭ ಮತ್ತು ಅಶುಭ ಫಲಗಳನ್ನು ಸೂಚಿಸುವ ಶಕುನಗಳನ್ನು ತಿಳಿದಿರುವ. निमित्तं जानाति—ज्ञा (अवबोधने) "कः" (३-२-३)। "तां पुण्यदर्शनां दृष्ट्वा निमित्तज्ञस्तपोनिधिः" रघु० १-८६। एवं **निमित्तवित् ನಿಮಿತ್ತವಿತ್** ಇತ್ಯಾದಿ.

**निमित्तज्ञान ನಿಮಿತ್ತಜ್ಞಾನ** (न०) ಶುಭಾಶುಭ ಫಲಗಳನ್ನು ಸೂಚಿಸುವ ಶಕುನಗಳ ತಿಳಿವಳಿಕೆ. निमित्तस्य शकुनस्य ज्ञानम्।

**निमिमान ನಿಮಿಮಾನ** (वि०) ಅಳೆಯುತ್ತಿರುವ. नि+माङ् (माने) "शानच्" (३-२-१२४)।

**निमिष ನಿಮಿಷ** (पुं०) 1. ವಿಷ್ಣು, ನಾರಾಯಣ. निमिषति निमीलिताक्षो भवति तद्विरोधिषु—तान्न कटाक्षयति। "योऽसौ सतां नेक्षते हि निमिषः स विरोधिनः" इति निरुक्तिः। ತನ್ನ ವಿರೋಧಿಗಳನ್ನು ಕಡೆಗಣ್ಣಿನಿಂದಲೂ ನೋಡುವುದಿಲ್ಲವಾದ್ದರಿಂದ ವಿಷ್ಣುವಿಗೆ ಈ ಹೆಸರು. "निमिषोऽनिमिषः स्रग्वी वाचस्पतिरुदारधीः" वि० स०। 2. ಕಣ್ಣು ಮುಚ್ಚುವುದು. 3. ಕಣ್ಣು ಮುಚ್ಚಿ ತೆರೆಯುವಷ್ಟು ಕಾಲ. "सज्यं च चक्रे निमिषान्तरेण शरांश्च जग्राह दशार्धसंख्यान्" भा० आदि० २०३-२४। "निमेषनिमिषौ नेत्रमीलने कालभिद्यपि" हेम०। 4. ಒಂದು ವಿಧ ಕಣ್ಣಿನ ರೆಪ್ಪೆಯ ರೋಗ.

**निमिषत् ನಿಮಿಷತ್** (वि०) ಮುಚ್ಚಿಕೊಳ್ಳುತ್ತಿರುವ, ಸಂಕೋಚ ಹೊಂದುತ್ತಿರುವ. नि+मिष (स्पर्धायाम्) "शतृ" (३-२-१२४)। "विरहतप्ततदङ्गनिवेशिता कमलिनी निमिषद्दलमुष्टिभिः" नैष० ४-३२। स्त्रियां "ङीप्" (४-१-६)। **–मिषन्ती –ಮಿಷನ್ತೀ.**

**निमिषित ನಿಮಿಷಿತ** (न०) ಕಣ್ಣು ಮುಚ್ಚುವುದು, ನೇತ್ರನಿಮೀಲನ. नि+मिष (स्पर्धायाम्) "क्तः" (३-३-११४)।

**निमीलत् ನಿಮೀಲತ್** (वि०) ಸಂಕೋಚಹೊಂದುತ್ತಿರುವ, ಮುಚ್ಚಿಕೊಳ್ಳುತ್ತಿರುವ. नि+मील (निमेषणे) "शतृ" (३-२-१२४)। "निमीलदाकेकरलोलचक्षुषां प्रियोपकण्ठं कृतगात्रवेपथुः" किरा० ८-५३। स्त्रियां "ङीप्" (४-१-६)। **–मीलन्ती –ಮೀಲನ್ತೀ.**

**निमीलन ನಿಮೀಲನ** (न०) ಸಂಕೋಚ ಹೊಂದುವುದು, ಮುಚ್ಚಿಕೊಳ್ಳುವುದು. नि+मील (निमेषणे) भावे "ल्युट्" (३-३-११५)। "निमीलनस्पष्टविलोकनाभ्यां कदर्थितस्ताः कलयन् कटाक्षैः" नैष० ६-२२।

**निमीलयत् ನಿಮೀಲಯತ್** (वि०) ಮುಚ್ಚಿಸುತ್ತಿರುವ, ಕಣ್ಣು ಮುಚ್ಚುವಂತೆ ಮಾಡುತ್ತಿರುವ. नि+मील (निमेषणे)+णिच् "शतृ" (३-२-१२४)। स्त्रियां "ङीप्" (४-१-६)। **–मीलयन्ती –ಮೀಲಯನ್ತೀ.**

**निमीला ನಿಮೀಲಾ** (स्त्री०) 1. ಕಣ್ಣು ಮುಚ್ಚುವುದು. 2. ನಿದ್ರೆ. नि+मील (निमेषणे) "अः" (३-३-१०३)।

**निमीलित ನಿಮೀಲಿತ** (वि०) ಮುಚ್ಚಲ್ಪಟ್ಟ. नि+मील (निमेषणे) "क्तः" (३-२-१०२)। "निमीलिताक्षः परया भ्रमन्त्या संघट्टमासाद्य चमच्चकार" नैष० ६-१३।

**निमीलितवत् ನಿಮೀಲಿತವತ್** (वि०) ಕಣ್ಣು ಮುಚ್ಚಿಕೊಂಡಿರುವ. नि+मील (निमेषणे) "क्तवतुः" (३-२-१०२)। स्त्रियां "ङीप्" (४-१-६)। **–मीलितवती –ಮೀಲಿತವತೀ.** "पश्य भीरु न मयापि दृश्यसे यन्निमीलितवती दृशावसि" नैष० १८-८९।

**निमूल ನಿಮೂಲ** (वि०) ಬೇರಿಲ್ಲದ, ಮೂಲರಹಿತವಾದ, ಬುಡವಿಲ್ಲದ. निवृत्तं मूलं यस्य। निमूलकाषं कषति।

**निमेय ನಿಮೇಯ** (पुं०) 1. ವಿನಿಮಯ, ಬದಲಾವಣೆ, ಅದಲು ಬದಲು. (वि०) 2. ಅಳೆಯಲ್ಪಡುವ. 3. ಅಳೆಯಲು ಶಕ್ಯವಾದ. 4. ಅಳೆಯಲು ಅರ್ಹವಾದ. नि+माङ् (माने) "यत्" (३-१-९७)।

**निमेष ನಿಮೇಷ** (पुं०) 1. ಕಣ್ಣು ಮುಚ್ಚುವುದು, ಕಣ್ಣು ರೆಪ್ಪೆಯಾಡುವುದು, ಕಣ್ಣು ಮಿಟುಕಿಸುವುದು. नि+मिष (स्पर्धायाम्) भावे "घञ्" (३-३-१८)। "अलसवलितैः प्रेमाद्रार्द्रैर्मुहुर्मुकुलीकृतैः क्षणमभिमुखैर्लज्जालोलैर्निमेषपराङ्मुखैः" अमरु० ४। 2. ಕಣ್ಣು ಮಿಟುಕಿಸುವಷ್ಟು ಕಾಲ, ಒಂದು ಸಲ ರೆಪ್ಪೆಯಾಡಿಸುವಷ್ಟು ಕಾಲ. "निमेषनिमिषौ नेत्रमीलने कालभिद्यपि" हेम०। "यथा यथेह त्वदुपेक्षयानया निमेषमप्येष जनो विलम्बते" नैष० ९-२०। "अष्टादशनिमेषास्तु काष्ठा त्रिंशत्तु ताः कला" अम०।

**निमेषण ನಿಮೇಷಣ** (न०) ಕಣ್ಣು ಮುಚ್ಚುವುದು. नि+मिष (स्पर्धायाम्) भावे "ल्युट्" (३-३-११५)। "निमेषणेनैव कियच्चिरायुषा जनेषु यूनोरुदपादि निर्णयः" नैष० १६-७७।

**निमेषरुच्** **ನಿಮೇಷರುಚ್** (पुं०) ಖದ್ಯೋತ, ಮಿಂಚು ಹುಳ, ಮಿಣುಕು ಹುಳ. निमेषं तत्कालं व्याप्य रोचते — रुच (दीप्तौ) "क्विप्" (३-२-७६)। "ध्वान्तोन्मेषश्च खद्योतो ज्योतिर्बीजं निमेषरुक्" त्रिकाण्ड०।

**निमेषनिःस्व** **ನಿಮೇಷನಿಃಸ್ವ** (वि०) ಕಣ್ಣು ಮುಚ್ಚಾಟ ವಿಲ್ಲದ, (ಕಣ್ಣಿನ) ರೆಪ್ಪೆಯಾಡದಿರುವ. निमेषे निःस्वम्। "अमूस्तदभ्यासभरं विवृण्वते निमेषनिःस्वैरधुनापि लोचनैः" नैष० १-२७।

**निम्न** **ನಿಮ್ನ** (वि०) 1. ಗಭೀರವಾದ, ಆಳವಾದ. निमनति — म्ना (अभ्यासे) "कः" (३-१-१३६)। "मध्ये क्षामा चकितहरिणीप्रेक्षणा निम्ननाभिः" मेघ० २-१९। 2. ತಗ್ಗಾಗಿರುವ, ಎತ್ತರವಿಲ್ಲದ. "संनिपत्य शनकैरथ निम्नादन्धकारमुदवाप समानि" किरा० ९-११। "क ईप्सितार्थस्थिरनिश्चयं मनः पयश्च निम्नाभिमुखं प्रतीपयेत्" कुमा० ५-५।

**निम्नगा** **ನಿಮ್ನಗಾ** (स्त्री०) 1. ನದಿ, ಹೊಳೆ. निम्नं गच्छति — गम्लृ (गतौ) "डः" (वा० ३-२-४८)। "प्रश्च्योतन्मदसुरभीणि निम्नगायाः क्रीडन्तो गजपतयः पयांसि कृत्वा" किरा० ७-३५। "उदधेरिव निम्नगाशतेषु" रघु० ८-८। (वि०) 2. ಕೆಳಮುಖವಾಗಿ ಹೋಗುವ.

**निम्नता** **ನಿಮ್ನತಾ** (स्त्री०) 1. ಆಳವಾಗಿರುವಿಕೆ. 2. ತಗ್ಗಾಗಿರುವಿಕೆ. निम्नस्य भावः "तल्" (५-१-११९)। "त्वः" (५-१-११९)। **निम्नत्वम्** **ನಿಮ್ನತ್ವಮ್.** "किरातसैन्यैरपिधाय रेचिता भुवः क्षणं निम्नतयेव भेजिरे" किरा० १४-३३।

**निम्नदेश** **ನಿಮ್ನದೇಶ** (पुं०) ತಗ್ಗುಪ್ರದೇಶ, ಹಳ್ಳವಾಗಿರುವ ಜಾಗ.

**निम्नोन्नत** **ನಿಮ್ನೋನ್ನತ** (वि०) ಹಳ್ಳತಿಟ್ಟಾಗಿರುವ, ತಗ್ಗು ಮತ್ತು ಎತ್ತರವಾಗಿರುವ. निम्नश्च उन्नत। "निपत्य चोत्पत्य च लङ्घयन्ती निम्नोन्नतान् वर्षविभागदेशान्" याद० १८-१६।

**निम्ब** **ನಿಂಬ** (पुं०) 1. ಬೇವಿನ ಮರ. णिवि (सेचने) "अच्" (३-१-१३४)। बवयोरभेदः। (न०) 2. ಬೇವಿನ ಎಲೆ ಕಾಯಿ ಹಣ್ಣು ಮುಂತಾದುದು. "भुञ्जानस्य नवं निम्बं परिवेविषती मधौ। सपत्नीष्वपि मे रागं संभाव्य स्वरुषः स्मरेः" नैष० २०-९०।

**निम्बतरु** **ನಿಂಬತರು** (पुं०) 1. ಪಾರಿಜಾತ ವೃಕ್ಷ, ಮಂದಾರ ವೃಕ್ಷ. 2. ಬೇವಿನ ಮರ. निम्ब इव निम्बसंज्ञको वा तरुः। "पारिभद्रे निम्बतरुर्मन्दारः पारिजातकः" अम०।

**निम्बतैल** **ನಿಂಬತೈಲ** (न०) ಬೇವಿನ ಎಣ್ಣೆ. निम्बस्य तैलम्। "इदं च पुराणनिम्बतैलाक्तपरिभृज्यमानरसोनकरसगन्धिभिः" मालती० ५।

**निम्बपञ्चक** **ನಿಂಬಪಂಚಕ** (न०) ಬೇವಿನ ಮರದ ಐದು ವಸ್ತುಗಳು, ಬೇವಿನ –ಎಲೆ, –ತೊಗಟೆ, –ಹೂವು, –ಹಣ್ಣು, ಮತ್ತು –ಬೇರು.

**निम्बबीज** **ನಿಂಬಬೀಜ** (पुं०) ಹಾಲೆ ಗಿಡ.

**निम्बू** **ನಿಂಬೂ** (स्त्री०) ಒಂದು ಜಾತಿಯ ನಿಂಬೆ ಗಿಡ. णिवि (सेचने) "ऊः" बाहु०।

**निम्लोच** **ನಿಮ್ಲೋಚ** (पुं०) ಅಸ್ತಹೊಂದುವುದು. नि+म्लुचु (गतौ) भावे "घञ्" (३-३-१८)। "कृष्णद्युमणिनिम्लोचे गीर्णेष्वजगरेण ह। किन्नु नः कुशलं ब्रूयां गतश्रीषु गृहेष्वहम्" भाग० ३-२-७।

**निम्लोचन** **ನಿಮ್ಲೋಚನ** (न०) ಅಸ್ತಮೊಂದುವುದು, ಮರೆಯಾಗುವುದು. नि+म्लुचु (गतौ) भावे "ल्युट्" (३-३-११५)।

**निम्लोचनी** **ನಿಮ್ಲೋಚನೀ** (स्त्री०) ವರುಣನ ಪಟ್ಟಣ, ಸೂರ್ಯನು ಅಸ್ತನಾಗುವ ಪ್ರದೇಶ. निम्लोचन "ङीप्" (४-१-१५)। "पश्चाद्वारुणीं निम्लोचनीं नाम" भाग० ५-२१-९।

**निम्लोचि** **ನಿಮ್ಲೋಚಿ** (पुं०) ಯದುವಂಶದ ಭಜಮಾನ ರಾಜನ ಒಬ್ಬ ಮಗ.

**नियच्छत्** **ನಿಯಚ್ಛತ್** (वि०) 1. ಆಜ್ಞೆಮಾಡುತ್ತಿರುವ, ಅಪ್ಪಣೆಮಾಡುತ್ತಿರುವ. नि + यम (उपरमे) "शतृ" (३-२-१२४)। "ते च तेन गरुडं नियच्छता गम्यतामिति गभीरमीरिताः" याद० १७-१३०। 2. ಹತೋಟಿಯಲ್ಲಿಡುತ್ತಿರುವ, ಅಂಕೆಯಲ್ಲಿಡುತ್ತಿರುವ.

**नियत** **ನಿಯತ** (वि०) 1. ನಿಶ್ಚಿತವಾದ, ಅವಶ್ಯವಾಗಿ ಆಗುವ. नि + यम (उपरमे) "क्तः" (३-४-७२)। "नियता स्वर्गसौधस्य निश्रेणिरिव शाश्वती" याद० २२-१९। 2. ನಿಯಮದಿಂದ ಕೂಡಿದ, ವ್ರತವನ್ನು ಕೈಗೊಂಡಿರುವ. "वशिनं क्षितेरयनयाविवेभरं नियमो यमश्च नियतं यति तथा" माघ० १३-२३। 3. ಸಂಬಂಧ ಹೊಂದಿರುವ, ಆಶ್ರಯ ಹೊಂದಿರುವ. "वाच्यर्था नियताः सर्वे वाङ्मूला वाग्विनिःसृताः" मनु० ४-२५६।

4. ವಾಡಿಕೆಯಾಗಿ ಬಂದಿರುವ, ಸಂಪ್ರದಾಯವಾಗಿ ಬಂದಿರುವ. 5. ಸ್ಥಿರವಾಗಿರುವ, ಸತತವಾಗಿರುವ. "चन्द्रे लक्ष्मीः प्रभा सूर्ये गतिर्वायौ भुवि क्षमा। एतत्तु नियतं सर्वं त्वयि चानुत्तमं यशः"। 6. ಹತೋಟಿಯಲ್ಲಿರುವ, ಅಧೀನದಲ್ಲಿರುವ. 7. ಒಂದು ಮಿತಿಯುಳ್ಳ, ಪರಿಮಿತವಾಗಿರುವ. "बाणाः पञ्च मनोभवस्य नियतास्तेषामसंख्यो जनः प्रायोऽस्मद्विध एव लक्ष्य इति यल्लोके प्रसिद्धिं गतम्" रत्ना० ३-३। 8. ಆಸಕ್ತನಾದ. "प्रतिज्ञामात्मनो रक्षन् सत्ये च नियतः सदा" भा० आदि० १४२-६७। 9. ಅಂಕೆಯಲ್ಲಿಡಲ್ಪಟ್ಟ. 10. ಕಟ್ಟಲ್ಪಟ್ಟ. (अव्य०) 11. ಸ್ಥಿರವಾಗಿ, ಎಂದೆಂದಿಗೂ. "भीमजाहृदि जितः स्त्रिया ह्रिया मन्मथोऽपि नियतं स लज्जितः" नैष० १८-३६। 12. ನಿಶ್ಚಯವಾಗಿ. "मुखेन्दुसंबन्धवशात्सुधाजुषः स्थिरत्वमूहे नियतं तदायुषः" नैष० १५-३२।

**नियतभोजन ನಿಯತಭೋಜನ** (वि०) ಆಹಾರದ ವಿಷಯದಲ್ಲಿ ನಿಯಮದಿಂದಿರುವ, ಮಿತವಾದ ಆಹಾರವನ್ನು ಸೇವಿಸುವ. नियतं परिमितं भोजनं यस्य।

**नियतविभक्तिक ನಿಯತವಿಭಕ್ತಿಕ** (वि०) ಯಾವಾಗಲೂ ಒಂದೇ ವಿಭಕ್ತಿಯಲ್ಲಿರುವ, ವಿಗ್ರಹವಾಕ್ಯದಲ್ಲಿ ವಿಭಕ್ತಿಯ ಬದಲಾವಣೆ ಹೊಂದದಿರುವ (ಶಬ್ದ). नियता विभक्तिर्यस्य "कप्" (५-४-१५४)। "एकविभक्तिचापूर्वनिपाते" (१-२-४४)। कौशाम्ब्याः निष्क्रान्तः निष्क्रान्तं निष्क्रान्तेन निष्क्रान्ताय निष्क्रान्तात् ಈ ರೀತಿಯಾದ ವಿಗ್ರಹವಾಕ್ಯಗಳಲ್ಲಿ ಕ್ರಾಂತಾದ್ಯರ್ಥಗಳಲ್ಲಿ ಪಂಚಮೀಸಮಾಸ ಬಂದು निष्कौशाम्बिः निष्कौशाम्बिं निष्कौशाम्बिना ಇತ್ಯಾದಿಗಳಾಗುವುವು. ಇಲ್ಲಿ कौशाम्बी ಶಬ್ದವೇ ವಿಗ್ರಹದಲ್ಲಿ ಪಂಚಮೀವಿಭಕ್ತಿ ಬದಲಾವಣೆ ಹೊಂದದೆ ನಿಯತ ವಿಭಕ್ತಿಕವಾಯಿತು.

**नियतव्रत ನಿಯತವ್ರತ** (वि०) ಸ್ಥಿರವಾದ ವ್ರತವನ್ನು ಕೈಗೊಂಡಿರುವ, ನಿಯಮಪೂರ್ವಕ ವ್ರತವನ್ನು ಹಿಡಿದಿರುವ. नियतं व्रतमस्य।

**नियतात्मन् ನಿಯತಾತ್ಮನ್** (वि०) ಮನಸ್ಸನ್ನು ಅಧೀನದಲ್ಲಿಟ್ಟುಕೊಂಡಿರುವ. नियतः आत्मा यस्य।

**नियताप्ति ನಿಯತಾಪ್ತಿ** (स्त्री०) (ಫಲಪ್ರಾಪ್ತಿಗೆ) ಒದಗಿದ್ದ ಪ್ರತಿಬಂಧಕದ ಪರಿಹಾರವಾಗಿ ಫಲವು ಕೈಗೂಡುವ ಭರವಸೆ, ಒಂದು ಫಲವನ್ನು ಅಪೇಕ್ಷಿಸಿ ಕೈಗೊಂಡ ಕಾರ್ಯದ (ಫಲಪ್ರಾಪ್ತಿಪರ್ಯಂತ ಸಂಭವಿಸುವ) ಪಂಚ ಅವಸ್ಥೆಗಳಲ್ಲೊಂದು. नियता निश्चिता आप्तिः। "अवस्थाः पञ्च कार्यस्य प्रारब्धस्य फलार्थिभिः" सा० द० ६-७०। (1) आरम्भः, (2) यत्नः, (3) प्राप्त्याशा, (4) नियताप्तिः ಮತ್ತು (5) फलागमः ಇವು ಕಾರ್ಯದ ಐದು ಅವಸ್ಥೆಗಳು. ಇವು ನಾಟ್ಯಕ್ಕೆ ಸಂಬಂಧಿಸಿದುವು.

(1) "भवेदारम्भ औत्सुक्यं यन्मुख्यफलसिद्धये" सा० द० ६-७१। ಮುಖ್ಯಫಲಪ್ರಾಪ್ತಿಗಾಗಿ ಉಂಟಾಗುವ ಔತ್ಸುಕ್ಯ (ಉತ್ಸಾಹ)ವು "ಆರಂಭ"ವೆಂಬ ಮೊದಲನೆಯ ಅವಸ್ಥೆ.

(2) "प्रयत्नस्तु फलावाप्तौ व्यापारोऽतित्वरान्वितः" सा० द० ६-७२। ಫಲಪ್ರಾಪ್ತಿಗಾಗಿ ನಡೆಯಿಸುವ ತ್ವರಿತವಾದ ವ್ಯಾಪಾರವು "ಪ್ರಯತ್ನ"ವೆಂಬ ಎರಡನೆಯ ಅವಸ್ಥೆ.

(3) "उपायापायशङ्काभ्यां प्राप्त्याशा प्राप्तिसंभवः" सा० द० ६-७२। ಉಪಾಯ ಮತ್ತು ಅಪಾಯದ ಶಂಕೆ ಇವುಗಳಿಂದ ಫಲಪ್ರಾಪ್ತಿಯ ವಿಷಯದಲ್ಲಿ ಉಂಟಾಗುವ ಸಂಶಯವು "ಪ್ರಾಪ್ತ್ಯಾಶಾ" ಎಂಬ ಮೂರನೆಯ ಅವಸ್ಥೆ.

(4) "अपायाभावतः प्राप्तिर्नियताप्तिस्तु निश्चिता" सा० द० ६-७३। ಸಂಭವಿಸಿದ ಅಪಾಯದ (ಪ್ರತಿಬಂಧಕದ) ಪರಿಹಾರಪೂರ್ವಕ ಫಲಪ್ರಾಪ್ತಿಯ ನಿಶ್ಚಯವು ನಾಲ್ಕನೆಯ "ನಿಯತಾಪ್ತಿ" ಎಂಬ ಅವಸ್ಥೆ.

(5) "सावस्था फलयोगः स्याद्यः समग्रफलोदयः" सा० द० ६-७३। ನಿರೀಕ್ಷಿಸಲ್ಪಟ್ಟ ಸಂಪೂರ್ಣ ಫಲಪ್ರಾಪ್ತಿಯು "ಫಲಾಗಮ"ವೆಂಬ ಐದನೆಯ ಅವಸ್ಥೆ.

**नियताशिन् ನಿಯತಾಶಿನ್** (वि०) ಮಿತವಾಗಿ ಊಟಮಾಡುವವನು, ಪರಿಮಿತವಾದ ಆಹಾರವನ್ನು ಸೇವಿಸುವವನು. नियतमश्नाति — अश (भोजने) "णिनिः" (३-२-७८)।

**नियति ನಿಯತಿ** (स्त्री०) 1. ಭಾಗ್ಯ, ಅದೃಷ್ಟ. नियम्यतेऽनया — नि + यम (उपरमे) "क्तिन्" (३-३-९४)। "नित्यं नियत्या परवत्यशेषे कः संविदानोऽप्यनुयोगयोग्यः" नैष० ६-१०३। 2. ನಿಯಮ, ವ್ರತ. "नियतिर्नियमे दैवे" मेदि०। 3. ನಿರ್ಬಂಧ, ಕಟ್ಟುಪಾಡು. 4. ವಿಧಿ, ದೈವ. "नियतिः केन लङ्घ्येत निजच्छायानुकारिणी" याद० १६-१२२।

**नियतेन्द्रिय ನಿಯತೇಂದ್ರಿಯ** (वि०) ಇಂದ್ರಿಯಗಳನ್ನು ಹತೋಟಿಯಲ್ಲಿಟ್ಟುಕೊಂಡಿರುವ, ಜಿತೇಂದ್ರಿಯನಾದ. नियतानि इन्द्रियाणि यस्य। "अवभृथप्रयतो नियतेन्द्रियः सुरसमाजसमाक्रमणोचितः" रघु० ९-२२।

**नियन्तव्य ನಿಯನ್ತವ್ಯ** (वि०) 1. ಅಂಕೆಯಲ್ಲಿಡಬೇಕಾದ, ಹತೋಟಿಯಲ್ಲಿಡಬೇಕಾದ. नि+यम (उपरमे) "तव्य:" (३-१-९६)। 2. ದಮನಮಾಡಬೇಕಾದ, ಅಡಗಿಸಬೇಕಾದ. "नियन्तव्या: सदा राज्ञा पापा ये स्युर्नराधिप" भा० शान्ति० ८८-१९।

**नियन्तृ ನಿಯಂತೃ** (पुं०) 1. ಪರಮಾತ್ಮ. तत्तद्रुचीन् प्ररोचयन् नियच्छति। "दैवतेषु च सर्वेषु तत्तदिच्छां प्ररोचयन्। मन्दाधिकारिणो योऽसौ नियन्ता स्यान्नियच्छति" इति निरुक्तिः। "अपराजित: सर्वसहो नियन्ता नियमो यम:" वि० स०। (वि०) 2. ಪ್ರಭು, ಯಜಮಾನ, ದೊರೆ. नि + यम (उपरमे) "तृच्" (३-१-१३३)। "रेखामात्रमपि क्षुण्णादामनोर्वर्त्मन: परम्। न व्यतीयु: प्रजास्तस्य नियन्तुर्नेमिवृत्तय:" रघु० १-१७। 3. ಸಾರಥಿ, ರಥವನ್ನು ನಡೆಸುವವನು. "त्रस्तौ समासन्नकरेणुसूत्कृतान्नियन्तरि व्याकुलमुक्तरज्जुके" माघ० १२-२४। 4. ಶಿಕ್ಷಿಸುವವನು, ಅಂಕೆಯಲ್ಲಿಡುವವನು, ಅಧೀನದಲ್ಲಿಟ್ಟುಕೊಳ್ಳುವವನು.

**नियन्त्रक ನಿಯಂತ್ರಕ** (वि०) 1. ನಿರೋಧಿಸುವವನು, ತಡೆಯುವವನು. 2. ಹತೋಟಿಯಲ್ಲಿಡುವವನು, ಅಂಕೆಯಲ್ಲಿಡುವವನು, ಹಿಡಿತದಲ್ಲಿಡುವವನು. नि + यत्रि (संकोचे) + णिच् "ण्वुल्" (३-१-१३३)।

**नियन्त्रण ನಿಯಂತ್ರಣ** (न०) 1. ತಡೆ, ಬಿಗಿಹಿಡಿಯುವುದು, ನಿರೋಧಿಸುವುದು. नि+यत्रि (संकोचे) + णिच् "ल्युट्" (३-३-११५)। 2. ಅಂಕೆಯಲ್ಲಿಡುವುದು, ಹತೋಟಿಯಲ್ಲಿಡುವುದು, ನಿರ್ಬಂಧದಲ್ಲಿಡುವುದು, ಹಿಡಿತದಲ್ಲಿಡುವುದು. "अनियन्त्रणानुयोगो नाम तपस्विजन:" शाकु० १। "स्वरा: काक्वादय: उदात्तादयो वा व्यङ्ग्यरूपमेव विशेषं प्रत्याययन्ति, न खलु प्रकृतोक्तमनेकार्थशब्दस्यैकार्थनियन्त्रणरूपं विशेषम्" सा० द०। "युच्" (३-३-१०७)। **–यन्त्रणा –ಯಂತ್ರಣಾ.**

**नियन्त्रित ನಿಯಂತ್ರಿತ** (वि०) 1. ತಡೆಯಲ್ಪಟ್ಟ, ನಿರೋಧಿಸಲ್ಪಟ್ಟ. नि + यत्रि (संकोचे) "क्त:" (३-२-१०२)। 2. ಹತೋಟಿಯಲ್ಲಿಡಲ್ಪಟ್ಟ, ನಿರ್ಬಂಧದಲ್ಲಿಡಲ್ಪಟ್ಟ. "एकमेकस्मिन्नर्थेऽभिधया नियन्त्रिते या शब्दार्थस्यान्यार्थबुद्धिहेतु: शक्ति: साभिधामूला व्यञ्जना" सा० द०। "अनेकार्थस्य शब्दस्य संयोगाद्यैर्नियन्त्रिते" सा० द०। 3. ಕಟ್ಟಲ್ಪಟ್ಟ. "मौर्व्या मेखलया नियन्त्रितमधोवासश्च माञ्जिष्ठकम्" उ० रा० ४-१९।

**नियम ನಿಯಮ** (पुं०) 1. ವ್ರತ, ಶಾಸ್ತ್ರೋಕ್ತವಾದ ಕರ್ಮದ ಆಚರಣೆ, ಉಪವಾಸ ಮೊದಲಾದುದು. नि+यम (उपरमे) "अप्" (३-३-६३)। "छायेदृगस्य च न कुत्रचिदध्यगायि तप्तं यमेन नियमेन तपोऽमुनैव" नैष० १३-१७। 2. ನಿಯಂತ್ರಣ, ತಡೆ, ನಿರೋಧ, ಪ್ರತಿಬಂಧಿಸುವುದು. "प्रियप्राया वृत्तिर्विनयमधुरो वाचि नियम: प्रकृत्या कल्याणी मतिरनवगीत: परिचय:" उ० रा० २-२। 3. ಅವಶ್ಯಕತೆ, ನಿರ್ಬಂಧ, ಅಗತ್ಯವಾಗಿರುವಿಕೆ. "साधने हि नियमोऽन्यजनानां योगिनां तु तपसाखिलसिद्धि:" नैष० ५-३। 4. ವ್ಯವಹಾರದ ನಿಬಂಧನೆ, ಕಟ್ಟಳೆ, ಕಾನೂನು. 5. ಪ್ರತಿಜ್ಞೆ. 6. ಅಂಗೀಕಾರ, ಒಪ್ಪಿಗೆ. "संविदागू: प्रतिज्ञानं नियमाश्रवसंश्रवा:" अम०। 7. ನಿಶ್ಚಯ, ನಿರ್ಧಾರ. 8. ಪರ್ಯಾಲೋಚನೆ, ಸಲಹೆ ಕೇಳುವುದು, ಕೂಡಿ ಮಾತಾಡುವುದು. "नियमो मन्त्रणायाञ्च प्रतिज्ञानिश्चये व्रते" मेदि०। 9. ಪಳಗಿಸುವುದು. 10. ತಗ್ಗಿಸುವುದು, ಕಡಮೆಮಾಡುವುದು. 11. ಅಷ್ಟಾಂಗಯೋಗದ ಒಂದು ಭೇದ. "यमनियमासनप्राणायामप्रत्याहारधारणाध्यानसमाधयोऽष्टावङ्गानि" पा० यो० सू० २-२९। ಶೌಚ, ಸಂತೋಷ, ತಪಸ್ಸು, ಸ್ವಾಧ್ಯಾಯ ಮತ್ತು ಈಶ್ವರಪ್ರಣಿಧಾನ ಇವು ಐದೂ ನಿಯಮಗಳು. "शौचसंतोषतप:स्वाध्यायेश्वरप्रणिधानानि नियमा:" पा० यो० सू० २-३२। ತಪಸ್ಸು, ಸಂತೋಷ, ಆಸ್ತಿಕ್ಯ, ದಾನ, ಈಶ್ವರಪೂಜೆ, ಸಿದ್ಧಾನ್ತವಾಕ್ಯಶ್ರವಣ, ಹ್ರೀ, ಮತಿ, ಜಪ, ಮತ್ತು ಹೋಮ ಈ ಹತ್ತೂ ನಿಯಮಗಳು. "तप: सन्तोष आस्तिक्यं दानमीश्वरपूजनम्। सिद्धान्तवाक्यश्रवणं ह्रीमती च जपो हुतम्। नियमा दश संप्रोक्ता योगशास्त्रविशारदै:" हठ०। 12. (ವ್ಯಾಕರಣ ಶಾಸ್ತ್ರದಲ್ಲಿ) ಸಾಮಾನ್ಯಶಾಸ್ತ್ರದಿಂದ ವಿಹಿತವಾದ ಕಾರ್ಯವನ್ನು ಸಂಕೋಚಪಡಿಸಿ ವಿಶೇಷ ಶಾಸ್ತ್ರದಿಂದ ವಿವಕ್ಷಿತ ವಿಷಯದಲ್ಲಿ ಮಾತ್ರ ಆ ಕಾರ್ಯವನ್ನು ವಿಧಿಸುವುದು. "नस्तद्धिते" (६-४-१४४) ಸೂತ್ರದಿಂದ "न"ಕಾರಾಂತ ಪದಗಳ ಸಾಮಾನ್ಯಕ್ಕೊ ಪ್ರಾಪ್ತವಾದ "टि" ಲೋಪವು "अहन्" ಶಬ್ದಕ್ಕೆ ट ಮತ್ತು ख ಪ್ರತ್ಯಯಗಳು ಪರವಾದರೆ ಮಾತ್ರ ಬರುವುದೆಂದು "अह्नष्टखोरेव" (६-४-१४५) ಸೂತ್ರದಿಂದ ನಿಯಮ ಮಾಡಿ ವಿಹಿತವಾಗಿದೆ. 13. ವಿಷ್ಣು. प्रतिबला नियम्यन्तेऽनेन — नि + यम कर० "अप्" (३-३-६३)। "नियम्यते जगद्येन नियम: स उदीरित:" इति निरुक्तिः। "अतीन्द्र: सङ्ग्रह: सर्गो धृतात्मा नियमो यम:" वि० स०।

नियमयति — नि+यम+णिच् "अच्" (३-१-१३४)। स्वेषु स्वेष्वधिकारेषु प्रजा नियमयति इति वा। 14. ಎರಡು ಕಡೆ ಸಂಭವಿಸುವ ಒಂದು ಕಾರ್ಯವನ್ನು ಒಂದು ಕಡೆ ನಿಷೇಧಿಸಿ ಇನ್ನೊಂದರಲ್ಲಿ ಮಾತ್ರ ಹೇಳುವುದು. ಇದಕ್ಕೆ ಪರಿಸಂಖ್ಯೆಯೆಂದು ಹೆಸರು. "स्नेहक्षयः प्रदीपेषु न स्वान्तेषु नतभ्रुवाम्" ಎಂಬಲ್ಲಿ ಶ್ಲೇಷಮೂಲವಾದ ಅಭೇದಾಧ್ಯವಸಾಯದಿಂದ "ಸ್ನೇಹ" (ಪದಕ್ಕೆ ತೈಲ ಮತ್ತು ಪ್ರೇಮ ಎಂಬ ಎರಡು ಅರ್ಥಗಳು) ಕ್ಷಯವನ್ನು ಸ್ತ್ರೀಯರ ಹೃದಯದಲ್ಲಿ ನಿಷೇಧಿಸಿ ದೀಪದಲ್ಲಿ ಮಾತ್ರ ಹೇಳಿರುವುದರಿಂದ ಪರಿಸಂಖ್ಯಾರೂಪವಾದ ನಿಯಮವು ಹೇಳಲ್ಪಟ್ಟಿದೆ.

**नियमन ನಿಯಮನ** (न०) 1. ದಮನ ಮಾಡುವುದು, ಅಂಕೆಯಲ್ಲಿಡುವುದು. ಅಡಗಿಸುವುದು. नि+यम (उपरमे) भावे "ल्युट्" (३-३-११५)। "समतया वसुवृष्टिविसर्जनैर्नियमनादसतां च नराधिपः" रघु० ९-६। 2. ನಿರ್ಬಂಧದಲ್ಲಿಡುವುದು, ಹತೋಟಿಯಲ್ಲಿಡುವುದು. 3. ಆಜ್ಞೆ, ಅಪ್ಪಣೆ. 4. ಬಂಧನ, ಕಟ್ಟುವುದು. 5. ಬಲಾತ್ಕಾರ, ಬಲಪ್ರಯೋಗ, ನಿರ್ಬಂಧ. 6. ಒಂದು ಕಾರ್ಯವನ್ನು ಒಂದು ಕಡೆ ನಿಷೇಧಿಸಿ ಇನ್ನೊಂದು ಕಡೆ ಹೇಳುವುದು. 7. ನಿರೋಧಿಸುವುದು, ತಡೆಯುವುದು. 8. ತಗ್ಗಿಸುವುದು, ಕಡಮೆಮಾಡುವುದು.

**नियमनिष्ठ ನಿಯಮನಿಷ್ಠ** (वि०) 1. ವ್ರತವನ್ನು ಆಚರಿಸುವುದರಲ್ಲಿ ಕಟ್ಟುನಿಟ್ಟಾದ. 2. ಆಜ್ಞೆಯನ್ನು ಪಾಲಿಸುವುದರಲ್ಲಿ ನಿರತನಾದ. नियमे निष्ठः। (स्त्री०) **–निष्ठा –ನಿಷ್ಠಾ.** ವ್ರತಾಚರಣೆ ಮತ್ತು ಆಜ್ಞಾಪಾಲನೆಯಲ್ಲಿ ಆಸಕ್ತಿ.

**नियमपत्र ನಿಯಮಪತ್ರ** (न०) 1. ಆಜ್ಞಾಪತ್ರ. 2. ಕರಾರು ಪತ್ರ, ಒಪ್ಪಂದದ ಪತ್ರ. नियमोपेतं पत्रम्।

**नियमयत् ನಿಯಮಯತ್** (वि०) 1. ದಮನಮಾಡುತ್ತಿರುವ, ಅಡಗಿಸುತ್ತಿರುವ. 2. ನಿರ್ಬಂಧದಲ್ಲಿಡುತ್ತಿರುವ, ಹತೋಟಿಯಲ್ಲಿಟ್ಟುಕೊಳ್ಳುತ್ತಿರುವ. नि+यम (उपरमे)+णिच् "शतृ" (३-२-१२४)। "अनुपहितवधूजनस्य रक्षां नियमयतो निजलीलया जगन्ति" याद० २४-७३। 3. ಬಲಾತ್ಕಾರಪಡಿಸುತ್ತಿರುವ. 4. ಬಂಧಿಸುತ್ತಿರುವ, ಕಟ್ಟುತ್ತಿರುವ. 5. ಆಜ್ಞೆ ಮಾಡುತ್ತಿರುವ. 6. ತಡೆಯುತ್ತಿರುವ, ನಿರೋಧಿಸುತ್ತಿರುವ. स्त्रियां "ङीप्" (४-१-६)। **–यन्ती –ಯಂತೀ.**

**नियमलङ्घन ನಿಯಮಲಂಘನ** (न०) 1. ಆಜ್ಞೆಯನ್ನು ಮೀರಿ ನಡೆಯುವುದು. 2. ಒಪ್ಪಂದವನ್ನು ಮುರಿದು ನಡೆಯುವುದು. नियमस्य लङ्घनम्।

**नियमवत् ನಿಯಮವತ್** (वि०) ಜಪ ಉಪವಾಸ ಮೊದಲಾದ ವ್ರತವನ್ನು ಹಿಡಿದಿರುವ. नियमोऽस्यास्ति "मतुप्" (५-२-९४)। स्त्रियां "ङीप्" (४-१-६)। **–वती –ವತೀ.**

**नियमविधि ನಿಯಮವಿಧಿ** (पुं०) 1. ನಿತ್ಯಕರ್ಮಾನುಷ್ಠಾನ, ಪ್ರತಿದಿನದ ಕರ್ತವ್ಯದ ಆಚರಣೆ. "नियमविधिजलानां बर्हिषां चोपनेत्री" कुमा० १-६०। 2. ಅನೇಕ ಉಪಾಯಗಳಿಂದ ಒಂದು ಕಾರ್ಯವು ಸಾಧನೆಯಾಗುವಲ್ಲಿ ವಿಶೇಷ ಪ್ರಯೋಜನದ ದೃಷ್ಟಿಯಿಂದ ಒಂದು ರೀತಿಯಿಂದ ಮಾತ್ರ ಅದನ್ನು ವಿಧಿಸುವುದು. ಬತ್ತವನ್ನು ಅಕ್ಕಿಯನ್ನಾಗಿ ಮಾಡಲು ನಖಗಳಿಂದ ಹೊಟ್ಟನ್ನು ಬಿಡಿಸಬಹುದು. ಮತ್ತು ಒನಕೆಯಿಂದಲೂ ಕುಟ್ಟಿ ಅಕ್ಕಿಯನ್ನು ಮಾಡಬಹುದು. "व्रीहीनवहन्ति" ಎಂಬ ವಾಕ್ಯದಿಂದ ಯಾಗದ ಪುರೋಡಾಶಕ್ಕಾಗಿ ಬತ್ತವನ್ನು ಒನಕೆಯಿಂದಲೇ ಕುಟ್ಟಬೇಕೆಂದು ನಿಯಮಮಾಡಿ ವಿಧಿಸಲ್ಪಟ್ಟಿದೆ. ಅದೃಷ್ಟೋತ್ಪತ್ತಿಯು ಇಲ್ಲಿ ಪ್ರಯೋಜನ.

**नियमित ನಿಯಮಿತ** (वि०) 1. ತಗ್ಗಿಸಲ್ಪಟ್ಟ, ಕಡಮೆ ಮಾಡಲ್ಪಟ್ಟ. नि + यम (उपरमे) + णिच् "क्तः" (३-२-१०२)। "गिरिशमुपचचार प्रत्यहं सा सुकेशी नियमितपरिखेदा तच्छिरश्चन्द्रपादैः" कुमा० १-६०। 2. ಬಗ್ಗಿಸಲ್ಪಟ್ಟ. "श्रीमद्भिर्नियमितकन्धरापरान्तैः संसक्तैरगुरुवनेषु साङ्गहारम्" किरा० ७-३७। 3. ಕಟ್ಟಲ್ಪಟ್ಟ, ಬಂಧಿಸಲ್ಪಟ್ಟ. "द्विगुणबाहुदण्डावेष्टननिश्चेष्टनियमिताम्" मालती० ७। "किञ्चिद्भ्रूभङ्गलीलानियमितजलधि राममन्वेषयामि" हनु० ना०। 4. ತಡೆಯಲ್ಪಟ್ಟ, ನಿರೋಧಿಸಲ್ಪಟ್ಟ. 5. ನಿರ್ಧರಿಸಲ್ಪಟ್ಟ, ನಿಶ್ಚಯಿಸಲ್ಪಟ್ಟ. 6. ಮಿತಿಗೊಳಿಸಲ್ಪಟ್ಟ, ಸಂಕೋಚಗೊಳಿಸಲ್ಪಟ್ಟ. "कृच्छ्रेणामेध्यमध्ये नियमिततनुभिः स्थीयते" भर्तृ० ३-३७।

**नियमोल्लङ्घन ನಿಯಮೋಲ್ಲಂಘನ** (न०) "नियमलङ्घन" ಪದದ ಅರ್ಥ.

**नियम्य ನಿಯಮ್ಯ** (वि०) 1. ತಡೆಯಲ್ಪಡುವ, ನಿರೋಧಿಸಲ್ಪಡುವ. नि + यम (उपरमे) "यत्" (३-१-९८)। 2. ಆಜ್ಞೆಗೆ ಒಳಪಟ್ಟಿರುವವನು. 3. ಒಬ್ಬನ ಅಧೀನದಲ್ಲಿರುವವನು, 4. ಶಿಕ್ಷಿಸಲ್ಪಡುವ, ನಿಗ್ರಹಿಸಲ್ಪಡುವ.

"त्रिलोकनाथेन सदा मखद्विषस्त्वया नियम्या ननु दिव्यचक्षुषा" रघु० ३-४५। 5. ಮಿತಿಗೊಳಿಸಲ್ಪಡುವ. 6. ಕಟ್ಟಲ್ಪಡುವ, ಬಂಧಿಸಲ್ಪಡುವ.

**नियातन ನಿಯಾತನ** (न०) 1. ಕೆಳಕ್ಕೆ ತಳ್ಳುವುದು, ಕೆಡವುವುದು. नि + यत (निकारोपस्कारयोः) + णिच् "ल्युट्" (३-३-११५)। (वि०) 2. ಭಯಗ್ರಸ್ತನಾದ. नितरां यातना यत्र।

**नियाम ನಿಯಾಮ** (पुं०) ನಿಯಮ. नि + यम (उपरमे) पक्षे "घञ्" (३-३-६३)।

**नियामक ನಿಯಾಮಕ** (पुं०) 1. ಹಡಗು ನಡೆಸುವುದನ್ನು ಕಲಿಸುವವನು. नि + यम (उपरमे) + णिच् "ण्वुल्" (३-१-१३३)। (वि०) 2. ಆಜ್ಞೆಮಾಡುವವನು. 3. ಅಂಕೆಯಲ್ಲಿಟ್ಟುಕೊಳ್ಳುವವನು. 4 ನಿಗ್ರಹಿಸುವವನು. ಶಿಕ್ಷಿಸುವವನು. 5. ನಿರೋಧಿಸುವವನು, ತಡೆಯುವವನು. 6. ಮಿತಿಗೊಳಿಸುವವನು. 7. ಸಾರಥಿ, ರಥ ನಡೆಸುವವನು. 8. ಗುರು. 9. ಸಭ್ಯ, ಯೋಗ್ಯ.

**नियुक्त ನಿಯುಕ್ತ** (वि०) 1. ಆಜ್ಞೆಮಾಡಲ್ಪಟ್ಟ, ಆದೇಶ ಪಡೆದ. नि + युजिर् (योगे) "क्तः" (३-२-१०२)। "स्वकेतुकल्पनात् पूर्वं नियुक्तं हरिणा स्वयम्। तमेव तादृशाकारं तममन्यन्त यादवाः" याद० २२-५७। 2. ಪ್ರೇರಿಸಲ್ಪಟ್ಟ, ಒಂದು ಕಾರ್ಯದಲ್ಲಿ ನಿಯೋಜಿಸಲ್ಪಟ್ಟ, ಒಂದು ಕಾರ್ಯವನ್ನು ನಡೆಸುವಂತೆ ಹೇಳಲ್ಪಟ್ಟ. "नियुक्तौ यो विधिं हित्वा वर्तेयातां तु कामतः। तावुभौ पतितौ स्यातां स्नुषागगुरुतल्पगौ" मनु० ९-६३। 3. ಅಧಿಕಾರದಲ್ಲಿ ನಿಯಮಿಸಲ್ಪಟ್ಟ. "अश्वसधर्माणो हि मनुष्याः नियुक्ताः कर्मसु विकुर्वते" अर्थशा० २७-९। 4. ಒಂದು ಕಚೇರಿಯ ನೌಕರ. 5. ನಿಶ್ಚಯಿಸಲ್ಪಟ್ಟ. 6. ಕಟ್ಟಲ್ಪಟ್ಟ. "प्रीत्या नियुक्तांल्लिहती स्तनन्धयान्" माघ० १२-४०।

**नियुक्तवत् ನಿಯುಕ್ತವತ್** (वि०) 1. ಅಪ್ಪಣೆಮಾಡಿದವನು. 2. ಅಧಿಕಾರದಲ್ಲಿ ನಿಯಮಿಸಿದವನು. 3. ಒಂದು ಕಾರ್ಯದಲ್ಲಿ ಪ್ರೇರಿಸಿದವನು. नि + युजिर् (योगे) "क्तवतुः" (३-२-१०२)। स्त्रियां "ङीप्" (४-१-६)। —वती —ವತೀ.

**नियुक्ति ನಿಯುಕ್ತಿ** (स्त्री०) 1. ಆಜ್ಞೆ, ಆದೇಶ. 2. ಅಧಿಕಾರದಲ್ಲಿ ನಿಯಮಿಸುವುದು. 3. ಒಂದು ಕಾರ್ಯದಲ್ಲಿ ಪ್ರೇರಿಸುವುದು, ಒಂದು ಕೆಲಸ ಮಾಡಲು ಹೇಳುವುದು. नि + युजिर् (योगे) "क्तिन्" (३-३-९४)।

**नियुज्यमान ನಿಯುಜ್ಯಮಾನ** (वि०) 1. ಅಪ್ಪಣೆಮಾಡುತ್ತಿರುವ, ಆಜ್ಞೆಮಾಡುತ್ತಿರುವ. 2. ಒಂದು ಕಾರ್ಯದಲ್ಲಿ ಪ್ರೇರಿಸುತ್ತಿರುವ, ಒಂದು ಕೆಲಸ ಮಾಡಲು ಹೇಳುತ್ತಿರುವ. नि + युज (समाधौ) "शानच्" (३-२-१२४)। "नियुज्यमानेन पुरः कर्मण्यतिगरीयसि। आरोप्यमाणोरुगुणं भर्त्रा कार्मुकमानमत्" माघ० १९-९१। 3. ಒಂದು ಅಧಿಕಾರದಲ್ಲಿ ನೇಮಿಸುತ್ತಿರುವ.

**नियुञ्जत् ನಿಯುಂಜತ್** (वि०) 1. ಆಜ್ಞೆ ಮಾಡುತ್ತಿರುವ. 2. ಅಧಿಕಾರದಲ್ಲಿ ನಿಯಮಿಸುತ್ತಿರುವ. 3. ಒಂದು ಕೆಲಸದಲ್ಲಿ ಪ್ರೇರಿಸುತ್ತಿರುವ. नि + युजिर् (योगे) "शतृ" (३-२-१२४)। "शानच्" (३-२-१२४)। **नियुञ्जानः ನಿಯುಂಜಾನಃ**. "अन्यस्मिन् हि नियुञ्जाना धर्मं हन्युः सनातनम्" मनु० ९-६४।

**नियुत ನಿಯುತ** (न०) 1. ಒಂದು ಲಕ್ಷ, 1,00,000 ಸಂಖ್ಯೆ. नियूयते बहुसंख्या प्राप्यतेऽनेन—नि+यु (मिश्रणे) "क्तः" (३-२-१०२)। "शतं सहस्रमयुतं नियुतं प्रयुतं मतम्। स्त्रीकोटिरर्बुदमिति क्रमाद्दशगुणोत्तरम्" रत्न०। 2. ಹತ್ತು ಲಕ್ಷ, 10,00,000 ಸಂಖ್ಯೆ. "एकं दश शतं चैव सहस्रमयुतं तथा। लक्षं च नियुतं चैव कोटिरर्बुद एव च। वृन्दः खर्वो निखर्वश्च शङ्खपद्मौ च सागरः। अन्त्यं मध्यं परार्धं च दशवृद्धया यथोत्तरम्"।

**नियुद्ध ನಿಯುದ್ಧ** (न०) ದ್ವಂದ್ವಯುದ್ಧ, ಬಾಹುಯುದ್ಧ, ಕೈಕಾಳಗ. नि+युध (संप्रहारे) भावे "क्तः" (३-३-११४)। "नियुद्धं बाहुयुद्धे" अम०। "नियुद्धचर्यानिपुणौ निजघ्नतुः" याद० १४-१५।

**नियोक्तव्य ನಿಯೋಕ್ತವ್ಯ** (वि०) 1. ನೇಮಿಸಲ್ಪಡುವವನು, ಒಂದು ಕಾರ್ಯಕ್ಕಾಗಿ ಗೊತ್ತುಮಾಡಲ್ಪಡುವವನು. नि+युजिर् (योगे) "तव्यः" (३-१-९६)। 2. ಇಡಲ್ಪಡುವ, ಇರಿಸಲ್ಪಡುವ. "स्थानेष्वेव नियोक्तव्या भृत्याश्चाभरणानि च" पञ्चतं० १-७८। 3. ಆಕ್ಷೇಪಿಸಲ್ಪಡುವವನು, ಅಪರಾಧಕ್ಕೆ ಗುರಿಮಾಡಲ್ಪಡುವವನು. "न स राज्ञा नियोक्तव्यो न निक्षेप्तुश्च बन्धुभिः" मनु० ८-१८६। 4. ಒಂದು ಅಧಿಕಾರದಲ್ಲಿ ನೇಮಿಸಲ್ಪಡುವವನು. 5. ಸಹೋದರನ ಪತ್ನಿಯಲ್ಲಿ ಪುತ್ರೋತ್ಪಾದನಕ್ಕಾಗಿ ನೇಮಿಸಲ್ಪಡುವ, ಪತಿಯ ಸಹೋದರನಿಂದ ಪುತ್ರೋತ್ಪಾದನೆಗಾಗಿ ನೇಮಿಸಲ್ಪಡುವ. "नान्यस्मिन् विधवा नारी नियोक्तव्या द्विजातिभिः" मनु० ९-६४। "अनीयर्" (३-१-९६)। —योजनीयः —ಯೋಜನೀಯಃ.

**नियोक्तृ ನಿಯೋಕ್ತೃ** (वि०) 1. ಆಜ್ಞೆಮಾಡುವವನು. नि+युजिर् (योगे) "तृच्" (३-१-१३३)। 2. ಪ್ರೇರಿಸುವವನು. 3. ಪ್ರಯೋಗಿಸುವವನು. "उत्क्रान्तिदा कमनु न प्रतिभाति शक्तिः कृष्णत्वमस्य च परेषु गदान्नियोक्तुः" नैष० १३-१८। 4. ನೇಮಿಸುವವನು. 5. ಪ್ರಭು, ಯಜಮಾನ. "स्थातुं नियोक्तुर्न हि शक्यमग्रे विनाश्य रक्ष्यं स्वयमक्षतेन" रघु० २-५६। 6. ಒಂದು ಕಾರ್ಯದಲ್ಲಿ ಗೊತ್ತುಮಾಡುವವನು. 7. ಒಂದು ಅಧಿಕಾರದಲ್ಲಿ ನೇಮಿಸುವವನು. स्त्रियां "ङीप्" (४-१-५)। **-त्री -ತ್ರೀ.**

**नियोग ನಿಯೋಗ** (पुं०) 1. ಒಂದು ಕಾರ್ಯದಲ್ಲಿ ಒಬ್ಬನನ್ನು ಗೊತ್ತುಮಾಡುವುದು, ಒಂದು ಕೆಲಸ ನಿರ್ವಹಣೆಗಾಗಿ ಒಬ್ಬನನ್ನು ನೇಮಿಸುವುದು. नि + युजिर् (योगे) "घञ्" (३-३-१८)। "अलघुनि बहु मेनिरे च ताः स्वं कुलिशभृता विहितं पदे नियोगम्" किरा० १०-१६। 2. ಆಜ್ಞೆ, ಅಪ್ಪಣೆ. "धातुर्नियोगादिह नैषधीयं लीलासरः सेवितुमागतेषु" नैष० ३-१८। 3. ನಿಜ, ನಿಶ್ಚಯ. "तत्सिषेवे नियोगेन स विकल्पपराङ्मुखः" रघु० १७-४९। 4. ಕಟ್ಟುವುದು. 5. ಪತಿಯಿಲ್ಲದ ಹೆಂಗಸಿನಲ್ಲಿ ಪುತ್ರೋತ್ಪಾದನೆಗಾಗಿ ಪತಿಯ ಸಹೋದರನನ್ನು ಗೊತ್ತುಮಾಡುವುದು. "अनिर्वृत्तं नियोगार्थं पश्यन्तो धर्मतस्तयोः" मनु० ९-६१। 6. ಅಧಿಕಾರ. 7. ದೈವ, ಅದೃಷ್ಟ.

**नियोग्य ನಿಯೋಗ್ಯ** (वि०) ಪ್ರಭು, ಯಜಮಾನ. नि + युजिर् (योगे) "ण्यत्" (३-१-१२४)। नियोगाय प्रभवति "क्यप्" (३-१-१२१) वा। "एते वयं नियोज्या नियोजयतु नियोग्यः" प्रद्यु० वि० ५।

**नियोजक ನಿಯೋಜಕ** (वि०) 1. ಪ್ರೇರಿಸುವವನು, ಒಂದು ಕೆಲಸ ಮಾಡೆಂದು ಹೇಳುವವನು. नि + युजिर् (योगे) "ण्वुल्" (३-१-१३३)। 2. ಆಜ್ಞೆಮಾಡುವವನು. 3. ಒಂದು ಅಧಿಕಾರದಲ್ಲಿ ನೇಮಿಸುವವನು. 4. ಒಂದು ಕಾರ್ಯದ ನಿರ್ವಹಣೆಗಾಗಿ ಗೊತ್ತುಮಾಡುವವನು.

**नियोजन ನಿಯೋಜನ** (न०) 1. ಒಂದು ಅಧಿಕಾರದಲ್ಲಿ ನೇಮಿಸುವುದು. नि + युजिर् (योगे) "ल्युट्" (३-३-११५)। 2. ಒಂದು ಕಾರ್ಯದ ನಿರ್ವಹಣೆಗಾಗಿ ಗೊತ್ತುಮಾಡುವುದು. 3. ಒಂದು ಕಾರ್ಯದಲ್ಲಿ ತೊಡಗುವಂತೆ ಮಾಡುವುದು. 4. ಕಟ್ಟುವುದು. 5. ಆಜ್ಞೆಮಾಡುವುದು. 6. ಸೇರಿಸುವುದು.

**नियोजयत् ನಿಯೋಜಯತ್** (वि०) 1. ಆಜ್ಞೆಮಾಡುವ. 2. ಒಂದು ಕಾರ್ಯದಲ್ಲಿ ತೊಡಗುವಂತೆ ಮಾಡುವ. 3. ಅಧಿಕಾರದಲ್ಲಿ ನೇಮಿಸುವ. 4. ಒಂದು ಕಾರ್ಯ ನಿರ್ವಹಣೆಗಾಗಿ ನೇಮಿಸುವ. नि+युज (संयमने)+णिच् "शतृ" (३-२-१२४)।

**नियोजयितव्य ನಿಯೋಜಯಿತವ್ಯ** (वि०) 1. ಆಜ್ಞಾಪಿಸಲ್ಪಡುವ. 2. ನೇಮಿಸಲ್ಪಡುವ. 3. ಒಂದು ಕಾರ್ಯದಲ್ಲಿ ತೊಡಗುವಂತೆ ಮಾಡಲ್ಪಡುವ. 4. ಒಂದು ಕಾರ್ಯನಿರ್ವಹಣೆಗಾಗಿ ನೇಮಿಸಲ್ಪಡುವ. नि+युज (संयमने) + णिच् "तव्यः" (३-१-९६)। "एनां तस्मै दत्वा देशत्यागेन सः नियोजयितव्यः" पञ्चतं० ५।

**नियोजित ನಿಯೋಜಿತ** (वि०) 1. ಆಜ್ಞಾಪಿಸಲ್ಪಟ್ಟ, ಆಜ್ಞೆಮಾಡಲ್ಪಟ್ಟ. नि + युजिर् (योगे) + णिच् "क्तः" (३-२-१०२)। "तदभिकेन चिकित्सितुमाशु तां मखभुजामधिपेन नियोजितौ" नैष० ४-५। 2. ಪ್ರಯೋಗಿಸಲ್ಪಟ್ಟ, ಪ್ರೇರಿಸಲ್ಪಟ್ಟ. "वज्रं च भूषामणिमूर्तिधारि नियोजितं तद्द्युतिकार्मुकं च" नैष० ७-१९। 3. ಪ್ರೇರಿಸಲ್ಪಟ್ಟ, ಒಂದು ಕಾರ್ಯಕ್ಕಾಗಿ ಗೊತ್ತುಮಾಡಿ ಕಳುಹಿಸಲ್ಪಟ್ಟ. "मरुत्वतैव प्रहितोऽसि निश्चितं नियोजितश्चोर्ध्वमुखेन तेजसा" नैष० ९-२३। 4. ನಿಶ್ಚಿತವಾದ. 5. ಸೇರಿಸಲ್ಪಟ್ಟ. 6. ಜೋಡಿಸಲ್ಪಟ್ಟ.

**नियोज्य ನಿಯೋಜ್ಯ** (पुं०) 1. ಸೇವಕ, ಆಳು. नियोक्तुं शक्यः – नि + युजिर् (योगे) "ण्यः" (७-३-६८)। कुत्वाभावो निपात्यते। "सिध्यन्ति कर्मसु महत्स्वपि यन्नियोज्याः संभावनागुणमवेहि तमीश्वराणाम्" शाकु० ७-४। (वि०) 2. ಅಧಿಕಾರದಲ್ಲಿ ನೇಮಿಸಲ್ಪಡುವವನು. 3. ಒಂದು ಕಾರ್ಯನಿರ್ವಹಣೆಗಾಗಿ ನೇಮಿಸಲ್ಪಡುವವನು. 4. ಸೇರಿಸಲ್ಪಡುವವನು. "हिते नियोज्यः खलु भूतिमिच्छता सहार्थनाशेन नृपोऽनुजीविना" किरा० १४-८। 5. ಜೋಡಿಸಲ್ಪಡುವ.

**नियोद्धृ ನಿಯೋದ್ಧೃ** (पुं०) 1. ಕುಕ್ಕುಟ, ಕೋಳಿ. नि+युध (संप्रहारे) "तृच्" (३-१-१३३)। (वि०) 2. ಬಾಹುಯುದ್ಧ ಮಾಡುವವನು, ಕೈಕಾಳಗ ಮಾಡುವವನು.

**निर् ನಿರ್** (अव्य०) ಇದೊಂದು ಉಪಸರ್ಗ. ಇದು ಈ ಕೆಳಗಿನ ಅರ್ಥಗಳಿಗೆ ದ್ಯೋತಕವಾಗುವುದು. 1. ನಿಶ್ಚಯ. नॄ (नये) "क्विप्" (३-२-१७८)। इत्वम् (७-३-५०)। "निश्चितम्"। 2. ದಾಟುವುದು, ಅತಿಕ್ರಮಿಸುವುದು "निष्कौशाम्बिः"। 3. ವಿಯೋಗ, ಬೇರ್ಪಡುವುದು.

ಅಗಲುವುದು, ಸಂಬಂಧವಿಲ್ಲದಿರುವುದು. "निःसङ्गः"। 4. ಅಭಾವ, ಶೂನ್ಯ. "मनुजपशुभिर्निर्मर्यादैर्भवद्भिरुदायुधैः" वेणी० ३-२४। 5. ನಿಃಶೇಷ. 6. ನಿಷೇಧ. "निर्निश्चये क्रान्ताद्यर्थे निःशेषप्रतिषेधयोः" हेम०। 7. ಆದೇಶ, ಅಪ್ಪಣೆ, ಆಜ್ಞೆ. "निर्दिश्य बन्धूनित इत्युदीरितं दमेन गत्वार्धपथे कृतार्हणम्" नैष० १६-१०। ಇತ್ಯಾದಿ.

**निरंश ನಿರಂಶ** (वि०) 1. ಭಾಗವಿಲ್ಲದ, ಭಾಗಕ್ಕೆ ಅಧಿಕಾರವಿಲ್ಲದ. निर्गतः अंशात्। "निरंशौ क्लीबपतितौ जात्यन्धबधिरौ तथा" मनु० ९-२०१। 2. ಭಾಗವಿಲ್ಲದ, ಸಂಪೂರ್ಣವಾದ. ಸೂರ್ಯನು ಸಂಚರಿಸುತ್ತಿರುವ ರಾಶಿಯಲ್ಲಿ ಮೂವತ್ತನೆಯ ಒಂದು ಭಾಗವಾದ ಮೊದಲನೆಯ ಭಾಗವು ಅಂಶಶೂನ್ಯವಾದುದರಿಂದ ನಿರಂಶವಾಯಿತು. "राशेः प्रथमभागस्थः निरंशः सूर्य उच्यते"।

**निरंशुक ನಿರಂಶುಕ** (वि०) 1. ಅಂಶುಗಳಿಲ್ಲದ, ಕಿರಣಗಳಿಲ್ಲದ. निर्गता अंशवो यस्मात्। 2. ವಸ್ತ್ರವಿಲ್ಲದ. निर्गतानि अंशुकानि यस्मात्। "वरुणगृहिणीमाशामासादयन्तममुं रुचीनिचयसिचयांशांशभ्रंशक्रमेण निरंशुकम्" नैष० १९-३।

**निरक्ष ನಿರಕ್ಷ** (वि०) ಅಕ್ಷಾಂಶವಿಲ್ಲದ ದೇಶ, ಅಕ್ಷದ ಉನ್ನತಿಯಿಲ್ಲದ ದೇಶ, ವಿಷುವಚ್ಛಾಯೆಯಿಲ್ಲದ ದೇಶ. निर्गतः अक्षः तदुन्नतिर्यस्मात्। "मेरोरुभयतो मध्ये ध्रुवतारे नभःस्थिते। निरक्षदेशसंस्थानामुभये क्षितिजाश्रये" सू० सि० १२-४३।

**निरग्नि ನಿರಗ್ನಿ** (पुं०) ಶ್ರೌತ ಸ್ಮಾರ್ತ ಅಗ್ನಿಕಾರ್ಯವಿಲ್ಲದ ವಿಪ್ರ. निर्गतोऽग्निर्यस्मात्।

**निरङ्क ನಿರಂಕ** (वि०) 1. ಲಾಂಛನವಿಲ್ಲದ, ಗುರುತಿಲ್ಲದ. 2. ಕಳಂಕವಿಲ್ಲದ. निर्गतोऽङ्को यस्य। "शशभृद्भित्तनिरङ्कभित्तयः" नैष० २-७४।

**निरङ्कुश ನಿರಂಕುಶ** (वि०) 1. ಪ್ರತಿಬಂಧಕವಿಲ್ಲದ, ಅಡ್ಡಿ ಆತಂಕಗಳಿಲ್ಲದ. निर्गतः अङ्कुश इव प्रतिबन्धको यस्य। "विनयरुचयस्तस्मात् सन्तः सदैव निरङ्कुशाः" मुद्रा० ३-६। 2. ತಡೆಯಲಶಕ್ಯವಾದ, ಭಯವಿಲ್ಲದ. "जगत्सनातनगुरौ वसिष्ठेऽपि निरङ्कुशः। व्यालद्विप इवास्माभिरुपकृष्यैव दम्यसे" म० वी० ३-३९।

**निरङ्कुशता ನಿರಂಕುಶತಾ** (स्त्री०) ಅಡ್ಡಿ ಆತಂಕಗಳಿಲ್ಲದಿರುವಿಕೆ, ತಡೆಯಿಲ್ಲದಿರುವಿಕೆ. निरङ्कुशस्य भावः "तल्" (५-१-११९)। "त्वः" (५-१-११९)। **–अङ्कुशत्वम् –ಅಂಕುಶತ್ವಮ್.**

**निरङ्ग ನಿರಂಗ** (न०) 1. ರೂಪಕಾಲಂಕಾರದ ಒಂದು ಭೇದ, ನಿರವಯವ ರೂಪಕ. निर्गतमङ्गं यस्य। ರೂಪಕಾಲಂಕಾರವು परम्परितम्, साङ्गम् ಮತ್ತು निरङ्गम् ಎಂದು ಮೂರು ವಿಧ. "तत्परम्परितं साङ्गं निरङ्गमिति च त्रिधा" सा० द० १०-२८। ಕೇವಲ ಉಪಮೇಯದಲ್ಲಿ ಉಪಮಾನತಾದಾತ್ಮ್ಯಾರೋಪವು. ನಿರವಯವರೂಪಕ. ಇದು ಮಾಲಾರೂಪ ಮತ್ತು ಕೇವಲಗಳೆಂದು ಎರಡು ವಿಧ. "निरङ्गं केवलस्यैव रूपणं तदपि द्विधा। मालाकेवलरूपत्वात्" सा० द० १०-३२।

**निरञ्जन ನಿರಂಜನ** (पुं०) 1. ಶಿವ, ಪರಮೇಶ್ವರ. 2. ಅಜ್ಞಾನಶೂನ್ಯನಾದ ಪರಮಾತ್ಮ. "दीर्घरोमा दीर्घभुजो दीर्घबाहुर्निरञ्जनः" हरिवं०। "तदा विद्वान् पुण्यपापे विधूय निरञ्जनं परमं साम्यमुपैति" मुण्डक०। 3. ದೋಷರಹಿತವಾದ. 4. ಕಾಡಿಗೆ (ಕಜ್ಜಲ) ಯಿಲ್ಲದ. निर्गतमञ्जनं कज्जलं तदिव समलमज्ञानं वा यस्य। 5. ಅಜ್ಞಾನವಿಲ್ಲದವನು. (स्त्री०) **–ना –ನಾ.** 6. ಪೂರ್ಣಿಮೆ, ಹುಣ್ಣಿಮೆ. निर्गतम् अञ्जनमिवान्धकारो यत्र। 7. ದುರ್ಗಾದೇವಿ. "निरञ्जने साचिविलोकितं दृशावयावकं वेपथुरोष्ठपल्लवम्" किरा० ८-५२।

**निरत ನಿರತ** (वि०) 1. ಆಸಕ್ತನಾದ, ತತ್ಪರನಾದ, ಶ್ರದ್ಧೆಯುಳ್ಳ. नि + रमु (क्रीडायाम्) "क्तः" (३-४-७२)। "शिवमस्तु सर्वजगतां परहितनिरता भवन्तु भूतगणाः" मालती० १०-२५। 2. ಹವ್ಯಾಸವುಳ್ಳ. 3. ಪ್ರೀತಿಗೊಂಡ, ಸಂತೋಷಗೊಂಡ.

**निरति ನಿರತಿ** (स्त्री०) ಬಹಳ ಪ್ರೀತಿ, ಅತ್ಯಂತ ಪ್ರೇಮ. नितरां रतिः।

**निरतिशय ನಿರತಿಶಯ** (वि०) 1. ಬಹಳ ಹೆಚ್ಚಾದ. निर्गतोऽतिशयो यस्मात्। 2. ತನಗಿಂತಲೂ ಮಿಗಿಲಾದವನಿಲ್ಲದ. 3. ಮೀರದಿರುವ, ಮೇಲಾಗಿರದ. "निरतिशयं गरिमाणं तेन जनन्याः स्मरन्ति विद्वांसः। यत्किमपि वहति गर्भं महतामपि यो गुरुर्भवति" पञ्चतं० १-३१।

**निरत्यय ನಿರತ್ಯಯ** (वि०) ಅಪಾಯವಿಲ್ಲದ, ನಾಶವಿಲ್ಲದ. निर्गतः अत्ययो यस्य। "निरत्ययं साम न दानवर्जितं न भूरि दानं विरहय्य सत्क्रियाम्" किरा० १-१२।

**निरध्व ನಿರಧ್ವ** (वि०) ದಾರಿತಪ್ಪಿದ, ದಾರಿಯಿಂದ ಸರಿದಿರುವ, ದಾರಿ ಬಿಟ್ಟು ಹೋಗಿರುವ. निष्क्रान्तोऽध्वनः "अच्" (५-४-८५)।

**निरनुक्रोश ನಿರನುಕ್ರೋಶ** (वि०) ದಯೆಯಿಲ್ಲದವನು, ಕಲ್ಲೆದೆಯುವನು. निर्गतः अनुक्रोशो यस्मात्। "मया

पुनरलज्जया निरनुक्रोशया यूयं परित्यक्ताः" मालती० १०।

**निरनुक्रोशता ನಿರನುಕ್ರೋಶತಾ** (स्त्री०) ದಯೆಯಿಲ್ಲದಿರುವಿಕೆ, ಕ್ರೌರ್ಯ. निरनुक्रोशस्य भावः "तल्" (५-१-११९)।

**निरनुयोज्य ನಿರನುಯೋಜ್ಯ** (वि०) 1. ಸೇವಕನಿಲ್ಲದ. निर्गतोऽनुयोज्यः सेवको यस्मात्। 2. ಪ್ರಶ್ನಿಸಲು ಯೋಗ್ಯನಲ್ಲದ, ಯಾವ ಅಪರಾಧವೂ ಇಲ್ಲದ.

**निरनुरोध ನಿರನುರೋಧ** (वि०) ಅನುಕೂಲವಾಗಿಲ್ಲದ, ಹೊಂದಿಕೊಂಡು ನಡೆಯದಿರುವ. निर्गतोऽनुरोधो यस्मात्। "प्रियो मन्युर्जातस्तव निरनुरोधे न तु वयम्" अमरु० ८१।

**निरन्तर ನಿರಂತರ** (वि०) 1. ಸಾಂದ್ರವಾದ, ದಟ್ಟವಾದ, ಎಡೆಬಿಡದ. निर्गतमन्तरं यस्मात्। "हृदयं निरन्तरबृहत्कठिनस्तनमण्डलावरणमप्यभिदन्" माघ० ९-६६। 2. ಸಂತತವಾದ, ಎಡೆಬಿಡದ, ವಿರಾಮವಿಲ್ಲದ. "शिलाशयां तामनिकेतवासिनीं निरन्तरास्वन्तरवातवृष्टिषु" कुमा० ५-२५। 3. ವ್ಯತ್ಯಾಸವಿಲ್ಲದ, ಸಮಾನವಾದ, ಒಂದೇ ವಿಧವಾದ. 4. ವ್ಯವಧಾನವಿಲ್ಲದ, ಮಧ್ಯೆ ಅವಕಾಶವಿಲ್ಲದ, ಬಿಡುವಿಲ್ಲದ. "परितो रुद्धनिरन्तराम्बराः" माघ० ७६। (अव्य०) **-रम् -ರಮ್.** 5. ವ್ಯವಧಾನವಿಲ್ಲದೆ, ಬಿಡುವಿಲ್ಲದೆ. "कृतापराधानपि योषितः प्रियान् परिष्वजन्ते शयने निरन्तरम्" ऋतुसं०। 6. ಸಾಂದ್ರವಾಗಿ, ದಟ್ಟವಾಗಿ, ನಿಬಿಡವಾಗಿ. "तस्य च यदृच्छया निरन्तरनिपतितानि विकसितानि कुसुमान्यादाय" मालती० १। 7. ಸಂತತವಾಗಿ, ಎಡೆಬಿಡದೆ, ವಿಚ್ಛಿತ್ತಿಯಿಲ್ಲದೆ. "आगर्भनिर्गमनिरन्तरोपारूढविस्रम्भसदृशम्" मालती० ६। 8. ವ್ಯತ್ಯಾಸವಿಲ್ಲದೆ, ಒಂದೇ ವಿಧವಾಗಿ.

**निरन्तराभ्यास ನಿರಂತರಾಭ್ಯಾಸ** (पुं०) ಎಡೆಬಿಡದೆ ಆವೃತ್ತಿಮಾಡುವುದು, ವಿಚ್ಛಿತ್ತಿಯಿಲ್ಲದೆ ಓದುವುದು. निरन्तरोऽभ्यासः। "निरन्तराभ्यासदृढीकृतस्य सस्नेहसूत्रग्रथितस्य जन्तोः" प्रबोध० ५-२६।

**निरन्तराल ನಿರಂತರಾಲ** (वि०) ಮಧ್ಯೆ ಅವಕಾಶವಿಲ್ಲದ, ಸ್ವಲ್ಪವೂ ಸ್ಥಳಾವಕಾಶವಿಲ್ಲದ. निर्गतमन्तरालं यस्मात्। "एककश्चिरमरोधि बालया तल्पयन्त्रणनिरन्तरालया" नैष० १८-४३।

**निरन्वय ನಿರನ್ವಯ** (वि०) 1. ಸಂಬಂಧವಿಲ್ಲದ. निर्गतः अन्वयः सम्बन्धो यस्मात्। "निरन्वयोऽनपसरः प्राप्तः स्याच्चौरकिल्बिषम्" मनु० ८-१९८। 2. ಸಂತತಿಯಿಲ್ಲದ, ಮಕ್ಕಳಿಲ್ಲದ. 3. ಹಿಂಬಾಲಕನಿಲ್ಲದ, ಪರಿವಾರವಿಲ್ಲದ, ಅನುಚರರಿಲ್ಲದ. "का त्वमेकाकिनी भीरु निरन्वयजने वने" भट्टि० ५-६६। 4. ಕಟ್ಟುಪಾಡಿಗೆ ಒಳಗಾಗದಿರುವ, ಪ್ರತ್ಯಕ್ಷವಾಗಿ ಕಟ್ಟುಬೀಳದಿರುವ, ಯಜಮಾನನ ಸಮಕ್ಷದಲ್ಲಿ ನಡೆಯದಿರುವ. "स्यात्साहसं त्वन्वयवत् प्रसभं कर्म यत्कृतम्। निरन्वयं भवेत्स्तेयं हृत्वापव्ययते च यत्" मनु० ८-३३२। 5. ಯಜಮಾನನ ಸಂಬಂಧವಿಲ್ಲದ (ಚೌರ್ಯ). "परिपूतेषु धान्येषु शाकमूलफलेषु च। निरन्वये शतं दण्डः सान्वयेऽर्धशतं दमः" मनु० ८-३३१।

**निरपत्य ನಿರಪತ್ಯ** (वि०) ಸಂತಾನವಿಲ್ಲದ, ಮಕ್ಕಳಿಲ್ಲದ. निर्गतमपत्यं यस्मात्।

**निरपत्यता ನಿರಪತ್ಯತಾ** (स्त्री०) ಮಕ್ಕಳಿಲ್ಲದಿರುವಿಕೆ. निरपत्यस्य भावः "तल्" (५-१-११९)। "त्वः" (५-१-११९)। **-अपत्यत्वम् -ಅಪತ್ಯತ್ವಮ್.**

**निरपत्रप ನಿರಪತ್ರಪ** (वि०) ಲಜ್ಜೆಯಿಲ್ಲದ, ನಾಚಿಕೆಯಿಲ್ಲದ. निष्क्रान्तः अपत्रपायाः। "ततो हसन् स भगवानसुरैर्निरपत्रपैः। अन्वीयमानस्तरसा क्रुद्धो भीतः परापतत्" भाग० ३-२०-२४।

**निरपराध ನಿರಪರಾಧ** (वि०) ದೋಷವಿಲ್ಲದ, ತಪ್ಪಿಲ್ಲದ, ಯಾವ ಕಳಂಕವೂ ಇಲ್ಲದ. निर्गतोऽपराधात्।

**निरपह्नव ನಿರಪಹ್ನವ** (वि०) ಮರೆಮಾಚದಿರುವ, ಮುಚ್ಚಿಡದಿರುವ.

**निरपाय ನಿರಪಾಯ** (वि०) 1. ಅಪಾಯವಿಲ್ಲದ, ನಾಶರಹಿತವಾದ, ಸ್ಥಿರವಾದ. निर्गतोऽपायात्। "तं समेत्य निरपायतेजसं सप्तसप्तिमिव तारकाग्रहैः" याद० १७-६८। 2. ತೊಂದರೆಯಿಲ್ಲದ, ವಿಪತ್ತಿಲ್ಲದ. "निखिलानुमतां नृपो विधत्ते निरपायप्रियपथ्यभावभव्याम्" याद० १५-३८। 3. ತಪ್ಪುಮಾಡದಿರುವ, ಋಜುಮಾರ್ಗದಲ್ಲಿರುವ. (अव्य०) 4. ಅಪಾಯವಿಲ್ಲದೆ, ನಾಶವಿಲ್ಲದೆ. 5. ತೊಂದರೆಯಿಲ್ಲದೆ, ವಿಪತ್ತಿಲ್ಲದೆ. "भद्रमस्तु भवते दिवस्पते निर्जराश्च निरपायमासताम्" याद० १७-१२४।

**निरपेक्ष ನಿರಪೇಕ್ಷ** (वि०) 1. ಆಸಕ್ತಿಯಿಲ್ಲದ, ಅಪೇಕ್ಷೆಯಿಲ್ಲದ, ಆಸೆಯಿಲ್ಲದ. निर्गता अपेक्षा यस्य। "अध्यात्मरतिरासीनो निरपेक्षो निरामिषः" मनु० ६-४९। 2. ಆಸೆಯನ್ನು ತೊರೆದಿರುವ, ಆಸೆಯನ್ನು ಇಟ್ಟುಕೊಳ್ಳದಿರುವ. "तादृशस्यात्मनिरपेक्षव्यवसायिनः कृतान्त-

कवलीक्रियमाणजीवितबलात्कारप्रत्यानयनगुरूपकारिण:" मालती० ७। 3. ಪರಾಧೀನವಲ್ಲದ, ಸ್ವತಂತ್ರವಾದ. 4. ಇತರರ ಆಶ್ರಯವನ್ನು ಅಪೇಕ್ಷಿಸದಿರುವ. "न्याय-निर्णीतसारत्वात् निरपेक्षमिवागमे" किरा० ११-३९। 5. ಗಮನಕೊಡದಿರುವ, ಅನಾದರದಿಂದ ಕೂಡಿದ, ಅಲಕ್ಷ್ಯದಿಂದ ಕೂಡಿದ. 6. ಉದಾಸೀನ, ತಟಸ್ಥ. (अव्य०) 7. ಆಸಕ್ತಿಯಿಲ್ಲದೆ. 8. ಆಸೆಯನ್ನು ಇಟ್ಟುಕೊಳ್ಳದೆ. 9. ಪರಾಧೀನತೆಯಿಲ್ಲದೆ. 10. ಇತರರ ಆಶ್ರಯವನ್ನು ಅಪೇಕ್ಷಿಸದೆ. 11. ಗಮನಕೊಡದೆ, ಅಲಕ್ಷ್ಯದಿಂದ ಕೂಡಿ. 12. ತಟಸ್ಥನಾಗಿ, ಉದಾಸೀನನಾಗಿ.

**निरपेक्षा ನಿರಪೇಕ್ಷಾ** (स्त्री०) ಅನಾದರ, ತಾತ್ಸಾರ, ಅಲಕ್ಷ್ಯ, ಅಸಡ್ಡೆ.

**निरपेक्षित ನಿರಪೇಕ್ಷಿತ** (वि०) 1. ಅಪೇಕ್ಷಿಸಲ್ಪಡದ. 2. ಉಪೇಕ್ಷಿಸಲ್ಪಟ್ಟ.

**निरभिभव ನಿರಭಿಭವ** (वि०) ಅವಮಾನಕ್ಕೆ ಒಳಗಾಗದ, ತಿರಸ್ಕಾರಕ್ಕೆ ಗುರಿಯಾಗದ. निर्गत: अभिभव: यस्मात्। "अनुत्सेको लक्ष्म्या निरभिभवसारा: परकथा:" भर्तृ० १-५७।

**निरभिमान ನಿರಭಿಮಾನ** (वि०) ಅಹಂಕಾರವಿಲ್ಲದ. निर्गतोऽभिमानो यस्मात्।

**निरभिलाष ನಿರಭಿಲಾಷ** (वि०) ಇಚ್ಛೆಯಿಲ್ಲದ, ಆಸೆಯಿಲ್ಲದ. निर्गतोऽभिलाषो यस्य। "स्वसुखनिरभिलाष: खिद्यसे लोकहेतो: प्रतिदिनमथवा ते वृत्तिरेवंविधैव" शाकु० ५-७।

**निरमित्र ನಿರಮಿತ್ರ** (पुं०) 1. ಪಾಂಡುಪುತ್ರನಾದ ನಕುಲನ ಒಬ್ಬ ಮಗ. "नकुलस्तु चैद्यां रेणुमतीं नाम भार्यामुदवहत्। तस्यां पुत्रं निरमित्रं नामाजनयत्" भा० आदि० ९३-७८। (वि०) 2. ಶತ್ರುವಿಲ್ಲದ. निर्गतोऽमित्रो यस्य।

**निरय ನಿರಯ** (पुं०) ನರಕ. निर्गतोऽयात्। "अवेक्षेत गतीर्नृणां कर्मदोषसमुद्भवा:। निरये चैव पतनं यातनाश्च यमक्षये" मनु० ६-६१।

**निरर्गल ನಿರರ್ಗಲ** (वि०) 1. ಪ್ರತಿಬಂಧಕವಿಲ್ಲದ, ಅಡ್ಡಿ ಆತಂಕಗಳಿಲ್ಲದ. निर्गतमर्गलमिव प्रतिबन्धो यस्य। "मरणसमये त्यक्ताशङ्कं प्रलापनिरर्गलप्रकटितनिजस्नेह: सोऽयं सखा पुर एव ते" मालती० ५-२६। (अव्य०) 2. ತಡೆಯಿಲ್ಲದೆ, ಅಡ್ಡಿಯಿಲ್ಲದೆ.

**निरर्थ ನಿರರ್ಥ** (वि०) 1. ಅರ್ಥವಿಲ್ಲದ. निर्गतोऽर्थो यस्य। 2. ಪ್ರಯೋಜನವಿಲ್ಲದ, ಫಲವಿಲ್ಲದ. 3. ಧನವಿಲ್ಲದ, ಬಡವನಾದ. "निरर्था साप्यमूर्तत्वात् पुरुषस्य महीपते"।

**निरर्थक ನಿರರ್ಥಕ** (वि०) 1. ಫಲವಿಲ್ಲದ, ಪ್ರಯೋಜನವಿಲ್ಲದ. निर्गतोऽर्थो यस्य—वा "कप्"। "प्रसावो निष्फलो यस्य क्रोधश्चापि निरर्थक:" भा० उद्योग० ३४-२२। 2. ಅರ್ಥವಿಲ್ಲದ. 3. ಪಾದ ಅಥವಾ ವಾಕ್ಯಪೂರ್ತಿಗಾಗಿ ಪ್ರಯೋಗಿಸುವ च वै तु हि ಇತ್ಯಾದಿ ವರ್ಣಗಳು. "निरर्थकं तु हीत्यादि पूरणैकप्रयोजनम्"।

**निरवकाश ನಿರವಕಾಶ** (वि०) 1. ವಿರಾಮವಿಲ್ಲದ, ಬಿಡುವಿಲ್ಲದ. निर्गतोऽवकाशो यस्य। 2. ಸ್ಥಳಾವಕಾಶವಿಲ್ಲದ, ಜಾಗವಿಲ್ಲದ, ಸ್ಥಾನವಿಲ್ಲದ. "न दोषं विद्वेषादपि निरवकाशं गुणमये" नैष० १४-९६।

**निरवग्रह ನಿರವಗ್ರಹ** (वि०) 1. ಅಡ್ಡಿ ಆತಂಕಗಳಿಲ್ಲದ, ನಿರ್ಬಂಧವಿಲ್ಲದ. निर्गत: अवग्रहो यस्य। "केचित् क्रोधसमाविष्टा मदान्धा निरवग्रहा:" भा० भीष्म० ९३-३९। 2. ಬರವಿಲ್ಲದ, ದುರ್ಭಿಕ್ಷವಿಲ್ಲದ, ಅನಾವೃಷ್ಟಿಯ ತೊಂದರೆಯಿಲ್ಲದ. (अव्य०) 3. ತಡೆಯಿಲ್ಲದೆ, ಅಡ್ಡಿ ಆತಂಕಗಳಿಲ್ಲದೆ. "निरवग्रहं दहति दैवमिव दारुणो विवस्वान्" मालती० ९।

**निरवद्य ನಿರವದ್ಯ** (वि०) 1. ದೋಷರಹಿತವಾದ, ಉತ್ಕೃಷ್ಟವಾದ. निर्गतमवद्यं दोषो यस्य। "लक्ष्मीनिवास निरवद्यगुणैकसिन्धो संसारसागरसमुत्तरणैकपोत"। 2. ರಾಗ ದ್ವೇಷಾದಿಗಳಿಲ್ಲದ. 3. ಅಜ್ಞಾನಶೂನ್ಯನಾದ ಪರಮಾತ್ಮ. "निष्फलं निष्क्रियं शान्तं निरवद्यं निरञ्जनम्। अमृतस्य परं सेतुं दग्धेन्धनमिवानलम्" श्वेता० उप०। 4. ಕರ್ಮ ಸಂಬಂಧವಿಲ್ಲದ. 5. ಹೇಯಗುಣವಿಲ್ಲದ.

**निरवधि ನಿರವಧಿ** (वि०) 1. ಅಂತ್ಯವಿಲ್ಲದ, ಕೊನೆಯಿಲ್ಲದ. निर्गत: अवधि: यस्य। "कटुस्तूष्णीं सह्यो निरवधिरयं तु प्रविलय:" उ० रा० ३-४४। 2. ಎಲ್ಲೆಯಿಲ್ಲದ, ಮೇರೆಯಿಲ್ಲದ. 3. ಕಾಲದ ಮಿತಿಯಿಲ್ಲದ, ಸತತವಾದ, ಅವಿಚ್ಛಿನ್ನವಾದ. "महानाधिव्याधिर्निरवधिरिदानीं प्रसरतु" मालती० ४-३। "कप्"। **-अवधिक: -ಅವಧಿಕ:**.

**निरवयव ನಿರವಯವ** (वि०) 1. ಅಂಗಗಳಿಲ್ಲದ, ಅವಯವಗಳಿಲ್ಲದ. (ಪರಮಾಣು, ಆಕಾಶ ಮೊದಲಾದುವು). 2. ನಿರಾಕಾರನಾದ (ಬ್ರಹ್ಮ). निर्गतोऽवयवो यस्मात्।

**निरवलम्ब ನಿರವಲಂಬ** (वि०) 1. ಆಶ್ರಯವಿಲ್ಲದ, ಆಧಾರವಿಲ್ಲದ, ಆಸರೆಯಿಲ್ಲದ. निर्गतोऽवलम्बो यस्मात्। 2. ಸಹಾಯ್ಯವಿಲ್ಲದ. ಇದೇ ಅರ್ಥದಲ್ಲಿ **-अवलम्बनः -ಅವಲಂಬನಃ.** (अव्य०) 3. ಆಶ್ರಯವಿಲ್ಲದೆ, ಆಧಾರವಿಲ್ಲದೆ. "उपरि निरवलम्बनं प्रियस्य न्यपतदथोच्चतरोच्चिचीषया." माघ० ७-४८।

**निरवशेष ನಿರವಶೇಷ** (वि०) 1. ಶೇಷವಿಲ್ಲದ, ಸಂಪೂರ್ಣವಾದ. निर्गतोऽवशेषो यस्मात्। "तत्प्रियसखि, यथैष भर्तुरुपेक्षाभिनिवेशो निरवशेषो हृदयादुद्ध्रियते तथा कुरु" मालती० ७। (अव्य०) 2. ಸಂಪೂರ್ಣವಾಗಿ, ಸಮಗ್ರವಾಗಿ. "साम्प्रतं निरवशेषं पूरिताः श्रीमाधवस्य मनोरथाः" मालती० १०।

**निरवसाद ನಿರವಸಾದ** (वि०) 1. ನಾಶವಿಲ್ಲದ, ಅಳಿವಿಲ್ಲದ. निर्गतोऽवसादो यस्मात्। 2. ದಣಿವಿಲ್ಲದ, ಆಯಾಸವಿಲ್ಲದ. 3. ಪರಾಜಯವಿಲ್ಲದ, ಸೋಲಿಲ್ಲದ. 4. ಹರ್ಷಚಿತ್ತನಾದ, ನಗುಮುಖವುಳ್ಳ.

**निरवहालिका ನಿರವಹಾಲಿಕಾ** (स्त्री०) ಬೇಲಿ, ಹೊರಾವರಣ. निर् + अव + हल (विलेखने) "ण्वुल्" (३-१-१३३)। "टाप्"। इत्त्वम्।

**निरव्यय ನಿರವ್ಯಯ** (वि०) ನಾಶವಿಲ್ಲದ, ಶಾಶ್ವತವಾದ, ನಿತ್ಯವಾದ, ವ್ಯತ್ಯಾಸವನ್ನು ಹೊಂದದಿರುವ.

**निरशन ನಿರಶನ** (वि०) 1. ಭೋಜನವಿಲ್ಲದ, ಊಟವಿಲ್ಲದ. निर्गतमशनं यस्मात्। "अश्मकुट्टा निरशना दशपञ्चतपाश्च ये" हरिवं०। (अव्य०) 2. ಉಪವಾಸ, ಊಟಮಾಡದಿರುವಿಕೆ. अशनस्याभावः अव्ययी०(२-१-६)।

**निरसन ನಿರಸನ** (न०) 1. ಹೊರದೂಡುವುದು, ಅಟ್ಟುವುದು, ಓಡಿಸುವುದು. निर् + असु (क्षेपणे) "ल्युट्" (३-३-११५)। "स पितुर्विक्रियां दृष्ट्वा राज्यान्निरसनं तथा" भा० आश्व० ४-१०। 2. ಪ್ರತ್ಯಾಖ್ಯಾನ, ತಿರಸ್ಕಾರ. 3. ವಧೆ, ಕೊಲ್ಲುವುದು. 4. ಉಗುಳುವುದು. "निरसनं वधे प्रतिक्षेपे। निष्ठीवने" मेदि०। 5. ತ್ಯಜಿಸುವುದು. 6. ಎಸೆಯುವುದು. 7. ತೆಗೆದುಹಾಕುವುದು, ತಳ್ಳಿಹಾಕುವುದು. 8. (ಬಾಣ) ಪ್ರಯೋಗಿಸುವುದು.' (वि०) 9. ಓಡಿಸುವ, ಅಟ್ಟುವ, ಹೊರದೂಡುವ. निर्+असु कर्त० "ल्युः" (३-१-१३४)। "प्रियविमानितमानवतीरुषां निरसनैरसनैरवृथार्थता" माघ० ६-४७। 10. ತಿರಸ್ಕರಿಸುವ. 11. ತ್ಯಜಿಸುವ. 12. ಎಸೆಯುವ. 13. ಪ್ರಯೋಗಿಸುವ.

**निरस्त ನಿರಸ್ತ** (वि०) 1. ಪರಿತ್ಯಜಿಸಲ್ಪಟ್ಟ, ನಿರಾಕರಿಸಲ್ಪಟ್ಟ. निर् + असु (क्षेपणे) "क्तः" (३-२-१०२)। "निरीक्ष्य संरम्भनिरस्तधैर्यं राधेयमाराधितजामदग्न्यम्" किरा० ३-२१। 2. ಅಟ್ಟಲ್ಪಟ್ಟ, ಹೊರದೂಡಲ್ಪಟ್ಟ, ಓಡಿಸಲ್ಪಟ್ಟ. "कौलीनभीतेन गृहान्निरस्ता न तेन वैदेहसुता मनस्तः" रघु० १४-८४। 3. ಶೂನ್ಯವಾಗಿ ಮಾಡಲ್ಪಟ್ಟ, ಬರಿದಾಗಿ ಮಾಡಲ್ಪಟ್ಟ. "निरस्तपादपे देशे एरण्डोऽपि द्रुमायते" हितो०। 4. ಪ್ರಯೋಗಿಸಲ್ಪಟ್ಟ (ಬಾಣ). 5. ಎಸೆಯಲ್ಪಟ್ಟ. 6. ತಿರಸ್ಕರಿಸಲ್ಪಟ್ಟ. "अमर्षिणा कृत्यमिव क्षमाश्रयं मदोद्धतेनेव हितं प्रियं वचः। बलीयसा तद्विधिनेव पौरुषं बलं निरस्तं न रराज जिष्णुना" किरा० १४-६३। 7. ತಳ್ಳಲ್ಪಟ್ಟ, ಕೆಡವಲ್ಪಟ್ಟ. "दुर्दान्तिमुत्क्रत्य निरस्तसादिनम्" माघ० १२-२२। 8. ನಾಶಪಡಿಸಲ್ಪಟ್ಟ, ಹೋಗಲಾಡಿಸಲ್ಪಟ್ಟ. "दीपितारं दिनारम्भे निरस्तध्वान्तसञ्चयम्" भट्टि० ७-१७। 9. ಉಗಿಯಲ್ಪಟ್ಟ. 10. ಪ್ರತಿಹತವಾದ. 11. ತ್ವರೆಯಿಂದ ಹೇಳಲ್ಪಟ್ಟ, ವೇಗವಾಗಿ ಹೇಳಲ್ಪಟ್ಟ (ಮಾತು).

**निरस्तवत् ನಿರಸ್ತವತ್** (वि०) 1. ಪರಿತ್ಯಜಿಸಿದವನು. निर् + असु (क्षेपणे) "क्तवतुः" (३-२-१०२)। 2. ತಿರಸ್ಕರಿಸಿದವನು. "राक्षसान् वट्यज्ञेषु पिण्डीशूरान् निरस्तवान्" भट्टि० ५-८५। 3. ಹೊರದೂಡಿದವನು, ಓಡಿಸಿದವನು. 4. (ಬಾಣ) ಪ್ರಯೋಗಿಸಿದವನು. 5. ಎಸೆದವನು. 6. ಹೋಗಲಾಡಿಸಿದವನು, ನಿವಾರಿಸಿದವನು. 7. ತಳ್ಳಿದವನು, ಕೆಡವಿದವನು. 8. ನಾಶಪಡಿಸಿದವನು. स्त्रियां "ङीप्" (४-१-६)। **-वती -ವತೀ.**

**निरस्यत् ನಿರಸ್ಯತ್** (वि०) 1. ತೆಗೆದುಹಾಕುತ್ತಿರುವ, ತಳ್ಳಿಹಾಕುತ್ತಿರುವ. निर् + असु (क्षेपणे) "शतृ" (३-२-१२४)। "ह्रीतया गलितनीवि निरस्यन्नन्तरीयमवलम्बितकाञ्चि" किरा० ९-४८। 2. ಬಿಡುತ್ತಿರುವ, ಪರಿತ್ಯಜಿಸುತ್ತಿರುವ. "कारणद्वयमिदं निरस्यतः प्रार्थनाधिकबले विपत्फला" किरा० १३-६१। 3. ತ್ಯಜಿಸುತ್ತಿರುವ, ತಳ್ಳಿಹಾಕುತ್ತಿರುವ. 4. ನಾಶಪಡಿಸುತ್ತಿರುವ. 5. ಹೊರದೂಡುತ್ತಿರುವ, ಹೊರಕ್ಕೆ ಅಟ್ಟುತ್ತಿರುವ. 6. ಎಸೆಯುತ್ತಿರುವ. 7. (ಬಾಣ) ಪ್ರಯೋಗಿಸುತ್ತಿರುವ. 8. ತಿರಸ್ಕರಿಸುತ್ತಿರುವ. स्त्रियां "ङीप्" (४-१-६)। **-अस्यन्ती -ಅಸ್ಯಂತೀ.**

**निरस्थि ನಿರಸ್ಥಿ** (न०) ಎಲುಬುಗಳಿಲ್ಲದ ಮಾಂಸ. निर्गतमस्थि यस्मात्। "मांसं निरस्थि सुस्विन्नं पुनर्दृषदि चूर्णितम्" सुश्रुत०।

**निरस्यमान ನಿರಸ್ಯಮಾನ** (वि०) ಹೋಗಲಾಡಿಸಲ್ಪಡುತ್ತಿರುವ, ಇಲ್ಲದಂತೆ ಮಾಡಲ್ಪಡುತ್ತಿರುವ. निर्+असु (क्षेपणे) कर्म० "शानच्" (३-२-१२४)। "मन्ये तस्य निरस्यमानकिरणस्यैषा मुखेनोद्गता श्वासायाससमाकुलालिसरणिव्याजेन धूमावली" अमरु० ९६।

**निरहङ्कार ನಿರಹಂಕಾರ** (वि०) 1. ಅಹಂಕಾರವಿಲ್ಲದ. 2. ಅಭಿಮಾನವಿಲ್ಲದ, ಗರ್ವವಿಲ್ಲದ. निर्गतोऽहंकारो यस्मात्। "निर्वैरा निरहङ्कारा विगतक्रोधमत्सराः" भा० आश्रम० ३४-१५।

**निराकरण ನಿರಾಕರಣ** (न०) 1. ತಿರಸ್ಕರಿಸುವುದು. 2. ನಿವಾರಿಸುವುದು, ಹೋಗಲಾಡಿಸುವುದು. निर्+आ+डु कृञ् (करणे) "ल्युट्" (३-३-११५)। 3. ಬಿಡುವುದು, ತ್ಯಜಿಸುವುದು. "आपात्यसैनिकनिराकरणाकुलेन" माघ० ५-१५।

**निराकरणीय ನಿರಾಕರಣೀಯ** (वि०) 1. ತಿರಸ್ಕರಿಸಲ್ಪಡುವ. 2. ತಿರಸ್ಕರಿಸಬೇಕಾದ. 3. ತಿರಸ್ಕರಿಸಲು ಅರ್ಹವಾದ. 4. ನಿವಾರಿಸಲ್ಪಡುವ. 5. ನಿವಾರಿಸಬೇಕಾದ. 6. ನಿವಾರಿಸಲು ಅರ್ಹವಾದ. निर्+आ+डु कृञ् (करणे) "अनीयर्" (३-१-९६)। "तव्यः" (३-१-९६)। –कर्तव्यः –ಕರ್ತವ್ಯಃ.

**निराकरिष्णु ನಿರಾಕರಿಷ್ಣು** (वि०) 1. ತಿರಸ್ಕರಿಸುವ ಸ್ವಭಾವದ. 2. ನಿವಾರಣೆಮಾಡುವ ಸ್ವಭಾವದ. निर्+आ+डु कृञ् (करणे) "इष्णुच्" (३-२-१३६)। "न चावदद्भर्तुरवर्णमार्या निराकरिष्णोर्वृजिनादृतेऽपि" रघु० १४-५७।

**निराकर्तृ ನಿರಾಕರ್ತೃ** (वि०) 1. ತಿರಸ್ಕರಿಸುವ, ತಳ್ಳಿಹಾಕುವ. निर्+आ+डु कृञ् (करणे) "तृच्" (३-१-१३३)। 2. ನಿವಾರಿಸುವ, ಪರಿಹರಿಸುವ. स्त्रियां "ङीप्" (४-१-५)। –कर्त्री –ಕರ್ತ್ರೀ.

**निराकाङ्क्ष ನಿರಾಕಾಂಕ್ಷ** (वि०) 1. ಅಪೇಕ್ಷೆಯಿಲ್ಲದಿರುವ, ಆಸೆಯಿಲ್ಲದಿರುವ. निर्गता आकाङ्क्षा अपेक्षा यस्मात्। 2. ಶಾಬ್ದಬೋಧವುಂಟಾಗಲು ಇತರ ಪದಗಳ ಆವಶ್ಯಕತೆಯಿಲ್ಲದ. "तेषां वाक्यं निराकाङ्क्षम्" कात्या०। यावत् पदवृन्दं निराकाङ्क्षं पूर्वापरपठितपदान्तराकाङ्क्षारहितम् इति व्याख्या।

**निराकार ನಿರಾಕಾರ** (पुं०) 1. ರೂಪವಿಲ್ಲದ ಪರಮಾತ್ಮ, ದೇಹರೂಪವಾದ ಆಕಾರವಿಲ್ಲದ ಬ್ರಹ್ಮ. "तेजःस्वरूपो भगवान् निराकारो निराश्रयः" ब्रह्मवै०। "साकारं च निराकारं सगुणं निर्गुणं प्रभुम्। सर्वाधारं च सर्वं च स्वेच्छारूपं नमाम्यहम्" ब्रह्मवै०। (वि०) 2. ಆಕಾರವಿಲ್ಲದ, ಅವಯವಗಳಿಲ್ಲದ. निर्गतः आकारः अवयवो यस्मात्।

**निराकुल ನಿರಾಕುಲ** (वि०) 1. ನೆಮ್ಮದಿಯಿಂದ ಕೂಡಿದ, ಚಿಂತೆಯಿಲ್ಲದ, ಗಾಬರಿಯಿಲ್ಲದ. "महारम्भाः कृतधियः तिष्ठन्ति च निराकुलाः" माघ० २-७९। 2. ಸ್ಥಿರವಾದ, ನಿಶ್ಚಲವಾದ, ತತ್ತರಿಸದಿರುವ. (अव्य०) 3. ನೆಮ್ಮದಿಯಿಂದ, ಚಿಂತೆಯಿಲ್ಲದೆ. 4. ಸ್ಥಿರವಾಗಿ, ನಿಶ್ಚಲವಾಗಿ.

**निराकृत ನಿರಾಕೃತ** (वि०) 1. ತಿರಸ್ಕರಿಸಲ್ಪಟ್ಟ, ಕಡೆಗಣಿಸಲ್ಪಟ್ಟ, ಉಪೇಕ್ಷಿಸಲ್ಪಟ್ಟ. "निराकृते यदुभिरिति प्रकोपिभिः स्पशे शनैर्गतवति तत्र विद्विषाम्" माघ० १७-२०। 2. ಹೊರದೂಡಲ್ಪಟ್ಟ, ಬಹಿಷ್ಕರಿಸಲ್ಪಟ್ಟ. निर्+आ+डु कृञ् (करणे) "क्तः" (३-२-१०२)। "उग्रम्पश्येन सुग्रीवस्तेन भ्राता निराकृतः" भट्टि० ६-१००। 3. ತಳ್ಳಿಹಾಕಲ್ಪಟ್ಟ. 4. ನಿವಾರಿಸಲ್ಪಟ್ಟ, ಪರಿಹರಿಸಲ್ಪಟ್ಟ.

**निराकृति ನಿರಾಕೃತಿ** (पुं०) 1. ಪಂಚಮಹಾಯಜ್ಞಗಳನ್ನು ಮಾಡದವನು. "यक्ष्मी च पशुपालश्च परिवेत्ता निराकृतिः" मनु० ३-१५४। (स्त्री०) 2. ತಿರಸ್ಕರಿಸುವುದು, ಉಪೇಕ್ಷಿಸುವುದು. निर्+आ+डु कृञ् (करणे) "क्तिन्" (३-३-९४)। 3. ತಳ್ಳಿಹಾಕುವುದು, ತ್ಯಜಿಸುವುದು. 4. ನಿವಾರಿಸುವುದು, ಪರಿಹರಿಸುವುದು. (वि०) 5. ವೇದಾಧ್ಯಯನ ಮಾಡದವನು. आकृतेरध्ययनचेष्टाया निर्गतः। 6. ಆಕಾರವಿಲ್ಲದ, ರೂಪವಿಲ್ಲದ. निर्गता आकृतिर्यस्मात्।

**निरागस् ನಿರಾಗಸ್** (वि०) ಅಪರಾಧವಿಲ್ಲದ, ತಪ್ಪಿಲ್ಲದ. निर्गतः आगसः। "कथमेकपदे निरागसं जनमाभाष्यमिमं न मन्यसे" रघु० ८-४८। "मयि निरागसि का वद विप्रता" नैष० ४-७१।

**निरातङ्क ನಿರಾತಂಕ** (वि०) 1. ಆತಂಕವಿಲ್ಲದ, ಭಯವಿಲ್ಲದ. निर्गतः आतङ्को यस्मात्। "पुरुषायुषजीविन्यो निरातङ्का निरीतयः" रघु० १-६३। 2. ವ್ಯಾಧಿಯಿಲ್ಲದ, ರೋಗವಿಲ್ಲದ. 3. ತಡೆಯಿಲ್ಲದ, ಅಡ್ಡಿಯಿಲ್ಲದ. "निरातङ्कः पङ्केष्विव पिशितखण्डेषु निपतन्निसर्गात्रिगात्रं सपदि लवशस्ते विकिरतु" मालती० ५-३४।

**निरातप ನಿರಾತಪ** (वि०) 1. ಬಿಸಿಲಿಲ್ಲದ, ಸೂರ್ಯನ ತಾಪವಿಲ್ಲದ, ನೆರಳಿನಿಂದ ಕೂಡಿದ. निर्गतः आतपो यस्मात्। (स्त्री०) –आतपा –ಆತಪಾ. 2. ರಾತ್ರಿ.

**निरादर ನಿರಾದರ** (वि०) ಆದರವಿಲ್ಲದ, ಪ್ರೀತಿಯಿಲ್ಲದ, ವಿಶ್ವಾಸವಿಲ್ಲದ. निर्गतः आदरो यस्मात्।

**निरादिष्ट ನಿರಾದಿಷ್ಟ** (वि०) ಪೂರ್ತಿಯಾಗಿ ಸಂದಾಯ ಮಾಡಿದ, ಸಂಪೂರ್ಣವಾಗಿ ಪಾವತಿಮಾಡಿದ. निर् + आ + दिश (अतिसर्जने) "क्तः" (३-४-७२)। "निरादिष्टधनश्चेत्तु प्रतिभूः स्यादलंधनः। स्वधनादेव तद्दद्यान्निरादिष्ट इति स्थितिः" मनु० ८-१६२।

**निरादेश ನಿರಾದೇಶ** (पुं०) (ಸಾಲವನ್ನು) ಪೂರ್ತಿಯಾಗಿ ಪಾವತಿಮಾಡುವುದು, ಸಂಪೂರ್ಣವಾಗಿ ಸಾಲವನ್ನು ತೀರಿಸುವುದು. निर् + आ + दिश (अतिसर्जने) "घञ्" (३-३-१८)।

**निराधार ನಿರಾಧಾರ** (वि०) ಆಧಾರವಿಲ್ಲದ, ಒತ್ತಾಸೆಯಿಲ್ಲದ, ಅವಲಂಬನವಿಲ್ಲದ, ಆಸರೆಯಿಲ್ಲದ. निर्गतः आधारो यस्मात्। "निराधारो हा रोदिमि कथय केषामिह पुरः" गङ्गाल०।

**निराधि ನಿರಾಧಿ** (वि०) 1. ಮನೋವ್ಯಥೆಯಿಲ್ಲದ. 2. ಕಳವಳವಿಲ್ಲದ, ಕಾತರವಿಲ್ಲದ, ಆತಂಕವಿಲ್ಲದ.

**निरानन्द ನಿರಾನಂದ** (वि०) ಸಂತೋಷವಿಲ್ಲದ, ಉಲ್ಲಾಸವಿಲ್ಲದ. निर्गतः आनन्दो यस्मात्। "निरुत्साहं निरानन्दं निर्वीर्यमरिनन्दनम्" हितो० २-७।

**निराबाध ನಿರಾಬಾಧ** (वि०) 1. ಪ್ರತಿಬಂಧಕವಿಲ್ಲದ, ಅಡ್ಡಿ ಆತಂಕಗಳಿಲ್ಲದ. निर्गता आबाधा यस्मात्। 2. ತೊಂದರೆಯಿಲ್ಲದ, ಹಿಂಸೆಯಿಲ್ಲದ. 3. ವ್ಯಥೆಯಿಲ್ಲದ, ದುಃಖವಿಲ್ಲದ. (अव्य०) 4. ಅಡ್ಡಿಯಿಲ್ಲದೆ, ತಡೆಯಿಲ್ಲದೆ. 5. ತೊಂದರೆಯಿಲ್ಲದೆ. "नाथे त्वयि निराबाधं त्रिलोकीं त्रातुमागते" याद० १६-२६।

**निरामय ನಿರಾಮಯ** (पुं०) 1. ಕಾಡುಮೇಕೆ. 2. ಸೂಕರ, ವರಾಹ, ಹಂದಿ. (वि०) 3. ರೋಗವಿಲ್ಲದ, ಆರೋಗ್ಯದಿಂದ ಕೂಡಿದ. निर्गतः आमयो यस्मात्। "निरामयानां चित्रं तु भुक्तमध्ये प्रकीर्तितम्" सुश्रुत० सूत्र० ४६-४२१। 4. ತೊಂದರೆಯಿಲ್ಲದ, ಉಪದ್ರವವಿಲ್ಲದ.

**निरामिष ನಿರಾಮಿಷ** (वि०) 1. ಆಸೆಯಿಲ್ಲದ, ಅಪೇಕ್ಷೆಯಿಲ್ಲದ. "अध्यात्मरतिरासीनो निरपेक्षो निरामिषः" मनु० ६-४९। 2. ಮಾಂಸವಿಲ್ಲದ. "यथामिषे जग्मुरनामिषभ्रमं निरामिषे चामिषमोहमूहिरे" नैष० १६-८१। 3. ಸುಖಸಾಮಗ್ರಿಯಿಲ್ಲದ. 4. ಲಂಚದ ಆಸೆಯಿಲ್ಲದ. निर्गतमामिषं मांसाद्यामिषमभिलाषो वा यस्मात्।

**निराय ನಿರಾಯ** (वि०) ಆದಾಯವಿಲ್ಲದ, ಸಂಪಾದನೆಯಿಲ್ಲದ.

**निरायत ನಿರಾಯತ** (वि०) 1. ಬಹಳ ಉದ್ದವಾದ, ದೀರ್ಘವಾದ. नितरामायतः। "मुक्तेषु रज्जुषु निरायतपूर्वकायाः निष्कम्पचामरशिखा निभृतोर्ध्वकर्णाः" शाकु० १-८। 2. ಸಂಕುಚಿತವಾದ, ಅಡಕವಾಗಿರುವ.

**निरायतत्व ನಿರಾಯತತ್ವ** (न०) ಅಡಕವಾಗಿರುವಿಕೆ, ಸಂಕುಚಿತವಾಗಿರುವಿಕೆ. निरायतस्य भावः "त्वः" (५-१-११९)। "वलिव्यपायस्फुटरोमराजिना निरायतत्वादुदरेण ताम्यता" किरा० ८-१७।

**निरायति ನಿರಾಯತಿ** (वि०) ಒಳ್ಳೆಯ ಭವಿಷ್ಯವಿಲ್ಲದ, ಕ್ಷಯಕಾಲವು ಸಮೀಪಿಸಿರುವ. निर् नास्ति आयतिः फलकालो यस्य। "नियता लघुता निरायतेरगरीयान्न पदं नृपश्रियः" किरा० २-१४।

**निरायास ನಿರಾಯಾಸ** (वि०) ಆಯಾಸವಿಲ್ಲದ, ದಣಿವಿಲ್ಲದ.

**निरायुध ನಿರಾಯುಧ** (वि०) ಆಯುಧವಿಲ್ಲದ, ಆಯುಧವನ್ನು ಹಿಡಿಯದಿರುವ.

**निरालम्ब ನಿರಾಲಂಬ** (वि०) 1. ಅವಲಂಬನವಿಲ್ಲದ, ಆಧಾರವಿಲ್ಲದ, ಆಸರೆಯಿಲ್ಲದ. निर्गतः आलम्बः यस्मात्। "एवं मयि निरालम्बे शापात् शिथिलतां गते" हरिवं०। 2. ಸ್ವತಂತ್ರನಾದ, ಒಬ್ಬನ ಆಶ್ರಯದಲ್ಲಿಲ್ಲದ. (न०) 3. ಬ್ರಹ್ಮ. (अव्य०) 4. ಆಶ್ರಯವಿಲ್ಲದ, ಆಸರೆಯಿಲ್ಲದೆ.

**निरालय ನಿರಾಲಯ** (वि०) ವಸತಿಯಿಲ್ಲದ, ಆಶ್ರಯವಿಲ್ಲದ. "रुचयोऽस्तमितस्य भास्वतः स्खलिता यत्र निरालयाः किल" नैष० २-९०।

**निरालोक ನಿರಾಲೋಕ** (वि०) 1. ಬೆಳಕಿಲ್ಲದ, ಅಂಧಕಾರಮಯವಾದ. निर्गतः आलोकः यस्मात्। "असारं संसारं परिमुषितरत्नं त्रिभुवनं निरालोकं लोकं मरणशरणं बान्धवजनम्" मालती० ५-३०। 2. ನೋಡದಿರುವ.

**निरावरण ನಿರಾವರಣ** (वि०) 1. ಆವರಣವಿಲ್ಲದ, ಮೇಲುಛಾವಣಿಯಿಲ್ಲದ. निर् नास्ति आवरणं यस्य। 2. ಮೇಲುಹೊದಿಕೆಯಿಲ್ಲದ, ಆಚ್ಛಾದನವಿಲ್ಲದ.

**निरावृति ನಿರಾವೃತಿ** (वि०) 1. ಆವರಣವಿಲ್ಲದ, ಮೇಲುಛಾವಣಿಯಿಲ್ಲದ. निर् नास्ति आवृतिः आवरणं यस्य। 2. ಮೇಲುಹೊದಿಕೆಯಿಲ್ಲದ, ಆಚ್ಛಾದನವಿಲ್ಲದ. "आववार तदथाम्बराञ्चलैः सा निरावृतिरिव त्रपावृता" नैष० १८-४७।

**निराश** ನಿರಾಶ (वि०) 1. ಆಸೆಯಿಲ್ಲದ, ಅಪೇಕ್ಷೆಯಿಲ್ಲದ. निर्गता आशा यस्मात्। 2. ಆಸೆಯನ್ನು ಬಿಟ್ಟಿರುವ, ಆಸೆಯನ್ನು ತೊರೆದಿರುವ. "ततो निराशः परिभावयन् परामये तयातोषि सरोषयेव सः" नैष० १६-१०६। "मनो बभूवेन्दुमतीनिराशम्" रघु० ६-२।

**निराशता** ನಿರಾಶತಾ (स्त्री०) ಆಸೆಯಿಲ್ಲದಿರುವಿಕೆ, ಆಸೆಯನ್ನು ತೊರೆದಿರುವಿಕೆ. निराशस्य भावः "तल्" (५-१-११९)। "गतो विरुत्योड्डयने निराशतां करौ निरोद्धुर्दंशति स्म केवलम्" नैष० १-१२५।

**निराशिस्** ನಿರಾಶಿಸ್ (वि०) 1. ಆಸೆ–ಅಭಿಲಾಷೆ–ಅಪೇಕ್ಷೆಯಿಲ್ಲದ. निर्गता आशीः अपेक्षा यस्मात्। "जगच्छरण्यस्य निराशिषः सतः किमेभिराशोपहतात्मवृत्तिभिः" कुमा० ५-७६। 2. ಆಸೆಯನ್ನು ತೊರೆದಿರುವ.

**निराश्रय** ನಿರಾಶ್ರಯ (वि०) 1. ಆಶ್ರಯವಿಲ್ಲದ, ವಸತಿಯಿಲ್ಲದ, ಆಧಾರವಿಲ್ಲದ. निर्गतः आश्रयो यस्मात्। "भवादृशाश्चेदधिकुर्वते रतिं निराश्रया हन्त हता मनस्विता" किरा० १-४३। 2. ಆಸರೆಯಿಲ್ಲದ, ಒತ್ತಾಸೆಯಿಲ್ಲದ, ಅವಲಂಬನವಿಲ್ಲದ.

**निरास** ನಿರಾಸ (पुं०) 1. ಓಡಿಸುವುದು, ಅಟ್ಟುವುದು, ಹೊರದೂಡುವುದು. निर् + असु (क्षेपणे) "घञ्" (३-३-१८)। "सभेव भीमा विदधे गणानां निद्रा निरासं प्रतिभागुणस्य" किरा० १६-२७। (वि०) 2. ಹೊರದೂಡುವ, ಅಟ್ಟುವ, ಓಡಿಸುವ. निर् +असु (क्षेपणे) "अच्" (३-१-१३४)।

**निरासक** ನಿರಾಸಕ (वि०) ಅಟ್ಟುವವನು, ಹೊರದೂಡುವವನು. निर्+असु (क्षेपणे) "ण्वुल्" (३-१-१३३)। "निरासकस्यापि न तावदुत्सहे महेश हातुं तव पादपङ्कजम्" स्तो० र० २६।

**निरासित** ನಿರಾಸಿತ (वि०) ಅಟ್ಟಲ್ಪಟ್ಟ, ಹೊರದೂಡಲ್ಪಟ್ಟ, ಓಡಿಸಲ್ಪಟ್ಟ. निर् + असु (क्षेपणे) "क्तः" (३-२-१०२)। "एतावता कालेन त्वया जगतामुपद्रवो निरासितः" म० वी० ७।

**निरास्थ** ನಿರಾಸ್ಥ (वि०) 1. ಆಸಕ್ತಿಯಿಲ್ಲದ. 2. ಆಸೆಯಿಲ್ಲದ, ಅಪೇಕ್ಷೆಯಿಲ್ಲದ. निर्गता आस्था यस्मात्।

**निरास्पद** ನಿರಾಸ್ಪದ (वि०) ಅವಕಾಶವಿಲ್ಲದ, ಎಡೆಯಿಲ್ಲದ, ಸ್ಥಾನವಿಲ್ಲದ. निर्गतमास्पदं यस्मात्। "निरास्पदं प्रश्नकुतूहलित्वमस्मास्वधीनं किमु निःस्पृहाणाम्" किरा० ३-९।

**निराहार** ನಿರಾಹಾರ (पुं०) 1. ಉಪವಾಸ, ಊಟವಿಲ್ಲದಿರುವುದು. निवृत्तः आहारः। "पश्चात्तापो निराहारः सर्वेऽमी शुद्धिहेतवः" याज्ञ० ३-३१। (न०) 2. ಆಹಾರದ ಅಭಾವ. (वि०) 3. ಆಹಾರವಿಲ್ಲದ, ಊಟವಿಲ್ಲದ. निर्गतः आहारः यस्य। "निराहाराः सख्यः सततरुदितोच्छूननयनाः" अमरु० ७।

**निरित्वर** ನಿರಿತ್ವರ (वि०) ನಿರ್ಗಮನದ ಸ್ವಭಾವದ, ಹೊರಡುವ ಸ್ವಭಾವದ. निर् + इण् (गतौ) "क्वरप्" (३-२-१६३)। "प्रसभमलयः पाथोजास्ये निविश्य निरित्वराः" नैष० १९-२७।

**निर् + ईक्ष (दर्शने)** 1. ಚೆನ್ನಾಗಿ ನೋಡು, ಎವೆಯಿಕ್ಕದೆ ನೋಡು. "यावदेतान्निरीक्षेऽहं योद्धुकामानवस्थितान्" गीता १-२२। 2. ದಿಟ್ಟಿಸಿ ನೋಡು, ಸರಿಯಾಗಿ ನೋಡು, ಗಮನಿಸು, ಜಾಗರೂಕತೆಯಿಂದ ನೋಡು. 3. ಎದುರು ನೋಡು. 4. ಹುಡುಕಿನೋಡು.

**निरीक्षक** ನಿರೀಕ್ಷಕ (वि०) 1. ಚೆನ್ನಾಗಿ ನೋಡುವವನು. 2. ಜಾಗರೂಕತೆಯಿಂದ ನೋಡುವವನು. 3. ಎದುರು ನೋಡುವವನು. निर्+ईक्ष (दर्शने) "ण्वुल्" (३-१-१३३)। 4. ಹುಡುಕಿ ನೋಡುವವನು.

**निरीक्षण** ನಿರೀಕ್ಷಣ (न०) 1. ಚೆನ್ನಾಗಿ ನೋಡುವುದು, ಎವೆಯಿಕ್ಕದೆ ನೋಡುವುದು. निर्+ईक्ष (दर्शने) "ल्युट्" (३-३-११५)। 2. ಜಾಗರೂಕತೆಯಿಂದ ನೋಡುವುದು, ದಿಟ್ಟಿಸಿ ನೋಡುವುದು. 3. ಬರುವವರನ್ನು ಎದುರು ನೋಡುವುದು. 4. ಹುಡುಕಿ ನೋಡುವುದು, ತಡಕುವುದು. (वि०) 5. ಚೆನ್ನಾಗಿ ನೋಡುವ. निरीक्षते—निर्+ईक्ष (दर्शने) "ल्युः" (३-१-१३४)। "प्राणापानौ सन्निरुन्ध्यात् पूरकुम्भकरेचकैः। यावन्मनस्त्यजेत् कामान् स्वनासाग्रनिरीक्षणः" भाग० ७-१५-३२।

**निरीक्षमाण** ನಿರೀಕ್ಷಮಾಣ (वि०) 1. ಚೆನ್ನಾಗಿ ನೋಡುತ್ತಿರುವ. निर्+ईक्ष (दर्शने) "शानच्" (३-२-१२४)। "सखीजनं प्रेमगुरूकृतादरं निरीक्षमाणा इव नम्रमूर्तयः" किरा० ८-११। 2. ಗಮನಿಸಿ ನೋಡುತ್ತಿರುವ. 3. ಎದುರುನೋಡುತ್ತಿರುವ. 4. ದಿಟ್ಟಿಸಿ ನೋಡುತ್ತಿರುವ.

**निरीक्षा** ನಿರೀಕ್ಷಾ (स्त्री०) 1. ಚೆನ್ನಾಗಿ ನೋಡುವುದು. निर्+ईक्ष (दर्शने) "अः" (३-३-१०३)। 2. ಗಮನಿಸಿ ನೋಡುವುದು. 3. ದಿಟ್ಟಿಸಿ ನೋಡುವುದು. 4. ಎದುರು ನೋಡುವುದು.

**निरीक्षित ನಿರೀಕ್ಷಿತ** (वि०) 1. ಚೆನ್ನಾಗಿ ನೋಡಲ್ಪಟ್ಟ. निर्+ईक्ष (दर्शने) "क्तः" (३-२-१०२)। "निरीक्षितं चाङ्गमवीक्षितं च दृशा पिबन्ती रभसेन तस्य" नैष० ८-१२। 2. ದಿಟ್ಟಿಸಿ ನೋಡಲ್ಪಟ್ಟ. "निरीय भूपेन निरीक्षितानना शशांस मौहूर्तिकसंसदंशकम्" नैष० १५-८। 3. ಹುಡುಕಲ್ಪಟ್ಟ. 4. ಎದುರುನೋಡಲ್ಪಟ್ಟ. "निरीक्षितौ मया भद्रे दश वर्षाणि पञ्च च" पञ्चतं० २-१५२।

**निरीक्षितव्य ನಿರೀಕ್ಷಿತವ್ಯ** (वि०) ಅವಶ್ಯವಾಗಿ ನೋಡಬೇಕಾದ. निर्+ईक्ष (दर्शने) "तव्यः" (३-१-९६)।

**निरीक्ष्यमाण ನಿರೀಕ್ಷ್ಯಮಾಣ** (वि०) 1. ನೋಡಲ್ಪಡುತ್ತಿರುವ. निर्+ईक्ष (दर्शने) कर्म० "शानच्" (३-२-१२४)। "निरीक्ष्यमाणा इव विस्मयाकुलैः पयोभिरुन्मीलितपद्मलोचनैः" किरा० ४-३। 2. ಎದುರುನೋಡಲ್ಪಡುತ್ತಿರುವ, ಪ್ರತೀಕ್ಷಿಸಲ್ಪಡುತ್ತಿರುವ.

**निरीति ನಿರೀತಿ** (स्त्री०) ಈತಿಬಾಧೆಯಿಲ್ಲದ, ಅತಿವೃಷ್ಟಿ ಅನಾವೃಷ್ಟಿ ಮೊದಲಾದ ಉಪದ್ರವವಿಲ್ಲದ. निर्गता ईतिर्यत्र। "पुरुषायुषजीविन्यो निरातङ्का निरीतयः" रघु० २-६३।

**निरीश्वर ನಿರೀಶ್ವರ** (वि०) 1. ಈಶ್ವರನನ್ನು ಅಂಗೀಕರಿಸದಿರುವ (ಒಪ್ಪದಿರುವ) ಸಾಂಖ್ಯಮತಾನುಯಾಯಿ.

ಸಾಂಖ್ಯರಲ್ಲಿ ಸೇಶ್ವರಸಾಂಖ್ಯರು ನಿರೀಶ್ವರಸಾಂಖ್ಯರು ಎಂದು ಎರಡು ಭೇದ. ಏಕೇಶ್ವರವಾದಿಗಳು ಸೇಶ್ವರ ಸಾಂಖ್ಯರು. ಪ್ರವಾಹೇಶ್ವರವಾದಿಗಳು ನಿರೀಶ್ವರಸಾಂಖ್ಯರು. ಅಣಿಮಾದಿ ಸಿದ್ಧಿಯುಳ್ಳ ಕಪಿಲಮಹರ್ಷಿಯು ಕಲ್ಪಾದಿಯಲ್ಲಿ ವೇದಾದಿ ಆಗಮಗಳನ್ನು ಪ್ರಕಾಶಪಡಿಸಿದುದರಿಂದ ಅವನು ಈಶ್ವರಸ್ಥಾನದಲ್ಲಿರುವನು. ಇಂತಹ ಸಿದ್ಧಪುರುಷರು ಪ್ರತಿಕಲ್ಪದಲ್ಲೂ ಒಬ್ಬರು ಬರುವ ಕಾರಣ ಶಾಶ್ವತವಾದ ಒಬ್ಬ ಈಶ್ವರನಿಲ್ಲವೆಂದು ಸಿದ್ಧಾಂತವಾದುದರಿಂದ ಇವರು ನಿರೀಶ್ವರವಾದಿಗಳು ಮತ್ತು ಪ್ರವಾಹೇಶ್ವರವಾದಿಗಳು. ಶಾಶ್ವತವಾದ ಒಬ್ಬ ಈಶ್ವರನನ್ನು ಅಂಗೀಕರಿಸಿರುವ ಪಾತಂಜಲಯೋಗಸಿದ್ಧಾಂತದವರು ಸೇಶ್ವರಸಾಂಖ್ಯರು. ಯೋಗದರ್ಶನದಲ್ಲಿ ಶ್ರೌತಸ್ಮಾರ್ತಕರ್ಮಗಳಿಂದ ಪರಮೇಶ್ವರ ಪ್ರೀತಿಯನ್ನೂ ಅನುಗ್ರಹವನ್ನೂ ಸಂಪಾದಿಸಬೇಕೆಂದು ಉಕ್ತವಾಗಿರುವುದರಿಂದ ಈಶ್ವರಭಕ್ತಿಗೆ ಪ್ರಾಧಾನ್ಯವುಂಟು. ಸಾಂಖ್ಯಶಾಸ್ತ್ರದಿಂದ ತತ್ತ್ವಜ್ಞಾನವನ್ನು ಸಂಪಾದಿಸಿ ಯೋಗಶಾಸ್ತ್ರದಿಂದ ಭಕ್ತಿಪೂರ್ವಕ ಕರ್ಮಾನುಷ್ಠಾನ ಮಾಡಿ ಮೋಕ್ಷವನ್ನು ಪಡೆಯಬೇಕೆಂಬ ಅಭಿಪ್ರಾಯದಿಂದ ಸಾಂಖ್ಯಯೋಗಗಳನ್ನು ಕೂಡಿಸಿ ವ್ಯವಹರಿಸುತ್ತಾರೆ. 2. ಈಶ್ವರನಿಲ್ಲವೆಂಬ ವಾದ.

**निरीष ನಿರೀಷ** (न०) ಈಚಿಲ್ಲದ ನೇಗಿಲು, ದಂಡವಿಲ್ಲದ ನೇಗಿಲು. निर्गतः ईषायाः।

**निरीह ನಿರೀಹ** (वि०) 1. ಅಪೇಕ್ಷೆಯಿಲ್ಲದ, ಇಚ್ಛೆಯಿಲ್ಲದ, ಅಭಿಲಾಷೆಯಿಲ್ಲದ. निर्गता ईहा यस्य। 2. ಯಾವ ವ್ಯಾಪಾರವೂ ಇಲ್ಲದ, ಯಾವ ಕಾರ್ಯವೂ ಇಲ್ಲದ, "अजस्य गृह्णतो जन्म निरीहस्य हतद्विषः" रघु० १०-२४।

**निरीहा ನಿರೀಹಾ** (स्त्री०) ಆಸೆಯಿಲ್ಲದಿರುವುದು, ಅಪೇಕ್ಷೆಯಿಲ್ಲದಿರುವುದು. निर्गता ईहा।

**निरुक्त ನಿರುಕ್ತ** (न०) 1. ಪದಗಳ ಅವಯವಾರ್ಥಗಳನ್ನು ಹೇಳುವುದು. निर्+वच (परिभाषणे) भावे "क्तः" (३-३-११४)। 2. ವೈದಿಕ ಪದಗಳ ಅರ್ಥಗಳನ್ನು ನಿಶ್ಚಯಿಸಿ ಹೇಳುವ ಒಂದು ಗ್ರಂಥ. निः निश्चयेन उक्तम्, निरुच्यते अनेनेति वा। ನಿರುಕ್ತವು ಆರು ವೇದಾಂಗಗಳಲ್ಲೊಂದು. ಇದು ವೇದಪುರುಷನ ಶ್ರೋತ್ರರೂಪವಾದುದು. "छन्दः पादौ तु वेदस्य हस्तौ कल्पोऽथ पठ्यते। ज्योतिषामयनं चक्षुर्निरुक्तं श्रोत्रमुच्यते। शिक्षा घ्राणं तु वेदस्य मुखं व्याकरणं स्मृतम्। तस्मात्साङ्गमधीत्यैव ब्रह्मलोके महीयते" पा० शि० ४१-४२। ನಿರುಕ್ತವು ಯಾಸ್ಕಮುನಿ ಪ್ರಣೀತವಾದುದು. ಇದು ವೈದಿಕ ಪದಗಳ ಅರ್ಥನಿರ್ವಚನಕ್ಕಾಗಿಯೇ ಹೊರಟಿರುವುದರಿಂದ ಇದರ ಅಧ್ಯಯನವು ಅತ್ಯವಶ್ಯವಾದುದು. ನಿರುಕ್ತವು ನಿಘಂಟು ಗ್ರಂಥಕ್ಕೆ ಭಾಷ್ಯರೂಪವಾಗಿರುವುದು. ಕ್ಲಿಷ್ಟವಾದ ಅನೇಕ ವೈದಿಕ ಶಬ್ದಗಳನ್ನೆಲ್ಲಾ ಪೃಥಕ್ಕಾಗಿ ಸಂಗ್ರಹಿಸಿ ರಚಿಸಿರುವ ಗ್ರಂಥವು ನಿಘಂಟುವೆಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಈ ಶಬ್ದಗಳ ಅರ್ಥನಿರ್ವಚನವು ನಿರುಕ್ತದಲ್ಲಿ ಮಾಡಲಾಗಿರುವುದರಿಂದ ಇದು ವೇದಾಂಗವಾಯಿತು. ನಿಘಂಟುವಿನಲ್ಲಿ ಐದು ಅಧ್ಯಾಯಗಳೂ ಮೂರು ಕಾಂಡಗಳೂ ಇವೆ. (1) नैघण्टुककाण्डः, (2) नैगमकाण्डः, (3) दैवतकाण्डः। "तमिमं समाम्नायं निघण्टवः इत्याचक्षते" निरु० १-१-२। ಋಗ್ವೇದಭಾಷ್ಯದ ಪ್ರಾರಂಭದಲ್ಲಿ "पञ्चाध्यायरूपकाण्डत्रयात्मके एतस्मिन् ग्रन्थे परनिरपेक्षितया पदार्थस्योक्तत्वात् तस्य ग्रन्थस्य निरुक्तत्वम्"। तद्व्याख्यानं च "समाम्नायः समाम्नातः स व्याख्यातव्यः" ಎಂದು ಉಕ್ತವಾಗಿದೆ. "वर्णागमो वर्णविपर्ययश्च द्वौ चापरौ वर्णविकारनाशौ। धातोस्तदर्थातिशयेन योगस्तदुच्यते पञ्चविधं निरुक्तम्" ಎಂದು ನಿರುಕ್ತವು ಐದು ವಿಧವಾಗಿ ಉಕ್ತ

ವಾಗಿದೆ. ಯಾಸ್ಕಮುನಿಯು ಶಬ್ದರಾಶಿಯನ್ನು (1) नाम-पदानि, (2) क्रियापदानि, (3) उपसर्गाः ಮತ್ತು (4) निपाताः ಎಂದು ನಾಲ್ಕು ವಿಧವಾಗಿ ಹೇಳಿರುತ್ತಾರೆ. "तत्रान्येतानि चत्वारि पदजातानि नामाख्याते चोपसर्ग-निपाताश्च तानीमानि भवन्ति" निरु० १-१-८।

**ನಿರುಕ್ತದಲ್ಲಿ ಬರುವ ವಿಚಾರಗಳು :** ನಾಮಪದ ಕ್ರಿಯಾಪದ ಉಪಸರ್ಗ ಮತ್ತು ನಿಪಾತಗಳ ಲಕ್ಷಣ, ಭಾವ ವಿಕಾರಲಕ್ಷಣ, ನಾಮಪದಗಳು ಧಾತುಜಗಳು ಎಂಬ ನಿರ್ಣಯ, ಮಂತ್ರಗಳ ಅರ್ಥವತ್ತ್ವ ಸ್ಥಾಪನೆ, ಮಂತ್ರಗಳ ದೇವತಾಪರಿಜ್ಞಾನ, ಅರ್ಥಜ್ಞಪ್ರಶಂಸೆ ಮತ್ತು ಅನರ್ಥಜ್ಞ ನಿಂದೆ, ನೈಘಂಟುಕ, ನೈಗಮ ಮತ್ತು ದೇವತಾಕಾಂಡಗಳ ವಿಭಾಗ, ನಿರ್ವಚನಕ್ರಮದ ಪ್ರತಿಪಾದನೆ ಇತ್ಯಾದಿ. ಎಲ್ಲಾ ನಾಮಪದಗಳೂ ಆಖ್ಯಾತಜಗಳೆಂದು ಇವರ ಸಿದ್ಧಾಂತ. "आख्यातजानीति शाकटायनः नैरुक्तसमयश्च" निरु० १-१२-२। ನೈಘಂಟುಕಕಾಂಡದಲ್ಲಿ ಏಕಾರ್ಥವಾಚಿಯಾದ ಅನೇಕ ಶಬ್ದಗಳ ಗಣಗಳು 69. ಒಟ್ಟು 1339 ಪದಗಳು. ನೈಗಮಕಾಂಡದಲ್ಲಿ ಏಕಪದಿಗಳು 278 ಪದಗಳು. ದೈವತ ಕಾಂಡದಲ್ಲಿ 6 ಗಣಗಳು — ಒಟ್ಟು 151 ಪದಗಳು ಈ ರೀತಿ ವಿಂಗಡಿಸಿರುತ್ತಾರೆ. ಇವುಗಳಲ್ಲಿ ನೈಘಂಟುಕಕಾಂಡದ ಗಣಗಳಲ್ಲಿ ಮುಖ್ಯವಾದ ಪದಗಳಿಗೂ ನೈಗಮ ಮತ್ತು ದೈವತ ಕಾಂಡಗಳ ಪ್ರತಿಯೊಂದು ಪದಕ್ಕೂ ನಿರ್ವಚನಮಾಡಿ ಮಂತ್ರಗಳ ಉದಾಹರಣೆಗಳನ್ನು ಕೊಡುವುದರ ಮೂಲಕ ನಿರುಕ್ತದಲ್ಲಿ ಅರ್ಥವಿವರಣೆ ಮಾಡಿರುತ್ತಾರೆ. ಯಾಸ್ಕ ಮುನಿಗಿಂತ ಪೂರ್ವದಲ್ಲಿ ಅನೇಕ ನಿರುಕ್ತಕಾರರು ಇದ್ದರೆಂದು ಯಾಸ್ಕರು ಹೇಳಿರುವ ऐतिहासिकाः, वैयाकरणाः, पूर्वे याज्ञिकाः, नैरुक्ताः ಎಂಬ ಮಾತುಗಳಿಂದ ತಿಳಿಯಬಹುದಾಗಿದೆ. आग्रायणः औदुम्बरायणः औपमन्यवः कात्थक्यः कौत्सः गार्ग्यः गालवः कैटकिः शाकल्यः शाकपूणिः ಇತ್ಯಾದಿ ನಿರುಕ್ತಕಾರರ ಹೆಸರನ್ನು ನಾಮತಃ ನಿರ್ದೇಶಿಸಿರುತ್ತಾರೆ. ವೇದಮಂತ್ರಗಳಿಗೆ ಆನುಪೂರ್ವಿಯೇ ಪ್ರಧಾನವಾದುದು, ಅರ್ಥವಲ್ಲ ಎಂಬ ವಾದವನ್ನು ನಿರಾಕರಿಸಿ ಯಾಸ್ಕರು ಲೋಕದಲ್ಲಿ ವ್ಯವಹಾರದಲ್ಲಿರುವ ಸಾಮಾನ್ಯ ಶಬ್ದಗಳನ್ನೇ ವೇದಮಂತ್ರಗಳಲ್ಲಿಯೂ ಉಪಯೋಗಿಸಿರುವುದರಿಂದ ವೇದಮಂತ್ರಗಳು ಅರ್ಥವತ್ತಾದುವು ಎಂದು ಸಿದ್ಧಾಂತ ಮಾಡಿದ್ದಾರೆ. "अर्थवन्तः शब्दसामान्यात्" निरु० १-१५-१०। ಅಯಾ ಪ್ರಕರಣಕ್ಕನುಗುಣವಾಗಿ ನಿರ್ದಿಷ್ಟವಾದ ಮಂತ್ರಗಳನ್ನು ಉಪಯೋಗಿಸಬೇಕೆಂದು ತೋರಿಸುವ ಬ್ರಾಹ್ಮಣಮಂತ್ರಗಳೂ ಅರ್ಥವತ್ತುವು. ವಿವಾಹದಲ್ಲಿ ವಿನಿಯೋಗಿಸುವ ಒಂದು ಮಂತ್ರದಲ್ಲಿ "ನೀವು (ದಂಪತಿಗಳು) ಇಬ್ಬರೂ ಈ ಮನೆಯಲ್ಲೇ ಸಂತೋಷದಿಂದಿರಿ. ನಿಮಗೆ ಯಾವಾಗಲೂ ವಿಯೋಗವಿಲ್ಲದಿರಲಿ. ಪೂರ್ಣಾಯುಸ್ಸನ್ನು ಹೊಂದಿ ಪುತ್ರಪೌತ್ರಾದಿಗಳೊಡನೆ ಕ್ರೀಡಿಸುತ್ತಿರಿ ಎಂಬ ಆಶೀರ್ವಚನ ಮಂತ್ರಕ್ಕೆ ಅರ್ಥವಿರುವುದು" ಎಂದು ಸಮಾಧಾನ ಹೇಳಿರುವರು. ಯಾಸ್ಕರು ಉಪಮಾಲಂಕಾರದ ಲಕ್ಷಣವನ್ನು ಹೇಳಿ "इति कर्मोपमा", "इति भूतोपमा", "इति रूपोपमा", "इति सिद्धोपमा" ಇತ್ಯಾದಿ ಉಪಮಾಲಂಕಾರದ ಕೆಲವು ಪ್ರಭೇದಗಳನ್ನೂ ಹೇಳಿರುವುದರಿಂದ ವೇದಗಳಲ್ಲಿಯೂ ಅಲಂಕಾರಶಾಸ್ತ್ರವು ಪ್ರಾರಂಭಾವಸ್ಥೆಯಲ್ಲಿತ್ತೆಂದು ತಿಳಿಯಬಹುದಾಗಿದೆ. ಯಾಸ್ಕರ ಕಾಲದಲ್ಲಿ ಸಮಾಜವು ವೇದದಲ್ಲಿ ಸಂಪೂರ್ಣ ನಂಬಿಕೆಯನ್ನು ಹೊಂದಿತ್ತೆಂದೂ ವೇದವಿರುದ್ಧವಾದ ಜೈನ ಬೌದ್ಧ ಧರ್ಮಗಳ ಪ್ರಭಾವವಿರಲಿಲ್ಲವೆಂದೂ ನಿರುಕ್ತದಿಂದ ತಿಳಿಯಬಹುದಾಗಿದೆ. ಆದರೆ ವೇದವಾಙ್ಮಯವು ಸರ್ವರಿಗೂ ಅರ್ಥವಾಗುತ್ತಿರಲಿಲ್ಲವೆಂದೂ ತಿಳಿಯಬೇಕಾಗುವುದು. ಮಂತ್ರಬ್ರಾಹ್ಮಣಾತ್ಮಕವಾದ ಸಮಗ್ರ ವೇದರಾಶಿಯನ್ನು ಯಾಸ್ಕಮುನಿಯು ವಿಮರ್ಶಾತ್ಮಕ ದೃಷ್ಟಿಯಿಂದ ನೋಡಿ ಅಂದಿನ ಕಾಲದ ಅಭಿಪ್ರಾಯಗಳನ್ನು ತಮ್ಮ ದೈವತಕಾಂಡದ ಟೀಕೆಯಲ್ಲಿ ನಿರೂಪಿಸಿರುತ್ತಾರಾದುದರಿಂದ ಪ್ರಾಚೀನವಾದ ವೈದಿಕ ಸಾಹಿತ್ಯದ ಇತಿಹಾಸದ ಅರಿವು ಭಾರತೀಯರಲ್ಲಿ ಆಗಿನಿಂದಲೂ ಇತ್ತೆಂದು ನಾವು ತಿಳಿಯಬಹುದಾಗಿದೆ.

**निरुक्तकृत् ನಿರುಕ್ತಕೃತ್** (ಪುಂ०) ನಿರುಕ್ತ ಗ್ರಂಥವನ್ನು ಬರೆದ ಯಾಸ್ಕಮುನಿ.

**निरुक्तज ನಿರುಕ್ತಜ** (ಪುಂ०) ಕ್ಷೇತ್ರಜ ಪುತ್ರ, ನಿಯೋಗವನ್ನು ಪಡೆದವನಿಂದ ಜನಿಸಿದ ಪುತ್ರ. निरुक्तात् नियुक्तात् जातः जनी (प्रादुर्भावे) "डः" (३-२-९८)।

**निरुक्ति ನಿರುಕ್ತಿ** (स्त्री०) 1. ನಿರ್ವಚನ, ಪದಗಳ ಅವಯವಾರ್ಥಗಳನ್ನು ಹೇಳುವುದು. निर् + वच (परिभाषणे) "क्तिन्" (३-३-९४)। "तदङ्गभोगावलिगायनीनां मध्ये निरुक्तिक्रमकुण्ठितानाम्" नैष० १०-१०६। 2. ಅವಯವ ಶಕ್ತಿಯಿಂದ ನಾಮಪದಗಳಿಗೆ ಬೇರೊಂದು ಅರ್ಥವನ್ನು ಕಲ್ಪಿಸುವುದು. ಇದು ಅರ್ಥಾಲಂಕಾರದ ಒಂದು ಭೇದ. "निरुक्तिर्योगतो नाम्नामन्यार्थत्वप्रकल्पनम्" चन्द्रा०। उदा :—"ईदृशैश्चरितैर्जाने सत्यं दोषाकरो भवान्"।

**निरुच्छ्वास ನಿರುಚ್ಛ್ವಾಸ** (ಪುಂ०) 1. ಉಸಿರಾಡದಿರುವಿಕೆ, ಶ್ವಾಸವನ್ನು ತಡೆದಿರುವಿಕೆ. निर्गतः उच्छ्वासः। (वि०) 2. ಉಸಿರಾಡದಿರುವ, ಉಸಿರು ಕಟ್ಟಿರುವ, "गणैरविच्छेद-

निरुद्धमाबभौ वनं निरुच्छ्वासमिवाकुलाकुलम्" किरा० १४-३२। 3. ಉಸಿರಾಡಲೂ ಅವಕಾಶವಿಲ್ಲದಷ್ಟು ಇಕ್ಕಟ್ಟಾದ. "उपेयुषो वर्त्म निरन्तराभिरसौ निरुच्छ्वासमनीकिनीभिः" माघ० ३-३२।

**निरुच्यमान ನಿರುಚ್ಯಮಾನ** (वि०) ಚೆನ್ನಾಗಿ ಹೇಳಲ್ಪಡುತ್ತಿರುವ, ಸ್ಪಷ್ಟವಾಗಿ ವಿವರಿಸಿ ಹೇಳಲ್ಪಡುತ್ತಿರುವ. निर्+वच (परिभाषणे) कर्म० "शानच्" (३-२-१२४)। "निरुच्यमानं प्रश्नं च नेच्छेच्चापि निष्पतेत्" मनु० ८-५५।

**निरुञ्छन ನಿರುಂಛನ** (न०) ಪರಸ್ಪರ ವಸ್ತ್ರಗಳನ್ನು ಬದಲಾಯಿಸಿಕೊಳ್ಳುವುದು. निर्+उछि (उञ्छे) "ल्युट्" (३-३-११५)। "सान्द्रप्रमोदात् पुलकोपगूढः सर्वाङ्गसंफुल्लसहस्रनेत्रः। तस्योत्तरीयेण निजाम्बरेण निरुञ्छनं चारु चकार शक्रः" कुमा० १३-१८।

**निरुत्तर ನಿರುತ್ತರ** (वि०) 1. ಉತ್ತರವಿಲ್ಲದ, ಪ್ರತಿವಚನವಿಲ್ಲದ, ಬದಲು ಹೇಳದಿರುವ. निर्गतमुत्तरं प्रतिवचनं यस्य। 2. ಶ್ರೇಷ್ಠನಿಲ್ಲದ. निर्गतः उत्तरः श्रेष्ठो यत्र।

**निरुत्सव ನಿರುತ್ಸವ** (वि०) ಉತ್ಸವವಿಲ್ಲದ, ಹಬ್ಬಗಳಿಲ್ಲದ. निर्गतः उत्सवः यस्मात्। "धृतिरस्तमिता रतिश्च्युता विरतं गेयमृतुर्निरुत्सवः" रघु० ८-६६।

**निरुत्साह ನಿರುತ್ಸಾಹ** (पुं०) 1. ಉತ್ಸಾಹವಿಲ್ಲದಿರುವಿಕೆ, ಯಾವ ವಿಷಯದಲ್ಲೂ ಇಚ್ಛೆಯಿಲ್ಲದಿರುವಿಕೆ. निर्गतः उत्साहः। (वि०) 2. ಉತ್ಸಾಹವಿಲ್ಲದ. 3. ಸೋಮಾರಿಯಾದ, ಮೈಗಳ್ಳನಾದ. "निरुत्साहं निरानन्दं निर्वीर्यमरिनन्दनम्" हितो० २-७।

**निरुत्सुक ನಿರುತ್ಸುಕ** (वि०) ಬಹಳ ಉತ್ಸುಕನಾದ, ಇಷ್ಟವಾದುದನ್ನು ಪಡೆಯಲು ತವಕಪಡುವ. नितरामुत्सुकः। "निरुत्सुकानामभियोगभाजां समुत्सुकेवाङ्कमुपैति सिद्धिः" किरा० ३-४०।

**निरुत्सेक ನಿರುತ್ಸೇಕ** (वि०) ಗರ್ವವಿಲ್ಲದ, ಅಹಂಕಾರವಿಲ್ಲದ.

**निरुद्ध ನಿರುದ್ಧ** (वि०) 1. ತಡೆಯಲ್ಪಟ್ಟ, ಬಿಗಿಹಿಡಿಯಲ್ಪಟ್ಟ. नि+रुधिर् (आवरणे) "क्तः" (३-२-१०२)। "अवेक्षितानायतवल्गमग्रे तुरङ्गिभिर्यत्ननिरुद्धवाहैः" माघ० ३-३०। 2. ತಡೆಯಲ್ಪಟ್ಟ, ಅಡ್ಡಿ ಮಾಡಲ್ಪಟ್ಟ. "निरुद्धवीवधासारप्रसारा गा इव व्रजम्। उपरुन्धन्तु दाशार्हाः पुरीं माहिष्मतीं द्विषः" माघ० २-६४। 3. ತಡೆದುಕೊಳ್ಳಲ್ಪಟ್ಟ, ಒಳಗೇ ಅಡಗಿಸಿಕೊಳ್ಳಲ್ಪಟ್ಟ. "निरुद्धबाष्पोदयसन्नकण्ठमुवाच कृच्छ्रादिति राजपुत्री" किरा० ३-३८। 4. ಆಕ್ರಮಿಸಲ್ಪಟ್ಟ, ಸುತ್ತುವರೆಯಲ್ಪಟ್ಟ. "गणैरविच्छेदनिरुद्धमाबभौ वनं निरुच्छ्वासमिवाकुलाकुलम्" किरा० १४-३२।

**निरुद्धवत् ನಿರುದ್ಧವತ್** (वि०) 1. ಬಿಗಿಹಿಡಿದವನು. 2. ತಡೆದವನು. 3. ಅಡಗಿಸಿಕೊಂಡವನು. 4. ಆಕ್ರಮಿಸಿದವನು. नि+रुधिर् (आवरणे) "क्तवतुः" (३-२-१०२)।

**निरुद्यम ನಿರುದ್ಯಮ** (पुं०) 1. ಪ್ರಯತ್ನವಿಲ್ಲದಿರುವಿಕೆ. 2. ಯಾವ ಕಾರ್ಯವೂ ಇಲ್ಲದಿರುವಿಕೆ. (वि०) 3. ಪ್ರಯತ್ನವಿಲ್ಲದ. 4. ಸೋಮಾರಿಯಾದ, ಯಾವ ಚಟುವಟಿಕೆಯೂ ಇಲ್ಲದ.

**निरुद्योग ನಿರುದ್ಯೋಗ** (वि०) "निरुद्यम" ನೋಡಿ.

**निरुद्योगिन् ನಿರುದ್ಯೋಗಿನ್** (वि०) ಯಾವ ಕೆಲಸವೂ ಇಲ್ಲದ, ಯಾವ ಕಾರ್ಯಕಲಾಪವೂ ಇಲ್ಲದ. निरुद्योग "इनिः" (५-२-११५)।

**निरुद्वेग ನಿರುದ್ವೇಗ** (पुं०) 1. ಗಾಬರಿಯಿಲ್ಲದಿರುವಿಕೆ, ಕಳವಳವಿಲ್ಲದಿರುವಿಕೆ. 2. ಭಯವಿಲ್ಲದಿರುವಿಕೆ, ಹೆದರಿಕೆಯಿಲ್ಲದಿರುವಿಕೆ. 3. ಅಸಮಾಧಾನವಿಲ್ಲದಿರುವಿಕೆ, ಶಾಂತವಾಗಿರುವಿಕೆ. निर्गतः उद्वेगः।

**निरुध्यमान ನಿರುಧ್ಯಮಾನ** (वि०) 1. ತಡೆಯಲ್ಪಟ್ಟ, ಅಡ್ಡಿ ಮಾಡಲ್ಪಟ್ಟ. नि+रुधिर् (आवरणे) कर्म० "शानच्" (३-२-१२४)। 2. ತಡೆಯಲ್ಪಟ್ಟ, ಬಿಗಿಹಿಡಿಯಲ್ಪಟ್ಟ. "निरुध्यमाना यदुभिः कथंचिन्मुहुर्यदुच्चिक्षिपुरग्रपादान्" माघ० ३-२९। 3. ಆಕ್ರಮಿಸಲ್ಪಟ್ಟ. "निरुध्यमानं निकरेण भासाम्" किरा० १६-४५। 4. ಒಳಗೇ ಅಡಗಿಸಿಕೊಳ್ಳಲ್ಪಟ್ಟ, ತಡೆದುಕೊಳ್ಳಲ್ಪಟ್ಟ.

**निरुन्धत् ನಿರುಂಧತ್** (वि०) 1. ತಡೆಯುತ್ತಿರುವ, ಅಡ್ಡಿ ಮಾಡುತ್ತಿರುವ. नि+रुधिर् (आवरणे) "शतृ" (३-२-१२४)। 2. ಆಕ್ರಮಿಸುತ್ತಿರುವ, ಆವರಿಸುತ್ತಿರುವ. "द्यां निरुन्धदतिनीलघनाभं ध्वान्तमुद्यतकरेण पुरस्तात्" किरा० ९-२०। 3. ತಡೆದುಕೊಳ್ಳುತ್ತಿರುವ, ಒಳಗೇ ಅಡಗಿಸಿಕೊಳ್ಳುತ್ತಿರುವ. 4. ತಡೆಯುತ್ತಿರುವ, ಬಿಗಿಹಿಡಿಯುತ್ತಿರುವ. स्त्रियां "ङीप्" (४-१-६)। **–न्धती –ರುಂಧತೀ.** "विपाण्डु संव्यानमिवानिलोद्धतं निरुन्धतीः सप्तपलाशजं रजः" किरा० ४-२८। "प्रसक्तदावानलधूमधूम्रा निरुन्धती धाम सहस्ररश्मेः" किरा० ९-२६।

**निरुन्धान ನಿರುಂಧಾನ** (वि०) 1. ತಡೆಗಟ್ಟುತ್ತಿರುವ, ಅಡ್ಡಿಪಡಿಸುತ್ತಿರುವ. नि+रुधिर् (आवरणे) "शानच्" (३-२-१२४)। "निरुन्धानाः सतां मार्गं भक्षयन्ति महीपतिम्" कामन्द० ४-१२। 2. ಆಕ್ರಮಿಸುತ್ತಿರುವ, ಆವರಿಸುತ್ತಿರುವ. 3. ಬಿಗಿಹಿಡಿಯುತ್ತಿರುವ. 4. ಒಳಗೆ ಅಡಗಿಸಿಕೊಳ್ಳುತ್ತಿರುವ.

**निरुपकारिन् ನಿರುಪಕಾರಿನ್** (वि०) ಉಪಕಾರಮಾಡದಿರುವ. "तुल्यरूपमसितोत्पलमक्षणोः कर्णगं निरुपकारि विदित्वा" किरा० ९-६१।

**निरुपक्रम ನಿರುಪಕ್ರಮ** (वि०) 1. ಚಿಕಿತ್ಸೆಯನ್ನು ಪ್ರಾರಂಭಿಸಲು ಯೋಗ್ಯವಲ್ಲದ, (ರೋಗ) ವಾಸಿಮಾಡಲಾಗದ 2. ಪ್ರಾರಂಭಿಸದಿರುವ, ಕಾರ್ಯಕ್ಕೆ ಮೊದಲು ಮಾಡದಿರುವ.

**निरुपद्रव ನಿರುಪದ್ರವ** (वि०) 1. ತೊಂದರೆಯಿಲ್ಲದ, ಹಿಂಸೆಯಿಲ್ಲದ. 2. ಅಪಾಯವಿಲ್ಲದ, ಹಿಂಸೆಯಿಲ್ಲದ. 3. ಅಪಾಯವಿಲ್ಲದ, ಯಾವ ವಿಧವಾದ ಕೆಡಕೂ ಇಲ್ಲದ. निर्गतः उपद्रवः यस्मात्।

**निरुपधि ನಿರುಪಧಿ** (वि०) 1. ಕಪಟವಿಲ್ಲದ, ಮೋಸವಿಲ್ಲದ, ವಂಚನೆಯಿಲ್ಲದ. निर्गतः उपधिः यस्मात्। 2. ಆತಂಕವಿಲ್ಲದ, ನೆಮ್ಮದಿಯಿಂದಿರುವ. "निरुपधिनिजावस्थालक्ष्मीविलक्षणमीक्ष्यते" नैष० १९-१३। वा "कप्" (५-४-१५४)। **–उपधिकः –ಉಪಧಿಕಃ**. "निरुपधिकनिजप्रभावगर्भं परिषदि विश्वपतिः प्रियासहायः" याद० २४-४१।

**निरुपपद ನಿರುಪಪದ** (वि०) ಉಪಪದವಿಲ್ಲದ, ಹಿಂದೆ ಯಾವ ಪದವೂ ಇಲ್ಲದ (ಪದ). निर् नास्ति उपपदं यस्य। "कथं निरुपपद एव चाणक्यो न आर्यचाणक्य इति" मुद्रा० ३।

**निरुपप्लव ನಿರುಪಪ್ಲವ** (वि०) ತೊಂದರೆಯಿಲ್ಲದಿರುವ, ಬಾಧೆಯಿಲ್ಲದಿರುವ. निर्गतः उपप्लवो यस्मात्। "प्रतिघातिनीं विषयसङ्गरतिं निरुपप्लवः शमसुखानुभवः" किरा० ६-२१।

**निरुपम ನಿರುಪಮ** (वि०) ಅನ್ಯಾದೃಶವಾದ, ಹೋಲಿಕೆಯಿಲ್ಲದ, ಸಾಟಿಯಿಲ್ಲದ. निर्गता उपमा यस्मात्।

**निरुपसर्ग ನಿರುಪಸರ್ಗ** (वि०) 1. प्र परा ಮೊದಲಾದ ಉಪಸರ್ಗದೊಡನೆ ಸೇರಿರದ. 2. ಯಾವ ಪೀಡೆಯೂ ಇಲ್ಲದ, ಯಾವ ಉಪದ್ರವವೂ ಇಲ್ಲದ. 3. ಉತ್ಪಾತ ಮೊದಲಾದ ಯಾವ ಅಶುಭಸೂಚನೆಯೂ ಇಲ್ಲದ. निर्गतः उपसर्गः यस्मात्।

**निरुपाख्य ನಿರುಪಾಖ್ಯ** (वि०) 1. ವರ್ಣಿಸಲು ಅಶಕ್ಯವಾದ, ಹೊಗಳಲು ಸಾಧ್ಯವಲ್ಲದ. निर्गता उपाख्या यस्मात्। "प्रापुस्तमेकं निरुपाख्यरूपं ब्रह्मेव चेतांसि यतव्रतानाम्" नैष० ३-३। 2. ವಾಸ್ತವವಾಗಿಲ್ಲದ, ಕಾಲ್ಪನಿಕ, ಸುಳ್ಳಾಗಿರುವ. (न०) 3. ಅನಿರ್ವಚನೀಯವಾದ ಬ್ರಹ್ಮ.

**निरुपाधिक ನಿರುಪಾಧಿಕ** (अव्य०) ಯಾವ ವಿಧವಾದ ಕಾರಣವೂ ಇಲ್ಲದೆ, ಯಾವ ನಿಮಿತ್ತವೂ ಇಲ್ಲದೆ. निर्गतः उपाधिः यस्मिन् कर्मणि। "निरुपाधिकसर्वबन्धुमेनं द्विषताऽनेन न भाषणप्रसङ्गः" याद० १५-७१।

**निरुपाय ನಿರುಪಾಯ** (वि०) ಉಪಾಯವಿಲ್ಲದ, ಯಾವ ವಿಧವಾದ ಯುಕ್ತಿಯೂ ಇಲ್ಲದ. निर्गतः उपायः यस्मात्। "उच्छिद्यमानो बलिना निरुपायप्रतिक्रियः" कामन्द०।

**निरूढ ನಿರೂಢ** (वि०) ಚೆನ್ನಾಗಿ ಬೆಳೆದುಬಂದಿರುವ, ಅಭಿವೃದ್ಧಿಹೊಂದಿರುವ. नि + रुह (बीजजन्मनि प्रादुर्भावे च) "क्तः" (३-४-७२)। "बाल्यात् प्रभृत्येव निरूढसख्यं सुग्रीवमेष ध्रुवमाश्रयेत" म० वी० ४-९।

**निरूढलक्षणा ನಿರೂಢಲಕ್ಷಣಾ** (स्त्री०) ವಿವಕ್ಷೆಗೆ ವಿಷಯವಾದ ಶಕ್ಯಸಂಬಂಧರೂಪವಾದ ಲಕ್ಷಣೆ. "कर्मणि कुशलः" ಎಂಬಲ್ಲಿ कुशल ಪದವು ಯೌಗಿಕವಾಗಿ ದರ್ಭೆಯನ್ನು ತರುವವನು ಎಂಬ ಅರ್ಥವನ್ನು ಕೊಡುವುದಾದರೂ ರೂಢಿಯಿಂದ ಪ್ರವೀಣ ಎಂಬ ಅರ್ಥದಲ್ಲಿ ವೃದ್ಧವ್ಯವಹಾರವಿರುವ ಕಾರಣ ಇಲ್ಲಿ ಯಾವ ಪ್ರಯೋಜನವನ್ನೂ ಅಪೇಕ್ಷಿಸದೆ ಪ್ರವೀಣ ಎಂಬ ಅರ್ಥವನ್ನು ಬೋಧಿಸುವುದರಿಂದ ಶಕ್ಯಸಂಬಂಧರೂಪವಾದ ಲಕ್ಷಣೆ.

**निरूढि ನಿರೂಢಿ** (स्त्री०) ಪ್ರಸಿದ್ಧಿ, ಖ್ಯಾತಿ, ಹೆಸರುವಾಸಿ. नि+रुह (बीजजन्मनि प्रादुर्भावे च) "क्तिन्" (३-३-९४)। "चतसृष्वपि ते विवेकिनी नृप विद्यासु निरूढिमागता" किरा० २-६।

**निरूपक ನಿರೂಪಕ** (वि०) 1. ನಿರೂಪಣೆಮಾಡುವವನು, ವಿಷಯದ ನಿಜಸ್ವರೂಪವನ್ನು ವಿವರಿಸಿ ಹೇಳುವವನು. नि + रूप (रूपक्रियायाम्) "ण्वुल्" (३-१-१३३)। 2. ಲಕ್ಷ್ಯವಿಟ್ಟು ನೋಡುವವನು, ಗಮನಿಸಿ ನೋಡುವವನು.

**निरूपण ನಿರೂಪಣ** (न०) 1. ವಿಚಾರ, ವಿಮರ್ಶೆ. नि+रूप (रूपक्रियायाम्) "ल्युट्" (३-३-११५)। 2. ನೋಡುವುದು, ಗಮನಿಸುವುದು. 3. ಒಂದು ವಸ್ತುವಿನ ನಿಷ್ಕೃಷ್ಟ ಸ್ವರೂಪವನ್ನು ವಿವರಿಸಿ ಹೇಳುವುದು. (स्त्रीन०) 4. ನೇತ್ರ,

ಕಣ್ಣು. 5. ವಿಕಾರ, "निरूपणं तु न पुमान् विलोचन-विकारयोः" नानार्थर०।

**निरूपणीय ನಿರೂಪಣೀಯ** (वि०) 1. ಚೆನ್ನಾಗಿ ನೋಡಲ್ಪಡುವ. 2. ಚೆನ್ನಾಗಿ ವಿವರಿಸಲ್ಪಡುವ. 3. ಚೆನ್ನಾಗಿ ವಿಚಾರಮಾಡಲ್ಪಡುವ. नि + रूप (रूपक्रियायाम्) + णिच् "अनीयर्" (३-१-९६)। 4. ಚೆನ್ನಾಗಿ ನೋಡಬೇಕಾದ. 5. ಚೆನ್ನಾಗಿ ವಿವರಿಸಬೇಕಾದ. 6. ಚೆನ್ನಾಗಿ ವಿಚಾರಮಾಡಬೇಕಾದ. "तव्यः" (३-१-९६)। **-यितव्यः -ಯಿತವ್ಯಃ.**

**निरूपयत् ನಿರೂಪಯತ್** (वि०) 1. ವಿಚಾರಮಾಡುತ್ತಿರುವ, ವಿಮರ್ಶೆಮಾಡುತ್ತಿರುವ. नि+रूप (रूपक्रियायाम्) + णिच् "शतृ" (३-२-१२४)। "अनुरूपमिमं निरूपयन्नथ सर्वेष्वपि पूर्वपक्षताम्". नैष० २-४२। 2. ಚೆನ್ನಾಗಿ ನೋಡುತ್ತಿರುವ, ಗಮನಿಸುತ್ತಿರುವ. 3. ವಸ್ತುವಿನ ನಿಜಸ್ವರೂಪವನ್ನು ವಿವರಿಸಿ ಹೇಳುತ್ತಿರುವ. "काव्यदोषान् निरूपयन् तस्य प्राथमिकत्वमुपपादयति" सा० द०। स्त्रियां "ङीप्" (४-१-६)। **-यन्ती -ಯಂತೀ.**

**निरूपित ನಿರೂಪಿತ** (वि०) 1. ವಿಚಾರಮಾಡಲ್ಪಟ್ಟ, ವಿಮರ್ಶೆಮಾಡಲ್ಪಟ್ಟ. नि+रूप (रूपक्रियायाम्) +णिच् "क्तः" (३-२-१०२)। 2. ಚೆನ್ನಾಗಿ ನೋಡಲ್ಪಟ್ಟ, ಚೆನ್ನಾಗಿ ಗಮನಿಸಲ್ಪಟ್ಟ. "अनङ्गशृङ्गाराचार्यसर्वागमोपदेशनिर्मितवैदग्ध्यमुग्धमनोहराः मया न निरूपिता एतयोर्दृष्टिसंभेदाः" मालती० ७। 3. ಚೆನ್ನಾಗಿ ವಿವರಿಸಿ ಹೇಳಲ್ಪಟ್ಟ. "स्तुत्या पुरास्माभिरुपासितेन पितामहेनेति निरूपितं नः" कुमा० १२-४७।

**निरूप्यमाण ನಿರೂಪ್ಯಮಾಣ** (वि०) 1. ಚೆನ್ನಾಗಿ ನೋಡಲ್ಪಡುತ್ತಿರುವ. नि + रूप (रूपक्रियायाम्) + णिच् "शानच्" (३-२-१२४)। "दृष्टेनैव मनो हृतं धृतिमुषा प्राणेश्वरेणाद्य मे तत्केनात्र निरूप्यमाणनिपुणो मानस्समाधीयताम्" अमरु० ८४। 2. ಚೆನ್ನಾಗಿ ವಿವರಿಸಿ ಹೇಳಲ್ಪಡುತ್ತಿರುವ. 3. ವಿಮರ್ಶಿಸಲ್ಪಡುತ್ತಿರುವ. "सन्धानमेवास्तु परेण तस्मान्नान्योऽभ्युपायोऽस्ति निरूप्यमाणः" भट्टि० १२-५४।

**निरूह ನಿರೂಹ** (पुं०) 1. ದೇಹದೊಳಗಿನ ದೋಷವನ್ನು ಹೋಗಲಾಡಿಸಲು ಪ್ರಯೋಗಿಸುವ ಒಂದು ವಿಧ ಬಸ್ತಿಕ್ರಿಯೆ, ಪಿಚಕಾರಿ. निर् + ऊह (वितर्के) कर० "घञ्" (३-३-१२१)। "अनायान्तं मुहूर्तात्तु निरूहं शोधनैर्हरेत्। तीक्ष्णैर्निरूहैर्मतिमान् क्षारमूत्राम्लसंयुतैः" सुश्रुत० चिकित्सा० ३८-१७। 2. ತರ್ಕ, ವಾದವಿವಾದ, ಚರ್ಚೆ. 3. ಅಧ್ಯಾಹಾರಪದಗಳಿಲ್ಲದ ವಾಕ್ಯ. 4. ನಿಶ್ಚಯ. "निरूहो बस्तिभेदे च ऊहशून्ये च निश्चिते" मेदि०। "ल्युट्" (३-३-११५)। **निरूहणम् ನಿರೂಹಣಮ್.**

**निर्ऋति ನಿರ್ಋತಿ** (पुं०) 1. ಅಷ್ಟದಿಕ್ಪಾಲಕರಲ್ಲೊಬ್ಬ, ದಕ್ಷಿಣ-ಪಶ್ಚಿಮ ಮಧ್ಯಭಾಗದ ವಿದಿಕ್ಕಿನ ಅಧಿಪತಿ. नियता ऋतिः मङ्गलं यत्र। "मृगव्याधश्च सर्पश्च निर्ऋतिश्च महायशाः" भा० आदि० ६७-२। (स्त्री०) 2. ಜ್ಯೇಷ್ಠಾದೇವಿ, ದಾರಿದ್ರ್ಯ, ದೌರ್ಭಾಗ್ಯ. निर्गता ऋतेः मङ्गलात्। 3. ಅಧರ್ಮನ ಪತ್ನಿ. (वि०) 4. ಉಪದ್ರವವಿಲ್ಲದ, ಯಾವ ತೊಂದರೆಯೂ ಇಲ್ಲದ.

**निरोजस् ನಿರೋಜಸ್** (वि०) ಅಂತಃಸತ್ತ್ವವಿಲ್ಲದ, ಬಲವಿಲ್ಲದ, ದೀನವಾದ. निर्गतमोजः यस्मात्। "प्रांशु निःश्वसितपृष्ठचरी वाङ्नारदस्य निरियाय निरोजाः" नैष० ५-४०।

**निरोद्धव्य ನಿರೋದ್ಧವ್ಯ** (वि०) 1. ಕಾಪಾಡಲ್ಪಡುವ, ರಕ್ಷಿಸಲ್ಪಡುವ. नि + रुधिर् (आवरणे) "तव्यः" (३-१-९६)। "आशयाश्चोदपानाश्च प्रभूतसलिलाकराः। निरोद्धव्याः सदा राज्ञा क्षीरिणश्च महीरुहाः" भा० शान्ति० ८६-१५। 2. ಬಂಧಿಸಲ್ಪಡುವ. 3. ತಡೆದುಕೊಳ್ಳಲ್ಪಡುವ, ಒಳಗೇ ಅಡಗಿಸಿಕೊಳ್ಳಲ್ಪಡುವ. 4. ಆಕ್ರಮಿಸಲ್ಪಡುವ, ಆವರಿಸಲ್ಪಡುವ. "अनीयर्" (३-१-९६)। **-रोधनीयः -ರೋಧನೀಯಃ.**

**निरोध ನಿರೋಧ** (पुं०) 1. ತಡೆಯುವುದು, ಅಡ್ಡಿಪಡಿಸುವುದು. नि + रुधिर् (आवरणे) "घञ्" (३-३-१८)। "विभेदमन्तः पदवीनिरोधं विध्वंसनं चाविदितप्रयोगः" किरा० १७-२७। 2. ತಡೆಯುವುದು, ಬಿಗಿಹಿಡಿಯುವುದು. "तेजोनिरोधसमताऽवहितेन यन्त्रा सम्यक्कशात्रयविचारवता नियुक्तः" माघ० ५-१०। 3. ತಡೆಹಿಡಿಯುವುದು, ಒಳಗೆ ಅಡಗಿಸಿಕೊಳ್ಳುವುದು, ಹತೋಟಿಯಲ್ಲಿಡುವುದು. "अन्तश्चराणां मरुतां निरोधान्निवातनिष्कम्पमिव प्रदीपम्" कुमा० ३-४८। "योगश्चित्तवृत्तिनिरोधः" पा० यो० सू०। 4. ನಾಶಪಡಿಸುವುದು, ನಿರ್ನಾಮಮಾಡುವುದು. 5. ಬಂಧಿಸುವುದು, ಸೆರೆಹಿಡಿದು ನಿರ್ಬಂಧದಲ್ಲಿಡುವುದು. "निरोधखिन्नावुचितोपचारैः आनर्च सस्नेहमुषानिरुद्धौ" याद० २०-९३। 6. ನಿಗ್ರಹಿಸುವುದು, ದಂಡಿಸುವುದು. "इन्द्रियाणां निरोधेन रागद्वेषक्षयेण च। अहिंसया च भूतानां अमृतत्वाय कल्पते" मनु० ६-६०।

**निरोधक ನಿರೋಧಕ** (वि०) 1. ತಡೆಯುವವನು, ಅಡ್ಡಿಪಡಿಸುವವನು. नि + रुधिर् (आवरणे) "ण्वुल्" (३-१-१३३)। 2. ಬಂಧನದಲ್ಲಿಡುವವನು, ಸೆರೆಹಿಡಿದು ನಿರ್ಬಂಧದಲ್ಲಿಡುವವನು. 3. ನಾಶಪಡಿಸುವವನು. 4. ತಡೆಹಿಡಿಯುವವನು.

**निरोधन ನಿರೋಧನ** (न०) 1. ತಡೆಯುವುದು, ಅಡ್ಡಿಪಡಿಸುವುದು, ಅಡೆಚಣೆಯುಂಟುಮಾಡುವುದು. नि+रुधिर् (आवरणे) भावे "ल्युट्" (३-३-११५)। 2. ಬಂಧನದಲ್ಲಿರಿಸುವುದು, ನಿರ್ಬಂಧದಲ್ಲಿಡುವುದು. 3. ನಿಗ್ರಹಿಸುವುದು, ದಂಡಿಸುವುದು. 4. ತಡೆದುಕೊಳ್ಳುವುದು, ಹತೋಟಿಯಲ್ಲಿಟ್ಟುಕೊಳ್ಳುವುದು.

**निर्ग ನಿರ್ಗ** (पुं०) ದೇಶ, ಪ್ರದೇಶ, ಪ್ರಾಂತ. नितरां गच्छत्यत्र—निर् + गम्लृ (गतौ) "ड:" (वा० ३-२-४८)।

**निर्गच्छत् ನಿರ್ಗಚ್ಛತ್** (वि०) ಹೊರಕ್ಕೆ ಹೊರಡುತ್ತಿರುವ, ಹೊರಕ್ಕೆ ಹೋಗುತ್ತಿರುವ. निर्+गम्लृ (गतौ) "शतृ" (३-२-१२४)। "निर्गच्छतः प्रविशतश्च निशामयन्तो नाथ त्वदेकहृदया न भजन्ति तन्द्रीम्" याद० १९-४। स्त्रियां "ङीप्" (४-१-६)। **-गच्छन्ती -ಗಚ್ಛಂತೀ.**

**निर्गत ನಿರ್ಗತ** (वि०) 1. ಹೊರಕ್ಕೆ ಹೊರಟಿರುವ, ಹೊರಕ್ಕೆ ಹೋಗಿರುವ. निर्+गम्लृ (गतौ) "क्त:" (३-४-७२)। "गणाधिपानामविधाय निर्गतैः परासुतां मर्मविदारणैरपि" किरा० १४-५४। 2. ಹೊರಟುಹೋದ.

**निर्गन्ध ನಿರ್ಗಂಧ** (वि०) ವಾಸನೆಯಿಲ್ಲದ, ಪರಿಮಳವಿಲ್ಲದ. निर्गतः गन्धः यस्मात्। "निर्गन्धा इव किंशुकाः"।

**निर्गम ನಿರ್ಗಮ** (पुं०) 1. ಹೊರಕ್ಕೆ ಹೋಗುವುದು, ಹೊರಕ್ಕೆ ಹೊರಡುವುದು. निर्+गम्लृ (गतौ) "अप्" (३-३-५८)। "अर्धवर्त्मनि रुणत्सि न पृच्छां निर्गमेण न परिश्रमयेनाम्" नैष० ५-२८। 2. ಹೊರಟುಹೋಗುವುದು "तेन तस्य मधुनिर्गमात्कृशः" रघु० १९-४६। 3. ದ್ವಾರ, ಬಾಗಿಲು. "अवाप्तनिर्गमः प्रययौ" काद०।

**निर्गमन ನಿರ್ಗಮನ** (न०) 1. ಹೊರಕ್ಕೆ ಹೋಗುವುದು, ಹೊರಕ್ಕೆ ಹೊರಡುವುದು. निर्+गम्लृ (गतौ) "ल्युट्" (३-३-११५)। 2. ದ್ವಾರ, ಬಾಗಿಲು. निर् + गम्लृ कर० "ल्युट्" (३-३-११७)।

**निर्गमित ನಿರ್ಗಮಿತ** (न०) 1. ಹೊರಕ್ಕೆ ಹೊರಡುವುದು, ಹೊರಕ್ಕೆ ಹೋಗುವುದು. निर्+गम्लृ (गतौ) + स्वार्थे णिच् "क्त:" (३-३-११४)। "इत्यनक्षरमवाचि घृताच्या दीर्घनिःश्वसितनिर्गमितेन" नैष० ५-४९। (वि०) 2. ಹೊರಕ್ಕೆ ಹೊರಟಿರುವ, ಹೊರಕ್ಕೆ ಹೋಗಿರುವ. निर् + गम्लृ कर्त० "क्त:" (३-४-७२)। "आनन्दजाश्रुभिरनुस्रियमाणमार्गान् प्राक्शोकनिर्गमितनेत्रपयःप्रवाहान्" नैष० १-१४४।

**निर्गलत् ನಿರ್ಗಲತ್** (वि०) ಸೋರುತ್ತಿರುವ, ಹೊರಕ್ಕೆ ಸುರಿಯುತ್ತಿರುವ. निर् + गल (प्रस्रवणे) "शतृ" (३-२-१२४)।

**निर्गलन ನಿರ್ಗಲನ** (न०) ಸ್ರವಿಸುವುದು, ಹೊರಕ್ಕೆ ಸೋರುವುದು. निर्+गल (प्रस्रवणे) भावे "ल्युट्" (३-३-११५)।

**निर्गलित ನಿರ್ಗಲಿತ** (वि०) ಹೊರಗೆ ಬಂದ, ಹೊರಗಡ ಸೋರಿಹೋದ, ಸಂಪೂರ್ಣವಾಗಿ ಸೋರಿಹೋದ. निर्+ गल (प्रस्रवणे) कर्त० "क्त:" (३-४-७२)। "स्वस्त्यस्तु ते निर्गलिताम्बुगर्भं शरद्घनं नार्दति चातकोऽपि" रघु० ५-१७।

**निर्गुण ನಿರ್ಗುಣ** (पुं०) 1. ಪರಮಾತ್ಮ, ಪರಬ್ರಹ್ಮ. निर्गतो गुणेभ्यः। ಸತ್ತ್ವಾದಿ ಗುಣರಹಿತನಾದುದರಿಂದ ಪರಮಾತ್ಮನು ನಿರ್ಗುಣನು. ಸತ್ತ್ವಾದಿ ಗುಣಗಳಿಗೆ ವಶ್ಯನಾಗದಿರುವುದರಿಂದ ಪರಮಾತ್ಮನು ನಿರ್ಗುಣನು. "सत्त्वादयो न सन्तीशे यत्र च प्राकृता गुणाः"। अतद्वश्यतया निर्गतः तत्संस्पर्शेऽपि अस्पृष्टः। हेयगुणरहितः। ಹೇಯ ಗುಣರಹಿತನಾದುದರಿಂದಲೂ ಪರಮಾತ್ಮನು ನಿರ್ಗುಣನು. ಇದರಿಂದ ಪರಮಾತ್ಮನು ಪರಮಸ್ವತಂತ್ರನು. "अणुर्बृहत्कृशःस्थूलो गुणभृन्निर्गुणो महान्" वि० स०। (वि०) 2. ಶೌರ್ಯ ಧೈರ್ಯ ಮೊದಲಾದ ಗುಣಗಳಿಲ್ಲದವನು. निर्गताः गुणाः शौर्यधैर्यादयो यस्मात्। "निर्गुणानपि निसर्गकिङ्करान् स्वीकुरुष्व कृपया स्वयंव नः" याद० १७-१२०। 3. ಸೂತ್ರವಿಲ್ಲದ ಬಿಲ್ಲು.

**निर्गुण्डी ನಿರ್ಗುಂಡೀ** (स्त्री०) 1. ಲಕ್ಕಿಗಿಡ. निर्गुडति—निर्+गुड (रक्षायाम्) "क:" (३-१-१३५)। पृषो०। 2. ಕರಿಯ ಲಕ್ಕಿಗಿಡ. "सिन्धुवारेन्द्रसुरसौ निर्गुण्डीन्द्राणिकेत्यपि"। "शेफालिका तु सुवाहा निर्गुण्डी नीलिका च सा" अम०। 3. ತಾವರೆಯ ಗಡ್ಡೆ. "निर्गुण्डी सिन्धुवारके। नीलशेफालिकायां च करहाटेऽपि कुत्रचित्" विश्व०। "समूलफलपत्रायाः निर्गुण्ड्याः स्वरसैर्घृतम्। सिद्धं पीत्वा क्षयक्षीणो निर्व्याधिर्भाति देववत्" चक्रद०।

**निर्गूढ ನಿರ್ಗೂಢ** (पुं०) 1. ಮರದ ಪೊಟರೆ. निर्निश्चयेन गुह्यते संव्रियतेऽत्र—निर् + गुहू (संवरणे) अधि० "क्त:" (३-४-७६)। (वि०) 2. ಬಹಳ ಗೂಢವಾದ, ಬಹಳ ರಹಸ್ಯವಾದ. 3. ಮುಚ್ಚಲ್ಪಟ್ಟ, ಮರೆಮಾಡಲ್ಪಟ್ಟ.

**निर्गृह ನಿರ್ಗೃಹ** (वि०) ಮನೆಯಿಲ್ಲದವನು, ವಾಸಕ್ಕೆ ನೆಲೆಯಿಲ್ಲದವನು. निर्गतो गृहात्।

**निर्ग्रन्थ ನಿರ್ಗ್ರಂಥ** (पुं०) 1. ಜೂಜುಗಾರ, ಜೂಜಾಟದವನು. निर्गतो ग्रन्थेभ्यः। 2. ಜೈನಭಿಕ್ಷು. 3. ಬೌದ್ಧ ಸಂನ್ಯಾಸಿ. (वि०) 4. ಮೂರ್ಖ. 5. ದರಿದ್ರ, ಬಡವ. 6. ಪ್ರಾಪಂಚಿಕ ವ್ಯವಹಾರಗಳನ್ನು ತ್ಯಜಿಸಿ ಪರಮಾತ್ಮನ ಧ್ಯಾನದಲ್ಲಿ ನಿರತನಾದವನು, ವಿರಕ್ತ. "आत्मारामाश्च मुनयो निर्ग्रन्था अप्युरुक्रमे। कुर्वन्त्यहैतुकीं भक्तिमित्थं भूतगुणो हरिः" भाग० १-७-१०। "निर्ग्रन्थो भिक्षु-मूर्खयोः। श्रमणे च" हेम०। "निर्ग्रन्थो नग्नकेऽपि स्यान्निःस्वबालिशयोरपि" मेदि०। ಜೈನಭಿಕ್ಷುವಿಗೆ ವಸ್ತ್ರ ಗ್ರಂಥಿಯಿಲ್ಲದುದರಿಂದ ನಿರ್ಗ್ರಂಥನು. ವಿರಕ್ತನಿಗೆ ಹೃದಯ ಗ್ರಂಥಿಯು ಭಗವತ್ಸಾಕ್ಷಾತ್ಕಾರವಾದ ಕೂಡಲೆ ಶಿಥಿಲವಾಗುವುದರಿಂದ ನಿರ್ಗ್ರಂಥನು. "भिद्यते हृदयग्रन्थिः छिद्यन्ते सर्वसंशयाः। क्षीयन्ते चास्य कर्माणि दृष्ट एवात्मनीश्वरे" भाग० १-२-२२। स्वार्थे "कः"। –ग्रन्थकः–ಗ್ರಂಥಕಃ. 1. ಫಲಶೂನ್ಯವಾದ. 2. ವಸ್ತ್ರವಿಲ್ಲದ, ದಿಗಂಬರನಾದ. 3. ಕ್ಷಪಣಕ. "निर्ग्रन्थकः स्यात्क्षपणे निष्फलेऽप्यपरिच्छदे" मेदि०।

**निर्ग्रन्थन ನಿರ್ಗ್ರಂಥನ** (न०) ಮಾರಣ, ಕೊಲ್ಲುವುದು. निर् + ग्रथि (कौटिल्ये) "ल्युट्" (३-३-११५)।

**निर्ग्रन्थिक ನಿರ್ಗ್ರಂಥಿಕ** (पुं०) 1. ಜೈನಸಂನ್ಯಾಸಿ. (वि०) 2. ಜಾಣ, ಬುದ್ಧಿವಂತ. 3. ಗ್ರಂಥಿಯಿಲ್ಲದ निर्गतो ग्रन्थिर्यस्य।

**निर्ग्राह्य ನಿಗ್ರಾ್ರಹ್ಯ** (वि०) ಇಂದ್ರಿಯಗಳಿಂದ ಅಥವಾ ಬುದ್ಧಿಯಿಂದ ತಿಳಿಯಲ್ಪಡುವ, ಬುದ್ಧಿಶಕ್ತಿಯಿಂದ ಗ್ರಹಿಸಲು ಶಕ್ಯವಾದ. निर् + ग्रह (उपादाने) कर्म० "ण्यत्" (३-१-१२४)। "महिम्नामेतस्मिन्विनयशिशिरो मौग्ध्य-मसृणो विदग्धैर्निर्ग्राह्यो न पुनरविदग्धैरतिशयः" उ० रा० ४-२१।

**निर्घट ನಿರ್ಘಟ** (न०) 1. ಜನನಿಬಿಡವಾದ ಮಾರುಕಟ್ಟೆ, ಬಹಳ ಜನರಿಂದ ಸಾಂದ್ರವಾದ ಅಂಗಡಿಬೀದಿ. 2. ತೆರಿಗೆ ವಿಧಿಸದಿರುವ ಮಾರುಕಟ್ಟೆ, ಸುಂಕವಿಲ್ಲದ ಮಾರುಕಟ್ಟೆ. 3. ಹಡಗಿಗೆ ಸಾಮಾನು ತುಂಬಲು ಮತ್ತು ಹಡಗಿನಿಂದ ಸಾಮಾನು ಇಳಿಸಲು ಅನುಕೂಲವಾದ ಬಂದರಿನ ಪಕ್ಕದಲ್ಲಿ ನೀರಿನೊಳಕ್ಕೆ ಚಾಚಿಕೊಂಡಿರುವ ಶಿಲಾನಿರ್ಮಿತವಾದ ಇಳಿದಾಣ. (वि०) 4. ಘಟವಿಲ್ಲದ ಪ್ರದೇಶ.

**निर्घण्ट ನಿರ್ಘಂಟ** (पुं०) 1. ನಿಘಂಟು, ಶಬ್ದಕೋಶ. 2. ಗ್ರಂಥಗಳ ಸಂಗ್ರಹ, ಗ್ರಂಥಗಳ ಪಟ್ಟಿ, ಗ್ರಂಥಗಳ ಸೂಚಿ.

**निर्घात ನಿರ್ಘಾತ** (पुं०) ವಾಯುವಿನಿಂದ ಹೊಡೆಯಲ್ಪಟ್ಟ ವಾಯುವು ಆಕಾಶದಿಂದ ಭೂಮಿಯ ಮೇಲೆ ಬೀಳುವುದರಿಂದ ಉಂಟಾಗುವ ಶಬ್ದ. "वायुनाभिहते वायौ गगनाच्च पतत्यधः। प्रचण्डघोरनिर्घोषो निर्घात इति कथ्यते"। "निर्घातघोषो गिरिशृङ्गशातनो घनोऽम्बरागा-कुहरोदरम्भरिः" कुमा० १५-२२। ಈ ರೀತಿ ವಾಯುವು ಭೂಮಿಯ ಮೇಲೆ ಬೀಳುವುದು ಬಹಳ ಅನಿಷ್ಟ ಸೂಚಕ. ಈ ವಾಯುವು ಭೂಮಿಯಲ್ಲಿ ಬೀಳುವ ಸಮಯದಲ್ಲಿ ಪಕ್ಷಿಗಳೆಲ್ಲವೂ ಸೂರ್ಯನಿಗೆ ಅಭಿಮುಖವಾಗಿ ತಿರುಗಿಕೊಂಡು ಕೂಗಿಕೊಳ್ಳುವುವು. "पवनः पवनाभिहतो गगनादवनौ यदा समापतति। भवति तदा निर्घातः स च पापो दीर्घविहगरुतः" बृहत्सं ३९-१। ಸಿಡಿಲಿನಂತೆ ಭೂಮಿಯ ಮೇಲೆ ಬೀಳುವ ಈ ಘೋರವಾದ ಶಬ್ದವು ಸೂರ್ಯೋದಯ ಸಮಯದಲ್ಲಿ ಬಿದ್ದರೆ ನ್ಯಾಯಾಧೀಶರು, ರಾಜರು, ಧನಿಕರು, ಯೋಧರು, ಸ್ತ್ರೀಯರು, ವರ್ತಕರು ಮತ್ತು ವೇಶ್ಯೆಯರು ನಾಶಹೊಂದುವರು. ಹಗಲು ಮೊದಲನೆಯ ಯಾಮದಲ್ಲಾದರೆ ಮೇಕೆಗಳು, ಕುರಿಗಳು, ಶೂದ್ರರು ಮತ್ತು ಪೌರರು ಇವರಿಗೆ ಹಾನಿಯುಂಟು. ಎರಡನೆಯ ಯಾಮದಲ್ಲಾದರೆ ರಾಜಸೇವಕರು ಮತ್ತು ಬ್ರಾಹ್ಮಣರಿಗೆ ಪೀಡೆಯುಂಟು. ಮೂರನೆಯ ಯಾಮದಲ್ಲಿ ಬಿದ್ದರೆ ವೈಶ್ಯರು ಮತ್ತು ಮೇಘಗಳಿಗೆ ಪೀಡೆ. ನಾಲ್ಕನೆಯ ಯಾಮದಲ್ಲಿ ಚೋರರಿಗೆ ಪೀಡೆ. ಸೂರ್ಯಾಸ್ತಮಯ ಕಾಲದಲ್ಲಿ ಬೀಳುವ ಈ ನಿರ್ಘಾತವು ನೀಚರನ್ನೂ ರಾತ್ರಿಯ ಮೊದಲನೆಯ ಯಾಮದಲ್ಲಿ ಸಸ್ಯಗಳನ್ನೂ ದ್ವಿತೀಯ ಯಾಮದಲ್ಲಿ ಪಿಶಾಚಿಗಳನ್ನೂ ಪೀಡಿಸುವುದು. ಮೂರನೆಯ ಯಾಮದಲ್ಲಿ ಬಿದ್ದರೆ ಕುದುರೆ ಮತ್ತು ಆನೆಗಳಿಗೆ ಪೀಡೆ. ರಾತ್ರಿ ನಾಲ್ಕನೆಯ ಯಾಮದಲ್ಲಿ ಈ ನಿರ್ಘಾತವು ಬಿದ್ದರೆ ಪಥಿಕರನ್ನು ನಾಶಪಡಿಸುವುದು. "अर्कोदयेऽधिकरणिकनृपधनियोधाङ्गनावणि-ग्वेश्याः। आप्रहरांशेऽजाविकमुपहन्याच्छूद्रपौरांश्च॥ आम-ध्याह्नाद्राजोपसेविनो ब्राह्मणांश्च पीडयति। वैश्यजलदां स्तृतीये चौरान् प्रहरे चतुर्थे तु॥ अस्तं याते नीचान् प्रथमे यामे निहन्ति सस्यानि। रात्रौ द्वितीययामे पिशाच-संघान् निपीडयति॥ तुरगकरिणस्तृतीये विनिहन्या-द्यायिनश्चतुर्थे च" बृहत्सं० ३९-२, ३, ४, ५।

**निर्घातन ನಿರ್ಘಾತನ** (न०) ಯಂತ್ರದಿಂದ ಮಾಡುವ ಒಂದು ವಿಧ ಚಿಕಿತ್ಸೆ.

**निर्घृण ನಿರ್ಘೃಣ** (वि०) ದಯೆಯಿಲ್ಲದವನು, ಕನಿಕರವಿಲ್ಲದವನು. निर्गता घृणा यस्मात्।

**निर्घोष ನಿರ್ಘೋಷ** (पुं०) 1. ಶಬ್ದ, ಸದ್ದು. निर्+घुषिर् (अव्यक्ते शब्दे) "घञ्" (३-३-१८)। "स्निग्धगम्भीरनिर्घोषमेकं स्यन्दनमास्थितौ। प्रावृषेण्यं पयोवाहं विद्युदैरावताविव" रघु० १-३६। (वि०) 2. ಶಬ್ದವಿಲ್ಲದ, ಸದ್ದಿಲ್ಲದ. "सन्नियम्येन्द्रियग्रामं निर्घोषे निर्जने वने। कायमभ्यन्तरं कृत्स्नमेवाग्रः परिचिन्तयेत्" भा० आश्व० २०-३६।

**निर्जन ನಿರ್ಜನ** (वि०) ಜನರಹಿತವಾದ, ವಿವಿಕ್ತವಾದ, ಏಕಾಂತವಾದ (ಪ್ರದೇಶ). निर्गतो जनो यस्मात्। "ससचिव इव निर्जनेऽपि तिष्ठन् मुनिरपि तुल्यरुचिस्त्रिलोकभर्तुः" किरा० १०-१४।

**निर्जय ನಿರ್ಜಯ** (पुं०) ಜಯ, ಗೆಲ್ಲುವುದು. नितरां जयः। "तमःसुहृच्चामरनिर्जयार्जिताः सिता वमन्तः खलु कीर्तिमुक्तिकाः" नैष० १५-२३।

**निर्जर ನಿರ್ಜರ** (पुं०) 1. ದೇವತೆ. निर्गता जरा यस्मात्। "अस्मिन्नाम तया वृते सुमनसः सन्तोऽपि यन्निर्जरा जाता दुर्मनसो न सोढुमुचिता तेषां तु साऽनौचिती" नैष० १५-८४। (न०) 2. ಅಮೃತ. (वि०) 3. ಮುದಿತನವಿಲ್ಲದವನು, ಪ್ರಾಯದವನು, ತರುಣ. (स्त्री०) –जरा –ಜರಾ. 4. ಅಮೃತಬಳ್ಳಿ. 5. ಮುರಯೆಂಬ ಗಂಧಿಗರ ದಿನಸು. "निर्जरस्तु जरात्यक्ते वाच्यवन्निर्जरः सुरे। निर्जरा तु गडूच्यां स्यात्तालपर्ण्यामपि क्वचित्" विश्व०।

**निर्जल ನಿರ್ಜಲ** (वि०) 1. ಜಲರಹಿತವಾದ, ನೀರಿಲ್ಲದ (ದೇಶ). निर्गतं जलं यस्मात्। 2. ನೀರು ಬೆರಕೆಯಿಲ್ಲದ (ಮೊಸರು). "तक्रं ह्युदश्विन्मथितं पादम्ब्वर्धाम्बुनिर्जलम्" अम०।

**निर्जलैकादशी ನಿರ್ಜಲೈಕಾದಶೀ** (स्त्री०) ಜ್ಯೇಷ್ಠ ಶುಕ್ಲ ಏಕಾದಶಿ. "वृषस्थे मिथुनस्थेऽर्के शुक्लाह्येकादशी हि या। ज्येष्ठे मासि प्रयत्नेन सोपास्या जलवर्जिता। स्नाने चाचमने चैव वर्जयित्वोदकं बुधः। उपयुञ्जीत नैवान्यद्व्रतभङ्गोऽन्यथा भवेत्" पाद्मपु०।

**निर्जित ನಿರ್ಜಿತ** (वि०) ಜಯಿಸಲ್ಪಟ್ಟ, ಗೆಲ್ಲಲ್ಪಟ್ಟ. निर्+जि (जये) "क्तः" (३-२-१०२)। "सरोरुहं तस्य दृशैव निर्जितं जिताः स्मितेनैव विधोरपि श्रियः" नैष० १-२४। "निर्जितेन हरिणा हरिः स्वयम्" याद० १७-८७।

**निर्जिहान ನಿರ್ಜಿಹಾನ** (वि०) ಹೊರಕ್ಕೆ ಹೊರಡುತ್ತಿರುವ, निर्+ओ हाङ् (गतौ) "शानच्" (३-२-१२४)। "कापि प्रमोदास्फुटनिर्जिहानवर्णेव या मङ्गलगीतिरासाम्" नैष० १४-५१।

**निर्जिह्व ನಿರ್ಜಿಹ್ವ** (पुं०) 1. ಮಂಡೂಕ, ಕಪ್ಪೆ. निर् नास्ति जिह्वा यस्य। (वि०) 2. ನಾಲಗೆಯಿಲ್ಲದ. 3. ಹೊರಕ್ಕೆ ನೀಡಿದ ನಾಲಗೆಯುಳ್ಳ, ಬಾಯಿಂದ ಹೊರಗಡೆ ಹೊರಟ ನಾಲಗೆಯುಳ್ಳ. निर्गता मुखाद्बहिर्गता जिह्वा यस्य। "निर्जिह्वैश्च श्वसद्भिश्च कूजद्भिश्च गतासुभिः। हयैर्बभौ नरश्रेष्ठ नानारूपधरैर्धरा" भा० भीष्म० ८९-३४।

**निर्जीव ನಿರ್ಜೀವ** (वि०) ಜೀವವಿಲ್ಲದ, ಜೀವಾತ್ಮನಿಲ್ಲದ (ಶರೀರ). निर्गतो जीवो जीवात्मा यस्मात्। "वाजिभिश्चापि निर्जीवैः श्वसद्भिः शोणितोक्षितैः" भा० द्रोण० ४९-२१।

**निर्झर ನಿರ್ಝರ** (पुं०) 1. ಬೆಟ್ಟದಲ್ಲಿ ಹುಟ್ಟಿ ಹರಿಯುವ ಪ್ರವಾಹ, ಗಿರಿನದಿ. निर्+झॄष् (वयोहानौ) "अप्" (३-३-५७)। "मन्था नगः स भुजगप्रभुवेष्टघृष्टिलेखावलद्धवलनिर्झरवारिधारः" नैष० ११-६२। "पृक्तस्तुषारैर्गिरिनिर्झराणामनोकहाकम्पितपुष्पगन्धी" रघु० २-१३। 2. ಸೂರ್ಯನ ಕುದುರೆ. 3. ತುಷಾನಲ, ಹೊಟ್ಟಿನ ಬೆಂಕಿ. "निर्झरस्तु सहस्रांशुतुरङ्गे तुषपावके" मेदि०।

**निर्झरिणी ನಿರ್ಝರಿಣೀ** (स्त्री०) ನದಿ, ಹೊಳೆ. निर्झरः कारणत्वेनास्त्यस्याः "इनिः" (५-२-११५)। "ङीप्" (४-१-५)। ಬೆಟ್ಟದಲ್ಲಿ ಹುಟ್ಟಿ ಹರಿದುಬಂದು ಮುಂದೆ ನದಿಯಾಗಿ ಪ್ರವಹಿಸುವುದರಿಂದ ಈ ಹೆಸರು. "फलभरपरिणामश्यामजम्बूनिकुञ्जस्खलनमुखरभूरिस्रोतसो निर्झरिण्यः" म० वी० ५-४०।

**निर्णय ನಿರ್ಣಯ** (पुं०) 1. ನಿಶ್ಚಯ, ತೀರ್ಮಾನ, ನಿರ್ಧಾರ. निर्+णीञ् (प्रापणे) "अच्" (३-३-५६)। "अवितृप्ततया तथापि मे हृदयं निर्णयमेव धावति" किरा० २-२९। "भव हृदय साभिलाषं संप्रति सन्देहनिर्णयो जातः" शाकु० १-२४। 2. (ನ್ಯಾಯಮತದಲ್ಲಿ) ಸಂಶಯವಿರೋಧಿಯಾದ ನಿಶ್ಚಯಾತ್ಮಕಜ್ಞಾನ. ಈ ಜ್ಞಾನವು ವಿಶೇಷ ದರ್ಶನದಿಂದ ಉಂಟಾಗುವುದು. ಇದು प्रत्यक्षम् ಮತ್ತು अनुमानम् ಎಂದು ಎರಡು ವಿಧ. ಔನ್ನತ್ಯ ಮಾತ್ರ ಸಾಮ್ಯದಿಂದ स्थाणुर्वा पुरुषो वा ಎಂಬ ಸಂಶಯ ಪುಂಟಾದಾಗ ಹಸ್ತಪಾದಾದಿ ವಿಶೇಷದರ್ಶನದಿಂದ पुरुष एवायम् ಎಂಬ ಸಂಶಯ ವಿರೋಧಿ ಜ್ಞಾನವುಂಟಾಗುವುದು ಪ್ರತ್ಯಕ್ಷನಿರ್ಣಯ. ವಿಷಾಣಮಾತ್ರ ದರ್ಶನದಿಂದ गौर्वा गवयो वा ಎಂಬ ಸಂಶಯವುಂಟಾದಾಗ ಸಾಸ್ನಾ (ಗಂಗೆದೊಗಲು) ದರ್ಶನದಿಂದ गौरेवायम् ಎಂಬ ಸಂಶಯ ವಿರೋಧಿಯಾದ ಅವಧಾರಣಜ್ಞಾನವು ಅನುಮಾನ

ನಿರ್ಣಯ. 3. ವಿಮರ್ಶಪೂರ್ವಕ ಪ್ರಮಾಣಗಳಿಂದ ಉಂಟಾಗುವ ತತ್ತ್ವಜ್ಞಾನ. 4. (ಮೀಮಾಂಸಕ ಮತದಲ್ಲಿ) ಐದು ವಿಧ ಅಧಿಕರಣಾಂಗಗಳಲ್ಲೊಂದು. विषयः, विशयः, पूर्वपक्षः, उत्तरः, निर्णयः ಇವು ಐದು ಅಧಿಕರಣಾಂಗಗಳು. 5. ನ್ಯಾಯಾಸ್ಥಾನದ ತೀರ್ಪು, ನ್ಯಾಯಮೂರ್ತಿಯು ಕೊಡುವ ಸತ್ಯ ತೀರ್ಮಾನ. "सर्वज्ञस्याप्येकाकिनो निर्णयाभ्युपगमो दोषाय" माल० १।

**निर्णयन ನಿರ್ಣಯನ** (न०) "निर्णय" ಪದದ ಅರ್ಥ. निर् + णीञ् (प्रापणे) "ल्युट्" (३-३-११५)।

**निर्णायक ನಿರ್ಣಾಯಕ** (वि०) ನಿರ್ಣಯವನ್ನು ಮಾಡುವ, ಒಂದು ರೀತಿಯಾಗಿ ವ್ಯವಸ್ಥೆಗೊಳಿಸುವ, ಬಗೆಹರಿಸುವ. निर् + णीञ् (प्रापणे) + णिच् "ण्वुल्" (३-१-१३३)। स्त्रियाम् "टाप्" (४-१-४)। **–यिका –ಯಿಕಾ.**

**निर्णिक्त ನಿರ್ಣಿಕ್ತ** (वि०) 1. ಶೋಧಿಸಲ್ಪಟ್ಟ, ತೊಳೆಯಲ್ಪಟ್ಟ. निर् + णिजिर् (शौचपोषणयोः) "क्तः" (३-२-१०२)। "तं धूपाश्यानकेशान्तं तोयनिर्णिक्तपाणयः। आकल्पसाधनैस्तैस्तैरुपसेदुः प्रसाधकाः" रघु० १७-२२। 2. ಕಳೆದುಕೊಳ್ಳಲ್ಪಟ್ಟ, ಹೋಗಲಾಡಿಸಲ್ಪಟ್ಟ, ನಿವಾರಿಸಿಕೊಳ್ಳಲ್ಪಟ್ಟ (ಅಪವಾದ).

**निर्णिक्तवत् ನಿರ್ಣಿಕ್ತವತ್** (वि०) ತೊಳೆದವನು, ಶುದ್ಧ ಮಾಡಿದವನು, निर्+णिजिर् (शौचपोषणयोः) "क्तवतुः" (३-२-१०२)। स्त्रियां "ङीप्" (४-१-६)। **–वती –ವತೀ.**

**निर्णिक्ति ನಿರ್ಣಿಕ್ತಿ** (स्त्री०) 1. ಶುದ್ಧಮಾಡುವುದು, ತೊಳೆಯುವುದು. निर्+णिजिर् (शौचपोषणयोः) "क्तिन्" (३-३-९४)। 2. ಪರಿಹರಿಸಿಕೊಳ್ಳುವುದು, ನಿವಾರಿಸಿಕೊಳ್ಳುವುದು. "वृद्धातिक्रमसंभृतस्य महतो निर्णिक्तये पाप्मनः" म० वी० ४-२५।

**निर्णीत ನಿರ್ಣೀತ** (वि०) 1. ನಿರ್ಣಯಿಸಲ್ಪಟ್ಟ, ತೀರ್ಮಾನಿಸಲ್ಪಟ್ಟ. निर्+णीञ् (प्रापणे) "क्तः" (३-२-१०२)। 2. ನಿರ್ಧರಿಸಲ್ಪಟ್ಟ, ನಿಶ್ಚಯಿಸಲ್ಪಟ್ಟ. "निर्णीते व्यवहारे तु प्रमाणमफलं भवेत्। लिखितं साक्षिणो वापि पूर्वमावेदितं न चेत्"। "न्यायनिर्णीतसारत्वान्निरपेक्षमिवागमे" किरा० ११-३९।

**निर्णेक ನಿರ್ಣೇಕ** (पुं०) 1. ತೊಳೆಯುವುದು, ಶುದ್ಧಮಾಡುವುದು. निर् + णिजिर् (शौचपोषणयोः) "घञ्" (३-३-१८)। 2. ನಿವಾರಿಸಿಕೊಳ್ಳುವುದು, ಪರಿಹರಿಸಿಕೊಳ್ಳುವುದು, ಹೋಗಲಾಡಿಸಿಕೊಳ್ಳುವುದು, ಕಳೆದುಕೊಳ್ಳುವುದು. "दानेन वधनिर्णेकं सर्पादीनामशक्नुवन्" मनु० ११-१३९।

**निर्णेजक ನಿರ್ಣೇಜಕ** (पुं०) 1. ರಜಕ, ಅಗಸ. निर्+णिजिर् (शौचपोषणयोः) "ण्वुल्" (३-१-१३३)। 2. ತೊಳೆಯುವವನು, ಶುದ್ಧಮಾಡುವವನು.

**निर्णेजन ನಿರ್ಣೇಜನ** (न०) 1. ತೊಳೆಯುವುದು, ಶುದ್ಧಮಾಡುವುದು. निर्+णिजिर् (शौचपोषणयोः) "ल्युट्" (३-३-११५)। 2. (ಪಾಪ) ಪರಿಹರಿಸಿಕೊಳ್ಳುವುದು. 3. (ದೋಷ) ನಿವಾರಿಸಿಕೊಳ್ಳುವುದು. 4. (ಅಪವಾದ) ಹೋಗಲಾಡಿಸಿಕೊಳ್ಳುವುದು.

**निर्णेतृ ನಿರ್ಣೇತೃ** (वि०) 1. ನಿರ್ಣಯಿಸುವವನು, ತೀರ್ಮಾನಿಸುವವನು. निर्+णीञ् (प्रापणे) "तृच्" (३-१-१३३)। 2. ನಿರ್ಧರಿಸುವವನು, ನಿಶ್ಚಯಿಸುವವನು. स्त्रियां "ङीप्" (४-१-५)। **निर्णेत्री ನಿರ್ಣೇತ್ರೀ.**

**निर्णोद ನಿರ್ಣೋದ** (पुं०) 1. ತಿರಸ್ಕರಿಸುವುದು, ಅಂಗೀಕರಿಸದೆ ಹಿಂತಿರುಗಿಸುವುದು. निर्+णुद (प्रेरणे) "घञ्" (३-३-१८)। 2. ಕದಲಿಸುವುದು. 3. ಹೊರಕ್ಕೆ ತಳ್ಳುವುದು, ಹೊರಕ್ಕೆ ದಬ್ಬುವುದು. 4. ಪರಿಹರಿಸುವುದು, ದೂರಮಾಡುವುದು. "ल्युट्" (३-३-११५)। **–नोदनम् –ನೋದನಮ್.**

**निर्दग्ध ನಿರ್ದಗ್ಧ** (वि०) ಚೆನ್ನಾಗಿ ಸುಡಲ್ಪಟ್ಟ. निर्+दह (भस्मीकरणे) "क्तः" (३-२-१०२)। "निजांशुनिर्दग्धमदङ्गभस्मभिर्मुधा विधुर्वञ्छति लाञ्छनोन्मृजाम्" नैष० ९-१४६।

**निर्दट ನಿರ್ದಟ** (वि०) 1. ದಯೆಯಿಲ್ಲದವನು, ಕನಿಕರವಿಲ್ಲದವನು. 2. ಪ್ರಯೋಜನವಿಲ್ಲದ. 3. ಮತ್ತೊಬ್ಬನಲ್ಲಿ ದೋಷವನ್ನು ಹೇಳಿ ಸಂತೋಷಪಡುವವನು. "निर्दटस्तु दयाशून्ये कथितो निष्प्रयोजने। परापवादरक्ते च वाच्यलिङ्गोऽयमिष्यते" मेदि०।

**निर्दण्ड ನಿರ್ದಂಡ** (वि०) ದಂಡಕ್ಕೆ ಅರ್ಹನಾದವನು, ಶಿಕ್ಷೆಗೆ ಅರ್ಹನಾದವನು.

**निर्दय ನಿರ್ದಯ** (वि०) 1. ದಯೆಯಿಲ್ಲದ, ಕನಿಕರವಿಲ್ಲದ. निर्गता दया यस्मात्। "अस्याः पीनस्तनव्याप्ते हृदयेऽस्मासु निर्दये" नैष० २०-३५। 2. ದಯೆಗೆ ಅರ್ಹನಲ್ಲದ, ದಯೆಯಿಡಲು ಯೋಗ್ಯನಲ್ಲದ. "ज्ञातिसम्बन्धिभिस्त्वेते त्यक्तव्याः कृतलक्षणाः। निर्दया निर्नमस्कारास्तन्मनोरनुशासनम्" मनु० ९-२३९। (अव्य०) 3. ದಯೆಯಿಲ್ಲದೆ, ಕನಿಕರವಿಲ್ಲದೆ. "न प्रहर्तुमलमस्मि निर्दयं विप्र इत्यभिभवत्यपि त्वयि" रघु० ११-८४।

**निर्दर ನಿರ್ದರ** (पुं०) 1. ಗಿರಿನದಿ, ಪರ್ವತದಲ್ಲಿ ಹುಟ್ಟಿ ಹರಿಯುವ ಪ್ರವಾಹ. (न०) 2. ಸಾರ, ಸತ್ತ್ವ, ತಿರುಳು. 3. ಅತಿಶಯ. "निर्दरं निर्भरे सारेऽन्यवत्तु कठिनेऽत्रपे" मेदि०। (वि०) 4. ಭಯವಿಲ್ಲದ. निर्गतो दरो यस्मात्। 5. ಕಠಿನವಾದ, ಕರ್ಕಶವಾದ. "ध्याननिर्दरशैलेन विनिश्वसितधातुना" रामा०। 6. ಲಜ್ಜೆಯಿಲ್ಲದ, ನಾಚಿಕೆಯಿಲ್ಲದ. 7. ಮರುಕವಿಲ್ಲದ, ದಯೆಯಿಲ್ಲದ.

**निर्दलन ನಿರ್ದಲನ** (न०) ಸೀಳುವುದು, ಹೋಳುಮಾಡುವುದು, ತುಂಡುಮಾಡುವುದು.

**निर्दलित ನಿರ್ದಲಿತ** (वि०) ಒಡೆಯಲ್ಪಟ್ಟ, ಸೀಳಲ್ಪಟ್ಟ. "दारुणसमारम्भदैवदुर्विलासपरिणामदुःखनिर्दलितमानसम्" मालती० ६।

**निर्दश ನಿರ್ದಶ** (वि०) ಹತ್ತು ದಿನಗಳಿಗೂ ಮೀರಿದ, ಹತ್ತು ದಿನಗಳು ಕಳೆದಿರುವ. निर्गतानि दश दिनानि यस्य।

**निर्दशन ನಿರ್ದಶನ** (वि०) ದಂತವಿಲ್ಲದವನು, ಹಲ್ಲಿಲ್ಲದವನು. निर्गता दशना यस्य।

**निर्दस्यु ನಿರ್ದಸ್ಯು** (वि०) ಚೋರರಿಲ್ಲದ, ಕಳ್ಳರಿಲ್ಲದ. निर्गतो दस्युर्यस्मात्। "निर्दस्युरभवल्लोकः" रामा०।

**निर्दहन ನಿರ್ದಹನ** (पुं०) 1. ಗೇರುಮರ, नितरां दहति—निर्+दह (भस्मीकरणे) "ल्युः" (३-१-१३४)। (वि०) 2. ಬೆಂಕಿಯಿಲ್ಲದ. निर्गतो दहनो यस्मात्। (स्त्री०) **–दहनी –ದಹನೀ.** 3. ಕುರಟಗೆ ಗಿಡ.

**निर्दातृ ನಿರ್ದಾತೃ** (वि०) 1. ಚೆನ್ನಾಗಿ ದಾನಮಾಡುವವನು, ಕೊಡುಗೈಯುಳ್ಳವನು. निर् + डु दाञ् (दाने) "तृच्" (३-१-१३३)। 2. ಚೆನ್ನಾಗಿ ಕತ್ತರಿಸುವವನು, ಕೊಯ್ಲು ಮಾಡುವವನು. निर् + दो (अवखण्डने) "तृच्" (३-१-१३३)। 3. ಚೆನ್ನಾಗಿ ಶೋಧಿಸುವವನು. निर्+दैप् (शोधने) "तृच्" (३-१-१३३)। "यथोद्धरति निर्दाता कक्षं धान्यं च रक्षति" मनु० ७-११०।

**निर्दारित ನಿರ್ದಾರಿತ** (वि०) 1. ಸೀಳಲ್ಪಟ್ಟ, ಹೋಳು ಮಾಡಲ್ಪಟ್ಟ. निर् + दॄ (विदारणे) + णिच् "क्तः" (३-२-१०२)। 2. ತೆರೆಯಲ್ಪಟ್ಟ. "क्रोधाक्रान्तः क्रूरनिर्दारिताक्षः प्रेक्षाञ्चक्रे नैव किञ्चिन्मदान्धः" माघ० १८-२८।

**निर्दिग्ध ನಿರ್ದಿಗ್ಧ** (वि०) 1. ಪುಷ್ಟನಾದ, ಬಲಶಾಲಿಯಾದ. निर्+दिह (उपचये) "क्तः" (३-४-७२)। "अथांसलो बली। निर्दिग्धो मांसलश्चोपचितः" अभि० चि०। 2. ಲೇಪನಮಾಡಲ್ಪಟ್ಟ, ಬಳಿಯಲ್ಪಟ್ಟ. निर् + दिह् कर्म० "क्तः" (३-२-१०२)।

**निर्दिशत् ನಿರ್ದಿಶತ್** (वि०) 1. ತೋರಿಸುತ್ತಿರುವ. निर् + दिश (अतिसर्जने) "शतृ" (३-२-१२४)। 2. ನಮೂದಿಸಿ ಹೇಳುತ್ತಿರುವ, ತಪಶೀಲುವಾರಾಗಿ ತೋರಿಸುತ್ತಿರುವ.

**निर्दिश्यमान ನಿರ್ದಿಶ್ಯಮಾನ** (वि०) 1. ತೋರಿಸಲ್ಪಡುತ್ತಿರುವ. निर्+दिश (अतिसर्जने) कर्म० "शानच्" (३-२-१२४)। 2. ವೈಯಕ್ತಿಕವಾಗಿ ತೋರಿಸಲ್ಪಡುತ್ತಿರುವ, ತಪಶೀಲುವಾರಾಗಿ ತೋರಿಸಿ ಹೇಳಲ್ಪಡುತ್ತಿರುವ.

**निर्दिष्ट ನಿರ್ದಿಷ್ಟ** (वि०) 1. ತೋರಿಸಲ್ಪಟ್ಟ. निर्+दिश (अतिसर्जने) "क्तः" (३-२-१०२)। "निर्दिष्टां कुलपतिना स पर्णशालामध्यास्य प्रयतपरिग्रहद्वितीयः" रघु० १-९५। 2. ಹೇಳಲ್ಪಟ್ಟ. 3. ನಮೂದಿಸಲ್ಪಟ್ಟ, ವೈಯಕ್ತಿಕವಾಗಿ ಸೂಚಿಸಲ್ಪಟ್ಟ. 4. ನಿಶ್ಚಯಿಸಲ್ಪಟ್ಟ. "निर्दिष्टविषयं किञ्चिदुपात्तविषयं तथा" हरिवं०।

**निर्देश ನಿರ್ದೇಶ** (पुं०) 1. ತೋರಿಸುವುದು. निर्+दिश (अतिसर्जने) "घञ्" (३-३-१८)। 2. ಅಜ್ಞೆ, ಅಪ್ಪಣೆ. "यूयं वै धर्मराजस्य यदि निर्देशकारिणः" भाग० ६-१-३८। 3. ಕಥನ, ಹೇಳುವುದು. "ओं तत्सदिति निर्देशः ब्रह्मणस्त्रिविधः स्मृतः" गीता १७-२३। ಶ್ರೀ ರಾಮಾನುಜ ಭಾಷ್ಯದಲ್ಲಿ "निर्देश" ಪದಕ್ಕೆ ನಾಮವಾಚಕ ಶಬ್ದವೆಂದು ಅರ್ಥಮಾಡಲಾಗಿದೆ. 4. ಸಲಹೆ, ಉಪದೇಶ. 5. ವೇತನ, ಕೂಲಿ. "कालमेव प्रतीक्षेत निर्देशं भृतको यथा"। 6. ಪರಿಸರ, ಹತ್ತಿರ, ಸಾಮೀಪ್ಯ. (वि०) 7. ದೇಶದಿಂದ ಹೊರಟುಹೋದ. निर्गतो देशात्।

**निर्देशक ನಿರ್ದೇಶಕ** (वि०) 1. ಅಜ್ಞೆಮಾಡುವವನು, ಅಪ್ಪಣೆಮಾಡುವವನು. निर्+दिश (अतिसर्जने) "ण्वुल्" (३-१-१३३)। 2. ತೋರಿಸುವವನು. 3. ಹೇಳುವವನು. 4. ಉಪದೇಶಿಸುವವನು. 5. ಸಲಹೆಗಾರ.

**निर्देष्टृ ನಿರ್ದೇಷ್ಟೃ** (वि०) 1. ಅಜ್ಞೆಮಾಡುವವನು, ಅಪ್ಪಣೆಮಾಡುವವನು. निर्+दिश (अतिसर्जने) "तृच्" (३-१-१३३)। 2. ಉಪದೇಶಿಸುವವನು. 3. ತೋರಿಸುವವನು. 4. ಹೇಳುವವನು. 5. ಸಲಹೆ ಕೊಡುವವನು. स्त्रियां "ङीप्" (४-१-५)। **–देष्ट्री –ದೇಷ್ಟ್ರೀ.**

**निर्दोष ನಿರ್ದೋಷ** (वि०) ದೋಷರಹಿತವಾದ. निर्गतो दोषो यस्मात्। "निर्दोषं दर्शयित्वा तु सदोषं यः प्रयच्छति। स मूल्याद्द्विगुणं दाप्यो विनयं तावदेव तु"।

"निर्दोषमपि वित्ताढ्यं दोषैर्योजयते नृपः" पञ्चतं० २-१२३।

**निर्द्वन्द्व ನಿರ್ದ್ವಂದ್ವ** (वि०) 1. ದ್ವಂದ್ವರಹಿತನಾದ, ಸುಖ-ದುಃಖ ರೂಪವಾದ ದ್ವಂದ್ವವಿಲ್ಲದ, ಶೀತ-ಉಷ್ಣ ರೂಪವಾದ ದ್ವಂದ್ವವಿಲ್ಲದ. 2. ಪುಣ್ಯ-ಪಾಪ ರೂಪವಾದ ಸಾಂಸಾರಿಕ ಸ್ವಭಾವದ ದ್ವಂದ್ವವಿಲ್ಲದ. निर्गतो द्वन्द्वः सकलसांसारिकस्वभावः यस्मात्। "त्रैगुण्यविषया वेदा निस्त्रैगुण्यो भवार्जुन। निर्द्वन्द्वो नित्यसत्वस्थो निर्योगक्षेम आत्मवान्" गीता २-४५। 3. ಎರಡಿಲ್ಲದ. 4. ಎರಡು ಪಕ್ಷಗಳಿಲ್ಲದ.

**निर्धन ನಿರ್ಧನ** (वि०) ದರಿದ್ರ, ಬಡವ. निर्गतं धनं यस्मात्। "अक्रोधं शिक्षयन्त्यन्यैः क्रोधना ये तपोधनाः। निर्धनास्ते धनायैव धातुवादोपदेशिनः" नैष० १७-८०।

**निर्धनत्व ನಿರ್ಧನತ್ವ** (न०) ದಾರಿದ್ರ್ಯ, ಬಡತನ. निर्धनस्य भावः "त्वः" (५-१-११९)। "तल्" (५-१-११९)। **–धनता –ಧನತಾ.**

**निर्धार ನಿರ್ಧಾರ** (पुं०) ನಿಶ್ಚಯ, ತೀರ್ಮಾನ. निर्ध्रियतेऽनेन — नि+धृङ् (अवस्थाने) "धञ्" (३-३-१२१)।

**निर्धारण ನಿರ್ಧಾರಣ** (न०) ನಿಶ್ಚಯ, ತೀರ್ಮಾನ, निर्धार्यते — निर् + धृङ् (अवस्थाने) + णिच् भावे "ल्युट्" (३-३-११५)।

**निर्धारणीय ನಿರ್ಧಾರಣೀಯ** (वि०) 1. ನಿರ್ಧರಿಸಲ್ಪಡುವ, ನಿಶ್ಚಯಿಸಲ್ಪಡುವ. 2. ನಿಶ್ಚಯಿಸಲು ಯೋಗ್ಯವಾದ, ತೀರ್ಮಾನ ಕೈಗೊಳ್ಳಲು ಅರ್ಹವಾದ. 3. ನಿಶ್ಚಯಿಸಬೇಕಾದ, ಅವಶ್ಯವಾಗಿ ತೀರ್ಮಾನ ಮಾಡಬೇಕಾದ. निर् + धृङ् (अवस्थाने) "अनीयर्" (३-१-९६)। "तव्यः" (३-१-९६)। **निर्धारितव्यः ನಿರ್ಧಾರಿತವ್ಯಃ.**

**निर्धारयितृ ನಿರ್ಧಾರಯಿತೃ** (वि०) 1. ನಿಶ್ಚಯಿಸುವವನು. 2. ತೀರ್ಮಾನ ಮಾಡುವವನು, ತೀರ್ಪು ಕೊಡುವವನು. निर्+धृङ् (अवस्थाने) "तृच्" (३-१-१३३)। स्त्रियां "ङीप्" (४-१-५)। **–धारयित्री –ಧಾರಯಿತ್ರೀ.**

**निर्धारित ನಿರ್ಧಾರಿತ** (वि०) ನಿಶ್ಚಯಿಸಲ್ಪಟ್ಟ. निर्धार्यते — निर् + धृङ् (अवस्थाने) + णिच् कर्म० "क्तः" (३-२-१०२)। "निर्धारितेऽर्थे लेखेन खलूक्त्वा खलु वाचिकम्" माघ० २-७०।

**निर्धार्य ನಿರ್ಧಾರ್ಯ** (वि०) 1. ನಿಶ್ಚಯಿಸಲ್ಪಡುವ. निर्+धृ (धारणे) "ण्यत्" (३-१-१२४)। 2. ಅವಶ್ಯವಾಗಿ ನಿಶ್ಚಯಿಸಬೇಕಾದ. 3. ತೀರ್ಮಾನ ಕೈಗೊಳ್ಳಲು ಯೋಗ್ಯವಾದ. 4. ಹೆಚ್ಚು ಸತ್ತ್ವಶಾಲಿಯಾಗಿ ಕೆಲಸ ಮಾಡುವವನು. "निर्धार्यः कर्मकर्ता च संपन्नः सत्त्वसम्पदा"।

**निर्धुत ನಿರ್ಧುತ** (वि०) ನಿರಾಕರಿಸಲ್ಪಟ್ಟ, ತಿರಸ್ಕರಿಸಲ್ಪಟ್ಟ. निर् + धुञ् (कम्पने) "क्तः" (३-२-१०२)। "चिरं युवाकूतशतैः कृतार्थनश्चिरं सरोषेङ्गितया च निर्धुतः" नैष० १६-१०८।

**निर्धूत ನಿರ್ಧೂತ** (वि०) 1. ನಿರಸನಮಾಡಲ್ಪಟ್ಟ, ತಳ್ಳಹಾಕಲ್ಪಟ್ಟ. निर्+धुञ् (कम्पने) "क्तः" (३-२-१०२)। "केशाकर्षणनिर्धूतगौरवा मा गमिष्यसि"। 2. ತ್ಯಜಿಸಲ್ಪಟ್ಟ, ಬಿಡಲ್ಪಟ್ಟ, ತೊರೆಯಲ್ಪಟ್ಟ. "अनाप्तपुण्योपचयैर्दुरापा फलस्य निर्धूतरजाः सवित्री" किरा० ३-५। 3. ತಿರಸ್ಕರಿಸಲ್ಪಟ್ಟ, ಅವಮಾನಗೊಳಿಸಲ್ಪಟ್ಟ. "उत्सेधनिर्धूतमहीरुहां ध्वजैर्जनावरुद्धोद्धतसिन्धुरंहसाम्" माघ० १२-५३। 4. ಅಡಿಸಲ್ಪಟ್ಟ, ಕದಲಿಸಲ್ಪಟ್ಟ. "ज्ञाननिर्धूतकल्मषाः" गीता ५-१७। 5. ಹೆದರಿಸಲ್ಪಟ್ಟ. "पुराहं वालिना राम राज्यात् स्वादवरोपितः। परुषाणि च संश्राव्य निर्धूतोऽस्मि बलीयसा" रामा०। 6. ಖಂಡಿಸಲ್ಪಟ್ಟ. 7. ನಾಶಪಡಿಸಲ್ಪಟ್ಟ. निर्धूतनिगमांस्तत्र नैगमानपरान्तजान्" याद० २२-९८।

**निर्धौत ನಿರ್ಧೌತ** (वि०) ಚೆನ್ನಾಗಿ ತೊಳೆಯಲ್ಪಟ್ಟ. नितरां धौतम्। "निर्धौते सति हरिचन्दने जलौघैरापाण्डोर्गतपरभागयाङ्गनायाः" माघ० ८-५१।

**निर्निमेष ನಿರ್ನಿಮೇಷ**(वि०) ರೆಪ್ಪೆಯಾಡದಿರುವ, ಮಿಟುಕದಿರುವ. "व्युत्थितेषु विमुखेषु वा स्वयं निर्निमेषनयनेषु नाकिषु" याद० १७-४१।

**निर्बन्ध ನಿರ್ಬಂಧ** (पुं०) 1. ಒತ್ತಾಯಮಾಡುವುದು, ಅವಶ್ಯವೆಂದು ಹೇಳಿ ಪಟ್ಟುಹಿಡಿಯುವುದು. निर्+बन्ध (बन्धने) भावे "घञ्" (३-३-१८)। "अवस्तुनिर्बन्धपरे कथं नु ते करोऽयमामुक्तविवाहकौतुकः" कुमा० ५-६६। 2. ಅತಿಶಯವಾದ ಪ್ರಯತ್ನ. "कपालकुण्डलाकोपदुर्जातजनितापदः। वयमभ्युद्धृताः कृच्छ्रान्निर्बन्धादार्ययानया" मालती० १०-१९।

**निर्बाध ನಿರ್ಬಾಧ** (वि०) 1. ಅಡ್ಡಿ ಆತಂಕಗಳಿಲ್ಲದ, ಅಡಚಣೆಯಿಲ್ಲದ. निर्गता बाधा यस्मात्। 2. ಉಪದ್ರವವಿಲ್ಲದ, ಹಿಂಸೆಯಿಲ್ಲದ, ಪೀಡೆಯಿಲ್ಲದ. 3. ವಿವಿಕ್ತವಾದ, ಯಾರ ಸಂಪರ್ಕವೂ ಇಲ್ಲದ.

**निर्भय ನಿರ್ಭಯ** (वि०) 1. ಭಯವಿಲ್ಲದ, ಹೆದರಿಕೆಯಿಲ್ಲದ. निर्गतं भयं यस्मात्। "निर्भयं तु भवेद्यस्य राष्ट्रं बाहुबलाश्रितम्" मनु० ९-२५५। 2. ಆತಂಕವಿಲ್ಲದ, ನೆಮ್ಮದಿಯಿಂದಿರುವ. "वितानतामातपनिर्भयास्तदा पटच्छिदाकालिकपुष्पजाः स्रजः" नैष० १५-१४।

**निर्भर ನಿರ್ಭರ** (वि०) 1. ಹೆಚ್ಚಾದ, ಅಧಿಕವಾದ, ಬಹಳವಾದ. निःशेषेण भरो भरणं यत्र। "जगुः पुण्यश्लोकं प्रतिनृपतयः किन्तु विदधुः स्वनिश्वासैर्भैमीहृदयमुदयन्निर्भरदयम्" नैष० १४-९६। 2. ಗುರುವಾದ, ಭಾರವಾದ. "अलघुप्रसारितविलोचनाञ्जलिद्रुतपीतमाधवरसौघनिर्भरैः" माघ० १३-४८। (न०) 3. ಅತಿಶಯ, ಹೆಚ್ಚು, ಆಧಿಕ್ಯ. (अव्य०) 4. ಅತಿಶಯವಾಗಿ, ಅಧಿಕವಾಗಿ, ಹೆಚ್ಚಾಗಿ. "प्रियावियोगाद्विधुरोऽपि निर्भरं कुतूहलाक्रान्तमना मनागभूत्" नैष० १-११९।

**निर्भर्त्सन ನಿರ್ಭರ್ತ್ಸನ** (न०) 1. ಹೆದರಿಸುವುದು, ಗದರಿಸುವುದು. नितरां भर्त्सनम्। "धैर्यमभिनदुदितं शिशुना जननीनिर्भर्त्सनविवृद्धमन्युना" माघ० १५-८७। 2. ಅವಮಾನಗೊಳಿಸುವುದು, ತಿರಸ್ಕರಿಸುವುದು.

**निर्भर्त्संयत् ನಿರ್ಭರ್ತ್ಸಯತ್** (वि०) 1. ಹೆದರಿಸುತ್ತಿರುವ, ಬೆದರಿಸುತ್ತಿರುವ. निर्+भर्त्स (तर्जने) + णिच् "शतृ" (३-२-१२४)। 2. ಅವಮಾನಗೊಳಿಸುತ್ತಿರುವ, ತಿರಸ್ಕರಿಸುತ್ತಿರುವ. स्त्रियां "ङीप्" (४-१-६)। –यन्ती –ಯಂತೀ.

**निर्भर्त्सित ನಿರ್ಭರ್ತ್ಸಿತ** (वि०) 1. ಹೆದರಿಸಲ್ಪಟ್ಟ, ಗದರಿಸಲ್ಪಟ್ಟ. निर्+भर्त्स (तर्जने)+णिच् "क्तः" (३-२-१०२)। 2. ಅವಮಾನಗೊಳಿಸಲ್ಪಟ್ಟ, ತಿರಸ್ಕರಿಸಲ್ಪಟ್ಟ. "अशोकनिर्भर्त्सितपद्मरागमाकृष्टहेमद्युतिकर्णिकारम्" कुमा० ३-५३।

**निर्भस्मित ನಿರ್ಭಸ್ಮಿತ** (वि०) ಭಸ್ಮರಹಿತವಾಗಿ ಮಾಡಲ್ಪಟ್ಟ. "गाङ्गौघनिर्भस्मितशम्भुकन्धरासवर्णमर्णः कथमन्यथास्य तत्" माघ० १२-६९।

**निर्भाग्य ನಿರ್ಭಾಗ್ಯ** (वि०) ಅದೃಷ್ಟಹೀನ, ದುರದೃಷ್ಟದವನು. निर्गतं भाग्यं यस्मात्।

**निर्भिन्न ನಿರ್ಭಿನ್ನ** (वि०) 1. ಒಡೆಯಲ್ಪಟ್ಟ, ಸೀಳಲ್ಪಟ್ಟ. निर् + भिदिर् (विदारणे) "क्तः" (३-२-१०२)। "दन्ताग्रनिर्भिन्नपयोदमुन्मुखाः शिलोच्चयानारुरुहुर्महीयसः" माघ० १२-४७। 2. ಪ್ರಕಾಶಪಡಿಸಲ್ಪಟ್ಟ, ಹೊರಗೆ ತೋರಿಸಲ್ಪಟ್ಟ. "परवृद्धिभिराहितव्यथः स्फुटनिर्भिन्नदुराशयोऽधमः" माघ० १६-२३।

**निर्भीक ನಿರ್ಭೀಕ** (वि०) ಭಯವಿಲ್ಲದ, ಹೆದರಿಕೆಯಿಲ್ಲದ. निर्गता भीर्यस्य "कप्" (५-४-१५४)।

**निर्भुग्न ನಿರ್ಭುಗ್ನ** (वि०) 1. ತಿರುಚಲ್ಪಟ್ಟ, ವಕ್ರವಾಗಿ ಮಾಡಲ್ಪಟ್ಟ. निर् + भुजो (कौटिल्ये) "क्तः" (३-२-१०२)। 2. ಬಗ್ಗಿಸಲ್ಪಟ್ಟ. 3. ಚೆನ್ನಾಗಿ ಒತ್ತಲ್ಪಟ್ಟ, ಚೆನ್ನಾಗಿ ಅದುಮಲ್ಪಟ್ಟ. "एकीकृतस्त्वचि निषिक्त इवावपीड्य निर्भुग्नपीनकुचकुड्मलयानया मे" मालती० ६-१२।

**निर्भृति ನಿರ್ಭೃತಿ** (वि०) ಕೂಲಿಯಿಲ್ಲದ, ಸಂಬಳವಿಲ್ಲದ. निर्गता भृतिर्यस्य।

**निर्भेद ನಿರ್ಭೇದ** (पुं०) 1. ಒಡೆಯುವುದು, ಸೀಳುವುದು. 2. ಪ್ರಕಾಶಪಡಿಸುವುದು, ಸ್ಪಷ್ಟವಾಗಿ ತಿಳಿಸುವುದು. निर् + भिदिर् (विदारणे) "घञ्" (३-३-१८)। "अहो, निर्भेदादृतेऽपि मालविकायामयमुपन्यासःशङ्कयति" माल० ४।

**निर्भेद्य ನಿರ್ಭೇದ್ಯ** (वि०) 1. ಸೀಳಲ್ಪಡುವ, ಒಡೆಯಲ್ಪಡುವ. 2. ಪ್ರಕಾಶಪಡಿಸಲ್ಪಡುವ, ಚೆನ್ನಾಗಿ ಹೊರಗೆಡಹಲ್ಪಡುವ. निर्+भिदिर् (विदारणे) "ण्यत्" (३-१-१२४)।

**निर्मक्षिक ನಿರ್ಮಕ್ಷಿಕ** (वि०) 1. ನೊಣಗಳಿಲ್ಲದ (ಪ್ರದೇಶ). 2. ನಿರ್ಜನ ಪ್ರದೇಶ, ಏಕಾಂತವಾದ ಸ್ಥಳ. निर्गता मक्षिका यस्मात्। (अव्य०) 3. ನೊಣಗಳಿಲ್ಲದಿರುವುದು, ನೊಣಗಳ ಅಭಾವ. मक्षिकाया अभावः। अव्ययी०। 4. ಜನರಿಲ್ಲದಿರುವುದು, ಮನುಷ್ಯರ ಅಭಾವ. "कृतं भवता निर्मक्षिकम्" शाकु० २।

**निर्मत्सर ನಿರ್ಮತ್ಸರ** (वि०) ಮಾತ್ಸರ್ಯವಿಲ್ಲದವನು, ಅಸೂಯೆಯಿಲ್ಲದವನು, ಹೊಟ್ಟೆಕಿಚ್ಚಿಲ್ಲದವನು. निर्गतो मत्सरो यस्मात्।

**निर्मथत् ನಿರ್ಮಥತ್** (वि०) 1. ಮಥನಮಾಡುತ್ತಿರುವ, ಕಡೆಯುತ್ತಿರುವ. निर् + मथे (विलोडने) "शतृ" (३-२-१२४)। 2. ಧ್ವಂಸಗೊಳಿಸುತ್ತಿರುವ, ನಾಶಮಾಡುತ್ತಿರುವ.

**निर्मथन ನಿರ್ಮಥನ** (न०) 1. ಮಥನಮಾಡುವುದು, ಕಡೆಯುವುದು. निर्+मथे (विलोडने) भावे "ल्युट्" (३-३-११५)। 2. ನಾಶಪಡಿಸುವುದು, ಧ್ವಂಸಗೊಳಿಸುವುದು. "विनिवर्तित एष वीरपोतः पृतनानिर्मथनात्त्वयोपहूतः" उ० रा० ५-८। 3. ಅಗ್ನಿಯನ್ನು ಕಡೆಯುವುದು. 4. ಮರ್ದನ, ಉಜ್ಜುವಿಕೆ, ತಿಕ್ಕಾಟ. "परिमलितपाटलीमुकुलनिर्मथनबहुलपरिमलोत्पीड० ..........."

मालती० ३। (वि०) 5. ಕಡೆಯುವ ಮಂತು. 6. ಅಗ್ನಿಯನ್ನು ಕಡೆಯುವ ಅರಣಿ. निर्मथ्यतेऽनेन — निर् + मथे करं० "ल्युट्" (३-३-११७)।

**निर्मथनीय ನಿರ್ಮಥನೀಯ** (वि०) 1. ಕಡೆಯಲ್ಪಡುವ. 2. ಕಡೆಯಬೇಕಾದ. 3. ಕಡೆಯಲು ಅರ್ಹವಾದ. 4. ನಾಶಪಡಿಸಲ್ಪಡುವ. 5. ನಾಶಪಡಿಸಬೇಕಾದ. 6. ನಾಶಪಡಿಸಲು ಅರ್ಹವಾದ. निर्+मथे (विलोडने) "अनीयर्" (३-१-९६)। "तव्यः" (३-१-९६)। **–मथितव्यम् –ಮಥಿತವ್ಯಮ್.**

**निर्मथित ನಿರ್ಮಥಿತ** (वि०) 1. ಕಡೆಯಲ್ಪಟ್ಟ, निर् + मथे (बिलोडने) "क्तः" (३-२-१०२)। "तैस्तैरसौ निर्मथितो विधूतस्संक्षोमितो बन्धनपीडनाद्यैः" याद० १८-१००। 2. ನಾಶಪಡಿಸಲ್ಪಟ್ಟ.

**निर्मथितवत् ನಿರ್ಮಥಿತವತ್** (वि०) 1. ಮೊಸರನ್ನು ಕಡೆದವನು. 2. ನಾಶಪಡಿಸಿದವನು. निर् + मथे (विलोडने) "क्तवतुः" (३-२-१०२)। 3. ಅಗ್ನಿಯನ್ನು ಕಡೆದವನು.

**निर्मथ्य ನಿರ್ಮಥ್ಯ** (वि०) 1. ಕಡೆಯಲ್ಪಡುವ. 2. ನಾಶಪಡಿಸಲ್ಪಡುವ, ಧ್ವಂಸಗೊಳಿಸಲ್ಪಡುವ. निर् + मथे (विलोडने) "ण्यत्" (३-१-१२४)।

**निर्मथ्यमान ನಿರ್ಮಥ್ಯಮಾನ** (वि०) ಕಡೆಯಲ್ಪಡುತ್ತಿರುವ. निर् + मन्थ (विलोडने) कर्म० "शानच्" (३-२-१२४)। "निर्मथ्यमानादुदधेरभूद्विषं महोल्बणं हालहलाह्वमग्रतः" भाग० ८-७-१७।

**निर्मन्थन ನಿರ್ಮಂಥನ** (न०) 1. ಮಥನಮಾಡುವುದು, ಮೊಸರು ಕಡೆಯುವುದು. निर् + मन्थ (विलोडने) "ल्युट्" (३-३-११५)। "यानि यानीह गीतानि तद्बालचरितानि च। दधिनिर्मन्थने काले स्मरन्ती तान्यगायत" भाग० १०-९-२। 2. ನಾಶಪಡಿಸುವುದು. 3. ಅಗ್ನಿಯನ್ನು ಕಡೆಯುವುದು. (वि०) 4. ಮೊಸರು ಕಡೆಯುವ ಮಂತು. 5. ಅಗ್ನಿಯನ್ನು ಕಡೆಯುವ ಅರಣಿ. निर् + मन्थ करं० "ल्युट्" (३-३-११७)।

**निर्मन्थनीय ನಿರ್ಮಂಥನೀಯ** (वि०) 1. ಕಡೆಯಲ್ಪಡುವ. 2. ಕಡೆಯಬೇಕಾದ. 3. ಕಡೆಯಲು ಅರ್ಹವಾದ. 4. ನಾಶಪಡಿಸಲ್ಪಡುವ. 5. ನಾಶಪಡಿಸಬೇಕಾದ. 6. ನಾಶಪಡಿಸಲು ಅರ್ಹವಾದ. निर्+मन्थ (विलोडने) "अनीयर्" (३-१-९६)। "तव्यः" (३-१-९६)। **–मन्थितव्यम् –ಮಂಥಿತವ್ಯಮ್.**

**निर्मन्थ्य ನಿರ್ಮಂಥ್ಯ** (वि०) 1. ಕಡೆಯಲ್ಪಡುವ. निर्+मन्थ (विलोडने) "ण्यत्" (३-१-१२४)। 2. ಕಡೆದು ಅಗ್ನಿಯನ್ನು ಉತ್ಪಾದಿಸುವ (ಅರಣಿ). 3. ನಾಶಪಡಿಸಲ್ಪಡುವ.

**निर्मन्यु ನಿರ್ಮನ್ಯು** (वि०) ಕೋಪವಿಲ್ಲದ. निर्गतो मन्युः यस्मात्। "न निर्मन्युः क्षत्रियोऽस्ति लोके निर्वचनं स्मृतम्" भा० वन० २७-३६।

**निर्मम ನಿರ್ಮಮ** (वि०) 1. ಪ್ರಪಂಚದ ವ್ಯವಹಾರವನ್ನು ತ್ಯಜಿಸಿರುವ, ಪ್ರಪಂಚದ ಸಂಬಂಧವನ್ನು ಬಿಟ್ಟಿರುವ. निर्गतं मम ममता यस्य। ममेत्येतदव्ययं ममतावाचि। "मारुतिः सागरं तीर्णः संसारमिव निर्ममः" रघु० १२-६०। "निराशीर्निर्ममो भूत्वा युध्यस्व विगतज्वरः" गीता ३-३०। 2. ನಿಃಸ್ಪೃಹನಾದ, ಆಸೆಯನ್ನು ತೋರದಿರುವ. "निर्ममे निर्ममोऽर्थेषु मधुरां मधुराकृतिः" रघु० १५-३०।

**निर्मर्याद ನಿರ್ಮರ್ಯಾದ** (वि०) 1. ಮರ್ಯಾದೆಯಿಲ್ಲದ, ಗೌರವವಿಲ್ಲದ. निर्गतो मर्यादायाः। "कृतमनुमतं दृष्टं वा यैरिदं गुरुपातकं मनुजपशुभिर्निर्मर्यादैर्भवद्भिरुदायुधैः" वेणी० ३-२४। 2. ಅವಿಧೇಯ. 3. ಎಲ್ಲೆಯಿಲ್ಲದ, ಗಡಿಯಿಲ್ಲದ.

**निर्मल ನಿರ್ಮಲ** (वि०) 1. ಸ್ವಚ್ಛವಾದ, ಕಶ್ಮಲವಿಲ್ಲದ. निर्गतो मलो यस्मात्। "विरेजिरे तच्चिकुरोत्कराः किराः क्षणं गलन्निर्मलवारिविप्रुषाम्" नैष० १५-२३। 2. ದೋಷವಿಲ್ಲದ, ಕಳಂಕವಿಲ್ಲದ. "संभृतोपकरणेन निर्मलां कर्तुमिष्टिमभिवाञ्छता मया" माघ० १४-७। 3. ರಾಗದ್ವೇಷಾದಿ ದೋಷವಿಲ್ಲದ. "मनस्तु सुखदुःखानां महतां कारणं द्विज। जाते तु निर्मले ह्यस्मिन् सर्वं भवति निर्मलम्" देवीभा०। 4. ಪ್ರಕಾಶವಾದ, ಮಾಲಿನ್ಯವಿಲ್ಲದ. "अगस्त्यभासा दिशि निर्मलत्विषि" नैष० ९-५७। 5. ಶುದ್ಧವಾದ, ಕಪಟವಿಲ್ಲದ. "इत्यनाविलमनोज्ञया गिरा निर्मलां निजदयामिवोद्वमन्" याद० १७-१२९। 6. ಪಾಪವಿಲ್ಲದ. "निर्मलाः स्वर्गमायान्ति सन्तः सुकृतिनो यथा" मनु० ८-३१८। (न०) 7. ನಿರ್ಮಾಲ್ಯ. 8. ಅಭ್ರಕ, ಕಾಗೆಬಂಗಾರ.

**निर्मलीकरण ನಿರ್ಮಲೀಕರಣ** (न०) 1. ಶುದ್ಧವಾಗಿ ಮಾಡುವುದು. 2. ಸ್ವಚ್ಛವಾಗಿ ಮಾಡುವುದು. 3. ದೋಷವಿಲ್ಲದಂತೆ ಮಾಡುವುದು. 4. ಪ್ರಕಾಶವಾಗಿ ಮಾಡುವುದು.

**निर्मलीकृत ನಿರ್ಮಲೀಕೃತ** (वि०) 1. ಶುದ್ಧವಾಗಿ ಮಾಡಲ್ಪಟ್ಟ. 2. ದೋಷವಿಲ್ಲದಂತೆ ಮಾಡಲ್ಪಟ್ಟ. 3. ಸ್ವಚ್ಛವಾಗಿ ಮಾಡಲ್ಪಟ್ಟ. 4. ಪ್ರಕಾಶವಾಗಿ ಮಾಡಲ್ಪಟ್ಟ.

**निर्मलीमस ನಿರ್ಮಲೀಮಸ** (वि०) 1. ಕಶ್ಮಲವಿಲ್ಲದ. 2. ಶುದ್ಧವಾದ, ಪವಿತ್ರವಾದ. "प्राज्यमाज्यमसकृद्वषट्कृतं निर्मलीमसमलीढ पावकः" माघ० १४-२५।

**निर्मलोपल ನಿರ್ಮಲೋಪಲ** (पुं०) ಸ್ಫಟಿಕಶಿಲೆ.

**निर्मशक ನಿರ್ಮಶಕ** (वि०) ಸೊಳ್ಳೆಗಳಿಲ್ಲದ (ದೇಶ). निर्गतो मशको यस्मात्।

**निर्मानुष ನಿರ್ಮಾನುಷ** (वि०) ಮನುಷ್ಯರಿಲ್ಲದ (ದೇಶ), ಜನರಿಲ್ಲದ (ಪ್ರದೇಶ). निर्गतो मानुषो यस्मात्, निर् नास्ति मानुषो यत्र वा।

**निर्माण ನಿರ್ಮಾಣ** (न०) 1. ಮಾಡುವುದು. 2. ರಚಿಸುವುದು. निर् + माङ् (माने) "ल्युट्" (३-३-११५)। "यदैतेऽसङ्गता भावा भूतेन्द्रियमनोगुणाः। यदायतननिर्माणे न शेकुर्ब्रह्मवित्तम" भाग० २-५-३२। "फलतु निर्माणरमणीयता" मालती० १। 3. ಸೃಷ್ಟಿಸುವುದು. "निर्माणमेव हि तदा तव लालनीयं मा पूतनात्वमुपगाः शिवतातिरेव" मालती० ९-५१। 4. ತಯಾರಿಸುವುದು. "अलम्भि तुङ्गासनसंनिवेशादपूपनिर्माणविदाग्रयादरः" नैष० १५-१२। 5. ಬೆಳವಣಿಗೆ. "अयमप्राप्तनिर्माणः" रामा०। (वि०) 6. ನಿರ್ಮಿತವಾದ, ಉತ್ಪಾದಿತ. निर् + माङ् कर्म० "ल्युट्" (३-३-११३)।

**निर्मातृ ನಿರ್ಮಾತೃ** (वि०) 1. ಮಾಡುವವನು. निर्+माङ् (माने) "तृच्" (३-१-१३३)। 2. (ಗ್ರಂಥ ಮೊದಲಾದುವನ್ನು) ರಚಿಸುವವನು. 3. (ಮನೆ ಮೊದಲಾದುವನ್ನು) ಕಟ್ಟುವವನು. 4. ಸೃಷ್ಟಿಸುವವನು. 5. ತಯಾರಿಸುವವನು. स्त्रियां "ङीप्" (४-१-५)। **-मात्री -ಮಾತ್ರೀ.**

**निर्माथ ನಿರ್ಮಾಥ** (पुं०) ಧ್ವಂಸಮಾಡುವುದು, ನಾಶಪಡಿಸುವುದು. निर्+मथे (विलोडने) "घञ्" (३-३-१८)। "ब्रह्माच्छला निखिलभुवनस्तोमनिर्माथयोग्यः" म० वी० २-२५।

**निर्माल्य ನಿರ್ಮಾಲ್ಯ** (न०) 1. ದೇವರಿಗೆ ಧರಿಸಿ ವಿಸರ್ಜಿಸಿದ ಪುಷ್ಪ ಮೊದಲಾದುದು, ಪೂಜಾನಂತರ ದೇವರಿಂದ ತೆಗೆದ ಪುಷ್ಪ. निर्+मल (धारणे) "ण्यत्" (३-१-१२४)। "अर्वाक् विसर्जनाद्द्रव्यं नैवेद्यं सर्वमुच्यते। विसर्जिते जगन्नाथे निर्माल्यं भवति क्षणात्"। 2. ಉಪಯೋಗಿಸಿ ತೆಗೆದುಹಾಕಿದ ಪುಷ್ಪ. "अस्याम्बुजलमभि भूषणैर्पूना-मङ्गेभ्यो गुरुभिरमज्जि लज्जयेव। निर्माल्यैरथ ममृतेऽवधीरितानामप्युच्चैर्भवति लघीयसां हि धार्ष्ट्यम्" माघ० ८-६०। 3. ಉಳಿಕೆ, ಉಚ್ಛಿಷ್ಟ.

**निर्मित ನಿರ್ಮಿತ** (वि०) 1. ತಯಾರಿಸಲ್ಪಟ್ಟ. निर्+माङ् (माने) "क्तः" (३-२-१०२)। "आस्यं शीतमयूख-मण्डलगुणानाकृष्य ते निर्मितं शङ्के सुन्दरि शर्वरीपरिवृढस्तेनैष दोषाकरः" नैष० २२-१४५। "त्वष्ट्रा नवं निर्मितमातपत्रम्" कुमा० ७-४१। 2. ಸೃಷ್ಟಿಸಲ್ಪಟ್ಟ, ಉತ್ಪತ್ತಿಮಾಡಲ್ಪಟ್ಟ. "आप्तकाम सृजसि त्रिजगत्किं कि भिनत्सि यदि निर्मितमेव" नैष० २१-१०५। 3. ರಚಿಸಲ್ಪಟ್ಟ, ಮಾಡಲ್ಪಟ್ಟ. "युवानमालोक्य विदग्धशीलया स्वपाणिपाथोरुहनालनिर्मितः" नैष० १६-५९। 4. ಉಂಟುಮಾಡಲ್ಪಟ್ಟ. "तमिमं कुरु दक्षिणेतरं चरणं निर्मित-रागमेहि मे" कुमा० ४-१९। 5. ರಚನೆ ಮಾಡಲ್ಪಟ್ಟ (ಗ್ರಂಥ). 6. ಕಲ್ಪಿಸಲ್ಪಟ್ಟ. 7. ನಿರ್ಮಿಸಲ್ಪಟ್ಟ, ಕಟ್ಟಲ್ಪಟ್ಟ (ಮನೆ ಮುಂತಾದುದು). 8. ಮಾಡಲ್ಪಟ್ಟ, "भजते खलु षण्मुखं शिखी चिकुरैर्निर्मितबर्हगर्हणः" नैष० २-३३।

**निर्मिति ನಿರ್ಮಿತಿ** (स्त्री०) 1. ಮಾಡುವುದು, ತಯಾರಿಸುವುದು. निर् + माङ् (माने) "क्तिन्" (३-३-९४)। "जातं शातक्रतव्यां हरिति विहरतः काकतालीयमस्या-मस्यामत्वेकमत्यस्थितसकलकलानिर्मितेर्निर्मलस्य" नैष० २२-१३९। 2. (ಗ್ರಂಥ ಮೊದಲಾದುವನ್ನು) ರಚಿಸುವುದು. 3. ಸೃಷ್ಟಿಸುವುದು. 4. ಕಲ್ಪಿಸುವುದು. 5. ಉಂಟುಮಾಡುವುದು, ಉತ್ಪತ್ತಿಮಾಡುವುದು.

**निर्मीयमाण ನಿರ್ಮೀಯಮಾಣ** (वि०) ನಿರ್ಮಿಸಲ್ಪಡುತ್ತಿರುವ, ಸೃಷ್ಟಿಸಲ್ಪಡುತ್ತಿರುವ. निर् + माङ् (माने) कर्म० "शानच्" (३-२-१२४)। "मुहूर्तमात्रहृदय-विनिहितनिर्मीयमाणवल्लभसमागमा" मालती० ३।

**निर्मुक्त ನಿರ್ಮುಕ್ತ** (पुं०) 1. ಪೊರೆಬಿಟ್ಟ ಸರ್ಪ, ಸೋಲೆಯನ್ನು ಬಿಟ್ಟ ಹಾವು. निर् + मुच्लृ (मोक्षणे) "क्तः" (३-२-१०२)। "निर्मुक्तशेषोरगनिर्विशेषैर्निकेतनैरुन्न-मितान्तरिक्षम्" याद० १८-१२३। (वि०) 2. ಬಿಡಲ್ಪಟ್ಟ. "हिमनिर्मुक्तयोर्योगे चित्राचन्द्रमसोरिव" रघु० १-४६। 3. ಬಿಡುಗಡೆಮಾಡಲ್ಪಟ್ಟ, ಬಂಧನದಿಂದ ತಪ್ಪಿಸಲ್ಪಟ್ಟ. 4. ಪ್ರಾಪಂಚಿಕಸಂಬಂಧವನ್ನು ಬಿಟ್ಟಿರುವ. "निर्मुक्तस्त्यक्तसङ्गे स्यान्मुक्तकञ्चुकभोगिनि" मेदि०। "निर्मुक्ताः सर्वसङ्गेभ्यो कृतात्मानो यतव्रताः" भा० अनु० १५९-५२।

**निर्मुक्ति ನಿರ್ಮುಕ್ತಿ** (स्त्री०) 1. ಬಿಡುಗಡೆ. 2. ಸಂಸಾರ ಪಾಶದಿಂದ ಬಿಡುಗಡೆ ಹೊಂದುವುದು. निर् + मुच्लृ (मोक्षणे) "क्तिन्" (३-३-९४)।

**निर्मुट ನಿರ್ಮುಟ** (पुं०) 1. ರವಿ, ಸೂರ್ಯ. 2. ಚೋರ, ಕಳ್ಳ. 3. ವನಸ್ಪತಿ, ಹೂವಿಲ್ಲದೆ ಫಲ ಬಿಡುವ ವೃಕ್ಷ. 4. ತೆರಿಗೆಯಿಲ್ಲದ ಮಾರುಕಟ್ಟೆ.

**निर्मूल ನಿರ್ಮೂಲ** (वि०) 1. ಬುಡವಿಲ್ಲದ, ಆಧಾರ ವಿಲ್ಲದ. निर्गतं मूलमाधारो यस्य। 2. ಬೇರಿಲ್ಲದ. निर्गतं मूलं बुध्नो यस्य। "आरुह्य वृक्षान्निर्मूलान् गजः परिरुजन्निव" भा० उद्योग० ७४-८। (अव्य०) 3. ಬುಡವಿಲ್ಲದೆ, ಆಧಾರವಿಲ್ಲದೆ. "निःश्वासा वदनं दहन्ति हृदयं निर्मूलमुन्मथ्यते निद्रा नैति न दृश्यते प्रियमुखं नक्तंदिवं रुद्यते" अमरु० ९२।

**निर्मूलन ನಿರ್ಮೂಲನ** (न०) 1. ಬುಡಸಹಿತ ಕಿತ್ತುಹಾಕುವುದು. 2. ಸಂಪೂರ್ಣವಾಗಿ ನಾಶಪಡಿಸುವುದು. "कदा शम्भो भविष्यामि कर्मनिर्मूलनक्षमः" भर्तृ० ३-८९।

**निर्मृष्ट ನಿರ್ಮೃಷ್ಟ** (वि०) ಚೆನ್ನಾಗಿ ತೊಳೆಯಲ್ಪಟ್ಟ, ಚೆನ್ನಾಗಿ ಒರೆಸಲ್ಪಟ್ಟ. निः निःशेषं मृष्टः। "निःशेषच्युतचन्दनं स्तनतटं निर्मृष्टरागोऽधरो नेत्रे दूरमनञ्जने पुलकिता तन्वी तवेयं तनुः" सा० द० २।

**निर्मोक ನಿರ್ಮೋಕ** (पुं०) 1. ಬಿಡುಗಡೆ ಹೊಂದಿಸುವುದು. निर् + मुच्लृ (मोक्षणे) "घञ्" (३-३-१८)। 2. ಹಾವಿನ ಪರೆ, ಹಾವಿನ ಸೋಲೆ. कर्मणि "घञ्" (३-३-१९)। "स्तनोत्तरीयाणि भवन्ति सङ्गान्निर्मोकपट्टाः फणिभिर्विमुक्ताः" रघु० १६-१७। 3. ಚರ್ಮ, ತೊಗಲು. "मृगनिर्मोकवसनाश्चीरवल्कलवाससः" भा० अनु० १४१-१००। 4. ಯುದ್ಧಕವಚ. 5. ಆಕಾಶ. "निर्मोको मोचने व्योम्नि सन्नाहे सर्पकञ्चुके" मेदि०। 6. ಸಾವರ್ಣಿಮನುವಿನ ಒಬ್ಬ ಮಗ. "निर्मोकविरजस्काद्याः सावर्णेस्तनया नृप" भाग० ८-१३-६।

**निर्मोक्ष ನಿರ್ಮೋಕ್ಷ** (पुं०) ಸಂಪೂರ್ಣವಾದ ಮೋಕ್ಷ, ವಿಮೋಚನೆ, ಬಿಡುಗಡೆ. नितरां मोक्षः। "न चोपलेभे पूर्वेषामृणनिर्मोक्षसाधनम्" रघु० १०-२।

**निर्मोचन ನಿರ್ಮೋಚನ** (न०) ಬಿಡುಗಡೆಮಾಡಿಸುವುದು. नितरां मोचनम् — निर् + मुच्लृ (मोक्षणे) + णिच् "ल्युट्" (३-३-११५)।

**निर्मोह ನಿರ್ಮೋಹ** (पुं०) 1. ರೈವತ ಮನುವಿನ ಒಬ್ಬ ಮಗ. (वि०) 2. ಮೋಹವಿಲ್ಲದ, ಭ್ರಾಂತಿಯಿಲ್ಲದ. निर्गतो मोहो यस्मात्।

**निर्यत् ನಿರ್ಯತ್** (वि०) ಹೊರಡುತ್ತಿರುವ, ಹೊರಗೆ ಬರುತ್ತಿರುವ. निर्+इण् (गतौ) "शतृ" (३-२-१२४)। "अस्मिन् मृदुश्वसनगर्भतदीयरन्ध्रनिर्यत्स्वनश्रुतिसुखादिव नोत्सहन्ते" माघ० ४-४३। स्त्रियां "ङीप्" (४-१-६)। **–यती –ಯತೀ.** "वर्गाद्गवां हुंकृतिचारु निर्यतीमरिमंधोरेक्षत गोमतल्लिकाम्" माघ० १२-४१।

**निर्यन्त्रण ನಿರ್ಯಂತ್ರಣ** (न०) 1. ಸ್ವಾತಂತ್ರ್ಯ, ನಿರ್ಬಂಧ ವಿಲ್ಲದಿರುವಿಕೆ. (वि०) 2. ನಿರ್ಬಂಧವಿಲ್ಲದ, ಅಡ್ಡಿ ಆತಂಕ ಗಳಿಲ್ಲದ, ಸ್ವತಂತ್ರ.

**निर्याण ನಿರ್ಯಾಣ** (न०) 1. ಆನೆಯ ಕಡೆಗಣ್ಣು. निर्यात्यनेन—निर्+या (प्रापणे) "ल्युट्" (३-३-११७)। "अपाङ्गदेशो निर्याणम्" अम०। "प्रत्यन्यदन्ति निशिताङ्कुशदूरभिन्ननिर्याणनिर्यदसृजं चलितं निषादी" माघ० ५-४१। 2. ಹಾಲು ಕರೆಯುವಾಗ ಹಸುವಿನ ಕಾಲಿಗೆ ಕಟ್ಟುವ ಹಗ್ಗ. "अभ्याजतोऽभ्यागततूर्णतर्णकान्निर्याणहस्तस्य पुरो दुधुक्षतः" माघ० १२-४१। 3. ಮೋಕ್ಷ. 4. ಮರಣ. 5. ನಿರ್ಗಮನ, ಹೊರಗೆ ಹೊರಡುವುದು. "निर्याणं निर्गमे मोक्षगजापाङ्गप्रदेशयोः" हेम०।

**निर्यात् ನಿರ್ಯಾತ್** (वि०) ಹೊರಡುತ್ತಿರುವ, ಹೋಗುತ್ತಿರುವ. निर् + या (प्रापणे) "शतृ" (३-२-१२४)। स्त्रियां "ङीप्" (४-१-६)। **–न्ती –ನ್ತೀ.** "निर्यान्तीं मन्त्रमूर्तिं जपति मयि मतिं न्यस्य मय्येव भक्तः" नैष० १४-९०।

**निर्यात ನಿರ್ಯಾತ** (न०) 1. ಹೊರಗೆ ಹೊರಡುವುದು. निर् + या भावे "क्तः" (३-३-११४)। (वि०) 2. ಹೊರಗೆ ಹೊರಟಿರುವ. निर्+या (प्रापणे) "क्तः" (३-४-७२)। "शय्योपान्तनिविष्टसस्मितसखीनेत्रोत्सवानन्दितो निर्यातः शनकैरलीकवचनोपन्यासमालीजनः" अमरु० २७।

**निर्यातन ನಿರ್ಯಾತನ** (न०) 1. ದ್ವೇಷವನ್ನು ತೀರಿಸಿಕೊಳ್ಳುವುದು. निर् + यत (निकारोपस्कारयोः) + णिच् "ल्युट्" (३-३-११५)। 2. ದಾನ. 3. ಇಟ್ಟುಕೊಂಡಿದ್ದ ವಸ್ತುವನ್ನು ಅದರ ಯಜಮಾನನಿಗೆ ಹಿಂತಿರುಗಿಸುವುದು. 4. ಸಾಲ ತೀರಿಸುವುದು. 5. ಮಾರಣ, ಕೊಲ್ಲುವುದು. "निर्यातनं वैरशुद्धौ दाने न्यासार्पणेऽपि च" मेदि०।

**निर्याति** ನಿರ್ಯಾತಿ (स्त्री०) 1. ಹೊರಡುವುದು. 2. ಮರಣ. निर्+या (प्रापणे) "क्तिन्" (३-३-९४)।

**निर्यातित** ನಿರ್ಯಾತಿತ (वि०) ಹಿಂತಿರುಗಿಸಲ್ಪಟ್ಟ, ಇಟ್ಟು ಕೊಂಡಿದ್ದು ಅದರ ಯಜಮಾನನಿಗೆ ಹಿಂದಕ್ಕೆ ಕೊಡಲ್ಪಟ್ಟ. निर्+यत (निकारोपस्कारयोः) "क्तः" (३-२-१०२)। "निर्यातितमिदं भूयः त्वज्जनन्यै मया स्वयम्। श्रवणाभरणद्वन्द्वं शीतलार्कयुगप्रभम्" याद० १६-१२८।

**निर्याम** ನಿರ್ಯಾಮ. (पुं०) ನಾವಿಕ, ಅಂಬಿಗ. "पोतवाहो नियामकः। निर्यामः" अभि० चि०।

**निर्यास** ನಿರ್ಯಾಸ (पुं०) 1. ಮರದ ಹಾಲು, ಮರದ ರಸ. निर् + यसु (प्रयत्ने) "घञ्" (३-३-१८)। "सेव्यमानौ सुखस्पर्शैः शालनिर्याससगन्धिभिः" रघु० १-३८। 2. ಕಷಾಯರಸ. 3. ಸ್ರವಿಸುವ ಜಲ, ಸೋರುವ ನೀರು. 4. ಸಾರ, ಸ್ಥಿರಾಂಶ. "अवकिरति नितान्तं कान्तिनिर्यासम्" माघ० ११-६२।

**निर्यूह** ನಿರ್ಯೂಹ (पुं०) 1. ದ್ವಾರ, ಬಾಗಿಲು. निर्+ऊह (वितर्के) "कः" (३-१-१३५)। पृषो०। 2. ಕೇಶಪಾಶದ ಮೇಲೆ ಧರಿಸಿದ ಹೂವಿನ ಸರ. 3. ಕಷಾಯರಸ. 4. ಗಜದಂತ, ಮನೆಯ ಗೋಡೆಯಲ್ಲಿ ಬಟ್ಟೆ ಮೊದಲಾದುವನ್ನು ತೂಗುಹಾಕಲು (ಇಡಲು) ಹೊಡೆದಿರುವ ಆನೆಯ ಕೊಂಬುಗಳಂತಿರುವ ಗೂಟ. 5. ನಿರ್ಯಾಸ, ಮರದ ರಸ. 6. ಚಾವಣಿ ಮೊದಲಾದುವುಗಳ ಮೇಲೆ ಶಂಕುವಿನಂತೆ ತುದಿಯುಳ್ಳ ಅಲಂಕಾರದ ಸಣ್ಣ ಗೋಪುರ. "निर्यूहः शिखरे द्वारे निर्यासे नागदन्तके" मेदि०। "द्वारापीडे क्वाथरसे निर्यूहो नागदन्तके" अम०। "रतान्तरे यत्र गृहान्तरेषु वितर्दिनिर्यूहविटङ्कनीडः" माघ० ३-५५।

**निर्लक्षण** ನಿರ್ಲಕ್ಷಣ (वि०) 1. ಶುಭಲಕ್ಷಣವಿಲ್ಲದ. निर्गतं लक्षणं यस्मात्। 2. ಯಾವ ಚಿಹ್ನೆಯೂ ಇಲ್ಲದ, ಯಾವುದೊಂದು ಗುರುತೂ ಇಲ್ಲದ.

**निर्लज्ज** ನಿರ್ಲಜ್ಜ (वि०) ಲಜ್ಜೆಯಿಲ್ಲದ, ನಾಚಿಕೆಯಿಲ್ಲದ. निर्गता लज्जा यस्मात्।

**निर्लिप्त** ನಿರ್ಲಿಪ್ತ (वि०) 1. ಲೇಪನ ಮಾಡಲ್ಪಡದ, ಬಳಿಯಲ್ಪಡದ. निर् + लिप (उपदेहे) "क्तः" (३-२-१०२)। 2. ಮಲಿನಮಾಡಲ್ಪಡದ, ಮಾಸಲ್ಪಡದ. 3. ತಟಸ್ಥನಾದ, ಉದಾಸೀನನಾದ, ಯಾವ ಪಕ್ಷವನ್ನೂ ಸೇರದಿರುವ, ಯಾವ ಸಂಬಂಧವನ್ನೂ ಹೊಂದದಿರುವ. "निरुपाधिश्च निर्लिप्तो निरीहो निधनान्तकः"।

**निर्लून** ನಿರ್ಲೂನ (वि०) ಕತ್ತರಿಸಲ್ಪಟ್ಟ, ಛೇದನ ಮಾಡಲ್ಪಟ್ಟ. निर् + लूञ् (छेदने) "क्तः" (३-२-१०२)। "निर्लूनलीलोपवनामपश्यद्दुःसञ्चरीभूतविमानमार्गाम्" कुमा० १३-३५।

**निर्लेखन** ನಿರ್ಲೇಖನ (न०) 1. ಕೊಳೆ ಮೊದಲಾದುವನ್ನು ತೆಗೆಯುವುದು, ಕೊಳೆಯನ್ನು ಉಜ್ಜಿ ತೆಗೆಯುವುದು. निर्+लिख (अक्षरविन्यासे) भावे "ल्युट्" (३-३-११५)। (वि०) 2. ಕೊಳೆಯನ್ನು ತೆಗೆಯುವ ಕುಂಚ ಮೊದಲಾದುದು. निर् + लिख कर० "ल्युट्" (३-३-११७)। "जिह्वानिर्लेखनं रौप्यं सौवर्णं वार्क्षमेव च" सुश्रुत० चिकित्सा० २४-१५।

**निर्लेप** ನಿರ್ಲೇಪ (न०) 1. ಕಮಲ, ತಾವರೆ. "बिसप्रसूनं राजीवं निर्लेपं बिसनाभिजम्" वैज०। (वि०) 2. ದೋಷರಹಿತವಾದ, ಪವಿತ್ರವಾದ. 3. ಕಳಂಕವಿಲ್ಲದ. 4. ಮಾಲಿನ್ಯವಿಲ್ಲದ. निर्गतो लेपो यस्मात्। "निर्लेपं काञ्चनं भाण्डमद्भिरेव विशुध्यति" मनु० ५-११२।

**निर्वक्तव्य** ನಿರ್ವಕ್ತವ್ಯ (वि०) ಅವಯವಾರ್ಥ ಹೇಳಿ ವಿವರಿಸಲ್ಪಡುವ. निर् + वच (परिभाषणे) "तव्यः" (३-१-९६)। निर्वचनीयम् निर्वाच्यम् ಇತ್ಯಾದಿ ಇದೇ ಅರ್ಥದಲ್ಲಿ.

**निर्वचन** ನಿರ್ವಚನ (न०) 1. ಪದಗಳ ಅವಯವಾರ್ಥವನ್ನು ವಿವರಿಸಿ ಹೇಳುವುದು. निर् + वच (परिभाषणे) भावे "ल्युट्" (३-३-११५)। 2. ಪ್ರಸಿದ್ಧಿ. "न निर्मन्युः क्षत्रियोऽस्ति लोके निर्वचनं स्मृतम्" भा० वन० २७-३६। (वि०) 3. ಪ್ರತಿವಚನವಿಲ್ಲದ, ಉತ್ತರವಿಲ್ಲದ. "येषां तटाकानि महोदकानि वाप्यश्च कूपाश्च प्रतिश्रयाश्च। अन्नस्य दानं मधुरा च वाणी यमस्य ते निर्वचना भवन्ति" भा० वन० २०३-४०। (अव्य०) 4. ಮೌನವಾಗಿ, ಮಾತನಾಡದೆ. "सा रञ्जयित्वा चरणौ कृताशीर्माल्येन तां निर्वचनं जघान" कुमा० ७-१९।

**निर्वण** ನಿರ್ವಣ (वि०) ವನದಿಂದ ಹೊರಕ್ಕೆ ಹೋಗಿರುವ, ಅರಣ್ಯವನ್ನು ಬಿಟ್ಟು ಹೋಗಿರುವ. निष्क्रान्तो वनात्। असंज्ञायामपि णत्वम् (८-४-५)। "निर्वणो वध्यते व्याघ्रो निर्व्याघ्रं छिद्यते वनम्" भा० उद्योग० २९-५७।

**निर्वपण** ನಿರ್ವಪಣ (न०) 1. ದಾನ, ಕೊಡುಗೆ. निर्+डु वप् (बीजसन्ताने) भावे "ल्युट्" (३-१-११५)। 2. ನಿವೇದನೆ, ಸಮರ್ಪಣೆ, ಆಹುತಿ, ಬಲಿ. 3. ವರ ಮೊದಲಾದುದನ್ನು ನೀಡುವುದು, ಅನುಗ್ರಹಿಸುವುದು.

"विहापनं निर्वपणं स्पर्शनं प्रतिपादनम्" वैज० । 4. ಪಾರ್ವಣಶ್ರಾದ್ಧದಲ್ಲಿ ಮಾಡುವ ಪಿಂಡಪ್ರದಾನ. "अनयैवावृता कार्यं पिण्डनिर्वपणं सुतैः" मनु० ३-२४८ ।

**निर्वर ನಿರ್ವರ** (वि०) 1. ಲಜ್ಜೆಯಿಲ್ಲದ, ನಾಚಿಕೆಯಿಲ್ಲದ. निर्गतो वरो यस्य । 2. ಭಯವಿಲ್ಲದ, ಹೆದರಿಕೆಯಿಲ್ಲದ. 3. ಸಾರಭೂತವಾದ. 4. ಕಠಿನವಾದ. "निर्वरं तु गतत्रपे । कठिने निर्भये सारे" हेम० ।

**निर्वर्णन ನಿರ್ವರ್ಣನ** (न०) 1. ದರ್ಶನ, ನೋಡುವುದು. निर् + वर्ण + णिच् भावे "ल्युट्" (३-३-११५) । 2. ಚೆನ್ನಾಗಿ ಗಮನಿಸುವುದು, ಸೂಕ್ಷ್ಮರೀತಿಯಲ್ಲಿ ನೋಡುವುದು. "निर्वर्णनं तु निध्यानं दर्शनालोकनेक्षणम्" अम० ।

**निर्वर्तक ನಿರ್ವರ್ತಕ** (वि०) ಕಾರ್ಯವನ್ನು ನೆರವೇರಿಸುವವನು, ಕೆಲಸವನ್ನು ಪೂರ್ತಿಗೊಳಿಸುವವನು. निर्+वृतु (वर्तने) "ण्वुल्" (३-१-१३३) ।

**निर्वर्तन ನಿರ್ವರ್ತನ** (न०) ಕಾರ್ಯವನ್ನು ನೆರವೇರಿಸುವುದು, ಕೆಲಸವನ್ನು ಪೂರ್ತಿಯಾಗಿ ನಡೆಸುವುದು. निर्+वृतु (वर्तने) भावे "ल्युट्" (३-३-११५) ।

**निर्वर्तनीय ನಿರ್ವರ್ತನೀಯ** (वि०) 1. ನೆರವೇರಿಸಲ್ಪಡುವ, ಸಮಾಪ್ತಿಗೊಳಿಸಲ್ಪಡುವ. निर्+वृतु (वर्तने) "अनीयर्" (३-१-९६) । 2. ನೆರವೇರಿಸಬೇಕಾದ, ಅವಶ್ಯವಾಗಿ ಮಾಡಬೇಕಾದ. "तव्यः" (३-१-९६) । –तितव्यः –ತಿತವ್ಯಃ.

**निर्वर्तित ನಿರ್ವರ್ತಿತ** (वि०) ನೆರವೇರಿಸಲ್ಪಟ್ಟ, ಪೂರ್ತಿಯಾಗಿ ಮಾಡಲ್ಪಟ್ಟ. निर् + वृतु (वर्तने) कर्म० "क्तः" (३-२-१०२)। "प्रणतमरतमकुटतटघटितपादुकाग्रचाभिषेकनिर्वर्तितसर्वलोकयोगक्षेम" रघु० ग० । "निर्वर्तितमहार्घगुरुबहुमानः" मालती० ८ ।

**निर्वर्त्य ನಿರ್ವರ್ತ್ಯ** (वि०) 1. ನೆರವೇರಿಸಲ್ಪಡುವ, ಸಂಪೂರ್ಣವಾಗಿ ಮಾಡಲ್ಪಡುವ. निर् + वृतु (वर्तने) "ण्यत्" (३-१-१२४) । (न०) 2. (ವ್ಯಾಕರಣ ಶಾಸ್ತ್ರದಲ್ಲಿ) ನಾಲ್ಕು ವಿಧ ಕರ್ಮಗಳಲ್ಲೊಂದು. "कर्मन्" ಪದದಲ್ಲಿ ನೋಡಿ.

**निर्वहण ನಿರ್ವಹಣ** (न०) 1. ನಿಭಾಯಿಸುವುದು, ನಿರ್ವಹಿಸುವುದು, ಶ್ರಮದಿಂದ ಕಾರ್ಯವನ್ನು ಕೊನೆಮುಟ್ಟಿಸುವುದು, ವಿಘ್ನಗಳನ್ನು ದಾಟಿ ಕಾರ್ಯವನ್ನು ನಡಸಿಕೊಂಡು ಹೋಗುವುದು. निर् + वह (प्रापणे) भावे "ल्युट्" (३-३-११५) । "काकंर्श्यं गमितेऽपि चेतसि तनू रोमाञ्चमालम्बते दृष्टे निर्वहणं भविष्यति कथं मानस्य तस्मिन् जने" अमरु० २८ । 2. ಸಮಾಪ್ತಿ, ಕೊನೆ. "यान्ति निर्वहणमस्य संसृतिक्लेशनाटकविडम्बनाविधेः" माघ० १४-६३ । 3. ನಾಟಕ ಮೊದಲಾದ ದೃಶ್ಯಕಾವ್ಯಗಳಲ್ಲಿ ಇರಬೇಕಾದ ಪಂಚಸಂಧಿಗಳಲ್ಲೊಂದು. ಈ ಸಂಧಿಯಲ್ಲಿ ಮುಖಾದಿ ಸಂಧಿಗಳಲ್ಲಿ ಉಕ್ತವಾದ ಕಥಾಭಾಗಗಳು ಒಂದುಗೂಡಿ ಮುಖ್ಯ ಫಲಪ್ರಾಪ್ತಿಯೊಡನೆ ಕಥೆಯು ಸಮಾಪ್ತಿಹೊಂದುವುದು. "बीजवन्तो मुखाद्यर्था विप्रकीर्णा यथायथम् । ऐकार्थ्यमुपनीयन्ते यत्र निर्वहणं हि तत्" दशरू० १-४८ । "तत् किं निमित्तमेतत् कुकविकृतनाटकस्येव अन्यन्मुखे अन्यत् निर्वहणे इति" मुद्रा० ६ ।

**निर्वाच्य ನಿರ್ವಾಚ್ಯ** (वि०) 1. ಅವಯವಾರ್ಥ ಹೇಳಿ ವಿವರಿಸಲ್ಪಡುವ. निर् + वच (परिभाषणे) "ण्यत्" (३-१-१२४)। 2. ದೋಷವಿಲ್ಲದ, ನಿಂದೆಗೆ ಅರ್ಹನಲ್ಲದ. "सखीषु निर्वाच्यमधाष्टर्यदूषितं प्रियाङ्गसंश्लेषमवाप मानिनी" किरा० ८-४८ । 3. ಹೇಳಲು ಅರ್ಹನಲ್ಲದ.

**निर्वाण ನಿರ್ವಾಣ** (न०) 1. ಸೌಖ್ಯ, ಆನಂದ, ಸಂತೋಷ. निर् + वा (गतिगन्धनयोः) "क्तः" (३-४-७२) । "कुर्वन्ति यामुत्पतन्तः स्मरार्तस्वर्लोकस्त्रीगात्रनिर्वाणमत्र" माघ० ४-२३ । 2. ಶಾಂತಿ, ಮನಸ್ಸಿಗೆ ನೆಮ್ಮದಿ. "निर्वाणं समुपगमेन यच्छते ते बीजानां प्रभव नमोऽस्तु जीवनाय" किरा० १८-३९ । 3. ವಿನಾಶ, ಅಳಿವು. "पुंसामलब्धनिर्वाणज्ञानदीपमयात्मनाम्" नैष० १७-३१ । 4. (ದೀಪವು) ನಂದಿಹೋಗುವುದು, (ಬೆಂಕಿಯು) ಆರಿಹೋಗುವುದು. "मनस्वी म्रियते कामं कार्पण्यं न तु गच्छति । अपि निर्वाणमायाति नानलो याति शीतताम्" हितो० १-१३३ । 5. ಶಾಶ್ವತವಾದ ಆನಂದ, ಎಂದೆಂದಿಗೂ ಇರುವ ಪರಮ ಸುಖ, ಮೋಕ್ಷ. "निर्वाणमपि मन्येऽहमन्तरायं जयश्रियः" किरा० ११-६९ । 6. (ಬೌದ್ಧಮತದಲ್ಲಿ) ದೇಹಾತ್ಮವಿನಾಶ, ಸಂಪೂರ್ಣವಾದ ಅಳಿವು. 7. ಸಂಗಮ, ಒಟ್ಟಿಗೆ ಸೇರುವುದು. 8. ಗಜಸ್ನಾನ, ಆನೆಯು ನೀರಿನಲ್ಲಿ ಇಳಿದು ಮಾಡುವ ಸ್ನಾನ. "अरुन्तुदमिवालानमनिर्वाणस्य दन्तिनः" रघु० १-७१ । 9. ನಿಧನ, ಮರಣ. 10. ವಿರಾಮ, ನಿಲುಗಡೆ, ಬಿಡುವು. "निर्वाणमस्तंगमने निर्वृतौ गजमज्जने । सङ्गमेऽप्यपवर्गे च" मेदि० । 11. ಸೂರ್ಯನು ಅಸ್ತನಾಗುವುದು. (वि०) 12. ಆರಿಹೋದ, ನಂದಿಹೋದ, ಶಾಂತವಾದ (ಬೆಂಕಿ). "निर्वाणवैरदहनाः प्रशमादरीणां नन्दन्तु पाण्डुतनयाः सह माधवेन" वेणी० १-७ । 13. ನಾಶಹೊಂದಿದ,

ಮರೆಯಾದ. 14. ಮೃತನಾದ. 15. ಅಸ್ತವನ್ನು ಹೊಂದಿದ. 16. ಮೋಕ್ಷಹೊಂದಿದ, ಸಂಸಾರಬಂಧನದಿಂದ ಬಿಡುಗಡೆ ಹೊಂದಿದ. 17. ಶಾಂತವಾದ. ಸ್ತಬ್ಧವಾದ, ನಿಃಶಬ್ದವಾದ. 18. ನಿಶ್ಚಲವಾದ.

**निर्वाणिन् ನಿರ್ವಾಣಿನ್** (ಪುಂ) ಜೈನ ತೀರ್ಥಂಕರರಲ್ಲೊಬ್ಬರು.

**निर्वाणी ನಿರ್ವಾಣೀ** (ಸ್ತ್ರೀಂ) ಜೈನರ ಶಾಸನದೇವತೆ, ಜಿನಶಾಸನದ ಅಧಿಷ್ಠಾತೃ ದೇವತೆ. "कन्दर्पा निर्वाणी बला धारिणी धरणप्रिया" अभिं चिं ।

**निर्वात ನಿರ್ವಾತ** (ಪುಂ) 1. ಹೊರಟುಹೋದ ಗಾಳಿ. निर्गतो वातः । (ವಿಂ) 2. ಗಾಳಿಯಿಲ್ಲದ (ಪ್ರದೇಶ), ಗಾಳಿ ಬೀಸದಂತೆ ಮರೆಮಾಡಲ್ಪಟ್ಟ (ಜಾಗ). निर्गतो वातो यस्मात् । "पोतो दुस्तरवारिराशितरणे दीपोऽन्धकारागमे निर्वाते व्यजनं मदान्धकरिणां दर्पोपशान्त्यै सृणिः" हितो० २-१६५ ।

**निर्वाद ನಿರ್ವಾದ** (ಪುಂ) 1. ನಿಂದೆ, ದೂಷಣೆ. निर्+वद (व्यक्तायां वाचि) "घञ्" (३-३-१८)। 2. ಅಪವಾದ. "किमात्मनिर्वादकथामुपेक्षे जायामदोषामुत संत्यजामि" रघु० १४-३४। 3. ವಿವಾದದ ನಿರ್ಣಯ, ವಾಗ್ವಾದದಲ್ಲಿ ಅಂಗೀಕೃತವಾದ ನಿರ್ಣಯ. नितरां वादः । (ಅವ್ಯಂ) 4. ವಾದಾಭಾವ, ವಾದವಿಲ್ಲದಿರುವಿಕೆ.

**निर्वाप ನಿರ್ವಾಪ** (ಪುಂ) 1. ಹೋಗಲಾಡಿಸುವುದು, ಆಳಿಸುವುದು. निर् + डु वप् (बीजसन्ताने) "घञ्" (३-३-१८) । "स्वकामसंमोहमहान्धकारनिर्वापमिच्छन्निव दीपिकाभिः" नैष० १४-६३ । 2. ದಾನ, ಕೊಡುಗೆ. 3. ಪಿತೃಗಳಿಗೆ ಮಾಡುವ ತರ್ಪಣ.

**निर्वापण ನಿರ್ವಾಪಣ** (ನಂ) 1. ದಾನ, ಕೊಡುಗೆ. निर्+डु वप् (बीजसन्ताने)+णिच "ल्युट्" (३-३-११५)। 2. ಮಾರಣ, ಕೊಲ್ಲುವುದು. 3. ದೀಪ ಅಥವಾ ಬೆಂಕಿಯನ್ನು ಆರಿಸುವುದು, –ಶಾಂತಗೊಳಿಸುವುದು, –ನಂದಿಸುವುದು. "दीपनिर्वापणात्पुंसः कूष्माण्डच्छेदनात् स्त्रियः"। 4. ಮೈ ಉರಿತವನ್ನು ಹೋಗಲಾಡಿಸುವುದು. "दाहपाकज्वरवतां कार्यं निर्वापणं भवेत्" सुश्रुत०। 5. ಹಸಿವು ಅಥವಾ ಬಾಯಾರಿಕೆಯನ್ನು ಶಮನಮಾಡುವುದು. 6. ದುಃಖ ಅಥವಾ ಕಷ್ಟವನ್ನು ಕಡಮೆಮಾಡುವುದು, –ಹಗುರಮಾಡುವುದು, –ತಗ್ಗಿಸುವುದು. "कर्तव्यानि खलु दुःखितैः दुःखनिर्वापणानि" ಉ० ರಾ० ३ ।

**निर्वापयत् ನಿರ್ವಾಪಯತ್** (ವಿಂ) 1. ದಾನಮಾಡಿಸುತ್ತಿರುವ. निर् + डु वप् (बीजसन्ताने) + णिच् "शतृ" (३-२-१२४)। 2. ಕೊಲ್ಲುತ್ತಿರುವ. 3. ದೀಪ ಅಥವಾ ಬೆಂಕಿಯನ್ನು ಆರಿಸುತ್ತಿರುವ. 4. ದೇಹದ ಉರಿತವನ್ನು ಹೋಗಲಾಡಿಸುತ್ತಿರುವ. 5. ಹಸಿವು ಅಥವಾ ಬಾಯಾರಿಕೆಯನ್ನು ಶಮನಮಾಡುತ್ತಿರುವ. "क्षुधं च निर्वापयता तृषं च स्वादीयसाऽऽवा गमितः सुखं तैः" नैष० ८-८७। स्त्रियां "ङीप्" (४-१-६) –यन्ती –ಯಂತೀ.

**निर्वापयितृ ನಿರ್ವಾಪಯಿತೃ** (ವಿಂ) 1. ದಾನಮಾಡಿಸುವ. निर् + डुवप् (बीजसन्ताने) + णिच् "तृच्" (३-१-१३३)। 2. ಕೊಲ್ಲುವ. 3. ದೇಹದ ಉರಿತ ಅಥವಾ ತಾಪವನ್ನು ಕಡಮೆಮಾಡುವ, –ಶಮನಗೊಳಿಸುವ. "स्मर एव तापहेतुर्निर्वापयिता स एव मे जातः" शाकु० ३-९। 4. ದೀಪ ಅಥವಾ ಬೆಂಕಿಯನ್ನು ಆರಿಸುವ. 5. ಹಸಿವು ಅಥವಾ ಬಾಯಾರಿಕೆಯನ್ನು ಶಮನಮಾಡುವ. 6. ದುಃಖ ಅಥವಾ ಕಷ್ಟವನ್ನು ಕಡಮೆಮಾಡುವ, –ಹಗುರಮಾಡುವ. स्त्रियां "ङीप्" (४-१-५)। –यित्री –ಯಿತ್ರೀ.

**निर्वापित ನಿರ್ವಾಪಿತ** (ವಿಂ) 1. ಕೊಡಿಸಲ್ಪಟ್ಟ. निर्+डु वप् (बीजसन्ताने) + णिच् "क्तः" (३-२-१०२)। 2. ಕೊಲ್ಲಲ್ಪಟ್ಟ. 3. ಆರಿಸಲ್ಪಟ್ಟ (ಬೆಂಕಿ, ದೀಪ). 4. ಕಡಮೆಮಾಡಲ್ಪಟ್ಟ (ದುಃಖ, ಕಷ್ಟ). 5. ಶಮನಮಾಡಲ್ಪಟ್ಟ (ಹಸಿವು, ಬಾಯಾರಿಕೆ, ಮೈ ಉರಿತ, ದೇಹದ ತಾಪ). "दग्धं चिराय मलयानिलचन्द्रपादैः निर्वापितं तु परिरभ्य वपुर्न नाम" मालती० ८-४। 6. ಸಂತೋಷಪಡಿಸಲ್ಪಟ್ಟ, ಆನಂದವುಂಟುಮಾಡಲ್ಪಟ್ಟ. "निर्वापितः कनककुम्भमुखोज्झितेन वंशाभिषेकविधिना शिशिरेण गर्भः" रघु० १९-५६।

**निर्वार्य ನಿರ್ವಾರ್ಯ** (ವಿಂ) 1. ಹೆಚ್ಚು ಬಲದಿಂದ ಕೂಡಿ ಭಯವಿಲ್ಲದೆ ಕೆಲಸಮಾಡುವವನು. निर् निश्चयेन व्रियते — वृञ् (वरणे) "ण्यत्" (३-१-१२४)। 2. ಎದುರಿಸಲಾಗದ, ತಡೆಯಲು ಸಾಧ್ಯವಿಲ್ಲದ.

**निर्वासन ನಿರ್ವಾಸನ** (ನಂ) 1. ಬಹಿಷ್ಕಾರ, ದೇಶದಿಂದ ಹೊರದೂಡುವುದು, ಒಂದು ಸ್ಥಳದಿಂದ ಬಲಾತ್ಕಾರವಾಗಿ ಹೊರಡಿಸಿಬಿಡುವುದು. निर् + वस (निवासे) + णिच् भावे "ल्युट्" (३-३-११५) । "निर्वासनं च नगरात् प्रव्रज्या च परन्तप। नानाविधानां दुःखानामावासोऽस्मि जनार्दन" भा० उद्योग० ९०-५८। 2. ಪರದೇಶದಲ್ಲಿ ವಾಸಮಾಡುವುದು. 3. ಅಟ್ಟುವುದು, ಓಡಿಸುವುದು. 4. ಹಿಂಸಿಸುವುದು, ಪೀಡಿಸುವುದು. "निर्वासनं हिंसने स्यात् नगरादेर्बहिष्कृतौ" मेदि०।

**निर्वासनीय** ನಿರ್ವಾಸನೀಯ (वि०) 1. ದೇಶಭ್ರಷ್ಟ ನಾಗಿ ಮಾಡಲ್ಪಡುವ. 2. ಅಟ್ಟಲ್ಪಡುವ.

**निर्वासयत्** ನಿರ್ವಾಸಯತ್ (वि०) 1. ಬಹಿಷ್ಕರಿಸು ತ್ತಿರುವ, ಹೊರದೂಡುತ್ತಿರುವ. 2. ಅಟ್ಟುತ್ತಿರುವ, ಓಡಿಸುತ್ತಿರುವ. 3. ಹಿಂಸಿಸುತ್ತಿರುವ, ಪೀಡಿಸುತ್ತಿರುವ. निर् + वस (निवासे) + णिच् "शतृ" (३-१-१२४)। स्त्रियां "ङीप्" (४-१-६)। -यन्ती -ಯನ್ತೀ.

**निर्वासित** ನಿರ್ವಾಸಿತ (वि०) 1. ದೇಶದಿಂದ ಹೊರಕ್ಕೆ ಕಳುಹಿಸಲ್ಪಟ್ಟ, ಹೊರದೂಡಲ್ಪಟ್ಟ, ಬಹಿಷ್ಕರಿಸಲ್ಪಟ್ಟ. निर् + वस (निवासे) + णिच् "क्तः" (३-२-१०२)। "निर्वासिताप्येवमतस्त्वयाहं तपस्विसामान्यमवेक्षणीया" रघु० १४-६७। 2. ಅಟ್ಟಲ್ಪಟ್ಟ, ಓಡಿಸಲ್ಪಟ್ಟ. "गोवर्धनाचलकलापिचयप्रचारनिर्वासिताहिनि घने सुरभिप्रसूने" नैष० ११-१०७।

**निर्वास्य** ನಿರ್ವಾಸ್ಯ (वि०) 1. ಬಹಿಷ್ಕರಿಸಲ್ಪಡುವ, ಗಡೀಪಾರುಮಾಡಲ್ಪಡುವ, ದೇಶದಿಂದ ಹೊರಕ್ಕೆ ಕಳುಹಿಸ ಲ್ಪಡುವ. 2. ಬಹಿಷ್ಕರಿಸಬೇಕಾದ, ಗಡೀಪಾರುಮಾಡ ಬೇಕಾದ. निर् + वस (निवासे) + णिच् "ण्यत्" (३-१-१२४)। 3. ಅಟ್ಟಲ್ಪಡುವ, ಓಡಿಸಲ್ಪಡುವ. 4. ಓಡಿಸಬೇಕಾದ. "अपुत्रा योषितश्चैषां भर्तव्याः साधुवृत्तयः। निर्वास्या व्यभिचारिण्यः प्रतिकूलास्तथैव च" याज्ञ० २-१४२। निर् + वस + णिच् "अनीयर्" (३-१-९६)। -वासनीयः -ವಾಸನೀಯಃ. "तव्यः" (३-१-९६)। -वासितव्यः -ವಾಸಿತವ್ಯಃ.

**निर्वास्यमान** ನಿರ್ವಾಸ್ಯಮಾನ (वि०) 1. ಹೊರಕ್ಕೆ ಕಳುಹಿಸಲ್ಪಡುತ್ತಿರುವ, ಬಹಿಷ್ಕರಿಸಲ್ಪಡುತ್ತಿರುವ, ಗಡೀ ಪಾರುಮಾಡಲ್ಪಡುತ್ತಿರುವ. निर् + वस (निवासे) + णिच् कर्म० "शानच्" (३-२-१२४)। 2. ಅಟ್ಟಲ್ಪಡು ತ್ತಿರುವ, ಓಡಿಸಲ್ಪಡುತ್ತಿರುವ. "निर्वास्यमानमपि तं परिवारयेयुस्तस्मात्खरप्रभृतयः पुर एव चिन्त्याः" म० वी० ४-८।

**निर्वाह** ನಿರ್ವಾಹ (पुं०) 1. ಕಾರ್ಯವನ್ನು ಸಮಾಪ್ತಿ ಗೊಳಿಸುವುದು, ಕೆಲಸವನ್ನು ಕೊನೆಮುಟ್ಟಿಸುವುದು. निर्+वह (प्रापणे) "घञ्" (३-३-१८)। 2. ಒಂದು ಗುರಿಯನ್ನು ಹಿಡಿದು ಕಾರ್ಯವನ್ನು ಸಾಧಿಸುವುದು. "किन्त्वङ्गीकृतमुत्सृजन् कृपणवत् श्लाघ्यो जनो लज्जते निर्वाहः प्रतिपन्नवस्तुषु सतामेतद्धि गोत्रव्रतम्" मुद्रा० २-१८। 3. ಒಂದು ಕಾರ್ಯವನ್ನು ನೆರವೇರಿಸುವುದು.

**निर्वाहक** ನಿರ್ವಾಹಕ (वि०) 1. ಕಾರ್ಯವನ್ನು ಸಾಧಿಸು ವವನು. 2. ಕಾರ್ಯವನ್ನು ಕೊನೆಮುಟ್ಟಿಸುವವನು. 3. ಕಾರ್ಯವನ್ನು ನೆರವೇರಿಸುವವನು. निर्+वह (प्रापणे) "ण्वुल्" (३-१-१३३)।

**निर्वाह्य** ನಿರ್ವಾಹ್ಯ (वि०) 1. ನೆರವೇರಿಸಲ್ಪಡುವ. 2. ಸಾಧಿಸಲ್ಪಡುವ. 3. ಸಮಾಪ್ತಿಗೊಳಿಸಲ್ಪಡುವ. निर् + वह (प्रापणे) "ण्यत्" (३-१-१२४)।

**निर्विकल्प** ನಿರ್ವಿಕಲ್ಪ (वि०) 1. ವಿಕಲ್ಪವಿಲ್ಲದ, ಪಕ್ಷಾಂತರ ವಿಲ್ಲದ. निर्गतो विकल्पो पक्षान्तरावकाशो यस्मात्। 2. ಭ್ರಾಂತಿಯಿಲ್ಲದ, ಸಂಶಯವಿಲ್ಲದ. 3. ಜ್ಞಾತೃ ಮತ್ತು ಜ್ಞೇಯಗಳ ಭೇದತೋರದೆ ಚಿತ್ತವು ಧ್ಯೇಯವಸ್ತುವಿನಲ್ಲೇ ಲಯಹೊಂದುವುದು. ಇದು ಸಮಾಧಿಯ ಒಂದು ಭೇದ. "आत्मारामा विहितरतयो निर्विकल्पे समाधौ" वेणी० १-२३।

**निर्विकार** ನಿರ್ವಿಕಾರ (पुं०) 1. ಯಾವ ವಿಧವಾದ ವಿಕಾರ ವನ್ನೂ ಹೊಂದದಿರುವ ಪರಮಾತ್ಮ. निर्गतो विकारः प्रकृतेरन्यथाभावः यस्मात्। (वि०) 2. ವಿಕಾರವನ್ನು ಹೊಂದದಿರುವ ಮನಸ್ಸುಳ್ಳವನು. "सिद्ध्यसिद्ध्योनिर्विकारः कर्ता सात्त्विक उच्यते" गीता १८-२६।

**निर्विघ्न** ನಿರ್ವಿಘ್ನ (वि०) 1. ವಿಘ್ನವಿಲ್ಲದ, ಅಡ್ಡಿ ಆತಂಕ ಗಳಿಲ್ಲದ. निर्गतो विघ्नो यस्मात्। "विलक्षीकृत्याम्भसा वस्त्रं जैनप्रव्रजितीकृते। सख्यौ सक्षौमभावेऽपि निर्विघ्नस्तनदर्शने" नैष० २०-१२९। (अव्य०) 2. ವಿಘ್ನ ವಿಲ್ಲದೆ, ತಡೆಯಿಲ್ಲದೆ, ಅಡ್ಡಿಯಿಲ್ಲದೆ.

**निर्विचार** ನಿರ್ವಿಚಾರ (वि०) 1. ವಿಮರ್ಶೆಯಿಲ್ಲದ, ವಿವೇಚನೆಯಿಲ್ಲದ, ಪರ್ಯಾಲೋಚನೆಯಿಲ್ಲದ. निर्गतो विचारो यस्मात्। (अव्य०) 2. ಆಲೋಚನೆ ಮಾಡದೆ, ವಿವೇಚನೆಯಿಲ್ಲದೆ.

**निर्विचिकित्स** ನಿರ್ವಿಚಿಕಿತ್ಸ (वि०) ಸಂದೇಹವಿಲ್ಲದ, ಸಂಶಯವಿಲ್ಲದ. निर्गता विचिकित्सा संशयो यस्मात्।

**निर्विचेष्ट** ನಿರ್ವಿಚೇಷ್ಟ (वि०) ಶರೀರದ ವ್ಯಾಪಾರವಿಲ್ಲದ, ಹಸ್ತಪಾದಾದಿಗಳ ಯಾವ ಕೆಲಸವೂ ಇಲ್ಲದ, ಕೈಕಾಲು ಗಳನ್ನೂ ಆಡಿಸದಿರುವ. निर् नास्ति विचेष्टा यस्य। "स लाङ्गलाकर्षणनिर्विचेष्टान् निष्पिष्य नागान्निषधप्रमाणान्" याद० २०-४३।

**निर्विचेष्टित** ನಿರ್ವಿಚೇಷ್ಟಿತ (न०) 1. ಯಾವ ವ್ಯಾಪಾ ರವೂ ಇಲ್ಲದಿರುವುದು, ಕರಚರಣಾದಿಗಳ ಕೆಲಸವಿಲ್ಲದಿರು ವುದು. (वि०) 2. ಹಸ್ತಪಾದಾದಿಗಳ ಯಾವ ಕೆಲಸವೂ

ಇಲ್ಲದಿರುವ, ಶರೀರವ್ಯಾಪಾರವಿಲ್ಲದ. "विपक्षान् भूभृतस्तत्र कुर्वता निर्विचेष्टितान्" याद० २२-१५७।

**निर्विण्ण ನಿರ್ವಿಣ್ಣ** (वि०) 1. ಖೇದಗೊಂಡ, ಮನನೊಂದಿರುವ. निर् + विद (सत्तायाम्) "क्तः" (३-४-७२)। णत्वम् (वा० ८-४-२९)। "यस्यास्ते पिशुनोपदेशवचनेर्मानेऽतिभूमिं गते निर्विण्णोऽनुनयं प्रति प्रियतमो मध्यस्थतामेष्यति" अमरु० ५। 2. ವೈರಾಗ್ಯ ಹೊಂದಿರುವ.

**निर्विनोद ನಿರ್ವಿನೋದ** (वि०) ಮನೋರಂಜನೆಯ ಆಟಪಾಟಗಳಿಲ್ಲದ, ವಿಶ್ರಾಂತಿಗಾಗಿ ಕ್ರೀಡೆಗಳನ್ನು ಏರ್ಪಡಿಸದಿರುವ. निर्गतो विनोदो क्रीडादिः यस्मात्। "सव्यापारामहनि न तथा पीडयेन्मद्वियोगः शङ्के रात्रौ गुरुतरशुचं निर्विनोदां सखीं ते" मेघ० २-२५।

**निर्विन्ध्य ನಿರ್ವಿಂಧ್ಯ** (वि०) 1. ವಿಂಧ್ಯಪರ್ವತದಿಂದ ಹೊರಟಿರುವ. निष्क्रान्तो विन्ध्यात्। (स्त्री०) -न्ध्या -ನ್ಧ್ಯಾ. 2. ನಿರ್ವಿಂಧ್ಯಾನದಿ. "निर्विन्ध्यायाः पथि भव रसाभ्यन्तरः सन्निपत्य स्त्रीणामाद्यं प्रणयवचनं विभ्रमो हि प्रियेषु" मेघ० १-२८।

**निर्विमर्श ನಿರ್ವಿಮರ್ಶ** (वि०) 1. ವಿಮರ್ಶೆಯಿಲ್ಲದ, ಪರ್ಯಾಲೋಚನೆಯಿಲ್ಲದ, ವಿವೇಚನೆಯಿಲ್ಲದ. निर् नास्ति विमर्शो विवेचनं यस्य। 2. ವಿಮರ್ಶಸಂಧಿಯಿಲ್ಲದ (ಒಂದು ರೂಪಕ), ನಾಲ್ಕು ಅಂಕಗಳೂ ವಿಮರ್ಶ ಸಂಧಿಯು ಇಲ್ಲದೆಯೂ ಇರುವ (ಡಿಮವೆಂಬ ರೂಪಕ). "चतुरङ्कश्चतुःसन्धिर्निर्विमर्शो डिमः स्मृतः" दशरू० ३-६०।

**निर्विरति ನಿರ್ವಿರತಿ** (वि०) 1. ವೈರಾಗ್ಯವಿಲ್ಲದ, ವಿಷಯ ಸಂಬಂಧ ಹೊಂದಿರುವ. निर् नास्ति विरतिर्वैराग्यं यस्य। (अव्य०) 2. ವೈರಾಗ್ಯವಿಲ್ಲದೆ, ಅನುರಾಗದಿಂದ ಕೂಡಿ, ವಿಷಯಾಭಿಲಾಷೆಯಿಂದ ಕೂಡಿ. "निर्विश्य निर्विरति काशिनिवासि भोगान्निर्माय नर्म च मिथो मिथुनं यथेच्छम्" नैष० ११-११८।

**निर्विवर ನಿರ್ವಿವರ** (वि०) ಅವಕಾಶರಹಿತವಾದ, ಸಂದುಗಳಿಲ್ಲದ, ದಟ್ಟವಾಗಿರುವ. निर् नास्ति विवरो यस्य।

**निर्विवरता ನಿರ್ವಿವರತಾ** (स्त्री०) ಸಾಂದ್ರವಾಗಿರುವಿಕೆ, ದಟ್ಟವಾಗಿರುವಿಕೆ, ಮಧ್ಯೆ ಅವಕಾಶವಿಲ್ಲದಿರುವಿಕೆ. "घटते हि संहततया जनितामिदमेव निर्विवरतां दधतोः" माघ० ९-४४।

**निर्विवाद ನಿರ್ವಿವಾದ** (वि०) ವಿವಾದಕ್ಕೆ ಅವಕಾಶವಿಲ್ಲದ, ಚರ್ಚೆಗೆ ಎಡೆಯಿಲ್ಲದ, ವಿವಾದಾಸ್ಪದವಲ್ಲದ.

**निर्विवेक ನಿರ್ವಿವೇಕ** (वि०) ವಿವೇಚನೆಯಿಲ್ಲದ, ವಿಮರ್ಶೆಯಿಲ್ಲದೆ ಕೆಲಸಮಾಡುವ, ಯೋಚಿಸದೆ ಕೆಲಸಮಾಡುವ. निर् नास्ति विवेको यस्य।

**निर्विशङ्क ನಿರ್ವಿಶಂಕ** (वि०) 1. ಸಂಶಯವಿಲ್ಲದ, ಸಂದೇಹವಿಲ್ಲದ. 2. ಭಯವಿಲ್ಲದ. "यस्मिन् कृत्यं समावेश्य निर्विशङ्केन चेतसा। आस्यते, सेवकः स स्यात् कलत्रमिव चापरम्" पञ्चतं० १-९४। (अव्य०) 3. ಭಯವಿಲ್ಲದೆ, ಹೆದರಿಕೆಯಿಲ್ಲದೆ. "तस्मिन्ननेन सह निर्विश निर्विशङ्कं वृन्दावने वनविहारकुतूहलानि" नैष० ११-१०७।

**निर्विशत् ನಿರ್ವಿಶತ್** (वि०) 1. ಅನುಭವಿಸುತ್ತಿರುವವನು. निर्+विश (प्रवेशने) "शतृ" (३-२-१२४)। "निजमगमदगारं निर्विशन् प्रेयसीनां स्मरशरशयितानां मन्दमभ्युत्थितानि" याद० १८-१३४। 2. ಮದುವೆಯಾಗುವವನು, ವಿವಾಹಮಾಡಿಕೊಳ್ಳುವವನು. "ज्येष्ठेऽनिर्विष्टे कनीयान् निर्विशन् परिवेत्ता भवति"। स्त्रियां "ङीप्" (४-१-६)। -विशन्ती -ವಿಶನ್ತೀ.

**निर्विशेष ನಿರ್ವಿಶೇಷ** (वि०) 1. ವಿಶೇಷವಿಲ್ಲದ, ವ್ಯತ್ಯಾಸವಿಲ್ಲದ. निर्गतो विशेषो यस्य। "वयमिह परितुष्टा वल्कलैस्त्वं दुकूलैः सम इह परितोषो निर्विशेषो विशेषः" भर्तृ० ३-५३। (अव्य०) 2. ವ್ಯತ್ಯಾಸವಿಲ್ಲದೆ, ಸಮಾನವಾಗಿ, ಹೆಚ್ಚು ಕಡಮೆಯಿಲ್ಲದೆ. "आधारबन्धप्रमुखैः प्रयत्नैः संवर्धितानां सुतनिर्विशेषम्" रघु० ५-६।

**निर्विषय ನಿರ್ವಿಷಯ** (वि०) 1. ವಾಸಮಾಡಲು ಒಂದು ಸ್ಥಾನವಿಲ್ಲದ, ದೇಶದಿಂದ ಹೊರದೂಡಲ್ಪಟ್ಟ, ಗಡೀಪಾರು ಮಾಡಲ್ಪಟ್ಟ. 2. ವಿಷಯಾಭಿಲಾಷೆಯಿಲ್ಲದ.

**निर्विषयीकृत ನಿರ್ವಿಷಯೀಕೃತ** (वि०) ದೇಶದಿಂದ ಹೊರಕ್ಕೆ ಕಳುಹಿಸಲ್ಪಟ್ಟ, ಗಡೀಪಾರುಮಾಡಲ್ಪಟ್ಟ.

**निर्विषाण ನಿರ್ವಿಷಾಣ** (वि०) ವಿಷಾಣರಹಿತವಾದ, ಕೊಂಬುಗಳಿಲ್ಲದ.

**निर्विष्ट ನಿರ್ವಿಷ್ಟ** (वि०) 1. ಉಪಭೋಗಿಸಲ್ಪಟ್ಟ, ಅನುಭವಿಸಲ್ಪಟ್ಟ. निर्+विश (प्रवेशने) "क्तः" (३-२-१०२)। "पयोधरैः पुण्यजनाङ्गनानां निर्विष्टहेमाम्बुजरेणु यस्याः" रघु० १३-६०। 2. ಪ್ರವೇಶಿಸಲ್ಪಟ್ಟ. 3. ವೇತನ ಕೊಡಲ್ಪಟ್ಟ, ಕೂಲಿ ಕೊಡಲ್ಪಟ್ಟ. 4. ವಿವಾಹ ಮಾಡಿಕೊಂಡವನು. "ज्येष्ठेऽनिर्विष्टे कनीयात् निर्विशन् परिवेत्ता भवति"।

**निर्वीर ನಿರ್ವೀರ** (वि०) 1. ವೀರರಿಲ್ಲದ, ಪರಾಕ್ರಮಶಾಲಿಗಳಿಲ್ಲದ. निर्गतो वीरो यस्मात्। (स्त्री०) -वीरा -ವೀರಾ.

2. ಪತಿ ಮತ್ತು ಮಕ್ಕಳು ಇಲ್ಲದ ಹೆಂಗಸು. "निर्वीरा निष्पतिसुता" अभि० चि०।

**निर्वीर्य ನಿರ್ವೀರ್ಯ** (पुं०) 1. ದುರ್ಬಲನಾದ ಮನುಷ್ಯ, ಬಡಕಲು ಮನುಷ್ಯ. निर्गतं वीर्यं यस्मात्। (वि०) 2. ಸತ್ತ್ವವಿಲ್ಲದ, ಶಕ್ತಿ ಕುಂದಿದ. "निर्वीर्यं गुरुशापभाषितवशात् किं मे तवेवायुधं संप्रत्येव भयाद्विहाय समरं प्राप्तोऽस्मि किं त्वं यथा" वेणी० ३-३५।

**निर्वृत ನಿರ್ವೃತ** (वि०) 1. ಸುಖ ಹೊಂದಿದ, ಸುಖವನ್ನು ಅನುಭವಿಸಿದ. निर्+वृञ् (वरणे) "क्तः" (३-४-७२)। "क्षीणमेव पृथु सस्मरं कियत् क्लान्तमेव बहु निर्वृतं मनाक्। कान्तचेतसि तदीयमाननं तत्तदालभत लक्षमादरात्" नैष० १८-१२२। 2. ಅರಿಹೋದ, ನಂದಿ ಹೋದ, ಶಾಂತವಾದ. "तीर्णे भीष्ममहोदधौ कथमपि द्रोणानले निर्वृते कर्णाशीविषभोगिनि प्रशमिते शल्ये च याते दिवम्" वेणी० ६-१। 3. ದಾಸ್ಯದಿಂದ ಬಿಡುಗಡೆ ಹೊಂದಿದ, ಬಂಧನದಿಂದ ಮುಕ್ತನಾದ, ಸ್ವತಂತ್ರನಾದ. 4. ಮೋಕ್ಷ ಹೊಂದಿದ.

**निर्वृति ನಿರ್ವೃತಿ** (स्त्री०) 1. ಸುಖ, ಸಂತೋಷ, ಆನಂದ. निर्+वृञ् (वरणे) "क्तिन्" (३-३-११४)। "सर्वर्तुनिर्वृतिकरे निवसन्नुपैति न द्वन्द्वदुःखमिह किञ्चिदकिञ्चनोऽपि" माघ० ४-६४। "निवृतिर्हि मनसो मदहेतुः" माघ० १०-२८। 2. ಶಾಂತಿ, ನೆಮ್ಮದಿ. "न जातु बाला लभते स्म निर्वृतिं तुषारसंघातशिलातलेष्वपि" कुमा० ५-५५। 3. ಮೋಕ್ಷ, ಮುಕ್ತಿ, ಸಂಸಾರ ಪಾಶದಿಂದ ಬಿಡುಗಡೆ. 4. ಮೃತ್ಯು. "शिवं निःश्रेयसं श्रेयः निर्वाणं ब्रह्म निर्वृतिः" अभि० चि०। "अथ निर्वृतिः। मोक्षे मृत्यौ सुखे सौस्थ्ये" हेम०। 5. ಸ್ವಾತಂತ್ರ್ಯ, ದಾಸ್ಯದಿಂದ ಬಿಡುಗಡೆ.

**निर्वृतिमत् ನಿರ್ವೃತಿಮತ್** (वि०) 1. ನೆಮ್ಮದಿಯಿಂದ ಕೂಡಿದ. निर्वृति "मतुप्" (५-२-९४)। "दत्त्वात्मजां भवतु निर्वृतिमानमात्यः" मालती० २-८। 2. ಸಂತೋಷ ದಿಂದ ಕೂಡಿದ.

**निर्वृत्त ನಿರ್ವೃತ್ತ** (वि०) 1. ನೆರವೇರಿಸಲ್ಪಟ್ಟ, ಮಾಡಲ್ಪಟ್ಟ. निर् + वृतु (वर्तने) "क्तः" (३-२-१०२)। "निर्वृत्तपर्जन्यजलाभिषेका प्रफुल्लकाशा वसुधेव रेजे" कुमा० ७-११। 2. ಸಮಾಪ್ತಿಗೊಳಿಸಲ್ಪಟ್ಟ, ಕೊನೆ ಮುಟ್ಟಿಸಲ್ಪಟ್ಟ. 3. ನೆರವೇರಿದ. "तथा मन्ये मनोरथनिर्वृत्तसमागमावेताविति" मालती० ४। 4. ನಿಷ್ಪನ್ನವಾದ, ಉಂಟಾದ, ಸಿದ್ಧವಾದ. "निर्वृत्तश्च फलेग्रहिर्द्रुमवरः दग्धश्च दावाग्निना" मालती० ९-३९।

**निर्वृत्ति ನಿರ್ವೃತ್ತಿ** (स्त्री०) 1. ನಿಷ್ಪತ್ತಿ, ಉಂಟಾಗುವುದು. निर्+वृतु (वर्तने) "क्तिन्" (३-३-९४)। 2. ಕಾರ್ಯವು ಸಮಾಪ್ತಿ ಹೊಂದುವುದು, ಕೊನೆ ಮುಟ್ಟುವುದು. 3. ಈಡೇರುವುದು, ಕೈಗೂಡುವುದು. "कर्मणां फलनिर्वृत्तिं शंस नस्तत्त्वतः पराम्" मनु० १२-१। 4. ನೆರವೇರುವುದು, ನಡೆಯುವುದು. (वि०) 5. ಜೀವನೋಪಾಯವಿಲ್ಲದ.

**निर्वेद ನಿರ್ವೇದ** (पुं०) 1. ತೇಜೋವಧೆ ಮಾಡಿಕೊಳ್ಳುವುದು, ವೈರಾಗ್ಯದಿಂದ ತನ್ನನ್ನೇ ಅವಮಾನಪಡಿಸಿಕೊಳ್ಳುವುದು, ದೇಹಾದಿಗಳಲ್ಲಿ ಕೀಳುಭಾವನೆ ಹುಟ್ಟುವುದು, ವೈರಾಗ್ಯ. ಇದು 33 ವ್ಯಭಿಚಾರಿ ಭಾವಗಳಲ್ಲೊಂದು. निर् + विद (ज्ञाने) "घञ्" (३-३-१८)। "तत्त्वज्ञानापदीर्ष्यादेर्निर्वेदःस्वावमाननम्" सा० द० ३-१४२। "यदा ते मोहकलिलं बुद्धिर्व्यतितरिष्यति। तदा गन्तासि निर्वेदं श्रोतव्यस्य श्रुतस्य च" गीता २-५२। 2. ಖೇದದಿಂದ ಎದೆಗುಂದುವುದು, ನಿರಾಶನಾಗುವುದು. "दारिद्र्याद्धियमेति ह्रीपरिगतः प्रभ्रश्यते तेजसो निस्तेजाः परिभूयते परिभवान्निर्वेदमापद्यते" मृच्छ० १-१४। 3. ಬೇಸರಿಕೆ. 4. ಖೇದ, ದುಃಖ. "अनिर्वेदः सदा कार्यः निर्वेदाद्धि कुतः सुखम्" भा० शान्ति० १५२-५१। (वि०) 5. ವೇದರಹಿತನಾದ, ವೇದಸಂಬಂಧವಿಲ್ಲದ.

**निर्वेश ನಿರ್ವೇಶ** (पुं०) 1. ಭೋಗ, ಅನುಭವಿಸುವುದು. निर्+विश (प्रवेशने) "घञ्" (३-३-१८)। "तत्सौखशायनिकसूरिगणेन सार्धं निर्वेशयोगमुपयाम निरीक्षणेस्ते" याद० १९-७६। 2. ವೇತನ, ಸಂಬಳ, ಕೂಲಿ. 3. ಪ್ರಜ್ಞೆ ತಪ್ಪುವುದು, ಜ್ಞಾನ ಹೋಗುವುದು. "निर्वेशस्तु पुमान् भोगे वेतने मूर्च्छनेऽपि च" मेदि०। 4. ಪ್ರಾಯಶ್ಚಿತ್ತ, ಪಾಪ ಪರಿಹಾರಮಾಡಿಕೊಳ್ಳುವುದು. 5. ವಿವಾಹ, ಮದುವೆ. भावे "ल्युट्" (३-३-११५)। **–वेशनम् –ವೇಶನಮ್.**

**निर्वेशनीय ನಿರ್ವೇಶನೀಯ** (वि०) ಅನುಭವಿಸಲ್ಪಡುವ. निर् + विश (प्रवेशने) "अनीयर्" (३-१-९६)। "निर्वेशनीयस्सविशेषमासीन्नेदीयसां नेत्रचकोरवृन्दैः" याद० १३-१९।

**निर्वेष्टन ನಿರ್ವೇಷ್ಟನ** (न०) ನೇಯ್ಗೆಯಲ್ಲಿ ಹಾಸು ಎಳೆಗಳ ನಡುವೆ ಹೊಕ್ಕು ಎಳೆಗಳನ್ನು ಹಾಯಿಸುವ ಲಾಳಿ. नितरां वेष्टनमत्र।

**निर्व्यथन ನಿರ್ವ್ಯಥನ** (न०) 1. ಬಿಲ, ಛಿದ್ರ, ತೂತು, ರಂಧ್ರ. निश्चयेन व्यथनं भयं चलनं वा यत्र। 2. ಅತಿಯಾದ ನೋವು. नितरां व्यथनम्। (वि०) 3. ವ್ಯಥೆಯಿಲ್ಲದ, ನೋವಿಲ್ಲದ. निर्गतं व्यथनं यस्मात्। निर्गतं व्यथनात् इति वा। "उच्चैस्तु तच्चित्रममुष्य भग्नस्यालोक्यते निर्व्यथनं यदन्तः" नैष० ७-६८।

**निर्व्यय ನಿರ್ವ್ಯಯ** (वि०) ವ್ಯಯವಿಲ್ಲದ, ಖರ್ಚಿಲ್ಲದ, ಅಕ್ಷಯವಾದ. नास्ति व्ययो यस्य। "आस्ते निर्व्ययरत्नसंपदुदयोदग्रः कथं याचकश्रेणीवर्जनदुर्यशोनिबिडितव्रीडस्तु रत्नाचलः" नैष० १२-६७।

**निर्व्यपेक्ष ನಿರ್ವ್ಯಪೇಕ್ಷ** (वि०) 1. ಅಪೇಕ್ಷೆಯಿಲ್ಲದ, ಆಸೆಯಿಲ್ಲದ, ನಿಃಸ್ಪೃಹನಾದ. निर्गता व्यपेक्षा यस्मात्। "तस्यापनोदाय फलप्रवृत्तावुपस्थितायामपि निर्व्यपेक्षः" रघु० १४-३९। (स्त्री०) **-व्यपेक्षा -ವ್ಯಪೇಕ್ಷಾ**. 2. ನಿಃಸ್ಪೃಹತೆ, ಆಸೆಯಿಲ್ಲದಿರುವಿಕೆ.

**निर्व्याज ನಿರ್ವ್ಯಾಜ** (वि०) 1. ಕಪಟವಿಲ್ಲದ, ಮುಚ್ಚುಮರೆಯಿಲ್ಲದ, ಯಥಾರ್ಥವಾದಿಯಾದ. निर्गतो व्याजः कपटो यस्मात्। 2. ನಿಜವಾದ, ಕೃತಕವಲ್ಲದ, ಅಪ್ಪಟವಾದ, ಚೊಕ್ಕವಾದ. "निर्व्याजसङ्गेन निशामयन्ती" याद० १३-५८। 3. ಬೂಟಾಟಿಕೆಯಿಲ್ಲದ, ಆಷಾಢಭೂತಿತನವಿಲ್ಲದ. 4. ನಿಮಿತ್ತವಿಲ್ಲದ, ಕಾರಣವಿಲ್ಲದ. "सर्वपुरुषातिशायि निर्व्याजमूर्जितं तेजः" मालती० ८। (अव्य०) 5. ಕಪಟವಿಲ್ಲದೆ. 6. ಕೃತಕವಲ್ಲದೆ, ನಿಜವಾಗಿ, ಸ್ವಭಾವವಾಗಿ. "स वैजयन्त्यादिविभावशाली निर्व्याजनिष्पन्ननिजानुभावः" याद० १३-८। 7. ಬೂಟಾಟಿಕೆಯಿಲ್ಲದೆ. 8. ಕಾರಣವಿಲ್ಲದೆ.

**निर्व्यापार ನಿರ್ವ್ಯಾಪಾರ** (वि०) 1. ವ್ಯಾಪಾರವಿಲ್ಲದ, ಕೆಲಸವಿಲ್ಲದ. 2. ಚಲನೆಯಿಲ್ಲದ. 3. ಯಾವುದೂ ಉದ್ಯೋಗವಿಲ್ಲದ. निर्गतो व्यापारो यस्मात्। "तं दधन्मैथिलीकण्ठनिर्व्यापारेण बाहुना" रघु० १५-५६।

**निर्व्यूढ ನಿರ್ವ್ಯೂಢ** (वि०) 1. ಸಾಧಿಸಲ್ಪಟ್ಟ, ಸಮಾಪ್ತಿಗೊಳಿಸಲ್ಪಟ್ಟ. निर् + वि + वह (प्रापणे) "क्तः" (३-२-१०२)। "अवदानं तु यत्कर्म निर्व्यूढमतिशोभनम्"। 2. ಬೆಳೆದುಬಂದಿರುವ, ಅಭಿವೃದ್ಧಿಹೊಂದಿದ. "श्लाघ्यान्वयेति नयनोत्सवकारिणीति निर्व्यूढसौहृदरसेति गुणोज्ज्वलेति" मालती० ६-१७। 3. ತ್ಯಜಿಸಲ್ಪಟ್ಟ, ಬಿಡಲ್ಪಟ್ಟ. "त्यक्ते निर्व्यूढ उच्यते" त्रिकाण्ड०। 4. ನೆರವೇರಿಸಲ್ಪಟ್ಟ, ನಡೆಸಲ್ಪಟ್ಟ. "निर्व्यूढो भगवत्याः संभावनाभारो बुद्धरक्षितया" मालती० ८। 5. ಸ್ಥಿರವಾದ, ಬದಲಾಯಿಸಲಾಗದ, ತಪ್ಪಿಸಲಾಗದ. "**स्त्रीणां** पतिपुत्रादिधने न निर्व्यूढं स्वत्वम् पुंसां तु **तन्निर्व्यूढं** यथेष्टविनियोगार्हत्वात्"।

**निर्व्यूह ನಿರ್ವ್ಯೂಹ** (पुं०) 1. "निर्यूह" ಪದದ ಅರ್ಥ. निर्यूह पृषो०। "द्वारतोरणनिर्व्यूहध्वजसंबाहशोभिना" भा० वन० १६१-४६। (वि०) 2. ವ್ಯೂಹವಿಲ್ಲದ ಸೈನ್ಯ. ವ್ಯೂಹರಚನೆಯಿಲ್ಲದ ಸೇನೆ.

**निर्हरण ನಿರ್ಹರಣ** (न०) 1. ನಾಶಪಡಿಸುವುದು. निर्+हृञ् (हरणे) "ल्युट्" (३-३-११५)। "तस्माद्भवद्भिः कर्तव्यं कर्मणां त्रिगुणात्मनाम्। बीजनिर्हरणम्" भाग० ७-७-२८। 2. ಹೊರಕ್ಕೆ ಎಳೆಯುವುದು, ಬಲವಂತದಿಂದ ಹೊರದೂಡುವುದು. "शरद्वसन्तप्रावृट्सु प्रकुपितानां दोषाणां निर्हरणम्" सुश्रुत० सूत्र० ६-१२।

**निर्ह्राद ನಿರ್ಹ್ರಾದ** (पुं०) ಶಬ್ದ, ಸದ್ದು, ಧ್ವನಿ. निर+ह्राद (अव्यक्ते शब्दे) "घञ्" (३-३-१८)। "सारसैः कलनिर्ह्रादैः क्वचिदुन्नमिताननौ" रघु० १-४१।

**निर्ह्रादिन् ನಿರ್ಹ್ರಾದಿನ್** (वि०) ಶಬ್ದದಿಂದ ಕೂಡಿದ, ಸದ್ದುಮಾಡುತ್ತಿರುವ. निर्ह्रादोऽस्यास्ति "इनिः" (५-२-११५)। "प्रवृत्तनिर्ह्रादिविभूषणारवः" किरा० ८-३।

**निलय ನಿಲಯ** (पुं०) 1. ಗೃಹ, ಮನೆ. निलीयतेऽत्र—नि+लीङ् (श्लेषणे) "घः" (३-३-११९)। "निलयेषु नक्तमसिताश्मनां चयैर्बिसिनीवधूपरिभवस्फुटागसः" माघ० १३-५४। 2. ಸ್ಥಾನ. "इत्यालेपुरनुप्रतीकनिलयालङ्कारसारश्रिया" नैष० १५-९२। 3. ವಾಸಸ್ಥಾನ. "भवन्मनस्कारलवोद्गमेन क्रमेलकानां निलयः पुरेव" नैष० १४-८४। 4. ಹಕ್ಕಿಗಳ ಗೂಡು. "निलयाय शाखिन इवाह्वयते ददुराकुलाः खगकुलानि गिरः" माघ० ९-४। 5. ಅಸ್ತಮಯ, ಅಸ್ತವನ್ನು ಹೊಂದುವುದು. "सञ्चारपूतानि दिगन्तराणि कृत्वा दिनान्ते निलयाय गन्तुम्" रघु० २-१५। 6. ಮರೆಯಾಗುವುದು, ಅದೃಶ್ಯವಾಗುವುದು. 7. ಮಹಾಪ್ರಳಯ.

**निलयन ನಿಲಯನ** (न०) 1. ಪಕ್ಷಿ ಮೊದಲಾದ ಪ್ರಾಣಿಗಳ ಗೂಡು, ಪ್ರಾಣಿಗಳ ಆವಾಸಸ್ಥಾನ. निलीयन्तेऽत्र—नि + लीङ् (संश्लेषणे) "ल्युट्" (३-३-११७)। 2. ಆಶ್ರಯಸ್ಥಾನ. "सादृश्यं निलयननिष्प्रकम्पपक्षैराजग्मुर्जलनिधिशायिभिर्नगेन्द्रैः" किरा० ७-२०।

**निलायिन् ನಿಲಾಯಿನ್** (वि०) ವಾಸಮಾಡುವ. निलीयते—नि + लीङ् (संश्लेषणे) "णिनिः" (३-१-१३४)।

"गण्डस्थलाघर्षगलन्मदोदकद्रवद्रुमस्कन्धनिलायिनोऽलयः" माघ० १२-६४।

**निलिम्प ನಿಲಿಂಪ** (पुं०) 1. ದೇವತೆ. नि+लिप (उपदेहे) "शः" (३-१-१३८)। मुमागमः (७-१-५९)। "देवा निलिम्पा मरुतो गीर्वाणा वायुनाः सुराः" वैज०। (स्त्री०) -लिम्पा -ಲಿಂಪಾ. 2. ಗೋವು, ಆಕಳು, ಹಸು. "स्त्री गवी तुम्बा निलिम्पा रोहिणी च सा" त्रिकाण्ड०। स्वार्थे "कः"। -लिम्पिका -ಲಿಂಪಿಕಾ.

**निलीन ನಿಲೀನ** (वि०) ಪೂರ್ತಿಯಾಗಿ ಬೆರೆತಿರುವ, ಸಂಪೂರ್ಣವಾಗಿ ಇನ್ನೊಂದು ವಸ್ತುವಿನೊಳಗೆ ಸೇರಿ ಕೊಂಡಿರುವ. नितरां लीनः। "वनानि तोयानि च नेत्रकल्पैः पुष्पैः सरोजैश्च निलीनभृङ्गैः" भट्टि० २-५।

**निवपन ನಿವಪನ** (न०) 1. ಪಿತೃಗಳಿಗೆ ಮಾಡುವ ದಾನ. नि + डु वप् (बीजसन्ताने) "ल्युट्" (३-३-११५)। "अस्मात्परं बत यथाश्रुति संभृतानि को नः कुले निवपनानि नियच्छतीति" शाकु० ६-२५। 2. ಬೀಜವನ್ನು ಬಿತ್ತುವುದು.

**निवर्तक ನಿವರ್ತಕ** (वि०) 1. ಹಿಂತಿರುಗಿಸುವವನು. नि+वृतु (वर्तने) "ण्वुल्" (३-१-१३३)। 2. ಹಿಂದಕ್ಕೆ ಕಳುಹಿಸುವವನು. 3. ತಡೆದು ನಿಲ್ಲಿಸುವವನು.

**निवर्तन ನಿವರ್ತನ** (न०) 1. ತಡೆದು ನಿಲ್ಲಿಸುವುದು, ಒಳಕ್ಕೆ ಬಾರದಂತೆ ತಡೆಯುವುದು. नि + वृतु (वर्तने)+णिच् "ल्युट्" (३-३-११५)। ಸೇತುವು खेयः ಮತ್ತು वन्ध्यः ಎಂದು ಎರಡು ವಿಧ. ನೀರನ್ನು ಶೇಖರಿಸಿ ಬಿಡಲು ನಿರ್ಮಾಣವಾಗುವುದು ಖೇಯವೆನಿಸುವುದು. ನೀರು ಬಾರದಂತೆ ತಡೆಯಲು ಕಟ್ಟುವುದು ವಂಧ್ಯವೆನಿಸುವುದು. "सेतुश्च द्विविधो ज्ञेयः खेयो वन्ध्यस्तथैव च। तोयप्रवर्तनात् खेयः वन्ध्यः स्यात्तन्निवर्तनात्" मिता०। 2. ಹಿಂತಿರುಗಿಸುವುದು, ಹಿಂದಕ್ಕೆ ಕಳುಹಿಸುವುದು, ಹಿಂದಕ್ಕೆ ಬರಮಾಡುವುದು. "घन घटयितुं तं निःस्नेहं य एव निवर्तने" अमरु० ३२। 3. ಮಾಡಿದ ಉಪಕಾರ ಅಥವಾ ಅಪಕಾರವನ್ನು ಹಿಂತಿರುಗಿಸುವುದು, ಪ್ರತ್ಯುಪಕಾರ ಅಥವಾ ಪ್ರತೀಕಾರ ಮಾಡುವುದು. "विनिपातनिवर्तनक्षमं मतमालम्बनमात्मपौरुषम्" किरा० २-१३। 4. ತೊಡಗಿದ ಕಾರ್ಯವನ್ನು ಮಾಡದೆ ನಿಲ್ಲಿಸುವುದು, ಕಾರ್ಯದಿಂದ ಹಿಂಜರಿದು ನಿಲ್ಲುವುದು. "विज्ञानं हृदयं चित्तं मनो बुद्धिश्च तत्समम्। अनेनात्मा करोतीह प्रवर्तननिवर्तने" कामन्द० १-३१। 5. ಹಿಂದಕ್ಕೆ ಬರುವುದು, ಹಿಂತಿರುಗುವುದು. 6. ಮೂರು ರಜ್ಜುಗಳ ಅಥವಾ 576 ಅಂಗುಲಗಳ ಅಳತೆ. "निवर्तनं तु तिसृभी रज्जुभिर्बलिशं च तत्" वैज०।

**निवर्तनीय ನಿವರ್ತನೀಯ** (वि०) 1. ಹಿಂತಿರುಗಿಸಲ್ಪಡುವ. 2. ಹಿಂತಿರುಗಿಸಬೇಕಾದ. नि +वृतु (वर्तने) "अनीयर्" (३-१-९६)। 3. ತಡೆದು ನಿಲ್ಲಿಸಲ್ಪಡುವ. 4. ತಡೆದು ನಿಲ್ಲಿಸಬೇಕಾದ. "तव्यः" (३-१-९६)। -वर्तितव्यः -ವರ್ತಿತವ್ಯಃ. नि+वृतु+णिच् "तव्यः" -वर्तयितव्यः -ವರ್ತಯಿತವ್ಯಃ.

**निवर्तमान ನಿವರ್ತಮಾನ** (वि०) ಹಿಂತಿರುಗುತ್ತಿರುವ, ಹಿಂದಕ್ಕೆ ಹೋಗುತ್ತಿರುವ. नि + वृतु (वर्तने) "शानच्" (३-२-१२४)।

**निवर्तयत् ನಿವರ್ತಯತ್** (वि०) 1. ಹಿಂತಿರುಗಿಸುತ್ತಿರುವ, ಹಿಂದಕ್ಕೆ ಕಳುಹಿಸುತ್ತಿರುವ. 2. ತಡೆದು ನಿಲ್ಲಿಸುತ್ತಿರುವ. नि + वृतु (वर्तने)+ णिच् "शतृ" (३-२-१२४)। स्त्रियां "ङीप्" (४-१-६)। -यन्ती -ಯಂತೀ. "अवोचदेनं गगनस्पृशा रघुः स्वरेण धीरेण निवर्तयन्निव" रघु० ३-४३।

**निवर्तित ನಿವರ್ತಿತ** 1. ಹಿಂದಕ್ಕೆ ಕಳುಹಿಸಲ್ಪಟ್ಟ, ಹಿಂದಕ್ಕೆ ಒಯ್ಯಲ್ಪಟ್ಟ. नि + वृतु (वर्तने)+ णिच् "क्तः" (३-२-१०२)। "प्रहारमूर्च्छापगमे रथस्था यन्तॄनुपालभ्य निवर्तिताश्वान्" रघु० ७-४४। 2. ಹಿಂತಿರುಗಿಸಲ್ಪಟ್ಟ. "निवर्तितं वैरिजनोपमर्दात् न्यस्तं रथे चक्रमुपाददानः" याद० २३-४०। 3. ತಡೆದು ನಿಲ್ಲಿಸಲ್ಪಟ್ಟ.

**निवर्तिन् ನಿವರ್ತಿನ್** (वि०) 1. ಹಿಂದಕ್ಕೆ ತಿರುಗಿದ, ಪರಾಙ್ಮುಖವಾದ. नि + वृतु (वर्तने) "णिनिः" (३-१-१३४)। "ययौ कटाक्षः सहसा निवर्तिना तदीक्षणेनार्धपथे समागमम्" नैष० १६-१२३। 2. ತೊಡಗಿದ ಕಾರ್ಯದಿಂದ ಹಿಂಜರಿದು ನಿಂತಿರುವ.

**निवर्त्य ನಿವರ್ತ್ಯ** (वि०) 1. ಹಿಂತಿರುಗಿಸಲ್ಪಡುವ, ಹಿಂದಕ್ಕೆ ಕರೆದುಕೊಳ್ಳಲ್ಪಡುವ. नि + वृतु (वर्तने) "ण्यत्" (३-१-१२४)। "त्वयैकसत्या तनुतापशङ्कया ततो निवर्त्यं न मनः कथंचन" नैष० ९-५५। 2. ತಡೆಯಲ್ಪಡುವ, ನಿವಾರಿಸಲ್ಪಡುವ, ಪರಿಹರಿಸಲ್ಪಡುವ. "निवर्त्ये धर्मशल्येऽस्मिन् निदाने सर्वपाप्मनाम्" याद० १६-४७।

**निल्वयनी ನಿಲ್ವಯನೀ** (स्त्री०) ಹಾವಿನ ಪೊರೆ. "सर्पाचिरस्तु निर्मोकः कञ्चुको निल्वयन्यपि" वैज०।

**निवसत् ನಿವಸತ್** (वि०) ವಾಸಮಾಡುತ್ತಿರುವ. नि+वस (निवासे) "शतृ" (३-२-१२४)। स्त्रियां "ङीप्"

(४-१-६)। -वसन्ती –ವಸಂತೀ. "सर्वर्तुनिर्वृतिकरे निवसन्नुपैति न द्वन्द्वदुःखमिह किञ्चिदकिञ्चनोऽपि" माघ० ४-६४।

**निवसति ನಿವಸತಿ** (स्त्री०) ಗೃಹ, ಮನೆ. नि + वस (निवासे) अधि० "अतिः" (उ० ४-६०)।

**निवसथ ನಿವಸಥ** (पुं०) ಗ್ರಾಮ, ಹಳ್ಳಿ. नि + वस (निवासे) अधि० "अथः" (उ० ३-११३)। "ग्रामः पर्युपसंनिम्यः प्रतेश्च वसथः परः" वैज०।

**निवसन ನಿವಸನ** (नं०) 1. ಗೃಹ, ಮನೆ. नि + वस (निवासे) "ल्युट्" (३-३-११७)। 2. ವಸ್ತ್ರ, ಬಟ್ಟೆ. नि+वस (आच्छादने) "ल्युट्" (३-३-११७)। "प्राप्य नाभिनदमज्जनमाशु प्रस्थितं निवसनग्रहणाय" माघ० १०-६०। "शय्यं निवसनं सद्म बुन्दिरं वेश्म मन्दिरम्" वैज०।

**निवसित ನಿವಸಿತ** (वि०) ಧರಿಸಲ್ಪಟ್ಟ, ಉಡಲ್ಪಟ್ಟ. नि + वस (आच्छादने) "क्तः" (३-२-१०२)। "तैस्तैश्चाटुभिरज्ञया किल तया वृत्ते रतिव्यत्यये लज्जामन्थरया तया निवसिते भ्रान्त्या मदीयांशुके" अमरु० परिशि० १४७।

**निवह ನಿವಹ** (पुं०) 1. ಸಮೂಹ, ಗುಂಪು. नितरामुह्यते —नि+वह (प्रापणे) "घः" (३-३-११८)। "सिताम्बुजानां निवहस्य यश्छलाद्बभावलिश्यामलितोदरश्रियम्" नैष० १-११०। 2. ಸಪ್ತವಾಯುಗಳಲ್ಲೊಂದು, "निवहो यत्र वातेशः केषांचिन्न सुखप्रदः। न प्रचण्डो न च मृदुः प्रमादी च प्रभञ्जनः"।

**निवाकु ನಿವಾಕು** (वि०) ಮಾತಿಲ್ಲದ, ಮಾತನಾಡದ.

**निवात ನಿವಾತ** (पुं०) 1. ಆಶ್ರಯ, ಶರಣಗೃಹ, ರಕ್ಷಣ ಸ್ಥಾನ, ತೊಂದರೆಯಿಂದ ತಪ್ಪಿಸಿಕೊಳ್ಳಲು ಮರೆ. नितरां वाति गच्छत्यत्र—नि+वा (गतिगन्धनयोः) अधि० "क्तः" (३-४-७६)। 2. ಗಾಳಿಯಿಲ್ಲದಿರುವಿಕೆ. "निवातस्तिमितां वेलां चन्द्रोदय इवोदधेः" रघु० १२-३६। 3. ವಾಸಸ್ಥಾನ, ಗೃಹ, ಮನೆ. 4. ಗಾಳಿಯಿಲ್ಲದ ಜಾಗ. "अन्तश्चराणां मरुतां निरोधान्निवातनिष्कम्पमिव प्रदीपम्" कुमा० ३-४८। (वि०) 5. ರಂಧ್ರಗಳಿಲ್ಲದ, ಗಾಳಿಯು ಪ್ರವೇಶಿಸಲು ಅವಕಾಶವಿಲ್ಲದ, ದೃಢವಾದ, ಶಸ್ತ್ರಗಳಿಗೂ ಅಭೇದ್ಯವಾದ. "उपाहितैर्वपुषि निवातवर्मभिः स्फुरन्मणिप्रसृतमरीचिसूचिभिः" माघ० १७-५१। 6. ಗಾಳಿಯಿಲ್ಲದ, ಗಾಳಿಯು ಆಡದಿರುವ, "अर्पितस्तिमितदीपदृष्टयो गर्भवेश्मसु निवातकुक्षिषु" रघु० १९-४२।

**निवातकवच ನಿವಾತಕವಚ** (पुं०) ಹಿರಣ್ಯಕಶಿಪುವಿನ ಮೊಮ್ಮಕ್ಕಳು. ಪ್ರಹ್ಲಾದನ ತಮ್ಮನಾದ ಸಂಹ್ರಾದನ ಮಕ್ಕಳು. निवातं शस्त्राभेद्यं कवचं येषाम्। [ಇವರೆಲ್ಲರೂ ಒಟ್ಟುಗೂಡಿ ಇಂದ್ರಾದಿಗಳನ್ನು ಪೀಡಿಸುತ್ತಾ ಅವರಿಂದ ತಪ್ಪಿಸಿಕೊಳ್ಳಲು ಸಮುದ್ರದೊಳಗೆ ಅವಿತುಕೊಳ್ಳುತ್ತಿದ್ದರು. ವನವಾಸ ಸಮಯದಲ್ಲಿ ಅರ್ಜುನನು ತಪಸ್ಸಿನಿಂದ ಪಾಶುಪತಾಸ್ತ್ರವನ್ನು ಪಡೆದನಂತರ ಇಂದ್ರನೊಡನೆ ಸ್ವರ್ಗಲೋಕಕ್ಕೆ ಹೋಗಿ ಅಲ್ಲೇ ಕೆಲವು ಕಾಲ ವಾಸವಾಗಿದ್ದನು. ಆಗ ಇಂದ್ರನ ಆಜ್ಞೆಯಂತೆ ಅರ್ಜುನನು ಈ ನಿವಾತಕವಚರನ್ನು ಸಂಹರಿಸಿದನು.] भा० वन० १७२।

**निवान्या ನಿವಾನ್ಯಾ** (स्त्री०) ತನ್ನ ಕರು ಮೃತವಾಗಿ ಬೇರೆ ಕರುವಿನಿಂದ ಊಡಿಸಿ ಹಾಲು ಕರೆಯಲ್ಪಡುವ ಹಸು.

**निवाप ನಿವಾಪ** (पुं०) 1. ಪಿತೃಗಳಿಗೆ ಮಾಡುವ ದಾನ, ಉದಕದಾನ, ತರ್ಪಣ. न्युप्यते — नि + डुवप् (बीजसन्ताने) कर्म० "घञ्" (३-३-१९)। "त्वं पुण्डरीकमुखबन्धुतया निरस्तमेको निवापसलिलं पिबसीत्ययुक्तम्" मालती० ९-४०। 2. ದಾನ, ಕೊಡುಗೆ. 3. ಬೀಜ, ಬಿತ್ತನೆಯ ಕಾಳು. 4. ಕ್ಷೇತ್ರ, ಭೂಮಿ.

**निवार ನಿವಾರ** (पुं०) 1. ನಿವಾರಣ, ತಡೆಯುವುದು. नि + वृञ् (वरणे) "घञ्" (३-३-१८)। 2. ಅಡ್ಡಿಪಡಿಸುವುದು, ತಪ್ಪಿಸುವುದು. 3. ನಿಷೇಧಿಸುವುದು.

**निवारण ನಿವಾರಣ** (नं०) 1. ತಡೆಯುವುದು, ಅಡ್ಡಿಪಡಿಸುವುದು, ತಪ್ಪಿಸುವುದು. नि + वृञ् (वरणे) + णिच् "ल्युट्" (३-३-११५)। "आस्वादवद्भिः कबलैस्तृणानां कण्डूयनैर्दंशनिवारणैश्च" रघु० २-५। 2. ಪ್ರತಿಬಂಧಿಸುವುದು, ನಿಷೇಧಿಸುವುದು. 3. ನಾಶಪಡಿಸುವುದು, ಹೋಗಲಾಡಿಸುವುದು. "सुरालयश्रीविपदां निवारणं सुरारिसंपत्परितापकारणम्" कुमा० १४-३। (वि०) 4. ತಡೆಯುವ, ತಪ್ಪಿಸುವ. 5. ನಿಷೇಧಿಸುವ. 6. ನಾಶಪಡಿಸುವ. नि + वृञ् (वरणे) + णिच् "ल्युः" (३-१-१३४)।

**निवारणीय ನಿವಾರಣೀಯ** (वि०) 1. ನಾಶಪಡಿಸಲ್ಪಡುವ, ಹೋಗಲಾಡಿಸಲ್ಪಡುವ. 2. ನಾಶಪಡಿಸಬೇಕಾದ, ಹೋಗಲಾಡಿಸಬೇಕಾದ. 3. ತಡೆಯಲ್ಪಡುವ, ಅಡ್ಡಿಪಡಿಸಲ್ಪಡುವ.. 4. ತಡೆಯಬೇಕಾದ, ತಪ್ಪಿಸಬೇಕಾದ. 5. ನಿಷೇಧಿಸಲ್ಪಡುವ. 6. ನಿಷೇಧಿಸಬೇಕಾದ. नि+वृञ्

(वरणे) + णिच् "अनीयर्" (३-१-९६)। "तव्य:" (३-१-९६)। -वारयितव्य: -ವಾರಯಿತವ್ಯಃ.

**निवारयत् ನಿವಾರಯತ್** (वि०) 1. ನಾಶಪಡಿಸುತ್ತಿರುವ, ಹೋಗಲಾಡಿಸುತ್ತಿರುವ. नि + वृञ् (वरणे) + णिच् "शतृ" (३-२-१२४)। "गतै: परेषामविभावनीयतां निवारयद्भिर्विपदं विदूरगै:" किरा० १४-५२। 2. ತಡೆಯುತ್ತಿರುವ, ಅಡ್ಡಿಪಡಿಸುತ್ತಿರುವ, ತಪ್ಪಿಸುತ್ತಿರುವ. 3. ನಿಷೇಧಿಸುತ್ತಿರುವ, ಪ್ರತಿಬಂಧಿಸುತ್ತಿರುವ. स्त्रियां "ङीप्" (४-१-६)। -यन्ती -ಯಂತೀ. "कौमारगन्धीनि निवारयन्ती वृत्तानि रोमावलिवेत्रचिह्ना" नैष० ६-३८। "उवाच मेना परिरभ्य वक्षसा निवारयन्ती महतो मुनिव्रतात्" कुमा० ५-३।

**निवारित ನಿವಾರಿತ** (वि०) 1. ನಿಷೇಧಿಸಲ್ಪಟ್ಟ, ಪ್ರತಿಬಂಧಿಸಲ್ಪಟ್ಟ. नि + वृञ् (वरणे) + णिच् "क्त:" (३-२-१०२)। "निवारितास्तेन महीतलेऽखिले निरीतिभावं गमितेऽतिवृष्टय:" नैष० १-११। 2. ತಡೆಯಲ್ಪಟ್ಟ, ತಪ್ಪಿಸಲ್ಪಟ್ಟ, ಅಡ್ಡಿಪಡಿಸಲ್ಪಟ್ಟ. "स्त्रीणां बृहज्जघनसेतुनिवारितानि" माघ० ५-२९। 3. ಹೋಗಲಾಡಿಸಲ್ಪಟ್ಟ, ನಾಶಪಡಿಸಲ್ಪಟ್ಟ. "निवारिताशावितति-स्तदाऽसीत् नभ:स्थली नाकिभिरप्यदृश्या" याद० २०-२५।

**निवारितवत् ನಿವಾರಿತವತ್** (वि०) 1. ಅಡ್ಡಿಪಡಿಸಿದ, ತಪ್ಪಿಸಿದ. 2. ನಾಶಪಡಿಸಿದ. 3. ನಿಷೇಧಿಸಿದ. नि+वृञ् (वरणे) + णिच् "क्तवतु:" (३-२-१०२)। स्त्रियां "ङीप्" (४-१-६)। -वती -ವತೀ.

**निवार्य ನಿವಾರ್ಯ** (वि०) 1. ತಡೆಯಲ್ಪಡುವ, ಅಡ್ಡಿಪಡಿಸಲ್ಪಡುವ. 2. ನಾಶಪಡಿಸಲ್ಪಡುವ, ಹೋಗಲಾಡಿಸಲ್ಪಡುವ. "अप्राकृतस्याहवदुर्मदस्य निवार्यमस्यास्त्रबलेन वीर्यम्" किरा० १६-२४। 3. ನಿಷೇಧಿಸಲ್ಪಡುವ. नि + वृञ् (वरणे) + णिच् "यत्" (३-१-९७)।

**निवार्यमाण ನಿವಾರ್ಯಮಾಣ** (वि०) 1. ತಡೆಯಲ್ಪಡುತ್ತಿರುವ, ಅಡ್ಡಿಪಡಿಸಲ್ಪಡುತ್ತಿರುವ. नि+वृञ् (वरणे) + णिच् कर्म० "शानच्" (३-२-१२४)। "निवार्यमाणैरभितोऽनुयायिभि:" कुमा० १५-२९। 2. ನಾಶಪಡಿಸಲ್ಪಡುತ್ತಿರುವ, ಹೋಗಲಾಡಿಸಲ್ಪಡುತ್ತಿರುವ. 3. ನಿಷೇಧಿಸಲ್ಪಡುತ್ತಿರುವ, ಪ್ರತಿಬಂಧಿಸಲ್ಪಡುತ್ತಿರುವ.

**निवास ನಿವಾಸ** (पुं०) 1. ಇರುವುದು, ವಾಸಮಾಡುವುದು. नि + वस (निवासे) "घञ् (३-३-१२१)। "वाराणसी निविशते न वसुन्धरायां तत्र स्थितिर्मखभुजां भुवने निवास:" नैष० ११-११६। 2. ಗೃಹ, ಮನೆ. "प्रासादशोभातिशयालुभि: पथि प्रभोर्निवासा: पटवेश्मभिर्बभु:" माघ० १२-६३। "तत्र तत्र प्रजानां हि निवासं समरोचयत्" विष्णुपु०। 3. ಆಶ್ರಯಸ್ಥಾನ, ವಾಸಸ್ಥಾನ. "भग्नो निवासोऽयमिहास्य पुष्पै: सदा नतो येन विषाणिनाग:" माघ० ४-६३। "गतिर्भर्ता प्रभु: साक्षी निवास: शरणं सुहृत्" गीता ९-१८। 4. ವಸ್ತ್ರ, ಬಟ್ಟೆ. "नमश्चर्मनिवासाय नमस्ते पीतवाससे" हरिवं०।

**निवासन ನಿವಾಸನ** (न०) ವಾಸಮಾಡಿಸುವುದು, ಇರುವಂತೆ ಮಾಡುವುದು.

**निवासिता ನಿವಾಸಿತಾ** (स्त्री०) ವಾಸಮಾಡುವಿಕೆ. निवासिनो भाव: "तल्" (५-१-११९)। "आजन्मन: सह निवासितया मयैव मातु: पयोधरपयोऽपि समं निपीय" मालती० ९-४०।

**निवासिन् ನಿವಾಸಿನ್** (वि०) 1. ವಾಸಮಾಡುವ. नि+ वस (निवासे) "णिनि:" (३-१-१३४)। "क्षितिनभ: सुरलोकनिवासिभि: कृतनिकेतमदृष्टपरस्परै:" किरा० ५-३। 2. ಒಕ್ಕಲಾಗಿರುವ, ನೆಲೆಸಿರುವ. स्त्रियां "ङीप्" (४-१-५)। -वासिनी -ವಾಸಿನೀ.

**निविविक्षत् ನಿವಿವಿಕ್ಷತ್** (वि०) 1. ಕೂಡಲು ಅಪೇಕ್ಷಿಸುತ್ತಿರುವ. नि + विश (प्रवेशने) + सन् "शतृ" (३-२-१२४)। 2. ಪ್ರವೇಶಿಸಲು ಅಪೇಕ್ಷಿಸುತ್ತಿರುವ. 3. ಇಡಲು ಅಪೇಕ್ಷಿಸುತ್ತಿರುವ. 4. ಸ್ಥಿರವಾಗಿ ನಿಲ್ಲಿಸಲು ಅಪೇಕ್ಷಿಸುತ್ತಿರುವ.

**निविविक्षा ನಿವಿವಿಕ್ಷಾ** (स्त्री०) 1. ಕೂಡಲು ಅಪೇಕ್ಷೆ. नि + विश (प्रवेशने) + सन् "अ:" (३-३-१०२)। 2. ಇಡಲು ಅಪೇಕ್ಷೆ, ಇರಿಸಲು ಇಚ್ಛೆ. 3. ಪ್ರವೇಶಿಸಲು ಅಪೇಕ್ಷೆ. 4. ಸ್ಥಿರವಾಗಿ ನಿಲ್ಲಿಸಲು ಅಪೇಕ್ಷೆ.

**निविविक्षु ನಿವಿವಿಕ್ಷು** (वि०) 1. ಕೂಡಲು ಅಪೇಕ್ಷಿಸುವ. नि + विश (प्रवेशने) + सन् "उ:" (३-२-१६८)। 2. ಪ್ರವೇಶಿಸಲು ಅಪೇಕ್ಷಿಸುವ. 3. ಇರಿಸಲು ಅಪೇಕ್ಷಿಸುವ. 4. ಸ್ಥಿರವಾಗಿ ಇಡಲು ಅಪೇಕ್ಷಿಸುವ.

**निविवृत्सत् ನಿವಿವೃತ್ಸತ್** (वि०) 1. ಹಿಂತಿರುಗಲು ಅಪೇಕ್ಷಿಸುತ್ತಿರುವ. नि + वृतु (वर्तने) + सन् "शतृ" (३-२-१२४)। "मुनीषुदहनातप्तान् लज्जया निविवृत्सत:" किरा० १५-३०। 2. ತಡೆಯಲು ಅಪೇಕ್ಷಿಸುತ್ತಿರುವ.

**निविवृत्सा ನಿವಿವೃತ್ಸಾ** (स्त्री०) 1. ಹಿಂತಿರುಗಲು ಅಪೇಕ್ಷೆ, ಹಿಂದಕ್ಕೆ ಹೋಗಲು ಅಪೇಕ್ಷೆ. नि+वृतु (वर्तने) +सन् "अ:" (३-३-१०२)। 2. ತಡೆಯಲು ಅಪೇಕ್ಷೆ, ಅಡ್ಡಿಪಡಿಸಲು ಅಪೇಕ್ಷೆ.

**निविवृत्सु ನಿವಿವೃತ್ಸು** (वि०) 1. ಹಿಂತಿರುಗಲು ಅಪೇಕ್ಷಿಸುವ, ಹಿಂದಕ್ಕೆ ಹೋಗಲು ಅಪೇಕ್ಷಿಸುವ. नि + वृतु (वर्तने) + सन् "उ:" (३-२-१६८)। 2. ತಡೆಯಲು ಅಪೇಕ್ಷಿಸುವ, ಅಡ್ಡಿಪಡಿಸಲು ಅಪೇಕ್ಷಿಸುವ.

**नि + विश – प्रवेशने** (तुदा० पर० सक० अनि०)। "नेर्विशः" (१-३-१७) इत्यात्मनेपदम्। निविशते। निविविशे। निवेष्टा ಇತ್ಯಾದಿ. 1. ಇಡು, ಇರಿಸು. "ततः प्रियोपात्तरसेऽधरोष्ठे निवेश्य दध्मौ जलजं कुमारः" रघु० १६-३७। 2. ಕೊಡು, ಕುಳಿತುಕೊ. "स काञ्चने यत्र मुनेरनुज्ञया नवाम्बुदश्यामवपुर्न्यविक्षत" माघ० १-१९। 3. (ಬುದ್ಧಿಯನ್ನು) ಸ್ಥಿರವಾಗಿ ನಿಲ್ಲಿಸು, ನಿಶ್ಚಲವಾಗಿ ನಿಲ್ಲಿಸು. "मय्येव मन आधत्स्व मयि बुद्धिं निवेशय" गीता १२-८। 4. ಶಾಸ್ತ್ರೋಕ್ತವಾಗಿ ಒಂದು ಸ್ಥಾನದಲ್ಲಿ ಕುಳ್ಳಿರಿಸು. "स निवेश्य कुशावत्यां रिपुनागाङ्कुशं कुशम्" रघु० १५-१७। 5. ಕಾಗದದ ಮೇಲೆ ಗುರುತಿಸು, ಕಾಗದದಲ್ಲಿ ತೋರ್ಪಡಿಸು. "तुल्यानुरागपिशुनं ललितार्थबन्धं पत्रे निवेशितमुदाहरणं प्रियायाः" विक्र० २-१३। 6. ಪ್ರವೇಶಿಸು. "ततो वावृत्यमानाऽसौ रामशालां न्यविक्षत" भट्टि० ४-२८। 7. ಮದುವೆಯಾಗು. "निवेशः पुंसि विन्यासे शिबिरोद्वाहयोरपि" मेदि०। 8. ಬೀಡುಮಾಡು, ಶಿಬಿರದಲ್ಲಿ ಇಳಿಸು. "कुशध्वजस्तानि चलध्वजानि निवेशयामास बली बलानि" रघु० १६-३७।

**निविष्ट ನಿವಿಷ್ಟ** (वि०) 1. ಕುಳಿತುಕೊಂಡಿರುವ. नि+विश (प्रवेशने) "क्तः" (३-४-७२)। "तयोः समानीय वरासनं मुदा निविष्टयोस्तत्र महात्मनोस्तयोः" भाग० १०-८५-३६। 2. ಬೀಡುಬಿಟ್ಟಿರುವ, ಶಿಬಿರದಲ್ಲಿ ಇಳಿದುಕೊಂಡಿರುವ. "निविष्टमुदधेः कूले तं प्रपेदे विभीषणः" रघु० १२-६८। 3. ಸ್ಥಿರವಾಗಿ ಇಟ್ಟಿರುವ, ನಿಶ್ಚಲವಾಗಿ ಇರಿಸಿರುವ, ಏಕಾಗ್ರತೆಯಿಂದ ಕೂಡಿದ. "भवन्ति साम्येऽपि निविष्टचेतसां वपुर्विशेषेष्वतिगौरवाः क्रियाः" कुमा० ५-३१। 4. ಪ್ರವೇಶಿಸಿರುವ, ಒಳಗೆ ಹೋಗಿರುವ. "उडुगणपरिवारो नायकोऽप्योषधीनाममृतमयशरीरः कान्तियुक्तोऽपि चन्द्रः। भवति विकलमूर्तिः मण्डलं प्राप्य भानोः परसदननिविष्टः को लघुत्वं न याति" उद्भ०। 5. ಇರುವ. "कोसलो नाम मुदितः स्फीतो जनपदो महान्। निविष्टः सरयूतीरे प्रभूतधनधान्यवान्" रामा०।

**निवीत ನಿವೀತ** (न०) 1. ಕಂಠದಲ್ಲಿ ಲಂಬಿಸುವಂತೆ ಧರಿಸಿದ ಯಜ್ಞೋಪವೀತ. निवीयते स्म –व्येञ् (संवरणे) "क्तः" (३-२-१०२)। संप्रसारणम् (६-१-१५)। 2. ಹೊದೆಯಲ್ಪಟ್ಟ ವಸ್ತ್ರ.

**निवीतिन् ನಿವೀತಿನ್** (वि०) ಕಂಠದಲ್ಲಿ ಲಂಬಿಸುವಂತೆ ಯಜ್ಞೋಪವೀತವನ್ನು ಧರಿಸಿದ. निवीतमस्त्यस्य "इनिः" (५-२-११५)। "कृतोपवीतो देवेभ्यः निवीती च भवेत्ततः। मनुष्यांस्तर्पयेद्भक्त्या ऋषिपुत्रान् ऋषींस्तथा"।

**निवृत ನಿವೃತ** (न०) 1. ಉತ್ತರೀಯ, ಹೊದೆಯುವ ವಸ್ತ್ರ. नि + वृञ् (वरणे) "क्तः" (३-२-१०२)। (वि०) 2. ಧರಿಸಲ್ಪಟ್ಟ, ಹೊದೆಯಲ್ಪಟ್ಟ.

**निवृत्त ನಿವೃತ್ತ** (वि०) 1. ಹಿಂತಿರುಗಿದ, ಹಿಂದಕ್ಕೆ ನಡೆದ. नि + वृतु (वर्तने) "क्तः" (३-४-७२)। "निवृत्ते भरते धीमानत्रेरामस्तपोवनम्" भट्टि० ४-१। 2. ನಿಂತುಹೋದ, ದೂರವಾದ, ಅದೃಶ್ಯವಾದ. "निवृत्ते सद्भावे जन इव जने गच्छति पुरः" अमरु० ४३। "निवृत्तवृत्तोरुपयोधरक्लमः प्रवृत्तनिर्ह्रादिविभूषणारवः" किरा० ८-३। 3. ಕೊನೆಗೊಂಡ, ಅವಸಾನಹೊಂದಿದ. "न द्वेष्टि संप्रवृत्तानि न निवृत्तानि काङ्क्षति" गीता १४-२२। 4. ಹಿಮ್ಮೆಟ್ಟಿದ, ಹಿಂಜರಿದುಹೋದ, ಪರಾಙ್ಮುಖನಾದ. "दान्तस्त्रिषवणस्नायी निवृत्तश्च प्रतिग्रहात्" याज्ञ० ३-४८। 5. ವಿಮುಖನಾದ, ಆಸಕ್ತಿಯನ್ನು ತೋರಿಸದ. "गान्धर्वमस्त्रं कुसुमास्त्रकान्तः प्रस्वापनं स्वप्ननिवृत्तलौल्यः" रघु० ७-६१। 6. ದೂರಕ್ಕೆ ಸರಿದ, ದೂರದಲ್ಲಿ ನಿಂತ. "एनो निवृत्तेन्द्रियवृत्तिरेनं जगाद भूयो जगदेकनाथः" रघु० ५-२३। 7. ತ್ಯಜಿಸಿದ, ತೊರೆದ, ಬಿಟ್ಟಿರುವ. "अनिवृत्तमांसानामेवं कल्पं व्याहरन्ति केचित्। निवृत्तमांसस्तु तत्रभवान् जनकः" उ० रा० ४। (न०) 8. ಹಿಂತಿರುಗುವುದು, ಹಿಂದಕ್ಕೆ ನಡೆಯುವುದು, ಹಿಂದಕ್ಕೆ ಹೋಗುವುದು. नि + वृतु (वर्तने) भावे "क्तः" (३-३-११४)। 9. ಅಭಾವ. 10. ದೂರವಾಗುವುದು, ಅದೃಶ್ಯವಾಗುವುದು, ಅಗೋಚರವಾಗುವುದು. 11. ಕೊನೆಗೊಳ್ಳುವುದು. 12. ಹಿಮ್ಮೆಟ್ಟುವುದು, ಹಿಂಜರಿಯುವುದು. 13. ದೂರಕ್ಕೆ ಸರಿಯುವುದು. 14. ತ್ಯಜಿಸುವುದು, ತೊರೆಯುವುದು. 15. ನಿವೃತ್ತಿಪೂರ್ವಕವಾದ ಕರ್ಮ (ಧರ್ಮ). "प्रवृत्तं च

निवृत्तं च द्विविधं कर्म वैदिकम् ।-- सर्गादौ सृजता सृष्टं ब्रह्मणा वेदरूपिणा" हेमाद्रि० ।

**निवृत्तात्मन् ನಿವೃತ್ತಾತ್ಮನ್** (पुं०) 1. ವಿಷ್ಣು, ಪರಮಾತ್ಮ. निवृत्ताः निवृत्तधर्मिणोऽप्यात्मानोऽस्य । "अनिवर्त्ती-निवृत्तात्मा संक्षेप्ता क्षेमकृच्छिवः" वि० स० । (वि०) 2. ವಿಷಯಾಭಿಲಾಷೆಯನ್ನು ತೊರೆದ ಮನಸ್ಸುಳ್ಳ. निवृत्तः विषयेभ्यः उपरतः आत्मा यस्य ।

**निवृत्ति ನಿವೃತ್ತಿ** (स्त्री०) 1. ಹಿಂತಿರುಗುವುದು, ಹಿಂದಕ್ಕೆ ನಡೆಯುವುದು. नि+वृतु (वर्तने) "क्तिन्" (३-३-९४)। "निजादनुव्रज्य स मण्डलावधेर्नलं निवृत्तौ चटुलापतां गतः" नैष० १६-११७ । 2. ಅಂತ್ಯವಾಗುವುದು, ಅವಸಾನಗೊಳ್ಳುವುದು, ಕೊನೆಯಾಗುವುದು. "निवृत्ति मेष्यन्ति परं दुरुत्तरस्त्वयैव मातः सुतशोकसागरः" नैष० १-१३६ । 3. ನಾಶಗೊಳ್ಳುವುದು, ಅಗೋಚರವಾಗುವುದು, ಕಳೆದುಹೋಗುವುದು. "उपलब्धवती दिवश्च्युतं विवशा शापनिवृत्तिकारणम्" रघु० ८-८२। 4. ಹಿಂದಕ್ಕೆ ಸರಿಯುವುದು, ಹಿಂಜರಿಯುವುದು. "प्राणाघातान्निवृत्तिः परधनहरणे संयमः सत्यवाक्यम्" भर्तृ० १-५४ । 5. ಜಗತ್ತಿನ ವ್ಯಾಪಾರದಿಂದ ದೂರವಾಗುವುದು, ಪ್ರಾಪಂಚಿಕ ವ್ಯವಹಾರವನ್ನು ತ್ಯಜಿಸುವುದು. 6. ವಿರಾಮ ಹೊಂದುವುದು, ವಿಶ್ರಾಂತಿ ಹೊಂದುವುದು, 7. ತ್ಯಜಿಸುವುದು, ತೊರೆಯುವುದು. ಇದು ದ್ವೇಷದಿಂದ ಉಂಟಾಗುವ ಒಂದು ಗುಣ. ದುಃಖದ ನಿವೃತ್ತಿಗೆ ದುಃಖದಲ್ಲಿ ಉಂಟಾಗುವ ದ್ವೇಷವು ಕಾರಣವಾಗುವುದರಿಂದ ನಿವೃತ್ತಿಯು ದುಃಖದ್ವೇಷದಿಂದ ಉಂಟಾಗುವುದು. निवृत्तिं प्रति फलगतद्वेषो द्विष्टसाधनताज्ञानं च कारणम् । "निवृत्तिस्तु भवेद्द्वेषाद्द्विष्टसाधनता धियः" भाषाप० १५१ । 8. ಅಭಾವ. "व्यापकनिवृत्तौ व्याप्यनिवृत्ते-रावश्यकत्वात्" । "विपक्षः साध्यधर्मनिवृत्तिमान्" ।

**निवेदन ನಿವೇದನ** (न०) 1. ಒಪ್ಪಿಸುವುದು, ಸಮರ್ಪಿಸುವುದು. नि + विद (ज्ञाने) + णिच् भावे "ल्युट्" (३-३-११५) । "श्रवणं कीर्तनं विष्णोः स्मरणं पादसेवनम् । अर्चनं वन्दनं दास्यं सख्यमात्मनिवेदनम्" भाग० ७-५-२३ । 2. ವಿಜ್ಞಾಪಿಸುವುದು, ಅರಿಕೆ ಮಾಡುವುದು. "निवेदनमिहास्माकमंशो निर्वहणं त्वयि" याद० १६-४७ । 3. ತಿಳಿಸುವುದು, ಸೂಚಿಸುವುದು. "वयस्यया-कृतविदा दमस्वसुः स्मितं वितत्याभिदधेऽथ भारती। इतः परेषामपि पश्य याचतां भवन्मुखेन स्वनिवेदन-त्वराम्" नैष० १२-५९ ।

**निवेदनीय ನಿವೇದನೀಯ** (वि०) 1. ಒಪ್ಪಿಸಲ್ಪಡುವ, ಸಮರ್ಪಿಸಲ್ಪಡುವ. 2. ಒಪ್ಪಿಸಬೇಕಾದ, ಸಮರ್ಪಿಸಬೇಕಾದ. 3. ತಿಳಿಸಲ್ಪಡುವ. 4. ತಿಳಿಸಬೇಕಾದ. 5. ವಿಜ್ಞಾಪಿಸಲ್ಪಡುವ. 6. ವಿಜ್ಞಾಪಿಸಬೇಕಾದ. नि+विद (ज्ञाने)+णिच् "अनीयर्" (३-१-९६)। "तव्यः" (३-१-९६) । **-वेदितव्यम् -ವೇದಿತವ್ಯಮ್.**

**निवेदयत् ನಿವೇದಯತ್** (वि०) 1. ಸಮರ್ಪಿಸುತ್ತಿರುವ. नि + विद (ज्ञाने) + णिच् "शतृ" (३-२-१२४) । 2. ತಿಳಿಸುತ್ತಿರುವ, ಸೂಚಿಸುತ್ತಿರುವ. "स्पष्टं बहिः स्थितवतेऽपि निवेदयन्तश्चेष्टाविशेषमनुजीविजनाय राज्ञाम्" माघ० ५-६७ । 3. ವಿಜ್ಞಾಪಿಸುತ್ತಿರುವ, ಅರಿಕೆಮಾಡುತ್ತಿರುವ, ಹೇಳುತ್ತಿರುವ. स्त्रियां "ङीप्" (४-१-६) । **-यन्ती -ಯಂತೀ.** "प्रथममेव शार्दूलनखरा-लंकृतस्य मकरन्दस्य मोहविच्छेदं निवेदयन्त्या भगवत्या नियुक्तेन भवता मालत्या समं जीवितेन हृदयं प्रसादी-कृतम्" मालती० ८ ।

**निवेदयितृ ನಿವೇದಯಿತೃ** (वि०) 1. ಸಮರ್ಪಿಸುವ, ಒಪ್ಪಿಸುವ. नि+विद (ज्ञाने)+णिच् "तृच्" (३-१-१३३)। 2. ತಿಳಿಸುವ. 3. ಸೂಚಿಸುವ. 4. ವಿಜ್ಞಾಪಿಸುವ, ಅರಿಕೆಮಾಡುವ, ಹೇಳುವ. स्त्रियां "ङीप्" (४-१-५)। **-यित्री -ಯಿತ್ರೀ.**

**निवेदित ನಿವೇದಿತ** (वि०) 1. ಸಮರ್ಪಿಸಲ್ಪಟ್ಟ, ಒಪ್ಪಿಸಲ್ಪಟ್ಟ. नि + विद + णिच् "क्तः" (३-२-१०२) । "मया निवेदितं भक्त्या गृहाण परमेश्वरि" । 2. ತಿಳಿಸಲ್ಪಟ್ಟ, ಹೇಳಲ್ಪಟ್ಟ. "तेन किल माधवप्रियवयस्येन मकरन्देन सकलो मदनोद्यानवृत्तान्तो भगवत्यै निवेदितः" मालती० २ । 3. ಸೂಚಿಸಲ್ಪಟ್ಟ, "कस्यापि कोऽपीति निवेदितं च धात्रेयिकायाश्चतुरं वचश्च" मालती० १-३६ । 4. ವಿಜ್ಞಾಪಿಸಲ್ಪಟ್ಟ, ಅರಿಕೆಮಾಡಲ್ಪಟ್ಟ. (न०) 5. ವಿಜ್ಞಾಪನೆ, ಅರಿಕೆ. "तव संमतिमेव केवलामधिगन्तुं धिगिदं निवेदितम्" नैष० २-४८ । 6. ಸೂಚಿಸುವುದು, ತಿಳಿಸುವುದು. 7. ಹೇಳುವುದು. 8. ಸಮರ್ಪಿಸುವುದು, ಒಪ್ಪಿಸುವುದು. नि+विद भावे "क्तः" (३-३-११४) ।

**निवेद्य ನಿವೇದ್ಯ** (वि०) 1. ಅರ್ಪಿಸಲ್ಪಡುವ. नि + विद (ज्ञाने) "ण्यत्" (३-१-१२४) । "तिलतिलकित-पर्पटाभमिन्दुं वितर निवेद्यमुपास्व पञ्चबाणम्" नैष० २२-१४७। 2. ಅರ್ಪಿಸಲು ಅರ್ಹವಾದ. "कर्णौ

किमस्या रतितत्पतिभ्यां निवेद्यरूपौ विधिशिल्पमीदृक्" नैष० ७-६१। 3. ತಿಳಿಸಲ್ಪಡುವ, ಹೇಳಲ್ಪಡುವ. 4. ತಿಳಿಸಲು ಅರ್ಹವಾದ, ಹೇಳಲು ಅರ್ಹವಾದ. 5. ಸೂಚಿಸಲ್ಪಡುವ. 6. ಸೂಚಿಸಲು ಅರ್ಹವಾದ. 7. ವಿಜ್ಞಾಪಿಸಲ್ಪಡುವ. 8. ವಿಜ್ಞಾಪಿಸಲು ಅರ್ಹವಾದ.

**निवेद्यमान ನಿವೇದ್ಯಮಾನ** (वि०) 1. ತೋರಿಸಿ ಹೇಳಲ್ಪಡುತ್ತಿರುವ, ಹೇಳಿ ತಿಳಿಸಲ್ಪಡುತ್ತಿರುವ. नि + विद (ज्ञाने) + णिच् "शानच्" (३-२-१२४)। "निवेद्यमानं वनपालपाणिना व्यलोकयत्काननकामनीयकम्" नैष० १-७६। 2. ಅರ್ಪಿಸಲ್ಪಡುತ್ತಿರುವ. 3. ವಿಜ್ಞಾಪಿಸಲ್ಪಡುತ್ತಿರುವ. 4. ಸೂಚಿಸಲ್ಪಡುತ್ತಿರುವ.

**निवेश ನಿವೇಶ** (पुं०) 1. ಪ್ರವೇಶ. नि + विश (प्रवेशने) भावे "घञ्" (३-३-१८)। 2. ಇಡುವುದು, ಇರಿಸುವುದು. "गौरवं व्यधित वागधिदेव्याः श्रीगृहोर्ध्वनिजकण्ठनिवेशात्" नैष० २१-५०। 3. ಕೂಡುವುದು, ಕುಳಿತುಕೊಳ್ಳುವುದು. "निवेशदेशाततधूतपक्षः पपात भूमावुपभैमि हंसः" नैष० ३-१। 4. ಮದುವೆಯಾಗುವುದು, ಜೀವಿತವನ್ನು ಸ್ಥಿರವಾಗಿ ಒಂದು ನೆಲೆಯಲ್ಲಿಡುವುದು. "ततो निवेशाय तदा स विप्रः संशितव्रतः। महीं चचार दारार्थी न च दारानविन्दत" भा० आदि० १४-१। 5. ಗೃಹ, ಮನೆ. नि + विश अधि० "घञ्" (३-३-१२१)। "भृशं ददर्शाश्रममण्डपोपमाः सपुष्पहासाः स निवेशवीरुधः" किरा० ४-१९। 6. ಶಿಬಿರ, ಠಾಣ್ಯ, ಬೀಡು. "भूभर्तुः समधिकमादधे तदोर्व्याः श्रीमत्तां हरिसखवाहिनीनिवेशः" किरा० ७-२७। 7. (ವಿಸ್ತಾರವಾದ) ಕ್ಷೇತ್ರ, (ವಿಶಾಲವಾದ) ಪ್ರದೇಶ, ಹೊರರೇಖೆ. "नवातपालोहितमाहितं मुहुर्महानिवेशौ परितः पयोधरौ" किरा० ४-८। 8. ಸಣ್ಣ ಪಟ್ಟಣ. "निवासः सैन्यविन्यासे न्यासे द्रङ्गविवाहयोः" हेम०।

**निवेशन ನಿವೇಶನ** (न०) 1. ಇಡುವುದು, ಇರಿಸುವುದು. नि+विश (प्रवेशने)+णिच् भावे "ल्युट्" (३-३-११५)। "रम्येषु हर्म्येषु निवेशनेन सपर्यया कुण्डिननाकनाथः" नैष० १०-२७। 2. ಪ್ರವೇಶ. 3. ಸ್ಥಿತಿ, ಇರುವಿಕೆ. 4. ಗೃಹ, ಮನೆ. नि+विश अधि० "ल्युट्" (३-३-११७)। "स्त्रियोपसंयुतः सोऽथ प्राप्यायोध्यां सुदर्शनः। संमान्य सर्वलोकांश्च ययौ राजा निवेशनम्" देवीभा०। 5. ಗೃಹ ನಿರ್ಮಾಣದ ಸ್ಥಳ, ಮನೆಯನ್ನು ಕಟ್ಟುವ ಜಾಗ. 6. ನಗರ, ಪಟ್ಟಣ. "यो हि वंशं समुत्पाद्य पार्थिवस्य निवेशने। न विघत्ते नृपं तत्र नरकं स हि गच्छति" रामा०। (वि०) 7. ಪ್ರವೇಶಿಸುವ. नि+विश "ल्युः" (३-१-१३४)। "आकाशेऽवस्थितः शब्दः सर्वश्रोत्रनिवेशनः" हरिवं०।

**निवेशनीय ನಿವೇಶನೀಯ** (वि०) 1. ಇಡಲ್ಪಡುವ, ಇರಿಸಲ್ಪಡುವ. नि + विश (प्रवेशने) "अनीयर्" (३-१-९६)। 2. ಇಡಲು ಅರ್ಹವಾದ. 3. ಇಡಬೇಕಾದ. "तव्यः" (३-१-९६)। –वेष्टव्यम् –ವೇಷ್ಟವ್ಯವ್.

**निवेशयत् ನಿವೇಶಯತ್** (वि०) ಇಡುತ್ತಿರುವ, ಇರಿಸುತ್ತಿರುವ. नि + विश (प्रवेशने) + णिच् "शतृ" (३-२-१२४)। "शनैरपूर्णप्रतिकारपेलवे निवेशयन्तं नयने बलोदधौ" किरा० १४-३६। स्त्रियां "ङीप्" (४-१-६)। –यन्ती –ಯಂತೀ.

**निवेशित ನಿವೇಶಿತ** (वि०) 1. ಇಡಲ್ಪಟ್ಟ, ಇರಿಸಲ್ಪಟ್ಟ. नि + विश (प्रवेशने) + णिच् "क्तः" (३-२-१०२)। "यद्यशो मयि निवेशितमेतन्निष्क्रयोऽस्तु कतमस्तु तदीयः" नैष० ५-९०। 2. ಸ್ಥಿರವಾಗಿ ನಿಲ್ಲಿಸಲ್ಪಟ್ಟ, ನೆಲೆಗೊಳಿಸಲ್ಪಟ್ಟ. 3. ಪ್ರವೇಶಮಾಡಿಸಲ್ಪಟ್ಟ.

**निवेश्य ನಿವೇಶ್ಯ** (वि०) 1. ಇಡಲ್ಪಡುವ, ಇರಿಸಲ್ಪಡುವ. नि+विश (प्रवेशने) "ण्यत्" (३-१-१२४)। 2. ಇಡಲು ಅರ್ಹವಾದ. "तदियं पूः प्रकाशार्थं निवेश्या मयि सुव्रत" हरिवं०। 3. ವಿವಾಹಮಾಡಿಕೊಳ್ಳಲು ಅರ್ಹವಾದ. "भवान्निवेश्यः प्रथमं ततोऽयं भीमो महाबाहुरचिन्त्यकर्मा" भा० आदि० २०६-८। 4. ಕುಳ್ಳಿರಿಸಲ್ಪಡುವ. 5. ಕುಳ್ಳಿರಿಸಲು ಅರ್ಹವಾದ. 6. ಶೋಧಿಸಲ್ಪಡುವ. 7. ಶೋಧಿಸಬೇಕಾದ. "अवश्यं राजपिण्डस्तैर्निवेश्य इति मे मतिः" भा० वन० ३६-१६।

**निश् ನಿಶ್** (स्त्री०) 1. ರಾತ್ರಿ. नितरां श्यति तनूकरोति व्यापारान्—नि+शो (तनूकरणे) "कः" (३-१-१३६)। पृषो०। "सा ह्रिया निशि पुनर्दिनोदयं वाञ्छति स्म पतिकेलिलज्जिता" नैष० १८-५५। 2. ಅರಿಶಿನ.

**निशठ ನಿಶಠ** (पुं०) ಬಲರಾಮನ ಒಬ್ಬ ಪುತ್ರ, ರೇವತಿಯ ಮಗ. "बलदेवोऽपि रेवत्यां निशठोल्मुकौ पुत्रावजनयत्" विष्णुपु०।

**निशमन ನಿಶಮನ** (न०) 1. ನೋಟ, ನೋಡುವುದು. नि + शम (आलोचने) + णिच् "ल्युट्" (३-३-११५)। 2. ಶ್ರವಣ, ಕೇಳುವುದು. "निशमनमुक्तं दृष्टौ श्रुतौ" मेदि०।

**निशमयत् ನಿಶಮಯತ್** (वि०) 1. ನೋಡುತ್ತಿರುವ. नि + शम (आलोचने) + णिच् "शतृ" (३-२-१२४)।

2. ಶ್ರವಣಮಾಡುತ್ತಿರುವ, ಕೇಳುತ್ತಿರುವ. "सततं निशमयन्त उत्सुका यें: प्रयान्ति मुदमस्य सूरयः" किरा० १३-४७।

**निशमित** ನಿಶಮಿತ (वि०) 1. ಶ್ರುತವಾದ, ಕೇಳಲ್ಪಟ್ಟ. नि + शम (आलोचने) + णिच् "क्तः" (३-२-१०२)। "कथं सविनयनिशमितगृष्टिवचनो विसर्जिताशेषसदृशदारक इतोऽभिमुखमपसरित एव स वत्सः" उ० रा० ४। 2. ನೋಡಲ್ಪಟ್ಟ.

**निशा** ನಿಶಾ (स्त्री०) 1. ರಾತ್ರಿ. नितरां श्यति तनूकरोति व्यापारान्---नि+शो (तनूकरणे) "कः" (३-१-१३६)। "विहाय सर्वान् वृणुते स्म किं न सा निशापि शीतांशुमनेन हेतुना" नैष० ९-५८। 2. ಮರದರಿಶಿನ. 3. ಅರಿಶಿನ. "निशा दारुहरिद्रायां स्यात् त्रियामाहरिद्रयोः" मेदि०।

**निशाकर** ನಿಶಾಕರ (पुं०) 1. ಚಂದ್ರ. निशां करोति—डु कृञ् (करणे) "टः" (३-२-२१)। "घनसंवृतयाम्बुदागमे कुमुदेनेव निशाकरत्विषा" नैष० २-४६। 2. ಮಹಾದೇವ, ಪರಶಿವ. निशाकरः (शिरसि) अस्ति—"अच्" (५-२-१२७)। "इतिहासः सकल्पश्च गौतमोऽथ निशाकरः" भा० अनु० ४८-७८। 3. ಕುಕ್ಕುಟ, ಕೋಳಿ. 4. ಕರ್ಪೂರ.

**निशाख्या** ನಿಶಾಖ್ಯಾ (स्त्री०) ಹರಿದ್ರೆ, ಅರಿಶಿನ. निशाया आख्याऽस्याः।

**निशाचर** ನಿಶಾಚರ (पुं०) 1. ರಾಕ್ಷಸ. निशायां चरति—चर (गतौ) "टः" (३-२-१६)। "अचिराद्यज्वभिर्भागं कल्पितं विधिवत्पुनः। मायाविभिरनालीढमादास्यध्वे निशाचरैः" रघु० १०-४५। 2. ಜಂಬುಕ, ನರಿ. 3. ಘೂಕ, ಗೂಬೆ. 4. ಸರ್ಪ. स्त्रियां जातित्वात् "ङीष्" (४-१-६३)। **-चरी -ಚರೀ.** ರಾಕ್ಷಸಿ. "राममन्मथशरेण ताडिता दुःसहेन हृदये निशाचरी" रघु० ११-२०। (वि०) 5. ರಾತ್ರಿಯಲ್ಲಿ ಸಂಚರಿಸುವ. "मन्ये स एव मदनस्य निशाचरस्य" याद० १९-२१। स्त्रियां टित्वात् "ङीप्" (४-१-१५)। **-चरी- ಚರೀ.** 6. ವ್ಯಭಿಚಾರಿಣಿ, ಸ್ವೈರಿಣಿ.

**निशाचरनाथ** ನಿಶಾಚರನಾಥ, **-पति -ಪತಿ** (पुं०) 1. ರಾಕ್ಷಸರ ದೊರೆ, ರಾವಣ. निशाचराणां नाथः पतिर्वा। 2. ಪ್ರಮಥಗಣಗಳ ಒಡೆಯನಾದ ಪರಮೇಶ್ವರ. निशाचराणां प्रमथानां नाथः पतिर्वा। "ततो हरो जटी स्थाणुर्निशाचरपतिः शिवः" भा० द्रोण०।

**निशाजल** ನಿಶಾಜಲ (न०) ಹಿಮ, ಮಂಜು.

**निशाट** ನಿಶಾಟ (पुं०) 1. ಘೂಕ, ಗೂಬೆ. निशायामटति—अट (गतौ) "अच्" (३-१-१३४)। 2. ರಾಕ್ಷಸ. "सगौरवं दत्तपथो निशाटैरैक्षिष्ट शैलाग्रमिवेन्द्रशत्रुम्" भट्टि० १२-८। (वि०) 3. ರಾತ್ರಿಯಲ್ಲಿ ಸಂಚರಿಸುವ.

**निशाटन** ನಿಶಾಟನ (पुं०) 1. ಘೂಕ, ಗೂಬೆ, निशायामटति—अट (गतौ) "ल्युः" (३-१-१३४)। (वि०) 2. ರಾತ್ರಿಯಲ್ಲಿ ಸಂಚರಿಸುವ.

**निशात** ನಿಶಾತ (वि०) ಸಾಣೆಹಿಡಿದು ಹರಿತವಾಗಿ ಮಾಡಲ್ಪಟ್ಟ. नि + शो (तनूकरणे) "क्तः" (३-२-१०२)। इत्वाभावे रूपम्। "निशातरौद्रेषु विकासतां गतैः प्रदीपयद्भिः ककुभामिवान्तरम्" किरा० १४-३०।

**निशात्यय** ನಿಶಾತ್ಯಯ (पुं०) 1. ರಾತ್ರಿಯ ಕೊನೆಯ ಕಾಲ. निशाया अत्ययः। "प्रार्थयन्त शयनोत्थितं प्रियास्तं निशात्ययविसर्गचुम्बनम्" रघु० १९-२९। 2. ಪ್ರಾತಃಕಾಲ.

**निशादि** ನಿಶಾದಿ (पुं०) ಸಾಯಂಸಂಧ್ಯಾಕಾಲ. निशाया आदिः।

**निशान** ನಿಶಾನ (न०) ಸಾಣೆಹಿಡಿದು ಹರಿತವಾಗಿ ಮಾಡುವುದು. नि+शो (तनूकरणे) भावे "ल्युट्" (३-३-११५)। "तेषां निशानार्थं श्लक्ष्णशिला माषवर्णा धारासंस्थापनार्थं शाल्मलीफलकमिति" सुश्रुत० सूत्र० ९-१३।

**निशानाथ** ನಿಶಾನಾಥ (पुं०) 1. ಚಂದ್ರ. निशाया नाथः। "अष्टमस्थे निशानाथे कण्टकैः पापवर्जितैः। प्रवासी सुखमायाति सौम्यैर्लभिसमन्वितः"। 2. ಕರ್ಪೂರ.

**निशान्त** ನಿಶಾಂತ (न०) 1. ಗೃಹ, ಮನೆ. नितरां शम्यते विश्रम्यतेऽत्र—नि+शमु (उपशमे) "क्तः" (३-४-७६)। "तस्याः स राजोपपदं निशान्तं कामीव कान्ताहृदयं प्रविश्य" रघु० १६-४०। 2. ಉಷಃಕಾಲ, ಪ್ರಾತಃಕಾಲ. "वसनमपि निशान्ते नेष्यते तत्प्रदातुं रथचरणविशालश्रोणिलोलेक्षणेन" माघ० ११-२३। (वि०) 3. ಬಹಳ ಶಾಂತನಾದ. नितान्तं शान्तः। "निशान्तं त्रिषु शान्ते स्यात् क्लीबं तु भवनोषसोः" मेदि०।

**निशान्ध** ನಿಶಾಂಧ (वि०) 1. ಇರುಳುಕುರುಡ, ರಾತ್ರಿ ಕಾಲದಲ್ಲಿ ಕಣ್ಣು ಕಾಣಿಸದವನು. निशायामन्धः। ಸಿಂಹ ರಾಶಿಯಲ್ಲಿ ಸೂರ್ಯನಿರುವಾಗ ಸಿಂಹಲಗ್ನದಲ್ಲಿ ಜನಿಸಿದವನು ನಿಶಾಂಧನಾಗುವನು. (स्त्री०) **-न्धा -ನ್ಧಾ.** 2. ಮುಳ್ಳುಗಸೆ ಗಿಡ.

**निशापति ನಿಶಾಪತಿ** (पुं०) 1. ಚಂದ್ರ. निशायाः पतिः। "प्रतिमासमसौ निशापतिः खग संगच्छति तद्दिनाधिपम्" नैष० २-५८। 2. ಕರ್ಪೂರ.

**निशापुत्र ನಿಶಾಪುತ್ರ** (पुं०) ಅನ್ತರಿಕ್ಷದಲ್ಲಿ ಸಂಚರಿಸುವ ನಕ್ಷತ್ರ ಮೊದಲಾದುವು.

**निशापुष्प ನಿಶಾಪುಷ್ಪ** (नं०) ರಾತ್ರಿಯಲ್ಲಿ ಅರಳುವ ಬಿಳಿ ನೈದಿಲೆ. निशायां पुष्पति — पुष्प (विकसने) "अच्" (३-१-१३४)।

**निशाबल ನಿಶಾಬಲ** (पुं०) ರಾತ್ರಿಕಾಲದಲ್ಲಿ ಬಲವುಳ್ಳ ಮೇಷಾದಿ ರಾಶಿಗಳು. ಮೇಷ ವೃಷಭ ಮಿಥುನ ಕರ್ಕಾಟಕ ಧನುಸ್ಸು ಮತ್ತು ಮಕರ ರಾಶಿಗಳು ರಾತ್ರಿಯಲ್ಲಿ ಬಲವುಳ್ಳವು.

**निशामणि ನಿಶಾಮಣಿ** (पुं०) ಚಂದ್ರ. निशायां मणिरिव।

**निशामन ನಿಶಾಮನ** (नं०) 1. ದರ್ಶನ, ನೋಟ. नि+शम (आलोचने)+णिच् "ल्युट्" (३-३-११५)। 2. ಆಲೋಚಿಸುವುದು. 3. ಶ್ರವಣ, ಕೇಳುವುದು. "निशामनं दर्शने स्यादालोचने च न द्वयोः" मेदि०।

**निशामयत् ನಿಶಾಮಯತ್** (वि०) ನೋಡುತ್ತಿರುವ. नि+शम (आलोचने)+णिच् "शतृ" (३-२-१२४)। स्त्रियां "ङीप्" (४-१-६)। –यन्ती –ಯನ್ತೀ. "निर्व्याजसङ्गेन निशामयन्ती" याद० १३-५८।

**निशामुख ನಿಶಾಮುಖ** (नं०) ರಾತ್ರಿಯ ಪ್ರಾರಂಭಕಾಲ, ಸಾಯಂಕಾಲ. निशाया मुखम्।

**निशामृग ನಿಶಾಮೃಗ** (पुं०) ಜಂಬುಕ, ನರಿ. निशाचरो मृगः। स्त्रियां जाति० "ङीष्" (४-१-६३)। –मृगी –ಮೃಗೀ.

**निशारण ನಿಶಾರಣ** (नं०) ಹಿಂಸಿಸುವುದು, ಕೊಲ್ಲುವುದು. नि + शृ (हिंसायाम्) + णिच् "ल्युट्" (३-३-११५)।

**निशारत्न ನಿಶಾರತ್ನ** (नं०) ಚಂದ್ರ. निशायां रत्नमिव।

**निशावसान ನಿಶಾವಸಾನ** (नं०) ರಾತ್ರಿಯ ಕೊನೆಯ ಕಾಲ. निशाया अवसानम्। "निशावसाने श्रुतताम्रचूडवाग्यथा रथाङ्गस्तपनं धृतादरः" नैष० १५-११।

**निशाविहार ನಿಶಾವಿಹಾರ** (पुं०) ರಾಕ್ಷಸ. निशायां विहारोऽस्य। "इत्थं प्रवादं युधि संप्रहारं प्रचक्रमे रामनिशाविहारी" भट्टि० २-३६।

**निशावेदिन् ನಿಶಾವೇದಿನ್** (पुं०) ಕುಕ್ಕುಟ, ಕೋಳಿ. निशां तन्मानं वेदयति — नि+ विद (ज्ञाने) + णिच् "णिनिः" (३-१-१३४)।

**निशाह्वा ನಿಶಾಹ್ವಾ** (स्त्री०) ಅರಿಶಿನ. निशाया आह्वा यस्याः।

**निशित ನಿಶಿತ** (वि०) 1. ಸಾಣೆಕಲ್ಲಿನಲ್ಲಿ ಉಜ್ಜಲ್ಪಟ್ಟ, ಹರಿತವಾದ. नि + शो (तनूकरणे) "क्तः" (३-२-१०२)। "निशितासिरतोऽभीको न्येजतेऽमरणा रुचा" किरा० १५-२२। 2. ತೀಕ್ಷ್ಣವಾದ, ಚೂಪಾದ. "प्रविश्य हि घ्नन्ति शठास्तथाविधानसंवृताङ्गान्निशिता इवेषवः" किरा० १-३०। (नं०) 3. ಲೋಹ, ಕಬ್ಬಿಣ.

**निशीथ ನಿಶೀಥ** (पुं०) 1. ಅರ್ಧರಾತ್ರಿ. निशेरतेऽत्र — नि + शीङ् (स्वप्ने) "थक्" (उ० २-९)। "अहो निशीथनिःसञ्चाररमणीयता राजमार्गस्य" मालती० ७। 2. ರಾತ್ರಿ. "निशीथदीपाः सहसा हतत्विषो बभूवुरालेख्यसमर्पिता इव" रघु० ३-१५।

**निशीथिनी ನಿಶೀಥಿನೀ** (स्त्री०) ರಾತ್ರಿ. निशीथोऽस्त्यस्याम् "इनिः" (५-२-११५)। "यस्य कीर्तिरवदायति स्म सा कार्तिकीतिथिनिशीथिनीस्वसा" नैष० १८-२२।

**निशीथिनीनाथ ನಿಶೀಥಿನೀನಾಥ** (पुं०) 1. ಚಂದ್ರ. निशीथिन्या नाथः। 2. ಕರ್ಪೂರ.

**निशुम्भ ನಿಶುಂಭ** (पुं०) 1. ಒಬ್ಬ ಅಸುರ, ಕಶ್ಯಪನಿಗೆ ಧನುವಿನಲ್ಲಿ ಜನಿಸಿದ ಒಬ್ಬ ಮಗ. ಶುಂಭನೆಂಬುವವನು ಇವನ ಅಣ್ಣ. [ಶುಂಭ ನಿಶುಂಭರಿಬ್ಬರೂ ಬ್ರಹ್ಮನಿಂದ, ಅಯೋನಿಜೆಯಾದ ಕನ್ಯೆಯಲ್ಲದೆ ಮತ್ತಾರಿಂದಲೂ ತಮಗೆ ಮರಣ ಕೂಡದೆಂಬ ವರವನ್ನು ಪಡೆದು ಲೋಕವನ್ನು ಪೀಡಿಸುತ್ತಿದ್ದರು. ದೇವತೆಗಳ ಪ್ರಾರ್ಥನೆಯಂತೆ ಆದಿಶಕ್ತಿಯ ದೇಹದಿಂದ ಹೊರಕ್ಕೆ ಬಂದ ಕೌಶಿಕಿಯೆಂಬ ಕನ್ಯೆಯೊಡನೆ ಇವರು ಯುದ್ಧಮಾಡಿ ಅವಳಿಂದ ಹತರಾದರು.] देवीभा०। 2. ವಧೆ, ಕೊಲ್ಲುವುದು. 3. ಹಿಂಸಿಸುವುದು, ಪೀಡಿಸುವುದು. नि + शुम्भ (शोभार्थे) "घञ्" (३-३-१८)। 4. ಮುರಿಯುವುದು, ಬಗ್ಗಿಸುವುದು. "प्रागप्राप्तनिशुम्भशाम्भवधनुर्द्वेधाक्रियाविर्भवत्" म० वी० २-३३।

**निशुम्भन ನಿಶುಂಭನ** (नं०) ವಧೆ, ಕೊಲ್ಲುವುದು. नि + शुम्भ (शोभार्थे) भावे "ल्युट्" (३-३-११५)।

**निश्चप्रच ನಿಶ್ಚಪ್ರಚ** (वि०) ನಿಶ್ಚಯಿಸಲ್ಪಟ್ಟ ಮತ್ತು ಶೇಖರಿಸಲ್ಪಟ್ಟ, –ವೃದ್ಧಿಪಡಿಸಲ್ಪಟ್ಟ. निश्चितं च प्रचितं च –निश्चितशब्दस्य निश्चादेशः प्रचितशब्दस्य प्रचादेशः (२-१-७२)।

**निश्चय ನಿಶ್ಚಯ** (पुं०) 1. ನಿರ್ಣಯ, ನಿಷ್ಕರ್ಷೆ, ಗೊತ್ತುವಳಿ. निस्+चिञ् (चयने) "अप्" (३-३-५८)। "क ईप्सितार्थस्थिरनिश्चयं मनः पयश्च निम्नाभिमुखं प्रतीपयेत्" कुमा० ५-५। 2. ತೀರ್ಮಾನ, ಇತ್ಯರ್ಥ. "व्यघात्प्रियप्राप्तिविघातनिश्चयात्" नैष० ९-८७। 3. ಸಂಶಯ ನಿವಾರಣೆ, ಸಂಶಯಪರಿಚ್ಛೇದ. 4. ಅರ್ಥಾಲಂಕಾರದ ಒಂದು ಭೇದ. ವರ್ಣನೀಯವಸ್ತುವಿನಲ್ಲಿ ಉಪಮಾನವಸ್ತುವಿನ ನಿಷೇಧಪೂರ್ವಕ ಉಪಮೇಯ ಸ್ಥಾಪನೆಯು **ನಿಶ್ಚಯಾಲಂಕಾರ**. "अन्यन्निषिध्य प्रकृतस्थापनं निश्चयः पुनः" सा० द० १०-३९। "वदनमिदं न सरोजं नयने नेन्दीवरे एते। इह सविधे मुग्धदृशो भ्रमर मुदा किं परिभ्रमसि" ಇಲ್ಲಿ ಸರೋಜವನ್ನೂ ಇಂದೀವರವನ್ನೂ ನಿಷೇಧಿಸಿ ವದನ ಮತ್ತು ನಯನ ರೂಪವಾದ ಉಪಮೇಯಗಳ ಸ್ಥಾಪನೆಯಿರುವುದರಿಂದ ನಿಶ್ಚಯಾಲಂಕಾರ.

**निश्चर ನಿಶ್ಚರ** (पुं०) ಹನ್ನೊಂದನೆಯ ಮನ್ವಂತರದ ಸಪ್ತರ್ಷಿಗಳಲ್ಲಿ ಒಬ್ಬ ಋಷಿ. "अङ्गिराश्चोदधिष्णश्च पौलस्त्यो निश्चरस्तथा। पुलहश्चाग्नितेजाश्च भाव्याः सप्त महर्षयः" हरिवं०।

**निश्चल ನಿಶ್ಚಲ** (वि०) 1. ಚಲಿಸದಿರುವ, ಒಂದೇ ಕಡೆ ಸ್ಥಿರವಾಗಿರುವ. निस् + चल (कम्पने) "अच्" (३-१-१३४)। 2. ಚಲನೆಯಿಲ್ಲದ, ದೃಢವಾದ, ವಿಕ್ಷೇಪ ಹೊಂದದಿರುವ. "श्रुतिविप्रतिपन्ना ते यदा स्थास्यति निश्चला। समाधावचला बुद्धिस्तदा योगमवाप्स्यसि" गीता २-५३। 3. ಸಂಚರಿಸದೆ ನಿಂತಿರುವ, ಅಲ್ಲಾಡದಿರುವ. "उन्नमितनिश्चलमुखावयवस्वच्छन्दविलसित•• ••" मालती० ९। (स्त्री०) –ला –ಲಾ. 4. ಭೂಮಿ.

**निश्चायक ನಿಶ್ಚಾಯಕ** (वि०) ನಿರ್ಣಯಮಾಡುವ ತೀರ್ಮಾನ ಕೊಡುವ, ಇತ್ಯರ್ಥಪಡಿಸುವ. निस् + चिञ् (चयने) "ण्वुल्" (३-१-१३३)।

**निश्चारक ನಿಶ್ಚಾರಕ** (पुं०) 1. ವಾಯು, ಗಾಳಿ. निस्+चर (गतौ) "ण्वुल्" (३-१-१३३)। 2. ಮಲವಿಸರ್ಜನೆ. (वि०) 3. ಇಷ್ಟಬಂದಂತೆ ನಡೆಯುವವನು, ಸ್ವಚ್ಛಂದ. "निश्चारकः पुरीषस्य क्षये स्वैरे समीरणे" मेदि०। 4. ಚಾರನಿಲ್ಲದ, ದೂತನಿಲ್ಲದ. 5. ಸಂಚಾರವಿಲ್ಲದ. निर्गतः चारो यस्मात् "कप्" (५-४-१५४)।

**निश्चित ನಿಶ್ಚಿತ** (वि०) 1. ನಿರ್ಧರಿಸಲ್ಪಟ್ಟ, ನಿಶ್ಚಯಿಸಲ್ಪಟ್ಟ. निस् + चिञ् (चयने) "क्तः" (३-२-१०२)। "इति निश्चितप्रियतमागतयः सितदीधितावुदयवत्यबलाः" माघ० ९-४३। 2. ಇತ್ಯರ್ಥಮಾಡಿದ, ತೀರ್ಮಾನಮಾಡಿದ. "अरावणमरामं वा जगदद्येति निश्चितः" रघु० १२-८३। 3. ನಿಷ್ಕರ್ಷಿಸಲ್ಪಟ್ಟ. "यातुं निश्चितचेतसि प्रियतमे सर्वे समं प्रस्थिताः" अमरु० ३५। (न०) 4. ನಿಶ್ಚಯ, ಇತ್ಯರ್ಥ, ತೀರ್ಮಾನ. (अव्य०) 5. ನಿಶ್ಚಯವಾಗಿ, ಸಂದೇಹವಿಲ್ಲದೆ. "मरुत्वतैव प्रहितोऽसि निश्चितम्" नैष० १-२३।

**निश्चिति ನಿಶ್ಚಿತಿ** (स्त्री०) 1. ನಿಶ್ಚಯ, ನಿರ್ಣಯ, ನಿಷ್ಕರ್ಷೆ. निस्+चिञ् (चयने) "क्तिन्" (३-३-९४)। 2. ತೀರ್ಮಾನ, ಇತ್ಯರ್ಥ.

**निश्चिन्त ನಿಶ್ಚಿಂತ** (वि०) ಚಿಂತೆಯಿಲ್ಲದ, ಯೋಚನೆಯಿಲ್ಲದ. निर्गता चिन्ता यस्मात्। "निश्चिन्तो धीरललितः कलासक्तः सुखी मृदुः" दशरू०। "स्वं कर्म कारयन्नास्ते निश्चिन्तो या झषध्वजः" भट्टि० ८-४८।

**निश्चेतन ನಿಶ್ಚೇತನ** (वि०) ಪ್ರಜ್ಞೆಯಿಲ್ಲದ, ಮೈಮೇಲೆ ಎಚ್ಚರವಿಲ್ಲದ. "कथमाविर्भूतमत्परिष्वङ्गोत्कण्ठ एव निश्चेतनः संवृत्तः" मालती० ९।

**निश्चेष्ट ನಿಶ್ಚೇಷ್ಟ** (वि०) 1. ಚಲನೆಯಿಲ್ಲದ, ಸಂಚರಿಸದಿರುವ. 2. ಕೆಲಸವಿಲ್ಲದ, ಶರೀರವ್ಯಾಪಾರವಿಲ್ಲದ. निर्गता चेष्टा व्यापारः यस्मात्। (अव्य०) 3. ಚಲನೆಯಿಲ್ಲದೆ. 4. ಶಾರೀರ ವ್ಯಾಪಾರವಿಲ್ಲದೆ. "द्विगुणबाहुदण्डावेष्टननिश्चेष्टनियमिताम्" मालती० ७।

**निश्च्यवन ನಿಶ್ಚ್ಯವನ** (पुं०) 1. ಅಗ್ನಿ. 2. ವೈವಸ್ವತ ಮನ್ವಂತರದ ಸಪ್ತರ್ಷಿಗಳಲ್ಲಿ ಒಬ್ಬ ಋಷಿ. (वि०) 3. ಚ್ಯುತಿಯಿಲ್ಲದ, ನಾಶವಿಲ್ಲದ. निर्गतं च्यवनं च्युतिर्यस्य।

**निश्च्योतत् ನಿಶ್ಚ್ಯೋತತ್** (वि०) ಸ್ರವಿಸುತ್ತಿರುವ, ಸೋರುತ್ತಿರುವ. निस् + श्च्युतिर् (क्षरणे) "शतृ" (३-२-१२४)। स्त्रियां "ङीप्" (४-१-६)। **–श्च्योतन्ती –ಶ್ಚ್ಯೋತಂತೀ.** "निश्च्योतन्ती नागराजस्य जज्ञे दानस्याहो लोहितस्येव धारा" माघ० १८-४२।

**निश्रेणि ನಿಶ್ರೇಣಿ** (स्त्री०) ನಿಚ್ಚಣಿಗೆ, ಏಣಿ. नियता श्रेणिरत्र। "चक्रे त्रिदिवनिश्रेणिः सरयूरनुयायिनाम्" रघु० १५-१००। "नियता स्वर्गसौधस्य निश्रेणिरिव शाश्वती" याद० २२-१९।

**निश्श्रेयस ನಿಶ್ಶ್ರೇಯಸ** (न०) ಮುಕ್ತಿ, ಮೋಕ್ಷ. निश्चितं श्रेयः निश्श्रेयसम्। "अच्" निपा० (५-४-७७)। "निश्श्रेयसप्रतिपदेन निजेन धाम्ना विश्वं समाधिरिव दर्शयते विवस्वान्" याद० १९-५१।

**निषक्त ನಿಷಕ್ತ** (ವಿಂ) 1. ನಿತ್ಯಸಂಬಂಧ ಹೊಂದಿರುವ. नि + षञ्ज (सङ्गे) "क्तः" (३-४-७२)। "भद्रा ह्येषां वाचि लक्ष्मीर्निषक्ता नैते वाचं विप्लुतार्थां वदन्ति" उ० रा० ४-१८। 2. ಚೆನ್ನಾಗಿ ಇಡಲ್ಪಟ್ಟ. "नितम्बिनी-मिच्छसि मुक्तलज्जां कण्ठे स्वयंग्राहनिषक्तबाहुम्" कुमा० ३-७। 3. ಒಂದರೊಳಗೆ ಸೇರಿಕೊಂಡಿರುವ, ಪ್ರತಿಬಿಂಬಿಸಿರುವ. "आत्मानमासन्नगणोपनीते खड्गे निषक्तप्रतिमं ददर्श" कुमा० ७-३६।

**निषङ्ग ನಿಷಙ್ಗ** (ಪುಂ) 1. ಬತ್ತಳಿಕೆ, ಬಾಣಗಳನ್ನಿಡುವ ಕೋಶ, ಮೂಡಿಗೆ. नितरां सजन्ति शरा अत्र — नि + षञ्ज (सङ्गे) अधि० "घञ्" (३-३-१२१)। "अग्रहीत्तु सशरं धनुरुज्झामास नूज्झितनिषङ्गमनङ्गः" माघ० १०-३४। 2. ನಿತ್ಯಸಂಬಂಧ, ಯಾವಾಗಲೂ ಸಂಬಂಧ ಹೊಂದಿರುವಿಕೆ. नि + षञ्ज भावे "घञ्" (३-३-१८)। 3. ಖಡ್ಗ, ಕತ್ತಿ. "निषङ्गस्तूणखड्गयोः" हेम०।

**निषङ्गिन् ನಿಷಂಗಿನ್** (ವಿಂ) 1. ಸೇರಿಕೊಂಡಿರುವ, ಅಂಟಿಕೊಂಡಿರುವ. नितान्तं सजति—नि+षञ्ज (सङ्गे) "णिनिः" (३-१-१३४)। "संसर्पिभिः पयसि गैरिक-रेणुरागैरम्भोजगर्भरजसाऽङ्गनिषङ्गिणा च" माघ० ५-३९। 2. ಧನುಸ್ಸನ್ನು ಹಿಡಿದಿರುವ. निषङ्गोऽस्यास्ति "इनिः" (५-२-११५)। 3. ಬತ್ತಳಿಕೆಯನ್ನು ಹೊಂದಿರುವ. "रथी निषङ्गी कवची धनुष्मान् दृप्तः स राजन्यकमेकवीरः" रघु० ७-५६। 4. ಖಡ್ಗ ಧರಿಸಿರುವ, ಕತ್ತಿ ಹಿಡಿದಿರುವ.

**निषण्ण ನಿಷಣ್ಣ** (ವಿಂ) 1. ಇರುವ, ಕುಳಿತಿರುವ. नि + षद्लृ (विशरणगत्यवसादनेषु) "क्तः" (३-४-७२)। "ददृशुरिव सुराङ्गना निषण्णं सशरमनङ्गमशोकपल्लवेषु" किरा० १०-३२। 2. ಸೇರಿಕೊಂಡಿರುವ, ಒಟ್ಟಿಗೆ ಕೂಡಿಕೊಂಡಿರುವ. "भृशमतिशयस्वेदसंपदेव स्तनयुगलैरित-रेतरं निषण्णैः" माघ० ७-६५। 3. ಇಡಲ್ಪಟ್ಟ. "रहस्त्व-दुत्सङ्गनिषण्णमूर्धा" रघु० १३-३५।

**निषद्या ನಿಷದ್ಯಾ** (स्त्री०) 1. ಅಂಗಡಿ. निषीदन्त्यस्यां जनाः — नि + षद्लृ (विशरणगत्यवसादनेषु) "क्यप्" (३-३-९९)। "केचिद्गुर्वीमित्य संयन्निषद्यां क्षीणन्ति स्म प्राणमूल्यैर्यशांसि" माघ० १८-१५। 2. ಮಾರುಕಟ್ಟೆ, ಧಾನ್ಯ ವಸ್ತ್ರ ಮೊದಲಾದುವುಗಳನ್ನು ಮಾರುವ ಪೇಟೆ. 3. ಸಣ್ಣ ಮಂಚ. "निषद्या खट्टिकासन्दी" त्रिकाण्ड०।

**निषद्वर ನಿಷದ್ವರ** (ಪುಂ) ಪಂಕ, ಕರ್ದಮ, ಕೆಸರು. निषीदन्ति निषण्णा भवन्ति जना अत्र—नि+षद्लृ (विशरण-गत्यवसादनेषु) "ष्वरच्" (उ० २-१२३)। **(स्त्री०) -वरी - ವರೀ.** ರಾತ್ರಿ.

**निषध ನಿಷಧ** (ಪುಂ) 1. ಒಂದು ಪರ್ವತ. निषीदति — नि + षद्लृ (विशरणादौ) "अच्" (३-१-१३४)। पृषो०। ಈ ಪರ್ವತವು ಇಲಾವೃತಖಂಡಕ್ಕೆ ದಕ್ಷಿಣದಲ್ಲಿರುವುದು. ಹತ್ತು ಸಹಸ್ರ ಯೋಜನ ಎತ್ತರವುಳ್ಳದ್ದು ಮತ್ತು ಎರಡು ಸಹಸ್ರ ಯೋಜನ ವಿಸ್ತಾರವುಳ್ಳದ್ದು. "एवं दक्षिणेनेलावृतं निषधो हेमकूटो हिमालय इति प्रागायता यथा नीलादयोऽयुतयोजनोत्सेधा हरिवर्षकिम्पुरुष-भारतानां यथासंख्यम्" भाग० ५-१६-९)। 2. ಸೂರ್ಯವಂಶದ ಒಬ್ಬ ದೊರೆ, ಶ್ರೀರಾಮನ ಪುತ್ರನಾದ ಕುಶನ ಪೌತ್ರ, ಕುಶನ ಮಗನಾದ ಅತಿಥಿರಾಜನ ಮಗ. "स नैष-धस्यार्थपतेः सुतायामुत्पादयामास निषिद्धशत्रुः। अनूनसारं निषधान्नगेन्द्रात् पुत्रं यमाहुर्निषधाख्यमेव" रघु० १८-१। (ಪುಂ ಬ० ವ०) 3. ನಿಷಧದೇಶ. "निषधेषु महीपालो वीरसेन इति श्रुतः" भा० वन० ४९-६०। 4. ನಿಷಧದೇಶದ ದೊರೆಗಳು. (ವಿಂ) 5. ಕಠಿನವಾದ, ಗಟ್ಟಿಯಾದ. "निषधः कठिने देशे तद्राजे पर्वतान्तरे" मेदि०।

**निषधेन्द्र ನಿಷಧೇಂದ್ರ, -ईश्वर - ಈಶ್ವರ** (ಪುಂ) ನಿಷಧದೇಶದ ದೊರೆ, ನಳಚಕ್ರವರ್ತಿ.

**निषाद ನಿಷಾದ** (ಪುಂ) 1. ಬೇಡರವನು, ಮೃಗಗಳ ಬೇಟೆಯಿಂದ ಜೀವಿಸುವವನು. निषीदति पापमस्मिन्—नि+षद्लृ (विशरणगत्यवसादनेषु) "घञ्" (३-३-१२१)। "निषादविद्धाण्डजदर्शनोत्थश्लोकत्वमापद्यत यस्य शोकः" रघु० १४-७०। 2. ಬೆಸ್ತರವನು, ಮತ್ಸ್ಯಗಳನ್ನು ಹಿಡಿದು ಜೀವಿಸುವವನು. 3. ನಿಮ್ನವರ್ಗಕ್ಕೆ ಸೇರಿದವನು, ಮ್ಲೇಚ್ಛ. "दासेरकः सपदि संवलितं निषादैः" माघ० ५-६६। 4. ಬ್ರಾಹ್ಮಣನಿಂದ ಶೂದ್ರಕನ್ಯೆಯಲ್ಲಿ ಹುಟ್ಟಿದ ಒಬ್ಬ ಮಿಶ್ರಜಾತಿಯವನು. ಇವನಿಗೆ ಪಾರಶವನೆಂದೂ ಹೆಸರು. "निषादः शूद्रकन्यायां (ब्राह्मणात्) यः पारशव उच्यते" मनु० १०-८। 5. ಸಪ್ತಸ್ವರಗಳಲ್ಲಿ ಒಂದು ಸ್ವರ, ತಂತಿಯಿಂದಲೂ ಕಂಠದಿಂದಲೂ ಹೊರಡುವ ಸಪ್ತಸ್ವರಗಳಲ್ಲಿ ಒಂದು. निषीदन्ति षड्जादयः स्वरा यत्र। ಇದು ಆನೆಯ ಗರ್ಜನೆಯಂತೆ ಗಂಭೀರವಾಗಿ ಹೊರಡುವ ಒಂದು ಸ್ವರ. "धैवतं हेषते वाजी निषादं बृंहते गजः" अम०। निषीदति मनोऽस्मिन्—नि+षद्लृ (विशरणादौ) "घञ्" (३-३-१२१) इति वा। "नादं निषादमधुरं

ततमुज्जगार" नैष० २१-१२७। **–दी –ದೀ.** स्त्रियां जाति० "ङीष्" (४-१-६३)। "निषादीं दद्दृशुर्दग्धां पञ्चपुत्रामनागसम्" भा० आदि० १६२-९।

**निषादवत् ನಿಷಾದವತ್** (पुं०) 1. ನಿಷಾದಸ್ವರ. निषादोऽस्त्यस्य "मतुप्" (५-२-९४)। "षड्जमध्यमगान्धारौ ऋषभो धैवतस्तथा। पञ्चमश्चापि विज्ञेयस्तथा चापि निषादवान्"। (वि०) 2. ನಿಷಾದಸ್ವರದಿಂದ ಕೂಡಿದ.

**निषादित ನಿಷಾದಿತ** (वि०) ಕುಳ್ಳಿರಿಸಲ್ಪಟ್ಟ, ಕೂಡುವಂತೆ ಮಾಡಲ್ಪಟ್ಟ. नि+षद्लृ (विशरणादौ)+णिच् "क्तः" (३-२-१०२)। "अहो निषादिता गजवधूः" मालती० ६।

**निषादिन् ನಿಷಾದಿನ್** (पुं०) 1. ಹಸ್ತಿಪಕ, ಮಾವಟಿಗ. निषीदत्यवश्यम्—नि+षद्लृ (विशरणादिषु) आवश्यके "णिनिः" (३-३-१७०)। "प्रचोदिताः परिचितयन्तृकर्मभिर्निषादिभिर्विदितयताङ्कुशक्रियैः" माघ० १७-३५। (वि०) 2. ಕುಳಿತಿರುವ. नि + षद्लृ "णिनिः" (३-१-१३४)। "आतपात्ययसंक्षिप्तनीवारासु निषादिभिः" रघु० १-५२। स्त्रियां "ङीप्" (४-१-५)। **–दिनी –ದಿನೀ.** "इक्षुच्छायनिषादिन्यस्तस्य गोप्तुर्गुणोदयम्" रघु० ४-२०।

**निषिक्त ನಿಷಿಕ್ತ** (वि०) 1. ಎರಚಲ್ಪಟ್ಟ, ಚಿಮುಕಿಸಲ್ಪಟ್ಟ, ಸಿಂಪಿಸಲ್ಪಟ್ಟ. नि+षिच (क्षरणे) "क्तः" (३-२-१०२)। 2. ಸುರಿಯಲ್ಪಟ್ಟ, ಎರೆಯಲ್ಪಟ್ಟ. 3. ಇಡಲ್ಪಟ್ಟ. "संयुगे सांयुगीनं तमुद्यतं प्रसहेत कः। अंशादृते निषिक्तस्य नीललोहितरेतसः" कुमा० २-५७।

**निषिञ्चत् ನಿಷಿಂಚತ್** (वि०) 1. ಸುರಿಯುತ್ತಿರುವ, ಸೇಚನೆಮಾಡುತ್ತಿರುವ. नि + षिच (क्षरणे) "शतृ" (३-२-१२४)। "तमङ्कमारोप्य शरीरयोगजैः सुखैर्निषिञ्चन्तमिवामृतं त्वचि" रघु० ३-२६। 2. ತುಂಬುತ್ತಿರುವ, ಪುಷ್ಪವನ್ನಾಗಿ ಮಾಡುತ್ತಿರುವ. "निषिञ्चन्माधवीं लक्ष्मीं लतां कौन्दीं च लासयन्" विक्र० २-४। स्त्रियां "ङीप्" (४-१-६)। **–न्ती –ನ್ತೀ.**

**निषिद्ध ನಿಷಿದ್ಧ** (वि०) 1. ನಿಷೇಧಿಸಲ್ಪಟ್ಟ, ಬೇಡವೆಂದು ತಡೆಯಲ್ಪಟ್ಟ, ಅಡ್ಡಿಮಾಡಲ್ಪಟ್ಟ. नि+षिध (गत्याम्) "क्तः" (३-२-२०२)। "रुषा निषिद्धालिजनां यदैनां छायाद्वितीयां कलयांचकार" नैष० ३-१२। 2. ತಡೆಯಲ್ಪಟ್ಟ, ನಿವಾರಿಸಲ್ಪಟ್ಟ, ತಪ್ಪಿಸಲ್ಪಟ್ಟ. "ग्रामीणैः पुनरध्वगस्य वसतिर्ग्रामे निषिद्धा यथा" अमरु० १३। 3. ತಡೆಯಲ್ಪಟ್ಟ, ಬರದಂತೆ ಮಾಡಲ್ಪಟ್ಟ (ಸೋಲಿಸಲ್ಪಟ್ಟ). "स नैषधस्यार्थपतेः सुतायामुत्पादयामास निषिद्धशत्रुः" रघु० १८-१। 4. ನಿಷೇಧಿಸಲ್ಪಟ್ಟ. ಕೂಡದೆಂದು ಹೇಳಿ ತಡೆಯಲ್ಪಟ್ಟ. "निषिद्धो भाषमाणस्तु सुवर्णं दण्डमर्हति" मनु० ८-३६१।

**निषिध्यमान ನಿಷಿಧ್ಯಮಾನ** (वि०) 1. ತಡೆಯಲ್ಪಡುತ್ತಿರುವ. नि + षिधू (शास्त्रे माङ्गल्ये च) कर्मं० "शानच्" (३-२-१२४)। 2. ನಿಷೇಧಿಸಲ್ಪಡುತ್ತಿರುವ, ಬೇಡವೆಂದು ಹೇಳಲ್ಪಡುತ್ತಿರುವ. 3. ಕೂಡದೆಂದು ಹೇಳಲ್ಪಡುತ್ತಿರುವ. 4. ಅಡ್ಡಿಪಡಿಸಲ್ಪಡುತ್ತಿರುವ, ಅಡಚಣೆಯುಂಟುಮಾಡಲ್ಪಡುತ್ತಿರುವ. 5. ಬರದಂತೆ ಮಾಡಲ್ಪಡುತ್ತಿರುವ, ತಪ್ಪಿಸಲ್ಪಡುತ್ತಿರುವ. "निषिध्यमानाहनि सन्ध्ययापि रात्रिप्रतीहारपदेऽधिकारम्" नैष० २२-६।

**निषीदत् ನಿಷೀದತ್** (वि०) 1. ನಿಂತಿರುವ. नि + षद्लृ (विशरणादौ) "शतृ" (३-२-१२४)। "तस्य भुवि बहुतिथास्तिथयः प्रतिजग्मुरेकचरणं निषीदतः" किरा० १२-२। 2. ಕುಳಿತಿರುವ. स्त्रियां "ङीप्" (४-१-६)। **–न्ती –ನ್ತೀ.**

**निषूदत् ನಿಷೂದತ್** (वि०) 1. ಕೊಲ್ಲುತ್ತಿರುವ. नि+षूद (क्षरणे) "शतृ" (३-२-१२४)। 2. ನಾಶಪಡಿಸುತ್ತಿರುವ. स्त्रियां "ङीप्" (४-१-६)। **–न्ती –ನ್ತೀ.**

**निषूदन ನಿಷೂದನ** (न०) 1. ಕೊಲ್ಲುವುದು. नि + षूद (क्षरणे) भावे "ल्युट्" (३-३-११५)। 2. ನಾಶಪಡಿಸುವುದು. (वि०) 3. ಕೊಲ್ಲುವ. 4. ನಾಶಪಡಿಸುವ.

**निषूदित ನಿಷೂದಿತ** (वि०) 1. ಕೊಲ್ಲಲ್ಪಟ್ಟ. नि + षूद (क्षरणे) "क्तः" (३-२-१०२)। 2. ನಾಶಪಡಿಸಲ್ಪಟ್ಟ.

**निषेक ನಿಷೇಕ** (पुं०) 1. ಚಿಮುಕಿಸುವುದು, ಸಿಂಪಿಸುವುದು, ಎರಚುವುದು. नि + षिच (क्षरणे) "घञ्" (३-३-१८)। 2. ಸೋರುವುದು, ಸ್ರವಿಸುವುದು. "ननु तैलनिषेकबिन्दुना सह दीपार्चिरुपैति मेदिनीम्" रघु० ८-३८। 3. ಗರ್ಭಾಧಾನ, ಗರ್ಭಕೋಶದಲ್ಲಿ ವೀರ್ಯವನ್ನು ಇಡುವುದು. "निषेकादीनि कर्माणि यः करोति यथाविधि। संभावयति चान्नेन स विप्रो गुरुरुच्यते" मनु० २-१४२। 4. ಗರ್ಭ. "प्रजानिषेकं मयि वर्तमानं सूनोरनुध्यायत चेतसेति" रघु० १४-६०। (न०) 5. ವೀರ್ಯ, ರೇತಸ್ಸು. "दूरादावसथान्मूत्रं दूरात्पादावसेचनम्। उच्छिष्टान्ननिषेकं च दूरादेव समाचरेत्" मनु० ४-१५१।

**निषेकादिकृत् ನಿಷೇಕಾದಿಕೃತ್** (ಪುಂ) ನಿಷೇಕಾದಿಕರ್ಮ (ಗರ್ಭಾಧಾನ, ಸೀಮಂತ ಮೊದಲಾದುವು) ಗಳನ್ನು ಮಾಡಿದ ತಂದೆ. निषेकादि गर्भाधानादिकं करोति — डु कृञ् (करणे) "क्विप्" (३-२-७६)। "स्यान्निषेकादिकृद्गुरुः" अम०।

**निषेक्तव्य ನಿಷೇಕ್ತವ್ಯ** (वि०) 1. ಸಿಂಪಿಸಲ್ಪಡುವ, ಚಿಮುಕಿಸಲ್ಪಡುವ. 2. ಚಿಮುಕಿಸಬೇಕಾದ. नि + षिच (क्षरणे) कर्मादौ "तव्यः" (३-१-९६)।

**निषेक्तृ ನಿಷೇಕ್ತೃ** (वि०) 1. ಸಿಂಪಿಸುವ, ಚಿಮುಕಿಸುವ. नि+षिच (क्षरणे) "तृच्" (३-१-१३३)। 2. ಗರ್ಭಾಧಾನ ಮಾಡುವ, ಗರ್ಭಕೋಶದಲ್ಲಿ ವೀರ್ಯವನ್ನು ಇಡುವ. स्त्रियां "ङीप्" (४-१-५)। —क्त्री —ಕ್ತ್ರೀ.

**निषेचन ನಿಷೇಚನ** (न०) 1. ಸಿಂಪಿಸುವುದು, ಸೇಚನೆ ಮಾಡುವುದು, ಚಿಮುಕಿಸುವುದು. नि + षिच (क्षरणे) "ल्युट्" (३-३-११५)। 2. ಎರೆಯುವುದು, ಸುರಿಯುವುದು, ಹೊಯ್ಯುವುದು.

**निषेच्य ನಿಷೇಚ್ಯ** (वि०) 1. ಸೇಚನೆ ಮಾಡಲ್ಪಡುವ, ಸಿಂಪಿಸಲ್ಪಡುವ, ಚಿಮುಕಿಸಲ್ಪಡುವ. नि+षिच (क्षरणे) "ण्यत्" (३-१-१२४)। 2. ಸೇಚನೆಮಾಡಬೇಕಾದ, ಚಿಮುಕಿಸಬೇಕಾದ.

**निषेदिवस् ನಿಷೇದಿವಸ್** (वि०) ಕುಳಿತಿರುವ. नि+षद्लृ (विशरणादौ) "क्वसुः" (३-२-१५८)। "भवतः स्मरतां सदासने जयिनि ब्रह्ममये निषेदुषाम्" किरा० १८-३८। स्त्रियां "ङीप्" (४-१-६)। **निषेदुषीम् ನಿಷೇದುಷೀಮ್.** "स्थितः स्थितामुच्चलितः प्रयातां निषेदुषीमासनबन्धधीरः" रघु० २-६।

**निषेद्धव्य ನಿಷೇದ್ಧವ್ಯ** (वि०) 1. ತಡೆಯಲ್ಪಡುವ, ಬೇಡವೆಂದು ಅಡ್ಡಿಮಾಡಲ್ಪಡುವ. नि+षिधू (शास्त्रे माङ्गल्ये च) "तव्यः" (३-१-९६)। 2. ತಡೆಯಬೇಕಾದ. 3. ಕೂಡದೆಂದು ತಡೆಯಲ್ಪಡುವ. 4. ಕೂಡದೆಂದು ತಡೆಯಬೇಕಾದ. 5. ತಪ್ಪಿಸಲ್ಪಡುವ, ಬರದಂತೆ ಅಡ್ಡಿಮಾಡಲ್ಪಡುವ. 6. ತಪ್ಪಿಸಬೇಕಾದ, ಬರದಂತೆ ಮಾಡಬೇಕಾದ. 7. ನಿವಾರಿಸಲ್ಪಡುವ, ಹಿಂದಕ್ಕೆ ಕಳುಹಿಸಲ್ಪಡುವ. 8. ನಿವಾರಿಸಬೇಕಾದ, ಹಿಂದಕ್ಕೆ ಅಟ್ಟಿ ಕಳುಹಿಸಬೇಕಾದ. इट्पक्षे **निषेधितव्यः ನಿಷೇಧಿತವ್ಯಃ.**

**निषेद्धृ ನಿಷೇದ್ಧೃ** (वि०) 1. ತಡೆಗಟ್ಟುವವನು, ಬರದಂತೆ ಮಾಡುವವನು, ಅಟ್ಟಿ ಹಿಂದಕ್ಕೆ ಓಡಿಸುವವನು. नि + षिधू (शास्त्रे माङ्गल्ये च) "तृच्" (३-१-१३३)। "दूत्याय दैत्यारिपतेः प्रवृत्तो द्विषां निषेद्धा निषधप्रभुस्तम्" नैष० ६-१। 2. ಅಡ್ಡಿಮಾಡುವವನು, ಬೇಡವೆಂದು ಹೇಳುವವನು. 3. ಕೂಡದೆಂದು ತಡೆಯುವವನು. 4. ತಪ್ಪಿಸುವವನು, ನಿವಾರಿಸುವವನು. 5. ಅಡ್ಡಗಟ್ಟುವವನು, ಅಡಚಣೆಯುಂಟುಮಾಡುವವನು.

**निषेध ನಿಷೇಧ** (ಪುಂ) 1. ತಡೆಯುವುದು, ಬೇಡವೆಂದು ಅಡ್ಡಿಮಾಡುವುದು. नि + षिध (गत्याम्) "घञ्" (३-३-१८)। 2. ತಡೆಯುವುದು, ಕೂಡದೆಂದು ಹೇಳುವುದು. 3. ತಡೆಯುವುದು, ತಪ್ಪಿಸುವುದು, ಅಡ್ಡಗಟ್ಟುವುದು. 4. ನಿವಾರಿಸುವುದು, ಹಿಂದಕ್ಕೆ ಅಟ್ಟಿ ಕಳುಹಿಸುವುದು.

**निषेधक ನಿಷೇಧಕ** (वि०) 1. ತಡೆಯುವವನು, ಅಡ್ಡಿಪಡಿಸುವವನು. 2. ನಿವಾರಿಸುವವನು, ಹಿಂದಕ್ಕೆ ಅಟ್ಟುವವನು. 3. ಬೇಡವೆಂದು ತಡೆಯುವವನು. 4. ಕೂಡದೆಂದು ತಡೆಯುವವನು. नि+षिध (गत्याम्) "ण्वुल्" (३-१-१३३)।

**निषेधत् ನಿಷೇಧತ್** (वि०) 1. ತಡೆಯುತ್ತಿರುವ, ಅಡ್ಡಿಯುಂಟುಮಾಡುತ್ತಿರುವ. नि + षिधू (शास्त्रे माङ्गल्ये च) "शतृ" (३-२-१२४)। "निषेधन्निषधान् गन्तुं विघ्नः संजघटे घनः" नैष० १७-१६०। 2. ತಪ್ಪಿಸುತ್ತಿರುವ. 3. ಬೇಡವೆಂದು ತಡೆಯುತ್ತಿರುವ. 4. ಕೂಡದೆಂದು ತಡೆಯುತ್ತಿರುವ. 5. ಬರದಂತೆ ಮಾಡುತ್ತಿರುವ. स्त्रियां "ङीप्" (४-१-६)। —न्ती —ನ್ತೀ.

**निषेधन ನಿಷೇಧನ** (न०) 1. ತಡೆಯುವುದು. 2. ತಪ್ಪಿಸುವುದು. 3. ಬೇಡವೆಂದು ಹೇಳುವುದು. 4. ಕೂಡದೆಂದು ಹೇಳುವುದು. नि+षिध (गत्याम्) "ल्युट्" (३-३-११५)। 5. ನಿವಾರಿಸುವುದು, ಹಿಂದಕ್ಕೆ ಅಟ್ಟುವುದು. 6. ಅಡ್ಡಗಟ್ಟುವುದು, ಅಡಚಣೆಯುಂಟುಮಾಡುವುದು.

**निषेध्य ನಿಷೇಧ್ಯ** (वि०) 1. ನಿಷೇಧಿಸಲ್ಪಡುವ, ತಡೆಯಲ್ಪಡುವ. नि + षिधू (शास्त्रे माङ्गल्ये च) "ण्यत्" (३-१-१२४)। 2. ನಿಷೇಧಿಸಬೇಕಾದ, ತಡೆಯಬೇಕಾದ. 3. ನಿವಾರಿಸಲ್ಪಡುವ, ತಪ್ಪಿಸಲ್ಪಡುವ. 4. ನಿವಾರಿಸಬೇಕಾದ, ತಪ್ಪಿಸಬೇಕಾದ. 5. ಅಡ್ಡಿಮಾಡಲ್ಪಡುವ, ಅಡಚಣೆಯುಂಟುಮಾಡಲ್ಪಡುವ. 6. ಬೇಡವೆಂದು ಹೇಳಲ್ಪಡುವ. 7. ಬೇಡವೆಂದು ಹೇಳಬೇಕಾದ. 8. ಅಟ್ಟಿ ಹಿಂದಕ್ಕೆ ಕಳುಹಿಸಲ್ಪಡುವ. 9. ಅಟ್ಟಿ ಹಿಂದಕ್ಕೆ ಕಳುಹಿಸಬೇಕಾದ.

**निषेवण ನಿಷೇವಣ** (न०) 1. ಸೇವಿಸುವುದು, ಉಪಚರಿಸುವುದು. नि+षेवृ (सेवायाम्) भावे "ल्युट्" (३-३-११५)।

2. ನಡಸುವುದು, ನಿರ್ವಹಿಸುವುದು, ಆಚರಿಸುವುದು. 3. ಉಪಯೋಗಿಸುವುದು. 4. ಗೌರವಿಸುವುದು. 5. ಪೂಜಿಸುವುದು. 6. ಅನುಭವಿಸುವುದು.

**निषेवणीय ನಿಷೇವಣೀಯ** (वि०) 1. ಸೇವಿಸಲ್ಪಡುವ, ಉಪಚರಿಸಲ್ಪಡುವ. 2. ಸೇವಿಸಬೇಕಾದ, ಉಪಚರಿಸಬೇಕಾದ. नि+षेवृ (सेवने) "अनीयर्" (३-१-९६)। 3. ಉಪಯೋಗಿಸಲ್ಪಡುವ. 4. ಉಪಯೋಗಿಸಬೇಕಾದ. 5. ನಿರ್ವಹಿಸಲ್ಪಡುವ. 6. ನಿರ್ವಹಿಸಬೇಕಾದ, ಆಚರಿಸಬೇಕಾದ. 7. ಗೌರವಿಸಲ್ಪಡುವ. 8. ಗೌರವಿಸಬೇಕಾದ. 9. ಪೂಜಿಸಲ್ಪಡುವ. 10. ಪೂಜಿಸಬೇಕಾದ. 11. ಅನುಭವಿಸಲ್ಪಡುವ. 12. ಅನುಭವಿಸಬೇಕಾದ. "अनिमेषनिषेवणीयमक्ष्णोरजहद्यौवनमाविरस्तु चित्ते" गोपालवि०। "तव्य:" (३-१-९६)। **-षेवितव्य: -ಷೇವಿತವ್ಯ:**

**निषेवमाण ನಿಷೇವಮಾಣ** (वि०) 1. ಸೇವಿಸುತ್ತಿರುವ, ಉಪಚರಿಸುತ್ತಿರುವ. नि + षेवृ (सेवने) "शानच्" (३-२-१२४)। 2. ನಡಸುತ್ತಿರುವ, ನಿರ್ವಹಿಸುತ್ತಿರುವ. 3. ಉಪಯೋಗಿಸುತ್ತಿರುವ. 4. ಗೌರವಿಸುತ್ತಿರುವ. 5. ಪೂಜಿಸುತ್ತಿರುವ. 6. ಅನುಭವಿಸುತ್ತಿರುವ.

**निषेवित ನಿಷೇವಿತ** (न०) 1. ಉಪಯೋಗಿಸುವುದು. नि+षेवृ (सेवने) भावे "क्त:" (३-३-११४)। "मन्त्रपूतमनुपप्लवं हविर्यायजूकपरिषन्निषेवितम्" याद० १७-१२६। 2. ಅನುಭವಿಸುವುದು. 3. ಗೌರವಿಸುವುದು. 4. ಪೂಜಿಸುವುದು. 5. ನಿರ್ವಹಿಸುವುದು, ನಡಸುವುದು. 6. ಸೇವಿಸುವುದು, ಉಪಚರಿಸುವುದು. (वि०) 7. ಉಪಯೋಗಿಸಲ್ಪಟ್ಟ. नि + षेवृ कर्म० "क्त:" (३-२-१०१)। "विषतां निषेवितमपक्रियया समुपैति सर्वमिति सत्यमद:" माघ० ९-६८। 8. ನಡಸಲ್ಪಟ್ಟ, ಆಚರಿಸಲ್ಪಟ್ಟ. 9. ಸೇವಿಸಲ್ಪಟ್ಟ. 10. ಅನುಭವಿಸಲ್ಪಟ್ಟ. 11. ಗೌರವಿಸಲ್ಪಟ್ಟ. 12. ಪೂಜಿಸಲ್ಪಟ್ಟ.

**निषेवितृ ನಿಷೇವಿತೃ** (वि०) 1. ಉಪಯೋಗಿಸುವವನು. 2. ಅನುಭವಿಸುವವನು. 3. ಪೂಜಿಸುವವನು. 4. ಗೌರವಿಸುವವನು. 5. ನಡಸುವವನು, ಆಚರಿಸುವವನು. 6. ಉಪಚರಿಸುವವನು. नि + षेवृ (सेवने) "तृच्" (३-१-१३३)। स्त्रियां **-वित्री -ವಿತ್ರೀ.**

**निषेव्य ನಿಷೇವ್ಯ** (वि०) 1. ಅನುಭವಿಸಲ್ಪಡುವ. 2. ಉಪಯೋಗಿಸಲ್ಪಡುವ. 3. ಪೂಜಿಸಲ್ಪಡುವ. 4. ಉಪಚರಿಸಲ್ಪಡುವ. 5. ಆಚರಿಸಲ್ಪಡುವ. 6. ಗೌರವಿಸಲ್ಪಡುವ. नि + षेवृ (सेवने) "ण्यत्" (३-१-१२४)।

**निषेव्यमाण ನಿಷೇವ್ಯಮಾಣ** (वि०) 1. ಉಪಚರಿಸಲ್ಪಡುತ್ತಿರುವ, ಸೇವಿಸಲ್ಪಡುತ್ತಿರುವ. नि + षेवृ (सेवने) कर्म० "शानच्" (३-२-१२४)। "निषेव्यमाणेन शिवैर्मरुद्भिरध्यास्यमाना हरिणा चिराय" माघ० ३-६२। 2. ಅನುಭವಿಸಲ್ಪಡುತ್ತಿರುವ. "प्रेयोभि: सह सरसी निषेव्यमाणा रक्तत्वं व्यधित वधूदृशां सुरा च" माघ० ८-५२। 3. ಗೌರವಿಸಲ್ಪಡುತ್ತಿರುವ. 4. ಪೂಜಿಸಲ್ಪಡುತ್ತಿರುವ. 5. ಆಚರಿಸಲ್ಪಡುತ್ತಿರುವ. 6. ಉಪಯೋಗಿಸಲ್ಪಡುತ್ತಿರುವ.

**निष्क ನಿಷ್ಕ** (पुंन०) 1. ನೂರೆಂಟು ಸುವರ್ಣಗಳ ತೂಕ. (16 ಮಾಷಗಳ ತೂಕ 1 ಸುವರ್ಣ. 108 ಸುವರ್ಣ ತೂಕ ಒಂದು ನಿಷ್ಕ). नि + षद्लृ (विशरणादौ) "कन्" टिलोपश्च (उ० ३-४५)। निश्चयेन कायति—कै (शब्दे) "क:" (३-१-१३६) इति वा। 2. ಒಂದು ಸುವರ್ಣ ನಾಣ್ಯ, ದೀನಾರವೆಂಬ ಒಂದು ನಾಣ್ಯ. 3. ಹದಿನಾರು ಆದ್ಯಮಾಷಗಳ ತೂಕ. (5 ಗುಲಗಂಜಿ ತೂಕ ಒಂದು ಮಾಷ). "निष्कमस्त्री साष्टहेमशतं दीनारकर्षयो:" मेदि०। 4. ಒಂದು ಸುವರ್ಣಾಭರಣ, ಎದೆಯಲ್ಲಿ ಧರಿಸುವ ಒಂದು ಆಭರಣ. "जयाशा यत्र चास्माकं प्रतिघातोत्थितार्चिषा। हरिचक्रेण तेनास्य कण्ठे निष्कमिवापतत्" कुमा० २-४९। 5. ಒಂದು ಪಲ, ನಾಲ್ಕು ಕರ್ಷಗಳ ತೂಕ. (16 ಆದ್ಯಮಾಷಗಳ ತೂಕ 1 ಕರ್ಷ). 6. ಸುವರ್ಣ, ಚಿನ್ನ. "वक्षोऽलंकरणे हेममात्रे हेमपलेऽपि च" मेदि०। "निलिल्ये तस्य दोर्मध्ये निष्काभरणवर्ष्मणा" याद० १६-३३।

**निष्कण्टक ನಿಷ್ಕಂಟಕ** (वि०) 1. ಮುಳ್ಳುಗಳಿಲ್ಲದ. निर्गत: कण्टको यस्मात्। 2. ಉಪದ್ರವವಿಲ್ಲದ, ತೊಂದರೆಯಿಲ್ಲದ. 3. ಶತ್ರುಗಳಿಲ್ಲದ, ಪೀಡಿಸುವವರಿಲ್ಲದ. "राज्यं निष्कण्टकं कृत्वा भोक्ष्यसे मेदिनीं पुन:" भा० विरा० ८-२९।

**निष्कण्ठ ನಿಷ್ಕಂಠ** (पुं०) ವಲಸೆ ಗಿಡ.

**निष्कपट ನಿಷ್ಕಪಟ** (वि०) ಕಪಟವಿಲ್ಲದ, ಮೋಸವಿಲ್ಲದ, ವಂಚನೆಯಿಲ್ಲದ, ಪ್ರಾಮಾಣಿಕವಾದ. निर्गत: कपटो यस्मात्।

**निष्कम्प ನಿಷ್ಕಂಪ** (वि०) 1. ಚಲಿಸದಿರುವ, ಅಲ್ಲಾಡದಿರುವ. निर्गत: कम्पो यस्मात्। "निष्कम्पवृक्षं निभृतद्विरेफं मूकाण्डजं शान्तमृगप्रचारम्" कुमा० ३-४२। 2. ನಡುಕವಿಲ್ಲದ. "निवातनिष्कम्पमिव प्रदीपम्"

कुमा० ३-४८। "निवातनिष्कम्पमिवापगापतिम्" किरा० १४-३७।

**निष्करुण ನಿಷ್ಕರುಣ** (वि०) ದಯೆಯಿಲ್ಲದ, ಕನಿಕರವಿಲ್ಲದ. निर्गता करुणा यस्मात्। "हा तात निष्करुण, एष इदानीं ते नरेन्द्रचित्ताराधनोपकरणं जनो विपद्यते" मालती० ५। "कमलानिलयस्त्वया दयालुः करुणे निष्करुणा निरूपणे त्वम्" दयाश०।

**निष्करुणता ನಿಷ್ಕರುಣತಾ** (स्त्री०) ದಯೆಯಿಲ್ಲದಿರುವಿಕೆ, ಕನಿಕರವಿಲ್ಲದಿರುವಿಕೆ. निष्करुणस्य भावः "तल्" (५-१-११९)। "निर्व्यूढं च निष्करुणतया तातस्य कापालिकत्वम्" मालती० ४।

**निष्कर्ष ನಿಷ್ಕರ್ಷ** (पुं०) 1. ನಿಶ್ಚಯ, ನಿರ್ಧಾರ. निस्+कृष (विलेखने) "घञ्" (३-३-१८)। 2. ಸ್ವರೂಪ ಪರಿಚ್ಛೇದ, ಸಾರವಾದುದು ಇಷ್ಟು ಎಂದು ತೀರ್ಮಾನ. "एतद्विदन्तो विद्वांसस्त्रयीनिष्कर्षमन्वहम्। क्रमतः पूर्वमभ्यस्य पश्चाद्वेदमधीयते" मनु० ४-१२५। 3. ಆಕರ್ಷಿಸುವುದು, ಎಳೆದುಕೊಳ್ಳುವುದು, ಸೆಳೆಯುವುದು. (न०) 4. ತೆರಿಗೆಗಾಗಿ ಪ್ರಜೆಗಳನ್ನು ಪೀಡಿಸುವುದು. "अनुकर्षं च निष्कर्षं व्याधिपावकमूर्छनम्" भा० सभा० १३-१४।

**निष्कर्षण ನಿಷ್ಕರ್ಷಣ** (न०) ಸೆಳೆಯುವುದು, ಎಳೆಯುವುದು, ಎಳೆದುಹಾಕುವುದು. निस् + कृष (विलेखने) भावे "ल्युट्" (३-३-११५)। "ब्राह्ममस्त्रं प्रियाशोकशल्यनिष्कर्षणौषधम्" रघु० १२-९७।

**निष्कल ನಿಷ್ಕಲ** (वि०) 1. ನಿರವಯುವ, ಅವಯುವಗಳಿಲ್ಲದ, ಸಂಪೂರ್ಣವಾದ. निर्गता कला यस्मात्। "निष्कलं निष्क्रियं शान्तं निरवद्यं निरञ्जनम्। अमृतस्य परं सेतुं दग्धेन्धनमिवानलम्" श्वेता० उप०। 2. ಕಲೆಗಳಿಲ್ಲದ, ಭಾಗಗಳಿಲ್ಲದ. 3. ನೀರಸವಾದ, ಶುಷ್ಕವಾದ, ಸಾರವಿಲ್ಲದ. 4. ಗಳಿತವಾದ, ಶಿಥಿಲವಾದ, ಕ್ಷೀಣವಾದ, ಇಂದ್ರಿಯಶಕ್ತಿಯಿಲ್ಲದ. "दृश्यन्ते निष्कलाः शान्ताः प्रहीणाः स्वस्वकर्मभिः" भा० वन० २१३-१०। (स्त्री०) -कला -ಕಲಾ. -ली -ಲೀ. 5. ವೃದ್ಧ ಹೆಂಗಸು, ಮುಟ್ಟು ನಿಂತುಹೋದ ಹೆಂಗಸು.

**निष्कलङ्क ನಿಷ್ಕಳಂಕ** (वि०) 1. ಕಳಂಕವಿಲ್ಲದ, ದೋಷವಿಲ್ಲದ, ಶುದ್ಧವಾದ. निर्गतः कलङ्को यस्मात्। 2. ಚಿಹ್ನೆಯಿಲ್ಲದ, ಗುರುತಿಲ್ಲದ.

**निष्कलमष ನಿಷ್ಕಲ್ಮಷ** (वि०) ದೋಷವಿಲ್ಲದ, ಶುದ್ಧವಾದ.

**निष्कषाय ನಿಷ್ಕಷಾಯ** (वि०) 1. ಚಿತ್ತದೋಷವಿಲ್ಲದ, ಶುದ್ಧವಾದ ಮನಸ್ಸುಳ್ಳ. निर्गतः कषायः रागद्वेषादिदोषः यस्मात्। (पुं०) 2. ಉತ್ಸರ್ಪಿಣೀಕಾಲದ ೧೩ನೆಯ ಜಿನ ದೇವ.

**निष्काम ನಿಷ್ಕಾಮ** (वि०) 1. ಯಾವ ಫಲದ ಉದ್ದೇಶವೂ ಇಲ್ಲದ, ಅಪೇಕ್ಷೆಯಿಲ್ಲದ, ಕೋರಿಕೆಯಿಲ್ಲದ, ಯಾವುದರ ಆಸೆಯೂ ಇಲ್ಲದ. निर्गतः कामोऽभिलाषो यस्मात्। "इह चामुत्र वा काम्यं प्रवृत्तं कर्म कीर्त्यते। निष्कामं ज्ञानपूर्वन्तु निवृत्तमुपदिश्यते" मनु० १२-८९। 2. ಪ್ರಾಪಂಚಿಕ ಆಸೆಯನ್ನು ತೊರೆದಿರುವ. (अव्य०) -मम् -ಮಮ್. 3. ಯಾವ ಫಲದ ಉದ್ದೇಶವೂ ಇಲ್ಲದ. 4. ಪ್ರಾಪಂಚಿಕ ಸೌಖ್ಯದಲ್ಲಿ ಇಷ್ಟವಿಲ್ಲದ.

**निष्कामकर्मन् ನಿಷ್ಕಾಮಕರ್ಮನ್** (न०) ಫಲಾಪೇಕ್ಷೆಯಿಲ್ಲದೆ ಮಾಡುವ ಕರ್ಮ.

**निष्कारण ನಿಷ್ಕಾರಣ** (वि०) 1. ಕಾರಣವಿಲ್ಲದ, ನಿಮಿತ್ತವಿಲ್ಲದ. निर्गतं कारणं यस्य। "····पीवरभुजस्तम्भेन सम्भाविता निष्कारणबान्धवेन सकलभुवनैकसारनिजदेहोपहारसाहसं कृत्वा परिरक्षितास्मि" मालती० ७। 2. ಯಾವ ಉದ್ದೇಶವೂ ಇಲ್ಲದ, ಯಾವ ಫಲಾಪೇಕ್ಷೆಯೂ ಇಲ್ಲದ. (अव्य०) 3. ಕಾರಣವಿಲ್ಲದೆ. 4. ಉದ್ದೇಶವಿಲ್ಲದೆ.

**निष्कालक ನಿಷ್ಕಾಲಕ** (पुं०) 1. ಪಾಪಪರಿಹಾರಕ್ಕಾಗಿ ಪಶ್ಚಾತ್ತಾಪಪಡುವವನು, -ಪ್ರಾಯಶ್ಚಿತ್ತ ಮಾಡಿಕೊಳ್ಳುವವನು, ಮಾಡಿದ ತಪ್ಪನ್ನು ತಿದ್ದಿಕೊಳ್ಳಲು ಕ್ಷೌರ ಮಾಡಿಸಿಕೊಂಡು ದೇಹಕ್ಕೆ ತುಪ್ಪವನ್ನು ಲೇಪನಮಾಡಿಕೊಳ್ಳುವವನು. निष्कालयति — निस् + कालि "ण्वुल्" (३-१-१३३)। "निष्कालको घृताभ्यक्तस्तप्तां शूर्मीं परिष्वज्य मरणात्पूतो भवति" इति वसिष्ठः।

**निष्कासन ನಿಷ್ಕಾಸನ** (न०) ಹೊರಗೆ ಕಳುಹಿಸುವುದು, ಹೊರಗೆ ಅಟ್ಟುವುದು, ಹೊರದೂಡುವುದು. निस्+कस (गतौ) + णिच् "ल्युट्" (३-३-११५)। भावे "घञ्" (३-३-१८)। -कासः -ಕಾಸಃ.

**निष्कासनीय ನಿಷ್ಕಾಸನೀಯ** (वि०) 1. ಹೊರಗೆ ಕಳುಹಿಸಲ್ಪಡುವ, ಹೊರಗೆ ಅಟ್ಟಲ್ಪಡುವ, ಹೊರದೂಡಲ್ಪಡುವ. निस् + कस (गतौ) + णिच् "अनीयर्" (३-१-९६)। 2. ಹೊರಗೆ ಕಳುಹಿಸಬೇಕಾದ, ಹೊರದೂಡಬೇಕಾದ. "तव्यः" (३-१-९६)। -सितव्यः -ಸಿತವ್ಯಃ.

**निष्कासयत् ನಿಷ್ಕಾಸಯತ್** (वि०) ಹೊರಗೆ ಅಟ್ಟುತ್ತಿರುವ, ಹೊರದೂಡುತ್ತಿರುವ.

**निष्कासित ನಿಷ್ಕಾಸಿತ** (वि०) 1. ಹೊರಗೆ ಅಟ್ಟಲ್ಪಟ್ಟ, ಹೊರದೂಡಲ್ಪಟ್ಟ. निस्+कस (गतौ)+णिच् "क्तः" (३-२-१०२)। 2. ಇಡಲ್ಪಟ್ಟ. 3. ಅಧಿಕಾರಿಯಾಗಿ ನೇಮಿಸಲ್ಪಟ್ಟ. "निष्कासितो निर्गमितेऽप्याहितेऽधिकृतेऽपि च" मेदि०।

**निष्कास्य ನಿಷ್ಕಾಸ್ಯ** (वि०) ಹೊರಗೆ ಕಳುಹಿಸಲ್ಪಡುವ, ಹೊರದೂಡಲ್ಪಡುವ. निस् + कस (गतौ) + णिच् "ण्यत्" (३-१-१२४)।

**निष्कास्यमान ನಿಷ್ಕಾಸ್ಯಮಾನ** (वि०) ಹೊರಗೆ ಕಳುಹಿಸಲ್ಪಡುತ್ತಿರುವ, ಹೊರಗೆ ಅಟ್ಟಲ್ಪಡುತ್ತಿರುವ, ಹೊರಗೆ ಓಡಿಸಲ್ಪಡುತ್ತಿರುವ. निस् + कस (गतौ)+णिच् कर्म० "शानच्" (३-२-१२४)।

**निष्किञ्चन ನಿಷ್ಕಿಂಚನ** (वि०) 1. ಯಾವುದೂ ಇಲ್ಲದ, ಕೊಂಚವೂ ಇಲ್ಲದ. निर्गतं किंचन यस्मात्। "प्रज्ञानं शौचमेवात्र शरीरस्य विशेषतः। तथा निष्किञ्चनत्वं च मनसश्च प्रसन्नता" भा० अनु०। 2. ದರಿದ್ರ, ಬಡವ.

**निष्कुट ನಿಷ್ಕುಟ** (पुं०) 1. ಮನೆಯ ಕೈತೋಟ, ಮನೆಯ ಉದ್ಯಾನವನ. निस् + कुट (कौटिल्ये) "कः" (३-१-१३६)। "नूनमस्य मणिभूभृता सह स्थापनं निजनिवेशनिष्कुटे" याद० १७-४०। 2. ಕಪಾಟ, ಕದ. 3. ಕೇದಾರ, ಗದ್ದೆ. "निष्कुटस्तु गृहोद्याने स्यात् केदारकपाटयोः" मेदि०।

**निष्कुटि ನಿಷ್ಕುಟಿ** (स्त्री०) ದೊಡ್ಡ ಯಾಲಕ್ಕಿ. निर्गता कुटिः कौटिल्यं यस्याः। वा "ङीष्" (ग० ४-१-४५)। **—कुटी — ಕುಟೀ.** "पृथ्वीका चन्द्रबालैलानिष्कुटिर्बहुला" अम०।

**निष्कुषित ನಿಷ್ಕುಷಿತ** (वि०) ಹರಿದುಹಾಕಲ್ಪಟ್ಟ, ಖಂಡಿಸಲ್ಪಟ್ಟ, ಎಳೆದು ತುಂಡುಮಾಡಲ್ಪಟ್ಟ. निस् + कुष (निष्कर्षे) 'क्तः" (३-२-१०२)। "उपान्तयोर्निष्कुषितं विहङ्गैराक्षिप्य तेभ्यः पिशितप्रियापि" रघु० ७-५०।

**निष्कुह ನಿಷ್ಕುಹ** (पुं०) ಮರದ ಪೊಟರೆ. निश्चयेन कुहयते — कुह (विस्मापने) "अच्" (३-१-१३४)। "निष्कुहः कोटरं वा ना" अम०।

**निष्कृत ನಿಷ್ಕೃತ** (वि०) 1. ಮಾಡಿದ ಅಪರಾಧಕ್ಕಾಗಿ ಪ್ರಾಯಶ್ಚಿತ್ತ ಮಾಡಿಕೊಂಡವನು. निस् + डु कृञ् (करणे) "क्तः" (३-४-७२)। 2. ಹೊರದೂಡಲ್ಪಟ್ಟವನು, ಹೊರಕ್ಕೆ ಅಟ್ಟಲ್ಪಟ್ಟವನು, ಬಹಿಷ್ಕರಿಸಲ್ಪಟ್ಟವನು.

**निष्कृति ನಿಷ್ಕೃತಿ** (स्त्री०) 1. ಪ್ರಾಯಶ್ಚಿತ್ತ, ಪಾಪವನ್ನು ಪರಿಹರಿಸಿಕೊಳ್ಳಲು ಮಾಡುವ ಕಾರ್ಯ. निस् + डु कृञ् (करणे) "क्तिन्" (३-३-९४)। "एषा पापकृतामुक्ता चतुर्णामपि निष्कृतिः। पतितैः संप्रयुक्तानामिमाः शृणुत निष्कृतीः" मनु० ११-१७९। 2. ಸಾಲ ತೀರಿಸುವುದು. "यं मातापितरौ क्लेशं सहेते संभवे नृणाम्। न तस्य निष्कृतिः शक्या कर्तुं वर्षशतैरपि" मनु० २-२२७। 3. ವಿಮೋಚನೆ, ಬಿಡುಗಡೆ, ಪಾರಾಗುವುದು. 4. ಪೂರ್ವಸ್ಥಿತಿಗೆ ತರುವುದು, ಮೊದಲಿನ ಆರೋಗ್ಯವನ್ನು ಪಡೆಯುವುದು.

**निष्कृष्ट ನಿಷ್ಕೃಷ್ಟ** (वि०) 1. ನಿಶ್ಚಯಿಸಲ್ಪಟ್ಟ, ನಿಷ್ಕರ್ಷಿಸಲ್ಪಟ್ಟ. 2. ಎಳೆಯಲ್ಪಟ್ಟ, ಸೆಳೆಯಲ್ಪಟ್ಟ. 3. ಸಂಗ್ರಹಿಸಿ ತೆಗೆಯಲ್ಪಟ್ಟ, ಸಾರವಾದ. निस् + कृष (विलेखने) "क्तः" (३-२-१०२)।

**निष्कोष ನಿಷ್ಕೋಷ** (पुं०) ಒಳಗಿನಿಂದ ಎಳೆಯುವುದು, ಸೆಳೆಯುವುದು. निस् + कुष (निष्कर्षे) "घञ्" (३-३-१८)। "ल्युट्" (३-३-११५)। **—कोषणम् —ಕೋಷಣಮ್.**

**निष्कोषणक ನಿಷ್ಕೋಷಣಕ** (न०) ಹಲ್ಲುಗಳ ಸಂದುಗಳಲ್ಲಿರುವ ವಸ್ತುಗಳನ್ನು ತೆಗೆದುಹಾಕುವುದು. "दन्तस्य निष्कोषणकेन नित्यं कर्णस्य कण्डूयनकेन वाऽपि" पञ्चतं० १-७७।

**निष्कोषणीय ನಿಷ್ಕೋಷಣೀಯ** (वि०) 1. ಒಳಗಿನಿಂದ ಸೆಳೆಯಲ್ಪಡುವ, ಎಳೆಯಲ್ಪಡುವ. निस्+कुष (निष्कर्षे) "अनीयर्" (३-१-९६)। 2. ಸೆಳೆಯಬೇಕಾದ, ಒಳಗಿನಿಂದ ಕಿತ್ತು ಎಳೆಯಬೇಕಾದ. "तव्यः" (३-१-९६)। **—कोषितव्यः —ಕೋಷಿತವ್ಯಃ.**

**निष्कौशाम्बि ನಿಷ್ಕೌಶಾಂಬಿ** (वि०) ಕೌಶಾಂಬೀ ನಗರದಿಂದ ಹೊರಟಿರುವ. निष्क्रान्तः कौशाम्ब्याः (वा० १-४-७९)।

**निष्क्रम ನಿಷ್ಕ್ರಮ** (पुं०) 1. ಹೊರಕ್ಕೆ ಹೊರಡುವುದು, ಹೊರಗಡೆ ಹೋಗುವುದು. निस् + क्रमु (पादविक्षेपे) "घञ्" (३-३-१८)। 2. ಬುದ್ಧಿಶಕ್ತಿ, ಬುದ್ಧಿಯ ಗುಣ. "धीशक्तिर्निष्क्रमः" अम०। "धीगुण" ಪದದಲ್ಲಿ ನೋಡಿ. 3. (ಶಿಶುವು) ಹುಟ್ಟಿದ ನಾಲ್ಕನೆಯ ತಿಂಗಳಲ್ಲಿ ಶಿಶುವನ್ನು ಹೊರಗಡೆ ಕರೆತರುವುದು. ಶಿಶುವಿಗೆ ಇದೊಂದು ಸಂಸ್ಕಾರ. ಶಿಶುವನ್ನು ನಾಲ್ಕನೆಯ ತಿಂಗಳಲ್ಲಿ ಮನೆಯ ಹೊರಗಡೆ

ಕರೆತಂದು ಸೂರ್ಯದರ್ಶನ ಮಾಡಿಸುವುದು ಪದ್ಧತಿ. "अहन्येकादशे नाम चतुर्थे मासि निष्क्रमः" याज्ञ० १-१२। 4. ದುಷ್ಕುಲ. निस् + क्रमु भावे "ल्युट्" (३-३-११५)। –ಕ್ರಮಣಮ್ –ಕ್ರಮಣಮ್. "गृहान्निष्क्रमणं सूतेश्चतुर्थे मासि कारयेत्। यात्रोक्ते समये मासि तृतीये द्वादशेऽहनि"। ಎಂದು ಮೂರನೆಯ ತಿಂಗಳಲ್ಲಿಯೂ ನಿಷ್ಕ್ರಮಣವು ಉಕ್ತವಾಗಿದೆ.

**निष्क्रय ನಿಷ್ಕ್ರಯ** (पुं०) 1. ಬದಲಾವಣೆಯ ವಸ್ತು, ಸಮಾನವಾದ ಬೆಲೆಯುಳ್ಳ ವಸ್ತುವಿನಿಂದ (ವಸ್ತುವನ್ನು ಕೊಟ್ಟು) ಬದಲಾಯಿಸಿಕೊಳ್ಳುವ ದ್ರವ್ಯ, ವಿನಿಮಯ ದ್ರವ್ಯ. निष्क्रीयते प्रत्याह्रियतेऽनेन – निस् + डु क्रीञ् (द्रव्यविनिमये) "अच्" (३-३-५६)। "यद्यशो मयि निवेशितमेतन्निष्क्रयोऽस्तु कतमस्तु तदीयः" नैष० ५-९०। 2. ಪ್ರತಿಫಲ, ಪ್ರತ್ಯುಪಕಾರ ರೂಪವಾದ ಕಾರ್ಯಾಚರಣೆ. "त्रसत्तुषाराद्रिसुताससंभ्रमस्वयंग्रहाश्लेषसुखेन निष्क्रयम्" माघ० १-५०। 3. ವೇತನ, ಕೂಲಿ. "भरण्यं भरणं भर्मं वेतनं निष्क्रयो भृतिः" वैजं०। 4. ವಿಕ್ರಯ, ಮಾರುವುದು. "न निष्क्रयविसर्गाभ्यां भर्तुर्भार्या विमुच्यते" मनु० ९-४६। 5. ವಿನಿಮಯ, ಬದಲಾವಣೆ, ಒಂದು ವಸ್ತುವನ್ನು ಕೊಟ್ಟು ಅದಕ್ಕೆ ಸಮಾನವಾದ ಬೆಲೆಯುಳ್ಳ ವಸ್ತುವನ್ನು ಕೊಳ್ಳುವುದು. 6. ಸಾಮರ್ಥ್ಯ. 7. ನಿರ್ಗಮನ, ಹೊರಡುವುದು.

**निष्क्रयण ನಿಷ್ಕ್ರಯಣ** (नं०) 1. ವಸ್ತುವನ್ನು ಕೊಟ್ಟು ಅದಕ್ಕೆ ಸಮವಾದ ಬೆಲೆಯುಳ್ಳ ವಸ್ತುವನ್ನು ಪಡೆಯುವುದು, ವಿನಿಮಯ, ಬದಲಾವಣೆ. 2. ಒಂದು ವಸ್ತುವನ್ನು ಕೊಟ್ಟು ಅದಕ್ಕೆ ಸಮವಾಗಿ ಬದಲಾಯಿಸಿಕೊಳ್ಳುವ ವಸ್ತು, ವಿನಿಮಯ ದ್ರವ್ಯ.

**निष्क्रान्त ನಿಷ್ಕ್ರಾಂತ** (वि०) 1. ಮನೆಯಿಂದ ಹೊರಕ್ಕೆ ಹೊರಟಿರುವ. निस् + क्रमु (पादविक्षेपे) "क्तः" (३-४-७२)। "निष्क्रान्ते मयि कल्याणि यथा सन्निहितेऽनघे। नातिथिस्तेऽवमन्तव्यः प्रमाणं यद्यहं तव" भा० अनु० २-६२। 2. ಹೊರಗಡೆ ಹೊರಟಿರುವ. "अध्यासिते वयस्याय भवता महता हृदि। स्तनावन्तरसंमान्तौ निष्क्रान्तौ ब्रूमहे बहिः" नैष० २०-४८। 3. (ನಾಟಕದಲ್ಲಿ) ರಂಗಸ್ಥಳದಿಂದ ಹೊರಟವನು, ರಂಗಸ್ಥಳವನ್ನು ಬಿಟ್ಟು ಹೊರಟವನು. "इति निष्क्रान्ताः सर्वे"।

**निष्क्रान्ति ನಿಷ್ಕ್ರಾಂತಿ** (स्त्री०) ಹೊರಗಡೆ ಹೊರಡುವುದು. निस्+क्रमु (पादविक्षेपे) "क्तिन्" (३-३-९४)।

**निष्क्रामत् ನಿಷ್ಕ್ರಾಮತ್** (वि०) ಹೊರಕ್ಕೆ ಹೋಗುತ್ತಿರುವ, ಹೊರಗಡೆ ಬರುತ್ತಿರುವ. निस् + क्रमु (पादविक्षेपे) "शतृ" (३-२-१२४)। स्त्रियां "ङीप्" (४-१-६)। –क्रामन्ती –ಕ್ರಾಮಂತೀ. "ततस्तु एकस्मात् भित्तिच्छिद्राद्गृहीतभक्तावयवां निष्क्रामन्तीं पिपीलिकापङ्क्तिमवलोक्य····" मुद्रा० २।

**निष्क्रिय ನಿಷ್ಕ್ರಿಯ** (वि०) ಕೆಲಸವಿಲ್ಲದ, ಯಾವ ಕಾರ್ಯವನ್ನೂ ಮಾಡದ. निर्गता क्रिया यस्मात्।

**निष्क्रियत्व ನಿಷ್ಕ್ರಿಯತ್ವ** (नं०) ಕೆಲಸವಿಲ್ಲದಿರುವಿಕೆ, ಯಾವ ಕಾರ್ಯವನ್ನೂ ಮಾಡದಿರುವಿಕೆ. निष्क्रियस्य भावः "त्वः" (५-१-११९)। "सव्रीडमन्दैरिव निष्क्रियत्वान्नात्यर्थमस्त्रैरवभासमानः" किरा० ३-४६।

**निष्टाप ನಿಷ್ಟಾಪ** (पुं०) ಬಿಸುಪು, ಒಳ್ಳೆಯ ಕಾವು. निःशेषेण तापः। "निष्टापस्विद्यदस्नः क्वथनपरिगलन्मेदसः प्रेतकायान्" मालती० ५-१७।

**निष्ठ ನಿಷ್ಠ** (वि०) 1. ಇರುವ, ನೆಲೆಸಿರುವ. नितरां तिष्ठति – नि + ष्ठा (गतिनिवृत्तौ) "कः" (३-१-१३६)। 2. ಶ್ರದ್ಧೆಯುಳ್ಳ, ನಂಬಿಕೆಯುಳ್ಳ, (ಸಾಮಾನ್ಯವಾಗಿ ಈ ಪದವು ಸಮಾಸಾಂತ್ಯದಲ್ಲಿ ಬರುವುದು.)

**निष्ठा ನಿಷ್ಠಾ** (स्त्री०) 1. ನಂಬಿಕೆ, ಶ್ರದ್ಧೆ, ವಿಶ್ವಾಸ. नि + ष्ठा (गतिनिवृत्तौ) "अङ्" (३-३-१०६)। "लोकेऽस्मिन् द्विविधा निष्ठा पुरा प्रोक्ता मयाऽनघ। ज्ञानयोगेन सांख्यानां कर्मयोगेन योगिनाम्" गीता ३-३। 2. ಕಾರ್ಯಸಾಧನೆ, ನೆರವೇರುವಿಕೆ, ಕಾರ್ಯಸಿದ್ಧಿ, ನಿಷ್ಪತ್ತಿ. "पाणिग्रहणिका मन्त्रा नियतं दारलक्षणम्। तेषां निष्ठा तु विज्ञेया विद्वद्भिः सप्तमे पदे" मनु० ८-२२७। 3. ವಿಷ್ಣು, ಪರಮಾತ್ಮ. निष्ठीयते शुभाश्रयभूतेऽस्मिन् अर्थिभिः। नि + ष्ठा अधि० "अङ्" (३-३-१०६)। "निष्ठा शान्तिः परायणम्" वि० स०। 4. ಕೊನೆ, ಸಮಾಪ್ತಿ. "निष्ठां गते दत्रिमसभ्यतोषे विहित्रिमे कर्मणि राजपत्न्यः" भट्टि० १-१३। 5. ನಾಶ, ಮರಣ. 6. (ನಾಟಕದಲ್ಲಿ) ಕೊನೆಯ ಸಂಧಿ, ನಿರ್ವಹಣ ಸಂಧಿ. ಮುಖ ಸಂಧಿಯಲ್ಲಿ ಉಪಕ್ಷಿಪ್ತವಾದ ಪ್ರಧಾನ ಕಾರ್ಯಕ್ಕೆ ಕಾರಣಭೂತವಾದ ಅನೇಕ ಪ್ರಕರಣಗಳು ಕೊನೆಯಲ್ಲಿ ಒಟ್ಟುಗೂಡಿ (ಏಕವಾಕ್ಯತೆಯನ್ನು ಹೊಂದಿ) ಮುಖ್ಯಫಲಪ್ರಾಪ್ತಿಯೊಡನೆ ಕಥೆಯು ಸಮಾಪ್ತಿ ಹೊಂದುವುದರಿಂದ ನಿರ್ವಹಣಸಂಧಿಗೆ ಈ ಹೆಸರು. "निष्ठा निर्वहणे समे" अम०। 7. ಯಾಚನೆ, ಬೇಡಿಕೆ.

8. ನಿಶ್ಚಯ, ಅವಧಾರಣ. "घ्राणं जिह्वा च चक्षुश्च त्वक्श्रोत्रं मन एव च। न निष्ठामधिगच्छन्ति बुद्धिस्तामधिगच्छति" भा० आश्व० २३-१२। 9. ಭಕ್ತಿ, ವಿಶ್ವಾಸ. 10. ಸ್ಥಿರಸ್ಥಿತಿ, ದೃಢತೆ, ಸ್ಥಿರವಾಗಿ ನೆಲಸಿರುವಿಕೆ. "मनो निष्ठाशून्यं भ्रमति च किमप्यालिखति च" मालती० १-३४। 11. ಧಾತುಗಳ ಮುಂದೆ ಸೇರಿಸುವ ಕೃತ್ ಪ್ರತ್ಯಯ, क्तः ಮತ್ತು क्तवतुः ಎಂಬ ಪ್ರತ್ಯಯ. "क्तक्तवतू निष्ठा" (१-१-२६)। 12. ಸ್ಥಿತಿ, ಇರುವಿಕೆ.

**निष्ठान ನಿಷ್ಠಾನ** (न०) ಮಜ್ಜಿಗೆಪಳದ್ಯ, ಚಟ್ನಿ ಮೊದಲಾದ ವ್ಯಂಜನ. निष्ठीयतेऽत्र—नि+ष्ठा (गतिनिवृत्तौ) "ल्युट्" (३-३-११७)। "स्यात्तेमनं तु निष्ठानम्" अम०।

**निष्ठापित ನಿಷ್ಠಾಪಿತ** (वि०) 1. ಸರಿಯಾದ ಜಾಗಕ್ಕೆ ಸೇರಿಸಲ್ಪಟ್ಟ, ಸುರಕ್ಷಿತಸ್ಥಾನಕ್ಕೆ ಒಯ್ಯಲ್ಪಟ್ಟ. नि + ष्ठा (गतिनिवृत्तौ)+णिच् "क्तः" (३-२-१०२)। "निहतनिष्पेषितनष्टनिष्ठापिताशेषजननिवहः" मालती० ३। 2. ಸೊಕ್ಕುಮುರಿಯಲ್ಪಟ್ಟ, ಸದೆಬಡಿಯಲ್ಪಟ್ಟ. "निर्व्यूढविषमव्यवसायनिष्ठापितप्रचण्डपाषण्डदोर्दण्डसाहसः" मालती० ६।

**निष्ठित ನಿಷ್ಠಿತ** (वि०) 1. ನಂಬಿಕೆಯಿಂದ ಕೂಡಿದ, ಶ್ರದ್ಧೆಯುಳ್ಳ. निष्ठाऽस्य सञ्जातः "इतच्" (५-२-३६)। 2. ಚೆನ್ನಾಗಿ ನೆಲೆಸಿರುವ, ಸ್ಥಿರವಾಗಿರುವ. नि + ष्ठा (गतिनिवृत्तौ) "क्तः" (३-४-७२)। "देवद्विषां निगमवर्त्मनि निष्ठितानां पूर्भिर्मयेन विहिताभिरदृश्यमूर्तिः" भाग० २-७-३७। 3. ಚೆನ್ನಾಗಿ ತಿಳಿದಿರುವ, ಪರಿಣತನಾದ. "रक्षिता स्वस्य धर्मस्य स्वजनस्य च रक्षिता। वेदवेदाङ्गतत्त्वज्ञो धनुर्वेदे च निष्ठितः" रामा०।

**निष्ठीवन ನಿಷ್ಠೀವನ** (न०) ಉಗುಳುವುದು. नि + ष्ठिवु (निरसने) भावे "ल्युट्" (३-३-११५)। पृषो०। "वान्तं निष्ठीवनं चैव कुर्वते चास्य सन्निधौ" भा०।

**निष्ठुर ನಿಷ್ಠುರ** (न०) 1. ಕಠಿನವಾದ ಮಾತು, ಬಿರುಸಾದ ಮಾತು, ಒರಟಾದ ಮಾತು. नि + ष्ठा (गतिनिवृत्तौ) "उरच्" (उ० १-४१)। 2. ಅಶ್ಲೀಲವಾದ ಮಾತು, ಜುಗುಪ್ಸೆಯುಂಟುಮಾಡುವ ಮಾತು. (वि०) 3. ಕಠಿನವಾದ, ಗಟ್ಟಿಯಾದ, ಕರ್ಕಶವಾದ. "उद्यन्नादं धन्विभिर्निष्ठुराणि स्थूलान्युच्चैर्मण्डलत्वं दधन्ति" माघ० १८-९। 4. ಕಠಿನಹೃದಯವುಳ್ಳವನು, ಕಲ್ಲೆದೆಯವನು. "यः पृष्ठं युधि दर्शयत्यरिभटश्रेणीषु यो वक्रतामस्मिन्नेव बिभर्ति यश्च किरति क्रूरध्वनिं निष्ठुरः" नैष० १२-९७। 5. ಕ್ರೂರವಾದ, ದಯೆಯಿಲ್ಲದ. "तथापि शस्त्रव्यवहारनिष्ठुरे विपक्षभावे चिरमस्य तस्थुषः" रघु० ३-६२। 6. ತಿರಸ್ಕರಿಸುವ, ಧಿಕ್ಕರಿಸುವ, ನಿಂದಿಸುವ. (अव्य०) 7. ಕಠಿನವಾಗಿ, ಒರಟಾಗಿ. "मकरन्देन निष्ठुरं प्रतिहतो जामाता" मालती० ७। 8. ದಯೆಯಿಲ್ಲದೆ. 9. ಕ್ರೂರವಾಗಿ.

**निष्ठुरता ನಿಷ್ಠುರತಾ** (स्त्री०) 1. ಕಠಿನತೆ, ಒರಟಾಗಿರುವಿಕೆ. 2. ಕ್ರೂರವಾಗಿರುವಿಕೆ. 3. ಧಿಕ್ಕರಿಸುವಿಕೆ. 4. ದಯೆಯಿಲ್ಲದಿರುವಿಕೆ. निष्ठुरस्य भावः "तल्" (५-१-११९)। "त्वः" (५-१-११९)। **–रत्वम् –ರತ್ವಮ್.**

**निष्ठेव ನಿಷ್ಠೇವ** (पुं०) ಉಗುಳುವುದು. नि + ष्ठिवु (निरसने) भावे "घञ्" (३-३-१८)।

**निष्ठेवन ನಿಷ್ಠೇವನ** (न०) ಉಗುಳುವುದು. नि + ष्ठिवु (निरसने) भावे "ल्युट्" (३-३-११५)।

**निष्ठ्यूत ನಿಷ್ಠ್ಯೂತ** (वि०) 1. ಉಗಿಯಲ್ಪಟ್ಟ, ಬಾಯಿಂದ ಹೊರದೂಡಲ್ಪಟ್ಟ. नि + ष्ठिवु (निरसने) "क्तः" (३-२-१०२)। "ऊठ्" (६-४-१९)। "तारामयं बीजभुजादसीयं कालेन निष्ठ्यूतमिवास्थियूथम्" नैष० २२-१४। 2. ಹೊರಕ್ಕೆ ಹಾಕಲ್ಪಟ್ಟ, ಹೊರಕ್ಕೆ ಚೆಲ್ಲಲ್ಪಟ್ಟ. "अङ्गुष्ठनिष्ठ्यूतमिवोर्ध्वमुच्चैस्त्रिस्रोतसः सन्ततधारमम्भः" माघ० ३-१०।

**निष्ण ನಿಷ್ಣ** (वि०) ಕುಶಲ, ಜಾಣ, ಸಮರ್ಥ. नि+ष्णा (शौचे) "कः" (३-१-१३६)। "अपूपुजन् विष्टरपाद्यमाल्यैरातिथ्यनिष्णा वनवासिमुख्याः" भट्टि० २-२६।

**निष्णात ನಿಷ್ಣಾತ** (वि०) 1. ಕುಶಲ, ನಿಪುಣ, ಸಮರ್ಥ. नि + ष्णा (शौचे) "क्तः" (३-४-७२)। "निष्णातश्च समागमोऽपि विहितस्त्वत्प्रेयसः कान्तया" मालती० १०-२४। 2. ಚೆನ್ನಾಗಿ ತಿಳಿದವನು, ನುರಿತವನು, ಪ್ರವೀಣ. "कुतोऽपत्यस्नेहः कुटिलनयनिष्णातमनसाम्" मालती० २-७।

**निष्पक्व ನಿಷ್ಪಕ್ವ** (वि०) ಚೆನ್ನಾಗಿ ಪಕ್ವವಾಗಿರುವ, ಚೆನ್ನಾಗಿ ಪಚನವಾಗಿರುವ. नितान्तं पक्वम्।

**निष्पतत् ನಿಷ್ಪತತ್** (वि०) 1. ಹೊರಕ್ಕೆ ಹೊರಡುತ್ತಿರುವ. निस्+पत्लृ (गतौ) "शतृ" (३-२-१२४)। "अयमरविवरेभ्यश्चातकैर्निष्पतद्भिर्हरिभिरचिरभासां तेजसा चानुलिप्तैः" शाकु० ७-७। 2. ಹೊರಡಲು ಪ್ರಯತ್ನಪಡುತ್ತಿರುವ. "त्यक्तगेहगमनाय निष्पतन्

पुष्पकेतुरिह धृष्यते ध्रुवम्" याद० १७-१६। 3. ಚೆನ್ನಾಗಿ ಬೀಳುತ್ತಿರುವ. स्त्रियां "ङीप्" (४-१-६)। –पतन्ती –ಪತನ್ತೀ.

**निष्पतन ನಿಷ್ಪತನ** (ನಂ) ಹೊರಕ್ಕೆ ಹೊರಡುವುದು, ಹೊರಗಡೆ ಬರುವುದು. निस् + पत्लृ (गतौ) "ल्युट्" (३-३-११५)।

**निष्पतिष्णु ನಿಷ್ಪತಿಷ್ಣು** (ವಿಂ) ಹೊರಡುವ ಸ್ವಭಾವದ, ಹೊರಕ್ಕೆ ಹೋಗುವ ಸ್ವಭಾವದ. "इन्द्रियाणि प्रमाथीनि बुद्धया संयम्य यत्नतः। सर्वतो निपतिष्णूनि पिता बालानिवात्मजान्" भा० शान्ति० २५६-३।

**निष्पत्ति ನಿಷ್ಪತ್ತಿ** (ಸ್ತ್ರೀಂ) 1. ಉತ್ಪತ್ತಿ, ಹುಟ್ಟುವುದು. निस् + पद (गतौ) "क्तिन्" (३-३-९४)। 2. ಧಾತು ಪ್ರತ್ಯಯಗಳ ಸಂಬಂಧದಿಂದ ಉಂಟಾಗುವ ಶಬ್ದಸಿದ್ಧಿ. रमन्ते योगिनोऽस्मिन् इति रामः। ಇಲ್ಲಿ ರಮ್ ಧಾತುವಿಗೆ "घञ्" ಪ್ರತ್ಯಯದ ಸಂಬಂಧದಿಂದ ರಾಮ ಶಬ್ದದ ನಿಷ್ಪತ್ತಿಯಾಗಿರುವುದು. 3. ನಾದದ ನಾಲ್ಕು ವಿಧ ಅವಸ್ಥೆಗಳಲ್ಲೊಂದು. आरम्भः घटः परिचयः ಮತ್ತು निष्पत्तिः ಎಂದು ನಾದದ ಅವಸ್ಥೆಗಳು ನಾಲ್ಕು.

(1) ಪ್ರಾಣಾಯಾಮದ ಬಲದಿಂದ ಅನಾಹತ ಚಕ್ರದಲ್ಲಿರುವ ಬ್ರಹ್ಮಗ್ರಂಥಿಯು ಒಡೆದು ಶೂನ್ಯವಾದ ಹೃದಯಾಕಾಶದಲ್ಲಿ ಆನಂದಜನಕವಾದ ಶಿಂಜಿತ ಸಮಾನವಾದ ಒಂದು ವಿಚಿತ್ರವಾದ ಧ್ವನಿಯು ಕೇಳಿಬರುವುದು. **ಇದು ನಾದದ ಆರಂಭಾವಸ್ಥೆ.** ಈ ಅವಸ್ಥೆಯಲ್ಲಿ ಹೃದಯಾಕಾಶ ವಿಶುದ್ಧಾಕಾಶ ಮತ್ತು ಭ್ರೂಮಧ್ಯಾಕಾಶಗಳನ್ನು ಯೋಗಿಗಳು ಶೂನ್ಯ ಅತಿಶೂನ್ಯ ಮತ್ತು ಮಹಾಶೂನ್ಯಗಳೆಂದು ವ್ಯವಹರಿಸುವರು. ಪ್ರಾಣವಾಯುವಿನಿಂದ ಹೃದಯವು ತುಂಬಿ ಪೂರ್ಣ ಆನಂದವುಂಟಾದಾಗ ರೂಪಲಾವಣ್ಯಬಲ ಸಂಪನ್ನನಾಗಿಯೂ ತೇಜಸ್ವಿಯಾಗಿಯೂ ಸೌಗಂಧ್ಯ ಯುಕ್ತನಾಗಿಯೂ ರೋಗರಹಿತನಾಗಿಯೂ ಆಗುವನು. "ब्रह्मग्रन्थेर्भवेद्भेदो ह्यानन्दः शून्यसम्भवः। विचित्रः क्वणको देहेऽनाहतः श्रूयते ध्वनिः॥ दिव्यदेहश्च तेजस्वी दिव्यगन्धस्त्वरोगवान्। संपूर्णहृदयश्शून्य आरम्भो योगवान् भवेत्" हಠಂ ७०, ७१।

(2) ಎರಡನೆಯದಾದ **ಘಟಾವಸ್ಥೆ**ಯಲ್ಲಿ ಪ್ರಾಣವಾಯುವು ಅಪಾನ ಮತ್ತು ನಾದಬಿಂದುಗಳನ್ನು ಒಟ್ಟುಗೂಡಿಸಿ ಕಂಠಸ್ಥಾನದಲ್ಲಿ ಮಧ್ಯಚಕ್ರವನ್ನು ಸೇರುವುದು. ಅಲ್ಲಿ ಜೀವಾತ್ಮ-ಪರಮಾತ್ಮರೊಡನೆ ಸೇರುವುದರಿಂದ ಇದಕ್ಕೆ "**ಘಟಾವಸ್ಥೆ**"ಯೆಂದು ಹೆಸರು. ಈ ಅವಸ್ಥೆಯಲ್ಲಿ ಯೋಗಿಯು ಸ್ಥಿರಾಸನಯುಕ್ತನಾಗಿರುವುದರಿಂದ ಒಳ್ಳೆ ಜ್ಞಾನಸಂಪನ್ನನಾಗಿಯೂ ರೂಪಲಾವಣ್ಯಾಧಿಕ್ಯದಿಂದ ದೇವತೆಗಳಿಗೆ ಸಮಾನನಾಗಿಯೂ ಆಗುವನು. "द्वितीयायां घटीकृत्य वायुर्भवति मध्यगः। दृढासनो भवेद्योगी ज्ञानी देवसमस्तदा" ಹಠಂ ४-७२। "प्राणापानौ नादबिन्दू जीवात्मपरमात्मनोः। मिलित्वा घटते यस्मात्तस्मात्स घट उच्यते" राजयोगः। ಘಟಾವಸ್ಥೆಯಲ್ಲಿ, ಬ್ರಹ್ಮಗ್ರಂಥಿಯು ಭೇದಾನಂತರ ಕಂಠಸ್ಥಾನದಲ್ಲಿರುವ ವಿಷ್ಣುಗ್ರಂಥಿಯ ಭೇದದಿಂದ ಅನೇಕ ನಾದಗಳ ಸಂಮರ್ದದಿಂದ ಬ್ರಹ್ಮಾನಂದಸೂಚಕವಾದ ಭೇರೀನಾದವುಂಟಾಗುವುದು. "विष्णुग्रन्थेस्ततो भेदात् परमानन्दसूचकः। अतिशून्ये विमर्दश्च भेरीशब्दस्तदा भवेत्" ಹಠಂ ४-७३।

(3) ಮೂರನೆಯದಾದ **ಪರಿಚಯಾವಸ್ಥೆ**ಯಲ್ಲಿ ರುದ್ರಗ್ರಂಥಿಯನ್ನು ಭೇದಿಸಿ ಭ್ರೂಮಧ್ಯಾಕಾಶದಲ್ಲಿ ಮದ್ದಳೆಯ ಧ್ವನಿಯಂತೆ ಒಂದು ನಾದವುಂಟಾಗುವುದು. ಆಗ ಪ್ರಾಣವಾಯುವು ಅಣಿಮಾದಿ ಸಕಲ ಸಿದ್ಧಿಗೂ ಸ್ಥಾನವಾದ ಭ್ರೂಮಧ್ಯಾಕಾಶವನ್ನು ಸೇರುವುದು. ಆಗ ಅಂತಃಕರಣ ಜನ್ಯವಾದ ಆನಂದವನ್ನು ಜಯಿಸಿ ಸ್ವಾಭಾವಿಕಾನಂದದ ಆವಿರ್ಭಾವವಾಗುವುದು. ಅದರಿಂದ ವಾತಪಿತ್ತಕಫ ದೋಷಗಳಿಂದ ಸಂಭವಿಸುವ ವೇದನೆ, ಜರೆ (ಮುಪ್ಪು) ವ್ಯಾಧಿ ಕ್ಷುತ್ತು (ಹಸಿವು) ನಿದ್ರೆ ಮೊದಲಾದುವುಗಳಿಂದ ವರ್ಜಿತನಾಗುವನು. "तृतीयायां तु विज्ञेयो विहायोमर्दलध्वनिः। महाशून्यं तदा याति सर्वसिद्धिसमाश्रयम्॥ चित्तानन्दं तदा जित्वा सहजानन्दसम्भवः। दोषदुःखजराव्याधिक्षुधानिद्राविवर्जितः॥ रुद्रग्रन्थिं यदा भित्वा शर्वपीठगतोऽनिलः" ಹಠಂ ४-७४, ७५, ७६।

(4) ನಾಲ್ಕನೆಯದಾದ **ನಿಷ್ಪತ್ತ್ಯವಸ್ಥೆ.** ಇದರಲ್ಲಿ ಬ್ರಹ್ಮಾನಂದವನ್ನುಂಟುಮಾಡುವ ವೇಣುನಾದವೂ ವೀಣಾನಾದವೂ ಕೇಳಿಬರುವುದು. ಈ ನಿಷ್ಪತ್ತ್ಯವಸ್ಥೆಯಲ್ಲಿ ಚಿತ್ತವು ಒಂದೇ ವಿಷಯದೊಡನೆ ಏಕೀಭವಿಸುವುದು. ಇದಕ್ಕೆ ರಾಜಯೋಗವೆಂದು ಹೆಸರು. ಅಂದರೆ ಚಿತ್ತೈಕಾಗ್ರ್ಯವೇ ರಾಜಯೋಗ. ಈ ರಾಜಯೋಗದಲ್ಲಿ ನಾದಾನುಸಂಧಾನಪರನಾದ ಯೋಗಿಯು ಸೃಷ್ಟಿಸಂಹಾರ ಕಾರ್ಯಗಳನ್ನು ಮಾಡಲು ಶಕ್ತನಾಗುವುದರಿಂದ ಈಶ್ವರನಿಗೆ ಸಮಾನನಾಗುವನು. ಈ ಅವಸ್ಥೆಯಲ್ಲಿ ಯೋಗಿಗೆ ಮುಕ್ತಿಯು ಸಿದ್ಧಿಸಿದರೂ ಅಥವಾ ಸಿದ್ಧಿಸದಿದ್ದರೂ ನಿರಂತರ ಮತ್ತು ಶಾಶ್ವತವಾದ ಬ್ರಹ್ಮಾನಂದವನ್ನು ಅನುಭವಿಸುವನು. "निष्पत्तौ वैणवः शब्दः क्वणद्वीणाक्वणो भवेत्॥ एकीभूतं तदा चित्तं राजयोगाभिधानकम्॥

सृष्टिसंहारकर्तासौ योगीश्वरसमो भवेत्॥ अस्तु वा मास्तु वा सिद्धिरत्रैवाखण्डितं सुखम्" हठ० ४-७६,७७,७८।

**निष्पत्र ನಿಷ್ಪತ್ರ** (वि०) 1. ಒಂದು ಪಾರ್ಶ್ವದಿಂದ ಮೈಯೊಳಕ್ಕೆ ಪ್ರವೇಶಿಸಿ ಮತ್ತೊಂದು ಪಾರ್ಶ್ವದಿಂದ ಹೊರಕ್ಕೆ ಹೊರಡುತ್ತಿರುವ ಬಾಣದಿಂದ ಕೂಡಿದ ಮೃಗ, निर्गतमन्यपार्श्वेन निःसृतं पत्रं यस्य। 2. ಎಲೆಗಳಿಲ್ಲದ. 3. ಗರಿಗಳಿಲ್ಲದ.

**निष्पत्राकृत ನಿಷ್ಪತ್ರಾಕೃತ** (वि०) ಒಂದು ಕಡೆಯಿಂದ ಪ್ರವೇಶಿಸಿ ಮತ್ತೊಂದು ಕಡೆಯಿಂದ ಹೊರಡುವುದರಿಂದ ಬಹಳ ನೋವುಂಟುಮಾಡುವ (ಬಾಣ). "शशंसुर्लाघवं तस्य निष्पत्राकृतसायकम्" याद० १६-१०।

**निष्पद ನಿಷ್ಪದ** (वि०) 1. ಕಾಲುಗಳಿಲ್ಲದವನು. निर्गतं पदं पादो यस्य। 2. ಕಾಲು (ಚಕ್ರ) ಗಳಿಲ್ಲದ ವಾಹನ, ಹಡಗು ಮೊದಲಾದುದು. "नौकाद्यं निष्पदं यानं तस्य लक्षणमुच्यते। अश्वादिकं तु यद्यानं स्थले सर्वं प्रतिष्ठितम्। जले नौकैव यानं स्यादतस्तां यत्नतो वहेत्"। 3. ಸ್ಥಾನವಿಲ್ಲದ, ಆಶ್ರಯವಿಲ್ಲದ. "निष्पदस्य कलेस्तत्र स्थानदानाद्विभीतकम्। कलिद्रुमः परं नासीदासीत्कल्पद्रुमोऽपि सः" नैष० १७-२१३।

**निःस्पन्द ನಿಃಸ್ಪಂದ**
**निष्पन्द ನಿಷ್ಪಂದ** } (वि०) ಸ್ಪಂದನವಿಲ್ಲದ, ಚಲನೆಯಿಲ್ಲದ. निर्गतः स्पन्दो स्पन्दनं यस्य। "मैथिलीतनयोद्गीतनिःस्पन्दमृगमाश्रमम्" रघु० १५-३७।

**निष्पन्दीकृत ನಿಷ್ಪಂದೀಕೃತ** (वि०) ಚಲನೆಯಿಲ್ಲದೆ ಮಾಡಲ್ಪಟ್ಟ, ಅಲುಗಾಡದಂತೆ ಮಾಡಲ್ಪಟ್ಟ. "निष्पन्दीकृतपद्मषण्डनयनं नष्टक्षपावासरम्" मृच्छ० ५-२४।

**निष्पन्न ನಿಷ್ಪನ್ನ** (वि०) 1. ಹುಟ್ಟಿದ, ಉತ್ಪತ್ತಿಹೊಂದಿದ. निस्+पद (गतौ) "क्तः" (३-४-७२)। 2. ಸಮಾಪ್ತಿಹೊಂದಿದ. 3. ಸಿದ್ಧವಾದ. "निष्पापत्वं फलं विद्धि तीर्थस्य मुनिसत्तम। कृषेः फलं यथा लोके निष्पन्नान्नस्य भक्षणम्"।

**निष्परिग्रह ನಿಷ್ಪರಿಗ್ರಹ** (पुं०) 1. ಪತ್ನೀ ಪುತ್ರ ಪರಿಜನರಾರೂ ಇಲ್ಲದ ಸಂನ್ಯಾಸಿ. निर्गतः परिग्रहः यस्य। "आत्मन्यात्मानमाधाय निर्द्वन्द्वो निष्परिग्रहः"। (वि०) 2. ವಿಷಯಾಭಿಲಾಷೆಯಿಲ್ಲದ. "एतावत् सह्यं, न निष्परिग्रहं स्थानपरिभ्रंशः पीडयिष्यति" मुद्रा० २।

**निष्पादक ನಿಷ್ಪಾದಕ** (वि०) ಉತ್ಪತ್ತಿಮಾಡುವವನು, ತಯಾರಿಸುವವನು. निस्+पद (गतौ)+णिच् "ल्युः" (३-१-१३४)।

**निष्पादन ನಿಷ್ಪಾದನ** (न०) 1. ಉತ್ಪತ್ತಿಮಾಡುವುದು, ತಯಾರಿಸುವುದು. निस् + पद (गतौ) + णिच् "ल्युट्" (३-३-११५)। 2. ಸಮಾಪ್ತಿಗೊಳಿಸುವುದು. स्त्रियां "युच्" (३-३-१०७)। **-पादना -ಪಾದನಾ.**

**निष्पादनीय ನಿಷ್ಪಾದನೀಯ** (वि०) 1. ಉತ್ಪತ್ತಿಮಾಡಲ್ಪಡುವ, ತಯಾರಿಸಲ್ಪಡುವ. निस् + पद (गतौ) + णिच् कर्म० "अनीयर्" (३-१-९६)। 2. ತಯಾರಿಸಬೇಕಾದ. "तव्यः" (३-१-९६)। **-दयितव्यः -ದಯಿತವ್ಯಃ.**

**निष्पादित ನಿಷ್ಪಾದಿತ** (वि०) 1. ತಯಾರಿಸಲ್ಪಟ್ಟ. नि + पद (गतौ) + णिच् "क्तः" (३-२-१०२)। 2. ಸಮಾಪ್ತಿಗೊಳಿಸಲ್ಪಟ್ಟ, ಪೂರ್ಣವಾಗಿ ಮಾಡಲ್ಪಟ್ಟ, ಸಾಧಿಸಲ್ಪಟ್ಟ. "मया निष्पादितं ह्यत्र देवकार्यमशेषतः" भाग० ११-८-२।

**निष्पान ನಿಷ್ಪಾನ** (न०) ಚೆನ್ನಾಗಿ ಕುಡಿಯುವುದು. निस् + पा (पाने) भावे "ल्युट्" (३-३-११५)।

**निष्पाव ನಿಷ್ಪಾವ** (पुं०) 1. ಮೊರದ ಗಾಳಿ, ಕೊಂಗದ ಗಾಳಿ. निष्पूयते तुषाद्यपनयेन शोध्यतेऽनेन—निस्+पूञ् (पवने) करः "घञ्" (३-३-१२१)। ಧಾನ್ಯವನ್ನು ಮೊರದಲ್ಲಿ ತೂರಿ ಹೊಟ್ಟನ್ನು ಬೇರ್ಪಡಿಸಬೇಕು. 2. ಧಾನ್ಯವನ್ನು ತೂರಿ ಹೊಟ್ಟನ್ನು ಬೇರ್ಪಡಿಸುವುದು. निस् + पूञ् भावे "घञ्" (३-३-१८)। 3. ರಾಜಮಾಷ, ಅವರೆ. 4. ಜಳ್ಳು ತೆನೆ.

**निष्पिष्ट ನಿಷ್ಪಿಷ್ಟ** (वि०) 1. ಪುಡಿಯಾಗಿರುವ, ಚೂರ್ಣವಾಗಿರುವ. पिष्लृ (संचूर्णने) "क्तः" (३-४-७२)। "शैलोपशल्यनिपतद्रथनेमिधारानिष्पिष्टनिष्ठुरशिलातलचूर्णगर्भाः" माघ० ५-८। 2. ಅರೆಯಲ್ಪಟ್ಟ, ನುಣ್ಣಗೆ ಮಾಡಲ್ಪಟ್ಟ. 3. ಹಿಂಸಿಸಲ್ಪಟ್ಟ, ಪೀಡಿಸಲ್ಪಟ್ಟ, "किष्किन्धाद्रिसदाऽत्यर्थं निष्पिष्टः कोणमुच्छ्वसन्" भट्टि० ६-१२०। 4. ಉಜ್ಜಲ್ಪಟ್ಟ, ತಿಕ್ಕಲ್ಪಟ್ಟ.

**निष्पीडन ನಿಷ್ಪೀಡನ** (न०) 1. ಹಿಂಡುವುದು, ಹಿಸುಕುವುದು. निस्+पीड (अवगाहने) + णिच् भावे "ल्युट्" (३-३-११५)। 2. ಅದುಮುವುದು, ಒತ್ತುವುದು. "श्वसदसितभुजङ्गभोगाङ्गदग्रन्थिनिष्पीडनोत्फुल्लफुल्लत्फणापीठनिर्यद्विषज्योतिरुज्जृम्भमाण० · · · · " मालती० ५-२३। 3. ಪೀಡಿಸುವುದು, ಹಿಂಸಿಸುವುದು. स्त्रियां "युच्" (३-३-१०७)। **-पीडना -ಪೀಡನಾ.** "सारम्भं चलता करेण निबिडां निष्पीडनां लम्भितः" नैष० १९-५७।

**निष्पीडयत् ನಿಷ್ಪೀಡಯತ್** (वि०) 1. ಹಿಂಡುತ್ತಿರುವ, ಹಿಸುಕುತ್ತಿರುವ. निस् + पीड (अवगाहने) + णिच् "शतृ" (३-२-१२४)। 2. ಹಿಂಸಿಸುತ್ತಿರುವ, ಪೀಡಿಸುತ್ತಿರುವ. 3. ಅದುಮುತ್ತಿರುವ, ಒತ್ತುತ್ತಿರುವ. स्त्रियां "ङीप्" (४-१-६)। –यन्ती –ಯಂತೀ.

**निष्पीत ನಿಷ್ಪೀತ** (वि०) ಸಂಪೂರ್ಣವಾಗಿ ಪಾನಮಾಡಲ್ಪಟ್ಟ, ಚೆನ್ನಾಗಿ ಕುಡಿಯಲ್ಪಟ್ಟ. निस् + पा (पाने) "क्तः" (३-२-१०२)। "निष्पीतकान्तिमकरन्दरसं प्रतीच्यां नीहारभानु चषकं निदधाति सन्ध्या" याद० १९-२५।

**निष्पुलाक ನಿಷ್ಪುಲಾಕ** (पुं०) ಪುಲಾಕವಿಲ್ಲದ ಧಾನ್ಯ, ಜಳ್ಳು ಹೊಟ್ಟುಗಳಿಲ್ಲದ ಧಾನ್ಯ. निर्गतं पुलाको यस्य।

**निष्पेष ನಿಷ್ಪೇಷ** (पुं०) 1. ಚೂರ್ಣಮಾಡುವುದು, ಪುಡಿಯಾಗಿ ಮಾಡುವುದು. निस् + पिष (संचूर्णने) "घञ्" (३-३-१८)। "दोर्निष्पेषविशीर्णसंचयदलत्कङ्काल-मुन्मथ्नतः" मालती० ८-९। 2. ಅರೆಯುವುದು, ನುಣ್ಣಗೆ ಮಾಡುವುದು, 3. ಪೀಡಿಸುವುದು, ಹಿಂಸಿಸುವುದು, 4. ಉಜ್ಜುವುದು, ತಿಕ್ಕುವುದು.

**निष्पेषण ನಿಷ್ಪೇಷಣ** (न०) 1. ಪುಡಿಮಾಡುವುದು. 2. ಹಿಂಸಿಸುವುದು. 3. ಅರೆಯುವುದು, 4. ಉಜ್ಜುವುದು, ತಿಕ್ಕುವುದು. "नाराचक्षेपणीयाश्मनिष्पेषोत्पतितानलम्" रघु० ४-७७।

**निष्पेषित ನಿಷ್ಪೇಷಿತ** (वि०) 1. ಪುಡಿಯಾಗಿ ಮಾಡಲ್ಪಟ್ಟ, ಚೂರ್ಣವಾಗಿ ಮಾಡಲ್ಪಟ್ಟ. निस्+पिष्लृ (संचूर्णने)+णिच् "क्तः" (३-२-१०२)। "निहतनिष्पेषितनष्टनिष्ठापिताशेषजननिवहः" मालती० ३। 2. ಹಿಂಸಿಸಲ್ಪಟ್ಟ, ಪೀಡಿಸಲ್ಪಟ್ಟ. 3. ಅರೆಯಲ್ಪಟ್ಟ. 4. ಉಜ್ಜಲ್ಪಟ್ಟ, ತಿಕ್ಕಲ್ಪಟ್ಟ.

**निष्प्रकम्प ನಿಷ್ಪ್ರಕಂಪ** (वि०) ನಿಶ್ಚಲವಾದ, ಅಲುಗಾಡದ, ಚಲಿಸದಿರುವ. निर्गतः प्रकम्पो यस्य। "सादृश्यं निलयननिष्प्रकम्पपक्षैराजग्मुर्जलनिधिशायिभिर्नगेन्द्रैः" किरा० ७-२०।

**निष्प्रतिक्रिय ನಿಷ್ಪ್ರತಿಕ್ರಿಯ** (वि०) 1. ಪ್ರತಿಕ್ರಿಯೆಯಿಲ್ಲದ, ನಿವಾರಣೋಪಾಯವಿಲ್ಲದ. निर्गता प्रतिक्रिया यस्य। 2. ಪ್ರತೀಕಾರವಿಲ್ಲದ, ಪ್ರತಿಫಲವಿಲ್ಲದ.

**निष्प्रतिद्वन्द्विक ನಿಷ್ಪ್ರತಿದ್ವಂದ್ವಿಕ** (वि०) 1. ಪ್ರತಿದ್ವಂದ್ವಿಗಳಿಲ್ಲದ, ಶತ್ರುಗಳಿಲ್ಲದ, ಎದುರಾಳಿಗಳಿಲ್ಲದ. निर्गतः प्रतिद्वन्द्वी यत्र। "कप्" (५-४-१५४)। "निष्प्रतिद्वन्द्विकं स्वर्गसुखमास्वाद्यतां सुरैः" याद० १६-१२७। 2. ಅಸದೃಶವಾದ, ಸರಿಸಮಾನವಿಲ್ಲದ.

**निष्प्रतिपत्ति ನಿಷ್ಪ್ರತಿಪತ್ತಿ** (स्त्री०) 1. ಸರಿಯಾದ ತಿಳಿವಳಿಕೆಯಿಲ್ಲದಿರುವಿಕೆ, ಅರಿವಿಲ್ಲದಿರುವಿಕೆ. निर्गता प्रतिपत्तिः सम्यग्ज्ञानम्। "कथं निष्प्रतिपत्तिशून्यमुत्थायान्यतः प्रवृत्तः" मालती० ९। (वि०) 2. ಗೌರವವಿಲ್ಲದ, ಮರ್ಯಾದೆಯಿಲ್ಲದ. 3. ತಿಳಿವಳಿಕೆಯಿಲ್ಲದ, ಸರಿಯಾದ ಅರಿವಿಲ್ಲದ.

**निष्प्रतिभ ನಿಷ್ಪ್ರತಿಭ** (वि०) ಪ್ರತಿಭೆಯಿಲ್ಲದ, ಪ್ರತ್ಯುತ್ಪನ್ನಮತಿಯಿಲ್ಲದ, ಮಂದಪ್ರಜ್ಞನಾದ. निर्गता प्रतिभा यस्य।

**निष्प्रतिम ನಿಷ್ಪ್ರತಿಮ** (वि०) ಅಸದೃಶವಾದ, ಅನುಪಮವಾದ, ಅತಿಶಯವಾದ. "तौ परस्परजिगीषयोद्यतौ वीक्ष्य निष्प्रतिमवीर्यवैभवौ" याद० १७-७५।

**निष्प्रतीकार ನಿಷ್ಪ್ರತೀಕಾರ** (वि०) 1. ನಿವಾರಣೋಪಾಯವಿಲ್ಲದ, ತಡೆಗಟ್ಟಲು ಸಾಧ್ಯವಿಲ್ಲದ. निर्गतः प्रतीकारो यस्य। "सर्वथा निष्प्रतीकारेयमापदुपस्थिता" काद०। 2. ವಾಸಿಮಾಡಲಾಗದ, ಗುಣಪಡಿಸಲಾಗದ.

**निष्प्रत्यूह ನಿಷ್ಪ್ರತ್ಯೂಹ** (वि०) ಅಡ್ಡಿಯಿಲ್ಲದ, ತಡೆಯಿಲ್ಲದ, ವಿಘ್ನವಿಲ್ಲದ. निर्गतः प्रत्यूहो यस्य। "निष्प्रत्यूहाः प्रियसखि यदा दुःसहाः संबभूवुः मोहोद्दामव्यसनगुरवो मन्मथोन्मादवेगाः" मालती० ९-४७।

**निष्प्रभ ನಿಷ್ಪ್ರಭ** (वि०) 1. ಕಾಂತಿಯಿಲ್ಲದ, ತೇಜಸ್ಸಿಲ್ಲದ, ಕಳೆಗುಂದಿದ. निर्गता प्रभा यस्य। "निष्प्रभश्च रिपुरास भूभृतां धूमशेष इव धूमकेतनः" रघु० ११-८१। 2. ಕತ್ತಲೆ ಕವಿದಿರುವ, ಮಸುಕಾಗಿರುವ. ಮಬ್ಬಾಗಿರುವ.

**निष्प्रमाण ನಿಷ್ಪ್ರಮಾಣ** (वि०) 1. ಅಳತೆಯಿಲ್ಲದ, ಅತಿ ದೊಡ್ಡದಾದ. निर्गतं प्रमाणं यस्य। "निष्प्रमाणशरीरः सन् लिलङ्घयिषुरर्णवम्" रामा०। 2. ಆಧಾರವಿಲ್ಲದ, ಪ್ರಮಾಣವಚನವಿಲ್ಲದ.

**निष्प्रयोजन ನಿಷ್ಪ್ರಯೋಜನ** (वि०) 1. ಪ್ರಯೋಜನವಿಲ್ಲದ, ಕೆಲಸಕ್ಕೆ ಬಾರದ. निर्गतं प्रयोजनं यस्य। 2. ಉದ್ದೇಶವಿಲ್ಲದ, ಗುರಿಯಿಲ್ಲದ. 3. ಕಾರಣವಿಲ್ಲದ. (अव्य०) 4. ಪ್ರಯೋಜನವಿಲ್ಲದೆ, ಫಲವಿಲ್ಲದೆ. 5. ಉದ್ದೇಶವಿಲ್ಲದೆ. 6. ಕಾರಣವಿಲ್ಲದೆ. "अलमनेन प्रश्रयेण, न निष्प्रयोजनमधिकारवन्तः प्रभुभिराहूयन्ते" मुद्रा० ३।

**निष्प्रवाणि ನಿಷ್ಪ್ರವಾಣಿ** (न०) ಹೊಸ ಬಟ್ಟೆ, ನೂತನ ವಸ್ತ್ರ, ಒಗೆಯದಿರುವ ಬಟ್ಟೆ. निर्गता प्रवाणी तन्तुवाय

शलाकाऽस्मात्। "अनाहतं निष्प्रवाणि तन्त्रकं च नवाम्बरे" अम०।

**निष्फल ನಿಷ್ಫಲ** (वि०) 1. ಫಲವಿಲ್ಲದ, ಪ್ರಯೋಜನ ವಿಲ್ಲದ. निर्गतं फलं यस्मात्। "निरगमदभिराद्धुमादृतानां भवति महत्सु न निष्फल: प्रयास:" माघ० ७-१। 2. ವ್ಯರ್ಥವಾದ, ನಿರರ್ಥಕವಾದ, ಕೆಲಸಕ್ಕೆ ಬಾರದ. "के वा न स्यु: परिभवपदं निष्फलारम्भयत्ना:" मेघ० १-५४। "काष्ठा: शून्या निष्फलानीन्द्रियाणि" मालती० ९-३७। 3. ಫಲಶೂನ್ಯವಾದ, ಕಾಯಿ ಹಣ್ಣು ಬಿಡದಿರುವ (ಮರ, ಗಿಡ ಮೊದಲಾದುದು). 4. ತಿರುಳಿಲ್ಲದ (ಧಾನ್ಯ), ಜಳ್ಳುಧಾನ್ಯ. "पलालोऽस्त्री स निष्फल:" अम०। (स्त्री०) **–फला –ಫಲಾ.** ಮುಟ್ಟು ನಿಂತು ಹೋದ ಹೆಂಗಸು, ವೃದ್ಧ ಹೆಂಗಸು.

**निष्यन्द ನಿಷ್ಯಂದ** (पुं०) 1. ಸ್ರವಿಸುವುದು, ಸೋರುವುದು. नि + स्यन्दृ (प्रस्रवणे) "घञ्" (३-३-१८)। "उन्नालबालकमलाकरमाकरन्दनिष्यन्दसंवलितमांसलगन्धबन्धु:" मालती० ९-१३। 2. ದ್ರವ, ರಸ. "शिशिरकटुकषाय: स्त्यायते सल्लकीनामिभदलितविकीर्णग्रन्थिनिष्यन्दगन्ध:" मालती० ९-६। 3. ಪ್ರವಾಹ, ಹೊನಲು. "गङ्गासरय्वोर्जलमुष्णतप्तं हिमाद्रिनिष्यन्द इवावतीर्ण:" रघु० १४-३।

**निष्यन्दमान ನಿಷ್ಯಂದಮಾನ** (वि०) 1. ಸ್ರವಿಸುತ್ತಿರುವ, ಸೋರುತ್ತಿರುವ. नि + स्यन्दृ (प्रस्रवणे) "शानच्" (३-२-१२४)। "प्रचलितकरिकृत्तिपर्यन्तचञ्चन्नखाघातभिन्नेन्दुनिष्यन्दमानामृतश्च्योत०.." मालती० ५-२३। 2. ಹರಿಯುತ್ತಿರುವ.

**निष्यन्दिन् ನಿಷ್ಯಂದಿನ್** (वि०) 1. ಸ್ರವಿಸುವ, ಸೋರುವ. नि + स्यन्दृ (प्रस्रवणे) "णिनि:" (३-१-१३४)। 2. ಸುರಿಸುವ. "खड्गाहतिव्यस्तस्कन्धकबन्धरन्ध्ररुधिरप्राग्भारनिष्यन्दिना" मालती० ५-२९। 3. ಪ್ರವಹಿಸುವ, ಹರಿಯುವ.

**निस् ನಿಸ್** (अव्य०) ಇದೊಂದು ಉಪಸರ್ಗ. ಈ ಉಪಸರ್ಗವು ಈ ಕೆಳಗಿನ ಅರ್ಥಗಳಿಗೆ ದ್ಯೋತಕವಾಗುವುದು : 1. ನಿಶ್ಚಯ, ನಿಜ, ದಿಟ. 2. ಸಾಕಲ್ಯ, ಸಮಗ್ರತೆ, ಸಂಪೂರ್ಣವಾಗಿರುವಿಕೆ. 3. ನಿಷೇಧ. 4. ಅತೀತವಾದ, ಅತಿಕ್ರಮಿಸಿದ, ಕಳೆದುಹೋದ. "निस् निषेधे च निश्चये। साकल्यातीतयो:" मेदि०।

**निसर्ग ನಿಸರ್ಗ** (पुं०) 1. ಸ್ವಭಾವ, ಪ್ರಕೃತಿ. नि + सृज (विसर्गे) "घञ्" (३-३-१८)। "निसर्गसंस्कारविनीत इत्यसौ नृपेण चक्रे युवराजशब्दभाक्" रघु० ३-३५। 2. ಸರ್ಗ, ಸೃಷ್ಟಿ. 3. ರೂಪ, ಸ್ವರೂಪ. 4. ದಾನ, ಕೊಡುಗೆ. "न त्वेवाधौ सोपकारे कौसीदीं वृद्धिमाप्नुयात्। न चाधे: कालसंरोधान्निसर्गोऽस्ति न विक्रय:" मनु० ८-१४३।

**निसर्गज ನಿಸರ್ಗಜ** (वि०) ಸಹಜವಾದ, ಸ್ವಭಾವಸಿದ್ಧವಾದ, ಹುಟ್ಟಿನಿಂದ ಬಂದ. निसर्गाज्जायते — जनी (प्रादुर्भावे) "ड:" (३-२-९८)।

**निसर्गतस् ನಿಸರ್ಗತಸ್** (अव्य०) ಸ್ವಭಾವವಾಗಿ, ಸಹಜವಾಗಿ. निसर्ग "तसि:" (वा० ५-४-४४)। "उपकृत्य निसर्गत: परेषामुपरोधं न हि कुर्वते महान्त:" माघ० २०-७५।

**निसर्गनिपुण ನಿಸರ್ಗನಿಪುಣ** (वि०) ಸ್ವಭಾವವಾಗಿ ಬುದ್ಧಿವಂತನಾದ, ಹುಟ್ಟಿನಿಂದಲೇ ಜಾಣನಾದ. निसर्गेण निपुण:। "निसर्गनिपुणा: स्त्रिय:" माल० ३।

**निसर्गशालीन ನಿಸರ್ಗಶಾಲೀನ** (वि०) ಸ್ವಭಾವವಾಗಿಯೇ ವಿನೀತನಾದ, ಸ್ವಭಾವವಾಗಿಯೇ ದಿಟ್ಟತನವಿಲ್ಲದ. निसर्गेण शालीन:। "निसर्गशालीन: स्त्रीजन:" माल० ४।

**निसर्गसिद्ध ನಿಸರ್ಗಸಿದ್ಧ** (वि०) ಸ್ವಭಾವವಾಗಿಯೇ ಸಿದ್ಧವಾದ, ಹುಟ್ಟಿನಿಂದಲೇ ಬಂದಿರುವ. "रागो नलिन्या हि निसर्गसिद्धः तत्र भ्रमत्येव वृथा षडङ्घ्रि:" भर्तृ० २-४७।

**निसृष्ट ನಿಸೃಷ್ಟ** (वि०) 1. ಬಿಡಲ್ಪಟ್ಟ, ತ್ಯಜಿಸಲ್ಪಟ್ಟ. नि + सृज (विसर्गे) "क्त:" (३-२-१०२)। "न स्वामिना निसृष्टोऽपि शूद्रो दास्यान्न मुच्यते" मनु० ८-४१४। 2. ಕೊಡಲ್ಪಟ್ಟ, ನೀಡಲ್ಪಟ್ಟ. 3. ತೆಗೆದು ಹಾಕಲ್ಪಟ್ಟ, ವಜಾಮಾಡಲ್ಪಟ್ಟ.

**निसृष्टार्थ ನಿಸೃಷ್ಟಾರ್ಥ** (पुं०) 1. ಮೂರು ವಿಧ ದೂತರಲ್ಲೊಬ್ಬ, ನಾಯಿಕಾನಾಯಕರ ಅಭಿಪ್ರಾಯವನ್ನು ಚೆನ್ನಾಗಿ ತಿಳಿದು ಸ್ವಬುದ್ಧಿಯಿಂದಲೇ ಅವರಿಗೆ ಉತ್ತರ ಕೊಡುತ್ತ, ಇಬ್ಬರ ಕಾರ್ಯವನ್ನು ಸುಗಮವಾಗಿ ನಡೆಸಿಕೊಡುವವನು ನಿಸೃಷ್ಟಾರ್ಥ ದೂತನು. निसृष्ट: निक्षिप्त: अर्थ: कार्यभारोऽस्मिन्। "उभयोर्भावमुन्नीय स्वयं वदति चोत्तरम्। सुश्लिष्टं कुरुते कार्यं निसृष्टार्थस्तु स स्मृत:" सा० द० ३-४७। 2. ರಾಜಕೀಯ ವ್ಯವಹಾರಗಳಲ್ಲಿ ಅಮಾತ್ಯನ ಗುಣಗಳಿಂದ ಕೂಡಿದ ದೂತನು ನಿಸೃಷ್ಟಾರ್ಥನು. "अमात्यसंपदोपेतो निसृष्टार्थ:"।

**निस्तत्त्व ನಿಸ್ತತ್ತ್ವ** (वि०) ತತ್ತ್ವವಾಗಿಲ್ಲದ, ವಾಸ್ತವ ಸ್ವರೂಪವಿಲ್ಲದ. निर्गतं तत्त्वं वास्तवं रूपं स्वरूपं वा यस्य।

**निस्तनी ನಿಸ್ತನೀ** (स्त्री०) ಸ್ತನಗಳಿಲ್ಲದ ಹೆಂಗುಸು. निर्गतौ स्तनौ यस्याः, वा "ङीष्" (४-१-५४)।

**निस्तन्तु ನಿಸ್ತಂತು** (वि०) ಸಂತಾನವಿಲ್ಲದ, ಮಕ್ಕಳಿಲ್ಲದ. निर्गतः तन्तुः यस्य।

**निस्तन्द्र ನಿಸ್ತಂದ್ರ** (वि०) 1. ಸೋಮಾರಿತನವಿಲ್ಲದ. निर्गता तन्द्रा यस्य। 2. ನಿದ್ರೆಯಿಲ್ಲದ, ತೂಕಡಿಕೆಯಿಲ್ಲದ. 3. ಆಯಾಸವಿಲ್ಲದ, ದಣಿವಿಲ್ಲದ.

**निस्तन्द्रि ನಿಸ್ತಂದ್ರಿ** (वि०) 1. ಸೋಮಾರಿತನವಿಲ್ಲದ. निर्गता तन्द्रिरालस्यं यस्य। 2. ತೂಕಡಿಕೆಯಿಲ್ಲದ. 3. ಆಯಾಸವಿಲ್ಲದ.

**निस्तन्द्री ನಿಸ್ತಂದ್ರೀ** (वि०) 1. ಸೋಮಾರಿತನವಿಲ್ಲದ. 2. ತೂಕಡಿಕೆಯಿಲ್ಲದ. 3. ಆಯಾಸವಿಲ್ಲದ. निर्गतः तन्द्र्याः।

**निस्तमस्क ನಿಸ್ತಮಸ್ಕ** (वि०) 1. ಕತ್ತಲೆಯಿಲ್ಲದ, ಅಂಧಕಾರವಿಲ್ಲದ. निर्गतं तमः यस्मात् "कप्" (५-४-१५४)। 2. ಪಾಪರಹಿತವಾದ, ದೋಷವಿಲ್ಲದ. "तस्य द्वितीयहरिविक्रमनिस्तमस्कं वायोरिमं परिवहस्य वदन्ति मार्गम्" शाकु० ७-६। 3. ಶೋಕರಹಿತವಾದ.

**निस्तरण ನಿಸ್ತರಣ** (न०) 1. ದಾಟುವುದು. निस् + तॄ (प्लवनतरणयोः) भावे "ल्युट्" (३-३-११५)। 2. ತೀರವನ್ನು ಮುಟ್ಟುವುದು, ದಡವನ್ನು ಸೇರುವುದು. 3. ಅಪಾಯದಿಂದ ಪಾರಾಗುವುದು, ಅಪಾಯದಿಂದ ತಪ್ಪಿಸಿಕೊಳ್ಳುವುದು. 4. ಉಪಾಯ, ಅಪಾಯದಿಂದ ತಪ್ಪಿಸಿಕೊಳ್ಳುವ ಮಾರ್ಗ. निस्तीर्यते अनेन — कर० "ल्युट्" (३-३-११७)। "स्यान्निस्तरणमुपाये निस्तारे तरणेऽपि च" मेदि०। 5. ಪೂರ್ಣಗೊಳಿಸುವುದು, ಕೊನೆಮುಟ್ಟುವುದು.

**निस्तर्हण ನಿಸ್ತರ್ಹಣ** (न०) ವಧಿಸುವುದು, ಕೊಲ್ಲುವುದು. निस् + तृहू (हिंसायाम्) भावे "ल्युट्" (३-३-११५)। "निस्तर्हणं निहननं क्षणनं परिवर्जनम्" अम०।

**निस्तल ನಿಸ್ತಲ** (वि०) 1. ಅಡಿಯಿಲ್ಲದ, ತಳಭಾಗವಿಲ್ಲದ. 2. ವರ್ತುಲವಾದ, ಗುಂಡಾಗಿರುವ. निर्गतं तलं यस्य। "कण्ठस्य तस्याः स्तनबन्धुरस्य मुक्ताकलापस्य च निस्तलस्य" कुमा० १-४२। 3. ಚಲಿಸುವ, ಅಲುಗಾಡುವ. (स्त्री०) **–ला –ಲಾ.** ಚೆಂಡು, ವರ್ತುಲವಾದ ವಸ್ತು.

**निस्तार ನಿಸ್ತಾರ** (पुं०) 1. ದಾಟುವುದು, ಆಚೆದಡ ಮುಟ್ಟುವುದು. निस् + तॄ (प्लवनतरणयोः) "घञ्" (३-३-१८)। 2. ಪೂರ್ತಿಗೊಳಿಸುವುದು, ಕೊನೆಮುಟ್ಟುವುದು. 3. ಕಷ್ಟದಿಂದ ತಪ್ಪಿಸಿಕೊಳ್ಳುವುದು, ಅಪಾಯದಿಂದ ಪಾರಾಗುವುದು. "निस्तारबीजमिदमेव कृशोदरीणां यन्माधव त्वमसि संप्रति कर्णधारः" उद्भ०। 4. ಸಾಲತೀರಿಸುವುದು, ಋಣವನ್ನು ಪರಿಹರಿಸುವುದು. "गृहीतराजवेतनस्य निस्तारः कृतः" हितो० ३। 5. ಉಪಾಯ. 6. ಹಾಯ್ದುಹೋಗುವುದು, ಕೊನೆಯನ್ನು ಮುಟ್ಟುವುದು. "संसार तव निस्तारपदवी न दवीयसी" भर्तृ० २-३३। 7. ಬಿಡುಗಡೆ ಹೊಂದುವುದು, ವಿಮೋಚನೆ ಪಡೆಯುವುದು.

**निस्तारक ನಿಸ್ತಾರಕ** (वि०) 1. ದಾಟಿಸುವವನು, ದಡ ಸೇರಿಸುವವನು. निस् + तॄ (प्लवनतरणयोः) "ण्वुल्" (३-१-१३३)। 2. ಬಿಡಿಸುವವನು, ವಿಮೋಚನೆಮಾಡಿಸುವವನು. 3. ಸಾಲ ತೀರಿಸುವವನು, ಋಣದಿಂದ ಬಿಡುಗಡೆ ಮಾಡಿಸುವವನು. 4. ಅಪಾಯದಿಂದ ತಪ್ಪಿಸುವವನು. 5. ಕೊನೆಮುಟ್ಟಿಸುವವನು.

**निस्तारण ನಿಸ್ತಾರಣ** (न०) 1. ದಾಟಿಸುವುದು, ಆಚೆದಡ ಮುಟ್ಟಿಸುವುದು. निस् + तॄ (प्लवनतरणयोः) + णिच् "ल्युट्" (३-३-११५)। 2. ದಡ ಮುಟ್ಟಿಸುವುದು, ಹೊಳೆ ಮೊದಲಾದುವನ್ನು ದಾಟಿಸುವುದು. 3. ಸಂಸಾರ ಬಂಧನದಿಂದ ಬಿಡುಗಡೆ ಮಾಡಿಸುವುದು. 4. ಸಾಲ ತೀರಿಸುವುದು. 5. ಅಪಾಯದಿಂದ ತಪ್ಪಿಸುವುದು. 6. ಕೊನೆ ಮುಟ್ಟಿಸುವುದು.

**निस्तारयितृ ನಿಸ್ತಾರಯಿತೃ** (वि०) "निस्तारक" ಪದದ ಅರ್ಥ. निस् + तॄ (प्लवनतरणयोः) + णिच् "तृच्" (३-१-१३३)। स्त्रियां "ङीप्" (४-१-५)। **–यित्री –ಯಿತ್ರೀ.**

**निस्तीर्ण ನಿಸ್ತೀರ್ಣ** (वि०) 1. ದಾಟಲ್ಪಟ್ಟ. निस् + तॄ (प्लवनतरणयोः) "क्तः" (३-२-१०२)। 2. ನೆರವೇರಿಸಲ್ಪಟ್ಟ, ಈಡೇರಿಸಲ್ಪಟ್ಟ, ಪೂರಯಿಸಲ್ಪಟ್ಟ. 3. ದಾನ ಮಾಡಲ್ಪಟ್ಟ, ಕೊಡಲ್ಪಟ್ಟ. 4. ತೊಂದರೆಯಿಂದ ತಪ್ಪಿಸಲ್ಪಟ್ಟ, ಅಪಾಯದಿಂದ ಪಾರುಮಾಡಲ್ಪಟ್ಟ. 5. ಸಾಲ ತೀರಿಸಲ್ಪಟ್ಟ, ಸಾಲದಿಂದ ಬಿಡುಗಡೆ ಮಾಡಲ್ಪಟ್ಟ.

**निस्तुष ನಿಸ್ತುಷ** (वि०) 1. ಹೊಟ್ಟು ತೆಗೆಯಲ್ಪಟ್ಟ ಧಾನ್ಯ ಮೊದಲಾದುದು. निर्गतः तुषः यस्मात्। 2. ದೋಷವಿಲ್ಲದ. "गुणैररीणैरुदयास्तनिस्तुषम्" नैष० १५-८।

**निस्तुषक्षीर ನಿಸ್ತುಷಕ್ಷೀರ** (ಪುಂ) ಗೋಧಿ.

**निस्तुषरत्न ನಿಸ್ತುಷರತ್ನ** (ನಂ) ಸ್ಫಟಿಕಶಿಲೆಯ ಹರಳು.

**निस्तुषीकृत ನಿಸ್ತುಷೀಕೃತ** (ವಿಂ) ಹೊಟ್ಟು ತೆಗೆಯಲ್ಪಟ್ಟ, ಹೊಟ್ಟಿಲ್ಲದೆ ಮಾಡಲ್ಪಟ್ಟ. निस् + तुष + कृञ् "च्विः" (५-४-५०)। "ईत्" (७-४-३२)। "क्तः" (३-२-१०२)।

**निस्तेजस् ನಿಸ್ತೇಜಸ್** (ವಿಂ) 1. ತೇಜಸ್ಸಿಲ್ಲದ, ತೇಜಸ್ಸನ್ನು ಕಳೆದುಕೊಂಡ, ಕಳೆಗುಂದಿದ. निर्गतं तेजः यस्मात्। 2. ವೀರ್ಯವಿಲ್ಲದ, ದುರ್ಬಲವಾದ, ಸತ್ತ್ವವಿಲ್ಲದ. "इदं कवचमज्ञात्वा कवचान्यं पठेत्तु यः। सर्वं तस्य वृथा देवि निस्तेजो न च वृद्धिदम्"। 3. ಧೈರ್ಯವಿಲ್ಲದ, ಉತ್ಸಾಹವಿಲ್ಲದ, ಮಂಕಾಗಿರುವ.

**निस्तोद ನಿಸ್ತೋದ** (ಪುಂ) ಚುಚ್ಚುವುದು, ಯಾತನೆ, ಕುಟುಕುವುದು. निस् + तुद (व्यथने) भावे "घञ्" (३-३-१८)। "मज्जक्षयेऽल्पशुक्रता पर्वभेदोऽस्थिनिस्तोदोऽस्थिशून्यता च" सुश्रुत० सूत्र० १५-९। भावे "ल्युट्" (३-३-११५)। –तोदनम् –ತೋದನವು. "पार्श्वभङ्गो गुदबस्तिनिस्तोदनम्" सुश्रुत०।

**निस्त्रप ನಿಸ್ತ್ರಪ** (ವಿಂ) ನಾಚಿಕೆಯಿಲ್ಲದ, ಲಜ್ಜೆಯಿಲ್ಲದ. "ईदृग्भण्डसखी कापि निस्त्रपा न मनागपि" नैष० २०-१४०।

**निस्त्रिंश ನಿಸ್ತ್ರಿಂಶ** (ಪುಂ) 1. ಖಡ್ಗ, ಕತ್ತಿ. निर्गतस्त्रिंशतोऽङ्गुलिभ्यः "डच्" (वा० ५-४-७३)। "परनिस्त्रिंशनिर्लूनकरवालाः पदातयः" माघ० १९-५५। (ವಿಂ) 2. ದಯೆಯಿಲ್ಲದ, ಕನಿಕರವಿಲ್ಲದ, ಕ್ರೂರ. "मन्युर्दुःसह एव यात्युपशमं नो सान्त्ववादैः स्फुटं हे निस्त्रिंश विमुक्तकण्ठकरुणं तावत्सखी रोदितु" अमरु० ६। 3. ಮೂವತ್ತಕ್ಕಿಂತ ಹೆಚ್ಚಾದ.

**निस्त्रिंशिन् ನಿಸ್ತ್ರಿಂಶಿನ್** (ವಿಂ) ಖಡ್ಗಧಾರಿ, ಕತ್ತಿಯನ್ನು ಹಿಡಿದಿರುವವನು. निस्त्रिंशोऽस्त्यस्य "इनिः" (५-२-११५)।

**निस्त्रैगुण्य ನಿಸ್ತ್ರೈಗುಣ್ಯ** (ವಿಂ) 1. ಸತ್ತ್ವರಜಸ್ತಮೋರೂಪವಾದ ಗುಣತ್ರಯದ ಕಾರ್ಯವಾದ ಸಂಸಾರದಿಂದ ದೂರವಾದ. त्रयो गुणास्त्रैगुण्यम् — तत्कार्यं संसारः — निर्गतः त्रैगुण्यात् संसारात् तत्कार्येभ्यः कामादिभ्यो वा। 2. ಸತ್ತ್ವರಜಸ್ತಮೋಗುಣಗಳ ಸಂಬಂಧವಿಲ್ಲದ. "त्रैगुण्यविषया वेदा निस्त्रैगुण्यो भवार्जुन" गीता २-४५।

**निस्स्नेह ನಿಸ್ಸ್ನೇಹ** (ವಿಂ) 1. ಸ್ನೇಹವಿಲ್ಲದ, ಪ್ರೇಮವಿಲ್ಲದ. 2. ಎಣ್ಣೆಯಿಲ್ಲದ. निर्गतः स्नेहः प्रेम तैलं वा यस्य।

**निस्पन्द ನಿಸ್ಪಂದ** (ವಿಂ) ಚಲನೆಯಿಲ್ಲದ. निर्गतः स्पन्दो यस्य। "सूक्ष्मे घने नैषधकेशपाशे निपत्य निस्पन्दतरीभवद्भ्याम्। तस्यानुबन्धं न विमोच्य गन्तुमपारि तल्लोचनखञ्जनाभ्याम्" नैष० ८-१३।

**निस्यन्द ನಿಸ್ಯಂದ** (ಪುಂ) 1. ತೊಟ್ಟಿಕ್ಕುವುದು, ಸೋರುವುದು, ಸ್ರವಿಸುವುದು. नि + स्यन्दू (प्रस्रवणे) "घञ्" (३-३-१८)। वा षत्वम् (८-३-७२)। निष्यन्दः ನಿಷ್ಯಂದಃ "तोयाधारपथाश्च वल्कलशिखानिष्यन्दरेखाङ्किताः" शाकु० १-१३। (ವಿಂ) 2. ಸ್ರವಿಸುವ, ಸೋರುವ. नि + स्यन्दू कर्तं० "अच्" (३-१-१३४)। "तदङ्गनिस्यन्दजलेन लोचने प्रमृज्य पुण्येन पुरस्कृतः सताम्" रघु० ३-४१। 3. ಪ್ರವಾಹ. 4. ಮರದ ಹಾಲು. "सल्लकीनामिभदलितविकीर्णग्रन्थिनिष्यन्दगन्धः" मालती० ९-६।

**निस्यन्दिन् ನಿಸ್ಯಂದಿನ್** (ವಿಂ) ಸ್ರವಿಸುವ, ಸೋರುವ. नि + स्यन्दू (प्रस्रवणे) "णिनिः" (३-१-१३४)। "सायं शशाङ्ककिरणाहतचन्द्रकान्तनिस्यन्दिनीरनिकरेण कृताभिषेकः" माघ० ४-५८।

**निस्राव ನಿಸ್ರಾವ** (ಪುಂ) ಅನ್ನದ ಗಂಜಿ. नि+स्रु (गतौ) "घञ्" (३-३-१९)।

**निस्वन ನಿಸ್ವನ** (ಪುಂ) ಶಬ್ದ. नि + स्वन (शब्दे) वा "अप्" (३-३-६४)। पक्षे "घञ्" (३-३-१८)। निस्वानः ನಿಸ್ವಾನಃ. "घण्टानादो निस्वनो डिण्डिमानाम्" माघ० १८-१०। "वायुं कृत्वाथ वाजाभ्यां पुङ्खे वैवस्वतं यमम्। विद्युत् कृत्वाथ निस्वानं मेरुं कृत्वाथ वै ध्वजम्" भा० द्रोण० २०३-७७।

**निहत ನಿಹತ** (ವಿಂ) 1. ಕೊಲ್ಲಲ್ಪಟ್ಟ, ವಧಿಸಲ್ಪಟ್ಟ. नि + हन (हिंसागत्योः) "क्तः" (३-२-१०२)। "सह भृत्यगणैः समित्रवर्गे निहते चेदिपतौ निवृत्तखेदाः" याद० १५-१२८। 2. ಹೊಡೆಯಲ್ಪಟ್ಟ. 3. ನಾಶಪಡಿಸಲ್ಪಟ್ಟ.

**निहनन ನಿಹನನ** (ನಂ) 1. ಕೊಲ್ಲುವುದು. नि+ हन (हिंसागत्योः) "ल्युट्" (३-३-११५)। 2. ನಾಶಪಡಿಸುವುದು. 3. ಹೊಡೆಯುವುದು.

**निहन्तव्य ನಿಹಂತವ್ಯ** (ವಿಂ) 1. ಕೊಲ್ಲಬೇಕಾದ. नि+हन (हिंसागत्योः) "तव्यः" (३-१-९६)। 2. ನಾಶಪಡಿಸಬೇಕಾದ. 3. ಹೊಡೆಯಲ್ಪಡುವ. 4. ನಾಶಪಡಿಸಲ್ಪಡುವ.

**निहन्तृ ನಿಹಂತೃ** (वि०) 1. ಕೊಲ್ಲುವವನು. नि + हन (हिंसागत्योः) "तृच्" (३-१-१३३)। 2. ನಾಶಪಡಿಸುವವನು. "निहन्ता वैरकाराणां सतां बहुकरः सदा। पारश्वधिकरामस्य शक्तेरन्तकरो रणे" भट्टि० ५-७८। 3. ಹೊಡೆಯುವವನು. (पुं०) 4. ಮಹಾದೇವ, ಪರಶಿವ. "भगहारी निहन्ता च कालो ब्रह्मा पितामहः" भा० अनु० ४७-७६। स्त्रियां "ङीप्" (४-१-५)। **-हन्त्री -ಹಂತ್ರೀ.**

**निहन्यमान ನಿಹನ್ಯಮಾನ** (वि०) 1. ಹೊಡೆಯಲ್ಪಡುತ್ತಿರುವ. नि + हन (हिंसागत्योः) कर्म० "शानच्" (३-२-१२४)। "युगान्तदम्भोलिनिपातभीषणैः निहन्यमानं निजमुष्टिमुद्गरैः" याद० १४-२१। 2. ನಾಶಪಡಿಸಲ್ಪಡುತ್ತಿರುವ.

**निहाका ನಿಹಾಕಾ** (स्त्री०) ದೊಡ್ಡಜಾತಿಯ ಹಲ್ಲಿ, ನೀರುಡ. नियतं जहाति भुवम्—नि+ओ हाक् (त्यागे) "कन्" (उ० ३-४४)। "निहाका गोधिका समे" अम०।

**निहिंसन ನಿಹಿಂಸನ** (न०) ಕೊಲ್ಲುವುದು. नि + हिंसि (हिंसायाम्) "ल्युट्" (३-३-११५)।

**निहित ನಿಹಿತ** (वि०) 1. ಇಡಲ್ಪಟ್ಟ, ಇರಿಸಲ್ಪಟ್ಟ. नि + डु धाञ् (धारणपोषणयोः) "क्तः" (३-२-१०२)। "तैरुर्वीनिहितचलत्पदं प्रचेले" माघ० ८-१। "तदीयमूले निहितं द्वितीयवद्ध्रुवं दधे कङ्कणमालवालताम्" नैष० १५-६८। "देवी वः परितोषितेति निहितामन्तःपुरीभिः पुरः" नैष० २९-६५। 2. ಕೊಡಲ್ಪಟ್ಟ. "इत्युक्तवत्या निहितादरेण भैम्या गृहीता मघवत्प्रसादः" नैष० ६-८६।

**निहीन ನಿಹೀನ** (वि०) 1. ಕೆಳಮಟ್ಟದ, ಕೆಳದರ್ಜೆಯ. नितरां हीनः। 2. ನೀಚ, ನಿಕೃಷ್ಟ, ಅಧಮ. "निहीनैः परिक्लिश्यन्ति समुपेक्षन्ति मां कथम्" भा० वन० १२-१२१।

**निह्नव ನಿಹ್ನವ** (पुं०) 1. ಅಪಲಾಪ, ವಾಸ್ತವವಾದ ವಿಷಯವನ್ನು ಅಲ್ಲವೆಂದು ಮರೆಮಾಚುವುದು. नि+ह्नुङ् (अपनयने) "अप्" (३-३-५७)। "निह्नवे भावितो दद्याद्धनं राज्ञे च तत्समम्" याज्ञ० २-११। 2. ಶಾಠ್ಯ, ಮೂರ್ಖತನ. 3. ಅವಿಶ್ವಾಸ, ಸಂಶಯ, ಅಪನಂಬಿಕೆ. "निह्नवः स्यादविश्वासे प्रलापे निकृतावपि" हैम०।

**निह्नुत ನಿಹ್ನುತ** (वि०) 1. ಅಪಲಾಪಮಾಡಲ್ಪಟ್ಟ, ಅಲ್ಲವೆಂದು ಮುಚ್ಚಿಡಲ್ಪಟ್ಟ, ಮರೆಮಾಚಲ್ಪಟ್ಟ. नि + ह्नुङ् (अपनयने) "क्तः" (३-२-१०२)। "स्वं निह्नुते शितिमचिह्नमभुष्य रागैः" नैष० २२-१३६। 2. ನಿರಾಕರಿಸಲ್ಪಟ್ಟ. "अहमहन्यवलोकयितास्मि ते पुनरहर्पतिनिह्नुतदर्पताम्" नैष० ४-५४।

**निह्नुति ನಿಹ್ನುತಿ** (स्त्री०) 1. ಅಪಲಾಪಮಾಡುವುದು, ಮರೆಮಾಚುವುದು, ಅಲ್ಲವೆಂದು ಹೇಳಿ ಮುಚ್ಚಿಡುವುದು. नि+ह्नुङ् (अपनयने) "क्तिन्" (३-३-९४)। "धन्यो हन्यत एव निह्नुतिपरः प्रेयान् रुदत्या हसन्" अमरु० ९। 2. ನಿರಾಕರಿಸುವುದು.

**नीकार ನೀಕಾರ** (पुं०) ತಿರಸ್ಕಾರ, ಅವಮಾನ.

**नीकाश ನೀಕಾಶ** (वि०) 1. (ಇದು ಉತ್ತರಪದವಾದಾಗ) ಸದೃಶವಾದ, ಸಮಾನವಾದ. नि + काशृ (दीप्तौ) "अच्" (३-१-१३४)। दीर्घः (६-३-१२३)। "आकाशनीकाशतटां तीरवानीरसंकुलाम्" भा० वन० १८४-१४। (पुं०) 2. ನಿಶ್ಚಯ. "नीकाशो निश्चये तुल्ये" मेदि०।

**नीच ನೀಚ** (वि०) 1. ಕುಬ್ಜ, ಕುಳ್ಳ, ಗಿಡ್ಡ. निकृष्टाम् ईं शोभां चिनोति—चिञ् (चयने) "डः" (३-२-१०२)। "प्रायेण नीचानपि मेदिनीभृतो जनः समेनैव पथाधिरोहति" माघ० १२-४६। 2. ಕೆಳಗಡೆ ಇರುವ, ಕೆಳಭಾಗದಲ್ಲಿರುವ. "शुचौ देशे प्रतिष्ठाप्य स्थिरमासनमात्मनः। नात्युच्छ्रितं नातिनीचं चेलाजिनकुशोत्तरम्" गीता० ६-११। 3. ತಗ್ಗಾದ (ಶಬ್ದ), ಮೆಲ್ಲನೆಯ (ಧ್ವನಿ). 4. ಅಧಮ, ಅಸಭ್ಯ, ಕೆಳದರ್ಜೆಯ ಮನುಷ್ಯ. "दैवादवाप्तविभवस्य गुणद्विषोऽस्य नीचस्य गोचरगतैः सुखमास्यते कैः" भर्तृ० १-४८। 5. ಕೆಳದರ್ಜೆಯ, ಬೆಲೆಯಿಲ್ಲದ, ಕೆಲಸಕ್ಕೆ ಬಾರದ. 6. ತಗ್ಗಾದ (ಪ್ರದೇಶ). "नीचः पामरे वासनेऽपि च" मेदि०। 7. ಗ್ರಹಗಳ ಉಚ್ಚಸ್ಥಾನದಿಂದ 7ನೆಯ ಸ್ಥಾನ.

**नीचकैस् ನೀಚಕೈಸ್** (अव्य०) 1. ಕೆಳಗೆ, ಕೆಳಕ್ಕೆ. 2. ಮೆಲ್ಲಗೆ. 3. ಮೆಲ್ಲನೆಯ ಧ್ವನಿಯಲ್ಲಿ. 4. ಕುಳ್ಳ, ಗಿಡ್ಡ.

**नीचग ನೀಚಗ** (पुं०) 1. ಉಚ್ಚಸ್ಥಾನದಿಂದ 7ನೇ ಸ್ಥಾನಕ್ಕೆ ಹೋಗಿರುವ ಗ್ರಹ. नीचं नीचस्थानं गच्छति — गम्लृ (गतौ) "डः" (वा० ३-२-४८)। (वि०) 2. ಕೆಳಮುಖವಾಗಿ ಹೋಗುವ (ಜಲ). (स्त्री०) **-गा -ಗಾ.** 3. ಕೆಳಮುಖವಾಗಿ ಹರಿಯುವ ನದಿ. 4. ನೀಚಪುರುಷನೊಡನೆ ಹೋಗುವ ಹೆಂಗಸು.

**नीचगृह ನೀಚಗೃಹ** (ನಂ) ಸೂರ್ಯ ಮೊದಲಾದ ಗ್ರಹಗಳಿಗೆ ತಮ್ಮ ಉಚ್ಚಸ್ಥಾನದಿಂದ 7 ನೆಯ ಸ್ಥಾನ (ರಾಶಿ).

| ಗ್ರಹ | ಉಚ್ಚರಾಶಿ | ನೀಚರಾಶಿ |
|---|---|---|
| ರವಿ | ಮೇಷ | ತುಲಾ |
| ಚಂದ್ರ | ವೃಷಭ | ವೃಶ್ಚಿಕ |
| ಕುಜ | ಮಕರ | ಕರ್ಕಾಟಕ |
| ಬುಧ | ಕನ್ಯಾ | ಮೀನ |
| ಗುರು | ಕರ್ಕಾಟಕ | ಮಕರ |
| ಶುಕ್ರ | ಮೀನ | ಕನ್ಯಾ |
| ಶನಿ | ತುಲಾ | ಮೇಷ |
| ರಾಹು | ಮಿಥುನ | ಧನುಸ್ಸು |
| ಕೇತು | ಧನುಸ್ಸು | ಮಿಥುನ |

**नीचता ನೀಚತಾ** (स्त्री०) 1. ಕೆಳಮಟ್ಟ, ಕೆಳದರ್ಜೆ, ಕಡಮೆಯ ಅಂತಸ್ತು. "अपहाय तुङ्गमपि मानमुचितमवलम्ब्य नीचताम्" माघ० १५-१९। 2. ಕುಳ್ಳಾಗಿರುವಿಕೆ, ಮೋಟಾಗಿರುವಿಕೆ. "कुब्जा नीचतयैव यान्ति शनकैरात्मेक्षणाशङ्किनः" रत्ना० २-३। नीचस्य भावः "तल्" (५-१-११९)। "त्वः" (५-१-११९)। **—त्वम् —ತ್ವಮ್.**

**नीचपथ ನೀಚಪಥ** (पुं०) ಕೆಳಕ್ಕೆ ಇಳಿಯುವ ಮಾರ್ಗ.

**नीचभोज्य ನೀಚಭೋಜ್ಯ** (पुं०) ಕೆಳದರ್ಜೆಯ ಮನುಷ್ಯರ ಆಹಾರ. नीचैर्भोज्यः।

**नीचा ನೀಚಾ** (स्त्री०) ಉತ್ತಮವಾದ ಹಸು, ಶ್ರೇಷ್ಠವಾದ ಆಕಳು.

**नीचैस् ನೀಚೈಸ್** (अव्य०) 1. ಕೆಳಭಾಗ, ತಗ್ಗುಪ್ರದೇಶ. नि + चिञ् (चयने) "डैसिः" (उ० ५-१३)। "नीचैर्गच्छत्युपरि च दशा चक्रनेमिक्रमेण" मेघ० २-४६। 2. ಮೆಲ್ಲಗೆ, ನಿಧಾನವಾಗಿ. "नीचैर्वास्यत्युपजिगमिषोर्देवपूर्वं गिरिं ते" मेघ० १-४२। 3. ಒಂದು ಬೆಟ್ಟ. "नीचैराख्यं गिरिमधिवसेस्तत्र विश्रामहेतोः" मेघ० १-२५। 4. ಮೆಲ್ಲನೆಯ ಧ್ವನಿಯಲ್ಲಿ. "नीचैः शंस हृदि स्थितो हि ननु मे प्राणेश्वरः श्रोष्यति" अमरु० ७०। 5. ಕುಳ್ಳ, ಗಿಡ್ಡ, ವಾಮನ. 6. ನಮ್ರನಾಗಿ, ವಿಧೇಯನಾಗಿ. "प्रवेश्य चैनं पुरमग्रयायी नीचैस्तथोपाचरदर्पितश्रीः" रघु० ५-६२।

**नीड ನೀಡ** (पुंन०) 1. ಹಕ್ಕಿಗಳ ಗೂಡು. नितराम् ईडयते — नि + ईड (स्तुतौ) "घञ्" (३-३-१९)। "वीरुन्नीडकपोतकूजितमनुक्रन्दन्त्यधः कुक्कुभाः" मालती० ९-७। 2. ಆಶ್ರಯಸ್ಥಾನ, ವಿಶ್ರಾಂತಿಸ್ಥಾನ. "अबलस्वकुलाशिनो झषान्निजनीडद्रुमपीडिनः खगान्" नैष० २-१०।

**नीडक ನೀಡಕ** (पुं०) 1. ಪಕ್ಷಿ, ಹಕ್ಕಿ. नीडे कायति — कै (शब्दे) "कः" (३-२-४)। 2. ಹಕ್ಕಿಗಳ ಗೂಡು.

**नीडज ನೀಡಜ** (पुं०) ಪಕ್ಷಿ. ಹಕ್ಕಿ. नीडे जायते — जनी (प्रादुर्भावे) "डः" (३-२-९७)।

**नीडोद्भव ನೀಡೋದ್ಭವ** (पुं०) ಪಕ್ಷಿ, ಹಕ್ಕಿ. नीडे उद्भवति--उद्+भू (सत्तायाम्) "अप्" (३-३-५७)। "शृङ्खलानिबद्धनीडोद्भवविभ्रमं युवा" नैष० १६-६३।

**नीत ನೀತ** (वि०) 1. ಒಯ್ಯಲ್ಪಟ್ಟ, ತರಲ್ಪಟ್ಟ. णीञ् (प्रापणे) "क्तः" (३-२-१०२)। "नीतस्त्रिलोकपतिना निजराजधानीं भूयः प्रजात इव पौरजनैः प्रतीतः" याद० २०-९८। 2. ಹೊಂದಿಸಲ್ಪಟ್ಟ, ಸೇರಿಸಲ್ಪಟ್ಟ, ಮುಟ್ಟಿಸಲ್ಪಟ್ಟ. "न नीतमन्येन नतिं कदाचित्कर्णान्तिकप्राप्तगुणं क्रियासु" माघ० ३-२०। "निजेन नीतं विजितान्यगौरवं गभीरतां धैर्यगुणेन भूयसा" किरा० १४-३९। 3. ಕಳೆಯಲ್ಪಟ್ಟ. "नीतान्यमूनि मठचत्वरशून्यदेवागारेषु मूर्खमुखरैः सह वासराणि" प्रबोध० ६-१२।

**नीति ನೀತಿ** (स्त्री०) 1. ಹೊಂದಿಸುವುದು, ತಲುಪಿಸುವುದು, ಮುಟ್ಟಿಸುವುದು. णीञ् (प्रापणे) "क्तिन्" (३-३-९४)। 2. ಮಾರ್ಗದರ್ಶನ, ನೇತೃತ್ವ, ಕಾರ್ಯವಿಧಾನವನ್ನು ತೋರಿಸಿಕೊಡುವುದು. 3. ನಡತೆ, ವರ್ತನೆ, ನಡವಳಿಕೆ. 4. ನಯ, ವಿನಯ, ಸಭ್ಯತೆ. नीयन्ते संलभ्यन्ते उपायादयः ऐहिकामुष्मिकार्था वास्यां अनया वा-णीञ् अधि० कर० वा क्तिन्। 5. ವಿವೇಕದಿಂದ ಕೂಡಿದ ವರ್ತನೆ, ನ್ಯಾಯವಾದ ವರ್ತನೆ. "काले खलु समारब्धाः फलं बध्नन्ति नीतयः" रघु० १२-६९। "आर्जवं हि कुटिलेषु न नीतिः" नैष० ५-१०३। 6. ಕಾರ್ಯದ ವ್ಯವಸ್ಥೆ, ಯೋಜನೆ, ಕಾರ್ಯನಡೆಯುವ ಏರ್ಪಾಡು. "अद्यान्तः खलु सर्वथास्य मदनायासप्रबन्धस्य मे कल्याणं विदधातु वा भगवतीनीतिर्विपर्येतु वा" मालती० ६-३। 7. ರಾಜ್ಯಾಡಳಿತ ಶಾಸ್ತ್ರ, ರಾಜಕೀಯ ವ್ಯವಹಾರದ ತತ್ತ್ವ, ರಾಜತಂತ್ರ. "आत्मोदयः परज्यानिः द्वयं नीतिरितीयती" माघ० २-३०। "नीतिरापदि यद्गम्यः परस्तन्मानिनो ह्रिये" माघ० २-६१। ನೀತಿಯನ್ನು ಬೋಧಿಸುವ ಗ್ರಂಥಗಳಿಂದ ಮನುಷ್ಯನು ಧರ್ಮಾಧರ್ಮ, ನಯ, ವಿವೇಕ, ಕಾರ್ಯನಿರ್ವಾಹದಲ್ಲಿ ಚಾತುರ್ಯ, ರಾಜ್ಯಾಡಳಿತನೈಪುಣ್ಯ ಮುಂತಾದ ಅನೇಕ ವಿಷಯಗಳಲ್ಲಿ ಪ್ರಾವೀಣ್ಯ ಪಡೆದು ಸಮಾಜದಲ್ಲಿ ಆದರ್ಶಪ್ರಾಯನಾಗಬಹುದು. ನೀತಿಯನ್ನು ತನ್ನ ಜೀವನದಲ್ಲಿ ಅಳವಡಿಸಿ

ಕೊಂಡು ಲೋಕಕ್ಕೂ ಮಾರ್ಗದರ್ಶನ ಮಾಡಿ ಜನತೆಯ ಜೀವನವನ್ನು ಸುಖಮಯವನ್ನಾಗಿ ಮಾಡಬಹುದು.

ಶುಕ್ರಾಚಾರ್ಯರು, ಬೃಹಸ್ಪತ್ಯಾಚಾರ್ಯರು, ಕಾಮಂದಕಿ, ಚಾಣಕ್ಯ ಮುಂತಾದವರಿಂದ ಪ್ರಜಾಕ್ಷೇಮಕ್ಕಾಗಿ ರಚಿತವಾದ ನೀತಿಶಾಸ್ತ್ರಗ್ರಂಥಗಳು ಜನತೆಗೆ ಬೋಧಪ್ರದವಾಗಿವೆ. "नयस्य विनयो मूलं विनयः शास्त्रनिश्चयः। विनयो हीन्द्रियजयः तद्युक्तं शास्त्रमिच्छति"। ನೀತಿಶಾಸ್ತ್ರದ ಅಧ್ಯಯನದಿಂದ ಮನುಷ್ಯನ ಜೀವನದಲ್ಲಿ ಕೆಳಗೆ ಕಂಡಂತೆ ಕರ್ತವ್ಯ ಮತ್ತು ಅಕರ್ತವ್ಯಗಳ ವಿವೇಕವುಂಟಾಗುವುದು. "शुचितास्तिक्यपूतात्मा पूजयेद्देवतां सदा। देवतावद्गुरुजनमात्मवच्च सुहृज्जनम्। प्रणिपातेन हि गुरुं सतोऽमृषानुचेष्टितैः। कुर्वीताभिमुखान् भृत्यैः देवान् सत्कृतकर्मणा। सद्भावेन हरेन्मित्रं संभ्रमेण च बान्धवान्। स्त्रीभृत्यान् प्रेमदानाभ्यां दाक्षिण्येनेतरं जनम्। अनिन्दा परकृत्येषु स्वधर्मपरिपालनम्। कृपणेषु दयालुत्वं सर्वत्र मधुरा गिरः। प्राणैरप्युपकारित्वं मित्रायाव्यभिचारिणे। गृहागते परिष्वङ्गः शक्त्या दानं सहिष्णुता। स्वसमृद्धिष्वनुत्सेकः परवृद्धिष्वमत्सरः। परोपतापि वचनं मौनव्रतचरिष्णुना" अग्निपु०।

**नीतिघोष ನೀತಿಘೋಷ** (पुं०) ಬೃಹಸ್ಪತಿಯ ರಥ. नीत्यात्मको घोषो यत्र। "नन्दिघोषोऽर्जुनरथो नीतिघोषस्तु गीष्पतेः" त्रिकाण्ड०।

**नीतिज्ञ ನೀತಿಜ್ಞ** (वि०) ನೀತಿಯನ್ನು ತಿಳಿದವನು, ನೀತಿ ಕುಶಲನು. नीतिं जानाति — ज्ञा (अवबोधने) "कः" (३-२-३)।

**नीतिमत् ನೀತಿಮಂತ್** (वि०) ನೀತಿಯುಕ್ತ, ನೀತಿಯನ್ನು ಚೆನ್ನಾಗಿ ತಿಳಿದು ಅದನ್ನು ಅನುಷ್ಠಾನದಲ್ಲಿ ತಂದುಕೊಂಡಿರುವವನು. नीतिः प्राशस्त्येनास्त्यस्य "मतुप्" (५-२-१४)। स्त्रियां "ङीप्" (४-१-६)। —मती — ಮತೀ.

**नीतिव्यतिक्रम ನೀತಿವ್ಯತಿಕ್ರಮ** (पुं०) ನೀತಿಯನ್ನು ಮೀರಿ ನಡೆಯುವುದು, ನೀತಿಯ ಉಲ್ಲಂಘನೆ. नीतेः व्यतिक्रमः।

**नीतिशास्त्र ನೀತಿಶಾಸ್ತ್ರ** (न०) ನೀತಿಯನ್ನು ಬೋಧಿಸುವ ಶಾಸ್ತ್ರ, ಶುಕ್ರನೀತಿ, ಬಾರ್ಹಸ್ಪತ್ಯ ನೀತಿ, ಕಾಮಂದಕೀಯ ನೀತಿ ಮುಂತಾದ ನೀತಿಶಾಸ್ತ್ರ. "भार्गवो नीतिशास्त्रं तु जगाद जगतो हितम्" भा०।

**नीध्र ನೀಧ್ರ** (न०) 1. ಮನೆಯ ಸೂರು, ಮನೆಯ ಹೊದಿಕೆ (ಮೇಲುಛಾವಣಿ)ಯ ತುದಿಯ ಭಾಗ. नितराम् इन्धे — नि इन्धी (दीप्तौ) "रक्" (उ० २-१३)। नितरां ध्रियते — नि + धृङ् (अवस्थाने) "कः" (वा० ३-२-५) वा। 2. ಅರಣ್ಯ, ಕಾಡು. 3. ಚಂದ್ರ. 4. ರೇವತೀ ನಕ್ಷತ್ರ. 5. ನೇಮಿ, ಚಕ್ರದ ಅಂಚು. "नीध्रं नेमौ वलीकेन्द्वोरेवतीभे च कानने" विश्व०। "नीव्र" ಎಂದೂ ಪಾಠಾನ್ತರವಿರುವುದು. "वलीकनीध्रे (व्रे) पटलप्रान्ते" अम०। "हरिन्मणिश्यामतृणाभिरामैर्गृहाणि नीध्रैरिव यत्र रेजुः" माघ० ३-४९।

**नीप ನೀಪ** (पुं०) 1. ಕದಂಬವೃಕ್ಷ. ಇದನ್ನು ಕೆಲವರು ಈಚಲು ಮರವೆನ್ನುವರು. णीञ् (प्रापणे) "पः" (उ० ३-२३)। "अंसलम्बिकुटजार्जुनस्रजस्तस्य नीपरजसाङ्गरागिणः" रघु० १९-३७। 2. ಕೆಂಪು ದಾಸವಾಳದ ಗಿಡ. 3. ನೀಲಿ ಅಶೋಕವೃಕ್ಷ. 4. ರಾಜರ ಒಂದು ವಂಶ. "नीपान्वयः पार्थिव एष यज्वा गुणैर्यमाश्रित्य परस्परेण" रघु० ६-४६। 5. ಬೆಟ್ಟದ ಕೆಳಪ್ರದೇಶ.

**नीयमान ನೀಯಮಾನ** (वि०) 1. ಒಯ್ಯಲ್ಪಡುತ್ತಿರುವ, ಸಾಗಿಸಲ್ಪಡುತ್ತಿರುವ, ತರಲ್ಪಡುತ್ತಿರುವ. णीञ् (प्रापणे) + णिच् "शानच्" (३-२-१२४)। "बभौ बलौघः शशिनोदितेन वेलामुदन्वानिव नीयमानः" रघु० १६-२७। 2. ಹೊಂದಿಸಲ್ಪಡುತ್ತಿರುವ, ಈಡುಮಾಡಲ್ಪಡುತ್ತಿರುವ. "परितः प्रसभेन नीयमानः शरवर्षैरवसायमाश्रयाशः" माघ० २०-७२।

**नीर ನೀರ** (न०) ಜಲ, ನೀರು. णीञ् (प्रापणे) "रक्" (उ० २-१३)। निर्गतं रात् अग्नेः इति वा। "अग्नेरापः" श्रुतिः। निर्गतो रोऽग्निर्यस्मात् इति वा। "अद्भ्योऽग्निर्ब्रह्मणः क्षत्रम्" स्मृतिः। "एकत्र स्फटिकतटांशुभिन्ननीरा नीलाश्मद्युतिभिदुराम्भसोऽपरत्र" माघ० ४-२६। ಕುಡಿಯಲು ಕೊಳದ ನೀರು ಶ್ರೇಷ್ಠವಾದುದು. "वाप्युद्भवं तत्प्रवदन्ति धीरा नीरं समासेन निगद्यतेऽत्र। यत् श्रीमतां चैव महायतीनां बलप्रदं पथ्यतरं प्रदिष्टम्"। ತೆಗೆದಿಟ್ಟ ನೀರು ಮಾರನೆಯ ದಿನಕ್ಕೆ ಶುದ್ಧವಲ್ಲ. "त्यजेत्पर्युषितं पुष्पं त्यजेत् पर्युषितं जलम्। गङ्गातोयं च तुलसी पवित्रं सर्वदा स्मृतम्" ಆದರೆ ಗಂಗಾನದಿಯ ಜಲವು ಸರ್ವದಾ ಶುದ್ಧವಾದುದು.

**नीरक्त ನೀರಕ್ತ** (वि०) ಬಣ್ಣವಿಲ್ಲದ, ಬಣ್ಣವು ಹೋಗಿರುವ (ವಸ್ತ್ರ). "नीरक्त वसनमपाकृतोऽङ्गरागः" माघ० ८-६१।

**नीरज ನೀರಜ** (न०) 1. ಪದ್ಮ, ಕಮಲ. ತಾವರೆ. नीरे जायते — जनी (प्रादुर्भावे) "ड:" (३-२-९७)। "जगदर्तुनिहिते हृदि नीरजे दवथुकुड्मलनेन पृथुस्तनीम्" नैष० ४-३०। 2. ಬೆಂಗಲು ಕೋಷ್ಠ. "नीरजं कुष्ठ-पद्मयो:" मेदि०। 3. ಮುಕ್ತಾಫಲ, ಮುತ್ತು. (वि०) 4. ನೀರಿನಲ್ಲಿ ಹುಟ್ಟಿದ.

**नीरजस् ನೀರಜಸ್** (वि०) 1. ರಜಸ್ಸಿಲ್ಲದ, ಧೂಳಿಲ್ಲದ (ಪ್ರದೇಶ). 2. ಪರಾಗವಿಲ್ಲದ. 3. ರಜೋಗುಣ ವಿಲ್ಲದ. निर्गतं रज: धूलि: पराग: रजोगुणो वा यस्य। "नीरजस्तमसा सत्त्वशुद्धिर्निःस्पृहता शम:" याज्ञ० ३-१५९। (स्त्री०) 4. ಮುಟ್ಟು ನಿಂತುಹೋಗಿರುವ ಹೆಂಗಸು.

**नीरजस्क ನೀರಜಸ್ಕ** (वि०) 1. ಧೂಳಿಲ್ಲದ. 2. ಪರಾಗ ವಿಲ್ಲದ. 3. ರಜೋಗುಣವಿಲ್ಲದ. निर्गतं रजो धूलि: पराग: रजोगुणो वा यस्य। वा "कप्" (५-४-१५४)। "नीरजस्के सदानन्दे पदे चाहं निवेशित:" प्रबोध० ६-३२।

**नीरजाक्ष ನೀರಜಾಕ್ಷ** (वि०) ಕಮಲದಂತೆ ಕಣ್ಣುಗಳುಳ್ಳ. नीरजे इव अक्षिणी यस्य "षच्" (५-४-११३)। स्त्रियां "ङीष्" (४-१-४१)। **–जाक्षी –ಜಾಕ್ಷೀ.** "कौशेयं व्रजदपि गाढतामजस्रं सस्रंसे विगलितनीवि नीरजाक्ष्या:" माघ० ८-६।

**नीरजात ನೀರಜಾತ** (वि०) ನೀರಿನಿಂದ ಹುಟ್ಟಿದ ಅನ್ನ ಮೊದಲಾದುದು. नीरात् जलात् जायते — जनी (प्रादुर्भावे) "क्त:" (३-३-१७४)। "अन्नं चापि प्रभवति पानीयात् कुरुसत्तम। नीरजातेन (अन्नेन) रहितं न किञ्चित् सम्प्रवर्तते" भा० अनु० १०२-११।

**नीरद ನೀರದ** (पुं०) 1. ಮೇಘ, ಮೋಡ. नीरं ददाति — डु दाञ् (दाने) "क:" (३-२-३)। "लक्ष्मीभृतोऽम्भोधितटाधिवासान् द्रुमानसौ नीरदनीलभास:" माघ० ३-७१। "नीलच्छविरसौ रेजे केशवच्छलनीरद:" माघ० १९-९६। 2. ಮುಸ್ತಕ, ಕೊನ್ನಾರಿ ಗೆಡ್ಡೆ.

**नीरदिन् ನೀರದಿನ್** (वि०) ಮೇಘದೊಡನೆ ಕೂಡಿರುವ. नीरदोऽस्यास्ति "इनि:" (५-२-११५)। स्त्रियां "ङीप्" (४-१-५)। **–दिनी –ದಿನೀ.** "क्वचिदिवेन्द्रगजाजिन-कञ्चुका: शरदि नीरदिनीर्यदवो दिश:" माघ० ६-५१।

**नीरधर ನೀರಧರ** (पुं०) ಮೇಘ, ಮೋಡ. नीरस्य धर:। "नवनीलनीरधरधीरगर्जितक्षणबद्धकुड्मलकदम्बडम्बरम्" उ० रा० ६-१७।

**नीरधि ನೀರಧಿ** (पुं०) ಸಮುದ್ರ, ಕಡಲು. नीराणि धीयन्ते अत्र—डु धाञ् (धारणपोषणयो:) "कि:" (३-३-९३)। "आस्येन स स्मरतु नीरधिमन्थनोत्थं स्वच्छन्दमिन्दुमपि सुन्दरि मन्दराद्रि:" नैष० ११-६३।

**नीरनिधि ನೀರನಿಧಿ** (पुं०) ಸಮುದ್ರ, ಕಡಲು. नीराणि निधीयन्तेऽत्र — नि + डु धाञ् (धारणपोषणयो:) "कि:" (३-३-९२)। "पारेजलं नीरनिधेरपश्यन्मुरारिरानील-पलाशराशी:" माघ० ३-७०।

**नीरनिलय ನೀರನಿಲಯ** (वि०) ಜಲದಲ್ಲಿರುವ, ನೀರಿನಲ್ಲಿ ವಾಸವಾಗಿರುವ. नीरं निलयो यस्य। "तल्लेशैरघुनापि नीरनिलयैरम्भोजमारभ्यते" नैष० २२-१४२।

**नीरन्ध्र ನೀರಂಧ್ರ** (वि०) 1. ಸಾಂದ್ರವಾದ, ದಟ್ಟವಾದ ನಿಬಿಡವಾದ. निर्गतं रन्ध्रं छिद्रमस्य। "नीरन्ध्रं पथिषु रजो रथाङ्गनुन्नं पर्यस्यन्नवसलिलारुणं वहन्ती" किरा० ७-२५। 2. ಎಡೆಬಿಡದಿರುವ, ಸೇರಿದಂತೆ ಇರುವ. 3. ರಂಧ್ರವಿಲ್ಲದ, ಛಿದ್ರವಿಲ್ಲದ.

**नीरन्ध्रित ನೀರಂಧ್ರಿತ** (वि०) 1. ಸಾಂದ್ರವಾಗಿರುವ, ದಟ್ಟವಾಗಿರುವ. नीरन्ध्रोऽस्य सञ्जात: "इतच्" (५-२-३६)। 2. ನಿರಂತರವಾಗಿರುವ, ಮಧ್ಯೆ ವ್ಯವಧಾನ ವಿಲ್ಲದ, ಅನುಸ್ಯೂತವಾದ. "श्रुत: स दृष्टश्च हरित्सु मोहात् ध्यात: स नीरन्ध्रितबुद्धिधारम्" नैष० ३-८२।

**नीरप्रिय ನೀರಪ್ರಿಯ** (पुं०) ಜಲವೇತಸ, ನೀರುಹಬ್ಬೆ ಗಿಡ. नीरं प्रियमस्य।

**नीरराशि ನೀರರಾಶಿ** (पुं०) 1. ಸಮುದ್ರ, ಕಡಲು. नीराणां राशिर्यत्र। "उचितस्वपनोऽपि नीरराशौ स्वबलाम्भोनिधि-मध्यगस्तदानीम्" माघ० २०-३६। 2. ನೀರಿನ ರಾಶಿ.

**नीररुह ನೀರರುಹ** (न०) 1. ಪದ್ಮ, ಕಮಲ, ತಾವರೆ. नीरे रोहति — रुह (बीजजन्मनि प्रादुर्भावे च) "क:" (३-१-१३६)। "नीलनीररुहमाल्यमयीं स न्यस्य तस्य गलनालविभूषाम्" नैष० २१-३६। (वि०) 2. ನೀರಿನಲ್ಲಿ ಹುಟ್ಟಿದ.

**नीरव ನೀರವ** (वि०) ಶಬ್ದವಿಲ್ಲದ, ಸದ್ದಿಲ್ಲದ.

**नीरस ನೀರಸ** (पुं०) 1. ದಾಳಿಂಬೆಗಿಡ. नितरां रसो यत्र। (वि०) 2. ರಸವಿಲ್ಲದ, ಶುಷ್ಕವಾದ, ಒಣಗಿರುವ. निर्गतो रस: यस्मात्। 3. ಶೃಂಗಾರಾದಿ ರಸವಿಲ್ಲದ. निर्गतो रस: शृङ्गारादि: यस्मात्। "अलब्धफलैनीरसं मम विधाय तस्मिन् जने समागममनोरथं भवतु पञ्चबाण: कृती" विक्र० २-११।

**नीराखु ನೀರಾಖು** (ಪುಂ) ಜಲಬಿಡಾಲ, ನೀರುಬೆಕ್ಕು. नीरस्य आखुः।

**नीराजन ನೀರಾಜನ** (ನಂ) 1. ದೇವರಿಗೆ ಮಾಡುವ ಆರತಿ. ಕರ್ಪೂರ ದೀಪ ಮೊದಲಾದುವುಗಳಿಂದ ಮಾಡುವ ಮಂಗಳಾರತಿ. निर् + राजृ (दीप्तौ) भावे "ल्युट्" (३-३-११५)। "कृत्वा नीराजनं विष्णोर्दीपावल्या सुदृश्यया। तमोविकारं जयति जिते तस्मिश्च को भवः"। "नीराजनं च यः पश्येत् देवदेवस्य चक्रिणः। सप्तजन्मनि विप्रः स्यादन्ते च परमं पदम्" मूलागमः। 2. ದೃಷ್ಟಿ ದೋಷ ಪರಿಹಾರಕ್ಕಾಗಿ ಮಾಡುವ ನೀರಿನ ಆರತಿ, ದೃಷ್ಟಿ ಶಾಂತಿಗಾಗಿ ಬಣ್ಣದ ನೀರಿನಿಂದ ನಿವಾಳಿಸುವುದು. "घृतलाञ्छनगोमयाञ्चनं विधुमालेपनपाण्डुरं विधिः। भ्रमयत्युचितं विदर्भजाननीराजनवर्धमानकम्" नैष० २-२६। निर् + राजृ + णिच् "युच्" (३-३-१०७)। (स्त्री०) -ना -ನಾ. "चक्रे स चक्रनिभचङ्क्रमणच्छलेन नीराजनां जनयतां निजबान्धवानाम्" नैष० १-१४४।

**नीरुज् ನೀರುಜ್** (ಪುಂ) 1. ಆರೋಗ್ಯ, ರೋಗವಿಲ್ಲದಿರುವಿಕೆ. निर् + रुज (हिंसायाम्) "क्विप्" (३-२-७६)। (ವಿಂ) 2. ರೋಗವಿಲ್ಲದವನು. निर् नास्ति रुक् रोगो यस्य। "एतेन पाल्यो वर्धन्ते नीरुजो निरुपद्रवाः" सुश्रुत० चिकित्सा० २५-२७।

**नीरुज ನೀರುಜ** (ನಂ) 1. ಚಂಗಲುಕೋಷ್ಠ. निर्गता रुजा यस्मात्। (ವಿಂ) 2. ರೋಗವಿಲ್ಲದವನು, ಆರೋಗ್ಯದಿಂದಿರುವವನು. निर्गता रुजा यस्य।

**नील ನೀಲ** (ಪುಂ) 1. ನೀಲವರ್ಣ, ಶ್ಯಾಮಲವರ್ಣ, ಕಪ್ಪು ಬಣ್ಣ. नील (वर्णे) "कः" (३-१-१३६)। 2. ನೀಲಮಣಿ, ಇಂದ್ರನೀಲಮಣಿ. 3. ಒಂದು ಪರ್ವತ. [ಇದು ಒರಿಸ್ಸಾ ಪ್ರಾಂತದ ಪುರಿಯ ಸಮೀಪದಲ್ಲಿರುವುದು. ಇಲ್ಲಿ ಜಗನ್ನಾಥನ ದೇವಾಲಯವಿರುವುದು.] 4. ರಾಮಸೈನ್ಯದಲ್ಲಿದ್ದ ಒಬ್ಬ ವಾನರ. 5. ಕುಬೇರನ ನವನಿಧಿಗಳಲ್ಲೊಂದು. "महापद्मश्च पद्मश्च शङ्खो मकरकच्छपौ। मुकुन्दः कुन्दनीलौ च वरश्च निधयो नव" अम०। 6. ನೀಲ್ಯೋಷಧಿ, ನೀಲಿಗಿಡ. 7. ಲಾಂಛನ, ದೇಹದ ಮೇಲಿನ ಕಪ್ಪುಚುಕ್ಕಿ, ಮೈಮೇಲೆ ಹುಟ್ಟುವ ಎಳ್ಳಿನ ಆಕಾರದ ಕಪ್ಪು ಮಚ್ಚೆ. "नीलो वर्णे मणौ शैले निधिवानरभेदयोः। नील्योषध्यां लाञ्छने च" हेम०। (ನಂ) 8. ಕರಿಯ ಸೌವರ್ಚಲ ಲವಣ. 9. ಮೈಲುತುತ್ತ. 10. ವಿಷ. 11. ಕತ್ತಲೆ. 12. ಸೌವೀರಾಂಜನ. 13. ತಾಳೀಸ ಪತ್ರೆ. (ಸ್ತ್ರೀಂ) -ला -ಲಾ. 14. ನೀಲಿ ಬಣ್ಣದ ನೊಣ. 15. ನೀಲಿ ಕೊಮ್ಮೆಗಿಡ. -ली -ಲೀ. 16. ನೀಲ್ಯೋಷಧಿ. (ವಿಂ) 17. ನೀಲಿವರ್ಣದ, ಕಪ್ಪಾದ. "नीलेभाऽनालनलिननिलीनोल्ललनालिना" माघ० १९-८४।

**नीलक ನೀಲಕ** (ಪುಂ) 1. ಭ್ರಮರ, ದುಂಬಿ. नीलवर्णेन कायति—कै (शब्दे) "कः" (३-२-४)। 2. ಅಗ್ನಿಯ ಜ್ವಾಲೆ. (ನಂ) 3. ಸೌವರ್ಚಲ ಲವಣ. 4. ಕಣ್ಣಿನ ಒಂದು ರೋಗ.

**नीलकण्ठ ನೀಲಕಂಠ** (ಪುಂ) 1. ಮಯೂರ, ನವಿಲು. नीलः कण्ठो यस्य। "स्कन्धाधिरूढोज्ज्वलनीलकण्ठानुर्वीरुहः श्लिष्टतनूनहीन्द्रैः" माघ० ४-७। 2. ನೀರು ಕೋಳಿ. 3. ಕಾಡಿಗೆಸೊಗಸಿನ ಹಕ್ಕಿ, ಖಂಜನ ಪಕ್ಷಿ. 4. ಗುಬ್ಬಚ್ಚಿ. स्त्रियां "ङीष्" (४-१-५५) सूत्रस्थेन "अङ्गगात्रकण्ठेभ्यो वक्तव्यम्" इति वृत्त्या निष्पन्नम्। -कण्ठी -ಕಂಠೀ. 5. ಪರಶಿವ, ಪರಮೇಶ್ವರ. "क्व नीलकण्ठ व्रजसीत्यलक्ष्यवागसत्यकण्ठार्पितबाहुबन्धना" कुमा० ५-५७। ಸಮುದ್ರಮಥನಕಾಲದಲ್ಲಿ ಲೋಕ ರಕ್ಷಣಾರ್ಥವಾಗಿ ಬ್ರಹ್ಮನ ಮಾತಿನಂತೆ ಪರಮೇಶ್ವರನು ವಿಷಪಾನ ಮಾಡಿದುದರಿಂದ ನೀಲಕಂಠನೆಂಬ ಹೆಸರಾಯಿತು. "त्रैलोक्यं मोहितं यस्य गन्धमाघ्राय तद्विषम्। प्राग्रसल्लोकरक्षार्थं ब्रह्मणो वचनाच्छिवः॥ दधार भगवान् कण्ठे मन्त्रमूर्तिर्महेश्वरः। तदाप्रभृति देवस्तु नीलकण्ठ इति श्रुतः" भा० आदि० ४२, ४३।

**नीलकमल ನೀಲಕಮಲ** (ನಂ) 1. ನೀಲ ತಾವರೆ. 2 ಕನ್ನೈದಿಲೆ. नीलं कमलम्।

**नीलकुरण्टक ನೀಲಕುರಂಟಕ** (ಪುಂ) ಕರಿಯ ಹೂವಿನ ಗೋರಂಟೆ. नीलः कुरण्टकः।

**नीलकेशी ನೀಲಕೇಶೀ** (ಸ್ತ್ರೀಂ) ನೀಲಿಗಿಡ.

**नीलक्रौञ्च ನೀಲಕ್ರೌಂಚ** (ಪುಂ) ನೀಲ ಬಕಪಕ್ಷಿ.

**नीलगिरि ನೀಲಗಿರಿ** (ಪುಂ) ಒಂದು ಬೆಟ್ಟ. ಇದು ಮದರಾಸು ಪ್ರಾಂತದಲ್ಲಿರುವುದು.

**नीलग्रीव ನೀಲಗ್ರೀವ** (ಪುಂ) 1. ಈಶ್ವರ, ಪರಶಿವ. 2. ಮಯೂರ.

**नीलङ्गु ನೀಲಂಗು** (ಪುಂ) 1. ಕ್ರಿಮಿ, ಹುಳ. नितरां लङ्गति—लगि (गतौ) "कुः" (उ० १-३६)। "नीलङ्गुस्तु क्रिमिः" अम०। 2. ಭ್ರಮರ, ದುಂಬಿ. 3. ಜಂಬುಕ, ನರಿ.

**नीलतरु ನೀಲತರು** (पुं०) 1. ನಾರಿಕೇಳವೃಕ್ಷ, ತೆಂಗಿನ ಮರ. 2. ಕಪ್ಪು ಬಣ್ಣದ ಮರ. नील: तरु: ।

**नीलताल ನೀಲತಾಲ** (पुं०) 1. ತಮಾಲವೃಕ್ಷ, ಹೊಂಗೆ ಮರ. 2. ಕಿರುತಾಳೆ.

**नीलध्वज ನೀಲಧ್ವಜ** (पुं०) 1. ತಾಳವೃಕ್ಷ. 2. ಒಬ್ಬ ದೊರೆ, ಮಾಹಿಷ್ಮತಿಯ ರಾಜ.

**नीलनलिन ನೀಲನಲಿನ** (न०) ನೀಲಕಮಲ.

**नीलनिर्गुण्डी ನೀಲನಿರ್ಗುಂಡೀ** (स्त्री०) ಕರಿಯ ಲಕ್ಕಿ ಗಿಡ.

**नीलपङ्क ನೀಲಪಂಕ** (न०) ಅಂಧಕಾರ, ಕತ್ತಲೆ. नीलं पङ्क इव । "तमसं तु निशाचर्म नीलपङ्कं रजोबलम्" त्रिकाण्ड० ।

**नीलपत्र ನೀಲಪತ್ರ** (पुं०) 1. ಕರಿ ಹೊನ್ನೆಮರ. 2. ದಾಳಿಂಬೆ ಗಿಡ. (न०) 3. ನೀಲೋತ್ಪಲ, ಕನ್ನೈದಿಲೆ. नीलं पत्रं पर्णं पुष्पदलं वा यस्य । (वि०) 4. ಕರಿಯ ಎಲೆಗಳುಳ್ಳ. नीलं पत्रं यस्य ।

**नीलपिच्छ ನೀಲಪಿಚ್ಛ** (पुं०) ಕಪ್ಪು ಪುಕ್ಕದ ಶ್ಯೇನಪಕ್ಷಿ, ಡೇಗೆ, ಗಿಡುಗ. नीलं पिच्छं यस्य । स्त्रियां जाति० "ङीष्" (४-१-६३) । **-पिच्छी -ಪಿಚ್ಛೀ.**

**नीलपीत ನೀಲಪೀತ** (वि०) ಕಪ್ಪು ಹಳದಿ ಬೆರೆತ ಗಾಢ ಹಸುರು ಬಣ್ಣ.

**नीलपुनर्नवा ನಿಲಪುನರ್ನವಾ** (स्त्री०) ನೀಲಿ ಹೂವಿನ ಕೊಮ್ಮೆಗಿಡ.

**नीलपुष्प ನೀಲಪುಷ್ಪ** (न०) 1. ಮಾಚಿಪತ್ರೆ. (स्त्री०) **-ष्पा -ಷ್ಪಾ.** 2. ವಿಷ್ಣುಕ್ರಾಂತಿ ಗಿಡ.

**नीलफला ನೀಲಫಲಾ** (स्त्री०) ನೇರಿಳೆಮರ, ಜಂಬೂ ವೃಕ್ಷ. नीलं फलं यस्य ।

**नीलभृङ्गराज ನೀಲಭೃಂಗರಾಜ** (पुं०) ಕರಿಯ ಕಂಗೊಂಗೆ ಗಿಡ.

**नीलमक्षिका ನೀಲಮಕ್ಷಿಕಾ** (स्त्री०) ನೀಲಿಬಣ್ಣದ ನೊಣ.

**नीलमणि ನೀಲಮಣಿ** (पुं०) 1. ಇಂದ್ರನೀಲಮಣಿ. "नृपनीलमणीगृहत्विषामुपवेयत्र भयेन भास्वत:" नैष० २-७५ । ಇಂದ್ರನೀಲಮಣಿಯನ್ನು ಶನಿಗ್ರಹದ ಪ್ರೀತ್ಯರ್ಥವಾಗಿ ದಾನಮಾಡಬೇಕು ಮತ್ತು ಧರಿಸಿಕೊಳ್ಳಬೇಕು. "धार्यमाणस्य ये दृष्टा: पद्मरागमणेर्गुणा:। धारणादिन्द्रनीलस्य तानेवाप्नोति मानव:"। 2. ಶ್ರೀಕೃಷ್ಣ. 3. ನವರತ್ನಗಳಲ್ಲೊಂದು.

**नीलमाणिक्य ನೀಲಮಾಣಿಕ್ಯ** (न०) ನೀಲರತ್ನ, ನವವಿಧ ರತ್ನಗಳಲ್ಲೊಂದು. "स्वबद्धया कण्ठिकयेव नीलमाणिक्यमय्या कुतुकेन गौर्या:" कुमा० १२-१४।

**नीलमाधव ನೀಲಮಾಧವ** (पुं०) ಶ್ರೀಕೃಷ್ಣ, ವಾಸುದೇವ, ವಿಷ್ಣು. नीलो नीलवर्णो माधव:। "प्रेषितोऽहं हरिं द्रष्टुं मन्वस्थं नीलमाधवम्" स्कान्द० ।

**नीलमाष ನೀಲಮಾಷ** (पुं०) ಉದ್ದು.

**नीलराजि ನೀಲರಾಜಿ** (स्त्री०) ಅಂಧಕಾರ, ಕತ್ತಲೆ. "निशाशशाङ्कक्षतनीलराजय:" ऋतुसं० ।

**नीललोह ನೀಲಲೋಹ** (न०) ಕಬ್ಬಿಣ.

**नीलरत्न ನೀಲರತ್ನ** (न०) ನವರತ್ನಗಳಲ್ಲೊಂದಾದ ನೀಲ ಮಣಿ.

**नीललोहित ನೀಲಲೋಹಿತ** (पुं०) 1. ಮಹಾದೇವ, ಪರಶಿವ, ಪರಮೇಶ್ವರ. नीलश्चासौ लोहितश्च कण्ठे जटासु च। "संयुगे सांयुगीनं तमुद्यतं प्रसहेत क:। अंशादृते निषिक्तस्य नीललोहितरेतस:" कुमा० ३-५७ । 2. ನೀಲಿ ಮತ್ತು ಕೆಂಪು ಬೆರೆತ ಬಣ್ಣ. (वि०) 3. ನೀಲಿ ಮತ್ತು ಕೆಂಪು ಮಿಶ್ರವಾದ ಬಣ್ಣದ.

**नीलवर्ण ನೀಲವರ್ಣ** (पुं०) 1. ನೀಲಿಬಣ್ಣ. (वि०) 2. ನೀಲಿಬಣ್ಣದ. **-वर्णा -ವರ್ಣಾ.** 3. ನೀಲಿಗಿಡ.

**नीलवासस् ನೀಲವಾಸಸ್** (पुं०) 1. ಬಲರಾಮ. 2. ಶನಿದೇವ. नीलं वासो यस्य। "नीलवासा: एककुण्डलो हलककुदि कृतसुभगसुन्दरभुजो भगवान् माहेन्द्रो वारणेन्द्र इव काञ्चनीं कक्षामुदारलीलो बिभर्ति" भाग० ५-२५-७ । (वि०) 3. ನೀಲವಸ್ತ್ರವನ್ನು ಧರಿಸಿರುವ. एवं नीलवसन: नीलवस्त्र: ಇತ್ಯಾದಿ.

**नीलशीर्ष ನೀಲಶೀರ್ಷ** (पुं०) ಕಪ್ಪುಮುಖದ ಕಪಿ.

**नीला ನೀಲಾ** (स्त्री०) 1. ನೀಲಿಬಣ್ಣದ ನೊಣ. 2. ನೀಲಿ ಕೊಮ್ಮೆಗಿಡ. 3. ನೀಲಿಗಿಡ.

**नीलाक्ष ನೀಲಾಕ್ಷ** (पुं०) ಹಂಸಪಕ್ಷಿ.

**नीलाङ्ग ನೀಲಾಂಗ** (पुं०) 1. ಸಾರಸಪಕ್ಷಿ, ನೀರುಹಕ್ಕಿ. नीलमङ्गं यस्य । (वि०) 2. ಕಪ್ಪು ಮೈಯುಳ್ಳ.

**नीलाञ्जन ನೀಲಾಂಜನ** (न०) ಸೌವೀರಾಂಜನ.

**नीलाञ्जसा ನೀಲಾಂಜಸಾ** (स्त्री०) 1. ಒಬ್ಬ ಅಪ್ಸರಸ್ಸು. 2. ಒಂದು ನದಿ. 3. ವಿದ್ಯುತ್ತು, ಮಿಂಚು. "नीलाञ्जसाऽप्सरोभेदे सरिद्भेदे च विद्युति" मेदि० ।

**नीलाम्बर ನೀಲಾಂಬರ** (पुं०) 1. ಬಲರಾಮ. 2. ಶನಿ ದೇವ. नीलमम्बरं यस्य। (न०) 3. ನೀಲಿವಸ್ತ್ರ. (वि०) 4. ನೀಲಿಬಣ್ಣದ ಬಟ್ಟೆಯನ್ನು ಧರಿಸಿರುವ.

**नीलाब्ज ನೀಲಾಬ್ಜ** (न०) ನೀಲಕಮಲ.

**नीलाम्बुज ನೀಲಾಂಬುಜ** (न०) ನೀಲಕಮಲ. नीलमम्बुजम्।

**नीलाम्बुजन्मन् ನೀಲಾಂಬುಜನ್ಮನ್** (न०) ನೀಲೋತ್ಪಲ, ಕನ್ನೈದಿಲೆ. नीलवर्णयुक्तमम्बुजन्म।

**नीलाम्ला ನೀಲಾಮ್ಲಾ** (स्त्री०) ಕರಿಯ ಹೂವಿನ ಗೋರಂಟಿ.

**नीलाशी ನೀಲಾಶೀ** (स्त्री०) ಕರಿಯ ಲಕ್ಕಿಗಿಡ. नीलं नीलवर्णमश्नुते — अशू (व्याप्तौ) "अण्" (३-२-१)। गौरा० "ङीष्" (४-१-४१)।

**नीलाश्मन् ನೀಲಾಶ್ಮನ್** (पुं०) ಇಂದ್ರನೀಲಮಣಿ, नील: अश्मा। "एकत्र स्फटिकतटांशुभिन्ननीरा नीलाश्मद्युतिभिदुराऽम्भसोऽपरत्र" माघ० ४-२६।

**नीलासन ನೀಲಾಸನ** (पुं०) ಕರಿ ಹೊನ್ನೆಮರ. नीलश्चासौ असनश्च।

**नीलिका ನೀಲಿಕಾ** (स्त्री०) 1. ಕರಿಯ ಲಕ್ಕಿಗಿಡ. 2. ನೀಲಿಗಿಡ. 3. ಕಣ್ಣಿನ ಒಂದು ರೋಗ. "नीलिका नीलिनीक्षुद्ररोगशेफालिकासु च" मेदि०।

**नीलिङ्गी ನೀಲಿಂಗೀ** (स्त्री०) ನಾನಾವಿಧ ಕ್ರಿಮಿಗಳಿಂದ ಕೂಡಿದ ಭೂಮಿ. "कचङ्गला तु नीलिङ्गी भूर्नानाजन्तुसंयुता" वैज०।

**नीलिन् ನೀಲಿನ್** (वि०) ನೀಲಿಬಣ್ಣದಿಂದ ಕೂಡಿದ, ಹೆಚ್ಚು ನೀಲಿಬಣ್ಣದ. नीलो भूम्नाऽस्त्यस्य "इनि:" (५-२-११५)।

**नीलिनी ನೀಲಿನೀ** (स्त्री०) ನೀಲಿಗಿಡ. नीलो वर्णोऽस्त्यस्या: "इनि:" (५-२-११५)।

**नीलिमन् ನೀಲಿಮನ್** (पुं०) ನೀಲಿಬಣ್ಣ. नीलस्य भाव: "इमनिच्" (५-१-१२३)। "प्रारम्भेऽपि त्रियामा तरुणयति निजं नीलिमानं वनेषु" मालती० ५-६।

**नीली ನೀಲೀ** (स्त्री०) 1. ನೀಲಿಗಿಡ. नील "ङीष्" (वा० ४-१-४२)। 2. ನೀಲಿಬಣ್ಣದ ನೊಣ. 3. ಒಂದು ರೋಗ.

**नीलीराग ನೀಲೀರಾಗ** (पुं०) 1. ದೃಢವಾದ ಪ್ರೇಮ, ನೀಲಿಬಣ್ಣದಂತೆ ಬದಲಾವಣೆ ಹೊಂದದಿರುವ (ಸ್ಥಿರವಾದ) ಪ್ರೇಮ. (वि०) 2. ದೃಢವಾದ ಪ್ರೇಮವುಳ್ಳ. "नीलीराग: स्थिरप्रेमा" वैज०।

**नीलीरोग ನೀಲೀರೋಗ** (पुं०) ಒಂದು ವಿಧ ಕಣ್ಣಿನ ರೋಗ.

**नीलोत्पल ನೀಲೋತ್ಪಲ** (न०) ಕನ್ನೈದಿಲೆ ಹೂವು. नीलमुत्पलम्। "नालेनास्तु त्वदक्षिप्रतिफलनभिदा तत्र नीलोत्पलानाम्" नैष० १२-१०३।

**नीलोपल ನೀಲೋಪಲ** (पुं०) ಇಂದ್ರನೀಲ ಶಿಲೆ. नीलश्चासौ उपलश्च। "नीलोपलस्यूतविचित्रधातुमसौ गिरिं रैवतकं ददर्श" माघ० ४-१।

**नीवर ನೀವರ** (पुं०) 1. ಯತಿ, ಸಂನ್ಯಾಸಿ. णीञ् (प्रापणे) "ष्वरच्" (उ० ३-१)। "नीवर: परिव्राट्" सि० कौ०। 2. ವರ್ತಕ, ವ್ಯಾಪಾರಿ. 3. ವಾಸಮಾಡುವವನು. "स्यान्नीवरो वाणिजके वास्तव्ये च पुमानयम्" मेदि०।

**नीवाक ನೀವಾಕ** (पुं०) ಧಾನ್ಯದ ಕೊರತೆಯ ನಿಮಿತ್ತ ಕೊಳ್ಳುವವರ ಪೈಪೋಟಿ. "नीवाकस्तु प्रयाम:स्यात्" अम०।

**नीवार ನೀವಾರ** (पुं०) ಒಂದು ವಿಧ ತೃಣಧಾನ್ಯ. निव्रियन्ते — वृञ् (वरणे) "घञ्" (३-३-४८)। "नीवारा: शुकगर्भकोटरमुखभ्रष्टास्तरूणामध:" शाकु० १-१३।

**नीवि(वी) ನೀವಿ(ವೀ)** (स्त्री०) 1. ವರ್ತಕರ ಮೂಲಧನ, ಬಂಡವಾಳ. नितरामिन्वति — इवि (प्रेरणे) "इन्" (उ० ४-१२०) वा "ङीष्" (ग० ४-१-४५)। "अमुद्राभङ्गसुभगा नीवीरिव रते: शुभ:" याद० १६-१३६। 2. ಹೆಂಗುಸರು ಸೊಂಟದಲ್ಲಿ ಹಾಕುವ ಸೀರೆಯ ಗಂಟು. "प्रापि तेन भृशमुच्छ्वसिताभिर्नीविभि: सपदि बन्धनमोक्ष:" माघ० १०-५१। "नीविमर्धमुकुलीकृतदृष्ट्या" माघ० १०-६४। "कान्ते तल्पमुपागते विगलिता नीवी स्वयं बन्धनात्" अमरु० १०१।

**नीव्र ನೀವ್ರ** (न०) "नीध्र" ಪದದ ಅರ್ಥ.

**नीवृत् ನೀವೃತ್** (स्त्री०) ಜನಪದ, ದೇಶ, ಜನರು ವಾಸ ಮಾಡುವ ಸ್ಥಾನ. नियतं वर्ततेऽत्र — वृतु (वर्तने) "क्विप्" (३-२-१७८)। दीर्घ: (६-३-११६)। "सरसी: परिशीलितुं मया गमिकर्मीकृतनैकनीवृता" नैष० २-४०।

**नीशार ನೀಶಾರ** (पुं०) ಹಿಮ ಮತ್ತು ಗಾಳಿಯನ್ನು ತಡೆಯುವ ಮೇಲು ಹೊದಿಕೆ. नितरां शीर्यते हिमानिला: यत्र — शॄ (हिंसायाम्) "घञ्" (वा० ३-३-२१)। दीर्घ: (६-३-१२२)।

**नीहार ನೀಹಾರ** (पुं०) ಹಿಮ, ಮಂಜು. निह्रियते —नि + हृञ् (हरणे) "घञ्" (३-३-१९)। "नीहारजालमलिनः पुनरुक्तसान्द्राः कुर्वन् वधूजनविलोचनपक्ष्ममालाः" माघ० ५-११।

**नु ನು** (अव्य०) 1. ವಿತರ್ಕ, ಸಂಶಯ, ಸಂದೇಹ. नुदति —णुद (प्रेरणे) "डुः" (३-२-१८०)। "स्वप्नो नु माया नु मतिभ्रमो नु क्लिष्टं नु तावत्फलमेव पुण्यम्" शाकु० ६-१०। 2. ವಿಕಲ್ಪ, ಪಕ್ಷಾಂತರ. "किं नु गर्हाम्यथात्मानमथ भीष्मं दुरासदम्" भाग० उद्योग० १७५-२९। 3. ಅನುನಯ, ಪ್ರಾರ್ಥನೆ. 4. ಅಪಮಾನ, ಅವಮಾನ. 5. ಆದೇಶ, ಆಜ್ಞೆ. 6. ಪ್ರಶ್ನೆ. "को नु भीष्मं युधा जेतुमुत्सहेत महीपतिः" भा० उद्योग० १७५-३६। 7. ಹೇತು, ಕಾರಣ. 8. ಅಪದೇಶ, ವ್ಯಾಜ, ನೆಪ. 9. ಅತೀತ. "नु वितर्कापमानयोः। विकल्पानुनयातीते प्रश्ने हेत्वपदेशयोः" मेदि०। (स्त्री०) 10. ಸ್ತುತಿ, ಹೊಗಳಿಕೆ.

**नुत ನುತ** (वि०) 1. ಸ್ತೋತ್ರಮಾಡಲ್ಪಟ್ಟ, ಹೊಗಳಲ್ಪಟ್ಟ. णु (स्तुतौ) "क्तः" (३-२-१०२)। "तं वेदशास्त्रपरिनिष्ठितशुद्धबुद्धिं चर्माम्बरं सुरमुनीन्द्रनुतं कवीन्द्रम्"। 2. ಶ್ಲಾಘಿಸಲ್ಪಟ್ಟ, ಕೊಂಡಾಡಲ್ಪಟ್ಟ.

**नुति ನುತಿ** (स्त्री०) 1. ಸ್ತೋತ್ರ, ಹೊಗಳಿಕೆ. णु (स्तुतौ) "क्तिन्" (३-३-९४)। 2. ಪ್ರಶಂಸೆ, ಕೊಂಡಾಟ, ಶ್ಲಾಘನೆ.

**नुत्त ನುತ್ತ** (वि०) 1. ಪ್ರೇರಿಸಲ್ಪಟ್ಟ, ತಳ್ಳಲ್ಪಟ್ಟ, ನೂಕಲ್ಪಟ್ಟ. णुद (प्रेरणे) "क्तः" (३-२-१०२)। वा नत्वम् (८-२-५६)। **नुन्नः ನುನ್ನಃ.** "प्रसह्य तेजोभिरसंख्यतां गतैरदस्त्वया नुन्नमनुत्तमं तमः" माघ० १-२७। 2. ಎಸೆಯಲ್ಪಟ್ಟ. 3. ಹೋಗಲಾಡಿಸಲ್ಪಟ್ಟ.

**नुदत् ನುದತ್** (वि०) 1. ಪ್ರೇರಿಸುತ್ತಿರುವ, 2. ತಳ್ಳುತ್ತಿರುವ, ನೂಕುತ್ತಿರುವ. णुद (प्रेरणे) "शतृ" (३-२-१२४)। 3. ಹೋಗಲಾಡಿಸುತ್ತಿರುವ. स्त्रियां "ङीप्" (४-१-६)। **–दती–ದತೀ, –दन्ती–ದಂತೀ.** "आत्मापराधं नुदतीं चिराय" रघु० १६-८५।

**नुद्यमान ನುದ್ಯಮಾನ** (वि०) 1. ತಳ್ಳಲ್ಪಡುತ್ತಿರುವ, ನೂಕಲ್ಪಡುತ್ತಿರುವ. णुद (प्रेरणे) कर्म० "शानच्" (३-२-१२४)। "नृपः पुरःस्थैः प्रतिबद्धवर्त्मा पश्चात्तनैः कश्चन नुद्यमानः" नैष० १०-६। 2. ಎಸೆಯಲ್ಪಡುತ್ತಿರುವ.

**नुनुत्सा ನುನುತ್ಸಾ** (स्त्री०) 1. ತಳ್ಳಲು ಅಪೇಕ್ಷೆ, ನೂಕಲು ಅಪೇಕ್ಷೆ. णुद (प्रेरणे) + सन् "अः" (३-३-१०२)। 2. ಎಸೆಯಲು ಇಚ್ಛೆ.

**नुनुत्सु ನುನುತ್ಸು** (वि०) 1. ತಳ್ಳಿಹಾಕಲು ಅಪೇಕ್ಷೆಯುಳ್ಳ. 2. ನೂಕಲು ಅಪೇಕ್ಷೆಯುಳ್ಳ. णुद (प्रेरणे)+सन् "उः" (३-२-१६८)। "यदवादिषमप्रियं तव प्रियमाधाय नुनुत्सुरस्मि तत्" नैष० २-११। 3. ಎಸೆಯಲು ಅಪೇಕ್ಷೆಯುಳ್ಳ.

**नू ನೂ** (स्त्री०) ಸ್ತುತಿ, ಹೊಗಳಿಕೆ. नू (स्तुतौ) "क्विप्" (वा० ३-३-१०८)।

**नूतन ನೂತನ** (वि०) ಹೊಸದಾದ. नव एव स्वार्थे "तनप्" (वा० ५-४-२५)। नवस्य नू आदेशश्च। "तदभिनयमिवावलिर्वनानामतनुत नूतनपल्लवाङ्गुलीभिः" माघ० ७-२५।

**नूत्न ನೂತ್ನ** (वि०) ನವೀನವಾದ, ಹೊಸದಾದ. नव एव स्वार्थे "त्नप्" नवस्य नू आदेशश्च (वा० ५-४-२५)।

**नूद ನೂದ** (पुं०) ಹೂವರಚಿ ಮರ, ಬ್ರಹ್ಮದಾರು ವೃಕ್ಷ.

**नूनम् ನೂನಮ್** (अव्य०) 1. ಉತ್ಪ್ರೇಕ್ಷಾವಾಚಕವಾದ ಒಂದು ಶಬ್ದ. नु ऊनयति ऊन (परिहाणे) "अम्"। "जगति सुमनसस्तदादि नूनं दधति परिस्फुटमर्थतोऽभिधानम्" माघ० ७-२८। "मन्ये शङ्के ध्रुवं प्रायो नूनमित्येवमादयः। उत्प्रेक्षाव्यञ्जकाः शब्दा इव शब्दोऽपि तादृशः"। 2. ತರ್ಕ, ಊಹೆ. "नूनमत्रभवतः शराकृतिं सर्वथायमनुयाति सायकः" किरा० १३-४५। 3. ನಿಶ್ಚಯ. "नूनं जनेन पुरुषे महति प्रयुक्तमागः परं तदनुरूपफलं प्रसूते" चं० रा०। 4. ವಾಕ್ಯಪೂರಣಕ್ಕಾಗಿ ಉಪಯೋಗಿಸಲ್ಪಡುವ ಪದ. 5. ಸ್ಮರಣೆ, ನೆನಪು. "नूनं तु निश्चिते तर्के स्मरणे वाक्यपूरणे" मेदि०।

**नूपुर ನೂಪುರ** (पुंन०) ಕಾಲಿನ ತೊಡುಗೆ, ಕಾಲಂದಿಗೆ, ಕಾಲ್ಕಡಗ, ಕಾಲಿನ ಗೊಲುಸು. नुवि पुरति—पुर (अग्रगमने) "कः" (३-१-१३५)। "अनेन तनुमध्यया मुखरनूपुराराविणा नवाम्बुरुहकोमलेन चरणेन संभावितः" माल० ३-१७। "ध्वनिरगविवरेषु नूपुराणाम्" किरा० १०-४।

**नृ ನೃ** (पुं०) 1. ಮನುಷ್ಯ, ಪುರುಷ, ಗಂಡಸು. णीञ् (प्रापणे) "ऋः" (उ० २-१००)। "वीक्षणेऽपि सघृणासि नृणां किं यासि न त्वमपि सार्थगुणेन" नैष०

५-५४। 2. ಪುಂಲಿಂಗ ಸೂಚಕ ಪದ. "हेतुर्ना कारणं बीजम्" अम०।

**नृकपाल ನೃಕಪಾಲ** (ಪುಂ) ಮನುಷ್ಯನ ತಲೆಬುರುಡೆ.

**नृकेसरिन् ನೃಕೇಸರಿನ್** (ಪುಂ) 1. ನೃಸಿಂಹ, ನರಸಿಂಹ, ಮಹಾವಿಷ್ಣುವಿನ ಒಂದು ಅವತಾರ. ना चासौ केसरी च। 2. ಪುರುಷಶ್ರೇಷ್ಠ, ಉತ್ತಮಪುರುಷ. ना केसरीव।

**नृग ನೃಗ** (ಪುಂ) ಒಬ್ಬ ದೊರೆ, ವೈವಸ್ವತ ಮನುವಿನ ಒಬ್ಬ ಮಗ. [ಈ ದೊರೆಯು ಅನೇಕ ಗೋವುಗಳನ್ನು ದಾನ ಮಾಡಿದವನು. ಒಂದು ದಿನ ಈ ರಾಜನು ದಾನಮಾಡಿದ್ದ ಒಂದು ಗೋವು ತಪ್ಪಿಸಿಕೊಂಡು ಬಂದು ಮತ್ತೆ ಇವನ ಗೋವುಗಳ ಗುಂಪಿನೊಡನೆ ಸೇರಿತು. ಅದನ್ನು ಗುರುತಿಸದೆ ಆ ಗೋವನ್ನೇ ನೃಗನು ಮತ್ತೊಬ್ಬ ಬ್ರಾಹ್ಮಣನಿಗೆ ದಾನ ಮಾಡಿದನು. ಹಿಂದೆ ದಾನವಾಗಿ ಪಡೆದಿದ್ದ ಗೋವನ್ನು ಬ್ರಾಹ್ಮಣನು ಹುಡುಕುತ್ತ ಎರಡನೆಯ ಸಲ ದಾನ ತೆಗೆದು ಕೊಂಡ ಬ್ರಾಹ್ಮಣನ ಮನೆಯಲ್ಲಿ ಅದನ್ನು ಗುರುತಿಸಿ ಕೇಳಲಾಗಿ ನೃಗನು ತನಗೆ ದಾನಮಾಡಿದುದಾಗಿ ಅವನು ಹೇಳಿದನು. ಇಬ್ಬರೂ ರಾಜನಲ್ಲಿಗೆ ಹೋಗಲು ಇವರಿಗೆ ನ್ಯಾಯ ದೊರಕಲಿಲ್ಲ. ರಾಜನು ಕಾಲವಶನಾದಾಗ ಅವನ ದತ್ತಾಪಹಾರದ ಕಾರಣದಿಂದ ಕೃಕಲಾಸ ಜನ್ಮವು ಪ್ರಾಪ್ತ ವಾಯಿತು. ಮುಂದೆ ಕೃಷ್ಣಾವತಾರದಲ್ಲಿ ರಾಜನಿಗೆ ಆ ಜನ್ಮವಿಮೋಚನೆಯಾಯಿತು.] भाग० १०-६४।

**नृङ्ग ನೃಂಗ** (ಪುಂ) 1. ಒಂದು ಸಣ್ಣ ನಗರ. 2. ಸಣ್ಣ ಗ್ರಾಮ.

**नृचक्षस् ನೃಚಕ್ಷಸ್** (ಪುಂ) ರಾಕ್ಷಸ.

**नृचक्षुस् ನೃಚಕ್ಷುಸ್** (ಪುಂ) ಸುನೀಥ ರಾಜನ ಮಗ. "सुनीथस्तस्य भविता नृचक्षुर्यत् सुखी नलः" भाग० ९-२२-४१।

**नृता ನೃತಾ** (ಸ್ತ್ರೀ०) ಪುಂಸ್ತ್ವ, ಪುರುಷತ್ವ. नुः भावः "तल्" (५-१-११९)। "अविनमन्न रराज वृथोच्चकै-रनृतया नृतया वनपादपः" माघ० ६-१०।

**नृति ನೃತಿ** (ಸ್ತ್ರೀ०) 1. ನರ್ತನ, ಕುಣಿತ. नृती (गात्रविक्षेपे) "इन्" (उ० ४-११९)। 2. ಕ್ರಿಮಿ, ಹುಳ. "नृतिः स्यान्नर्तने कृमौ" हेम०।

**नृत्त ನೃತ್ತ** (ನಂ) ನರ್ತನ, ಕುಣಿತ. नृती (गात्रविक्षेपे) "क्तः" (३-३-११४)। "नाथभक्तिपरिष्कार्यां नृत्त-लीलामिव स्पृशन्" याद० १६-६३। "नृत्तादस्याः स्थित-मतितरां कान्तमृज्वायतार्धम्" माल० २-६।

**नृत्तज्ञ ನೃತ್ತಜ್ಞ** (ವಿಂ) ನೃತ್ಯಶಾಸ್ತ್ರವನ್ನು ಬಲ್ಲವನು. नृत्तं जानाति — ज्ञा (अवबोधने) "कः" (३-१-१३५)। "नृत्तज्ञसस्यप्रवराङ्गनानां धनुष्करक्षत्रतपस्विनां च" बृहत्सं० ५-७३।

**नृत्य ನೃತ್ಯ** (ನಂ) ನರ್ತನ, ಕುಣಿತ. नृती (गात्रविक्षेपे) "क्यप्" (३-१-११०)। ನೃತ್ಯ ಮತ್ತು ನೃತ್ತಗಳೆರಡ ರಲ್ಲೂ ಗಾತ್ರವಿಕ್ಷೇಪವು ಸಮಾನವಾದರೂ ಅನುಕರ ಣಾತ್ಮಕವೂ ಭಾವಾಶ್ರಯವೂ ಆದ ನೃತ್ಯಕ್ಕಿಂತಲೂ ಕೇವಲ ತಾಲಲಯಾಶ್ರಯವಾದ ನೃತ್ತವು ಭಿನ್ನವಾದುದು. "गात्र-विक्षेपार्थत्वे समानेऽपि अनुकारात्मकत्वेन नृत्तादन्य-न्नृत्यम्"। "अन्यद्भावाश्रयं नृत्यं नृत्तं ताललया-श्रितम्" दशरू० १-९। "सुखश्रवा मङ्गलतूर्यनिस्वनाः प्रमोदनृत्यैः सह वारयोषिताम्" रघु० ३-१९। ನೃತ್ತ ಮತ್ತು ನೃತ್ಯಗಳೆರಡೂ ಲಾಸ್ಯ ಮತ್ತು ತಾಂಡವಗಳೆಂದು ಎರಡು ವಿಧ. ಸುಕುಮಾರವಾದ ನೃತ್ತ ಮತ್ತು ನೃತ್ಯಗಳು ಲಾಸ್ಯ. ಉದ್ಧತವಾದ ನೃತ್ತ ಮತ್ತು ನೃತ್ಯಗಳು ತಾಂಡವ. "मधुरोद्धतभेदेन तद्द्वयं द्विविधं पुनः। लास्यताण्डवरूपेण नाटकाद्युपकारकम्" दशरू० १-१०। ರಸಾಶ್ರಯವಾದ ನಾಟ್ಯವು ಇವೆರಡಕ್ಕಿಂತಲೂ ಭಿನ್ನವಾದುದು.

**नृत्यत् ನೃತ್ಯತ್** (ವಿಂ) ನರ್ತನಮಾಡುತ್ತಿರುವ, ಕುಣಿದಾಡು ತ್ತಿರುವ. नृती (गात्रविक्षेपे) "शतृ" (३-२-१२४)। "यत्र वैणरववैणवस्वरैर्हुंकृतैरुपवनीपिकालिनाम्। कङ्कणालिकलहैश्च नृत्यतां कुञ्जितं सुरतकूजितं तयोः" नैष० १८-१७। स्त्रियां "ङीप्" (४-१-६)। —न्ती —न्ती।

**नृत्यप्रिय ನೃತ್ಯಪ್ರಿಯ** (ಪುಂ) 1. ನಟರಾಜ, ಮಹಾದೇವ, ಪರಮೇಶ್ವರ. नृत्यं प्रियमस्य। (ವಿಂ) 2. ನೃತ್ಯವು ಪ್ರಿಯವಾಗಿರುವ.

**नृत्यशाला ನೃತ್ಯಶಾಲಾ** (ಸ್ತ್ರೀ०) ನರ್ತನವನ್ನು ಕಲಿಸುವ ಶಾಲೆ, ನಾಟ್ಯಗೃಹ.

**नृत्यस्थान ನೃತ್ಯಸ್ಥಾನ** (ನಂ) ನರ್ತನಸ್ಥಾನ, ರಂಗಸ್ಥಳ. नृत्यस्य स्थानम्।

**नृदुर्ग ನೃದುರ್ಗ** (ನಂ) ನಾಲ್ಕು ದಿಕ್ಕುಗಳಲ್ಲೂ ಆನೆ ಕುದುರೆ ರಥಗಳಿಂದಲೂ ಬಹುಮಂದಿ ಪದಾತಿ (ಕಾಲಾಳು) ಗಳಿಂದಲೂ ಕೂಡಿದ ಒಂದು ದುರ್ಗ. ರಾಜನು ವಾಸ ಮಾಡುವ ರಾಜಧಾನಿಯು ಶತ್ರುಗಳಿಗೆ ಅಭೇದ್ಯವಾಗಿ ಈ ರೀತಿಯ ದುರ್ಗಗಳಿಂದ ಆವೃತವಾಗಿರಬೇಕು. "धन्वदुर्गं महीदुर्गमब्दुर्गं वार्क्षमेव वा। नृदुर्गं गिरिदुर्गं वा

समाश्रित्य वसेत्पुरीम्" मनु० ೭-೭೦ । ನೃದುರ್ಗವು ಆರು ವಿಧ ದುರ್ಗಗಳಲ್ಲೊಂದು.

**नृदेव ನೃದೇವ** (ಪುಂ) ರಾಜ, ದೊರೆ. नृणां देवः । ना देव इव वा । "अम्लानमालाविपुलातपत्रैर्देवा नृदेवाश्च भिदां न भेजुः" नैष० १०-३३।

**नृधर्मन् ನೃಧರ್ಮನ್** (ಪುಂ) ಕುಬೇರ. नुः मनुष्यस्येव धर्मोऽस्य "अनिच्" (५-४-१२४) ।

**नृनमन ನೃನಮನ** (ವಿ०) ಮನುಷ್ಯರಿಂದ ನಮಸ್ಕರಿಸಲ್ಪಡುವ ದೇವತೆ ಮೊದಲಾದವರು. नृभिर्नम्यते — णम (प्रह्वत्वे शब्दे) कर्म० "ल्युट्" (३-३-११३) ।

**नृप ನೃಪ** (ಪುಂ) 1. ರಾಜ, ದೊರೆ, ಪ್ರಜೆಗಳನ್ನು ಕಾಪಾಡುವವನು. नॄन् पाति — पा (रक्षणे) "कः" (३-२-३)। ನಾಲ್ಕು ಯೋಜನ ವಿಸ್ತಾರದ ಪ್ರದೇಶಕ್ಕೆ ಅಧಿಕಾರಿಯಾದವನು ನೃಪನು. ಅದಕ್ಕೆ ನೂರರಷ್ಟು ವಿಸ್ತಾರದ ಪ್ರದೇಶವನ್ನು ಆಳುವವನು ಮಂಡಲೇಶ್ವರನು. ಅದಕ್ಕಿಂತಲೂ ಹತ್ತರಷ್ಟು ಅಧಿಕವಾದವನು ರಾಜೇಂದ್ರನು. "चतुर्योजनपर्यन्तमधिकारो नृपस्य च । यो राजा तच्छतगुणः स एव मण्डलेश्वरः । तस्माद्दशगुणो राजा राजेन्द्रः परिकीर्तितः" ब्रह्मवै०। ಆದರೆ ಎಲ್ಲಾ ರಾಜರಲ್ಲೂ ನೃಪಪದಪ್ರಯೋಗವು ಕಂಡುಬರುವುದು. "क्रियासु युक्तैर्नृप चारचक्षुषो न वञ्चनीयाः प्रभवोऽनुजीविभिः" किरा० १-४। "यियासतस्तस्य नृपस्य जज्ञिरे प्रशस्तवस्तूनि तदेव यौवतम्" नैष० १५-७६। 2. ಹದಿನಾರು ಸಂಖ್ಯೆ. ಮಹಾಭಾರತದಲ್ಲಿ ಹದಿನಾರೇ ಮಂದಿ ರಾಜರುಗಳ ಮಾಹಾತ್ಮ್ಯೆವನ್ನು ವರ್ಣಿಸಿರುವುದರಿಂದ ಈ ಪದಕ್ಕೆ ಹದಿನಾರು ಸಂಖ್ಯೆಯಲ್ಲಿ ಸಂಕೇತ. "भुवि नृपमितहस्तेष्वङ्गुलग्नं तदग्रम्" लीला० ।

**नृपकन्द ನೃಪಕಂದ** (ಪುಂ) ರಾಜಪಲಾಂಡು, ರಾಜೀರುಳ್ಳಿ. कन्दानां नृपः श्रेष्ठः । राजदन्तादि० (२-२-३१) परनि०।

**नृपगृह ನೃಪಗೃಹ** (ನ०) ರಾಜನ ಅರಮನೆ, ರಾಜನ ವಾಸಸ್ಥಾನ. नृपस्य गृहम् । ರಾಜಗೃಹದ ಲಕ್ಷಣ: ರಾಜನ ಅರಮನೆಯು 108 ಮೊಳಗಳ ಅಗಲವುಳ್ಳದ್ದಾಗಿಯೂ 135 ಮೊಳಗಳ ಉದ್ದಳತೆಯುಳ್ಳದ್ದಾಗಿಯೂ ಇರಬೇಕು. "उत्तममष्टाभ्यधिकं हस्तशतं नृपगृहं पृथुत्वेन । अष्टांशोनान्येवं पञ्च सपादानि दैर्घ्येण" बृहत्सं० ५३-४। ಅರಮನೆಯ ಮಧ್ಯಭಾಗದಲ್ಲಿ ಸಭಾಭವನವಿರಬೇಕು. ಗೋಶಾಲೆ ಅಶ್ವಶಾಲೆ ಮತ್ತು ಗಜಶಾಲೆಗಳಿಂದ ಕೂಡಿರಬೇಕು. ಬಾವಿ ಕೊಳ ಮತ್ತು ಜಲಯಂತ್ರಗಳ ಸೌಕರ್ಯವನ್ನು ಕಲ್ಪಿಸಿರಬೇಕು. ನಾಲ್ಕು ಕಡೆಗಳಲ್ಲೂ ಸಮವಾಗಿಯೂ ದಕ್ಷಿಣ ಭಾಗವು ಎತ್ತರವಾಗಿಯೂ ಉತ್ತರ ಭಾಗವು ತಗ್ಗಾಗಿಯೂ ಇರಬೇಕು. ಶಸ್ತ್ರಾಸ್ತ್ರಧಾರಿಗಳಿಂದ ಸುರಕ್ಷಿತವಾದ ಪ್ರಾಕಾರವು ರಚಿತವಾಗಿರಬೇಕು. ಅರಮನೆಯ ನಾಲ್ಕು ಕಡೆಯ ದ್ವಾರಗಳೂ ಯಾಮದ ಸರದಿ ಪ್ರಕಾರ ಬದಲಾಯಿಸಿಕೊಳ್ಳುವ ದ್ವಾರಪಾಲಕರಿಂದ ಸುರಕ್ಷಿತವಾಗಿರಬೇಕು. ವಸ್ತ್ರಕ್ಷಾಲನ ಸ್ನಾನ ಮುಂತಾದ ಕಾರ್ಯಗಳಿಗಾಗಿ ಪೂರ್ವಭಾಗದಲ್ಲಿ ಸ್ನಾನಕಲ್ಪನೆಯಿರಬೇಕು. ಧಾನ್ಯ ಸಂಗ್ರಹಕ್ಕಾಗಿ ದ್ವಾರಪಾಲಕರಿಗಾಗಿ ದಾಸೀ ಮತ್ತು ಸೇವಕರಿಗಾಗಿ ದಕ್ಷಿಣದಿಕ್ಕಿನಲ್ಲಿ ವಸತಿಯನ್ನು ಕಲ್ಪಿಸಬೇಕು. ಇತ್ಯಾದಿ. "राजगृहं सभामध्यं गवाश्वगजशालिकम् । प्रशस्तवापीकूपादिजलयन्त्रैः सुशोभितम् । सर्वतः स्यात् समभुजं दक्षिणोच्चमुदङ्नतम् । शस्त्रास्त्रधारिभिर्युक्तप्राकारं सुष्ठुयन्त्रकम् । चतुर्भिः पञ्चभिः षड्भिर्यामिकैः परिवर्तकैः । वस्त्रादिमार्जनार्थं च स्नानार्थं यजनार्थकम् । भोजनार्थं च पाकार्थं पूर्वस्यां कल्पयेद् गृहम् । धान्यार्थं द्वारपालार्थं दासीदासार्थमेव च । उत्सर्गार्थं गृहान् कुर्यात् दक्षिणस्यामनुक्रमात्" इत्यादि शुक्रनीतिपरिशिष्टम् । एवं नृपभवनम् नृपमन्दिरम् ಇತ್ಯಾದಿ.

**नृपञ्जय ನೃಪಂಜಯ** (ಪುಂ) ಪೂರುವಂಶದ ಒಬ್ಬ ದೊರೆ. "नृपञ्जयो बहुरथः इत्येते पौरवाः स्मृताः" हरिवं०।

**नृपति ನೃಪತಿ** (ಪುಂ) 1. ರಾಜ, ದೊರೆ. नॄन् पाति — पा (रक्षणे) "डतिः" (उ० ४-५७)। "नेत्रव्रजाः पौरजनस्य तस्मिन् विहाय सर्वान् नृपतीन् निपेतुः" रघु० ६-७। 2. ಕ್ಷತ್ರಿಯ. "विप्रस्य त्रिषु वर्णेषु नृपतेर्वर्णयोर्द्वयोः । वैश्यस्य वर्णे चैकस्मिन् षडेतेऽपसदाः स्मृताः" मनु० १०-१०।

**नृपद्रुम ನೃಪದ್ರುಮ** (ಪುಂ) ರಾಜವೃಕ್ಷ, ಕಕ್ಕೆಗಿಡ. नृपस्यादतो द्रुमः ।

**नृपप्रिय ನೃಪಪ್ರಿಯ** (ಪುಂ) 1. ಒಂದು ಬಗೆಯ ಬಿದಿರು. 2. ರಾಜೀರುಳ್ಳಿ. (ವಿ०) 3. ರಾಜನಿಗೆ ಪ್ರೀತಿಪಾತ್ರನಾದ. (ಸ್ತ್ರೀ०) –प्रिया – ಪ್ರಿಯಾ. 4. ಕೇತಕೀ ವೃಕ್ಷ, ತಾಳೆಗಿಡ.

**नृपलक्ष्मन् ನೃಪಲಕ್ಷ್ಮನ್** (ನ०) ರಾಜನ ಚಿಹ್ನೆ, ರಾಜಲಕ್ಷಣವಾದ ಛತ್ರ ಚಾಮರ ಧನುಸ್ಸು ಮುಂತಾದುದು. नृपस्य लक्ष्म ।

**नृपलिङ्गधर ನೃಪಲಿಂಗಧರ** (ವಿಂ) ರಾಜವೇಷವನ್ನು ಧರಿಸಿರುವವನು. "निजग्राहौजसा वीरः कलिं दिग्विजये क्वचित्। नृपलिङ्गधरं शूद्रम्" भाग०।

**नृपशासन ನೃಪಶಾಸನ** (ನಂ) ರಾಜನ ಆಜ್ಞೆ, ದೊರೆಯ ಆದೇಶ. नृपस्य शासनम्। ರಾಜನು ಪ್ರಜೆಗಳು ಮತ್ತು ಇತರರ ವಿಷಯದಲ್ಲಿ ಮಾಡಬೇಕಾದ ಆಜ್ಞೆ. [ವಿವರಕ್ಕೆ "राजशासन" ಪದದಲ್ಲಿ ನೋಡಿ.]

**नृपशु ನೃಪಶು** (ಪುಂ) 1. ಮೂರ್ಖ, ಪಶುಗಳಂತೆ ತಿಳಿವಳಿಕೆ ಯಿಲ್ಲದವನು. ना पशुरिव। "कृष्टा येन शिरोरुहे नृपशुना पाञ्चालराजात्मजा" वेणी० ३-४७। 2. ಪುರುಷ ಪಶು. ना चासौ पशुश्च।

**नृपसभ ನೃಪಸಭ** (ನಂ) ಅನೇಕ ರಾಜರ ಸಭೆ. नृपाणां सभा नपुंसकत्वम् (२-४-२३)।

**नृपसुत ನೃಪಸುತ, –सूनु –ಸೂನು** (ಪುಂ) 1. ರಾಜ ಪುತ್ರ, ರಾಜಕುಮಾರ. नृपस्य सुतः सूनुर्वा। (स्त्री०) **–सुता –ಸುತಾ.** 2. ರಾಜಕುಮಾರಿ. 3. ಮೂಗಿಲಿ.

**नृपांश ನೃಪಾಂಶ** (ಪುಂ) 1. ರಾಜನ ಭಾಗ, ಕಂದಾಯದ ರೂಪದಲ್ಲಿ ಕೊಡಬೇಕಾದ ರಾಜನ ಪಾಲು. नृपस्य राज्ञः अंशः। 2. ರಾಜಪುತ್ರ, ರಾಜನ ಮಗ.

**नृपात्मज ನೃಪಾತ್ಮಜ** (ಪುಂ) ರಾಜನ ಮಗ, ರಾಜ ಕುಮಾರ. नृपस्यात्मजः। (स्त्री०)**–आत्मजा –ಆತ್ಮಜಾ.** ರಾಜಕುಮಾರಿ.

**नृपाध्वर ನೃಪಾಧ್ವರ** (ಪುಂ) ರಾಜನು ಮಾಡಬೇಕಾದ ರಾಜಸೂಯ ಯಾಗ. नृपकर्तव्योऽध्वरः।

**नृपान्न ನೃಪಾನ್ನ** (ನಂ) ರಾಜಸಂಬಂಧವಾದ ಅನ್ನ. राज्ञोऽन्नम्।

**नृपाभीर ನೃಪಾಭೀರ** (ನಂ) ರಾಜನ ಭೋಜನ ಸಮಯ ವನ್ನು ತಿಳಿಸುವ ಒಂದು ವಾದ್ಯ. नृपमभीरयति–अभि+ईर (गतौ) "कः" (३-१-१३५)।

**नृपामय ನೃಪಾಮಯ** (ಪುಂ) ರಾಜಯಕ್ಷ್ಮರೋಗ, ಕ್ಷಯ ರೋಗ. आमयानां नृपः राजदन्तादि० पूर्वनिपातः।

**नृपाल ನೃಪಾಲ** (ಪುಂ) ರಾಜ, ದೊರೆ. नॄन् पालयति— पाल (रक्षणे)+णिच् "अण्" (३-२-१)। "भवन्तु तावत्तव लोचनाञ्चला निपेयनेपालनृपालपालयः" नैष० १२-४३।

**नृपासन ನೃಪಾಸನ** (ನಂ) ರಾಜನ ಸಿಂಹಾಸನ. नृपस्यासनम्। "यमभ्यषिञ्चच्छतपत्रनेत्रो सिंहासनाशां परिहृत्य दूरात्" भाग० ३-१-२८।

**नृपाह्वय ನೃಪಾಹ್ವಯ** (ಪುಂ) ರಾಜೀರುಳ್ಳಿ.

**नृमिथुन ನೃಮಿಥುನ** (ನಂ) ಸ್ತ್ರೀಪುರುಷರ ಜೋಡಿ.

**नृमेध ನೃಮೇಧ** (ಪುಂ) ನರಮೇಧ, ನರಯಜ್ಞ.

**नृयज्ञ ನೃಯಜ್ಞ** (ಪುಂ) ಗೃಹಸ್ಥನು ಪ್ರತಿದಿನವೂ ಮಾಡ ಬೇಕಾದ ಪಂಚಮಹಾಯಜ್ಞಗಳಲ್ಲೊಂದಾದ ಅತಿಥಿ ಪೂಜಾರೂಪವಾದ ಯಜ್ಞ. नृः यज्ञः। (1) ಋಷಿ ಯಜ್ಞ, (2) ದೇವಯಜ್ಞ, (3) ಭೂತಯಜ್ಞ, (4) ನೃಯಜ್ಞ ಮತ್ತು (5) ಪಿತೃಯಜ್ಞ ಇವು ಪಂಚ ಮಹಾಯಜ್ಞಗಳು. "ऋषियज्ञं देवयज्ञं भूतयज्ञं च सर्वदा। नृयज्ञं पितृयज्ञं च यथाशक्ति न हापयेत्" मनु० ४-२१। ವೇದಾಧ್ಯಯನವು ಋಷಿಯಜ್ಞ. ತರ್ಪಣವು ಪಿತೃಯಜ್ಞ. ಅಗ್ನಿಕಾರ್ಯವು ದೇವಯಜ್ಞ. ಬಲಿದಾನವು ಭೂತಯಜ್ಞ. ಅತಿಥಿ ಸತ್ಕಾರವು ನೃಯಜ್ಞ.

**नृवाहन ನೃವಾಹನ** (ಪುಂ) ಮನುಷ್ಯನೇ ವಾಹನವಾಗಿ ಉಳ್ಳ ಕುಬೇರ. ना वाहनमस्य।

**नृशंस ನೃಶಂಸ** (ವಿಂ) ಘಾತುಕ, ಕ್ರೂರ, ಇತರರಿಗೆ ತೊಂದರೆಯುಂಟುಮಾಡುವವನು. नॄन् शंसति— शंसु (हिंसायाम्) "अण्" (३-२-१)। "ये नृशंसा दुरात्मानः प्राणिनां प्राणनाशकाः। उद्वेजनीया भूतानां व्याला इव भवन्ति ते" पञ्चतं० ३-१३५।

**नृषद् ನೃಷದ್** (ಪುಂ) ಪರಮಾತ್ಮ. नरि सीदति अन्तर्यामितया— षद्लृ (विशरणगत्यवसादनेषु) "क्विप्" (३-२-६१)।

**नृसिंह ನೃಸಿಂಹ** (ಪುಂ) 1. ಮನುಷ್ಯ ಮತ್ತು ಸಿಂಹದ ಆಕಾರವನ್ನು ಹೊಂದಿದ ಪರಮಾತ್ಮನ ಒಂದು ಅವತಾರ. ना चासौ सिंहश्च। "नरसिंह" ಪದದಲ್ಲಿ ನೋಡಿ. "सटाच्छटाभिन्नघनेन बिभ्रता नृसिंह सैंहीमतनुं तनुं त्वया" माघ० १-४७। 2. ಪುರುಷಶ್ರೇಷ್ಠ.

**नृसिंहचतुर्दशी ನೃಸಿಂಹಚತುರ್ದಶೀ** (स्त्री०) ವೈಶಾಖ ಶುಕ್ಲ ಚತುರ್ದಶಿ, ಮಹಾವಿಷ್ಣುವು ನೃಸಿಂಹ ರೂಪದಿಂದ ಅವತರಿಸಿದ ದಿನ. नृसिंहस्याविर्भावदिनं चतुर्दशी। "वैशाखे शुक्लपक्षे च चतुर्दश्यां महातिथौ। सायं प्रह्लादधिक्कारमसहिष्णुः परो हरिः। सद्यः कटकटाशब्दविस्मापितसमाजनः। लीलयास्तम्भगर्भान्तादुद्भूतः शब्दभीषणः। नृहरेरवतारास्तां यत्नतः समुपोषयेत्। महापुण्यतमायाञ्च सायं विष्णुं प्रपूजयेत्"।

**नृसिंहपुराण ನೃಸಿಂಹಪುರಾಣ** (ನಂ) ಹದಿನೆಂಟು ಉಪ ಪುರಾಣಗಳಲ್ಲೊಂದು.

**नृसेन(ना) ನೃಸೇನ(ನಾ)** (स्त्रीन०) ಮನುಷ್ಯರ ಸೇನೆ. नृणां सेना। वा क्लीबत्वम् (२-४-२५)।

**नृसोम ನೃಸೋಮ** (पुं०) ಪುರುಷಶ್ರೇಷ್ಠ, ಉತ್ತಮ ಪುರುಷ. ना सोम इव। "तथेत्युपस्पृश्य पयः पवित्रं सोमोद्भवायाः सरितो नृसोमः" रघु० ५-५९।

**नृहरि ನೃಹರಿ** (पुं०) ನರಸಿಂಹಾವತಾರವೆತ್ತಿದ ಮಹಾವಿಷ್ಣು. ना चासौ हरिश्च। "तं मन्यमानो निजवीर्यशङ्कितं तद्धस्तमुक्तो नृहरिं महासुरः" भाग० ७-८-२७।

**नेजक ನೇಜಕ** (पुं०) 1. ರಜಕ, ಅಗಸ. णिजिर् (शौचपोषणयोः) "ण्वुल्" (३-१-१३३)। "शाल्मलीफलके श्लक्ष्णे नेनिज्यान्नेजकः शनैः। न च वासांसि वासोभिर्निर्हरेत् न च वासयेत्" मनु० ८-३९६। (वि०) 2. ಬಟ್ಟೆ ಒಗೆಯುವವನು.

**नेजन ನೇಜನ** (न०) 1. ಬಟ್ಟೆ ಒಗೆಯುವುದು. 2. ಶುಚಿಯಾಗಿ ಮಾಡುವುದು. णिजिर् (शौचपोषणयोः) "ल्युट्" (३-३-११५)। 3. ಅಗಸನ ಮನೆ. णिजिर् अधि० "ल्युट्" (३-३-११७)।

**नेतिकर्म ನೇತಿಕರ್ಮ** (न०) ಹಠಯೋಗದ ಒಂದು ಭೇದ. ವಿತಸ್ತಿಪ್ರಮಾಣದ ಗಂಟಿಲ್ಲದೆ ಸುಸ್ನಿಗ್ಧವಾದ ದಾರವನ್ನು ಒಂದು ನಾಸಾರಂಧ್ರದೊಳಗೆ ಹಾಕಿ ಬಾಯಿಮೂಲಕ ಹೊರಕ್ಕೆ ತೆಗೆಯಬೇಕು. ಮೂಗಿನೊಳಕ್ಕೆ ಹಾಕಿದ ದಾರವನ್ನು ಚೆನ್ನಾಗಿ ಆಡಿಸಿದರೆ ಒಳಗಿರುವ ಕಫ ಮೊದಲಾದ ಕಶ್ಮಲವೆಲ್ಲ ಹೊರಕ್ಕೆ ಬಂದು ತಲೆಯು ಶುದ್ಧವಾಗುವುದು. "सूत्रं वितस्ति सुस्निग्धं नासानाले प्रवेशयेत्। मुखान्निर्गमयेच्चैषा नेतिः सिद्धैर्निगद्यते" हठ० २-२९। ಇದರಿಂದ ಕಪಾಲಶುದ್ಧಿಯುಂಟಾಗುವುದಲ್ಲದೆ ದಿವ್ಯದೃಷ್ಟಿಯುಂಟಾಗಿ ಸ್ಕಂಧಸಂಧಿಯ ಸಕಲ ರೋಗಗಳೂ ನಿವಾರಣೆ ಹೊಂದುವುವು. "कपालशोधिनी चैव दिव्यदृष्टिप्रदायिनी। जत्रूर्ध्वजातरोगौघं नेतिराशु निहन्ति च" हठ० २-३०।

**नेतृ ನೇತೃ** (पुं०) 1. ವಿಷ್ಣು. नयति तच्छीलो निर्वहति नियुक्तं करोति—णीञ् (प्रापणे) "तृन्" (३-२-१३५)। "भक्तैर्नियुक्तं यत्कर्म नेता तत्करणादपि" इति निरुक्तिः। "न्यायो नेता समीरणः" वि० स०। 2. ಒಡೆಯ, ಪ್ರಭು, ಯಜಮಾನ, ಸ್ವಾಮಿ. णीञ् "तृच्" (३-१-१३३)। "स राजा पुरुषो दण्डः स नेता शासिता च सः। चतुर्णामाश्रमाणां च धर्मस्य प्रतिभूः स्मृतः" मनु० ७-१७। 3. ನಾಯಕ, ಆಳುವವನು, ದೊರೆ. "नेतारिलोकेषु करोति यद्यत्तत्तच्चकारास्य शरेषु शम्भुः" किरा० १७-२७। "आसन्नोषधयो नेतुर्नक्तमस्नेहदीपिकाः" रघु० ४-७५। 4. ಮುಂದಾಳು, ಮಾರ್ಗದರ್ಶನ ಮಾಡುವವನು, ಗುಂಪಿನ ಯಜಮಾನ. "रसस्यैकस्य भूयांसस्तथा नेतुर्महीभृतः" माघ० २-८७। 5. ಕಾರ್ಯನಿರ್ವಾಹಕ, ಕಾರ್ಯ ನಡಸುವವನು. "द्रव्यं जिगीषुमधिगम्य जडात्मनोऽपि नेतुर्यशस्विनि पदे नियता प्रतिष्ठा" मुद्रा० ७-१४। 6. ನಾಟಕದಲ್ಲಿ ಕಥಾನಾಯಕ. "त्यागी कृती कुलीनः सुश्रीको रूपयौवनोत्साही। दक्षोऽनुरक्तलोकः तेजोवैदग्ध्यशीलवान्नेता" सा० द० ३-३०। (वि०) 7. ಒಯ್ಯುವವನು, ಕರೆದುಕೊಂಡು ಹೋಗುವವನು, ತೆಗೆದುಕೊಂಡು ಹೋಗುವವನು. "नेत्रा नीताः सततगतिना यद्विमानाग्रभूमीरालेख्यानां नवजलकणैर्दोषमुत्पाद्य सद्यः" मेघ० २-६। ನಕ್ಷತ್ರಾರ್ಥದಲ್ಲಿ नेतृ ಪದಕ್ಕೆ ಬಹುವ್ರೀಹಿಯಲ್ಲಿ "अप्" (वा० ५-४-११५) ಬರುವುದು. मृगो नेता यासां ताः मृगनेत्रा रात्रयः। एवं पुण्यनेत्राः। ಇತ್ಯಾದಿ. स्त्रियां "ङीप्" (४-१-५)। नेत्री ನೇತ್ರೀ.

**नेत्र ನೇತ್ರ** (न०) 1. ಲೋಚನ, ನಯನ, ಕಣ್ಣು. नीयतेऽनेन — णीञ् (प्रापणे) "ष्ट्रन्" (३-२-१८२)। "नेत्राणां मदरुचिरक्षतेव तस्थौ चक्षुष्यः खलु महतां परैरलङ्घ्यः" माघ० ८-५७। 2. ಮೊಸರು ಕಡೆಯುವ ಹಗ್ಗ. 3. ವಸ್ತ್ರ, ಬಟ್ಟೆ. "विस्तारितः कुञ्जरकर्णतालैर्नेत्रक्रमेणोपरुरोध सूर्यम्" रघु० ७-३९। "वासः परं नेत्रमहं न नेत्रं किमु त्वमालिङ्ग्य तन्मयापि" नैष० ७-८। 4. ಮರದ ಬುಡ. 5. ರಥ, ಗಾಡಿ. 6. ಪಿಚಕಾರಿ, ಬಸ್ತಿ, ಮಲನಾಲದೊಳಕ್ಕೆ ದ್ರವ ವಸ್ತುವನ್ನು ಬಿಡುವ ಕೊಳವೆ. 7. ಎರಡು ಸಂಖ್ಯೆ. (पुं०) 8. ನಾಯಕ, ಯಜಮಾನ, ಮುಂದಾಳು. 9. ನಕ್ಷತ್ರ. "नेत्रो नेतरि" त्रिकाण्ड०। (वि०) 10. ಒಯ್ಯುವವನು, ಮುಂದೆ ಸಾಗಿಸುವವನು, (स्त्री०) **नेत्री ನೇತ್ರೀ** 11. ನಾಡಿ, ನರ. 12. ನದಿ, ಹೊಳೆ. 13. ಲಕ್ಷ್ಮಿ. "नेत्रं वस्त्रे मथोगुणे। मूलाक्षिनेतृषु" हेम०। "नेत्रं मथिगुणे वस्त्रभेदे मूले द्रुमस्य च। रथे चक्षुषि नद्यां च नेत्री नाड्यां च योषिति" मेदि०।

**नेत्रकोश ನೇತ್ರಕೋಶ** (पुं०) ಕಣ್ಣುಗುಡ್ಡೆ.

**नेत्रच्छद ನೇತ್ರಚ್ಛದ** (पुं०) ಕಣ್ಣಿನ ರೆಪ್ಪೆ. नेत्रे छाद्यतेऽनेन — छद (अपवारणे) + णिच् "घः" (३-३-११८)।

**नेत्रपर्यन्त ನೇತ್ರಪರ್ಯಂತ** (ಪುಂ) 1. ಕಣ್ಣಿನ ತುದಿ, ಕಡೆಗಣ್ಣು. नेत्रयोः पर्यन्तः। (ವಿಂ) 2. ಕಣ್ಣಿನವರೆಗೂ ಇರುವ.

**नेत्रपाक ನೇತ್ರಪಾಕ** (ಪುಂ) ಒಂದು ವಿಧ ನೇತ್ರರೋಗ.

**नेत्रपिण्ड ನೇತ್ರಪಿಂಡ** (ಪುಂ) ಕಣ್ಣಿನ ಗುಡ್ಡೆ. नेत्रस्य पिण्डः।

**नेत्रबन्ध ನೇತ್ರಬಂಧ** (ಪುಂ) ಹಿಂದುಗಡೆಯಿಂದ ಬಂದು ತಿಳಿಯದಂತೆ ಕಣ್ಣು ಮುಚ್ಚಿ ಆಡುವ ಕಣ್ಣುಮುಚ್ಚಾಲೆ ಆಟ. नेत्रयोर्बन्धः। "अस्पृश्यनेत्रबन्धाद्यैः क्वचिन्मृगखगेहया" भाग० १०-१८-१४।

**नेत्रमल ನೇತ್ರಮಲ** (ನಂ) ಕಣ್ಣಿನ ಪಿಸುರು. नेत्रयोर्मलम्।

**नेत्रयोनि ನೇತ್ರಯೋನಿ** (ಪುಂ) 1. ಚಂದ್ರ. नेत्रमत्रिनेत्रमुत्पत्तिस्थानं यस्य। 2. ಇಂದ್ರ. नेत्राणि योनय इवास्य।

**नेत्ररञ्जन ನೇತ್ರರಂಜನ** (ನಂ) ಕಾಡಿಗೆ, ಕಣ್ಣಿನ ಕಪ್ಪು. नेत्रे रज्यतेऽनेन — रञ्ज (रागे) करण० "ल्युट्" (३-३-११७)।

**नेत्ररुज् ನೇತ್ರರುಜ್** (ಸ್ತ್ರೀಂ) ನೇತ್ರರೋಗ.

**नेत्ररोग ನೇತ್ರರೋಗ** (ಪುಂ) ಕಣ್ಣಿಗೆ ಬರುವ ರೋಗ.

**नेत्ररो(लो)मन् ನೇತ್ರರೋ(ಲೋ)ಮನ್** (ನಂ) ಕಣ್ಣಿನ ರೆಪ್ಪೆಯ ಕೂದಲು. नेत्रस्य रोम लोम वा।

**नेत्रवस्त्र ನೇತ್ರವಸ್ತ್ರ** (ನಂ) ಕಣ್ಣಿನ ರೆಪ್ಪೆ. नेत्रयोः वस्त्रमिव।

**नेत्रविष् ನೇತ್ರವಿಷ್** (ಸ್ತ್ರೀಂ) ಕಣ್ಣಿನ ಮಲ, ಕಣ್ಣಿನ ಪಿಸುರು.

**नेत्रविष ನೇತ್ರವಿಷ** (ಪುಂ) ಸರ್ಪ, ಹಾವು. नेत्रे विषं यस्य। "दृष्टिनिःश्वासविषाः सर्पाः" सुश्रुत०। "आशीविषान् नेत्रविषान् कोपयेन्न च पण्डितः" भा० सभा०।

**नेत्रस्तम्भ ನೇತ್ರಸ್ತಂಭ** (ಪುಂ) ಕ್ರೂರವಾಗಿ ನೋಡುತ್ತ ಕಣ್ಣನ್ನು ಮುಚ್ಚದೆ ತೆರೆದುಕೊಂಡಿರುವುದು. नेत्रयोः स्तम्भः।

**नेत्रान्त ನೇತ್ರಾಂತ** (ಪುಂ) ಕಣ್ಣಿನ ಕೊನೆಯ ಭಾಗ, ಕಡೆಗಣ್ಣು. नेत्रयोरन्तः।

**नेत्राभिष्यन्द ನೇತ್ರಾಭಿಷ್ಯಂದ** (ಪುಂ) ಕಣ್ಣೀರು ಸೋರುವುದು, ಒಂದು ವಿಧ ನೇತ್ರರೋಗ. नेत्रयोरभिष्यन्दः। ಇದೊಂದು ಸಾಂಕ್ರಾಮಿಕ (ಅಂಟು) ರೋಗ. ಪದೇ ಪದೇ ಪರಸ್ಪರ ಅಂಗಸ್ಪರ್ಶ, ಒಬ್ಬನ ಉಸಿರನ್ನು ಇನ್ನೊಬ್ಬನು ಎಳೆದುಕೊಳ್ಳುವುದು ಒಟ್ಟಿಗೆ ಕುಳಿತು ಊಟಮಾಡುವುದು ಒಂದೇ ಹಾಸಿಗೆಯಲ್ಲಿ ಮಲಗುವುದು ಒಂದೇ ಆಸನದಲ್ಲಿ ಕೂಡುವುದು ಮುಂತಾದುವುಗಳಿಂದ ಕುಷ್ಠ, ಜ್ವರ, ಶೋಫ (ಊತ) ನೇತ್ರಾಭಿಷ್ಯಂದ ಮುಂತಾದ ರೋಗಗಳು ಅಂಟುವುವು. "प्रसङ्गात् गात्रसंस्पर्शात् निःश्वासात् सहभोजनात्। सह शय्यासनाच्चापि वस्त्रमाल्यानुलेपनात्। कुष्ठं ज्वरश्च शोषश्च नेत्राभिष्यन्द एव च। औपसर्गिकरोगाश्च संक्रामन्ति नरान्नरम्" सुश्रुत०।

**नेत्रामय ನೇತ್ರಾಮಯ** (ಪುಂ) ನೇತ್ರರೋಗ.

**नेत्राम्बु ನೇತ್ರಾಂಬು** (ನಂ) ಕಣ್ಣೀರು.

**नेत्री ನೇತ್ರೀ** (ಸ್ತ್ರೀಂ) 1. ನದಿ, ಹೊಳೆ. 2. ನಾಡಿ, ನರ. 3. ಲಕ್ಷ್ಮೀ. णीञ् (प्रापणे) "ष्ट्रन्" (३-२-१८२)। "ङीष्" (४-१-४१)। 4. ಒಯ್ಯುವ ಹೆಂಗುಸು. नेतृ "ङीप्" (४-१-५)।

**नेदिष्ठ ನೇದಿಷ್ಠ** (ವಿಂ) ಹೆಚ್ಚು ಸಮೀಪದಲ್ಲಿರುವ. अतिशयेनान्तिकः "इष्ठन्" (५-३-५५)। नेदादेशः (५-३-६३)।

**नेदीयस् ನೇದೀಯಸ್** (ವಿಂ) ಅತ್ಯಂತ ಸಮೀಪದಲ್ಲಿರುವ, ಬಹಳ ಹತ್ತಿರದಲ್ಲಿರುವ. अतिशयेन अन्तिकः "ईयसुन्" (५-३-५७)। नेदादेशः (५-३-६३)। "निर्वेशनीयः सविशेषमासीन्नेदीयसां नेत्रचकोरवृन्दैः" याद० १३-१९। स्त्रियां "ङीप्" (४-१-६)। —यसी —ಯಸೀ. "नेदीयसीं तव निशम्य विभातनान्दीम्" याद० १९-१०।

**नेप ನೇಪ** (ಪುಂ) 1. ಪುರೋಹಿತ. (ನಂ) 2. ಜಲ, ನೀರು.

**नेपथ्य ನೇಪಥ್ಯ** (ನಂ) 1. ಅಲಂಕಾರ, ಭೂಷಣ, ಆಭರಣ, ಒಡವೆ. नेः नेता, तस्य पथ्यम्। "तेषां महार्हासनसंस्थितानामुदारनेपथ्यभृतां स मध्ये" रघु० ६-६। 2. ಆಭರಣಗಳನ್ನು ತೊಡುವುದು, ವೇಷ ಹಾಕಿಕೊಳ್ಳುವುದು. "निर्नाभिकौशेयमुपात्तबाणमभ्यङ्गनेपथ्यमलञ्चकार" कुमा० ७-७। 3. ರಂಗಭೂಮಿಯ ಹಿಂಭಾಗ, ಪರದೆಯ ಒಳಭಾಗ, ಪಾತ್ರಗಳಿಗೆ ವೇಷ ಭೂಷಣಾದಿಗಳ ಕಾರ್ಯದ ಮತ್ತು ಕುಶೀಲವ (ಗಾಯಕ) ರು ಕೂಡುವ ಸ್ಥಳ. "कुशीलवकुटुम्बस्य स्थली नेपथ्यमिष्यते"।

**नेपाल ನೇಪಾಲ** (ಪುಂ) 1. ಒಂದು ದೇಶ. ಈ ದೇಶವು ನಮ್ಮ ಭಾರತರಾಷ್ಟ್ರಕ್ಕೆ ಉತ್ತರದಿಕ್ಕಿನಲ್ಲಿರುವುದು. (ಪುಂ ಬಂ ವಂ) 2. ನೇಪಾಲ ದೇಶದ ಜನರು. (ನಂ) 3. ತಾಮ್ರಲೋಹ.

**नेपालजा ನೇಪಾಲಜಾ** (ಸ್ತ್ರೀಂ) ನೇಪಾಲ ದೇಶದಲ್ಲಿ ಹುಟ್ಟಿದ ಮಣಶಿಲೆ.

**नेपालिका ನೇಪಾಲಿಕಾ** (स्त्री०) ಮಣಶಿಲೆ.

**नेम ನೇಮ** (पुं०) 1. ಕಾಲ, ಸಮಯ. 2. ಅವಧಿ, ಗಡು. 3. ಹಳ್ಳ, ಗುಳಿ. 4. ಪ್ರಾಕಾರ, ಸುತ್ತುಗೋಡೆ. 5. ಕಪಟ, ಮೋಸ, ವಂಚನೆ. 6. ಅರ್ಧ, ಒಂದು ಭಾಗ. "नेमस्त्वर्धे प्राकारगर्तयोः। अवधौ कैतवे काले" हेम०। "सप्तलोकीनिर्वाहिकोरकितनेमकटाक्षलीलाम्" श्रीस्तुतिः।

**नेमि ನೇಮಿ** (पुं०) 1. ರಥದ ಚಕ್ರದ ಅಂಚು. नयति रथम् — णीञ् (प्रापणे) "मिः" (उ० ४-४३)। "नीचैर्गच्छत्युपरि च दशा चक्रनेमिक्रमेण" मेघ० २-४६। 2. ತಿನಿಶವೃಕ್ಷ, ನೆಮ್ಮಿಗಿಡ. 3. ಬಾವಿಯಿಂದ ನೀರನ್ನು ಮೇಲಕ್ಕೆ ಎಳೆಯಲು ಹಾಕಿರುವ ರಾಟೆ. (स्त्री०) वा "ङीष्" (ग० ४-१-४५)। –मी – ವಿ॰. 4. ಬಾವಿಯ ಸಮೀಪದಲ್ಲಿರುವ ಸಮಸ್ಥಳ.

**नेमिश ನೇಮಿಶ** (न०) ನೈಮಿಶವೆಂಬ ಒಂದು ಅರಣ್ಯ. नेमिः शीर्यतेऽत्र—शॄ (हिंसायाम्) अधि० "डः" बाहु०।

**नेयार्थता ನೇಯಾರ್ಥತಾ** (स्त्री०) ರೂಢಿ ಪ್ರಯೋಜನ ಯಾವುದೂ ಇಲ್ಲದೆ ಶಬ್ದಕ್ಕೆ ಲಕ್ಷ್ಯಾರ್ಥವನ್ನು ಹೇಳುವುದು. नेयः न्यायराहित्येन स्वेच्छया कल्पनीयोऽर्थो यस्य, तस्य भावः — "तल्" (५-१-११९)। "कमले चरणाघातं मुखं सुमुखि तेऽकरोत्" सा० द०। ಇಲ್ಲಿ ಚರಣಾಘಾತ ಪದದಿಂದ ಜಯರೂಪವಾದ ಅರ್ಥವು ಲಕ್ಷಣಾವೃತ್ತಿಯಿಂದ ಲಭ್ಯವಾಗುವುದು. ಆದರೆ ರೂಢಿ ಪ್ರಯೋಜನಗಳು ಯಾವುದೂ ಇಲ್ಲವಾದುದರಿಂದ ನೇಯಾರ್ಥರೂಪ ದೋಷವಿರುವುದು.

**नेष्ट ನೇಷ್ಟ** (वि०) 1. ಇಷ್ಟವಲ್ಲದ. 2. ಒಳ್ಳೆಯದಲ್ಲದ. न इष्टः। "अतिककुदाः कृशदेहा नेष्टा हीनाधिकाङ्गयश्च (गावः)" बृहत्सं० ६१-४।

**नेष्टु ನೇಷ್ಟು** (पुं०) ಮಣ್ಣಿನ ಹೆಂಟೆ. "यथा महार्णवे क्षिप्तः क्षिप्रं नेष्टुर्विनश्यति" भा० अनु०।

**नैःस्व ನೈಃಸ್ವ** (न०) ದಾರಿದ್ರ್ಯ, ಬಡತನ. निःस्वस्य भावः "अण्" (५-१-१३०)।

**नैःस्व्य ನೈಃಸ್ವ್ಯ** (न०) ದಾರಿದ್ರ್ಯ, ಬಡತನ. निःस्वस्य भावः "ष्यञ्" (५-१-१२४)।

**नैक ನೈಕ** (पुं०) 1. ವಿಷ್ಣು. न एकः। ಮಾಯೆಯಿಂದ ಅನೇಕ ರೂಪಗಳನ್ನು ತಾಳುವುದರಿಂದ ಪರಮಾತ್ಮನಿಗೆ ಈ ಹೆಸರು. "नैकस्तु माययाऽनेकरूपत्वात्परिकीर्तितः" इति निरुक्तिः। "एको नैकः स वः कः किम्" वि० स०। (वि०) 2. ಅನೇಕ, ಬಹಳ.

**नैकचर ನೈಕಚರ** (वि०) ಒಂಟಿಯಾಗಿ ಸಂಚರಿಸದಿರುವ, ಅನೇಕರ ಗುಂಪಿನಲ್ಲಿ ಸಂಚರಿಸುವ. नैकः चरति।

**नैकटिक ನೈಕಟಿಕ** (वि०) ಸಮೀಪದಲ್ಲಿ ವಾಸಮಾಡುವ. निकटे वसति — "ठक्" (४-४-७३)। "पर्षद्वलान् महाब्रह्मैराट नैकटिकाश्रमान्" भट्टि० ४-१२।

**नैकट्य ನೈಕಟ್ಯ** (न०) ಹತ್ತಿರ, ಸಾಮೀಪ್ಯ. निकटस्य भावः "ष्यञ्" (५-१-१२४)। "बाधते तञ्च नैकट्यात् सर्वं स मगधेश्वरः" कथास०।

**नैकद ನೈಕದ** (पुं०) ವಿಷ್ಣು, ನಾರಾಯಣ. नैकानि अनेकानि ददाति, तादृश्यः असङ्ख्येयमालाञ्जनवासःप्रभृतिब्रह्मालङ्कारदायिन्यो मुक्ताभ्युत्थानविदो दिव्याप्सरसः सन्त्यस्य। "ब्रह्मालङ्कारदायिन्यो मुक्तेभ्यश्च परे पदे। दिव्याश्चाप्सरसो यस्य नैकदः स च कथ्यते" इति निरुक्तिः। "सुखदो नैकदोऽग्रजः" वि०स०।

**नैकधा ನೈಕಧಾ** (अव्य०) ಅನೇಕ ಪ್ರಕಾರವಾಗಿ. नैक प्रकारे "धा" (५-३-४२)। "शीर्षयोः पतिता वृक्षा बिभिदुर्नैकधा तयोः" भा० वन०।

**नैकभेद ನೈಕಭೇದ** (वि०) ಅನೇಕ ಪ್ರಕಾರವಾದ. न एको भेदोऽत्र।

**नैकमाय ನೈಕಮಾಯ** (पुं०) 1. ವಿಷ್ಣು, ಪರಮಾತ್ಮ. नैकाः मायाः मुग्धशिशुरूपापरिमितजगन्निगरणनिरालम्बनैकोदकवटदलशयनाद्यनेकाश्चर्याणि अस्य। "मुग्धार्भकत्वरूपेण जगन्निर्भरणादपि। वटैकपत्रशयनात् निरालम्बजले मुहुः। अनन्ताश्चर्यसंयुक्तो नैकमायस्तु सः स्मृतः" इति निरुक्तिः। "युगादिकृद्युगावर्तो नैकमायो महाशनः" वि० स०। (वि०) 2. ಅನೇಕ ಪ್ರಕಾರವಾದ ಕಪಟ ವ್ಯಾಪಾರವುಳ್ಳ.

**नैकरूप ನೈಕರೂಪ** (पुं०) 1. ವಿಷ್ಣು, ಪರಮಾತ್ಮ. नैकं रूपं यस्य। नैकानि अनेकानि तत्तत्सर्वप्रतीतियोग्यानि रूपाण्यस्य। "तत्तज्जनज्ञानयोग्यं रूपं यस्य विशेषतः। नैकरूपः समुद्दिष्टः सर्वप्रत्ययगोचरः" इति निरुक्तिः। "नैकरूपो बृहद्रूपः शिपिविष्टः प्रकाशनः" वि० स०। (वि०) 2. ಅನೇಕ ರೂಪಗಳುಳ್ಳ.

**नैकविध ನೈಕವಿಧ** (वि०) ಅನೇಕ ರೀತಿಯ, ಅನೇಕ ಪ್ರಕಾರದ. "बालेऽधराधरितनैकविधप्रवाले" नैष० ११-१०४।

**नैकशृङ्ग ನೈಕಶೃಂಗ** (पुं०) ವಿಷ್ಣು, ನಾರಾಯಣ. नैकानि शृङ्गाण्यस्य। बुद्धियोगः सारथ्यम् अनायुधग्रहणव्याजः

प्राप्तकाले तद्ग्रहणं चेति बहूनि वैरिबाधकान्यस्य शृङ्गाणि। "प्रग्रहो निग्रहो व्यग्रः नैकशृङ्गो गदाग्रजः" वि० स०।

**नैकात्मन् ನೈಕಾತ್ಮನ್** (पुं०) ವಿಷ್ಣು, ನಾರಾಯಣ. नैकः आत्मा स्वरूपमस्य। ಸರ್ಗಾದಿಕಾರ್ಯಗಳಲ್ಲಿ ತನ್ನ ವಿಭೂತಿಯಿಂದ ಅನೇಕ ರೂಪಗಳನ್ನು ಸ್ವೀಕರಿಸುವುದರಿಂದ ಈ ಹೆಸರು. "नैकात्मानेकरूपत्वात् सर्गादिषु विभूतिभिः" इति निरुक्तिः। "नैकात्मा नैककर्मकृत्" वि० स०। "तदैक्षत बहुस्यां प्रजायेयेति" श्रुतिः।

**नैगम ನೈಗಮ** (पुं०) 1. ಉಪನಿಷತ್ತು, ವೇದಾಂತ, ಬ್ರಹ್ಮ ಪ್ರತಿಪಾದಕವಾದ ವೇದದ ಒಂದು ಭಾಗ. निगम एव स्वार्थे "अण्" (५-४-३८)। 2. ವರ್ತಕ, ಕ್ರಯ ವಿಕ್ರಯಗಳಿಂದ ಜೀವಿಸುವವನು. निगमे भवः "अण्" (४-३-५३)। "निर्धूतनिगमांस्तत्र नैगमानपरान्तजान्" याद० २२-९८। 3 ನಯ, ನೀತಿ. 4. ಪೌರ, ನಗರದಲ್ಲಿ ವಾಸಮಾಡುವವನು. 5. ಉಪಾಯ. 6. ವೈದಿಕ ನಿಘಂಟುವಿನ ಒಂದು ಭಾಗ. "आद्यं नैघण्टुकं काण्डं द्वितीयं नैगमं तथा"। ನೈಗಮಕಾಂಡದಲ್ಲಿ ಏಕಾರ್ಥವಾಚಿಯಾದ ಅನೇಕ ಶಬ್ದಗಳನ್ನು ಸೇರಿಸಲಾಗಿದೆ. (वि०) 7. ವೇದಸಂಬಂಧವಾದ. "नैगमः स्यादुपनिषद्वणिजोर्नागिरेऽपि च" मेदि०।

**नैगमिक ನೈಗಮಿಕ** (वि०) ವೇದದಲ್ಲಿರುವ, ವೇದದಲ್ಲಿ ವಿವರಿಸಲ್ಪಟ್ಟಿರುವ.

**नैघण्टुक ನೈಘಂಟುಕ** (न०) ಯಾಸ್ಕರು ನಿರುಕ್ತದಲ್ಲಿ ಪರ್ಯಾಯಶಬ್ದಗಳಿಗೆ ಅರ್ಥವಿವರಣೆ ಕೊಟ್ಟಿರುವ ಭಾಗ, ನಿರುಕ್ತದ ಮೊದಲನೆಯ ಮೂರು ಅಧ್ಯಾಯಗಳಿಂದ ಕೂಡಿದ ನಿಘಂಟುಗ್ರಂಥದ ಮೊದಲನೆಯ ಕಾಂಡ,

**नैचिकी ನೈಚಿಕೀ** (स्त्री०) ಶ್ರೇಷ್ಠವಾದ ಆಕಳು, ಉತ್ತಮಜಾತಿಗೆ ಸೇರಿದ ಹಸು. नीचैश्चरति — "ठक्" (४-४-८)।

**नैज ನೈಜ** (वि०) ತನ್ನದಾದ, ತನ್ನ ಸಂಬಂಧವಾದ. निजस्येदम् "अण्" (४-३-१२०)।

**नैत्य ನೈತ್ಯ** (वि०) 1. ನಿತ್ಯಕರ್ಮ, ಪ್ರತಿದಿನವೂ ಆಚರಿಸಲು ವಿಹಿತವಾದ ಕರ್ಮ. नित्य स्वार्थे "अण्" (५-४-३८)। 2. ಪ್ರತಿದಿನವೂ ಕೊಡಲ್ಪಡುವ. नित्यं दीयते "अण्" (५-१-९७)।

**नैत्यक ನೈತ್ಯಕ** (वि०) ನಿತ್ಯಕರ್ಮ, ಪ್ರತಿದಿನವೂ ಆಚರಿಸಬೇಕಾದ ಜಪ, ತಪಸ್ಸು, ಯಾಗ ಮುಂತಾದುದು. नैत्य स्वार्थे "कः"। "नैत्यके नास्त्यनध्यायः ब्रह्मसूत्रं हि तत्स्मृतम्" मनु० २-१०६।

**नैदाघ ನೈದಾಘ** (वि०) ನಿದಾಘಸಂಬಂಧವಾದ, ಗ್ರೀಷ್ಮ ಋತುಸಂಬಂಧವಾದ. निदाघस्येदम् "अण्" (४-३-१२०)। "हन्ता पुरां भूरि पृषत्कवर्षं निरास नैदाघ इवम्बु मेघः" किरा० १७-३२।

**नैदाघिक ನೈದಾಘಿಕ** (वि०) ಗ್ರೀಷ್ಮರ್ತುವಿನಲ್ಲಿರುವ, ಗ್ರೀಷ್ಮರ್ತುವಿನಲ್ಲಿ ಉಂಟಾದ. निदाघे भवः "ठञ्" (४-३-११)।

**नैदान ನೈದಾನ** (वि०) ನಿದಾನವನ್ನು ತಿಳಿದವನು, ಕಾರಣವನ್ನು ಅರಿತವನು. निदानं वेद "अण्" (४-२-५९)।

**नैदानिक ನೈದಾನಿಕ** (वि०) 1. ರೋಗದ ಕಾರಣವನ್ನು ತಿಳಿದವನು. 2. ರೋಗದ ಕಾರಣವನ್ನು ತಿಳಿಸುವ ಗ್ರಂಥವನ್ನು ಅಧ್ಯಯನ ಮಾಡಿದವನು. निदानं रोगकारणं वेद तत्प्रतिपादकग्रन्थमधीते वा "ठक्" (४-२-५९)।

**नैदेशिक ನೈದೇಶಿಕ** (वि०) ಸೇವಕ, ಅಜ್ಞೆಯಂತೆ ನಡೆಯುವವನು, ಹೇಳಿದ ಕಾರ್ಯವನ್ನು ಮಾಡುವವನು.

**नैद्र ನೈದ್ರ** (वि०) ನಿದ್ರೆಯ ಸಂಬಂಧವಾದ, ನಿದ್ರೆಯ ಸಂಬಂಧದಿಂದ ಬಂದ. निद्राया आगतः "अण्" (४-३-७४)। "गच्छतः स्म मधुकैटभौ विभोर्यस्य नैद्रसुखविघ्नतां क्षणम्" माघ० १४-६८।

**नैधन ನೈಧನ** (न०) 1. ಮರಣ, ನಿಧನ. निधन स्वार्थे "अण्" (५-४-३८)। 2. ನೈಧನ ತಾರೆ. 3. ನಿಧನ ಸ್ಥಾನ, ಲಗ್ನದಿಂದ ಎಂಟನೆಯ ಸ್ಥಾನ. "शुद्धैर्द्वादशकेन्द्रनैधनगृहैः पापैस्त्रिषष्ठायगैः" बृहत्सं ९८-१७।

**नैपाल ನೈಪಾಲ** (पुं०) 1. ನೇಪಾಲ ದೇಶದಲ್ಲಿ ಹುಟ್ಟಿದ ಬೇವಿನಮರ. 2. ಮಣಿಶಿಲೆ. नेपाले भवः नेपालस्येदं वा "अण्"। (स्त्री०) —ली —ಲೀ. 3. ನವಮಲ್ಲಿಕೆ, ಹೆಜ್ಜಾಜಿಗಿಡ. 4. ಕರಿಯ ಲಕ್ಕಿಗಿಡ. 5. ನೀಲಿಗಿಡ.

**नैपालिक ನೈಪಾಲಿಕ** (न०) ತಾಮ್ರಲೋಹ. नेपाले भवः "ठक्"।

**नैपुण ನೈಪುಣ** (न०) ಕುಶಲತೆ, ಜಾಣತನ. निपुणस्य कर्म भावो वा "अण्" (५-१-१३०)। "प्रकटान्यपि नैपुणं महत्परवाच्यानि चिराय गोपितुम्" माघ० १६-३०।

**नैपुण्य ನೈಪುಣ್ಯ** (न०) 1. ಕುಶಲತೆ, ಜಾಣತನ. 2. ಜಾಣನ ಕೆಲಸ. निपुणस्य भावः कर्म वा "ष्यञ्" (५-१-१२४)।

**नैभृत्य ನೈಭೃತ್ಯ** (न०) ಗುಟ್ಟಾಗಿಡುವುದು, ರಹಸ್ಯವಾಗಿಡುವುದು, ಮುಚ್ಚಿಡುವುದು. निभृतस्य भावः "ष्यञ्"

(೫-೧-೧೨೪)। "केनचित्कारणेन मया नैमृत्यमवलम्बितम्" माल० ५।

**नैमित्त ನೈಮಿತ್ತ** (ವಿ೦) 1. ನಿಮಿತ್ತಸಂಬಂಧವಾದ, ಶಕುನದಲ್ಲಿ ಕಂಡುಬರುವ. 2. ನಿಮಿತ್ತಶಾಸ್ತ್ರಗ್ರಂಥದ ವ್ಯಾಖ್ಯಾನ. निमित्ते भवः निमित्तसूचकग्रन्थव्याख्यानो वा "अण्" (೪-೩-೭೩)।

**नैमित्तिक ನೈಮಿತ್ತಿಕ** (ವಿ೦) 1. ನಿಮಿತ್ತವನ್ನು ತಿಳಿದವನು. 2. ನಿಮಿತ್ತಶಾಸ್ತ್ರಗ್ರಂಥದ ಅಧ್ಯಯನ ಮಾಡುವವನು. निमित्तं वेत्ति तत्प्रतिपादकग्रन्थमधीते वा "ठक्" (೪-೨-೬೦)। 3. ಒಂದು ಕಾರಣದಿಂದ ಬಂದ, ಕಾರಣವನ್ನು ಆಶ್ರಯಿಸಿ ಬಂದ. "निमित्तनैमित्तिकयोरयं क्रमः तव प्रसादस्य पुरस्तु संपदः" शाकु० ७-३०। 4. ಒಂದು ಕಾರಣವನ್ನು ಆಶ್ರಯಿಸಿ ಬಂದ ಕರ್ಮ. ಸ್ನಾನ, ದಾನ, ಪ್ರಾಯಶ್ಚಿತ್ತ ಮುಂತಾದುವು. ಗ್ರಹಣಸ್ನಾನವು ನೈಮಿತ್ತಿಕ. ಪಾಪಪರಿಹಾರಕ್ಕಾಗಿ ಮಾಡುವ ದಾನವು ನೈಮಿತ್ತಿಕ. ರಜಸ್ವಲಾದಿ ಸ್ಪರ್ಶ, ಅಬುದ್ಧಿಕೃತ ಪಾಪ ಕಾರ್ಯ ಮುಂತಾದ ಕಾರಣಗಳಿಂದ ಮಾಡಿಕೊಳ್ಳುವ ಪ್ರಾಯಶ್ಚಿತ್ತವು ನೈಮಿತ್ತಿಕ. "निमित्तमात्रमाश्रित्य यो धर्मः संप्रवर्तते। नैमित्तिकः स विज्ञेयः प्रायश्चित्तविधिर्यथा"।

**नैमित्तिकप्रलय ನೈಮಿತ್ತಿಕಪ್ರಲಯ** (ಪು೦) ಬ್ರಹ್ಮನ ಒಂದು ಹಗಲಿನ ಕೊನೆಯಲ್ಲಿ ಸಂಭವಿಸುವ ಪ್ರಳಯ, ಒಂದು ಸಾವಿರ ಚತುರ್ಯುಗಗಳ ಅನಂತರ ಉಂಟಾಗುವ ಪ್ರಳಯ. ಪ್ರಳಯವು ನಿತ್ಯ ನೈಮಿತ್ತಿಕ ಪ್ರಾಕೃತ ಮತ್ತು ಆತ್ಯಂತಿಕಗಳೆಂದು ನಾಲ್ಕು ವಿಧ.

ಪರಮಾತ್ಮನು ಒಂದು ಸಾವಿರ ಚತುರ್ಯುಗಗಳು ಕಳೆದನಂತರ ರುದ್ರರೂಪದಿಂದ ಸಕಲ ಪ್ರಾಣಿಗಳನ್ನೂ ತನ್ನೊಳಗೆ ಸೇರಿಸಿಕೊಳ್ಳುವನು. ಭೂಮಿಯಲ್ಲಿ ಒಂದು ನೂರು ವರ್ಷಗಳ ಕಾಲ ಅನಾವೃಷ್ಟಿಯುಂಟಾಗಿ ಸಸ್ಯಗಳೆಲ್ಲವೂ ಸತ್ತ್ವಹೀನವಾಗಿ ಪ್ರಾಣಿಗಳೆಲ್ಲವೂ ತತ್ತರಿಸಿ ಹೋಗುವುವು. ಆಗ ಸೂರ್ಯನ ಏಳು ರಶ್ಮಿಗಳಲ್ಲೂ ಪ್ರವೇಶಿಸಿ ಭೂಮಿಯಲ್ಲಿರುವ ಸಮಸ್ತ ಜಲರಾಶಿಗಳನ್ನೂ ಪಾನಮಾಡುವನು. ಇದರಿಂದ ಭೂಮಿಯೆಲ್ಲವೂ ನೀರಸವಾಗುವುದು. ಸಕಲ ನದಿಗಳ ಸಮುದ್ರಗಳ ಮತ್ತು ಕೆರೆ ಮೊದಲಾದ ಸಮಸ್ತ ಜಲಾಶಯಗಳ ನೀರನ್ನೂ ಎಳೆದುಕೊಂಡು ಆ ಏಳು ಸೂರ್ಯರಶ್ಮಿಗಳು ಏಳು ಸೂರ್ಯರೂಪವನ್ನು ಹೊಂದಿ ಮೂರು ಲೋಕಗಳನ್ನೂ ದಹಿಸುವುವು. ಈ ಸೂರ್ಯರಿಂದ ದಗ್ಧವಾದ ಮೂರು ಲೋಕಗಳೂ ಅಂಬರೀಷ (ಹುರಿಯುವ ಬಾಣಲೆ) ದಂತಾಗುವುವು. ಈ ಸಮಯದಲ್ಲಿ ಅಧಿಕಾರವನ್ನು ಕಳೆದುಕೊಂಡ ಮನ್ವಾದಿಗಳು ಜನಲೋಕವನ್ನು ಸೇರುವರು. ಹೀಗೆ ರುದ್ರರೂಪಿಯಾದ ವಿಷ್ಣುವು ಜಗತ್ತೆಲ್ಲವನ್ನೂ ದಹಿಸಿ ತನ್ನ ನಿಃಶ್ವಾಸದಿಂದ ಮೇಘಗಳನ್ನು ಸೃಷ್ಟಿಸುವನು. ಈ ಮೇಘಗಳೆಲ್ಲವೂ ಭಯಂಕರವಾಗಿ ಸಿಡಿಲು ಗುಡುಗುಗಳ ಸಮೇತ ನೂರು ವರ್ಷಗಳು ಸತತವಾಗಿ ಮಳೆಯನ್ನು ಸುರಿಸಿ ಪ್ರಳಯಾಗ್ನಿಯನ್ನು ಶಾಂತಗೊಳಿಸುವುವು. ಆಗ ಜಗತ್ತೆಲ್ಲವೂ ಜಲಮಯವಾಗುವುದು. ಮತ್ತೆ ವಿಷ್ಣುವಿನ ನಿಃಶ್ವಾಸದಿಂದ ಹೊರಟ ವಾಯುವು ಆ ಮೇಘಗಳನ್ನೆಲ್ಲಾ ಚದುರಿಸಿ ಒಂದು ನೂರು ವರ್ಷಗಳ ಕಾಲ ಸತತವಾಗಿ ಬೀಸುವುದು. ಅನಂತರ ಆ ವಾಯುವನ್ನು ಸಂಪೂರ್ಣವಾಗಿ ಪಾನಮಾಡಿ ಮಹಾವಿಷ್ಣುವು ಏಕಾಕಾರವಾದ ಆ ಮಹಾಸಮುದ್ರದಲ್ಲಿ ಶೇಷಶಾಯಿಯಾಗಿ ಜನಲೋಕವಾಸಿಗಳಾದ ಸನಕಾದಿ ಮಹರ್ಷಿಗಳಿಂದ ಸ್ತುತಿಸಲ್ಪಡುತ್ತ ಯೋಗನಿದ್ರೆಯಲ್ಲಿ ಮಗ್ನನಾಗಿರುವನು. **ಇದು ನೈಮಿತ್ತಿಕ ಪ್ರಳಯ.**

"चतुर्युगसहस्रान्ते क्षीणप्राये महीतले। अनावृष्टिरतीवोग्रा जायते शतवार्षिकी। ततो यान्यल्पसाराणि तानि सत्त्वान्यशेषतः। क्षयं यान्ति मुनिश्रेष्ठ पार्थिवान्यनुपीडनात्। ततः स भगवान् विष्णूरुद्ररूपधरोऽव्ययः। क्षयाय यतते कर्तुमात्मस्थाः सकलाः प्रजाः। ततः स भगवान् विष्णुर्भानोः सप्तसु रश्मिषु। स्थितः पिबत्यशेषाणि जलानि मुनिसत्तम। समुद्रान् सरितः शैलान् नदीः प्रस्रवणानि च। पातालेषु च यत्तोयं तत्सर्वं नयति क्षयम्। ततस्तस्यानुभावेन तोयाहारोपबृंहिताः। त एव रश्मयः सप्त जायन्ते सप्त भास्कराः। अधश्चोर्ध्वं च ते दीप्तास्ततः सप्त दिवाकराः। दहन्त्यशेषं त्रैलोक्यं सपातालतलं द्विज। ततः कालाग्निरुद्रोऽसौ भूत्वा सर्वहरोऽनलः। शेषाहिश्वाससंभूतः पातालानि दहत्यधः। अम्बरीषमिवाभाति त्रैलोक्यमखिलं तदा। ज्वालावर्तपरीवारमुपक्षीणचराचरम्। ततस्तापपरीतास्तु लोकद्वयनिवासिनः। कृताधिकारा गच्छन्ति महर्लोकं महामुने। तस्मादपि महातापतप्ताः लोकात्ततः परम्। गच्छन्ति जनलोकं ते दशावृत्त्या परैषिणः। ततो दग्ध्वा जगत्सर्वं रुद्ररूपी जनार्दनः। मुखनिःश्वासजान् मेघान् करोति मुनिसत्तम। ततो गजकुलप्रख्यास्तटित्वन्तोऽतिनादिनः। उत्तिष्ठन्ति तदा व्योम्नि घोराः संवर्तका घनाः। हाहारावा महाकायाः पूरयन्ति नभःस्थलम्। वर्षन्तस्ते महासारास्तमग्निमतिभैरवम्। शमयन्त्यखिलं विप्र त्रैलोक्यान्तरधिष्ठितम्। नष्टे चाग्नौ च सततं वर्षमाणाह्य-

र्निशम्। प्लावयन्ति जगत्सर्वमम्भोभिर्मुनिसत्तम। अन्धकारीकृते लोके नष्टे स्थावरजङ्गमे। वर्षन्ति ते महामेघा वर्षाणामधिकं शतम्। एवं भवति कल्पान्ते समस्तं मुनिसत्तम। वासुदेवस्य माहात्म्यात् नित्यस्य परमात्मनः। मुखनिःश्वासजो विष्णोर्वायुस्तान् जलदांस्ततः। नाशयन् वाति मैत्रेय वर्षाणामपरं शतम्। सर्वभूतमयोऽचिन्त्यो भगवान् भूतभावनः। अनादिरादिर्विश्वस्य पीत्वा वायुमशेषतः। एकार्णवे ततस्तस्मिन् शेषशय्यागतः प्रभुः। ब्रह्मरूपधरः शेते भगवानादिकृद्धरिः। जनलोकगतैः सिद्धैः सनकाद्यैरभिष्टुतः। आत्ममायामयीं दिव्यां योगनिद्रां समास्थितः। एष नैमित्तिको नाम मैत्रेय प्रतिसञ्चरः। निमित्तं तत्र यच्छेते ब्रह्मरूपधरो हरिः" विष्णुपु० ६-३, ४।

**नैमिशारण्य ನೈಮಿಶಾರಣ್ಯ** (न०) ನಿಮಿಶವೆಂಬ ಒಂದು ಅರಣ್ಯ. निमिशमेव स्वार्थे "अण्" (५-४-३८)।

**नैमेय ನೈಮೇಯ** (पुं०) ಬದಲಾಯಿಸಿಕೊಳ್ಳುವುದು, ಅದಲು ಬದಲು ಮಾಡಿಕೊಳ್ಳುವುದು. नि+मेङ् (प्रणिदाने) "यत्" (३-१-९७)।

**नैयग्रोध ನೈಯಗ್ರೋಧ** (न०) ನ್ಯಗ್ರೋಧ ಫಲ, ಆಲದ ಹಣ್ಣು ಮೊದಲಾದುದು. न्यग्रोधस्य विकारः "अण्" (४-३-१६४)। ऐजागमः (७-३-३)।

**नैयत्य ನೈಯತ್ಯ** (न०) ನಿಯಮನ, ಹತೋಟಿಯಲ್ಲಿಡುವುದು, ತಡೆಹಿಡಿಯುವುದು.

**नैयमिक ನೈಯಮಿಕ** (वि०) ನಿಯಮದಿಂದ ಪ್ರಾಪ್ತವಾದ, ವಿಧಿಯಿಂದ ಬಂದ, ಕಟ್ಟುಪಾಡಿನಿಂದ ಉಂಟಾದ. नियमादागतः "ठक्" (४-३-७४)।

**नैयायिक ನೈಯಾಯಿಕ** (पुं०) ನ್ಯಾಯವನ್ನು ತಿಳಿದವನು, ನ್ಯಾಯಶಾಸ್ತ್ರವನ್ನು ಅಧ್ಯಯನಮಾಡುವವನು. न्याय न्यायशास्त्रं वेत्ति अधीते वा "ठक्" (४-२-६०)। ऐजागमः (७-३-३)।

**नैरन्तर्य ನೈರಂತರ್ಯ** (न०) 1. ಎಡೆಬಿಡದಿರುವಿಕೆ, ಸೇರಿಕೊಂಡಿರುವಿಕೆ, ಅವಿಚ್ಛಿನ್ನವಾಗಿರುವಿಕೆ. निरन्तरस्य भावः "ष्यञ्" (५-१-१२४)। (अव्य०) 2. ಎಡೆಬಿಡದೆ, ಅವಿಚ್ಛಿನ್ನವಾಗಿ. "नैरन्तर्यच्छिन्नदेहान्तरालं दुर्मेक्षस्य ज्वालिना वाशितेन" माघ० १८-७६।

**नैरपेक्ष्य ನೈರಪೇಕ್ಷ್ಯ** (न०) ಅಪೇಕ್ಷೆಯಿಲ್ಲದಿರುವಿಕೆ, ಆಸೆಯಿಲ್ಲದಿರುವಿಕೆ. निरपेक्षस्य भावः "ष्यञ्" (५-१-१२४)।

**नैरयिक ನೈರಯಿಕ** (वि०) ನರಕದಲ್ಲಿ ವಾಸಮಾಡುವವನು.

**नैराश्य ನೈರಾಶ್ಯ** (न०) ಪ್ರತ್ಯಾಶೆಯಿಲ್ಲದಿರುವಿಕೆ, ಯಾವ ಆಶೆಯೂ ಇಲ್ಲದಿರುವಿಕೆ, ಭರವಸೆಯಿಲ್ಲದಿರುವಿಕೆ. निराशस्य भावः "ष्यञ्" (५-१-१२४)। "नैराश्यकातरधियो हरिणेक्षणायाः श्रुत्वा निकामकरुणं च मनोहरं च" मालती० ६-८।

**नैरुक्त ನೈರುಕ್ತ** (वि०) 1. ನಿರುಕ್ತದಲ್ಲಿ ಬರುವ, ನಿರುಕ್ತದಲ್ಲಿರುವ. 2. ನಿರುಕ್ತದ ವ್ಯಾಖ್ಯಾನ ಗ್ರಂಥ. निरुक्तस्य व्याख्यानो ग्रन्थः तत्र भवो वा "अण्" (४-३-७३)। 3. ನಿರುಕ್ತವನ್ನು ತಿಳಿದವನು. 4. ನಿರುಕ್ತವನ್ನು ಅಧ್ಯಯನಮಾಡುವವನು. निरुक्तं वेत्त्यधीते वा "अण्" (४-२-६०)। "त्रैविद्यो हेतुकस्तर्की नैरुक्तो धर्मपाठकः। त्रयश्चाश्रमिणः पूर्वे परिषत्स्याद्दशावरा" मनु० १२-१११।

**नैरुक्तिक ನೈರುಕ್ತಿಕ** (वि०) 1. ಪದಗಳ ನಿರ್ವಚನವನ್ನು ತಿಳಿದವನು. 2. ನಿರುಕ್ತ ಗ್ರಂಥವನ್ನು ಅಧ್ಯಯನಮಾಡುವವನು. निरुक्तं वेत्ति तद्ग्रन्थमधीते वा "ठक्" (४-२-६०)।

**नैर्ऋत ನೈರ್ಋತ** (पुं०) 1. ರಾಕ್ಷಸ. निर्ऋतेरपत्यम "अण्" (४-१-९२)। "मुखावयवलूनां तां नैर्ऋता यत्पुरो दधुः। रामाभियायिनां तेषां तदेवाभूदमङ्गलम्" रघु० १२-४३। 2. ನಿರ್ಋತಿ ದಿಕ್ಕಿನ ಅಧಿಪತಿ. (वि०) 3. ರಾಕ್ಷಸಸಂಬಂಧವಾದ. निर्ऋतेरिदम् "अण्" (४-३-१२०)। स्त्रियां "ङीप्" (४-१-१५)। नैर्ऋती ನೈರ್ಋತೀ. 4. ನಿರ್ಋತಿ ದಿಕ್ಕು, ದಕ್ಷಿಣ-ಪಶ್ಚಿಮ ದಿಕ್ಕುಗಳ ಮಧ್ಯದ ವಿದಿಕ್ಕು. 5. ರಾಕ್ಷಸರ ಶಕ್ತಿ. (न०) 6. ಮೂಲ ನಕ್ಷತ್ರ.

**नैर्गुण्य ನೈರ್ಗುಣ್ಯ** (न०) 1. ಗುಣವಿಲ್ಲದಿರುವಿಕೆ. 2. ಸತ್ತ್ವರಜಸ್ತಮೋಗುಣಗಳಿಂದ ಶೂನ್ಯವಾಗಿರುವಿಕೆ. निर्गुणस्य भावः "ष्यञ्" (५-१-१२४)।

**नैर्घृण्य ನೈರ್ಘೃಣ್ಯ** (न०) ದಯೆಯಿಲ್ಲದಿರುವಿಕೆ, ಕನಿಕರವಿಲ್ಲದಿರುವುದು. निर्घृणस्य भावः "ष्यञ्" (५-१-१२४)।

**नैर्मल्य ನೈರ್ಮಲ್ಯ** (न०) 1. ನಿರ್ಮಲವಾಗಿರುವಿಕೆ, ಕಶ್ಮಲವಿಲ್ಲದಿರುವಿಕೆ, ಶುದ್ಧವಾಗಿರುವಿಕೆ. निर्मलस्य भावः "ष्यञ्" (५-१-१२४)। 2. ದೋಷವಿಲ್ಲದಿರುವಿಕೆ. 3. ವಿಷಯಗಳಲ್ಲಿ ಉಂಟಾಗುವ ವೈರಾಗ್ಯ. "विषयेष्वतिसंरागो मानसो मल उच्यते। तेष्वेव हि विरागस्तु नैर्मल्यं समुदाहृतम्"।

**नैर्लज्य ನೈರ್ಲಜ್ಯ** (नं०) ಲಜ್ಜೆಯಿಲ್ಲದಿರುವಿಕೆ, ನಾಚಿಕೆಯಿಲ್ಲದಿರುವಿಕೆ. निर्लज्जस्य भावः "ष्यञ्" (५-१-१२४)।

**नैल्य ನೈಲ್ಯ** (नं०) ಕಪ್ಪಾಗಿರುವಿಕೆ, ನೀಲವಾಗಿರುವಿಕೆ. नीलस्य भावः "ष्यञ्" (५-१-१२४)।

**नैवेद्य ನೈವೇದ್ಯ** (नं०) ನಿವೇದನಕ್ಕೆ ಯೋಗ್ಯವಾದ ವಸ್ತು, ದೇವರಿಗೆ ಅರ್ಪಿಸುವ ಹವಿಸ್ಸು ಹಣ್ಣು ಕಾಯಿ ಮೊದಲಾದುದು. नि + विद (ज्ञाने) + णिच् "यत्" (३-१-९७)। "निवेदनीयं द्रव्यन्तु नैवेद्यमिति कथ्यते"।

**नैवेशिक ನೈವೇಶಿಕ** (नं०) ಮದುವೆಗಾಗಿ ಕೊಡುವ ವಸ್ತು, ವಿವಾಹಕ್ಕೆ ಯೋಗ್ಯವಾದ ವಸ್ತು. निवेशाय विवाहाय हितम् "ठक्"। "नैवेशिकं स्वर्णधुर्यं दत्वा स्वर्गे महीयते" याज्ञ० १-२१०।

**नैश ನೈಶ** (वि०) 1. ರಾತ್ರಿಸಂಬಂಧವಾದ. निशाया इदम् "अण्" (४-३-१२०)। "उच्छेत्तुं प्रभवति यन्न सप्तसप्तिस्तन्नैशं तिमिरमपाकरोति चन्द्रः" माघ० ६-३०। 2. ರಾತ್ರಿಯಲ್ಲಿ ಸಂಭವಿಸಿದ, ರಾತ್ರಿಯಲ್ಲಿ ಉಂಟಾದ. निशायां भवम् "अण्" (४-३-१४)। "करदशनचिह्नं नैशमङ्गेऽन्यनारीजनितमिति सरोषामीर्ष्यया शङ्कमानाम्" माघ० ११-३७। 3. ರಾತ್ರಿಯಲ್ಲಿ ಆಚರಿಸಬೇಕಾದ. "ठञ्" (४-३-११)। नैशिकम् ನೈಶಿಕಮ್. स्त्रियां "ङीप्" (४-१-१५)। -की -ಕೀ. "नृणामकृतचूडानां विशुद्धिर्नैशिकी स्मृता" मनु० ५-६७।

**नैश्चल्य ನೈಶ್ಚಲ್ಯ** (नं०) ಚಲಿಸದಿರುವಿಕೆ, ಅಲುಗಾಡದಿರುವಿಕೆ. निश्चलस्य भावः "ष्यञ्" (५-१-१२४)।

**नैषध ನೈಷಧ** (पुं०) 1. ನಿಷಧದೇಶದ ದೊರೆ. निषधानामयम् "अण्" (४-३-१२०)। "जनेन यूनः स्तुवता तदास्पदे निदर्शनं नैषधमभ्यषेचयत्" नैष० १-३६। "स नैषधस्यार्थपतेः सुतायामुत्पादयामास निषिद्धशत्रुः" रघु० १८-१। 2. ನಳಚಕ್ರವರ್ತಿ. "ददर्श पश्यामिव नैषधः प्रियामथाश्रितोद्ग्रीविकमुन्नतैर्गृहैः" नैष० १६-१२२। (नं०) 3. ಶ್ರೀಹರ್ಷಕವಿ ವಿರಚಿತವಾದ ನಳಚಕ್ರವರ್ತಿಯ ಚರಿತ್ರೆ ರೂಪವಾದ ಒಂದು ಮಹಾಕಾವ್ಯ.

**नैषधीय ನೈಷಧೀಯ** (वि०) ನಳಸಂಬಂಧವಾದ. नैषधस्यायम् "छः" (४-२-११४)। "सस्मार सस्मरमतिः प्रति नैषधीयं तत्रामरालयमरालमरालकेशी" नैष० १३-४०।

**नैषध्य ನೈಷಧ್ಯ** (पुं०) 1. ನಿಷಧದೇಶದ ದೊರೆ. निषधानां राजा "ण्यः" (४-१-१७०)। 2. ನಿಷಧರಾಜನ ಮಗ. निषधस्यापत्यम् "ण्यः" (४-१-१७०)।

**नैषाद ನೈಷಾದ** (पुं०) ಬೇಡರವನ ಮಗ. निषादस्यापत्यं पुमान् "अण्" (४-१-१०४)।

**नैष्कर्म्य ನೈಷ್ಕರ್ಮ್ಯ** (नं०) 1. ಕೆಲಸಮಾಡದಿರುವುದು, ಯಾವ ಕಾರ್ಯವನ್ನೂ ಮಾಡದೆ ಸೋಮಾರಿಯಾಗಿರುವುದು. निष्कर्मणो भावः "ष्यञ्" (५-१-१२४)। 2. ವಿಧಿಸಲ್ಪಟ್ಟ ಕರ್ಮಗಳನ್ನು ಆಚರಿಸದಿರುವುದು, ನಿಷ್ಕ್ರಿಯನಾಗಿರುವುದು, ಜ್ಞಾನನಿಷ್ಠೆ, ಕರ್ಮಯೋಗವನ್ನು ದಾಟುವುದು. निष्कर्मा निष्कान्तकर्मयोगः तस्य भावः "ष्यञ्" (५-१-१२४)। ಕರ್ಮಗಳ ಅನುಷ್ಠಾನವು ಜ್ಞಾನನಿಷ್ಠೆಗೆ ಉಪಾಯವಾದುದರಿಂದ ನೈಷ್ಕರ್ಮ್ಯ ಶಬ್ದಕ್ಕೆ ಕರ್ಮಯೋಗವನ್ನು ದಾಟುವುದೆಂದರ್ಥ. "न कर्मणामनारम्भान्नैष्कर्म्यं पुरुषोऽश्नुते" गीता ३-४।

**नैष्कशतिक ನೈಷ್ಕಶತಿಕ** (वि०) ನೂರು ನಿಷ್ಕಗಳುಳ್ಳವನು. निष्कशतमस्यास्ति "ठञ्" (५-२-११९)। एवं नैष्कसहस्रिकः ನೈಷ್ಕಸಹಸ್ರಿಕಃ.

**नैष्किक ನೈಷ್ಕಿಕ** (पुं०) 1. ಟಂಕಸಾಲೆಯ ಅಧಿಕಾರಿ. निष्के हेम्नि नियुक्तः "ठक्" (४-४-६९)। 2. ಒಂದು ನಿಷ್ಕ (ನಾಣ್ಯ) ದಿಂದ ಕೊಳ್ಳಲ್ಪಟ್ಟ. निष्केण क्रीतम् "ठक्" (५-१-२०)।

**नैष्क्रमण ನೈಷ್ಕ್ರಮಣ** (वि०) 1. ಹೊಸದಾಗಿ ಜನಿಸಿದ ಶಿಶುವನ್ನು ಮನೆಯಿಂದ ಹೊರಗಡೆ (ವಿಹಿತವಾದ ಕಾಲದಲ್ಲಿ) ಕರೆತರುವಾಗ ಕೊಡುವ ವಸ್ತು. 2. ಈ ಸಮಯದಲ್ಲಿ ಮಾಡುವ ಕಾರ್ಯ. निष्क्रमणे दीयते "अण्" (५-१-९७)।

**नैष्ठिक ನೈಷ್ಠಿಕ** (वि०) 1. ಬ್ರಹ್ಮಚಾರಿಯಾಗಿ ಯಾವಜ್ಜೀವವೂ ಗುರುಕುಲದಲ್ಲಿ ವಾಸಮಾಡುವವನು. निष्ठा विद्यतेऽस्य "ठन्" (५-२-११६)। "अगूढसद्भावमितीङ्गितज्ञया निवेदितो नैष्ठिकसुन्दरस्तया" कुमा० ५-६२। "सृष्टवान् परमेष्ठी यं नैष्ठिकब्रह्मचारिणम्" नैष० १७-११६। 2. ಕೊನೆಯದಾದ, ಅಂತಿಮವಾದ. "विदधे विधिमस्य नैष्ठिकं यतिभिः सार्धमनग्निमग्निचित्" रघु० ८-२५।

**नैसर्गिक ನೈಸರ್ಗಿಕ** (वि०) ಸ್ವಭಾವಸಿದ್ಧವಾದ, ಸ್ವಭಾವವಾಗಿ ಬಂದ. निसर्गादागतः "ठक्" (४-३-७४)। "रूपं तदोजस्वि तदेव वीर्यं तदेव नैसर्गिकमुन्नतत्वम्" रघु० ५-३७। स्त्रियां "ङीप्" (४-१-१५)। -की -ಕೀ. "नैसर्गिकी सुरभिणः कुसुमस्य सिद्धा मूर्ध्नि स्थितिर्न चरणैरवताडनानि" मालती० ९-४९।

**नैस्त्रिंशिक ನೈಸ್ತ್ರಿಂಶಿಕ** (वि०) ಖಡ್ಗಧಾರಿ, ಕತ್ತಿ ಹಿಡಿದು ಯುದ್ಧಮಾಡುವವನು. निस्त्रिंशः प्रहरणमस्य "ठक्" (४-४-५७)।

**नो ನೋ** (अव्य०) ಅಭಾವ. णह् (बन्धने) "डो"। "अश्रद्धया हुतं दत्तं तपस्तप्तं कृतं च यत्। असदित्युच्यते पार्थ न च तत्प्रेत्य नो इह" गीता १७-२८।

**नोचेत् ನೋಚೇತ್** (अव्य०) ಇಲ್ಲದಿದ್ದರೆ. नो च चेत्च।

**नोदन ನೋದನ** (न०) 1. ಪ್ರೇರಣೆ, ಬಲವಂತಪಡಿಸುವುದು. णुद (प्रेरणे)+णिच् भावे "ल्युट्" (३-३-११५)। 2. ಮುಂದಕ್ಕೆ ತಳ್ಳುವುದು, ನೂಕುವುದು, ದೂಡುವುದು.

**नोदनीय ನೋದನೀಯ** (वि०) 1. ಪ್ರೇರಿಸಲ್ಪಡುವ. 2. ಮುಂದಕ್ಕೆ ತಳ್ಳಲ್ಪಡುವ, ನೂಕಲ್ಪಡುವ. णुद (प्रेरणे)+णिच् "अनीयर्" (३-१-९६)। 3. ಮುಂದಕ್ಕೆ ತಳ್ಳಬೇಕಾದ. "तव्यः" (३-१-९६)। **-यितव्यः -ಯಿತವ್ಯಃ.**

**नोदयत् ನೋದಯತ್** (वि०) 1. ಪ್ರೇರಿಸುತ್ತಿರುವ. 2. ತಳ್ಳುತ್ತಿರುವ, ಮುಂದೆ ಹೋಗುವಂತೆ ಮಾಡುತ್ತಿರುವ. णुद (प्रेरणे) + णिच् "शतृ" (३-२-१२४)। स्त्रियां "ङीप्" (४-१-६)। **-यन्ती -ಯಂತೀ.** "शानच्" (३-२-१२४)। **-यमानः -ಯಮಾನಃ.**

**नोदयितृ ನೋದಯಿತೃ** (वि०) 1. ಪ್ರೇರಿಸುವವನು, ಬಲವಂತಪಡಿಸುವವನು. णुद (प्रेरणे) + णिच् "तृच्" (३-१-१३३)। "समीरणो नोदयिता भवेति व्यादिश्यते केन हुताशनस्य" कुमा० ३-२१। 2. ತಳ್ಳುವವನು. ಮುಂದಕ್ಕೆ ನೂಕುವವನು. स्त्रियां "ङीप्" (४-१-५)। **-यित्री -ಯಿತ್ರೀ.**

**नोदित ನೋದಿತ** (वि०) 1. ಪ್ರೇರಿಸಲ್ಪಟ್ಟ. णुद (प्रेरणे) +णिच् "क्तः" (३-२-१०२)। "मुनयस्ततोऽभिमुखमेत्य नयनविनिमेषनोदिताः" किरा० १२-२५। 2. ಮುಂದಕ್ಕೆ ತಳ್ಳಲ್ಪಟ್ಟ, ನೂಕಲ್ಪಟ್ಟ.

**नोधा ನೋಧಾ** (अव्य०) ಒಂಬತ್ತು ವಿಧವಾಗಿ, ಒಂಬತ್ತು ಪ್ರಕಾರವಾಗಿ. नव "धा" (५-३-४२)। पृषो०। "नोधा विधाय रूपं स्वं सर्वसंकल्पविद् विभुः" भाग० ३-२३-४७।

**नोपस्थातृ ನೋಪಸ್ಥಾತೃ** (वि०) ಸಮೀಪಕ್ಕೆ ಬರದೆ ಇರುವವನು, ದೂರದಲ್ಲೇ ಇರುವವನು. न उपस्थाता। "अन्यवादी क्रियाद्वेषी नोपस्थाता निरुत्तरः"।

**नौ ನೌ** (स्त्री०) 1. ನೌಕೆ, ಹಡಗು. नुद्यते—णुद (प्रेरणे) "डौः" (उ० २-६५)। 2. ದೋಣಿ, ನದಿ ಮೊದಲಾದುವುಗಳ ನೀರನ್ನು ದಾಟುವ ಸಾಧನ. "नावा स्मरः किं हरभीतिगुप्ते पयोधरे खेलति कुम्भ एव" नैष० ६-६६।

**नौकर्णधार ನೌಕರ್ಣಧಾರ** (पुं०) 1. ಹಡಗನ್ನು ನಡಸುವವನು. नावः कर्णं धारयति—धृ (धारणे) + णिच् "अण्" (३-२-१)। 2. ದೋಣಿ ನಡಸುವವನು, ಅಂಬಿಗ.

**नौका ನೌಕಾ** (स्त्री०) 1. ನೌಕೆ, ಹಡಗು. नौ स्वार्थे "कः"। 2. ದೋಣಿ.

**नौकादण्ड ನೌಕಾದಂಡ** (पुं०) ದೋಣಿ ನಡೆಸುವ ಹುಟ್ಟು ಗೋಲು. नौकाया दण्डः।

**नौचर ನೌಚರ** (वि०) ಹಡಗಿನಲ್ಲಿ ಸಂಚರಿಸುವವನು. नावि चरति—चर (गतौ) "टः" (३-२-१६)। "यादोनाथः शिवजलपथः कर्मणे नौचराणाम्" रघु० १७-८१।

**नौतार्य ನೌತಾರ್ಯ** (वि०) 1. ಹಡಗಿನಿಂದ ದಾಟಲ್ಪಡುವ. नावा तार्यम्। 2. ದೋಣಿಯಿಂದ ದಾಟಲ್ಪಡುವ ಹೊಳೆ ಮೊದಲಾದುದು.

**नौयान ನೌಯಾನ** (न०) 1. ಸಮುದ್ರಯಾನ, ಹಡಗಿನಲ್ಲಿ ಮಾಡುವ ಸಮುದ್ರದ ಪ್ರಯಾಣ. नावा यानम्। 2. ದೋಣಿಯಿಂದ ನದಿಯ ಆಚೆದಡಕ್ಕೆ ಹೋಗುವುದು.

**नौयायिन् ನೌಯಾಯಿನ್** (वि०) 1. ಹಡಗಿನಲ್ಲಿ ಸಮುದ್ರ ಪ್ರಯಾಣ ಮಾಡುವವನು. नावा याति—या (प्रापणे) "णिनिः" (३-१-१३४)। 2. ದೋಣಿಯಲ್ಲಿ ನದಿಯನ್ನು ದಾಟುವವನು.

**न्यक्कार ನ್ಯಕ್ಕಾರ** (पुं०) 1. ತಿರಸ್ಕಾರ, ಅವಮಾನ. न्यक्+कृञ् (करणे) "घञ्" (३-३-१८)। "न्यक्कारो ह्ययमेव मे यदरयः तत्राप्यसौ तापसः सोऽप्यत्रैव निहन्ति राक्षसकुलं जीवत्यहो रावणः" सा० द०। 2. ಕೆಳಕ್ಕೆ ಮಾಡುವುದು. "ल्युट्" (३-३-११५)। **-करणम् -ಕರಣಮ್.** "क्तिन्" (३-३-९४)। **-कृतिः -ಕೃತಿಃ.**

**न्यक्ष ನ್ಯಕ್ಷ** (पुं०) 1. ಪರಶುರಾಮ. 2. ಮಹಿಷ, ಎಮ್ಮೆ. (न०) 3. ಕಾರ್ತ್ಸ್ನ್ಯ, ಸಂಪೂರ್ಣತೆ. (वि०) 4. ನಿಕೃಷ್ಟ, ಅಧಮ.

**न्यग्भाव ನ್ಯಗ್ಭಾವ** (पुं०) 1. ಅವಮಾನ, ತೇಜೋವಧೆ. 2. ಕೆಳಕ್ಕೆ ಬರುವುದು, ಕೆಳದರ್ಜೆಗೆ ಬರುವುದು, ಅಧೀನವಾಗುವುದು. न्यक् + भू (सत्तायाम्) "घञ्" (३-३-२४)।

**न्यग्भावित ನ್ಯಗ್ಭಾವಿತ** (वि०) 1. ಅವಮಾನಗೊಳಿಸಲ್ಪಟ್ಟ. 2. ಇನ್ನೊಂದಕ್ಕೆ ಅಧೀನವಾಗಿ ಮಾಡಲ್ಪಟ್ಟ. न्यक् + भू (सत्तायाम्) + णिच् "क्तः" (३-२-१०२)।

**न्यग्रोध ನ್ಯಗ್ರೋಧ** (पुं०) 1. ವಟವೃಕ್ಷ, ಆಲದ ಮರ. न्यक् रुणद्धि — रुधिर् (आवरणे) "अण्" (३-२-१)। "सिक्तो हन्त स एष मैथिलसुताबाष्पोदकोत्पादकैर्न्यग्रोधक्षरितैर्जटा रचयितुं क्षीरैर्निषादाहृतैः" चं० रा०। 2. ವಿಷ್ಣು, ನಾರಾಯಣ. न्यग्भूतैरघःकृताञ्जलिभिः रुध्यते स्वप्रसादौन्मुख्येन व्यवस्थाप्यते। "न्यग्भूतैः प्रणतैः स्वानुग्रहौन्मुख्येन रुध्यते। यो व्यवस्थाप्यते नित्यं न्यग्रोधः स उदाहृतः" इति निरुक्तिः। "न्यग्रोधोदुम्बरोऽश्वत्थः" वि० स०। 3. ಒಂದು ಮಾರು, ನಾಲ್ಕು ಮೊಳಗಳ ಉದ್ದದಳತೆ, ನೀಡಿದ ಎರಡು ತೋಳುಗಳ ಅಳತೆ. 4. ಶಮೀವೃಕ್ಷ. (स्त्री०) -धी – ಧೀ. 5. ಇಲಿಯಾಲದ ಮರ.

**न्यग्रोधपरिमण्डल ನ್ಯಗ್ರೋಧಪರಿಮಂಡಲ** (पुं०) ಮಾರುದ್ದದ ಮನುಷ್ಯ, ನಾಲ್ಕು ಮೊಳಗಳ ಎತ್ತರದ ಮನುಷ್ಯ. न्यग्रोधः व्यामः परिमण्डलं यस्य।

**न्यङ्कु ನ್ಯಂಕು** (पुं०) 1. ಒಂದು ಜಾತಿಯ ಜಿಂಕೆ. नितरामञ्चति — नि + अञ्चु (गतौ) "उः" (उ० १-१७)। कुत्वम् (७-३-५३)। "सद्यो हतन्यङ्कुभिरस्रदिग्धं व्याघ्रैः पदं तेषु विधीयते मे" रघु० १६-१५। 2. ಒಟ್ಟು ಮುಷಿ.

**न्यञ्च् ನ್ಯಂಚ್** (वि०) 1. ಕೆಳಗಡೆಗೆ ಹೋಗುವ. 2. ಕೆಳಕ್ಕೆ ಬಗ್ಗಿರುವ. न्यञ्चति — नि + अञ्चु (गतौ) "क्विन्" (३-२-५९)। 3. ಕೆಳಗಡೆಯ, ಕೆಳಭಾಗದ. 4. ಕಾತ್ಸ್ನ್ಯರ್ಕ, ಸಂಪೂರ್ಣತೆ. "न्यङ् निम्ने नीचकात्स्न्ययोः" हेम०। 5. ನೀಚ, ಅಧಮ.

**न्यञ्चन ನ್ಯಂಚನ** (न०) 1. ಬಗ್ಗುವುದು. नितरामञ्चनम्। 2. ಕೆಳಗೆ ಇಡುವುದು.

**न्यञ्चित ನ್ಯಂಚಿತ** (वि०) ಕೆಳಗೆ ಇಡಲ್ಪಟ್ಟ. नि + अञ्चु (गतौ क्षेपणे च) + णिच् "क्तः" (३-२-१०२)।

**न्यर्बुद ನ್ಯರ್ಬುದ** (न०) ಹತ್ತು ಅರ್ಬುದಗಳು, ಒಂದು ನೂರು ಕೋಟಿ ಸಂಖ್ಯೆ. (ಒಂದು ಅರ್ಬುದ ಹತ್ತು ಕೋಟಿ). "प्रयुतं चार्बुदं च न्यर्बुदं च समुद्रश्च"।

**न्यस्त ನ್ಯಸ್ತ** (वि०) 1. ಇಡಲ್ಪಟ್ಟ, ಕೆಳಗೆ ಇರಿಸಲ್ಪಟ್ಟ. नि + असु (क्षेपणे) "क्तः" (३-२-१०२)। "न्यस्तशुल्कबलिचित्रतलाभिः तुल्यता वसतिवेश्ममहीभिः" किरा० ९-२९। 2. ಎಸೆಯಲ್ಪಟ್ಟ, ಪ್ರಯೋಗಿಸಲ್ಪಟ್ಟ (ಬಾಣ). 3. ತ್ಯಜಿಸಲ್ಪಟ್ಟ, ಬಿಡಲ್ಪಟ್ಟ. "न्यस्तशस्त्रपरिकर्मणामसौ निष्कृतिस्त्वदुपसत्तिरेव नः" याद० १७-११५। 4. ಇಡಲ್ಪಟ್ಟ, ಸೇರಿಸಲ್ಪಟ್ಟ, ಬರೆಯಲ್ಪಟ್ಟ, ಚಿತ್ರಿಸಲ್ಪಟ್ಟ. "न्यस्ताक्षरा धातुरसेन यत्र भूर्जत्वचः कुञ्जरबिन्दुशोणाः" कुमा० १-७।

**न्याद ನ್ಯಾದ** (पुं०) ಆಹಾರ, ಊಟ.

**न्याय ನ್ಯಾಯ** (पुं०) 1. ಉಪಾಯ, ಕ್ರಮ, ರೀತಿ. नि + इण् (गतौ) कर० "घञ्" (३-३-१२२)। "अधार्मिकं त्रिभिर्न्यायैः निगृह्णीयात् प्रयत्नतः" मनु० ८-३१०। 2. ಯೋಗ್ಯವಾದ ನಡವಳಿಕೆ, ಒಪ್ಪು, ಔಚಿತ್ಯ. नि + इण् "घञ्" (३-३-१८)। 3. ನಿಯಮ, ಕಟ್ಟಳೆ. "निक्षिप्यायाचिषं यत्ता न्यायात् ताम्बूलफालिकाः" नैष० २०-८२। 4. ನ್ಯಾಯಶಾಸ್ತ್ರ, ಪದಾರ್ಥಗಳನ್ನು ನಿರೂಪಣಮಾಡುವ ಶಾಸ್ತ್ರ. 5. प्रतिज्ञा हेतुः उदाहरणम् उपनयः ಮತ್ತು निगमनम् ಎಂಬ ಐದು ಅವಯವಗಳಿಂದ ಕೂಡಿರುವ ತಾರ್ಕಿಕರ ವಾದಸರಣಿ. 6. ಪ್ರಾಮಾಣಿಕತೆ, ನೀತಿ, ಧರ್ಮ. नि+इण् "घञ्" (३-३-१२२)। "यान्ति न्यायप्रवृत्तस्य तिर्यञ्चोऽपि सहायताम्"। 7. ನ್ಯಾಯಾಲಯದ ತೀರ್ಪು. 8. ಕಾನೂನಿನ ನಡವಳಿಕೆ, ಕಾನೂನಿನ ಕಾರ್ಯಕ್ರಮ. 9. ವಿಷ್ಣು, ನಾರಾಯಣ. युक्तकारी ಎಂಬ ಅರ್ಥದಲ್ಲಿ नि + इण् "घञ्" (३-३-३७)। "न्यायो हि युक्तकारित्वात् भक्तेष्वेव विशेषतः" इति निरुक्तिः। "अग्रणीर्ग्रामणीः श्रीमान् न्यायो नेता समीरणः" वि० स०। 10. ತರ್ಕಂತೆ ಯೋಚಿಸಿದ ವಿವರಣೆ, ಸಮಂಜಸವಾದ ದೃಷ್ಟಾಂತದೊಡನೆ ಸ್ಪಷ್ಟಪಡಿಸುವುದು. ಲೋಕಪ್ರಸಿದ್ಧವಾದ ದೃಷ್ಟಾಂತಗಳಿಂದ ವಿಷಯಗಳನ್ನು ವಿವರವಾಗಿ ಸ್ಪಷ್ಟಪಡಿಸುವ ಕೆಲವು ನ್ಯಾಯಗಳನ್ನು ಈ ಕೆಳಗೆ ಕೊಡಲಾಗಿದೆ.

(1) अजाकृपाणीयन्यायः—ಆಕಸ್ಮಿಕವಾಗಿ ತೊಂದರೆಗಳು ಪ್ರಾಪ್ತವಾಗುವ ವಿಷಯದಲ್ಲಿ ಈ ನ್ಯಾಯವು ಪ್ರವರ್ತಿಸುವುದು. ಆಕಸ್ಮಿಕವಾದ ಅಜಾಗಮನಕಾಲಕ್ಕೆ ಸರಿಯಾಗಿ ಕೃಪಾಣಪತನ ಸಂಭವಿಸುವಂತೆ ಮನುಷ್ಯನಿಗೆ ಆಕಸ್ಮಿಕವಾಗಿ ಅನಿಷ್ಟ ಸಂಭವಿಸುವ ಸ್ಥಳದಲ್ಲಿ ಈ ನ್ಯಾಯವನ್ನು ಉಪಯೋಗಿಸುವರು. ಇದು "काकतालीय" ನ್ಯಾಯಕ್ಕೆ ಸಮಾನವಾದುದು.

(२) अन्धकूपपतनन्यायः—ಹಿರಿಯರು ಸರಿಯಾದ ಮಾರ್ಗವನ್ನು ತಿಳಿಸಿದರೂ ಕುರುಡನು ಅದನ್ನು ಬಿಟ್ಟು ಬೇರೆ ದಾರಿಯಲ್ಲಿ ಹೋಗಿ ಬಾವಿಗೆ ಬೀಳುವಂತೆ ಶಾಸ್ತ್ರ

ಗಳು ಸರಿಯಾದ ಮಾರ್ಗವನ್ನು ಉಪದೇಶಿಸುತ್ತಿದ್ದರೂ ಮನುಷ್ಯನು ದುರ್ಮಾರ್ಗಪ್ರವೃತ್ತನಾಗಿ ಅಧಃಪತನ ವನ್ನು ಹೊಂದುತ್ತಾನೆ ಎಂಬ ಅರ್ಥದಲ್ಲಿ ಈ ನ್ಯಾಯವು ಪ್ರವರ್ತಿಸುವುದು.

(3) अन्धपरम्परान्याय:—ಒಬ್ಬ ಅಂಧನು ಹೇಳಿದು ದನ್ನು ಇನ್ನೊಬ್ಬ ಅಂಧನು ಕೇಳಿ ನಂಬುವುದು, ಅದನ್ನು ಅವನಿಂದ ಮತ್ತೊಬ್ಬ ಅಂಧನು ಕೇಳಿ ನಂಬುವುದು ಹೀಗೆ ಈ ನಂಬಿಕೆಯು ಅಂಧರಲ್ಲಿ ಬೇರೂರುವಂತೆ ಅಜ್ಞನಿಂದ ಅಜ್ಞನಿಗೆ ಅವನಿಂದ ಮತ್ತೊಬ್ಬ ಅಜ್ಞನಿಗೆ ಹೀಗೆ ಅಜ್ಞ ಪರಂಪರೆಯಲ್ಲಿ ವಿಷಯವು ಶಾಶ್ವತವಾಗಿ ನಿಲ್ಲುವುದು ಎಂಬ ಅರ್ಥದಲ್ಲಿ ಈ ನ್ಯಾಯವು ಪ್ರವರ್ತಿಸುವುದು. ಇದು "गतानुगतिक" ನ್ಯಾಯಕ್ಕೆ ಸಮಾನವಾದುದು.

(4) अर्के चेन्मधु विन्देत किमर्थं पर्वतं व्रजेत्—ಅರ್ಕ ವೃಕ್ಷದಲ್ಲೇ ಮಧುವು ದೊರಕುವಾಗ ಪ್ರಯಾಸಪಟ್ಟು ಪರ್ವತಕ್ಕೇಕೆ ಹೋಗಬೇಕು. ಕೇವಲ ಜ್ಞಾನಾರ್ಜನೆ ಯಿಂದಲೇ ಪುರುಷಾರ್ಥಸಿದ್ಧಿಯುಂಟಾಗುವಾಗ ಆಯಾಸ ಸಾಧ್ಯವಾದ ಕರ್ಮಗಳ ಆಚರಣೆ ಏಕೆ? ಎಂಬ ಅರ್ಥದಲ್ಲಿ ಈ ನ್ಯಾಯವು ಪ್ರವರ್ತಿಸುವುದು.

(5) अर्धजरतीयन्याय:—"अर्धजरतीय" ಪದದಲ್ಲಿ ಇದರ ವಿವರಣೆ ನೋಡಿ.

(6) अशोकवनिकान्याय:—ಅಶೋಕವನಕ್ಕೆ ಹೋಗು ವುದರಿಂದ ಅಲ್ಲಿ ಉತ್ಕೃಷ್ಟ ವೃಕ್ಷಚ್ಛಾಯೆ ಮತ್ತು ಪುಷ್ಪ ಸೌರಭ್ಯಾದಿ ಲಾಭವಿರುವ ಕಾರಣ ಬೇರೆ ಕಡೆಗೆ ಹೋಗುವ ಆಸೆಯು ಹೇಗೆ ಉಂಟಾಗುವುದಿಲ್ಲವೊ ಹಾಗೆ ತನ್ನ ಅಭೀಷ್ಟ ಲಾಭ ಹೊಂದುವ ಸನ್ನಿವೇಶವನ್ನು ಬಿಟ್ಟು ಬೇರೆ ವಿಷಯ ದಲ್ಲಿ ಇಚ್ಛೆಯುಂಟಾಗುವುದಿಲ್ಲವೆಂಬ ಅರ್ಥದಲ್ಲಿ ಈ ನ್ಯಾಯದ ಪ್ರವೃತ್ತಿ.

(7) आकाशमुष्टिहननन्याय:—ಆಕಾಶದಲ್ಲಿ ಮುಷ್ಟಿ ಯನ್ನು ಕುಟ್ಟುವುದರಿಂದ ಯಾವ ಪ್ರಯೋಜನವೂ ಉಂಟಾಗದಿರುವಂತೆ ಮನುಷ್ಯನು ತನಗೆ ಅಸಾಧ್ಯವಾದ ಕಾರ್ಯದಲ್ಲಿ ಎಷ್ಟು ಗುದ್ದಾಡಿದರೂ ವ್ಯರ್ಥವೆಂಬ ಅರ್ಥ ದಲ್ಲಿ ಈ ನ್ಯಾಯವು ಹೊರಟಿದೆ.

(8) एकसम्बन्धिज्ञानमपरसम्बन्धिस्मारकमिति न्याय: —ಒಂದು ವಸ್ತುವಿನ ದರ್ಶನದಿಂದ ಅದಕ್ಕೆ ಸಂಬಂಧಿಸಿದ ವಿಷಯವೂ ಸ್ಮರಣೆಗೆ ಬರುವುದು. ಆನೆಯನ್ನು ನೋಡಿ ದಾಗ ಅದರ ಸಂಬಂಧವಾದ ಮಾವಟಿಗನ ನೆನಪು ಬರುವಂತೆ ಒಂದು ಶಬ್ದಜ್ಞಾನದಿಂದ ಆ ಶಬ್ದವಾಚ್ಯವಾದ ಅರ್ಥದ ಸ್ಮರಣೆಯೂ ಉಂಟಾಗುವುದೆಂಬ ಅರ್ಥದಲ್ಲಿ ಈ ನ್ಯಾಯದ ಪ್ರವೃತ್ತಿ.

(9) काकतालीयन्याय:—ಆಕಸ್ಮಿಕವಾದ ಇಷ್ಟಪ್ರಾಪ್ತಿ ಮತ್ತು ಅನಿಷ್ಟಪ್ರಾಪ್ತಿಗಳ ವಿಷಯದಲ್ಲಿ ಈ ನ್ಯಾಯ ಹೊರಟಿರುವುದು. ಕಾಗೆಯು ಹೋಗುತ್ತಿರುವಾಗ ಆಕಸ್ಮಾತ್ ತಾಳಫಲದ ಪತನದಿಂದ ಅದಕ್ಕೆ ಇಷ್ಟವಾದ ವಸ್ತುವಿನ ಲಾಭವುಂಟಾಗುವಂತೆ ಮನುಷ್ಯನು ನಿರೀಕ್ಷಿಸದೆ ಇರುವಾಗ ಆಕಸ್ಮಾತ್ ಅವನ ಇಷ್ಟಸಿದ್ಧಿಯುಂಟಾಗುವುದು ಎಂಬ ವಿಷಯದಲ್ಲಿ ಈ ನ್ಯಾಯಕ್ಕೆ ಪ್ರವೃತ್ತಿ. ಈ ರೀತಿ ಇಷ್ಟಸಿದ್ಧಿಯು ಕಾಕತಾಳೀಯ.

(10) काकाक्षिगोलकन्याय:—ಕಾಗೆಯ ದೃಷ್ಟಿಯು ಎರಡು ಕಣ್ಣುಗುಡ್ಡೆಗಳಲ್ಲಿಯೂ ಸಂಚರಿಸುತ್ತ ಎರಡು ಕಣ್ಣುಗಳ ನೋಟಕ್ಕೂ ಉಪಯೋಗವಾಗುವಂತೆ ಒಂದು ಪದಾರ್ಥಕ್ಕೆ ಎರಡು ಕಡೆ ಸಂಬಂಧ ವಿವಕ್ಷೆಯುಂಟು ಎಂಬ ಅರ್ಥದಲ್ಲಿ ಈ ನ್ಯಾಯವು ಪ್ರವರ್ತಿಸುವುದು.

(11) कूपमण्डूकन्याय:—ಒಂದು ಸಣ್ಣ ಬಾವಿಯಲ್ಲಿರುವ ಮಂಡೂಕವು ತಾನಿರುವಷ್ಟೇ ಪ್ರದೇಶವು ಪ್ರಪಂಚವೆಂದು ತಿಳಿದಿರುವಂತೆ ಮನುಷ್ಯನು ತಾನು ಪಡೆದಿರುವುದಕ್ಕಿಂತ ಪ್ರಪಂಚಜ್ಞಾನವು ಬೇರೊಂದಿಲ್ಲ ಎಂದು ಹೇಳುವುದೂ ತಾನು ತಿಳಿದಿರುವುದೇ ಸಿದ್ಧಾಂತ, ಅದಕ್ಕಿಂತಲೂ ಬೇರೆ ಮತತತ್ತ್ವವಿಲ್ಲವೆಂದೂ ಮತಾಂತರಜ್ಞಾನಶೂನ್ಯನು ಹೇಳು ವುದು ಅವಿವೇಕದ ಫಲವೆಂದು ಹೇಳುವ ಕಡೆ ಈ ನ್ಯಾಯ ಹೇಳುವರು.

(12) कूपयन्त्रघटिकान्याय:—ಬಾವಿಯಿಂದ ನೀರನ್ನು ಎಳೆಯಲು ಘಟಗಳನ್ನು ಕಟ್ಟಿ ಬಾವಿಯೊಳಕ್ಕೆ ಬಿಡುವರು. ಅವುಗಳಲ್ಲಿ ಕೆಲವು ನೀರು ತುಂಬಿಕೊಂಡು ಮೇಲಕ್ಕೆ ಬರುವಾಗ ಪೂರ್ಣವಾಗಿಯೂ ಮತ್ತೆ ಕೆಲವು ಘಟಗಳು ಮೇಲೆ ನೀರನ್ನು ಸುರಿದು ಕೆಳಕ್ಕೆ ಬರುವಾಗ ಬರಿ ದಾಗಿಯೂ ಇರುವುವು. ಇವು ನೀರನ್ನು ತುಂಬಿ ಕೊಂಡು ಮೇಲಕ್ಕೆ ಬರುವಾಗ ಮೊದಲು ತುಂಬಿದ್ದ ಘಟಗಳು ಬರಿದಾಗಿ ಕೆಳಕ್ಕೆ ಬರುವುವು. ಹೀಗೆಯೇ ಮನುಷ್ಯನ ಜೀವನದಲ್ಲಿ ಕೆಲವು ಕಾಲ ಸಂಪತ್ತು ಕೆಲವು ಕಾಲ ದಾರಿದ್ರ್ಯ ಕೆಲವು ಕಾಲ ಸೌಖ್ಯ ನಂತರ ಕಷ್ಟ ಈ ರೀತಿ ಏರು ಪೇರುಗಳು ಸಂಭವಿಸುವುದರಿಂದ ಮನುಷ್ಯನು ಸಂಪತ್ತು ಬಂದಾಗ ಗರ್ವಪಡಕೂಡದು ಮತ್ತು ಕಷ್ಟದಿಂದ ನರಳು ತ್ತಿರುವ ದರಿದ್ರನನ್ನು ತಿರಸ್ಕಾರದಿಂದ ಕಾಣಕೂಡದು ಎಂಬ ಅರ್ಥದಲ್ಲಿ ಈ ನ್ಯಾಯವು ಪ್ರವರ್ತಿಸುವುದು. "आपद्गतं हससि किं द्रविणान्ध मूढ लक्ष्मी: स्थिरा न भवतीति किमत्र चित्रम्। एतान् प्रपश्यसि घटान् जलयन्त्रचक्रे रिक्ता भवन्ति भरिता भरिताश्च रिक्ता:"।

(13) गोबलीवर्दन्याय:—ಬಲೀವರ್ದವು (ಎತ್ತು) ಗೋವಿಶೇಷವಾದರೂ ಗೋಪದದ ಮುಂದೆ ಈ ಪದದ ಪ್ರಯೋಗವು ಬಲೀವರ್ದವೂ ಗೋ ಜಾತಿಗೆ ಸೇರಿದ್ದೆಂದೂ ಅದು ದುರ್ದಮ್ಯವೆಂದೂ ಹೇಳಲು ಈ ರೀತಿ ಸಾಮಾನ್ಯ ವಿಶೇಷ ಪ್ರಯೋಗವಿರುವುದು. ಹೀಗೆಯೇ ಸಾಮಾನ್ಯ ವಿಶೇಷರೂಪವಾದ ವಿಷಯಗಳಲ್ಲಿ ವೈಶಿಷ್ಟ್ಯವನ್ನು ಹೇಳಲು ವಿಶೇಷವಸ್ತುಬೋಧಕ ಪದಪ್ರಯೋಗವು ಎಂದು ಹೇಳುವಲ್ಲಿ ಈ ನ್ಯಾಯಕ್ಕೆ ಪ್ರವೃತ್ತಿ.

(14) दण्डापूपन्याय:—ಅಪೂಪಗಳನ್ನು ಕಟ್ಟಿರುವ ದಂಡಕ್ಕೆ ಇಲಿಯು ಹತ್ತಿ ದಂಡವನ್ನೇ ಭಕ್ಷಿಸಿತು ಎಂಬ ಅರ್ಥದಿಂದ ಅದರಲ್ಲಿದ್ದ ಅಪೂಪಗಳನ್ನೂ ಭಕ್ಷಿಸಿತು ಎಂಬ ಅರ್ಥವು ತಾನಾಗಿಯೇ ತೋರುವಂತೆ ದುಷ್ಕರವಾದ ಕಾರ್ಯವು ಸಿದ್ಧಿಸುವಲ್ಲಿ ಸುಕರವಾದ ಕಾರ್ಯವೂ ಸಿದ್ಧಿಸುವುದೆಂಬ ಅರ್ಥಕ್ಕೆ ಸ್ವತಃ ಪ್ರತೀತಿಯುಂಟಾಗುವುದು ಎಂಬ ಅರ್ಥದಲ್ಲಿ ಈ ನ್ಯಾಯಕ್ಕೆ ಪ್ರವೃತ್ತಿ.

(15) देहलीदीपन्याय:— ದೇಹಳಿಯ (ಹೊಸ್ತಿಲ) ಲ್ಲಿ ಇಟ್ಟಿರುವ ದೀಪವು ಒಳಗಡೆ ಮತ್ತು ಹೊರಗಡೆ ಎರಡು ಕಡೆಗೂ ಬೆಳಕನ್ನು ಕೊಡುವಂತೆ ಎರಡು ಪದಗಳ ಮಧ್ಯದಲ್ಲಿ ಪ್ರಯುಕ್ತವಾದ ಒಂದು ಪದದ ಅರ್ಥವು ಎರಡೂ ಪದಗಳಿಗೂ ಅನ್ವಯಿಸುವುದೆಂಬ ಅರ್ಥದಲ್ಲಿ ಈ ನ್ಯಾಯದ ಪ್ರಯೋಗ. "अस्त्रेणापि हि बद्धस्य भयं मम न जायते। पितामहमहेन्द्राभ्यां रक्षितस्यानिलेन च" ಇಲ್ಲಿ "रक्षितस्य" ಪದವು ಹಿಂದಿನ ಮತ್ತು ಮುಂದಿನ ಎರಡು ಪದಗಳಿಗೂ ಅನ್ವಯಿಸುವುದರಿಂದ ಇಲ್ಲಿ "ದೇಹಳೀದೀಪನ್ಯಾಯ" ಪ್ರವರ್ತಿಸುವುದು. ಇದು "काकाक्षिगोलक" ನ್ಯಾಯಕ್ಕೆ ಸಮಾನವಾದುದು.

(16) पङ्कप्रक्षालनन्याय:—ಬೇಕೆಂದು ಕೆಸರನ್ನು ತುಳಿದು ಅದನ್ನು ತೊಳೆದುಕೊಳ್ಳುವುದಕ್ಕಿಂತ ಕೆಸರನ್ನು ತುಳಿಯದಿರುವುದೇ ಒಳ್ಳೆಯದು. ಹೀಗೆ ತೊಂದರೆಯುಂಟಾಗುವುದೆಂದು ತಿಳಿದೂ ಆ ಕಾರ್ಯವನ್ನು ಮಾಡಿ ತೊಂದರೆಯ ಪರಿಹಾರೋಪಾಯ ಹುಡುಕುವುದು ಮೂರ್ಖತನ ಎಂಬ ಅರ್ಥದಲ್ಲಿ ಈ ನ್ಯಾಯ. "प्रक्षालनाद्धि पङ्कस्य दूरादस्पर्शनं वरम्"।

(17) बीजाङ्कुरन्याय:—ಬೀಜವು ಅಂಕುರೋತ್ಪತ್ತಿಗೆ ಕಾರಣವೇ ಅಥವಾ ಅಂಕುರವು ಬೀಜೋತ್ಪತ್ತಿಗೆ ಕಾರಣವೇ ಈ ರೀತಿ ಅನ್ಯೋನ್ಯಾಶ್ರಯ ದೋಷವು ಸಂಭವಿಸುವುದು. ಹೀಗೆಯೇ ಪ್ರಾಕ್ತನ ಕರ್ಮಗಳಿಂದ ಶರೀರಪ್ರಾಪ್ತಿಯೇ ಅಥವಾ ಶರೀರವನ್ನು ಪಡೆಯುವುದರಿಂದ ಕರ್ಮಗಳೇ ಎಂದು ಇಲ್ಲಿಯೂ ಈ ದೋಷವು ತೋರುವುದು. ಎರಡೂ ಅನಾದಿಯೆಂದು ಹೇಳುವುದರಿಂದ ಈ ದೋಷ ಪರಿಹಾರ: ಇಂತಹ ಪ್ರಸಂಗಗಳಲ್ಲಿ ಈ ನ್ಯಾಯಕ್ಕೆ ಪ್ರವೃತ್ತಿ. "न च कर्मान्तरेण शरीरं सम्भवति। न च शरीरमन्तरेण कर्म सम्भवति इति इतरेतराश्रयत्वप्रसङ्गः। अनादित्वे तु बीजाङ्कुरन्यायेनोपपत्तेर्न कश्चिद्दोषो भवति"।

(18) भिक्षुपादप्रसरणन्याय:—ಭಿಕ್ಷುಕನು ಒಬ್ಬ ಧನಿಕನ ಮನೆಯಲ್ಲಿ ಊಟ ವಸ್ತ್ರ ವಾಸ ಮೊದಲಾದ ಸೌಕರ್ಯಗಳನ್ನು ಸಂಪಾದಿಸುವ ಉದ್ದೇಶದಿಂದ ಮೊದಲು ಭಿಕ್ಷೆಯ ಯಾಚನೆ ಅನಂತರ ಮನೆಯಲ್ಲಿ ನಿಲ್ಲಲು ಸ್ವಲ್ಪ ಸ್ಥಳಾವಕಾಶ ಪಡೆದು ಯಜಮಾನನ ಪ್ರೀತಿವಿಶ್ವಾಸಗಳನ್ನು ಕ್ರಮೇಣ ಗಳಿಸಿ ಸರ್ವಸ್ವವನ್ನೂ ಸಂಪಾದಿಸಿಕೊಳ್ಳುವಂತೆ ಸ್ವಲ್ಪ ಮಾತ್ರ ಫಲದ ನೆಪದಿಂದ ಪ್ರವರ್ತಿಸಿ ಕ್ರಮೇಣ ಸರ್ವಾಭೀಷ್ಟಗಳನ್ನೂ ಸಂಪಾದಿಸಿಕೊಳ್ಳುವವನ ವಿಷಯದಲ್ಲಿ ಈ ನ್ಯಾಯಕ್ಕೆ ಪ್ರವೃತ್ತಿ.

(19) वरमद्य कपोतः श्वो मयूरात्:—ನಾಳೆ ದೊರಕುವುದೆಂದು ಪ್ರತೀಕ್ಷಿಸುವ ಮಯೂರಕ್ಕಿಂತಲೂ ಈ ದಿನ ದೊರೆತ ಕಪೋತವೇ ಶ್ರೇಷ್ಠ. ನಾಳೆ ಇದಕ್ಕಿಂತಲೂ ವಿಶೇಷವಾದ ಫಲವು ದೊರಕುವುದೆಂಬ ಪ್ರತೀಕ್ಷೆಯಿಂದ ಈ ದಿನ ಪ್ರಾಪ್ತವಾಗಿರುವ ಸಾಮಾನ್ಯಫಲವನ್ನು ಕೈಬಿಡುವುದು ಬುದ್ಧಿವಂತನ ಲಕ್ಷಣವಲ್ಲ ಎಂಬ ಅರ್ಥದಲ್ಲಿ ಈ ನ್ಯಾಯಕ್ಕೆ ಪ್ರವೃತ್ತಿ.

(20) सूचीकटाहन्याय:—ಸೂಜಿಯನ್ನು ತಯಾರಿಸಲು ಅಲ್ಪಕಾಲ ಮತ್ತು ಅಲ್ಪಪ್ರಯತ್ನ ಸಾಕು. ಕಟಾಹವನ್ನು ತಯಾರಿಸಲು ಹೆಚ್ಚುಕಾಲ ಮತ್ತು ಪ್ರಯತ್ನಗಳು ಬೇಕಾಗುವುವು. ಆದುದರಿಂದ ಅಲ್ಪಯತ್ನಸಾಧ್ಯವಾದ ಸೂಜಿಯ ನಿರ್ಮಾಣಕಾರ್ಯವನ್ನು ಮೊದಲು ಕೈಗೊಂಡು ಅನಂತರ ಕಟಾಹಕಾರ್ಯದಲ್ಲಿ ಮನುಷ್ಯನು ತೊಡಗುವನು. ಹೀಗೆಯೇ ಅಲ್ಪಪ್ರಯಾಸ ಸಾಧ್ಯವಾದ ಕಾರ್ಯವನ್ನು ಮೊದಲುಮಾಡಿ ಅನಂತರ ಹೆಚ್ಚು ಕಾಲದಲ್ಲಿ ಹೆಚ್ಚು ಪ್ರಯತ್ನದಿಂದ ನಡೆಯಬೇಕಾದ ಕಾರ್ಯವನ್ನು ಕೈಗೊಳ್ಳಬೇಕೆಂದು ಹೇಳುವ ಅರ್ಥದಲ್ಲಿ ಈ ನ್ಯಾಯವು ಹೊರಟಿದೆ.

**न्यायपथ ನ್ಯಾಯಪಥ** (ಪುಂ) ಮೀಮಾಂಸಾಶಾಸ್ತ್ರ. न्यायोपेतः पन्थाः।

**न्यायवर्तिन् ನ್ಯಾಯವರ್ತಿನ್** (ತ್ರಿಂ) ನ್ಯಾಯಮಾರ್ಗದಲ್ಲಿ ನಡೆಯುವವನು, ಯೋಗ್ಯವಾದ ಮಾರ್ಗದಲ್ಲಿ ವ್ಯವಹರಿಸುವವನು.

**न्यायवादिन् ನ್ಯಾಯವಾದಿನ್** (ತ್ರಿಂ) ವಕೀಲ, ನ್ಯಾಯವನ್ನು ಹಿಡಿದು ವಾದಿಸುವವನು.

**न्यायवृत्त ನ್ಯಾಯವೃತ್ತ** (ನಂ) 1. ನ್ಯಾಯವಾಗಿ ನಡಸುವ ವ್ಯವಹಾರ. न्यायोपेतं वृत्तम्। (ವಿಂ) 2. ನ್ಯಾಯವಾದ ವ್ಯವಹಾರ ನಡಸುವವನು.

**न्यायवृत्ति ನ್ಯಾಯವೃತ್ತಿ** (ಸ್ತ್ರೀಂ) 1. ನ್ಯಾಯಮಾರ್ಗದಿಂದ ನಡಸುವ ವ್ಯವಹಾರ. 2. ನ್ಯಾಯವಾಗಿ ವಾದಿಸುವ ವಕೀಲನ ಜೀವನ.

**न्यायिन् ನ್ಯಾಯಿನ್** (ವಿಂ) ನ್ಯಾಯವಂತ.

**न्याय्य ನ್ಯಾಯ್ಯ** (ವಿಂ) 1. ನ್ಯಾಯದಿಂದ ಕೂಡಿದ. न्यायादनपेतः। "न्याय्यात्पथः प्रविचलन्ति पदं न धीराः" भर्तृ०। 2. ನ್ಯಾಯಸಿದ್ಧವಾದ, ನ್ಯಾಯಪ್ರಾಪ್ತವಾದ. न्यायादागतः। 3. ನ್ಯಾಯದಲ್ಲಿರುವ. न्याये भवः "यत्" (४-३-५४)। "देवाश्चैतान् समेत्योचुन्र्याय्यं वः शिशुरुक्तवान्" मनु० २-१५२।

**न्यास ನ್ಯಾಸ** (ಪುಂ) 1. ಇಡುವುದು, ಇರಿಸುವುದು. नि+असु (क्षेपणे) भावे "घञ्" (३-३-१८)। "तस्याः खुरन्यासपवित्रपांसुमपांसुलानां धुरि कीर्तनीया" रघु० २-२। "नमयन् सारगुरुभिः पादन्यासैर्वसुन्धराम्" कुमा० ६-५०। 2. ನಿಕ್ಷೇಪ, ಕೇಳಿದಾಗ ಕೊಡಲು ಹೇಳಿ ಒಬ್ಬನಲ್ಲಿ ಇಡುವ ವಸ್ತು. नि + असु कर्म० "घञ्" (३-३-१९)। "अर्थो हि कन्या परकीय एव तामद्य संप्रेष्य परिग्रहीतुः। जातो ममायं विशदः प्रकामं प्रत्यर्पितन्यास इवान्तरात्मा" शाकु० ५-२१। 3. ತ್ಯಾಗ, ವರ್ಜನ, ತೊರೆದುಬಿಡುವುದು. "काम्यानां कर्मणां न्यासं संन्यासं कवयो विदुः" गीता १८-२। 4. ಅರ್ಪಣ, ಸಮರ್ಪಿಸುವುದು, ಒಪ್ಪಿಸುವುದು. 5. ಶರೀರದ ಅಂಗಗಳಲ್ಲಿ ದೇವತೆಗಳನ್ನು ಉದ್ದೇಶಿಸಿ ಮಾಡುವ ಮಂತ್ರೋಚ್ಚಾರಣ ರೂಪವಾದ ಕಾರ್ಯ. अङ्गन्यासः, करन्यासः। 6. ವ್ಯಾಕರಣ ಶಾಸ್ತ್ರದ ಒಂದು ಗ್ರಂಥ. "अनुत्सूत्रपदन्यासा सद्वृत्तिः सन्निबन्धना। शब्दविद्येव नो भाति राजनीतिरपस्पशा" माघ० २-११२।

**न्यासिन् ನ್ಯಾಸಿನ್** (ವಿಂ) 1. ತ್ಯಾಗಮಾಡುವವನು, ಬಿಟ್ಟುಬಿಡುವವನು. 2. ಸಂನ್ಯಾಸಿ, ಸರ್ವಸಂಗ ಪರಿತ್ಯಾಗ ಮಾಡಿದ ಯತಿ. नि + असु (क्षेपणे) "णिनिः" (३-२-७८)।

**न्युप्त ನ್ಯುಪ್ತ** (ವಿಂ) ಪಿತೃಗಳನ್ನು ಉದ್ದೇಶಿಸಿ ಕೊಡಲ್ಪಟ್ಟ (ತರ್ಪಣ). नि + डु वप् (बीजसन्ताने) "क्तः" (३-२-१०२)।

**न्युप्यमान ನ್ಯುಪ್ಯಮಾನ** (ವಿಂ) ಪಿತೃಗಳಿಗೆ ಕೊಡಲ್ಪಡುತ್ತಿರುವ (ಜಲತರ್ಪಣ). नि+डु वप् (बीजसन्ताने) कर्म० "शानच्" (३-२-१२४)। "न्युप्यमानजलयोगितिलौघः स द्विरुक्तकरकालतिलोऽभूत्" नैष० २१-२०।

**न्युब्ज ನ್ಯುಬ್ಜ** (ಪುಂ) 1. ಕರ್ಮರಂಗ ವೃಕ್ಷ, ಕಡಾರದ ಗಿಡ, ಒಂದು ಜಾತಿಯ ನಿಂಬೆಗಿಡ. नि + उब्ज (आर्जवे) "घञ्" (३-३-१८)। 2. ದರ್ಭೆದಿಂದ ಮಾಡಿದ ಯಾಗದ ಒಂದು ಪಾತ್ರೆ. (ವಿಂ) 3. ಕುಬ್ಜ, ವಾಮನ, ಗಿಡ್ಡ, ಕುಳ್ಳ. 4. ಬೆನ್ನನ್ನು ಬಗ್ಗಿಸಿಕೊಂಡಿರುವ ಗೂನ, ಬಗ್ಗಿದ ಬೆನ್ನುಳ್ಳವನು. 5. ಕೆಳಮುಖವಾದ, ಅಧೋಮುಖವಾದ. "ऊर्ध्वार्पितन्युब्जकटाहकल्पे यद्व्योम्नि दीपेन दिनाधिपेन" नैष० २२-३१। "न्युब्जं कुब्जे कर्मरङ्गे न्युब्जो व्याधावधोमुखे" वैज०। "न्युब्जः कुब्जे कुशस्रुचि" हेम०। (ನಂ) 6. ಒಂದು ಜಾತಿಯ ನಿಂಬೆಹಣ್ಣು, ಕಡಾರದ ಹಣ್ಣು.

**न्यून ನ್ಯೂನ** (ವಿಂ) 1. ಗರ್ಹಿತವಾದ, ತುಚ್ಛವಾದ, ನೀಚವಾದ. नि + ऊन (परिहाणे) "अच्" (३-१-१३४)। 2. ಕಡಮೆಯಾದ, ಕೊರತೆಯಿಂದ ಕೂಡಿದ, ಸಮಗ್ರವಲ್ಲದ. "नान्यदन्येन संसृष्टरूपं विक्रयमर्हति। न चासारं न च न्यूनं न दूरे न तिरोहितम्" मनु० ८-२०३।

**न्योकस् ನ್ಯೋಕಸ್** (ವಿಂ) ಶಾಶ್ವತವಾದ ವಾಸಸ್ಥಾನವುಳ್ಳವನು.

**न्योजस् ನ್ಯೋಜಸ್** (ವಿಂ) ವಕ್ರವಾದ, ಕುಟಿಲವಾದ. नि + उब्ज (आर्जवे) "असुन्" (उ० ४-१८८)।

**नृस्थिमालिन् ನೃಸ್ಥಿಮಾಲಿನ್** (ಪುಂ) ನರಾಸ್ಥಿಮಾಲೆಯನ್ನು ಧರಿಸಿರುವ ಪರಮೇಶ್ವರ, ಪರಶಿವ. नुरस्थिमाला अस्त्यस्य "इनिः" (५-२-११६)।

इति "न" कारादिपदार्थनिरूपणम्।

## "नारायण" पदपरिशिष्टम्

2. ಅಶ್ವತ್ಥವೃಕ್ಷ, ಅರಳಿಮರ. 3. ಸದ್ಯಃ ಹುಟ್ಟಿದ ಜಂತು. 4. ಜಲ, ನೀರು. 5. ಸದಾಶಿವ. 6. ಮಹಾಪದ್ಮ. 7. ಮತ್ಸ್ಯ, ಮೀನು. 8. ವೃಷಭ, ಎತ್ತು. 9. ಚತುರ್ಮುಖ. 10. ಚಂದ್ರ. 11. ಹಿಮಾಚಲ. 12. ಸಮುದ್ರ, ಕಡಲು. 13. ಕಪಿತ್ಥವೃಕ್ಷ, ಬೇಲದಮರ. 14. ಜಯ. 15. ನೀರಿನಸುಳಿ. 16. ಮಂಡೂಕ, ಕಪ್ಪೆ. (ನಂ) 17. ಮಂಗಳ, ಶುಭ. 18. ಅಶ್ವಮೇಧಯಾಗ ಮಾಡಿದವನು. शब्दार्थकल्पतरुः।

## "नारायणी" पदपरिशिष्टम्

5. ಚಂದ್ರಿಕೆ, ಬೆಳದಿಂಗಳು. 6. ಸರಸ್ವತಿ. 7. ಗೋಪುಚ್ಛ, 8. ಪಟ್ಟದ ರಾಣಿ. 9. ಗಂಗಾನದಿ. शब्दार्थकल्पतरुः।

# प

**प ಪ** ಇದು ವ್ಯಂಜನಾಕ್ಷರಗಳಲ್ಲಿ "प" ವರ್ಗದ ಮೊದಲನೆಯದು ಮತ್ತು ಅಭ್ಯಂತರಸ್ಪೃಷ್ಟಪ್ರಯತ್ನದಿಂದ ಓಷ್ಠಸ್ಥಾನದಲ್ಲಿ ಹುಟ್ಟುವ ಅಲ್ಪಪ್ರಾಣವರ್ಣ. "कादयो मावसानाः स्पर्शाः" "स्पृष्टं प्रयतनं स्पर्शानाम्" "उपूपध्मानीयानामोष्ठौ" सि० कौ०।

**प ಪ** (पुं०) 1. ಧನಾಧಿಪತಿ, ಕುಬೇರ. पाति—पा (रक्षणे) "डः" बाहु०। 2. ಪವನ, ವಾಯು, ಗಾಳಿ. पातयति वृक्षान्—पत्लृ (गतौ) अन्तर्णिच् "डः"। 3. ಪರ್ಣ, ಎಲೆ. पतति वृक्षात्—पत्लृ "डः"। 4. ಪಾನ, ಕುಡಿಯುವುದು. पीयते। 5. ಪಶ್ಚಿಮದಿಕ್ಕು. 6. ಅಂಡ, ತತ್ತಿ, ಮೊಟ್ಟೆ. 7. ಪ್ರಾಕಾರ. 8. ವಸ್ತ್ರ, ಬಟ್ಟೆ. 9. ಕೌಸ್ತುಭಮಣಿ. 10. ಶುಭಲಗ್ನ. 11. ರಣ, ಯುದ್ಧ. 12. ಶೈಲ, ಬೆಟ್ಟ. (न०) 13. ಸುವರ್ಣ, ಚಿನ್ನ. (वि०) 14. ಕುಡಿಯುವವನು. 15. ರಕ್ಷಕ, ಕಾಪಾಡುವವನು. [ಇದು ಸಮಾಸದ ಕೊನೆಯಲ್ಲಿ ಬರುವುದು,] द्विपः नृपः ಇತ್ಯಾದಿ. 16. ಪವಿತ್ರವಾದ, ಪರಿಶುದ್ಧವಾದ. "पः कुबेरः समाख्यातः पश्चिमे च प्रकीर्तितः। पवने पः समाख्यातः पः स्यात् पाने च पातरि" एका०। "पो ना वाताण्डपूतेषु पाने पातरि कीर्तितः" मेदि०। "पः पुमान् पवने शैले प्राकारे कौस्तुभे रणे। शुभलग्नेऽथ पं क्लीबे हेम्नि" नानार्थर०। (स्त्री०) **पा ಪಾ.** 17. ನೀರಿನ ಧಾರೆ. 18. ಅಮೃತ. 19. ಸಂಮತಿ, ಒಪ್ಪಿಗೆ. "स्त्रीलिङ्गे त्वम्बुधारायां सुधायां संमतौ च पा" नानार्थर०।

**पकार ಪಕಾರ** (पुं०) "ಪ" ವರ್ಣ. प "कारः" (३-३-१०८)।

**पक्कण ಪಕ್ಕಣ** (पुं०) ಬೇಡರ ಮನೆಗಳಿರುವ ಗ್ರಾಮ, ಬೇಡರ ಹಳ್ಳಿ. पचन्ति—डु पचष् (पाके) "क्विप्" (३-२-१७८)। कणन्ति—कण (शब्दे) "अच्" (३-१-१३४)। पचः कणाः यत्र पक्कणः। ಬೇಯಿಸಿ ತಿನ್ನುವುದು ಜಗಳವಾಡುವುದು ಇವೇ ಪ್ರಧಾನವಾಗಿರುವುದರಿಂದ ಈ ಹೆಸರು. "पक्कणः शबरालयः" अम०।

**पक्ति ಪಕ್ತಿ** (स्त्री०) 1. ಪಾಕ, ಅಡಿಗೆ, ಬೇಯಿಸುವುದು. डुपचष् (पाके) "क्तिन्" (३-३-९४)। 2. ಗೌರವ, ಮರ್ಯಾದೆ. "पक्तिर्गौरवपाकयोः" हेम०। 3. ಪಕ್ವವಾಗುವುದು, ಹಣ್ಣಾಗುವುದು. 4. ಪರಿಣಾಮ ಹೊಂದುವುದು. 5. ಜೀರ್ಣವಾಗುವುದು, ಅರಗುವುದು.

**पक्तिका ಪಕ್ತಿಕಾ** (स्त्री०) ಬಿಳಿಯ ಸಾಸವೆ. "शठः सिद्धार्थतोटकौ। पक्तिका त्रिष्टुभा चास्मिन् गौरे" वैज०।

**पक्तिशूल ಪಕ್ತಿಶೂಲ** (न०) ಆಹಾರವು ಜೀರ್ಣವಾಗುವ ಸಮಯದಲ್ಲಿ ಬರುವ ಉದರಶೂಲೆ, ಪರಿಣಾಮಶೂಲೆ, ಹೊಟ್ಟೆನೋವು. पक्तौ अन्नपरिणामकाले शूलम्।

**पक्तृ ಪಕ್ತೃ** (वि०) ಅಡಿಗೆಮಾಡುವವನು, ಬೇಯಿಸುವವನು. डु पचष् (पाके) "तृच्" (३-१-१३३)। स्त्रियां "ङीप्" (४-१-५)। **-क्त्री -ಕ್ತ್ರೀ.**

**पक्त्रिम ಪಕ್ತ್ರಿಮ** (वि०) 1. ಪಾಕದಿಂದ ಸಿದ್ಧವಾದ. डु पचष् (पाके) "क्त्रिः" (३-३-८८)। "मप्" (४-४-२०)। 2. ಹಣ್ಣಾಗಿರುವ, ಪಕ್ವವಾದ, ಮಾಗಿರುವ.

**पक्व ಪಕ್ವ** (वि०) 1. ಪರಿಣತವಾದ, ಕಾಲವಶದಿಂದ ಹಣ್ಣಾಗಿರುವ. पच्यते स्म—डु पचष् (पाके) "क्तः" (३-२-१०२)। "वः" (८-२-५२)। 2. ಪಾಕಮಾಡಲ್ಪಟ್ಟ, ಬೇಯಿಸಲ್ಪಟ್ಟ. 3. ಸಂಪೂರ್ಣತೆಯನ್ನು ಹೊಂದಿದ, ನೈಪುಣ್ಯವನ್ನು ಹೊಂದಿದ. 4. ವಿನಾಶದ ಅಂಚನ್ನು ಮುಟ್ಟಿರುವ. "पक्वं परिणतेऽपि स्याद्विनाशाभिमुखे त्रिषु" मेदि०। 5. ಹುರಿಯಲ್ಪಟ್ಟ. "भ्रष्टं पक्वं विनाम्बुना" वैज०। 6. ಕಾಯಿಸಲ್ಪಟ್ಟ, ಕುದಿಯಿಸಲ್ಪಟ್ಟ, ಕರಗಿಸಲ್ಪಟ್ಟ. "शीनं स्त्यानं शृतं पक्वं विलीनं विद्रुतं द्रुतम्" वैज०। 7. ಜೀರ್ಣವಾದ, ಅರಗಿದ. (न०) 8. ಕಾಯಿಸಿದ ಹಾಲಿನಿಂದ ಮಾಡಿದ ಮೊಸರು. "पक्वं स्यात् सञ्जातं पयसः शृतात्" वैज०। 9. ಬೇಯಿಸಲ್ಪಟ್ಟ ಅನ್ನ, -ಆಹಾರ. 10. ಬೇಯಿಸುವುದು. पचष् भावे "क्तः"।

**पक्वकृत् ಪಕ್ವಕೃತ್** (पुं०) ಅಡಿಗೆ ಮಾಡುವವನು. पक्वं करोति—डु कृञ् (करणे) "क्विप्" (३-२-७६)।

**पक्वरस ಪಕ್ವರಸ** (पुं०) ಮದ್ಯ.

**पक्ववारि ಪಕ್ವವಾರಿ** (न०) ಗಂಜಿ, ಅಂಬಲಿ.

**पक्वान्न ಪಕ್ವಾನ್ನ** (न०) ಬೇಯಿಸಲ್ಪಟ್ಟ ಅನ್ನ, ಬೇಯಿಸಲ್ಪಟ್ಟ ಅಕ್ಕಿ ಮೊದಲಾದ ಆಹಾರಧಾನ್ಯ. पक्वमन्नम्।

**पक्वाधान ಪಕ್ವಾಧಾನ** (न०) ಹೊಟ್ಟೆ, ಆಹಾರವು ಜೀರ್ಣವಾಗುವ ನಾಭಿಯ ಕೆಳಭಾಗ. पक्वस्याधानम्।

**पक्वाशय ಪಕ್ವಾಶಯ** (ಪುಂ) ಹೊಟ್ಟೆ, ತಿಂದ ಆಹಾರವು ಜೀರ್ಣವಾಗುವ ಭಾಗ (ಸ್ಥಳ), ನಾಭಿಯ ಕೆಳಗಿನ ಭಾಗ. पक्वम् आमादिकम् आशेतेऽत्र — आ + शीङ् (स्वप्ने) "अच्" (३-३-५६)। "पक्वाशयस्त्वधो नाभेरूर्ध्वमामाशयः स्मृतः"।

**पक्ष ಪಕ್ಷ** (ಪುಂ) 1. ಪಾರ್ಶ್ವ, ಮಗ್ಗುಲು. पक्ष (परिग्रहे) "घञ्" (३-३-१९)। "शय्यां जहत्युभयपक्षविनीतनिद्राः स्तम्बेरमामुखरशृङ्खलकर्षिणस्ते" रघु० ५-७२। 2. ಪಕ್ಷಿಗಳ ರೆಕ್ಕೆ, ಹಕ್ಕಿಗಳ ಗರಿ. "अथावलम्ब्य क्षणमेकपादिकां तदा निदद्रावुपपल्वलं खगः। स तिर्यगावर्जितकन्धरः शिरः पिधाय पक्षेण रतिक्लमालसः" नैष० १-१२१। 3. ಬಾಣದ ಗರಿ. "भित्त्वा घोणामायसेनाधिवक्षः स्थूरीपृष्ठो गार्ध्रपक्षेण विद्धः" माघ० १८-२२। 4. ಕೇಶಪಾಶ, ಕೇಶಸಮೂಹ. "पाशः पक्षश्च हस्तश्च कलापार्थाः कचात्परे" अम०। 5. ಮಾಸದ ಅರ್ಧಭಾಗ, ತಿಂಗಳಿನಲ್ಲಿ ಹದಿನೈದು ದಿನಗಳನ್ನೊಳಗೊಂಡ ಒಂದು ಭಾಗ, ಅರ್ಧಭಾಗ ಶುಕ್ಲಪಕ್ಷ. ಇನ್ನರ್ಧಭಾಗ ಕೃಷ್ಣಪಕ್ಷ. ಈ ರೀತಿ ಮಾಸದಲ್ಲಿ ಎರಡು ಪಕ್ಷಗಳು. पक्ष्यते परिगृह्यते देवपितृकार्याय — पक्ष (परिग्रहे) "घञ्" (३-३-१९)। "पक्षस्ते दश पञ्च च। पक्षौ पूर्वापरौ शुक्लकृष्णौ" अम०। "पित्र्ये रात्र्यहनी मासः प्रविभागस्तु पक्षयोः" मनु० १-६६। "सीता वृद्धिं समायाति शुक्लपक्ष इवोडुराट्" पञ्चतं० १-१०१। 6. ಒಂದು ಪಂಗಡ, ಒಂದು ಗುಂಪು, ಕಕ್ಷಿ. "सहजचापलदोषसमुद्धतश्चलितदुर्बलपक्षपरिग्रहः" माघ० २-११७। 7. ಸಂದೇಹದಿಂದ ಕೂಡಿದ ಸಾಧ್ಯವುಳ್ಳ ವಸ್ತು. "पर्वतो वह्निमान्" ಎಂಬಲ್ಲಿ पर्वतो वह्निमान् न वा ಎಂಬ ಸಂದೇಹವಿರುವುದರಿಂದ वह्निमत्त्व ರೂಪಸಾಧ್ಯವಿಷಯದಲ್ಲಿ ಸಂದೇಹದಿಂದ ಕೂಡಿದ ಪರ್ವತವು ಪಕ್ಷವಾಗುವುದು. "सन्दिग्धसाध्यवान् पक्षः" त० सं०। 8. ವಿರೋಧ, ಹಗೆತನ. 9. ಹಾಗೆ ಭಾವಿಸುವುದು, ಹಾಗೆ ಇಟ್ಟುಕೊಳ್ಳುವುದು, ವಿಕಲ್ಪವಾಗಿ ತಿಳಿಯುವುದು. 10. ಪ್ರಮೇಯದ ವಿಷಯದಲ್ಲಿ ವಾದ ಮಾಡುವಾಗ ತರ್ಕಬದ್ಧವಾಗಿ ಒಂದು ವಿಷಯ ಕುರಿತು ಮಾತನಾಡುವುದು. ಇದು पूर्वपक्षः उत्तरपक्षः ಎಂದು ಎರಡು ವಿಧ. ದೋಷನಿರೂಪಣೆ ಮಾಡಿ ಹೇಳುವುದು ಪೂರ್ವಪಕ್ಷ, ದೋಷವನ್ನು ಪರಿಹರಿಸಿ ಸಿದ್ಧಾಂತಮಾಡುವುದು ಉತ್ತರಪಕ್ಷ. 11. ಕುಲ, ವಂಶ, ಸಂತತಿ. "किं क्रन्दसि दुराक्रन्द स्वपक्षक्षयकारक। स्वपक्षस्य क्षये जाते को नस्त्राता भविष्यति" पञ्चतं० ४-३१। 12. ಬಲ, ಶಕ್ತಿ. 13. ಸಾಹಾಯ್ಯ, ಒತ್ತಾಸೆ. 14. ಭಿತ್ತಿ, ಗೋಡೆ. 15. ಪಕ್ಕದ ಬಾಗಿಲು, ಪಾರ್ಶ್ವದ್ವಾರ. 16. ಒಲೆಯ ರಂಧ್ರ, ಒಲೆಯ ಸಂದು. 17. ಸಾಮೀಪ್ಯ. 18. ಗೆಳೆಯ, ಮಿತ್ರ. "पक्षः पार्श्वगरुत्साध्यसहायबलभित्तिषु। पार्श्वद्वारे विरोधेऽर्धमासे चुल्लिबिलेऽन्तिके" वैज०। 19. ಪಕ್ಷಿ, ಹಕ್ಕಿ. 20. ರಾಜನ ಆನೆ. 21. ಪಾರ್ಷ್ಣಿಗ್ರಾಹ, ಹನ್ನೆರಡು ಮಂದಿ ರಾಜರಲ್ಲೊಬ್ಬ, ವಿಜಯಯಾತ್ರೆಗಾಗಿ ಹೊರಟ ರಾಜನ ಹಿಂಭಾಗದಲ್ಲಿರುವ ರಾಜ. 22. ಸೈನ್ಯ. 23. ಶುದ್ಧಿ. 24. ದೇಹ. 25. ಅವಯವ, ಅಂಗ. 26. ಗೃಹ, ಮನೆ. 27. ವರ್ಗ, ಸಮೂಹ. 28. ಒಂದು ವಸ್ತುವಿನ ಒಂದು ಪಾರ್ಶ್ವ. "पक्षः सहायगरुदन्तिकसाध्यभित्तिमित्रेषु चुल्लिविवरे नृपकुञ्जरे च। बृन्दे कचादुपरि मासदले च पक्षद्वारे बले च गजपार्श्वविरोधयोश्च" नानार्थर०।

**पक्षक ಪಕ್ಷಕ** (ಪುಂ) 1. ಪಾರ್ಶ್ವದ ಬಾಗಿಲು, ಪಕ್ಕದ ಬಾಗಿಲು. पक्ष इव "कन्" (५-३-९६)। 2. ಒಂದು ಪಾರ್ಶ್ವ, ಒಂದು ಪಕ್ಕ. "अथ पार्श्वं च पक्षद्वारं च पक्षकः" नानार्थर०। "गजपतिमधिरोहः पक्षकव्यत्ययेन" माघ० ११-७। 3. ಪಕ್ಕದ ಕೊಠಡಿ. ಒಂದು ಪಕ್ಕದ ಕೋಣೆ. "पक्षशाला तु पक्षकः" वैज०।

**पक्षचर ಪಕ್ಷಚರ** (ಪುಂ) 1. ಚಂದ್ರ. 2. ಒಂಟಿಯಾಗಿ ಸಂಚರಿಸುವ ಆನೆ, ಒಂಟಿ ಸಲಗ. "अथ पक्षचरश्चन्द्रे पृथक्चारिगजेऽपि च" मेदि०। 3. ಗುಂಪಿನಿಂದ ತಪ್ಪಿಸಿಕೊಂಡ ಆನೆ. 4. ಪಕ್ಷಿ, ಹಕ್ಕಿ. "यूथभ्रष्टगजे पक्षचर एकचरद्विपे। खगे च" नानार्थर०।

**पक्षच्छिद् ಪಕ್ಷಚ್ಛಿದ್** (ಪುಂ) 1. ಇಂದ್ರ. पक्षं छिनत्ति — छिदिर् (द्वैधीकरणे) "क्विप्" (३-२-७६)। "क्रुद्धेऽपि पक्षच्छिदि वृत्रशत्रावेदनाज्ञं कुलिशक्षतानाम्" कुमा० १-२०। (वि०) 2. ರೆಕ್ಕೆಯನ್ನು ಕತ್ತರಿಸುವ.

**पक्षज ಪಕ್ಷಜ** (ಪುಂ) ಚಂದ್ರ. पक्षे शुक्लपक्षे जायते — जनी (प्रादुर्भावे) "डः" (३-२-९७)।

**पक्षति ಪಕ್ಷತಿ** (स्त्री०) 1. ಪಕ್ಷದ ಮೂಲ, ರೆಕ್ಕೆಯ ಬುಡ. पक्षस्य मूलम् "तिः" (५-२-२५)। "करयन्त्रणदन्तुरान्तरे व्यलिखच्चञ्चुपुटेन पक्षती" नैष० २-२। 2. ಪಕ್ಷದ ಪ್ರಾರಂಭದ ದಿನ, ಪ್ರತಿಪತ್ತು, ಪಾಡ್ಯ. "प्रतिपत् पक्षतिर्ज्ञेया गरुन्मूलेऽपि पक्षतिः" शाश्व०।

**पक्षद्वार ಪಕ್ಷದ್ವಾರ** (ನ०) ಪಾರ್ಶ್ವದ ಬಾಗಿಲು, ಪಕ್ಕದ ಬಾಗಿಲು. पक्षे पार्श्वे द्वारम्।

**पक्षधर ಪಕ್ಷಧರ** (ಪುಂ) 1. ಚಂದ್ರ. धरति—धृञ् (धारणे) "अच्" (३-१-१३४)। पक्षस्य धरः। 2. ಪಕ್ಷಿ, ಹಕ್ಕಿ. (वि०) 3. ಒಂದು ಪಕ್ಷವನ್ನು ಹಿಡಿದವನು, ಒಂದು ಗುಂಪಿಗೆ ಸೇರಿದವನು. 4. ರೆಕ್ಕೆಗಳನ್ನು ಹೊಂದಿರುವ.

**पक्षपात ಪಕ್ಷಪಾತ** (ಪುಂ) 1. ಒಂದು ಪಕ್ಷವನ್ನು ಹಿಡಿಯುವುದು, ಒಂದು ಗುಂಪನ್ನು ಸೇರುವುದು. पक्षे पातः। 2. ಆಸಕ್ತಿ, ಅಭಿನಿವೇಶ. "असक्तमाराधयतो यथायथं विभज्य भक्त्या समपक्षपातया" किरा० १-११। 3. ಪ್ರೀತಿ, ಪ್ರೇಮ, ವಿಶ್ವಾಸ. "वीतस्पृहाणामपि मुक्तिभाजां भवन्ति भव्येषु हि पक्षपातः" किरा० ३-१२। 4. ನ್ಯಾಯವಲ್ಲದ ರೀತಿಯಲ್ಲಿ ಒಬ್ಬನಿಗಾಗಲಿ ಒಂದು ಪಂಗಡಕ್ಕಾಗಲಿ ಸಾಹಾಯ್ಯಮಾಡುವ ಬುದ್ಧಿ. "पक्षपातमत्र देवी मन्यते" माल० १। 5. ರೆಕ್ಕೆಗಳು ಬೀಳುವುದು, ಗರಿಗಳು ಉದುರುವುದು.

**पक्षपातिता ಪಕ್ಷಪಾತಿತಾ** (स्त्री०) 1. ಒಂದು ಪಕ್ಷವನ್ನು ಅವಲಂಬಿಸುವುದು, ಒಂದು ಗುಂಪನ್ನು ಸೇರುವುದು. पक्षपातिनो भावः "तल्" (५-१-११९)। 2. ಒಬ್ಬನಿಗಾಗಲಿ ಒಂದು ಗುಂಪಿಗಾಗಲಿ ಸಾಹಾಯ್ಯಮಾಡುವ ಬುದ್ಧಿ. 3. ಸ್ನೇಹ, ಪ್ರೀತಿ, ವಿಶ್ವಾಸ. 4. ರೆಕ್ಕೆಗಳಿಂದ ಹಾರಾಡುವಿಕೆ. "न परं पथि पक्षपातितानवलम्बे किमु मादृशेऽपि सा" नैष० २-५२।

**पक्षपातिन् ಪಕ್ಷಪಾತಿನ್** (वि०) 1. ಒಂದು ಪಕ್ಷವನ್ನು ಹಿಡಿದಿರುವ, ಒಂದು ಗುಂಪನ್ನು ಸೇರಿರುವ. 2. ಒಂದು ಗುಂಪಿನಲ್ಲಿ ವಿಶ್ವಾಸವಿಟ್ಟಿರುವ, ಒಂದು ಪಕ್ಷಕ್ಕೆ ಸಾಹಾಯ್ಯ ಮಾಡುವ. "सर्वथा पाण्डवपक्षपातिनो देवाः" वेणी० ३।

**पक्षपालि ಪಕ್ಷಪಾಲಿ** (स्त्री०) ರಹಸ್ಯವಾದ ಬಾಗಿಲು, ಗುಟ್ಟಾದ ಬಾಗಿಲು, ದಿಡ್ಡಿಬಾಗಿಲು.

**पक्षभाग ಪಕ್ಷಭಾಗ** (ಪುಂ) 1. ಒಂದು ಪಾರ್ಶ್ವ. 2. ಆನೆಯ ಪಕ್ಕೆ, ಆನೆಯ ಒಂದು ಪಾರ್ಶ್ವಭಾಗ. पक्षस्य भागः।

**पक्षमूल ಪಕ್ಷಮೂಲ** (ನಂ) 1. ಶುಕ್ಲ ಮತ್ತು ಕೃಷ್ಣಪಕ್ಷಗಳ ಪ್ರಾರಂಭದ ದಿವಸ. 2. ರೆಕ್ಕೆಗಳ ಬುಡ, ಹಕ್ಕಿ ಗರಿಗಳ ಬುಡ.

**पक्षवाहन ಪಕ್ಷವಾಹನ** (ಪುಂ) ಪಕ್ಷಿ, ಹಕ್ಕಿ. पक्षौ वाहनमिवास्य।

**पक्षसन्धि ಪಕ್ಷಸಂಧಿ** (ಪುಂ) ಎರಡು ಪಕ್ಷಗಳ ಸಂಧಿಕಾಲ, ಶುಕ್ಲ ಮತ್ತು ಕೃಷ್ಣ ಪಕ್ಷಗಳು ಸೇರುವ ಕಾಲ.

**पक्षाघात ಪಕ್ಷಾಘಾತ** (ಪುಂ) ಒಂದು ವಿಧ ವಾತರೋಗ, ಪಾರ್ಶ್ವವಾಯು ರೋಗ.

**पक्षान्त ಪಕ್ಷಾಂತ** (ಪುಂ) ಪಕ್ಷದ ಕೊನೆಯಲ್ಲಿ ಬರುವ 1. ಹುಣ್ಣಿಮೆ. 2. ಅಮಾವಾಸ್ಯೆ. पक्षस्यान्तो यत्र। 3. ಪಕ್ಷದ ಕೊನೆ. पक्षस्यान्तः।

**पक्षान्तर ಪಕ್ಷಾಂತರ** (ನಂ) 1. ಬೇರೆ ಪಂಗಡ, ಬೇರೆ ಗುಂಪು. 2. ಇನ್ನೊಂದು ಪಾರ್ಶ್ವ. 3. ವಾದದ ಇನ್ನೊಂದು ದೃಷ್ಟಿ, ವಾದದ ಇನ್ನೊಂದು ಮುಖ. अन्यः पक्षः।

**पक्षिणी ಪಕ್ಷಿಣೀ** (स्त्री०) 1. ಇಂದಿನ ಮತ್ತು ನಾಳೆಯ ಎರಡು ಹಗಲುಗಳಿಂದ ಕೂಡಿದ ಒಂದು ರಾತ್ರಿ. पक्षतुल्यौ दिवसौ यस्याः स्तः "इनिः" (५-२-११५)। "ङीप्" (४-१-५)। "आगामिवर्तमानाहर्युक्तायां निशि पक्षिणी" अम०। 2. ಹೆಣ್ಣು ಹಕ್ಕಿ.

**पक्षिन् ಪಕ್ಷಿನ್** (ಪುಂ) ಪಕ್ಷಿ, ಹಕ್ಕಿ. पक्षावस्य स्तः "इनिः" (५-२-११५)। "ये पक्षिणः प्रथममम्बुनिधिं गतास्ते येऽपीन्द्रपाणितुलितायुधलूनपक्षाः" माघ० ५-३१।

**ಪಕ್ಷಿಗಳ ಉತ್ಪತ್ತಿ ಮತ್ತು ಅವುಗಳ ಸಂತಾನ:**

(1) ಕಶ್ಯಪನ ಪತ್ನಿಯರಲ್ಲಿ ಒಬ್ಬಳಾದ ವಿನತಾದೇವಿಗೆ ಅರುಣ ಮತ್ತು ಗರುಡ (ಗರುತ್ಮಾನ್) ಎಂಬ ಇಬ್ಬರು ಮಕ್ಕಳು.

ಅರುಣನ ಪತ್ನಿಯಾದ ಶ್ಯೇನಿಯಲ್ಲಿ ಸಂಪಾತಿ ಮತ್ತು ಜಟಾಯು ಎಂಬ ಇಬ್ಬರು ಜನಿಸಿದರು.

| | |
|---|---|
| ಸಂಪಾತಿಯ ಸಂತಾನ | ಗೃಧ್ರಗಳು |
| ಜಟಾಯುವಿನ ಸಂತಾನ | ಕಾಗೆಗಳು |

(2) ಗರುತ್ಮಂತನ ಪತ್ನಿಯರು ಭಾಸೀ ಕ್ರೌಂಚೀ ಶುನೀ ಶುಕೀ ಮತ್ತು ಧೃತರಾಷ್ಟ್ರೀ ಎಂಬ ಐದು ಮಂದಿ.

| | |
|---|---|
| ಶುನಿಯ ಮಕ್ಕಳು | ತ್ರಿಶಿಖ |
| 6 | ಸುನೇತ್ರ |
| | ಸುಮುಖ |
| | ಸುನಸ |
| | ಸುರೂಪ ಮತ್ತು |
| | ಸುಪರ್ವ |
| ಭಾಸಿಯ ಮಕ್ಕಳು | ಉಲೂಕ |
| 6 | ಕಾಗೆ |
| | ಕುಕ್ಕುಟ |
| | ಮಯೂರ |
| | ಗುಬ್ಬಚ್ಚಿ |
| | ಪಾರಿವಾಳ ಮತ್ತು |
| | ತಿತ್ತಿರಿ |

| | |
|---|---|
| ಕ್ರೌಂಚಿಯ ಮಕ್ಕಳು | ಖಡ್ಗಮೃಗ |
| 4 | ಕುರವಕ |
| | ಸಾರಸ ಮತ್ತು |
| | ಬಕ |
| ಧೃತರಾಷ್ಟ್ರಿಯ ಮಕ್ಕಳು | ಕಲಹಂಸ |
| | ಕಪ್ಪುಕಾಲಿನ ಮತ್ತು |
| | ಕಪ್ಪು ಕೊಕ್ಕುಳ್ಳ |
| | ಹಂಸ |
| | (ಧಾರ್ತರಾಷ್ಟ್ರ) |
| | ಚಕ್ರವಾಕ ಶ್ಯೇನ |
| | ಮತ್ತು ಇತರ |
| | ಜಲಚರಗಳು |
| ಶುಕಿಯ ಮಕ್ಕಳು | ಶುಕ ಜಾತಿಯ |
| | ಪಕ್ಷಿಗಳು |

ಇತ್ಯಾದಿ ಇನ್ನೂ ಅನೇಕ ಪಕ್ಷಿಗಳ ಸಂತತಿಗಳು ಇವರಿಂದ ಜನಿಸಿ ಮುಂದೆ ಅನಂತಾನಂತ ಕೋಟಿ ಸಂಖ್ಯೆಯಲ್ಲಿ ಅಭಿವೃದ್ಧಿಗೊಂಡಿವೆ. (ತ್ರಿ०) 2. ರೆಕ್ಕೆಗಳುಳ್ಳ.

**पक्षिराज् ಪಕ್ಷಿರಾಜ್** (ಪುं०) ಪಕ್ಷಿಗಳಿಗೆಲ್ಲಾ ರಾಜನಾದ ಗರುಡ. पक्षिषु राजते — राज् (दीप्तौ) "क्विप्" (३-२-६१)। "निजकेतुशिरःश्रितः सुपर्णादुदपप्तन्भयुतानि पक्षिराजाम्" माघ० २०-५२।

**पक्षिराज ಪಕ್ಷಿರಾಜ** (ಪುं०) ಎಲ್ಲಾ ಪಕ್ಷಿಗಳ ಜಾತಿಗೂ ಒಡೆಯನಾದ ಗರುಡ. पक्षिणां राजा "टच्" (५-४-९१)।

**ಗರುಡನಿಗೆ ಪಕ್ಷಿರಾಜತ್ವಪ್ರಾಪ್ತಿ:** ಕಶ್ಯಪನು ಪುತ್ರಾರ್ಥಿಯಾಗಿ ಯಾಗ ಮಾಡಲು ಯತ್ನಿಸಿದಾಗ ಇಂದ್ರ ಮತ್ತು ಮಹರ್ಷಿಗಳೆಲ್ಲರೂ ಯಾಗಕ್ಕಾಗಿ ಬೇಕಾದ ಅನೇಕ ಉಪಕರಣಗಳನ್ನು ಒದಗಿಸಿಕೊಡಲು ಬಂದರು. ತನ್ನೊಡನೆ ಬರುತ್ತಿದ್ದ ವಾಲಖಿಲ್ಯಋಷಿಗಳನ್ನು ನೋಡಿ ಇಂದ್ರನು ಅಪಹಾಸ್ಯಮಾಡಲು ಋಷಿಗಳು ಕ್ರುದ್ಧರಾಗಿ ಬೇರೊಬ್ಬ ಇಂದ್ರನನ್ನು ಸೃಷ್ಟಿಸಲು ಉಗ್ರವಾದ ಕಾರ್ಯವೊಂದನ್ನು ಕೈಗೊಂಡರು. ಇದರಿಂದ ಭೀತನಾದ ಇಂದ್ರನು ಕಶ್ಯಪರಲ್ಲಿ ಮೊರೆಯಿಡಲು ಕಶ್ಯಪರು ವಾಲಖಿಲ್ಯರನ್ನು ಸಮಾಧಾನಗೊಳಿಸಿ ಅವರ ಕರ್ಮಾಚರಣೆಯಿಂದ ಜನಿಸುವ ಪುತ್ರನು ಪಕ್ಷಿಜಾತಿಗಳಿಗೆಲ್ಲಾ ರಾಜನಾಗಲಿ ಎಂದು ಹೇಳಿದನು. ಕಶ್ಯಪಪತ್ನಿಯಾದ ವಿನತಾದೇವಿಯಲ್ಲಿ ಮಹಾಪರಾಕ್ರಮಶಾಲಿಗಳಾದ ಅರುಣ ಮತ್ತು ಗರುಡ ಎಂಬ ಇಬ್ಬರು ಪುತ್ರರು ಜನಿಸಿದರು. ಅರುಣನು ಸೂರ್ಯನ ಸಾರಥಿಯಾದನು. ಕಶ್ಯಪನು ಗರುಡನನ್ನು ಪಕ್ಷಿರಾಜನನ್ನಾಗಿ ಮಾಡಿ ಪಟ್ಟಾಭಿಷೇಕ ನಡೆಸಿದನು. भा० आदि० ३१।

**पक्षिसिंह ಪಕ್ಷಿಸಿಂಹ** (ಪುं०) ಗರುಡ. पक्षी सिंह इव।

**पक्षीन्द्र ಪಕ್ಷೀಂದ್ರ, –ईश – ಈಶ** (ಪುं०) 1. ಗರುಡ, ಪಕ್ಷಿರಾಜ. 2. ವಿಷ್ಣು. "पक्षीशो गरुडे विष्णौ" हेम०। "प्रभञ्जन इवाम्भोदान् पक्षीन्द्र इव पन्नगान्" याद० २२-१३१।

**पक्ष्मन् ಪಕ್ಷ್ಮನ್** (ನ०) 1. ರೆಪ್ಪೆಯ ಕೂದಲು, ಕಣ್ಣಿನ ಕೂದಲು. पक्ष (परिग्रहे) "मनिन्" (उ० ४-१४५)। "मद्यमन्दविगलत्रपमीषच्चक्षुरुन्मिषितपक्ष्म दधत्या" माघ० १०-१७। 2. ಪದ್ಮ ಮೊದಲಾದುವುಗಳ ಕೇಸರ. ಕಿಂಜಲ್ಕ. 3. ಹಕ್ಕಿಗಳ ರೆಕ್ಕೆ. 4. ಹೂವುಗಳ ದಳ. 5. ದಾರದ ತೆಳುವಾದ ಭಾಗ. "पक्ष्माऽक्षिलोम्नि तन्त्वादिसूक्ष्मांशे कुसुमच्छदे। गरुत्किञ्जल्कयोश्चापि" हेम०। 6. ಹೊಗೆಯ ಗೂಡು.

**पक्ष्ममाला ಪಕ್ಷ್ಮಮಾಲಾ** (ಸ್ತ್ರೀ०) ನೇತ್ರರೋಮಪಙ್ಕ್ತಿ, ರೆಪ್ಪೆಕೂದಲಿನ ಸಾಲು. पक्ष्मणो माला। "इति वदति सखीजने निमीलद्द्विगुणितसान्द्रतराक्षिपक्ष्ममाला" माघ० ७-४३।

**पक्ष्मल ಪಕ್ಷ್ಮಲ** (ತ್ರಿ०) 1. ಸುಂದರವಾದ ರೆಪ್ಪೆಯ ಕೂದಲಿನಿಂದ ಕೂಡಿದ. पक्ष्मास्यास्ति "लच्" (५-२-९७)। "मुखमंसविवर्ति पक्ष्मलाक्ष्याः कथमप्युन्नमितं न चुम्बितं तु" शाकु० ३-२२। 2. ಲೋಮಮಯವಾದ, ಕೂದಲಿನಿಂದ ತುಂಬಿದ. "अस्मिन्नसौ मृदितपक्ष्मलरल्लकाङ्गः" माघ० ४-६१।

**पङ्क ಪಂಕ** (ಪುं.ನ०) 1. ಕೆಸರು, ಕೊಚ್ಚೆ, ಬದಿ. पच्यते—पचि (विस्तारे) कर्म० "घञ्" (३-३-१९)। "कथमेत्य मतिर्विपर्ययं करिणी पङ्कमिवावसीदति" किरा० २-६। 2. ಪಾಪ. पच्यतेऽनेन दुःखम् — पचि कर० "घञ्" (३-३-१२१)।

**पङ्ककर्वट ಪಂಕಕರ್ವಟ** (ಪುं०) ನೀರಿನಿಂದ ಕೂಡಿದ ಕೆಸರು. "चुलुको घनजम्बाले दलाढचे पङ्ककर्वटः" त्रिकाण्ड०।

**पङ्कक्रीड ಪಂಕಕ್ರೀಡ** (ಪುं०) ಸೂಕರ, ಹಂದಿ. पङ्के क्रीडति — क्रीडृ (विहारे) "अच्" (३-१-१३४)।

**पङ्कज ಪಂಕಜ** (ನ०) 1. ಪದ್ಮ, ತಾವರೆ, ಕಮಲ. पङ्के जायते — जनी (प्रादुर्भावे) "डः" (३-२-९७)। "नवपलाशपलाशवनं पुरः स्फुटपरागपरागतपङ्कजम्" माघ० ६-२। [ಕಪ್ಪೆ ಮೊದಲಾದುವು ಕೆಸರಿನಲ್ಲಿ ಹುಟ್ಟಿದರೂ "ಕಮಲ" ಎಂಬ ಅರ್ಥದಲ್ಲಿ ಇದು ಯೋಗರೂಢ.] 2. ಸಾರಸ ಪಕ್ಷಿ.

**पङ्कजन्मन् ಪಂಕಜನ್ಮನ್** (न०) 1. ಪದ್ಮ, ಕಮಲ, ತಾವರೆ. पङ्के जन्मास्य। 2. ಸಾರಸ ಪಕ್ಷಿ.

**पङ्कजनाभ ಪಂಕಜನಾಭ** (पुं०) ವಿಷ್ಣು. पङ्कजं नाभौ यस्य। "सुतोऽभवत् पङ्कजनाभकल्पः कृत्स्नस्य नाभिर्नृपमण्डलस्य" रघु० १८-२०।

**पङ्कजिनी ಪಂಕಜಿನೀ** (स्त्री०) 1. ಕಮಲಗಳಿಂದ ಕೂಡಿದ ದೇಶ, ಸರೋವರ. पङ्कज "इनिः" (५-२-१३५)। 2. ಕಮಲ ಲತೆ. "अलिकुलमलकाकृति प्रपेदे नलिनमुखान्तविसर्पि पङ्कजिन्याः" किरा० १०-३३। 3, ಕಮಲಗಳ ಸಮೂಹ.

**पङ्कता ಪಂಕತಾ** (स्त्री०) ಕೆಸರಾಗಿರುವಿಕೆ, ಬದಿಯಾಗಿರುವುದು. पङ्कस्य भावः "तल्" (५-१-११९)। "अनीत्वा पङ्कतां धूलिमुदकं नावतिष्ठते" माघ० २-३४।

**पङ्कपेषम् ಪಂಕಪೇಷಮ್** (अव्य०) ಕೆಸರಿನಿಂದ ಅರೆದು, ಕೆಸರಿನಿಂದ ಉಜ್ಜಿ. पङ्केन पिनष्टि — पिष्लृ (सञ्चूर्णने) "णमुल्" (३-४-३८)। "भीमं भूमौ लोलमानं सरोषः पादेनासृक्पङ्कपेषं पिपेष" माघ० १८-४५।

**पङ्कमण्डूक ಪಂಕಮಂಡೂಕ** (पुं०) ಕಪ್ಪೆಚಿಪ್ಪು. पङ्के मण्डूक इव।

**पङ्कार ಪಂಕಾರ** (पुं०) 1. ಶೈವಾಲ, ಪಾಚಿ. पङ्कमृच्छति — ऋ (गतौ) "अण्" (३-२-१)। 2. ಅಣೆಕಟ್ಟು, ಅಡ್ಡಕಟ್ಟೆ. 3. ಸೋಪಾನ, ಹಂತ, ಮೆಟ್ಟಿಲು. 4. ಜಲಕುಬ್ಜಕ ಪುಷ್ಪ. "पङ्कारः शैवले सेतौ सोपाने जलकुब्जके" विश्व०।

**पङ्किल ಪಂಕಿಲ** (वि०) ಕೆಸರಿನಿಂದ ಕೂಡಿದ. पङ्कोऽस्त्यस्य "इलच्" (५-२-१००)। "परस्परं परिकुपितस्य पिंषतः क्षतोर्मिकाकनकपरागपङ्किलम्" माघ० १७-८।

**पङ्केरुह ಪಂಕೇರುಹ** (न०) ಕಮಲ, ಪದ್ಮ, ತಾವರೆ. पङ्के रोहति — रुह (बीजजन्मादौ) "कः" (३-१-१३६)। सप्तम्या अलुक् (६-३-१४)। "समापय प्रावृषमश्रुविप्रुषां स्मितेन विश्राणय कौमुदीमुदः। दृशावितः खेलतु खञ्जनद्वयी विकासि पङ्केरुहमस्तु ते मुखम्" नैष० ९-१२२।

**पङ्केशय ಪಂಕೇಶಯ** (वि०) ಕೆಸರಿನಲ್ಲಿರುವ, ಕೆಸರಿನಲ್ಲಿ ವಾಸಮಾಡುವ. पङ्के शेते — शीङ् (स्वप्ने) "अच्" (३-२-१५)।

**पङ्क्ति ಪಙ್ಕ್ತಿ** (स्त्री०) 1. ಶ್ರೇಣಿ, ಸಾಲು. पचि (विस्तारे) "क्तिन्" (३-३-१७४)। "आस्थितः स्थगितवारिदपङ्क्त्या सन्ध्यया गगनपश्चिमभागः" किरा० ९-४०। 2. ಒಂದೇ ಜಾತಿಯ ವಸ್ತುಗಳ ಸಾಲು. 3. ಒಂದೇ ಗುಂಪಿಗೆ ಸೇರಿದ ಜನರ ಸಾಲು. 4. ಹತ್ತು ಸಂಖ್ಯೆ. 5. ಐದು ಅಕ್ಷರಗಳ ಪಾದವುಳ್ಳ ಒಂದು ಛಂದಸ್ಸು, —ವೃತ್ತ. "भ्मौगिति पङ्क्तिः" वृ० र०। ಭಗಣ ಮತ್ತು ಗುರುದ್ವಯ ಪ್ರತಿ ಪಾದದಲ್ಲಿಯೂ ಇರುವುದು. "पङ्क्ति" ವೃತ್ತ. 6. ವೃತ್ತರತ್ನಾಕರದಲ್ಲಿ ಹತ್ತನೆಯ ಛಂದಸ್ಸು. "गायत्र्युष्णिगनुष्टुप्च बृहती पङ्क्तिरेव च" वृ० र०।

**पङ्क्तिकण्टक ಪಙ್ಕ್ತಿಕಂಟಕ** (वि०) ಪಙ್ಕ್ತಿಗೆ ಸೇರಲು ಅರ್ಹತೆಯಿಲ್ಲದವನು. पङ्क्तौ कण्टक इव।

**पङ्क्तिकण्ठ ಪಙ್ಕ್ತಿಕಂಠ, —कन्धर —ಕಂಧರ** (पुं०) ರಾವಣ. पङ्क्तिसंख्याककण्ठाः कन्धरा वा अस्य।

**पङ्क्तिदूषक ಪಙ್ಕ್ತಿದೂಷಕ** (पुं०) ಪಙ್ಕ್ತಿಯಲ್ಲಿ ಕೂಡಲು ಅನರ್ಹನಾದ ಬ್ರಾಹ್ಮಣ, ಪತಿತ ಬ್ರಾಹ್ಮಣ. पङ्क्तिं दूषयति — दुष (वैकृत्ये) + णिच् "ण्वुल्" (३-१-१३३)। **ಪಙ್ಕ್ತಿಗೆ ಅನರ್ಹರಾದವರು—** ವಂಚಕ, ಮೋಸಗಾರ. ಶಿಶುಹತ್ಯೆ ಮಾಡಿದವನು. ಭ್ರೂಣಹತ್ಯೆಗೆ ಕಾರಣನಾದವನು. ವೇದಾಧ್ಯಯನ ಮಾಡದವನು. ಬಡ್ಡಿಯ ಹಣದಿಂದ ಜೀವಿಸುವವನು. ಆತತಾಯಿ. ವಿಷಪ್ರಯೋಗ ಮಾಡುವವನು. ತಾಯಿತಂದೆಗಳಿಗೆ ಅವಿಧೇಯನಾಗಿ ಅವರೊಡನೆ ಜಗಳವಾಡುವವನು. ಮಿತ್ರದ್ರೋಹಿ ಮುಂತಾದ ಬ್ರಾಹ್ಮಣರು ಪಙ್ಕ್ತಿಗೆ ಅನರ್ಹರಾದವರು.

**पङ्क्तिपावन ಪಙ್ಕ್ತಿಪಾವನ** (पुं०) ಪಙ್ಕ್ತಿಯನ್ನು ಪವಿತ್ರಗೊಳಿಸುವವನು, ಪಙ್ಕ್ತಿಯಲ್ಲಿ ಕೂಡಲು ಅರ್ಹನಾದವನು. पङ्क्तिं पावयति — पूञ् (पवने) + णिच् "ल्युः" (३-१-१३४)। ಸಾಂಗವೇದಾಧ್ಯಯನ ಮಾಡಿದವನೂ ಪಂಚಾಗ್ನಿಉಪಾಸಕನೂ ಪಙ್ಕ್ತಿಗೆ ಸೇರುವ ಅರ್ಹತೆಯುಳ್ಳವನು. "तत्र ब्राह्मणाः केचित्तैत्तिरीयाः पङ्क्तिपावनाः काश्यपाः पञ्चाग्नयः" मालती० १, "वेदार्थवित् प्रवक्ता च सहृदः। शतायुश्चैव विज्ञेया ब्राह्मणाः पङ्क्तिपावनाः" मनु० ३-१८६।

**पङ्क्तिरथ ಪಙ್ಕ್ತಿರಥ** (पुं०) ದಶರಥ. पङ्क्तिषु दशसु दिक्षु रथो यस्य। ದಶರಥನು ದಶದಿಕ್ಕುಗಳಲ್ಲೂ ಅಪ್ರತಿಹತವಾಗಿ ರಥವನ್ನು ಬಿಡುತ್ತಿದ್ದುದರಿಂದ ಈ ಹೆಸರು.

**पङ्गु ಪಂಗು** (वि०) 1. ಸಂಚರಿಸಲು ಕಾಲಿಲ್ಲದವನು, ಹೆಳವ. पन (स्तुतौ) "गुः" बाहु०। "साहसैरपि पङ्गुरङ्घ्रिभिरभिव्यक्तीभवन्भानुमान्" नैष० ५-१३६। स्त्रियाम् "ऊङ्" (४-१-६८)। 2. ಶನಿಗ್ರಹ.

**पङ्गुल ಪಂಗುಲ** (ಪುं०) ಬೆಳ್ಳಿಯಂತೆ ಹೊಳಪುಳ್ಳ ಕುದುರೆ. "पीयूषवर्णे सेराहः पङ्गुलः सितकाचसः" वैज०।

**पचत ಪಚತ** (ಪುं०) 1. ಅಗ್ನಿ, ಬೆಂಕಿ. डु पचष् (पाके) "अतच्" (उ० ३-११०)। "पचतोऽग्निः" सि० कौ०। 2. ಸೂರ್ಯ. 3. ಇಂದ್ರ.

**पचतभृज्जता ಪಚತಭೃಜ್ಜತಾ** (स्त्री०) ಅಡಿಗೆಮಾಡಿರಿ ಮತ್ತು ಹುರಿಯಿರಿ ಎಂದು ಯಾವಾಗಲೂ ಅಪ್ಪಣೆ ಮಾಡುವ ಕೆಲಸ. पचत भृज्जत इति सततं यत्राभिधीयते सा पचतभृज्जता। ಸತತಕ್ರಿಯೆಯು ತೋರುವ ಸ್ಥಳದಲ್ಲಿ ತಿಙನ್ತಗಳಿಗೆ ಪರಸ್ಪರ ಸಮಾಸ ಬರುವುದು. (ग० २-१-७१)।

**पचन ಪಚನ** (ಪುं०) 1. ಅಗ್ನಿ, ಬೆಂಕಿ. डु पचष् (पाके) "ल्युः" (३-१-१३४)। (न०) 2. ಅಡಿಗೆಮಾಡುವಿಕೆ. ಬೇಯಿಸುವಿಕೆ. डु पचष् भावे "ल्युट्" (३-३-११५)। 3. ಕುಂಬಾರನ ಆವಿಗೆ, ಕುಂಬಾರನು ಮಡಕೆ ಬೇಯಿಸುವ ಒಲೆ. डु पचष् अधि० "ल्युट्" (३-३-११७)। "कुम्भकारः कुलालोऽस्य पचनं पाकमण्डलम्" वैज०। (वि०) 4. ಅಡಿಗೆ ಮಾಡುವ, ಬೇಯಿಸುವ (ಪಾತ್ರೆ). डु पचष् कर० "ल्युट्" (३-३-११७)।

**पचप्रकुटा ಪಚಪ್ರಕುಟಾ** (स्त्री०) ಅಡಿಗೆಮಾಡು ಕತ್ತರಿಸು ಎಂದು ಯಾವಾಗಲೂ ಹೇಳುವ ಕಾರ್ಯ. पच प्रकुट इत्युच्यते यस्यां क्रियायाम्।

**पचम्पचा ಪಚಂಪಚಾ** (स्त्री०) ಮರದರಿಶಿನ. अत्यर्थं पचति "अच्" (३-१-१३४)। पृषो०।

**पचा ಪಚಾ** (स्त्री०) ಅಡಿಗೆಮಾಡುವುದು, ಬೇಯಿಸುವುದು. डु पचष् (पाके) "अङ्" (३-३-१०४)। "रन्धनं पचनं पचा" वैज०।

**पचि ಪಚಿ** (स्त्री०) 1. ಅಗ್ನಿ, ಬೆಂಕಿ. डु पचष् (पाके) "इन्" (उ० ४-११७)। 2. ಹಸಿವು. "बुभुक्षेच्छाशनाया क्षुज्जिघत्साशिशिषा पचिः" वैज०।

**पचेलिम ಪಚೇಲಿಮ** (ಪುं०) 1. ಅಗ್ನಿ, ಬೆಂಕಿ. 2. ಸೂರ್ಯ. डु पचष् (पाके) कर्त० "एलिमच्" (उ० ४-३७)। "पचेलिमो वह्निरव्योः" सि० कौ०। (वि०) 3. ಫಲೋನ್ಮುಖವಾದ, ಫಲವನ್ನು ಕೊಡಲು ಹೊರಟಿರುವ. स्वयमेव पच्यते — डु पचष् (पाके) "केलिमर्" (वा० ३-१-९६)। "तातानुतर्पणपचेलिमभागधेयां भागीरथीं भगवतीं शरणं भजामः" चं० रा०। 4. ಪಕ್ವವಾಗಿರುವ, ಹಣ್ಣಾಗಿರುವ. "स वारनारीकुचसञ्चितोपमं ददर्श मालूरफलं पचेलिमम्" नैष० १-९४।

**पचेलुक ಪಚೇಲುಕ** (ಪುं०) ಸೂದ, ಅಡಿಗೆಯವನು.

**पच्य ಪಚ್ಯ** (वि०) ಪಕ್ವವಾಗಲು ಯೋಗ್ಯವಾದ, ತಾನಾಗಿಯೇ ಹಣ್ಣಾಗಲು ಯೋಗ್ಯವಾದ. डु पचष् (पाके) कर्मकर्त० "क्यप्" (३-१-११४)। निपा०। "सुखेन लभ्या दधतः कृषीवलैरकृष्टपच्या इव सस्यसम्पदः" किरा० १-१७।

**पज्ज ಪಜ್ಜ** (ಪುं०) ತುರೀಯ ವರ್ಣದವನು पद्भ्यां जायते — जनी (प्रादुर्भावे) "डः" (३-२-९८)। स्त्रियां जाति० "ङीष्" (४-१-६३)। **पज्जी ಪಜ್ಜೀ.**

**पञ्चक ಪಂಚಕ** (न०) 1. ಐದರ ಗುಂಪು, ಐದು ವಸ್ತುಗಳ ಸಮೂಹ. पञ्चन् "कः" (५-१-५८)। "मनसिशयमहास्त्रमन्यथाऽमी न कुसुमपञ्चकमप्यलं विसोढुम्" माघ० ७-२। 2. ಐದು. पञ्चैव स्वार्थे संज्ञायां "कः" (५-१-५८)। (वि०) 3. ಐದರಿಂದ ಕೊಳ್ಳಲ್ಪಟ್ಟ. पञ्चभिः क्रीतम् "कन्" (५-१-२२)। 4. ಐದರಿಂದ ಕೂಡಿದ, ಐದು ಸಂಖ್ಯೆಯಿಂದ ಕೂಡಿದ. 5. ಐದು ಭಾಗಗಳಿಂದ ಕೂಡಿದ. 6. ಐದು ಕೂಲಿಯುಳ್ಳ. 7. ಐದು ನಾಣ್ಯಗಳ ಬೆಲೆಯುಳ್ಳ. पञ्च अंशो भृतिः वस्नं वाऽस्य "कन्" (५-१-५६)। 8. ಐದು ಬಡ್ಡಿ ಆಯ (ಉತ್ಪತ್ತಿ) ಲಾಭ ಶುಲ್ಕ (ತೆರಿಗೆ) ಮತ್ತು ಉಪದಾ (ಕಾಣಿಕೆ) ಕೊಡಲ್ಪಡುವ. पञ्च अस्मै अस्मिन् वा वृद्धिः आयः लाभः शुल्कम् उपदा वा दीयते "कन्" (५-१-४७)। 9. (ಜ್ಯೋತಿಃಶಾಸ್ತ್ರದಲ್ಲಿ) ಮೃತ್ಯು ಅಗ್ನಿ ರಾಜ ಚೋರ ಮತ್ತು ರೋಗಗಳೆಂಬ ಐದು ದೋಷಗಳ ಗುಂಪು. ಆಯಾ ದಿನದ ತಿಥಿ ವಾರ ನಕ್ಷತ್ರ ಮತ್ತು ಲಗ್ನಗಳ ಸಂಖ್ಯೆಗಳನ್ನು ಒಟ್ಟುಗೂಡಿಸಿ ಒಂಬತ್ತರಿಂದ ಭಾಗಿಸಿದಾಗ

| | | |
|---|---|---|
| ಶೇಷವು | ಒಂದು ಬಂದರೆ | ಮೃತ್ಯು |
| ,, | ಎರಡು ,, | ಅಗ್ನಿ |
| ,, | ನಾಲ್ಕು ,, | ರಾಜ |
| ,, | ಆರು ,, | ಚೋರ |
| ,, | ಎಂಟು ,, | ರೋಗ |

ಪಂಚಕವೆಂದು ಐದು ಭಾಗಗಳಾಗಿ ಹೇಳಿರುವುದರಿಂದ ಇದಕ್ಕೆ "ಪಂಚಕ"ವೆಂದು ಹೆಸರು. 10. ಧನಿಷ್ಠಾಪಂಚಕ. ಧನಿಷ್ಠೆ ಶತಭಿಷಕ್ ಪೂರ್ವಾಭಾದ್ರೆ ಉತ್ತರಾಭಾದ್ರೆ ಮತ್ತು ರೇವತಿ ಇವು ಐದು ಧನಿಷ್ಠಾಪಂಚಕ. 11. ಸಾಂಖ್ಯದರ್ಶನದಲ್ಲಿ ಉಕ್ತವಾದ ಇಪ್ಪತ್ತೈದು ತತ್ತ್ವಗಳ ಐದು ಪಂಚಕ (ಭಾಗಗಳು) (1) ಭೂತಪಂಚಕ (ಪೃಥಿವಿ ಜಲ

ತೇಜಸ್ಸು ವಾಯು ಮತ್ತು ಆಕಾಶ). (2) ತನ್ಮಾತ್ರ ಪಂಚಕ (ಶಬ್ದತನ್ಮಾತ್ರ ಸ್ಪರ್ಶತನ್ಮಾತ್ರ ರೂಪತನ್ಮಾತ್ರ ರಸತನ್ಮಾತ್ರ ಮತ್ತು ಗಂಧತನ್ಮಾತ್ರ). (3) ಜ್ಞಾನೇಂದ್ರಿಯ ಪಂಚಕ. (ಚಕ್ಷುಸ್ಸು ಶ್ರೋತ್ರ ಘ್ರಾಣ ರಸನ ಮತ್ತು ತ್ವಕ್ಕು). (4) ಕರ್ಮೇಂದ್ರಿಯಪಂಚಕ (ವಾಕ್ಕು ಪಾಣಿ ಪಾದ ಪಾಯು ಮತ್ತು ಉಪಸ್ಥ). (5) ಅವಶಿಷ್ಟ ಪಂಚಕ (ಪ್ರಕೃತಿ ಮಹತ್ ಅಹಂಕಾರ ಮನಸ್ಸು ಮತ್ತು ಜೀವಾತ್ಮ).

**पञ्चकर्मन् ಪಂಚಕರ್ಮನ್** (ನಂ) ವೈದ್ಯನು ಮಾಡುವ ಐದು ವಿಧ ಚಿಕಿತ್ಸೆ. पञ्चानां कर्मणां समाहारः।

1. ವಮನ (ವಾಂತಿಮಾಡಿಸುವುದು)
2. ರೇಚನ (ಭೇದಿಮಾಡಿಸುವುದು)
3. ನಸ್ಯ (ಮೂಗಿನಿಂದ ಮಾಡುವ ಸ್ನೇಹನಕ್ರಿಯೆ)
4. ನಿರೂಹ (ಪಿಚಕಾರಿ—ಎಣ್ಣೆಯಿಲ್ಲದ ಬಸ್ತಿಕ್ರಿಯೆ)
5. ಅನುವಾಸನ (ಪಿಚಕಾರಿ—ಎಣ್ಣೆಸಹಿತ ಬಸ್ತಿಕ್ರಿಯೆ).

**पञ्चकोल ಪಂಚಕೋಲ** (ನಂ) ಐದು ಮೂಲಿಕೆಗಳಿಂದ ತಯಾರಿಸುವ ಒಂದು ಔಷಧ, ಹಿಪ್ಪಲಿ ಚವ್ಯ ಚಿತ್ರ ಮೂಲ ಪೋಡಿ ಮತ್ತು ಶುಂಠಿ ಇವುಗಳ ಕಷಾಯವನ್ನು ಜೇನುತುಪ್ಪ ಸೇರಿಸಿ ಸೇವಿಸಿದರೆ ಕಫ ಮತ್ತು ವಾತರೋಗ ನಿವಾರಣೆಯಾಗುವುದು.

**पञ्चकोश ಪಂಚಕೋಶ** (ಪುಂ) ಜೀವನಿಗೆ ಆಚ್ಛಾದಕವಾದ ದೇಹ ಮೊದಲಾದ ಐದು ಕೋಶಗಳು.

1. ಅನ್ನಮಯಕೋಶ (ಸ್ಥೂಲಶರೀರ)
2. ಪ್ರಾಣಮಯಕೋಶ
3. ಮನೋಮಯಕೋಶ
4. ವಿಜ್ಞಾನಮಯಕೋಶ ಮತ್ತು
5. ಆನಂದಮಯಕೋಶ (ಇದೇ ಮುಕ್ತಿ ಅಥವಾ ಮೋಕ್ಷ).

ಈ ದೇಹವು ಅನ್ನದಿಂದಲೇ ಬದುಕಿರುವುದರಿಂದ ಇದು **ಅನ್ನಮಯಕೋಶ.** "देहोऽयमन्नभवनोऽन्नमयस्तु कोशश्चान्नेन जीवति विनश्यति तद्विहीनः। त्वक्चर्ममांसरुधिरास्थिपुरीषराशिर्नायं स्वयं भवितुमर्हति नित्यशुद्धः"।

ಐದು ಕರ್ಮೇಂದ್ರಿಯಗಳಿಂದ ಕೂಡಿದ ಪ್ರಾಣವು **ಪ್ರಾಣಮಯಕೋಶ.** "कर्मेन्द्रियैः पञ्चभिरञ्चितोऽयं प्राणो भवेत् प्राणमयस्तु कोशः"।

ಐದು ಜ್ಞಾನೇಂದ್ರಿಯಗಳು ಮತ್ತು ಮನಸ್ಸು **ಮನೋಮಯಕೋಶ.** ಇದು ನಾನು ನನ್ನದು ಎಂಬ ಭಾವವನ್ನುಂಟುಮಾಡುವುದು. "ज्ञानेन्द्रियाणि च मनश्च मनोमयः स्यात् कोशो ममाहमिति बुद्धिविकल्पहेतुः"।

ಪುರುಷನ ಸಂಸಾರಬಂಧನಕ್ಕೆ ಕಾರಣವಾದುದು **ವಿಜ್ಞಾನಮಯಕೋಶ.** "विज्ञानमयकोशस्तु पुंसः संसारकारणम्"। ಇತ್ಯಾದಿ ವಿವರಗಳಿಗೆ ವಿವೇಕಚೂಡಾಮಣಿಯಲ್ಲಿ ನೋಡುವುದು.

**पञ्चगव ಪಂಚಗವ** (ನಂ) ಐದು ಗೋವುಗಳ ಗುಂಪು. पञ्चानां गवां समाहारः "टच्" (५-४-९२)।

**पञ्चगवधन ಪಂಚಗವಧನ** (ವಿಂ) ಐದು ಗೋವುಗಳ ರೂಪವಾದ ಧನವುಳ್ಳವನು. पञ्च गावो धनमस्य।

**पञ्चगव्य ಪಂಚಗವ್ಯ** (ನಂ) ಗೋಸಂಬಂಧವಾದ ಐದು ವಸ್ತುಗಳು. गोविकारः "यत्" (४-३-१६०)। (1) ಹಾಲು (2) ಮೊಸರು (3) ತುಪ್ಪ (4) ಗೋಮೂತ್ರ ಮತ್ತು (5) ಗೋಮಯ (ಸಗಣಿ) ಇವು ಪಂಚಗವ್ಯಗಳು. ಪಂಚಗವ್ಯಪ್ರಾಶನದಿಂದ ಆರೋಗ್ಯ ಐಶ್ವರ್ಯ ಸಕಲ ಪಾಪನಿವೃತ್ತಿ ಮತ್ತು ಸಕಲ ಇಷ್ಟಸಿದ್ಧಿಯುಂಟಾಗುವುವು.

**पञ्चगु ಪಂಚಗು** (ವಿಂ) ಐದು ಗೋವುಗಳನ್ನು ಕೊಟ್ಟು (ಕ್ರಯಕ್ಕೆ) ಕೊಳ್ಳಲ್ಪಟ್ಟ. पञ्चभिः गोभिः क्रीतम् "ठञ्" (५-१-३७)। ठञो लोपः (५-१-२८)। ह्रस्वः (१-२-४८)।

**पञ्चगुण ಪಂಚಗುಣ** (ಪುಂ ಬಂ ವಂ) 1. ಪೃಥಿವಿ ಮೊದಲಾದ ಪಂಚಮಹಾಭೂತಗಳ ಪಂಚಗುಣಗಳು—ರೂಪ ರಸ ಗಂಧ ಸ್ಪರ್ಶ ಮತ್ತು ಶಬ್ದ. (ವಿಂ) 2. ಐದರಷ್ಟಾದ, ಐದರಿಂದ ಗುಣಿಸಲ್ಪಟ್ಟ. 3. ಐದು ಪ್ರಕಾರವಾದ. (ಸ್ತ್ರೀಂ) **-गुणी -ಗುಣೀ.** 4. ಪೃಥಿವಿ, ಭೂಮಿ.

**पञ्चगुप्त ಪಂಚಗುಪ್ತ** (ಪುಂ) 1. ಐದು ಅಂಗಗಳು ಗೂಢವಾಗಿರುವ ಕಮಠ, ಆಮೆ. ಕೈಕಾಲುಗಳು ಮತ್ತು ತಲೆ ಇವು ಐದೂ ಆಮೆಯ ಚಿಪ್ಪಿನೊಳಗೇ ಅಡಗಿದ್ದು ಗೂಢವಾಗಿರುವುದರಿಂದ ಈ ಹೆಸರು. 2. ಚಾರ್ವಾಕಮತ, ಲೋಕಾಯತ ದರ್ಶನ. "लोकायते कच्छपे च पञ्चगुप्तः स्मृतो बुधैः" त्रिकाण्ड०।

**पञ्चचत्वारिंश ಪಂಚಚತ್ವಾರಿಂಶ** (ವಿಂ) ನಲವತ್ತೈದನೆಯ. पञ्चचत्वारिंशतः पूरणः "डट्" (५-२-४८)। स्त्रियां "ङीप्" (४-१-१५)। **-चत्वारिंशी -ಚತ್ವಾರಿಂಶೀ.**

**पञ्चचत्वारिंशत् ಪಂಚಚತ್ವಾರಿಂಶತ್** (ಸ್ತ್ರೀಂ) ನಲವತ್ತೈದು. पञ्चाधिका चत्वारिंशत्।

**पञ्चचत्वारिंशत्तम ಪಂಚಚತ್ವಾರಿಂಶತ್ತಮ** (ವಿಂ) ನಲವತ್ತೈದನೆಯ. पञ्चचत्वारिंशतः पूरणः — वा "तमट्" (५-२-५६)। स्त्रियां "ङीप्" (४-१-१५)। **-तमी -ತಮೀ.**

**पञ्चचामर ಪಂಚಚಾಮರ** (ಪುಂ) ವೃತ್ತರತ್ನಾಕರದಲ್ಲಿ ಉಕ್ತವಾದ ಹದಿನಾರನೆಯ ಛಂದಸ್ಸಿನ ಒಂದು ವೃತ್ತ. ಲಘು ಮತ್ತು ಗುರು ವರ್ಣಗಳು (ಲಘು ಗುರು ಲಘು ಗುರು) ಈ ರೀತಿಯಾಗಿ ನಿರಂತರವೂ ಪ್ರತಿ ಪಾದದಲ್ಲೂ ಇರುವ ಒಂದು ವೃತ್ತ. "लघुर्गुर्निरन्तरं यदा स पञ्चचामरः" वृ० र०।

**पञ्चजन ಪಂಚಜನ** (ಪುಂ) 1. ಮನುಷ್ಯ. पञ्चभिः भूतैः जन्यते — जनी (प्रादुर्भावे) "घञ्" (३-३-१९)। 2. ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರ ಮತ್ತು ರಥಕಾರ (ಬಡಗಿ) ಈ ಐವರು. 3. ಮನುಷ್ಯನಂತಿರುವ ದೇವತೆ ಮೊದಲಾದವರು. 4. ಒಬ್ಬ ರಾಕ್ಷಸ. ಈತನು ಶ್ರೀಕೃಷ್ಣನಿಂದ ಹತನಾದನು.

**पञ्चजनीन ಪಂಚಜನೀನ** (ವಿ०) ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರ ಮತ್ತು ರಥಕಾರ ಈ ಐವರಿಗೂ ಹಿತವಾದ. पञ्चजनेभ्यो हितम् "खः" (वा० ५-१-९)।

**पञ्चत् ಪಂಚತ್** (ಪುಂ) ಐದು ಸಂಖ್ಯೆಯಿಂದ ಕೂಡಿದ. ಐದು ಪರಿಮಾಣವುಳ್ಳ. पञ्च परिमाणमस्य पञ्चत् निपा० (५-१-६०)।

**पञ्चतक्ष ಪಂಚತಕ್ಷ** (ನ०) ಐವರು ಬಡಗಿಯರ ಗುಂಪು. पञ्चानां तक्ष्णां समाहारः अनो नलोपश्च (वा० २-४-१७)। स्त्रीत्वाभावपक्षे रूपम्। स्त्रीत्वपक्षे द्विगोः (४-१-२१)। इति "ङीप्"। —तक्षी —ತಕ್ಷೀ.

**पञ्चतत्त्व ಪಂಚತತ್ತ್ವ** (ನ०) ಪೃಥಿವಿ ಅಪ್ಪು ತೇಜಸ್ಸು ವಾಯು ಮತ್ತು ಆಕಾಶಗಳೆಂಬ ಐದು ತತ್ತ್ವಗಳು. पञ्चानां तत्त्वानां समाहारः।

**पञ्चतन्त्र ಪಂಚತಂತ್ರ** (ನ०) ಒಂದು ನೀತಿಗ್ರಂಥ.

**पञ्चतन्मात्र ಪಂಚತನ್ಮಾತ್ರ** (ನ०) ರೂಪ ರಸ ಗಂಧ ಸ್ಪರ್ಶ ಮತ್ತು ಶಬ್ದ ರೂಪವಾದ ಐದು ತನ್ಮಾತ್ರಗಳು. [ವಿವರಕ್ಕೆ "तन्मात्र" ಪದದಲ್ಲಿ ನೋಡಿ]

**पञ्चतप ಪಂಚತಪ** (ಪುಂ) ಪಂಚಾಗ್ನಿ ಮಧ್ಯದಲ್ಲಿ ನಿಂತು ತಪಸ್ಸು ಮಾಡುವವನು.

**पञ्चतपस् ಪಂಚತಪಸ್** (ವಿ०) ಐದು ಅಗ್ನಿಗಳ ಮಧ್ಯೆ ನಿಂತು ತಪಸ್ಸುಮಾಡುವವನು. पञ्चाग्निसाध्यं तपो यस्य। ನಾಲ್ಕು ಕಡೆಗಳಲ್ಲೂ ಅಗ್ನಿ ನೆತ್ತಿಯ ಮೇಲೆ ಸೂರ್ಯ ಈ ಮಧ್ಯೆ ನಿಂತು ತಪಸ್ಸುಮಾಡುವುದು ಬಹಳ ಉಗ್ರವಾದುದು. "तेजस्विमध्ये तेजस्वी दवीयानपि गण्यते। पञ्चमः पञ्चतपसस्तपनो जातवेदसाम्" माघ० २-५१।

**पञ्चतय ಪಂಚತಯ** (ವಿ०) ಐದು ಅವಯವಗಳುಳ್ಳ. पञ्च अवयवाः यस्य "तयप्" (५-२-४२)।

**पञ्चता ಪಂಚತಾ** (ಸ್ತ್ರೀ०) 1. ಮರಣ, ಸಾವು. 2. ಶರೀರಕ್ಕೆ ಆರಂಭಕವಾದ ಪಂಚಮಹಾಭೂತಗಳು ಶರೀರನಾಶಾನಂತರ ಅವುಗಳ ಭಾವವನ್ನು ಹೊಂದುವಿಕೆ. पञ्चानां भावः "तल्" (५-१-११९)। "पञ्चता पञ्चभावे स्यात् मरणेऽपि च योषिति" मेदि०। "पञ्चतापन्नमुनिकुमारकसञ्जीवनामृत" रघु० ग०।

**पञ्चतिक्त ಪಂಚತಿಕ್ತ** (ನ०) ಬೇವು ನಲ್ಲಿ ಆಡುಸೋಗೆ ಪಟೋಲ ಮತ್ತು ಹೆಗ್ಗುಳ್ಳಗಳು. पञ्चगुणितं तिक्तम्। "निम्बामृता वृषपटोलनिदिग्धिकाश्च" चक्रदत्तः।

**पञ्चदश ಪಂಚದಶ** (ವಿ०) 1. ಹದಿನೈದನೆಯ. पञ्च दशानां पूरणः "डट्" (५-२-४८)। स्त्रियां "ङीप्" (४-१-१५)। —दशी —ದಶೀ. 2. ಹುಣ್ಣಿಮೆ. 3. ಅಮಾವಾಸ್ಯೆ.

**पञ्चदशन् ಪಂಚದಶನ್** (ತ್ರಿ०) 1. ಹದಿನೈದು. पञ्चाधिका दश। 2. ಹದಿನೈದು ಸಂಖ್ಯೆಯಿಂದ ಕೂಡಿದ.

**पञ्चदशाह ಪಂಚದಶಾಹ** (ಪುಂ) ಹದಿನೈದು ದಿವಸ. पञ्चदशगुणितमहः।

**पञ्चदशाहिक ಪಂಚದಶಾಹಿಕ** (ವಿ०) ಹದಿನೈದು ದಿವಸಗಳಲ್ಲಿ ಮಾಡಬಹುದಾದ. पञ्चदशाहः साध्यतयाऽस्त्यस्य "ठन्" (५-२-११५)।

**पञ्चदीर्घ ಪಂಚದೀರ್ಘ** (ವಿ०) ಐದು ಭಾಗಗಳು ದೀರ್ಘವಾಗಿ ಉಳ್ಳ (ಮಹಾ) ಪುರುಷ. पञ्चसु अवयवेषु दीर्घः। (ಮಹಾಪುರುಷಲಕ್ಷಣದಿಂದ ಕೂಡಿದ ಪುರುಷನಿಗೆ ಐದು ಅವಯವಗಳು ದೀರ್ಘವಾಗಿರುವುವು). [ವಿವರಕ್ಕೆ "द्वात्रिंशल्लक्षण" ಪದದಲ್ಲಿ ನೋಡಿ.]

**पञ्चधा ಪಂಚಧಾ** (ಅವ್ಯ०) ಐದು ಪ್ರಕಾರವಾಗಿ.

**पञ्चन् ಪಂಚನ್** (ತ್ರಿ० ಬ० ವ०) 1. ಐದು, ಐದು ಸಂಖ್ಯೆ. "किमहो नृपाः सममभीभिरुपपतिसुतैः पञ्चभिः" माघ० १५-६३। 2. ಐದು ಸಂಖ್ಯೆಯಿಂದ ಕೂಡಿದ.

**पञ्चनख ಪಂಚನಖ** (ಪುಂ) 1. ಗಜ, ಆನೆ. 2. ಕೂರ್ಮ, ಆಮೆ. पञ्च नखा यस्य। "गजकूर्मौ पञ्चनखौ" नानार्थर०। 3. ವ್ಯಾಘ್ರ, ಹುಲಿ. 4. ಮುಳ್ಳುಹಂದಿ. 5. ನೀರುಡ, ದೊಡ್ಡಜಾತಿಯ ಹಲ್ಲಿ. 6. ಖಡ್ಗಮೃಗ. 7. ಮೊಲ. "श्वाविधं शल्यकं गोधां खड्गकूर्मशशांस्तथा। भक्ष्यान् पञ्चनखेष्वाहुरनुष्ट्रांश्चैकतोदतः" मनु० ५-१८।

**पञ्चनद ಪಂಚನದ** (ನಂ) 1. ಐದು ನದಿಗಳು. पञ्चानां नदीनां समाहारः "अच्" (वा० ५-४-७५)। (ಪುಂ) 2. ಐದು ನದಿಗಳುಳ್ಳ ದೇಶ, ಈಗಿನ ಪಂಜಾಬ ದೇಶ. पञ्च नद्यः सन्त्यत्र "अच्"। ಶತದ್ರು, ವಿಪಾಶಾ, ಇರಾವತೀ, ಚಂದ್ರಭಾಗಾ ಮತ್ತು ವಿತಸ್ತಾ ಈ ಐದು ನದಿಗಳೂ ಪಂಜಾಬ ದೇಶದಲ್ಲಿರುವುವು. ಈಗಿನ ಪಂಜಾಬ ದೇಶವು ಪೂರ್ವದಲ್ಲಿ ಮದ್ರದೇಶವಾಗಿತ್ತು. (ಪುಂ ಬಂ ವಂ) 3. ಈ ದೇಶದ ಜನರು.

**पञ्चनवत ಪಂಚನವತ** (ವಿಂ) ತೊಂಬತ್ತೈದನೆಯ. पञ्चनवतेः पूरणः "डट्" (५-२-४८)। स्त्रियां "ङीप्" (४-१-१५)। **–नवती – ನವತೀ.**

**पञ्चनवति ಪಂಚನವತಿ** (ಸ್ತ್ರೀಂ) ತೊಂಬತ್ತೈದು. पञ्चाधिका नवतिः।

**पञ्चनवतितम ಪಂಚನವತಿತಮ** (ವಿಂ) ತೊಂಬತ್ತೈದನೆಯ. पञ्चनवतेः पूरणः —वा "तमट्" (५-२-५६)। स्त्रियां "ङीप्" (४-१-१५)। **–तमी – ತಮೀ.**

**पञ्चनिम्ब ಪಂಚನಿಂಬ** (ನಂ) ಬೇವಿನಮರದ ಐದು ಪದಾರ್ಥಗಳು. ಬೇವಿನ (1) ಹೂವು, (2) ಬೇರು, (3) ತೊಗಟೆ. (4) ಹಣ್ಣು ಮತ್ತು (5) ಎಲೆ- ಇವು ಪಂಚನಿಂಬಗಳು.

**पञ्चपञ्चाश ಪಂಚಪಂಚಾಶ** (ವಿಂ) ಐವತ್ತೈದನೆಯ. पञ्चपञ्चाशतः पूरणः "डट्" (५-२-४८)। स्त्रियां "ङीप्" (४-१-१५)। **–पञ्चाशी – ಪಂಚಾಶೀ.**

**पञ्चपञ्चाशत् ಪಂಚಪಂಚಾಶತ್** (ಸ್ತ್ರೀಂ) ಐವತ್ತೈದು. पञ्चाधिका पञ्चाशत्।

**पञ्चपञ्चाशत्तम ಪಂಚಪಂಚಾಶತ್ತಮ** (ವಿಂ) ಐವತ್ತೈದನೆಯ. पञ्चपञ्चाशतः पूरणः—वा "तमट्" (५-२-५६)। स्त्रियां "ङीप्" (४-१-१५)। **–तमी – ತಮೀ.**

**पञ्चपर्वन् ಪಂಚಪರ್ವನ್** (ನಂ) ಐದು ಪರ್ವದಿನಗಳು —ಅಷ್ಟಮಿ, ಚತುರ್ದಶಿ, ಪೂರ್ಣಿಮೆ, ಅಮಾವಾಸ್ಯೆ ಮತ್ತು ಸಂಕ್ರಮಣಗಳು ಪಂಚಪರ್ವಗಳು.

**पञ्चपितृ ಪಂಚಪಿತೃ** (ಪುಂ ಬಂ ವಂ) ಐವರು ತಂದೆಗಳು, ಜನಕ ಮತ್ತು ಇತರ ನಾಲ್ವರು. ಈ ನಾಲ್ವರೂ ತಂದೆಗೆ ಸಮಾನರು. **ಐದು ವಿಧ ತಂದೆಗಳು :** (1) ಜನಕ, (2) ಉಪನಯನ ಮಾಡಿದ ಆಚಾರ್ಯ, (3) ವಿದ್ಯಾದಾನ ಮಾಡಿದ ಗುರು, (4) ಅನ್ನದಾನ ಮಾಡಿದವನು ಮತ್ತು (5) ಭಯದಿಂದ ರಕ್ಷಿಸಿದವನು. "जनकश्चोपनेता च यश्च विद्यां प्रयच्छति। अन्नदाता भयत्राता पञ्चैते पितरः स्मृताः"।

**पञ्चप्राण ಪಂಚಪ್ರಾಣ** (ಪುಂ ಬಂ ವಂ) ದೇಹದೊಳಗಿರುವ ಐದು ಪ್ರಾಣವಾಯುಗಳು. (1) ಪ್ರಾಣ, (2) ಅಪಾನ, (3) ಸಮಾನ, (4) ಉದಾನ ಮತ್ತು (5) ವ್ಯಾನ ಇವು ಪಂಚಪ್ರಾಣ ವಾಯುಗಳು. ಪ್ರಾಣವಾಯುವು ಹೃದಯದಲ್ಲಿಯೂ ಅಪಾನವಾಯುವು ಗುದಪ್ರದೇಶದಲ್ಲಿಯೂ ಸಮಾನವಾಯುವು ನಾಭಿಯಲ್ಲೂ ಉದಾನವಾಯುವು ಕಂಠದೇಶದಲ್ಲೂ ವ್ಯಾನವಾಯುವು ಶರೀರದ ಎಲ್ಲಾ ಭಾಗಗಳಲ್ಲೂ ಇರುವುದು. ಪ್ರಾಣವಾಯುವು ಅನ್ನವು ಒಳಗೆ ಹೋಗಿ ಸೇರುವಂತೆ ಮಾಡುವುದು. ಅಪಾನವಾಯುವು ಮಲ ಮೂತ್ರಾದಿಗಳ ವಿಸರ್ಜನೆಮಾಡಿಸುವುದು. ಸಮಾನ ವಾಯುವು ಆಹಾರವನ್ನು ಪಚನಮಾಡಿಸುವುದು. ಉದಾನ ವಾಯುವು ವಾಗ್ವ್ಯಾಪಾರ ಮಾಡಿಸುವುದು. ವ್ಯಾನ ವಾಯುವು ದರ್ಶನಾನುಕೂಲವಾದ ನಿಮೇಷವ್ಯಾಪಾರ ಮಾಡಿಸುವುದು. "हृदि प्राणो गुदेऽपानः समानो नाभिसंस्थितः। उदानः कण्ठदेशस्थो व्यानः सर्वशरीरगः"। "अन्नप्रवेशनम् मूत्राद्युत्सर्गोऽन्नविपाचनम्। भाषणादिनिमेषादि तद्व्यापाराः क्रमादमी"।

**पञ्चबाण ಪಂಚಬಾಣ** (ಪುಂ) 1. ಕಾಮ, ಮನ್ಮಥ. पञ्च बाणाः [illegible] "यदक्रमं विक्रमशक्तिसाम्यादुपाचरद्द्वावपि [illegible]" नैष० ८-४। 2. ಮನ್ಮಥನ ಐದು ಬಾಣಗಳು. (1) ಅರವಿಂದ, (2) ಅಶೋಕ, (3) ಚೂತ, (4) ನವಮಲ್ಲಿಕೆ ಮತ್ತು (5) ನೀಲೋತ್ಪಲ ಇವು ಮನ್ಮಥನ ಐದು ಬಾಣಗಳು. ಸಂಮೋಹನ ಉನ್ಮಾದನ ಶೋಷಣ ತಾಪನ ಮತ್ತು ಸ್ತಂಭನಗಳೆಂದು ಈ ಬಾಣಗಳ ಹೆಸರು.

**पञ्चबाहु ಪಂಚಬಾಹು** (ಪುಂ) ಈಶ್ವರ, ಮಹಾದೇವ.

**पञ्चभद्र ಪಂಚಭದ್ರ** (ಪುಂ) ಒಂದು ಜಾತಿಯ ಕುದುರೆ. ಐದು ಅಂಗಗಳಲ್ಲಿ ಶುಭ ಚಿಹ್ನೆಗಳುಳ್ಳ ಕುದುರೆ. ಎದೆ ಬೆನ್ನು ಮುಖ ಮತ್ತು ಎರಡು ಪಾರ್ಶ್ವಗಳಲ್ಲಿ ಶುಭಲಕ್ಷಣಗಳಿಂದ ಕೂಡಿದ ಕುದುರೆಗೆ ಪಂಚಭದ್ರವೆಂದು ಹೆಸರು. स्त्रियां जाति० "ङीष्" (४-१-६३)। **–भद्री – ಭದ್ರೀ.** "पञ्चभद्रस्तु हृत्पृष्ठमुखपार्श्वेषु पुष्पितः"।

**पञ्चभूत ಪಂಚಭೂತ** (ನಂ ಬಂ ವಂ) ಪಂಚಮಹಾಭೂತಗಳು. ಪೃಥ್ವಿ (ಭೂಮಿ) ಅಪ್ (ಜಲ) ತೇಜಸ್ಸು (ಅಗ್ನಿ) ವಾಯು (ಗಾಳಿ) ಮತ್ತು ಆಕಾಶ ಇವು ಪಂಚಮಹಾಭೂತಗಳು. **ಶರೀರದಲ್ಲಿ ಈ ಪಂಚಮಹಾಭೂತಗಳ ಗುಣಗಳು :** (1) ಅಸ್ಥಿ ಮಾಂಸ ನಖ ನಾಡಿ (ನರ) ಮತ್ತು ತ್ವಕ್ (ಚರ್ಮ) ಇವು ಪೃಥ್ವಿಯ ಗುಣಗಳು, (2) ಮಲ ಮೂತ್ರ ಶುಕ್ರ (ರೇತಸ್ಸು) ಶ್ಲೇಷ್ಮ (ಕಫ)

ಶೋಣಿತ (ರಕ್ತ) ಇವು ಅಪ್ ಗುಣಗಳು. (3) ಹ್ರಾಸ ನಿದ್ರೆ ಕ್ಷುತ್ (ಹಸಿವು) ಭ್ರಾಂತಿ ಮತ್ತು ಆಲಸ್ಯ (ಸೋಮಾರಿತನ) ಇವು ತೇಜಸ್ಸಿನ ಗುಣಗಳು. (4) ಧಾರಣ ಚಾಲನ ಕ್ಷೇಪ ಸಂಕೋಚ ಮತ್ತು ಪ್ರಸರಣ ಇವು ವಾಯುವಿನ ಗುಣಗಳು. (5) ಕಾಮ ಕ್ರೋಧ ಲೋಭ ತ್ರಪಾ (ಲಜ್ಜೆ) ಮತ್ತು ಮೋಹ ಇವು ಆಕಾಶಭೂತದ ಗುಣಗಳು, "अस्थिमांसं नखञ्चैव नाडी त्वक्चेति पञ्चमी। पृथ्वी पञ्चगुणा प्रोक्ता ब्रह्मज्ञानेन भाषितम्॥ मलं मूत्रं तथा शुक्रं श्लेष्मा शोणितमेव च। तोयं पञ्चगुणं प्रोक्तं ब्रह्मज्ञानेन भाषितम्॥ ह्रासो निद्रा क्षुधा चैव भ्रान्तिरालस्यमेव च। तेजः पञ्चगुणं प्रोक्तं ब्रह्मज्ञानेन भाषितम्॥ धारणं चालनं क्षेपः संकोचः प्रसरस्तथा। वायुः पञ्चगुणः प्रोक्तः ब्रह्मज्ञानेन भाषितम्॥ कामः क्रोधस्तथा लोभः त्रपा मोहश्च पञ्चमः। नभः पञ्चगुणं प्रोक्तं ब्रह्मज्ञानेन भाषितम्" ब्रह्मज्ञानतन्त्रम्। **ಪಂಚಮಹಾಭೂತತತ್ತ್ವ ನಕ್ಷತ್ರಗಳು :—**

**ಪೃಥ್ವೀತತ್ತ್ವದ ನಕ್ಷತ್ರಗಳು:** ಅನೂರಾಧಾ, ಜ್ಯೇಷ್ಠಾ ಉತ್ತರಾಷಾಢಾ ಶ್ರವಣ ಧನಿಷ್ಠಾ ಅಭಿಜಿತ್ ಮತ್ತು ರೇವತಿ.

**ಅಪ್ತತ್ತ್ವದ ನಕ್ಷತ್ರಗಳು:** ರೋಹಿಣೀ ಆರ್ದ್ರಾ ಆಶ್ಲೇಷಾ ಮೂಲ ಪೂರ್ವಾಷಾಢಾ ಮತ್ತು ಉತ್ತರಾ ಭಾದ್ರಾ.

**ತೇಜಸ್ತತ್ತ್ವದ ನಕ್ಷತ್ರಗಳು:** ಭರಣೀ ಕೃತ್ತಿಕಾ ಪುಷ್ಯ ಮಘಾ ಪೂರ್ವಫಲ್ಗುನೀ ಸ್ವಾತೀ ಮತ್ತು ಪೂರ್ವಾ ಭಾದ್ರಾ.

**ವಾಯುತತ್ತ್ವದ ನಕ್ಷತ್ರಗಳು:** ಅಶ್ವಿನೀ ಮೃಗಶೀರ್ಷ ಪುನರ್ವಸು ಹಸ್ತ ಚಿತ್ರಾ ಉತ್ತರಫಲ್ಗುನೀ ಮತ್ತು ವಿಶಾಖಾ. "धनिष्ठा रेवती ज्येष्ठानुराधा श्रवणा तथा। अभिजिच्चोत्तराषाढा पृथ्वीतत्त्वमुदाहृतम्॥ पूर्वाषाढा तथाश्लेषा मूलार्द्रा चैव रोहिणी। परभाद्रपदा तोयं आपस्तत्त्वन्त्वभीष्टदम्। भरणी कृत्तिका पुष्या मघा पूर्वा च फल्गुनी। पूर्वभाद्रपदा स्वाती तेजस्तत्त्वमिति प्रिये। विशाखोत्तरफल्गुन्यौ हस्ता चित्रा पुनर्वसुः। अश्विनी मृगशीर्षा च वायुतत्त्वमुदाहृतम्" सूक्ष्मस्वरोदयः।

**पञ्चम ಪಂಚಮ** (पुं०) 1. (ಸಂಗೀತಶಾಸ್ತ್ರದಲ್ಲಿ) ಒಂದು ಸ್ವರ. ಕೋಕಿಲದ ಧ್ವನಿಯಂತೆ ಹೊರಡುವ ಐದನೆಯ ಸ್ವರ. "पिकः कूजति पञ्चमम्"। ನಾಭಿ ಮೊದಲಾದ ಐದು ಸ್ಥಾನಗಳಲ್ಲಿ ಸಂಚರಿಸಿ ಐದನೆಯ ಸ್ಥಾನದಲ್ಲಿ ಸೇರುವುದರಿಂದ ಇದು ಪಂಚಮಸ್ವರವಾಯಿತು. "वायुः समुद्गतो नाभेरुरोहृत्कण्ठमूर्धसु। विचरन् पञ्चमस्थानप्राप्त्या पञ्चम उच्यते"। "श्रुतिसमधिकमुच्चैः पञ्चमं पीडयन्तः सततमृषभहीनं भिन्नकीकृत्य षड्जम्" माघ० ११-१। 2. ಒಂದು ರಾಗ. "समाज एवालपितासु वैणिकैर्मुमूर्च्छे यत्पञ्चममूर्च्छनासु च" नैष० १-५२। (न०) 3. ಮೈಥುನ. (वि०) 4. ಐದನೆಯ. पञ्चानां पूरणः "डट्" (५-२-४८)। डटो मडागमः (५-२-४९)। "पञ्चमः पञ्चतपसस्तपनो जातवेदसाम्" माघ० २-५१। 5. ಜಾಣ, ಸಮರ್ಥ. 6. ಮನೋಹರವಾದ, ಸುಂದರವಾದ. स्त्रियां "ङीप्" (४-१-१५)। **–मी –ಮಿ.** 7. ದ್ರೌಪದಿ. "पञ्चमः सुन्दरे दक्षे पञ्चानामपि पूरणे। रागभेदे पञ्चमी तु द्रौपद्याम्" हेम०। 8, ಪಕ್ಷದ ಐದನೆಯ ತಿಥಿ.

**पञ्चमकार ಪಂಚಮಕಾರ** (न०) ಮಕಾರವು ಮೊದಲು ಬರುವ ಮದ್ಯ ಮೊದಲಾದ ಐದು. पञ्च मकारा यत्र। "मद्यं मांसं तथा मत्स्यः मुद्रा मैथुनमेव च। पञ्चतत्त्वमिदं देवि निर्वाणमुक्तिहेतवे। मकारपञ्चकं देवि देवानामपि दुर्लभम्" गुप्तसाधनतन्त्रम्।

**पञ्चमहापातक ಪಂಚಮಹಾಪಾತಕ** (न०) ಐದು ಮಹಾಪಾಪಕೃತ್ಯಗಳು. पञ्चप्रकारं महापातकम्। (1) ಬ್ರಹ್ಮಹತ್ಯೆ (2) ಸುರಾಪಾನ (3) ಸ್ತೇಯ (ಕಳ್ಳತನ) (4) ಗುರುಪತ್ನೀಗಮನ ಮತ್ತು (5) ಅಂತಹ ಪಾಪಕೃತ್ಯಗಳನ್ನು ಮಾಡಿದವರ ಸಹವಾಸ. ಇವು ಐದು ಮಹಾಪಾತಕಗಳು. "ब्रह्महत्या सुरापानं स्तेयं गुर्वङ्गनागमः। महान्ति पातकान्याहुः संसर्गश्चापि तैः सह" मनु० ११-५४।

**पञ्चमहायज्ञ ಪಂಚಮಹಾಯಜ್ಞ** (पुं०) ಗೃಹಸ್ಥನು ಪ್ರತಿದಿನವೂ ಆಚರಿಸಬೇಕಾದ ಐದು ಮಹಾಯಜ್ಞಗಳು. (1) ಬ್ರಹ್ಮಯಜ್ಞ (2) ದೇವಯಜ್ಞ, (3) ಪಿತೃಯಜ್ಞ (4) ಭೂತಯಜ್ಞ ಮತ್ತು (5) ಮನುಷ್ಯಯಜ್ಞ.

ಅಧ್ಯಾಪನವು ಬ್ರಹ್ಮಯಜ್ಞ.
ಹೋಮ (ಅಗ್ನಿಕಾರ್ಯ) ದೇವಯಜ್ಞ
ತರ್ಪಣವು ಪಿತೃಯಜ್ಞ
ಬಲಿಕಾರ್ಯವು ಭೂತಯಜ್ಞ
ಅತಿಥಿಸತ್ಕಾರವು ಮನುಷ್ಯಯಜ್ಞ.

"अध्यापनं ब्रह्मयज्ञः पितृयज्ञस्तु तर्पणम्। होमो दैवो बलिर्भौतो नृयज्ञोऽतिथिपूजनम्" मनु० ३-७०।

**पञ्चमास्य ಪಂಚಮಾಸ್ಯ** (पुं०) 1. ಕೋಗಿಲೆ. पञ्चमः स्वरः आस्ये यस्य। ಕೋಗಿಲೆಯು ಪಂಚಮಸ್ವರದಲ್ಲಿ ಕೂಗುವುದರಿಂದ ಈ ಹೆಸರು. "पिकः कूजति पञ्चमम्"।

2. ಐದು ತಿಂಗಳು ಕಳೆದಿರುವ, ಐದು ತಿಂಗಳಾಗಿರುವ. पञ्च मासाः भूताः "यप्" (५-१-८२)।

**पञ्चमी ಪಂಚಮೀ** (स्त्री०) 1. ಶುಕ್ಲ ಮತ್ತು ಕೃಷ್ಣಪಕ್ಷಗಳ ಐದನೆಯ ತಿಥಿ. 2. ದ್ರೌಪದಿ, ಪಾಂಡವರ ಪತ್ನಿ. पञ्च पतीन् मिनोति — डु मिञ् (प्रक्षेपणे) "क्विप्"। "पञ्चमी पाण्डवस्त्रियाम्" विश्व०। 3. ಪಂಚಮೀ ವಿಭಕ್ತಿ.

**पञ्चमुख ಪಂಚಮುಖ** (पुं०) 1. ಈಶ್ವರ, ಪರಶಿವ, ಮಹಾದೇವ. पञ्च मुखान्यस्य। **ಈಶ್ವರನ ಐದು ಮುಖಗಳ ಹೆಸರು ಮತ್ತು ಅವುಗಳ ವರ್ಣ :**

| ದಿಕ್ಕು | ಮುಖದ ಹೆಸರು | ವರ್ಣ |
|---|---|---|
| ಪೂರ್ವ | ತತ್ಪುರುಷ | ರಕ್ತ |
| ದಕ್ಷಿಣ | ಅಘೋರ | ಕೃಷ್ಣ |
| ಪಶ್ಚಿಮ | ಸದ್ಯೋಜಾತ | ಶುಕ್ಲ |
| ಉತ್ತರ | ವಾಮದೇವ | ಪೀತ |
| ಊರ್ಧ್ವ (ಮಧ್ಯ) | ಈಶಾನ | ಮಿಶ್ರ ವರ್ಣ |

"पश्चिमे तु मुखे सद्यो वामदेवस्तथोत्तरे। पूर्वे तत्पुरुषं विद्यादघोरं चापि दक्षिणे।। ईशानः पञ्चमो मध्ये सर्वेषामुपरि स्थितः। एते पञ्चमुखा वत्स पापघ्ना ग्रहनाशनाः।। सद्योजातो भवेच्छुक्लो वामदेवस्तु पीतकः। रक्तस्तत्पुरुषो ज्ञेयोऽघोरः कृष्णः स एव च। ईशानः पश्चिमस्तेषां सर्ववर्णसमन्वितः" देवीपु०। 2. ಸಿಂಹ. पञ्च विस्तृतं मुखमस्य। 3. ವ್ಯಾಘ್ರ, ಹುಲಿ. 4. ರುದ್ರಾಕ್ಷ.

**पञ्चमुद्रा ಪಂಚಮುದ್ರಾ** (स्त्री०) ಆವಾಹನೀ ಮೊದಲಾದ ಐದು ಮುದ್ರೆಗಳು, ದೇವರ ಪೂಜಾಕಾಲದಲ್ಲಿ ಮಾಡಬೇಕಾದ ಐದು ವಿಧ ಹಸ್ತಪ್ರದರ್ಶನ. (1) ಪುಷ್ಪಗಳಿಂದ ತುಂಬಿದ ಅಂಜಲಿಯು **ಆವಾಹನೀ** ಮುದ್ರೆ. (2) ಕೆಳಮುಖವಾದ ಅಂಜಲಿಯು **ಸ್ಥಾಪನೀ** ಮುದ್ರೆ. (3) ಮೇಲುಮುಖವಾದ ಅಂಗುಷ್ಠಗಳಿಂದ ಕೂಡಿದ ಮುಷ್ಟಿಬಂಧವು **ಸನ್ನಿಧಾಪನೀ** ಮುದ್ರೆ. (4) ಅಂಗುಷ್ಠಗಳನ್ನು ಒಳಗಡೆ ಸೇರಿಸಿದ ಮುಷ್ಟಿಬಂಧವು **ಸಂಬೋಧನೀ** ಮುದ್ರೆ. (5) ಮೇಲುಮುಖವಾದ ಮುಷ್ಟಿಯ ಜೋಡಣೆಯು **ಸಂಮುಖೀಕರಣ** ಮುದ್ರೆ. ಇವು ಪೂಜಾಕಾಲದ ಪಂಚಮುದ್ರೆಗಳು. "सम्यक् प्रपूरितः पुष्पैः कराभ्यां कल्पितोऽञ्जलिः। आवाहनी समाख्याता मुद्रा देशिकसत्तमैः।। अधोमुखी त्वियं चेत् स्यात् स्थापनी मुद्रिका भवेत्। उच्छ्रिताङ्गुष्ठमुष्ट्योस्तु संयोगात् सन्निधापनी। अन्तः प्रवेशिताङ्गुष्ठा सैव सम्बोधनी मता।। उत्तानमुष्टियुगला संमुखीकरणा मता" पूजाप्रदीपः।

**पञ्चमूत्र ಪಂಚಮೂತ್ರ** (नं०) ಗೋವು ಆಡು ಮೇಷ (ಕುರಿ) ಮಹಿಷ (ಎಮ್ಮೆ) ಮತ್ತು ಗರ್ದಭ (ಕತ್ತೆ) ಇವುಗಳ ಮೂತ್ರ. पञ्चप्रकारं मूत्रम्।

**पञ्चयाम ಪಂಚಯಾಮ** (पुं०) ದಿವಸ, ಹಗಲು. पञ्च यामाः यत्र। ಎಂಟು ಯಾಮಗಳುಳ್ಳ ಒಂದು ದಿನದಲ್ಲಿ ಮೂರು ಯಾಮಗಳು ರಾತ್ರಿಗೆ ಸೇರುವುವು. ಅದರಿಂದ ರಾತ್ರಿಗೆ "त्रियामा" ಎಂದು ಹೆಸರು. ಉಳಿದ ಐದು ಯಾಮಗಳು ಹಗಲಿಗೆ ಸೇರುವುವು.

**पञ्चरात्र ಪಂಚರಾತ್ರ** (नं०) 1. ಐದು ರಾತ್ರಿಗಳು. पञ्चानां रात्रीणां समाहारः "अच्" (५-४-८७)। 2. ಐದು ವಿಧ ಜ್ಞಾನಗಳನ್ನು ಉಪದೇಶಿಸುವ ಒಂದು ಗ್ರಂಥ. पञ्चरात्राणि ज्ञानानि यत्र। "रात्रं च ज्ञानवचनं ज्ञानं पञ्चविधं स्मृतम्। तेनेदं पञ्चरात्रं च प्रवदन्ति मनीषिणः"।

**पञ्चलक्षण ಪಂಚಲಕ್ಷಣ** (नं०) 1. ಪುರಾಣ. पञ्च सर्गादीनि लक्षणान्यत्र। "सर्गश्च प्रतिसर्गश्च वंशो मन्वन्तराणि च। वंशानुचरितं चेति लक्षणानां तु पञ्चकम्"। (स्त्री०) —लक्षणी —ಲಕ್ಷಣೀ. 2. ವ್ಯಾಪ್ತಿಸ್ವರೂಪ ಪಂಚಕ. पञ्चानां लक्षणानां समाहारः "ङीप्" (४-१-२१)। ವ್ಯಾಪ್ತಿಯ ಪಂಚಲಕ್ಷಣಗಳನ್ನು ಪ್ರತಿಪಾದಿಸುವ ಗ್ರಂಥವು ಪಂಚಲಕ್ಷಣೀ.

**पञ्चलवण ಪಂಚಲವಣ** (नं०) ಐದು ವಿಧ ಉಪ್ಪು. ಕಾಚಕ ಸೈಂಧವ ಸಾಮುದ್ರ ವಿಡ ಮತ್ತು ಸೌವರ್ಚಲಗಳೆಂದು ಉಪ್ಪು ಐದು ವಿಧ.

**पञ्चलाङ्गलक ಪಂಚಲಾಂಗಲಕ** (नं०) ಒಂದು ಮಹಾದಾನ, ಐದು ನೇಗಿಲುಗಳಿಂದ ಉಳಬಹುದಾದ ಜಮೀನಿನ ದಾನ. ಒಂದು ಜಿಲ್ಲೆಯ ಮುಖ್ಯಪಟ್ಟಣ ಅಥವಾ ಅದಕ್ಕೂ ಚಿಕ್ಕದಾದ ತಾಲ್ಲೂಕುಮುಖ್ಯನಗರ ಧಾನ್ಯಸಮೃದ್ಧವಾದ ಗ್ರಾಮ ಅಥವಾ ಐದು ನೇಗಿಲುಗಳ ಉಳುಮೆಯುಳ್ಳ ಭೂಮಿ ಇವುಗಳ ದಾನವು ಮಹಾದಾನ. ಭೂಮಿ ದಾನ ಮಾಡಿದರೆ ದೃಢವಾದ ಮರದಿಂದ ಮಾಡಿದ ಐದು ನೇಗಿಲುಗಳನ್ನೂ ಕೊಂಬುಗಳಿಗೆ ಸುವರ್ಣದ ಹನಸು (ಶೃಂಗಾಭರಣ) ಗಳಿಂದಲೂ ಬಾಲಗಳಿಗೆ ಮುಕ್ತಾಭರಣಗಳಿಂದಲೂ ಕಾಲುಗೊರಸುಗಳಿಗೆ ಬೆಳ್ಳಿಯ ಕವಚಗಳಿಂದಲೂ ಕೆಂಪು ರೇಷ್ಮೆ ವಸ್ತ್ರಗಳಿಂದಲೂ ಗಂಧ ಪುಷ್ಪಗಳಿಂದಲೂ ಅಲಂಕೃತವಾದ ಹತ್ತು ಉತ್ತಮಲಕ್ಷಣದಿಂದ ಕೂಡಿದ ಎತ್ತುಗಳನ್ನೂ ಸರ್ವೋಪಕರಣಗಳೊಡನೆ ಕೊಡಬೇಕು. मत्स्यपु०।

**पञ्चलोह ಪಂಚಲೋಹ** (ನಂ) ಐದು ಲೋಹಗಳು. ಸುವರ್ಣ ಬೆಳ್ಳಿ ತಾಮ್ರ ತವರ ಮತ್ತು ಸೀಸ ಇವು ಪಂಚ ಲೋಹಗಳು.

**पञ्चवक्त्र ಪಂಚವಕ್ತ್ರ** (ಪುಂ) 1. ಈಶ್ವರ, ಪರಶಿವ, ಮಹಾದೇವ. पञ्च वक्त्राण्यस्य। [ವಿವರಕ್ಕೆ "पञ्चमुख" ಪದದಲ್ಲಿ ನೋಡಿ.] 2. ಸಿಂಹ. पञ्च विशालं वक्त्रमस्य। "वेलाचलादर्भकपञ्चवक्त्रान् विहङ्गपातेन जिघृक्षमाणान्" यादं १८-८६। 3. ವ್ಯಾಘ್ರ, ಹುಲಿ. 4. ರುದ್ರಾಕ್ಷ. "पञ्चपूर्वस्तु वक्त्रस्य व्याघ्रे सिंहे हरे" वैजं।

**पञ्चवटी ಪಂಚವಟೀ** (ಸ್ತ್ರೀಂ) 1. ವಟ ಮೊದಲಾದ ಐದು ವೃಕ್ಷಗಳು. पञ्चानां वटानां समाहारः "ङीप्" (४-१-२१)। ಅಶ್ವತ್ಥ (ಅರಳೀಮರ) ಬಿಲ್ವ ವಟ (ಆಲದ ಮರ) ಧಾತ್ರೀ (ನೆಲ್ಲಿಮರ) ಅಶೋಕ (ಕೆಂಪು ಚಿನ್ನದೆಲೆ ಗಿಡ) ಇವು ವಟಾದಿ ಪಂಚವೃಕ್ಷಗಳು. ಈ ಐದು ವೃಕ್ಷಗಳ ಮಧ್ಯೆ ಕುಳಿತು ಮಾಡುವ ತಪಸ್ಸು ಸಿದ್ಧಿಪ್ರದವಾದುದು. 2. ದಂಡಕಾರಣ್ಯದ ಒಂದು ಭಾಗ, ಶ್ರೀರಾಮನು ಸೀತಾ ಲಕ್ಷ್ಮಣರೊಡನೆ ಕೆಲಕಾಲ ವಾಸಮಾಡುತ್ತಿದ್ದ ಒಂದು ಕ್ಷೇತ್ರ. ಈಗ ಇಲ್ಲಿ "ನಾಸಿಕ" ಎಂಬ ಊರಾಗಿರುವುದು. ಈ ಪಂಚವಟೀ ಕ್ಷೇತ್ರದಲ್ಲಿ ಲಕ್ಷ್ಮಣನಿಂದ ಶೂರ್ಪಣಖೆಯು ನಾಸಿಕಾ ಛೇದನವಾದುದರಿಂದ ಈ ಊರಿಗೆ ನಾಸಿಕವೆಂದು ಹೆಸರಾಗಿದೆ. "पञ्चवट्यां ततो रामः शासनात् कुम्भजन्मनः। अनपोढस्थितिस्तस्थौ विन्ध्याद्रिः प्रकृताविव" रघुं १२-३१।

**पञ्चवर्ग ಪಂಚವರ್ಗ** (ಪುಂ) ರಾಜನ ಚಾರಪಂಚಕ, ಸ್ವ-ಪರ ರಾಷ್ಟ್ರಗಳ ವಿಷಯಗಳನ್ನು ತಿಳಿದುಕೊಳ್ಳಲು ರಾಜನು ನಿಯಮಿಸುವ ಐದು ಮಂದಿ ಗೂಢಚಾರರು. (1) कापटिकः (2) उदास्थितः (3) गृहपतिः (4) वैदेहिकः ಮತ್ತು (5) तापसः ಇವರು ಐದು ವಿಧ ಗೂಢಚಾರರು. पञ्चानां चाराणां वर्गः। [ವಿವರಕ್ಕೆ "उदास्थित" ಪದದಲ್ಲಿ ನೋಡಿ.]

**पञ्चवर्षदेशीय ಪಂಚವರ್ಷದೇಶೀಯ** (ವಿಂ) ಸುಮಾರು ಐದು ವರ್ಷ ವಯಸ್ಸುಳ್ಳ. ईषन्न्यूनपञ्चवर्षवान् — पञ्चवर्ष "देशीयर्" (५-३-६७)।

**पञ्चवायु ಪಂಚವಾಯು** (ಪುಂ ಬಂ ವಂ) ಶರೀರದೊಳಗಿನ ಪಂಚಪ್ರಾಣವಾಯುಗಳು. ಪ್ರಾಣ ಅಪಾನ ಸಮಾನ ಉದಾನ ಮತ್ತು ವ್ಯಾನ ಇವು ಪಂಚವಾಯುಗಳು. [ವಿವರಕ್ಕೆ "पञ्चप्राण" ಪದದಲ್ಲಿ ನೋಡಿ.]

**पञ्चवार्षिक ಪಂಚವಾರ್ಷಿಕ** (ವಿಂ) 1. ಐದು ವರ್ಷಗಳಲ್ಲಿ ನಡೆದ, ಐದು ವರ್ಷಗಳಲ್ಲಿ ನೆರವೇರಿಸಲ್ಪಟ್ಟ. पञ्चभिः वर्षैः निर्वृत्तः "ठञ्" (५-१-७९)। उत्तरपदवृद्धिः (७-३-१६)। 2. ಐದು ವರ್ಷಗಳ ಕಾಲ ಗೌರವಿಸಿ ಕೆಲಸಮಾಡಿಸಲ್ಪಟ್ಟ. 3. ಐದು ವರ್ಷಗಳ ಕಾಲ ಕೂಲಿಕೊಟ್ಟು ಕೊಳ್ಳಲ್ಪಟ್ಟ. 4. ಐದು ವರ್ಷಗಳು ಕಳೆದ. पञ्चवर्षान् अधीष्टः भृतः भूतो वा "ठञ्" (५-१-८०)। उत्तरपदवृद्धिः (७-३-१६)। ಭವಿಷ್ಯತ್‌ಕಾಲದ ವಿಷಯದಲ್ಲಿ ಉತ್ತರಪದಕ್ಕೆ ವೃದ್ಧಿ ಬರುವುದಿಲ್ಲ. द्वैवर्षिकः त्रैवर्षिकः पाञ्चवर्षिकः ಇತ್ಯಾದಿ ರೂಪಗಳಾಗುವುವು.

**पञ्चविंश ಪಂಚವಿಂಶ** (ವಿಂ) ಇಪ್ಪತ್ತೈದನೆಯ. पञ्चविंशतेः पूरणः "डट्" (५-२-४८)। स्त्रियां "ङीप्" (४-१-१५)। **-विंशी -ವಿಂಶೀ.**

**पञ्चविंशति ಪಂಚವಿಂಶತಿ** (ಸ್ತ್ರೀಂ) ಇಪ್ಪತ್ತೈದು. पञ्चाधिका विंशतिः।

**पञ्चविंशतितम ಪಂಚವಿಂಶತಿತಮ** (ವಿಂ) ಇಪ್ಪತ್ತೈದನೆಯ. पञ्चविंशति "डट्" (५-२-४८)। डटः "तमट्" आगमः (५-२-५६)। स्त्रियां "ङीप्" (४-१-१५)। **-विंशतितमी -ವಿಂಶತಿತಮೀ.**

**पञ्चवृत्ति ಪಂಚವೃತ್ತಿ** (ಸ್ತ್ರೀಂ) 1. ಪ್ರಮಾಣ ವಿಪರ್ಯಯ ವಿಕಲ್ಪ ನಿದ್ರಾ ಮತ್ತು ಸ್ಮೃತಿ ರೂಪವಾದ ಐದು ವೃತ್ತಿಗಳು. 2. ಪ್ರಾಣನ ಅಪಾನನ ಉದಾನನ ಸಮಾನನ ಮತ್ತು ವ್ಯಾನನ ರೂಪ ವ್ಯಾಪಾರಗಳುಳ್ಳ ಶರೀರದೊಳಗಿನ ಪ್ರಾಣವಾಯು. [ವಿವರಕ್ಕೆ "पञ्चप्राण" ಪದದಲ್ಲಿ ನೋಡಿ.]

**पञ्चशर ಪಂಚಶರ** (ಪುಂ) 1. ಕಾಮ, ಮನ್ಮಥ. पञ्च शराः बाणाः अस्य। "शापावसाने प्रतिपन्नमूर्तेर्ययाचिरे पञ्चशरस्य सेवाम्" कुमा० ७-९२। 2. ಮನ್ಮಥನ ಐದು ಬಾಣಗಳು.

**पञ्चशाख ಪಂಚಶಾಖ** (ಪುಂ) 1. ಹಸ್ತ, ಕೈ. पञ्च शाखा इवाङ्गुलयो यस्य। 2. ಗಜ, ಆನೆ. (ನಂ) 3. ಐದು ಶಾಖೆಗಳು. पञ्चानां शाखानां समाहारः।

**पञ्चष ಪಂಚಷ** (ವಿಂ ಬಂ ವಂ) ಐದು ಅಥವಾ ಆರು. पञ्च वा षड्वा। "त्वचः समुत्तार्य दलानि रीत्या मोचात्वचः पञ्चषपाटनायाम्" नैषं ७-३१।

**पञ्चसंस्कार ಪಂಚಸಂಸ್ಕಾರ** (ಪುಂ) ವೈಷ್ಣವರಿಗೆ ನಡೆಯಬೇಕಾದ ಐದು ವಿಧ ಸಂಸ್ಕಾರಗಳು. ತಾಪಃ ಪುಂಡ್ರಃ ನಾಮ ಮಂತ್ರ ಮತ್ತು ಯಾಗ ಇವು ಐದು ಸಂಸ್ಕಾರ

ಗಳು. ತಪ್ತಸುದರ್ಶನ ಮತ್ತು ಪಾಂಚಜನ್ಯಧಾರಣ (ಅಂಕನ)ವು **ತಾಪ.** ಊರ್ಧ್ವಪುಂಡ್ರ ಧಾರಣವು **ಪುಂಡ್ರ.** ಆಚಾರ್ಯರಿಂದ ಮಾಡಲ್ಪಟ್ಟ ದಾಸಾಂತ ನಾಮಕರಣವು **ನಾಮ.** ಆಚಾರ್ಯರಿಂದ ಮಂತ್ರೋಪದೇಶ ನಡೆಯುವುದು **ಮಂತ್ರ.** ಆಚಾರ್ಯರಿಂದ ಅನುಗ್ರಹಿಸಲ್ಪಟ್ಟ ದೇವತಾ ಪೂಜಾಧಿಕಾರವು **ಯಾಗ.** "तापः पुण्ड्रस्तथा नाम मन्त्रो यागश्च पञ्चमः"।

**पञ्चसुगन्धिक ಪಂಚಸುಗಂಧಿಕ** (न०) ಕರ್ಪೂರ ತಕ್ಕೋಲಕ ವೃಕ್ಷದ ಪರಿಮಳದ್ರವ್ಯ ಲವಂಗಕುಸುಮ ಗುವಾಕ ಮತ್ತು ಜಾಯಿಕಾಯಿ ಇವುಗಳ ಸಮಭಾಗಗಳಿಂದ ತಯಾರಿಸಲ್ಪಟ್ಟ ಒಂದು ಸುಗಂಧ ವಸ್ತು.

**पञ्चसूना ಪಂಚಸೂನಾ** (स्त्री०) ಪ್ರಾಣಿಗಳ ಐದು ಹಿಂಸಾಸ್ಥಾನಗಳು. पञ्च सूनाः। ಗೃಹಸ್ಥನಿಗೆ ಪ್ರತಿದಿನವೂ ಪಾಪಹೇತುವಾದುವು (ಈ ಐದು) ಒಲೆ ಅರೆಯುವ ಕಲ್ಲು ಗೃಹಕೃತ್ಯಕ್ಕೆ ಬೇಕಾದ ವಸ್ತುಗಳು ಒರಳು ನೀರಿನ ಕಲಶ. ಇವುಗಳ ಉಪಯೋಗಕಾಲದಲ್ಲಾಗುವ ಪ್ರಾಣಿವಧೆಯು ಪಾಪಹೇತುವಾಗುವುದು. "पञ्च सूना गृहस्थस्य चुल्ली पेषण्युपस्करः। कण्डनी चोदकुम्भश्च बध्यते यास्तु वाहयन्" मनु० ३-६८। ಈ ಪಾಪನಿವಾರಣೆಗಾಗಿ ಗೃಹಸ್ಥನಿಗೆ ಪ್ರತಿದಿನವೂ ಪಂಚಮಹಾಯಜ್ಞಗಳು ವಿಹಿತವಾಗಿವೆ. ["पञ्चमहायज्ञ" ಪದದಲ್ಲಿ ನೋಡಿ.]

**पञ्चांश ಪಂಚಾಂಶ** (पुं०) 1. ಐದನೆಯ ಒಂದು ಭಾಗ. पञ्चमोंऽशः। 2. ಮೂವತ್ತು ಭಾಗಗಳುಳ್ಳ ರಾಶಿಯ ಐದನೆಯ ಒಂದು ಭಾಗ.

**पञ्चाक्षर ಪಂಚಾಕ್ಷರ** (पुं०) 1. ಐದು ಅಕ್ಷರಗಳುಳ್ಳ ಒಂದು ಮಂತ್ರ. पञ्च अक्षराणि यत्र। 2. ಪ್ರಣವ. ಪ್ರಣವವು अकारः उकारः मकारः नादः बिन्दुः ಈ ಐದರಿಂದ ಕೂಡಿರುವುದರಿಂದ ಈ ಹೆಸರು.

**पञ्चाग्नि ಪಂಚಾಗ್ನಿ** (पुं०) 1. ದಕ್ಷಿಣ (ಅನ್ವಾಹಾರ್ಯ ಪಚನ) ಗಾರ್ಹಪತ್ಯ ಆಹವನೀಯ ಸಭ್ಯ ಮತ್ತು ಆವಸಥ್ಯ ಗಳೆಂದು ಯಾಗಾಗ್ನಿಗಳು ಐದು. (त्रि०) 2. ಈ ಅಗ್ನಿಗಳಿಂದ ವಿಹಿತವಾದ ಕರ್ಮಾಚರಣೆಯುಳ್ಳವನು, -ವಿಹಿತವಾದ ಕರ್ಮಗಳನ್ನು ಮಾಡುವವನು. पञ्च अग्नयो यस्य। 3. ನಾಲ್ಕು ಕಡೆಗಳಲ್ಲೂ ಅಗ್ನಿ ನೆತ್ತಿಯ ಮೇಲೆ ಸೂರ್ಯ ಈ ರೀತಿಯಿರುವ ಪಂಚತೇಜಸ್ಸುಗಳು.

**पञ्चाग्निक ಪಂಚಾಗ್ನಿಕ** (न०) ಐದು ಅಗ್ನಿಗಳ ಮಧ್ಯೆ ಮಾಡುವ ತಪಸ್ಸು. पञ्च अग्नयो यत्र।

**पञ्चाङ्ग ಪಂಚಾಂಗ** (पुं०) 1. ಕೂರ್ಮ, ಆಮೆ. पञ्च अङ्गानि यस्य। 2. ಐದು ಅಂಗಗಳಲ್ಲಿ ಶುಭಲಕ್ಷಣಗಳುಳ್ಳ ಪಂಚಭದ್ರವೆಂಬ ಒಂದು ಜಾತಿಯ ಕುದುರೆ. 3. ತೋಳುಗಳು ಮಂಡಿಗಳು ಶಿರಸ್ಸು ವಕ್ಷಸ್ಸು ಮತ್ತು ನೇತ್ರ ಈ ಐದು ಅಂಗಗಳಿಗೂ ಭೂಸ್ಪರ್ಶವಾಗುವಂತೆ ಮಾಡುವ ಪ್ರಣಾಮ "बाहुभ्यां चैव जानुभ्यां शिरसा वक्षसा दृशा। पञ्चाङ्गोऽयं प्रणामः स्यात्" तन्त्रसा०। 4. ಒಂದು ಮರದ ಐದು ಭಾಗಗಳು. ತ್ವಕ್ಕು (ತೊಗಟೆ) ಪರ್ಣ (ಎಲೆ) ಪುಷ್ಪ ಬೇರು ಮತ್ತು ಫಲ ಇವು ಮರದ ಐದು ಭಾಗಗಳು. 5. ಪಂಚಾಂಗ, ಪ್ರತಿ ದಿನದ ತಿಥಿ ವಾರ ನಕ್ಷತ್ರ ಯೋಗ ಮತ್ತು ಕರಣ ಇವು ಜ್ಯೋತಿಷದ ಐದು ಅಂಗಗಳು. "तिथिर्वारश्च नक्षत्रं योगः करणमेव च। पञ्चाङ्गमेतदुद्दिष्टम्"।

**पञ्चाङ्गगुप्त ಪಂಚಾಂಗಗುಪ್ತ** (पुं०) ಕೂರ್ಮ, ಆಮೆ. पञ्चाङ्गानि गुप्तान्यस्य। ಎರಡು ಕಾಲುಗಳು ಎರಡು ಕೈಗಳು ಮತ್ತು ತಲೆ ಇವುಗಳನ್ನು ತನಗೆ ಇಷ್ಟಬಂದಾಗ ಚಿಪ್ಪಿನೊಳಕ್ಕೆ ಎಳೆದುಕೊಂಡು ರಕ್ಷಣೆಮಾಡಿಕೊಳ್ಳುವುದರಿಂದ ಈ ಹೆಸರು. स्त्रियां जाति० "ङीष्" (४-१-६३)। -ङ्गी -ಗೀ.

**पञ्चाङ्गशुद्धि ಪಂಚಾಂಗಶುದ್ಧಿ** (स्त्री०) ಪಂಚಾಂಗಗಳ ದೋಷವಿಲ್ಲದಿರುವಿಕೆ, ಶುದ್ಧ (ಯೋಗ್ಯ) ವಾದ ತಿಥಿ ವಾರ ನಕ್ಷತ್ರ ಯೋಗ ಮತ್ತು ಕರಣ ಇವುಗಳು ಇರುವಿಕೆ. ಶುಭ ಕಾರ್ಯಗಳಿಗೆ ಪಂಚಾಂಗಶುದ್ಧಿ ತಾರಾಬಲ ಚಂದ್ರಬಲಗಳಿರುವ ದಿವಸವೂ ಗುರು ಶುಕ್ರರು ಅಸ್ತವಾಗದಿರುವಾಗ ಶುದ್ಧವಾದ ಲಗ್ನವೂ ಪ್ರಶಸ್ತ.

**पञ्चाङ्गुल ಪಂಚಾಂಗುಲ** (पुं०) ಏರಂಡವೃಕ್ಷ, ಹರಳುಗಿಡ. पञ्च अङ्गुलय इव पत्राणि अस्य "अच्" (५-४-८६)। ಈ ಮರದ ಅವಯವಗಳು ಅಂಗುಲಿಯಂತಿರುವುದರಿಂದ ಈ ಹೆಸರು. ಮರದ ಅರ್ಥದಲ್ಲಿ ಮಾತ್ರ ಈ "अच्" ಪ್ರತ್ಯಯ ಬರುವುದು.

**पञ्चाङ्गुलि ಪಂಚಾಂಗುಲಿ** (पुं०) ಹಸ್ತ, ಕೈ. पञ्च अङ्गुलयोऽस्य।

**पञ्चाज ಪಂಚಾಜ** (न०) ಆಡಿನ ಸಂಬಂಧವಾದ ಐದು ವಸ್ತುಗಳು. अजाया विकारः "अण्" (४-३-१५४)। पञ्चभिर्गुणितमाजम्। ಪುರೀಷ (ಹಿಕ್ಕೆ) ಮೂತ್ರ ಹಾಲು ಮೊಸರು ಮತ್ತು ತುಪ್ಪ ಇವು ಆಡಿನ ಐದು ಪದಾರ್ಥಗಳು.

**पञ्चात्मक ಪಂಚಾತ್ಮಕ** (न०) ಪಂಚಭೂತಗಳಿಂದ ಉತ್ಪನ್ನವಾದ ಶರೀರ. पञ्च आत्मा आकाशादयः यस्य "कप्"।

**पञ्चानन ಪಂಚಾನನ** (पुं०) 1. ಪರಶಿವ, ಮಹಾದೇವ. पञ्च आननान्यस्य। 2. ಸಿಂಹ. पञ्च विशालमाननमस्य। 3. ಸಿಂಹರಾಶಿ. 4. ರುದ್ರಾಕ್ಷ.

**पञ्चामृत ಪಂಚಾಮೃತ** (न०) 1. ಹಾಲು ಮೊಸರು ತುಪ್ಪ ಸಕ್ಕರೆ ಮತ್ತು ಜೇನುತುಪ್ಪಗಳೆಂಬ ಐದು ಸಿಹಿ ಪದಾರ್ಥಗಳು. पञ्चानाममृतानां समाहारः। "दुग्धं च शर्करा चैव घृतं दधि तथा मधु। पञ्चामृतमिदं प्रोक्तम्"। 2. ಪಂಚಮಹಾಭೂತಗಳು. न म्रियन्ते नात्यन्तं विनश्यन्ति कार्यकारणरूपेण सर्वदाऽवस्थानात् इति अमृतानि। पञ्च अमृतानि। "नाडीनामुदयक्रमेण जगतः पञ्चामृताकर्षणात्" मालती० ५-२।

**पञ्चाम्नाय ಪಂಚಾಮ್ನಾಯ** (पुं०) ಪರಮೇಶ್ವರನ ಪಂಚ ಮುಖಗಳಿಂದ ಹೊರಟ ಆಮ್ನಾಯಸದೃಶವಾದ ಐದು ಶಾಸ್ತ್ರಗಳು. "पूर्वाम्नायः शब्दरूपो दक्षिणः कर्णरूपकः। पश्चिमः प्रश्नरूपः स्यात् उत्तरं चोत्तरस्तथा। ऊर्ध्वाम्नायस्तत्त्वबोधः केवलानुभवात्मकः" भैरवतन्त्रम्।

**पञ्चायतनी ಪಂಚಾಯತನೀ** (स्त्री०) ಉಪಾಸ್ಯರಾದ ಗಣಪತಿ ಪಾರ್ವತಿ ಈಶ್ವರ ಅಚ್ಯುತ ಮತ್ತು ಆದಿತ್ಯರೆಂಬ ಐದು ದೇವತೆಗಳು. पञ्चानामायतनानां समाहारः।

ಈ ಐದು ದೇವತೆಗಳನ್ನೂ ಪೂಜಿಸುವವರು ಯಾವ ದಿನದಲ್ಲಿ ಯಾರನ್ನು ಪೂಜಿಸುವರೋ ಅವರನ್ನು ಮಧ್ಯದಲ್ಲೂ ಉಳಿದವರನ್ನು ಆಯಾ ಕ್ರಮದಲ್ಲೂ ಇಟ್ಟು ಪೂಜಿಸಬೇಕು.

**ಗಣಪತಿ ಪಂಚಾಯತನ:**

| | |
|---|---|
| ಮಧ್ಯದಲ್ಲಿ | ಗಣಪತಿ |
| ಈಶಾನ್ಯದಲ್ಲಿ | ಕೇಶವ |
| ಆಗ್ನೇಯದಲ್ಲಿ | ಈಶ್ವರ |
| ನೈರ್ಋತದಲ್ಲಿ | ಸೂರ್ಯ |
| ವಾಯುವ್ಯದಲ್ಲಿ | ಪಾರ್ವತಿ |

**ಪಾರ್ವತೀ ಪಂಚಾಯತನ:**

| | |
|---|---|
| ಮಧ್ಯದಲ್ಲಿ | ಪಾರ್ವತಿ |
| ಈಶಾನ್ಯದಲ್ಲಿ | ಅಚ್ಯುತ |
| ಆಗ್ನೇಯದಲ್ಲಿ | ಈಶ್ವರ |
| ನೈರ್ಋತದಲ್ಲಿ | ಗಣಪತಿ |
| ವಾಯುವ್ಯದಲ್ಲಿ | ಸೂರ್ಯ |

**ಶಿವ ಪಂಚಾಯತನ:**

| | |
|---|---|
| ಮಧ್ಯದಲ್ಲಿ | ಈಶ್ವರ |
| ಈಶಾನ್ಯದಲ್ಲಿ | ಕೇಶವ |
| ಆಗ್ನೇಯದಲ್ಲಿ | ಸೂರ್ಯ |
| ನೈರ್ಋತದಲ್ಲಿ | ಗಣಪತಿ |
| ವಾಯುವ್ಯದಲ್ಲಿ | ಪಾರ್ವತಿ |

**ವಿಷ್ಣು ಪಂಚಾಯತನ:**

| | |
|---|---|
| ಮಧ್ಯದಲ್ಲಿ | ಕೇಶವ |
| ಈಶಾನ್ಯದಲ್ಲಿ | ಈಶ್ವರ |
| ಆಗ್ನೇಯದಲ್ಲಿ | ಗಣಪತಿ |
| ನೈರ್ಋತದಲ್ಲಿ | ಸೂರ್ಯ |
| ವಾಯುವ್ಯದಲ್ಲಿ | ಪಾರ್ವತಿ |

**ಸೂರ್ಯ ಪಂಚಾಯತನ:**

| | |
|---|---|
| ಮಧ್ಯದಲ್ಲಿ | ಸೂರ್ಯ |
| ಈಶಾನ್ಯದಲ್ಲಿ | ಈಶ್ವರ |
| ಆಗ್ನೇಯದಲ್ಲಿ | ಗಣಪತಿ |
| ನೈರ್ಋತದಲ್ಲಿ | ವಿಷ್ಣು |
| ವಾಯುವ್ಯದಲ್ಲಿ | ಪಾರ್ವತಿ |

**पञ्चायुध ಪಂಚಾಯುಧ** (न०) 1. ವಿಷ್ಣುವಿನ ಐದು ಆಯುಧಗಳು. पञ्च आयुधानि। शङ्खः चक्रम् गदा खड्गः शार्ङ्गम् ಇವು ಐದು ಆಯುಧಗಳು. "शङ्खो लक्ष्मीपतेः पाञ्चजन्यः चक्रं सुदर्शनम्। कौमोदकी गदा खड्गो नन्दकः कौस्तुभो मणिः। चापः शार्ङ्गं मुरारेः" अम०। 2. ಮನ್ಮಥನ ಐದು ಬಾಣಗಳು. (पुं०) 3. ವಿಷ್ಣು. 4. ಕಾಮ, ಮನ್ಮಥ.

**पञ्चारी ಪಂಚಾರೀ** (स्त्री०) ಚತುರಂಗದ ಆಟದ ಹಲಗೆ.

**पञ्चाल ಪಂಚಾಲ** (पुं० ब० व०) 1. ಪಂಚಾಲದೇಶ. पचि (विस्तारकरणे) "कालन्" (उ० १-११५)। 2. ಪಂಚಾಲದೇಶದ ದೊರೆಗಳು. पञ्चालानां राजानः "अञ्" (४-१-१६६)। बहुत्वे अञो लुक् (२-४-६२)। एकत्वे पाञ्चालः।

**पञ्चालिका ಪಂಚಾಲಿಕಾ** (स्त्री०) ಪುತ್ಥಳಿ, ಬಟ್ಟೆ, ದಂತ ಮೊದಲಾದುವುಗಳಿಂದ ನಿರ್ಮಿತವಾದ ಬೊಂಬೆ. पञ्चभिर्वर्णैरल्यते — अल "घञ्" (३-३-१९)। स्वार्थे "कन्"। "पञ्चालिका पुत्रिका स्याद्वस्त्रदन्तादिभिः कृता" अम०।

**पञ्चाली ಪಂಚಾಲೀ** (स्त्री०) ಪುತ್ಥಳಿ, ವಸ್ತ್ರ ದಂತ ಮೊದಲಾದುವುಗಳಿಂದ ನಿರ್ಮಿತವಾದ ಬೊಂಬೆ.

**पञ्चावयव ಪಂಚಾವಯವ** (पुं०) ಪ್ರತಿಜ್ಞಾ ಹೇತು ಉದಾಹರಣ ಉಪನಯ ಮತ್ತು ನಿಗಮಗಳೆಂಬ ಐದು ಭಾಗಗಳಿಂದ ಕೂಡಿದ ತಾರ್ಕಿಕರ ವಾದ. पञ्च अवयवा यस्य।

**पञ्चाश ಪಂಚಾಶ** (वि०) ಐವತ್ತನೆಯ. पञ्चाशतः पूरणः "डट्" (५-२-४८)। स्त्रियां "ङीप्" (४-१-१५)। **पञ्चाशी ಪಂಚಾಶೀ.**

**पञ्चाशत् ಪಂಚಾಶತ್** (स्त्री०) 1. ಐವತ್ತು. पञ्च दशतः परिमाणमस्याः "शत्" प्रत्ययः प्रकृतेः पञ्चादेशश्च निपा० (५-१-५९)। (वि०) 2. ಐವತ್ತು ಪರಿಮಾಣವುಳ್ಳ, ಐವತ್ತರಿಂದ ಕೂಡಿದ.

**पञ्चाशत्तम ಪಂಚಾಶತ್ತಮ** (वि०) ಐವತ್ತನೆಯ. पञ्चाशतः पूरणः "डट्" (५-२-४८)। डटः वा तमडागमः (५-२-६६)। पक्षे पञ्चाशः। स्त्रियां "ङीप्" (४-१-१५)। **–तमी –ತಮೀ.**

**पञ्चाशिन् ಪಂಚಾಶಿನ್** (वि०) ಐವತ್ತರಿಂದ ಕೂಡಿರುವ.

**पञ्चाशीति ಪಂಚಾಶೀತಿ** (स्त्री०) ಎಂಬತ್ತೈದು. पञ्चाधिका अशीतिः।

**पञ्चास्य ಪಂಚಾಸ್ಯ** (पुं०) 1. ಮೃಗಗಳ ರಾಜನಾದ ಸಿಂಹ. पञ्च विस्तीर्णमास्यं अस्य। स्त्रियां "टाप्" (४-१-४)। 2. ಸಿಂಹರಾಶಿ. 3. ಈಶ್ವರ, ಪರಶಿವ, ಪರಮಾತ್ಮ. पञ्च आस्यान्यस्य। 4. ರುದ್ರಾಕ್ಷ. (वि०) 5. ಐದು ಮುಖಗಳುಳ್ಳ.

**पञ्चीकरण ಪಂಚೀಕರಣ** (न०) ಪಂಚಭೂತಗಳನ್ನೂ ಕೆಲವು ಭಾಗಮಾಡಿ ಅವುಗಳ ಮಿಶ್ರಣಮಾಡುವುದು. अपञ्च पञ्चात्मकानि क्रियन्तेऽनेन—पञ्चन् + डु कृञ् (करणे) च्विः भावे "ल्युट्" (३-३-११५)। दीर्घः (७-४-२६)। ಪಂಚಭೂತಗಳಲ್ಲಿ ಒಂದೊಂದನ್ನೂ ಸಮವಾಗಿ ಎರಡೆರಡು ಭಾಗಮಾಡಿ ಆ ಹತ್ತು ಭಾಗಗಳಲ್ಲಿ ಮೊದಲನೆಯ ಐದು ಭಾಗಗಳನ್ನೂ ಪ್ರತ್ಯೇಕ ನಾಲ್ಕು ಭಾಗಮಾಡಿ ಆ ನಾಲ್ಕು ಭಾಗಗಳಲ್ಲಿ ಎರಡನೆಯ ಅರ್ಧ ಭಾಗವನ್ನು ಬಿಟ್ಟು ಉಳಿದ ಭಾಗಗಳನ್ನು ಸೇರಿಸುವುದು **ಪಂಚೀಕರಣ.** "द्विधा विधाय चैकैकं चतुर्धा प्रथमं पुनः। स्वस्वेतरद्वितीयांशैर्योजनात् पञ्च पञ्च ते" वेदान्तसारः।

**पञ्चीकृत ಪಂಚೀಕೃತ** (वि०) ಒಂದೊಂದನ್ನೂ ಭಾಗಗಳಾಗಿ ಮಾಡಿ ಒಟ್ಟಿಗೆ ಸೇರಿಸಲ್ಪಟ್ಟ (ಪಂಚಭೂತಗಳು).

**पञ्चेन्द्र ಪಂಚೇಂದ್ರ** (पुं० ब० व०) ಐವರು ಇಂದ್ರರು. पञ्च इन्द्राः।

**ಪಂಚೇಂದ್ರೋಪಾಖ್ಯಾನ:** ಇಂದ್ರನು ದೇವತೆಗಳ ಸತ್ರಯಾಗಕ್ಕೆ ಹೋಗಿದ್ದಾಗ ಗಂಗಾನದಿಯಲ್ಲಿ ಅಳುತ್ತಾ ಸ್ನಾನಮಾಡುತ್ತಿದ್ದ ಒಬ್ಬ ಯುವತಿಯನ್ನು ಕಂಡು ಅವಳ ವಿಷಯ ವಿಚಾರಿಸಲಾಗಿ ಅವಳು ಇಂದ್ರನನ್ನು ಒಂದು ಪರ್ವತದ ಶಿಖರಕ್ಕೆ ಕರೆದೊಯ್ದಳು. ಅಲ್ಲಿದ್ದ ಪರಮೇಶ್ವರನು ತನ್ನನ್ನು ಗೌರವಿಸಲಿಲ್ಲವೆಂದು ಇಂದ್ರನು ಕುಪಿತನಾದನು. ಪರಮೇಶ್ವರನ ಓರೆನೋಟದಿಂದ ಇಂದ್ರನು ನಿಶ್ಚಲನಾಗಿ ನಿಂತುಬಿಟ್ಟನು. ಪರಮೇಶ್ವರನ ಆಜ್ಞೆಯಂತೆ ಇಂದ್ರನನ್ನು ಕರೆತರಲು ಹೋದ ತರುಣಿಯ ಸ್ಪರ್ಶದಿಂದ ಇಂದ್ರನು ಕೆಳಕ್ಕೆ ಬಿದ್ದನು. ಆಗ ಈಶ್ವರನು ಇವನಂತೆಯೇ ಗರ್ವಿತರಾಗಿ ಶಿಕ್ಷೆಯನ್ನು ಅನುಭವಿಸುತ್ತ ಗುಹೆಯಲ್ಲಿ ಬಿದ್ದಿದ್ದ ಇನ್ನೂ ನಾಲ್ವರು ಇಂದ್ರರನ್ನು ತೋರಿಸಲು ಅವರನ್ನು ನೋಡಿ ಭೀತನಾದ ಇಂದ್ರನು ಪರಮೇಶ್ವರನಲ್ಲಿ ಕ್ಷಮೆ ಬೇಡುವನು. ಪ್ರಸನ್ನನಾದ ಪರಮೇಶ್ವರನು "ನೀವೆಲ್ಲರೂ ಭೂಮಿಯಲ್ಲಿ ಮನುಷ್ಯರಾಗಿ ಜನಿಸಿ ಅತಿಶಯ ಪರಾಕ್ರಮದಿಂದ ಯಶಸ್ವಿಗಳಾಗಿ ಜಗತ್ತಿಗೆಲ್ಲಾ ಆಶ್ಚರ್ಯವುಂಟುಮಾಡುವಿರಿ. ಈ ತರುಣಿಯೇ ನಿಮ್ಮ ಐವರಿಗೂ ಪತ್ನಿಯಾಗುವಳು" ಎಂದು ಅನುಗ್ರಹಿಸಿದನು. ಈ ಐವರೂ ಮುಂದೆ ಪಂಚಪಾಂಡವರಾಗಿಯೂ ಈ ತರುಣಿಯು ದ್ರೌಪದಿಯಾಗಿಯೂ ಹುಟ್ಟಿದರು. भा० आदि० २१४।

**पञ्चेन्द्रिय ಪಂಚೇಂದ್ರಿಯ** (न०) ಐದು ಕರ್ಮೇಂದ್ರಿಯಗಳು ಮತ್ತು ಐದು ಜ್ಞಾನೇಂದ್ರಿಯಗಳು.

**पञ्चेषु ಪಂಚೇಷು** (पुं०) 1. ಕಾಮ, ಮನ್ಮಥ. पञ्च इषवोऽस्य। "त्वामुच्चकैस्तापयता नृपं च पञ्चेषुणैवाजनि योजनेयम्" नैष० ३-१००। 2. ಮನ್ಮಥನ ಐದು ಬಾಣಗಳು. "अरविन्दमशोकं च चूतं च नवमल्लिका। नीलोत्पलं च पञ्चैते पञ्चबाणस्य सायकाः" अम०।

**पञ्चोपचार ಪಂಚೋಪಚಾರ** (पुं०) ದೇವರ ಪೂಜಾಕಾಲದಲ್ಲಿ ಸಮರ್ಪಿಸುವ ಗಂಧ ಪುಷ್ಪ ಧೂಪ ದೀಪ ಮತ್ತು ನೈವೇದ್ಯಗಳೆಂಬ ಐದು ಉಪಚಾರಗಳು.

**पञ्चोष्मन् ಪಂಚೋಷ್ಮನ್** (पुं०) ದೇಹದಲ್ಲಿ ಆಹಾರವನ್ನು ಪಚನಮಾಡುವ ಐದು ಅಗ್ನಿಗಳು. पञ्च ऊष्माणः। "भौमाप्याग्नेयवायव्याः पञ्चोष्माणः सनाभसाः। पञ्चाहारगुणान् स्वान् स्वान् पार्थिवादीन् पचन्त्यनु। पार्थिवाः पार्थिवानेव शेषाः शेषांश्चदेहगान्" सारकौमुदी।

**पञ्जर ಪಂಜರ** (पुं० न०) 1. ದೇಹದೊಳಗಿನ ಮೂಳೆಗಳ ಸಮೂಹ, ಎಲುಬಿನ ಗೂಡು. पजि (आवरणे) "अरन्" बाहु०। (न०) 2. ಹಕ್ಕಿಗಳ ಬೋನು. "शुक पञ्जरबन्धस्ते मधुराणां गिरां फलम्"। 3. ಕಲಿಯುಗ.

**पञ्जिका ಪಂಜಿಕಾ** (स्त्री०) 1. ಒಂದು ಗ್ರಂಥದ ಸಾರ ವತ್ತಾದ ವ್ಯಾಖ್ಯಾನ, ಪ್ರಮಾಣಪುರಸ್ಸರವಾದ ವಿವರಣೆ. 2. ಪ್ರತಿದಿನದ ಆಯವ್ಯಯಗಳನ್ನು ನಿರ್ದೇಶಿಸುವ ಲೆಕ್ಕದ ಪುಸ್ತಕ. 3. ತಿಥಿ ವಾರ ನಕ್ಷತ್ರ ಯೋಗ ಮತ್ತು ಕರಣ ಗಳನ್ನು ತಿಳಿಸುವ ಪಂಚಾಂಗ.

**पञ्जिकारक ಪಂಜಿಕಾರಕ** (पुं०) ಕಾಯಸ್ಥ ಪಂಗಡ ದವನು. पञ्जिमायव्ययसूचकपत्रं करोति ।

**पञ्जी ಪಂಜೀ** (स्त्री०) 1. ಪಂಚಾಂಗ. "दैवज्ञवक्त्रेण शृणोति पञ्जीं शत्रुक्षयं याति शशीव कृष्णे"। 2. ನೂಲನ್ನು ತೆಗೆಯಲು ಸಿದ್ಧಪಡಿಸಿದ ಹತ್ತಿಯ ಹಂಜಿ, ನೂಲು ತೆಗೆಯಲು ಅನುಕೂಲಿಸುವಂತೆ ಬಿಡಿಸಿ ಹದ ಮಾಡಿದ ಹತ್ತಿಯ ಹಂಜಿ. 3. ಆಯವ್ಯಯಗಳನ್ನು ಸೂಚಿಸುವ ಪತ್ರ.

**पञ्जीकर ಪಂಜೀಕರ** (पुं०) ಕಾಯಸ್ಥ ಪಂಗಡದವನು. पञ्जीमायव्ययसूचकपत्रं करोति—कृञ् "ट:" (३-२-२०)।

**पट ಪಟ** (पुं०) 1. ಪ್ರಿಯಾಲವೃಕ್ಷ, ಮೊರಟಗಿಡ. (पुंन०) 2. ವಸ್ತ್ರ, ಬಟ್ಟೆ. पट (गतौ) "अच्" (३-१-१३४)। "अयं पट: सूत्रदरिद्रतां गतो ह्ययं पटश्छिद्रशतैरलङ्कृत:। अयं पट: प्रावरितुं न शक्यते ह्ययं पट: संवृत एव शोभते" मृच्छ० २-१०। 3. ಚಿತ್ರಗಳನ್ನು ಬರೆಯುವ ಬಟ್ಟೆ. 4. ಉತ್ತಮದರ್ಜೆಯ ಬಟ್ಟೆ. 5. ಮೇಲಿನ ಆಚ್ಛಾದನ, ಛಾವಣಿ. ಲಿಂಗತ್ರಯದಲ್ಲೂ ಇದರ ಪ್ರಯೋಗವುಂಟು. "त्रिलिङ्गयां तु क्वचिच्छुङ्गा कलशी कन्दरी दरी। पेटी पुटी पटी वाटी कवाटी पिटका वटी" वैज०। "प्रसारयन्ति कुशलाश्चित्रां वाचं पटीमिव" माघ० २-७४। 6. ಜವನಿಕೆ, ತೆರೆ, ಪರದೆ. 7. ಪ್ರಮಾದವಚನ, ಅಜ್ಞಾನದ ಮಾತು. 8. ದೋಷ, ತಪ್ಪು. 9. ಪುರಸ್ಕಾರ, ಗೌರವ. "पट: प्रियालवृक्षे च सुचेले च पुरस्कृतौ। पट: प्रमादवचनदोषयोरप्युदाहृत:" विश्व०।

**पटक ಪಟಕ** (न०) ಶಿಬಿರ, ಠಾಣ್ಯ, ದಂಡು ಇಳಿಯುವ ಜಾಗ. पटेन छदनेन कायति—कै (शब्दे) "क:" (३-२-३)।

**पटकार ಪಟಕಾರ** (पुं०) ತಂತುವಾಯ, ನೇಯ್ಗೆಯ ವನು, ಬಟ್ಟೆಯನ್ನು ನೇಯುವವನು. पटं करोति—कृञ् (करणे) "अण्" (३-२-१)।

**पटकुटी ಪಟಕುಟೀ** (स्त्री०) ಡೇರೆ, ವಸ್ತ್ರಗೃಹ, ಗುಡಾರ, पटनिर्मिता कुटी।

**पटगृह ಪಟಗೃಹ, —मण्डप —ಮಂಡಪ, —वेश्मन् —ವೇಶ್ಮನ್** (न०) ಡೇರೆ, ವಸ್ತ್ರಗೃಹ, ಗುಡಾರ. "प्रासादशोभातिशयालुभि: पथि प्रभोर्निवासा: पटवेश्मभिर्बभु:" माघ० १२-६३। "उन्नम्रताम्रपटमण्डपमण्डितं तत्" माघ० ५-६८।

**पटच्चर ಪಟಚ್ಚರ** (न०) 1. ಹಳೆಯ ಬಟ್ಟೆ, ಚಿಂದಿ ಬಟ್ಟೆ. भूतपूर्वं पटत्—भूतपूर्वे "चरट्" (५-३-५३)। "पटच्चरं जीर्णवस्त्रम्" अम०। (पुं०) 2. ಚೋರ, ಕಳ್ಳ. "पटच्चर: पटच्चोर:" वैज०। 3. ಮಧ್ಯದೇಶದ ಒಂದು ಪ್ರಾಂತ. "पटच्चरादयश्चान्ये मध्यदेशस्य नीवृत:" वैज०।

**पटच्चोर ಪಟಚ್ಚೋರ** (पुं०) ತಸ್ಕರ, ಕಳ್ಳ. "पटच्चर: पटच्चोर:" वैज०।

**पटल ಪಟಲ** (स्त्रीन०) 1. ಸಮೂಹ, ಗುಂಪು, ರಾಶಿ. पटं विस्तारं लाति—ला (आदाने) "क:" (३-२-३)। "भूयते स्म सुमन: सुमन:स्रग्दामधामपटले पटलेन" नैष० २१-२२। "रथाङ्गपाणे: पटलेन रोचिषाम्" माघ० १-२१। (न०) 2. ಗೂಡೆ, ಮಕರಿ, ಬುಟ್ಟಿ. 3. ಪರಿವಾರ, ಪರಿಜನ. 4. ತಿಲಕ, ಸಂಗಾತಿ, ಮೈಮೇಲಿನ ಕಪ್ಪು ಚುಕ್ಕಿ. 5. ಒಂದು ನೇತ್ರರೋಗ, ಕಣ್ಣಿನ ಪೊರೆ. 6. ಛಾವಣಿ, ಮನೆಯ ಮೇಲಿನ ಹೊದಿಕೆ. "विनमितपटलाग्रं दृश्यते जीर्णकुड्यम्" मुद्रा० ३-१५। "अथ पटलं पिटके च परिच्छदे। छदिर्दृग्रोगतिलके क्लीबं वृन्दे पुनर्नना" मेदि०। स्त्रियां **पटली ಪಟಲೀ.** (पुं० न०) 7. ಒಂದು ಅಧ್ಯಾಯ, ಪರಿಚ್ಛೇದ.

**पटवाप ಪಟವಾಪ** (पुं०) ಡೇರೆ, ವಸ್ತ್ರಗೃಹ, ಗುಡಾರ.

**पटवास ಪಟವಾಸ** (पुं०) 1. ಡೇರೆ, ವಸ್ತ್ರಗೃಹ, ಗುಡಾರ. पटनिर्मित: वास:। 2. ವಸ್ತ್ರ, ಬಟ್ಟೆ. "निजरज: पटवासमिवाकिरद्धृतपटोपमवारिमुचां दिशाम्" माघ० ६-३७। 3. ವಸ್ತ್ರಗಳಿಗೆ ವಾಸನೆ ಕೊಡುವ ಸುವಾಸನೆಯ ಪುಡಿ. पटं वासयति—वास (उपसेवायाम्) + णिच् "अण्" (३-२-१)। "अस्मिन् प्रकीर्णपटवासकृतान्धकारे" रत्ना० १-१२। स्वार्थे "कन्" (५-४-५)। **—वासक: —ವಾಸಕ:.**

**पटह ಪಟಹ** (पुं० न०) 1. ತಮಟೆ. पट इति शब्दं जहाति —ओहाक् (त्यागे) "क:" (३-२-३)। "यियासतस्तस्य महीध्ररन्ध्रभिदापटीयान् पटहप्रणाद:" माघ० ३-२४। 2. ಯುದ್ಧದಲ್ಲಿ ಬಾರಿಸಲ್ಪಡುವ ನಗಾರಿ, ಭೇರಿ.

"अवलोकनाय सुरविद्विषां द्विषः पटहप्रणादविहितोपहूतयः" माघ० १३-३०। 3. ಪ್ರಾರಂಭ, ಉಪಕ್ರಮ. "पटहो वाद्य आरम्भे" हेम०।

**पटि ಪಟಿ, -ಟೀ—टी** (स्त्री०) ನಯವಾದ ವಸ್ತ್ರ. पट "इन्" (उ० ४-११७)। "प्रसारयन्ति कुशलाश्चित्रां वाचं पटीमिव" माघ० २-७४।

**पटिमन् ಪಟಿಮನ್** (पुं०) ಪಟುವಾಗಿರುವಿಕೆ, ಜಾಣತನ, ದಕ್ಷತೆ, ಸಾಮರ್ಥ್ಯ. पटोर्भावः "इमनिच्" (५-१-१२२)।

**पटिष्ठ ಪಟಿಷ್ಠ** (वि०) ಅತ್ಯಂತ ನಿಪುಣ, ಬಹಳ ಜಾಣನಾದ. अतिशयेन पटुः "इष्ठन्" (५-३-५५)।

**पटीयस् ಪಟೀಯಸ್** (वि०) ಇಬ್ಬರಲ್ಲಿ ಹೆಚ್ಚು ಪಟುವಾದವನೊಬ್ಬ. अयमनयोरतिशयेन पटुः "ईयसुन्" (५-३-५७)। "दधौ पटीयान् समयं नयन्नयं दिनेश्वरश्रीरुदयं दिने दिने" नैष० १-१७। स्त्रियां "ङीप्" (४-१-६)। **-यसी -ಯಸೀ.** "कृष्णापि शुद्धेरधिकं विधातृभिर्विहन्तुमंहांसि जलैः पटीयसी" माघ० १२-६७।

**पटीर ಪಟೀರ** (पुं०) 1. ಮೂಲಂಗಿ ಗೆಡ್ಡೆ. 2. ಚಂದನ ವೃಕ್ಷ, ಗಂಧದ ಮರ. पट (गतौ) "ईरन्" (उ० ४-३०)। "पटीरस्कन्धविषयाः तत्र तेषां भुजङ्गमाः" याद० २२-१९८। 3. ಕಾಮ, ಮನ್ಮಥ. 4. ಉದರ, ಹೊಟ್ಟೆ. 5. ಗದ್ದೆ, ಕೇದಾರ. 6. ಬಿದಿರಿನ ಸಾರ. 7. ಜಲ್ಲಡಿ, ಒಂದರಿ. 8. ಮೋಡ. "पटीरस्तु मूलके। केदारे वेणुसारे च वरिदे। तितउन्यपि" मेदि०। (वि०) 9. ಉನ್ನತವಾದ, ಎತ್ತರವಾದ. 10. ರಮಣೀಯವಾದ, ಸುಂದರವಾದ.

**पटु ಪಟು** (पुं०) 1. ಕಹಿ ಪಡವಲಗಿಡ. पाटयति—पट (गतौ)+णिच् "उः" पटिरादेशश्च (उ० १-१८)। "पटोलस्तिक्तकः पटुः" अम०। 2. ಹಾಗಲಗಿಡ. (न०) 3. ಸೈಂಧವ ಲವಣ. 4. ಮಣ್ಣಿನಿಂದ ತೆಗೆದ ಉಪ್ಪು. 5. ಅಳಿಂಬೆ, ನಾಯಿಕೊಡೆ. "पटुर्दक्षे च नीरोगे चतुरेऽप्यभिधेयवत्। पटोले तु पुमान् क्लीबे छत्रालवणयोरपि" मेदि०। (वि०) 6. ಜಾಣನಾದ, ನಿಪುಣನಾದ. "अनुभवन्नवदोलमृतूत्सवं पटुरपि प्रियकण्ठजिघृक्षया" रघु० ९-४६। 7. ಸಮರ್ಥ, ಶಕ್ತ. "नुनुदे तनुकण्डु पण्डितः पटुचञ्चूपुटकोटिकुट्टनैः" नैष० २-४। 8. ತೀಕ್ಷ್ಣವಾದ, ಹರಿತವಾದ, ಚೂಪಾಗಿರುವ. "पटुर्धारावाही नव इव चिरेणापि हि न मे निकृन्तन् मर्माणि क्रकच इव मन्युर्विरमति" उ० रा० ४-३। 9. ಸ್ಫುಟವಾದ, ಸ್ಪಷ್ಟವಾದ. "उषसि स गजयूथकर्णतालैः पटुपटहध्वनिभिर्विनीतनिद्रः" रघु० ९-७१। 10. ಯೋಗ್ಯ, ಯುಕ್ತ, ಉಚಿತ. "स्मर्तुमधिगतगुणस्मरणाः पटवो न दोषमखिलं खलूत्तमाः" माघ० १५-४३। 11. ವಾಗ್ಮಿ, ವಾಚಾಳಿ, ವಾಕ್ಚತುರ. 12. ಸ್ಪಷ್ಟವಾಗಿ ಮಾತಾಡುವ. "तदर्थमध्याप्य जनेन तद्वने शुका विमुक्ताः पटवस्तमस्तुवन्" नैष० १-१०३। 13. ಕಠಿನವಾದ, ಗಟ್ಟಿಯಾದ. 14. ರೋಗದಿಂದ ಮುಕ್ತನಾದ, ಆರೋಗ್ಯ ಹೊಂದಿರುವ. 15. ಕಪಟೋಪಾಯವುಳ್ಳ, ವಂಚಕ, ಧೂರ್ತ. 16. ಶೂರ, ಧೀರ, ಪರಾಕ್ರಮಿ. 17. ಚಟುವಟಿಕೆಯಿಂದ ಕೂಡಿದ, ಚುರುಟಿಯಾಗಿರುವ. 18. ದುರ್ಭಾಷೆಯಾಡುವ, ಬಿರುಸಾಗಿ ನುಡಿಯುವ. स्त्रियां वा "ङीप्" (४-१-४४)। **पट्वी ಪಟ್ವೀ, पटुः ಪಟುಃ.**

**पटुकल्प ಪಟುಕಲ್ಪ** (वि०) ಸಮರ್ಥನಂತಿರುವ, ಅಷ್ಟು ಚತುರನಲ್ಲದ. ईषदूनः पटुः "कल्पप्" (५-३-६७)। देश्यः देशीयर च। **पटुदेश्यः ಪಟುದೇಶ್ಯಃ, पटुदेशीयः ಪಟುದೇಶೀಯಃ.**

**पटुत्व ಪಟುತ್ವ** (न०) 1. ಸಾಮರ್ಥ್ಯ, ಶಕ್ತಿ. पटोर्भावः "त्वः" (५-१-११९)। "नारावं व्यतनुत मेखलाकलापः कस्मिन् वा सजलगुणे गिरां पटुत्वम्" माघ० ८-४५। 2. ನೈಪುಣ್ಯ, ಜಾಣತನ, ಕುಶಲತೆ. 3. ಚಟುವಟಿಕೆ, ಕಾರ್ಯಶಕ್ತಿ. "तल्" (५-१-११९)। **पटुता ಪಟುತಾ.** "अङ्गानि प्रसभं त्यजन्ति पटुतामाज्ञाविधेयानि मे" मुद्रा० ३-१।

**पटुपर्णी ಪಟುಪರ್ಣೀ** (स्त्री०) ಘಂಟಾಮಣಿಸೊಪ್ಪು, ಕಂಕೋಷ್ಠ. पटूनि पर्णान्यस्य। जाति० "ङीष्" (४-१-६३)।

**पटुरूप ಪಟುರೂಪ** (वि०) 1. ಬಹಳ ದಕ್ಷನಾದ, ಬಹಳ ಸಮರ್ಥನಾದ. 2. ಬಹಳ ನಿಪುಣನಾದ, ಬಹಳ ಕುಶಲನಾದ. प्रशस्तः पटुः "रूपप्" (५-३-६६)।

**पटोल ಪಟೋಲ** (पुं०) ಕಹಿ ಪಡವಲಗಿಡ. पटति—पट (गतौ) "कोलच्" (उ० १-६६)। "पटोलस्तिक्तकः पटुः" अम०।

**पटोलिका ಪಟೋಲಿಕಾ** (स्त्री०) ಜ್ಯೋತ್ಸ್ನೀಲತೆ, ಪಡವಲಗಿಡ.

**पटोली ಪಟೋಲೀ** (स्त्री०) ಕಹಿ ಪಡವಲಗಿಡ.

**पट्ट ಪಟ್ಟ** (पुं०) 1. ಅರೆಯುವ ಕಲ್ಲು. पट (गतौ) "तः" बाहु०। (न०) 2. ರಾಜಶಾಸನ, ಕಂದಾಯದ ಪಟ್ಟಿ. 3. ನಗರ, ಪಟ್ಟಣ. 4. ಪೀಠ, ಆಸನ.

5. ಚತುಷ್ಪಥ, ನಾಲ್ಕು ರಸ್ತೆಗಳು ಸೇರುವ ಜಾಗ. 6. ಗಾಯಕ್ಕೆ ಕಟ್ಟುವ ಪಟ್ಟಿ. "पट्टः पेषणपाषाणे व्रणादीनां च बन्धने। चतुष्पथे तु राजादिशासनान्तरपीठयोः" मेदि०। 7. ಮಕುಟ, ಕಿರೀಟ, ಟೋಪಿ. "निर्वृत्तजाम्बूनदपट्टशोभे न्यस्तं ललाटे तिलकं दधानः" रघु० १८-४४। 8. ಸಿಂಹಾಸನ. 9. ವಸ್ತ್ರ, ಬಟ್ಟೆ. "त्रासार्ता ऋत्विजोऽधश्चपलगणहृतोष्णीषपट्टाः पतन्ति" रत्ना० १-३। 10. ಉತ್ತರೀಯ, ಹೊದೆಯುವ ವಸ್ತ್ರ. 11. ನೇತ್ರ, ಕಣ್ಣು. 12. ಸಾಣೆ ಕಲ್ಲು. 13. ರೇಷ್ಮೆ ವಸ್ತ್ರ. "पट्टो नेत्रेऽपि शाणे स्यात्" वैज०। 14. ಫಲಕ, ಹಲಗೆಯಂತೆ ಅಗಲವಾಗಿರುವ ವಸ್ತು. "एषा मे मनोरथप्रियतमा सकुसुमास्तरणं शिलापट्टमधिशयाना सखीभ्यामन्वास्यते" शाकु० ३।

**पट्टदेवी ಪಟ್ಟದೇವೀ, –महिषी –ಮಹಿಷೀ** (स्त्री०) ಪಟ್ಟ ಮಹಿಷಿ, ಪಟ್ಟಾಭಿಷಿಕ್ತಳಾದ ರಾಣಿ. पट्टे सिंहासने स्थिता देवी महिषी वा।

**पट्टण ಪಟ್ಟಣ** (न०) 1. ಪ್ರಧಾನವಾದ ನಗರ, ಜಿಲ್ಲೆಯ ಮುಖ್ಯ ನಗರ. पटन्ति जना अत्र—पट (गतौ) "ततन्" बाहु०। 2. ಸಣ್ಣ ಹಳ್ಳಿ, ಚಿಕ್ಕ ಗ್ರಾಮ. "ग्रामाः क्षुद्राः परे क्रमात्। स्युः कर्वटं कार्वटिकं कार्वकं नृंगपट्टणे। कर्वटोऽस्त्री द्रोणमुखं पट्टणं पुटभेदनम्" वैज०।

**पट्टबन्ध ಪಟ್ಟಬಂಧ** (पुं०) ಪತಿಯು ಜೀವಿಸಿರುವಾಗ ಒಬ್ಬ ಸ್ತ್ರೀಯಲ್ಲಿ ಕ್ಷತ್ರಿಯನಿಂದ ಜನಿಸಿದ ಮಗ. "पत्यौ जीवति कुण्डोऽसौ"। "क्षत्रकुण्डः पट्टबन्धः" वैज०।

**पट्टस ಪಟ್ಟಸ** (पुं०) ಯುದ್ಧದ ಕೊಡಲಿ, ಯುದ್ಧದಲ್ಲಿ ಉಪಯೋಗಿಸುವ ಹರಿತವಾದ ಆಯುಧ. "पट्टसो लोहदण्डो यः तीक्ष्णधारः क्षुरोपमः" वैज०।

**पट्टिका ಪಟ್ಟಿಕಾ** (स्त्री०) ಕೆಂಪು ಆರಗಿನ ಗಿಡ.

**पट्टी ಪಟ್ಟೀ** (स्त्री०) 1. ಕೆಂಪು ಅರಗಿನ ಗಿಡ. 2. ಬೈತಲೆಯ ಬೊಟ್ಟು, ತಲೆಯಿಂದ ನೆತ್ತಿಯವರೆಗೆ ಇಳಿಬಿಟ್ಟಿರುವ ಒಂದು ಲಲಾಟದ ಆಭರಣ. "पट्टी ललाटिका" हेम०।

**पठत् ಪಠತ್** (वि०) 1. ಓದುತ್ತಿರುವ. पठ (व्यक्तायां वाचि) "शतृ" (३-२-१२४)। "इत्येतन्मानवं शास्त्रं भृगुप्रोक्तं पठन् द्विजः" मनु० १२-१२६। 2. ಹೇಳುತ್ತಿರುವ. "पठतां वन्दिवृन्दानां प्रवीरा विक्रमावलिम्" कुमा० १६-४।

**पठन ಪಠನ** (न०) 1. ಓದುವುದು. पठ (व्यक्तायां वाचि) "ल्युट्" (३-३-११५)। 2. ಅಧ್ಯಯನ ಮಾಡುವುದು, ಮನದಟ್ಟಾಗುವಂತೆ ಓದುವುದು. 3. ಹೇಳುವುದು, ಬಾಯಿಂದ ಉಚ್ಚಾರಮಾಡುವುದು. "भूतप्रेतपिशाचानां पठनादेव नाशनम्" मार्कं०।

**पठनीय ಪಠನೀಯ** (वि०) 1. ಓದಲ್ಪಡುವ. 2. ಓದಬೇಕಾದ. पठ (व्यक्तायां वाचि) "अनीयर्" (३-१-९६)। "तव्यः"। **पठितव्यम् ಪಠಿತವ್ಯಮ್.**

**पठित ಪಠಿತ** (वि०) 1. ಓದಲ್ಪಟ್ಟ. 2. ಹೇಳಲ್ಪಟ್ಟ. 3. ಅಭ್ಯಾಸ ಮಾಡಲ್ಪಟ್ಟ. पठ कर्म० "क्तः"।

**पठ्य ಪಠ್ಯ** (वि०) 1. ಓದಲು ಯೋಗ್ಯವಾದ. 2. ಅಭ್ಯಾಸ ಮಾಡಲು ಯೋಗ್ಯವಾದ. पठ (व्यक्तायां वाचि) "यत्" (३-३-११३)।

**पठ्यमान ಪಠ್ಯಮಾನ** (वि०) 1. ಓದಲ್ಪಡುತ್ತಿರುವ. 2. ಹೇಳಲ್ಪಡುತ್ತಿರುವ. पठ (व्यक्तायां वाचि) कर्म० "शानच्" (३-२-१२४)। 3. ಅಭ್ಯಾಸಮಾಡಲ್ಪಡುತ್ತಿರುವ.

**पण ಪಣ** (पुं०) 1. ಒಂದು ಕರ್ಷದ ತೂಕವುಳ್ಳ ತಾಮ್ರದ ನಾಣ್ಯ. पण्यते—पण (व्यवहारे स्तुतौ च) "अप्" (३-३-६६)। ಐದು ಗುಲಗಂಜಿಗಳ ತೂಕ ಒಂದು ಆದ್ಯಮಾಷಕ. ಹದಿನಾರು ಆದ್ಯಮಾಷಕಗಳ ತೂಕ ಒಂದು ಕರ್ಷ. ಒಂದು ಕರ್ಷ ತೂಕದ ಬೆಳ್ಳಿಯ ನಾಣ್ಯವು ಕಾರ್ಷಿಕ. ಅದೇ ತೂಕದ ತಾಮ್ರದ ನಾಣ್ಯವು ಪಣ. "कार्षिके ताम्रिके पणः" अम०। 2. ಎಂಬತ್ತು ಕವಡೆಗಳ ಬೆಲೆಯ ಒಂದು ನಾಣ್ಯ. "वराटकानां दशकद्वयं यत् सा काकिणी ताश्च पणश्चतस्रः" लीला०। 3. ಸಂಬಳ, ಕೂಲಿ, ವೇತನ. 4. ಕರಾರು, ಒಪ್ಪಂದ, ಷರತ್ತು. "सन्धिं करोतु भवतां नृपतिः पणेन" वेणी० १-१५। 5. ದ್ಯೂತ, ಜೂಜು. 6. ಮೂಲ್ಯ, ಬೆಲೆ. 7. ಧನ, ಐಶ್ವರ್ಯ. 8. ಜೂಜಿನಲ್ಲಿ ಪಂದ್ಯವಾಗಿಡುವ ವಸ್ತು. 9. ವ್ಯವಹಾರ, ವ್ಯಾಪಾರ. 10. ವ್ಯಾಪಾರದ ಸರಕು. 11. ಗೃಹ, ಮನೆ. 12. ವಿಷ್ಣು. पण कर्तं० "अच्" (३-१-१३४)। पणति सर्वेषां स्वाम्यदास्यव्यतिहारेण व्यवहरति इति पणः। "स्वाम्यदास्यव्यतीहारव्यवहारात् पणः स्मृतः" इति निरुक्तिः। "प्राणदः प्रणवः पणः" वि० स०। "ग्लहे माने वराटानां मूल्ये कार्षापणे धने। द्यूते विक्रय्यशाकादेर्बद्धमुष्टौ भृतौ पणः। पणः स्याद्व्यवहारेऽपि" शाश्व०। 13. ಪಗಡೆಯಾಟ. 14. ವಿಕ್ರಯ,

ಮಾರಾಟ. 15. ಅಂಗಡಿ, ಮಾರಾಟದ ಸ್ಥಳ. 16. ಸಾರಾಯಿ ತೆಗೆಯುವವನು, ಭಟ್ಟಿ ಇಳಿಸುವವನು. 17. ಒಂದು ಮುಷ್ಟಿ. (ವಿ೦) 18. ವರ್ತಕ, ಮಾರಾಟಗಾರ, ಕ್ರಯವಿಕ್ರಯಗಳನ್ನು ಮಾಡುವವನು.

**पणग्रन्थि ಪಣಗ್ರಂಥಿ** (ಪುಂ) ಆಪಣ, ಅಂಗಡಿ, ವಸ್ತುಗಳ ಕ್ರಯವಿಕ್ರಯ ಸ್ಥಳ. पणस्य क्रयविक्रयादेः ग्रन्थिरत्र। "स्रवद्रङ्गः पणग्रन्थिः" हारा०।

**पणन ಪಣನ** (ನ೦) 1. ಕ್ರಯವಿಕ್ರಯ ಮೊದಲಾದ ವ್ಯವಹಾರ, ಕೊಳ್ಳುವುದು ಮಾರುವುದು ಮೊದಲಾದ ವ್ಯಾಪಾರ. 2. ಹೊಗಳುವುದು, ಸ್ತೋತ್ರಮಾಡುವುದು. पण (व्यवहारे स्तुतौ च) भावे "ल्युट्" (३-३-११५)। 3. ಜೂಜಿನಲ್ಲಿ ಪಂದ್ಯ ಕಟ್ಟುವುದು.

**पणबन्ध ಪಣಬಂಧ** (ಪುಂ) ಕರಾರು, ಸಂಧಿಮಾಡಿಕೊಳ್ಳುವುದು, ಒಪ್ಪಂದಮಾಡಿಕೊಳ್ಳುವುದು. पणस्य बन्धः। "नय इव पणबन्धव्यक्तयोगैरुपायैः" रघु० १०-८६।

**पणव ಪಣವ** (ಪುಂ) 1. ಮದ್ದಳೆ. पणं व्यवहारं वाति —वा (गतिगन्धनयोः) "कः" (३-२-३)। "द्रुतमध्वनन्नुपरिपाणिवृत्तयः पणवा इवाश्वचरणक्षता भुवः" माघ० १३-५। 2. ಆನೆ ಮೊದಲಾದುವುಗಳ ಹೆಗಲು. "गजस्कन्धेऽपि पणवः" वैज०।

**पणस ಪಣಸ** (ಪುಂ) ಮಾರಾಟದ ವಸ್ತು. पण (व्यवहारे) "असच्" (उ० ३-११७)। "पणसः पण्यद्रव्यम्" सि० कौ०।

**पणस्त्री ಪಣಸ್ತ್ರೀ, –अङ्गना –ಅಂಗನಾ** (ಸ್ತ್ರೀ೦) ವೇಶ್ಯೆ, ಸೂಳೆ.

**पणाया ಪಣಾಯಾ** (ಸ್ತ್ರೀ೦) 1. ಕ್ರಯವಿಕ್ರಯವ್ಯವಹಾರ. पण (व्यवहारे स्तुतौ च) + आयः (३-१-२८)। भावे "अः" (३-३-१०२)। 2. ಸ್ತುತಿ, ಹೊಗಳಿಕೆ. 3. ದ್ಯೂತ, ಜೂಜು.

**पणायित ಪಣಾಯಿತ** (ವಿ೦) 1. ಹೊಗಳಲ್ಪಟ್ಟ, ಸ್ತೋತ್ರಮಾಡಲ್ಪಟ್ಟ. पण (व्यवहारे स्तुतौ च) + वा आयः (३-१-३१) "क्तः" (३-२-१०२)। पक्षे **पणितम् ಪಣಿತಮ್**. 2. ಕೊಳ್ಳಲ್ಪಟ್ಟ. 3. ಮಾರಲ್ಪಟ್ಟ.

**पणि ಪಣಿ** (ಸ್ತ್ರೀ೦) 1. ಅಂಗಡಿಬೀದಿ. पण (व्यवहारे) "इन्" (उ० ४-११७)। 2. ಕೃಪಣ, ಜಿಪುಣ, ಜೀನ.

**पणिक ಪಣಿಕ** (ಪುಂ) ವರ್ತಕನ ಮನೆ. "चन्द्रशाला शिरोगृहम् पणिकस्तु वणिग्गृहम्" वैज०।

**पणित ಪಣಿತ** (ವಿ೦) 1. ಸ್ತೋತ್ರಮಾಡಲ್ಪಟ್ಟ, ಹೊಗಳಲ್ಪಟ್ಟ. पण (व्यवहारे स्तुतौ च) "क्तः" (३-२-१०२)। वा आयः (३-१-३१)। **पणायितः ಪಣಾಯಿತಃ.** 2. ಕೊಳ್ಳಲ್ಪಟ್ಟ. 3. ಮಾರಲ್ಪಟ್ಟ.

**पणितव्य ಪಣಿತವ್ಯ** (ವಿ೦) 1. ಮಾರಲು ಅರ್ಹವಾದ, ಮಾರಾಟಕ್ಕೆ ಯೋಗ್ಯವಾದ. 2. ಮಾರಲ್ಪಡುವ, ವಿಕ್ರಯಿಸಲ್ಪಡುವ पण (व्यवहारे) "तव्यः" (३-१-९६)। "विक्रेयं पणितव्यं च पण्यं" वैज०।

**पणितृ ಪಣಿತೃ** (ವಿ೦) ವರ್ತಕ, ಕ್ರಯ ಮತ್ತು ವಿಕ್ರಯಗಳ ವ್ಯವಹಾರ ಮಾಡುವವನು. पण (व्यवहारे) "तृच्" (३-१-१३३)। "पणिता न जनारवैरवैदपि गुञ्जन्तमलि मलीमसम्" नैष० २-९२।

**पण्ड ಪಂಡ** (ಪುಂನ೦) 1. ಷಂಡ, ನಪುಂಸಕ. पण (व्यवहारे) "डः" (उ० १-१११)। "क्लीबः पण्डषण्डो नपुंसकम्" वैज०। (ವಿ೦) 2. ಬಾಲ ಕತ್ತರಿಸಲ್ಪಟ್ಟ. "पण्डस्तु छिन्नपुच्छकः" वैज०।

**पण्डा ಪಂಡಾ** (ಸ್ತ್ರೀ೦) ಬುದ್ಧಿ, ಜ್ಞಾನ. पडि (गतौ) "अः" (३-३-१०३)। "पण्डः षण्डे धियि स्त्री स्यात्" मेदि०।

**पण्डित ಪಂಡಿತ** (ಪುಂ) 1. ವಿದ್ವಾಂಸ, ಒಳ್ಳೆಯ ಜ್ಞಾನಸಂಪನ್ನ, ಬುದ್ಧಿವಂತ. पण्डा अस्य सञ्जाता "इतच्" (५-२-३६)। "विद्याविनयसम्पन्ने ब्राह्मणे गवि हस्तिनि। शुनि चैव श्वपाके च पण्डिताः समदर्शिनः" गीता ५-१८। "मातृवत्परदारेषु परद्रव्येषु लोष्टवत्। आत्मवत् सर्वभूतानि यो जानाति स पण्डितः"। (ವಿ೦) 2. ಪ್ರವೀಣ, ನಿಷ್ಣಾತ, ಕುಶಲ. "रतिदूतिपदेषु कोकिलां मधुरालापनिसर्गपण्डिताम्" कुमा० ४-१६। 3. ಜಾಣ, ನಿಪುಣ. 4. ಧೂಪದ ಪುಡಿ, ಲೋಬಾನ. "पण्डितः सिह्लके कवौ" मेदि०।

**पण्डितम्मन्य ಪಂಡಿತಮ್ಮನ್ಯ** (ವಿ೦) ತನ್ನನ್ನು ಪಂಡಿತನೆಂದು ತಿಳಿದುಕೊಂಡಿರುವ, ತಾನು ಪಂಡಿತನೆಂದು ಅಭಿಮಾನವುಳ್ಳ. पण्डितमात्मानं मन्यते —मन (ज्ञाने) "खः" (३-२-८३)। "णिनिः" (३-२-८२)। **पण्डितमानी ಪಂಡಿತಮಾನೀ.** "मूर्खाः पण्डितमानिनः"।

**पण्डितिमन् ಪಂಡಿತಿಮನ್** (ಪುಂ) 1. ಪಾಂಡಿತ್ಯ, ಜ್ಞಾನ, ತಿಳಿವಳಿಕೆ. 2. ಜಾಣತನ. 3, ಪ್ರಾವೀಣ್ಯ, ಕುಶಲತೆ. पण्डितस्य भावः "इमनिच्" (५-१-१२३)।

**पण्डूक ಪಂಡ್ರುಕ** (ಪುಂ) ಪಂಗು, ಹೆಳವ, ಕುಂಟ.

**पण्य ಪಣ್ಯ** (नं०) 1. ವಿಕ್ರಯಿಸಲು ಅರ್ಹವಾದ ವಸ್ತು, ಮಾರಲು ಯೋಗ್ಯವಾದ ಪದಾರ್ಥ. पण (व्यवहारे) "यत्" निपा० (३-१-१०१)। "स्तुति" ಎಂಬ ಅರ್ಥದಲ್ಲಿ "ण्यत्" (३-१-१२४)। पाण्यम् ಎಂದಾಗು ವುದು. "पूरावभासे विपणिस्थपण्या सर्वाङ्गनद्धाभरणेव नारी" रघु० १६-४१। (पुं०) 2. ಮೌಲ್ಯ, ಬೆಲೆ, ಕ್ರಯ. (वि०) 3. ವ್ಯವಹರಿಸಲು ಯೋಗ್ಯವಾದ. "महता पण्यपुण्येन क्रीतेयं कायनौस्त्वया"।

**पण्यस्त्री ಪಣ್ಯಸ್ತ್ರೀ, -अङ्गना -ಅಂಗನಾ** (स्त्री०) ವೇಶ್ಯೆ, ಸೂಳೆ. "यः पण्यस्त्रीरतिपरिमलोद्गारिभिर्नागराणाम्" मेघ० २५।

**पण्यवीथी ಪಣ್ಯವೀಥೀ** (स्त्री०) ಅಂಗಡಿಯ ಬೀದಿ, ಕ್ರಯ ವಿಕ್ರಯಗಳ ಸ್ಥಳ. "अनुसायमभुर्विलेपनापणकश्मीरजपण्यवीथयः" नैष० २-९०।

**पण्यशाला ಪಣ್ಯಶಾಲಾ** (स्त्री०) ಅಂಗಡಿ, ಕ್ರಯವಿಕ್ರಯ ಗಳ ಸ್ಥಳ.

**पण्याजिर ಪಣ್ಯಾಜಿರ**(नं०) ವ್ಯಾಪಾರದ ಸ್ಥಳ, ಮಾರುಕಟ್ಟೆ.

**पण्याजीव ಪಣ್ಯಾಜೀವ** (पुं०) ಕ್ರಯವಿಕ್ರಯಗಳಿಂದ ಜೀವಿಸುವ ವರ್ತಕ. पण्यमाजीवो यस्य।

**पण्याजीवक ಪಣ್ಯಾಜೀವಕ** (नं०) ಅಂಗಡಿ, ವ್ಯಾಪಾರ ಸ್ಥಳ. पण्याजीवेन कायति—कै (शब्दे) "कः" (३-२-४)।

**पत ಪತ** (वि०) 1. ಚೆನ್ನಾಗಿ ಪೋಷಿಸಲ್ಪಟ್ಟ, ಪುಷ್ಟವಾದ. 2. ಹಾರುವ, ಮೇಲಕ್ಕೆ ಹಾರಿಹೋಗುವ. 3. ಹಾರಿ ಕೆಳಕ್ಕೆ ಇಳಿಯುವ. पतति—पत्लृ (गतौ) "अच्" (३-१-१३४)। (पुं०) 4. ರೆಕ್ಕೆ, ಗರಿ. 5. ಕೆಳಕ್ಕೆ ಬೀಳುವುದು.

**पतग ಪತಗ** (पुं०) ಪಕ್ಷಿ, ಹಕ್ಕಿ. पतः उत्पतितः सन् गच्छति—गम्लृ (गतौ) "डः" (वा० ३-२-४८)। पतेन पक्षेण गच्छति—गम्लृ "डः" वा। "तरूर्मिलोलैः पतगग्रहान्नृपं न्यवारयद्वारिरुहैः करैरिव" नैष० १-१२६।

**पतगराज् ಪತಗರಾಜ್, -राज -ರಾಜ**(पुं०) ಪಕ್ಷಿರಾಜ, ಗರುಡ. "विप्रं पुरा पतगराडिव निर्जगार" माघ० ५-६६।

**पतङ्ग ಪತಂಗ** (पुं०) 1. ಪಕ್ಷಿ, ಹಕ್ಕಿ. पत्लृ (गतौ) "अङ्गच्" (उ० १-११६)। "उपेतपार्श्वश्चरणेन मौनिना नृपः पतङ्गं समधत्त पाणिना" नैष० १-१२४। स्त्रियां "ङीष्" (४-१-६३)। 2. ಸೂರ್ಯ. "पतत्पतङ्गप्रतिमस्तपोनिधिः पुरोऽस्य यावन्न भुवि व्यलीयत" माघ० १-१२। 3. ಶಲಭ, "कामस्तु बाणावसरं प्रतीक्ष्य पतङ्गवद्वह्निमुखं विविक्षुः" कुमा० ३-६४। 4. ನೀರಿನಲ್ಲಿ ಬೆಳೆಯುವ ಬತ್ತ ಮೊದಲಾದ ಧಾನ್ಯ. 5. ಪಾದರಸ. 6. ಕ್ಷತ್ರಿಯ ಜಾತಿಯ ಒಂದು ಹಕ್ಕಿ. [ವಿವರಕ್ಕೆ "ऊर्ध्वायन" ಪದದಲ್ಲಿ ನೋಡಿ.] 7. ಅಗ್ನಿ, ಬೆಂಕಿ. "पतङ्गः शलभे शालिप्रभेदे पक्षिसूर्ययोः" मेदि०। 8. ಮಾರ್ಜಾರ. "पतङ्गः शलभे शालौ मार्जारेऽग्नौ रवौ खगे" वैज०। 9. ಭ್ರಮರ, ದುಂಬಿ.

**पतङ्गिका ಪತಂಗಿಕಾ** (स्त्री०) ಹೆಣ್ಣು ಪತಂಗದ ಹುಳ. पतङ्ग स्वार्थे "कन्" (५-३-७५)।

**पतञ्जलि ಪತಂಜಲಿ** (पुं०) 1. ಯೋಗಸೂತ್ರಗಳನ್ನು ಬರೆದ ಒಬ್ಬ ಋಷಿ. 2. ಪಾಣಿನಿಯ ವ್ಯಾಕರಣಸೂತ್ರ ಗಳಿಗೆ ಮಹಾಭಾಷ್ಯ ಬರೆದ ಒಬ್ಬ ಮಹರ್ಷಿ. पतन् अञ्जलिः यस्मिन्। ಒಬ್ಬ ಋಷಿಯಿಂದಲೇ ಈ ಎರಡು ಗ್ರಂಥಗಳೂ ರಚಿತವಾದುವೆಂದು ಕೆಲವರ ಮತ. ಈ ಎರಡು ಗ್ರಂಥಗಳೂ ಬೇರೆ ಬೇರೆ ಋಷಿಗಳಿಂದ ರಚಿತ ವಾದುವೆಂದು ಮತ್ತೆ ಕೆಲವರ ಅಭಿಪ್ರಾಯ.

**पतत् ಪತತ್** (पुं०) 1. ಪಕ್ಷಿ, ಹಕ್ಕಿ. पतति—पत्लृ (गतौ) "शतृ" (३-२-१२४)। "पततां परितः परिस्फुरद्भिः परिपिङ्गीकृतदिङ्मुखैर्मयूखैः" माघ० २-५५। (वि०) 2. ಓಡುತ್ತಿರುವ, ವೇಗವಾಗಿ ಹೋಗುತ್ತಿರುವ. "प्रतिनादपूरितदिगन्तरः पतन् पुरगोपुरं प्रति स सैन्यसागरः" माघ० १३-२७। 3. ಎದುರಿಗೆ ಬರುತ್ತಿರುವ. "पुरः पततपरबलरेणुमालिनीमलक्षयद्दिशमभिधूमितामिव" माघ० १७-४१। 4. ಪ್ರವೇಶಿಸುತ್ತಿರುವ, ಒಳಕ್ಕೆ ನುಗ್ಗುತ್ತಿರುವ, ಬೀಳುತ್ತಿರುವ. "मानिन्या वपुषि पतन्निसर्गमन्दो भिन्दानो हृदयमसाहि नोदवज्रः" माघ० ८-३९। 5. ಕೆಳಕ್ಕೆ ಇಳಿಯುತ್ತಿರುವ. "पतत्पतङ्गप्रतिमस्तपोनिधिः पुरोऽस्य यावन्न भुवि व्यलीयत" माघ० १-१२। "स्त्रियां "ङीप्" (४-१-६)। **पतन्ती ಪತಂತೀ.** "आलोकयामास हरिः पतन्तीर्नदीः स्मृतीर्वेदमिवाम्बुराशिम्" माघ० ३-७५।

**पतत्र ಪತತ್ರ** (नं०) 1. ವಾಹನ. पत्लृ (गतौ) "अत्रन्" (उ० ३-१०५)। 2. ಗಗನ, ಆಕಾಶ. "पतत्रं खे गरुत्यपि" वैज०। 3. ಪರ್ಣ, ಪತ್ರ, ಎಲೆ. "पर्णं बर्हं पतत्रं च" वैज०।

**पतत्रि ಪತತ್ರಿ** (पुं०) ಪಕ್ಷಿ, ಹಕ್ಕಿ. पत्लृ (गतौ) "अत्रिन्" (उ० ४-६९)। "विविष्किरपतत्रय:" अम०।

**पतत्र ಪತತ್ರ** (न०) ರೆಕ್ಕೆ, ಗರಿ. पतात् त्रायते — त्रैङ् (पालने) "क:" (३-२-३)। "येन मे पूर्वमद्रीणां पक्षच्छेद: प्रजात्यये। कृतो निविशतां भारै: पतत्रै: पततां भुवि" भाग० ८-११-३४।

**पतत्त्रिन् ಪತತ್ತ್ರಿನ್** (पुं०) ಪಕ್ಷಿ, ಹಕ್ಕಿ. पतत्त्रमस्त्यस्य "इनि:" (५-२-११५)। "पदं सहेत भ्रमरस्य पेलवं शिरीषपुष्पं न पुन: पतत्त्रिण:" कुमा० ५-४।

**पतद्ग्रह ಪತದ್ಗ್ರಹ** (पुं०) 1. ಕೆಳಗೆ ಸುರಿಯುವ ನೀರನ್ನು ತುಂಬಿಕೊಳ್ಳುವ ಪಾತ್ರೆ. "पतद्ग्रहे तिष्ठति रुक्मशैले धर्मद्रवैरात्मभुवाऽर्च्यमान:" याद० १८-४२। 2. ಪೀಕದಾನಿ, ಉಗುಳುವ ಬಟ್ಟಲು. गृह्णाति — ग्रह (उपादाने) "अच्" (३-१-१३४)। पततो ग्रह:। पतन्तं गृह्णाति — ग्रह "अण्" (३-२-१)। **-ग्राह: -ಗ್ರಾಹಃ.**

**पतद्भीरु ಪತದ್ಭೀರು** (पुं०) ಶ್ಯೇನ, ಗಿಡಗ ಹಕ್ಕಿ.

**पतन ಪತನ** (न०) 1. ಕೆಳಕ್ಕೆ ಬೀಳುವುದು. 2. ಕೆಳಕ್ಕೆ ಇಳಿಯುವುದು. पत्लृ (गतौ) "ल्युट्" (३-३-११५)। "पतनोद्यततारकानुकारी शलभो वह्निमिवाससाद चैद्य:" याद० १५-११४। 3. ಅವನತಿ, ಅಳಿವು, ನಾಶ. "ग्रहाधीना नरेन्द्राणामुच्छ्राया: पतनानि च" याज्ञ० १-३०८। 4. ಒಳ್ಳೆಯ ಮಾರ್ಗದಿಂದ ಜಾರುವುದು, ಕೆಟ್ಟದಾರಿಗೆ ಇಳಿಯುವುದು. "पतनं सत्पथाद्भ्रंश:" वैज०। 5. ಪರ್ಣ, ಪತ್ರ, ಎಲೆ. "छदस्तु छदनं पत्रं पलाशं पतनं दलम्" वैज०।

**पतयालु ಪತಯಾಲು** (वि०) ಬೀಳುವ ಸ್ವಭಾವದವನು. पतयति—पत (गतौ)+णिच् "आलुच्" (३-२-१५८)।

**पतस ಪತಸ** (पुं०) ಪಕ್ಷಿ, ಹಕ್ಕಿ. पत्लृ (गतौ) "असच्" (उ० ३-११७)।

**पताक ಪತಾಕ** (पुं०) ಹೆಬ್ಬೆರಳನ್ನು ಮಡಿಸಿಕೊಂಡು ಉಳಿದ ಬೆರಳುಗಳನ್ನು ಸೇರಿಸಿ ಚಾಚಿದ ಹಸ್ತ. "पताक: कुञ्चिताङ्गुष्ठे संश्लिष्टप्रसृताङ्गुलौ" वैज०।

**पताका ಪತಾಕಾ** (स्त्री०) 1. ತ್ರಿಕೋಣಾಕಾರದ ಬಾವುಟ. पत्यतेऽनया — पत्लृ (गतौ) "आक:" (उ० ४-१४) निपा०। "रम्या इति प्राप्तवती: पताका रागं विविक्ता इति वर्धयन्ती:" माघ० ३-५३। ತ್ರಿಕೋಣಾಕಾರವಾದುದು ಪತಾಕೆ. ಚತುಷ್ಕೋಣಾಕಾರವಾದುದು ಧ್ವಜ. "त्रिकोणा वै पताका स्यु: चतुष्कोणा ध्वजा: स्मृता:"। 2. ಶುಭ, ಮಂಗಳ, ಸೌಭಾಗ್ಯ. 3. ನಾಟಕದ ಒಂದು ಅಂಗ. ["पताकास्थानक" ಪದದಲ್ಲಿ ನೋಡಿ.]

**पताकास्थानक ಪತಾಕಾಸ್ಥಾನಕ** (न०) ಒಂದು ಪ್ರಯೋಜನಕ್ಕಾಗಿ ನಿರೀಕ್ಷಿಸುತ್ತಿರುವಾಗ ಅಥವಾ ಚಿಂತಿಸುತ್ತಿರುವಾಗ ಅನಿರೀಕ್ಷಿತ ಕಾರಣದಿಂದ ಆ ವಿಷಯಕ್ಕೆ ಸಮಾನವಾದ ವಿಷಯದ ಘಟನೆ. "यत्रार्थे चिन्तितेऽन्यस्मिन् तल्लिङ्गोऽन्य: प्रयुज्यते। आगन्तुकेन भावेन पताकास्थानकं तु तत्" सा० द० ६-४५। ರತ್ನಾವಳಿಯಲ್ಲಿ— ವಾಸವದತ್ತಾವೇಷದಿಂದ ಸಂಕೇತಸ್ಥಾನದಲ್ಲಿದ್ದ ಸಾಗರಿಕೆಯು ವಾಸವದತ್ತೆಯ ಭಯದಿಂದ ಕಂಠಕ್ಕೆ ಪಾಶವನ್ನು ಸುತ್ತಿ ಮರಣಪ್ರಯತ್ನ ನಡೆಸುತ್ತಿರುವಲ್ಲಿ ರಾಜನು ಹೋಗಿ ವಾಸವದತ್ತೆಯೆಂದು ತಿಳಿದು ಕಂಠಪಾಶವನ್ನು ಬಿಚ್ಚುತ್ತಾನೆ. ಆಗ ಸಾಗರಿಕೆಯೆಂದು ತಿಳಿದನಂತರ ವಾಸವದತ್ತೆಯಲ್ಲಿ ನಿರೀಕ್ಷಿಸುತ್ತಿದ್ದ ಸೌಖ್ಯಾನುಭವವು ಸಾಗರಿಕೆಯಲ್ಲಿ ಉಂಟಾದುದರಿಂದ ಇಲ್ಲಿ "ಪತಾಕಾಸ್ಥಾನಕ" ರೂಪವಾದ ಅಂಗವು ಪ್ರತಿಪಾದಿತವಾಗಿದೆ.

**पताकिन् ಪತಾಕಿನ್** (वि०) 1. ಬಾವುಟವನ್ನು ಹಿಡಿದಿರುವವನು. पताकाऽस्यास्ति "इनि:" (५-२-११६)। स्त्रियां "ङीप्" (४-१-५)। **-किनी -ಕಿನೀ.** (पुं०) 2. ಬಾವುಟವನ್ನು ಹೊಂದಿರುವ ರಥ. "क्षितिरेणुकेतुवसना: पताकिन:" माघ० १३-४।

**पताकिनी ಪತಾಕಿನೀ** (स्त्री०) ಸೇನೆ, ದಂಡು. पताकाऽस्यास्ति "इनि:" (५-२-११६)। "ङीप्" (४-१-५)। "रथवर्त्मरजोऽप्यस्य कुत एव पताकिनीम्" रघु० ४-८२।

**पति ಪತಿ** (पुं०) 1. ಯಜಮಾನ, ಗಂಡ. पाति — पा (रक्षणे) "डति:" (उ० ४-५७)। "पत्यु: शिरश्चन्द्रकलामनेन स्पृशेति सख्या परिहासपूर्वम्" कुमा० ७-१९। 2. ಸ್ವಾಮಿ, ಒಡೆಯ. "तदाप्रभृत्येव विमुक्तसङ्ग: पति: पशूनामपरिग्रहोऽभूत्" कुमा० १-५३। 3. ಯಜಮಾನ, ಒಡೆಯ. 4. ನಾಯಕ, ಅಧಿಪತಿ, ಪ್ರಭು. "ग्रामस्याधिपतिं कुर्याद्दशग्रामपतिं तथा। विंशतीशं शतेशं च सहस्रपतिमेव च" मनु० ७-११५।

**पतिंवरा ಪತಿಂವರಾ** (स्त्री०) ತಾನಾಗಿಯೇ ಪತಿಯನ್ನು ವರಿಸುವ ಕನ್ಯೆ, ತಾನಾಗಿಯೇ ಗಂಡನನ್ನು ಹುಡುಕುವ ಕನ್ಯೆ. पतिं वृणोति — वृञ् (वरणे) "खच्" (३-२-४६)। "विवेश मञ्चान्तरराजमार्गं पतिंवरा क्लृप्तविवाहवेषा" रघु० ६-१०।

**पतिघ्न ಪತಿಘ್ನ** (वि०) ಪತಿಯನ್ನು ನಾಶಮಾಡುವ ಲಕ್ಷಣ. पतिं हन्ति — हन (हिंसागत्योः) "टक्" (३-२-५२)। स्त्रियां "ङीप्" (४-१-१५)। **पतिघ्नी ಪತಿಘ್ನೀ.** पतिघ्नी पाणिरेखा।

**पतित ಪತಿತ** (वि०) 1. ಕೆಳಕ್ಕೆ ಬಿದ್ದ, ಕೆಳಕ್ಕೆ ಉರುಳಿದ. पत्लृ (गतौ) "क्तः" (३-४-७२)। "पतिते पतङ्गमृगराजि निजप्रतिबिम्बरोषित इवाम्बुनिधौ" माघ० ९-१८। 2. ಆಗಮಿಸಿದ, ಬಂದ. "अभिमुखपतितैर्गुणप्रकर्षात् अवजितमुद्धतिमुज्ज्वलां दधानैः" माघ० ७-२९। 3. ಅನುನಯಕ್ಕಾಗಿ ಸಮಾಧಾನಪಡಿಸುವುದಕ್ಕಾಗಿ ಅಥವಾ ಕ್ಷಮೆ ಬೇಡಲು (ಕಾಲಿಗೆ) ಬಿದ್ದ. "मयि ते पादपतिते किंकरत्वमुपागते" पञ्चतं० ४-८। 4. ಧರ್ಮಭ್ರಷ್ಟ, ಕರ್ಮಭ್ರಷ್ಟ, ಕರ್ತವ್ಯಭ್ರಷ್ಟ. "संवत्सरेण पतति पतितेन सहाचरन्" मनु० ११-१८०। 5. ಪಾಪಕಾರ್ಯದಿಂದ ನರಕವನ್ನು ಹೊಂದಿದವನು, ನರಕದಲ್ಲಿ ಬಿದ್ದವನು. 6. ಕೆಳದರ್ಜೆಗೆ ಇಳಿದ. 7. ಪದಚ್ಯುತನಾದ, ಸ್ಥಾನದಿಂದ ಕೆಳಕ್ಕೆ ಇಳಿದ. 8. ಸಂಬಂಧ ಹೊಂದಿದ, ಸೇರಿಕೊಂಡಿರುವ, ಬಿದ್ದಿರುವ. "दर्पणनिर्मलासु पतिते घनतिमिरमुषि" माघ० ४-६७।

**पतिदेवता ಪತಿದೇವತಾ** (स्त्री०) ಪತಿಯನ್ನೇ ದೈವವನ್ನಾಗಿ ತಿಳಿದಿರುವ ಹೆಂಗುಸು, ಪತಿವ್ರತೆಯಾದ ಹೆಂಗುಸು, ಸಾಧ್ವಿ. पतिरेव देवता यस्याः। "कः पतिदेवतामन्यः परामष्टुमुत्सहेत" शाकु० ६।

**पतिद्विष् ಪತಿದ್ವಿಷ್** (स्त्री०) ಪತಿಯನ್ನು ದ್ವೇಷಿಸುವ ಹೆಂಗುಸು.

**पतिमती ಪತಿಮತೀ** (स्त्री०) ಯಜಮಾನ (ಒಡೆಯ)ನುಳ್ಳ ಭೂಮಿ. पतिरस्या अस्ति "मतुप्" (५-२-९४)। "ङीप्" (४-१-६)।

**पतिलोक ಪತಿಲೋಕ** (पुं०) ಪತಿಯೊಡನೆ ನಡೆಸಿದ ಧರ್ಮಾಚರಣೆಯಿಂದ ಲಭಿಸುವ ಸ್ವರ್ಗ ಮೊದಲಾದ ಲೋಕ.

**पतिवत्नी ಪತಿವತ್ನೀ** (स्त्री०) ಯಜಮಾನನುಳ್ಳ ಹೆಂಗುಸು, ಗಂಡನುಳ್ಳ ಹೆಂಗುಸು. पतिरस्या अस्ति "मतुप्" (५-२-९४) नुक् (४-१-३२) वत्वं च निपा०। "ङीप्" (४-१-५)।

**पतिव्रता ಪತಿವ್ರತಾ** (स्त्री०) ಪತಿಸೇವೆಯಲ್ಲಿ ನಿರತಳಾದ ಹೆಂಗುಸು, ಪತಿ ಸೇವೆಯೇ ವ್ರತವಾಗಿ ಉಳ್ಳ ಹೆಂಗುಸು. पतिः पतिसेवा व्रतमस्याः। ಇಲ್ಲಿ ಪತಿ ಶಬ್ದಕ್ಕೆ ಲಕ್ಷಣೆಯಿಂದ ಪತಿಸೇವೆಯೆಂದು ಅರ್ಥ. "भवन्त्यव्यभिचारिण्यो भर्तुरिष्टे पतिव्रताः" कुमा० ६-८६। "मुमुचे न पतिव्रतौचिती प्रतिचन्द्रोदयमभ्रगङ्गया" नैष० २-८९।

**पत्लृ — गतौ** (भ्वा० पर० अक० से०)। पतति पततः पतन्ति। पपात पेततुः पेतुः। पतिता। पतिष्यति। पततु। अपतत्। पतेत्। पत्यात्। अपप्तत्। अपतिष्यत्।

**ಈ ಧಾತುವು ಸಂದರ್ಭಾನುಸಾರ ಈ ಕೆಳಗಿನ ಅರ್ಥಗಳಲ್ಲಿ ಪ್ರಯೋಗಿಸಲ್ಪಡುವುದು:**

1. ಮೇಲಿನಿಂದ ಕೆಳಕ್ಕೆ ಬೀಳು. "आह्लादिकह्लारसमीरणाहते पुरः पपाताम्भसि यामुने रजः" माघ० १२-६६। 2. ಮೇಲಕ್ಕೆ ಹಾರು, ಆಕಾಶಮಾರ್ಗವಾಗಿ ಮೇಲಕ್ಕೆ ಹೋಗು. "हन्तुं कलहकारोऽसौ शब्दकारः पपात खम्" भट्टि० ५-१००। 3. ಕೆಳಕ್ಕೆ ಬಾ, ಇಳಿ. "पतत्यधो धाम विसारि सर्वतः किमेतदित्याकुलमीक्षितं जनैः" माघ० १-२। 4. ಅಧೋಗತಿ ಹೊಂದು, ದುರ್ಗತಿ ಹೊಂದು, ಉನ್ನತಸ್ಥಾನದಿಂದ ಕೆಳಕ್ಕೆ ಬೀಳು. "पतन्ति पितरो ह्येषां लुप्तपिण्डोदकक्रियाः" गीता १-४२। 5. ಸಂಭವಿಸುವುದು, ಉಂಟಾಗುವುದು. "लक्ष्मीर्यत्र पतन्ति तत्र विवृतद्वारा इव व्यापदः"।

**भावे** :—पत्यते। पेते। पतिता। पतिष्यते। पत्यताम्। ಇತ್ಯಾದಿ.

**णिचि** :—पातयति, –ते। पातयां चकार, –चक्रे, –बभूव, –आस। पातयिता। पातयिष्यति, ते। पातयतु, –ताम्। अपातयत्, –त। ಇತ್ಯಾದಿ.

**कर्मणि** :—पात्यते। पातयां चक्रे, –बभूवे, आसे। पातयिता, पातिता। पातयिष्यते, पातिष्यते। पात्यताम्। ಇತ್ಯಾದಿ.

**कृत्सु** :—पतितव्यम्। पतनीयम्। पात्यम्। पतितः। पतितवान्। पतन्, पतन्ती। पतितम्। पतनम्। पतित्वा, निपत्य।

**ण्यन्तात् कृत्सु** :—पातयितव्यः। पातनीयः। पात्यः। पातितः। पातितवान्, –वती। पातयन्, –यन्ती। पातयमानः। पातितम्। पातनम्। पातयित्वा। निपात्य।

**ಈ ಧಾತುವಿಗೆ ಉಪಸರ್ಗಗಳ ಯೋಗದಿಂದ ಉಂಟಾಗುವ ಅರ್ಥಭೇದಗಳು:**

(1) अनु+पत्लृ=अनुपतति। अनुपतनम्। अनुपातः। 1. ಅನುಸರಿಸು, ಹಿಂಬಾಲಿಸು, ಹಿಂದೆ ಓಡಿಹೋಗು. "ग्रीवाभङ्गाभिरामं मुहुरनुपतति स्यन्दने बद्धदृष्टिः"

शाकु० १-७। 2. ಹಿಡಿ, ಅವಲಂಬಿಸು, ಆಶ್ರಯಿಸು. "न यत्र प्रत्याशामनुपतति नो वा रहयति" मालती० ९-८।

(2) अभि + पत्लृ = अभिपतति। अभिपपात। अभिपतन्। अभिपतनम्। अभिपातः। 1. ಸಮೀಪಿಸು, ಹತ್ತಿರಕ್ಕೆ ಹೋಗು. "चरणमभिपपात षट्पदाली धूतनवलोहितपङ्कजाभिशङ्का" किरा० १०-४२। 2. ಮೇಲೆ ಬೀಳು, ಆಕ್ರಮಣ ಮಾಡು. "यन्ता गजस्याभ्यपतद् गजस्थं तुल्यप्रतिद्वन्द्वि बभूव युद्धम्" रघु० ७-३७। 3. ಹಿಂದಕ್ಕೆ ಹೋಗು, ಹಿಂಜರಿ, ಹಿಮ್ಮೆಟ್ಟು. "अभिपतितुमना लघुत्वभीतेरभवदमुञ्चति वल्लभेऽतिगुर्वी" माघ० ७-५१।

(3) अभि+आ+पत्लृ=अभ्यापतति। अभ्यापतत्। अभ्यापतनम्। ಎದುರಿಗೆ ಬಾ, ಎದುರು ಕಡೆಯಿಂದ ಹತ್ತಿರಕ್ಕೆ ಬಾ. "अभ्यापतन्तमसुराधिपमीशपुत्रो दुर्वारबाहुविभवं सुरसैनिकैस्तम्" कुमा० १७-४९।

(4) अव+पत्लृ=अवपतति। अवपातः। अवपतितः। 1. ಕೆಳಕ್ಕೆ ಬೀಳು, ಮೇಲಿನಿಂದ ಕೆಳಕ್ಕೆ ಇಳಿ. "श्येनावपातचकितानननर्वतिकेव" मालती० ८-८। 2. ಕುಸಿದು ಬೀಳು, ಕಳಚಿ ಬೀಳು. "जलं कूलावपातेन प्रसन्नं कलुषायते" मृच्छ० ९-२४।

(4a) अव+पत्लृ+णिच्=अवपातनम्। अवपातितः। ಕೆಡವು, ಕೆಳಕ್ಕೆ ತಳ್ಳು, ಕೆಳಕ್ಕೆ ನೂಕು. "अभिघाते तथा छेदे भेदे कुड्यावपातने" याज्ञ० २-२२३।

(5) आ+पत्लृ = आपतति। आपतन्। आपतित। 1. ಬಾ, ಎದುರಾಗಿ ಬಾ, ಹತ್ತಿರಕ್ಕೆ ಬಾ, ಅದರ ಕಡೆಗೆ ಬಾ. "आपतन्नपसरन्नपि भेजे ग्राह्यतामिव च दुर्ग्रहतां च" याद० २१-५३। 2. ಆಕ್ರಮಿಸು, ಮೇಲೆ ಬೀಳು, ಧಾಳಿಮಾಡು. "उदायुधानापततस्तान् दृप्तान् प्रेक्ष्य राघवः" रघु० १२-४४। 3. ಸಂಭವಿಸು, ಆಗು. "अहो, कथमिदमापतितम्?" उ० रा० २।

(6) उत्+पत्लृ=उत्पतति। उत्पतनम्। उत्पतितः। 1. ಮೇಲಕ್ಕೆ ಹೋಗು, ಮೇಲಕ್ಕೆ ಹಾರಿಹೋಗು. "लोकतः खगरथेन मध्यमादुत्पतन्तमवनम्य माधवम्" याद० १७-३। 2. ಮೇಲಕ್ಕೆ ಬಾ, ಮೇಲಕ್ಕೆ ಹೊರಡು, ಹೊರಕ್ಕೆ ಬಾ. "मातङ्गनक्रैः सहसोत्पतद्भिर्भिन्नान् द्विधा पश्य समुद्रफेनम्" रघु० १३-११। 3. ಚಿಮ್ಮು, ಪುಟವೇಳು, ಹಾರು. "पातितोऽपि कराघातैरुत्पतत्येव कन्दुकः"। 4. ಉದ್ಭವಿಸು, ಉತ್ಪತ್ತಿಹೊಂದು, ಹುಟ್ಟು. "नाराचक्षेपणीयाश्मनिष्पेषोत्पतितानलम्" रघु० ४-७७।

(7) नि+पत्लृ = निपतति। निपपात। निपतन्। निपतनम्। निपतितः। 1. ಕೆಳಕ್ಕೆ ಬೀಳು, ಮೇಲಿನಿಂದ ಬೀಳು. "निपततापि न मन्दरभूभृता त्वमुदधौ शशलाञ्छन चूर्णितः" नैष० ४-५१। 2. ತಲುಪು, ಸೇರು, ಪ್ರವೇಶಿಸು. "त्वय्येव निपतन्त्योघा जाह्नवीया इवार्णवे" रघु० १०-२६। 3. ಮೇಲೆ ಬೀಳು, ಮೇಲಕ್ಕೆ ಹಾರಿ ಬೀಳು. "सिंहः शिशुरपि निपतति मदमलिनकपोलभित्तिषु गजेषु" भर्तृ० १-३०। 4. ಬಂದು ಕೂಡು, ಕುಳಿತುಕೊ, ಒಂದು ಜಾಗದಲ್ಲಿ ಬಂದು ಸೇರು. "अभ्यर्हितं पूर्वं निपतति"। 5. ಕೆಳಕ್ಕೆ ಇಳಿದು ಬಾ. "निपतन्ति धार्तराष्ट्राः कालवशान्मेदिनीपृष्ठे" वेणी० १-६।

(8) परा + पत्लृ = परापतति। परापतत्। परापतनम्। ಬರುವುದು, ಬಂದು ಸೇರುವುದು, ಸಮೀಪಕ್ಕೆ ಬರುವುದು, ಎದುರಿಗೆ ಬರುವುದು. "दिवापि तारास्तरलास्तरस्विनीः परापतन्तीः परितोऽथ वाहिनीः" कुमा० १५-१९।

(9) प्र + पत्लृ = प्रपतति। प्रपतन्। प्रपतितः। 1. ಮೇಲಕ್ಕೆ ಹಾರು, ಹಾರಿಹೋಗು. 2. ಕೆಳಕ್ಕೆ ಬೀಳು, ಕೆಳಕ್ಕೆ ಧುಮುಕು. "मूर्ध्नि गङ्गाप्रपातेन धौतपादाम्भसा च वः" कुमा० ६-५७। 2. ಕೆಳಕ್ಕೆ ಬಿದ್ದು ನಮಸ್ಕರಿಸು.

(10) प्र+नि+पत्लृ = प्रणिपतति। प्रणिपतनम्। प्रणिपतन्। ನಮಸ್ಕರಿಸು. "प्रणिपत्य सुरास्तस्मै शमयित्रे सुरद्विषाम्" रघु० १०-१५। "तस्याः सखीभ्यां प्रणिपातपूर्वं स्वहस्तलूनः शिशिरात्ययस्य" कुमा० ३-६१।

**पतेर ಪತೇರ** (पुं०) 1. ಗರ್ತ, ಹಳ್ಳ, ಗುಳಿ. 2. ಪಕ್ಷಿ, ಹಕ್ಕಿ. "गर्तः पतेरो भूश्वभ्रमवखातोऽवटोऽवधिः" वैज०। 3. ಅಧಕ ಪರಿಮಾಣ, ಒಂದು ಕೊಳಗದ ಅಳತೆ. (वि०) 4. ಮೇಲಕ್ಕೆ ಹಾರುವ. 5. ಹೋಗುವವನು. पत्लृ (गतौ) "एरक्" (उ० १-५८)।

**पत्तन ಪತ್ತನ** (न०) 1. ನಗರ, ಜಿಲ್ಲೆಯ ಮುಖ್ಯಪಟ್ಟಣ. पतन्ति जना अत्र—पत्लृ (गतौ) "तनन्" (उ० ३-१५०)। "पत्तने विद्यमानेऽपि ग्रामे रत्नपरीक्षा" माल० १। 2. ಮೃದಂಗ, ಮದ್ದಳೆ.

**पत्तनाधिकारिन् ಪತ್ತನಾಧಿಕಾರಿನ್** (पुं०) ಜಿಲ್ಲೆಯ ಅಧಿಕಾರಿ, ಜಿಲ್ಲೆಯ ಮುಖ್ಯ ಪಟ್ಟಣದಲ್ಲಿರುವ ಮುಖ್ಯಾಧಿಕಾರಿ.

**पत्ति ಪತ್ತಿ** (पुं०) 1. ಸೇನೆ, ಕಾಲಾಳು, ಕಾಲ್ಬಲ. पद (गतौ) "क्तिच्" (३-३-१७४)। "रथवाजिपत्तिकरिणीसमाकुलं तदनीकयोः समगत द्वयं मिथः" माघ० १३-१७। 2. ವೀರ, ಶೂರ. (स्त्री०) 3. ಗಮನ. 4. ಸೇನೆಯ ಒಂದು ಪ್ರಭೇದ, ಒಂದು ರಥ ಒಂದು ಗಜ ಮೂರು ಅಶ್ವಗಳು ಮತ್ತು ಐದು ಕಾಲಾಳುಗಳುಳ್ಳ ಸೇನೆಯ ಒಂದು ಗುಂಪು. "एको रथो गजश्चैको नराः पञ्च पदातयः। त्रयश्च तुरगास्तज्ज्ञैः पत्तिरित्यभिधीयते" भा० आदि० २-१९। 5. ತೋಳು ಕೆನ್ನೆ ಸ್ತನ ಮೊದಲಾದುವುಗಳ ಮೇಲೆ ಬರೆಯಲ್ಪಟ್ಟ ಚಿತ್ರ. "पत्तिस्तु पत्रकं लेखा बाहुगण्डस्तनादिषु" वैज०। 6. ಐವತ್ತೈದು ಮನುಷ್ಯಸೇನೆಯ ಒಂದು ಗುಂಪು. "नराणां पञ्चपञ्चाशदेषा पत्तिर्विधीयते" भा० उद्योग०।

**पत्र ಪತ್ರ** (न०) 1. ಎಲೆ, ದಳ, ಪರ್ಣ. पतति — पत्लृ (गतौ) "ष्ट्रन्" (उ० ४-१५९)। "मदोद्धताः प्रत्यनिलं विचेरुर्वनस्थलीर्मर्मरपत्रमोक्षाः" कुमा० ३-३१। 2. ರೆಕ್ಕೆ, ಗರಿ. "सद्यः प्रवालोद्गमचारुपत्रे नीते समाप्तिं नवचूतबाणे" कुमा० ३-२७। 3. ಬರೆಯುವ ಕಾಗದ. 4. ಬರೆದ ಕಾಗದ, ಕ್ಷೇಮ ಸಮಾಚಾರದ ಕಾಗದ. 5. ವ್ಯವಹಾರದ ಕಾಗದ: (1) ಆಧಾರ ಪತ್ರ, (2) ಭೋಗ್ಯ ಪತ್ರ, (3) ಕ್ರಯ ಪತ್ರ, (4) ದಾನ ಪತ್ರ ಇತ್ಯಾದಿ. "विवादेऽन्विष्यते पत्रं तदभावे च साक्षिणः। साक्ष्यभावात्ततो दिव्यं प्रवदन्ति मनीषिणः" पञ्चतं० १-४३६। 6. ಹೂವಿನ ದಳ. "पत्रान्तलग्नैर्जलबिन्दुजालैराकृष्टमुक्ताफलजालशोभम्" कुमा० ७-८९। 7. ವಾಹನ. "दिशः पपात पत्रेण वेगनिष्कम्पकेतुना" रघु० १५-४८। 8. ಬಾಣದ ಗರಿ. 9. ಮನುಷ್ಯನ ಮುಖ ಮೊದಲಾದ ಅಂಗಗಳಲ್ಲಿ ಕಸ್ತೂರಿ ಚಂದನ ಮೊದಲಾದ ಸುಗಂಧದ್ರವ್ಯದಿಂದ ಬರೆಯುವ ಚಿತ್ರ. "अन्यत्र कालागुरुदत्तपत्रा भक्तिर्भुवश्चन्दनकल्पितेव" रघु० १३-५५।

**पत्रक ಪತ್ರಕ** (न०) 1. ಎಲೆ, ಪರ್ಣ. 2. ಮನುಷ್ಯನ ಮೈಮೇಲೆ ಬರೆಯುವ ಚಿತ್ರ.

**पत्रपरशु ಪತ್ರಪರಶು** (पुं०) ಅಕ್ಕಸಾಲಿಗನು ಚಿನ್ನ ಬೆಳ್ಳಿಗಳನ್ನು ಕತ್ತರಿಸುವ ಸಾಧನ, ಚಾಣ. पत्रमिव परशुः। "व्रश्चनः पत्रपरशुः" अम०।

**पत्रपाली ಪತ್ರಪಾಲೀ** (स्त्री०) ಕತ್ತರಿ. पत्राकारा पालिरग्रं यस्याः।

**पत्रपाश्या ಪತ್ರಪಾಶ್ಯಾ** (स्त्री०) ಬೈತಲೆಯ ಬೊಟ್ಟು. पाशसमूहः पाश्या — पत्रमिव पाश्या। "पत्रपाश्या ललाटिका" अम०।

**पत्रभङ्ग ಪತ್ರಭಂಗ** (पुं०) ಸ್ತನ ಕೆನ್ನೆ ಮೊದಲಾದ ಸ್ಥಳಗಳಲ್ಲಿ ಕಸ್ತೂರಿ ಚಂದನ ಮುಂತಾದುವುಗಳಿಂದ ರಚಿತವಾದ (ಬರೆಯಲ್ಪಟ್ಟ) ಚಿತ್ರ. पत्राकारः भङ्गः।

**पत्ररथ ಪತ್ರರಥ** (पुं०) ಪಕ್ಷಿ, ಹಕ್ಕಿ. पत्रं पक्षो रथ इव यस्य। "व्यर्थीकृतं पत्ररथेन तेन तथाऽवसाय व्यवसायमस्याः" नैष० ३-६। स्त्रियां जाति० "ङीष्" (४-१-६३)। **-रथी** -ರಥೀ.

**पत्रलता ಪತ್ರಲತಾ** (स्त्री०) ಪತ್ರಾಕಾರದ ತಿಲಕ. पत्राकारा लता यत्र।

**पत्रलेखा ಪತ್ರಲೇಖಾ** (स्त्री०) ಸ್ತ್ರೀಯರ ಅಂಗಗಳಲ್ಲಿ ಬರೆಯುವ ಚಿತ್ರ. पत्राकारा लेखा। "कस्याश्चिन्मुखमनुधौतपत्रलेखम्" माघ० ८-५६।

**पत्रवाह ಪತ್ರವಾಹ** (पुं०) 1. ಪಕ್ಷಿ, ಹಕ್ಕಿ. पत्रं वहति — वह (प्रापणे) "अण्" (३-२-१)। "उत्क्रान्तानामामिषायोपरिष्टात् अध्याकाशं बभ्रमुः पत्रवाहाः" माघ० १८-७३। 2. ಬಾಣ. "प्रमुखेऽभिहताश्च पत्रवाहाः प्रसभं माधवमुक्तवत्सदन्तैः" माघ० २०-२५। (वि०) 3. ಕಾಗದವನ್ನು ಒಯ್ಯುವವನು.

**पत्रविशेषक ಪತ್ರವಿಶೇಷಕ** (न०) ಪತ್ರಭಂಗ, ಪತ್ರರಚನೆ. पत्रमिव विशेषो यत्र। "कप्" (५-४-१५४)। "स्वेदोद्गमः किंपुरुषाङ्गनानां चक्रे पदं पत्रविशेषकेषु" कुमा० ३-३३।

**पत्रवेष्ट ಪತ್ರವೇಷ್ಟ** (पुं०) ತಾಟಂಕ, ಓಲೆ. पत्रमिव वेष्टयते — वेष्ट (वेष्टने) "घञ्" (३-३-१९)। "उद्ग्रन्थकेशश्च्युतपत्रलेखो विश्लेषि मुक्ताफलपत्रवेष्टः" रघु० १६-६७।

**पत्रशाक ಪತ್ರಶಾಕ** (न०) ಪತ್ರರೂಪವಾದ ತರಕಾರಿ, ಸೊಪ್ಪು. पत्रात्मकं शाकम्।

**पत्रश्रेष्ठ ಪತ್ರಶ್ರೇಷ್ಠ** (पुं०) ಬಿಲ್ವಪತ್ರೆ ಮರ. पत्रं श्रेष्ठं यस्य।

**पत्रसूची ಪತ್ರಸೂಚೀ** (स्त्री०) ಮುಳ್ಳು, ಕಂಟಕ.

**पत्राढ्य ಪತ್ರಾಢ್ಯ** (न०) ತಾಳೀಸಪತ್ರೆ, पत्रैराढ्या यस्य।

**पत्राङ्ग ಪತ್ರಾಂಗ** (न०) 1. ಕೆಂಪುಚಂದನ. 2. ಭೂರ್ಜವೃಕ್ಷ, ಭುಜಪತ್ರೆ ಗಿಡ. पत्रमिवाङ्गमस्य।

**पत्राङ्गुलि ಪತ್ರಾಂಗುಲಿ** (स्त्री०) ಮೈಮೇಲೆ ಬರೆಯುವ ಚಿತ್ರ. पत्रार्थोऽङ्गुलिः अङ्गुलिव्यापारः।

**पत्राञ्जन ಪತ್ರಾಂಜನ** (न०) ಮಸಿ, ಶಾಯಿ. पत्रमज्यतेऽनेन — अञ्जू (व्यक्त्यादौ) कर० "ल्युट्" (३-३-११७)।

**पत्राढ्य ಪತ್ರಾಢ್ಯ** (न०) ಹಿಪ್ಪಲಿ ಬೇರು. पत्रैराढ्यम्।

**पत्रावली ಪತ್ರಾವಲೀ** (स्त्री०) 1. ಪತ್ರಭಂಗ, ಮೈಮೇಲೆ ಬರೆಯುವ ಚಿತ್ರ. 2. ಎಲೆಗಳ ಸಾಲು.

**पत्रिका ಪತ್ರಿಕಾ** (स्त्री०) 1. ಬರೆಯುವ ಕಾಗದ. 2. ಬರೆದ ಕಾಗದ, ಕ್ಷೇಮಸಮಾಚಾರದ ಕಾಗದ. 3. ವ್ಯವಹಾರದ ಪತ್ರ.

**पत्रिणी ಪತ್ರಿಣೀ** (स्त्री०) 1. ಕಿರಿಯ ನಾದಿನಿ, ಪತ್ನಿಯ ತಂಗಿ. "कनिष्ठा स्यालिका हाली पत्रिणी केलिकुञ्चिका" वैज०। 2. ಚಿಗುರು, ಮೊಳಕೆ.

**पत्रिन् ಪತ್ರಿನ್** (पुं०) 1. ಪಕ್ಷಿ, ಹಕ್ಕಿ. पत्रमस्त्यस्य "इनिः" (५-२-११५)। "तं क्षुरप्रशकलीकृतं कृती पत्रिणां व्यभजदाश्रमाद्बहिः" रघु० ११-२९। 2. ಶರ, ಬಾಣ. "ध्रुवं प्रणाशः प्रहितस्य पत्रिणः शिलोच्चये तस्य विमार्गणं नयः" किरा० १४-९। 3. ಶ್ಯೇನ, ಗಿಡುಗ ಹಕ್ಕಿ, ಡೇಗೆ. "नभसि महसां ध्वान्तध्वाङ्क्षप्रमापणपत्त्रिणामिह विहरणैः श्येनपातां रवेरवधारयन्" नैष० १९-१२। 4. ಪರ್ವತ, ಬೆಟ್ಟ. 5. ವೃಕ್ಷ, ಮರ. पत्राणि पर्णान्यस्य सन्ति "इनिः" (५-२-११५)। 6. ರಥ. 7. ರಥಿಕ. "पत्री काण्डे खगे द्रुमे। रथेऽद्री रथिके श्येने" हेम०। (वि०) 8. ಕಾಗದಗಳುಳ್ಳ. 9. ರೆಕ್ಕೆಗಳುಳ್ಳ, ಗರಿಗಳುಳ್ಳ. "जहार चान्येन मयूरपत्रिणा शरेण शक्रस्य महाशनिध्वजम्" रघु० ३-५६। 10. ಎಲೆಗಳಿಂದ ಕೂಡಿದ.

**पत्री ಪತ್ರೀ** (स्त्री०) ಲಿಪಿ, ಬರವಣಿಗೆ.

**पत्रोर्ण ಪತ್ರೋರ್ಣ** (न०) 1. ತೊಳೆದ ರೇಷ್ಮೆ ಬಟ್ಟೆ, ಪಟ್ಟವಸ್ತ್ರ. पत्रोत्पन्ना ऊर्णा साधनत्वेनास्त्यस्य "अच्" (५-२-१२७)। (पुं०) 2. ಹೆಮ್ಮರ. "पत्रोर्णं धौतकौशेये क्लीबं स्याच्छोणके पुमान्" मेदि०।

**पत्नी ಪತ್ನೀ** (स्त्री०) ಮದುವೆಯಾದ ಹೆಂಡತಿ, ಮದುವೆಯಾಗಿ ಪತಿಯ ಯಜ್ಞಕಾರ್ಯಗಳಲ್ಲಿ ಪಾಲುಗೊಳ್ಳುವ ಹೆಂಗಸು. पति यज्ञसंबन्धे "नः" (४-१-३३)। "तत्तद्भूमिपतिः पत्न्यै दर्शयन् प्रियदर्शनः" रघु० १-४७। "आकीर्णमृषिपत्नीनामुटजद्वाररोधिभिः" रघु० १-५०। "पत्नीमूलं गृहं पुंसां यदि छन्दोनुवर्तिनी। गृहाश्रमसमं नास्ति यदि भार्या वशानुगा"।

**पत्न्याट ಪತ್ನ್ಯಾಟ** (पुं०) ಪತ್ನಿಯ ಗೃಹ. पत्नी अटत्यत्र — अट (गतौ) "घञ्" (३-३-१२१)।

**पथ ಪಥ** (पुं०) ಮಾರ್ಗ, ದಾರಿ. (अकारान्तः) पथत्यत्र — पथे (गतौ) घञर्थे "कः" (३-३-५८)। "वाटः पथश्च मार्गश्च" त्रिकाण्ड०।

**पथक ಪಥಕ** (वि०) ದಾರಿಯಲ್ಲಿ ಕುಶಲನಾದವನು, ದಾರಿಯನ್ನು ತಿಳಿದವನು. पथि कुशलः "वुन्" (५-२-६३)।

**पथत् ಪಥತ್** (वि०) ನಡೆಯುವವನು, ಹೋಗುವವನು. पथे (गतौ) "शतृ" (३-२-१२४)।

**पथिक ಪಥಿಕ** (वि०) ದಾರಿ ನಡೆಯುವವನು, ಪ್ರಯಾಣಿಕ, ದಾರಿಗ. पन्थानं गच्छति—पथिन् "ष्कन्" (५-१-७५)। "मधुकरैरपवादकरैरिव स्मृतिभुवः पथिका हरिणा इव" माघ० ६-९। स्त्रियां "ङीप्" (४-१-४१)। **पथिकी ಪಥಿಕೀ.**

**पथिकसंघात ಪಥಿಕಸಂಘಾತ** (पुं०) ಪ್ರಯಾಣಿಕರ ಗುಂಪು. पथिकानां संघातः।

**पथिन् ಪಥಿನ್** (पुं०) ಮಾರ್ಗ, ದಾರಿ. पतन्त्यनेन—पत्लृ (गतौ) "इनिः" थः अन्तादेशश्च (उ० ४-१२)। "पन्थानमाशु विजहीहि पुरः स्तनौ ते पश्यन् प्रतिद्विरदकुम्भविशङ्कितचेताः" माघ० ५-३४। "न्याय्यात्पथः प्रविचलन्ति पदं न धीराः" भर्तृ० २-८३। ಸಮಾಸದ ಕೊನೆಯಲ್ಲಿ पथिन् ಶಬ್ದವು "पथः" ಎಂದು ಅಕಾರಾಂತವಾಗುವುದು. "तोयाधारपथाश्च वल्कलशिखानिष्यन्दरेखाङ्किताः" शाकु० १-१३। "उत्तोरणं राजपथं प्रपेदे" कुमा० ७-६३।

**पथिल ಪಥಿಲ** (वि०) ಪರಸ್ಥಳಕ್ಕೆ ಹೊರಟಿರುವ ಪ್ರಯಾಣಿಕ, ದಾರಿಗ, ದಾರಿ ನಡೆಯುವವನು. पथे (गतौ) "इलच्" (उ० १-५७)।

**पथिवाहक ಪಥಿವಾಹಕ** (वि०) 1. ಕ್ರೂರ. 2. ಮೂಟೆ ಹೊರುವವನು, ಭಾರ ಹೊರುವ ಕೂಲಿಯಾಳು. 3. ಬೇಟೆಗಾರ. पन्थानं वाहयति — वह (प्रापणे) + णिच् "ण्वुल्" (३-१-१३३)।

**पथ्य ಪಥ್ಯ** (न०) 1. ಹಿತ. 2. ಆರೋಗ್ಯ. पथोऽनपेतः "यत्" (४-४-९२)। "उत्तिष्ठमानस्तु परो नोपेक्ष्यः पथ्यमिच्छता" माघ० २-१०। (वि०) 3. ಮಾರ್ಗವನ್ನು ಬಿಡದಿರುವ, ದಾರಿತಪ್ಪಿ ನಡೆಯದಿರುವ. 4. ಮಾರ್ಗ

ದಲ್ಲಿ ಸಾಧುವಾದ, ದಾರಿಯಲ್ಲಿ ಒಳ್ಳೆಯದಾಗಿರುವ. पथि साधुः "यत्" (४-४-९८)। 5. ಮಾರ್ಗದಲ್ಲಿರುವ, ದಾರಿಯಲ್ಲಿರುವ. पथि भवः "यत्" (४-१-५४)। 6. ಹಿತವಾದ. 7. ಆರೋಗ್ಯಕರವಾದ.

**पथ्या ಪಥ್ಯಾ** (स्त्री०) 1. ಹರೀತಕೀ ವೃಕ್ಷ, ಅಳಲೆ ಗಿಡ. पथोऽनपेता "यत्" (४-४-९२)। 2. ಆರ್ಯಾವೃತ್ತದ ಒಂದು ಭೇದ. ಆರ್ಯಾವೃತ್ತದ ಪೂರ್ವಾರ್ಧ ಮತ್ತು ಉತ್ತರಾರ್ಧಗಳಲ್ಲಿ ಮೊದಲನೆಯ ಮೂರು ಗಣಗಳಿಗೆ ಒಂದು ಪಾದವು ನಿಲ್ಲುವಂತಾದರೆ "**पथ्यार्या**" ವೃತ್ತವಾಗುವುದು. "त्रिष्वंशकेषु पादो दलयोराद्येषु दृश्यते यस्याः। पथ्येति नाम तस्याः छन्दोविद्भिः समाख्यातम्" वृ० र०।

**पथ्यापथ्य ಪಥ್ಯಾಪಥ್ಯ** (न०) ರೋಗಿಗಳಿಗೆ ಹಿತವಾದ ಮತ್ತು ಅಹಿತಕರ ವಸ್ತುಗಳು. पथ्यं च अपथ्यं च अनयोः समाहारः।

**पथ्यावक्त्र ಪಥ್ಯಾವಕ್ತ್ರ** (न०) ಅನುಷ್ಟುಪ್ ಛಂದಸ್ಸಿನ ಒಂದು ಭೇದ. ಯುಗ್ಮ ಪಾದಗಳಲ್ಲಿ ನಾಲ್ಕನೆಯ ಅಕ್ಷರದ ಮುಂದೆ "ಜ" ಗಣವಿದ್ದರೆ "पथ्यावक्त्र" ವೃತ್ತವಾಗುವುದು. ಅಯುಗ್ಮ (1 ಮತ್ತು 3 ನೆಯ) ಪಾದಗಳಲ್ಲಿ "वक्त्र" ವೃತ್ತದ ಲಕ್ಷಣವಿರಬೇಕು. "युजोर्जेन सरिद्भर्तुः पथ्यावक्त्रं प्रकीर्तितम्" वृ० र०।

**पद् ಪದ್** (पुं०) ಪಾದ, ಚರಣ, ಕಾಲು. पद्यते — पद (गतौ) "क्विप्" (३-२-१७८)। "पदङ्घ्रिश्चरणोऽस्त्रियाम्" अम०। "पद्" ಪದವು ಪಾದ ಶಬ್ದಕ್ಕೆ "पद्दन्नोमास्०" (६-१-६३) ಸೂತ್ರದಿಂದ ವಿಹಿತವಾದ "पद्" ಆದೇಶವೆಂದು ಕೆಲವರ ಅಭಿಪ್ರಾಯ.

**पद – गतौ** (दिवा० आत्म० सक० अनि०)। पद्यते पद्येते पद्यन्ते। पेदे पेदाते पेदिरे। पत्ता पत्तारौ पत्तारः। पत्तासे। पत्ताहे। पत्स्यते। पद्यताम्। अपद्यत। ಇತ್ಯಾದಿ. ಹೊಂದು, ಪಡೆ, ಗಳಿಸು. "ज्योतिषामाधिपत्यं च प्रभावं चाप्यपद्यत" भा०। ಹೊಂದು, ಸೇರು, ತಲುಪು.

**कर्मणि :**—पद्यते। पेदे। ಇತ್ಯಾದಿ. ಮೇಲಿನ ರೂಪಗಳಂತಾಗುವುವು.

**णिचि :**—पादयति, –ते। पादयां चकार, –चक्रे, –बभूव, –आस। पादयिता। –सि, –से। –हे। पादयतु, –ताम्। अपादयत्, –त। पादयेत्, –त। ಇತ್ಯಾದಿ.

**सनि :**—पित्सते। पित्सां चक्रे। पित्सिता। पित्सिष्यते। ಇತ್ಯಾದಿ.

**कृत्सु :**—पत्तव्यम्। पदनीयम्। पाद्यम्। पन्नः। पन्नवान्, –वती। पद्यमानः। पत्तुम्। पन्नम्। पदनम्। पत्त्वा। प्रपद्य। पादंपादम्।

**ಉಪಸರ್ಗಗಳ ಯೋಗದಿಂದ ಈ ಧಾತುವಿಗೆ ಉಂಟಾಗುವ ಅರ್ಥಭೇದಗಳು :**

(1) **आ + पद** = आपद्यते। आपेदे। आपद्यमानः। आपादि। आपद्यत। 1. ಸಂಭವಿಸು, ಉಂಟಾಗು, ಆಗು. "निषादविद्धाण्डजदर्शनोत्थः श्लोकत्वमापद्यत यस्य शोकः" रघु० १४-७०। 2. ಸಮೀಪಕ್ಕೆ ಬಾ. "एष रावणिरापादि वानराणां भयङ्करः" भट्टि० १५-८९। 3. ತೊಂದರೆಗೊಳಗಾಗು, ಕಷ್ಟಪಡು.

(2) **उद् + पद** = उत्पद्यते। उदपादि। उत्पत्तिः। उत्पन्नः। 1. ಹುಟ್ಟು, ಉತ್ಪತ್ತಿಹೊಂದು. "उत्पद्यन्ते विलीयन्ते दरिद्राणां मनोरथाः"। "उत्पत्स्यते मम तु कोऽपि समानधर्मा कालो ह्ययं निरवधिर्विपुला च पृथ्वी" मालती० १-८। 2. ಸಂಭವಿಸು, ಸಂಘಟಿಸು. "मम तावदुत्पन्नावसरमर्थित्वं श्रूयताम्" माल० ३।

(3) **प्रति + उत् + पद** = प्रत्युत्पद्यते। प्रत्युत्पन्नः। 1. ಬೇಗ ಉಂಟಾಗು, ಬೇಗ ಉತ್ಪತ್ತಿ ಹೊಂದು. "प्रत्युत्पन्नमतिर्धीमान् व्यवसायी विशारदः। सत्यधर्मपरो यश्च स भिषक्पाद उच्यते" सुश्रुत० सूत्र० ३४। 2. ಮತ್ತೆ ಹುಟ್ಟು, ಪುನಃ ಉತ್ಪತ್ತಿ ಹೊಂದು.

(4) **वि + उत् + पद** = व्युत्पद्यते। व्युत्पत्तिः। व्युत्पन्नः। 1. ಪದನಿಷ್ಪತ್ತಿ, ಶಬ್ದರೂಪಸಾಧನೆ. 2. ಪಾಂಡಿತ್ಯ, ಜ್ಞಾನ, ತಿಳಿವಳಿಕೆ. "व्युत्पत्तिरावर्जितकोविदापि न रञ्जनाय क्रमते जडानाम्" वि० दे० च०।

(5) **उप + पद** = उपपद्यते। उपपेदे। उपपत्तिः। उपपन्नः। 1. ಹೊಂದು, ಸೇರು, ತಲುಪು. "शिशिरतरवातैराप्यायितशरीरः कथंचिदप्युत्थाय यमुनातटमुपपेदे" पञ्चतं० १। 2. ಸಂಭವಿಸು, ದೊರಕು. "त्वदन्यः संशयस्यास्य च्छेत्ता न ह्युपपद्यते" गीता ६-३९। 3. ಆಗು, ಸಾಧ್ಯವಾಗು. "कर्तव्यं वो न पश्यामि स्याच्चेत्किं नोपपद्यते" कुमा० ६-६१। 4. ಅನುರೂಪವಾಗು, ಯೋಗ್ಯವಾಗಿ ಆಗು, ತಕ್ಕಂತೆ ಆಗು. "मा क्लैब्यं गच्छ कौन्तेय नैतत्त्वय्युपपद्यते" गीता २-३।

(6) **अभि+उप+पद**=अभ्युपपद्यते। अभ्युपपत्स्यते। 1. ಅನುಗ್ರಹಿಸು, ಕೃಪೆತೋರು. "तपः कृशामभ्युपपत्स्यते सखीं वृषेव सीतां तदवग्रहक्षताम्" कुमा०

५-६१। 2. ರಕ್ಷಿಸು, ಕಾಪಾಡು. "ब्राह्मणाभ्युपपत्तौ च शपथे नास्ति पातकम्" मनु० ८-११२।

**(7) निस्+पद**-निष्पद्यते। निष्पत्तिः। निष्पन्नः। 1. ಹುಟ್ಟು, ಉತ್ಪತ್ತಿ ಹೊಂದು. "निष्पद्यन्ते च सस्यानि यथोप्तानि विशां पृथक्" मनु० ९-२४७। 2. ಸಿದ್ಧ ರೂಪವನ್ನು ಹೊಂದು, ಪರಿನಿಷ್ಠಿತ ರೂಪವನ್ನು ಹೊಂದು. पदनिष्पत्तिः शब्दनिष्पत्तिः। 3. ಪರಿಣತಿ ಹೊಂದು, ಪಕ್ವಾವಸ್ಥೆಯನ್ನು ಹೊಂದು. "कथमप्यम्भसामन्तरानिष्पत्तेः प्रतीक्षते" कुमा० २-३७।

**(8) प्र+पद**=प्रपद्यते। प्रपेदे। प्रपत्तिः। प्रपन्नः। 1. ಹೊಂದು, ಸೇರು. "सती सती योगविसृष्टदेहा तां जन्मने शैलवधूं प्रपेदे" कुमा० १-२१। 2. ಹೊಂದು, ಪಡೆ, ಗಳಿಸು. "स्फुरत्प्रभामण्डलमध्यवर्ति कान्तं वपुर्व्योमचरं प्रपेदे" रघु० ५-६१। 3. ಸೇರು, ತಲುಪು. "कौत्सः प्रपेदे वरतन्तुशिष्यः" रघु० ५-१। 4. ಅಭಿಪ್ರಾಯ ಪಡು, ಕಾರ್ಯ ಕೈಗೊಳ್ಳಲು ಉದ್ದೇಶಿಸು. "पश्यामो मयि किं प्रपद्यत इति स्थैर्यं मयालम्बितम्" अमरु० २४। 5. ರಕ್ಷಣೆಗಾಗಿ ಆಶ್ರಯ ಹೊಂದು, ಶರಣು ಹೊಂದು. "भूत्वा शरण्या शरणार्थमन्यं कथं प्रपत्स्ये त्वयि दीप्यमाने" रघु० १४-६४। "शिष्यस्तेऽहं शाधि मां त्वां प्रपन्नम्" गीता २-७।

**(9) प्रति+पद**=प्रतिपद्यते। प्रतिपत्तिः। प्रतिपन्नः। प्रतिपद्य। 1. ಅಭಿಪ್ರಾಯಪಡು, ಉದ್ದೇಶಿಸು. "वाहतक, किं प्रतिपद्यते वैदर्भः?" माल० १। 2. ಹೊಂದು, ಪಡೆ. "स राज्यं गुरुणा दत्तं प्रतिपद्याधिकं बभौ" रघु० ४-१। 3. ಸ್ವೀಕರಿಸು, ಅಂಗೀಕರಿಸು. "तद्धनुर्ग्रहणमेव राघवः प्रत्यपद्यत समर्थमुत्तरम्" रघु० ११-७९। 4. ಆಶ್ರಯಿಸು, ಸೇರು. "उमामुखं तु प्रतिपद्य लोला द्विसंश्रयां प्रीतिमवाप लक्ष्मीः" कुमा० १-४३। 5. ಸ್ವೀಕರಿಸು, ತೆಗೆದುಕೊ. "प्रतिपत्तुमङ्ग घटते च न तव नृपयोग्यमर्हणम्" माघ० १५-२२। 6. ಪ್ರಮಾಣದಿಂದ ಸ್ಥಿರಪಡಿಸು, ಸತ್ಯದಿಂದ ಸ್ಥಾಪಿಸು, ನಿದರ್ಶನದಿಂದ ಸಿದ್ಧಪಡಿಸು. "उक्तमेवार्थमुदाहरणेन प्रतिपादयति"। 7. ಕೊಡು, ದಾನಮಾಡು. "गुणवते वराय कन्या प्रतिपादनीया" शाकु० ४। "अर्थिभ्यः प्रतिपाद्यमानमनिशं प्राप्नोति वृद्धिं पराम्" भर्तृ० २-१६। 8. ಗ್ರಹಿಸು, ಹಿಡಿದುಕೊ, ಮುಷ್ಟಿಯಿಂದ ಹಿಡಿ. "रथं सुमन्त्रप्रतिपन्नरश्मिमारोप्य वैदेहसुतां प्रतस्थे" रघु० १४-४७। 9. ಅಂಗೀಕರಿಸು, ಒಪ್ಪು, ಸಮ್ಮತಿಸು. "कार्यं त्वया नः प्रतिपन्नकल्पम्" कुमा० ३-१४। "निर्वाहः प्रतिपन्नवस्तुषु सतामेतद्धि गोत्रव्रतम्" मुद्रा० २-१८।

**(10) वि+प्रति+पद**=विप्रतिपद्यते। विप्रतिपत्तिः। ತತ್ತ್ವವನ್ನು ತಿಳಿಯಲಾಗದೆ ಸಂಶಯಪಡು. पर्वतो वह्निमान् पर्वतो वह्न्यभाववान् इति वादिप्रतिवादिनोर्वदिन मध्यस्थस्य तत्त्वावधारणे विप्रतिपत्तिः"।

**(11) वि+पद** = विपद्यते। विपन्नः। 1. ಮೃತಿ ಹೊಂದು, ಮರಣ ಹೊಂದು. "हा तात एष ते नरेन्द्रचित्ताराधनोपकरणं जनो विपद्यते" मालती० ५। 2. ತೊಂದರೆಗೊಳಗಾಗು. "स बन्धुर्यो विपन्नानामापदुद्धरणक्षमः" हितो०।

**(12) सम्+पद** = संपद्यते। संपत्स्यते। सम्पत्। सम्पत्तिः। "सम्पत्स्यते वः कामोऽयं कालः कश्चित् प्रतीक्ष्यताम्" कुमा० २-५४।

**पद ಪದ** (नं०) 1. ವ್ಯವಸಾಯ, ಉದ್ಯೋಗ. पद (गतौ) "अच्" (३-१-१३४)। 2. ತ್ರಾಣ, ರಕ್ಷಣೆ. 3. ಸ್ಥಾನ, ಜಾಗ. "दधौ पदं व्योम्नि सुरारिवाहिनीरुपर्युपर्येरयनिवारितातपा" कुमा० १५-१४। "अविवेकः परमापदां पदम्" किरा० २-३०। 4. ವಸ್ತು. "अनारतं तेन पदेषु लम्भिता विभज्य सम्यग्विनियोगसत्क्रियाः" किरा० १-१५। 5. ಪಾದ, ಚರಣ, ಕಾಲು. "त्यक्त्वा त्वरां व्रज पदैः स्खलितैरयं ते खेदं गमिष्यति गुरुर्नितरां नितम्बः" रत्ना० २-१६। 6. ಕಾಲಿನ ಹೆಜ್ಜೆ, ಕಾಲಿನ ಅಡಿ. "दर्भाङ्कुरेण चरणः क्षत इत्यकाण्डे तन्वी स्थिता कतिचिदेव पदानि गत्वा" शाकु० २-१२। 7. ಪಾದನ್ಯಾಸ, ಕಾಲಡಿಯಿಟ್ಟು ನಡೆಯುವುದು. "आरट्टजश्चटुलनिष्ठुरपातमुच्चैश्चित्रं चकार पदमर्धपुलायितेन" माघ० ५-१०। 8. ಹೆಜ್ಜೆಯಿಟ್ಟ ಜಾಗ, ಹೆಜ್ಜೆಯ ಗುರುತು. "पदं तुषारस्रुतिधौतरक्तं यस्मिन्नदृष्ट्वापि हतद्विपानाम्" कुमा० १-६। 9. ಅಧಿಕಾರ, ಗೌರವ ಸ್ಥಾನ. "यान्त्येवं गृहिणीपदं युवतयो वामाः कुलस्याधयः" शाकु० ४-१७। 10. ಗುರುತು, ಚಿಹ್ನೆ. "वामश्चास्याः कररुहपदैर्मुच्यमानो मदीयैर्मुक्ताजालं चिरपरिचितं त्याजितो दैवगत्या" मेघ० २-३३। 11. ವ್ಯಾಜ, ನೆಪ. "द्रुततरपदपातमापपात प्रियमिति कोपपदेन कापि सख्या" माघ० ७-१४। 12. ಕಾರಣ. "वस्त्वेकैकमपीह वाञ्छितफलप्राप्तेः पदं किं पुनः" रत्ना० १-५।

13. ವಾಸಸ್ಥಾನ. "नियता लघुता निरायतेरगरीयान् न पदं नृपश्रियः" किरा० २-१४। 14. ಪದವಿ, ಅಧಿಕಾರಸ್ಥಾನ. "केनाभ्यसूया पदकाङ्क्षिणा ते नितान्तदीर्घैर्जनिता तपोभिः" कुमा० ३-४। 15. ವಾಕ್ಯ. "त्वामुत्कण्ठाविरचितपदं मन्मुखेनेदमाह" मेघ० २-४०। 16. ಗೋಚರ, ವಿಷಯ. "पदं दृशः स्याः कथमीश मादृशाम्" माघ० १-३७। 17. ಸಾಯಕ, ಬಾಣ. 18. ಕಿರಣ. 19. ಒಳಗಿನ ಪ್ರದೇಶ, ಅಂತರ. ಅವಕಾಶ. "पदं स्थाने शरे त्राणे पादाङ्के पादचिह्नयोः। शब्देषु-वस्तुवाक्येषु व्यवसायापदेशयोः" वैज०। 20. ಶ್ಲೋಕದ ನಾಲ್ಕನೆಯ ಒಂದು ಭಾಗ, ಒಂದು ಪಾದ. "श्लोकपादः पदं केचित्सुप्तिङन्तमथापरे। परेऽवान्तरवाक्यैकस्वरूपं पदमूचिरे" नाट्यप्रदीपः। 21. ವೇದವಾಕ್ಯಗಳ ಪದಗಳನ್ನು ಬಿಡಿಸಿ ಹೇಳುವುದು. 22. ಸುಬನ್ತ ಮತ್ತು ತಿಙನ್ತ ರೂಪಗಳು. "सुप्तिङन्तं पदम्" (१-४-१४)। ಪ್ರಯೋಗಕ್ಕೆ ಅರ್ಹವಾದ ಅರ್ಥವತ್ತಾದ ವರ್ಣಗಳು ಪದವಾಗುವುವು. "वर्णाः पदं प्रयोगार्हानन्वितैकार्थबोधकाः" सा० द० २-२। "पदं व्याजाङ्घ्रितच्चिह्नस्थानत्राणांशुलक्ष्मसु। व्यवसाये सुप्तिङन्ते सायके वस्तुवाक्ययोः" नानार्थर०। ಪದವು ನಾಮ ಆಖ್ಯಾತ ಉಪಸರ್ಗ ಮತ್ತು ನಿಪಾತಗಳೆಂದು ನಾಲ್ಕು ವಿಧ. ನಾಮಪದವು (1) ರೂಢ (2) ಲಕ್ಷಕ (3) ಯೋಗರೂಢ ಮತ್ತು (4) ಯೌಗಿಕಗಳೆಂದು ನಾಲ್ಕು ವಿಧ. [ವಿವರಕ್ಕೆ "नामन्" ಪದದಲ್ಲಿ ನೋಡಿ.] ತಿಙನ್ತ ಪದವು ಆಖ್ಯಾತ ವೆನಿಸುವುದು. करोति पचति ಇತ್ಯಾದಿ. लघुशब्देन्दुशे०। प्र परा अप सम् ಇತ್ಯಾದಿಗಳು ಉಪಸರ್ಗಗಳು. ಅದ್ರವ್ಯ ವಾಚಕ चादि ಗಳು ನಿಪಾತಸಂಜ್ಞೆಯುಳ್ಳ ಪದಗಳು, ಲಿಂಗ ಸಂಖ್ಯಾ ಮತ್ತು ಕಾರಕಗಳಿಂದ ಕೂಡಿದುದು ದ್ರವ್ಯ. ಚಾದಿಗಳು ಅದ್ರವ್ಯ ವಾಚಕಗಳು. ನೈಯಾಯಿಕರು ಮುಖ್ಯ ಮತ್ತು ಗೌಣಗಳೆಂದು ಪದವನ್ನು ಎರಡು ವಿಧವಾಗಿ ಹೇಳುವರು. ಮುಖ್ಯಪದವು ಯೌಗಿಕ ರೂಢ ಯೋಗರೂಢ ಮತ್ತು ಯೌಗಿಕರೂಢಗಳೆಂದು ನಾಲ್ಕು ವಿಧ. पाचक ಮೊದಲಾದುದು ಯೌಗಿಕ. गौः मण्डपम् ಮೊದಲಾದುವು ರೂಢ. पङ्कज ಮೊದಲಾದುದು ಯೋಗರೂಢ. उद्भिद ಮೊದಲಾದುದು ಯೌಗಿಕರೂಢ. ಅಲಂಕಾರಿಕರು ವಾಚಕ ಲಕ್ಷಕ ಮತ್ತು ವ್ಯಂಜಕಗಳೆಂದು ಮೂರು ವಿಧವಾಗಿ ಹೇಳುತ್ತಾರೆ.

**पदक ಪದಕ** (पुं०) 1. ವೇದದ ಪದಪಾಠವನ್ನು ಅಧ್ಯಯನ ಮಾಡುವವನು. 2. ಪದಪಾಠವನ್ನು ತಿಳಿದವನು. पदमधीते वेद वा "वुन्" (४-२-६१)। 3. ಕಂಠಾಭರಣ, ಅಡ್ಡಿಗೆ ಮತ್ತು ಸರಗಳಿಗೆ ಹಾಕುವ ಪದಕ.]

**पदक्रमक ಪದಕ್ರಮಕ** (पुं०) ವೇದದ ಪದ ಮತ್ತು ಕ್ರಮ ಪಾಠಗಳನ್ನು ಅಧ್ಯಯನ ಮಾಡುವ ಮತ್ತು ತಿಳಿದಿರುವವನು. पदक्रमौ वेत्त्यधीते वा "वुन्" (४-२-६१)।

**पदग ಪದಗ** (पुं०) ಪದಾತಿ, ಕಾಲಾಳು. पादाभ्यां गच्छति — गम्लृ (गतौ) "डः" (वा० ३-२-४८)। पादस्य "पद" आदेशः (६-३-५२)।

**पदच्छेद ಪದಚ್ಛೇದ** (पुं०) ಪದಗಳನ್ನು ಬಿಡಿಸುವುದು, ಪದಗಳನ್ನು ಬೇರ್ಪಡಿಸುವುದು.

**पदच्युत ಪದಚ್ಯುತ** (वि०) ಅಧಿಕಾರ ಸ್ಥಾನದಿಂದ ಕೆಳಕ್ಕೆ ಇಳಿದವನು, पदात् च्युतः।

**पदन्यास ಪದನ್ಯಾಸ** (पुं०) 1. ಪಾದನಿಕ್ಷೇಪ, ಕಾಲಡಿಯನ್ನಿಡುವುದು, ಹೆಜ್ಜೆಯಿಡುವುದು. 2. ವಾಕ್ಯಗಳನ್ನು ಬರೆಯುವುದು.

**पदपङ्क्ति ಪದಪಙ್ಕ್ತಿ** (स्त्री०) 1. ಕಾಲಿನ ಹೆಜ್ಜೆಗಳ ಸಾಲು. पदानां पङ्क्तिः। "द्वारेऽस्य पाण्डुसिकते पदपङ्क्तिर्दृश्यतेऽभिनवा" शाकु० ३-५। 2. ಪದಗಳ ಸಾಲು, ಪದಗಳ ಆನುಪೂರ್ವಿ. "अनुपमशमदीप्ततागरीयान् कृतपदपङ्क्तिरथर्वणेव वेदः" किरा० १०-१०।

**पदपाठ ಪದಪಾಠ** (पुं०) ವೇದಮಂತ್ರಗಳ ಪದಗಳನ್ನು ಬಿಡಿಸಿ ಹೇಳುವ ಗ್ರಂಥ.

**पदभञ्जन ಪದಭಂಜನ** (न०) ನಿರುಕ್ತ ಗ್ರಂಥ.

**पदमञ्जरी ಪದಮಂಜರೀ** (स्त्री०) ಹರದತ್ತ ವಿರಚಿತವಾದ ಒಂದು ವ್ಯಾಕರಣ ಗ್ರಂಥ.

**पदरथी ಪದರಥೀ** (स्त्री०) ಚಪ್ಪಲಿ, ಪಾದರಕ್ಷೆ.

**पदवी ಪದವೀ** (स्त्री०) 1. ಮಾರ್ಗ, ದಾರಿ. पद्यतेऽनया — पद (गतौ) "अविः"। वा "ङीष्" (ग० ४-१-४५)। पक्षे — विः — वीः. "उत्सृष्टलीलागतिरागवाक्षादलक्तकाङ्कां पदवीं ततान" कुमा० ७-५८। 2. ಅಧಿಕಾರಸ್ಥಾನ. 3. ಸದಾಚಾರ, ಸದ್ವರ್ತನೆ, ಒಳ್ಳೆಯ ನಡತೆ.

**पदष्ठीव ಪದಷ್ಠೀವ** (न०) ಕಾಲು ಮತ್ತು ಮಂಡಿಗಳು. पादौ च अष्ठीवन्तौ च "अच्" पादस्य पद्भावश्च निपा० (५-४-७७)।

**पदाजि ಪದಾಜಿ** (पुं०) 1. ಪದಾತಿ, ಕಾಲಾಳು, ಕಾಲ್ಬಲ. पादाभ्यामजति — अज (गतिक्षेपणयोः) "इण्" (उ० ४-१-३१)। पादस्य "पद" आदेशः (६-३-५२)। 2. ಯುದ್ಧ. 3. ರಶ್ಮಿ. "पदाजिर्युधि मार्गे च" वैज०।

**पदाति ಪದಾತಿ** (ಪುಂ) ಕಾಲಾಳು, ಕಾಲ್ಬಲ. पादाभ्यामतति —अत (सातत्यगमने) "इण्" (उ० ४-१३१)। पादस्य "पद" आदेशः (६-३-५२)। "पत्तिः पदातिरथिनं रथेशः तुरङ्गसादी तुरगाधिरूढम्" रघु० ७-३७। "आलापैरिव गान्धर्वमदीप्यत पदातिभिः" माघ० १९-४७।

**पदातिक ಪದಾತಿಕ** (ಪುಂ) ಕಾಲಾಳು, ಕಾಲ್ಬಲ. पदाति स्वार्थे "कः"।

**पदार ಪದಾರ** (ಪುಂ) 1. ಕಾಲಿನ ಧೂಳು. 2. ಕಾಲಿನ ಮೇಲುಭಾಗ. "पदारः पादधूलौ स्यात् पादालिन्देऽपि पुंस्ययम्" मेदि०।

**पदार्थ ಪದಾರ್ಥ** (ಪುಂ) ಶಬ್ದದಿಂದ ಹೇಳಲ್ಪಡುವ ವಸ್ತು, –ದ್ರವ್ಯ ಮೊದಲಾದುದು. पदस्यार्थः। ಜಾತಿ ಆಕೃತಿ ಮತ್ತು ವ್ಯಕ್ತಿ ಈ ಮೂರೂ ಸೇರಿ ಪದಾರ್ಥವೆನಿಸುವುದು. "घटमानय" ಎಂಬಲ್ಲಿ ಘಟತ್ವಾತ್ಮಕ ಜಾತಿ ಕಂಬುಗ್ರೀವಾದಿ ಆಕೃತಿ ತದ್ವಿಶಿಷ್ಟವಾದ ಒಂದು ವ್ಯಕ್ತಿವಿಶೇಷವು ಘಟ ಪದದ ಅರ್ಥ. ಪದಾರ್ಥವು भावः ಮತ್ತು अभावः ಎಂದು ಎರಡು ವಿಧ. भाव ಪದಾರ್ಥಗಳು (1) द्रव्यम् (2) गुणः (3) कर्म (4) सामान्यम् (5) विशेषः ಮತ್ತು (6) समवायः ಎಂದು ಆರು ವಿಧ. अभाव ಪದಾರ್ಥಗಳು (1) प्रागभावः (2) प्रध्वंसाभावः (3) अत्यन्ताभावः ಮತ್ತು (4) अन्योन्याभावः ಎಂದು ನಾಲ್ಕು ವಿಧ. ಇದು ತಾರ್ಕಿಕರ ಮತ.

**ಅದ್ವೈತ ಸಿದ್ಧಾಂತ**ದಲ್ಲಿ तत्त्वम् (चित्) ಮತ್ತು अतत्त्वम् (अचित्) ಎಂದು ಪದಾರ್ಥವು ಎರಡು ವಿಧ. ಯಾವ ಕಾಲದಲ್ಲೂ ಬಾಧೆಯಿಲ್ಲದ ಮತ್ತು ನಿವೃತ್ತಿಯಿಲ್ಲದ ಶಾಶ್ವತ ಬ್ರಹ್ಮನು ತತ್ತ್ವ. ಇವನು ಜ್ಞಾನಾನಂದ ಸ್ವರೂಪನು. ನಿತ್ಯ ಶುದ್ಧ ಬುದ್ಧ ಮುಕ್ತಸ್ವರೂಪನು. ಎಲ್ಲಾ ವಿಧದಲ್ಲೂ ಇದಕ್ಕೆ ವ್ಯತಿರಿಕ್ತವಾದುದು ಅತತ್ತ್ವ. ಇದು ಅನಿರ್ವಾಚ್ಯ ಮತ್ತು ಅತ್ಯಂತಾಸತ್ ಎಂದು ಎರಡು ವಿಧ. ಪ್ರತ್ಯಕ್ಷವಾದ ಗವಾಶ್ವಘಟಪಟಾದಿಗಳು ಅನಿರ್ವಾಚ್ಯ. ಶಶಶೃಂಗ ಕೂರ್ಮರೋಮ ಮೊದಲಾದುವು ಅತ್ಯಂತಾಸತ್ ಪದಾರ್ಥ.

**ವಿಶಿಷ್ಟಾದ್ವೈತ ಸಿದ್ಧಾಂತ**ದಲ್ಲಿ चित् अचित् ಮತ್ತು ईश्वरः ಎಂದು ಪದಾರ್ಥಗಳು ಮೂರು.

**ದ್ವೈತ ಸಿದ್ಧಾಂತ**ದಲ್ಲಿ स्वतन्त्रः ಮತ್ತು परतन्त्रः ಎಂದು ಪದಾರ್ಥಗಳು ಎರಡು.

**ಶೈವದರ್ಶನ**ದಲ್ಲಿ (1) पतिः (2) पशुः ಮತ್ತು (3) पाशः ಎಂದು ಪದಾರ್ಥಗಳು ಮೂರು. "केचन माहेश्वराः कर्मादिसापेक्षः परमेश्वरः कारणमिति पक्षं कक्षीकुर्वाणाः पक्षान्तरमुपक्षिपन्ति पतिपशुपाशभेदास्त्रयः पदार्थाः" इति। "त्रिपदार्थं चतुष्पादं महातन्त्रं जगद्गुरुः। सूत्रेणैकेन संक्षिप्य प्राह विस्तरतः पुनः" स० द० सं०।

**ವೈಶೇಷಿಕದರ್ಶನ**ಕಾರರು (1) द्रव्यम् (2) गुणः (3) कर्म (4) सामान्यम् (5) विशेषः ಮತ್ತು (6) समवायः ಎಂದು ಆರು ಪದಾರ್ಥಗಳು ಎಂದು ಹೇಳುತ್ತಾರೆ.

**ಸಾಂಖ್ಯ ಮತ್ತು ಪಾತಂಜಲ ದರ್ಶನ**ಕಾರರು (1) द्रव्यम् (2) गुणः (3) कर्म ಮತ್ತು (4) सामान्यम् ಎಂದು ಪದಾರ್ಥಗಳು ನಾಲ್ಕು ಮಾತ್ರ ಎಂದು ಹೇಳುತ್ತಾರೆ.

**ಪ್ರಾಭಾಕರ ಮತ**ದಲ್ಲಿ (1) द्रव्यम् (2) गुणः (3) कर्म (4) सामान्यम् (5) सङ्ख्या (6) समवायः (7) सादृश्यम् ಮತ್ತು (8) शक्तिः ಎಂದು ಎಂಟು ಪದಾರ್ಥಗಳನ್ನು ಅಂಗೀಕರಿಸಿರುತ್ತಾರೆ.

**पदालिक ಪದಾಲಿಕ** (ಪುಂ) ಕಾಲಿನ ಮೇಲುಭಾಗ. पदस्य अलिकमिव।

**पदिक ಪದಿಕ** (ಪುಂ) ಪದಾತಿ, ಕಾಲಾಳು. पादाभ्यां चरति—"ष्ठन्" (४-४-१०)। पादस्य पद्भावः (वा० ६-३-५३)।

**पद्ग ಪದ್ಗ** (ಪುಂ) ಪದಾತಿ, ಕಾಲಾಳು. पद्भ्यां गच्छति—गम्लृ (गतौ) "डः" (वा० ३-२-४८)।

**पद्धति ಪದ್ಧತಿ** (ಸ್ತ್ರೀಂ) 1. ಮಾರ್ಗ, ದಾರಿ. पादाभ्यां हतिः—पादस्य पद्भावः (६-३-५४)। "पथः श्रुतेर्दर्शयितार ईश्वरा मलीमसामाददते न पद्धतिम्" रघु० ३-४६। 2. ಪಙ್ಕ್ತಿ, ಸಾಲು, ಶ್ರೇಣಿ. "पद्धतिः पङ्क्तिवर्त्मनोः" मेदि०।

**पद्धिम ಪದ್ಧಿಮ** (ನಂ) ಕಾಲು ಶೀತವಾಗಿರುವುದು, ಕಾಲು ತಣ್ಣಗಿರುವುದು. पादस्य हिमम्—पादस्य पद्भावः (६-३-५४)।

**पद्म ಪದ್ಮ** (ಪುಂನಂ) 1. ಕಮಲ, ತಾವರೆ. पद्यते—पद (गतौ) "मन्" (उ० १-१३७)। "अधारि पद्मेषु तदङ्घ्रिणा घृणा क्व तच्छयच्छायलवोऽपि पल्लवे" नैष० १-२०। (ನಂ) 2. ಆನೆಯ ಮುಖ ಮತ್ತು ಸೊಂಡಿಲುಗಳ ಮೇಲೆ ಇರುವ ಬಣ್ಣ ಬಣ್ಣದ ಚುಕ್ಕೆಗಳು. 3. ಸೇನೆಗಳ ಒಂದು ವ್ಯೂಹ, ಪದ್ಮಾಕಾರವಾಗಿ ನಿಲ್ಲಿಸುವ

ಸೇನೆಗಳ ಒಂದು ಗುಂಪು. "पद्मेन चैव व्यूहेन निविशेत सदा स्वयम्" मनु० ७-१८८। 4. ದೇಹದೊಳಗಿರುವ ನಾಡಿ, ಚಕ್ರರೂಪವಾದ ಕಮಲ, ಬ್ರಹ್ಮರಂಧ್ರದಲ್ಲಿರುವ ಸಹಸ್ರದಳಾತ್ಮಕವಾದ ಕಮಲ. "कण्ठे स्यात् षोडशदलं भ्रूमध्ये द्वीतिसंमितम्। सहस्रदलमाख्यातं ब्रह्मरन्ध्रे तु पङ्कजम्"। 5. ಕುಬೇರನ ನವನಿಧಿಗಳಲ್ಲೊಂದು. 6. ಒಂದು ಸಂಖ್ಯೆ, 1000000000000000000 7. ಸರ್ಪ, ಹಾವು. "पद्मः स्यात् पन्नगे व्यूहे निधौ संख्यान्तरेऽम्बुजे। पद्मके बिन्दुजालेऽपि" विश्व०। 8. ಹಳದಿ ಕಪ್ಪು ಮತ್ತು ಬಿಳುಪು ಇವುಗಳ ಮಿಶ್ರವರ್ಣ. 9. ಮೈಮೇಲಿನ ಕಪ್ಪು ಮಚ್ಚೆ, ಸಂಗಾತಿಯೆಂಬ ಕಪ್ಪು ಚುಕ್ಕಿ. 10. ಒಂದು ವಿಧ ರತಿಬಂಧ.

**पद्मक ಪದ್ಮಕ** (ನ०) 1. ಆನೆಯ ಮುಖ ಮತ್ತು ಸೊಂಡಿಲುಗಳ ಮೇಲಿರುವ ಹೂವಿನ ಆಕಾರದ ಗುರುತು. 2. ಪದ್ಮಾಕಾರದಲ್ಲಿ ನಿಲ್ಲಿಸಿರುವ ಸೈನ್ಯದ ಗುಂಪು. पद्ममिव "कन्" (५-३-९६)। 3. ಒಂದು ಮೂಲಿಕೆ.

**पद्मकर ಪದ್ಮಕರ** (ಪುं०) 1. ಪದ್ಮವನ್ನು ಹಸ್ತದಲ್ಲಿ ಧರಿಸಿರುವ ವಿಷ್ಣು. पद्मं करेऽस्य। (वि०) 2. ಕೈಯಲ್ಲಿ ಕಮಲವನ್ನು ಹಿಡಿದಿರುವ.

**पद्मकन्द ಪದ್ಮಕಂದ** (ಪುं०) ತಾವರೆಯ ಗಡ್ಡೆ.

**पद्मकिन् ಪದ್ಮಕಿನ್** (ಪುं०) ಗಜ, ಆನೆ.

**पद्मचारिणी ಪದ್ಮಚಾರಿಣೀ** (स्त्री०) ಬೆಟ್ಟದಾವರೆ, ಅಂತರದಾವರೆ.

**पद्मज ಪದ್ಮಜ** (ಪುं०) 1. ಬ್ರಹ್ಮ, ಚತುರ್ಮುಖ. पद्माज्जायते — जनी (प्रादुर्भावे) "ड:" (३-२-९८)। एवं **पद्मजात:—भव:—भू:—संभव:** ಇತ್ಯಾದಿ. (वि०) 2. ಕಮಲದಿಂದ ಉಂಟಾದ.

**पद्मतन्तु ಪದ್ಮತಂತು** (ಪುं०) ತಾವರೆ ದಂಟಿನ ನಾರು, ತಾವರೆ ದಂಟಿನ ಸಣ್ಣ ಎಳೆ.

**पद्मनाभ ಪದ್ಮನಾಭ** (ಪುं०) ವಿಷ್ಣು. पद्मं नाभौ यस्य। "अच्" (५-४-७५)। "पद्मनाभोऽरविन्दाक्षः पद्मगर्भः शरीरभृत्" वि० स०। "पद्मनाभचरणाङ्कितास्मसु प्राप्तवत्स्वमृतविप्रुषो नवाः" कुमा० ८-२३।

**पद्मनाल ಪದ್ಮನಾಲ** (ನ०) ತಾವರೆಯ ದಂಟು.

**पद्मनेत्र ಪದ್ಮನೇತ್ರ** (वि०) ಕಮಲದಂತೆ ಕಣ್ಣುಗಳುಳ್ಳ. पद्ममिव नेत्रं यस्य।

**पद्मपत्र ಪದ್ಮಪತ್ರ** (ನ०) 1. ತಾವರೆಯ ದಳ. 2. ನೆಲದಾವರೆಯ ಗೆಡ್ಡೆ.

**पद्मपाणि ಪದ್ಮಪಾಣಿ** (ಪುं०) 1. ಬ್ರಹ್ಮ, ಚತುರ್ಮುಖ. 2. ಬುದ್ಧದೇವ. 3. ಸೂರ್ಯ. 4. ವಿಷ್ಣು. पद्मं पाणौ यस्य। (वि०) 5. ಕಮಲವನ್ನು ಕೈಯಲ್ಲಿ ಹಿಡಿದಿರುವ.

**पद्मपुराण ಪದ್ಮಪುರಾಣ** (ನ०) ವ್ಯಾಸಮಹರ್ಷಿಯಿಂದ ರಚಿತವಾದ ಅಷ್ಟಾದಶ ಪುರಾಣಗಳಲ್ಲೊಂದು.

ಈ ಪುರಾಣದಲ್ಲಿ ಪ್ರತಿಪಾದಿತವಾಗಿರುವ ವಿಷಯ : ಪುಲಸ್ತ್ಯಋಷಿಯು ಭೀಷ್ಮಾಚಾರ್ಯರಿಗೆ ಸೃಷ್ಟ್ಯಾದಿ ಕ್ರಮದಲ್ಲಿ ಅನೇಕ ಇತಿಹಾಸ ಮತ್ತು ಆಖ್ಯಾನಗಳೊಡನೆ ಹೇಳಿದ ಧರ್ಮಗಳು, ಪುಷ್ಕರದ ಮಾಹಾತ್ಮ್ಯ ಬ್ರಹ್ಮಯಜ್ಞಕ್ರಮ ವೇದಪಾಠಲಕ್ಷಣ ದಾನಗಳ ವಿಷಯ ಪಾರ್ವತಿಯ ಕಲ್ಯಾಣ ತಾರಕಾಸುರವೃತ್ತಾಂತ ಇತ್ಯಾದಿ ಅನೇಕ ವಿಷಯಗಳು ವಿಸ್ತಾರವಾಗಿ ಪ್ರತಿಪಾದಿತವಾಗಿವೆ.

**पद्मप्रिया ಪದ್ಮಪ್ರಿಯಾ** (स्त्री०) 1. ಜರತ್ಕಾರು ಮಹರ್ಷಿಯ ಪತ್ನಿ, ಮನಸಾದೇವಿ. 2. ಲಕ್ಷ್ಮಿ.

**पद्मबन्धु ಪದ್ಮಬಂಧು** (ಪುं०) 1. ರವಿ, ಸೂರ್ಯ. पद्मस्य बन्धुः। 2. ಅರ್ಕವೃಕ್ಷ, ಎಕ್ಕದ ಗಿಡ. 3. ಭ್ರಮರ, ದುಂಬಿ. 4. ಹಗಲು.

**पद्मभू ಪದ್ಮಭೂ, —योनि —ಯೋನಿ** (ಪುं०) ಬ್ರಹ್ಮ, ಚತುರ್ಮುಖ. पद्मात् विष्णुनाभिकमलात् भवति — भू (सत्तायाम्) "क्विप्" (३-२-१७९)। पद्मं योनिरस्य।

**पद्ममुख ಪದ್ಮಮುಖ** (वि०) ಕಮಲದಂತೆ ಮುಖವುಳ್ಳ. पद्ममिव मुखं यस्य। स्त्रियां "ङीष्" (४-१-५४)। **—मुखी —ಮುಖೀ.** "चित्ते ममैकः सकलत्रिलोकीसारो निधिः पद्ममुखः स एव" नैष० ३-८१।

**पद्मयोनि ಪದ್ಮಯೋನಿ** (ಪುं०) ಬ್ರಹ್ಮ, ಚತುರ್ಮುಖ.

**पद्मराग ಪದ್ಮರಾಗ** (ಪುं०) ಕೆಂಪು, ಮಾಣಿಕ್ಯ, ಕೆಂಪುಬಣ್ಣದ ಮಣಿ. पद्मस्येव रागोऽस्य। "अशोकनिर्भर्त्सितपद्मरागमाकृष्टहेमद्युतिकर्णिकारम्" कुमा० ३-५३। "पद्मरागदलत्विषा" माघ० २-२९।

**पद्मरेखा ಪದ್ಮರೇಖಾ** (स्त्री०) ಅಂಗೈಯಲ್ಲಿರುವ ಪದ್ಮಾಕಾರದ ಗೆರೆ. पद्माकारा रेखा। ಪದ್ಮರೇಖೆಯು ಧನಲಾಭವನ್ನು ಸೂಚಿಸುವುದು.

**पद्मलाञ्छन ಪದ್ಮಲಾಂಛನ** (ಪುं०) 1. ಬ್ರಹ್ಮ, ಚತುರ್ಮುಖ. 2. ಸೂರ್ಯ. 3. ಕುಬೇರ. पद्मं लाञ्छनं यस्य। 4. ರಾಜ, ದೊರೆ. (स्त्री०) **—लाञ्छना —ಲಾಂಛನಾ.** 5. ಲಕ್ಷ್ಮಿ. 6. ಸರಸ್ವತಿ. 7. ತಾರೆ. "स्यात्पद्मलाञ्छनो लोकेश्वरे ब्रह्मणि भास्करे। धनदे

च स्त्रियां तारालक्ष्मीवाग्देवतासु च" मेदि०। (वि०) 8. ಪದ್ಮರೇಖೆಯುಳ್ಳ.

**पद्मवासा ಪದ್ಮವಾಸಾ** (स्त्री०) ಲಕ್ಷ್ಮಿ. पद्मं वासोऽस्याः।

**पद्मा ಪದ್ಮಾ** (स्त्री०) 1. ಲಕ್ಷ್ಮಿ. पद्ममस्त्यस्याः "अच्" (५-२-१२७)। "पद्मा पद्मातपत्रेण भेजे साम्राज्यदीक्षितम्" रघु० ४-५। 2. ಲವಂಗ. 3. ಚಿಟ್ಟದಾವರೆ. 4. ಮನಸಾದೇವಿ. 5. ಬೃಹದ್ರಥರಾಜನ ಮಗಳು, ಕಲ್ಕಿದೇವನ ಪತ್ನಿ. 6. ಪಂಜಿಕೆ, ವ್ಯಾಖ್ಯಾನ, ಟೀಕೆ. "पद्मोऽस्त्री पद्मके व्यूहनिधिसंख्यान्तरेऽम्बुजे। ना नागे स्त्री फञ्जिकाश्रीचारटीपन्नगीषु च" मेदि०। 7. ಭಾರಂಗಿ ಗಿಡ. "हञ्जिका ब्राह्मणी पद्मा" अम०।

**पद्माकर ಪದ್ಮಾಕರ** (पुं०) 1. ತಾವರೆ ಹೂವುಗಳಿಂದ ತುಂಬಿದ ಕೆರೆ ಮುಂತಾದ ಜಲಾಶಯ. 2. ಸರೋವರ. पद्मानामाकरः। 3. ಕಮಲ ವನ. "पद्माकराणां परिषन्निवेशे" याद० १२-४।

**पद्माक्ष ಪದ್ಮಾಕ್ಷ** (पुं०) 1. ವಿಷ್ಣು. पद्ममिवाक्षिणी यस्य "षच्" (५-४-११३)। (न०) 2. ತಾವರೆಯ ಬೀಜ. (वि०) 3. ತಾವರೆಯಂತೆ ಕಣ್ಣುಗಳುಳ್ಳ. स्त्रियां "ङीष्" (४-१-४१)। –क्षी –ಕ್ಷೀ.

**पद्माट ಪದ್ಮಾಟ** (पुं०) ಚಕ್ರಮರ್ದ ವೃಕ್ಷ, ತಗಚೆ ಗಿಡ. पद्ममिवाटति — अट (गतौ) "अच्" (३-१-१३४)।

**पद्मालय ಪದ್ಮಾಲಯ** (पुं०) 1. ಬ್ರಹ್ಮ, ಚತುರ್ಮುಖ. पद्ममालयो यस्य। (स्त्री०) 2. –आलया –ಆಲಯಾ. ಲಕ್ಷ್ಮಿ. पद्ममालयो यस्याः। 3. ಲವಂಗ.

**पद्मावती ಪದ್ಮಾವತೀ** (स्त्री०) 1. ಲಕ್ಷ್ಮಿ. पद्ममस्या अस्ति "मतुप्" (५-२-९४)। मस्य वः (८-२-९)। संज्ञायां दीर्घः। 2. ವಿದರ್ಭ (ಈಗಿನ ಬೀರಾರ್) ದೇಶದ ಒಂದು ನಗರ. "मन्त्रिणा देवरातेन माधवं पुत्रमान्वीक्षिकीश्रवणाय कुण्डिनपुरादिमां पद्मावतीं प्रहिण्वता सुविहितम्" मालती० १। 3. ಒಂದು ನದಿ. 4. ಚಿಟ್ಟದಾವರೆ ಗಿಡ. 5. ಜರತ್ಕಾರು ಋಷಿಯ ಪತ್ನಿ ಮನಸಾದೇವಿ.

**पद्मासन ಪದ್ಮಾಸನ** (पुं०) 1. ಬ್ರಹ್ಮ, ಚತುರ್ಮುಖ. पद्ममासनं यस्य। 2. ಪದ್ಮರೂಪವಾದ ಆಸನ. "प्रणेमतुस्तौ पितरौ प्रजानां पद्मासनस्थाय पितामहाय" कुमा० ७-८६। 3. ಯೋಗಾಂಗವಾದ ಒಂದು ಆಸನ. ಎಡಮಂಡಿಯ ಮೇಲೆ ಬಲಗಾಲನ್ನೂ ಬಲಮಂಡಿಯ ಮೇಲೆ ಎಡಗಾಲನ್ನೂ ಇಟ್ಟುಕೊಂಡು ಎರಡು ಕೈಗಳನ್ನೂ ಹಿಂಭಾಗದಿಂದ ತಂದು ಅಂಗುಷ್ಠಗಳನ್ನು ಭದ್ರವಾಗಿ ಹಿಡಿದುಕೊಂಡು ಗಲ್ಲ (ಚಿಬುಕ) ವನ್ನು ಎದೆಯ ಮೇಲೆ ಇಟ್ಟು ನಾಸಾಗ್ರವನ್ನು ನೋಡುತ್ತ ಕೂಡುವುದು ಪದ್ಮಾಸನ. "वामोरूपरि दक्षिणं च चरणं संस्थाप्य वामं तथा दक्षोरूपरि पश्चिमेन विधिना धृत्वा कराभ्यां दृढम्। अङ्गुष्ठौ हृदये निधाय चिबुकं नासाग्रमालोकयेदेतद्व्याधिविनाशकारि यमिनां पद्मासनं प्रोच्यते" हठ० १-४४। 4. ದೇವತಾರ್ಚನೆಯ ಕಾಲದಲ್ಲಿ ಕೂಡುವ ಒಂದು ಆಸನ. "ऊरुमूले वामपादं पुनस्तु दक्षिणं पदम्। वामोरौ स्थापयित्वा तु पद्मासनमिति स्मृतम्"।

**पद्मिन् ಪದ್ಮಿನ್** (पुं०) 1. ಗಜ, ಆನೆ. पद्मं बिन्दुजालमस्त्यस्य "इनिः" (५-२-११५)। 2. ವಿಷ್ಣು. "पद्मी पद्मनिभेक्षणः" वि० स०। (वि०) 3. ಕಮಲವನ್ನು ಹಿಡಿದಿರುವ.

**पद्मिनी ಪದ್ಮಿನೀ** (स्त्री०) 1. ಲಕ್ಷ್ಮಿ. पद्ममस्या अस्ति "इनिः" (५-२-११५)। "ङीप्" (४-१-५)। 2. ಕಮಲಗಳ ಸಮೂಹ. 3. ಕಮಲಗಳಿಂದ ಕೂಡಿದ ದೇಶ, ಸರೋವರ. पद्मानि सन्त्यत्र "इनिः"(५-२-१३५)। 4. ಕಮಲ ಲತೆ, ತಾವರೆ ಬಳ್ಳಿ. "पद्मिनी योषिदन्तरे। अब्जेऽब्जिन्यां सरस्यां च" हेम०। "सकमलमुखहासं वीक्षितः पद्मिनीभिः" माघ० ११-४७। 5. ಪದ್ಮಿನೀ ಜಾತಿಯ ಹೆಂಗಸು. ಸ್ತ್ರೀಯರಲ್ಲಿ ಚಿತ್ರಿಣೀ ಹಸ್ತಿನೀ ಶಂಖಿನೀ ಮತ್ತು ಪದ್ಮಿನೀ ಎಂದು ನಾಲ್ಕು ವಿಧ. ಕಮಲದಂತೆ ನೇತ್ರಗಳೂ ಚಿಕ್ಕದಾದ ಮೂಗಿನ ಹೊಳ್ಳೆಗಳೂ ನಿಬಿಡವಾದ ಸ್ತನಗಳೂ ದೀರ್ಘವೂ ರಮಣೀಯವೂ ಆದ ಕೇಶಪಾಶವೂ ಕೃಶ (ತೆಳು) ವಾದ ದೇಹವೂ ಮೃದುವಾದ ಸವಿನುಡಿಯೂ ಸಂಗೀತ ವಾದ್ಯಗಳಲ್ಲಿ ಅಭಿರುಚಿಯೂ ಕಮಲದಂತೆ ಸೌಗಂಧ್ಯವೂ ಇರುವ ಹೆಂಗಸು ಪದ್ಮಿನೀ ಜಾತಿಯವಳು. "भवति कमलनेत्रा नासिकाक्षुद्ररन्ध्रा अविरलकुचयुग्मा दीर्घकेशी कृशाङ्गी। मृदुवचनसुशीला गीतवाद्यानुरक्ता सकलतनुसुवेशा पद्मिनी पद्मगन्धा" रतिमं०।

**पद्मिनीकान्त ಪದ್ಮಿನೀಕಾಂತ, –वल्लभ –ವಲ್ಲಭ**(पुं०) ಸೂರ್ಯ.

**पद्मोद्भव ಪದ್ಮೋದ್ಭವ**(पुं०) 1. ಬ್ರಹ್ಮ, ಚತುರ್ಮುಖ. पद्ममुद्भवोऽस्य। (स्त्री०) –उद्भवा –ಉದ್ಭವಾ. 2. ಮನಸಾದೇವಿ, ಜರತ್ಕಾರು ಋಷಿಯ ಪತ್ನಿ.

**पद्य ಪದ್ಯ** (ಪುಂ) 1. ಪರಮಾತ್ಮನ ಪಾದಗಳಿಂದ ಹುಟ್ಟಿದ ನಾಲ್ಕನೆಯ ವರ್ಣದವನು. (ನಂ) 2. ಶ್ಲೋಕ, ನಾಲ್ಕು ಪಾದಗಳುಳ್ಳ, ಛಂದೋಬದ್ಧವಾದ ವಾಕ್ಯ. पादाः सन्त्यस्य "यप्" (वा० ५-२-१२०)। 3. ತೇವದ ಮಣ್ಣು, ಚೆನ್ನಾಗಿ ಒಣಗದಿರುವ ಕೆಸರು. पदमस्मिन् दृश्यते "यत्" (४-४-८७)। (स्त्री०) -द्या ದ್ಯಾ. 4. ನುರುಜು ಕಲ್ಲುಳ್ಳ ನೆಲ. पादौ विध्यति—पाद "यत्" (४-४-८३)। पादस्य पद्भावः (६-३-५३)। 5. ಮಾರ್ಗ, ದಾರಿ. पादाय हिता "यत्" (५-१-६)। पदस्य पद्भावः (६-३-५३)।

**पद्र ಪದ್ರ** (ಪುಂ) ಗ್ರಾಮ, ಹಳ್ಳಿ. पद्यते गच्छत्यत्र — पद (गतौ) "रक्" (उ० २-१३)। पद्रो ग्रामः सि० कौ०।

**पद्रथ ಪದ್ರಥ** (ಪುಂ) ಪಾದಚಾರಿ, ಪಾದಗಳಿಂದ ಸಂಚರಿಸುವವನು. पद् रथ इव यस्य।

**पद्व ಪದ್ವ** (ಪುಂ) 1. ಭೂಲೋಕ. 2. ರಥ. 3. ಮಾರ್ಗ, ದಾರಿ. पद (गतौ) "वन्" (उ० १-१५१)। निपा०।

**पद्वन् ಪದ್ವನ್** (ಪುಂ) ಮಾರ್ಗ, ದಾರಿ. पद्यते गम्यते यत्र — पद (गतौ) "वनिप्" (उ० ४-११२)। पद्वा पन्थाः सि० कौ०।

**पनस ಪನಸ** (ಪುಂ) 1. ಹಲಸಿನ ಮರ. पनाय्यते स्तूयते —पन (व्यवहारे स्तुतौ च) "असच्" (उ० ३-११७)। 2. ಕಂಟಕ, ಮುಳ್ಳು. 3. ಒಬ್ಬ ವಾನರ. (स्त्री०) 4. ಒಂದು ರೋಗ, ಉರಿಬಾವು. "पनसः कपिरुग्भिदोः। कण्टके कण्टकिफले" हेम०। (ನಂ) 5. ಹಲಸಿನ ಹಣ್ಣು. "पनसः कण्टकिफले कण्टके वानरान्तरे। स्त्रियां रोगप्रभेदे स्यात्" मेदि०। ಮೇದಿನೀಕೋಶದಲ್ಲಿ ಸ್ತ್ರೀಲಿಂಗವೆಂದು ಉಕ್ತವಾಗಿದೆ.

**पन्थक ಪಂಥಕ** (वि०) ಮಾರ್ಗದಲ್ಲಿ ಹುಟ್ಟಿದ, ದಾರಿಯಲ್ಲಿ ಉಂಟಾದ. पथि जातः—पथिन् "वुन्" (४-३-२९)। पन्थादेशश्च।

**पन्न ಪನ್ನ** (वि०) 1. ಕೆಳಕ್ಕೆ ಬಿದ್ದ, ಜಾರಿಬಿದ್ದ, ಕಳಚಿದ. पद्यते — पद (गतौ) "क्तः" (३-४-७२)। (ನಂ) 2. ಕೆಳಕ್ಕೆ ಇಳಿಯುವುದು, ಕೆಳಕ್ಕೆ ಬೀಳುವುದು.

**पन्नग ಪನ್ನಗ** (ಪುಂ) 1. ಸರ್ಪ, ಹಾವು. पन्नं पतितं गच्छति — गम्लृ (गतौ) "डः" (वा० ३-२-४८)। "स ददर्श पतङ्गपुङ्गवो विटपच्छन्नतरक्षुपन्नगम्" नैष० २-३७। (ನಂ) 2. ಸೀಸಲೋಹ.

**पन्नगारि ಪನ್ನಗಾರಿ** (ಪುಂ) ಗರುಡ. पन्नगस्य अरिः। "फणावतस्त्रासयितुं रसायास्तलं विवक्षन्निव पन्नगारिः" माघ० ३-२३।

**पन्नगाशन ಪನ್ನಗಾಶನ** (ಪುಂ) ಗರುಡ. पन्नगः अशनमस्य।

**पन्नद्धा ಪನ್ನದ್ಧಾ** (स्त्री०) ತೊಗಲಿನ ಪಾದರಕ್ಷೆ, ಚರ್ಮದ ಚಪ್ಪಲಿ. पदि नद्धा।

**पन्नन्ध्री ಪನ್ನಂಧ್ರೀ** (स्त्री०) ಚಪ್ಪಲಿ, ಪಾದರಕ್ಷೆ.

**पपि ಪಪಿ** (ಪುಂ) ಚಂದ್ರ. पाति लोकम् — पा (रक्षणे) "किः" द्वित्वं च (३-२-१७१)।

**पपी ಪಪೀ** (ಪುಂ) 1. ಸೂರ್ಯ. 2. ಚಂದ್ರ. पाति लोकम्—पा (रक्षणे) "ईः" द्वित्वं च (उ० ३-१५९)। "पपीः स्यात्सोमसूर्ययोः" सि० कौ०।

**पपु ಪಪು** (ಪುಂ) ಪಾಲಕ, ರಕ್ಷಕ. पा (रक्षणे) "कुः" द्वित्वं च (उ० १-२२)।

**पम्पा ಪಂಪಾ** (स्त्री०) ಒಂದು ಸರೋವರ, ಋಷ್ಯಮೂಕದ ಸಮೀಪದಲ್ಲಿರುವ ಒಂದು ಸರಸ್ಸು. "स तां सतां बुद्धिमिव प्रसन्नां पम्पां वियोगज्वरजातकम्पः" चं० रा०।

**पयस् ಪಯಸ್** (ನಂ) 1. ಕ್ಷೀರ, ಹಾಲು. पीयते — पीङ् (पाने) "असुन्" (उ० ४-१८९)। "दुग्ध्वा पयः पत्रपुटे मदीयं पुत्रोपभुङ्क्ष्वेति तमादिदेश" रघु० २-३५। 2. ಜಲ, ನೀರು. "नदीयो जितमिति लज्जयेव तासामालोले पयसि महोत्पलं ममज्ज" माघ० ८-४८। 3. ಅನ್ನ, ಆಹಾರ.

**पयस्य ಪಯಸ್ಯ** (वि०) 1. ಹಾಲಿನ ವಿಕಾರ, ಹಾಲಿನಿಂದ ಉಂಟಾದ. (ಮೊಸರು ಬೆಣ್ಣೆ ಮುಂತಾದುವು.) पयसो विकारः "यत्" (४-३-१६०)। 2. ಹಾಲಿಗೆ ಹಿತವಾದ. पयसे हितम् "यत्" (५-१-५)। (स्त्री०) -स्या -ಸ್ಯಾ. 3. ಹಾಲುತೊಟ್ಟಿನ ಗಿಡ. 4. ಕುದಿಯಿಸಿ ಮೊಸರು ಬೆರಸಿದ ಬಿಸಿ ಹಾಲು. "पयस्या च क्षीरशरः" वैज०। 5. ಘಂಟಾಮಣಿ ಸೊಪ್ಪು, ಕಂಕೋಷ್ಠ.

**पयस्वत् ಪಯಸ್ವತ್** (वि०) 1. ನೀರಿನಿಂದ ಕೂಡಿದ. पयोऽस्त्यस्य "मतुप्" (५-२-९४)। मस्य वः (८-२-९)। 2. ಪ್ರಶಸ್ತವಾದ ಹಾಲಿನಿಂದ ಕೂಡಿದ.

**पयस्वल ಪಯಸ್ವಲ** (वि०) 1. ನೀರಿನಿಂದ ಕೂಡಿದ, ಜಲವಿಶಿಷ್ಟವಾದ. पयस् "वलच्" (वा० ५-२-११२)। 2. ಹೆಚ್ಚು ಹಾಲಿನಿಂದ ಕೂಡಿದ. (ಪುಂ) 3. ಆಡು, ಮೇಕೆ.

**पयस्विन् ಪಯಸ್ವಿನ್** (वि०) 1. ಹಾಲಿನಿಂದ ಕೂಡಿದ. 2. ಜಲದಿಂದ ಕೂಡಿದ. पयोऽस्यास्ति—पयस् "विनिः" (५-२-१२१)। स्त्रियां "ङीप्" (४-१-५)। **-स्विनी -ಸ್ವಿನೀ.** 3. ಧೇನು, ಹಸು. "प्रदक्षिणीकृत्य पयस्विनीं तां सुदक्षिणा साक्षतपात्रहस्ता" रघु० २-२१। 4. ನದಿ, ಹೊಳೆ. 5. ಗಂಗಾನದಿ. "परापरफलप्राप्तिः पावनी च पयस्विनी" काशीखं। 6. ರಾತ್ರಿ. "पयस्विनी नदीधेन्वोर्विभावर्यां च योषिति" मेदि०। 7. ಕಿರಿ ನೆಲಗುಂಬಳ. 8. ಆಡು. 9. ಸೀಹಾಲೆ ಸೊಪ್ಪು.

**पयोगल ಪಯೋಗಲ** (पुं०) 1. ಮಂಜಿನ ಗಡ್ಡೆ. पयो गालयते—गल (अवस्रंसने) + णिच् "अच्" (३-१-१३४)। 2. ದ್ವೀಪ. पयो गलति—गल (अदने) "अच्"।

**पयोघन ಪಯೋಘನ** (पुं०) ಮಂಜಿನಗಡ್ಡೆ.

**पयोजन्मन् ಪಯೋಜನ್ಮನ್** (पुं०) 1. ಮೇಘ, ಮೋಡ. पयसो जन्म यस्मात्। 2. ಮುಸ್ತಕ, ಕೊನ್ನಾರಿ.

**पयोद ಪಯೋದ** (पुं०) 1. ಮೇಘ, ಮೋಡ. पयो ददाति—डु दाञ् (दाने) "कः" (३-२-३)। "कान्तानां बहुमतिमाययुः पयोदा नाल्पीयान् बहु सुकृतं हिनस्ति दोषः" किरा० ७-१५। 2. ಕೊನ್ನಾರಿ ಗಡ್ಡೆ, ಭದ್ರ ಮುಸ್ತೆ.

**पयोधर ಪಯೋಧರ** (पुं०) 1. ಮೇಘ, ಮೋಡ. धरति —धृञ् (धारणे) "अच्" (३-१-१३४)। पयसो जलस्य धरः। "नवानधोऽधो बृहतः पयोधरान् समूढकर्पूरपरागपाण्डुरम्" माघ० १-४। 2. ಕುಚ, ಸ್ತನ. "आविर्भवद्घनपयोधरबाहुमूला शातोदरी युवदृशां क्षणमुत्सवोऽभूत्" माघ० ५-२३। 3. ಮುಸ್ತಕ, ಕೊನ್ನಾರಿ ಗಡ್ಡೆ. 4. ತೆಂಗಿನ ಮರ. 5. ಬೆನ್ನೆಲುಬು. 6. ಹಸು ಮೊದಲಾದ ಪ್ರಾಣಿಗಳ ಕೆಚ್ಚಲು. "पयोधरीभूतचतुःसमुद्रां जुगोप गोरूपधरामिवोर्वीम्" रघु० २-३। 7. ಕೋಶಕಾರ, ನಿಘಂಟುಕಾರ. "पयोधरः कोशकारे नारिकेले स्तनेऽपि च। कशेरुमेघयोः पुंसि" मेदि०।

**पयोधस् ಪಯೋಧಸ್** (पुं०) 1. ಸಮುದ್ರ. पयो दधाति—डु धाञ् (धारणे) "असुन्" (उ० ४-१८८)। 2. ಜಲಾಶಯ, ನೀರನ್ನು ಶೇಖರಿಸಿಡುವ ಕೆರೆ ಕೊಳ ಕಟ್ಟೆ ಮೊದಲಾದುವು.

**पयोधि ಪಯೋಧಿ** (पुं०) ಸಮುದ್ರ, ಕಡಲು. पयो धीयतेऽत्र—डु धाञ् (धारणे) "किः" (३-३-९३)। "तेनाम्भसां सारमयः पयोधेर्दध्रे मणिर्दीधितिदीपिताशः" माघ० ३-९। "तान्येकदेशान्निभृतं पयोधेः सोऽम्भांसि मेघान् पिबतो ददर्श" माघ० ३-७४।

**पयोनिधि ಪಯೋನಿಧಿ** (पुं०) ಸಮುದ್ರ, ಕಡಲು. पयांसि निधीयन्तेऽत्र—नि + डु धाञ् (धारणे) "किः" (३-३-९३)। "युगक्षयक्षणनिरवग्रहे जगत् पयोनिधेर्जल इव मग्नमाबभौ" माघ० १७-६०। "तथा न तापाय पयोनिधीनाम्" नैष० ८-८१।

**पयोमुच् ಪಯೋಮುಚ್** (पुं०) ಮೇಘ, ಮೋಡ. पयो मुञ्चति—मुच्लृ (मोक्षणे) "क्विप्" (३-२-७६)। "शनैः शनैरुपचितपङ्कभारिकाः पयोमुचः प्रययुरपेतवृष्टयः" माघ० १७-६३।

**पयोवाह ಪಯೋವಾಹ** (पुं०) 1. ಮೇಘ, ಮೋಡ. पयो जलं वहति—वह (प्रापणे) "अण्" (३-२-१)। "प्रावृषेण्यं पयोवाहं विद्युदैरावताविव" रघु० १-३६। 2. ಮುಸ್ತಕ, ಕೊನ್ನಾರಿ ಗಡ್ಡೆ.

**पयोव्रत ಪಯೋವ್ರತ** (न०) 1. ಹಾಲನ್ನು ಮಾತ್ರ ಕುಡಿದು ಮಾಡುವ ಒಂದು (ಪ್ರಾಯಶ್ಚಿತ್ತರೂಪವಾದ) ವ್ರತ. ವ್ಯವಸಾಯ ಮಾಡಿದ ಕ್ಷೇತ್ರದಲ್ಲಿ ಬೆಳೆದ ಪೈರುಗಳನ್ನು ಮತ್ತು ಅರಣ್ಯದಲ್ಲಿ ತಾನಾಗಿ ಹುಟ್ಟಿ ಬೆಳೆದಿರುವ ಪೈರುಗಳನ್ನು ಉದ್ದೇಶ (ಪ್ರಯೋಜನ) ವಿಲ್ಲದೆ ಕೊಯ್ದರೆ ಪಯೋವ್ರತವನ್ನು ಮಾಡಿ ಒಂದು ದಿನ ಗೋವನ್ನು ಕಾಯ್ದು ಬರಬೇಕು. (वि०) 2. ಪಯಸ್ಸೇ ವ್ರತವಾಗಿ ಉಳ್ಳವನು. "कृष्टजानामोषधीनां जातानां च स्वयं वने। वृथालम्भेऽनुगच्छेद्गां दिनमेकं पयोव्रतः" मनु० ११-१४४।

**पयोष्णी ಪಯೋಷ್ಣೀ** (स्त्री०) ಒಂದು ನದಿ, ಒಂದು ಹೊಳೆ. ಇದು ವಿಂಧ್ಯಪರ್ವತಕ್ಕೆ ದಕ್ಷಿಣ ದಿಕ್ಕಿನಲ್ಲಿ ದಕ್ಷಿಣ ಕೋಸಲದಲ್ಲಿರುವುದು.

**पर ಪರ** (पुं०) 1. ಶತ್ರು, ಹಗೆ, ವೈರಿ. पिपर्ति रोषम् —पॄ (पालनपूरणयोः) "अच्" (३-१-१३४)। "न समयपरिरक्षणं क्षमं ते निकृतिपरेषु परेषु भूरिधाम्नः" किरा० १-४५। "उत्तिष्ठमानस्तु परो नोपेक्ष्यः पथ्यमिच्छता" माघ० २-१०। 2. ಬ್ರಹ್ಮನ ಆಯುಸ್ಸು. 360 ಕಲ್ಪಗಳು ಕಳೆದರೆ ಬ್ರಹ್ಮನ ಒಂದು ವರ್ಷ. ಅಂತಹ 100 ವರ್ಷಗಳು ಬ್ರಹ್ಮನ ಆಯುಸ್ಸು. ಇದಕ್ಕೆ "ಪರ" ಎಂದು ಹೆಸರು. "त्रीणि कल्पशतानि स्युः तथा षष्टिर्द्विजोत्तमाः। ब्रह्मणः कथितं वर्षं पराख्यं तच्च तत्पदम्" कूर्मपु०। (वि०) 3. ಅನ್ಯ, ಇತರ, ಬೇರೆಯವನು.

"परस्य मर्मविधमुज्झतां निजं द्विजिह्वतादोषमजिह्मगामिभिः" माघ० १-६३। 4. ಶ್ರೇಷ್ಠವಾದ, ಉತ್ತಮವಾದ, ಉತ್ಕೃಷ್ಟವಾದ. "अलभत परां बुद्धिं षष्ठे दिने नवयौवनं स किल सकलं शास्त्रं शस्त्रं विवेद विभुर्यया" कुमा० ११-५०। 5. ದೂರದ, ದೂರದಲ್ಲಿರುವ. 6. ಅದರ ಮುಂದಿನ, ಅದರ ಆಚೆ ಇರುವ. "अरेरनन्तरं मित्रमुदासीनं तयोः परम्" मनु० ७-१५८। 7. ಮುಂದಿನ, ಅನಂತರದ. "रम्यां रघुप्रतिनिधिः स नवोपकार्यां बाल्यात्परामिव दशां मदनोऽध्युवास" रघु० ५-६३। 8. ದೊಡ್ಡದಾದ, ಎಲ್ಲಕ್ಕಿಂತಲೂ ಹಿರಿಯದಾದ, ಸರ್ವಶ್ರೇಷ್ಠವಾದ. "परतोऽपि परश्चासि विधाता वेधसामपि" कुमा० २-१४। 9. ಹೆಚ್ಚಿನದಾದ, ಮಿಗಿಲಾದ. "इन्द्रियाणि पराण्याहुरिन्द्रियेभ्यः परं मनः। मनसस्तु परा बुद्धिः यो बुद्धेः परतस्तु सः" गीता ३-४२। "इन्द्रियेभ्यः परा ह्यर्थाः अर्थेभ्यश्च परं मनः। मनसस्तु परा बुद्धिः बुद्धेरात्मा महान् परः। महतः परमव्यक्तमव्यक्तात्पुरुषः परः। पुरुषान्न परं किञ्चित् सा काष्ठा सा परा गतिः" कठ०। 10. ಅಧಿಕವಾದ, ಹೆಚ್ಚಾದ. "तदद्य ते वन्यफलाशिनः परं परैति कार्श्यं यशसा समं वपुः" किरा० १-३९। 11. (ಸಮಾಸದ ಕೊನೆಯಲ್ಲಿ) ಆಸಕ್ತನಾದ, ತತ್ಪರನಾದ, ಶ್ರದ್ಧೆಯುಳ್ಳ. "सेवापराः शिवसुरेशकृशानुधर्मरक्षोऽम्बुनाथपवमानधनाधिनाथाः"। "इत्याप्रसादादस्यास्त्वं परिचर्यापरो भव" रघु० १-९१। (न०) 12. ಬ್ರಹ್ಮ, ಪರಮಾತ್ಮ. 13. ಸಾಮಾನ್ಯವೆಂಬ ಪದಾರ್ಥದ ಎರಡು ಭೇದಗಳಲ್ಲೊಂದು. परम् ಮತ್ತು अपरम् ಎಂದು ಸಾಮಾನ್ಯವು ಎರಡು ವಿಧ. ಪರವು ಅಧಿಕ ದೇಶವೃತ್ತಿ (ವ್ಯಾಪಕ). ಅಪರವು ನ್ಯೂನ ದೇಶವೃತ್ತಿ (ವ್ಯಾಪ್ಯ). "सामान्यं द्विविधं प्रोक्तं परं चापरमेव च" भाषाप०। 14. ಮೋಕ್ಷ, ಮುಕ್ತಿ. (अव्य०) 15. ಅನಂತರ, ಬಳಿಕ, ಮುಂದೆ. "भाग्यायत्तमतः परं न खलु तद्वाच्यं वधूबन्धुभिः" शाकु० ४-१६। "मत्परं दुर्लभं मत्वा नूनमावर्जितं मया" रघु० १-६७। 16. ಅತ್ಯಂತವಾಗಿ, ಬಹಳವಾಗಿ. "अन्वर्थसंज्ञैव परं त्रिमार्गगा ययावसंख्यैः पथिभिश्चमूरसौ" माघ० १२-२३। 17. ಆದರೆ. 18. ಬೇರೆ ರೀತಿಯಾಗಿ. 19. ಅಧಿಕವಾಗಿ, ಹೆಚ್ಚಾಗಿ, ಮೀರಿ. "रेखामात्रमपि क्षुण्णादामनोर्वर्त्मनः परम्" रघु० १-१७।

**परःशत ಪರಃಶತ** (न०) 1. ನೂರಕ್ಕಿಂತಲೂ ಹೆಚ್ಚು. (वि०) 2. ನೂರಕ್ಕಿಂತಲೂ ಹೆಚ್ಚಾದ. शतात् परे। "आलोकयामास हरिर्महीधरानधिश्रयन्तीर्गजताः परःशताः" माघ० १२-५०।

**परःसहस्र ಪರಃಸಹಸ್ರ** (न०) 1. ಸಾವಿರಕ್ಕಿಂತಲೂ ಹೆಚ್ಚು. (वि०) 2. ಸಾವಿರಕ್ಕಿಂತಲೂ ಹೆಚ್ಚಾದ. "ब्रह्मादयो ब्रह्महिताय तप्त्वा परःसहस्रं शरदां तपांसि" उ० रा० १-१५।

**परक ಪರಕ** (वि०) ಮುಂದಿನ, ಅನಂತರದ. पर स्वार्थे "कः"। "षष्ठे द्वितीयलान्ले परके मुखलाच्च स यतिपदनियमः" वृ० र०।

**परकलत्र ಪರಕಲತ್ರ** (न०) ಪರಪುರುಷನ ಪತ್ನಿ. "अनिर्वर्णनीयं परकलत्रम्" शाकु०।

**परकीय ಪರಕೀಯ** (वि०) ಇತರನ ಸಂಬಂಧವಾದ. ಇನ್ನೊಬ್ಬನದಾದ. परस्येदम् "छः" (४-२-१३८)। कुगागमश्च (ग० ४-२-१३८)। "अर्थो हि कन्या परकीय एव तामद्य संप्रेष्य परिग्रहीतुः" शाकु० ४-२१। (स्त्री०) –या –ಯಾ. ನಾಯಿಕೆಯಲ್ಲಿ ಒಂದು ಭೇದ, ಅನ್ಯಸ್ತ್ರೀ, ಪರಪುರುಷನಲ್ಲಿ ಅನುರಕ್ತಳಾಗಿ ಅದನ್ನು ಹೊರಗೆ ತೋರಿಸಿಕೊಳ್ಳದಿರುವ ಹೆಂಗುಸು.

**परक्षेत्र ಪರಕ್ಷೇತ್ರ** (न०) 1. ಪರಸ್ತ್ರೀ, ಇತರನ ಪತ್ನಿ. 2. ಇತರನ ಭೂಮಿ, ಇನ್ನೊಬ್ಬನ ನೆಲ. परस्य क्षेत्रम्। "वृषापेहि परक्षेत्रादायाति क्षेत्रपालकः" चन्द्रा०। "तौ तु जातौ परक्षेत्रे प्राणिनौ प्रेत्य चेह च" मनु० ३-१७५।

**परगामिन् ಪರಗಾಮಿನ್** (वि०) 1. ವಿಶೇಷಣ, ವಾಚ್ಯಲಿಂಗ, ವಿಶೇಷ್ಯಕ್ಕೆ ಅಧೀನವಾದ (ಶಬ್ದ). परं वाच्यं गच्छति — गम्लृ (गतौ) "णिनिः" (३-१-१३४)। 2. ಇನ್ನೊಬ್ಬನನ್ನು ಸೇರುವ.

**परग्रन्थि ಪರಗ್ರಂಥಿ** (पुं०) ಅಂಗುಲಿಪರ್ವ, ಬೆರಳುಗಳ ಗಿಣ್ಣು.

**परचक्र ಪರಚಕ್ರ** (न०) 1. ಪರರಾಷ್ಟ್ರ, ಶತ್ರುರಾಷ್ಟ್ರ. 2. ಶತ್ರುಸೈನ್ಯ. 3. ಶತ್ರುವಿನಿಂದ ಉಂಟಾದ ಈತಿ ಬಾಧೆ.

**परच्छन्द ಪರಚ್ಛಂದ** (वि०) ಪರಾಧೀನ. परस्य छन्दो यत्र।

**परच्छिद्र ಪರಚ್ಛಿದ್ರ** (न०) 1. ಇನ್ನೊಬ್ಬನಲ್ಲಿರುವ ದೋಷ, ಇತರನಲ್ಲಿರುವ ಕುಂದು. 2. ಇತರನಲ್ಲಿರುವ ಅಪರಾಧ.

**परजात ಪರಜಾತ** (पुं०) 1. ಇನ್ನೊಬ್ಬನಿಂದ ಜನಿಸಿದ ಕುಂಡ (ಗಂಡನು ಬದುಕಿರುವಾಗ ಇನ್ನೊಬ್ಬನಿಂದ ಹುಟ್ಟಿ

ದವನು), ಗೋಳಕ (ಗಂಡನು ತೀರಿದನಂತರ ಇನ್ನೊಬ್ಬನಿಂದ ಹುಟ್ಟಿದವನು) ಮೊದಲಾದ ಪುತ್ರ. 2. ಕೋಗಿಲೆ. परेण जातः। (वि०) 3. ಇನ್ನೊಬ್ಬನಿಂದ ಪೋಷಿಸಲ್ಪಟ್ಟವನು.

**परजित ಪರಜಿತ** (पुं०) 1. ಕೋಗಿಲೆ. परेण जितः परपुष्टत्वात्। (वि०) 2. ಇತರರಿಂದ ಜಯಿಸಲ್ಪಟ್ಟ.

**परञ्ज ಪರಂಜ** (पुं०) 1. ತೈಲಯಂತ್ರ, ಎಣ್ಣೆಯ ಗಿರಣಿ, ಎಣ್ಣೆಯ ಗಾಣ. 2. ಕತ್ತಿಯ ಅಲಗು, ಅಸಿಧಾರೆ. 3. ಫೇನ, ನೊರೆ. "परञ्जस्तैलयन्त्रे स्यात् छुरिकाफलफेनयोः" मेदि०।

**परञ्जय ಪರಂಜಯ** (पुं०) 1. ವರುಣ. परां पश्चिमां दिशं जयति स्वामित्वेन—जि (जये) "खच्" (३-२-४६)। मुमागमः (६-३-६७)। 2. ಶತ್ರುವನ್ನು ಜಯಿಸುವ ದೊರೆ. परं शत्रुं जयति — जि "खच्"।

**परतन्त्र ಪರತಂತ್ರ** (वि०) 1. ಪರಾಧೀನ, ಇತರನಿಗೆ ಅಧೀನನಾದ, ಇತರನನ್ನು ಆಶ್ರಯಿಸಿರುವ. परस्तन्त्रं प्रधानं यस्य। "परतन्त्रः पराधीनः परवान्नाथवानपि" अम०। (न०) 2. ಪರಕೀಯ ಶಾಸ್ತ್ರ. परस्य तन्त्रम्। 3. ಉತ್ತಮವಾದ ಶಾಸ್ತ್ರ. परमुत्कृष्टं तन्त्रम्।

**परतस् ಪರತಸ್** (अव्य०) 1. ಇನ್ನೊಬ್ಬನಿಂದ. पर "तसिल्" (५-३-७)। 2. ಶತ್ರುವಿನ ದೆಸೆಯಿಂದ, ಹಗೆಯಿಂದ. "यदात्थ राजन्यकुमार तत्तथा यशस्तु रक्ष्यं परतो यशोधनैः" रघु० ३-४८। 3. ಮುಂದೆ, ಆಚೆ. 4. ಆಮೇಲೆ, ಅನಂತರ, ತರುವಾಯ. "मनसस्तु परा बुद्धिः यो बुद्धेः परतस्तु सः" गीता ३-४२।

**परतापन ಪರತಾಪನ** (वि०) ಇತರನನ್ನು ಪೀಡಿಸುವ, ಇತರನಿಗೆ ತೊಂದರೆ ಕೊಡುವ. परं तापयति — तप (सन्तापे) + णिच् "ल्युः" (३-१-१३४)।

**परत्र ಪರತ್ರ** (अव्य०) 1. ಬೇರೆ ಕಡೆ, ಬೇರೆ ಜಾಗದಲ್ಲಿ. 2. ಬೇರೆ ಲೋಕದಲ್ಲಿ, ಸ್ವರ್ಗ ಮೊದಲಾದ ಇತರ ಲೋಕದಲ್ಲಿ, ಪರಲೋಕದಲ್ಲಿ. पर "त्रल्" (५-३-१०)। 3. ಬೇರೆ ವಸ್ತುವಿನಲ್ಲಿ, ಬೇರೆ ಮನುಷ್ಯನಲ್ಲಿ. "परत्र साध्येऽतिशयस्थिरत्रसैः" याद० १४-४६। "सन्ततिः शुद्धवंश्या हि परत्रेह च शर्मणे" रघु० १-६९।

**परत्व ಪರತ್ವ** (न०) ಶ್ರೇಷ್ಠತೆ, ಉತ್ಕೃಷ್ಟತೆ, ಸರ್ವೋತ್ತಮತ್ವ. परस्य भावः "त्वः" (५-१-११९)। "परत्वमाद्यं प्रतिपन्नषड्गुणः" याद० १४-७४।

**परदार ಪರದಾರ** (पुं० ब० व०) ಇತರನ ಪತ್ನಿ, ಪರಸ್ತ್ರೀ. परस्य दाराः। "परदारेषु जायेते द्वौ सुतौ कुण्डगोलकौ" मनु० ३-१७४।

**परदारिन् ಪರದಾರಿನ್** (वि०) ಜಾರ, ವ್ಯಭಿಚಾರಿ, ಪರಸ್ತ್ರೀಸಂಗ ಮಾಡುವವನು.

**परदुःख ಪರದುಃಖ** (न०) ಇತರರ ಕಷ್ಟ, ಬೇರೆಯವರಿಗೆ ಉಂಟಾದ ತೊಂದರೆ. परेषां दुःखम्। "महदपि परदुःखं शीतलं सम्यगाहुः प्रणयमगणयित्वा यन्ममापद्गतस्य" विक्र० ४-२७।

**परदेश ಪರದೇಶ** (पुं०) ತಾನು ವಾಸಮಾಡುವುದಕ್ಕಿಂತ ಬೇರೆ ದೇಶ.

**परदेवता ಪರದೇವತಾ** (स्त्री०) ಪರಬ್ರಹ್ಮ.

**परदेशिन् ಪರದೇಶಿನ್** (वि०) ಇತರ ದೇಶದವನು, ಬೇರೆ ದೇಶದವನು.

**परद्वेषिन् ಪರದ್ವೇಷಿನ್** (वि०) ಇತರರನ್ನು ದ್ವೇಷಿಸುವವನು, ಇತರರಲ್ಲಿ ಅಸೂಯೆಯಿಂದ ದೋಷವನ್ನು ಹೇಳುವವನು. परान् द्वेष्टि — द्विष (अप्रीतौ) "णिनिः" (३-२-७८)। स्त्रियां "ङीप्" (४-१-५)। **–द्वेषिणी –ದ್ವೇಷಿಣೀ.**

**परधन ಪರಧನ** (न०) ಇನ್ನೊಬ್ಬನ ಹಣ, ಇತರನ ಆಸ್ತಿ.

**परधर्म ಪರಧರ್ಮ** (पुं०) 1. ಬೇರೆಯವರು ಆಚರಿಸುವ ಧರ್ಮ, ತನಗೆ ವಿಹಿತವಾದ ಧರ್ಮಕ್ಕಿಂತಲೂ ಬೇರೆಯಾದ ಧರ್ಮ. (ಆಚಾರ ವ್ಯವಹಾರಗಳು.) परेषां धर्मः। "स्वधर्मे निधनं श्रेयः परधर्मो भयावहः" गीता ३-३५। "वरं स्वधर्मो विगुणः न पारक्यः स्वनुष्ठितः। परधर्मेण जीवन् हि सद्यः पतति जातितः" मनु० १०-९७। 2. ಉತ್ಕೃಷ್ಟವಾದ ಧರ್ಮ, ಶ್ರೇಷ್ಠವಾದ ಧರ್ಮ. परः श्रेष्ठः धर्मः।

**परनिपात ಪರನಿಪಾತ** (पुं०) ವಿಗ್ರಹವಾಕ್ಯದಲ್ಲಿ ಪೂರ್ವಪದವಾಗಿರುವುದನ್ನು ಸಮಾಸದಲ್ಲಿ ಕೊನೆಯ ಪದವಾಗಿ ಹೇಳುವುದು. दन्तानां राजा राजदन्तः। पूर्वं भूतः भूतपूर्वः ಇತ್ಯಾದಿ.

**परन्तप ಪರಂತಪ** (वि०) 1. ಶತ್ರುಗಳನ್ನು ಪೀಡಿಸುವ, ವೈರಿಗಳಿಗೆ ತೊಂದರೆಯುಂಟುಮಾಡುವ. परान् शत्रून् तापयति—तप (सन्तापे)+णिच् "खच्" (३-२-३९)। ह्रस्वः (६-४-९४)। मुमागमः (६-३-६७)। (पुं०) 2. ತಾಪಸಮನುವಿನ ಒಬ್ಬ ಮಗ.

**परपक्ष ಪರಪಕ್ಷ** (ಪುಂ०) 1. ಇನ್ನೊಬ್ಬನ ಪಂಗಡ. 2. ಶತ್ರುಪಕ್ಷ, ಶತ್ರುಗಳ ಗುಂಪು.

**परपद ಪರಪದ**(ನ०) 1. ಶ್ರೇಷ್ಠವಾದ ಸ್ಥಾನ. 2. ಮೋಕ್ಷ, ಮುಕ್ತಿ.

**परपिण्डाद ಪರಪಿಂಡಾದ** (ಪುಂ०) ಪರಾನ್ನವನ್ನು ಉಂಡು ಜೀವಿಸುವವನು. परस्य पिण्डमन्नमत्ति — अद (भक्षणे) "अण्" (३-२-१)।

**परपुरुष ಪರಪುರುಷ** (ಪುಂ०) 1. ಪರಮಾತ್ಮ, ಪರಮ ಪುರುಷ, ವಿಷ್ಣು. 2. ಉಪನಾಯಕ, ಉಪಪತಿ. 3. ಅಪರಿಚಿತ ಮನುಷ್ಯ.

**परपुष्ट ಪರಪುಷ್ಟ** (ಪುಂ०) 1. ಕೋಗಿಲೆ. परेण काकेन पुष्टः। ಕೋಗಿಲೆಗೆ ತಾನು ಹಾಕಿದ ಮೊಟ್ಟೆಯನ್ನು ಪೋಷಿಸಿ ಒಡೆಯಲು ತಿಳಿಯದೆ ಅದನ್ನು ಕಾಗೆಯ ಗೂಡಿನಲ್ಲಿಡುವುದು. ಕಾಗೆಯು ತನ್ನ ಮೊಟ್ಟೆಯೆಂಬ ಭ್ರಾಂತಿಯಿಂದ ಅದನ್ನು ಒಡೆದು ಪೋಷಿಸುವುದು. ವಸಂತಕಾಲ ಬಂದಾಗ ಕೋಗಿಲೆಯ ಸ್ವರವನ್ನು ಕೇಳಿದ ಕಾಗೆಯು ಆ ಮರಿಯನ್ನು ಹೊರಕ್ಕೆ ಓಡಿಸುವುದು. "वसन्तकाले संप्राप्ते काकः काकः पिकः पिकः"। (स्त्री०) **-पुष्टा -ಪುಷ್ಟಾ.** ಹೆಣ್ಣು ಕೋಗಿಲೆ. "प्रियसखीसदृशं प्रतिबोधिताः किमपि काम्यगिरा परपुष्टया" माघ० ६-८। (वि०) 2. ಇತರರಿಂದ ಪೋಷಿಸಲ್ಪಟ್ಟ.

**परपूर्वा ಪರಪೂರ್ವಾ** (स्त्री०) ಮೊದಲಿನ ಗಂಡನನ್ನು ಬಿಟ್ಟು ಬೇರೊಬ್ಬನನ್ನು ಮದುವೆಯಾದ ಹೆಂಗುಸು, ಎರಡನೆಯ ಸಲ ಮದುವೆಯಾದವಳು. परः इतरः पूर्वो यस्याः। "पतिं हित्वापकृष्टं स्वमुत्कृष्टं या निषेवते। निन्द्यैव सा भवेल्लोके परपूर्वेति चोच्यते" मनु० ५-१६३।

**परप्रेष्य ಪರಪ್ರೇಷ್ಯ** (ಪುಂ०) ಸೇವಕ, ಆಳು. (स्त्री०) **-प्रेष्या -ಪ್ರೇಷ್ಯಾ.** ಸೇವಕಿ.

**परब्रह्मन् ಪರಬ್ರಹ್ಮನ್** (ನ०) ಪರಮಾತ್ಮ. परं च तत् ब्रह्म च।

**परभाग ಪರಭಾಗ** (ಪುಂ०) 1. ಶ್ರೇಷ್ಠ ಗುಣ, ಉತ್ತಮವಾದ ಯೋಗ್ಯತೆ, ಉತ್ಕರ್ಷ. परस्य उत्कृष्टस्य भागः। "दुरधिगमः परभागो यावत्पुरुषेण साहसं न कृतम्" पञ्चतं० ५-३४। 2. ಆಧಿಕ್ಯ, ಅತಿಶಯ, ಹೆಚ್ಚು. "तारैर्बभूवे परभागलाभतः परिस्फुटैस्तेषु तुरङ्गहेषितैः" माघ० १२-१५। 3. ಕೊನೆಯ ಭಾಗ, ಶೇಷ, ಉಳಿಕೆ. 4. ಹಿಂಭಾಗ, ಪಶ್ಚಾದ್ಭಾಗ. "दन्तवाससि समानगुणश्रीः संमुखोऽपि परभागमवाप" माघ० १०-८६। 5. ಇತರನ ಭಾಗ, ಇನ್ನೊಬ್ಬನ ಪಾಲು.

**परभाषा ಪರಭಾಷಾ** (स्त्री०) ಅನ್ಯರ ಭಾಷೆ, ಪರದೇಶೀಯರ ಭಾಷೆ.

**परभुक्त ಪರಭುಕ್ತ** (वि०) ಇತರರಿಂದ ಅನುಭವಿಸಲ್ಪಟ್ಟ. परेण भुक्तम्। (स्त्री०) **-भुक्ता -ಭುಕ್ತಾ.** ಇನ್ನೊಬ್ಬನಿಂದ ಅನುಭವಿಸಲ್ಪಟ್ಟ ಹೆಂಗುಸು. "परभुक्तां च कान्तां च यो भुङ्क्ते स नराधमः। स पच्यते कालसूत्रे यावच्चन्द्रदिवाकरौ" ब्रह्मवै०।

**परभृत् ಪರಭೃತ್** (ಪುಂ०) ವಾಯಸ, ಕಾಗೆ. परं कोकिलसुतं (स्वपुत्रधिया) बिभर्ति—डु भृञ् (धारणपोषणयोः) "क्विप्" (३-२-६१)।

**परभृत ಪರಭೃತ** (ಪುಂ०) 1. ಕೋಗಿಲೆ. परेण काकेन भृतः पोषितः। "परभृतयुवतीनां सम्यगायाति गातुं न तव तरुणि वाणीगं सुधासिन्धुवेणी" नैष० २१-१५६। (स्त्री०) **-भृता -ಭೃತಾ.** ಹೆಣ್ಣುಕೋಗಿಲೆ. "चूतयष्टिरिवाभ्याशे मधौ परभृतोन्मुखी" कुमा० ६-२। (वि०) 2. ಇನ್ನೊಬ್ಬನಿಂದ ಪೋಷಿಸಲ್ಪಟ್ಟ.

**परम ಪರಮ** (ಪುಂ०) 1. ಪರಮಾತ್ಮ. (वि०) 2. ಉತ್ಕೃಷ್ಟವಾದ, ಶ್ರೇಷ್ಠವಾದ. परं उत्कृष्टं माति—माङ् (माने) "कः" (३-२-३)। "सर्वथा ब्राह्मणाः पूज्याः परमं दैवतं हि तत्" मनु० ९-३१९। 3. ಪ್ರಧಾನ, ಮುಖ್ಯ. 4. ಮೊದಲನೆಯ. 5. ಶ್ರೇಷ್ಠತರವಾದ, ಅದಕ್ಕಿಂತಲೂ ಉತ್ತಮವಾದ. "न मन्ये वाणिज्यात् किमपि परमं वर्तनमिह" पञ्चतं० १-११। 6. ಮೇಲಾದ, ಉಚ್ಚತಮವಾದ, ಸರ್ವಶ್ರೇಷ್ಠವಾದ. "वेदोदितं स्वकं कर्म नित्यं कुर्यादतन्द्रितः। तद्धि कुर्वन् यथाशक्ति प्राप्नोति परमां गतिम्" मनु० ४-१४। (अव्य०) 7. ಅಂಗೀಕಾರ, ಒಪ್ಪಿಗೆ. "ततः परममित्युक्त्वा प्रतस्थे मुनिमण्डलम्" कुमा० ६-३५। 8. ಅನುಜ್ಞೆ. 9. ಅತಿಯಾಗಿ, ಹೆಚ್ಚಾಗಿ. "परमं स्यादनुज्ञातेऽप्यव्ययं परमः परे। परमं स्यात् प्रधानाद्योरोङ्कारेऽपि तथोच्यते" विश्व०।

**परमपु(पू)रुष ಪರಮಪು(ಪೂ)ರುಷ** (ಪುಂ०) ಪುರುಷಶ್ರೇಷ್ಠನಾದ ವಿಷ್ಣು, ಶ್ರೀಮನ್ನಾರಾಯಣ. परमश्चासौ पु(पू)रुषश्च।

**परमर्षि ಪರಮರ್ಷಿ** (ಪುಂ०) ಉತ್ತಮ ಜ್ಞಾನಸಂಪನ್ನನಾದ ಮುನಿ, ಪರಮಾತ್ಮನ ಸ್ವರೂಪವನ್ನು ತಿಳಿದ ಮುನಿ. परमश्चासौ ऋषिश्च। "ऋषिर्हिंसागतौ धातुः विद्यासत्यतपःश्रुतैः। एष सन्निचयो यस्मात् ब्रह्मणश्च

ततस्त्वृषिः। निवृत्तिसमकालन्तु बुद्ध्या व्यक्तिमृषिस्त्वयम्। ऋषते परमं यस्मात्परमर्षिस्ततः स्मृतः" मत्स्यपु०।

**परमहंस ಪರಮಹಂಸ**(ಪುಂ) ಉತ್ತಮ ಯೋಗಿ, ಇಂದ್ರಿಯಗಳನ್ನು ನಿಗ್ರಹಿಸಿ ತನ್ನ ಅಧೀನದಲ್ಲಿಟ್ಟುಕೊಂಡು ತಪೋನಿರತನಾದ ಸಂನ್ಯಾಸಿ. ಕುಟೀಚಕ, ಬಹೂದಕ, ಹಂಸ ಮತ್ತು ಪರಮಹಂಸರೆಂಬ ನಾಲ್ಕು ವಿಧ ಸಂನ್ಯಾಸಿಗಳಲ್ಲಿ ಪರಮಹಂಸನೇ ಉತ್ತಮನು. परमःहंसः आत्मा यस्य। ಕೋಪತಾಪಗಳನ್ನು ತೊರೆದು ಸುಖದುಃಖಾದಿ ದ್ವಂದ್ವಗಳನ್ನು ಸಮನಾಗಿ ಭಾವಿಸಿ ಶುದ್ಧಮನಸ್ಸಿನಿಂದ ಪ್ರಾಣಧಾರಣೆಗಾಗಿ ಮಾತ್ರ ಕ್ಲೃಪ್ತಕಾಲದಲ್ಲಿ ಭಿಕ್ಷಾಟನೆ ಮಾಡುತ್ತ ಶೂನ್ಯಗೃಹ ದೇವಾಲಯ ವೃಕ್ಷಮೂಲ ನದೀತೀರ ಪರ್ವತದ ಗುಹೆ ಮೊದಲಾದ ವಿವಿಕ್ತ ಪ್ರದೇಶಗಳಲ್ಲಿ ವಾಸಮಾಡುತ್ತ ಅಹಂಕಾರ ಮಮಕಾರ ಶೂನ್ಯನಾಗಿ ಸರ್ವದಾ ಪ್ರಣವವನ್ನು ಜಪಿಸುತ್ತ ಶುಭಾಶುಭ ಕರ್ಮಗಳ ನಿರ್ಮೂಲನಕ್ಕಾಗಿ ಸಂನ್ಯಾಸದಿಂದ ದೇಹವನ್ನು ತ್ಯಜಿಸಲು ಯತ್ನಿಸುವವನು ಪರಮಹಂಸನು. "प्रणवाद्यास्त्रयो वेदाः प्रणवे पर्यवस्थिताः। तस्मात्प्रणवमेवैकं परमहंसः सदा जपेत्। विविक्तदेशमाश्रित्य सुखासीनः समाहितः। यथाशक्ति समाधिस्थः भवेत् संन्यासिनां वरः" सूतसं०।

**परमाणु ಪರಮಾಣು** (ಪುಂ) 1. ಅತಿಸೂಕ್ಷ್ಮವಾದ ಕಣ, ಬಹಳ ಸೂಕ್ಷ್ಮವಾದ ಅಂಶ. ಬಹಳ ಸಣ್ಣದಾದ ರೇಣು (ಧೂಳು). परमश्चासौ अणुश्च। ಮನೆಯ ಹೆಂಚಿನ ಅಥವಾ ಬೇರೆ ಯಾವುದಾದರೂ ಕಿಟಕಿ (ಗವಾಕ್ಷ) ಮೊದಲಾದುವುಗಳ ಸಂದಿನಿಂದ ಬೀಳುವ ಸೂರ್ಯಕಿರಣಗಳಲ್ಲಿ ಕಾಣುವ (ಸಂಚರಿಸುವ) ಅತಿ ಸೂಕ್ಷ್ಮವಾದ ಧೂಳಿನ ಆರನೆಯ ಒಂದು ಭಾಗವು ಪರಮಾಣು. "जालसूर्यमरीचिस्थं यत्सूक्ष्मं दृश्यते रजः। तस्य षष्ठतमो भागः परमाणुः स उच्यते"। "परगुणपरमाणून् पर्वतीकृत्य नित्यं निजहृदि विकसन्तः स्यापयन्तः कियन्तः" भर्तृ० १-७०। ಎರಡು ಪರಮಾಣುಗಳಿಂದ ಕೂಡಿದ ದ್ರವ್ಯವು ದ್ವ್ಯಣುಕವಾಗುವುದು. ಹೀಗೆಯೇ ತ್ರ್ಯಣುಕಾದಿ ಬ್ರಹ್ಮಾಂಡ ಪರ್ಯಂತ ಎಲ್ಲಕ್ಕೂ ಮೂಲಕಾರಣವಾದುದು ಪರಮಾಣು. ಆದರೆ ಪರಮಾಣುವಿಗೆ ಕಾರಣವಾದುದು ಯಾವುದೂ ಇಲ್ಲ. ಪೃಥಿವಿ, ಅಪ್ಪು, ತೇಜಸ್ಸು ಮತ್ತು ವಾಯುಗಳೆಂಬ ನಾಲ್ಕು ಭೂತಗಳ ಅತಿ ಸೂಕ್ಷ್ಮವಾದ ದ್ರವ್ಯವು ಪರಮಾಣು. ಇದು ನಿತ್ಯ ಮತ್ತು ಅವಯವಶೂನ್ಯವಾದುದು. ಇದಕ್ಕಿಂತಲೂ ಸೂಕ್ಷ್ಮವಾದುದು ಯಾವುದೂ ಇಲ್ಲ. ಇದು ಅತೀಂದ್ರಿಯ. ಈ ಪರಮಾಣುಗಳಿಂದಲೇ ಪರಮಾತ್ಮನು ದ್ವ್ಯಣುಕ ತ್ರ್ಯಣುಕಾದಿ ಕ್ರಮದಿಂದ ಸ್ಥೂಲ ಪೃಥ್ವೀ ಜಲ ತೇಜಸ್ಸು ಮತ್ತು ವಾಯುಗಳನ್ನು ಸೃಷ್ಟಿಸುವನು. 2. ಅತಿ ಸೂಕ್ಷ್ಮವಾದ ಕಾಲ, ಕಾಲದಲ್ಲಿ ಎಲ್ಲಕ್ಕಿಂತಲೂ ಸೂಕ್ಷ್ಮವಾದ ಭಾಗ, ಕಾಲದಲ್ಲಿ ಯಾವುದಕ್ಕಿಂತಲೂ ಕೆಳಗಿನ ವಿಭಾಗವಿಲ್ಲವೋ ಅದು (ಪರಮಾಣು ಕಾಲ). ಸೂರ್ಯಗತಿಯ ಮೇಲೆ ಕಾಲಗತಿಯಲ್ಲಿಯೂ ಸ್ಥೂಲಸೂಕ್ಷ್ಮ ವಿಭಾಗಗಳುಂಟು. ಸೂರ್ಯನು ಒಂದು ಪರಮಾಣು ಪ್ರದೇಶವನ್ನು ದಾಟುವಷ್ಟು ಕಾಲವು ಪರಮಾಣುಕಾಲ. ಸೂರ್ಯನು ದ್ವಾದಶರಾಶಿ ಸ್ವರೂಪವಾದ ಈ ಲೋಕವನ್ನು ದಾಟುವಷ್ಟು ಕಾಲವು (ಒಂದು ಸಂವತ್ಸರ) ಮಹಾಕಾಲವೆನಿಸುವುದು. "स कालः परमाणुर्वै यो भुङ्क्ते परमाणुताम्। सतोऽविशेषभुग्यस्तु स कालः परमो महान्" भाग० ३-११-४।

**परमाण्वङ्गक ಪರಮಾಣ್ವಂಗಕ** (ಪುಂ) ವಿಷ್ಣು, ಸರ್ವೇಶ್ವರ. परमाणुरङ्गं यस्य। ಸಕಲ ಜಗತ್ತನ್ನೂ ಸೃಷ್ಟಿಸುವ ಈಶ್ವರನಿಗೆ ಪರಮಾಣುಗಳೆಲ್ಲವೂ ಅಂಗವಾಗಿರುವುವು.

**परमात्मन् ಪರಮಾತ್ಮನ್** (ಪುಂ) ಪರಮೇಶ್ವರ, ಪರಬ್ರಹ್ಮ. परमश्चासौ आत्मा च। "परमात्मा परं ब्रह्म निर्गुणं प्रकृतेः परः। कारणं कारणानां च श्रीकृष्णो भगवान् स्वयम्" ब्रह्मवै०। "पूतात्मा परमात्मा च मुक्तानां परमा गतिः" वि० स०। ಸಕಲ ಜೀವರೂ ಪರಮಾತ್ಮ (ಈಶ್ವರ)ನಿಂದ ಆತ್ಮವಂತರು. ಪರಮಾತ್ಮನು (ಈಶ್ವರನು) ಯಾರಿಂದಲೂ ಆತ್ಮವಂತನಲ್ಲ. ಇದರಿಂದ ಈಶ್ವರನು ಪರಮಾತ್ಮನು. "येन भूतान्यात्मवन्ति नायमन्येन चात्मवान्। अतोह्यात्मेश्वरत्वाच्च परमात्मा प्रकीर्तितः" इति निरुक्तिः। "न दैवं केशवात्परम्"। "परः पराणां परमः परमात्मात्मसंस्थितः" विष्णुपु०। "न त्वत्समोऽस्त्यभ्यधिकः कुतोऽन्यः" गीता ११-४३। "मत्तः परतरं नान्यत् किञ्चिदस्ति" गीता ७-७। "यस्मात्परं नापरमस्ति किञ्चित् यस्मान्नाणीयो न ज्यायोऽस्ति कश्चित्" श्वेता० उप० ३-९। ಸ್ವರೂಪ ಗುಣರೂಪ ಮತ್ತು ಐಶ್ವರ್ಯಾದಿಗಳಿಂದ ಉತ್ಕೃಷ್ಟಕ್ಕಿಂತಲೂ ಉತ್ಕೃಷ್ಟನೂ ಆತ್ಮಾಂತರರಹಿತನೂ ಆದುದರಿಂದ ಈಶ್ವರನು ಪರಮಾತ್ಮನು. "न च योगविधेर्नवेतरः स्थिरधीरापरमात्मदर्शनात्" रघु० ८-२२।

**परमाद्वैत ಪರಮಾದ್ವೈತ** (पुं०) ಪರಮಾತ್ಮ, ವಿಷ್ಣು. परममद्वैतं यस्य। परमः अद्वैतो वा। ಪರಮಾತ್ಮನು ಚಿದಚಿದ್ವಿಶಿಷ್ಟನಾಗಿ ಒಬ್ಬನೇ ಆಗಿರುವುದರಿಂದ ಅದ್ವೈತನು. ಪರಮನಾದ ಅದ್ವೈತನು ಪರಮಾದ್ವೈತನು.

**परमानन्द ಪರಮಾನನ್ದ** (पुं०) 1. ಸರ್ವೋತ್ಕೃಷ್ಟವಾದ ಆನಂದಸ್ವರೂಪನಾದ ಪರಮಾತ್ಮ. परमः सर्वोत्कृष्टः आनन्दः। 2. ಆನಂದಯುಕ್ತನಾದ ಪರಮಾತ್ಮ.

**परमान्न ಪರಮಾನ್ನ** (नं०) ಪಾಯಸ, ಕ್ಷೀರಾನ್ನ, ಕ್ಷೀರದಲ್ಲಿ ಪಕ್ವವಾದ ಅನ್ನ. परमं च तदन्नं च।

**परमायुस् ಪರಮಾಯುಸ್** (नं०) ಮನುಷ್ಯ ಮತ್ತು ತಿರ್ಯಕ್ ಪ್ರಾಣಿಗಳು ಜೀವಿಸುವ ಕಾಲ, ಮನುಷ್ಯಾದಿಗಳಿಗೆ ಶಾಸ್ತ್ರದಲ್ಲಿ ಹೇಳಿರುವ ಪರಮಾವಧಿ ಜೀವಿತದ ಕಾಲ. परमम् आयुः।

ಮನುಷ್ಯನಿಗೆ ಪರಮಾವಧಿ
ಜೀವಿತಕಾಲ 125 ವರ್ಷ ಮತ್ತು 5 ದಿನಗಳು
ಆನೆಗೂ " "
ಕುದುರೆಗೆ .. 32 ವರ್ಷಗಳು
ಕತ್ತೆ ಮತ್ತು ಒಂಟೆಗಳಿಗೆ.. 25 "
ಹಸು ಮತ್ತು ಎಮ್ಮೆಗಳಿಗೆ.. 24 "
ನಾಯಿಗೆ .. 12 "
ಜಿಂಕೆ, ಹಂದಿ, ಆಡು, ಕುರಿ
ಮುಂತಾದ ಪ್ರಾಣಿಗಳಿಗೆ 16 "

"शतं वर्षाणि विंशत्या निशाभिः पञ्चभिः सह। परमायुरिदं प्रोक्तं नराणां करिणामिह॥ अब्दा द्वात्रिंशदश्वानां शुनां द्वादशवत्सराः। पञ्चविंशतिवर्षाणि खरस्य करभस्य च। चतुर्विंशतिरब्दानां वृषस्य महिषस्य च। मृगशूकरबस्तादिपशूनां षड्दशान्विताः"॥

**परमार्थ ಪರಮಾರ್ಥ** (पुं०) 1. ಪರಬ್ರಹ್ಮಜ್ಞಾನ. परमश्चासावर्थश्च। "इदं हि तत्त्वं परमार्थभाजामयं हि साक्षात्पुरुषः पुराणः" म० वी० ७-२। 2. ಮೋಕ್ಷ, ಮುಕ್ತಿ. परमः मुख्यः अर्थः प्रयोजनम्। 3. ಸುಖ. 4. ಯಥಾರ್ಥ, ನಿಜ, ಸ್ವಲ್ಪವೂ ಸುಳ್ಳಿನ ಸಂಬಂಧವಿಲ್ಲದ ಸತ್ಯ. "परिहासविजल्पितं सखे परमार्थेन न गृह्यतां वचः" शाकु० २-१८। 5. ಉತ್ತಮವಾದ ವಸ್ತು. 6. ಉತ್ತಮವಾದ ಐಶ್ವರ್ಯ.

**परमार्थतस् ಪರಮಾರ್ಥತಸ್** (अव्य०) ನಿಜವಾಗಿ, ಯಥಾರ್ಥವಾಗಿ, ಸತ್ಯವಾಗಿ. परमार्थ "तसिः" (वा० ५-४-४४)। "विकारं खलु परमार्थतोऽज्ञात्वानारम्भः प्रतीकारस्य" शाकु० ३।

**परमिका ಪರಮಿಕಾ** (स्त्री०) ಹೆಚ್ಚಾದ, ಅತಿಶಯವಾದ. "मुदं परमिकां लेभे ननन्द च नराधिपः" भा० आदि० १३३-२६।

**परमृत्यु ಪರಮೃತ್ಯು** (पुं०) ವಾಯಸ, ಕಾಗೆ. परस्मात् मृत्युरस्य। ಕಾಗೆಗಳಿಗೆ ಯಾವ ರೋಗದಿಂದಲೂ ಸಾವಿಲ್ಲ. ಮನುಷ್ಯನಿಂದ ಅಥವಾ ಇತರ ಆಘಾತದಿಂದ ಮಾತ್ರ ಇದಕ್ಕೆ ಸಾವು.

**परमेश ಪರಮೇಶ** (पुं०) ಪರಮಾತ್ಮ.

**परमेश्वर ಪರಮೇಶ್ವರ** (पुं०) 1. ವಿಷ್ಣು, ಪರಮಾತ್ಮ. 2. ಪರಶಿವ, ಮಹಾದೇವ. "शूली दक्षाध्वराराातिः कामारिः परमेश्वरः" वैज०। 3. ಇಂದ್ರ. 4. ಸಾರ್ವಭೌಮ, ಚಕ್ರವರ್ತಿ.

**परमेष्ठिन् ಪರಮೇಷ್ಠಿನ್** (पुं०) 1. ಬ್ರಹ್ಮ, ಚತುರ್ಮುಖ. परमे व्योमनि ब्रह्मपदे तिष्ठति — ष्ठा (गतिनिवृत्तौ) "इनिः" (उ० ४-१०)। षत्वम् (वा० ८-३-९७)। अलुक् (६-३-१४)। "मन्वन्तराण्यसंख्यानि सर्गः संहार एव च। क्रीडन्निवैतत् कुरुते परमेष्ठी पुनः पुनः" मनु० १-८०। 2. ವಿಷ್ಣು, ಪರಮಾತ್ಮ. "यथैव श्लाघ्यते गङ्गा पादेन परमेष्ठिनः। प्रभवेण द्वितीयेन तथैवोच्छिरसा त्वया" कुमा० ६-७०। "भूतार्थव्याहृतिः सा हि न स्तुतिः परमेष्ठिनः" रघु० १०-३३। 3. ಪರಶಿವ, ಪರಮೇಶ್ವರ.

**परम्पर ಪರಂಪರ** (पुं०) 1. ಪ್ರಪೌತ್ರನ ಮಗ, ಮರಿಮಗನ ಮಗ. 2. ಮರಿಮಗನ ಮೊಮ್ಮಗ, ಪ್ರಪೌತ್ರನ ಮೊಮ್ಮಗ. "नप्तारौ पौत्रदौहित्रौ प्रतिनप्ता प्रपौत्रकः। परम्परस्तु तत्पुत्रः तत्पुत्रोऽपि परम्परः" वैज०। 3. ಒಂದು ಜಾತಿಯ ಜಿಂಕೆ. "मृगभेदे च पुत्रस्य प्रपौत्रे च परम्परः" शाश्व०। (स्त्री०) –परा –ಪರಾ. 4. ವಂಶ, ಸಂತಾನ, ಕುಲ. 5. ಅನುಕ್ರಮ, ಪರ್ಯಾಯ, ಒಂದಾದ ಮೇಲೆ ಒಂದು ಬರುವಿಕೆ. "महतीयं खल्वनर्थपरम्परा" काद०। 6. ಹಿಂಸೆ, ಪೀಡೆ, ತೊಂದರೆ. 7. ಪಙ್ಕ್ತಿ, ಸಾಲು. "तोयान्तर्भास्करालीव रेजे मुनिपरम्परा" कुमा० ६-४९। "परम्परो मृगभेदे प्रपौत्रे तनयस्य च। परम्परा परिपाट्यां हिंसासन्तानयोरपि" मेदि०।

**परम्पराक ಪರಂಪರಾಕ** (नं०) ಯಾಗದಲ್ಲಿ ಮಾಡುವ ಪಶುವಧೆ. परं परः श्रेष्ठः आकोऽस्मात्।

**परम्परीण ಪರಂಪರೀಣ** (वि०) ಪರಂಪರೆಯಾಗಿ ಪ್ರಾಪ್ತವಾದ, ವಂಶಕ್ರಮದಿಂದ ಬಂದ. पराश्च परतरांश्च अनुभवति "ख:" (५-२-१०)। प्रकृते: परम्परभावो निपात्यते। "लक्ष्मीं परम्परीणां त्वं पुत्रपौत्रीणतां नय" भट्टि० ५-१५।

**परलोक ಪರಲೋಕ** (पुं०) ಮುಂದಿನ ಲೋಕ, ಊರ್ಧ್ವಲೋಕ, ಸ್ವರ್ಗಾದಿ ಲೋಕ.

**परवत् ಪರವತ್** (वि०) 1. ಪರತಂತ್ರ, ಪರಾಧೀನ, ಇನ್ನೊಬ್ಬನ ಆಶ್ರಯದಲ್ಲಿರುವ. पर: स्वामी अस्यास्ति "मतुप्" (५-२-९४)। "तव शासनमाशु भूपति: परवानद्य यतस्त्वयैव स:" माघ० १६-४। स्त्रियां "ङीप्" (४-१-६)। **–वती –ವತೀ.** "जाने तपसो वीर्यं सा बाला परवतीति मे विदितम्" शाकु० ३-१। 2. ಇತರರ ಪ್ರಭಾವಕ್ಕೆ ಒಳಪಟ್ಟ, ಇನ್ನೊಬ್ಬನ ನೈತಿಕ ಬಲದಿಂದ ಜಯಿಸಲ್ಪಟ್ಟ.

**परवश ಪರವಶ** (वि०) ಪರತಂತ್ರ, ಪರಾಧೀನ. परस्य वश:।

**परवाणि ಪರವಾಣಿ** (पुं०) 1. ನ್ಯಾಯಾಧೀಶ, ಧರ್ಮಾಧ್ಯಕ್ಷ. 2. ಸಂವತ್ಸರ. "परवाणि: पुमान् धर्माध्यक्ष-वत्सरयोरपि" मेदि०।

**परवाद ಪರವಾದ** (पुं०) ಅಪವಾದ.

**परश ಪರಶ** (पुं०) ಒಂದು ಮಣಿ. स्पृशति—पृषो०। ತನ್ನ ಸ್ಪರ್ಶಮಾತ್ರದಿಂದ ಇತರ ಲೋಹಗಳನ್ನು ಸ್ವರ್ಣವಾಗಿ ಮಾಡುವ ಒಂದು ರತ್ನ.

**परशव्य ಪರಶವ್ಯ** (वि०) ಕೊಡಲಿಗೆ ಹಿತವಾದ. परशवे हितम्।

**परशु ಪರಶು** (पुं०) 1. ಕೊಡಲಿ, ಮರವನ್ನು ಕಡಿಯುವ ಒಂದು ಆಯುಧ. परान् शृणाति—शॄ (हिंसायाम्) "कु:" (उ० १-३३)। टिलोपश्च। "उग्रेण भोस्तव तपस्तपसा दहामि पक्षान्तरे च सदृशं परशु: करोतु" म० वी० ३-४४। 2. ಆಯುಧ, ಶಸ್ತ್ರ. 3. ಟಂಕಣಕಾರ, ಬಿಳಿಗಾರ, ಶಸ್ತ್ರಕ್ಷಾರ. "परशु: शस्त्रकण्टक: शस्त्रक्षारो महाबल:" वैज०।

**परशुधर ಪರಶುಧರ** (पुं०) 1. ಪರಶುರಾಮ. ಜಮದಗ್ನಿ ಋಷಿಯ ಮಗ, ವಿಷ್ಣುವಿನ ಒಂದು (ಆವೇಶ) ಅವತಾರ. धरति—धृञ् (धारणे) "अच्" (३-१-१३४)। परशोर्धर:। 2. ಗಣಪತಿ. (वि०) 3. ಕೊಡಲಿಯನ್ನು ಹಿಡಿದಿರುವ.

**परशुराम ಪರಶುರಾಮ** (पुं०) ಜಮದಗ್ನಿ ಋಷಿಯ ಮಗು ವಿಷ್ಣುವಿನ (ಆವೇಶ) ಅವತಾರ. परशुधरो राम:। ವಿಷ್ಣುವು ಈ ಅವತಾರವನ್ನೆತ್ತಿ ರಾಜ್ಯಮದದಿಂದ ದೃಪ್ತರಾಗಿದ್ದ ದುಷ್ಟಕ್ಷತ್ರಿಯರೊಡನೆ ಇಪ್ಪತ್ತೊಂದು ಸಲ ಯುದ್ಧಮಾಡಿ ಎಲ್ಲರನ್ನೂ ಸಂಹರಿಸಿದನು. ಇದು ವಿಷ್ಣುವಿನ ಹದಿನಾರನೆಯ ಅವತಾರ. "अवतारे षोडशमे पश्यन् ब्रह्मद्रुहो नृपान्। त्रि:सप्तकृत्व: कुपितो नि:-क्षत्रामकरोन्महीम्" भाग० १-३-२०। ಪರಶುರಾಮನು ತಂದೆಯ ಆಜ್ಞೆಯಂತೆ ತನ್ನ ತಾಯಿ ರೇಣುಕೆಯ ಶಿರಸ್ಸನ್ನು ಕಡಿದು ಮತ್ತೆ ತಂದೆಯ ವರದಿಂದ ತಾಯಿಯನ್ನು ಬದುಕಿಸಿದನು. ಒಂದು ದಿನ ಕಾರ್ತವೀರ್ಯಾರ್ಜುನನು ಜಮದಗ್ನಿಯ ಆಶ್ರಮಕ್ಕೆ ಬಂದು ಆತನ ಹೋಮಧೇನುವನ್ನು ಅಪಹರಿಸಿಕೊಂಡು ಹೋಗಲು ಪರಶುರಾಮನು ಆತನೊಡನೆ ಯುದ್ಧಮಾಡಿ ಸಂಹರಿಸಿದನು. ಇದರಿಂದ ಕುಪಿತರಾದ ಆತನ ಮಕ್ಕಳು ಪರಶುರಾಮನಿಲ್ಲದಿದ್ದಾಗ ಜಮದಗ್ನಿಯ ಆಶ್ರಮಕ್ಕೆ ಬಂದು ಆತನನ್ನು ಕೊಂದರು. ಇದನ್ನು ತಿಳಿದ ಪರಶುರಾಮನು ಕ್ರುದ್ಧನಾಗಿ ಇಪ್ಪತ್ತೊಂದು ಸಲ ಯುದ್ಧಮಾಡಿ ಕ್ಷತ್ರಿಯಕುಲವನ್ನೇ ನಿರ್ಮೂಲ ಮಾಡಿ ಭೂಮಿಯನ್ನು ಕಷ್ಟದಿಂದ ಪಾರು ಮಾಡಿದನು. ಕರ್ಣನು ಬ್ರಾಹ್ಮಣ ವೇಷದಿಂದ ಪರಶುರಾಮನಲ್ಲಿಗೆ ಹೋಗಿ ಅಸ್ತ್ರವಿದ್ಯೆಯನ್ನು ಕಲಿತನು. ಈ ಮೋಸವನ್ನು ಅರಿತು ಪರಶುರಾಮನು ಕರ್ಣನ ಬಾಣಗಳು ಫಲಿಸದಿರಲೆಂದು ಶಾಪವಿತ್ತನು. ದ್ರೋಣಾಚಾರ್ಯರು ಪರಶುರಾಮನಲ್ಲಿ ಅಸ್ತ್ರವಿದ್ಯಾಭ್ಯಾಸಮಾಡಿದರು. ಪರಶುರಾಮನು ಅಶ್ವಮೇಧಯಾಗ ಮಾಡಿ ಭೂಮಿಯನ್ನೆಲ್ಲಾ ಕಶ್ಯಪನಿಗೆ ದಾನಮಾಡಿದನು. ಪರಶುರಾಮನು ಶ್ರೀರಾಮನಿಂದ ಪರಾಜಿತನಾದನು. ಈತನು ಏಳು ಮಂದಿ ಚಿರಂಜೀವಿಗಳಲ್ಲೊಬ್ಬ. "अश्वत्थामा बलिर्व्यासो हनुमांश्च विभीषण:। कृप: परशुरामश्च सप्तैते स्थिरजीविन:"॥

**परशुवन ಪರಶುವನ** (न०) ಒಂದು ನರಕ.

**परश्वध ಪರಶ್ವಧ** (पुं०) ಕೊಡಲಿ, ಮರವನ್ನು ಕಡಿಯುವ ಒಂದು ಆಯುಧ. परस्य श्वयनम्—टु ओश्वि (गति-वृद्ध्यो:) "ड:" (वा० ३-२-१०२)। परश्वं [illegible]—धेट् (पाने) "क:" (३-२-३)। "धारां शितां राम-परश्वधस्य संभावयत्युत्पलपत्रसाराम्" रघु० ६-४२।

**परश्वस् ಪರಶ್ವಸ್** (अव्य०) ನಾಳೆಯ ಮುಂದಿನ ದಿನ, ನಾಳಿದ್ದು. पर:श्वस् पृषो०।

**परसंज्ञक ಪರಸಂಜ್ಞಕ** (ಪುಂ०) ಜೀವಾತ್ಮ. परः संज्ञा अस्य "कप्" (५-४-१५४)।

**परसवर्ण ಪರಸವರ್ಣ** (ಪುಂ०) ಮುಂದಿನ ವರ್ಣಕ್ಕೆ ಸಮಾನವಾದ ವರ್ಣ. परेण समानो वर्णः।

**परस्तात् ಪರಸ್ತಾತ್** (अव्य०) 1. ಆಚೆ, ಅದರಿಂದ ಮುಂದೆ, ಅದಕ್ಕೆ ಅನಂತರ, ಅದರ ಬಳಿಕ. पर वा "अस्तातिः" (५-३-२९)। 2. ಅನಂತರ, ಬಳಿಕ, ತರುವಾಯ. "तत्परस्तादवगम्यते" शाकु० १।

**परस्त्री ಪರಸ್ತ್ರೀ** (स्त्री०) ಪರಪುರುಷನ ಪತ್ನಿ, ಇನ್ನೊಬ್ಬನ ಹೆಂಡತಿ.

**परस्पर ಪರಸ್ಪರ** (वि०) 1. ಅನ್ಯೋನ್ಯವಾದ, ಒಬ್ಬನಿಗೊಬ್ಬನ. "परस्परप्राप्तिनिराशयोर्वरं शरीरनाशोऽपि समानुरागयोः" माल० ३-१५। "परस्पराक्षिसादृश्यमदूरोज्झितवर्त्मसु" रघु० १-४०। (अव्य०) 2. ಅನ್ಯೋನ್ಯವಾಗಿ. "परस्परेण विज्ञातस्तेषूपायनपाणिषु" रघु० ४-७९। "परिफुल्लगण्डपुलकाः परस्परं परिरेभिरे कुकुरकौरवस्त्रियः" माघ० १३-१६।

**परस्मैपद ಪರಸ್ಮೈಪದ** (न०) ಇನ್ನೊಬ್ಬನ ಉದ್ದೇಶದಿಂದ ಉಪಯೋಗಿಸುವ ಪದ, ಮಾಡುವ ಕ್ರಿಯೆಯ ಫಲವು ಇತರನಿಗೆ ಸೇರಿದುದೆಂದು ಹೇಳುವ ಪದ. परस्मै पदम् "अलुक्" (६-३-८)। "शेषात्कर्तरि परस्मैपदम्" (१-३-७८)।

**परा ಪರಾ** (अव्य०) ನಾಮಪದ ಮತ್ತು ಕ್ರಿಯಾಪದಗಳ ಹಿಂದೆ ಸೇರಿಸಲ್ಪಡುವ ಒಂದು ಉಪಸರ್ಗ. ಇದು ಈ ಕೆಳಗಿನ ಅರ್ಥಗಳಿಗೆ ದ್ಯೋತಕವಾಗುವುದು. 1. ಪ್ರಾತಿಲೋಮ್ಯ, ವ್ಯತ್ಯಾಸ, ಹಿಂದು ಮುಂದಾಗುವುದು. 2. ಪ್ರಾಧಾನ್ಯ, ಮುಖ್ಯತೆ. 3. ವಧೆ, ಕೊಲ್ಲುವುದು, ನಾಶಪಡಿಸುವುದು. "पराहतध्वस्तशिखे शिखावतो वपुष्यविक्षिप्तसमिद्धतेजसि" किरा० १६-५६। 4. ಗಮನ, ಹೋಗುವುದು, ನಡೆಯುವುದು. 5. ಆಶ್ರಯ, ಅವಲಂಬನೆ. 6. ಸೋಲುವುದು. "पराभवं तस्य महासुरस्य"। 7. ಹಿಂತಿರುಗುವುದು. परावृत्तः। 8. ಮೋಕ್ಷ, ಮುಕ್ತಿ, ಬಿಡುಗಡೆ. 9. ಅವಮಾನ. पराभूतः। "पराभवोऽप्युत्सव एव मानिनाम्" किरा० १-४१। 10. ಹೊಡೆಯುವುದು, ತಾಕುವುದು. "अवाप्तकिञ्जल्कविभेदमुच्चकैर्विवृत्तपाठीनपराहतं पयः" किरा० ४-५। ಇತ್ಯಾದಿ. (स्त्री०) 11. ನಾಭಿರೂಪವಾದ ಮೂಲಾಧಾರದಿಂದ ಮೊದಲು ಹುಟ್ಟಿದ ನಾದರೂಪವಾದ ವರ್ಣ. "मूलाधारात् प्रथममुदितो यस्तु तारः पराख्यः" अलं० कौस्तु०। ಆತ್ಮನು ಬುದ್ಧಿಯೊಡನೆ ಸೇರಿ ಬಾಹ್ಯವಿಷಯಗಳನ್ನು ಗ್ರಹಿಸಿ ಅದನ್ನು ಹೇಳಲು ಶಬ್ದೋಚ್ಚಾರಣೆಗಾಗಿ ಯತ್ನಿಸುವನು. ಈ ಶಬ್ದೋಚ್ಚಾರಣೆಗೆ ಮೂಲಾಧಾರದಿಂದ ಹುಟ್ಟುವ ನಾದ ಮೊದಲಾಗಿ ಅರ್ಥಬೋಧಕಶಬ್ದನಿಷ್ಪತ್ತಿಯವರೆಗೆ परा पश्यन्ती मध्यमा ಮತ್ತು वैखरी ಎಂಬ ನಾಲ್ಕು ಅವಸ್ಥೆಗಳುಂಟು. [ವಿವರಕ್ಕೆ "पश्यन्ती" ಪದದಲ್ಲಿ ನೋಡಿ.] 12. ಗಂಗಾನದಿ.

**पराक ಪರಾಕ** (ಪುಂ०) ಹನ್ನೆರಡು ದಿನಗಳು ಉಪವಾಸವಿದ್ದು ಮಾಡುವ ಒಂದು ಪ್ರಾಯಶ್ಚಿತ್ತರೂಪವಾದ ವ್ರತ. "यतात्मनोऽप्रमत्तस्य द्वादशाहमभोजनम्। पराको नाम कृच्छ्रोऽयं सर्वपापापनोदन." मनु० ११-२१५।

**पराकार ಪರಾಕಾರ** (ಪುಂ०) ಧಿಕ್ಕಾರ, ತೆಗಳಿಕೆ, "पराकारस्तु धिक्क्रिया" वैज०।

**पराक्रम ಪರಾಕ್ರಮ** (ಪುಂ०) ಬಲ, ಶಕ್ತಿ, ಶರೀರಸಾಮರ್ಥ್ಯ. परा + क्रमु (पादविक्षेपे) "घञ्" (३-३-१२१)। "निरीक्षितुं वियति समेत्य कौतुकात् पराक्रमं समरमुखे महीभृताम्" माघ० १७-६२।

**पराग ಪರಾಗ** (ಪುಂ०) 1. ರೇಣು, ಧೂಳು. परा गच्छति —गम्लृ (गतौ) "डः" (वा० ३-२-४८)। "प्रतापोऽग्रे ततः शब्दः परागस्तदनन्तरम्" रघु० ४-३०। 2. ಹೂವಿನ ಧೂಳು, ಪುಷ್ಪದ ರೇಣು. "नवपलाशपलाशवनं पुरः स्फुटपरागपरागतपङ्कजम्" माघ० ६-२। 3. ಚೂರ್ಣ, ಪುಡಿ. "नवानघोऽधो बृहतः पयोधरान् समूढकर्पूरपरागपाण्डुरम्" माघ० १-४। 4. ಸ್ನಾನೀಯ ಚೂರ್ಣ, ಸ್ನಾನವಾದ ಮೇಲೆ ಮೈಗೆ ಪೂಸುವ ಸುವಾಸನೆಯ ಪುಡಿ. 5. ಚಂದನ. 6. ಉಪರಾಗ, ಸೂರ್ಯಚಂದ್ರರ ಗ್ರಹಣ. 7. ಯಶಸ್ಸು, ಕೀರ್ತಿ. 8. ಒಂದು ಪರ್ವತ. "परागः सुमनोरेणौ धूलिस्नानीययोरपि। गिरिप्रभेदे विख्याताचुपरागे च चन्दने" मेदि० विश्व०। 9. ಬಿದಿರು. "भवेत्परागः स्नानीये वेणौ रेणौ च कौसुमे" नानार्थर०। 10. ಸ್ವೇಚ್ಛೆಯಾಗಿ ಸಂಚರಿಸುವುದು.

**परागत ಪರಾಗತ** (वि०) 1. ವ್ಯಾಪ್ತವಾದ, ಆವೃತವಾದ, ಸುತ್ತುವರಿಯಲ್ಪಟ್ಟ. परा + गम्लृ (गतौ) "क्तः" (३-२-१०२)। "नवपलाशपलाशवनं पुरः स्फुटपरागपरागतपङ्कजम्" माघ० ६-२। 2. ಹಿಂತಿರುಗಿದ, ಹಿಂದಕ್ಕೆ ಬಂದ, "वत्स, सावधानो भव। परागतस्ते प्रतिवीरः" उ० रा० ५।

**परागवत् ಪರಾಗವತ್** (वि०) ಪರಾಗದಿಂದ ಕೂಡಿದ, ಮಕರಂದಸಹಿತವಾದ, ಪುಷ್ಪದ ಧೂಳಿನಿಂದ ಕೂಡಿರುವ. परागोऽस्यास्ति "मतुप्" (५-२-९४)। स्त्रियां "ङीप्" (४-१-६)। **-वती -ವತೀ.**

**परागिन् ಪರಾಗಿನ್** (वि०) ಮಕರಂದದಿಂದ ಕೂಡಿರುವ, ಹೂವಿನ ಧೂಳಿನಿಂದ ಕೂಡಿದ. परागोऽस्यास्ति "इनिः" (५-२-११५)। स्त्रियां "ङीप्" (४-१-५)। **-गिणी -ಗಿಣೀ.** "इदमपास्य विरागि परागिणीरलिकदम्बकमम्बुरुहां ततीः" माघ० ६-११।

**पराङ्मुख ಪರಾಙ್ಮುಖ** (वि०) 1. ವಿಮುಖ, ಹಿಮ್ಮುಖವುಳ್ಳ, ಹಿಂದಕ್ಕೆ ತಿರುಗಿಕೊಂಡಿರುವ. परा अञ्चति — अञ्चु (गतिपूजनयोः) "क्विन्" (३-२-५९)। पराक् मुखं यस्य। "प्रणयकोपभृतोऽपि पराङ्मुखाः सपदि वारिधरारवभीरवः" माघ० ६-३८। स्त्रियां "ङीप्" (४-१-५)। "विग्रहाच्च शयने पराङ्मुखीर्नानुनेतुमबलाः स तत्वरे" रघु० १९-३८। 2. ವಿಮುಖ, ಪ್ರತಿಕೂಲ. "तनुरपि न ते दोषोऽस्माकं विधिस्तु पराङ्मुखः" अमरु० ३०। 3. ವಿರುದ್ಧ ನಡವಳಿಕೆಯುಳ್ಳ, ಇಷ್ಟವಿಲ್ಲದ ಮನಸ್ಸುಳ್ಳ, ದ್ವೇಷದ ಮನೋಭಾವವುಳ್ಳ. "मातुर्न केवलं स्वस्याः श्रियोऽप्यासीत्पराङ्मुखः" रघु० १२-१३। 4. ಅಲಕ್ಷ್ಯ, ಗಣನೆಗೆ ತಂದುಕೊಳ್ಳದ, ತಿರಸ್ಕಾರದ ಮನಸ್ಸುಳ್ಳ. "दैवात्सर्गादिवध्यत्वं मर्त्येष्वास्थापराङ्मुखः" रघु० १०-४३। 5. ತಪ್ಪಿಸುವ, ಬಿಟ್ಟುಬಿಡುವ, ತೊರೆದುಬಿಡುವ. स्त्रियां "ङीप्" **-मुखी -ಮುಖೀ.** "प्रायेण सामग्र्यविधौ गुणानां पराङ्मुखी विश्वसृजः प्रवृत्तिः" कुमा० ३-२८।

**पराच् ಪರಾಚ್** (वि०) 1. ಹಿಂತಿರುಗಿಕೊಂಡ, ಮುಖವನ್ನು ಹಿಂದಕ್ಕೆ ಮಾಡಿಕೊಂಡ, ಹಿಂದುಮುಂದಾದ. परा अञ्चति—अञ्चु (गतिपूजनयोः) "क्विन्" (३-२-५९)। "आत्मीयास्ते ये पराञ्चः पुरस्तादभ्यावर्ती संमुखो यः परोऽसौ" माघ० १८-१८। 2. ವಿರುದ್ಧವಾದ, ಪ್ರತಿಕೂಲವಾದ. 3. ಬೇರೆ ಕಡೆಗೆ ತಿರುಗಿದ. 4. ಮೇಲಕ್ಕೆ ಹೋಗುವ. 5. ಪಶ್ಚಿಮ ದಿಕ್ಕಿನ. 6. ಪಶ್ಚಿಮ ದೇಶದ. 7. ಮುಂದಿನ ಕಾಲದ. (अव्य०) 8. ಪಶ್ಚಿಮ ದಿಕ್ಕಿನ ಕಡೆಗೆ. 9. ಪಶ್ಚಿಮ ದೇಶದ ಕಡೆಗೆ. 10. ಮುಂದಿನ ಕಾಲದಲ್ಲಿ, ಆಕಾಲದ ನಂತರ. "उदक्प्रत्यक्परागर्वाक् प्राक् च तिर्यगवागपाक्। विष्वक् चैवमुदीचीनप्रमुखाः स्युर्यथाक्रमम्। दिग्देशकालवचनमुदगादिकमव्ययम्। दिग्देशकालसंबन्धिपदार्थेष्वभिधेयवत्" वैज०।

**पराचित ಪರಾಚಿತ** (वि०) ಸೇವಕ, ಆಳು. परैराचितः —आ + चिञ् (चयने) "क्तः" (३-२-१०२)। "पराचितपरास्कन्दपरजातपरधिताः" अम०।

**पराचीन ಪರಾಚೀನ** (वि०) 1. ಹಿಂತಿರುಗಿದ, ಹಿಂದಕ್ಕೆ ಮುಖಮಾಡಿದ. परा अञ्चति — अञ्चु (गतिपूजनयोः) "खः" (५-४-८)। 2. ಪಶ್ಚಿಮ ದೇಶದಲ್ಲಿರುವ.

**पराजय ಪರಾಜಯ** (पुं०) ಅಪಜಯ, ಸೋಲು. परा + जि (जये) "अच्" (३-३-५६)। "विष्टपत्रयपराजयस्थिरां रावणश्रियमपि व्यकम्पयत्" रघु० ११-१९।

**पराजित ಪರಾಜಿತ** (वि०) ಸೋಲಿಸಲ್ಪಟ್ಟ, ಗೆಲ್ಲಲ್ಪಟ್ಟ. परा + जि (जये) "क्तः" (३-२-१०२)।

**पराञ्ज ಪರಾಂಜ** (पुं०) 1. ಎಣ್ಣೆ ಗಾಣ. 2. ನೊರೆ. 3. ಕತ್ತಿಯ ಅಲಗು, ಅಸಿಧಾರೆ.

**पराण् ಪರಾಣ್** (वि०) ಪ್ರಾಣಸಹಿತನಾದ, ಜೀವದಿಂದ ಕೂಡಿರುವ. परा+अन (प्राणने) "क्विप्" (३-२-७६)। णत्वम् (८-४-२०)।

**परात्पर ಪರಾತ್ಪರ** (पुं०) ಪರವಾಸುದೇವ, ಪರಮಾತ್ಮ. परात् श्रेष्ठादपि परः श्रेष्ठः। "महतः परमव्यक्तमव्यक्तात् पुरुषः परः। पुरुषान्नपरं किञ्चित् सा काष्ठा सा परा गतिः" कठ०।

**परात्मन् ಪರಾತ್ಮನ್** (पुं०) ಪರಮಾತ್ಮ, ಪರಬ್ರಹ್ಮ.

**परादन ಪರಾದನ** (पुं०) ಪಾರಸೀ ದೇಶದ ಕುದುರೆ.

**पराधीन ಪರಾಧೀನ** (वि०) 1. ಪರತಂತ್ರ, ಇನ್ನೊಬ್ಬನ ಅಧೀನದಲ್ಲಿರುವ, ಇನ್ನೊಬ್ಬನ ಆಸರೆಯಲ್ಲಿರುವ. परस्य अधीनः। 2. ಇನ್ನೊಬ್ಬನನ್ನವಲಂಬಿಸಿರುವ, ಇನ್ನೊಂದು ವಸ್ತುವಿಗೆ ಅಧೀನವಾಗಿರುವ. "हिंसाप्रायां पराधीनां कृषिं यत्नेन वर्जयेत्" मनु० १०-८३।

**परान्न ಪರಾನ್ನ** (न०) 1. ಇತರರ ಅನ್ನ, ಇನ್ನೊಬ್ಬನ ಮನೆಯ ಅನ್ನ. परस्य अन्नम्। "कष्टात् कष्टतरं किं परगृहवासः परान्नं च"। ಪರಾನ್ನವನ್ನು ತಿಂದು ಜೀವಿಸುವವನಿಗೆ ಮಂತ್ರಸಿದ್ಧಿಯಿಲ್ಲ. "जिह्वा दग्धा परान्नेन करौ दग्धौ प्रतिग्रहात्। मनो दग्धं परस्त्रीभिः कथं सिद्धिर्वरानने"। ತೀರ್ಥಯಾತ್ರೆಯ ಸಮಯದಲ್ಲಿ ಪರಾನ್ನ ಭೋಜನವು ಕೂಡದು. "षोडशांशं स लभते यः परान्नेन गच्छति। अर्धं तीर्थफलं तस्य यः प्रसङ्गेन गच्छति"। ಗುರು ಸೋದರಮಾವ ಮಾವ (ಶ್ವಶುರ) ತಂದೆ ಮತ್ತು ಮಗ ಇವರ ಅನ್ನವು ಪರಾನ್ನವಲ್ಲ. "गुर्वन्न

मातुलान्नं च श्वशुरान्नं तथैव च। पितुः पुत्रस्य चैवान्नं न परान्नमिति स्मृतिः"। (वि०) 2. ಪರಾನ್ನವನ್ನು ತಿಂದು ಜೀವಿಸುವ.

**पराभव ಪರಾಭವ** (पुं०) 1. ಸೋಲು, ಅಪಜಯ. परा + भू (सत्तायाम्) "अप्" (३-३-५७)। "परैरपर्यासितवीर्यसंपदां पराभवोऽप्युत्सव एव मानिनाम्" किरा० १-४१। 2. ಅವಮಾನ, ಅಪಮಾನ.

**परामर्श ಪರಾಮರ್ಶ** (पुं०) 1. ವಿಮರ್ಶೆ, ವಿವೇಚನೆ. परा + मृश (आमर्शने)। भावे "घञ्" (३-३-१८)। 2. ಯುಕ್ತಿ, ಉಪಾಯ. 3. ಅಡ್ಡಿ, ಆತಂಕ, ತಡೆ. "तपःपरामर्शविवृद्धमन्योर्भ्रूभङ्गदुष्प्रेक्ष्यमुखस्य तस्य" कुमा० ३-७१। 4. ಸ್ಪರ್ಶ, ಮುಟ್ಟುವಿಕೆ. 5. ಸಾಧ್ಯ ಸಮಾನಾಧಿಕರಣವಾದ ಪಕ್ಷವು ಹೇತುವಿನಿಂದ ಕೂಡಿರುವುದೆಂಬ ಜ್ಞಾನ, ವಿಷಯವು ಸರಿಯಾದ ಹೇತುವಿನಿಂದ ಕೂಡಿರುವುದೆಂಬ ತಿಳಿವಳಿಕೆ. "व्याप्तिविशिष्टपक्षधर्मताज्ञानं परामर्शः" त० सं०। ಈ ಜ್ಞಾನವೇ ಅನುಮಿತಿಗೆ ಕಾರಣ. "वह्निव्याप्यवानयं पर्वतः" ಎಂಬ ಜ್ಞಾನದಿಂದ ಮಾತ್ರ ಅನುಮಿತಿಯುಂಟಾಗಲಾರದು. ಅನುಮಿತಿಗೆ ವ್ಯಾಪ್ತಿವಿಶಿಷ್ಟಪಕ್ಷ ಧರ್ಮತಾ ಜ್ಞಾನವು ಅವಶ್ಯವಾದುದು. ಮಹಾನಸಾದಿಗಳಲ್ಲಿ ಧೂಮವನ್ನು ಕಂಡು "वह्निव्याप्यो धूमः" ಎಂಬ ಜ್ಞಾನವುಂಟಾದರೆ ಪರ್ವತದಲ್ಲಿಯೂ ಧೂಮವನ್ನು ಕಂಡಾಗ पर्वतो वह्निमान् धूमात् ಎಂಬ ಅನುಮಿತಿಯುಂಟಾಗುವುದು. ಈ ಅನುಮಿತಿಗೆ "वह्निव्याप्यधूमवानयम्" ಎಂಬ ಪರಾಮರ್ಶವೇ ಕಾರಣ. 6. ಮೇಲೆ ಬೀಳುವುದು, ಧಾಳಿಮಾಡುವುದು, ಆಕ್ರಮಣ ಮಾಡುವುದು.

**परामर्शन ಪರಾಮರ್ಶನ** (न०) 1. ಆಲೋಚಿಸುವುದು, ವಿಮರ್ಶೆಮಾಡುವುದು, ವಿವೇಚನೆಮಾಡಿ ನೋಡುವುದು. परा + मृश (आमर्शने) "ल्युट्" (३-३-११५)। 2. ಜ್ಞಾಪಿಸಿಕೊಳ್ಳುವುದು, ನೆನಪುಮಾಡಿಕೊಳ್ಳುವುದು.

**परामृशत् ಪರಾಮೃಶತ್** (वि०) 1. ಸ್ಪರ್ಶಮಾಡುತ್ತಿರುವ, ಮುಟ್ಟುತ್ತಿರುವ. परा + मृश (आमर्शने) "शतृ" (३-२-१२४)। "परामृशन् हर्षजडेन पाणिना तदीयमङ्गं कुलिशव्रणाङ्कितम्" रघु० ३-६८। 2. ಅಡ್ಡಿಪಡಿಸುತ್ತಿರುವ, ತಡೆಮಾಡುತ್ತಿರುವ. 3. ವಿಮರ್ಶೆ ಮಾಡುತ್ತಿರುವ, ವಿವೇಚನೆ ಮಾಡುತ್ತಿರುವ. ಆಲೋಚಿಸಿ ನೋಡುತ್ತಿರುವ. "दशाननायोधनकेलिकिङ्करं परामृशन्नृक्षपतिं परः पुमान्" याद० १४-२२। 4. ಧಾಳಿ ಮಾಡುತ್ತಿರುವ, ಮೇಲೆ ಬೀಳುತ್ತಿರುವ. स्त्रियां "ङीप्" (४-१-६)। **-आमृशन्ती -ಆಮೃಶನ್ತೀ.** "परामृशन्ती विततान काचित् प्रतिक्रियां पाणिनखांशुजालैः" याद० २३-५१।

**परामृष्ट ಪರಾಮೃಷ್ಟ** (वि०) 1. ಆಲೋಚಿಸಿ ನೋಡಲ್ಪಟ್ಟ, ವಿಮರ್ಶೆಮಾಡಲ್ಪಟ್ಟ. परा + मृश (आमर्शने) "क्तः" (३-२-१०२)। 2. ಧಾಳಿಮಾಡಲ್ಪಟ್ಟ. 3. ಸ್ಪರ್ಶ ಮಾಡಲ್ಪಟ್ಟ, ಮುಟ್ಟಲ್ಪಟ್ಟ. "केशवृन्दे परामृष्टा चाणक्येनेव द्रौपदी" मृच्छ० १-३९। 4. ಅಡ್ಡಿಮಾಡಲ್ಪಟ್ಟ, ತೊಂದರೆಪಡಿಸಲ್ಪಟ್ಟ.

**परायण ಪರಾಯಣ** (पुं०) 1. ವಿಷ್ಣು, ಪರಮಾತ್ಮ. समाधिमतां परम् अतिशयितं अयनं अव्यवहितप्रापिका भक्तिरस्मात्। "यस्मात्तु परमा भक्तिः चरमप्रापिका मता। तस्मात्परायण इति स्मृतोऽष्टार्णे उत्तमः" इति निरुक्तिः। "निष्ठा शान्तिः परायणः" वि०स०। (न०) 2. ಭಕ್ತಿ, ಶ್ರದ್ಧೆ, ಅತಿಶಯವಾದ ಆಸಕ್ತಿ. 3. ಒಳ್ಳೆಯ ಆಶ್ರಯ, ಒಳ್ಳೆಯ ಆಸರೆ. (वि०) 4. ಹೆಚ್ಚು ಆಸಕ್ತಿಯುಳ್ಳ, ಶ್ರದ್ಧೆಯುಳ್ಳ. 5. ಹೆಚ್ಚು ಅಭಿಲಾಷೆಯುಳ್ಳ. "प्रभुर्धनपरायणः सततदुर्गतिः सज्जनः" भर्तृ० १-४५। 6. ಇಷ್ಟವಾದ, ಪ್ರಿಯವಾದ.

**परायत्त ಪರಾಯತ್ತ** (वि०) ಪರಾಧೀನ, ಪರಾಶ್ರಯವುಳ್ಳ, ಇತರರನ್ನು ಅವಲಂಬಿಸಿರುವ. परेषामायत्तः। "परार्थश्चेत् स्वार्थादभिमततरो हन्त परवान् परायत्तः प्रीतेः कथमिव रसं वेत्तु पुरुषः" मुद्रा० ३-४।

**परारि ಪರಾರಿ** (अव्य०) ಪೂರ್ವತರ ಸಂವತ್ಸರ, ಹಿಂದಿನ ಎರಡನೆಯ ವರ್ಷ, ಹಿಂದಿನ ವರ್ಷಕ್ಕೆ ಮೊದಲಿನ ವರ್ಷ. पूर्वतर परभावः आरी च निपा० (५-३-२२)। "अतीतानन्तरे वर्षे परारि" वैज०।

**परारिका ಪರಾರಿಕಾ** (स्त्री०) ಒಂದು ಜಾತಿಯ ಈರುಳ್ಳಿ. "लशुनं दीर्घपत्रम् पिच्छनद्धः महौषधः फरुण्डः पलाण्डुः लताकः परारिका गृञ्जनः यवनेष्टः" ಎಂದು ಈರುಳ್ಳಿಯಲ್ಲಿ ಹತ್ತು ಜಾತಿಯಿರುವುದು.

**परार्थ ಪರಾರ್ಥ** (पुं०) 1. ಇತರರ ಪ್ರಯೋಜನ, ಇತರರಿಗಾಗುವ ಪ್ರಯೋಜನ. परस्यार्थः। "एते सत्पुरुषाः परार्थघटकाः स्वार्थान् परित्यज्य ये" भर्तृ० १-६४। "स्वार्थो यस्य परार्थ एव स पुमानेकः सतामग्रणीः"। "तथाहि सर्वे तस्यासन् परार्थैकफला गुणाः" रघु० १-२९। (वि०) 2. ಇತರರ ಪ್ರಯೋಜನವೇ ಕಾರಣ

ವಾಗಿ ಉಳ್ಳ, ಇನ್ನೊಬ್ಬನ ಕಾರ್ಯವೇ ನಿಮಿತ್ತವಾಗಿ ಉಳ್ಳ. परः अर्थः उद्देश्यो यस्य। (अव्य०) 3. ಇತರನಿಗಾಗಿ, ಇನ್ನೊಬ್ಬನಿಗಾಗಿ, ಇನ್ನೊಬ್ಬನ ಪ್ರಯೋಜನಕ್ಕಾಗಿ.

**परार्ध ಪರಾರ್ಧ** (न०) 1. ಇನ್ನೊಂದು ಭಾಗ, ಎರಡನೆಯ ಅರ್ಧಭಾಗ. "दिनस्य पूर्वार्धपरार्धभिन्ना छायेव मैत्री खलसज्जनानाम्" भर्तृ० २-६०। 2. ಒಂದು ದೊಡ್ಡ ಸಂಖ್ಯೆ. "अथ परे दशगुणोत्तराः। शतं सहस्रमयुतं नियुतं प्रयुतार्बुदे। न्यर्बुदं बृन्दखर्वे च निखर्वं शङ्खमम्बुजम्। समुद्रो मध्यमन्तं च परार्धं च यथाक्रमम्" वैज०। ಮುಂದಿನ ಪ್ರತಿಯೊಂದು ಸಂಖ್ಯೆಯೂ ಹತ್ತರಷ್ಟು ಹೆಚ್ಚಾಗುವುದು.

| | |
|---|---|
| शतम् | १०० × 10 |
| सहस्रम् | १००० × 10 |
| अयुतम् | १०००० × 10 |
| नियुतम् | १००००० × 10 |
| प्रयुतम् | १०००००० × 10 |
| अर्बुदम् | १००००००० × 10 |
| न्यर्बुदम् | १०००००००० × 10 |
| बृन्दम् | १००००००००० × 10 |
| खर्वम् | १०००००००००० × 10 |
| निखर्वम् | १००००००००००० × 10 |
| शङ्खम् | १०००००००००००० × 10 |
| अम्बुजम् | १००००००००००००० × 10 |
| समुद्रः | १०००००००००००००० × 10 |
| मध्यम् | १००००००००००००००० × 10 |
| अन्तम् | १०००००००००००००००० × 10 |
| परार्धम् | १००००००००००००००००० |

3. ಬ್ರಹ್ಮನ ಆಯುಃಪ್ರಮಾಣದ ಎರಡನೆಯ ಅರ್ಧ (ಉತ್ತರಾರ್ಧ). परस्य ब्रह्मणः आयुषोऽर्धम्।

**परार्ध्य ಪರಾರ್ಧ್ಯ** (वि०) 1. ಶ್ರೇಷ್ಠವಾದ. परस्मिन्नर्धे भवः "यत्" (४-३-५)। "आबद्धप्रचुरपरार्ध्यकिंकिणीको रामाणामनवरतोदगाहभाजाम्" माघ० ८-४५। 2. ಅಧಿಕ ಮೌಲ್ಯದ, ಹೆಚ್ಚು ಬೆಲೆಬಾಳುವ. "यतः परार्ध्यानि भृतान्यनूनैः" माघ० ४-११। 3. ಸುಂದರವಾದ. "परार्ध्यवर्णास्तरणोपपन्नम्" रघु० ६-४।

**परावर ಪರಾವರ** (वि०) 1. ಅತ್ಯಂತ ಶ್ರೇಷ್ಠವಾದ. परस्मादप्यवरः। 2. ಹಿಂದಿನ ಮತ್ತು ಮುಂದಿನ. 3. ಮೇಲಿನ ಮತ್ತು ಕೆಳಗಿನ. 4. ದೂರದ ಮತ್ತು ಸಮೀಪದ. (स्त्री०) -अवरा -ಅವರಾ. 5. ಒಂದು ವಿದ್ಯೆ.

**परावर्त ಪರಾವರ್ತ** (पुं०) 1. ಹಿಂತಿರುಗುವಿಕೆ. 2. ವಿನಿಮಯ, ಬದಲಾವಣೆ. परा + वृतु (वर्तने) "घञ्" (३-३-१८)।

**परावह ಪರಾವಹ** (पुं०) ಸಪ್ತವಿಧ ವಾಯುಗಳಲ್ಲೊಂದು. परा वहति — वह (प्रापणे) "अच्" (३-१-१३४)। (1) आवहः (2) प्रवहः (3) विवहः (4) परावहः (5) संवहः (6) उद्वहः ಮತ್ತು (7) परिवहः ಇವು ಸಪ್ತವಾಯುಗಳು. ಪರಾವಹವಾಯುವು ಪರಿವಹವಾಯುವಿನ ಮೇಲುಗಡೆಯಿರುವುದು.

**पराविद्ध ಪರಾವಿದ್ಧ** (पुं०) ಕುಬೇರ. परा + व्यध (ताडने) "क्तः" (३-२-१०२)।

**परावृत्त ಪರಾವೃತ್ತ** (वि०) 1. ಹಿಂತಿರುಗಿದ, ಹಿಂದಕ್ಕೆ ಹೋದ. परा + वृतु (वर्तने) "क्तः" (३-४-७२)। 2. ಬದಲಾವಣೆ ಹೊಂದಿದ, ವಿನಿಮಯದಿಂದ ಬಂದಿರುವ.

**परावृत्ति ಪರಾವೃತ್ತಿ** (स्त्री०) 1. ಹಿಂತಿರುಗುವಿಕೆ, ಹಿಂದಕ್ಕೆ ಹೋಗುವಿಕೆ. परा+वृतु (वर्तने) "क्तिन्" (३-३-९४)। 2. ವಿನಿಮಯ, ಬದಲಾವಣೆ.

**पराशर ಪರಾಶರ** (पुं०) ಒಬ್ಬ ಮಹರ್ಷಿ, ವ್ಯಾಸಮಹರ್ಷಿಯ ತಂದೆ, ಒಬ್ಬ ಸ್ಮೃತಿಕಾರರು. ಪರಾಶರಸ್ಮೃತಿಯು ಈ ಮಹರ್ಷಿಯಿಂದ ವಿರಚಿತವಾದುದು.

**पराशरात्मज ಪರಾಶರಾತ್ಮಜ** (पुं०) ವ್ಯಾಸಮಹರ್ಷಿ. पराशरस्यात्मजः।

**पराश्रय ಪರಾಶ್ರಯ** (पुं०) 1. ಇನ್ನೊಬ್ಬನ ಆಸರೆ, ಇತರನ ಅವಲಂಬನೆ. 2. ಶತ್ರುವಿನ ಆಶ್ರಯ. परस्याश्रयः। (वि०) 3. ಇನ್ನೊಬ್ಬನ ಆಶ್ರಯದಲ್ಲಿರುವ. (स्त्री०) -आश्रया -ಆಶ್ರಯಾ. ಮತ್ತೊಂದು ಮರವನ್ನು ಆಶ್ರಯಿಸಿ ಬೆಳೆಯುವ ಲತೆ, ಬಳ್ಳಿ.

**परास ಪರಾಸ** (न०) ತವರ. "रङ्गं वङ्गं त्रपु क्षौम्यं मृद्वङ्गं नागजीवनम्। परासं सिंहलं ज्येष्ठम्" वैज०।

**परासन ಪರಾಸನ** (न०) ಸಂಹರಿಸುವುದು, ಕೊಲ್ಲುವುದು. परा + असु (क्षेपणे) "ल्युट्" (३-३-११५)।

**परासु ಪರಾಸು** (वि०) ಮರಣಹೊಂದಿದ, ಗತಿಸಿಹೋದ. परागताः असवो यस्य।

**परास्त ಪರಾಸ್ತ** (वि०) 1. ಎಸೆಯಲ್ಪಟ್ಟ, ಬಿಸಾಡಲ್ಪಟ್ಟ. परा+असु (क्षेपणे) "क्तः" (३-२-१०२)। 2. ಬಿಡಲ್ಪಟ್ಟ, ತ್ಯಜಿಸಲ್ಪಟ್ಟ. "परास्तवसुधा सुधाधिवसति"

किरा० ५-२७। 3. ತಿರಸ್ಕರಿಸಲ್ಪಟ್ಟ, ತಳ್ಳಿಹಾಕಲ್ಪಟ್ಟ. "इति यदुक्तं तदपि परास्तम्"।

**परास्कन्दन ಪರಾಸ್ಕಂದನ** (न०) 1. ಇತರರ ಮೇಲೆ ಬೀಳುವುದು, ಇತರರನ್ನು ಮುತ್ತಿಗೆ ಹಾಕುವುದು. 2. ಇತರರನ್ನು ತಿರಸ್ಕರಿಸುವುದು.

**परास्कन्दिन् ಪರಾಸ್ಕಂದಿನ್** (वि०) 1. ಇತರರ ಮೇಲೆ ಬೀಳುವ ಸ್ವಭಾವವ. (पुं०) 2. ಚೋರ, ಕಳ್ಳ. परान् आस्कन्दितुं शीलमस्य — पर + आ + स्कन्दिर् (गतिशोषणयोः) "णिनिः" (३-२-७८)। "प्रतिरोधिपरास्कन्दिपाटच्चरमलिम्लुचाः" अम०। 3. ಇತರರನ್ನು ತಿರಸ್ಕರಿಸುವ ಸ್ವಭಾವದ.

**पराह ಪರಾಹ** (पुं०) ಮಾರನೆಯ ದಿನ, ಮರುದಿವಸ. परम् अहः "टच्" (५-४-९१)।

**पराहत ಪರಾಹತ** (वि०) ಹೊಡೆಯಲ್ಪಟ್ಟ, ಗಾಯಗೊಳಿಸಲ್ಪಟ್ಟ, ಹಿಂಸಿಸಲ್ಪಟ್ಟ. परा+हन (हिंसागत्योः) "क्तः" (३-२-१०२)। "पराहतध्वस्तशिखे शिखावतो वपुष्यधिक्षिप्तसमिद्धतेजसि" किरा० १६-५६।

**पराह्ण ಪರಾಹ್ಣ** (पुं०) ಹಗಲಿನ ಉತ್ತರಾರ್ಧ. परः अह्नः "टच्" (५-४-८८)। णत्वम् (८-४-७)।

**परि ಪರಿ** (अव्य०) ನಾಮಪದಗಳ ಮತ್ತು ಕ್ರಿಯಾಪದಗಳ ಹಿಂದೆ ಸೇರಿಸಲ್ಪಡುವ ಒಂದು ಉಪಸರ್ಗ. ಇದು ಈ ಕೆಳಗಿನ ಅರ್ಥಗಳಿಗೆ ದ್ಯೋತಕವಾಗಿರುವುದು. 1. ಸುತ್ತಲೂ, ಎಲ್ಲಾ ಕಡೆಯಲ್ಲೂ. "शुक्लैर्मयूखनिचयैः परिवीतमूर्तिः" किरा० ५-४२। 2. ವರ್ಜನ, ವಿನಾ, ಹೊರತು. "परिविष्णु"—विष्णुं वर्जयित्वा इत्यर्थः। "परि त्रिगर्तात्"। 3. ಇತ್ಥಂಭೂತಾಖ್ಯಾನ, ಪ್ರಕಾರವನ್ನು ಹೇಳುವುದು, ರೀತಿಯನ್ನು ಹೇಳುವುದು. "भक्तो विष्णुं प्रति पर्यनु वा"। 4. ಭಾಗ. "लक्ष्मीर्हरिं प्रति परि अनु वा"। 5. ದೋಷಕಥನ, ದೋಷವನ್ನು ಹೇಳುವುದು. "अनिन्द्यः पौलस्त्यो व्रजति परिवादो मयि पुनः" म० वी० ५-२८। 6. ಅಲಂಕಾರ, ಭೂಷಣ. "परिष्कृतां काञ्चनतोरणैस्तां वल्गुध्वजां वन्दनदामचित्राम्" याद० १३-४१। 7. ಆಲಿಂಗನ. "घनपुलकपुलोमजाकुचाग्रद्रुतपरिरम्भनिपीडनक्षमत्वम्" माघ० १-७४। 8. ವೀಪ್ಸಾ. "वृक्षं वृक्षं प्रति परि अनु वा सिञ्चति"। 9. ಲಕ್ಷಣ, ಸೂಚನೆ, ಚಿಹ್ನೆ. "वृक्षं प्रति परि अनु वा विद्योतते विद्युत्"। 10. ವ್ಯಾಪ್ತಿ, ಹರಡುವಿಕೆ. 11. ವಂಚನೆ, ಮೋಸ. 12. ವ್ಯಾಧಿ, ರೋಗ. 13. ಪೂಜೆ. 14. ಶೋಕ, ದುಃಖ. "शशंस सीतापरिदेवनान्तमनुष्ठितं शासनमग्रजस्य" रघु० १४-८३। 15. ನಿರಸನ, ತಳ್ಳಿಹಾಕುವುದು. "परि स्यात् सर्वतोभावलक्षणादिषु भूषणे। आलिङ्गने वञ्चने च" नानार्थर०। "परि स्यात्सर्वतोभावे वर्जने व्याधिशोकयोः। इत्थंभूताख्यानभागवीप्सालिङ्गनलक्षणे। दोषाख्याने निरसने पूजाव्याप्त्योश्च भूषणे" मेदि०।

**परिकथा ಪರಿಕಥಾ** (स्त्री०) ಕಲ್ಪಿತಕಥೆ, ಕಟ್ಟುಕಥೆ, ಕಲ್ಪಿತ ಪುರುಷನ ಚರಿತ್ರೆ ಮತ್ತು ಸಾಹಸಕೃತ್ಯಗಳನ್ನು ಹೇಳುವ ಕಥೆ. "अथ वाङ्मयभेदाः स्युः चम्पूः खण्डकथा कथा। आख्यायिका परिकथा" त्रिकाण्ड०।

**परिकर ಪರಿಕರ** (पुं०) 1. ಸಮೂಹ, ಗುಂಪು, ರಾಶಿ. परि + कृ (विक्षेपे) "अप्" (३-३-५७)। "सन्ध्याकृष्टावशिष्टस्वकरपरिकरैः स्पष्टहेमारपङ्क्तिः" रत्ना० ३-५। 2. ಪರಿವಾರ, ಪರಿಜನ. 3. ಕಟಿಬಂಧ, ನಡುಕಟ್ಟು. "अहिपरिकरभाजो भास्मनैरङ्गरागैरधिगतधवलिम्नः शूलपाणेरभिख्याम्" माघ० ५-६५। 4. ತಪಸ್ವಿಯು ನಡುವನ್ನು ಬಳಸಿ ಮಂಡಿಗಳನ್ನು ಸೇರಿಸಿ ಕಟ್ಟುವ ಬಟ್ಟೆ. 5. ವಿವೇಚನೆ, ವಿಮರ್ಶಿಸುವುದು. 6. ಪರ್ಯಂಕ, ಮಂಚ. 7. ಪ್ರಾರಂಭ, ಉಪಕ್ರಮ. 8. ಸಹಾಯಕ, ಜೊತೆಯಲ್ಲಿ ಕೆಲಸಮಾಡುವವನು. "भवेत्परिकरः सङ्घे पर्यङ्कपरिवारयोः। प्रगाढगात्रिकाबन्धे समारम्भविवेकयोः" मेदि०। 9. ಅರ್ಥಾಲಂಕಾರದ ಒಂದು ಭೇದ, ಅಭಿಪ್ರಾಯ ಗರ್ಭಿತವಾದ ವಿಶೇಷಣಗಳಿಂದ ಕೂಡಿದ ಒಂದು ಅಲಂಕಾರ. **ಲಕ್ಷಣ:** "अलङ्कारः परिकरः साभिप्राये विशेषणे"। **ಉದಾ:** "सुधांशुकलितोत्तंसस्तापं हरतु वः शिवः" चन्द्रा०। 10. ರೂಪಕಗಳಲ್ಲಿ ಮುಖಸಂಧಿಯ ಒಂದು ಅಂಗ. ಕಾವ್ಯಾರ್ಥದಲ್ಲಿ ಮುಖ್ಯ ಫಲಕ್ಕೆ ಕಾರಣ (ಬೀಜ) ಭೂತವಾದ ರತಿ ಉತ್ಸಾಹಾದಿಗಳು ಪ್ರಾರಂಭದಲ್ಲಿ ಸಮುತ್ಪನ್ನವಾಗಿ ಅದು ಮುಂದಕ್ಕೆ ಇನ್ನೂ ವೃದ್ಧಿಹೊಂದುವುದು "ಪರಿಕರ"ವೆನಿಸುವುದು. "समुत्पन्नार्थबाहुल्यं ज्ञेयः परिकरः पुनः" सा० द० ६-८३।

**परिकर्तृ ಪರಿಕರ್ತೃ** (पुं०) ಅಣ್ಣನಿಗೆ ಮದುವೆಯಾಗದಿರುವಾಗ ತಮ್ಮನಿಗೆ ಮದುವೆಮಾಡಿಸುವವನು, ಅಣ್ಣನಿಗಿಂತ ಮುಂಚೆ ತಮ್ಮನಿಗೆ ಮದುವೆ ಮಾಡಿಸುವ ಪುರೋಹಿತ. "ज्येष्ठे अनिर्विष्टे कनीयान् निर्विशन् परिवेत्ता भवति परिविन्नो ज्येष्ठः परिवेदनीया कन्या परिदायी दाता परिकर्ता याजकः ते सर्वे पतिताः" हारीतः।

**परिकर्मन् ಪರಿಕರ್ಮನ್** (न०) 1. ಅಲಂಕಾರ, ಶೃಂಗಾರ, परि + डु कृञ् (करणे) "मनिन्" (उ० ४-१४५)। "यावत्तं कृताचारपरिकर्माणं पश्यामि" शाकु० २। 2. ಅಂಗಸಂಸ್ಕಾರ, ವಾಸನೆಪುಡಿ ಮೊದಲಾದುವನ್ನು ಮೈಗೆ ಹಚ್ಚಿ ಸೊಗಸುಮಾಡುವುದು. परिमलवर्जनार्था क्रिया परिकर्म स्नानोद्वर्तनादि। "परिकर्माङ्गसंस्कारः" अम०। 3. ಚಿತ್ತಶುದ್ಧಿಯನ್ನುಂಟುಮಾಡುವ ಉಪಾಯ, ಮನಸ್ಸನ್ನು ಶುದ್ಧಿಗೊಳಿಸುವ ಮೈತ್ರಿ ಮೊದಲಾದ ಚಿತ್ತವೃತ್ತಿ. मैत्री करुणा मुदिता ಮತ್ತು उपेक्षा ಎಂದು ಚಿತ್ತಪ್ರಸಾದವನ್ನುಂಟುಮಾಡುವ ಮನೋಧರ್ಮಗಳು ನಾಲ್ಕು. ಚಿತ್ತೈಕಾಗ್ರ್ಯ ಹೊಂದಿರುವ ಯೋಗಿಗಳಿಗೆ ಮಹಾತ್ಮರಲ್ಲಿ ಮೈತ್ರಿಯೂ ದುಃಖಿತಪ್ತರಾದವರಲ್ಲಿ ಕರುಣೆಯೂ ಸುಖಿಗಳ ವಿಷಯದಲ್ಲಿ ಮುದಿತೆ (ಅನುಮೋದನೆ) ಯೂ ಪಾಪಾತ್ಮರ ವಿಷಯದಲ್ಲಿ (ಔದಾಸೀನ್ಯ) ಉಪೇಕ್ಷೆಯೂ ಉಂಟಾಗುವುದು. "मैत्र्यादिचित्तपरिकर्मविदो विधाय क्लेशप्रहाणमिह लब्धसबीजयोगाः" माघ० ४-५५। 4. ಪೂಜೆ, ಸೇವೆ, ಶುಶ್ರೂಷೆ. (वि०) 5. ಪರಿಚಾರಕ, ಸೇವಕ, ಆಳು. परितः कर्मास्य।

**परिकर्मिन् ಪರಿಕರ್ಮಿನ್** (वि०) ಪರಿಚಾರಕ, ಸೇವಕ, ಆಳು. परिकर्मास्यास्ति "इनिः" (५-२-११६)।

**परिकर्ष ಪರಿಕರ್ಷ** (पुं०) ಎಳೆಯುವುದು, ಸೆಳೆಯುವುದು. परि + कृष (विलेखने) "घञ्" (३-३-१८)।

**परिकर्षण ಪರಿಕರ್ಷಣ** (न०) ಎಳೆಯುವುದು, ಸೆಳೆಯುವುದು. परि + कृष (विलेखने) "ल्युट्" (३-३-११५)।

**परिकलित ಪರಿಕಲಿತ** (न०) 1. ಗ್ರಹಿಸುವುದು, ತಿಳಿಯುವುದು. (वि०) 2. ತಿಳಿಯಲ್ಪಟ್ಟ.

**परिकल्कन ಪರಿಕಲ್ಕನ** (न०) ವಂಚನೆ, ಮೋಸ.

**परिकल्पन ಪರಿಕಲ್ಪನ** (न०) 1. ಏರ್ಪಡಿಸುವುದು, ವ್ಯವಸ್ಥೆ ಮಾಡುವುದು, ಸಜ್ಜುಗೊಳಿಸುವುದು. परि+कृपू (सामर्थ्ये) "ल्युट्" (३-३-११५)। 2. ನಿಶ್ಚಯಿಸುವುದು, ನಿಗದಿ ಮಾಡುವುದು, ಗೊತ್ತುಮಾಡುವುದು. 3. ಹವಣಿಸುವುದು, ಒದಗಿಸುವುದು. (स्त्री०) **–कल्पना –ಕಲ್ಪನಾ.** "माहात्म्यादतिपौरुषस्य भवतो दृप्तारिदर्पच्छिदः पश्यंतान् परिकल्पनाव्यतिकरप्रोच्छूनवंशान् गजान्" मुद्रा० ७-१५। 4. ಸೃಷ್ಟಿಸುವುದು, ಹುಟ್ಟಿಸಿ ಹೇಳುವುದು.

**परिकल्पित ಪರಿಕಲ್ಪಿತ** (वि०) 1. ನಿಶ್ಚಯಿಸಲ್ಪಟ್ಟ, ಗೊತ್ತುಮಾಡಲ್ಪಟ್ಟ. परि + कृपू (सामर्थ्ये) "क्तः" (३-२-१०२)। 2. ಕಲ್ಪಿಸಿ ಹೇಳಲ್ಪಟ್ಟ, ಸೃಷ್ಟಿಸಿ ಹೇಳಲ್ಪಟ್ಟ. 3. ಸಜ್ಜುಗೊಳಿಸಲ್ಪಟ್ಟ, ವ್ಯವಸ್ಥೆ ಮಾಡಲ್ಪಟ್ಟ. 4. ಒದಗಿಸಲ್ಪಟ್ಟ, ಹವಣಿಸಲ್ಪಟ್ಟ. 5. ಮಾಡಲ್ಪಟ್ಟ. "चित्रे निवेश्य परिकल्पितसत्त्वयोगा रूपोच्चयेन मनसा विधिना कृता नु" शाकु० २-९।

**परिकीर्ण ಪರಿಕೀರ್ಣ** (वि०) ಸುತ್ತಲೂ ಹರಡಿರುವ, ಎಲ್ಲಾ ಕಡೆಯಲ್ಲೂ ವ್ಯಾಪಿಸಿರುವ. परि + कॄ (विक्षेपे) "क्तः" (३-४-७२)। "परिकीर्णमुद्यतभुजस्य भुवनविवरे दुरासदम्" किरा० १२-११।

**परिकीर्तन ಪರಿಕೀರ್ತನ** (न०) ಹೇಳುವುದು. परि + कृत (संशब्दने) "ल्युट्" (३-३-११५)।

**परिकीर्तित ಪರಿಕೀರ್ತಿತ** (वि०) ಉಕ್ತವಾದ, ಹೇಳಲ್ಪಟ್ಟ. परि + कृत (संशब्दने) "क्तः" (३-२-१०२)। "मोहात्तस्य परित्यागस्तामसः परिकीर्तितः" गीता १८-७।

**परिकुपित ಪರಿಕುಪಿತ** (वि०) ಹೆಚ್ಚು ಕೋಪಗೊಂಡಿರುವ. परि + कुप (क्रोधे) "क्तः" (३-४-७२)। "परस्परं परिकुपितस्य पिषतः क्षतोर्मिका कनकपरागपङ्किलम्" माघ० १७-८। "क्तवतुः" (३-२-१०२)। **–कुपितवत् –ಕುಪಿತವತ್.** स्त्रियां "ङीप्" (४-१-६)। **–वती –ವತೀ.**

**परिकुप्यत् ಪರಿಕುಪ್ಯತ್** (वि०) ಹೆಚ್ಚು ಕೋಪಗೊಳ್ಳುತ್ತಿರುವ, ಹೆಚ್ಚು ಕೋಪಿಸಿಕೊಳ್ಳುತ್ತಿರುವ. परि + कुप (क्रोधे) "शतृ" (३-२-१२४)। स्त्रियां "ङीप्" (४-१-६)। **–कुप्यन्ती –ಕುಪ್ಯಂತೀ.**

**परिकोपन ಪರಿಕೋಪನ** (न०) 1. ಹೆಚ್ಚು ಕೋಪಿಸಿಕೊಳ್ಳುವುದು. परि+कुप (क्रोधे) भावे "ल्युट्" (३-३-११५)। (वि०) 2. ಹೆಚ್ಚು ಕೋಪಿಸಿಕೊಳ್ಳುವ. परि + कुप "युच्" (३-२-१५१)।

**परिकोपनीय ಪರಿಕೋಪನೀಯ** (वि०) 1. ಹೆಚ್ಚು ಕೋಪಗೊಳಿಸಲ್ಪಡುವ, ಹೆಚ್ಚು ಕೋಪವುಂಟುಮಾಡಲ್ಪಡುವ. परि + कुप (क्रोधे) + णिच् "अनीयर्" (३-१-९६)। "तव्यः" (३-१-९६)। **–कोपयितव्यः –ಕೋಪಯಿತವ್ಯಃ.** 2. ಹೆಚ್ಚು ಕೋಪವುಂಟುಮಾಡಲು ತಕ್ಕುದ.

**परिक्रम ಪರಿಕ್ರಮ** (पुं०) 1. ನಡೆಯುವುದು, ಮುಂದೆ ಸಾಗುವುದು. परि+क्रमु (पादविक्षेपे) "घञ्" (३-३-१८)। न वृद्धिः (७-३-३४)। "द्रुतपदमभियातुमिच्छतीनां गगनपरिक्रमलाघवेन तासाम्" किरा० १०-२। 2. ಸುಖ

ವಾಗಿ ತಿರುಗಾಡುವುದು, ವಿಹಾರಾರ್ಥವಾಗಿ ಸಂಚರಿಸುವುದು. 3. ಸುತ್ತಲೂ ಓಡಾಡುವುದು, ಎಲ್ಲಾ ಕಡೆಯೂ ಸಂಚರಿಸುವುದು. 4. ಪ್ರದಕ್ಷಿಣೆ ಮಾಡುವುದು. "परिक्रमैः पर्यचरत्स देवः" याद० १३-९२। "ल्युट्" (३-३-११५)। **–क्रमणम् –ಕ್ರಮಣಮ್.**

**परिक्रय ಪರಿಕ್ರಯ** (पुं०) 1. ವಿನಿಮಯ, ಬದಲಾವಣೆ. परि + डु क्रीञ् (द्रव्यविनिमये) "अच्" (३-३-५६)। 2. ಕೊಂಡುಕೊಳ್ಳುವುದು, ಕ್ರಯಕ್ಕೆ ಕೊಳ್ಳುವುದು. 3. ಹಣವನ್ನು ಕೊಟ್ಟು ಕ್ಲೃಪ್ತಕಾಲಕ್ಕೆ ಬಾಡಿಗೆಗೆ ಕೊಳ್ಳುವುದು. "शिष्टस्य प्रतिरक्षार्थं परिक्रय उदाहृतः" हितो० ४-१२२। "ल्युट्" (३-३-११५)। **–क्रयणम् –ಕ್ರಯಣಮ್.**

**परिक्राम(म्य)त् ಪರಿಕ್ರಾಮ(ಮ್ಯ)ತ್** (वि०) 1. ಸುತ್ತಲೂ ಸಂಚರಿಸುತ್ತಿರುವ, ಎಲ್ಲಾ ಕಡೆಯಲ್ಲೂ ಓಡಾಡುತ್ತಿರುವ. परि+क्रमु (पादविक्षेपे) "शतृ" (३-२-१२४)। 2. ವಿಹಾರಾರ್ಥವಾಗಿ ಸಂಚರಿಸುತ್ತಿರುವ. 3. ಮುಂದೆ ನಡೆಯುತ್ತಿರುವ. स्त्रियां "ङीप्" (४-१-६)। **–क्रामन्ती, –क्राम्यन्ती –ಕ್ರಾಮಂತೀ, –ಕ್ರಾಮ್ಯಂತೀ.**

**परिक्रिया ಪರಿಕ್ರಿಯಾ** (स्त्री०) 1. ಸುತ್ತುಗಟ್ಟುವುದು, ಸುತ್ತುವರೆಯುವುದು. परि + डु कृञ् (करणे) "शः" (३-३-१००)। 2. ಸುತ್ತಲೂ ಬೇಲಿ ಹಾಕುವುದು ಅಥವಾ ಕಂದಕ ತೋಡುವುದು.

**परिक्रीणान ಪರಿಕ್ರೀಣಾನ** (वि०) 1. ಕ್ರಯಕ್ಕೆ ಕೊಳ್ಳುವ. 2. ವಿನಿಮಯ ಮಾಡಿಕೊಳ್ಳುವ, ಬದಲಾವಣೆ ಮಾಡಿಕೊಳ್ಳುವ. परि + डु क्रीञ् (द्रव्यविनिमये) "शानच्" (३-२-१२४)। "कृतेनोपकृतं वायोः परिक्रीणानमुत्थितम्" भट्टि० ८-८। 3. ಕ್ಲೃಪ್ತ ಕಾಲಕ್ಕೆ ಬಾಡಿಗೆಗೆ ಕೊಳ್ಳುವವನು.

**परिक्रीत ಪರಿಕ್ರೀತ** (वि०) 1. ಕ್ರಯಕ್ಕೆ ಕೊಳ್ಳಲ್ಪಟ್ಟ. परि + डु क्रीञ् (द्रव्यविनिमये) "क्तः" (३-२-१०२)। "संभोगाय परिक्रीतः कर्तास्मि तव नाप्रियम्" भट्टि० ८-७८। 2. ಬಾಡಿಗೆಗೆ ಕೊಳ್ಳಲ್ಪಟ್ಟ, ಕೆಲವು ಕಾಲದ ಮಟ್ಟಿಗೆ ಬಾಡಿಗೆಗೆ ತೆಗೆದುಕೊಳ್ಳಲ್ಪಟ್ಟ. "शतेन शताय वा परिक्रीतः" सि० कौ०। 3. ವಿನಿಮಯ ಮಾಡಿಕೊಳ್ಳಲ್ಪಟ್ಟ, ಬದಲಾವಣೆ ಮಾಡಲ್ಪಟ್ಟ.

**परिक्लम ಪರಿಕ್ಲಮ** (पुं०) ಹೆಚ್ಚು ಬಳಲಿಕೆ, ಹೆಚ್ಚು ಆಯಾಸ. परि+क्लमु (ग्लानौ) "घञ्" (३-३-१८)। "ल्युट्" (३-३-११५)। **–क्लमनम् –ಕ್ಲಮನಮ್.**

**परिक्लान्त ಪರಿಕ್ಲಾಂತ** (वि०) ಬಹಳ ಬಳಲಿರುವ, ಹೆಚ್ಚು ಆಯಾಸಗೊಂಡಿರುವ. परि + क्लमु (ग्लानौ) "क्तः" (३-४-७२)। "द्राघीयसा वयोऽतीतः परिक्लान्तः किलाध्वना" किरा० ११-२।

**परिक्लिशित ಪರಿಕ್ಲಿಶಿತ** (वि०) ಹೆಚ್ಚು ತೊಂದರೆ ಅನುಭವಿಸಿದ, ಹೆಚ್ಚು ಕಷ್ಟಪಟ್ಟಿರುವ. परि+क्लिशू (विबाधने) "क्तः" (३-४-७२)। इडभावे **–क्लिष्टः –ಕ್ಲಿಷ್ಟಃ.**

**परिक्लिश्नत् ಪರಿಕ್ಲಿಶ್ನತ್** (वि०) ಹೆಚ್ಚು ತೊಂದರೆಪಡುತ್ತಿರುವ, ಬಹಳ ಕಷ್ಟಪಡುತ್ತಿರುವ. परि + क्लिशू (विबाधने) "शतृ" (३-२-१२४)। स्त्रियां "ङीप्" (४-१-६)। **–क्लिश्नती –ಕ್ಲಿಶ್ನತೀ.**

**परिक्लिश्यत् ಪರಿಕ್ಲಿಶ್ಯತ್** (वि०) ಹೆಚ್ಚು ಪರಿತಾಪ ಪಡುತ್ತಿರುವ, ಹೆಚ್ಚು ದುಃಖವನ್ನು ಅನುಭವಿಸುತ್ತಿರುವ. परि + क्लिशु (उपतापे) "शतृ" (३-२-१२४)। स्त्रियां "ङीप्" (४-१-६)। **–क्लिश्यन्ती –ಕ್ಲಿಶ್ಯಂತೀ.**

**परिक्लिष्ट ಪರಿಕ್ಲಿಷ್ಟ** (वि०) ಹೆಚ್ಚು ತೊಂದರೆಯನ್ನು ಅನುಭವಿಸಿದ, परि + क्लिशू (विबाधने) "क्तः" (३-४-७२)।

**परिक्लेद ಪರಿಕ್ಲೇದ** (पुं०) ತೇವ, ಒದ್ದೆ. परि + क्लिदू (आर्द्रीभावे) "घञ्" (३-३-१८)।

**परिक्लेश ಪರಿಕ್ಲೇಶ** (पुं०) ಹೆಚ್ಚು ತೊಂದರೆ, ಹೆಚ್ಚು ಕಷ್ಟ. परि+क्लिशू (विबाधने) "घञ्" (३-३-१८)। "ल्युट्" (३-३-११५)। **–क्लेशनम् –ಕ್ಲೇಶನಮ್.**

**परिक्वणत् ಪರಿಕ್ವಣತ್** (वि०) ಕೂಗುತ್ತಿರುವ, ಶಬ್ದ ಮಾಡುತ್ತಿರುವ. "परिक्वणत्सारसपङ्क्तिमेखले:" किरा० ८-९।

**परिक्षत ಪರಿಕ್ಷತ** (वि०) ಗಾಯಗೊಳಿಸಲ್ಪಟ್ಟ. परि + क्षणु (हिंसायाम्) "क्तः" (३-२-१०२)। "कुशाङ्कुरादानपरिक्षताङ्गुलिः कृतोऽक्षसूत्रप्रणयी तया करः" कुमा० ५-११।

**परिक्षय ಪರಿಕ್ಷಯ** (पुं०) ಕಡಮೆಯಾಗುವುದು, ಅವನತಿ ಹೊಂದುವುದು, ನಾಶಹೊಂದುವುದು. परि + क्षि (क्षये) "अच्" (३-३-५६)। "न महानपि भूतिमिच्छता फलसम्पत्प्रवणः परिक्षयः" किरा० २-८।

**परिक्षाम ಪರಿಕ್ಷಾಮ** (पुं०) ಒಣಗಿರುವ, ಬತ್ತಿಹೋಗಿರುವ, ಸೊರಗಿಹೋಗಿರುವ. परि + क्षै (क्षये) "क्तः" (३-४-७२)। तकारस्य मः (८-२-५३)।

**परिक्षित् ಪರಿಕ್ಷಿತ್** (ಪುಂ) 1. ಅಭಿಮನ್ಯುವಿನ ಪುತ್ರ, ಜನಮೇಜಯರಾಜನ ತಂದೆ, ಅರ್ಜುನನ ಮೊಮ್ಮಗ. परिक्षीणे क्षयति — क्षि "क्विप्" (३-२-७६)। परि सर्वतोभावेन क्षीयते हन्यते दुरितं येन वा। ಕುರುವಂಶವು ಪರಿಕ್ಷೀಣವಾಗಿದ್ದಾಗ ಈತನು ಜನಿಸಿದ್ದರಿಂದ ಈ ಹೆಸರು. ಈ ವಿಷಯವನ್ನು ಮೊದಲೇ ಒಬ್ಬ ಬ್ರಾಹ್ಮಣನು ಹೇಳಿದ್ದನು. "विराटस्य सुतां पूर्वं स्नुषां गाण्डीवधन्वनः। उपप्लाव्यगतां दृष्ट्वा व्रतवान् ब्राह्मणोऽब्रवीत्। परिक्षीणेषु कुरुषु पुत्रस्तव भविष्यति। एतदस्य परिक्षित्वं गर्भस्थस्य भविष्यति" भा० सौप्तिक० १६-२, ३। ಪರಿಕ್ಷಿತ್ತು ಧರ್ಮರಾಜನ ರಾಜ್ಯಭಾರಾನಂತರ ಚಕ್ರವರ್ತಿಯಾದನು. ಕುರುಕ್ಷೇತ್ರದ ಯುದ್ಧವು ಮುಗಿದನಂತರ ಅಭಿಮನ್ಯುಪತ್ನಿಯಾದ ಉತ್ತರೆಯ ಗರ್ಭದಲ್ಲಿ ಈತನು ಜನಿಸಿದನು. ಈತನು ಗರ್ಭದಲ್ಲಿದ್ದಾಗಲೇ ಕುರುವಂಶದ ನಾಶದಿಂದ ಕೋಪಗೊಂಡ ಅಶ್ವತ್ಥಾಮನ ಬ್ರಹ್ಮಾಸ್ತ್ರದಿಂದ ಹತನಾಗಿದ್ದರೂ ಶ್ರೀಕೃಷ್ಣನ ಮಹಿಮೆಯಿಂದ ಬದುಕಿದನು. ಒಬ್ಬ ವೃಷಲನು ರಾಜವೇಷವನ್ನು ಧರಿಸಿ ಒಂದು ಗೋವನ್ನೂ ಒಂದು ವೃಷಭವನ್ನೂ ಹಿಂಸಿಸುತ್ತಿದ್ದುದನ್ನು ಕಂಡು ಈ ಪರಿಕ್ಷಿತ್ತು, ಗೋವು ಭೂದೇವಿಯೆಂದೂ ವೃಷಭವು ಧರ್ಮಪುರುಷನೆಂದೂ ಇವರನ್ನು ಹಿಂಸಿಸುತ್ತಿದ್ದವನು ಕಲಿಪುರುಷನೆಂದೂ ತಿಳಿದು ದಂಡಿಸಲಾಗಿ ಕಲಿಯು ಶರಣಾಗತನಾಗಿ ಓಡಿಹೋದನು. ಪರಿಕ್ಷಿತ್ತು ಧರ್ಮಾತ್ಮನಾಗಿಯೂ ನೀತಿವಂತನಾಗಿಯೂ ಇದ್ದರೂ ಒಂದು ಸಲ ಇವನ ದೌರ್ಭಾಗ್ಯದಿಂದ ಅರಣ್ಯಕ್ಕೆ ಬೇಟೆಗಾಗಿ ಹೋಗಿದ್ದಾಗ ಸಮಾಧಿಸ್ಥನಾಗಿದ್ದ ಶಮೀಕಮಹರ್ಷಿಯು ಅರಣ್ಯದಲ್ಲಿ ತನ್ನನ್ನು ಮಾತನಾಡಿಸಿ ಗೌರವಿಸಲಿಲ್ಲವೆಂಬ ಕಾರಣದಿಂದ ಕೋಪಗೊಂಡು ಆ ಋಷಿಯ ಕೊರಳಿಗೆ ಒಂದು ಸತ್ತ ಹಾವನ್ನು ಮಾಲೆಯಾಗಿ ಹಾಕಿ ಹೊರಟುಹೋದನು. ಸ್ವಲ್ಪ ಸಮಯದಲ್ಲೇ ಅಲ್ಲಿಗೆ ಬಂದ ಋಷಿಯ ಪುತ್ರನಾದ ಶೃಂಗಿಯು ಇದನ್ನು ಕಂಡು "ಬ್ರಾಹ್ಮಣವಂಶಕ್ಕೇ ಅವಮಾನ ಮಾಡಿದ ಈ ಪಾಪಿಯು ಏಳುದಿನಗಳೊಳಗೆ ಸರ್ಪದಂಶನದಿಂದ ಮರಣಹೊಂದಲಿ" ಎಂದು ಶಾಪವಿತ್ತನು. ಸಮಾಧಿಯಿಂದ ಜಾಗೃತಿಗೊಂಡ ಶಮೀಕಋಷಿಯು ತನ್ನ ಮಗನ ಈ ಅವಿವೇಕಕ್ಕಾಗಿ ಚಿಂತಿಸಿ ತನ್ನ ಶಿಷ್ಯನ ಮೂಲಕ ಪರಿಕ್ಷಿತ್ತಿಗೆ ಜಾಗರೂಕತೆ ಹೇಳಿಕಳುಹಿಸಿದನು. ಪರಿಕ್ಷಿತ್ತು ತನ್ನ ಈ ನೀಚಕಾರ್ಯಕ್ಕೆ ದುಃಖಪಟ್ಟು ಪುತ್ರನಾದ ಜನಮೇಜಯನನ್ನು ರಾಜ್ಯದಲ್ಲಿರಿಸಿ ಸರ್ಪಗಳಿಗೆ ದುರ್ಗಮವಾದ ಒಂದು ಮನೆಯನ್ನು ಸಮುದ್ರದೊಳಗೆ ನಿರ್ಮಿಸಿ ವ್ಯಾಸಪುತ್ರನಾದ ಶುಕಮಹರ್ಷಿಯಿಂದ ಶ್ರೀಮದ್ಭಾಗವತ ಕಥೆಯನ್ನು ಶ್ರವಣಮಾಡಿದನು. ಏಳನೆಯ ದಿನ ಇವನನ್ನು ಸಂದರ್ಶಿಸಲು ಬಂದ ಬ್ರಾಹ್ಮಣರು ತಂದುಕೊಟ್ಟ ಫಲವನ್ನು ಆಘ್ರಾಣ ಮಾಡುತ್ತಿದ್ದಾಗ ಅದರೊಳಗೆ ಸೇರಿಕೊಂಡಿದ್ದ ತಕ್ಷಕನು ಇವನನ್ನು ಕಚ್ಚಲಾಗಿ ಪರಿಕ್ಷಿತ್ತು ಅಸುವನ್ನು ನೀಗಿದನು. ಮಹಾಭಾರತಯುದ್ಧಾನಂತರ ಮೂವತ್ತಾರು ವರ್ಷಗಳು ಕಳೆದು ಶ್ರೀಕೃಷ್ಣನ ನಿರ್ಯಾಣವಾಗಲಾಗಿ ಪಾಂಡವರೂ ಮಹಾಪ್ರಸ್ಥಾನ ಮಾಡಿದರು. ಪರಿಕ್ಷಿತ್ತು ತನ್ನ ಮೂವತ್ತಾರನೆಯ ವರ್ಷ ರಾಜ್ಯ ಸ್ವೀಕಾರ ಮಾಡಿ ಅರವತ್ತು ವರ್ಷಗಳ ಕಾಲ ರಾಜ್ಯವಾಳಿ ತನ್ನ ತೊಂಬತ್ತಾರನೆಯ ವರ್ಷದಲ್ಲಿ ದೇಹವನ್ನು ತ್ಯಜಿಸಿದನು. 2. ಚಂದ್ರವಂಶದ ಅನಶ್ವನ ಮಗ. 3. ಚಂದ್ರವಂಶದ ಅವಿಕ್ಷಿತರಾಜನ ಮಗ. 4. ಸೂರ್ಯವಂಶದ ಒಬ್ಬ ದೊರೆ. ಮಂಡೂಕರಾಜನ ಮಗಳಾದ ಸುಶೋಭನೆಯು ಈತನ ಪತ್ನಿ. ಶಲ ದಲ ಮತ್ತು ಬಲರೆಂಬ ಮೂವರು ಈತನ ಪುತ್ರರು.

**परिक्षिप्त ಪರಿಕ್ಷಿಪ್ತ** (वि०) 1. ಸುತ್ತುವರೆಯಲ್ಪಟ್ಟ. परि + क्षिपु (निरसने) "क्तः" (३-२-१०२)। "गङ्गास्रोतःपरिक्षिप्तं वप्रान्तर्ज्वलितौषधि" कुमा० ६-३८। 2. ಸುತ್ತಲೂ ಎಸೆಯಲ್ಪಟ್ಟ, ಬಿಸಾಡಲ್ಪಟ್ಟ. 3. ಸುತ್ತಲೂ ಇಡಲ್ಪಟ್ಟ. 4. ಧಿಕ್ಕರಿಸಲ್ಪಟ್ಟ. "परिक्षिप्तं तु धिक्कृते" नानार्थर०।

**परिक्षीण ಪರಿಕ್ಷೀಣ** (वि०) ಕ್ಷಯಹೊಂದಿದ, ಎಲ್ಲವನ್ನೂ ಕಳೆದುಕೊಂಡ, ದರಿದ್ರನಾದ. परि + क्षि (क्षये) "क्तः" (३-४-७२)। "परिक्षीणः कश्चित् स्पृहयति यवानां प्रसृतये स पश्चात्संपूर्णः कलयति धरित्रीं तृणसमाम्" भर्तृ० १-३६।

**परिक्षेप ಪರಿಕ್ಷೇಪ** (पुं०) 1. ಸುತ್ತಲೂ ಚೆಲ್ಲುವುದು, ಸುತ್ತಲೂ ಎರಚುವುದು. 2. ಸುತ್ತಲೂ ಬಿಸಾಡುವುದು. परि+क्षिपु (निरसने) "घञ्" (३-३-१८)। 3. ಪರಿಧಿ, ಮಂಡಲ, ವರ್ತುಲಾಕಾರವಾಗಿ ಸುತ್ತುವರೆಯುವುದು. "महार्णवपरिक्षेपं लङ्कायाः परिखालघुम्" रघु० १२-६६। 4. ಇಂದ್ರಿಯ. परितः क्षिप्यते विषयवासनया जीवात्मा येन — परि + क्षिपु कर० "घञ्" (३-३-१२१)। "एकादशपरिक्षेपं मनोव्याकरणात्मकम्" भा० आश्व० ३७-२।

**परिक्षेपिन् ಪರಿಕ್ಷೇಪಿನ್** (वि०) ಸುತ್ತಲೂ ಎರಚುವ ಸ್ವಭಾವದ, ಸುತ್ತಲೂ ಚೆಲ್ಲುವ ಸ್ವಭಾವದ. परि + क्षिपु (निरसने) "घिनुण्" (३-२-१४२)। "त्यागिनं सुखदुःखस्य परिक्षेप्यम्भसामृतुः" भट्टि० ७-१०।

**परिखा ಪರಿಖಾ** (स्त्री०) ಕೋಟೆಯ ಸುತ್ತಲೂ ತೋಡುವ ಕಂದಕ, ಶತ್ರುಗಳು ಪ್ರವೇಶಿಸಲಾಗದಂತೆ ಕೋಟೆಯ ಸುತ್ತಲೂ ನೀರು ತುಂಬಿದ ಹಳ್ಳ. परितः खन्यते — खनु (अवदारणे) "डः" (३-२-१०२)। "महार्णवपरिक्षेपं लङ्कायाः परिखालघुम्" रघु० १२-६६।

**परिखीकृत ಪರಿಖೀಕೃತ** (वि०) ಕಂದಕವಾಗಿ ಮಾಡಲ್ಪಟ್ಟ. अपरिखाः परिखाः संपद्यमानाः कृताः "च्विः" (५-४-५०)। दीर्घः (७-४-३२)। "सवेलावप्रवलयां परिखीकृतसागराम्" रघु० १-३०।

**परिखिन्न ಪರಿಖಿನ್ನ** (वि०) ಆಯಾಸಗೊಂಡ, ಬಳಲಿದ. परि + खिद (दैन्ये) "क्तः" (३-४-७२)।

**परिखेद ಪರಿಖೇದ** (पुं०) ಆಯಾಸ, ದಣಿವು, ಬಳಲಿಕೆ. परि+खिद (दैन्ये) "घञ्" (३-३-१८)। "गिरिशमुपचचार प्रत्यहं सा सुकेशी नियमितपरिखेदा तच्छिरश्चन्द्रपादैः" कुमा० १-६०।

**परिखेदित ಪರಿಖೇದಿತ** (वि०) 1. ಪೀಡಿಸಲ್ಪಟ್ಟ, ನೋಯಿಸಲ್ಪಟ್ಟ, ತೊಂದರೆಪಡಿಸಲ್ಪಟ್ಟ. परि + खिद (दैन्ये) + णिच् "क्तः" (३-२-१०२)। "परिखेदित विन्ध्यवीरुधः परिपीतामलनिर्झराम्भसः" भट्टि० १०-२९। 2. ಆಯಾಸಪಡಿಸಲ್ಪಟ್ಟ.

**परिगणन ಪರಿಗಣನ** (न०) 1. ಚೆನ್ನಾಗಿ ಎಣಿಸುವಿಕೆ, ಸಂಪೂರ್ಣವಾಗಿ ಎಣಿಸುವುದು. परि + गण (संख्याने) + णिच् "ल्युट्" (३-३-११५)। स्त्रियां "युच्" (३-३-१०७)। –ना–ನಾ. "श्रेणीभूताः परिगणनया निर्दिशन्तो बलाकाः" मेघ०। 2. ಎಣಿಕೆಯಲ್ಲಿ ಸೇರಿಸುವುದು, ವಿಶೇಷ ರೀತಿಯಲ್ಲಿ ಹೇಳುವುದು.

**परिगणित ಪರಿಗಣಿತ** (वि०) 1. ಚೆನ್ನಾಗಿ ಎಣಿಸಲ್ಪಟ್ಟ. परि + गण (संख्याने) + णिच् "क्तः" (३-२-१०२)। 2. ಎಣಿಕೆಯಲ್ಲಿ ಸೇರಿಸಲ್ಪಟ್ಟ, ಗಣ್ಯನಾಗಿ ಎಣಿಸಲ್ಪಟ್ಟ, ವಿಶೇಷ ರೀತಿಯಲ್ಲಿ ಹೇಳಲ್ಪಟ್ಟ.

**परिगत ಪರಿಗತ** (वि०) 1. ವ್ಯಾಪ್ತವಾದ, ಸುತ್ತಲೂ ಹರಡಿರುವ. परि+गम्लृ (गतौ) "क्तः" (३-४-७२)। "विशदप्रभापरिगतं विबभावुदयाचलव्यवहितेन्दुवपुः" माघ० ९-२६। 2. ತಿಳಿಯಲ್ಪಟ್ಟ, ಅರಿಯಲ್ಪಟ್ಟ. "प्रथमपरिगतार्थस्तं रघुः संनिवृत्तं विजयिनमभिनन्द्य श्लाघ्यजायासमेतम्" रघु० ७-७१। 3. ಹೊಂದಲ್ಪಟ್ಟ, ಪಡೆಯಲ್ಪಟ್ಟ. परि+गम्लृ कर्म० "क्तः" (३-२-१०२)। 4. ನೆನೆಯಲ್ಪಟ್ಟ, ಸ್ಮರಿಸಲ್ಪಟ್ಟ. 5. ಬಾಧಿಸಲ್ಪಟ್ಟ, ಪೀಡಿಸಲ್ಪಟ್ಟ. "अपि स्थाणुवदासीनः शुष्यन् परिगतः क्षुधा" पञ्चतं० १-५०। 6. ಸುತ್ತುವರೆಯಲ್ಪಟ್ಟ, ಸುತ್ತಲೂ ವ್ಯಾಪಿಸಲ್ಪಟ್ಟ, ಸುತ್ತುಗಟ್ಟಲ್ಪಟ್ಟ. "जलनिबिडितवस्त्रव्यक्तनिम्नोन्नताभिः परिगततटभूमिः स्नानमात्रोत्थिताभिः" मालती० ४-१०।

**परिगदित ಪರಿಗದಿತ** (न०) ಹೆಚ್ಚು ಮಾತನಾಡುವುದು. परि+गद (व्यक्तायां वाचि) भावे "क्तः" (३-३-११४)।

**परिगलत् ಪರಿಗಲತ್** (वि०) ಸ್ರವಿಸುತ್ತಿರುವ, ಸೋರುತ್ತಿರುವ. परि+गल (प्रस्रवणे) "शतृ" (३-२-१२४)। "निष्टापस्विद्यदस्थ्नः क्वथनपरिगलन्मेदसः प्रेतकायान्" मालती० ५-१७।

**परिगलित ಪರಿಗಲಿತ** (वि०) ಸ್ರವಿಸಿದ, ಸೋರಿದ. परि + गल (प्रस्रवणे) "क्तः" (३-४-७२)। "मदाम्भसा परिगलितेन सप्तधा गजान् जनः शमितरजश्चयानधः" माघ० १७-६८।

**परिगर्हण ಪರಿಗರ್ಹಣ** (न०) ಅತಿಯಾಗಿ ನಿಂದಿಸುವುದು, ಬಹಳ ಬಯ್ಯುವುದು. परि+गर्ह (निन्दने) भावे "ल्युट्" (३-३-११५)।

**परिगूढ ಪರಿಗೂಢ** (वि०) 1. ಬಚ್ಚಿಡಲ್ಪಟ್ಟ, ಅತ್ಯಂತ ರಹಸ್ಯವಾದ, ಬಹಳ ಗುಟ್ಟಾದ. परि + गुहू (संवरणे) "क्तः" (३-२-१०२)। 2. ತಿಳಿಯಲು ಬಹಳ ಕಷ್ಟವಾದ, ಬಹಳ ಗಹನವಾದ.

**परिगृहीत ಪರಿಗೃಹೀತ** (वि०) 1. ಸ್ವೀಕರಿಸಲ್ಪಟ್ಟ, ತೆಗೆದುಕೊಳ್ಳಲ್ಪಟ್ಟ. परि+ग्रह (उपादाने) "क्तः" (३-२-१०२)। 2. ಹಿಡಿಯಲ್ಪಟ್ಟ, ಹಿಡಿದು ನಿಲ್ಲಿಸಲ್ಪಟ್ಟ, ತಡೆಯಲ್ಪಟ್ಟ. "नाभिह्रदैः परिगृहीतरयाणि निम्नैः स्त्रीणां बृहज्जघनसेतुनिवारितानि" माघ० ५-२९। 3. ಅಂಗೀಕರಿಸಲ್ಪಟ್ಟ, ಅನುಗ್ರಹ ತೋರಿ ತನ್ನದಾಗಿ ಮಾಡಿಕೊಳ್ಳಲ್ಪಟ್ಟ. "अतिमात्रभासुरत्वं पुष्यति भानोः परिग्रहादनलः। अधिगच्छति महिमानं चन्द्रोऽपि निशापरिगृहीतः" माल० १-१३।

**परिगृह्या ಪರಿಗೃಹ್ಯಾ** (स्त्री०) ಮದುವೆಯಾದ ಪತ್ನಿ.

**परिग्रह ಪರಿಗ್ರಹ** (पुं०) 1. ಸ್ವೀಕಾರ, ತೆಗೆದುಕೊಳ್ಳುವುದು. परि+ग्रह (उपादाने) "अप्" (३-३-५८)। "इक्ष्वाकुवंशगुरवे प्रयतः प्रणम्य स भ्रातरं भरतमर्घ्यपरिग्रहान्ते" रघु० १३-७०। 2. ಪತ್ನಿ, ಹೆಂಡತಿ, ಭಾರ್ಯೆ. "निर्दिष्टां कुलपतिना स पर्णशालामध्यास्य प्रयतपरिग्रहद्वितीयः" रघु० १-९५। 3. ಪರಿಜನ, ಸೇವಕ, ಆಳು. 4. ಅನುಗ್ರಹ ತೋರಿ ಅಂಗೀಕರಿಸುವುದು. "कुमुद्वतीवेन्दुपरिग्रहेण

ज्योत्स्नोत्सवं दुर्लभमम्बुजिन्या" नैष० ४-४५। 5. ಗ್ರಹಣ, ಹಿಡಿದುಕೊಳ್ಳುವುದು, ತೆಗೆದುಕೊಳ್ಳುವುದು. "अनयदासनरज्जुपरिग्रहे भुजलतां जलतामबलाजनः" रघु० ९-४६। 6. ಶಾಪ, ಬೈಗಳು. 7. ಪಡೆಯುವುದು, ಸ್ವೀಕರಿಸುವುದು, ತನ್ನದಾಗಿ ಮಾಡಿಕೊಳ್ಳುವುದು. "असंशयं क्षत्रपरिग्रहक्षमा यदार्यमस्यामभिलाषि मे मनः" शाकु० १-१९। 8. ರಾಹು ಕೇತುಗಳಿಂದ ಚಂದ್ರ ಸೂರ್ಯರ ಗ್ರಹಣ. 9. ಮೌಲ್ಯ, ಬೆಲೆ. 10. ಸಂಸಾರ ಐಶ್ವರ್ಯ ಮೊದಲಾದ ಸಕಲ ಭೋಗೋಪಕರಣ. "निराशीर्यतचित्तात्मा त्यक्तसर्वपरिग्रहः" गीता ४-२१। 11. ಅಂಗೀಕಾರ, ಒಪ್ಪಿಗೆ, ಸಮ್ಮತಿ. 12. ಅನುಕೂಲವಾದ ಮನೋಭಾವ, ಪ್ರೀತಿ ವಿಶ್ವಾಸಗಳಿಂದ ಕೂಡಿರುವಿಕೆ. "नमो वः परमास्त्रेभ्यो धन्याः स्मो वः परिग्रहात्" उ० रा० ७-११। 13. ಹೊಂದುವುದು. "भावसाध्वसपरिग्रहादभूत् कामदोहदमनोहरं वपुः" कुमा० ८-१। 14. ಧರಿಸುವುದು, ಧಾರಣೆ ಮಾಡಿಕೊಳ್ಳುವುದು. "लोकेन भावी पितुरेव तुल्यः संभावितो मौलिपरिग्रहात्सः" रघु० १८-३८। 15. ಸಾಧನ, ಉಪಕರಣ. "अजिनदण्डभृतं कुशमेखलां यतगिरं मृगशृङ्गपरिग्रहाम्" रघु० ९-२१। 16. ಶಪಥ, ಪ್ರತಿಜ್ಞೆ. 17. ಮೂಲ, ಬುಡ. 18. ಸೇನೆಯ ಹಿಂಭಾಗ. 19. ಅನುಗ್ರಹ, ದಯೆ. 20. ಕೈಗೊಳ್ಳುವುದು, (ಕಾರ್ಯವನ್ನು) ಕೈಗೆ ತೆಗೆದುಕೊಳ್ಳುವುದು. 21. ರಾಹು ಕೇತುಗಳಿಂದ ಹಿಡಿಯಲ್ಪಟ್ಟ ಚಂದ್ರಸೂರ್ಯರು. 22. ವಿಷ್ಣು, ಪರಮಾತ್ಮ, ನಾರಾಯಣ. परितो ग्रहः स्वसम्बन्धिपौरजानपदतत्सम्बन्धिनां दूर्वादीनामपि परमपदप्रापणात् ग्रहणम् अस्य। "इहामुत्र समं सर्वग्रहणाद् स्यात्परिग्रहः" इति निरुक्तिः। "ऋतुः सुदर्शनः कालः परमेष्ठी परिग्रहः" वि० स०। "पत्नी परिजनादानमूलशापाः परिग्रहाः" अम०। "पत्नीस्वीकारशपथमूल्येष्वपि परिग्रहः" वैज०। 23. ಅನುಗ್ರಹ, ದಯೆ. "अतिमात्रभासुरत्वं पुष्यति भानोः परिग्रहादनलः" माल० १-१३। (वि०) 24. ಸ್ವೀಕರಿಸಿದ ವಸ್ತು, ತಾನು ಪಡೆದ ಪದಾರ್ಥ, ತಾನು ಸಂಪಾದಿಸಿದ ವಸ್ತು. "सुरपतिमपि श्वा पार्श्वस्थं विलोक्य न शङ्कते न हि गणयति क्षुद्रो जन्तुः परिग्रहफल्गुताम्" भर्तृ० १-९। "परिग्रहोपरक्तौ तु ग्रस्तार्केन्द्वोः" वैज०।

**परिग्रहण ಪರಿಗ್ರಹಣ** (न०) 1. ಸುತ್ತಲೂ ಹಿಡಿದುಕೊಳ್ಳುವುದು. परितो ग्रहणम्। 2. ಮೇಲೆ ಮುಚ್ಚುವುದು, ಸುತ್ತಲೂ ಹೊದಿಸುವುದು.

**परिग्रहीतृ ಪರಿಗ್ರಹೀತೃ** (पुं०) 1. ಪತಿ, ಗಂಡ, ಯಜಮಾನ. "अर्थो हि कन्या परकीय एव तामद्य संप्रेष्य परिग्रहीतुः" शाकु० ४-२१। 2. ದತ್ತು ತಂದೆ, ಸ್ವೀಕಾರ ಪಡೆದ ತಂದೆ. परि + ग्रह (उपादाने) "तृच्" (३-१-१३३)।

**परिग्राह ಪರಿಗ್ರಾಹ** (पुं०) ಯಾಗದ ಒಂದು ವೇದಿಯ ಸ್ವೀಕಾರ. परि + ग्रह (उपादाने) "घञ्" (३-३-४७)। उत्तरः परिग्राहः। स्फ्येन वेदेः स्वीकरणम् सि० कौ०।

**परिघ ಪರಿಘ** (पुं०) 1. ಕಬ್ಬಿಣದ ಹಿಡಿ ಹಾಕಿದ ಮರದ ದೂಲ, ಕಬ್ಬಿಣದ ಕಟ್ಟು ಹಾಕಿದ ದೊಡ್ಡ ದೊಣ್ಣೆ. परिहन्यते अनेन — परि + हन (हिंसागत्योः) "अप्" घादेशश्च (३-३-८४)। "निकुम्भो वानरेन्द्रस्य प्राहैषीत् परिघं ततः। हनूमांश्चापतन्तं तमभाङ्क्षीद्भोगिभीषणम्" भट्टि० १५-१२१। 2. ಅಗಳಿ, ಅಡ್ಡಮರ. "भार्गवस्य सुकृतोऽपि सोऽभवत्स्वर्गमार्गपरिघो दुरत्ययः" रघु० ११-८८। 3. ಕಬ್ಬಿಣದ ಗದೆ. 4. ಹಿಂಸಿಸುವುದು, ಕೊಲ್ಲುವುದು. 5. ಕುಂಭ, ಕಲಶ, ಬಿಂದಿಗೆ. 6. ವಿಷ್ಕಂಭ ಮೊದಲಾದ ಯೋಗಗಳಲ್ಲಿ ಒಂದು ಯೋಗ. 7. ಗೋಪುರ. 8. ಪ್ರಾಕಾರ 9. ಗಾಜಿನ ಹೂಜಿ. "परिघो योगभेदेऽस्त्रविशेषेऽर्गलघातयोः" मेदि०।

**परिघात ಪರಿಘಾತ** (पुं०) 1. ಕಬ್ಬಿಣದ ಕಟ್ಟುಹಾಕಿದ ದೊಡ್ಡ ದೊಣ್ಣೆ. परिहन्यते अनेन — परि + हन (हिंसागत्योः) "घञ्" (३-३-१२१)। 2. ಹಿಂಸಿಸುವುದು, ಕೊಲ್ಲುವುದು.

**परिघातन ಪರಿಘಾತನ** (पुं०) 1. ಕಬ್ಬಿಣದ ಕಟ್ಟುಹಾಕಿದ ದೊಡ್ಡ ದೊಣ್ಣೆ. परि + हन (हिंसागत्योः) + णिच् "ल्युः" (३-१-१३४)। (न०) 2. ಸುತ್ತಲೂ ಹೊಡೆಯುವುದು. (वि०) 3. ಸುತ್ತಲೂ ಹೊಡೆಯುವವನು.

**परिघोष ಪರಿಘೋಷ** (पुं०) 1. ಶಬ್ದ, ಸದ್ದು. 2. ಅವಾಚ್ಯ ಶಬ್ದ, ಅಯೋಗ್ಯವಾದ ಮಾತು. 3. ಗುಡುಗು, ಮೇಘಗರ್ಜನೆ. "परिघोषो निनादे स्यादवाच्ये जलदध्वनौ" मेदि०।

**परिचय ಪರಿಚಯ** (पुं०) 1. ಅಭ್ಯಾಸ. परि + चिञ् (चयने) "अच्" (३-३-५६)। "परिचयं चललक्ष्यनिपातने भयरुषोश्च तदिङ्गितबोधनम्" रघु० ९-४९। "हेतुः परिचयस्थैर्ये वक्तुर्गुणनिकैव सा" माघ० २-७५। 2. ಹೆಚ್ಚು ಸಲಿಗೆ, ಹೆಚ್ಚು ಸಂಬಂಧವಿಟ್ಟುಕೊಳ್ಳುವುದು. "अतिपरिचयादवज्ञा सन्ततगमनादनादरो भवति"।

3. ಹಿಂದೆ ನೋಡಿದ ಗುರುತು. 4. ಹೆಚ್ಚುಕಾಲ ಪಳಗಿರುವುದು, ಬಹಳ ಬಳಕೆಯಾಗಿರುವುದು. "न परिचयो मलिनात्मनां प्रधानम्" माघ० ७-६१। 5. ಶೇಖರಿಸಿಡುವುದು, ಕೂಡಿಹಾಕುವುದು, ವೃದ್ಧಿಪಡಿಸುವುದು. 6. ಗಾಢವಾದ ಸ್ನೇಹ, ಚೆನ್ನಾಗಿ ಬೆಳೆದುಬಂದಿರುವ ಸ್ನೇಹ. "तदिह सुवदनायां तात मत्तः परस्मात् परिचयकरुणायाः सर्वथा मा विरंसीः" मालती० ६-१६। 7. ನಾದದ ನಾಲ್ಕು ಅವಸ್ಥೆಗಳಲ್ಲೊಂದು. ["निष्पत्ति" ಪದದಲ್ಲಿ ನೋಡಿ.]

**परिचर ಪರಿಚರ** (पुं०) 1. ಸೇವಕ, ಆಳು. परितः चरति — चर (गतिभक्षणयोः) "अच्" (३-१-१३४)। 2. ಸೈನ್ಯದ ಸುತ್ತಲೂ ಇರುವ ಕಾವಲುಗಾರ, ಯುದ್ಧಕಾಲದಲ್ಲಿ ರಥ ಮೊದಲಾದುವನ್ನು ಶತ್ರುಗಳ ಧಾಳಿಯಿಂದ ರಕ್ಷಿಸುವವನು. 3. ಅಂಗರಕ್ಷಕ. (वि०) 4. ಸುತ್ತಲೂ ಸಂಚರಿಸುವ. ಉಪಚಾರಮಾಡಲು ನೈಪುಣ್ಯ, ದಕ್ಷತೆ, ಯಜಮಾನನಲ್ಲಿ ಅನುರಾಗ, ತ್ರಿಕರಣ ಶುದ್ಧಿ ಇವು ಪರಿಚರನ ಮುಖ್ಯ ಗುಣಗಳು. "उपचारज्ञता दाक्ष्यमनुरागश्च भर्तरि। शौचं चेति चतुर्थोऽयं गुणः परिचरे जने"।

**परिचरण ಪರಿಚರಣ** (नं०) ಶುಶ್ರೂಷೆ, ಸೇವೆ. परि+चर भावे "ल्युट्" (३-३-११५)। "परिचरणफलं प्रभुः प्रयच्छन् अमितगुणाभिररंस्त वल्लभाभिः" याद० २४-१।

**परिचरत् ಪರಿಚರತ್** (वि०) ಉಪಚಾರ ಮಾಡುತ್ತಿರುವ, ಶುಶ್ರೂಷೆ ಮಾಡುತ್ತಿರುವ. परि+चर (गतौ) "शतृ" (३-२-१२४)।

**परिचर्यमाण ಪರಿಚರ್ಯಮಾಣ** (वि०) ಶುಶ್ರೂಷೆ ಮಾಡಲ್ಪಡುತ್ತಿರುವ, ಸೇವಿಸಲ್ಪಡುತ್ತಿರುವ. परि + चर (गतौ) कर्मं० "शानच्" (३-२-१२४)। "निवृत्तरागैः परिचर्यमाणो नाथः स्वयं नाकनिकेतनानाम्" याद० १८-५४।

**परिचर्या ಪರಿಚರ್ಯಾ** (स्त्री०) 1. ಸೇವೆ, ಶುಶ್ರೂಷೆ. परि+चर (गतिभक्षणयोः) "शः" यक् च निपा० (वा० ३-३-१०१)। "इत्याप्रसादादस्यास्त्वं परिचर्यापरो भव" रघु० १-९१। 2. ಪೂಜೆ. "ग्रहीतुमार्यान् परिचर्यया मुहुर्महानुभावा हि नितान्तमर्थिनः" माघ० १-१७।

**परिचलत् ಪರಿಚಲತ್** (वि०) ಚಲಿಸುತ್ತಿರುವ, ಹೋಗುತ್ತಿರುವ. परि + चल (कम्पने) "शतृ" (३-२-१२४)। "परिचलतो बलानुजबलस्य पुरः सततं धृतश्रियः" माघ० ३-८२। स्त्रियां "ङीप्" (४-१-६)। —चलन्ती —ಚಲಂತೀ.

**परिचलन ಪರಿಚಲನ** (नं०) ಮುಂದೆ ಹೋಗುವುದು, ಮುಂದೆ ಸಾಗುವುದು. परि + चल (कम्पने) "ल्युट्" (३-३-११५)।

**परिचलित ಪರಿಚಲಿತ** (वि०) ಮುಂದೆ ಹೊರಟಿರುವ, ಮುಂದೆ ಸಾಗಿರುವ. परि + चल (कम्पने) "क्तः" (३-४-७२)।

**परिचाय्य ಪರಿಚಾಯ್ಯ** (पुं०) ಮೂರು ಯಜ್ಞಾಗ್ನಿಗಳಲ್ಲೊಂದು. परिचीयते — परि + चिञ् (चयने) कर्मं० "ण्यत्" (३-१-१३१)। आयादेशश्च निपा०। परिचाय्यः उपचाय्यः ಮತ್ತು ಸಮೂಹ್ಯ ಎಂದು ಅಗ್ನಿಯ ಹೆಸರು ಮೂರು. "समूह्यं चिन्वीत पशुकामः। परिचाय्यं चिन्वीत ग्रामकामः" तैत्तिरीये।

**परिचार ಪರಿಚಾರ** (पुं०) ಸೇವೆ, ಶುಶ್ರೂಷೆ. परि+चर (गतौ) भावे "घञ्" (३-३-१८)।

**परिचारक ಪರಿಚಾರಕ** (पुं०) ಸೇವಕ, ಆಳು. परिचरति — परि + चर (गतौ) "ण्वुल्" (३-१-१३४)। "तत्रात्मभूतैः कालज्ञैरहार्यैः परिचारकैः। सुपरीक्षितमन्नाद्यमद्यान्मन्त्रैर्विषापहैः" मनु० ७-२१७। स्त्रियां "टाप्" (४-१-४)। —चारिका —ಚಾರಿಕಾ. ಸೇವಕಿ, ಹೆಣ್ಣು ಆಳು. "दृढा मम त्वत्कुचयोः कठोरयोरुरस्तटीयं परिचारिकोचिता" नैष० ९-११६।

**परिचार्य ಪರಿಚಾರ್ಯ** (वि०) ಸೇವಿಸಲ್ಪಡುವವನು. परिचार्यतेऽसौ—परि+चर कर्मं० "ण्यत्" (३-१-१२४)।

**परिचालन ಪರಿಚಾಲನ** (नं०) ಚಲಿಸುವಂತೆ ಮಾಡುವುದು, ಮುಂದೆ ಹೋಗುವಂತೆ ಮಾಡುವುದು. परि + चल (कम्पने) + णिच् "ल्युट्" (३-३-११५)।

**परिचालयत् ಪರಿಚಾಲಯತ್** (वि०) ಮುಂದೆ ನಡೆಸುತ್ತಿರುವ, ಮುಂದೆ ನಡೆಯುವಂತೆ ಮಾಡುತ್ತಿರುವ. परि+चल (कम्पने) + णिच् "शतृ" (३-२-१२४)। स्त्रियां "ङीप्" (४-१-६)। —चालयन्ती —ಚಾಲಯಂತೀ.

**परिचालित ಪರಿಚಾಲಿತ** (वि०) ಮುಂದೆ ನಡೆಸಲ್ಪಟ್ಟ, ಮುಂದೆ ಹೋಗುವಂತೆ ಮಾಡಲ್ಪಟ್ಟ. परि+चल (कम्पने) + णिच् "क्तः" (३-२-१०२)।

**परिचित ಪರಿಚಿತ** (वि०) 1. ಹೆಚ್ಚು ಪಳಗಿರುವ, ಹೆಚ್ಚು ಕಾಲ ಪಳಗಿದ. परि+चिञ् (चयने) "क्तः" (३-४-७२)। "तथापीदं शश्वत्परिचितविविक्तेन मनसा जनाकीर्णं मन्ये

हुतवहपरीतं गृहमिव" शाकु० ೫-೧೦। 2. ಹೆಚ್ಚಿಸಲ್ಪಟ್ಟ, ವೃದ್ಧಿಪಡಿಸಲ್ಪಟ್ಟ. परि + चिञ् कर्म० "क्त:" (೩-೨-೧೦೨)। 3. ಅಭ್ಯಾಸಮಾಡಲ್ಪಟ್ಟ, ಅನೇಕಾವೃತ್ತಿ ಮಾಡಲ್ಪಟ್ಟ. "यथा पुरा परिचितदाहधाष्टर्यया" माघ० ೧೭-೧೦। 4. ಗುರುತಾಗಿರುವ, ಹಿಂದಿನಿಂದ ತಿಳಿದಿರುವ. "परिचितमागच्छन्तं ग्राहकमुत्कण्ठया विलोक्यासौ। हृष्यति तद्धनलुब्धो यद्वत्पुत्रेण जातेन" पञ्चतं० ೧-೧೬। 5. ಹೆಚ್ಚು ಪ್ರಣಯವುಳ್ಳ, ಅಧಿಕವಾದ ಪ್ರೀತಿಯುಳ್ಳ. "परिचितपरिचुम्बनाभियोगादपगतकुङ्कुमरेणुभिः कपोलैः" माघ० ೭-೬೩।

**परिचिति ಪರಿಚಿತಿ** (स्त्री०) "परिचय" ಪದದ ಅರ್ಥ. परि+ चिञ् (चयने) "क्तिन्" (೩-೩-೯೪)।

**परिचिन्तन ಪರಿಚಿಂತನ** (न०) ಆಲೋಚಿಸುವುದು. परि + चिति (स्मृत्याम्) "ल्युट्" (೩-೩-೧೧೫)।

**परिचिन्तनीय ಪರಿಚಿಂತನೀಯ** (वि०) 1. ಚೆನ್ನಾಗಿ ಯೋಚಿಸಿ ನೋಡಲ್ಪಡುವ. 2. ಯೋಚಿಸಿ ನೋಡಬೇಕಾದ.

**परिचिन्तित ಪರಿಚಿಂತಿತ** (वि०) ಆಲೋಚಿಸಲ್ಪಟ್ಟ, ಚೆನ್ನಾಗಿ ಯೋಚಿಸಿ ನೋಡಲ್ಪಟ್ಟ. परि+चिति (स्मृत्याम्) "क्त:" (೩-೨-೧೦೨)।

**परिचुम्बन ಪರಿಚುಂಬನ** (न०) ಚುಂಬಿಸುವುದು, ಮುದ್ದಾಡುವುದು, ಪ್ರೀತಿ ಮತ್ತು ಗೌರವ ತೋರಿಸಲು ಮುತ್ತು ಕೊಡುವುದು. परि+चुबि (वक्त्रसंयोगे) "ल्युट्" (೩-೩-೧೧೫)। "परिचितपरिचुम्बनाभियोगादपगतकुङ्कुमरेणुभिः कपोलैः" माघ० ೭-೬೩।

**परिचुम्बनीय ಪರಿಚುಂಬನೀಯ** (वि०) ಚುಂಬಿಸಲ್ಪಡುವ, ಪ್ರೀತಿಯಿಂದ ಮುತ್ತು ಕೊಡಲ್ಪಡುವ. परि + चुबि (वक्त्रसंयोगे) "अनीयर्" (೩-೧-೯೬)।

**परिचुम्बित ಪರಿಚುಂಬಿತ** (वि०) ಚುಂಬಿಸಲ್ಪಟ್ಟ, ಮುತ್ತು ಕೊಡಲ್ಪಟ್ಟ. परि + चुबि (वक्त्रसंयोगे) "क्त:" (೩-೨-೧೦೨)।

**परिच्छद ಪರಿಚ್ಛದ** (पुं०) 1. ಉಪಕರಣ, ಸಾಮಗ್ರಿ (ಹೊರಗಣ ಅಂಗ; ಛತ್ರ ಚಾಮರ ಮುಂತಾದುದು). परिच्छाद्यतेऽनेन — परि + छद (अपवारणे) + णिच् "घ:" (೩-೩-೧೧೮)। "सेना परिच्छदस्तस्य द्वयमेवार्थसाधनम्" रघु० ೧-೧೯। 2. ಆಚ್ಛಾದನ, ಹೊದಿಕೆ. 3. ವಸ್ತ್ರ ಒಡವೆ ಮುಂತಾದ ಅಲಂಕಾರ. "शाखावसक्तकमनीयपरिच्छदानामध्वश्रमातुरवधूजनसेवितानाम्" किरा० ೭-೪೦। 4. ಪರಿಜನ, ಸೇವಕ, ಆಳು. "नरपतिरतिवाहयांबभूव क्वचिदसमेतपरिच्छदस्त्रियामाम्" रघु० ೯-೭೦। 5. ಆಸ್ತಿ, ಧೇನು ಧಾನ್ಯ ಮೊದಲಾದ ಐಶ್ವರ್ಯ. "विवास्यो वा भवेद्राष्ट्रात्सद्रव्यः सपरिच्छदः" मनु० ೯-೨೪೧। 6. ಬ್ರಾಹ್ಮಣನಿಂದ ಶಬರ ಸ್ತ್ರೀಯಲ್ಲಿ ಹುಟ್ಟಿದ ಮಿಶ್ರಜಾತಿಯವನು. "विप्रादावृतमुग्रस्त्री निषादिषु मनोजवम्। चण्डाली तु श्वचण्डालं शबरी तु परिच्छदम्" वैज०।

**परिच्छित्ति ಪರಿಚ್ಛಿತ್ತಿ** (स्त्री०) 1. ನಿರ್ಣಯ, ನಿಶ್ಚಯ, ನಿರ್ಧಾರ. परि + छिदिर् (द्वैधीकरणे) "क्तिन्" (೩-೩-೯೪)। 2. ತಪ್ಪು ಒಪ್ಪುಗಳನ್ನು ನಿರ್ಣಯಿಸಿ ಬೇರ್ಪಡಿಸುವುದು.

**परिच्छिन्न ಪರಿಚ್ಛಿನ್ನ** (वि०) 1. ಇಷ್ಟೇ ಎಂದು ಅಳೆಯಲ್ಪಟ್ಟ, ಇಯತ್ತೆಯ ಅವಧಿಯುಳ್ಳ. परि + छिदिर् (द्वैधीकरणे) "क्त:" (೩-೨-೧೦೨)। "परिच्छिन्नप्रभावर्धिर्न मया न च विष्णुना" कुमा० ೨-೫೮। 2. ತಪ್ಪು ಒಪ್ಪುಗಳನ್ನು ನಿರ್ಣಯಿಸಿ ಬೇರ್ಪಡಿಸಲ್ಪಟ್ಟ, ನಿರ್ಣಯಿಸಲ್ಪಟ್ಟ.

**परिच्छेद ಪರಿಚ್ಛೇದ** (पुं०) 1. ನಿರ್ಣಯ, ನಿಶ್ಚಯ, ನಿರ್ಧಾರ. परि+छिदिर् (द्वैधीकरणे) "घञ्" (೩-೩-೧೮)। ಇವನು ಇಂತಹವನು ಇದು ಇಂತಹುದು ಎಂಬ ನಿಶ್ಚಯ ಜ್ಞಾನವು ಪರಿಚ್ಛೇದವೆನಿಸುವುದು. "परिच्छेदातीतः सकलवचनानामविषयः पुनर्जन्मन्यस्मिन् अनुभवपथं यो न गतवान्" मालती० ೧-೩೩। 2. ವಿಮರ್ಶೆ, ವಿವೇಚನೆ, ಸರಿಯಾಗಿ ಆಲೋಚಿಸುವುದು. "परिच्छेदो हि पाण्डित्यं यदापन्ना विपत्तयः। अपरिच्छेदकर्तॄणां विपदः स्युः पदे पदे" हितो० ೧-೧೪೮। 3. ಸೀಮೆ, ಎಲ್ಲೆ, ಗಡಿ. 4. ಅವಧಿ, ಇಷ್ಟು ಎಂದು ಮಿತಿ. "राजा — अलमलं परिच्छेदेन" माल० ೨। 5. ಗ್ರಂಥದ ಭಾಗ. ಇದರಂತೆಯೇ उच्छ्वासः अध्यायः पटलः अङ्कः काण्डः पर्व स्तबकः तरङ्गः ಮುಂತಾದುವು. 6. ಅಳತೆ, ಪರಿಮಾಣ.

**परिच्छेद्य ಪರಿಚ್ಛೇದ್ಯ** (वि०) 1. ನಿಶ್ಚಯಿಸಲು ಅರ್ಹವಾದ. 2. ನಿರ್ಧರಿಸಲ್ಪಡುವ. 3. ನಿರ್ಣಯಿಸಲು ಶಕ್ಯವಾದ. परि + छिदिर् (द्वैधीकरणे) कर्मादौ "ण्यत्" (೩-೧-೧೨೪)। 4. ಇಷ್ಟೇ ಎಂದು ಮಿತಿಗೊಳಿಸಲ್ಪಡುವ, ಇಷ್ಟು ಎಂದು ಅಳತೆ ಮಾಡಲ್ಪಡುವ. "प्रत्यक्षोऽप्यपरिच्छेद्यो मह्यादिर्महिमा तव" रघु० ೧೦-೨೮।

**परिच्युत ಪರಿಚ್ಯುತ** (वि०) ಕೆಳಗೆ ಬಿದ್ದಿರುವ, ಜಾರಿ ಬಿದ್ದಿರುವ. परि+च्युङ् (गतौ) "क्त:" (೩-೪-೭೨)।

"परिच्युतस्तत्कुचकुम्भमध्यात् किं शोषमायासि मृणालहार" रत्ना० २-१४।

**परिच्युति ಪರಿಚ್ಯುತಿ** (स्त्री०) ಕೆಳಗೆ ಬೀಳುವಿಕೆ, ಕೈಜಾರಿ ಬೀಳುವುದು. परि+च्युङ् (गतौ) "क्तिन्" (३-३-९४)।

**परिजन ಪರಿಜನ** (पुं०) 1. ಸೇವಕ, ಆಳು. परिगतो जनः। "यानाज्जनः परिजनैरवतार्यमाणा राज्ञीर्नरापनयनाकुलसौविदल्लाः" माघ० ५-१७। 2. ಸೇವಕರ ಸಮೂಹ. "परिजनश्च यथाव्यापारं राजानमभितः स्थितः" माल० १।

**परिज्ञात ಪರಿಜ್ಞಾತ** (वि०) ಚೆನ್ನಾಗಿ ತಿಳಿಯಲ್ಪಟ್ಟ. परि+ज्ञा (अवबोधने) "क्तः" (३-३-१०२)। "तपस्विभिः कैश्चित् परिज्ञातोऽस्मि" शाकु० २।

**परिज्ञान ಪರಿಜ್ಞಾನ** (न०) ಸೂಕ್ಷ್ಮಜ್ಞಾನ. ಕೂಲಂಕಷವಾದ ತಿಳಿವಳಿಕೆ. परि+ज्ञा (अवबोधने) "ल्युट्" (३-३-११५)।

**परिज्ञेय ಪರಿಜ್ಞೇಯ** (वि०) 1. ಚೆನ್ನಾಗಿ ತಿಳಿಯಲ್ಪಡುವ. 2. ಚೆನ್ನಾಗಿ ತಿಳಿಯಲು ಅರ್ಹವಾದ. 3. ಚೆನ್ನಾಗಿ ತಿಳಿಯಲು ಶಕ್ಯವಾದ. परि+ज्ञा (अवबोधने) "यत्" (३-१-९७)। आतः ईत् (६-४-६५)।

**परिज्वन् ಪರಿಜ್ವನ್** (पुं०) 1. ಚಂದ್ರ. 2. ಯಾಜ್ಞಿಕ, ಯಜ್ಞಮಾಡಿಸುವ ಪುರೋಹಿತ. 3. ಪರಿಚಾರಕ. "परिज्वा तु पुमानिन्दौ याज्ञिके परिचारके" मेदि०।

**परिज्वलत् ಪರಿಜ್ವಲತ್** (वि०) ಚೆನ್ನಾಗಿ ಹೊಳೆಯುತ್ತಿರುವ, ತೇಜಃಶಾಲಿಯಾದ. परि+ज्वल (दीप्तौ) "शतृ" (३-२-१२४)। "परिज्वलन्तं निधनाय भूभृतां दहन्तमाशा इव जातवेदसम्" किरा० १४-३५।

**परिडीन ಪರಿಡೀನ** (न०) ಪಕ್ಷಿಗಳ ಹಾರಾಟದ ಒಂದು ಭೇದ. ["खगगति" ಪದದಲ್ಲಿ ನೋಡಿ.]

**परिणत ಪರಿಣತ** (पुं०) 1. ಅಡ್ಡಲಾಗಿ ಕೊಂಬುಗಳಿಂದ ಹೊಡೆಯುವ ಆನೆ. परि+णम (प्रह्वत्वे) "क्तः" (३-४-७२)। "तिर्यग्दन्तप्रहारस्तु गजः परिणतो मतः"। "सततमसुमतामगम्यरूपाः परिणतदिक्करिकास्तटीर्बिभर्ति" माघ० ४-२९। (वि०) 2. ಪಕ್ವವಾಗಿರುವ, ಹಣ್ಣಾಗಿರುವ. "त्वय्यासन्ने परिणतफलश्यामजम्बूवनान्ताः संपत्स्यन्ते कतिपयदिनस्थायिहंसा दशार्णाः" मेघ० १-२३। 3. ಚೆನ್ನಾಗಿ ವಿಕಾಸಹೊಂದಿದ, ಪರಿಪಕ್ವವಾದ, ಸಂಪೂರ್ಣತೆ ಪಡೆದ. "शब्दब्रह्मविदः कवेः परिणतप्रज्ञस्य वाणीमिमाम्" उ० रा० ७-२१। 4. ಹಳೆಯದಾದ, ಇಳಿಮುಖವಾದ. "परिणतं वयः"। 5. ಬದಲಾವಣೆ ಹೊಂದಿದ, ಬೇರೆ ರೂಪವನ್ನು ಹೊಂದಿದ. "प्रवेशानन्तरं च काननोपान्तवर्तिलताभावेन परिणतमस्या रूपम्" विक्र० ४। 6. ಪರಿಪೂರ್ಣವಾದ, ಚೆನ್ನಾಗಿ ಬೆಳೆದು ಅಭಿವೃದ್ಧಿ ಹೊಂದಿದ. "निर्वेक्ष्यावः परिणतशरच्चन्द्रिकासु क्षपासु" मेघ० २-४७। 7. ಸಮಾಪ್ತಿ ಹೊಂದಿದ, ಕೊನೆ ಮುಟ್ಟಿದ. 8. ಜೀರ್ಣವಾದ, ಅರಗಿದ. 9. ನಿಪುಣ, ನಿಷ್ಣಾತ, ಸಂಪೂರ್ಣ ಜ್ಞಾನ ಪಡೆದವನು. 10. ಚೆನ್ನಾಗಿ ಬಗ್ಗಿರುವ, ಕೆಳಮುಖವಾಗಿರುವ. 11. ಚೆನ್ನಾಗಿ ಬಲಿತಿರುವ, ಎಳೆಯದಲ್ಲದ. "परिणतशरकाण्डा पाण्डुभिर्गण्डभागैः" माघ० ११-३०।

**परिणति ಪರಿಣತಿ** (स्त्री०) 1. ಪರಿಪೂರ್ಣತೆ, ಸಂಪೂರ್ಣತೆ. परि+णम (प्रह्वत्वे) "क्तिन्" (३-३-९४)। "प्रभुत्वस्योत्कर्षात्परिणतिविशुद्धेश्च तपसाम्" म० वी० २-१५। 2. ಪರಿಣಾಮ, ಕಾರ್ಯದ ಫಲ. "समानप्रेमाणं जनमसुलभं प्रार्थितवतो विधौ वामारम्भे मम समुचितैषा परिणतिः" मालती० ४-४। 3. ಕೊನೆ, ಅಂತ್ಯ, ಸಮಾಪ್ತಿ, ಪರಿಪಾಕಾವಸ್ಥೆ. "परिणतिरमणीयाः प्रीतयस्त्वद्विधानामहमपि तव मान्या हेतुभिस्तैश्च तैश्च" मालती० ६-१६। 4. ಜರಾವಸ್ಥೆ, ಮುಪ್ಪು, ಮುದಿತನ. "अभवद्गतः परिणतिं शिथिलः परिमन्दसूर्यनयनो दिवसः" माघ० ९-३। 5. ಆಹಾರ ಜೀರ್ಣವಾಗುವುದು, ಆಹಾರದ ಪಚನ. 6. ಪರಿಪಕ್ವವಾಗುವುದು, ಚೆನ್ನಾಗಿ ಹಣ್ಣಾಗುವುದು. 7. ಚೆನ್ನಾಗಿ ಬಲಿಯುವುದು. 8. ಚೆನ್ನಾಗಿ ಬಗ್ಗುವುದು. 9. ಬದಲಾವಣೆ ಹೊಂದುವುದು, ರೂಪಾಂತರ ಹೊಂದುವುದು. "परिणतिमिति रात्रेर्मागधा माधवाय" माघ० ११-१।

**परिणद्ध ಪರಿಣದ್ಧ** (वि०) 1. ಸುತ್ತಲೂ ಕಟ್ಟಲ್ಪಟ್ಟ. परि+णह (बन्धने) "क्तः" (३-२-१०२)। "स जयति परिणद्धः शक्तिभिः शक्तिनाथः" मालती० ५-१। 2. ವಿಶಾಲವಾದ, ಅಗಲವಾದ. "युवा युगव्यायतबाहुरंसलः कपाटवक्षाः परिणद्धकन्धरः" रघु० ३-३४।

**परिणमत् ಪರಿಣಮತ್** (वि०) 1. ಉಂಟಾಗುವ, ಸಿದ್ಧಿಸುವ. परि+णम (प्रह्वत्वे) "शतृ" (३-२-१२४)। "योगिनां परिणमन् विमुक्तये केन नास्तु विनयः सतां प्रियः" किरा० १३-४४। 2. ಅಭಿವೃದ್ಧಿ ಹೊಂದುತ್ತಿರುವ, ಬಲಿಯುತ್ತಿರುವ, ಬೆಳೆಯುತ್ತಿರುವ. "परिणमदरुणिम्नः पङ्कजारण्यकोशान्" याद० १९-७७। 3. ಪಕ್ವವಾಗುತ್ತಿರುವ, ಹಣ್ಣಾಗುತ್ತಿರುವ. 4. ಬದಲಾವಣೆ

ಹೊಂದುತ್ತಿರುವ, ರೂಪಾಂತರ ಹೊಂದುತ್ತಿರುವ. 5. ಪರಿಪೂರ್ಣತೆ ಪಡೆಯುತ್ತಿರುವ.

**परिणय ಪರಿಣಯ** (पुं०) ವಿವಾಹ, ಮದುವೆ. परि+णीञ् (प्रापणे) भावे "अच्" (३-३-५६)। "तस्मिन् संयमिनामाद्ये जाते परिणयोन्मुखे। जहुः परिग्रहव्रीडां प्राजापत्यास्तपस्विनः" कुमा० ६-३४।

**परिणयन ಪರಿಣಯನ** (न०) ವಿವಾಹ, ಮದುವೆ. परि + णीञ् (प्रापणे) भावे "ल्युट्" (३-३-११५)। "अवनितनयभीतान् प्रीणयन्नादितेयान् परिणयनविलम्बं पद्मनाभः प्रसेहे" याद० १६-१४४।

**परिणहन ಪರಿಣಹನ** (न०) ಸುತ್ತಲೂ ಕಟ್ಟುವುದು. परि + णह (बन्धने) भावे "ल्युट्" (३-३-११५)।

**परिणाम ಪರಿಣಾಮ** (पुं०) 1. ಬದಲಾವಣೆ, ರೂಪಾಂತರ ಹೊಂದುವುದು, ವಸ್ತುವಿನ ಪೂರ್ವದ ಗುಣ ಹೋಗಿ ಬೇರೆ ಗುಣದ ಉತ್ಪತ್ತಿ. परि + णम (प्रह्वत्वे) "घञ्" (३-३-१८)। मृदः परिणामो घटः। पयसः परिणामो दधि। 2. ಕಾರ್ಯದ ಕೊನೆಯ ಅವಸ್ಥೆ, ಫಲಕಾಲ. "परिणामसुखे गरीयसि व्यथकेऽस्मिन् वचसि क्षतौजसाम्" किरा० २-४। 3. ಪರಿಪಕ್ವವಾಗುವುದು, ಬಲಿಯುವುದು. "उपैति सस्यं परिणामरम्यता नदीरनौद्धत्यमपङ्कतां मही" किरा० ४-२२। 4. ಪಕ್ವವಾಗುವುದು, ಹಣ್ಣಾಗುವುದು. "फलभरपरिणामश्यामजम्बूनिकुञ्जस्खलनतनुतरङ्गामुत्तरेण स्रवन्तीम्" मालती० ९-२४। 5. ಮುಪ್ಪು, ಮುದಿತನ. "गुणवत्सुतरोपितश्रियः परिणामे हि दिलीपवंशजाः" रघु० ८-११। 6. ಕೊನೆ, ಅಂತ್ಯ. "प्रच्छायसुलभनिद्राः दिवसाः परिणामरमणीयाः" शाकु० १-३। 7. ಆಹಾರವು ಜೀರ್ಣವಾಗುವ ಕಾಲ, ತಿಂದ ಆಹಾರವು ಪಚನವಾಗುವ ಅವಸ್ಥೆ. "हितं च परिणामे यत्तदाद्यं भूतिमिच्छता" पञ्चतं० ४-२३। 8. ಅರ್ಥಾಲಂಕಾರದ ಒಂದು ಭೇದ, ಪರಿಣಾಮಾಲಂಕಾರ. ಉಪಮಾನವಸ್ತುವನ್ನು ಉಪಮೇಯರೂಪದಿಂದ ಪ್ರಕೃತಕಾರ್ಯೋಪಯೋಗಿಯಾಗಿ ವರ್ಣಿಸುವುದು **ಪರಿಣಾಮಾಲಂಕಾರ.** "परिणामः क्रियार्थश्चेद्विषयी विषयात्मना" चन्द्रा०। **ಉದಾ:** "प्रसन्नेन दृगब्जेन वीक्षते मदिरेक्षणा" ಇಲ್ಲಿ ಅಚೇತನವಾದ ಅಬ್ಜಕ್ಕೆ ವೀಕ್ಷಣಕರ್ತೃತ್ವವು ಅಸಂಭವವಾದುದರಿಂದ ಉಪಮೇಯಭೂತವಾದ ದೃಕ್ ರೂಪದಿಂದ ಪರಿಣಾಮವನ್ನು ಅಪೇಕ್ಷಿಸಿ ವೀಕ್ಷಣಕಾರ್ಯೋಪಯೋಗಿಯಾಗಿ ವರ್ಣಿತವಾಗಿರುವುದರಿಂದ ಪರಿಣಾಮಾಲಂಕಾರ.

**परिणामदर्शिन् ಪರಿಣಾಮದರ್ಶಿನ್** (वि०) 1. ಪ್ರಯತ್ನದ ಫಲವನ್ನು ನೋಡುವ, ನಡೆಸಿದ ಕಾರ್ಯದ ಫಲವನ್ನು ಕಾಣುವ. परिणामं पश्यति — दृशिर् (प्रेक्षणे) "णिनिः" (३-१-१३४)। 2. ದೂರದೃಷ್ಟಿಯುಳ್ಳ, ವಿಚಾರಪರ.

**परिणामशूल ಪರಿಣಾಮಶೂಲ** (पुं०) ಒಂದು ವಿಧ ಹೊಟ್ಟೆನೋವು, ನೋವನ್ನುಂಟುಮಾಡುವ ಒಂದು ವಿಧ ವಾತರೋಗ. परिणामे शूलम् यस्य। ಆಹಾರವು ಜೀರ್ಣವಾಗುವ ಸಮಯದಲ್ಲಿ ವಾತದೋಷದಿಂದ ಸಂಭವಿಸುವ ಈ ವ್ಯಾಧಿಗೆ ಪರಿಣಾಮಶೂಲವೆಂದು ಹೆಸರು. "स्वैर्निदानैः प्रकुपितो वायुः सन्निहितो यदा। कफपित्ते समावृत्य शूलकारी भवेद्बली"। "भुक्ते जीर्यति यच्छूलं तदेव परिणामजम्"।

**परिणामिन् ಪರಿಣಾಮಿನ್** (वि०) ಪರಿಣಾಮ ಹೊಂದುವ, ಬದಲಾವಣೆ ಹೊಂದುವ, ರೂಪಾಂತರ ಹೊಂದುವ. परि + णम (प्रह्वत्वे) "णिनिः" (३-१-१३४)।

**परिणाय ಪರಿಣಾಯ** (पुं०न) ಪಗಡೆಕಾಯನ್ನು ನಡೆಸುವುದು. परितो वामदक्षिणतो नयनम् — णीञ् (प्रापणे) "घञ्" (३-३-३७)। "परिणायस्तु शारीणां समन्तान्नयनेऽस्त्रियाम्" अम०।

**परिणायक ಪರಿಣಾಯಕ** (पुं०) ಪತಿ, ಗಂಡ. परि+णीञ् (प्रापणे) "ण्वुल्" (३-१-१३३)। "अनुदेहमागतवतः प्रतिमां परिणायकस्य गुरुमुद्वहता" माघ० ९-७३।

**परिणाह ಪರಿಣಾಹ** (पुं०) ವೈಶಾಲ್ಯ, ವಿಸ್ತಾರ, ಅಗಲ. परि + णह (बन्धने) (३-३-१९)। "अतिशयपरितापग्लपिताङ्ग्या यथास्याः स्तनयुगपरिणाहं मण्डलाभ्यां ब्रवीति" रत्ना० २-१३।

**परिणाहवत् ಪರಿಣಾಹವತ್** (वि०) ವಿಶಾಲವಾದ, ವಿಸ್ತಾರವಾದ, ಅಗಲವಾದ. परिणाहोऽस्यास्ति वा "मतुप्" (५-२-११६)। "अतिशयपरिणाहवान्वितेने बहुतरमर्पितरत्नकिंकिणीकः" माघ० ७-५। स्त्रियां "ङीप्" (४-१-६)। **-वती -ವತೀ.**

**परिणाहिन् ಪರಿಣಾಹಿನ್** (वि०) ವಿಶಾಲವಾದ, ವಿಸ್ತಾರವಾದ, ಅಗಲವಾದ, परिणाहोऽस्यास्ति "इनिः" (५-२-११५)। "तरुमूरुयुगेन सुन्दरी किमु रम्भां परिणाहिना परम्" नैष० २-३७। स्त्रियां "ङीप्" (४-१-५)। **परिणाहिनी ಪರಿಣಾಹಿನೀ.**

**परिंणसक ಪರಿಣಂಸಕ** (वि०) 1. ಭಕ್ಷಿಸುವ, ತಿನ್ನುವ. परि + णिसि (चुम्बने) "ण्वुल्" (३-१-१३३)। "वृनान्तप्रेक्षणः पापः फलानां परिंणिसकः" भट्टि० ९-१०६। 2. ಚುಂಬಿಸುವವನು.

**परिंणिसन ಪರಿಣಂಸನ** (न०) 1. ಭಕ್ಷಿಸುವುದು, ತಿನ್ನುವುದು. 2. ಚುಂಬಿಸುವುದು. परि + णिसि (चुम्बने) "ल्युट्" (३-३-११५)।

**परिणिनंसा ಪರಿಣಿನಂಸಾ** (स्त्री०) ಕೊಂಬುಗಳಿಂದ ಅಡ್ಡಲಾಗಿ ಹೊಡೆಯುವ ಅಪೇಕ್ಷೆ, ತಿರ್ಯಕ್ದಂತ ಪ್ರಹಾರದ ಅಪೇಕ್ಷೆ, ಒಂದು ಪಾರ್ಶ್ವದಿಂದ ತನ್ನ ಕೊಂಬುಗಳಿಂದ ಹೊಡೆಯುವುದು, ಮಣ್ಣಿನ ಗುಡ್ಡೆಯನ್ನು ಗುದ್ದಿ ತೋಡುವುದು ಇತ್ಯಾದಿ ಆನೆಯ ಸ್ವಭಾವ. परि + णम (प्रह्वत्वे शब्दे च) + सन् "अः" (३-३-१०२)।

**परिणिनंसु ಪರಿಣಿನಂಸು** (वि०) ಕೊಂಬಿನಿಂದ ತಿರ್ಯಕ್ಕಾಗಿ ಹೊಡೆಯುವ ಅಪೇಕ್ಷೆಯುಳ್ಳ, (ಆನೆ). परि + णम (प्रह्वत्वे शब्दे च) + सन् "उः" (३-२-१६८)। "स्तम्बेरमः परिणिनंसुरसावुपैति षिड्गैरगद्यत ससंभ्रममेव काचित्" माघ० ५-३४।

**परिणीत ಪರಿಣೀತ** (वि०) ಮದುವೆಯಾದವನು. (स्त्री०) **–णीता –ಣೀತಾ.** ಮದುವೆಯಾದ ಹೆಂಗಸು.

**परिणेतृ ಪರಿಣೇತೃ** (पुं०) 1. ಪತಿ, ಗಂಡ. परि + णीञ् (प्रापणे) "तृच्" (३-१-१३३)। "स एव वेषः परिणेतुरिष्टं भावान्तरं तस्य विभोः प्रपेदे" कुमा० ७-३१। (वि०) 2. ಮದುವೆಯಾಗುವವನು. 3. ಕರೆದು ಕೊಂಡು ಹೋಗುವವನು, ಒಯ್ಯುವವನು.

**परिणेय ಪರಿಣೇಯ** (वि०) 1. ಸುತ್ತಲೂ ಒಯ್ಯಲ್ಪಡುವ. 2. ಸುತ್ತಲೂ ಒಯ್ಯಲು ಯೋಗ್ಯವಾದ. 3. ಸುತ್ತಲೂ ಒಯ್ಯಲು ಶಕ್ಯವಾದ. परि + णीञ् (प्रापणे) "यत्" (३-१-९७)। (स्त्री०) **–णेया –ಣೇಯಾ.** 4. ವಿವಾಹಕ್ಕೆ ಯೋಗ್ಯಳಾದ ಕನ್ಯೆ.

**परितप्त ಪರಿತಪ್ತ** (वि०) 1. ಕಾಯಿಸಲ್ಪಟ್ಟ, ಬಿಸಿಯಾಗಿ ಮಾಡಲ್ಪಟ್ಟ. परि+तप (दाहे) "क्तः" (३-२-१०२)। 2. ದುಃಖಗೊಂಡ, ಖೇದಗೊಂಡ. "परितप्यत एव नोत्तमः परितप्तोऽप्यपरः सुसंवृतिः" माघ० १६-२३।

**परितर्पण ಪರಿತರ್ಪಣ** (वि०) 1. ತೃಪ್ತಿಗೊಳಿಸುವ, परि+तृप (प्रीणने) "ल्युः" (३-१-१३४)। "आतप्तजीवितपुनःपरितर्पणोऽयं संजीवनौषधिरसो हृदि नु प्रसक्तः" उ० रा० ३-११। (न०) 2. ತೃಪ್ತಿಪಡಿಸುವುದು.

**परितस् ಪರಿತಸ್** (अव्य०) 1. ಎಲ್ಲಾ ಕಡೆಯಲ್ಲೂ, ಸುತ್ತಲೂ. परि "तसिल्" (५-३-९)। ಈ ಪದದ ಯೋಗವಿದ್ದಲ್ಲಿ ದ್ವಿತೀಯಾವಿಭಕ್ತಿ ಬರುವುದು. "परितश्च धौतमुखरुक्मविलसदहिमांशुमण्डलाः। तेनुरतनुवपुषः पृथिवीं स्फुटलक्ष्यतेजस इवात्मजाः श्रियः" माघ० १५-७८। 2. ಅಭಿಮುಖವಾಗಿ, (ಅದರ) ಕಡೆಗೆ, (ಅದರ) ದಿಕ್ಕಿಗೆ. "चमरान् परितः प्रवर्तिताश्वः क्वचिदाकर्णविकृष्टभल्लवर्षी" रघु० ९-६६। 3. ಸಮೀಪದಲ್ಲಿ, ಹತ್ತಿರದಲ್ಲಿ. "परितोऽन्तिके सर्वतोऽर्थे" वैज०।

**परिताप ಪರಿತಾಪ** (पुं०) 1. ಉಷ್ಣತೆ, ಬಿಸಿ, ಕಾವು. परि + तप (सन्तापे) कर० "घञ्" (३-३-१२१)। "अनुभवति हि मूर्ध्ना पादपस्तीव्रमुष्णं शमयति परितापं छायया संश्रितानाम्" शाकु० ५-७। 2. ನೋವು, ಬೇನೆ. "तया सारङ्गाक्ष्या त्वमसि न कदाचिद्विरहितं प्रसक्ते निर्वाणे हृदय परितापं वहसि किम्" माल० ३-२। 3. ಶೋಕ, ದುಃಖ, ವಿಲಾಪ. 4. ಭಯ. 5. ನರಕ. परि+तप अधि० "घञ्" (३-३-१२१)। "परितापस्तु पुंसि स्याद्दुःखे च नरकान्तरे" मेदि०।

**परितापिन् ಪರಿತಾಪಿನ್** (वि०) 1. ತಾಪವುಂಟುಮಾಡುವ, ಹೆಚ್ಚು ಕಾವನ್ನುಂಟುಮಾಡುವ. परि + तप (सन्तापे) "णिनिः" (३-२-७८)। 2. ದುಃಖವುಂಟುಮಾಡುವ, ನೋವನ್ನುಂಟುಮಾಡುವ ಸ್ವಭಾವದ. "आपातरम्या विषयाः पर्यन्तपरितापिनः" किरा० ११-१२। 3. ಹೆಚ್ಚು ಸಂತಾಪವುಳ್ಳ, ಅಧಿಕವಾದ ಉಷ್ಣತೆಯುಳ್ಳ. परितापोऽस्यास्ति "इनिः" (५-२-११५)। "विनिहितं परितापिनि चन्दनं हृदि तया धृतबुद्बुदमाबभौ" नैष० ४-२८।

**परितुष्ट ಪರಿತುಷ್ಟ** (वि०) 1. ಸಂತೋಷಗೊಂಡ, ತೃಪ್ತಿ ಹೊಂದಿದ. परि + तुष (तुष्टौ) "क्तः" (३-४-७२)। "वयमिह परितुष्टा वल्कलैस्त्वं दुकूलैः सम इह परितोषो निर्विशेषो विशेषः" भर्तृ० ३-५३। 2. ಆನಂದಪಟ್ಟ, ಹರ್ಷ ಹೊಂದಿದ.

**परितुष्टि ಪರಿತುಷ್ಟಿ** (स्त्री०) 1. ಸಂತೋಷ, ತೃಪ್ತಿ. परि+तुष (तुष्टौ) "क्तिन्" (३-३-९४)। 2. ಆನಂದ, ಹರ್ಷ.

**परितूर्ण ಪರಿತೂರ್ಣ** (अव्य०) ಜಾಗ್ರತೆಯಾಗಿ, ಶೀಘ್ರವಾಗಿ. "युधाजितः कृतपरितूर्णवीजनम्" माघ० १७-६।

**परितोष ಪರಿತೋಷ** (पुं०) 1. ಸಂತೋಷ, ತೃಪ್ತಿ. परि + तुष (तुष्टौ) "घञ्" (३-३-१८)। "सम इह

परितोषो निर्विशेषो विशेषः" भर्तृ० ३-५३। 2. ಆನಂದ, ಹರ್ಷ. "भवत्संभावनोत्थाय परितोषाय मूर्च्छते" कुमा० ६-५९।

**परितोषण ಪರಿತೋಷಣ** (वि०) 1. ತೃಪ್ತಿಪಡಿಸುವ. ಸಂತೋಷಪಡಿಸುವ. परि + तुष (तुष्टौ) "ल्युः" (३-१-१३४)। 2. ಆಹ್ಲಾದವುಂಟುಮಾಡುವ, ಆನಂದ ಪಡಿಸುವ. "संजीवनश्च मनसः परितोषणश्च" उ० रा० ३-१२।

**परितोषणीय ಪರಿತೋಷಣೀಯ** (वि०) ತೃಪ್ತಿಪಡಿಸ ಬೇಕಾದ, ಸಂತೋಷಪಡಿಸಬೇಕಾದ. परि + तुष (तुष्टौ) "अनीयर्" (३-१-९६)।

**परितोषयत् ಪರಿತೋಷಯತ್** (वि०) 1. ಸಂತೋಷ ಪಡಿಸುತ್ತಿರುವ. 2. ಆನಂದಪಡಿಸುತ್ತಿರುವ. परि + तुष (तुष्टौ) + णिच् "शतृ" (३-२-१२४)। स्त्रियां "ङीप्" (४-१-६)। **-तोषयन्ती -ತೋಷಯನ್ತೀ.**

**परितोषयितृ ಪರಿತೋಷಯಿತೃ** (वि०) 1. ತೃಪ್ತಿಪಡಿಸು ವವನು, ಸಂತೋಷಪಡಿಸುವವನು. परि + तुष (तुष्टौ) + णिच् "तृच्" (३-१-१३३)। 2. ಆನಂದವುಂಟು ಮಾಡುವವನು, ಆಹ್ಲಾದವನ್ನುಂಟುಮಾಡುವವನು. "परि-तोषयिता न कश्चन स्वगतो यस्य गुणोऽस्ति देहिनः" माघ० १६-२८। स्त्रियां "ङीप्" (४-१-५)। **-यित्री -ಯಿತ್ರೀ.**

**परितोषित ಪರಿತೋಷಿತ** (वि०) 1. ಸಂತೋಷಪಡಿಸ ಲ್ಪಟ್ಟ. परि+तुष (तुष्टौ)+णिच् "क्तः" (३-२-१०२)। "परितोषितभावुकः स्ववृत्त्या श्रुतिलक्ष्यां महतीं प्रियाम-विन्दत्" याद० १५-३। 2. ಆನಂದವುಂಟುಮಾಡ ಲ್ಪಟ್ಟ.

**परित्यक्त ಪರಿತ್ಯಕ್ತ** (वि०) 1. ತ್ಯಜಿಸಲ್ಪಟ್ಟ, ಬಿಡಲ್ಪಟ್ಟ, ತೊರೆಯಲ್ಪಟ್ಟ. परि + त्यज (हानौ) "क्तः" (३-२-१०२)। "परित्यक्तं तेन त्वमसि सुतशोकान्न तु भयात् विमोक्ष्ये शस्त्र त्वामहमपि यतः स्वस्ति भवते" वेणी० ३-१९। 2. ಬಿಡಲ್ಪಟ್ಟ, ಪ್ರಯೋಗಿಸಲ್ಪಟ್ಟ (ಬಾಣ).

**परित्यजत् ಪರಿತ್ಯಜತ್** (वि०) ತ್ಯಜಿಸುತ್ತಿರುವ, ಬಿಡು ತ್ತಿರುವ, ತೊರೆಯುತ್ತಿರುವ. परि + त्यज (हानौ) "शतृ" (३-२-१२४)।

**परित्यजन ಪರಿತ್ಯಜನ** (न०) ತ್ಯಜಿಸುವುದು, ತೊರೆದು ಬಿಡುವುದು. परि+त्यज (हानौ) "ल्युट्" (३-३-११५)।

**परित्याग ಪರಿತ್ಯಾಗ** (पुं०) ತ್ಯಜಿಸುವುದು, ತೊರೆದುಬಿಡು ವುದು. परि + त्यज (हानौ) "घञ्" (३-३-१८)। "गुरोरप्यवलिप्तस्य कार्याकार्यमजानतः। उत्पथं प्रतिपन्नस्य परित्यागो विधीयते"।

**परित्याज्य ಪರಿತ್ಯಾಜ್ಯ** (वि०) ಬಿಡಲು ಯೋಗ್ಯವಾದ, ವರ್ಜಿಸಲು ಅರ್ಹವಾದ. परि + त्यज (हानौ) "ण्यत्" (३-१-१२४)।

**परित्रस्त ಪರಿತ್ರಸ್ತ** (वि०) ಹೆದರಿದ, ಅಂಜಿದ, ಭಯ ಗೊಂಡ. परि + त्रसी (उद्वेगे) "क्तः" (३-४-७२)। "व्यरमत् प्रधनाद्यस्मात् परित्रस्तः सहस्रदृक्" भट्टि० ८-५३।

**परित्राण ಪರಿತ್ರಾಣ** (न०) 1. ರಕ್ಷಣೆ, ಕಷ್ಟದಿಂದ ಪಾರು ಮಾಡುವುದು. परि + त्रैङ् (पालने) "ल्युट्" (३-३-११५)। "परित्राणाय साधूनां विनाशाय च दुष्कृताम्। धर्मसंस्थापनार्थाय संभवामि युगे युगे" गीता ४-८। 2. ಆಸರೆ, ಮರೆ. परि + त्रैङ् (पालने) कर० "ल्युट्" (३-३-११७)। "परित्राणमविन्दन्ती जानकी जीवितं त्यजेत्" रामा०।

**परित्राणी ಪರಿತ್ರಾಣೀ** (स्त्री०) ನೀರಾಮೆ ಬಳ್ಳಿ. "परि-त्राण्यां त्रायमाणा त्रायन्ती बलभद्रिका" वैज०।

**परित्रात ಪರಿತ್ರಾತ** (वि०) ರಕ್ಷಿಸಲ್ಪಟ್ಟ, ಕಷ್ಟದಿಂದ ಪಾರು ಮಾಡಲ್ಪಟ್ಟ. परि+त्रैङ् (पालने) "क्तः" (३-२-१०२)।

**परित्रातृ ಪರಿತ್ರಾತೃ** (वि०) ರಕ್ಷಿಸುವವನು, ಕಷ್ಟದಿಂದ ತಪ್ಪಿಸುವವನು. परि+त्रैङ् (पालने) "तृच्" (३-१-१३३)।

**परिदंश ಪರಿದಂಶ** (पुं०) ಯುದ್ಧಕವಚ, ಕಾಲಿನಿಂದ ತಲೆಯವರೆಗೂ ಮುಚ್ಚುವ ಕವಚ.

**परिदंशित ಪರಿದಂಶಿತ** (वि०) ಯುದ್ಧಕವಚವನ್ನು ತೊಟ್ಟಿ ರುವ. परिदंशोऽस्य सञ्जातः "इतच्" (५-२-३६)।

**परिदर्शन ಪರಿದರ್ಶನ** (न०) ಚೆನ್ನಾಗಿ ಯೋಚಿಸಿ ನೋಡು ವುದು, ವಿವೇಚನೆಯಿಂದ ನೋಡುವುದು.

**परिदान ಪರಿದಾನ** (न०) 1. ವಸ್ತುವಿನ ಬದಲಾವಣೆ, ಒಂದು ವಸ್ತುವನ್ನು ಕೊಟ್ಟು ಬೇರೊಂದು ವಸ್ತುವನ್ನು ಪಡೆಯುವುದು. परि + डु दाञ् (दाने) "ल्युट्" (३-३-११५)। 2. ಪ್ರತ್ಯರ್ಪಣ, ತನ್ನಲ್ಲಿ ಒಬ್ಬನು ಇಟ್ಟಿದ್ದ ವಸ್ತುವನ್ನು ಹಿಂದಕ್ಕೆ ಕೊಡುವುದು.

**परिदायिन् ಪರಿದಾಯಿನ್** (पुं०) ಅಣ್ಣನು ಮದುವೆ ಯಾಗದಿರುವಾಗ ತಮ್ಮನಿಗೆ ಕನ್ಯೆಯನ್ನು ಕೊಟ್ಟು ಮದುವೆ ಮಾಡುವ ತಂದೆ. परित्यज्य शास्त्रं ददाति—परि + डु

दाव् (दाने) "णिनिः" (३-१-१३४)। "ज्येष्ठेऽनिर्विष्टे कनीयान् निर्विशन् परिवेत्ता भवति परिविन्नो ज्येष्ठः परिवेदनीया कन्या परिदायी दाता परिकर्ता याजकस्ते सर्वे पतिताः" हारीतः।

**परिदीपित ಪರಿದೀಪಿತ** (वि०) ಪ್ರಕಾಶಗೊಳಿಸಲ್ಪಟ್ಟ. परि + दीपी (दीप्तौ) + णिच् "क्तः" (३-२-१०२)। "परिदीपितदीर्घकाष्ठमुच्चैस्तरुवद्विश्वमुवोष जातवेदाः" माघ० २०-६१।

**परिदृष्ट ಪರಿದೃಷ್ಟ** (वि०) 1. ಸುತ್ತಲೂ ನೋಡಲ್ಪಟ್ಟ, ಚೆನ್ನಾಗಿ ನೋಡಲ್ಪಟ್ಟ. परि + दृशिर् (प्रेक्षणे) "क्तः" (३-२-१०२)। 2. ಚೆನ್ನಾಗಿ ಯೋಚಿಸಿ ನಿರ್ಣಯಿಸಲ್ಪಟ್ಟ, ವಿವೇಚನೆಯಿಂದ ನಿಶ್ಚಯಿಸಲ್ಪಟ್ಟ. "परिदृष्टपरावरस्तमीषद्विनयन् विष्णुपदीसुतो बभाषे" याद० १५-५५।

**परिदेवक ಪರಿದೇವಕ** (वि०) ಅಳುವ ಸ್ವಭಾವದವನು. परि+दिवु (परिकूजने)+णिच् "वुञ्" (३-२-१४७)। "कथंचित्परिदेवकः" भट्टि० ७-१३।

**परिदेवन ಪರಿದೇವನ** (न०) ಪ್ರಲಾಪ, ಗೋಳಾಟ. परि+दिवु (परिकूजने)+णिच् "ल्युट्" (३-३-११५)। "परिदेवनञ्च पाञ्चाल्याः वासुदेवस्य सन्निधौ। आश्वासनञ्च कृष्णस्य दुःखार्तायाः प्रकीर्तितम्" भा० आदि० १-१५३। परि + दिवु + णिच् "युच्" (३-३-१०७)। –देवना –ದೇವನಾ. "अव्यक्तादीनि भूतानि व्यक्तमध्यानि भारत। अव्यक्तनिधनान्येव तत्र का परिदेवना" गीता २-२८।

**परिदेवित ಪರಿದೇವಿತ** (न०) ಅಳುವುದು, ಪ್ರಲಾಪ. परि +दिवु (परिकूजने)+णिच् भावे "क्तः" (३-३-११४)। "व्यथाऽप्रियप्राप्तिविघातनिश्चयान्मृदूनि दूना परिदेवितानि सा" नैष० ९-८७।

**परिदेविन् ಪರಿದೇವಿನ್** (वि०) ಅಳುವ ಸ್ವಭಾವದ. परि+दिवु (परिकूजने)+णिच् "घिनुण्" (३-२-१४२)। "कुर्वन्ति परिसारिण्यो विद्युतः परिदेविनम्" भट्टि० ७-७।

**परिधान ಪರಿಧಾನ** (न०) 1. ಉಡುವ ಬಟ್ಟೆ, ಹೊಕ್ಕಳಿನಿಂದ ಕೆಳಗೆ ಧರಿಸುವ ವಸ್ತ್ರ. परिधीयते — परि + डुधाञ् (धारणपोषणयोः) कर्म० "ल्युट्" (३-३-११३)। "निशान्तनारीपरिधानधूननस्फुटागसाप्यूरुषु लोलचक्षुषः" माघ० १-६१। 2. ವಸ್ತ್ರ, ಬಟ್ಟೆ. "वीक्ष्य रन्तुमनसः सुरनारीरात्तचित्रपरिधानविभूषाः" किरा० ९-१। 3. ವಸ್ತ್ರವನ್ನು ಉಡುವುದು, ಧರಿಸುವುದು. 4. ಆಭರಣಗಳನ್ನು ತೊಡುವುದು.

**परिधानीय ಪರಿಧಾನೀಯ** (वि०) ಉಡುವ ವಸ್ತ್ರ, ಉಡಲು ಅರ್ಹವಾದ ವಸ್ತ್ರ. परि +डु धाञ् (धारणपोषणयोः) "अनीयर्" (३-१-९६)।

**परिधाय ಪರಿಧಾಯ** (पुं०) 1. ಪರಿಜನ, ಸೇವಕ, ಆಳು. परि+डु धाञ् (धारणपोषणयोः) "घञ्" (३-३-१९)। 2. ಜಲಸ್ಥಾನ, ಜಲಾಶಯ, ನೀರು ಶೇಖರಿಸುವ ಸ್ಥಳ. 3. ಪಿರ್ರೆ, ನಿತಂಬ. ಜಲಸ್ಥಾನಕ್ಕೆ ಬದಲಾಗಿ ಜನಸ್ಥಾನವೆಂದೂ ಕೆಲವು ಕೋಶಕಾರರು ಹೇಳುವರು.

**परिधि ಪರಿಧಿ** (पुं०) 1. ಸೂರ್ಯಚಂದ್ರರ ಸುತ್ತಲೂ ಗುಂಡಾಗಿ ಕಾಣುವ ಪ್ರಭೆ. परिधीयतेऽनेन — परि + डुधाञ् (धारणपोषणयोः) "किः" (३-३-९२)। "मुखविधुमदसीयं सेवितुं लम्बमानः शशिपरिधिरिवोच्चैर्मण्डलस्तेन तेने" नैष० २-१०८। 2. ಯಾಗಾಗ್ನಿಯ ಸುತ್ತಲೂ ಇಡುವ ಪಲಾಶ (ಮುತ್ತುಗ) ಮೊದಲಾದ ಸಮಿತ್ತು. 3. ಯಜ್ಞದ ಪಶುವನ್ನು ಕಟ್ಟಲು ನೆಡುವ ಪಲಾಶ ಮೊದಲಾದ ಮರದ ಕಂಬ. 4. ಪ್ರಾಕಾರ, ಸುತ್ತುಗೋಡೆ. 5. ಬೇಲಿ. "परिधिर्यज्ञिये काष्ठे प्राकारे परिवेषणे" वैज०। "परिधिर्यज्ञियतरोः शाखायामुपसूर्यके" अम०। (न०) 6. ಧರಿಸುವ ವಸ್ತ್ರ. परि+धाञ् कर्म० "किः"। "मेघश्यामः कनकपरिधिः कर्णविद्योतविद्युन्मूर्ध्नि भ्राजद्विलुलितकचः स्रग्धरो रक्तनेत्रः" भाग० ८-७-१७।

**परिधिस्थ ಪರಿಧಿಸ್ಥ** (पुं०) 1. ಸೈನ್ಯದ ಸುತ್ತಲೂ ಇರುವ ಕಾವಲುಗಾರ, ಪಹರೆಯವನು. परिधौ तिष्ठति — परि +ष्ठा (गतिनिवृत्तौ) "कः" (३-२-४)। 2. ಯುದ್ಧದಲ್ಲಿ ರಾಜನ ರಕ್ಷಣೆಗಾಗಿ ಸುತ್ತಲೂ ನಿಲ್ಲುವ ಸೈನ್ಯ.

**परिधूसर ಪರಿಧೂಸರ** (वि०) 1. ಸಂಪೂರ್ಣವಾಗಿ ನರೆತಿರುವ, ಬೂದಿಬಣ್ಣದ. परितो धूसरः। 2. ಮಲಿನವಾದ. "वसने परिधूसरे वसाना नियमक्षाममुखी धृतैकवेणिः" शाकु० ७-२१।

**परिधेय ಪರಿಧೇಯ** (न०) ಉಡುವ ವಸ್ತ್ರ, ಅಧೋವಸ್ತ್ರ. परि+डु धाञ् (धारणपोषणयोः) "यत्" (३-१-९७)।

**परिनिष्ठा ಪರಿನಿಷ್ಠಾ** (स्त्री०) 1. ಸಂಪೂರ್ಣ ಜ್ಞಾನ, ನಿಷ್ಪೃಷ್ಟವಾದ ಜ್ಞಾನ. परि+नि+ष्ठा (गतिनिवृत्तौ) "अङ्" (३-३-१०६)। 2. ಕೊನೆ, ಸಮಾಪ್ತಿ.

**परिनिष्ठापित ಪರಿನಿಷ್ಠಾಪಿತ** (वि०) ಸಂಪೂರ್ಣಗೊಳಿಸಲ್ಪಟ್ಟ, ಪೂರ್ತಿಮಾಡಲ್ಪಟ್ಟ. परि + नि + ष्ठा (गतिनिवृत्तौ) + णिच् "क्तः" (३-२-१०२)। "निवृत्तचौलकर्मणोस्तयोस्त्रयीवर्जमितरास्तिस्रो विद्याः सावधानेन परिनिष्ठापिताः" उ० रा० २।

**परिनिष्ठित ಪರಿನಿಷ್ಠಿತ** (वि०) ಕೊನೆಯ ಘಟ್ಟವನ್ನು ಮುಟ್ಟಿರುವ, ಸಂಪೂರ್ಣತೆಯನ್ನು ಪಡೆದ, ಪರಿಷ್ಕೃತವಾದ ಒಂದು ಆಕಾರವನ್ನು ಹೊಂದಿದ. परिनिष्ठाऽस्य संजातः "इतच्" (५-२-३६)। "अपरिनिष्ठितस्योपदेशस्य प्रकाशनमन्याय्यम्" माल० १।

**परिन्यास ಪರಿನ್ಯಾಸ** (पुं०) ನಾಟಕದಲ್ಲಿ ಮುಖ್ಯಫಲಕ್ಕೆ ಮೂಲಭೂತವಾದ ಬೀಜವು ವಿಸ್ತಾರವಾಗಿ ಬೆಳೆದು ಬಂದುದರ ಸೂಚನೆ. ಇದು ಮುಖಸಂಧಿಯ ಒಂದು ಅಂಗ. "तन्निष्पत्तिः परिन्यासः" सा० द० ६-८४।

**परिपक्व ಪರಿಪಕ್ವ** (वि०) 1. ಚೆನ್ನಾಗಿ ಮಾಗಿರುವ. परि + डु पचष् (पाके) "क्तः" (३-२-१०२)। "प्रफुल्ललोध्रः परिपक्वशालिः" ऋतुसं० ४-१। 2. ಚೆನ್ನಾಗಿ ಬೇಯಿಸಲ್ಪಟ್ಟ, ಚೆನ್ನಾಗಿ ಪಚನವಾಗಿರುವ (ಅನ್ನ). 3. ಚೆನ್ನಾಗಿ ಸುಡಲ್ಪಟ್ಟ (ರೊಟ್ಟಿ). 4. ಚೆನ್ನಾಗಿ ಉಳಲ್ಪಟ್ಟ (ಭೂಮಿ). 5. ಚೆನ್ನಾಗಿ ಬಲಿತಿರುವ, ಪೂರ್ತಿಯಾಗಿ ಬೆಳವಣಿಗೆ ಹೊಂದಿದ, ಚೆನ್ನಾಗಿ ವಿಕಾಸಹೊಂದಿದ (ಬುದ್ಧಿ). 6. ಚೆನ್ನಾಗಿ ಜೀರ್ಣವಾದ (ಆಹಾರ).

**परिपण ಪರಿಪಣ** (न०) ಮೂಲಧನ, ಬಂಡವಾಳ. परि + पण (व्यवहारे स्तुतौ च) "घः" (३-३-११८)। "नीवी परिपणं मूलधनम्" अम०।

**परिपणन ಪರಿಪಣನ** (न०) ಜೂಜಿನಲ್ಲಿ ಒತ್ತೆ ಇಡುವುದು, ಪಂದ್ಯವಾಗಿ ಇಡುವುದು. परि + पण (व्यवहारे स्तुतौ च) "ल्युट्" (३-३-११५)।

**परिपणित ಪರಿಪಣಿತ** (वि०) ಜೂಜಿನಲ್ಲಿ ಒತ್ತೆ ಇಡಲ್ಪಟ್ಟ, ಪಂದ್ಯವಾಗಿ ಇಡಲ್ಪಟ್ಟ. परि + पण (व्यवहारे स्तुतौ च) "क्तः" (३-२-१०२)। "सततमनभिभाषणं मया ते परिपणितं भवतीमनाययन्त्या" माघ० ७-९।

**परिपत् ಪರಿಪತ್** )(पुं०) ಪಂಕ, ಕೆಸರು. "दारिपत्परिपत्पङ्कचिकिलाश्च निषद्वरः" वैज०।

**परिपतत् ಪರಿಪತತ್** (वि०) ಧಾವಿಸುತ್ತಿರುವ, ಸುತ್ತಲೂ ಹಾರಾಡುತ್ತಿರುವ. परि + पत्लृ (गतौ) "शतृ" (३-२-१२४)। "त्रासाकुलः परिपतत्परितो निकेतान्" माघ० ५-२६। स्त्रियां "ङीप्" (४-१-६)। **–पतन्ती –ಪತಂತೀ.** "दधति परिपतन्त्यो जालवातायनेभ्यः" माघ० ११-५०।

**परिपतन ಪರಿಪತನ** (न०) ಸುತ್ತಲೂ ಹಾರಾಡುವುದು. परि + पत्लृ (गतौ) "ल्युट्" (३-३-११५)।

**परिपन्थ ಪರಿಪಂಥ** (पुं०) ವೈರಿ, ಹಗೆ, ಶತ್ರು. पन्थानं वर्जयित्वा तिष्ठति — परि + पथि (गतौ) "अच्" (३-१-१३४)। पन्थादेशः निपा०।

**परिपन्थक ಪರಿಪಂಥಕ** (पुं०) ವೈರಿ, ಹಗೆ, ಶತ್ರು. परिपन्थयति—परि+पथि (गतौ) "ण्वुल्" (३-१-१३३)। "हतो दुर्योधनः पापो राज्यस्य परिपन्थकः" भा० सौप्तिक० १६-२७।

**परिपन्थिन् ಪರಿಪಂಥಿನ್** (पुं०) ವೈರಿ, ಹಗೆ, ಶತ್ರು. परि दोषाख्याने पन्थयितुं शीलः — परि + पथि (गतौ) + णिच् "णिनिः" (३-२-७८)।

**परिपवन ಪರಿಪವನ** (पुं०) ಒಂದರಿ, ಜಲ್ಲಡಿ. परिपूयतेऽनेन—परि+पूञ् (पवने) कर० "ल्युट्" (३-३-११७)।

**परिपश्यत् ಪರಿಪಶ್ಯತ್** (वि०) ಸುತ್ತಲೂ ನೋಡುತ್ತಿರುವ, ಎಲ್ಲಾ ಕಡೆಯಲ್ಲೂ ನೋಡುತ್ತಿರುವ. परि + दृशिर् (प्रेक्षणे) "शतृ" (३-२-१२४)। "कामनीयकमधःकृतकामं काममक्षिभिरवेक्ष्य तदीयम्" नैष० ५-६४।

**परिपाक ಪರಿಪಾಕ** (पुं०) 1. ಚೆನ್ನಾಗಿ ಬೇಯುವಿಕೆ. परि+डु पचष् (पाके) "घञ्" (३-३-१८)। "इत्यद्भुतं केवलवह्निपक्वमांसेन मत्स्यः परिपाकमेति" भावप्र०। 2. ನೈಪುಣ್ಯ, ಜಾಣತನ. "वीक्ष्य तस्य विनये परिपाकं पाकशासनपदं स्पृशतोऽपि" नैष० ५-२०। 3. ಚೆನ್ನಾಗಿ ಜೀರ್ಣವಾಗುವುದು, ಅರಗುವುದು. 4. ಚೆನ್ನಾಗಿ ಬಲಿಯುವುದು, ಮಾಗುವುದು, ಹಣ್ಣಾಗುವುದು. "परिपाकपिशङ्गलतारजसा रोधश्चकास्ति कपिशं गलता" माघ० ४-४८। 5. ಫಲಕಾಲ, "त्वमशक्नुवन्नशुभकर्मनिरत परिपाकदारुणम्" माघ० १५-३१। 6. ಕಾರ್ಯದ ಫಲ, ಯತ್ನದ ಪರಿಣಾಮ. "क्षमायाः स क्षेत्रं गुणमणिगणानामपि खनिः प्रपन्नानां मूर्तः सुकृतपरिपाको जनिमताम्" म० वी० ८-३३। उपसर्गस्य वा दीर्घः (६-३-१२२)। **परीपाकः –ಪರೀಪಾಕಃ.** "सुचरितपरीपाकात्प्राप्तश्चिरस्य समागमः" म० वी० ४-२८।

**परिपाटल ಪರಿಪಾಟಲ** (वि०) ಮಾಸಲು ಕೆಂಪುಬಣ್ಣದ. "परिपाटलाब्जदलचारुणासकृच्चलिताङ्गुलीकिसलयेन पाणिना" माघ० १३-४२।

**परिपाटि ಪರಿಪಾಟಿ** (स्त्री०) 1. ಅನುಕ್ರಮ, ಒಂದಾದ ಮೇಲೊಂದು, ಒಂದು ಕ್ರಮ. परि+पट (गतौ)+णिच् "इः" (उ० ४-१३१)। 2. ಪ್ರಕಾರ, ರೀತಿ.

**परिपाठ ಪರಿಪಾಠ** (पुं०) ತಪಸೀಲು, ಸಂಪೂರ್ಣ ವಿವರ.

**परिपार्श्व ಪರಿಪಾರ್ಶ್ವ** (न०) ಸಮೀಪ, ಹತ್ತಿರ. "अथो वयस्यां परिपार्श्ववर्तिनीम्" कुमा० ५-५१।

**परिपालन ಪರಿಪಾಲನ** (न०) 1. ಪಾಲಿಸುವುದು, ಕಾಪಾಡುವುದು. परि + पाल (रक्षणे) + णिच् भावे "ल्युट्" (३-३-११५)। "औत्सुक्यमात्रमवसाययति प्रतिष्ठा क्लिश्नाति लब्धपरिपालनवृत्तिरेनम्" शाकु० ५-६। 2. ಪೋಷಿಸುವುದು. "उत्पादनमपत्यस्य जातस्य परिपालनम्" मनु० ९-२७।

**परिपालनीय ಪರಿಪಾಲನೀಯ** (वि०) 1. ಪಾಲಿಸಲ್ಪಡುವ, ರಕ್ಷಿಸಲ್ಪಡುವ. परि + पाल (रक्षणे) + णिच् "अनीयर्" (३-१-९६)। 2. ಪಾಲಿಸಬೇಕಾದ, ಕಾಪಾಡಬೇಕಾದ. 3. ಪಾಲಿಸಲು ಯೋಗ್ಯನಾದ, ಕಾಪಾಡಲು ಯೋಗ್ಯನಾದ. "तव्यः" (३-१-९६)। **–पालयितव्यः –ಪಾಲಯಿತವ್ಯಃ.**

**परिपालयत् ಪರಿಪಾಲಯತ್** (वि०) ಪಾಲಿಸುತ್ತಿರುವ, ರಕ್ಷಿಸುತ್ತಿರುವ. परि + पाल (रक्षणे) + णिच् "शतृ" (३-२-१२४)। स्त्रियां "ङीप्" (४-१-६)। **–यन्ती –ಯಂತೀ.**

**परिपालयितृ ಪರಿಪಾಲಯಿತೃ** (वि०) ಕಾಪಾಡುವವನು. परि + पाल (रक्षणे) + णिच् "तृच्" (३-१-१३३)। स्त्रियां "ङीप्" (४-१-५)। **–यित्री –ಯಿತ್ರೀ.**

**परिपालित ಪರಿಪಾಲಿತ** (वि०) 1. ಪೋಷಿಸಲ್ಪಟ್ಟ, ಸಾಕಲ್ಪಟ್ಟ. परि+पाल (रक्षणे)+णिच् "क्तः" (३-२-१०२)। "शिरसा विधृता नित्यं स्नेहेन परिपालिताः। केशा अपि विरज्यन्ते निःस्नेहाः किं न सेवकाः" पञ्चतं० १-९०। 2. ಕಾಪಾಡಲ್ಪಟ್ಟ.

**परिपिष्टक ಪರಿಪಿಷ್ಟಕ** (न०) ಸೀಸಲೋಹ. परि + पिष्लृ (सञ्चूर्णने) "कः" (३-२-१०२)। संज्ञायां "कन्"।

**परिपीत ಪರಿಪೀತ** (वि०) ಚೆನ್ನಾಗಿ ಕುಡಿಯಲ್ಪಟ್ಟ. परिपीयते — परि + पा (पाने) "क्तः" (३-२-१०२)। ईत्वम् (३-४-६६)। "परिपीतधूमवर्तिरुपस्पृश्य च गृहीतताम्बूलः" काद०।

**परिपुञ्ज्यमान ಪರಿಪುಂಜ್ಯಮಾನ** (वि०) ಒಂದು ಗುಪ್ಪೆಯಾಗಿ ಮಾಡಲ್ಪಡುತ್ತಿರುವ, ಎಲ್ಲಾ ಸೇರಿ ಒಂದು ರಾಶಿಯಾಗಿ ಮಾಡಲ್ಪಡುತ್ತಿರುವ. परि + पिजि (हिंसाबलादाननिकेतनेषु) कर्म० "शानच्" (३-२-१२४)। "वपुषा पुराणपुरुषः पुरः क्षितौ परिपुञ्ज्यमानपृथुहारयष्टिना। भुवनैर्नतोऽपि विहितात्मगौरवः प्रणनाम नाम तनयं पितृष्वसुः" माघ० १३-८।

**परिपूत ಪರಿಪೂತ** (वि०) 1. ಬಹಳ ಶುದ್ಧವಾದ. परि+पूञ् (पवने) "क्तः" (३-४-७२)। "रेवतीवदनोच्छिष्टपरिपूतपुटे दृशौ" माघ० २-१६। 2. ತೂರಿದ ಧಾನ್ಯ, ತೂರಿದ ನಂತರ ರಾಶಿಹಾಕಿದ ಧಾನ್ಯ.

**परिपूजन ಪರಿಪೂಜನ** (न०) ಪೂಜಿಸುವುದು, ಆರಾಧಿಸುವುದು. परि+पूज (पूजने)+णिच् "ल्युट्" (३-३-११५)।

**परिपूजित ಪರಿಪೂಜಿತ** (वि०) ಚೆನ್ನಾಗಿ ಪೂಜೆಮಾಡಲ್ಪಟ್ಟ, ಚೆನ್ನಾಗಿ ಆರಾಧಿಸಲ್ಪಟ್ಟ. परि + पूज (पूजने) + णिच् "क्तः" (३-२-१०२)।

**परिपूरण ಪರಿಪೂರಣ** (न०) ತುಂಬುವುದು. परि+पूरी (आप्यायने) "ल्युट्" (३-३-११५)। "त्वक्साररन्ध्रपरिपूरणलब्धगीतिरस्मिन्नसौ मृदितपक्ष्मलरल्लकाङ्गः" माघ० ४-६१।

**परिपूरयत् ಪರಿಪೂರಯತ್** (वि०) ತುಂಬುತ್ತಿರುವ, ಪೂರ್ತಿಮಾಡುತ್ತಿರುವ. परि + पूरी (आप्यायने) + णिच् "शतृ" (३-२-१२४)। स्त्रियां "ङीप्" (४-१-६)। **–पूरयन्ती –ಪೂರಯಂತೀ.**

**परिपूरित ಪರಿಪೂರಿತ** (वि०) ತುಂಬಲ್ಪಟ್ಟ. परि+पूरी (आप्यायने)+णिच् "क्तः" (३-२-१०२)। "रुग्णोरुरोधःपरिपूरिताम्भसः समस्थलीकृत्य पुरातनीर्नदीः" माघ० १२-६०।

**परिपूरितवत् ಪರಿಪೂರಿತವತ್** (वि०) ತುಂಬಿದವನು, ಭರ್ತಿಮಾಡಿದವನು. परि + पूरी (आप्यायने) + णिच् "क्तवतुः" (३-२-१०२)।

**परिपूरिन् ಪರಿಪೂರಿನ್** (वि०) ತುಂಬುವವನು, ಭರ್ತಿಮಾಡುವವನು. परि + पूरी (आप्यायने) + णिच् "णिनिः" (३-१-१३४)। "प्रापे रूपी पुराऽरेपाः परिपूरी परः परैः" माघ० १९-९४।

**परिपूर्ण ಪರಿಪೂರ್ಣ** (वि०) 1. ತುಂಬಿರುವ, ಭರ್ತಿಯಾಗಿರುವ. परि + पूरी (आप्यायने) "क्तः" (३-४-७२)। "रुचिमिन्दुदले करोत्यजः परिपूर्णेन्दुरुचिर्महीपतिः" माघ० १६-७१। 2. ಚೆನ್ನಾಗಿ ತುಂಬಲ್ಪಟ್ಟ, ಭರ್ತಿಮಾಡಲ್ಪಟ್ಟ. परि + पूरी + णिच् "क्तः" (३-२-१०२)।

**परिपूर्णता ಪರಿಪೂರ್ಣತಾ** (स्त्री०) ತುಂಬಿರುವಿಕೆ, ಭರ್ತಿಯಾಗಿರುವಿಕೆ. परिपूर्णस्य भाव: "तल्" (५-१-११९)। "त्व:" (५-१-११९)। **–पूर्णत्वम् –ಪೂರ್ಣತ್ವಮ್.** "दृश्यते परिपूर्णत्वं मुखचन्द्रस्य ते सखि" उद्भट:।

**परिपूर्ति ಪರಿಪೂರ್ತಿ** (स्त्री०) ತುಂಬಿರುವಿಕೆ, ಭರ್ತಿಯಾಗಿರುವಿಕೆ. परि+पूरी (आप्यायने) "क्तिन्" (३-३-९४)।

**परिपेलव ಪರಿಪೇಲವ** (न०) 1. ಒಂದು ಜಾತಿಯ ಕೊನ್ನಾರಿ ಗೆಡ್ಡೆ, ಕೆಂಪುಬಣ್ಣದ ಕೊನ್ನಾರಿ. परित: पेलवं मृदुता यस्य। (वि०) 2. ಬಹಳ ಕೋಮಲವಾದ.

**परिपोषण ಪರಿಪೋಷಣ** (न०) ಕಾಪಾಡುವುದು, ಸಾಕುವುದು. परि + पुष (पुष्टौ) "ल्युट्" (३-३-११५)।

**परिपोषणीय ಪರಿಪೋಷಣೀಯ** (वि०) 1. ಅವಶ್ಯವಾಗಿ ಸಾಕಬೇಕಾದ. 2. ಸಾಕಲ್ಪಡುವ. परि + पुष (पुष्टौ) "अनीयर्" (३-१-९६)। "आदौ न वा प्रणयिनां प्रणयो विधेय: दत्तोऽथवा प्रतिदिनं परिपोषणीय:" पञ्चतं० १-२६८।

**परिपोषयत् ಪರಿಪೋಷಯತ್** (वि०) ಕಾಪಾಡುತ್ತಿರುವ, ಸಾಕುತ್ತಿರುವ. परि + पुष (पुष्टौ) + णिच् "शतृ" (३-२-१२४)। स्त्रियां "ङीप्" (४-१-६)। **–यन्ती –ಯಂತೀ.**

**परिप्रश्न ಪರಿಪ್ರಶ್ನ** (पुं०) ಯುಕ್ತವಾಗಿ ಪ್ರಶ್ನೆಮಾಡುವುದು, ವಿಚಾರಪೂರ್ವಕ ಯೋಗ್ಯರೀತಿಯಲ್ಲಿ ಪ್ರಶ್ನೆಮಾಡುವುದು. परित: प्रश्न:। "तद्विद्धि प्रणिपातेन परिप्रश्नेन सेवया" गीता ४-३४।

**परिप्लव ಪರಿಪ್ಲವ** (पुं०) 1. ತೇಲುವುದು, ಈಜುವುದು. परि+प्लुङ् (गतौ) "अप्" (३-३-५७)। 2. ಪ್ರವಾಹ, ನೆರೆ. 3. ದೋಣಿ, ಹರಿಗೋಲು. (वि०) 4. ಚಂಚಲವಾದ, ಅಲುಗಾಡುತ್ತಿರುವ. 5. ಚಲಿಸುತ್ತಿರುವ, ಸಂಚರಿಸುತ್ತಿರುವ. "मत्कुणाविव पुरा परिप्लवौ सिन्धुनाथशयने निषेदुष:" माघ० १४-६८। 6. ತೇಲುತ್ತಿರುವ, ಈಜಾಡುತ್ತಿರುವ. परि + प्लुङ् "अच्" (३-१-१३४)।

**परिप्लुत ಪರಿಪ್ಲುತ** (वि०) 1. ನೀರಿನಲ್ಲಿ ಮುಳುಗಿರುವ, ಪ್ರವಾಹಕ್ಕೆ ಸಿಕ್ಕಿರುವ. परि + प्लुङ् (गतौ) "क्त:" (३-४-७२)। 2. ಸಹಿಸಲಶಕ್ಯವಾದ ಕಷ್ಟದಲ್ಲಿ ಸಿಲುಕಿರುವ, ಕಷ್ಟದಲ್ಲಿ ಮುಳುಗಿರುವ. 3. ಒದ್ದೆಯಾಗಿರುವ, ತೇವವಾಗಿರುವ, ನೆನೆದಿರುವ. 4. ಸ್ನಾನಮಾಡಿದ. (स्त्री०) **–प्लुता –ಪ್ಲುತಾ.** 5. ಮದ್ಯ. 6. ಮೈಥುನ ಕಾಲದಲ್ಲಿ ವೇದನೆಯಿಂದ ಕೂಡಿದ ಯೋನಿ.

**परिप्लुष्ट ಪರಿಪ್ಲುಷ್ಟ** (वि०) ದಹಿಸಲ್ಪಟ್ಟ, ಸುಡಲ್ಪಟ್ಟ. परि + प्लुष (दाहे) "क्त:" (३-२-१०२)।

**परिबर्ह ಪರಿಬರ್ಹ** (पुं०) 1. ಸೇವಕ, ಅನುಚರ, ಆಳು, ಪರಿಜನ. परि+बर्ह (प्राधान्ये) "अच्" (३-१-१३४)। "इयं प्रचुरपरिबर्हया भवत्या संवर्ध्यताम्" दशकु०। 2. ರಾಜಯೋಗ್ಯವಾದ ವಸ್ತು, ಛತ್ರ ಚಾಮರ ಮೊದಲಾದುದು. परि + बर्ह कर्म० "घञ्" (३-३-१९)। 3. ಮನೆಯ ಉಪಕರಣಗಳು, ಕುರ್ಚಿ ಬೆಂಚು ಮೇಜು ಮೊದಲಾದುವು.

**परिबर्हण ಪರಿಬರ್ಹಣ** (न०) 1. ಭೂಷಣ, ಒಡವೆ. 2. ಪೂಜೆ, ಸೇವೆ. 3. ಬೆಳವಣಿಗೆ, परि + बृह (वृद्धौ) "ल्युट्" (३-३-११५)।

**परिबर्हवत् ಪರಿಬರ್ಹವತ್** (वि०) 1. ಸೇವಕರೊಡನೆ ಕೂಡಿದ. 2. ಛತ್ರ ಚಾಮರಾದಿಗಳಿಂದ ಕೂಡಿದ. 3. ಕುರ್ಚಿ ಬೆಂಚು ಮೇಜು ಮೊದಲಾದ ಗೃಹೋಪಕರಣಗಳಿಂದ ಕೂಡಿರುವ. परिबर्होऽस्यास्ति "मतुप्" (५-२-९४)। "वेश्मानि राम: परिबर्हवन्ति विश्राण्य सौहार्दनिधि: सुहृद्भ्य:" रघु० १४-१५।

**परिबृढ ಪರಿಬೃಢ** (पुं०) 1. ಅಧಿಪತಿ, ಯಜಮಾನ, ಸ್ವಾಮಿ, ಪ್ರಭು. परि + बृह बृहि (वृद्धौ) "क्त:"। निष्ठातकारस्य ढकार: हकारस्य लोपश्च निपा० (७-२-२१)। "किं भुव: परिबृढा न विवोढुं तत्र तामुपगता विवदन्ते" नैष० ५-४२। 2. ರಾಜ, ದೊರೆ.

**परिभव ಪರಿಭವ** (पुं०) 1. ಅವಮಾನ, ಮುಖಭಂಗ. परि+भू (सत्तायाम्) "अप्" (३-३-५७)। "पराक्रम: परिभवे वैयात्यं सुरतेष्विव" माघ० २-४४। 2. ತಿರಸ್ಕಾರ, ಅಗೌರವ, ಅವಮರ್ಯಾದೆ. 3. ಯುದ್ಧದಲ್ಲಾಗುವ ಸೋಲು, ಉತ್ಸಾಹಭಂಗ. 4. ಸುತ್ತಲೂ ಇರುವುದು.

**परिभवन ಪರಿಭವನ** (न०) ಅವಮಾನಪಡುವುದು, ತಿರಸ್ಕಾರ ಹೊಂದುವುದು. परि + भू (सत्तायाम्) भावे "ल्युट्" (३-३-११५)।

**परिभवनीय ಪರಿಭವನೀಯ** (वि०) ಅವಮಾನಪಡಲು ಯೋಗ್ಯನಾದವನು. परि + भू (सत्तायाम्) "अनीयर्" (३-१-९६)। "देवि, न मां समानविद्यया परिभवनीयमवगन्तुमर्हसि" माल० १।

**परिभविन् ಪರಿಭವಿನ್** (वि०) ಅವಮಾನಗೊಳಿಸುವ ಸ್ವಭಾವದ. परि+भू (सत्तायाम्) "इनि:" (३-२-१५७)।

"परपरिभवि तेजस्तन्वतामाशु कर्तुं प्रभवति हि विपक्षोच्छेदमग्रेसरोऽपि" माघ० ११-२५।

**परिभाव ಪರಿಭಾವ** (पुं०) ಅವಮಾನ, ಮುಖಭಂಗ. परि + भू (सत्तायाम्) "घञ्" (३-३-५५)। "अस्य वनशुन इवापचितिः परिभाव एव भवतां भुवोऽधिपाः" माघ० १५-३४। उपसर्गस्य वा दीर्घः (६-३-१२२)। परीभावः ಪರೀಭಾವ.

**परिभावना ಪರಿಭಾವನಾ** (स्त्री०) ಆಲೋಚಿಸುವುದು, ಚಿಂತಿಸುವುದು, ಧ್ಯಾನಮಾಡುವುದು. परि + भू (सत्तायाम्)+णिच् "युच्" (३-३-१०७)। "अनेकसंवत्सरातिक्रमेऽपि प्रतिक्षणपरिभावनास्पष्टनिर्भासः प्रत्यग्र इव न मे दारुणो दुःखसंवेगः प्रशाम्यति" उ० रा० ४।

**परिभावित ಪರಿಭಾವಿತ** (वि०) 1. ಗಣನೆಗೆ ತೆಗೆದುಕೊಳ್ಳಲ್ಪಟ್ಟ, ಸೇರಿಸಿಕೊಳ್ಳಲ್ಪಟ್ಟ. परि + भू (सत्तायाम्) + णिच् "क्तः" (३-२-१०२)। 2. ಅವಮಾನಗೊಳಿಸಲ್ಪಟ್ಟ.

**परिभाविन् ಪರಿಭಾವಿನ್** (वि०) 1. ಅವಮಾನಗೊಳಿಸುವ, ತಿರಸ್ಕರಿಸುವ. परि + भू (सत्तायाम्) "णिनिः" (३-१-१३४)। स्त्रियां "ङीप्" (४-१-५)। **-भाविनी -ಭಾವಿನೀ.** "आः अतिथिपरिभाविनि" शाकु० ४। 2. ವಿರೋಧಿಸುವ, ಉಲ್ಲಂಘಿಸುವ. "वैद्ययत्नपरिभाविनं गदम्" रघु० १९-५३।

**परिभावुक ಪರಿಭಾವುಕ** (वि०) ತಿರಸ್ಕರಿಸುವ. परि+भू (सत्तायाम्) "उकञ्" (३-२-१५४)। "सवितुः परिभावुकैर्मरीचीनचिराम्यक्तमतङ्गजाङ्गभाभिः" माघ० २०-६९।

**परिभाषण ಪರಿಭಾಷಣ** (न०) 1. ನಿಂದಾಪೂರ್ವಕ ವಾಗ್ದಂಡನೆ, ಆಕ್ಷೇಪಣೆ, ತಪ್ಪು ಹೊರಿಸಿ ಎಚ್ಚರಿಸುವುದು. परि + भाष (व्यक्तायां वाचि) "ल्युट्" (३-३-११५)। 2. ನಿಯಮ, ಕಟ್ಟಳೆ. "परिभाषणं सनिन्दोपालम्भे नियमेऽपि च" मेदि०।

**परिभाषा ಪರಿಭಾಷಾ** (स्त्री०) 1. ಮಾತು, ಭಾಷಣ, ಸಂವಾದ. परि + भाष (व्यक्तायां वाचि) "अः" (३-३-१०३)। 2. ನಿಂದಾಪೂರ್ವಕ ಕೋಪದ ಮಾತು. 3. ಟೀಕೆ, ವಿವರಣೆ, ಸ್ಪಷ್ಟಪಡಿಸುವಿಕೆ. 4. ಅವಯವಾರ್ಥವಿಲ್ಲದೆ ಸಮುದಾಯಾರ್ಥದಲ್ಲಿರುವ ಒಂದು ಸಂಜ್ಞೆ, -ಸಂಕೇತ. 5. ಶಾಸ್ತ್ರಕಾರರ ಒಂದು ಸಂಕೇತ, ಸಂಪೂರ್ಣ ಶಾಸ್ತ್ರಕ್ಕೂ ಅನ್ವಯಿಸುವ ವಿವರಣಪೂರ್ವಕವಾದ ಒಂದು ನಿಯಮ. "अनियमे नियमकारिणी परिभाषा"। "इको गुणवृद्धी" (१-१-३) ಇತ್ಯಾದಿ. ಗುಣವೃದ್ಧಿ ಶಬ್ದಗಳಿಂದ ಗುಣವೃದ್ಧಿಗಳನ್ನು ವಿಧಿಸುವ ಕಡೆ इकः ಎಂಬ ಷಷ್ಠ್ಯಂತಪದವು ಉಪಸ್ಥಿತವಾಗುವುದು ಇತ್ಯಾದಿ ನಿಯಮಗಳು ಸಂಪೂರ್ಣಶಾಸ್ತ್ರಕ್ಕೂ ಅನ್ವಯಿಸುವುದರಿಂದ ಇದಕ್ಕೆ "परिभाषा" ಎಂದು ಹೆಸರು. "परिभाषाह्येकदेशे स्थित्वा सर्वशास्त्रमभिज्वलयति दीपवत्" इति भाष्यकारः। "परितो व्यापृतां भाषां परिभाषां प्रचक्षते"। "प्रमितः प्रमिताक्षरापि सर्वं विषयं व्याप्तवती गता प्रतिष्ठाम्। न खलु प्रतिहन्यते कुतश्चित् परिभाषेव गरीयसी यदाज्ञा" माघ० १६-८०।

**परिभुक्त ಪರಿಭುಕ್ತ** (वि०) ಉಪಯೋಗಿಸಲ್ಪಟ್ಟ, ಅನುಭವಿಸಲ್ಪಟ್ಟ. परि + भुज (परिपालनाभ्यवहारयोः) "क्तः" (३-२-१०२)। "तदवितथमवादीर्यन्मम त्वं प्रियेति प्रियजनपरिभुक्तं यद्दुकूलं दधानः" माघ० ११-३३।

**परिभूत ಪರಿಭೂತ** (वि०) ತಿರಸ್ಕರಿಸಲ್ಪಟ್ಟ, ಅವಮಾನಗೊಳಿಸಲ್ಪಟ್ಟ. परि + भू (सत्तायाम्) "क्तः" (३-२-१०२)। "परिभूतं सुखरहितं कुलटापुत्रं च पापनिरतं च। जनयति नक्षत्रपतिः क्षितिसुतदृष्टो झषे शूरम्" सारा० २३-८१।

**परिभूति ಪರಿಭೂತಿ** (स्त्री०) 1. ಅನಾದರ, ತಿರಸ್ಕಾರ. 2. ಅವಮಾನ, ಅಗೌರವ. परि + भू (सत्तायाम्) "क्तिन्" (३-३-९४)।

**परिभूयमान ಪರಿಭೂಯಮಾನ** (वि०) ಅವಮಾನಗೊಳಿಸಲ್ಪಡುತ್ತಿರುವ. परि+भू "शानच्" (३-२-१२४)। "परित्रायेथां मामनेन दुर्विनीतेन दुष्टमधुकरेण परिभूयमानाम्" शाकु० १।

**परिभोग ಪರಿಭೋಗ** (पुं०) 1. ಸುಖ, ಸಂತೋಷಾನುಭವ. 2. ಸಂಭೋಗ, ಸ್ತ್ರೀಪುರುಷರ ಸಂಗಮ. परि+ भुज (परिपालनाभ्यवहारयोः) "घञ्" (३-३-१८)। "स सैन्यपरिभोगेन गजदानसुगन्धिना" रघु० ४-४५। "दर्पणेषु परिभोगदर्शिनीर्नर्मपूर्वमनुपृष्ठसंस्थितः" रघु० १९-२८।

**परिभ्रंश ಪರಿಭ್ರಂಶ** (पुं०) ಕೆಳಕ್ಕೆ ಬೀಳುವುದು, ಮೇಲಿನಿಂದ ಕಳಚಿ ಬೀಳುವುದು. परि + भ्रंशु (अवस्रंसने) "घञ्" (३-३-१८)। भावे "ल्युट्" (३-३-११५)। **-भ्रंशनम् -ಭ್ರಂಶನಮ್.** "नलस्य नृपते राज्यात्परिभ्रंशनम्"।

**परीवाद ಪರೀವಾದ** (पुं०) 'परिवाद" ಪದದ ಅರ್ಥ. वा दीर्घ: (६-३-१२२)। "परीवादं न कुर्वीत परीहासश्च पुत्रक" मार्क०।

**परीवार ಪರೀವಾರ** (पुं०) "परिवार" ಪದದ ಅರ್ಥ. वा दीर्घ: (६-३-१२२)।

**परीवाह ಪರೀವಾಹ** (पुं०) "परिवाह" ಪದದ ಅರ್ಥ. वा दीर्घ: (६-३-१२२)। "पूरोत्पीडे तटाकस्य परीवाहः प्रतिक्रिया" उ० रा० ३-२२।

**परीष्टि ಪರೀಷ್ಟಿ** (स्त्री०) 1. ಪರಿಚರ್ಯೆ, ಪೂಜೆ, ಸೇವೆ. परि + इष् (इच्छायाम्) "क्तिन्" (३-३-९४)। 2. ಅನ್ವೇಷಣೆ, ಹುಡುಕುವುದು, ವಿಚಾರಮಾಡುವುದು, ವಿಮರ್ಶಿಸುವುದು. 3. ಅಣಿಮಾದಿ ಅಷ್ಟವಿಧ ಸಿದ್ಧಿಗಳಲ್ಲೊಂದು. "परीष्टिः परिचर्यायां प्राकाम्येऽन्वेषणे स्त्रियाम्" मेदि०।

**परीसार ಪರೀಸಾರ** (पुं०) ಸುತ್ತಲೂ ಸಂಚರಿಸುವುದು. परि + सृ (गतौ) "घञ्" (३-३-१८)। वा दीर्घ: (६-३-१२२)।

**परीहार ಪರೀಹಾರ** (पुं०) "परिहार" ಪದದ ಅರ್ಥ. वा दीर्घ: (६-३-१२२)।

**परीहास ಪರೀಹಾಸ** (पुं०) "परिहास" ಪದದ ಅರ್ಥ. वा दीर्घ: (६-३-१२२)। "परीवादं न कुर्वीत परीहासञ्च पुत्रक" मार्क०।

**परु ಪರು** (पुं०) 1. ಪರ್ವತ, ಬೆಟ್ಟ. 2. ಸಮುದ್ರ. 3. ಸ್ವರ್ಗ. 4. ಗ್ರಂಥಿ, ಗೆಣ್ಣು. पॄ (पालनपूरणयोः) "उः" बाहु०। 5. ಅಂಗ, ಅವಯವ.

**परुका ಪರುಕಾ** (स्त्री०) ಒಂದು ಜಾತಿಯ ಬದನೆಕಾಯಿ.

**परुत् ಪರುತ್** (अव्य०) ಕಳೆದ ವರ್ಷ, ಹಿಂದಿನ ವರ್ಷ. पूर्वस्मिन् वत्सरे निपा० (५-३-२२)।

**परुत्न ಪರುತ್ನ** (वि०) ಕಳೆದ ವರ್ಷ ಉಂಟಾದ. परुत् "त्नः" (वा० ४-३-२३)।

**परुद्वार ಪರುದ್ವಾರ** (पुं०) ಅಶ್ವ, ಕುದುರೆ, परुः समुद्रः द्वारमस्य।

**परुष ಪರುಷ** (न०) 1. ಕಠಿನವಾದ ಮಾತು. पॄ (पालनपूरणयोः) "उषच्" (उ० ४-७५)। (वि०) 2. ಕಠಿನವಾದ, ಕರ್ಕಶವಾದ, ಒರಟಾದ (ವಸ್ತು). "शुद्धस्नानात् परुषमलकं नूनमागण्डलम्बम्" मेघ० २-२८। 3. ಕಠಿನವಾದ, ಕ್ರೂರವಾದ, ದಯೆಯಿಲ್ಲದ (ಮಾತು). "सेवकः स्वामिनं द्वेष्टि कृपणं परुषाक्षरम्" पञ्चत० १-५१। 4. ಕಠೋರವಾದ, ಬಿರುಸಾದ, ಉಗ್ರವಾದ (ಶಬ್ದ). "क्रीडालोलाः श्रवणपरुषैर्गर्जितैर्भाययेस्ताः" मेघ० १-६१। 5. ಚಿತ್ರವಿಚಿತ್ರವಾದ, ಬಣ್ಣ ಬಣ್ಣದ. "परुषं कर्बुरे रूक्षे निष्ठुरोक्तौ च वाच्यवत्" मेदि०।

**परुषवचन ಪರುಷವಚನ** (न०) 1. ಕಠಿನವಾದ ಮಾತು, ಕೋಪದ ಮಾತು. परुषं वचनम्। (वि०) 2. ಕಠಿನವಾಗಿ ಮಾತಾಡುವ, ಬಿರುಸಾಗಿ ಮಾತಾಡುವ. परुषं वचनं यस्य।

**परुषाक्षर ಪರುಷಾಕ್ಷರ** (न०) 1. ಕಠಿನವಾದ ಮಾತು, ಬಿರುಸಾದ ಮಾತು. (वि०) 2. ಬಿರುಸಾಗಿ ಮಾತಾಡುವ, ಕೋಪದಿಂದ ಮಾತಾಡುವ. परुषाणि अक्षराणि यस्य। "सेवकः स्वामिनं द्वेष्टि कृपणं परुषाक्षरम्" पञ्चत० १-५१।

**परुषोक्ति ಪರುಷೋಕ್ತಿ** (स्त्री०) 1. ಕಠಿನವಾದ ಮಾತು, ಬಿರುಸಾದ ಮಾತು, ಕೋಪದ ಮಾತು. परुषा उक्तिः। (वि०) 2. ಕೋಪದಿಂದ ಮಾತಾಡುವ, ಬಿರುಸಾಗಿ ಮಾತಾಡುವ.

**परुस् ಪರುಸ್** (न०) ಗ್ರಂಥಿ, ಗೆಣ್ಣು, ಗಂಟು. पॄ (पालनपूरणयोः) "उसिः" (उ० २-११७)।

**परेत ಪರೇತ** (पुं०) 1. ಭೂತ, ಪಿಶಾಚಿ. (वि०) 2. ಗತಿಸಿದವನು, ಮೃತನಾದವನು. परं लोकमितः। "परेतो वाच्यलिङ्गः स्यान्मृते भूतान्तरे पुमान्" मेदि०।

**परेतभर्तृ ಪರೇತಭರ್ತೃ, –राज् –ರಾಜ್** (पुं०) ಯಮಧರ್ಮರಾಯ. परेतानां भर्ता राट् वा। "परेतभर्तुर्महिषोऽमुना धनुर्विधातुमुत्खातविषाणमण्डलः" माघ० १-५७।

**परेद्यवि ಪರೇದ್ಯವಿ** (अव्य०) ಮಾರನೆ ದಿನ, ಮರುದಿನ. पर "एद्यवि" (५-३-२२)। निपा०। "परेद्यव्यद्य पूर्वेद्युरन्येद्युश्चापि चिन्तयन्" भट्टि० ४-१३।

**परेष्टुका ಪರೇಷ್ಟುಕಾ** (स्त्री०) ಹಲವು ಬಾರಿ ಕರು ಹಾಕಿದ ಆಕಳು, ಅನೇಕ ಸಲ ಕರು ಹಾಕಿದ ಹಸು. परैरिष्यते — इषु (इच्छायाम्) "तुः" बाहु०। स्वार्थे "कन्"। "बहुसूतिः परेष्टुका" अम०।

**परैधित ಪರೈಧಿತ** (वि०) 1. ಇತರರಿಂದ ಬೆಳೆಸಲ್ಪಟ್ಟ, ಬೇರೆಯವರಿಂದ ಸಾಕಲ್ಪಟ್ಟ. परैः एधितः — पर + एध (वृद्धौ) + णिच् "क्तः" (३-२-१०२)। (पुं०) 2. ಸೇವಕ, ಆಳು. "दासे भृत्यः परिस्कन्दः परजातः परैधितः" वैज०। "परान्नः परपिण्डादः परजातपरैधितौ" वैज०।

**परोक्ष ಪರೋಕ್ಷ** (ಪುಂ) 1. ತಪಸ್ವಿ, ಪರೋಕ್ಷಜ್ಞಾನವುಳ್ಳ ಸನ್ಯಾಸಿ. परोक्षं श्रुत्याप्तवाक्यश्रवणजन्यं ज्ञानमस्यास्ति "अच्" (५-२-१२७) । 2. ಯಯಾತಿಯ ಪುತ್ರನಾದ ಅನುವಿನ ಒಬ್ಬ ಮಗ. "अनोः समानरश्चक्षुः परोक्षश्च सुतास्त्रयः" भाग० ९-२३-१। (न०) 3. ಎದುರಿಗೆ ಇಲ್ಲದಿರುವುದು, ಕಣ್ಣಿಗೆ ಕಾಣಿಸದಂತೆ ದೂರದಲ್ಲಿರುವುದು. अक्ष्णोः परम्। परशब्दस्य ओकारादेशः निपा०। प्रयोक्तुरिन्द्रियागोचरत्वम्। परोक्षे लिट् (३-२-११५)। ಇದು ದ್ವಿತೀಯಾ ಮತ್ತು ಸಪ್ತಮೀ ವಿಭಕ್ತ್ಯರ್ಥಗಳಲ್ಲಿ ಕ್ರಿಯಾವಿಶೇಷಣವಾಗಿ ಪ್ರಯೋಗಿಸಲ್ಪಡುವುದು. "नोदाहरेदस्य नाम परोक्षमपि केवलम्" मनु० २-१९९। "परोक्षे कार्यहन्तारं प्रत्यक्षे प्रियवादिनम्। वर्जयेत्तादृशं मित्रं विषकुम्भं पयोमुखम्" चाणक्य०। (अव्य०) 4. ಅಪ್ರತ್ಯಕ್ಷಜ್ಞಾನ, ಶ್ರುತಿ ಮತ್ತು ಆಪ್ತವಚನಶ್ರವಣ ಇವುಗಳಿಂದ ಉಂಟಾಗುವ ಜ್ಞಾನ. (वि०) 5. ದೃಷ್ಟಿಗೆ ಗೋಚರವಲ್ಲದ, ಕಣ್ಣಿಗೆ ಕಾಣಿಸದಿರುವ, ಎದುರಿಗೆ ಇಲ್ಲದಿರುವ, ಉಪಸ್ಥಿತವಲ್ಲದ, "स्थाने वृता भूपतिभिः परोक्षैः स्वयंवरं साधुममंस्त भोज्या" रघु० ७-१३। 6. ಜ್ಞಾನಕ್ಕೆ ಸಿಲುಕದ, ತಿಳಿವಳಿಕೆಗೂ ಎಟುಕದ, ಸ್ವಲ್ಪವೂ ಪರಿಚಯವಿಲ್ಲದ. "क्व वयं क्व परोक्षमन्मथो मृगशावैः सममेधितो जनः" शाकु० २-१८।

**परोक्षार्थ ಪರೋಕ್ಷಾರ್ಥ** (ಪುಂ) ಕಣ್ಣೆದುರಿಗೆ ಇಲ್ಲದ ವಿಷಯ, ದೂರದಲ್ಲಿರುವ ಅಥವಾ ಮರೆಯಲ್ಲಿರುವ. ದೃಷ್ಟಿಗೆ ಗೋಚರವಲ್ಲದ ವಿಷಯ.

**परोढा ಪರೋಢಾ** (स्त्री०) ಪರಕೀಯ ನಾಯಿಕೆಯ ಒಂದು ಭೇದ. ಪರಕೀಯ ನಾಯಿಕೆಯಲ್ಲಿ ಪರೋಢಾ ಮತ್ತು ಕನ್ಯಕಾ ಎಂದು ಎರಡು ಭೇದ. ಲಜ್ಜೆಯನ್ನು ತೊರೆದು ಉತ್ಸವಾದಿ ವ್ಯಾಜದಿಂದ ಬೀದಿಗಳಲ್ಲಿ ತಿರುಗುತ್ತ ಮನೆ ಮನೆಗೂ ಹೋಗಿ ಪರಪುರುಷರ ಸಂಬಂಧವಿಟ್ಟುಕೊಂಡಿರುವ ನಾಯಿಕೆಯು ಪರೋಢೆ. परेणोढा। "यात्रादिनिरतान्योढा कुलटा गलितत्रपा" सा० द० ३-६६। ಇವಳು ತನ್ನ ಪತಿಯಲ್ಲಿ ಅನುರಕ್ತಳಾಗಿರದೆ ಪರಪುರುಷರ ಸಂಬಂಧವಿಟ್ಟುಕೊಂಡಿರುವ ನಾಯಿಕೆ.

**परोपकार ಪರೋಪಕಾರ** (ಪುಂ) ಇತರರಿಗೆ ಮಾಡುವ ಸಹಾಯ್ಯ. परेषामुपकारः। "परोपकारः पुण्याय पापाय परपीडनम्"। "परोपकारः कर्तव्यः प्राणैः कण्ठगतैरपि"। "श्रीखण्डखण्डैर्मलयाचलः किं परोपकाराय सतां विभूतयः"।

**परोपकारिन् ಪರೋಪಕಾರಿನ್** (वि०) ಇತರರಿಗೆ ಉಪಕಾರ ಮಾಡುವವನು, ಇತರರಿಗೆ ಹಿತವಾದ ಕಾರ್ಯವನ್ನು ಮಾಡುವವನು.

**परोरजस् ಪರೋರಜಸ್** (वि०) 1. ರಜೋಗುಣ ಕಾರ್ಯವಾದ ಸಕಲ ದೋಷಗಳಿಂದ ದೂರನಾಗಿರುವ. रजसः परः। बाहु० समासः। पृषो०। "अक्षरं ते ज्योतिः प्रकाश्यताम्। स त्वां पुनातु देवः परोरजसां य एष तपति" उ०रा० ४। 2. ಮುಕ್ತಿಹೊಂದಿದ.

**परोवरीण ಪರೋವರೀಣ** (वि०) ಉತ್ಕೃಷ್ಟ ಮತ್ತು ನಿಕೃಷ್ಟ ವಿಷಯಗಳನ್ನು ಅನುಭವಿಸುವ. परांश्च अवरांश्च अनुभवति "खः" अवरस्य उत्वं च (५-२-१०)।

**परोवरीयस् ಪರೋವರೀಯಸ್** (ಪುಂ) 1. ಪರಮ ಶ್ರೇಷ್ಠನಾದ ಪರಮಾತ್ಮ. परश्च वरीयांश्च निपा०। 2. ಪರಮಾನಂದ, ಬ್ರಹ್ಮಾನಂದ.

**परोष्णी ಪರೋಷ್ಣೀ** (स्त्री०) ಜಿರಳೆ. परः शत्रुरुष्णो यस्याः।

**पर्कटि ಪರ್ಕಟಿ, —टी ಟೀ** (स्त्री०) ಪ್ಲಕ್ಷವೃಕ್ಷ, ಜುಲ್ಲಿಗಿಡ. पृच्यते — पृची (संपर्के) "कटः" बाहु०। बह्वादि० वा "ङीष्" (४-१-४५)।

**पर्कटिन् ಪರ್ಕಟಿನ್** (ಪುಂ) ಪ್ಲಕ್ಷವೃಕ್ಷ, ಜುಲ್ಲಿಗಿಡ.

**पर्जनी ಪರ್ಜನೀ** (स्त्री०) ಮರದರಿಶಿನ.

**पर्जन्य ಪರ್ಜನ್ಯ** (ಪುಂ) 1. ಇಂದ್ರ. पृषु (सेचने) "अन्यः" षकारस्य जश्च (उ० ३-१०३)। 2. ಮೇಘ, ಮೋಡ. "प्रवृद्ध इव पर्जन्यः सारङ्गैरभिनन्दितः" रघु० १७-१५। 3. ಮಳೆ. "अन्नाद्भवन्ति भूतानि पर्जन्यादन्नसंभवः" गीता ३-१४। 4. ಗುಡುಗುತ್ತಿರುವ ಮೋಡ. 5. ಮೇಘದ ಶಬ್ದ. "पर्जन्यो मेघशब्देऽपि ध्वनदम्बुदशक्रयोः" मेदि०। 6. ವಿಷ್ಣು. "स्वतत्त्वज्ञानदानेन नित्यं तापत्रयापहा। पर्जन्यः स समाख्यातः" इति निरुक्तिः। "पर्जन्यः पावनोऽनिलः" वि० स०।

**पर्ण ಪರ್ಣ** (ಪುಂ) 1. ಕಿಂಶುಕ ವೃಕ್ಷ, ಪಲಾಶ ವೃಕ್ಷ, ಮುತ್ತುಗದ ಮರ. पॄ (पालनपूरणयोः) "नः" (उ० ३-६)। (न०) 2. ಪತ್ರ, ಎಲೆ. "स्वयं विशीर्णद्रुमपर्णवृत्तिता परा हि काष्ठा तपसस्तया पुनः" कुमा० ५-२८। 3. ಗರಿ, ರೆಕ್ಕೆ. 4. ವೀಳ್ಯದೆಲೆ, "अनिधाय मुखे पर्णं पूगं स्वादयते नरः। मतिभ्रंशो दरिद्रः स्यादन्ते न स्मरते हरिम्" राजनि०। "पर्णं पत्रं किंशुके ना" मेदि०।

**पर्णकार ಪರ್ಣಕಾರ** (पुं०) ವೀಳ್ಯದೆಲೆಯನ್ನು ಬೆಳೆದು ಮಾರಿ ಜೀವಿಸುವವನು. पर्णं करोति उत्पादयति — डुकृञ् (करणे) "अण्" (३-२-१)।

**पर्णकुटी ಪರ್ಣಕುಟೀ** (स्त्री०) ಪರ್ಣಶಾಲೆ, ಎಲೆಗಳಿಂದ ನಿರ್ಮಿತವಾದ ಗುಡಿಸಲು. पर्णनिर्मिता कुटी।

**पर्णभोजन ಪರ್ಣಭೋಜನ** (पुं०) 1. ಆಡು, ಮೇಕೆ. पर्णं भुङ्क्ते — भुज (परिपालनाभ्यवहारयोः) "ल्युः" (३-१-१३४)। (न०) 2. ಎಲೆಯಲ್ಲಿ ಊಟಮಾಡುವುದು. पर्णे भोजनम्। (वि०) 3. ಎಲೆಯಲ್ಲಿ ಊಟ ಮಾಡುವ. पर्णे भोजनं यस्य।

**पर्णमुच् ಪರ್ಣಮುಚ್** (पुं०) ಮರಗಿಡಗಳಲ್ಲಿ ಎಲೆ ಬಿಡುವ ಕಾಲ, ಮರ ಚಿಗುರುವ ಕಾಲ, ಶಿಶಿರ ಋತು. पर्णानि मुञ्चत्यत्र — मुच्लृ (मोक्षणे) "क्विप्" (३-२-७६)।

**पर्णल ಪರ್ಣಲ** (वि०) ಪರ್ಣಗಳಿಂದ ಕೂಡಿದ, ಎಲೆಗಳಿಂದ ಕೂಡಿದ. पर्णानि सन्त्यत्र-वा "लच्" (५-२-९७)। पक्षे "मतुप्" (५-२-९४)। **-वान् -ವಾನ್.**

**पर्णलता ಪರ್ಣಲತಾ** (स्त्री०) ತಾಂಬೂಲೀ ಲತೆ, ವೀಳ್ಯದೆಲೆಯ ಬಳ್ಳಿ. पर्णप्रधाना लता।

**पर्णवीटिका ಪರ್ಣವೀಟಿಕಾ** (स्त्री०) ಅಡಕೆಯನ್ನಿಟ್ಟು ಮಡಿಸಿ ಸುತ್ತಿದ ವೀಳ್ಯದೆಲೆ (ಬೀಡಾ). पर्णस्य वीटिका।

**पर्णशय्या ಪರ್ಣಶಯ್ಯಾ** (स्त्री०) ಎಲೆಗಳಿಂದ ರಚಿತವಾದ ಹಾಸಿಗೆ. पर्णरचिता शय्या।

**पर्णशाला ಪರ್ಣಶಾಲಾ** (स्त्री०) ಎಲೆಗಳಿಂದ ನಿರ್ಮಿತವಾದ ಮನೆ, ತಪಸ್ವಿಗಳು ವಾಸಮಾಡುವ ಕುಟೀರ. पर्णरचिता शाला। "निर्दिष्टां कुलपतिना स पर्णशालामध्यास्य प्रयतपरिग्रहद्वितीयः" रघु० १-९५।

**पर्णस ಪರ್ಣಸ** (वि०) ಎಲೆಗೆ ಸಮೀಪ ಪ್ರದೇಶದಲ್ಲಿರುವ. पर्णस्यादूरभवम् — पर्ण "सः" (४-२-८०)।

**पर्णाद ಪರ್ಣಾದ** (पुं०) 1. ಒಬ್ಬ ಬ್ರಾಹ್ಮಣ. [ಇವನು ವಿದರ್ಭಾಧಿಪತಿಯಾದ ಭೀಮರಾಜನ ಆಸ್ಥಾನದಲ್ಲಿದ್ದನು. ನಳನ ವಿರಹದಿಂದ ದಮಯಂತಿಯು ವಿದರ್ಭವನ್ನು ಸೇರಿದ ನಂತರ ನಳನನ್ನು ಹುಡುಕಲು ಪರ್ಣಾದನನ್ನು ರಹಸ್ಯವಾಗಿ ಕಳುಹಿಸಿದಳು. "विश्रान्तं तु ततः पश्चात् पर्णादं द्विजसत्तमम्। अर्चयामास वैदर्भी धनेनातीव भामिनी। नले चेहागते विप्र भूयो दास्यामि ते वसु। यद्ध्यर्हं समेष्यामि शीघ्रमेव द्विजोत्तम" भा० वन० ६८-१९, २०। (वि०) 2. ಎಲೆಯನ್ನು ತಿನ್ನುವ. पर्णान्यत्ति — अद (भक्षणे) "अण्" (३-२-१)।

**पर्णाशन ಪರ್ಣಾಶನ** (पुं०) 1. ಮೇಘ, ಮೋಡ. पर्णान्यश्नाति — अश (भोजने) "ल्युः" (३-१-१३४)। (वि०) 2. ಎಲೆಯನ್ನು ತಿನ್ನುವ.

**पर्णास ಪರ್ಣಾಸ** (पुं०) ತುಲಸಿ. पर्णान्यस्यति — असु (क्षेपणे) "अच्" (३-१-१३४)।

**पर्णिन् ಪರ್ಣಿನ್** (पुं०) 1. ವೃಕ್ಷ, ಮರ. पर्णान्यस्य सन्ति — "इनिः" (५-२-११५)। (स्त्री०) **पर्णिनी ಪರ್ಣಿನೀ.** 2. ಕಾಡುದ್ದಿನ ಗಿಡ.

**पर्णिल ಪರ್ಣಿಲ** (वि०) ಎಲೆಗಳಿಂದ ಕೂಡಿದ. पर्ण "इलच्" (५-२-१००)। ಪಿಚ್ಛಾದಿ ಗಣ ಪಾಠದಲ್ಲಿ ಈ ಪದವು ಸೇರಿಲ್ಲ. ಸಿಧ್ಮಾದಿಗಣದಲ್ಲಿ ಸೇರಿರುವುದರಿಂದ **पर्णलः ಪರ್ಣಲಃ** ಎಂಬ ಪ್ರಯೋಗವು ಸಾಧುವಾದುದು.

**पर्णोटज ಪರ್ಣೋಟಜ** (न०) ಪರ್ಣಶಾಲೆ, ಎಲೆಗಳಿಂದ ನಿರ್ಮಿತವಾದ ಗೃಹ (ಗುಡಿಸಲು). पर्णनिर्मितम् उटजम्।

**पर्द — कुत्सिते शब्दे** (भ्वा० आत्म० अक० से०)। पर्दते। पपर्दे। पर्दिता। पर्दिष्यते। पर्दताम्। अपर्दिष्ट। अपर्दिष्यत। ಇತ್ಯಾದಿ. ಕೆಟ್ಟ ಶಬ್ದಮಾಡು, ಅಪಾನ ವಾಯುವನ್ನು ಬಿಡು.

**पर्द ಪರ್ದ** (पुं०) 1. ಕೇಶಪಾಶ, ಜುಟ್ಟು. 2. ಅಪಾನ ವಾಯುವಿನ ಶಬ್ದ. पर्द (कुत्सिते शब्दे) "दः" बाहु०। "ल्युट्" (३-३-११५)। **-पर्दनम् -ಪರ್ದನಮ್.**

**पर्प ಪರ್ಪ** (न०) 1. ಗೃಹ, ಮನೆ. 2. ಹೊಸದಾದ ಹಸಿ ಹುಲ್ಲು, ಎಳೆಯ ಹುಲ್ಲು. पॄ (पालनपूरणयोः) "पः" (उ० ३-२८)। निपा०। (पुं०) 3. ಹೆಳವರು ಸಂಚರಿಸಲು ಉಪಯೋಗಿಸುವ ಚಕ್ರವಿರುವ ಪೀಠ. "येन पीठेन पङ्गवश्चरन्ति स पर्पः" सि० कौ० (४-४-१०)।

**पर्पट ಪರ್ಪಟ** (पुं०) 1. ಹಪ್ಪಳ. पर्प (गतौ) "अटन्" (उ० ४-८१)। ಮೇದಿನೀ ಕೋಶದಲ್ಲಿ ಸ್ತ್ರೀಲಿಂಗವಾಗಿ ಉಕ್ತವಾಗಿದೆ. 2. ಒಂದು ಔಷಧ. "पर्पटी पिष्टभेदे स्यात् पर्पटो भेषजान्तरे" मेदि०। (स्त्री०) **पर्पटी ಪರ್ಪಟೀ.**

**पर्पटद्रुम ಪರ್ಪಟದ್ರುಮ** (पुं०) ಕಿರಿಯ ಶಿವನಿ ಮರ. ತೇಗದ ಮರವೆಂದು ಕೆಲವರು ಹೇಳುತ್ತಾರೆ. पर्पट इव द्रुमः।

**पर्परीक ಪರ್ಪರೀಕ** (पुं०) 1. ಸೂರ್ಯ. 2. ಅಗ್ನಿ, ಬೆಂಕಿ. 3. ಜಲಾಶಯ, ನೀರನ್ನು ಶೇಖರಿಸಿಡುವ ಕೆರೆ ಮೊದಲಾದುದು. पिपर्ति—पॄ (पालनपूरणयोः) "ईकन्" (उ० ४-२०)।

**पर्परीण ಪರ್ಪರೀಣ** (ಪುಂ०) ಎಲೆಯ ನರ, ಎಲೆಯ ನಾಡಿ.

**पर्पिक ಪರ್ಪಿಕ** (ಪುಂ०) ಚಕ್ರವಿರುವ ಪೀಠದಲ್ಲಿ ಸಂಚರಿಸುವ ಹೆಳವ. पर्पेण चरति — "ठन्" (४-४-१०)। "येन पीठेन पङ्गवश्चरन्ति स पर्पः" सि० कौ०।

**पर्यङ्क ಪರ್ಯಂಕ** (ಪುಂ०) 1. ಮಂಚ. परितोऽङ्क्यते— अकि (लक्षणे) "घञ्" (३-३-१९)। "अथोपविष्टं राजानं पर्यङ्के ज्वलनप्रभे" भा० वन० २४८-८। 2. ವೀರಾಸನ, ಯೋಗಾಸನದ ಒಂದು ಭೇದ, ದಕ್ಷಿಣ ಪಾದವನ್ನು ಎಡತೊಡೆಯ ಮೇಲೆಯೂ ಬಲತೊಡೆಯನ್ನು ವಾಮಪಾದದ ಮೇಲೆಯೂ ಇಟ್ಟು ಕೂಡುವುದು ವೀರಾಸನ. "एकपादं तथैकस्मिन्विन्यसेदूरुणि स्थितम्। इतरस्मिंस्तथा चोरुं वीरासनमितीरितम्" हठ०। "पर्यङ्कबन्धस्थिरपूर्वकायमृज्वायतं संनमितोभयांसम्" कुमा० ३-४५।

**पर्यङ्कबन्ध ಪರ್ಯಂಕಬಂಧ** (ಪುಂ०) ಬೆನ್ನು ಮತ್ತು ಮಂಡಿಗಳನ್ನು ಬಳಸಿ ಬರುವಂತೆ ವಸ್ತ್ರವನ್ನು ಸುತ್ತಿ ಕಟ್ಟುವುದು, ವಸ್ತ್ರ ಮೊದಲಾದುವುಗಳಿಂದ ಬೆನ್ನು ತೊಡೆ ಮಂಡಿಗಳನ್ನು ಒಟ್ಟುಗೂಡಿಸಿ ಕಟ್ಟುವುದು. "शनैः कृतप्राणविमुक्तिरीशः पर्यङ्कबन्धं निबिडं बिभेद" कुमा० ३-५९। **-बन्धनम् -ಬಂಧನಮ್.**

**पर्यच्छ ಪರ್ಯಚ್ಛ** (ವಿ०) ಸುತ್ತಲೂ ಸ್ವಚ್ಛವಾದ, ಎಲ್ಲಾ ಕಡೆಯಲ್ಲೂ ನಿರ್ಮಲವಾದ. परितोऽच्छम्। "पर्यच्छे सरसि हृतेंऽशुके पयोभिः" माघ० ८-४६।

**पर्यटत् ಪರ್ಯಟತ್** (ವಿ०) ಸುತ್ತಾಡುತ್ತಿರುವ, ಎಲ್ಲಾ ಕಡೆಯಲ್ಲೂ ಸಂಚರಿಸುತ್ತಿರುವ. परि + अट (गतौ) "शतृ" (३-२-१२४)। "भूयोभूयः सविधनगरीरथ्यया पर्यटन्तम्" मालती० १-१८। स्त्रियां "ङीप्" (४-१-६)। **-अटन्ती - ಅಟಂತೀ.**

**पर्यटन ಪರ್ಯಟನ** (ನ०) ಸುತ್ತಾಡುವುದು, ಎಲ್ಲಾ ಕಡೆಯಲ್ಲೂ ಸಂಚರಿಸುವುದು. परितोटनम् — परि + अट (गतौ) "ल्युट्" (३-३-११५)। भावे "क्तः" (३-३-११४)। **-अटितम् -ಅಟಿತಮ್.** "भूमेः पर्यटनं पुण्यं तीर्थक्षेत्रनिषेवणैः" भाग० ९-७-१८।

**पर्यटनीय ಪರ್ಯಟನೀಯ** (ವಿ०) ಎಲ್ಲಾ ಕಡೆಯಲ್ಲೂ ಸಂಚರಿಸಬೇಕಾದ. परि + अट (गतौ) "अनीयर्" (३-१-९६)। "तव्यः" (३-१-९६)। **-अटितव्यम् -ಅಟಿತವ್ಯಮ್.**

**पर्यटित ಪರ್ಯಟಿತ** (ನ०) 1. ಎಲ್ಲಾ ಕಡೆಯಲ್ಲೂ ಸಂಚರಿಸುವುದು. परि+अट (गतौ) भावे "क्तः" (३-३-११४)। (ವಿ०) 2. ಸುತ್ತಾಡಿದ, ಎಲ್ಲಾ ಕಡೆಯಲ್ಲೂ ಸಂಚರಿಸಿದ. परि+अट कर्त० "क्तः" (३-४-७२)। कर्त० "क्तवतुः" (३-२-१०२)। **-अटितवान् - ಅಟಿತವಾನ್.**

**पर्यनुयोग ಪರ್ಯನುಯೋಗ** (ಪುಂ०) ತಿಳಿದುಕೊಳ್ಳುವ ಆಸೆಯಿಂದ ಮಾಡುವ ಪ್ರಶ್ನೆ. परितोऽनुयोगः। ವಿಷಯವನ್ನು ತಿಳಿದು ಅದನ್ನು ಖಂಡಿಸುವ ಉದ್ದೇಶದಿಂದ ಮಾಡುವ ಪ್ರಶ್ನೆಯು ಪರ್ಯನುಯೋಗ.

**पर्यनुयोज्य ಪರ್ಯನುಯೋಜ್ಯ** (ವಿ०) ವಾದದಲ್ಲಿ ನಿಗ್ರಹೀತ (ಪರಾಜಿತ) ನಾಗಿರುವೆನೆಂದು ಯುಕ್ತಿಯಿಂದ ಪ್ರಶ್ನಿಸಲ್ಪಡುವವನು. परि + अनु + युजिर् (योगे) कर्म० "ण्यत्" (३-१-१२४)।

**पर्यनुयोज्योपेक्षण ಪರ್ಯನುಯೋಜ್ಯೋಪೇಕ್ಷಣ** (ನ०) ನಿಗ್ರಹಸ್ಥಾನವನ್ನು ಹೊಂದಿದ್ದರೂ ನಿಗ್ರಹದ ವಿಷಯವನ್ನು ನಿಗ್ರಹೀತನಿಗೆ ತಿಳಿಸದೆ ಉಪೇಕ್ಷೆಯಿಂದಿರುವುದು. निग्रहस्थानं प्राप्तवतोऽनिग्रहः निग्रहस्थानानुद्भावनम् उपेक्षणम्।

**पर्यन्त ಪರ್ಯಂತ** (ಪುಂ०) 1. ಪರ್ವತ ಸಮುದ್ರ ಮೊದಲಾದುವುಗಳ ಎಲ್ಲೆ, ಗಡಿ. परिगतोऽन्तम्। "पर्यन्तो लभ्यते भूमेः समुद्रस्य गिरेरपि। न कथंचित् महीपस्य चित्तान्तः केनचित् क्वचित्"। 2. ಪಾರ್ಶ್ವ, ಸಮೀಪ ಭಾಗ. "पर्यन्ताश्रयिभिर्निजस्य सदृशं नाम्नः किरातैः कृतम्" रत्ना० २-३। 3. ಅಂಚು, ಕೊನೆ. "आभाति पर्यन्तवनं विदूरात् मेघान्तरालक्ष्यमिवेन्दुबिम्बम्" रघु० १३-३८।

**पर्यन्तभू ಪರ್ಯಂತಭೂ** (ಸ್ತ್ರೀ०) ಗ್ರಾಮ ನಗರಗಳ ಸುತ್ತು ಭೂಮಿ, ಸಮೀಪಪ್ರದೇಶ. पर्यन्तस्य भूः।

**पर्यन्तिका ಪರ್ಯಂತಿಕಾ** (ಸ್ತ್ರೀ०) ಒಳ್ಳೆಯ ಗುಣಗಳ ನಾಶ. "निर्वति व्योममुद्गरः। पर्यन्तिका गुणभ्रंशः" हारा०।

**पर्यय ಪರ್ಯಯ** (ಪುಂ०) 1. ಕ್ರಮವನ್ನು ಮೀರಿ ನಡೆಯುವುದು, ನಿಯಮವನ್ನು ಉಲ್ಲಂಘಿಸುವುದು, ಶಾಸ್ತ್ರಮರ್ಯಾದೆ ಮತ್ತು ಲೋಕಮರ್ಯಾದೆಗಳನ್ನು ಅತಿಕ್ರಮಿಸಿ ನಡೆಯುವುದು. परि + इण् (गतौ) "अच्" (३-३-५६)। 2. ಮುಗಿಯುವುದು, ಕೊನೆಗೊಳ್ಳುವುದು, ಅಂತ್ಯ. "यथर्तुलिङ्गान्यृतवः स्वयमेवर्तुपर्यये" मनु० १-३०

**पर्यवसान ಪರ್ಯವಸಾನ** (नं०) 1. ಕೊನೆ, ಅಂತ್ಯ. परि+अव+षो (अन्तकर्मणि) भावे "ल्युट्" (३-३-११५)। 2. ನಿಶ್ಚಯ, ಅರ್ಥಾವಧಾರಣ.

**पर्यवसित ಪರ್ಯವಸಿತ** (वि०) 1. ಪೂರ್ವಾಪರಪರ್ಯಾಲೋಚನೆಯಿಂದ ನಿಶ್ಚಯಿಸಲ್ಪಟ್ಟ. परि + अव + षो (अन्तकर्मणि) "क्तः" (३-२-१०२)। 2. ನಿಷ್ಪನ್ನವಾದ, ತೀರ್ಮಾನವಾದ, ಕೊನೆಯಮಟ್ಟವನ್ನು ಮುಟ್ಟಿದ.

**पर्यवस्था ಪರ್ಯವಸ್ಥಾ** (स्त्री०) 1. ವಿರೋಧಿಸುವುದು, ಪ್ರತಿಭಟಿಸುವುದು. परि + अव + ष्ठा (गतिनिवृत्तौ) "अङ्" (३-३-१०६)। 2. ತಡೆಯೊಡ್ಡುವುದು, ಅಡ್ಡಿಪಡಿಸುವುದು. भावे "ल्युट्" (३-३-११५)। –अवस्थानम् –ಅವಸ್ಥಾನಮ್.

**पर्यवस्थातृ ಪರ್ಯವಸ್ಥಾತೃ** (वि०) 1. ವಿರೋಧಿಸುವವನು, ಪ್ರತಿಭಟಿಸುವವನು. परि + अव + ष्ठा (गतिनिवृत्तौ) "तृच्" (३-१-१३३)। 2. ತಡೆಯುವವನು, ಅಡ್ಡಿಪಡಿಸುವವನು, ಆತಂಕಪಡಿಸುವವನು. "अन्तकः पर्यवस्थाता जन्मिनः सन्ततापदः। इति त्याज्ये भवे भव्यो मुक्तावुत्तिष्ठते जनः" किरा० ११-१३। 3. ವೈರಿ, ಹಗೆ, ಶತ್ರು.

**पर्यवस्थित ಪರ್ಯವಸ್ಥಿತ** (वि०) ಮತ್ತೆ ಸ್ಥಿರವಾಗಿ ನಿಂತಿರುವ, ಪುನಃ ನೆಲೆಗೊಂಡಿರುವ. परि + अव + ष्ठा (गतिनिवृत्तौ) "क्तः" (३-४-७२)। "सौम्यदृष्टिरकरोत्सुधाभुजः पर्यवस्थितधृतीन् परः पुमान्" याद० १७-१२९।

**पर्यश्रु ಪರ್ಯಶ್ರು** (वि०) ಕಣ್ಣೀರು ತುಂಬಿದ, ಕಂಬನಿಯಿಂದ ಕೂಡಿದ. परिगतम् अश्रु यस्य। "तुषारलेखाकुलितोत्पलाभे पर्यश्रुणी मङ्गलभङ्गभीरुः" किरा० ३-३६।

**पर्यसन ಪರ್ಯಸನ** (नं०) 1. ಎಸೆಯುವುದು, ಬಿಸಾಡುವುದು. परि+असु (क्षेपणे) "ल्युट्" (३-३-११५)। 2. ಕಳುಹಿಸುವುದು, ಹೊರದೂಡುವುದು. 3. ಸುತ್ತಲೂ ಇಡುವುದು.

**पर्यस्त ಪರ್ಯಸ್ತ** (वि०) 1. ಎಸೆಯಲ್ಪಟ್ಟ, ಬಿಸಾಡಲ್ಪಟ್ಟ 2. ಸುತ್ತಲೂ ಪ್ರಯೋಗಿಸಲ್ಪಟ್ಟ (ಬಾಣ ಮುಂತಾದುದು). 3. ಸುತ್ತಲೂ ಇಡಲ್ಪಟ್ಟ. परि + असु (क्षेपणे) "क्तः" (३-२-१०२)। 4. ಅತ್ತಿತ್ತ ಚೆಲ್ಲಾಪಿಲ್ಲಿಯಾಗಿ ಬಿದ್ದಿರುವ. "भग्नैर्दण्डैरातपत्राणि भूमौ पर्यस्तानि प्रौढचन्द्रद्युतीनि" माघ० १८-६७। 5. ಸುತ್ತಲೂ ಹರಡಿರುವ, ಎಲ್ಲಾ ಕಡೆಯಲ್ಲೂ ವ್ಯಾಪ್ತವಾದ. "ततोऽनुकुर्याद्विशदस्य तस्यास्ताम्रौष्ठपर्यस्तरुचः स्मितस्य" कुमा० १-४४। 6. ಸುತ್ತುಗಟ್ಟಲ್ಪಟ್ಟ, ಸುತ್ತಲೂ ಆವರಿಸಲ್ಪಟ್ಟ. 7. ಕೊಲ್ಲಲ್ಪಟ್ಟ. 8. ಜಾರಿಬಿದ್ದ. "पर्यस्तं तु हते स्रस्ते" हेम०।

**पर्यस्ति ಪರ್ಯಸ್ತಿ** (स्त्री०) ಮಂಚ. पर्यस्यते शरीरं यत्र – परि+ असु (क्षेपणे) "क्तिन्" (३-३-९४)।

**पर्यस्यत् ಪರ್ಯಸ್ಯತ್** (वि०) ಹರಡುತ್ತಿರುವ, ಸುತ್ತಲೂ ವ್ಯಾಪಿಸುತ್ತಿರುವ. परि + असु (क्षेपणे) "शतृ" (३-२-१२४)। "पर्यस्यन्निव निचयः सहस्रसंख्याम्" किरा० ५-३४।

**पर्याकुल ಪರ್ಯಾಕುಲ** (वि०) 1. ಕದಡಿಹೋಗಿರುವ, ಬಗ್ಗಡವಾದ, ಕಲಕಿರುವ (ನೀರು ಮೊದಲಾದುದು). परि+आ+कुल (संस्त्याने बन्धुषु च) "कः" (३-१-१३५)। 2. ಕೆದರಿರುವ, ಚೆದರಿರುವ, ಹರಡಿರುವ. "स्रस्तं कर्णशिरीषरोधि वदने घर्माम्भसां जालकं बन्धे स्रंसिनि चैकहस्तयमिताः पर्याकुला मूर्धजाः" शाकु० १-२६। 3. ಗಾಬರಿಗೊಂಡಿರುವ, ದಿಗಿಲುಪಟ್ಟಿರುವ. "आर्य, अनेन आरण्यकवृत्तान्तेन पर्याकुलाः स्मः" शाकु० १। 4. ತುಂಬಿರುವ, ನೆರೆದಿರುವ.

**पर्याण ಪರ್ಯಾಣ** (नं०) ಕುದುರೆಯ ಬೆನ್ನಿನ ಮೇಲೆ ಹಾಕುವ ಜೀನು. परि + या (प्रापणे) "ल्युट्" (३-३-११७)। पृषो०।

**पर्याप्त ಪರ್ಯಾಪ್ತ** (वि०) 1. ಸಾಕಷ್ಟು, ಸಾಕಾಗುವ, ಯಥೇಷ್ಟವಾದ. परि + आप्लृ (व्याप्तौ) "क्तः" (३-४-७२)। "यावतैषां समाप्येरन्यज्ञाः पर्याप्तदक्षिणाः" रघु० १७-१७। 2. ಹೊಂದಲ್ಪಟ್ಟ, ಪಡೆಯಲ್ಪಟ್ಟ, ಸಂಪಾದಿಸಲ್ಪಟ್ಟ. "पर्याप्तसप्तभुवनाभयदक्षिणानि पुण्यानि तातचरितान्यपि यो न वेद" उ० रा० ५-३३। 3. ಸಂಪೂರ್ಣವಾದ, ಸಮಗ್ರವಾದ. "शरत्प्रमृष्टाम्बुधरोपरोधः शशीव पर्याप्तकलो नलिन्याः" रघु० ६-४४। 4. ದಕ್ಷ, ಶಕ್ತ, ಸಮರ್ಥ. "पर्याप्तोऽसि प्रजाः पातुमौदासीन्येन वर्तितुम्" रघु० १०-२५। 5. ಬಹಳ, ತುಂಬ, ತುಂಬಿತುಳುಕುವ. "पर्याप्तपुष्पस्तबकस्तनाभ्यः स्फुरत्प्रवालौष्ठमनोहराभ्यः" कुमा० ३-३९। (नं०) 6. ತೃಪ್ತಿ. 7. ನಿವಾರಣ. "पर्याप्तं तु यथेष्टे स्यात् तृप्तौ शक्ते निवारणे" विश्व०। (अव्य०) 8. ಸಾಕಾಗುವಷ್ಟು, ತೃಪ್ತಿಯಾಗುವಷ್ಟು. "प्रियापीतादभ्यधिकं तपोवनमृगः पर्याप्तमाचामति" उ० रा० ४-१।

**पर्याप्ति ಪರ್ಯಾಪ್ತಿ** (स्त्री०) 1. ಹೊಂದುವುದು, ಪಡೆಯುವುದು, ಸಂಪಾದಿಸುವುದು. परि+आप्लृ (व्याप्तौ) भावे "क्तिन्" (३-३-९४)। 2. ರಕ್ಷಿಸುವುದು, ಕಾಪಾಡುವುದು. 3. ಸಮೃದ್ಧಿ, ತುಂಬಿರುವಿಕೆ. 4. ಸಮಾಪ್ತಿ, ಕೊನೆ. 5. ದಕ್ಷತೆ, ಸಾಮರ್ಥ್ಯ. "धातुरद्भुतनिर्माणपर्याप्तिमिव रूपिणीम्" कथास०। 6. ತೃಪ್ತಿ. "नास्ति व्यसनिनां वत्स भुवि पर्याप्तये धनम्" कथास०। 7. ಸ್ವರೂಪ ಸಂಬಂಧ ವಿಶೇಷ. अयमेको घटः इमौ द्वौ घटौ इत्यादिप्रतीतिसाक्षिकः स्वरूपसम्बन्धविशेषः।

**पर्याय ಪರ್ಯಾಯ** (पुं०) 1. ಕ್ರಮ, ಒಂದಾದ ಮೇಲೆ ಮತ್ತೊಂದು ಬರುವುದು. परि + इण् (गतौ) "घञ्" (३-३-३८)। "पर्यायसेवामुत्सृज्य पुष्पसंभारतत्पराः" कुमा० २-३६। 2. ರೀತಿ, ಪ್ರಕಾರ. 3. ಸಮಾನಾರ್ಥವುಳ್ಳ ಶಬ್ದ. 4. ಅವಸರ, ಸಮಯ, ಅವಕಾಶ. 5. ನಿರ್ಮಾಣ, ತಯಾರಿಸುವುದು. 6. ಪದಾರ್ಥಗಳ ಗುಣ, ದ್ರವ್ಯಧರ್ಮ. 7. ಅರ್ಥಾಲಂಕಾರದ ಒಂದು ಭೇದ, ಪರ್ಯಾಯಾಲಂಕಾರ. ಒಂದು ವಸ್ತುವು ಕ್ರಮವಾಗಿ (ಒಂದಾದಮೇಲೊಂದರಂತೆ) ಅನೇಕ ಆಶ್ರಯಗಳನ್ನು ಪಡೆಯುವಂತೆ ವರ್ಣಿಸುವುದು "ಪರ್ಯಾಯ" ಅಲಂಕಾರ. "पर्यायो यदि पर्यायेणैकस्यानेकसंश्रयः"। **उदा**: "पद्मं मुक्त्वा गता चन्द्रं कामिनीवदनोपमा" ಇಲ್ಲಿ ಕಾಮಿನೀವದನಸಾದೃಶ್ಯವು ಪದ್ಮವನ್ನು ಬಿಟ್ಟು ಬಳಿಕ ಚಂದ್ರನನ್ನು ಸೇರಿತು ಎಂದು ಅನೇಕ ಆಶ್ರಯಗಳನ್ನು ಹೊಂದಿದಂತೆ ವರ್ಣಿತವಾಗಿರುವುದರಿಂದ ಪರ್ಯಾಯಾಲಂಕಾರ. ಅನೇಕ ವಸ್ತುಗಳಿಗೆ ಕ್ರಮವಾಗಿ ಒಂದೇ ಆಶ್ರಯದ ವರ್ಣನೆಯೂ ಪರ್ಯಾಯಾಲಂಕಾರವಾಗುವುದು.

**पर्यायशयन ಪರ್ಯಾಯಶಯನ** (न०) ಪಹರೆಯವರು ಯಾವುದ ಸರದಿಯಂತೆ ಕ್ರಮವಾಗಿ ಮಲಗುವುದು. पर्यायेण क्रमेण शयनम्।

**पर्यायोक्त ಪರ್ಯಾಯೋಕ್ತ** (न०) ಪರ್ಯಾಯೋಕ್ತಾಲಂಕಾರ, ಅರ್ಥಾಲಂಕಾರದ ಒಂದು ಭೇದ. पर्यायेण उक्तम्। ಒಂದು ರೀತಿಯಲ್ಲಿ ಗಮ್ಯವಾಗುವ ಅರ್ಥವನ್ನು ಪ್ರಕಾರಾಂತರದಿಂದ ವರ್ಣಿಸುವುದು "ಪರ್ಯಾಯೋಕ್ತ" ಎಂಬ ಅಲಂಕಾರ. "पर्यायोक्तं हि गम्यस्य वचो भङ्ग्यन्तराश्रयम्"। **उदा**: "नमस्तस्मै कृतौ येन मुधा राहुवधूकुचौ" ಇಲ್ಲಿ ಲಕ್ಷ್ಮೀಪತಿ ರೂಪದಿಂದ ಗಮ್ಯನಾಗುವ ವಾಸುದೇವನು ರಾಹುವಧೂಸ್ತನಗಳ ವೈಯರ್ಥ್ಯಕಾರಿಯಾಗಿ ಪ್ರಕಾರಾಂತರದಿಂದ ವರ್ಣಿತನಾಗಿರುವುದರಿಂದ ಪರ್ಯಾಯೋಕ್ತಾಲಂಕಾರ.

**पर्यालोचन ಪರ್ಯಾಲೋಚನ** (न०) ಚೆನ್ನಾಗಿ ವಿವೇಚನೆ ಮಾಡುವುದು, ಚೆನ್ನಾಗಿ ಎಚ್ಚರಿಕೆಯಿಂದ ಪರಿಶೀಲಿಸುವುದು. परि + आ + लोचृ (दर्शने) "ल्युट्" (३-३-११५)।

**पर्यास ಪರ್ಯಾಸ** (पुं०) 1. ಪರಿವರ್ತನೆ, ಬದಲಾವಣೆ. परि + असु (क्षेपे) "घञ्" (३-३-१८)। "पर्यासं परिमाणञ्च गतिं चन्द्रार्कयोरपि" मार्क०। 2. ಪತನ, ಬೀಳುವುದು. 3. ಹನನ, ಹೊಡೆಯುವುದು, ಕೊಲ್ಲುವುದು.

**पर्युक्षण ಪರ್ಯುಕ್ಷಣ** (न०) ಸೇಚನೆ, ನೀರು ಮೊದಲಾದುವನ್ನು ಚಿಮುಕಿಸುವುದು. परितः उक्षणम्—परि+उक्ष (सेचने) "ल्युट्" (३-३-११५)।

**पर्युत्सुक ಪರ್ಯುತ್ಸುಕ** (वि०) 1. ಇಷ್ಟವಾದುದನ್ನು ಹೊಂದಲು ಆಸಕ್ತಿಯುಳ್ಳ. परि + उद् + षु (प्रसवैश्वर्ययोः) "क्विप्" (३-२-७६)। संज्ञायां "कन्" (५-३-७५)। "पर्युत्सुकां कथयसि प्रियदर्शनां तामार्ति न पश्यसि पुरूरवसस्तदर्थाम्" विक्र० २-१५। 2. ಚಿಂತಾಕ್ರಾಂತನಾದ, ಮಹತ್ತರವಾದ ಚಿಂತೆಯಿಂದ ಕೂಡಿದ. "मुहूर्तं प्रकृतिगम्भीरोऽपि पर्युत्सुकनयन आसीत्" शाकु० ६। "रम्याणि वीक्ष्य मधुरांश्च निशम्य शब्दान् पर्युत्सुकीभवति यत्सुखितोऽपि जन्तुः" शाकु० ५-२।

**पर्युदञ्चन ಪರ್ಯುದಂಚನ** (न०) 1. ಋಣ, ಸಾಲ परितः उदञ्च्यते — परि + उद् + अञ्चु (गतौ) "ल्युट्" (३-३-११३)। "स्यादृणं पर्युदञ्चनम्" अम०। 2. ಮೇಲಕ್ಕೆ ಎತ್ತುವುದು. भावे "ल्युट्" (३-३-११५)।

**पर्युदस्त ಪರ್ಯುದಸ್ತ** (वि०) 1. ನಿಷೇಧಿಸಲ್ಪಟ್ಟ, ತಡೆಯಲ್ಪಟ್ಟ, परि+उद्+असु (क्षेपणे) "क्तः" (३-२-१०२)। 2. ಎಲ್ಲಾ ಕಡೆಯಲ್ಲೂ ಮೇಲಕ್ಕೆ ಎತ್ತಲ್ಪಟ್ಟ.

**पर्युदास ಪರ್ಯುದಾಸ** (पुं०) 1. ನಿವಾರಣ, ನಿಷೇಧ, ತಡೆಯುವುದು. परि + उद् + असु (क्षेपणे) "घञ्" (३-३-१)। 2. ವಾಕ್ಯದ ಉತ್ತರ ಪದದೊಡನೆ "नञ्"ಗೆ ಅನ್ವಯವಿದ್ದೂ ವಿಧಿಗೆ ಪ್ರಾಧಾನ್ಯವೂ ಪ್ರತಿಷೇಧಕ್ಕೆ ಅಪ್ರಾಧಾನ್ಯವೂ ಇರುವಿಕೆ. "प्रधानत्वं विधेर्यत्र प्रतिषेधेऽप्रधानता। पर्युदासः स विज्ञेयः यत्रोत्तरपदेन नञ्" सा० द०।

**पर्युपासक ಪರ್ಯುಪಾಸಕ** (वि०) ಆರಾಧಕ, ಪೂಜಿಸುವವನು. परि + उप + आस (उपवेशने) "ण्वुल्" (३-१-१३३)।

**पर्युपासन ಪರ್ಯುಪಾಸನ** (न०) 1. ಪೂಜೆ. 2. ಗೌರವ, ಮರ್ಯಾದೆ. 3. ಸೇವೆ, ಶುಶ್ರೂಷೆ. परि+उप+आस (उपवेशने) "ल्युट्" (३-३-११५)।

**पर्युपासितृ ಪರ್ಯುಪಾಸಿತೃ** (वि०) 1. ಪೂಜಿಸುವವನು, 2. ಸೇವೆ ಮಾಡುವವನು, ಶುಶ್ರೂಷೆ ಮಾಡುವವನು. परि + उप + आस (उपवेशने) "तृच्" (३-१-१३३)। स्त्रियां "ङीप्" (४-१-६)। **–उपासित्री –ಉಪಾಸಿತ್ರೀ.** "णिनिः" (३-१-१३४)। **–उपासिन् –ಉಪಾಸಿನ್.**

**पर्युप्ति ಪರ್ಯುಪ್ತಿ** (स्त्री०) ಬಿತ್ತನೆಯ ಕಾರ್ಯ, ಬೀಜವನ್ನು ಬಿತ್ತುವುದು. परि + डु वप् (बीजसन्ताने) "क्तिन्" (३-३-९४)।

**पर्युषित ಪರ್ಯುಷಿತ** (वि०) ಹಳೆಯದಾದ, ಹೊಸದಲ್ಲದ. परि + वस (निवासे) "क्तः" (३-४-७२)। ನಿಯತವಾದ ಕಾಲವನ್ನು ಮೀರಿರುವುದು ಪರ್ಯುಷಿತವಾಗುವುದು. ಅನ್ನ ಪುಷ್ಪ ಮೊದಲಾದುವು ಒಂದು ರಾತ್ರಿ ಕಳೆದರೆ ಮಾರನೆಯ ದಿನ ಪರ್ಯುಷಿತವಾಗುವುದು. ಪರ್ಯುಷಿತವಾದುದು ಪೂಜಾದಿಗಳಿಗೆ ನಿಷಿದ್ಧ. "यातयामं गतरसं पूतिपर्युषितं च यत्" गीता १७-१०। ಕ್ರಿಮಿಕೀಟಾದಿಗಳಿಂದ ದೂಷಿತವಾಗದ ಹೊಸ ಪುಷ್ಪಗಳು ದೇವತಾರ್ಚನೆಗೆ ಶ್ರೇಷ್ಠವಾದುದು. "अपर्युषितनिश्छिद्रैः प्रोक्षितैर्जन्तुवर्जितैः। स्वीयारामोद्भवैर्वापि पुष्पैः संपूजयेद्धरिम्"। ಪದ್ಮ ಕಲ್ಹಾರ ತುಳಸಿ ಇವುಗಳಿಗೆ ಪರ್ಯುಷಿತ ದೋಷವಿಲ್ಲ.

**पर्येषण ಪರ್ಯೇಷಣ** (न०) ಅನ್ವೇಷಣ, ಹುಡುಕುವುದು.

**पर्येषणा ಪರ್ಯೇಷಣಾ** (स्त्री०) 1. ಯುಕ್ತಿಯಿಂದ ಪದಾರ್ಥಗಳ ಪರೀಕ್ಷೆ, ಶಾಸ್ತ್ರಾಧಾರದಿಂದ ವಸ್ತುಗಳ ವಿಮರ್ಶೆ. परितः शास्त्रादिना एषणा। 2. ಅನ್ವೇಷಣ, ಹುಡುಕುವುದು, ಧರ್ಮಾದಿಗಳ ವಿಮರ್ಶೆ. परि + इष (गतौ) वा "युच्" (३-३-१०७)। पक्षे "क्तिन्" (३-३-९४)। **पर्येष्टिः ಪರ್ಯೇಷ್ಟಿಃ.**

**पर्येहि ಪರ್ಯೇಹಿ** (वि०) ಎಲ್ಲಾ ಕಡೆಯಲ್ಲೂ ಕೆಲಸ ಮಾಡುವ. परि + ईह (चेष्टायाम्) "इन्" (उ० ४-११७)। स्त्रियां "ङीन्" (४-१-७३)। **–ही –ಹೀ.**

**पर्वक ಪರ್ವಕ** (न०) ಮಂಡಿಯ ಕೀಲು, ಮಂಡಿಯ ಸಂದು. पर्वणा कायति — कै (शब्दे) "कः" (३-२-४)।

**पर्वगामिन् ಪರ್ವಗಾಮಿನ್** (पुं०) ನಿಷಿದ್ಧವಾದ ಪರ್ವದಿನಗಳಲ್ಲಿ ಸ್ತ್ರೀಸಂಗ ಮಾಡುವವನು. पर्वणि गच्छति — गम्लृ (गतौ) "णिनिः" (३-२-७८)।

**पर्वण ಪರ್ವಣ** (वि०) 1. ಪೂರ್ತಿಮಾಡುವ, ತುಂಬುವ. पर्व (पूरणे) ल्युट्" (३-३-११७)। स्त्रियां "ङीप्" (४-१-१५)। **–णी –ಣೀ.** 2. ಪೂರ್ಣಿಮೆ, ಹುಣ್ಣಿಮೆ, 3. ಸಂಧಿವಾತ, ಸಂದುಗಳ ರೋಗ.

**पर्वणिका ಪರ್ವಣಿಕಾ** (स्त्री०) ಸಂಧಿವಾತ, ಸಂದುಗಳ ರೋಗ. पर्वणी स्वार्थे "कः"।

**पर्वणी ಪರ್ವಣೀ** (स्त्री०) 1. ಪೂರ್ಣಿಮೆ, ಹುಣ್ಣಿಮೆ. "चन्द्रस्येवोदये प्राप्ते पर्वण्यां सरितां पतिः" हरिवं०। 2. ಸಂಧಿವಾತ, ಸಂದುಗಳ ವ್ಯಾಧಿ.

**पर्वत ಪರ್ವತ** (पुं०) 1. ಗಿರಿ, ಬೆಟ್ಟ. पर्वति — पर्व (पूरणे) "अतच्" (उ० ३-११०)। "पयोधिं तर्णकपदं पर्वतं सिकतामयम्। पातालं च स्थलीपृष्ठं प्रेक्षतामितविक्रमः" याद० २२-५१। 2. ಕಲ್ಲು ಬಂಡೆ. 3. ಒಬ್ಬ ದೇವರ್ಷಿ, ನಾರದ ಮಹರ್ಷಿಯ ಸೋದರಳಿಯ. "नारदः पर्वतश्चैव ह्यावृषी लोकसत्तमौ। मातुलो भागिनेयश्च देवलोकादिहागतौ" भा० शान्ति० २९-५। 4. ವೃಕ್ಷ, ಮರ. 5. ಒಂದು ವಿಧ ಶಾಕ. 6. ಒಂದು ಜಾತಿಯ ಮೀನು. "पर्वतः पादपे पुंसि शाकमत्स्यप्रभेदयोः। देवमुन्यन्तरे शैले प्रपातो निर्झरे तटे" मेदि०। 7. ಸಪ್ತ (7) ಸಂಖ್ಯೆ.

**पर्वतज ಪರ್ವತಜ** (वि०) ಬೆಟ್ಟದಲ್ಲಿ ಹುಟ್ಟಿದ. पर्वते जायते—जनी (प्रादुर्भावे) "डः" (३-२-९७)। (स्त्री०) **–जा –ಜಾ.** 1. ಪರ್ವತ ಪುತ್ರಿ, ಪಾರ್ವತೀದೇವಿ, ಗೌರಿ, 2. ನದಿ, ಹೊಳೆ.

**पर्वतकाक ಪರ್ವತಕಾಕ** (पुं०) ಕಾಗೆ ಜಾತಿಯ ಒಂದು ಹಕ್ಕಿ, ಡೊಂಬ ಕಾಗೆ.

**पर्वतराज् ಪರ್ವತರಾಜ್** (पुं०) ಪರ್ವತಗಳ ರಾಜನಾದ ಹಿಮಾಲಯ. पर्वतेषु राजते—राजृ (दीप्तौ) "क्विप्" (३-२-६१)। पर्वतानां राजा "टच्" (५-४-९१)। **–राजः –ರಾಜಃ.**

**पर्वतात्मज ಪರ್ವತಾತ್ಮಜ** (पुं०) ಪರ್ವತ ಪುತ್ರ, ಮೈನಾಕ ಪರ್ವತ.

**पर्वतात्मजा ಪರ್ವತಾತ್ಮಜಾ** (स्त्री०) ಪಾರ್ವತೀದೇವಿ, ಗೌರಿ, ಪರ್ವತ ಪುತ್ರಿ. पर्वतस्यात्मजा।

**पर्वतारि ಪರ್ವತಾರಿ** (पुं०) ಮಹೇಂದ್ರ. पर्वतानां गिरीणां (तत्पक्षच्छेदकत्वात्) अरिः। ಪರ್ವತಗಳ ರೆಕ್ಕೆಗಳನ್ನು ಕತ್ತರಿಸಿದ್ದರಿಂದ ಇಂದ್ರನು ಪರ್ವತಗಳ ಶತ್ರು.

**पर्वन् ಪರ್ವನ್** (न०) 1. ಉತ್ಸವ, ಹಬ್ಬ. पॄ (पूरणे) "वनिप्" (उ० ४-११२)। 2. ಗ್ರಂಥಿ, ಗಂಟು, ಗೆಣ್ಣು.

"सा वक्रनखधारिण्या वेणुकर्कशपर्वया" रघु० १२-४१। 3. ಗ್ರಂಥದ ಭಾಗ. 4. ಪಂಚ ಪರ್ವಕಾಲಗಳು, ಅಷ್ಟಮಿ, ಚತುರ್ದಶಿ, ಪೂರ್ಣಿಮೆ, ಅಮಾವಾಸ್ಯೆ ಮತ್ತು ಸಂಕ್ರಮಣ. ಇವು ಐದೂ ಪರ್ವಕಾಲಗಳು. 5. ಮೆಟ್ಟಿಲು, ಹಂತ. "सोपानपर्वाणि विमुञ्चदम्भः" रघु० १६-४६। 6. ಹುಣ್ಣಿಮೆ ಅಥವಾ ಅಮಾವಾಸ್ಯೆ ಪ್ರತಿಪತ್ತು (ಪಾಡ್ಯ) ಗಳ ಸಂಧಿಕಾಲ. "भ्रातः पर्वणि पश्य दानवपतिः शीर्षविशेषाकृतिः" भर्तृ० १-२६। 7. ಪ್ರಸ್ತಾವ. 8. ಒಂದು ಲಕ್ಷಣ. 9. ಅಂಶ, ಒಂದು ಭಾಗ. "पर्व क्लीबं महे ग्रन्थौ प्रस्तावे लक्षणान्तरे। दर्शप्रतिपदोः सन्धौ विषुवत्प्रभृतिष्वपि" मेदि०। 10. ಸೂರ್ಯ ಚಂದ್ರರ ಗ್ರಹಣ. 11. ಅಯನ ಸಂಕ್ರಾಂತಿ.

**पर्वमूला ಪರ್ವಮೂಲಾ** (स्त्री०) ಬಿಳಿ ಗರಿಕೆ. पर्वणि पर्वणि मूलं यस्याः।

**पर्वयोनि ಪರ್ವಯೋನಿ** (पुं०) ಗೆಣ್ಣುಗಳಲ್ಲಿ ಮೊಳಕೆ ಹೊರಡುವ ಕಬ್ಬು ಮೊದಲಾದುದು. पर्व ग्रन्थिः योनि-रुत्पत्तिस्थानं यस्य।

**पर्वसन्धि ಪರ್ವಸಂಧಿ** (पुं०) ಹುಣ್ಣಿಮೆ–ಪಾಡ್ಯ ಮತ್ತು ಅಮಾವಾಸ್ಯೆ–ಪಾಡ್ಯಗಳ ಸಂಧಿಕಾಲ. पर्वणोः सन्धिः। "स पर्वसन्धिः प्रतिपत्पञ्चदश्योर्यदन्तरम्" अम०।

**पर्शु ಪರ್ಶು** (पुं०) 1. ಆಯುಧ, ಶಸ್ತ್ರ. स्पृश (संस्पर्शने) "शुन्" पृ आदेशश्च (उ० ५-२७)। 2. ಪರಶು, ಕೊಡಲಿ.

**पर्शुका ಪರ್ಶುಕಾ** (स्त्री०) ಪಕ್ಕೆ ಎಲುಬು. पर्शुरिव "कन्" (५-३-९६)। "पार्श्वास्थिनि तु पर्शुका" अम०।

**पर्शुपाणि ಪರ್ಶುಪಾಣಿ** (पुं०) 1. ಗಣಪತಿ, ವಿನಾಯಕ. 2. ಪರಶುರಾಮ. पर्शुः पाणावस्य।

**पर्शुराम ಪರ್ಶುರಾಮ** (पुं०) ಪರಶುರಾಮ. पर्शुसहितो रामः।

**पर्श्वध ಪರ್ಶ್ವಧ** (पुं०) ಪರಶ್ವಧ, ಕುಠಾರ, ಕೊಡಲಿ. परश्वध पृषो०।

**पल ಪಲ** (न०) 1. ನಾಲ್ಕು ಕರ್ಷಗಳ ತೂಕ.

| | | |
|---|---|---|
| 5 ಗುಲಗಂಜಿಗಳ ತೂಕ | .. | 1 ಆದ್ಯಮಾಷಕ |
| 16 ಆದ್ಯಮಾಷಕಗಳು | .. | 1 ಕರ್ಷ |
| 4 ಕರ್ಷಗಳ ತೂಕ | .. | 1 ಪಲ. |

2. ಪಲಲ, ಮಾಂಸ. "पलमुन्मानमांसयोः" मेदि०।

**पलगण्ड ಪಲಗಂಡ** (वि०) ಇಟ್ಟಿಗೆ ಮತ್ತು ಗಾರೆ ಕೆಲಸದವನು, ಸುಣ್ಣ ಬಳಿಯುವವನು. "पलगण्डो लेपकरः" वैज०। "पलगण्डस्तु सुधाजीवी च लेपकः" त्रिकाण्ड०।

**पलङ्कष ಪಲಂಕಷ** (पुं०) 1. ರಾಕ್ಷಸ. पलं कषति—कष (हिंसायाम्) "खच्" बाहु०। "मुम्" (६-३-६७)। (स्त्री०) **-कषा-ಕಷಾ.** 2. ನೆಗ್ಗಿಲು ಗಿಡ. 3. ಸಣ್ಣ ರಾಸ್ನೆ. 4. ಕಿಂಶುಕವೃಕ್ಷ, ಮುತ್ತುಗದ ಮರ. 5. ಗುಗ್ಗುಳ ಗಿಡ. 6. ಅರಗು. "पलङ्कषा गोक्षुरके रास्ना गुग्गुलु-किंशुके। मुण्डीरी (?) लाक्षयोश्च स्त्री राक्षसे तु पलङ्कषः" मेदि०।

**पलप्रिय ಪಲಪ್ರಿಯ** (पुं०) ರಾಕ್ಷಸ.

**पलल ಪಲಲ** (पुं०) 1. ರಾಕ್ಷಸ. पलं मांसं लाति—ला (आदाने) "कः" (३-२-३)। (न०) 2. ಮಾಂಸ, ಬಾಡು. पल (गतौ) "कलः" (उ० १-१०६)। 3. ತಿಲಚೂರ್ಣ, ಎಳ್ಳಿನ ಪುಡಿ. 4. ಪಂಕ, ಕೆಸರು. "पललं तिलचूर्णे च पङ्के मांसे नपुंसकम्। ना राक्षसे" मेदि०। 5. ಪಿತ್ತಧಾತು. "मायुः पलाग्निः पललं ज्वरः स्यात्" हारा०।

**पलज्वर ಪಲಲಜ್ವರ** (पुं०) 1. ಪಿತ್ತಧಾತು. पललं ज्वरयति। 2. ಪಿತ್ತಜ್ವರ.

**पलाश ಪಲಾಶ** (पुं०) 1. ಕಿಂಶುಕವೃಕ್ಷ, ಮುತ್ತುಗದ ಮರ. प्रशस्तानि पलाशानि सन्त्यस्य "अच्" (५-२-१२७)। "नवपलाशपलाशवनं पुरः स्फुटपरागपरागतपङ्कजम्" माघ० ६-२। 2. ರಾಕ್ಷಸ. पलं मांसम् अश्नाति—अश (भोजने) "अण्" (३-२-१)। 3. ಕಚೋರ. "कच्चूरोऽपि पलाशः" अम०। (न०) 4. ಪರ್ಣ, ಎಲೆ. "चलत्पला-शान्तरगोचरास्तरोस्तुषारमूर्तेरिव नक्तमंशवः" माघ० १-२१। (वि०) 5. ಹಸುರುಬಣ್ಣದ. स्त्रियां "ङीष्" (४-१-६३)। **पलाशी ಪಲಾಶೀ.**

**पलाशिन् ಪಲಾಶಿನ್** (पुं०) 1. ವೃಕ್ಷ, ಮರ. पलाशानि सन्त्यस्य "इनिः" (५-२-११५)। "नीते पलाशिन्युचिते शरीरवद्गजान्तकेनान्तमदान्तकर्मणा" माघ० १२-५५। (वि०) 2. ಎಲೆಗಳಿಂದ ಕೂಡಿರುವ. स्त्रियां "ङीप्" (४-१-५)। **-शिनी -ಶಿನೀ.**

**पलाशिल ಪಲಾಶಿಲ** (वि०) ಪಲಾಶವೃಕ್ಷಕ್ಕೆ ಕೊಂಚ ದೂರದಲ್ಲಿರುವ. पलाशस्यादूरभवः "इलः" (४-२-८०)।

**पलिक्नी ಪಲಿಕ್ನೀ** (स्त्री०) 1. ನರೆತ ಕೂದಲುಳ್ಳ ಹೆಂಗಸು, ವೃದ್ಧ ಹೆಂಗಸು. पलितमस्त्यस्याः "अच्" (५-२-१२७)। तकारस्य क्नादेशः (वा० ४-१-३९)। "ङीप्" (४-१-५)। "वृद्धा पलिक्नी" अम०। 2. ಮೊದಲ ಬಾರಿಗೆ ಗರ್ಭಿಣಿಯಾಗುವ ಹಸು. "पलिक्नी बालगर्भिणी" वैज०।

**पलित ಪಲಿತ** (ನಂ) 1. ಮುಪ್ಪಿನಿಂದ ಕೂದಲಿನಲ್ಲಿ ಆಗುವ ಬಿಳುಪು, ಕೂದಲು ನರೆವುದು. पल (गतौ) भावे "क्तः" (३-३-११४)। 2. ಮೆಣಸು. "मरिचं पलितं श्यामं वेल्लवं पेलवं कटु" वैजं। 3. ಕರ್ದಮ, ಕೆಸರು. 4. ತಾಪ, ಬಿಸಿ, ಉಷ್ಣತೆ. 5. ಸಾಂಬ್ರಾಣಿ. 6. ಕೇಶ ಪಾಶ. "पलितं शैलजे तापे केशपाशे च कर्दमे" मेदि०। 7. ಶರೀರದಲ್ಲಿ ಧಾತು ವ್ಯತ್ಯಾಸದಿಂದ ಕೂದಲು ನರೆವುದು. "क्रोधशोकश्रमकृतः शरीरोष्मा शिरोगतः। पित्तं च केशान् पचति पलितं तेन जायते"। "आसन् व्योमदिशस्तूलैः पलितैरिव पाण्डुराः" कुमा० १६-६। (वि०) 8. ನರೆಕೂದಲುಳ್ಳ. पलितमस्यास्ति "अच्" (५-२-१२७)।

**पलितंकरण ಪಲಿತಂಕರಣ** (वि०) ಮುದಿಯಾಗದಿರುವುದನ್ನು ಮುದಿಯಾಗಿ ಮಾಡುವ ಸಾಧನ. अपलितं पलितं करोत्यनेन—डु कृञ् (करणे) कर० "ख्युन्" (३-२-५६)।

**पलितम्भविष्णु ಪಲಿತಂಭವಿಷ್ಣು** (वि०) ಮುದಿಯಾಗದೇ ಇರುವುದು ಮುದಿಯಾಗುವ. अपलितः पलितो भवति—भू "खिष्णुच्" (२-२-५७)। "खुकञ्" (३-२-५७)। -भावुकः -ಭಾವುಕಃ.

**पलितिन् ಪಲಿತಿನ್** (वि०) ನರೆತಕೂದಲುಳ್ಳ. पलितमस्यास्ति "इनिः" (५-२-११५)।

**पल्यङ्क ಪಲ್ಯಂಕ** (पुं०) ಮಂಚ. परिगतोऽङ्कं यस्य। रस्य लः। "पल्यङ्कविगलितहारचारुभिः स्वैः" माघ० ८-९।

**पल्ययन ಪಲ್ಯಯನ** (नं०) ಕುದುರೆಯ ಜೀನು.

**पल्ल ಪಲ್ಲ** (पुं०) 1. ಕುಸೂಲ, ಉಗ್ರಾಣ, ಧಾನ್ಯದ ಶೇಖರಣೆಯ ಜಾಗ. पदं लाति — ला (आदाने) "कः" (३-२-३)। 2. ಗೃಹ, ಮನೆ.

**पल्लव ಪಲ್ಲವ** (पुंन०) 1. ಕಿಸಲಯ, ಚಿಗುರು. पद्भ्यां लूयते—लूञ् (छेदने) "अप्" (३-३-५७)। "लोलोष्ठमौष्ट्रकमुदग्रमुखं तरूणामभ्रंलिहानि लिलिहे नवपल्लवानि" माघ० ५-६५। 2. ಮುಂಗೈ, ತೋಳಿನ ತುದಿ. 3. ಹೆಚ್ಚು ವಿಸ್ತಾರವಾಗಿರುವಿಕೆ, ಹರಡಿರುವಿಕೆ. "पल्लवं त्वस्त्री प्रकोष्ठेऽप्यतिविस्तृते" वैजं। 4. ವಿಟ, ಕಾಮುಕ. "वेश्यापतौ षिद्गकुम्भभुजङ्गविटपल्लवाः" वैजं। 5. ರೆಂಬೆ, ಕೊಂಬೆ. 6. ಬಲ, ಶಕ್ತಿ. 7. ಲಾಕ್ಷಾರಸದ ಕೆಂಪು. 8. ಶೃಂಗಾರ. "पल्लवोऽस्त्री किसलये विटपे विस्तरे बले। शृङ्गारेऽलक्तकरागे च" मेदि०।

**पल्लवक ಪಲ್ಲವಕ** (पुं०) 1. ವಿಟ, ಜಾರಪುರುಷ. 2. ಒಂದು ಜಾತಿಯ ಮೀನು. (पुंन०) 3. ಕಿಸಲಯ, ಚಿಗುರು. 4. ಅಶೋಕ ವೃಕ್ಷ. "षिद्गः पल्लवको विटः" अभि० चि०।

**पल्लविक ಪಲ್ಲವಿಕ** (पुं०) ಜಾರಪುರುಷ, ವಿಟ.

**पल्लवित ಪಲ್ಲವಿತ** (वि०) 1. ಚಿಗುರಿರುವ, ಚಿಗುರು ಹೊರಟಿರುವ. पल्लवोऽस्य सञ्जातः "इतच्" (५-२-३६)। "प्रियासु बालासुरतक्षमासु च द्विपत्रितं पल्लवितं च बिभ्रतम्" नैष० १-११८। 2. ಅಗಲವಾದ, ವಿಸ್ತಾರವಾದ. 3. ಅರಗಿನ ರಸದಿಂದ ಬಳಿಯಲ್ಪಟ್ಟ, ಲಾಕ್ಷಾರಸದ ಲೇಪನದಿಂದ ಕೆಂಪಾಗಿರುವ.

**पल्लविन् ಪಲ್ಲವಿನ್** (पुं०) ವೃಕ್ಷ, ಮರ. पल्लवोऽस्यास्ति "इनिः" (५-२-११५)।

**पल्लि(ल्ली) ಪಲ್ಲಿ(ಲ್ಲೀ)** (स्त्री०) 1. ಸಣ್ಣ ಹಳ್ಳಿ, ಚಿಕ್ಕ ಗ್ರಾಮ. 2. ಗೃಹ, ಮನೆ. 3. ಗುಡಿಸಲು, ಕುಟೀರ. पल्ल (गतौ) "इन्" (उ० ४-११७)। वा "ङीष्" (ग० ४-१-४५)। "पल्यल्पग्रामकुटचोः स्त्री पल्लः स्थूलकुसूलके" मेदि०। 4. ಹಲ್ಲಿ, ಗೌಳಿ. पल्ली गृहमाश्रयत्वेनास्त्यस्याः "अच्" (५-२-१२७)। गौरा० "ङीष्" (४-१-४१)। "माणिक्या भित्तिका पल्ली कुड्यमत्स्यो गृहोलिका" अभि० चि०।

**पल्वल ಪಲ್ವಲ** (नं०) ಸಣ್ಣ ಕೊಳ, ಚಿಕ್ಕ ಜಲಾಶಯ. पल्यते — पल (गतौ) "वलच्" (उ० ४-१०७)। पिबन्त्यस्मिन् — पा (पाने) "वलच्" लगागमो निपा० (उ० ४-१०७) वा। "पयोधिलक्ष्मीमुषि केलिपल्वले रिरंसुहंसी कलनादसादरम्" नैष० १-११७।

**पव ಪವ** (पुं०) 1. ಧಾನ್ಯವನ್ನು ತೂರುವುದು. पूञ् (पवने) "अप्" (३-३-५७)। 2. ವಾಯು, ಗಾಳಿ. 3. ಶುದ್ಧ ಮಾಡುವುದು, ಪವಿತ್ರಗೊಳಿಸುವುದು.

**पवन ಪವನ** (पुं०) 1. ವಿಷ್ಣು. पूञ् (पवने) "ल्युः" (३-१-१३४)। सर्वदा सर्वत्र स्वभावादेव पवति। "सदा स्वयन्तु सर्वत्र प्रवाह इति नित्यशः। पवनः प्रवहति यः कथ्यते वेगतो मनुः" इति निरुक्तिः। "पवनः पावनोऽनलः" वि० स०। 2. ವಾಯು, ಗಾಳಿ. पुनाति — पूञ् (पवने) "युच्" (उ० २-७८)। "उपवनपवनानुपातदक्षैरलिभिरलाभि यदङ्गनागणस्य" माघ० ७-२७। 3. ಧಾನ್ಯವನ್ನು ತೂರುವುದು. (नं०) 4. ಆವಿಗೆ, ಕುಂಬಾರನು ಮಡಕೆಗಳನ್ನು ಬೇಯಿಸುವ ಜಾಗ. पुनात्यत्र— पूञ् (पवने) अधि० "ल्युट्" (३-३-११७)। 5. ಜಲ, ನೀರು. पूञ् कर० "ल्युट्" (३-३-११७)। "पवनं

कुम्भकारस्य पाकस्थाने नपुंसकम्। निष्पावमरुतोः पुंसि" मेदि०। 6. ಶುದ್ಧಮಾಡುವುದು, ಪವಿತ್ರಗೊಳಿಸುವುದು. पूञ् भावे "ल्युट्" (३-३-११५)।

**पवनतनय ಪವನತನಯ, -सुत -ಸುತ, -सूनु -ಸೂನು** (पुं०) ವಾಯುಪುತ್ರ—(1) ಭೀಮಸೇನ. (2) ಆಂಜನೇಯ. (3) ಅಗ್ನಿ.

**पवनव्याधि ಪವನವ್ಯಾಧಿ** (पुं०) ಉದ್ಧವ, ಶ್ರೀಕೃಷ್ಣನ ಒಬ್ಬ ಮಿತ್ರ ಮತ್ತು ಮಂತ್ರಿ. पवनः वातरोगो व्याधिरस्य। "प्रापयन् पवनव्याधेर्गिरमुत्तरपक्षताम्" माघ० २-१५।

**पवनात्मज ಪವನಾತ್ಮಜ** (पुं०) ವಾಯುಪುತ್ರ— (1) ಆಂಜನೇಯ. (2) ಭೀಮಸೇನ. (3) ಅಗ್ನಿ. "वायोरग्निः" तै० उ०।

**पवनाश ಪವನಾಶ** (पुं०) ಸರ್ಪ, ಹಾವು. पवनमश्नाति—अश (भोजने) "अण्" (३-२-१)।

**पवनाशन ಪವನಾಶನ** (पुं०) ಸರ್ಪ, ಹಾವು.

**पवनाशनाश ಪವನಾಶನಾಶ** (पुं०) 1. ಗರುಡ. 2. ಮಯೂರ, ನವಿಲು. पवनाशनमश्नाति—अश (भोजने) "अण्" (३-२-१)।

**पवमान ಪವಮಾನ** (पुं०) ವಾಯು, ಗಾಳಿ. पवते—पूङ् (पवने) "शानन्" (३-२-१२८)। मुगागमः (७-२-८२)।

**पवमानतनय ಪವಮಾನತನಯ, -पुत्र -ಪುತ್ರ, -सुत -ಸುತ, -सूनु -ಸೂನು** (पुं०) ವಾಯುಪುತ್ರ— (1) ಆಂಜನೇಯ. (2) ಭೀಮಸೇನ. (3) ಅಗ್ನಿ.

**पवमानात्मज ಪವಮಾನಾತ್ಮಜ** (पुं०) ವಾಯುಪುತ್ರ— (1) ಆಂಜನೇಯ. (2) ಭೀಮಸೇನ. (3) ಅಗ್ನಿ. "पवमानात्मजो वह्निर्हव्यवाहन उच्यते"। "वायोरग्निः" श्रुतिः।

**पवारु ಪವಾರು** (पुं०) ಹಾಗಲಗಿಡ. "पवारुः कारवेल्लोऽसौ" त्रिकाण्ड०।

**पवि ಪವಿ** (पुं०) 1. ವಜ್ರಾಯುಧ. पूञ् (पवने) "इः" (उ० ४-१३८)। (स्त्री०) 2. ವಾಕ್ಕು, ಮಾತು.

**पवित ಪವಿತ** (न०) 1. ಮರಿಚ, ಮೆಣಸು. (वि०) 2. ಪವಿತ್ರವಾದ, ಪರಿಶುದ್ಧವಾದ. पूङ् (पवने) "क्तः" (३-४-७२)। वा इडागमः (७-२-५१)। पक्षे पूतः। "तत्र मन्त्रपवितं हविः क्रतावश्नतो न वपुरेव केवलम्" माघ० १४-२६।

**पवित्र ಪವಿತ್ರ** (न०) 1. ವಿಷ್ಣು, ನಾರಾಯಣ. पूञ् (पवने) "इत्रः" (उ० ४-१७२)। गुणविभवरूपनिरूपकसोपानेन तन्निरूप्यस्वरूपमनुप्रविशति। "पवित्रं मङ्गलं परम्" वि०स०। 2. ಹೋಮದಲ್ಲಿ ಆಜ್ಯವನ್ನು ಶುದ್ಧಮಾಡುವ ಎರಡು ದರ್ಭೆಗಳು. (ದರ್ಭೆಯ ಎರಡು ಅಗ್ರಗಳು) पूयते आज्यमनेन — पूञ् (पवने) "इत्रः" (उ० ४-१७२)। 3. ವೈದಿಕ ಕಾರ್ಯಗಳಲ್ಲಿ ಅನಾಮಿಕಾ ಬೆರಳಿಗೆ ಹಾಕಿಕೊಳ್ಳಬೇಕಾದ ದರ್ಭೆಯ ಅಥವಾ ಸ್ವರ್ಣದ ಉಂಗುರ. 4. ಯಜ್ಞೋಪವೀತ. 5. ತಾಮ್ರಲೋಹ. 6. ವೃಷ್ಟಿ, ಮಳೆ. 7. ಜಲ, ನೀರು. 8. ಆಜ್ಯ, ಘೃತ, ತುಪ್ಪ. (वि०) 9. ಪರಿಶುದ್ಧವಾದ. "त्रीणि श्राद्धे पवित्राणि दौहित्रः कुतपस्तिलाः" मनु० ३-२३५। "त्रीणि देवाः पवित्राणि ब्राह्मणानामकल्पयन्। अदृष्टमद्भिर्निर्णिक्तं यच्च वाचा प्रशस्यते" मनु० ५-१२७। (स्त्री०) -त्रा -ತ್ರಾ. 10. ತುಲಸಿಗಿಡ. 11. ಹರಿದ್ರ, ಅರಿಶಿನ. 12. ಒಂದು ನದಿ.

**पवित्रक ಪವಿತ್ರಕ** (पुं०) 1. "पवित्र" ಪದದ ಅರ್ಥ. 2. ಅಶ್ವತ್ಥವೃಕ್ಷ, ಅರಳಿಮರ. 3. ಅತ್ತಿಮರ. 4. ಕುಶ, ದರ್ಭೆ. 5. ಮಿಾನುಬಲೆಯ ದಾರ. "शणसूत्रं पवित्रकम्" अम०।

**पशव्य ಪಶವ್ಯ** (वि०) 1. ಪಶುವಿಗೆ ಹಿತವಾದ, ಪಶುವಿಗೆ ತಕ್ಕುದಾದ. पशवे हितम् "यत्" (५-१-५)। "रम्यं पशव्यमाजीव्यं जाङ्गलं देशमावसेत्" याज्ञ० १-३२१। 2. ಪಶುವಿಗೆ ಸಂಬಂಧಪಟ್ಟ, ಪಶುಸಂಬಂಧವಾದ.

**पशु ಪಶು** (पुं०) 1. ಗೋವು, ಆಕಳು, ಹಸು. सर्वमविशेषेण पश्यति—दृशिर् (प्रेक्षणे) "कुः" (उ० १-२७)। पश्यादेशश्च। "प्रजापतिर्हि वैश्याय सृष्ट्वा परिददे पशून्" मनु० ९-३२७। 2. ಪ್ರಾಣಿ, ಜನ್ತುಸಾಮಾನ್ಯ. ಪಶುಗಳು ಗ್ರಾಮ್ಯ ಮತ್ತು ಅರಣ್ಯಗಳೆಂದು ಎರಡು ವಿಧ. ["आरण्य" ಮತ್ತು "ग्राम्यपशु" ಪದಗಳಲ್ಲಿ ನೋಡಿ.] 3. ಪ್ರಮಥ ಗಣ. 4. ದೇವತೆ. 5. ಛಾಗ, ಆಡು, ಮೇಕೆ. 6. ಅಗ್ನಿ. 7. ಯಜ್ಞ, ಯಾಗ. (अव्य०) 8. ದರ್ಶನ, ನೋಟ. 9. ಜೀವ, ಜೀವಾತ್ಮ. "निबद्धाः पशवो नाथ त्वदेकाधीनमुक्तयः" याद० १६-११८। ಏನೂ ತಿಳಿವಳಿಕೆಯಿಲ್ಲದ ಮನುಷ್ಯನ ವಿಷಯದಲ್ಲಿ ಈ ಪಶುಪದಪ್ರಯೋಗವಿರುವುದು. नृपशुः नरपशुः ಇತ್ಯಾದಿ. "विद्याविहीनः पशुः"।

**पशुचर्या ಪಶುಚರ್ಯಾ** (स्त्री०) ಪಶುವಿನಂತೆ ಲಜ್ಜೆಯನ್ನು ತೊರೆದು ಮಾಡುವ ವ್ಯವಹಾರ. पशोरिव चर्या।

**पशुदेवता ಪಶುದೇವತಾ** (स्त्री०) ಪಶುವಿನ ಅಧಿಷ್ಠಾತೃ ದೇವತೆ.

**पशुधर्म ಪಶುಧರ್ಮ** (पुं०) ಪಶುವಿನ ವ್ಯವಹಾರ, ಲಜ್ಜೆಯನ್ನು ತೊರೆದು ಸ್ವೇಚ್ಛೆಯಂತೆ ನಡೆಸುವ ಪಶುವಿಗೆ ಸಮಾನವಾದ ವ್ಯವಹಾರ. पशूनामिव यथेष्टमैथुनादिरूपो-धर्मः। "अयं द्विजैर्हि विद्वद्भिः पशुधर्मो विगर्हितः" मनु० ९-६६।

**पशुनाथ ಪಶುನಾಥ** (पुं०) ಪರಶಿವ, ಪರಮಾತ್ಮ. पशूनां नाथः।

**पशुप ಪಶುಪ** (वि०) 1. ಪಶುಗಳನ್ನು ಕಾಪಾಡುವವನು. पशून् पाति — पा (रक्षणे) "कः" (३-२-३)। 2. ಪಶುಗಳ ಒಡೆಯ.

**पशुपति ಪಶುಪತಿ** (पुं०) 1. ಪರಶಿವ, ಪರಮಾತ್ಮ, ಮಹಾದೇವ. पशूनां जीवानां पतिः। "पशुपतिरपि तान्यहानि कृच्छ्रात्" कुमा० ६-९५। 2. ಪಶುವಿನ ಯಜಮಾನ, ಪಶುವಿನ ಒಡೆಯ.

**पशुपाल ಪಶುಪಾಲ** (वि०) ಗೋಪಾಲಕ, ಗೊಲ್ಲ, ದನ ಕಾಯುವವನು. पशून् पालयति — पाल (रक्षणे) + णिच् "अण्" (३-२-१)। "यक्ष्मी च पशुपालश्च परिवेत्ता निराकृतिः। ब्रह्मद्विट् परिवित्तिश्च गणाभ्यन्तर एव च" मनु० ३-१५४। पशु + पाल (रक्षणे) + णिच् "ण्वुल्" (३-१-१३४)। **-पालकः -ಪಾಲಕಃ.**

**पशुपालन ಪಶುಪಾಲನ** (न०) ಪಶುಗಳನ್ನು ರಕ್ಷಿಸುವುದು, ಪಶುಗಳನ್ನು ಪೋಷಿಸುವುದು. पशूनां पालनम्।

**पशुपाश ಪಶುಪಾಶ** (पुं०) 1. ಪಶುಗಳನ್ನು ಕಟ್ಟುವ ಹಗ್ಗ. पाश्यतेऽनेन—पश (बन्धने) "घञ्" (३-३-१२१)। पशूनां पाशः। 2. ಜೀವಾತ್ಮನ ಬಂಧನ.

**पशुपाशक ಪಶುಪಾಶಕ** (पुं०) ಒಂದು ವಿಧ ಸುರತ ಬಂಧ. "स्त्रियमानतपूर्वाङ्गीं स्वपादान्तःपदद्वयम्। ऊर्ध्वांशेन रमेत् कामी बन्धोऽयं पशुपाशकः" रतिमं०।

**पशुमारम् ಪಶುಮಾರಮ್** (अव्य०) ಪಶುವನ್ನು ಕೊಲ್ಲುವಂತೆ, ಪಶುವನ್ನು ಹಿಂಸಿಸುವಂತೆ. पशुमिव मारयित्वा— मृङ् (प्राणत्यागे) "णमुल्" (३-४-४६)। "प्रगृह्य तरसा दोर्भ्यां पशुमारममारयत्" भा० वन० ११-६३।

**पशुरज्जु ಪಶುರಜ್ಜು** (पुं०) ಪಶುಗಳನ್ನು ಕಟ್ಟಿಹಾಕುವ ಹಗ್ಗ.

**पशुराज ಪಶುರಾಜ** (पुं०) ಪಶು (ಮೃಗ) ಗಳಿಗೆ ರಾಜನಾದ ಸಿಂಹ. पशूनां राजा "टच्" (५-४-९१)।

**पश्चात् ಪಶ್ಚಾತ್** (अव्य०) 1. ಹಿಂಭಾಗ. अपर "आतिः" पश्चभावश्च (५-३-३२)। 2. ಹಿಂಭಾಗದಿಂದ, ಹಿಂದುಗಡೆಯಿಂದ. "पश्चाद्वद्धपुरुषमादाय रक्षिणौ च" शाकु० ६। 3. ಹಿಂಭಾಗದಲ್ಲಿ, ಹಿಂದುಗಡೆಯಲ್ಲಿ. "पुरःस्थिते गोप्तरि विश्वहेतौ पश्चादवस्थायिनि तत्प्रवर्त्ये" याद० २३-२३। 4. ಅನಂತರ, ಬಳಿಕ, ತರುವಾಯ. "धौतापाङ्गं हरशशिरुचा पावकेस्तं मयूरं पश्चादद्रिग्रहणगुरुभिर्गर्जितैर्नर्तयेथाः" मेघ० १-४४। 5. ಪಶ್ಚಿಮ ದಿಕ್ಕು. 6. ಪಶ್ಚಿಮ ದಿಕ್ಕಿನಿಂದ. 7. ಪಶ್ಚಿಮದಿಕ್ಕಿನಲ್ಲಿ. 8. ಕೊನೆಯಲ್ಲಿ. 9. ಅಧಿಕಾರ. "पश्चात्प्रतीच्यां चरमेऽप्यधिकारेऽपि दृश्यते" मेदि०।

**पश्चात्कृत ಪಶ್ಚಾತ್ಕೃತ** (वि०) 1. ಹಿಂದಕ್ಕೆ ಹಾಕಲ್ಪಟ್ಟ. 2. ತಳ್ಳಿಹಾಕಲ್ಪಟ್ಟ. "तया तु तस्यार्धशरीरभाजा पश्चात्कृताः स्निग्धजनाशिषोऽपि" कुमा० ७-२८।

**पश्चात्तन ಪಶ್ಚಾತ್ತನ** (वि०) ಹಿಂಭಾಗದಲ್ಲಿರುವ, ಹಿಂದುಗಡೆ ನಡೆದುಬರುತ್ತಿರುವ. पश्चात्तन्वति गमनादीनि— तनु (विस्तारे) "अच्" (३-१-१३४)। "नृपः पुरःस्थैः प्रतिबद्धवर्त्मा पश्चात्तनैः कश्चनलम्बमानः" नैष० १०-६। "अग्रादिपश्चाड्डिमच्" (वा० ४-३-२३) ವಾರ್ತಿಕದಿಂದ पश्चात् ಶಬ್ದಕ್ಕೆ "डिमच्" ಪ್ರತ್ಯಯ ವಿಧಿಸಿರುವುದರಿಂದ "सायंचिरं...." (४-३-२३) ಸೂತ್ರದಿಂದ "ट्यु" ಪ್ರತ್ಯಯ ಬರುವಂತಿಲ್ಲ. ಆದುದರಿಂದ तनु ಧಾತುವಿಗೆ "अच्" ಪ್ರತ್ಯಯ ವಿಧಿಸಿ पश्चात्तन ರೂಪ ನಿಷ್ಪನ್ನವಾಗಬೇಕು.

**पश्चात्ताप ಪಶ್ಚಾತ್ತಾಪ** (पुं०) ಅನಂತರ ವಿಷಾದಪಡುವುದು, ತಪ್ಪು ಕಾರ್ಯ ಮಾಡಿ ತರುವಾಯ ಅದಕ್ಕಾಗಿ ಮರುಗುವುದು. पश्चात् अनन्तरम् तापः। "पश्चात्तापो निराहारः सर्वेऽमी शुद्धिहेतवः" याज्ञ० ३-३१।

**पश्चार्ध ಪಶ್ಚಾರ್ಧ** (पुं०) ಹಿಂದಿನ ಅರ್ಧಭಾಗ, ಶರೀರದ ಹಿಂಭಾಗ. अपरश्चासावर्धश्च — अपरस्य पश्चभावः (२-१-५८)। "पश्चार्धेन प्रविष्टः शरपतनभयाद्भूयसा पूर्वकायम्" शाकु० १-७।

**पश्चिम ಪಶ್ಚಿಮ** (वि०) 1. ಹಿಂಭಾಗದಲ್ಲಿರುವ, ಹಿಂದುಗಡೆಯಿರುವ. पश्चाद्भवः "डिमच्" (वा० ४-३-२३)। 2. ಅನಂತರದ, ಮುಂದಿನ, ಎರಡನೆಯ. "पूर्वां सन्ध्यां जपंस्तिष्ठन्नैशमेनो व्यपोहति। पश्चिमां तु समासीनो मलं हन्ति दिवाकृतम्" मनु० २-१०२। (स्त्री०) **-मा -ಮಾ.** ಪಶ್ಚಿಮ ದಿಕ್ಕು. "मलयरुहरजोभिर्भूषयन् पश्चिमाशाम्" माघ० ११-१४।

**पश्चिमरात्र ಪಶ್ಚಿಮರಾತ್ರ** (पुं०) ರಾತ್ರಿಯ ಉತ್ತರ ಭಾಗ, ರಾತ್ರಿಯ ಉತ್ತರಾರ್ಧ. पश्चिमं रात्रेः, एकदेशिसमासः।

तेन "उपारता: पश्चिमरात्रगोचरात्" इति सिद्धम् सि० कौ०।

**पश्चिमरात्रि ಪಶ್ಚಿಮರಾತ್ರಿ** (स्त्री०) ರಾತ್ರಿಯ ಎರಡನೆಯ ಭಾಗ, ರಾತ್ರಿಯ ಉತ್ತರಾರ್ಧ. पश्चिमा चासौ रात्रिश्च। "उपारता: पश्चिमरात्रिगोचरादपारयन्त: पतितुं जवेन गाम्" किरा० ४-१०।

**पश्चिमार्ध ಪಶ್ಚಿಮಾರ್ಧ** (पुं०) ಎರಡನೆಯ ಅರ್ಧಭಾಗ, ಮುಂದಿನ ಅರ್ಧಭಾಗ. पश्चिमोऽर्ध:।

**पश्चिमोत्तरा ಪಶ್ಚಿಮೋತ್ತರಾ** (स्त्री०) ಪಶ್ಚಿಮ ಮತ್ತು ಉತ್ತರ ದಿಕ್ಕುಗಳ ಮಧ್ಯದ ದಿಕ್ಕು, ವಾಯು ದಿಕ್ಕು. पश्चिमाया उत्तरस्या दिशोऽन्तराला दिक्।

**पश्य ಪಶ್ಯ** (वि०) ನೋಡುವವನು. पश्यति—दृशिर् (प्रेक्षणे) "श:" (३-१-१३७)। पश्यादेश: (७-३-७८)। "पश्या: पुरन्ध्री: प्रति सान्द्रचन्द्ररज:कृतक्रीडकुमारचक्रे" नैष० ६-३९।

**पश्यत् ಪಶ್ಯತ್** (वि०) ನೋಡುತ್ತಿರುವ. दृशिर् (प्रेक्षणे) "शतृ" (३-२-१२४)। पश्यादेश: (७-३-७८)। "पश्यन् कृतार्थैरपि वल्लवीजनो जनाधिनाथं न ययौ वितृष्णताम्" माघ० १२-३९। स्त्रियां "ङीप्" (४-१-६)। **पश्यन्ती ಪಶ್ಯನ್ತೀ.**

**पश्यतोहर ಪಶ್ಯತೋಹರ** (वि०) ನೋಡುತ್ತಿರುವಂತೆಯೇ ಕದಿಯುವವನು, ನೋಡುತ್ತಿರುವವನನ್ನು ಲಕ್ಷ್ಯಮಾಡದೆ ಕದಿಯುವವನು. पश्यतो हरति। पश्यन्तमनादृत्य हरति इत्यर्थ:। षष्ठ्या अलुक् (वा० ६-३-२१)।

**पश्यन्ती ಪಶ್ಯನ್ತೀ** (स्त्री०) 1. ನೋಡುತ್ತಿರುವವಳು. पश्यत् स्त्रियां "ङीप्" (४-१-६)। 2. ಮೂಲಾಧಾರ (ನಾಭಿ) ದಿಂದ ಹೊರಟು ಹೃದಯವನ್ನು ಮುಟ್ಟುವ ನಾದರೂಪವಾದ ವರ್ಣ. ಇದು ಶಬ್ದನಿಷ್ಪತ್ತಿಯ ಎರಡನೆಯ ಅವಸ್ಥೆ. ಮೂಲಾಧಾರದಿಂದ ಹುಟ್ಟುವ ನಾದರೂಪ ವರ್ಣಕ್ಕೆ ಅರ್ಥಬೋಧಕ ಶಬ್ದನಿಷ್ಪತ್ತಿಯವರೆಗೆ परा पश्यन्ती मध्यमा ಮತ್ತು वैखरी ಎಂಬ ನಾಲ್ಕು ಅವಸ್ಥೆಗಳುಂಟು.

**परा :**—ತಾನು ತಿಳಿದುಕೊಂಡ ವಿಷಯವನ್ನು ಇತರರಿಗೆ ಹೇಳಲು ಅದನ್ನು ತಿಳಿಸುವ ಶಬ್ದೋಚ್ಚಾರಣೆಗಾಗಿ ಚೇತನನಿಂದ ಪ್ರೇರಿತವಾದ ಮನಸ್ಸು ಮೂಲಾಧಾರ (ನಾಭಿ) ಸ್ಥಿತವಾದ ಅನಲವನ್ನು ಚಲಿಸುವಂತೆ ಮಾಡುವುದು. ಅದರಿಂದ ಚಲಿತವಾದ ಅನಲವು ಆ ಜಾಗದಲ್ಲಿರುವ ಅನಿಲವನ್ನು ಚಲಿಸುವಂತೆ ಮಾಡುವುದು. ಚಲಿತವಾದ ಆ ವಾಯುವಿನಿಂದ ಅಲ್ಲೇ ಸೂಕ್ಷ್ಮರೂಪವಾಗಿ ನಾದವು ಉತ್ಪನ್ನವಾಗುವುದು. ಈ ಸೂಕ್ಷ್ಮರೂಪವಾದ ನಾದಕ್ಕೆ "परा" ಎಂದು ಸಂಜ್ಞೆ. ಇದು ಬಹಳ ಸೂಕ್ಷ್ಮರೂಪವಾದುದರಿಂದ ಇದಕ್ಕೆ सूक्ष्मा ಎಂದೂ ಸಂಜ್ಞೆ. "चेतनेन ज्ञातार्थविवक्षया तद्बोधकशब्दनिष्पादनाय प्रेरितमन्त:करणं मूलाधारस्थितमनलं चालयति। तच्चालितश्चानल: तत्स्थलस्थानिलं चालयति। तच्चालितेनानिलेन तत्रैव सूक्ष्मरूपेणोत्पादित: शब्द: परा वागित्यभिधीयते" शब्दार्थर०।

**पश्यन्ती :**—ಈ ಸೂಕ್ಷ್ಮರೂಪವಾದ ನಾದವು ನಾಭಿಪ್ರದೇಶದವರೆಗೂ ಚಲಿಸಿದಾಗ ಅದರ ಸಂಬಂಧದಿಂದ ಉಂಟಾದ ಶಬ್ದವು "**पश्यन्ती**" ಎಂದು ಕರೆಯಲ್ಪಡುವುದು. "ततो नाभिदेशपर्यन्तं चलितेन तेन तद्देशसंयोगादुत्पादित: शब्द: पश्यन्तीति व्यवह्रियते। एतद्द्वयस्य सूक्ष्मतरसूक्ष्मतमतया ईश्वरयोगिमात्रगम्यता नास्मदीयश्रुतिगोचरता" शब्दार्थर०।

**मध्यमा :**—ಈ ನಾದವು ಹೃದಯದೇಶಕ್ಕೆ ಪ್ರಸರಿಸಿದಾಗ ಅದರ ಸಂಬಂಧದಿಂದ ಉತ್ಪನ್ನವಾದ ಶಬ್ದವು "**मध्यमा**" ಎಂಬ ಸಂಜ್ಞೆಯನ್ನು ಹೊಂದುವುದು. ಇದು ಮೂರನೆಯ ಅವಸ್ಥೆ. ಇದು ಧ್ವನ್ಯಾತ್ಮಕವಾದುದರಿಂದ ಕಿವಿಗಳನ್ನು ಮುಚ್ಚಿಕೊಂಡು ಕೇಳಿದರೆ ಕದಾಚಿತ್ ನಮಗೂ ಕೇಳಲು ಸಾಧ್ಯವಾಗಬಹುದು. "ततस्तेनैव हृदयदेशं परिसरता हृदयसंयोगेन निष्पादित: शब्द: "**मध्या**" इत्युच्यते। सा च स्वकर्णपिधानेन ध्वन्यात्मकतया सूक्ष्मरूपेण कदाचिदस्माकमपि समधिगम्या" शब्दार्थर०।

**वैखरी :**—ಬಳಿಕ ಬಾಯಿವರೆಗೂ ಬಂದ ಆ ಧ್ವನಿಯು ಕಂಠದೇಶಕ್ಕೆ ಬಂದು ತಲೆಯವರೆಗೂ ಹೋದಾಗ ತಲೆಯ ಹೊಡತದಿಂದ ಹಿಂತಿರುಗಿ ಮುಖದಲ್ಲಿ ತಾನು ಹುಟ್ಟುವ ಎಂಟು ಸ್ಥಾನಗಳಲ್ಲಿ ಅಭಿಹತವಾಗಿ ಹುಟ್ಟುವ ಶಬ್ದವು "**वैखरी**" ಅವಸ್ಥೆಯುಳ್ಳದ್ದು. ಈ ವೈಖರೀ ಅವಸ್ಥೆಯಲ್ಲಿ ಶಬ್ದನಿಷ್ಪತ್ತಿಯುಂಟಾಗಿ ಆ ಶಬ್ದವು ಅರ್ಥಬೋಧನಸಮರ್ಥವಾಗುವುದು. "ततो मुखपर्यन्तमागच्छता तेन कण्ठदेशं प्राप्य आहत्य मूर्धानं तत्प्रतिघातेन परावृत्य च मुखविवरे कण्ठादितत्तदष्टस्थानेषु स्वाभिघातेनोत्पादित: शब्द: "**वैखरी**" त्युच्यते" शब्दार्थर०। "आत्मा बुद्ध्या समेत्यार्थान् मनो युङ्क्ते विवक्षया। मन: कायाग्निमाहन्ति स प्रेरयति मारुतम्। मारुतस्तूरसि चरन् मन्द्रं जनयति स्वरम्" पा० शि०। "वैखरी शब्दनिष्पत्ति: मध्यमा श्रुतिगोचरा। द्योतितार्था तु पश्यन्ती सूक्ष्मा वागनपायिनी" मल्लिनाथधृतवाक्यम्।

**पस्त्य ಪಸ್ತ್ಯ** (न०) ಗೃಹ, ಮನೆ.

**पा – पाने** (भ्वा० पर० सक० अनि०)।

| | | | |
|---|---|---|---|
| लट्— | पिबति | पिबतः | पिबन्ति। |
| | पिबसि | पिबथः | पिबथ। |
| | पिबामि | पिबावः | पिबामः। |
| लिट्— | पपौ | पपतुः | पपुः। |
| | पपिथ / पपाथ | पपथुः | पप। |
| | पपौ | पपिव | पपिम। |
| लुट्— | पाता | पातारौ | पातारः। |
| लृट्— | पास्यति | पास्यतः | पास्यन्ति। |
| लोट्— | पिबतु / पिबतात् | पिबताम् | पिबन्तु। |
| | पिब / पिबतात् | पिबतम | पिबत। |
| | पिबानि | पिबाव | पिबाम। |
| लङ्— | अपिबत् | अपिबताम् | अपिबन्। |
| विधिलिङ्— | पिबेत् | पिबेताम् | पिबेयुः। |
| आशीर्लिङ्— | पेयात् | पेयास्ताम् | पेयासुः। |
| लुङ्— | अपात् | अपाताम् | अपुः। |
| लृङ्— | अपास्यत् | अपास्यताम् | अपास्यन्। |

1. ಕುಡಿ, ಪಾನಮಾಡು. "मधु द्विरेफः कुसुमैकपात्रे पपौ प्रियां स्वामनुवर्तमानः" कुमा० ३-३६। 2. ಚುಂಬಿಸು, ಮುತ್ತಿಡು. "करौ व्याधुन्वत्याः पिबसि रतिसर्वस्वमधरम्" शाकु० १-२०। 3. ಆದರ ಕಡೆ ನೋಡು, ಆ ಕಡೆ ನೋಡು. "वसिष्ठधेनोरनुयायिनं तमावर्तमानं वनिता वनान्तात्। पपौ निमेषालसपक्ष्मपङ्क्तिरुपोषिताभ्यामिव लोचनाभ्याम्" रघु० २-१९।

**कर्मणि**:—पीयते। पपे। पायिता, पाता। पायिष्यते, पास्यते। पीयताम्। अपीयत। ಇತ್ಯಾದಿ.

**णिचि**:—पाययति। पाययां चकार, –चक्रे, –बभूव, –आस। पाययिता। पाययिष्यति। पाययतु। आपाययत्। ಇತ್ಯಾದಿ.

**ण्यन्तात् कर्मणि**:—पाय्यते। पाययां –चक्रे, –बभूवे, –आसे। पाययिता, पायिता। पाययिष्यते। ಇತ್ಯಾದಿ.

**सनि**:—पिपासति। पिपासां चकार। पिपासिता। पिपासिष्यति। पिपासतु। ಇತ್ಯಾದಿ.

**कृत्सु**:—पातव्यम्। पानीयम्। पेयम्। पीतम्। पीतवान्। पिबन्, पिबन्ती। पातुम्। पीतम्। पानम्। पीत्वा। निपाय। निपीय ಎಂಬುದು पीङ् (पाने) ಧಾತುವಿನ ಲ್ಯಬಂತ ರೂಪ.

**ण्यन्तात् कृत्सु**:—पाययितव्यः। पायनीयः। पाय्यः। पायितः। पायितवान्, –वती। पाययन्, –यन्ती। पाययमानः। पाययितुम्। पायितम्। पायनम्। पाययित्वा। निपाय्य।

**पा – रक्षणे** (अदा० पर० सक० अनि०)।

| | | |
|---|---|---|
| पाति | पातः | पान्ति |
| पासि | पाथः | पाथ। |
| पपौ | पपतुः | पपुः। |
| पपिथ / पपाथ | पपथुः | पप। |
| पपौ | पपिव | पपिम। |
| पाता | पातारौ | पातारः |
| पास्यति | पास्यतः | पास्यन्ति |
| पातु / पातात् | पाताम् | पान्तु। |
| पाहि / पातात् | पातम् | पात। |
| पानि | पाव | पाम। |
| अपात् | अपाताम् | अपुः। |
| पायात् | पायाताम् | ಇತ್ಯಾದಿ. |

1. ರಕ್ಷಿಸು, ಕಾಪಾಡು. "सिद्धा नद्योऽश्विनौ श्रीर्दितिरदितिसुता मातरश्चण्डिकाद्या वेदास्तीर्थानि यज्ञा गणवसुमुनयः पान्तु नित्यं ग्रहाश्च" पञ्चतं० १। "प्रजाः प्रजानाथ पितेव पासि" रघु० २-४८।

**कर्मणि**:—पायते। पायताम्। अपायत। पायेत ಇತ್ಯಾದಿ. ಉಳಿದೆಲ್ಲ ರೂಪಗಳೂ पा (पाने) ಧಾತುವಿನ ರೂಪಗಳಂತೆ.

**कृत्सु**:—पातव्यम्। पानीयम्। पेयः। पातः। पान्। पातम्। पानम्। पात्वा। ಇತ್ಯಾದಿ ರೂಪಗಳಾಗುವುವು.

**णिचि**:—पालयति, –ते। ಇತ್ಯಾದಿ.

2. ಪ್ರತೀಕ್ಷಿಸು, ನಿರೀಕ್ಷಿಸು. "अत्रोपविश्य मुहूर्तमार्यः पालयतु कृष्णागमनम्" वेणी० १। 3. ಆಳು, ಆಡಳಿತ ನಡೆಸು.

**पांशु(सु) ಪಾಂಶು(ಸು)** (पुं०) 1. ಧೂಳು, ಮಣ್ಣು ಹುಡಿ. पशि(सि) (नाशने) "कुः" दीर्घश्च (उ० १-२७)। "क्षुण्णः क्षणं यदुबलैर्दिवमाततांसुः पांसुर्दिशां मुखमतुलयदुत्थितोऽद्रेः" माघ० ५-११। 2. ಗೊಬ್ಬರ

ಬೆಳೆಯುವ ಜಮೀನಿಗೆ ಹಾಕಲು ಕೂಡಿಸಿಡುವ ತೊಪ್ಪೆಯ ಗುಪ್ಪೆ. "पांसुर्धूली च शस्यार्थचिरसञ्चितगोमये" मेदि०।

**पांशु(सु)कूल ಪಾಂಶು(ಸು)ಕೂಲ** (न०) ಯಾರೊಬ್ಬರ ಹೆಸರನ್ನೂ ನಮೂದಿಸದೆ ಹೊರಡಿಸುವ ಶಾಸನ, -ಆಜ್ಞೆ. "शासनं धर्मकीलः स्यात् मुकुतिः शूद्रशासनम्। पट्टोलिका क्लृप्तकीला पांशुकूलं न कस्यचित्" त्रिकाण्ड०।

**पांशु(सु)क्षार ಪಾಂಶು(ಸು)ಕ್ಷಾರ** (न०) ಕ್ಷಾರಲವಣ.

**पांशु(सु)चत्वर ಪಾಂಶು(ಸು)ಚತ್ವರ** (न०) ಆಲಿಕಲ್ಲು, ಮುಗಿಲ್ಗಲ್ಲು.

**पांशु(सु)चामर ಪಾಂಶು(ಸು)ಚಾಮರ** (पुं०) 1. ಗರಿಕೆ ಹುಲ್ಲಿನಿಂದ ಕೂಡಿದ ತೀರಪ್ರದೇಶ, ಗರಿಕೆಹುಲ್ಲು ಬೆಳೆದಿರುವ ದಡ. 2. ಪ್ರಶಂಸೆ, ಹೊಗಳಿಕೆ. 3. ಧೂಳಿನ ರಾಶಿ. 4. ಒಣಗಿದ ಎಲೆಗಳ ಶಬ್ದ, ತರಗೆಲೆಗಳ ಮರ್ಮರ ಶಬ್ದ. 5. ಬಟ್ಟೆಗಳಿಗೆ ವಾಸನೆ ಕಟ್ಟುವ ದ್ರವ್ಯ. "स्यात् पांशुचामरः पुंसि दूर्वाञ्चिततटीभुवि। वर्षापके प्रशंसायां पुरोटौ धूलिगुच्छके" मेदि०।

**पांशु(सु)मर्दन ಪಾಂಶು(ಸು)ಮರ್ದನ** (पुं०) ಮರಗಿಡಗಳ ಬುಡದಲ್ಲಿ ನೀರು ನಿಲ್ಲಲು ಮಾಡುವ ಪಾತಿ.

**पांशु(सु)र ಪಾಂಶು(ಸು)ರ** (पुं०) 1. ಕಾಡುನೊಣ. पांशुरस्यास्ति—पांशु "रः" (वा० ५-२-१०७)। "पांशुरो दंशकः स्मृतः" हारा०। 2. ಹೆಳವ, ಕುಂಟ. "पांगुरः पीठसर्पी स्यात्" हारा०।

**पांशु(सु)ल ಪಾಂಶು(ಸು)ಲ** (पुं०) 1. ವ್ಯಭಿಚಾರಿ, ಪರಸ್ತ್ರೀಲೋಲನಾದ ಪುರುಷ. 2. ಪರಮೇಶ್ವರನ ಒಂದು ಆಯುಧ, ತುದಿಯಲ್ಲಿ ತಲೆಬುರುಡೆಯಿಂದ ಕೂಡಿದ ತ್ರಿಶೂಲ. "पांसुलः पुंश्चले शम्भोः खट्वाङ्गे स्यसती-भुवोः" मेदि०। (वि०) 3. ಧೂಳಿನಿಂದ ಕೂಡಿದ, ಧೂಳಿನಿಂದ ತುಂಬಿದ. पांशु(सु) रस्त्यस्य "लच्" (५-२-९७)। "परिपाण्डुर्पांसुलकपोलमाननं दधती मनोहरतरत्वमागता" मालती० २-४। 4. ದೋಷದಿಂದ ಕೂಡಿದ, ದೋಷದೂಷಿತನಾದ, ಅಪರಿಶುದ್ಧನಾದ. "दारत्यागी भवाम्याहो परस्त्रीस्पर्शपांसुलः" शाकु० ५-२९। (स्त्री०) -ला -ಲಾ. 5. ಭೂಮಿ. 6. ಸ್ವೈರಿಣಿ, ಸ್ವೇಚ್ಛೆಯಿಂದ ತಿರುಗುವ ಹೆಂಗಸು, ವ್ಯಭಿಚಾರಿಣಿ. "स्वैरिणी पांसुला" अम०।

**पाक ಪಾಕ** (पुं०) 1. ಅಡಿಗೆ, ಅನ್ನ ಮೊದಲಾದುವನ್ನು ಬೇಯಿಸುವುದು. डुपचष् (पाके) "घञ्" (३-३-१८)। 2. ಶಿಶು, ಮಗು, ಮರಿ. पिबति स्तनम्—पा (पाने) "कन्" (उ० ५-५३)। "पोतः पाकोऽर्भको डिम्भः" अम०। 3. ಮಾಗುವುದು, ಹಣ್ಣಾಗುವುದು. "काम्पिल्यक-प्रसवपाटलगण्डपालिपाकारुणस्फुटितदाडिमकान्तिवक्त्रम्" मालती० ९-३१। 4. (ಇಟ್ಟಿಗೆ, ಸುಣ್ಣಕಲ್ಲು ಮೊದಲಾದುವನ್ನು) ಸುಡುವುದು. 5. ಬೇಯಿಸುವುದು, 6. ಆಹಾರವು ಜೀರ್ಣವಾಗುವುದು. 7. ಫಲ, ಅಭೀಷ್ಟಸಿದ್ಧಿ, ಕಾರ್ಯವು ಕೈಗೂಡುವುದು. "आशीर्भिरेधयामासुः पुरःपाकाभि-रम्बिकाम्" कुमा० ६-९०। 8. ಒಬ್ಬ ದೈತ್ಯ, ಇಂದ್ರನಿಂದ ಹತನಾದ ಒಬ್ಬ ಅಸುರ. 9. ಧಾನ್ಯ, ಕಾಳು. "नीवारपाकादिकडङ्गरीयैरामृश्यते जानपदैर्न कच्चित्" रघु० ५-९। 10. (ಬುದ್ಧಿ) ಪೂರ್ತಿಯಾಗಿ ಬೆಳೆಯುವುದು, ಬಲಿಯುವುದು, ಪ್ರಾವೀಣ್ಯಹೊಂದುವುದು, ಪರಿಣತಿ ಹೊಂದುವುದು. 11. ಮುಪ್ಪಿನಿಂದ ತಲೆಯ ಕೂದಲು ನರೆಯುವುದು. 12. ಘೂಕ, ಗೂಬೆ. 13. ಒಳಕುರು, ಹೊಟ್ಟೆಯೊಳಗೆ ಕೀವು ತುಂಬಿದ ಕುರು. 14. ಭೀತಿ, ಭಯ. 15. ಮಾಡಿದ ಪ್ರಯತ್ನದ ಬೆಳವಣಿಗೆ.

**पाकज ಪಾಕಜ** (पुं०) 1. ಕಾಚಲವಣ. पाकाज्जायते—जनी (प्रादुर्भावे) "ड:" (३-२-९७)। 2. ಆಹಾರವು ಜೀರ್ಣವಾಗುವ ಸಮಯದಲ್ಲಿ ಬರುವ ಪರಿಣಾಮಶೂಲೆಯೆಂಬ ಒಂದು ಉದರ ರೋಗ. पाके पाककाले जायते—जनी "ड:" (३-२-९७)। (वि०) 3. ಪಾಕದಿಂದ ಉಂಟಾದ.

**पाकपात्र ಪಾಕಪಾತ್ರ, -भाण्ड -ಭಾಂಡ** (न०) ಅಡಿಗೆಯ ಪಾತ್ರೆ, ಅನ್ನ ಮೊದಲಾದುವನ್ನು ಬೇಯಿಸುವ ಪಾತ್ರೆ.

**पाकल ಪಾಕಲ** (पुं०) 1. ಆನೆಯ ಜ್ವರ. "पाकलं कुष्ठ-भेषज्ये पुंसि स्यात् कुञ्जरज्वरे" मेदि०। (न०) 2. ಚಂಗಲುಕೋಷ್ಠ.

**पाकशाला ಪಾಕಶಾಲಾ** (स्त्री०) ಅಡಿಗೆಯ ಮನೆ, ಮಹಾನಸ.

**पाकशासन ಪಾಕಶಾಸನ** (पुं०) ಇಂದ್ರ, ಪಾಕ ದೈತ್ಯನನ್ನು ಶಿಕ್ಷಿಸಿದ ದೇವೇಂದ್ರ. पाकं शासयति—शासु (अनुशिष्टौ) + णिच "ल्युः" (३-१-१३४)। "तत्र निश्चित्य कन्दर्पमगमत्पाकशासनः" कुमा० २-६३।

**पाकशासनि ಪಾಕಶಾಸನಿ** (पुं०) ಇಂದ್ರನ ಮಗ— (1) ಜಯಂತ, (2) ಅರ್ಜುನ, (3) ವಾಲಿ. पाकशासनस्य अपत्यम् "इञ्" (४-१-९५)।

**पाकस्थान ಪಾಕಸ್ಥಾನ** (न०) ಮಹಾನಸ, ಅಡಿಗೆಯಮನೆ, ಪಾಕಶಾಲೆ. पाकस्य स्थानम्।

**पाकारि ಪಾಕಾರಿ** (पुं०) 1. ಇಂದ್ರ, ದೇವತೆಗಳ ಒಡೆಯು, ಪಾಕದೈತ್ಯನ ಶತ್ರು. पाकस्य अरिः। 2. ಬಿಳಿ ಚಿನ್ನ. पाकमृच्छति — ऋ (गतौ) "इः" (उ० ४-१३८)।

**पाकुक ಪಾಕುಕ** (पुं०) ಪಾಚಕ, ಅಡಿಗೆಯವನು. डु पचष् (पाके) "शुकन्" (उ० २-३१)।

**पाक्य ಪಾಕ್ಯ** (पुं०) 1. ಯವಕ್ಷಾರ. (न०) 2. ಅಟ್ಟುಪ್ಪು. (वि०) 3. ಬೇಯಿಸಲ್ಪಡುವ. 4. ಬೇಯಿಸಬೇಕಾದ. डु पचष् (पाके) "ण्यत्" (३-१-१२४)।

**पाक्षिक ಪಾಕ್ಷಿಕ** (वि०) 1. ಪಕ್ಷದಲ್ಲಿ ಉಂಟಾದ, ತಿಂಗಳಿನ 15 ದಿನಗಳಲ್ಲಿ ಬರುವ. पक्षे भवः "ठक्" (४-३-७२)। 2. ಒಂದು ಪಕ್ಷದಲ್ಲಿ ಉಂಟಾದ, ಒಂದು ಪಂಗಡದಲ್ಲಿ ಉಂಟಾದ, ಒಂದು ಕಕ್ಷಿಗೆ ಸಂಬಂಧಿಸಿದ. 3. ಸಂಶಯ ಗ್ರಸ್ತವಾದ ಒಂದು ವಿಷಯಕ್ಕೆ ಸಂಬಂಧಿಸಿದ, ವಿಕಲ್ಪದ ಒಂದು ಪಕ್ಷಕ್ಕೆ ಮಾತ್ರ ಸಂಬಂಧಿಸಿದ.

**पाखण्ड ಪಾಖಂಡ** (पुं०) ವೇದಧರ್ಮವನ್ನು ಖಂಡಿಸುವ ನಾಸ್ತಿಕ ಮತದವನು. पा खण्डयति — खडि (भेदने) + णिच् "अच्" (३-१-१३४)। "पालनाच्च त्रयीधर्मः पाशब्देन निगद्यते। तं खण्डयन्ति ये यस्मात्पाखण्डास्तेन हेतुना"।

**पागल ಪಾಗಲ** (वि०) ಮದ್ಯಪಾನ ಮಾಡಿದವನಂತೆ ಉನ್ಮತ್ತನಾದವನು, ಹುಚ್ಚು ಹಿಡಿದವನು. पिबति सुराम् — पा (पाने) "क्विप्" (३-२-१७८)। पाः, स इव गालयते स्खलति—गल (प्रस्रवणे) णिच् "अच्" (३-१-१३४)। "पागलायाङ्गहीनाय चान्धाय बधिराय च। जडाय चैव मूर्खाय क्लीबतुल्याय पापिने। ब्रह्महत्यां लभेत्सोऽपि यः स्वकन्यां ददाति च" ब्रह्मवै०।

**पाङ्क्त ಪಾಙ್ಕ್ತ** (न०) 1. ಪಂಚಕ, ಪಂಚ (ಐದು) ಸಂಖ್ಯೆಯುಳ್ಳದ್ದು. ಗಾಯತ್ರಿ ಮೊದಲಾದ ಛಂದಸ್ಸುಗಳಲ್ಲಿ ಪಙ್ಕ್ತಿಯು ಐದನೆಯದಾದುದರಿಂದ ಅದರ ಸಂಬಂಧದಿಂದ ಪಾಙ್ಕ್ತ ಪದಕ್ಕೆ ಐದು ಎಂದು ಅರ್ಥ. पङ्क्तिसंख्या अस्त्यस्य "अच्" (५-२-१२७)। पृथिवी अन्तरिक्षम् द्युलोकः दिक् ಮತ್ತು अवान्तरदिशः ಇವು **ಲೋಕ ಪಾಙ್ಕ್ತ**. अग्निः वायुः आदित्यः चन्द्रमाः ಮತ್ತು नक्षत्राणि ಇವು **ದೇವತಾಪಾಙ್ಕ್ತ**. आपः ओषधयः वनस्पतयः आकाशः ಮತ್ತು आत्मा ಇವು **ಭೂತ ಪಾಙ್ಕ್ತ**. ಇವೆಲ್ಲವೂ ಆಧಿಭೂತ ಪಾಙ್ಕ್ತಗಳು.

प्राणः व्यानः अपानः उदानः ಮತ್ತು समानः ಇವು **ವಾಯುಪಾಙ್ಕ್ತ**. चक्षुः श्रोत्रम् मनः वाक् ಮತ್ತು त्वक् ಇವು **ಇಂದ್ರಿಯಪಾಙ್ಕ್ತ**. चर्म मांसम् रक्तम् अस्थि ಮತ್ತು मज्जा ಇವು **ಧಾತುಪಾಙ್ಕ್ತ**. ಇವೆಲ್ಲವೂ ಅಧ್ಯಾತ್ಮಪಾಙ್ಕ್ತಗಳು ಮತ್ತು ಬಾಹ್ಯಪಾಙ್ಕ್ತಗಳು. "पञ्चपदा पङ्क्तिः पाङ्क्तो यज्ञः" ಎಂಬ ಶ್ರುತಿಯಿಂದ ಯಜ್ಞವೂ ಪಾಙ್ಕ್ತ. शां० भा०।

ಅಧಿಭೂತಗಳಲ್ಲಿ ಪೃಥಿವೀ ಮೊದಲಾದ ಪಂಚಕ ಮೊದಲನೆಯದು. अग्नि ಮೊದಲಾದುದು ದ್ವಿತೀಯ ಪಂಚಕ. अप् ಮೊದಲಾದುದು ತೃತೀಯ ಪಂಚಕ.

ಅಧ್ಯಾತ್ಮಗಳಲ್ಲಿ प्राण ಮೊದಲಾದುದು ಪ್ರಥಮ ಪಂಚಕ. चक्षुस् ಮೊದಲಾದುದು ದ್ವಿತೀಯ ಪಂಚಕ. चर्म ಮೊದಲಾದುದು ತೃತೀಯ ಪಂಚಕ. ಈ ಆರು ಪಂಚಕಗಳೂ पञ्चाक्षरा पङ्क्तिः ಎಂದು ಪಂಚಸಂಖ್ಯೆಗಳಿಂದ ಕೂಡಿರುವುದರಿಂದ ಪಾಙ್ಕ್ತಗಳು. रङ्गरा० भा०।

"पञ्चसंख्यायोगात् न केवलं पङ्क्तिच्छन्दःसम्पादनम् पत्नीयजमानदैवमानुषवित्तैः पञ्चभिः सम्पाद्यते इति यज्ञत्वसंपादनमपि कर्तुं शक्यते" आनन्दगिरिटीका। (वि०) 2. ಪಙ್ಕ್ತಿಯಲ್ಲಿರುವ, ಒಂದೇ ಸಾಲಿನಲ್ಲಿರುವ. पङ्क्तौ भवः "अञ्" (४-१-८६)। 3. ಪಙ್ಕ್ತಿಗೆ ಅರ್ಹನಾದ, ಪಙ್ಕ್ತಿಯಲ್ಲಿ ಸೇರಲು ಯೋಗ್ಯನಾದ, "अपाङ्क्तदाने यो दातुर्भवत्यूर्ध्वं फलोदयः। दैवे हविषि पित्र्ये वा तत्प्रवक्ष्याम्यशेषतः" मनु० ३-१६९।

**पाङ्क्तेय ಪಾಙ್ಕ್ತೇಯ** (वि०) ಪಙ್ಕ್ತಿಗೆ ಸೇರಲು ಅರ್ಹನಾದ, ಪಙ್ಕ್ತಿಯಲ್ಲಿ ಕೂಡಲು ಯೋಗ್ಯನಾದ. "अपाङ्क्तेयैर्यदन्यैश्च तद्वै रक्षांसि भुञ्जते" मनु० ३-१७१।

**पाङ्क्त्य ಪಾಙ್ಕ್ತ್ಯ** (वि०) ಪಙ್ಕ್ತಿಗೆ ಯೋಗ್ಯನಾದ, ಪಙ್ಕ್ತಿಯಲ್ಲಿರಲು ಅರ್ಹನಾದ. "अपाङ्क्त्यो यावतः पाङ्क्त्यान् भुञ्जानाननुपश्यति" मनु० ३-१७६।

**पाचक ಪಾಚಕ** (पुं०) 1. ಅಡಿಗೆಯವನು, ಅಡಿಗೆಯೇ ಜೀವಿಕೆಯಾಗಿ ಉಳ್ಳವನು. डु पचष् (पाके) "ण्वुल्" (३-१-१३३)। 2. ಅಡಿಗೆ ಮಾಡುವವನು. 3. ಆಹಾರವನ್ನು ಜೀರ್ಣಮಾಡುವ ಜಾಠರಾಗ್ನಿ. 4. ಪಿತ್ತಧಾತು. "पाचकं रञ्जकं चापि साधकालोचके तथा। भ्राजकञ्चेति पित्तस्य नामानि स्थानभेदतः" भावप्र०।

**पाचन ಪಾಚನ** (पुं०) 1. ಅಗ್ನಿ. पाच्यतेऽनेन — डु पचष् (पाके) + णिच् कर० "ल्युट्" (३-३-११७)। 2. ಕೆಂಪು ಹರಳು ಗಿಡ. (न०) 3. ಪ್ರಾಯಶ್ಚಿತ್ತ, ಪಾಪಕ್ಷಯವುಂಟುಮಾಡುವ ಒಂದು ಕಾರ್ಯ. 4. ದೋಷ

ವನ್ನು ನಾಶಪಡಿಸುವ ಒಂದು ವಸ್ತು. (वि०) 5. ಪಾಕ ಮಾಡಿಸುವ. पचष् + णिच् "ल्युः" (३-१-१३४)।

**पाच्य ಪಾಚ್ಯ** (वि०) ಅವಶ್ಯವಾಗಿ ಬೇಯಿಸಲ್ಪಡಬೇಕಾದ. डु पचष् (पाके) कर्म० "ण्यत्" (३-१-१२४)। न कुत्वम् (७-३-६५)।

**पाञ्चजन्य ಪಾಂಚಜನ್ಯ** (पुं०) 1. ಮಹಾವಿಷ್ಣುವಿನ ಶಂಖ. पञ्चजने दैत्ये भवः "यञ्" (वा० ४-३-५८)। "दृप्यतामथ दैत्यानां ध्वनिरुत्कम्पयन् दिवम्। पाञ्चजन्यप्रणादेन पर्यभूयत भूयसा" याद० १६-८३। 2. ಅಗ್ನಿ. 3. ಜಂಬುಹುಲ್ಲು.

**पाञ्चजन्यधर ಪಾಂಚಜನ್ಯಧರ** (पुं०) ವಿಷ್ಣು. पाञ्चजन्यस्य धरः—धृ (धारणे) "अच्" (३-१-१३४)।

**पाञ्चदश ಪಾಂಚದಶ** (वि०) ತಿಂಗಳಿನ ಹದಿನೈದನೆಯ ದಿನದಲ್ಲಿ ಬರುವ, ಹುಣ್ಣಿಮೆಯ ದಿನದಲ್ಲಿರುವ. पञ्चदश्यां पौर्णमास्यां भवः "अण्" (४-३-१६)।

**पाञ्चभौतिक ಪಾಂಚಭೌತಿಕ** (वि०) ಪೃಥಿವೀ ಮೊದಲಾದ ಪಂಚಭೂತಗಳಿಂದ ಉಂಟಾದ ಶರೀರ ಮುಂತಾದುದು. पञ्चभ्यो भूतेभ्य आगतः "ठक्" (४-३-७४)।

**पाञ्चवर्षिक ಪಾಂಚವರ್ಷಿಕ** (वि०) ಮುಂದಿನ ಐದು ವರ್ಷಗಳಲ್ಲಿ ನಡೆಯುವ, ಐದು ವರ್ಷಗಳ ಕಾಲದಲ್ಲಿ ಆಗಬೇಕಾದ. पञ्च वर्षाः परिमाणमस्य "ठञ्" (५-१-५७)।

**पाञ्चशब्दिक ಪಾಂಚಶಬ್ದಿಕ** (न०) ಐದು ವಿಧ ಶಬ್ದಗಳಿಂದ ನಡೆಯುವ ವಾದ್ಯ. पञ्चभिः शब्दैः निर्वृत्तम्—"ठक्" (५-१-७९)। (1) ಅಂಗಜ, (2) ಚರ್ಮಜ, (3) ತಂತ್ರಜ, (4) ಕಾಂಸ್ಯಜ ಮತ್ತು (5) ಪೂತ್ಕೃತಗಳೆಂದು ಶಬ್ದವು ಐದು ವಿಧ. "अङ्गजं चर्मजं चैव तन्त्रजं कांस्यजं तथा। फूत्कृतं चेति मुनिभिः कथितं पाञ्चशब्दिकम्" स्कान्द०।

**पाञ्चार्थिक ಪಾಂಚಾರ್ಥಿಕ** (पुं०) 1. ಪಾಶುಪತ ಮತ. पञ्च अर्थाः कृत्यानि पाशा वा यत्र। (वि०) 2. ಪಾಶುಮತಾನುಯಾಯಿ.

**पाञ्चाल ಪಾಂಚಾಲ** (पुं०) 1. ಪಂಚಾಲ ದೇಶದ ದೊರೆ. पञ्चालानां राजा "अञ्". (वा० ४-१-१६६)। (पुं०ब०व०) 2. ಪಂಚಾಲ ದೇಶದ ಜನರು. "पाञ्चालाश्चैव मत्स्याश्च शूरसेनाः पटच्चराः" भा० विरा०। 3. ಪಂಚಾಲ ದೇಶ. पञ्चभिः प्रधाननदीभिः अलति—अल (भूषणपर्याप्तवारणेषु) "अच्" (३-१-१३४)। स्वार्थे "अण्"। ಪಂಚಾಲ ದೇಶವು ಹಿಮಾಲಯದಿಂದ ಚರ್ಮಣ್ವತೀ ನದಿಯವರೆಗೂ ದೆಹಲಿಗೆ ವಾಯವ್ಯ ದಿಕ್ಕಿನಲ್ಲಿರುವುದು. ಇದು ದಕ್ಷಿಣ ಮತ್ತು ಉತ್ತರ ಪಂಚಾಲಗಳೆಂದು ಎರಡು ಭಾಗ ಮಾಡಲ್ಪಟ್ಟು, ಗಂಗಾ ನದಿಯಿಂದ ಬೇರ್ಪಡಿಸಲ್ಪಟ್ಟಿದೆ. ದಕ್ಷಿಣಪಂಚಾಲವು ದ್ರುಪದರಾಜನ ರಾಜ್ಯ. ಇದರ ರಾಜಧಾನಿ ಕಾಂಪಿಲ್ಯ. ದಕ್ಷಿಣಪಂಚಾಲವು ಗಂಗಾ ನದಿಯ ದಕ್ಷಿಣ ತೀರದಿಂದ ಚರ್ಮಣ್ವತೀ ನದಿಯವರೆಗೂ ಉತ್ತರಪಂಚಾಲವು ಗಂಗಾನದಿಯಿಂದ ಹಿಮಾಚಲದವರೆಗೂ ಹರಡಿರುವುದು. (न०) 4. ಶಾಸ್ತ್ರ. पञ्चानां विषयाणामन्यतोऽनवगतानां प्रकाशनायालमिति पञ्चालं शास्त्रम्-स्वार्थे "अण्"। "प्रवृत्तं च निवृत्तं च शास्त्रं पञ्चालसंज्ञकम्"। (वि०) 5. ಪಂಚಾಲ ದೇಶದಲ್ಲಿರುವ, -ದೇಶದಲ್ಲಿ ಹುಟ್ಟಿದ. पञ्चाले भवः "अण्" (४-३-५३)।

**पाञ्चालिका ಪಾಂಚಾಲಿಕಾ** (स्त्री०) ಪುತ್ಥಳಿ, ವಸ್ತ್ರ ಅಥವಾ ದಂತದಿಂದ ತಯಾರಿಸಿದ ಬೊಂಬೆ. पाञ्चाली स्वार्थे "कन्" ह्रस्वः "टाप्" च। "स्तन्यत्यागात्प्रभृति सुमुखी दन्तपाञ्चालिकेव" मालती० १०-५।

**पाञ्चाली ಪಾಂಚಾಲೀ** (स्त्री०) 1. ಪುತ್ಥಳಿ, ವಸ್ತ್ರ ದಂತ ಮೊದಲಾದುವುಗಳಿಂದ ಮಾಡಿದ ಬೊಂಬೆ. पञ्चभिर्वर्णैरल्यते—अल "घञ्" (३-३-१९)। "ङीप्" (४-१-४१)। 2. ದ್ರೌಪದಿ, ಪಂಚಾಲರಾಜನ ಪುತ್ರಿ. पाञ्चाले भवा "अण्" (४-३-५३)। "ङीप्" (४-१-१५)। "पाञ्चाल्या मम दुर्नयोपजनितस्तीर्णो निकारार्णवः" वेणी० ६-४५।

**पाट् ಪಾಟ್** (अव्य०) ಸಂಬೋಧನೆ. "संबोधने ननु प्याट् पाट् हे है भो अङ्ग हन्त च" वैज०।

**पाटक ಪಾಟಕ** (पुं०) 1. ತಟ, ದಡ, ತೀರಪ್ರದೇಶ. पाटयति—पट (भाषार्थे)+णिच् "ण्वुल्" (३-१-१३३)। 2. ಒಂದು ಹಳ್ಳಿಯ ಒಂದು ಭಾಗ. 3. ಪಗಡೆಯಾಟದಲ್ಲಿ ಕಾಯಿಗಳನ್ನು ನಡೆಸುವುದು. 4. ಒಂದು ವಿಧ ವಾದ್ಯ. 5. ಮಹಾಕಿಷ್ಕು. 6. ಮೂಲದ್ರವ್ಯವು ಕಡಮೆಯಾಗುವಿಕೆ. "पाटको रोधसि ग्रामैकदेशेऽक्षादिचालने। वाद्यभेदे महाकिष्कौ मूलस्यापचयेऽपि च" हैम०। (वि०) 7. ಭೇದಿಸುವ, ಸೀಳುವ, ಕತ್ತರಿಸುವ, ತುಂಡುಮಾಡುವ.

**पाटच्चर ಪಾಟಚ್ಚರ** (पुं०) ಚೋರ, ಕಳ್ಳ, ತಸ್ಕರ. पाटयन् छिन्दन् चरति—चर (गतौ) "अच्" (३-१-१३४)। पृषो०। "मन्त्रिन्, कुलिङ्गसाहसिकत्वं किलैतस्य पापपाटच्चरस्य" प्रद्यु० वि०।

**पाटन ಪಾಟನ** (नं०) 1. ಕತ್ತರಿಸುವುದು, ಛೇದಿಸುವುದು, ತುಂಡುಮಾಡುವುದು. पट (भाषार्थे) + णिच् "ल्युट्" (३-३-११५)। "अस्थिभङ्गं यवां कृत्वा लाङ्गूलच्छेदनं तथा। पाटने कर्णशृङ्गाणां माषार्धं तु यवान् पिबेत्"। 2. ಛೇದಿಸುವುದು, ಎರಡು ಹೋಳು ಮಾಡುವುದು. स्त्रियां "टाप्" (४-१-४)। –ना –ನಾ.

**पाटनीय ಪಾಟನೀಯ** (वि०) 1. ಕತ್ತರಿಸಲ್ಪಡುವ, ಛೇದಿಸಲ್ಪಡುವ. पट (भाषार्थे) + णिच् "अनीयर्" (३-१-९६)। 2. ಕತ್ತರಿಸಬೇಕಾದ, ತುಂಡುಮಾಡಬೇಕಾದ. 3. ಸೀಳಲ್ಪಡುವ. 4. ಸೀಳಬೇಕಾದ. 5. ಚುಚ್ಚಿ ರಂಧ್ರ ಮಾಡಲ್ಪಡುವ. 6. ರಂಧ್ರ ಮಾಡಬೇಕಾದ. "तव्यः" (३-१-९६)। –यितव्यः –ಯಿತವ್ಯಃ.

**पाटयत् ಪಾಟಯತ್** (वि०) 1. ಕತ್ತರಿಸುತ್ತಿರುವ, ಛೇದಿಸುತ್ತಿರುವ, ತುಂಡುಮಾಡುತ್ತಿರುವ. पट (भाषार्थे) + णिच् "शतृ" (३-२-१२४)। 2. ಚುಚ್ಚುತ್ತಿರುವ ಚುಚ್ಚಿ ರಂಧ್ರಮಾಡುತ್ತಿರುವ. 3. ಛೇದಿಸುತ್ತಿರುವ, ಎರಡು ಭಾಗ ಮಾಡುತ್ತಿರುವ, ಎರಡು ಹೋಳು ಮಾಡುತ್ತಿರುವ. स्त्रियां "ङीप्" (४-१-६)। –यन्ती –ಯಂತೀ.

**पाटयितृ ಪಾಟಯಿತೃ** (वि०) 1. ಕತ್ತರಿಸುವವನು, ತುಂಡುಮಾಡುವವನು. पट (भाषार्थे) + णिच् "तृच्" (३-१-१३३)। 2. ಎರಡು ಭಾಗಮಾಡುವವನು, ಎರಡು ಹೋಳುಮಾಡುವವನು. 3. ಚುಚ್ಚಿ ರಂಧ್ರ ಮಾಡುವವನು. स्त्रियां "ङीप्" (४-१-५)। –यित्री –ಯಿತ್ರೀ.

**पाटल ಪಾಟಲ** (पुं०) 1. ಬಿಳುಪು ಮತ್ತು ಕೆಂಪು ಬೆರೆತ ಮಿಶ್ರವರ್ಣ. पट (गतौ) + णिच् "कलः" (उ० १-१०६)। "कपोलपाटलादेशि बभूव रघुचेष्टितम्" रघु० ४-६८। 2. ಕೆಂಪು ಬತ್ತ. (स्त्री०) –ला –ಲಾ, –लिः –ಲಿಃ. 3. ಹಸುರು ಪಾದರಿ ಗಿಡ. (स्त्रीन०) –ला –ಲಾ, –लम् –ಲಮ್. 4. ಹಸುರು ಪಾದರಿ ಹೂವು. "पाटलसंसर्गसुरभिवनवाताः" शाकु० १-३। "पाटला पाटलो स्त्री स्यादस्य पुष्पे पुनर्न ना" मेदि०। (वि०) 5. ಬಿಳುಪು ಮತ್ತು ಕೆಂಪು ಬೆರೆತ ಮಿಶ್ರವರ್ಣ. "उच्छ्वासिभिर्बहलपाटलवालुराबैः" माघ० ५-२१। "वाच्यवाच्ये पुमान् श्वेतरक्तवर्णेऽपि वाच्यवत्" मेदि०।

**पाटला ಪಾಟಲಾ, –लि –ಲಿ** (स्त्री०) 1. ಹಸುರು ಪಾದರಿ ಗಿಡ. (स्त्रीन०) 2. ಪಾದರಿ ಹೂವು. "स पाटलायाः स्तवकं प्रकम्पितः" नैष० १-९५।

**पाटलावती ಪಾಟಲಾವತೀ** (स्त्री०) ದುರ್ಗಾದೇವಿ.

**पाटलिपुत्र ಪಾಟಲಿಪುತ್ರ** (नं०) ಮಗಧ ದೇಶದ ರಾಜಧಾನಿ. ಇದರ ಪೂರ್ವದ ಹೆಸರು ಕುಸುಮಪುರ. ಈಗ ಇದು ಪಾಟನಾ ಎಂದು ಪ್ರಸಿದ್ಧವಾಗಿದೆ. ಇದು ಮಗಧ ದೇಶದ ದೊರೆಯಾಗಿದ್ದ ಅಜಾತಶತ್ರುವಿನ ರಾಜಧಾನಿ. ಪೂರ್ವದಲ್ಲಿ ಗಿರಿವ್ರಜವು ಮಗಧ ದೇಶದ ರಾಜಧಾನಿಯಾಗಿದ್ದು ಅನಂತರ ಪಾಟಲಿಪುತ್ರವು ರಾಜಧಾನಿಯಾಯಿತು. ಕಾಲಕ್ರಮದಲ್ಲಿ ಮಗಧ ದೇಶವನ್ನು ನಂದರು ಆಳುತ್ತಿದ್ದರು. ಅನಂತರ ಚಾಣಕ್ಯನ ತಂತ್ರದಿಂದ ನಂದರ ಅಸಹನೆ ಮತ್ತು ದ್ವೇಷಕ್ಕೆ ಗುರಿಯಾಗಿದ್ದ ಚಂದ್ರಗುಪ್ತನು ಇದರ ರಾಜನಾದನು. "अये! कथमप्रवृत्तकौमुदीमहोत्सवं कुसुमपुरं पश्यामि? अथ त्वया अस्मद्वचनात् आघोषितः कुसुमपुरे कौमुदीमहोत्सवः?" मुद्रा० ३। ಈ ಪಾಟಲಿಪುತ್ರದಲ್ಲಿ ಸುದರ್ಶನ ರಾಜನು ರಾಜ್ಯವಾಳುತ್ತಿದ್ದಾಗ ರಾಜಕುಮಾರರಿಗೆ ನೀತಿಶಾಸ್ತ್ರವನ್ನು ಬೋಧಿಸಲು ವಿಷ್ಣುಶರ್ಮನೆಂಬ ಪಂಡಿತನೊಬ್ಬನು ಪಂಚತಂತ್ರ ಮತ್ತು ಹಿತೋಪದೇಶಗಳನ್ನು ರಚಿಸಿದನು.

**पाटलिमन् ಪಾಟಲಿಮನ್** (पुं०) ಬಿಳುಪು ಮತ್ತು ಕೆಂಪು ಬೆರೆತ ಮಿಶ್ರವರ್ಣ. पाटलस्य भावः "इमनिच्" (५-१-१२२)।

**पाटल्या ಪಾಟಲ್ಯಾ** (स्त्री०) ಹಸುರು ಪಾದರಿ ಹೂವಿನ ರಾಶಿ. पाटलस्य समूहः "यः" (४-२-४९)।

**पाटव ಪಾಟವ** (नं०) 1. ಜಾಣತನ, ನೈಪುಣ್ಯ, ದಕ್ಷತೆ, ಸಾಮರ್ಥ್ಯ. पटोर्भावः "अण्" (५-१-१३१)। "पाटवं संस्कृतोक्तिषु" हितो०। 2. ಲವಲವಿಕೆ, ಚುರುಕಾಗಿರುವಿಕೆ. "ह्रीविमोहविरहादुपलेभे पाटवं नु हृदयं नु वधूभिः" किरा० ९-५४। 3. ಶಕ್ತಿ. 4. ಆರೋಗ್ಯ.

**पाटविक ಪಾಟವಿಕ** (वि०) 1. ಪಟುವಾಗಿರುವ, ಚುರುಕಾಗಿರುವ, ಲವಲವಿಕೆಯಿಂದ ಕೂಡಿದ. पाटवमस्त्यस्य "ठन्" (५-२-११५)। "रथे रयसनिर्भिन्नद्विपपाटविकासिनि" माघ० १९-५६। 2. ಧೂರ್ತ, ವಂಚಕ, ಮೋಸಗಾರ. "पटः पाटविको धूर्तः स्मृतः" त्रिकाण्ड०। 3. ಶಕ್ತ, ಸಮರ್ಥ. 4. ಆರೋಗ್ಯಶಾಲಿ.

**पाटित ಪಾಟಿತ** (वि०) 1. ಸೀಳಲ್ಪಟ್ಟ, ಎರಡು ಭಾಗ ಮಾಡಲ್ಪಟ್ಟ. पट (भाषार्थे)+णिच् "क्तः" (३-२-१०२)। 2. ಚುಚ್ಚಲ್ಪಟ್ಟ, ಚುಚ್ಚಿ ರಂಧ್ರ ಮಾಡಲ್ಪಟ್ಟ. "नाभिषामनुपदं समस्पृशद् मंपाटितत्वचेन पाणिना" रघु० ११-३१। 3. ಕಣ್ಣು ಕೊರೆಯಲ್ಪಟ್ಟ (ಗೋಡೆ). "कन्यासु भित्तिषु

मया निशि - पाटितासु क्षारक्षतासु विषमासु च कल्पनासु" मृच्छ० ३-१४। 4. ಕತ್ತರಿಸಲ್ಪಟ್ಟ, ತುಂಡು ಮಾಡಲ್ಪಟ್ಟ.

**पाटीर ಪಾಟೀರ** (पुं०) 1. ಚಂದನ, ಗಂಧ. पटीर स्वार्थे "अण्" (५-४-३८)। "पाटीरद्रुमवर्णनेन कविभिर्मूढैर्दिनं नीयते"। 2. ಮೂಲಂಗಿ ಗೆಡ್ಡೆ. 3. ತಗರ. 4. ಜಲ್ಲಡೆ, ಒಂದರಿ. 5. ಮೇಘ, ಮೋಡ. 6. ಕ್ಷೇತ್ರ, ಜಮೀನು, ವ್ಯವಸಾಯದ ಭೂಮಿ. 7. ಬಿದಿರಿನ ರಸ. 8. ಕೆಟ್ಟಗಾಳಿಯ ಸೇವನೆಯಿಂದ ಉಂಟಾಗುವ ಜ್ವರ. "पाटीरो मूलके वङ्गे तितऊ वान्तिकेऽम्बुदे। केदारे वेणुसारे च" हेम०।

**पाट्य ಪಾಟ್ಯ** (वि०) 1. ಛೇದಿಸಲ್ಪಡುವ, ಕತ್ತರಿಸಲ್ಪಡುವ. पट + णिच् कर्म० "यत्" (३-१-९७)। 2. ಸೀಳಲ್ಪಡುವ, ಎರಡು ಭಾಗವಾಗಿ ಮಾಡಲ್ಪಡುವ.

**पाठ ಪಾಠ** (पुं०) 1. ಶಾಸ್ತ್ರಾಭ್ಯಾಸ, ವೇದಾಧ್ಯಯನ. पठ (व्यक्तायां वाचि) भावे "घञ्" (३-३-१८)। 2. ಪ್ರವಚನ ಮಾಡುವುದು, ಬೋಧಿಸುವುದು, ಅಧ್ಯಾಪನ, ಓದಿಸುವುದು. पठ + णिच् "अच्" (३-३-५६)। ಪ್ರವಚನಸಮಯದಲ್ಲಿ ಶಿಕ್ಷಕನಲ್ಲಿ ಸಂಭವಿಸಬಹುದಾದ 18 ವಿಧ ದೋಷಗಳು : (1) शङ्कितम्, (2) भीतम्, (3) उद्घुष्टम्, (4) अव्यक्तम्, (5) अनुनासिकम्, (6) विस्वरम्, (7) विरसम्, (8) विश्लिष्टम्, (9) विसमाहितम्, (10) काकस्वरम्, (11) निरसितम्, (12) स्थानविवर्जितम्, (13) व्याकुलम्, (14) तालहीतम्, (15) सगीतम्, (16) सशिरःकम्पम्, (17) अल्पकण्ठम् ಮತ್ತು (18) अनर्थकम् मार्क०। 3. ಓದಬೇಕಾದ ಗ್ರಂಥಭಾಗ. पठ्यते — पठ कर्म० "घञ्" (३-३-१९)।

**पाठक ಪಾಠಕ** (वि०) 1. ಓದುವವನು, ಅಭ್ಯಾಸಮಾಡುವವನು, ಕಲಿಯುವವನು. पठ (व्यक्तायां वाचि) "ण्वुल्" (३-१-१३३)। 2. ಪಠನಮಾಡುವವನು, ಇತಿಹಾಸ ಪುರಾಣ ಕಾವ್ಯಾದಿಗಳನ್ನು ಓದುವವನು. 3. ಅಧ್ಯಾಪಕ, ಪಾಠ ಹೇಳುವವನು, ಪ್ರವಚನಮಾಡುವವನು. पठ + णिच् "ण्वुल्" (३-१-१३३)।

**पाठच्छेद ಪಾಠಚ್ಛೇದ** (पुं०) 1. ಪಾಠದ ವಿರಾಮ, ಪ್ರವಚನದ ನಿಲುಕಡೆ, ಓದುವಾಗ ಅಲ್ಲಲ್ಲಿ ನಿಲ್ಲಿಸುವುದು, ಓದುವಾಗ ಮಧ್ಯೆ ಮಧ್ಯೆ ಅವಕಾಶ ಕೊಡುವುದು. पाठस्य छेदः। 2. ಮಧ್ಯೆ ಮಧ್ಯೆ ಬಿಡಿಸಿ ಓದುವುದು.

**पाठदोष ಪಾಠದೋಷ** (पुं०) ತಪ್ಪಾಗಿ ಓದುವುದು.

**पाठन ಪಾಠನ** (न०) ಪ್ರವಚನಮಾಡುವುದು, ಬೋಧಿಸುವುದು, ಶಿಕ್ಷಣ, ಕಲಿಸುವುದು, ಓದಿಸುವುದು. पठ (व्यक्तायां वाचि) + णिच् "ल्युट्" (३-३-११५)।

**पाठशाला ಪಾಠಶಾಲಾ** (स्त्री०) ವಿದ್ಯಾಲಯ, ವಿದ್ಯಾಶಾಲೆ, ವಿದ್ಯೆಯನ್ನು ಕಲಿಯುವ ಸ್ಥಳ, ಶಿಕ್ಷಣಶಾಲೆ.

**पाठा ಪಾಠಾ** (स्त्री०) ಅಗುರುಶುಂಠಿ. "पाठाम्बष्ठा विद्धकर्णी स्थापनी श्रेयसी शिवा" अम०।

**पाठित ಪಾಠಿತ** (वि०) ಪ್ರವಚನಮಾಡಲ್ಪಟ್ಟ, ಕಲಿಸಲ್ಪಟ್ಟ, ಓದಿಸಲ್ಪಟ್ಟ. पठ (व्यक्तायां वाचि) + णिच् "क्तः" (३-२-१०२)। "विष्णुशर्मणापि तदर्थं पञ्चतन्त्राणि रचयित्वा पाठितास्ते राजपुत्राः" पञ्चतं।

**पाठिन् ಪಾಠಿನ್** (वि०) 1. ಓದುವವನು, ಅಭ್ಯಾಸಮಾಡುವವನು, ಕಲಿಯುವವನು. पठ (व्यक्तायां वाचि) "णिनिः" (३-१-१३४)। 2. ವಿದ್ಯಾಭ್ಯಾಸ ಮಾಡಿದವನು, ವಿದ್ಯಾಭ್ಯಾಸವನ್ನು ಮುಗಿಸಿದವನು.

**पाठीन ಪಾಠೀನ** (पुं०) 1. ಪಾಠಕ, ಪುರಾಣಾದಿಗಳನ್ನು ಪಠನಮಾಡುವವನು. 2. ಗುಗ್ಗುಳದ ಗಿಡ. 3. ಸಾವಿರ ಕೋರೆಹಲ್ಲುಗಳುಳ್ಳ ಒಂದು ಜಾತಿಯ ಮೀನು. "पाठीनो मीनभेदे स्यात्पाठके गुग्गुलद्रुमे" मेदि०। "अवाप्तकिञ्जल्कविभेदमुच्चकैः विवृत्तपाठीनपराहतं पयः" किरा० ४-५।

**पाठ्य ಪಾಠ್ಯ** (वि०) 1. ಅಧ್ಯಯನ ಮಾಡಬೇಕಾದ, ಓದಬೇಕಾದ. 2. ಅಧ್ಯಯನ ಮಾಡಲ್ಪಡುವ, ಓದಲ್ಪಡುವ. पठ (व्यक्तायां वाचि) कर्म० "ण्यत्" (३-१-१२४)।

**पाण ಪಾಣ** (पुं०) 1. ಪಾಣಿ, ಹಸ್ತ, ಕೈ. पण्यतेऽनेन — पण (व्यवहारे स्तुतौ च) कर० "घञ्" (३-३-११७)। 2. ಪಣ, ಪಂದ್ಯ, ಪಂತ, ಬಾಜಿ. पण भावे "घञ्" (३-३-१८)। "दीव्यामहे पार्थिव मा विशङ्कां कुरुष्व पाणं च चिरञ्च मा कृथाः" भा० सभा० ८४-८।

**पाणि ಪಾಣಿ** (पुं०) 1. ಹಸ್ತ, ಕೈ. पणायन्त्यनेन—पण (व्यवहारे स्तुतौ च) + आयः "इण्" आयस्य लुक् च (उ० ४-१३२)। "दन्तालिकाधरणनिश्चलपाणियुग्ममर्धोदितो हरिरिवोदयशैलमध्नः" माघ० ५-५६। (स्त्री०) 2. ಅಂಗಡಿಬೀದಿ, ಮಾರುಕಟ್ಟೆ.

**पाणिकच्छपिका ಪಾಣಿಕಚ್ಛಪಿಕಾ** (स्त्री०) ಕೂರ್ಮ ಮುದ್ರೆ.

**पाणिगृहीती ಪಾಣಿಗೃಹೀತೀ** (स्त्री०) ಭಾರ್ಯೆ, ಧರ್ಮಪತ್ನಿ, ಮದುವೆಯಾದ ಹೆಂಡತಿ. पाणिः गृहीतो

यस्याः "ङीष्" (वा० ४-१-५२)। पाणिगृहीती भार्यायां पाणिगृहीतान्या सि० कौ०।

**पाणिग्रह ಪಾಣಿಗ್ರಹ** (पुं०) ವಿವಾಹ, ಮದುವೆ. पाणिर्गृह्यतेऽत्र—ग्रह (उपादाने) "अप्" (३-३-५८)।

**पाणिग्रहण ಪಾಣಿಗ್ರಹಣ** (न०) ವಿವಾಹ, ಮದುವೆ. पाणिर्गृह्यतेऽत्र—ग्रह (उपादाने) अधि० "ल्युट्" (३-३-११७)। "प्रयुक्तपाणिग्रहणं यदन्यद्वधूवरं पुष्यति कान्तिमग्र्याम्" कुमा० ७-७८।

**पाणिग्रहणिक ಪಾಣಿಗ್ರಹಣಿಕ** (वि०) ವಿವಾಹಸಂಬಂಧವಾದ (ಮಂತ್ರ). पाणिग्रहणं प्रयोजनमस्य "ठक्" (५-१-१०९)। "पाणिग्रहणिका मन्त्रा नियतं दारलक्षणम्। तेषां निष्ठा तु विज्ञेया विद्वद्भिः सप्तमे पदे" मनु० ८-२२७।

**पाणिग्रहीतृ ಪಾಣಿಗ್ರಹೀತೃ** (पुं०) ಪತಿ, ಗಂಡ, ಮದುವೆಯಾದವನು, ಮದವಣಿಗ. पाणिं गृह्णाति—ग्रह (उपादाने) "तृच्" (३-१-१३३)।

**पाणिग्राह ಪಾಣಿಗ್ರಾಹ** (पुं०) ಪತಿ, ಮದುವೆಯಾದ ಗಂಡ. पाणिं गृह्णाति—ग्रह (उपादाने) "अण्" (३-२-१)। "बाल्ये पितुर्वशे तिष्ठेत्पाणिग्राहस्य यौवने" मनु० ८-१४८।

**पाणिघ ಪಾಣಿಘ** (वि०) 1. ಕೈಯಿಂದ ಹೊಡೆಯುವವನು. पाणिना हन्ति—हन (हिंसागत्योः) "टक्" टिलोपः घत्वं च निपा० (३-२-५५)। 2. ಕೈಯಿಂದ ಮೃದಂಗ ಮೊದಲಾದ ವಾದ್ಯಗಳನ್ನು ಬಾರಿಸುವವನು.

**पाणिज ಪಾಣಿಜ** (पुं०) ನಖ, ಉಗುರು. पाणौ जायते—जनी (प्रादुर्भावे) "डः" (३-२-९७)।

**पाणितल ಪಾಣಿತಲ** (न०) ಹಸ್ತ, ಅಂಗೈ.

**पाणिन ಪಾಣಿನ** (पुं०) ಪಣಿಯೆಂಬ ಮುನಿಯ ಮಗ, ಪಾಣಿನಿಮುನಿ. पणिनो मुनेरपत्यम् "अण्" (४-१-९२)। न टिलोपः (६-४-१६५)।

**पाणिनि ಪಾಣಿನಿ** (पुं०) ಪಾಣಿನಿ ಮುನಿ. ಪರಮೇಶ್ವರನ ಅನುಗ್ರಹದಿಂದ ಚತುರ್ದಶ ಸೂತ್ರಗಳನ್ನು (ಅಕ್ಷರ ಸಮಾಮ್ನಾಯವನ್ನು) ಪಡೆದು ಸಮಗ್ರ ವ್ಯಾಕರಣಶಾಸ್ತ್ರವನ್ನು ರಚಿಸಿದ ಒಬ್ಬ ಮುನಿ. पणिनो युवापत्यम् "इञ्" (४-१-९५)। "येनाक्षरसमाम्नायमधिगम्य महेश्वरात्। कृत्स्नं व्याकरणं प्रोक्तं तस्मै पाणिनये नमः"। ಈ ಮುನಿಯು अष्टाध्यायीसूत्रपाठः गणपाठः धातुपाठः लिङ्गानुशासनम् ಮತ್ತು शिक्षा ಎಂಬ ಐದು ಗ್ರಂಥಗಳನ್ನು ರಚಿಸಿರುವನು.

**पाणिनीय ಪಾಣಿನೀಯ** (वि०) 1. ಪಾಣಿನಿಯಲ್ಲಿ ಭಕ್ತಿಯುಳ್ಳ ಶಿಷ್ಯರು. पाणिनो भक्तिरस्य "छः" (४-२-११४)। "अकृतव्यूहाः पाणिनीयाः" परि० ५७। 2. ಪಾಣಿನಿಯಿಂದ ಹೇಳಲ್ಪಟ್ಟ. पाणिनिना प्रोक्तम् "छः" (४-३-१०१)। 3. ಪಾಣಿನಿ ಮುನಿಯಿಂದ ಮೊದಲು ತಿಳಿಯಲ್ಪಟ್ಟ. पाणिनिना उपज्ञातम् "छः" (४-३-११५)। 4. ಪಾಣಿನಿಸಂಬಂಧವಾದ. पाणिनेरिदम् "छः" (४-२-११४)।

**पाणिन्धम ಪಾಣಿಂಧಮ** (वि०) ಕೈಯಿಂದ ಶಬ್ದ ಮಾಡಲ್ಪಡುವ, ಹಸ್ತತಾಡನದಿಂದ ಶಬ್ದ ಮಾಡಲ್ಪಡುವ (ದಾರಿ). ಅಂಧಕಾರದಿಂದ ಅವ್ಯಕ್ತವಾದ ಮಾರ್ಗದಲ್ಲಿ ದುಷ್ಟ ಪ್ರಾಣಿಗಳನ್ನು ಅಟ್ಟಲು ಕೈಗಳನ್ನು ಹೊಡೆದು ಶಬ್ದಮಾಡುವುದುಂಟು. पाणयो ध्मायन्ते अस्मिन्—पाणि + ध्मा (शब्दाग्निसंयोगयोः) "खश्" (३-२-३७)। निपा०।

**पाणिपाद ಪಾಣಿಪಾದ** (न०) ಕೈಗಳು ಮತ್ತು ಕಾಲುಗಳು. पाण्योः पादयोश्च समाहारः। एकवद्भावः (२-४-२)।

**पाणिपीडन ಪಾಣಿಪೀಡನ** (न०) 1. ಪಾಣಿಗ್ರಹಣ, ವಿವಾಹ, ಮದುವೆ. पाणिः पीड्यतेऽत्र—पीड (अवगाहने) अधि० "ल्युट्" (३-३-११७)। "पाणिपीडनविधेरनन्तरं शैलराजदुहितुर्हरं प्रति। भावसाध्वसपरिग्रहादभूत् कामदोहदमनोहरं वपुः" कुमा० ८-१। 2. ಕೈಯಿಂದ ಕೈಯನ್ನು ಹಿಸುಕುವುದು. पाणेः पीडनम्।

**पाणिबन्ध ಪಾಣಿಬಂಧ** (पुं०) ವಿವಾಹ, ಮದುವೆ. पाणिर्बध्यतेऽत्र—बन्ध (बन्धने) "घञ्" (३-३-१२१)।

**पाणिभुज् ಪಾಣಿಭುಜ್** (पुं०) ಉದುಂಬರ ವೃಕ್ಷ, ಅತ್ತಿ ಮರ.

**पाणिरुह ಪಾಣಿರುಹ** (पुं०) ನಖ, ಉಗುರು. पाणौ रोहति—रुह (बीजजन्मादौ) "कः" (३-१-१३५)।

**पाणिवाद ಪಾಣಿವಾದ** (पुं०) 1. ಕೈಗಳನ್ನು ತಟ್ಟುವವನು, ಕೈ ತಟ್ಟಿ ಶಬ್ದಮಾಡುವವನು. 2. ಕೈಗಳಿಂದ ಮೃದಂಗ ಮೊದಲಾದುವನ್ನು ವಾದಿಸುವವನು.

**पाणिसर्ग्या ಪಾಣಿಸರ್ಗ್ಯಾ** (स्त्री०) ರಜ್ಜು, ಹಗ್ಗ. पाणिभ्यां सृज्यतेऽसौ—सृज (विसर्गे) "ण्यत्" (वा० ३-१-१२२)। पाणिसर्ग्या रज्जुः सि० कौ०।

**पाणीकरण ಪಾಣೀಕರಣ** (न०) ವಿವಾಹ, ಮದುವೆ. पाणौ क्रियतेऽस्मिन्—कृञ् अधि० "ल्युट्" (३-३-११७)।

**पाण्डर ಪಾಂಡರ** (पुं०) 1. ಮರುವಕ ವೃಕ್ಷ, ಮಂಗಾರೆ ಗಿಡ. 2. ಶ್ವೇತವರ್ಣ. 3. ಒಂದು ಪರ್ವತ. (वि०) 4. ಶ್ವೇತವರ್ಣದ, ಬಿಳುಪಾದ. पाण्डरः श्वेतवर्णोऽस्त्यस्य । (न०) 5. ಗೈರಿಕ ಧಾತು. 6. ಕುಂದಪುಷ್ಪ, ಮೊಲ್ಲೆ ಹೂವು.

**पाण्डव ಪಾಂಡವ** (पुं०) ಪಾಂಡುರಾಜನ ಪುತ್ರರಾದ (1) ಧರ್ಮರಾಜ, (2) ಭೀಮ, (3) ಅರ್ಜುನ, (4) ನಕುಲ ಮತ್ತು (5) ಸಹದೇವ. पाण्डोरपत्यम् "अण्" (४-२-७१)॥ "यः स कौरव्यदायादः पाण्डुर्नाम नराधिपः । कामभोगान् परित्यज्य शतशृङ्गमितो गतः । ब्रह्मचर्यव्रतस्थस्य तस्य दिव्येन हेतुना । साक्षाद्धर्मादयं पुत्रस्तत्र जातो युधिष्ठिरः । तथैनं बलिनां श्रेष्ठं तस्य राज्ञो महात्मनः । मातरिश्वा ददौ पुत्रं भीमं नाम महाबलम् । पुरन्दरादयं जज्ञे कुन्त्यां सत्यपराक्रमः । यस्य कीर्तिर्महेष्वासान् सर्वानभिभविष्यति । यौ तु माद्री महेष्वासावसूत पुरुषोत्तमौ । अश्विभ्यां पुरुषव्याघ्राविमौ तावपि तिष्ठतः" भा० आदि० १२५ । "भजतां पांडवः स्वर्गमवत्विन्द्रः तपस्विनः" माघ० २-६५ ।

**पाण्डवीय ಪಾಂಡವೀಯ** (वि०) ಪಾಂಡವರ ಸಂಬಂಧವಾದ. पाण्डवानामिदम् "छः" (४-२-११४) ।

**पाण्डवेय ಪಾಂಡವೇಯ** (पुं०) ಪಾಂಡವರು, ಪಾಂಡುರಾಜನ ಪತ್ನಿಯರಾದ ಕುಂತೀ ಮತ್ತು ಮಾದ್ರೀಪುತ್ರರು. पाण्डोरियं पाण्डवी कुन्ती माद्री च, तयोरपत्यानि "ढक्" (४-१-१२०) । "यदाश्रौषं चापयेन सङ्ख्ये स्वयं मृत्युं विहितं धार्मिकेण । तच्चाकार्षुः पाण्डवेयाः प्रहृष्टास्तदा नाशंसे विजयाय संजय" भा० आदि० १-२०७ ।

**पाण्डित्य ಪಾಂಡಿತ್ಯ** (न०) 1. ಜ್ಞಾನ, ವಿದ್ವತ್ತು. पण्डितस्य भावः "ष्यञ्" (५-१-१२४) । "यत् प्रौढित्वमुदारता च वचसां यच्चार्थतो गौरवं तच्चेदस्ति ततस्तदेव गमकं पाण्डित्यवैदग्ध्ययोः" मालती० १-१० । 2. ಜಾಣತನ, ಕೌಶಲ್ಯ, ಚತುರತೆ, ಪ್ರಾವೀಣ್ಯ.

**पाण्डु ಪಾಂಡು** (पुं०) 1. ಪಾಂಡುಮಹಾರಾಜ, ಪಾಂಡವರ ತಂದೆ, ಶಂತನುರಾಜನ ಪುತ್ರನಾದ ವಿಚಿತ್ರವೀರ್ಯನ ಪತ್ನಿ ಅಂಬಾಲಿಕೆಯಲ್ಲಿ ವ್ಯಾಸಮಹರ್ಷಿಯಿಂದ ಜನಿಸಿದ ಒಬ್ಬ ಪುತ್ರ. ವಿಚಿತ್ರವೀರ್ಯನು ಸಂತಾನವಿಲ್ಲದೆ ಸ್ವರ್ಗಸ್ಥನಾದನು. ತಾಯಿಯಾದ ಸತ್ಯವತಿಯು ಅವನ ಸಂತತಿ ಮುಂದೆ ಬೆಳೆಯದೆಂಬ ಉದ್ದೇಶದಿಂದ ವ್ಯಾಸಮಹರ್ಷಿಯನ್ನು ಕರೆದು ವಿಚಿತ್ರವೀರ್ಯನ ಪತ್ನಿ ಅಂಬಾಲಿಕೆಯಲ್ಲಿ ಪುತ್ರೋತ್ಪಾದನೆಗಾಗಿ ಆಜ್ಞಾಪಿಸಲು ವ್ಯಾಸನಿಂದ ಅವಳಲ್ಲಿ ಪಾಂಡುವು ಜನಿಸಿದನು. "साथ द्वैपायनं चिन्तयामास । सोऽग्रतः स्थितः किं करवाणीति । सत्यवत्युवाच भ्राता तेऽनपत्य एव स्वर्गतः तस्यार्थे पुत्रमुत्पादयेति । स परमित्युवाच स तत्र त्रीन् पुत्रानुत्पादयामास धृतराष्ट्रं पाण्डुं विदुरं चेति" भा० आदि० ६३-५७ । ಪಾಂಡುರಾಜನು ಕುಂತಿ ಮತ್ತು ಮಾದ್ರಿ ಇಬ್ಬರನ್ನು ಮದುವೆಯಾದನು. ಒಂದು ದಿನ ಇವನು ಮಾದ್ರಿಯೊಡನೆ ಅರಣ್ಯಕ್ಕೆ ಬೇಟೆಗಾಗಿ ಹೋಗಿದ್ದಾಗ ಕಿಂದಮನೆಂಬ ಋಷಿಯು ಮೃಗರೂಪದಿಂದ ತನ್ನ ಪತ್ನಿಯೊಡನೆ ವಿಹರಿಸುತ್ತಿರಲು ಮೃಗದ ಭ್ರಾಂತಿಯಿಂದ ಗಂಡುಮೃಗವನ್ನು ಸಂಹರಿಸಿದನು. ಆ ಮೃಗವು ಕೂಡಲೆ ಕಿಂದಮ ಋಷಿಯ ರೂಪವನ್ನು ಹೊಂದಿ "ಸ್ತ್ರೀಸಂಗಮದಿಂದ ನಿನಗೂ ಇದೇ ಗತಿ ಬರಲಿ" ಎಂದು ಶಪಿಸಿತು. ಆದರಿಂದ ದುಃಖಿತನಾದ ಪಾಂಡುವು ನಗರವನ್ನು ತ್ಯಜಿಸಿ ಶತಶೃಂಗ ಪರ್ವತದ ಸಮೀಪದಲ್ಲಿ ತಾಪಸವೇಷದಿಂದ ವಾಸಮಾಡುತ್ತಿದ್ದು ಸಂತತಿ ವಿಚ್ಛೇದವನ್ನು ಸಹಿಸದೆ ಪುತ್ರೋತ್ಪಾದನೆಗಾಗಿ ಪತ್ನಿಯರನ್ನು ಪ್ರೋತ್ಸಾಹಿಸಿದನು. ಕುಂತಿಯು ದುರ್ವಾಸಮಹರ್ಷಿಯ ಅನುಗ್ರಹದಿಂದ ಪಡೆದಿದ್ದ ಮಂತ್ರವನ್ನು ಜಪಿಸಿ ಯಮಧರ್ಮರಾಯನಿಂದ ಧರ್ಮರಾಜನನ್ನೂ ವಾಯುದೇವನಿಂದ ಭೀಮಸೇನನನ್ನೂ, ಇಂದ್ರನಿಂದ ಅರ್ಜುನನನ್ನೂ ಪಡೆದಳು. ಆ ಮಂತ್ರದ ಮಹಿಮೆಯಿಂದ ಮಾದ್ರಿಯೂ ಅಶ್ವಿನೀ ದೇವತೆಗಳ ಮೂಲಕ ನಕುಲ ಸಹದೇವರೆಂಬ ಅವಳಿ ಮಕ್ಕಳನ್ನು ಪಡೆದಳು. ಒಮ್ಮೆ ಪಾಂಡುವು ಮೋಹಪರವಶನಾಗಿ ಮಾದ್ರಿಯೊಡನೆ ವಿಹರಿಸಿ ಕಿಂದಮನ ಶಾಪದಂತೆ ಕಾಲವಶನಾದನು. भा० आदि० ६३ । 2. ಬಿಳಿಯ ಬಣ್ಣ. (वि०) 3. ಬಿಳುಪಾದ, ಬಿಳಿಯ ಬಣ್ಣವುಳ್ಳ. "अवमपरदिशोऽङ्के मुञ्चति स्रस्तहस्तः शिशयिषुरिव पाण्डुं म्लानमात्मानमिन्दुः" माघ० ११-२२ । 4. ಪಾಂಡುರೋಗ, ಕಾಮಾಲೆರೋಗ. (पुं० ब० व०) 5. ಪಾಂಡುದೇಶ.

**पाण्डुकम्बल ಪಾಂಡುಕಂಬಲ** (पुं०) 1. ಬಿಳಿ ಉಣ್ಣೆಯ ಕಂಬಳಿ, ನಯಗಂಬಳಿ. पाण्डुवर्णः कम्बलः । 2. ಕಾವಿಯಾದ ಮೇಲುಹೊದಿಕೆ. 3. ಒಂದು ಜಾತಿಯ ಶಿಲೆ. "स्यात् पाण्डुकम्बलः श्वेतप्रावारग्रावभेदयोः" मेदि० । 4. ಆನೆಯ ಮೇಲೆ ಅಲಂಕಾರಕ್ಕಾಗಿ ಹೊದಿಸುವ ರತ್ನಗಂಬಳಿ.

**पाण्डुकम्बलिन् ಪಾಂಡುಕಂಬಲಿನ್** (वि०) ಶ್ವೇತಕಂಬಳಿಯಿಂದ ಅಲಂಕರಿಸಲ್ಪಟ್ಟ ರಥ, ಬಿಳಿಯ ಕಂಬಳಿಯನ್ನು ಹೊದಿಸಿದ ರಥ. पाण्डुकम्बलेन परिवृतो रथः "इनिः" (४-२-११) ।

**पाण्डुपुत्र ಪಾಂಡುಪುತ್ರ** (पुं०) ಪಾಂಡುರಾಜನ ಮಕ್ಕಳು, ಧರ್ಮರಾಜ ಭೀಮ ಅರ್ಜುನ ನಕುಲ ಮತ್ತು ಸಹದೇವ ರೆಂಬ ಐವರು ಪಾಂಡವರು.

**पाण्डुपृष्ठ ಪಾಂಡುಪೃಷ್ಠ** (वि०) ಬೆನ್ನಿನಮೇಲೆ ದುರ್ಲಕ್ಷಣದ ಬಿಳಿಯ ಮಚ್ಚೆಯುಳ್ಳವನು. पाण्डु पृष्ठं यस्य।

**पाण्डुर ಪಾಂಡುರ** (पुं०) 1. ಬಿಳುಪು ಮತ್ತು ಹಳದಿ ಬೆರೆತ ಮಿಶ್ರವರ್ಣ. 2. ಬಿಳುಪು, ಬಿಳಿಯ ಬಣ್ಣ. (न०) 3. ಕಾಮಾಲೆ ವ್ಯಾಧಿ. 4. ಶ್ವಿತ್ರರೋಗ. (वि०) 5. ಬಿಳುಪಾದ, ಬಿಳಿಯ ಬಣ್ಣದ. "उदमज्जि कैटभजित: शयनादपनिद्रपाण्डुरसरोजरुचा" माघ० ९-३०। 6. ಹಳದಿ ಮತ್ತು ಬಿಳುಪು ಬೆರೆತ ಮಿಶ್ರವರ್ಣದ.

**पाण्डुरित ಪಾಂಡುರಿತ** (वि०) ಬೆಳ್ಳಗಾಗಿರುವ. पाण्डुरोऽस्य सञ्जात: "इतच्" (५-२-३६)। "आयच्छदुर्वीन्द्रचमूसमुत्थैर्मूरेणुभि: पाण्डुरिता मृगाक्षी:" नैष० १०-९।

**पाण्डुरोग ಪಾಂಡುರೋಗ** (पुं०) ಕಾಮಾಲೆ ವ್ಯಾಧಿ. ಪಿತ್ತಜಲನಿಗೆ ಅವಕಾಶವಿಲ್ಲದೆ ದೇಹವೆಲ್ಲವನ್ನೂ ಹಳದಿ ಬಣ್ಣಕ್ಕೆ ತಿರುಗಿಸುವ ಒಂದು ವ್ಯಾಧಿ. ಈ ಕಾಮಾಲೆ ವ್ಯಾಧಿಯು ವಾತ, ಪಿತ್ತ ಮತ್ತು ಕಫದೋಷಗಳಿಂದ ಪೃಥಕ್ಕಾಗಿ ಮೂರು ವಿಧ. ಎಲ್ಲ ದೋಷಗಳ ಮೇಳನದಿಂದ ಒಂದು ವಿಧ. ಈ ರೀತಿ ನಾಲ್ಕು ವಿಧ. ಈ ವ್ಯಾಧಿಯಲ್ಲಿ ವಾತಾದಿ ದೋಷದಿಂದ ಕೃಷ್ಣ ಪೀತ ಮತ್ತು ಶುಕ್ಲ ವರ್ಣಗಳು ಉಂಟಾದರೂ ಪಾಂಡುವರ್ಣವು ಅಧಿಕವಾಗಿರುವುದರಿಂದ ಪಾಂಡುರೋಗವೆಂದು ಇದಕ್ಕೆ ಹೆಸರು. "पाण्डवामयोऽष्टार्थविध: प्रदिष्ट: पृथक् समस्तैर्युगपच्च दोषै:। सर्वेषु चैतेष्विह पाण्डुभावो यतोऽधिकोऽत:खलु पाण्डुरोग:" सुश्रुत० उत्तरतं० ४४-४।

**पाण्डुलेख ಪಾಂಡುಲೇಖ** (पुं०) ಸರಿಯಾದ ಚಿತ್ರ ಬರೆಯುವ ಮೊದಲು ಸ್ಥೂಲವಾಗಿ ಸೀಮೆಸುಣ್ಣದಿಂದ ಬರೆಯುವ ರೂಪರೇಖೆಯ ಚಿತ್ರ, ಆಕೃತಿ ಸೂಚಕ ಸ್ಥೂಲ ರೂಪದ ಚಿತ್ರ. ಈ ಚಿತ್ರ (ನಕ್ಷೆ) ವನ್ನು ಮೊದಲು ಹಲಗೆಯ ಅಥವಾ ಭೂಮಿಯ ಮೇಲೆ ಬರೆದು ಸರಿಯಾದ ರೂಪವನ್ನು ಹೊಂದಿದ ಬಳಿಕ ಕಾಗದದ ಮೇಲೆ ಬರೆಯಬೇಕು. "पाण्डुलेखेन फलके भूमौ वा प्रथमं लिखेत्। ऊनाधिकं तु संशोध्य पश्चात्पत्रे निवेशयेत्" व्यास:।

**पाण्डुशर्करा ಪಾಂಡುಶರ್ಕರಾ** (स्त्री०) ಒಂದು ವಿಧ ಪ್ರಮೇಹ ರೋಗ.

**पाण्ड्य ಪಾಂಡ್ಯ** (पुं०) 1. ಪಾಂಡುದೇಶದ ನಿವಾಸಿ. 2. ಪಾಂಡುದೇಶದ ದೊರೆ. पाण्डु: देशोऽभिजनोऽस्य तस्य राजा वा "ड्यण्" (वा० ४-१-१६६)। "तस्यामेव रघो: पाण्ड्या: प्रताप न विषेहिरे" रघु० ४-४९। "पाण्ड्योऽयमंसार्पितलम्बहार: क्लृप्ताङ्गरागो हरिचन्दनेन" रघु० ६-६०।

**पाण्ड्यवाट ಪಾಂಡ್ಯವಾಟ** (पुं०) ಮುತ್ತುಗಳು ಸಿಕ್ಕುವ ಒಂದು ಪ್ರದೇಶ, ಮುತ್ತುಗಳ ಆಕರ ಪ್ರದೇಶ.

**पात् ಪಾತ್** (वि०) ರಕ್ಷಿಸುವ, ಕಾಪಾಡುವ. पा (रक्षणे) "शतृ" (३-२-१२४)।

**पात ಪಾತ** (पुं०) 1. ಇಳಿಯುವುದು, ಕೆಳಕ್ಕೆ ಬರುವುದು. पत्लृ (गतौ) भावे "घञ्" (३-३-१८)। 2. ಬೀಳುವುದು. "कृत्वा पुंवत्पातमुच्चैर्भृगुभ्य:" माघ० ४-२३। दृष्टिपात:, ग्रहपात:, चरणपात:। 3. ನಾಶ, ಅಳಿವು. "आसीनमासन्नशरीरपातस्त्रियम्बकं संयमिनं ददर्श" कुमा० ३-४४। 4. ರಾಹು. 5. ಸಂಭವಿಸುವುದು, ಬಂದು ಒದಗುವುದು, ಆಗುವುದು, ಘಟನೆ. (वि०) 6. ಬೀಳುವವನು. पत्लृ "ण:" (३-१-१४०)। 7. ರಕ್ಷಿಸಲ್ಪಟ್ಟ, ಕಾಪಾಡಲ್ಪಟ್ಟ. पा(रक्षणे)"क्त:"(३-२-१०२)।

**पातक ಪಾತಕ** (न०) ಪಾಪ, ನರಕಕ್ಕೆ ತಳ್ಳುವ ಅಕಾರ್ಯ. पातयति—पत्लृ (गतौ)+णिच् "ण्वुल्" (३-१-१३३)। "ब्रह्महत्या सुरापानं स्तेयं गुर्वङ्गनागम:। महान्ति पातकान्याहु: संसर्गश्चापि तै: सह" मनु० ११-५५। ಎಂದು ಐದು ವಿಧ ಮಹಾಪಾತಕಗಳು ಉಕ್ತವಾಗಿವೆ.

**पातकिन् ಪಾತಕಿನ್** (वि०) ಮಹಾಪಾಪ ಮಾಡಿದವನು. पातकमस्यास्ति "इनि:" (५-२-११५)। स्त्रियां "ङीप्" (४-१-५)। **पातकिनी ಪಾತಕಿನೀ** "दृशौ मृषा पातकिनो मनोरथा: कथं पृथू वामपि विप्रलेभिरे" नैष० ९-९१।

**पातङ्गि ಪಾತಂಗಿ** (पुं०) ಸೂರ್ಯನ ಪುತ್ರ. 1. ಶನಿದೇವ. 2. ಕರ್ಣ. 3. ಸುಗ್ರೀವ. 4. ಯಮಧರ್ಮರಾಯ. 5. ವೈವಸ್ವತಮನು. पतङ्गस्य सूर्यस्य अपत्यं पुमान् "इञ्" (४-१-९५)।

**पातञ्जल ಪಾತಂಜಲ** (न०) 1. ಪತಂಜಲಿ ಮಹರ್ಷಿಯಿಂದ ರಚಿತವಾದ ಮಹಾಭಾಷ್ಯ, ಪಾಣಿನಿಯ ಅಷ್ಟಾಧ್ಯಾಯಿ ಸೂತ್ರಗಳಿಗೆ ಬರೆದ ವ್ಯಾಖ್ಯಾನ. पतञ्जलिना प्रोक्तम् "अण्"। 2. ಪತಂಜಲಿ ಮಹರ್ಷಿ ಪ್ರಣೀತವಾದ ಯೋಗ ಶಾಸ್ತ್ರ, ಯೋಗ ದರ್ಶನ.

**पातन ಪಾತನ** (न०) 1. ಬೀಳಿಸುವುದು, ಕೆಳಕ್ಕೆ ತಳ್ಳುವುದು. पत्लृ (गतौ) + णिच् भावे "ल्युट्" (३-३-११५)।

(वि०) 2. ಕೆಳಕ್ಕೆ ತಳ್ಳುವ, ಕೆಳಗೆ ಬೀಳಿಸುವ. पत्लृ (गतौ) कर्तं० "ल्युः" (३-१-१३४)।

**पातनीय ಪಾತನೀಯ** (वि०) 1. ಕೆಳಗೆ ತಳ್ಳಲ್ಪಡುವ, ಕೆಳಗೆ ಬೀಳಿಸಲ್ಪಡುವ. पत्लृ (गतौ) + णिच् "अनीयर्" (३-१-९६)। 2. ಕೆಳಕ್ಕೆ ತಳ್ಳಬೇಕಾದ, ಕೆಡವಬೇಕಾದ. "तव्यः" (३-१-९६)। **–यितव्यः –ಯಿತವ್ಯಃ.**

**पातयत् ಪಾತಯತ್** (वि०) ಕೆಳಕ್ಕೆ ತಳ್ಳುತ್ತಿರುವ, ಕೆಳಗೆ ಬೀಳಿಸುತ್ತಿರುವ. पत्लृ (गतौ) + णिच् "शतृ" (३-२-१२४)। स्त्रियां "ङीप्" (४-१-६)। **–यन्ती –ಯನ್ತೀ.**

**पातव्य ಪಾತವ್ಯ** (वि०) 1. ಪಾನಮಾಡಲ್ಪಡುವ, ಕುಡಿಯಲ್ಪಡುವ. 2. ಪಾನಮಾಡಬೇಕಾದ, ಕುಡಿಯಬೇಕಾದ. 3. ಕುಡಿಯಲು ಅರ್ಹವಾದ. पा (पाने) कर्मादौ "तव्यः" (३-१-९६)। 4. ರಕ್ಷಿಸಲ್ಪಡುವ, ಕಾಪಾಡಲ್ಪಡುವ. 5. ರಕ್ಷಿಸಬೇಕಾದ. 6. ರಕ್ಷಿಸಲು ಅರ್ಹವಾದ. पा (रक्षणे) कर्मादौ "तव्यः" (३-१-९६)। उभयत्र "अनीयर्" (३-१-९६)। **पानीयम् ಪಾನೀಯಮ್.**

**पाताल ಪಾತಾಲ** (न०) 1. ಅಧೋಭುವನ, ಕೆಳಗಿನ ಲೋಕ, ಪಾತಾಳಲೋಕ, ನಾಗಲೋಕ. पतन्त्यस्मिन् अधर्मेण — पत्लृ (गतौ) "आलच्" (उ० १-११४)। ಪಾತಾಳಲೋಕವು ಭೂಲೋಕಕ್ಕೆ ಕೆಳಗಿರುವ ಸಪ್ತ ಅಧೋಲೋಕಗಳಲ್ಲಿ ಕೊನೆಯದು. ["चतुर्दशभुवन" ಪದದಲ್ಲಿ ನೋಡಿ.] "पातालं च स्थलीपृष्ठं प्रेक्षतामितविक्रमः" याद० २२-५९। 2. ವಿವರ, ಹಳ್ಳ, ಗುಳಿ, ಗುಂಡಿ. 3. ಬಡಬಾಗ್ನಿ. "पातालं नागलोके स्याद्विवरे बडवानले" मेदि०। 4. 361 ಸಂಖ್ಯೆ.

**पातालकेतु ಪಾತಾಲಕೇತು** (पुं०) ಒಬ್ಬ ರಾಕ್ಷಸ.

**पातालगरुडी ಪಾತಾಲಗರುಡೀ** (स्त्री०) ಅಮೃತಬಳ್ಳಿಯೆಂಬ ಒಂದು ಲತೆ.

**पातालनिलय ಪಾತಾಲನಿಲಯ, –निवासिन् –ನಿವಾಸಿನ್** (पुं०) 1. ದೈತ್ಯ, ಅಸುರ. 2. ಸರ್ಪ.

**पातालौकस् ಪಾತಾಲೌಕಸ್** (पुं०) 1. ದೈತ್ಯ, ಅಸುರ. 2. ಸರ್ಪ.

**पाति ಪಾತಿ** (पुं०) 1. ಪ್ರಭು, ಒಡೆಯ, ಯಜಮಾನ. पाति रक्षति — पा (रक्षणे) "अतिः" (उ० ५-५)। 2. ಪಕ್ಷಿ, ಹಕ್ಕಿ. 3. ಪತಿ, ಗಂಡ.

**पातित ಪಾತಿತ** (वि०) ಕೆಳಗೆ ತಳ್ಳಲ್ಪಟ್ಟ, ಬೀಳಿಸಲ್ಪಟ್ಟ, ಕೆಡವಲ್ಪಟ್ಟ. पत्लृ (गतौ) + णिच् "क्तः" (३-२-१०२)। "पातितेषु विमतेष्विति नाम प्राप्य यादवपुरं परमेष्ठी" याद० २१-३७।

**पातितवत् ಪಾತಿತವತ್** (वि०) ಕೆಳಗೆ ತಳ್ಳಿದವನು. पत्लृ (गतौ) "क्तवतुः" (३-२-१०२)।

**पातित्य ಪಾತಿತ್ಯ** (न०) ಪತಿತನ ಭಾವ, ಜಾತಿಭ್ರಷ್ಟನಾಗಿರುವಿಕೆ. पतितस्य भावः "ष्यञ्" (५-१-१२४)।

**पातिली ಪಾತಿಲೀ** (स्त्री०) 1. ಬಲೆ. 2. ವನಿತೆ, ಹೆಂಗಸು. पतिः भर्ता पक्षी वा लीयतेऽत्र — लीङ् (संश्लेषणे) "डः"। गौरा० "ङीष्" (४-१-४१)। 3. ಮೃತ್ಪಾತ್ರೆ, ಮಣ್ಣಿನ ಪಾತ್ರೆ. "पातिली वागुरायां स्यान्नारीपात्रप्रभेदयोः" मेदि०।

**पातिव्रत्य ಪಾತಿವ್ರತ್ಯ** (न०) ಪತಿಭಕ್ತಿಯಿಂದ ಕೂಡಿರುವಿಕೆ, ಪತಿವ್ರತೆಯಾಗಿರುವಿಕೆ, ಪತಿಯ ಸೇವೆಯೇ ಮುಖ್ಯ ವ್ರತವಾಗಿರುವಿಕೆ. पतिः लक्षणया पतिसेवा व्रतमस्याः पतिव्रता — पतिव्रताया भावः "ष्यञ्" (५-१-१२४)।

**पातुक ಪಾತುಕ** (पुं०) 1. ಪ್ರಪಾತ, ಬೆಟ್ಟದ ಇಕ್ಕಟ್ಟಾದ ಪ್ರದೇಶ. 2. ನೀರು ಆನೆ. "पातुकः पतयालौ स्यात् प्रपातजलहस्तिनोः" मेदि०। (वि०) 3. ಬಂದು ಬೀಳುವ ಸ್ವಭಾವದ, ಬಂದು ಮುತ್ತಿಕೊಳ್ಳುವ ಸ್ವಭಾವದ. पत्लृ (गतौ) "उकञ्" (३-२-१५४)। "तदङ्गमुद्दिश्य सुगन्धि पातुकाः शिलीमुखालीः कुसुमाद्गुणस्पृशः" नैष० १-९३। 4. ಬಂದು ಸೇರುವ. "उत्पतुमस्ति पदमेव न मत्पदानामर्थोऽपि नार्थपुनरुक्तिषु पातुकानाम्" नैष० ११-३६।

**पातृ ಪಾತೃ** (वि०) 1. ಕಾಪಾಡುವವನು, ರಕ್ಷಿಸುವವನು. पा (रक्षणे) "तृच्" (३-१-१३३)। "संहारकर्तुः संहर्ता पातुः पाता परात्परः" ब्रह्मवै०। 2. ಪಾನಮಾಡುವ, ಕುಡಿಯುವ. 3. ಪಾನಮಾಡುವ, (लाक्ष०) ನೋಡುವ. पा (पाने) "तृच्" (३-१-१३३)। "पातुर्दृशालेख्यमयीं नृपस्य त्वामादरादस्तनिमीलयास्ते" नैष० ३-१०४।

**पात्म ಪಾತ್ಮ** (पुं०) ಗ್ರೀಷ್ಮರ್ತು. "शुचिरूष्मागमः पात्म उष्ण ऊष्मापि" वैज०।

**पात्य ಪಾತ್ಯ** (वि०) 1. ಕೆಳಗೆ ಬೀಳಿಸಲ್ಪಡುವ, ಕೆಳಗೆ ತಳ್ಳಲ್ಪಡುವ. पत्लृ (गतौ) + णिच् "ण्यत्" (३-१-१२४)। 2. ಕೆಳಗೆ ತಳ್ಳಬೇಕಾದ, ಕೆಡವಬೇಕಾದ.

**पात्र ಪಾತ್ರ** (न०) 1. ಅಡಿಗೆಯ ಪಾತ್ರೆ 2. ಬಿಂದಿಗೆ. 3. ಕುಡಿಯುವ ಪಂಚಪಾತ್ರೆ ಮೊದಲಾದುದು. पिबत्यनेन

—पा (पाने) "ष्ट्रन्" (उ० ४-१५९)। "स मृण्मये वीतहिरण्मयत्वात् पात्रे निधायार्घ्यमनर्घशील:" रघु० ५-२। 4. ನದಿಯ ಎರಡು ದಡಗಳ ಮಧ್ಯಭಾಗ, ಹೊಳೆಯ ನೀರು ಹರಿಯುವ ಪ್ರದೇಶ. 5. ನೀರು ನಿಲ್ಲಲು ಯೋಗ್ಯವಾದ ಕೆರೆ ಕೊಳ ಮುಂತಾದುವುಗಳ ಒಳ ಅಂಗಣ. 6. ವಿದ್ಯಾವಿನಯಸಂಪನ್ನನಾದ ಯೋಗ್ಯಬ್ರಾಹ್ಮಣ. "दातव्यं प्रत्यहं पात्रे निमित्तेषु विशेषत:। याचितेनापि दातव्यं श्रद्धापूतं स्वशक्तित:" याज्ञ० १-२०३। 7. ಪರ್ಣ, ಎಲೆ. 8. ರಾಜಾಮಾತ್ಯ, ರಾಜನ ಮಂತ್ರಿ. 9. ಯಜ್ಞದಲ್ಲಿ ಉಪಯೋಗಿಸುವ ಪಾತ್ರೆ. "पात्रं स्रुवादौ पर्णे च भाजने राजमन्त्रिणि। तीरद्वयान्तरे योग्ये" मेदि०। 10. ಒಂದು ವಸ್ತುವಿಗೆ ಆಧಾರವಾದ ಮತ್ತೊಂದು ವಸ್ತು. ಆಧಾರ ವಸ್ತು. पाति रक्षत्याधेयम्। "पात्रविशेषे न्यस्तं गुणान्तरं व्रजति शिल्पमाधातु:" माल० १-६। 11. ನಾಟಕಗಳಲ್ಲಿ ಅಭಿನಯಿಸುವ ನಟ. "अहमस्यां कालिदासग्रथितवस्तुना नवेन त्रोटकेन उपस्थास्ये। तदुच्यतां पात्रवर्ग: स्वेषु स्वेषु पाठेषु अवहितैर्भवितव्यम् इति" विक्र०।

**पात्रट ಪಾತ್ರಟ** (पुं०) 1. ಕರ್ಪಟ, ಕಂಬಳಿ, ಉಣ್ಣೆಯ ಬಟ್ಟೆ. (वि०) 2. ಕೃಶವಾಗಿರುವ, ತೆಳ್ಳಗಿರುವ. "पात्रट: कर्पटे पुंसि कृशे स्यादभिधेयवत्" मेदि०।

**पात्रटीर ಪಾತ್ರಟೀರ** (पुं०) 1. ಯೋಗ್ಯವಾದ ಕೆಲಸ ಕಾರ್ಯಗಳನ್ನು ನಡೆಸುವ ಮಂತ್ರಿ. 2. ಲೋಹ ಪಾತ್ರೆ, ಕಬ್ಬಿಣದ ಪಾತ್ರೆ. 3. ಕಂಚಿನ ಪಾತ್ರೆ. 4. ಬೆಳ್ಳಿಯ ಪಾತ್ರೆ. 5. ಅಗ್ನಿ, ಬೆಂಕಿ. 6. ನಾಸಾಮಲ, ಮೂಗಿನಿಂದ ಹೊರಡುವ ಸಿಂಬಳ. "पात्रटीरस्तु पुंलिङ्गो युक्तव्यापारमन्त्रिणि। लोहकांस्यरजतपात्रे सिंहाणे पावकेऽपि च" मेदि०।

**पात्रसात् ಪಾತ್ರಸಾತ್** (अव्य०) ಯೋಗ್ಯನಾದ ಮನುಷ್ಯನಿಗೆ ಅಧೀನನಾಗಿ, ಯೋಗ್ಯಪುರುಷನ ವಶನಾಗಿ.

**पात्रासादन ಪಾತ್ರಾಸಾದನ** (न०) ಯಜ್ಞಪಾತ್ರೆಗಳನ್ನು ಯಾಗ ಕಾರ್ಯಕ್ಕಾಗಿ ದರ್ಭೆಯ ಮೇಲೆ ಕ್ರಮವಾಗಿ ಇಡುವುದು.

**पात्रिन् ಪಾತ್ರಿನ್** (वि०) 1. ಪಾತ್ರೆಗಳನ್ನು ಹೊಂದಿರುವವನು. 2. ಯೋಗ್ಯರಾದ ಮನುಷ್ಯರನ್ನು ಹೊಂದಿರುವವನು.

**पात्रिय ಪಾತ್ರಿಯ** (वि०) ಭೋಜನ ಕೂಟದಲ್ಲಿ ಸೇರಲು ಯೋಗ್ಯನಾದವನು. पात्रं भोजनपात्रमर्हति "घ:" (५-१-६८)। पक्षे "यत्"। पात्र्य: ಪಾತ್ರ್ಯ:.

**पात्रीकृत ಪಾತ್ರೀಕೃತ** (वि०) ಯೋಗ್ಯನಾಗಿ ಮಾಡಲ್ಪಟ್ಟವನು. अपात्रं पात्रं कृत:। "मृष्टं प्रतिग्राहयता स्वमर्थं पात्रीकृतो दस्युरिवासि येन" शाकु० ५-२०।

**पात्रीभूत ಪಾತ್ರೀಭೂತ** (वि०) ಯೋಗ್ಯನಾಗಿ ಆಗಿರುವ.

**पात्रेबहुल ಪಾತ್ರೇಬಹುಲ** (वि०) ಕಾರ್ಯದ ಸಮಯದಲ್ಲಿ ಬರದೆ ಊಟದ ಸಮಯದಲ್ಲಿ ಮಾತ್ರ ಹೆಚ್ಚಾಗಿ ಬಂದು ಸೇರುವ ಸ್ವಾರ್ಥಪರರು. पात्रे भोजनपात्रे निहिते बहुलीभूता: न तु कार्ये। निपा० (२-१-४८)।

**पात्रेसमित ಪಾತ್ರೇಸಮಿತ** (वि०) ಊಟದ ಸಮಯದಲ್ಲೇ ಬರುವ, ಕಾರ್ಯಮಾಡುವುದರಲ್ಲಿ ಅಸಮರ್ಥರಾಗಿ ಭೋಜನ ಕಾಲದಲ್ಲಿ ಮಾತ್ರ ಬರುವ, ಸ್ವಾರ್ಥಪರರಾದ. पात्रे भोजनपात्रे निहित एव समिता: सङ्गता: न तु कार्ये। निपा० (२-१-४८)।

**पाथ ಪಾಥ** (पुं०) 1. ರವಿ, ಸೂರ್ಯ. 2. ಅಗ್ನಿ. (न०) 3. ಜಲ, ನೀರು. पाति रक्षति—पा (रक्षणे) "थुट्" (उ० ४-२०३)। निपा०। "पाथोऽर्केऽग्नौ जले क्लीबम्" मेदि०।

**पाथस् ಪಾಥಸ್** (न०) 1. ಜಲ, ನೀರು. पाति रक्षति—पा (रक्षणे) "असुन्" थुट् च (उ० ४-२०३): 2. ಅನ್ನ, ಆಹಾರ. (उ० ४-२०४)।

**पाथिक ಪಾಥಿಕ** (पुं०) ಪಥಿಕನ ಮಗ, ದಾರಿ ನಡೆಯುವವನ ಮಗ. पथिकस्यापत्यं पुमान् "अण्" (४-१-११२)। स्त्रियां "ङीप्" (४-१-१५)। पाथिकी ಪಾಥಿಕೀ.

**पाथिस् ಪಾಥಿಸ್** (पुं०) 1. ಸ್ವರ್ಗ, ದೇವಲೋಕ. 2. ಚಂದ್ರ. 3. ಸೂರ್ಯ. "पाथींषि स्वर्गचन्द्रार्का:" वैज०। 4. ಸಮುದ್ರ. 5. ನೇತ್ರ, ಕಣ್ಣು.

**पाथेय ಪಾಥೇಯ** (न०) ಬುತ್ತಿ, ಪ್ರಯಾಣ ಕಾಲದಲ್ಲಿ ದಾರಿಯ ಊಟಕ್ಕಾಗಿ ತೆಗೆದುಕೊಳ್ಳುವ ಆಹಾರ ವಸ್ತು. पथि साधु "ढञ्" (४-४-१०७)। "मन:प्रसादाञ्जलिना निकामं जग्राह पाथेयमिवेन्द्रसूनु:" किरा० ३-३७।

**पाथोज ಪಾಥೋಜ** (न०) ಪದ್ಮ, ಕಮಲ, ತಾವರೆ. पाथसि जायते—जनी (प्रादुर्भावे) "ड:" (३-२-९७)।

**पाथोद ಪಾಥೋದ** (पुं०) 1. ಮೇಘ, ಮೋಡ. पाथो ददाति—डु दाञ् (दाने) "क:" (३-२-३)। "पाथोदं निजकेलिसौधशिखरादारुह्य यत्कामिनी" नैष० २-१०४। 2. ಕೊನ್ನಾರಿ ಗೆಡ್ಡೆ, ಮುಸ್ತಕ.

**पाथोधर ಪಾಥೋಧರ** (पुं०) 1. ಮೇಘ, ಮೋಡ. पाथसां धर:। 2. ಕೊನ್ನಾರಿ ಗೆಡ್ಡೆ, ಮುಸ್ತಕ.

**पाथोधि** ಪಾಥೋಧಿ (पुं०) ಸಮುದ್ರ, ಕಡಲು. पाथांसि धीयन्तेऽत्र — डु धाञ् (धारणपोषणयोः) "कि:" (३-३-९३)। "पाथोधिमाघसमघोत्थितसिन्धुपुत्री०" नैष० ११-६०।

**पाथोनिधि** ಪಾಥೋನಿಧಿ (पुं०) ಸಮುದ್ರ, ಕಡಲು. पाथांसि निधीयन्तेऽत्र—नि+डु धाञ् (धारणपोषणयोः) "कि:" (३-३-९२)। "जननीमिव तां लक्ष्म्याः पाथोनिधिपतिव्रताम्। नियमैरर्चितैर्भेजे निगमस्वात्तवैभवाम्" यादः २२-१६९।

**पाद** ಪಾದ (पुं०) 1. ಚರಣ, ಕಾಲು. पद्यतेऽसौ — पद (गतौ) "घञ्" (३-३-१६)। "तयोर्जगृहतुः पादान् राजा राज्ञी च मागधी" रघु० १-५७। 2. ನಾಲ್ಕನೆಯ ಒಂದು ಭಾಗ. 3. ಪ್ರತ್ಯಂತಪರ್ವತ, ಪರ್ವತದ ಸುತ್ತಲೂ ಇರುವ ಗುಡ್ಡಗಳು. पद्यते एभिः — पद (गतौ) "घञ्" (३-३-१२१)। "भूभर्तुरायतनिरन्तरसंनिविष्टाः पादा इवाभिबभुरावल्यो रथानाम्" माघ० ५-२०। 4. ಶ್ಲೋಕದ ನಾಲ್ಕನೆಯ ಒಂದು ಭಾಗ. 5. ಗಿಡಮರಗಳ ಬೇರು. 6. ಕಿರಣ. "दिवसं मृशोष्णरुचिपादहतां रुदतीमिवानवरताच्छिरूतेः" माघ० ९-३४। 7. ಗ್ರಂಥದ ಅಧ್ಯಾಯದ ನಾಲ್ಕನೆಯ ಒಂದು ಭಾಗ. 8. ಗಮನ, ನಡಗೆ. "पादो बुध्ने तुरीयांशे शैलप्रत्यन्तपर्वते। चरणे च मयूखे च" मेदि०। 9. ಗಾಡಿಯ ಚಕ್ರ. "पादः पुरः कूबरिणां विदारिताः प्रकाममाक्रान्ततलास्ततो मवैः" माघ० १२-२१। ಬಹುವಾರ್ಥಕ ಪಾದ ಶಬ್ದವು ಉಪಮಾನ ವಾಚಕ (ಪೂರ್ವ) ಪದಕ್ಕೆ ಮತ್ತು ಸಂಖ್ಯಾವಾಚಕ ಶಬ್ದ ಮತ್ತು ಸುಶಬ್ದಗಳಿಗೆ ಪರವಾದರೆ ಸಮಾಸಾಂತ ಲೋಪ ಬಂದು पाद्(त्) ಎಂದಾಗುವುದು. व्याघ्रस्येव पादावस्य व्याघ्रपात्। द्विपात् सुपात् ಇತ್ಯಾದಿ. 10. ಹಿರಿಯರ ಹೆಸರಿಗೆ ಸೇರಿಸುವ ಒಂದು ಗೌರವದ ಪದ. "जीवत्सु तातपादेषु" उ० रा० १-१९।

**पादक** ಪಾದಕ (वि०) ಗಮನದಲ್ಲಿ ಕುಶಲನಾದವನು, ನಡಗೆಯಲ್ಲಿ ಸಮರ್ಥನಾದವನು. पादे गमने कुशलः "कन्" (५-२-६४)।

**पादकटक** ಪಾದಕಟಕ (पुं०) ನೂಪುರ, ಕಾಲಿನ ತೊಡುಗೆ, ಕಾಲಿನ ಆಭರಣ. पादस्य कटक इव। "हंसकः पादकटकः" अम०।

**पादग्रन्थि** ಪಾದಗ್ರಂಥಿ (पुं०) ಕಾಲಿನ ಗಂಟು. पादस्य ग्रन्थिः।

**पादग्रहण** ಪಾದಗ್ರಹಣ (न०) ಪಾದಗಳನ್ನು ಹಿಡಿದು ಮಾಡುವ ನಮಸ್ಕಾರ. पादौ गृह्यते यत्र—ग्रह (उपादाने) अधि० "ल्युट्" (३-३-११७)। "तामर्चिताभ्यः कुलदेवताभ्यः कुलप्रतिष्ठां प्रणमय्य माता। अकारयत् कारयितव्यदक्षा क्रमेण पादग्रहणं सतीनाम्" कुमा० ७-२७।

**पादचत्वर** ಪಾದಚತ್ವರ (पुं०) 1. ಹೋತ. 2. ಮರಳು. 3. ಅಶ್ವತ್ಥವೃಕ್ಷ, ಅರಳಿಮರ. 4. ಆಲಿಕಲ್ಲು. 5. ಇತರರ ದೋಷವನ್ನೇ ಎತ್ತಿ ಹೇಳುವವನು. "स्यात् पादचत्वरश्छागे सैकते पिप्पलेऽपि च। करके परदोषैकप्रवक्तृपुरुषेऽपि च" मेदि०।

**पादचार** ಪಾದಚಾರ (पुं०) ಕಾಲುನಡಗೆ, ಕಾಲಿನಿಂದ ನಡೆಯುವುದು. पादेन चारः। "क्रीडाशैले यदि च विचरेत् पादचारेण गौरी" मेघ० १-६०।

**पादचारिन्** ಪಾದಚಾರಿನ್ (पुं०) 1. ಪದಾತಿ, ಕಾಲಾಳು, ಕಾಲುಬಲ. पादाभ्यां चरति—चर (गतौ) "णिनिः" (३-२-७८)। (वि०) 2. ಕಾಲುನಡಗೆಯಿಂದ ಸಂಚರಿಸುವವನು. "गिरिराट् पादचारीव पद्भ्यां निर्वरयन् महीम्" माग०।

**पादज** ಪಾದಜ (पुं०) ಪರಮಾತ್ಮನ ಪಾದಗಳಿಂದ ಹುಟ್ಟಿದ ನಾಲ್ಕನೆಯ ವರ್ಣದವನು. पद्भ्यां जायते—जनी (प्रादुर्भावे) "डः" (३-२-९८)।

**पादजल** ಪಾದಜಲ (न०) 1. ಪಾದೋದಕ, ಕಾಲು ತೊಳೆದ ನೀರು. पादक्षालनं जलम्। 2. ಮಜ್ಜಿಗೆ, ನಾಲ್ಕನೆಯ ಒಂದು ಭಾಗ ನೀರು ಬೆರಸಿ ಕಡೆದ ಮೊಸರು. (वि०) 3. ನಾಲ್ಕನೆಯ ಒಂದು ಭಾಗ ನೀರು ಬೆರಸಿದ. पादमितं जलं यत्र।

**पादजाह** ಪಾದಜಾಹ (न०) ಕಾಲಿನ ಹರಡು, ಕಾಲಿನ ಅಡಿ, ಪಾದಮೂಲ. पादस्य मूलम् "जाहच्" (५-२-२४)।

**पादतल** ಪಾದತಲ (न०) ಅಂಗಾಲು.

**पादत्र** ಪಾದತ್ರ (न०) ಪಾದರಕ್ಷೆ, ಚಪ್ಪಲಿ. पादौ त्रायते— त्रैङ् (पालने) "कः" (३-२-३)। "पादरोगहरं वृष्यं रक्षोघ्नं प्रीतिवर्धनम्। सुखप्रचारमोजस्यं सदा पादत्रधारणात्" सुश्रुत० चिकित्सा० २४-७१।

**पादत्राण** ಪಾದತ್ರಾಣ (न०) ಪಾದರಕ್ಷೆ, ಚಪ್ಪಲಿ. पादौ त्रायतेऽनेन — त्रैङ् (पालने) "ल्युट्" (३-३-११७)।

**पाददाह** ಪಾದದಾಹ (पुं०) ಒಂದು ವಿಧ ವಾತರೋಗ, ಪಿತ್ತರಕ್ತದಿಂದ ಕೂಡಿದ ವಾತಸಂಚಾರದಿಂದ ಉಂಟಾಗುವ ಉರಿವಾಯು. पादौ दहति — दह (भस्मीकरणे)

"णम्" (३-२-१)। ಈ ವಾತಸಂಚಾರದಿಂದ ಕಾಲಿನಲ್ಲಿ ಉರಿತವುಂಟಾಗುವುದು. ನಡೆಯುವಾಗ ಇದರ ಬಾಧೆಯು ಅಧಿಕವಾಗುವುದು. "पादयोः कुरुते दाहं पित्तासृक्सहितोऽनिलः। विशेषतश्चङ्क्रमतः पाददाहं तमादिशेत्" सुश्रुत० निदान० १-८०।

**पादन्यास ಪಾದನ್ಯಾಸ** (पुं०) ಕಾಲಿನ ಹೆಜ್ಜೆಯಿಡುವುದು, ಕಾಲಿನ ಅಡಿಯಿಡುವುದು. पादस्य न्यासः। "अङ्गैरन्तर्निहितवचनैः सूचितः सम्यगर्थः पादन्यासो लयमनुगतस्तन्मयत्वं रसेषु" माल० २-८।

**पादप ಪಾದಪ** (पुं०) 1. ವೃಕ್ಷ, ಮರ. पादेन मूलेन पिबति—पा (पाने) "कः" (३-२-३)। "अनुभवति हि मूर्ध्ना पादपस्तीव्रमुष्णं शमयति परितापं छायया संश्रितानाम्" शाकु० ५-७। 2. ಪಾದಪೀಠ. 3. ಅದ್ರಿ, ಬೆಟ್ಟ. "पादपः पादपीठेऽद्रौ" मेदि०।

**पादपरुहा ಪಾದಪರುಹಾ** (स्त्री०) ಬದನಿಕೆ ಗಿಡ. पादपं रोहति—रुह (बीजजन्मादौ) "कः" (३-२-३)।

**पादपा ಪಾದಪಾ** (स्त्री०) ಪಾದರಕ್ಷೆ, ಚಪ್ಪಲಿ.

**पादपाश ಪಾದಪಾಶ** (पुं०) 1. ಕುದುರೆಯ ಕಾಲಿಗೆ ಕಟ್ಟುವ ಹಗ್ಗ. पादस्य पाशः। "दामाञ्चनं पादपाशो नासारज्जुस्तु लालिका" वैज०। (स्त्री०) —पाशी—ಪಾಶೀ. 2. ಲತೆ, ಬಳ್ಳಿ. 3. ಸರಪಳಿ, ಸಂಕೋಲೆ. 4. ಚಾಪೆ, ಮಂದಲಿಗೆ.

**पादपीठ ಪಾದಪೀಠ** (न०) ಕಾಲುಗಳನ್ನು ಇಟ್ಟುಕೊಳ್ಳುವ ಮಣೆ. पादस्य पीठम्। "वितानसहितं तत्र भेजे पैतृकमासनम्। चूडामणिभिरुद्घृष्टपादपीठं महीक्षिताम्" रघु० १७-२८।

**पादपूरण ಪಾದಪೂರಣ** (न०) 1. ಶ್ಲೋಕದ ಪಾದವನ್ನು ಪೂರ್ತಿಮಾಡುವುದು. 2. ಶ್ಲೋಕವನ್ನು ಅರ್ಥವಿಲ್ಲದ ಪದಗಳಿಂದ ತುಂಬಿ ಪೂರ್ತಿಮಾಡುವುದು. च वै तु हि ಇತ್ಯಾದಿ ಪದಗಳಿಂದ ಶ್ಲೋಕ ಪಾದಗಳನ್ನು ತುಂಬಿ ಪೂರ್ತಿ ಮಾಡುವುದು. "चान्वाचये समाहारेऽप्यन्योन्यार्थे समुच्चये। पक्षान्तरे तथा पादपूरणे" मेदि०। "तु पादपूरणे भेदे" मेदि०। "वै स्यात्सम्बोधने पादपूरणे" मेदि०। "हि पादपूरणे हेतौ" मेदि०।

**पादप्रक्षालन ಪಾದಪ್ರಕ್ಷಾಲನ** (न०) 1. ಕಾಲು ತೊಳೆದುಕೊಳ್ಳುವಿಕೆ. पादयोः प्रक्षालनम्। 2. ಕಾಲು ತೊಳೆಯುವ ನೀರು. पादौ प्रक्षाल्येतेऽनेन—क्षल (शौचकर्मणि) "ल्युट्" (३-३-११७)। "पादप्रक्षालनं मेधाजननं सुपवित्रकम्। अलक्ष्मीकलिहृच्चैवमायुषो हितकारि च" राजनि०।

**पादप्रहार ಪಾದಪ್ರಹಾರ** (पुं०) ಕಾಲಿನ ಏಟು, ಕಾಲಿನಿಂದ ಒದೆಯುವುದು.

**पादबन्ध ಪಾದಬಂಧ** (पुं०) 1. ಸರಪಣಿ, ಹಸು ಮೊದಲಾದುವುಗಳ ಕಾಲುಗಳನ್ನು ಕಟ್ಟುವ ಹಗ್ಗ. पादौ बध्येते अनेन—बन्ध (बन्धने) "घञ्" (३-३-१२१)। 2. ಬೇಡಿ, ಸಂಕೋಲೆ.

**पादबन्धन ಪಾದಬಂಧನ** (न०) 1. ಹಸು ಎಮ್ಮೆ ಮೊದಲಾದುವುಗಳ ಕಾಲು ಕಟ್ಟುವ ಹಗ್ಗ. पादौ बध्येतेऽनेन—बन्ध (बन्धने) करo "ल्युट्" (३-३-११७)। 2. ಪಶುಗಳ ಕಾಲುಗಳನ್ನು ಕಟ್ಟುವುದು. पादयोः बन्धनम्।

**पादभाग ಪಾದಭಾಗ** (पुं०) ಕಾಲುಭಾಗ, ನಾಲ್ಕನೆಯ ಒಂದು ಭಾಗ.

**पादमूल ಪಾದಮೂಲ** (न०) 1. ಕಾಲಿನ ತಳಭಾಗ, ಕಾಲಿನ ಅಡಿ, ಅಂಗಾಲು. पादयोः मूलम्। "सा पादमूले कैकेय्या मन्थरा निपपात ह" रामा०। 2. ಹಿರಿಯರನ್ನು ಕುರಿತು ಆಡುವ ಮರ್ಯಾದೆಯ ಮಾತು. "निखिलभुवनतलरत्नमिति कृत्वा देवपादमूलमादायागताहमिच्छामि देवदर्शनसुखमनुभवितुम्" काद०।

**पादरक्ष ಪಾದರಕ್ಷ** (पुं०) 1. ಚಪ್ಪಲಿ, ಜೋಡು. पादं रक्षति—रक्ष (पालने) "अण्" (३-२-१)। 2. ರಥದ ಚಕ್ರಗಳನ್ನು ಕಾಪಾಡುವ ಕಬ್ಬಿಣದ ಪಟ್ಟಿ.

**पादरक्षण ಪಾದರಕ್ಷಣ** (न०) ಕಾಲನ್ನು ರಕ್ಷಿಸುವುದು, ಕಲ್ಲು ಮುಳ್ಳು ಮೊದಲಾದುವುಗಳಿಂದ ಕಾಲುಗಳನ್ನು ರಕ್ಷಿಸುವುದು. पादस्य रक्षणम्।

**पादरक्षिणी ಪಾದರಕ್ಷಿಣೀ** (स्त्री०) ಪಾದುಕೆ, ಚಪ್ಪಲಿ, ಪಾದರಕ್ಷೆ.

**पादरजस् ಪಾದರಜಸ್** (न०) ಪಾದದ ಧೂಳು.

**पादरज्जु ಪಾದರಜ್ಜು** (स्त्री०) ಆನೆ ಮೊದಲಾದುವುಗಳ ಕಾಲಿಗೆ ಕಟ್ಟುವ ಹಗ್ಗ.

**पादरथी ಪಾದರಥೀ** (स्त्री०) ಪಾದುಕೆ, ಚಪ್ಪಲಿ. क्षुद्रो रथः रथी, पादयोः रथीव। "पन्नद्धी पादविरजाः कोशी पादरथी भवेत्" हारा०।

**पादरोह ಪಾದರೋಹ** (पुं०) ವಟವೃಕ್ಷ, ಆಲದ ಮರ.

**पादवन्दन ಪಾದವಂದನ** (न०) ಕಾಲಿಗೆ ಎರಗಿ ನಮಸ್ಕಾರ ಮಾಡುವುದು, ಕಾಲಿನ ಮೇಲೆ ತಲೆಯಿಟ್ಟು ಮಾಡುವ

ನಮಸ್ಕಾರ. पादयोर्वन्दनम् । "कुर्यात् श्वशुरयोः पादवन्दनं भर्तृतत्परा" याज्ञ० १-८३। ಹಿರಿಯರ ಪಾದಗಳನ್ನು ಹಿಡಿದು ನಮಸ್ಕರಿಸಬೇಕು. ಆದರೆ ಯುವತಿಯಾಗಿರುವ ಗುರುಪತ್ನಿಯ ಪಾದವಂದನವು ನಿಷಿದ್ಧ. "गुरुपत्नी तु युवतिः नाभिवाद्येह पादयोः। पूर्णविंशतिवर्षेण गुणदोषौ विजानता" मनु० २-२१२।

**पादवल्मीक ಪಾದವಲ್ಮೀಕ** (न०) ಆನೆಕಾಲು ರೋಗ. ಕಾಲು ಗಜಚರ್ಮದಂತೆ ದಪ್ಪವಾಗಿ ಊದುವ ಒಂದು ರೋಗ. पादे वल्मीकमिव।

**पादविक ಪಾದವಿಕ** (वि०) ಪಥಿಕ, ದಾರಿ ನಡೆಯುವವನು. पदवीं धावति — "ठक्" (४-४-३७)।

**पादविरजस् ಪಾದವಿರಜಸ್** (स्त्री०) ಪಾದರಕ್ಷೆ, ಚಪ್ಪಲಿ. पादौ विरजाः क्रियन्तेऽनया। "पन्नद्धी पादविरजाः कोशी पादरथी भवेत्" हारा०।

**पादशाखा ಪಾದಶಾಖಾ** (स्त्री०) ಕಾಲುಬೆರಳು. पादस्य शाखेव।

**पादशैल ಪಾದಶೈಲ** (पुं०) ಪರ್ವತದ ಸುತ್ತಲೂ ಇರುವ ಸಣ್ಣ ಗುಡ್ಡಗಳು. पादरूपः शैलः।

**पादशोथ ಪಾದಶೋಥ** (पुं०) ಕಾಲಿನ ಊತ, ಕಾಲು ಊದುವುದು. पादस्य शोथः।

**पादशौच ಪಾದಶೌಚ** (न०) ಪಾದಪ್ರಕ್ಷಾಳನ, ಕಾಲುಗಳನ್ನು ತೊಳೆದುಕೊಳ್ಳುವುದು. पादयोः शौचम्।

**पादस्फोट ಪಾದಸ್ಫೋಟ** (पुं०) ಕಾಲು ಒಡೆಯುವ ರೋಗ, ಕಾಲು ಒಡೆದು ರಕ್ತ, ಕೀವು ಸುರಿಯುವ ಕುಷ್ಠ ರೋಗ. पादः स्फुटत्यनेन — स्फुट (विशीर्णने) "घञ्" (३-३-१२१)।

**पादहर्ष ಪಾದಹರ್ಷ** (पुं०) ಕಾಲಿನ ಹೆಜ್ಜೆಯ ಮೇಲೆ ಹೆಚ್ಚು ಭಾರ ಬಿಡುವುದರಿಂದ ಉಂಟಾಗುವ ಕಾಲು ಜೋವು, ಕಾಲು ಮರವಡಿಸುವುದು. पादस्य हर्षः। "हृष्यतश्चरणौ यस्य भवतश्च प्रसुप्तवत्। पादहर्षः स विज्ञेयः कफवातप्रकोपजः" सुश्रुत० निदान० १-८१।

**पादाकुलक ಪಾದಾಕುಲಕ** (न०) ಮಾತ್ರಾವೃತ್ತದ ಒಂದು ಭೇದ. ಮಾತ್ರಾಸಮಕ ವಿಶ್ಲೋಕ ವಾನವಾಸಿಕಾ ಮತ್ತು ಚಿತ್ರಾವೃತ್ತಗಳಲ್ಲಿ ಯಾವುದಾದರೂ ಎರಡು ಮೂರು ಅಥವಾ ನಾಲ್ಕು ವೃತ್ತಗಳ (ಯಥಾ ಸಂಭವ) ಪಾದಗಳಿಂದ ಕೂಡಿರುವುದಾದರೆ (ಪಾದಗಳಲ್ಲಿ ಅಕ್ಷರಗಳು ಹೆಚ್ಚು ಕಡಮೆಯಾಗಿರಬಹುದಾದುದರಿಂದ) ವೃತ್ತ ಪರಿಮಾಣವು ನಿಯತವಾಗಿಲ್ಲದ "**ಪಾದಾಕುಲಕ**" ವೃತ್ತವಾಗುವುದು. "यदतीतविविधशुभलक्षणयुतैर्मात्रासमादिपादैः कथितम्। अनियतवृत्तपरिमाणयुक्तं प्रथितं जगत्सु च पादाकुलकम्" वृ० र०।

**पादाग्र ಪಾದಾಗ್ರ** (न०) ಕಾಲಿನ ತುದಿ.

**पादाङ्गद ಪಾದಾಂಗದ** (न०) ನೂಪುರ, ಕಾಲಿನ ತೊಡುಗೆ, ಕಾಲಿನ ಆಭರಣ, ಗೊಲಸು ಗೆಜ್ಜೆ ಮುಂತಾದುವು. पादस्याङ्गदमिव। गौरा० "ङीष्" (४-१-४१)। **पादाङ्गदी ಪಾದಾಂಗದೀ.** "पादाङ्गदी हंसकः स्यात्" हारा०।

**पादात् ಪಾದಾತ್** (पुं०) 1. ಪದಾತಿ, ಕಾಲಾಳು, ಕಾಲು ಬಲ. पादाभ्यामतति—अत (सातत्यगमने) "क्विप्" (३-२-७६)। (वि०) 2. ಕಾಲಿನಿಂದ ಸಂಚರಿಸುವವನು. ನಡೆದು ಹೋಗುವವನು.

**पादात ಪಾದಾತ** (न०) ಪದಾತಿಗಳ ಸಮೂಹ, ಕಾಲಾಳುಗಳ ಗುಂಪು, ಕಾಲುಬಲ (ಸೈನ್ಯ)ದ ತಂಡ. पदाति "अण्" (४-२-३८)। "दीर्घास्तिर्यग्वैजयन्तीसदृक्षः पादातानां भ्रेजिरे खड्गलेखाः" माघ० १८-४।

**पादाति ಪಾದಾತಿ, –तिक –ತಿಕ** (पुं०) ಕಾಲಾಳು, ಕಾಲುಬಲ.

**पादाम्बु ಪಾದಾಂಬು** (न०) ಮಜ್ಜಿಗೆ, ನಾಲ್ಕನೆಯ ಒಂದು ಭಾಗ ನೀರು ಬೆರಸಿ ಕಡೆದ ಮೊಸರು. पादमम्बु यस्य। "तक्रं ह्युदश्विन्मथितं पादाम्ब्वर्धाम्बु निर्जलम्" अम०।

**पादालिन्दी ಪಾದಾಲಿಂದೀ** (स्त्री०) ನೌಕೆ, ಹಡಗು. पादइवालिन्दो यस्याः। गौरा० "ङीष्" (४-१-४१)। "पादालिन्दी तरण्डा नौस्तरणिस्तारणिस्तरिः" हारा०।

**पादावर्त ಪಾದಾವರ್ತ** (पुं०) ಏತ, ಬಾವಿಯಿಂದ ನೀರನ್ನು ಎತ್ತಲು ಕಾಲಿನಿಂದ ತಿರುಗಿಸಲ್ಪಡುವ ಚಕ್ರ. पादाभ्यामावर्त्यते—आ+वृतु (वर्तने) कर्म० "घञ्" (३-३-१९)। "उद्घटिकं घटीयन्त्रं पादावर्तोऽरघट्टकः" अभि० चि०।

**पादाविक ಪಾದಾವಿಕ** (पुं०) ಪದಾತಿ, ಕಾಲಾಳು, ಕಾಲು ಬಲ (ಸೈನ್ಯ). पादेनावो रक्षणम्। तत्र नियुक्तः "ठक्" (४-४-६९)।

**पादिक ಪಾದಿಕ** (वि०) 1. ನಾಲ್ಕನೆಯ ಒಂದು ಭಾಗದಿಂದ ಜೀವಿಸುವವನು. पादेन चतुर्थांशेन जीवति "ठक्" (४-४-१२)। 2. ನಾಲ್ಕನೆಯ ಒಂದು ಭಾಗದಷ್ಟು ಪರಿಮಾಣವುಳ್ಳ. पादः परिमाणमस्य। "षट्त्रिंशदाब्दिकं चर्यं गुरौ त्रैवेदिकं व्रतम्। तदर्धिकं पादिकं वा ग्रहणान्तिकमेव वा" मनु० ३-१।

**पादिन् ಪಾದಿನ್** (वि०) 1. ಚರಣಗಳುಳ್ಳ, ಕಾಲುಗಳುಳ್ಳ. पादौ चरणौ स्तोऽस्य "इनिः" (५-२-११५)। 2. ನಾಲ್ಕನೆಯ ಒಂದು ಭಾಗವನ್ನು ತೆಗೆದುಕೊಳ್ಳುವವನು. पादश्चतुर्थांशो ग्राह्यत्वेनास्त्यस्य "इनिः" (५-२-११५)। "सर्वेषामर्धिनो मुख्यास्तदर्धेनार्धिनोऽपरे। तृतीयिनस्तृतीयांशाश्चतुर्थांशाश्च पादिनः" मनु० ८-२१०।

**पादुक ಪಾದುಕ** (वि०) 1. ನಡೆಯುವ ಸ್ವಭಾವದ. पद (गतौ) "उकञ्" (३-२-१५४)। (स्त्री०) **-का -ಕಾ.** 2. ಪಾದುಕೆ, ಪಾದರಕ್ಷೆ. 3. ಜನರು ಸಂಚರಿಸುವ ದೊಡ್ಡ ರಸ್ತೆಯಲ್ಲಿ ಒಳಗೆ ಮುಳ್ಳು ಹಾಕಿ ಮರಳಿನಿಂದ ಮುಚ್ಚಲ್ಪಟ್ಟ ಹಳ್ಳ, -ಗುಳಿ. "पादुका कण्टकी गर्तः पांसुच्छन्नो महापथे" वैज०। पद्यतेऽनया — पद (गतौ) "ऊः" (उ० १-७५)। स्वार्थे "कः"। ह्रस्वः (७-४-१३)। "इति निगदितवन्तं राघवस्तं जगाद व्रज भरत गृहीत्वा पादुके त्वं मदीये। च्युतनिखिलविशङ्कः पूज्यमानो जनौघैः सकलभुवनराज्यं कारयास्मन्मतेन" भट्टि० ३-५६।

**पादुकाकार ಪಾದುಕಾಕಾರ** (पुं०) ಚಪ್ಪಲಿ ತಯಾರಿಸುವವನು.

**पादू ಪಾದೂ** (स्त्री०) ಪಾದರಕ್ಷೆ, ಚಪ್ಪಲಿ. पद्यतेऽनया-- पद (गतौ) "ऊः" (उ० १-८५)।

**पादोदक ಪಾದೋದಕ** (न०) 1. ಪಾದಪ್ರಕ್ಷಾಳನದ ನೀರು, ಕಾಲು ತೊಳೆದ ನೀರು. 2. ಹಿರಿಯರ ಮತ್ತು ಪರಮ ಪೂಜ್ಯರೆನಿಸಿದವರ ಪಾದಗಳನ್ನು ತೊಳೆದ ನೀರು, ಪಾದತೀರ್ಥ. ಹಿರಿಯರ ಚರಣಗಳನ್ನು ತೊಳೆದ ನೀರನ್ನು ಪೂಜ್ಯಭಾವನೆಯಿಂದ ಪವಿತ್ರವಾದುದೆಂದು ಸ್ವೀಕರಿಸುವ ಸಂಪ್ರದಾಯ. पादप्रक्षालनजातमुदकम्। "हृदि रूपं मुखे नाम नैवेद्यमुदरे हरेः। पादोदकञ्च निर्माल्यं मस्तके यस्य सोऽच्युतः" पाद्म० उत्तर०।

**पादोदर ಪಾದೋದರ** (पुं०) ಸರ್ಪ, ಹಾವು. पादः उदरे यस्य।

**पाद्य ಪಾದ್ಯ** (न०) 1. ಪಾದಪ್ರಕ್ಷಾಳನಕ್ಕಾಗಿ ಕೊಡುವ ನೀರು. पादायेदम् "यत्" (५-४-२५)। "नारीणामथ सरसी सफेनहस्ता प्रीत्येव व्यतनुत पाद्यमूर्मिहस्तैः" माघ० ८-१५। (वि०) 2. ನಾಲ್ಕನೆಯ ಒಂದು ಭಾಗವನ್ನು ಹೊಂದಲು ಅರ್ಹನಾದವನು. पादं चतुर्थांशमर्हति "यत्" (५-१-६६)।

**पान ಪಾನ** (पुं०) 1. ಮದ್ಯವನ್ನು ಮಾಡುವವನು. पीयते यस्मात् – पा (पाने) "ल्युट्"। 2. ನಿಃಶ್ವಾಸ, ನಿಟ್ಟುಸಿರು. पायतेऽनेन — पा (रक्षणे) कर० "ल्युट्" (३-३-११७)। "निःश्वासः पान एतनः" वैज०। 3. ದ್ರವಪದಾರ್ಥವನ್ನು ಕುಡಿಯುವುದು. "पानधौतनवयावकरागं सुभ्रुवो निभृतचुम्बनदक्षाः" माघ० १०-२६। 4. ಕುಡಿಯುವ ಪಾತ್ರೆ. पिबत्यनेन – पा (पाने) कर० "ल्युट्" (३-३-११७)। 5. ರಕ್ಷಣೆ, ಕಾಪಾಡುವುದು. पा (रक्षणे) भावे "ल्युट्" (३-३-११५)। 6. ಕಾಲುವೆ, ಕೊಳ ಮೊದಲಾದ ಜಲವಿರುವ ಪ್ರದೇಶ. पीयते पशुपक्ष्यादिभिरत्र—पा (पाने) अधि० "ल्युट्" (३-३-११७)। 7. ಜಲ, ನೀರು. पीयते — पा (पाने) कर्म० "ल्युट्" (३-३-११३)। (वि०) 8. ಪಾನಮಾಡುವವನು. 9. ರಕ್ಷಿಸುವವನು. पिबति रक्षति वा — पा (पाने, रक्षणे) कर्त० "ल्युः" (३-१-१३४)।

**पानक ಪಾನಕ** (न०) ಕುಡಿಯಬಹುದಾದ ದ್ರವವಸ್ತು, ಹಾಲು, ನೀರು ಮುಂತಾದುದು, ಹುಳಿ ಅಥವಾ ನಿಂಬೆ ಹಣ್ಣಿನ ರಸದಲ್ಲಿ ಮಾಡಿದ ಪಾನೀಯ.

**पानगोष्ठी ಪಾನಗೋಷ್ಠೀ** (स्त्री०) ಮದ್ಯಪಾನ ಮಾಡುವವರ ಸಭೆ, ಕುಡಿಯುವವರು ಒಟ್ಟುಗೂಡುವುದು, ಮದ್ಯ ಕುಡಿಯುವವರ ಗುಂಪು.

**पानप ಪಾನಪ** (वि०) ಮದ್ಯವನ್ನು ಕುಡಿಯುವವನು. ಹೆಂಡಗುಡುಕ. पानं मद्यादिपेयं पिबति — पा (पाने) "कः" (३-२-३)।

**पानपात्र ಪಾನಪಾತ್ರ** (न०) ಕುಡಿಯುವ ಪಾತ್ರೆ, ಮದ್ಯ ಮೊದಲಾದ ಪಾನೀಯವನ್ನು ಕುಡಿಯುವ ಪಾತ್ರೆ. पानस्य पेयस्य मद्यादेः पात्रम्।

**पानभूमि ಪಾನಭೂಮಿ** (स्त्री०) ಕುಡಿಯುವ ಜಾಗ. ಮದ್ಯಪಾನ ಮಾಡುವ ಸ್ಥಳ. पानस्य भूमिः। "घ्राणकान्तमधुगन्धकर्षिणीः पानभूमिरचनाः प्रियासखः" रघु० १९-११।

**पानशौण्ड ಪಾನಶೌಂಡ** (वि०) ಮದ್ಯವನ್ನು ಕುಡಿಯುವುದರಲ್ಲಿ ಸಮರ್ಥನಾದವನು.

**पानीय ಪಾನೀಯ** (न०) 1. ಜಲ, ನೀರು. पीयते—पा (पाने) "अनीयर्" (३-१-९६)। "पानीयं प्राणिनः प्राणाः पानीयं पावनं महत्। पानीयस्य प्रदानेन तृप्तिर्भवति शाश्वती"। (वि०) 2. ಕುಡಿಯಲ್ಪಡುವ. 3. ಕುಡಿಯಲು ಅರ್ಹವಾದ. 4. ರಕ್ಷಿಸಲ್ಪಡುವ. 5. ರಕ್ಷಿಸಲು ಅರ್ಹವಾದ. 6. ಕುಡಿಯಬೇಕಾದ. 7. ರಕ್ಷಿಸಬೇಕಾದ. पा (पाने रक्षणे वा) कर्मादौ "अनीयर्"।

**पानीयनकुल ಪಾನೀಯನಕುಲ** (पुं०) ನೀರುಬೆಕ್ಕು, ಜಲಮಾರ್ಜಾರ. "उद्रस्तु जलमार्जारः पानीयनकुलो वसी" अभि० चि०।

**पानीयशाला ಪಾನೀಯಶಾಲಾ** (स्त्री०) 1. ಮದ್ಯ ಮಾರುವ ಮನೆ, ಹೆಂಡದ ಅಂಗಡಿ. 2. ಮದ್ಯ ಕುಡಿಯುವ ಮನೆ. पीयतेऽस्याम् — पा (पाने) अधि० "अनीयर्" (३-१-९६)। पानीया शाला। स्वार्थे "कः"। -शालिका -ಶಾಲಿಕಾ.

**पान्थ ಪಾಂಥ** (वि०) 1. ಪಥಿಕ, ಯಾತ್ರೆಗೆ ಹೋಗುವವನು, ದಾರಿ ನಡೆಯುವವನು, ದಾರಿಗ. पन्थानं नित्यं गच्छति — "णः" (५-१-७६)। "यथा निदाघसमये सूर्यांशुपरिपीडितः। पान्थो याति जलं दृष्ट्वा त्वरितं तत्पिपासया" हरिवं०। 2. ವಿಯೋಗಿ, ಪ್ರವಾಸಕಾಲದಲ್ಲಿ ಪತ್ನಿಯನ್ನು ಬಿಟ್ಟು ದೂರವಾಗಿರುವವನು. "इतीव पान्थान् शपतः पिकान् द्विजान् सखेदमैक्षिष्ट स लोहितेक्षणान्" नैष० १-९०।

**पाप ಪಾಪ** (न०) 1. ನರಕವಾಸಕ್ಕೆ ಕಾರಣವಾದ ದುಷ್ಕೃತ್ಯ ಮತ್ತು ದುರಾಚಾರ, ಹಿಂಸೆ. पाति अस्मादात्मानम् — पा (रक्षणे) "पः" (उ०३-२३)। "दृढभक्तिरिति ज्येष्ठे राज्यतृष्णापराङ्मुखः। मातुः पापस्य भरतः प्रायश्चित्तमिवाकरोत्" रघु० १२-१९। "पापं पापाः कथयत कथं शौर्यराशेः पितुर्मे" वेणी० ३-८। (वि०) 2. ಪಾಪಿ, ಪಾಪಾತ್ಮ, ಪಾಪಕಾರ್ಯವನ್ನೆಸಗಿದವನು, ಪಾಪದ ಸ್ವಭಾವದವನು. पापमस्यास्ति "अच्" (५-२-१२७)। "सुहृन्मित्रार्युदासीनमध्यस्थद्वेष्यबन्धुषु। साधुष्वपि च पापेषु समबुद्धिर्विशिष्यते" गीता ६-९। 3. ವಂಚಕ, ಘಾತುಕ, ಕ್ರೂರಕಾರ್ಯ ಮಾಡುವವನು. "नृशंसो घातुकः क्रूरः पापः" अम०। ಪಾಪವು ಕಾಯಿಕ ವಾಚಿಕ ಮತ್ತು ಮಾನಸಿಕಗಳೆಂದು ಮೂರು ವಿಧ.

(1) ಪ್ರಾಣಹಿಂಸೆ, ಕಳ್ಳತನ, ಪರಸ್ತ್ರೀದೂಷಣ (ವ್ಯಭಿಚಾರ) ಇವು ಕಾಯಿಕ ಪಾಪ. "प्राणाभितापनं स्तैन्यं परदारमथापि वा। त्रीणि पापानि कायेन सर्वतः परिवर्जयेत्" भा० शान्ति०।

(2) ಕೆಟ್ಟಮಾತಾಡುವುದು, ಇತರರ ಮನ ನೋಯುವಂತೆ ಕಠಿನವಾಗಿ ಮಾತಾಡುವುದು, ಚಾಡಿಕೋರತನ, ಸುಳ್ಳು ಹೇಳುವುದು ಇತ್ಯಾದಿ ವಾಚಿಕ ಪಾಪ. "असत्प्रलापं पारुष्यं पैशुन्यमनृतं तथा। चत्वारि वाचा राजेन्द्र न जल्पेत न चिन्तयेत्" [illegible]० शान्ति०।

(3) ಪರಸ್ವತ್ತನ್ನು ಅಪಹರಿಸುವುದು ವಂಚನೆ ದ್ವೇಷ ಇತ್ಯಾದಿ ಮಾನಸಿಕ ಪಾಪ. "अनभिध्या परस्वेषु सर्वसत्त्वेषु सौहृदम्। कर्मणां फलमस्तीति त्रिविधं मनसा चरेत्" भा० शान्ति०।

**पापकृत् ಪಾಪಕೃತ್** (वि०) ಪಾಪಕಾರ್ಯವನ್ನು ಮಾಡಿದವನು. पापं कृतवान्। "पापकृन्मुच्यते पापात् तथा दानेन चापदि"।

**पापग्रह ಪಾಪಗ್ರಹ** (पुं०) ತೊಂದರೆ ಕೊಡುವ ಗ್ರಹ, ಪೀಡಿಸುವ ಗ್ರಹ—ಕ್ಷೀಣಚಂದ್ರ, ಕುಜ, ರಾಹು, ಶನಿ ಇವರೊಡನೆ ಸೇರಿದ ಬುಧ ಮತ್ತು ರವಿ ಇವರು ಪಾಪ ಗ್ರಹಗಳು. "अर्धेन्दुः कुजो राहुः शनिस्तैर्युत इन्दुजः। रविः पापग्रहास्त्वेते शुभास्त्वन्ये प्रकीर्तिताः"।

**पापघ्न ಪಾಪಘ್ನ** (पुं०) 1. ತಿಲ, ಎಳ್ಳು. पापं हन्ति — हन (हिंसागत्योः) "टक्" (३-२-५३)। ತಿಲದಾನದಿಂದ ಪಾಪ ಪರಿಹಾರವಾಗುವುದು. (वि०) 2. ಪಾಪವನ್ನು ನಾಶಪಡಿಸುವ.

**पापचेली ಪಾಪಚೇಲೀ** (स्त्री०) ಅಗುರು ಹುಂಡಿ. "एकाष्ठीला पापचेली प्राचीना वनतिक्तिका" अम०।

**पापनाशन ಪಾಪನಾಶನ** (पुं०) 1. ವಿಷ್ಣು. पापं तदुपलक्ष्यं बाह्याभ्यन्तरशत्रुं नाशयति — णश (अदर्शने) + णिच् "ल्युः" (३-१-१३४)। "देवकीतनयत्वेऽपि प्रपन्नानां विशेषतः। बाह्यान्तःशत्रुसंहारी यः स स्यात् पापनाशनः" इति निरुक्तिः। (न०) 2. ಪಾಪವನ್ನು ನಾಶಪಡಿಸುವುದು. पापस्य नाशनम्। 3. ಪ್ರಾಯಶ್ಚಿತ್ತ, ಪಾಪವನ್ನು ಪರಿಹರಿಸುವ ಒಂದು ಕಾರ್ಯ. पापं नाश्यत्यनेन — णश + णिच् कर० "ल्युट्" (३-३-११७)। (वि०) 4. ಪಾಪವನ್ನು ಪರಿಹರಿಸುವ. पापं नाशयति— णश (अदर्शने) णिच् "ल्युः" (३-१-१३४)।

**पापपति ಪಾಪಪತಿ** (पुं०) ಉಪಪತಿ, ಜಾರ, ವಿಂಡ. पापजनकः पतिः।

**पापफल ಪಾಪಫಲ** (न०) ಪಾಪದ ಫಲ, ದುಷ್ಕಾರ್ಯದ ಫಲ.

**पापभाज् ಪಾಪಭಾಜ್** (वि०) ಪಾಪವನ್ನು ಹೊಂದುವ, ಪಾಪವನ್ನು ಸಂಪಾದಿಸುವ. पापं भजते—भज (सेवायाम्) "क्विप्" (३-२-७६)। "न केवलं यो महतोऽपभाषते शृणोति तस्मादपि यः स पापभाक्" कुमा० ५-८३।

**पापमुक्त ಪಾಪಮುಕ್ತ** (वि०) ಪಾಪದಿಂದ ಬಿಡಲ್ಪಟ್ಟ. पापान्मुक्तः। "यः समः सर्वभूतेषु जितात्मा शान्तमानसः।

स पापेभ्यो विमुच्येत ज्ञानवान् स च वेदवित्" वराहपु०।

**पापमुक्ति ಪಾಪಮುಕ್ತಿ** (स्त्री०) ಪಾಪದಿಂದ ಬಿಡುಗಡೆ. पापान्मुक्तिः।

**पापयोनि ಪಾಪಯೋನಿ** (स्त्री०) 1. ತಿರ್ಯಕ್‌ಪ್ರಾಣಿಗಳ ಯೋನಿಯಲ್ಲಿ ಹುಟ್ಟುವಿಕೆ, ನಿಕೃಷ್ಟವಾದ ಜನ್ಮ. पापा निन्द्या योनिः। (वि०) 2. ಪಾಪಕರ್ಮದಿಂದ ಉಂಟಾದ ಜನ್ಮವುಳ್ಳ, ತಿರ್ಯಕ್‌ಪ್ರಾಣಿಗಳ ಯೋನಿಯಲ್ಲಿ ಜನಿಸಿದ. पापहेतुका योनिर्यस्य। "महापातकजान् घोरान्नरकान् प्राप्य दारुणान्। कर्मक्षयात्प्रजायन्ते महापातकिनस्त्विह॥ मृगाश्वसूकरोष्ट्राणां ब्रह्महा योनिमृच्छति। खरपुक्कसवेणानां सुरापो नात्र संशयः। कृमिकीटपतङ्गत्वं स्वर्णहारी समाप्नुयात्। तृणगुल्मलतात्वं च क्रमशो गुरुतल्पगः" याज्ञ० ३-२०६-८। [ವಿವರಕ್ಕೆ "अधर्म" ಪದದಲ್ಲಿ ನೋಡಿ.]

**पापरोग ಪಾಪರೋಗ** (पुं०) ಪಾಪಕೃತ್ಯಗಳಿಂದ ಜನ್ಮಾಂತರದಲ್ಲಿ ಉಂಟಾಗುವ ರೋಗ, ವೈದ್ಯ ಚಿಕಿತ್ಸೆಗೂ ಅಡಗದ ಕರ್ಮವ್ಯಾಧಿ. [ಈ ವ್ಯಾಧಿಗಳು ಅನುಭವದಿಂದಲೇ ನಿವೃತ್ತಿ ಹೊಂದಬೇಕು. ಪಾಪಕರ್ಮಗಳಿಗೆ ಅನುಗುಣವಾದ ನರಕವಾಸ ಮತ್ತು ತಿರ್ಯಕ್‌ಜನ್ಮಗಳಾದ ಬಳಿಕ ಮನುಷ್ಯ ಜನ್ಮ ಪಡೆದು ಅನುಭವಿಸಬೇಕಾದ ಅನೇಕ ವ್ಯಾಧಿಗಳಲ್ಲಿ ಕರ್ಮವ್ಯಾಧಿಗಳೂ ಉಂಟು.] ಮಹಾಪಾತಕಿಯು ಕುಷ್ಠರೋಗಿಯಾಗುವನು. ಬ್ರಹ್ಮಹತ್ಯೆ ಮಾಡಿದವನು ಕ್ಷಯರೋಗಿಯಾಗುವನು. ಸ್ವರ್ಣವನ್ನು ಕದಿಯುವವನು ಕುನಖಿಯಾಗುತ್ತಾನೆ. ಧಾನ್ಯಚೋರನು ಅಂಗಹೀನನಾಗುತ್ತಾನೆ. ವಸ್ತ್ರಚೋರನು ಶ್ವೇತ ರೋಗವನ್ನು ಅನುಭವಿಸುತ್ತಾನೆ. ಅಶ್ವಾಪಹಾರಕನು ಕುಂಟನಾಗಿ ಹುಟ್ಟುತ್ತಾನೆ. ಇತ್ಯಾದಿ ಅನೇಕ ಕಷ್ಟದಾಯಕ ವ್ಯಾಧಿಗಳನ್ನು ಪಾಪಿಯು ಅನುಭವಿಸಬೇಕಾಗುವುದು.

**पापरोगिन् ಪಾಪರೋಗಿನ್** (वि०) ಪಾಪಕೃತ್ಯದ ಫಲವಾದ ರೋಗಗಳುಳ್ಳವನು. पापरोगोऽस्यास्ति "इनिः" (५-२-११५)।

**पापर्द्धि ಪಾಪರ್ದ್ಧಿ** (स्त्री०) 1. ಬೇಟೆ. पापानामृद्धिरत्र। 2. ಪಾಪದ ವೃದ್ಧಿ, ಪಾಪವು ಹೆಚ್ಚುವಿಕೆ. पापानामृद्धिः समृद्धिः।

**पापशमन ಪಾಪಶಮನ** (न०) 1. ಪಾಪವನ್ನು ಕಡಮೆ ಮಾಡುವುದು. पापस्य शमनम्। (वि०) 2. ಪಾಪವನ್ನು ಕಡಮೆಮಾಡುವ. पापं शमयति—शमु (उपशमे) "ल्युः" (३-१-१३४)।

**पापहन् ಪಾಪಹನ್** (वि०) ಪಾಪವನ್ನು ನಾಶಪಡಿಸುವ. पापं हन्ति—हन (हिंसागत्योः) "क्विप्" (३-२-८७)। "उपपदनियमस्य प्रायिकत्वाभिप्रायेण "क्विप्"। "यत्र श्यामो लोहिताक्षो दण्डश्चरति पापहा। प्रजास्तत्र न मुह्यन्ति नेता चेत्साधु पश्यति" मनु० ७-२५।

**पापात्मन् ಪಾಪಾತ್ಮನ್** (वि०) ಪಾಪದಿಂದ ಕೂಡಿದ (ಜೀವ). पापयुक्तः आत्मा।

**पापिन् ಪಾಪಿನ್** (वि०) ಪಾಪದಿಂದ ಕೂಡಿದ. पापमस्यास्ति "इनिः" (५-२-११५)।

**पापिष्ठ ಪಾಪಿಷ್ಠ** (वि०) ಎಲ್ಲರಿಗಿಂತಲೂ ಹೆಚ್ಚು ಪಾಪಿಯಾದ, ಅಧಿಕ ಪಾಪ ಮಾಡಿದ. अतिशयेन पापी—"इष्ठन्" (५-३-५५)।

**पापीयस् ಪಾಪೀಯಸ್** (वि०) ಇಬ್ಬರಲ್ಲಿ ಹೆಚ್ಚು ಪಾಪಿಯಾದ ಒಬ್ಬ. अयमनयोरतिशयेन पापी "ईयसुन्" (५-३-५७)। स्त्रियां "ङीप्" (४-१-६)। -यसी -ಯಸೀ.

**पाप्मन् ಪಾಪ್ಮನ್** (पुं०) ಪಾಪ, ಪಾತಕ. आप्नोति व्याप्नोति लोकान्—आप्लृ (व्याप्तौ) "मनिन्" (उ० ४-१५०)। निपा०। "पाप्मनां तमसि पातयितॄणामात्मचौर्यमविराजपदस्थम्" याद० २१-२०।

**पामघ्न ಪಾಮಘ್ನ** (पुं०) 1. ಗಂಧಕ. पाम हन्ति—हन (हिंसागत्योः) "टक्" (३-२-५३)। (स्त्री०) 2. ಕಟುಕರೋಹಿಣಿ.

**पामन् ಪಾಮನ್** (न०) ಕಜ್ಜಿ, ಚರ್ಮರೋಗ. पायत्यङ्गम्—पै (शोषणे) "मनिन्" (उ० ४-१४५)। स्त्रियां मन्नन्तत्वात् वा "डाप्" (४-१-१३)। पामा ಪಾಮಾ. "पाम पामा विचर्चिका" अम०।

**पामन ಪಾಮನ** (वि०) ಕಜ್ಜಿಯಿಂದ ಕೂಡಿದ, ಕಜ್ಜಿ ಹಿಡಿದಿರುವ, ಚರ್ಮರೋಗವುಳ್ಳ. पामास्त्यस्य "नः" (५-२-१००)।

**पामर ಪಾಮರ** (वि०) 1. ಅಜ್ಞ, ಮೂರ್ಖ, ಏನೇನೂ ತಿಳುವಳಿಕೆಯಿಲ್ಲದವನು. पातीति पाः धर्मः म्रियतेऽनेन—मृङ् (प्राणत्यागे) "घः" (३-३-११८)। 2. ನೀಚ, ಅಸಭ್ಯ, ಅಸಂಸ್ಕೃತ. "पामरो मूर्खनीचयोः" मेदि०। "दूरात् पामरफूत्कृतैः श्रुतिपथप्राप्तैः प्रबुद्धस्त्वमूदृष्टी निर्झरवारिभिः सहमनाः श्वभ्रे निमज्जन्निव" राजत० १-३७८। 3. ಕಜ್ಜಿಯಿಂದ ಕೂಡಿದವನು ಕಜ್ಜಿ ಹಿಡಿದವನು. पाम अस्यास्ति "रः" (४-२-८०)। 4. ದುಷ್ಟ, ದುರ್ಜನ. स्त्रियां पामरी ಪಾಮರೀ.

**पामारि ಪಾಮಾರಿ** (ಪುಂ) ಗಂಧಕ. पाम्नोऽरि:। "गन्धाश्मा शुल्बपामाकुष्ठारिर्गान्धिकगान्धकौ" अभि० चि०।

**पायन ಪಾಯನ** (ನಂ) ಕುಡಿಸುವುದು, ಕುಡಿಯುವಂತೆ ಮಾಡುವುದು. पा (पाने)+णिच् "ल्युट्" (३-३-११५)।

**पायनीय ಪಾಯನೀಯ** (वि०) 1. ಕುಡಿಸಲ್ಪಡುವ. 2. ಕುಡಿಸಲು ಅರ್ಹನಾದ. 3. ಕುಡಿಸಬೇಕಾದ, ಪಾನ ಮಾಡಿಸಬೇಕಾದ. पा (पाने) + णिच् "अनीयर्" (३-१-९६)। "तव्य:" (३-१-९६)। **पाययितव्य: ಪಾಯಯಿತವ್ಯ:**.

**पाययत् ಪಾಯಯತ್** (वि०) ಕುಡಿಸುತ್ತಿರುವ, ಪಾನ ಮಾಡಿಸುತ್ತಿರುವ. पा (पाने) + णिच् "शतृ" (३-२-१२४)। स्त्रियां "ङीप्" (४-१-६)। **—यन्ती —ಯನ್ತೀ**. "शानच्" (३-२-१२४)। **—पयमान: —ಯಯಮಾನಃ**.

**पायस ಪಾಯಸ** (पुं०न०) 1. ಕ್ಷೀರಾನ್ನ, ಕ್ಷೀರದಲ್ಲಿ ಪಕ್ವವಾದ ಅನ್ನ, ಹಾಲಿನಲ್ಲಿ ಬೇಯಿಸಲ್ಪಟ್ಟ ಅನ್ನ. पयसि संस्कृतम् "अण्" (४-२-१६)। "संवत्सरं तु गव्येन पयसा पायसेन च" मनु० ३-२७१। 2. ಲೋಬಾನ, ತುರುಷ್ಕ ದೇಶದ ಒಂದು ವಾಸನಾದ್ರವ್ಯ. "पायसस्तु क्लीबपुंसो: श्रीवासपरमान्नयो:" मेदि०। (वि०) 3. ಹಾಲಿನಿಂದ ತಯಾರಿಸಲ್ಪಟ್ಟ ವಸ್ತು. पयसो विकार: "अण्" (४-३-१३४)।

**पायिक ಪಾಯಿಕ** (पुं०) ಪದಾತಿ, ಕಾಲಾಳು.

**पायित ಪಾಯಿತ** (न०) 1. ಕುಡಿಸುವುದು, ಪಾನಮಾಡಿಸುವುದು. पा (पाने) + णिच् "क्त:" (३-३-११४)। (वि०) 2. ಕುಡಿಸಲ್ಪಟ್ಟ, ಪಾನಮಾಡಿಸಲ್ಪಟ್ಟ. पा+णिच् "क्त:" (३-२-१०२)।

**पायितवत् ಪಾಯಿತವತ್** (वि०) ಕುಡಿಸಿದವನು, ಪಾನ ಮಾಡಿಸಿದವನು. पा (पाने) + णिच् "क्तवतु:" (३-२-१०२)। स्त्रियां "ङीप्" (४-१-६)। **—वती —ವತೀ**.

**पायिन् ಪಾಯಿನ್** (न०) ಕುಡಿಯುವವನು, ಪಾನಮಾಡುವವನು. पा (पाने) "णिनि:" (३-२-७८)।

**पायु ಪಾಯು** (वि०) 1. ಗುದ, ಆಸನದ್ವಾರ, ಅಪಾನ ವಾಯು ಹೊರಡುವ ಮಾರ್ಗ. पाति मलनि:सारणेन रक्षति—पा (रक्षणे) "उण्" (उ० १-१)। 2. ಒಂದು ಕರ್ಮೇಂದ್ರಿಯ. ["कर्मेन्द्रिय" ಪದದಲ್ಲಿ ನೋಡಿ.]

**पाय्य ಪಾಯ್ಯ** (न०) 1. ಪರಿಮಾಣ, ಅಳತೆ. मीयतेऽनेन —मा (माने) "ण्यत्" धात्वादे: पत्वं च निपा० (३-१-१२९)। 2. ಪಾನೀಯ, ಜಲ, ನೀರು. 3. ಕುಡಿಯುವುದು, ಪಾನಮಾಡುವುದು. (वि०) 4. ನಿಂದೆಗೆ ಅರ್ಹನಾದ, ನೀಚ, ಅಧಮ. 5. ಕುಡಿಸಲ್ಪಡುವ. 6. ಕುಡಿಸಬೇಕಾದ, ಪಾನಮಾಡಿಸಬೇಕಾದ. 7. ಪಾನ ಮಾಡಿಸಲು ಅರ್ಹನಾದ. "घृतं च पाय्य: स नर: सुजीर्णे स्निग्धो विरेच्य: स यथोपदेशम्" सुश्रुत० सूत्र० १७-३०।

**पार ಪಾರ** (न०) 1. ಹೊಳೆಯ ಅಥವಾ ಸಮುದ್ರದ ಎದುರು ದಡ. पार्यते तरणमत्र—पार (कर्मसमाप्तौ) "घञ्" (३-३-१२१)। "पारेजलं नीरनिधेरपश्यन्मुरारिरानीलपलाशराशी:" माघ० ३-७०। "नादाब्धेस्तु परं पारं न जानाति सरस्वती। अद्यापि मज्जनभयात् तुम्बीं वहति वक्षसि"। (पुं०न०) 2. ಪ್ರಾಂತ ಭಾಗ, ಕೊನೆಯ ಭಾಗ. "तेजस्वी रिपुहतबन्धुदु:खपारं बाहुभ्यां व्रजति धृतायुधप्लवाभ्याम्" वेणी० ३-२७। 3. ಆಚೆಯ ಪ್ರದೇಶ, ಒಂದು ವಸ್ತುವಿನ ಅಥವಾ ಪ್ರದೇಶದ ಹೊರಭಾಗ. "स हि देव: परं ज्योतिस्तम:पारे व्यवस्थितम्" कुमा० २-५८। 4. ಪಾದರಸ. (स्त्री०) **पारा ಪಾರಾ**. 5. ಒಂದು ನದಿ.

**पारक ಪಾರಕ** (वि०) 1. ಪಾಲಿಸುವವನು, ಕಾಪಾಡುವವನು. पृ (पालनपूरणयो:) "ण्वुल्" (३-१-१३३)। 2. ಪೂರ್ತಿಮಾಡುವ. 3. ಪ್ರೀತಿಯುಂಟುಮಾಡುವ.

**पारक्य ಪಾರಕ್ಯ** (न०) 1. ಪರಲೋಕಕ್ಕೆ ಸಾಧನವಾದ ಕಾರ್ಯ, ಪರಲೋಕಕ್ಕೆ ಹಿತವಾದ ಕರ್ಮ. परस्मै लोकाय हितम्। (वि०) 2. ಪರಕೀಯ, ಇತರರಿಗೆ ಸಂಬಂಧಿಸಿದ. परस्येदम्। "वरं स्वधर्मो विगुणो न पारक्य: स्वनुष्ठित:। परधर्मेण जीवन् हि सद्य: पतति जातित:" मनु० १०-९७।

**पारग ಪಾರಗ** (वि०) 1. ಪಾರವನ್ನು ತಲುಪುವ, ಆಚೆ ದಡವನ್ನು ಮುಟ್ಟುವ. पारं गच्छति—गम्लृ (गतौ) "ड:" (३-२-४८)। 2. ಕೊನೆಯ ಭಾಗವನ್ನು ಮುಟ್ಟಿರುವ, ಒಂದು ವಿಷಯದಲ್ಲಿ ಸಂಪೂರ್ಣ ಜ್ಞಾನವನ್ನು ಪಡೆದಿರುವ. "मृगया न विगीयते नृपैरपि धर्मागममर्मपारगै:" नैष० २-९। 3. ಕಾರ್ಯವನ್ನು ಸಮಾಪ್ತಿಗೊಳಿಸುವ, ಕಾರ್ಯದ ಕೊನೆಯನ್ನು ಮುಟ್ಟುವ.

**पारगत ಪಾರಗತ** (वि०) 1. ಕೊನೆಯನ್ನು ಮುಟ್ಟಿದ. 2. ಆಚೆ ದಡವನ್ನು ತಲುಪಿದ. 3. ಸಂಪೂರ್ಣ ತಿಳಿವಳಿಕೆಯನ್ನು ಪಡೆದಿರುವ. पारं गत:।

**पारगामिन् ಪಾರಗಾಮಿನ್** (वि०) 1. ಕೊನೆಯನ್ನು ಮುಟ್ಟುವ. 2. ಆಚೆ ದಡವನ್ನು ತಲುಪುವ. पारं गच्छति — गम्लृ (गतौ) "णिनिः" (३-१-१३४)।

**पारण ಪಾರಣ** (पुं०) 1. ಮೇಘ, ಮೋಡ. पारयति — पार (कर्मसमाप्तौ) + णिच् "ल्युः" (३-१-१३४)। (न०) 2. ವ್ರತ ಸಮಾಪ್ತಿಯ ನಂತರ ಮಾಡುವ ಭೋಜನ. पार भावे "ल्युट्" (३-३-११५)। स्त्रियां "युच्" (३-३-१०७)। **—णा —ಣಾ.** 3. ಭೋಜನ, ಊಟ. "बभूव तस्याः किल पारणाविधिः न वृक्षवृत्तिव्यतिरिक्तसाधनः" कुमा० ५-२२।

**पारत(द) ಪಾರತ(ದ)** (पुं०) ಪಾದರಸ. पारं तनोति —तनु (विस्तारे) "डः" (वा० ३-२-१०१)। पृषो०। पारं ददाति — डु दाञ् (दाने) "कः" (३-२-३) वा। ಪರಮೇಶ್ವರನ ದೇಹದಿಂದ ಭೂಮಿಯಲ್ಲಿ ಬಿದ್ದ ರೇತಸ್ಸು ಪಾದರಸವಾಯಿತು. "शिवाङ्गात् प्रच्युतं रेतः पतितं धरणीतले। तद्देहसारजातत्वाच्छुक्लमच्छमभूच्च तत्। क्षेत्रभेदेन विज्ञेयं शिववीर्यं चतुर्विधम्। श्वेतं रक्तं तथा पीतं कृष्णं तत्तु भवेत् क्रमात्"।

**पारतन्त्र्य ಪಾರತಂತ್ರ್ಯ** (न०) ಪರಾಧೀನತೆ, ಇನ್ನೊಬ್ಬರ ಆಶ್ರಯದಲ್ಲಿರುವಿಕೆ. परतन्त्रस्य भावः "ष्यञ्" (५-१-१२४)।

**पारत्रिक ಪಾರತ್ರಿಕ** (वि०) 1. ಪರಲೋಕಕ್ಕೆ ಹಿತವಾದ. 2. ಪರಲೋಕದಲ್ಲಿರುವ, ಪರಲೋಕದಲ್ಲಿ ಉಂಟಾಗುವ. परत्र भवम् "ठञ्" (वा० ४-३-६०)।

**पारद ಪಾರದ** (पुं०) ಪಾದರಸ, ರಸಧಾತು. पारं ददाति — डु दाञ् (दाने) "कः" (३-२-३)। ["पारत" ಪದದಲ್ಲಿ ನೋಡಿ.] "पारदः सकलरोगनाशकः षड्रसो निखिलयोगवाहकः"।

**पारदारिक ಪಾರದಾರಿಕ** (वि०) ಪರಸ್ತ್ರೀಸಂಗ ಮಾಡುವವನು, ವ್ಯಭಿಚಾರಿ. परदारान् गच्छति — "ठक्" (वा० ७-३-७)। "पारदारिकविलाससाहसं देवभर्तुरुदटङ्कि भित्तिषु" नैष० १८-२१।

**पारदार्य ಪಾರದಾರ್ಯ** (न०) ಪರಸ್ತ್ರೀಗಮನ, ವ್ಯಭಿಚಾರ. परस्य दाराः दारा यस्य परदारः, तस्य कर्म "ष्यञ्" (५-१-१२४)। "भृताध्ययनादानं भृतकाध्यापनं तथा। पारदार्यं पारिवित्त्यं वार्धुष्यं लवणक्रिया" याज्ञ० ३-२३५।

**पारदृश्वन् ಪಾರದೃಶ್ವನ್** (वि०) ಕೊನೆಯನ್ನು ಕಂಡಿರುವ, ಕೊನೆಯನ್ನು ಮುಟ್ಟಿರುವ, ಸಂಪೂರ್ಣ ಜ್ಞಾನವನ್ನು ಸಂಪಾದಿಸಿದ. पारं दृष्टवान् — दृशिर् (प्रेक्षणे) "क्वनिप्" (३-२-९४)। "अनाकृष्टस्य विषयैः विद्यानां पारदृश्वनः" रघु० १-२३। स्त्रियां "ङीप्" रश्चान्तादेशः (४-१-७)। **—श्वरी —ಶ್ವರೀ.**

**पारदेश्य ಪಾರದೇಶ್ಯ** (वि०) 1. ಪರದೇಶದಲ್ಲಿರುವ, ಪರದೇಶದಲ್ಲಿ ಉಂಟಾದ. परदेशे भवम्। 2. ಪರದೇಶದಿಂದ ಬಂದಿರುವ, ಬೇರೆ ದೇಶದಿಂದ ಲಭ್ಯವಾದ. "दशकं पारदेश्ये तु यः सद्यः क्रयविक्रयी" याज्ञ० २-२५२।

**पारमार्थिक ಪಾರಮಾರ್ಥಿಕ** (वि०) 1. ಪರಮಾರ್ಥವೇ ಪ್ರಯೋಜನವಾಗಿ ಉಳ್ಳ, ಪರಲೋಕದ ಧರ್ಮಕ್ಕೆ ಅನುಕೂಲವಾದ, ಶ್ರೇಯಃಸಾಧನೆಯೇ ಫಲವಾಗಿ ಉಳ್ಳ. परमार्थः प्रयोजनमस्य "ठञ्" (५-१-१०९)। 2. ಪರಮಾರ್ಥಕ್ಕೆ ಸಂಬಂಧಿಸಿದ, ನಿಜವಾದ ವಿಷಯಕ್ಕೆ ಸಂಬಂಧಿಸಿದ. 3. ವಾಸ್ತವವಾದ ಸಂಗತಿಯಿಂದ ಕೂಡಿದ, ನಿಜವಾದ ವಿಷಯವನ್ನೊಳಗೊಂಡಿರುವ. "गतानुगतिको लोको न लोकः पारमार्थिकः"। स्त्रियां "ङीप्" (४-१-१५)। **पारमार्थिकी ಪಾರಮಾರ್ಥಿಕೀ.**

**पारमार्थ्य ಪಾರಮಾರ್ಥ್ಯ** (न०) ಪರಮಾರ್ಥದ ಭಾವ, ವಸ್ತುಸ್ಥಿತಿಯಿಂದಿರುವಿಕೆ, ನಿಜವಾಗಿರುವಿಕೆ. परमार्थस्य भावः "ष्यञ्" (५-१-१२४)।

**पारमेष्ठ्य ಪಾರಮೇಷ್ಠ್ಯ** (न०) 1. ಸರ್ವಶ್ರೇಷ್ಠತೆ, ಪರಮೋನ್ನತ ಸ್ಥಾನದಲ್ಲಿರುವಿಕೆ. 2. ಬ್ರಹ್ಮಪಟ್ಟ, ಚತುರ್ಮುಖನ ಸ್ಥಾನದಲ್ಲಿರುವಿಕೆ. परमे व्योमनि चिदाकाशे ब्रह्मपदे वा तिष्ठति — परम + ष्ठा (गतिनिवृत्तौ) "इनिः" (उ० ४-१०)। "अलुक्" (६-३-१४)। परमेष्ठिनो भावः "ष्यञ्" (५-१-१२४)। "न पारमेष्ठ्यं न महेन्द्रधिष्ण्यं न सार्वभौमं न रसाधिपत्यम्। न योगसिद्धीरपुनर्भवं वा मय्यर्पितात्मेच्छति मद्विनान्यत्" भाग० ११-१४-१४।

**पारम्पर्य ಪಾರಂಪರ್ಯ** (न०) ಪರಂಪರೆ, ಕುಲಕ್ರಮ, ವಂಶಕ್ರಮ. परम्परा स्वार्थे "ष्यञ्" (वा० ५-१-१२४)।

**पारम्पर्योपदेश ಪಾರಂಪರ್ಯೋಪದೇಶ** (पुं०) ಪ್ರಾಚೀನ ಕಾಲದಿಂದ ಪರಂಪರೆಯಾಗಿ ಬಂದಿರುವ ಮಾತು, ಹಿಂದಿನ ಕಾಲದಿಂದ ಜನರ ಬಾಯಿಂದ ಬಂದಿರುವ ಹೇಳಿಕೆ, ಐತಿಹ್ಯ. पारम्पर्येण गुरुजनपरम्परया प्राप्तः उपदेशः। "ಈ ಕ್ಷೇತ್ರದಲ್ಲಿ ಮಹಾಮಹಿಮಾನ್ವಿತರಾದ ದೊಡ್ಡ ಯೋಗಿ

ಯೊಬ್ಬರು ಅದೃಶ್ಯರಾಗಿ ವಾಸಿಸುತ್ತಿರುವರು" ಇತ್ಯಾದಿ ಹಿಂದಿನ ಕಾಲದಿಂದಲೂ ಕವಿಯಿಂದ ಕವಿಗೆ ಬಂದ ಮಾತು ಪಾರಂಪರ್ಯೋಪದೇಶವೆನಿಸುವುದು.

**पारलौकिक ಪಾರಲೌಕಿಕ** (वि०) 1. ಪರಲೋಕ ಸಂಬಂಧವಾದ, ಪರಲೋಕದಲ್ಲಿ ಉಂಟಾಗುವ. परलोके भवम् "ठञ्" (वा० ४-३-६०)। उभयपदवृद्धिः (७-३-२०)। "दानपात्रमधमर्णमिहैकग्राहि कोटिगुणितं दिवि दायि" नैष० ५-९२। 2. ಪರಲೋಕಕ್ಕೆ ಹಿತವಾದ, ಪರಲೋಕಕ್ಕೆ ಸಾಧನವಾದ. "धर्म एको मनुष्याणां सहायः पारलौकिकः" भा० अनु० १७३-१।

**पारवत ಪಾರವತ** (पुं०) ಪಾರಾವತ, ಕಪೋತಪಕ್ಷಿ, ಪಾರಿವಾಳದ ಹಕ್ಕಿ. पारावत पृषो०। "पारावतः पारवतो जरा स्याज्जरसा सह" शब्दभेद०।

**पारवश्य ಪಾರವಶ್ಯ** (न०) ಪಾರತಂತ್ರ್ಯ, ಪರಾಧೀನತೆ, ಇತರರ ಅಧೀನದಲ್ಲಿರುವಿಕೆ. परवशस्य भावः "ष्यञ्" (५-१-१२४)।

**पारशव ಪಾರಶವ** (पुं०) 1. ಮದುವೆಯಾದ ಶೂದ್ರಸ್ತ್ರೀಯಲ್ಲಿ ಬ್ರಾಹ್ಮಣನಿಂದ ಜನಿಸಿದ ನಿಷಾದನೆಂಬ ಸಂಕರ ಜಾತಿಯವನು. "ब्राह्मणाद्वैश्यकन्यायामम्बष्ठो नाम जायते। निषादः शूद्रकन्यायां यः पारशव उच्यते" मनु० १०-८। 2. ಪರಸ್ತ್ರೀಯಲ್ಲಿ ಜನಿಸಿದವನು. 3. ಶಸ್ತ್ರ, ಆಯುಧ. (वि०) 4. ಪರಶು ಸಂಬಂಧವಾದ, ಕೊಡಲಿಗೆ ಸಂಬಂಧಿಸಿದ. परशोरिदम् "अण्" (४-३-१२०)। "पारशवः पुमान्। परस्त्रीतनये शस्त्रे द्विजात् शूद्रासुतेऽपि च" मेदि०।

**पारश्वधिक ಪಾರಶ್ವಧಿಕ** (पुं०) ಕೊಡಲಿಯೇ ಆಯುಧವಾಗಿ ಉಳ್ಳ, ಕೊಡಲಿಯನ್ನು ಹಿಡಿದು ಯುದ್ಧಮಾಡುವ. परश्वधः प्रहरणमस्य "ठञ्" (४-४-५८)।

**पारसीक ಪಾರಸೀಕ** (पुं०) 1. ಪಾರಸೀದೇಶದ ಕುದುರೆ. (पुं० ब० व०) 2. ಪಾರಸೀ ದೇಶ. 3. ಪಾರಸೀ ದೇಶದ ದೊರೆಗಳು. 4. ಪಾರಸೀ ದೇಶದ ಜನರು. "पारसीकांस्ततो जेतुं प्रतस्थे स्थलवर्त्मना" रघु० ४-६०।

**पारस्कर ಪಾರಸ್ಕರ** (पुं०) ಗೃಹ್ಯಸೂತ್ರವನ್ನು ರಚಿಸಿದ ಒಬ್ಬ ಋಷಿ. पारं करोति—"सुट्" निपा०(६-१-१५७)।

**पारस्त्रैणेय ಪಾರಸ್ತ್ರೈಣೇಯ** (पुं०) ಪರಸ್ತ್ರೀಯಲ್ಲಿ ಜನಿಸಿದವನು, ಜಾರಪುರುಷನಿಂದ ಹುಟ್ಟಿದವನು. परस्त्रिया अपत्यम् "ढक्"(४-१-१२०)। इनङादेशः (४-१-१२६)। उभयपदवृद्धिः (७-३-२०)। स्त्रियां "ङीप्"(४-१-१५)। [illegible] -ಸ್ತ್ರೈಣೇಯಿ.

**पारस्यकुलीन ಪಾರಸ್ಯಕುಲೀನ** (पुं०) ಪರಗೃಹದಲ್ಲಿ ಜನಿಸಿದವನು, ಬೇರೆ ವಂಶದಲ್ಲಿ ಹುಟ್ಟಿದವನು, ದತ್ತಪುತ್ರ. परस्य कुले भवः "खञ्" (४-४-९१)। गणे परस्यकुलेति पाठात् अलुक्।

**पारायण ಪಾರಾಯಣ** (न०) 1. ಆದಿಯಿಂದ ಕೊನೆಯವರೆಗೂ ಗ್ರಂಥವನ್ನು ಓದುವುದು, ಸಂಪೂರ್ಣ ಗ್ರಂಥವನ್ನು ಓದುವುದು. पारं समाप्तिमयतेऽनेन—अय (गतौ) "ल्युट्" (३-३-११७)। "बृहस्पतिरिन्द्राय दिव्यं वर्षसहस्रं शब्दपारायणं जगौ। नान्तं जगाम"। 2. ಪುರಾಣ ಪಾಠ, ಪುರಾಣವನ್ನು ಓದುವುದು. "वरयेद्-ब्राह्मणं शान्तं पारायणकृते तदा" देवीभा०। 3. ವೇದದ ಪಠನ.

**पारायणिक ಪಾರಾಯಣಿಕ** (पुं०) ಪಾರಾಯಣಮಾಡುವವನು, ಗ್ರಂಥವನ್ನು ಪೂರ್ತಿಯಾಗಿ ಓದುವವನು, ವೇದ ಇತಿಹಾಸ ಪುರಾಣಾದಿ ಗ್ರಂಥಗಳನ್ನು ಸಂಪೂರ್ಣ ಓದಿ ಮುಗಿಸುವವನು. (ಶಿಷ್ಯ) पारायणं वर्तयति वेदाध्ययनम् आवर्तयति "ठञ्" (५-१-७२)। छात्रः।

**पारावत ಪಾರಾವತ** (पुं०) ಕಪೋತ ಪಕ್ಷಿ, ಪಾರಿವಾಳದ ಹಕ್ಕಿ. पारे पर्वतनद्यादिपरपारे आपतति—पार+आ+पत्लृ (गतौ) "अच्" (३-१-१३४)। पृषो० परत्व वः। परं जीवमवति परात् शत्रोः अहङ्काराद्वा ज्ञानोपदेशद्वारा अवति—अव (रक्षणे) "शतृ" (३-२-१२४)। परावन् तत्त्वज्ञः, तस्यायम् "अण्" (४-३-१२०)। "तां कस्यांचिद्भवनवलभौ सुप्तपारावतायाम्" मेघ० १-३८। ಇಪ್ಪತ್ತನಾಲ್ಕು ಮಂದಿ ಉಪದೇಷ್ಟೃಗಳಲ್ಲಿ ಪಾರಾವತವೂ ಒಂದು ಎಂದು ಉಕ್ತವಾಗಿದೆ.

**ಇಪ್ಪತ್ತನಾಲ್ಕು ಮಂದಿ ಗುರುಗಳು:** (1) ಪೃಥಿವಿ (2) ವಾಯು (3) ಆಕಾಶ (4) ಜಲ (5) ಚಂದ್ರ (6) ಅಗ್ನಿ (7) ಸೂರ್ಯ (8) ಪಾರಿವಾಳ (9) ಹೆಬ್ಬಾವು (10) ಸಮುದ್ರ (11) ಪತಂಗ (12) ಜೇನುಹುಳು (13) ಆನೆ (14) ಬೇಡರು (15) ಜಿಂಕೆ (16) ಮೀನು (17) ವೇಶ್ಯೆ (18) ಕುರರ ಪಕ್ಷಿ (19) ಸಣ್ಣ ಮಗು (20) ಒಬ್ಬ ಕನ್ಯೆ (21) ಲೋಹಕಾರ (22) ಸರ್ಪ (23) ಜೇಡರ ಹುಳ ಮತ್ತು (24) ಭ್ರಮರ.

**ಈ ಇಪ್ಪತ್ತನಾಲ್ಕು ಗುರುಗಳಿಂದ ಕಲಿಯಬೇಕಾದ ಗುಣಗಳು:**

**ಪೃಥಿವಿಯಿಂದ:**—ಎಂತಹ ಕಷ್ಟ ಬಂದರೂ ಭೂಮಿಯಂತೆ ತಾಳ್ಮೆಯಿಂದ ನಿಶ್ಚಲವಾಗಿ ಇರಬೇಕಾದ ಕ್ಷಮಾ

ಗುಣವನ್ನೂ ಮತ್ತು ಭೂಮಿಯ ಮೇಲೆ ಇರುವ ಪರ್ವತಗಳೂ ವೃಕ್ಷಗಳೂ ಪರಾರ್ಥಕ್ಕಾಗಿಯೇ ಇರುವಂತೆ ಮನುಷ್ಯನ ಜನ್ಮ ಕರ್ಮಗಳೆಲ್ಲವೂ ಪರೋಪಕಾರಕ್ಕಾಗಿಯೇ ಎಂಬ ಬುದ್ಧಿಯನ್ನೂ **ಪೃಥಿವಿಯಿಂದ** ಕಲಿಯಬೇಕು.

**ವಾಯುವಿನಿಂದ :**—ಪ್ರಾಣಧಾರಣೆಗೆ ಆಹಾರ ಮಾತ್ರ ಸಾಕು. ಇಂದ್ರಿಯ ತೃಪ್ತಿಯು ಅದಕ್ಕೆ ಬೇಕಾಗಿಲ್ಲ. ಅದರಂತೆ ಯೋಗಿಗೆ ಪ್ರಾಣಧಾರಣೆಗೆ ಬೇಕಾದ ಆಹಾರವೇ ಸಾಕೆಂದೂ ಶಬ್ದಾದಿ ವಿಷಯಗಳಿಗಾಗಿ ದುಡಿಯಬಾರದೆಂದೂ **ಪ್ರಾಣವಾಯುವಿನಿಂದ** ತಿಳಿಯಬೇಕು.

ಚಂದನ ಅಗ್ನಿ ಮುಂತಾದ ಶೀತೋಷ್ಣ ವಸ್ತುಗಳ ಮೇಲೆ ಬೀಸಿದ ಹೊರಗಿನ ವಾಯುವು ಆ ಗುಣಗಳನ್ನು ತನ್ನಲ್ಲಿ ಇಟ್ಟುಕೊಳ್ಳದಿರುವಂತೆ ಪ್ರಿಯಾಪ್ರಿಯಗಳಾದ ವಿಷಯಗಳಿಂದ ತೋರಿಬರುವ ಸುಖದುಃಖಗಳನ್ನು ಮನಸ್ಸಿಗೆ ಅಂಟಿಸಿಕೊಳ್ಳದೆ ದೇವಮನುಷ್ಯಾದಿ ಶರೀರಗಳಲ್ಲಿ ತಾನು ಪ್ರವೇಶಿಸಿದ್ದರೂ ತನ್ನನ್ನು ದೇಹವಿಲಕ್ಷಣವಾದ ಆತ್ಮವೆಂದೇ **ಹೊರಗಿನ ವಾಯುವಿನಿಂದ** ತಿಳಿಯಬೇಕು.

**ಆಕಾಶದಿಂದ :**—ಆಕಾಶವು ಎಲ್ಲಾ ವಸ್ತುಗಳ ಒಳಗೂ ಹೊರಗೂ ವ್ಯಾಪಿಸಿದ್ದು ಆ ವಸ್ತುಗಳ ಸಂಬಂಧವಿಲ್ಲದಿರುವಂತೆ ಪರಮಾತ್ಮನು ಬ್ರಹ್ಮಾತ್ಮಕವಾದ ಸಮಸ್ತ ಚರಾಚರ ವಸ್ತುಗಳ ಒಳಗೂ ಹೊರಗೂ ನಿರಂತರವಾಗಿ ವ್ಯಾಪಿಸಿರುವನೆಂಬುದನ್ನು **ಆಕಾಶದಿಂದ** ತಿಳಿಯಬೇಕು.

**ಜಲದಿಂದ :**—ನೀರಿನಲ್ಲಿ ಸ್ವಚ್ಛತೆಯೂ ಸ್ನಿಗ್ಧತೆಯೂ ಮಾಧುರ್ಯವೂ ಇದ್ದು ದರ್ಶನ ಸ್ಪರ್ಶ ಸಂಕೀರ್ತನಾದಿಗಳಿಂದ ಲೋಕವನ್ನು ಪವಿತ್ರಗೊಳಿಸುವಂತೆ ಯೋಗಿಯಾದವನು ಸ್ವಚ್ಛಮನಸ್ಸುಳ್ಳವನಾಗಿಯೂ ಸಕಲ ಪ್ರಾಣಿಗಳಲ್ಲೂ ಸ್ನೇಹವನ್ನು ಪ್ರದರ್ಶಿಸುವವನಾಗಿಯೂ ಮಧುರ ಭಾಷಿಯಾಗಿಯೂ ಇದ್ದು ದರ್ಶನ ಸ್ಪರ್ಶನಾದಿಗಳಿಂದ ಇತರರನ್ನು ಅನುಗ್ರಹಿಸುತ್ತಿರಬೇಕೆಂಬುದನ್ನು **ಜಲದಿಂದ** ಕಲಿಯಬೇಕು.

**ಚಂದ್ರನಿಂದ :**—ಚಂದ್ರನ ಕಲೆಗಳಿಗೆ ಸಂಭವಿಸುವ ವೃದ್ಧಿಕ್ಷಯಗಳು ಚಂದ್ರನಿಗಿಲ್ಲವೆಂಬುದನ್ನು ನೋಡಿ ಮನುಷ್ಯನಿಗೆ ಕಾಲಕ್ರಮದಲ್ಲಿ ನಡೆಯಬೇಕಾಗಿರುವ ನಿಷೇಕಾದಿ ಸಂಸ್ಕಾರಗಳೆಲ್ಲವೂ ಅವನ ದೇಹಕ್ಕೆ ಮಾತ್ರವೆಂದೂ ಆತ್ಮನಿಗಲ್ಲವೆಂದೂ **ಚಂದ್ರನಿಂದ** ತಿಳಿದುಕೊಳ್ಳಬೇಕು.

**ಅಗ್ನಿಯಿಂದ :**—ಅಗ್ನಿಯು ತೇಜಸ್ಸಿನಿಂದ ಜ್ವಲಿಸುತ್ತ ಸರ್ವವನ್ನೂ ಭಕ್ಷಿಸುತ್ತಿದ್ದರೂ ಶುದ್ಧವೆನಿಸಿಕೊಂಡಿರುವಂತೆ ಯೋಗಿಯು ಜ್ಞಾನ ತಪಸ್ಸುಗಳಿಂದ ತೇಜಸ್ವಿಯಾಗಿ ಆಹಾರದಲ್ಲಿ ಭೇದವೆಣಿಸದೆ ಉದರಭರಣ ಮಾತ್ರದಿಂದ ತೃಪ್ತನಾಗಿ ಶುದ್ಧಮನಸ್ಕನಾಗಿರಬೇಕೆಂಬುದನ್ನೂ ಅಗ್ನಿಯು ತನಗೆ ಆಶ್ರಯವಾದ ಕಾಷ್ಠ ಮೊದಲಾದುವುಗಳಲ್ಲಿ ಸೇರಿ ಆಯಾ ವಸ್ತುಗಳ ವಕ್ರತ್ವ ಋಜುತ್ವ ಮೊದಲಾದ ಆಕಾರದಿಂದಲೇ ತೋರುವಂತೆ ಪರಮಾತ್ಮನೂ ಮಾಯೆಯಿಂದ ಚಿದಚಿದಾತ್ಮಕಗಳಾದ ಪ್ರಪಂಚದಲ್ಲಿ ಸೇರಿದ್ದು ಆಯಾ ದೇವಮನುಷ್ಯಾದಿ ರೂಪದಿಂದಲೇ ತೋರುತ್ತಿರುವನೆಂಬುದನ್ನೂ **ಅಗ್ನಿಯಿಂದ** ತಿಳಿಯಬೇಕು.

**ಸೂರ್ಯನಿಂದ :**—ಸೂರ್ಯನು ತನ್ನ ಕಿರಣಗಳಿಂದ ಸಮುದ್ರದ ನೀರನ್ನು ಆಕರ್ಷಿಸಿಕೊಂಡರೂ ಸ್ವಾರ್ಥಕ್ಕಲ್ಲದೆ ಪರಾರ್ಥವಾಗಿ ಕಾಲಕಾಲಕ್ಕೆ ಮಳೆಯ ರೂಪದಿಂದ ಭೂಮಿಯ ಮೇಲೆ ಚೆಲ್ಲುವಂತೆ ಯೋಗಿಯೂ ತಾನು ಸಂಪಾದಿಸಿದ ಭೋಗ್ಯವಸ್ತುಗಳೆಲ್ಲವನ್ನೂ ಪರಾರ್ಥವಾಗಿ ತ್ಯಾಗಮಾಡಬೇಕೆಂಬುದನ್ನು **ಸೂರ್ಯನಿಂದ** ತಿಳಿಯಬೇಕು.

**ಕಪೋತ (ಪಾರಿವಾಳ) ದಿಂದ :**—ಕಪೋತದಂಪತಿಗಳೆರಡು ತಮ್ಮ ಮರಿಗಳನ್ನು ಬಹಳ ವಾತ್ಸಲ್ಯದಿಂದ ಪ್ರೀತಿಸುತ್ತ ಅವುಗಳನ್ನು ನೋಡಿ ಆನಂದಿಸುತ್ತಿದ್ದು ಒಂದು ದಿನ ಆಹಾರಕ್ಕಾಗಿ ಗೂಡಿನಿಂದ ಹೊರಟು ಅಲೆದಾಡುತ್ತ ಬರುವುದರೊಳಗೆ ಬೇಟೆಗಾಗಿ ಒಂದ ಬೇಡನು ಎರಡು ಮರಿಗಳನ್ನೂ ಬಲೆಯೊಳಕ್ಕೆ ಸೇರಿಸಿಕೊಳ್ಳಲು ತಾಯಿಹಕ್ಕಿಯೂ ಅದರ ಪ್ರೇಮದಿಂದ ತಾನೂ ಅದರೊಳಗೆ ಸೇರಿಕೊಂಡಿತು. ಅದನ್ನು ನೋಡಿ ತಾಳಲಾರದೆ ದುಃಖದಿಂದ ಗಂಡುಹಕ್ಕಿಯೂ ಬಲೆಯೊಳಗೆ ಸೇರಿಕೊಳ್ಳಲು ಬೇಡನು ಎಲ್ಲವನ್ನೂ ತೆಗೆದುಕೊಂಡು ಹೊರಟನು. ಹೀಗೆಯೇ ಸಂಸಾರಿಯಾದವನು ಇಂದ್ರಿಯಗಳನ್ನು ಜಯಿಸದೆ ಸುಖದುಃಖಾದಿ ದ್ವಂದ್ವಗಳಿಗೆ ಸಿಲುಕಿ ಕುಟುಂಬ ಪೋಷಣೆಗಾಗಿಯೇ ಕಷ್ಟಪಡುತ್ತ ಪತ್ನೀಪುತ್ರಾದಿಗಳೊಡನೆ ಅಪಾರ ದುಃಖಕ್ಕೆ ಗುರಿಯಾಗುವನೆಂಬ ವಿಷಯವನ್ನು **ಕಪೋತದಿಂದ** ಕಲಿತುಕೊಳ್ಳಬೇಕು.

**ಹೆಬ್ಬಾವಿನಿಂದ :**—ಮನುಷ್ಯನಿಗೆ ಸುಖದುಃಖಗಳೆರಡೂ ಕರ್ಮಾನುಸಾರವಾಗಿ ಅನಪೇಕ್ಷಿತವಾಗಿಯೇ ಸಂಭವಿಸುವುವು. ಆದುದರಿಂದ ವಿವೇಕಿಯಾದವನು ಸುಖವನ್ನೂ ದುಃಖದಂತೆಯೇ ಭಾವಿಸಿ ಅದರಲ್ಲಿ ವಿಮುಖನಾಗಿರಬೇಕು. ತನಗೆ ದೈವಲಬ್ಧವಾದ ಆಹಾರದಿಂದಲೇ ದೇಹಧಾರಣ ಮಾಡಿಕೊಳ್ಳುತ್ತ, ತಾನಾಗಿ ಲಬ್ಧವಾದ

ಆಹಾರದಿಂದಲೇ ಪ್ರಾಣಧಾರಣೆ ಮಾಡಿಕೊಳ್ಳುವ ಹೆಬ್ಬಾವಿ (ಅಜಗರ) ನಂತೆ ಯಾವ ಸೌಖ್ಯವನ್ನೂ ಅಪೇಕ್ಷಿಸದೆ ತತ್ತ್ವಜ್ಞಾನ ಸಂಪಾದನೆಯಲ್ಲಿ ಮಾತ್ರ ನಿರತನಾಗಿರಬೇಕೆಂಬುದನ್ನು **ಹೆಬ್ಬಾವಿ (ಅಜಗರ) ನಿಂದ** ತಿಳಿಯಬೇಕು.

**ಸಮುದ್ರದಿಂದ:**—ಸಮುದ್ರವು ಮಳೆಗಾಲದಲ್ಲಿ ಅನೇಕ ನದೀಪ್ರವಾಹಗಳಿಂದ ತುಂಬಿದ್ದರೂ ಉಕ್ಕಿಬರದಿರುವಂತೆ ಬೇಸಿಗೆಯಲ್ಲೂ ಬತ್ತಿಹೋಗದಿರುವಂತೆ ಯೋಗಿಯಾದವನೂ ತನಗೆ ಅತಿಶಯವಾದ ಭಾಗ್ಯವು ಲಭಿಸಿದಾಗ ಹಿಗ್ಗದೆಯೂ ಅದಿಲ್ಲದಾಗ ಕುಗ್ಗದೆಯೂ ಇರಬೇಕೆಂಬುದನ್ನು **ಸಮುದ್ರದಿಂದ** ತಿಳಿಯಬೇಕು.

**ಪತಂಗದಿಂದ:**—ಮನುಷ್ಯನು ತನ್ನನ್ನು ಮರುಳುಗೊಳಿಸುವ ಸ್ತ್ರೀರೂಪವನ್ನು ನೋಡಿ ತನ್ನ ಭೋಗ್ಯವಸ್ತುವೆಂದು ತಿಳಿದು ಅದಕ್ಕೆ ಅಪೇಕ್ಷಿಸಿದಾಗ ತಾನು ಅಂಧಕೂಪದಲ್ಲಿ ಮುಳುಗುವನೆಂಬುದನ್ನು, ಅಗ್ನಿಜ್ವಾಲೆಯು ತನಗೆ ಭೋಗ್ಯವಸ್ತುವೆಂದು ತಿಳಿದು ಅದರಲ್ಲಿ ಬಿದ್ದು ಸಾಯುವ **ಪತಂಗದಿಂದ** ಕಲಿಯಬೇಕು.

**ಜೇನುಹುಳದಿಂದ:**—ಜೇನುಹುಳಗಳು ಪುಷ್ಪಗಳಿಗೆ ಸ್ವಲ್ಪವೂ ನೋವುಂಟುಮಾಡದೆ ಅವುಗಳಲ್ಲಿ ಸ್ವಲ್ಪ ಮಾತ್ರ ಮಕರಂದವನ್ನು ಗ್ರಹಿಸಿ ಬೇರೆ ಪುಷ್ಪದ ಕಡೆ ಹೋಗುವಂತೆ ಯೋಗಿಯೂ ಬೇರೊಬ್ಬರಿಗೆ ತೊಂದರೆಯುಂಟಾಗದಂತೆ ಅಲ್ಲಲ್ಲಿ ಲಭಿಸಿದ ಅಲ್ಪಸ್ವಲ್ಪ ಆಹಾರವನ್ನು ಮಾತ್ರ ತನ್ನ ಪ್ರಾಣಧಾರಣೆಗಾಗಿ ಸಂಗ್ರಹಿಸುತ್ತ ಕಾಲಯಾಪನೆ ಮಾಡಬೇಕೆಂಬುದನ್ನೂ ಒಂದೇ ಪುಷ್ಪದಲ್ಲಿ ನಿಂತ ಜೇನುಹುಳವು ಅದು ಮುಕುಳಿತವಾದಾಗ ಅದರಲ್ಲಿ ಸಿಕ್ಕಿಬೀಳುವಂತೆ ಯೋಗಿಯೂ ಒಂದೇ ಕಡೆ ನಿಂತರೆ ಮೋಹಪಾಶಬದ್ಧನಾಗಿ ಕೆಡುವನೆಂಬುದನ್ನೂ **ಜೇನುಹುಳದಿಂದ** ತಿಳಿದುಕೊಳ್ಳಬೇಕು.

**ಆನೆಯಿಂದ:**—ಕಾಡಾನೆಗಳು ಸೊಪ್ಪು ಮತ್ತು ಹುಲ್ಲುಗಳಿಂದ ಮುಚ್ಚಲ್ಪಟ್ಟ ಹಳ್ಳದ ಮೇಲೆ ಮರದಿಂದ ತಯಾರಿಸಿ ನಿಲ್ಲಿಸಿರುವ ಹೆಣ್ಣಾನೆಯನ್ನು ನೋಡಿ ಅದರ ಆಸೆಯಿಂದ ಅಲ್ಲಿಗೆ ಹೋಗಿ ಹಳ್ಳಕ್ಕೆ ಬಿದ್ದು ಸಿಕ್ಕಿಕೊಳ್ಳುವಂತೆ ಯೋಗಿಯೂ ಸ್ತ್ರೀರೂಪದ ಬೊಂಬೆಯನ್ನು ನೋಡಿದರೂ ಸ್ಪರ್ಶಮಾಡಿದರೂ ಮೋಹಪಾಶಕ್ಕೆ ಸಿಲುಕಿ ಹಳ್ಳಕ್ಕೆ ಬೀಳುವನೆಂಬುದನ್ನು **ಆನೆಯಿಂದ** ತಿಳಿದುಕೊಳ್ಳಬಹುದು.

**ಬೇಡನಿಂದ:**—ಜೇನುಹುಳಗಳು ಕಷ್ಟಪಟ್ಟು ಸಂಗ್ರಹಿಸಿಟ್ಟ ಜೇನನ್ನು ಬೇಡನು ಉಪಾಯದಿಂದ ಅಪಹರಿಸಿಕೊಂಡು ಹೋಗುವಂತೆ ಮನುಷ್ಯನು ಆತ್ಯಾಸೆಯಿಂದ ಸಂಪಾದಿಸಿ ತಾನೂ ಅನುಭವಿಸದೆ ದಾನವನ್ನೂ ಮಾಡದೆ ಕೂಡಿಟ್ಟ ಹಣವು ಇತರರ ಪಾಲಾಗುವುದೆಂದು **ಬೇಡನ ದೃಷ್ಟಾಂತದಿಂದ** ತಿಳಿಯಬೇಕು.

**ಜಿಂಕೆಯಿಂದ:**—ಜಿಂಕೆಯು ಬೇಟೆಗಾರನ ಗಾನದ ಧ್ವನಿಗೆ ಮರುಳಾಗಿ ಅವನ ಕೈಗೆ ಸಿಕ್ಕಿ ಅಸುವನ್ನು ನೀಗುವಂತೆ ಯೋಗಿಯು ಭಗವದ್ವಿಷಯವಲ್ಲದ ಗ್ರಾಮ್ಯ ಸಂಗೀತಕ್ಕೆ ಗಮನ ಕೊಟ್ಟಲ್ಲಿ ವಿನಾಶ ಹೊಂದುತ್ತಾನೆ ಎಂಬ ವಿಷಯವನ್ನು **ಜಿಂಕೆಯಿಂದ** ಕಲಿಯಬೇಕು.

**ಮೀನಿನಿಂದ:**—ಮೀನು ಗಾಳಕ್ಕೆ ಚುಚ್ಚಿರುವ ವಸ್ತುವನ್ನು ಕಚ್ಚಲು ಹೋಗಿ ಬೆಸ್ತನ ಕೈಗೆ ಸಿಕ್ಕಿ ಸಾಯುವಂತೆ ಯೋಗಿಯು ಜಿಹ್ವಾಚಾಪಲ್ಯದಿಂದ ಆತ್ಮವಿನಾಶ ಹೊಂದುತ್ತಾನೆ ಎಂಬ ಅಂಶವನ್ನು **ಮೀನಿನಿಂದ** ತಿಳಿದುಕೊಳ್ಳಬೇಕು. ಮನುಷ್ಯನು ಮೊದಲು ರಸನೇಂದ್ರಿಯವನ್ನು ಜಯಿಸಿದಲ್ಲಿ ಇತರ ಇಂದ್ರಿಯಗಳನ್ನು ಜಯಿಸಿದಂತೆಯೇ ಆಗುವುದು.

**ವೇಶ್ಯೆಯಿಂದ:**— ವೇಶ್ಯೆಯಾದವಳು ಸಾಮಾನ್ಯಜನರಿಂದ ತನಗೆ ಬೇಕಾದಷ್ಟು ದ್ರವ್ಯವು ಲಭಿಸುವುದಿಲ್ಲವೆಂದು ತಿಳಿದು ಬಂದ ಪುರುಷರೆಲ್ಲರನ್ನೂ ತಿರಸ್ಕರಿಸಿ ಹೆಚ್ಚು ಹಣವನ್ನು ಕೊಡುವವನು ಬರುವನೆಂದು ಪ್ರತೀಕ್ಷಿಸುತ್ತ ನಿದ್ರಾಹಾರಗಳನ್ನು ಬಿಟ್ಟು ಕುಳಿತಿರಲು ಅಂತಹವನು ಬರದಿದ್ದಾಗ ಚಿಂತಾಕ್ರಾಂತಳಾಗಿ ನಿರ್ವೇದ ಹೊಂದಿ ದ್ರವ್ಯಾಸೆಯಿಂದ ಉಂಟಾದ ಚಿಂತೆಯಿಂದ ಮುಂದೆ ಕ್ಷೇಮಕರವಾದ ವೈರಾಗ್ಯವನ್ನು ಹೊಂದುವಂತೆ ಮನುಷ್ಯನು ಹೆಚ್ಚು ಆಶೆಪಟ್ಟು ಕೊನೆಗೆ ದುಃಖಕ್ಕೆ ಒಳಗಾಗುವನೆಂಬ ವಿಚಾರವನ್ನು **ವೇಶ್ಯೆಯಿಂದ** ತಿಳಿಯಬೇಕು.

**ಕುರರ (ಕುರವ) ಪಕ್ಷಿಯಿಂದ:**—ಯಾವುದಾದರೂ ಒಂದು ವಸ್ತುವು ತನ್ನದೆಂಬ ಆಸೆಯಿಂದ ಅದನ್ನು ಪಡೆಯುವುದೂ ಮತ್ತು ಅದನ್ನು ರಕ್ಷಿಸುವುದೂ ದುಃಖಕ್ಕೆ ಕಾರಣವೆಂಬ ವಿಷಯವನ್ನು, ಕೊಕ್ಕಿನಲ್ಲಿ ಮಾಂಸದ ತುಂಡನ್ನು ಕಚ್ಚಿಕೊಂಡು ಅದನ್ನು ರಕ್ಷಿಸುವ ಭಯದಿಂದ ಪೇಚಾಡುತ್ತಿದ್ದ ಕುರರ ಪಕ್ಷಿಯಿಂದ ಗಿಡುಗ ಹಕ್ಕಿಯೊಂದು ಬಂದು ಮಾಂಸದ ತುಂಡನ್ನು ಅಪಹರಿಸಿಕೊಂಡು ಹೋದಾಗ ಅದನ್ನು ರಕ್ಷಿಸುವ ಭಯವಿಲ್ಲದೆ ಸುಖದಿಂದಿದ್ದ **ಕುರರ ಪಕ್ಷಿಯಿಂದ** ತಿಳಿದುಕೊಳ್ಳಬಹುದು.

**ಸಣ್ಣಮಗುವಿನಿಂದ:**—ಸಣ್ಣಮಗುವಿಗೆ ಮಾನಾಪಮಾನಗಳ ತಿಳಿವಳಿಕೆಯಿಲ್ಲ. ಸಂಸಾರದ ಯೋಚನೆಯಿಲ್ಲ.

ಆತ್ಮಪೋಷಣೆಯ ಚಿಂತೆಯಂತೂ ಇಲ್ಲವೇ ಇಲ್ಲ. ಪರಮಾತ್ಮ ಧ್ಯಾನಾಸಕ್ತನಾದ ಯೋಗಿಯೂ ಇವುಗಳಲ್ಲಿ ದೃಷ್ಟಿಯಿಡದೆ ನಿತ್ಯಾನಂದವನ್ನು ಅನುಭವಿಸುವನೆಂಬ ವಿಷಯವನ್ನು **ಸಣ್ಣಮಗುವಿನಿಂದ** ತಿಳಿದುಕೊಳ್ಳ ಬಹುದು.

**ಕನ್ಯೆಯಿಂದ** :—ತನ್ನನ್ನು ವರಿಸಲು ಬರುವ ಯಾರಿಗೂ ತನ್ನ ಬಡತನವು ತಿಳಿಯಬಾರದೆಂಬ ಉದ್ದೇಶದಿಂದ ರಹಸ್ಯವಾಗಿ ಬತ್ತವನ್ನು ಕುಟ್ಟುತ್ತಿದ್ದ ಸಮಯದಲ್ಲಿ ತನ್ನ ಕೈಗಳಲ್ಲಿ ಶಬ್ದಮಾಡುತ್ತಿದ್ದ ಬಳೆಗಳೆಲ್ಲವನ್ನೂ ತೆಗೆದುಹಾಕಿ ಲಕ್ಷಣಕ್ಕೆ ಒಂದೊಂದು ಬಳೆಯನ್ನು ಮಾತ್ರ ಉಳಿಸಿಕೊಂಡು ಸ್ವಲ್ಪವೂ ಶಬ್ದವಿಲ್ಲದೆ ಬತ್ತವನ್ನು ಕುಟ್ಟುತ್ತಿದ್ದ **ಕನ್ಯೆಯಿಂದ** ಮನುಷ್ಯನು ಏಕಾಂಗಿ ಯಾಗಿದ್ದಾಗ ಯಾವ ರೀತಿಯ ಕಲಹಕ್ಕೂ ವಾದವಿವಾದ ಗಳಿಗೂ ಅವಕಾಶವಿಲ್ಲದೆ ಪರಮಾತ್ಮ ಧ್ಯಾನವು ಸುಗಮ ವಾಗಿ ನಡೆಯುವುದೆಂಬ ವಿಷಯವನ್ನು ತಿಳಿಯಬಹುದು.

**ಲೋಹಕಾರ (ಬಾಣಗಾರ) ನಿಂದ** :—ಬಾಣಗಾರ (ಬಾಣವನ್ನು ತಯಾರಿಸುವವ)ನು ಬಾಣದ ಅಲಗಿಗೆ ಹದವನ್ನು ಕೊಡುತ್ತಿರುವಾಗ ಏಕಾಗ್ರತೆಯಿಂದ ಅದ ರಲ್ಲೇ ಮಗ್ನನಾಗಿ ಯಾರನ್ನೂ ತಲೆಯೆತ್ತಿ ನೋಡದೆ ಕೆಲಸ ಮಾಡುತ್ತಿರುವಂತೆ ಪರಮಾತ್ಮನಲ್ಲೇ ನೆಟ್ಟ ಮನಸ್ಸುಳ್ಳ ಯೋಗಿಯೂ ಯಾವ ಬಾಹ್ಯವಿಷಯ ಗಳನ್ನೂ ಗಮನಿಸಲಾರನೆಂಬ ವಿಷಯವನ್ನು **ಬಾಣ ಗಾರನಿಂದ** ತಿಳಿದುಕೊಳ್ಳಬಹುದು.

**ಸರ್ಪದಿಂದ** :—ಯೋಗಿಯಾದವನು ಜನರ ಗುಂಪಿನಲ್ಲಿ ಸೇರದೆ ಏಕಾಂಗಿಯಾಗಿ ಸಂಚರಿಸುತ್ತಾ ಗವಿಗಳಲ್ಲಿ ಏಕಾಂತವಾಗಿ ಧ್ಯಾನಮಾಡುತ್ತಿರಬೇಕೆಂಬುದನ್ನೂ, ಹೋದ ಕಡೆ ಸಾಧುಗಳ ಗೃಹಗಳಲ್ಲಿದ್ದುಕೊಂಡು ನಿದ್ರಾ ಹಾರಗಳನ್ನು ನಿರ್ವಹಿಸಬೇಕೆಂಬುದನ್ನೂ, ಬೇರೆ ಪ್ರಾಣಿ ಗಳು ಕಟ್ಟಿದ ಗೂಡಿನಲ್ಲಿ ಸೇರಿಕೊಂಡು ಯಾವ ಜನರ ಗುಂಪಿಗೂ ಸೇರದೆ ಸುಖವಾಗಿರುವ **ಸರ್ಪದಿಂದ** ತಿಳಿದುಕೊಳ್ಳಬಹುದು.

**ಜೇಡರಹುಳದಿಂದ** :—ಪರಮಾತ್ಮನು ತನ್ನ ಸಂಕಲ್ಪ ರೂಪವಾದ ಮಾಯೆಯಿಂದ ಸೃಷ್ಟಿಸಿದ ಜಗತ್ತೆಲ್ಲ ವನ್ನೂ ಪ್ರಳಯಕಾಲದಲ್ಲಿ ಕಾಲರೂಪವಾದ ತನ್ನ ಶಕ್ತಿ ಯಿಂದ ಉಪಸಂಹರಿಸಿ ತನ್ನಲ್ಲಿಯೇ ಅಡಗಿಸಿ ಇಟ್ಟು ಕೊಂಡು ತಾನೊಬ್ಬನೇ ನಿಲ್ಲುವನು ಎಂಬ ವಿಷಯವನ್ನು, ತನ್ನ ಹೃದಯದಿಂದಲೇ ದಾರವನ್ನು ನಿರ್ಮಿಸಿ ಬಲೆ ಯಂತೆ ಅದನ್ನು ನಾನಾ ಕಡೆಗೂ ಹರಡಿ ತಾನು ಅದರಲ್ಲಿ ವಿಹರಿಸುತ್ತಿದ್ದು ಮತ್ತೆ ಆ ದಾರವನ್ನು ತನ್ನಲ್ಲಿಯೇ ಅಡಗಿಸಿಕೊಳ್ಳುವ **ಊರ್ಣನಾಭಿ (ಜೇಡರಹುಳ) ಯಿಂದ** ತಿಳಿದುಕೊಳ್ಳಬೇಕು.

**ಭ್ರಮರದಿಂದ** :—ಕಣಜಹುಳವು ತನ್ನ ಆಹಾರಕ್ಕಾಗಿ ಬೇರೆ ಹುಳವನ್ನು ತಂದು ತನ್ನ ಗೂಡಿನಲ್ಲಿಟ್ಟಾಗ ಆ ಹುಳವು ಭಯದಿಂದ ಆ ಕಣಜದ ಹುಳವನ್ನೇ ಮನಸ್ಸಿನಲ್ಲಿ ಚಿಂತಿಸುತ್ತ ಕೊನೆಗೆ ತಾನೂ ಆ ಕಣಜದ ರೂಪವನ್ನೇ ಹೊಂದುವಂತೆ ಜೀವನು ಸರ್ವದಾ ಬ್ರಹ್ಮಧ್ಯಾನದಲ್ಲೇ ಇರುತ್ತ ಕೊನೆಗೆ ಬ್ರಹ್ಮಸಾರೂಪ್ಯ ವನ್ನೇ ಹೊಂದುವನೆಂಬ ವಿಷಯವನ್ನು **ಭ್ರಮರ (ಕಣಜ) ದಿಂದ** ತಿಳಿಯಬಹುದು.

**पारावताङ्घ्रि ಪಾರಾವತಾಂಘ್ರಿ** (ಪ್ಞಂ) ಕಂಗೊಂಗೆಗಿಡ, ಜ್ಯೋತಿಷ್ಮತೀಲತೆ. पारावत इव अङ्घ्रिः मूलमस्य ।

**पारावार ಪಾರಾವಾರ** (ಪ್ಞಂ) 1. ಸಮುದ್ರ, ಕಡಲು. पारमवारं च अस्त्यस्य "अच्" (५-२-१२७)। पारमा-वृणोति—आ + वृञ् (वरणे) "अण्" (३-२-१) वा। "पारावारपयोविशोषणकलापारीणकालानलज्वाला जालं॰" दशाव॰। (द्विव॰) 2. ಎರಡು ಕಡೆಯ ತೀರ ಗಳು, ಆಚಿನ ಮತ್ತು ಈಚಿನ ದಡಗಳು. पारं च अवारं च।

**पारावारीण ಪಾರಾವಾರೀಣ** (ವಿಂ) 1. ಆಚೆ ದಡ ವನ್ನೂ ಈಚಿನ ದಡವನ್ನೂ ತಲುಪುವವನು. पारमवारं च गच्छति — "खः" (वा॰ ४-२-९३)। 2. ಸಮುದ್ರ ವನ್ನು ಸೇರುವವನು. पारावारं गामी — "खः" (५-२-११)।

**पाराशर ಪಾರಾಶರ**(ಪ್ಞಂ) 1. ವೇದವ್ಯಾಸ, ಬಾದರಾಯಣ, ಪರಾಶರಮಹರ್ಷಿಯ ಪುತ್ರ. पराशरस्यापत्यम् "अण्" (४-१-११४)। 2. ಪರಾಶರಮಹರ್ಷಿಪ್ರಣೀತವಾದ ಧರ್ಮ (ಸ್ಮೃತಿ) ಸಂಹಿತೆ. "कृते तु मानवो धर्मस्त्रेतायां गौतमः स्मृतः। द्वापरे शङ्खलिखितः कलौ पाराशरः स्मृतः"। (ನಂ) 3. ಪರಾಶರಮಹರ್ಷಿಪ್ರಣೀತವಾದ ಭಿಕ್ಷುಸೂತ್ರ. पराशरेण कृतम् "अण्" (४-३-११६)। (ವಿಂ) 4. ಪರಾಶರಮಹರ್ಷಿ ಸಂಬಂಧವಾದ. पराशर-स्यायम् "अण्" (४-३-१२०)।

**पाराशरि ಪಾರಾಶರಿ** (ಪ್ಞಂ) 1. ಪರಾಶರಮಹರ್ಷಿಯ ಪುತ್ರ, ವೇದವ್ಯಾಸಮುನಿ. पराशरस्यापत्यम् "इञ्" (४-१-९५)। 2. ಶುಕಮಹರ್ಷಿ.

**पाराशरिन् ಪಾರಾಶರಿನ್** (ಪ್ಞಂ) ಭಿಕ್ಷು, ಸಂನ್ಯಾಸಿ. पाराशर्येण प्रोक्तं भिक्षुसूत्रमधीते — "णिनिः" (४-३-११०)।

**पाराशर्य ಪಾರಾಶರ್ಯ** (पुं०) ವೇದವ್ಯಾಸಮಹರ್ಷಿ, ಬಾದರಾಯಣಋಷಿ, ಪರಾಶರಮಹರ್ಷಿಯ ಪುತ್ರ. पराशरस्यगोत्रापत्यं पुमान् "यञ्" (४-१-१०५)।

**पारि ಪಾರಿ** (न०) 1. ಬ್ರಹ್ಮಜ್ಞಾನ. 2. ಸಮುದ್ರ.

**पारिकर्मिक ಪಾರಿಕರ್ಮಿಕ** (वि०) ಅಲಂಕಾರಕಾರ್ಯ ದಲ್ಲಿ ನಿಯುಕ್ತನಾದವನು. परिकर्मणि नियुक्तः "ठक्" (४-४-६९)।

**पारिकाङ्क्षिन् ಪಾರಿಕಾಂಕ್ಷಿನ್** (पुं०) 1. ಯತಿ, ಸಂನ್ಯಾಸಿ. 2. ತಾಪಸ. पारि ब्रह्मज्ञानम्, तत् काङ्क्षति — काक्षि (काङ्क्षायाम्) "णिनिः" (३-२-७८)। "तपस्वी तापसः पारिकाङ्क्षी" अम०।

**पारिख ಪಾರಿಖ** (वि०) ಕಂದಕದಲ್ಲಿರುವ परिखायां भवः "अण्" (४-२-११०)।

**पारिखेयी ಪಾರಿಖೇಯೀ** (स्त्री०) ಕಂದಕಕ್ಕೆ ಯೋಗ್ಯ ವಾದ ಭೂಮಿ. परिखा ऽस्या अस्ति "ढक्" (५-१-१७)।

**पारिग्रामिक ಪಾರಿಗ್ರಾಮಿಕ** (वि०) ಗ್ರಾಮದ ಸುತ್ತಲೂ ಇರುವ. परि + ग्राम "ठञ्" (४-३-६१)।

**पारिजात ಪಾರಿಜಾತ** (पुं०) ಇಂದ್ರನ ಉದ್ಯಾನ (ನಂದನ) ವನದಲ್ಲಿರುವ ಐದು ದೇವತರುಗಳಲ್ಲಿ ಒಂದು. ಪಂಚ ದೇವತರುಗಳು: (1) ಮಂದಾರಃ (2) ಪಾರಿಜಾತಃ (3) ಸಂತಾನಃ (4) ಕಲ್ಪವೃಕ್ಷಃ ಮತ್ತು (5) ಹರಿಚಂದನಂ. "ततोऽभवत् पारिजातः सुरलोकविभूषणम्" भाग० ८-८-६। ಇದು ಅಮೃತಮಥನಕಾಲದಲ್ಲಿ ಸಮುದ್ರ ದಿಂದ ಹುಟ್ಟಿ ಬಂದಿತು.

**पारिणाय्य ಪಾರಿಣಾಯ್ಯ** (न०) ವಿವಾಹಕಾಲದಲ್ಲಿ ಪಡೆದ ಸ್ತ್ರೀಧನ. परिणये तत्काले लब्धम् "ष्यञ्" बाहु०। "मातुः पारिणाय्यं स्त्रियो विभजेरन्"।

**पारिणाह्य ಪಾರಿಣಾಹ್ಯ** (न०) ಮನೆಯಲ್ಲಿರುವ ಆಭರಣ ಶಯನ ಆಸನ ಮೊದಲಾದ ಗೃಹೋಪಕರಣಗಳು. "अर्थस्य संग्रहे चैनां व्यये चैव नियोजयेत्। शौचे धर्मेऽन्नपक्त्यां च पारिणाह्यस्य वेक्षणे" मनु० ९-११।

**पारितथ्या ಪಾರಿತಥ್ಯಾ** (स्त्री०) ಹೆಂಗಸರು ತಲೆಯಲ್ಲಿ ಧರಿಸುವ ಜಡೆಬಿಲ್ಲೆ. परितः तथाभूता परितथा — परितथैव "ष्यञ्" (वा० ५-१-१२४)। "वालपाश्या पारितथ्या" अम०।

**पारितोषिक ಪಾರಿತೋಷಿಕ** (न०) ಸಂತೋಷಕ್ಕಾಗಿ ಅಥವಾ ಸಂತೋಷದಿಂದ ಬಂದ ಧನ ಅಥವಾ ವಸ್ತು. परितोषः प्रयोजनमस्य "ठञ्" (५-१-१०९)। "न कदाचित् प्रियवचनं निष्फलीकृतं मया, तद्गृह्यतां पारितोषिकम्" मृच्छ० ५।

**पारिपन्थिक ಪಾರಿಪಂಥಿಕ** (पुं०) 1. ಚೋರ, ಕಳ್ಳ. पन्थानं वर्जयित्वा व्याप्य वा तिष्ठति — परिपन्थम् अव्ययी०। परिपन्थं तिष्ठति हन्ति वा "ठक्" (४-४-३६)। (वि०) 2. ದಾರಿ ಬಿಟ್ಟು ಹೋಗಿರುವ, ತಪ್ಪುದಾರಿಯಲ್ಲಿ ಹೋಗಿರುವ.

**पारिपाट्य ಪಾರಿಪಾಟ್ಯ** (न०) ಪರಿಪಾಟಿಯ ಭಾವ, ಒಂದು ಕ್ರಮವಾಗಿರುವಿಕೆ. परिपाट्या भावः "ष्यञ्" (५-१-१२४)।

**पारिपात्र ಪಾರಿಪಾತ್ರ** (पुं०) ಸಪ್ತಕುಲಪರ್ವತಗಳ ಲ್ಲೊಂದು. "महेन्द्रो मलयः सह्यः शुक्तिमानृक्षपर्वतः। विन्ध्यश्च पारिपात्रश्च सप्तैवात्र कुलाचलाः"। स्वार्थे "कन्"। **-पात्रकः -ಪಾತ್ರಕಃ.**

**पारिपार्श्विक ಪಾರಿಪಾರ್ಶ್ವಿಕ** (पुं०) 1. ನಾಟಕದಲ್ಲಿ ಸೂತ್ರಧಾರನಿಗೆ ಸಹಾಯಕನಾಗಿರುವ ಅವನ ಅನುಚರ. 2. ಸೇವಕ, ಆಳು. परिपार्श्वं वर्तते "ठक्" (४-४-२९)। सूत्रधारसदृशत्वात् स्थापकोऽपि सूत्रधार उच्यते। तस्यानुचरः पारिपार्श्विकः। "नटी विदूषको वापि पारिपार्श्वक एव वा। सूत्रधारेण सहिताः संलापं यत्र कुर्वते" सा० द० ६-३१। "तत्किमिति पारिपार्श्विक, नारम्भयसि कुशीलवैः सह संगीतकमेलकम्" वेणी०।

**पारिप्लव ಪಾರಿಪ್ಲವ** (वि०) 1. ಚಂಚಲವಾದ, ಚಲಿಸುವ. परि + प्लुङ् (गतौ) "अच्" (३-१-१३४)। स्वार्थे "अण्" (५-४-३८)। "तयोपचाराञ्जलिखिन्नहस्तया ननन्द पारिप्लवनेत्रया नृपः" रघु० ३-११। "उपान्तवानीरवनोपगूढान्यालक्ष्यपारिप्लवसारसानि" रघु० १३-३०। 2. ಗಲಿಬಿಲಿಯಾದ, ದಿಕ್ಕುತೋರದಂತೆ ಆಗಿರುವ, ತಬ್ಬಿಬ್ಬಾದ, ದಿಗ್ಭ್ರಮೆಹೊಂದಿದ. "हा हा देवि किमुत्पथैर्मम मनः पारिप्लवं धावति" उ० रा० ४-२२। (न०) 3. ನೆಮ್ಮದಿಯಿಲ್ಲದಿರುವಿಕೆ, ಚಿಂತೆ ಯಿಂದ ಕೂಡಿರುವಿಕೆ. "प्रतिष्ठामव्याजं व्रजतु मयि पारिप्लवधुरा विधिः स्थैर्यं धत्तां भवतु कृतकृत्यश्च मदनः" मालती० ४-३। (पुं०) 4. ನೀರಿನ ಮೇಲೆ ಸಂಚರಿಸುವ ಹಕ್ಕಿ. "पारिप्लवशतैर्जुष्टा बर्हिक्रौञ्च निनादिता" रामा०।

**पारिभद्र ಪಾರಿಭದ್ರ** (पुं०) 1. ಮಂದಾರವೃಕ್ಷ, ಪಾರಿಜಾತದ ಗಿಡ. पारि पारं गतं भद्रमस्य। परिभद्र स्वार्थे "अण्"

(५-४-३८) वा। 2. ನಿಂಬತರು, ಬೇವಿನ ಮರ. 3. ದೇವದಾರು ವೃಕ್ಷ. "पारिभद्रस्तु निम्बद्रौ मन्दारे देवदारुणि" मेदि०। 4. ಸರಳದೇವದಾರು. (न०) 5. ಚಂಗಲುಕೋಷ್ಠ.

**पारिभद्रक ಪಾರಿಭದ್ರಕ** (पुं०) ದೇವದಾರು ವೃಕ್ಷ.

**पारिभाव्य ಪಾರಿಭಾವ್ಯ** (न०) 1. ಚಂಗಲುಕೋಷ್ಠ. परिभावे व्याधिशमने साधुः "यत्" (४-४-९८)। स्वार्थे "अण्" (५-४-३८)। "व्याधिः कुष्ठं पारिभाव्यं व्याप्यं पाकलमुत्पलम्" अम०। 2. ಆಧಾರ, ಹೊಣೆ, ಜಾಮಿನು.

**पारिभाषिक ಪಾರಿಭಾಷಿಕ** (न०) ಅವಯವಾರ್ಥವಿಲ್ಲದೆ ಸಮುದಾಯಾರ್ಥದಲ್ಲಿರುವ ಸಂಕೇತ ಪದ. परिभाषा आधुनिकसंकेतः, तत आगतम्। गुणः वृद्धिः नदी ಮೊದಲಾದ ಸಂಜ್ಞಾವಾಚಕಪದಗಳಿಗೆ ಅವಯವಾರ್ಥವಿಲ್ಲದೆ ಅವು ಆಯಾ ಸಂಜ್ಞೆಗಳನ್ನು ಮಾತ್ರ ಸಂಕೇತದಿಂದ ಬೋಧಿಸುವುದರಿಂದ ಪಾರಿಭಾಷಿಕ ಪದಗಳು.

**पारिमाण्डल्य ಪಾರಿಮಾಂಡಲ್ಯ** (न०) ಪರಮಾಣುವಿನ ಪರಿಮಾಣ. परितो मण्डलं यस्य परमाणुः, परिमण्डलस्य भावः "ष्यञ्" (५-१-१२४)। "पारिमाण्डल्यभिन्नानां कारणत्वमुदाहृतम्" भाषाप०।

**पारिमुखिक ಪಾರಿಮುಖಿಕ** (वि०) ಮುಖಕ್ಕೆ ಎದುರಾಗಿ ನಿಂತಿರುವ. परिमुखं वर्तते "ठक्" (४-४-२९)।

**पारिमुख्य ಪಾರಿಮುಖ್ಯ** (न०) ಎದುರಾಗಿರುವಿಕೆ, ಮುಖಕ್ಕೆ ಸಮೀಪದಲ್ಲಿರುವಿಕೆ.

**पारियात्र ಪಾರಿಯಾತ್ರ** (पुं०) ಸಪ್ತಕುಲಪರ್ವತಗಳಲ್ಲೊಂದು.

**पारियानिक ಪಾರಿಯಾನಿಕ** (पुं०) ಮಾರ್ಗದಲ್ಲಿ (ರಸ್ತೆಯಲ್ಲಿ) ಸಂಚರಿಸಲು ಯೋಗ್ಯವಾದ ರಥ. परियानं प्रयोजनमस्य "ठक्" (५-१-१०९)।

**पारिरक्षक ಪಾರಿರಕ್ಷಕ** (पुं०) ತಾಪಸ, ತಪಸ್ವಿ, ಮುನಿ. परिरक्षति आत्मानम्—परि + रक्ष (पालने) "ण्वुल्" (३-१-१३३)।

**पारिवित्त्य ಪಾರಿವಿತ್ತ್ಯ** (न०) ತಮ್ಮನು ಮದುವೆಯಾದರೂ ಅಣ್ಣನು ಮದುವೆಯಾಗದಿರುವಿಕೆ. परिवित्तेः भावः "ष्यञ्" (५-१-१२४)।

**पारिव्याध ಪಾರಿವ್ಯಾಧ** (पुं०) 1. ಬೆಟ್ಟಗಣಿಗಿಲೆ ಗಿಡ. 2. ವೇತಸವೃಕ್ಷ, ಹಬ್ಬೆಗಿಡ. "पारिव्याधस्तु पुंसि स्याद्वेतसे च द्रुमोत्पले" मेदि०।

**पारिषद ಪಾರಿಷದ** (पुं०) 1. ಸಭಿಕ, ಸಭೆಯಲ್ಲಿರುವವನು. परिषदि साधुः "णः" (४-४-१०१)। "शङ्कुकर्णमुखाः सर्वे दिव्याः पारिषदास्तथा" भा० सभा० १०-३५। (वि०) 2. ಸಭೆಗೆ ಸಂಬಂಧಿಸಿದ, ಪರಿಷತ್ಸಂಬಂಧವಾದ. परिषद इदम् "अञ्" (४-३-१२३)।

**पारिषदक ಪಾರಿಷದಕ** (वि०) ಸಭೆಯಿಂದ ಮಾಡಲ್ಪಟ್ಟ. परिषदा कृतम् "वुञ्" (४-३-११८)।

**पारिषद्य ಪಾರಿಷದ್ಯ** (पुं०) ಸಭಿಕ, ಸಭೆಯಲ್ಲಿರುವವನು. परिषदि साधुः "ण्यः" (४-४-१०१)।

**पारिहारिक ಪಾರಿಹಾರಿಕ** (वि०) ಪರಿಹಾರವನ್ನು ಕೊಡುವವನು, ಪರಿಹರಿಸುವವನು. परिहारे साधुः "ठक्" (४-४-१०२)।

**पारिहार्य ಪಾರಿಹಾರ್ಯ** (पुं०) ವಲಯ, ಬಳೆ. परिह्रियते—हृञ् (हरणे) "घञ्" (३-३-१९)। परिहारः। स्वार्थे "ष्यञ्" (वा० ५-१-१२४)। "आवापकः पारिहार्यः कटको वलयोऽस्त्रियाम्" अम०।

**पारी ಪಾರೀ** (स्त्री०) 1. ಜಲಪ್ರವಾಹ, ಹೊನಲು. पा (पाने) "क्विप्" (वा० ३-३-९४)। तां राति—रा (दाने) "कः" (३-२-३)। "ङीष्" (४-१-४१)। 2. ನೀರು ಕುಡಿಯುವ ಪಾತ್ರೆ, ಗಿಂಡಿ, ಲೋಟ, ಬಟ್ಟಲು ಮುಂತಾದುವು. 3. ಆನೆಯ ಕಾಲಿಗೆ ಕಟ್ಟುವ ಹಗ್ಗ. "पारी पूरे च कर्कर्यां पादरज्जौ च दन्तिनः" मेदि०। 4. ಹಾಲು ಕರೆಯುವ ಪಾತ್ರೆ. "प्रीत्या नियुक्ताँल्लिहती स्तनंधयान्निगृह्य पारीमुभयेन जानुनोः" माघ० १२-४०।

**पारीण ಪಾರೀಣ** (वि०) 1. ದಡವನ್ನು ಮುಟ್ಟುವ, ತೀರವನ್ನು ತಲುಪುವ. पारं गामी "खञ्" (५-२-११)। 2. ಕೊನೆ ಮುಟ್ಟುವ, ಸಮಾಪ್ತಿಗೊಳಿಸುವ.

**पारीन्द्र ಪಾರೀಂದ್ರ** (पुं०) ಸಿಂಹ, ಮೃಗರಾಜ. "कण्ठीरवस्तु पारीन्द्रः" हारा०।

**पारीरण ಪಾರೀರಣ** (पुं०) 1. ಕಮಠ, ಆಮೆ. पार्यां रणति—रण (शब्दे) "अच्" (३-१-१३४)। 2. ದಂಡ, ಕೋಲು. 3. ವಸ್ತ್ರ, ಬಟ್ಟೆ. "पारीरणः स्यात् कमठे दण्डे च पट्टशाटके" विश्व०।

**पारु ಪಾರು** (पुं०) 1. ರವಿ, ಸೂರ್ಯ. 2. ಅಗ್ನಿ, ಬೆಂಕಿ. पिबति जलम्—पा (पाने) "रुः" (उ० ४-१०१) बाहु० पिबतेरपि।

**पारुष्य ಪಾರುಷ್ಯ** (पुं०) 1. ಬೃಹಸ್ಪತಿ. 2. ಕಠಿಣತೆ, ಕ್ರೂರತನ. परुषस्य भावः "ष्यञ्" (५-१-१२४)।

3. ಕಠಿನವಾದ ಮಾತು, ಬಿರುಸಾದ ಮಾತು, ಅಪ್ರಿಯವಾದ ಮಾತು. ಇದು ನಾಲ್ಕು ವಿಧ ವಾಙ್ಮಯ ಪಾಪಗಳಲ್ಲೊಂದು. "पारुष्यमनृतं चैव पैशुन्यं चापि सर्वशः। असम्बद्धप्रलापश्च वाङ्मयं स्याच्चतुर्विधम्"। "पारुष्यं परुषत्वे च दुर्वाक्ये पुंसि गीष्पतौ" मेदि०।

**पारेगङ्गम् ಪಾರೇಗಂಗಮ್** (अव्य०) ಗಂಗಾನದಿಯ ಆಚೆಯ ದಡದಲ್ಲಿ, ಗಂಗಾನದಿಯ ಎದುರು ತೀರದಲ್ಲಿ. गङ्गायाः पारे—अव्ययी० (२-१-१८)। एवम् पारेजलम् पारेसमुद्रम् ಇತ್ಯಾದಿ.

**पारोक्ष्य ಪಾರೋಕ್ಷ್ಯ** (न०) ರಹಸ್ಯ, ಗುಟ್ಟು. परोक्षस्य भावः "ष्यञ्" (५-१-१२४)।

**पार्घट ಪಾರ್ಘಟ** (न०) 1. ಧೂಳು. 2. ಭಸ್ಮ, ಬೂದಿ. पादेन घटते—घट (चेष्टायाम्) "अच्" (३-१-१३४)। पृषो०।

**पार्थ ಪಾರ್ಥ** (पुं०) ಪೃಥೆಯ (ಕುಂತಿಯ) ಮಗ— 1. ಧರ್ಮರಾಜ. 2. ಭೀಮ. 3. ಅರ್ಜುನ. पृथाया अपत्यं पुमान् "अण्" (४-१-११२)। "प्रियेषु यैः पार्थ विनोपपत्तेर्विचिन्त्यमानैः क्लममेति चेतः" किरा० ३-५२। "यियक्षमाणेनाहूतः पार्थेनाथ द्विषन् मुरम्" माघ० २-१। 4. ಅರ್ಜುನ ವೃಕ್ಷ, ಕೆಂಪು ಮತ್ತಿಮರ.

**पार्थक्य ಪಾರ್ಥಕ್ಯ** (न०) ಬೇರೆಯಾಗಿರುವಿಕೆ, ಪ್ರತ್ಯೇಕವಾಗಿರುವಿಕೆ. पृथक् भावे "ष्यञ्" (५-१-१२४)।

**पार्थव ಪಾರ್ಥವ** (न०) 1. ಅಗಲವಾಗಿರುವಿಕೆ, ವಿಸ್ತಾರವಾಗಿರುವಿಕೆ. पृथोर्भावः "अण्" (५-१-१२२)। (वि०) 2. ಪೃಥುಚಕ್ರವರ್ತಿ ಸಂಬಂಧವಾದ. पृथोरयम् "अण्" (४-३-१२०)। स्त्रियां "ङीप्" (४-१-१५)। **पार्थवी ಪಾರ್ಥವೀ.**

**पार्थसारथि ಪಾರ್ಥಸಾರಥಿ** (पुं०) ಅರ್ಜುನನಿಗೆ ಸಾರಥಿಯಾಗಿದ್ದ ಶ್ರೀಕೃಷ್ಣ. पार्थस्य सारथिः।

**पार्थिव ಪಾರ್ಥಿವ** (पुं०) 1. ರಾಜ, ದೊರೆ, ಪೃಥಿವಿಯ ಒಡೆಯ. पृथिव्या ईश्वरः "अण्" (५-१-४२)। "दित्सया ददपि पार्थिवोऽर्थिनं गुण्यगुण्य इति न व्यजीगणत्" माघ० १४-४७। 2. ಒಂದು ಸಂವತ್ಸರದ ಹೆಸರು, ಪ್ರಭವ ಮೊದಲಾದ ಅರವತ್ತು ಸಂವತ್ಸರಗಳಲ್ಲಿ ಹತ್ತೊಂಬತ್ತನೆಯ ಸಂವತ್ಸರ. (न०) 3. ಮೃತ್ಪಾತ್ರೆ, ಮಣ್ಣಿನ ಪಾತ್ರೆ. पृथिव्या विकारः "अण्" (४-३-१३४)। (वि०) 4. ಭೂಮಿಯ ಸಂಬಂಧವಾದ. पृथिव्या इदम् "अण्" (४-३-१२०)। "विरक्तसन्ध्याकपिशं पुरस्ताद्यतो रजः पार्थिवमुज्जिहीते" रघु० १३-६४।

**पार्थिवा ಪಾರ್ಥಿವಾ**
**पार्थिवी ಪಾರ್ಥಿವೀ** } (स्त्री०) ಭೂಮಿಯ ಸಂತಾನ, ಭೂಮಿಯ ಪುತ್ರಿ, ಸೀತಾದೇವಿ. पृथिव्या अपत्यम् "ञः" "अञ्" (वा० ४-१-८५) वा। ञ प्रत्यये "टाप्" (४-१-४)। अञ् प्रत्यये "ङीप्" (४-१-१५)। "पार्थिवीमुदवहद्रघूद्वहो लक्ष्मणस्तदनुजामथोर्मिलाम्" रघु० ११-५४।

**पार्पर ಪಾರ್ಪರ** (पुं०) 1. ಯಮಧರ್ಮರಾಯ. 2. ಕ್ಷಯರೋಗ. 3. ಅನ್ನದ ಅಗುಳು. 4. ಭಸ್ಮ, ಬೂದಿ. 5. ಕದಂಬಪುಷ್ಪದ ಕೇಸರ. "पार्परो भस्मनि यमे जराटे नीपकेसरे। क्षयरोगे भक्तसिक्थे" हेम०।

**पार्वण ಪಾರ್ವಣ** (न०) 1. ಅಮಾವಾಸ್ಯೆಯ ದಿನ ಮಾಡುವ ಶ್ರಾದ್ಧ. पर्वणि क्रियते—पर्वन् "अण्" (४-२-९२)। (वि०) 2. ಪರ್ವಕಾಲದಲ್ಲಿ ಮಾಡಲ್ಪಡುವ.

**पार्वत ಪಾರ್ವತ** (वि०) ಪರ್ವತಸಂಬಂಧವಾದ. पर्वतस्येदम् "अण्" (४-३-१२०)। "यावत् पृथिव्यां विहितं गवाश्वं सहारण्यैः पशुभिः पार्वतैश्च" भा० आदि०।

**पार्वती ಪಾರ್ವತೀ** (स्त्री०) ಪರ್ವತರಾಜನ ಪುತ್ರಿ, ಗೌರಿ. पर्वतस्यापत्यं स्त्री "अण्" (४-१-९२)। "ङीप्" (४-१-१५)। "लीलाकमलपत्राणि गणयामास पार्वती" कुमा० ६-८४।

**पार्वतीनन्दन ಪಾರ್ವತೀನಂದನ** (पुं०) ಷಣ್ಮುಖ, ಕಾರ್ತಿಕೇಯ, ಸ್ಕಂದ. पार्वत्याः नन्दनः। "पार्वतीनन्दनः स्कन्दः" अम०। एवं **—पुत्रः ಪುತ್ರ, —सुतः —ಸುತ, —सूनुः —ಸೂನು.** ಇತ್ಯಾದಿ.

**पार्विक ಪಾರ್ವಿಕ** (वि०) ಪರ್ವಕಾಲದಲ್ಲಿರುವ, ಪೂರ್ಣಿಮೆಯ ದಿನದಲ್ಲಿರುವ. पर्वणि भवः "ठक्"। "न शारदः पार्विकशर्वरीश्वरः" नैष० १-२०।

**पार्शव ಪಾರ್ಶವ** (वि०) 1. ಪರಶುಧಾರಿಯಾದ, ಕೊಡಲಿಯೇ ಆಯುಧವಾಗಿರುವ. पर्शुः प्रहरणमस्य "अण्" (५-३-११७)। 2. ಆಯುಧಧಾರಿಯಾದ, ಆಯುಧವನ್ನು ಹಿಡಿದಿರುವ.

**पार्श्व ಪಾರ್ಶ್ವ** (पुंन०) 1. ದೇಹದ ಎರಡು ಪಕ್ಕಗಳು, ಕಕ್ಷಗಳ ಕೆಳಭಾಗಗಳು. स्पृश्यते—स्पृश (स्पर्शने) "श्वण्" पृ इत्यादेशश्च (उ० ५-२७)। वृद्धिः (७-२-११५)। 2. ಸಮೀಪ, ಹತ್ತಿರ. "एवंवादिनि देवर्षौ पार्श्वे

पितुरधोमुखी। लीलाकमलपत्राणि गणयामास पार्वती" कुमा० ६-८४। "धृष्टः पार्श्वे भवति च वसन् दूरतोऽप्यप्रगल्भः" भर्तृ० १-४७। (ನ०) 3. ಪಕ್ಕೆಲುಬುಗಳ ಸಮೂಹ. पर्शूनां समूहः "णस्" (वा० ४-२-४३)। 4. ಒಂದು ವಸ್ತುವಿನ ಪೆಂಲ್ಕೈ, ಪಕ್ಕ, ಮಗ್ಗಲು. "पिठरं ज्वलदतिमात्रं निजपार्श्वानिव दहतितराम्" पञ्चतं० १-३५३। 5. ಚಕ್ರದ ಅಂಚಿನ ಸಮೀಪ ಭಾಗ. "पार्श्वं कक्षावरे चक्रोपान्ते पर्शुगणेऽपि च" मेदि०। (ಪುಂ०) 6. ಜಿನದೇವ, ಇಪ್ಪತ್ತಮೂರನೆಯ ತೀರ್ಥಂಕರರು.

**पार्श्वक ಪಾರ್ಶ್ವಕ** (ಪುಂ०) ಮೋಸದಿಂದ ಹಣವನ್ನು ಸಂಪಾದಿಸುವವನು, ವಂಚಕ. "कुसृत्या विभवान्वेषी पार्श्वकः सन्धिजीवकः" त्रिकाण्ड०। पार्श्वेनान्विच्छति "कन्" (५-२-७५)।

**पार्श्वग ಪಾರ್ಶ್ವಗ** (ಪುಂ०) 1. ಅನುಚರ, ಸೇವಕ, ಆಳು. पार्श्वे गच्छति—गम्लृ (गतौ) "डः" (वा० ३-२-४८)। "व्यादिदेश गणशोऽथ पार्श्वगान् कार्मुकाभिहरणाय मैथिलः" रघु० ११-४३। (ವಿ०) 2. ಸಮೀಪದಲ್ಲಿ ಸಂಚರಿಸುವವನು. 3. ಪಕ್ಕದಲ್ಲಿರುವವನು.

**पार्श्वचर ಪಾರ್ಶ್ವಚರ** (ಪುಂ०) 1. ಅನುಚರ, ಸೇವಕ, ಆಳು. (ವಿ०) 2. ಪಕ್ಕದಲ್ಲಿರುವವನು. 3. ಸಮೀಪದಲ್ಲಿ ಸಂಚರಿಸುವವನು. पार्श्वे चरति — चर (गतौ) "टः" (३-२-१६)। "तस्मै प्रतिश्रुत्य रघुप्रवीरस्तदीप्सितं पार्श्वचरानुयातः" रघु० १४-२९। स्त्रियां "ङीप्" (४-१-१५)। **–चरी –ಚರೀ.**

**पार्श्वतस् ಪಾರ್ಶ್ವತಸ್** (अव्य०) 1. ಪಕ್ಕದಿಂದ. 2. ಪಕ್ಕದಲ್ಲಿ. 3. ಸಮೀಪದಿಂದ. 4. ಸಮೀಪದಲ್ಲಿ. पार्श्व "तसिः" (वा० ५-४-४४)। "मित्रकार्यमपदिश्य पार्श्वतः प्रस्थितं तमनवस्थितं प्रियाः" रघु० १९-३१।

**पार्श्वतीय ಪಾರ್ಶ್ವತೀಯ** (ವಿ०) 1. ಪಕ್ಕದಲ್ಲಿರುವ. 2. ಸಮೀಪದಲ್ಲಿರುವ. पार्श्वतो भवः "छः" (वा० ४-२-१३८)।

**पार्श्वद ಪಾರ್ಶ್ವದ** (ಪುಂ०) ಅನುಚರ, ಸೇವಕ, ಆಳು. पार्श्वं ददाति — डु दाञ् (दाने) "कः" (३-२-३)।

**पार्श्वनाथ ಪಾರ್ಶ್ವನಾಥ** (ಪುಂ०) ಜೈನರ ಗುರು.

**पार्श्वभाग ಪಾರ್ಶ್ವಭಾಗ** (ಪುಂ०) ಆನೆಯ ಪಕ್ಕೆ. पार्श्वस्य भागः। "पक्षभागः पार्श्वभागः" अम०।

**पार्श्वशूल ಪಾರ್ಶ್ವಶೂಲ** (ಪುಂ०) ಪಕ್ಕೆಯ ನೋವು. पार्श्वे जातः शूलः। ಈ ರೋಗವು ಕಫ ಮತ್ತು ವಾತ ದೋಷದಿಂದ ಉಂಟಾಗುವುದು. ಉದರದ ಒಂದು ಪಾರ್ಶ್ವದಲ್ಲಿರುವ ಕಫವು ವಾಯುವನ್ನು ತಡೆಯುವುದರಿಂದ ಹೊಟ್ಟೆಯಲ್ಲಿ ಗುಡಗುಡ ಶಬ್ದವುಂಟಾಗುವುದು. ಸೂಜಿಯಂತೆ ಚುಚ್ಚಲು ಆರಂಭವಾಗಿ ಉಚ್ಛ್ವಾಸಕ್ಕೆ ತೊಂದರೆಯುಂಟಾಗುವುದು. ಈ ಬಾಧೆಯಿಂದ ಆಹಾರದಲ್ಲಿ ಅಪೇಕ್ಷೆಯಿರುವುದಿಲ್ಲ. ನಿದ್ರೆಯೂ ಬರುವುದಿಲ್ಲ. ಇದು ಪಾರ್ಶ್ವಶೂಲವೆಂಬ ಒಂದು ವ್ಯಾಧಿ. "रुणद्धि मारुतं श्लेष्मा कुक्षिपार्श्वव्यवस्थितः। स संरुद्धः करोत्याशु ध्मानं गुडगुडायनम्। सूचीभिरिव निस्तोदः कृच्छ्रोच्छ्वासी तदा नरः। नान्नं वाञ्छति नो निद्रामुपैत्यर्तिनिपीडितः। पार्श्वशूलः स विज्ञेयः कफानिलसमुद्भवः" सुश्रुत० उत्तरतं० ४२-११७, १८, १९।

**पार्श्वास्थि ಪಾರ್ಶ್ವಾಸ್ಥಿ** (ನ०) ಪಕ್ಕೆಯ ಎಲುಬು. पार्श्वस्य अस्थि।

**पार्श्विक ಪಾರ್ಶ್ವಿಕ** (ವಿ०) ಪಕ್ಕದಲ್ಲಿರುವವನು, ಹತ್ತಿರದಲ್ಲಿರುವವನು. पार्श्वे भवः।

**पार्षत ಪಾರ್ಷತ** (ವಿ०) 1. ಚಿತ್ರಮೃಗ ಸಂಬಂಧವಾದ, ಬಿಳಿ ಚುಕ್ಕಿಯಿರುವ ಜಿಂಕೆಯ ಸಂಬಂಧವಾದ. पृषतस्येदम् "अण्" (४-३-१२०)। "षण्मासांश्छागमांसेन पार्षतेन च सप्त वै। अष्टावेणस्य मांसेन रौरवेण नवैव तु" मनु० ३-२६९। (ಪುಂ०) 2. ದ್ರುಪದ ರಾಜ. 3. ಧೃಷ್ಟದ್ಯುಮ್ನ. [ಇದು ಮನೆತನದ ಹೆಸರು.] (स्त्री०) **–ती –ತೀ.** ದ್ರೌಪದಿ.

**पार्षद् ಪಾರ್ಷದ್** (स्त्री०) ಪರಿಷತ್, ಸಭೆ. परिषद् पृषो०।

**पार्षद ಪಾರ್ಷದ** (ವಿ०) ಸಭ್ಯ, ಸಭಿಕ, ಸಭೆಗೆ ಅರ್ಹನಾದವನು. पार्षदि साधुः "णः" (४-४-१०१)। (योगविभागात्) "ण्यः" **पार्षद्यः ಪಾರ್ಷದ್ಯಃ.**

**पार्षदंश ಪಾರ್ಷದಂಶ** (ಪುಂ०) ಬಿಂದುವಿನ ಒಂದು ಭಾಗದಲ್ಲಿರುವ. पृषदंशे भवः "अञ्" (४-१-८६)।

**पार्षदश्व ಪಾರ್ಷದಶ್ವ** (ವಿ०) 1. ವಾಯುಸಂಬಂಧವಾದ. पृषदश्वस्य वायोरिदम् "अण्" (४-३-१२०)। 2. ಪೃಷದಶ್ವ ರಾಜನ ಸಂಬಂಧವಾದ.

**पार्ष्णि ಪಾರ್ಷ್ಣಿ** (ಪುಂ०) 1. ಹಿಮ್ಮಡಿ, ಕಾಲಿನ ಗಂಟುಗಳ ಕೆಳಭಾಗ. पृष्यतेऽनेन — पृषु (सेचने) "निः" वृद्धिश्च (उ० ४-५२)। निपा०। "उद्वेजयत्यङ्गुलिपार्ष्णिभागान्मार्गे शिलीभूतहिमेऽपि यत्र" कुमा० १-११। 2. ಹಿಂಭಾಗ. "स गुप्तमूलप्रत्यन्तः शुद्धपार्ष्णिरयान्वितः"

रघु० ४-२६। 3. ಸೈನ್ಯದ ಹಿಂಭಾಗ. 4. ಜಯಿಸುವ ಅಪೇಕ್ಷೆ. (स्त्री०) 5. ಹುಚ್ಚು ಹಿಡಿದ ಹೆಂಗಸು. "पार्ष्णिः स्यादुन्मदस्त्रियाम्। स्त्रियां द्वयोः सैन्यपृष्ठे पादग्रन्थ्यधरेऽपि च" मेदि०। 6. ಕುಂತಿ.

**पार्ष्णिग्राह ಪಾರ್ಷ್ಣಿಗ್ರಾಹ** (पुं०) ಹಿಂಭಾಗದಲ್ಲಿರುವ ಶತ್ರು, ಬೆನ್ನುಹತ್ತಿ ಬಂದ ಶತ್ರು. पार्ष्णिं सैन्यपृष्ठं गृह्णाति—ग्रह (उपादाने) "अण्" (३-२-१)। "यातव्यपार्ष्णिग्राहादिमालायामधिकद्युतिः" माघ० २-९२।

**पार्ष्णिघात ಪಾರ್ಷ್ಣಿಘಾತ** (पुं०) ಹಿಂಗಾಲಿನ ಹೊಡೆತ, ಹಿಮ್ಮಡಿಯಿಂದ ಹೊಡೆಯುವುದು. "आस्कन्द्य वेगेन विमुक्तनादः क्षितिं विधुन्वन्निव पार्ष्णिघातैः" किरा० १७-५०।

**पर्ष्णित्र ಪಾರ್ಷ್ಣಿತ್ರ** (न०) ಹಿಂಗಾವಲು ಸೈನ್ಯ, ಹಿಂಭಾಗದಲ್ಲಿ ರಕ್ಷಿಸುವ ಸೈನ್ಯ. पार्ष्णिं त्रायते — त्रैङ् (पालने) "कः" (३-२-३)।

**पार्ष्णिवाह ಪಾರ್ಷ್ಣಿವಾಹ** (पुं०) ಹಿಂಭಾಗದಲ್ಲಿ ಸೈನ್ಯದ ಉಸ್ತುವಾರಿ ನೋಡಿಕೊಳ್ಳುವ ಅಧಿಕಾರಿ. पार्ष्णिं वहति — वह (प्रापणे) "अण्" (३-२-१)।

**पाल – रक्षणे** (चुरा० उभ० सक० से०)। पालयति –ते पालयामास। अपीपलत्, –त ಇತ್ಯಾದಿ. ರಕ್ಷಿಸು, ಕಾಪಾಡು.

**पाल ಪಾಲ** (वि०) 1. ರಕ್ಷಕ, ಕಾಪಾಡುವವನು. पालयति —पाल (रक्षणे) + णिच् "अच्" (३-१-१३४)। "प्रलीनभूपालमपि स्थिरायति प्रशासदावारिधि मण्डलं भुवः" किरा० १-२३। 2. ಪಶುಪಾಲಕ, ಗೋಪಾಲಕ, ದನ ಕಾಯುವವನು. "दिवा वक्तव्यता पाले रात्रौ स्वामिनि तद्गृहे। योगक्षेमेऽन्यथा चेत्तु पालो वक्तव्यतामियात्" मनु० ८-२३०। (पुं०) 3. ಪೀಕದಾನಿ, ಪಡಿಗ, ತಾಂಬೂಲವನ್ನು ಅಗಿದು ರಸವನ್ನು ಉಗುಳುವ ಬಟ್ಟಲು. 4. ರಕ್ಷಣೆ, ಕಾಪಾಡುವುದು.

**पालक ಪಾಲಕ** (वि०) 1. ರಕ್ಷಿಸುವವನು, ಕಾಪಾಡುವವನು. पाल (रक्षणे) + णिच् "ण्वुल्" (३-१-१३३)। (पुं०) 2. ರಾಜ, ದೊರೆ. 3. ಅಶ್ವರಕ್ಷಕ, ಕುದುರೆಯನ್ನು ಕಾಪಾಡುವವನು. 4. ಅಶ್ವ, ಕುದುರೆ.

**पालकाप्य ಪಾಲಕಾಪ್ಯ** (पुं०) 1. ಒಬ್ಬ ಋಷಿ. ಈ ಋಷಿಯಿಂದ ಗಜಾಶ್ವಾದಿಲಕ್ಷಣಗ್ರಂಥವು ರಚಿತವಾಗಿದೆ. (न०) 2. ಆನೆ ಕುದುರೆ ಮೊದಲಾದುವುಗಳ ಲಕ್ಷಣಗಳನ್ನು ತಿಳಿಸುವ ಗ್ರಂಥ.

**पालघ्न ಪಾಲಘ್ನ** (पुं०) ನಾಯಿಕೊಡೆ, ಛತ್ರಿಯ ಆಕಾರದಲ್ಲಿ ಹುಟ್ಟುವ ಒಂದು ಜಾತಿಯ ಗಿಡ.

**पालङ्क्य ಪಾಲಂಕ್ಯ** (पुं०) 1. ಗಿಡುಗದ ಹಕ್ಕಿ. (न०) 2. ಒಂದು ವಿಧ ಗಂಧಿಗರ ದ್ರವ್ಯ.

**पालन ಪಾಲನ** (न०) 1. ರಕ್ಷಿಸುವುದು, ಕಾಪಾಡುವುದು. पाल (रक्षणे) भावे "ल्युट्" (३-३-११५)। "स्रष्टो नृपो हि विप्राणां पालने दुष्टनिग्रहे" भा० आदि० १५३-१२। 2. ಸದ್ಯಃ ಕರು ಹಾಕಿದ (ಪ್ರಸವಿಸಿದ) ಹಸುವಿನ ಹಾಲು. पाल्यतेऽनेन — पाल + णिच् "ल्युट्" (३-३-११७)। (वि०) 3. ರಕ್ಷಿಸುವ, ಕಾಪಾಡುವ. पाल + णिच् कर० "ल्युट्" (३-३-११७)। स्त्रियां "ङीप्" (४-१-१५)। **पालनी ಪಾಲನೀ.** "श्रियः कुरूणामधिपस्य पालनीं प्रजासु वृत्तिं यमयुङ्क्त वेदितुम्" किरा० १-१।

**पालनीय ಪಾಲನೀಯ** (वि०) 1. ರಕ್ಷಿಸಲ್ಪಡುವ, ಕಾಪಾಡಲ್ಪಡುವ. पाल (रक्षणे) + णिच् "अनीयर्" (३-१-९६)। 2. ರಕ್ಷಿಸಲು ಅರ್ಹವಾದ. 3. ರಕ್ಷಿಸಬೇಕಾದ. "तव्यः" (३-१-९६)। **–यितव्यः – ಯಿತವ್ಯಃ.**

**पालयत् ಪಾಲಯತ್** (वि०) ಕಾಪಾಡುತ್ತಿರುವ, ರಕ್ಷಿಸುತ್ತಿರುವ. पाल (रक्षणे) + णिच् "शतृ" (३-२-१२४)। "पृतनासागरौघेन पालयन् सागराम्बराम्" याद० २२-६६। स्त्रियां "ङीप्" (४-१-६)। **–यन्ती –ಯಂತೀ.** "शानच्" (३-२-१२४)। **–मानः –ಮಾನಃ.**

**पालयितृ ಪಾಲಯಿತೃ** (वि०) ರಕ್ಷಿಸುವವನು, ಕಾಪಾಡುವವನು. पाल (रक्षणे) + णिच् "तृच्" (३-१-१३३)। "तस्मिन् क्षणे पालयितुः प्रजानामुत्पश्यतः सिंहनिपातमुग्रम्" रघु० २-६०। स्त्रियां "ङीप्" (४-१-५)। **–यित्री –ಯಿತ್ರೀ.**

**पालल ಪಾಲಲ** (वि०) ಎಳ್ಳಿನ ಪುಡಿಯಿಂದ ತಯಾರಿಸಲ್ಪಟ್ಟ. पललस्य तिलचूर्णस्य विकारः "अण्" (४-३-१३४)।

**पालाश ಪಾಲಾಶ** (पुं०) 1. ಹಸುರು ಬಣ್ಣ. पलाशस्य पत्रस्यायम् "अण्" (४-३-१२०)। (वि०) 2. ಹಸುರು ಬಣ್ಣದ. 3. ಪಲಾಶವೃಕ್ಷದ ಅವಯವ, ಮುತ್ತುಗದ ಮರದ ರೆಂಬೆ ಕೋಲು ಎಲೆ ಮೊದಲಾದುವು. पलाशस्य अवयवः विकारो वा "अण्" (४-३-१३५)। "ब्राह्मणो बैल्वपालाशौ क्षत्रियो वाटखादिरौ। पैलवौदुम्बरौ वैश्यो दण्डानर्हन्ति धर्मतः" मनु० २-४५।

**पालाशक** ಪಾಲಾಶಕ (पुं॰) ಪಲಾಶವೃಕ್ಷದ ಸಮೀಪ ಪ್ರದೇಶ. पलाशस्यादूरभवो देशः — पलाश "कक्" (४-२-८०)।

**पालि** ಪಾಲಿ (स्त्री॰) 1. ಅಂಚು, ತುದಿ. पालयति — पाल (रक्षणे) + णिच् "इः" (उ॰ ४-१३९)। वा "ङीष्" (ग॰ ४-१-४५)। —ली — ಲೀ. "काम्पिल्यकप्रसवपाटलगण्डपालिः" मालती॰ ९-३१। 2. ಪಙ್ಕ್ತಿ, ಸಾಲು, ಶ್ರೇಣಿ. "विपुलपुलकपालिः" गीतगो॰। 3. ಚಿಹ್ನೆ, ಗುರುತು. 4. ಕಿವಿಯ ಅಗ್ರಭಾಗ, ಕಿವಿಯ ತುದಿ, ಕಿವಿಯ ಹಾಲೆ. "यस्य पालिद्वयमपि कर्णस्य न भवेदिह" सुश्रुत॰ सूत्र॰। 5. ಅಂಚು, ಕತ್ತಿ ಮೊದಲಾದುವುಗಳ ಅಲಗಿನ ಏಣು. 6. ಹೇನು. 7. ಮೀಸೆ ಬೆಳೆದಿರುವ ಹೆಂಗಸು. 8. ಪ್ರಶಂಸೆ, ಹೊಗಳಿಕೆ. 9. ಸೇತುವೆ. 10. ಉತ್ಸಂಗ, ತೊಡೆ. 11. ಪ್ರಸ್ಥ, ಒಂದು ಬಳ್ಳದ ಅಳತೆ. (ಇದು ಪೂರ್ವಕಾಲದ ಒಂದು ಅಳತೆ). 12. ವಿದ್ಯಾಭ್ಯಾಸ ಕಾಲದಲ್ಲಿ ಶಿಷ್ಯನಿಗೆ ಉಪಾಧ್ಯಾಯನು ಕಲ್ಪಿಸಿರುವ ಉಪಜೀವನಾಧಾರ. "पालिर्यूकाश्रिपङ्क्तिषु। जातश्मश्रुस्त्रियां प्रान्ते सेतौ कल्पितभोजने। प्रशंसा-कर्णलतयोरुत्सङ्गे प्रस्थचिह्नयोः" हेम॰।

**पालिका** ಪಾಲಿಕಾ (स्त्री॰) 1. "पालि" ಪದದ ಅರ್ಥ. पालि स्वार्थे "कः"। 2. ರಕ್ಷಿಸುವವಳು, ಕಾಪಾಡುವವಳು.

**पालित** ಪಾಲಿತ (वि॰) 1. ರಕ್ಷಿಸಲ್ಪಟ್ಟ, ಕಾಪಾಡಲ್ಪಟ್ಟ. पाल (रक्षणे) + णिच् "क्तः" (३-२-१०२)। "अथ भीमभुजेन पालिता नगरी मञ्जुरसौ वराजिता" नैष॰ २-७३। (पुं॰) 2. ಶಾಖೋಟಕ ವೃಕ್ಷ, ಕಾರೆಗಿಡ.

**पालित्य** ಪಾಲಿತ್ಯ (न॰) ಕೂದಲು ನರೆಯುವುದು, ಮುಪ್ಪಿನಿಂದ ಕೂದಲು ಬೆಳ್ಳಗಾಗುವುದು. पलितस्य भावः "ष्यञ्" (५-१-१२४)।

**पालिन्** ಪಾಲಿನ್ (वि॰) ರಕ್ಷಿಸುವವನು, ಕಾಪಾಡುವವನು. पालयति—पाल (रक्षणे)+णिच् "णिनिः" (३-१-१३४)।

**पालिन्दी** ಪಾಲಿಂದೀ (स्त्री॰) ಕರಿಯ ತಿಗಡೆ ಮರ. पालयति—पाल (रक्षणे) + णिच् "किन्दच्" बाहु॰। "श्यामापालिन्दी तु सुषेणिका" अम॰।

**पावक** ಪಾವಕ (पुं॰) 1. ಅಗ್ನಿ, ಬೆಂಕಿ. पुनाति — पूञ् (पवने) "ण्वुल्" (३-१-१३३)। "विहाय लक्ष्मीपतिलक्ष्म कार्मुकं जटाधरः सन् जुहुधीह पावकम्" किरा॰ १-४४। 2. ಚಿತ್ರಕವೃಕ್ಷ, ಚಿತ್ರಮೂಲದ ಗಿಡ. 3. ವಿದ್ಯುತ್ತಿನ ಅಗ್ನಿ, ಮಿಂಚಿನ ಅಗ್ನಿ, ಸಿಡಿಲು. 4. ಸದಾಚಾರ, ಸದ್ವರ್ತನೆ, ಒಳ್ಳೆಯ ನಡತೆ. 5. ನೆಲ್ಲಿಗಿಡ. 6. ಮೂರು ಸಂಖ್ಯೆ. 7. ಅಗ್ನಿದೇವತೆ. 8. ಗೇರು ಮರ. 9. ವಾಯುವಿಳಂಗ. 10. ವರುಣ. "पावकोऽग्नौ सदाचारे वह्निमन्थे च चित्रके। भल्लातके विडङ्गे" मेदि॰। (वि॰) 11. ಪವಿತ್ರವಾಗಿ ಮಾಡುವವನು, ಶುದ್ಧ ಮಾಡುವವನು.

**पावकात्मज** ಪಾವಕಾತ್ಮಜ (पुं॰) ಕಾರ್ತಿಕೇಯ, ಷಣ್ಮುಖ, ಕುಮಾರಸ್ವಾಮಿ.

**पावकि** ಪಾವಕಿ (पुं॰) ಕಾರ್ತಿಕೇಯ, ಷಣ್ಮುಖ. पावकस्यापत्यम् "इञ्" (४-१-९५)।

**पावन** ಪಾವನ (पुं॰) 1. ವಿಷ್ಣು, ಪರಮಾತ್ಮ. पावयति जगत् — पूञ् (पवने) + णिच् "ल्युः" (३-१-१३४)। "पावनः पावयत्येषः भुवनं सर्वतः सदा" इति निरुक्तिः। "पावनः सर्वलोकानां त्वमेव रघुनन्दन" रामा॰। "भूतभव्यभवन्नाथः पवनः पावनोऽनलः" वि॰ स॰। 2. ವ್ಯಾಸ. 3. ಲೋಬಾನ, ತುರುಷ್ಕ ದೇಶದ ವಾಸನಾದ್ರವ್ಯ. 4. ಅಗ್ನಿ, ಬೆಂಕಿ. 5. ವೇದವ್ಯಾಸ ಮಹರ್ಷಿ. 6. ಹಳದಿ ಗಂಧದ ಸೊಪ್ಪು. (न॰) 7. ರುದ್ರಾಕ್ಷಿ. 8. ಚಂಗಲ ಕೋಷ್ಟ. 9. ಚಿತ್ರಕ ವೃಕ್ಷ, ಹರಳು ಗಿಡ. 10. ಜಲ, ನೀರು. 11. ಪ್ರಾಯಶ್ಚಿತ್ತ. 12. ಗೋಮಯ, ಹಸುವಿನ ಸಗಣಿ. "पावनं तु जले कृच्छ्रे ना व्यासे पावके त्रिषु" मेदि॰। (वि॰) 13. ಶುದ್ಧ ಮಾಡುವ, ಪವಿತ್ರಗೊಳಿಸುವ. "पादास्त्वामभितो निषण्णहरिणा गौरीगुरोः पावनाः" शाकु॰ ६-१७। 14. ಪವಿತ್ರವಾದ, ಪರಿಶುದ್ಧವಾದ. "नवोटजाभ्यन्तरसंभृतानलं तपोवनं तच्च बभूव पावनम्" कुमा॰ ५-१७। (स्त्री॰) पावनी ಪಾವನೀ. कर॰ "ल्युट्" (३-३-११७)। "ङीप्" (४-१-१५)। 15. ಅಳಲೆ ಗಿಡ. 16. ಹಸು, ಆಕಳು. 17. ಗಂಗಾನದಿ. 18. ತುಲಸಿ.

**पावनध्वनि** ಪಾವನಧ್ವನಿ (पुं॰) 1. ಶಂಖ. पावनो ध्वनिरस्य। (वि॰) 2. ಪವಿತ್ರ ಶಬ್ದದಿಂದ ಕೂಡಿದ.

**पाश** ಪಾಶ (पुं॰) 1. ರಜ್ಜು, ಹಗ್ಗ. पश्यते बध्यतेऽनेन — पश (बन्धने) कर॰ "घञ्" (३-३-१२१)। 2. ಬಂಧನ, ಕಟ್ಟು. "पादाकृष्टव्रततिवलयासङ्गसञ्जातपाशः" शाकु॰ १-२९। 3. ವರುಣನ ಆಯುಧ. "किं चायमरिदुर्वारः पाणौ पाशः प्रचेतसः। मन्त्रेण हतवीर्यस्य फणिनो दैन्यमाश्रितः" कुमा॰ २-२१। 4. ಮೃಗ ಪಕ್ಷಿ ಮೊದಲಾದುವು

ವನ್ನು ಹಿಡಿಯುವ ಬಲೆ, ಸರಿಗುಣಿಕೆಯುಳ್ಳ ಹುರಿಯ ಉರುಲು. 5. ಪಗಡೆಯಾಟದ ದಾಳ. ಸಮಾಸಾಂತ್ಯದಲ್ಲಿ "पाश" ಶಬ್ದವು ಈ ಕೆಳಗಿನ ಅರ್ಥಗಳನ್ನು ಕೊಡುವುದು. 1. ನಿಂದೆ. छात्रपाश: ದುಷ್ಟಶಿಷ್ಯ. भिषक्पाश: ಅಯೋಗ್ಯನಾದ ವೈದ್ಯ. 2. ಶೋಭೆ, ಸೌಂದರ್ಯ. कर्णपाश: ಸುಂದರವಾದ ಕಿವಿ. 3. ಸಮೂಹ, ಕಲಾಪ. केशपाश: "पाशस्तु मृगपक्ष्यादिबन्धने। कर्णान्ते शोभनार्थः स्यात् कचान्ते निकारार्थकः। छात्राद्यन्ते च निन्दार्थः" हेम०।

**पाशक ಪಾಶಕ** (पुं०) ಪಗಡೆ ಮೊದಲಾದ ಆಟದ ಕಾಯಿಗಳು.

**पाशधर ಪಾಶಧರ** (पुं०) 1. ವರುಣ. धरति—धृञ् (धारणे) "अच्" (३-१-१३४)। पाशस्य धरः। 2. ವರುಣದೇವತಾಕವಾದ "ಶತಭಿಷಕ್" ನಕ್ಷತ್ರ. (वि०) 3. ಪಾಶವನ್ನು ಹಿಡಿದಿರುವ.

**पाशभृत् ಪಾಶಭೃತ್** (पुं०) 1. ವರುಣ. पाशं बिभर्ति—डु भृञ् (धारणपोषणयोः) "क्विप्" (३-२-७६)। "विसृष्टपार्श्वानुचरस्य तस्य पार्श्वद्रुमाः पाशभृता समस्य" रघु० २-९। 2. "ಶತಭಿಷಕ್" ನಕ್ಷತ್ರ. (वि०) 3. ಪಾಶವನ್ನು ಹಿಡಿದಿರುವ.

**पाशव ಪಾಶವ** (न०) 1. ಪಶುಗಳ ಸಮೂಹ. पशूनां समूहः "अण्" (४-२-३७)। 2. ಪಶುಸಂಬಂಧವಾದ. पशोरिदम् "अण्" (४-३-१२०)। स्त्रियां "ङीप्" (४-१-१५)। **पाशवी ಪಾಶವೀ.**

**पाशहस्त ಪಾಶಹಸ್ತ** (पुं०) 1. ವರುಣ. 2. "ಶತಭಿಷಕ್" ನಕ್ಷತ್ರ. (वि०) 3. ಪಾಶವನ್ನು ಕೈಯಲ್ಲಿ ಹಿಡಿದಿರುವ.

**पाशिन् ಪಾಶಿನ್** (पुं०) 1. ವರುಣ. पाशोऽस्यास्ति "इनिः" (५-२-११५)। "आखण्डलो दण्डधरः कृशानुः पाशीति नाथैः ककुभां चतुर्भिः" नैष० १०-१०। 2. ವ್ಯಾಧ, ಬೇಡರವನು, ಬೇಟೆಗಾರ. 3. ಯಮ. (वि०) 4. ಪಾಶವನ್ನು ಹಿಡಿದಿರುವ. "पाशी व्याधे च वरुणे" मेदि०।

**पाशुपत ಪಾಶುಪತ** (पुं०) 1. ಬಕಪುಷ್ಪ. पशुपतेरयम्—"अण्" (४-३-१२०)। ಶಿವನಿಗೆ ಪ್ರಿಯವಾದುದರಿಂದ ಇದಕ್ಕೆ ಈ ಹೆಸರು. 2. ಪಶುಪತಿಯ ಭಕ್ತ. (न०) 3. ಪಶುಪತಿದೇವತಾಕವಾದ ಅಸ್ತ್ರ, ಪಾಶುಪತಾಸ್ತ್ರ, ಅರ್ಜುನನು ಇಂದ್ರಕೀಲ ಪರ್ವತದಲ್ಲಿ ಉಗ್ರತಪಸ್ಸನ್ನು ಆಚರಿಸಿ ಪರಮೇಶ್ವರನ ಅನುಗ್ರಹದಿಂದ ಪಡೆದ ಒಂದು ಅಸ್ತ್ರ. पशुपतिर्देवताऽस्य "अण्" (४-२-२४)। 4. ಪಶುಪತಿದೇವತಾಕವಾದ ಹವಿಸ್ಸು. 5. ಪಶುಪತಿಯಿಂದ ಪ್ರೋಕ್ತವಾದ ಶಾಸ್ತ್ರ, ಪಾಶುಪತಶಾಸ್ತ್ರ, ಪಶುಪತಿ ದರ್ಶನ. (वि०) 6. ಪಾಶುಪತಮತಾನುಯಾಯಿ.

**पाशुपतास्त्र ಪಾಶುಪತಾಸ್ತ್ರ** (न०) ಅರ್ಜುನನು ಶತ್ರುಜಯಕ್ಕಾಗಿ ಪರಮೇಶ್ವರನಿಂದ ಪಡೆದ ಒಂದು ಅಸ್ತ್ರ. पाशुपतं पशुपतिसम्बन्धि अस्त्रम्।

**पाशुपाल्य ಪಾಶುಪಾಲ್ಯ** (न०) ಪಶುಸಂರಕ್ಷಣೆ, ವೈಶ್ಯವೃತ್ತಿ. पशुपालस्य भावः कर्म वा "ष्यञ्" (५-१-१२४)। "कुसीदकृषिवाणिज्यपाशुपाल्यं विशः स्मृतम्" याज्ञ० १-११९।

**पाश्चात्य ಪಾಶ್ಚಾತ್ಯ** (वि०) 1. ಪಶ್ಚಿಮ ದೇಶದಲ್ಲಿರುವ. 2. ಪಶ್ಚಿಮ ದೇಶದಲ್ಲಿ ಹುಟ್ಟಿದ. पश्चाद्भवः जातो वा "त्यक्" (४-२-९८)। "सङ्ग्रामतुमुलस्तस्य पाश्चात्यैरश्वसाधनैः" रघु० ४-६२। 3. ಹಿಂಭಾಗದಲ್ಲಿರುವ. 4. ಅನಂತರ ಉಂಟಾದ. (न०) 5. ಹಿಂಭಾಗ. "पाश्चात्यभागमिह सानुषु सन्निषण्णाः पश्यन्ति शान्तमलसान्द्रतरांशुजालम्" माघ० ४-२२।

**पाषण्ड ಪಾಷಂಡ** (वि०) ವೇದವಿಹಿತವಾದ ಧರ್ಮವನ್ನು ಬಿಟ್ಟಿರುವ, ವೈದಿಕ ಸಂಪ್ರದಾಯವನ್ನು ತ್ಯಜಿಸಿರುವ. पाति रक्षति पापेभ्यः पाः—पा (रक्षणे) "क्विप्" (३-२-७६)। वेदधर्मः, तं षण्डयति निष्फलं करोति—"अच्" (३-१-१३४)। "पालनाच्च त्रयीधर्मः पाशब्देन निगद्यते। षण्डयन्ति तु तं यस्मात् पाषण्डस्तेन कीर्तितः"।

**पाषण्डिन् ಪಾಷಂಡಿನ್** (वि०) ವೇದಧರ್ಮವನ್ನು ತ್ಯಜಿಸಿರುವವನು, ವೇದವಿಹಿತ ಕರ್ಮಗಳನ್ನು ಆಚರಿಸದೆ ನಿಂದಿಸುವವನು. पां वेदधर्मं षण्डयति—षण्ड + णिच् "णिनिः" (३-१-१३४)।

**पाषाण ಪಾಷಾಣ** (पुं०) 1. ಬಂಡೆ, ದೊಡ್ಡ ಶಿಲೆ. 2. ಕಲ್ಲು. पिनष्टि—पिष्लृ (सञ्चूर्णने) "आनक्" बाहु०। "पाषाणस्खलनविलोलमाशु नूनं वैलक्ष्याद्ययुरवरोधनानि सिन्धोः" माघ० ८-८। (स्त्री०) **—णी—ಣೀ.** 3. ಸಣ್ಣ ಕಲ್ಲು. ತಕ್ಕಡಿಯಲ್ಲಿ ತೂಕಕ್ಕಾಗಿ ಉಪಯೋಗಿಸುವ ಕಲ್ಲು.

**पाषाणदारण ಪಾಷಾಣದಾರಣ** (पुं०) ಕಲ್ಲುಳಿ, ಕಲ್ಲನ್ನು ಒಡೆಯುವ ಉಳಿ. पाषाणो दार्यतेऽनेन—दॄ (विदारणे) + णिच् "ल्युट्" (३-३-११७)।

**पाषाणभेदन ಪಾಷಾಣಭೇದನ** (पुं०) 1. ಕಲ್ಲನ್ನು ಒಡೆಯುವ ಉಳಿ. पाषाणं भिनत्ति—भिदिर् (विदारणे)

"ल्युः" (३-१-१३४)। 2. ಮೂತ್ರರೋಗವನ್ನು ಹೋಗಲಾಡಿಸುವ ಒಂದು ಮೂಲಿಕೆ. "णिनिः" (३-१-१३४)। -मेदिन् -ಭೇದಿನ್.

**पिक ಪಿಕ** (पुं०) ಕೋಗಿಲೆ. अपि कायति — कै (शब्दे) "कः" (३-१-१३६)। "वष्टि भागुरिः" इति अपेरकारलोपः। "पिकाद्वने शृण्वति भृङ्गहुंकृतैर्दशामुदञ्चत्करुणे वियोगिनाम्" नैष० १-८८। स्त्रियां "ङीप्" (४-१-६३)। -की -ಕೀ.

**पिकबन्धु ಪಿಕಬಂಧು** (पुं०) ಚೂತವೃಕ್ಷ, ಮಾವಿನ ಮರ. पिकस्य बन्धुः। "पिकबन्धुस्तु चूतः स्यात् स्त्रीप्रियः षट्पदातिथिः" त्रिकाण्ड०।

**पिकाक्ष ಪಿಕಾಕ್ಷ** (पुं०) 1. ಕಪಿಲೆ ಹಿಟ್ಟು ಎಂಬ ಒಂದು ಔಷಧ. (वि०) 2. ಕೋಗಿಲೆಯಂತೆ ಕೆಂಪು ಕಣ್ಣುಗಳುಳ್ಳವನು.

**पिकानन्द ಪಿಕಾನಂದ** (पुं०) ವಸಂತ ಋತು. पिकमानन्दयति — आ + टु नदि (समृद्धौ) + णिच् "अण्" (३-२-१)।

**पिकेक्षणा ಪಿಕೇಕ್ಷಣಾ** (स्त्री०) ಕೋಗಿಲೆಯ ಕಣ್ಣುಗಳಂತೆ ಕೆಂಪು ಕಣ್ಣುಗಳುಳ್ಳ ಹೆಂಗಸು. पिकस्येव ईक्षणं यस्याः।

**पिक्क ಪಿಕ್ಕ** (पुं०) 1. ಆನೆಯ ಮರಿ. 2. ಪ್ರಾಯದ ಆನೆ.

**पिङ्ग ಪಿಂಗ** (पुं०) 1. ಪಿಂಗಳವರ್ಣ, ಕಂದು ಹಳದಿ ಬಣ್ಣ. पिजि (वर्णे) "अच्" (३-१-१३४)। "शह्वान्तरद्योति विलोचनं यदन्तर्निविष्टामलपिङ्गतारम्" कुमा० ७-३३। 2. ಮೂಷಿಕ, ಇಲಿ. (स्त्री०) -ङ्गा -ಙ್ಗಾ. 3. ಗೋರೋಚನ. 4. ಇಂಗು. 5. ಪಾರ್ವತಿ. 6. ಅರಿಶಿನ. -ङ्गी -ಙ್ಗೀ. 7. ಶಮೀವೃಕ್ಷ. (न०) 8. ಮರಿ, ಶಾವಕ. "पिङ्गी शम्यां पिङ्गा हिङ्गुनाड्योर्गोरोचनोमयोः। पिङ्गं बालके पिशङ्गे" हेम०। "पिङ्गी शम्यां पिशङ्गे ना" मेदि०। 9. ಕಂದು ಹಳದಿ ಬಣ್ಣದ.

**पिङ्गजट ಪಿಂಗಜಟ** (पुं०) ಪರಶಿವ, ಪರಮೇಶ್ವರ. पिङ्गा जटा अस्य।

**पिङ्गल ಪಿಂಗಲ** (पुं०) 1. ಕಂದು ಹಳದಿ ಬಣ್ಣ. पिञ्जति— पिजि (वर्णे) "कलच्" (उ० १-१०६)। 2. ರುದ್ರ. 3. ಸೂರ್ಯನ ಪಾರ್ಶ್ವದಲ್ಲಿರುವ ಒಬ್ಬ ಅನುಚರ. 4. ಒಂದು ಸರ್ಪ. 5. ಕುಬೇರನ ನವನಿಧಿಗಳಲ್ಲೊಂದು. 6. ಅಗ್ನಿ. 7. ಕಪಿ. 8. ಪಿಂಗಳಾಚಾರ್ಯರು, ಛಂದಃಶಾಸ್ತ್ರವನ್ನು ಬರೆದ ಒಬ್ಬ ಮುನಿ. "पिङ्गलादिभिराचार्यैर्यदुक्तं लौकिकं द्विधा। मात्रावर्णविभेदेन छन्दस्तदिह कथ्यते" वृ०र०। (वि०) 9. ಕಂದು ಹಳದಿ ಬಣ್ಣದ. (स्त्री०) -ला -ಲಾ. 10. ಕುಮುದದಿಗ್ಗಜದ ಪತ್ನಿ. 11. ಒಬ್ಬ ವೇಶ್ಯೆ. 12. ದೇಹದೊಳಗಿನ ಒಂದು ನಾಡಿ. "पिङ्गलः कपिले वह्नौ रुद्रेऽर्कपरिपार्श्वके। कपौ मुनौ निधिभेदे पिङ्गला कुमुदस्त्रियाम्" हेम०। ಪಿಂಗಳಾ ನಾಡಿಯು ದೇಹದಲ್ಲಿರುವ ಪ್ರಧಾನವಾದ ಹತ್ತು ನಾಡಿಗಳಲ್ಲೊಂದು. (1) इडा (2) पिङ्गला (3) सुषुम्णा (4) गान्धारी (5) हस्तिजिह्वा (6) पूषा (7) यशस्विनी (8) अलम्बुषा (9) कुहूः ಮತ್ತು (10) शङ्खिनी ಇವು ಹತ್ತು ಪ್ರಧಾನನಾಡಿಗಳು. "प्रधानाः प्राणवाहिन्यो भूयस्तत्र दश स्मृताः। इडा च पिङ्गला चैव सुषुम्णा च तृतीयिका। गान्धारी हस्तिजिह्वा च पूषा चैव यशस्विनी। अलम्बुषा कुहूश्चैव शङ्खिनी च दश स्मृताः"। ದೇಹದೊಳಗೆ ನಾಭಿಕಮಲವು ದಶನಾಡ್ಯಾತ್ಮಕವಾಗಿರುವುದು. ಇಡಾ ಮತ್ತು ಪಿಂಗಳಾ ನಾಡಿಗಳ ಮಧ್ಯದಲ್ಲಿ ಸುಷುಮ್ನಾ ನಾಡಿಯಿರುವುದು. "एवं नाडीमयं चक्रं विज्ञेयं शक्तिचक्रके। इडायाः पिङ्गलायाश्च मध्ये या सा सुषुम्णिका"। ಬ್ರಹ್ಮವಿಷ್ಣುಶಿವಾತ್ಮಕವಾಗಿರುವ ಈ ನಾಡಿಯು ಸತ್ತ್ವರಜಸ್ತಮೋಗುಣಗಳಿಂದ ಕೂಡಿರುವುದು. "इयं च त्रिगुणा ज्ञेया ब्रह्मविष्णुशिवात्मिका"

**पिङ्गललोह ಪಿಂಗಲಲೋಹ** (न०) ಹಿತ್ತಾಳೆ.

**पिङ्गलिका ಪಿಂಗಲಿಕಾ** (स्त्री०) ಬಕಪಕ್ಷಿ.

**पिङ्गसार ಪಿಂಗಸಾರ** (पुं०) ಹರಿದಳ. पिङ्गमेव सारोऽस्य।

**पिङ्गस्फटिक ಪಿಂಗಸ್ಫಟಿಕ** (पुं०) ಗೋಮೇದಕ ಮಣಿ.

**पिङ्गा ಪಿಂಗಾ** (स्त्री०) "पिङ्ग" ಪದದಲ್ಲಿ ನೋಡಿ.

**पिङ्गाक्ष ಪಿಂಗಾಕ್ಷ** (पुं०) 1. ಶಿವ, ಪರಮೇಶ್ವರ. पिङ्गे अक्षिणी यस्य। (वि०) 2. ಹಳದಿ ಬಣ್ಣದಿಂದ ಕೂಡಿದ ಕಣ್ಣುಗಳುಳ್ಳ.

**पिङ्गी ಪಿಂಗೀ** (स्त्री०) ಶಮೀವೃಕ್ಷ.

**पिङ्गेक्षण ಪಿಂಗೇಕ್ಷಣ** (पुं०) ಶಿವ, ಪರಮೇಶ್ವರ, ಮಹಾದೇವ.

**पिचण्ड ಪಿಚಂಡ** (पुं०) 1. ಉದರ, ಹೊಟ್ಟೆ. अपि चमत्यस्मिन् — चमु (अदने) "डः" (उ० १-१११)। "वष्टि भागुरिरल्लोपमवाप्योरुपसर्गयोः" इत्यकारलोपः। 2. ಪಶುವಿನ ಅವಯವ. "पिचण्ड उदरे पशोरवयवे पुमान्" मेदि०।

**पिचण्डक ಪಿಚಂಡಕ** (वि०) ತನ್ನ ಹೊಟ್ಟೆಯನ್ನು ತುಂಬಿ ಕೊಳ್ಳುವವನು, ಇತರರ ಸಂಪಾದನೆಯಿಂದ ಜೀವಿಸುವವನು, ಸ್ವಾರ್ಥಪರ. पिचण्डे कुशलः "कन्" (५-२-६४)।

**पिचण्डिल ಪಿಚಂಡಿಲ** (वि०) ದೊಡ್ಡ ಹೊಟ್ಟೆಯುಳ್ಳವನು. पिचण्ड वा "इलच्" (५-२-११७)। पक्षे इनिठनौ मतुप् च। इनिः—**पिचण्डी** (न्), ठन्—**पिचण्डिकः**, मतुप्—**पिचण्डवान्**।

**पिचव्य ಪಿಚವ್ಯ** (पुं०) ಹತ್ತಿಯ ಗಿಡ.

**पिचु ಪಿಚು** (पुं०) 1. ಕಾರ್ಪಾಸ, ಹತ್ತಿ. डुपचष् (पाके) "उः" बाहु०। पृषो०। 2. ಒಂದು ವಿಧ ಕುಷ್ಠರೋಗ. 3. ಒಂದು ಧಾನ್ಯ. 4. ಒಂದು ಕರ್ಷ, ಹದಿನಾರು ಅಕ್ಷ ಮಾಷಕಗಳ ತೂಕ, 1/4 ಪಲ. 5. ಒಬ್ಬ ಅಸುರ. "पिचुर्ना कुष्ठभेदे च कर्षे तूलेऽसुरान्तरे" मेदि०।

**पिचुमन्द ಪಿಚುಮಂದ** (पुं०) ಬೇವಿನ ಮರ. पिचुं कुष्ठं मन्दयति — मन्द + णिच् "अण्" (३-२-१)।

**पिचुमर्द ಪಿಚುಮರ್ದ** (पुं०) ಬೇವಿನ ಮರ. पिचुं मर्दयति — मृद (क्षोदे) + णिच् "अण्" (३-२-१)। "सार्धं कथंचिदुचितैः पिचुमर्दपत्रैः" माघ० ५-६६।

**पिचुल ಪಿಚುಲ** (पुं०) 1. ನೀರುಕಾಗೆ. 2. ತಕ್ಕೆಗಿಡ. पिचुं तूलं लाति — ला (आदाने) "कः" (३-२-३)। 3. ನೀರುಹಲಸಿನ ಗಿಡ. "पिचुलो झावुकेऽपि स्यादिज्जले जलवायसे" मेदि०।

**पिच्चट ಪಿಚ್ಚಟ** (पुं०) 1. ಕಣ್ಣುರಿ, ಒಂದು ವಿಧ ನೇತ್ರರೋಗ. पिच्च (कुट्टने) "अटन्" (उ० ४-८१)। (न०) 2. ಸೀಸದಲೋಹ. 3. ತವರ. "पिच्चटो नेत्ररोगे स्यात् क्लीबं सीसकरङ्गयोः" मेदि०।

**पिच्छ ಪಿಚ್ಛ** (पुंन०) 1. ನವಿಲುಗರಿ. 2. ನವಿಲಿನ ಪುಚ್ಛ. पिच्छ (कुट्टने) "अच्" (३-१-१३४)। "चपलबर्हविलम्बिपिच्छदाम्नः शिखरशिखाः शिखिशेखरानमुष्य" माघ० ४-५०। (पुं०) 3. ಬಾಲ. (स्त्री०) —च्छा —ಚ್ಛಾ. 4. ರಾಶಿ, ಗುಂಪು. 5. ಬೂರುಗದ ಮರದ ಅಂಟು. 6. ಕುದುರೆಯ ಕಾಲಿನ ರೋಗ. 7. ಸಮೂಹ. 8. ಕೋಶ, ಒರೆ. 9. ಪಂಕ್ತಿ, ಸಾಲು. 10. ಬಾಳೆ ಗಿಡ. 11. ಅನ್ನದ ಕೆನೆ. 12. ಹಾವಿನ ವಿಷ. "पिच्छा पूगच्छटा कोशमोचाशाल्मलिवेष्टके। भक्तसंभूतमण्डे च पङ्क्त्यावश्वपदामये। स्त्रियां पुंसि तु लाङ्गूले न द्वयोर्बर्हचूडयोः" मेदि०।

**पिच्छबाण ಪಿಚ್ಛಬಾಣ** (पुं०) ಶ್ಯೇನಪಕ್ಷಿ, ಡೇಗೆ, ಗಿಡುಗ.

**पिच्छिल ಪಿಚ್ಛಿಲ** (पुं०) 1. ಅನ್ನದ ಕೆನೆ, ಗಂಜಿ. 2. ಸಾರದಾರ ಸಹಿತವಾದ ಗಂಜಿ. पिच्छा "इलच्" (४-२-१००)। (वि०) 3. ಕೈಯಿಂದ ಜಾರುವ, ಜಿಡ್ಡಿನಿಂದ ಕೂಡಿದ. 4. ಕೆನೆಯಿಂದ ಕೂಡಿದ. "तरुणं सर्षपशाकं नवौदनं पिच्छिलानि च दधीनि। अल्पव्ययेन सुन्दरि ग्राम्यजनो मिष्टमश्नाति" वृ० र०। 5. ಪಿಚ್ಛೆಯಿಂದ ಕೂಡಿದ. 6. ಕೆಸರಾಗಿರುವ. "घनाम्बुना राजपथे हि पिच्छिले क्वचिद्बुधैरप्यपथेन गम्यते" नैष० १-३६। (स्त्री०) —ला —ಲಾ. 7. ಅಗುರು ಗಿಡ. 8. ಬೂರುಗದ ಗಿಡ. 9. ಕೊಳವಣಿ ಗಿಡ. 10. ಅಗೆ ಗಿಡ.

**पिञ्छ ಪಿಂಛ** (न०) "पिच्छ" ಪದದ ಅರ್ಥ. पिच्छ पृषो०।

**पिञ्ज ಪಿಂಜ** (पुं०) 1. ಚಂದ್ರ. 2. ಕರ್ಪೂರ. 3. ವಧೆ, ಕೊಲ್ಲುವುದು. पिजि (हिंसायाम्) + णिच् "अच्" (३-३-५६)। (न०) 4. ಬಲ, ಶಕ್ತಿ. (वि०) 5. ಹಳದಿ ಬಣ್ಣ. 6. ಕಳವಳಗೊಂಡ, ನೆಮ್ಮದಿಯಿಲ್ಲದ. (स्त्री०) पिञ्जा ಪಿಂಜಾ. 7. ತೂಲ, ಹತ್ತಿ. 8. ಹರಿದ್ರಾ, ಅರಿಶಿನ. 9. ಹಿಂಸೆ. 10. ರಾಶಿ, ಗುಂಪು.

**पिञ्जट ಪಿಂಜಟ** (पुं०) ನೇತ್ರಮಲ, ಕಣ್ಣಿನ ಕೊಳೆ, ಕಣ್ಣಿನ ಪಿಸುರು.

**पिञ्जन ಪಿಂಜನ** (न०) 1. ಹತ್ತಿಯನ್ನು ಬಿಡಿಸಿ ಶುದ್ಧ ಮಾಡುವ (ಬಿಲ್ಲಿನ ಆಕಾರದ) ಯಂತ್ರ. पिजि (हिंसायाम्) करणे "ल्युट्" (३-३-११७)। 2. ಹತ್ತಿಯನ್ನು ಬಿಡಿಸಿ ಶುದ್ಧಮಾಡುವುದು.

**पिञ्जर ಪಿಂಜರ** (न०) 1. ಹರಿದಳ. 2. ಸ್ವರ್ಣ, ಚಿನ್ನ. पिञ्जं पिञ्जवर्णं राति—रा (दाने) "कः" (३-२-३)। 3. ಪಂಜರ, ಗೂಡು. (पुं०) 4. ಕಂದುಹಳದಿ ಬಣ್ಣ. 5. ಹಳದಿ ಬಣ್ಣ. (वि०) 6. ಹಳದಿ ಬಣ್ಣದ. 7. ಕಂದು ಹಳದಿ ಬಣ್ಣದ.

**पिञ्जल ಪಿಂಜಲ** (पुं०) 1. ಬಹಳವಾಗಿ ಹೆದರಿರುವ ಧೂಳು. पिजि (हिंसायाम्)+णिच् "कलच्" बाहु०। (न०) 2. ಹರಿದಳ. 3. ದರ್ಭೆ ಹುಲ್ಲು.

**पिञ्जाल ಪಿಂಜಾಲ** (न०) ಸ್ವರ್ಣ, ಚಿನ್ನ.

**पिञ्जिका ಪಿಂಜಿಕಾ** (स्त्री०) ದಾರವನ್ನು ಎಳೆಯಲು ಮಾಡಿರುವ ಹತ್ತಿಯ ಪಿಂಡಿ. पिजि (भाषार्थे) + णिच् "ण्वुल्" (३-१-१३३)। "पिञ्जिका तूलनालिका" त्रिकाण्ड०।

**पिञ्जूष ಪಿಂಜೂಷ** (पुं॰) ಕರ್ಣಮಲ, ಕಿವಿಯ ಗುಗ್ಗೆ. पिजि (हिंसायाम्) "ऊषन्" बाहु॰ ।

**पिञ्जेट ಪಿಂಜೇಟ** (पुं॰) ನೇತ್ರಮಲ, ಕಣ್ಣಿನ ಪಿಸುರು. पिञ्जट पृषो॰ ।

**पिञ्जोला ಪಿಂಜೋಲಾ** (स्त्री॰) ತರಗೆಲೆಯ ಶಬ್ದ.

**पिट ಪಿಟ** (पुं॰) 1. ಪೆಟ್ಟಿಗೆ. 2. ಬುಟ್ಟಿ. (न॰) 3. ಗೃಹ, ಮನೆ.

**पिटक ಪಿಟಕ** (पुंस्त्री॰) 1. ಪೆಟ್ಟಿಗೆ. 2. ಬಿದಿರು ಮೊದಲಾದುವುಗಳಿಂದ ಮಾಡಿದ ಬುಟ್ಟಿ ಮಕ್ಕರಿ ಮುಂತಾದುವು. पेटति— पिट (संघाते) "क्वुन्" (उ॰ २-३२)। (पुं॰) मेदि॰ । (त्रि॰) 3. ಹೊಪ್ಪೆ, ಹೊಪ್ಪಳೆ. अम॰ । "गण्डस्योपरि पिटकः संवृत्तः" ।

**पिटक्या ಪಿಟಕ್ಯಾ** (स्त्री॰) ಪಿಟಕಗಳ ಸಮೂಹ, ಬುಟ್ಟಿಗಳ ರಾಶಿ. पिटकानां समूहः "यः" (४-२-४९)।

**पिठर ಪಿಠರ** (पुं॰) 1. ಮೃತ್ಪಾತ್ರೆ, ಮಡಕೆ, ಅನ್ನ ಬೇಯಿಸುವ ಮಣ್ಣಿನ ಪಾತ್ರೆ. पिठ (क्लेशे) "कः" (३-१-१३५)। पिठं राति— रा (दाने) "कः" (३-२-३)। 2. ಮನೆಯ ಮಹಾದ್ವಾರದ ಹತ್ತಿರ ನಿರ್ಮಿಸಿರುವ ಕಾವಲುಗಾರನ ಮನೆ. (न॰) 3. ಕೊನ್ನಾರಿ ಗೆಡ್ಡೆ. 4. ಮೊಸರು ಕಡೆಯುವ ಕೋಲು, ಮಂತು. "पिठरः स्थाल्यां ना क्लीबं मुस्तामन्थानदण्डयोः" मेदि॰ । (स्त्री॰) —री —ರೀ. 5. ಅನ್ನ ಬೇಯಿಸುವ ಪಾತ್ರೆ.

**पिडक ಪಿಡಕ** (पुं॰) 1. ಸ್ಫೋಟಕ, ಹೊಪ್ಪೆ. पीडयति— पीड (अवगाहने) + णिच् "ण्वुल्" (३-१-१३३)। (स्त्री॰) —का —ಕಾ. 2. ಮೊಡವೆ, ಸಣ್ಣ ಗುಳ್ಳೆ. 3. ಕುರು, ಗುಳ್ಳೆ.

**पिण्ड ಪಿಂಡ** (पुं॰) 1. ಬೋಳ, ಬಾಣಂತಿ ಬೋಳ. 2. ಲಾಮಂಚದ ಬೇರು, ಉಶೀರ. पिण्डते— पिडि (संघाते) "अच्" (३-१-१३४)। 3. ದೇಹ, ಶರೀರ. "एकान्तविध्वंसिषु मद्विधानां पिण्डेष्वनास्था खलु भौतिकेषु" रघु॰ २-५७। 4. ಕಬಳ, ಗ್ರಾಸ, ಆಹಾರದ ತುತ್ತು. "स न्यस्तशस्त्रो हरये स्वदेहमुपानयत् पिण्डमिवामिषस्य" रघु॰ २-५९। 5. ಆಹಾರ, ಊಟ. "यः कोऽपि कालो भगवत्याः पिण्डपातवेलां विसृज्य मालतीमनुवर्तमानायाः" मालती॰ ३। 6. ದೇಹದ ಒಂದು ಭಾಗ, ಕಣಕಾಲಿನ ಹಿಂಭಾಗ, ಕಾಲ್ಕೀಲದ ಮೀನಖಂಡ ಭಾಗ. 7. ಮನೆಯ ಒಂದು ಭಾಗ. 8. ಒಂದು ಗೋಳ, ಉಂಡೆ, ದುಂಡಾದ ವಸ್ತು. 9. ರಾಶಿ, ಗುಂಪು. "प्रयान्ति पीत्वा हिमपिण्डपाण्डुराः" माघ॰ १२-६८। 10. ಲೋಬಾನ. 11. ಜಪಾಪುಷ್ಪ, ದಾಸವಾಳದ ಹೂವು. 12. ಪಿತೃಗಳಿಗೆ ಶ್ರಾದ್ಧದಲ್ಲಿ ಕೊಡುವ ಅನ್ನದ ಉಂಡೆ, ಪಿತೃಗಳ ಪ್ರೀತ್ಯರ್ಥ ಅವರನ್ನು ಉದ್ದೇಶಿಸಿ ಮಾಡುವ ಪಿಂಡದಾನ. "न्युप्य पिण्डांस्ततस्तांस्तु प्रयतो विधिपूर्वकम्। तेषु दर्भेषु तं हस्तं निमृज्याल्लेपभागिनाम्" मनु॰ ३-२१६। 13. ಆನೆಯ ಕುಂಭಸ್ಥಳ. 14. ಮಾಂಸ. (न॰) 15. ಜೀವನೋಪಾಯ. 16. ಸೈನ್ಯ. 17. ಲೋಹ, ಕಬ್ಬಿಣ. (वि॰) 18. ಸಾಂದ್ರವಾದ, ದಟ್ಟವಾದ. 19. ಘನವಾದ, ಗಟ್ಟಿಯಾದ. (स्त्री॰) पिण्डी ಪಿಂಡೀ. 20. ಸೋರೆಗಿಡ, ಸಿಹಿಸೋರೆ. 21. ಖರ್ಜೂರದ ಮರ. 22. ಅಶೋಕವೃಕ್ಷ. 23. ಮಂಗಾರೆಗಿಡ. 24. ಕಣಕಾಲಿನ ಹಿಂಭಾಗ. "पिण्डो गोले बले सान्द्रे देहागारैकदेशयोः। देहमात्रे निवापे च गोलसिह्लकयोरपि। ओड्रपुष्पे च पुंसि स्यात् क्लीबमाजीवनायसोः। पिण्डी तु पिण्डीतगरेऽलाबूखर्जूरभेदयोः" मेदि॰ । "पिण्डं तु वेश्मैकदेशे जीवनायसोः। बले सान्द्रे पिण्डखलाबूखर्जूर्योस्तगरेऽपि च" हेम॰ । ಈ ರೀತಿ ಕೋಶಗಳಲ್ಲಿ ಭಿನ್ನಲಿಂಗಗಳಲ್ಲಿ ಉಕ್ತವಾಗಿದೆ.

**पिण्डक ಪಿಂಡಕ** (पुंन॰) 1. ಲೋಬಾನ, ಒಂದು ವಾಸನಾ ದ್ರವ್ಯ. 2. ಬೋಳ, ಬಾಣಂತಿ ಬೋಳ. 3. ಗೋಳ, ದುಂಡಾದ ವಸ್ತು. 4. ಕಬಳ, ಗ್ರಾಸ. (पुं॰) 5. ಪಿಶಾಚ. 6. ಆಲೂಗೆಡ್ಡೆ.

**पिण्डकन्द ಪಿಂಡಕಂದ** (पुं॰) ಆಲೂಗೆಡ್ಡೆ. पिण्डाकारः कन्दः ।

**पिण्डखर्जूर ಪಿಂಡಖರ್ಜೂರ** (पुं॰) ಮೆದುವಾಗಿ ಮುದ್ದೆಯಾಗಿರುವ ಖರ್ಜೂರ. पिण्डवत् खर्जूरः ।

**पिण्डखर्जूरी ಪಿಂಡಖರ್ಜೂರೀ** (स्त्री॰) ಪಿಂಡಖರ್ಜೂರ ವೃಕ್ಷ. "पिण्डखर्जूरिकास्त्वन्या सा देशे पश्चिमे भवेत्। खर्जूरी गोस्तनाकारा परद्वीपादिहागता। जायते पश्चिमे देशे सा छोहारेति कीर्त्यते"।

**पिण्डगोस ಪಿಂಡಗೋಸ** (पुं॰) ಬೋಳ, ಬಾಣಂತಿ ಬೋಳ.

**पिण्डतैल ಪಿಂಡತೈಲ** (न॰) ಲೋಬಾನ, ಒಂದು ವಾಸನಾ ದ್ರವ್ಯ. पिण्डवत् तैलम् ।

**पिण्डद ಪಿಂಡದ** (पुं॰) ಶ್ರಾದ್ಧದಲ್ಲಿ ಪಿತೃಗಳಿಗೆ ಪಿಂಡ ಪ್ರದಾನ ಮಾಡುವ ಪುತ್ರ. पिण्डं ददाति— डु दाञ् (दाने) "कः" (३-२-३)। "पिण्डदोऽंशहरश्चैव पूर्वाभावे परः परः" याज्ञ॰ २-१३२।

**पिण्डदातृ ಪಿಂಡದಾತೃ** (पुं०) "पिण्डद" ಪದದ ಅರ್ಥ. पिण्डं ददाति — डु दाञ् (दाने) "तृच्" (३-१-१३३)।

**पिण्डपाद ಪಿಂಡಪಾದ** (पुं०) ಗಜ, ಆನೆ. पिण्ड इव पादोऽस्य।

**पिण्डपितृयज्ञ ಪಿಂಡಪಿತೃಯಜ್ಞ** (पुं०) ಅಗ್ನಿಕಾರ್ಯಕ್ಕೆ ಅರ್ಹನಾದ (ಸಪತ್ನೀಕ) ಗೃಹಸ್ಥನು ಮಾಡುವ ಪಿಂಡದಾನ ರೂಪವಾದ (ಪಿತೃ) ಯಜ್ಞ.

**पिण्डपुष्प ಪಿಂಡಪುಷ್ಪ** (पुं०) 1. ಅಶೋಕ ವೃಕ್ಷ. पिण्ड इव पुष्पं पुष्पगुच्छो यस्य। (न०) 2. ಅಶೋಕ ಪುಷ್ಪ.

**पिण्डफला ಪಿಂಡಫಲಾ** (स्त्री०) ಕಹಿಸೋರೆ.

**पिण्डबीजक ಪಿಂಡಬೀಜಕ** (पुं०) ಬೆಟ್ಟಗಣಗಿಲೆ ಗಿಡ.

**पिण्डमुस्ता ಪಿಂಡಮುಸ್ತಾ** (स्त्री०) ಕೊನ್ನಾರಿಯ ಒಂದು ಭೇದ.

**पिण्डमूल ಪಿಂಡಮೂಲ** (न०) ಮೂಲಂಗಿಯ ಜಾತಿಗೆ ಸೇರಿದ ಕೆಂಪುಗೆಡ್ಡೆಯ ಒಂದು ಗಿಡ, ಕೆಂಪು ಮೂಲಂಗಿ.

**पिण्डल ಪಿಂಡಲ** (पुं०) ಸೇತುವೆ.

**पिण्डस ಪಿಂಡಸ** (पुं०) ಪರಾನ್ನದಿಂದ ಜೀವಿಸುವವನು; ಭಿಕ್ಷುಕ.

**पिण्डा ಪಿಂಡಾ** (स्त्री०) 1. ಉಕ್ಕು. 2. ಕಸ್ತೂರಿ.

**पिण्डात ಪಿಂಡಾತ** (पुं०) ಲೋಬಾನ, ಒಂದು ವಾಸನಾ ದ್ರವ್ಯ.

**पिण्डाभ्र ಪಿಂಡಾಭ್ರ** (न०) ಮೇಘದ ಜಲದಿಂದ ಉಂಟಾದ ಹಿಮದ ಗಡ್ಡೆ.

**पिण्डायस ಪಿಂಡಾಯಸ** (न०) ಉಕ್ಕು.

**पिण्डार ಪಿಂಡಾರ** (पुं०) 1. ಗೋಪಾಲಕ. 2. ಎಮ್ಮೆಗಳನ್ನು ಸಾಕುವವನು. 3. ದ್ರುಮ, ಮರ. 4. ಕ್ಷಪಣಕ, ಬೌದ್ಧಸಂನ್ಯಾಸಿ. "पिण्डारः क्षपणे गोपे महिषीरक्षके द्रुमे" मेदि०।

**पिण्डालु ಪಿಂಡಾಲು** (पुं०) 1. ಆಲೂಗೆಡ್ಡೆ, ಪಿಂಡಾಕಾರದ ಒಂದು ಜಾತಿಯ ಗೆಡ್ಡೆ. पिण्डाकारः आलुः। 2. ಒಂದು ಜಾತಿಯ ಅಮೃತಬಳ್ಳಿ.

**पिण्डि ಪಿಂಡಿ, —डी —ಡೀ** (स्त्री०) 1. ರಥದ ಚಕ್ರದ ನಾಭಿ, ಚಕ್ರದ ತೂಬು. 2. ಕಣಕಾಲಿನ ಹಿಂಭಾಗ. ಕಾಲ್ಚೀಲದ ಮಾಂಸಖಂಡ ಭಾಗ. 3. ಪೀಠ. 4. ಅಶೋಕ ವೃಕ್ಷ. 5. ಸೋರೆಗಿಡ, ಸಿಹಿಸೋರೆ. 6. ದೇವರ ವಿಗ್ರಹದ ಪಾದಪೀಠ. स्वार्थे "कः"। **पिण्डिका ಪಿಂಡಿಕಾ.**

**पिण्डित ಪಿಂಡಿತ** (वि०) 1. ದುಂಡಾಗಿ ಮಾಡಲ್ಪಟ್ಟ, ಗೋಳಾಕಾರವಾಗಿ ಮಾಡಲ್ಪಟ್ಟ. पिडि (सङ्घाते) "क्तः" (३-२-१०२)। 2. ಒಟ್ಟುಗೂಡಿಸಲ್ಪಟ್ಟ, ಒಟ್ಟಾಗಿ ಸೇರಿಸಿ ಹೇಳಲ್ಪಟ್ಟ. "श्रुतमार्याभ्यां भगवत्या वचनम्?। एष पिण्डितार्थं उपदेशदर्शनेन निर्णय इति" माल० १। 3. ಗುಣಿಸಲ್ಪಟ್ಟ, ಹೆಚ್ಚಿಸಲ್ಪಟ್ಟ. 4. ಎಣಿಸಲ್ಪಟ್ಟ, ಲೆಕ್ಕ ಮಾಡಲ್ಪಟ್ಟ. (पुं०) 5. ಲೋಬಾನ, ಒಂದು ಸುಗಂಧ ದ್ರವ್ಯ.

**पिण्डिल ಪಿಂಡಿಲ** (पुं०) 1. ಸೇತುವೆ. (वि०) 2. ಗಣಕ, ಲೆಕ್ಕಾಚಾರ ಮಾಡುವವನು. 3. ಜನ್ಮಕಾಲದ ತಿಥಿ ನಕ್ಷತ್ರಾದಿಗಳ ಪ್ರಮಾಣಗಳನ್ನು ಲೆಕ್ಕಮಾಡಿ ನಿರ್ಣಯಿಸುವವನು. (वि०) 4. ಗಣಿತಶಾಸ್ತ್ರದಲ್ಲಿ ಪ್ರವೀಣನಾದವನು.

**पिण्डीकृत ಪಿಂಡೀಕೃತ** (वि०) ಒಟ್ಟುಗೂಡಿಸಲ್ಪಟ್ಟ, ಒಟ್ಟಾಗಿ ಸೇರಿಸಲ್ಪಟ್ಟ.

**पिण्डीतक ಪಿಂಡೀತಕ** (पुं०) 1. ಮಂಗಾರೆ ಗಿಡ. 2. ನಂದೀಬಟ್ಟಲು ಗಿಡ.

**पिण्डीभूत ಪಿಂಡೀಭೂತ** (वि०) ಒಟ್ಟಾಗಿ ಸೇರಿರುವ, ಒಂದು ರಾಶಿಯಾಗಿರುವ.

**पिण्डीर ಪಿಂಡೀರ** (पुं०) 1. ದಾಳಿಂಬೆ ಗಿಡ. पिण्डं पिण्डाकारं फलमीरयति — ईर (गतौ) "अण्" (३-२-१)। 2. ಸಮುದ್ರದ ನೊರೆ. (वि०) 3. ತೇವವಿಲ್ಲದ, ನೀರಸವಾದ, ಒಣಗಿರುವ.

**पिण्डीशूर ಪಿಂಡೀಶೂರ** (वि०) ಊಟದ ವಿಷಯದಲ್ಲಿ ಮಾತ್ರ ಶೂರನಾದ, ಊಟದಲ್ಲಿ ಮಾತ್ರ ಪ್ರವೀಣನಾದ. पिण्ड्यां पिण्डव्यापार एव शूरः (नान्यत्र)। ತನ್ನ ಮನೆಯಲ್ಲಿದ್ದುಕೊಂಡು ಪ್ರತಾಪವನ್ನು ಹೇಳಿಕೊಳ್ಳುವ ಹೇಡಿಯ ವಿಷಯದಲ್ಲಿ ಈ ಪದಪ್ರಯೋಗ. "राक्षसान् वट्यज्ञेषु पिण्डीशूरान् निरस्तवान्" भट्टि० ५-८५।

**पिण्डोलि ಪಿಂಡೋಲಿ** (स्त्री०) ಉಚ್ಛಿಷ್ಟ, ಊಟಮಾಡಿ ಉಳಿದ ವಸ್ತು, ಉಂಡು ಮಿಕ್ಕಿದ್ದು.

**पिण्याक ಪಿಣ್ಯಾಕ** (पुंन०) 1. ಎಳ್ಳು ಮೊದಲಾದ ಬೀಜಗಳಿಂದ ಎಣ್ಣೆ ತೆಗೆದಮೇಲೆ ಉಳಿಯುವ ಹಿಂಡಿ. पण (व्यवहारे) "आकः" (उ० ४-१५)। निपा०। 2. ಇಂಗು. 3. ಕೇಸರಿ. 4. ಲೋಬಾನ. "पिण्याकोऽस्त्री तिलकल्के हिङ्गुबाह्लीकसिह्लके" मेदि०।

**पितामह ಪಿತಾಮಹ** (पुं०) 1. ತಾತ, ತಂದೆಯ ತಂದೆ. पितुः पिता — पितृ "डामहच्" (वा० ४-२-३६)। पितामह षित्। षित्वात् गौरा० "ङीष्" (४-१-४१)

**पितामही ಪಿತಾಮಹೀ.** ಅಜ್ಜಿ, ತಂದೆಯ ತಾಯಿ. 2. ಬ್ರಹ್ಮ, ಚತುರ್ಮುಖಿ. पितॄणां मरीच्यादीनां पितृगणानां पिता। 3. ಪರಶಿವೆ, ಪರಮೇಶ್ವರ.

**पितृ ಪಿತೃ** (ಪುಂ) 1. ಜನಕ, ತಂದೆ. पाति रक्षति—पा (रक्षणे) "तृच्" (उ० २-९५)। निपा०। ತಂದೆಯಾದವನು ಎಲ್ಲರಿಗೂ ಪೂಜ್ಯನು. ತಂದೆಯ ಅನುಗ್ರಹದಿಂದ ವಾತ್ಸಲ್ಯದಿಂದ ಪುತ್ರನಾದವನು ಪ್ರಪಂಚದಲ್ಲಿ ಸಕಲ ವ್ಯವಹಾರಗಳನ್ನು ತಿಳಿದುಕೊಳ್ಳುವನು. ತಂದೆಯು ಯಾವಾಗಲೂ ಪುತ್ರನ ರಕ್ಷಣೆಯೇ ಧ್ಯೇಯವುಳ್ಳವನಾದುದರಿಂದ पिता ಎನಿಸಿಕೊಂಡನು. ಆದುದರಿಂದ ಪುತ್ರನಾದವನು ತಂದೆಯ ವಿಷಯದಲ್ಲಿ ಪೂಜ್ಯ ಮನೋಭಾವವುಳ್ಳವನಾಗಿರಬೇಕು. "मान्यः पूज्यश्च सर्वेभ्यः सर्वेषां जनको भवेत्। अहो तस्य प्रसादेन सर्वान् पश्यति मानवः। जनको जन्मदाता च रक्षणाच्च पिता नृणाम्। तातो विस्तीर्णकरणात् कलया स प्रजापतिः"। ತಂದೆಯು ಹನ್ನೊಂದು ಮಂದಿ ಗುರುಗಳ ಪಂಙ್ತಿಯಲ್ಲಿ ಸೇರಿದವನು.

**ಹನ್ನೊಂದು ಮಂದಿ ಗುರುಗಳು:** (1) उपाध्याय: (2) पिता (ಜನಕ ತಂದೆ) (3) ज्येष्ठभ्राता (4) महीपतिः (5) मातुलः (ಸೋದರಮಾವ) (6) श्वशुरः (ಪತ್ನಿಯ ತಂದೆ) (7) त्राता (ಆಪತ್ಕಾಲದಲ್ಲಿ ರಕ್ಷಿಸಿದವನು) (8) मातामहः (ತಾಯಿಯ ತಂದೆ) (9) पितामहः (ತಂದೆಯ ತಂದೆ) (10) बन्धुः ಮತ್ತು (11) ज्येष्ठपितृव्यः (ತಂದೆಯ ಜ್ಯೇಷ್ಠ ಸಹೋದರ) ಇವರೆಲ್ಲರಲ್ಲಿಯೂ ಗುರುತ್ವವನ್ನು ಇಟ್ಟುಕೊಳ್ಳಬೇಕು. ಜನಕ ತಂದೆಗಿಂತಲೂ ಮಂತ್ರೋಪದೇಶ ಮಾಡಿದ ಪಿತೃವಿನಲ್ಲಿ ಹೆಚ್ಚು ಗೌರವದಿಂದಿರಬೇಕು. "उत्पादकब्रह्मदात्रोर्गरीयान् ब्रह्मदः पिता। तस्मान्मन्येत सततं पितुरप्यधिकं गुरुम्" तन्त्रसा०।

**ಪಂಚ (ಐದು ಮಂದಿ) ಪಿತೃಗಳು:** (1) अन्नदाता (ಅನ್ನ ಹಾಕಿ ಪೋಷಿಸಿದವನು) (2) भयत्राता (ಭಯದಿಂದ ರಕ್ಷಿಸಿದವನು) (3) विद्याप्रदाता (ವಿದ್ಯೆ ಕಲಿಸಿದವನು) (4) जनकः (ಜನಕ ತಂದೆ) ಮತ್ತು (5) उपनेता (ಬ್ರಹ್ಮೋಪದೇಶ ಮಾಡಿದವನು) ಇವರು ಪಂಚಪಿತೃಗಳು.

ತಾಯಿಯೊಡನೆ ತಂದೆಯನ್ನೂ ಸೇರಿಸಿ ಹೇಳುವಾಗ ತಂದೆಯನ್ನು ಹೇಳುವ पितृ ಶಬ್ದಕ್ಕೆ ವಿಕಲ್ಪವಾಗಿ ಏಕಶೇಷವುಂಟಾಗಿ पितरौ ಎಂದಾಗುವುದು. माता च पिता च पितरौ। मातापितरौ मातरपितरौ ಎಂದೂ ರೂಪವಾಗುವುದು. (१-२-७०) ಮತ್ತು (६-३-३२)। "जगतः पितरौ वन्दे पार्वतीपरमेश्वरौ" रघु० १-१। "पितुः प्रयत्नात् स समग्रसंपदः शुभैः शरीरावयवैर्दिने दिने। पुपोष वृद्धिं हरिदश्वदीधितेरनुप्रवेशादिव बालचन्द्रमाः" रघु० ३-२२। (ಪುಂ ಬ० ವ०) 2. ವಂಶದ ಹಿರಿಯರು, ಪಿತಾಮಹ (ತಂದೆಯ ತಂದೆ), ಪ್ರಪಿತಾಮಹ (ತಂದೆಯ ತಾತ) ಮೊದಲಾದವರು. "ऋणाभिधानात् स्वयमेव केवलं तदा पितॄणां मुमुचे स बन्धनात्" रघु० ३-२०। 3. ಪಿತೃದೇವತೆಗಳು. ಇವರು ದೇವತೆಗಳಲ್ಲಿ ಒಂದು ಗುಂಪಿನವರು. ಚಂದ್ರಲೋಕಕ್ಕೆ ಮೇಲೆ ಇವರು ವಾಸ ಮಾಡುವುದರಿಂದ ಆ ಲೋಕಕ್ಕೆ "ಪಿತೃಲೋಕ" ಎಂದು ಹೆಸರು. "पितृलोक" ಪದದಲ್ಲಿ ನೋಡಿ.

**पितृक ಪಿತೃಕ** (वि०) ತಂದೆಯಿಂದ ಪ್ರಾಪ್ತವಾದ, ತಂದೆಯ ಕ್ರಮದಿಂದ ಬಂದ. पितुरागतम्—पितृकम् पृषो०। "पैत्रं च पितृकं चापि पित्र्यं च पितुरागतम्"।

**पितृकर्मन् ಪಿತೃಕರ್ಮನ್, —कार्यम् —ಕಾರ್ಯಮ್** (न०) **—क्रिया —ಕ್ರಿಯಾ** (स्त्री०) ಪುತ್ರನು ಪಿತೃಗಳಿಗೆ ಮಾಡಬೇಕಾದ ಶ್ರಾದ್ಧ ತರ್ಪಣ ಮೊದಲಾದ ಕರ್ಮ. पितॄनुद्दिश्य क्रियमाणं कर्म। "स्वधाकारः पराह्याशीः सर्वेषु पितृकर्मसु" मनु० ३-२५२।

**पितृकल्प ಪಿತೃಕಲ್ಪ** (वि०) 1. ತಂದೆಗೆ ಸಮಾನನಾದ. ईषदूनः पिता "कल्पप्" (५-३-६७)। (ಪುಂ) 2. ಚತುರ್ಮುಖನ ಈಗ ನಡೆಯುತ್ತಿರುವ ತಿಂಗಳ ಮೂವತ್ತನೆಯ ದಿನವಾದ ಅಮಾವಾಸ್ಯೆ.

**पितृकुल्या ಪಿತೃಕುಲ್ಯಾ** (स्त्री०) ಮಲಯ ಪರ್ವತದಲ್ಲಿ ಹುಟ್ಟಿ ಹರಿಯುವ ಒಂದು ನದಿ.

**पितृतिथि ಪಿತೃತಿಥಿ** (स्त्री०) ಅಮಾವಾಸ್ಯೆ.

**पितृतीर्थ ಪಿತೃತೀರ್ಥ** (न०) 1. ಗಯಾಕ್ಷೇತ್ರ. पितृप्रियं तीर्थम्। 2. ಅಂಗುಷ್ಠ ಮತ್ತು ತರ್ಜನೀ ಬೆರಳುಗಳ ಮಧ್ಯೆ ಪಿತೃಗಳನ್ನು ಉದ್ದೇಶಿಸಿ ಬಿಡುವ ತೀರ್ಥ. "अन्तराङ्गुष्ठदेशिन्योः पितॄणां तीर्थमुत्तमम्" कूर्मपु०।

**पितृदान ಪಿತೃದಾನ** (न०) ಪಿತೃಗಳನ್ನು ಉದ್ದೇಶಿಸಿ ಮಾಡುವ ಅನ್ನದಾನ ವಸ್ತ್ರದಾನ ಮತ್ತು ಜಲತರ್ಪಣ ಮೊದಲಾದುವು. पित्रे दानम्।

**पितृदिन ಪಿತೃದಿನ** (न०) ಅಮಾವಾಸ್ಯೆ.

**पितृपक्ष ಪಿತೃಪಕ್ಷ** (ಪುಂ) ಕನ್ಯಾಮಾಸದ ಕೃಷ್ಣ ಪಕ್ಷ. पितृप्रियः पक्षः।

**पितृपति ಪಿತೃಪತಿ** (ಪುಂ) ಯಮಧರ್ಮರಾಯ. पितॄणां पतिः। "त्वं ब्रह्मा हरिरजसंज्ञितस्त्वमिन्द्रो वित्तेशः

पितृपतिरम्बुपतिः समीरः। सोमोऽग्निर्बंधनमहीधरो-प्रभिसंघः किं स्तव्यं तव सकलात्मरूपधाम्नः" मार्कं०।

**पितृपितृ ಪಿತೃಪಿತೃ** (पुं०) 1. ಪಿತಾಮಹ, ಬ್ರಹ್ಮ, ಚತುರ್ಮುಖ. 2. ಅಜ್ಜ, ತಾತ, ಪಿತಾಮಹ.

**पितृप्रसू ಪಿತೃಪ್ರಸೂ** (स्त्री०) 1. ಸಾಯಂಸಂಧ್ಯೆ. पितृणां प्रसूरिव। ಪಿತೃಕಾರ್ಯಗಳಲ್ಲಿ ಸಂಧ್ಯಾಕಾಲದಲ್ಲಿರುವ ತಿಥಿಯು ಮುಖ್ಯವಾದುದರಿಂದ ಈ ಹೆಸರು. "रजनीमिव-मुपनेतुं पितृप्रसूः प्रथममुपतस्थे" आर्यासप्तशती। 2. ಪಿತಾಮಹಿ, ತಂದೆಯ ತಾಯಿ.

**पितृबन्धु ಪಿತೃಬಂಧು, —बान्धव —ಬಾಂಧವ** (पुं०) ತಂದೆಯ ಕಡೆಯ ಬಂಧು. ತಂದೆಯ ಸೋದರತ್ತೆಯ ಮಕ್ಕಳು, ತಂದೆಯ ಚಿಕ್ಕಮ್ಮ ಮತ್ತು ದೊಡ್ಡಮ್ಮನ ಮಕ್ಕಳು. ತಂದೆಯ ಸೋದರಮಾವನ ಮಕ್ಕಳು ಇವರೆಲ್ಲರೂ ಪಿತೃ (ತಂದೆಯ ಕಡೆಯ) ಬಂಧುಗಳು. "पितुः पितुःस्वसुः पुत्राः पितुर्मातुःस्वसुः सुताः। पितुर्मातुल-पुत्राश्च विज्ञेयाः पितृबान्धवाः"।

**पितृभोजन ಪಿತೃಭೋಜನ** (पुं०) ಮಾಷ, ಉದ್ದು. पितृ-भिर्भुज्यते—भुज (पालनाभ्यवहारयोः) कर्म० "ल्युट्"।

**पितृमत् ಪಿತೃಮತ್** (वि०) ಪ್ರೀತಿಯ ತಂದೆಯುಳ್ಳವನು. पितृ प्रशंसायां "मतुप्" (५-२-९४)। "पुत्रस्तथै-वात्मजवत्सलेन स तेन पित्रा पितृमान् बभूव" रघु० १८-११।

**पितृयज्ञ ಪಿತೃಯಜ್ಞ** (पुं०) ತರ್ಪಣ. पितॄनुद्दिश्य यज्ञः। "अध्यापनं ब्रह्मयज्ञः पितृयज्ञस्तु तर्पणम्। होमो दैवो बलिर्भौतो नृयज्ञोऽतिथिपूजनम्" मनु० ३-७०।

**पितृयान ಪಿತೃಯಾನ** (पुं०) ಪಿತೃಗಳು ಚಂದ್ರಲೋಕಕ್ಕೆ ಹೋಗುವ ಮಾರ್ಗ.

**पितृलोक ಪಿತೃಲೋಕ** (पुं०) ಪಿತೃಗಳ ಲೋಕ, ಚಂದ್ರಲೋಕದ ಮೇಲ್ಗಡೆ ಇರುವ ಲೋಕ. ಮೂವತ್ತೊಂದು ಪಿತೃಗಣಗಳು ಈ ಲೋಕದ ನಿವಾಸಿಗಳು. ವಿಶ್ವ ಮೊದಲಾದ ಪಿತೃಗಣಗಳು 9. ಕಲ್ಯಾಣ ಮೊದಲಾದ ಪಿತೃಗಣಗಳು 6. ವರೇಣ್ಯಾದಿ ಪಿತೃಗಣಗಳು 7. ಮಹಾತ್ಮಾದಿ ಪಿತೃಗಣಗಳು 5. ಸುಮಿದಾದಿ ಪಿತೃಗಣಗಳು 4. ಈ ರೀತಿ ಪಿತೃಗಣಗಳು 31.

**पितृव्य ಪಿತೃವ್ಯ** (पुं०) ತಂದೆಯ ಸಹೋದರ, ಚಿಕ್ಕಪ್ಪ ಮತ್ತು ದೊಡ್ಡಪ್ಪ. पितुर्भ्राता—पितृ "व्यत्" (४-२-३६)। निपा०। "पितुर्भ्राता पितृव्यः स्यान्मातुर्भ्राता तु मातुलः" अम०।

**पितृष्वसृ ಪಿತೃಷ್ವಸೃ** (स्त्री०) ಸೋದರತ್ತೆ, ತಂದೆಯ ಸಹೋದರಿ. ಚಿಕ್ಕಮ್ಮ ಮತ್ತು ದೊಡ್ಡಮ್ಮ. पितुः स्वसा। "मुकुन्दनतोऽपि विहितात्मगौरवः प्रणनाम नाम तनयं पितृष्वसुः" माघ० १३-८।

**पितृसन्निभ ಪಿತೃಸನ್ನಿಭ** (पुं०) ತಂದೆಗೆ ಸಮಾನನಾದವನು. पितेव सम्यक् निभाति—भा (दीप्तौ) "कः" (३-१-१३६)। "मनोभवः स पितृसंनिभः" बम०। ಆಚಾರ್ಯ, ಜ್ಯೇಷ್ಠ ಸಹೋದರ, ರಾಜ, ಮಾತುಲ, ಶ್ವಶುರ (ಪತ್ನಿಯ ತಂದೆ) ರಕ್ಷಕ, ಮಾತಾಮಹ, ಪಿತಾಮಹ, ವರ್ಣಜ್ಯೇಷ್ಠ ಮತ್ತು ಪಿತೃವ್ಯ ಇವರು ತಂದೆಗೆ ಸಮಾನರು.

**पितृसू ಪಿತೃಸೂ** (स्त्री०) ಅಜ್ಜಿ, ತಂದೆಯ ತಾಯಿ. पितरं सूते—षूङ् (प्राणिगर्भविमोचने) "क्विप्" (३-२-६१)।

**पितृहू ಪಿತೃಹೂ** (पुं०) ಬಲಕಿವಿ, ದಕ್ಷಿಣ ಕರ್ಣ. पितॄ-नाह्वयतेऽनेन—ह्वेञ् "क्विप्"।

**पित्त ಪಿತ್ತ** (न०) ದೇಹದೊಳಗಿನ ಒಂದು ಧಾತು. अपिदीयते प्रकृतावस्थया रक्ष्यते विकृतावस्थया नाश्यते वा शरीरम् अनेन —अपि + देङ् (पालने) दो (अवखण्डने) वा "क्तः" (३-२-१०२)। "तः" (७-४-४७)। अपेर-ल्लोपः। "पित्तेन दूने रसने सितापि तिक्तायते हंस-कुलावतंस" नैष० ३-९४। ವಾತ ಪಿತ್ತ ಮತ್ತು ಕಫ ಗಳೆಂಬ ಈ ಮೂರು ಧಾತುಗಳೂ ದೇಹದ ಉತ್ಪತ್ತಿಗೆ ಕಾರಣ. ಶರೀರದ ಅಧೋಭಾಗ (ಶ್ರೋಣಿ ಮತ್ತು ಗುದ) ದಲ್ಲಿ ವಾತವೂ ಅದಕ್ಕೆ ಮೇಲೆ ಮಧ್ಯಭಾಗ (ಪಕ್ವಾಶಯ ಮತ್ತು ಆಮಾಶಯ ಮಧ್ಯ) ದಲ್ಲಿ ಪಿತ್ತಧಾತುವೂ ಊರ್ಧ್ವ ಭಾಗ (ಆಮಾಶಯ) ದಲ್ಲಿ ಶ್ಲೇಷ್ಮ (ಕಫ) ಧಾತುವೂ ಇರುವುವು. ಮೂರು ಕಂಬಗಳ ಆಧಾರದ ಮೇಲೆ ಮನೆಯು ನಿಲ್ಲುವಂತೆ ಶುಕ್ರಶೋಣಿತಾದಿ• ಧಾತುಗಳಿಂದ ಕೂಡಿದ ಈ ಮೂರು ಧಾತುಗಳಿಂದ ದೇಹವು ಧರಿಸಲ್ಪಟ್ಟಿರುವುದು. ಈ ಮೂರು ಧಾತುಗಳೂ ಸಮಸ್ಥಿತಿಯಲ್ಲಿದ್ದರೆ ದೇಹವು ಆರೋಗ್ಯದಿಂದಿರುವುದು. ಇವು ವಿಷಮಿಸಿದರೆ ಆರೋಗ್ಯವು ಕೆಟ್ಟು ಶರೀರನಾಶಕ್ಕೆ ಕಾರಣವಾಗುವುವು. "वातपित्त-श्लेष्माण एव देहसंभवहेतवः। तैरेवाव्यापन्नैरधोमध्यो-र्ध्वसन्निविष्टैः शरीरमिदं धार्यतेऽगारमिव स्थूणाभिस्तिसृभिः। त एव च व्यापन्नाः प्रलयहेतवः" सुश्रुत० सूत्र० २१-३। "वातः श्रोणिगुदसंश्रयः, तदुपर्यधो नाभेः पक्वाशयः, पक्वामाशयमध्यं पित्तस्य, आमाशयः श्लेष्मणः इति दोषस्थानानि" सुश्रुत० सूत्र० २१-६। ಇವಲ್ಲದೆ ಪಿತ್ತ

ಧಾತುವಿಗೆ ಯಕೃತ್ತು (ಉದರದ ಬಲಗಡೆಯಿರುವ ದೊಡ್ಡ ಮಾಂಸಗ್ರಂಥಿ) ಪ್ಲೀಹ (ಉದರದ ಎಡಭಾಗದಲ್ಲಿ ಅನ್ನ ಕೋಶದ ಹಿಂದೆ ಇರುವ ಮಾಂಸಗ್ರಂಥಿ) ಹೃದಯ ದೃಷ್ಟಿ ತ್ವಕ್ಕು ಇವೂ ಆಶ್ರಯಸ್ಥಾನಗಳು. "पित्तस्य यकृत्प्लीहानौ हृदयं दृष्टिः त्वक् पूर्वोक्तं च स्थानानि" सुश्रुत० सूत्र० २१-७। (1) पाचकम् (2) रञ्जकम् (3) साधकम् (4) आलोचकम् ಮತ್ತು (5) भ्राजकम् ಎಂದು ಶರೀರದ ಎಲ್ಲಾ ಕಡೆಯಲ್ಲೂ ವ್ಯಾಪಿಸಿರುವ ಪಿತ್ತದ ಹೆಸರು ಐದು.

ಪಕ್ವ ಮತ್ತು ಆಮಾಶಯಗಳ ಮಧ್ಯೆ ಇರುವ ಪಿತ್ತ ಧಾತುವು ಅಶಿತ, ಖಾದಿತ, ಲೀಢ ಮತ್ತು ಪೀತಗಳೆಂದು ನಾಲ್ಕು ವಿಧ. ಆಹಾರವನ್ನು ಪಚನಮಾಡಿ ದೋಷ ರಸ ಮೂತ್ರ ಮತ್ತು ಪುರೀಷಗಳನ್ನು ಬೇರ್ಪಡಿಸುವುದು. ಅಲ್ಲೇ ಇರುವ ಈ ಪಿತ್ತಧಾತುವು ತನ್ನ ಶಕ್ತಿಯಿಂದ ಉಳಿದ ಪಿತ್ತಸ್ಥಾನಗಳಿಗೂ ತನ್ನ ಪ್ರಭಾವವನ್ನು ಬೀರುವುದು. ಈ ಪಿತ್ತಧಾತುವಿಗೆ "ಪಾಚಕ" ಎಂದು ಹೆಸರು. ಯಕೃತ್ತು ಮತ್ತು ಪ್ಲೀಹಗಳಲ್ಲಿರುವ ಪಿತ್ತಕ್ಕೆ "ರಂಜಕ" ಎಂದು ಹೆಸರು. ಹೃದಯಸ್ಥಾನದಲ್ಲಿರುವ ಪಿತ್ತಕ್ಕೆ "ಸಾಧಕ" ಎಂದು ಸಂಜ್ಞೆ. ದೃಷ್ಟಿಯಲ್ಲಿರುವ ಪಿತ್ತವು "ಆಲೋಚಕ" ಸಂಜ್ಞೆಯುಳ್ಳದ್ದು. ತ್ವಕ್ (ಚರ್ಮ) ಗತವಾದ ಪಿತ್ತಕ್ಕೆ "ಭ್ರಾಜಕ" ಎಂಬ ಸಂಜ್ಞೆ. "तच्चादृष्टहेतुकेन विशेषेण पक्वामाशयमध्यस्थं पित्तं चतुर्विधमन्नपानं पचति, विवेचयति च दोषरसमूत्रपुरीषाणि, तत्रस्थमेव चात्मशक्त्या शेषाणां पित्तस्थानानां शरीरस्य चाग्निकर्मणाऽनुग्रहं करोति, तस्मिन् पित्ते पाचकोऽग्निरिति संज्ञा ; यत्तु यकृत्प्लीह्नोः पित्तं तस्मिन् रञ्जकोऽग्निरिति संज्ञा; यत्पित्तं हृदयस्थं तस्मिन् साधकोऽग्निरिति संज्ञा; यद्दृष्ट्यां पित्तं तस्मिन्नालोचकोऽग्निरिति संज्ञा ; यत्तु त्वचि पित्तं तस्मिन् भ्राजकोऽग्निरिति संज्ञा" सुश्रुत० सूत्र० २१-१०।

**पित्तघ्न ಪಿತ್ತಘ್ನ** (वि०) ಪಿತ್ತವನ್ನು ಪರಿಹರಿಸುವ. पित्तं हन्ति — हन (हिंसागत्योः) "टक्" (३-२-५३)। (स्त्री०) **–घ्नी –ಘ್ನೀ.** ಅಮೃತಬಳ್ಳಿ.

**पित्तज्वर ಪಿತ್ತಜ್ವರ** (पुं०) ಪಿತ್ತದೋಷದಿಂದ ಉಂಟಾಗುವ ಜ್ವರ. पित्तनिमित्तको ज्वरः। **ಪಿತ್ತಜ್ವರ ಲಕ್ಷಣ:** ತೀಕ್ಷ್ಣವಾದ ವೇಗ ಅತಿಸಾರ ಅಲ್ಪನಿದ್ರೆ ವಾಂತಿ ಕಂಠ ತುಟಿ ನಾಸಿಕೆ (ಮೂಗು) ಬಾಯಿ ಇವುಗಳಲ್ಲಿ ಬೆವರುವುದು ಮೈ ಉರಿತ ಬಾಯಾರಿಕೆ ನೇತ್ರಮಲಮೂತ್ರಗಳಲ್ಲಿ ಹಳದಿಬಣ್ಣ ತಲೆ ಸುತ್ತುವುದು ಇವು ಪಿತ್ತ ಜ್ವರಲಕ್ಷಣ. "वेगस्तीक्ष्णोऽतिसारश्च निद्राल्पत्वं तथा वमिः। कण्ठौष्ठमुखनासानां पाकः स्वेदश्च जायते। प्रलापः कटुता वक्त्रे मूर्च्छा दाहो मदस्तृषा। पीतविण्मूत्रनेत्रत्वं पैत्तिके भ्रम एव च" सुश्रुत० उत्तरतं० ३९-३१, ३२।

**पित्तल ಪಿತ್ತಲ** (न०) 1. ಉಪಧಾತುಗಳಲ್ಲೊಂದಾದ ಹಿತ್ತಾಳೆ. पित्तं तद्वर्णं लाति — ला (आदाने) "कः" (३-२-३)। (वि०) 2. ಪಿತ್ತವನ್ನು ಹೆಚ್ಚಾಗಿ ಹೊಂದಿರುವ. पित्त "लच्" (५-२-९७)। (स्त्री०) **–ला –ಲಾ.** 3. ನೀರುಹಿಪ್ಪಲಿ.

**पित्ताभिष्यन्द ಪಿತ್ತಾಭಿಷ್ಯಂದ** (पुं०) ಪಿತ್ತದ ಆಧಿಕ್ಯದಿಂದ ನೇತ್ರಗಳಲ್ಲಿ ನೀರು ಸೋರುವುದು, ಒಂದು ವಿಧ ನೇತ್ರರೋಗ. पित्तकृतः अभिष्यन्दः।

**पित्तारि ಪಿತ್ತಾರಿ** (पुं०) 1. ಅರಗು. 2. ಒಂದು ಮೂಲಿಕೆ, ಭಾರಂಗಿ, ಬರ್ಬರ.

**पित्र्य ಪಿತ್ರ್ಯ** (न०) 1. ಪಿತೃತೀರ್ಥ, ಪಿತೃಗಳನ್ನು ಉದ್ದೇಶಿಸಿ ಅಂಗುಷ್ಠ ಮತ್ತು ತರ್ಜನಿಗಳ ಮಧ್ಯೆ ಬಿಡುವ ತೀರ್ಥ. पितरो देवता अस्य "यत्" (४-२-३१)। "कायमङ्गुलिमूलेऽग्रे दैवं पित्र्यं तयोरधः" मनु० २-५९। 2. ಮಧು. (पुं०) 3. ಮಾಘಮಾಸ. 4. ಹಿರಿಯ ಸಹೋದರ. 5. ಮಾಷ, ಉದ್ದು. (वि०) 6. ಪಿತೃಸಂಬಂಧವಾದ. ತಂದೆಯಿಂದ ಬಂದ, ತಂದೆಯಿಂದ ಪ್ರಾಪ್ತವಾದ. पितुरागतम् "यत्" (४-३-७९)। "ज्येष्ठ एव तु गृह्णीयात् पित्र्यं धनमशेषतः। शेषास्तमुपजीवेयुः यथैव पितरं तथा" मनु० ९-१०५। 7. ಶ್ರಾದ್ಧಕ್ಕೆ ಅರ್ಹವಾದ. "कफघ्नं खड्गिपिशितं कषायमनिलापहम्। पित्र्यं पवित्रमायुष्यं बद्धमूत्रं विरूक्षणम्" सुश्रुत० सूत्र० ४६-१०३।

**पित्र्या ಪಿತ್ರ್ಯಾ** (स्त्री०) 1. ಪೌರ್ಣಮಾಸಿ, ಹುಣ್ಣಿಮೆ. 2. ಮಘಾನಕ್ಷತ್ರ. पितरो देवता अस्याः — पितृ "यत्" (४-२-३१)।

**पित्सत् ಪಿತ್ಸತ್** (पुं०) 1. ಪಕ್ಷಿ, ಹಕ್ಕಿ. पतितुमिच्छति— पत्लृ (गतौ) + सन् "शतृ" (३-२-१२४)। (वि०) 2. ಕೆಳಕ್ಕೆ ಇಳಿಯಲು ಅಪೇಕ್ಷೆಯುಳ್ಳ.

**पित्सल ಪಿತ್ಸಲ** (वि०) ರಸ್ತೆ, ದಾರಿ, ಮಾರ್ಗ. पत्लृ (गतौ) + सन् "कलः" बाहु०।

**पिदधत् ಪಿದಧತ್** (वि०) ಮುಚ್ಚುತ್ತಿರುವ, ಆಚ್ಛಾದಿಸುತ್ತಿರುವ. अपि+डुधाञ् (धारणे) "शतृ" (३-२-१२४)। अपेरल्लोपः। "शानच्" (३-२-१२४)। **–दधानः**

-ಪಧಾನಃ. "पिदधानमन्वगुपगम्य दृशौ ब्रुवते जनाय वद कोऽयमिति" माघ० ९-७६।

**पिधातव्य ಪಿಧಾತವ್ಯ** (वि०) 1. ಮುಚ್ಚಲ್ಪಡುವ, 2. ಮುಚ್ಚಬೇಕಾದ, ಮರೆಮಾಡಬೇಕಾದ. 3. ಮುಚ್ಚಲು ಯೋಗ್ಯವಾದ. अपि + डुधाञ् (धारणे) "तव्यः" (३-१-९६)। अपेरल्लोपः। "अनीयर्" (३-१-९६)। पिधानीयम् ಪಿಧಾನೀಯಮ್.

**पिधान ಪಿಧಾನ** (न०) 1. ಆಚ್ಛಾದನ, ಮುಚ್ಚುವುದು. अपि + धाञ् (धारणे) "ल्युट्" (३-३-११५)। अपेरल्लोपः। 2. ಮುಚ್ಚಳ, ಮುಚ್ಚುವ ತಟ್ಟೆ. कर० "ल्युट्" (३-३-११७)।

**पिधानक ಪಿಧಾನಕ** (न०) ಅಸಿಕೋಶ, ಕತ್ತಿಯ ಒರೆ.

**पिधेय ಪಿಧೇಯ** (वि०) ಮುಚ್ಚಲ್ಪಡುವ, ಮರೆಮಾಡಲ್ಪಡುವ.

**पिनद्ध ಪಿನದ್ಧ** (वि०) 1. ಕವಚ ತೊಟ್ಟಿರುವವನು. अपि नह्यते स्म — णह (बन्धने) "क्तः" (३-२-१०२)। 2. ಕಟ್ಟಲ್ಪಟ್ಟ, ಗಂಟುಹಾಕಲ್ಪಟ್ಟ. "सखि अनसूये, अतिपिनद्धेन वल्कलेन प्रियंवदया नियन्त्रितास्मि। शिथिलय तावदेतत्" शाकु० १। 3. ಧರಿಸಲ್ಪಟ್ಟ. 4. ಮುಚ್ಚಲ್ಪಟ್ಟ, ಮರೆಮಾಡಲ್ಪಟ್ಟ. "यदस्थिभिर्निर्मितवंशवंश्यस्थूणं त्वचा रोमनखैः पिनद्धम्" भाग० ११-८-३३। "अपांनिधिः फेनपिनद्धभासः" माघ० ३-३१।

**पिनाक ಪಿನಾಕ** (पुंन०) 1. ಪರಶಿವನ ಧನುಸ್ಸು, ಪರಮೇಶ್ವರನ ಬಿಲ್ಲು. पाति — पा (रक्षणे) "आकः" (उ० ४-१५)। निपा०। "दृप्तान्धकप्राणहरं पिनाकं महासुरस्त्रीविधवात्वहेतुम्" कुमा० १२-१९। 2. ಶೂಲಾಯುಧ, ಈಶ್ವರನ ತ್ರಿಶೂಲ. 3. ಧೂಳಿನ ಸುರಿಮಳೆ. "पिनाकोऽस्त्री रुद्रचापे पांशुवर्षत्रिशूलयोः" मेदि०।

**पिनाकपाणि ಪಿನಾಕಪಾಣಿ** (पुं०) ಪಿನಾಕವನ್ನು ಹಿಡಿದಿರುವ ಪರಮೇಶ್ವರ. पिनाकं पाणौ यस्य। "कुर्यां हरस्यापि पिनाकपाणेर्धैर्यच्युतिं के मम धन्विनोऽन्ये" कुमा० ३-१०।

**पिनाकिन् ಪಿನಾಕಿನ್** (पुं०) ಪರಶಿವ, ಪರಮೇಶ್ವರ, ಮಹಾದೇವ. पिनाकः अस्यास्ति "इनिः" (५-२-११५)। "स भीमरूपः शिव इत्युदीर्यते न सन्ति याथार्थ्यविदः पिनाकिनः" कुमा० ५-७७।

**पिपतिषत् ಪಿಪತಿಷತ್** (पुं०) 1. ಪಕ್ಷಿ, ಹಕ್ಕಿ. पतितुमिच्छति—पत्लृ (गतौ) + सन् "शतृ" (३-२-१२४)। (वि०) 2. ಕೆಳಗೆ ಇಳಿಯಲು ಅಪೇಕ್ಷಿಸುತ್ತಿರುವ. इडभावे पित्सन् ಪಿತ್ಸನ್. स्त्रियां पिपतिषन्ती ಪಿಪತಿಷನ್ತೀ. पित्सन्ती ಪಿತ್ಸನ್ತೀ.

**पिपतिषा ಪಿಪತಿಷಾ** (स्त्री०) ಕೆಳಗೆ ಇಳಿಯುವ ಅಪೇಕ್ಷೆ, ಇಳಿಯುವ ಆಸೆ. पतितुमिच्छा — पत्लृ (गतौ) + सन् "अः" (३-३-१०२)। इडभावे पित्सा ಪಿತ್ಸಾ.

**पिपतिषु ಪಿಪತಿಷು** (वि०) 1. ಕೆಳಗೆ ಇಳಿಯಲು ಇಚ್ಛಿಸುವ. पतितुमिच्छुः — पत्लृ (गतौ) + सन् "उः" (३-२-१६८)। (पुं०) 2. ಪಕ್ಷಿ, ಹಕ್ಕಿ. इडभावे पित्सुः ಪಿತ್ಸುಃ.

**पिपासत् ಪಿಪಾಸತ್** (वि०) ಕುಡಿಯಲು ಅಪೇಕ್ಷಿಸುವ. पातुमिच्छन्—पा (पाने) + सन् "शतृ" (३-२-१२४)। "ग्राम्यानपश्यत् कपिशं पिपासतः स्वगोत्रसंकीर्तनभावितात्मनः" माघ० १२-३८। स्त्रियां पिपासन्ती ಪಿಪಾಸನ್ತೀ.

**पिपासा ಪಿಪಾಸಾ** (स्त्री०) ಬಾಯಾರಿಕೆ. पातुमिच्छा—पा (पाने) + सन् "अः" (३-३-१०२)।

**पिपासित ಪಿಪಾಸಿತ** (वि०) ಬಾಯಾರಿಕೆಯುಳ್ಳವನು, ನೀರನ್ನು ಕುಡಿಯಲು ಅಪೇಕ್ಷಿಸುವವನು. पा (पाने) + सन् "क्तः" (३-४-७२)।

**पिपासिन् ಪಿಪಾಸಿನ್** (वि०) ಬಾಯಾರಿಕೆಯುಳ್ಳವನು. पिपासा अस्यास्ति — "इनिः" (५-२-११६)।

**पिपासु ಪಿಪಾಸು** (वि०) 1. ಬಾಯಾರಿಕೆಯುಳ್ಳವನು, ನೀರುಕುಡಿಯಲು ಅಪೇಕ್ಷೆಯುಳ್ಳವನು. पातुमिच्छुः — पा (पाने) + सन् "उः" (३-२-१६८)। 2. ಕುಡಿಯಲು ಇಚ್ಛೆಯುಳ್ಳ, ಪಾನಮಾಡಲು ಅಪೇಕ್ಷಿಸುವ. "अम्बुजाक्षीसंवादपीयूषपिपासवस्ते" नैष० ६-३।

**पिपीलक ಪಿಪೀಲಕ** (पुं०) ಇರುವೆ. अपिपीलति — अपि + पील (प्रतिष्टम्भे) "ण्वुल्" (३-१-१३३)। अपेरल्लोपः।

**पिपीलिका ಪಿಪೀಲಿಕಾ** (स्त्री०) ಹೆಣ್ಣು ಇರುವೆ. पिपीलक "टाप्" (४-१-४)।

**पिपीली ಪಿಪೀಲೀ** (स्त्री०) ಹೆಣ್ಣು ಇರುವೆ. अपिपीलति — अपि + पील (प्रतिष्टम्भे) "अच्" (३-१-१३४)। गौरा० "ङीष्" (४-१-४१)।

**पिप्पल ಪಿಪ್ಪಲ** (पुं०) 1. ಅಶ್ವತ್ಥವೃಕ್ಷ, ಅರಳಿಮರ. पिप्पलं जलमस्यास्ति "अच्" (५-२-१२७)। "क्षात्रक्रमात् पिप्पलदण्डयोग्यः पलाशदण्डादृतपाणिरासीत्"

ಚಂ॰ ರಾ॰ । 2. ಬಂಧನರೂಪವಾದ ಅಡ್ಡಿ ಆತಂಕಗಳಿಲ್ಲದೆ ಇರುವ ಪಕ್ಷಿ. (ನ॰) 3. ಜಲ, ನೀರು. 4. ಬಟ್ಟೆಯ ತುಂಡು. (ಸ್ತ್ರೀ॰) **–ಲೀ –ಲೀ.** 5. ಹಿಪ್ಪಲಿ.

**पिप्पलक ಪಿಪ್ಪಲಕ** (ನ॰) ಸ್ತ್ರೀಯರ ಮೊಲೆ ತೊಟ್ಟು.

**पिप्पली ಪಿಪ್ಪಲೀ** (ಸ್ತ್ರೀ॰) ಹಿಪ್ಪಲಿ ಗಿಡ. पिपर्ति—पॄ (पालनपूरणयोः) "अलच्" बाहु॰ । पृषो॰ । गौरा॰ "ङीष्" (४-१-४१) । "पिप्पलं सलिले वस्त्रच्छेदे च ना खगे। निरर्गले पक्षिभेदे कणायां पिप्पला मता" मेदि॰ ।

**पिप्पलीमूल ಪಿಪ್ಪಲೀಮೂಲ** (ನ॰) ಹಿಪ್ಪಲಿ. पिप्पल्या इव मूलमस्य ।

**पिप्पिका ಪಿಪ್ಪಿಕಾ** (ಸ್ತ್ರೀ॰) ದಂತಮಲ, ಹಲ್ಲಿನ ಕೊಳೆ. "दूषीका दूषिका जैह्वं कुलुकं पिप्पिका पुनः। दन्त्यं कार्णं तु पिञ्जूषः" अभि॰ चि॰ ।

**पिप्लु ಪಿಪ್ಲು** (ಪುಂ॰) ಹುಟ್ಟುಮಚ್ಚೆ, ಹುಟ್ಟಿದಾಗಿನಿಂದ ಮೈಯಲ್ಲಿರುವ ಕಪ್ಪು ಮಚ್ಚೆ. अपि प्लवेत — प्लुङ् (गतौ) "डुः" (वा॰ ३-२-१८०) । "जटुलः कालकः पिप्लुः तिलकस्तिलकालकः" अम॰ ।

**पिबत् ಪಿಬತ್** (ವಿ॰) 1. ಕುಡಿಯುತ್ತಿರುವ, ಪಾನಮಾಡುತ್ತಿರುವ. पा (पाने) "शतृ" (३-२-१२४)। "तेन स्वहस्तार्जितमेकवीरः पिबन्यशो मूर्तमिवावभासे" रघु॰ ७-६३। "पिबन् स तस्याः स्तनयोः सुधौघं क्षणंक्षणं साधु समेक्षमाणः" कुमा॰ ११-२। 2. ಪ್ರೀತಿಯಿಂದ ನೋಡುತ್ತಿರುವ. "निवातपद्मस्तिमितेन चक्षुषा नृपस्य कान्तं पिबतः सुताननम्" रघु॰ ३-१७। 3. ಆಲಿಸುತ್ತಿರುವ, ಪ್ರೀತಿಯಿಂದ ಕೇಳುತ್ತಿರುವ. स्त्रियां "ङीप्" (४-१-६)। **पिबन्ती ಪಿಬನ್ತೀ.** "समेकदृश्यं नयनैः पिबन्त्यो नार्यो न जग्मुः विषयान्तराणि" कुमा॰ ७-६४।

**पिलु ಪಿಲು** (ಪುಂ॰) ಗೋಣಿ ಮರ.

**पिल्ल ಪಿಲ್ಲ** (ನ॰) 1. ರೋಗದಿಂದ ನೀರು ಸೋರುವ ಕಣ್ಣು. (ವಿ॰) 2. ನೀರು ಸೋರುವ ಕಣ್ಣುಳ್ಳವನು. क्लिन्न "लः" पिल् आदेशश्च (वा॰ ५-२-३३)। "स्युः क्लिन्नाक्षे चुल्लचिल्लपिल्लाः क्लिन्नेऽक्ष्णि चाप्यमी" अम॰ ।

**पिल्लका ಪಿಲ್ಲಕಾ** (ಸ್ತ್ರೀ॰) ಹೆಣ್ಣು ಆನೆ.

**पिशङ्ग ಪಿಶಂಗ** (ಪುಂ॰) 1. ಪಿಂಗಳವರ್ಣ, ಹಳದಿ ಬಣ್ಣ. पिश (अवयवे) "अङ्गच्" (उ॰ १-११८)। (ವಿ॰) 2. ಹಳದಿ ಬಣ್ಣದ. "पिशङ्गमौञ्जीयुजमर्जुनच्छविं वसानमेणाजिनमञ्जनद्युति" माघ॰ १-६। स्त्रियां "ङीष्" **–ङ्गी –ಗೀ.** "मध्ये समुद्रं ककुभः पिशङ्गीर्या कुर्वती काञ्चनवप्रभासा" माघ॰ ३-३३।

**पिशङ्गित ಪಿಶಂಗಿತ** (ವಿ॰) ಹಳದಿಯಾಗಿ ಮಾಡಲ್ಪಟ್ಟ. "रोचिष्णुकाञ्चनचयांशुपिशङ्गिताशाः" माघ॰ ५-२०।

**पिशङ्गिला ಪಿಶಂಗಿಲಾ** (ಸ್ತ್ರೀ॰) ಹಿತ್ತಾಳೆ.

**पिशाच ಪಿಶಾಚ** (ಪುಂ॰) ದೇವಯೋನಿಗಳ ಒಂದು ಭೇದ, ದೇವತೆಗಳೇ ಉತ್ಪತ್ತಿಸ್ಥಾನವಾಗಿ ಉಳ್ಳವರ ಒಂದು ಗುಂಪು. पिशितमश्नाति — अश (भोजने) "अण्" (३-२-१)। पृषो॰। "यक्षरक्षःपिशाचांश्च गन्धर्वाप्सरसोऽसुरान्। नागान् सर्पान् सुपर्णांश्च पितॄणां च पृथग्गणान्" मनु॰ १-३७। ಕುಬೇರ ಮತ್ತು ಅವನ ಅನುಚರರು ಯಕ್ಷರು. ರಾವಣ ಮೊದಲಾದವರು ರಾಕ್ಷಸರು. ಅವರಿಗಿಂತಲೂ ಕೆಳಮಟ್ಟದವರಾದ ಮಾಂಸಾಹಾರಿಗಳಾದ ಮರು ದೇಶವಾಸಿಗಳು ಪಿಶಾಚರು. ಚಿತ್ರರಥ ಮೊದಲಾದವರು ಗಂಧರ್ವರು. ಊರ್ವಶಿ ಮೇನಕೆ ರಂಭೆ ಮೊದಲಾದವರು ಅಪ್ಸರಸ್ಸುಗಳು. ವಿರೋಚನ ಬಲಿ ಮೊದಲಾದವರು ಅಸುರರು. ತಕ್ಷಕ ವಾಸುಕಿ ಮೊದಲಾದವರು ನಾಗರು. ಹೆಬ್ಬಾವು ನೀರುಹಾವು ಮೊದಲಾದುವು ಸರ್ಪಗಳು. ಗರುಡಾದಿಗಳು ಸುಪರ್ಣರು. ಆಜ್ಯಪಾದಿಗಳು ಪಿತೃಗಣಕ್ಕೆ ಸೇರಿದವರು.

**पिशाचक ಪಿಶಾಚಕ** (ವಿ॰) ಪಿಶಾಚಗಳನ್ನು ಓಡಿಸುವುದರಲ್ಲಿ ಕುಶಲನಾದ. पिशाच तन्निवारणे कुशलः "कन्" (५-२-६४)।

**पिशाचकिन् ಪಿಶಾಚಕಿನ್** (ಪುಂ॰) ಕುಬೇರ.

**पिशाचद्रु ಪಿಶಾಚದ್ರು** (ಪುಂ॰) ಪಿಶಾಚಗಳಿಗೆ ಪ್ರಿಯವಾದ ಮರ, ಶಾಖೋಟಕ ವೃಕ್ಷ. पिशाचप्रियः द्रुः।

**पिशाचसभ ಪಿಶಾಚಸಭ** (ನ॰) ಪಿಶಾಚಗಳ ಸಭೆ. पिशाचानां सभा। नपुंसकत्वम् (२-४-२३)।

**पिशाची ಪಿಶಾಚೀ** (ಸ್ತ್ರೀ॰) ಹೆಣ್ಣು ಪಿಶಾಚಿ. पिशाच "ङीष्" (४-१-६३)।

**पिशित ಪಿಶಿತ** (ನ॰) ಮಾಂಸ. पिशति—पिशि (अवयवे) "इतन्" (उ॰ ३-९५)। "निरातङ्कः पङ्केष्विव पिशितखण्डेषु निपतन्नसिगात्रिंगात्रं सपदि लवशस्ते विकिरतु" मालती॰ ५-३४। (ಸ್ತ್ರೀ॰) **–ता –ತಾ, –ती –ತೀ.** ಜಟಾಮಾಂಸಿ.

**पिशितभुज् ಪಿಶಿತಭುಜ್** (ಪುಂ॰) 1. ರಾಕ್ಷಸ. पिशितं मांसं भुङ्क्ते — भुज (परिपालनाभ्यवहारयोः) "क्विप्"

(३-२-७६)। "पिशितभुजं भुजभारहीनमेनम्"। चं० रा०। (वि०) 2. ಮಾಂಸವನ್ನು ತಿನ್ನುವವನು.

**पिशिताशन ಪಿಶಿತಾಶನ** (पुं०) ರಾಕ್ಷಸ. पिशितमशनं यस्य। "छायाश्चरन्ति बहुधा भयमादधानाः सन्ध्यापयोदकपिशाः पिशिताशनानाम्" शाकु० ३-२४।

**पिशिताशिन् ಪಿಶಿತಾಶಿನ್** (पुं०) 1. ರಾಕ್ಷಸ. पिशितमश्नाति — अश (भोजने) "णिनिः" (३-२-७८)। "पिशिताशिनामनुदिनं स्फुटतां स्फुटतां जगाम परिविह्वलता" भट्टि० १०-८। (वि०) 2. ಮಾಂಸವನ್ನು ತಿನ್ನುವ.

**पिशी ಪಿಶೀ** (स्त्री०) ಜಟಾಮಾಂಸಿ.

**पिशुन ಪಿಶುನ** (पुं०) 1. ನಾರದ. 2. ಕಾಗೆ, ವಾಯಸ. पिंशति — पिश (अवयवे) "उनन्" (उ० ३-५५)। (न०) 3. ಕುಂಕುಮಕೇಸರಿ. (वि०) 4. ಸೂಚಿಸುವ, ತಿಳಿಸುವ. "शत्रूणामनिशं विनाशपिशुनः क्रुद्धस्य चैद्यं प्रति" माघ० १-७५। 5. ದುರ್ಜನ, ಚಾಡಿಕೋರ, ಪರಸ್ಪರ ಭೇದವನ್ನುಂಟುಮಾಡುವವನು. "कोऽप्येष एव पिशुनोऽस्त्यमनुष्यधर्मा कर्णेऽपरं स्पृशति हन्ति परं समूलम्" पञ्चतं० १-३२८। 6. ನೆನಪನ್ನುಂಟುಮಾಡುವ, ಸ್ಮರಣೆಗೆ ತರುವ. "ब्रह्मावर्तं जनपदमथ च्छायया गाहमानः क्षेत्रं क्षत्रप्रधनपिशुनं कौरवं तद्भजेथाः" मेघ० १-४८। 7. ಕ್ರೂರನಾದವನು, ದಯೆಯಿಲ್ಲದವನು. 8. ನೀಚ. 9. ಮೂರ್ಖ.

**पिष्ट ಪಿಷ್ಟ** (न०) 1. ಹಿಟ್ಟು, ಬೀಸಿ ನುಣ್ಣಗೆ ಮಾಡಿದ ಧಾನ್ಯದ ಪುಡಿ. पिष्यते स्म — पिष्लृ (संचूर्णने) "क्तः" (३-२-१०२)। 2. ಅಕ್ಕಿ ಗೋಧಿ ರಾಗಿ ಮುಂತಾದುವುಗಳ ಹಿಟ್ಟಿನಿಂದ ಮಾಡಿದ ಆಹಾರ ಅಥವಾ ಹಿಟ್ಟು. "अन्नादष्टगुणं पिष्टं पिष्टादष्टगुणं पयः। पयसोऽष्टगुणं मांसं मांसादष्टगुणं घृतम्। घृतादष्टगुणं तैलं मर्दनान्न च भक्षणात्"। (वि०) 3. ಪುಡಿಮಾಡಲ್ಪಟ್ಟ, ಅರೆಯಲ್ಪಟ್ಟ. "कृत्वा तांश्चणकान् पिष्टान् गृहीत्वा जलकुम्भिकान्" कथास०।

**पिष्टक ಪಿಷ್ಟಕ** (पुं०) 1. ಹಿಟ್ಟಿನಿಂದ ಮಾಡಿದ ರೊಟ್ಟಿ. पिष्टस्य विकारः — संज्ञायां "कन्" (४-३-१४७)। 2. ಒಂದು ವಿಧ ನೇತ್ರರೋಗ. "पिष्टको घृतपूपादौ नेत्ररोगान्तरेऽपि च" मेदि०। (न०) 3. ಎಳ್ಳಿನ ಪುಡಿ. पिष्टमिव प्रतिकृतिः — इवार्थे "कन्" (५-३-९६)।

**पिष्टप ಪಿಷ್ಟಪ** (पुंन०) ಭುವನ, ಲೋಕ. विशन्त्यत्र — विश (प्रवेशने) "कपन्" आदेः वकारस्य पकारश्च निपा० (उ० ३-१४५)।

**पिष्टपचन ಪಿಷ್ಟಪಚನ** (न०) ಹಿಟ್ಟನ್ನು ಬೇಯಿಸುವ ಪಾತ್ರೆ. पच्यतेऽत्र — डु पचष् (पाके) "ल्युट्" (३-३-११७)। पिष्टस्य पचनम्।

**पिष्टपूर ಪಿಷ್ಟಪೂರ** (पुं०) ಕಡಲೆ ಹಿಟ್ಟಿನಲ್ಲಿ ತುಪ್ಪದಿಂದ ತಯಾರಿಸಲ್ಪಟ್ಟ ಭಕ್ಷ್ಯ, ಮೈಸೂರುಪಾಕ. पिष्टः पूर्यते — पूरी (आप्यायने) कर्मं० "अप्"।

**पिष्टवर्त्ति ಪಿಷ್ಟವರ್ತ್ತಿ** (पुं०) ಕಡಲೆ ಹೆಸರು ಮೊದಲಾದುವುಗಳ ಹಿಟ್ಟು. पिष्टं वर्तयति — वृतु (वर्तने) + णिच् "इः" (उ० ४-१३१)।

**पिष्टसौरभ ಪಿಷ್ಟಸೌರಭ** (न०) ಚಂದನ, ಗಂಧ. पिष्टस्यैव सौरभमस्य।

**पिष्टात ಪಿಷ್ಟಾತ** (पुं०) ವಾಸನೆಯ ಚೂರ್ಣ, ವಸ್ತ್ರಗಳಿಗೆ ವಾಸನೆ ಕಟ್ಟುವ ಸುವಾಸನೆಯ ಪುಡಿ. पिष्टमतति—अत (सातत्यगमने) "अण्" (३-२-१)। "पिष्टातः पटवासकः" अम०।

**पिहित ಪಿಹಿತ** (वि०) 1. ಮುಚ್ಚಲ್ಪಟ್ಟ, ಆಚ್ಛಾದಿಸಲ್ಪಟ್ಟ. अपिधीयते — डु धाञ् (धारणपोषणयोः) "क्तः" (३-२-१०२)। "अप्रभूतमतनीयसि तन्वी काञ्चिधाम्नि पिहितैकतरोरु" माघ० १०-८३। 2. ಮುಚ್ಚಲ್ಪಟ್ಟ, ಮರೆಮಾಡಲ್ಪಟ್ಟ. "रुरुधे पिहिताहिमद्युतिर्द्यौर्विशिखैरन्तरिता च्युता धरित्री" माघ० २०-१५।

**पीठ ಪೀಠ** (न०) ಕೂಡುವ ಆಸನ. पेठन्त्यत्र — पिठ (हिंसासंक्लेशनयोः) "घञ्" (३-३-१२१)। "गिरेस्तटित्वानिव तावदुच्चकैर्जवेन पीठादुदतिष्ठदच्युतः" माघ० १-१२। "पीठं दत्वा साधवेऽभ्यागताय आनीयापः परिनिर्निज्य पादौ। सुखं पृष्ट्वा प्रतिवेद्यात्मसंस्थां ततो दद्यादन्नमवेक्ष्य वीरः" भा० उद्योग० ३८-२। "धातुपाषाणकाष्ठैश्च पीठस्त्रिविध उच्यते। धातवश्च शिलाश्चैव काष्ठानि विविधानि च" ಎಂದು ಪೀಠ ಪದಕ್ಕೆ ಪುಂಲಿಂಗದಲ್ಲೂ ಪ್ರಯೋಗವಿದೆ. ಪೀಠವು ಧಾತು (ಲೋಹ) ಪಾಷಾಣ (ಶಿಲೆ) ಮತ್ತು ಕಾಷ್ಠ (ದಾರು) ಮಯಗಳೆಂದು ಮೂರು ವಿಧ.

**पीठकेलि ಪೀಠಕೇಲಿ** (पुं०) ಪೀಠಮರ್ದನೆಂಬ ನಾಯಕ; ಸಹಾಯಪುರುಷ, ನಾಯಕನನ್ನು ಹೊಗಳುತ್ತಾ ಅವನ ಕಾರ್ಯಕ್ಕೆ ಸಹಾಯಕನಾಗಿದ್ದುಕೊಂಡು ಪ್ರಯೋಜನ

ಪಡೆಯುವ ಪರೋಪಜೀವಿಯಾದ ಪುರುಷ. पीठे आसने केलिर्नर्मादिरस्य ।

**पीठन्यास ಪೀಠನ್ಯಾಸ** (पुं०) ಆಧಾರಶಕ್ತಿ ಪ್ರಕೃತಿ ಮೊದಲಾದ ಪೀಠದೇವತೆಗಳನ್ನು ಪ್ರಣವಪೂರ್ವಕ ಧ್ಯಾನಿಸಿ ಹೃದಯದಲ್ಲಿ ಮಾಡುವ ನ್ಯಾಸ.

**पीठमर्द ಪೀಠಮರ್ದ** (पुं०) ನಾಯಕನ ಸಹಾಯಕರಲ್ಲೊಬ್ಬ. ನಾಯಕನ ದೀರ್ಘಕಾಲದ ವ್ಯಾಪಾರಗಳಲ್ಲಿ ಅವನಿಗೆ ಸಹಾಯಕನಾಗಿರುವ ನಾಯಕನ ಗುಣಗಳಿಗಿಂತಲೂ ಕಡಮೆ ಗುಣಗಳುಳ್ಳ ಪುರುಷ. "दूरानुवर्तिनि स्यात् तस्य प्रासङ्गिकेतिवृत्ते तु । किञ्चित्तद्गुणहीनः सहाय एवास्य पीठमर्दाख्यः" सा०द० ३-३९ ।

**पीठसर्प ಪೀಠಸರ್ಪ** (वि०) ಪೀಠದಲ್ಲಿ ಕುಳಿತು ಮುಂದೆ ಸಾಗುವವನು, ಹೆಳವ, ನಡೆಯಲು ಕಾಲಿಲ್ಲದವನು. पीठेन सर्पति—सृप्लृ (गतौ) "अच्" (३-१-१३४)। "णिनिः" (३-१-१३४) । **—सर्पी —ಸರ್ಪೀ.**

**पीठी ಪೀಠೀ** (स्त्री०) ಆಸನ.

**पीठीकृत ಪೀಠೀಕೃತ** (वि०) ಆಸನವಾಗಿ ಮಾಡಲ್ಪಟ್ಟ.

**पीडन ಪೀಡನ** (न०) 1. ಮರ್ದನ, ಹಿಸುಕುವುದು. पीड (अवगाहने) "ल्युट्" (३-३-११५) । "पूत्कार्यपीडनौ चक्रे स सखीषु प्रियास्तनौ" नैष० २०-१४५। "सुभ्रुवामधि पयोधरपीठं पीडनैस्त्रुटितवत्यपि पत्युः" माघ० १०-८७ । 2. ಹಿಂಸಿಸುವುದು, ಪೀಡಿಸುವುದು. "परस्य पीडनं कुर्वन् स्वार्थसिद्धिं च पण्डितः। गूढबुद्धिर्न लक्ष्येत वने चतुरको यथा" पञ्चतं० १-३९९ । 3. ಒತ್ತಡ, ಬಲವಾಗಿ ಒತ್ತುವಿಕೆ, ಬಲವಾಗಿ ಅದುಮುವುದು. "ममापि दृढपीडनैरपि न तृप्तिरालिङ्गनैः" मालती० ९-३८ । 4. ಹಿಡಿದುಕೊಳ್ಳುವುದು, ಗ್ರಹಣ. "पाणिपीडनविधेरनन्तरं शैलराजदुहितुर्हरं प्रति" कुमा०८-१ । 5. ನಾಶಪಡಿಸುವುದು, ಇಲ್ಲದಂತೆ ಮಾಡುವುದು. 6. ಉದಾಸೀನನಾಗಿ ಕಾಣುವುದು. 7. ತಳ್ಳಿಹಾಕುವುದು, ಕೈಬಿಡುವುದು. (वि०) 8. ಹಿಂಸಿಸುವ, ಪೀಡಿಸುವ. "पीडनानि च सर्वाणि व्यसनानि तथैव च" मनु० ९-२९९ ।

**पीडयत् ಪೀಡಯತ್** (वि०) 1. ಮರ್ದಿಸುತ್ತಿರುವ, ಹಿಸುಕುತ್ತಿರುವ, ಹಿಂಡುತ್ತಿರುವ. पीड (अवगाहने) + णिच् "शतृ" (३-२-१२४) । "लभेत सिकतासु तैलमपि यत्नतः पीडयन्" भर्तृ० १-५ । 2. ನಾಶಪಡಿಸುತ್ತಿರುವ. "आत्मन्यन्तर्दधे भूयः कालं कालेन पीडयन्" मनु० १-५१ । 3. ಬಲವಾಗಿ ಒತ್ತುತ್ತಿರುವ, ಅವುಚುತ್ತಿರುವ. 4. ಶಬ್ದ ಕೇಳಿಸದಂತೆ ಕಿವಿಯನ್ನು ಮುಚ್ಚುತ್ತಿರುವ. स्त्रियां "ङीप्" (४-१-६)। "कर्णौ पीडयती सख्या वीक्ष्य नेत्रासितोत्पले" नैष० २०-९८। 5. ತಳ್ಳಿಹಾಕುತ್ತಿರುವ, ಕೈಬಿಡುತ್ತಿರುವ. "श्रुतिसमधिकमुच्चैः पञ्चमं पीडयन्तः सततमृषभहीनं भिन्नकीकृत्य षड्जम्" माघ० ११-१ ।

**पीडा ಪೀಡಾ** (स्त्री०) 1. ಹಿಂಸೆ, ತೊಂದರೆ. पीड (अवगाहने) "अङ्" (३-३-१०४)। "मा भूदाश्रमपीडेति परिमेयपुरःसरौ" रघु० १-३७ । 2. ನೋವು, ಬಾಧೆ. "मूढग्राहेणात्मनो यत्पीडया क्रियते तपः। परस्योत्सादनार्थं वा तत्तामसमुदाहृतम्" गीता १७-१९। 3. ದುಃಖ, ವ್ಯಸನ, ಕಷ್ಟ. ಪೀಡಾವಿಶೇಷವಾದ ಈ ದುಃಖವು (1) आध्यात्मिकम् (2) आधिदैविकम् ಮತ್ತು (3) आधिभौतिकम् ಎಂದು ಮೂರು ವಿಧ. ["आधिदैविक" ಪದದಲ್ಲಿ ನೋಡಿ.] 4. ಕೃಪೆ, ದಯೆ. 5. ಸರಳ ದೇವದಾರು. 6. ನಾಶಪಡಿಸುವುದು. 7. ಕಸ, ಧೂಳು. 8. ತಲೆಗೆ ಮುಡಿಸುವ ಹೂವಿನ ಸರ. "पीडा कृपाशिरोमालाऽवमर्दसरलद्रुषु" मेदि० ।

**पीडित ಪೀಡಿತ** (वि०) 1. ಪೀಡಿಸಲ್ಪಟ್ಟ, ತೊಂದರೆಪಡಿಸಲ್ಪಟ್ಟ. पीड (अवगाहने) + णिच् "क्तः" (३-२-१०२)। "नाविनीतैर्व्रजेद्धुर्यैः न च क्षुद्व्याधिपीडितैः" मनु० ४-६७ । 2. ಹಿಸುಕಲ್ಪಟ್ಟ, ಒತ್ತಲ್ಪಟ್ಟ, ಕಿವುಚಲ್ಪಟ್ಟ. "वल्लभेन परिरम्भपीडितौ प्रेयसीहृदि कुचाववापतुः" नैष० १८-९७। 3. ಹಿಂಡಲ್ಪಟ್ಟ, ಮರ್ದಿಸಲ್ಪಟ್ಟ. "कुचौ दोषोज्झितावस्याः पीडितौ वर्णितौ तथा" नैष० २०-४९। 4. ನೋವುಂಟುಮಾಡಲ್ಪಟ್ಟ. "सोऽनुमान्य हिमवन्तमात्मभूरात्मजाविरहदुःखपीडितम्" कुमा० ८-२१ । 5. ಗ್ರಹಣಮಾಡಲ್ಪಟ್ಟ, ಹಿಡಿದುಕೊಳ್ಳಲ್ಪಟ್ಟ. "न प्रमाणीकृतः पाणिर्बाल्ये बालेन पीडितः। नाहं न जनको नाग्निर्नानुवृत्तिर्न सन्ततिः" उ० रा० ७-५ । 6. ಗಾಯವುಂಟುಮಾಡಲ್ಪಟ್ಟ. "उदधेरिव मन्थेन पीडितस्य समुत्थितैः। दृढलग्नैरिवोत्पत्ती दीप्तं शोणितबिन्दुभिः" याद० १६-५ ।

**पीडिन् ಪೀಡಿನ್** (वि०) ಪೀಡಿಸುವ, ಹಿಂಸಿಸುವ. पीडयति —पीड (अवगाहने) + णिच् "णिनिः" (३-२-७८)। "निजनीडद्रुमपीडिनः खगान्" नैष० २-१० ।

**पीड्यमान ಪೀಡ್ಯಮಾನ** (वि०) 1. ಪೀಡಿಸಲ್ಪಡುತ್ತಿರುವ, ತೊಂದರೆಪಡಿಸಲ್ಪಡುತ್ತಿರುವ. पीड (अवगाहने) कर्म० "शानच्" (३-२-१२४) । "चाटतस्करदुर्वृत्तैस्तथा

साहसिकादिभिः। पीड्यमानाः प्रजा रक्ष्याः कूटच्छद्मादिभिस्तथा" पञ्चतं० १-३७४। 2. ನೋಯಿಸಲ್ಪಡುತ್ತಿರುವ, ಹಿಂಸಿಸಲ್ಪಡುತ್ತಿರುವ.

**पीत ಪೀತ** (ಪುಂ०) 1. ಪೀತವರ್ಣ, ಹಳದಿ ಬಣ್ಣ. पिबति वर्णान्तरम्—पा (पाने) "क्तः" (उ० ३-८९)। बाहु०। 2. ಕುಸುಂಬೆ ಬಣ್ಣ. (ನ०) 3. ಪಾನಮಾಡುವುದು, ಕುಡಿಯುವುದು. पा (पाने) भावे "क्तः" (३-३-११४)। 4. ಹರಿದಳ. 5. ಸ್ವರ್ಣ, ಚಿನ್ನ. (ವಿ०)6. ಪಾನಮಾಡಲ್ಪಟ್ಟ, ಕುಡಿಯಲ್ಪಟ್ಟ. पा(पाने) कर्म० "क्तः" (३-२-१०२)। "पीतशीधुमधुरैर्मिथुनानामाननैः परिहृतं चषकान्तः" माघ० १०-११। 7. ಹಳದಿ ಬಣ್ಣದ. "मेघो जलार्द्रमहिषोदरभृङ्गनीलो विद्युत्प्रभारचितपीतपटोत्तरीयः" मृच्छ० ५-२। 8. ಪ್ರೀತಿಯಿಂದ ನೋಡಲ್ಪಟ್ಟ. "न लक्षितो रक्षिभटैर्यदाम्यां पीतोऽसि तन्वा जितपुष्पधन्वा" नैष० ८-२७।

**पीतक ಪೀತಕ** (ಪುಂ०) 1. ನಂದಿವೃಕ್ಷ, 2. ಅಶೋಕವೃಕ್ಷ. (ನ०) 3. ಹರಿದಳ. 4. ಕುಂಕುಮಕೇಸರಿ. पीत "कन्" (५-४-२९)। पीतेन पीतवर्णेन कायति—कै (शब्दे) "कः" (३-२-३)। 5. ಹಿತ್ತಾಳೆ. 6. ಮಧು, ಜೇನುತುಪ್ಪ. 7. ಅಗುರು.

**पीतकन्द ಪೀತಕಂದ** (ಪುಂ०) ಕೆಂಪುಮೂಲಂಗಿ, ಕಿತ್ತಳೆ ಬಣ್ಣದ ಬೇರು ಗೆಡ್ಡೆಯುಳ್ಳ ಒಂದು ಜಾತಿಯ ಮೂಲಂಗಿ.

**पीतकरवीर ಪೀತಕರವೀರ** (ಪುಂ०) ಹಳದಿಯ ಗನ್ನೇರಳೆ ವೃಕ್ಷ. पीतः करवीरः।

**पीतकावेर ಪೀತಕಾವೇರ** (ನ०) 1. ಕುಂಕುಮಕೇಸರಿ. पीतं कावेरं कुत्सिताङ्गमपि यस्मात्। 2. ಹಿತ್ತಾಳೆ ಲೋಹ. "पीतकावेरमित्येतत् कुङ्कुमे पित्तलेऽपि च" मेदि०।

**पीतकाष्ठ ಪೀತಕಾಷ್ಠ** (ನ०) ಹಳದಿ ಚಂದನ. पीतं काष्ठम्।

**पीतचम्पक ಪೀತಚಂಪಕ** (ಪುಂ०) ದೀಪ. पीतः चम्पक इव।

**पीतता ಪೀತತಾ** (ಸ್ತ್ರೀ०) ಹಳದಿಯ ಬಣ್ಣ.

**पीततुण्ड ಪೀತತುಂಡ** (ಪುಂ०) ಕಾರಂಡವ ಪಕ್ಷಿ.

**पीतदारु ಪೀತದಾರು** (ನ०) ಸರಳ ದೇವದಾರು.

**पीतदुग्धा ಪೀತದುಗ್ಧಾ** (ಸ್ತ್ರೀ०) ಹಾಲು ಕರೆಯಲು ಬಂಧನಕ್ಕೆ ಒಳಪಡಿಸಿರುವ ಹಸು. पीतं दुग्धं यस्याः।

**पीतद्रु ಪೀತದ್ರು** (ಪುಂ०) ಮರದರಿಶಿನ, ದಾರುಹರಿದ್ರೆ. "दार्वी दारुहरिद्रा च पर्जन्या पर्जनीति च। पीतद्रुश्च हरिद्रुश्च पीतदारुकपीतकम्"।

**पीतन ಪೀತನ** (ನ०) 1. ಹರಿತಾಳ, ಹರಿದಳ. 2. ಕುಂಕುಮ ಕೇಸರಿ. 3. ದೇವದಾರು ವೃಕ್ಷ. (ಪುಂ०) 4. ಆಮ್ರಾತಕ ವೃಕ್ಷ, ಅಮಟೆಮರ. पीतं करोति—पीत + णिच् "ल्युः" (३-१-१३४)। "पीतनं पीतदारुणि। कुङ्कुमे हरिताले च पुमानाम्रातके मतः" मेदि०।

**पीतनक ಪೀತನಕ** (ಪುಂ०) ಆಮ್ರಾತಕ ವೃಕ್ಷ, ಅಮಟೆಮರ.

**पीतनील ಪೀತನೀಲ** (ಪುಂ०) ಹಳದಿ ನೀಲಿಬಣ್ಣ ಬೆರೆತ ಹಸುರು ಬಣ್ಣ.

**पीतपादा ಪೀತಪಾದಾ** (ಸ್ತ್ರೀ०) ಮೈನಾ ಎಂಬ ಒಂದು ಜಾತಿಯ ಪಕ್ಷಿ. पीतौ पादौ यस्याः।

**पीतपुष्प ಪೀತಪುಷ್ಪ** (ಪುಂ०) 1. ಚಂಪಕವೃಕ್ಷ, ಸಂಪಿಗೆಮರ. पीतं पुष्पं यस्य। 2. ಕಣಗಿಲೆ ಗಿಡ. (ನ०) 3. ಕುಂಬಳದ ಗಿಡ. "कूष्माण्डं स्यात् पुष्पफलं पीतपुष्पं बृहत्फलम्" भावप्र०। (ಸ್ತ್ರೀ०) -पुष्पा -ಪುಷ್ಪಾ. 4. ಹಾವುಮೆಕ್ಕೆ. 5. ತೊಗರಿಗಿಡ.

**पीतभृङ्गराज ಪೀತಭೃಂಗರಾಜ** (ಪುಂ०) ಗರಗದ ಸೊಪ್ಪು.

**पीतमणि ಪೀತಮಣಿ** (ಪುಂ०) ಪುಷ್ಪರಾಗ. पीतो मणिः।

**पीतमूलक ಪೀತಮೂಲಕ** (ನ०) ಕೆಂಪುಮೂಲಂಗಿ, ಕಿತ್ತಳೆ ಬಣ್ಣದ ಗೆಡ್ಡೆಯುಳ್ಳ ಒಂದು ಜಾತಿಯ ಮೂಲಂಗಿ. पीतं मूलमस्य "कप्" (५-४-१५४)।

**पीतरक्त ಪೀತರಕ್ತ** (ಪುಂ०) 1. ಹಳದಿ ಮತ್ತು ಕೆಂಪು ಬೆರೆತ ಬಣ್ಣ. (ನ०) 2. ಪುಷ್ಪರಾಗ.

**पीतराग ಪೀತರಾಗ** (ಪುಂ०) 1. ಪೀತವರ್ಣ, ಹಳದಿಬಣ್ಣ. (ನ०) 2. ಜೇನುಮೇಣ. 3. ತಾವರೆ ಹೂವಿನ ಕುಸುರು. (ವಿ०) 4. ಹಳದಿ ಬಣ್ಣದ.

**पीतरोहिणी ಪೀತರೋಹಿಣೀ** (ಸ್ತ್ರೀ०) ಗಾಂಭಾರೀಗಿಡ, ಶಿವನೆಯ ಮರ.

**पीतल ಪೀತಲ** (ಪುಂ०) 1. ಹಳದಿಬಣ್ಣ. पीतं लाति-ला (आदाने) "कः"(३-२-३)। (ವಿ०) 2. ಹಳದಿಬಣ್ಣದ. (ನ०) 3. ಹಿತ್ತಾಳೆ.

**पीतलक ಪೀತಲಕ** (ನ०) ಹಿತ್ತಾಳೆ. पीतलेन पीतवर्णेन कायति—कै (शब्दे) "कः" (३-२-३)।

**पीतलोह ಪೀತಲೋಹ** (ನ०) ಹಿತ್ತಾಳೆ. पीतं लोहम्।

**पीतवासस् ಪೀತವಾಸಸ್** (पुं०) 1. ಶ್ರೀಕೃಷ್ಣ. पीतं वासो यस्य। (वि०) 2. ಹಳದಿ ಬಟ್ಟೆಯನ್ನು ಉಟ್ಟಿರುವ. "यः स चक्रगदापाणिः पीतवासाः शितिप्रभः" भा० आदि०।

**पीतवृक्ष ಪೀತವೃಕ್ಷ** (पुं०) 1. ಸರಳವೃಕ್ಷ. 2. ಹೆಮ್ಮರ, ತಿಗಡುಮರ.

**पीतसार ಪೀತಸಾರ** (पुं०) 1. ಗಂಧದ ಮರ. 2. ಗೋಮೇದಕ ಮಣಿ.

**पीतसालक ಪೀತಸಾಲಕ** (पुं०) ಹೊನ್ನೆಮರ.

**पीतस्फटिक ಪೀತಸ್ಫಟಿಕ** (पुं०) ಪುಷ್ಪರಾಗ.

**पीतहरित ಪೀತಹರಿತ** (पुं०) ಹಳದಿ ಮತ್ತು ಹಸುರು ಬೆರೆತ ಬಣ್ಣ.

**पीता ಪೀತಾ** (स्त्री०) ಹರಿದ್ರೆ, ಅರಿಶಿನ. पीतो वर्णोऽस्त्यस्याः "अच्" (५-२-१२७)।

**पीताब्धि ಪೀತಾಬ್ಧಿ** (पुं०) ಸಮುದ್ರವನ್ನು ಪಾನಮಾಡಿದ ಅಗಸ್ತ್ಯ ಮಹರ್ಷಿ. पीतोऽब्धिः येन।

**पीताम्बर ಪೀತಾಂಬರ**(पुं०) 1. ಮಹಾವಿಷ್ಣು. पीतमम्बरं वस्त्रं यस्य। 2. ಶೈಲೂಷ, ನಟ. (वि०) 3. ಹಳದಿ ವಸ್ತ್ರವನ್ನು ಧರಿಸಿರುವ.

**पीतारुण ಪೀತಾರುಣ** (पुं०) ಹಳದಿ ಕೆಂಪು ಬೆರೆತ ಬಣ್ಣ.

**पीताश्मन् ಪೀತಾಶ್ಮನ್** (पुं०) ಪುಷ್ಪರಾಗ ಮಣಿ. पीतः अश्मा।

**पीति ಪೀತಿ** (पुं०) 1. ಅಶ್ವ, ಕುದುರೆ. पा (पाने) "क्तिच्" (३-३-१७४)। (स्त्री०) 2. ಪಾನ, ಕುಡಿಯುವುದು. पा (पाने) भावे "क्तिन्" (३-३-९४)। "पीतिर्नाऽश्वे स्त्रियां पाने" मेदि०। 3. ಆನೆಯ ಸೊಂಡಿಲು. पीयतेऽनया—करं० "क्तिन्"।

**पीतिका ಪೀತಿಕಾ** (स्त्री०) ಮರದರಿಶಿನ. पीतो वर्णोऽस्त्यस्याः "ठन्" (५-२-११५)।

**पीतिन् ಪೀತಿನ್** (पुं०) ಅಶ್ವ, ಕುದುರೆ.

**पीतु ಪೀತು** (पुं०) 1. ಸೂರ್ಯ. 2. ಅಗ್ನಿ. पा (पाने) "तुन्" (उ० १-७१)। 3. ಯೂಥಪತಿ, ಸಲಗ.

**पीथ ಪೀಥ** (पुं०) 1. ರವಿ, ಸೂರ್ಯ. 2. ಅಗ್ನಿ, ಬೆಂಕಿ. पा (पाने) "थक्" (उ० २-७)। ईत्वम् (६-४-६६)। 3. ಕಾಲ, ಸಮಯ. (न०) 4. ಘೃತ, ತುಪ್ಪ. 5. ಜಲ, ನೀರು. त्रिकाण्ड०।

**पीथि ಪೀಥಿ** (पुं०) ಅಶ್ವ, ಕುದುರೆ.

**पीन ಪೀನ** (वि०) 1. ಬಲಿಷ್ಠವಾದ, ಬಲಶಾಲಿಯಾದ. ओप्यायी (वृद्धौ) "क्तः" (३-४-७२)। निष्ठातस्य नः (८-२-४५)। "परिणतकठोरपुष्करगर्भच्छदपीनमसृणसुकुमारः" उ० रा० ६-१३। 2. ದಪ್ಪವಾಗಿರುವ, ಸ್ಥೂಲವಾಗಿರುವ, ಪುಷ್ಟವಾಗಿರುವ. "मुहुरितरकराहितेन पीनस्तनतटरोधि तिरोदधेंऽशुकेन" माघ० ७-३२।

**पीनस ಪೀನಸ** (पुं०) ಒಂದು ವಿಧ ಮೂಗಿನ ರೋಗ. पीनं जनं स्यति नाशयति—षो (अन्तकर्मणि) "कः" (३-२-३)। ಈ ರೋಗಕ್ಕೆ "प्रतिश्यायः" ಎಂದೂ ಹೆಸರು. ಪೀನಸ ರೋಗವು (1) वातजः (2) पित्तजः ಮತ್ತು (3) कफजः ಎಂದು ಮೂರು ವಿಧ.

**ವಾತಜ ಪೀನಸ ಲಕ್ಷಣ:** ಮೂಗಿನ ಹೊಳ್ಳೆಗಳು ವಾಯುವಿನಿಂದ ತುಂಬಿರುವಂತೆ ಮತ್ತು ಧೂಳಿನಿಂದ ಮುಚ್ಚಲ್ಪಟ್ಟಂತೆ ಆಗುವುದಲ್ಲದೆ ಮೂಗಿನಲ್ಲಿ ಸ್ವಲ್ಪ ಸ್ವಲ್ಪವಾಗಿ ನೀರು ಸೋರಲು ಪ್ರಾರಂಭವಾಗುವುದು. ಕಂಠ ದವಡೆ ಮತ್ತು ತುಟಿಗಳು ಒಣಗುವುವು. ಹಣೆಯ ಮೂಳೆಗಳಲ್ಲಿ ಯಾತನೆಯೂ ಕಾಣಿಸಿಕೊಳ್ಳುವುದು, ಕಂಠದ ಶಕ್ತಿ ಕುಂಠಿತವಾಗಿ ಸ್ವರವೂ ಸರಿಯಾಗಿ ಹೊರಡಲಾರದು. "आनद्धा पिहिता नासा तनुस्रावप्रवर्तिनी। गलताल्वोष्ठशोषश्च निस्तोदः शङ्खयोस्तथा। स्वरोपघातश्च भवेत् प्रतिश्यायेऽनिलात्मके" सुश्रुत० उत्तरतं० २४-६।

**ಪಿತ್ತ ಪೀನಸ ಲಕ್ಷಣ:** ಪಿತ್ತ ಪೀನಸದಲ್ಲಿ ಮೂಗಿನಿಂದ ಬಿಸಿಯಾದ ಹಳದಿಬಣ್ಣದ ದ್ರವವು ಸ್ರವಿಸುವುದು. ದೇಹವು ಕೃಶವಾಗುವುದು, ರಕ್ತ ಕಡಮೆಯಾಗಿ ಬಿಳುಪೇರುವುದು. ಬಾಯಾರಿಕೆಯಿಂದ ಪೀಡಿತನಾಗುವನು. ಹೊಗೆಯಿಂದ ಕೂಡಿದ ಬೆಂಕಿಯು ಹೊರಡುವಂತೆ ಮೂಗಿನಿಂದ ಬಿಸಿಯ ಉಸಿರು ಹೊರಡುವುದು. "उष्णः सपीतकः स्रावो घ्राणात् स्रवति पैत्तिके। कृशोऽतिपाण्डुः सन्तप्तो भवेत्तृष्णानिपीडितः। सधूमं सहसा वह्निं वमतीव च मानवः" सुश्रुत० उत्तरतं० २४-७, ८।

**ಕಫಜ ಪೀನಸ ಲಕ್ಷಣ:** ಕಫಜ ಪೀನಸದಲ್ಲಿ ಪದೇ ಪದೇ ಮೂಗಿನಿಂದ ಬಿಳುಪಾದ ಶೀತಕಫವು ಸ್ರವಿಸುವುದು. ಕಣ್ಣು ಊದುವುದು. ಕಣ್ಣಿನಲ್ಲಿ ಬಿಳುಪೇರಿ ಎಲ್ಲವೂ ಬೆಳ್ಳಗೆ ಕಾಣಿಸುವುದು. ತಲೆ ಮುಖಗಳು ಭಾರವಾಗುವುವು. ತಲೆ ಕಂಠ ತುಟಿ ಮತ್ತು ದವಡೆಗಳಲ್ಲಿ ಬಹಳ ನವೆಯುಂಟಾಗುವುದು. "कफः कफकृते घ्राणाच्छुक्लः शीतः स्रवेन्मुहुः। शुक्लावभासः शूनाक्षः भवेद्गुरुशिरोमुखः। शिरोगलौष्ठतालूनां कण्डूयनमतीव च" सुश्रुत० उत्तरतं० २४-९, १०।

ಪೀನಸ ರೋಗಕ್ಕೆ ಕಾರಣ: ಅತಿಯಾದ ಸ್ತ್ರೀ ಸಂಗಮ ಹೊಗೆ ಧೂಳು ಇವು ಮೂಗಿನ ಮೂಲಕ ತಲೆಯನ್ನು ಪ್ರವೇಶಿಸುವುದರಿಂದ ತಲೆಯಲ್ಲಿ ಉಂಟಾಗುವ ಹಿಂಸೆ ಮಲಮೂತ್ರಗಳನ್ನು ಹೆಚ್ಚುಕಾಲ ತಡೆಯುವುದು ಇತ್ಯಾದಿ ಪೀನಸರೋಗಕ್ಕೆ ಕಾರಣಗಳು. "नारीप्रसङ्गः शिरसोऽभितापः धूमो रजः शीतमतिप्रतापः। संधारणं मूत्रपुरीषयोश्च सद्यः प्रतिश्यायनिदानमुक्तम्" सुश्रुत० उत्तरतं० २४-४।

**पीनसा ಪೀನಸಾ** (स्त्री०) ಸೌತೆಗಿಡ. पीनं स्यति — षो (अन्तकर्मणि) "कः" (३-२-७६)।

**पीनसिन् ಪೀನಸಿನ್** (वि०) ಪೀನಸ ರೋಗವುಳ್ಳವನು. पीनसोऽस्यास्ति "इनिः" (५-२-११५)। "विलङ्घनैः पाचनदीपनीयैरुपाचरेत् पीनसिनं यथावत्। बहुद्रववैर्वातकफोपसृष्टं प्रच्छर्दयेत् पीनसिनं वयःस्थम्" सुश्रुत० उत्तरतं० २४।

**पीनाह ಪೀನಾಹ** (पुं०) ಬಾವಿಯ ಕಟ್ಟೆ. ಇಟ್ಟಿಗೆ ಮೊದಲಾದುವುಗಳಿಂದ ನಿರ್ಮಿತವಾದ ಬಾವಿಯ ಮುಖಭಾಗ.

**पीनोध्नी ಪೀನೋಧ್ನೀ** (स्त्री०) ದಪ್ಪವಾದ ಕೆಚ್ಚಲುಳ್ಳ ಹಸು. पीनमूधोऽस्याः। ऊधोन्तस्य अनङादेशः (५-४-१३१)। "ङीप्" (४-१-२५)।

**पीयु ಪೀಯು** (पुं०) 1. ಕಾಲ, ಸಮಯ. पिबति — पा (पाने) "कुः" युगागमश्च निपा० (उ० १-३७)। 2. ರವಿ, ಸೂರ್ಯ. 3. ವಾಯಸ, ಕಾಗೆ.

**पीयूष ಪೀಯೂಷ** (न०) 1. ಅಮೃತ. पीय्यते — पीय (सौत्रधातुः) "ऊषन्" (उ० ४-७६)। "पीयूषधारानधराभिरन्तस्तासां रसोदन्वति मज्जयामः" नैष० ३-४२। 2. ಕ್ಷೀರ, ಹಾಲು. (पुंन०) 3. ಕರು ಹಾಕಿದ ಏಳು ದಿನಗಳೊಳಗಿನ ಹಸುವಿನ ಹಾಲು. "स्यात्पेयुषं च पीयूषं नवक्षीरेऽमृतेऽपि च" हारा०। "नवसूतगवीदुग्धे पीयूषममृतेऽपि च" नानार्थर०। "पीयूषोऽभिनवं पयः" अम०।

**पीयूषभुज् ಪೀಯೂಷಭುಜ್** (पुं०) ದೇವತೆ. पीयूषं भुङ्क्ते — भुज (परिपालनाभ्यवहारयोः) "क्विप्" (३-२-७६)। "रुच्यो रुचीभिर्जितकाञ्चनीभिस्तथासि पीयूषभुजां सनाभिः" नैष० ८-२८।

**पीयूषमयूख ಪೀಯೂಷಮಯೂಖ** (पुं०) ಅಮೃತಮಯ ಕಿರಣಗಳುಳ್ಳ ಚಂದ್ರ. पीयूषमया मयूखा अस्य। "आलोकतृप्तीकृतलोक यस्त्वामसूत पीयूषमयूखमेनम्" नैष० ८-३०।

**पीयूषमहस् ಪೀಯೂಷಮಹಸ್** (पुं०) 1. ಚಂದ್ರ. 2. ಕರ್ಪೂರ. पीयूषमिव आह्लादकं महो यस्य।

**पीयूषवर्ष ಪೀಯೂಷವರ್ಷ** (पुं०) 1. ಚಂದ್ರ. 2. ಕರ್ಪೂರ. 3. ಚಂದ್ರಾಲೋಕವೆಂಬ ಅಲಂಕಾರ ಗ್ರಂಥವನ್ನು ರಚಿಸಿದ ಒಬ್ಬ ಕವಿ. "उल्लासाय विचारवीचिनिचयालङ्कारवारांनिधेश्चन्द्रालोकममुं स्वयं वितनुते पीयूषवर्षः कृती" चन्द्रा०।

**पीलक ಪೀಲಕ** (पुं०) 1. ಕಟ್ಟಿರುವೆ. ಉದ್ದವಾದ ಕಪ್ಪು ಇರುವೆ. (वि०) 2. ತಡೆಗಟ್ಟುವವನು. पील (प्रतिष्टम्भे) "ण्वुल्" (३-१-१३३)।

**पीलु ಪೀಲು** (पुं०) 1. ಕುಸುಮ, ಪುಷ್ಪ. पीलति प्रतिष्टम्नाति — पील (प्रतिष्टम्भे) "कुः" (उ० १-३७)। 2. ಗೋನುಮರ. 3. ಪರಮಾಣು. 4. ಗಜ, ಆನೆ. 5. ಅಸ್ಥಿಖಂಡ, ಎಲುಬುಗಳ ರಾಶಿ. 6. ತಾಳವೃಕ್ಷದ ಕಾಂಡ. 7. ಕ್ರಿಮಿ, ಹುಳ. 8. ಶರ, ಬಾಣ. (न०) 9. ಗೋನುಹಣ್ಣು.

**पीलुपत्र ಪೀಲುಪತ್ರ** (पुं०) ಕುರಟಗೆ ಗಿಡ.

**पीलुपर्णी ಪೀಲುಪರ್ಣೀ** (स्त्री०) 1. ಕುರಟಗೆ ಗಿಡ. 2. ತೊಂಡೆಗಿಡ. "पीलुपर्णी बिम्बिकायां मूर्वायामोषधीभिदि" मेदि०।

**पीवन् ಪೀವನ್** (वि०) 1. ಸ್ಥೂಲವಾದ, ಪುಷ್ಟವಾದ, ದಪ್ಪವಾದ. 2. ಬಲಿಷ್ಠ, ಬಲಶಾಲಿ. प्यैङ् (वृद्धौ) "क्वनिप्" (उ० ४-११५)। संप्रसारणञ्च। "कल्लोलजालचलनोपनतेन पीवा जीवातुनानवरतेन पयोरसेन" नैष० ११-४१।

**पीवर ಪೀವರ** (वि०) 1. ಸ್ಥೂಲವಾದ, ದಪ್ಪವಾದ, ಪರಿಪುಷ್ಟವಾದ. प्यैङ् (वृद्धौ) "ष्वरच्" (उ० ३-१)। "तं कर्णभूषणनिपीडितपीवरांसं शय्योत्तरच्छदविमर्दकृशाङ्गरागम्" रघु० ५-६५। (पुं०) 2. ತಾಮಸ ಮನ್ವಂತರದ ಸಪ್ತರ್ಷಿಗಳಲ್ಲೊಬ್ಬ ಋಷಿ. 3. ಕೂರ್ಮ, ಆಮೆ. "पीवरः कच्छपे स्थूले" मेदि०।

**पीवरस्तनी ಪೀವರಸ್ತನೀ** (स्त्री०) 1. ದೊಡ್ಡ ಕೆಚ್ಚಲುಳ್ಳ ಹಸು. 2. ಸ್ಥೂಲವಾದ ಸ್ತನಗಳುಳ್ಳ ಹೆಂಗಸು. पीवरौ स्तनौ यस्याः। "पयोधरेणोरसि काचिदुन्मनाः प्रियं जघानोन्नतपीवरस्तनी" किरा० ८-१९।

**पीवरा ಪೀವರಾ** (स्त्री०) 1. ಅಶ್ವಗಂಧಿ ಗಿಡ. 2. ಶತಾವರೀ ಗಿಡ. 3. ಸ್ಥೂಲವಾದ ಹೆಂಗಸು.

**पीवरि ಪೀವರೀ** (स्त्री०) 1. ಶತಾವರೀ ಗಿಡ. 2. ಆಕಳು, ಹಸು.

**पीवा ಪೀವಾ** (स्त्री०) ಜಲ, ನೀರು.

**पुंयोग ಪುಂಯೋಗ** (पुं०) 1. ಪುರುಷನ ಸಂಬಂಧ, ಹೆಂಗಸಿಗೆ ಪುರುಷನೊಡನೆ ಉಂಟಾಗುವ (ಮೈಥುನ ರೂಪವಾದ) ಸಂಬಂಧ. 2. ಪುರುಷನಿಗೂ ಹೆಂಗಸಿಗೂ ಇರುವ ಪತಿ-ಪತ್ನೀರೂಪವಾದ ಸಂಬಂಧ. "पुंयोगादाख्यायाम्" पा० सू० ४-१-४८। ಪತಿಪತ್ನೀರೂಪವಾದ ಈ ಸಂಬಂಧದಿಂದ ಗೋಪನ ಪತ್ನಿ ಎಂಬ ಅರ್ಥದಲ್ಲಿ ಪುರುಷವಾಚಕವಾದ गोप ಶಬ್ದಕ್ಕೆ "ङीष्" ಪ್ರತ್ಯಯ ವಿಹಿತವಾಗಿ गोपस्य स्त्री गोपी ಎಂದು ರೂಪವಾಗುವುದು.

**पुंराशि ಪುಂರಾಶಿ** (पुं०) ಪುರುಷಗ್ರಹವು ಅಧಿಪತಿಯಾಗಿರುವ ಮೇಷ ಮೊದಲಾದ ರಾಶಿಗಳು. ಕುಜ ರವಿ ಮತ್ತು ಗುರು ಇವರು ಅಧಿಪತಿಗಳಾದ ಮೇಷ ಸಿಂಹ ವೃಶ್ಚಿಕ ಧನುಸ್ಸು ಮತ್ತು ಮೀನರಾಶಿಗಳು ಪುಂರಾಶಿಗಳು.

**पुंलिङ्ग ಪುಂಲಿಂಗ** (न०) 1. ಪುರುಷನ ಚಿಹ್ನೆ, ಪುರುಷನ ಗುರುತು, ಪುರುಷನ ಲಕ್ಷಣ. पुंसो लिङ्गम्। (पुं०) 2. ಪುರುಷನನ್ನು ಹೇಳುವ ಶಬ್ದ, ಪುಂಲಿಂಗ ವಿಶಿಷ್ಟವಾದ ಶಬ್ದ. पुंसो लिङ्गमस्य। (वि०) 3. ಪುರುಷನ ಚಿಹ್ನೆಯುಳ್ಳ. "पुंलिङ्गा इव नार्यस्तु स्त्रीलिङ्गाः पुरुषाभवन्" भा० शल्य०।

**पुंवत् ಪುಂವತ್** (अव्य०) 1. ಪುರುಷನಂತೆ, ಗಂಡಸಿನಂತೆ. पुंसा तुल्यम् "वतिः" (५-१-११५)। "ततो नृपाणां श्रुतवृत्तवंशा पुंवत्प्रगल्भा प्रतिहाररक्षी" रघु० ६-२०। 2. ಪುಂವಾಚಕಶಬ್ದದಂತೆ, ಪುರುಷವಾಚಕಶಬ್ದದಂತೆ, ಪುರುಷನನ್ನು ಹೇಳುವ ಶಬ್ದದಂತೆ. "स्त्रियाः पुंवत् भाषितपुंस्कादनूङ्" पा० सू० ६-३-३४।

**पुंवत्स ಪುಂವತ್ಸ** (पुं०) 1. ಗಂಡುಕರು, ಹೋರಿಗರು. पुमांश्चासौ वत्सश्च। (स्त्री०) **-वत्सा -ವತ್ಸಾ**. 2. ಗಂಡುಕರುವುಳ್ಳ ಹಸು.

**पुंवृष ಪುಂವೃಷ** (पुं०) 1. ಎತ್ತು, ಹೋರಿ. 2. ಮೂಗಿಲಿ.

**पुंवेष ಪುಂವೇಷ** (पुं०) 1. ಪುರುಷನ ವೇಷ. (वि०) 2. ಪುರುಷನಂತೆ ಉಟ್ಟು ತೊಟ್ಟಿರುವ.

**पुंश्चली ಪುಂಶ್ಚಲೀ** (स्त्री०) ಕುಲಟೆ, ಹಾದರಗಿತ್ತಿ, ಸ್ವೇಚ್ಛೆಯಿಂದ ಮನೆಮನೆಗೂ ತಿರುಗುತ್ತಿರುವ ಹೆಂಗಸು. पुंसो भर्तुः सकाशात् चलति — चल (कम्पने) "अच्" (३-१-१३४)। गौरा० "ङीष्" (४-१-४१)। "चिकित्साकातरक्रुद्धपुंश्चलीमत्तविद्विषाम्" याज्ञ० १-१६२।

**ಕುಲಟೆಯು ನಡೆನುಡಿಗಳಲ್ಲಿರುವ ದೋಷಗಳು :** ಇವಳ ಸಹವಾಸ ಮಾಡಿ ಇವಳನ್ನು ನಂಬಿದವನು ಸರ್ವನಾಶವನ್ನು ಹೊಂದುವನು. ಅವನು ಸಂಪಾದಿಸಿದ ಕೀರ್ತಿಯು ನಾಶವಾಗುವುದಲ್ಲದೆ ಧರ್ಮಭ್ರಷ್ಟನಾಗುವನು. ಕುಲದಿಂದ ಹೊರಗಾಗುವನು. ಇವಳು ಇಷ್ಟನಾದ ಮತ್ತೊಬ್ಬನಲ್ಲಿ ಮೋಹಗೊಂಡು ಮೊದಲಿನವನನ್ನು ಬಿಟ್ಟು ಓಡುವುದರಿಂದ ಇವಳನ್ನು ಸೇರಿದವನು ಉಭಯತ್ರ ಭ್ರಷ್ಟನಾಗುವನು. ತನ್ನ ಪತಿ, ತಂದೆ, ತಾಯಿ, ಮಗ ಬಂಧು ಇವರೆಲ್ಲರನ್ನೂ ವಂಚಿಸಿ ಹೋಗುವಷ್ಟು ಚಪಲ ಚಿತ್ತಳು ಮತ್ತು ಕ್ರೂರ ಹೃದಯವುಳ್ಳವಳು. "पुंश्चली यो हि विश्वस्तो विधिना स विडम्बितः। बहिष्कृतश्च यशसा धर्मेण स्वकुलेन च। वाञ्छितं नूतनं प्राप्य विनश्यति पुरातनम्। दैवे कर्मणि पैत्रे च पुत्रे बन्धौ च भर्तरि। दारुणं पुंश्चलीचित्तं सदा शृङ्गारकर्मणि। प्राणाधिकं रतिज्ञं सामृतदृष्ट्या हि पुंश्चली। रत्नप्रद रत्यविज्ञं विषदृष्ट्या हि पश्यति"।

**पुंश्चिह्न ಪುಂಶ್ಚಿಹ್ನ** (न०) ಪುರುಷನ ಲಕ್ಷಣವಾದ ಜನನೇಂದ್ರಿಯ. पुंसः पुरुषस्य चिह्नम्।

**पुंस् ಪುಂಸ್** (पुं०) ಪುರುಷ, ಗಂಡಸು. पाति — पा (रक्षणे) "डुमसुन्" (उ० ४-१७७)। पुमान् पुमांसौ पुमांसः। "तामगौरवभेदेन मुनींश्चापश्यदीश्वरः। स्त्री पुमानित्यनास्थैषा वृत्तं हि महितं सताम्" कुमा० ६-१२।

**पुंसवन ಪುಂಸವನ** (न०) 1. ಸ್ತ್ರೀಯು ಗರ್ಭಧರಿಸಿದಾಗ ಪುತ್ರಸಂತಾನದ ಅಪೇಕ್ಷೆಯಿಂದ ನಡೆಯುವ ಒಂದು ಸಂಸ್ಕಾರ. पुमांसं सूतेऽनेन — षूङ् (प्राणिगर्भविमोचने) "ल्युट्" (३-३-११७)। "यथाक्रमं पुंसवनादिकाः क्रियाः धृतेश्च धीरः सदृशीर्व्यधत्त सः" रघु० ३-१०। 2. ಕ್ಷೀರ, ಹಾಲು. पुमांसमिव सूते पुरुषवत् जनयत्यनेन— कर० "ल्युट्"। ಗರ್ಭವನ್ನು ಧರಿಸಿರುವುದು ಸ್ಪಷ್ಟವಾಗಿ ತೋರಿದಾಗ ಮೂರನೆಯ ತಿಂಗಳಲ್ಲಿ ಪುಂಸವನವು ನಡೆಯಬೇಕು.

**पुंस्कोकिल ಪುಂಸ್ಕೋಕಿಲ** (पुं०) ಗಂಡು ಕೋಗಿಲೆ. पुमान् कोकिलः। "चूताङ्कुरास्वादकषायकण्ठः पुंस्कोकिलो यन्मधुरं चुकूज" कुमा० ३-३२।

**पुंस्त्व ಪುಂಸ್ತ್ವ** (न०) 1. ಪುರುಷತ್ವ, ಗಂಡುತನ. पुंसः पुरुषस्य भावः "त्वः" (५-१-११९)। "यत्नात्परीक्षितः पुंस्त्वे युवा धीमान् जनप्रियः" याज्ञ० १-५५। 2. ವೀರ್ಯ, ಶುಕ್ರಧಾತು.

**पुक्कस ಪುಕ್ಕಸ** (ಪುಂ) 1. ನಿಷಾದನಿಂದ ಶೂದ್ರ ಸ್ತ್ರೀಯಲ್ಲಿ ಜನಿಸಿದ ಒಬ್ಬ ಮಿಶ್ರ ಜಾತಿಯವನು. "जातो निषादाच्छूद्रायां जात्या भवति पुक्कसः" मनु० १०-१८। स्त्रियां **पुक्कसी ಪುಕ್ಕಸೀ.** (स्त्री०) 2. ಕೋರಕ, ಮೊಗ್ಗು. 3. ನೀಲಿಗಿಡ.

**पुङ्ख ಪುಂಖ** (ಪುಂ) 1. ಬಾಣದ ಮೂಲಭಾಗ. पुमांसं खनति – खनु (अवदारणे) "डः" (वा० ३-२-१०१)। "सक्ताङ्गुलिः सायकपुङ्ख एव चित्रार्पितारम्भ इवावतस्थे" रघु० २-३१। 2. ಗಿಡಗ ಹಕ್ಕಿ.

**पुङ्ग ಪುಂಗ** (ಪುಂನ) ಸಮೂಹ, ಗುಂಪು, ರಾಶಿ.

**पुङ्गव ಪುಂಗವ** (ಪುಂ) 1. ವೃಷಭ, ಎತ್ತು. पुमान् गौः "टच्" (५-४-९२)। "रोमोद्गमः प्रादुरभूदुमायाः स्विन्नाङ्गुलिः पुङ्गवकेतुरासीत्" कुमा० ७-७७। (वि०) 2. (ಉತ್ತರಪದವಾದಾಗ) ಶ್ರೇಷ್ಠ, ಉತ್ತಮ. "यदुपुङ्गवसूर्यसन्निधाने शिशुपालः प्रतिसूर्यवत्प्रदीप्तः" याद० १५-११६।

**पुच्छ ಪುಚ್ಛ** (ಪುಂನ) 1. ಬಾಲ, ಲಾಂಗೂಲ. "पुच्छभाण्डचीवराण्णिङ्" (३-१-२०) इति निपातनात्साधुः। "पश्चात्पुच्छं वहति विपुलं तच्च धूनोत्यजस्रम्" उ० रा० ४-२६। 2. ಹಿಂಭಾಗ, ಹಿಂದಿನ ಅವಯವ.

**पुच्छकण्टक ಪುಚ್ಛಕಂಟಕ** (ಪುಂ) (ಬಾಲದಲ್ಲಿ ಮುಳ್ಳಿರುವ) ವೃಶ್ಚಿಕ, ಚೇಳು.

**पुच्छटि ಪುಚ್ಛಟಿ** (स्त्री०) ಬೆರಳುಗಳಿಂದ ಚಿಟಿಕಿ ಹಾಕುವುದು.

**पुच्छिन् ಪುಚ್ಛಿನ್** (वि०) 1. ಬಾಲವುಳ್ಳ, ಬಾಲ ಹೊಂದಿರುವ. पुच्छोऽस्यास्ति "इनिः" (५-२-११५)। (ಪುಂ) 2. ಅರ್ಕವೃಕ್ಷ, ಎಕ್ಕದ ಗಿಡ. 3. ಕುಕ್ಕುಟ, ಕೋಳಿ.

**पुञ्ज ಪುಂಜ** (ಪುಂ) ರಾಶಿ, ಸಮೂಹ, ಧಾನ್ಯ ಮೊದಲಾದುವುಗಳ ಗುಪ್ಪೆ (ಗುಡ್ಡೆ). पिजि (हिंसाबलादाननिकेतनेषु) "अच्" (३-१-१३४)। पृषो०। "क्षीरोदवेलेव सफेनपुञ्जा पर्याप्तचन्द्रेव शरत्त्रियामा" कुमा० ७-२६।

**पुट ಪುಟ** (ಪುಂನ) 1. ಎಲೆಯಿಂದ ನಿರ್ಮಿತವಾದ ಪಾನಪಾತ್ರೆ, ದೊನ್ನೆ. पुट (संश्लेषणे) "कः" (३-१-१३५)। "दुग्ध्वा पयः पत्रपुटे मदीयं पुत्रोपभुङ्क्ष्वेति तमादिदेश" रघु० २-६५। 2. ಕುಳಿಯಾಗಿರುವ ಮಧ್ಯಭಾಗ, ಪೊಳ್ಳಾಗಿರುವ ಮಧ್ಯಭಾಗ. "बद्धपल्लवपुटाञ्जलिद्रुमं दर्शनोन्मुखमृगं तपोवनम्" रघु० ११-२३। 3. ಯಾವುದಾದರೂ ವಸ್ತುವನ್ನು ಒಳಗೊಳ್ಳುವ ಅಗಲವಾದ ಪಾತ್ರೆ, –ಸಂಪುಟ. 4. ಕುದುರೆಕಾಲಿನ ಗೊರಸು. (ಪುಂ) 5. ನಗರ, ಪಟ್ಟಣ. "स्थानीयं नगरं पुटः" वैज०। (न०) 6. ಜಾಯಿಕಾಯಿ. 7. ಔಷಧ ಮೊದಲಾದುವನ್ನು ಪಾಕ ಮಾಡುವ ಲೋಹದ ಅಥವಾ ಮೃತ್ಪಾತ್ರೆ. 8. ಚಿನ್ನ ಬೆಳ್ಳಿ ಮೊದಲಾದ ಲೋಹಗಳನ್ನು ಪುಟಕ್ಕೆ ಹಾಕಲು ಬಳಸುವ ಮೂಷಿ. 9, ಪುಸ್ತಕ ಮೊದಲಾದುವುಗಳ ಹಾಳೆಯ ಒಂದು ಪಕ್ಕ. (वि०) 10. ಹೊದಿಕೆಯ ಸಾಧನ, ಮುಚ್ಚಳದ ತಟ್ಟೆ ಮೊದಲಾದುದು.

**पुटक ಪುಟಕ** (न०) 1. ಪದ್ಮ, ಕಮಲ, ತಾವರೆಹೂವು. पुट इव कायति – कै (शब्दे) "कः" (३-२-३)। 2. "पुट" ಪದದ ಅರ್ಥ. पुट स्वार्थे "कः"।

**पुटग्रीव ಪುಟಗ್ರೀವ** (ಪುಂ) 1. ತಾಮ್ರಲೋಹದ ತಂಬಿಗೆ. –ಚೊಂಬು. 2, ಮೊಸರು ಕಡೆಯುವ ಪಾತ್ರೆ. पुटमिव ग्रीवा अस्य।

**पुटपाक ಪುಟಪಾಕ** (ಪುಂ) 1. ಸಂಪುಟದ ಒಳಗೆ ಇರುವ ಔಷಧದ ಪಾಕ, ಪಾತ್ರೆಯೊಳಗೆ ಔಷಧವನ್ನು ಕಾಯಿಸುವುದು, –ಕುದಿಸುವುದು. पुटेन पाकः। "अन्तर्भिन्नो गभीरत्वादन्तर्गूढघनव्यथः। पुटपाकप्रतीकाशो रामस्य करुणो रसः" उ० रा० ३-१। ಹೂಜಿಯಾಕಾರದ ಪಾತ್ರೆಯಲ್ಲಿ ಔಷಧವನ್ನಿಟ್ಟು ಅದರ ಬಾಯನ್ನು ತೇವದ ಮಣ್ಣಿನಿಂದ ಮುಚ್ಚಿ ಅದರ ದ್ರವಾಂಶವೆಲ್ಲಾ ಹೋಗಿ ಭಸ್ಮವಾಗುವವರೆಗೂ ಕಾಯಿಸುವುದು ಪುಟಪಾಕ. 2. ಚಿನ್ನ ಬೆಳ್ಳಿ ಮೊದಲಾದುವನ್ನು ಮೂಷಿಯಲ್ಲಿಟ್ಟು ಚೊಕ್ಕಮಾಡುವುದು.

**पुटभेद ಪುಟಭೇದ** (ಪುಂ) 1. ನದಿ ಮೊದಲಾದುವುಗಳ ವಕ್ರಗತಿ, ಹೊಳೆಯು ವಕ್ರವಾಗಿ ಹರಿಯುವುದು. 2. ಆತೋದ್ಯ, ವೀಣೆ ಮೊದಲಾದ ತಂತೀವಾದ್ಯ ಮದ್ದಳೆ ಮೊದಲಾದ ಚರ್ಮವಾದ್ಯ ಕೊಳಲು (ಪಿಳ್ಳಂಗೋವಿ) ಮೊದಲಾದ ವೇಣುವಾದ್ಯ ತಾಳ ಮೊದಲಾದ ಕಂಚಿನ ವಾದ್ಯ ಈ ನಾಲ್ಕು ವಿಧ ವಾದ್ಯಗಳು. 3. ನಗರ, ಪಟ್ಟಣ. "पुटभेदो नदीवक्रपत्तनातोद्ययोरपि" मेदि०। 4. ಉನ್ಮೀಲನ, ತೆರೆಯುವುದು. "पुटभेदो ललाटस्थनीललोहितचक्षुषः" उ० रा० ६-३।

**पुटभेदन ಪುಟಭೇದನ** (न०) ಪಟ್ಟಣ, ನಗರ. पुटानि पात्राणि भिद्यन्तेऽत्र – भिदिर् (विदारणे) "युच्" (उ० २-७९)। "उपरुध्यमानमिव भूभृतां बलैः पुटभेदनं दनुसुतारिरक्षित" माघ० १३-२६।

**पुटिका ಪುಟಿಕಾ** (स्त्री०) ಯಾಲಕ್ಕಿ. पुटमस्त्यस्याः "ठन्" (५-२-११५)।

**पुटित ಪುಟಿತ** (न०) 1. ಹಸ್ತಪುಟ, ಅಂಗೈ. पुटं सञ्जातमस्य "इतच्" (५-२-३६)। (वि०) 2. ಹೊಲಿಯಲ್ಪಟ್ಟ, ಹೊಲಿಗೆ ಹಾಕಲ್ಪಟ್ಟ. 3. ಛೇದಿಸಲ್ಪಟ್ಟ, ಸೀಳಲ್ಪಟ್ಟ. "पुटितं स्याद्धस्तपुटे पाटितस्यूतयोरपि" मेदि०।

**पुटी ಪುಟೀ** (स्त्री०) 1. ಕೌಪೀನ, ಲಂಗೋಟಿ. पुट (संश्लेषणे) "कः" (३-१-१३५)। गौरा० "ङीष्" (४-१-४१)। 2. ಎಲೆಯಿಂದ ನಿರ್ಮಿತವಾದ ದೊನ್ನೆ.

**पुटोटज ಪುಟೋಟಜ** (न०) ಶ್ವೇತಚ್ಛತ್ರ, ಬಿಳಿಯ ಕೊಡೆ. पुटं संश्लिष्टमुटजमिव।

**पुटोदक ಪುಟೋದಕ** (पुं०) ತೆಂಗಿನಮರ. पुटे पात्रमध्ये उदकं यस्य।

**पुण्डरीक ಪುಂಡರೀಕ** (न०) 1. ಶ್ವೇತಕಮಲ, ಬಿಳಿದಾವರೆ पुण (कर्मणि शुभे) "ईकन्" तस्य रुगागमः धातोः डगागमश्च निपा० (उ० ४-२०)। "अवकिरति नितान्तं कान्तिनिर्यासमच्छस्तुतनवजलपाण्डुं पुण्डरीकोदरेषु" माघ० ११-६२। 2. ಬಿಳಿಯ ಕೊಡೆ, ಬಿಳಿಯ ಛತ್ರಿ. 3. ಒಂದು ಔಷಧ. (पुं०) 4. ಆಗ್ನೇಯ ದಿಕ್ಕಿನ ದಿಗ್ಗಜ. "तेन द्विपानामिव पुण्डरीको राज्ञामजय्योऽजनि पुण्डरीकः" रघु० १८-८। 5. ಬಿಳುಪು, ಶ್ವೇತವರ್ಣ. 6. ವ್ಯಾಘ್ರ, ಹುಲಿ. 7. ಒಂದು ಸರ್ಪ. 8. ಶ್ರೀರಾಮಚಂದ್ರನ ವಂಶದ ಒಬ್ಬ ದೊರೆ. "राज्ञामजय्योऽजनि पुण्डरीकः" रघु० १८-८। 9. ಒಂದು ಧಾನ್ಯ. 10. ಗಜಜ್ವರ, ಆನೆಗೆ ಬರುವ ಜ್ವರ. 11. ಒಂದು ಯಾಗ. "अश्वमेधो राजसूयः पुण्डरीकोऽथ गोसवः। एतैरपि महायज्ञैरिष्टं ते भूरिदक्षिणैः" भा०। 12. ಕಮಂಡಲು, ಜಲಪಾತ್ರೆ. 13. ಒಬ್ಬ ನಿಘಂಟುಕಾರ. 14. ಒಂದು ವಿಧ ಕುಷ್ಠ ರೋಗ.

**पुण्डरीकाक्ष ಪುಂಡರೀಕಾಕ್ಷ** (पुं०) 1. ಮಹಾವಿಷ್ಣು. पुण्डरीके इव अक्षिणी अस्य "षच्" (५-४-११३)। पुण्डरीकं हृदयकमलं धाम वासस्थानं तत्र सन्नपि अक्षः न क्षीयते हन्यते वा इति पुण्डरीकाक्षः। "नास्य जरयैतज्जीर्यति न वधेनास्य हन्यते इति" श्रुतिः। "पुण्डरीकं परं धाम नित्यमक्षयमव्ययम्। तद्भवान् पुण्डरीकाक्षः" भा० उद्योग० ६९-६। ನಿತ್ಯವೈಕುಂಠವಾಸಿಗಳಿಗೆ ದೃಷ್ಟಿಭೂತನಾಗಿರುವುದರಿಂದ ಪರಮಾತ್ಮನಿಗೆ ಈ ಹೆಸರು. "दिवीव चक्षुराततम्" पु० सू०। "पुण्डरीकं परं धाम नित्यमक्षरमव्ययम्। तद्गतानामक्षिभूतः पुण्डरीकाक्ष ईरितः" इति निरुक्तिः। "अमोघः पुण्डरीकाक्षः" वि० स०। पुण्डरीकं लोकात्मकम् अक्षति व्याप्नोति—अक्षू (व्याप्तौ) "अण्" (३-२-१) इति वा। "विलोचने बिभ्रदधिश्रितश्रिणी स पुण्डरीकाक्ष इति स्फुटोऽभवत्" माघ० १-२४। 2. ನೀರುಕೋಳಿ, ಕಡಲಹದ್ದು. "उत्क्रोशः पुण्डरीकाक्षो मेघरावोऽम्बुकुक्कुटी" चरक०।

**पुण्डरीयक ಪುಂಡರೀಯಕ** (न०) 1. ಸ್ಥಲಪದ್ಮ, ನೆಲದಾವರೆ. 2. ಬಿಳಿನೈದಿಲೆ ಗೆಡ್ಡೆ.

**पुण्डर्य ಪುಂಡರ್ಯ** (न०) 1. ಬಿಳಿನೈದಿಲೆ ಗೆಡ್ಡೆ. 2. ಸ್ಥಲಪದ್ಮ, ನೆಲದಾವರೆ.

**पुण्ड्र ಪುಂಡ್ರ** (पुं०) 1. ಪಟಾಪಟಿ ಕಬ್ಬು, ಉದ್ದುದ್ದದ ಕೆಂಪು ಹಳದಿ ಪಟ್ಟೆಗಳಿರುವ ಕಬ್ಬು. पुण्ड्यन्ते—पुडि (खण्डने) "रक्" (उ० २-१३)। 2. ಒಬ್ಬ ದೈತ್ಯ. 3. ಪದ್ಮ, ಕಮಲ. 4. ಕಾಡಿರುವಂತಿಗೆ. 5. ಶ್ವೇತಕಮಲ, ಬಿಳಿ ತಾವರೆ. 6. ಚಿತ್ರ. 7. ಕ್ರಿಮಿ. 8. ಪಂಥದ (ಒಂದು ಧರ್ಮದ) ಗುರುತು, ಮತವನ್ನು ಸೂಚಿಸುವ ಹಣೆಯ ಮೇಲೆ ಇರುವ ಒಂದು ಚಿಹ್ನೆ, ऊर्ध्वपुण्ड्रः तिर्यक्पुण्ड्रः ಇತ್ಯಾದಿ. (पुं० ಬ० ವ०) 9. ಒಂದು ದೇಶ. "प्राग्ज्योतिषाश्च पुण्ड्राश्च विदेहास्ताम्रलिप्तकाः"।

**पुण्ड्रक ಪುಂಡ್ರಕ** (पुं०) 1. ಕಾಡಿರುವಂತಿಗೆ ಗಿಡ. पुण्ड्र इव प्रतिकृतिः "कन्" (५-३-९६)। 2. ಪಟಾಪಟಿ ಕಬ್ಬು. पुण्ड्र स्वार्थे "कन्"। 3. ತಿಲಕವೃಕ್ಷ. 4. ಅಶ್ವದ ಮೈಮೇಲಿನ ಚಿಹ್ನೆ. ಈ ಚಿಹ್ನೆಯು ಅಶ್ವಗಳ ಶುಭಾಶುಭ ಲಕ್ಷಣವನ್ನು ತಿಳಿಸುವುದು.

**पुण्य ಪುಣ್ಯ** (न०) 1. ಶುಭವಾದ ಅದೃಷ್ಟ ಕರ್ಮ, ಸುಕೃತ, ಧರ್ಮ. पूञ् (पवने) "यत्" णुगागमः ह्रस्वश्च (उ० ५-१५)। "पुण्ये मनः कस्य मुनेरपि स्यात्प्रमाणमास्ते यदघेऽपि धावत्" नैष० ८-१७। "अत्युत्कटैः पुण्यपापैरिहैव फलमश्नुते" हितो० १-८३। "लोकान्तरसुखं पुण्यं तपोदानसमुद्भवम्" रघु० १-६९। 2. ಒಳ್ಳೆಯ ಕಾರ್ಯ, ಶ್ರೇಯಸ್ಕರವಾದ ಕೆಲಸ. (वि०) 3. ಪರಿಶುದ್ಧವಾದ, ಪವಿತ್ರವಾದ. "यक्षश्चक्रे जनकतनयास्नानपुण्योदकेषु" मेघ० १-१। 4. ಒಳ್ಳೆಯ, ಶ್ರೇಯಸ್ಕರವಾದ. 5. ಶುಭಕರವಾದ, ಶುಭಸೂಚಕವಾದ, ಮಂಗಳಕರವಾದ. "नामधेयं दशम्यां तु द्वादश्यां वास्य कारयेत्। पुण्ये तिथौ मुहूर्ते वा नक्षत्रे वा गुणान्विते" मनु० २-३०।

6. ಸುಗಂಧವಾದ. 7. ಸುಂದರವಾದ, ರಮ್ಯವಾದ, ಮನೋಹರವಾದ. "प्राप्ताः कृच्छ्रादृष्यशृङ्गोपचारैः पुण्यश्रीकाः कोसलेन्द्रेण पुत्राः" म० वी० १-२४। (पुं०) 8. ವಿಷ್ಣು. पुनाति पातकिनोऽपि। "पुण्यो योऽसौ पातकिपावनः" इति निरुक्तिः। "पूर्णः पूरयिता पुण्यः" वि० स०।

**पुण्यक ಪುಣ್ಯಕ** (नं०) ಪುಣ್ಯಸಂಪಾದನೆಗಾಗಿ ಮಾಡುವ ವ್ರತ ಉಪವಾಸ ಮೊದಲಾದುವು.

**पुण्यकर्मन् ಪುಣ್ಯಕರ್ಮನ್** (नं०) ಪುಣ್ಯಕಾರ್ಯ, ಶ್ರೇಯಸ್ಸನ್ನುಂಟುಮಾಡುವ ಕಾರ್ಯ.

**पुण्यकव्रत ಪುಣ್ಯಕವ್ರತ** (नं०) ಉತ್ತಮ ಪತಿಯ ಮತ್ತು ಶ್ರೀಕೃಷ್ಣನಂತಹ ಪುತ್ರನ ಪ್ರಾಪ್ತಿಗಾಗಿ ಸ್ತ್ರೀಯರು ಮಾಡುವ ಒಂದು ವ್ರತ.

**पुण्यकाल ಪುಣ್ಯಕಾಲ** (पुं०) ಪುಣ್ಯಕರವಾದ ಸಮಯ, ಪುಣ್ಯಸಂಪಾದನೆಯ ಕಾಲ.

**पुण्यकीर्तन ಪುಣ್ಯಕೀರ್ತನ** (पुं०) 1. ವಿಷ್ಣು. पुण्यं पुण्यजनकं कीर्तनं यस्य। "पुण्यश्रवणकीर्तनः" वि०स०। (नं०) 2. ಪುಣ್ಯಚರಿತ್ರೆಯನ್ನು ಹೇಳುವುದು, ಪುಣ್ಯಕಥೆಗಳನ್ನು ಹೇಳುವುದು.

**पुण्यकृत् ಪುಣ್ಯಕೃತ್** (वि०) ಪುಣ್ಯಕಾರ್ಯವನ್ನು ಮಾಡುವವನು, ಧರ್ಮಕಾರ್ಯಗಳನ್ನು ಮಾಡುವವನು. पुण्यं करोति — डु कृञ् (करणे) "क्विप्" (३-२-८९)। "पुण्यकृच्चाटुकारस्ते किङ्करः सुरतेषु कः" भट्टि० ५-६८।

**पुण्यक्षेत्र ಪುಣ್ಯಕ್ಷೇತ್ರ** (नं०) 1. ಪವಿತ್ರವಾದ ಕ್ಷೇತ್ರ, ಯಾತ್ರಾಸ್ಥಳ. 2. ಪುಣ್ಯಭೂಮಿ.

**पुण्यगन्ध ಪುಣ್ಯಗಂಧ** (पुं०) ಚಂಪಕವೃಕ್ಷ, ಸಂಪಿಗೆ ಮರ.

**पुण्यजन ಪುಣ್ಯಜನ** (पुं०) 1. ರಾಕ್ಷಸ. पुण्यः विरोधलक्षणया पापी जनः। "सर्पैः पुण्यजनैश्चैव वीरुद्भिः पर्वतैस्तथा" हरिवं०। 2. ಯಕ್ಷ. "पयोधरैः पुण्यजनाङ्गनानां निर्विष्टहेमाम्बुजरेणु यस्याः" रघु० १३-६०। 3. ಸತ್ಪುರುಷ. "अथ पुण्यजनो यक्षे राक्षसे सज्जनेऽपि च" मेदि०।

**पुण्यजनेश्वर ಪುಣ್ಯಜನೇಶ್ವರ** (पुं०) ಯಕ್ಷರಾಜನಾದ ಕುಬೇರ. पुण्यजनानां यक्षाणामीश्वरः।

**पुण्यदर्शन ಪುಣ್ಯದರ್ಶನ** (पुं०) 1. ಚಾಷಪಕ್ಷಿ, ಹಂಗನಹಕ್ಕಿ. पुण्यं शुभजनकं दर्शनं यस्य। (वि०) 2. ನೋಡಿದ ಮಾತ್ರದಿಂದಲೇ ಪುಣ್ಯವನ್ನುಂಟುಮಾಡುವವನು. "तां पुण्यदर्शनां दृष्ट्वा निमित्तज्ञस्तपोनिधिः" रघु० १-८६।

**पुण्यपुरुष ಪುಣ್ಯಪುರುಷ** (पुं०) ಶ್ರೇಷ್ಠನಾದ ಮನುಷ್ಯ, ಧರ್ಮಶ್ರದ್ಧೆಯುಳ್ಳ ಮನುಷ್ಯ, ಶ್ರದ್ಧಾಭಕ್ತಿಗಳುಳ್ಳ ಮನುಷ್ಯ.

**पुण्यफल ಪುಣ್ಯಫಲ** (नं०) 1. ಧರ್ಮಕಾರ್ಯಗಳಿಂದ ಸಂಪಾದಿಸಿದ ಫಲ, ಪುಣ್ಯಕಾರ್ಯಾಚರಣೆಯಿಂದ ಬಂದ ಫಲ. पुण्यजन्यं फलम्। (पुं०) 2. ಮರಗಳ ಗುಂಪು, ಮರಗಳ ತೋಪು.

**पुण्यभाज् ಪುಣ್ಯಭಾಜ್** (वि०) ಪುಣ್ಯವನ್ನು ಮಾಡಿದವನು, ಪುಣ್ಯಕಾರ್ಯವನ್ನು ಮಾಡಿದವನು. पुण्यं भजति — भज (सेवायाम्) "ण्वि:" (३-२-६२)।

**पुण्यभू ಪುಣ್ಯಭೂ, -भूमि -ಭೂಮಿ** (स्त्री०) ಪುಣ್ಯವನ್ನು ಸಂಪಾದಿಸಿಕೊಡುವ ಭೂಮಿ, ಪುಣ್ಯವನ್ನುಂಟುಮಾಡುವ ದೇಶ, ಆರ್ಯಾವರ್ತ ದೇಶ, ವಿಂಧ್ಯ ಮತ್ತು ಹಿಮಾಚಲಗಳ ಮಧ್ಯದೇಶ. "आर्यावर्तः पुण्यभूमिर्मध्यं विन्ध्यहिमागयोः" अम०।

**पुण्यलक्षण ಪುಣ್ಯಲಕ್ಷಣ** (नं०) 1. ಒಳ್ಳೆಯ ಲಕ್ಷಣ, ಉತ್ತಮ ಭಾಗ್ಯದ ಲಕ್ಷಣ. पुण्यं लक्षणम्। (वि०) 2. ಉತ್ತಮ ಅದೃಷ್ಟದ ಲಕ್ಷಣಗಳುಳ್ಳ, ಭಾಗ್ಯದ ಲಕ್ಷಣಗಳುಳ್ಳ. पुण्यानि लक्षणानि यस्य। "निवर्तयास्मादसदीप्सितान्मनः क्व तद्विधस्त्वं क्व च पुण्यलक्षणा" कुमा० ५-७३।

**पुण्यवत् ಪುಣ್ಯವತ್** (वि०) ಪುಣ್ಯವಂತ, ಧರ್ಮಕಾರ್ಯ ಮಾಡಿ ಪುಣ್ಯ ಸಂಪಾದಿಸಿದವನು. पुण्यमस्यास्ति "मतुप्" (५-२-९४)। "ऊर्ध्वं भित्त्वा प्रतिष्ठन्ते प्राणाः पुण्यवतां नृप। मध्यतो मध्यपुण्यानामधो दुष्कृतकर्मणाम्" भा० शान्ति० ३०३-२७।

**पुण्यश्लोक ಪುಣ್ಯಶ್ಲೋಕ** (पुं०) 1. ವಿಷ್ಣು, ಶ್ರೀಕೃಷ್ಣ. पुण्यः पुण्यदायकः श्लोको यशः चरित्रं वा यस्य। 2. ಯುಧಿಷ್ಠಿರ, ಧರ್ಮರಾಜ. "संप्रस्थिते द्वारकायां जिष्णौ बन्धुदिदृक्षया। ज्ञातुं च पुण्यश्लोकस्य कृष्णस्य च विचेष्टितम्" भाग० १-१४-१। 3. ನಳಚಕ್ರವರ್ತಿ. "पुण्यश्लोकस्य वै सूतो वार्ष्णेय इति विश्रुतः" भा० वन०। (स्त्री०) **-श्लोका -ಶ್ಲೋಕಾ.** 4. ದ್ರೌಪದಿ. 5. ಸೀತಾದೇವಿ. "पुण्यश्लोको नलो राजा पुण्यश्लोको युधिष्ठिरः। पुण्यश्लोका च वैदेही पुण्यश्लोको जनार्दनः"। (वि०) 6. ಪುಣ್ಯಕರವಾದ ಕೀರ್ತಿಯನ್ನು ಸಂಪಾದಿಸಿದ.

**पुण्यस्थान ಪುಣ್ಯಸ್ಥಾನ** (नं०) 1. ಪವಿತ್ರವಾದ ಸ್ಥಾನ 2. ಲಗ್ನದಿಂದ ಒಂಬತ್ತನೆಯ ಸ್ಥಾನ.

**पुण्या ಪುಣ್ಯಾ** (स्त्री०) 1. ತುಲಸಿ. पूयतेऽनया—पूञ् (पवने) "यत्" णुक् ह्रस्वश्च (उ० ५-१५)। 2. ಪುಣ್ಯವನ್ನುಂಟುಮಾಡುವ ಹೆಂಗಸು.

**पुण्यात्मन् ಪುಣ್ಯಾತ್ಮನ್** (वि०) ಪುಣ್ಯಸ್ವಭಾವದವನು, ಧರ್ಮದ ಬುದ್ಧಿಯುಳ್ಳವನು. पुण्य आत्मा स्वभावो यस्य।

**पुण्याह ಪುಣ್ಯಾಹ** (न०) ಪುಣ್ಯದಿವಸ, ಶುಭದಿವಸ. पुण्यञ्च तदहश्च "टच्" (५-४-९१)। "पुण्याहं व्रज मङ्गलं सुदिवसः प्रातः प्रयातस्य ते" अमरु० ६१।

**पुण्याहवाचन ಪುಣ್ಯಾಹವಾಚನ** (न०) ದೇವತಾಕಾರ್ಯ ಮೊದಲಾದ ಸಂದರ್ಭಗಳಲ್ಲಿ ಶುಭಫಲಪ್ರಾಪ್ತಿಗಾಗಿ ಪುಣ್ಯಾಹಶಬ್ದೋಚ್ಚಾರ ಮಾಡಿಸುವುದು. पुण्याहस्य वाचनम्। "पुण्याहवाचनं दैवे ब्राह्मणस्य विधीयते। एतदेव निरोङ्कारं कुर्यात् क्षत्रियवैश्ययोः। उपांशु च तथा वैश्ये शूद्रे स्वस्ति प्रयोजयेत्"।

**पुत् ಪುತ್** (न०) ನರಕಗಳಲ್ಲಿ ಒಂದು ವಿಭಾಗ.

**पुत्त ಪುತ್ತ** (न०) ಗಮನ, ಚಲನೆ.

**पुत्तल ಪುತ್ತಲ** (पुं०) ವಿಗ್ರಹ, ಪ್ರತಿಮೆ, ಮೂರ್ತಿ. पुत्तं गमनं लाति अन्यस्मात्—ला (आदाने) "कः" (३-२-३)। संज्ञायां "कन्"। पुत्तलकः ಪುತ್ತಲಕಃ.

**पुत्तलिका ಪುತ್ತಲಿಕಾ** (स्त्री०) ಮಣ್ಣು ಹುಲ್ಲು ಕಡ್ಡಿ ಶಿಲೆ ಮುಂತಾದುವುಗಳಿಂದ ನಿರ್ಮಿತವಾದ ವಿಗ್ರಹ, —ಪ್ರತಿಮೆ. पुत्तली स्वार्थे "कन्"।

**पुत्तली ಪುತ್ತಲೀ** (स्त्री०) ಮಣ್ಣು ಹುಲ್ಲು ಕಲ್ಲು ಕಡ್ಡಿ ಮುಂತಾದುವುಗಳಿಂದ ನಿರ್ಮಿತವಾದ ವಿಗ್ರಹ, —ಪ್ರತಿಮೆ. पुत्तं गमनं लाति अन्याश्रयेण—ला (आदाने) "कः" (३-२-३)। "ङीष्" (४-१-४१)।

**पुत्तिका ಪುತ್ತಿಕಾ** (स्त्री०) 1. ಹೆಣ್ಣು ಪತಂಗದ ಹುಳ. पुत्तं गमनमस्त्यस्याः "ठन्" (५-२-११५)। 2. ಗೆದ್ದಲು ಹುಳ, ಒಂದು ಜಾತಿಯ ಇರುವೆ. "धर्मं शनैः सञ्चिनुयात् वल्मीकमिव पुत्तिकाः। परलोकसहायार्थं सर्वभूतान्यपीडयन्" मनु० ४-२३८।

**पुत्र ಪುತ್ರ** (पुं०) ಮಗ. पुनाति पित्रादीन्—पूञ् (पवने) "क्त्रः" ह्रस्वश्च (उ० ४-१६४)। पुत्नाम्नो नरकात् त्रायते—त्रैङ् (पालने) "कः" (३-२-४) इति वा। "पुन्नाम्नो नरकाद्यस्मात्त्रायते पितरं सुतः। तस्मात् पुत्र इति प्रोक्तः स्वयमेव स्वयंभुवा" मनु० ९-१३८। ಪುತ್ರಸಂತಾನವಿಲ್ಲದವನಿಗೆ "ಪುತ್" ನರಕಪ್ರಾಪ್ತಿಯಾಗುವುದರಿಂದ ಪುತ್ರನು ಜನಿಸಿ ಪಿತೃಗಳನ್ನು ಆ ನರಕದಿಂದ ತಪ್ಪಿಸಿ ರಕ್ಷಿಸುವನು. ಆದುದರಿಂದ ಇವನಿಗೆ "पुत्र" ಎಂಬ ಹೆಸರು.

**ಪುತ್ರರು 12 ವಿಧ:** (1) औरसः (2) क्षेत्रजः (3) दत्तः (4) कृत्रिमः (5) गूढोत्पन्नः (6) अपविद्धः (7) कानीनः (8) सहोढः (9) क्रीतः (10) पौनर्भवः (11) स्वयंदत्तः ಮತ್ತು (12) शौद्रः ಇವರು ದ್ವಾದಶ ವಿಧ ಪುತ್ರರು.

(1) ವಿವಾಹ ಸಂಸ್ಕಾರ ಹೊಂದಿದ ತನ್ನ ಪತ್ನಿಯಲ್ಲಿ ತಾನು ಪಡೆದ ಪುತ್ರನು **ಔರಸನು.** "स्वक्षेत्रे संस्कृतायां तु स्वयमुत्पादयेद्धि यम्। तमौरसं विजानीयात्पुत्रं प्रथमकल्पितम्" मनु० ९-१६६।

(2) ನಪುಂಸಕನ ಅಥವಾ ವ್ಯಾಧಿಪೀಡಿತನ ಪತ್ನಿಯಲ್ಲಿ ಅಥವಾ ಪತಿಯು ಮೃತನಾದನಂತರ ಅವನ ಪತ್ನಿಯಲ್ಲಿ ನಿಯೋಗದಿಂದ ಜನಿಸಿದವನು **ಕ್ಷೇತ್ರಜನು.** "यस्तल्पजः प्रमीतस्य क्लीबस्य व्याधितस्य वा। स्वधर्मेण नियुक्तायां स पुत्रः क्षेत्रजः स्मृतः" मनु० ९-१६७।

(3) ಪುತ್ರಸಂತಾನವಿಲ್ಲದವನಿಗೆ ಆಪತ್ಕಾಲದಲ್ಲಿ ಧಾರೆಯೆರೆದು ತಾಯಿತಂದೆಗಳು ಪ್ರೀತಿಯಿಂದ ಕೊಡುವ ಪುತ್ರನು **ದತ್ತಪುತ್ರ.** "माता पिता वा दद्यातां यमद्भिः पुत्रमापदि। सदृशं प्रीतिसंयुक्तं स ज्ञेयो दत्त्रिमः सुतः" मनु० ९-१६८।

(4) ತಾಯಿ ತಂದೆಗಳ ಉಪಚಾರದಲ್ಲಿ ಆಸಕ್ತಿ, ಅವರ ಪಾರಲೌಕಿಕಾದಿ ಕ್ರಿಯೆಗಳಲ್ಲಿ ಶ್ರದ್ಧೆ ಇತ್ಯಾದಿ ಪುತ್ರಗುಣೋಪೇತನಾದ ಒಬ್ಬನನ್ನು ಮಗನನ್ನಾಗಿ ಮಾಡಿಕೊಂಡರೆ ಅವನು **ಕೃತ್ರಿಮಪುತ್ರ.** "सदृशं तु प्रकुर्याद्यं गुणदोषविचक्षणम्। पुत्रं पुत्रगुणैर्युक्तं स विज्ञेयश्च कृत्रिमः" मनु० ९-१६९।

(5) ಮನೆಯಲ್ಲೇ ಇರುವ ಪತ್ನಿಯಲ್ಲಿ ಯಾರ ಸಂಬಂಧದಿಂದಲೋ ಗೂಢವಾಗಿ ಜನಿಸಿದ ಮತ್ತು ಯಾರಿಂದ ಜನಿಸಿದವನು ಎಂದೂ ತಿಳಿಯಲಾಗದ ಪುತ್ರನು **ಗೂಢೋತ್ಪನ್ನನು.** "उत्पद्यते गृहे यस्य न च ज्ञायेत कस्य सः। स गृहे गूढ उत्पन्नस्तस्य स्याद्यस्य तल्पजः" मनु० ९-१७०।

(6) ತಾಯಿತಂದೆಗಳಿಂದ ಪರಿತ್ಯಜಿಸಲ್ಪಟ್ಟ ಮಗನನ್ನು ಪುತ್ರನನ್ನಾಗಿ ಸ್ವೀಕರಿಸಿದರೆ ಅವನು **ಅಪವಿದ್ಧನು.** "मातापितृभ्यामुत्सृष्टं तयोरन्यतरेण वा। तं पुत्रं परिगृह्णीयादपविद्धः स उच्यते" मनु० ९-१७१।

(7) ತಂದೆಯ ಮನೆಯಲ್ಲಿರುವಾಗ ಮಗಳ ಕನ್ಯಾವಸ್ಥೆಯಲ್ಲಿ ರಹಸ್ಯ ಸಂಬಂಧದಿಂದ ಜನಿಸಿದವನು **ಕಾನೀನನು.**

"पितृवेश्मनि कन्या तु यं पुत्रं जनयेद्रहः। तं कानीनं वदेन्नाम्ना वोढुः कन्यासमुद्भवम्" मनु० ९-१७२।

(8) ಗರ್ಭಿಣಿಯಾಗಿರುವುದನ್ನು ತಿಳಿದೂ ಅಥವಾ ತಿಳಿಯದೆ ಮದುವೆಯಾದ ಹೆಂಗಸಿನಲ್ಲಿ ಜನಿಸುವ ಪುತ್ರನು ಯಜಮಾನನಿಗೆ **ಸಹೋಢಪುತ್ರನು.** "या गर्भिणी संस्क्रियते ज्ञाताऽज्ञातापि वा सती। वोढुः स गर्भो भवति सहोढ इति चोच्यते" मनु० ९-१७३।

(9) ಪುತ್ರಸಂತಾನವಿಲ್ಲದವನು ಜನಕತಾಯಿತಂದೆಗಳಿಂದ ಕ್ರಯಕ್ಕೆ ಪಡೆದ ಮಗನು ಅವನಿಗೆ **ಕ್ರೀತಕಪುತ್ರ**ನಾಗುವನು. "क्रीणीयाद्यस्त्वपत्यार्थं मातापित्रोर्यमन्तिकात्। स क्रीतकः सुतस्तस्य सदृशोऽसदृशोऽपि वा" मनु० ९-१७४।

(10) ಪತಿಯಿಂದ ಪರಿತ್ಯಜಿಸಲ್ಪಟ್ಟವಳೂ ಅಥವಾ ವಿಧವೆಯಾದವಳೂ ಸ್ವೇಚ್ಛೆಯಿಂದ ಮತ್ತೊಬ್ಬನನ್ನು ಮದುವೆಯಾಗಿ ಪಡೆಯುವ ಮಗನು ಅವನಿಗೆ **ಪೌನರ್ಭವನು.** "या पत्या वा परित्यक्ता विधवा वा स्वयेच्छया। उत्पादयेत्पुनर्भूत्वा स पौनर्भव उच्यते" मनु० ९-१७५।

(11) ಮಾತಾಪಿತೃಗಳಿಲ್ಲದವನಾಗಿ ಅಥವಾ ಅವರಿಂದ ಕಾರಣವಿಲ್ಲದೆ ತ್ಯಜಿಸಲ್ಪಟ್ಟವನಾಗಿ ತನ್ನನ್ನು ತಾನಾಗಿಯೇ ಯಾವನಿಗಾದರೂ ದಾನಮಾಡಿಕೊಂಡರೆ ಅವನಿಗೆ ಅವನು **ಸ್ವಯಂದತ್ತಪುತ್ರ**ನಾಗುತ್ತಾನೆ. "मातापितृविहीनो यस्त्यक्तो वा स्यादकारणात्। आत्मानं स्पर्शयेद्यस्मै स्वयंदत्तस्तु स स्मृतः" मनु० ९-१७७।

(12) ವಿಪ್ರನು ಶೂದ್ರಸ್ತ್ರೀಯೊಡನೆ ಕಾಮತೃಪ್ತಿಗಾಗಿ ಸಂಬಂಧ ಹೊಂದಿ ಅವಳಲ್ಲಿ ಪಡೆಯುವ ಪುತ್ರನು **ಶೌದ್ರ.** "यं ब्राह्मणस्तु शूद्रायां कामादुत्पादयेत्सुतम्। स पारयन्नेव शवः तस्मात्पारशवः स्मृतः" मनु० ९-१७८।

"ऋणानुबन्धरूपेण पशुपत्नीसुतादयः" ಎಂಬಂತೆ ಜನ್ಮಾಂತರ ಋಣವನ್ನು ತೀರಿಸಿಕೊಳ್ಳಲು ಮತ್ತು ತೀರಿಸಲು ಪುತ್ರನಾಗಿ ಹುಟ್ಟುವನು. ಹೀಗೆಯೇ ಪತ್ನಿ ತಾಯಿ ತಂದೆ ಸೇವಕರು ಸ್ತ್ರೀಯರು ಮಿತ್ರರು ಸ್ವಜನ ಮತ್ತು ಬಾಂಧವರೂ ಈ ಸಂಬಂಧ ಕಲ್ಪಿಸಿಕೊಂಡು ಬಂದು ಸೇರುತ್ತಾರೆ. ಇವರೆಲ್ಲರೂ (1) ऋणसम्बन्धी (2) न्यासापहारकः (3) रिपुः ಮತ್ತು (4) प्रियः ಎಂದು ನಾಲ್ಕು ವಿಧವಾಗಿ ಹುಟ್ಟುತ್ತಾರೆ. "ऋणसम्बन्धिनः केचित् केचिन्न्यासापहारकाः। रिपवश्च प्रियाश्चेति स्वकर्मवशवर्तिनः। भेदैश्चतुर्भिर्जायन्ते पुत्रा मित्राः स्त्रियस्तथा। भार्या पिता च माता च भृत्याः स्वजनबान्धवाः। स्वेन स्वेन हि जायन्ते सम्बन्धेन महीतले"।

ಋಣವನ್ನು ಪಡೆದು ಅದನ್ನು ತೀರಿಸದೆ ಮೃತನಾದರೆ ಅವನಿಗೆ ಪುತ್ರನಾಗಿ ಸಹೋದರನಾಗಿ ತಂದೆ ಅಥವಾ ಮಿತ್ರನಾಗಿ ಹುಟ್ಟಿ ಅವನ ಋಣವನ್ನು ತೀರಿಸಬೇಕು. ಮಿತ್ರಭಾವದಿಂದಿದ್ದು ಅವರ ಋಣವನ್ನು ತೀರಿಸುವ ಪುತ್ರನು **ಋಣಸಂಬಂಧಿ** ಪುತ್ರನು. "ऋणं यस्य गृहीत्वा यः प्रयाति मरणं किल। अन्नदाता सुतो भूत्वा भ्राता वाथ पिता प्रियः। मित्ररूपेण वर्तेत अन्तर्दुष्टः सदैव सः"। ತಾಯಿತಂದೆಗಳು ಸಂಪಾದಿಸಿಟ್ಟಿದ್ದ ದ್ರವ್ಯವನ್ನು ಅಪಹರಿಸುವವನು **ನ್ಯಾಸಾಪಹಾರಕನು.**

**रिपुपुत्रलक्षणम् :** ಜನ್ಮಾಂತರದ ದ್ವೇಷವನ್ನು ತೀರಿಸಿಕೊಳ್ಳುವ ವ್ಯಾಜದಿಂದ ಹುಟ್ಟುವವನು **ರಿಪುಪುತ್ರನು.** ಇವನು ಬಾಲ್ಯದಲ್ಲಿ ಯಾವಾಗಲೂ ನಿಷ್ಠುರವಾಗಿ ಮಾತನಾಡುತ್ತ ಶತ್ರುವಿನಂತೆಯೇ ವರ್ತಿಸುತ್ತಾನೆ. ವಿನೋದದ ಮಾತನಾಡುತ್ತಲೇ ತಾಯಿತಂದೆಗಳನ್ನು ಹೊಡೆಯುತ್ತಾನೆ. ಹೊಡೆದೂ ನಗುತ್ತಾ ಮನೆ ಬಿಟ್ಟು ಹೊರಡುತ್ತಾನೆ, ಮತ್ತೆ ಮನೆಗೆ ಬಂದು ಕೋಪದಿಂದ ಮಾತನಾಡುತ್ತ ತನ್ನ ಜನ್ಮಾಂತರದ ದ್ವೇಷವನ್ನು ತೀರಿಸಿಕೊಳ್ಳುತ್ತಾನೆ. "बाल्ये वयसि संप्राप्ते रिपुवद्वर्तते सदा। पितरं मातरं चैव क्रीडमानो हि ताडयेत्। ताडयित्वा प्रयात्येवं प्रहस्यैवं पुनः पुनः। पुनरायाति तं तत्र पितरं मातरं पुनः। सक्रोधो वर्तते नित्यं वैरकर्मणि सर्वदा। प्रयात्येवं स दुष्टात्मा पूर्ववैरानुभावतः"।

**प्रियपुत्रलक्षणम् :** ಪ್ರೀತಿಪಾತ್ರನಾದ ಪುತ್ರನು ಬಾಲ್ಯದಿಂದಲೇ ತನ್ನ ಆಟಪಾಟಾದಿಗಳಿಂದ ತಾಯಿತಂದೆಗಳನ್ನು ಸಂತೋಷಪಡಿಸುತ್ತಾ ವಯಸ್ಸು ಪ್ರಾಪ್ತವಾದನಂತರ ಅವರಿಗೆ ಹಿತವಾದ ಕಾರ್ಯಗಳನ್ನು ಮಾಡುತ್ತ ಭಕ್ತಿಯಿಂದ ಅವರ ಶುಶ್ರೂಷೆ ಮಾಡುತ್ತ ಮುಪ್ಪಿನಲ್ಲಿ ಅವರನ್ನು ಸಲಹುವವನು **ಪ್ರಿಯಪುತ್ರನು.** "जातमात्रः प्रियं कुर्याद्बाल्ये नटनक्रीडनैः। वयः प्राप्य प्रियं कुर्यान्मातापित्रोरनन्तरम्। भक्त्या सन्तोषयेन्नित्यं तावुभौ परिपालयेत्। स्नेहेन वचसा चैव प्रियसम्भाषणेन च"।

**सत्पुत्रलक्षणम् :** ಪುಣ್ಯಕಾರ್ಯನಿರತನೂ ಸತ್ಯನುಡಿಯುವುದು ಧರ್ಮಕಾರ್ಯಾಚರಣೆ ಇವುಗಳಲ್ಲಿ ಆಸಕ್ತನೂ ಜ್ಞಾನಸಂಪನ್ನನೂ ಬುದ್ಧಿವಂತನೂ ವಾಕ್ಚತುರನೂ ಸಕಲ ಕಾರ್ಯನಿರ್ವಹಣೆಯಲ್ಲೂ ಧೈರ್ಯಶಾಲಿಯೂ ವೇದಾಧ್ಯಯನ ತತ್ಪರನೂ ದೇವತಾಕಾರ್ಯಗಳಲ್ಲಿ ಶ್ರದ್ಧೆಯುಳ್ಳ

ವುದು, ಬೆಳೆಯುವುದು. पुष कर्तं० "क्तिच्"। "पुष्टिं जनाः पुष्य इव द्वितीये" रघु० १८-३२। 3. ಧರ್ಮ ಪುರುಷನ ಪತ್ನಿ. "नामतो धर्मपत्न्यस्ताः कीर्त्यमाना निबोध मे। कीर्तिर्लक्ष्मीर्धृतिर्मेधा पुष्टिः श्रद्धा क्रिया तथा" भा० आदि० ६७-१४। 4. ಗಣಪತಿಯ ಪತ್ನಿ. "पुष्टिर्गणपतेः पत्नी पूजिता जगतीतले"। 5. ಅಶ್ವಗಂಧಾ ಗಿಡ.

**पुष्टिका ಪುಷ್ಟಿಕಾ** (स्त्री०) ಕಪ್ಪೆಚಿಪ್ಪು. पुष्टयै कं जलं यस्याः।

**पुष्टिकान्त ಪುಷ್ಟಿಕಾಂತ** (पुं०) ಗಣಪತಿ. ಪುಷ್ಟಿಯ ಪತಿ. पुष्टेः कान्तः।

**पुष्टिदा ಪುಷ್ಟಿದಾ** (स्त्री०) 1. ಅಶ್ವಗಂಧಾ. पुष्टिं ददाति — डुदाञ् (दाने) "कः" (३-२-३)। (वि०) 2. ದೇಹಕ್ಕೆ ಪುಷ್ಟಿಯುಂಟುಮಾಡುವ.

**पुष्णत् ಪುಷ್ಣತ್** (वि०) ಸಾಕುತ್ತಿರುವ. ಸಲಹುತ್ತಿರುವ. पुष (पुष्टौ) "शतृ" (३-२-१२४)। स्त्रियां "ङीप्" (४-१-६)। —ती —ತೀ.

**पुष्प ಪುಷ್ಪ** (न०) 1. ಪುಷ್ಪ, ಹೂವು. पुष्यति — पुष्प (विकसने) "अच्" (३-१-१३४)। "पुष्पं प्रवालोपहितं यदि स्यात् मुक्ताफलं वा यदि विद्रुमस्थम्" कुमा० १-४४। 2. ಹೆಂಗಸರ ರಜಸ್ಸು. पुष्यते — पुष्प कर्म० "घञ्" (३-३-१९)। 3. ವಿಕಾಸ, ಅರಳುವಿಕೆ. 4. ಕುಬೇರನ (ಪುಷ್ಪಕ) ವಿಮಾನ. 5. ಒಂದು ವಿಧ ನೇತ್ರರೋಗ. "पुष्पं विकास आर्तवे। धनदस्य विमाने च कुसुमे नेत्ररुज्यपि" हेम०। (पुं०) 6. ವಿಕಾಸ. 7. ಪ್ರಕಾಶ. पुष्प (विकसने) "घञ्" (३-३-१८)।

**पुष्पक ಪುಷ್ಪಕ** (न०) 1. ಕುಬೇರನ ವಿಮಾನ. पुष्यति— पुष्प (विकसने) "क्वुन्" (उ० २-३२)। ಶಬ್ದಾರ್ಣವದಲ್ಲಿ "विमानं पुष्पकोऽस्त्री" ಎಂದಿರುವುದರಿಂದ ಪುಲ್ಲಿಂಗದಲ್ಲೂ ಪ್ರಯೋಗವುಂಟು. "वैमानिकाः पुण्यकृतस्त्यजन्तु मरुतां पथि। पुष्पकालोकसंक्षोभं मेघावरणतत्पराः" रघु० १०-४६। 2. ಪುಷ್ಪ, ಹೂವು. पुष्प स्वार्थे "कन्"। 3. ವಿಷವಿಲ್ಲದ ಒಂದು ಜಾತಿಯ ಹಾವು. 4. ಹಿತ್ತಾಳೆ. 5. ಒಂದು ವಿಧ ನೇತ್ರರೋಗ. 6. ರಸಾಂಜನ, 7. ಕುಸುಮಾಂಜನ, ನೇತ್ರಪುಷ್ಪ (ಕಣ್ಣಿನಲ್ಲಿ ಬೆಳೆಯುವ ಹೂ) ವನ್ನು ಕರಗಿಸುವ ಒಂದು ಅಂಜನ. 8. ರತ್ನಖಚಿತವಾದ ಬಳೆ. 9. ಮಣ್ಣಿನ ಅಗ್ಗಿಷ್ಟಿಕೆ.

**पुष्पकरण्डक ಪುಷ್ಪಕರಂಡಕ** (न०) 1. ಪುಷ್ಪದ ಪಾತ್ರೆ, ಹೂವಿನ ಬುಟ್ಟಿ. पुष्पस्य करण्डकम्। 2. ಅವಂತಿ ದೇಶದಲ್ಲಿರುವ ಒಂದು ಪುಷ್ಪೋದ್ಯಾನ. "महाकालस्योज्जयिनी विशालाऽवन्तिका तथा। तस्योद्यानं तु विज्ञेयं नाम्ना पुष्पकरण्डकम्"।

**पुष्पकरण्डिनी ಪುಷ್ಪಕರಂಡಿನೀ** (स्त्री०) ಉಜ್ಜಯಿನೀ ನಗರ.

**पुष्पकाल ಪುಷ್ಪಕಾಲ, —समय —ಸಮಯ** (पुं०) 1. ವಸಂತ ಋತು, ಪುಷ್ಪಪ್ರಚುರವಾದ ಕಾಲ. 2. ಹೆಂಗಸರು ಋತುಮತಿಯರಾಗುವ ಕಾಲ.

**पुष्पकासीस ಪುಷ್ಪಕಾಸೀಸ** (न०) ಗಂಧಕಾಮ್ಲ ಲವಣ.

**पुष्पकीट ಪುಷ್ಪಕೀಟ** (पुं०) 1. ಭ್ರಮರ, ದುಂಬಿ. पुष्पप्रियः कीटः। "इन्दिन्दिरः पुष्पकीटो मधुव्रो मधुकेशटः" त्रिकाण्ड०। 2. ಹೂವಿನೊಳಗಿರುವ ಹುಳ.

**पुष्पकेतन ಪುಷ್ಪಕೇತನ, —केतु —ಕೇತು** (पुं०) ಕಾಮದೇವ, ಮನ್ಮಥ.

**पुष्पचाप ಪುಷ್ಪಚಾಪ** (पुं०) 1. ಕಾಮದೇವ, ಮನ್ಮಥ. पुष्पं चापो यस्य। "जितेन्द्रिये शूलिनि पुष्पचापः स्वकार्यसिद्धिं पुनराशशंसे" कुमा० ३-५७। 2. ಪುಷ್ಪರೂಪವಾದ ಧನುಸ್ಸು. "शैलसारमपि नातियत्नत पुष्पचापमिव पेशलं स्मरः" रघु० ११-४५।

**पुष्पचामर ಪುಷ್ಪಚಾಮರ** (पुं०) 1. ತಾಳೆಗಿಡ, ಕೇತಕ ವೃಕ್ಷ. 2. ಮದನವೃಕ್ಷ, ಮಂಗಾರೆ ಗಿಡ, 3. ಬೆತ್ತ.

**पुष्पदन्त ಪುಷ್ಪದಂತ** (पुं०) 1. ವಾಯುದಿಕ್ಕಿನ ದಿಗ್ಗಜ. पुष्पमिव शुक्लो दन्तोऽस्य। 2. ಒಬ್ಬ ವಿದ್ಯಾಧರ. 3. ಒಂದು ಆನೆ. 4. ಷಣ್ಮುಖನ ಒಬ್ಬ ಅನುಚರ. 5. ಒಬ್ಬ ಜಿನ.

**पुष्पद्रव ಪುಷ್ಪದ್ರವ** (पुं०) 1. ಮಕರಂದ, ಪುಷ್ಪರಸ. 2. ಪುಷ್ಪವನ್ನು ಊರುಹಾಕಿ ತೆಗೆದ ಕಷಾಯ.

**पुष्पद्रु ಪುಷ್ಪದ್ರು, —द्रुम —ದ್ರುಮ** (पुं०) ಹೂವಿನ ಗಿಡ.

**पुष्पधनुस् ಪುಷ್ಪಧನುಸ್** (पुं०) 1. ಕಾಮದೇವ, ಮನ್ಮಥ. पुष्पं धनुरस्य। संज्ञायाम् अनङः वैकल्पिकत्वात् न अनङ् (५-४-१३३)। "द्रुतमेत्य पुष्पधनुषो धनुषः कुमुदेऽङ्गनामनसि चावसरम्" माघ० ९-४१। 2. ಮನ್ಮಥನ ಬಿಲ್ಲು.

**पुष्पधन्वन् ಪುಷ್ಪಧನ್ವನ್** (पुं०) ಪುಷ್ಪವೇ ಧನುಸ್ಸಾಗಿರುವ ಮನ್ಮಥ. पुष्पं धनुरस्य "अनङ्" (५-४-१३२)। "संमोहनं नाम च पुष्पधन्वा धनुष्यमोघं समधत्त बाणम्" कुमा० ३-६६।

**पुष्पनिक्ष ಪುಷ್ಪನಿಕ್ಷ** (ಪುಂ) ಭ್ರಮರ, ದುಂಬಿ. पुष्पं निक्षति — निक्ष "अण्" (३-२-१)।

**पुष्पनिर्यास ಪುಷ್ಪನಿರ್ಯಾಸ** (ಪುಂ) ಮಕರಂದ, ಪುಷ್ಪರಸ. पुष्पस्य निर्यासः।

**पुष्पन्धय ಪುಷ್ಪಂಧಯ** (ಪುಂ) 1. ಭ್ರಮರ, ದುಂಬಿ. पुष्पं धयति — धेट् (पाने) "खश्"। मुमागमः (६-३-६७)। (ವಿಂ) 2. ಪುಷ್ಪರಸವನ್ನು ಕುಡಿಯುವವನು.

**पुष्पपुर ಪುಷ್ಪಪುರ** (ನಂ) ಪಾಟಲಿಪುತ್ರ ನಗರ, ಕುಸುಮಪುರ. ಪೂರ್ವದಲ್ಲಿ ಇದು ಪಾಟಲಿಪುತ್ರ ನಗರದ ಒಂದು ಭಾಗದ ಹೆಸರಾಗಿದ್ದಿತು. ಇದು ರಾಜಧಾನಿಯಾದ ಕಾಲದಿಂದ ಕಾಲಕ್ರಮದಲ್ಲಿ ಸಂಪೂರ್ಣನಗರವೂ पुष्पपुरम् कुसुमपुरम् ಎಂಬ ಹೆಸರನ್ನು ಪಡೆದು ಪ್ರಸಿದ್ಧಿಪಡೆಯಿತು.

**पुष्पप्रचय ಪುಷ್ಪಪ್ರಚಯ** (ಪುಂ) 1. ಕಳ್ಳತನದಿಂದ ಹೂವನ್ನು ಬಿಡಿಸುವುದು. पुष्पाणां प्रचयः। पुष्पप्रचयं चौर्येण। 2. ಮರದ ಮೇಲೆ ಹತ್ತಿ ಹೂವನ್ನು ಬಿಡಿಸುವುದು. 3. ಭೂಮಿಯಲ್ಲಿ ನಿಂತು ಕೋಲು ಮೊದಲಾದುವುಗಳಿಂದ ಗಿಡದ ಹೂವನ್ನು ಬಿಡಿಸುವುದು. भूमौ स्थित्वा वृक्षाग्रस्थानां पुष्पाणां यष्टया प्रचयं करोति।

**पुष्पप्रचाय ಪುಷ್ಪಪ್ರಚಾಯ** (ಪುಂ) ಭೂಮಿಯಲ್ಲಿ ನಿಂತು ಕೈಯಿಂದ ಗಿಡದ ಹೂವನ್ನು ಬಿಡಿಸುವುದು. पुष्पाणां प्रचायः — प्र + चिञ् (चयने) (हस्तादाने) "घञ्" (३-३-४०)।

**पुष्पप्रचायिका ಪುಷ್ಪಪ್ರಚಾಯಿಕಾ** (ಸ್ತ್ರೀಂ) ಕ್ರಮವಾಗಿ ಪುಷ್ಪವನ್ನು ಬಿಡಿಸುವುದು, ಗಿಡದಿಂದ ಒಂದಾದ ಮೇಲೊಂದು ಹೂವನ್ನು ಬಿಡಿಸುವುದು. पुष्प + प्र+चिञ् (चयने) पर्याये "ण्वुच्" (३-३-१११)।

**पुष्पफल ಪುಷ್ಪಫಲ** (ಪುಂ) 1. ಕಪಿತ್ಥ ವೃಕ್ಷ, ಬೇಲದ ಮರ. पुष्पयुक्तं फलमस्य। 2. ಕೂಷ್ಮಾಂಡ, ಕುಂಬಳ ಗಿಡ.

**पुष्पबाण ಪುಷ್ಪಬಾಣ** (ಪುಂ) ಕಾಮದೇವ, ಪುಷ್ಪವೇ ಬಾಣವಾಗಿ ಉಳ್ಳ ಮನ್ಮಥ.

**पुष्पमाला ಪುಷ್ಪಮಾಲಾ** (ಸ್ತ್ರೀಂ) ಹೂವಿನ ಮಾಲೆ.

**पुष्पमास ಪುಷ್ಪಮಾಸ** (ಪುಂ) 1. ಚೈತ್ರಮಾಸ. पुष्पप्रधानो मासः। 2. ವಸಂತ ಸಮಯ, ವಸಂತ ಋತು.

**पुष्परजस् ಪುಷ್ಪರಜಸ್** (ನಂ) ಮಕರಂದ, ಹೂವಿನ ಧೂಳು.

**पुष्परथ ಪುಷ್ಪರಥ** (ಪುಂ) ಪುಷ್ಪದಿಂದ ನಿರ್ಮಿತವಾದ ರಥ, ಹೂವಿನಿಂದ ಅಲಂಕರಿಸಲ್ಪಟ್ಟ ರಥ. पुष्पनिर्मितो रथः।

**पुष्पराग ಪುಷ್ಪರಾಗ** (ಪುಂ) ಪುಷ್ಪರಾಗ ಮಣಿ. पुष्पस्येव रागो वर्णो यस्य। "तस्य प्रभा निर्जितपुष्परागं पौष्यां तिथौ पुष्यमसूत पत्नी" रघुं १८-३२। **–राजः –ರಾಜಃ** पुष्पमिव राजते—राज् (दीप्तौ) "अच्" (३-१-१३४)।

**पुष्परेणु ಪುಷ್ಪರೇಣು** (ಪುಂ) ಪುಷ್ಪದ ಧೂಳು, ಮಕರಂದ. पुष्पस्य रेणुः। "सेव्यमानौ सुखस्पर्शैः सालनिर्यासगन्धिभिः। पुष्परेणूत्किरैर्वातैराधूतवनराजिभिः" रघुं १-३८।

**पुष्पलाव ಪುಷ್ಪಲಾವ** (ಪುಂ) ಹೂವಾಡಿಗ, ಮಾಲೆಯನ್ನು ರಚಿಸಲು ಹೂವನ್ನು ಬಿಡಿಸುವವನು. पुष्पाणि लुनाति— लूञ् (छेदने) "अण्" (३-२-१)। स्त्रियां "ङीप्" (४-१-१५)। **–लावी –ಲಾವೀ.** ಹೂವಾಡಿಗನ ಹೆಂಡತಿ. "गण्डस्वेदापनयनरुजाक्लान्तकर्णोत्पलानां छायादानात्क्षणपरिचितः पुष्पलावीमुखानाम्" मेघं १-२६।

**पुष्पलाविन् ಪುಷ್ಪಲಾವಿನ್** (ಪುಂ) ಮಾಲಾಕಾರ, ಹೂವಾಡಿಗ, ಮಾಲೆಯನ್ನು ರಚಿಸಲು ಹೂವನ್ನು ಬಿಡಿಸುವವನು. पुष्पाणि लुनाति — लूञ् (छेदने) "णिनिः" (३-२-७८)।

**पुष्पलिह् ಪುಷ್ಪಲಿಹ್** (ಪುಂ) ಭ್ರಮರ, ದುಂಬಿ. पुष्पं लेढि — लिह (आस्वादने) "क्विप्" (३-२-७६)।

**पुष्पवती ಪುಷ್ಪವತೀ** (ಸ್ತ್ರೀಂ) ಪುಷ್ಪವತಿಯಾದ ಹೆಂಗಸು, ಋತುಮತಿಯಾದ ಕನ್ಯೆ. पुष्पं रजोऽस्त्यस्याः "मतुप्" (५-२-९४)। "ङीप्" (४-१-६)।

**पुष्पवन्तौ ಪುಷ್ಪವಂತೌ** (ಪುಂ ದ್ವಿವಂ) ಸೂರ್ಯಚಂದ್ರರು. पुष्पो विकासः प्रकाशश्च अनयोरस्ति "मतुप्" (५-२-९४)। पुष्पवन्तौ पुष्पवद्भ्यां पुष्पवतोः। ಈ ಅರ್ಥದಲ್ಲಿ ಅಕಾರಾಂತ ಪುಷ್ಪವಂತ ಶಬ್ದವೂ ಉಂಟು. अव (रक्षणे) "झच्" (उं ३-१२६)। झोऽन्तः (७-१-३) पुष्पस्यावन्तौ, शकं। पुष्पवन्तौ पुष्पवन्ताभ्यां पुष्पवन्तयोः ಇತ್ಯಾದಿ ರೂಪಗಳು. "रविशशिनौ पुष्पवन्ताख्यौ" नाममाला।

**पुष्पवर्ष ಪುಷ್ಪವರ್ಷ** (ಪುಂನಂ) ಹೂವಿನ ಮಳೆ. पुष्पाणां वर्षम्। "वृष्टिर्वर्षम्" अमं। "सुरभि सुरविमुक्तं पुष्पवर्षं पपात" रघुं १२-१०२। "वर्षोऽस्त्री भारतादौ च जम्बूद्वीपाब्दवृष्टिषु" मेदिं। ಆದುದರಿಂದ "वर्ष" ಶಬ್ದವು ಪುಂನಪುಂಸಕಲಿಂಗ.

**पुष्पवृष्टि ಪುಷ್ಪವೃಷ್ಟಿ** (ಸ್ತ್ರೀಂ) ಹೂವಿನ ಮಳೆ, ಹೂವನ್ನು ಮೇಲಿನಿಂದ ಸುರಿಯುವುದು. पुष्पाणां वृष्टिः। "परस्पर-

शरव्राताः पुष्पवृष्टिं न सेहिरे" रघु० १२-१४। ಲೋಕಹಿತಾರ್ಥ ಸಾಹಸ ತೋರಿ ಮಹೋಪಕಾರ ಮಾಡಿದ ರಾಜರ ಮೇಲೆ ಅಥವಾ ಉತ್ಸವಕಾಲದಲ್ಲಿ ಮಂಗಳಾರ್ಥ ಹೂವಿನ ಮಳೆಯನ್ನು ಕರೆಯುವುದುಂಟು.

**पुष्पवाटी ಪುಷ್ಪವಾಟೀ** (स्त्री०) ಪುಷ್ಪೋದ್ಯಾನ, ಹೂವಿನ ತೋಟ. पुष्पाणां वाटी।

**पुष्पशकटी ಪುಷ್ಪಶಕಟೀ** (स्त्री०) ಆಕಾಶವಾಣಿ.

**पुष्पशर ಪುಷ್ಪಶರ** (पुं०) ಪುಷ್ಪವೇ ಬಾಣವಾಗಿ ಉಳ್ಳ ಮನ್ಮಥ. पुष्पं शरोऽस्य।

**पुष्पशरासन ಪುಷ್ಪಶರಾಸನ** (पुं०) ಪುಷ್ಪವೇ ಧನುಸ್ಸಾಗಿ ಉಳ್ಳ ಮನ್ಮಥ. पुष्पमयं शरासनं यस्य।

**पुष्पसमय ಪುಷ್ಪಸಮಯ** (पुं०) ವಸಂತಕಾಲ, ವಸಂತ ಋತು.

**पुष्पसार ಪುಷ್ಪಸಾರ** (पुं०) ಪುಷ್ಪರಸ.

**पुष्पहास ಪುಷ್ಪಹಾಸ** (पुं०) 1. ವಿಷ್ಣು. सायं पुष्पस्येव हासः भोग्यतोल्लासोऽस्य। "स्वात्मानुभवशक्तीनां सायं पुष्पवदस्य वै। हासोऽस्ति भोग्यतोल्लासः पुष्पहास इति स्मृतः" इति निरुक्तिः। "पुष्पहासः प्रजागरः" वि० स०। 2. ಪುಷ್ಪವು ವಿಕಾಸಹೊಂದುವುದು, ಹೂವು ಅರಳುವುದು. (स्त्री०)**-हासा-ಹಾಸಾ.** 3. ಋತುಮತಿಯಾದ ಹೆಂಗಸು, ರಜಸ್ವಲೆ. पुष्पं हास इव यस्याः।

**पुष्पागम ಪುಷ್ಪಾಗಮ** (पुं०) ವಸಂತ ಋತು, ಪುಷ್ಪಗಳು ಹೇರಳವಾಗಿ ಬಿಡುವ ಕಾಲ. पुष्पाण्यागच्छन्त्यत्र — आ + गम्लृ (गतौ) "अप्" (३-३-५८)।

**पुष्पा ಪುಷ್ಪಾ** (स्त्री०) ಚಂಪಾನಗರ, ಕರ್ಣನ ರಾಜಧಾನಿ.

**पुष्पाजीव ಪುಷ್ಪಾಜೀವ** (पुं०) ಹೂವಾಡಿಗ, ಹೂವನ್ನು ಮಾರಿ ಜೀವಿಸುವವನು. पुष्पाण्याजीवो जीविकास्य। पुष्पैराजीवति — आ + जीव (प्राणधारणे) "अच्" (३-१-१३४) इति वा।

**पुष्पाञ्जलि ಪುಷ್ಪಾಂಜಲಿ** (पुं०) ಹೂವಿನ ಬೊಗಸೆ.

**पुष्पाम्बुज ಪುಷ್ಪಾಂಬುಜ** (नं०) ಮಕರಂದ, ಪುಷ್ಪರಸ.

**पुष्पायुध ಪುಷ್ಪಾಯುಧ** (पुं०) ಪುಷ್ಪವೇ ಆಯುಧವಾಗಿ ಉಳ್ಳ ಮನ್ಮಥ. पुष्पमायुधमस्य। "पुष्पायुधस्यास्त्रिभिरर्धदग्धैः सितासितश्रीरघटि द्विजेन्द्रः" नैष० २२-६५।

**पुष्पावचय ಪುಷ್ಪಾವಚಯ** (पुं०) 1. ಹೂವನ್ನು ಕದಿಯುವುದು, ಕಳ್ಳತನದಿಂದ ಹೂವನ್ನು ಗಿಡದಿಂದ ಬಿಡಿಸುವುದು. पुष्पाणामवचयः — अव + चिञ् (चयने) "अच्" (३-३-५६)। 2. ಮರದ ಮೇಲೆ ಹತ್ತಿ ಹೂವನ್ನು ಬಿಡಿಸುವುದು. 3. ಭೂಮಿಯಲ್ಲಿ ನಿಂತು ಕೋಲು ಮೊದಲಾದುವುಗಳಿಂದ ಗಿಡದ ಹೂವನ್ನು ಬಿಡಿಸುವುದು.

**पुष्पावचाय ಪುಷ್ಪಾವಚಾಯ** (पुं०) ನೆಲದಲ್ಲಿ ನಿಂತು ಕೈಯಿಂದ ಗಿಡದ ಹೂವನ್ನು ಬಿಡಿಸುವುದು (ಕೊಯ್ಯುವುದು). अव + चिञ् (चयने) "घञ्" (३-३-४०)।

**पुष्पावचायिन् ಪುಷ್ಪಾವಚಾಯಿನ್** (पुं०) ಹೂವಾಡಿಗ, ಹೂವನ್ನು ಕಟ್ಟಿ ಮಾರಲು ಗಿಡದಿಂದ (ಹೂವನ್ನು) ಬಿಡಿಸುವವನು. पुष्पाण्यवचिनोति — अव + चिञ् (चयने) "णिनिः" (३-२-७८)।

**पुष्पासव ಪುಷ್ಪಾಸವ** (नं०) ಮಧು, ಜೇನುತುಪ್ಪ. पुष्पस्यासवम्। "गृहीतताम्बूलविलेपनस्रजः पुष्पासवामोदितवक्त्रपङ्कजाः" ऋतुसं०।

**पुष्पासार ಪುಷ್ಪಾಸಾರ** (पुं०) ಪುಷ್ಪವೃಷ್ಟಿ.

**पुष्पास्त्र ಪುಷ್ಪಾಸ್ತ್ರ** (पुं०) ಪುಷ್ಪವೇ ಅಸ್ತ್ರವಾಗಿ ಉಳ್ಳ ಮನ್ಮಥ. पुष्पाण्यस्त्राण्यस्य।

**पुष्पिका ಪುಷ್ಪಿಕಾ** (स्त्री०) 1. ದಂತಮಲ, ಹಲ್ಲಿನಲ್ಲಿ ಸೇರುವ ಕೊಳೆ, ಹಲ್ಲುಪಾಚಿ. 2. ಲಿಂಗದ ಮಲ.

**पुष्पिणी ಪುಷ್ಪಿಣೀ** (स्त्री०) ಋತುಮತಿಯಾದ ಹೆಂಗಸು, ರಜಸ್ವಲೆ.

**पुष्पित ಪುಷ್ಪಿತ** (वि०) 1. ಪುಷ್ಪಿಸಿರುವ, ಹೂವು ಬಿಟ್ಟಿರುವ. पुष्पमस्य सञ्जातम् "इतच्" (५-२-३६)। 2. ಅರಳಿರುವ, ವಿಕಾಸಹೊಂದಿದ. "एकेनापि सुवृक्षेण पुष्पितेन सुगन्धिना। वासितं तद्वनं सर्वं सुपुत्रेण कुलं यथा" चाणक्यः।

**पुष्पिताग्रा ಪುಷ್ಪಿತಾಗ್ರಾ** (स्त्री०) ವೃತ್ತರತ್ನಾಕರದ ಅರ್ಧಸಮವೃತ್ತಪ್ರಕರಣದಲ್ಲಿ ಉಕ್ತವಾದ ಒಂದು ವೃತ್ತ. ವಿಷಮ (1 ಮತ್ತು 3 ನೆಯ) ಪಾದಗಳಲ್ಲಿ ನಗಣದ್ವಯ ರಗಣ ಮತ್ತು ಯಗಣಗಳೂ, ಸಮ (2 ಮತ್ತು 4 ನೆಯ) ಪಾದಗಳಲ್ಲಿ ನಗಣ ಜಗಣ ಜಗಣ ರಗಣಗಳೂ ಮತ್ತು ಒಂದು ಗುರುವರ್ಣವೂ ಇದ್ದಲ್ಲಿ "**पुष्पिताग्रा**" ವೃತ್ತವಾಗುವುದು.

**ಲಕ್ಷಣ:** "अयुजि नयुगरेफतो यकारो युजि च नजौ जरगाश्च पुष्पिताग्रा" वृ०२०।

**ಗಣವಿನ್ಯಾಸ:**

न न र य । न ज ज र ग
III III OIO IOO । III IOI IOI OIO O

ಈ ವೃತ್ತದ ವಿಷಮ ಪಾದಗಳಲ್ಲಿ ಹನ್ನೆರಡು ಅಕ್ಷರಗಳೂ ಸಮಪಾದಗಳಲ್ಲಿ ಹದಿಮೂರು ಅಕ್ಷರಗಳೂ ಇರುವುವು.

**पुष्पिन् ಪುಷ್ಪಿನ್** (ವಿ०) ಪುಷ್ಪಗಳಿಂದ ಕೂಡಿದ. पुष्पाण्यस्य सन्ति "इनिः" (५-२-११५)।

**पुष्पेषु ಪುಷ್ಪೇಷು** (ಪುಂ०) ಪುಷ್ಪವೇ ಬಾಣವಾಗಿ ಉಳ್ಳ ಮನ್ಮಥ. पुष्पम् इषुर्यस्य। "तुल्याभिलाषामालोक्य स चैकां मुनिकन्यकाम्। ययावकस्मात् पुष्पेषुशराघात-रसज्ञताम्" कथास०। "पुष्पेषुणा ध्रुवममूनिषुवर्षजप्ति-हुंकारमन्त्रबलमस्मितशान्तशक्तीन्" नैष० ११-२६।

**पुष्पोत्कटा ಪುಷ್ಪೋತ್ಕಟಾ** (ಸ್ತ್ರೀ०) ರಾವಣ ಮತ್ತು ಕುಂಭಕರ್ಣ ಇವರ ತಾಯಿಯಾದ ಕೈಕಸಿಯ ಸಹೋದರಿ, ಬ್ರಹ್ಮಕುಲದಲ್ಲಿ ಹುಟ್ಟಿದ ಸುಮಾಲಿಯ ಮಗಳು. ರಾವಣಕುಂಭಕರ್ಣರು ಕೈಕಸಿಯ ಮಕ್ಕಳು. ರಾಮಾ०। ಪುಷ್ಪೋತ್ಕಟೆಯ ಮಕ್ಕಳು. ಭಾ०।

**पुष्य ಪುಷ್ಯ** (ಪುಂಸ್ತ್ರೀ०) 1. ಪುಷ್ಯ ನಕ್ಷತ್ರ. ಅಶ್ವಿನಿ ಮೊದಲಾದ ಇಪ್ಪತ್ತೇಳು ನಕ್ಷತ್ರಗಳಲ್ಲಿ ಎಂಟನೆಯ ನಕ್ಷತ್ರ. पुष्णाति कार्याणि पुष्यन्त्यस्मिन्नर्थाः इति वा—पुष (पुष्टौ) "क्यप्" (३-३-११६) निपा०। स्त्रियां "टाप्" (४-१-४)। ಈ ನಕ್ಷತ್ರವು ಬೃಹಸ್ಪತಿ ದೇವತಾಕವಾದುದು. ಇದು ಕರ್ಕಾಟಕರಾಶಿಗೆ ಸೇರಿದುದು. ಈ ನಕ್ಷತ್ರದಲ್ಲಿ ಹುಟ್ಟಿದವನು ಸುಂದರವಾದ ಶರೀರವುಳ್ಳವನೂ ತಾಯಿ ತಂದೆಗಳಲ್ಲಿ ಭಕ್ತಿಯುಳ್ಳವನೂ ಸ್ವಧರ್ಮದಲ್ಲಿ ಆಸಕ್ತಿಯುಳ್ಳವನೂ ಅಭಿನಯದಲ್ಲಿ ಪ್ರವೀಣನೂ ಬಹುಮೂಲ್ಯ ವಾಹನವುಳ್ಳವನೂ ಆಗಿರುವನು. "प्रसन्नगात्रः पितृमातृ-भक्तः स्वधर्मयुक्तोऽभिनयाभियुक्तः। भवेन्मनुष्यः खलु पुष्यजन्मा सम्मानचामीकरवाहनाढ्यः"। ಪುಷ್ಯ ನಕ್ಷತ್ರದಲ್ಲಿ ಹುಟ್ಟಿದವನಿಗೆ ಪ್ರಾರಂಭದಲ್ಲಿ ಶನಿದಶೆ ನಡೆಯುವುದು. ಪುಷ್ಯ ನಕ್ಷತ್ರವು ಸೀಮಂತ, ನಾಮಕರಣ, ಕರ್ಣವೇಧನ, ಅನ್ನಪ್ರಾಶನ, ಚೌಳ, ಉಪನಯನ, ವಿದ್ಯಾರಂಭ, ಮಂತ್ರಾರಂಭ, ವಿವಾಹ, ಗೃಹಾರಂಭ, ಗೃಹಪ್ರವೇಶ, ಧಾನ್ಯಸಂಗ್ರಹ ಮುಂತಾದ ಶುಭ ಕಾರ್ಯಗಳಿಗೆ ಪ್ರಶಸ್ತವಾದುದು. 2. ಪುಷ್ಯಮಾಸ. 3. ಕಲಿಯುಗ. "पुष्यः कलियुगः स्मृतः। नक्षत्रमासयोर्भेदे" मेदि०। 4. ಸೂರ್ಯವಂಶದ ಒಬ್ಬ ದೊರೆ, "तस्य प्रभानिर्जित-पुष्परागं पौष्यां तिथौ पुष्यमसूत पत्नी" रघु० १८-३२।

**पुष्यत् ಪುಷ್ಯತ್** (ವಿ०) 1. ವೃದ್ಧಿಪಡಿಸುತ್ತಿರುವ, ಹೆಚ್ಚಿಸುತ್ತಿರುವ, ಅಧಿಕಪಡಿಸುತ್ತಿರುವ. पुष (पुष्टौ) "शतृ" (३-२-१२४)। "पुष्यतां पाण्डरं छत्रं पुण्डरीकमिव श्रियः। धर्मोऽधर्मश्च नान्योस्ति रक्षणोपेक्षणे भुवः" याद० २२-१०। 2. ಪ್ರದರ್ಶಿಸುತ್ತಿರುವ, ತೋರಿಸುತ್ತಿರುವ.

**पुष्यरथ ಪುಷ್ಯರಥ** (ಪುಂ०) ಯುದ್ಧಕ್ಕಾಗಿ ಉಪಯೋಗಿಸದೆ ಉತ್ಸವಕಾಲದಲ್ಲಿ ಮಾತ್ರ ಉಪಯೋಗಿಸಲ್ಪಡುವ ಚಕ್ರದ ವಾಹನ. "असौ पुष्यरथश्चक्रयानं न समराय यत्" अम०। "महारथः पुष्यरथं रथाङ्गी क्षिप्रं क्षपानाथ इवाधिरूढः" माघ० ३-२२।

**पुस्त ಪುಸ್ತ** (ನ०) 1. ಬಳಿಯುವುದು, ಮೆತ್ತುವುದು, ಪೂಸುವುದು. 2. ಮಣ್ಣು ಮರ ಲೋಹ ಚರ್ಮ ಮುಂತಾದುವುಗಳಿಂದ ಮಾಡಿದ ಶಿಲ್ಪಕಾರ್ಯ. पुस्त्यते—पुस्त (आदरानादरयोः) + णिच् "अच्" (३-३-५६)। "मृदा वा दारुणा वाथ वस्त्रेणाप्यथ चर्मणा। लोहरत्नैः कृतं वापि पुस्तमित्यभिधीयते"। 3. ಪುಸ್ತಕ, ಗ್ರಂಥ. "पुस्तं क्लीबे पुस्तके च लेप्यादिशिल्पकर्मणि" मेदि०।

**पुस्तक ಪುಸ್ತಕ** (ನ०) ಗ್ರಂಥ, ಅಕ್ಷರಗಳಿಂದ ಬರೆಯಲ್ಪಟ್ಟ ಅರ್ಥವತ್ತಾದ ವಾಕ್ಯಗಳ ಸಮುದಾಯ. पुस्त स्वार्थे "कन्"।

**पुस्तकर्मन् ಪುಸ್ತಕರ್ಮನ್** (ನ०) 1. ಗ್ರಂಥರಚನೆ, ಗ್ರಂಥಗಳನ್ನು ಬರೆಯುವುದು. 2. ಬಳಿಯುವುದು, ಪೂಸುವುದು ಮತ್ತು ಮೆತ್ತುವುದು.

**पूग ಪೂಗ** (ಪುಂ०) 1. ಅಡಕೆ ಮರ. पुनाति—पूञ् (पवने) "गन्" (उ० १-१२१)। "ततो वेलातटेनैव फलवत्पूग-मालिना" रघु० ४-४४। 2. ರಾಶಿ, ಗುಂಪು, ಸಮೂಹ. "घनतां ध्रुवं नयति तेन भवद्गुणपूगपूरितमतृप्तया" माघ० ९-६४। 3. ಭಾವ, ಸ್ವಭಾವ. (ನ०) 4. ಅಡಕೆ, ಅಡಕೆಕಾಯಿ.

**पूगद्रुम ಪೂಗದ್ರುಮ** (ಪುಂ०) ಅಡಕೆಮರ.

**पूगपात्र ಪೂಗಪಾತ್ರ** (ನ०) ಉಗುಳುಪಾತ್ರೆ, ಉಗುಳುದಾನಿ, ತಾಂಬೂಲರಸವನ್ನು ಉಗುಳುವ ಪಾತ್ರೆ. पूगस्य चर्विततद्रसस्य पात्रम्। "पूगपात्रं फाल्गुकम्" हारा०।

**पूगपीठ ಪೂಗಪೀಠ** (ಪುಂನ०) ತಾಂಬೂಲರಸವನ್ನು ಉಗಿಯುವ ಪಾತ್ರೆ. "कटोलकः पतद्ग्रहः। पूगपीठं च" त्रिकाण्ड०।

**पूगपुष्पिका ಪೂಗಪುಷ್ಪಿಕಾ** (ಸ್ತ್ರೀ०) ವಿವಾಹಸಮಯದಲ್ಲಿ ಕೊಡುವ ತಾಂಬೂಲ, ಎಲೆ ಅಡಕೆ. पूगसहितं पुष्पमत्र "कप्" (५-४-१५४)। "कुहलिः पूगपुष्पिका" त्रिकाण्ड०।

**पूगफल ಪೂಗಫಲ** (ನ०) ಅಡಕೆಕಾಯಿ.

**पूजक ಪೂಜಕ** (ವಿ०) ಆರಾಧಕ, ಪೂಜೆಮಾಡುವವನು. पूजयति—पूज (पूजने) + णिच् "ण्वुल्" (३-१-१३३)।

**पूजन ಪೂಜನ** (न०) 1. ಪೂಜಿಸುವುದು, ಆರಾಧಿಸುವುದು. 2. ಗೌರವಿಸುವುದು. पूज (पूजने) + णिच् "ल्युट्" (३-३-११५)। "देवद्विजगुरुप्राज्ञपूजनं शौचमार्जवम्। ब्रह्मचर्यमहिंसा च शारीरं तप उच्यते" गीता १७-१४। (स्त्री०) **-नी -ನೀ.** ಹೆಣ್ಣುಗುಬ್ಬಚ್ಚಿ.

**पूजनीय ಪೂಜನೀಯ** (वि०) 1. ಪೂಜಿಸಲ್ಪಡುವ. 2. ಪೂಜೆಗೆ ಅರ್ಹನಾದ. 3. ಗೌರವಿಸಲು ಅರ್ಹನಾದ. पूज (पूजने) + णिच् "अनीयर्" (३-१-९६)। "तव्यः" (३-१-९६)। **-यितव्यः -ಯಿತವ್ಯಃ.**

**पूजयत् ಪೂಜಯತ್** (वि०) 1. ಪೂಜಿಸುತ್ತಿರುವ, ಆರಾಧಿಸುತ್ತಿರುವ. पूज (पूजने) + णिच् "शतृ" (३-२-१२४)। 2. ಗೌರವಿಸುತ್ತಿರುವ, ಮರ್ಯಾದೆಯಿಂದ ಸತ್ಕರಿಸುತ್ತಿರುವ. स्त्रियां "ङीप्" (४-१-६)। **-यन्ती -ಯಂತೀ.**

**पूजा ಪೂಜಾ** (स्त्री०) 1. ಪೂಜೆ, ದೇವರ ಪೂಜೆ, ದೇವತಾರಾಧನೆ. पूज (पूजने) + णिच् "अङ्" (३-३-१०५)। "अपि रामे महाभागा मम माता यशस्विनी। वन्यैरुपाहरत् पूजां पूजार्हे सर्वदेहिनाम्" रामा०। 2. ಗೌರವಿಸುವುದು, ಮರ್ಯಾದೆಯಿಂದ ಸತ್ಕರಿಸುವುದು. "प्रतिबध्नाति हि श्रेयः पूज्यपूजाव्यतिक्रमः" रघु० १-७९। "संप्राप्तो योऽतिथिः सायं सूर्योढो गृहमेधिनाम्। पूजया तस्य देवत्वं प्रयान्ति गृहमेधिनः" पञ्चतं० १-१८१। **ದೇವರ ಪೂಜೆಯ ಅಷ್ಟಾದಶೋಪಚಾರಗಳು:** (1) ಆಸನ (2) ಸ್ವಾಗತ (3) ಪಾದ್ಯ (4) ಅರ್ಘ್ಯ (5) ಆಚಮನೀಯ (6) ಸ್ನಾನ (7) ವಸ್ತ್ರ (8) ಉಪವೀತ (9) ಗಂಧ (10) ಪುಷ್ಪ (11) ಆಭರಣ (12) ಧೂಪ (13) ದೀಪ (14) ಭೋಜ್ಯ (ನೈವೇದ್ಯ) (15) ದರ್ಪಣ (16) ಮಾಲ್ಯಾನುಲೇಪನ (17) ನಮಸ್ಕಾರ ಮತ್ತು (18) ವಿಸರ್ಜನೆ. तन्त्रसा०।

**पूजार्ह ಪೂಜಾರ್ಹ** (वि०) 1. ಪೂಜೆಗೆ ಅರ್ಹನಾದ, ಆರಾಧಿಸಲು ಯೋಗ್ಯನಾದ. पूजामर्हति—अर्ह (पूजायाम्) "अच्" (३-२-१२)। 2. ಮಾನ್ಯನಾದ, ಗೌರವಿಸಲು ಯೋಗ್ಯನಾದ. "प्रजनार्थं महाभागा पूजार्हा गृहदीप्तयः। स्त्रियः श्रियश्च गेहेषु न विशेषोऽस्ति कश्चन" मनु० ९-२६।

**पूजित ಪೂಜಿತ** (वि०) 1. ಪೂಜಿಸಲ್ಪಟ್ಟ, ಆರಾಧಿಸಲ್ಪಟ್ಟ. पूज (पूजने) + णिच् "क्तः" (३-२-१०२)। "निवृत्ते भरते धीमानत्र रामस्तपोवनम्। प्रपेदे पूजितस्तस्मिन् दण्डकारण्यमीयिवान्" भट्टि० ४-१। 2. ಗೌರವಿಸಲ್ಪಟ್ಟ, ಮರ್ಯಾದೆಮಾಡಲ್ಪಟ್ಟ.

**पूजिल ಪೂಜಿಲ** (पुं०) 1. ದೇವತೆ, ದೇವರು. पूज (पूजने) + णिच् "इलच्" (उ० १-५७)। (वि०) 2. ಪೂಜ್ಯನಾದ, ಗೌರವಕ್ಕೆ ಅರ್ಹನಾದ. 3. ಪೂಜಾರ್ಹ, ಆರಾಧಿಸಲು ಅರ್ಹನಾದ.

**पूज्य ಪೂಜ್ಯ** (वि०) 1. ಪೂಜೆಗೆ ಅರ್ಹನಾದ, ಆರಾಧಿಸಲು ಯೋಗ್ಯನಾದ. पूजयितुमर्हः — पूज (पूजने) + णिच् "यत्" (३-१-९७)। "प्रतिबध्नाति हि श्रेयः पूज्यपूजाव्यतिक्रमः" रघु० १-७९। 2. ಗೌರವಿಸಲು ಅರ್ಹನಾದ. 3. ಪೂಜಿಸಲ್ಪಡುವ. 4. ಗೌರವಿಸಲ್ಪಡುವ. "य एव विद्वान् तपसा च वृद्धः स एव पूज्यो भवति द्विजानाम्" मत्स्यपु०। (पुं०) 5. ಶ್ವಶುರ, ಮಾವ, ಪತ್ನಿಯ ತಂದೆ, ಪತಿಯ ತಂದೆ. "पूज्यः श्वशुरवन्द्ययोः" मेदि०।

**पूत ಪೂತ** (पुं०) 1. ಶಂಖ. पवते — पूङ् (पवने) कर्त० "क्तः" (३-४-७२)। 2. ಬಿಳಿಯ ದರ್ಭೆ. 3. ಹುಳಿಬೇಲ. (न०) 4. ಸತ್ಯ, ದಿಟ, ನಿಜ, ಪ್ರಾಮಾಣಿಕತೆ. 5. ತೂರಿದ ಧಾನ್ಯ, ಹೊಟ್ಟಿನಿಂದ ಬೇರ್ಪಡಿಸಲ್ಪಟ್ಟ ಧಾನ್ಯ. (वि०) 6. ಪವಿತ್ರವಾದ, ಪರಿಶುದ್ಧವಾದ. 7. ಚೆನ್ನಾಗಿ ಶೋಧಿಸಲ್ಪಟ್ಟ, ಯಾವ ದೋಷವೂ ಇಲ್ಲದ. "दृष्टिपूतं न्यसेत् पादं वस्त्रपूतं जलं पिबेत्। सत्यपूतां वदेद्वाचं मनःपूतं समाचरेत्" मनु० ६-४६। 8. ಪ್ರಾಯಶ್ಚಿತ್ತ ವ್ರತ ಮೊದಲಾದುವುಗಳಿಂದ ಶುದ್ಧನಾದ. 9. ಪವಿತ್ರವಾದ. "अश्रान्तश्रुतिपाठपूतरसनाविर्भूतभूरिस्तव०" नैष० २-१०२।

**पूतक्रतायी ಪೂತಕ್ರತಾಯೀ** (स्त्री०) ಇಂದ್ರನ ಪತ್ನಿ, ಶಚೀದೇವಿ. पूतक्रतोः शक्रस्य स्त्री "ऐ" "ङीप्" च (४-१-३६)।

**पूतक्रतु ಪೂತಕ್ರತು** (पुं०) ಇಂದ್ರ. पूतः क्रतुः येन। "घोषस्यान्ववदिष्टेव लङ्का पूतक्रतोः पुरः" भट्टि० ८-२९।

**पूतगन्ध ಪೂತಗಂಧ** (पुं०) ಬರ್ಬರ ವೃಕ್ಷ, ಭಾರಂಗಿ ಗಿಡ.

**पूततृण ಪೂತತೃಣ** (न०) ಬಿಳಿಯ ದರ್ಭೆ.

**पूतद्रु ಪೂತದ್ರು** (पुं०) 1. ಪಲಾಶವೃಕ್ಷ, ಮುತ್ತುಗದ ಮರ. 2. ಪನಸವೃಕ್ಷ, ಹಲಸಿನಮರ.

**पूतधान्य ಪೂತಧಾನ್ಯ** (न०) ತಿಲ, ಎಳ್ಳು. पूतं धान्यम्।

**पूतना ಪೂತನಾ** (स्त्री०) 1. ಆಳಲೆ ಗಿಡ. पूतं करोति—तत्करोति इति "णिच्" ततो "युच्" (उ० २-७८)।

"अभया त्वव्यथा पथ्या वयस्था पूतनाऽमृता" अम०। 2. ಒಬ್ಬ ರಕ್ಕಸಿ, ಶ್ರೀಕೃಷ್ಣನನ್ನು ಕೊಲ್ಲುವ ಉದ್ದೇಶದಿಂದ ಕಂಸನಿಂದ ಕಳುಹಿಸಲ್ಪಟ್ಟ ಒಬ್ಬ ರಾಕ್ಷಸಿ. ಈ ರಾಕ್ಷಸಿಯು ವಿಷ ಬಳಿದ ಸ್ತನವನ್ನುಣಿಸಲು ಬಂದು ಶ್ರೀಕೃಷ್ಣನಿಂದ ಹತಳಾದಳು. "कंसेन प्रहिता घोरा पूतना बालघातिनी। शिशूंश्चचार निघ्नन्ती पुरग्रामव्रजादिषु" भाग० १०-६-२। 3. ರಾಕ್ಷಸಿ. "निर्माणमेव हि तदा तव लालनीयं मा पूतनात्वमुपगाः शिवतातिरेव" मालती० ९-५१। 4. ಒಂದು ಬಾಲಗ್ರಹ ದೇವತೆ.

**पूतनारि ಪೂತನಾರಿ** (पुं०) ಪೂತನೆಯೆಂಬ ರಾಕ್ಷಸಿಯ ಶತ್ರುವಾದ ಶ್ರೀಕೃಷ್ಣ. पूतनाया अरिः।

**पूतफल ಪೂತಫಲ** (पुं०) 1. ಹಲಸಿನ ಮರ. (न०) 2. ಹಲಸಿನ ಹಣ್ಣು.

**पूतात्मन् ಪೂತಾತ್ಮನ್** (पुं०) 1. ವಿಷ್ಣು, ಪರಮಾತ್ಮ. पूतः आत्मा स्वरूपं यस्य। ಸಂಸಾರಿಗಳಂತೆ ಚಿದಚಿದ್ದೋಷ ಸಂಬಂಧವಿಲ್ಲವಾದುದರಿಂದ ಪರಮಾತ್ಮನು ಪವಿತ್ರ ಸ್ವರೂಪನು. "शरीरत्वाच्च जगतः तद्दोषैर्न कदाचन। लिप्यते यः स पूतात्मा न भुङ्क्ते च फलानि यः" इति निरुक्तिः। "पूतात्मा परमात्मा च मुक्तानां परमा गतिः" वि०स०। (वि०) 2. ಶುದ್ಧವಾದ ಶರೀರವುಳ್ಳ. 3. ಶುದ್ಧವಾದ ಮನಸ್ಸುಳ್ಳ, ಕಲ್ಮಷವಿಲ್ಲದ ಹೃದಯವುಳ್ಳ.

**पूति ಪೂತಿ** (स्त्री०) 1. ಪವಿತ್ರವಾಗಿರುವಿಕೆ, ಶುದ್ಧವಾಗಿರುವಿಕೆ. पूञ् (पवने) "क्तिन्" (३-३-९४)। 2. ದುರ್ಗಂಧ, ಕೆಟ್ಟವಾಸನೆ. पूयी (विशरणे दुर्गन्धे च) "क्तिच्" (३-३-१७४)। 3. ಕೊಳೆತುಹೋಗುವುದು, ನಾರುವುದು. (वि०) 4. ದುರ್ಗಂಧದಿಂದ ಕೂಡಿದ, ಕೊಳೆತು ನಾರುವ. "यातयामं गतरसं पूति पर्युषितं च यत्। उच्छिष्टमपि चामेध्यं भोजनं तामसप्रियम्" गीता१७-१०। (पुं०)5. ಪುನುಗು ಬೆಕ್ಕು. "शिलाजातस्तु खट्टासः पूतिः खट्टसिकापि च" वैज०।

**पूतिक ಪೂತಿಕ** (पुं०) 1. ತಪಸಿಗಿಡ. (न०) 2. ವಿಷ್ಠೆ, ಅಮೇಧ್ಯ, ಮಲ. पूत्या दुर्गन्धेन कायति—कै (शब्दे) "कः" (३-२-३)। "किं त्वया पापकं पूर्वं कृतं कर्म सुदारुणम्। यस्त्वं श्मशाने मृतकान् पूतिकानत्सि कुत्सितान्" भा०।

**पूतिकरज ಪೂತಿಕರಜ** (पुं०) ತಪಸಿಗಿಡ. पूतिश्चासौ करजश्च।

**पूतिकरञ्ज ಪೂತಿಕರಂಜ** (पुं०) ಕರಂಜವೃಕ್ಷದ ಒಂದು ಭೇದ. पूतिश्चासौ करञ्जश्च।

**पूतिकर्ण(क) ಪೂತಿಕರ್ಣ(ಕ)** (पुं०) ಕೀವು ಸುರಿದು ದುರ್ಗಂಧದಿಂದ ಕೂಡಿದ ಒಂದು ಕಿವಿಯ ರೋಗ. पूतिः दुर्गन्धः कर्णो यस्मात्। "पूयं स्रवति यत् पूति स ज्ञेयः पूतिकर्णकः"।

**पूतिका ಪೂತಿಕಾ** (स्त्री०) 1. ಒಂದು ಜಾತಿಯ ಜಂತು. "पुलाका इव धान्येषु पूतिका इव पक्षिषु। मशका इव मर्त्येषु येषां धर्मो न कारणम्" पञ्चतं० ३-९७। 2. ಪುನುಗು ಬೆಕ್ಕು. 3. ಒಂದು ಜಾತಿಯ ಲತೆ.

**पूतिकाष्ठ ಪೂತಿಕಾಷ್ಠ** (न०) 1. ದೇವದಾರು ವೃಕ್ಷ. पूति [illegible]काष्ठं च। 2. ಸರಳ (ದೇವದಾರು) ವೃಕ್ಷ. "पूतिकाष्ठं च सरलदेवदारुमहीरुहोः" मेदि०।

**पूतिगन्ध ಪೂತಿಗಂಧ** (पुं०) 1. ದುರ್ಗಂಧ, ಕೆಟ್ಟವಾಸನೆ, ದುರ್ನಾತ. 2. ಇಂಗುದಿ ವೃಕ್ಷ, ಗಾರೆ ಗಿಡ. "नित्यानध्याय एव स्यात् ग्रामेषु नगरेषु [illegible] धर्मनैपुण्य कामानां पूतिगन्धे च सर्वदा" मनु० ४-१०७।

**पूतिगन्धि ಪೂತಿಗಂಧಿ** (वि०) ದುರ್ಗಂಧದಿಂದ ಕೂಡಿದ, ದುರ್ನಾತವುಳ್ಳ. पूतिःगन्धो यस्य "इः" (५-४-१३५)। "अव्याधिजं कटुजं तीक्ष्णमुष्णं यशोमुषं परुषं पूतिगन्धि। सतां पेयं यन्न पिबन्त्यसन्तः मन्युं महाराज पिब प्रशाम्य" भा० सभा० ६०।

**पूतितैला ಪೂತಿತೈಲಾ** (स्त्री०) ಜ್ಯೋತಿಷ್ಮತೀಲತೆ, ಕಂಗೊಂಗೆ ಗಿಡ. पूति दुर्गन्धं तैलं यस्याः।

**पूतिनस्य ಪೂತಿನಸ್ಯ** (पुं०) ಒಂದು ವಿಧ ಮೂಗಿನ ರೋಗ. पूतिः दुर्गन्धो नस्यः नासाभवो रोगः।

**पूतिनासिक ಪೂತಿನಾಸಿಕ** (वि०) ದುರ್ಗಂಧದಿಂದ ಕೂಡಿದ ಮೂಗುಳ್ಳ. पूतिः दुर्गन्धयुक्ता नासिका यस्य।

**पूतिपत्र ಪೂತಿಪತ್ರ** (पुं०) ಹೆಮ್ಮರ, ಅಡುಮರ. पूतीनि पत्राण्यस्य।

**पूतिपुष्पिका ಪೂತಿಪುಷ್ಪಿಕಾ** (स्त्री०) ಮಾತುಲುಂಗ ವೃಕ್ಷ, ಮಾದಳದ ಗಿಡ. पूतीनि पुष्पाण्यस्य।

**पूतिफली ಪೂತಿಫಲೀ** (स्त्री०) ಬಾಹುಜಿಗೆ ಗಿಡ. पूति फलं यस्याः "ङीष्" (४-१-६४)। "कालमेषी कृष्णफला वागुजी पूतिफल्यपि" अम०।

**पूतिमेद ಪೂತಿಮೇದ** (पुं०) ದುರ್ಗಂಧವುಳ್ಳ ಕಗ್ಗಲಿಮರ. पूतिर्मेदोऽस्य।

**पूतिवात ಪೂತಿವಾತ** (पुं०) 1. ಬಿಲ್ವವೃಕ್ಷ, ಬಿಲ್ವಪತ್ರೆ ಮರ. पूतये पारिशुद्धयाय वातो यस्य। 2. ದುರ್ಗಂಧದಿಂದ ಕೂಡಿದ ಗಾಳಿ.

**पूतिवृक्ष ಪೂತಿವೃಕ್ಷ** (पुं०) ಹೆಮ್ಮರ, ತಿಗಡುಮರ.

**पूतीक ಪೂತೀಕ** (पुं०) 1. ತಪಸಿಗಿಡ. 2. ಪುನುಗು ಬೆಕ್ಕು.

**पूत्यण्ड ಪೂತ್ಯಂಡ** (पुं०) ಕಸ್ತೂರಿ ಮೃಗ.

**पून ಪೂನ** (वि०) ನಷ್ಟವಾದ, ನಾಶಹೊಂದಿದ. पूञ् (पवने) "क्तः" (३-४-७२)। निष्ठातकारस्य नः (वा० ८-२-४४)। पूना यवाः।

**पूप ಪೂಪ** (पुं०) ಹಿಟ್ಟಿನಿಂದ ಮಾಡಿದ ರೊಟ್ಟಿ ಮೊದಲಾದ ಭಕ್ಷ್ಯ. पूञ् (पवने) "क्विप्" (वा० ३-३-१०८)। पुवं पाति — पा (रक्षणे) "कः" (३-२-३)। "मधु हृत्वा नरो दंशः पूपं हृत्वा पिपीलिकः" मार्क०।

**पूपली ಪೂಪಲೀ** (स्त्री०) ಹೋಳಿಗೆ, ಒಬ್ಬಿಟ್ಟು.

**पूपाली ಪೂಪಾಲೀ** (स्त्री०) ಹೋಳಿಗೆ, ಒಬ್ಬಿಟ್ಟು. पूपाय अलति — अल (भूषणादौ) "अच्" (३-१-१३४)। "ङीष्" (४-१-४१)। "पोली पूपाली चर्पटी च सा" त्रिकाण्ड०।

**पूपिका ಪೂಪಿಕಾ** (स्त्री०) ಹೋಳಿಗೆ, ಒಬ್ಬಿಟ್ಟು. पूपस्तदाकारोऽस्त्यस्याः "ठन्" (५-२-११५)। "पूपोऽपूपः फोलिका तु पूलिकापोलिपूपिकाः" अभि० चि०।

**पूयी — विशरणे दुर्गन्धे च** (भ्वा० आत्म० अक० से०) पूयते। अपूयिष्ट। ಇತ್ಯಾದಿ. 1. ಒಡೆ, ಎರಡು ತುಂಡು ಮಾಡು, ಸೀಳು. 2. ಕೊಳೆತು ಹೋಗು, ಕೊಳೆತು ನಾರು, ಕೀವುಗಟ್ಟು. पूयते मत्स्यः।

**पूय ಪೂಯ** (न०) ಹಣ್ಣಾದ ಗಾಯದಿಂದ ಹೊರಡುವ ಕೀವು, ಕೆಟ್ಟುಹೋಗಿ ಬಿಳುಪಾದ ರಕ್ತ. पूयी (विशरणे) "अच्" (३-१-१३४)। "पूयं चिकित्सकस्यान्नम्" मनु० ४-२२०। **ಕೀವನ್ನು ಅಧಿಕಗೊಳಿಸುವ ವಸ್ತುಗಳು**: "तक्रान्तैर्नवधान्यादिर्योऽयं वर्ग उदाहृतः। दोषसञ्जननो ह्येष विज्ञेयः पूयवर्धनः" सुश्रुत० सूत्र० १९-१७। [ಸುಶ್ರುತ ಸಂಹಿತೆಯಲ್ಲಿ ನವಧಾನ್ಯಾದಿವರ್ಗ ನೋಡಿ.] कर० "ल्युट्" (३-३-११७)। **पूयनम् ಪೂಯನಮ್.**

**पूयमान ಪೂಯಮಾನ** (वि०) ತೂರಲ್ಪಡುತ್ತಿರುವ, ಹೊಟ್ಟನ್ನು ಬೇರ್ಪಡಿಸಿ ಶುದ್ಧವಾಗಿ ಮಾಡಲ್ಪಡುತ್ತಿರುವ (ಧಾನ್ಯ). पूञ् (पवने) कर्म० "शानच्" (३-२-१२४)।

**पूयमानयव ಪೂಯಮಾನಯವ** (अव्य०) ಧಾನ್ಯವನ್ನು ತೂರಿ ಶುದ್ಧಮಾಡುವ ಸ್ಥಳ, –ಕಣ. पूयमाना यवा यत्र — अव्ययी० (२-१-१७)।

**पूयरक्त ಪೂಯರಕ್ತ** (पुंन०) ಕೀವುಸಹಿತ ರಕ್ತ ಸುರಿಯುವ ಒಂದು ವಿಧ ಮೂಗಿನ ರೋಗ. पूययुक्तं रक्तमस्मिन्। "नासा भवेत् पूयमसृग्विमिश्रं तं पूयरक्तं प्रवदन्ति रोगम्"। "निचयादभिघाताद्वा पूयासृङ्नासिका स्रवेत्। तत्पूयरक्तमाख्यातं शिरोदाहरुजाकरम्"।

**पूयारि ಪೂಯಾರಿ** (पुं०) ಬೇವಿನ ಮರ. पूयानामरिः।

**पूर्(ः) ಪೂರ್(ः)** (स्त्री०) ಪಟ್ಟಣ, ನಗರ. पिपर्ति—पॄ (पालनपूरणयोः) "क्विप्" (३-२-१७७)। उत्वम् (७-१-१०२)। दीर्घः (८-२-७६)। "रथस्य तस्यां पुरि दत्तचक्षुर्विद्वान् विदामास शनैर्न यातम्" माघ० ३-३२।

**पूर ಪೂರ** (पुं०) 1. ಜಲಪ್ರವಾಹ, ನೀರು ಹರಿಯುವಿಕೆ, 2. ಜಲರಾಶಿ, ಜಲಸಮೂಹ. पूरयति-पूर (पूरणे) + णिच् "अच्" (३-१-१३४)। "पूरोत्पीडे तटाकस्य परीवाहः प्रतिक्रिया" उ० रा० ३-२९। "महोदधेः पूर इवेन्दुदर्शनात्" रघु० ३-१७। 3. ಪಾತ್ರೆಯೊಳಗೆ ನೀರು ತುಂಬುವುದು, ನೀರು ಮೊದಲಾದ ದ್ರವವಸ್ತುವನ್ನು ಸುರಿಯುವುದು. "भवन्ति यत्रौषधयो रजन्यामतैलपूराः सुरतप्रदीपाः" कुमा० १-१०। 4. ರೊಟ್ಟಿ ದೋಸೆ ಮೊದಲಾದ ಖಾದ್ಯ (ತಿಂಡಿ). 5. ಗಾಯವನ್ನು ತೊಳೆದು ಶುದ್ಧಮಾಡುವುದು. "पूरो जलसमूहे स्यात् व्रणसंशुद्धिखाद्ययोः" मेदि०।

**पूरक ಪೂರಕ** (पुं०) 1. ಮಾತುಲುಂಗ ವೃಕ್ಷ, ಮಾದಳದ ಗಿಡ. पूरयति — पूरी (आप्यायने) + णिच् "ण्वुल्" (३-१-१३३)। 2. ಪ್ರಾಣಾಯಾಮದ ಒಂದು ಅಂಗ. ವಾಯುವನ್ನು ನಾಸಿಕೆಯಿಂದ ಎಳೆದುಕೊಂಡು ತುಂಬುವುದು ಪೂರಕ. "पूरकः पूरणं वायोः कुम्भकः स्थापनं क्वचित्। बहिर्निःसारणं तस्य रेचकः परिकीर्तितः"। "नासिकाकृष्ट उच्छ्वासो ध्मातुः पूरक उच्यते"। (वि०) 3. ಪೂರ್ತಿಮಾಡುವ. 4. ತುಂಬುವ. "प्राकारस्य च भेत्तारं परिखाणां च पूरकम्। द्वाराणां चैव भङ्क्तारं क्षिप्रमेव प्रवासयेत्" मनु० ९-२८९।

**पूरण ಪೂರಣ** (पुं०) 1. ಸಮುದ್ರ, ಕಡಲು. पूरयति— पूरी (आप्यायने) + णिच् "ल्युः" (३-१-१३४)। 2. ಸೇತು. पूर्यतेऽनेन—पूरी कर० "ल्युट्" (३-३-११७)। 3. ಶಾಲ್ಮಲಿವೃಕ್ಷ, ಬೂರಗದ ಮರ. 4. ವಿಷ್ಣುತೈಲ. ಒಂದು ಔಷಧ. (न०) 5. ತುಂಬುವುದು. "कुम्भपूरणभवः पटुरुच्चैरुच्चचार निनदोऽम्भसि तस्याः"

रघु० ९-७३। 6. ಪೂರ್ತಿಮಾಡುವುದು. "याचमानजनमानसवृत्तेः पूरणाय बत जन्म न यस्य" नैष० ५-८८। 7. ನೇಯ್ಗೆಯ ದಾರ, ಬಟ್ಟೆಯನ್ನು ನೇಯುವ ದಾರ. 8. ಸಂಖ್ಯಾಪೂರಣ, ಸಂಖ್ಯೆಯನ್ನು ತುಂಬುವುದು, "तस्य पूरणे डट्" पा० सू० ५-२-४८। पञ्चानां पूरणः पञ्चमः। (वि०) 9. ತುಂಬುವ, ಪೂರ್ತಿಮಾಡುವ (ಸಂಖ್ಯೆ). पूरी कर० "ल्युट्" (३-३-११७)। स्त्रियां "ङीप्" (४-१-१५)। पूरणी ಪೂರಣೀ. "संसत्सु जाते पुरुषाधिकारे न पूरणी तं समुपैति संख्या" किरा० ३-५१। 10. ತುಂಬುವವನು. पूरी कर्त० "ल्युः" (३-१-१३४)। 11. ಪೂರ್ತಿಮಾಡುವವನು, ಪೂರ್ಣವಾಗಿ ಮಾಡುವವನು. 12. ಗುಣಕಸಂಖ್ಯೆ, ಗುಣಿಸುವ ಸಂಖ್ಯೆ.

**पूरणीय ಪೂರಣೀಯ** (वि०) 1. ತುಂಬಲ್ಪಡುವ. 2. ಪೂರ್ಣಗೊಳಿಸಲ್ಪಡುವ. 3. ತುಂಬಬೇಕಾದ. 4. ಪೂರ್ಣಮಾಡಬೇಕಾದ, ಸಮಾಪ್ತಿಗೊಳಿಸಬೇಕಾದ. पूरी (आप्यायने) + णिच् "अनीयर्" (३-१-९६)। "तव्यः" (३-१-९६)। **-यितव्यः -ಯಿತವ್ಯಃ.**

**पूरयितृ ಪೂರಯಿತೃ** (पुं०) 1. ವಿಷ್ಣು. पूरी (आप्यायने) + णिच् "तृन्" (३-२-१३५)। ಭಕ್ತರ ಮನೋರಥವನ್ನು ಪೂರ್ಣಗೊಳಿಸುವುದರಿಂದ ಈ ಹೆಸರು. "सदा पूरयितुं शीलं यस्य स्तोतृमनोरथान्। स स्यात् पूरयिता" इति निरुक्तिः। "पूर्णः पूरयिता पुण्यः" वि० स०। (वि०) 2. ತುಂಬುವವನು. 3. ಪೂರ್ತಿಮಾಡುವವನು, ಪೂರ್ಣಗೊಳಿಸುವವನು. पूरी (आप्यायने) + णिच् "तृच्" (३-१-१३३)। स्त्रियां "ङीप्" (४-१-५)। **-यित्री -ಯಿತ್ರೀ.**

**पूरिका ಪೂರಿಕಾ** (स्त्री०) ಪೂರಿ, ರವೆ ಅಥವಾ ಹಿಟ್ಟಿನಿಂದ ತಯಾರಿಸಲ್ಪಟ್ಟ ಒಂದು ಭಕ್ಷ್ಯ.

**पूरित ಪೂರಿತ** (वि०) 1. ತುಂಬಲ್ಪಟ್ಟ. "प्रतिनादपूरितदिगन्तरः पतन् पुरगोपुरं प्रति स सैन्यसागरः" माघ० १३-२७। 2. ಪೂರ್ತಿಗೊಳಿಸಲ್ಪಟ್ಟ. पूरी (आप्यायने) + णिच् कर्म० "क्तः" (३-२-१०२)। 3. ಅಧಿಕಗೊಳಿಸಲ್ಪಟ್ಟ, ಹೆಚ್ಚಿಸಲ್ಪಟ್ಟ.

**पूरु ಪೂರು** (पुं०) ಶರ್ಮಿಷ್ಠೆಯಲ್ಲಿ ಜನಿಸಿದ ಯಯಾತಿಯ ಮಗ. [ಇವನು ತನ್ನ ತಂದೆ ಯಯಾತಿಯ ಮುದಿತನವನ್ನು ತೆಗೆದುಕೊಂಡು ತನ್ನ ಯೌವನವನ್ನು ಅವನಿಗೆ ಕೊಟ್ಟನು. ಅದರಿಂದ ಸಂತುಷ್ಟನಾದ ತಂದೆಯು ಪೂರುವಿಗೆ ರಾಜ್ಯಾಧಿಕಾರವನ್ನು ಕೊಟ್ಟನು. ಇವನು ಕೋಸಲ ರಾಜನ ಮಗಳನ್ನು ಮದುವೆಯಾಗಿ ಅವಳಲ್ಲಿ ಜನಮೇಜಯ ಮತ್ತು ಪೌಷ್ಟಿಯಲ್ಲಿ ಪ್ರವೀರ ಈಶ್ವರ ರೌದ್ರಾಶ್ವರೆಂಬ ಮಕ್ಕಳನ್ನು ಪಡೆದನು. ಪೂರುವಿಗೆ ದ್ರುಹ್ಯು ಅನು ಯದು ಮತ್ತು ತುರ್ವಸು ಎಂಬ ನಾಲ್ವರು ಸಹೋದರರು ಇದ್ದರು.]

**पूरुष ಪೂರುಷ** (पुं०) 1. ಮನುಷ್ಯ. 2. ಗಂಡಸು. पूरी (आप्यायने) "कुषन्" बाहु०। पुर (अग्रगमने) "कुषन्" (उ० ४-७४) वा। पृषो० दीर्घः। [ಪುರುಷಲಕ್ಷಣಕ್ಕೆ "द्वात्रिंशल्लक्षण" ಪದದಲ್ಲಿ ನೋಡಿ.]

**ಸಾಮುದ್ರಿಕಶಾಸ್ತ್ರದಲ್ಲಿ ಉಕ್ತವಾಗಿರುವ ವಿಶೇಷ ಪುರುಷಲಕ್ಷಣಗಳು:** ಅಂಗುಷ್ಠ (ಹೆಬ್ಬೆರಳು) ಮಧ್ಯಭಾಗದಲ್ಲಿ ಯವರೇಖೆಯುಳ್ಳವನಿಗೆ ಭೋಜನಸೌಖ್ಯ ಮತ್ತು ನೂರು ವರ್ಷಗಳು ಆಯುಸ್ಸು. "अङ्गुष्ठोदरमध्ये तु यवो यस्य विराजितः। उन्नतं भोजनं तस्य शतं जीवति मानवः"। ಅಂಗೈಯಲ್ಲಿ ಅಂಕುಶ ಕುಲಿಶ (ವಜ್ರಾಯುಧ) ಮತ್ತು ಛತ್ರ ರೇಖೆಗಳಿದ್ದರೆ ಅವನಿಗೆ ಐಶ್ವರ್ಯವೂ ಎಂಬತ್ತು ವರ್ಷಗಳ ಆಯುಃಪ್ರಮಾಣವೂ ಉಕ್ತವಾಗಿದೆ, "अङ्कुशं कुलिशं छत्रं यस्य पाणितले भवेत्। ऐश्वर्यं च विनिर्दिष्टमशीत्यायुर्भवेद् ध्रुवम्"। ಕಿರುಬೆರಳಿನಿಂದ ತರ್ಜನಿಯವರೆಗೆ ಅಖಂಡವಾದ ರೇಖೆಯಿದ್ದರೆ ನೂರಿಪ್ಪತ್ತು ವರ್ಷಗಳ ಆಯುಃಪ್ರಮಾಣವು ಉಕ್ತವಾಗಿದೆ. "कनिष्ठातर्जनीं यावत् रेखा भवति चाक्षता। विंशत्यब्दाधिकशतं नरा जीवन्त्यनामयाः"। ಕಿರುಬೆರಳಿನಿಂದ ಮಧ್ಯದ ಬೆರಳವರೆಗೆ ಅಖಂಡವಾದ ರೇಖೆಯಿದ್ದರೆ ನೂರು ಅಥವಾ ಎಂಬತ್ತು ವರ್ಷಗಳ ಕಾಲ ಜೀವಿಸಿರುವನು. "कनिष्ठामध्यमां यावत् रेखा भवति चाक्षता। शताब्दं वाथवाशीतिर्नरो जीवेन्न संशयः"। ಕನಿಷ್ಠಿಕೆ (ಕಿರುಬೆರಳು) ಯ ಕೆಳಗೆ ಇರುವ ರೇಖೆಯು ಪತ್ನಿಯರ ಸಂಖ್ಯೆಯನ್ನು ಸೂಚಿಸುವುದು. "कनिष्ठायां स्थिता रेखा संख्या यावतिका स्मृता। तावती पुरुषाणां तु नारी भवति निश्चितम्"। ಮಧ್ಯಮಬೆರಳಲ್ಲಿ ಯವರೇಖೆಯಿದ್ದರೆ ಇತರರು ಕೂಡಿಸಿಟ್ಟಿರುವ ಧನವನ್ನು ಪಡೆಯುತ್ತಾನೆ. "मध्यमायां यदि यवा दृश्यन्तेऽत्यन्तशोभनाः। तदान्यसञ्चितं वित्तं प्राप्नोति"। ಅಂಗುಷ್ಠ (ಹೆಬ್ಬೆರಳಿನ) ಯವರೇಖೆಯ ಮೇಲುಗಡೆ ಚಕ್ರರೇಖೆಯಿದ್ದರೆ ಪಾಮರರು ಸಂಪಾದಿಸಿ ಕೂಡಿಸಿಟ್ಟ ಧನವನ್ನು ಪಡೆಯುತ್ತಾನೆ. "यस्याथ चक्रमङ्गुष्ठे यवादूर्ध्वं च दृश्यते। तदा वै पामरादीनामर्जितं धनमाप्नुयात्"। ಗಲ್ಲ ಮತ್ತು ಎದೆಗಳಲ್ಲಿ ಕೂದಲಿಲ್ಲದವನು ಧೂರ್ತನಾಗುವನು. "चिबुके

श्मश्रुशून्या ये निर्लोमहृदयाश्च ये। ते धूर्ता नैव सन्देहः समुद्रवचनं यथा"।

**पूर्ण ಪೂರ್ಣ** (पुं०) 1. ವಿಷ್ಣು. पूरी (आप्यायने)+णिच् "क्तः" (३-४-७२)। इडभावः निपा० (७-२-२७)। ಪರಮಾತ್ಮನು ಅವಾಪ್ತಸಮಸ್ತಕಾಮನಾದುದರಿಂದ ಪೂರ್ಣನು. "पूर्णः समस्तकामैश्च संपन्नः सर्वशक्तिभिः" इति निरुक्तिः। "पूर्णः पूरयिता पुण्यः" वि०स०। (वि०) 2. ಶಕ್ತ, ಸಮರ್ಥ, ಬಲಶಾಲಿ. 3. ಸಮಗ್ರವಾದ, ಸಂಪೂರ್ಣವಾದ. "अपूर्णमेकेन शतक्रतूपमः" रघु० ३-३८। 4. ಸಮಾಪ್ತವಾದ, ಕೊನೆಯನ್ನು ಮುಟ್ಟಿದ. 5. ತುಂಬಿರುವ, ಭರ್ತಿಯಾಗಿರುವ. "पर्याप्तत्क्रयिकलोकमगण्यपण्यपूर्णापणा विपणिनो विपणीर्विभेजुः" माघ० ५-२४। 6. ತುಂಬಲ್ಪಟ್ಟ, ಭರ್ತಿಮಾಡಲ್ಪಟ್ಟ. पूरी + णिच् कर्म० "क्तः" (३-२-१०२)। निपा० (७-२-२७)। (स्त्री०) **–र्णा –ರ್ಣಾ.** ಪೂರ್ಣತಿಥಿ. पञ्चमी दशमी ಮತ್ತು पूर्णिमा ಇವು ಪೂರ್ಣತಿಥಿಗಳು. "नन्दा भद्रा जया रिक्ता पूर्णा प्रतिपदः क्रमात्"।

**पूर्णकाम ಪೂರ್ಣಕಾಮ** (पुं०) 1. ಪರಮಾತ್ಮ. पूर्णः कामोऽस्य। परमात्मा अवाप्तसमस्तकामः। (वि०) 2. ಇಷ್ಟಸಿದ್ಧಿ ಹೊಂದಿದವನು, ಇಷ್ಟವಾದುದನ್ನು ಪಡೆದವನು. पूर्णः कामो यस्य।

**पूर्णकुम्भ ಪೂರ್ಣಕುಂಭ** (पुं०) 1. ನೀರಿನಿಂದ ತುಂಬಿದ ಬಿಂದಿಗೆ. 2. ತುಂಬಿದ ಬಿಂದಿಗೆ. जलादिभिः पूर्णः कुम्भः।

**पूर्णपात्र ಪೂರ್ಣಪಾತ್ರ** (न०) 1. ಮಂಗಳ ವಸ್ತುಗಳಿಂದ ತುಂಬಿದ ಪಾತ್ರೆ ಅಥವಾ ಪೆಟ್ಟಿಗೆ. पूर्णं च तत् पात्रं च। 2. ಪುತ್ರಜನನ ಜನ್ಮದಿನೋತ್ಸವ (ಹುಟ್ಟಿದ ಹಬ್ಬ) ಮುಂತಾದ ಸಂತೋಷಸಮಾರಂಭದಲ್ಲಿ ಪರಿಜನರಿಗೆ ಪಾರಿತೋಷಿಕವಾಗಿ ಕೊಡುವ ವಸ್ತ್ರ ಆಭರಣ ಮೊದಲಾದುವು, ಉತ್ಸವ ಕಾಲದಲ್ಲಿ ಬಂಧುಮಿತ್ರರು ಯಜಮಾನನಿಂದ ವಸ್ತ್ರ ಆಭರಣ ಮೊದಲಾದುವನ್ನು ಸಂತೋಷದಿಂದ ತಾವಾಗಿ ಎಳೆದು ತೆಗೆದುಕೊಳ್ಳುವುದು. "हर्षादुत्सवकाले यदलङ्कारांशुकादिकम्। आकृष्य गृह्यते पूर्णपात्रं पूर्णालकं च तत्" हारा०। "शाम्भवं चापमारोप्य योऽस्मानानन्दयिष्यति। पूर्णपात्रमियं तस्मै मैथिली कल्पयिष्यति" अनर्घ०। 3. ಹೋಮಕಾರ್ಯಗಳಲ್ಲಿ ಕೊಡುವ ಬ್ರಹ್ಮದಕ್ಷಿಣೆ, 256 ಮುಷ್ಟಿ (ಹಿಡಿ) ಗಳ ಪ್ರಮಾಣ.

| | |
|---|---|
| 8 ಮುಷ್ಟಿ (ಹಿಡಿ) ಗಳು | 1 ಕುಂಚಿ. |
| 8 ಕುಂಚಿಗಳು | 1 ಪುಷ್ಕಲ |
| 4 ಪುಷ್ಕಲಗಳು | 1 ಪೂರ್ಣಪಾತ್ರ. |

"अष्टमुष्टिर्भवेत्कुञ्चिः कुञ्चयोऽष्टौ च पुष्कलम्। पुष्कलानि च चत्वारि पूर्णपात्रं विधीयते"। "होमान्ते पूर्णपात्रं ब्रह्मणे दद्यात्" ಗೋಭಿಲಃ।

**पूर्णप्रज्ञ ಪೂರ್ಣಪ್ರಜ್ಞ** (पुं०) ದ್ವೈತಮತ ಪ್ರವರ್ತಕರಾದ ಶ್ರೀಮನ್ಮಧ್ವಾಚಾರ್ಯರು, ಆನಂದ ತೀರ್ಥರು. ವಾಯುದೇವರು ಶ್ರೀಮಧ್ವಾಚಾರ್ಯರೆಂಬ ಅಭಿಧಾನದಿಂದ ಅವತರಿಸಿ ದ್ವೈತಮತ ಪ್ರಚಾರ ಮಾಡಿದರು. "प्रथमस्तु हनूमान् स्यात् द्वितीयो भीम एव च। पूर्णप्रज्ञस्तृतीयश्च भगवत्कार्यसाधकः"। [ದ್ವೈತಮತದ ವಿವರಕ್ಕೆ "द्वैतदर्शन" ಪದದಲ್ಲಿ ನೋಡಿ]. ಈ ಆಚಾರ್ಯರು ಇತರ ಮತ ಪ್ರವರ್ತಕರಾದ ಪೂರ್ವಾಚಾರ್ಯರುಗಳಂತೆ ಸಿದ್ಧಾಂತ ಸ್ಥಾಪಕರಾಗಿ ಅನೇಕ ಗ್ರಂಥಗಳನ್ನು ರಚಿಸಿರುವರು. ಅವುಗಳಿಗೆ ಸರ್ವಮೂಲ ಗ್ರಂಥವೆಂದು ಪ್ರಸಿದ್ಧಿಯಿದೆ. ಸರ್ವಮೂಲ ಗ್ರಂಥವು 27 ವಿಧ. ಅವುಗಳಲ್ಲಿ ಹತ್ತು ಪ್ರಕರಣ ಗ್ರಂಥಗಳು. ಆಚಾರ ಗ್ರಂಥಗಳು ಕೆಲವು. ಕೆಲವು ಸಿದ್ಧಾಂತ ಗ್ರಂಥಗಳು. ಪ್ರಸ್ಥಾನತ್ರಯ ಭಾಷ್ಯಗಳು. ಕೆಲವು ಪುರಾಣ ತಾತ್ಪರ್ಯ ನಿರ್ಣಯಗಳು. ಈ ಸರ್ವಮೂಲ ಗ್ರಂಥಗಳಿಗೆ ಶ್ರೀ ಜಯತೀರ್ಥಾಚಾರ್ಯರೆಂಬುವರು ಟೀಕೆಗಳನ್ನು ಬರೆದಿರುವುದರಿಂದ ಅವರಿಗೆ "ಟೀಕಾಚಾರ್ಯ" ರೆಂದು ಹೆಸರಾಯಿತು. ಅವುಗಳ ಮೇಲೂ ಟೀಕೆಗಳು ಅಸಂಖ್ಯಾತವಾಗಿ ಬೆಳೆದುಬಂದಿವೆ.

ಶ್ರುತಿ ಸ್ಮೃತಿ ಇತಿಹಾಸ ಪುರಾಣ ಮೊದಲಾದ ಎಲ್ಲಾ ಶಾಸ್ತ್ರಗಳೂ ಶ್ರೀವಿಷ್ಣುವಿನ ಮಹಾತ್ಮ್ಯವನ್ನು ಉಪದೇಶಿಸಿ ಮಹಾವಿಷ್ಣುವಿಗೆ ಸರ್ವೋತ್ಕರ್ಷವನ್ನು ಪ್ರತಿಪಾದಿಸುವುದರಿಂದ ಇಂತಹ ಉತ್ಕರ್ಷಜ್ಞಾನವೇ ಮೋಕ್ಷ ಸಾಧನವಾಗುವುದೆಂದು ಸಿದ್ಧಾಂತಪಡಿಸಿರುವುವು, ಜಗತ್ಕಾರಣತ್ವ ಮೊದಲಾದ ಸಕಲ ವ್ಯಾಪಾರಗಳನ್ನು ವಿಷ್ಣುವಿಗೇ ಸಮರ್ಥಿಸಿ ವಿಷ್ಣುಭಕ್ತಿಯೇ ಮುಖ್ಯವೆಂದು ನಿರ್ಣಯಿಸಿರುವುದರಿಂದ ಇವರ ದರ್ಶನಕ್ಕೆ **"ವೈಷ್ಣವಸಿದ್ಧಾಂತ"** ವೆಂದು ಪ್ರಸಿದ್ಧಿಯುಂಟಾಯಿತು. "उत्पत्तिस्थितिसंहारा नियतिर्ज्ञानमावृतिः। बन्धमोक्षौ च पुरुषाद्यस्मात् स हरिरेकराट्" सर्वदर्शनसङ्ग्रहे स्कान्दवचनम्। "यतो वा इमानि भूतानि जायन्ते। येन जातानि जीवन्ति" इत्यादिश्रुतिवचनम्।

**पूर्णबीज ಪೂರ್ಣಬೀಜ** (पुं०) ಮಾತುಲುಂಗವೃಕ್ಷ, ಮಾದಳದ ಗಿಡ. पूर्णं बीजं यस्य।

**पूर्णमा ಪೂರ್ಣಮಾ** (स्त्री०) ಪೂರ್ಣಿಮೆ, ಹುಣ್ಣಿಮೆ. पूर्णः कलाभिः पूर्णश्चन्द्रः मीयतेऽस्यां — माङ् (माने) घञर्थे "कः" (वा० ३-३-५८)।

**पूर्णमास ಪೂರ್ಣಮಾಸ** (पुं०) 1. ಪೂರ್ಣಿಮೆ, ಹುಣ್ಣಿಮೆ. पूर्णो मासो यत्र। "दर्शेन पूर्णमासेन चातुर्मास्यैः पुनः पुनः। अजयद्धयमेधेन सहस्रं परिवत्सरान्" भा० शान्ति० २६-११४। 2. ಹುಣ್ಣಿಮೆಯ ದಿನ ಮಾಡುವ ಯಾಗ. पूर्णमासी पूर्णिमा साधनत्वेनास्त्यस्य "अच्" (५-२-१२७।

**पूर्णमासी ಪೂರ್ಣಮಾಸೀ** (स्त्री०) ಪೂರ್ಣಿಮೆ, ಹುಣ್ಣಿಮೆ. पूर्णश्चान्द्रमासो यत्र। गौरा० "ङीष्" (४-१-६१)।

**पूर्णयोग ಪೂರ್ಣಯೋಗ** (पुं०) ಒಂದು ವಿಧ ಬಾಹು ಯುದ್ಧ.

**पूर्णा ಪೂರ್ಣಾ** (स्त्री०) ಪೂರ್ಣ ತಿಥಿ. पञ्चमी दशमी ಮತ್ತು ಪೂರ್ಣಿಮಾ ಇವು ಪೂರ್ಣ ತಿಥಿಗಳು. ಗುರುವಾರ ಮತ್ತು ಪೂರ್ಣ ತಿಥಿಗಳ ಸಂಯೋಗವು "ಸಿದ್ಧಿಯೋಗ" ವಾಗುವುದು.

**पूर्णान(ल)क ಪೂರ್ಣಾನ(ಲ)ಕ** (न०) 1. ಪೂರ್ಣ ಪಾತ್ರ, ಸಂತೋಷಕಾಲದಲ್ಲಿ ಬಂಧುಗಳು ಮತ್ತು ಸ್ನೇಹಿತರು ಯಜಮಾನನಿಂದ ವಸ್ತ್ರ ಆಭರಣ ಮೊದಲಾದುವನ್ನು ತಾವಾಗಿಯೇ ಎಳೆದು ತೆಗೆದುಕೊಳ್ಳುವುದು. 2. ನಗಾರಿ ತಮಟೆ ಮುಂತಾದುವು. "भवेत्पूर्णानकं वर्षापने पटहेऽपि च" मेदि०।

**पूर्णायुर्योग ಪೂರ್ಣಾಯುರ್ಯೋಗ** (पुं०) ಮನುಷ್ಯನ ಸಂಪೂರ್ಣ ಆಯುಃಪ್ರಮಾಣವನ್ನು ತಿಳಿಸುವ ಗ್ರಹಗಳ ಸ್ಥಿತಿ, ಆಯುಃಪ್ರಮಾಣದ ಸಂಪೂರ್ಣಕಾಲ (ಶತಮಾನ) ಬದುಕಿರಲು ಆವಶ್ಯವಾದ ಗ್ರಹಗಳ ಸ್ಥಿತಿ. (ಗ್ರಹಗಳ ಪರಸ್ಪರ ಸಂಬಂಧ). पूर्णायुषो योगः भवत्यस्मात्। ಅಷ್ಟಮಭಾವಾಧಿಪತಿಯು ಸ್ವಕ್ಷೇತ್ರದಲ್ಲೇ ಇದ್ದರೆ ಪೂರ್ಣಾಯುಸ್ಸು. ದಶಮ ಭಾವಾಧಿಪತಿಯು ತನ್ನ ಉಚ್ಚ ಕ್ಷೇತ್ರ, ಸ್ವಕ್ಷೇತ್ರ ಅಥವಾ ಮಿತ್ರಕ್ಷೇತ್ರದಲ್ಲಿದ್ದರೂ ಲಗ್ನಾಧಿಪತಿ ಮತ್ತು ದಶಮಾಧಿಪತಿಗಳು ಕೇಂದ್ರದಲ್ಲಿದ್ದರೂ (ಸ್ವಕ್ಷೇತ್ರ, ಮೂಲತ್ರಿಕೋಣ ಮತ್ತು ಸ್ವೋಚ್ಚಕ್ಷೇತ್ರಗಳಲ್ಲಿದ್ದರೆ ಮತ್ತೂ ವಿಶೇಷ) ಲಗ್ನಾಧಿಪತಿಯು ಕೇಂದ್ರದಲ್ಲಿದ್ದು ಗುರುಶುಕ್ರರೊಡನೆ ಕೂಡಿದ್ದರೂ ಅಥವಾ ಅವರಿಂದ ನೋಡಲ್ಪಟ್ಟರೂ ಪಾಪಗ್ರಹಗಳು ಮೂರು ಆರು ಮತ್ತು ಹನ್ನೊಂದನೆಯ ಸ್ಥಾನಗಳಲ್ಲಿದ್ದರೂ ಶುಭಗ್ರಹಗಳು ಕೇಂದ್ರ ತ್ರಿಕೋಣಗಳಲ್ಲಿದ್ದರೂ ಲಗ್ನಾಧಿಪತಿಯು ಬಲಿಷ್ಠನಾಗಿದ್ದರೂ ಮೂರು ಗ್ರಹಗಳು ಉಚ್ಚಸ್ಥಾನಗಳಲ್ಲಿದ್ದು ಲಗ್ನದಲ್ಲಿ ಅಷ್ಟಮಾಧಿಪತಿಯು ಇದ್ದರೂ ಅಷ್ಟಮದಲ್ಲಿ ಪಾಪಗ್ರಹಗಳಿಲ್ಲದಿದ್ದರೂ ಪೂರ್ಣಾಯುಸ್ಸೆಂದು ತಿಳಿಯಬೇಕು. ಮನುಷ್ಯನ ಆಯುಃಪ್ರಮಾಣ ನೂರು ವರ್ಷಗಳ ಕಾಲ. ಇಷ್ಟು ಕಾಲ ಅವನು ಬದುಕಿರಬೇಕಾದರೆ ಹಿತವಾದ ಆಹಾರವಿಹಾರಗಳು ಕಾರಣ. "वर्षशतं खल्वायुषः प्रमाणमस्मिन् काले तस्य निमित्तं प्रकृतिगुणात्मसम्पत् सात्मोपसेवनञ्च" चरक०।

**पूर्णायुष्क ಪೂರ್ಣಾಯುಷ್ಕ** (वि०) ದೀರ್ಘಾಯುಷ್ಯವುಳ್ಳವನು.

**पूर्णायुस् ಪೂರ್ಣಾಯುಸ್** (न०) ದೀರ್ಘಾಯುಷ್ಯ, ಜೀವಿತದ ಸಂಪೂರ್ಣಕಾಲ, ನೂರು ವರ್ಷಗಳ ಜೀವನ ಕಾಲ.

**पूर्णावतार ಪೂರ್ಣಾವತಾರ** (पुं०) ಮಹಾವಿಷ್ಣುವಿನ ಸಂಪೂರ್ಣಾವತಾರ. पूर्णः अवतारः। ಶ್ರೀನೃಸಿಂಹಾವತಾರ, ಶ್ರೀರಾಮಾವತಾರ, ಶ್ರೀಕೃಷ್ಣಾವತಾರಗಳು ಪೂರ್ಣಾವತಾರಗಳು. "पूर्णो नृसिंहो रामश्च श्वेतद्वीपविराड् विभुः। परिपूर्णतमः कृष्णो वैकुण्ठे गोकुले स्वयम्। वैकुण्ठे कमलाकान्तो रूपभेदश्चतुर्भुजः। गोलोके गोकुले राधाकान्तोऽयं द्विभुजः स्वयम्" ब्रह्मवै०।

**पूर्णि ಪೂರ್ಣಿ** (स्त्री०) ಪೂರ್ತಿ, ಸಮಗ್ರತೆ.

**पूर्णिमा ಪೂರ್ಣಿಮಾ** (स्त्री०) 1. ಪೂರ್ಣಿಮೆ, ಹುಣ್ಣಿಮೆ पूरी (आप्यायने) भावे "क्तः" (३-३-११४)। पूर्णं चन्द्रस्य पूरणम्, तेन निर्वृत्ता—"इमप्" (वा० ४-४-२०)। "टाप्" (४-१-४)। ಚಂದ್ರಮಂಡಲವು ಶುಕ್ಲಪಕ್ಷದ ಹದಿನೈದನೆಯ ದಿನ ಕಲೆಗಳಿಂದ ಪೂರ್ಣವಾಗಿ ತುಂಬಲ್ಪಡುವುದರಿಂದ ಈ ಹೆಸರು. "निखिलान्निशि पूर्णिमा तिथीनुपतस्थेऽतिथिरेकिका तिथिः" नैष० २-७६। 2. ಮರೀಚಿಮಹರ್ಷಿಯ ಒಬ್ಬ ಮಗಳು.

**पूर्णेन्दु ಪೂರ್ಣೇಂದು** (पुं०) ಪೂರ್ಣಚಂದ್ರ, ಸಕಲ ಕಲೆಗಳಿಂದಲೂ ಪರಿಪೂರ್ಣನಾದ ಚಂದ್ರ. "पूर्णेन्दुमास्यं विदधुः पुनस्ते पुनर्मखीचक्रुरनिद्रमब्जम्" नैष० १०-२०।

**पूर्णोपमा ಪೂರ್ಣೋಪಮಾ** (स्त्री०) ಉಪಮಾಲಂಕಾರದ ಒಂದು ಭೇದ. ವರ್ಣ್ಯ ಉಪಮಾನ ಸಾಧಾರಣಧರ್ಮ ಮತ್ತು ಉಪಮಾವಾಚಕಪದ ಈ ನಾಲ್ಕೂ ಪದಗಳ ಉಪಾದಾನವಿದ್ದಲ್ಲಿ "पूर्णोपमा" ಅಲಂಕಾರವಾಗುವುದು. "हंसीव कृष्ण ते कीर्तिः स्वर्गङ्गामवगाहते" ಇಲ್ಲಿ

ಕೀರ್ತಿಯು ವರ್ಣ್ಯ (ಉಪಮೇಯ). ಹಂಸಿಯು ಉಪಮಾನ. ಸ್ವರ್ಗಂಗಾವಗಾಹನವು ಸಾಧಾರಣ ಧರ್ಮ. ಇವ ಶಬ್ದವು ಉಪಮಾವಾಚಕ, ಈ ನಾಲ್ಕು ಪದಗಳಿಗೂ ಉಪಾದಾನ (ಪ್ರಯೋಗ) ವಿರುವುದರಿಂದ ಇಲ್ಲಿ ಪೂರ್ಣೋಪಮಾಲಂಕಾರ. ಇವುಗಳಲ್ಲಿ ಯಾವುದಾದರೂ ಒಂದು ಎರಡು ಅಥವಾ ಮೂರು ಪದಗಳಿಗೆ ಪ್ರಯೋಗವಿಲ್ಲದಿದ್ದಲ್ಲಿ "लुप्तोपमा" ಅಲಂಕಾರ. "एकद्वित्र्यनुपादानाद्भिन्ना लुप्तोपमाऽष्टधा"। [ವಿವರಕ್ಕೆ "लुप्तोपमा" ಪದದಲ್ಲಿ ನೋಡಿ.]

**पूर्त ಪೂರ್ತ** (न०) 1. ಪಾಲನೆ, ಪೋಷಣೆ, ಸಾಕುವುದು. पृ (पालनपूरणयोः) भावे "क्तः" (३-३-११४)। 2. ಬಾವಿ ಕೆರೆ ಮುಂತಾದುವನ್ನು ತೋಡಿಸುವುದು, ಯಾತ್ರಾರ್ಥಿಗಳ ಸೌಕರ್ಯಕ್ಕಾಗಿ ತೋಪುಗಳ ನಿರ್ಮಾಣ ಅನ್ನಸತ್ರಗಳ ಏರ್ಪಾಡು ಹಣ್ಣುಹಂಪಲಿಗಾಗಿ ಉದ್ಯಾನ ನಿರ್ಮಾಣ ದೇವಾಲಯನಿರ್ಮಾಣ ಮುಂತಾದ ಧರ್ಮ ಕಾರ್ಯಗಳು. पृ कर्मं० "क्तः" (३-२-१०२)। "पुष्करिण्यः सभावापीदेवतायतनानि च। आरामश्च विशेषेण पूर्तं कर्म विनिर्दिशेत्" स्मृतिः। "इष्टेन पूर्तेन नलस्य वश्याः स्वर्भोगमत्रापि सृजन्त्यमर्त्याः" नैष० ३-२१। (वि०) 3. ತುಂಬಲ್ಪಟ್ಟ. 4. ಮುಚ್ಚಲ್ಪಟ್ಟ. 5. ಪೋಷಿಸಲ್ಪಟ್ಟ, ಸಾಕಲ್ಪಟ್ಟ.

**पूर्ति ಪೂರ್ತಿ** (स्त्री०) 1. ತುಂಬುವುದು, ಭರ್ತಿಮಾಡುವುದು. 2. ಪೂರ್ತಿಮಾಡುವುದು, ಸಮಾಪ್ತಿಗೊಳಿಸುವುದು. 3. ಸಾಕುವುದು, ಪೋಷಿಸುವುದು. पृ (पालनपूरणयोः) भावे "क्तिन्" (३-३-९४)। 4. ಗುಣಿಸುವುದು, ಹೆಚ್ಚಿಸುವುದು.

**पूर्द्वार ಪೂರ್ದ್ವಾರ** (न०) ಪಟ್ಟಣದ ಮಹಾದ್ವಾರ, ಗೋಪುರ, ಊರ ಹೊರಬಾಗಿಲು. पुरः द्वारम्।

**पूर्य ಪೂರ್ಯ** (वि०) ತುಂಬಲ್ಪಡುವ, ಭರ್ತಿಮಾಡಲ್ಪಡುವ. पूरी (आप्यायने) + णिच् "ण्यत्" (३-१-१२४)।

**पूर्यमाण ಪೂರ್ಯಮಾಣ** (वि०) ತುಂಬಲ್ಪಡುತ್ತಿರುವ. ಭರ್ತಿಮಾಡಲ್ಪಡುತ್ತಿರುವ. पूरी (आप्यायने) + णिच् "शानच्" (३-२-१२४)।

**पूर्व ಪೂರ್ವ** (न०) 1. ಪೂರ್ವಕಾಲ, ಹಿಂದಿನಕಾಲ, ಪ್ರಾಚೀನಕಾಲ. पूर्वति — पूर्व (निकेतने) "अच्" (३-१-१३४)। 2. ಹಿಂದಿನಕಾಲ, ಇದಕ್ಕೆ ಮುಂಚಿನಕಾಲ. 3. ಪ್ರಾರಂಭಕಾಲ. ಮೊದಲನೆಯ ಘಟ್ಟ. (पुं०अ०) 4. ಪೂರ್ವಪುರುಷರು, ಮೂಲಪುರುಷರು, ವಂಶದ ಹಿರಿಯರು. "पयः पूर्वैः स्वनिःश्वासैः कवोष्णमुपभुज्यते" रघु० १-६७। "तदर्थमुर्वीमवदारयद्भिः पूर्वैः किलायं परिवर्धितो नः" रघु० १३-३। (वि०) 5. ಹಿಂದಿನ ಕಾಲದವನು, ಹಳಬ. 6. ಪುರಾತನಕಾಲದ, ಪ್ರಾಚೀನ ಕಾಲದ. "इदं कविभ्यः पूर्वेभ्यः नमोवाकं प्रशास्महे" उ० रा० १-१। 7. ಹಿಂದಿನ, ಇದಕ್ಕೆ ಹಿಂದಿನದಾದ. "प्राणिनां यदवलोकनक्षणे पूर्वजातिषु भवत्यनुस्मृतिः" याद० १७-३४। 8. ಹಿಂದಿನಕಾಲದ, ಇದಕ್ಕೆ ಮುಂಚಿನ ಕಾಲದ. "पूर्वानुबद्धवैरेण शत्रुणा प्रभविष्णुना" मृच्छ० १०-४४। 9. ಮೊದಲನೆಯ, ಪ್ರಾರಂಭದ, ಎಳೆಯ. "पूर्वे वयसि यः शान्तः स शान्त इति मे मतिः" पञ्चतं० १-१७६। 10. ಪೂರ್ವದಿಕ್ಕಿನಲ್ಲಿರುವ. 11. ಮೊದಲನೆಯ, ಹಿಂದಿನ. "पूर्वस्मादन्यवद्भाति भावाद्दाशरथिस्तुवन्" भट्टि० ८-१०५। 12. ಮೊದಲನೆಯ ಘಟ್ಟದ, ಪ್ರಾರಂಭದ. (अव्य०) 13. ಪೂರ್ವದಲ್ಲಿ, ಹಿಂದಿನಕಾಲದಲ್ಲಿ, ಪ್ರಾಚೀನ ಕಾಲದಲ್ಲಿ. 14. ಪ್ರಾರಂಭದಲ್ಲಿ, ಮೊಟ್ಟಮೊದಲು. "पूर्वमेव मया ज्ञातं पूर्णमेतद्धि मेदसा" पञ्चतं० १-११७। 15. ಇದಕ್ಕೆ ಹಿಂದೆ, ಇದಕ್ಕೆ ಮೊದಲು, ಇದಕ್ಕೆ ಮುಂಚೆ. "पूर्वं मानादवज्ञाय द्रव्यार्थे जननीवशात्" मृच्छ० ८-१७। 16. ಪ್ರಥಮವಾಗಿ, ಮೊದಲನೆಯವನಾಗಿ. "पूर्वं तावदहं मूर्खः द्वितीयः पाशबन्धकः" पञ्चतं० ३-२११। (स्त्री०) **-र्वा -ರ್ವಾ.** ಪೂರ್ವ ದಿಕ್ಕು. पूर्व ಶಬ್ದವು ದಿಕ್ಕು ದೇಶ ಮತ್ತು ಕಾಲವಾಚಕವಾದಾಗ ಪ್ರಥಮಾ ಬಹುವಚನ, ಚತುರ್ಥೀ ಪಂಚಮೀ ಮತ್ತು ಸಪ್ತಮೀ ವಿಭಕ್ತಿಗಳ ಏಕವಚನಗಳಲ್ಲಿ ವಿಕಲ್ಪವಾಗಿ ಸರ್ವನಾಮ ಸಂಜ್ಞೆಯನ್ನು ಹೊಂದುವುದು.

| (पुं०) | | | |
|---|---|---|---|
| | पूर्वः | पूर्वौ | पूर्वे / पूर्वाः । |
| | पूर्वं | पूर्वौ | पूर्वान् । |
| | पूर्वेण | पूर्वाभ्याम् | पूर्वैः । |
| | पूर्वस्मै / पूर्वाय | पूर्वाभ्याम् | पूर्वेभ्यः । |
| | पूर्वस्मात् / पूर्वात् | पूर्वाभ्याम् | पूर्वेभ्यः । |
| | पूर्वस्य | पूर्वयोः | पूर्वेषाम् । |
| | पूर्वस्मिन् / पूर्वे | पूर्वयोः | पूर्वेषु । |

ಸ್ತ್ರೀಲಿಂಗದಲ್ಲಿ ಸರ್ವನಾಮಸಂಜ್ಞೆಯು ನಿತ್ಯವಾಗಿ ಬರುವುದು. पूर्वस्यै पूर्वस्याम् ಇತ್ಯಾದಿ.

ಸರ್ವನಾಮಸಂಜ್ಞೆಯಿರುವುದರಿಂದ ವೃತ್ತಿಯಲ್ಲಿ ಪುಂವದ್ಭಾವ ಬರುವುದು.

पूर्वस्याः रूपम् = पूर्वरूपम् ।

पूर्वस्यां स्थितम् = पूर्वस्थितम् ಇತ್ಯಾದಿ. "सर्वनाम्नो वृत्तिमात्रे पुंवद्भावः" (वा० २-१-५१)।

**पूर्व ಪೂರ್ವ पूर्वक ಪೂರ್ವಕ** (वि०) (ಸಮಾಸದ ಕೊನೆಯಲ್ಲಿ) ಪೂರ್ವದಲ್ಲಿರುವ, ಮೊದಲಲ್ಲಿರುವ, ಮೊದಲಾಗಿರುವ. "संबन्धमाभाषणपूर्वमाहुर्वृत्तः स नौ सङ्गतयोर्वनान्ते" रघु० २-५८। ಇಲ್ಲಿ ಸಂಬಂಧ (ಸಖ್ಯ)ಕ್ಕೆ ಆಭಾಷಣ (ಸಂಭಾಷಣೆ, ಆಲಾಪ)ವೇ ಪೂರ್ವ (ಮೊದಲು) ದಲ್ಲಿ ನಡೆದಿರಬೇಕೆಂಬ ಅರ್ಥ. ಮೊದಲು ಸಂಭಾಷಣೆ ಅನಂತರ ಸಖ್ಯ ಎಂಬ ಅರ್ಥವಿರುವುದರಿಂದ ಸಂಬಂಧವು ಆಭಾಷಣಪೂರ್ವವಾಗುವುದು. ಹೀಗೆಯೇ राजपूर्वः ಎಂಬಲ್ಲಿ ರಾಜ ಶಬ್ದವೇ ಮೊದಲಾಗಿರುವ दशपूर्वरथः ಎಂಬಲ್ಲಿ ದಶಪದವೇ ಪೂರ್ವದಲ್ಲಿರುವ ರಥ ಎಂಬ ಅರ್ಥ. "पुण्यः शब्दो मुनिरिति मुहुः केवलं राजपूर्वः" शाकु० २-१४। "दशपूर्वरथं यमाख्यया दशकण्ठारिगुरुं विदुर्बुधाः" रघु० ८-२९। ಹೀಗೆಯೇ स्मितपूर्वम् बहुमानपूर्वम् ಇತ್ಯಾದಿ. "अनामयप्रश्नपूर्वकमाह" शाकु० ।

**पूर्वकर्मन् ಪೂರ್ವಕರ್ಮನ್** (न०) 1. ಮೊದಲನೆಯ ಕೆಲಸ, ಮೊದಲು ಮಾಡಬೇಕಾದ ಕೆಲಸ. "कर्म त्रिविधम्। पूर्वकर्म प्रधानकर्म पश्चात्कर्मचेति" सुश्रुत०। 2. ಪೂರ್ವಜನ್ಮದ ಕರ್ಮ, ಹಿಂದಿನ ಜನ್ಮದಲ್ಲಿ ಮಾಡಿದ ಪುಣ್ಯಪಾಪ ಕರ್ಮ (ಕಾರ್ಯ)ಗಳು. "यद्यद्भव्यं भवतु भगवन् पूर्वकर्मानुरूपम्" मृ० मा०। 3. ಪೂರ್ವಭಾವಿಯಾಗಿ ಮಾಡುವ ಕೆಲಸ.

**पूर्वकाय ಪೂರ್ವಕಾಯ** (पुं०) 1. ತಿರ್ಯಕ್ ಪ್ರಾಣಿಗಳ ದೇಹದ ಮುಂಭಾಗ. पूर्वं कायस्य। "ग्रीवाभङ्गाभिरामं मुहुरनुपतति स्यन्दने बद्धदृष्टिः पश्चार्धेन प्रविष्टः शरपतनभयाद्भूयसा पूर्वकायम्" शाकु० १-७। 2. ಮನುಷ್ಯನ ದೇಹದ ಮೇಲುಭಾಗ, "स्पृशन् करेणानतपूर्वकायं संप्रस्थितो वाचमुवाच कौत्सः" रघु० ५-३२।

**पूर्वकाल ಪೂರ್ವಕಾಲ** (पुं०) 1. ಹಿಂದಿನಕಾಲ, ಪ್ರಾಚೀನಕಾಲ, ಹಳೆಯಕಾಲ. (वि०) 2. ಹಿಂದಿನಕಾಲದ. ಹಳೆಯಕಾಲದ, ಪ್ರಾಚೀನಕಾಲದ.

**पूर्वकृत ಪೂರ್ವಕೃತ** (वि०) 1. ಮೊದಲು ಮಾಡಲ್ಪಟ್ಟ. पूर्वं कृतम्। 2. ಪೂರ್ವಜನ್ಮದಲ್ಲಿ ಮಾಡಲ್ಪಟ್ಟ, ಹಿಂದಿನ ಜನ್ಮದಲ್ಲಿ ಆಚರಿಸಲ್ಪಟ್ಟ. 3. ಮುಂಭಾಗದಲ್ಲಿ ಮಾಡಲ್ಪಟ್ಟ.

**पूर्वकोटि ಪೂರ್ವಕೋಟಿ** (स्त्री०) ಪೂರ್ವಪಕ್ಷ, ವಾದದ ಪ್ರಾರಂಭದಲ್ಲಿ ಹಾಕುವ ಪ್ರಶ್ನೆ, ಶಾಸ್ತ್ರದಲ್ಲಿ ಕಂಡುಬರುವ ಸಂಶಯ ನಿವಾರಣೆಗಾಗಿ ಹಾಕುವ ಪ್ರಶ್ನೆ.

**पूर्वगङ्गा ಪೂರ್ವಗಂಗಾ** (स्त्री०) ನರ್ಮದಾ ನದಿ. पूर्वा चासौ गङ्गा च।

**पूर्वज ಪೂರ್ವಜ** (पुं०) 1. ಮೊದಲು ಹುಟ್ಟಿದ ಅಣ್ಣ, ಹಿರಿಯ ಸಹೋದರ. पूर्वस्मिन् काले जायते — जनी (प्रादुर्भावे) "ड:" (३-२-९७)। "पूर्वदेवजनितानभिनिघ्नन् पूर्वजेन सहितो यदुनाथः" याद० २१-६४। 2. ಪೂರ್ವಿಕ, ವಂಶದ ಹಿರಿಯ. "स पूर्वजानां कपिलेन रोषात् भस्मावशेषीकृतविग्रहाणाम्" रघु० १६-३४। (पुं० ब० व०) 3. ಚಂದ್ರಲೋಕದಲ್ಲಿ ವಾಸಿಸುವ ಪಿತೃಗಳು. (स्त्री०) –जा –ಜಾ. ಅಕ್ಕ, ಜ್ಯೇಷ್ಠ ಸಹೋದರಿ. (वि०) 4. ಪೂರ್ವದಲ್ಲಿ ಹುಟ್ಟಿದ, ಮೊದಲು ಹುಟ್ಟಿದ.

**पूर्वजन्मन् ಪೂರ್ವಜನ್ಮನ್** (पुं०) 1. ಜ್ಯೇಷ್ಠ ಸಹೋದರ, ಅಣ್ಣ. पूर्वं जन्म यस्य। "स लक्ष्मणं लक्ष्मणपूर्वजन्मा विलोक्य लोकत्रयगीतकीर्तिः" रघु० १४-४४। (न०) 2. ಹಿಂದಿನ ಜನ್ಮ. पूर्वं जन्म। (वि०) 3. ಮೊದಲು ಹುಟ್ಟಿದ. पूर्वं जन्म यस्य।

**पूर्वजाति ಪೂರ್ವಜಾತಿ** (स्त्री०) ಪೂರ್ವಜನ್ಮ, ಹಿಂದಿನ ಜನ್ಮ. "प्राणिनां यदवलोकनक्षणे पूर्वजातिषु भवत्यनुस्मृतिः" याद० १७-३४।

**पूर्वदक्षिणा ಪೂರ್ವದಕ್ಷಿಣಾ** (स्त्री०) ಪೂರ್ವ ಮತ್ತು ದಕ್ಷಿಣ ದಿಕ್ಕುಗಳ ಮಧ್ಯಭಾಗ, ಆಗ್ನೇಯ ದಿಕ್ಕು. पूर्वस्याः दक्षिणस्याश्च दिशः अन्तरालं (२-२-२६)।

**पूर्वदिक्पति ಪೂರ್ವದಿಕ್ಪತಿ** (पुं०) ಪೂರ್ವದಿಕ್ಕಿನ ಅಧಿಪತಿ, ಇಂದ್ರ. पूर्वदिशः अधिपतिः।

**पूर्वदिग्बल ಪೂರ್ವದಿಗ್ಬಲ** (न०) ಪೂರ್ವದಿಕ್ಕಿನಲ್ಲಿರುವ ಗ್ರಹಗಳ ಬಲ, ದ್ವಾದಶ ರಾಶಿಗಳಲ್ಲಿ ಪೂರ್ವದಿಕ್ಕಿನಲ್ಲಿರುವ ಗ್ರಹಗಳ ಬಲ. ಪೂರ್ವದಿಕ್ಕಿನಲ್ಲಿ ಬುಧ ಮತ್ತು ಗುರು ಗ್ರಹಗಳು ಬಲಿಷ್ಠರು.

**पूर्वदिग्बलिन् ಪೂರ್ವದಿಗ್ಬಲಿನ್** (पुं०) ಪೂರ್ವದಿಕ್ಕಿನಲ್ಲಿ ಬಲಿಷ್ಠವಾದ ಗ್ರಹ, ದ್ವಾದಶರಾಶಿಗಳಲ್ಲಿ ಪೂರ್ವದಿಕ್ಕಿನ ರಾಶಿಯಲ್ಲಿ ಬಲವುಳ್ಳ ಗ್ರಹ. ಪೂರ್ವದಿಕ್ಕಿನಲ್ಲಿ ಬುಧ ಮತ್ತು ಗುರು ಗ್ರಹಗಳಿಗೆ ಬಲವಿರುವುದು. "प्राच्यां सौम्यसुराचार्यौ याम्यां भास्करभूमिजौ। प्रत्यक् सौरिरुदीच्यां तु सितेन्दू दिग्बलान्वितौ"।

**पूर्वदिग्वदन ಪೂರ್ವದಿಗ್ವದನ** (ನಂ) ಪೂರ್ವದಿಕ್ಕಿಗೆ ಅಭಿಮುಖವಾಗಿ (ಎದುರಾಗಿ) ರುವ ರಾಶಿ. पूर्वदिशि वदनं यस्य। ಮೇಷ, ಸಿಂಹ ಮತ್ತು ಧನೂ ರಾಶಿಗಳು ಪೂರ್ವದಿಕ್ಕಿಗೆ ಅಭಿಮುಖವಾಗಿರುವುವು.

**पूर्वदिश् ಪೂರ್ವದಿಶ್** (स्त्री०) ಪೂರ್ವದಿಕ್ಕು, ಸೂರ್ಯನು ಉದಯಿಸುವ ದಿಕ್ಕು. पूर्वा दिक्।

**पूर्वदिश्य ಪೂರ್ವದಿಶ್ಯ** (वि०) ಪೂರ್ವದಿಕ್ಕಿನಲ್ಲಿರುವ. पूर्वदिशि भवम् "यत्" (४-३-५४)।

**पूर्वदिष्ट ಪೂರ್ವದಿಷ್ಟ** (वि०) ಪೂರ್ವ ಜನ್ಮದ ಭಾಗ್ಯಾನುಸಾರ ಉಂಟಾಗುವ ಸುಖದುಃಖಾದಿಗಳು. पूर्वं दिष्टं भाग्यं कारणत्वेनास्त्यस्य "अच्" (५-२-१२७)। "प्रतिगृह्णामि ते शापमात्मनोऽञ्जलिनाम्बिके। देवैर्मर्त्याय यत्प्रोक्तं पूर्वदिष्टं हि तस्य तत्" भाग० ६-१७-१७।

**पूर्वदेव ಪೂರ್ವದೇವ** (पुं०) 1. ಅಸುರ, ದೇವತೆಗಳ ಶತ್ರು. पूर्वे च ते देवाश्च। यद्वा पूर्वं देवा:। ಇವರು ಪೂರ್ವದಲ್ಲಿ ದೇವತೆಗಳಾಗಿದ್ದು ಅನ್ಯಾಯ ಕೃತ್ಯಗಳಿಂದ ದ್ವೇಷದಿಂದ ದೇವತ್ವವನ್ನು ಕಳೆದುಕೊಂಡು ಅಸುರರಾದರು. "पूर्वदेवजनितानभिनिघ्नन् पूर्वजेन सहितो यदुनाथ:" याद० २१-६४। (पुं० द्विव०) 2. ನರನಾರಾಯಣರು. "तेषां मनश्च तेजश्चाप्याददानाविवौजसा। पूर्वदेवौ व्यतिक्रान्तौ नरनारायणावृषी" भा० उद्योग० ४९-५।

**पूर्वदेवता ಪೂರ್ವದೇವತಾ** (स्त्री०) ಅನಾದಿಯಿಂದ ದೇವತಾರೂಪರಾದ ಪಿತೃಗಳು. पूर्वे देवता:। ಪೂರ್ವದೇವತೆಗಳು ಕ್ರೋಧವನ್ನು ತ್ಯಜಿಸಿದವರೂ ಬಾಹ್ಯ ಮತ್ತು ಅಂತಃಶೌಚವುಳ್ಳವರಾಗಿಯೂ ಜಿತೇಂದ್ರಿಯರಾಗಿಯೂ ಯುದ್ಧವನ್ನು ತ್ಯಜಿಸಿದವರಾಗಿಯೂ ದಯೆ ಮೊದಲಾದ ಎಂಟು ಸುಗುಣಗಳಿಂದ ಕೂಡಿದವರಾಗಿಯೂ ಇರುವರು. "अक्रोधना: शौचपरा: सततं ब्रह्मचारिण:। न्यस्तशस्त्रा महाभागा: पितर: पूर्वदेवता:" मनु० ३-१९२।

**पूर्वदेश ಪೂರ್ವದೇಶ** (पुं०) ಜಂಬೂದ್ವೀಪದ ಪೂರ್ವದಿಕ್ಕಿನಲ್ಲಿರುವ ಒಂದು ದೇಶ.

**पूर्वपक्ष ಪೂರ್ವಪಕ್ಷ** (पुं०) 1. ತಿಂಗಳಿನ ಮೊದಲನೆಯ ಪಕ್ಷ, ಮೊದಲ ಹದಿನೈದು ದಿನಗಳ ಶುಕ್ಲಪಕ್ಷ. पूर्व: पक्ष:। 2. ಶಾಸ್ತ್ರಗಳಲ್ಲಿ ಉಂಟಾಗುವ ಸಂಶಯ ಪರಿಹಾರಕ್ಕಾಗಿ ಹಾಕುವ ಪ್ರಶ್ನೆ. 3. ಸಿದ್ಧಾಂತಕ್ಕೆ ವಿರುದ್ಧವಾದ ಪ್ರಶ್ನೆ. 4. ವಾದಿಯು ಒಂದು ಪ್ರಮೇಯದ ವಿಚಾರದಲ್ಲಿ ಅದಕ್ಕೆ ವಿರುದ್ಧವಾಗಿ ಮಾಡುವ ಯುಕ್ತಿಯುಕ್ತವಾದ ಚರ್ಚೆ. 5. ಅಧಿಕರಣದ ಐದು ಅವಯವಗಳಲ್ಲೊಂದು. विषय: विशय: (संशय:) पूर्वपक्ष: उत्तरम् ಮತ್ತು निर्णय: (सिद्धान्त:) ಇವು ಐದು ಅಧಿಕರಣಾಂಗಗಳು.

**पूर्वपद ಪೂರ್ವಪದ** (ನಂ) ಸಮಸ್ತ ಪದಗಳಲ್ಲಿ ಮೊದಲನೆಯ ಪದ. पूर्वं पदम्।

**पूर्वपर्वत ಪೂರ್ವಪರ್ವತ** (पुं०) ಉದಯಪರ್ವತ. ಸೂರ್ಯನು ಉದಯಿಸುತ್ತಿರುವಂತೆ ಕಾಣುವ ಪೂರ್ವದಿಕ್ಕಿನ ಒಂದು ಪರ್ವತ.

**पूर्वपाद ಪೂರ್ವಪಾದ** (पुं०) ಕಾಲಿನ ತುದಿ. पूर्वं पादस्य।

**पूर्वपितामह ಪೂರ್ವಪಿತಾಮಹ** (पुं०) ವಂಶದಲ್ಲಿ ಹುಟ್ಟಿದ ಹಿರಿಯ, ಪಿತಾಮಹನಿಗಿಂತ ಹಿಂದಿನವನು, ಪ್ರಪಿತಾಮಹ ಮುಂತಾದವರು. पूर्व: पितामहात्।

**पूर्वपीठिका ಪೂರ್ವಪೀಠಿಕಾ** (स्त्री०) ಗ್ರಂಥದ ಅವತರಣಿಕೆ, ಗ್ರಂಥದ ಪ್ರಾರಂಭಕ್ಕೆ ಮೊದಲು ಅದರಲ್ಲಿ ಪ್ರತಿಪಾದ್ಯವಾದ ವಿಷಯದ ಬಗ್ಗೆ ಕೊಡುವ ಸೂಕ್ಷ್ಮ ಪರಿಚಯ, ಗ್ರಂಥರಚನೆಯ ಪ್ರಸ್ತಾವನೆ.

**पूर्वपुरुष ಪೂರ್ವಪುರುಷ** (पुं०) ತಂದೆ ಮೊದಲಾದ ಮೂವರು ಹಿರಿಯರು, ತಂದೆ ತಾತ ಮತ್ತು ಮುತ್ತಾತ.

**पूर्वपूर्व ಪೂರ್ವಪೂರ್ವ** (वि०) ಹಿಂದು ಹಿಂದಿನ, ಹಿಂದಿನವನಿಗಿಂತ ಹಿಂದಿನ, ಹಿಂದಿನದಿಕ್ಕಿಂತ ಹಿಂದಿನ. पूर्वं वीप्सायां द्वित्वम्। "पूर्वपूर्वनरेन्द्राणामुच्छिष्टमपि मेदिनी" याद० २२-११।

**पूर्वफल्गुनी ಪೂರ್ವಫಲ್ಗುನೀ** (स्त्री०) ಅಶ್ವಿನಿ ಮೊದಲಾದ ಇಪ್ಪತ್ತೇಳು ನಕ್ಷತ್ರಗಳಲ್ಲಿ ಹನ್ನೊಂದನೆಯದು. पूर्वा फल्गुनी। ಈ ನಕ್ಷತ್ರವು ಭಗದೇವತಾಕವಾದುದು. "नासत्यान्तकवह्निधातृशशभृद्रुद्रादितीज्योरगा ऋक्षेशा: पितरो भगोऽर्यमरवित्वष्टा समीर: क्रमात्" मु० चिं०। ಪೂರ್ವಫಲ್ಗುನೀ ನಕ್ಷತ್ರದಲ್ಲಿ ಹುಟ್ಟಿದವನು ಶೂರನೂ ದಾನಶೂರನೂ ಸಾಹಸಿಯೂ ಪೃಥ್ವೀಪತಿಯೂ ಕೋಪದ ಸ್ವಭಾವದವನೂ ಸಾಮರ್ಥ್ಯಶಾಲಿಯೂ ಧೂರ್ತಸ್ವಭಾವದವನೂ ಕ್ರೂರನೂ ವಾತರೋಗವುಳ್ಳವನೂ ಆಗಿರುವನು.

**पूर्वफल्गुनीभव ಪೂರ್ವಫಲ್ಗುನೀಭವ** (पुं०) ಬೃಹಸ್ಪತಿ, ದೇವತೆಗಳ ಆಚಾರ್ಯ.

**पूर्वभाग ಪೂರ್ವಭಾಗ** (पुं०) 1. ಮುಂಭಾಗ. 2. ಶರೀರದ ಮೇಲುಭಾಗ. 3. ಮೊದಲನೆಯ ಭಾಗ.

**पूर्वभाद्रपदा ಪೂರ್ವಭಾದ್ರಪದಾ** (पुं०) ಅಶ್ವಿನೀ ಮೊದಲಾದ ಇಪ್ಪತ್ತೇಳು ನಕ್ಷತ್ರಗಳಲ್ಲಿ ಇಪ್ಪತ್ತೈದನೆಯದು. ಇದರ ಅಧಿದೇವತೆಯು ಅಜೈಕಪಾದ. ಇದು ಖಟ್ವಾಕೃತಿಯು ದ್ವಿತಾರಕಾತ್ಮಿಕವಾದುದ್ದು.

**पूर्वभाव ಪೂರ್ವಭಾವ** (ಪುಂ) 1. ಪೂರ್ವದಲ್ಲಿ ಇರುವಿಕೆ, ಕಾರ್ಯಕ್ಕೆ ಮೊದಲು ಕಾರಣವಾಗಿರುವಿಕೆ. पूर्वो भावः। 2. ಈಗ ಇರುವುದಕ್ಕಿಂತಲೂ ಮೊದಲು ಇರುವಿಕೆ.

**पूर्वभाविन् ಪೂರ್ವಭಾವಿನ್** (वि०) 1. ಮೊದಲು ಇರುವ, ಇದಕ್ಕಿಂತಲೂ ಮುಂಚೆ ಇರುವ. 2. ಕಾರಣ, ಹೇತು. पूर्वं भवति — भू "णिनिः" (३-१-१३४)। स्त्रियां "ङीप्" (४-१-५)। -भाविनी -ಭಾವಿನೀ.

**पूर्वरङ्ग ಪೂರ್ವರಂಗ** (ಪುಂ) 1. ನಾಟ್ಯಶಾಲೆ. पूर्वं रज्यतेऽस्मिन् — रञ्ज (रागे) अधि० "घञ्" (३-३-१२१)। 2. ಅಭಿನಯಿಸಬೇಕಾದ ಕಥಾವಸ್ತುವಿಗೆ ಪೂರ್ವದಲ್ಲಿ ನೃತ್ಯಶಾಲೆಯಲ್ಲಿ ಸಂಭವಿಸಬಹುದಾದ ವಿಘ್ನಗಳ ಶಾಂತಿಗಾಗಿ ಕುಶೀಲವರಿಂದ ಆಚರಿಸಲ್ಪಡುವ ನಾಂದೀಪಠನ ಗೀತವಾದ್ಯರೂಪವಾದ ಕಾರ್ಯ. "यन्नाट्यवस्तुनः पूर्वं रङ्गविघ्नोपशान्तये। कुशीलवाः प्रकुर्वन्ति पूर्वरङ्गः स उच्यते" सा० द० ६-२२। ಪೂರ್ವರಂಗದಲ್ಲಿ (ನಾಟ್ಯಶಾಲೆಯಲ್ಲಿ) ಇದು ನಟೀನಟರ ಮತ್ತು ಗಾಯಕರ ಪರಸ್ಪರ ಸಂತೋಷಪೂರ್ವಕವಾದ ವ್ಯಾಪಾರವಾದುದರಿಂದಲೂ ಕಥಾವಸ್ತುವಿಗೆ ಪೂರ್ವದಲ್ಲಿ ಆಚರಿಸಲ್ಪಡುವುದರಿಂದಲೂ ಇದೂ ಪೂರ್ವರಂಗವಾಯಿತು. "सभापतिः सभासभ्या गायका वादका अपि। नटी नटश्च मोदन्ते यत्रान्योन्यानुरञ्जनात्। अतो रङ्ग इति ज्ञेयः पूर्वं यत्स प्रकल्पते। तस्मादयं पूर्वरङ्गः इति विद्वद्भिरुच्यते" भावप्रकाशिका। "पूर्वरङ्गः प्रसङ्गाय नाटकीयस्य वस्तुनः" माघ० २-८।

**पूर्वराग ಪೂರ್ವರಾಗ** (ಪುಂ) ನಾಯಿಕಾನಾಯಕರ ಸಮಾಗಮಕ್ಕೆ ಪೂರ್ವದಲ್ಲಿ ಉಂಟಾಗುವ ಅನುರಾಗ, ಪರಸ್ಪರ ಸ್ತ್ರೀಪುರುಷರ ಮನಸ್ಸನ್ನು ಆಕರ್ಷಿಸುವ ಪ್ರೇಮ. ಸಮಾಗಮಕ್ಕೆ ಮೊದಲು ಇದೊಂದು ಅವಸ್ಥಾವಿಶೇಷ. ಈ ಪ್ರೇಮವು ಪರಸ್ಪರ ಶ್ರವಣ ಮತ್ತು ದರ್ಶನಗಳಿಂದ ಅಂಕುರಿಸಿ ವೃದ್ಧಿಹೊಂದುವುದು. "श्रवणाद्दर्शनाद्वापि मिथः संरूढरागयोः। दशाविशेषो योऽप्राप्तौ पूर्वरागः स उच्यते" सा० द० ३-१८८।

**पूर्वरात्र ಪೂರ್ವರಾತ್ರ** (ಪುಂ) ರಾತ್ರಿಯ ಪೂರ್ವಭಾಗ, ರಾತ್ರಿಯ ಮೊದಲುಭಾಗ. रात्रेः पूर्वभागः। पूर्वं रात्रेः "अच्" (५-४-८७)।

**पूर्वरूप ಪೂರ್ವರೂಪ** (ನ०) 1. ಪೂರ್ವರೂಪಾಲಂಕಾರ, ಅರ್ಥಾಲಂಕಾರದ ಒಂದು ಭೇದ. (1) ಒಂದು ವಸ್ತುವು ತನ್ನ ಗುಣವನ್ನು ಬಿಟ್ಟು ಬೇರೆ ಗುಣವನ್ನು ಹೊಂದಿದ್ದರೂ ಕಾರಣಾಂತರದಿಂದ ಪುನಃ ತನ್ನ ಗುಣವನ್ನೇ ಪಡೆಯುವುದು "ಪೂರ್ವರೂಪ" ಅಲಂಕಾರ. "पुनः स्वगुणसंप्राप्तिः पूर्वरूपमुदाहृतम्"। उदा: "हरकण्ठांशुलिप्तोऽपि शेषस्त्वद्यशसा सितः" चन्द्रा०। ಇಲ್ಲಿ ಆದಿಶೇಷನು ಪರಮೇಶ್ವರನ ಕಂಠದ (ನೀಲ) ಕಾಂತಿಯಿಂದ ತನ್ನ ಧಾವಳ್ಯ (ಗುಣ) ವನ್ನು ಬಿಟ್ಟು ನೈಲ್ಯ (ಗುಣ) ವನ್ನು ಹೊಂದಿದ್ದರೂ ನಿನ್ನ ಯಶಸ್ಸಿನಿಂದ ಆವೃತನಾಗಿ ಮತ್ತೆ ತನ್ನ ಗುಣ (ಧಾವಳ್ಯ) ವನ್ನು ಹೊಂದಿದನೆಂದು ವರ್ಣಿತವಾಗಿರುವುದರಿಂದ ಪೂರ್ವರೂಪಾಲಂಕಾರ. (2) ಒಂದು ವಸ್ತುವು ವಿಕಾರಹೊಂದಿದರೂ ಅದರ ಮೊದಲಿನ ಅವಸ್ಥೆಯಲ್ಲೇ ಉಳಿಯುವುದೂ ಪೂರ್ವರೂಪ. "पूर्वरूपानुवृत्तिश्च विकृते सति वस्तुनि। दीपे निर्वापितेऽप्यासीत्काञ्चीरत्नैर्महन्महः" चन्द्रा०। 2. ವ್ಯಾಧಿಯು ಬರುವುದಕ್ಕೆ ಮೊದಲು ಉಂಟಾಗುವ ಸೂಚನೆ, ವ್ಯಾಧಿಯ ಪೂರ್ವಲಕ್ಷಣ. 3. ಪೂರ್ವಸೂಚನೆ, ಬದಲಾವಣೆ ಹೊಂದುವುದರ ಪೂರ್ವಲಕ್ಷಣ. 4. ಹಿಂದಿನ ರೂಪ.

**पूर्वलक्षण ಪೂರ್ವಲಕ್ಷಣ** (ನ०) ಪೂರ್ವಸೂಚನೆ.

**पूर्ववयस् ಪೂರ್ವವಯಸ್** (ನ०) 1. ತಾರುಣ್ಯ, ಯೌವನ, ಪ್ರಾಯ. पूर्वं वयः। "पूर्वे वयसि यः शान्तः स शान्त इति मे मतिः। धातुषु क्षीयमाणेषु शमः कस्य न जायते" पञ्चतं० १-१७६। (वि०) 2. ತರುಣ, ಪ್ರಾಯದವನು.

**पूर्ववर्तिन् ಪೂರ್ವವರ್ತಿನ್** (वि०) ಪೂರ್ವದಲ್ಲಿರುವ, ಮೊದಲು ಇರುವ. पूर्वं वर्तते—वृतु (वर्तने) "णिनिः" (३-१-१३४)।

**पूर्ववाद ಪೂರ್ವವಾದ** (ಪುಂ) ನ್ಯಾಯಾಧೀಶನ ಮುಂದೆ ಮಾಡುವ ವ್ಯವಹಾರವಿಷಯದ ಮಂಡನೆ, ವ್ಯವಹಾರದ ವಿಷಯವನ್ನು ಹಿಡಿದು ಮಾತಾಡುವುದು. पूर्वो वादः। "पूर्ववादं परित्यज्य योऽन्यमालम्बते पुनः। पदसंक्रामणाज्ज्ञेयो हीनवादी स वै नरः"।

**पूर्ववादिन् ಪೂರ್ವವಾದಿನ್** (ಪುಂ) ವ್ಯವಹಾರದ ವಿಷಯದನ್ನು ಹಿಡಿದು ಮೊದಲು ಮಾತಾಡುವ ವಾದಿ ಅಥವಾ ಪ್ರತಿವಾದಿ. पूर्वं वदति—वद (व्यक्तायां वाचि) "णिनिः" (३-१-१३४)। "मिथ्योक्तौ पूर्ववादी तु प्रतिपत्तौ न सा भवेत्"।

**पूर्ववार्षिक ಪೂರ್ವವಾರ್ಷಿಕ** (वि०) ವರ್ಷಾಕಾಲದ ಪೂರ್ವಭಾಗದಲ್ಲಿ ಉಂಟಾದ. वर्षाणां पूर्वं पूर्ववर्षाः, तत्र जातः "ठञ्" (४-३-११)।

**पूर्ववृत्त ಪೂರ್ವವೃತ್ತ** (ನ०) 1. ಪೂರ್ವದಲ್ಲಿ ನಡೆದ ಕಥೆ, ಇತಿಹಾಸ. 2. ಹಿಂದಿನ ವಿಷಯ, ಭೂತಕಾಲದಲ್ಲಿ ನಡೆದ

ವಿಷಯು. "पूर्ववृत्तकथितैः पुराविदः सानुजः पितृसखस्य राघवः" रघु० ११-१०।

**पूर्वशैल ಪೂರ್ವಶೈಲ** (पुं०) ಪೂರ್ವಪರ್ವತ, ಉದಯ ಪರ್ವತ.

**पूर्वा ಪೂರ್ವಾ** (स्त्री०) ಪೂರ್ವದಿಕ್ಕು.

**पूर्वापर ಪೂರ್ವಾಪರ** (पुं०) 1. ಪೂರ್ವದೇಶ ಮತ್ತು ಪಶ್ಚಿಮ ದೇಶ. पूर्वश्च अपरश्च। 2. ಪೂರ್ವ ದಿಕ್ಕಿನ ಮತ್ತು ಪಶ್ಚಿಮ ದಿಕ್ಕಿನ. "पूर्वापरौ तोयनिधी वगाह्य स्थितः पृथिव्या इव मानदण्डः" कुमा० १-१। (वि०) 3. ಪೂರ್ವದ ಮತ್ತು ಅನನ್ತರದ.

**पूर्वार्ध ಪೂರ್ವಾರ್ಧ** (न०) 1. ಮೊದಲನೆಯ ಅರ್ಧ ಭಾಗ. पूर्वमर्धम्। "दिनस्य पूर्वार्धपरार्धभिन्ना छायेव मैत्री खलसज्जनानाम्" भर्तृ० १-४९। 2. ಶರೀರದ ಮೇಲು ಭಾಗ. "शकुन्तला पूर्वार्धेन शयनादुत्थाय" शाकु० ३।

**पूर्वाषाढा ಪೂರ್ವಾಷಾಢಾ** (स्त्री०) ಪೂರ್ವಾಷಾಢಾ ನಕ್ಷತ್ರ, ಅಶ್ವಿನಿ ಮೊದಲಾದ ಇಪ್ಪತ್ತೇಳು ನಕ್ಷತ್ರಗಳಲ್ಲಿ ಇಪ್ಪತ್ತನೆಯ ನಕ್ಷತ್ರ. ಈ ನಕ್ಷತ್ರವು ಜಲಾಧಿದೇವತಾಕ ವಾದುದು. ಇದು ಆನೆಯ ಕೊಂಬಿನ ಆಕಾರದಲ್ಲಿ ದ್ವಿತಾರ ಕಾತ್ಮಿಕವಾದುದು.

**पूर्वाह्ण ಪೂರ್ವಾಹ್ಣ** (पुं०) ಹಗಲಿನ ಮೂರು ಭಾಗಗಳಲ್ಲಿ ಮೊದಲನೆಯ ಭಾಗ, ಹಗಲಿನ ಪೂರ್ವಭಾಗ. पूर्वमह्नः। समासान्तः "टच्" (५-४-९१)। अह्नादेशः (५-४-८८)। णत्वम् (८-४-७)। "आवर्तनात्तु पूर्वाह्णो ह्यपराह्णस्ततः परम्"। "मैत्रं प्रसाधनं स्नानं दन्तधावनमञ्जनम्। पूर्वाह्ण एव कुर्वीत देवतानां च पूजनम्" मनु० ४-१५२।

**पूर्वाह्णक ಪೂರ್ವಾಹ್ಣಕ** (वि०) ಪೂರ್ವಾಹ್ಣದಲ್ಲಿ ಹುಟ್ಟಿದ. पूर्वाह्णे जातः "वुन्" (४-३-२८)।

**पूर्वाह्ण(ह्णे)तन ಪೂರ್ವಾಹ್ಣ (ಹ್ಣೇ) ತನ** (वि०) ಪೂರ್ವಾಹ್ಣದಲ್ಲಿರು... ...ಗಲಿನ ಮೊದಲನೆಯ ಭಾಗದಲ್ಲಿ ರುವ. पूर्वाह्णे भवः—वा "टच्युः" तुट् च (४-३-२४)। सप्तम्या वा लुक् (६-३-१७)। पक्षे **पूर्वाह्णतनः ಪೂರ್ವಾಹ್ಣತನಃ** टच्युप्रत्ययाभावे "ठञ्" (४-३-११)। **पौर्वाह्णिकः ಪೌರ್ವಾಹ್ಣಿಕಃ** पूर्वाह्णः सोढोऽस्य ಎಂದು ವಿಗ್ರಹವಾದರೆ "टच्यु" ಪ್ರತ್ಯಯವು ನಿತ್ಯವಾಗಿ ಬಂದು **पूर्वाह्णतनम् ಪೂರ್ವಾಹ್ಣತನಮ್** ಎಂದು ರೂಪವಾಗು ವುದು.

**पूर्वाह्णिक ಪೂರ್ವಾಹ್ಣಿಕ** (वि०) ಪೂರ್ವಾಹ್ಣದಲ್ಲಿ ಸಾಧಿಸ ಬೇಕಾದ ಕಾರ್ಯ. पूर्वाह्णः साधनतयाऽस्त्यस्य "ठन्" (५-२-११५)।

**पूर्विन् ಪೂರ್ವಿನ್** (वि०) ಪೂರ್ವದಲ್ಲಿ ಕೆಲಸಮಾಡಿದವನು, ಮೊದಲು ಕಾರ್ಯವನ್ನು ಮಾಡಿದವನು. पूर्वं कृतमनेन "इनिः" (५-२-८६)।

**पूर्वेद्युस् ಪೂರ್ವೇದ್ಯುಸ್** (अव्य०) 1. ಮೊದಲನೆಯ ದಿನ, ಹಿಂದಿನ ದಿನ. पूर्वस्मिन्नहनि — पूर्व "एद्युस्" (५-३-२२)। "पूर्वेद्युरपरेद्युर्वा श्राद्धकर्मण्युपस्थिते। निमन्त्रयेत त्र्यवरान् सम्यग्विप्रान्यथोदितान्" मनु० ३-१८७। 2. ಪ್ರಾತಃಕಾಲ, ಹಗಲಿನ ಪ್ರಾರಂಭಕಾಲ, ಹಗಲಿನ ಪೂರ್ವಭಾಗ. "पूर्वेद्युः प्रातःकाले स्यात्" मेदि०। "पूर्वेद्युः पूर्वाह्णप्रभातयोः" हेम०।

**पूर्वोत्तर ಪೂರ್ವೋತ್ತರ** (वि०) 1. ಪೂರ್ವ ಮತ್ತು ಉತ್ತರ ದಿಕ್ಕಿನ. 2. ಪೂರ್ವದ ಮತ್ತು ಅನನ್ತರದ. (स्त्री०) 3. ಪೂರ್ವ ಮತ್ತು ಉತ್ತರ ದಿಕ್ಕುಗಳ ಮಧ್ಯ ಭಾಗ, ಈಶಾನ್ಯದಿಕ್ಕು. पूर्वस्याः उत्तरस्याश्च दिशः अन्तरालम् (२-२-१६)।

**पूषन् ಪೂಷನ್** (पुं०) ಸೂರ್ಯ. पूषति—पूष (वृद्धौ) "कनिः" (उ० १-१५७)। "इन्धनौघधगप्यग्निस्त्विषा नात्येति पूषणम्" माघ० २-२३। पूषा पूषणौ पूषणः। ಈ ಪೂಷನೆಂಬ ಸೂರ್ಯನು ದ್ವಾದಶ ಸೂರ್ಯರಲ್ಲೊ ಬ್ಬನು. "धाता मित्रोऽर्यमा शक्रः वरुणस्त्वंश एव च। भगो विवस्वान् पूषा च सविता दशमस्तथा। एकादश-स्तथा त्वष्टा द्वादशो विष्णुरुच्यते" भा० आदि० ६६।

**पूषात्मज ಪೂಷಾತ್ಮಜ** (पुं०) 1. ಮೇಘ, ಮೋಡ. पूष्णः आत्मजः। ವೃಷ್ಟಿಗೆ ಅಧಿಪತಿಯಾದ ಮೇಘವು ಸೂರ್ಯ ನಿಂದ ಹುಟ್ಟಿದುದರಿಂದ ಈ ಹೆಸರು. "आदित्याज्जायते वृष्टिः वृष्टेरन्नं ततः प्रजाः"। "वृष्टिं पूषात्मजो यथा" भा० वन०। 2. ಇಂದ್ರ.

**पूषदन्तहर ಪೂಷದನ್ತಹರ** (पुं०) ಪರಶಿವ. ಪರಮೇಶ್ವರನ ಅಂಶಭೂತನಾದ ವೀರಭದ್ರನಿಂದ ಪೂಷನೆಂಬ ಸೂರ್ಯನ ದಂತಭಂಗವುಂಟಾಯಿತು.

**पृक्का ಪೃಕ್ಕಾ** (स्त्री०) ಬೆಣ್ಣೆ ಬಿದಿರು ಸೊಪ್ಪು.

**पृक्त ಪೃಕ್ತ** (वि०) ಬೆರೆತಿರುವ, ಸೇರಿಕೊಂಡಿರುವ, ಸಂಬಂಧ ಹೊಂದಿರುವ. पृची (संपर्के) "क्तः" (३-४-७२)। "पृक्तस्तुषारैर्गिरिनिर्झराणामनोकहाकम्पितपुष्पगन्धी" रघु० २-१३।

+णिच् "शतृ" (३-२-१२४) "शानच्" (३-२-१२४)। -यमानः -ಯಮಾನಃ.

**प्रकल्पमान ಪ್ರಕಲ್ಪಮಾನ** (वि०) 1. ನಿರ್ಮಾಣ ಮಾಡುತ್ತಿರುವ, ರಚಿಸುತ್ತಿರುವ. प्र+कृपू (सामर्थ्ये) "शानच्" (३-२-१२४)। 2. ಏರ್ಪಾಡು ಮಾಡುತ್ತಿರುವ.

**प्रकल्पित ಪ್ರಕಲ್ಪಿತ** (वि०) 1. ರಚಿಸಲ್ಪಟ್ಟ, ತಯಾರಿಸಲ್ಪಟ್ಟ. प्र+कृपू (सामर्थ्ये)+णिच् "क्तः" (३-२-१०२)। "मुखमीक्षितुं क्षितिपतेरुपेयुषां परितः प्रकल्पितनिकेतनं बहिः" माघ० १३-२६। 2. ಸಿದ್ಧಪಡಿಸಲ್ಪಟ್ಟ, ಸಜ್ಜುಗೊಳಿಸಲ್ಪಟ್ಟ. 3. ಗೊತ್ತುಮಾಡಲ್ಪಟ್ಟ, ನಿಗದಿಮಾಡಲ್ಪಟ್ಟ. णिजभावे **प्रक्लृप्तः ಪ್ರಕ್ಲೃಪ್ತಃ**. 4. ನಿಗದಿಯಾಗಿರುವ. 5. ಸಿದ್ಧವಾಗಿರುವ. 6. ನಿರ್ಮಾಣವಾಗಿರುವ.

**प्रकल्पितव्य ಪ್ರಕಲ್ಪಿತವ್ಯ, -कल्पयितव्य -ಕಲ್ಪಯಿತವ್ಯ, प्रकल्प्तव्य ಪ್ರಕಲ್ಪ್ತವ್ಯ** (वि०) "प्रकल्पनीय" ಪದದಲ್ಲಿ ನೋಡಿ.

**प्रकल्प्य ಪ್ರಕಲ್ಪ್ಯ** (वि०) 1. ತಯಾರಿಸಲ್ಪಡುವ. 2. ಸಿದ್ಧಪಡಿಸಲ್ಪಡುವ. 3. ಗೊತ್ತುಮಾಡಲ್ಪಡುವ, ನಿಗದಿಮಾಡಲ್ಪಡುವ. प्र+कृपू (सामर्थ्ये)+णिच् "ण्यत्" (३-१-१२४)।

**प्रकाण्ड ಪ್ರಕಾಂಡ** (पुं०) 1. ಮರದ ಬೇರಿನಿಂದ ಕೊಂಬೆಗಳವರೆಗೂ ಇರುವ ದೂಲ. प्रकाण्डयते—प्र+कडि (भेदने)+णिच् "अच्" (३-३-५६)। पृषो०। प्रकृष्टः काण्डो वा। "रम्भापि किं चिह्नयति प्रकाण्डं न चात्मनः स्वेन न चैतदूरू" नैष० ७-९३। 2. ರೆಂಬೆ, ಕೊಂಬೆ. (वि०) 3. ಪ್ರಶಸ್ತವಾದ, ಶ್ರೇಷ್ಠವಾದ. "क्षत्रप्रकाण्डगृहिणीबहुमानपूजामूर्जस्वलामपि शची मनसा करोतु" म० वी० ४-३५। "प्रकाण्डो विटपे शस्ते मूलस्कन्धान्तरे तरोः" हेम०।

**प्रकाण्डक ಪ್ರಕಾಂಡಕ** (पुं०) 1. ಶಾಖೆ, ರೆಂಬೆ. प्रकाण्ड स्वार्थे "कः"। 2. ಮರದ ದೂಲ, ರೆಂಬೆಯವರೆಗಿನ ಕಾಂಡ. (वि०) 3. ಶ್ರೇಷ್ಠವಾದ, ಪ್ರಶಸ್ತವಾದ. "दण्डकानध्यवात्तां यौ वीररक्षःप्रकाण्डकौ" भट्टि० ५-६।

**प्रकाम ಪ್ರಕಾಮ** (वि०) 1. ಹೆಚ್ಚು ಕಾಮಾಸಕ್ತನಾದ. प्रकृष्टः कामो यस्य। 2. ಯಥೇಷ್ಟವಾದ, ಹೇರಳವಾದ. "विलोकयन्त्यो वपुरापुरक्ष्णां प्रकामविस्तारफलं हरिण्यः" रघु० २-११। (अव्य०) **-मम् -ಮಮ್**. 3. ಹೆಚ್ಚಾಗಿ, ಅತಿಶಯವಾಗಿ, ಅತ್ಯಂತವಾಗಿ. "पादैः पुरः कूबरिणां विदारिताः प्रकाममाक्रान्ततलास्ततो गजैः" माघ० १२-२१। 4. ಸ್ವೇಚ್ಛೆಯಂತೆ, ಇಷ್ಟಬಂದಂತೆ, ಇಷ್ಟಾನುಸಾರವಾಗಿ. "परिमलितमपि प्रियः प्रकामं कुचयुगमुज्ज्वलमेव कामिनीनाम्" माघ० ७-७०।

**प्रकार ಪ್ರಕಾರ** (पुं०) 1. ರೀತಿ, ಬಗೆ, ತೆರ. प्र+डुकृञ् (करणे) "घञ्" (३-३-१८)। "गात्रस्तम्भः स्खलयति गतिं कः प्रकारः किमेतत्" मालती० ५-२०। 2. ವಿಧ, ಪ್ರಭೇದ, ಜಾತಿ. 3. ಸಾಮ್ಯ, ಸಾದೃಶ್ಯ, ಹೋಲಿಕೆ. 4. ಭೇದ, ತಾರತಮ್ಯ, ವ್ಯತ್ಯಾಸ. "प्रकारस्तुल्यभेदयोः" मेदि०।

**प्रकाश ಪ್ರಕಾಶ** (पुं०) 1. ಆತಪ, ಸೂರ್ಯನ ಬೆಳಕು, ಬಿಸಿಲು. प्र+काशृ (दीप्तौ) भावे "घञ्" (३-३-१८)। 2. ಕಾಂತಿ, ಬೆಳಕು. "किञ्चित्प्रकाशस्तिमितोग्रतारैर्भ्रूविक्रियायां विरतप्रसङ्गैः" कुमा० ३-४७। 3. ತೋರಿಕೆ, ಕಾಣಿಸಿಕೊಳ್ಳುವುದು. (वि०) 4. ತೋರಿಸಿಕೊಳ್ಳುವ, ಕಣ್ಣಿಗೆ ಕಾಣಿಸಿಕೊಳ್ಳುವ. "प्रकाशश्चाप्रकाशश्च लोकालोक इवाचलः" रघु० १-६८। 5. ಸ್ಪಷ್ಟವಾಗಿ ತೋರುವ, ಕಣ್ಣಿಗೆ ಗೋಚರವಾಗುವ. "प्रह्लानतीव क्वचिदुद्धतश्रियः क्वचित्प्रकाशानथ गह्वरानपि" माघ० १२-५६। 6. ಪ್ರಸಿದ್ಧಿಪಡೆದಿರುವ, ಖ್ಯಾತಿಹೊಂದಿರುವ. "जगत्प्रकाशं तदशेषमिज्यया भवद्गुरुर्लङ्घयितुं ममोद्यतः" रघु० ३-४८। 7. ಆವರಣ ರಹಿತವಾದ, ಕತ್ತಲಿನಿಂದ ಆವೃತವಾಗಿಲ್ಲದ, ಬೆಳಕಿನಿಂದ ಕೂಡಿದ. "विपिनानि प्रकाशानि शक्तिमत्त्वाच्चकार सः" रघु० ४-३१। 8. ಅರಳಿದ, ವಿಕಾಸಹೊಂದಿದ. (अव्य०) 9. ಸ್ಪಷ್ಟವಾಗಿ, ಕಣ್ಣಿಗೆ ಕಾಣಿಸುವಂತೆ. "उन्निद्रप्रियकमनोरमं रमण्याः संरेजे सरसि वपुः प्रकाशमेव" माघ० ८-२८। 10. ಬಹಿರಂಗವಾಗಿ, ಎಲ್ಲರಿಗೂ ತಿಳಿಯುವಂತೆ. "ससहायः स हन्तव्यः प्रकाशं विविधैर्वधैः" मनु० ८-१९३। 11. ಕಿವಿಗೆ ಕೇಳಿಸುವಂತೆ, ಎಲ್ಲರೂ ಕೇಳಲು ಅನುಕೂಲವಾಗುವಂತೆ. [ನಾಟಕಗಳಲ್ಲಿ आत्मगतम् ಎಂಬುದರ ಪ್ರತಿಯಾಗಿ प्रकाशम् ಎಂದು ಉಪಯೋಗಿಸಲ್ಪಡುವುದು.] (न०) 12. ಕಾಂಸ್ಯ, ಕಂಚು.

**प्रकाशक ಪ್ರಕಾಶಕ** (वि०) 1. ಬೆಳಕನ್ನು ಉಂಟುಮಾಡುವ, ಬೆಳಕನ್ನು ಕೊಡುವ. प्रकाशयति—प्र+काशृ (दीप्तौ) "ण्वुल्" (३-१-१३३)। 2. ತತ್ತ್ವವನ್ನು ಹೊರಪಡಿಸುವ, ನಿಜವಾದ ಅಂಶವನ್ನು ವಿಶದಪಡಿಸುವ, ವಿಷಯವನ್ನು ವಿವರವಾಗಿ ನಿರೂಪಿಸಿ ಹೇಳುವ. "तत्र सत्त्वं निर्मलत्वात् प्रकाशकमनामयम्" गीता १४-६।

3. ಮೈದೋರುವ, ದೃಷ್ಟಿಗೆ ಗೋಚರವಾಗುವ, ತೋರ್ಪಡಿಸಿಕೊಳ್ಳುವ. 4. ಸೂಚಿಸುವ, ತಿಳಿಸುವ.

**प्रकाशन ಪ್ರಕಾಶನ** (ಪುಂ) 1. ವಿಷ್ಣು. दिदृक्षुभ्योऽर्जुनादिभ्यः दिव्यं रूपं प्रकाशयत्यसौ—प्र + काशृ (दीप्तौ) + णिच् "ल्युः" (३-१-१३४)। "दिव्यं रूपं दिदृक्षुभ्यः पार्थादिभ्यो विशेषतः। रूपं प्रकाशयति यः स प्रकाशन ईरितः" इति निरुक्तिः। "दिव्यं ददामि ते चक्षुः" गीता। "नैकरूपो बृहद्रूपः शिपिविष्टः प्रकाशनः" वि० स०। (न०) 2. ಪ್ರಕಾಶಪಡಿಸುವುದು, ಬಹಿರಂಗಪಡಿಸುವುದು, ಹೊರಗೆಡಹುವುದು. 3. ತೋರ್ಪಡಿಸಿಕೊಳ್ಳುವುದು, ಕಣ್ಣಿಗೆ ಕಾಣಿಸಿಕೊಳ್ಳುವುದು, ಮೈದೋರುವುದು. 4. ಬೆಳಕನ್ನುಂಟುಮಾಡುವುದು. 5. ತೋರಿಸುವುದು, ಸೂಚಿಸುವುದು, ವ್ಯಕ್ತಪಡಿಸುವುದು, ನಿರೂಪಿಸಿ ಹೇಳುವುದು. "इति स्वयं मोहमहोर्मिनिर्मितं प्रकाशनं शोचति नैषधे निजम्" नैष० ९-१२७। "प्रणयप्रकाशनविदो मधुराः सुतरामभीष्टजनचित्तहृतः" माघ० ९-५५। (वि०) 6. ಪ್ರಕಾಶಗೊಳಿಸುವ, ಬೆಳಕನ್ನುಂಟುಮಾಡುವ.

**प्रकाशनीय ಪ್ರಕಾಶನೀಯ** (वि०) 1. ಪ್ರಕಾಶಪಡಿಸಲ್ಪಡುವ, ಪ್ರಸಿದ್ಧಪಡಿಸಲ್ಪಡುವ. प्र+काशृ (दीप्तौ)+ णिच् "अनीयर्" (३-१-९६)। 2. ಪ್ರಕಟಿಸಲ್ಪಡುವ, ಬಹಿರಂಗಪಡಿಸಲ್ಪಡುವ. 3. ಪ್ರಕಾಶಪಡಿಸಬೇಕಾದ. 4. ಪ್ರಕಟಿಸಬೇಕಾದ. "तव्यः" (३-१-९६)। –यितव्यः –ಯಿತವ್ಯಃ.

**प्रकाशमान ಪ್ರಕಾಶಮಾನ** (वि०) ಹೊಳೆಯುತ್ತಿರುವ, ಜ್ವಲಿಸುತ್ತಿರುವ. प्र + काशृ (दीप्तौ) "शानच्" (३-२-१२४)। "फणामणिव्रातमयूखमण्डलप्रकाशमानोदरदिव्यधामनि" स्तो० २०।

**प्रकाशयत् ಪ್ರಕಾಶಯತ್** (वि०) 1. ಪ್ರಕಾಶಗೊಳಿಸುತ್ತಿರುವ, ಬೆಳಕನ್ನುಂಟುಮಾಡುತ್ತಿರುವ. प्र + काशृ (दीप्तौ) + णिच् "शतृ" (३-२-१२४)। 2. ಪ್ರಕಟಪಡಿಸುತ್ತಿರುವ, ತೋರಿಸುತ್ತಿರುವ. "प्रकाशयन् किञ्चिदिवाप्रमेयः प्रभावमात्मीयमनन्यवेद्यम्" याद० २३-१९। 3. ಪ್ರಸಿದ್ಧಪಡಿಸುತ್ತಿರುವ, ಬಹಿರಂಗಪಡಿಸುತ್ತಿರುವ. "प्रकाशयन्तं स्वमसावबुध्यत" नैष० ९-१२१।

**प्रकाशयितृ ಪ್ರಕಾಶಯಿತೃ** (वि०) 1. ಬೆಳಕನ್ನುಂಟುಮಾಡುವ. 2. ಪ್ರಸಿದ್ಧಪಡಿಸುವ, ಬಹಿರಂಗಪಡಿಸುವ.

**प्रकाशात्मन् ಪ್ರಕಾಶಾತ್ಮನ್** (पुं०) 1. ವಿಷ್ಣು. प्रकाशः (मूर्खैरपि सदा संप्रतिपन्नपरप्रभावतया) प्रदीप्तः आत्मा स्वभावोऽस्य। "मूर्खैरपि सदा सम्यक् प्रतिपन्नस्वभाववान्। यः स स्यात्तु प्रकाशात्मा" इति निरुक्तिः। "ओजस्तेजोद्युतिधरः प्रकाशात्मा प्रतापनः" वि० स०। 2. ಸೂರ್ಯ. (वि०) 3. ವ್ಯಕ್ತವಾದ ಸ್ವಭಾವವುಳ್ಳ. 4. ವ್ಯಕ್ತವಾದ ಸ್ವರೂಪವುಳ್ಳ.

**प्रकाशित ಪ್ರಕಾಶಿತ** (वि०) 1. ಪ್ರಕಾಶಗೊಂಡ, ಪ್ರಸಿದ್ಧಿಪಡೆದ. 2. ಪ್ರಕಟವಾದ, ಬಹಿರಂಗಪಟ್ಟಿರುವ. प्र+काशृ (दीप्तौ) कर्त० "क्तः" (३-४-७२)। 3. ಪ್ರಕಾಶಗೊಳಿಸಲ್ಪಟ್ಟ, ಪ್ರಸಿದ್ಧಪಡಿಸಲ್ಪಟ್ಟ, ಹೊರಗೆಡಹಲ್ಪಟ್ಟ. प्र+काशृ+णिच् "क्तः" (३-२-१०२)। "प्रकाशितत्वन्मतिशीलसाराः कृतोपकारा इव विद्विषस्ते" किरा० ३-१६। 4. ಪ್ರಕಟಿಸಲ್ಪಟ್ಟ. 5. ಪ್ರಕಾಶಗೊಳಿಸಲ್ಪಟ್ಟ, ಬೆಳಗಿಸಲ್ಪಟ್ಟ. 6. ತೋರಿಸಲ್ಪಟ್ಟ, ಪ್ರದರ್ಶಿಸಲ್ಪಟ್ಟ.

**प्रकाश्य ಪ್ರಕಾಶ್ಯ** (वि०) 1. ಪ್ರಕಾಶಿಸಲ್ಪಡುವ, ಪ್ರಕಟಿಸಲ್ಪಡುವ. प्र + काशृ (दीप्तौ) + णिच् "ण्यत्" (३-१-१२४)। 2. ಪ್ರಕಟಿಸಲು ಅರ್ಹವಾದ, ಪ್ರಕಾಶಗೊಳಿಸಲು ಯೋಗ್ಯವಾದ. 3. ಪ್ರಕಟಿಸಬೇಕಾದ. 4. ಪ್ರಸಿದ್ಧಪಡಿಸಬೇಕಾದ. 5. ಪ್ರದರ್ಶಿಸಬೇಕಾದ. ತೋರಿಸಬೇಕಾದ. (अव्य०) 6. ಪ್ರಕಾಶಪಡಿಸಿ, ಪ್ರಕಟಿಸಿ. 7. ಬಹಿರಂಗಪಡಿಸಿ. प्र + काशृ "क्त्वा" (३-४-२१)। "ल्यप्" (७-१-३७)। 8. ತೋರಿಸಿ, ಪ್ರದರ್ಶಿಸಿ. "लग्नद्विरेफाञ्जनभक्तिचित्रं मुखे मधुश्रीस्तिलकं प्रकाश्य" कुमा० ३-३०।

**प्रकिरण ಪ್ರಕಿರಣ** (न०) 1. ಎರಚುವುದು, ಎಸೆಯುವುದು. 2. ಚೆಲ್ಲುವುದು. प्र+कॄ (विक्षेपे) "ल्युट्" (३-३-११५)।

**प्रकिरत् ಪ್ರಕಿರತ್** (वि०) 1. ಎರಚುತ್ತಿರುವ, ಎಸೆಯುತ್ತಿರುವ, ಬೀರುತ್ತಿರುವ. प्र + कॄ (विक्षेपे) "शतृ" (३-२-१२४)। 2. ಚೆಲ್ಲುತ್ತಿರುವ. "तेजः प्रकिरता दिक्षु सप्रतापमदीप्यत" माघ० १९-८।

**प्रकीर्ण ಪ್ರಕೀರ್ಣ** (न०) 1. ಚಾಮರ. प्र+कॄ (विक्षेपे) "क्तः" (३-२-१०२)। "प्रकीर्णं गुत्सकादिषु" त्रिकाण्ड०। 2. ಕಲಬೆರಕೆ, ವಿವಿಧ ವಿಷಯಗಳ ಸಂಗ್ರಹ. 3. ವಿವಿಧ ವಿಷಯಗಳಿಂದ ಕೂಡಿದ ಗ್ರಂಥಭಾಗ. (वि०) 4. ಬೆರಸಲ್ಪಟ್ಟ, ನಾನಾ ವಿಷಯಗಳನ್ನು ಸೇರಿಸಿ ರಚಿಸಲ್ಪಟ್ಟ. (ಗ್ರಂಥ). 5. ಎರಚಲ್ಪಟ್ಟ, ಎಸೆಯಲ್ಪಟ್ಟ. 6. ಚೆಲ್ಲಲ್ಪಟ್ಟ, ಹರಡಲ್ಪಟ್ಟ. "प्रकीर्णः पुष्पाणां हरिचरणयोरञ्जलिरयम्" वेणी० १-१। 7. ಹರಡಲ್ಪಟ್ಟ, ಚಲಿಸುವಂತೆ ಆಡಿಸಲ್ಪಟ್ಟ. "यान्तोऽस्पृशन्तश्चरणैरिवावनिं जवात्प्रकीर्णै-

रमितः प्रकीर्णकैः" माघ० १२-१७। 8. ಅಸಂಗತವಾದ, ಸಂಬಂಧವಿಲ್ಲದ, ಅಸಂಬದ್ಧವಾದ. "बह्वपि स्वेच्छया कामं प्रकीर्णमभिधीयते। अनुज्झितार्थसम्बन्धः प्रबन्धो दुरुदाहरः" माघ० २-७३।

**प्रकीर्णक** ಪ್ರಕೀರ್ಣಕ (पुं०) 1. ಅಶ್ವ, ಕುದುರೆ. "विध्वस्तचामरकुथान् विप्रविद्धप्रकीर्णकान्" भा० द्रोण० ३६-४२। (न०) 2. ಚಾಮರ. प्रकीर्ण संज्ञायां "कन्" (५-३-७५)। "यान्तोऽस्पृशन्तश्चरणैरिवावनिं जवात्प्रकीर्णैरभितः प्रकीर्णकैः" माघ० १२-१७। "चामरं तु प्रकीर्णकम्" अम०। 3. ಬೆರಕೆ, ನಾನಾ ವಿಷಯಗಳ ಸಂಗ್ರಹ. 4. ನಾನಾ ವಿಷಯಗಳ ಸಂಗ್ರಹರೂಪವಾದ ಗ್ರಂಥದ ಒಂದು ಭಾಗ. "प्रकीर्णकं चामरे स्याद्विस्तारे च तुरङ्गमे" मेदि०। 5. ಗ್ರಂಥದ ವಿಸ್ತೃತ ಭಾಗ, ವಿವರಣೆಗಳಿಂದ ಕೂಡಿದ ಗ್ರಂಥದ ಭಾಗ.

**प्रकीर्तन** ಪ್ರಕೀರ್ತನ (न०) 1. ಹೇಳುವುದು. प्र + कृत (संशब्दने)+णिच् "ल्युट्" (३-३-११५)। 2.ಸಾರುವುದು, ಡಂಗುರ ಹೊಡೆಸುವುದು.

**प्रकीर्तित** ಪ್ರಕೀರ್ತಿತ (वि०) 1. ಹೇಳಲ್ಪಟ್ಟ. प्र + कृत (संशब्दने)+णिच् "क्तः" (३-२-१०२)। "प्रभूतमल्पं कार्यं वा यो नरः कर्तुमिच्छति। सर्वारम्भेण तत् कुर्यात् सिंहादेकं प्रकीर्तितम्" चाणक्य० ६७। 2. ಸಾರಿ ಹೇಳಲ್ಪಟ್ಟ, ಡಂಗುರ ಹೊಡೆದು ಹೇಳಲ್ಪಟ್ಟ.

**प्रकीर्य** ಪ್ರಕೀರ್ಯ (पुं०) 1. ತಪಸಿಗಿಡ. 2. ಕರಂಜವೃಕ್ಷ. प्र+कृ (विक्षेपे) "यक्" (उ० ४-११२)। (अव्य०) 3. ಹರಡಿ. 4. ಎಸೆದು.

**प्रकीर्यमाण** ಪ್ರಕೀರ್ಯಮಾಣ (वि०) ಎರಚಲ್ಪಟ್ಟ, ಹರಡಲ್ಪಟ್ಟ. प्र+कृ (विक्षेपे) कर्म० "शानच्" (३-२-१२४)। "प्रकीर्यमाणा निजमुष्टिमुद्गरक्षताकृतेः" याद० १४-१२।

**प्रकुपित** ಪ್ರಕುಪಿತ (वि०) 1. ಕೋಪಗೊಂಡ. प्र+कुप (क्रोधे) "क्तः" (३-४-७२)। 2. ಕೆರಳಿದ. "प्रकुपित इव रोगः क्षिप्रकारी विकारम्" माघ० २०-७६।

**प्रकुपितवत्** ಪ್ರಕುಪಿತವತ್ (वि०) ಕೋಪಗೊಂಡವನು. प्र + कुप (क्रोधे) कर्त० "क्तवतु:" (३-२-१०२)। स्त्रियां "ङीप्" (४-१-६)। -वती -ವತೀ.

**प्रकुप्यत्** ಪ್ರಕುಪ್ಯತ್ (वि०) ಕೋಪಗೊಳ್ಳುತ್ತಿರುವ. प्र + कुप (क्रोधे) "शतृ" (३-२-१२४)। "प्रतिविव्याध दैतेयं बाणैरसनिभीषणैः। पक्षवन्तमिवाद्रीन्द्रं प्रकुप्यन् पाकशासनः" याद० १६-८५। स्त्रियां "ङीप्" (४-१-६)। -कुप्यन्ती -ಕುಪ್ಯಂತೀ.

**प्रकृत** ಪ್ರಕೃತ (वि०) 1. ಪ್ರಾರಂಭಿಸಲ್ಪಟ್ಟ, ಉಪಕ್ರಮಿಸಲ್ಪಟ್ಟ. प्र+डु कृञ् (करणे) "क्तः" (३-२-१०२)। "समवादि वक्तृभिरभीष्टसंकथाप्रकृतार्थशेषमथ हस्तसंज्ञया" माघ० १३-३। 2. ಪ್ರಸಕ್ತವಾದ, ಪ್ರಸ್ತುತವಾದ, ಪ್ರಕರಣಕ್ಕೆ ಸಂಬಂಧಿಸಿದ, ವರ್ಣಿಸಲ್ಪಡುತ್ತಿರುವ. [ಆಲಂಕಾರಿಕರು "उपमेय" ಪದದ ಅರ್ಥದಲ್ಲಿ ಈ ಪದವನ್ನು ಪ್ರಯೋಗಿಸುವರು.] "विषयात्मतयारोप्ये प्रकृतार्थोपयोगिनि। परिणामो भवेत्तुल्यातुल्याधिकरणो द्विधा" सा० द० १०-३४। "प्रकृतमनुसरामः"। 3. ಮುಖ್ಯವಾದ, ಪ್ರಧಾನವಾದ. 4. ಸ್ವಭಾವದಿಂದಿರುವ, ಬದಲಾವಣೆ ಹೊಂದದಿರುವ. "प्रकृतं तु प्रस्तुतेऽपि प्रकृतः प्रकृतिस्थिते" हेम०। 5. ಚೆನ್ನಾಗಿ ಮಾಡಲ್ಪಟ್ಟ. प्रकर्षेण कृतः। "अव्याकुलं प्रकृतमुत्तरधेयकर्म धाराः प्रसाधयितुमव्यतिकीर्णरूपाः" माघ० ५-६०।

**प्रकृतार्थ** ಪ್ರಕೃತಾರ್ಥ (पुं०) ಪ್ರಸ್ತುತವಾದ ವಿಷಯ, ಕೈಗೆ ತೆಗೆದುಕೊಂಡಿರುವ ವಿಷಯ. प्रकृतोऽर्थः।

**प्रकृति** ಪ್ರಕೃತಿ (स्त्री०) 1. ಸ್ವಭಾವ, ಸಹಜವಾದ ಗುಣ. प्र + डु कृञ् (करणे) "क्तिन्" (३-३-९४)। "उष्णत्वमग्न्यातपसंप्रयोगात् शैत्यं हि यत्सा प्रकृतिर्जलस्य" रघु० ५-५४। 2. ಸ್ವಭಾವ, ಹುಟ್ಟುಗುಣ. "प्रकृतिः खलु सा महीयसः सहते नान्यसमुन्नतिं यया" किरा० २-२१। "प्रकृत्या यद्वक्रं तदपि समरेखं नयनयोः" शाकु० १-९। "राक्षसीमासुरीं चैव प्रकृतिं मोहिनीं श्रिताः" गीता ९-१२। 3. (ಅದ್ವೈತ ಮತದಲ್ಲಿ) (1) ಅವಿದ್ಯೆ (2) ತ್ರಿಗುಣಾತ್ಮಿಕವಾದ ಮಾಯೆ. "मयाध्यक्षेण प्रकृतिः सूयते सचराचरम्" गीता ९-१०। 4. (ದ್ವೈತಮತದಲ್ಲಿ) ಚಿತ್ ಮತ್ತು ಅಚಿತ್ (ಜಡ) ಎಂದು ಪ್ರಕೃತಿಯು ಎರಡು ವಿಧ. ಲಕ್ಷ್ಮಿಯು ಚಿತ್‌ಪ್ರಕೃತಿ, ಸ್ಥಾವರಜಗತ್ತು ಅಚಿತ್‌ಪ್ರಕೃತಿ. 5. (ವಿಶಿಷ್ಟಾದ್ವೈತ ಮತದಲ್ಲಿ) ಈಶ್ವರಾಧಿಷ್ಠಿತವಾದ ಜಗತ್ತಿನ ಮೂಲಕಾರಣ. ಪ್ರಧಾನ, ಸತ್ತ್ವ ರಜಸ್ಸು ಮತ್ತು ತಮಸ್ಸು ಇವು ಹೆಚ್ಚು ಕಡಿಮೆಯಾಗದಂತೆ ಸಮಾನಗುಣಗಳುಳ್ಳ ದ್ರವ್ಯ. ಈ ತ್ರಿಗುಣದ್ರವ್ಯವು ಪೂರ್ವಪೂರ್ವಾವಸ್ಥಾವಿನಾಶರೂಪವಾದ ಉತ್ತರೋತ್ತರಾವಸ್ಥಾಭೇದಗಳಿಂದ ಇಪ್ಪತ್ತನಾಲ್ಕು ತತ್ತ್ವಗಳಾಗಿ ಪರಿಣಾಮ ಹೊಂದುವುದು. "प्रकृतिः पञ्चभूतेषु स्वभावे मूलकारणे"। ಇದೇ ಮೂಲಪ್ರಕೃತಿ.

ಈಶ್ವರಾಧಿಷ್ಠಿತವಾದ ಪ್ರಕೃತಿಯೇ ಸಕಲಜಗತ್ತಿಗೂ ಉಪಾದಾನಕಾರಣ. ಈ ಮೂಲಪ್ರಕೃತಿಯಲ್ಲಿರುವ ಪರಿಣಾಮರೂಪವಾದ ಸ್ವಭಾವಗುಣವೂ ಜೀವಾತ್ಮರ ಕರ್ಮಫಲಗಳೂ ಪರಮಾತ್ಮನ ಜಗತ್ಸೃಷ್ಟಿಕಾರ್ಯದಲ್ಲಿ ಸಹಕಾರಿಗಳಾಗಿರುವುವು. "कालं कर्म स्वभावं च मायेशो मायया स्वया। आत्मन् यदृच्छया प्राप्तं विबुभूषुरुपाददे" भाग० ५-२-२१। 6. (ಸಾಂಖ್ಯಮತದಲ್ಲಿ) ಸತ್ತ್ವ ರಜಸ್ಸು ಮತ್ತು ತಮಸ್ಸು ಈ ಮೂರು ಗುಣಗಳ ಏರುಪೇರಿಲ್ಲದ ಸಾಮ್ಯ. "सत्त्व-रजस्तमसां साम्यावस्था प्रकृतिः" सां० सू०। "सत्त्वं रजस्तम इति गुणत्रयमुदाहृतम्। साम्यावस्थितिरेतेषां प्रकृतिः परिकीर्तिता" मत्स्यपु०। 7. (ಶಾಕ್ತರ ಮತದಲ್ಲಿ) ದೇವೀಪಂಚಕ ರೂಪವಾದ ಒಂದು ಶಕ್ತಿ. (1) दुर्गा (2) राधा (3) लक्ष्मीः (4) सरस्वती ಮತ್ತು (5) सावित्री ಈ ಐವರೂ ಸೃಷ್ಟಿಕಾರ್ಯದ ಪ್ರಕೃತಿಯೆಂದು ಇವರ ಮತ. "प्रकृष्टवाचकः प्रश्च कृतिश्च सृष्टिवाचकः। सृष्टौ प्रकृष्टा या देवी प्रकृतिः सा प्रकीर्तिता"। गुणे प्रकृष्टे सत्त्वे च प्रशब्दो वर्तते श्रुतौ। मध्यमे रजसि कृश्च तिशब्दस्तामसो मतः। त्रिगुणात्मस्वरूपा या सर्वशक्तिसमन्विता। प्रधानसृष्टिकरणे प्रकृतिस्तेन कथ्यते"। ಈ ತ್ರಿಗುಣಾತ್ಮಿಕ ಪ್ರಕೃತಿಯು ಅನಂತಕೋಟಿ ಬ್ರಹ್ಮಾಂಡಮಯವಾದ ಸಕಲಜಗತ್ತಿಗೂ ಮೂಲಕಾರಣವಾದುದರಿಂದ ಮೂಲಪ್ರಕೃತಿ. ಶಾಶ್ವತವಾದುದರಿಂದ ಅಕ್ಷರ. ಸೂಕ್ಷ್ಮವಾದುದರಿಂದ ಅವ್ಯಕ್ತ. ಜಡವಾದುದರಿಂದ ತಮಸ್ಸು. ವಿಚಿತ್ರಕಾರ್ಯಗಳಿಗೆ ಕಾರಣವಾದುದರಿಂದ ಮಾಯೆ. ಜ್ಞಾನಕ್ಕೆ ವಿರೋಧಿಯಾದುದರಿಂದ ಅವಿದ್ಯೆ. ಪರಮಾತ್ಮನ ಜಗತ್ಸೃಷ್ಟಿಕಾರ್ಯಕ್ಕೆ ಸಹಾಯವಾದುದರಿಂದ ಅಪರಶಕ್ತಿ. ಈ ರೀತಿ ವ್ಯವಹರಿಸಲ್ಪಡುವುದು. 8. (ವೈಯಾಕರಣಮತದಲ್ಲಿ) ಪ್ರಾತಿಪದಿಕ, ಸುಬಾದಿಪ್ರತ್ಯಯರಹಿತವಾದ ಅರ್ಥವತ್ತಾದ ಶಬ್ದಸ್ವರೂಪ. ಇದು ನಾಮ ಮತ್ತು ಧಾತುಗಳೆಂದು ಎರಡು ವಿಧ. "निरुक्ता प्रकृतिर्द्वेधा नामधातुप्रभेदतः। यत्प्राति-पदिकं प्रोक्तं तन्नाम्नो नातिरिच्यते"। 9. (ಸಂಗೀತಶಾಸ್ತ್ರದಲ್ಲಿ) ಮೂಲಸ್ವರ. 10. (ಆಯುರ್ವೇದದಲ್ಲಿ) ದೇಹದ ಅವಸ್ಥೆ. 11. ಪರಮಾತ್ಮನ ಮಾಯೆಯೆಂಬ ಶಕ್ತಿ. ಈ ಶಕ್ತಿಯು (1) परा ಮತ್ತು (2) अपरा ಎಂದು ಎರಡು ವಿಧ. (1) भूमिः आपः अनलः वायुः खम् (आकाशः) मनः बुद्धिः ಮತ್ತು अहङ्कारः ಈ ರೀತಿ ಅಪರಾಪ್ರಕೃತಿಯು ಎಂಟು ವಿಧ. (2) ಇದಕ್ಕಿಂತಲೂ ಭಿನ್ನವಾದ ಮತ್ತು ಜೀವರೂಪವಾದ ಪ್ರಕೃತಿಯು ಪರಾಪ್ರಕೃತಿ. ಜಗತ್ತಿನ ಸೃಷ್ಟಿಗೆ ಕಾರಣವಾದ ಈ ಶಕ್ತಿಯಿಂದಲೇ ಈ ಜಗತ್ತೆಲ್ಲವೂ ಧರಿಸಲ್ಪಟ್ಟಿರುವುದು. "यस्य शक्तिर्महा-माया जगद्विभ्रमकारिणी। विश्वोत्पत्तिनिमित्तत्वात् प्रकृतिः प्रोच्यते बुधैः" वेदान्तकौ० 12. (ನೀತಿಶಾಸ್ತ್ರದಲ್ಲಿ) ಸ್ವಾಮಿ ಅಮಾತ್ಯ ಸುಹೃತ್ತು ಕೋಶ ರಾಷ್ಟ್ರ ದುರ್ಗ ಸೈನ್ಯ ಮತ್ತು ಪೌರರು. प्रकृष्टं कुर्वन्ति राज्यम्। प्र+डु कृञ् "क्तिच्" (३-३-१७४)। 13. ಸ್ತ್ರೀಯರ ಮತ್ತು ಪುರುಷರ ಜನನೇಂದ್ರಿಯ. 14. ಪುರಜನರು, ಪ್ರಜೆಗಳು. "धात्रूनामिव कोशेषु प्रकृतीनामचेतसाम् पातुमर्हथ पर्याप्तं प्रसादनरसायनम्" याद० २२-२१। "प्रवर्ततां प्रकृतिहिताय पार्थिवः" शाकु० ७-३४। 15. ಮಂತ್ರಿಮಂಡಲಿ, ಸಚಿವಸಂಪುಟ. "अथानाथाः प्रकृतयः मातृबन्धुनिवासिनम्" रघु० १२-१२। 16. ಇಪ್ಪತ್ತೊಂದು ಅಕ್ಷರಗಳ ಪಾದಗಳುಳ್ಳ ಒಂದು ಛಂದಸ್ಸು. "धृतिश्चातिधृतिश्चैव कृतिःप्रकृतिराकृतिः" वृ० र०। 17. ಪಂಚಮಹಾಭೂತಗಳು. 18. ಪ್ರಧಾನ, ಮುಖ್ಯ. 19. ಪರಮಾತ್ಮ. 20. ಹೆಂಗಸು. 21. ಶಿಲ್ಪಿ, ಕೈಕೆಲಸಗಾರ.

**प्रकृतिज ಪ್ರಕೃತಿಜ** (वि०) ಸ್ವಭಾವಸಿದ್ಧವಾದ, ಸ್ವಭಾವವಾಗಿ ಹುಟ್ಟಿದ. प्रकृत्या जायते – जनी (प्रादुर्भावे) "डः" (३-२-१०१)।

**प्रकृतितरल ಪ್ರಕೃತಿತರಲ** (वि०) ಸ್ವಭಾವವಾಗಿ ಚಂಚಲವಾದ, ಅಶಾಶ್ವತವಾದ, ಅನಿತ್ಯವಾದ. प्रकृत्या तरलम्। "प्रकृतितरले का नः पीडा गते हतजीविते" अमरु० ३०।

**प्रकृतिपुरुष ಪ್ರಕೃತಿಪುರುಷ** (पुं०) ಪ್ರಧಾನಪುರುಷ, ರಾಜ್ಯದ ಪ್ರಥಮಪ್ರಜೆ. "जानामि त्वां प्रकृतिपुरुषं कामरूपं मघोनः" मेघ० १-६।

**प्रकृतिमण्डल ಪ್ರಕೃತಿಮಂಡಲ** (न०) 1. ಪ್ರಜಾಸ್ತೋಮ, ಜನಸಮುದಾಯ. प्रकृतेर्मण्डलम्। "अधिगतं विधिवद्यदपालयत्प्रकृतिमण्डलमात्मकुलोचितम्" रघु० ९-२। 2. ಸ್ವಾಮಿ ಅಮಾತ್ಯ ಮೊದಲಾದ ಸಪ್ತರಾಜ್ಯಾಂಗಗಳಲ್ಲೊಂದು.

**प्रकृतिभाव ಪ್ರಕೃತಿಭಾವ** (पुं०) ಸ್ವಭಾವವಾಗಿಯೇ ಇರುವುದು, ವ್ಯತ್ಯಾಸ (ವಿಕಾರ) ಹೊಂದದೆ ಇರುವುದು.

**प्रकृतिमहत् ಪ್ರಕೃತಿಮಹತ್** (वि०) ಸ್ವಭಾವವಾಗಿಯೇ ದೊಡ್ಡವರಾದ, ಉದಾರವಾದ ಮನಸ್ಸುಳ್ಳ, ಸೌಜನ್ಯದಿಂದ ಕೂಡಿದ. प्रकृत्या महान्। "हृदि स्वच्छा वृत्तिः श्रुतमधि-गतं च श्रवणयोर्विनाप्यैश्वर्येण प्रकृतिमहतां मण्डनमिदम्" भर्तृ० १-५३।

**प्रकृतिसिद्ध ಪ್ರಕೃತಿಸಿದ್ಧ** (वि०) ಸ್ವಭಾವಸಿದ್ಧವಾದ, ಸಹಜವಾದ, ಹುಟ್ಟಿನಿಂದ ಬಂದ. प्रकृत्या सिद्धम्। "यशसि चाभिरुचिर्व्यसनं श्रुतौ प्रकृतिसिद्धमिदं हि महात्मनाम्" भर्तृ० १-५२।

**प्रकृष्ट ಪ್ರಕೃಷ್ಟ** (वि०) 1. ಉತ್ತಮವಾದ, ಶ್ರೇಷ್ಠವಾದ. प्र + कृष (विलेखने) "क्तः" (३-४-७२)। 2. ಅಧಿಕವಾದ, ಹೆಚ್ಚಾದ. "प्रकृष्टगद्गदेन दीर्घशोकसन्तानेन संप्रति परिक्षीणो रामभद्रः" उ० रा० ३। 3. ಚೆನ್ನಾಗಿ ಎಳೆಯಲ್ಪಟ್ಟ. प्र + कृष कर्म० "क्तः" (३-२-१०२)। 4. ಚೆನ್ನಾಗಿ ಉಳಲ್ಪಟ್ಟ.

**प्रक्लृप्ति ಪ್ರಕ್ಲೃಪ್ತಿ** (स्त्री०) 1. ಏರ್ಪಡಿಸುವುದು, 2. ಗೊತ್ತುಮಾಡುವುದು. 3. ಸಜ್ಜುಗೊಳಿಸುವುದು.

**प्रकोथ ಪ್ರಕೋಥ** (पुं०) 1. ದೌರ್ಗಂಧ್ಯ, ಕೆಟ್ಟ ವಾಸನೆ, ದುರ್ನಾತ. प्र + कुथ (पूतीभावे) "घञ्" (३-३-१८)। 2. ಶೋಷಣೆ, ಒಣಗುವಿಕೆ. "शीघ्रं स्तनो हि मृदुमांसतयोपनद्धः सद्यं प्रकोथमुपयात्यवदीर्यते च" सुश्रुत०।

**प्रकोप ಪ್ರಕೋಪ** (पुं०) 1. ಸಿಟ್ಟೆಬ್ಬಿಸುವಿಕೆ, ರೇಗಿಸುವುದು. प्र + कुप (क्रोधे) + णिच् "घञ्" (३-३-१८)। "उपदेशो हि मूर्खाणां प्रकोपाय न शान्तये" पञ्चतं० १-४२०। 2. ರೋಷ, ಆವೇಶ, ಅತಿಯಾದ ಕೋಪ, "प्रभुमन्त्रः प्रकृतिप्रकोपजः" किरा० २-५२। भावे "ल्युट्" (३-३-११५)। –कोपनम् –ಕೋಪನವು.

**प्रकोपित ಪ್ರಕೋಪಿತ** (वि०) ರೇಗಿಸಲ್ಪಟ್ಟ, ಸಿಟ್ಟೆಬ್ಬಿಸಲ್ಪಟ್ಟ. प्र + कुप (क्रोधे) + णिच् "क्तः" (३-२-१०२)। "कुतूहलेनेव मुहुः कुहूरवं विडम्बच डिम्भेन पिकः प्रकोपितः" नैष० ९-३८।

**प्रकोपिन् ಪ್ರಕೋಪಿನ್** (वि०) ಹೆಚ್ಚು ಕೋಪಗೊಂಡ. "निराकृते यदुभिरिति प्रकोपिभिः" माघ० १७-२०।

**प्रकोष्ठ ಪ್ರಕೋಷ್ಠ** (पुं०) 1. ಮೊಳಕೈ ಕೆಳಗೆ ಮಣಿಕಟ್ಟಿನವರೆಗಿನ ಭಾಗ. प्रकुष्यतेऽनेन–प्र + कुष (निष्कर्षे) "थन्" (उ० २-४)। "लतागृहद्वारगतोऽथ नन्दी वामप्रकोष्ठार्पितहेमवेत्रः" कुमा० ३-४१। 2. ಅರಮನೆಯೊಳಗಿನ ಕೊಠಡಿ. 3. ಹಸ್ತ, ಬಿಚ್ಚಿದ ಕೈ. "प्रकोष्ठः कूर्पराधस्तात् भूपकक्षान्तरेऽपि च। हस्ते च विस्तृतकरे" हेम०। 4. ಅರಮನೆಯ ಹೊರಬಾಗಿಲಿನ ಸಮೀಪದ ಒಂದು ಕೊಠಡಿ. 5. ಮಣಿಕಟ್ಟು. "प्रकोष्ठभाजः प्रियशारिकायाः पयः स्वयं सादरमर्पयन्ती" याद० १३-४७।

**प्रकोष्ठक ಪ್ರಕೋಷ್ಠಕ** (पुं०) ಅರಮನೆಯ ಹೊರಬಾಗಿಲಿನ ಸಮೀಪದ ಕೊಠಡಿ. प्रकोष्ठ स्वार्थे "कन्"। "तस्थुर्विनम्रक्षितिपालसंकुले तदङ्गनद्वारवरप्रकोष्ठके" कुमा० १५-६।

**प्रक्रम ಪ್ರಕ್ರಮ** (पुं०) 1. ಕಾರ್ಯದ ಪ್ರಾರಂಭ, ಉಪಕ್ರಮ. प्र + क्रमु (पादविक्षेपे) "घञ्" (३-३-१८)। "हा धिक्कष्टमनिष्टमस्तकरुणः कोऽयं विधेः प्रक्रमः" मालती० ५-२४। 2. ಕ್ರಮ, ರೀತಿ. भग्नप्रक्रमः ಎಂಬುದೊಂದು ಕಾವ್ಯದೋಷ. 3. ಕಾರ್ಯವಿಧಾನ, ಕಾರ್ಯ ನಡೆಸುವ ರೀತಿ. 4. ಅವಸರ, ಅವಕಾಶ. "प्रक्रमः क्रमेऽवसरे" मेदि०। 5. ಮುಂದೆ ನಡೆಯುವುದು. भावे "ल्युट्" (३-३-११५)। –क्रमणम् –ಕ್ರಮಣವು. "प्रदक्षिणप्रक्रमणात् कृशानोः" कुमा० ७-७९।

**प्रक्रमभङ्ग ಪ್ರಕ್ರಮಭಂಗ** (पुं०) ಕ್ರಮಭಂಗ, ಪ್ರಾರಂಭಿಸಿದ ರೀತಿಯನ್ನು ಬಿಟ್ಟು ಬೇರೆ ರೀತಿಯಲ್ಲಿ ಹೇಳುವುದು. प्रक्रमस्य भङ्गः। "एवमुक्तो मन्त्रिमुख्यै रावणः प्रत्यभाषत" ಎಂಬಲ್ಲಿ वच ಧಾತುವಿನಿಂದ ಪ್ರಾರಂಭಿಸಲ್ಪಟ್ಟು ಉತ್ತರವನ್ನು ಅದೇ ಧಾತುವಿನಿಂದ ಕೊಡಬೇಕಾಗಿರುವಲ್ಲಿ भष ಧಾತುವಿನ ಪ್ರಯೋಗವು ಪ್ರಕ್ರಮಭಂಗದೋಷಾಕ್ರಾಂತವಾದುದು.

**प्रक्रान्त ಪ್ರಕ್ರಾಂತ** (न०) 1. ಸಂಚಾರದ ಪ್ರದೇಶ, ಸಂಚಾರ ಮಾಡುವ ಸ್ಥಾನ. "प्रकान्तं च मुहुः पृष्ट्वा हनूमन्तं व्यसर्जयत्" भट्टि० ८-१२५। (वि०) 2. ಪ್ರಾರಂಭಿಸಲ್ಪಟ್ಟ, ಉಪಕ್ರಮಿಸಲ್ಪಟ್ಟ. प्र + क्रमु (पादविक्षेपे) "क्तः" (३-२-१०२)। "अद्यापि गङ्गासलिलप्रवाहे प्रक्रान्तपातामिव संप्रपेदे" याद० २३-१५। 3. ಮುಂದೆ ಸಾಗಿದ, ಮುಂದೆ ನಡೆದ. 4. ಹಿಂದೆ ನಿರ್ದೇಶಿಸಲ್ಪಟ್ಟ, ಮೊದಲು ಹೇಳಲ್ಪಟ್ಟ.

**प्रक्रिया ಪ್ರಕ್ರಿಯಾ** (स्त्री०) 1. ಅಧಿಕಾರ, ರಾಜನು ಛತ್ರಚಾಮರಾದಿಗಳನ್ನು ಹೊಂದಿರುವುದು. प्रकर्षाय करणम् — प्र + कृञ् (करणे) "शः" (३-३-१००)। रिङ् च। 2. ಪ್ರಕಾರ, ರೀತಿ, ಬಗೆ, ವಿಧಾನ. "विफलितजलसेकप्रक्रियागौरवेण व्यरचि स हृतचित्तस्तत्र भैमीवनेन" नैष० २-१०६। 3. (ವ್ಯಾಕರಣ ಶಾಸ್ತ್ರದಲ್ಲಿ) ಶಬ್ದವ್ಯುತ್ಪತ್ತಿಯ ಅವಸ್ಥೆ, ಶಬ್ದವು ನಿಷ್ಪನ್ನವಾಗಲು ನಡೆಯುವ ಶಾಸ್ತ್ರೀಯ ಕಾರ್ಯ. रामः ಎಂಬುವುದು ಪರಿನಿಷ್ಠಿತ ರೂಪ. राम+सु ಮೊದಲಾದ ಪ್ರತ್ಯಯವಿಧಾನರೂಪ ಕಾರ್ಯವು ಪ್ರಕ್ರಿಯೆಯೆನಿಸುವುದು.

**प्रक्लिद्यत् ಪ್ರಕ್ಲಿದ್ಯತ್** (वि०) ತೇವವಾಗುತ್ತಿರುವ, ನೆನೆಯುತ್ತಿರುವ, ಒದ್ದೆಯಾಗುತ್ತಿರುವ. प्र + क्लिदू (आर्द्रीभावे) "शतृ" (३-२-१२४)। स्त्रियां "ङीप्" (४-१-६)। **–क्लिद्यती – ಕ್ಲಿದ್ಯತೀ.**

**प्रक्लिन्न ಪ್ರಕ್ಲಿನ್ನ** (वि०) 1. ಒದ್ದೆಯಾದ, ತೇವವಾದ. प्र + क्लिदू (आर्द्रीभावे) "क्तः" (३-४-७२)। 2. ತೃಪ್ತಿ ಹೊಂದಿದ.

**प्रक्लेद ಪ್ರಕ್ಲೇದ** (पुं०) ತೇವವಾಗುವುದು, ಒದ್ದೆಯಾಗುವುದು. प्र + क्लिदू (आर्द्रीभावे) "घञ्" (३-३-१८)।

**प्रक्लेदन ಪ್ರಕ್ಲೇದನ** (न०) 1. ಒದ್ದೆಮಾಡುವುದು, ತೋಯಿಸುವುದು. प्र + क्लिदू (आर्द्रीभावे) + णिच् "ल्युट्" (३-३-११५)। (वि०) 2. ಒದ್ದೆಮಾಡುವ, ತೋಯಿಸುವ. प्र+क्लिदू+णिच् "ल्युः" (३-१-१३४)।

**प्रक्वण ಪ್ರಕ್ವಣ** (पुं०) ವೀಣಾನಾದ, ವೀಣೆಯ ಶಬ್ದ. प्र + क्वण (शब्दे) वा "अप्" (३-३-६५)। पक्षे "घञ्" (३-३-१८)। **प्रक्वाणः ಪ್ರಕ್ವಾಣಃ.** भावे "ल्युट्" (३-३-११५)। **–क्वणनम् –ಕ್ವಣನಮ್.**

**प्रक्षालन ಪ್ರಕ್ಷಾಲನ** (न०) 1. ತೊಳೆಯುವುದು, ಶುಭ್ರಮಾಡುವುದು. प्र + क्षल (शौचकर्मणि) भावे "ल्युट्" (३-३-११५)। "यस्यावरोधस्तनचन्दनानां प्रक्षालनाद्वारिविहारकाले" रघु० ६-४८। 2. ತೊಳೆಯುವುದು, ಶುದ್ಧಮಾಡುವುದು, ಚೊಕ್ಕಟಮಾಡುವುದು. "धर्मार्थं यस्य वित्तेहा वरं तस्य निरीहता। प्रक्षालनाद्धि पङ्कस्य दूरादस्पर्शनं वरम्" हितो०। (वि०) 3. ತೊಳೆಯುವ, ಶುಭ್ರವಾಗಿ ಮಾಡುವ. 4. ತೊಳೆಯುವ. ಚೊಕ್ಕಟವಾಗಿ ಮಾಡುವ, प्र + क्षल कर्त० "ल्युः" (३-१-१३४)।

**प्रक्षालनीय ಪ್ರಕ್ಷಾಲನೀಯ** (वि०) 1. ತೊಳೆಯಲ್ಪಡುವ. 2. ಶುಭ್ರವಾಗಿ ಮಾಡಲ್ಪಡುವ, ಚೊಕ್ಕಟಮಾಡಲ್ಪಡುವ. प्र + क्षल (शौचकर्मणि) + णिच् "अनीयर्" (३-१-९६)। 3. ತೊಳೆಯಬೇಕಾದ. 4. ಚೊಕ್ಕಟವಾಗಿ ಮಾಡಬೇಕಾದ. "तव्यः" (३-१-९६)। **– यितव्यः –ಯಿತವ್ಯಃ.**

**प्रक्षालयत् ಪ್ರಕ್ಷಾಲಯತ್** (वि०) 1. ತೊಳೆಯುತ್ತಿರುವ. 2. ಶುದ್ಧಮಾಡುತ್ತಿರುವ, ಚೊಕ್ಕಟವಾಗಿ ಮಾಡುತ್ತಿರುವ. प्र + क्षल (शौचकर्मणि) + णिच् "शतृ" (३-२-१२४)। स्त्रियां "ङीप्" (४-१-६)। **–क्षालयन्ती –ಕ್ಷಾಲಯನ್ತೀ.**

**प्रक्षालयितृ ಪ್ರಕ್ಷಾಲಯಿತೃ** (वि०) 1. ತೊಳೆಯುತ್ತಿರುವ, ಶುಭ್ರವಾಗಿ ಮಾಡುತ್ತಿರುವ. प्र + क्षल (शौचकर्मणि) + णिच् "तृच्" (३-१-१३३)। 2. ಶುದ್ಧಮಾಡುತ್ತಿರುವ, ಚೊಕ್ಕಟವಮಾಡುತ್ತಿರುವ. स्त्रियां "ङीप्" (४-१-५)। **– यित्री – ಯಿತ್ರೀ.**

**प्रक्षालित ಪ್ರಕ್ಷಾಲಿತ** (वि०) 1. ತೊಳೆಯಲ್ಪಟ್ಟ, ಶುಭ್ರವಾಗಿ ಮಾಡಲ್ಪಟ್ಟ. 2. ಶುದ್ಧಮಾಡಲ್ಪಟ್ಟ, ಚೊಕ್ಕಟವಾಗಿ ಮಾಡಲ್ಪಟ್ಟ. प्र + क्षल (शौचकर्मणि) + णिच् "क्तः" (३-२-१०२)।

**प्रक्षाल्य ಪ್ರಕ್ಷಾಲ್ಯ** (वि०) 1. ತೊಳೆಯಲ್ಪಡುವ. 2. ಶುದ್ಧಮಾಡಲ್ಪಡುವ. प्र + क्षल (शौचकर्मणि) + णिच् "ण्यत्" (३-१-१२४)। (अव्य०) 3. ತೊಳೆದು, ಶುಭ್ರವಾಗಿಮಾಡಿ. 4. ಚೊಕ್ಕಟವಾಗಿ ಮಾಡಿ. प्र + क्षल + णिच् "क्त्वा"। "ल्यप्" (७-१-३७)।

**प्रक्षाल्यमान ಪ್ರಕ್ಷಾಲ್ಯಮಾನ** (वि०) 1. ಚೆನ್ನಾಗಿ ತೊಳೆಯಲ್ಪಡುತ್ತಿರುವ. 2. ಶುದ್ಧಮಾಡಲ್ಪಡುತ್ತಿರುವ. प्र+क्षल (शौचकर्मणि) + णिच् "शानच्" (३-२-१२४)।

**प्रक्षिपत् ಪ್ರಕ್ಷಿಪತ್** (वि०) 1. ಇಡುತ್ತಿರುವ, ಇರಿಸುತ್ತಿರುವ. प्र + क्षिपु (निरसने) "शतृ" (३-२-१२४)। "प्रावृट् प्रावृडिति ब्रवीति शठधीः क्षारं क्षते प्रक्षिपन्" मृच्छ० ५-१८। 2. ಹಾಕುತ್ತಿರುವ, ಎಸೆಯುತ್ತಿರುವ. "भूधरानुदहरद्भुजशाली प्रक्षिपंश्च नगराणि ममर्द" याद० २१-४७। 3. ಹೊಸದಾಗಿ ಸೇರಿಸುತ್ತಿರುವ. स्त्रियां "ङीप्" (४-१-६)। **– क्षिपती –क्षिपन्ती, –ಕ್ಷಿಪತೀ, –ಕ್ಷಿಪನ್ತೀ.**

**प्रक्षिपमाण ಪ್ರಕ್ಷಿಪಮಾಣ** (वि०) 1. ಇಡುತ್ತಿರುವ, ಇರಿಸುತ್ತಿರುವ. प्र + क्षिपु (निरसने) "शानच्" (३-२-१२४)। 2. ಎಸೆಯುತ್ತಿರುವ.

**प्रक्षिप्त ಪ್ರಕ್ಷಿಪ್ತ** (न०) 1. ಇರಿಸುವುದು, ಇಡುವುದು. प्र + क्षिपु (निरसने) भावे "क्तः" (३-४-७२)। 2. ಎಸೆಯುವುದು, ಬಿಸಾಡುವುದು. (वि०) 3. ಇಡಲ್ಪಟ್ಟ, ಇರಿಸಲ್ಪಟ್ಟ. 4. ಎಸೆಯಲ್ಪಟ್ಟ, 5. ಒಳಗೆ ಸೇರಿಸಲ್ಪಟ್ಟ, ಒಳಕ್ಕೆ ಹಾಕಲ್ಪಟ್ಟ. "पातालप्रतिमल्लगल्लविवरप्रक्षिप्तसप्तार्णवम्" मालती० ५-२२। 6. ಹೊಸದಾಗಿ ಸೇರಿಸಲ್ಪಟ್ಟ, ಇರುವುದರ ಜೊತೆಗೆ ಸೃಷ್ಟಿಸಿ ಸೇರಿಸಲ್ಪಟ್ಟ. 7. ಮುಂದಕ್ಕೆ ಚಾಚಲ್ಪಟ್ಟ, ಮುಂದಕ್ಕೆ ನೀಡಲ್ಪಟ್ಟ.

**प्रक्षिप्यत् ಪ್ರಕ್ಷಿಪ್ಯತ್** (वि०) 1. ಎಸೆಯುತ್ತಿರುವ. 2. ಇಡುತ್ತಿರುವ. प्र + क्षिप (प्रेरणे) "शतृ" (३-२-१२४)।

**प्रक्षिप्यमाण ಪ್ರಕ್ಷಿಪ್ಯಮಾಣ** (वि०) 1. ಎಸೆಯಲ್ಪಡುತ್ತಿರುವ. 2. ಇಡಲ್ಪಡುತ್ತಿರುವ, ಇರಿಸಲ್ಪಡುತ್ತಿರುವ. प्र + क्षिप (प्रेरणे) कर्म० "शानच्" (३-२-१२४)।

**प्रक्षीण ಪ್ರಕ್ಷೀಣ** (वि०) 1. ಕಡಮೆಯಾದ. 2. ದುರ್ಬಲನಾದ, ಬಡಕಲಾದ. 3. ನಾಶಹೊಂದಿದ. 4. ಅವನತಿ ಹೊಂದಿದ, ಕ್ಷಯಹೊಂದಿದ. 5. ತೆಳುವಾದ. प्र + क्षि (क्षये) "क्तः" (३-४-७२)। दीर्घः (६-४-६०)। निष्ठानत्वम् (८-२-४६)।

**प्रक्षुण्ण ಪ್ರಕ್ಷುಣ್ಣ** (वि०) 1. ಚೆನ್ನಾಗಿ ನಡೆದು ಸವೆಸಲ್ಪಟ್ಟ, ತುಳಿದು ಪಳಗಿಸಲ್ಪಟ್ಟ (ಮಾರ್ಗ). प्र+क्षुदिर् (सम्पेषणे) "क्तः" (३-२-१०२)। 2. ಚೂರ್ಣ ಮಾಡಲ್ಪಟ್ಟ, ಪುಡಿಮಾಡಲ್ಪಟ್ಟ. 3. ಪುನಃಪುನಃ ಉಚ್ಚರಿಸಲ್ಪಟ್ಟ ಅಥವಾ ಮನನ ಮಾಡಲ್ಪಟ್ಟ.

**प्रक्षुब्ध ಪ್ರಕ್ಷುಬ್ಧ** (वि०) 1. ಕೆರಳಿರುವ, ರೇಗಿರುವ, ಕುಪಿತನಾದ, ಕೋಪಗೊಂಡ. प्र + क्षुभ (सञ्चलने) "क्तः" (३-४-७२)। इडभावः निपा० (७-२-१८)। "तस्यन्दनः सपदि सारथिसंप्रणुन्नः प्रक्षुब्धवारिधरधीरगभीरघोषः" कुमा० १७-१०। 2. ಚಲಿಸಿದ, ಅಲುಗಾಡಿದ, ಕ್ಷೋಭೆಗೊಂಡ.

**प्रक्षुभ्यत् ಪ್ರಕ್ಷುಭ್ಯತ್** (वि०) 1. ಕ್ಷೋಭೆ ಹೊಂದುತ್ತಿರುವ, ಅಲ್ಲಾಡುತ್ತಿರುವ. प्र+क्षुभ (सञ्चलने) "शतृ" (३-२-१२४)। "प्रक्षुभ्यदम्भोधिविभिन्नभूधराद्वलं द्विषोऽभूदवनिप्रकम्पम्" कुमा० १५-२३। 2. ಉದ್ರೇಕ ಹೊಂದುತ್ತಿರುವ.

**प्रक्षुभ्यमाण ಪ್ರಕ್ಷುಭ್ಯಮಾಣ** (वि०) 1. ಕ್ಷೋಭೆ ಹೊಂದುತ್ತಿರುವ, ಹೆದರುತ್ತಿರುವ. प्र+क्षुभ (सञ्चलने) "शानच्" (३-२-१२४)। "प्रक्षुभ्यमाणमवलोक्य दिगीशसैन्यम्" कुमा० १७-१२। 2, ಉದ್ರೇಕ ಹೊಂದುತ್ತಿರುವ.

**प्रक्षेप ಪ್ರಕ್ಷೇಪ** (पुं०) 1. ಇಡುವುದು, ಇರಿಸುವುದು. प्र + क्षिप (प्रेरणे) "घञ्" (३-३-१८)। 2. ಎಸೆಯುವುದು, ಬಿಸಾಡುವುದು. 3. ಮುಂದಕ್ಕೆ ಚಾಚುವುದು, ಮುಂದಕ್ಕೆ ನೀಡುವುದು. 4. ಹೊಸದಾಗಿ ಸೇರಿಸುವುದು, ಇರುವುದರ ಜೊತೆಗೆ ಸ್ವಂತವಾಗಿ ಸೃಷ್ಟಿಸಿ ಸೇರಿಸುವುದು. भावे "ल्युट्"(३-३-११५)। **–क्षेपणम् –ಕ್ಷೇಪಣಮ್.**

**प्रक्षोभ ಪ್ರಕ್ಷೋಭ** (पुं०) 1. ಅಲ್ಲಾಡುವುದು, ಕ್ಷೋಭೆ ಹೊಂದುವುದು. 2. ಉದ್ರೇಕಗೊಳ್ಳುವುದು. प्र + क्षुभ (सञ्चलने) "घञ्" (३-३-१८)।

**प्रक्ष्वेडन ಪ್ರಕ್ಷ್ವೇಡನ** (पुं०) ನಾರಾಚ, ಲೋಹಮಯವಾದ ಬಾಣ. प्रकर्षेण क्ष्वेदन्ते–क्ष्विदा (अव्यक्ते शब्दे) "ल्युः" (३-१-१३४)। पृषो०। "प्रक्ष्वेडनास्तु नाराचाः" अम०।

**प्रखर ಪ್ರಖರ** (पुं०) 1. ಕುಕ್ಕುರ, ನಾಯಿ. 2 ಹೇಸರಗತ್ತೆ, (न०) 3. ಕುದುರೆಯ ಕವಚ, ಕುದುರೆಯ ರಕ್ಷಣೆಗಾಗಿ ಹಾಕುವ ನಿಲುವಂಗಿ. (वि०) 4. ಬಹಳ ತೀಕ್ಷ್ಣವಾದ, ಅತಿ ತೀವ್ರವಾದ, ಬಿಸಿಯಾದ. "प्रखरं हयसन्नाहे कुक्कुरेऽपि च। पुंसि त्रिष्वत्यन्तखरे" मेदि०। (अव्य०) 5. ಹೆಚ್ಚಾಗಿ, ಅಧಿಕವಾಗಿ. "त्रस्तः समस्तजनहासकरः करेणोस्तावत्खरः प्रखरमुल्ललयांचकार" माघ० ५-७।

**प्रख्या ಪ್ರಖ್ಯಾ** (स्त्री०) 1. ಖ್ಯಾತಿ ಕೀರ್ತಿ, ಪ್ರಸಿದ್ಧಿ. प्र + ख्या (प्रकथने) भावे "अङ्" (३-३-१०६)। 2. ಸಾದೃಶ್ಯ, ಔಪಮ್ಯ. (ಉತ್ತರ ಪದವಾದಾಗ) (वि०) **–प्रख्यः – ಪ್ರಖ್ಯಃ.** ಸದೃಶ, ಸಮಾನ. "गुप्तमभ्रचयप्रख्यैर्गोपुरैर्मन्दरोपमैः" भा० आदि०।

**प्रख्यात ಪ್ರಖ್ಯಾತ** (वि०) ಪ್ರಸಿದ್ಧನಾದ, ಕೀರ್ತಿವಂತನಾದ, ಖ್ಯಾತಿಯನ್ನು ಪಡೆದ. प्र + ख्या (प्रकथने) "क्तः" (३-४-७२)। "प्रख्यातदीक्षं प्रणतार्तिभञ्जे पार्थस्तदा दैत्यरिपुं प्रपन्नः" याद० २३-३५।

**प्रख्याति ಪ್ರಖ್ಯಾತಿ** (स्त्री०) ಯಶಸ್ಸು, ಕೀರ್ತಿ. प्र+ख्या (प्रकथने) "क्तिन्" (३-३-९४)।

**प्रख्यान ಪ್ರಖ್ಯಾನ** (न०) 1. ಪ್ರಸಿದ್ಧಿ ಹೊಂದುವುದು. 2. ಪ್ರಸಿದ್ಧಿ, ಕೀರ್ತಿ, ಯಶಸ್ಸು. प्र + ख्या (प्रकथने) भावे "ल्युट्" (३-३-११५)।

**प्रख्यापन ಪ್ರಖ್ಯಾಪನ** (न०) ಪ್ರಸಿದ್ಧಪಡಿಸುವುದು. ಎಲ್ಲರಿಗೂ ತಿಳಿಯುವಂತೆ ಮಾಡುವುದು.

**प्रगण्ड ಪ್ರಗಂಡ** (पुं०) 1. ಮೊಳಕೈಯ ಮೇಲುಭಾಗ, ಮೊಳಕೈಯಿಂದ ಕಕ್ಷದವರೆಗಿನ ಭಾಗ. प्रत्यासन्नो गण्डः कपोलोऽस्य। (स्त्री०) **–प्रगण्डी – ಪ್ರಗಂಡೀ.** 2. ಕೋಟೆಯ ಗೋಡೆ. 3. ವೀರರ ಶಿಬಿರ.

**प्रगत ಪ್ರಗತ** (वि०) ಮುಂದೆ ಬಂದಿರುವ, ಮುಂದೆ ಸಾಗಿದ, ಮುಂದುವರೆದ. प्रकृष्टं गतः।

**प्रगतजानुक ಪ್ರಗತಜಾನುಕ** (वि०) ಒಂದಕ್ಕೊಂದು ಸೇರದೆ ವಿರಳವಾಗಿರುವ ಮೊಳಕಾಲುಗಳುಳ್ಳವನು, ಒಂದಕ್ಕೊಂದು ದೂರದಲ್ಲಿರುವ ಮೊಳಕಾಲುಗಳುಳ್ಳವನು. प्रगते विरले जानुनी यस्य।

**प्रगन्थ ಪ್ರಗಂಥ** (ಪುಂ०) ಪರ್ಪಟ, ಹಪ್ಪಳ.

**प्रगम ಪ್ರಗಮ** (ಪುಂ०) 1. ಬೆಳವಣಿಗೆ, ಅಭಿವೃದ್ಧಿ. प्र + गम्लृ (गतौ) "अप्" (३-३-५८)। 2. ಸಂಚಾರ, ಓಡಾಟ.

**प्रगमन ಪ್ರಗಮನ** (ನಂ०) 1. ಪ್ರಗತಿ, ಬೆಳವಣಿಗೆ. 2. ಪ್ರತಿಮುಖಸಂಧಿಯ ಒಂದು ಅಂಗ, ಅನುರಾಗಬೀಜವು ಪರಸ್ಪರ ಸಂಭಾಷಣೆಗಳಿಂದ ಪ್ರಕಟವಾಗುವುದು ಪ್ರಗಮನ. "प्रगमनं वाक्यं स्यादुत्तरोत्तरम्" सा० द० ६-९२। "उर्वशी — जयतु जयतु महाराजः। राजा — मया नाम जितं यस्य त्वयायं समुदीर्यते" विक्र० २-१६। 3. ಸಂಚಾರ, ಓಡಾಟ. "हरेः प्रगमनं नास्ति न प्रभानं हिमद्रुहः" भट्टि० ९-१०७।

**प्रगल्भ ಪ್ರಗಲ್ಭ** (ವಿ०) 1. ಪ್ರತಿಭೆಯಿಂದ ಕೂಡಿದ, ಹೊಸ ಹೊಸದಾಗಿ ಹೊಳೆಯುವ ಬುದ್ಧಿಯುಳ್ಳ. प्रगल्भते — प्र + गल्भ (धाष्टर्ये) "अच्" (३-१-१३४)। "ब्रुवते स्म दूत्य उपसृत्य नरान्नरवत् प्रगल्भमतिगर्भगिरः" माघ० ९-६२। 2. ಕೆಚ್ಚಿನಿಂದ ಕೂಡಿದ, ಧೈರ್ಯದಿಂದ ಕೂಡಿದ. "इति प्रगल्भं पुरुषाधिराजो मृगाधिराजस्य वचो निशम्य" रघु० २-४१। 3. ವಾಗ್ಮಿ, ಧೈರ್ಯದಿಂದ ಚೆನ್ನಾಗಿ ಮಾತಾಡುವವನು. "ततो नृपाणां श्रुतवंशवृत्ता पुंवत् प्रगल्भा प्रतिहाररक्षी" रघु० ६-२०। 4. ಚೆನ್ನಾಗಿ ಬೆಳೆದಿರುವ, ಚೆನ್ನಾಗಿ ವಿಕಾಸಹೊಂದಿದ. "गुहः प्रगल्भेऽपि वयस्यतोऽस्याः तस्थौ निवृत्तान्यवराभिलाषः" कुमा० १-५१। 5. ಪ್ರೌಢವಾದ, ಪೂರ್ಣವಾಗಿ ಪಕ್ವವಾದ, ಉದಾರವಾದ ಅರ್ಥವುಳ್ಳ. "अथाजिनाषाढधरः प्रगल्भवाग्ज्वलन्निव ब्रह्ममयेन तेजसा" कुमा० ५-३०। 6. ಲಜ್ಜೆಯನ್ನು ತೊರೆದಿರುವ, ಸಂಕೋಚವಿಲ್ಲದ. 7. ಚತುರ, ದಕ್ಷ, ಸಮರ್ಥ. 8. ಗರ್ವದಿಂದ ಕೂಡಿದ. 9. ಧೀರ, ಧೈರ್ಯಶಾಲಿ. "मुक्तार्पणेषु प्रकृतिप्रगल्भाः स्वयं तरङ्गाधरदानदक्षाः" रघु० १३-९। (स्त्री०) — ल्भा — ಲ್ಭಾ. (1) ಧೈರ್ಯಶಾಲಿಯಾದ ಹೆಂಗಸು. (2) ಚಂಡಿ, ಗಯ್ಯಾಳಿ, ಬೈಗುಳದ ಹೆಂಗಸು. (3) ಮೂರು ವಿಧ ಸ್ತ್ರೀಯನಾಯಿಕೆಯರಲ್ಲೊಬ್ಬಳು. "सापि कथिता त्रिभेदा मुग्धा मध्या प्रगल्भेति" सा०द० ३-५७। ಕಾಮದಿಂದ ಮೈಮರೆತವಳೂ ತುಂಬಿದ ಪ್ರಾಯವುಳ್ಳವಳೂ ಸಕಲವಿಧ ಸುರತಗಳಲ್ಲೂ ಪ್ರವೀಣಳೂ ಉನ್ನತ ವರ್ತನೆಯುಳ್ಳವಳೂ ಕಿಂಚಿಲ್ಲಜ್ಜೆಯಿಂದ ಕೂಡಿದವಳೂ ನಾಯಕನ ಮೇಲೆ ಪ್ರಭಾವ ಬೀರುವವಳೂ ಆದ ಹೆಂಗಸು ಪ್ರಗಲ್ಭೆಯೆನಿಸುವಳು. "स्मरान्धा गाढतारुण्या समस्तरतकोविदा। भावोन्नता दरव्रीडा प्रगल्भाक्रान्तवल्लभा" सा० द० ३-६०।

**प्रगल्भता ಪ್ರಗಲ್ಭತಾ** (स्त्री०) 1. ಧೈರ್ಯ, ಕೆಚ್ಚು. 2. ಚಾತುರ್ಯ, ಬುದ್ಧಿವಂತಿಕೆ. प्रगल्भस्य भावः "तल्" (५-१-११९)। "आर्याप्यरुन्धती तत्र व्यापारं कर्तुमर्हति। प्रायेणैवंविधे कार्ये पुरन्ध्रीणां प्रगल्भता" कुमा० ६-३२। 3. ಉತ್ಸಾಹ. 4. ಗರ್ವ, ಸೊಕ್ಕು. 5. ಹಿರಿಮೆ. 6. ಪ್ರತಿಭೆಯಿಂದ ಕೂಡಿರುವಿಕೆ.

**प्रगाढ ಪ್ರಗಾಢ** (ವಿ०) 1. ಅತಿಶಯವಾದ, ಹೆಚ್ಚಾದ, ಅಧಿಕವಾದ. 2. ದೃಢವಾದ, ಬಲವಾದ. "तत्रान्तरिक्षे बाणानां प्रगाढानां विशांपते" भा० द्रोण०। 3. ಕಷ್ಟವಾದ, ಕ್ಲಿಷ್ಟವಾದ. (अव्य०) 4. ದೃಢವಾಗಿ, ಬಲವಾಗಿ. 5. ಕಷ್ಟದಿಂದ. 6. ಅಧಿಕವಾಗಿ, ಹೆಚ್ಚಾಗಿ.

**प्रगातृ ಪ್ರಗಾತೃ** (ವಿ०) ಶ್ರೇಷ್ಠನಾದ ಗಾಯಕ, ಉತ್ತಮವಾಗಿ ಹಾಡುವವನು. प्रकर्षेण गायति — गै (शब्दे) "तृच्" (३-१-१३३)। "ततो गोपाः प्रगातारः कुशला नृत्यवादिते" भा० वन०। स्त्रियां "ङीप्" (४-१-५)। — गात्री — ಗಾತ್ರೀ.

**प्रगीत ಪ್ರಗೀತ** (ನಂ०) 1. ಉತ್ತಮವಾದ ಗಾನ, ಒಳ್ಳೆಯ ಸಂಗೀತ, ಚೆನ್ನಾಗಿ ಹಾಡುವುದು. प्रकृष्टं गीतम्। (वि०) 2. ಉತ್ತಮವಾಗಿ ಹಾಡಲ್ಪಟ್ಟ. प्रकर्षेण गीतम्।

**प्रगुण ಪ್ರಗುಣ** (ವಿ०) 1. ಉತ್ತಮಗುಣಗಳುಳ್ಳ, ಋಜುಮಾರ್ಗದ, ಪ್ರಾಮಾಣಿಕನಾದ, ವಂಚನೆ ಮೋಸಗಳಿಲ್ಲದ. प्रकृष्टो गुणो यस्य। "फलवितरणदक्षं पक्षपातानभिज्ञं प्रगुणमनुविधेयं प्राप्य पद्मासहायम्" दयाघा०। 2. ಅನುಗುಣವಾದ, ಅನುರೂಪವಾದ, ತಕ್ಕುದಾದ. "गरीयानन्योन्यप्रगुणगुणनिर्माणनिपुणो विधातुर्व्यापारः फलतु च मनोज्ञश्च भवतु" मालती० १-१९। 3. ಉತ್ತಮಸ್ಥಿತಿಯುಳ್ಳ. "श्रमजयात् प्रगुणं च करोत्यसौ तनुमतोऽनुमतः सचिवैर्ययौ" रघु० ९-४९। 4. ದಕ್ಷ, ಚತುರ, ಸಮರ್ಥ. "प्राणत्राणप्रगुणमभवन्मत्परिष्वङ्गकल्पः" मालती० ९-४७। 5. ಋಜುವಾದ, ವಕ್ರವಲ್ಲದ.

**प्रगुणन ಪ್ರಗುಣನ** (ನಂ०) 1. ಹೆಚ್ಚಿಸುವುದು. 2. ಕ್ರಮಪಡಿಸುವುದು. प्र + गुण (आमन्त्रणे) + णिच् "ल्युट्" (३-३-११५)।

**प्रगुणित ಪ್ರಗುಣಿತ** (ವಿ०) 1. ಹೆಚ್ಚಿಸಲ್ಪಟ್ಟ, ಅಧಿಕಪಡಿಸಲ್ಪಟ್ಟ. प्र + गुण (आमन्त्रणे) + णिच् "क्तः"

(३-२-१०२)। 2. ಪುನಃ ಪುನಃ ಆವೃತ್ತಿ ಮಾಡಲ್ಪಟ್ಟ, ಮತ್ತೆ ಮತ್ತೆ ಅಭ್ಯಾಸಮಾಡಲ್ಪಟ್ಟ. "शास्त्रज्ञोऽपि प्रगुणितनयोऽप्यात्तबोधोऽपि बाढम् संसारेऽस्मिन् भवति विरलो भाजनं सद्गतीनाम्" भर्तृ० २-७७।

**प्रगृह्य ಪ್ರಗೃಹ್ಯ** (न०) ಸ್ವರಸಂಧಿ ಕಾರ್ಯವು ಬಾರದಿರುವ ಪದ, ಈಕಾರ ಊಕಾರ ಮತ್ತು ಏಕಾರಾಂತ ದ್ವಿವಚನದ ಪದ. "ईदूदेद्द्विवचनं प्रगृह्यम्" पा० सू० १-१-११। हरी एतौ, विष्णू इमौ, गङ्गे अमू, पचेते इमौ ಇತ್ಯಾದಿ ಸ್ಥಳಗಳಲ್ಲಿ ಪ್ರಗೃಹ್ಯಸಂಜ್ಞೆಯಿರುವುದರಿಂದ ಸಂಧಿಕಾರ್ಯವು ಬಂದಿರುವುದಿಲ್ಲ. "प्लुतप्रगृह्या अचि नित्यम्" पा०सू० ६-१-१२५। प्र+ग्रह (उपादाने) "क्यप्" (३-१-११९)।

**प्रगे ಪ್ರಗೇ** (अव्य०) ಪ್ರಾತಃಕಾಲ, ಪ್ರಭಾತ, ಹಗಲಿನ ಪ್ರಾರಂಭಕಾಲ. प्रगीयतेऽत्र — प्र + गै (शब्दे) "के"। "इत्थं रथाश्वेभनिषादिनां प्रगे गणो नृपाणामथ तोरणाद्बहिः" माघ० १२-१।

**प्रगेतन ಪ್ರಗೇತನ** (वि०) ಪ್ರಾತಃಕಾಲದಲ್ಲಿರುವ. प्रगे भवः "ट्युः" (४-३-२३)। तुट् च।

**प्रगेनिश ಪ್ರಗೇನಿಶ, –शय –ಶಯ** (वि०) ಪ್ರಾತಃ ಕಾಲವೂ ರಾತ್ರಿಯಂತಿರುವ, ಪ್ರಾತಃಕಾಲದಲ್ಲಿ ನಿದ್ರಿಸುವ. प्रगे निशेव निद्राहेतुः यस्य। प्रगे शेते इति वा। "उत्सूर्यशायिनश्चासन् सर्वे चासन् प्रगेशयाः" भा० शान्ति० २३५-८६।

**प्रग्रह ಪ್ರಗ್ರಹ** (पुं०) 1. ಕಿರಣ, ರಶ್ಮಿ. प्र+ग्रह (उपादाने) "अप्" (३-३-५८)। "इन्दोः प्राच्यां भवति तरणेः प्रग्रहः किं प्रतीच्याम्"। 2. ಕುದುರೆಯ ಹಗ್ಗ, ಕುದುರೆಯ ಕಡಿವಾಣ. "उत्तरुरुत्तालखुरारवं द्रुताः श्लथीकृतप्रग्रहमर्वतां व्रजाः" माघ० १२-३१। 3. ತಕ್ಕಡಿಯ ದಾರ. प्र + ग्रह (उपादाने) "अप्" (३-३-५३)। 4. ವಿಷ್ಣು. अर्जुनः रश्मिभिरिव प्रगृह्यते प्रकर्षेण गृह्यते सारथिनानेन — प्र + ग्रह (उपादाने) कर० "अप्" (३-३-५८)। "पार्थःसारथिनानेन रश्मिभिर्यः प्रगृह्यते। स प्रग्रहः समाख्यातः सप्तवर्णे उदाहृतः" इति निरुक्तिः। "प्रग्रहो निग्रहो व्यग्रः" वि०स०। 5. ಸುವರ್ಣ, ಚಿನ್ನ. 6. ಇಂದ್ರಿಯಗಳ ನಿಗ್ರಹ, ತಡೆ, ಹತೋಟಿ. 7. ಭುಜ, ಬಾಹು, ತೋಳು. 8. ಬಿಗಿಯಾಗಿ ಹಿಡಿಯುವಿಕೆ, ಭದ್ರವಾಗಿ ಹಿಡಿದುಕೊಳ್ಳುವಿಕೆ. 9. ಪೂಜೆ. 10. ಕಕ್ಕೆಗಿಡ, 11. ಅವಲಂಬನ, ಆಶ್ರಯ, ಆಸರೆ. "नृपेष्वथ प्रणष्टेषु जगत्यप्रग्रहाः प्रजाः। क्षणेन निर्वृते चैवं हत्वाचान्योन्यमाहवे" हरिवं०। 12. ಕಣಿಗಿಲೆ ಗಿಡ. 13. ಧಾರಣ, ಧರಿಸುವುದು, ತೊಡುವುದು. 14. ಹಸು ಮೊದಲಾದುವನ್ನು ಕಟ್ಟುವ ಹಗ್ಗ. 15. ತಿರ್ಯಕ್ ಪ್ರಾಣಿಗಳನ್ನು ಪಳಗಿಸುವುದು. 16. ಬಂದಿ, ಸೆರೆಯಾಳು, ಖೈದಿ. "तुलासूत्रेऽश्वरश्मौ प्रग्राहः प्रग्रहः पुनः। तयोश्च संयमोद्योतपूजावन्द्यग्र्यबंधेषु च" वैज०। भावे "ल्युट्" (३-३-११५)।– ग्रहणम् – ಗ್ರಹಣ ವಸ್.

**प्रग्राह ಪ್ರಗ್ರಾಹ** (पुं०) 1. ಕುದುರೆಯ ಕಡಿವಾಣ, ಕುದುರೆಯನ್ನು ಕಟ್ಟುವ ಹಗ್ಗ. "अप्रग्राहैरिवादित्यो वाजिभिर्दूरपातिभिः" भट्टि० ७-५२। 2. ಹಿಡಿಯುವುದು, ತೆಗೆದುಕೊಳ್ಳುವುದು, ಲಾಭದ ಆಸೆಯಿಂದ ಹಿಡಿದುಕೊಳ್ಳುವುದು. प्र+ग्रह (उपादाने) "घञ्" (३-३-४६)। "पात्रप्रग्राहेण चरति भिक्षुः" सि० कौ०। "प्रग्राहैरिव पात्राणामन्वेष्या मैथिली कृतैः" भट्टि० ७-४४। 3. ತುಲಾಸೂತ್ರ, ತಕ್ಕಡಿಯದಾರ. प्र + ग्रह वा "घञ्" (३-३-५२)। "तुलाप्रग्राहेण चरति वणिक्" सि० कौ०। 4. ರಶ್ಮಿ, ಹಗ್ಗ. 5. ಕಿರಣ. "प्रग्राहस्तु तुलासूत्रे वृषादिप्रग्रहेऽपि च" मेदि०।

**प्रग्रीव ಪ್ರಗ್ರೀವ** (पुंन०) 1. ವಾತಾಯನ, ಗವಾಕ್ಷ, ಕಿಟಕಿ. 2. ಮನೆಯ ಸುತ್ತಲೂ ಹಾಕಿರುವ ಮರದ ಕಟಕಟೆ. प्रकृष्टा ग्रीवा यस्मिन्। 3. ಅಶ್ವಶಾಲೆ. 4. ಮರದ ತುದಿ, ವೃಕ್ಷದ ಅಗ್ರಭಾಗ. 5. ಪ್ರಾಸಾದ, ವಾಸಕ್ಕೆ ಸುಖವಾಗಿರುವ ಉಪ್ಪರಿಗೆ ಮನೆ. 6. ಕಲಶ, ಘಟ, ಬಿಂದಿಗೆ. 7. ಕಂಠ, ಕುತ್ತಿಗೆ. "प्रग्रीवमस्त्री कलशे ग्रीवाप्रासादयोरपि" वैज०। 8. ಪ್ರಸಾದ, ಸ್ವಚ್ಛತೆ. ನಾನಾರ್ಥ ರತ್ನಮಾಲೆಯಲ್ಲಿ "प्रासाद" ಪದಕ್ಕೆ ಬದಲಾಗಿ "प्रसाद" ಎಂದು ಉಕ್ತವಾಗಿದೆ. "प्रग्रीवमस्त्री ग्रीवायां प्रसादे कलशेऽपि च" नानार्थर०। (वि०) 9. ಸುಂದರವಾದ ಕಂಠವುಳ್ಳ, ಲಕ್ಷಣವಾದ ಕುತ್ತಿಗೆಯುಳ್ಳ. प्रकृष्टा ग्रीवा यस्य।

**प्रघट्टक ಪ್ರಘಟ್ಟಕ** (पुं०) ಉಪದೇಶ, ಬೋಧನೆ.

**प्रघण ಪ್ರಘಣ प्रघाण ಪ್ರಘಾಣ** (पुं०) 1. ಮನೆಯ ಹೊರಬಾಗಿಲಿನ ಸಮೀಪದ ಕೈಸಾಲೆ, ತಲೆ ಬಾಗಿಲಿನ ಬಳಿ ಇರುವ ಅಂಗಳ. प्रविशद्भिर्जनैः पादैः प्रकर्षेण हन्यते — प्र + हन (हिंसागत्योः) कर्म० वा "अप्" (३-३-७९)। पक्षे वृद्धिः। निपा०। 2. ತಾಮ್ರ ಲೋಹದ ಬಿಂದಿಗೆ. 3. ಕಬ್ಬಿಣದ ದೊಡ್ಡ ಹಾರೆ. "प्रघणस्ताम्रकुम्भे स्यादलिन्दे लोहमुद्गरे" मेदि०।

**प्रघस ಪ್ರಘಸ** (ಪುಂ) 1. ಹೆಚ್ಚಾಗಿ ತಿನ್ನುವುದು, ಹೊಟ್ಟೆಬಾಕತನ. 2. ಒಬ್ಬ ರಾಕ್ಷಸ. प्रकर्षेण अत्ति — प्र + अद (भक्षणे) "अप्" (३-३-५९)। अदेः घस्लृ आदेशः (२-४-३८)।

**प्रघात ಪ್ರಘಾತ** (ಪುಂ) 1. ಹೊಡೆತ, ಏಟು. प्र + हन (हिंसागत्योः) भावे "घञ्" (३-३-१८)। 2. ಯುದ್ಧ, ಸಂಗ್ರಾಮ, ಕಾಳಗ. प्र + हन अधि० "घञ्"(३-३-१२१)।

**प्रघुण ಪ್ರಘುಣ** (ಪುಂ) ಅತಿಥಿ. प्र + घुण (भ्रमणे) "कः" (३-१-१३५)।

**प्रघूर्ण ಪ್ರಘೂರ್ಣ** (ಪುಂ) 1. ಅತಿಥಿ. (ವಿಂ) 2. ತಿರುಗಾಡುತ್ತಿರುವ, ಅಲೆದಾಡುತ್ತಿರುವ. प्र + घूर्ण (भ्रमणे) "अच्" (३-१-१३४)।

**प्रचक्र ಪ್ರಚಕ್ರ** (ನಂ) ಚಲಿಸುತ್ತಿರುವ ಸೈನ್ಯ, ಹೊರಟಿರುವ ಸೇನೆ. प्रस्थितं चक्रम् सैन्यम्।

**प्रचक्षस् ಪ್ರಚಕ್ಷಸ್** (ಪುಂ) 1. ಬೃಹಸ್ಪತಿ. प्र + चक्षिङ् (व्यक्तायां वाचि) "असिः" (उ० ४-२३२)। 2. ಬೃಹಸ್ಪತಿ ಗ್ರಹ.

**प्रचण्ड ಪ್ರಚಂಡ** (ಪುಂ) 1. ಬಿಳಿಯ ಕಣಗಿಲೆಗಿಡ. 2. ಬಹಳ ತೀಕ್ಷ್ಣವಾದ, ಬಹಳ ಕ್ರೂರವಾದ. प्रकर्षेण चण्डः। "पौलस्त्यापजयप्रचण्डचरिते यः कार्तवीर्ये मुनिः" ಮಂವೀಂ ೨-೧೩। 3. ಭಯಂಕರವಾದ, ದಿಗಿಲುಹುಟ್ಟಿಸುವ. 4. ಸಹಿಸಲಾಗದ, ತಾಳಲು ಸಾಧ್ಯವಲ್ಲದ. 5. ಪ್ರತಾಪಶಾಲಿಯಾದ. 6. ಹೆಚ್ಚು ಕೋಪಗೊಂಡ, ಕೋಪದಿಂದ ಕೆರಳಿದ. 7. ಧೈರ್ಯಶಾಲಿ, ಕೆಚ್ಚೆದೆಯ. 8. ಬಹಳ ಜೋರಾದ, ರಭಸದ. 9. ಬಲಶಾಲಿ, ಬಲಿಷ್ಠ, ಅಧಿಕ ಬಲವುಳ್ಳವನು.

**प्रचय ಪ್ರಚಯ** (ಪುಂ) 1. ಸಮೂಹ, ರಾಶಿ, ಗುಂಪು. प्र + चिञ् (चयने) "अच्" (३-३-५६)। "प्रसन्नः पुण्यानां प्रचय इव सर्वस्य सुखदः" म० वी० २-१५। 2. ಗಿಡದಲ್ಲಿರುವ ಪುಷ್ಪ, ಫಲಗಳನ್ನು ಕೋಲು ಮುಂತಾದ ಸಾಧನಗಳಿಂದ ಕೀಳುವುದು. "वृक्षाग्रस्थानां फलानां यष्ट्या प्रचयं करोति" सि० कौ० (३-३-४०) 3. ಗಿಡದಲ್ಲಿರುವ ಪುಷ್ಪ, ಫಲಗಳನ್ನು ಕಳ್ಳತನದಿಂದ ಕೈಯಿಂದ ಕೀಳುವುದು. "पुष्पप्रचयं चौर्येण" "सि० कौ० (३-३-४०)। 4. ಶಿಥಿಲವಾದ ಸಂಯೋಗ, ಸಡಿಲವಾಗಿ ಅಂಟಿಕೊಂಡಿರುವಿಕೆ. "संख्यातः परिमाणाच्च प्रचयादपि जायते। प्रचयः शिथिलाख्यो यः संयोगस्तेन जन्यते" भाषाप०। प्र + चिञ् अस्तेये हस्तादाने "घञ्" (३-३-४०)। –प्रचायः –ಪ್ರಚಾಯಃ, ಕೈಯಿಂದ ಗಿಡದ ಪುಷ್ಪ ಫಲಗಳನ್ನು ಬಿಡಿಸುವುದು. "हस्तादाने चेरस्तेये"। भावे "ल्युट्" (३-३-११५)। –चयनम् –ಚಯನಮ್.

**प्रचर ಪ್ರಚರ** (ಪುಂ) 1. ಮಾರ್ಗ, ದಾರಿ. प्रचरत्यस्मिन् — प्र + चर (गतौ) अधि० "घः" (३-३-११९)। निपा०। 2. ಪ್ರಸಾರವಾಗುವುದು, ಹರಡುವುದು, ಎಲ್ಲಾ ಕಡೆಯೂ ವ್ಯಾಪಿಸುವುದು. "मर्त्यदुष्प्रचरमस्त्रविचारं चारुशिष्यजनतामनुशिष्य" नैष० २१-६।

**प्रचरत् ಪ್ರಚರತ್** (ವಿಂ) ಸಂಚರಿಸುತ್ತಿರುವ, ತಿರುಗಾಡುತ್ತಿರುವ, ನಡೆಯುತ್ತಿರುವ. प्र + चर (गतौ) "शतृ" (३-२-१२४)। स्त्रियां "ङीप्" (४-१-६)। –चरन्ती –ಚರನ್ತೀ.

**प्रचरित ಪ್ರಚರಿತ** (ವಿಂ) 1. ಮುಂದೆ ಹೊರಟಿರುವ, ಮುಂದೆ ಸಾಗಿರುವ. प्र + चर (गतौ) "क्तः" (३-४-७२)। 2. ಅನುಸರಿಸಿಬಂದ, ಮುಂದೆ ನಡೆದು ಬಂದ, ಪ್ರಾರಂಭಿಸಿ ಮುಂದೆ ಸಾಗಿದ (ಕಾರ್ಯ).

**प्रचल ಪ್ರಚಲ** (ವಿಂ) 1. ಚಂಚಲವಾದ, ನಡುಗುವ. प्र + चल (कम्पने) "अच्" (३-१-१३४)। "य उत्पलाक्षि प्रचलैर्विलोचनैस्तवाक्षिसादृश्यमिव प्रयुञ्जते" कुमा० ५-३५। 2. ಚೆನ್ನಾಗಿ ನಡೆಯುವ. 3. ಬಳಕೆಯಲ್ಲಿರುವ, ರೂಢಿಯಲ್ಲಿರುವ, ವ್ಯವಹಾರದಲ್ಲಿರುವ.

**प्रचलत् ಪ್ರಚಲತ್** (ವಿಂ) 1. ತಿರುಗಾಡುತ್ತಿರುವ, ಸಂಚರಿಸುತ್ತಿರುವ, ನಡೆಯುತ್ತಿರುವ. प्र + चल (कम्पने) "शतृ" (३-२-१२४)। "एतस्मिन् प्रचलाकिनां प्रचलतामुद्वेजिताः कूजितैः" उ० रा० २-२९। 2. ಅಲುಗಾಡುತ್ತಿರುವ, ಅಲ್ಲಾಡುತ್ತಿರುವ. "प्रचलत्कलापिकलशङ्कुकस्वना" माघ० १३-४१। स्त्रियां "ङीप्" (४-१-६)। –चलन्ती –ಚಲನ್ತೀ.

**प्रचलाक ಪ್ರಚಲಾಕ** (ಪುಂ) 1. ನವಿಲಿನ ಗರಿ. प्रकर्षेण चलति-चल (कम्पने) "आकः" (उ० ४-५४)। 2. ಸರ್ಪ. 3. ಬಾಣದ ಏಟು. 4. ಧನುರ್ವಿದ್ಯೆ. "प्रचलाकः शराघाते शिखण्डे च भुजङ्गमे" मेदि०।

**प्रचलाकिन् ಪ್ರಚಲಾಕಿನ್** (ಪುಂ) ಮಯೂರ, ನವಿಲು. प्रचलाकोऽस्यास्ति "इनिः" (५-२-११५)। "एतस्मिन् प्रचलाकिनां प्रचलतामुद्वेजिताः कूजितैः" उ० रा० २-२९।

**प्रचलायित ಪ್ರಚಲಾಯಿತ** (ವಿಂ) ತೂಗಡಿಸಿದವನು, ತೂಗಡಿಕೆಯಿಂದ ಅಲ್ಲಾಡಿದವನು. प्रचल इवाचरति —

प्र+चल (कम्पने) "क्यङ्" (३-१-११)। प्रचलाय कर्तं० "क्तः" (३-४-७२)। "घूर्णितः प्रचलायितः" अम०।

**प्रचलित ಪ್ರಚಲಿತ** (वि०) 1. ಅಲುಗಾಡಿದ, ಕ್ಷೋಭೆಗೊಂಡ. प्र+चल (कम्पने) कर्तं० "क्तः" (३-४-७२)। "विकौतुकः प्रकृतमहाप्लवेऽभवत् विशृङ्खलप्रचलितसिन्धुवारिणि" माघ० १७-३०। 2. ಮುಂದಕ್ಕೆ ಹೊರಟಿರುವ, ಮುಂದೆ ಸಾಗಿದ. (न०) 3. ಮುಂದಕ್ಕೆ ಹೊರಡುವುದು, ಮುಂದೆ ಸಾಗುವುದು. प्र+चल भावे "क्तः" (३-३-११४)। "प्रचलिते चलितं स्थितमास्थिते" किरा० १८-१०।

**प्रचाय ಪ್ರಚಾಯ** (पुं०) "प्रचय" ಪದದಲ್ಲಿ ನೋಡಿ.

**प्रचायिका ಪ್ರಚಾಯಿಕಾ** (स्त्री०) 1. ಕ್ರಮವಾಗಿ ಗಿಡದಿಂದ ಹೂವನ್ನು ಬಿಡಿಸಿ ಶೇಖರಿಸಿ ಇಡುವುದು. प्र + चिञ् (चयने) भावे "ण्वुच्" (३-३-१११)। 2. ಹೂವನ್ನು ಬಿಡಿಸಿ ಶೇಖರಿಸಿಡುವ ಹೆಂಗಸು. प्र + चिञ् "ण्वुल्" (३-१-१३३)।

**प्रचार ಪ್ರಚಾರ** (पुं०) 1. ಓಡಾಡುವುದು, ಸಂಚರಿಸುವುದು, ನಡೆಯುವುದು. प्र + चर (गतौ) भावे "घञ्" (३-३-१८)। "निष्कम्पवृक्षं निभृतद्विरेफं मूकाण्डजं शान्तमृगप्रचारम्" कुमा० ३-४२। 2. ಹಸು ಮೊದಲಾದ ಪ್ರಾಣಿಗಳು ಮೇಯುವ ಪ್ರದೇಶ. "परिश्रान्तः पिपासार्तः आससाद मुनिं वने। गवां प्रचारेष्वासीनं फेनमापिबतां पयः" भा० आदि० ४०-१७। 3. ವ್ಯವಹಾರದಲ್ಲಿರುವುದು, ಉಪಯೋಗದಲ್ಲಿರುವುದು, ಬಳಕೆಯಲ್ಲಿರುವುದು. 4. ಪ್ರಚಾರಪಡಿಸುವುದು, ಎಲ್ಲರಿಗೂ ಶ್ರುತಪಡಿಸುವುದು, ಎಲ್ಲಾಕಡೆಗೂ ತಿಳಿಯಪಡಿಸುವುದು. 5. ಪ್ರಕಾಶ. 6. ಕುದುರೆಯ ನೇತ್ರ ರೋಗ. भावे "ल्युट्" (३-३-११५)। **—चारणम् —ಚಾರಣಮ್.** "अधीतिबोधाचरणप्रचारणैः दशाश्चतस्रः प्रणयन्नुपाधिभिः" नैष० १-४।

**प्रचारित ಪ್ರಚಾರಿತ** (वि०) 1. ನಡೆಸಲ್ಪಟ್ಟ, ತಿರುಗಾಡಿಸಲ್ಪಟ್ಟ. प्र + चर (गतौ) + णिच् "क्तः" (३-२-१०२)। 2. ಪ್ರಸಿದ್ಧಪಡಿಸಲ್ಪಟ್ಟ, ಬಹಿರಂಗವಾಗಿ ಎಲ್ಲರಿಗೂ ತಿಳಿಯುವಂತೆ ಮಾಡಲ್ಪಟ್ಟ.

**प्रचालन ಪ್ರಚಾಲನ** (न०) ಅಲುಗಾಡಿಸುವಿಕೆ, ಕದಲಿಸುವಿಕೆ. प्र + चल (कम्पने) + णिच् "ल्युट्" (३-३-११५)। "माम, किमनेन वृथानर्थप्रचालनेन" पञ्चतं० ५।

**प्रचिकीर्षा ಪ್ರಚಿಕೀರ್ಷಾ** (स्त्री०) ಪ್ರತೀಕಾರ ಮಾಡಲು ಅಪೇಕ್ಷೆ. प्र + डु कृञ् (करणे) + सन् "अः" (३-३-१०२)।

**प्रचिकीर्षु ಪ್ರಚಿಕೀರ್ಷು** (वि०) ಪ್ರತೀಕಾರ ಮಾಡಲು ಅಪೇಕ್ಷಿಸುವ. प्र + कृञ् + सन् "उः" (३-२-१६८)।

**प्रचित ಪ್ರಚಿತ** (वि०) 1. ಶೇಖರಿಸಲ್ಪಟ್ಟ, ಸಂಗ್ರಹಿಸಲ್ಪಟ್ಟ (ಪುಷ್ಪ). प्र + चिञ् (चयने) "क्तः" (३-२-१०२)। 2. ಪ್ರಚಯಸ್ವರದಿಂದ ಕೂಡಿದ. 3. ಅಧಿಕಗೊಳಿಸಲ್ಪಟ್ಟ, ಹೆಚ್ಚಿಸಲ್ಪಟ್ಟ. "प्रचितगुणा मणिभिः स्यमन्तकाद्यैः" याद० २४-५।

**प्रचितक ಪ್ರಚಿತಕ** (पुं०) ದಂಡಕದ ಒಂದು ಭೇದ. ಪ್ರತಿಪಾದದಲ್ಲೂ ಎರಡು ನಗಣಗಳ ಮುಂದೆ ಏಳು ಯಗಣಗಳಿದ್ದಲ್ಲಿ "प्रचितकः" ಎಂಬ ದಂಡಕವಾಗುವುದು. "प्रचितकसमभिधो धीरधीभिः स्मृतो दण्डको नद्वयादुत्तरैः सप्तभिर्यैः" वृ० र०।

**प्रचीयमान ಪ್ರಚೀಯಮಾನ** (वि०) ವೃದ್ಧಿ ಹೊಂದುತ್ತಿರುವ, ಬೆಳೆಯುತ್ತಿರುವ. प्र + चिञ् (चयने) कर्तं० "शानच्" (३-२-१२४)। "क्रमेण निस्तीर्य च दोहदव्यथां प्रचीयमानावयवा रराज सा" रघु० ३-७।

**प्रचुर ಪ್ರಚುರ** (पुं०) 1. ಚೋರ, ಕಳ್ಳ. (वि०) 2. ಅನೇಕ, ಬಹಳ, ಹೇರಳ. प्रचोरति — प्र + चुर (स्तेये) "कः" (३-१-१३५)। "नित्यव्यया प्रचुरनित्यधनागमा च वाराङ्गनेव नृपनीतिरनेकरूपा" भर्तृ० १-३८। चुरादीनां णिज्वैकल्पिकः। 3. ದೊಡ್ಡದಾದ, ಹಿರಿದಾದ. (क्रि० वि०) 4. ಹೆಚ್ಚಾಗಿ, ಹೇರಳವಾಗಿ. "प्रचुराधिगताङ्गनिर्वृतिं परितस्त्वां खलु विग्रहेण सः" माघ० १६-३।

**प्रचुरपुरुष ಪ್ರಚುರಪುರುಷ** (पुं०) ಚೋರ, ಕಳ್ಳ. प्रचुरश्चासौ पुरुषश्च। "चौरः शङ्कितवर्णकः स्यात् कुम्भिलश्च प्रचुरपुरुषः" त्रिकाण्ड०।

**प्रचुरीकरण ಪ್ರಚುರೀಕರಣ** (न०) 1. ಶೇಖರಿಸಿಡುವುದು, ರಾಶಿಹಾಕುವುದು. 2. ಹೆಚ್ಚಿಸುವುದು, ಬೆಳೆಸುವುದು.

**प्रचुरीकृत ಪ್ರಚುರೀಕೃತ** (वि०) ಹೆಚ್ಚಿಸಲ್ಪಟ್ಟ, ಬೆಳೆಸಲ್ಪಟ್ಟ, ಅಧಿಕಗೊಳಿಸಲ್ಪಟ್ಟ.

**प्रचुरीभूत ಪ್ರಚುರೀಭೂತ** (वि०) ಅಧಿಕವಾಗಿರುವ, ಬೆಳೆದಿರುವ, ವೃದ್ಧಿ ಹೊಂದಿರುವ.

**प्रचेतस् ಪ್ರಚೇತಸ್** (पुं०) 1. ವರುಣ. पचेतति — प्र + चिती (संज्ञाने) "असुन्" (उ० ४-१८९)। "किश्वायमरिदुर्वारः पाणौ पाशः प्रचेतसः" कुमा० २-२१। 2. ಒಬ್ಬ ಮುನಿ, ಹತ್ತು ಪ್ರಜಾಪತಿಗಳಲ್ಲೊಬ್ಬ. "मरीचिमत्र्यङ्गिरसौ पुलस्त्यं पुलहं क्रतुम्। प्रचेतसं वसिष्ठं च भृगुं नारदमेव च" मनु० १-३५। 3. (वि०) ಸಂತೋಷ

ಗೊಂಡ ಮನಸ್ಸುಳ್ಳ. प्रकृष्टं चेतोऽस्य। "प्रचेताः पाशिनि मुनौ संप्रहृष्टहृदि त्रिषु" मेदि०।

**प्रचेतृ ಪ್ರಚೇತೃ** (ಪುಂ०) ಸಾರಥಿ, ರಥವನ್ನು ನಡೆಸುವವನು. प्रचेतति युद्धादिस्थाने वीरान् सञ्चिनोति — प्र + चिती (संज्ञाने) "तृच्" (३-१-१३३)।

**प्रचेलक ಪ್ರಚೇಲಕ** (ಪುಂ०) 1. ಅಶ್ವ, ಕುದುರೆ. प्रकर्षेण चेलति गच्छति — प्र + चेल् (चलने) "ण्वुल्" (३-१-१३३)। (ವಿ०) 2. ಚೆನ್ನಾಗಿ ನಡೆಯುವ, ಒಳ್ಳೆಯ ನಡಗೆಯುಳ್ಳ.

**प्रचोद ಪ್ರಚೋದ** (ಪುಂ०) 1. ಪ್ರೇರಿಸುವುದು, ಒತ್ತಾಯ ಪಡಿಸುವುದು. 2. ಪುಸಲಾಯಿಸುವುದು, ಹುರಿದುಂಬಿಸುವುದು, ಪ್ರೋತ್ಸಾಹಿಸುವುದು. 3. ಮುಂದಕ್ಕೆ ತಳ್ಳುವುದು, ನೂಕುವುದು. 4. ಕೆಟ್ಟ ಕಾರ್ಯಕ್ಕೆ ಒತ್ತಾಯ ಪಡಿಸುವುದು. प्र + चुद (संचोदने) + णिच् "घञ्" (३-३-१८)। भावे "ल्युट्" (३-३-११५)। **–चोदनम् –ಚೋದನನ್.** प्र+चुद+णिच् "युच्" (३-३-१०७)। **–चोदना –ಚೋದನಾ.**

**प्रचोदक ಪ್ರಚೋದಕ** (ವಿ०) 1. ಪ್ರೇರಿಸುವ, ಒತ್ತಾಯ ಪಡಿಸುವ. प्र + चुद (संचोदने) + णिच् "ण्वुल्" (३-१-१३३)। 2. ಪುಸಲಾಯಿಸುವ, ಹುರಿದುಂಬಿಸುವ, ಪ್ರೋತ್ಸಾಹಿಸುವ. "ल्युः" (३-१-१३४)। **–चोदनः –ಚೋದನಃ.** 3. ಕೆಟ್ಟ ಕಾರ್ಯಕ್ಕೆ ಒತ್ತಾಯಪಡಿಸುವ. 4. ಮುಂದಕ್ಕೆ ತಳ್ಳುವ, ನೂಕುವ.

**प्रचोदनी ಪ್ರಚೋದನೀ** (स्त्री०) ಹೆಗ್ಗುಳ್ಳದ ಗಿಡ. प्रचोद्यतेऽपसार्यते रोगोऽनया — प्र + चुद (संचोदने) + णिच् "ल्युट्" (३-३-११७)। "ङीप्" (४-१-१५)। "प्रचोदनी कुली क्षुद्रा दुस्पर्शा राष्ट्रिकेत्यपि" अम०।

**प्रचोदनीय ಪ್ರಚೋದನೀಯ** (ವಿ०) 1. ಪ್ರೋತ್ಸಾಹಿಸಬೇಕಾದ. 2. ಪ್ರೇರಿಸಬೇಕಾದ.

**प्रचोदयत् ಪ್ರಚೋದಯತ್** (ವಿ०) 1. ಪ್ರೇರಿಸುತ್ತಿರುವ, ಒತ್ತಾಯಪಡಿಸುತ್ತಿರುವ. 2. ಪುಸಲಾಯಿಸುತ್ತಿರುವ, ಪ್ರೋತ್ಸಾಹಿಸುತ್ತಿರುವ. 3. ಕೆಟ್ಟಕಾರ್ಯಕ್ಕೆ ಒತ್ತಾಯ ಪಡಿಸುತ್ತಿರುವ. 4. ತಳ್ಳುತ್ತಿರುವ, ನೂಕುತ್ತಿರುವ. प्र + चुद (संचोदने) + णिच् "शतृ" (३-२-१२४)। "शानच्" (३-२-१२४)। **– दयमानः –ಚೋದಯಮಾನಃ.**

**प्रचोदित ಪ್ರಚೋದಿತ** (ವಿ०) 1. ಪ್ರೇರಿಸಲ್ಪಟ್ಟ, ಒತ್ತಾಯಪಡಿಸಲ್ಪಟ್ಟ. प्र + चुद (संचोदने) + णिच् "क्तः" (३-२-१०२)। "चोदितो गुरुणा नित्यमप्रचोदित एव वा। कुर्यादध्ययने यत्नमाचार्यस्य हितेषु च" मनु० २-१९१। 2. ಪುಸಲಾಯಿಸಲ್ಪಟ್ಟ, ಪ್ರೋತ್ಸಾಹಿಸಲ್ಪಟ್ಟ, ಹುರಿದುಂಬಿಸಲ್ಪಟ್ಟ. "रघूणामन्वयं वक्ष्ये तनुवाग्विभवोऽपि सन्। तद्गुणैः कर्णमागत्य चापलाय प्रचोदितः" रघु० १-९। 3. ಎಚ್ಚರಿಕೆಮಾಡಲ್ಪಟ್ಟ, ಕೆಟ್ಟ ಕಾರ್ಯಕ್ಕೆ ಒತ್ತಾಯಪಡಿಸಲ್ಪಟ್ಟ. 4. ಮುಂದಕ್ಕೆ ತಳ್ಳಲ್ಪಟ್ಟ, ನೂಕಲ್ಪಟ್ಟ. 5. ಮುಂದಕ್ಕೆ ನಡೆಸಲ್ಪಟ್ಟ. (ಎತ್ತು, ಆನೆ, ಕುದುರೆ ಮೊದಲಾದುವು). "प्रचोदिताः परिचितयन्तृकर्मभिर्निषादिभिः" माघ० १७-३५।

**प्रचोदिन् ಪ್ರಚೋದಿನ್** (ವಿ०) "प्रचोदक" ಪದದ ಅರ್ಥ. प्र + चुद (संचोदने) + णिच् "णिनिः" (३-१-१३४)। स्त्रियां "ङीप्" (४-१-५)। **–चोदिनी –ಚೋದಿನೀ.**

**प्रचोद्यमान ಪ್ರಚೋದ್ಯಮಾನ** (ವಿ०) 1. ಒತ್ತಾಯ ಪಡಿಸಲ್ಪಡುತ್ತಿರುವ, ಪ್ರೇರಿಸಲ್ಪಡುತ್ತಿರುವ. 2. ಪುಸಲಾಯಿಸಲ್ಪಡುತ್ತಿರುವ, ಪ್ರೋತ್ಸಾಹಿಸಲ್ಪಡುತ್ತಿರುವ. 3. ಎಚ್ಚರಿಕೆ ಮಾಡಲ್ಪಡುತ್ತಿರುವ. ಕೆಟ್ಟ ಕೆಲಸಕ್ಕೆ ಒತ್ತಾಯಪಡಿಸಲ್ಪಡುತ್ತಿರುವ. 4. ಮುಂದಕ್ಕೆ ನೂಕಲ್ಪಡುತ್ತಿರುವ. प्र + चुद (संचोदने) + णिच् कर्म० "शानच्" (३-२-१२४)।

**प्रच्छद ಪ್ರಚ್ಛದ** (ಪುಂ०) ಮೇಲು ಹೊದಿಕೆ, ಹಾಸಿಗೆಯ ಮೇಲೆ ಹಾಸುವ ಬಟ್ಟೆ. प्रच्छाद्यतेऽनेन — प्र + छद (अपवारणे) + णिच् "घः" (३-३-११८)। "प्रच्छदान्तगलिताश्रुबिन्दुभिः क्रोधभिन्नवलयैर्विवर्तनैः" रघु० १९-२२।

**प्रच्छदपट ಪ್ರಚ್ಛದಪಟ** (ಪುಂ०) ಮೇಲುಹೊದಿಕೆ, ಹಾಸಿಗೆಯ ಮೇಲೆ ಹಾಸುವ ದುಪ್ಪಟ. प्रच्छदश्चासौ पटश्च। "वलीभङ्गाभोगैरलकपतितैः शीर्णकुसुमैः स्त्रियाः सर्वावस्थं कथयति रतं प्रच्छदपटः" सा० द० ३।

**प्रच्छना ಪ್ರಚ್ಛನಾ** (स्त्री०) ಪ್ರಶ್ನೆ, ಕೇಳಿಕೆ. प्रच्छ (ज्ञीप्सायाम्) "युच्" बाहु०।

**प्रच्छन्न ಪ್ರಚ್ಛನ್ನ** (ನ०) 1. ಒಳಬಾಗಿಲು, ರಹಸ್ಯದ ಬಾಗಿಲು. प्रकर्षेण छन्नम्। (ವಿ०) 2. ರಹಸ್ಯವಾಗಿರುವ, ಮರೆಯಾಗಿ ವರ್ತಿಸುವ. "प्रच्छन्ना हि महात्मानः चरन्ति वसुधामिमाम्" भा० वन०। (अव्य०) 3. ರಹಸ್ಯವಾಗಿ, ಗುಟ್ಟಾಗಿ. "विद्या नाम नरस्य रूपमधिकं प्रच्छन्नगुप्तं धनम्" भर्तृ० १-१६।

**प्रच्छर्दन ಪ್ರಚ್ಛರ್ದನ** (न०) 1. ವಮನ, ವಾಂತಿ. प्र + छर्द (वमने) "ल्युट्" (३-३-११५)। 2. ದೇಹದೊಳಗಿನ ವಾಯುವನ್ನು ಮೂವತ್ತೆರಡು ಮಾತ್ರಾಕಾಲದಲ್ಲಿ ಮೆಲ್ಲ ಮೆಲ್ಲಗೆ "ಪಿಂಗಳಾ" ನಾಡಿಯ ಮೂಲಕ ಹೊರಕ್ಕೆ ಹೊರಡಿಸುವ ಪ್ರಯತ್ನ, ರೇಚನ. "प्रच्छर्दन-विधारणाभ्यां वा प्राणस्य" ಪಾ०ಯೋ०ಸೂ० १-३४। "प्राणस्य शरीरान्तर्गतस्य वायोः प्रच्छर्दनं द्वात्रिंशन्मात्राप्रमाणेन शनैः शनैः पिङ्गलया बहिर्विरेचनम्" योगसूत्रवृत्तिः १-३४। (वि०) 3. ವಾಂತಿಮಾಡಿಸುವ ಔಷಧ.

**प्रच्छर्दिका ಪ್ರಚ್ಛರ್ದಿಕಾ** (स्त्री०) 1. ವಮನ, ವಾಂತಿ. प्र + छर्द (वमने) "ण्वुल्" (३-३-१०८)। स्त्रियां "टाप्"। अत इत्त्वम्। (वि०) 2. ವಾಂತಿ ಮಾಡಿಸುವ ಔಷಧಿ ಮುಂತಾದುದು. कर्तं० "ण्वुल्" (३-१-१३३)।

**प्रच्छादन ಪ್ರಚ್ಛಾದನ** (न०) 1. ಉತ್ತರೀಯ, ಹೊದೆಯುವ ವಸ್ತ್ರ. प्रच्छाद्यतेऽनेन — प्र + छद (अपवारणे) + णिच् "ल्युट्" (३-३-११७)। 2. ಮುಚ್ಚಿಡುವುದು, ಬಚ್ಚಿಡುವುದು, ರಹಸ್ಯವಾಗಿಡುವುದು. "आत्मप्रच्छादनार्थं वै बाहुवीर्यमुपाश्रितः। विप्ररूपं विधायेदं मन्ये मां प्रति युध्यसे" भा० आदि० २०५-१८। 3. ಹೊದಿಸುವುದು, ಮರೆಮಾಡುವುದು, ಮುಚ್ಚುವುದು.

**प्रच्छादनीय ಪ್ರಚ್ಛಾದನೀಯ** (वि०) 1. ಹೊದಿಸಲ್ಪಡುವ. 2. ಮುಚ್ಚಲ್ಪಡುವ, ಮರೆಮಾಡಲ್ಪಡುವ. 3. ಹೊದಿಸಬೇಕಾದ. 4. ಮುಚ್ಚಿಡಬೇಕಾದ. प्र + छद (अपवारणे) + णिच् "अनीयर्" (३-१-९६)।

**प्रच्छादित ಪ್ರಚ್ಛಾದಿತ** (वि०) ಮುಚ್ಚಲ್ಪಟ್ಟ, ಮರೆಮಾಡಲ್ಪಟ್ಟ. प्र + छद (अपवारणे) + णिच् "क्तः" (३-२-१०२)। "विधाय वैकल्पिकवैजयन्तीं प्रच्छादितं प्राणयति स्म पार्थम्" याद० २३-४१।

**प्रच्छाद्यमान ಪ್ರಚ್ಛಾದ್ಯಮಾನ** (वि०) ಮುಚ್ಚಲ್ಪಡುತ್ತಿರುವ, ಮರೆಮಾಡಲ್ಪಡುತ್ತಿರುವ. प्र + छद (अपवारणे) + णिच् कर्म० "शानच्" (३-२-१२४)। "रणाख्यदर्शे रजसोत्थितेन प्रच्छाद्यमाने तमसेव भानौ" याद० २०-२६।

**प्रच्छाय ಪ್ರಚ್ಛಾಯ** (वि०) ಒಳ್ಳೆಯ ನೆರಳುಳ್ಳ ಪ್ರದೇಶ, ಹೆಚ್ಚು ನೆರಳುಳ್ಳ ಜಾಗ. प्रकृष्टा छाया यत्र प्रदेशे। "प्रच्छायसुलभनिद्रा दिवसाः परिणामरमणीयाः" शाकु० १-३।

**प्रच्छिल ಪ್ರಚ್ಛಿಲ** (वि०) ಜಲಶೂನ್ಯವಾದ, ನೀರಿಲ್ಲದ.

**प्रच्यव ಪ್ರಚ್ಯವ** (पुं०) 1. ವಿನಾಶ, ಅಳಿವು. 2. ಕೆಳಗೆ ಬೀಳುವುದು, ಕಳಚಿ ಬೀಳುವುದು, ಜಾರಿಬೀಳುವುದು. 3. ಸ್ರವಿಸುವುದು, ಸೋರುವುದು.

**प्रच्यवन ಪ್ರಚ್ಯವನ** (न०) 1. ಸೋರುವುದು, ಸ್ರವಿಸುವುದು. 2. ಕೆಳಗೆ ಬೀಳುವುದು. प्र + च्युङ् (गतौ) "ल्युट्" (३-३-११५)। 3. ಅಧಿಕಾರ ಸ್ಥಾನದಿಂದ ಇಳಿಯುವುದು.

**प्रच्यावन ಪ್ರಚ್ಯಾವನ** (न०) 1. ಕೆಳಗೆ ತಳ್ಳುವುದು, ಕೆಡವುವುದು. प्र + च्युङ् (गतौ) + णिच् "ल्युट्" (३-३-११५)। 2. ಅಧಿಕಾರಸ್ಥಾನದಿಂದ ಇಳಿಸುವುದು.

**प्रच्यावित ಪ್ರಚ್ಯಾವಿತ** (वि०) 1. ಕೆಳಗೆ ತಳ್ಳಲ್ಪಟ್ಟ. 2. ಅಧಿಕಾರದಿಂದ ಹೊರದೂಡಲ್ಪಟ್ಟ.

**प्रच्युत ಪ್ರಚ್ಯುತ** (वि०) 1. ಕೆಳಗೆ ಕಳಚಿಬಿದ್ದ. प्र + च्युङ् (गतौ) कर्त० "क्तः" (३-४-७२)। 2. ಅಧಿಕಾರ ಸ್ಥಾನದಿಂದ ಹೊರಬಿದ್ದ. 3. ಸ್ರವಿಸಿದ, ಸೋರಿದ. 4. ನಾಶಹೊಂದಿದ.

**प्रच्युति ಪ್ರಚ್ಯುತಿ** (स्त्री०) 1. ಕೆಳಗೆ ಬೀಳುವುದು. 2. ನಾಶ, ಅಳಿವು. 3. ಸ್ರವಿಸುವುದು, ಸೋರುವುದು. 4. ಅಧಿಕಾರಸ್ಥಾನದಿಂದ ಹೊರಬೀಳುವುದು. प्र + च्युङ् (गतौ) "क्तिन्" (३-३-९४)।

**प्रच्योतत् ಪ್ರಚ್ಯೋತತ್** (वि०) ಸೋರುತ್ತಿರುವ, ಸ್ರವಿಸುತ್ತಿರುವ. प्र + च्युतिर् (क्षरणे) "शतृ" (३-२-१२४)। "उन्मीलन्मुकुलकरालकुन्दकोशप्रच्योतद्घनमकरन्दगन्धबन्धो" मालती० १-४१।

**प्रज ಪ್ರಜ** (पुं०) ಪತಿ, ಗಂಡ. प्रविश्य जायायां जायते — जनी (प्रादुर्भावे) "डः" (३-२-९९)।

**प्रजन ಪ್ರಜನ** (पुं०) 1. ಉತ್ಪತ್ತಿ, ಹುಟ್ಟುವುದು, ಜನಿಸುವುದು. प्र + जनी (प्रादुर्भावे) "यदि हि स्त्री न रोचेत पुमांसं न प्रमोदयेत्। अप्रमोदात्पुनः पुंसः प्रजनं न प्रवर्तते" मनु० ३-६१। 2. ಪ್ರಥಮ ಗರ್ಭಧಾರಣಕ್ಕಾಗಿ ಹಸುಗಳ ಮೇಲೆ ಹೋರಿಗಳನ್ನು ಹಾರಿಸುವುದು. 3. ಗರ್ಭಗ್ರಹಣ, ಗರ್ಭಧಾರಣ. प्रजायतेऽनेन — प्र + जनी कर० "घञ्" (३-३-१२१)। "प्रजनार्थं स्त्रियः सृष्टाः सन्तानार्थं च मानवाः। तस्मात्साधारणो धर्मः श्रुतौ पत्न्या सहोदितः" मनु० ९-९६। 4. ಜನನ ಹೇತು, ಉತ್ಪತ್ತಿಗೆ ಕಾರಣ. "प्रजनश्चास्मि कन्दर्पः सर्पाणामस्मि वासुकिः" गीता १०-२८। 5. ಉಪಸ್ಥವೆಂಬ ಇಂದ್ರಿಯ,

ಸ್ತ್ರೀಯರ ಮತ್ತು ಪುರುಷರ ಜನನೇಂದ್ರಿಯ. (वि०) 6. ಸೃಷ್ಟಿಸುವ, ಉತ್ಪತ್ತಿಮಾಡುವ. "ईशो नगानां प्रजनः प्रजानां प्रसीदतां नः स महाविभूतिः" भाग० ८-५-३४।

**प्रजनन ಪ್ರಜನನ** (न०) 1. ಜನ್ಮ, ಉತ್ಪತ್ತಿ. प्र + जनी (प्रादुर्भावे) भावे "ल्युट्" (३-३-११५)। 2. ಪುರುಷರ ಮತ್ತು ಸ್ತ್ರೀಯರ ಜನನೇಂದ್ರಿಯ. प्र + जनी अधि० "ल्युट्" (३-३-११७)। 3. ಗೋವುಗಳ ಪ್ರಥಮ ಗರ್ಭಗ್ರಹಣ, ಹಸುಗಳಿಗೆ ಮೊದಲನೆಯಬಾರಿ ಹೋರಿ ಬಿಡುವುದು. प्र + जनी कर० "ल्युट्" (३-३-११७)। 4. ಜನ್ಮವೀಯುವುದು, ಉತ್ಪತ್ತಿಮಾಡುವುದು. "तस्मात्प्रहेष्याम्यद्य त्वां हीनः प्रजननात् स्वयम्" भा० आदि०।

**प्रजनिका ಪ್ರಜನಿಕಾ** (स्त्री०) ಜನ್ಮವೀಯುವ ತಾಯಿ. प्र + जनी (प्रादुर्भावे) + णिच् "ण्वुल्" (३-१-१३३)।

**प्रजनित ಪ್ರಜನಿತ** (वि०) ಉಂಟುಮಾಡಲ್ಪಟ್ಟ, ಉತ್ಪತ್ತಿ ಮಾಡಲ್ಪಟ್ಟ. प्र + जनी (प्रादुर्भावे) + णिच् "क्तः" (३-२-१०२)। "प्रजनितमदनो मनस्विनीभिः गुणसुरभिः सुरभिः स्वयं न मेने" याद० २४-१४।

**प्रजनितृ ಪ್ರಜನಿತೃ** (पुं०) ಜನಕ, ತಂದೆ. प्र + जनी (प्रादुर्भावे) + णिच् "तृच्" (३-१-१३३)।

**प्रजल्प ಪ್ರಜಲ್ಪ** (पुं०) 1. ಅತಿಯಾಗಿ ಮಾತಾಡುವುದು. प्रकृष्टो जल्पः–प्र + जल्प (व्यक्तायां वाचि) "घञ्" (३-३-१८)। ಇದು ಯೋಗಾಭ್ಯಾಸಕ್ಕೆ ಪ್ರತಿಬಂಧಕವಾದುದು. "अत्याहारः प्रयासश्च प्रजल्पो नियमग्रहः। जनसङ्गश्च लौल्यं च षड्भिर्योगो विनश्यति" हठ० १-१५। 2. ಆಲಾಪ, ಮಾತು. 3. ಹರಟೆ, ಪ್ರಯೋಜನವಿಲ್ಲದ ಮಾತು, ವೃಥಾಲಾಪ, ತಿರುಳಿಲ್ಲದ ಮಾತು. "असूयेर्ष्यामदयुजा योऽवधीरणमुद्रया। प्रियस्य कौशलोद्गारः प्रजल्पः स तु कथ्यते"। भावे "ल्युट्" (३-३-११५)। –जल्पनम् –ಜಲ್ಪನವ್.

**प्रजल्पत् ಪ್ರಜಲ್ಪತ್** (वि०) 1. ಮಾತಾಡುತ್ತಿರುವ. प्र + जल्प (व्यक्तायां वाचि) "शतृ" (३-२-१२४)। "प्रजल्पन् मत्पदे लग्नः कान्तः किं न हि नूपुरः" चन्द्रा०। 2. ಹರಟುತ್ತಿರುವ, ಉಪಯೋಗವಿಲ್ಲದೆ ಮಾತಾಡುತ್ತಿರುವ. 3. ಅತಿಯಾಗಿ ಮಾತಾಡುತ್ತಿರುವ.

**प्रजल्पित ಪ್ರಜಲ್ಪಿತ** (न०) 1. ಮಾತು, ನುಡಿ. प्र + जल्प (व्यक्तायां वाचि) भावे "क्तः" (३-३-११४)। "शृणु त्वदालोकनतर्षभाजां प्रजल्पितं पञ्जरशारिकाणाम्" याद० १८-१२६। 2. ಹರಟೆ, ಉಪಯೋಗವಿಲ್ಲದ ಮಾತು, ತಿರುಳಿಲ್ಲದ ಮಾತು. (वि०) 3. ಮಾತನಾಡಿದ. प्र + जल्प कर्त० "क्तः" (३-४-७२)। "स्वरेण तस्याममृतस्रुतेव प्रजल्पितायामभिजातवाचि" कुमा० १-४५।

**प्रजव ಪ್ರಜವ** (पुं०) ಹೆಚ್ಚುವೇಗ. प्र + जु [ಸೌತ್ರಧಾತು] "अप्" (३-३-५७)।

**प्रजवित ಪ್ರಜವಿತ** (वि०) ಬಹಳ ವೇಗವುಳ್ಳ, ಹೆಚ್ಚು ವೇಗದಿಂದ ಕೂಡಿದ. प्र + जु (ಸೌತ್ರಧಾತು) + णिच् "क्तः" (३-२-१०२)। प्रकृष्टजवोऽस्य सञ्जातः "इतच्" (५-२-३६) वा। "नन्वेष त्वरितसुमन्त्रनुद्यमानप्रोद्वल्गत्प्रजवितवाजिना रथेन" उ०रा० ५-१।

**प्रजविन् ಪ್ರಜವಿನ್** (वि०) ಹೆಚ್ಚು ವೇಗವುಳ್ಳ. प्र + जु [ಸೌತ್ರಧಾತು] "इनिः" (३-२-१५६)। "प्रजवी जवनो जवः" अम०। "तिष्ठद्भिः कथमपि देवतानुभावादाकृष्टैः प्रजविभिरायतं तुरङ्गैः" किरा० ७-४।

**प्रजा ಪ್ರಜಾ** (स्त्री०) 1. ಜನ, ಪ್ರಜೆಗಳು. प्रजायते — प्र+ जनी (प्रादुर्भावे) "डः" (३-२-९९)। "अथ प्रजानामधिपः प्रभाते जायाप्रतिग्राहितगन्धमाल्याम्" रघु० २-१। "प्रजाः प्रजानाथ पितेव पासि" रघु० २-४८। 2. ಸಂತಾನ, ಮಕ್ಕಳು. "यशसे विजिगीषूणां प्रजायै गृहमेधिनाम्" रघु० १-७। ತಾಯಿ ತಂದೆಗಳ ಗುಣ ದೋಷಗಳಿಂದ ಮಕ್ಕಳು ಭಿನ್ನ ಭಿನ್ನ ಸ್ವಭಾವವುಳ್ಳವರಾಗಿ ಹುಟ್ಟುತ್ತಾರೆ. "मातॄणां शीलदोषेण पितृशीलगुणेन च। विभिन्नास्तु प्रजाः सर्वाः भवन्ति भवशीलिनाम्" अग्निपु०। 3. ಜನ್ಮ, ಉತ್ಪತ್ತಿ, ಹುಟ್ಟುವುದು.

**प्रजाकाम ಪ್ರಜಾಕಾಮ** (वि०) ಸಂತಾನವನ್ನು ಅಪೇಕ್ಷಿಸುವ, ಮಕ್ಕಳಾಗಬೇಕೆಂದು ಬಯಸುವ. प्रजां कामयते — कमु (कान्तौ) + णिङ् "अच्" (३-१-१३४)।

**प्रजागर ಪ್ರಜಾಗರ** (पुं०) 1. ಜಾಗರಣೆ, ನಿದ್ರೆಮಾಡದಿರುವುದು. प्र + जागृ (निद्राक्षये) "अप्" (३-३-५७)। "प्रजागरात्खिलीभूतस्तस्याः स्वप्ने समागमः" शाकु० ६-२२। 2. ವಿಷ್ಣು. प्रजागर्ति — प्र + जागृ "अच्" (३-१-१३४)। ಭಕ್ತರ ವಿಷಯದಲ್ಲಿ ಅನವರತವೂ ಎಚ್ಚರದಿಂದಿರುವುದರಿಂದ "प्रजागरः" ಎಂಬ ಹೆಸರು. "रात्रिन्दिवं प्रजागर्ति सस्येष्विव कृषीवलः। भक्तेषु नितरां योऽसौ प्रजागर इहोच्यते" इति निरुक्तिः। "आधारनिलयो धाता पुष्पहासः प्रजागरः" वि० स०। 3. ಪ್ರಾಣ.

**प्रजातन्तु ಪ್ರಜಾತಂತು** (ಪುಂ) ಸಂತಾನ, ಸಂತತಿ, ವಂಶ. प्रजायाः प्रजननस्य तन्तुरिव । "आचार्याय प्रियं धनमाहृत्य प्रजातन्तुं मा व्यवच्छेत्सीः" तैं०उप० ।

**प्रजात ಪ್ರಜಾತ** (ನ०) ಪ್ರಜೆಗಳ ಉತ್ಪತ್ತಿ, ಪುತ್ರೋತ್ಪತ್ತಿ. प्रकर्षेण जातम् ।

**प्रजाता ಪ್ರಜಾತಾ** (स्त्री०) ಮಕ್ಕಳನ್ನು ಹಡೆದ ಹೆಂಗಸು. प्रजातं सुतोत्पत्तिः तदस्या अस्ति "अच्" (५-२-१२७)।

**प्रजाति ಪ್ರಜಾತಿ** (स्त्री०) ಪ್ರಜೋತ್ಪತ್ತಿ, ಮಕ್ಕಳು ಜನಿಸುವುದು. प्र + जनी (प्रादुर्भावे) भावे "क्तिन्" (३-३-९४) ।

**प्रजानत् ಪ್ರಜಾನತ್** (वि०) ಚೆನ್ನಾಗಿ ತಿಳಿಯುತ್ತಿರುವ, ಸ್ಪಷ್ಟವಾಗಿ ಅರಿಯುತ್ತಿರುವ. प्र + ज्ञा (अवबोधने) "शतृ" (३-२-१२४) ।

**प्रजानाथ ಪ್ರಜಾನಾಥ** (ಪುಂ) ರಾಜ, ದೊರೆ, ಪ್ರಜೆಗಳ ಒಡೆಯ. प्रजानां नाथः । "जीवन् पुनः शश्वदुपप्लवेभ्यः प्रजाः प्रजानाथ पितेव पासि" रघु० २-४८।

**प्रजानिषेक ಪ್ರಜಾನಿಷೇಕ** (ಪುಂ) ಗರ್ಭಾಧಾನ ಮಾಡುವುದು, ಬಸಿರುಂಟುಮಾಡುವುದು, ವೀರ್ಯವನ್ನು ಗರ್ಭಕೋಶಕ್ಕೆ ಸೇರಿಸುವುದು. प्रजाया निषेकः। "प्रजानिषेकं मयि वर्तमानं सूनोरनुध्यायत चेतसेति" रघु० १४-६०।

**प्रजाप ಪ್ರಜಾಪ** (ಪುಂ) ರಾಜ, ದೊರೆ. प्रजाः पाति — पा (रक्षणे) "कः" (३-२-३) ।

**प्रजापति ಪ್ರಜಾಪತಿ** (ಪುಂ) 1. ವಿಷ್ಣು, ಪರಮಾತ್ಮ. ಬದ್ಧ ಮತ್ತು ಮುಕ್ತರಿಗಿಂತಲೂ ಉತ್ಕೃಷ್ಟರಾದ ನಿತ್ಯಸೂರಿಗಳು ಪ್ರಜೆಗಳು. ನಿತ್ಯಸೂರಿಗಳಾದ ಆ ಪ್ರಜೆಗಳಿಗೆ ಪತಿ (ಸ್ವಾಮಿ) ಯಾದುದರಿಂದ ವಿಷ್ಣುವು ಪ್ರಜಾಪತಿ. बद्धमुक्तापेक्षया प्रकर्षेण जायमानानां प्रजानां प्रादुर्भवतां सूरीणां पतिः स्वामी नित्यपरिचरणीयः। "बद्धादुत्कृष्टतो ये च जायन्ते सूरयः प्रजाः। तेषां यो नित्यसूरीणां पतिः स स्यात् प्रजापतिः" इति निरुक्तिः। "ज्येष्ठः श्रेष्ठः प्रजापतिः" वि०स०। 2. ಬ್ರಹ್ಮ, ಚತುರ್ಮುಖ. प्रजानां पतिः। "अस्याः सर्गविधौ प्रजापतिरभूच्चन्द्रो नु कान्तिप्रदः शृङ्गारैकरसः स्वयं नु मदनो मासो नु पुष्पाकरः" विक्र० १-१०। 3. ಪ್ರಜಾಸೃಷ್ಟಿಗಾಗಿ ಬ್ರಹ್ಮನಿಂದ ಸೃಷ್ಟಿಸಲ್ಪಟ್ಟ ಮರೀಚಿ ಮೊದಲಾದ ಹತ್ತು ಮಂದಿ ಪ್ರಜಾಪತಿಗಳು. **ದಶ ಪ್ರಜಾಪತಿಗಳು** :—(1) मरीचिः (2) अत्रिः (3) अङ्गिरस् (राः) (4) पुलस्त्यः (5) पुलहः (6) क्रतुः (7) प्रचेतस् (ताः) (8) वसिष्ठः (9) भृगुः ಮತ್ತು (10) नारदः। 4. ರಾಜ, ದೊರೆ, ಪ್ರಜೆಗಳ ಒಡೆಯ, ಪ್ರಜೆಗಳನ್ನು ಕಾಪಾಡುವವನು. प्रजानां पतिः। "अथ धर्ममूर्तिरनुरागभावितः स्वयमादित प्रवयणं प्रजापतिः" माघ० १३-१९। 5. ಚತುರ್ಮುಖನ ದಕ್ಷಿಣ ಅಂಗುಷ್ಠದಿಂದ ಜನಿಸಿದ ದಕ್ಷ (ಪ್ರಜಾಪತಿ). 6. ಸೂರ್ಯ. 7. ಜಾಮಾತ, ಅಳಿಯ. 8. ವಹ್ನಿ, ಅಗ್ನಿ. 9. ವಿಶ್ವಕರ್ಮ. "प्रजापतिर्ब्रह्मराज्ञोर्जामातरि दिवाकरे। वह्नौ त्वष्टरि दक्षादौ" हेम०। 10. ಮನು. "न तौ प्रति हि तान् धर्मान्मनुराह प्रजापतिः" मनु० १०-७८। 11. ಜನಕ, ತಂದೆ. "जनको जन्मदानाच्च रक्षणाच्च पिता नृणाम्। ततो विस्तीर्णकरणात् कलया स प्रजापतिः" ब्रह्मवै०।

**प्रजावत् ಪ್ರಜಾವತ್** (वि०) 1. ಸಂತಾನವುಳ್ಳ, ಮಕ್ಕಳಿಂದ ಕೂಡಿದ. 2. ಪ್ರಜೆಗಳಿಂದ ಕೂಡಿದ ದೊರೆ, ಪ್ರಕೃತಿ ಸಂಪನ್ನನಾದ ರಾಜ. प्रजाः सन्त्यस्य "मतुप्" (५-२-९४)। स्त्रियां "ङीप्" (४-१-६) **—वती — ವತೀ.** 1. ಸಹೋದರನ ಪತ್ನಿ. प्रजा अस्त्यस्याः "मतुप्"। "तस्यामेवास्य यामिन्यामन्तर्वत्नी प्रजावती" रघु० १५-१३। 2. ತಾಯಿ. 3. ಮಕ್ಕಳುಳ್ಳ ಹೆಂಗಸು.

**प्रजासृज् ಪ್ರಜಾಸೃಜ್** (ಪುಂ) ಬ್ರಹ್ಮ, ಚತುರ್ಮುಖ. प्रजाः सृजति — सृज (विसर्गे) "क्विप्" (३-२-७६)। "कृतः प्रजाक्षेमकृता प्रजासृजा सुपात्रनिक्षेपनिराकुलात्मना" माघ० १-२८।

**प्रजेश ಪ್ರಜೇಶ, —ईश्वर — ಈಶ್ವರ** (ಪುಂ) ರಾಜ, ದೊರೆ, ಪ್ರಜೆಗಳ ಒಡೆಯ. प्रजानामीशः ईश्वरो वा। "तमभ्यनन्दत्प्रथमं प्रबोधितः प्रजेश्वरः शासनहारिणा हरेः" रघु० (३-६८)।

**प्रज्ञ ಪ್ರಜ್ಞ** (ಪುಂ) ವಿದ್ವಾಂಸ, ಪಂಡಿತ, ಚೆನ್ನಾಗಿ ತಿಳಿದವನು, ಬುದ್ಧಿವಂತ. प्रकर्षेण जानाति — ज्ञा (अवबोधने) "कः" (३-१-१३६)।

**प्रज्ञा ಪ್ರಜ್ಞಾ** (स्त्री०) 1. ಬುದ್ಧಿ, ತಿಳಿದುಕೊಳ್ಳುವ ಮತ್ತು ವಿಚಾರಮಾಡುವ ಶಕ್ತಿ. प्रज्ञायतेऽनया — प्र + ज्ञा (अवबोधने) "अङ्" (३-३-१०५)। "आकारसदृशप्रज्ञः प्रज्ञया सदृशागमः। आगमैः सदृशारम्भः आरम्भसदृशोदयः" रघु० १-१५। 2. ಚೆನ್ನಾಗಿ ತಿಳಿದ ಹೆಂಗಸು.

**प्रज्ञात ಪ್ರಜ್ಞಾತ** (वि०) ಪ್ರಖ್ಯಾತಿ ಪಡೆದ, ಪ್ರಸಿದ್ಧಿ ಹೊಂದಿದ. प्रकर्षेण ज्ञातः।

**प्रज्ञादृश् ಪ್ರಜ್ಞಾದೃಶ್** (वि०) ಬುದ್ಧಿಯೇ ಕಣ್ಣಾಗಿರುವ, ಬಾಹ್ಯದೃಷ್ಟಿಯಿಲ್ಲದ. "खद्योतवद्दर्शितखञ्जदीप्तीन् प्रज्ञादृशो भूमिभृतः सभायाम्" याद० २३-१६।

**प्रज्ञान ಪ್ರಜ್ಞಾನ** (ನಂ) 1. ಬುದ್ಧಿ, ತಿಳಿದುಕೊಳ್ಳುವ ಮತ್ತು ವಿಚಾರಮಾಡುವ ಶಕ್ತಿ. प्र + ज्ञा (अवबोधने) "ल्युट्" (३-३-११५)। 2. ಚಿಹ್ನೆ, ಗುರುತು. प्र + ज्ञा करं० "ल्युट्" (३-३-११७)। 3. ಚೈತನ್ಯ. (वि०) 4. ಬುದ್ಧಿವಂತ, ತಿಳಿದವನು. प्रज्ञानमस्त्यस्य "अच्" (५-२-१२७)।

**प्रज्ञाल ಪ್ರಜ್ಞಾಲ** (वि०) ಬುದ್ಧಿವಂತ, ಪ್ರಾಜ್ಞ. प्रज्ञाऽस्त्यस्य "लच्" (५-२-९७)। "मतुप्" (५-२-९४)। प्रज्ञावान् ಪ್ರಜ್ಞಾವಾನ್.

**प्रज्ञिन् ಪ್ರಜ್ಞಿನ್** (वि०) ಬುದ್ಧಿವಂತ, ಜ್ಞಾನಿ. प्रज्ञास्त्यस्य "इनिः" (५-२-११५)।

**प्रज्ञिल ಪ್ರಜ್ಞಿಲ** (वि०) ಬುದ್ಧಿವಂತ, ಪ್ರಾಜ್ಞ. प्रज्ञाऽस्त्यस्य "इलच्" (५-२-१००)।

**प्रज्ञु ಪ್ರಜ್ಞು** (वि०) ವಿರಳವಾದ ಮೊಳಕಾಲುಗಳುಳ್ಳವನು, ಒಂದಕ್ಕೊಂದು ಸೇರದೆ ದೂರವಾಗಿರುವ ಮೊಳಕಾಲುಗಳುಳ್ಳವನು. प्रगते जानुनी यस्य "ज्ञुः" (५-४-१२९)। "प्रज्ञुः प्रगतजानुकः" अम०।

**प्रज्वलत् ಪ್ರಜ್ವಲತ್** (वि०) 1. ಚೆನ್ನಾಗಿ ಉರಿಯುತ್ತಿರುವ. प्र+ज्वल (दीप्तौ) "शतृ" (३-२-१२४)। 2. ಚೆನ್ನಾಗಿ ಹೊಳೆಯುತ್ತಿರುವ, ಹೆಚ್ಚು ಪ್ರಕಾಶಮಾನವಾದ. "प्रज्वलत्कान्तिचक्राणि चक्राणि वरचक्रिणाम्" कुमा० १६-१७। स्त्रियां "ङीप्" (४-१-६)। –ज्वलन्ती –ಜ್ವಲನ್ತೀ.

**प्रज्वलन ಪ್ರಜ್ವಲನ** (ನಂ) 1. ಚೆನ್ನಾಗಿ ಉರಿಯುವುದು. 2. ಪ್ರಕಾಶಮಾನವಾಗಿರುವಿಕೆ. प्र+ज्वल (दीप्तौ) भावे "ल्युट्" (३-३-११५)।

**प्रज्वलनीय ಪ್ರಜ್ವಲನೀಯ** (वि०) 1. ಉರಿಯಬೇಕಾದ. 2. ಹೊಳೆಯಬೇಕಾದ. प्र+ज्वल (दीप्तौ) "अनीयर्" (३-१-९६)। "तव्यः" (३-१-९६)। –ज्वलितव्यः –ಜ್ವಲಿತವ್ಯಃ. 3. ಉರಿಸಲ್ಪಡಬೇಕಾದ. 4. ಉರಿಸಲ್ಪಡುವ. 5. ಪ್ರಕಾಶಗೊಳಿಸಲ್ಪಡುವ. 6. ಪ್ರಕಾಶಗೊಳಿಸಬೇಕಾದ. प्र+ज्वल+णिच् "अनीयर्" (३-१-९६)। "तव्यः" (३-१-९६)। –ज्वलयितव्यः –ಜ್ವಲಯಿತವ್ಯಃ.

**प्रज्वलयत् ಪ್ರಜ್ವಲಯತ್** (वि०) 1. ಚೆನ್ನಾಗಿ ಉರಿಸುತ್ತಿರುವ. 2. ಹೆಚ್ಚು ಪ್ರಕಾಶಗೊಳಿಸುತ್ತಿರುವ. प्र+ज्वल (दीप्तौ) + णिच् "शतृ" (३-२-१२४)। स्त्रियां "ङीप्" (४-१-६)। –ज्वलयन्ती –ಜ್ವಲಯನ್ತೀ.

**प्रज्वलित ಪ್ರಜ್ವಲಿತ** (वि०) 1. ಚೆನ್ನಾಗಿ ಉರಿಸಲ್ಪಟ್ಟ, ಉರಿಯುವಂತೆ ಮಾಡಲ್ಪಟ್ಟ. प्र+ज्वल (दीप्तौ) +णिच् "क्तः" (३-२-१०२)। "अग्निं प्रज्वलितं वन्दे जातवेदं हुताशनम्। सुवर्णवर्णममलं समिद्धं सर्वतोमुखम्"। 2. ಪ್ರಕಾಶಗೊಳಿಸಲ್ಪಟ್ಟ.

**प्रडीन ಪ್ರಡೀನ** (ನಂ) ಹಕ್ಕಿಗಳ ಹಾರಾಟದ ಒಂದು ಭೇದ, ಹಕ್ಕಿಯು ವೇಗವಾಗಿ ಓಡುವಿಕೆ. प्रकृष्टं डयनम्— प्र+डीङ् (विहायसा गतौ) भावे "क्तः" (३-३-११४)। निष्ठा नत्वम् (८-२-४५)। "प्रडीनोड्डीनसंडीनान्येताः खगगतिक्रियाः" अम०।

**प्रण ಪ್ರಣ** (वि०) ಪ್ರಾಚೀನವಾದ, ಪುರಾತನವಾದ, ಹಿಂದಿನ ಕಾಲದ. प्र "नः" (वा० ५-४-२५)।

**प्रणत ಪ್ರಣತ** (वि०) 1. ಪ್ರಣಾಮ ಮಾಡಿದ, ನಮಸ್ಕರಿಸಿದ. प्र +णम (प्रह्वत्वे शब्दे) "क्तः" (३-४-७२)। "प्रणतः शिरसा करिष्यते सकलैरेत्य समं धराधिपैः" माघ० १६-४०। 2. ಚೆನ್ನಾಗಿ ಬಗ್ಗಿರುವ. प्रकर्षेण नतः। 3. ವಿನೀತ, ವಿಧೇಯ.

**प्रणति ಪ್ರಣತಿ** (स्त्री०) 1. ಪ್ರಣಾಮ, ನಮಸ್ಕಾರ. प्र + णम (प्रह्वत्वे शब्दे) "क्तिन्" (३-३-९४)। "क्षणमयमुपविष्टः क्ष्मातलन्यस्तपादः प्रणतिपरमवेक्ष्य प्रीतमह्नाय लोकम्" माघ० ११-४८। 2. ನಮ್ರತೆ, ವಿನಯ, ವಿಧೇಯತೆ. "स ददर्श वेतसवनाचरितां प्रणतिं बलीयसि समृद्धिकरीम्" किरा० ६-५।

**प्रणदत् ಪ್ರಣದತ್** (वि०) ಶಬ್ದಮಾಡುತ್ತಿರುವ. प्र+णद (अव्यक्ते शब्दे) "शतृ" (३-२-१२४)।

**प्रणदन ಪ್ರಣದನ** (ನಂ) ಶಬ್ದಮಾಡುವುದು. प्र + णद (अव्यक्ते शब्दे) "ल्युट्" (३-३-११५)।

**प्रणदित ಪ್ರಣದಿತ** (वि०) 1. ಶಬ್ದಮಾಡಿದ. प्र + णद (अव्यक्ते शब्दे) "क्तः" (३-४-७२)। "सरित इव सविभ्रमप्रयातप्रणदितहंसकभूषणा विरेजुः' माघ० ७-२३। 2. ಝೇಂಕಾರಮಾಡಿದ. "निपपात संभ्रमभृतः श्रवणादसितभ्रुवः प्रणदितालिकुलम्" माघ० ९-७१।

**प्रणन्तव्य ಪ್ರಣಂತವ್ಯ** (वि०) 1. ನಮಸ್ಕರಿಸಲ್ಪಡುವ. 2. ನಮಸ್ಕರಿಸಬೇಕಾದ.

**प्रणमत् ಪ್ರಣಮತ್** (वि०) ನಮಸ್ಕರಿಸುತ್ತಿರುವ, ಪ್ರಣಾಮ ಮಾಡುತ್ತಿರುವ. प्र + णम (प्रह्वत्वे शब्दे) "शतृ" (३-२-१२४)। "प्रणमन् ब्रह्मणा प्रोक्तः राजकाधिपतिस्ततः" भट्टि० २१-१३। स्त्रियां "ङीप्" (४-१-६)। –णमन्ती –ಣಮನ್ತೀ.

**प्रणमन ಪ್ರಣಮನ** (ನಂ) ಭಕ್ತಿಯಿಂದ ನಮಸ್ಕರಿಸುವುದು.

**प्रणम्र ಪ್ರಣಮ್ರ** (ವಿಂ) 1. ಬಗ್ಗಿರುವ, ಕೆಳಮುಖವಾಗಿರುವ. प्र+णम (प्रह्वत्वे शब्दे) "रः" (३-२-१६७)। 2. (ಕಾಲಿಗೆ ಬಿದ್ದು) ನಮಸ್ಕಾರಮಾಡಿದ. "द्रुतविगमितविप्रयोगचिह्नामपि तनयां नृपतिः पदप्रणम्राम" नैष० ४-११८। 3. ವಿಧೇಯನಾದ, ವಿನೀತನಾದ.

**प्रणय ಪ್ರಣಯ** (ಪುಂ) 1. ಪ್ರೀತಿ, ಪ್ರೇಮ, ಅನುರಾಗ. प्र+णीञ् (प्रापणे) "अच्" (३-३-५६)। "प्रणयप्रकाशनविदो मधुराः सुतरामभीष्टजनचित्तहृतः" माघ० ९-५५। 2. ವಿಸ್ರಂಭ, ವಿಶ್ವಾಸ. "सखेति मत्वा प्रसभं यदुक्तं हे कृष्ण हे यादव हे सखेति। अजानता महिमानं तवेदं मया प्रमादात् प्रणयेन वापि" गीता ११-४१। 3. ಯಾಚನೆ, ಬೇಡಿಕೆ. "तद्भूतनाथानुग नार्हसि त्वं सम्बन्धिनो मे प्रणयं विहन्तुम्" रघु० २-५७। 4. ಮುಕ್ತಿ, ಮೋಕ್ಷ. 5. ನಂಬಿಕೆ, ನೆಚ್ಚಿಕೆ. 6. ವಿನಯ, ವಿಧೇಯತೆ. "प्रणयः प्रश्रये प्रेम्णि याच्ञाविस्रम्भयोरपि" मेदि०। 7. ದಯೆ, ಕರುಣೆ, ಕನಿಕರ. "एष ते प्रणयो विप्र शिरसा धार्यते मया" मृच्छ० १-४५।

**प्रणयकलह ಪ್ರಣಯಕಲಹ** (ಪುಂ) ಪ್ರೀತಿಯ ಜಗಳ, ಪತಿಪತ್ನಿಯರಿಗೆ ನಡೆಯುವ ಹುಸಿಯ ಜಗಳ. ಅನ್ತರಂಗದಲ್ಲಿ ವಿಶ್ವಾಸವಿದ್ದರೂ ಯಾವುದಾದರೂ ತಾತ್ಕಾಲಿಕ ಅಸಮಾಧಾನದಿಂದ ಜಗಳವಾಡಿದಂತೆ ನಟಿಸುವುದು ಪ್ರಣಯ ಕಲಹ. ಈ ಕಲಹವು ಕೆಲವು ನಿಮಿಷಗಳಲ್ಲೇ ಶಾಂತವಾಗುವುದು. "नाप्यन्यस्मात् प्रणयकलहाद्विप्रयोगोपपत्तिर्वित्तेशानां न च खलु वयो यौवनादन्यदस्ति" मेघ० २-२।

**प्रणयकुपित ಪ್ರಣಯಕುಪಿತ** (ವಿಂ) ಪ್ರೀತಿಯಿಂದ ಕೋಪಿಸಿಕೊಂಡ. प्रणयेन कुपितः। "त्वामालिख्य प्रणयकुपितां धातुरागैः शिलायामात्मानं ते चरणपतितं यावदिच्छामि कर्तुम्" मेघ० २-४२।

**प्रणयकोप ಪ್ರಣಯಕೋಪ** (ಪುಂ) ಪ್ರೀತಿಯ ಕೋಪ, ಪ್ರೀತಿಯಿಂದ ಮುನಿಸಿಕೊಳ್ಳುವುದು. प्रणयेन कोपः। "प्रणयकोपभृतोऽपि पराङ्मुखाः सपदि वारिधरारवभीरवः" माघ० ६-३८।

**प्रणयत् ಪ್ರಣಯತ್** (ವಿಂ) 1. ಮಾಡುತ್ತಿರುವ. प्र+णीञ् (प्रापणे) "शतृ" (३-२-१२४)। "अधीतिबोधाचरणप्रचारणैः दशाश्चतस्रः प्रणयन्नुपाधिभिः" नैष० १-४। 2. ಒಯ್ಯುತ್ತಿರುವ, ಸಾಗಿಸುತ್ತಿರುವ,

**प्रणयन ಪ್ರಣಯನ** (ನಂ) 1. ಒಯ್ಯುವುದು, ಸಾಗಿಸುವುದು. प्र+णीञ् (प्रापणे) "ल्युट्" (३-३-११५)। 2. ಮಾಡುವುದು. "सर्गशेषप्रणयनाद्विश्वयोनेरनन्तरम्" कुमा० ६-९। 3. ತರುವುದು. 4. ರಚಿಸುವುದು, ನಿರ್ಮಿಸುವುದು, ಕಾವ್ಯ ಮೊದಲಾದ ಗ್ರಂಥಗಳನ್ನು ಬರೆಯುವುದು. 5. ಅಗ್ನಿಯ ಒಂದು ಸಂಸ್ಕಾರ, ಅಗ್ನಿಯನ್ನು ಗಾರ್ಹಪತ್ಯದಿಂದ ತೆಗೆದು ಬೇರೆ ಕಡೆ ಇಡುವುದು. "शुष्मणि प्रणयनादिसंस्कृते तैर्हवींषि जुहवां बभूविरे" माघ० १४-२२।

**प्रणयनीय ಪ್ರಣಯನೀಯ** (ವಿಂ) 1. ತರಲ್ಪಡುವ. 2. ಒಯ್ಯಲ್ಪಡುವ. प्र+णीञ् (प्रापणे) "अनीयर्" (३-१-९६)। 3. ಸಂಸ್ಕರಿಸಲ್ಪಡುವ (ಅಗ್ನಿ).

**प्रणयवत् ಪ್ರಣಯವತ್** (ವಿಂ) 1. ಪ್ರೇಮವುಳ್ಳ, ಪ್ರೀತಿಯಿಂದ ಕೂಡಿದ. प्रणयोऽस्यास्ति "मतुप्" (५-२-९४)। 2. ಅಪೇಕ್ಷೆಯುಳ್ಳ, ಆಸೆಯುಳ್ಳ. "स्रोतोवहां पथि निकामजलामतीत्य जातः सखे प्रणयवान् मृगतृष्णिकायाम्" शाकु० ६-१६। 3. ಪ್ರೀತಿಯುಳ್ಳ, ಅನುರಾಗವುಳ್ಳ, (ಪತಿ, ಗಂಡ). "सिक्तायाः क्षणमभिषिच्य पूर्वमन्यामन्यस्या प्रणयवता बतावलायाः" माघ० ८-४३।

**प्रणयिता ಪ್ರಣಯಿತಾ** (स्त्री०) ಪ್ರೀತಿಯಿಂದ ಕೂಡಿರುವಿಕೆ, ಪ್ರೇಮದಿಂದಿರುವುದು. प्रणयिनो भावः "तल्" (५-१-११९)। "तीक्ष्णादुद्विजते मृदौ परिभवक्लेशान्न संतिष्ठते मूर्खान् द्वेष्टि न गच्छति प्रणयितामत्यन्तविद्वत्स्वपि" मुद्रा० ३-५।

**प्रणयिन् ಪ್ರಣಯಿನ್** (ಪುಂ) 1. ಪತಿ, ಗಂಡ. प्रणयोऽस्यास्ति "इनिः" (५-२-११५)। "प्रणयिनं रभसादुदरश्रिया वलिभयालिभयादिव सस्वजे" माघ० ६-१३। (ವಿಂ) 2. ಅಪೇಕ್ಷೆಯುಳ್ಳ, ಬಯಕೆಯುಳ್ಳ. "मेघालोके भवति सुखिनोऽप्यन्यथावृत्ति चेतः कण्ठाश्लेषप्रणयिनि जने किं पुनर्दूरसंस्थे" मेघ० १-३। 3. ಪ್ರೀತಿಯುಳ್ಳ, ಅನುರಾಗವುಳ್ಳ, ಪ್ರೇಮಕ್ಕೆ ಪಾತ್ರನಾದ. "यदिन्दावानन्दं प्रणयिनि जने वा न भजते व्यनक्तचन्तस्तापं तदयमतिधीरोऽपि विषमम्" मालती० ३-९। 4. ಯಾಚಕ, ಬೇಡುವವನು. "परिग्रहीतुं प्रणयिप्रियत्वात् त्रिलोचनस्तामुपचक्रमे च" कुमा० ३-६६। 5. ಸಹಚರ, ಒಡನಾಡಿ, ಮಿತ್ರ. "कुशाङ्कुरादानपरिक्षताङ्गुलिः कृतोऽक्षसूत्रप्रणयी तया करः" कुमा० ५-११। स्त्रियां "ङीप्" (४-१-५)। **प्रणयिनी ಪ್ರಣಯಿನೀ.** (स्त्री०) 1. ಗೆಳತಿ, 2. ಪತ್ನಿ, ಹೆಂಡತಿ,

**प्रणर्तन ಪ್ರಣರ್ತನ** (नं०) 1. ನರ್ತನಮಾಡುವುದು, ಕುಣಿದಾಡುವುದು. प्र + नृती (गात्रविक्षेपे) "ल्युट्" (३-३-११५)। 2. ಕಂಪಿಸುವುದು, ಅಲುಗಾಡುವುದು, ಚಲಿಸುವುದು.

**प्रणर्तयमान ಪ್ರಣರ್ತಯಮಾನ** (वि०) 1. ಕುಣಿದಾಡಿಸುತ್ತಿರುವ. प्र + नृती (गात्रविक्षेपे) + णिच् "शानच्" (३-२-१२४)। 2. ಅಲುಗಾಡಿಸುತ್ತಿರುವ, ಚಲಿಸುವಂತೆ ಮಾಡುತ್ತಿರುವ.

**प्रणर्तित ಪ್ರಣರ್ತಿತ** (वि०) 1. ಅಲುಗಾಡಿಸಲ್ಪಟ್ಟ, ಅಲ್ಲಾಡಿಸಲ್ಪಟ್ಟ. प्र+नृती (गात्रविक्षेपे)+णिच् "क्तः" (३-२-१०२)। "प्रणर्तितस्मेरसरोजराजिः पुरः परीरम्भमिलन्महोर्मिः" कुमा० १३-३२। 2. ಕುಣಿದಾಡಿಸಲ್ಪಟ್ಟ.

**प्रणव ಪ್ರಣವ** (पुं०) 1. ಓಂಕಾರ, ಮಂತ್ರಗಳ ಪ್ರಾರಂಭದಲ್ಲಿ ವೇದಾಧ್ಯಯನದ ಪ್ರಾರಂಭದಲ್ಲಿ ಮತ್ತು ಕೊನೆಯಲ್ಲಿ ಹೇಳಬೇಕಾದ ಶಬ್ದ. प्रकर्षेण नूयते—प्र+णु (स्तुतौ) "अप्" (३-३-५७)। ब्रह्मविष्णुमहेश्वररूपत्वात् प्रणम्यते—प्र + णम (प्रह्वत्वे शब्दे) कर्म० "घञ्" (३-३-१९) वा। पृषो०। "ओंकारः प्रणवस्तारो वेदादिर्वर्तुलो ध्रुवः। त्रैगुण्यं त्रिगुणो ब्रह्म सत्यो मन्त्रादिरव्ययः"। ಮಂತ್ರಗಳ ಆದಿ ಮತ್ತು ವೇದಾಧ್ಯಯನದ ಆದಿ ಮತ್ತು ಅಂತ್ಯಗಳಲ್ಲಿ ಪ್ರಣವೋಚ್ಚಾರಣದಿಂದ ಬ್ರಹ್ಮ ವಿಷ್ಣು ಮಹೇಶ್ವರರ ನಾಮಸಂಕೀರ್ತನವಾಗುವುದು. "अकारो विष्णुरुद्दिष्टः उकारस्तु महेश्वरः। मकारेणोच्यते ब्रह्मा प्रणवेन त्रयो मताः"। "अकारेण जगत्पाता संहर्ता स्यादुकारतः। मकारेण जगत्स्रष्टा प्रणवार्थ उदाहृतः"। ಓಂಕಾರವು ಪರಮಾತ್ಮನ ಸ್ವರೂಪ. ಸಕಲವೂ ಪರಮಾತ್ಮನಿಂದಲೇ ಉತ್ಪನ್ನವಾದುವು. ಎಲ್ಲವೂ ಪರಮಾತ್ಮನಿಗೆ ಶೇಷಭೂತವಾದುವು. ಸರ್ವವೂ ಪರಮಾತ್ಮನ ಶರೀರವಾಗಿ ಅವನಲ್ಲೇ ಸೇರಿಕೊಂಡಿರುವುವು. ಆದುದರಿಂದ ಸರ್ವಪ್ರಕಾರದಿಂದಲೂ ಸರ್ವವೂ ಪರಮಾತ್ಮನ ಸ್ವರೂಪವಾಗಿವೆ. ಹೀಗೆ ಪರಮಾತ್ಮನು ಸರ್ವಭೂತಾತ್ಮಕನಾಗಿರುವನು. "रसोऽहमप्सु कौन्तेय प्रभास्मि शशिसूर्ययोः। प्रणवः सर्ववेदेषु शब्दः खे पौरुषं नृषु॥ पुण्यो गन्धः पृथिव्यां च तेजश्चास्मि विभावसौ। जीवनं सर्वभूतेषु तपश्चास्मि तपस्विषु" ಇತ್ಯಾದಿ गीता ७। ಪ್ರಣವಾಕ್ಷರವು ಮೋಕ್ಷಪ್ರದವಾದುದು. "ओमित्येकाक्षरं ब्रह्म व्याहरन् मामनुस्मरन्। यः प्रयाति त्यजन् देहं स याति परमां गतिम्" गीता ८-१३। "इत्येतदक्षरं ब्रह्म परमोङ्कारसंज्ञितम्। यस्तं वेद नरः सम्यक् तथा ध्यायति वा पुनः। संसारचक्रमुत्सृज्य त्यक्तत्रिविधबन्धनः। प्राप्नोति ब्रह्मनिलयं परम परमात्मनि" मार्क०। 2. ವಿಷ್ಣು, ಪರಮಾತ್ಮ. प्राणान् सर्वान् (परमात्मनि) प्रणामयति इति प्रणवः। प्र + णु (स्तुतौ) अन्तर्भावितण्यर्थः। ततः "अच्" (३-१-१३४)। ಪ್ರಣವಾಕ್ಷರಗಳಿಂದ ಆತ್ಮೋಜ್ಜೀವನಸಂಬಂಧವನ್ನು ಸ್ಮರಣೆಗೆ ತಂದು (ಜ್ಞಾಪಿಸಿ) ಎಲ್ಲರೂ ತನಗೆ ನಮಸ್ಕರಿಸಿ ಆಶ್ರಯಿಸುವಂತೆ ಮಾಡುವುದರಿಂದ ಪರಮಾತ್ಮನು ಪ್ರಣವನು. "आत्मोज्जीवनसम्बन्धमुद्बोध्य प्रणवेन वै। पादारविन्दयोस्तान् यः प्रणामयति नित्यशः। प्रणवः स समाख्यातः सप्तार्णो मोक्षदो मनुः" इति निरुक्तिः। "प्रणवः परमात्मैषः ओं तत्सदिति विश्रुतः" इति च। "प्राणदः प्रणवः पणः" वि० स०।

**प्रणश्यत् ಪ್ರಣಶ್ಯತ್** (वि०) 1. ನಾಶಹೊಂದುತ್ತಿರುವ. 2. ಅದೃಶ್ಯವಾಗುತ್ತಿರುವ, ದೃಷ್ಟಿಗೆ ಗೋಚರವಾಗದೆ ಇರುತ್ತಿರುವ. प्र+णश (अदर्शने) "शतृ" (३-२-१२४)। "प्रणश्यन्नपि नाशक्नोदत्येतुं बाणगोचरम्। त्वयैवोक्तं महामायो मारीचो रामहस्तिनः" भट्टि० ९-१३४।

**प्रणष्ट ಪ್ರಣಷ್ಟ** (वि०) 1. ನಷ್ಟವಾದ, ಕಳೆದುಹೋದ. प्र+णश (अदर्शने) "क्तः" (३-४-७२)। "प्रणष्टाधिगतं द्रव्यं तिष्ठेद्युक्तैरधिष्ठितम्" मनु० ८-३४। 2. ನಾಶಹೊಂದಿದ, ಕಣ್ಮರೆಯಾದ. "विद्युत्प्रणाशं स वरं प्रणष्टो यदोर्ध्वशोषं तृणवद्विशुष्कः" भट्टि० ३-९८।

**प्रणाद ಪ್ರಣಾದ** (पुं०) 1. ಪ್ರೀತಿಯಿಂದ ಮಾತಾಡುವ ಶಬ್ದ, ಅನುರಾಗದಿಂದುಂಟಾದ ಸೀತ್ಕಾರ. प्रकृष्टो नादः। प्र + णद (अव्यक्ते शब्दे) भावे "घञ्" (३-३-१८)। "प्रणादस्तु शब्दः स्यादनुरागजः" अम०। 2. ಗಟ್ಟಿಯಾದ ಶಬ್ದ, ದೊಡ್ಡ ಶಬ್ದ, ಎತ್ತರದ ಶಬ್ದ. "अवलोकनाय सुरविद्विषां द्विषः पटहप्रणादविहितोपहूतयः" माघ० १३-३०।

**प्रणाम ಪ್ರಣಾಮ** (पुं०) 1. ನಮಸ್ಕಾರ, ವಿನಯದಿಂದ ಕೈ ಮುಗಿಯುವುದು, ಭಕ್ತಿಯಿಂದ ತಾನು ಚಿಕ್ಕವನೆಂದು ತಿಳಿಸುವ ಕೈಗಳ (ಅಂಜಲಿಯ) ಜೋಡಣೆ. प्र + णम (प्रह्वत्वे शब्दे) भावे "घञ्" (३-३-१८)। "कृतप्रणामस्य महीं महीभुजे जितां सपत्नेन निवेदयिष्यतः" किरा० १-२। "मूर्ध्ना प्रणामं वृषभध्वजस्य" कुमा० ३-६२। 2. ಅಷ್ಟಾಂಗಗಳಿಂದ ಕೂಡಿದ ನಮಸ್ಕಾರ; ಭುಜಗಳು, ಪಾದಗಳು, ಮಂಡಿಗಳು, ವಕ್ಷಸ್ಸು, (ಎದೆ),

ಲಲಾಟ (ಹಣೆ), ದೃಷ್ಟಿ (ಕಣ್ಣು), ಮನಸ್ಸು ಮತ್ತು ಮಾತು ಈ ಎಂಟು ಅಂಗಗಳಿಂದ ಮಾಡುವ ನಮಸ್ಕಾರವು ಸಾಷ್ಟಾಂಗ ಪ್ರಣಾಮ. "दोर्भ्यां पद्भ्यां च जानुभ्यामुरसा शिरसा दृशा। मनसा वचसा चैव प्रणामोऽष्टाङ्ग ईरितः" वैद्यना० आह्निक०। ಪ್ರಣಾಮವು (1) ಭಕ್ತಿಯಿಂದ ಕೈ ಜೋಡಿಸಿ ಮುಗಿಯುವುದು (2) ಅಷ್ಟಾಂಗ ಸಹಿತ ಪ್ರಣಾಮ (3) ಪಂಚಾಂಗ ಪ್ರಣಾಮ ಮತ್ತು (4) ಅಭಿವಾದನಗಳೆಂದು ನಾಲ್ಕು ವಿಧ. ಒಂದು ಕೈಯಿಂದ ನಮಸ್ಕರಿಸುವುದು ದೋಷವಾಗುವುದು. "एकहस्तप्रणामश्च एकं वापि प्रदक्षिणम्। अकाले दर्शनं विष्णोर्हन्ति पुण्यं पुराकृतम्" तन्त्रसा०। ಪ್ರಣಾಮವು (1) ಕಾಯಿಕ (ಸಾಷ್ಟಾಂಗ ಪ್ರಣಾಮ.) (2) ವಾಚಿಕ (ಮಂತ್ರೋಚ್ಚಾರಣಪೂರ್ವಕ ಮಾಡುವ ನಮಸ್ಕಾರ) ಮತ್ತು (3) ಮಾನಸ (ಭೂಸ್ಪರ್ಶ ಮಾಡದೆ ಕೇವಲ ಕೈ ಜೋಡಿಸಿ ಮಾಡುವ ನಮಸ್ಕಾರ) ಎಂದು ಮತ್ತೆ ಮೂರು ವಿಧ. ಇವುಗಳಲ್ಲಿ ಮೊದಲನೆಯದು ಉತ್ತಮ. ಎರಡನೆಯದು ಮಧ್ಯಮ. ಮೂರನೆಯದು ಅಧಮ. "प्रसार्य पादौ हस्तौ च पतित्वा दण्डवत् क्षितौ। जानुभ्यामवनीं गत्वा शिरसाऽऽस्पृश्य मेदिनीम्। क्रियते यो नमस्कारः उत्तमः कायिकः स्मृतः" ಇತ್ಯಾದಿ. कालिकापु०। "विष्णोर्दण्डप्रणामार्थं भक्तेन पतता भुवि। पातितं पातकं कृत्स्नं नोत्तिष्ठति पुनः सह"।

**प्रणाय्य ಪ್ರಣಾಯ್ಯ** (वि०) 1. ಚೋರ, ಕಳ್ಳ, ವಿಶ್ವಾಸಕ್ಕೆ ಅರ್ಹನಲ್ಲದವನು. 2. ವಿರಕ್ತ, ಸುಖದಲ್ಲಿ ಅಪೇಕ್ಷೆಯಿಲ್ಲದವನು. ವಿಶ್ವಾಸಕ್ಕೆ ಯೋಗ್ಯವಾಗಿರುವುದು ಮತ್ತು ಸುಖಾಪೇಕ್ಷೆ ಇವು ಸಂಮತವಾಗುವುದು. ಇಂತಹ ಸಂಮತಿಯಿಲ್ಲದ ವಿಷಯಗಳಲ್ಲಿ ಈ ಪ್ರಯೋಗ. प्र + णीञ् (प्रापणे) "ण्यत्" (३-१-१२८)। "प्रणाय्योऽसंमतौ" पा० सू०। "न प्रणाय्यो जनः कश्चित् निकाय्यं तेऽधितिष्ठति। देवकार्यविघाताय धर्मद्रोही महोदये" भट्टि० ६-६६। ಸಂಮತಿಯಿರುವಲ್ಲಿ प्रणेयः ಎಂದಾಗುವುದು.

**प्रणाल ಪ್ರಣಾಲ** (पुं०) 1. ನೀರು ಹರಿಯುವ ಮಾರ್ಗ, ಕಾಲುವೆ ಮೊದಲಾದುದು. प्रणल्यते जलादिर्निःसार्यतेऽनेन — प्र + णल (गन्धे बन्धने च) "घञ्" (३-३-१२१)। स्त्रियां "ङीष्" (४-१-४१)। **–णाली –ಣಾಲೀ.** "उच्चैरधः पातिपयोमुचोऽपि समूहमूहुः पयसां प्रणाल्यः" माघ० ३-४४। 2. ಪರಂಪರೆ, ಎಡೆಬಿಡದಿರುವಿಕೆ, ಅವಿಚ್ಛಿನ್ನವಾಗಿರುವಿಕೆ.

**प्रणाश ಪ್ರಣಾಶ** (पुं०) 1. ನಾಶವಾಗುವುದು, ಕಣ್ಣಿಗೆ ಕಾಣಿಸದೆ ಹೋಗುವುದು. प्र + णश (अदर्शने) "घञ्" (३-३-१८)। "ध्रुवं प्रणाशः प्रहितस्य पत्रिणः शिलोच्चये तस्य विमार्गणं नयः" किरा० १४-९। 2. ನಾಶ, ಅಳಿವು, ಮರಣ. "भर्तुः प्रणाशादथ शोचनीयं दशान्तरं तत्र समं प्रपन्ने" रघु० १४-१।

**प्रणाशन ಪ್ರಣಾಶನ** (न०) 1. ನಾಶಮಾಡುವುದು. प्र+णश (अदर्शने) + णिच् भावे "ल्युट्" (३-३-११५)। "स चापमुत्सृज्य विवृद्धमत्सरः प्रणाशनाय प्रबलस्य विद्विषः" रघु० ३-६०। (वि०) 2. ನಾಶಪಡಿಸುವ, ಇಲ್ಲದಂತೆ ಮಾಡುವ, ಹಾಳುಮಾಡುವ. प्र+णश+णिच् कर्त० "ल्युः" (३-१-१३४)।

**प्रणाशयत् ಪ್ರಣಾಶಯತ್** (वि०) ನಾಶಪಡಿಸುತ್ತಿರುವ, ಇಲ್ಲದಂತೆ ಮಾಡುತ್ತಿರುವ. प्र + णश (अदर्शने) + णिच् "शतृ" (३-२-१२४)। स्त्रियां "ङीप्" (४-१-६)। **–यन्ती –ಯಂತೀ.**

**प्रणाशित ಪ್ರಣಾಶಿತ** (वि०) ನಾಶಪಡಿಸಲ್ಪಟ್ಟ. प्र+णश (अदर्शने) + णिच् "क्तः" (३-२-१०२)।

**प्रणाश्य ಪ್ರಣಾಶ್ಯ** (वि०) ನಾಶಪಡಿಸಲ್ಪಡುವ. प्र + णश (अदर्शने) + णिच् "ण्यत्" (३-१-१२४)।

**प्रणिगदत् ಪ್ರಣಿಗದತ್** (वि०) ಚೆನ್ನಾಗಿ ಹೇಳುತ್ತಿರುವ, ವಿವರಿಸಿ ಹೇಳುತ್ತಿರುವ. प्र + नि + गद (व्यक्तायां वाचि) "शतृ" (३-२-१२४)। "समय एव करोति बलाबलं प्रणिगदन्त इतीव शरीरिणाम्" माघ० ६-४४। स्त्रियां "ङीप्" (४-१-६)। **–गदन्ती –ಗದಂತೀ.**

**प्रणिघ्नत् ಪ್ರಣಿಘ್ನತ್** (वि०) ಹೊಡೆಯುತ್ತಿರುವ, ಕೊಲ್ಲಲು ಯತ್ನಿಸುತ್ತಿರುವ. प्र+नि+हन (हिंसागत्योः) "शतृ" (३-२-१२४)। "प्रण्यगादीत् प्रणिघ्नन्तं घनः प्रणिनदन्निव" भट्टि० ९-९९। स्त्रियां "ङीप्" (४-१-६)। **–घ्नती –ಘ್ನತೀ.**

**प्रणिदधत् ಪ್ರಣಿದಧತ್** (वि०) 1. ಕೆಳಗೆ ಇಡುತ್ತಿರುವ, ಇರಿಸುತ್ತಿರುವ. प्र + नि + डुधाञ् (धारणपोषणयोः) "शतृ" (३-२-१२४)। 2. ಸಾವಧಾನವಾಗಿ ನೋಡುತ್ತಿರುವ, ಯೋಚಿಸಿ ನೋಡುತ್ತಿರುವ. "मृदुसुरभिसुजातबन्धुराभिः प्रणिदधदग्रनिबद्धपङ्कजाभिः" याद० २४-५२। स्त्रियां "ङीप्" (४-१-६)। **–दधती –ದಧತೀ.**

**प्रणिधान ಪ್ರಣಿಧಾನ** (न०) 1. ಪ್ರಯತ್ನ. प्रणिधीयते— प्र + नि + डुधाञ् (धारणपोषणयो:) "ल्युट्" (३-३-११५)। "प्रणिधानेन धैर्येण रूपेण वचसा च मे। मन: प्रविष्टो देवर्षे गुणकेश्याः पतिर्वरः" भा० उद्योग० १०३-२१। 2. ಸಮಾಧಿ, ಧ್ಯಾನ, ಯೋಗಶಾಸ್ತ್ರೋಕ್ತವಾದ ಏಕವಸ್ತುವಿಷಯಕ ನಿರಂತರ ಚಿಂತನೆ. "सोऽपश्यत् प्रणिधानेन सन्ततेः स्तम्भकारणम्" रघु० १-७४। 3. ಭಕ್ತಿ. "ईश्वरप्रणिधानाद्वा" पा० यो० सू० १-२३। 4. ಚಿತ್ತೈಕಾಗ್ರ್ಯ. 5. ಈಶ್ವರನಲ್ಲಿ ಸಕಲ ಕರ್ಮಗಳನ್ನೂ ಅರ್ಪಿಸುವುದು, ಸರ್ವಕರ್ಮಫಲತ್ಯಾಗ. 6. ಅಂತಹ ಕರ್ಮಫಲಗಳನ್ನು ಅಪೇಕ್ಷಿಸದಿರುವಿಕೆ, ಫಲಸಂನ್ಯಾಸ. "तपःस्वाध्यायेश्वरप्रणिधानानि क्रियायोगः" पा० यो० सू० २-१। 7. ಪ್ರವೇಶ, ಒಳಗೆ ಹೋಗುವುದು. "बहुशः क्षता हीनशस्त्रप्रणिधानेनापविद्धा" सुश्रुत० शारीर० ८।

**प्रणिधि ಪ್ರಣಿಧಿ** (पुं०) 1. ಗೂಢಚಾರ, ರಹಸ್ಯಕಾರ್ಯದಲ್ಲಿ ನಿಯುಕ್ತನಾದವನು. प्रणिधीयते—प्र+नि+डुधाञ् (धारणपोषणयो:) "कि:" (३-३-९२)। "अद्यापि तस्योशनसापि नीतिं प्रयुक्तरागप्रणिधिर्द्विषस्ते" कुमा० ३-६। "श्रुतं मया मत्प्रणिधिः स वर्गः" ३-१७। 2. ಅನುಚರ, ಸೇವಕ, ಆಳು. 3. ಯಾಚನೆ, ಬೇಡುವುದು. 4. ಅವಧಾನ.

**प्रणिनंसा ಪ್ರಣಿನಂಸಾ** (स्त्री०) ನಮಸ್ಕರಿಸಲು ಅಪೇಕ್ಷೆ. प्र + णम (प्रह्वत्वे शब्दे) +सन् "अ:" (३-३-१०२)।

**प्रणिनंसु ಪ್ರಣಿನಂಸು** (वि०) ನಮಸ್ಕರಿಸಲು ಅಪೇಕ್ಷಿಸುವ. प्रणन्तुमिच्छुः—प्र+णम (प्रह्वत्वे शब्दे) +सन् "उ:" (३-२-१६८)। "प्रणिनंसुरिवाबोधि पर्यस्तशकटोपम:" याद० २२-२०४।

**प्रणिनदत् ಪ್ರಣಿನದತ್** (वि०) ಗಟ್ಟಿಯಾಗಿ ಕೂಗುತ್ತಿರುವ, ಗರ್ಜಿಸುತ್ತಿರುವ. प्र + नि + णद (अव्यक्ते शब्दे) "शतृ" (३-२-१२४)। "प्रण्यगादीत् प्रणिघ्नन्तं घन: प्रणिनदन्निव" भट्टि० ९-९१। स्त्रियां "ङीप्" (४-१-६)। -णिनदन्ती -ಣಿನದಂತೀ.

**प्रणिपतत् ಪ್ರಣಿಪತತ್** (वि०) 1. ನಮಸ್ಕರಿಸುತ್ತಿರುವ. प्र + नि + पत्लृ (गतौ) "शतृ" (३-२-१२४)। 2. ಶರಣಾಗತನಾಗುತ್ತಿರುವ.

**प्रणिपतन ಪ್ರಣಿಪತನ** (न०) 1. ನಮಸ್ಕರಿಸುವುದು. प्र + नि + पत्लृ (गतौ) भावे "ल्युट्" (३-३-११५)। 2. ಕಾಲಿಗೆ ಬಿದ್ದು ಶರಣಾಗತನಾಗುವುದು.

**प्रणिपात ಪ್ರಣಿಪಾತ** (पुं०) 1. ಪ್ರಣಾಮ, ನಮಸ್ಕಾರ. प्र+नि+पत्लृ (गतौ) "घञ्" (३-३-१८)। "तस्याः सखीभ्यां प्रणिपातपूर्वं स्वहस्तलून: शिशिरात्ययस्य" कुमा० ३-६१। 2. ಕಾಲಿಗೆ ಬಿದ್ದು ಶರಣಾಗತನಾಗುವುದು. "प्रणिपातप्रतीकारः संरम्भो हि महात्मनाम्" रघु० ४-६४।

**प्रणिहित ಪ್ರಣಿಹಿತ** (वि०) 1. ಇಡಲ್ಪಟ್ಟ, ಇರಿಸಲ್ಪಟ್ಟ. प्र+नि+डुधाञ् (धारणपोषणयो:) "क्त:" (३-२-१०२)। 2. ನೀಡಲ್ಪಟ್ಟ, ಮುಂದಕ್ಕೆ ಚಾಚಲ್ಪಟ್ಟ. "मामाकाशप्रणिहितभुजं निर्दयाश्लेषहेतोर्लब्धायास्ते कथमपि मया स्वप्नसन्दर्शनेषु" मेघ० २-४३। 3. ಏಕಾಗ್ರತೆಯಿಂದ ಇಡಲ್ಪಟ್ಟ, ಒಂದೇ ವಿಷಯದಲ್ಲಿ ಇರಿಸಲ್ಪಟ್ಟ. "प्रणिहितधियां त्वत्संपृक्ते वृषाद्रिशिखामणौ प्रसृमरसुधाधाराकारा प्रसीदति भावना" दयाश० ८०। 4. ಪ್ರಾಪ್ತವಾದ, ಹೊಂದಲ್ಪಟ್ಟ, ಪಡೆಯಲ್ಪಟ್ಟ. 5. ಇಡಲ್ಪಟ್ಟ, ಬೀರಲ್ಪಟ್ಟ (ದೃಷ್ಟಿ). "सा सीतामङ्कमारोप्य भर्तृप्रणिहितेक्षणाम्" रघु० १५-८४। "अथ प्रणिहितं न्यस्ते प्राप्तेऽपि च समाहिते" मेदि०। 6. ಸಾವಧಾನವಾದ ಮನಸ್ಸುಳ್ಳ, ಎಚ್ಚರದಿಂದ ಕೂಡಿದ. "ततः प्रणिहितः स्वार्थे" भट्टि० ९-९१।

**प्रणी ಪ್ರಣೀ** (वि०) ಉಂಟುಮಾಡುವ, ಏರ್ಪಡಿಸುವ. प्रणयति—प्र + णीञ् (प्रापणे) "क्विप्" (३-२-६१)। "सायन्तनीं तिथिप्रण्यः पङ्कजानां दिवातनीम्" भट्टि० ५-६५।

**प्रणीत ಪ್ರಣೀತ** (पुं०) 1. ಮಂತ್ರದಿಂದ ಸಂಸ್ಕರಿಸಲ್ಪಟ್ಟ ಅಗ್ನಿ. प्रकर्षं नीत:—प्र + णीञ् (प्रापणे) "क्त:" (३-२-१०२)। (वि०) 2. ಸರಿಯಾಗಿ ಒಯ್ಯಲ್ಪಟ್ಟ. प्रकर्षेण नीतम्। 3. ಮಾಡಲ್ಪಟ್ಟ, ನೆರವೇರಿಸಲ್ಪಟ್ಟ. "असेवतामुं मधुगन्धवारिणि प्रणीतलीलाप्लवनो वनानिल:" नैष० १-१०६। 4. ಸರಿಯಾದ ಪಾಕದಿಂದ ರಸಯುಕ್ತವಾದ ಅಡಿಗೆ. प्रणीयते स्म—प्र+णीञ् (प्रापणे) कर्मं० "क्त:" (३-२-१०२)। "प्रणीतमुपसंपन्नम्" अम०। 5. ರಚಿಸಲ್ಪಟ್ಟ, ನಿರ್ಮಿಸಲ್ಪಟ್ಟ, ಮಾಡಲ್ಪಟ್ಟ. "उत्तरं रामचरितं तत्प्रणीतं प्रयोक्ष्यते" उ० रा० १-२। 6. ಏರ್ಪಡಿಸಲ್ಪಟ್ಟ, ವಿಧಿಸಲ್ಪಟ್ಟ. "नृपस्य वर्णाश्रमपालनं यत्स एव धर्मो मनुना प्रणीतः" रघु० १४-६७। 7. ಪ್ರವೇಶಗೊಳಿಸಲ್ಪಟ್ಟ, ಒಳಕ್ಕೆ ತರಲ್ಪಟ್ಟ. "प्रणीतः संस्कृताग्नौ ना यज्ञपात्रान्तरे स्त्रियाम्। त्रिषु क्षिप्तोप-

संपन्नविहितेषु प्रवेशिते" मेदि०। (स्त्री०) –ता –ತಾ. ಯಾಗಸಂಬಂಧವಾದ ಒಂದು ಪಾತ್ರೆ.

**प्रणीतवत् ಪ್ರಣೀತವತ್** (वि०) 1. ಮಾಡಿದವನು. 2. ವಿಧಿಸಿದವನು. 3. ರಚಿಸಿದವನು. 4. ಒಯ್ದವನು. 5. ತಯಾರಿಸಿದವನು. प्र + णीञ् (प्रापणे) "क्तवतु:" (३-२-१०२)। "जगज्जयं तेन च कोशमक्षयं प्रणीतवान् शैशवशेषवानयम्" नैष० १-१९।

**प्रणुत ಪ್ರಣುತ** (वि०) ಸ್ತುತಿಸಲ್ಪಟ್ಟ, ಹೊಗಳಲ್ಪಟ್ಟ, ಕೊಂಡಾಡಲ್ಪಟ್ಟ. प्र+णु (स्तुतौ) "क्त:" (३-२-१०२)।

**प्रणुदत् ಪ್ರಣುದತ್** (वि०) ಮುಂದಕ್ಕೆ ತಳ್ಳುತ್ತಿರುವ, ಮುಂದಕ್ಕೆ ನೂಕುತ್ತಿರುವ. प्र + णुद (प्रेरणे) "शतृ" (३-२-१२४)। स्त्रियां "ङीप्" (४-१-६)। –दती –ದತೀ, –दन्ती –ದನ್ತೀ. "शानच्" (३-२-१२४)। –णुदमान: –ಣುದಮಾನಃ.

**प्रणुद्यमान ಪ್ರಣುದ್ಯಮಾನ** (वि०) ಮುಂದಕ್ಕೆ ತಳ್ಳಲ್ಪಡುತ್ತಿರುವ, ಮುಂದಕ್ಕೆ ನಡೆಸಲ್ಪಡುತ್ತಿರುವ.

**प्रणुन्न ಪ್ರಣುನ್ನ** (वि०) ಮುಂದಕ್ಕೆ ತಳ್ಳಲ್ಪಟ್ಟ, ಮುಂದಕ್ಕೆ ನೂಕಲ್ಪಟ್ಟ. प्र + णुद (प्रेरणे) "क्त:" (३-२-१०२)। निष्ठातकारस्य वा न:। पक्षे **प्रणुत्तम् ಪ್ರಣುತ್ತಮ್.** "दयितावलोकनविकसन्नयनप्रसरप्रणुन्नमिव वारिरुहम्" माघ० ९-७१।

**प्रणेजक ಪ್ರಣೇಜಕ** (वि०) 1. ತೊಳೆಯುವ, ಶುದ್ಧ ಮಾಡುವ. 2. ಪೋಷಿಸುವ, ಸಾಕುವ. प्र + णिजिर् (शौचपोषणयो:) "ण्वुल्" (३-१-१३३)।

**प्रणेजन ಪ್ರಣೇಜನ** (न०) 1. ತೊಳೆಯುವುದು, ಶುದ್ಧ ಮಾಡುವುದು. प्र + णिजिर् (शौचपोषणयो:) "ल्युट्" (३-३-११५)। 2. ಪೋಷಿಸುವುದು. 3. ತೊಳೆಯುವ ನೀರು, ಶುದ್ಧಮಾಡುವ ಜಲ. प्र + णिजिर् कर० "ल्युट्" (३-३-११७)। 4. ಪೋಷಿಸುವ, ಸಾಕುವ. कर्त० "ल्यु:" (३-१-१३४)।

**प्रणेतृ ಪ್ರಣೇತೃ** (वि०) 1. ಗ್ರಂಥವನ್ನು ನಿರ್ಮಿಸುವವನು, –ರಚಿಸುವವನು. प्र + णीञ् (प्रापणे) "तृच्" (३-१-१३३)। 2. ನಾಯಕ, ಯಜಮಾನ, ಮುಂದಾಳು, 3. ಸಾರಥಿ, ರಥವನ್ನು ನಡೆಸುವವನು. "तूर्णं प्रणेत्रा कृतनादमुच्चकै: प्रणोदितं वेसरयुग्ममध्वनि" माघ० १२-१९। स्त्रियां "ङीप्" (४-१-६)। –त्री –ತ್ರೀ.

**प्रणेय ಪ್ರಣೇಯ** (वि०) ವಶಪಡಿಸಿಕೊಳ್ಳಲು ಶಕ್ಯನಾದ, ಅಧೀನನಾಗಿರುವ. प्रणेतुं शक्य: — प्र + णीञ् (प्रापणे) "यत्" (३-१-९७)।

**प्रणोद ಪ್ರಣೋದ** (पुं०) ಮುಂದಕ್ಕೆ ತಳ್ಳುವುದು, ಮುಂದಕ್ಕೆ ನೂಕುವುದು. प्र + णुद (प्रेरणे) "घञ्" (३-३-१८)। भावे "ल्युट्" (३-३-११५)। **प्रणोदनम् ಪ್ರಣೋದನಮ್.**

**प्रणोदित ಪ್ರಣೋದಿತ** (वि०) ಮುಂದಕ್ಕೆ ತಳ್ಳಲ್ಪಟ್ಟ, ಮುಂದಕ್ಕೆ ಅಟ್ಟಲ್ಪಟ್ಟ, ಮುಂದಕ್ಕೆ ನಡೆಸಲ್ಪಟ್ಟ. प्र+णुद (प्रेरणे) + णिच् "क्त:" (३-२-१०२)। "तूर्णं प्रणेत्रा कृतनादमुच्चकै: प्रणोदितं वेसरयुग्ममध्वनि" माघ० १२-१९।

**प्रतत ಪ್ರತತ** (वि०) 1. ವಿಸ್ತಾರವಾಗಿ ಹರಡಿರುವ. प्र+तनु (विस्तारे) "क्त:" (३-४-७२)। 2. ವಿಸ್ತಾರವಾದ, ಅಗಲವಾದ.

**प्रतति ಪ್ರತತಿ** (स्त्री०) 1. ಲತೆ, ಬಳ್ಳಿ. प्र+तनु (विस्तारे) कर्त० "क्तिच्" (३-३-१७४)। 2. ವಿಸ್ತಾರಗೊಳ್ಳುವುದು, ಪ್ರಸರಣ, ವ್ಯಾಪನೆ. प्र + तनु (विस्तारे) भावे "क्तिन्" (३-३-९४)। "प्रतति: विस्तृतिर्लता" मेदि०।

**प्रतन ಪ್ರತನ** (वि०) ಪುರಾತನವಾದ, ಪ್ರಾಚೀನವಾದ, ಹಳೆಯದಾದ. प्र "तनप्" (वा० ५-४-२५)।

**प्रतनु ಪ್ರತನು** (वि०) 1. ಬಹಳ ಸಣ್ಣದಾಗಿರುವ, ಬಹಳ ತೆಳುವಾಗಿರುವ. प्रकृष्ट: तनु:। "आकृष्टप्रतनुवपुर्लतैस्तरद्भिस्तस्याम्भस्तदथ सरोमहार्णवस्य" माघ० ८-२५। "शुचि: सौघोत्सङ्ग: प्रतनु वसनं पङ्कजदृश:" भर्तृ० २-८८। 2. ಬಹಳ ಚಿಕ್ಕದಾಗಿರುವ, ಅಲ್ಪಪ್ರಮಾಣದ. "उत्पश्यामि प्रतनुषु नदीवीचिषु भ्रूविलासान्" मेघ० २-४१। 3. ಅಲ್ಪವಾದ, ಕೊಂಚವಾದ. (अव्य०) 4. ಅಲ್ಪವಾಗಿ, ಕೊಂಚವಾಗಿ. "प्रतनूल्लसिताचिरद्युत: शरदं प्राप्य विखण्डितायुधा:" माघ० १६-३१।

**प्रतपन ಪ್ರತಪನ** (न०) ಕಾಯಿಸುವುದು, ಬಿಸಿಯಾಗಿ ಮಾಡುವುದು. प्र + तप (सन्तापे) भावे "ल्युट्" (३-३-११५)।

**प्रतप्त ಪ್ರತಪ್ತ** (वि०) 1. (ಬೆಂಕಿಯಲ್ಲಿ) ಕಾಯಿಸಲ್ಪಟ್ಟ. प्र + तप (सन्तापे) "क्त:" (३-२-१०२)। "प्रतप्तचामीकरभासुरेण दिश: प्रकाशेन पिशङ्गयन्त्य:" किरा० १६-४०। 2. ಸುಡಲ್ಪಟ್ಟ. 3. (ಬಿಸಿಲಲ್ಲಿ) ಕಾಯಿಸಲ್ಪಟ್ಟ. "उद्धृतमुच्चैर्ध्वजिनीभिरंशुभि: प्रतप्तमभ्यर्णतया विवस्वत:" माघ० १२-६६। 4. ಕುದಿಸಲ್ಪಟ್ಟ. "प्रतप्तस्येव सहसा सर्पिषस्तोयबिन्दव:" माघ० २-५५।

**प्रतल ಪ್ರತಲ** (पुं०) 1. ಬೆರಳುಗಳನ್ನು ನೀಡಿ ಬಿಚ್ಚಿದ ಹಸ್ತ. -ಅಂಗೈ. प्रकृष्टं तलमस्य। 2. ಸಪ್ತಪಾತಾಳ ಲೋಕಗಳಲ್ಲೊಂದು.

**प्रतान ಪ್ರತಾನ** (नं०) 1. ಲತೆಯ ಕುಡಿ, ಬಳ್ಳಿಯ ಹಬ್ಬು. प्र + तनु (विस्तारे) "घञ्" (३-३-१८)। "लताप्रतानोद्ग्रथितैः सकेशैरधिज्यधन्वा विचचार दावम्" रघु० २-८। 2. ತಂತುಯುಕ್ತವಾದ ಬಳ್ಳಿ, ನೆಲದಲ್ಲೇ ಹರಡುವ ಕುಂಬಳ ಸೋರೆ ಮುಂತಾದ ಗಿಡ. "गुच्छगुल्मं तु विविधं तथैव तृणजातयः। बीजकाण्डरुहाण्येव प्रताना वल्ल्य एव च" मनु० १-४८। 3. ವಿಸ್ತಾರ, ಪ್ರಸರಣ, ಹರಡುವಿಕೆ, ವ್ಯಾಪನೆ. "दूर्वाप्रतानसहजास्तरणेषु भेजे निद्रासुखं वसनसद्मसु राजदाराः" माघ० ५-२२।

**प्रतानिनी ಪ್ರತಾನಿನೀ** (स्त्री०) ಲತೆ, ಬಳ್ಳಿ.

**प्रताप ಪ್ರತಾಪ** (पुं०) 1. ತಾಪ, ಬಿಸಿ, ಕಾವು. प्र + तप (सन्तापे) "घञ्" (३-३-१८)। "यथा प्रह्लादनाच्चन्द्रः प्रतापात्तपनो यथा" रघु० ४-१२। 2. ಪ್ರಭಾವ, ತೇಜಸ್ಸು. "प्रतापोऽग्रे ततः शब्दः परागस्तदनन्तरम्" रघु० ४-३०। 3. ಆತಪ, ಬಿಸಿಲು. "प्रतापस्तस्य भानोश्च युगपद्व्यानशे दिशः" रघु० ४-१५। 4. ಪೌರುಷ, ಶಕ್ತಿ, ಪರಾಕ್ರಮ. "सर्वः प्रायो भजति विकृतिं भिद्यमाने प्रतापे" मन्वी० २-४। 5. ಯಶಸ್ಸು, ಕೀರ್ತಿ. 6. ಪ್ರಕಾಶ, ಬೆಳಕು. "नियतविषयवृत्तेरप्यनल्पप्रतापक्षतसकलविपक्षस्तेजसः स स्वभावः" माघ० ११-५९।

**प्रतापन ಪ್ರತಾಪನ** (पुं०) 1. ವಿಷ್ಣು. स्वतेजोभिः जगत् प्रतापयति — प्र + तप (सन्तापे) + णिच् "ल्युः" (३-१-१३४)। "तेजोभिरापूर्य जगत् समग्रं भासस्तवोग्राः प्रतपन्ति विष्णो" गीता ११-३०। ಸೂರ್ಯಾದಿಗಳ ಮೂಲಕ ಜಗತ್ತನ್ನು ತಾಪಗೊಳಿಸುವುದರಿಂದ ವಿಷ್ಣುವು ಪ್ರತಾಪನನು. (नं०) 2. ಕಾಯಿಸುವಿಕೆ, ಬಿಸಿಮಾಡುವಿಕೆ, प्र+तप+णिच् "ल्युट्" (३-३-११५)। 3. ನೋಯಿಸುವುದು, ಪೀಡಿಸುವುದು. (वि०) 4. ಬಿಸಿಮಾಡುವ, ಕಾಯಿಸುವ, ಸುಡುವ. प्र+तप+णिच् "ल्युः" (३-१-१३४)। 5. ನೋಯಿಸುವ, ಪೀಡಿಸುವ.

**प्रतापवत् ಪ್ರತಾಪವತ್** (वि०) 1. ಪೌರುಷದಿಂದ ಕೂಡಿದವನು, ಶೂರ, ವೀರ. प्रतापोऽस्यास्ति "मतुप्" (५-२-९४)। 2. ಪ್ರಭಾವಶಾಲಿ, ತೇಜಸ್ವಿ. "तीक्ष्णा नारुन्तुदा बुद्धिः कर्म शान्तं प्रतापवत्" माघ० २-१०९।

**प्रतापस ಪ್ರತಾಪಸ** (पुं०) 1. ಬಿಳಿ ಎಕ್ಕದ ಗಿಡ, ಶ್ವೇತಾರ್ಕ ವೃಕ್ಷ. प्रतापं चक्षुस्तेजः स्यति — षो (अन्तकर्मणि) "कः" (३-२-३)। 2. ಒಳ್ಳೆಯ ತಪಸ್ವಿ. प्रकृष्टस्तापसः।

**प्रतार ಪ್ರತಾರ** (पुं०) ವಂಚನೆ, ಮೋಸ. प्र + तॄ (प्लवनतरणयोः) + णिच् "घञ्" (३-३-१८)।

**प्रतारक ಪ್ರತಾರಕ** (वि०) ವಂಚಕ, ಮೋಸಗಾರ. प्रतारयति—प्र+तॄ (प्लवनतरणयोः)+णिच् "ण्वुल्" (३-१-१३३)। "स परप्रतारकोऽसौ निन्दति योऽलीकपण्डितो युवतीः" भर्तृ० २-७२।

**प्रतारण ಪ್ರತಾರಣ** (नं०) ಮೋಸಗೊಳಿಸುವುದು, ವಂಚಿಸುವುದು. प्र + तॄ (प्लवनतरणयोः) + णिच् "ल्युट्" (३-३-११५)। (स्त्री०) "युच्" (३-३-१०७)। -तारणा -ತಾರಣಾ. "यदीच्छसि वशीकर्तुं जगदेकेन कर्मणा। उपास्यतां कलौ कल्पलता देवी प्रतारणा" उद्भ०।

**प्रतारयत् ಪ್ರತಾರಯತ್** (वि०) ಮೋಸಗೊಳಿಸುತ್ತಿರುವ. प्र+तॄ (प्लवनतरणयोः)+णिच् "शतृ" (३-२-१२४)। स्त्रियां "ङीप्" (४-१-६)। -यन्ती -ಯಂತೀ.

**प्रतारयितृ ಪ್ರತಾರಯಿತೃ** (वि०) ವಂಚಿಸುವವನು, ಮೋಸಮಾಡುವವನು. प्र + तॄ (प्लवनतरणयोः) + णिच् "तृच्" (३-१-१३३)। स्त्रियां "ङीप्" (४-१-५)। -यित्री- ಯಿತ್ರೀ.

**प्रतारित ಪ್ರತಾರಿತ** (वि०) ಮೋಸಗೊಳಿಸಲ್ಪಟ್ಟ, ವಂಚಿಸಲ್ಪಟ್ಟ. प्र + तॄ (प्लवनतरणयोः) + णिच् "क्तः" (३-२-१०२)। "किं त्वेवं कविभिः प्रतारितमनास्तत्त्वं विजानन्नपि त्वङ्मांसास्थिमयं वपुर्मृगदृशां मन्दो जनः सेवते" भर्तृ० २-४६।

**प्रतारिन् ಪ್ರತಾರಿನ್** (वि०) 1. ವಂಚಿಸುವ, ಮೋಸಪಡಿಸುವ. प्र + तॄ (प्लवनतरणयोः) + णिच् "णिनिः" (३-२-७८)। 2. ದಾಟಿಸುವ, ಆಚೆಕಡೆಗೆ ಸಾಗಿಸುವ. स्त्रियां "ङीप्" (४-१-५)। -तारिणी -ತಾರಿಣೀ.

**प्रतार्यमाण ಪ್ರತಾರ್ಯಮಾಣ** (वि०) ವಂಚಿಸಲ್ಪಡುತ್ತಿರುವ, ಮೋಸಗೊಳಿಸಲ್ಪಡುತ್ತಿರುವ. प्र+तॄ (प्लवनतरणयोः) + णिच् कर्म० "शानच्" (३-२-१२४)।

**प्रति ಪ್ರತಿ** (अव्य०) ಇದೊಂದು ಉಪಸರ್ಗಾವ್ಯಯ. ಸುಬಂತ ಮತ್ತು ಕ್ರಿಯಾಪದಗಳೊಡನೆ ಸೇರಿದಾಗ ಇದು ಈ ಕೆಳಗಿನ ಅರ್ಥಗಳಿಗೆ ದ್ಯೋತಕವಾಗುವುದು. 1. ಹಿಂತಿರುಗಿ ಬಾ, ಮತ್ತೆ ಬಾ. "प्रत्यागतं त्वास्मि कृतार्थमेव

स्तनोपपीडं परिरब्धुकामा" किरा० ३-५४। 2. ಹಿಂತಿರುಗು, ಹಿಂದಕ್ಕೆ ಹೋಗು. "आगतानगणितप्रतियातान्" माघ० १०-२०। 3. ಅಭಿಮುಖವಾಗಿ, ಎದುರಾಗಿ. "मदोद्धताः प्रत्यनिलं विचेरुर्वनस्थलीर्मर्मरपत्रमोक्षाः" कुमा० ३-३१। 4. ಪ್ರತಿಕೂಲ, ವಿರುದ್ಧ. "प्रतिकामिनीति ददृशुश्चकिताः स्मरजन्मघर्मपयसोपचिताम्" माघ० ९-३५। 5. ಸ್ಪರ್ಧೆ, ಎದುರಿಸುವುದು, ಮೇಲಾಟ. "प्रतिचन्द्रः"। 6. ಸಾದೃಶ್ಯ, ಹೋಲಿಕೆ, ಸಮಾನತೆ. "सुतां तदीयां सुरभेः कृत्वा प्रतिनिधिं शुचिः" रघु० १-८१। 7. ಎದುರು ಪಕ್ಷ, ವಿರೋಧ ಪಕ್ಷ. "अस्त्रज्वालावलीढप्रतिबलजलधेरन्तरौर्वायमाणे" वेणी० ३-७। 8. ತಿರಸ್ಕಾರ, ನಿರಾಕರಣೆ, ತಳ್ಳಿಹಾಕುವುದು. "प्रत्यादेशादपि च मधुनो विस्मृतभ्रूविलासम्" मेघ० २-३२। 9. ವೀಪ್ಸೆ. "प्रतिक्षणं सा कृतरोमविक्रियां व्रताय मौञ्जीं त्रिगुणां बभार याम्" कुमा० ५-१०। ಈ ಉಪಸರ್ಗವು ಪ್ರತ್ಯೇಕವಾಗಿರುವಾಗ ಕೊಡುವ ಅರ್ಥಗಳು. 1. ಲಕ್ಷಣ, ಚಿಹ್ನೆ, ಗುರುತು. "वृक्षं प्रति विद्योतते विद्युत्"। 2. ಇತ್ಥಂಭೂತಾಖ್ಯಾನ, ಒಂದು ರೀತಿಯಾಗಿರುವುದನ್ನು ಹೇಳುವುದು, ಒಂದು ಪ್ರಕಾರವಾಗಿರುವುದನ್ನು ತಿಳಿಸುವುದು. "भक्तो विष्णुं प्रति"। ವಿಷ್ಣು ವಿಷಯಕವಾದ ಭಕ್ತಿರೂಪ ಪ್ರಕಾಶವನ್ನು ಹೊಂದಿದವನು ಎಂದು ಅರ್ಥ. 3. ಭಾಗ, ಅಂಶ. "लक्ष्मीर्हरिं प्रति"। 4. ವೀಪ್ಸೆ. "वृक्षं वृक्षं प्रति सिञ्चति"। 5. ಪ್ರತಿದಾನ, ಬದಲಾಗಿ ಕೊಡುವುದು. "तिलेभ्यः प्रति यच्छति माषान्"। 6. ಎದುರಾಗಿ, ವಿರುದ್ಧವಾಗಿ. "परेण भग्नेऽपि बले महौजाः ययावजः प्रत्यरिसैन्यमेव" रघु० ७-५५। 7. ಅದರ ಕಡೆಗೆ, ಅವನ ಕಡೆಗೆ, ಅದನ್ನು ಕುರಿತು. "प्रत्यन्यनागं चलितस्त्वरावता निरस्य कुण्ठं दधैतान्यमङ्कुशम्" माघ० १२-१२। 8. ಅದರ ವಿಷಯವಾಗಿ, ಅವನ ವಿಷಯವಾಗಿ. "विवक्षता दोषमपि च्युतात्मना त्वयैकमीशं प्रति साधु भाषितम्" कुमा० ५-८१।

**प्रतिकण्ठ ಪ್ರತಿಕಂಠ** (अव्य०) 1. ಪ್ರತಿಯೊಬ್ಬನಲ್ಲಿಯೂ, ಪ್ರತಿಯೊಂದು ಕಂಠದಲ್ಲಿಯೂ. कण्ठे कण्ठे। वीप्सायाम् अव्ययी०। 2. ಕಂಠದ ಸಮೀಪದಲ್ಲಿ, ಕುತ್ತಿಗೆಯ ಹತ್ತಿರ. कण्ठस्य समीपम् सामीप्ये अव्ययी०।

**प्रतिकर्तृ ಪ್ರತಿಕರ್ತೃ** (वि०) 1. ಪ್ರತಿಯಾಗಿ ಮಾಡುವವನು, ತಾನು ಪಡೆದ ಉಪಕಾರಕ್ಕೆ ಪ್ರತ್ಯುಪಕಾರ ಮಾಡುವವನು. 2. ಇನ್ನೊಬ್ಬನಿಂದ ತನಗೆ ಆದ ಅಪಕಾರಕ್ಕೆ ಪ್ರತಿಯಾಗಿ ಪ್ರತ್ಯಪಕಾರ ಮಾಡುವವನು. प्रति+डुकृञ् (करणे) "तृच्" (३-१-१३३)।

**प्रतिकर्मन् ಪ್ರತಿಕರ್ಮನ್** (न०) 1. ಅಲಂಕಾರ, ಶೃಂಗಾರ, ವಸ್ತ್ರ ಭೂಷಣಾದಿಗಳಿಂದ ಮಾಡಿಕೊಳ್ಳುವ ವೇಷ ಬದಲಾವಣೆ. प्रत्यङ्गं कर्म। "प्रतिकर्म कर्तुमुपचक्रमिरे सर्वमुपकारि कृतम्" माघ० ९-४३। 2. ಪ್ರತಿಕ್ರಿಯೆ, ಎದುರಿಸುವುದು, ಮಾಡಿದ ತಪ್ಪಿಗೆ ಬದಲಾಗಿ ಮಾಡುವುದು.

**प्रतिकर्ष ಪ್ರತಿಕರ್ಷ** (पुं०) 1. ಆಕರ್ಷಣ, ಚೆನ್ನಾಗಿ ಎಳೆಯುವುದು. प्रति + कृष (विलेखने) "घञ्" (३-३-१८)। 2. ಅರ್ಥ ಮತ್ತು ಅನ್ವಯ ಸೌಕರ್ಯಕ್ಕಾಗಿ ಹಿಂದಿನ ವಾಕ್ಯದ ಪದವನ್ನು ಮುಂದಿನ ವಾಕ್ಯಕ್ಕೆ ತೆಗೆದುಕೊಳ್ಳುವುದು.

**प्रतिकाय ಪ್ರತಿಕಾಯ** (पुं०) 1. ಎದುರಾಳು, ಪ್ರತಿಪಕ್ಷದವನು, ವೈರಿ, ಹಗೆ. प्रतिगतः कायो यत्र। "स वृषध्वजसायकावभिन्नं जयहेतुः प्रतिकायमेषणीयम्" किरा० १३-२८। 2. ವಿಗ್ರಹ, ಪ್ರತಿಕೃತಿ, ಪ್ರತಿಮೆ. "छाया छन्दः कायो रूपं बिम्बं मानकृती अपि" अभि० चि०।

**प्रतिकार ಪ್ರತಿಕಾರ** (पुं०) 1. ಪ್ರತಿಕ್ರಿಯೆ, ಅಪಕಾರಕ್ಕೆ ಅಥವಾ ಉಪಕಾರಕ್ಕೆ ಬದಲಾಗಿ ಮಾಡುವ ಪ್ರತ್ಯಪಕಾರ ಅಥವಾ ಪ್ರತ್ಯುಪಕಾರ. प्रति+डुकृञ् (करणे) "घञ्" (३-३-१८)। 2. ಪರಿಹಾರ, ನಿವಾರಣೆ. 3. ರೋಗ ಪರಿಹಾರಕ್ಕೆ ಮಾಡುವ ಚಿಕಿತ್ಸೆ. "प्रतिकारविधानमायुषः सति शेषे हि फलाय कल्पते" रघु० ८-४०। वा दीर्घः (६-३-१२२)। प्रतीकारः ಪ್ರತೀಕಾರಃ

**प्रतिकाश ಪ್ರತಿಕಾಶ** (वि०) (ಸಮಾಸದ ಕೊನೆಯಲ್ಲಿ ಉತ್ತರ ಪದವಾಗಿದ್ದಾಗ) ಸದೃಶವಾದ, ಸಮಾನವಾದ. प्रति + काशृ (दीप्तौ) "अच्" (३-१-१३४)।

**प्रतिकुञ्चन ಪ್ರತಿಕುಂಚನ** (न०) 1. ಬಗ್ಗಿಸುವುದು, ವಕ್ರವಾಗಿ ಮಾಡುವುದು. प्रति + कुञ्च (कौटिल्ये) भावे "ल्युट्" (३-३-११५)। 2. ಅಲ್ಪವಾಗಿ ಮಾಡುವುದು, ಚಿಕ್ಕದಾಗಿ ಮಾಡುವುದು. प्रति + कुञ्च (अल्पीभावे) "ल्युट्" (३-३-११५)।

**प्रतिकुञ्चित ಪ್ರತಿಕುಂಚಿತ** (वि०) 1. ಬಗ್ಗಿಸಲ್ಪಟ್ಟ. प्रति+कुञ्च (कौटिल्ये)+णिच् "क्तः" (३-२-१०२)। "प्रतिकुञ्चितकूर्परेण तेन श्रवणोपान्तिकनीयमानगव्यम्" माघ० २०-१९। 2. ಚಿಕ್ಕದಾಗಿ ಮಾಡಲ್ಪಟ್ಟ. कुञ्च (अल्पीभावे)+णिच् "क्तः" (३-२-१०२)।

3. ಬಗ್ಗಿರುವ, ವಕ್ರವಾಗಿರುವ. 4. ಚಿಕ್ಕದಾಗಿರುವ. प्रति+ कुच (कौटिल्याल्पीभावयोः) "क्तः" (३-४-७२)।

**प्रतिकूप ಪ್ರತಿಕೂಪ** (ಪುಂ०) ಕಂದಕ, ಕೋಟೆಯ ಸುತ್ತಲೂ ತೋಡಿರುವ ಹಳ್ಳ. प्रतिरूपः कूपः। "खातभूः प्रतिकूपः स्यात्" हारा०।

**प्रतिकूल ಪ್ರತಿಕೂಲ** (ವಿ०) 1. ವಿರುದ್ಧವಾದ, ಅನುಕೂಲವಲ್ಲದ. प्रतीपं कूलात्। "दृढमप्यपरप्रतिष्ठितं प्रतिकूलं नितरां निरस्यति" माघ० १६-७४। 2. ಕಠಿನವಾದ, ಹಿತವಲ್ಲದ, ಕರ್ಕಶವಾದ. "अप्यन्यपुष्टा प्रतिकूलशब्दा श्रोतुर्वितन्त्रीरिव ताड्यमाना" कुमा० १-४५। 3. ಎದುರಾಗಿರುವ, ಎದುರಾಗಿ ಬೀಸುವ (ಗಾಳಿ). (अव्य०) 4. ಎದುರಾಗಿ, ಅಭಿಮುಖವಾಗಿ. "उत्पातवातप्रतिकूलपातिनीरुपत्यकाभ्यो बृहतीः शिला इव" माघ० १२-५०। 5. ವಿರುದ್ಧವಾಗಿ, ಅನನುಕೂಲವಾಗಿ. "तस्मिन् वने संयमिनां मुनीनां तपःसमाधेः प्रतिकूलवर्ती" कुमा० ३-२४। 6. ಅಹಿತವಾಗಿ, ಕಠಿನವಾಗಿ.

**प्रतिकूलता ಪ್ರತಿಕೂಲತಾ** (स्त्री०) ಪ್ರತಿಕೂಲವಾಗಿರುವಿಕೆ, ವಿರೋಧದಿಂದ ಕೂಡಿರುವಿಕೆ, ವಿರುದ್ಧವಾಗಿರುವುದು. "प्रतिकूलतामुपगते हि विधौ विफलत्वमेति बहुसाधनता" माघ० ९-६।

**प्रतिकूलभाषण ಪ್ರತಿಕೂಲಭಾಷಣ** (न०) ವಿರುದ್ಧವಾಗಿ ಮಾತಾಡುವುದು.

**प्रतिकूलभाषिन् ಪ್ರತಿಕೂಲಭಾಷಿನ್** (वि०) ವಿರುದ್ಧವಾಗಿ ಮಾತಾಡುವ, ಎದುರಿಸಿ ಮಾತಾಡುವ. प्रतिकूलं भाषते—भाष (व्यक्तायां वाचि) "णिनिः" (३-१-१३४)।

**प्रतिकूलवचन ಪ್ರತಿಕೂಲವಚನ** (न०) ವಿರುದ್ಧವಾದ ಮಾತು.

**प्रतिकूलवर्तन ಪ್ರತಿಕೂಲವರ್ತನ** (न०) ವಿರುದ್ಧವಾಗಿ ನಡೆದುಕೊಳ್ಳುವುದು.

**प्रतिकूलवर्तिन् ಪ್ರತಿಕೂಲವರ್ತಿನ್** (वि०) ವಿರುದ್ಧವಾಗಿ ನಡೆಯುವ, ವಿರುದ್ಧವಾಗಿ ಕಾರ್ಯ ನಡೆಸುವ. प्रतिकूलं वर्तते—वृतु (वर्तने) "णिनिः" (३-२-७८)। स्त्रियां "ङीप्" (४-१-५)। **–वर्तिनी –ವರ್ತಿನೀ.**

**प्रतिकूलवाच् ಪ್ರತಿಕೂಲವಾಚ್** (स्त्री०) ಅನುಕೂಲವಲ್ಲದ ಮಾತು, ವಿರುದ್ಧವಾದ ಮಾತು. प्रतिकूला वाक्।

**प्रतिकूलवाद ಪ್ರತಿಕೂಲವಾದ** (ಪುಂ०) ಪ್ರತಿಹೇಳುವುದು, ವಿರುದ್ಧವಾಗಿ ಮಾತಾಡುವುದು, ಅಸಂಬದ್ಧವಾಗಿ ಮಾತಾಡುವುದು.

**प्रतिकूलवादिन् ಪ್ರತಿಕೂಲವಾದಿನ್** (वि०) ವಿರುದ್ಧವಾಗಿ ಮಾತಾಡುವ, ಅನನುಕೂಲವಾಗಿ ಹೇಳುವ. प्रतिकूलं वदति—वद (व्यक्तायां वाचि) "णिनिः" (३-२-७८)। "इति द्विजातौ प्रतिकूलवादिनि प्रवेपमानाधरलक्ष्यकोपया" कुमा० ५-७४।

**प्रतिकृत ಪ್ರತಿಕೃತ** (वि०) 1. ಪ್ರತಿಯಾಗಿ ಮಾಡಲ್ಪಟ್ಟ, ಮುಯ್ಯಿ ತೀರಿಸಲ್ಪಟ್ಟ. प्रति+डु कृञ् (करणे) "क्तः" (३-२-१०२)। "कृतप्रतिकृतप्रीतैस्तयोर्मुक्तां सुरासुरैः" रघु० १२-९४। 2. ಚಿಕಿತ್ಸೆ ಮಾಡಲ್ಪಟ್ಟ, ರೋಗಪರಿಹಾರಕ್ಕಾಗಿ ಔಷಧೋಪಚಾರ ಮಾಡಲ್ಪಟ್ಟ. 3. ನಿವಾರಿಸಲ್ಪಟ್ಟ, ಪರಿಹರಿಸಲ್ಪಟ್ಟ. 4. ಸೇಡು ತೀರಿಸಿಕೊಳ್ಳಲ್ಪಟ್ಟ. (न०) 5. ಮುಯ್ಯಿ, ಪಡೆದ ಉಪಕಾರಕ್ಕೆ ಮಾಡುವ ಪ್ರತ್ಯುಪಕಾರ, 6. ಪ್ರತ್ಯಪಕಾರ, ಸೇಡು ತೀರಿಸಿಕೊಳ್ಳುವುದು. "क्लिष्टमन्मथमपि प्रियं प्रभोर्दुर्लभप्रतिकृतं वधूरतम्" कुमा० ८-८।

**प्रतिकृति ಪ್ರತಿಕೃತಿ** (स्त्री०) 1. ವಿಗ್ರಹ, ಪ್ರತಿಮೆ. प्रकृष्टा कृतिः। "तस्या एव प्रतिकृतिसखो यत्क्रतूनाजहार" रघु० १४-८७। 2. ಮುಯ್ಯಿ ತೀರಿಸುವುದು. 3. ಸೇಡು ತೀರಿಸಿಕೊಳ್ಳುವುದು. "शृणुध्वं देवताः सर्वाः शत्रुप्रतिकृतिं पराम्" हरिवं०। 4. ಚಿತ್ರ, ಪ್ರತಿರೂಪ, ಭಾವಚಿತ್ರ, ಪಟ. "प्रतिकृतिरचनाभ्यो दूतिसन्दर्शिताभ्यः समधिकतररूपाः शुद्धसन्तानकामैः" रघु० १८-५३। 5. ಪ್ರತಿನಿಧಿ, ಬದಲು ಮನುಷ್ಯ. (वि०) 6. ಸಮಾನವಾದ, ಸದೃಶವಾದ.

**प्रतिकृष्ट ಪ್ರತಿಕೃಷ್ಟ** (वि०) 1. ಎರಡು ಸಲ ಉಳಲ್ಪಟ್ಟ (ಭೂಮಿ). 2. ನೀಚ, ಅಧಮ. प्रति+कृष (विलेखने) "क्तः" (३-२-१०२)। "प्रतिकृष्टं मतं गर्ह्ये द्विरावृत्त्या च कर्षिते" मेदि०।

**प्रतिक्रिया ಪ್ರತಿಕ್ರಿಯಾ** (स्त्री०) 1. ಪ್ರತೀಕಾರ, ಸೇಡು ತೀರಿಸಿಕೊಳ್ಳುವುದು, ಮುಯ್ಯಿ ತೀರಿಸುವುದು. प्रति—कृञ् "शः" (३-३-१००)। 2. ರೋಗನಿವಾರಣೋಪಾಯ, ರೋಗಪರಿಹಾರಕ್ಕಾಗಿ ಮಾಡುವ ಚಿಕಿತ್ಸೆ. 3. ನಿವಾರಣೋಪಾಯ, ಪರಿಹಾರಕಾರ್ಯ, "प्रतिशुश्राव काकुत्स्थस्तेभ्यो विघ्नप्रतिक्रियाम्" रघु० १५-४। 4. ಪ್ರತಿಫಲ.

**प्रतिक्षण ಪ್ರತಿಕ್ಷಣ** (अव्य०) ಮತ್ತೆ ಮತ್ತೆ, ಪುನಃ ಪುನಃ, ಪ್ರತಿಯೊಂದು ಸಮಯದಲ್ಲೂ. क्षणे क्षणे—विभ०

अव्ययी०। "प्रतिक्षणं संभ्रमलोलदृष्टिर्लीलारविन्देन निवारयन्ती" कुमा० ३-५६।

**प्रतिक्षिप्त ಪ್ರತಿಕ್ಷಿಪ್ತ** (वि०) 1. ಪ್ರೇರಿಸಲ್ಪಟ್ಟ, ಕಳುಹಿಸಲ್ಪಟ್ಟ. प्रति + क्षिप (प्रेरणे) "क्तः" (३-२-१०२)। 2. ನಿವಾರಿಸಲ್ಪಟ್ಟ, ಪರಿಹರಿಸಲ್ಪಟ್ಟ. 3. ತಡೆಯಲ್ಪಟ್ಟ, ನಿಷೇಧಿಸಲ್ಪಟ್ಟ. 4. ತಿರಸ್ಕರಿಸಲ್ಪಟ್ಟ, ತಳ್ಳಿಹಾಕಲ್ಪಟ್ಟ. 5. ಆಕ್ಷೇಪಿಸಲ್ಪಟ್ಟ. 6. ದೋಷಾರೋಪಣೆಮಾಡಲ್ಪಟ್ಟ. 7. ಕರೆದು ತಿರಸ್ಕರಿಸಿ ಕಳುಹಿಸಲ್ಪಟ್ಟ. "आहूय प्रेषितो यस्तु प्रतिक्षिप्तः स उच्यते"।

**प्रतिक्षेप ಪ್ರತಿಕ್ಷೇಪ** (पुं०) 1. ಆಕ್ಷೇಪಣೆ. प्रति + क्षिप (प्रेरणे) "घञ्" (३-३-१८)। 2. ತಿರಸ್ಕರಿಸುವುದು, ತಳ್ಳಿಹಾಕುವುದು. 3. ವಿರೋಧಿಸಿ ಮಾತಾಡುವುದು. 4. ತಡೆಯುವುದು, ನಿಷೇಧಿಸುವುದು. 5. ದೋಷಾರೋಪಣೆ ಮಾಡುವುದು. 6. ನಿವಾರಿಸುವುದು, ಪರಿಹರಿಸುವುದು.

**प्रतिगत ಪ್ರತಿಗತ** (न०) 1. ಹಕ್ಕಿಗಳ ಒಂದು ವಿಧ ಹಾರಾಟ. प्रति+गम्लृ (गतौ) "क्तः" (३-३-११४)। "गतागतप्रतिगतसंपाताश्च पक्षिणाम्। गतिभेदाः पक्षिगृहं कुलायो नीडमस्त्रियाम्"। 2. ಹಿಂತಿರುಗಿ ಬರುವುದು. (वि०) 3. ಹಿಂತಿರುಗಿ ಬಂದ. प्रति + गम्लृ "क्तः" (३-४-७२)। 4. ಎದುರಾಗಿ ಬಂದ.

**प्रतिगमन ಪ್ರತಿಗಮನ** (न०) ಹಿಂತಿರುಗುವುದು, ಹಿಂದಕ್ಕೆ ಹೋಗುವುದು.

**प्रतिगर्जत् ಪ್ರತಿಗರ್ಜತ್** (वि०) 1. ಗರ್ಜನೆ ಮಾಡುತ್ತಿರುವ, ಶಬ್ದಮಾಡುತ್ತಿರುವ. प्रति + गर्ज (शब्दे) "शतृ" (३-२-१२४)। 2. ಎದುರಿಸುತ್ತಿರುವ, ಪ್ರತಿಸ್ಪರ್ಧಿಸುತ್ತಿರುವ. "स हि निदेशमलङ्घयतामभूत्सुहृदयोहृदयः प्रतिगर्जताम्" रघु० ९-९।

**प्रतिगृहीत ಪ್ರತಿಗೃಹೀತ** (वि०) 1. ತೆಗೆದುಕೊಳ್ಳಲ್ಪಟ್ಟ, ಸ್ವೀಕರಿಸಲ್ಪಟ್ಟ. प्रति + ग्रह (उपादाने) "क्तः" (३-२-१०२)। 2. ಅಂಗೀಕರಿಸಲ್ಪಟ್ಟ, ಸಂಮತಿಸಲ್ಪಟ್ಟ, ಒಪ್ಪಲ್ಪಟ್ಟ. "सखे, त्वमम्बया पुत्र इति प्रतिगृहीतः" शाकु० २। 3. ಪ್ರತಿಭಟಿಸಲ್ಪಟ್ಟ, ಎದುರಿಸಲ್ಪಟ್ಟ. 4. ಹಿಡಿಯಲ್ಪಟ್ಟ, ಸ್ವಾಧೀನಕ್ಕೆ ತೆಗೆದುಕೊಳ್ಳಲ್ಪಟ್ಟ. "तेन हि वर्षवरप्रतिगृहीतमेनं तत्रभवतः सकाशं प्रापय" माल० ४।

**प्रतिगृह्णत् ಪ್ರತಿಗೃಹ್ಣತ್** (वि०) ಸ್ವೀಕರಿಸುತ್ತಿರುವ, ಅಂಗೀಕರಿಸುತ್ತಿರುವ. प्रति + ग्रह (उपादाने) "शतृ" (३-२-१२४)। "अमोघाः प्रतिगृह्णन्तावर्घ्यानुपदमाशिषः" रघु० १-४४।

**प्रतिगृह्यमाण ಪ್ರತಿಗೃಹ್ಯಮಾಣ** (वि०) ಸ್ವೀಕರಿಸಲ್ಪಡುತ್ತಿರುವ, ತೆಗೆದುಕೊಳ್ಳಲ್ಪಡುತ್ತಿರುವ. प्रति + ग्रह (उपादाने) कर्म० "शानच्" (३-२-१२४)।

**प्रतिग्रह ಪ್ರತಿಗ್ರಹ** (पुं०) 1. ಸ್ವೀಕರಿಸುವುದು, ತೆಗೆದುಕೊಳ್ಳುವುದು. प्रति+ग्रह (उपादाने) "अप्" (३-३-५८)। "न द्रव्याणामविज्ञाय विधिं धर्म्यं प्रतिग्रहे। प्राज्ञः प्रतिग्रहं कुर्यादवसीदन्नपि क्षुधा" मनु० ४-१८७। 2. ದಾನ, ಕೊಡುಗೆ. "करकल्पजनान्तराद्विधेः शुचितः प्रापि स हि प्रतिग्रहः" नैष० २-१२। 3. ಶಾಸ್ತ್ರೋಕ್ತವಾಗಿ ಮಾಡುವ ದಾನ. "राजतः पुपुविरे निरेनसः प्राप्य तेऽपि विमलं प्रतिग्रहम्" माघ० १४-३५। 4. ದಾನಮಾಡಿದುದನ್ನು ತೆಗೆದುಕೊಳ್ಳುವುದು, ಕೊಡುಗೆಯನ್ನು ಸ್ವೀಕರಿಸುವುದು. "दानं प्रतिग्रहं चैव ब्राह्मणानामकल्पयत्" मनु० १-८८। 5. ಪತದ್ಗ್ರಹ, ಉಗುಳುವ ಪಾತ್ರೆ, ಪೀಕದಾನಿ. प्रतिगृह्णाति निष्ठीवनं — प्रति + ग्रह "अच्" (३-१-१३४)। 6. ಸೈನ್ಯದ ಹಿಂಭಾಗ. 7. ವಿವಾಹ ಮಾಡಿಕೊಳ್ಳುವುದು. "प्रतिग्रहः स्वीकरणे सैन्यपृष्ठे पतद्ग्रहे। द्विजेभ्यो विधिवद्देये तद्ग्रहे च ग्रहान्तरे" मेदि०। प्रति + ग्रह भावे "ल्युट्" (३-३-११५)। –ग्रहणम् –ಗ್ರಹಣಮ್.

**प्रतिग्रहीतृ ಪ್ರತಿಗ್ರಹೀತೃ** (वि०) 1. ತೆಗೆದುಕೊಳ್ಳುವವನು, ಸ್ವೀಕರಿಸುವವನು. प्रति + ग्रह (उपादाने) "तृच्" (३-१-१३३)। 2. ಶಾಸ್ತ್ರೋಕ್ತವಾಗಿ ಮಾಡಿದ ದಾನವನ್ನು ತೆಗೆದುಕೊಳ್ಳುವವನು. 3. ವಿವಾಹ ಮಾಡಿಕೊಳ್ಳುವವನು. स्त्रियां "ङीप्" (४-१-५)। –ग्रहीत्री –ಗ್ರಹೀತ್ರೀ.

**प्रतिग्राह ಪ್ರತಿಗ್ರಾಹ** (पुं०) 1. ಉಗುಳುವ ಪಾತ್ರೆ, ಪೀಕದಾನಿ. प्रतिगृह्णाति — प्रति + ग्रह (उपादाने) वा "णः" (३-१-१४३)। पक्षे "अच्" (३-१-१३४)। –ग्रहः –ಗ್ರಹಃ. "प्रतिग्राहः पतद्ग्रहः" अम०। (वि०) 2. ದಾನವನ್ನು ಸ್ವೀಕರಿಸುವವನು, ಕೊಡುಗೆಯನ್ನು ತೆಗೆದುಕೊಳ್ಳುವವನು. भावे "घञ्" (३-३-१८)। 3. ದಾನವನ್ನು ತೆಗೆದುಕೊಳ್ಳುವುದು.

**प्रतिग्राहक ಪ್ರತಿಗ್ರಾಹಕ** (वि०) ಸ್ವೀಕರಿಸುವವನು, ತೆಗೆದುಕೊಳ್ಳುವವನು. प्रति + ग्रह (उपादाने) "ण्वुल्" (३-१-१३३)। "णिनिः" (३-१-१३४)। –ग्राहिन् –ಗ್ರಾಹಿನ್.

**प्रतिग्राहयत् ಪ್ರತಿಗ್ರಾಹಯತ್** (वि०) ಸ್ವೀಕರಿಸುವಂತೆ ಮಾಡುವವನು, ತೆಗೆದುಕೊಳ್ಳುವಂತೆ ಮಾಡುವವನು. प्रति + ग्रह (उपादाने) + णिच् "शतृ" (३-२-१२४)। "मुष्टिं प्रतिग्राहयता स्वमर्थं पात्रीकृतो दस्युरिवासि येन" शाकु० ५-२०।

**प्रतिग्राहित ಪ್ರತಿಗ್ರಾಹಿತ** (वि०) ಸ್ವೀಕರಿಸುವಂತೆ ಮಾಡಲ್ಪಟ್ಟ. प्रति + ग्रह (उपादाने) + णिच् "क्तः" (३-२-१०२)। "अथ प्रजानामधिपः प्रभाते जायाप्रतिग्राहितगन्धमाल्याम्" रघु० २-१।

**प्रतिग्राह्य ಪ್ರತಿಗ್ರಾಹ್ಯ** (वि०) 1. ಸ್ವೀಕರಿಸಲ್ಪಡುವ. 2. ಸ್ವೀಕರಿಸಲು ಯೋಗ್ಯವಾದ. प्रति+ग्रह (उपादाने) "ण्यत्" (३-१-१२४)।

**प्रतिघ ಪ್ರತಿಘ** (पुं०) 1. ಕ್ರೋಧ, ಕೋಪ. प्रतिहन्ति अनेन — प्रति + हन (हिंसागत्योः) "डः" (वा० ३-२-४८)। "प्रतिघः कुतोऽपि समुपेत्य नरपतिगणं समाश्रयत्" माघ० १५-५३। 2. ಏಟು, ಹೊಡೆತ.

**प्रतिघात ಪ್ರತಿಘಾತ** (पुं०) 1. ಏಟು, ಹೊಡೆತ. प्रति+हन (हिंसागत्योः) "घञ्" (३-३-१८)। 2. ಎದುರು ಹೊಡೆತ. "जयाशा यत्र चास्माकं प्रतिघातोत्थितार्चिषा" कुमा० २-४९। 3. ಮಾರಣ, ಕೊಲ್ಲುವುದು. भावे "ल्युट्" (३-३-११५)। -घातनम् -ಘಾತನಮ್.

**प्रतिघातक ಪ್ರತಿಘಾತಕ** (वि०) 1. ತಡೆಮಾಡುವವನು, ಅಡ್ಡಿಪಡಿಸುವವನು. प्रति+हन (हिंसागत्योः) "ण्वुल्" (३-१-१३३)। 2. ಹೊಡೆಯುವವನು, ಹಿಂಸಿಸುವವನು. 3. ಕೊಲ್ಲುವವನು. 4. ತೊಂದರೆಪಡಿಸುವವನು. "णिनिः" (३-१-१३४)। -घातिन् -ಘಾತಿನ್. स्त्रियाम् "ङीप्" (४-१-५)। -घातिनी -ಘಾತಿನೀ. "विजित्य नेत्रप्रतिघातिनीं प्रभामनन्यदृष्टिः सवितारमैक्षत" कुमा० ५-२०।

**प्रतिघ्न ಪ್ರತಿಘ್ನ** (न०) ದೇಹ, ಶರೀರ. प्रति + हन (हिंसागत्योः) घञर्थे "कः" (वा० ३-३-५८)।

**प्रतिघ्नती ಪ್ರತಿಘ್ನತೀ** (स्त्री०) ಪ್ರತಿಬಂಧಿಸುತ್ತಿರುವ, ತಡೆಯುತ್ತಿರುವ. प्रति + हन (हिंसागत्योः) "शतृ" (३-२-१२४)। "ङीप्" (४-१-६)। "प्रतिघ्नतीभिः कृतमीलनानि द्युलोकभाजामपि लोचनानि" किरा० १६-४३।

**प्रतिचिकीर्षा ಪ್ರತಿಚಿಕೀರ್ಷಾ** (स्त्री०) 1. ಪ್ರತಿಕ್ರಿಯೆ ಮಾಡಲು ಅಪೇಕ್ಷೆ, ಸೇಡು ತೀರಿಸಿಕೊಳ್ಳಲು ಅಪೇಕ್ಷೆ, 2. ಮುಯ್ಯಿ ತೀರಿಸಲು ಇಚ್ಛೆ. प्रतिकर्तुमिच्छा—प्रति+डुकृञ् (करणे)+सन् "अः" (३-३-१०२)। "यथाप्रतिज्ञं द्विषतां युधि प्रतिचिकीर्षया" किरा० ११-७४।

**प्रतिचिकीर्षु ಪ್ರತಿಚಿಕೀರ್ಷು** (वि०) ಸೇಡು ತೀರಿಸಿಕೊಳ್ಳಲು ಅಪೇಕ್ಷಿಸುವ, ಪ್ರತ್ಯಪಕಾರ ಮಾಡಲು ಇಚ್ಛಿಸುವ. प्रतिकर्तुमिच्छुः—प्रति + डुकृञ् (करणे)+सन् "उः" (३-२-१६८)।

**प्रतिच्छन्द ಪ್ರತಿಚ್ಛಂದ** (पुं०) 1. ಪ್ರತಿನಿಧಿ, ಬದಲಿಯವನು. (वि०) 2. ಸಮಾನವಾದ. प्रतिगतं छन्दः। "तैर्वैजयन्तीवनराजिराजिभिर्गिरिप्रतिच्छन्दमहामतङ्गजैः" माघ० १२-२९।

**प्रतिच्छन्न ಪ್ರತಿಚ್ಛನ್ನ** (वि०) ಮರೆಮಾಡಲ್ಪಟ್ಟ, ಮುಚ್ಚಲ್ಪಟ್ಟ. प्रति+छद (अपवारणे) "क्तः" (३-२-१०२)। "अनयोरेवोद्यानपालिकयोस्तिरस्करिणीप्रतिच्छन्ना पार्श्ववर्तिनी भूत्वोपलप्स्ये" शाकु० ६।

**प्रतिच्छाया ಪ್ರತಿಚ್ಛಾಯಾ** (स्त्री०) 1. ಪ್ರತಿಮೆ, ವಿಗ್ರಹ. प्रतिरूपा छाया। प्रकृष्टा छाया वा। 2. ಪ್ರತಿಕೃತಿ, ಛಾಯಾಚಿತ್ರ.

**प्रतिच्छायिका ಪ್ರತಿಚ್ಛಾಯಿಕಾ** (स्त्री०) ಪ್ರತಿಬಿಂಬ, ಪ್ರತಿರೂಪ, ಛಾಯಾಚಿತ್ರ. "रूपं प्रतिच्छायिकयोपनीतमालोकि ताभिर्यदि नाम कामम्" नैष० ६-४६।

**प्रतिजागर ಪ್ರತಿಜಾಗರ** (पुं०) ಎಚ್ಚರದಿಂದ ಕಾಯುವಿಕೆ, ನಿದ್ರೆಯ ಕಾಲದಲ್ಲಿ ಎಚ್ಚರಿಕೆಯಿಂದ ಗಮನಿಸುವುದು. प्रति + जागृ (निद्राक्षये) "घञ्" (३-३-१८)।

**प्रतिजिगमिषा ಪ್ರತಿಜಿಗಮಿಷಾ** (स्त्री०) ಹಿಂತಿರುಗುವ ಅಪೇಕ್ಷೆ, ಮರಳಿ ಹಿಂದಕ್ಕೆ ಹೋಗುವ ಅಪೇಕ್ಷೆ. प्रति+गम्लृ (गतौ) + सन् "अः" (३-३-१०२)।

**प्रतिजिगमिषित ಪ್ರತಿಜಿಗಮಿಷಿತ** (वि०) ಹಿಂತಿರುಗಿ ಹೋಗಲು ಅಪೇಕ್ಷಿಸಲ್ಪಟ್ಟ, ಮರಳಿ ಹೋಗಿ ಸೇರಲು ಇಚ್ಛಿಸಲ್ಪಟ್ಟ. प्रति + गम्लृ (गतौ) + सन् "क्तः" (३-२-१०२)। "प्रतिजिगमिषितां भ्रातुमन्वक् समन्वग्रहीत्" याद० १७-१३४।

**प्रतिजिगमिषु ಪ್ರತಿಜಿಗಮಿಷು** (वि०) ಹಿಂತಿರುಗುವ ಅಪೇಕ್ಷೆಯುಳ್ಳ, ಮರಳಿ ಹಿಂದಕ್ಕೆ ಹೋಗಲು ಇಚ್ಛಿಸುವ. प्रति + गम्लृ (गतौ) + सन् "उः" (३-२-१६८)।

**प्रतिजिहीर्षत् ಪ್ರತಿಜಿಹೀರ್ಷತ್** (वि०) 1. ಒಯ್ಯಲು ಅಪೇಕ್ಷಿಸುತ್ತಿರುವ. प्रति + हृञ् (हरणे) + सन् "शतृ" (३-२-१२४)। 2. ಪರಿಹರಿಸಲು ಅಪೇಕ್ಷಿಸುತ್ತಿರುವ,

**प्रतिजिहीर्षा ಪ್ರತಿಜಿಹೀರ್ಷಾ** (स्त्री०) 1. ಒಯ್ಯಲು ಅಪೇಕ್ಷೆ, ಸಾಗಿಸಲು ಇಚ್ಛೆ. प्रति + हृञ् (हरणे) + सन् "अ:" (३-३-१०२)। 2. ಪರಿಹರಿಸಲು ಅಪೇಕ್ಷೆ, ಹೋಗಲಾಡಿಸಲು ಇಚ್ಛೆ.

**प्रतिजिहीर्षित ಪ್ರತಿಜಿಹೀರ್ಷಿತ** (वि०) 1. ಒಯ್ಯಲು ಅಪೇಕ್ಷಿಸಲ್ಪಟ್ಟ. 2. ನಿವಾರಿಸಲು ಅಪೇಕ್ಷಿಸಲ್ಪಟ್ಟ. प्रति + हृञ् (हरणे) + सन् "क्तः" (३-२-१०२)।

**प्रतिजिहीर्षु ಪ್ರತಿಜಿಹೀರ್ಷು** (वि०) 1. ಸಾಗಿಸಲು ಅಪೇಕ್ಷೆಯುಳ್ಳ. 2. ಪರಿಹರಿಸಲು ಇಚ್ಛೆಯುಳ್ಳ. प्रति+ हृञ् (हरणे) + सन् "उ:" (३-२-१६८)।

**प्रतिजिह्वा ಪ್ರತಿಜಿಹ್ವಾ** (स्त्री०) ತಾಲುವಿನ ಮೂಲ ಭಾಗದಲ್ಲಿರುವ ಕಿರುನಾಲಿಗೆ, ದವಡೆಯ ಮೂಲಸ್ಥಾನದಲ್ಲಿರುವ ಕಿರುನಾಲಿಗೆ. प्रतिरूपा जिह्वा। स्वार्थे "कन्" (५-४-५)। –जिह्विका –ಜಿಹ್ವಿಕಾ.

**प्रतिज्ञा ಪ್ರತಿಜ್ಞಾ** (स्त्री०) 1. ವಚನ, ವಾಗ್ದಾನ, ಕೊಟ್ಟ ಮಾತು. प्रतिज्ञायते—प्रति + ज्ञा (अवबोधने) "अङ्" (३-३-१०६)। "तीर्त्वा जवेनैव नितान्तदुस्तरां नदीं प्रतिज्ञामिव तां गरीयसीम्" माघ० १२-७४। 2. ಶಪಥ. "निस्तीर्णोरुप्रतिज्ञाजलनिधिगहनः क्रोधनः क्षत्रियोऽस्मि" वेणी० ६-३७। "दैवात् पूर्णप्रतिज्ञः पुनरपि न करोत्यायतिज्यानिभीतः" मुद्रा० ४-१२। 3. (ನ್ಯಾಯಶಾಸ್ತ್ರದಲ್ಲಿ) ನ್ಯಾಯದ ಐದು ಅವಯವಗಳಲ್ಲೊಂದು. (1) प्रतिज्ञा (2) हेतुः (3) उदाहरणम् (4) उपनयः ಮತ್ತು (5) निगमनम् ಇವು ಐದು ಅವಯವಗಳು. "पर्वतो वह्निमान्" ಎಂಬುದು ಪ್ರತಿಜ್ಞೆ. धूमवत्त्वात् ಎಂಬುವುದು ಹೇತು. "यथा महानसः" ಎಂದು ಉದಾಹರಣೆ. "तथा चायम्" ಎನ್ನುವುದು ಉಪನಯ. "तस्मात्तथा" ಎಂದು ನಿಗಮನ. 4. ಕರಾರು, ಒಪ್ಪಂದ.

**प्रतिज्ञात ಪ್ರತಿಜ್ಞಾತ** (वि०) 1. ವಾಗ್ದಾನ ಮಾಡಲ್ಪಟ್ಟ, ಭಾಷೆ ಕೊಡಲ್ಪಟ್ಟ. प्रति + ज्ञा (अवबोधने) "क्तः" (३-२-१०२)। 2. ಅಂಗೀಕರಿಸಲ್ಪಟ್ಟ, ಒಪ್ಪಿಗೆಕೊಡಲ್ಪಟ್ಟ, ಸಂಮತಿಸಲ್ಪಟ್ಟ. 3. ಶಪಥಮಾಡಲ್ಪಟ್ಟ. 4. ಒಪ್ಪಿಕೊಳ್ಳಲ್ಪಟ್ಟ. "ऋणे देये प्रतिज्ञाते पञ्चकं शतमर्हति" मनु० ८-१३९।

**प्रतिज्ञान ಪ್ರತಿಜ್ಞಾನ** (न०) 1. ಪ್ರತಿಜ್ಞೆ ಮಾಡುವುದು. 2. ಶಪಥಮಾಡುವುದು. 3. ದೃಢವಾಗಿ ಹೇಳುವುದು, ಭರವಸೆಯ ಮಾತಾಡುವುದು. 4. ಅಂಗೀಕರಿಸುವುದು, ಒಪ್ಪಿಕೊಳ್ಳುವುದು. 5. ಸಂಮತಿಸುವುದು, ಒಪ್ಪಿಗೆಕೊಡುವುದು. प्रति+ज्ञा (अवबोधने) "ल्युट्" (३-३-११५)।

**प्रतिज्ञापत्र ಪ್ರತಿಜ್ಞಾಪತ್ರ** (न०) ಕರಾರು ಪತ್ರ, ಒಪ್ಪಿಗೆ ಪತ್ರ.

**प्रतिज्ञाभङ्ग ಪ್ರತಿಜ್ಞಾಭಂಗ** (पुं०) ಮಾತಿಗೆ ತಪ್ಪುವುದು, ಕೊಟ್ಟ ಮಾತಿನಂತೆ ನಡೆಯದಿರುವುದು. प्रतिज्ञाया भङ्गः।

**प्रतिज्ञाविरोध ಪ್ರತಿಜ್ಞಾವಿರೋಧ** (पुं०) 1. ಒಪ್ಪಂದಕ್ಕೆ ತಪ್ಪಿ ನಡೆಯುವುದು, ಕರಾರನ್ನು ಮೀರಿ ನಡೆಯುವುದು. 2. (ನ್ಯಾಯಶಾಸ್ತ್ರದಲ್ಲಿ) ಪ್ರತಿಜ್ಞೆಗೆ ವಿರುದ್ಧವಾಗಿ ವಾದಿಸುವುದು, ವ್ಯಭಿಚರಿತ ಮತ್ತು ಬಾಧಿತ ಹೇತು ಮೊದಲಾದುವುಗಳನ್ನು ಹೇಳಿ ವಾದಿಸುವುದು. 3. ಕೊಟ್ಟ ಮಾತಿನಂತೆ ನಡೆಯದಿರುವುದು.

**प्रतिज्ञासंन्यास ಪ್ರತಿಜ್ಞಾಸಂನ್ಯಾಸ** (पुं०) ಕೊಟ್ಟ ಮಾತಿನಂತೆ ನಡೆಯದೆ ಮೌನದಿಂದಿರುವುದು, ಪ್ರತಿಜ್ಞಾಭಂಗ. प्रतिज्ञायाः संन्यासः।

**प्रतितन्त्र ಪ್ರತಿತಂತ್ರ** (न०) ವಿರುದ್ಧವಾದ ಶಾಸ್ತ್ರ, ಒಂದು ಮತಕ್ಕೆ ಪ್ರತಿಕೂಲವಾದ ಶಾಸ್ತ್ರ.

**प्रतिताली ಪ್ರತಿತಾಲೀ** (स्त्री०) ಬೀಗದ ಕೈ.

**प्रतिदान ಪ್ರತಿದಾನ** (न०) 1. ವಿನಿಮಯ, ಒಂದು ವಸ್ತುವನ್ನು ಕೊಂಡು ಅದಕ್ಕೆ ಬದಲಾಗಿ ಮತ್ತೊಂದು ವಸ್ತುವನ್ನು ಕೊಡುವುದು. प्रतिरूपं दानम्। 2. ತನ್ನಲ್ಲಿಟ್ಟಿದ್ದ ವಸ್ತುವನ್ನು (ಅದರ ಯಜಮಾನನಿಗೆ) ಹಿಂತಿರುಗಿಸಿಕೊಡುವುದು, ಪ್ರತ್ಯರ್ಪಣ. "पुमानुपनिधिर्न्यासः प्रतिदानं तदर्पणम्" अम०।

**प्रतिदारण ಪ್ರತಿದಾರಣ** (न०) 1. ಯುದ್ಧ, ಕದನ, ಕಾಳಗ. प्रतिदार्यतेऽस्मिन् — प्रति + दॄ (विदारणे) कर० "ल्युट्" (३-३-११७)। 2. ಒಡೆಯುವುದು, ಸೀಳುವುದು.

**प्रतिदिन ಪ್ರತಿದಿನ** (अव्य०) ನಿತ್ಯವೂ, ಪ್ರತಿದಿವಸದಲ್ಲೂ, दिनेदिने। अव्ययी०। "प्रतिदिनमिदमादिमं प्रमोदं प्रणयविरोषसितासितैर्वचोभिः" याद० २४-५३।

**प्रतिदिवन् ಪ್ರತಿದಿವನ್** (पुं०) 1. ಸೂರ್ಯ. प्रतिदीव्यति —प्रति+दिवु (क्रीडादौ) "कनिन्" (उ० १-१५४)। प्रतिदीवन् ಪ್ರತಿದೀವನ್. पृषो०। 2. ದಿವಸ, ಹಗಲು. प्रतिदीव्यन्त्यस्मिन् — अधि० "कनिन्"।

**प्रतिदिश ಪ್ರತಿದಿಶ** (अव्य०) ಪ್ರತಿದಿಕ್ಕಿನಲ್ಲಿಯೂ. दिशि दिशि। अव्ययी०।

**प्रतिद्रुत ಪ್ರತಿದ್ರುತ** (वि०) ಅಭಿಮುಖವಾಗಿ ಓಡಿಬಂದ, ಎದುರಾಗಿ ಬಂದ. प्रति+द्रु (गतौ) "क्तः" (३-४-७२)।

"प्रतिद्वुतान् प्रार्दयत प्रकुप्यन् एकः समस्तानपि यादवाग्र्यान्" २०-३७।

**प्रतिद्वन्द्व ಪ್ರತಿದ್ವಂದ್ವ** (ಪುಂ) 1. ವೈರಿ, ಶತ್ರು, ಹಗೆ. (ನಂ) 2. ವೈರ, ಶತ್ರುತ್ವ, ವಿರೋಧ.

**प्रतिद्वन्द्विन् ಪ್ರತಿದ್ವಂದ್ವಿನ್** (ಪುಂ) 1. ಶತ್ರು, ವೈರಿ, ಹಗೆ. "तत्प्रतिद्वन्द्विना मूर्ध्नि दिव्याः कुसुमवृष्टयः" रघु० १५-२५। 2. ಪ್ರತಿಕೂಲವಾಗಿರುವ, ವಿರುದ್ಧವಾಗಿರುವ. प्रतिद्वन्द्वमस्यास्ति "इनिः" (५-२-११५)। "कृतान्तदुर्वृत्त इवापरेषां पुरः प्रतिद्वन्द्विनि पाण्डवास्त्रे" किरा० १६-२१। 3. ಪ್ರತಿಸ್ಪರ್ಧಿಸುವ, ಸಮಾನವಾದ, ಸದೃಶವಾದ. "अन्येभ्यो वनदेवताकरतलैरापर्वभागोत्थितैर्दत्तान्याभरणानि तत्किसलयोद्भेदप्रतिद्वन्द्विभिः" शाकु० ४-४।

**प्रतिध्वनि ಪ್ರತಿಧ್ವನಿ, -ध्वान -ಧ್ವಾನ** (ಪುಂ) ಎದುರು ಶಬ್ದ, ಮರುದನಿ, ಶಬ್ದವನ್ನು ಅನುಸರಿಸಿ ಹೊರಡುವ ಧ್ವನಿ. प्रतिरूपो ध्वनिः ध्वानो वा। "सभाभित्तिप्रतिध्वानैर्भयादन्ववदन्निव" माघ० २-६७।

**प्रतिनन्दन ಪ್ರತಿನಂದನ** (ನಂ) 1. ಅಭಿನಂದನೆ, ನಲ್ಮೆ ಹೇಳುವುದು, ಸಂತೋಷವನ್ನು ತಿಳಿಸುವುದು. प्रति+टु नदि (समृद्धौ) "ल्युट्" (३-३-११५)। 2. ಸಂತೋಷದಿಂದ ಒಪ್ಪಿಗೆ ಕೊಡುವುದು, ಮನಃಪೂರ್ವಕ ಸಂಮತಿಸುವುದು.

**प्रतिनप्तृ ಪ್ರತಿನಪ್ತೃ** (ಪುಂ) ಪ್ರಪೌತ್ರ, ಮೊಮ್ಮಗನ ಮಗ. प्रतिरूपो नप्ता।

**प्रतिनव ಪ್ರತಿನವ** (ವಿಂ) ನೂತನವಾದ, ಹೊಸದಾದ. प्रतिगतं नवम् नवताम्। "पश्चादुच्चैर्भुजतरुवनं मण्डलेनाभिलीनः सान्ध्यं तेजः प्रतिनवजपापुष्परक्तं दधानः" मेघ० १-३६।

**प्रतिनाद ಪ್ರತಿನಾದ** (ಪುಂ) ಪ್ರತಿಧ್ವನಿ, ಮರುದನಿ, ಎದುರು ಶಬ್ದ, ಅನುಸರಿಸಿ ಹೊರಡುವ ಶಬ್ದ. प्रतिरूपो नादः। "प्रतिनादपूरितदिगन्तरः पतन् पुरगोपुरं प्रति स सैन्यसागरः" माघ० १३-२७।

**प्रतिनादित ಪ್ರತಿನಾದಿತ** (ವಿಂ) ಪ್ರತಿಧ್ವನಿಯುಂಟುಮಾಡಲ್ಪಟ್ಟ. "प्रतिनादितामरविमानमानकैः" माघ० १३-२५।

**प्रतिनायक ಪ್ರತಿನಾಯಕ** (ಪುಂ) ಕಥಾನಾಯಕನಿಗೆ ವಿರೋಧಿಯಾದವನು, ಎದುರಾಳು, ಪ್ರತಿಕಕ್ಷಿ. प्रतिकूलो नायकः। ಭಯಂಕರವ್ಯಾಪಾರ ಅಹಂಕಾರ ಆತ್ಮಶ್ಲಾಘನೆ ಪಾಪಕಾರ್ಯ ಕಾಮಕ್ರೋಧಜ ವ್ಯಸನ ಇವುಗಳಿಂದ ಕೂಡಿದವನು ಪ್ರತಿನಾಯಕ. "धीरोद्धतः पापकारी व्यसनी प्रतिनायकः" सा० द० ३-१३१। ರಾಮಾಯಣದಲ್ಲಿ ಶ್ರೀರಾಮನಿಗೆ ರಾವಣನೂ ಮಹಾಭಾರತದಲ್ಲಿ ಯುಧಿಷ್ಠಿರನಿಗೆ ದುರ್ಯೋಧನನೂ ಪ್ರತಿನಾಯಕರು.

**प्रतिनिधि ಪ್ರತಿನಿಧಿ** (ಪುಂ) 1. ಬದಲಿಯವನು, ಒಬ್ಬನಿಗೆ ಬದಲಾಗಿ ನೇಮಿಸಲ್ಪಟ್ಟವನು, ಇನ್ನೊಬ್ಬನ ಕಾರ್ಯವನ್ನು ನಿರ್ವಹಿಸಲು ಅವನಿಗೆ ಸಮಾನನಾದವನು. प्रतिनिधीयते—प्रति + नि + डु धाञ् (धारणपोषणयोः) "किः" (३-३-९२)। "सुतां तदीयां सुरभेः कृत्वा प्रतिनिधिं शुचिः" रघु० १-८२। 2. ಪ್ರತಿಮೆ, ವಿಗ್ರಹ. 3. ಚಿತ್ರಪಟ. (ವಿಂ) 4. ಸದೃಶವಾದ, ಸಮಾನವಾದ.

**प्रतिनियत ಪ್ರತಿನಿಯತ** (ವಿಂ) ಮೊದಲೇ ಗೊತ್ತುಮಾಡಲ್ಪಟ್ಟ, ಮೊದಲೇ ನಿರ್ಣಯಿಸಲ್ಪಟ್ಟ.

**प्रतिनिर्दिष्ट ಪ್ರತಿನಿರ್ದಿಷ್ಟ** (ವಿಂ) ಇನ್ನೂ ವಿಶೇಷಾಂಶವನ್ನು ತಿಳಿಸಲು ಮತ್ತೆ ನಿರ್ದೇಶಿಸಿ ಹೇಳಲ್ಪಟ್ಟ ಪೂರ್ವೋಕ್ತ ವಿಷಯ. प्रतिनिर्दिश्यते—प्रति+निर्+दिश (अतिसर्जने) कर्मं० "क्तः" (३-२-१०२)।

**प्रतिनिर्देश ಪ್ರತಿನಿರ್ದೇಶ** (ಪುಂ) ಪೂರ್ವೋಕ್ತ ವಿಷಯವನ್ನು ಇನ್ನೂ ವಿಶೇಷ ರೀತಿಯಲ್ಲಿ ಹೇಳಲು ಮತ್ತೆ ನಿರ್ದೇಶಿಸಿ ಹೇಳುವುದು. प्रति + निर् + दिश (अतिसर्जने) "घञ्" (३-३-१८)।

**प्रतिनिर्देश्य ಪ್ರತಿನಿರ್ದೇಶ್ಯ** (ವಿಂ) ಮತ್ತೆ ನಿರ್ದೇಶಿಸಿ ಹೇಳಲ್ಪಡುವ. प्रति + निर् + दिश (अतिसर्जने) "ण्यत्" (३-१-१२४)। "उदेति सविता ताम्रस्ताम्र एवास्तमेति च" ಇಲ್ಲಿ ತಾಮ್ರ ಪದದ ಅರ್ಥವು ಬೇರೆ ಪದದಿಂದ ಹೇಳಲ್ಪಟ್ಟಿದ್ದರೆ ತಾಮ್ರ ಪದಾರ್ಥವು ತತ್‌ಕ್ಷಣ ಪ್ರತೀತವಾಗದೆ ಅರ್ಥಾಂತರದ ಜ್ಞಾನವುಂಟಾಗಿ ಪ್ರಕೃತಾರ್ಥದ ವಿಳಂಬಪ್ರತೀತಿಗೆ ಕಾರಣವಾಗಬಹುದಾದುದರಿಂದ ಮತ್ತೆ ತಾಮ್ರ ಪದವೇ ಪ್ರತಿನಿರ್ದೇಶಿಸಿ ಹೇಳಲ್ಪಟ್ಟಿದೆ.

**प्रतिनिर्यातन ಪ್ರತಿನಿರ್ಯಾತನ** (ನಂ) 1. ತನ್ನಲ್ಲಿ ಇಟ್ಟಿದ್ದ ವಸ್ತುವನ್ನು ಅದರ ಯಜಮಾನನಿಗೆ ಹಿಂತಿರುಗಿಸುವುದು, ಪ್ರತ್ಯರ್ಪಣ. प्रति+निर्+यत (निकारोपस्कारयोः) + णिच् "ल्युट्" (३-३-११५)। 2. ಸೇಡು ತೀರಿಸಿಕೊಳ್ಳುವುದು, ಮುಯ್ಯಿ ತೀರಿಸುವುದು, ಪ್ರತೀಕಾರಮಾಡುವುದು. 3. ಉಪಕಾರಕ್ಕೆ ಪ್ರತ್ಯುಪಕಾರ ಮಾಡುವುದು.

**प्रतिनिविष्ट ಪ್ರತಿನಿವಿಷ್ಟ** (ವಿಂ) ತನ್ನ ಮಾರ್ಗವನ್ನೇ ಹಿಡಿಯುವ ದುರಾಗ್ರಹವುಳ್ಳ, ಹಟಮಾರಿತನದ, ತನ್ನ

ಪ್ರಯತ್ನವನ್ನೇ ಬಿಡದೆ ಮುಂದುವರಿಸುವ. प्रति+नि+विश (प्रवेशने) "क्तः" (३-४-७२)। "न तु प्रतिनिविष्टमूर्खजनचित्तमाराधयेत्" भर्तृ० १-४।

**प्रतिनुदत् ಪ್ರತಿನುದತ್** (वि०) ಹಿಂದಕ್ಕೆ ಅಟ್ಟುತ್ತಿರುವ, ಹಿಂದಕ್ಕೆ ಓಡಿಸುತ್ತಿರುವ.

**प्रतिनोद ಪ್ರತಿನೋದ** (पुं०) ಹಿಂದಕ್ಕೆ ಅಟ್ಟುವುದು, ಹಿಮ್ಮೆಟ್ಟಿಸುವುದು, ಹಿಂದಕ್ಕೆ ಓಡಿಸುವುದು. प्रति + णुद (प्रेरणे) भावे "घञ्" (३-३-१८)। भावे "ल्युट्" (३-३-११५)। –नोदनम् –ನೋದನವು.

**प्रतिपक्ष ಪ್ರತಿಪಕ್ಷ** (पुं०) 1. ವೈರಿ, ಶತ್ರು, ಹಗೆ. प्रतिकूलः पक्षो यस्य। "दन्तैश्चिच्छिदिरे कोपात् प्रतिपक्षं गजा इव" माघ० १९-५५। 2. ಎದುರು ಪಕ್ಷ, ವಿರೋಧಿ ಪಕ್ಷ. प्रतिकूलः पक्षः। (वि०) 3. ವಿರುದ್ಧವಾದ, ವಿಘ್ನಕಾರಿಯಾದ. "तदलं प्रतिपक्षमुन्नतेरवलम्ब्य व्यवसायवन्ध्यताम्" किरा० २-१५। 4. ಸದೃಶವಾದ, ಸಮಾನವಾದ. 5. ಪ್ರತಿವಾದಿ, ಎದುರಾಳಿ.

**प्रतिपक्षित ಪ್ರತಿಪಕ್ಷಿತ** (पुं०) ದೋಷದಿಂದ ಕೂಡಿದ ಹೇತು, ಐದು ವಿಧ ಹೇತ್ವಾಭಾಸಗಳಲ್ಲೊಂದು ಭೇದ. प्रतिपक्षोऽस्य सञ्जातः "इतच्" (५-२-३६)। "अनैकान्तो विरुद्धश्चाप्यसिद्धः प्रतिपक्षितः। कालात्ययोपदिष्टश्च हेत्वाभासाश्च पञ्चधा" भाषाप०।

**प्रतिपक्षिन् ಪ್ರತಿಪಕ್ಷಿನ್** (पुं०) 1. ಶತ್ರು, ವೈರಿ, ಹಗೆ. 2. ಎದುರಾಳಿ, ಪ್ರತಿವಾದಿ. प्रतिपक्षोऽस्यास्ति "इनिः" (५-२-११५)।

**प्रतिपत्तव्य ಪ್ರತಿಪತ್ತವ್ಯ** (वि०) 1. ಸ್ವೀಕರಿಸಲ್ಪಡುವ, ಅಂಗೀಕರಿಸಲ್ಪಡುವ, ಒಪ್ಪಲ್ಪಡುವ. 2. ತೆಗೆದುಕೊಳ್ಳಲ್ಪಡುವ. 3. ಹೊಂದಲ್ಪಡುವ. 4. ಆಶ್ರಯಿಸಲ್ಪಡುವ. प्रति+पद (गतौ) "तव्यः" (३-१-९६)। 5. ಸ್ವೀಕರಿಸಬೇಕಾದ. 6. ಸಂಮತಿಸಬೇಕಾದ, ಒಪ್ಪಬೇಕಾದ. 7. ಪಡೆಯಬೇಕಾದ. 8. ಆಶ್ರಯಿಸಬೇಕಾದ.

**प्रतिपत्ति ಪ್ರತಿಪತ್ತಿ** (स्त्री०) 1. ಗೌರವ, ಮರ್ಯಾದೆ. प्रति + पद (गतौ) "क्तिन्" (३-३-९४)। "सामान्यप्रतिपत्तिपूर्वकमियं दारेषु दृश्या त्वया भाग्यायत्तमतःपरं न खलु तद्वाच्यं वधूबन्धुभिः" शाकु० ४-१६। 2. ಇತಿ ಕರ್ತವ್ಯತಾಜ್ಞಾನ, ಏನುಮಾಡಬೇಕೆಂಬ ಬುದ್ಧಿ. "वपुरादरातिशयशंसि पुनः प्रतिपत्तिमूढमपि बाढमभूत्" माघ० ९-७७। 3. ಪ್ರಾಪ್ತಿ, ಸಂಪಾದನೆ, ಹೊಂದುವಿಕೆ. 4. ಪ್ರವೃತ್ತಿ, ನಡವಳಿಕೆ, ಕಾರ್ಯ ನಡೆಸುವ ವಿಧಾನ. "भवत्यनिष्टादपि नाम दुःसहान्मनस्विनीनां प्रतिपत्तिरीदृशी" कुमा० ५-४२। "प्रतिपत्तिरधःकृतैनसो जनताभिस्तव साधु वर्ण्यते" माघ० १६-८। 5. ವರ್ತಮಾನ, ಸುದ್ದಿ, ಸಮಾಚಾರ. "स्वनगराय प्रस्थितं मां प्रिया सबाष्पमाह कियच्चिरेणार्यपुत्रः प्रतिपत्तिं दास्यतीति" शाकु० ६। 6. ಉಪಾಯ, ಯುಕ್ತಿ. 7. ಅಂಗೀಕಾರ, ಒಪ್ಪಿಗೆ, ಸಂಮತಿ. "चिरेणानुगुणं प्रोक्ता प्रतिपत्तिपराङ्मुखी" भट्टि० ८-९५। 8. ಜ್ಞಾನ, ತಿಳಿವಳಿಕೆ. "वागर्थाविव संपृक्तौ वागर्थप्रतिपत्तये। जगतः पितरौ वन्दे पार्वतीपरमेश्वरौ" रघु० १-१। 9. ಪ್ರಾಗಲ್ಭ್ಯ, ದಿಟ್ಟತನ. 10. ಕಾರ್ಯನಿರ್ವಹಣೆ, ಕಾರ್ಯಾಚರಣೆ, ಕಾರ್ಯವನ್ನು ನೆರವೇರಿಸುವಿಕೆ. "कविमाह्वाययामास प्रस्तुतप्रतिपत्तये" रघु० १५-७५। 11. ಬುದ್ಧಿ. 12. ಪದ ಪ್ರಾಪ್ತಿ. "प्रतिपत्तिः प्रवृत्तौ च प्रागल्भ्ये गौरवेऽपि च। संप्राप्तौ च प्रबोधे च पदप्राप्तौ च योषिति" मेदि०। 13. ಪುನಃ ಪಡೆಯುವುದು, ಮತ್ತೆ ಹೊಂದುವುದು. 14. ಪ್ರತಿಭೆ, ಹೊಸ ಹೊಸದಾಗಿ ಹೊಳೆಯುವ ಬುದ್ಧಿ. 15. ಕೀರ್ತಿ, ಯಶಸ್ಸು.

**प्रतिपत्तिमत् ಪ್ರತಿಪತ್ತಿಮತ್** (वि०) 1. ತಿಳಿವಳಿಕೆಯುಳ್ಳ, ಬುದ್ಧಿವಂತ. 2. ಕೀರ್ತಿಶಾಲಿ, ಪ್ರಖ್ಯಾತಿ ಪಡೆದವನು. प्रतिपत्तिरस्यास्ति "मतुप्" (५-२-९४)।

**प्रतिपथ ಪ್ರತಿಪಥ** (वि०) 1. ಮಾರ್ಗವನ್ನು ಅನುಸರಿಸಿರುವ, ದಾರಿಯನ್ನು ಅನುಸರಿಸಿ ಹೋಗುವ. पन्थानमनुगतः। "प्रतिपथगतिरासीद्वेगदीर्घीकृताङ्गः" कुमा० ३-७६। (अव्य०) 2. ಪ್ರತಿ ಮಾರ್ಗದಲ್ಲಿಯೂ. "प्रमथितभूभृतः प्रतिपथं मथितस्य भृशं महीयसा" माघ० ३-८२।

**प्रतिपद् ಪ್ರತಿಪದ್** (स्त्री०) 1. ಶುಕ್ಲ ಮತ್ತು ಕೃಷ್ಣ ಪಕ್ಷಗಳ ಮೊದಲನೆಯ ತಿಥಿ. प्रतिपद्यते उपक्रम्यतेऽनया पक्षो मासो वा — प्रति + पद (गतौ) "क्विप्" (वा० ३-३-१०८)। 2. ಬುದ್ಧಿ, ಪ್ರಜ್ಞೆ, ತಿಳಿವಳಿಕೆ.

**प्रतिपद ಪ್ರತಿಪದ** (अव्य०) 1. ಮತ್ತೆ ಮತ್ತೆ, ಪುನಃ ಪುನಃ, ಪದೆ ಪದೆ. पदे पदे — वीप्सायाम् अव्ययी०। "प्रहरकमपनीय स्वं निदिद्रासतोच्चैः प्रतिपदमुपहूतः केनचिज्जागृहीति" माघ० ११-४। 2. ಪ್ರತಿಯೊಂದು ಜಾಗದಲ್ಲಿಯೂ. "शिथिलितकुसुमाकुलाग्रपाणिः प्रतिपदसंयमितांशुकावृताङ्गी" माघ० ७-३६। 3. ಪ್ರತಿಯೊಂದು ಪದದಲ್ಲಿಯೂ. 4, ಪ್ರತಿಯೊಂದು ಹೆಜ್ಜೆಯಲ್ಲಿಯೂ.

**प्रतिपद्यमान ಪ್ರತಿಪದ್ಯಮಾನ** (वि०) 1. ಹೊಂದುತ್ತಿರುವ. 2. ತಿಳಿಯುತ್ತಿರುವ. "वृत्तं रहः प्रणयमप्रतिपद्यमाने" शाकु० ५-२३।

**प्रतिपन्न ಪ್ರತಿಪನ್ನ** (वि०) 1. ತಿಳಿಯಲ್ಪಟ್ಟ. प्रति+पद (गतौ) "क्तः" (३-२-१०२)। "प्रमदाः पतिवर्त्मगा इति प्रतिपन्नं हि विचेतनैरपि" कुमा० ४-३३। 2. ಹೊಂದಲ್ಪಟ್ಟ, ಪಡೆಯಲ್ಪಟ್ಟ. "शापावसाने प्रतिपन्नमूर्तेर्ययाचिरे पञ्चशरस्य सेवाम्" कुमा० ७-९२। 3. ಅಂಗೀಕರಿಸಲ್ಪಟ್ಟ, ಒಪ್ಪಲ್ಪಟ್ಟ. "आशंसता बाणगतिं वृषाङ्के कार्यं त्वया नः प्रतिपन्नकल्पम्" कुमा० ३-१४। 4. ಕೈಗೊಂಡ ಕಾರ್ಯ, ವಹಿಸಿಕೊಂಡಿರುವ ಕೆಲಸ, ಅಂಗೀಕರಿಸಲ್ಪಟ್ಟ ಕಾರ್ಯ. "किन्त्वङ्गीकृतमुत्सृजन् कृपणवत् श्लाघ्यो जनो लज्जते निर्वाहः प्रतिपन्नवस्तुषु सतामेतद्धि गोत्रव्रतम्" मुद्रा० २-१८। 5. ಸಂಪಾದಿಸಲ್ಪಟ್ಟ. 6. ಹಿಡಿದುಕೊಳ್ಳಲ್ಪಟ್ಟ. "रथं सुमन्त्रप्रतिपन्नरश्मिम्" रघु० १४-४७।

**प्रतिपादक ಪ್ರತಿಪಾದಕ** (वि०) 1. ಕೊಡುವ, ದಾನ ಮಾಡುವ. प्रति + पद (गतौ) + णिच् "ण्वुल्" (३-१-१३३)। 2. ತಿಳಿಸುವ, ಬೋಧಿಸುವ. "स्वगतनानात्वशून्यं ब्रह्मतत्त्वमिति प्रतिपादकेषु वेदान्तेषु जागरूकेषु कथमशेषगुणत्वम्" स० द० सं०। 3. ವಿವರಿಸಿ ಹೇಳುವ, ವಿಸ್ತಾರವಾಗಿ ತಿಳಿಯಪಡಿಸುವ. 4. ಸಮರ್ಥಿಸುವ, ದೃಢಪಡಿಸುವ, ಸ್ಥಿರಪಡಿಸುವ. स्त्रियां "टाप्" (४-१-४)। –पादिका –ಪಾದಿಕಾ.

**प्रतिपादन ಪ್ರತಿಪಾದನ** (न०) 1. ತಿಳಿಸುವುದು, ಬೋಧಿಸುವುದು. प्रति+पद (गतौ) +णिच् "ल्युट्" (३-३-११५)। "प्रतिपादनं तु दाने प्रतिपत्तौ च बोधने" मेदि०। 2. ದಾನ, ಕೊಡುಗೆ. "प्रतिश्रुतार्धराज्यप्रतिपादनेऽपि पर्वतकविनाशः केवलं कृतघ्नतामात्रफलः स्यात्" मुद्रा० ३। 3. ವಿವರವಾಗಿ ತಿಳಿಸುವಿಕೆ, ವಿಸ್ತಾರವಾಗಿ ಹೇಳುವುದು. 4. ಸ್ಥಿರಪಡಿಸುವುದು, ದೃಢಪಡಿಸುವುದು, ಸಮರ್ಥಿಸುವುದು, ಸಾಧಿಸುವುದು.

**प्रतिपादनीय ಪ್ರತಿಪಾದನೀಯ** (वि०) 1. ತಿಳಿಸಲ್ಪಡುವ, ಅವಶ್ಯವಾಗಿ ಬೋಧಿಸಲ್ಪಡುವ. प्रति + पद (गतौ) + णिच् "अनीयर्" (३-१-९६)। 2. ವಿವರಿಸಿ ಹೇಳಲ್ಪಡುವ, ವಿಸ್ತರಿಸಲ್ಪಡುವ. 3. ದಾನಮಾಡಲ್ಪಡಬೇಕಾದ, ಕೊಡಲ್ಪಡಬೇಕಾದ. "गुणवते कन्यका प्रतिपादनीयेत्ययं तावत्प्रथमः संकल्पः" शाकु० ४। 4. ತಿಳಿಸಲ್ಪಡಬೇಕಾದ. 5. ಸ್ಥಿರಪಡಿಸಲ್ಪಡಬೇಕಾದ, ಸಮರ್ಥಿಸಲ್ಪಡಬೇಕಾದ. 6. ವಿವರಿಸಿ ಹೇಳಲ್ಪಡಬೇಕಾದ.

**प्रतिपादयितृ ಪ್ರತಿಪಾದಯಿತೃ** (वि०) "प्रतिपादक" ಪದದ ಅರ್ಥ. प्रति + पद (गतौ) + णिच् "तृच्" (३-१-१३३)। स्त्रियां "ङीप्" (४-१-५)। –यित्री –ಯಿತ್ರೀ.

**प्रतिपादयत् ಪ್ರತಿಪಾದಯುತ್** (वि०) 1. ಕೊಡುತ್ತಿರುವ, ದಾನಮಾಡುತ್ತಿರುವ. प्रति + पद (गतौ) + णिच् "शतृ" (३-२-१२४)। 2. ತಿಳಿಸುವ, ಬೋಧಿಸುತ್ತಿರುವ. 3. ವಿಸ್ತಾರವಾಗಿ ವಿವರಿಸಿ ಹೇಳುತ್ತಿರುವ. 4. ವಿಷಯವನ್ನು ದೃಢಪಡಿಸಿ ಸಮರ್ಥಿಸುತ್ತಿರುವ, ನಿದರ್ಶನದಿಂದ ವ್ಯಕ್ತಪಡಿಸುತ್ತಿರುವ. स्त्रियां "ङीप्" (४-१-६)। –पादयन्ती –ಪಾದಯುನ್ತೀ.

**प्रतिपादित ಪ್ರತಿಪಾದಿತ** (वि०) 1. ತಿಳಿಸಲ್ಪಟ್ಟ. प्रति+पद (गतौ) +णिच् "क्तः" (३-२-१०२)। 2. ವಿವರಿಸಿ ಹೇಳಲ್ಪಟ್ಟ. 3. ಕೊಡಲ್ಪಟ್ಟ, ದಾನಮಾಡಲ್ಪಟ್ಟ. "गुरुभिः प्रतिपादितां वधूमपहृत्य स्वजनस्य भूपतेः" माघ० १६-४९। 4. ಸ್ಥಿರಪಡಿಸಲ್ಪಟ್ಟ, ನಿದರ್ಶನದಿಂದ ಸಮರ್ಥಿಸಿ ದೃಢಪಡಿಸಲ್ಪಟ್ಟ.

**प्रतिपादुक ಪ್ರತಿಪಾದುಕ** (वि०) ಹೊಂದುತ್ತಿರುವ, ಪಡೆಯುತ್ತಿರುವ. प्रति + पद (गतौ) "उकञ्" (३-२-१५४)। "प्रक्रान्ति प्रतिपादुकैश्च पादैश्चक्लृपे भानुमतः पुनःप्रसर्तुम्" माघ० २०-३९।

**प्रतिपाद्य ಪ್ರತಿಪಾದ್ಯ** (वि०) 1. ತಿಳಿಸಲ್ಪಡುವ. प्रति+पद (गतौ) +णिच् "ण्यत्" (३-१-१२४)। 2. ವಿವರಿಸಲ್ಪಡುವ, ವಿಸ್ತರಿಸಿ ಹೇಳಲ್ಪಡುವ. 3. ದಾನಮಾಡಲ್ಪಡುವ, ಕೊಡಲ್ಪಡುವ. "अर्थिने न तृणवद्धनमात्रं किन्तु जीवनमपि प्रतिपाद्यम्" नैष० ५-८६। 4. ಸಮರ್ಥಿಸಲ್ಪಡುವ, ನಿದರ್ಶನದಿಂದ ದೃಢಪಡಿಸಲ್ಪಡುವ.

**प्रतिपाद्यमान ಪ್ರತಿಪಾದ್ಯಮಾನ** (वि०) 1. ತಿಳಿಸಲ್ಪಡುತ್ತಿರುವ. प्रति + पद (गतौ) +णिच् कर्म० "शानच्" (३-२-१२४)। 2. ವಿವರಿಸಿ ಹೇಳಲ್ಪಡುತ್ತಿರುವ, ವಿಸ್ತಾರವಾಗಿ ನಿರೂಪಿಸಲ್ಪಡುತ್ತಿರುವ. 3. ಉದಾಹರಣೆಗಳಿಂದ ಸಾಧಿಸಲ್ಪಡುತ್ತಿರುವ, ದೃಢಪಡಿಸಲ್ಪಡುತ್ತಿರುವ. 4. ದಾನಮಾಡಲ್ಪಡುತ್ತಿರುವ, ಕೊಡಲ್ಪಡುತ್ತಿರುವ. "अर्थिस्यः प्रतिपाद्यमानमनिशं प्राप्नोति वृद्धिं पराम्" भर्तृ० १-१२।

**प्रतिपालक ಪ್ರತಿಪಾಲಕ** (वि०) 1. ಕಾಪಾಡುವವನು, ರಕ್ಷಿಸುವವನು. प्रति + पाल (रक्षणे) + णिच् "ण्वुल्"

(३-१-१३३)। 2. ಪ್ರತೀಕ್ಷಿಸುವವನು, ಎದುರುನೋಡುತ್ತಿರುವವನು. 3. ಅನುಸರಿಸಿ ನಡೆಯುವವನು, ಪಾಲಿಸುವವನು.

**प्रतिपालन ಪ್ರತಿಪಾಲನ** (न०) 1. ಪ್ರತೀಕ್ಷಿಸುವುದು, ಎದುರು ನೋಡುವುದು. प्रति + पाल (रक्षणे) + णिच् "ल्युट्" (३-३-११५)। 2. ಕಾಪಾಡುವುದು, ರಕ್ಷಿಸುವುದು. 3. ಅನುಸರಿಸಿ ನಡೆಯುವುದು, ಪಾಲಿಸುವುದು.

**प्रतिपालनीय ಪ್ರತಿಪಾಲನೀಯ** (वि०) 1. ನಿರೀಕ್ಷಿಸಲ್ಪಡುವ. 2. ಪಾಲಿಸಲ್ಪಡುವ, ಅನುಸರಿಸಿ ಆಚರಿಸಲ್ಪಡುವ. 3. ಕಾಪಾಡಲ್ಪಡುವ, ರಕ್ಷಿಸಲ್ಪಡುವ. 4. ನಿರೀಕ್ಷಿಸಬೇಕಾದ. 5. ಪಾಲಿಸಬೇಕಾದ, ಅನುಸರಿಸಿ ನಡೆಯಬೇಕಾದ. 6. ರಕ್ಷಿಸಬೇಕಾದ. प्रति + पाल (रक्षणे) + णिच् "अनीयर्" (३-१-९६)। "तव्य:" । **–पालयितव्य: –ಪಾಲಯಿತವ್ಯಃ.**

**प्रतिपालयत् ಪ್ರತಿಪಾಲಯತ್** (वि०) 1. ನಿರೀಕ್ಷಿಸುತ್ತಿರುವ, ಪ್ರತೀಕ್ಷಿಸುತ್ತಿರುವ, ಎದುರುನೋಡುತ್ತಿರುವ. प्रति + पाल (रक्षणे) + णिच् "शतृ" (३-२-१२४)। "गतमच्युतेन सह शून्यतां गत: प्रतिपालयन् मन इवाङ्गनाजन:" माघ० १३-४७ । 2. ಕಾಪಾಡುತ್ತಿರುವ, ರಕ್ಷಿಸುತ್ತಿರುವ. 3. ಅನುಸರಿಸಿ ನಡೆಯುತ್ತಿರುವ, ಪಾಲಿಸಿ ಆಚರಿಸುತ್ತಿರುವ. स्त्रियां "ङीप्" (४-१-६)। **–पालयन्ती –ಪಾಲಯನ್ತೀ.**

**प्रतिपालित ಪ್ರತಿಪಾಲಿತ** (वि०) 1. ಕಾಪಾಡಲ್ಪಟ್ಟ, ರಕ್ಷಿಸಲ್ಪಟ್ಟ. प्रति + पाल (रक्षणे) + णिच् "क्त:" (३-२-१०२)। 2. ನಿರೀಕ್ಷಿಸಲ್ಪಟ್ಟ, ಎದುರುನೋಡಲ್ಪಟ್ಟ. "जलधरावलिरप्रतिपालितस्वसमया समयाज्जगतीधरम्" माघ० ६-२५। 3. ಪಾಲಿಸಲ್ಪಟ್ಟ, ಅನುಸರಿಸಿ ಆಚರಿಸಲ್ಪಟ್ಟ.

**प्रतिपाल्य ಪ್ರತಿಪಾಲ್ಯ** (वि०) 1. ಕಾಪಾಡಲ್ಪಡುವ. 2. ನಿರೀಕ್ಷಿಸಲ್ಪಡುವ, ಎದುರುನೋಡಲ್ಪಡುವ. 3. ಅನುಸರಿಸಿ ಆಚರಿಸಲ್ಪಡುವ, ಪಾಲಿಸಲ್ಪಡುವ. प्रति + पाल (रक्षणे)+णिच् "यत्" (३-१-९७)।

**प्रतिपिपादयिषत् ಪ್ರತಿಪಿಪಾದಯಿಷತ್** (वि०) 1. ಪ್ರತಿಪಾದನೆ ಮಾಡಲು ಅಪೇಕ್ಷಿಸುತ್ತಿರುವ. 2. ದಾನಮಾಡಲು ಅಪೇಕ್ಷಿಸುತ್ತಿರುವ. प्रति + पद (गतौ) +णिच्+सन् "शतृ" (३-२-१२४)।

**प्रतिपिपादयिषा ಪ್ರತಿಪಿಪಾದಯಿಷಾ** (स्त्री०) 1. ಪ್ರತಿಪಾದನೆ ಮಾಡಲು ಅಪೇಕ್ಷೆ. प्रतिपादयितुमिच्छा—प्रति + पद (गतौ) + णिच् + सन् "अ:" (३-३-१०२)। 2. ದಾನಮಾಡಲು ಅಪೇಕ್ಷೆ.

**प्रतिपिपादयिषु ಪ್ರತಿಪಿಪಾದಯಿಷು** (वि०) 1. ಪ್ರತಿಪಾದನೆ ಮಾಡಲು ಅಪೇಕ್ಷಿಸುವ. प्रति+ पद (गतौ) + णिच्+सन् "उ:" (३-२-१६८)। 2. ದಾನಮಾಡಲು ಅಪೇಕ್ಷಿಸುವ, ಕೊಡಲು ಇಚ್ಛಿಸುವ.

**प्रतिपुरुष ಪ್ರತಿಪುರುಷ** (पुं०) 1. ಬದಲಿ ಮನುಷ್ಯ, ಪ್ರತಿನಿಧಿ. 2. ಮನೆಯೊಳಗೆ ಯಾರಾದರೂ ಎಚ್ಚರದಿಂದಿರುವರೆ ಎಂಬುದನ್ನು ತಿಳಿದುಕೊಳ್ಳಲು ಚೋರ (ಕಳ್ಳ) ರು ಮೊದಲು ಮನೆಯೊಳಗೆ ತಳ್ಳಿ ನೋಡುವ ಮನುಷ್ಯನ ಒಂದು ಆಕೃತಿ. प्रतिरूप: पुरुष:। (अव्य०) 3. ಪ್ರತಿಯೊಬ್ಬ ಮನುಷ್ಯನಿಗೂ, ಪ್ರತಿಯೊಬ್ಬನಿಗೂ.

**प्रतिपुस्तक ಪ್ರತಿಪುಸ್ತಕ** (न०) ಒಂದು ಪುಸ್ತಕಕ್ಕೆ ಪ್ರತಿರೂಪವಾದ ಪುಸ್ತಕ, ಮೂಲಪ್ರತಿಯ ನಕಲು, ಹಸ್ತಪ್ರತಿ.

**प्रतिपूजन ಪ್ರತಿಪೂಜನ** (न०) ಬದಲು ಮರ್ಯಾದೆ ಮಾಡುವುದು, ಮಾಡಿದ ಮರ್ಯಾದೆಗೆ ಪ್ರತಿಯಾಗಿ ಗೌರವಿಸುವುದು.

**प्रतिपूजित ಪ್ರತಿಪೂಜಿತ** (वि०) ತೋರಿಸಿದ ಗೌರವಕ್ಕೆ ಪ್ರತಿಯಾಗಿ ಗೌರವಿಸಲ್ಪಟ್ಟ.

**प्रतिप्रणाम ಪ್ರತಿಪ್ರಣಾಮ** (पुं०) ಬದಲು ನಮಸ್ಕಾರ, ನಮಸ್ಕಾರಕ್ಕೆ ಬದಲಾಗಿ ಮಾಡುವ ನಮಸ್ಕಾರ.

**प्रतिप्रदान ಪ್ರತಿಪ್ರದಾನ** (न०) 1. ಬದಲಾಗಿ ಕೊಡುವುದು, ಒಂದು ವಸ್ತುವಿಗೆ ಬದಲಾಗಿ ಮತ್ತೊಂದು ವಸ್ತುವನ್ನು ಕೊಡುವುದು. प्रति+प्र+डु दाञ् (दाने) "ल्युट्" (३-३-११५) । 2. ತಂದ ವಸ್ತುವನ್ನು ಹಿಂತಿರುಗಿಸಿ ಕೊಡುವುದು, ವಸ್ತುವನ್ನು ಅದರ ಯಜಮಾನನಿಗೆ ಹಿಂತಿರುಗಿಸುವುದು. "मम प्रतिप्रदानं हि रावणस्य न रोचते" रामा० ।

**प्रतिप्रिय ಪ್ರತಿಪ್ರಿಯ** (न०) ಪ್ರತ್ಯುಪಕಾರ, "प्रतिप्रियं चेद्भवतो न कुर्यां वृथा हि मे स्यात्स्वपदोपलब्धि:" रघु० ५-५६ ।

**प्रतिप्रयाण ಪ್ರತಿಪ್ರಯಾಣ** (न०) ಹಿಂತಿರುಗುವುದು, ಹಿಂತಿರುಗಿ ಹೋಗುವುದು, –ಬರುವುದು.

**प्रतिप्रसव ಪ್ರತಿಪ್ರಸವ** (पुं०) ಒಂದು ಸಾಮಾನ್ಯವಾಗಿ ನಿಷೇಧಿಸಿರುವ ವಿಷಯವನ್ನು ಮತ್ತೆ ವಿಧಿಸುವುದು, ಸಾಮಾನ್ಯಶಾಸ್ತ್ರದಿಂದ ನಿಷೇಧಿಸಲ್ಪಟ್ಟ ವಿಷಯವನ್ನು ವಿಶೇಷ ಶಾಸ್ತ್ರದಿಂದ ವಿಧಿಸುವುದು. "तृजकाभ्यां कर्तरि" (२-२-१५) ಸೂತ್ರದಿಂದ ಸಾಮಾನ್ಯವಾಗಿ ಉಕ್ತವಾದ

ಷಷ್ಠೀ ಸಮಾಸ ನಿಷೇಧಕ್ಕೆ "याजकादिभिश्च" (२-२-९) ಸೂತ್ರದಿಂದ ಉಕ್ತವಾದ ವಿಶೇಷ ರೀತಿಯ ಷಷ್ಠೀ ಸಮಾಸ ವಿಧಾನವು ಪ್ರತಿಪ್ರಸವ. "तृजकाभ्यां कर्तरि" इत्यस्य प्रतिप्रसवोऽयम् सि० कौ०।

**प्रतिप्रस्थान ಪ್ರತಿಪ್ರಸ್ಥಾನ** (न०) 1. ವಿರುದ್ಧ ಪಕ್ಷವನ್ನು ಸೇರುವುದು, ಶತ್ರುಗಳ ಕಡೆ ಸೇರುವುದು. प्रतिकूलं प्रस्थानम्। 2. ಪ್ರತ್ಯುತ್ಥಾನ, ಎದುರುಗೊಳ್ಳುವುದು. "भरत्यासच्छन्नप्रबलवृजिनप्राभृतभृतां प्रतिप्रस्थानं ते श्रुतिनगरशृङ्गाटकजुषः" दयाश०।

**प्रतिप्रहार ಪ್ರತಿಪ್ರಹಾರ** (पुं०) ಎದುರು ಏಟು, ಬದಲು ಹೊಡೆತ, ಹೊಡೆದ ಏಟಿಗೆ ಪ್ರತಿಯಾಗಿ ಹೊಡೆಯುವುದು. प्रतिरूपः प्रहारः।

**प्रतिफल ಪ್ರತಿಫಲ** (न०) 1. ಪ್ರತಿಬಿಂಬ, ಮಾರ್ಪೊಳಪು, ಸ್ವಚ್ಛವಾದ ವಸ್ತುವಿನೊಳಗೆ ಕಾಣುವ ಬೇರೆ ವಸ್ತುವಿನ ನೆರಳು. प्रतिफलति—प्रति+फल (निष्पत्तौ) "अच्" (३-१-१३४)। "प्रतिफलमवलोक्य स्वीयमिन्दोः कलायां हरशिरसि परस्यावासमाशङ्कमाना"। 2. ಶ್ರಮಕ್ಕೆ ತಕ್ಕ ಪ್ರಯೋಜನ, ಸಲ್ಲಿಸಿದ ಸೇವೆಗೆ ತಕ್ಕ ಫಲ. 3. ಪ್ರತ್ಯುಪಕಾರ, ಮುಯ್ಯಿ.

**प्रतिफलत् ಪ್ರತಿಫಲತ್** (वि०) ಪ್ರತಿಬಿಂಬಿಸುವ, ಸ್ವಚ್ಛವಾದ ವಸ್ತುವಿನಲ್ಲಿ ಸಂಬಂಧ ಹೊಂದುವ. प्रति + फल (निष्पत्तौ) "शतृ" (३-२-१२४)। "अमलात्मसु प्रतिफलन्नभितस्तरुणीकपोलफलकेषु मुहुः" माघ० ९-३७।

**प्रतिफलन ಪ್ರತಿಫಲನ** (न०) 1. ಪ್ರತಿಬಿಂಬಿಸುವುದು, ಸ್ವಚ್ಛವಾದ ವಸ್ತುವಿನಲ್ಲಿ ಸಂಬಂಧ ಹೊಂದಿದ ಮತ್ತೊಂದು ವಸ್ತುವಿನ ನೆರಳು. प्रति + फल (निष्पत्तौ) "ल्युट्" (३-३-११५)। 2. ಶ್ರಮಕ್ಕೆ ತಕ್ಕ ಪ್ರಯೋಜನ ಪಡೆಯುವುದು. 3. ಪ್ರತ್ಯುಪಕಾರ.

**प्रतिफलित ಪ್ರತಿಫಲಿತ** (वि०) ಪ್ರತಿಬಿಂಬಿಸಿದ, ಸ್ವಚ್ಛವಾದ ಒಂದು ವಸ್ತುವಿನಲ್ಲಿ ಕಾಣಿಸಿಕೊಂಡ, ಸ್ವಚ್ಛವಾದ ಬೇರೆ ವಸ್ತುವಿನೊಳಗೆ ಸಂಬಂಧ ಹೊಂದಿದ. प्रति+ फल (निष्पत्तौ) "क्तः" (३-४-७२)।

**प्रतिबद्ध ಪ್ರತಿಬದ್ಧ** (वि०) 1. ತಡೆಯಲ್ಪಟ್ಟ, ಅಡ್ಡಿಪಡಿಸಲ್ಪಟ್ಟ. प्रति+बन्ध (बन्धने) "क्तः" (३-२-१०२)। "नृपः पुरस्थैः प्रतिबद्धवर्त्मा पश्चात्तनैः कश्चन नुद्यमानः" नैष० १०-६। 2. ಕಟ್ಟಿಹಾಕಲ್ಪಟ್ಟ. "वनाय पीतप्रतिबद्धवत्सां यशोधनो धेनुमृषेर्मुमोच" रघु० २-१। 3. ಭಗ್ನ ಮನೋರಥ, ಆಶೆಯನ್ನು ತೊರೆದಿರುವ, ಉತ್ಸಾಹಹೀನನಾದ. 4. ಇಡಲ್ಪಟ್ಟ, ಸೇರಿಸಲ್ಪಟ್ಟ. "तौ सन्धिषु व्यञ्जितवृत्तिभेदं रसान्तरेषु प्रतिबद्धरागम्" कुमा० ७-९१।

**प्रतिबध्नत् ಪ್ರತಿಬಧ್ನತ್** (वि०) ತಡೆಯುತ್ತಿರುವ, ಅಡ್ಡಿಪಡಿಸುತ್ತಿರುವ. प्रति + बन्ध (बन्धने) "शतृ" (३-२-१२४)। स्त्रियां "ङीप्" (४-१-६)। **–बध्नती –ಬಧ್ನತೀ.** "निबिडपीनकुचद्वययन्त्रणा तमपराधमदात्प्रतिबध्नती" नैष० ४-१०१

**प्रतिबध्यमान ಪ್ರತಿಬಧ್ಯಮಾನ** (वि०) 1. ತಡೆಯಲ್ಪಡುತ್ತಿರುವ. 2. ಕಟ್ಟಲ್ಪಡುತ್ತಿರುವ. प्रति+बन्ध (बन्धने) कर्म० "शानच्" (३-२-१२४)।

**प्रतिबन्ध ಪ್ರತಿಬಂಧ** (पुं०) 1. ಅಡ್ಡಿ, ತಡೆ, ಅತಂಕ. प्रति+बन्ध (बन्धने) "घञ्" (३-३-१८)। "शक्तिर्हि कालस्य विभोर्जरात्या शक्त्यन्तराणां प्रतिबन्धहेतुः" म० वी० ५-४। 2. ಶತ್ರುಗಳನ್ನು ತಡೆಗಟ್ಟುವುದು, 3. ಎಲ್ಲಾ ಕಡೆಯಲ್ಲೂ ಸಂಬಂಧ ಹೊಂದುವುದು.

**प्रतिबन्धक ಪ್ರತಿಬಂಧಕ** (वि०) 1. ಅಡ್ಡಿಪಡಿಸುವ, ತಡೆಯೊಡ್ಡುವ. प्रति+बन्ध (बन्धने) "ण्वुल्" (३-१-१३३)। "त्यागिनो निष्कलङ्कस्य को दोषोऽस्य महीपतेः। ममापुण्यं तु तन्निन्द्यं यच्छ्रेयःप्रतिबन्धकम्"। 2. ಕಟ್ಟಿಹಾಕುವವನು. स्त्रियां "टाप्" **प्रतिबन्धिका ಪ್ರತಿಬಂಧಿಕಾ.**

**प्रतिबन्धन ಪ್ರತಿಬಂಧನ** (न०) 1. ಕಟ್ಟಿಹಾಕುವುದು. प्रति+बन्ध (बन्धने) "ल्युट्" (३-३-११५)। 2. ತಡೆಯುವುದು, ಅಡ್ಡಿಪಡಿಸುವುದು.

**प्रतिबन्धनीय ಪ್ರತಿಬಂಧನೀಯ** (वि०) 1. ಅಡ್ಡಿಪಡಿಸಲ್ಪಡುವ, ತಡೆಯಲ್ಪಡುವ. प्रति + बन्ध (बन्धने) "अनीयर्" (३-१-९६)। 2. ಕಟ್ಟಲ್ಪಡುವ. 3. ಕಟ್ಟಲು ಅರ್ಹವಾದ. 4. ಕಟ್ಟಬೇಕಾದ. 5. ತಡೆಯಲು ಅರ್ಹವಾದ. 6. ತಡೆಯಬೇಕಾದ. "तव्यः" (३-१-९६)। **–बन्द्धव्यम् –ಬಂದ್ಧವ್ಯಮ್.**

**प्रतिबन्ध्य ಪ್ರತಿಬಂಧ್ಯ** (वि०) 1. ಕಟ್ಟಲ್ಪಡುವ. 2. ತಡೆಯಲ್ಪಡುವ. प्रति + बन्ध (बन्धने) "ण्यत्" (३-१-१२४)।

**प्रतिबल ಪ್ರತಿಬಲ** (वि०) 1. ಶಕ್ತ, ಸಮರ್ಥ. प्रतिगतं बलमस्य। 2. ಶತ್ರುವಿಗೆ ಸಮಾನ ಬಲವುಳ್ಳ. प्रतिरूपं बलं यस्य। (न०) 3. ಶತ್ರುಸೈನ್ಯ, ಪ್ರತಿಪಕ್ಷದ ಸೇನೆ. "अस्त्रज्वालावलीढप्रतिबलजलधेरन्तरौर्वायमाणे" वेणी०

३-७। 4. ಶಕ್ತಿ, ಸಾಮರ್ಥ್ಯ. 5. ಶತ್ರು, ಹಗೆ, ವೈರಿ. प्रतिकूलं बलमस्य।

**प्रतिबिम्ब ಪ್ರತಿಬಿಂಬ** (पुंन०) 1. ಮಾರ್ಪೊಳಪು, ಪ್ರತಿಫಲನ, ಸ್ವಚ್ಛ ವಸ್ತುವಿನಲ್ಲಿ ತೋರುವ ಒಂದು ವಸ್ತುವಿನ ನೆರಳು. प्रतिरूपो बिम्बः। "परिखाकपटस्फुटस्फुरत्प्रतिबिम्बानवलम्बिताम्बुनि" नैष० २-७९। 2. ವಿಗ್ರಹ, ಪ್ರತಿಮೆ. (वि०) 3. ಸದೃಶವಾದ, ಸಮಾನವಾದ. "अस्या मुखेन्दावधरः सुधाभूबिम्बस्य युक्तः प्रतिबिम्ब एषः" नैष० ७-३८।

**प्रतिबिम्बित ಪ್ರತಿಬಿಂಬಿತ** (वि०) ಪ್ರತಿಫಲಿಸಿರುವ, ಸ್ವಚ್ಛ ವಸ್ತುವಿನಲ್ಲಿ ತದ್ವತ್ತಾಗಿ ಕಾಣುವ. प्रतिबिम्बोऽस्य सञ्जातः "इतच्" (५-२-३६)। "विरहपाण्डुकपोलतले विधुर्व्यधित भीमभुवः प्रतिबिम्बितः" नैष० ४-२६।

**प्रतिबुद्ध ಪ್ರತಿಬುದ್ಧ** (वि०) 1. ಜಾಗರೂಕನಾಗಿರುವ, ಅವಧಾನದಿಂದ ಕೂಡಿದ. प्रति+बुध (अवगमने) "क्तः" (३-४-७२)। 2. ನಿದ್ದೆಯಿಂದ ಎಚ್ಚರಗೊಂಡಿರುವ. "प्रतिबुद्धापि किं करिष्ये। न म उचितेष्वपि निजकार्येषु हस्तपादं प्रसरति" शाकु० ४। 3. ಅರಳಿದ, ವಿಕಾಸ ಹೊಂದಿದ, "अये अप्रतिबुद्धोऽपि चूतप्रसवोऽत्र बन्धनभङ्गसुरभिर्भवति" शाकु० ६। 4. ಪ್ರಜ್ಞೆಯಿಂದ ಕೂಡಿದ, ಜ್ಞಾನೋದಯವಾಗಿರುವ.

**प्रतिबोध ಪ್ರತಿಬೋಧ** (पुं०) 1. ಎಚ್ಚರಿಕೆ, ಜಾಗರಣೆ, ನಿದ್ರೆಯಿಲ್ಲದಿರುವುದು. प्रति + बुध (अवगमने) "घञ्" (३-३-१८)। "स्वस्थमभिददृशे सहसा प्रतिबोधजृम्भितमुखैर्मृगाधिपैः" किरा० १२-४८। 2. ಅರಳುವುದು, ವಿಕಾಸಹೊಂದುವುದು. 3. ಅರಿವು, ತಿಳಿವಳಿಕೆ. 4. ಸ್ಮರಣೆ, ನೆನಪು, "संमोहः खलु विस्मयनीयो न प्रतिबोधः" शाकु० ६। 5. ಬೋಧನೆ, ಉಪದೇಶ.

**प्रतिबोधक ಪ್ರತಿಬೋಧಕ** (वि०) 1. ನಿದ್ದೆಯಿಂದ ಎಚ್ಚರಗೊಳಿಸುವವನು, ನಿದ್ದೆಯಿಂದ ಎಬ್ಬಿಸುವವನು. प्रति+बुध (अवगमने) "ण्वुल्" (३-१-१३३)। 2. ತಿಳಿಸುವ, ಬೋಧಿಸುವ, ಉಪದೇಶಿಸುವ.

**प्रतिबोधन ಪ್ರತಿಬೋಧನ** (न०) 1. ಬೋಧಿಸುವುದು, ಉಪದೇಶಿಸುವುದು. प्रति + बुध (अवगमने) "ल्युट्" (३-३-११५)। 2. ನಿದ್ದೆಯಿಂದ ಎಬ್ಬಿಸುವುದು, ಎಚ್ಚರಿಸುವುದು.

**प्रतिबोधनीय ಪ್ರತಿಬೋಧನೀಯ** (वि०) 1. ಎಚ್ಚರಗೊಳಿಸಲ್ಪಡುವ, ನಿದ್ದೆಯಿಂದ ಎಬ್ಬಿಸಲ್ಪಡುವ. प्रति+बुध (अवगमने)+णिच् "अनीयर्" (३-१-९६)। 2. ಎಚ್ಚರಗೊಳಿಸಬೇಕಾದ, ಎಬ್ಬಿಸಬೇಕಾದ. 3. ಉಪದೇಶಿಸಲ್ಪಡುವ, ಬೋಧಿಸಲ್ಪಡುವ. 4. ಬೋಧಿಸಬೇಕಾದ, ಉಪದೇಶಿಸಬೇಕಾದ. "तव्यः"। **-बोधयितव्यः -ಬೋಧಯಿತವ್ಯಃ.**

**प्रतिबोधयत् ಪ್ರತಿಬೋಧಯತ್** (वि०) 1. ನಿದ್ರೆಯಿಂದ ಎಚ್ಚರಗೊಳಿಸುತ್ತಿರುವ. 2. ಉಪದೇಶಿಸುತ್ತಿರುವ. प्रति+बुध (अवगमने)+णिच् "शतृ" (३-२-१२४)। स्त्रियां "ङीप्" (४-१-५)। **-बोधयन्ती -ಬೋಧಯನ್ತೀ.**

**प्रतिबोधवत् ಪ್ರತಿಬೋಧವತ್** (वि०) 1. ಎಚ್ಚರಿಕೆಯುಳ್ಳ, ಜಾಗರೂಕತೆಯುಳ್ಳ. 2. ತಿಳಿವಳಿಕೆಯುಳ್ಳ, ಅರಿವುಳ್ಳ. प्रतिबोधोऽस्यास्ति "मतुप्" (५-२-९७)। स्त्रियां "ङीप्" (४-१-६)। **-बोधवती -ಬೋಧವತೀ.** "स्त्रीणामशिक्षितपटुत्वममानुषीषु संदृश्यते किमुत याः प्रतिबोधवत्यः" शाकु० ५-२२।

**प्रतिबोधित ಪ್ರತಿಬೋಧಿತ** (वि०) 1. ಎಚ್ಚರಗೊಳಿಸಲ್ಪಟ್ಟ, ನಿದ್ದೆಯಿಂದ ಎಬ್ಬಿಸಲ್ಪಟ್ಟ. प्रति+बुध (अवगमने) + णिच् "क्तः" (३-२-१०२)। 2. ಉಪದೇಶಿಸಲ್ಪಟ್ಟ, ಬೋಧಿಸಲ್ಪಟ್ಟ. "प्रियसखीसदृशं प्रतिबोधिताः किमपि काम्यगिरा परपुष्टया" माघ० ६-८।

**प्रतिभट ಪ್ರತಿಭಟ** (पुं०) 1. ಶತ್ರುಪಕ್ಷದ ಯೋಧ, ಶತ್ರುಸೈನ್ಯದೊಳಗಿನ ಸಿಪಾಯಿ. प्रतिकूलो भटः। 2. ಎದುರಾಳಿ, ವಿರೋಧಿ, ಪ್ರತಿಕಕ್ಷಿ, ಶತ್ರು. (वि०) 3. ಪ್ರತಿಸ್ಪರ್ಧಿಸುವ, ಪ್ರತಿದ್ವಂದ್ವಿಯಾದ. "गुप्तं घटप्रतिभटस्तनि बाहुनेत्रं नालोकसेऽतिशयमद्भुतमेतदीयम्" नैष० १३-६।

**प्रतिभय ಪ್ರತಿಭಯ** (वि०) 1. ಭಯಂಕರವಾದ, ಭಯವನ್ನುಂಟುಮಾಡುವ. प्रतिगतं भयमस्मिन्। "विदूरयः प्रतिभयमास्यकन्दरं चलत्कणाधरमिव कोटरं तरुः" माघ० १७-१७। (न०) 2. ಭಯ, ಭೀತಿ, ಹೆದರಿಕೆ. "प्रतिभयं भये। घोरेऽपि" मेदि०।

**प्रतिभा ಪ್ರತಿಭಾ** (स्त्री०) 1. ಬುದ್ಧಿಶಕ್ತಿ, ಜ್ಞಾನಬಲ. प्रति + भा (दीप्तौ) "कः" (३-१-१३६)। "गुरूपदेशं प्रतिभेव तीक्ष्णा प्रतीक्षते जातु न कालमर्तिः" नैष० ३-९१। 2. ಬುದ್ಧಿ, ಅರಿವು, ತಿಳಿವಳಿಕೆ. "सर्वतः कुशलवानसि कच्चित्त्वं स नैषध इति प्रतिभा नः" नैष० ५-७४। 3. ಹೊಸಹೊಸದಾಗಿ ವಿಷಯಗಳು ಹೊಳೆಯುವ ಬುದ್ಧಿ. "प्रज्ञा नवनवोन्मेषशालिनी प्रतिभा मता"। 4. ದೀಪ್ತಿ, ಪ್ರಕಾಶ, ಕಾಂತಿ. प्रति + भा "अङ्" (३-३-१०६)।

**प्रतिभात ಪ್ರತಿಭಾತ** (वि०) 1. ತಿಳಿಯಲ್ಪಟ್ಟ, ಅರಿಯಲ್ಪಟ್ಟ. प्रति + भा (दीप्तौ) "क्तः" (३-२-१०२)। 2. ಪ್ರಕಾಶದಿಂದ ಕೂಡಿದ, ಕಾಂತಿಯುಕ್ತವಾದ, ಹೊಳೆಯುವ. 3. ಹೊಳೆದ, ಸ್ಫುರಿಸಿದ.

**प्रतिभान ಪ್ರತಿಭಾನ** (न०) 1. ಪ್ರಕಾಶ, ಕಾಂತಿ, ಬೆಳಕು. प्रति+भा (दीप्तौ) "ल्युट्" (३-३-११५)। 2. ಜ್ಞಾನ, ತಿಳಿವಳಿಕೆ, ಅರಿವು. 3. ಸಮಯೋಚಿತವಾಗಿ ಉತ್ತರ ಹೇಳುವ ಬುದ್ಧಿ. 4. ಧೈರ್ಯ, ಕೆಚ್ಚೆದೆ.

**प्रतिभानवत् ಪ್ರತಿಭಾನವತ್** (वि०) 1. ಪ್ರತಿಭೆಯಿಂದ ಕೂಡಿದ, ಸಮಯೋಚಿತವಾದ ಉತ್ತರ ಹೇಳುವ ಸಾಮರ್ಥ್ಯವುಳ್ಳ. प्रतिभानमस्यास्ति "मतुप्" (५-२-९७)। "दमघोषसुतेन कश्चन पतिशिष्टः प्रतिभानवानथ" माघ० १६-१। 2. ಧೈರ್ಯಶಾಲಿ. 3. ಬುದ್ಧಿವಂತ. 4. ಪ್ರಕಾಶಮಾನವಾದ.

**प्रतिभान्वित ಪ್ರತಿಭಾನ್ವಿತ** (वि०) 1. ಪ್ರತಿಭೆಯಿಂದ ಕೂಡಿದ, ಹೊಸ ಹೊಸ ವಿಷಯಗಳು ಸ್ಫುರಿಸುವ ಶಕ್ತಿಯುಳ್ಳ. प्रतिभया अन्वितः। 2. ಧೈರ್ಯಶಾಲಿ. 3. ಪ್ರಕಾಶದಿಂದ ಕೂಡಿದ, ಕಾಂತಿಯುಕ್ತವಾದ. 4. ತಿಳಿವಳಿಕೆಯುಳ್ಳ.

**प्रतिभावत् ಪ್ರತಿಭಾವತ್** (वि०) "प्रतिभान्वित" ಪದದ ಅರ್ಥ. प्रतिमा अस्यास्ति "मतुप्" (५-२-९७)।

**प्रतिभास ಪ್ರತಿಭಾಸ** (पुं०) 1. ಪ್ರಕಾಶ, ಕಾಂತಿ. प्रति+भासृ (दीप्तौ) "घञ्" (३-३-१८)। 2. ಹೊಳೆಯುವುದು, ಪ್ರಕಾಶಿಸುವುದು. 3. ಸ್ಫುರಿಸುವುದು, ತೋರುವುದು. "न खलु व्यङ्ग्यसंस्पर्शपरामर्शादत्र चारुताप्रतीतिः। अपि तु वाच्यवैचित्र्यप्रतिभासादेव" काव्यप्र०। 4. ತೋರ್ಕೆ, ಕಾಣಿಸಿಕೊಳ್ಳುವುದು.

**प्रतिभासन ಪ್ರತಿಭಾಸನ** (न०) 1. ಹೊಳೆಯುವುದು, ತೋರುವುದು. 2. ಪ್ರಕಾಶಿಸುವಿಕೆ. 3. ತೋರ್ಕೆ, ಕಾಣಿಸಿಕೊಳ್ಳುವುದು.

**प्रतिभू ಪ್ರತಿಭೂ** (पुं०) ಜಾಮೀನುದಾರ, ಹೊಣೆಗಾರ, ಸಾಲ ಮೊದಲಾದುವುಗಳಿಗೆ ಹೊಣೆಯಾಗುವವನು. प्रतिनिधिर्भवति — प्रति + भू (सत्तायाम्) "क्विप्" (३-२-७६)। "याचितश्चिरयति क्व नु धीरः प्रापणे क्षणमपि प्रतिभूः कः" नैष० ५-१२६।

**प्रतिम ಪ್ರತಿಮ** (वि०) (ಸಮಾಸದ ಕೊನೆಯಲ್ಲಿ) ಸದೃಶವಾದ, ಸಮಾನವಾದ. प्रतिमाति — प्रति+माङ् (माने) "कः" (३-१-१३६)।

**प्रतिमल्ल ಪ್ರತಿಮಲ್ಲ** (वि०) 1. ಸದೃಶವಾದ, ಸಮಾನವಾದ. प्रतिरूपो मल्लः। "पातालप्रतिमल्लगल्लविवरप्रक्षिप्तसप्तार्णवं वन्दे नन्दितनीलकण्ठपरिषद्व्यक्तं तव क्रीडितम्" मालती० ५-२२। 2. ಬಲಿಷ್ಠನಾದ ಶತ್ರು, ಪ್ರಬಲನಾದ ವೈರಿ.

**प्रतिमा ಪ್ರತಿಮಾ** (स्त्री०) 1. ಪ್ರತಿಬಿಂಬ, ಛಾಯೆ, ಸ್ವಚ್ಛವಸ್ತುವಿನಲ್ಲಿ ಕಾಣುವ ಮತ್ತೊಂದು ವಸ್ತುವಿನ ರೂಪ. प्रतिमीयतेऽनया — प्रति + माङ् (माने) कर० "अङ्" (३-३-१०६)। "मुखमिन्दुरुज्ज्वलकपोलमतः प्रतिमाच्छलेन सुदृशामविशत्" माघ० ९-४८। "रत्नस्तम्भेषु संक्रान्तप्रतिमास्ते चकाशिरे" माघ० २-४। 2. ವಿಗ್ರಹ, ಬಿಂಬ, ಮೂರ್ತಿ. "ततः सपर्यां सपशूपहारां पुरः परार्ध्यप्रतिमागृहायाः" रघु० १६-३९। 3. ಸಾದೃಶ್ಯ, ಹೋಲಿಕೆ. प्रति + मा भावे "अङ्"। "अथैकधेनोरपराधचण्डाद्गुरोः कृशानुप्रतिमाद्बिभेषि" रघु० २-४९। 4. ಆನೆಯ ಕೊಂಬುಗಳ ಮಧ್ಯಭಾಗ, ಕುಂಭಸ್ಥಳದ ಕೆಳಭಾಗ. [ವಿಷ್ಣು, ಪರಶಿವ, ಅರ್ಧನಾರೀಶ್ವರ, ನೃಸಿಂಹ, ಅಂಬಿಕೆ, ಲಕ್ಷ್ಮಿ, ಮನ್ಮಥ, ಮುಂತಾದ ಅರ್ಚಾಮೂರ್ತಿಗಳ ಲಕ್ಷಣ ಪ್ರಮಾಣ ವಿನ್ಯಾಸ ಮುಂತಾದ ವಿಷಯಗಳಿಗೆ ಮತ್ಸ್ಯಪುರಾಣ ಪಾದ್ಮೋತ್ತರಖಂಡ ಅಗ್ನಿಪುರಾಣಗಳಲ್ಲಿ ನೋಡಬೇಕು. ಗ್ರಂಥವಿಸ್ತರ ಭಯದಿಂದ ಇಲ್ಲಿ ಕೊಡಲು ಸಾಧ್ಯವಾಗಿಲ್ಲ]. 5. ಅಳತೆ, ಪ್ರಮಾಣ.

**प्रतिमान ಪ್ರತಿಮಾನ** (न०) 1. ಪ್ರತಿಬಿಂಬ, ವಿಗ್ರಹ, ಮೂರ್ತಿ. प्रतिमीयतेऽनेन — प्रति+माङ् (माने) कर० "ल्युट्" (३-३-११७)। 2. ಸಾದೃಶ್ಯ, ಸಾಮ್ಯ, ಹೋಲಿಕೆ. "पर्यन्तभूधरनिकुञ्जविजृम्भितेन हेरम्बकण्ठरसितप्रतिमानमेति" मालती० ९-३। 3. ಆನೆಯ ಕುಂಭಸ್ಥಳದ ಕೆಳಭಾಗ, ಆನೆಯ ಕೊಂಬುಗಳ ಮಧ್ಯಭಾಗ, ಆನೆಯ ಹಣೆ. "अम्भोधिरोधसि पृथुप्रतिमानभागरुद्धोरुदन्तमुसलप्रसरं निपेते" माघ० ५-३६।

**प्रतिमुक्त ಪ್ರತಿಮುಕ್ತ** (वि०) 1. ಬಿಡಲ್ಪಟ್ಟ, ಬಂಧನದಿಂದ ಬಿಡುಗಡೆ ಮಾಡಲ್ಪಟ್ಟ. प्रति + मुच्लृ (मोक्षणे) "क्तः" (३-२-१०२)। "गृहीतप्रतिमुक्तस्य स धर्मविजयी नृपः। श्रियं महेन्द्रनाथस्य जहार न तु मेदिनीम्" रघु० ४-४३। 2. ಧರಿಸಲ್ಪಟ್ಟ, ಉಡಲ್ಪಟ್ಟ, ತೊಡಲ್ಪಟ್ಟ. प्रतिमुच्यते स्म। 3. ಬಂಧಿಸಲ್ಪಟ್ಟ, ಕಟ್ಟಲ್ಪಟ್ಟ. "न मृत्युपाशः प्रतिमुक्तस्य वीरा विकत्थनं तव गृह्णन्त्यभद्र" भाग० ३-१८-१०। 4. ಹಿಂತಿರುಗಿಸಲ್ಪಟ್ಟ,

ಪ್ರತ್ಯರ್ಪಣ ಮಾಡಲ್ಪಟ್ಟ. "तद्वन्नतीभिर्मदरागशोभां विलोचनेषु प्रतिमुक्तमासीत्" रघु० १६-५९। 5. ಹಿಂತಿರುಗಿದ, ಹಿಂದಕ್ಕೆಹೋದ.

**प्रतिमुख ಪ್ರತಿಮುಖ** (न०) 1. ದೃಶ್ಯಕಾವ್ಯ (ರೂಪಕ) ಗಳಲ್ಲಿ ಇರಬೇಕಾದ ಪಂಚಸಂಧಿಗಳಲ್ಲೊಂದು. **ಇದರ ಲಕ್ಷಣ** :—ಮುಖಸಂಧಿಯಲ್ಲಿ ಉಕ್ತವಾದ ಪ್ರಧಾನ ಫಲ ಸಂಪಾದಕವಾದ ಬೀಜದ ಪ್ರಕಾಶ ಮತ್ತು ಅಪ್ರಕಾಶ ವರ್ಣನೆಯು **ಪ್ರತಿಮುಖ ಸಂಧಿ**. "फलप्रधानोपायस्य मुखसन्धिनिवेशिनः। लक्ष्यालक्ष्यइवोद्भेदो यत्र प्रतिमुखं च तत्" सा०द० ६-७७। विलासः परिसर्पः विधूतम् तपनम् नर्म नर्मद्युतिः प्रगमनम् विरोधः पर्युपासनम् वज्रं पुष्पम् उपन्यासः वर्णसंहारः ಇವು ಪ್ರತಿಮುಖ ಸಂಧಿಯ ಅಂಗಗಳು. "विलासः परिसर्पश्च विधूतं तपनं तथा। नर्म नर्मद्युतिश्चैव तथा प्रगमनं पुनः। विरोधश्च प्रतिमुखे तथा स्यात्पर्युपासनम्। वज्रं पुष्पमुपन्यासो वर्णसंहार इत्यपि" सा० द० ६-८७, ८८। (अव्य०) 2. ಅಭಿಮುಖವಾಗಿ, ಎದುರಾಗಿ. 3. (ಅದರ)ಕಡೆಗೆ.

**प्रतियत् ಪ್ರತಿಯತ್** (वि०) 1. ಅಂತಿರುವ, ತಿಳಿದಿರುವ. प्रति + इण् (गतौ) "शतृ" (३-२-१२४)। स्त्रियां "ङीप्" (४-१-६)। **-यती -ಯತೀ**. "रतिपति-प्रहितानिलहेतितां प्रतियती सुदती मलयानिले" नैष० ४-४०। 2. ಹಿಂತಿರುಗಿ ಬರುವ.

**प्रतियत्न ಪ್ರತಿಯತ್ನ** (पुं०) 1. ಪ್ರಯತ್ನ. प्रतियत्यते— प्रति + यती (प्रयत्ने) "नङ्" (३-३-९०)। 2. ಅಭಿಲಾಷೆ, ಅಪೇಕ್ಷೆ, ಪಡೆಯುವ ಆಸೆ. 3. ಸಂಸ್ಕಾರ, ಗಂಧ ಪುಷ್ಪ ಮೊದಲಾದುವುಗಳಿಂದ ಶೃಂಗರಿಸುವುದು, ಸೊಗಸು ಮಾಡುವುದು. "सुगन्धितामप्रतियत्नपूर्वां बिभ्रन्ति यत्र प्रमदाय पुंसाम्" माघ० ३-५४। 4. ಮುಯ್ಯಿ ತೀರಿಸಿಕೊಳ್ಳುವುದು, ಸೇಡು ತೀರಿಸುವುದು, ಪ್ರತ್ಯಪಕಾರ ಮಾಡುವುದು. 5. ರಚನೆ, ಮಾಡುವುದು, ನಿರ್ಮಿಸುವುದು. 6. ಒಂದು ವಸ್ತುವಿಗೆ ಬೇರೆ ಗುಣವನ್ನು ಹೊಂದಿಸುವುದು, ಹೊಸ ಗುಣವನ್ನು ಕೂಡಿಸುವುದು, ಪರಿಷ್ಕರಿಸುವುದು. "प्रतियत्नो गुणाधानम्" सि० कौ०। 7. ಸೆರೆಹಿಡಿಯುವುದು. ಬಂಧಿಸುವುದು. (वि०) 8. ಪ್ರಯತ್ನವುಳ್ಳವನು. "प्रतियत्नः प्रयत्नवान्" त्रिकाण्ड०।

**प्रतियात ಪ್ರತಿಯಾತ** (वि०) 1. ಹಿಂತಿರುಗಿದ, ಹಿಂದಕ್ಕೆ ಹೋದ. प्रति + या (प्रापणे) "क्तः" (३-४-७२)। "आगतानगणितप्रतियातान् वल्लभानभिसिसारयिषूणाम्" माघ० १०-२०। 2. ಮತ್ತೆ ಅಭಿಮುಖವಾಗಿ ಹೋದ.

**प्रतियातना ಪ್ರತಿಯಾತನಾ** (स्त्री०) ಪ್ರತಿಕೃತಿ, ಪ್ರತಿಮೆ. ಮೂರ್ತಿ. प्रतियात्यतेऽनया — प्रति + यत (निकारोपस्कारयोः) + णिच् "युच्" (३-३-१०७)। "अनिर्विदा या विदधे विधात्रा पृथ्वी पृथिव्याः प्रतियातनेव" माघ० ३-३४।

**प्रतियान ಪ್ರತಿಯಾನ** (न०) ಹಿಂತಿರುಗುವುದು, ಹಿಂದಕ್ಕೆ ತೆರಳುವುದು. प्रति + या (प्रापणे) भावे "ल्युट्" (३-३-११५)।

**प्रतियियासा ಪ್ರತಿಯಿಯಾಸಾ** (स्त्री०) ಹಿಂತಿರುಗಲು ಅಪೇಕ್ಷೆ, ಹಿಂದಕ್ಕೆ ತೆರಳಲು ಇಚ್ಛೆ. प्रतियातुमिच्छा — प्रति + या (प्रापणे) + सन् "अः" (३-३-१०२)।

**प्रतियियासु ಪ್ರತಿಯಿಯಾಸು** (वि०) ಹಿಂತಿರುಗಲು ಅಪೇಕ್ಷಿಸುವ, ಹಿಂದಕ್ಕೆ ಹೋಗಲು ಇಚ್ಛಿಸುವ. प्रतियातुमिच्छुः — प्रति+या (प्रापणे)+सन् "उः" (३-२-१६८)।

**प्रतियोग ಪ್ರತಿಯೋಗ** (पुं०) 1. ವಿರೋಧ. प्रति + युजिर् (योगे) "घञ्" (३-३-१८)। 2. ಪ್ರತಿ ಹೇಳುವುದು, ತಿರಸ್ಕರಿಸುವುದು, ನಿಷೇಧಿಸುವುದು. 3. ಪ್ರತಿಕ್ರಿಯೆ, ಪ್ರತೀಕಾರ. 4. ವಿರುದ್ಧವಾದ ಸಂಬಂಧ.

**प्रतियोगिन् ಪ್ರತಿಯೋಗಿನ್** (वि०) 1. ವಿರುದ್ಧವಾದ ಸಂಬಂಧವುಳ್ಳ, ಪ್ರತಿಕೂಲಸಂಬಂಧ ಹೊಂದಿರುವ. प्रतिरूपं युज्यते — प्रति + युजिर् (योगे) "घिनुण्" (३-२-१४२)। ಯಾವುದೊಂದು ವಸ್ತುವಿನ ಅಭಾವವನ್ನು ಹೇಳುವೆವೋ ಆ ವಸ್ತುವು ಅಭಾವದ ಪ್ರತಿಕೂಲ ಸಂಬಂಧ ಹೊಂದಿರುವುದರಿಂದ ಅದು ಅಭಾವದ ಪ್ರತಿಯೋಗಿಯಾಗುವುದು. "घटो नास्ति" ಎಂಬಲ್ಲಿ ಘಟದಲ್ಲಿ ಅಭಾವ ರೂಪವಾದ ಪ್ರತಿಕೂಲ ಸಂಬಂಧವಿರುವುದರಿಂದ ಘಟವು ಘಟಾಭಾವ ಪ್ರತಿಯೋಗಿ. "घटाभावस्य प्रतियोगी घटः"। (पुं०) 2. ವಿರೋಧಿ, ಶತ್ರು, ಹಗೆ. 3. ಸರಿಯಾದ ಈಡು, ಹೊಂದಿಕೆ.

**प्रतियोध ಪ್ರತಿಯೋಧ** (पुं०) ಶತ್ರುಪಕ್ಷದ ಭಟ. "त्रिदिवं प्रत्यपद्यन्त प्रतियोधा निरागसः" याद० २२-१४५।

**प्रतिरुद्ध ಪ್ರತಿರುದ್ಧ** (वि०) 1. ತಡೆಯಲ್ಪಟ್ಟ, ಅಡ್ಡಿ ಪಡಿಸಲ್ಪಟ್ಟ. प्रति + रुधिर् (आवरणे) "क्तः"

(३-२-१०२)। 2. ನಿಷೇಧಿಸಲ್ಪಟ್ಟ. 3. ಯಾವ ಕಡೆಗೂ ಹೋಗಲು ಬಿಡದೆ ನಿರ್ಬಂಧದಲ್ಲಿಡಲ್ಪಟ್ಟ (ಶತ್ರು).

**प्रतिरुन्धत् ಪ್ರತಿರುಂಧತ್** (वि०) 1. ತಡೆಗಟ್ಟುತ್ತಿರುವ, ಅಡ್ಡಿಮಾಡುತ್ತಿರುವ. प्रति + रुधिर् (आवरणे) "शतृ" (३-२-१२४)। 2. ನಿಷೇಧಿಸುತ್ತಿರುವ. 3. ನಿರ್ಬಂಧದಲ್ಲಿಡುತ್ತಿರುವ. "शानच्" (३-२-१२४)। **–रुन्धान: –ರುಂಧಾನಃ.** ಪ್ರತಿಭಟಿಸುವ ವಿರೋಧಿ. "प्रभयाऽनुकृतप्रवर्ग्यदीप्तिः प्रतिरुन्धानदुरासदो ररास" याद० १५-७३।

**प्रतिरूप ಪ್ರತಿರೂಪ** (न०) 1. ವಿಗ್ರಹ, ಪ್ರತಿಮೆ, ಮೂರ್ತಿ. प्रतिकृतं रूपम्। 2. ಛಾಯಾಚಿತ್ರ, ಪ್ರತಿಬಿಂಬ. (वि०) 3. ಸಮಾನವಾದ, ಸದೃಶವಾದ, ಸಮಾನರೂಪವುಳ್ಳ, ಅನುರೂಪವಾದ.

**प्रतिरोध ಪ್ರತಿರೋಧ** (पुं०) 1. ತಡೆ, ಅಡ್ಡಿ. प्रति + रुधिर् (आवरणे) "घञ्" (३-३-१८)। 2. ಮುತ್ತಿಗೆ ಹಾಕುವುದು. 3. ಚೌರ್ಯ, ಕಳ್ಳತನ. 4. ತಿರಸ್ಕಾರ. प्रतिरुध्यतेऽनेन — कर० "घञ्" (३-३-१२१)। भावे "ल्युट्" (३-३-११५)। **–रोधनम् –ರೋಧನಮ್.**

**प्रतिरोधक ಪ್ರತಿರೋಧಕ** (वि०) 1. ತಡೆಯುವವನು, ಅಡ್ಡಗಟ್ಟುವವನು. प्रति+रुधिर् (आवरणे) "ण्वुल्" (३-१-१३३)। "उदीर्णरागप्रतिरोधकं जनैरभीक्ष्णमक्षुण्णतयातिदुर्गमम्" माघ० १-३४। 2. ಮುತ್ತಿಗೆ ಹಾಕುವವನು, ಸುತ್ತುಗಟ್ಟುವವನು. (पुं०) 3. ಚೋರ, ಕಳ್ಳ, ತಸ್ಕರ. "कोदण्डपाणिनिनदत्प्रतिरोधकानाम्" माल० ५-१०।

**प्रतिरोधिन् ಪ್ರತಿರೋಧಿನ್** (पुं०) 1. ಚೋರ, ಕಳ್ಳ. प्रतिरुणद्धि — प्रति + रुधिर् (आवरणे) "णिनिः" (३-२-७८)। (वि०) 2. ತಡೆಯುವವನು, ಅಡ್ಡಗಟ್ಟುವವನು. "तृच्" (३-१-१३३)। **–रोद्धा –ರೋದ್ಧಾ.**

**प्रतिलब्ध ಪ್ರತಿಲಬ್ಧ** (वि०) ಪಡೆಯಲ್ಪಟ್ಟ, ಹೊಂದಲ್ಪಟ್ಟ. "प्रतिलब्धोऽयमिह प्रयोगकालः" याद० १५-२६।

**प्रतिलम्भ ಪ್ರತಿಲಂಭ** (पुं०) ಪಡೆಯುವುದು, ಹೊಂದುವುದು. प्रति+डुलभष् (प्राप्तौ) "घञ्" (३-३-१८)। "एकतो हि धिगमूमगुणज्ञामन्यतः कथमदः प्रतिलम्भः" नैष० ५-६१।

**प्रतिलाभ ಪ್ರತಿಲಾಭ** (पुं०) ಹಿಂದಕ್ಕೆ ತೆಗೆದುಕೊಳ್ಳುವುದು, ಕೊಟ್ಟದ್ದನ್ನು ಹಿಂದಕ್ಕೆ ಪಡೆಯುವುದು.

**प्रतिलिपि ಪ್ರತಿಲಿಪಿ** (स्त्री०) ಪ್ರತಿರೂಪವಾದ ಬರವಣಿಗೆ, ಹಸ್ತಪ್ರತಿ.

**प्रतिलोम ಪ್ರತಿಲೋಮ** (वि०) 1. ನೀತಿಗೆ ವಿರುದ್ಧವಾದ, ಪ್ರತಿಕೂಲವಾದ. प्रतिगतं लोम आनुकूल्यं यस्मात्। "सतीव्रतातिप्रतिलोमतीव्राः" नैष० ६-९५। 2. ಶತ್ರುತ್ವದ, ಹಗೆತನದ. 3. ನಿಮ್ನವರ್ಗದ.

**प्रतिलोमज ಪ್ರತಿಲೋಮಜ** (वि०) ನಿಮ್ನವರ್ಗದವನಿಂದ ಜನಿಸಿದ.

**प्रतिवचन ಪ್ರತಿವಚನ** (न०) 1. ಪ್ರತ್ಯುತ್ತರ, ಬದಲು ಮಾತು. 2. ಪ್ರತಿಧ್ವನಿ. 3. ವಿರುದ್ಧವಾದ ಮಾತು.

**प्रतिवचस् ಪ್ರತಿವಚಸ್** (न०) 1. ಉತ್ತರ, ಪ್ರತ್ಯುತ್ತರ, ಮರುನುಡಿ. प्रतिरूपं वचः। "व्याहृता प्रतिवचो न संदधे गन्तुमैच्छदवलम्बितांशुका" कुमा० ८-२। 2. ಪ್ರತಿಧ್ವನಿ. 3. ವಿರುದ್ಧವಾದ ಮಾತು.

**प्रतिवत्सर ಪ್ರತಿವತ್ಸರ** (अव्य०) ಪ್ರತಿ ವರ್ಷದಲ್ಲೂ.

**प्रतिवस्तु ಪ್ರತಿವಸ್ತು** (न०) 1. ಸಮಾನವಾದ ಪದಾರ್ಥ, ಒಂದು ವಸ್ತುವನ್ನು ಹೋಲುವ ಇನ್ನೊಂದು ವಸ್ತು. प्रतिरूपं वस्तु। 2. ಒಂದು ವಸ್ತುವಿಗೆ ಬದಲಾಗಿ ಪಡೆದ ಮತ್ತೊಂದು ವಸ್ತು, ವಿನಿಮಯ ಹೊಂದಿದ ವಸ್ತು. (अव्य०) 3. ಪ್ರತಿಯೊಂದು ಪದಾರ್ಥದಲ್ಲಿಯೂ. "न स्वेदिनश्चामरमारुतैर्न निमेषनेत्राः प्रतिवस्तुचित्रैः" नैष० १०-३३।

**प्रतिवस्तूपमा ಪ್ರತಿವಸ್ತೂಪಮಾ** (स्त्री०) ಅರ್ಥಾಲಂಕಾರದ ಒಂದು ಭೇದ. प्रतिवस्तु प्रतिवाक्यार्थम् उपमा सादृश्यं (साधारणधर्मः) यस्याः। ಉಪಮಾನೋಪಮೇಯವಾಕ್ಯಗಳಿಗೆ ಒಂದೇ ಸಮಾನ ಧರ್ಮದ ಅನ್ವಯವಿರುವಲ್ಲಿ "प्रतिवस्तूपमा" ಅಲಂಕಾರವಾಗುವುದು. ಲಕ್ಷಣ: "वाक्ययोरेकसामान्ये प्रतिवस्तूपमा मता"। ಉದಾ: "तापेन भ्राजते सूरः शूरश्चापेन राजते" ಇಲ್ಲಿ ಪ್ರಕಾಶರೂಪವಾದ ಒಂದೇ ಸಾಧಾರಣ ಧರ್ಮವು भ्राजते राजते ಎಂದು ಬೇರೆ ಬೇರೆ ಪದಗಳಿಂದ ಉಕ್ತವಾಗಿರುವುದರಿಂದ ಪ್ರತಿವಸ್ತೂಪಮಾಲಂಕಾರ.

**प्रतिवाक्(च्) ಪ್ರತಿವಾಕ್(ಚ್)** (स्त्री०) ಪ್ರತ್ಯುತ್ತರ, ಮರುನುಡಿ, ಬದಲುಮಾತು. प्रतिरूपा वाक्। "भवत्यवज्ञा च भवत्यनुत्तरात् अतः प्रदित्सुः प्रतिवाचमस्मि ते" नैष० ९-२५।

**प्रतिवाक्य ಪ್ರತಿವಾಕ್ಯ** (न०) ಪ್ರತ್ಯುತ್ತರ, ಮರುನುಡಿ. प्रतिरूपं वाक्यम्।

**प्रतिवाचिक ಪ್ರತಿವಾಚಿಕ** (न०) ಪ್ರತ್ಯುತ್ತರ, ಬದಲು ಮಾತು, ಮರುನುಡಿ. "मयापि देयं प्रतिवाचिकं न ते स्वनाम मत्कर्णसुधामकुर्वते" नैष० ९-१६।

**प्रतिवात ಪ್ರತಿವಾತ** (पुं०) 1. ಅಭಿಮುಖವಾಗಿ ಬೀಸುವ ಗಾಳಿ. प्रतिगतः अभिमुखीभूतो वातः। "प्रतिवातेऽनुवाते च नासीत गुरुणा सह" मनु० २-२०३। 2. ಪ್ರತಿಕೂಲವಾದ ಗಾಳಿ. (अव्य०) 3. ಗಾಳಿಗೆ ಎದುರಾಗಿ, ಗಾಳಿಗೆ ಅಭಿಮುಖವಾಗಿ. "गच्छति पुरः शरीरं धावति पश्चादसंस्तुतं चेतः। चीनांशुकमिव केतोः प्रतिवातं नीयमानस्य" शाकु० १-३०।

**प्रतिवाद ಪ್ರತಿವಾದ** (पुं०) 1. ಪ್ರತ್ಯುತ್ತರ, ಬದಲು ಮಾತು. प्रति + वद (व्यक्तायां वाचि) "घञ्" (३-३-१८)। 2. ಒಬ್ಬನು ಹೇಳಿದ ಮಾತಿಗೆ ವಿರುದ್ಧವಾಗಿ ಹೇಳುವುದು. 3. ತಿರಸ್ಕರಿಸಿ ಮಾತಾಡುವುದು.

**प्रतिवादिन् ಪ್ರತಿವಾದಿನ್** (वि०) 1. ವಿರುದ್ಧವಾಗಿ ಮಾತಾಡುವ. प्रति + वद (व्यक्तायां वाचि) "णिनिः" (३-२-७८)। 2. (ವ್ಯವಹಾರದಲ್ಲಿ) ಎದುರಾಳಿ, ವಾದಿಯು ಹೇಳಿದ ನ್ಯಾಯಕ್ಕೆ ವಿರುದ್ಧವಾದ ನ್ಯಾಯವನ್ನು ತೋರಿಸಿ ಮಾತಾಡುವವನು. "अथ वादिकृतं प्रमाणमन्यैः प्रतिवादीव निराकरोत्प्रमाणैः" माघ० २०-१८।

**प्रतिवासर ಪ್ರತಿವಾಸರ** (अव्य०) ಪ್ರತಿದಿನದಲ್ಲೂ. वासरे वासरे। अव्ययी०।

**प्रतिवासिन् ಪ್ರತಿವಾಸಿನ್** (वि०) ಸಮೀಪದಲ್ಲಿ ವಾಸಮಾಡುವ, ಪಕ್ಕದ ಮನೆಯಲ್ಲಿ ವಾಸಮಾಡುವ. प्रत्यासन्नं वसति—प्रति+वस (निवासे) "णिनिः" (३-१-१३४)।

**प्रतिविधातव्य ಪ್ರತಿವಿಧಾತವ್ಯ** (वि०) 1. ಪ್ರತಿಯಾಗಿ ಮಾಡಲ್ಪಡುವ, ಪ್ರತಿಕ್ರಿಯೆ ಮಾಡಲ್ಪಡುವ, ನಿವಾರಿಸಲ್ಪಡುವ. प्रति + वि + डु धाञ् (धारणपोषणयोः) "तव्यः" (३-१-९६)। 2. ಪ್ರತಿಕ್ರಿಯೆ ಮಾಡಬೇಕಾದ, ಪರಿಹರಿಸಬೇಕಾದ.

**प्रतिविधान ಪ್ರತಿವಿಧಾನ** (न०) ಪ್ರತೀಕಾರ, ನಿವಾರಣೋಪಾಯ. प्रति + वि + डु धाञ् (धारणपोषणयोः) कर० "ल्युट्" (३-३-११७)। "शत्रुप्रयुक्तानां तीक्ष्णरसदायिनां प्रतिविधानं प्रति अप्रमादिनः परीक्षितभक्तयः नियुक्ता आप्तपुरुषाः" मुद्रा० १।

**प्रतिविधित्सा ಪ್ರತಿವಿಧಿತ್ಸಾ** (स्त्री०) ಪ್ರತಿಕ್ರಿಯೆಮಾಡಲು ಅಪೇಕ್ಷೆ, ಪ್ರತೀಕಾರ ನಡೆಸಲು ಅಪೇಕ್ಷೆ. प्रति+वि+डु धाञ् (धारणपोषणयोः) + सन् "अः" (३-३-१०२)।

**प्रतिविधित्सु ಪ್ರತಿವಿಧಿತ್ಸು** (वि०) ಪ್ರತೀಕಾರ ಮಾಡಲು ಅಪೇಕ್ಷಿಸುವ. प्रति+वि+डु धाञ् (धारणपोषणयोः)+ सन् "उः" (३-२-१६८)।

**प्रतिविन्ध्य ಪ್ರತಿವಿಂಧ್ಯ** (पुं०) ಧರ್ಮರಾಜನ ಮಗ, ದ್ರೌಪದಿಯ ಪುತ್ರ. "पाण्डवेभ्यो हि पाञ्चाल्यां द्रौपद्यां पञ्च जज्ञिरे। कुमारा रूपसंपन्नाः सर्वशास्त्रविशारदाः। प्रतिविन्ध्यो युधिष्ठिरात् सुतसोमो वृकोदरात्। अर्जुनात् श्रुतकीर्तिस्तु शतानीकस्तु नाकुलिः। तथैव सहदेवाच्च श्रुतसेनः प्रतापवान्" भा० आदि० ६४-१६४, ५।

**प्रतिविषा ಪ್ರತಿವಿಷಾ** (स्त्री०) ಅತಿಬಜೆ. प्रतीपं विषमस्याः।

**प्रतिवेश ಪ್ರತಿವೇಶ** (पुं०) ಪಕ್ಕದ ಮನೆ, ನೆರೆಮನೆ. प्रत्यासन्नो वेशः। प्रतिविशत्यत्र इति वा।

**प्रतिवेशिन् ಪ್ರತಿವೇಶಿನ್** (वि०) ಪಕ್ಕದ ಮನೆಯವನು, ನೆರೆಮನೆಯವನು. प्रतिवेशोऽस्यास्ति "इनिः" (५-२-११५)। "दृष्ट्वा प्रभातसमये प्रतिवेशिवर्गो दोषांश्च मे वदति कर्मणि कौशलं च" मृच्छ० ३-१४। स्त्रियां "ङीप्" (४-१-५)। **-वेशिनी -ವೇಶಿನೀ.** "दृष्टि हे प्रतिवेशिनि क्षणमिहाप्यस्मद्गृहे दास्यसि प्रायेणास्य शिशोः पिता न विरसाः कौपीरपः पास्यति" सा० द० ४।

**प्रतिवेश्मन् ಪ್ರತಿವೇಶ್ಮನ್** (न०) 1. ಪಕ್ಕದ ಮನೆ. प्रत्यासन्नं वेश्म। (अव्य०) 2. ಮನೆಯಲ್ಲಿ. वेश्मनि प्रतिवेश्म अव्ययी०। "करयुग्मपद्ममुकुलापवर्जितैः प्रतिवेश्म लाजकुसुमैरवाकिरन्" माघ० १३-३७।

**प्रतिवेश्म ಪ್ರತಿವೇಶ್ಮ** (अव्य०) ಮನೆಯಲ್ಲಿ.

**प्रतिशब्द ಪ್ರತಿಶಬ್ದ** (पुं०) ಪ್ರತಿಧ್ವನಿ, ಮರುದನಿ. प्रतिरूपः शब्दः। "धीरनिजरवविलीनगुरुप्रतिशब्दमस्य रणतूर्यमवादि" माघ० १५-७३।

**प्रतिशयन ಪ್ರತಿಶಯನ** (न०) ನಿರಶನವ್ರತ ಕೈಗೊಂಡು ಇಷ್ಟಪ್ರಾಪ್ತಿಗಾಗಿ ಸತ್ಯಾಗ್ರಹಮಾಡಿ ದೇವರ ಮುಂದೆ ಮಲಗುವುದು. "प्रतिशयनभूमिकाभूषितपयोधिपुलिन" रघु० ग०।

**प्रतिशयित ಪ್ರತಿಶಯಿತ** (वि०) ಇಷ್ಟಪ್ರಾಪ್ತಿಗಾಗಿ ನಿರಶನವ್ರತ ಕೈಗೊಂಡು ದೇವರ ಮುಂದೆ ಮಲಗಿರುವ. "अनया च किलास्मै प्रतिशयिताय स्वप्ने समादिष्टम्" दशकु०।

**प्रतिशासन ಪ್ರತಿಶಾಸನ** (न०) ಭೃತ್ಯರನ್ನು ಕರೆದು ಕಾರ್ಯದಲ್ಲಿ ನೇಮಿಸುವುದು. प्रति + शासु (अनुशिष्टौ) भावे "ल्युट्" (३-३-११५)।

**प्रतिशिष्ट ಪ್ರತಿಶಿಷ್ಟ** (वि०) 1. ಅಪ್ಪಣೆ ಮಾಡಲ್ಪಟ್ಟ, ಹೇಳಿಕಳುಹಿಸಲ್ಪಟ್ಟ. प्रति+शासु (अनुशिष्टौ) "क्तः" (३-२-१०२)। "दमघोषसुतेन कश्चन प्रतिशिष्टः

प्रतिभानवानथ" माघ० १६-१। 2. ತಿರಸ್ಕರಿಸಲ್ಪಟ್ಟ, ತಳ್ಳಿಹಾಕಲ್ಪಟ್ಟ.

**प्रतिश्याय ಪ್ರತಿಶ್ಯಾಯ** (पुं०) ಪೀನಸರೋಗ. प्रति + श्यैङ् (गतौ) "णः" (३-१-१४१)। ["पीनस" ಪದದಲ್ಲಿ ನೋಡಿ].

**प्रतिश्रय ಪ್ರತಿಶ್ರಯ** (पुं०) 1. ಆಶ್ರಯ, ಸ್ಥಾನ, ಆಸರೆ. 2. ಗೃಹ, ಮನೆ. प्रतिश्रीयते—प्रति+श्रिञ् (सेवायाम्) "अच्" (३-३-५६)। "स सम्यक् पूजयित्वा तं विप्रं विप्रर्षभस्तदा। ददौ प्रतिश्रयं तस्मै सदा सर्वातिथिव्रतः" भा० आदि०। 3. ಸಭೆ. 4. ಅಂಗೀಕಾರ, ಒಪ್ಪಿಗೆ, ಸಂಮತಿ. "प्रतिश्रयः सभायां चाश्रयेऽभ्युपगमेऽपि च" मेदि०। 5. ಯಜ್ಞಶಾಲೆ.

**प्रतिश्रव ಪ್ರತಿಶ್ರವ** (पुं०) 1. ಅಂಗೀಕಾರ, ಒಪ್ಪಿಗೆ, ಸಂಮತಿ. प्रति+श्रु (श्रवणे) भावे "अप्" (३-३-५७)। "इति सोऽभीष्टसंप्राप्तौ कारयित्वा प्रतिश्रवम्। दूरमुत्क्रान्तमर्यादः सङ्गमं तमयाचत" राजत०। 2. ವಾಗ್ದಾನ, ಭಾಷೆ ಕೊಡುವುದು, ಪ್ರತಿಜ್ಞೆ.

**प्रतिश्रवण ಪ್ರತಿಶ್ರವಣ** (न०) 1. ಅಂಗೀಕಾರ, ಒಪ್ಪಿಗೆ, ಸಂಮತಿ. प्रति+श्रु (श्रवणे) भावे "ल्युट्" (३-३-११५)। "प्रतिश्रवणसंभाषे शयानो न समाचरेत्" मनु० २-१९५। 2. ಪ್ರತಿಜ್ಞೆ, ಭಾಷೆ ಕೊಡುವುದು, ವಾಗ್ದಾನ.

**प्रतिश्रुत् ಪ್ರತಿಶ್ರುತ್** (स्त्री०) 1. ಅಂಗೀಕಾರ, ಒಪ್ಪಿಗೆ, ಸಂಮತಿ. प्रति + श्रु (श्रवणे) "क्विप्" (वा० ३-३-१०८)। 2. ಪ್ರತಿಜ್ಞೆ, ವಾಗ್ದಾನ. 3. ಪ್ರತಿಧ್ವನಿ. "वियद्गतः पुष्पकचन्द्रशालाः क्षणं प्रतिश्रुन्मुखराः करोति" रघु० १३-४०।

**प्रतिश्रुत ಪ್ರತಿಶ್ರುತ** (न०) 1. ಅಂಗೀಕಾರ, ಒಪ್ಪಿಗೆ. प्रति + श्रु (श्रवणे) भावे "क्तः" (३-३-११४)। 2. ಮಾತುಕೊಡುವುದು, ವಾಗ್ದಾನ, ಪ್ರತಿಜ್ಞೆ. (वि०) 3. ವಾಗ್ದಾನ ಮಾಡಲ್ಪಟ್ಟ, ಭರವಸೆ ಕೊಡಲ್ಪಟ್ಟ. "प्रतिश्रुतार्धराज्यप्रदानेऽपि पर्वतकविनाशः केवलं कृतघ्नतामात्रफलःस्यात्" मुद्रा० ३।

**प्रतिश्रुति ಪ್ರತಿಶ್ರುತಿ** (स्त्री०) 1. ಪ್ರತಿಧ್ವನಿ. प्रति + श्रु (श्रवणे) "क्तिन्" (३-३-९४)। "मनस्विनामुदितगुरुप्रतिश्रुतिः श्रुतस्तथा न निजमृदङ्गनिःस्वनः" माघ० १७-४२। 2. ಅಂಗೀಕಾರ, ಒಪ್ಪಿಗೆ. 3. ಪ್ರತಿಜ್ಞೆ. "इष्टं नः प्रति ते प्रतिश्रुतिरभूत् याच स्वराह्लादिनी" नैष० ५-१३५।

**प्रतिषिद्ध ಪ್ರತಿಷಿದ್ಧ** (वि०) 1. ನಿಷೇಧಿಸಲ್ಪಟ್ಟ, ತಡೆಯಲ್ಪಟ್ಟ, ನಿರೋಧಿಸಲ್ಪಟ್ಟ. प्रति + षिध (गत्याम्) "क्तः" (३-२-१०२)। "देव, प्रतिषिद्धः कौमुदीमहोत्सवः" मुद्रा० ३। "सर्वर्तुषु दिवास्वापः प्रतिषिद्धोऽन्यत्र ग्रीष्मात्" सुश्रुत० शारीर०। 2. ವಿರೋಧಿಸಲ್ಪಟ್ಟ, ಪ್ರತಿಯಾಗಿ ಹೇಳಲ್ಪಟ್ಟ.

**प्रतिषेद्धृ ಪ್ರತಿಷೇದ್ಧೃ** (वि०) 1. ನಿಷೇಧಿಸುವ, ತಡೆಗಟ್ಟುವ, ನಿರೋಧಿಸುವ. प्रति + षिध (गत्याम्) "तृच्" (३-१-१३३)। 2. ಪ್ರತಿಹೇಳುವ, ವಿರುದ್ಧವಾಗಿ ಹೇಳುವ. "यदा तु प्रतिषेद्धारं पापो न लभते क्वचित्। तिष्ठन्ति बहवो लोकास्तदा पापेषु कर्मसु" भा० आदि० ११६-१०।

**प्रतिषेध ಪ್ರತಿಷೇಧ** (पुं०) 1. ತಡೆ, ಅಡ್ಡಿ, ನಿಷೇಧ. प्रति + षिध (गत्याम्) "घञ्" (३-३-१८)। "आर्य, कौमुदीमहोत्सवप्रतिषेधस्य किं फलमार्यः पश्यति" मुद्रा० ३। 2. ವಿರುದ್ಧವಾದ ಮಾತು, ಎದುರುಮಾತು. 3. ಅರ್ಥಾಲಂಕಾರದ ಒಂದು ಭೇದ. ಪ್ರಸಿದ್ಧವಾದ ಒಂದು ವಿಷಯದಲ್ಲಿ ಮಾಡುವ ಪ್ರತಿಷೇಧವು ಸ್ವತಃ ಅನುಪಯುಕ್ತವಾಗಿ ಅರ್ಥಾಂತರ ಕೊಡುವುದರಲ್ಲಿ ಚಮತ್ಕಾರಕಾರಿಯಾಗುವುದು **ಪ್ರತಿಷೇಧಾಲಂಕಾರ. ಲಕ್ಷಣ:** "प्रतिषेधः प्रसिद्धस्य निषेधस्यानुवर्णनम्"। **ಉದಾ:** "न द्यूतमेतत् कितव क्रीडनं निशितैः शरैः"।

**प्रतिषेधत् ಪ್ರತಿಷೇಧತ್** (वि०) 1. ತಡೆಯುತ್ತಿರುವ, ಅಡ್ಡಿಮಾಡುತ್ತಿರುವ. प्रति + षिध (गत्याम्) "शतृ" (३-२-१२४)। 2. ನಿರೋಧಿಸುತ್ತಿರುವ, ಬೇಡವೆಂದು ಹೇಳುತ್ತಿರುವ, ಮಾಡದಂತೆ ತಡೆಯುತ್ತಿರುವ. "प्रतिषेधत्सु चाधर्मात् हितं चोपदिशत्स्वपि" मनु० २-२०६।

**प्रतिषेधाक्षर ಪ್ರತಿಷೇಧಾಕ್ಷರ** (न०) ನಿಷೇಧ ವಚನ, ಬೇಡ, ಕೂಡದು ಎನ್ನುವ ಮಾತು. "मुहुरङ्गुलिसंवृताधरोष्ठं प्रतिषेधाक्षरविक्लवाभिरामम्" शाकु० ३-२२।

**प्रतिषेधोपमा ಪ್ರತಿಷೇಧೋಪಮಾ** (स्त्री०) ಕಾವ್ಯಾದರ್ಶದಲ್ಲಿ ಹೇಳಿರುವ ಅರ್ಥಾಲಂಕಾರದ ಒಂದು ಭೇದ. प्रतिषेधेन उपमा। ಉಪಮಾನದ ಸಾದೃಶ್ಯವನ್ನು ಪ್ರತಿಷೇಧಿಸಿ ಉಪಮೇಯದಲ್ಲಿ ಹೆಚ್ಚು ವೈಚಿತ್ರ್ಯವನ್ನು ಹೇಳುವಲ್ಲಿ "प्रतिषेधोपमा" ಅಲಂಕಾರ. "न जातु शक्तिरिन्दोस्ते मुखेन प्रतिगर्जितुम्। कलङ्किनो जडस्येति प्रतिषेधोपमैव सा" काव्या० २-३४।

**प्रतिष्कश ಪ್ರತಿಷ್ಕಶ** (पुं०) 1. ಗೂಢಚಾರ, ಗುಪ್ತವಾಗಿ ಸಮಾಚಾರವನ್ನು ಒಯ್ಯುವವನು. (वि०) 2. ಮುಂದೆ

ನಡೆಯುವವನು. 3. ಸಹಾಯಕ. "प्रतिष्कशः पुमान् दूते त्रिष्वग्रगसहाययोः" वैज० ।

**प्रतिष्कष ಪ್ರತಿಷ್ಕಷ** (पुं०) ತೊಗಲಿನ ಹಗ್ಗ.

**प्रतिष्टब्ध ಪ್ರತಿಷ್ಟಬ್ಧ** (वि०) ತಡೆಯಲ್ಪಟ್ಟ, ಅಡ್ಡಿಪಡಿಸಲ್ಪಟ್ಟ, ವಿಘ್ನವುಂಟುಮಾಡಲ್ಪಟ್ಟ. प्रति+स्तन्भु (रोधने) कर्म० "क्तः" (३-२-१०२)।

**प्रतिष्टम्भ ಪ್ರತಿಷ್ಟಂಭ** (पुं०) ಅಡ್ಡಿಪಡಿಸುವುದು, ತಡೆಯುವುದು, ವಿಘ್ನವುಂಟುಮಾಡುವುದು. प्रति+स्तन्भु (रोधने) भावे "घञ्" (३-३-१८)। "बाहुप्रतिष्टम्भविवृद्धमन्युरभ्यर्णमागस्कृतमस्पृशद्भिः" रघु० २-३२।

**प्रतिष्ठा ಪ್ರತಿಷ್ಠಾ** (स्त्री०) 1. ಗೌರವ, ಮರ್ಯಾದೆ. प्रति+ष्ठा (गतिनिवृत्तौ) "अङ्" (३-३-१०६)। "अस्याधिकस्योपमयोपमाता दाता प्रतिष्ठां खलु तेभ्य एव" नैष० ७-१६। 2. ಸ್ಥಿರತೆ, ಭದ್ರವಾಗಿರುವಿಕೆ. "विपक्षमखिलीकृत्य प्रतिष्ठा खलु दुर्लभा" माघ० २-३४। 3. ಆಸ್ಪದ, ಸ್ಥಾನ. "वेदिप्रतिष्ठान् विततार्ध्वराणां यूपानपश्यत् शतशो रघूणाम्" रघु० १६-३५। 4. ವಾಸಸ್ಥಾನ, ಗೃಹ. "असौ शरण्यः शरणोन्मुखानामगाधसत्त्वो मगधप्रतिष्ठः" रघु० ६-२१। 5. ಅವಲಂಬನ, ಆಧಾರ, ಆಶ್ರಯ. "संरोपितेऽप्यात्मनि धर्मपत्नी त्यक्ता मया नाम कुलप्रतिष्ठा" शाकु० ६-२४। 6. ಯಶಸ್ಸು, ಕೀರ್ತಿ, ಪ್ರಖ್ಯಾತಿ. "प्राणप्रच्युतिभीरुणा न च मया नात्मप्रतिष्ठार्थिना" मुद्रा० २-५। 7. ವಿಜಯ, ಸರ್ವೋತ್ಕರ್ಷದಿಂದಿರುವುದು. "मानिषाद प्रतिष्ठां त्वमगमः शाश्वतीः समाः" चं० रा०। 8. ಸ್ಥಾಪನೆ, ಇರಿಸುವುದು, ವಿಧಿವತ್ತಾಗಿ ಸ್ಥಾಪಿಸುವುದು. "ऐश्वर्यादनपेतमीश्वरमयं लोकोऽर्थतः सेवते तं गच्छन्त्यनु ये विपत्तिषु पुनस्ते तत्प्रतिष्ठाशया" मुद्रा० २-४०। 9. ಯಾಗನಿಷ್ಪತ್ತಿ. 10. ವೃತ್ತರತ್ನಾಕರದಲ್ಲಿ ಉಕ್ತವಾದ ನಾಲ್ಕನೆಯ ಛಂದಸ್ಸು. "उक्तात्युक्ता तथा मध्या प्रतिष्ठान्या सुपूर्विका" वृ० र०। 11. ಸ್ಥಿತಿ, ಇರುವಿಕೆ. "त्रिस्रोतसं वहति यो गगनप्रतिष्ठां ज्योतींषि वर्तयति च प्रविभक्तरश्मिः" शाकु० ७-६। 12. ದೇವರ ಸಾನ್ನಿಧ್ಯಕ್ಕಾಗಿ ವಿಗ್ರಹವನ್ನು ಶಾಸ್ತ್ರೋಕ್ತವಾಗಿ ಮಂತ್ರಗಳಿಂದ ಆವಾಹನಪೂರ್ವಕ ಸ್ಥಾಪನೆಮಾಡುವುದು. "विशेषसन्निधिर्या तु क्रियते व्यापकस्य तु। सन्मूर्तौ भावनामन्त्रैः प्रतिष्ठा साभिधीयते"। "पूजा विना प्रतिष्ठां नास्ति न मन्त्रं विना प्रतिष्ठा च। तदुभयविप्रतिपन्नः पश्यतु गीर्वाणपाषाणम्" आर्यासप्त०। 13. ಇಷ್ಟಸಿದ್ಧಿ, ಇಷ್ಟಪ್ರಾಪ್ತಿ, ಕಾರ್ಯವು ಕೈಗೂಡುವುದು. "औत्सुक्यमात्रमवसाययति प्रतिष्ठा" शाकु० ५-६।

**प्रतिष्ठान ಪ್ರತಿಷ್ಠಾನ** (न०) 1. ಗಂಗಾ ನದಿಯ ಉತ್ತರ ತೀರದಲ್ಲಿರುವ ಒಂದು ನಗರ, ಚಂದ್ರವಂಶದ ದೊರೆಗಳ ರಾಜಧಾನಿ. प्रति+ष्ठा (गतिनिवृत्तौ) अधि० "ल्युट्" (३-३-११७)। 2. ವಾಸಸ್ಥಾನ. "प्रतिष्ठाने नरपति ययाति समुपस्थितौ" भा० उद्योग० ११४-९। 3. ಒಂದು ನಗರದ ಸ್ಥಾಪನೆ.

**प्रतिष्ठापक ಪ್ರತಿಷ್ಠಾಪಕ** (वि०) ಸ್ಥಾಪನೆ ಮಾಡಿಸುವವನು, ಪ್ರತಿಷ್ಠೆ ಮಾಡಿಸುವವನು. प्रति+ष्ठा (गतिनिवृत्तौ)+णिच् "ण्वुल्" (३-१-१३३)। "तृच्" (३-१-१३३)। **प्रतिष्ठापयिता ಪ್ರತಿಷ್ಠಾಪಯಿತಾ.**

**प्रतिष्ठापन ಪ್ರತಿಷ್ಠಾಪನ** (न०) ದೇವರ ವಿಗ್ರಹವನ್ನು ಪ್ರತಿಷ್ಠೆಮಾಡಿಸುವುದು, ವಿಗ್ರಹದಲ್ಲಿ ಸಾನ್ನಿಧ್ಯಕ್ಕಾಗಿ ಮಂತ್ರಪೂರ್ವಕ ಆವಾಹನೆಮಾಡಿ ಪ್ರತಿಷ್ಠೆ ಮಾಡಿಸುವುದು. प्रति+ष्ठा (गतिनिवृत्तौ)+णिच् "ल्युट्" (३-३-११५)।

**प्रतिष्ठासत् ಪ್ರತಿಷ್ಠಾಸತ್** (वि०) ಹೊರಡಲು ಅಪೇಕ್ಷಿಸುತ್ತಿರುವ. प्र+ष्ठा (गतिनिवृत्तौ)+सन् "शतृ" (३-२-१२४)। स्त्रियाम् **–तिष्ठासन्ती –ತಿಷ್ಠಾಸನ್ತೀ.**

**प्रतिष्ठासा ಪ್ರತಿಷ್ಠಾಸಾ** (स्त्री०) ಹೊರಡಲು ಅಪೇಕ್ಷೆ. प्रस्थातुमिच्छा—प्र+ष्ठा (गतिनिवृत्तौ)+सन् "अः" (३-३-१०२)।

**प्रतिष्ठासित ಪ್ರತಿಷ್ಠಾಸಿತ** (वि०) ಹೊರಟುಬರಲು ಅಪೇಕ್ಷಿಸಲ್ಪಟ್ಟ. प्र+ष्ठा (गतिनिवृत्तौ)+सन् "क्तः" (३-२-१०२)।

**प्रतिष्ठासु ಪ್ರತಿಷ್ಠಾಸು** (वि०) ಹೊರಡಲು ಅಪೇಕ್ಷಿಸುವ. प्रस्थातुमिच्छुः—प्र+ष्ठा (गतिनिवृत्तौ)+सन् "उः" (३-२-१६८)। "अभिचैद्यं प्रतिष्ठासुरासीत् कार्यद्वयाकुलः" माघ० २-१।

**प्रतिष्ठित ಪ್ರತಿಷ್ಠಿತ** (वि०) 1. ಸ್ಥಿರವಾಗಿ ನಿಲ್ಲಿಸಲ್ಪಟ್ಟ. प्र+ष्ठा (गतिनिवृत्तौ) "क्तः" (३-२-१०२)। 2. ಇರಿಸಲ್ಪಟ್ಟ, ಇಡಲ್ಪಟ್ಟ. "अरैः सन्धार्यते नाभिर्नाभौ चाराः प्रतिष्ठिताः" पञ्चतं० १-८९। 3. ಪ್ರತಿಷ್ಠೆಮಾಡಲ್ಪಟ್ಟ, ಪೂಜಾಕಾರ್ಯಕ್ಕಾಗಿ ಸ್ಥಾಪನಾದಿ ಸಂಸ್ಕಾರ ಮಾಡಲ್ಪಟ್ಟ. 4. ಗೌರವವನ್ನು ಸಂಪಾದಿಸಿದ, ಗೌರವ ಪಡೆದಿರುವ. प्रतिष्ठा अस्य सञ्जातः "इतच्" (५-२-३६)। "प्रतिष्ठितानाश्चाकीर्तिर्मरणादतिरिच्यते"। 5. ಕೀರ್ತಿ

ಶಾಲಿಯಾದ. (पुं०) 6. ವಿಷ್ಣು. प्रति + ष्ठा (गतिनिवृत्तौ) "क्तः" (३-४-७२)। अन्यानपेक्षया स्वे महिम्नि स्थितः। "स्वे महिम्नि स्थितो यस्तु स प्रतिष्ठित उच्यते" इति निरुक्तिः। "अपांनिधिरधिष्ठानमप्रमत्तः प्रतिष्ठितः" वि० स०।

**प्रतिसंजिहीर्षत् ಪ್ರತಿಸಂಜಿಹೀರ್ಷತ್** (वि०) ಹಿಂದಕ್ಕೆ ಎಳೆದುಕೊಳ್ಳಲು ಅಪೇಕ್ಷಿಸುತ್ತಿರುವ. प्रति + सम् + हृञ् (हरणे) + सन् "शतृ" (३-२-१२४)।

**प्रतिसंजिहीर्षा ಪ್ರತಿಸಂಜಿಹೀರ್ಷಾ** (स्त्री०) ಹಿಂದಕ್ಕೆ ಎಳೆದುಕೊಳ್ಳಲು ಅಪೇಕ್ಷೆ. प्रति+सम्+हृञ् (हरणे)+सन् "अः" (३-२-१०२)।

**प्रतिसंजिहीर्षु ಪ್ರತಿಸಂಜಿಹೀರ್ಷು** (वि०) ಹಿಂದಕ್ಕೆ ಆಕರ್ಷಿಸಲು ಅಪೇಕ್ಷಿಸುವ. प्रति+सम्+हृञ् (हरणे) + सन् "उः" (३-२-१६८)।

**प्रतिसंहरण ಪ್ರತಿಸಂಹರಣ** (न०) ಹಿಂದಕ್ಕೆ ತೆಗೆದುಕೊಳ್ಳುವುದು, ಹಿಂದಕ್ಕೆ ಎಳೆದುಕೊಳ್ಳುವುದು. प्रति+सम्+हृञ् (हरणे) भावे "ल्युट्" (३-३-११५)।

**प्रतिसंहरत् ಪ್ರತಿಸಂಹರತ್** (वि०) ಹಿಂದಕ್ಕೆ (ಬಾಣವನ್ನು) ಎಳೆದುಕೊಳ್ಳುತ್ತಿರುವ. प्रति + सम् + हृञ् (हरणे) "शतृ" (३-२-१२४)। "नरेन्द्रसूनुः प्रतिसंहरन्निषुं प्रियंवदः प्रत्यवदत्सुरेश्वरः" रघु० ३-६४।

**प्रतिसंहर्तृ ಪ್ರತಿಸಂಹರ್ತೃ** (वि०) (ಬಾಣವನ್ನು) ಹಿಂದಕ್ಕೆ ಎಳೆದುಕೊಳ್ಳುವವನು. प्रति + सम् + हृञ् (हरणे) "तृच्" (३-१-१३३)।

**प्रतिसंहार ಪ್ರತಿಸಂಹಾರ** (पुं०) (ಪ್ರಯೋಗಿಸಿದ ಬಾಣವನ್ನು) ಹಿಂದಕ್ಕೆ ಎಳೆದುಕೊಳ್ಳುವುದು. प्रति+सम्+हृञ् (हरणे) "घञ्" (३-३-१८)।

**प्रतिसंहृत ಪ್ರತಿಸಂಹೃತ** (वि०) ಹಿಂದಕ್ಕೆ ತೆಗೆದುಕೊಳ್ಳಲ್ಪಟ್ಟ (ಬಾಣ). प्रति + सम् + हृञ् (हरणे) "क्तः" (३-२-१०२)। "राजा, एष प्रतिसंहृतः" शाकु० १।

**प्रतिसंह्रियमाण ಪ್ರತಿಸಂಹ್ರಿಯಮಾಣ** (वि०) ಹಿಂದಕ್ಕೆ ಎಳೆದುಕೊಳ್ಳಲ್ಪಡುತ್ತಿರುವ (ಬಾಣ). प्रति + सम् + हृञ् (हरणे) कर्म० "शानच्" (३-२-१२४)।

**प्रतिसक्त ಪ್ರತಿಸಕ್ತ** (वि०) ಆಸಕ್ತವಾದ, ಸೇರಿಕೊಂಡಿರುವ, ಸಂಬಂಧ ಹೊಂದಿದ. प्रति + षञ्ज (सङ्गे) "क्तः" (३-४-७२)। "निशम्य चैनां तपसे कृतोद्यमां सुतां गिरीशप्रतिसक्तमानसाम्" कुमा० ५-३।

**प्रतिसङ्क्रम ಪ್ರತಿಸಂಕ್ರಮ** (पुं०) 1. ಮತ್ತೊಂದು ವಸ್ತುವಿನೊಳಗೆ ಸೇರಿಕೊಳ್ಳುವುದು, ಪ್ರತಿಬಿಂಬಿಸುವುದು. प्रति + सम् + क्रमु (पादविक्षेपे) "घञ्" (३-३-१८)। भावे "ल्युट्" (३-३-११५)। –क्रमणम् –ಕ್ರಮಣವು. 2. ಸಂಚಾರ.

**प्रतिसञ्चर ಪ್ರತಿಸಂಚರ** (पुं०) 1. ಪ್ರಳಯ, ವಿಲೀನಗೊಳ್ಳುವುದು. प्रतिसञ्चरन्ति क्रियाशून्यतया विलीयन्तेऽस्मिन् — प्रति + सम् + चर (गतौ) अधि० "घः" (३-३-११९) निपा०। "पद्मासहायकरुणे प्रतिसञ्चरकेलिमाचरसि" दयाश० १६। "यदा तु प्रकृतौ याति लयं विश्वमिदं जगत्। तदोच्यते प्राकृतोऽयं विद्वद्भिः प्रतिसञ्चरः" मार्क०। 2. ಸಂಚಾರ.

**प्रतिसन्देश ಪ್ರತಿಸಂದೇಶ** (पुं०) ಸಂದೇಶಕ್ಕೆ ಪ್ರತ್ಯುತ್ತರ ಹೇಳಿಕಳುಹಿಸುವುದು, ಹೇಳಿಕಳುಹಿಸಿದ ಮಾತಿಗೆ ಬದಲು ಮಾತು ಹೇಳಿಕಳುಹಿಸುವುದು. प्रतिरूपः सन्देशः।

**प्रतिसन्धान ಪ್ರತಿಸಂಧಾನ** (न०) 1. ಒಟ್ಟಿಗೆ ಸೇರಿಸುವುದು, ಒಟ್ಟುಗೂಡಿಸುವುದು. प्रति + सम् + डुधाञ् (धारणपोषणयोः) "ल्युट्" (३-३-११५)। 2. ಅನುಸಂಧಾನ, ಅನುಚಿಂತನೆ, ಧ್ಯಾನ. 3. ಅನ್ವೇಷಣೆ, ಹುಡುಕುವುದು.

**प्रतिसन्धि ಪ್ರತಿಸಂಧಿ** (पुं०) 1. ವಿರಾಮ, ನಿಲುಗಡೆ. प्रतीपः सन्धिः। "अदृष्टतोऽनुपायाच्च प्रतिसन्धिश्च कर्मणः" भा० शान्ति०। 2. ಒಟ್ಟಿಗೆ ಸೇರುವುದು, ಮತ್ತೆ ಒಟ್ಟುಗೂಡುವುದು.

**प्रतिसन्धेय ಪ್ರತಿಸಂಧೇಯ** (वि०) 1. ಒಟ್ಟಿಗೆ ಸೇರಿಸಲ್ಪಡುವ, ಒಟ್ಟುಗೂಡಿಸಲ್ಪಡುವ. प्रति + सम् + डुधाञ् "यत्" (३-१-९७)। 2. ಧ್ಯಾನಮಾಡಲ್ಪಡುವ.

**प्रतिसर ಪ್ರತಿಸರ** (पुं०) 1. ಹಸ್ತಸೂತ್ರ, ಕಂಕಣ, ರಕ್ಷೆಗಾಗಿ ಕೈಗೆ ಕಟ್ಟುವ ಮಂತ್ರಿಸಿದ ದಾರ. प्रतिसरति — प्रति + सृ (गतौ) "अच्" (३-१-१३४)। 2. ಒಂದು ಮಂತ್ರ. 3. ಮಾಲೆ, ಹೂವಿನ ಸರ. 4. ಸೈನ್ಯದ ಹಿಂಭಾಗ. 5. ವಿವಾಹಾದಿ ಶುಭಕಾರ್ಯಗಳಲ್ಲಿ ಕೈಗೆಕಟ್ಟುವ ಮಂಗಳಸೂತ್ರ, ಕಂಕಣ. "त्रस्तोरगप्रतिसरेण करेण पाणिः" किरा० ५-३३। 6. ಸೇವಕ, ಆಳು. 7. ವ್ರಣಶುದ್ಧಿ, ಗಾಯವನ್ನು ತೊಳೆದು ಶುದ್ಧಮಾಡುವುದು. (पुन०) 8. ಆಭರಣ, ಒಡವೆ. 9. ಕಾವಲುಗಾರ.

**प्रतिसर्ग ಪ್ರತಿಸರ್ಗ** (पुं०) 1. ಬ್ರಹ್ಮನ ಸೃಷ್ಟಿಗೆ ಸಮಾನವಾದ ದಕ್ಷ ಮರೀಚಿ ಮೊದಲಾದ ಪ್ರಜಾಪತಿಗಳ ಸೃಷ್ಟಿ

ಕಾರ್ಯ. ಇದು ಪುರಾಣದ ಐದು ಲಕ್ಷಣಗಳಲ್ಲೊಂದು. "सर्गश्च प्रतिसर्गश्च वंशो मन्वन्तराणि च। वंशानुचरितं चेति लक्षणानां तु पञ्चकम्"।

**ದಕ್ಷಪ್ರಜಾಪತಿಯ ಸೃಷ್ಟಿ:** ಅನೇಕ ಮಂದಿ ಪುತ್ರರು ದೇವರ್ಷಿಗಳು ಮಹರ್ಷಿಗಳು ಸೋಮಪರು ಮತ್ತು ಅನೇಕ ಪಿತೃಗಣಗಳು. "सुतान् बहून् समुत्पाद्य दक्षो देवर्षिसत्तमान्। महर्षीन् सोमपादींश्च बहून् पितृगणांस्तथा। सृष्टिं प्रवर्तयामास प्रतिसर्गोऽस्य स स्मृतः"।

**ಮರೀಚಿ ಪ್ರಜಾಪತಿಯ ಸೃಷ್ಟಿ:** ಕಶ್ಯಪ. ಕಶ್ಯಪರಿಂದ ದೇವತೆಗಳು ದೈತ್ಯರು ದಾನವರು ಸಿದ್ಧರು ಗಂಧರ್ವರು ಯಕ್ಷರು ಅಪ್ಸರಸಿಯರು ಲತಾವೃಕ್ಷಗಳು ದುಷ್ಟಮೃಗಗಳು ಶ್ಯೇನ ಗರ್ದಭ ಪಶುಪಕ್ಷಿಗಳು ಗೋವುಗಳು ಅರುಣ ಗರುಡ ಮುಂತಾದವರು. "मरीचेः कश्यपो जातः कश्यपात् सकलं जगत्। देवा दैत्या दानवाश्च तस्य सर्गः प्रकीर्तितः"।

**ಅತ್ರಿಪ್ರಜಾಪತಿಯ ಸೃಷ್ಟಿ:** ಅತ್ರಿಯ ನೇತ್ರದಿಂದ ಚಂದ್ರನು ಹುಟ್ಟಿದನು. ಚಂದ್ರನಿಂದ ಮುಂದೆ ಚಂದ್ರವಂಶವು ಬೆಳೆಯಿತು. ಇದು ಸೋಮವರ್ಗ. "अत्रेर्नेत्रादभूच्चन्द्रश्चन्द्रवंशस्ततोऽभवत्। तेन सर्वं जगद्व्याप्तं सोमवर्गः प्रकीर्तितः"।

**ಅಥರ್ವಾಂಗಿರಸ್ಸಿನ ಸೃಷ್ಟಿ:** ಅನೇಕ ಪುತ್ರರು. ಯಂತ್ರ ಮಂತ್ರ ಮೊದಲಾದುವು ಈ ಪ್ರಜೆಗಳು.

**ಪುಲಸ್ತ್ಯನ ಸೃಷ್ಟಿ:** ಆಜ್ಯಪರು ಮತ್ತು ರಾಕ್ಷಸರು. "आज्यपाख्याः पुलस्त्यस्य पुत्राश्चान्ये च राक्षसाः। प्रतिसर्गाः पुलस्त्यस्य बलवीर्यसमन्विताः"।

**ಪುಲಹನ ಸೃಷ್ಟಿ:** ಕಾದ್ರವೇಯರು (ನಾಗಲೋಕದ ಸರ್ಪಗಳು) ಗಜ, ಅಶ್ವ ಮುಂತಾದ ಪ್ರಜೆಗಳು. "काद्रवेया गजा अश्वाः प्रजा बहुतरास्तथा। ससृजे पुलहेनैषः सर्गस्तस्य प्रकीर्तितः"। ಮತ್ತು ಕ್ರತುವಿಗೆ 88000 ಪ್ರಜೆಗಳು (ಪುತ್ರರು) ಪ್ರಚೇತಸ್ಸಿಗೆ 86000 ಪುತ್ರರು ವಸಿಷ್ಠರಿಗೆ 50 ಪುತ್ರರು ಭೃಗುವಿಗೆ ದೈತ್ಯಪುರೋಹಿತರಾದ ಭಾರ್ಗವರು ನಾರದರಿಂದ ನಕ್ಷತ್ರಗಳು ವಿಮಾನಗಳು ನೃತ್ಯ ಗೀತ ಮುಂತಾದುವು. ಈ ರೀತಿ ಸೃಷ್ಟವಾದ ಪ್ರಜಾಸಂತತಿಗಳು ಜಗತ್ತೆಲ್ಲವನ್ನೂ ವ್ಯಾಪಿಸಿರುವುದು. "एते दश मरीचाद्याः कृतदारान् बहून् सुतान्। उत्पाद्योत्पाद्य पृथिवीं दिवं च समपूरयन्"। 2. ಪ್ರಳಯ, ಜಗತ್ತಿನ ನಾಶ.

**प्रतिसर्पण ಪ್ರತಿಸರ್ಪಣ** (ನಂ) (ಅದರ) ಕಡೆಗೆ ಹೋಗುವುದು.

**प्रतिसर्पत् ಪ್ರತಿಸರ್ಪತ್** (ವಿಂ) (ಅವರ) ಕಡೆಗೆ ಹೋಗುತ್ತಿರುವ, (ಅದನ್ನು) ಕುರಿತು ಹೋಗುವ. प्रति + सृप्लृ (गतौ) "शतृ" (३-२-१२४)। "तस्य कुण्डिनपुरं प्रतिसर्पन् भूपतेर्व्यवसितानि शशंसुः" नैष० ५-६७।

**प्रतिसारण ಪ್ರತಿಸಾರಣ** (ನಂ) 1. ಬೆರಳ ತುದಿಯಿಂದ ನಾಲಿಗೆ ಹಲ್ಲು ಮುಂತಾದುವಕ್ಕೆ ಸುಗಂಧ ಚೂರ್ಣವನ್ನು ಹಚ್ಚುವುದು (ಉಜ್ಜುವುದು). प्रति + सृ (गतौ) + णिच् "ल्युट्" (३-३-११५)। "अङ्गुल्यग्रेण चूर्णाद्यैः घर्षणं प्रतिसारणम्" वैज०। "दन्तजिह्वामुखानां यच्चूर्णकल्कावलेहकैः। शनैर्घर्षणमङ्गुल्या तदुक्तं प्रतिसारणम्" भावप्र०। 2. ದೂರಮಾಡುವುದು, ದೂರಕ್ಕೆ ತಳ್ಳುವುದು. 3. ಗಾಯದ ಚಿಕಿತ್ಸೆ. 4. ಗಾಯಕ್ಕೆ ಮುಲಾಮು ಹಚ್ಚುವ ಒಂದು ಸಾಧನ. प्रति + सृ + णिच् कर० "ल्युट्" (३-३-११७)। 5. ಜರುಗಿಸುವುದು, ತಳ್ಳುವುದು. (ವಿಂ) 6. ದೂರಮಾಡುವ, ದೂರಕ್ಕೆ ತಳ್ಳುವ. 7. ದೂರಕ್ಕೆ ಓಡಿಸುವ. प्रति + सृ + णिच् "ल्युः" (३-१-१३४)।

**प्रतिसारयत् ಪ್ರತಿಸಾರಯತ್** (ವಿಂ) 1. ದೂರಕ್ಕೆ ತಳ್ಳುತ್ತಿರುವ, ದೂರಮಾಡುತ್ತಿರುವ. 2. ದೂರಕ್ಕೆ ಓಡಿಸುತ್ತಿರುವ, ದೂರಕ್ಕೆ ಅಟ್ಟುತ್ತಿರುವ. प्रति+सृ (गतौ) + णिच् "शतृ" (३-२-१२४)। 3. ಗಾಯಕ್ಕೆ ಚಿಕಿತ್ಸೆ ಮಾಡುತ್ತಿರುವ. 4. ಸುಗಂಧಿ ಚೂರ್ಣದಿಂದ ನಾಲಿಗೆ ತುಟಿ ಮೊದಲಾದುವುಗಳನ್ನುಜ್ಜುತ್ತಿರುವ. 5. ಗಾಯಕ್ಕೆ ಚಿಕಿತ್ಸೆ ಮಾಡುತ್ತಿರುವ. 6. ಜರುಗಿಸುತ್ತಿರುವ.

**प्रतिसारयितव्य ಪ್ರತಿಸಾರಯಿತವ್ಯ** (ವಿಂ) 1. ಚಿಕಿತ್ಸೆ ಮಾಡಲ್ಪಡುವ (ಗಾಯ). प्रति + सृ (गतौ) + णिच् "तव्यः" (३-१-९६)। 2. ಜರುಗಿಸಲ್ಪಡುವ, ಸರಿಸಲ್ಪಡುವ. 3. ದೂರಕ್ಕೆ ತಳ್ಳಲ್ಪಡುವ. 4. ದೂರಕ್ಕೆ ಓಡಿಸಲ್ಪಡುವ. 5. ದೂರಕ್ಕೆ ತಳ್ಳಬೇಕಾದ, 6. ದೂರಕ್ಕೆ ಓಡಿಸಬೇಕಾದ. 7. ಚಿಕಿತ್ಸೆಮಾಡಬೇಕಾದ. "अनीयर्" (३-१-९६)। –सारणीय:–ಸಾರಣೀಯಃ.

**प्रतिसारयितृ ಪ್ರತಿಸಾರಯಿತೃ** (ವಿಂ) 1. ಗಾಯಕ್ಕೆ ಮುಲಾಮು ಹಾಕುವವನು. 2. ದೂರಕ್ಕೆ ತಳ್ಳುವವನು. 3. ಅಟ್ಟುವವನು. प्रति + सृ (गतौ) + णिच् "तृच्" (३-१-१३४)। स्त्रियां –सारयित्री –ಸಾರಯಿತ್ರೀ.

**प्रतिसार्यमाण ಪ್ರತಿಸಾರ್ಯಮಾಣ** (ವಿಂ) ಜರುಗಿಸಲ್ಪಡುತ್ತಿರುವ, ಸರಿಸಲ್ಪಡುತ್ತಿರುವ. प्रति+सृ (गतौ)+णिच् कर्म० "शानच्" (३-२-१२४)। "धात्र्यङ्गुलीभिः प्रतिसार्यमाणमूर्णामयं कौतुकहस्तसूत्रम्" कुमा० ७-२५।

**प्रतिसीरा ಪ್ರತಿಸೀರಾ** (स्त्री०) ಬಟ್ಟೆಯ ತೆರೆ, ವಸ್ತ್ರದ ಪರದೆ. प्रतिसिनोति — प्रति + षिञ् (बन्धने) "क्रन्" (उ० २-२६) दीर्घश्च ।

**प्रतिसूर्य ಪ್ರತಿಸೂರ್ಯ** (पुं०) 1. ಹಲ್ಲಿಯ ಜಾತಿಗೆ ಸೇರಿದ ಒಂದು ಬಗೆ ಓತಿ, ಗೋಸುಂಬೆ. "स्याद्वेदार: क्रकचमात् कृकलास: तृणाञ्जन:। प्रतिसूर्य:" त्रिकाण्ड०। 2. ಅಂತರಿಕ್ಷದಲ್ಲಿ ಎರಡನೆಯ ಸೂರ್ಯನಂತೆ ಕಾಣಿಸುವ ಒಂದು ಉತ್ಪಾತ. प्रतिरूप: सूर्य:। स्वार्थे "क:"। **–सूर्यक: –ಸೂರ್ಯಕಃ**. "तृष्यद्भि: प्रतिसूर्यकैरजगरस्वेदद्रव: पीयते" उ० रा० २-१६। ಅಂತರಿಕ್ಷದಲ್ಲಿ ಕಾಣುವ ಪ್ರತಿ ಸೂರ್ಯನು ವೈಡೂರ್ಯದಂತೆ ಬೆಳ್ಳಗೆ ಸ್ವಚ್ಛವಾಗಿದ್ದರೆ ಜಗತ್ತಿಗೆ ಕ್ಷೇಮ ಮತ್ತು ಸುಭಿಕ್ಷ. "प्रतिसूर्यक: प्रशस्तो दिवसकृदृतुवर्णसप्रभ: स्निग्ध:। वैडूर्यनिभ: स्वच्छ: शुक्लश्च क्षेमसौभिक्ष:" बृहत्सं० ३७-१। ಪ್ರತಿ ಸೂರ್ಯನು ಹಳದಿ ಬಣ್ಣದಿಂದ ಕೂಡಿದ್ದರೆ ವ್ಯಾಧಿ ಕಂಪು ಅಶೋಕ ಬಣ್ಣವಾಗಿದ್ದರೆ ಶಸ್ತ್ರಯುದ್ಧ ನಡೆಯುವುದು. ಮಾಲಾಕಾರದ ಪ್ರತಿ ಸೂರ್ಯರಿಂದ ದೇಶದಲ್ಲಿ ಕಳ್ಳಕಾಕರ ಭೀತಿ, ವ್ಯಾಧಿ ಮತ್ತು ರಾಜರಿಗೆ ವಿಪತ್ತುಗಳು ಸಂಭವಿಸುವುವು. "पीतो व्याधिं जनयत्यशोकरूपश्च शस्त्रकोपश्च। प्रतिसूर्याणां माला दस्युभयातङ्कनृपहन्त्री" बृहत्सं० ३७-२।

**प्रतिसृष्ट ಪ್ರತಿಸೃಷ್ಟ** (वि०) 1. ಕಳುಹಿಸಲ್ಪಟ್ಟ. प्रति + सृज (विसर्गे) "क्त:" (३-२-१०२)। 2. ದಾನಮಾಡಲ್ಪಟ್ಟ, ಕೊಡಲ್ಪಟ್ಟ. 3. ತಿರಸ್ಕರಿಸಲ್ಪಟ್ಟ, ನಿರಾಕರಿಸಲ್ಪಟ್ಟ. "प्रतिसृष्ट: प्रेषिते स्यात्प्रत्याख्याते च वाच्यवत्" मेदि०।

**प्रतिस्त्री ಪ್ರತಿಸ್ತ್ರೀ** (स्त्री०) 1. ಪ್ರತಿ ಹೆಂಗಸು, ಪರಸ್ತ್ರೀ. प्रतिरूपा स्त्री। (अव्य०) 2. ಹೆಂಗಸಿಗೆ ಎದುರಾಗಿ, –ಅಭಿಮುಖವಾಗಿ. आभिमुख्ये अव्ययी०।

**प्रतिस्पन्दन ಪ್ರತಿಸ್ಪಂದನ** (न०) ಸ್ಫುರಣ, ಹಾರುವುದು, ಅದಿರುವುದು. प्रति+स्पदि (किञ्चिच्चलने) "ल्युट्" (३-३-११५)।

**प्रतिस्पर्धा ಪ್ರತಿಸ್ಪರ್ಧಾ** (स्त्री०) ಮೇಲಾಟ, ಹುರುಡು. प्रति + स्पर्ध (संघर्षे) "अङ्" (३-३-१०३)।

**प्रतिस्पर्धिन् ಪ್ರತಿಸ್ಪರ್ಧಿನ್** (वि०) ಎದುರಾಳಿ, ಪ್ರತಿದ್ವಂದ್ವಿ, ಮೇಲಾಡುವವನು. प्रतिस्पर्धते—स्पर्ध (संघर्षे) "णिनि:" (३-१-१३४)।

**प्रतिस्वन ಪ್ರತಿಸ್ವನ, –स्वर –ಸ್ವರ** (पुं०) ಪ್ರತಿಶಬ್ದ, ಪ್ರತಿಧ್ವನಿ, ಮಾರ್ನುಡಿ. प्रतिरूप: स्वन: स्वरो वा। "दधिरेऽधिभित्ति पटहप्रतिस्वनै: स्फुटमट्टहासमिव सौधपङ्क्तय:" माघ० १३-३१।

**प्रतिहत ಪ್ರತಿಹತ** (वि०) 1. ತಡೆಯಲ್ಪಟ್ಟ, ನಿವಾರಿಸಲ್ಪಟ್ಟ, ಎದುರಿಸಲ್ಪಟ್ಟ. प्रति + हन (हिंसागत्यो:) "क्त:" (३-२-१०२)। "रम्यास्तपोधनानां प्रतिहतविघ्ना: क्रिया: समवलोक्य" शाकु० १-१२। 2. ನಾಶಪಡಿಸಲ್ಪಟ್ಟ, ಹೋಗಲಾಡಿಸಲ್ಪಟ್ಟ. 3. ಹಿಂದಕ್ಕೆ ಅಟ್ಟಲ್ಪಟ್ಟ, ಹಿಂದಕ್ಕೆ ಓಡಿಸಲ್ಪಟ್ಟ. 4. ವ್ಯರ್ಥಪಡಿಸಲ್ಪಟ್ಟ, "तस्मिन्नुपाया: सर्वे न: क्रूरे प्रतिहतक्रिया:" कुमा० २-४८। 5. ನಿರಾಶನಾದ, ಆಸೆಯನ್ನು ತೊರೆದ. "मनोहत: प्रतिहत: प्रतिबद्धो हतश्च स:" अम०। 6. ದ್ವೇಷಿಸಲ್ಪಟ್ಟ. 7. ಬದಲಾಗಿ ಹೊಡೆಯಲ್ಪಟ್ಟ.

**प्रतिहति ಪ್ರತಿಹತಿ** (स्त्री०) ಎದುರು ಏಟು, ಎದುರು ಪೆಟ್ಟು. प्रति+हन (हिंसागत्यो:) "क्तिन्" (३-३-९४)। "ध्रुवमागता: प्रतिहतिं कठिने मदनेषव: कुचतटे महति" माघ० ९-४९।

**प्रतिहनन ಪ್ರತಿಹನನ** (न०) 1. ಹಿಮ್ಮೆಟ್ಟುವುದು, ಹಿಂದಕ್ಕೆ ಓಡುವುದು. 2. ಪ್ರತಿಯಾಗಿ ಹೊಡೆಯುವುದು, ಎದುರು ಏಟು ಹೊಡೆಯುವುದು. प्रति + हन (हिंसागत्यो:) "ल्युट्" (३-३-११५)।

**प्रतिहन्यमान ಪ್ರತಿಹನ್ಯಮಾನ** (वि०) ಹೊಡೆಯಲ್ಪಡುತ್ತಿರುವ. प्रति + हन (हिंसागत्यो:) कर्म० "शानच्" (३-२-१२४)। "विघ्नै: पुन: पुनरपि प्रतिहन्यमाना: प्रारब्धमुत्तमगुणा न परित्यजन्ति" भर्तृ० १-७२।

**प्रतिहर्तृ ಪ್ರತಿಹರ್ತೃ** (वि०) 1. ಪರಿಹರಿಸುವವನು, ಹೋಗಲಾಡಿಸುವವನು, ನಿವಾರಿಸುವವನು. प्रति+हृञ् (हरणे) "तृच्" (३-१-१३३)। "उपपन्नं ननु शिवं सप्तस्वङ्गेषु यस्य मे। दैवीनां मानुषीणां च प्रतिहर्ता त्वमापदाम्" रघु० १-६०। 2. ಮತ್ತೆ ತರುವವನು, ಪುನಃ ತೆಗೆದುಕೊಂಡು ಬರುವವನು. स्त्रियां "ङीप्" (४-१-५)। **–हर्त्री –ಹರ್ತ್ರೀ**.

**प्रतिहस्तक ಪ್ರತಿಹಸ್ತಕ** (पुं०) ಪ್ರತಿನಿಧಿ, ಪ್ರತಿ ಪುರುಷ, ಬದಲಿಯವನು. प्रतिरूपो हस्तो यस्य। "आश्रितानां भृतौ स्वामिसेवायां धर्मसेवने। पुत्रस्योत्पादने चैव न सन्ति प्रतिहस्तका:" हितो० २-३३।

**प्रतिहार ಪ್ರತಿಹಾರ** (पुं०) 1. ದ್ವಾರ, ಬಾಗಿಲು. प्रतिह्रियते आह्रियते — प्रति + हृञ् (हरणे) "घञ्" (३-३-१९)। "धवलाश्मरश्मिपटलाविभावितप्रतिहारमाविशदसौ सद:

शनैः" माघ० १३-६२। 2. ದ್ವಾರಪಾಲಕ, ಬಾಗಿಲು ಕಾಯುವವನು. प्रतिह्रियतेऽत्र — प्रति + हृञ् (हरणे) अधि० "घञ्" (३-३-१२१)। "ज्ञातो हि प्रतिहारेण ज्ञानी कश्चिन् द्विजोत्तमः"। वा दीर्घः (६-३-१२२)। प्रतीहारः ಪ್ರತೀಹಾರಃ. 3. ಗಾರುಡಿಗ, ತಂತ್ರಗಾರ, ಯಕ್ಷಿಣಿ ಮಾಡುವವನು. प्रतिरूपं हरति — हृञ् (हरणे) "अण्" (३-२-१)। स्त्रियां गौरा० "ङीष्" (४-१-४१)। -हारी -ಹಾರೀ.

**प्रतिहारक ಪ್ರತಿಹಾರಕ** (पुं०) ತಂತ್ರಗಾರ, ಗಾರುಡಿಗ, ಕಣ್ಣುಕಟ್ಟು ಮಾಡುವವನು. प्रति + हृञ् (हरणे) "ण्वुल्" ३-१-१३३)।

**प्रतिहारभूमि ಪ್ರತಿಹಾರಭೂಮಿ** (स्त्री०) ಮನೆಯ ಬಾಗಿಲು, ಮನೆಯ ಪ್ರವೇಶ ಸ್ಥಳ. प्रतिहारस्य भूमिः। "भविष्यतः पत्युरुमा च शम्भोः समाससाद प्रतिहारभूमिम्" कुमा० ३-५८।

**प्रतिहाररक्षी ಪ್ರತಿಹಾರರಕ್ಷೀ** (स्त्री०) ದ್ವಾರಪಾಲಿಕೆ, ಮನೆಯ ಬಾಗಿಲನ್ನು ಕಾಯುವ ಹೆಂಗಸು. प्रतिहारं रक्षति। "ततो नृपाणां श्रुतवृत्तवंशा पुंवत् प्रगल्भा प्रतिहाररक्षी" रघु० ६-२०।

**प्रतिहास ಪ್ರತಿಹಾಸ** (पुं०) 1. ಹಾಸ್ಯಮಾಡಿದವನನ್ನು ಪ್ರತಿಯಾಗಿ ಹಾಸ್ಯಮಾಡುವುದು. प्रतिरूपो हासः। 2. ಕಣಗಿಲೆ ಗಿಡ. प्रतीतो हासो विकासोऽस्य। वा दीर्घः (६-३-१२२)। प्रतीहासः ಪ್ರತೀಹಾಸಃ.

**प्रतीक ಪ್ರತೀಕ** (पुं०) 1. ಅಂಗ, ಅವಯವ. प्रत्येति — प्रति+इण् (गतौ) "कीकन्" (उ० ४-२५)। निपा०। "तदा घटेतापि न वा तदेतत्प्रतिप्रतीकाद्भुतरूपशिल्पम्" नैष० ७-१०। 2. ಮುಖ. (न०)3. ಒಂದು ಶ್ಲೋಕದ ಅಥವಾ ವಾಕ್ಯದ ಮೊದಲ ಪದ. "वदनसौरभलोभपरिभ्रमत्" ಇತ್ಯಾದಿ ಶ್ಲೋಕದ ವ್ಯಾಖ್ಯಾನಕ್ಕಾಗಿ "वदनेति" ಎಂದು ವ್ಯಾಖ್ಯಾನದ ಪ್ರಾರಂಭದಲ್ಲಿ ಮೊದಲನೆಯ ಪದವು ಪ್ರತೀಕವಾಗಿರುವುದು. 4. ವಿಗ್ರಹ, ಮೂರ್ತಿ. (वि०) 5. ಅನುರೂಪವಾದ. 6. ಪ್ರತಿಕೂಲವಾದ, ವಿರುದ್ಧವಾದ. "मुखे प्रतीकस्त्रिषु तु प्रतिकूलानुरूपयोः" वैज०। 7. ನಿಯಮಕ್ಕೆ ಅನುಸಾರವಲ್ಲದ, ನಿಯಮಕ್ಕೆ ವಿರುದ್ಧವಾದ, ವಿಲೋಮ. "प्रतीकोऽवयवेऽपि स्यात् प्रतिकूलविलोमयोः" मेदि०।

**प्रतीकार ಪ್ರತೀಕಾರ** (पुं०) "प्रतिकार" ಪದದ ಅರ್ಥ. "विपत्प्रतीकारपरेण मङ्गलं निषेव्यते भूतिसमुत्सुकेन" कुमा० ५-७६।

**प्रतीकाश ಪ್ರತೀಕಾಶ** (पुं०) 1. ಸಾಮ್ಯ, ಹೋಲಿಕೆ. प्रतिकाशते—प्रति+काशृ (दीप्तौ) "अच्" (३-१-१३४)। वा दीर्घः (६-३-१२३)। पक्षे प्रतिकाशः ಪ್ರತಿಕಾಶಃ. 2. (ಸಮಾಸದಲ್ಲಿ ಉತ್ತರಪದವಾದಾಗ) ಸದೃಶವಾದ, ಸಮಾನವಾದ. "पुटपाकप्रतीकाशो रामस्य करुणो रसः" उ० रा० ३-१। "स्युरुत्तरपदेत्वमी। निभसंकाशनीकाशप्रतीकाशोपमादयः" अम०।

**प्रतीक्षक ಪ್ರತೀಕ್ಷಕ** (वि०) 1. ನಿರೀಕ್ಷಿಸುವವನು. 2. ಕಾದು ನೋಡುವವನು. प्रति+ईक्ष (दर्शने) "ण्वुल्" (३-१-१३३)।

**प्रतीक्षण ಪ್ರತೀಕ್ಷಣ** (न०) 1. ನಿರೀಕ್ಷಿಸುವುದು, ಎದುರು ನೋಡುವುದು. 2. ಕಾದು ನೋಡುವುದು. प्रति + ईक्ष (दर्शने) भावे "ल्युट्" (३-३-११५)।

**प्रतीक्षमाण ಪ್ರತೀಕ್ಷಮಾಣ**(वि०) 1. ಎದುರು ನೋಡುತ್ತಿರುವ. 2. ಕಾಯುತ್ತಿರುವ. प्रति + ईक्ष (दर्शने) कर्त० "शानच्" (३-२-१२४)। "प्रतीक्षमाणानधिचन्द्रशालं पश्य त्वया शिक्षितचारुलास्यान्" याद० १८-१२५।

**प्रतीक्षा ಪ್ರತೀಕ್ಷಾ** (स्त्री०) 1. ನಿರೀಕ್ಷಿಸುವುದು, ಎದುರು ನೋಡುವುದು. 2. ಕಾದು ನೋಡುವುದು. प्रति + ईक्ष (दर्शने) "अः" (३-३-१०३)। "मित्रप्रतीक्षया शल्य धार्तराष्ट्रस्य चोभयोः" भा०।

**प्रतीक्षित ಪ್ರತೀಕ್ಷಿತ** (वि०) 1. ಎದುರು ನೋಡಲ್ಪಟ್ಟ, ನಿರೀಕ್ಷಿಸಲ್ಪಟ್ಟ. 2. ಕಾಯಲ್ಪಟ್ಟ. प्रति + ईक्ष (दर्शने) "क्तः" (३-२-१०२)। "त्वं समीरण इव प्रतीक्षितः कर्षकेण वलजान् पुपूषता" माघ० १४-७।

**प्रतीक्षितृ ಪ್ರತೀಕ್ಷಿತೃ** (वि०) 1. ನಿರೀಕ್ಷಿಸುವ, ಎದುರು ನೋಡುವ. 2. ಕಾದು ನೋಡುವ. प्रति+ईक्ष (दर्शने) "तृच्" (३-१-१३३)। स्त्रियां "ङीप्" (४-१-५)। -ईक्षित्री -ಈಕ್ಷಿತ್ರೀ.

**प्रतीक्षिन् ಪ್ರತೀಕ್ಷಿನ್** (वि०) 1. ನಿರೀಕ್ಷಿಸುವವನು. 2. ಕಾದುನೋಡುವವನು. प्रति+ईक्ष (दर्शने) "णिनिः" (३-१-१३४)।

**प्रतीक्ष्य ಪ್ರತೀಕ್ಷ್ಯ** (वि०) 1. ಪೂಜ್ಯನಾದವನು, ಗೌರವಿಸಲ್ಪಡುವವನು. प्रति + ईक्ष (दर्शने) कर्म० "ण्यत्" (३-१-१२४)। 2. ಪಾಲಿಸಲ್ಪಡಬೇಕಾದ. "प्रतीक्ष्यं तत् प्रतीक्ष्यायै पितृष्वस्रे प्रतिश्रुतम्" माघ० २-१०८।

(अव्य०) 3. ಎದುರುನೋಡಿ. 4. ಕಾದುನೋಡಿ. "कामस्तु बाणावसरं प्रतीक्ष्य" कुमा० ३-६४।

**प्रतीक्ष्यमाण ಪ್ರತೀಕ್ಷ್ಯಮಾಣ** (वि०) 1. ಎದುರು ನೋಡಲ್ಪಡುತ್ತಿರುವ. 2. ಆಸೆಯಿಂದ ಕಾದು ನೋಡಲ್ಪಡುತ್ತಿರುವ. प्रति + ईक्ष (दर्शने) कर्म० "शानच्" (३-२-१२४)।

**प्रतीची ಪ್ರತೀಚೀ** (स्त्री०) ಪಶ್ಚಿಮ ದಿಕ್ಕು, ಸೂರ್ಯ ಚಂದ್ರಾದಿಗಳು ಅಸ್ತಹೊಂದುವ ದಿಕ್ಕು. प्रति पश्चात् दिनान्तेऽञ्चति सूर्यम्—"क्विन्" (३-२-५९)। "ङीप्" (४-१-६)। "प्रतीचीसिन्धुवीचीव दिनोद्गारे सुधाकरम्" नैष० २०-२। "अग्रेवणं वर्तमाने प्रतीच्यां चन्द्रमण्डले" भट्टि० ९-९३।

**प्रतीचीन ಪ್ರತೀಚೀನ** (वि०) ಪಶ್ಚಿಮ ದೇಶದಲ್ಲಿರುವ. प्रत्यक् भवम् "खः" (५-४-८)।

**प्रतीच्छा ಪ್ರತೀಚ್ಛಾ** (स्त्री०) 1. ಬಡಿಸಿದ ಆಹಾರವನ್ನು ತೆಗೆದುಕೊಳ್ಳುವುದು. "परिवेषणं वर्धनं च प्रतीच्छा पततो ग्रहः" वैज०। 2. ಹೆಚ್ಚು ಅಭಿಲಾಷೆ. "महीभृतस्तस्य च मन्मथश्रिया निजस्य चित्तस्य च तं प्रतीच्छया" नैष० १-२६।

**प्रतीच्य ಪ್ರತೀಚ್ಯ** (वि०) ಪಶ್ಚಿಮದಿಕ್ಕಿನಲ್ಲಿ ಹುಟ್ಟಿದ. प्रतीच्यां भवः।

**प्रतीत ಪ್ರತೀತ** (वि०) 1. ಪ್ರಸಿದ್ಧನಾದ, ಪ್ರಖ್ಯಾತಿ ಪಡೆದ, ಹೆಸರುವಾಸಿಯಾದ. प्रति + इण् (गतौ) "क्तः" (३-४-७२)। "धरस्योद्धर्तासि त्वमिति ननु सर्वत्र जगति प्रतीतस्तत्किं मामतिभरमधः प्रापिपयिषुः" माघ० ५-६९। 2. ಹರ್ಷಗೊಂಡ, ಸಂತೋಷಗೊಂಡ. "पतिः प्रतीतः प्रसवोन्मुखीं प्रियां ददर्श काले दिवमभ्रितामिव" रघु० ३-१२। 3. ಅರಿತಿರುವ, ತಿಳಿದಿರುವ. 4. ನಂಬಿರುವ, ವಿಶ್ವಾಸದಿಂದಿರುವ. "प्रतीतः सादरे ज्ञाते हृष्टप्रख्यातयोस्त्रिषु" मेदि०।

**प्रतीति ಪ್ರತೀತಿ** (स्त्री०) 1. ಅರಿವು, ಪರಿಜ್ಞಾನ, ತಿಳಿವಳಿಕೆ. प्रति + इण् (गतौ) "क्तिन्" (३-३-९४)। "आगत्य भूतः सफलो भवत्या भावप्रतीत्या गुणलोभवत्याः" नैष० ३-११५। 2. ನಂಬಿಕೆ, ವಿಶ್ವಾಸ. "त्वदर्थमर्थित्वकृति प्रतीतिः कीदृङ् मयि स्यान्निषधेश्वरस्य" नैष० ३-७२। 3. ಪ್ರಸಿದ್ಧಿ, ಪ್ರಖ್ಯಾತಿ.

**प्रतीप ಪ್ರತೀಪ** (पुं०) 1. ಚಂದ್ರವಂಶದ ಒಬ್ಬ ದೊರೆ, ಶಂತನು ಮಹಾರಾಜನ ತಂದೆ, ಭೀಷ್ಮಾಚಾರ್ಯನ ತಾತ. (वि०) 2. ವಿರುದ್ಧವಾದ, ಪ್ರತಿಕೂಲವಾದ. "इति प्रतीपोक्तिमतिं सखीनां विलुप्य पाण्डित्यबलेन बाला" नैष० ६-१०८। 3. ಮೇಲುಮುಖವಾಗಿ ಹರಿಯುವ. प्रतिगताः उत्तानगा आपो यस्याः। "अम्भोभिरुल्लङ्घित-तुङ्गरोधसः प्रतीपनाम्नीः कुरुते स्म निम्नगाः" माघ० १२-५७। 4. ಅನುಕೂಲವಲ್ಲದ, ಒಡಂಬಡಿಕೆಯಿಲ್ಲದ, ಸುಮತಿಯಿಲ್ಲದ. 5. ಪ್ರತಿಪಕ್ಷದ, ಶತ್ರುಪಕ್ಷದ. "न तत्यजुर्नूनमनन्यविश्रमाः प्रतीपभूपालमृगीदृशां दृशः" नैष० १-११। (न०) 6. ಅರ್ಥಾಲಂಕಾರದ ಒಂದು ಭೇದ. ಪ್ರಸಿದ್ಧೋಪಮಾನಪ್ರಾತಿಕೂಲ್ಯವರ್ಣನೆಯು "ಪ್ರತೀಪಾಲಂಕಾರ" ಪ್ರಸಿದ್ಧವಾದ ಉಪಮಾನಕ್ಕೆ ಉಪಮೇಯತ್ವವನ್ನು ಹೇಳಿ ವರ್ಣಿಸುವುದು ಪ್ರತೀಪ. "प्रतीपमुपमानस्योपमेयत्वप्रकल्पनम्"। उदा०: "त्वल्लोचनसमं पद्मं त्वद्वक्त्रसदृशो विधुः" चन्द्रा०। ಈ ಪ್ರತೀಪಾಲಂಕಾರವು ಐದು ವಿಧ. [ಚಂದ್ರಾಲೋಕ, ಕುವಲಯಾನಂದ ಗ್ರಂಥಗಳನ್ನು ನೋಡಿ]. (अव्य०) 7. ಪ್ರತಿಕೂಲವಾಗಿ, ವಿರುದ್ಧವಾಗಿ, ಎದುರಿಸಿ. "भर्तुर्विप्रकृतापि रोषणतया मा स्म प्रतीपं गमः" शाकु० ४-१७। 8. ಎದುರಾಗಿ, ಅಭಿಮುಖವಾಗಿ.

**प्रतीपग ಪ್ರತೀಪಗ** (वि०) ಪ್ರತಿಕೂಲವಾಗಿ ಹೋಗುವ, ಎದುರಾಗಿ ಚಲಿಸುವ. प्रतीपं गच्छति—गम्लृ (गतौ) "डः" (३-२-१०१)। "तस्य जातु मरुतः प्रतीपगाः वर्त्मसु ध्वजतरुप्रमाथिनः" रघु० ११-५८।

**प्रतीपगति ಪ್ರತೀಪಗತಿ** (स्त्री०), **—गमन —ಗಮನ** (न०) ವಕ್ರಗತಿ, ಮೇಲಕ್ಕೆ ಎದ್ದು ಹಿಂತಿರುಗುವಿಕೆ, ಹಿಂಚಲನೆ. प्रतीपा गतिः। प्रतीपं गमनम्। "अम्भसामोघसंरोधः प्रतीपगमनादिव" कुमा० २-२५।

**प्रतीपदर्शिनी ಪ್ರತೀಪದರ್ಶಿನೀ** (स्त्री०) ಹೆಂಗಸು. प्रतीपं द्रष्टुं शीलमस्याः—दृशिर् (प्रेक्षणे) "णिनिः" (३-२-७८)। "प्रतीपदर्शिनी वामा वनिता महिला तथा" अम०।

**प्रतीयमान ಪ್ರತೀಯಮಾನ** (वि०) ಬೋಧಿಸಲ್ಪಡುತ್ತಿರುವ, ತಿಳಿಸಲ್ಪಡುತ್ತಿರುವ. प्रति+इण् (गतौ) कर्म० "शानच्" (३-२-१२४)। "रत्यादयो हि प्रथममेकैकशः प्रतीयमानाः सर्वेऽप्येकीभूताः रसतामापद्यन्ते" सा० द०।

**प्रतीर ಪ್ರತೀರ** (न०) ತಟ, ದಡ, ತೀರಪ್ರದೇಶ. प्रतीरयति—प्र + तीर (कर्मसमाप्तौ) + णिच् "अच्" (३-१-१३४)।

**प्रतीवाप ಪ್ರತೀವಾಪ** (ಪುಂ०) 1. ಹಾಲಿಗೆ ಹೆಪ್ಪು ಹಾಕುವುದು. प्रत्युप्यते—प्रति + डुवप् (बीजसन्ताने) "घञ्" (३-३-१८)। दीर्घः (६-३-१२२)। "आतञ्चनं सञ्जवनं प्रतीवापश्च मूतकम्" वैज०। 2. ಒಂದು ವಿಧ ರೋಗ.

**प्रतीष्ट ಪ್ರತೀಷ್ಟ** (वि०) ಸ್ವೀಕರಿಸಲ್ಪಟ್ಟ, ಅಂಗೀಕರಿಸಲ್ಪಟ್ಟ, ತೆಗೆದುಕೊಳ್ಳಲ್ಪಟ್ಟ. प्रति + इष (इच्छायाम्) "क्तः" (३-२-१०२)। "अमन्यतावन्तमिवैष पल्लवैः प्रतीष्टकामज्वलदस्त्रजालकम्" नैष० १-१०२।

**प्रतुद ಪ್ರತುದ** (ಪುಂ०) ಕೊಕ್ಕಿನಿಂದ ಕಿತ್ತು ಹಿಂಸಿಸಿ ತಿನ್ನುವ ಹಕ್ಕಿ, ಕಾಗೆ, ರಣಹದ್ದು, ಹದ್ದು ಮುಂತಾದುವು. "प्रतुद्य भक्षयन्त्येते तुण्डेन प्रतुदाः स्मृताः"।

**प्रतोत्र ಪ್ರತೋತ್ರ** (न०) ಆನೆಯನ್ನು ಚುಚ್ಚಿ ಶಿಕ್ಷಿಸುವ ಅಂಕುಶ. प्रतुद्यतेऽनेन — प्र + तुद (व्यथने) "ष्ट्रन्" (३-२-१८२)। "इति वाक्सायकैर्विद्धः प्रतोत्रैरिव कुञ्जरः। निशि निस्त्रिंशमादाय विवस्त्रोऽभ्यद्रवद्रुषा" भाग० ९-१४-३०।

**प्रतोद ಪ್ರತೋದ**(ಪುಂ०) 1. ಆನೆಯನ್ನು ಶಿಕ್ಷಿಸುವ ಅಂಕುಶ. प्रतुद्यतेऽनेन — प्र + तुद (व्यथने) कर० "घञ्" (३-३-१२१)। "प्रतोदा जगलुर्वाममानञ्चुर्यज्ञिया मृगाः" भट्टि० १४-९१। 2. ಚಾವಟಿ, ಗಾಡಿಯ ಎತ್ತು, ಕುದುರೆ ವೊದಲಾದುವನ್ನು ಅಟ್ಟಿ ನಡೆಸುವ ಕೋಲು. "प्रतोदसन्दंशिकयोदहार्षीत् पाञ्चालकन्यापरिभूतिशल्यम्" याद० २३-५२।

**प्रतोली ಪ್ರತೋಲೀ** (स्त्री०) ನಗರದ ಮುಖ್ಯ ರಸ್ತೆ, ರಾಜಮಾರ್ಗ. प्रतोलयन्ति जनाः अस्मिन् — प्र+ तुल (उन्माने) + णिच् (३-१-१३४)। "विलोकयामास सभां स भैम्यास्तस्य प्रतोलीमणिवेदिकायाम्" नैष० ६-५८।

**प्रतोष ಪ್ರತೋಷ** (ಪುಂ०) 1. ಸಂತೋಷ, ಹರ್ಷ, ಆನಂದ. प्र + तुष (तुष्टौ) "घञ्" (३-३-१८)। 2. ಸ್ವಾಯಂಭುವ ಮನುವಿನ ಹನ್ನೆರಡು ಮಂದಿ ಮಕ್ಕಳಲ್ಲೊಬ್ಬ. "तोषः प्रतोषः सन्तोषः भद्रः शान्तिरिडस्पतिः" भाग० ४-१-७।

**प्रत्त ಪ್ರತ್ತ** (वि०) ಕೊಡಲ್ಪಟ್ಟ, ದಾನಮಾಡಲ್ಪಟ್ಟ. प्रदीयते स्म—प्र+डु दाञ् (दाने) "क्तः" (३-२-१०२)। तकारादेशः (७-४-४७)।

**प्रत्न ಪ್ರತ್ನ** (वि०) ಪುರಾತನವಾದ, ಹಳೆಯದಾದ, ಬಹಳ ಹಿಂದಿನ ಕಾಲದ. प्र "त्नप्" (वा० ५-४-२५)। "प्रत्नं वेतण्डरत्नं सततपरिचलत्कर्णतालप्ररोहत्" चं० भा० १-१। "प्रत्नस्य विष्णो रूपं यत् सत्यस्यर्तस्य ब्रह्मणः" भाग० ५-२०-५।

**प्रत्यक् ಪ್ರತ್ಯಕ್** (अव्य०) 1. ಪಶ್ಚಿಮ ದಿಕ್ಕು. 2. ಪಶ್ಚಿಮ ದೇಶ. 3. ಪಶ್ಚಿಮ ಕಾಲ. 4. ಪಶ್ಚಿಮ ದಿಕ್ಕಿನಿಂದ. 5. ಪಶ್ಚಿಮ ದೇಶದಿಂದ. 6. ಪಶ್ಚಿಮ ಕಾಲದಿಂದ. 7. ಪಶ್ಚಿಮ ದೇಶದಲ್ಲಿ. 8. ಪಶ್ಚಿಮ ದಿಕ್ಕಿನಲ್ಲಿ. 9. ಪಶ್ಚಿಮ ಕಾಲದಲ್ಲಿ. प्रत्यञ्चति—प्रति + अञ्चु (गतौ) "क्विन्" (३-२-५९) "अस्तातिः" (५-३-२७)। अस्तातेः लुक् (५-३-३०)। "प्रत्यग्दिग्देशकालेषु वाच्यवत् त्रितयेऽव्ययम्" मेदि०। 10. ವಿರುದ್ಧವಾಗಿ, ಪ್ರತಿಕೂಲವಾಗಿ.

**प्रत्यक्पर्णी ಪ್ರತ್ಯಕ್ಪರ್ಣೀ** (स्त्री०) ಅಪಾಮಾರ್ಗ, ಉತ್ತರಣೆ ಗಿಡ. प्रत्यञ्चि पर्णान्यस्याः। "ङीष्" (४-१-६४)। "प्रत्यक्पर्णी केशवल्ली किहिणी खरमञ्जरी" अम०।

**प्रत्यक्पुष्पी ಪ್ರತ್ಯಕ್ಪುಷ್ಪೀ** (स्त्री०) ಅಪಾಮಾರ್ಗ, ಉತ್ತರಣೆ ಗಿಡ. प्रत्यञ्चि पुष्पाण्यस्याः। "ङीष्" (४-१-६४)। "प्रत्यक्पुष्पीसदापुष्पीनिम्बकषायाणामन्यतमेनालोड्य मधुसैन्धवयुक्तां मात्रां पाययित्वा वामयेत्" सुश्रुत० सूत्र० ४३-१।

**प्रत्यक्श्रेणी ಪ್ರತ್ಯಕ್ಶ್ರೇಣೀ** (स्त्री०) ಇಲಿಯಾಲದ ಮರ, ಇಲಿ ಕಿವಿಯ ಗಿಡ. प्रतीची श्रेणी यस्याः। "प्रत्यक्श्रेणी सुतश्रेणी रण्डा मूषिकपर्ण्यपि" अम०।

**प्रत्यक्ष ಪ್ರತ್ಯಕ್ಷ** (न०) 1. ಪ್ರತ್ಯಕ್ಷ ಜ್ಞಾನ, ಇಂದ್ರಿಯಾರ್ಥ ಸನ್ನಿಕರ್ಷ (ಸಂಬಂಧ) ದಿಂದ ಉಂಟಾಗುವ ಜ್ಞಾನ, ಅನುಭವ. प्रतिगतमक्षमिन्द्रियम् यत्र। ಇದು (1) घ्राणजम् (2) रासनम् (3) श्रावणम् (4) चाक्षुषम् (5) स्पार्शनम् ಮತ್ತು (6) मानसम् ಎಂದು ಆರು ವಿಧ.

ಘ್ರಾಣೇಂದ್ರಿಯಕ್ಕೆ ಗಂಧವು ಗೋಚರವಾಗುವುದರಿಂದ ಇದು **ಘ್ರಾಣಜ** ಪ್ರತ್ಯಕ್ಷ.

ಜಿಹ್ವೆಗೆ ರಸವು ಗೋಚರವಾಗುವುದು **ರಾಸನ** ಪ್ರತ್ಯಕ್ಷ.

ಶ್ರವಣೇಂದ್ರಿಯಕ್ಕೆ ಶಬ್ದವು ಗೋಚರವಾಗುವುದು **ಶ್ರಾವಣ** ಪ್ರತ್ಯಕ್ಷ.

ಚಕ್ಷುರಿಂದ್ರಿಯದಿಂದ ಉದ್ಭೂತ ರೂಪದ ಗ್ರಹಣವು **ಚಾಕ್ಷುಷ** ಪ್ರತ್ಯಕ್ಷ.

ತ್ವಗಿಂದ್ರಿಯಕ್ಕೆ ಉದ್ಭೂತಸ್ಪರ್ಶವದ್ದ್ರವ್ಯದ ಅನುಭವವು **ಸ್ಪಾರ್ಶನ** ಪ್ರತ್ಯಕ್ಷ.

ಮನೋಗ್ರಾಹ್ಯವಾದ ಸುಖದುಃಖಾದಿಜ್ಞಾನವು **ಮಾನಸ** ಪ್ರತ್ಯಕ್ಷ. "घ्राणजादिप्रभेदेन प्रत्यक्षं षड्विधं स्मृतम् । घ्राणस्य गोचरो गन्धः गन्धत्वादिरपि स्मृतः ।। तथा रसो रसज्ञायास्तथा शब्दोऽपि च श्रुतेः ।। उद्भूतरूपं नयनस्य गोचरो द्रव्याणि तद्वन्ति पृथक्त्वसंख्ये । क्रियां जातिं योग्यवृत्ति समवायञ्च तादृशम् । गृह्णाति चक्षुः सम्बन्धात् आलोकोद्भूतरूपयोः । उद्भूतस्पर्शवद्द्रव्यं गोचरः सोऽपि च त्वचः । द्रव्याध्यक्षे त्वचो योगो मनसा ज्ञानकारणम् । मनोग्राह्यं सुखं दुःखमिच्छा द्वेषो मतिः कृतिः" भाषाप० । (वि०) 2. ದೃಷ್ಟಿಗೆ ಗೋಚರವಾಗುವ, ಕಣ್ಣಿಗೆ ಕಾಣಿಸುವ. "प्रत्यक्षाभिः प्रपन्नस्तनुभिरवतु वस्ताभिरष्टाभिरीशः" शाकु० १-१ । 3. ಕಣ್ಣಿನ ಎದುರಿಗೆ ಇರುವ. (अव्य०) 4. ಅಪರೋಕ್ಷವಾಗಿ, ಸ್ಪಷ್ಟವಾಗಿ, ಕಣ್ಣಿಗೆ ಕಾಣುವಂತೆ. "फलन्त्वनभिसन्धाय क्षेत्रिणां बीजिनां तथा । प्रत्यक्षं क्षेत्रिणामर्थो बीजाद्योनिर्गरीयसी" मनु० ९-५२ । 5. ಪ್ರತಿಯೊಂದು ಕಣ್ಣಿನಲ್ಲೂ. अक्षि अक्षि प्रति — अव्ययी० (२-१-१४) ।

**प्रत्यक्षज्ञान ಪ್ರತ್ಯಕ್ಷಜ್ಞಾನ** (न०) ಕಣ್ಣಿನ ಎದುರಿಗೆ ಕಾಣುವುದರಿಂದುಂಟಾಗುವಜ್ಞಾನ, ವಸ್ತುವನ್ನು ಸಾಕ್ಷಾತ್ತಾಗಿ ನೋಡುವುದರಿಂದ ಉಂಟಾಗುವ ಅರಿವು.

**प्रत्यक्षदर्शन ಪ್ರತ್ಯಕ್ಷದರ್ಶನ** (न०) 1. ಸಾಕ್ಷಾತ್ತಾಗಿ ನೋಡುವುದು, ಕಣ್ಣಿನ ಎದುರಿಗೆ ನೋಡುವುದು. प्रत्यक्षं दर्शनम् । "प्रत्यक्षदर्शनं यज्ञे गतिं चानुत्तमां शुभाम् । नैषधाय ददौ शक्रः प्रीयमाणः शचीपतिः" भा० वन० ५४-३६ । (वि०) 2. ಪ್ರತ್ಯಕ್ಷವಾಗಿ ನೋಡುವ, ಎದುರಿಗೆ ನೋಡುವ. प्रत्यक्षं पश्यति — दृशिर् (प्रेक्षणे) "ल्युः" (३-१-१३४) । "णिनिः" (३-१-१३४) । **—दर्शिन्** **—ದರ್ಶಿನ್.** स्त्रियां "ङीप्" (४-१-५) । **—दर्शिनी** **—ದರ್ಶಿನೀ.**

**प्रत्यक्षवाद ಪ್ರತ್ಯಕ್ಷವಾದ** (पुं०) ಪ್ರತ್ಯಕ್ಷವೊಂದೇ ಪ್ರಮಾಣವೆಂದು ಹೇಳುವುದು, ದೃಷ್ಟಿಗೆ ಗೋಚರವಾಗುವುದೊಂದು ಹೊರತು ಬೇರೆ ಯಾವುದೂ ಇಲ್ಲವೆಂದು ವಾದಿಸುವುದು.

**प्रत्यक्षवादिन् ಪ್ರತ್ಯಕ್ಷವಾದಿನ್** (वि०) 1. ಪ್ರತ್ಯಕ್ಷ ಹೊರತು ಮತ್ತೆ ಯಾವುದೂ ಪ್ರಮಾಣವಲ್ಲವೆಂದು ಹೇಳುವವನು, ಪ್ರತ್ಯಕ್ಷಪ್ರಮಾಣದಿಂದ ಮಾತನಾಡುವವನು. प्रत्यक्षमेव प्रमाणतया वदति — वद (व्यक्तायां वाचि) "णिनिः" (३-२-७८) । 2. ಪ್ರತ್ಯಕ್ಷವಾಗಿ ಮಾತಾಡುವವನು.

**प्रत्यक्षिन् ಪ್ರತ್ಯಕ್ಷಿನ್** (वि०) ಕಣ್ಣಿನಿಂದ ಸಾಕ್ಷಾತ್ತಾಗಿ ನೋಡುವ. प्रत्यक्षमस्यास्ति "इनिः" (५-२-११५) ।

**प्रत्यक्स्रोतस् ಪ್ರತ್ಯಕ್‌ಸ್ರೋತಸ್** (पुं०) 1. ನದ, ಪಶ್ಚಿಮಾಭಿಮುಖವಾಗಿ ಹರಿಯುವ ಗಂಡುಹೊಳೆ. प्रत्यक् स्रोतो यस्य । ಪೂರ್ವಾಭಿಮುಖವಾಗಿ ಹರಿಯುವ ಹೊಳೆಯು ನದಿ. ಪಶ್ಚಿಮಾಭಿಮುಖವಾಗಿ ಹರಿಯುವ ಹೊಳೆಯು ನದ. (ನರ್ಮದಾ ನದಿ ಹೊರತು). "दधद्भिरभितस्तटौ विकचवारिजाम्बूनदैर्विनोदितदिनक्लमाः कृतरुचश्च जाम्बूनदैः" माघ० ४-६६ । 2. ಪರಮಾತ್ಮಧ್ಯಾನಾಸಕ್ತನಾದ ಯತಿ. प्रतीचि प्रत्यगात्मनि स्रोतश्चित्तप्रवाहो यस्य । 3. ನರ್ಮದಾ ನದಿ.

**प्रत्यगात्मन् ಪ್ರತ್ಯಗಾತ್ಮನ್** (पुं०) ಪರಮಾತ್ಮ, ಪರಮೇಶ್ವರ.

**प्रत्यगानन्द ಪ್ರತ್ಯಗಾನಂದ** (पुं०) ಆತ್ಮಾನಂದವುಳ್ಳ, ಬ್ರಹ್ಮಾನಂದವನ್ನು ಅನುಭವಿಸುವ.

**प्रत्यगाशापति ಪ್ರತ್ಯಗಾಶಾಪತಿ** (पुं०) ಪಶ್ಚಿಮ ದಿಕ್ಕಿನ ಅಧಿಪತಿ, ವರುಣ. प्रत्यगाशायाः पतिः ।

**प्रत्यगुदच् ಪ್ರತ್ಯಗುದಚ್** (स्त्री०) ಪಶ್ಚಿಮ ಮತ್ತು ಉತ್ತರ ದಿಕ್ಕುಗಳ ಮಧ್ಯದ ವಿದಿಕ್ಕು, ವಾಯುದಿಕ್ಕು. प्रतीच्या उदीच्याश्च दिशः अन्तरालम् ।

**प्रत्यग्र ಪ್ರತ್ಯಗ್ರ** (वि०) 1. ನವೀನವಾದ, ಹೊಸದಾದ. प्रतिनवमग्रमस्य । "दन्तानामधरमयावकं पदानि प्रत्यग्रास्तनुमविलेपनां नखाङ्काः" माघ० ८-५५ । 2. ಶುದ್ಧವಾದ.

**प्रत्यङ्ग ಪ್ರತ್ಯಂಗ** (न०) 1. ವೇದಾಂಗಗಳಿಗೆ ಸಮಾನವಾದ —ಪುರಾಣಗಳು ನ್ಯಾಯಶಾಸ್ತ್ರ ಮೀಮಾಂಸಾ ಮತ್ತು ಧರ್ಮಶಾಸ್ತ್ರ. 2. ದೇಹದಲ್ಲಿರುವ ಸಣ್ಣ ಸಣ್ಣ ಅವಯವಗಳು, ಪ್ರಧಾನವಾದ ಅಂಗಗಳನ್ನು ಅನುಸರಿಸಿ ಹುಟ್ಟುವ ಇತರ ಸೂಕ್ಷ್ಮಾವಯವಗಳು. प्रतिगतमङ्गम् । ತಲೆ ಮೂಗು ಗಡ್ಡ ಹೊಟ್ಟೆ ಬೆನ್ನು ನಾಭಿ (ಹೊಕ್ಕಳು) ಹಣೆ ಹೊಕ್ಕಳಿನ ಕೆಳಭಾಗ (ಬಸ್ತಿ) ಕಂಠ (ಕುತ್ತಿಗೆ) ಕಿವಿಗಳು ಕಣ್ಣುಗಳು ಹುಬ್ಬುಗಳು ಶಂಖಗಳು (ಕಿವಿ ಮತ್ತು ಹುಬ್ಬುಗಳ ಮಧ್ಯ) ಹೆಗಲುಗಳು ಕೆನ್ನೆಗಳು ಕಕ್ಷಗಳು ಸ್ತನಗಳು ವೃಷಣಗಳು ಪಕ್ಕೆಗಳು ತೊಡೆಗಳು ಪಿರ್ರೆಗಳು ಮಂಡಿಗಳು ತೋಳುಗಳು ಮತ್ತು ಬೆರಳುಗಳು ಮುಂತಾದುವು. "मस्तकोदरपृष्ठ-

नाभिललाटनासाचिबुकबस्तिग्रीवा इत्येता एकैका:। कर्ण-नेत्रभ्रूशङ्खांसगण्डकक्षस्तनवङ्क्षणवृषणपार्श्वस्फिग्जानु-कूर्परबाहूरुप्रभृतयो द्वे द्वे विंशतिरङ्गुलय: स्रोतांसि च। एष प्रत्यङ्गविभाग:" सुश्रुत० शारीर० ५-४। (अव्य०) 3. ಪ್ರತಿಯೊಂದು ಅಂಗದಲ್ಲಿಯೂ. 4. ಪ್ರತಿಯೊಂದು ಅಂಗವನ್ನೂ.

**प्रत्यङ्मुख ಪ್ರತ್ಯಙ್ಮುಖ** (वि०) 1. ಪಶ್ಚಿಮಾಭಿಮುಖವಾದ, ಪಶ್ಚಿಮ ದಿಕ್ಕಿಗೆ ತಿರುಗಿಕೊಂಡಿರುವ. प्रत्यक् मुखं यस्य। "आयुष्यं प्राङ्मुखो भुङ्क्ते यशस्यं दक्षिणामुख:। श्रियं प्रत्यङ्मुखो भुङ्क्ते ऋतं भुङ्क्तेह्युदङ्मुख:" मनु० २-५२। 2. ಹಿಮ್ಮುಖವಾದ, ಹಿಂದಕ್ಕೆ ತಿರುಗಿದ.

**प्रत्यनन्तर ಪ್ರತ್ಯನಂತರ** (वि०) 1. ಸಮೀಪದಲ್ಲಿರುವ, ಬಹಳ ಹತ್ತಿರದಲ್ಲಿರುವ. प्रतिप्राप्तमनन्तरम्। 2. ಸಮೀಪ ಸಂಬಂಧಹೊಂದಿರುವ, ಸಮೀಪದಲ್ಲಿ ಸೇರಿದಂತಿರುವ. "आजीवंस्तु यथोक्तेन ब्राह्मण: स्वेन कर्मणा। जीवेत् क्षत्रियधर्मेण स ह्यस्य प्रत्यनन्तर:" मनु० १०-८१। (अव्य०) 3. ಕೂಡಲೆ, ಮರುಕ್ಷಣದಲ್ಲಿ.

**प्रत्यनिल ಪ್ರತ್ಯನಿಲ** (अव्य०) 1. ಗಾಳಿಗೆ ಎದುರಾಗಿ, ಗಾಳಿಗೆ ಅಭಿಮುಖವಾಗಿ. 2. ಗಾಳಿಗೆ ಪ್ರತಿಯಾಗಿ, ಗಾಳಿಗೆ ವಿರುದ್ಧವಾಗಿ.

**प्रत्यनीक ಪ್ರತ್ಯನೀಕ** (पुं०) 1. ಶತ್ರು, ವೈರಿ, ಹಗೆ. प्रतिगत: अनीकं युद्धम्। (न०) 2. ಶತ್ರುಸೈನ್ಯ. "ऋतेऽपि त्वां न भविष्यन्ति सर्वे येऽवस्थिता: प्रत्यनीकेषु योधा:" गीता ११-३२। 3. ಶತ್ರುತ್ವ, ಹಗೆತನ, ವೈರ. 4. ಅರ್ಥಾಲಂಕಾರದಲ್ಲಿ ಒಂದು ಭೇದ. ಬಲಿಷ್ಠನಾದ ಶತ್ರುವನ್ನು ಎದುರಿಸಲು ಶಕ್ತಿಯಿಲ್ಲದೆ ಶತ್ರುಪಕ್ಷದಲ್ಲಿ ತನ್ನ ಪರಾಕ್ರಮ ಪ್ರದರ್ಶನ ಮಾಡುವುದು (ಶತ್ರುಪಕ್ಷಕ್ಕೆ ಮಾಡುವ ಪ್ರತೀಕಾರವು) "**ಪ್ರತ್ಯನೀಕಾಲಂಕಾರ**". **ಇದರ ಲಕ್ಷಣ:** "प्रत्यनीकं बलवत: शत्रो: पक्षे पराक्रम:"। **ಉದಾ:** "जैत्रनेत्रानुगौ कर्णावुत्पलाभ्यामध: कृतौ"। ಕಾಂತಿಸೌಂದರ್ಯಗಳಿಂದ ತನ್ನನ್ನು ಜಯಿಸಿದ ನೇತ್ರಗಳೊಡನೆ ಸ್ಪರ್ಧಿಸಲು ಶಕ್ತಿಯಿಲ್ಲದ ಉತ್ಪಲಗಳಿಂದ ನೇತ್ರಸಮೀಪವರ್ತಿಯಾದ ಕರ್ಣಗಳು ತಿರಸ್ಕೃತವಾದುವು ಎಂದು ಶತ್ರುಪಕ್ಷದಲ್ಲಿ ಪ್ರತೀಕಾರವರ್ಣನೆಯಿರುವುದರಿಂದ ಪ್ರತ್ಯನೀಕಾಲಂಕಾರ.

**प्रत्यनुमान ಪ್ರತ್ಯನುಮಾನ** (न०) ವಿರುದ್ಧವಾದ ಅನುಮಾನ, ಪ್ರತಿಕೂಲವಾದ ಅನುಮಾನ. प्रतिरूपमनुमानम्। "पर्वतो वह्निमान् धूमात्" ಎಂದು ಹೇಳಿದ್ದಕ್ಕೆ "पर्वतो न वह्निमान् पाषाणमयत्वात्" ಎಂದು ಪ್ರತಿವಾದಿಯು ಹೇಳುವುದು ಪ್ರತ್ಯನುಮಾನ.

**प्रत्यन्त ಪ್ರತ್ಯಂತ** (पुं०) 1. ಗಡಿ, ಸರಹದ್ದು, ಎಲ್ಲೆಯ ಪ್ರದೇಶ. प्रतिगत: अन्तम्। "स गुप्तमूलप्रत्यन्त: शुद्धपार्ष्णिरयान्वित:" रघु० ४-२६। 2. ಮ್ಲೇಚ್ಛದೇಶ. (वि०) 3. ಗಡಿಯಲ್ಲಿರುವ, ಅಂಚಿನಲ್ಲಿರುವ, ಸಮೀಪದಲ್ಲಿ ಸೇರಿದಂತಿರುವ.

**प्रत्यन्तपर्वत ಪ್ರತ್ಯಂತಪರ್ವತ** (पुं०) ಪರ್ವತದ ಸುತ್ತಲೂ ಇರುವ ಗುಟ್ಟಗಳು, ಬೆಟ್ಟದ ಸಮೀಪದಲ್ಲಿರುವ ಸಣ್ಣ ಗುಟ್ಟಗಳು. प्रत्यन्ते महाद्रीणां समीपे पर्वता:।

**प्रत्यभिज्ञा ಪ್ರತ್ಯಭಿಜ್ಞಾ** (स्त्री०) ಗುರುತಿನ ವಸ್ತುವಿನಿಂದ ಉಂಟಾಗುವ ಪೂರ್ವಸ್ಮರಣೆ, ಪೂರ್ವದಲ್ಲಿ ಅನುಭವಿಸಿದ ವಸ್ತುವಿನ ದರ್ಶನದಿಂದ ಉಂಟಾಗುವ ಹಿಂದಿನ ನೆನಪು. प्रतिगता अभिज्ञाम्। ಒಂದು ಕಾಲದಲ್ಲಿ ಒಂದು ಕಡೆ ನೋಡಿದ್ದ ವಸ್ತುವನ್ನು ಮತ್ತೆ ನೋಡಿದಾಗ ಪೂರ್ವಸಂಸ್ಕಾರದಿಂದ ಅದೇ ಈ ವಸ್ತುವೆಂಬ ನೆನಪುಂಟಾಗುವುದು ಪ್ರತ್ಯಭಿಜ್ಞೆ. "तद्देशकालवृत्तित्वरूपतत्तासंस्कारात् स एवायं घट: इति प्रत्यभिज्ञा जायते। "सभ्रूविलासमथ सोऽयमितीव नाम सप्रत्यभिज्ञमिव मामवलोक्य तस्या:" मालती० १-२८।

**प्रत्यभिज्ञात ಪ್ರತ್ಯಭಿಜ್ಞಾತ** (वि०) ಗುರುತಿನಿಂದ ಕಂಡುಹಿಡಿಯಲ್ಪಟ್ಟ.

**प्रत्यभिज्ञादर्शन ಪ್ರತ್ಯಭಿಜ್ಞಾದರ್ಶನ** (न०) ಪ್ರತ್ಯಭಿಜ್ಞಾಶಾಸ್ತ್ರ.

**प्रत्यभियोग ಪ್ರತ್ಯಭಿಯೋಗ** (पुं०) ಪ್ರತಿಯಾಗಿ ಮಾಡುವ ಅಪಕಾರ, ಅಪರಾಧಿಯ ವಿಷಯದಲ್ಲಿ ಮಾಡುವ ಪ್ರತೀಕಾರ. प्रतिरूपोऽभियोग:।

**प्रत्यभिवाद ಪ್ರತ್ಯಭಿವಾದ** (पुं०) ಮಾಡಿದ ನಮಸ್ಕಾರಕ್ಕೆ ಪ್ರತಿಯಾಗಿ ಮಾಡುವ ಆಶೀರ್ವಾದ. प्रति + अभि + वद (व्यक्तायां वाचि) + णिच् "घञ्" (३-३-१८)। भावे "ल्युट्" (३-३-११५)। **-वादनम् -ವಾದನಮ್.**

**प्रत्यय ಪ್ರತ್ಯಯ** (पुं०) 1. ವಿಶ್ವಾಸ, ನಂಬಿಕೆ. प्रति+इण् (गतौ) "अण्" (३-३-५६)। "भूयो दृष्टप्रत्यया: प्राप्तसंज्ञा: साधीयस्ते यद्रणायाद्रियन्ते" माघ० १८-६३। 2. ಕಾರಣ, ಹೇತು. "अपेक्षते प्रत्ययमुत्तमं त्वां बीजाङ्कुर: प्रागुदयादिवाम्भ:" कुमा० ३-१८। 3. ಶಪಥ, ಪ್ರತಿಜ್ಞೆ. प्रतीयतेऽनेन करः "अच्"। 4. ಜ್ಞಾನ, ಅರಿವು, ಪರಿಜ್ಞಾನ. "स्थानप्रत्ययात्तु वयमेवंतर्किण:" शाकु० ७।

5. ಅಧೀನ, ಪರತಂತ್ರ. 6. ಪ್ರಾತಿಪದಿಕದ ಮುಂದೆ ಅದರ ಅರ್ಥಜ್ಞಾನಕ್ಕಾಗಿ ವಿಧಿಸಲ್ಪಡುವ ಸುಬಾದಿ ಪ್ರತ್ಯಯ. सुप् तिङ् कृत् ಮತ್ತು ತದ್ಧಿತ ಪ್ರತ್ಯಯಗಳು. "प्रकृतिमवधीकृत्य विधीयमानः स्वार्थबोधकः शब्दविशेषः प्रत्ययः। स्वीयमर्थं प्रत्याययति" इति भाष्यम्। "केवलं दधति कर्तृवाचिनः प्रत्ययानिह न जातु कर्मणि। धातवः सृजतिसंहृशास्तयः स्तौतिरत्र विपरीतकारकः" माघ० १४-६६। 7. ಬುದ್ಧಿ, ಜ್ಞಾನ. 8. ರಂಧ್ರ, ವಿವರ, ತೂತು. 9. ಆಚಾರ. 10. ಖ್ಯಾತಿ, ಪ್ರಸಿದ್ಧಿ. 11. ನಿಶ್ಚಯ, ನಿರ್ಣಯ. "यदि संशय एव स्यात् लिङ्गानामपि दर्शने। साक्षिप्रत्यय एव स्यात् सीमावादविनिर्णयः" मनु० ८-२५३। 12. ವಿಶ್ವಾಸ, ಪರವಾತ್ಮ. सहितान् प्रत्याययति विस्रम्भयति। "योऽसौ प्रत्याययति तान् प्रत्ययः समुदाहृतः" इति निरुक्तिः। "अहः संवत्सरो व्यालः प्रत्ययः सर्वदर्शनः" वि० स०। "प्रत्ययो ज्ञानरन्ध्रयोः। विश्वासे शपथे हेतावाचारप्रथितत्वयोः। अधीने निश्चये स्वादौ" हेम०। (वि०) 13. ಸ್ವಾದುವಾದ, ಸಿಹಿಯಾದ. 14. ಸಹಾಯಕ, ಒತ್ತಾಸೆಮಾಡುವವನು. "प्रत्ययाः सहकारिणः" त्रिकाण्ड०।

**प्रत्ययकारक ಪ್ರತ್ಯಯಕಾರಕ** (वि०) ನಂಬಿಕೆಯನ್ನುಂಟು ಮಾಡುವವನು. प्रत्ययं करोति—डुकृञ् (करणे) "ण्वुल्" (३-१-१३३)। "णिनिः" (३-१-१३४)। **–कारी –ಕಾರೀ.** स्त्रियां "ङीप्" (४-१-५)। **–कारिणी –ಕಾರಿಣೀ.** ಮುದ್ರೆ, ಮುದ್ರಿಕೆ, ಮೊಹರು.

**प्रत्ययित ಪ್ರತ್ಯಯಿತ** (वि०) 1. ಆಪ್ತ. 2. ನಂಬಿರುವವನು, ನಂಬಿಕೆ ಹೊಂದಿರುವವನು. प्रत्ययोऽस्य सञ्जातः "इतच्" (५-२-३६)। "तच्छ्रुत्वा व्यसृजद्राजा सोऽथ प्रत्ययितान् द्विजान्" कथास०।

**प्रत्ययिन् ಪ್ರತ್ಯಯಿನ್** (वि०) ನಂಬಿಕೆಯುಳ್ಳವನು. प्रत्ययोऽस्यास्ति "इनिः" (५-२-११५)।

**प्रत्यर्थिन् ಪ್ರತ್ಯರ್ಥಿನ್** (पुं०) 1. ಶತ್ರು, ವೈರಿ, ಹಗೆ. प्रतिकूलम् अर्थयितुं शीलः—प्रति+अर्थ (उपयाच्ञायाम्) "णिनिः" (३-२-७८)। "प्रत्यर्थिपार्थिवपयोनिधिमाथमन्थपृथ्वीधरः पृथुरयं मधुराधिनाथः" नैष० ११-१०३। 2. ವಿರೋಧಿ, ಪ್ರತಿಕಕ್ಷಿ, ಎದುರಾಳಿ. 3. (ನ್ಯಾಯಾಂಗಗಳಲ್ಲಿ) ಪ್ರತಿವಾದಿ, ವಾದಿಯ ಎದುರಾಳಿ. "स धर्मस्थसखः शश्वत् अर्थिप्रत्यर्थिनां स्वयम्। ददर्श संशयच्छेद्यान् व्यवहारानतन्द्रितः" रघु० १७-३९।

**प्रत्यर्पण ಪ್ರತ್ಯರ್ಪಣ** (न०) ಹಿಂದಕ್ಕೆ ಕೊಡುವುದು, ವಸ್ತುವಿನ ಯಜಮಾನನಿಗೆ ಒಪ್ಪಿಸುವುದು. प्रति + ऋ (गतौ) + णिच् "ल्युट्" (३-३-११५)। "धरायां तस्य संरम्भं सीताप्रत्यर्पणैषिणः" रघु० १५-८८।

**प्रत्यर्पणीय ಪ್ರತ್ಯರ್ಪಣೀಯ** (वि०) 1. ಹಿಂದಕ್ಕೆ ಒಪ್ಪಿಸಲ್ಪಡುವ. 2. ಹಿಂದಕ್ಕೆ ಒಪ್ಪಿಸಬೇಕಾದ, –ಕೊಡಬೇಕಾದ. प्रति+ऋ (गतौ) + णिच् "अनीयर्" (३-१-९६)। "तव्यः" (३-१-९६)। **–यितव्यः –ಯಿತವ್ಯಃ.**

**प्रत्यर्पयत् ಪ್ರತ್ಯರ್ಪಯತ್** (वि०) ಹಿಂತಿರುಗಿಸುತ್ತಿರುವ, ಹಿಂದಕ್ಕೆ ಒಪ್ಪಿಸುತ್ತಿರುವ. प्रति + ऋ (गतौ) + णिच् "शतृ" (३-२-१२४)। स्त्रियां "ङीप्" (४-१-६)। **–यन्ती –ಯಂತೀ.**

**प्रत्यर्पित ಪ್ರತ್ಯರ್ಪಿತ** (वि०) ಹಿಂದಕ್ಕೆ ಕೊಡಲ್ಪಟ್ಟ, ಹಿಂದಕ್ಕೆ ಒಪ್ಪಿಸಲ್ಪಟ್ಟ. प्रति + ऋ (गतौ) + णिच् "क्तः" (३-२-१०२)।

**प्रत्यवमर्श ಪ್ರತ್ಯವಮರ್ಶ** (पुं०) ಅನುಸಂಧಾನ, ಧ್ಯಾನ, ಚಿಂತನೆ. प्रति + अव + मृश (आमर्शने) "घञ्" (३-३-१८)। "ल्युट्" (३-३-११५)। **–अवमर्शनम् –ಅವಮರ್ಶನಮ್.**

**प्रत्यवर ಪ್ರತ್ಯವರ** (वि०) ಬಹಳ ನಿಕೃಷ್ಟವಾದ. प्रतिरूपोऽवरः। "प्रतिग्रहाद्याजनाद्वा तथैवाध्यापनादपि। प्रतिग्रहः प्रत्यवरः प्रेत्य विप्रस्य गर्हितः" मनु० १०-१०९। "मत्तः प्रत्यवरः कश्चित् नास्ति सुग्रीवसन्निधौ" रामा०।

**प्रत्यवरोध ಪ್ರತ್ಯವರೋಧ** (पुं०) ತಡೆಯುವುದು, ವಿಘ್ನವುಂಟುಮಾಡುವುದು. प्रति + अव + रुधिर् (आवरणे) "घञ्" (३-३-१८) "ल्युट्" (३-३-११५)। **–अवरोधनम् –ಅವರೋಧನಮ್.**

**प्रत्यवसन ಪ್ರತ್ಯವಸನ** (न०) ಭೋಜನ. "अभ्यवहारः प्रत्यवसनं भोजनं जग्धिः" हला०।

**प्रत्यवसान ಪ್ರತ್ಯವಸಾನ** (न०) ಭೋಜನ, ಊಟ. प्रति+अव+षो (अन्तकर्मणि) "ल्युट्" (३-३-११५)। "जग्धिः प्रत्यवसानं च भक्षणं भोजनाशने" वैद्यकरत्नमाला।

**प्रत्यवसित ಪ್ರತ್ಯವಸಿತ** (वि०) ಭಕ್ಷಿಸಲ್ಪಟ್ಟ, ತಿನ್ನಲ್ಪಟ್ಟ. प्रति+अव+षो (अन्तकर्मणि) "क्तः" (३-२-१०२)।

**प्रत्यवस्यत् ಪ್ರತ್ಯವಸ್ಯತ್** (वि०) ಊಟಮಾಡುತ್ತಿರುವ, ಭಕ್ಷಿಸುತ್ತಿರುವ. प्रति+अव+षो (अन्तकर्मणि) "शतृ" (३-२-१२४)। "अभीलानि प्राणिनः प्रत्यवस्यन् कालो

नूनं व्यादधावाननानि" माघ० १८-७८। स्त्रियां "ङीप्" (४-१-६)। —अवस्कन्ती –ಅವಸ್ಕನ್ತೀ.

**प्रत्यवस्कन्द ಪ್ರತ್ಯವಸ್ಕಂದ** (पुं०) (ನ್ಯಾಯಾಂಗ ವ್ಯವಹಾರದಲ್ಲಿ) ನಾಲ್ಕು ವಿಧ ಉತ್ತರಗಳಲ್ಲೊಂದು ವಿಧ ಉತ್ತರ.

**प्रत्यवस्था ಪ್ರತ್ಯವಸ್ಥಾ** (स्त्री०) ಪ್ರತಿಪಕ್ಷವಾಗಿ ನಿಲ್ಲುವಿಕೆ. ವಿರುದ್ಧ ಪಕ್ಷವಾಗಿರುವಿಕೆ. प्रति + अव + ष्ठा (गतिनिवृत्तौ) "अङ्" (३-३-१०६)। भावे "ल्युट्" (३-३-११५)। —अवस्थानम् –ಅವಸ್ಥಾನಮ್. ಸಾಧರ್ಮ್ಯ ಮತ್ತು ವೈಧರ್ಮ್ಯಗಳಿಂದ ಪಕ್ಷ ಪ್ರತಿಪಕ್ಷಗಳು ಏರ್ಪಡುವುವು. "साधर्म्यवैधर्म्याभ्यां प्रत्यवस्थानम्"।

**प्रत्यवस्थातृ ಪ್ರತ್ಯವಸ್ಥಾತೃ** (वि०) ಶತ್ರು, ಪ್ರತಿಕಕ್ಷಿ. प्रति+अव+ष्ठा (गतिनिवृत्तौ) "तृच्" (३-१-१३३)। ಪ್ರತಿಕಕ್ಷಿಯಾಗಿ ನಿಲ್ಲುವುದರಿಂದ ಶತ್ರುವಿಗೆ ಈ ಹೆಸರು.

**प्रत्यवहार ಪ್ರತ್ಯವಹಾರ** (पुं०) 1. ಸಂಹಾರ, ಜಗತ್ತಿನ ನಾಶ, ಪ್ರಳಯ. प्रति + अव + हृञ् (हरणे) भावे "घञ्" (३-३-१८)। "मान्यः स मे स्थावरजङ्गमानां सर्गस्थितिप्रत्यवहारहेतुः" रघु० २-४४। 2. (ಸೈನ್ಯವನ್ನು) ಹಿಂದಕ್ಕೆ ತೆಗೆದುಕೊಳ್ಳುವುದು, (ಯುದ್ಧದಿಂದ) ಹಿಂದಕ್ಕೆ ಬರಮಾಡಿಕೊಳ್ಳುವುದು. "ततः प्रत्यवहारोऽभूत्सैन्यानां राघवाज्ञया" भा० वन० २८५-४१।

**प्रत्यवाय ಪ್ರತ್ಯವಾಯ** (पुं०) 1. ಪಾಪ, ದುರಿತ. प्रत्यवय्यते — प्रति + अव + अय (गतौ) "घञ्" (३-३-१९)। "क्षयं केचिदुपात्तस्य दुरितस्य प्रचक्षते। अनुत्पत्तिं तथाचान्ये प्रत्यवायस्य मन्वते" जाबालिः। 2. ದುರಾಚಾರ, ವಿಪರೀತವಾದ ಆಚಾರ, ವಿರುದ್ಧವಾದ ಆಚಾರ, ಶಾಸ್ತ್ರವಿರುದ್ಧವಾದ ನಡವಳಿಕೆ. "उत्तमानुत्तमान् गच्छन् हीनान् हीनांश्च वर्जयन्। ब्राह्मणः श्रेष्ठतामेति प्रत्यवायेन शूद्रताम्" मनु० ४-२४५। 3. ವಿಹಿತವಾದುದನ್ನು ಆಚರಿಸದಿರುವುದರಿಂದ ಉಂಟಾದ ದೋಷ. "यावदर्हकरणं किल साधोः प्रत्यवायघुतये न गुणाय" नैष० ५-९।

**प्रत्यवेक्षण ಪ್ರತ್ಯವೇಕ್ಷಣ** (न०) 1. ಪೂರ್ವಾಪರ ವಿಷಯಗಳ ಪರ್ಯಾಲೋಚನೆ, ವಿಷಯವನ್ನು ಎಚ್ಚರದಿಂದ ಯೋಚಿಸುವುದು. प्रति+ अव + ईक्ष (दर्शने) "ल्युट्" (३-३-११५)। 2. ಮಾಡಿದ ಮತ್ತು ಮಾಡಬೇಕಾದ ಕಾರ್ಯಗಳ ಚಿಂತನೆ. भावे "अः" (३-३-१०३)। —अवेक्षा –ಅವೇಕ್ಷಾ. 3. ಚೆನ್ನಾಗಿ ನೋಡುವಿಕೆ. 4. ಹಿಂತಿರುಗಿ ನೋಡುವುದು. "प्रत्यवेक्षणपदं प्रतीहि माम्" याद० १७-११७।

**प्रत्यवेक्षित ಪ್ರತ್ಯವೇಕ್ಷಿತ** (वि०) 1. ಚೆನ್ನಾಗಿ ಪರಿಶೀಲಿಸಲ್ಪಟ್ಟ, ಜಾಗರೂಕತೆಯಿಂದ ಯೋಚಿಸಿ ನೋಡಲ್ಪಟ್ಟ. प्रति + अव + ईक्ष (दर्शने) "क्तः" (३-२-१०२)। 2. ಚೆನ್ನಾಗಿ ನೋಡಲ್ಪಟ್ಟ. "महाराज, प्रत्यवेक्षिताः प्रमदवनभूमयः" शाकु० ६।

**प्रत्यवेक्ष्य ಪ್ರತ್ಯವೇಕ್ಷ್ಯ** (वि०) 1. ಯೋಚಿಸಿ ವಿಚಾರ ಮಾಡಲ್ಪಡುವ, ಜಾಗರೂಕತೆಯಿಂದ ವಿಮರ್ಶಿಸಲ್ಪಡುವ. प्रति + अव + ईक्ष (दर्शने) "ण्यत्" (३-१-१२४)। "भव्यमुख्याः समारम्भाः प्रत्यवेक्ष्या निरत्ययाः" रघु० १७-५३। 2. ಚೆನ್ನಾಗಿ ನೋಡಲ್ಪಡುವ.

**प्रत्यश्मन् ಪ್ರತ್ಯಶ್ಮನ್** (पुं०) ಕೆಂಪು ಸುಣ್ಣಕಲ್ಲು, ಒಂದು ಗೈರಿಕ ಧಾತು. प्रतिरूपः अश्मा। "प्रत्यश्मा गिरिमृत्" त्रिकाण्ड०।

**प्रत्यहम् ಪ್ರತ್ಯಹಮ್** (अव्य०) ಪ್ರತಿದಿನವೂ, ನಿತ್ಯವೂ. अहन्यहनि — अव्ययी०। "गिरिशमुपचचार प्रत्यहं सा सुकेशी" कुमा० १-६०।

**प्रत्याकार ಪ್ರತ್ಯಾಕಾರ** (पुं०) ಖಡ್ಗಕೋಶ, ಕತ್ತಿಯ ಒರೆ. प्रतिरूपः खड्गसदृशः आकारोऽस्य।

**प्रत्याख्यात ಪ್ರತ್ಯಾಖ್ಯಾತ** (वि०) 1. ತಿರಸ್ಕರಿಸಲ್ಪಟ್ಟ, ನಿರಾಕರಿಸಲ್ಪಟ್ಟ. प्रति + आ + ख्या (प्रकथने) "क्तः" (३-२-१०२)। 2. ತಳ್ಳಿಹಾಕಲ್ಪಟ್ಟ.

**प्रत्याख्यान ಪ್ರತ್ಯಾಖ್ಯಾನ** (न०) 1. ತಿರಸ್ಕಾರ, ನಿರಾಕರಣೆ. प्रति + आ + ख्या (प्रकथने) "ल्युट्" (३-३-११५)। "प्रत्याख्यानपराङ्मुखः प्रियतमो गन्तुं प्रवृत्तोऽधुना" अमरु० ८७। 2. ತಳ್ಳಿಹಾಕುವುದು.

**प्रत्यागत ಪ್ರತ್ಯಾಗತ** (वि०) ಹಿಂತಿರುಗಿ ಬಂದ, ಹಿಂದಕ್ಕೆ ಬಂದ. प्रति+आ+गम्लृ (गतौ) "क्तः" (३-४-७२)। "प्रत्यागतं त्वास्मि कृतार्थमेव स्तनोपपीडं परिरब्धुकामा" किरा० ३-५४।

**प्रत्यागति ಪ್ರತ್ಯಾಗತಿ** (स्त्री०) ಹಿಂದಕ್ಕೆ ಬರುವುದು, ಹಿಂತಿರುಗಿ ಬರುವುದು. प्रति + आ + गम्लृ (गतौ) "क्तिन्" (३-३-९४)।

**प्रत्यागम ಪ್ರತ್ಯಾಗಮ** (पुं०) ಹಿಂದಕ್ಕೆ ಬರುವುದು, ಹಿಂತಿರುಗಿ ಬರುವುದು. प्रति + आ + गम्लृ (गतौ) "अप्" (३-३-५८)। "ल्युट्" (३-३-११५)। —आगमनम् –ಆಗಮನಮ್.

**प्रत्यादान ಪ್ರತ್ಯಾದಾನ** (ನಂ) ಹಿಂದಕ್ಕೆ ತೆಗೆದುಕೊಳ್ಳುವುದು. प्रति+आ+डुदाञ् (दाने) "ल्युट्" (३-३-११५)।

**प्रत्यादिष्ट ಪ್ರತ್ಯಾದಿಷ್ಟ** (ವಿಂ) 1. ತಿರಸ್ಕರಿಸಲ್ಪಟ್ಟ, ನಿರಾಕರಿಸಲ್ಪಟ್ಟ. प्रति + आ + दिश (अतिसर्जने) "क्तः" (३-२-१०२)। "प्रत्यादिष्टविशेषमण्डनविधिर्वामप्रकोष्ठार्पितम्" शाकुं० ६-६। 2. ಹಿಂದಕ್ಕೆ ತಳ್ಳಲ್ಪಟ್ಟ, ಹಿಂದಕ್ಕೆ ದೂಡಲ್ಪಟ್ಟ, ಅವಮಾನಗೊಳಿಸಲ್ಪಟ್ಟ. "रक्षागृहगता दीपाः प्रत्यादिष्टा इवाभवन्" रघु० १०-६८।

**प्रत्यादेश ಪ್ರತ್ಯಾದೇಶ** (ಪುಂ) 1. ತಿರಸ್ಕಾರ, ನಿರಾಕರಣೆ. प्रति+आ+दिश (अतिसर्जने) "घञ्" (३-३-१८)। "प्रत्यादेशादपि च मधुनो विस्मृतभ्रूविलासम्" मेघ० २-३२। 2. ಅವಮಾನ, ಅವಜ್ಞೆ. "सुकुमारं प्रहरणं महेन्द्रस्य, प्रत्यादेशो रूपगर्विताया: श्रीगौर्या: अलंकारः सर्गस्य" विक्र० १।

**प्रत्याधान ಪ್ರತ್ಯಾಧಾನ** (ನಂ) ಪುನರಾಧಾನ, ದ್ವಿತೀಯ ವಿವಾಹವಾದ ನಂತರ ಮಾಡುವ ಅಗ್ನಿಸಂಧಾನ. प्रति + आ + डुधाञ् (धारणपोषणयोः) भावे "ल्युट्" (३-३-११५)।

**प्रत्यानयन ಪ್ರತ್ಯಾನಯನ** (ನಂ) ಹಿಂದಕ್ಕೆ ತರುವುದು. प्रति + आ + णीञ् (प्रापणे) "ल्युट्" (३-३-११५)।

**प्रत्यापत्ति ಪ್ರತ್ಯಾಪತ್ತಿ** (ಸ್ತ್ರೀಂ) 1. ಪುನಃ ಬರುವುದು, ಹಿಂತಿರುಗಿ ಬರುವುದು. प्रति+आ+पद (गतौ) "क्तिन्" (३-३-९४)। 2. ವೈರಾಗ್ಯ, ಪ್ರಪಂಚವ್ಯವಹಾರದಲ್ಲಿ ಪ್ರೀತಿಯನ್ನು ತೊರೆದುಬಿಡುವಿಕೆ.

**प्रत्याम्नात ಪ್ರತ್ಯಾಮ್ನಾತ** (ವಿಂ) ಪ್ರತಿನಿಧಿಯಾಗಿ ಗೊತ್ತುಮಾಡಲ್ಪಟ್ಟ, ಬದಲಾಗಿ ಹೇಳಲ್ಪಟ್ಟ. प्रति + आ + म्ना (अभ्यासे) "क्तः" (३-२-१०२)।

**प्रत्याम्नाय ಪ್ರತ್ಯಾಮ್ನಾಯ** (ಪುಂ) ಪ್ರತಿಯಾಗಿ ವಿಧಿಸಲ್ಪಡುವ ವಸ್ತು, ಮುಖ್ಯವಾಗಿ ವಿಧಿಸಲ್ಪಟ್ಟ ವಸ್ತುವು ದುರ್ಲಭವಾಗಿದ್ದು ಅದಕ್ಕೆ ಪ್ರತಿಯಾಗಿ ವಿಹಿತವಾದ ವಸ್ತು. प्रति+आ+म्ना (अभ्यासे) कर्म० "घञ्" (३-३-१९)। "युक्" (७-३-३३)।

**प्रत्यायक ಪ್ರತ್ಯಾಯಕ** (ವಿಂ) 1. ವಿಶ್ವಾಸವುಂಟುಮಾಡುವ, ನಂಬಿಕೆಯುಂಟುಮಾಡುವ. प्रति+आ+इण् (गतौ) "ण्वुल्" (३-१-१३३)। 2. ಬೋಧಿಸುವ, ತಿಳಿಸುವ.

**प्रत्यायन ಪ್ರತ್ಯಾಯನ** (ನಂ) 1. ವಿಶ್ವಾಸವುಂಟುಮಾಡುವುದು, ನಂಬಿಕೆ ಹುಟ್ಟಿಸುವುದು. प्रति + आ + इण् (गतौ) + णिच् "ल्युट्" (३-३-११५)। 2. ಬೋಧಿಸುವುದು, ತಿಳಿಸುವುದು.

**प्रत्यायित ಪ್ರತ್ಯಾಯಿತ** (ವಿಂ) ನಂಬಿಕೆಯುಂಟುಮಾಡಲ್ಪಟ್ಟ. प्रति + आ + इण् (गतौ) + णिच् "क्तः" (३-२-१०२)। "प्रदर्शिताप्तभ्रमणेन नूनं प्रत्यायिता मन्दरनर्तकेन" याद० १८-९९।

**प्रत्यालीढ ಪ್ರತ್ಯಾಲೀಢ** (ವಿಂ) 1. ಬಿಲ್ಲುಗಾರನು ಯುದ್ಧಕ್ಕಾಗಿ ಬಾಣವನ್ನು ಹೂಡಿ ಹೊಂಚು ಹಾಕಿ ಅಯವರಿತು ನಿಲ್ಲುವುದು. प्रति +आ + लिह (आस्वादने) "क्तः" (३-३-११४)। (1) ಪ್ರತ್ಯಾಲೀಢ (2) ಆಲೀಢ (3) ಸಮಪದ (4) ವಿಶಾಖ ಮತ್ತು (5) ಮಂಡಲಗಳೆಂದು ಬಿಲ್ಲುಗಾರನ ಪಾದವಿನ್ಯಾಸವು ಐದು ಬಗೆ. "स्यात् प्रत्यालीढमालीढं समं पादं तथापरम्। वैशाखं मण्डलं चेति धन्विनां स्थानपञ्चकम्"। 2. ಆಸ್ವಾದಿಸಲ್ಪಟ್ಟ, ರುಚಿನೋಡಲ್ಪಟ್ಟ.

**प्रत्यावर्तन ಪ್ರತ್ಯಾವರ್ತನ** (ನಂ) ಹಿಂತಿರುಗುವುದು, ಹಿಂದಕ್ಕೆ ಬರುವುದು. प्रति + आ + वृतु (वर्तने) भावे "ल्युट्" (३-३-११५)।

**प्रत्यावृत्त ಪ್ರತ್ಯಾವೃತ್ತ** (ವಿಂ) 1. ಹಿಂತಿರುಗಿದ, ಹಿಮ್ಮೆಟ್ಟಿದ. प्रति+आ+वृतु (वर्तने) "क्तः" (३-४-७२)। "प्रत्यावृत्तं भङ्गभाजि स्वसैन्ये तुल्यं मुक्तैराकिरन्ति स्म कश्चित्" माघ० १८-५५। 2. ಮತ್ತೆ ಬಂದ, ಮತ್ತೆ ಸಂಭವಿಸಿದ. "प्रत्यावृत्तमहोत्सवेन मुदितां प्राप्तः पुरीं द्वारकाम्" याद० २३-६२।

**प्रत्याशा ಪ್ರತ್ಯಾಶಾ** (ಸ್ತ್ರೀಂ) 1. ಇಷ್ಟವಾದ ವಸ್ತುವಿನ ನಿರೀಕ್ಷಣೆ, ಉತ್ಸಾಹದಿಂದ ಎದುರು ನೋಡುವುದು, ನಂಬಿಕೆಯಿಂದ ಕೂಡಿದ ಹಾರೈಕೆ. प्रति किञ्चिद्वस्तु प्रति आशा— प्रति + आ + अशू (व्याप्तौ) "अच्" (३-१-१३४)। "न यत्र प्रत्याशामनुपतति नो वा रहयति प्रतिक्षिप्तं चेतः प्रविशति च मोहान्धतमसम्" मालती० ९-८। 2. ಆಸೆ, ಅಭಿಲಾಷೆ, ತೃಷ್ಣೆ. "प्रत्याशाभिर्मदसो दारितानि" माघ० १८-७८।

**प्रत्याश्वस्त ಪ್ರತ್ಯಾಶ್ವಸ್ತ** (ವಿಂ) 1. ಸಮಾಧಾನಗೊಂಡ. प्रति + आ + श्वस (प्राणने) "क्तः" (३-४-७२)। 2. ಮತ್ತೆ ಉಸಿರಾಡಿಕೊಂಡ. "प्रत्याश्वस्तां सममभिनवैर्जालकैर्मालतीनाम्" मेघ० २-३५।

**प्रत्याश्वास ಪ್ರತ್ಯಾಶ್ವಾಸ** (ಪುಂ) ಸಮಾಧಾನಗೊಳ್ಳುವುದು, ಉಸಿರಾಡಿಕೊಳ್ಳುವುದು. प्रति + आ + श्वस (प्राणने) "घञ्" (३-३-१८)।

**प्रत्याश्वासन ಪ್ರತ್ಯಾಶ್ವಾಸನ** (ನಂ) ಸಮಾಧಾನ ಪಡಿಸುವುದು, ಸಂತಯಿಸುವುದು. प्रति + आ + श्वस (प्राणने) + णिच् "ल्युट्" (३-३-११५)।

**प्रत्याश्वासित ಪ್ರತ್ಯಾಶ್ವಾಸಿತ** (ವಿಂ) ಸಮಾಧಾನಗೊಳಿಸಲ್ಪಟ್ಟ, ಸಂತಯಿಸಲ್ಪಟ್ಟ. प्रति+आ+श्वस (प्राणने)+ णिच् "क्तः" (३-२-१०२)।

**प्रत्यासत्ति ಪ್ರತ್ಯಾಸತ್ತಿ** (ಸ್ತ್ರೀಂ) 1. (ಕಾಲ ಮತ್ತು ದೇಶಗಳ) ಸಾಮೀಪ್ಯ, ಸಮೀಪಸಂಬಂಧ. 2. ಸಾದೃಶ್ಯ, ಸಮಾನತೆ, ಸಾಮ್ಯ. प्रति + आ + षद्लृ (विशरणादौ) "क्तिन्" (३-३-९४)।

**प्रत्यासन्न ಪ್ರತ್ಯಾಸನ್ನ** (ವಿಂ) 1. ಸಮೀಪದಲ್ಲಿರುವ, ಹತ್ತಿರದಲ್ಲಿರುವ. प्रति + आ + षद्लृ (विशरणादौ) "क्तः" (३-४-७२)। 2. ಸಂಪರ್ಕ ಹೊಂದಿರುವ, ಸಮೀಪ ಸಂಬಂಧವುಳ್ಳ. 3. ಸನ್ನಿಹಿತವಾಗಿರುವ, ಹತ್ತಿರಕ್ಕೆ ಬಂದಿರುವ. "प्रत्यासन्ने दन्तिनि प्रातिपक्षे यन्त्रा नागः प्रास्तवक्त्रच्छदोऽपि" माघ० १८-२८।

**प्रत्यासर ಪ್ರತ್ಯಾಸರ** (ಪುಂ) 1. ಸೇನೆಯ ಹಿಂಭಾಗ. प्रति+ आ + सृ (गतौ) "अप्" (३-३-५७)। "घञ्" (३-३-१२१)। –आसारः –ಆಸಾರಃ. 2. ಸೇನೆಯ ವ್ಯೂಹ ರಚನೆ.

**प्रत्याहत ಪ್ರತ್ಯಾಹತ** (ವಿಂ) ಕುಂಠಿತಗೊಳಿಸಲ್ಪಟ್ಟ, ಶಕ್ತಿ ಕೆಡಿಮೆಮಾಡಲ್ಪಟ್ಟ. प्रति+आ+हन (हिंसागत्योः) "क्तः" (३-२-१०२)। "प्रत्याहतास्त्रो गिरिशप्रभावात् आत्मन्यवज्ञां शिथिलीचकार" रघु० २-४१।

**प्रत्याहरण ಪ್ರತ್ಯಾಹರಣ** (ನಂ) 1. ಹಿಂದಕ್ಕೆ ತರುವುದು, ಹಿಂದಕ್ಕೆ ತೆಗೆದುಕೊಂಡು ಬರುವುದು. प्रति + आ + हृञ् (हरणे) "ल्युट्" (३-३-११५)। 2. ವಿಷಯಗಳಿಂದ ಇಂದ್ರಿಯಗಳನ್ನು ತಡೆದು ಸ್ವಾಧೀನದಲ್ಲಿ ಇಟ್ಟುಕೊಳ್ಳುವುದು, ಇಂದ್ರಿಯಗಳನ್ನು ನಿಗ್ರಹಿಸಿ ನಿರ್ಬಂಧದಲ್ಲಿಟ್ಟುಕೊಳ್ಳುವುದು.

**प्रत्याहार ಪ್ರತ್ಯಾಹಾರ** (ಪುಂ) 1. ಮನಸ್ಸು ಮತ್ತು ಇಂದ್ರಿಯಗಳನ್ನು ವಿಷಯಗಳಿಂದ ತಡೆದು ನಿಲ್ಲಿಸುವುದು, ಇಂದ್ರಿಯಗಳನ್ನು ನಿಗ್ರಹಿಸಿ ನಿರ್ಬಂಧದಲ್ಲಿಟ್ಟುಕೊಳ್ಳುವುದು. प्रति+आ+हृञ् (हरणे) "घञ्" (३-३-१८)। ಇದು ಅಷ್ಟವಿಧ ಯೋಗಾಂಗಗಳಲ್ಲೊಂದು. (1) यमः (2) नियमः (3) आसनम् (4) प्राणायामः (5) प्रत्याहारः (6) धारणा (7) ध्यानम् ಮತ್ತು (8) समाधिः ಇವು ಯೋಗದ ಎಂಟು ಅಂಗಗಳು. "यमनियमासनप्राणायाम-प्रत्याहारधारणाध्यानसमाधयोऽष्टावङ्गानि" पा० यो० सू० २-२९। "शब्दादिष्वनुरक्तानि निगृह्याक्षाणि योगवित्। कुर्याच्चित्तानुकारीणि प्रत्याहारपरायणः" विष्णुपु०। 2. (ವ್ಯಾಕರಣ ಶಾಸ್ತ್ರದಲ್ಲಿ) ಚತುರ್ದಶ (ಹದಿನಾಲ್ಕು) ಮಾಹೇಶ್ವರಸೂತ್ರಗಳ ಇತ್ ಸಂಜ್ಞೆಯುಳ್ಳ ಕೊನೆಯ ವರ್ಣದೊಡನೆ ಸೇರಿಸಿ ಹೇಳುವ ಮೊದಲನೆಯ ವರ್ಣಕ್ಕೂ ಅವೆರಡರ ಮಧ್ಯದ ವರ್ಣಗಳಿಗೂ ಹೇಳುವ ಒಂದು ಸಂಜ್ಞೆ. ಇದಕ್ಕೆ ಪ್ರತ್ಯಾಹಾರವೆಂಬ ಸಂಜ್ಞೆ. "आदिरन्त्येन सहेता" पा० सू० १-१-७१। "अन्त्येन इता सहितः आदिः मध्यगानां स्वस्य च संज्ञा स्यात्" सि० कौ०। अइउण् ಎಂಬ ಸೂತ್ರದಲ್ಲಿ ಅಕಾರ ಮತ್ತು ण् ವರ್ಣಗಳಿಗೆ ಮಾಡುವ ಪ್ರತ್ಯಾಹಾರವು अण्। ಇಲ್ಲಿ ಮೊದಲನೆಯ ವರ್ಣವಾದ ಅಕಾರ ಮತ್ತು ಇತ್ ಸಂಜ್ಞೆಯುಳ್ಳ ण् ವರ್ಣಗಳ ಮಧ್ಯದ ವರ್ಣಗಳಾದ इ उ ವರ್ಣಗಳಿಗೂ ಆದಿವರ್ಣವಾದ ಅಕಾರಕ್ಕೂ ಗ್ರಹಣ. ಈ ರೀತಿ अच् इक् एङ् ऐच् यण् यर् लण् अल् ಇತ್ಯಾದಿ ಸಂಜ್ಞೆಗಳು ಪ್ರತ್ಯಾಹಾರದಿಂದ ಸಿದ್ಧಿಸುವುವು. ಪ್ರತ್ಯಾಹಾರಗಳಲ್ಲಿ ಇತ್ ಸಂಜ್ಞೆಯುಳ್ಳ ವರ್ಣಗಳಿಗೆ ಗ್ರಹಣವಿಲ್ಲ. "प्रत्याहारेष्वितां न ग्रहणम्" सि० कौ०। अच् ಪ್ರತ್ಯಾಹಾರದಿಂದ ಎಲ್ಲಾ ಸ್ವರ ವರ್ಣಗಳಿಗೂ अल् ಪ್ರತ್ಯಾಹಾರದಿಂದ ಎಲ್ಲಾ ಸ್ವರ ಮತ್ತು ವ್ಯಂಜನ ವರ್ಣಗಳಿಗೂ ಗ್ರಹಣ. ಈ ಸೌಲಭ್ಯಕ್ಕಾಗಿ ಪ್ರತ್ಯಾಹಾರ ಮಾಡುವುದು.

**प्रत्याहृत ಪ್ರತ್ಯಾಹೃತ** (ವಿಂ) ಹಿಂದಕ್ಕೆ ತರಲ್ಪಟ್ಟ, ಮತ್ತೆ ತರಲ್ಪಟ್ಟ. "प्रत्याहृतैः पत्रलताङ्कुराद्यैः" याद० १८-८७।

**प्रत्युक्त ಪ್ರತ್ಯುಕ್ತ** (ವಿಂ) 1. ಉತ್ತರ ಹೇಳಲ್ಪಟ್ಟ. प्रति+ वच (परिभाषणे) "क्तः" (३-२-१०२)। 2. ಬದಲು ಹೇಳಿ ತಿರಸ್ಕರಿಸಲ್ಪಟ್ಟ, ಪ್ರತಿಕೂಲವಾಗಿ ಉತ್ತರ ಕೊಡಲ್ಪಟ್ಟ.

**प्रत्युक्ति ಪ್ರತ್ಯುಕ್ತಿ** (ಸ್ತ್ರೀಂ) ಬದಲು ಮಾತು, ಉತ್ತರ. प्रति + वच (परिभाषणे) "क्तिन्" (३-३-९४)।

**प्रत्युज्जीवन ಪ್ರತ್ಯುಜ್ಜೀವನ** (ನಂ) ಪುನಃ ಜೀವಿಸುವುದು, ಕಷ್ಟ ನಿವಾರಣೆಯಾಗಿ ಮತ್ತೆ ಪೂರ್ವಸ್ಥಿತಿಗೆ ಬಂದು ಬಾಳುವುದು. प्रति+उद्+जीव (प्राणधारणे) भावे "ल्युट्" (३-३-११५)।

**प्रत्युज्जीवित ಪ್ರತ್ಯುಜ್ಜೀವಿತ** (ವಿಂ) ಬದುಕಿನ ಕಷ್ಟ ನಿವಾರಣೆಯಾಗಿ ಮತ್ತೆ ಹಿಂದಿನ ಸ್ಥಿತಿಗೆ ಬಂದಿರುವ.

**प्रत्युत ಪ್ರತ್ಯುತ** (अव्यं) 1. ವಿರುದ್ಧವಾಗಿ, ಬದಲಾಗಿ, ಹೇಳಿದ ವಿಷಯಕ್ಕೆ ಅಥವಾ ಮಾತಿಗೆ ವಿಪರೀತವಾಗಿ. प्रति उत। "अनुकम्पाद्यतिशयो यदि कश्चित् विवक्ष्यते। न दोषः पुनरुक्तोऽपि प्रत्युतेयमलंक्रिया" काव्यां ३-१३७। 2. ವೈಪರೀತ್ಯದಿಂದ, ಸ್ವಭಾವಕ್ಕೆ ವಿರುದ್ಧವಾಗಿ. "मधुरैरपि भूयसा स मेघ्यैः प्रथमं प्रत्युत वारिभिर्दिदीपे" माघं २०-७१।

**प्रत्युत्क्रम ಪ್ರತ್ಯುತ್ಕ್ರಮ** (ಪುಂ) 1. ಯುದ್ಧಕ್ಕಾಗಿ ನಡೆಸುವ ಪ್ರಯತ್ನ, ಯುದ್ಧಕ್ಕಾಗಿ ಕೈಗೊಳ್ಳುವ ಸನ್ನಾಹ. प्रति + उत् + क्रमु (पादविक्षेपे) "घञ्" (३-३-१८)। 2. ಮುಖ್ಯಫಲಪ್ರಾಪ್ತಿಯ ಸಲುವಾಗಿ ನಡೆಸುವ ಪ್ರಾರಂಭದ ಕಾರ್ಯ, ಪ್ರಧಾನವಾದ ಫಲಕ್ಕೆ ಅನುಕೂಲವಾದ ಕಾರ್ಯಾರಂಭ. "क्तिन्" (३-३-९४)। **प्रत्युत्क्रान्तिः ಪ್ರತ್ಯುತ್ಕ್ರಾಂತಿ.** "ल्युट्" (३-३-११५)। **–क्रमणम् –ಕ್ರಮಣಮ್.**

**प्रत्युत्तर ಪ್ರತ್ಯುತ್ತರ** (नं) ವಾದಿಯು ಹೇಳಿದ ವಿಷಯಕ್ಕೆ ಪ್ರತಿಯಾಗಿ ಪ್ರತಿವಾದಿಯ ಉತ್ತರ. प्रतिरूपमुत्तरम्।

**प्रत्युत्थान ಪ್ರತ್ಯುತ್ಥಾನ** (नं) 1. ಬಂದವನಿಗೆ ಗೌರವ ಪ್ರದರ್ಶಿಸಲು ಆಸನದಿಂದ ಎದ್ದು ನಿಲ್ಲುವುದು. प्रति + उद् + ष्ठा (गतिनिवृत्तौ) "ल्युट्" (३-३-११५)। "पूजितः परया भक्त्या प्रत्युत्थानासनादिभिः" भागं १०-६९। 2. ಯುದ್ಧಕ್ಕಾಗಿ ಸಿದ್ಧಗೊಳಿಸುವುದು. 3. ಎದುರುಗೊಂಡು ಏಳುವುದು.

**प्रत्युत्थित ಪ್ರತ್ಯುತ್ಥಿತ** (ವಿಂ) 1. ಎದುರುಗೊಂಡು ಮೇಲಕ್ಕೆ ಎದ್ದುನಿಂತಿರುವ. 2. ಯುದ್ಧಕ್ಕಾಗಿ ಅಣಿಮಾಡಿರುವ. 3. ಹಿರಿಯರು ಬಂದಾಗ ಮರ್ಯಾದೆಗಾಗಿ ಆಸನದಿಂದ ಎದ್ದು ನಿಂತಿರುವ. प्रति+उद्+ष्ठा (गतिनिवृत्तौ) "क्तः" (३-४-७२)।

**प्रत्युत्पन्न ಪ್ರತ್ಯುತ್ಪನ್ನ** (ವಿಂ) 1. ತತ್‌ಕ್ಷಣ ಉದ್ಭವಿಸಿದ, ಕೂಡಲೆ ಉತ್ಪತ್ತಿಹೊಂದಿದ, ಒಡನೆಯೇ ಸಿದ್ಧವಾದ. प्रति + उत् + पद (गतौ) "क्तः" (३-४-७२)। 2. ಪುನಃ ಹುಟ್ಟಿದ, ಮತ್ತೆ ಹುಟ್ಟಿಬಂದ.

**प्रत्युत्पन्नमति ಪ್ರತ್ಯುತ್ಪನ್ನಮತಿ** (ವಿಂ) 1. ಚುರುಕಾದ ಬುದ್ಧಿಯುಳ್ಳವನು, ಸೂಕ್ಷ್ಮಬುದ್ಧಿಯುಳ್ಳವನು, ಪ್ರತಿಭಾವಂತ. प्रत्युत्पन्ना मतिर्यस्य। (स्त्रीं) 2. ಸಮಯಕ್ಕೆ ತಕ್ಕಂತೆ ಹೊಳೆಯುವ ಬುದ್ಧಿ. "प्रत्युत्पन्नमतिर्धीमान् व्यवसायी विशारदः। सत्यधर्मपरो यश्च स भिषक्पाद उच्यते" सुश्रुतं सूत्रं।

**प्रत्युदाहरण ಪ್ರತ್ಯುದಾಹರಣ** (नं) ಒಂದು ಉದಾಹರಣೆಗೆ ವಿರುದ್ಧವಾದ ಉದಾಹರಣೆ. "अन्तर्वत्पतिवतोर्नुक्" (४-१-३२) ಸೂತ್ರದಲ್ಲಿ ಕೊಟ್ಟಿರುವ अन्तर्वत्नी ಮತ್ತು पतिवत्नी ಎಂಬ ಉದಾಹರಣೆಗಳಲ್ಲಿ ವಿಧಿಸಿರುವ नुक् ಆಗಮ ಮತ್ತು वत्व ನಿಪಾತಗಳಿಗೆ ಅವಕಾಶವಿಲ್ಲದ ಪದಗಳು ಪ್ರತ್ಯುದಾಹರಣೆಗಳು. अन्तरस्यां शालायां घटः ಎಂದು ವಿಗ್ರಹ ಮಾತ್ರವೇ ಹೊರತು मतुप् ಬರುವುದಿಲ್ಲ. पतिमती पृथिवी ಎಂಬಲ್ಲಿ वत्व ಬರುವುದಿಲ್ಲ. ಇವು ಪ್ರತ್ಯುದಾಹರಣೆಗಳು.

**प्रत्युद्गत ಪ್ರತ್ಯುದ್ಗತ** (ವಿಂ) 1. ಮರ್ಯಾದೆಯಿಂದ ಎದ್ದು ಎದುರುಗೊಂಡ, ಗೌರವದೊಡನೆ ಎದುರಿಗೆ ಬಂದ. प्रति + उद् + गम्लृ (गतौ) कर्तं "क्तः" (३-४-७२)। "प्रत्युद्गतप्रियसखीजनदत्तहस्तां सत्यां त्रयीमयरथादवतारयिष्यन्" यादं १८-१३१। 2. ಎದುರಿಗೆ ಎದ್ದು ಬಂದ.

**प्रत्युद्गति ಪ್ರತ್ಯುದ್ಗತಿ** (स्त्रीं) 1. ಮರ್ಯಾದೆಯಿಂದ ಎದ್ದು ಎದುರುಗೊಳ್ಳುವುದು, ಹಿರಿಯರನ್ನು ಗೌರವದಿಂದ ಕಾಣಲು ಆಸನದಿಂದ ಮೇಲಕ್ಕೆ ಎದ್ದು ಹೋಗುವುದು. प्रति + उद् + गम्लृ (गतौ) "क्तिन्" (३-३-९४)।

**प्रत्युद्गम ಪ್ರತ್ಯುದ್ಗಮ** (ಪುಂ) 1. ಪ್ರತ್ಯುತ್ಥಾನ, ಹಿರಿಯರು ಬಂದಾಗ ಮರ್ಯಾದೆಯಿಂದ ಆಸನಬಿಟ್ಟು ಎದ್ದು ಎದುರಿಗೆ ಹೋಗುವುದು. प्रति+उद्+गम्लृ (गतौ) "अप्" (३-३-५८)। 2. ಎದುರಿಗೆ ಬಂದಾಗ ಮೇಲಕ್ಕೆ ಎದ್ದು ಹೋಗುವುದು. "एकत्रासनसंस्थितिः परिहृता प्रत्युद्गमाद् दूरतः ताम्बूलानयनच्छलेन रभसाश्लेषोऽपि संविघ्नितः" साँदं ३।

**प्रत्युद्गमन ಪ್ರತ್ಯುದ್ಗಮನ** (नं) ಗಣ್ಯರು ಬಂದಾಗ ಮರ್ಯಾದೆಯಿಂದ ಎದ್ದು ಎದುರಿಗೆ ಹೋಗುವುದು. प्रति+ उद् + गम्लृ (गतौ) "ल्युट्" (३-३-११५)। "आर्य, प्रत्यासन्नो महाराजः। तत्प्रत्युद्गमनेन संभाव्यतामार्येण" प्रबोधं २।

**प्रत्युद्गमनीय ಪ್ರತ್ಯುದ್ಗಮನೀಯ** (नं) 1. ಒಗೆದು ಶುದ್ಧವಾದ ಒಂದು ಜೊತೆ ವಸ್ತ್ರ. प्रति + उद् + गम्लृ (गतौ) "अनीयर्" (३-१-९६)। (ವಿಂ) 2. ಪೂಜ್ಯನಾದ, ಗೌರವದಿಂದ ಎದ್ದು ಎದುರುಗೊಳ್ಳಲು ಅರ್ಹನಾದ.

**प्रत्युपकार ಪ್ರತ್ಯುಪಕಾರ** (ಪುಂ) ಪಡೆದ ಉಪಕಾರಕ್ಕೆ ಪ್ರತಿಯಾಗಿ ಮಾಡುವ ಉಪಕಾರ, ಮಂಯ್ಯಿ. प्रतिरूपः उपकारः।

**प्रत्युपदेश ಪ್ರತ್ಯುಪದೇಶ** (ಪುಂ) ತಾನು ಕಲಿಸಿದ ವಿಷಯಕ್ಕೆ ಪ್ರತಿಯಾಗಿ ಇನ್ನೊಬ್ಬನಿಂದ ಬೇರೆ ವಿಷಯವನ್ನು ಕಲಿಯುವುದು. "व्यनीयत प्रत्युपदेशलुब्धैरादित्सुभिर्नूपुरसिञ्जितानि" कुमा० १-३४।

**प्रत्युरस ಪ್ರತ್ಯುರಸ** (अव्य०) ವಕ್ಷಸ್ಥಲವಲ್ಲಿ. उरसि प्रति प्रत्युरसम् विभक्तयर्थे अव्ययी०। समासान्तः "अच्" (५-४-८२)। "कृतमण्डलबन्धमुल्लसद्भिः शिरसि प्रत्युरसम् विलम्बमानैः" माघ० २०-४८।

**प्रत्युप्त ಪ್ರತ್ಯುಪ್ತ** (वि०) 1. ಒಂದು ವಸ್ತುವಿನೊಳಗೆ ಹುದುಗಿಸಲ್ಪಟ್ಟ. प्रति + डुवप् (बीजसन्ताने) "क्तः" (३-२-१०२)। 2. ಬಿತ್ತಲ್ಪಟ್ಟ, ಬೀಜಾವಾಪ ಮಾಡಲ್ಪಟ್ಟ. 3. ಚಿನ್ನ ಬೆಳ್ಳಿ ಮೊದಲಾದುವುಗಳಲ್ಲಿ ಸೇರಿಸಿ ಕತ್ತಲ್ಪಟ್ಟ. "लीनेव प्रतिबिम्बितेव लिखितेवोत्कीर्णरूपेव च प्रत्युप्तेव च वज्रलेपघटितेवान्तर्निखातेव च" मालती० ५-१०।

**प्रत्युष ಪ್ರತ್ಯುಷ** (ಪುಂ) ಪ್ರಭಾತ, ಪ್ರಾತಃಕಾಲ. प्रति+उष (दाहे) "कः" (३-१-१३६)।

**प्रत्युषस् ಪ್ರತ್ಯುಷಸ್** (न०) ಪ್ರಭಾತ, ಪ್ರಾತಃಕಾಲ. प्रति + उष (दाहे) "असिः" (उ० ४-२३३)।

**प्रत्यूष ಪ್ರತ್ಯೂಷ** (ಪುಂ) 1. ಪ್ರಭಾತ, ಪ್ರಾತಃಕಾಲ. प्रति+ऊष (रुजायाम्) "कः" (३-१-१३६)। "दीर्घीकुर्वन् पटु मदकलं कूजितं सारसानां प्रत्यूषेषु स्फुटितकमलामोदमैत्रीकषायः" मेघ० १-३१। 2. ಅಷ್ಟವಸುಗಳಲ್ಲೊಬ್ಬ ವಸು.

**प्रत्यूषस् ಪ್ರತ್ಯೂಷಸ್** (न०) ಪ್ರಭಾತ, ಪ್ರಾತಃಕಾಲ. प्रति + ऊष (रुजायाम्) "असिः" (उ० ४-२३३)। "प्रत्यूषस्यपराह्णे तु जीर्णान्ने च प्रकुप्यति" सुश्रुत० सूत्र०।

**प्रत्यूह ಪ್ರತ್ಯೂಹ** (ಪುಂ) ಅಂತರಾಯ, ವಿಘ್ನ. प्रति+ऊह (वितर्के) "घञ्" (३-३-१८)। "स्त्रीप्रत्यूहप्रवणकुशलाः शीधवश्चक्रुरासाम्" माघ० ९-८७।

**प्रत्येक ಪ್ರತ್ಯೇಕ** (अव्य०) 1. ಪ್ರತ್ಯೇಕವಾಗಿ, ಪ್ರತಿಯೊಬ್ಬನನ್ನೂ, ಒಬ್ಬೊಬ್ಬನಲ್ಲಿಯೂ, ಪ್ರತಿಯೊಬ್ಬನಲ್ಲಿಯೂ, ಪ್ರತಿಯೊಬ್ಬನಿಗೂ. एकमेकं प्रति—अव्ययी०। "प्रत्येकं विनियुक्तात्मा कथं न ज्ञास्यसि प्रभो" कुमा० २-३१। (वि०) 2. ಬೇರೆ ಬೇರೆಯಾದ, ಪೃಥಕ್ಕಾದ. "प्रत्येकोक्तिश्लाघनप्रीणिताभिः" याद० २४-८८।

**प्रथम ಪ್ರಥಮ** (वि०) 1. ಮೊದಲನೆಯ. प्रथ (प्रख्याने) "अमच्" (उ० ५-६८)। "प्रथमा चरमा च देवता त्वम्" याद० १५-२१। "प्रणमन्ति सदा सुयोधनं प्रथमे मानभृतां न वृष्णयः" किरा० २-४४। 2. ಪ್ರಧಾನ, ಮುಖ್ಯ. "एष वै प्रथमः कल्पः प्रदाने हव्यकव्ययोः" मनु० ३-१४७। 3. ಅಸದೃಶ, ಅತ್ಯುತ್ತಮ. "राम इत्यभिरामेण वपुषा तस्य चोदितः। नामधेयं गुरुश्चक्रे जगत्प्रथममङ्गलम्" रघु० १०-६७। (ವ್ಯಾಕರಣದಲ್ಲಿ) (ಪುಂ) 4. ಪ್ರಥಮಪುರುಷ. भवति भवतः भवन्ति। (स्त्री०) —मा —ಮಾ. (अव्य०) 5. ಮೊದಲು, ಪ್ರಾರಂಭದಲ್ಲಿ. "प्रथमं कलाऽभवदथार्धमथो हिमदीधितिर्महदभूदुदितः" माघ० ९-२९। 6. ಮೊದಲು, ಹಿಂದೆ, ಪೂರ್ವದಲ್ಲಿ. "प्रथमप्रबुद्धनदराजसुतावदनेन्दुनेव तुहिनद्युतिना" माघ० ९-३०। 7. ಮೊದಲು, ಎಲ್ಲಕ್ಕಿಂತಲೂ ಮುಂಚೆ. "यात्रायै चोदयामास तं शक्तेः प्रथमं शरत्" रघु० ४-२४। 8. ಮೊದಲನೆಯದಾಗಿ, ಹೊಸದಾಗಿ. 9. ಪ್ರಥಮಾವಿಭಕ್ತಿ.

**प्रथमकल्प ಪ್ರಥಮಕಲ್ಪ** (ಪುಂ) ಮುಖ್ಯವಾದ ಕಲ್ಪ, ಮೊದಲನೆಯ ಪಕ್ಷ.

**प्रथमज ಪ್ರಥಮಜ** (वि०) 1. ಮೊದಲು ಹುಟ್ಟಿದ. प्रथमं जायते—जनी (प्रादुर्भावे) "डः" (३-२-१०१)। 2. ಮೊದಲನೆಯ ಗರ್ಭದಲ್ಲಿ ಹುಟ್ಟಿದವನು.

**प्रथममङ्गल ಪ್ರಥಮಮಂಗಲ** (न०) ಉತ್ತಮವಾದ ಮಂಗಳ, ಅಸಮಾನವಾದ ಮಂಗಳ. "राम इत्यभिरामेण वपुषा तस्य चोदितः। नामधेयं गुरुश्चक्रे जगत्प्रथममङ्गलम्" रघु० १०-६७।

**प्रथमवयस् ಪ್ರಥಮವಯಸ್** (न०) ಪೂರ್ವ ವಯಸ್ಸು, ತಾರುಣ್ಯ, ಪ್ರಾಯ.

**प्रथमाश्रम ಪ್ರಥಮಾಶ್ರಮ** (ಪುಂ) ನಾಲ್ಕು ಆಶ್ರಮಗಳಲ್ಲಿ ಮೊದಲನೆಯದಾದ ಬ್ರಹ್ಮಚರ್ಯಾಶ್ರಮ. प्रथमः आश्रमः। "विवेश कश्चिज्जटिलस्तपोवनं शरीरबद्धः प्रथमाश्रमो यथा" कुमा० ५-३०।

**प्रथयत् ಪ್ರಥಯತ್** (वि०) 1. ಪ್ರಸಿದ್ಧಪಡಿಸುತ್ತಿರುವ. प्रथ (प्रख्याने) + णिच् "शतृ" (३-२-१२४)। 2. ತೋರ್ಪಡಿಸುತ್ತಿರುವ, ಪ್ರದರ್ಶಿಸುತ್ತಿರುವ. "प्रथयन्ननिवार्यवीर्यतां प्रजिघायेषुमघातुकं शिवः" किरा० १५-४८।

**प्रथा ಪ್ರಥಾ** (स्त्री०) ಪ್ರಖ್ಯಾತಿ, ಪ್ರಸಿದ್ಧಿ. प्रथ (प्रख्याने) भावे "अङ्" (३-३-१०४)। "शाक्तिजनजनितनामपदां त्वमतः श्रियः पतिरिति प्रथामगाः" माघ० १५-२७।

**प्रथित ಪ್ರಥಿತ** (वि०) 1. ಪ್ರಸಿದ್ಧಿಪಡೆದ, ಹೆಸರನ್ನು ಗಳಿಸಿದ, ಕೀರ್ತಿಯನ್ನು ಪಡೆದ. प्रथ (प्रख्याने) "क्तः" (३-४-७२)। "अनुममार न मार कथं नु सा रतिरतिप्रथितापि पतिव्रता" नैष० ४-७९। (पुं०) 2. ವಿಷ್ಣು, ಪರಮಾತ್ಮ. "अच्युतत्वेन लोकेऽस्मिन् प्रख्यातः प्रथितः स्मृतः" इति निरुक्तिः। "अच्युतः प्रथितः प्राणः प्राणदो वासवानुजः" वि० स०।

**प्रथिति ಪ್ರಥಿತಿ** (स्त्री०) ಖ್ಯಾತಿ, ಪ್ರಸಿದ್ಧಿ. प्रथ (प्रख्याने) "क्तिः" (उ० ४-१८२)।

**प्रथिमन् ಪ್ರಥಿಮನ್** (पुं०) ವೈಶಾಲ್ಯ, ವಿಸ್ತಾರವಾಗಿರುವುದು, ಅಗಲವಾಗಿರುವುದು. पृथोर्भावः—वा "इमनिच्" (५-१-१२२)। पक्षे "अण्" (५-१-१३१)। **पार्थवम् ಪಾರ್ಥವಮ್.** "वंश्या गुणाः खल्वपि लोककान्ताः प्रारम्भसूक्ष्माः प्रथिमानमापुः" रघु० १८-४९।

**प्रथिमिनी ಪ್ರಥಿಮಿನೀ** (स्त्री०) ವಿಸ್ತಾರವಾದ (ಅಗಲವಾದ) ಶರೀರವುಳ್ಳ ಹೆಂಗಸು. प्रथिमा अस्त्यस्याः "इनिः" (५-२-१३७)।

**प्रथिवी ಪ್ರಥಿವೀ** (स्त्री०) ಪೃಥಿವಿ, ಭೂಮಿ. पृथिवी—पृषो०।

**प्रथिष्ठ ಪ್ರಥಿಷ್ಠ** (वि०) ಹೆಚ್ಚು ವಿಸ್ತಾರವಾಗಿರುವ, ಹೆಚ್ಚು ಅಗಲವಾಗಿರುವ. एषाम् अतिशयेन पृथुः "इष्ठन्" (५-३-५५)। ऋकारस्य रेफः (६-४-१६१)।

**प्रथीयस् ಪ್ರಥೀಯಸ್** (वि०) 1. ದೊಡ್ಡದಾದ, ವಿಸ್ತಾರವಾದ, ಅಗಲವಾದ. अनयोरतिशयेन पृथुः "ईयसुन्" (५-३-७७)। ऋकारस्य रेफः (६-४-१६१)। 2. ಹೆಚ್ಚಾದ, ಅತಿಶಯವಾದ. "प्रथीयसा सूक्ष्मनिरन्तरेण क्षौमाभिरामेण परागमून्ना" याद० २०-२४। स्त्रियां "ङीप्" (४-१-६)। **प्रथीयसी ಪ್ರಥೀಯಸೀ.** "पुरः सुराणां पृतनां प्रथीयसीम्" कुमा० १५-४६।

**प्रद ಪ್ರದ** (वि०) (ಸಮಾಸದ ಕೊನೆಯಲ್ಲಿ) ದಾನಮಾಡುವವನು, ಕೊಡುವವನು. प्रददाति—डु दाञ् (दाने) "कः" (३-१-१३६)। "यानशय्याप्रदो भार्यामैश्वर्यमभयप्रदः" मनु० ४-२३२।

**प्रदक्षिण ಪ್ರದಕ್ಷಿಣ** (न०) 1. ಎಡಗಡೆಯಿಂದ ಬಲಗಡೆಗೆ ಹೋಗಿ ದೇವರನ್ನು ಬಳಸಿ ಬರುವುದು, ಬಲಪಾರ್ಶ್ವವು ದೇವರ ಕಡೆಗೆ ಬರುವಂತೆ ಮಾಡಿ ದೇವರನ್ನು ಸುತ್ತಿಬರುವುದು. "प्रदक्षिणप्रक्रमणात् कृशानोरुदर्चिषः तन्मिथुनं चकाशे" कुमा० ७-७९। "एकं देव्यां रवौ सप्त त्रीणि कुर्याद्विनायके। चत्वारि केशवे कुर्यात् शिवे चार्धप्रदक्षिणम्"। (क्रि० वि०) 2. ಬಲಪಾರ್ಶ್ವದಿಂದ ಬಳಸಿಕೊಂಡು, ಸುತ್ತಿಕೊಂಡು. "प्रदक्षिणं व्यतीयाय शेषयित्वा महीधरम्" याद० २२-१२७।

**प्रदत्त ಪ್ರದತ್ತ** (वि०) ಕೊಡಲ್ಪಟ್ಟ, ದಾನಮಾಡಲ್ಪಟ್ಟ. प्रकर्षेण दत्तम्—प्र+डु दाञ् (दाने) "क्तः" (३-२-१०२)।

**प्रदग्ध ಪ್ರದಗ್ಧ** (वि०) ದಹಿಸಲ್ಪಟ್ಟ, ಚೆನ್ನಾಗಿ ಸುಡಲ್ಪಟ್ಟ. प्र+दह (भस्मीकरणे) "क्तः" (३-२-१०२)।

**प्रदर ಪ್ರದರ** (पुं०) 1. ಶರ, ಬಾಣ. प्रदीर्यतेऽनेन—प्र+दॄ (विदारणे) "अप्" (३-३-५६)। 2. ಬಿರುಕು, ಬಿಲ, ಹಳ್ಳ, ಗರ್ತ. "सीमानः प्रदरोदरेषु विरलस्वल्पांभसो यास्वयम्" उ० रा० २-१६। 3. ಸ್ತ್ರೀಯರ ಒಂದು ರೋಗ, ರಕ್ತಪ್ರದರ, ಜನನೇಂದ್ರಿಯದಿಂದ ಹೊರಡುವ ರಕ್ತಸ್ರಾವ. ಇದು (1) श्लैष्मिकः (2) पैत्तिकः (3) वातिकः ಮತ್ತು (4) त्रैदोषिकः ಎಂದು ನಾಲ್ಕು ವಿಧ. "तं श्लेष्मपित्तानिलसन्निपातैः चतुःप्रकारं प्रदरं वदन्ति"। 4. ಭಂಗ, ಮುರಿಯುವುದು. "प्रदरो रोगभेदे स्यात् विदारे शरभङ्गयोः" मेदि०।

**प्रदर्शक ಪ್ರದರ್ಶಕ** (पुं०) ತೋರಿಸುವವನು. प्र+दृशिर् (प्रेक्षणे)+णिच् "ण्वुल्" (३-१-१३३)।

**प्रदर्शन ಪ್ರದರ್ಶನ** (न०) 1. ತೋರಿಸುವುದು, ಪ್ರದರ್ಶಿಸುವುದು, ತೋರ್ಪಡಿಸುವುದು. प्र+दृशिर् (प्रेक्षणे)+णिच् "ल्युट्" (३-३-११५)। 2. ತೋರ್ಪಡಿಸಿಕೊಳ್ಳುವುದು, ಕಾಣಿಸಿಕೊಳ್ಳುವುದು.

**प्रदर्शनीय ಪ್ರದರ್ಶನೀಯ** (वि०) 1. ತೋರಿಸಲ್ಪಡುವ. 2. ತೋರಿಸಬೇಕಾದ. 3. ತೋರಿಸಲು ಅರ್ಹವಾದ. प्र+दृशिर् (प्रेक्षणे)+णिच् "अनीयर्" (३-१-९६)। "तव्यः" (३-१-९६)। **-दर्शयितव्यः -ದರ್ಶಯಿತವ್ಯಃ.**

**प्रदर्शयत् ಪ್ರದರ್ಶಯತ್** (वि०) 1. ತೋರಿಸುತ್ತಿರುವ, ತೋರ್ಪಡಿಸುತ್ತಿರುವ. प्र+दृशिर् (प्रेक्षणे)+णिच् "शतृ" (३-२-१२४)। स्त्रियां "ङीप्" (४-१-५)। **-दर्शयन्ती -ದರ್ಶಯಂತೀ.** 2. ಸ್ಪಷ್ಟಪಡಿಸುತ್ತಿರುವ. "प्रदर्शयन् ऋक्षपतेः पराक्रमम्" याद० १४-११।

**प्रदर्शयमान ಪ್ರದರ್ಶಯಮಾನ** (वि०) ತೋರಿಸುತ್ತಿರುವ. प्र+दृशिर् (प्रेक्षणे)+णिच् "शानच्" (३-२-१२४)।

**प्रदर्शयितृ ಪ್ರದರ್ಶಯಿತೃ** (वि०) ತೋರಿಸುವವನು. प्र + दृशिर् (प्रेक्षणे) + णिच् "तृच्" (३-१-१३३)।

**प्रदर्शित ಪ್ರದರ್ಶಿತ** (वि०) 1. ತೋರಿಸಲ್ಪಟ್ಟ, ತೋರ್ಪಡಿಸಲ್ಪಟ್ಟ. प्र + दृशिर् (प्रेक्षणे) + णिच् "क्तः" (३-२-१०२)। "प्रदर्शितात्मभ्रमणेन नूनम् प्रत्यायितां मन्दरनर्तकेन" याद० १८-९९। 2. ವಿವರಿಸಿ ಹೇಳಲ್ಪಟ್ಟ.

**प्रदर्श्य ಪ್ರದರ್ಶ್ಯ** (वि०) 1. ತೋರಿಸಲ್ಪಡುವ, ಪ್ರದರ್ಶಿಸಲ್ಪಡುವ. प्र + दृशिर् (प्रेक्षणे) + णिच् "यत्" (३-१-९७)। (अव्य०) 2. ತೋರಿಸಿ, ತೋರ್ಪಡಿಸಿ, ಪ್ರದರ್ಶಿಸಿ.

**प्रदर्श्यमान ಪ್ರದರ್ಶ್ಯಮಾನ** (वि०) 1. ತೋರಿಸಲ್ಪಡುತ್ತಿರುವ. 2. ವಿವರಿಸಿ ತಿಳಿಸಲ್ಪಡುತ್ತಿರುವ.

**प्रदल ಪ್ರದಲ** (पुं०) ಶರ, ಬಾಣ. प्रदलति—दल (विशरणे) "अच्" (३-१-१३४)।

**प्रदव ಪ್ರದವ** (पुं०) 1. ಹೆಚ್ಚು ತಾಪ. प्र + टुदु (उपतापे) "अप्" (३-३-५६)। (वि०) 2. ಹೆಚ್ಚು ತಾಪವನ್ನುಂಟುಮಾಡುವ. प्रकर्षेण दुनोति — प्र + टु दु (उपतापे) "अच्" (३-१-१३४)।

**प्रदा ಪ್ರದಾ** (स्त्री०) ಚೆನ್ನಾಗಿ ದಾನಮಾಡುವುದು. प्र+डु दाञ् (दाने) भावे "अङ्" (३-३-१०४)।

**प्रदातव्य ಪ್ರದಾತವ್ಯ** (वि०) 1. ದಾನಮಾಡಲ್ಪಡುವ. 2. ದಾನಮಾಡಬೇಕಾದ. 3. ದಾನಮಾಡಲು ಅರ್ಹವಾದ. प्र + डु दाञ् (दाने) कर्मादौ "तव्यः" (३-१-९६)।

**प्रदातृ ಪ್ರದಾತೃ** (वि०) 1. ದಾನಮಾಡುವವನು, ಉದಾರವಾಗಿ ಕೊಡುವವನು. प्र + डु दाञ् (दाने) "तृच्" (३-१-१३३)। 2. ಕೊಡುವವನು, ನೀಡುವವನು. स्त्रियां ङीप् (४-१-५)। **-दात्री -ದಾತ್ರೀ.**

**प्रदान ಪ್ರದಾನ** (न०) 1. ಚೆನ್ನಾಗಿ ದಾನಮಾಡುವುದು. प्र + डु दाञ् (दाने) भावे "ल्युट्" (३-३-११५)। "प्रदानं प्रच्छन्नं गृहमुपगते संभ्रमविधिः प्रियं कृत्वा मौनं सदसि कथनं चाप्युपकृतेः" भर्तृ० १-५७। 2. ಕೊಡುವುದು, ನೀಡುವುದು. "यद्गोग्रासप्रदानव्रतसुकृतमविश्रान्तमुज्जृम्भते स्म" नैष० २-१०५।

**प्रदाय ಪ್ರದಾಯ** (पुं०) ದಾನ, ಕೊಡುಗೆ. प्र + डु दाञ् (दाने) "घञ्" (३-३-१८)। "युक्" (७-३-३३)।

**प्रदायक ಪ್ರದಾಯಕ** (वि०) ಕೊಡುವವನು. प्र+डु दाञ् (दाने) "ण्वुल्" (३-१-१३३)। "युक्" (७-३-३३)।

**प्रदायिन् ಪ್ರದಾಯಿನ್** (वि०) ದಾನಮಾಡುವವನು. प्रददाति—प्र+डु दाञ् (दाने) "णिनिः" (३-१-१३४)। "युक्" (७-३-३३)।

**प्रदि ಪ್ರದಿ** (वि०) 1. ದಾನಮಾಡುವವನು, ಉದಾರವಾಗಿ ಕೊಡುವವನು. प्र+दाञ् (दाने) "किः" (३-३-९२)। 2. ದಾನಮಾಡಲ್ಪಡುವ ವಸ್ತು.

**प्रदिक् ಪ್ರದಿಕ್** (स्त्री०) ವಿದಿಕ್ಕು, ಆಗ್ನೇಯ ನೈರ್ಋತ್ಯ ವಾಯವ್ಯ ಮತ್ತು ಈಶಾನ್ಯ ಮೂಲೆ ದಿಕ್ಕುಗಳು. प्रगता दिग्भ्यः। "ततो विभ्रान्तमनसो जनाः क्षुद्भयपीडिताः। गृहाणि संपरित्यज्य बभ्रमुः प्रदिशो दिशः" भा० आदि०।

**प्रदिग्ध ಪ್ರದಿಗ್ಧ** (वि०) ಲೇಪನ ಮಾಡಲ್ಪಟ್ಟ, ಬಳಿಯಲ್ಪಟ್ಟ. प्र + दिह (उपचये) "क्तः" (३-२-१०२)। "अव्यक्तरेखामिव चन्द्रलेखां पांसुप्रदिग्धामिव हेमरेखाम्" रामा०।

**प्रदित्सत् ಪ್ರದಿತ್ಸತ್** (वि०) ಕೊಡಲು ಅಪೇಕ್ಷಿಸುತ್ತಿರುವ. प्र + डु दाञ् (दाने) + सन् "शतृ" (३-२-१२४)।

**प्रदित्सा ಪ್ರದಿತ್ಸಾ** (स्त्री०) ಕೊಡಲು ಅಪೇಕ್ಷೆ, ದಾನಮಾಡಲು ಇಚ್ಛೆ. प्रदातुमिच्छा—प्र+डु दाञ् (दाने) + सन् "अः" (३-३-१०२)।

**प्रदित्सु ಪ್ರದಿತ್ಸು** (वि०) ಕೊಡಲು ಇಚ್ಛಿಸುವ, ದಾನಮಾಡಲು ಇಚ್ಛಿಸುವ. प्रदातुमिच्छुः — प्र + डु दाञ् (दाने) + सन् "उः" (३-२-१६८)। "भवत्यवज्ञा च भवत्यनुत्तरादतः प्रदित्सुः प्रतिवाचमस्मि ते" नैष० ९-२५।

**प्रदिष्ट ಪ್ರದಿಷ್ಟ** (वि०) 1. ನಿರ್ದೇಶ ಮಾಡಲ್ಪಟ್ಟ, ಗೊತ್ತುಮಾಡಲ್ಪಟ್ಟ. प्र+दिश (अतिसर्जने) "क्तः" (३-२-१०२)। "तस्यालमेषा क्षुधितस्य तृप्त्यै प्रदिष्टकाला परमेश्वरेण" रघु० २-४०। 2. ತೋರಿಸಲ್ಪಟ್ಟ. 3. ಆಜ್ಞೆಮಾಡಲ್ಪಟ್ಟ. 4. ಕೊಡಲ್ಪಟ್ಟ. "अभ्यर्च्य पूर्वविभवादधिकैः प्रदिष्टैः" याद० २२-२४२।

**प्रदीप ಪ್ರದೀಪ** (पुं०) 1. ದೀಪ, ದೀವಿಗೆ, ಸೊಡರು. प्रदीपयति — प्र + दीपी (दीप्तौ) + णिच् "अच्" "भवन्ति यत्रौषधयो रजन्यामतैलपूराः सुरतप्रदीपाः" कुमा० १-१०। "प्रदीपः स्नेहमादत्ते दशयाभ्यन्तरस्थया" माघ० २-५५। 2. ಬೆಳಗುವ ವಸ್ತು, ಪ್ರಕಾಶಪಡಿಸುವ ವಸ್ತು.

**प्रदीपक ಪ್ರದೀಪಕ** (वि०) 1. ಬೆಳಗುವ, ಬೆಳಕು ಕೊಡುವ, ಪ್ರಕಾಶಪಡಿಸುವ. प्र + दीपी (दीप्तौ) + णिच् "क्तः" (३-२-१०२)। 2. ಸಣ್ಣದೀಪ, ಕೈದೀಪ.

**प्रदीपन ಪ್ರದೀಪನ** (न०) 1. ಬೆಳಗುವುದು, ಪ್ರಕಾಶಪಡಿಸುವುದು. प्र + दीपी (दीप्तौ) + णिच् "ल्युट्" (३-३-११५)। 2. ಪ್ರಕಾಶಿಸುವುದು, ಉರಿಯುವುದು. (पुं०) 3. ಒಂದು ವಿಷ. "महादाहकरः पूर्वैः कथितः स प्रदीपनः"। (वि०) 4. ಬೆಳಗುವ, ಪ್ರಕಾಶಪಡಿಸುವ. कर्तं० "ल्युः" (३-१-१३४)।

**प्रदीपित ಪ್ರದೀಪಿತ** (वि०) 1. ಪ್ರಕಾಶಪಡಿಸಲ್ಪಟ್ಟ. प्र + दीपी (दीप्तौ) + णिच् "क्तः" (३-२-१०२)। 2. ಉರಿಯಿಸಲ್ಪಟ್ಟ, ಉರಿಯುವಂತೆ ಮಾಡಲ್ಪಟ್ಟ. "तं प्रदीपितलाङ्गूलम्" रामा०।

**प्रदीप्त ಪ್ರದೀಪ್ತ** (वि०) 1. ಉರಿಯುವ, ಜ್ವಲಿಸುವ. प्र + दीपी (दीप्तौ) "क्तः" (३-४-७२)। "दयाघनः संयति दैत्यहन्ता प्रदीप्तमस्त्रं प्रतिसंजहार" याद० २०-७४। 2. ಪ್ರಕಾಶಿಸುವ, ಹೊಳೆಯುವ. "प्रदीप्तरत्नशिरसं प्रालेयपरिपाण्डुरम्" याद० २२-१२७।

**प्रदीप्ति ಪ್ರದೀಪ್ತಿ** (स्त्री०) ಪ್ರಕಾಶ, ಬೆಳಕು. प्र + दीपी (दीप्तौ) "क्तिन्" (३-३-९४)।

**प्रदुष्ट ಪ್ರದುಷ್ಟ** (वि०) 1. ದುರುಳ, ನೀಚ. प्र + दुष (वैकृत्ये) "क्तः" (३-४-७२)। 2. ಕೆಟ್ಟಿರುವ, ಅಶುದ್ಧವಾಗಿರುವ, ಮಲಿನವಾದ. 3. ನಿಯಮಕ್ಕೆ ವಿರುದ್ಧವಾದ.

**प्रदूषित ಪ್ರದೂಷಿತ** (वि०) ಕೆಡಿಸಲ್ಪಟ್ಟ. प्र + दुष (वैकृत्ये) + णिच् "क्तः" (३-२-१०२)।

**प्रदेश ಪ್ರದೇಶ** (पुं०) 1. ಸ್ಥಾನ, ಜಾಗ. 2. ದೇಶ, ನಾಡು. प्र+दिश (अतिसर्जने) "घञ्" (३-३-१२१)। "दिवं यदि प्रार्थयसे वृथा श्रमः पितुः प्रदेशस्तव देवभूमयः" कुमा० ५-४५।

**प्रदेशन ಪ್ರದೇಶನ** (न०) 1. ದೇವರು ರಾಜರು ಮೊದಲಾದವರಿಗೆ ಅರ್ಪಿಸುವ ಉಪಹಾರ, ಕಾಣಿಕೆ. प्रदिश्यते— प्र + दिश (अतिसर्जने) "ल्युट्" (३-३-११३)। 2. ಸಲಹೆ, ಸೂಚನೆ.

**प्रदेशनी ಪ್ರದೇಶನೀ** (स्त्री०) ತರ್ಜನೀ ಬೆರಳು, ಅಂಗುಷ್ಠದ ಪಕ್ಕದ ಹೆದರಿಸುವ ಬೆರಳು. प्रदिश्यतेऽनया — प्र + दिश (अतिसर्जने) कर० "ल्युट्" (३-३-११७)।

**प्रदेशिनी ಪ್ರದೇಶಿನೀ** (स्त्री०) ತರ್ಜನೀ ಬೆರಳು, ಹೆದರಿಸುವ ಬೆರಳು. प्रदिशति — प्र + दिश (अतिसर्जने) "णिनिः" (३-१-१३४)। "ङीप्" (४-१-५)। "अविभ्रमद्भ्रमदनलोल्मुकाकृति प्रदेशिनीं जगदिव दग्धुमाहुकिः" माघ० १७-९।

**प्रदेष्टृ ಪ್ರದೇಷ್ಟೃ** (पुं०) ಬೊಕ್ಕಸದ ಅಧಿಕಾರಿ.

**प्रदेह ಪ್ರದೇಹ** (पुं०) 1. ಲೇಪನಮಾಡುವುದು, ಬಳಿಯುವುದು. प्र + दिह (उपचये) "घञ्" (३-३-१८)। 2. ಗಾಯಕ್ಕೆ ಮುಲಾಮು ಹಚ್ಚುವುದು.

**प्रदोष ಪ್ರದೋಷ** (पुं०) 1. ರಾತ್ರಿಯ ಮೊದಲನೆಯ ಭಾಗ, ಅಧಿಕವಾದ ದೋಷದಿಂದ ಕೂಡಿದ ಕಾಲ. प्रकृष्टो दोषः यस्मिन्। "वद प्रदोषे स्फुटचन्द्रतारका विभावरी यद्यरुणाय कल्पते" कुमा० ५-४४। "अस्तमानं समारभ्य सार्धाः सप्त च नाडिकाः। प्रदोष इति विख्यातस्त्वर्घयाममतः परम्"। 2. ಹೆಚ್ಚು ದೋಷವುಳ್ಳವನು. "तमःस्वभावास्तेऽप्येनं प्रदोषमनुयायिनः" माघ० २-९८।

**प्रदोषकाल ಪ್ರದೋಷಕಾಲ** (पुं०) ರಾತ್ರಿಯ ಪ್ರಾರಂಭಕಾಲ, ರಾತ್ರಿಯ ಮೊದಲನೆಯ ಭಾಗ.

**प्रदोषक ಪ್ರದೋಷಕ** (वि०) ಸಾಯಂಕಾಲ ಪ್ರದೋಷ ವೇಳೆಯಲ್ಲಿ ಹುಟ್ಟಿದ. प्रदोषे जातः "वुन्" (४-३-२८)।

**प्रदोह ಪ್ರದೋಹ** (पुं०) ಹಸು ಎಮ್ಮೆ ಮೊದಲಾದುವುಗಳ ಹಾಲು ಕರೆಯುವುದು. प्र + दुह (प्रपूरणे) भावे "घञ्" (३-३-१८)।

**प्रद्यु ಪ್ರದ್ಯು** (न०) ಪುಣ್ಯ. प्रकृष्टा द्यौः स्वर्गो यस्मात्।

**प्रद्युम्न ಪ್ರದ್ಯುಮ್ನ** (पुं०) ಮನ್ಮಥ, ಕಾಮದೇವ. प्रकृष्टं द्युम्नं बलमस्य। ಮನ್ಮಥನ ಅವತಾರ. ರುಕ್ಮಿಣೀ ಶ್ರೀಕೃಷ್ಣರ ಪುತ್ರ. [ಈತನನ್ನು ಶಂಬರಾಸುರನು ಮಾಯೆಯಿಂದ ಬಂದು ಅಪಹರಿಸಿ ಸಮುದ್ರದಲ್ಲಿ ಹಾಕಿದನು. ಒಂದು ಮೀನು ಈ ಶಿಶುವನ್ನು ನುಂಗಿತು. ಬೆಸ್ತನು ಈ ಮೀನನ್ನು ಹಿಡಿದು ತಂದು ಅದರೊಳಗಿದ್ದ ಶಿಶುವನ್ನು ಶಂಬರಾಸುರನ ರಾಣಿ ಮಾಯಾವತಿಗೆ ಒಪ್ಪಿಸಿದನು. ರಾಣಿಯು ಮಗುವಿಗೆ ಮಾಯಾವಿದ್ಯೆಗಳನ್ನು ಕಲಿಸಿ ಶಂಬರನನ್ನು ಕೊಲ್ಲಿಸಿ ಮಗುವನ್ನು ರುಕ್ಮಿಣಿಗೆ ತಂದು ಒಪ್ಪಿಸಿದಳು. ನಾರದನಿಂದ ತನ್ನ ಮಗನೆಂದು ತಿಳಿದ ರುಕ್ಮಿಣಿಯು ಸಂತೋಷದಿಂದ ಪುತ್ರನನ್ನು ಕರೆದುಕೊಂಡಳು.] "हतावशिष्टा दनुजेन्द्रभृत्याः प्रद्युम्नविक्रान्तिभयान्निवृत्ताः" याद० २०-६८।

**प्रद्योत ಪ್ರದ್ಯೋತ** (पुं०) 1. ರಶ್ಮಿ, ಕಿರಣ. प्रद्योतते — प्र+द्युत (दीप्तौ) "अच्" (३-१-१३४)। 2. ಬೆಳಗುವುದು, ಪ್ರಕಾಶಿಸುವುದು, ಹೊಳೆಯುವುದು. 3. ಮಗಧ ದೇಶದ ಒಬ್ಬ ದೊರೆ. "प्रद्योतस्य सुता वसन्तसमयस्त्वं [illegible] नाम्ना धृतिम्" रत्ना० १-१०।

**प्रद्योतन ಪ್ರದ್ಯೋತನ** (पुं०) 1. ರವಿ, ಸೂರ್ಯ. प्र+द्युत (दीप्तौ) "युच्" (३-२-१४९)। "प्रद्योतनसमं पौरा: प्रहृष्टा: प्रत्युपासत" याद० २२-२३६। (न०) 2. ಪ್ರಕಾಶ, ದೀಪ್ತಿ. भावे "ल्युट्" (३-३-११५)। (वि०) 3. ಹೊಳೆಯುವ, ಪ್ರಕಾಶಿಸುವ. कर्तं० "ल्यु:" (३-१-१३४)। "देव: प्रभाप्रभुरिव स्मरशत्रुसूनु: प्रद्योतन: सुघनदुर्धरधामधामा" कुमा० १७-२३।

**प्रद्रव ಪ್ರದ್ರವ** (पुं०) ಪಲಾಯನ, ಓಟ, ಓಡಿಹೋಗುವುದು. प्रकृष्टो द्रव:।

**प्रद्राव ಪ್ರದ್ರಾವ** (पुं०) 1. ಪಲಾಯನ, ತಪ್ಪಿಸಿಕೊಂಡು ಓಡಿಹೋಗುವುದು. प्र+द्रु (गतौ) "घञ्" (३-३-२७)। 2. ವೇಗವಾಗಿ ಹೋಗುವುದು.

**प्रद्राविन् ಪ್ರದ್ರಾವಿನ್** (वि०) ಓಡಿಹೋಗುವ ಸ್ವಭಾವದ, ಪಲಾಯನದ ಬುದ್ಧಿಯುಳ್ಳ. प्र+द्रु (गतौ) "णिनि:" (३-२-७८)।

**प्रद्रुत ಪ್ರದ್ರುತ** (वि०) ಓಡಿಹೋದ, ಪಲಾಯನ ಮಾಡಿದ. प्र + द्रु (गतौ) "क्त:" (३-४-७२)। "तुरङ्गमं प्रद्रुतमेकया दिशा" माघ० १२-२२।

**प्रधन ಪ್ರಧನ** (न०) 1. ಯುದ್ಧ, ಸಂಗ್ರಾಮ. प्र+डु धाञ् (धारणपोषणयो:) "क्यु:" (उ० २-८१)। "प्रहित: प्रधनाय माधवानहमाकारयितुं महीभृता" माघ० १६-५२। 2. ಒಡೆಯುವುದು, ಸೀಳುವುದು. "प्रधनं धारणे रणे" मेदि०। (वि०) 3. ದೊಡ್ಡ ಐಶ್ವರ್ಯವಂತ, ಅತಿಶಯವಾದ ಧನವುಳ್ಳವನು. प्रकृष्टं धनं यस्य।

**प्रधमन ಪ್ರಧಮನ** (न०) 1. ಬಾಯಿಂದ ಊದಿ ತುಂಬುವುದು. प्र+धम (ध्वाने) भावे "ल्युट्" (३-३-११५)। 2. ಸೀನನ್ನು ಬರಗೊಳಿಸುವ ವಸ್ತು.

**प्रधर्ष ಪ್ರಧರ್ಷ** (पुं०) 1. ಹಿಂಸೆ, ಬಾಧೆ, ತೊಂದರೆ. प्र + धृष (प्रसहने) "घञ्" (३-३-१८)। 2. ಮೇಲೆ ಬೀಳುವುದು, ಆಕ್ರಮಣ. 3. ಅಸಹನೆ. 4. ಗರ್ವ, ಕೊಬ್ಬು, ಸೊಕ್ಕು.

**प्रधर्षक ಪ್ರಧರ್ಷಕ** (वि०) 1. ಹಿಂಸಿಸುವವನು, ಪೀಡಿಸುವವನು, ತೊಂದರೆ ಕೊಡುವವನು. प्र + धृष (प्रसहने) "ण्वुल्" (३-१-१३३)। 2. ಆಕ್ರಮಣ ಮಾಡುವವನು, ಮುತ್ತಿಗೆ ಹಾಕುವವನು. 3. ಬಲಾತ್ಕರಿಸುವವನು.

**प्रधर्षण ಪ್ರಧರ್ಷಣ** (न०) 1. ತೊಂದರೆ ಕೊಡುವುದು, ಹಿಂಸಿಸುವುದು. 2. ಆಕ್ರಮಣ ಮಾಡುವುದು. 3. ಬಲಾತ್ಕರಿಸಿ ವ್ಯಭಿಚಾರ ಮಾಡುವುದು. 4. ಮಾನಭಂಗ ಮಾಡುವುದು. प्र+धृष (प्रसहने) भावे "ल्युट्" (३-३-११५)। 5. ಅವಮಾನಗೊಳಿಸುವುದು. (वि०) 6. ತೊಂದರೆ ಕೊಡುವವನು. 7. ಆಕ್ರಮಣ ಮಾಡುವವನು. 8. ಬಲಾತ್ಕರಿಸಿ ವ್ಯಭಿಚಾರ ಮಾಡುವವನು. 9. ಮಾನಭಂಗ ಮಾಡುವವನು. प्र + धृष (प्रसहने) "ल्यु:" (३-१-१३४)।

**प्रधर्षित ಪ್ರಧರ್ಷಿತ** (वि०) 1. ತೊಂದರೆ ಪಡಿಸಲ್ಪಟ್ಟ. 2. ಆಕ್ರಮಣ ಮಾಡಲ್ಪಟ್ಟ. 3. ಅವಮಾನಗೊಳಿಸಲ್ಪಟ್ಟ. प्र + धृष (प्रसहने) "क्त:" (३-२-१०२)।

**प्रधान ಪ್ರಧಾನ** (पुंन०) 1. ಮಹಾಮಾತ್ರ, ರಾಜನಿಗೆ ಮುಖ್ಯ ಸಹಾಯಕನಾಗಿರುವ ಮುಖ್ಯ ಅಧಿಕಾರಿ. प्रकर्षेण धीयते—प्र + डु धाञ् (धारणपोषणयो:) कर्म० "ल्युट्" (३-३-११३)। (पुं०) 2. ಸೇನಾಪತಿಗಳ ಅಧ್ಯಕ್ಷ. प्र+धाञ् "ल्यु:" (३-१-१३४)। (न०) 3. ಮೂಲಪ್ರಕೃತಿ, ಸಾಂಖ್ಯಮತದಲ್ಲಿ ಸತ್ತ್ವ ರಜಸ್ಸು ಮತ್ತು ತಮಸ್ಸು ಈ ಮೂರು ಗುಣಗಳುಳ್ಳ ಪ್ರಕೃತಿ. प्रधत्ते सर्वमत्र— प्र+धाञ् "ल्युट्" (३-३-११७)। 4. ಪರಮಾತ್ಮ. 5. ಬುದ್ಧಿ, ಪ್ರಜ್ಞೆ. (वि०) 6. ಪ್ರಶಸ್ತವಾದ, ಉತ್ತಮವಾದ. 7. ಮುಖ್ಯ. "शमप्रधानेषु तपोधनेषु गूढं हि दाहात्मकमस्ति तेज:" शाकु० २-७। "रत्नैश्च पूजयेदेनं प्रधानपुरुषै: सह" मनु० ७-२०३। "उपसर्जनं प्रधानस्य धर्मतो नोपपद्यते। पिता प्रधानं प्रजने तस्माद्धर्मेण तं त्यजेत्" मनु० ९-१२१। "प्रधानं स्यान्महामात्रे प्रकृतौ परमात्मनि। प्रज्ञायामपि च क्लीबमेकत्वे तूत्तमे सदा" मेदि०। "महामात्र: प्रधान: स्यात्" ಎಂದು ಬೋಪಾಲಿತ ವಚನವಿರುವುದರಿಂದ ಮಹಾಮಾತ್ರ ಎಂಬ ಅರ್ಥದಲ್ಲಿ ಪುಂನಪುಂಸಕಲಿಂಗ ಪ್ರಯೋಗಗಳೂ ಉಂಟು.

**प्रधानधातु ಪ್ರಧಾನಧಾತು** (पुं०) ಶುಕ್ರಧಾತು, ವೀರ್ಯ.

**प्रधानमन्त्रिन् ಪ್ರಧಾನಮಂತ್ರಿನ್** (पुं०) ಹಿರಿಯ ಮಂತ್ರಿ, ಮುಖ್ಯ ಸಚಿವ, ಮೊದಲ ಸಚಿವ, ರಾಷ್ಟ್ರದ ಪ್ರಧಾನ ಸಚಿವ. प्रधान: मुख्य: मन्त्री। **प्रधानसचिव: ಪ್ರಧಾನ ಸಚಿವ:, –अमात्य: –ಅಮಾತ್ಯ:**.

**प्रधि ಪ್ರಧಿ** (पुं०) ನೇಮಿ, ಚಕ್ರಧಾರೆ, ರಥದ ಚಕ್ರದ ಅಂಚು. प्रधीयतेऽनेन — प्र + डु धाञ् (धारणपोषणयो:) "कि:" (३-३-९२)। "चक्रे प्रधिरिवासक्तो नास्य शक्यं पलायितुम्" भा० उद्योग० ५१-५८। "प्रधिमण्डलोद्धतपरागघनवलयमध्यवर्तिन:" माघ० १५-७९।

**प्रधी ಪ್ರಧೀ** (स्त्री०) 1. ಉತ್ತಮವಾದ ಪ್ರಜ್ಞೆ, ಶ್ರೇಷ್ಠವಾದ ಬುದ್ಧಿ. प्रकृष्टा धी:। (वि०) 2. ಉತ್ತಮ ಬುದ್ಧಿಯುಳ್ಳವನು, ಬುದ್ಧಿವಂತ. प्रकृष्टा धीर्यस्य।

**प्रधूपित ಪ್ರಧೂಪಿತ** (ವಿ०) 1. ಸಂತಾಪಗೊಳಿಸಲ್ಪಟ್ಟ, ದುಃಖಪಡಿಸಲ್ಪಟ್ಟ. प्र + धूप (सन्तापे) "क्तः" (३-२-१०२)। "अविषह्यव्यसनप्रधूपिताम्" कुमा० ४-३०। 2. ಕಾಯಿಸಲ್ಪಟ್ಟ, ಸುಟ್ಟು ಬಿಸಿ ಮಾಡಲ್ಪಟ್ಟ. 3. ವಾಸನೆ ಕಟ್ಟಲ್ಪಟ್ಟ. ಸುವಾಸನೆ ತುಂಬಲ್ಪಟ್ಟ. (स्त्री०) **–धूपिता –ಧೂಪಿತಾ.** 4. ಸೂರ್ಯನು ಚಲಿಸುವ ದಿಕ್ಕು. 5. ಕಷ್ಟಪಡಿಸಲ್ಪಟ್ಟ ಹೆಂಗಸು, ಕ್ಲೇಶಕ್ಕೆ ಒಳಗಾದ ಹೆಂಗಸು. "प्रधूपिता क्लेशितायां सूर्यगन्तव्यदिश्यपि" मेदि०।

**प्रध्वंस ಪ್ರಧ್ವಂಸ** (ಪುं०) 1. ನಾಶ, ಪ್ರಳಯ. प्र + ध्वंसु (अवस्रंसने) भावे "घञ्" (३-३-१८)। "प्रध्वंसमेति व्यथिताच्च तेजः" किरा० १७-१६। 2. ಸಾಂಖ್ಯ ಮತದಲ್ಲಿ ಕಳೆದುಹೋದ ಅವಸ್ಥೆ.

**प्रध्वंसित ಪ್ರಧ್ವಂಸಿತ** (ವಿ०) ನಾಶಪಡಿಸಲ್ಪಟ್ಟ, ಹುಟ್ಟಡಗಿಸಲ್ಪಟ್ಟ. प्र+ध्वंसु (अवस्रंसने) "क्तः" (३-२-१०२)। "प्रध्वंसितान्धतमसस्तत्रोदाहरणं रविः" माघ० २-३३।

**प्रपञ्च ಪ್ರಪಂಚ** (ಪುं०) 1. ವಿಪರ್ಯಾಸ, ವ್ಯತ್ಯಾಸ. प्र + पचि (व्यक्तीकरणे) "अच्" (३-१-१३४)। 2. ವಿಸ್ತಾರ, ಹರಡುವುದು, ಮುಂದೆ ಬೆಳೆಯುವುದು. पचि (विस्तारवचने) अधि० "घञ्" (३-३-१२१)। "भरतज्ञकविप्रणीतकाव्यग्रथिताङ्का इव नाटकप्रपञ्चाः" माघ० २०-४४। 3. ಸಂಚಯ, ಕೂಡಿಡುವುದು, ರಾಶಿ ಹಾಕುವುದು. 4. ಪ್ರತಾರಣ, ವಂಚನೆ, ಮೋಸ. 5. ಸಂಸಾರ, ಸಂಸಾರವು ಭ್ರಾಂತಿರೂಪ ವೈಪರೀತ್ಯದಿಂದ ಕೂಡಿರುವುದರಿಂದ ಭ್ರಾಂತಿ ಮೂಲಕವಾಯಿತು. 6. ವಿಶದ ಪಡಿಸುವುದು, ವಿವರಿಸುವುದು. "प्रपञ्चो विप्रलम्भने। विस्तारे सन्चयेऽपि स्यात्" हेम०।

**प्रपञ्चित ಪ್ರಪಂಚಿತ** (ವಿ०) 1. ವಿಸ್ತಾರಮಾಡಲ್ಪಟ್ಟ, ಬೆಳೆಸಲ್ಪಟ್ಟ. प्र + पचि (विस्तारवचने) "क्तः" (३-२-१०२)। 2. ವಂಚಿಸಲ್ಪಟ್ಟ, ಮೋಸಗೊಳಿಸಲ್ಪಟ್ಟ. 3. ವಿವರಿಸಲ್ಪಟ್ಟ, ವಿಶದಪಡಿಸಲ್ಪಟ್ಟ.

**प्रपतत् ಪ್ರಪತತ್** (ವಿ०) ಕೆಳಗೆ ಬೀಳುತ್ತಿರುವ. प्र+पत्ऌ (गतौ) "शतृ" (३-२-१२४)। "नामूर्च्छत् कोपितो हन्तुमियेष प्रपतन्नपि" कुमा० १६-४४।

**प्रपतन ಪ್ರಪತನ** (ನ०) 1. ಕೆಳಕ್ಕೆ ಬೀಳುವುದು. प्र+पत्ऌ (गतौ) भावे "ल्युट्" (३-३-११५)। 2. ವಿಶ್ಲೇಷ ಹೊಂದುವ ವಸ್ತುವಿಗೆ ಆಶ್ರಯವಾಗಿದ್ದು ಚಲನವಿಲ್ಲದೆ ಸ್ಥಿರವಾಗಿರುವ ವಸ್ತು, ಎಲೆಗಳಿಗೆ ಆಶ್ರಯವಾಗಿದ್ದು ಎಲೆಗಳು ಉದುರಿಬಿದ್ದರೂ ಚಲಿಸದೆ ಸ್ಥಿರವಾಗಿರುವ ವೃಕ್ಷ. "ध्रुवमपायेऽपादानम्" ಪಾ० ಸೂ० १-४-२४ ಸೂತ್ರದಿಂದ ವೃಕ್ಷವು ಅಪಾದಾನ ಸಂಜ್ಞೆಯನ್ನು ಹೊಂದುವುದು. वृक्षात्पर्णं पतति ಎಂಬಲ್ಲಿ ಮರದಿಂದ ಬೀಳುವ ಎಲೆಗಳಿಗೆ ಆಶ್ರಯವಾಗಿದ್ದ ವೃಕ್ಷವು ಅಪಾದಾನ ಸಂಜ್ಞೆಯುಳ್ಳದ್ದು, ಇದೇ ಧ್ರುವ. ಇದೇ ಪ್ರಪತನ ಪದದ ಅರ್ಥ. प्रपतत्यस्मात् —अपादाने "ल्युट्"। निपा० (३-४-७४)।

**प्रपतित ಪ್ರಪತಿತ** (ವಿ०) 1. ಕೆಳಕ್ಕೆ ಬಿದ್ದ. 2. ಕೆಳಕ್ಕೆ ಉದುರಿದ.

**प्रपत्ति ಪ್ರಪತ್ತಿ** (स्त्री०) ಶರಣಾಗತಿ, ಕಷ್ಟದ ಪರಿಹಾರಕ್ಕಾಗಿ ಸಮರ್ಥನಾದ ರಕ್ಷಕನೊಬ್ಬನನ್ನು ಆಶ್ರಯಿಸುವುದು. प्र + पद (गतौ) "क्तिन्" (३-३-९४)। ಪರಮಾತ್ಮನ ಆಜ್ಞೆಗೆ ವಿರುದ್ಧವಾಗಿ ನಡೆದು ಅವನ ನಿಗ್ರಹಕ್ಕೆ ಪಾತ್ರನಾಗುವುದರಿಂದ ಜೀವನು ಅನೇಕ ವಿಧ ಕ್ಲೇಶಪರಂಪರೆಗಳಿಗೆ ಪಾತ್ರನಾಗಬೇಕಾಗುವುದು. ಈ ಕಷ್ಟದಿಂದ ವಿಮುಕ್ತಿ ಪಡೆಯಲು ಸರ್ವಶರಣ್ಯನಾದ ಪರಮಾತ್ಮನನ್ನೇ ರಕ್ಷಕನನ್ನಾಗಿ ಆಶ್ರಯಿಸಬೇಕು. ಪರಮಾತ್ಮನ ಕೃಪೆಗೆ ಪಾತ್ರನಾಗಬೇಕಾದರೆ ಪ್ರಪತ್ತಿಯು ಸುಲಭೋಪಾಯ.

ಸಂಸಾರಬಂಧನಹೇತುವಾದ ಪ್ರಕೃತಿಯ ಸಂಬಂಧದಿಂದ ಮೋಕ್ಷವು ತನಗೆ ಸರ್ವಥಾ ಸಾಧ್ಯವಿಲ್ಲವೆಂದು ತಿಳಿದ ಜೀವನು ಪರಮಾತ್ಮನಿಗೆ ಶರಣಾಗತನಾಗಬೇಕು. ಇದೇ ಪ್ರಪತ್ತಿ, ಭರನ್ಯಾಸ. "मामेकमेव शरणमात्मानं सर्वदेहिनाम्। याहि सर्वात्मभावेन यास्यसि ह्यकुतोभयम्"।

ಪರಮಾತ್ಮನೇ ಸಕಲ ಜಗನ್ನಿಯಾಮಕ. ಜಗದ್ವ್ಯಾಪಾರಗಳೆಲ್ಲವೂ ಅವನ ಅಧೀನ. ತನ್ನ ರಕ್ಷಣೆಯೂ ಪರಮಾತ್ಮನಿಗೆ ಸೇರಿದುದು ಎಂದು ರಕ್ಷಣೆಯ ಭಾರವನ್ನು ಅವನ ಚರಣಾರವಿಂದಗಳಲ್ಲಿ ಅರ್ಪಿಸಿ ಪುನರ್ಭವದ ಭೀತಿಯಿಲ್ಲದಿರಬಹುದು. "अहं मद्रक्षणभरो मद्रक्षणफलं तथा। न मम श्रीपतेरेवेत्यात्मानं निक्षिपेद्बुधः॥ निःशङ्कः तत्त्वदृष्ट्या निरवधिकदयं प्राप्य संरक्षकं त्वां न्यस्य त्वत्पादपद्मे वरद निजभरं निर्भरो निर्भयोऽस्मि"॥

ಇಂತಹ ಜೀವನ ರಕ್ಷಣೆಯು ತನಗೇ ಸೇರಿದುದರಿಂದ ಅವನ ಅಪರಾಧಗಳನ್ನು ಗಣಿಸದೆ ಪರಮಾತ್ಮನು ಸರ್ವಭೂತಗಳ ರಕ್ಷಣಾರೂಪವಾದ ವ್ರತವನ್ನು ಕೈಗೊಂಡಿರುತ್ತಾನೆ.

ಮಹಾತ್ಮನಾದ ವಿಭೀಷಣನು ತನ್ನ ಪತ್ನೀ ಪುತ್ರ ಮಿತ್ರ ಮೊದಲಾದ ಸರ್ವಸ್ವವನ್ನೂ ಪರಿತ್ಯಜಿಸಿ ಶ್ರೀರಾಮಚಂದ್ರನನ್ನು ತನ್ನ ರಕ್ಷಣೆಗಾಗಿ "परित्यक्ता मया लङ्का मित्राणि च धनानि च। भवद्गतं च मे राज्यं जीवितं च

ಸುಖಾನಿ च" ಎಂದು ಹೇಳಿ "सर्वलोकशरण्याय राघवाय महात्मने। निवेदयत मां क्षिप्रं विभीषणमुपस्थितम्" ಎಂದು ಯಾಚಿಸಿದನು.

ಆಗ ಸರ್ವಲೋಕಶರಣ್ಯನಾದ ಶ್ರೀರಾಮಚಂದ್ರನು "सकृदेव प्रपन्नाय तवास्मीति च याचते। अभयं सर्वभूतेभ्यो ददाम्येतद्व्रतं मम" ಎಂದು ಅಭಯವನ್ನು ನೀಡಿ ಶರಣಾಗತನಾದವನನ್ನು ಎಂದಿಗೂ ಕೈಬಿಡುವುದಿಲ್ಲ ವೆಂದು ಸರ್ವಲೋಕರಕ್ಷಕತ್ವವನ್ನು ಘೋಷಿಸಿದನು.

ಜೀವನಿಗೂ ಪರಮಾತ್ಮನಿಗೂ ಇರುವ ಶೇಷ ಶೇಷಿಭಾವ ಅಕಿಂಚನ್ಯ (ಕರ್ಮ, ಜ್ಞಾನ ಮತ್ತು ಭಕ್ತಿಯೋಗ ರೂಪ ವಾದ ಸಾಧನವಿಲ್ಲದಿರುವಿಕೆ) ಅನನ್ಯ ಗತಿತ್ವ (ಸಮರ್ಥರಾದ ರಕ್ಷಕರಾರೂ ಇಲ್ಲದಿರುವಿಕೆ) ಈ ಮೂರೂ ಪ್ರಪತ್ತಿಗೆ ಮುಖ್ಯ ಕಾರಣಗಳು. "न धर्मनिष्ठोऽस्मि न चात्मवेदी न भक्तिमांस्त्वच्चरणारविन्दे। अकिञ्चनोऽनन्यगति: शरण्य त्वत्पादमूलं शरणं प्रपद्ये" स्तो० २०। "मुमुक्षुर्वै शरणमहं प्रपद्ये" श्रुति:।

ಪ್ರಪತ್ತಿಗೆ (1) आनुकूल्यस्य संकल्प: (ಭಗವತ್ಪ್ರೀತಿಕರ ವಾದ ಕಾರ್ಯಾಚರಣೆಗಾಗಿ ಸಂಕಲ್ಪಿಸುವುದು). (2) प्रातिकूल्यस्य वर्जनम् (ಅವನಿಗೆ ಸಂಮತವಲ್ಲದ ಕಾರ್ಯಗಳ ಪರಿತ್ಯಾಗ). (3) महाविश्वास: (ಪರಮಾತ್ಮನು ತನ್ನನ್ನು ರಕ್ಷಿಸುವನೆಂಬ ಮಹಾವಿಶ್ವಾಸ, ನಂಬಿಕೆ). (4) कार्पण्यम् (ನಮ್ಮ ರಕ್ಷಣೆಯಲ್ಲಿ ನಾವು ಅಸಮರ್ಥರೆಂದು ಭಾವಿಸಿ ರಕ್ಷಣೆಗಾಗಿ ಪರಮಾತ್ಮನನ್ನು ಬೇಡುವುದು). ಮತ್ತು (5) गोप्तृत्ववरणम् ("तमेव शरणं गच्छ सर्वभावेन भारत" ಎಂಬ ಪರಮಾತ್ಮನ ಉಪದೇಶದಂತೆ ಅವನಲ್ಲೇ ರಕ್ಷಕತ್ವವನ್ನು ಯಾಚಿಸುವುದು). ಈ ಐದೂ ಮುಖ್ಯ ವಾದ ಅಂಗಗಳು.

ಈ ಪ್ರಪತ್ತಿಯಿಂದ ಮೋಕ್ಷಪ್ರಾಪ್ತಿಮಾತ್ರವಲ್ಲದೆ ಐಹಿಕವಾದ ಅಪೇಕ್ಷೆಗಳೂ ಸಿದ್ಧಿಸುವುವು. ಪ್ರಪತ್ತಿಗೆ ಜಾತಿ ಮತಗಳ ಭೇದವಿಲ್ಲದೆ ಸ್ತ್ರೀಪುರುಷ ಭೇದವಿಲ್ಲದೆ ಎಲ್ಲರೂ ಅರ್ಹರು. "मां हि पार्थ व्यपाश्रित्य येऽपि स्यु: पापयोनय:। स्त्रियो वैश्यास्तथा शूद्रास्तेऽपि यान्ति परां गतिम्" गीता ९-३२।

ಪ್ರಪತ್ತಿಯಿಂದ ಭಗವನ್ಮಾಯಾರೂಪವಾದ ಪ್ರಕೃತಿಯ ಸಂಬಂಧವು ಹೋಗಿ ಮೋಕ್ಷವು ಲಭಿಸುವುದು. "दैवी ह्येषा गुणमयी मम माया दुरत्यया। मामेव ये प्रपद्यन्ते मायामेतां तरन्ति ते" गीता ७-१४। ಇದರಿಂದ ಎಂದೆಂದಿಗೂ ಪುನರ್ಜನ್ಮವಿಲ್ಲ. "आब्रह्मभुवनाल्लोका: पुनरावर्तिनोऽर्जुन। मामुपेत्य तु कौन्तेय पुनर्जन्म न विद्यते" गीता ८-१६। ಇಂತಹ ಪ್ರಪತ್ತಿಯು ಆಚಾರ್ಯರ ಮೂಲಕ ನಡೆಯುವುದು ಸರ್ವೋತ್ತಮ.

**प्रपथ ಪ್ರಪಥ** (ಪುಂ) 1. ಉತ್ತಮವಾದ ಮಾರ್ಗ, ಒಳ್ಳೆಯ ದಾರಿ. प्रकृष्ट: पन्था: "अ:" (५-४-७४)। (ವಿಂ) 2. ಶಿಥಿಲವಾದ, ಸಡಿಲವಾದ.

**प्रपद ಪ್ರಪದ** (ನಂ) ಪಾದದ ಅಗ್ರಭಾಗ, ಕಾಲಿನ ತುದಿ. प्रगतं पदम्।

**प्रपदन ಪ್ರಪದನ** (ನಂ) "प्रपत्ति" ಪದದ ಅರ್ಥ. प्र+पद (गतौ) भावे "ल्युट्" (३-३-११५)।

**प्रपन्न ಪ್ರಪನ್ನ** (ವಿಂ) 1. ಶರಣಾಗತಿ ಹೊಂದಿದವನು. प्रपद्यते स्म — प्र + पद (गतौ) "क्त:" (३-४-७२)। "यच्छ्रेय: स्यान्निश्चितं ब्रूहि तन्मे शिष्यस्तेऽहं शाधि मां त्वां प्रपन्नम्" गीता २-७। "सकृदेव प्रपन्नाय तवास्मीति च याचते। अभयं सर्वभूतेभ्यो ददाम्येतद्व्रतं मम" रामा०। 2. ಹೊಂದಿರುವ, ಸೇರಿರುವ. "तदा सहास्माभिरनुज्ञया गुरोरियं प्रपन्ना तपसे तपोवनम्" कुमा० ५-५९। 3. ಹೊಂದಿದ, ಪಡೆದ. "अपि प्रपन्नां प्रकृति विलोक्य" नैष० ९-१२१।

**प्रपलायित ಪ್ರಪಲಾಯಿತ** (ವಿಂ) ಓಡಿಹೋದ, ಪಲಾಯನ ಮಾಡಿದ.

**प्रपा ಪ್ರಪಾ** (ಸ್ತ್ರೀಂ) 1. ಯಜ್ಞಶಾಲೆ, ಯಾಗಶಾಲೆ. प्रपिबन्त्यस्याम्—प्र+पा (पाने) "अङ्" (३-३-१०६)। "विश्वामित्रं पुरस्कृत्य शतानन्दं च धार्मिकम्। प्रपामध्ये तु विधिवत् वेदिं कृत्वा महातपा:" रामा०। 2. ಪಾನೀಯ ಶಾಲೆ, ಅರವಟ್ಟಿಗೆ, ಯಾತ್ರಾರ್ಥಿಗಳಿಗೆ ನೀರು ಪಾನಕ ಮೊದಲಾದುವನ್ನು ಕೊಡುವ ಗೃಹ.

**प्रपाठक ಪ್ರಪಾಠಕ** (ಪುಂ) ಗ್ರಂಥದ ಒಂದು ಭಾಗ, ಅಧ್ಯಾಯ ಪರಿಚ್ಛೇದ ಉಲ್ಲಾಸ ಮೊದಲಾದುದು.

**प्रपाणि ಪ್ರಪಾಣಿ** (ಪುಂ) ಹಸ್ತ, ಅಂಗೈ, ಪಾಣಿತಲ. प्रकृष्ट: पाणि:।

**प्रपात ಪ್ರಪಾತ** (ಪುಂ) 1. ಕೆಳಗೆ ಬೀಳುವುದು, ಧುಮುಕುವುದು. प्र + पत्लृ (गतौ) भावे "घञ्" (३-३-१८)। "मूर्ध्नि गङ्गाप्रपातेन धौतपादाम्भसा च व:" कुमा० ६-५७। 2. ಬೆಟ್ಟದಿಂದ ಕೆಳಗೆ ಬೀಳುವ ಜಾಗ, ಕಮರಿ, ಬೆಟ್ಟದ ಕಡಿದಾದ ಮುಖ. प्रपतन्त्यस्मात् — प्र + पत्लृ "घञ्" (३-३-१९)। "मधु पश्यति मूढात्मा प्रपातं नैव पश्यति। करोति निन्दितं कर्म नरकं नैव पश्यति" देवीभा०। 3. ಪ್ರವಾಹವು ಮೇಲಿಂದ ಬೀಳುವ ಜಾಗ.

प्रपतन्त्यस्मिन्—अधि० "घञ्" (३-३-१२१)। "गङ्गाप्रपातान्तविरूढशष्पं गौरीगुरोर्गह्वरमाविवेश" रघु० २-२६। 4. ಗಿರಿನದಿ, ಬೆಟ್ಟದಲ್ಲಿ ಹುಟ್ಟಿ ಹರಿಯುವ ನದಿ. 5. ತೀರ, ದಡ. 6. ಆಕ್ರಮಣ, ಮೇಲೆ ಬೀಳುವುದು, ಮುತ್ತಿಗೆ. 7. ಹಕ್ಕಿಗಳ ಎಂಟು ವಿಧ ಹಾರಾಟಗಳಲ್ಲಿ ಒಂದು ಬಗೆ. "सम्पातं च प्रपातं च महापातं निपातनम्। चक्रं तिर्यक् तथा चोर्ध्वमष्टमं लघुसंज्ञकम्। 8. ಕೆಳಕ್ಕೆ ಬೀಳಿಸುವುದು, ಒಂದು ಜಾಗದಿಂದ ಹೊರದೂಡುವುದು. "तत्तु नस्यं देयं वाताभिभूते शिरसि दन्तकेशश्मश्रुप्रपातदारुणकर्णशूलकर्णक्ष्वेड०" सुश्रुत० चिकित्सा० ४०-२२। 9. ಗರ್ತ, ಹಳ್ಳ. "प्रपातो निर्झरे भृगौ। अवटे पतने कच्छे" हेम०। प्र+पत्लृ+णिच् "घञ्" (३-३-१९)।

**प्रपायिन् ಪ್ರಪಾಯಿನ್** (वि०) 1. ಪಾನಮಾಡುವವನು, ಕುಡಿಯುವವನು. प्र+पा (पाने) "णिनिः" (३-१-१३४)। 2. ರಕ್ಷಕ, ಕಾಪಾಡುವವನು. प्र+पा (रक्षणे) "णिनिः"।

**प्रपितामह ಪ್ರಪಿತಾಮಹ** (पुं०) 1. ತಂದೆಯ ತಾತ, ತಾತನ ತಂದೆ, ಅಜ್ಜನ ತಂದೆ. प्रकर्षेण पितामहः। "पिता यस्य निवृत्तः स्यात् जीवेद्वापि पितामहः। पितुः स नाम संकीर्त्य कीर्तयेत्प्रपितामहम्" मनु० ३-२२१। 2. ಶ್ರೀಕೃಷ್ಣ, ಪರಮಾತ್ಮ. "वायुर्यमोऽग्निः वरुणः शशाङ्कः प्रजापतिस्त्वं प्रपितामहश्च" गीता ११-३९। 3. ಪ್ರಜಾಪತಿಗಳ ತಂದೆಯಾದ ಪಿತಾಮಹ (ಚತುರ್ಮುಖ)ನ ತಂದೆ ಪರಬ್ರಹ್ಮ. "भूर्भुवः स्वस्तरुस्तारः स पिता प्रपितामहः" वि० स०।

**प्रपितामही ಪ್ರಪಿತಾಮಹೀ** (स्त्री०) ಪ್ರಪಿತಾಮಹನ ಪತ್ನಿ, ತಂದೆಯ ಅಜ್ಜಿ, ತಾತನ ತಾಯಿ. प्रपितामहस्य स्त्री — "ङीष्" (४-१-४१)। "स्वेन भर्त्रा सहश्राद्धं माता भुङ्क्ते स्वधामयम्। पितामही च स्वेनैव स्वेनैव प्रपितामही"।

**प्रपित्सा ಪ್ರಪಿತ್ಸಾ** (स्त्री०) ಹೊಂದಲು ಅಪೇಕ್ಷೆ, ಹೊಂದಲು ಅಭಿಲಾಷೆ. प्र+पद (गतौ)+सन् "अः" (३-३-१०२)।

**प्रपित्सु ಪ್ರಪಿತ್ಸು** (वि०) 1. ಹೊಂದಲು ಅಪೇಕ್ಷೆಯುಳ್ಳ, ಪಡೆಯಲು ಅಭಿಲಾಷೆಯುಳ್ಳ. प्र + पद (गतौ) + सन् "उः" (३-२-१६८)। "प्रपित्सोः किं च ते मुक्तिनिःस्पृहस्य कलेवरे" किरा० ११-१६। 2. ಬೀಳಲು ಅಪೇಕ್ಷೆಯುಳ್ಳ. "पयसि प्रपित्सुरपराम्बुनिधेः" माघ० ९-१।

**प्रपुन्नाड ಪ್ರಪುನ್ನಾಡ** (पुं०) ಚಕ್ರಮರ್ದವೃಕ್ಷ, ತಗಚೆಗಿಡ. पुमांसं नाडयति—नड (भ्रंशे)+णिच् "अण्" (३-२-१)। प्रकृष्टः पुन्नाडः। डस्य लत्वम्। **प्रपुन्नालः ಪ್ರಪುನ್ನಾಲಃ, प्रपुन्नडः ಪ್ರಪುನ್ನಡಃ, प्रपुन्नाटः ಪ್ರಪುನ್ನಾಟಃ** ಎಂಬ ರೂಪಗಳೂ ಉಂಟು.

**प्रपूरिका ಪ್ರಪೂರಿಕಾ** (स्त्री०) ಹೆಗ್ಗುಳ್ಳದ ಗಿಡ. प्रपूर्यते कण्टकैः — प्र + पूर कर्म० "घञ्" (३-३-१९)।

**प्रपूरण ಪ್ರಪೂರಣ** (न०) 1. ತುಂಬುವುದು. 2. ಸಮಾಪ್ತಿಗೊಳಿಸುವುದು, ಕೊನೆ ಮುಟ್ಟಿಸುವುದು. 3. ಸೇರಿಸುವುದು, ಅಳವಡಿಸುವುದು.

**प्रपूरित ಪ್ರಪೂರಿತ** (वि०) 1. ತುಂಬಲ್ಪಟ್ಟ, ಭರ್ತಿಮಾಡಲ್ಪಟ್ಟ. 2. ಸಮಾಪ್ತಿಗೊಳಿಸಲ್ಪಟ್ಟ, ಕೊನೆ ಮುಟ್ಟಿಸಲ್ಪಟ್ಟ. 3. ಸೇರಿಸಲ್ಪಟ್ಟ, ಒಳ ಜೋಡಿಸಲ್ಪಟ್ಟ.

**प्रपौण्डरीक ಪ್ರಪೌಂಡರೀಕ** (न०) ಬಿಳಿ ನೈದಿಲೆ ಗೆಡ್ಡೆ.

**प्रपौत्र ಪ್ರಪೌತ್ರ** (पुं०) ಮೊಮ್ಮಗನ ಮಗ, ಮಗನ ಮೊಮ್ಮಗ. प्रकर्षेण पौत्रः। (स्त्री०) **-पौत्री -ಪೌತ್ರೀ.** ಮೊಮ್ಮಗನ ಮಗಳು, ಮಗನ ಮೊಮ್ಮಗಳು.

**प्रफुल्ल ಪ್ರಫುಲ್ಲ** (वि०) 1. ವಿಕಾಸಹೊಂದಿದ, ಅರಳಿದ. प्रफुल्लति—प्र+फुल्ल (विकसने) "अच्" (३-१-१३४)। "प्रफुल्लतापिञ्छनिभैरभीषुभिः शुभैश्च सप्तच्छदपांसुपाण्डुभिः" माघ० १-२२। 2. ವಿಸ್ತಾರವಾಗಿರುವ, ಅಗಲವಾಗಿರುವ, ಚೆನ್ನಾಗಿ ತೆರೆದಿರುವ (ಕಣ್ಣು). "प्रफुल्लचक्षुःकुमुदः कुमार्या" कुमा० ७-७४।

**प्रबद्ध ಪ್ರಬದ್ಧ** (वि०) ಬಿಗಿಯಾಗಿ ಕಟ್ಟಿಹಾಕಲ್ಪಟ್ಟ, ಗಂಟು ಹಾಕಲ್ಪಟ್ಟ, ಭದ್ರಪಡಿಸಲ್ಪಟ್ಟ. प्र + बन्ध (बन्धने) "क्तः" (३-२-१०२)।

**प्रबन्ध ಪ್ರಬಂಧ** (पुं०) 1. ಗ್ರಂಥ, ಕೃತಿ. 2. ಕಾವ್ಯ ಮೊದಲಾದ ರಚನೆ. प्रबध्यते — प्र + बन्ध (बन्धने) "घञ्" (३-३-१८)। "भाससौमिल्लककविपुत्रादीनां प्रबन्धानतिक्रम्य वर्तमानकवेः कालिदासस्य क्रियायां कथं बहुमानः" माल० १। 3. ಸಾತತ್ಯ, ವಿಚ್ಛಿತ್ತಿಯಿಲ್ಲದಿರುವಿಕೆ, ಎಡೆಬಿಡದಿರುವಿಕೆ. "अतिप्रबन्धप्रहितास्त्रवृष्टिभिः तमाश्रयं दुष्प्रसहस्य तेजसः" रघु० ३-५८। 4. ಕಟ್ಟು, ಗಂಟು. भावे "ल्युट्" (३-३-११५)। **-बन्धनम् -ಬಂಧನಮ್.** "प्रबन्धनाय प्रजिघाय जिष्णुः" किरा० १६-३६।

**प्रबन्धृ ಪ್ರಬಂಧೃ** (वि०) ಗ್ರಂಥವನ್ನು ಬರೆಯುವವನು, ಕಾವ್ಯ ನಾಟಕಾದಿಗಳನ್ನು ರಚಿಸುವವನು. प्र + बन्ध (बन्धने) "तृच्" (३-१-१३३)।

**प्रबन्धृता ಪ್ರಬಂಧೃತಾ** (ಸ್ತ್ರೀ०) ಗ್ರಂಥವನ್ನು ರಚಿಸುವಿಕೆ, ಗ್ರಂಥನಿರ್ಮಾಣ ಮಾಡುವಿಕೆ. प्रबन्धुः भावः "तल्" (५-१-११९)। "तदत्र मद्भाषितसूत्रपद्धतौ प्रबन्धृतास्तु प्रतिबन्धृता न ते" नैष० ९-३७।

**प्रबर्ह ಪ್ರಬರ್ಹ** (वि०) ಉತ್ತಮವಾದ, ಮೇಲ್ಮಟ್ಟದ.

**प्रबल ಪ್ರಬಲ** (पुं०) 1. ಪಲ್ಲವ, ಚಿಗುರು, ಕಿಸಲಯ. प्रकृष्टं बलति—बल (प्राणने धान्यावरोधने च) "अच्" (३-१-१३४)। 2. ಹೆಚ್ಚು ಬಲಶಾಲಿಯಾದ, ಹೆಚ್ಚು ಶಕ್ತಿವಂತ. "प्रणाशनाय प्रबलस्य विद्विषः" रघु० ३-६०। 3. ಬಹಳ ಜೋರಾದ, ಅತಿ ವೇಗವಾದ. "कोटरमकालवृष्ट्या प्रबलपुरोवातया गमिते" माल० ४-२। 4. ಅಧಿಕವಾದ, ಹೆಚ್ಚಾದ. "तत्सान्द्रसिन्दूरपरागरागै र्ध्रुवं प्रवालप्रबलारुणं तत्" नैष० ७-१००। (न०) 5. ಹೆಚ್ಚು ಬಲ, ಅಧಿಕವಾದ ಶಕ್ತಿ. प्रकृष्टं बलम्।

**प्रबाधक ಪ್ರಬಾಧಕ** (वि०) 1. ಪೀಡಿಸುವವನು, ತೊಂದರೆಪಡಿಸುವವನು. 2. ಹಿಮ್ಮೆಟ್ಟಿಸುವವನು, ಹಿಂದಕ್ಕೆ ಓಡಿಸುವವನು.

**प्रबाधन ಪ್ರಬಾಧನ** (न०) 1. ಪೀಡಿಸುವುದು, ತೊಂದರೆ ಪಡಿಸುವುದು. 2. ಹಿಂದಕ್ಕೆ ಓಡಿಸುವುದು.

**प्रबाधमान ಪ್ರಬಾಧಮಾನ** (वि०) 1. ಪೀಡಿಸುತ್ತಿರುವ, ತೊಂದರೆಪಡಿಸುತ್ತಿರುವ. प्र + बाधृ (विलोडने) "शानच्" (३-२-१२४)। "प्रबाधमानस्य जगन्ति धीमन्" भट्टि० १२-२। 2. ಹಿಮ್ಮೆಟ್ಟಿಸುತ್ತಿರುವ.

**प्रबाध्यमान ಪ್ರಬಾಧ್ಯಮಾನ** (वि०) 1. ತೊಂದರೆ ಪಡಿಸಲ್ಪಡುತ್ತಿರುವ, ಪೀಡಿಸಲ್ಪಡುತ್ತಿರುವ. प्र + बाधृ (विलोडने) कर्म० "शानच्" (३-२-१२४)। 2. ಹಿಂದಕ್ಕೆ ಓಡಿಸಲ್ಪಡುತ್ತಿರುವ.

**प्रबुद्ध ಪ್ರಬುದ್ಧ** (वि०) 1. ಎಚ್ಚರಗೊಂಡ, ನಿದ್ದೆಯಿಂದ ಎದ್ದಿರುವ. प्र + बुध (अवगमने) कर्त० "क्तः" (३-४-७२)। "अभ्यक्तमिव स्नातः शुचिरशुचिमिव प्रबुद्ध इव सुप्तम्" शाकु० ५-११। 2. ವಿಕಾಸಹೊಂದಿದ, ಅರಳಿರುವ. "प्रबुद्धपुण्डरीकाक्षं बालातपनिभांशुकम्। दिवसं शारदमिव प्रारम्भसुखदर्शनम्" रघु० १०-९०। 3. ಬುದ್ಧಿವಂತ, ತಿಳಿವಳಿಕೆಯನ್ನು ಹೊಂದಿದವನು.

**प्रबुध्यमान ಪ್ರಬುಧ್ಯಮಾನ** (वि०) 1. ಎಚ್ಚರಗೊಳ್ಳುತ್ತಿರುವ. प्र+बुध (अवगमने) "शानच्" (३-२-१०२)। 2. ತಿಳಿದುಕೊಳ್ಳುತ್ತಿರುವ, ಅರಿಯುತ್ತಿರುವ. "समीहितोदर्कमिदं द्वयोरिति प्रबुध्यमानो न निरोधमादधे" याद० १४-९।

**प्रबोध ಪ್ರಬೋಧ** (पुं०) 1. ಉತ್ತಮ ಜ್ಞಾನ, ಒಳ್ಳೆಯ ತಿಳಿವಳಿಕೆ. प्र + बुध (अवगमने) "घञ्" (३-३-१८)। "सूतात्मजाः सवयसः प्रथितप्रबोधं प्राबोधयन्नुषसि वाग्भिरुदारवाचः" रघु० ५-६५। 2. ಎಚ್ಚರಿಕೆ, ನಿದ್ದೆಯಿಂದ ಎಚ್ಚರಗೊಳ್ಳುವುದು. "सा बाणवर्षिणं रामं योधयित्वा सुरद्विषाम्। अप्रबोधाय सुष्वाप गृध्रच्छाये वरूथिनी" रघु १२-५०। 3. ತಿಳಿಸುವುದು, ಬೋಧನೆ ಮಾಡುವುದು. भावे "ल्युट्" (३-३-११५)। **-बोधनम् -ಬೋಧನಮ್.** 1. ವಾಸನೆಯಿಲ್ಲದ ವಸ್ತುವಿಗೆ ವಾಸನೆ ಕಟ್ಟುವುದು. 2. ತಿಳಿಸುವುದು, ಬೋಧಿಸುವುದು.

**प्रबोधक ಪ್ರಬೋಧಕ** (पुं०) ನಿದ್ರೆಯಿಂದ ಎಚ್ಚರಗೊಳಿಸುವವನು.

**प्रबोधयत् ಪ್ರಬೋಧಯತ್** (वि०) 1. ಬೋಧಿಸುತ್ತಿರುವ, ತಿಳಿಯಪಡಿಸುತ್ತಿರುವ. प्र+बुध (अवगमने)+णिच् "शतृ" (३-२-१२४)। 2. ಎಚ್ಚರಗೊಳಿಸುತ್ತಿರುವ, ನಿದ್ದೆಯಿಂದ ಎಬ್ಬಿಸುತ್ತಿರುವ. स्त्रियां "ङीप्" (४-१-६)। **-बोधयन्ती -ಬೋಧಯನ್ತೀ.** "शानच्" (३-२-१२४)। **-बोधयमानः -ಬೋಧಯಮಾನಃ.**

**प्रबोधवत् ಪ್ರಬೋಧವತ್** (वि०) 1. ಉತ್ತಮಜ್ಞಾನವುಳ್ಳವನು, ಒಳ್ಳೆಯ ತಿಳಿವಳಿಕೆಯನ್ನು ಹೊಂದಿರುವವನು. प्रबोधोऽस्यास्ति "मतुप्" (५-२-९४)। 2. ಭ್ರಾಂತಿಯಿಂದ ಮುಕ್ತನಾದ, ಎಚ್ಚರಗೊಂಡ, ಯಥಾರ್ಥ ಜ್ಞಾನವನ್ನು ಸಂಪಾದಿಸಿದ. "मुनिर्यथात्मानमथ प्रबोधवान् प्रकाशयन्तं स्वमसात्रबुध्यत" नैष० ९-१२१।

**प्रबोधित ಪ್ರಬೋಧಿತ** (वि०) 1. ಎಚ್ಚರಗೊಳಿಸಲ್ಪಟ್ಟ, ನಿದ್ದೆಯಿಂದ ಎಬ್ಬಿಸಲ್ಪಟ್ಟ. प्र + बुध (अवगमने) + णिच् "क्तः" (३-२-१०२)। 2. ತಿಳಿಸಲ್ಪಟ್ಟ, ಬೋಧಿಸಲ್ಪಟ್ಟ. "तमभ्यनन्दत्प्रथमं प्रबोधितः प्रजेश्वरः शासनहारिणा हरेः" रघु० ३-६८।

**प्रबोध्यमान ಪ್ರಬೋಧ್ಯಮಾನ** (वि०) 1. ಎಚ್ಚರಗೊಳಿಸಲ್ಪಡುತ್ತಿರುವ, ನಿದ್ದೆಯಿಂದ ಎಬ್ಬಿಸಲ್ಪಡುತ್ತಿರುವ. प्र + बुध (अवगमने) + णिच् "शानच्" (३-२-१२४)। 2. ತಿಳಿಸಲ್ಪಡುತ್ತಿರುವ, ಬೋಧಿಸಲ್ಪಡುತ್ತಿರುವ.

**प्रभञ्जन ಪ್ರಭಂಜನ** (पुं०) 1. ವಾಯು, ಗಾಳಿ. प्रकृष्टं भनक्ति — भञ्जो (आमर्दने) "युच्" (उ० २-७८)। "क्षणादथैष क्षणदापतिप्रभः प्रभञ्जनाध्येयजवेन वाजिना" नैष० १-६७। (न०) 2. ಮುರಿಯುವುದು, ಒಡೆಯುವುದು, ತುಂಡುಮಾಡುವುದು. (वि०) 3. ಮುರಿಯುವವನು, ಒಡೆಯುವವನು, ತುಂಡುಮಾಡು

ವವನು. "सा सलज्जा विहस्याह पुत्रं देहि सुरोत्तम। बलवन्तं महाकायं सर्वदर्पप्रभञ्जनम्" भा० आदि०।

**प्रभव ಪ್ರಭವ** (ಪುಂ) 1. ಉತ್ಪತ್ತಿಗೆ ಹೇತು, ಜನ್ಮಕ್ಕೆ ಕಾರಣ. प्रभवत्यस्मात् — प्र + भू (सत्तायाम्) अपादाने "अप्" (३-३-५७)। "अनन्तरत्नप्रभवस्य यस्य हिमं न सौभाग्यविलोपि जातम्" कुमा० १-३। 2. ನದಿಯ ಮೂಲಸ್ಥಾನ, ಹೊಳೆಯ ಉತ್ಪತ್ತಿಯ ಸ್ಥಳ. "तस्या एव प्रभवमचलं प्राप्य गौरं तुषारैः" मेघ० १-५२। 3. ಜನ್ಮ, ಉತ್ಪತ್ತಿ, ಹುಟ್ಟು. भावे "अप्" "यमामनन्त्यात्मभुवोऽपि कारणं कथं सलक्ष्यप्रभवो भविष्यति" कुमा० ५-८१। 4. ವಿಷ್ಣು, ಪರಮಾತ್ಮ. प्रकृष्टो भवः जन्म यस्य। "देवादिजनवैजात्यात् प्रकृष्टोत्पत्तिमत्त्वतः। अविद्यादोषवैधुर्यात् प्रभवः परिकीर्तितः" इति निरुक्तिः। "संभवो भावनो भर्ता प्रभवः प्रभुरीश्वरः" वि० स०। 5. ಹುಟ್ಟಿದ ಜಾಗ, ಉತ್ಪತ್ತಿಯ ಸ್ಥಾನ. प्रभवत्यस्मिन्। 6. ಪರಾಕ್ರಮ, ಶಕ್ತಿ, ಬಲ. कर० "अप्"। 7. ಜ್ಞಾನದ ಮೂಲಸ್ಥಾನ. 8. ಅರವತ್ತು ಸಂವತ್ಸರಗಳಲ್ಲಿ ಮೊದಲನೆಯ ಸಂವತ್ಸರ. "प्रभवो जन्ममूले स्यात् जन्महेतौ पराक्रमे। ज्ञानस्य चादिमस्थाने" मेदि०। (वि०) 9. ಪರಾಕ್ರಮಶಾಲಿ. 10. ಹುಟ್ಟಿದ, ಉತ್ಪನ್ನವಾದ.

**प्रभविष्णु ಪ್ರಭವಿಷ್ಣು** (वि०) 1. ಪ್ರಭು, ಯಜಮಾನ, ಸ್ವಾಮಿ. प्रभवितुं शीलमस्य — प्र + भू (सत्तायाम्) "इष्णुच्" (३-२-१३८)। "न भर्ता नैव च सुतो न पिता भ्रातरो न च। आदाने वा विसर्गे वा स्त्रीधने प्रभविष्णवः"। 2. ಸಮರ್ಥ, ಶಕ್ತ.

**प्रभा ಪ್ರಭಾ** (स्त्री०) 1. ಪ್ರಕಾಶ, ಬೆಳಕು, ಕಾಂತಿ. प्रकर्षेण भाति—भा (दीप्तौ) "अङ्" (३-३-१०६)। "प्रभामहत्या शिखयेव दीपस्त्रिमार्गयेव त्रिदिवस्य मार्गः" कुमा० १-२८। 2. ಕಿರಣ, ರಶ್ಮಿ. 3. ಸೂರ್ಯನ ಸುತ್ತಲೂ ಮಂಡಲಾಕಾರವಾಗಿ ಹರಡುವ ಛಾಯೆ, ಪರಿವೇಷ. 4. ಸೂರ್ಯನ ಪತ್ನಿ. 5. ದುರ್ಗಾದೇವಿ. 6. ಕುಬೇರನ ಪಟ್ಟಣ. 7. ವೃತ್ತರತ್ನಾಕರದಲ್ಲಿ ಉಕ್ತವಾದ ಹನ್ನೆರಡನೆಯ ಛಂದಸ್ಸಿನ ಒಂದು ವೃತ್ತ. **ಲಕ್ಷಣ:** ನಗಣದ್ವಯ ರಗಣದ್ವಯವಿದ್ದಲ್ಲಿ "प्रभा" ವೃತ್ತವಾಗುವುದು. "स्वरशरविरतिर्ननौ रौ प्रभा" वृ० र०। **ಗಣವಿನ್ಯಾಸ:**

न न र र ।
।।। ।।। ऽ।ऽ ऽ।ऽ

**प्रभाकर ಪ್ರಭಾಕರ** (ಪುಂ) 1. ಸೂರ್ಯ. प्रभां करोति— डु कृञ् (करणे) "टः" (३-२-२१)। "कृशानुरपधूमत्वात् प्रसन्नत्वात् प्रभाकरः। रक्षोविप्रकृतावास्तामपविद्धशुचाविव" रघु० १०-७४। 2. ಅಗ್ನಿ, ಬೆಂಕಿ. "प्रभाकरोऽग्निसूर्ययोः" मेदि०। 3. ಚಂದ್ರ. "तावतीत्य रथानीकं विमुक्तौ पुरुषर्षभौ। ददृशाते यथा राहोरास्यान्मुक्तौ प्रभाकरौ" भा० द्रोण० १०१-५। 4. ಸಮುದ್ರ. 5. ಶಿವ, ಪರಮೇಶ್ವರ. 6. ಒಬ್ಬ ಪ್ರಸಿದ್ಧ ಮೀಮಾಂಸಾಶಾಸ್ತ್ರ ಪ್ರವರ್ತಕ. ಇದರಿಂದ ಈ ದರ್ಶನಕ್ಕೆ "ಪ್ರಾಭಾಕರ" ಎಂದು ಹೆಸರಾಯಿತು. 7. ಅರ್ಕವೃಕ್ಷ, ಎಕ್ಕದ ಗಿಡ. 8. ಕುಶದ್ವೀಪದ ಒಂದು ಖಂಡ.

**प्रभाकीट ಪ್ರಭಾಕೀಟ** (ಪುಂ) ಖದ್ಯೋತ, ಮಿಂಚುಹುಳ. प्रभायुतः कीटः।

**प्रभाञ्जन ಪ್ರಭಾಂಜನ** (ಪುಂ) ನುಗ್ಗೆಮರ.

**प्रभात ಪ್ರಭಾತ** (ಪುಂ) 1. ಪ್ರಾತಃಕಾಲ, ಬೆಳಕು ಹರಿಯುವ ಕಾಲ, ಹಗಲಿನ ಪ್ರಾರಂಭಕಾಲ. प्रकर्षेण भातुं प्रवृत्तम्— प्र + भा (दीप्तौ) "क्तः" (३-४-७१)। "परिमलरुचिराभिर्न्यक्कृतास्तु प्रभाते युवतिभिरुपभोगान्नीरुचः पुष्पमालाः" माघ० ११-२७। (वि०) 2. ಪ್ರಭೆಯಿಂದ ಕೂಡಿದ, ಕಾಂತಿಯುಕ್ತವಾದ. प्र + भा कर्त० "क्तः" (३-४-७२)। ವೈದ್ಯ ಪುರೋಹಿತ ಮಂತ್ರಿ ಮತ್ತು ಜೋಯಿಸ ಇವರನ್ನು ಪ್ರಾತಃಕಾಲದಲ್ಲಿ ನೋಡಬೇಕು. "वैद्यः पुरोहितो मन्त्री देवज्ञोऽथ चतुर्थकः। प्रभातकाले द्रष्टव्यो नित्यं स्वश्रियमिच्छता"। ಪ್ರಾತಃಕಾಲದಲ್ಲಿ ಶ್ರೋತ್ರಿಯ ಸುಮಂಗಲಿ ಅಗ್ನಿ ಗೋವು ಅಗ್ನಿಹೋತ್ರಿ ಇವರ ದರ್ಶನದಿಂದ ಸಕಲ ವಿಪತ್ತುಗಳೂ ಪರಿಹಾರವಾಗುವುವು. "श्रोत्रियं सुभगामग्निं गाञ्चैवाग्निचितं तथा। प्रातरुत्थाय यः पश्येदापद्भ्यः स विमुच्यते"।

**प्रभाव ಪ್ರಭಾವ** (ಪುಂ) 1. ಪ್ರತಾಪ, ಉತ್ತಮ ಬೊಕ್ಕಸದ ಸ್ಥಿತಿ ಮತ್ತು ಸೈನ್ಯ ಮತ್ತು ದುಷ್ಟದಮನ ಇವುಗಳಿಂದುಂಟಾದ ತೇಜಸ್ಸು, ಪ್ರಭುಶಕ್ತಿ. प्र + भू (सत्तायाम्) भावे "घञ्" (३-३-१८)। "स प्रतापः प्रभावश्च यत्तेजः कोशदण्डजम्" अम०। 2. ಮಹಿಮೆ, ಮಾಹಾತ್ಮ್ಯ. "प्रकाशयन् किञ्चिदिवाप्रमेयः प्रभावमात्मीयमनन्यवेद्यम्" याद० २३-१९। 3. ಶಾಂತಿ. 4. ಶಕ್ತಿ, ಸಾಮರ್ಥ್ಯ. "पूज्यते यदपूज्योऽपि यदगम्योऽपि गम्यते। वन्द्यते यदवन्द्योऽपि स प्रभावो धनस्य च" पञ्चतं० १-७। 5. ಸೂರ್ಯನ ಒಬ್ಬ ಪುತ್ರ.

**प्रभावज ಪ್ರಭಾವಜ** (न०) 1. ಮಹಿಮೆಯಿಂದ ಉಂಟಾದ. 2. ಪ್ರಭುಶಕ್ತಿಯಿಂದ ಉಂಟಾದ. प्रभावात् जायते — जनी (प्रादुर्भावे) "डः" (३-२-९८)।

**प्रभावत् ಪ್ರಭಾವತ್** (वि०) 1. ಕಾಂತಿಯುಕ್ತವಾದ, ಪ್ರಭೆಯಿಂದ ಕೂಡಿದ. प्रभास्यास्ति "मतुप्" (५-२-९४)। स्त्रियां "ङीप्" (४-१-६)। **-वती -ವತೀ.**

**प्रभाववत् ಪ್ರಭಾವವತ್** (वि०) 1. ಪ್ರಭುಶಕ್ತಿಯಿಂದ ಕೂಡಿದ, ಮಹಾಘನತೆಯಿಂದ ಕೂಡಿದ. प्रभावोऽस्यास्ति "मतुप्" (५-२-९४)। 2. ಶಕ್ತಿವಂತ, ಸಾಮರ್ಥ್ಯಶಾಲಿ. "इनि:" (५-२-११५)। **प्रभाविन् ಪ್ರಭಾವಿನ್** "प्रभाविनं भाविनमन्तमात्मन:" माघ० १-६७।

**प्रभाष ಪ್ರಭಾಷ** (पुं०) 1. ಅಷ್ಟವಸುಗಳಲ್ಲೊಬ್ಬ. (वि०) 2. ಚೆನ್ನಾಗಿ ಮಾತಾಡುವವನು. प्रकृष्टं भाषते — प्र + भाष (व्यक्तायां वाचि) "अच्" (३-१-१३४)। (न०) 3. ಚೆನ್ನಾಗಿ ಮಾತಾಡುವುದು. भावे "घञ्" (३-३-१८)।

**प्रभाषण ಪ್ರಭಾಷಣ** (न०) ಚೆನ್ನಾಗಿ ಮಾತಾಡುವುದು. प्र + भाष (व्यक्तायां वाचि) "ल्युट्" (३-३-११५)।

**प्रभास ಪ್ರಭಾಸ** (पुं०) ಸೋಮತೀರ್ಥ. ಒಂದು ಪುಣ್ಯತೀರ್ಥ, ದ್ವಾರಕೆಯ ಹತ್ತಿರವಿರುವ ಒಂದು ಪುಣ್ಯಕ್ಷೇತ್ರ. ಈ ಕ್ಷೇತ್ರವು ಗುಜರಾತ ಪ್ರಾಂತದಲ್ಲಿದೆ. ಇಲ್ಲಿ ಸುಪ್ರಸಿದ್ಧ ಸೋಮನಾಥ ದೇವಸ್ಥಾನವಿರುವುದು. ಅರ್ಜುನನು ತೀರ್ಥಯಾತ್ರಾಸಮಯದಲ್ಲಿ ಇಲ್ಲಿ ಸಂಚರಿಸಿದನು. ಯಾದವರು ಸ್ವಯೂಥಕಲಹದಿಂದ ಪರಸ್ಪರ ಹೊಡೆದಾಡಿ ಹತರಾದುದು ಈ ಪ್ರಭಾಸ ಕ್ಷೇತ್ರದಲ್ಲಿ.

**प्रभिन्न ಪ್ರಭಿನ್ನ** (पुं०) ಮತ್ತಗಜ, ಮದಿಸಿದ ಆನೆ. प्रकर्षेण भिद्यते स्म—प्र+भिदिर् (विदारणे) "क्त:" (३-२-१०२)। "यथा नलवनं क्रुद्धः प्रभिन्नः षष्टिहायनः। मृद्नीयात्तद्वदायस्तः पार्थोऽमृद्नात् चमूं तव" भा० द्रोण० २८-२०।

**प्रभु ಪ್ರಭು** (पुं०) 1. ಸ್ವಾಮಿ, ಯಜಮಾನ, ಅಧಿಪತಿ. प्र+भू (सत्तायाम्) "डु:" (३-२-१८०)। "प्रभुर्बुभूषुर्भुवनत्रयस्य यः शिरोऽतिरागाद्दशमं चिकर्तिषु:" माघ० १-४९। 2. ಪತಿ, ಯಜಮಾನ. "यमवाप्य विदर्भभूः प्रभुं हसति द्यामपि शक्रभर्तृकाम्" नैष० २-१६। 3. ವಿಷ್ಣು, ಬ್ರಹ್ಮಾದಿ ಸಕಲ ಜೀವರಿಗೂ ಭೋಗಾಪವರ್ಗಗಳನ್ನು ಕೊಡಲು ಸಮರ್ಥನಾದುದರಿಂದ ಈ ಹೆಸರು. "ब्रह्मादीनां च सर्वेषां भोगमोक्षसमर्पणे। समर्थः प्रभुरित्युक्तः सर्वेष्टफलदो मनु:" इति निरुक्तिः। "संभवो भावनो भर्ता प्रभवः प्रभुरीश्वरः" वि० स०। 4. ಪರಶಿವ, ಪರಮೇಶ್ವರ. "हरश्च हरिणाक्षश्च सर्वभूतहरः प्रभुः"। 5. ಪಾರದ, ಪಾದರಸ. (वि०) 6. ಸಮರ್ಥ, ಶಕ್ತ. "न कालसारं हरिणं तदक्षिद्वयं प्रभुर्बद्धमभून्मनोभूः" नैष० ६-१९। 7. ಆಡಳಿತ ನಡಸುವವನು, ರಾಜ್ಯಭಾರ ಮಾಡುವವನು. 8. ಉತ್ತಮ, ಶ್ರೇಷ್ಠ. "वैशेष्यात् प्रकृतिश्रैष्ठ्यात् नियमस्य च धारणात्। संस्कारस्य विशेषाच्च वर्णानां ब्राह्मणः प्रभुः" मनु० १०-३।

**प्रभुत्व ಪ್ರಭುತ್ವ** (न०) 1. ಸಮಸ್ತವಾದ ಚಿತ್ತು ಮತ್ತು ಅಚಿತ್ತುಗಳ ನಿಯಂತೃತ್ವ, ಸಕಲ ಚೇತನ ಮತ್ತು ಅಚೇತನಗಳಿಗೆ ನಿಯಾಮಕನಾಗಿರುವಿಕೆ. प्रभोर्भावः "त्व:" (५-१-११९)। ಸಕಲ ಜಗತ್ತಿನ ಸೃಷ್ಟಿ ಸ್ಥಿತಿ ಪ್ರಳಯಗಳಿಗೂ ಪರಮಾತ್ಮನು ಪ್ರಭುವಾದುದರಿಂದ ಸಕಲ ಚೇತನಾಚೇತನಗಳ ಪ್ರಭುತ್ವ (ನಿಯಾಮಕತ್ವ)ವು ಅವನಲ್ಲಿರುವುದು. "तल्" (५-१-११९)। **प्रभुता ಪ್ರಭುತಾ.** 2. ಒಡೆತನ. 3. ಪ್ರಭುಶಕ್ತಿ. "प्रभुत्वभून्मानुगृहाण वा न वा" नैष० ९-१०९। 4. ಶ್ರೇಷ್ಠತೆ, ಪಾರಮ್ಯ. 5. ಸಾಮರ್ಥ್ಯ. 6. ಅಧಿಕಾರ. "तदेषा भवतः कान्ता त्यज वैनां गृहाण वा। उपपन्ना हि दारेषु प्रभुता सर्वतोमुखी" शाकु० ५-२६।

**प्रभुशक्ति ಪ್ರಭುಶಕ್ತಿ** (स्त्री०) ಉತ್ತಮಕೋಶಬಲ ಮತ್ತು ದುಷ್ಟದಮನಗಳಿಂದ ಉಂಟಾದ ತೇಜಸ್ಸು. "अनुपालयतामुदेष्यतीं प्रभुशक्तिं द्विषतामनीहया" किरा० २-१०।

**प्रभूत ಪ್ರಭೂತ** (वि०) 1. ಪ್ರಚುರವಾದ, ಹೇರಳವಾದ. प्र + भू (सत्तायाम्) "क्त:" (३-४-७२)। "तं पोतवणिजस्तत्र प्रभूतैः पर्यतोषयन्" याद० २२-९७। 2. ಮೇಲಕ್ಕೆ ಎದ್ದಿರುವ, ಮೇಲುಗಡೆ ಹೋಗಿರುವ. 3. ಉನ್ನತವಾದ, ಎತ್ತರವಾದ. 4. ಉತ್ಪನ್ನವಾದ, ಉಂಟಾಗಿರುವ.

**प्रभूति ಪ್ರಭೂತಿ** (स्त्री०) 1. ಉತ್ಪತ್ತಿ, ಹುಟ್ಟುವುದು. 2. ಪ್ರಾಚುರ್ಯ, ಹೇರಳವಾಗಿರುವಿಕೆ. प्र+भू (सत्तायाम्) "क्तिन्" (३-३-९४)।

**प्रभूष्णु ಪ್ರಭೂಷ್ಣು** (वि०) ಸಮರ್ಥ, ಶಕ್ತ. प्र + भू (सत्तायाम्) "स्नु:" (३-२-१३९)।

**प्रभृति ಪ್ರಭೃತಿ** (वि०) 1. (ಸಮಾಸದಲ್ಲಿ ಉತ್ತರಪದವಾದಾಗ) ಅದೇ ಮೊದಲಾದ, ಅವನೇ -ಅವಳೇ -ಅವರೇ ಮೊದಲಾದ. "ततो भवदपथ्यकारिषु चन्दनदासप्रभृतिषु निगृह्यमाणेषु" मुद्रा० ३। (अव्य०) 2. (ಅದು) ಮೊದಲುಗೊಂಡು, (ಅದರಿಂದ) ಪ್ರಾರಂಭಿಸಿ. "तदा प्रभृत्युन्मदना पितुर्गृहे ललाटिकाचन्दनधूसरालका" कुमा० ५-५५।

**प्रभेद ಪ್ರಭೇದ** (ಪುಂ) 1. ಭೇದ, ಪ್ರಕಾರ, ವಿಧ. प्र+भिदिर् (विदारणे) "घञ्" (३-३-१२१)। 2. ಒಡೆಯುವುದು, ಸೀಳುವುದು, ಹೋಳುಮಾಡುವುದು. भावे "घञ्" (३-३-१८)। 3. ಹೊರಕ್ಕೆ ಚಿಮ್ಮುವುದು, ಮದವು ಸ್ರವಿಸುವುದು, ಮದೋದಕವು ಹರಿಯುವುದು. "बभूव तेनातितरां सुदुःसहः कटप्रभेदेन करीव पार्थिवः" रघु० ३-३७। 4. ಬೇರೆಯಾಗುವುದು.

**प्रभेदक ಪ್ರಭೇದಕ** (ವಿಂ) 1. ಒಡೆಯುವ, ಸೀಳುವ, ಬೇರೆಮಾಡುವ. प्र + भिदिर् (विदारणे) "ण्वुल्" (३-१-१३३)। 2. ಭೇದ ತೋರಿಸುವ, ವ್ಯತ್ಯಾಸವನ್ನು ತೋರಿಸುವ.

**प्रभ्रंशथु ಪ್ರಭ್ರಂಶಥು** (ಪುಂ) ಒಂದು ವಿಧ ಮೂಗಿನ ರೋಗ.

**प्रभ्रष्ट ಪ್ರಭ್ರಷ್ಟ** (ನಂ) 1. ತಲೆಯ ಜಡೆಯಿಂದ ಜೋಲಾಡುವ ಹೂವಿನ ಸರ. प्र + भ्रंशु (अधःपतने) "क्तः" (३-४-७१)। (ವಿಂ) 2. ಕೆಳಗೆ ಬಿದ್ದಿರುವ. "प्रभ्रष्टैः सरभसमम्भसोऽवगाहक्रीडाभिः" माघ० ८-४९। स्वार्थे "कन्" (५-४-५)। –**भ्रष्टकम् –ಭ್ರಷ್ಟಕಮ್.**

**प्रमत्त ಪ್ರಮತ್ತ** (ವಿಂ) 1. ವಿವೇಕವಿಲ್ಲದವನು, ವಿವೇಚನೆಯ ಶಕ್ತಿಯಿಲ್ಲದವನು. 2. ಎಚ್ಚರ ತಪ್ಪಿದವನು. प्र+मदी (हर्षे) "क्तः" (३-४-७२)। "कश्चित्कान्ताविरहगुरुणा स्वाधिकारात्प्रमत्तः" मेघ० १-१। "मत्तं प्रमत्तमुन्मत्तं सुप्तं बालं स्त्रियं जडम्" भाग० १-७-३६। 3. ಮದ್ಯಪಾನದಿಂದ ಮದಿಸಿದವನು. 4. ಹುಚ್ಚು ಹಿಡಿದವನು, ಬುದ್ಧಿಭ್ರಮೆಯುಳ್ಳವನು.

**प्रमथ ಪ್ರಮಥ** (ಪುಂ) 1. ಪರಶಿವನ ಅನುಚರ. प्रमथति दुष्टान् — प्र + मथे (विलोडने) "अच्" (३-१-१३४)। "अपि शयनसखीभ्यो दत्तवाचं कथंचित्प्रमथमुखविकारैर्हासयामास गूढम्" कुमा० ७-९५। 2. ಅಶ್ವ, ಕುದುರೆ. 3. ಧೃತರಾಷ್ಟ್ರನ ಒಬ್ಬ ಮಗ. (स्त्री०) 4. ಅಳಲೆ ಗಿಡ.

ಪರಮೇಶ್ವರನ ಪ್ರಮಥರು 36 ಕೋಟಿ ಮಂದಿಯಿರುವರು. ಇವರೆಲ್ಲರೂ ನಾನಾ ರೂಪಗಳನ್ನು ಧರಿಸಿರುವರು. ಪ್ರಮಥರು ಅನೇಕ ಗಣ (ಗುಂಪು) ಗಳಲ್ಲಿರುವರು. ಜಟೆ ಮತ್ತು ಅರ್ಧಚಂದ್ರಧಾರಿಗಳಾಗಿ ಕೆಲವರು ಪರಮೇಶ್ವರನ ಧ್ಯಾನಪರಾಯಣರಾಗಿ ಮದ ಮಾತ್ಸರ್ಯ ಅಹಂಕಾರಗಳನ್ನು ತ್ಯಜಿಸಿ ಸರ್ವದಾ ಪರಮಾತ್ಮನ ಸೇವೆ ಮಾಡುತ್ತಾಇರುವರು. ಇವರೆಲ್ಲರೂ ಸಂಸಾರವಿಮುಖರಾಗಿ ಸದಾ ಯೋಗಾಸಕ್ತರಾಗಿ ಬ್ರಹ್ಮಾನಂದವನ್ನು ಅನುಭವಿಸುತ್ತಿರುವರು. "षट्त्रिंशत्तु सहस्राणि प्रमथा द्विजसत्तमाः। नानारूपधरा ये वै जटाचन्द्रार्धमण्डिताः। योगिनो मदमात्सर्यदम्भाहंकारवर्जिताः। संसारविमुखाः सर्वे यतयो योगतत्पराः। कृत्वा परिषदं रुच्या तिष्ठन्ति विगतक्लमाः" ಇತ್ಯಾದಿ ಕಾಲಿಕಾಪು०। ಇನ್ನು ಕೆಲವರು (ಎಂಟುಕೋಟಿ ಪ್ರಮಥರು) ಪರಮೇಶ್ವರನು ಪಾರ್ವತಿಯೊಡನೆ ಕ್ರೀಡಿಸುತ್ತಿರುವಾಗ ಇವರೂ ಅರ್ಧನಾರೀಶ್ವರರಾಗಿ ದ್ವಾರಪಾಲಕರಾಗಿರುತ್ತಾರೆ. ಪರಮೇಶ್ವರನು ಆಕಾಶಮಾರ್ಗದಲ್ಲಿ ಸಂಚರಿಸುತ್ತಿರುವಾಗ ಇವರೂ ಹಿಂಬಾಲಿಸಿ ಹೋಗುತ್ತಾ ಪರಮೇಶ್ವರನ ಸೇವೆ ಮಾಡುತ್ತಾರೆ. ಇನ್ನು ಕೆಲವು ಗಣಗಳು ಶಸ್ತ್ರಾಸ್ತ್ರಧಾರಿಗಳಾಗಿ ಯುದ್ಧದಲ್ಲಿ ಹೋರಾಡಿ ಶತ್ರುಸಂಹಾರ ಮಾಡುತ್ತಾರೆ. ಇವರ ಸಂಖ್ಯೆ ಒಂಬತ್ತು (9) ಕೋಟಿ. "उमासहायं क्रीडन्तमनुगच्छन्ति भूषिताः। शृङ्गारवेषाभरणाः अष्टौ ते कोटयो गणाः। अर्धनारीश्वराश्चान्ये ह्यर्धनारीश्वरं हरम्। अनुयान्ति महाभागास्तुल्यरूपा हरस्य ये। अर्धनारीशरीरास्तु द्वारपाला भवन्ति ते। आकाशमार्गे गच्छन्तमनुगच्छन्ति नित्यशः। नानाशस्त्रधराः शम्भोर्गणास्तु प्रमथाः स्मृताः। प्रमथ्नन्ति च युद्धेषु युध्यमानान् महाबलान्। ते वै महाबलाः शूराः संख्यया नवकोटयः" कालिकापु०।

**प्रमथन ಪ್ರಮಥನ** (ನಂ) 1. ವಧೆ, ಕೊಲ್ಲುವುದು. प्र+मथे (विलोडने) भावे "ल्युट्" (३-३-११५)। "वालिप्रमथनं चैव सुग्रीवप्रतिपादनम्" रामा०। 2. ಕಲಕುವುದು. 3. ಕಡೆಯುವುದು. 4. ಪೀಡಿಸುವುದು, ಹಿಂಸಿಸುವುದು, ಗಾಯಗೊಳಿಸುವುದು. (ವಿಂ) 5. ವಧಿಸುವವನು, ಕೊಲ್ಲುವವನು. 6. ಹಿಂಸಿಸುವವನು. कर्त० "ल्युः" (३-१-१३४)। "स चाशिवरूपसदृशो देवतुल्यपराक्रमः। सर्वासामेव नारीणां चित्तप्रमथनो रहः" भा० आदि०।

**प्रमथा ಪ್ರಮಥಾ** (स्त्री०) ಹರೀತಕಿ, ಅಳಲೆ ಗಿಡ.

**प्रमथाधिप ಪ್ರಮಥಾಧಿಪ** (ಪುಂ) ಪ್ರಮಥಗಣಗಳ ಸ್ವಾಮಿಯಾದ ಪರಮೇಶ್ವರ, ಪರಶಿವ. प्रमथानामधिपः।

**प्रमथित ಪ್ರಮಥಿತ** (ವಿಂ) 1. ಪೀಡಿಸಲ್ಪಟ್ಟ, ಹಿಂಸಿಸಲ್ಪಟ್ಟ. प्र+मन्थ (विलोडने) "क्तः" (३-२-१०२)। 2. ವಧಿಸಲ್ಪಟ್ಟ, ಕೊಲ್ಲಲ್ಪಟ್ಟ. 3. ಮಂತಿನಿಂದ ಕಡೆಯಲ್ಪಟ್ಟ. (ನಂ) 4. ನೀರು ಬೆರಸದೆ ಕಡೆಯಲ್ಪಟ್ಟ ಮೊಸರು.

**प्रमथ्नत् ಪ್ರಮಥ್ನತ್** (ವಿಂ) 1. ಮಂತಿನಿಂದ ಕಡೆಯುತ್ತಿರುವ. प्र+मन्थ (विलोडने) "शतृ" (३-२-१२४)।

2. ಪೀಡಿಸುತ್ತಿರುವ. ಹಿಂಸಿಸುತ್ತಿರುವ. 3. ಕೊಲ್ಲುತ್ತಿರುವ. स्त्रियां "ङीप्" (४-१-६)। –मथ्नती –ಮಥ್ನತೀ.

**प्रमथ्यमान ಪ್ರಮಥ್ಯಮಾನ** (वि०) 1. ಕಡೆಯಲ್ಪಡುತ್ತಿರುವ. प्र + मन्थ (विलोडने) कर्म० "शानच्" (३-२-१२४)। "आभाति भूयिष्ठमयं समुद्र: प्रमथ्यमानो गिरिणेव भूय:" रघु० १३-१४। 2. ಪೀಡಿಸಲ್ಪಡುತ್ತಿರುವ. 3. ಕಲಕಲ್ಪಡುತ್ತಿರುವ, ಕ್ಷೋಭೆ ಹೊಂದಿಸಲ್ಪಡುತ್ತಿರುವ. 4. ಕೊಲ್ಲಲ್ಪಡುತ್ತಿರುವ.

**प्रमद ಪ್ರಮದ** (पुं०) 1. ಹರ್ಷ, ಸಂತೋಷ. प्र + मदी (हर्षे) "अप्" (३-३-६८)। "तच्छ्रुत्वा मम राज्ञश्च विषादप्रमदौ द्वयो:। अभूतां मेघमालोक्य हंसचातकयोरिव" कथास०। "बिभ्रन्ति यत्र प्रमदाय पुंसाम्" माघ० ३-५४। 2. ದತ್ತೂರಿಗಿಡ. प्रमाद्यतेऽनेन — प्र + मदी कर० "अप्"। 3. ಮತ್ತ, ಮದಿಸಿದವನು. प्रमाद्यति—प्र+मदी "अच्" (३-१-१३४)। "प्रावृषि प्रमदबर्हिणेष्वभूत्कृत्रिमाद्रिषु विहारविभ्रम:" रघु० १९-३७। 4. ಸಪ್ತರ್ಷಿಗಳಲ್ಲೊಬ್ಬ ಋಷಿ.

**प्रमदकानन ಪ್ರಮದಕಾನನ, –वन –ವನ** (न०) ರಾಜನ ಅಂತಃಪುರದ ಸ್ತ್ರೀಯರ ವಿಹಾರಕ್ಕೆ ಯೋಗ್ಯವಾದ ವನ, –ಕೈತೋಟ. प्रमदानां काननम् वनम्—वा ह्रस्व: (६-३-६३)। "स्यादेतदेव प्रमदवनमन्त:पुरोचितम्" अम०। प्रमदावनम् ಎಂಬ ಪಾಠವೂ ಉಂಟು. "अधिगतकुसुमापचायलील: प्रमदवनानि विभूषयन् स्वधाम्ना" यादव० २४-१४।

**प्रमदा ಪ್ರಮದಾ** (स्त्री०) ಉತ್ತಮ ಹೆಂಗಸು. ಶ್ರೇಷ್ಠವಾದ ಗುಣವುಳ್ಳ ಹೆಂಗಸು. प्रकृष्टो मदो हर्षोऽस्त्यस्या: "अच्" (५-२-१२७)। "धृतमुग्धगण्डफलकैर्विबभुर्विकसद्भिरास्यकमलै: प्रमदा:" माघ० ९-४७।

**प्रमदाजन ಪ್ರಮದಾಜನ** (पुं०) ಹೆಂಗಸು.

**प्रमनस् ಪ್ರಮನಸ್** (वि०) ಸಂತೋಷದಿಂದಿರುವ ಮನಸ್ಸುಳ್ಳ, ಯಾವಾಗಲೂ ಹರ್ಷದ ಚಿತ್ತವುಳ್ಳ. प्रकृष्टं मनो यस्य। "इति बहुपरुषं प्रभाषति प्रमनसि मद्रपतौ रिपुस्तवम्" भा० कर्ण० ३१-४२। "प्रमना: प्रमोदपरिफुल्लचक्षुष:" माघ० १३-१४।

**प्रमा ಪ್ರಮಾ** (स्त्री०) 1. ಯಥಾರ್ಥಜ್ಞಾನ, ದ್ರವ್ಯ ಮೊದಲಾದುವುಗಳ ನಿಜವಾದ ಜ್ಞಾನ, ತತ್ತ್ವಾನುಭವ, ಯಥಾರ್ಥಾನುಭವ. प्र + माङ् (माने) "अङ्" (३-३-१०६)। "तद्वति तत्प्रकारकानुभवो यथार्थ:। सैव प्रमेत्युच्यते" त० सं०। ರಜತತ್ವ ವಿಶಿಷ್ಟವಾದ ರಜತದಲ್ಲಿ इदं रजतम् ಎಂಬ ರಜತತ್ವ ಪ್ರಕಾರಕ ಜ್ಞಾನವು ಯಥಾರ್ಥವಾದುದರಿಂದ ಇದು ಪ್ರಮೆಯಾಗುವುದು. यत्र यदस्ति तत्र तस्यानुभव:। भवति हि रजते इदं रजतम् इति ज्ञानं रजतत्ववति रजतत्वावगाहि ಎಂದು ಲಕ್ಷಣ ಸಮನ್ವಯ. रजते इदं रजतम् इति प्रत्यक्षं प्रमा। 2. ಪ್ರಮಾಣ, ವಸ್ತುಸ್ಥಿತಿಯನ್ನು ಯಥಾರ್ಥವಾಗಿ ತಿಳಿಯುವ ಉಪಾಯ. ["प्रमाण" ಪದದಲ್ಲಿ ನೋಡಿ.] "प्रत्यक्षादिप्रमासिद्धविरुद्धार्थाविबोधिन:। वेदान्ता यदि शास्त्राणि बौद्धै: किमपराध्यते" प्रबोध० २-४।

**प्रमाण ಪ್ರಮಾಣ** (न०) 1. ವಿಷ್ಣು. प्रमीयतेऽनेन निस्संशयवेदरहस्यपरमार्थप्रत्यायकतया सोऽर्थ:— प्र + माङ् (माने) कर० "ल्युट्" (३-३-११७)। "परमार्थत्रयीसारप्रत्यायकतया स्वयम्। प्रमाणमिति विख्यात: सप्तार्णो मनुरुत्तम:" इति निरुक्ति:। "प्रमाणं प्राणनिलय प्राणभृत् प्राणजीवन:" वि० स०। 2. ಆಧಾರ, ಯಥಾರ್ಥಾನುಭವಕ್ಕೆ ಕಾರಣ, ವಸ್ತುವನ್ನು ಯಥಾರ್ಥವಾಗಿ ತಿಳಿದುಕೊಳ್ಳುವ ಉಪಾಯ. प्रमीयतेऽनेन—प्रमाता येनार्थं प्रमिणोति तत् प्रमाणम्। ಈ ಯಥಾರ್ಥಾನುಭವವು (1) प्रत्यक्षम् (2) अनुमिति: (3) उपमिति: ಮತ್ತು (4) शाब्दम् ಎಂದು ನಾಲ್ಕು ವಿಧ. ಈ ನಾಲ್ಕು ವಿಧ ಯಥಾರ್ಥಾನುಭವಗಳಿಗೂ ಅಸಾಧಾರಣಕಾರಣಗಳಾದ (1) प्रत्यक्षप्रमाणम् (2) अनुमानप्रमाणम् (3) उपमानप्रमाणम् ಮತ್ತು (4) शब्दप्रमाणम् ಎಂಬ ನಾಲ್ಕು ಕರಣಗಳಿರುವುವು. "यथार्थानुभवश्चतुर्विध:। प्रत्यक्षानुमित्युपमितिशाब्दभेदात्। तत्करणमपि चतुर्विधम्। प्रत्यक्षानुमानोपमानशब्दभेदात्। असाधारणकारणं करणम्। कार्यनियतपूर्ववृत्ति कारणम्" त० सं०। ಕಾರಣವು समवायिकारणम् असमवायिकारणम् ಮತ್ತು निमित्तकारणम् ಎಂದು 3 ವಿಧ. "कारणं समवाय्यसमवायिनिमित्तभेदात् त्रिविधम्" त० सं०।(ಯಥಾರ್ಥಾನುಭವಕ್ಕೆ)ಪ್ರತ್ಯಕ್ಷಾತ್ಮಕ ಪ್ರಮೆಗೆ ಚಕ್ಷುರಾದಿಗಳು ಪ್ರಮಾಣ. ಲಿಂಗ (ಹೇತು) ದರ್ಶನವು ಅನುಮಿತಿಗೆ ಪ್ರಮಾಣ. ಸಾದೃಶ್ಯ ಜ್ಞಾನವು ಉಪಮಿತಿಗೆ ಪ್ರಮಾಣ. ಶಾಬ್ದಪ್ರಮೆಗೆ ಶಬ್ದವು ಪ್ರಮಾಣ. ಈ ಎಲ್ಲಾ ಪ್ರಮೆಗಳಿಗೂ ಇಂದ್ರಿಯ ಸನ್ನಿಕರ್ಷವೇ ಮುಖ್ಯವಾದ ಕರಣವು. "धर्मं जिज्ञासमानानां प्रमाणं परमं श्रुति:" मनु० २-१३। 3. ಅಳತೆ. (ಎತ್ತರ, ಉದ್ದ ಮತ್ತು ಅಗಲ). "दृष्टो हि वृण्वन्

कलभप्रमाणोऽप्याशाः पुरोवातमवाप्य मेघः" रघु० १८-३८। 4. ದರ್ಜೆ, ಮಟ್ಟ. 5. ದೃಷ್ಟಾಂತ. "पृथिव्यां स्वामिभक्तानां प्रमाणे परमे स्थितः" मुद्रा० २-२२। 6. ನಿರ್ಣಾಯಕ, ನಿಶ್ಚಯಿಸುವವನು. "नारीं पृच्छामि नेन्दुं कथयतु विजया न प्रमाणं यदीन्दुः" मुद्रा० १-१। "यतः कामाद्विभिद्य कुतश्चिन्निगूढः प्रचरति। तदेतज्ज्ञात्वा तत्र देवः प्रमाणमिति" प्रबोध० २। 7. ಸಾಕ್ಷ್ಯ, ರುಜುವಾತು. 8. ಮರ್ಯಾದೆ. 9. ಇಯತ್ತೆ. 10. ಶಾಸ್ತ್ರ. 11. ಕಾರಣ, ಹೇತು. 12. ಆಜ್ಞೆ. 13. ಪ್ರತಿಜ್ಞೆ. (वि०) 14. ಅಳೆಯುವವನು. प्र+मा कर्तृ० "ल्युः" (३-१-१३४)। 15. ಸತ್ಯವಾದಿ. "प्रमाण नित्यमर्यादाशास्त्रेषु सत्यवादिनि। इयत्तायां च हेतौ च क्लीबैकत्वे प्रमातरि" मेदि०।

**प्रमाणज्ञ ಪ್ರಮಾಣಜ್ಞ** (पुं०) 1. ಶಿವ, ಪರಮೇಶ್ವರ. (वि०) 2. ಪ್ರಮಾಣವನ್ನು ತಿಳಿದಿರುವ, ಯಥಾರ್ಥ ಜ್ಞಾನದ ಉಪಾಯವನ್ನು ತಿಳಿದಿರುವ. प्रमाणं जानाति— ज्ञा (अवबोधने) "कः" (३-२-३)।

**प्रमाणपत्र ಪ್ರಮಾಣಪತ್ರ** (न०) ವಿಷಯವನ್ನು ರುಜುವಾತುಪಡಿಸುವ (ಸಮರ್ಥಿಸುವ) ಪತ್ರ, ಲಿಖಿತ ಮೂಲಕ ಸಮರ್ಥಿಸಿಕೊಳ್ಳುವ ಪತ್ರ.

**प्रमाणपुरुष ಪ್ರಮಾಣಪುರುಷ** (पुं०) ನಿರ್ಣಯಮಾಡುವವನು, ತೀರ್ಪುಗಾರ, ನ್ಯಾಯನಿರ್ಣಾಯಕ, ವ್ಯಾಜ್ಯವನ್ನು ಬಗೆಹರಿಸುವ ನ್ಯಾಯಮೂರ್ತಿ.

**प्रमाणवचन ಪ್ರಮಾಣವಚನ** (न०) ಯಥಾರ್ಥವನ್ನು ತಿಳಿಸುವ ಮಾತು, ಆಧಾರಪೂರ್ವಕ ಹೇಳುವ ಮಾತು.

**प्रमातामह ಪ್ರಮಾತಾಮಹ** (पुं०) ಮಾತಾಮಹನ ತಂದೆ, ತಾಯಿಯ ಅಜ್ಜ. प्रकृष्टो मातामहः। **-मही -ಮಹೀ.** ಮಾತಾಮಹನ ತಾಯಿ, ತಾಯಿಯ ಅಜ್ಜಿ.

**प्रमातृ ಪ್ರಮಾತೃ** (वि०) 1. ಅಳೆಯುವವನು, ಅಳತೆ ಮಾಡುವವನು. प्रमिणोति — प्र + डुमिञ् (प्रक्षेपणे) "तृच्" (३-१-१३३)। 2. ಯಥಾರ್ಥ ಜ್ಞಾನವನ್ನು ಉಂಟುಮಾಡುವವನು, ಪ್ರಮಾಣಪೂರ್ವಕ ವಸ್ತುಸ್ಥಿತಿಯನ್ನು ತಿಳಿಸುವವನು. 3. (ಅದ್ವೈತಮತದಲ್ಲಿ) ಚಿತ್ತವೃತ್ತಿ ಪ್ರತಿಬಿಂಬಿತವಾದ ಚೈತನ್ಯ. 4. (ಸಾಂಖ್ಯ ಮತದಲ್ಲಿ) ಶುದ್ಧ ಚೇತನ.

**प्रमाथ ಪ್ರಮಾಥ** (पुं०) 1. ಕ್ಷೋಭೆ ಹೊಂದಿಸುವುದು, ಕಲಕುವುದು, ಚಾಂಚಲ್ಯವುಂಟುಮಾಡುವುದು. प्र + मथे (विलोडने) भावे "घञ्" (३-३-१८)। 2. ಕಡೆಗೋಲಿನಿಂದ ಕಡೆಯುವುದು. 3. ಹಿಂಸಿಸುವುದು, ಪೀಡಿಸುವುದು. 4. ವಧಿಸುವುದು, ಕೊಲ್ಲುವುದು. "सैनिकानां प्रमाथेन सत्यमोजायितं त्वया। जामदग्न्यस्य दमने न हि निर्बन्धमर्हति" उ० रा० ५-३१। 5. ಕೆಳಕ್ಕೆ ತಳ್ಳಿ ಉಜ್ಜುವುದು, -ತಿಕ್ಕುವುದು. "निपात्य पेषणं भूमौ प्रमाथ इति कथ्यते"।

**प्रमाथिन् ಪ್ರಮಾಥಿನ್** (वि०) 1. ಕ್ಷೋಭೆಯನ್ನು ಉಂಟುಮಾಡುವ, ಕಲಕುವ, ಚಾಂಚಲ್ಯವನ್ನು ಉಂಟುಮಾಡುವ. प्र + मथे (विलोडने) "घिनुण्" (३-२-१४५)। "चञ्चलं हि मनः कृष्ण प्रमाथि बलवद्दृढम्" गीता ६-३४। "इन्द्रियाणि प्रमाथीनि हरन्ति प्रसभं मनः" गीता २-६०। 2. ತುಂಡುಮಾಡುವ, ಕತ್ತರಿಸುವ. "चित्रीयमाणानतिलाघवेन प्रमाथिनस्तान् भवमार्गणानाम्" किरा० १७-३१। 3. ಕೆಳಕ್ಕೆ ತಳ್ಳುತ್ತಿರುವ, ತಳ್ಳಿ ಹರಿದುಹಾಕುತ್ತಿರುವ. "तस्य जातु मरुतः प्रतीपगाः वर्त्मसु ध्वजतरुप्रमाथिनः" रघु० ११-५८। 4. ಕೊಲ್ಲುವ, ವಧಿಸುವ. स्त्रियां "ङीप्" (४-१-६)। **प्रमाथिनी ಪ್ರಮಾಥಿನೀ.** "क्व रुजा हृदयप्रमाथिनी क्व च ते विश्वसनीयमायुधम्" माल० ३-२।

**प्रमाद ಪ್ರಮಾದ** (पुं०) 1. ಗಮನವಿಲ್ಲದಿರುವುದು, ಎಚ್ಚರಿಕೆಯಿಲ್ಲದಿರುವಿಕೆ, ಎಚ್ಚರ ತಪ್ಪುವುದು. प्र + मदी (हर्षग्लेपनयोः) भावे "घञ्" (३-३-१८)। "लोभप्रमादविश्वासैः पुरुषो नश्यते त्रिभिः"। 2. ಕರ್ತವ್ಯದಲ್ಲಿ ಅಲಕ್ಷ್ಯ ಮತ್ತು ಅಕರ್ತವ್ಯದಲ್ಲಿ ಪ್ರವೃತ್ತಿ. "अहन्यहन्यात्मन एव तावज्ज्ञातुं प्रमादस्खलितं न शक्यम्" शाकु० ६-२६। 3. ಅಪರಾಧ, ತಪ್ಪು. "प्रमादालस्यजाड्यानि स्थापितानि निजानि तैः" पञ्चतं० १-४०। 4. ಅಪಾಯ, ಅನರ್ಥ, ಕೇಡು. "अहो महान् प्रमादः प्रमादः" उ० रा० ३। 5. ಕುಡಿದು ಅಮಲೇರುವುದು. 6. ಹುಚ್ಚು ಹಿಡಿಯುವುದು.

**प्रमादवत् ಪ್ರಮಾದವತ್** (वि०) 1. ಎಚ್ಚರತಪ್ಪಿದವನು, ಗಮನವಿಲ್ಲದವನು. प्रमादोऽस्यास्ति "मतुप्" (५-२-१२७)। 2. ಕುಡಿದು ಅಮಲೇರಿದವನು. 3. ಹುಚ್ಚುಹಿಡಿದವನು, ಬುದ್ಧಿಭ್ರಮಣೆ ಹೊಂದಿದವನು. "इनिः" (५-२-११५)। **प्रमादिन् ಪ್ರಮಾದಿನ್.** "सर्वत्र प्रमादी वैधेयः" विक्र०। "प्रमादिनां तथा चौराः भिक्षुका गृहमेधिनाम्" पञ्चतं० १-१६७।

**प्रमाद्यत् ಪ್ರಮಾದ್ಯತ್** (वि०) ಎಚ್ಚರ ತಪ್ಪುತ್ತಿರುವ, ಮೈ ಮರೆಯುತ್ತಿರುವ. प्र + मदी (हर्षग्लेपनयोः) "शतृ" (३-२-१२४)। "उपायमास्थितस्यापि नश्यन्त्यर्थाः प्रमाद्यतः" माघ० २-८०।

**प्रमापण ಪ್ರಮಾಪಣ** (न०) ವಧಿಸುವುದು, ಕೊಲ್ಲುವುದು. प्र + मीञ् (हिंसायाम्) +णिच् "ल्युट्" (३-३-११५)।

**प्रमार्जत् ಪ್ರಮಾರ್ಜತ್** (वि०) 1. ಚೆನ್ನಾಗಿ ತೊಳೆಯುತ್ತಿರುವ, ಚೆನ್ನಾಗಿ ಶುದ್ಧಮಾಡುತ್ತಿರುವ. प्र + मृजू (शुद्धौ) "शतृ" (३-२-१२४)। 2. ಬಟ್ಟೆಯಿಂದ ಒರಸುತ್ತಿರುವ. वृद्धेरभावे **प्रमृजत् ಪ್ರಮೃಜತ್**. स्त्रियां "ङीप्" (४-१-६)। **प्रमृजती ಪ್ರಮೃಜತೀ, प्रमार्जती ಪ್ರಮಾರ್ಜತೀ.**

**प्रमार्जन ಪ್ರಮಾರ್ಜನ** (न०) 1. ಚೆನ್ನಾಗಿ ತೊಳೆಯುವುದು, ಚೆನ್ನಾಗಿ ಶುದ್ಧಮಾಡುವುದು. प्र + मृजू (शुद्धौ) भावे "ल्युट्" (३-३-११५)। 2. ಬಟ್ಟೆಯಿಂದ ಒರಸುವುದು. "म्रदीयसा स्नानजलस्य वाससा प्रमार्जनेनाधिकमुज्ज्वलीकृताः" नैष० १५-१४।

**प्रमार्जनीय ಪ್ರಮಾರ್ಜನೀಯ** (वि०) 1. ಚೆನ್ನಾಗಿ ತಿಕ್ಕಲ್ಪಡುವ, ಚೆನ್ನಾಗಿ ತೊಳೆಯಲ್ಪಡುವ, ಶುದ್ಧಮಾಡಲ್ಪಡುವ. 2. ಚೆನ್ನಾಗಿ ತೊಳೆಯಬೇಕಾದ. प्र + मृजू (शुद्धौ) कर्मादौ "अनीयर्" (३-१-९६)। 3. ಒರಸಲ್ಪಡುವ. "तव्यः"। **प्रमार्जितव्यम् ಪ್ರಮಾರ್ಜಿತವ್ಯಮ್, -मार्ष्टव्यम्-ಮಾರ್ಷ್ಟವ್ಯಮ್.**

**प्रमार्जित ಪ್ರಮಾರ್ಜಿತ** (वि०) 1. ಹೋಗಲಾಡಿಸಲ್ಪಟ್ಟ. "सर्वथा प्रमार्जितं त्वया प्रत्यादेशदुःखं शकुन्तलायाः" शाकु० ६। 2. ಒರಸಲ್ಪಟ್ಟ.

**प्रमित ಪ್ರಮಿತ** (वि०) 1. ಬಹಳ ಅಲ್ಪವಾದ, ಕೊಂಚವಾದ. प्र + माङ् (माने) "क्तः" (३-४-७२)। "परितः प्रमिताक्षरापि सर्वं विषयं व्याप्तवती गता प्रतिष्ठाम्" माघ० १६-८०। 2. ಎಲ್ಲರಿಗೂ ತಿಳಿದಿರುವ, ಪ್ರಸಿದ್ಧನಾದ. 3. ಪರಿಮಿತವಾದ, ಒಂದು ಅಳತೆಗೆ ಒಳಪಟ್ಟ.

**प्रमिताक्षरा ಪ್ರಮಿತಾಕ್ಷರಾ** (स्त्री०) ಹನ್ನೆರಡನೆಯ ಛಂದಸ್ಸಿನ ಒಂದು ವೃತ್ತ.

**प्रमिति ಪ್ರಮಿತಿ** (स्त्री०) 1. ಅಳತೆ. 2. ಪ್ರತ್ಯಕ್ಷಾದಿ ಪ್ರಮಾಣಗಳಿಂದ ಉಂಟಾದ ಜ್ಞಾನ. 3. ಪ್ರಮಾಣ, ಯಥಾರ್ಥ ಜ್ಞಾನವನ್ನುಂಟುಮಾಡುವ ಉಪಾಯ. प्र + माङ् (माने) "क्तिन्" (३-३-९४)।

**प्रमीढ ಪ್ರಮೀಢ** (वि०) 1. ದಟ್ಟವಾದ, ಘನವಾದ, ಒತ್ತಾಗಿ ಕೂಡಿಸಿದ. 2. ಮೂತ್ರರೋಗವುಳ್ಳವನು. प्र+मिह (स्नेहने) "क्तः" (३-४-७२)। "त्वग्दोषिणां प्रमीढानां स्निग्धाभिष्यन्दिबृंहिणाम्। शिशिरे लङ्घनं शस्तमपि वातविकारिणाम्" चरक० सूत्र० २२-२४।

**प्रमीत ಪ್ರಮೀತ** (वि०) 1. ಮರಣಹೊಂದಿದ. प्र+मीङ् (हिंसायाम्) "क्तः" (३-४-७२)। 2. ಯಜ್ಞಕ್ಕಾಗಿ ವಧಿಸಲ್ಪಟ್ಟ ಪಶು. प्र + मीञ् (हिंसायाम्) "क्तः" (३-२-१०२)। "प्रमीतं वाच्यलिङ्गं स्यात् प्रोक्षितेऽपि मृतेऽपि च" मेदि०।

**प्रमीति ಪ್ರಮೀತಿ** (स्त्री०) ಮರಣ, ಸಾವು. प्र + मीङ् (हिंसायाम्) "क्तिन्" (३-३-९४)।

**प्रमीला ಪ್ರಮೀಲಾ** (स्त्री०) 1. ಗಾಢನಿದ್ರೆ, ಮೈಮರೆತ ನಿದ್ದೆ. प्र + मील (निमेषणे) "अः" (३-३-१०३)। 2. ಆಲಸ್ಯ, ಯಾವ ಕೆಲಸದಲ್ಲೂ ಉತ್ಸಾಹವಿಲ್ಲದಿರುವುದು, ನಿರಾಸಕ್ತಿ. 3. ಶ್ರಮದ ಕಾರಣ ಕೆಲಸ ಮಾಡುವುದರಲ್ಲಿ ಸಾಮರ್ಥ್ಯವಿಲ್ಲದಿರುವುದು.

**प्रमुक्त ಪ್ರಮುಕ್ತ** (वि०) ಬಂಧನದಿಂದ ಬಿಡುಗಡೆ ಮಾಡಲ್ಪಟ್ಟ. प्र+मुच्लृ (मोक्षणे) "क्तः" (३-२-१०२)।

**प्रमुक्तवत् ಪ್ರಮುಕ್ತವತ್** (वि०) ಬಿಡುಗಡೆಮಾಡಿದವನು. प्र+मुच्लृ (मोक्षणे) "क्तवतुः" (३-२-१०२)।

**प्रमुख ಪ್ರಮುಖ** (पुं०) 1. ಪುನ್ನಾಗವೃಕ್ಷ, ಸುರಗಿಮರ, ಸುರಹೊನ್ನೆಮರ. प्रकृष्टं मुखमग्रभागो यस्य। 2. ಸಮೂಹ, ರಾಶಿ, ಗುಂಪು. 3. ಮರ್ಯಾದೆಯ ಮನುಷ್ಯ. (न०) 4. ತತ್ಕಾಲ, ವರ್ತಮಾನಕಾಲ, ಆಗಿನ ಕಾಲ. "तदात्वं प्रमुखम्" त्रिकाण्ड०। 5. ಮುಂಭಾಗ, ಎದುರು. "यानेव हत्वा न जिजीविषामस्तेऽवस्थिताः प्रमुखे धार्तराष्ट्राः" गीता २-६। (वि०) 6. ಶ್ರೇಷ್ಠ, ಉತ್ತಮ. "बलेषु प्रमुखो हस्ती न तथान्यो महीपतेः" हितो० ३-१२४। 7. ಪ್ರಧಾನ, ಮುಖ್ಯ. "ज्वलन्मणिशिखाश्चैनं वासुकिप्रमुखा निशि। स्थिरप्रदीपतामेत्य भुजङ्गाः पर्युपासते" कुमा० २-३८। 8. ಪ್ರಥಮ, ಮೊದಲಾದ. "नारदप्रमुखास्तस्यामन्तर्वेद्यां महात्मनः" भा० सभा० ३९-२। 9. ಮರ್ಯಾದೆಗೆ ಅರ್ಹನಾದ, ಗೌರವಕ್ಕೆ ಯೋಗ್ಯನಾದ. 10. ಅಭಿಮುಖವಾದ, ಎದುರಾಗಿರುವ.

**प्रमुग्ध ಪ್ರಮುಗ್ಧ** (वि०) 1. ಸೌಮ್ಯವಾದ, ಮನೋಹರವಾದ, ಸಂತೋಷವುಂಟುಮಾಡುವ. प्र + मुह (वैचित्ये)

"क्तः" (३-४-७२)। 2. ಅಜ್ಞ, ಪ್ರಜ್ಞಾಶೂನ್ಯನಾದ, ಮೈಮೇಲೆ ಎಚ್ಚರವಿಲ್ಲದ.

**प्रमुञ्चत् ಪ್ರಮುಂಚತ್** (ವಿ०) ಬಿಡುಗಡೆಮಾಡುತ್ತಿರುವ, ಬಂಧನದಿಂದ ತಪ್ಪಿಸುತ್ತಿರುವ. प्र + मुच्लृ (मोक्षणे) "शतृ" (३-२-१२४)। स्त्रियां "ङीप्" (४-१-६)। **-मुञ्चती-मुञ्चन्ती-ಮುಂಚತೀ-ಮುಂಚನ್ತೀ.** "शानच्" (३-२-१२४)। **-मुञ्चमानः-ಮುಂಚಮಾನಃ.**

**प्रमुद् ಪ್ರಮುದ್** (ವಿ०) 1. ಹರ್ಷಗೊಂಡ, ಸಂತೋಷಪಟ್ಟಿರುವ. प्रकृष्टा मुद् यस्य। (स्त्री०) 2. ಹರ್ಷ, ಆನಂದ, ಸಂತೋಷ. प्रकृष्टा मुत्। "श्रुत्वा तु पार्थिवस्यैतत् संवर्तः प्रमुदं गतः" भा०।

**प्रमुदित ಪ್ರಮುದಿತ** (ವಿ०) ಸಂತೋಷಪಟ್ಟಿರುವ. प्र+ मुद (हर्षे) "क्तः" (३-४-७२)। "प्रमुदितवरपक्षमेकतस्तत्क्षितिपतिमण्डलमन्यतो वितानम्" रघु० ६-८६।

**प्रमुदितवदना ಪ್ರಮುದಿತವದನಾ** (स्त्री०) ಸಮವೃತ್ತದ ಹನ್ನೆರಡನೆಯ ಛಂದಸ್ಸಿನ ಒಂದು ವೃತ್ತ, ನಗಣದ್ವಯ ರಗಣದ್ವಯಗಳುಳ್ಳ ವೃತ್ತ. **ಲಕ್ಷಣ:** "प्रमुदितवदना भवेन्नौ ररौ" वृ० र०। **ಗಣವಿನ್ಯಾಸ:**

न न र र।
III III UIU UIU

**प्रमुषित ಪ್ರಮುಷಿತ** (ವಿ०) 1. ಕದಿಯಲ್ಪಟ್ಟ, ಅಪಹರಿಸಲ್ಪಟ್ಟ. प्र + मुष (स्तेये) "क्तः" (३-२-१०२)। "परामृशन् कठिनकठोरकामिनीकुचस्थलप्रमुषितचन्दनं पृथुः" माघ० १७-११। 2. ಬೇರೆ ಕಡೆಗೆ ತಿರುಗಿಸಲ್ಪಟ್ಟ, ವಿಕ್ಷೇಪವುಂಟುಮಾಡಲ್ಪಟ್ಟ (ಜ್ಞಾನ).

**प्रमुषितवत् ಪ್ರಮುಷಿತವತ್** (ವಿ०) ಅಪಹರಿಸಿದವನು.

**प्रमुष्णत् ಪ್ರಮುಷ್ಣತ್** (ವಿ०) ಅಪಹರಿಸುತ್ತಿರುವ, ಕದಿಯುತ್ತಿರುವ. प्र+मुष (स्तेये) "शतृ" (३-२-१२४)। स्त्रियां "ङीप्" (४-१-६)। **-मुष्णती -ಮುಷ್ಣತೀ.**

**प्रमृष्ट ಪ್ರಮೃಷ್ಟ** (ವಿ०) ಹೋಗಲಾಡಿಸಲ್ಪಟ್ಟ, ತೊಡೆದುಹಾಕಲ್ಪಟ್ಟ, ತೊಳೆಯಲ್ಪಟ್ಟ. प्र+मृजू (शुद्धौ) "क्तः" (३-२-१०२)। "येन श्रियः संश्रयदोषरूढं स्वभावलोलेत्ययशःप्रमृष्टम्" रघु० ६-४१।

**प्रमृष्टवत् ಪ್ರಮೃಷ್ಟವತ್** (ವಿ०) ಹೋಗಲಾಡಿಸಿದವನು, ತೊಳೆದುಹಾಕಿದವನು. प्र + मृजू (शुद्धौ) "क्तवतुः" (३-२-१०२)।

**प्रमेय ಪ್ರಮೇಯ** (ವಿ०) 1. ತತ್ತ್ವತಃ ತಿಳಿಯಲ್ಪಡುವ ವಿಷಯ. प्रमीयते— प्र + माङ् (माने) कर्म० "यत्" (३-१-९७)। "योऽर्थः तत्त्वतः प्रमीयते तत्प्रमेयम्"। ಯಥಾರ್ಥಜ್ಞಾನಕ್ಕೆ ವಿಷಯವಾದುದು ಪ್ರಮೇಯ. "प्रमाविषयत्वं प्रमेयत्वम्"। ಪ್ರತ್ಯಕ್ಷಾದಿ ಪ್ರಮಾಣದಿಂದ ತಿಳಿಸಲ್ಪಡುವ ವಿಷಯ. प्रमाणप्रतिपाद्योऽर्थः। 2. ಪರಬ್ರಹ್ಮ. ಮೋಕ್ಷಾಕಾಂಕ್ಷಿಗಳಿಂದ ಚೆನ್ನಾಗಿ ತಿಳಿಯಲ್ಪಡುವ ಪರಮಾತ್ಮ. निःश्रेयसार्थिभिः प्रकर्षेण मेयम्। ಯಾವುದರ ಭ್ರಮೆಯಿಂದ ಈ ಸಂಸಾರದಲ್ಲಿ ತೊಳಲುತ್ತಿರುವೆವೋ ಯಾವುದರ ತತ್ತ್ವಜ್ಞಾನದಿಂದ ಈ ಸಂಸಾರವನ್ನು ತೊಳೆದುಕೊಳ್ಳುವೆವೋ ಅದೇ ಪ್ರಮೇಯ (ಪರಬ್ರಹ್ಮ). 3. (ನ್ಯಾಯಮತದಲ್ಲಿ) ಹನ್ನೆರಡು ವಿಧ ಪ್ರಮೇಯಗಳು. (1) आत्मा (2) शरीरम् (3) इन्द्रियम् (4) अर्थः (5) बुद्धिः (6) मनः (7) प्रवृत्तिः (8) दोषः (9) प्रेत्यभावः (10) फलम् (11) दुःखम् ಮತ್ತು (12) अपवर्गः। 4. ಅಳೆಯಲ್ಪಡುವ. 5. ಅಳೆಯಲು ಯೋಗ್ಯವಾದ. 6. ಅಳೆಯಲು ಶಕ್ಯವಾದ. 7. ತಿಳಿಯಲ್ಪಡುವ. 8. ತಿಳಿಯಲು ಯೋಗ್ಯವಾದ. 9. ತಿಳಿಯಲು ಶಕ್ಯವಾದ.

**प्रमेह ಪ್ರಮೇಹ** (ಪುं०) ಒಂದು ವಿಧ ವ್ಯಾಧಿ, ಶುಕ್ರಧಾತುವು ಯಾವಾಗಲೂ ಸ್ರವಿಸುವ ಒಂದು ರೋಗ. प्रकर्षेण मेहति क्षरति वीर्यादिरनेन — प्र+मिह (सेचने) कर० "घञ्" (३-३-१२१)।

**प्रमोक्तव्य ಪ್ರಮೋಕ್ತವ್ಯ** (ವಿ०) 1. ಬಿಡುಗಡೆಮಾಡಲ್ಪಡುವ. 2. ಬಿಡುಗಡೆ ಮಾಡಬೇಕಾದ. 3. ಬಿಡುಗಡೆ ಮಾಡಲು ಅರ್ಹನಾದ. प्र + मुच्लृ (मोक्षणे) "तव्यः" (३-१-९६)। "अनीयर्" (३-१-९६)। **-मोचनीयः -ಮೋಚನೀಯಃ.**

**प्रमोक्ष ಪ್ರಮೋಕ್ಷ** (ಪುं०) ಬಂಧನದಿಂದ ಬಿಡುಗಡೆ.

**प्रमोचन ಪ್ರಮೋಚನ** (ನं०) 1. ಸಂಪೂರ್ಣವಾಗಿ ಬಿಡುಗಡೆ ಮಾಡುವುದು. प्र + मुच्लृ (मोक्षणे) भावे "ल्युट्" (३-३-११५)। 2. ಹೊರಗೆ ಕಳುಹಿಸುವುದು, ಹೊರಗೆ ಹೊರಡಿಸುವುದು. (स्त्री०) **-मोचनी -ಮೋಚನೀ.** 3. ಬುಡುಮೆಯ ಗಿಡ. प्रकर्षेण मुच्यतेऽनया — प्र + मुच्लृ (मोक्षणे) "ल्युट्" (३-३-११७)। "ङीप्" (४-१-१५)।

**प्रमोद ಪ್ರಮೋದ** (ಪುं०) 1. ಆನಂದ, ಹರ್ಷ, ಸಂತೋಷ. प्र + मुद (हर्षे) "घञ्" (३-३-१८)। "पुण्येन नाल्पेकत

लोकपाल: प्रमोदबाष्पावृतनेत्रमाल:" नैष० ३-२८। 2. ಆಮೋದ, ಸುವಾಸನೆ. "अश्विनोरोषधीनाञ्च घ्राणो मोदप्रमोदयो:" भाग० २-६-२। 3. ಸಾಂಖ್ಯಮತದಲ್ಲಿ ಉಕ್ತವಾದ ಮುಖ್ಯವಾದ ಸಿದ್ಧಿಗಳಲ್ಲೊಂದು. "तिस्रश्च मुख्या: सिद्धय: प्रमोदमुदितमोदमाना:" सां० तत्त्वकौ०।

**प्रमोदन ಪ್ರಮೋದನ** (पुं०) 1. ವಿಷ್ಣು. ತನ್ನ ಧ್ಯಾನಾಸಕ್ತರಾದ ಭಕ್ತರನ್ನು ಸಂತೋಷಗೊಳಿಸುವುದರಿಂದ ಪರಮಾತ್ಮನು ಪ್ರಮೋದನ. स्वसम्बन्धिन: तत्प्रथमानुसन्धानेन प्रमोदयति प्रहर्षयति—प्र+मुद (हर्षे) + णिच् "ल्यु:" (३-१-१३४)। "ध्यानासक्तेषु भक्तेषु मोदमान: प्रमोदन:" इति निरुक्ति:। "जितामित्र: प्रमोदन:" वि० स०। (न०) 2. ಆನಂದಪಡುವುದು, ಸಂತೋಷಪಡುವುದು. भावे "ल्युट्" (३-३-११५)। 3. ಆನಂದಪಡಿಸುವುದು, ಸಂತೋಷಪಡಿಸುವುದು. प्र+मुद+णिच् भावे "ल्युट्"। (वि०) 4. ಆನಂದಪಡಿಸುವ, ಸಂತೋಷವುಂಟುಮಾಡುವ. प्र + मुद + णिच् "ल्यु:" (३-१-१३४)।

**प्रमोदयत् ಪ್ರಮೋದಯತ್** (वि०) ಸಂತೋಷವುಂಟುಮಾಡುತ್ತಿರುವ, ಆನಂದಪಡಿಸುತ್ತಿರುವ. प्र+मुद (हर्षे) + णिच् "शतृ" (३-२-१२४)। "प्रमोदयन्नथ मुखरान् कलापिन: प्रतिष्ठते नवघनवद्रथ: स्म स:" माघ० १९-२९। स्त्रियां "ङीप्" (४-१-६)। **–मोदयन्ती –ಮೋದಯನ್ತೀ.**

**प्रमोदयितृ ಪ್ರಮೋದಯಿತೃ** (वि०) ಸಂತೋಷವುಂಟುಮಾಡುವ. प्र+मुद (हर्षे) +णिच् "तृच्" (३-१-१३३)। स्त्रियां "ङीप्" (४-१-५) **–यित्री –ಯಿತ್ರೀ.**

**प्रमोदित ಪ್ರಮೋದಿತ** (वि०) 1. ಸಂತೋಷವುಂಟಾಗಿರುವ. प्रमोदोऽस्य सञ्जात: "इतच्" (५-२-३६)। 2. ಸಂತೋಷಪಡಿಸಲ್ಪಟ್ಟ, ಆನಂದಗೊಳಿಸಲ್ಪಟ್ಟ. 3. ಹೆಚ್ಚು ವಾಸನೆಯುಂಟುಮಾಡಲ್ಪಟ್ಟ, ಪರಿಮಳವುಂಟುಮಾಡಲ್ಪಟ್ಟ. प्र+मुद (हर्षे) + णिच् "क्त:" (३-२-१०२)। "बन्धाढ्यनानारतमल्लयुद्धप्रमोदितै: केलिवने मरुद्भि:" नैष० ३-१२४।

**प्रमोदिन् ಪ್ರಮೋದಿನ್** (वि०) 1. ಹರ್ಷದಿಂದ ಕೂಡಿದ. ಸಂತೋಷವುಳ್ಳ. प्रमोदोऽस्यास्ति "इनि:" (५-२-११५)। 2. ಹರ್ಷವನ್ನುಂಟುಮಾಡುವ, ಆನಂದಪಡಿಸುವ. प्रमोदयति—प्र+मुद (हर्षे) +णिच् "णिनि:" (३-१-१३४)।

**प्रमोषण ಪ್ರಮೋಷಣ** (न०) 1. ಕದಿಯುವುದು, ಅಪಹರಿಸುವುದು. प्र+मुष (स्तेये) भावे "ल्युट्" (३-३-११५)। 2. ಹೋಗಲಾಡಿಸುವುದು, ತೊಡೆದುಹಾಕುವುದು.

**प्रमोषणीय ಪ್ರಮೋಷಣೀಯ** (वि०) 1. ಅಪಹರಿಸಲ್ಪಡುವ. 2. ಅಪಹರಿಸಬೇಕಾದ. 3. ಅಪಹರಿಸಲು ಅರ್ಹವಾದ. प्र+मुष (स्तेये) "अनीयर्" (३-१-९६)। "तव्य:"। **–मोषितव्यम् –ಮೋಷಿತವ್ಯಮ್.**

**प्रमोह ಪ್ರಮೋಹ** (पुं०) ಸರಿಯಾದ ಜ್ಞಾನವಿಲ್ಲದಿರುವುದು, ಮಂಕು ಹಿಡಿದಿರುವುದು. प्र + मुह (वैचित्ये) "घञ्" (३-३-१८)। "प्रसरति परिमाथी कोऽप्ययं देहदाहस्तिरयति करणानां ग्राहकत्वं प्रमोह:" मालती० १-४४।

**प्रमोहन ಪ್ರಮೋಹನ** (न०) ಮೋಹಗೊಳಿಸುವುದು, ಮಂಕು ಹಿಡಿಸುವುದು. प्र + मुह (वैचित्ये) + णिच् भावे "ल्युट्" (३-३-११५)।

**प्रम्लान ಪ್ರಮ್ಲಾನ** (वि०) 1. ಚೆನ್ನಾಗಿ ಬಾಡಿಹೋಗಿರುವ, ಕಾಂತಿಹೀನವಾದ. प्र+म्लै (हर्षक्षये) "क्त:" (३-४-७२)। नत्वं (८-२-४३)। 2. ಕಳೆಗುಂದಿರುವ, ಸತ್ತ್ವವಿಲ್ಲದ, ಹರ್ಷವಿಲ್ಲದ.

**प्रयच्छत् ಪ್ರಯಚ್ಛತ್** (वि०) 1. ಕೊಡುತ್ತಿರುವ, ನೀಡುತ್ತಿರುವ. प्र + दाण् (दाने) "शतृ" (३-२-१२४)। दाणो यच्छादेश: (७-३-७८)। "प्रयच्छतोच्चै: कुसुमानि मानिनी विपक्षगोत्रं दयितेन लम्भिता" किरा० ८-१४। 2. ತಡೆಯುತ್ತಿರುವ, ಅಂಕೆಯಲ್ಲಿಡುತ್ತಿರುವ. प्र + यम (उपरमे) "शतृ" (३-२-१२४) "छ:" (७-३-७७)।

**प्रयत् ಪ್ರಯತ್** (वि०) ಹೊಂದುತ್ತಿರುವ, ಚೆನ್ನಾಗಿ ಪಡೆಯುತ್ತಿರುವ. प्र+इण् (गतौ) "शतृ" (३-२-१२४)। "प्रयत: प्रशमं हुताशनस्य क्वचिदालक्ष्यत मुक्तमूलमर्चि:" माघ० २०-७३।

**प्रयत ಪ್ರಯತ** (वि०) 1. ಪವಿತ್ರನಾದ, ಪರಿಶುದ್ಧನಾದ. प्र+यती (प्रयत्ने) "अच्" (३-१-१३४)। 2. ನಮ್ರ, ವಿನೀತ. "इक्ष्वाकुवंशगुरवे प्रयत: प्रणम्य सभ्रातरं भरतमर्घ्यपरिग्रहान्ते" रघु० १३-७०। 3. ಜಿತೇಂದ್ರಿಯನಾದ, ಇಂದ್ರಿಯನಿಗ್ರಹವುಳ್ಳ. प्र + यम (उपरमे) "क्त:" (३-४-७२)। "निर्दिष्टां कुलपतिना स पर्णशालामध्यास्य प्रयतपरिग्रहद्वितीय:" रघु० १-९५। "तस्मै हिमाद्रे: प्रयतां तनूजां यतात्मने रोचयितुं यतस्व" कुमा० ३-१६। 4. ತಡೆದಿರುವ, ಅಂಕೆಯಲ್ಲಿಟ್ಟಿರುವ. 5. ಪ್ರಯತ್ನದಿಂದ ಕೂಡಿದ, ಪ್ರಯತ್ನಪಟ್ಟಿರುವ.

**प्रयतन ಪ್ರಯತನ** (न०) ಪ್ರಯತ್ನಪಡುವುದು. प्र+यती (प्रयत्ने) भावे "ल्युट्" (३-३-११५)।

**प्रयतनीय ಪ್ರಯತನೀಯ**(ವಿಂ) 1. ಪ್ರಯತ್ನಿಸಬೇಕಾದ. 2. ಪ್ರಯತ್ನಪಡಬಹುದಾದ. प्र + यती (प्रयत्ने) "अनीयर्" (३-१-९६)। "तव्यः"। **–यतितव्यम् –ಯತಿತವ್ಯಮ್.**

**प्रयतमान ಪ್ರಯತಮಾನ**(ವಿಂ) ಪ್ರಯತ್ನಪಡುತ್ತಿರುವ. प्र + यती (प्रयत्ने) "शानच्" (३-२-१२४)। "या न ययौ प्रियमन्यवधूभ्यः सारतरागमना यतमानम्" माघ० ४-४५।

**प्रयतवत् ಪ್ರಯತವತ್**(ವಿಂ) ತಡೆದಿರುವ, ಅಂಕೆಯಲ್ಲಿಟ್ಟಿರುವ. प्र + यम (उपरमे) "क्तवतु:" (३-२-१०२)।

**प्रयत्त ಪ್ರಯತ್ತ** (ವಿಂ) 1. ಪ್ರಯತ್ನಪಟ್ಟಿರುವ. प्र + यती (प्रयत्ने) "क्तः" (३-४-७२)। 2. ಸಿದ್ಧವಾಗಿರುವ, ಸಜ್ಜಾಗಿರುವ.

**प्रयत्न ಪ್ರಯತ್ನ** (ಪುಂ) 1. ಸರಿಯಾದ ಯತ್ನ, ಸರಿಯಾದ ಉದ್ಯಮ. प्र + यती (प्रयत्ने) "नङ्" (३-३-९०)। "तस्येदं विपुलं विधेर्विलसितं पुंसां प्रयत्नच्छिदः" मुद्रा० ५-२०। 2. ಹೆಚ್ಚು ಶ್ರಮ. "तदेष कथमनुपतत एव मे प्रयत्नप्रेक्षणीयः संवृत्तः" शाकु० १। 3. ಫಲಪ್ರಾಪ್ತಿಗಾಗಿ ಬಹಳ ತ್ವರೆಯಿಂದ ನಡಸುವ ಕಾರ್ಯ. ಫಲಾಪೇಕ್ಷೆಯಿಂದ ಪ್ರಾರಂಭಿಸಲ್ಪಟ್ಟ ಕಾರ್ಯಕ್ಕೆ ಫಲಪ್ರಾಪ್ತಿಯ ವರೆಗೂ ಐದು ಅವಸ್ಥೆಗಳುಂಟು. (1) आरम्भः (2) यत्नः (3) प्राप्त्याशा (4) नियताप्तिः ಮತ್ತು (5) फलागमः। ಎರಡನೆಯ ಅವಸ್ಥೆಯೇ ಪ್ರಯತ್ನವಾಗುವುದು. "प्रयत्नस्तु फलावाप्तौ व्यापारोऽतित्वरान्वितः" सा० द० ६-७२।

**प्रयत्नवत् ಪ್ರಯತ್ನವತ್** (ವಿಂ) ಪ್ರಯತ್ನವುಳ್ಳವನು, ಸರಿಯಾದ ಉದ್ಯಮವುಳ್ಳವನು. प्रयत्नोऽस्त्यस्य "मतुप्" (५-२-९४)।

**प्रयन्तव्य ಪ್ರಯನ್ತವ್ಯ** (ವಿಂ) 1. ಅಂಕೆಯಲ್ಲಿಡಲ್ಪಡುವ, ನಿಗ್ರಹಿಸಲ್ಪಡುವ. 2. ನಿಗ್ರಹಿಸಬೇಕಾದ, ಹತೋಟಿಯಲ್ಲಿಡಬೇಕಾದ. प्र + यम (उपरमे) "तव्यः" (३-१-९६)। "अनीयर्"। **–यमनीयः –ಯಮನೀಯಃ.**

**प्रयमन ಪ್ರಯಮನ**(ನಂ) ಅಂಕೆಯಲ್ಲಿಡುವುದು, ಹತೋಟಿಯಲ್ಲಿಡುವುದು. प्र + यम (उपरमे) भावे "ल्युट्" (३-३-११५)।

**प्रयसन ಪ್ರಯಸನ** (ನಂ) 1. ಪ್ರಯತ್ನ. प्र + यसु (प्रयत्ने) भावे "ल्युट्" (३-३-११५)। 2. ಆಯಾಸ, ಶ್ರಮ, ಬಳಲಿಕೆ.

**प्रयसनीय ಪ್ರಯಸನೀಯ** (ವಿಂ) 1. ಯತ್ನಿಸಲ್ಪಡುವ. 2. ಯತ್ನಿಸಬೇಕಾದ. 3. ಯತ್ನಿಸಲು ಅರ್ಹವಾದ. प्र + यसु (प्रयत्ने) कर्मणि "अनीयर्" (३-१-९६)। "तव्यः" (३-१-९६)। **–यसितव्यम् –ಯಸಿತವ್ಯಮ್.**

**प्रयस्त ಪ್ರಯಸ್ತ** (ವಿಂ) 1. ಬಹಳ ಕಷ್ಟದಿಂದ ಮಾಡಲ್ಪಟ್ಟ. प्र + यसु (प्रयत्ने) "क्तः" (३-२-१०२)। 2. ಸಂಬಾರದ ವಸ್ತುಗಳನ್ನು ಸೇರಿಸಿ ಸಂಸ್ಕರಿಸಲ್ಪಟ್ಟ ವ್ಯಂಜನ. 3. ಬಹಳ ಶ್ರಮದಿಂದ ಮಾಡಲ್ಪಟ್ಟ.

**प्रयस्यत् ಪ್ರಯಸ್ಯತ್** (ವಿಂ) ಪ್ರಯತ್ನಪಡುತ್ತಿರುವ. प्र + यसु (प्रयत्ने) "शतृ" (३-२-१२४)। स्त्रियां "ङीप्" (४-१-६)। **–यस्यन्ती –ಯಸ್ಯನ್ತೀ.**

**प्रयाग ಪ್ರಯಾಗ** (ಪುಂ) 1. ಒಂದು ಪುಣ್ಯತೀರ್ಥ, ಪುಣ್ಯಕ್ಷೇತ್ರ. ಈ ಪುಣ್ಯಕ್ಷೇತ್ರವು ಈಗಿನ ಅಲಹಾಬಾದಿನ ಸಮೀಪದಲ್ಲಿರುವುದು. 2. ಒಂದು ಯಾಗ. प्रकृष्टो यागः। 3. ಇಂದ್ರ. प्रकृष्टा यागा यस्मात्। 4. ಅಶ್ವ, ಕುದುರೆ. "प्रयागस्तीर्थभेदे स्याद्यज्ञे शतमखाश्वयोः" मेदि०।

**प्रयागभय ಪ್ರಯಾಗಭಯ** (ಪುಂ) ಇಂದ್ರ. प्रयागात् प्रकृष्टयागकारिणो बिभेति — बि भी (भये) "अच्" तस्य (वा० ३-३-५६)। ಇತರರು ಯಾಗಮಾಡುವುದರಿಂದ ಪದವಿಗೆ ಚ್ಯುತಿಯುಂಟಾಗುವುದೆಂದು ಇಂದ್ರನಿಗೆ ಭಯ.

**प्रयाचन ಪ್ರಯಾಚನ** (ನಂ) ಬೇಡುವುದು, ಕೇಳಿಕೊಳ್ಳುವುದು. प्र+टु याचृ (याच्ञायाम्) "ल्युट्" (३-३-११५)।

**प्रयाचनीय ಪ್ರಯಾಚನೀಯ** (ವಿಂ) 1. ಬೇಡಲ್ಪಡುವ, ಯಾಚಿಸಲ್ಪಡುವ. प्र+याचृ (याच्ञायाम्) "अनीयर्" (३-१-९६)। 2. ಯಾಚಿಸಬೇಕಾದ. 3. ಯಾಚಿಸಲು ಅರ್ಹವಾದ. "तव्यः"। **–याचितव्यः –ಯಾಚಿತವ್ಯಃ.**

**प्रयाचित ಪ್ರಯಾಚಿತ** (ವಿಂ) ಬೇಡಲ್ಪಟ್ಟ, ಯಾಚಿಸಲ್ಪಟ್ಟ. प्र + याचृ (याच्ञायाम्) "क्तः" (३-२-१०२)।

**प्रयाण ಪ್ರಯಾಣ** (ನಂ) 1. ಗಮನ, ಹೊರಡುವುದು, ಹೊರಟುಬರುವುದು. प्र + या (प्रापणे) "ल्युट्" (३-३-११५)। "प्रयाणकालोचितचारुवेषभृद्धजं वहन् पर्वतपक्षदारणम्" कुमा० १४-५। 2. ಯಾತ್ರೆ, ಪರಸ್ಥಳಕ್ಕೆ ಹೊರಟುಬರುವುದು. "दृष्टिप्रपातं परिहृत्य तस्य कामः पुरःशुक्रमिव प्रयाणे" कुमा० ३-४३।

**प्रयात्(न्) ಪ್ರಯಾತ್(ನ್)** (ವಿಂ) ಹೋಗುತ್ತಿರುವ, ಪ್ರಯಾಣಮಾಡುತ್ತಿರುವ. प्र + या (प्रापणे) "शतृ" (३-२-१२४)। "पतिं प्रयान्तं पृतनास्तमन्वयुः" कुमा० १५-९। स्त्रियां "ङीप्" (४-१-६)। **–यान्ती**

–ಯಾನ್ತೀ. "प्रयान्ती पृतना सद्यः प्रणादैर्व्योमपूरयत्" याद० २२-६१।

**प्रयात ಪ್ರಯಾತ** (पुं०) 1. ಭೃಗು, ಪ್ರಪಾತ, ಬೆಟ್ಟದ ಕಮರಿ. (न०) 2. ಪ್ರಯಾಣ, ಹೊರಟುಬರುವುದು. प्र+या (प्रापणे) भावे "क्तः" (३-३-११४)। 3. ನಡಿಗೆ, ಗಮನ. "सरित इव सविभ्रमप्रयातप्रणदितहंसकभूषणा विरेजुः" माघ० ७-२३। (वि०) 4. ಹೊರಟಿರುವ. प्र+या कर्त० "क्तः" (३-४-७२)। "प्राचीं प्रयाते विरहाद्दयं ते तापाच्च रूपाच्च शशाङ्कशङ्की" नैष० ८-६२। 5. ಹೊಂದಿರುವ, ಪಡೆದಿರುವ. "प्रयातस्तव यम्यत्वं शस्त्रपूतो ब्रवीमि ते" भट्टि० ६-४९। 6. ಪ್ರಯಾಣದಿಂದ ಹೊಂದಲ್ಪಟ್ಟ. कर्म० "क्तः" (३-२-१०२)।

**प्रयातवत् ಪ್ರಯಾತವತ್** (वि०) ಹೊರಟಿರುವ, ಹೋಗುವ. प्र+या(प्रापणे) "क्तवतुः" (३-२-१०२)।

**प्रयातव्य ಪ್ರಯಾತವ್ಯ** (वि०) 1. ಅವಶ್ಯವಾಗಿ ಹೋಗಬೇಕಾದ, ಹೊರಟುಬರಬೇಕಾದ. प्र+या (प्रापणे) "तव्यः" (३-१-९६)। 2. ಯುದ್ಧಕ್ಕಾಗಿ ಅಭಿಮುಖವಾಗಿ ಹೋಗಿ ಹೋರಾಡಬೇಕಾದ (ಶತ್ರು). "अनीयर्"। –यानीयः –ಯಾಣೀಯಃ.

**प्रयातृ ಪ್ರಯಾತೃ** (वि०) ಹೊರಡುವವನು, ಪ್ರಯಾಣ ಮಾಡುವವನು. प्र+या (प्रापणे) "तृच्"(३-१-१३३)।

**प्रयाम ಪ್ರಯಾಮ** (पुं०) 1. ದೈರ್ಘ್ಯ, ಉದ್ದ, ನೀಳ. प्र+यम (उपरमे) "घञ्" (३-३-१८)। 2. ಆಹಾರ ಧಾನ್ಯಗಳ ಕೊರತೆ. 3. ಆಹಾರಧಾನ್ಯಗಳ ಕೊರತೆಯಿಂದ ಕೊಳ್ಳುವವರ ಪೈಪೋಟಿ. "नीवाकस्तु प्रयामः स्यात्" अम०।

**प्रयास ಪ್ರಯಾಸ** (पुं०) 1. ಪ್ರಯತ್ನ. प्र+यसु (प्रयत्ने) भावे "घञ्" (३-३-१८)। "प्रयासः सुरशत्रूणां जात्युत्तरमिवाभवत्" याद० १६-९६। 2. ಆಯಾಸ, ಶ್ರಮ, ಹೆಚ್ಚು ಬಳಲಿಕೆ. "अत्याहारः प्रयासश्च प्रजल्पो नियमग्रहः। जनसंघश्च लौल्यं च षड्भिर्योगो विनश्यति" हठ०।

**प्रयास्यत् ಪ್ರಯಾಸ್ಯತ್** (वि०) ಹೊರಟುಬರಲಿರುವ, ಮುಂದೆ ಹೋಗಲಿರುವ. प्र+या (प्रापणे)+स्य "शतृ" (३-२-१२४)। "प्रयास्यतः पुण्यवनाय जिष्णो रामस्य रोचिष्णुमुखस्य धृष्णुः" भट्टि० १-२५।

**प्रयुक्त ಪ್ರಯುಕ್ತ** (वि०) 1. ಪ್ರಯೋಗಿಸಲ್ಪಟ್ಟ, ಉಪಯೋಗಿಸಲ್ಪಟ್ಟ (ಶಬ್ದ). प्र+युजिर् (योगे) "क्तः" (३-२-१०२)। "अयमपि च गिरं नस्त्वत्प्रबोधप्रयुक्तामनुवदति शुकस्ते मञ्जुवाक्पञ्जरस्थः" रघु० ५-७५। 2. ಕಳುಹಿಸಲ್ಪಟ್ಟ. "अध्यापितस्योशनसापि नीतिं प्रयुक्तरागप्रणिधिर्द्विषस्ते" कुमा० ३-६। 3. ಪ್ರಯೋಗಿಸಲ್ಪಟ್ಟ, ಬಿಡಲ್ಪಟ್ಟ (ಬಾಣ). "अलं महीपाल तव श्रमेण प्रयुक्तमप्यस्त्रमितो वृथा स्यात्" रघु० २-३४। 4. ಮಾಡಲ್ಪಟ್ಟ. "प्रयुक्तसत्कारविशेषमात्मना न मां परं संप्रतिपत्तुमर्हति" कुमा० ५-३१। 5. ನೆರವೇರಿಸಲ್ಪಟ್ಟ. "प्रयुक्तपाणिग्रहणं यदन्यद्वधूवरं पुष्यति कान्तिमग्र्याम्" कुमा० ७-७२। 6. ಪ್ರೇರಿಸಲ್ಪಟ್ಟ, ಮುಂದಕ್ಕೆ ಹೋಗುವಂತೆ ಮಾಡಲ್ಪಟ್ಟ. "प्रयुक्तैरग्रतो नागैः प्रावृषेण्यैरिवाम्बुदैः" याद० २२-२००। 7. ಪ್ರೇರಿಸಲ್ಪಟ್ಟ, ಒತ್ತಾಯಪಡಿಸಲ್ಪಟ್ಟ. "अथावमानेन पितुः प्रयुक्ता दक्षस्य कन्या भवपूर्वपत्नी" कुमा० १-२१। 8. ಒತ್ತಾಗಿ ಸೇರಿಸಲ್ಪಟ್ಟ, ದಟ್ಟವಾಗಿ ಮಾಡಲ್ಪಟ್ಟ. प्रकर्षेण युक्तम्। 9. ಆಡಿಸಲ್ಪಟ್ಟ, ಅಲುಗಾಡಿಸಲ್ಪಟ್ಟ. "मरुत्प्रयुक्ताश्च मरुत्सखाभं तमर्च्यमारादभिवर्तमानम्" रघु० २-१०। 10. ಆಚರಿಸಲ್ಪಟ್ಟ, ನಡೆಸಲ್ಪಟ್ಟ. "प्रसह्य योऽस्मासु परैः प्रयुक्तः स्मर्तुं न शक्यः किमुताधिकर्तुम्" किरा० ३-४४। 11. ಬಡ್ಡಿಯ ಸಂಪಾದನೆಗಾಗಿ ಸಾಲ ಕೊಡಲ್ಪಟ್ಟ. 12. ಸಮಾಧಿಯಲ್ಲಿ ಕುಳಿತಿರುವ. प्र+युज (समाधौ) "क्तः" (३-४-७२)। 13. ಚೆನ್ನಾಗಿ ಕೂಡಿಕೊಂಡಿರುವ, ಸರಿಯಾಗಿ ಸೇರಿಕೊಂಡಿರುವ. "गुणप्रयुक्ताः परमर्मभेदिनः शरा इवावंशभवा भवन्ति" उद्भ०। 14. ಉಂಟಾಗಿರುವ, ಏರ್ಪಟ್ಟಿರುವ, ಸಂಭವಿಸಿರುವ. "अपायसंदर्शनजां विपत्तिमुपायसंदर्शनजां च सिद्धिम्। मेधाविनो नीतिगुणप्रयुक्तां पुरः स्फुरन्तीमिव दर्शयन्ति" पञ्चतं० १-६५। (न०) 15. ಹೇತು, ಕಾರಣ, ನಿಮಿತ್ತ.

**प्रयुक्तवत् ಪ್ರಯುಕ್ತವತ್** (वि०) 1. (ಪದವನ್ನು) ಪ್ರಯೋಗಿಸಿದವನು, (ಶಬ್ದವನ್ನು) ಉಪಯೋಗಿಸಿದವನು. 2. (ಬಾಣವನ್ನು) ಪ್ರಯೋಗಿಸಿದವನು. 3. ಕಳುಹಿಸಿದವನು. 4. ಪ್ರೇರಿಸಿದವನು, ಮುಂದಕ್ಕೆ ಹೋಗುವಂತೆ ಮಾಡಿದವನು. 5. ಒತ್ತಾಯಪಡಿಸಿದವನು. 6. ಬಡ್ಡಿಗಾಗಿ ಸಾಲ ಕೊಟ್ಟವನು. प्र+युजिर् (योगे) "क्तवतुः" (३-२-१०२)।

**प्रयुक्ति ಪ್ರಯುಕ್ತಿ** (स्त्री०) 1. ಪ್ರಯೋಗಿಸುವುದು, ಉಪಯೋಗಿಸುವುದು. 2. ಬಡ್ಡಿಗಾಗಿ ಸಾಲ ಕೊಡುವುದು. 3. ಪ್ರೇರಿಸುವುದು, ಹುರಿದುಂಬಿಸುವುದು. 4. ಒತ್ತಾಯಪಡಿಸುವುದು. 5. ಕಳುಹಿಸುವುದು. 6. (ಬಾಣವನ್ನು)

ಪ್ರಯೋಗಿಸುವುದು. प्र + युजिर् (योगे) "क्तिन्" (३-३-९४)।

**प्रयुज्यमान ಪ್ರಯುಜ್ಯಮಾನ** (वि०) 1. ಪ್ರೇರಿಸಲ್ಪಡುತ್ತಿರುವ, ಒತ್ತಾಯಪಡಿಸಿ ಹೇಳಲ್ಪಡುತ್ತಿರುವ. प्र + युजिर् (योगे) कर्म० "शानच्" (३-२-१२४)। "ध्रुवेण भर्त्रा ध्रुवदर्शनाय प्रयुज्यमाना प्रियदर्शनेन" कुमा० ७-८५। 2. ಅನುಗ್ರಹಿಸಲ್ಪಡುತ್ತಿರುವ, ಕೊಡಲ್ಪಡುತ್ತಿರುವ. "प्रयुज्यमानानि तयोर्यथार्हं माङ्गल्यमाल्याभरणाक्षतानि" याद० १३-८३। 3. ಬಡ್ಡಿಗಾಗಿ ಕೊಡಲ್ಪಡುತ್ತಿರುವ (ಸಾಲ). 4. ಪ್ರಯೋಗಿಸಲ್ಪಡುತ್ತಿರುವ, ಉಪಯೋಗಿಸಲ್ಪಡುತ್ತಿರುವ (ಪದ). 5. ಕಳುಹಿಸಲ್ಪಡುತ್ತಿರುವ. 6. ಆಚರಿಸಲ್ಪಡುತ್ತಿರುವ. 7. ಪ್ರೇರಿಸಲ್ಪಡುತ್ತಿರುವ, ಮುಂದಕ್ಕೆ ಹೋಗುವಂತೆ ಮಾಡಲ್ಪಡುತ್ತಿರುವ. 8. ಒತ್ತಾಯಪಡಿಸಲ್ಪಡುತ್ತಿರುವ. 9. ಚೆನ್ನಾಗಿ ಸೇರಿಸಲ್ಪಡುತ್ತಿರುವ. 10. ಅಲುಗಾಡಿಸಲ್ಪಡುತ್ತಿರುವ.

**प्रयुञ्जत् ಪ್ರಯುಂಜತ್** (वि०) 1. (ಶಬ್ದವನ್ನು) ಪ್ರಯೋಗಿಸುತ್ತಿರುವ, ಉಪಯೋಗಿಸುತ್ತಿರುವ. प्र + युजिर् (योगे) "शतृ" (३-२-१२४)। 2. (ಬಾಣವನ್ನು) ಪ್ರಯೋಗಿಸುತ್ತಿರುವ, ಬಿಡುತ್ತಿರುವ. 3. ಪ್ರಯೋಗದಿಂದ ತೋರ್ಪಡಿಸುತ್ತಿರುವ. 4. ಬಡ್ಡಿಗಾಗಿ ಹಣವನ್ನು ಸಾಲವಾಗಿ ಕೊಡುತ್ತಿರುವ. 5. ಚೆನ್ನಾಗಿ ಸೇರಿಸುತ್ತಿರುವ. 6. ಮಾಡುತ್ತಿರುವ. 7. ಪ್ರೇರಿಸುತ್ತಿರುವ, ಮುಂದಕ್ಕೆ ಹೋಗುವಂತೆ ಮಾಡುತ್ತಿರುವ. 8. ಪ್ರೋತ್ಸಾಹಿಸುತ್ತಿರುವ. 9. ಅಭಿನಯಿಸಿ ತೋರಿಸುತ್ತಿರುವ. "शानच्" (३-२-१२४)। **-युञ्जानः -ಯುಂಜಾನಃ**. "यत्सत्यं काव्यविशेषवेदिन्यां परिषदि प्रयुञ्जानस्य ममापि चेतसि सुमहान् परितोषः प्रादुर्भवति" मुद्रा० १।

**प्रयुत ಪ್ರಯುತ** (न०) 1. ದಶಲಕ್ಷ ಸಂಖ್ಯೆ, ಹತ್ತು ಲಕ್ಷ. प्र + यु (मिश्रणे) "क्तः" (३-२-१०२)। "शतं सहस्रमयुतं नियुतं प्रयुतं मतम्। स्त्री कोटिरर्बुदमिति क्रमाद्दशगुणोत्तरम्"। (वि०) 2. ಹತ್ತುಲಕ್ಷವುಳ್ಳ, ಹತ್ತು ಲಕ್ಷ ಸಂಖ್ಯೆಯುಳ್ಳ. (वि०) 3. ಸರಿಯಾಗಿ ಸೇರಿಕೊಂಡಿರುವ, ಚೆನ್ನಾಗಿ ಕೂಡಿಕೊಂಡಿರುವ. प्र + यु (मिश्रणे) "क्तः" (३-४-७२)।

**प्रयोक्तव्य ಪ್ರಯೋಕ್ತವ್ಯ** (वि०) 1. ಪ್ರಯೋಗಿಸಲ್ಪಡುವ, ಉಪಯೋಗಿಸಲ್ಪಡುವ. प्र + युजिर् (योगे) "तव्यः" (३-१-९६)। 2. ಆಚರಿಸಲ್ಪಡುವ, ಮಾಡಲ್ಪಡುವ, ಪ್ರಯೋಗಿಸಲ್ಪಡುವ. "तूष्णीं दण्डः प्रयोक्तव्यस्तस्य सिद्धौ ध्रुवो जयः" मं०वी० ६-१५। 3. ಪ್ರಯೋಗಿಸಲ್ಪಡುವ, ಬಿಡಲ್ಪಡುವ (ಬಾಣ). 4. ಬಡ್ಡಿಗಾಗಿ (ಸಾಲ) ಕೊಡಲ್ಪಡುವ. 5. ಸೇರಿಸಲ್ಪಡುವ, ಒಟ್ಟಿಗೆ ಕೂಡಿಸಲ್ಪಡುವ. 6. ಪ್ರೇರಿಸಲ್ಪಡುವ, ಒತ್ತಾಯಪಡಿಸಲ್ಪಡುವ. "अनीयर्" (३-१-९६)। **-योजनीयः -ಯೋಜನೀಯಃ.**

**प्रयोक्तृ ಪ್ರಯೋಕ್ತೃ** (वि०) 1. ಬಡ್ಡಿಗಾಗಿ ಸಾಲ ಕೊಡುವವನು. प्र + युजिर् (योगे) "तृच्" (३-१-१३३)। "उत्तमर्णाधमर्णौ द्वौ प्रयोक्तृग्राहकौ क्रमात्" अम०। 2. (ಬಾಣವನ್ನು) ಪ್ರಯೋಗಿಸುವವನು. "संमोहनं नाम सखे ममास्त्रं प्रयोगसंहारविभक्तमन्त्रम्। गान्धर्वमादत्स्व यतः प्रयोक्तुर्न चारिहिंसा विजयश्च हस्ते" रघु० ५-५७। 3. ಆಚರಿಸುವವನು, ಮಾಡುವವನು. "पुत्रो रघुस्तस्य पदं प्रशास्ति महाक्रतोर्विश्वसृजः प्रयोक्ता" रघु० ६-७६। 4. ಪ್ರಯೋಗಮಾಡಿ ತೋರಿಸುವವನು, ಅಭಿನಯಿಸಿ ತೋರಿಸುವವನು, ನಾಟ್ಯಾಚಾರ್ಯ. "स प्रयोगनिपुणैः प्रयोक्तृभिः संजघर्ष सह मित्रसन्निधौ" रघु० १९-३६। 5. ನಿಯೋಜಿಸುವವನು, ಆಜ್ಞೆಮಾಡಿ ಕಳುಹಿಸುವವನು. "परदारप्रयोक्तारः ते वै निरयगामिनः" भा० अनु० २३-६१। स्त्रियां "ङीप्" (४-१-५)। **प्रयोक्त्री ಪ್ರಯೋಕ್ತ್ರೀ.**

**प्रयोग ಪ್ರಯೋಗ** (पुं०) 1. (ಶಬ್ದದ) ಪ್ರಯೋಗ, ಉಚ್ಚಾರಣೆ, (ಶಬ್ದವನ್ನು) ಉಪಯೋಗಿಸುವುದು. प्र + युजिर् (योगे) "घञ्" (३-३-१८)। "क्षणशयितविबुद्धाः कल्पयन्तः प्रयोगान्" माघ० ११-६। 2. (ಬಾಣದ) ಪ್ರಯೋಗ, (ಬಾಣವನ್ನು) ಬಿಡುವುದು. "प्रत्यब्रवीच्चैनमिषुप्रयोगे तत्पूर्वभङ्गे वितथप्रयत्नः" रघु० २-४२। 3. ಅಭಿನಯಿಸಿ ಕಾರ್ಯದಿಂದ ತೋರಿಸುವುದು. "तदत्रभवानिमं मां च शास्त्रे प्रयोगे च विमृशतु" माल० १। 4. ಸಾಮದಾನಾದಿ ಉಪಾಯಗಳ ಆಚರಣೆ. "क्षणशयितविबुद्धाः कल्पयन्तः प्रयोगानुदधिमहति राज्ये काव्यवद्दुर्विगाहे" माघ० ११-६। 5. ರೂಪಕ, ನಾಟಕ. "अपश्यतामप्सरसां मुहूर्तं प्रयोगमाद्यं ललिताङ्गहारम्" कुमा० ७-९१। 6. ಓಷಧಿ ಮೂಲಿಕೆಗಳಿಂದ ಮಾಡುವ ಸ್ತಂಭನ ಉಚ್ಚಾಟನ ವಶೀಕರಣ ಮೊದಲಾದ ಕಾರ್ಯ. 7. ನಿದರ್ಶನ, ಉದಾಹರಣೆ. 8. ಬಡ್ಡಿಗಾಗಿ ಸಾಲವನ್ನು ಕೊಡುವುದು. "सप्त वित्तागमा धर्म्या दायो लाभः क्रयो जयः। प्रयोगः कर्मयोगश्च सत्प्रतिग्रह एव च" मनु० १०-११५। 9. ಅಭಿನಯ. "स प्रयोगनिपुणैः

प्रयोक्तृभिः संजघर्ष सह मित्रसन्निधौ" रघु० १९-३६। 10. ಕಾರ್ಯತಃ ಮಾಡಿ ತೋರಿಸುವುದು.

**प्रयोगातिशय ಪ್ರಯೋಗಾತಿಶಯ** (पुं०) ನಾಟಕದಲ್ಲಿ ಪ್ರಸ್ತಾವನೆಯ (ಆಮುಖದ) ಒಂದು ಭೇದ. ಸೂತ್ರಧಾರನು ತನ್ನ ಕಾರ್ಯಕ್ಕೆ ಸಂಬಂಧಿಸಿದ ವಾಕ್ಯ ಪ್ರಯೋಗದಿಂದ ನಾಟಕದ ಪ್ರಾರಂಭದಲ್ಲಿ ಪಾತ್ರಪ್ರವೇಶವನ್ನು एषः ಇತ್ಯಾದಿ ಪದಗಳಿಂದ ಸೂಚಿಸಿ ನಿರ್ಗಮಿಸುವಲ್ಲಿ ಪ್ರಯೋಗಾತಿಶಯ ರೂಪವಾದ ಆಮುಖ (ಪ್ರಸ್ತಾವನೆ). "एषोऽयमित्युपक्षेपात् सूत्रधारप्रयोगतः। पात्रप्रवेशो यश्चायं प्रयोगातिशयो मतः" दशरू०।

**प्रयोगिन् ಪ್ರಯೋಗಿನ್** (वि०) ಪ್ರಯೋಗ ನಡಸುವವನು, ಕಾರ್ಯಮಾಡಿ ತೋರಿಸುವವನು. प्र + युजिर् (योगे) "घिनुण्" (३-२-१४२)।

**प्रयोजक ಪ್ರಯೋಜಕ** (वि०) 1. ಪ್ರೇರಿಸುವವನು, ಕಾರ್ಯದಲ್ಲಿ ತೊಡಗುವಂತೆ ಮಾಡುವವನು. प्रयुनक्ति— प्र + युजिर् (योगे) "ण्वुल्" (३-१-१३३)। 2. (ವ್ಯಾಕರಣದಲ್ಲಿ) ಹೇತು ಸಂಜ್ಞೆಯುಳ್ಳ ಕರ್ತೃ. ಕಾರ್ಯ ಮಾಡುವವನನ್ನು ಪ್ರೇರಿಸುವವನು ಕರ್ತೃ ಸಂಜ್ಞೆ ಮತ್ತು ಹೇತು ಸಂಜ್ಞೆಗಳನ್ನು ಹೊಂದುವವನು. देवदत्तः यज्वा भवति, याजकस्तं प्रेरयति ಎಂಬಲ್ಲಿ ದೇವದತ್ತನು ಮುಖ್ಯಕರ್ತನಾದನು, ಯಾಜಕನು ಪ್ರಯೋಜಕಕರ್ತನು. ಪ್ರಯೋಜಕನಾದ ಯಾಜಕನಿಗೆ ಹೇತುಸಂಜ್ಞೆ ಮತ್ತು ಕರ್ತೃ ಸಂಜ್ಞೆ ಬಂದಿರುವುದು. "तत्प्रयोजककर्तृत्वमुपैति मम जल्पतः" माघ० २-७१। 3. ಆಜ್ಞೆಮಾಡುವವನು. "शातातपो वसिष्ठश्च धर्मशास्त्रप्रयोजकाः" याज्ञ० १-५। 4. ಬಡ್ಡಿಗಾಗಿ ಹಣವನ್ನು ಸಾಲವಾಗಿ ಕೊಡುವವನು. 5. ಪ್ರೋತ್ಸಾಹಿಸುವವನು, ಹುರಿದುಂಬಿಸುವವನು.

**प्रयोजन ಪ್ರಯೋಜನ** (न०) 1. ಕಾರ್ಯ. प्र+युजिर् (योगे) "ल्युट्" (३-३-११३)। "प्रयोजनापेक्षितया प्रभूणां प्रायश्चलं गौरवमाश्रितेषु" कुमा० ३-१। 2. ಗುರಿ, ಧ್ಯೇಯ, ಉದ್ದೇಶ. "पुत्रप्रयोजना दाराः"। "धनं सर्वप्रयोजनम्"। 3. ಉಪಯೋಗ, ಅಗತ್ಯ, ಆವಶ್ಯಕತೆ. "यतः उत्तममध्यमाधमैः सर्वैरपि राज्ञां प्रयोजनम्" पञ्चतं० १। 4. ಫಲ. "अल्पप्रयोजनकृतोरुतरप्रयासैरुद्गूर्णलोष्टलगुडैः परितोऽनुविद्धम्" माघ० ५-२४। 5. ಹೇತು, ಕಾರಣ. प्र + युजिर् कर० "ल्युट्" (३-३-११७)। 6. ಪಡೆಯುವ ಸಾಧನ, ಸಂಪಾದಿಸುವ ಉಪಾಯ. "एतच्चतुर्विधं विद्यात्पुरुषार्थप्रयोजनम्" मनु० ७-१००। 7. ಉಪಯೋಗ, ಪ್ರಯೋಗ. 8. ಲಾಭ, ಬಡ್ಡಿ ಮತ್ತು ವ್ಯಾಪಾರಗಳಿಂದ ಬರುವ ಹೆಚ್ಚಿನ ಗಳಿಕೆ. "प्रयोजनं कार्यहेत्वोः" मेदि०।

**प्रयोज्य ಪ್ರಯೋಜ್ಯ** (पुं०) 1. ಭೃತ್ಯ, ಸೇವಕ. (न०) 2. ಬಡ್ಡಿಗಾಗಿ ಅಥವಾ ಹೆಚ್ಚಿನ ಸಂಪಾದನೆಗಾಗಿರುವ ಮೂಲಧನ. (वि०) 3. ಪ್ರಯೋಗಿಸಲು ಶಕ್ಯವಾದ, ಉಪಯೋಗಿಸಲು ಸಾಧ್ಯವಾದ. प्र + युजिर् (योगे) "ण्यत्" (७-३-६८) निपा०। "वाक् चैव मधुरा श्लक्ष्णा प्रयोज्या धर्ममिच्छता" मनु० २-१५९। 4. ಪ್ರಯೋಗಿಸಲ್ಪಡುವ, ಬಿಡಲ್ಪಡುವ (ಬಾಣ).

**प्ररुदत् ಪ್ರರುದತ್** (वि०) ಅಳುತ್ತಿರುವ, ಕಣ್ಣೀರು ಬಿಡುತ್ತಿರುವ. प्र + रुदिर् (अश्रुविमोचने) "शतृ" (३-२-१२४)। स्त्रियां "ङीप्" (४-१-६)। –रुदती –ರುದತೀ.

**प्ररुदित ಪ್ರರುದಿತ** (न०) 1. ಅಳುವುದು. प्र + रुदिर् (अश्रुविमोचने) "क्तः" (३-३-११४)। 2. ಕಣ್ಣೀರು ಬಿಟ್ಟಿರುವ. कर्त० "क्तः" (३-४-७२)।

**प्ररूढ ಪ್ರರೂಢ** (न०) 1. ಜಠರ, ಹೊಟ್ಟೆ. परोहत्यत्र— प्र + रुह (बीजजन्मनि प्रादुर्भावे च) अधि० "क्तः" (३-४-७६)। (वि०) 2. ಚೆನ್ನಾಗಿ ಬೇರುಬಿಟ್ಟಿರುವ, ಸ್ಥಿರವಾಗಿ ನಿಂತಿರುವ. "प्ररूढभावो भगवत्यधोक्षजे प्रष्टुं पुनस्तं विदुरः प्रचक्रमे" भाग० ४-१३-१। 3. ಜನಿಸಿರುವ, ಹುಟ್ಟಿರುವ. प्र+रुह कर्त० "क्तः" (३-४-७२)। "नाभिप्ररूढाम्बुरुहासनेन संस्तूयमानः प्रथमेन धात्रा" रघु० १३-६। 4. ಚೆನ್ನಾಗಿ ಬೆಳೆದಿರುವ, ಅಭಿವೃದ್ಧಿ ಹೊಂದಿರುವ. 5. ಉದ್ದವಾಗಿ ಬೆಳೆದಿರುವ. "प्ररूढलूनैरिव पक्षजालैः" याद० १८-४। 6. ಚೆನ್ನಾಗಿ ಬೆಳೆದಿರುವ, ಹೆಚ್ಚಾಗಿರುವ.

**प्ररूढवत् ಪ್ರರೂಢವತ್** (वि०) 1. ಚೆನ್ನಾಗಿ ಬೆಳೆದಿರುವ, ಚೆನ್ನಾಗಿ ಅಭಿವೃದ್ಧಿ ಹೊಂದಿರುವ. प्र+रुह (बीजजन्मनि प्रादुर्भावे च) "क्तवतुः" (३-२-१०२)। 2. ಚೆನ್ನಾಗಿ ಬೇರುಬಿಟ್ಟಿರುವ. 3. ಅಭಿವೃದ್ಧಿ ಹೊಂದಿರುವ, ಹೆಚ್ಚಿರುವ. 4. ಹುಟ್ಟಿರುವ.

**प्ररूढि ಪ್ರರೂಢಿ** (स्त्री०) 1. ಹುಟ್ಟುವುದು. 2. ಬೆಳೆಯುವುದು.

**प्ररोचन ಪ್ರರೋಚನ** (न०) ರುಚಿ ಹುಟ್ಟಿಸುವುದು, ಪ್ರೋತ್ಸಾಹಿಸುವುದು, ಇಷ್ಟಪಡಿಸುವುದು, ಹುರಿದುಂಬಿಸುವುದು. प्र + रुच (दीप्तावभिप्रीतौ च) + णिच् भावे

"ल्युट्" (३-३-११५)। "अलोकसामान्यगुणस्तनूजः प्ररोचनार्थं प्रकटीकृतश्च" मालती० १-१३। "युच्" (३-३-१०७)। **-रोचना -ರೋಚನಾ.** ಕವಿಕಾವ್ಯಾದಿಗಳ ಪ್ರಶಂಸೆಯಿಂದ ಜನರ ಮನಸ್ಸನ್ನು ತನ್ನ ಕಡೆಗೆ ತಿರುಗಿಸಿ ಕೊಳ್ಳುವುದು. ಇದು ಭಾರತೀವೃತ್ತಿಯ ಒಂದು ಅಂಗ. "तस्याः प्ररोचना वीथी तथा प्रहसनामुखे। अङ्गान्यत्रोन्मुखीकारः प्रशंसातः प्ररोचना" सा०द० ६-३०।

**प्ररोपण ಪ್ರರೋಪಣ** (न०) ಬೆಳೆಸುವುದು. प्र + रुह (बीजजन्मनि प्रादुर्भावे च) + णिच् "ल्युट्" (३-३-११५)। वा "पः" (७-३-४३)। पक्षे **-रोहणम् -ರೋಹಣಮ್.**

**प्ररोपणीय ಪ್ರರೋಪಣೀಯ** (वि०) 1. ಬೆಳೆಸಲ್ಪಡುವ. 2. ಬೆಳೆಸಬೇಕಾದ. प्र + रुह (बीजजन्मादौ) + णिच् "अनीयर्" (३-१-९६)। वा "पः" (७-३-४३)। पक्षे **-रोहणीयः -ರೋಹಣೀಯಃ.** "तव्यः" **-रोपयितव्यः, -रोहयितव्यः, -ರೋಪಯಿತವ್ಯಃ, -ರೋಹಯಿತವ್ಯಃ.**

**प्ररोपित ಪ್ರರೋಪಿತ** (वि०) ಚೆನ್ನಾಗಿ ಬೆಳೆಸಲ್ಪಟ್ಟ. प्र+रुह (बीजजन्मादौ) + णिच् "क्तः" (३-२-१०२)। वा "पः" (७-३-४३)। पक्षे **-रोहितः -ರೋಹಿತಃ.**

**प्ररोपितवत् ಪ್ರರೋಪಿತವತ್** (वि०) ಚೆನ್ನಾಗಿ ಬೆಳೆಸಿದವನು. प्र + रुह (बीजजन्मादौ) + णिच् "क्तवतुः" (३-२-१०२)। वा "पः" (७-३-४३)। पक्षे **-रोहितवान् -ರೋಹಿತವಾನ್.**

**प्ररोह ಪ್ರರೋಹ** (पुं०) 1. ಅಂಕುರ, ಮೊಳಕೆ. प्र + रुह (बीजजन्मनि प्रादुर्भावे च) "अच्" (३-१-१३४)। "उमातनौ गूढतनोः स्मरस्य तच्छङ्किनः पूर्वमिव प्ररोहम्" कुमा० ७-७६। 2. ತೇಜಸ್ಸಿನ ಅಂಕುರ, ಅಂಕುರದಂತೆ ಹೊರಹೊಮ್ಮುತ್ತಿರುವ ಕಾಂತಿ. "कपालनेत्रान्तरलब्धमार्गैर्ज्योतिःप्ररोहैरुदितैः शिरस्तः" कुमा० ३-४९। 3. ಚಿಗುರುವುದು, ಮೊಳಕೆ ಹೊರಡುವುದು. 4. ಸಂತತಿಯ ಕೊನರು, ವಂಶದ ಮೊಳಕೆ.

**प्ररोहण ಪ್ರರೋಹಣ** (न०) 1. "प्ररोपण" ಪದದಲ್ಲಿ ನೋಡಿ. 2. ಹುಟ್ಟುವುದು. 3. ಬೆಳೆಯುವುದು. प्र + रुह भावे "ल्युट्" (३-३-११५)।

**प्ररोहणीय ಪ್ರರೋಹಣೀಯ** (वि०) 1. "प्ररोपणीय" ಪದದಲ್ಲಿ ನೋಡಿ. 2. ಬೆಳೆಯಲ್ಪಡುವ. 3. ಬೆಳೆಯಬೇಕಾದ. प्र + रुह (बीजजन्मादौ) "अनीयर्" (३-१-९६)। "तव्यः"। **-रोढव्यः -ರೋಢವ್ಯಃ.**

**प्ररोहत् ಪ್ರರೋಹತ್** (वि०) 1. ಹುಟ್ಟುತ್ತಿರುವ. 2. ಬೆಳೆಯುತ್ತಿರುವ. "प्ररोहतां वीरयशस्तरूणाम्" याद० २०-५१। 3. ವೃದ್ಧಿ ಹೊಂದುತ್ತಿರುವ. प्र + रुह (बीजजन्मादौ) "शतृ" (३-२-१२४)। स्त्रियां "ङीप्" (४-१-६)। **-रोहन्ती -ರೋಹನ್ತೀ.**

**प्ररोहयत् ಪ್ರರೋಹಯತ್** (वि०) 1. ಬೆಳೆಸುತ್ತಿರುವ. 2. ಅಭಿವೃದ್ಧಿ ಹೊಂದಿಸುತ್ತಿರುವ. प्र+रुह (बीजजन्मादौ) +णिच् "शतृ" (३-२-१२४)। स्त्रियां "ङीप्" (४-१-६)। **-रोहयन्ती -ರೋಹಯನ್ತೀ.**

**प्रलपत् ಪ್ರಲಪತ್** (वि०) 1. ಮಾತಾಡುತ್ತಿರುವ. प्र+लप (व्यक्तायां वाचि) "शतृ" (३-२-१२४)। 2. ಹರಟೆ ಹೊಡೆಯುತ್ತಿರುವ, ವಿಪರೀತ ಮಾತಾಡುತ್ತಿರುವ, ವಿವೇಕವಿಲ್ಲದೆ ಮಾತಾಡುತ್ತಿರುವ. 3. ರೋದನಮಾಡುತ್ತಿರುವ, ಅಳುತ್ತಿರುವ. स्त्रियां "ङीप्" (४-१-६)। **-लपन्ती -ಲಪನ್ತೀ.**

**प्रलपन ಪ್ರಲಪನ** (न०) 1. ಮಾತಾಡುವುದು, ಸಂಭಾಷಣೆ ಮಾಡುವುದು. प्र + लप (व्यक्तायां वाचि) भावे "ल्युट्" (३-३-११५)। 2. ವೃಥಾ ಹರಟುವುದು, ಪ್ರಯೋಜನವಿಲ್ಲದೆ ಮಾತಾಡುವುದು. 3. ರೋದನ, ಅಳುವುದು.

**प्रलपनीय ಪ್ರಲಪನೀಯ** (वि०) 1. ಮಾತಾಡಬೇಕಾದ, ಸಂಭಾಷಣೆ ಮಾಡಬೇಕಾದ. प्र+लप (व्यक्तायां वाचि) "अनीयर्" (३-१-९६)। 2. ಮಾತಾಡಲು ಅರ್ಹವಾದ. "तव्यः"। **-लपितव्यम् -ಲಪಿತವ್ಯಮ್.**

**प्रलपित ಪ್ರಲಪಿತ** (न०) 1. ಮಾತಾಡುವುದು. प्र + लप (व्यक्तायां वाचि) भावे "क्तः" (३-३-११४)। 2. ರೋದನ. 3. ಪ್ರಯೋಜನವಿಲ್ಲದೆ ಮಾತಾಡುವುದು, ಹರಟೆ. (वि०) 4. ಹೇಳಲ್ಪಟ್ಟ, ಮಾತಾಡಲ್ಪಟ್ಟ. कर्म० "क्तः" (३-२-१०२)। "वचो वैदेहीति प्रतिपदमुदश्रु प्रलपितम्" सा० द०।

**प्रलपितवत् ಪ್ರಲಪಿತವತ್** (वि०) 1. ಮಾತಾಡಿದವನು. 2. ಪ್ರಯೋಜನವಿಲ್ಲದೆ ಹರಟಿದವನು. 3. ರೋದನ ಮಾಡಿದವನು. प्र+लप (व्यक्तायां वाचि) "क्तवतुः" (३-२-१०२)।

**प्रलम्ब ಪ್ರಲಂಬ** (पुं०) 1. ಒಬ್ಬ ಅಸುರ. 2. ತಗರ. 3. ಪಯೋಧರ, ಸ್ತನ. 4. ಬಳ್ಳಿಯ ಚಿಗುರು. 5. ಶಾಖೆ, ರೆಂಬೆ. 6. ಹಾರ. (वि०) 7. ಜೋಲಾಡುವ, ನೇತಾಡುವ, ತೂಗಾಡುವ. प्र + लबि (अवस्रंसने) "अच्"

(३-१-१३४)। (पुं०) 8. ಜೋಲಾಡುವುದು, ತೂಗಾಡುವುದು. प्र+लबि भावे "घञ्" (३-३-१८)। "प्रलम्बो दैत्यभेदे स्यात् त्रपुषेऽपि पयोधरे। लताङ्कुरे च शाखायां हारभेदे प्रलम्बने" मेदि०।

**प्रलम्बघ्न ಪ್ರಲಂಬಘ್ನ** (पुं०) ಬಲರಾಮ.

**प्रलम्बन ಪ್ರಲಂಬನ** (न०) ಜೋಲಾಡುವುದು, ತೂಗಾಡುವುದು. प्र+लबि (अवस्रंसने) भावे "ल्युट्" (३-३-११५)।

**प्रलम्बमान ಪ್ರಲಂಬಮಾನ** (वि०) ಜೋಲಾಡುತ್ತಿರುವ, ತೂಗಾಡುತ್ತಿರುವ. प्र + लबि (अवस्रंसने) "शानच्" (३-२-१२४)।

**प्रलम्बित ಪ್ರಲಂಬಿತ** (वि०) ಜೋಲುಬಿದ್ದಿರುವ. प्र + लबि (अवस्रंसने) "क्तः" (३-४-७२)।

**प्रलय ಪ್ರಲಯ** (पुं०) 1. ನಾಶ, ಅಳಿವು. प्र + लीङ् (श्लेषणे) "अच्" (३-३-५६)। "प्रलयमखिलतारालोकमह्नाय नीत्वा श्रियमनतिशयश्रीः सानुरागं दधानः" माघ० ११-६६। 2. ಕಲ್ಪದ ಕೊನೆಯ ಕಾಲ, ಜಗತ್ತಿನ ನಾಶದ ಕಾಲ. "प्रलयोल्लसितस्य वारिधेः परिवाहो जगतः करोति किम्" माघ० १६-५१। ಪ್ರಲಯವು नित्यप्रलयः नैमित्तिकप्रलयः प्राकृतप्रलयः ಮತ್ತು आत्यन्तिकप्रलयः ಎಂದು ನಾಲ್ಕು ವಿಧ. "नित्यं नैमित्तिकं चैव प्राकृतात्यन्तिकौ तथा। चतुर्धायं पुराणेऽस्मिन् प्रोच्यते प्रतिसञ्चरः"। [ವಿವರಕ್ಕೆ ಆಯಾಪದಗಳಲ್ಲಿ ನೋಡಿ]. 3. ಮರಣ, ನಿಧನ, "भर्तुर्ये प्रलयेऽपि पूर्वसुकृतासङ्गेन निःसञ्ज्ञया" मुद्रा० १-१४। 4. ಸೊರಗಿ ಬೀಳುವುದು, ಪ್ರಜ್ಞೆತಪ್ಪಿ ಬೀಳುವುದು. 5. ಒಂದು ವಿಧ ಸಾತ್ತ್ವಿಕ ಭಾವ. (1) स्तम्भः (2) स्वेदः (3) रोमाञ्चः (4) स्वरभङ्गः (5) वेपथुः (6) वैवर्ण्यम् (7) अश्रु ಮತ್ತು (8) प्रलयः ಇವು ಎಂಟು ವಿಧ ಸಾತ್ತ್ವಿಕ ಭಾವಗಳು. सा० द० ३-१३५। "प्रलयः सुखदुःखाभ्यां चेष्टाज्ञाननिराकृतिः" सा० द० ३-१३९।

**प्रलयकाल ಪ್ರಲಯಕಾಲ** (पुं०) ಕಲ್ಪದ ಕೊನೆಯಕಾಲ, ಜಗತ್ತಿನ ನಾಶದ ಕಾಲ.

**प्रलयजलधर ಪ್ರಲಯಜಲಧರ** (पुं०) ಪ್ರಲಯಕಾಲದ ಮೇಘ.

**प्रलयपयोधि ಪ್ರಲಯಪಯೋಧಿ, –पयोनिधि -ಪಯೋನಿಧಿ, –अर्णव –ಅರ್ಣವ** (पुं०) ಪ್ರಳಯಕಾಲದ ಸಮುದ್ರ, ಜಗತ್ತಿನ ನಾಶದ ಸಮಯದಲ್ಲಿ ಉಕ್ಕಿ ಬರುವ ಸಮುದ್ರ. प्रलये पयोधिः पयोनिधिः अर्णवो वा। "क्षिप्तबहुजलबिन्दु वपुः प्रलयार्णवोत्थित इवादिशूकरः" माघ० १५-५। "प्रलयपयोधिजले धृतवानसि वेदम्" गीतगो० १।

**प्रलयपवन ಪ್ರಲಯಪವನ** (पुं०) ಪ್ರಳಯಕಾಲದ ಗಾಳಿ. "तूलोत्क्षेपप्रलयपवनः किं न यातः स्मृतिं ते" वेणी० ३-२३।

**प्रलाप ಪ್ರಲಾಪ** (पुं०) 1. ಹರಟೆ, ಪ್ರಯೋಜನವಿಲ್ಲದ ಮಾತು, ಅರ್ಥವಿಲ್ಲದ ಮಾತು, ವಿವೇಕವಿಲ್ಲದ ಮಾತು. प्र + लप (व्यक्तायां वाचि) भावे "घञ्" (३-३-१८)। "हतभ्रातृशतो दुःखी प्रलापैरस्य का व्यथा" वेणी० ५-३१। "असंबद्धप्रलापश्च वाङ्मयं स्याच्चतुर्विधम्" मनु० १२-६। 2. ಸಂಭಾಷಣೆ, ಪರಸ್ಪರ ಮಾತಾಡುವುದು. 3. ರೋದನ.

**प्रलापिन् ಪ್ರಲಾಪಿನ್** (वि०) 1. ಮಾತಾಡುವವನು. 2. ಅರ್ಥವಿಲ್ಲದೆ ಮಾತಾಡುವವನು, ವಿವೇಕವಿಲ್ಲದೆ ಮಾತಾಡುವವನು. प्रलपति — प्र + लप (व्यक्तायां वाचि) "घिनुण्" (३-२-१४२)। "दुरात्मन् सूतापसद असंबद्धप्रलापिन्" वेणी० ३। 3. ರೋದನ ಮಾಡುವ, ಅಳುವ. "प्रलापिनो भविष्यन्ति कदान्वेतेऽपलाषिणः" भट्टि० ७-१२।

**प्रलीन ಪ್ರಲೀನ** (वि०) 1. ನಾಶಹೊಂದಿದ, ಅಳಿದು ಹೋದ. प्र + लीङ् (श्लेषणे) "क्तः" (३-४-७२)। "नः" (८-२-४४)। "प्रलीनभूपालमपि स्थिरायति प्रशासदावारिधि मण्डलं भुवः" किरा० १-२३। 2. ಪ್ರಜ್ಞಾಶೂನ್ಯನಾದ, ಜ್ಞಾನವಿಲ್ಲದೆ ಬಿದ್ದಿರುವ. 3. ತಿರೋಭೂತವಾದ, ಮರೆಯಾದ. "विदधदिव जगत् पुनः प्रलीनं भवति महान् हि परार्थ एव सर्वः" भट्टि० १०-६७।

**प्रलुठित ಪ್ರಲುಠಿತ** (वि०) ಹೊಡೆಯಲ್ಪಟ್ಟು ಹೊರಳಾಡುವ, ಗಾಯಗೊಂಡು ಭೂಮಿಯಲ್ಲಿ ಒದ್ದಾಡುವ. प्र + लुठ (प्रतिघाते) "क्तः" (३-४-७२)। "प्रलुठितमवनौ विलोक्य कृत्तं दशवदनः खचरोत्तमं प्रहृष्यन्" भट्टि० ५-१०८।

**प्रलून ಪ್ರಲೂನ** (वि०) ಚೆನ್ನಾಗಿ ಕತ್ತರಿಸಲ್ಪಟ್ಟ. प्र+लूञ् (छेदने) "क्तः" (३-२-१०२)।

**प्रलेप ಪ್ರಲೇಪ** (पुं०) 1. ಲೇಪನಮಾಡುವುದು, ಬಳಿಯುವುದು. प्र+लिप (उपदेहे) भावे "घञ्" (३-३-१८)। 2. ಮುಲಾಮು, ಗಾಯ ಮೊದಲಾದುವುಗಳ ಮೇಲೆ

ಹಚ್ಚುವ ಔಷಧ. प्रकृष्टो लेपः येन। "आलिम्पअमृतमयैरिव प्रलेपैरन्तर्वा बहिरपि वा शरीरघातून्" ಉ० रा० ३-३९।

**प्रलेपक ಪ್ರಲೇಪಕ** (पुं०) 1. ಲೇಪನ ಮಾಡುವವನು, ಗಾರೆಯ ಕೆಲಸದವನು, ಸುಣ್ಣ ಬಣ್ಣ ಮೊದಲಾದುವನ್ನು ಬಳಿಯುವವನು. प्र + लिप (उपदेहे) "ण्वुल्." (३-१-१३३)। 2. ಮುಲಾಮು ಹಚ್ಚುವವನು. 3. ಒಂದು ವಿಧ ಜ್ವರ.

**प्रलेपन ಪ್ರಲೇಪನ** (न०) 1. ಲೇಪನಮಾಡುವುದು, ಮುಲಾಮು ಹಚ್ಚುವುದು. 2. ಸುಣ್ಣ ಬಣ್ಣಗಳನ್ನು ಬಳಿಯುವುದು. प्र+लिप(उपदेहे) "ल्युट्" (३-३-११५)।

**प्रलेह ಪ್ರಲೇಹ** (पुं०) 1. ಲೇಹ್ಯ. 2. ಆಸ್ವಾದಿಸಲ್ಪಡುವ ಗೊಜ್ಜು, ಒಂದು ವ್ಯಂಜನ. "प्रलेहजस्नेहघृतानुबिम्बनां चुचुम्ब कोऽपि श्रितभोजनच्छलः" नैष० १६-६६।

**प्रलोभ ಪ್ರಲೋಭ** (पुं०) 1. ಅತ್ಯಾಶೆ, ದುರಾಶೆ. प्र+लुभ (विमोहने) "घञ्" (३-३-१८)। 2. ಮೋಹಗೊಳಿಸುವುದು, ಆಸೆತೋರಿಸುವುದು, ಮರುಳುಮಾಡುವುದು.

**प्रलोभन ಪ್ರಲೋಭನ** (न०) 1. ಆಸೆ ತೋರಿಸುವುದು, ಮರುಳುಮಾಡುವುದು. प्र + लुभ (विमोहने) "ल्युट्" (३-३-११५)। 2. ಆಕರ್ಷಿಸುವ ವಸ್ತು, ಮೋಹಗೊಳಿಸುವ ವಸ್ತು. कर० "ल्युट्" (३-३-११७)।

**प्रलोभनीय ಪ್ರಲೋಭನೀಯ** (वि०) 1. ಮರುಳು ಮಾಡಲ್ಪಡುವ, ಆಸೆತೋರಿಸಿ ಮೋಹಗೊಳಿಸಲ್ಪಡುವ. प्र+लुभ (विमोहने) "अनीयर्" (३-१-९६)। 2. ಮೋಸಪಡಿಸಲ್ಪಡುವ. 3. ಮರುಳು ಮಾಡಬೇಕಾದ, ಆಸೆತೋರಿಸಿ ವಂಚಿಸಬೇಕಾದ.

**प्रलोभयत् ಪ್ರಲೋಭಯತ್** (वि०) ಆಸೆ ತೋರಿಸುತ್ತಿರುವ, ಆಸೆತೋರಿಸಿ ಆಕರ್ಷಿಸುತ್ತಿರುವ. प्र + लुभ (विमोहने) + णिच् "शतृ" (३-२-१२४)। स्त्रियां "ङीप्" (४-१-६)। "प्रलोभयन्तीं ललितैस्ततः प्रथम लक्षितैः" याद० २२-१६४।

**प्रलोभिन् ಪ್ರಲೋಭಿನ್** (वि०) ಮೋಹಗೊಳಿಸುವ, ಆಸೆತೋರಿಸಿ ಮರುಳುಮಾಡುವ. प्र + लुभ (विमोहने) "णिनिः" (३-२-७८)।

**प्रवक्तृ ಪ್ರವಕ್ತೃ** (वि०) 1. ಪ್ರವಚನ ಮಾಡುವವನು, ವೇದಶಾಸ್ತ್ರಾದಿಗಳನ್ನು ಅಧ್ಯಯನಮಾಡಿಸುವವನು. प्र + वच (परिभाषणे) "तृच्" (३-२-१३३)। 2. ಹೇಳುವವನು, ಉಪದೇಶಿಸುವವನು, ಗುರು. "जातिमात्रोपजीवी वा कामं स्याद्ब्राह्मणब्रुवः। धर्मप्रवक्ता नृपतेः" मनु० ८-२०।

**प्रवचन ಪ್ರವಚನ** (न०) 1. ಉಪದೇಶ, ಬೋಧನೆ. 2. ವ್ಯಾಖ್ಯಾನ, ವಿವರದೊಡನೆ ಪ್ರತಿಪಾದಿಸುವುದು. प्र + वच (परिभाषणे) भावे "ल्युट्" (३-३-११५)। 3. ಒಳ್ಳೆಯ ಮಾತು. 4. ವೇದ. "अथ प्रवचनं वेदे प्रकृष्टवचनेऽपि च" मेदि०। 5. ವೇದಾಂಗ.

**प्रवचनीय ಪ್ರವಚನೀಯ** (पुं०) 1. ಗುರು, ಉಪಾಧ್ಯಾಯ. प्र+वच (परिभाषणे) वा कर्त० "अनीयर्" (३-४-६८)। निपा०। प्रवचनीयो गुरुर्वेदस्य। 2. ಪ್ರವಚನ ಮಾಡಲ್ಪಡುವ. पक्षे कर्म० "अनीयर्" (३-१-९६)। "प्रवचनीयो वेदो गुरुणा" सि० कौ०। "अथ प्रवचनीयश्च स्यात् प्रवक्तृप्रवाच्ययोः" मेदि०।

**प्रवचस् ಪ್ರವಚಸ್** (वि०) ಚೆನ್ನಾಗಿ ಮಾತಾಡುವವನು, ವಾಗ್ಮಿ, ಚತುರನಾಗಿ ಮಾತಾಡುವವನು. प्रकृष्टं वचो यस्य। "वाचोयुक्तिपटुर्वाग्मी वचोज्ञः प्रवचाः प्रवाक्"।

**प्रवण ಪ್ರವಣ** (पुं०) 1. ಚತುಷ್ಪಥ, ನಾಲ್ಕು ರಸ್ತೆಗಳು ಕೂಡುವ ಜಾಗ (ಚೌಕ). प्रवन्ते जना अनेन — प्रुङ् (गतौ) "ल्युट्" (३-३-११७)। (न०) 2. ಉದರ, ಹೊಟ್ಟೆ. (वि०) 3. ಆಸಕ್ತನಾದ, ತತ್ಪರನಾದ. "जातौ न वित्ते न गुणे न कामः सौन्दर्य एव प्रवणः स वामः" नैष० १०-१३। 4. ಬಗ್ಗಿರುವ, ಬಾಗಿರುವ. 5. ಪೂರ್ಣವಾದ, ತುಂಬಿರುವ. 6. ಅಧೀನ, ಪರತಂತ್ರ. 7. ಕ್ರಮವಾಗಿ ಇಳಿಜಾರಾಗಿರುವ (ಭೂಮಿ). 8. ಉನ್ಮುಖವಾದ, ಉತ್ಸಾಹದಿಂದಿರುವ, ಉತ್ಸುಕವಾದ. "न महानपि भूतिमिच्छता फलसंपत्प्रवणः परिक्षयः" किरा० २-८। 9. ನಮ್ರ, ವಿಧೇಯ. 10. ಉದಾರನಾದ. 11. ಬಳಲಿದ, ಬಣ್ಣ ಕೆಟ್ಟಿರುವ, ಸೊರಗಿರುವ. 12. ಉದ್ದವಾದ, ನೀಳವಾದ. 13. ಕ್ಷೀಣವಾದ.

**प्रवणता ಪ್ರವಣತಾ** (स्त्री०) ಆಸಕ್ತನಾಗಿರುವಿಕೆ, ತತ್ಪರನಾಗಿರುವಿಕೆ ಒಲಿದಿರುವಿಕೆ, ಅನುಸರಿಸುವ ಸ್ವಭಾವ. प्रवणस्य भावः "तल्" (५-१-११९)। "नीचप्रवणता लक्ष्मि जलजायास्तवोचिता"।

**प्रवत्स्यत् ಪ್ರವತ್ಸ್ಯತ್** (वि०) ಪ್ರಯಾಣ ಹೊರಡಲಿರುವ, ಪರಸ್ಥಳಕ್ಕೆ ಹೊರಟುಬರಲಿರುವ. प्र + वस (निवासे) + स्यः "शतृ" (३-२-१२४)।

**प्रवत्स्यत्पतिका ಪ್ರವತ್ಸ್ಯತ್ಪತಿಕಾ** (स्त्री०) ಪರಸ್ಥಳಕ್ಕೆ ಹೊರಟುಬರಲಿರುವ ಪುರುಷನ ಪತ್ನಿ. प्रवत्स्यन् पतिः यस्याः "कप्"।

**प्रवयण ಪ್ರವಯಣ** (ನಂ) 1. ರಥದ ಎತ್ತು ಕುದುರೆ ಮೊದಲಾದುವನ್ನು ನಡೆಸಲು ಉಪಯೋಗಿಸುವ ಕೋಲಿಂ, ಚಾವಟಿ. प्रवीयतेऽनेन — प्र+ अज (गतिक्षेपणयो:) ಕರಂ "ल्युट्" (३-३-११७)। अजे: वा वी आदेश: (२-४-५७)। पक्षे **प्राजनम् ಪ್ರಾಜನಮ್.** "अथ धर्ममूर्तिरनुरागभावित: स्वयमादित प्रवयणं प्रजापति:" माघं १३-१९। 2. ಚೆನ್ನಾಗಿ ನಡೆಯುವುದು, ಗಂಭೀರವಾಗಿ ನಡೆಯುವುದು. प्रकृष्टं वयणम् गमनम्।

**प्रवयस् ಪ್ರವಯಸ್** (ವಿಂ) 1. ವೃದ್ಧ, ಮುದುಕ. प्रगतं वयो यस्य। "नृपति: प्रकृतीरवेक्षितुं व्यवहारासनमाददे युवा। परिचेतुमुपांशु धारणां कुशपूतं प्रवयास्तु विष्टरम्" रघुं ८-१८। 2. ಹಳೆಯದಾದ, ಪುರಾತನವಾದ.

**प्रवर ಪ್ರವರ** (ಪುಂ) 1. ಸಂತತಿ, ವಂಶ. प्र+वृञ् (वरणे) "अप्" (३-३-५८)। 2. ಸಂತತಿಯ ಮೂಲಪುರುಷರು, ಮೂಲಪುರುಷರ ಗಣ. **ಈ ಮೂಲಪುರುಷರಾದ ಮುನಿಗಳು (ಋಷಿಗಳು):** ಭರದ್ವಾಜಗೋತ್ರಕ್ಕೆ ಭರದ್ವಾಜ ಅಂಗಿರಸ ಮತ್ತು ಬಾರ್ಹಸ್ಪತ್ಯ. ವಿಶ್ವಾಮಿತ್ರ ಗೋತ್ರಕ್ಕೆ ವಿಶ್ವಾಮಿತ್ರ ಮರೀಚಿ ಮತ್ತು ಕೌಶಿಕ. ಅತ್ರಿ ಗೋತ್ರಕ್ಕೆ ಅತ್ರಿ ಆತ್ರೇಯ ಮತ್ತು ಶಾತಾತಪ. ಗೋತಮ ಗೋತ್ರಕ್ಕೆ ಗೋತಮ ವಸಿಷ್ಠ ಮತ್ತು ಬಾರ್ಹಸ್ಪತ್ಯ. ವಸಿಷ್ಠಗೋತ್ರಕ್ಕೆ ವಸಿಷ್ಠ. ಕಾಶ್ಯಪಗೋತ್ರಕ್ಕೆ ಕಾಶ್ಯಪ, ಅಪ್ಸಾರ ಮತ್ತು ನೈಧ್ರುವ. ಅಗಸ್ತ್ಯಗೋತ್ರಕ್ಕೆ ಅಗಸ್ತಿ ದಧೀಚಿ ಮತ್ತು ಜೈಮಿನಿ. ಕೌಶಿಕಗೋತ್ರಕ್ಕೆ ಕೌಶಿಕ ಅತ್ರಿ ಮತ್ತು ಜಮದಗ್ನಿ. ವಾತ್ಸ್ಯ (ಶ್ರೀವತ್ಸ) ಗೋತ್ರಕ್ಕೆ ಭಾರ್ಗವ ಚ್ಯವನ ಆಪ್ನುವಾನ ಔರ್ವ ಮತ್ತು ಜಮದಗ್ನಿ. ಕಾತ್ಯಾಯನಗೋತ್ರಕ್ಕೆ ಅತ್ರಿ ಭೃಗು ಮತ್ತು ವಸಿಷ್ಠ. ಗರ್ಗಗೋತ್ರಕ್ಕೆ ಗಾರ್ಗ್ಯ ಕೌಸ್ತುಭ ಮತ್ತು ಮಾಂಡವ್ಯ. ಆತ್ರೇಯಗೋತ್ರಕ್ಕೆ ಆತ್ರೇಯ ಶಾತಾತಪ ಮತ್ತು ಸಾಂಖ್ಯ ಇತ್ಯಾದಿ. 3. ಉತ್ತರೀಯ, ಹೊದೆಯುವ ವಸ್ತ್ರ. (ನಂ) 4. ಅಗುರು ಚಂದನ. (ವಿಂ) 5. ಶ್ರೇಷ್ಠವಾದ, ಉತ್ತಮವಾದ. "उत्कण्ठितस्य हृदयानुगुणा वयस्या संकेतके चिरयति प्रवरो विनोद:" मृच्छं ३-३। 6. ಹಿರಿಯ, ಜ್ಯೇಷ್ಠ.

**प्रवर्ग ಪ್ರವರ್ಗ** (ಪುಂ) 1. ವಿಷ್ಣು. 2. ಹೋಮದ ಅಗ್ನಿ, ಯಾಗದ ಅಗ್ನಿ. प्रवृज्यते निक्षिप्यते हविरस्मिन्—प्र+ वृजी (वर्जने) अधिं "घञ्" (३-३-१२१)।

**प्रवर्ग्य ಪ್ರವರ್ಗ್ಯ** (ಪುಂ) ಅಂಗಭೂತವಾದ ಒಂದು ಯಾಗ.

**प्रवर्तक ಪ್ರವರ್ತಕ** (ವಿಂ) 1. ಪ್ರವೃತ್ತಿಯನ್ನು ಉಂಟುಮಾಡುವ, ಪ್ರೇರಿಸುವ, ಕಾರ್ಯದಲ್ಲಿ ತೊಡಗುವಂತೆ ಮಾಡುವ. प्रवर्तयति — प्र + वृतु (वर्तने) + णिच् "ण्वुल्" (३-१-१३३)। 2. ಸ್ಥಾಪಕ, ಸ್ಥಾಪನೆಮಾಡಿದವನು, ಸಂಸ್ಥೆ ಮತ ಸಿದ್ಧಾಂತ ಮೊದಲಾದುವುಗಳನ್ನು ಸೃಷ್ಟಿಸಿದವನು (ಪ್ರಾರಂಭಿಸಿದವನು). "धन्वन्तरिर्देवतम आयुर्वेदप्रवर्तक:" भागं ९-१७-४। 3. ಕಾರ್ಯವನ್ನು ಮುಂದುವರೆಸುವ, ಕಾರ್ಯವನ್ನು ನಿಲ್ಲಿಸದೆ ಮುಂದಕ್ಕೆ ತರುವ. 4. ದುರ್ಬೋಧನೆಯಿಂದ ಒತ್ತಾಯ ಮಾಡುವ, ಚಿತಾವಣೆ ಮಾಡುವ.

**प्रवर्तन ಪ್ರವರ್ತನ** (ನಂ) 1. ಮುನ್ನಡೆ, ಅಭಿವೃದ್ಧಿಪಡಿಸುವುದು. प्र+वृतु (वर्तने)+णिच् "ल्युट्" (३-३-११५)। "इतरार्थग्रहे येषां कवीनां स्यात् प्रवर्तनम्"। 2. ಪ್ರಾರಂಭ. "राजानमामन्त्र्य तत: कुर्यात् सेतुप्रवर्तनम्"। 3. ಪ್ರವೃತ್ತಿಯುಂಟುಮಾಡುವುದು, ಕಾರ್ಯದಲ್ಲಿ ತೊಡಗುವಂತೆ ಮಾಡುವುದು. "युच्" (३-३-१०७)। **–वर्तना –ವರ್ತನಾ.** "अथवा भवत: प्रवर्तना न कथं पिष्टमियं पिनष्टि न" नैषं २-६१।

**प्रवर्तनीय ಪ್ರವರ್ತನೀಯ** (ವಿಂ) 1. ಪ್ರಾರಂಭಿಸಲ್ಪಡುವ, ಉಪಕ್ರಮಿಸಲ್ಪಡುವ. प्र + वृतु (वर्तने) + णिच् "अनीयर्" (३-१-९६)। 2. ಪ್ರಾರಂಭಿಸುವಂತೆ ಮಾಡಲ್ಪಡುವ. 3. ಪ್ರೇರಿಸಲ್ಪಡುವ, ಒತ್ತಾಯಮಾಡಲ್ಪಡುವ, ಪ್ರೋತ್ಸಾಹಿಸಲ್ಪಡುವ. 4. ಸೃಷ್ಟಿಸಲ್ಪಡುವ, ಸ್ಥಾಪಿಸಲ್ಪಡುವ. 5. ಪ್ರಾರಂಭಿಸಬೇಕಾದ. 6. ಸ್ಥಾಪಿಸಬೇಕಾದ. 7. ಪ್ರೋತ್ಸಾಹಿಸಬೇಕಾದ. 8. ಪ್ರಾರಂಭಿಸುವಂತೆ ಮಾಡಬೇಕಾದ. "तव्य:"। **–वर्तयितव्य: –ವರ್ತಯಿತವ್ಯಃ.**

**प्रवर्तयत् ಪ್ರವರ್ತಯತ್** (ವಿಂ) 1. ಪ್ರವೃತ್ತಿಯುಂಟುಮಾಡುತ್ತಿರುವ, ಕಾರ್ಯದಲ್ಲಿ ತೊಡಗುವಂತೆ ಮಾಡುತ್ತಿರುವ. प्र+वृतु (वर्तने)+णिच् "शतृ" (३-२-१२४)। 2. ಕಾರ್ಯವನ್ನು ಪ್ರಾರಂಭಿಸುವಂತೆ ಮಾಡುತ್ತಿರುವ. 3. ಕಾರ್ಯವು ಮುನ್ನಡೆಯುವಂತೆ ಮಾಡುತ್ತಿರುವ.

**प्रवर्तयितृ ಪ್ರವರ್ತಯಿತೃ** (ವಿಂ) "प्रवर्तक" ಪದದ ಅರ್ಥ. प्र+वृतु (वर्तने)+णिच् "तृच्" (३-१-१३३)।

**प्रवर्तित ಪ್ರವರ್ತಿತ** (ವಿಂ) 1. ಸ್ಥಾಪಿಸಲ್ಪಟ್ಟ, ಸೃಷ್ಟಿಸಿ ಪ್ರಾರಂಭಿಸಲ್ಪಟ್ಟ. प्र + वृतु (वर्तने) + णिच् "क्त:" (३-२-१०२)। 2. ಉಂಟುಮಾಡಲ್ಪಟ್ಟ, ಉತ್ಪತ್ತಿ ಮಾಡಲ್ಪಟ್ಟ. "न कारणात् स्वात् बिभिदे कुमार:

प्रवर्तितो दीप इव प्रदीपात्" रघु० ५-३७। 3. ಕಾರ್ಯವನ್ನು ಪ್ರಾರಂಭಿಸುವಂತೆ ಪ್ರೇರಿಸಲ್ಪಟ್ಟ. 4. ಪ್ರೋತ್ಸಾಹಿಸಲ್ಪಟ್ಟ, ಒತ್ತಾಯಪಡಿಸಲ್ಪಟ್ಟ. 5. ನಡೆಸಲ್ಪಟ್ಟ, ಸಂಚಾರ ಮಾಡಿಸಲ್ಪಟ್ಟ, ಓಡಾಡಿಸಲ್ಪಟ್ಟ. "चमरान् परितः प्रवर्तिताश्वः क्वचिदाकर्णविकृष्टभल्लवर्षी" रघु० ९-६६। 6. ಹೊರಡಿಸಲ್ಪಟ್ಟ. "पदे पदे मौनमयान्तरीपिणी प्रवर्तिता सारघसारसारणी" नैष० ९-१५५।

**प्रवर्तिन् ಪ್ರವರ್ತಿನ್** (वि०) 1. ಕಾರ್ಯವನ್ನು ಮುಂದಕ್ಕೆ ನಡೆಸುವ. 2. ಕಾರ್ಯವನ್ನು ಪ್ರಾರಂಭಿಸುವ. 3. ಪ್ರೋತ್ಸಾಹಿಸುವ, ಚಿತಾವಣೆಮಾಡುವ. 4. ಹುಟ್ಟಿ ಹೊರಟುಬರುವ. 5. ಸ್ಥಾಪಿಸುವ, ಸೃಷ್ಟಿಸಿ ಪ್ರಾರಂಭಿಸುವ. प्र+वृतु (वर्तने)+णिच् "णिनिः" (३-१-१३४)। स्त्रियां "ङीप्" (४-१-५)। **प्रवर्तिनी ಪ್ರವರ್ತಿನೀ.** "त्वामामनन्ति प्रकृतिं पुरुषार्थप्रवर्तिनीम्" कुमा० २-१३।

**प्रवर्धन ಪ್ರವರ್ಧನ** (न०) 1. ಬೆಳೆಯುವುದು, ವೃದ್ಧಿ ಹೊಂದುವುದು. प्र+वृधु (वर्धने) "ल्युट्" (३-३-११५)। 2. ಅಧಿಕವಾಗುವುದು, ಹೆಚ್ಚುವುದು. (वि०) 3. ವೃದ್ಧಿಪಡಿಸುವ, ಹೆಚ್ಚಿಸುವ. प्र + वृधु कर्त० "ल्युः" (३-१-१३४)। "वातपित्तोपशमनं गुरु शुक्रप्रवर्धनम्" सुश्रुत० सूत्र० ४६-९९।

**प्रवर्धनीय ಪ್ರವರ್ಧನೀಯ** (वि०) 1. ವೃದ್ಧಿಪಡಿಸಲ್ಪಡುವ, ಹೆಚ್ಚಿಸಲ್ಪಡುವ. 2. ಬೆಳೆಸಲ್ಪಡುವ. प्र + वृधु (वृद्धौ) + णिच् "अनीयर्" (३-१-९६)। 3. ವೃದ್ಧಿಹೊಂದಿಸಬೇಕಾದ, ಹೆಚ್ಚಿಸಬೇಕಾದ. 4. ಬೆಳೆಸಬೇಕಾದ.

**प्रवर्धमान ಪ್ರವರ್ಧಮಾನ** (वि०) 1. ಅಭಿವೃದ್ಧಿ ಹೊಂದುತ್ತಿರುವ. 2. ಬೆಳೆಯುತ್ತಿರುವ. प्र + वृधु (वृद्धौ) "शानच्" (३-२-१२४)।

**प्रवर्धयत् ಪ್ರವರ್ಧಯತ್** (वि०) 1. ಅಭಿವೃದ್ಧಿಪಡಿಸುತ್ತಿರುವ. 2. ಬೆಳೆಸುತ್ತಿರುವ, ದೊಡ್ಡದಾಗಿ ಮಾಡುತ್ತಿರುವ. प्र+वृधु (वृद्धौ)+णिच् "शतृ" (३-२-१२४)। "शानच्" **–वर्धयमानः –ವರ್ಧಯಮಾನಃ.**

**प्रवसत् ಪ್ರವಸತ್** (वि०) ಪ್ರಯಾಣಮಾಡುತ್ತಿರುವ, ಪರಸ್ಥಳಕ್ಕೆ ಹೋಗುತ್ತಿರುವ. प्र + वस (निवासे) "शतृ" (३-२-१२४)। "प्रवसतः सुतरामुदकम्पयद्विदलकन्दलकम्पनलालितः" माघ० ६-३०।

**प्रवसन ಪ್ರವಸನ** (न०) ಪರಸ್ಥಳಕ್ಕೆ ಪ್ರಯಾಣಮಾಡುವುದು, ಊರುಬಿಟ್ಟು ಹೊರಟುಬರುವುದು. प्र + वस (निवासे) भावे "ल्युट्" (३-३-११५)।

**प्रवसनीय ಪ್ರವಸನೀಯ** (वि०) 1. ಪರಸ್ಥಳಕ್ಕೆ ಕಳುಹಿಸಲ್ಪಡುವ. 2. ಪರಸ್ಥಳಕ್ಕೆ ಕಳುಹಿಸಬೇಕಾದ. 3. ಬಹಿಷ್ಕರಿಸಿ ಕಳುಹಿಸಲ್ಪಡುವ, ಗಡೀಪಾರು ಮಾಡಲ್ಪಡುವ. प्र+वस (निवासे) "अनीयर्" (३-१-९६)। 4. ಗಡೀಪಾರು ಮಾಡಬೇಕಾದ.

**प्रवह ಪ್ರವಹ** (पुं०) 1. ಹೊರಗಡೆ ಸಂಚಾರಕ್ಕಾಗಿ ಹೊರಡುವುದು. प्र+वह (प्रापणे) "घः" निपा० (३-३-११९)। 2. ಸಪ್ತವಿಧವಾಯುಗಳಲ್ಲೊಂದು. "आवहः प्रवहश्चैव विवहश्च समीरणः। परावरः संवहश्च उद्वहश्च महाबलः॥ तथा परिवहः श्रीमान्" हरिवं०। ಈ ವಾಯುವು ಆವಹ ವಾಯುವಿಗೆ ಮೇಲುಭಾಗದಲ್ಲಿರುವುದು. "यस्माज्ज्योतींषि वहति प्रवहस्तेन स स्मृतः" विष्णुपु० २-१२। 3. ಒಂದು ಮೇಘ.

**प्रवहण ಪ್ರವಹಣ** (न०) 1. ಮೇನಾ, ಶಿಬಿಕೆ, ಪುರುಷರಿಂದ ಹೊರಲ್ಪಡುವ ಒಂದು ವಾಹನ, ಸುತ್ತಲೂ ಪರದೆಗಳಿಂದ ಮುಚ್ಚಿದ ಸ್ತ್ರೀಯರ ವಾಹನ. प्रोह्यतेऽनेन — प्र + वह (प्रापणे) कर० "ल्युट्" (३-३-११७)। 2. ರಥ, ಗಾಡಿ. "पर्यन्तोपनीतयवसबुसकवलसुपुष्टास्तैलाभ्यक्तविषाणा बद्धाः प्रवहणबलीवर्दाः" मृच्छ० ४।

**प्रवहत् ಪ್ರವಹತ್** (वि०) 1. ವಹಿಸಿರುವ, ಧರಿಸಿರುವ. प्र + वह (प्रापणे) "शतृ" (३-२-१२४)। "प्रवहन्तं सदामोदं सुप्तं परिजनान्वितम्" भट्टि० ८-५२। 2. ಹರಿಯುತ್ತಿರುವ.

**प्रवल्हिका ಪ್ರವಲ್ಹಿಕಾ** (स्त्री०) ಗೂಢಾರ್ಥವುಳ್ಳ ಮಾತು, ಅರ್ಥವಾಗದ ಪ್ರಶ್ನೆ, ಸಮಸ್ಯೆ, ಒಗಟು. प्र + वल्ह (परिभाषणे) "ण्वुल्" (३-१-१३३)।

**प्रवाक्(च्) ಪ್ರವಾಕ್ (ಚ್)** (वि०) 1. ಚೆನ್ನಾಗಿ ಮಾತಾಡುವವನು, ಚತುರನಾಗಿ ಮಾತಾಡುವವನು, ವಾಗ್ಮಿ. प्रकृष्टा वाक् यस्य। "वाचोयुक्तिपटुर्वाग्मी वचोज्ञः प्रवचाः प्रवाक्"। "जडानप्यनुलोमार्थान् प्रवाचः कृतिनां गिरः" माघ० २-२५। 2. ಅತಿಯಾಗಿ ಮಾತಾಡುವ, ಹರಟುವ, ಅರ್ಥವಿಲ್ಲದೆ ಮಾತಾಡುವ. "प्रवाचः कार्पण्यात्सवितथवाचोऽपि कृतिनः" मुद्रा० ३-१६।

**प्रवाचन ಪ್ರವಾಚನ** (न०) ಪ್ರಕಟಿಸುವುದು, ಘೋಷಿಸುವುದು, ಪ್ರಸಿದ್ಧಪಡಿಸುವುದು. प्र + वच (परिभाषणे) + णिच् "ल्युट्" (३-३-११५)।

**प्रवाणि ಪ್ರವಾಣಿ** (स्त्री०) ನೇಯ್ಗೆಯುವನ ಒಂದು ಸಲಕರಣೆ. ಹಾಸು ಎಳೆಗಳ ನಡುವೆ ಹೊಕ್ಕು ಎಳೆಗಳನ್ನು ಹಾಯಿಸುವ ಲಾಳಿ. प्रकर्षेण ऊयतेऽनन — प्र + वेञ् (तन्तुसन्ताने) "ल्युट्" (३-३-११७)। "ङीप्" (४-१-१५)। निपा० ह्रस्वः।

**प्रवात ಪ್ರವಾತ** (पुं०) 1. ಸ್ವಚ್ಛವಾದ ಗಾಳಿ, ನಿರ್ಮಲವಾದ ಗಾಳಿ. प्रकृष्टो वातः। "देव, प्रवातशयने देवी निषण्णा रक्तचन्दनधारिणा चरणेन भगवत्या कथाभिर्विनोद्यमाना तिष्ठति" माल० ४। 2. ಬಿರುಗಾಳಿ, ವೇಗವಾದ ಗಾಳಿ. "ननु प्रवातेऽपि निष्कम्पा गिरयः" शाकु० ६। (वि०) 3. ಬಿರುಗಾಳಿಯಿಂದ ಕೂಡಿದ ಸ್ಥಳ, ವೇಗವಾಗಿ ಬೀಸುವ ಗಾಳಿಯುಳ್ಳ ಪ್ರದೇಶ. प्रभूतो वातो यत्र। "प्रवातनीलोत्पलनिर्विशेषमधीरविप्रेक्षितमायताक्ष्या" कुमा० १-४६।

**प्रवाद ಪ್ರವಾದ** (पुं०) 1. ಪರಸ್ಪರ ಮಾತು, ಪರಸ್ಪರ ಪ್ರತಿಭಟನೆಯ ಮಾತು, ಕೆಣಕಿ ಮಾತಾಡುವುದು. प्र+वद (व्यक्तायां वाचि) "घञ्" (३-३-१८)। "इत्थं प्रवादं युधि संप्रहारं प्रचक्रतू रामनिशाविहारौ" भट्टि० २-३६। 2. ವದಂತಿ, ಜನರ ಆಡುಮಾತು. प्रकृष्टो वादः। "अनुरागप्रवादस्तु वत्सयोः सार्वलौकिकः" मालती० १-१६। 3. ನಿಂದೆ, ದೂಷಣೆ. "सन्याः श्रियामनुपभोगनिरर्थकत्वदोषप्रवादममृजन्नगनिम्नगानाम्" माघ० ५-२८।

**प्रवार ಪ್ರವಾರ** (पुं०) ಹೊದೆಯುವ ವಸ್ತ್ರ, ಉತ್ತರೀಯ. प्रव्रियतेऽनेन—प्र+वृञ् (वरणे) वा "घञ्" (३-३-५४)। पक्षे प्रवरः ಪ್ರವರಃ.

**प्रवारण ಪ್ರವಾರಣ** (पुंन०) 1. ತನ್ನ ಇಷ್ಟದಂತೆ ಮಾಡುವ ದಾನ, ನಿರ್ಬಂಧವಿಲ್ಲದೆ ಮಾಡುವ ದಾನ, ಫಲಾಪೇಕ್ಷೆಯಿಂದ ಮಾಡುವ ದಾನ. प्रव्रियते — प्र + वृञ् (वरणे) +णिच् "ल्युट्" (३-३-११५)। (न०)2. ನಿಷೇಧಿಸುವುದು, ತಡೆಯುವುದು. "प्रवारणं निषेधे स्यात् काम्यदाने च न द्वयोः" मेदि०।

**प्रवाल ಪ್ರವಾಲ** (पुंन०) 1. ಕಿಸಲಯ, ಅಂಕುರ, ಚಿಗುರು. प्रवलति — प्र + वल (प्राणने) "णः" (३-१-१४०)। "तयोः प्रवालैर्वनयोस्तथाम्बुजैर्नियोद्धुकामे किमु बद्धवर्मणी" नैष० १-१२३। 2. ವಿದ್ರುಮ, ಹವಳ. "प्रवालरागच्छुरितं सुषुप्सया हरिर्घनच्छायमिवार्णसां निधिम्" नैष० १-७४। 3. ವೀಣಾದಂಡ, ವೀಣೆಯ ದಂಡಿಗೆ. "वीणादण्डः प्रवालः स्यात्" अम०।

**प्रवास ಪ್ರವಾಸ** (पुं०) 1. ಪರಸ್ಥಳಕ್ಕೆ ಹೊರಟುಬರುವುದು, ಪರಸ್ಥಳದ ಪ್ರಯಾಣ. प्र + वस (निवासे)। "रामप्रवासे व्यमृशन्न दोषं जनापवादं स नरेन्द्रमृत्युम्" भट्टि० ३-७। 2. ಪರಸ್ಥಳದ ವಾಸ. "इष्टप्रवासजनितान्यबलाजनस्य दुःखानि नूनमतिमात्रसुदुःसहानि" शाकु० ४-२।

**प्रवासन ಪ್ರವಾಸನ** (न०) 1. ಪರಸ್ಥಳಕ್ಕೆ ಕಳುಹಿಸುವುದು, ಊರಿನಿಂದ ಹೊರಗೆ ಕಳುಹಿಸುವುದು. 2. ದೇಶಭ್ರಷ್ಟನನ್ನಾಗಿ ಮಾಡುವುದು, ಗಡೀಪಾರುಮಾಡುವುದು. प्र+वस (निवासे) + णिच् "ल्युट्" (३-३-११५)। "रामस्य ब्राहुरसि निर्भरगर्भखिन्नसीताविवासनपटोः करुणा कुतस्ते" उ०रा० २-१०। 3. ವಧೆ, ಕೊಲ್ಲುವುದು. प्र + वस (छेदे) + णिच् "ल्युट्" (३-३-११५)।

**प्रवासित ಪ್ರವಾಸಿತ** (वि०) ದೇಶಭ್ರಷ್ಟನಾಗಿ ಮಾಡಲ್ಪಟ್ಟ. प्र + वस (निवासे) + णिच् "क्तः" (३-२-१०२)।

**प्रवासिन् ಪ್ರವಾಸಿನ್** (वि०) 1. ದೇಶಾಂತರದಲ್ಲಿ ವಾಸಮಾಡುವ. 2. ಪ್ರಯಾಣಮಾಡುವ, ಪರಸ್ಥಳದ ಪ್ರಯಾಣವನ್ನು ಕೈಗೊಂಡಿರುವ. प्रवस्तुं शीलमस्य — प्र + वस (निवासे) "घिनुण्" (३-२-१४५)।

**प्रवास्य ಪ್ರವಾಸ್ಯ** (वि०) ಹೊರಗೆ ಕಳುಹಿಸಲ್ಪಡುವ, ಗಡೀಪಾರು ಮಾಡಲ್ಪಡುವ.

**प्रवाह ಪ್ರವಾಹ** (पुं०) 1. ಹೊನಲು, ಹರಿಯುವ ನೀರು. प्र + वह (प्रापणे) "घञ्" (३-३-१८)। "पूर्वं तदुत्पीडितवारिराशिः सरित्प्रवाहस्तटमुत्ससर्ज" रघु० ५-४६। 2. ಉತ್ತಮವಾದ ಅಶ್ವ, ಶ್ರೇಷ್ಠವಾದ ಕುದುರೆ. प्रकृष्टो वाहः। 3. ಹೊರಡುವುದು, ಮುಂದಕ್ಕೆ ಹರಿದು ಬರುವುದು, ವಿಷಯವು ಮುಂದಕ್ಕೆ ಓಡುವುದು, ವಿಷಯಗಳ ಅವಿಚ್ಛಿನ್ನವಾದ ಮುನ್ನಡೆ. "ब्रह्मादयः सुरगणा मुनयोऽथ सिद्धाः सत्त्वैकतानमतयो वचसां प्रवाहैः" भाग० ७-९-८। "प्रवाहस्तु प्रवृत्तौ स्यादपि स्रोतसि वारिणः" मेदि०। 4. ಮಲಮೂತ್ರಾದಿಗಳ ವಿಸರ್ಜನೆ. "प्रवाहेण गुदभ्रंशे मूत्राघाते कटिग्रहे। मधुराम्लशृतं तैलं सर्पिर्वाप्यनुवासनम्" सुश्रुत० उत्तरतं० ४०।

**प्रवाहक ಪ್ರವಾಹಕ** (पुं०) 1. ರಾಕ್ಷಸ. (वि०) 2. ಮುಂದಕ್ಕೆ ಸಾಗಿಸುವ. प्रवहति — प्र + वह (प्रापणे) "ण्वुल्" (३-१-१३३)। "णिनिः" (३-१-१३४)। —वाहिन् —ವಾಹಿನ್.

**प्रवाहिका ಪ್ರವಾಹಿಕಾ** (स्त्री०) ಗ್ರಹಣೀರೋಗ, ಅತಿಸಾರ, ಅತಿಯಾದ ಭೇದಿ. प्रवहति — प्र + वह (प्रापणे) "ण्वुल्" (३-३-१०८)।

**प्रवाही ಪ್ರವಾಹೀ** (स्त्री०) ಮರಳು. प्रोह्यते—प्र+वह (प्रापणे) "घञ्" (३-३-१९)। "ङीष्" (४-१-४१)।

**प्रविकर्ष ಪ್ರವಿಕರ್ಷ** (पुं०) ಚೆನ್ನಾಗಿ ಎಳೆಯುವುದು. "प्रविकर्षनिनादभिन्नरन्ध्रः" किरा० १३-१६।

**प्रविकसत् ಪ್ರವಿಕಸತ್** (वि०) 1. ಅರಳುತ್ತಿರುವ. प्र + वि + कस (गतौ) "शतृ" (३-२-१२४)। 2. ಪ್ರಕಾಶಿಸುತ್ತಿರುವ. "प्रविकसति चिराय द्योतिताशेषलोके दशशतकरमूर्तविक्षिणीव द्वितीये" माघ० ११-६३।

**प्रविकसित ಪ್ರವಿಕಸಿತ** (वि०) ಚೆನ್ನಾಗಿ ಅರಳಿರುವ. प्र + वि + कस (गतौ) "क्तः" (३-४-७२)।

**प्रविकास ಪ್ರವಿಕಾಸ** (पुं०) 1. ಚೆನ್ನಾಗಿ ಅರಳುವುದು. प्र + वि + कस (गतौ) "घञ्" (३-३-१८)। 2. ಪ್ರಕಾಶಿಸುವುದು, ಹೊಳೆಯುವುದು.

**प्रविकासिन् ಪ್ರವಿಕಾಸಿನ್** (वि०) ವಿಕಸಿಸುವ, ಅರಳುವ. प्रविकसति — प्र + वि + कस (गतौ) "णिनिः" (३-१-१३४)।

**प्रविख्यात ಪ್ರವಿಖ್ಯಾತ** (वि०) ಪ್ರಸಿದ್ಧಿಪಡೆದ, ಖ್ಯಾತಿಯನ್ನು ಗಳಿಸಿದ. प्र + वि + ख्या (प्रकथने) "क्तः" (३-४-७२)।

**प्रविख्याति ಪ್ರವಿಖ್ಯಾತಿ** (स्त्री०) ಬಹಳ ಪ್ರಸಿದ್ಧಿ, ಕೀರ್ತಿ. प्र + वि + ख्या (प्रकथने) "क्तिन्" (३-३-९४)।

**प्रविचलत् ಪ್ರವಿಚಲತ್** (वि०) 1. ಅಲುಗಾಡುತ್ತಿರುವ, ಅದಿರುತ್ತಿರುವ. प्र+ वि + चल (कम्पने) "शतृ" (३-२-१२४)। 2. ದಾರಿತಪ್ಪಿ ಹೋಗುತ್ತಿರುವ, ಮಾರ್ಗಬಿಟ್ಟು ಹೋಗುತ್ತಿರುವ.

**प्रविचलित ಪ್ರವಿಚಲಿತ** (वि०) 1. ಅಲುಗಾಡಿದ, ಅದಿರಿದ. प्र + वि + चल (कम्पने) "क्तः" (३-४-७२)। 2. ದಾರಿತಪ್ಪಿಹೋಗಿರುವ, ಮಾರ್ಗಬಿಟ್ಟು ಹೋಗಿರುವ. 3. ಹೊರಟಿರುವ, ಮುಂದಕ್ಕೆ ನಡೆದ.

**प्रवितत ಪ್ರವಿತತ** (वि०) 1. ಹರಡಿಕೊಂಡಿರುವ, ವಿಸ್ತಾರಗೊಂಡಿರುವ. प्र + वि + तनु (विस्तारे) "तन्" (उ० ३-८८)। "प्रविततशरजालच्छन्नविश्वान्तराले" किरा० १४-६५। 2. ಕೆದರಿರುವ, ಬಿಚ್ಚಿ ಕೆದರಿಹೋಗಿರುವ. "हेम्नः स्थलीषु परितः परिवृत्य वाजी धुन्वन्वपुः प्रविततायतकेशपङ्क्तिः" माघ० ५-५५।

**प्रविदारण ಪ್ರವಿದಾರಣ** (न०) 1. ಯುದ್ಧ, ಕಾಳಗ. प्र + वि + दृ (विदारणे) + णिच् अधि० "ल्युट्" (३-३-११७)। 2. ಸೀಳುವುದು, ಒಡೆಯುವುದು, भावे "ल्युट्" (३-३-११५)।

**प्रविदारित ಪ್ರವಿದಾರಿತ** (वि०) 1. ಸೀಳಲ್ಪಟ್ಟ, ಒಡೆಯಲ್ಪಟ್ಟ. प्र + वि + दृ (विदारणे) + णिच "क्तः" (३-२-१०२)। 2. ಹೆಚ್ಚು ವಿಕಾಸಗೊಳಿಸಲ್ಪಟ್ಟ, ಚೆನ್ನಾಗಿ ತೆರೆಯಲ್ಪಟ್ಟ. "प्रविदारितारुणतरोग्रनयनकुसुमोज्ज्वलः स्फुरन्" माघ० १५-४९।

**प्रविद्ध ಪ್ರವಿದ್ಧ** (वि०) ಎಸೆಯಲ್ಪಟ್ಟ, ಬಿಸಾಡಲ್ಪಟ್ಟ. प्र + व्यध (ताडने) "क्तः" (३-२-१०२)।

**प्रविभक्त ಪ್ರವಿಭಕ್ತ** (वि०) 1. ಬೇರ್ಪಡಿಸಲ್ಪಟ್ಟ, ಪ್ರತ್ಯೇಕವಾಗಿ ಮಾಡಲ್ಪಟ್ಟ. प्र+वि+भज (सेवायाम्) "क्तः" (३-२-१०२)। 2. ಭಾಗ ಮಾಡಲ್ಪಟ್ಟ, ಎರಡು ಹೋಳಾಗಿ ಮಾಡಲ್ಪಟ್ಟ. "त्रिस्रोतसं वहति यो गगनप्रतिष्ठां ज्योतींषि वर्तयति च प्रविभक्तरश्मिः" शाकु० ७-६।

**प्रविभाग ಪ್ರವಿಭಾಗ** (पुं०) ಬೇರೆ ಬೇರೆ ಭಾಗ, ಪಾಲು, ಹಂಚಿಕೆ. प्र+वि+भज (सेवायाम्) "घञ्" (३-३-१९)।

**प्रविरल ಪ್ರವಿರಲ** (वि०) 1. ಬಹಳ ವಿರಳವಾದ, ಎಡೆಬಿಟ್ಟಿರುವ, ಮಧ್ಯೆ ಅಂತರದಿಂದ ಕೂಡಿದ, ವ್ಯವಧಾನದಿಂದ ಕೂಡಿದ. 2. ಬಹಳ ಅಲ್ಪವಾದ, ಬಹಳ ಕಡಮೆಯಾದ. प्रकृष्टं विरलं यस्मिन्। "प्रथममन्यभृताभिरुदीरिताः प्रविरला इव मुग्धवधूकथाः" रघु० ९-३४।

**प्रविलय ಪ್ರವಿಲಯ** (पुं०) ನಿವೃತ್ತಿ, ನಾಶ, ಅಳಿವು. प्रकर्षेण विलयः। "ब्रह्मणीव विवर्तानां क्वापि प्रविलयः कृतः" उ० रा० ६-६।

**प्रविवत्सत् ಪ್ರವಿವತ್ಸತ್** (वि०) ಪ್ರವಾಸ ಮಾಡಲು ಇಚ್ಛಿಸುತ್ತಿರುವ, ಪರಸ್ಥಳಕ್ಕೆ ಹೊರಡಲು ಇಚ್ಛಿಸುತ್ತಿರುವ. प्र + वस (निवासे) + सन् "शतृ" (३-२-१२४) "प्रविवत्सतः प्रियतमस्य निगडमिव चक्षुरक्षिपत माघ० १५-८६।

**प्रविवत्सा ಪ್ರವಿವತ್ಸಾ** (स्त्री०) ಪ್ರವಾಸಮಾಡುವ ಅಪೇಕ್ಷೆ ಪರಸ್ಥಳಕ್ಕೆ ಹೊರಡುವ ಇಚ್ಛೆ. प्र+वस (निवासे)+सन् "अः" (३-३-१०२)।

**प्रविवत्सु ಪ್ರವಿವತ್ಸು** (वि०) ಪರಸ್ಥಳಕ್ಕೆ ಹೊರಟುಬರಲು ಅಪೇಕ್ಷಿಸುವ, ಪ್ರವಾಸಮಾಡಲು ಇಚ್ಛಿಸುವ. प्र + वस (निवासे) + सन् "उः" (३-२-१६८)।

**प्रविशत् ಪ್ರವಿಶತ್** (वि०) ಪ್ರವೇಶಿಸುತ್ತಿರುವ, ಒಳಗೆ ಹೋಗುತ್ತಿರುವ. प्र + विश (प्रवेशने) "शतृ" (३-२-१२४)। "पुरं परस्य प्रविशन्वियोगी योगीव चित्रं स रराज राजा" नैष० ६-४६। स्त्रियां "ङीप्" (४-१-६)। **–विशन्ती –ವಿಶನ್ತೀ.**

**प्रविश्लेष ಪ್ರವಿಶ್ಲೇಷ** (पुं०) ಅಗಲುವಿಕೆ, ಬೇರೆಯಾಗುವಿಕೆ.

**प्रविष्ट ಪ್ರವಿಷ್ಟ** (वि०) ಪ್ರವೇಶಿಸಿದ, ಒಳಗೆ ಹೋದ. प्र+विश (प्रवेशने) "क्तः" (३-४-७२)। "तच्चिन्तया-न्तर्निरचायि चारु स्वस्यैव तन्व्या हृदयं प्रविष्टः" नैष० ६-३०।

**प्रवीण ಪ್ರವೀಣ** (वि०) ನಿಪುಣ, ಜಾಣ, ನುರಿತವನು, ಚತುರ. वीणया प्रगायति प्रवीणयति—प्र+वीणा+णिच् (३-१-२५) "अच्" (३-१-१३४)। "अपि भ्रमी-भङ्गिभिरावृताङ्गं वासो लतावेष्टितकप्रवीणम्" नैष० ७-९७। "विश्वावसुप्राग्रहरैः प्रवीणैः संगीयमान-त्रिपुरावदानः" कुमा० ७-४८।

**प्रवीर ಪ್ರವೀರ**(पुं०) 1. ಒಳ್ಳೆಯ ವೀರಪುರುಷ, ಉತ್ತಮ ಯೋಧ. प्रकृष्टो वीरः। 2. ಉತ್ತಮ ಪುರುಷ, ಶ್ರೇಷ್ಠ ಪುರುಷ.

**प्रवृत्त ಪ್ರವೃತ್ತ** (वि०) 1. ಪ್ರಾರಂಭವಾದ. प्र + वृतु (वर्तने) "क्तः" (३-४-७२)। "तदिदमेव तावद-चिरप्रवृत्तमुपभोगक्षमं ग्रीष्मसमयमधिकृत्य गीयताम्" शाकु० १। 2. ಒಂದು ಕಾರ್ಯದಲ್ಲಿ ತೊಡಗಿರುವ, ಪ್ರಾರಂಭಿಸಿರುವ, ಪ್ರಯತ್ನಿಸಿರುವ. "प्रवृत्त एव स्वयमुज्झितश्रमः क्रमेण पेष्टुं भुवनद्विषामसि" माघ० १-४०। 3. ಹುಟ್ಟಿದ, ಉತ್ಪನ್ನವಾದ, ಉಂಟಾದ, "अनुग्रहं संस्मरणप्रवृत्तमिच्छामि संवर्धितमाज्ञया ते" कुमा० ३-३।

**प्रवृत्ति ಪ್ರವೃತ್ತಿ** (स्त्री०) 1. ವಾರ್ತೆ, ಸಮಾಚಾರ, ಸುದ್ದಿ. प्रवर्तते व्याप्नोति — प्र + वृतु (वर्तने) "क्तिच्" (३-३-१७४)। "प्रत्यासन्ने नभसि दयिताजीवितालम्ब-नार्थी जीमूतेन स्वकुशलमयीं हारयिष्यन् प्रवृत्तिम्" मेघ० २-४। 2. ವ್ಯಾಪಾರ, ಪ್ರಯತ್ನ. "प्रायेण सामग्र्यविधौ गुणानां पराङ्मुखी विश्वसृजः प्रवृत्तिः" कुमा० ३-२८। 3. ಪ್ರವಾಹ, ನೀರು ಮೊದಲಾದ ದ್ರವಪದಾರ್ಥದ ಹೊನಲು. 4. ಪ್ರಾರಂಭ, ಉಪಕ್ರಮ. "तपस्विनः स्थाणुवनौकसस्तामाकालिकीं वीक्ष्य मधु-प्रवृत्तिम्" कुमा० ३-३४। 5. ಒಲವು, ಒಲುವುದು. "सतां हि सन्देहपदेषु वस्तुषु प्रमाणमन्तःकरणप्रवृत्तयः" शाकु० १-१९। 6. ಕಾರ್ಯ, ಕೆಲಸ, ವ್ಯಾಪಾರ. "त्वां प्रत्यकस्मात्कलुषप्रवृत्तावस्त्येव मन्युर्भरताग्रजे मे" रघु० १४-७३। 7. ನಡೆ, ಓಟ, ಹರಿವು, ಗತಿ. "प्रवृत्ति-रासीच्छब्दानां चरितार्था चतुष्टयी" कुमा० २-१७। 8. ಕಾಣಿಸಿಕೊಳ್ಳುವುದು, ತೋರ್ಪಡಿಸಿಕೊಳ್ಳುವುದು, ಮೈದೋರುವುದು. "आद्ये वः कुसुमप्रसूतिसमये यस्या भवत्युत्सवः" शाकु० ४-८। 9. ಪ್ರವೃತ್ತಿಮಾರ್ಗ, ಪ್ರಾಪಂಚಿಕವ್ಯಾಪಾರದಲ್ಲಿ ಸದಾ ಆಸಕ್ತನಾಗಿರುವುದು. 10. ಪ್ರವರ್ತನ, ಒಂದು ಕಾರ್ಯದಲ್ಲಿ ತೊಡಗುವುದು. 11. ಕೈಹಿಡಿದ ಕಾರ್ಯದಲ್ಲಿ ಪಟ್ಟುಹಿಡಿದು ಪ್ರಯತ್ನವನ್ನು ಮುಂದುವರೆಸುವುದು. 12. ಬಳಕೆಯಲ್ಲಿರುವುದು, ವ್ಯವಹಾರದಲ್ಲಿರುವುದು. 13. ಉಜ್ಜಯಿನೀ ನಗರ.

**प्रवृद्ध ಪ್ರವೃದ್ಧ** (वि०) 1. ಚೆನ್ನಾಗಿ ಬೆಳೆದಿರುವ, ಅಭಿವೃದ್ಧಿ ಹೊಂದಿರುವ. प्र + वृधु (वृद्धौ) "क्तः" (३-४-७२)। "सत्त्वं समुत्कटं जातं प्रवृद्धं शास्त्रदर्शनात्"। 2. ಅಧಿಕವಾದ, ಹೆಚ್ಚಾದ. "प्रवृद्धमन्द्राम्बुदधीरनादः कृष्णार्ण-वाभ्यर्णचरैकहंसः" माघ० ३-२१। 3. ದೊಡ್ಡದಾಗಿ ಬೆಳೆದಿರುವ.

**प्रवृद्धि ಪ್ರವೃದ್ಧಿ** (स्त्री०) 1. ಚೆನ್ನಾಗಿ ಬೆಳೆಯುವುದು, ಅಭಿವೃದ್ಧಿಹೊಂದುವುದು. प्र + वृधु (वृद्धौ) "क्तिन्" (३-३-९४)। "प्रवृद्धौ हीयते चन्द्रः समुद्रोऽपि तथा-विधः" रघु० १७-७१। 2. ಅಧಿಕವಾಗುವುದು, ಹೆಚ್ಚುವುದು. 3. ದೊಡ್ಡದಾಗಿ ಬೆಳೆಯುವುದು. "श्मश्रुप्रवृद्धि-जनिताननविक्रियांश्च प्लक्षान् प्ररोहजटिलानिव मन्त्रि-वृद्धान्" रघु० १३-७१।

**प्रवेक ಪ್ರವೇಕ** (वि०) ಉತ್ತಮವಾದ, ಶ್ರೇಷ್ಠವಾದ. प्रविच्यते—प्र+विचिर् (पृथग्भावे) "घञ्" (३-३-१९)।

**प्रवेग ಪ್ರವೇಗ** (पुं०) ಅಧಿಕವಾದ ವೇಗ.

**प्रवेणि ಪ್ರವೇಣಿ** (स्त्री०) 1. ಹೆರಳು, ಹೆಣೆದಿರುವ ಜಡೆ. प्र + वेणृ (गतिज्ञानचिन्तानिशामनादौ) "इन्" (उ० ४-११८)। वा दीर्घः (ग० ४-१-४५)। **–वेणी –ವೇಣೀ.** "हेमभक्तिमतीं भूमेः प्रवेणीमिव पिप्रिये" रघु० १५-३०। 2. ಆನೆಯ ಮೇಲೆ ಹೊದಿಸುವ ಚಿತ್ರವರ್ಣದ ಕಂಬಳಿ, ರತ್ನಗಂಬಳಿ.

**प्रवेप ಪ್ರವೇಪ** (पुं०) ನಡುಗುವುದು, ಕಂಪಿಸುವುದು. टु वेपृ (कम्पने) "घञ्" (३-३-१८)। भावे "ल्युट्" (३-३-११५)। **–वेपनम् –ವೇಪನಮ್.** "अथुच्" (३-३-८९)। **–वेपथुः –ವೇಪಥುಃ,**

**प्रवेपमान ಪ್ರವೇಪಮಾನ** (वि०) ಕಂಪಿಸುತ್ತಿರುವ, ನಡುಗುತ್ತಿರುವ, ಅದಿರುತ್ತಿರುವ. प्र+टु वेपृ (कम्पने) "शानच्" (३-२-१२४)। "मुखेन सा पद्मसुगन्धिना निशि प्रवेपमानाधरपत्रशोभिना" कुमा० ५-२७।

**प्रवेश ಪ್ರವೇಶ** (पुं०) ಪ್ರವೇಶಿಸುವುದು, ಒಳಕ್ಕೆ ಹೋಗುವುದು, ಒಳಕ್ಕೆ ಬರುವುದು. प्र + विश (प्रवेशने) भावे "घञ्" (३-३-१८)। "प्रवेशयामास च भर्तुरेनां भ्रूक्षेपमात्रानुमतप्रवेशाम्" कुमा० ३-६०। "तव प्रवेशे सुकृतानि हेतुर्मन्ये मदक्ष्णोरपि तावदत्र" नैष० ८-२७।

**प्रवेशक ಪ್ರವೇಶಕ** (पुं०) ಐದು ವಿಧ ಅರ್ಥೋಪಕ್ಷೇಪಕಗಳಲ್ಲೊಂದು. [ನಾಟಕದ ಅಂಕಗಳ ಮಧ್ಯದಲ್ಲಿ ಪ್ರತ್ಯಕ್ಷವಾಗಿ ಪ್ರದರ್ಶಿಸಲು ಅನುಚಿತವಾದ ಮತ್ತು ನೀರಸವಾದ ಕಥಾವಸ್ತುವನ್ನು ವಿಷ್ಕಂಭ ಮೊದಲಾದ ಐದು ಅರ್ಥೋಪಕ್ಷೇಪಕಗಳ ಮೂಲಕ ಸೂಚಿಸಬೇಕು.] (1) विष्कम्भः (2) चूलिका (3) अङ्कास्यम् (4) प्रवेशकः ಮತ್ತು (5) अङ्कावतारः ಇವು ಐದು ಅರ್ಥೋಪಕ್ಷೇಪಕಗಳು. ಹಿಂದೆ ನಡೆದ ಮತ್ತು ಮುಂದೆ ನಡೆಯಲಿರುವ ಕಥೆಯ ವಸ್ತುವನ್ನು ಸೂಚಿಸುವ ಅರ್ಥೋಪಕ್ಷೇಪಕವು ಪ್ರವೇಶಕ. ಪ್ರವೇಶಕಕ್ಕೆ ಮೊದಲನೆಯ ಅಂಕದಲ್ಲಿ ಅವಕಾಶವಿಲ್ಲ. ಇದು ನೀಚಪಾತ್ರಗಳಿಂದ ಪ್ರಯೋಗಿಸಲ್ಪಡುವುದು. "वृत्तवर्तिष्यमाणानां कथांशानां निदर्शकः। प्रवेशकस्तु नाद्येऽङ्के नीचपात्रप्रयोजितः"।

**प्रवेशन ಪ್ರವೇಶನ** (न०) 1. ಒಳಗೆ ಹೋಗುವುದು, ಒಳಕ್ಕೆ ಬರುವುದು. प्र+विश (प्रवेशने) भावे "ल्युट्" (३-३-११५)। "तव योगप्रभावेन शक्यं तत्र प्रवेशनम्" हरिवं०। 2. ಮಹಾದ್ವಾರ, ಮನೆಯ ಪ್ರಧಾನ ದ್ವಾರ. प्रविश्यतेऽनेन—प्र + विश (प्रवेशने) कर० "ल्युट्" (३-३-११७)।

**प्रवेशनीय ಪ್ರವೇಶನೀಯ** (वि०) 1. ಪ್ರವೇಶಿಸಲ್ಪಡುವ. 2. ಪ್ರವೇಶಿಸಲು ಅರ್ಹವಾದ. 3. ಪ್ರವೇಶಿಸಬೇಕಾದ. प्र + विश (प्रवेशने) "अनीयर्" (३-१-९६)। प्र+विश+णिच् "अनीयर्" (३-१-९६)। 4. ಪ್ರವೇಶಿಸುವಂತೆ ಮಾಡಲ್ಪಡುವ. 5. ಪ್ರವೇಶಿಸುವಂತೆ ಮಾಡಲು ಅರ್ಹವಾದ. 6. ಪ್ರವೇಶಿಸುವಂತೆ ಮಾಡಬೇಕಾದ. "तव्यः" (३-१-९६)। केवलात् **–वेष्टव्यम् –ವೇಷ್ಟವ್ಯಮ್.** ण्यन्तात् **–वेशयितव्यम् –ವೇಶಯಿತವ್ಯಮ್.**

**प्रवेश्य ಪ್ರವೇಶ್ಯ** (वि०) ಪ್ರವೇಶಿಸಲ್ಪಡುವ. प्र + विश (प्रवेशने) "ण्यत्" (३-१-१२४)।

**प्रवेष्ट ಪ್ರವೇಷ್ಟ** (पुं०) 1. ತೋಳು, ಭುಜ, ಬಾಹು. प्र+वेष्ट (वेष्टने) "अच्" (३-१-१३४)। 2. ಆನೆಯ ಬೆನ್ನು.

**प्रव्यक्त ಪ್ರವ್ಯಕ್ತ** (वि०) ಸ್ಫುಟವಾದ, ಸ್ಪಷ್ಟವಾದ. प्रव्यज्यते—प्र + वि + अञ्जू (व्यक्त्यादौ) "क्तः" (३-२-१०२)।

**प्रव्रजन ಪ್ರವ್ರಜನ** (न०) 1. ಸಂನ್ಯಾಸ ಸ್ವೀಕಾರ, ಸರ್ವಸಂಗಪರಿತ್ಯಾಗಪೂರ್ವಕ ನಾಲ್ಕನೆಯ ಆಶ್ರಮವನ್ನು ಸ್ವೀಕರಿಸುವುದು. प्र + व्रज (गतौ) भावे "ल्युट्" (३-३-११५)। 2. ಊರುಬಿಟ್ಟು ಹೊರಡಿಸುವುದು, ಗಡೀಪಾರು ಮಾಡಿಸುವುದು.

**प्रव्रजित ಪ್ರವ್ರಜಿತ** (पुं०) 1. ಸಂನ್ಯಾಸಿ, ನಾಲ್ಕನೆಯ ಆಶ್ರಮವನ್ನು ಸ್ವೀಕರಿಸಿದವನು. (न०) 2. ಸಂನ್ಯಾಸ ಸ್ವೀಕಾರ.

**प्रव्रजिता ಪ್ರವ್ರಜಿತಾ** (स्त्री०) ಸಂನ್ಯಾಸಿನಿ.

**प्रव्रज्या ಪ್ರವ್ರಜ್ಯಾ** (स्त्री०) 1. ನಾಲ್ಕನೆಯ ಆಶ್ರಮ, ಸಂನ್ಯಾಸ. प्र + व्रज (गतौ) "क्यप्" (३-३-९८)। "मुक्तायज्ञोपवीतानि बिभ्रतो हैमवल्कलाः। रत्नाक्षसूत्राः प्रव्रज्यां कल्पवृक्षा इवाश्रिताः" कुमा० ६-६। 2. ಸರ್ವಸಂಗ ಪರಿತ್ಯಾಗಮಾಡಿ ವೈರಾಗ್ಯದಿಂದ ಭಿಕ್ಷುಕನಾಗಿ ಸಂಚರಿಸುತ್ತಿರುವುದು. "ततश्च प्रव्रज्यासमयसुलभाचारविमुखः प्रसक्तस्ते यत्नः प्रभवति पुनर्दैवमपरम्" मालती० ४-६।

**प्रव्रश्चन ಪ್ರವ್ರಶ್ಚನ** (पुं०) 1. ಕೈಕೊಡಲಿ. 2. ಸಣ್ಣ ಕತ್ತಿ, ಕುಡುಗೋಲು. प्रव्रश्च्यतेऽनेन—प्र + ओ व्रश्चू (छेदने) कर० "ल्युट्" (३-३-११७)। इध्मप्रव्रश्चनः कुठारः सि० कौ०।

**प्रशंसक ಪ್ರಶಂಸಕ** (वि०) ಪ್ರಶಂಸೆ ಮಾಡುವವನು, ಹೊಗಳುವವನು, ಕೊಂಡಾಡುವವನು. प्र+शंसु (स्तुतौ) "ण्वुल्" (३-१-१३३)।

**प्रशंसत् ಪ್ರಶಂಸತ್** (वि०) ಹೊಗಳುತ್ತಿರುವ, ಸ್ತೋತ್ರ ಮಾಡುತ್ತಿರುವ, ಕೊಂಡಾಡುತ್ತಿರುವ. प्र+शंसु (स्तुतौ) "शतृ" (३-२-१२४)। स्त्रियां "ङीप्" (४-१-६)। **–शंसन्ती –ಶಂಸನ್ತೀ.**

**प्रशंसन ಪ್ರಶಂಸನ** (न०) 1. ಹೊಗಳಿಕೆ, ಕೊಂಡಾಡುವುದು. प्र+शंसु (स्तुतौ) भावे "ल्युट्" (३-३-११५)। 2. ಹೊಗಳಿಸುವುದು. णिच् "ल्युट्" (३-३-११५)।

**प्रशंसनीय ಪ್ರಶಂಸನೀಯ** (वि०) 1. ಹೊಗಳಲ್ಪಡುವ, ಶ್ಲಾಘಿಸಲ್ಪಡುವ. प्र+शंसु (स्तुतौ) कर्म० "अनीयर्"

(३-१-९६)। 2. ಶ್ಲಾಘಿಸಬೇಕಾದ. 3. ಶ್ಲಾಘಿಸಲು ಅರ್ಹವಾದ. "प्रशंसनीयानि बभूवुराजौ पश्चात्प्रयातानि धनुर्धराणाम्" याद० २०-५८। "तव्य:"। **-शंसितव्यम् -ಶಂಸಿತವ್ಯಮ್.**

**प्रशंसयत् ಪ್ರಶಂಸಯತ್** (वि०) ಹೊಗಳಿಸುತ್ತಿರುವ, ಕೊಂಡಾಡಿಸುತ್ತಿರುವ. प्र+शंसु (स्तुतौ)+णिच् "शतृ" (३-२-१२४)। स्त्रियां "ङीप्" (४-१-६)। **-यन्ती -ಯಂತೀ.** "शानच्" (३-२-१२४)। **-शंसयमान: -ಶಂಸಯಮಾನಃ.**

**प्रशंसा ಪ್ರಶಂಸಾ** (स्त्री०) 1. ಹೊಗಳಿಕೆ, ಕೊಂಡಾಡುವುದು. प्र+शंसु (स्तुतौ) भावे "अ:" (३-३-१०२)। 2. ಖ್ಯಾತಿ, ಕೀರ್ತಿ, ಪ್ರಸಿದ್ಧಿ. "धर्मेप्सवस्तु धर्मज्ञा: सतां धर्ममनुष्ठिता:। मन्त्रवर्जं न दुष्यन्ति प्रशंसां प्राप्नुवन्ति च" मनु० १०-१२७।

**प्रशंसित ಪ್ರಶಂಸಿತ** (वि०) ಹೊಗಳಲ್ಪಟ್ಟ, ಶ್ಲಾಘಿಸಲ್ಪಟ್ಟ, ಕೊಂಡಾಡಲ್ಪಟ್ಟ. प्र + शंसु (स्तुतौ) + णिच् "क्त:" (३-२-१०२)।

**प्रशंसितवत् ಪ್ರಶಂಸಿತವತ್** (वि०) ಹೊಗಳಿದವನು, ಕೊಂಡಾಡಿದವನು, ಶ್ಲಾಘಿಸಿದವನು. प्र + शंसु (स्तुतौ) "क्तवतु:" (३-२-१०२)।

**प्रशंस्य ಪ್ರಶಂಸ್ಯ** (वि०) ಹೊಗಳಲ್ಪಡುವ, ಕೊಂಡಾಡಲ್ಪಡುವ. प्र + शंसु (स्तुतौ) "ण्यत्" (३-१-१२४)। वा "क्यप्" (वा० ३-१-१०९)। **-शस्यम् -ಶಸ್ಯಮ್.**

**प्रशम ಪ್ರಶಮ** (पुं०) 1. ಶಾಂತತೆ, ಸಹನೆ, ತಾಳ್ಮೆ. प्र + शमु (उपशमे) भावे "घञ्" (३-३-१८)। "प्रशमाभरणं पराक्रम: स नयापादितसिद्धिभूषण:" किरा० २-३२। 2. ಕಡಮೆಯಾಗುವುದು, ತಗ್ಗುವುದು. ನಂದಿಹೋಗುವುದು. "प्रशमादर्चिषामेतदनुद्गीर्णसुरायुधम्" कुमा० २-२०। 3. ತೃಪ್ತಿಪಡಿಸುವುದು, ತಣಿಸುವುದು. ಶಾಂತಗೊಳಿಸುವುದು. ಸಮಾಧಾನಪಡಿಸುವುದು. "क्षुभितस्य महीभृतस्त्वयि प्रशमोपन्यसनं वृथा मम" माघ० १६-५१।

**प्रशमन ಪ್ರಶಮನ** (न०) 1. ಕಡಮೆಮಾಡುವುದು, ಶಾಂತಗೊಳಿಸುವುದು, ಅಡಗಿಸುವುದು. प्र + शमु (उपशमे) + णिच् भावे "ल्युट्" (३-३-११५)। "आपन्नार्तिप्रशमनफला: संपदो ह्युत्तमानाम्" मेघ० १-५३। 2. ವಧೆ, ಕೊಲ್ಲುವುದು. 3. ದಾನ, ಕೊಡುಗೆ. "तै: सार्धं चिन्तयेन्नित्यं सामान्यं सन्धिविग्रहम्। स्थानं समुदयं गुप्तिं लब्धप्रशमनानि च" मनु० ७-५६। 4. ರಕ್ಷಣೆ, ಕಾಪಾಡುವುದು, ಸ್ಥಿರಪಡಿಸುವುದು, ಭದ್ರಪಡಿಸುವುದು. "लब्धप्रशमनस्वस्थमथैनं समुपस्थिता। पार्थिवश्रीर्द्वितीयेव शरत्पङ्कजलक्षणा" रघु० ४-१४। 5. ಕಡಮೆಯಾಗುವುದು, ಶಾಂತವಾಗುವುದು. प्र + शमु भावे "ल्युट्" (३-३-११५)। 6. ನಿವಾರಣೆಯಾಗುವುದು. 7. ನಿವಾರಣೆ ಮಾಡುವುದು, ರೋಗಾದಿಗಳನ್ನು ಗುಣಪಡಿಸುವುದು.

**प्रशमनीय ಪ್ರಶಮನೀಯ** (वि०) 1. ಕಡಮೆಮಾಡಲ್ಪಡುವ, ಶಾಂತಗೊಳಿಸಲ್ಪಡುವ, ಅಡಗಿಸಲ್ಪಡುವ. प्र + शमु (उपशमे) + णिच् "अनीयर्" (३-१-९६)। 2. ಶಾಂತಗೊಳಿಸಬೇಕಾದ, ನಿವಾರಣೆಮಾಡಬೇಕಾದ. 3. ನಿವಾರಣೆಗೆ ಅರ್ಹವಾದ. "तव्य:" (३-१-९६)। **-शमयितव्य: -ಶಮಯಿತವ್ಯಃ.**

**प्रशमयत् ಪ್ರಶಮಯತ್** (वि०) 1. ಶಾಂತಗೊಳಿಸುತ್ತಿರುವ, ಕಡಮೆಮಾಡುತ್ತಿರುವ. प्र+शमु (उपशमे)+णिच् "शतृ" (३-२-१२४)। 2. ತಣಿಸುತ್ತಿರುವ, ತೃಪ್ತಿಪಡಿಸುತ್ತಿರುವ. 3. ಆರಿಸುತ್ತಿರುವ, ನಂದಿಸುತ್ತಿರುವ. 4. ನಿವಾರಿಸುತ್ತಿರುವ. स्त्रियां "ङीप्" (४-१-६)। **-शमयन्ती -ಶಮಯಂತೀ.** "शानच्" (३-२-१२४)। **-शमयमान: -ಶಮಯಮಾನಃ.**

**प्रशमित ಪ್ರಶಮಿತ** (वि०) 1. ಕಡಮೆಮಾಡಲ್ಪಟ್ಟ, ಶಾಂತಗೊಳಿಸಲ್ಪಟ್ಟ. प्र + शमु (उपशमे) + णिच् "क्त:" (३-२-१०२)। "असिच्यत प्रशमितपांसुभिर्मही मदाम्बुभिर्धृतनवपूर्णकुम्भया" माघ० १७-३८। 2. ತೃಪ್ತಿಪಡಿಸಲ್ಪಟ್ಟ. 3. ಆರಿಸಲ್ಪಟ್ಟ, ನಂದಿಸಲ್ಪಟ್ಟ. 4. ನಿವಾರಿಸಲ್ಪಟ್ಟ, ಪರಿಹರಿಸಲ್ಪಟ್ಟ. "हा हा धिक्परगृहवासदूषणं यद्वैदेह्या: प्रशमितमद्भुतैरुपायै:" उ०रा० १-४०। वा इडागम: निपा० (७-२-२७)। इडभावपक्षे **-शान्त: -ಶಾಂತಃ.**

**प्रशमितवत् ಪ್ರಶಮಿತವತ್** (वि०) 1. ಶಾಂತಗೊಳಿಸಿದವನು. 2. ಆರಿಸಿದವನು, ನಂದಿಸಿದವನು. 3. ತಣಿಸಿದವನು, ತೃಪ್ತಿಪಡಿಸಿದವನು. प्र + शमु (उपशमे) + णिच् "क्तवतु:" (३-२-१०२)। वा इडागम: निपा० (७-२-२७)। इडभावपक्षे **-शान्तवान् -ಶಾಂತವಾನ್.**

**प्रशस्त ಪ್ರಶಸ್ತ** (न०) 1. ಹೊಗಳಿಕೆ, ಶ್ಲಾಘನೆ, ಕೊಂಡಾಟ. प्र+शंसु (स्तुतौ) "क्त:" (३-३-११४)। 2. ಹೊಗಳಲ್ಪಟ್ಟ, ಕೊಂಡಾಡಲ್ಪಟ್ಟ, ಶ್ರೇಷ್ಠವಾದ. कर्मं० "क्त:" (३-२-१०२)। "स त्वं मदीये महिते प्रशस्ते वसंश्चतुर्थोऽग्निरिवाग्न्यगारे" रघु० ५-२५।

**प्रशस्ति ಪ್ರಶಸ್ತಿ** (स्त्री०) 1. ಶ್ಲಾಘನೆ, ಹೊಗಳಿಕೆ. प्र+शंसु (स्तुतौ) "क्तिन्" (३-३-९४)। 2. ಶ್ರೇಷ್ಠತೆ, ಉತ್ಕೃಷ್ಟವಾಗಿರುವಿಕೆ.

**प्रशस्यमान ಪ್ರಶಸ್ಯಮಾನ** (वि०) ಶ್ಲಾಘಿಸಲ್ಪಡುತ್ತಿರುವ, ಹೊಗಳಲ್ಪಡುತ್ತಿರುವ. प्र + शंसु (स्तुतौ) कर्म० "शानच्" (३-२-१२४)। "इयमधुना वसुन्धरा-जाह्नवीभ्यां प्रशस्यमाना मया चारुन्धत्या च समर्पिता पूर्वं भगवता वैश्वानरेण निर्णीतपुण्यचरित्रा जानकी परिगृह्य-ताम्" उ०रा० ७।

**प्रशाम्(न्) ಪ್ರಶಾಮ್ (ನ್)** (वि०) 1. ಶಾಂತನಾಗಿರುವ, ತಾಳ್ಮೆಯಿಂದ ಕೂಡಿದ. प्र + शमु (उपशमे) "क्विप्" (३-२-६१)। दीर्घः (६-४-१५)। (अव्य०) 2. ಸಾಮರ್ಥ್ಯ.

**प्रशान्त ಪ್ರಶಾಂತ** (वि०) 1. ತಾಳ್ಮೆಯಿಂದ ಕೂಡಿದ, ಶಾಂತನಾಗಿರುವ. प्र+शमु (उपशमे) "क्तः" (३-४-७२)। "प्रशान्तश्वापदाकीर्णं मुनिशिष्योपशोभितम्"। 2. ನಿಃಶಬ್ದವಾಗಿರುವ, ಸ್ತಬ್ಧವಾಗಿರುವ. "अहो प्रशान्त-रमणीयमुद्यानवनम्"। 3. ಸಮಾಧಾನಗೊಂಡಿರುವ, ತೃಪ್ತಿಹೊಂದಿರುವ. 4. ಬಗೆಹರಿದಿರುವ, ಕೊನೆಗೊಂಡಿರುವ, ಒಂದು ಸ್ಥಿಮಿತಕ್ಕೆ ಬಂದಿರುವ. 5. ಆರಿಹೋಗಿರುವ, ನಂದಿಹೋಗಿರುವ. "कथमविरलप्रवृत्तवारिधारा संपातैः प्रशान्तमेव पावकास्त्रम्" उ०रा० ६।

**प्रशान्ति ಪ್ರಶಾಂತಿ** (स्त्री०) 1. ಕೋಪತಾಪಗಳಿಲ್ಲದಿರುವಿಕೆ, ಶಾಂತತೆ, ತಾಳ್ಮೆ. प्र + शमु (उपशमे) "क्तिन्" (३-३-९४)। 2. ಕಡಮೆಯಾಗುವುದು, ತಗ್ಗುವುದು. 3. ಆರಿಹೋಗುವುದು, ನಂದಿಹೋಗುವುದು. 4. ನಿವೃತ್ತಿ, ನಿವಾರಣೆ, ಪರಿಹಾರ.

**प्रशासक ಪ್ರಶಾಸಕ** (वि०) 1. ಆಳುವವನು. 2. ಆಜ್ಞೆ ಮಾಡುವವನು. प्र + शासु (अनुशिष्टौ) "ण्वुल्" (३-१-१३३)। 3. ಉಪದೇಶಿಸುವವನು, ಕಲಿಸುವವನು. 4. ಪಾಲಿಸುವವನು. 5. ಶಿಕ್ಷಿಸುವವನು, ದಂಡಿಸುವವನು.

**प्रशासत् ಪ್ರಶಾಸತ್** (वि०) 1. ಆಜ್ಞಾಪಿಸುತ್ತಿರುವ. 2. ಆಳುತ್ತಿರುವ. प्र + शासु (अनुशिष्टौ) "शतृ" (३-२-१२४)। "प्रलीनभूपालमपि स्थिरायति प्रशास-दावारिधि मण्डलं भुवः" किरा० १-२३। 3. ಕಲಿಸುತ್ತಿರುವ, ಬೋಧಿಸುತ್ತಿರುವ. 4. ಪಾಲಿಸುತ್ತಿರುವ, ರಕ್ಷಿಸುತ್ತಿರುವ. 5. ಶಿಕ್ಷಿಸುತ್ತಿರುವ, ದಂಡಿಸುತ್ತಿರುವ. स्त्रियां "ङीप्" (४-१-६)। –शासती –ಶಾಸತೀ.

**प्रशासन ಪ್ರಶಾಸನ** (न०) 1. ಆಜ್ಞೆಮಾಡುವುದು. 2. ಆಳುವುದು. प्र + शासु (अनुशिष्टौ) "ल्युट्" (३-३-११५)। 3. ಉಪದೇಶ, ಬೋಧನೆ. 4. ದಂಡನೆ, ಶಿಕ್ಷೆ. 5. ಪಾಲನೆ, ರಕ್ಷಣೆ.

**प्रशास्तृ ಪ್ರಶಾಸ್ತೃ** (पुं०) 1. ಪ್ರಭು, ದೊರೆ, ಆಳುವವನು. प्र + शासु (अनुशिष्टौ) "तृच्" (३-१-१३३)। "प्रशास्त्रध्यक्षसेनानां मन्त्र्यमात्यपुरोधसाम्। सम्यक्-प्रचारविज्ञानं दुष्टानाञ्चावबोधनम्" काम० नी०। (वि०) 2. ಆಜ್ಞೆಮಾಡುವವನು. 3. ಉಪದೇಶಿಸುವವನು, ಗುರು, ಆಚಾರ್ಯ. 4. ಶಿಕ್ಷಿಸುವವನು, ದಂಡಿಸುವವನು. 5. ರಕ್ಷಿಸುವವನು. "शासु" ಧಾತುವಿಗೆ ७-२-३४ ಸೂತ್ರದಲ್ಲಿ इडागम ರಹಿತವಾಗಿ ಮತ್ತು ६-४-१२ ಸೂತ್ರದಲ್ಲಿ प्र ಪೂರ್ವಕ शासु ಧಾತುವಿಗೆ इडागम ರಹಿತವಾಗಿ ನಿರ್ದೇಶವಿರುವುದು. ಇದರಂತೆ प्रशास्तृ ಪದಪ್ರಯೋಗ ಸಿದ್ಧವಾಗುವುದು. ಆದರೆ ರಘುವಂಶ (१-९२) ದಲ್ಲಿ शासु ಧಾತುವಿಗೆ "आदेशं देशकालज्ञः शिष्यः शासितुरानतः" ಎಂದು इडागम ಸಹಿತವಾದ ಪ್ರಯೋಗವಿರುವುದು. ಮತ್ತು प्र ಪೂರ್ವಕ "शासु" ಧಾತುವಿಗೆ ಪಂಚತಂತ್ರ (५-६२) ದಲ್ಲಿ इडागम ಸಹಿತವಾದ ಪ್ರಯೋಗವೂ ಕಂಡುಬರುವುದು. "यत्र स्त्री यत्र कितवो बालो यत्र प्रशासिता। तद्गृहं क्षयमायाति भार्गवो हीदमब्रवीत्"॥

**प्रशिष्य ಪ್ರಶಿಷ್ಯ** (पुं०) ಶಿಷ್ಯನ ಶಿಷ್ಯ, ವಿದ್ಯಾರ್ಥಿಯ ವಿದ್ಯಾರ್ಥಿ. प्रकर्षेण शिष्यः।

**प्रश्चोतत् ಪ್ರಶ್ಚೋತತ್** (वि०) 1. ಚಿಮುಕಿಸುತ್ತಿರುವ, ಸಿಂಪಡಿಸುತ್ತಿರುವ. प्र + श्चुतिर् (क्षरणे) "शतृ" (३-२-१२४)। 2. ಸ್ರವಿಸುತ್ತಿರುವ, ಸೋರುತ್ತಿರುವ.

**प्रश्चोतन ಪ್ರಶ್ಚೋತನ** (न०) 1. ಚಿಮುಕಿಸುವುದು, ಸಿಂಪಡಿಸುವುದು. प्र + श्चुतिर् (क्षरणे) "ल्युट्" (३-३-११५)। 2. ಸೋರುವುದು, ಸ್ರವಿಸುವುದು.

**प्रश्न ಪ್ರಶ್ನ** (पुं०) 1. ಕೇಳಿಕೆ, ತಿಳಿದುಕೊಳ್ಳಲು ಕೇಳುವುದು. प्रच्छ (ज्ञीप्सायाम्) "नङ्" (३-३-९०)। "शः" (६-४-१९)। "स्वाधीनकुशलाः सिद्धिमन्तः। स भवन्तमनामयप्रश्नपूर्वकमिदमाह" शाकु० ५। 2. ಪರೀಕ್ಷಾರ್ಥವಾಗಿ ಕೇಳುವುದು, ವಿಚಾರಣೆಮಾಡುವುದು, ತನಿಖೆ ಮಾಡುವುದು. "साक्षिप्रश्नविधानं च धर्मं स्त्रीपुंसयोरपि" मनु० १-११५। 3. ಸಮಸ್ಯೆ, ತೊಡಕು. "द्वितीयं ते प्रश्नं दास्यामि। सुसमृद्धानां ग्रामाणां का रक्षां करोति" मृच्छ० ५। 4. ಗ್ರಂಥದ ಒಂದು ಭಾಗ.

**प्रश्नदूती ಪ್ರಶ್ನದೂತೀ** (स्त्री०) ಸಮಸ್ಯೆ, ಒಗಟು, ಗೂಢಾರ್ಥವುಳ್ಳ ಪ್ರಶ್ನೆ. प्रश्नस्य दूतीव। "प्रश्नदूती प्रहेलिका" त्रिकाण्ड०।

**प्रश्नविवाक ಪ್ರಶ್ನವಿವಾಕ** (पुं०) ನ್ಯಾಯವನ್ನು ನಿರ್ಣಯಿಸುವವನು, ವ್ಯಾಜ್ಯವನ್ನು ವಿಮರ್ಶಿಸಿ ತೀರ್ಪುಕೊಡುವವನು, ಇಬ್ಬರಲ್ಲಿ ಅಭಿಪ್ರಾಯಭೇದ ಬಂದಾಗ ವ್ಯವಹಾರದ ನಿರ್ಣಯಕ್ಕಾಗಿ ಬಂದ ಮೂರನೆಯವನು. प्रश्नस्य विवाकोऽस्यास्ति "अच्" (५-२-१२७)।

**प्रश्रथन ಪ್ರಶ್ರಥನ** (न०) ಸಡಿಲವಾಗುವುದು, ಬಿಗಿ ಕಡಮೆಯಾಗುವುದು. प्र + श्रथ (दौर्बल्ये) भावे "ल्युट्" (३-३-११५)।

**प्रश्रन्थन ಪ್ರಶ್ರಂಥನ** (न०) 1. "प्रश्रथन" ಪದದ ಅರ್ಥ. प्र+श्रथि (शैथिल्ये) भावे "ल्युट्" (३-३-११५)। 2. ಬಿಡುವುದು, ವಿಮೋಚನೆ, ಬಿಡುಗಡೆ. प्र + श्रन्थ (विमोचने) "ल्युट्" (३-३-११५)।

**प्रश्रन्थित ಪ್ರಶ್ರಂಥಿತ** (वि०) 1. ಸಡಿಲವಾಗಿರುವ, ಬಿಗಿ ತಪ್ಪಿರುವ. प्र + श्रथि (शैथिल्ये) "क्तः" (३-४-७२)। 2. ವಿಮೋಚನೆಗೊಳಿಸಲ್ಪಟ್ಟ, ಬಿಡುಗಡೆ ಮಾಡಲ್ಪಟ್ಟ. प्र + श्रन्थ (विमोचने) कर्म० "क्तः" (३-२-१०२)।

**प्रश्रय ಪ್ರಶ್ರಯ** (पुं०) 1. ವಿಧೇಯತೆ, ವಿನಯ, ನಮ್ರತೆ. प्र+श्रिञ् (सेवायाम्) "अच्" (३-३-५६)। "कैकेय्यास्तनयो जज्ञे भरतो नाम शीलवान्। जनयित्रीमलंचक्रे यः प्रश्रय इव श्रियम्" रघु० १०-७०। 2. ಗೌರವ, ಮರ್ಯಾದೆ. "शौरेः प्रतापोपनतैरितस्ततः समागतैः प्रश्रयनम्रमूर्तिभिः" माघ० १२-३३। 3. ಪ್ರೀತಿಯಿಂದ ಪ್ರಾರ್ಥಿಸುವುದು. भावे "ल्युट्" (३-३-११५)। -श्रयणम् -ಶ್ರಯಣಮ್.

**प्रश्रित ಪ್ರಶ್ರಿತ** (वि०) ವಿಧೇಯ, ನಮ್ರ, ವಿನಯದಿಂದ ಕೂಡಿದ. प्र+श्रिञ् (सेवायाम्) "क्तः" (३-२-१०२)। "अब्रवीत् प्रश्रितं वाक्यं प्रसवार्थं द्विजोत्तमम्" रामा०।

**प्रश्लथ ಪ್ರಶ್ಲಥ** (वि०) ಸಡಿಲವಾಗಿರುವ, ಶಿಥಿಲವಾಗಿರುವ.

**प्रश्लिष्ट ಪ್ರಶ್ಲಿಷ್ಟ** (वि०) 1. ಚೆನ್ನಾಗಿ ಸೇರಿಕೊಂಡಿರುವ, ಚೆನ್ನಾಗಿ ಅಂಟಿಕೊಂಡಿರುವ. प्र + श्लिष (आलिङ्गने) "क्तः" (३-४-७२)। 2. ಯುಕ್ತಿಯಿಂದ ಕೂಡಿದ.

**प्रश्लेष ಪ್ರಶ್ಲೇಷ** (पुं०) ಚೆನ್ನಾಗಿ ಸಂಬಂಧ ಹೊಂದಿರುವಿಕೆ, ಚೆನ್ನಾಗಿ ಸೇರಿಕೊಂಡಿರುವಿಕೆ. प्र + श्लिष (आलिङ्गने) "घञ्" (३-३-१८)।

**प्रष्टव्य ಪ್ರಷ್ಟವ್ಯ** (वि०) 1. ಕೇಳಲ್ಪಡುವ, ಪ್ರಶ್ನೆಮಾಡಲ್ಪಡುವ. प्रच्छ (ज्ञीप्सायाम्) "तव्यः" (३-१-९६)। 2. ಪ್ರಶ್ನೆಮಾಡಲು ಯೋಗ್ಯನಾದ. "प्रष्टव्यं पृच्छतस्तस्य कथनीयमवीवचत्" भट्टि० ६-४६। 3. ಪ್ರಶ್ನಿಸಬೇಕಾದ. "यः पृष्ट्वा कुरुते कार्यं प्रष्टव्यान् स्वहितान् गुरून्" पञ्चतं० ४-६४।

**प्रष्टृ ಪ್ರಷ್ಟೃ** (वि०) ಪ್ರಶ್ನೆಮಾಡುವವನು, ಕೇಳುವವನು. प्रच्छ (ज्ञीप्सायाम्) "तृच्" (३-१-१३३)। षः (८-२-३६)। स्त्रियां "ङीप्" (४-१-५)। **प्रष्ट्री ಪ್ರಷ್ಟ್ರೀ.**

**प्रष्ठ ಪ್ರಷ್ಠ** (वि०) 1. ಮುಂದೆ ನಡೆಯುವ, ಮುಂಭಾಗದಲ್ಲಿ ಹೋಗುವ. प्र + ष्ठा (गतिनिवृत्तौ) "कः" (३-२-४)। षत्वम् (८-३-९२)। "आदिष्टवर्त्मा मुनिभिः स गच्छंस्तपतां वरः। विरराज रथप्रष्ठैर्वालिखिल्यैरिवांशुमान्" रघु० १५-१०। 2. ಮುಖ್ಯ, ಪ್ರಧಾನ. "धूतधौताशयः प्रष्ठाः प्रातिष्ठन्त क्षमाभृताम्" माघ० १९-३०।

**प्रष्ठवाट्(ह्) ಪ್ರಷ್ಠವಾಟ್(ಹ್)** (पुं०) ಪಳಗಿಸಲ್ಪಡುತ್ತಿರುವ ಎತ್ತು, ತಿದ್ದಲ್ಪಡುತ್ತಿರುವ ಎತ್ತು. प्रष्ठमग्रगामिनं वहति—वह (प्रापणे) "ण्विः" (३-२-६४)। ಎತ್ತುಗಳನ್ನು ಗಾಡಿಗೆ ಪಳಗಿಸಲು ಮೊದಲು ನೊಗದ ತುದಿಗೆ ಕಟ್ಟಿ ನಡೆಸುವರು. "प्रष्ठवाड्युगपार्श्वगः" अम०।

**प्रष्ठौही ಪ್ರಷ್ಠೌಹೀ** (स्त्री०) ಮೊದಲನೆಯ ಸಲ ಗರ್ಭ ಧರಿಸಿದ ಹಸು. प्रष्ठं वहति—वह (प्रापणे) "ण्विः" (३-२-६४)। "ङीष्" (४-१-६१)।

**प्रसकल ಪ್ರಸಕಲ** (वि०) ಪರಿಪೂರ್ಣವಾದ, ಸಮಸ್ತವಾದ. "प्रसकलकुचबन्धुरोद्धुरोरः प्रसभविभिन्नतनूत्तरीयबन्धा" माघ० ७-३४।

**प्रसक्त ಪ್ರಸಕ್ತ** (वि०) 1. ಚೆನ್ನಾಗಿ ಸೇರಿಕೊಂಡಿರುವ, ಚೆನ್ನಾಗಿ ಅಂಟಿಕೊಂಡಿರುವ. प्रकर्षेण सक्तः। "मम रूपकीर्तिमहरद्भुवि यस्तमनुप्रसक्तहृदयेयमिति। त्वयि मत्सरादिव निरस्तदयः सुतरां क्षिणोति खलु तां मदनः" माघ० ९-६३। 2. ಸಂತತವಾದ, ಎಡೆಬಿಡದ, ನಿರಂತರವಾದ, ಅವಿಚ್ಛಿನ್ನವಾದ. "रथाङ्गसीमन्तितसान्द्रकर्दमान् प्रसक्तसंपातपृथक्कृतान् पथः" किरा० ४-१८। 3. ಆಸಕ್ತನಾಗಿರುವ, ಹೆಚ್ಚು ಪ್ರೀತಿಯಿಂದ ಕೂಡಿರುವ. "कुर्वन्ति तावत्प्रथमं प्रियाणि यावन्न जानन्ति नरं प्रसक्तम्" पञ्चतं० १-२०५। 4. ನಿರಂತರಸಂಬಂಧ ಹೊಂದಿ

ರುವ. "प्रसक्ताः कामभोगेषु पतन्ति नरकेऽशुचौ" गीता १६-१६। 5. ಸಂಬಂಧಪಟ್ಟ, ಪ್ರಾರಂಭಿಸಿದ ವಿಷಯಕ್ಕೆ ಸಂಬಂಧಿಸಿದ. (अव्य०) 6. ಅವಿಚ್ಛಿನ್ನವಾಗಿ ನಿರಂತರವಾಗಿ. "अधोमुखाकाशसरिन्निपातिनीरपः प्रसक्तं मुमुचुः पयोमुचः" किरा० १६-५५।

**प्रसक्ति ಪ್ರಸಕ್ತಿ** (स्त्री०) 1. ಆಸಕ್ತಿ, ಶ್ರದ್ಧೆ, ಭಕ್ತಿ, ನಿಷ್ಠೆ. प्र + षञ्ज (सङ्गे) "क्तिन्" (३-३-९४)। "मा भूवन्नपथहृतस्तवेन्द्रियाश्वाः [illegible] [illegible]तु शिवः शिवां प्रसक्तिम्" किरा० ५-५०। 2. ಸಂಬಂಧ, ಜೊತೆಗೂಡುವುದು, ಸೇರಿಕೊಂಡಿರುವುದು. 3. ಅನುಮಿತಿ. 4. ವ್ಯಾಪ್ತಿ. अतिप्रसक्तिः अतिव्याप्तिः। 5. ಸಂಭವಿಸುವಿಕೆ, ಆಗುವಿಕೆ, ಒದಗುವಿಕೆ. 6. ಪ್ರಸ್ತಾವ, ಅವಕಾಶ, ಸಂದರ್ಭ. ತಕ್ಕ ಸಮಯ.

**प्रसङ्ख्यान ಪ್ರಸಂಖ್ಯಾನ** (न०) 1. ಆತ್ಮಾನುಸಂಧಾನ, ಧ್ಯಾನ, ತಪಸ್ಸು. प्र + सम् + ख्या (प्रकथने) "ल्युट्" (३-३-११५)। "श्रुताप्सरोगीतिरपि क्षणेऽस्मिन् हरः प्रसङ्ख्यानपरो बभूव" कुमा० ३-४०। 2. ಕೀರ್ತಿ, ಯಶಸ್ಸು, ಪ್ರಸಿದ್ಧಿ.

**प्रसङ्ग ಪ್ರಸಂಗ** (पुं०) 1. ಸಂಬಂಧ, ಸಹವಾಸ. प्र+षञ्ज (सङ्गे) "घञ्" (३-३-१८)। "असतां सङ्गदोषेण साधवो यान्ति विक्रियाम्। दुर्योधनप्रसङ्गेन भीष्मो गोहरणे गतः" पञ्चतं० १-२७४। 2. ಸಂಬಂಧ, ಅನುಷಂಗ, ಪ್ರಕರಣ, ಪ್ರಸ್ತಾವ. "कथाप्रसङ्गेन जनैरुदाहृतादनुस्मृताखण्डलसूनुविक्रमः" किरा० १-२४। 3. ಮೈಥುನ, ಸಂಭೋಗ. "भवति भणामि निवर्ततामस्माद्गणिकाप्रसङ्गात् इति" मृच्छ० ४। 4. ಸಂಭವಿಸುವುದು, ಘಟನೆ, ಆಗುವುದು, ಒದಗುವುದು. 5. ವ್ಯಾಪ್ತಿ. अतिप्रसङ्गः अतिव्याप्तिः। 6. ಉದ್ದೇಶ, ಇಚ್ಛೆ, ಅಭಿಲಾಷೆ. "किञ्चित्प्रकाशस्तिमितोग्रतारैर्भ्रूविक्रियायां विरतप्रसङ्गैः" कुमा० ३-४७। 7. ಕಾರ್ಯ, ಹವ್ಯಾಸ, ವ್ಯಾಪಾರ, ಪ್ರವೃತ್ತಿ, ಹಂಬಲ. "कालक्रमेणाथ तयोः प्रवृत्ते स्वरूपयोग्ये सुरतप्रसङ्गे" कुमा० १-१९। 8. ಅಕ್ರಮವಾದ ಸಂಭೋಗ. 9. ಅನುರಕ್ತನಾಗಿರುವಿಕೆ, ಪ್ರೀತಿಯಿಂದಿರುವಿಕೆ.

**प्रसज्यप्रतिषेध ಪ್ರಸಜ್ಯಪ್ರತಿಷೇಧ** (पुं०) ವಿಧಿವಾಕ್ಯಕ್ಕೆ ಅಪ್ರಾಧಾನ್ಯವೂ ಪ್ರತಿಷೇಧಕ್ಕೆ ಪ್ರಾಧಾನ್ಯವೂ ಇರುವಿಕೆ. ಯಾವ ವಾಕ್ಯದಲ್ಲಿ ಉದ್ದೇಶ್ಯಕ್ಕೆ ಅಪ್ರಾಧಾನ್ಯ ಮತ್ತು ಪ್ರತಿಷೇಧ (ನಿಷೇಧ)ಕ್ಕೆ ಪ್ರಾಧಾನ್ಯವಿರುವುದೋ ಅಲ್ಲಿ ಪ್ರಸಜ್ಯಪ್ರತಿಷೇಧ. "अप्राधान्यं विधेर्यत्र प्रतिषेधे प्रधानता। प्रसज्यप्रतिषेधोऽसौ क्रियया सह यत्र नञ्"।

**प्रसञ्जन ಪ್ರಸಂಜನ** (न०) 1. ಪ್ರವರ್ತನ, ಕಾರ್ಯ ನಡೆಸುವುದು, ಕಾರ್ಯವನ್ನು ಪ್ರಾರಂಭಿಸುವುದು. प्र+षञ्ज (सङ्गे) "ल्युट्" (३-३-११५)। 2. ಸೇರಿಸುವುದು, ಒಟ್ಟಿಗೆ ಕೂಡಿಸುವುದು.

**प्रसञ्जित ಪ್ರಸಂಜಿತ** (वि०) 1. ಪ್ರಾರಂಭಿಸಲ್ಪಟ್ಟ, ನಡೆಸಲ್ಪಟ್ಟ. प्र + षञ्ज (सङ्गे) "क्तः" (३-२-१०२)। "ममैव वार्हदिनमश्रुदुर्दिनैः प्रसह्य वर्षासु ऋतौ प्रसञ्जिते" नैष० ९-९६। 2. ಒಟ್ಟಿಗೆ ಸೇರಿಸಲ್ಪಟ್ಟ, ಒಟ್ಟುಗೂಡಿಸಲ್ಪಟ್ಟ.

**प्रसत्ति ಪ್ರಸತ್ತಿ** (स्त्री०) 1. ನೈರ್ಮಲ್ಯ. प्र + षद्लृ (विशरणादौ) "क्तिन्" (३-३-९४)। 2. ಔದಾರ್ಯ. 3. ಪ್ರಸನ್ನತೆ, ಪ್ರಸಾದ, ಅನುಗ್ರಹ. "प्रसत्तये गोत्रभिदस्तपांसि" किरा० ३-२९।

**प्रसदन ಪ್ರಸದನ** (न०) ಪ್ರಸನ್ನತೆ, ಪ್ರಸಾದ. ಅನುಗ್ರಹ ಬುದ್ಧಿ. प्र + षद्लृ (विशरणादौ) भावे "ल्युट्" (३-३-११५)। "प्रसदनमनुकम्पे प्राप्तवत्या भवत्या वृषगिरिहरिनीलं व्यञ्जितं निर्विशन्ति" दयाश०।

**प्रसन्न ಪ್ರಸನ್ನ** (वि०) 1. ನಿರ್ಮಲವಾದ, ತಿಳಿಯಾದ. ಸ್ವಚ್ಛವಾದ. प्र + षद्लृ (विशरणादौ) "क्तः" (३-४-७२)। "पयांसि दधिसर्पींषि रसवन्ति हितानि च। सलिलानि प्रसन्नानि सर्वे भावाश्च शोभनाः॥ रसाः स्पर्शाश्च गन्धाश्च शब्दाश्चापि गुणान्विताः। दृश्यानि च प्रसन्नानि यत्र राजा युधिष्ठिरः" भा० विरा० ३१-४२, ४४। 2. ಸಂತೋಷಗೊಂಡ, ಸುಪ್ರೀತನಾದ. "अपि प्रसन्नेन महर्षिणा त्वं सम्यग्विनीयानुमतो गृहाय" रघु० ५-१०। 3. ನಿರ್ಮಲವಾದ, ಕೋಪತಾಪಾದಿ ದೋಷರಹಿತವಾದ. "अपि प्रसन्नं हरिणेषु ते मनः करस्थदर्भप्रणयापहारिषु" कुमा० ५-३५। 4. ದಯೆಯಿಂದ ಕೂಡಿದ, ಅನುಗ್ರಹದ ಬುದ್ಧಿಯುಳ್ಳ. "न केवलानां पयसां प्रसूतिमवेहि मां कामदुघां प्रसन्नाम्" रघु० २-६३। 5. ಸ್ಫುಟವಾದ, ಸ್ಪಷ್ಟವಾದ, ಪ್ರಸಾದ ಗುಣದಿಂದ ಕೂಡಿದ. "अर्थवैमल्यं प्रसादः"। 6. ಸತ್ಯ, ನಿಜ, ಯಥಾರ್ಥ. "वयस्य मकरन्द, प्रसन्नप्रायस्ते तर्कः" मालती० १। 7. ನೆಮ್ಮದಿಯ ಮನಸ್ಸುಳ್ಳ, ಪ್ರಶಾಂತವಾದ ಚಿತ್ತವುಳ್ಳ. 8. ಶುದ್ಧವಾದ, ನಿರ್ಮಲವಾದ, ಮೇಘ ಮುಂತಾದುದರಿಂದ ಮುಚ್ಚಲ್ಪಡದಿರುವ.

"प्रसन्नदिक्पांसुविविक्तवातं शङ्खस्वनानन्तरपुष्पवृष्टि" कुमा० १-२३।

**प्रसन्नता ಪ್ರಸನ್ನತಾ** (स्त्री०) ನೈರ್ಮಲ್ಯ, ಸ್ವಚ್ಛವಾಗಿರುವಿಕೆ.

**प्रसन्नमुख ಪ್ರಸನ್ನಮುಖ** (वि०) 1. ನಗುಮುಖವುಳ್ಳ, ಸಂತೋಷದಿಂದ ಕೂಡಿದ ಮುಖವುಳ್ಳ. प्रसन्नं मुखं यस्य। 2. ಅನುಗ್ರಹವನ್ನು ಸೂಚಿಸುವ ಮುಖಮುದ್ರೆಯುಳ್ಳ. –वदन –ವದನ. "प्रसन्नवदनं ध्यायेत्सर्वविघ्नोपशान्तये"।

**प्रसन्ना ಪ್ರಸನ್ನಾ** (स्त्री०) ಮದ್ಯ, ಹೆಂಡ, ಸಾರಾಯಿ. प्र+षद्लृ (विशरणादौ) "क्तः" (३-४-७२)। निष्ठातकारस्य नकारः (८-२-४२)। "प्रसन्ना स्त्री सुरायां स्यात्" मेदि०।

**प्रसभ ಪ್ರಸಭ** (न०) 1. ಬಲಾತ್ಕಾರ, ಬಲವಂತ, ನಿರ್ಬಂಧ. प्रगता सभा सभाधिकारो यस्मात्। "योग्यैर्व्रजद्भिर्नृपजां वरीतुं वीरैरनर्हैः प्रसभेन हर्तुम्" नैष० १०-३। (अव्य०) 2. ಬಲವಂತವಾಗಿ, ಬಲಾತ್ಕಾರದಿಂದ. "इन्द्रियाणि प्रमाथीनि हरन्ति प्रसभं मनः" गीता २-६०। 3. ಅಧಿಕವಾಗಿ, ಅತ್ಯಂತವಾಗಿ. "तवास्मि गीतरागेण हारिणा प्रसभं हृतः" शाकु० १-५। 4. ಧಾರ್ಷ್ಟ್ಯದಿಂದ, ದಿಟ್ಟತನದಿಂದ. "सखेति मत्वा प्रसभं यदुक्तं हे कृष्ण हे यादव हे सखेति" गीता ११-४१।

**प्रसर ಪ್ರಸರ** (पुं०) 1. ಪ್ರಾಬಲ್ಯ, ವೇಗ. प्र+सृ (गतौ) "अप्" बाहु०। "दिगीशवृन्दांशविभूतिरीशिता दिशां स कामप्रसरावरोधिनीम्" नैष० १-६। 2. ಹರಡುವುದು, ಮುಂದಕ್ಕೆ ವ್ಯಾಪಿಸುವುದು. "दयितावलोकविकसन्नयनप्रसरप्रणुन्नमिव वारिरुहम्" माघ० ९-७१। 3. ಮಾರ್ಗ, ಪ್ರವೇಶಾವಕಾಶ. "शूरेभ्योऽप्यधिकं बिभेत्युपहसत्येकान्तभीरुनहो श्रीर्लब्धप्रसरेव वेशवनिता दुःखोपचर्या भृशम्" मुद्रा० ३-५। 4. ಅತಿಶಯವಾದ ಪ್ರಮಾಣ, ಆಧಿಕ್ಯ, ಹಿರಿಮೆ, ಗಾತ್ರ, ವಿಸ್ತಾರ. "त्वष्टुः सदाभ्यासगृहीतशिल्पविज्ञानसंपत्प्रसरस्य सीमा" माघ० ३-३५। 5. ಪ್ರವಾಹ, ಹೊನಲು, ಹರಿವು. 6. ಸಮೂಹ, ಗುಂಪು. 7. ಯುದ್ಧ. 8. ಬಾಣ. 9. ಪ್ರಣಯ, ಪ್ರೀತಿ, ವಿಶ್ವಾಸ. 10. ವೇಗ. "प्रसरः प्रणये वेगे" मेदि०। "प्रसरस्तु संगरे प्रणये जवे" हेम०। "लोहनालस्तु नाराचः प्रसरः काण्डगोचरः" त्रिकाण्ड०।

**प्रसरण ಪ್ರಸರಣ** (न०) 1. ಹರಡುವುದು, ವ್ಯಾಪಿಸುವುದು. प्र+सृ (गतौ) भावे "ल्युट्" (३-३-११५)। 2. ಗಮನ, ಹೋಗುವುದು, ಸಂಚರಿಸುವುದು. 3. ಸೇನೆಯು ಅಲ್ಲಿಂದಿಲ್ಲಿಗೆ ಸುತ್ತಾಡುವುದು, ಸೇನೆಯ ಓಡಾಟ. 4. ತಪ್ಪಿಸಿಕೊಂಡು ಓಡುವುದು.

**प्रसरणी ಪ್ರಸರಣೀ** (स्त्री०) ಸೇನೆಯ ಓಡಾಟ, ಸೈನ್ಯದ ಸುತ್ತಾಟ. प्र+सृ (गतौ) "अनिः" (उ० २-१०२)। वा दीर्घः (ग० ४-१-४५)।

**प्रसर्पण ಪ್ರಸರ್ಪಣ** (न०) 1. ಮುಂದಕ್ಕೆ ಹೋಗುವುದು. ಮುಂದಕ್ಕೆ ನಡೆಯುವುದು. प्र+सृप्लृ (गतौ) भावे "ल्युट्" (३-३-११५)। 2. ಎಲ್ಲಾ ಕಡೆಯಲ್ಲೂ ಹರಡುವುದು, ವ್ಯಾಪಿಸುವುದು. 3. ಸಭೆಯೊಳಗೆ ಪ್ರವೇಶಿಸುವುದು.

**प्रसर्पत् ಪ್ರಸರ್ಪತ್** (वि०) 1. ಸಂಚರಿಸುತ್ತಿರುವ, ಓಡಾಡುತ್ತಿರುವ. "अपि तद्वपुषि प्रसर्पतोर्गमिते कान्तिझरैरगाधताम्" नैष० २-३२। 2. ಮುಂದಕ್ಕೆ ಹೋಗುತ್ತಿರುವ, ಮುಂದಕ್ಕೆ ನಡೆಯುತ್ತಿರುವ. प्र+सृप्लृ (गतौ) "शतृ" (३-२-१२४)। 3. ಎಲ್ಲಾಕಡೆಗೂ ಹರಡುತ್ತಿರುವ. स्त्रियां "ङीप्" (४-१-६)। –सर्पन्ती –ಸರ್ಪಂತೀ.

**प्रसर्पिन् ಪ್ರಸರ್ಪಿನ್** (वि०) 1. ಮುಂದೆ ಸಾಗುವ, ಮುಂದಕ್ಕೆ ಹೋಗುವ. प्र+सृप्लृ (गतौ) "णिनिः" (३-१-१३४)। 2. ಹರಡುವ ಸ್ವಭಾವದ, ವ್ಯಾಪಿಸುವ ಸ್ವಭಾವವುಳ್ಳ. "णिनिः" (३-२-७८)।

**प्रसव ಪ್ರಸವ** (पुं०) 1. ಪ್ರಸವಿಸುವುದು, ಹೆರುವುದು. प्र+षूङ् (प्राणिप्रसवे) "अप्" (३-३-५८)। "पतिः प्रतीतः प्रसवोन्मुखीं प्रियां ददर्श काले दिवमभ्रितामिव" रघु० ३-१२। 2. ಗರ್ಭ ಧರಿಸುವುದು, ಬಸಿರಾಗುವುದು. "यथाविध्यधिगम्यैनां शुक्लवस्त्रां शुचिव्रताम्। मिथो भजेताप्रसवात् सकृत्सकृदृतावृतौ" मनु० ९-७०। 3. ಜನ್ಮ, ಉತ್ಪತ್ತಿ. "ज्ञाने मौनं क्षमा शक्तौ त्यागे श्लाघाविपर्ययः। गुणा गुणानुबन्धित्वात् तस्य सप्रसवा इव" रघु० १-२२। 4. ಪುತ್ರ, ಮಗ, ಸಂತಾನ. "वधूविधात्रा प्रतिनन्द्यते स्म कल्याणि वीरप्रसवा भवेति" कुमा० ७-८७। 5. ಕಾರಣ, ಹೇತು. करं "अप्"। "उपकारकमायतेर्भृशं प्रसवः कर्मफलस्य भूरिणः" किरा० २-४३। 6. ಪುಷ್ಪ, ಕುಸುಮ, ಹೂವು. "गणा नमेरुप्रसवावतंसा भूर्जत्वचः स्पर्शवतीर्दधानाः" कुमा० १-५५। 7. ಫಲ, ಹಣ್ಣು. "अथ रिरंसुममुं युगपद्गिरौ कृतयथास्वतरुप्रसवश्रिया" माघ० ६-१।

**प्रसवन ಪ್ರಸವನ** (ನಂ) 1. ಪ್ರಸವಿಸುವುದು, ಹೆರುವುದು. प्र + षूङ् (प्राणिगर्भविमोचने) भावे "ल्युट्" (३-३-११५)। 2. ಸಂತಾನಾಭಿವೃದ್ಧಿಶಕ್ತಿ, ಪ್ರಸವಿಸುವ ಚೈತನ್ಯ. प्र + षु (प्रसवैश्वर्ययोः) "ल्युट्" (३-३-११५)। 3. ಅಭ್ಯನುಜ್ಞೆ, ಅನುಮತಿ, ಅಪ್ಪಣೆ. प्रसवोऽभ्यनुज्ञानम् सि० कौ०।

**प्रसवनीय ಪ್ರಸವನೀಯ** (ವಿಂ) 1. ಪ್ರಸವಿಸಲ್ಪಡುವ. ಗರ್ಭದಿಂದ ಹೊರಕ್ಕೆ ತರಲ್ಪಡುವ. प्र+षूङ् (प्राणिगर्भविमोचने) "अनीयर्" (३-१-९६)। 2. ಅನುಮತಿ ಕೊಡಲ್ಪಡುವ. प्र + षु (प्रसवैश्वर्ययोः) "अनीयर्" (३-१-९६)। 3. ಪ್ರಸವಿಸಬೇಕಾದ. 4. ಅನುಮತಿ ಕೊಡಬೇಕಾದ. "तव्यः"। **–सवितव्यम् –ಸವಿತವ್ಯವ್**, वा इट्। पक्षे **–सोतव्यम् –ಸೋತವ್ಯವ್**.

**प्रसवबन्धन ಪ್ರಸವಬಂಧನ** (ನಂ) ಹೂವು ಹಣ್ಣು ಕಾಯಿಗಳ ತೊಟ್ಟು. प्रसवानां बन्धनं यत्र।

**प्रसवितृ ಪ್ರಸವಿತೃ** (ಪುಂ) ತಂದೆ, ಜನಕ, ರಕ್ಷಕ. प्रसूते जनयति — प्र + षूङ् (प्राणिगर्भविमोचने) "तृच्" (३-१-१३३)। (स्त्री०) **–सवित्री –ಸವಿತ್ರೀ.** "ङीप्" (४-१-५)।

**प्रसव्य ಪ್ರಸವ್ಯ** (ವಿಂ) 1. ಪ್ರತಿಕೂಲವಾದ, ವಿರುದ್ಧವಾದ. प्रगतं सव्यात्। 2. ಪ್ರಸವಿಸಲ್ಪಡುವ. प्र + षूङ् (प्राणिगर्भविमोचने) कर्म० "यत्" (३-१-९७)। 3. ಅನುಜ್ಞೆ ಕೊಡಲ್ಪಡುವ. प्र+षु (प्रसवैश्वर्ययोः) आवश्यके "ण्यत्" (३-१-१२५)। **–साव्यम् –ಸಾವ್ಯವ್.** 4. ಅವಶ್ಯವಾಗಿ ಅನುಮತಿ ಕೊಡಬೇಕಾದ. (ನಂ) 5. ಪ್ರದಕ್ಷಿಣೆ. ದೇವರು ಹಿರಿಯರು ಮುಂತಾದವರು ಬಲಪಾರ್ಶ್ವದಲ್ಲಿರುವಂತೆ ಮಾಡಿಕೊಂಡು ಸುತ್ತಿಬರುವುದು. "प्रसव्यश्चापि तच्चक्रुर्ऋत्विजोऽग्निचितं नृपम्" रामा०।

**प्रसह ಪ್ರಸಹ** (ಪುಂ) 1. ಬಲಾತ್ಕಾರದಿಂದ ಇತರ ಪ್ರಾಣಿಗಳನ್ನು ಹಿಂಸಿಸಿ ಕೊಂದು ತಿನ್ನುವ ಕ್ರೂರಪ್ರಾಣಿ, –ಪಕ್ಷಿ. ಹದ್ದು, ಗಿಡಗ, ಕುರವಕ ಹಕ್ಕಿ ಮೊದಲಾದುವು. "काको गृध्र उलूकश्च चिल्लश्च शशघातकः। चाषो भासश्च कुरर इत्याद्याः प्रसहाः स्मृताः" भावप्र०। 2. ತಾಳ್ಮೆ, ಸಹನೆ. (ವಿಂ) 3. ಬಹಳ ಸಹಿಸಿಕೊಳ್ಳುವ, ಬಹಳ ಸಹನೆಯುಳ್ಳ. प्र+षह (मर्षणे) "अच्" (३-१-१३४)।

**प्रसहन ಪ್ರಸಹನ** (ಪುಂ) 1. ಬಲಾತ್ಕಾರದಿಂದ ಇತರ ಪ್ರಾಣಿಗಳನ್ನು ಹಿಂಸಿಸಿ ಕೊಂದು ತಿನ್ನುವ ಹದ್ದು, ಗಿಡಗ, ಕುರವಕ, ಕಾಗೆ ಮೊದಲಾದ ಪಕ್ಷಿ, ಹಿಂಸಿಸುವ ಪ್ರಾಣಿ, ಸಿಂಹ, ಹುಲಿ ಮೊದಲಾದುವು. प्रगतं सहनं सह्यगुणो यस्मात्। "शार्दूलसिंहशरभर्क्षतरक्षुमुख्याः येऽन्यान् प्रसह्य विनिहत्य निवर्तयन्ते। ते कीर्तिताः प्रसहनाः पललं तदीयमर्शःप्रमेहजठरामयजाड्यहारि" राजनि०। (ನಂ) 2. ಸಹನೆ, ತಾಳ್ಮೆ. 3. ಆಲಿಂಗನ, ಅಪ್ಪಿಕೊಳ್ಳುವುದು. प्र + षह (मर्षणे) भावे "ल्युट्" (३-३-११५)। (ವಿಂ) 4. ಸಹನೆಯುಳ್ಳ, ತಾಳ್ಮೆಯುಳ್ಳ. प्रसहनमस्यास्ति "अच्" (५-२-१२७)। 5. ಸಹನೆಯಿಲ್ಲದ, ಸ್ವಲ್ಪವೂ ತಾಳ್ಮೆಯಿಲ್ಲದ. प्रगतं सहनं यस्मात्।

**प्रसह्य ಪ್ರಸಹ್ಯ** (ವಿಂ) 1. ಹೆಚ್ಚು ಸಹಿಸಿಕೊಳ್ಳಲು ಶಕ್ಯವಾದ. प्रकर्षेण सोढुं शक्यः — प्र + षह (मर्षणे) "यत्" (३-१-९९)। (अव्य०) 2. ಬಲಾತ್ಕಾರದಿಂದ, ಬಲವಂತದಿಂದ. "प्रसह्य तेजोभिरसंख्यतां गतैरदस्त्वया नुत्तमनुत्तमं तमः" माघ० १-२७।

**प्रसह्यचोर ಪ್ರಸಹ್ಯಚೋರ** (ಪುಂ) ಬಲಾತ್ಕಾರದಿಂದ ಕಳ್ಳತನ ಮಾಡುವವನು, ದರೋಡೆ ಮಾಡುವವನು, ಡಕಾಯಿತ. प्रसह्य बलात्कारेण चोरः।

**प्रसह्यहरण ಪ್ರಸಹ್ಯಹರಣ** (ನಂ) ಬಲಾತ್ಕಾರದಿಂದ ಅಪಹರಿಸುವುದು, ದರೋಡೆ ಮಾಡುವುದು.

**प्रसाद ಪ್ರಸಾದ** (ಪುಂ) 1. ಸ್ವಚ್ಛವಾಗಿರುವಿಕೆ, ಕೊಳೆಯಿಲ್ಲದೆ ನಿರ್ಮಲವಾಗಿರುವಿಕೆ. प्र+षद्लृ (विशरणादौ) "घञ्" (३-३-१८)। "छाया न मूर्च्छति मलोपहतप्रसादे शुद्धे तु दर्पणतले सुलभावकाशा" शाकु० ७-३२। 2. ಅನುಗ್ರಹ, ಕೃಪೆ. "तव प्रसादात् कुसुमायुधोऽपि सहायमेकं मधुमेव लब्ध्वा" कुमा० ३-१०। 3. (1) ಕಾವ್ಯದಲ್ಲಿ ಶಬ್ದದ ಒಂದು ಗುಣ, ಕಾವ್ಯಬಂಧದ (ಪದರಚನೆಯ) ಶೈಥಿಲ್ಯ. "शैथिल्यं प्रसादः" काव्या० सू०। "गाढत्वशैथिल्याभ्यां व्युत्क्रमेण मिश्रणं बन्धस्य प्रसादः" रसगं०। ಇದು ಶಬ್ದದ ಗುಣ. (2) ಕಾವ್ಯದಲ್ಲಿ ಅರ್ಥಗತವಾದ ಒಂದು ಗುಣ, ಅರ್ಥದ ವೈಮಲ್ಯ, ವಿವಕ್ಷಿತವಾದ ಅರ್ಥಕ್ಕೆ ಸಮರ್ಪಕವಾದ ಪದಗಳ ಪ್ರಯೋಗ. "अर्थवैमल्यं प्रसादः" काव्या० सू०। "यावदर्थकपदत्वरूपमर्थवैमल्यं प्रसादः" रसगं०। ಇದು ಅರ್ಥಗುಣ. (3) ಕಾವ್ಯಕ್ಕೆ ಆತ್ಮಭೂತವಾದ ರಸದ ಒಂದು ಧರ್ಮ, ಪಠನ ಅಥವಾ ಶ್ರವಣಮಾತ್ರದಿಂದಲೇ ಸಹೃದಯರ ಮನಸ್ಸನ್ನು ಆಕರ್ಷಿಸುವಂತಹ ಒಂದು ಧರ್ಮ. "चित्तं व्याप्नोति यः क्षिप्रं शुष्केन्धनमिवानलः। स प्रसादः समस्तेषु रसेषु रचनासु च" सा० द० ८-७। "श्रुतमात्रा वाक्यार्थ

करतलबदरमिव निवेदयन्ती घटना प्रसादस्य" रसगं०। ಇದು ರಸದ ಧರ್ಮ. "नैकमोज: प्रसादो वा रसभावविद: कवे:" माघ० २-८३। 4. ವರ, ಬೇಡಿಕೆ. "अतर्क्यद्विघ्नमिवेष्टसाहस: प्रसादमिच्छासदृशं पिनाकिन:" माघ० १-४९। 5. ತಿಳಿಯಾಗಿರುವಿಕೆ, ಮನಸ್ಸಿನಲ್ಲಿ ಯಾವ ಯೋಚನೆಯೂ ಇಲ್ಲದೆ ಸ್ವಚ್ಛವಾಗಿರುವಿಕೆ, ಸ್ವಾಸ್ಥ್ಯ. "गहनमपरराग्रप्राप्तबुद्धिप्रसादा: कवय इव महीपाश्चिन्तयन्त्यर्थजातम्" माघ० ११-६। 6. ದೇವರಿಗೆ ನಿವೇದನ ಮಾಡಲ್ಪಟ್ಟ ವಸ್ತು. "आसीद्वंशध्वजो राजा प्रजापालनतत्पर:। प्रसादं सत्यदेवस्य त्यक्त्वा दु:खमवाप स:" स्कान्द०। 7. ನಿರ್ಮಲವಾಗಿರುವಿಕೆ, ಶುದ್ಧವಾಗಿರುವಿಕೆ, ಕಶ್ಮಲವಿಲ್ಲದೆ ಸ್ವಚ್ಛವಾಗಿರುವಿಕೆ. 8. ಪ್ರಸನ್ನತೆ, ಸೌಮ್ಯತೆ, ಕಾಠಿನ್ಯವಿಲ್ಲದಿರುವಿಕೆ. "प्रसादलक्ष्मीं दधतं समग्रां वपु: प्रकर्षेण जनातिगेन" किरा० ३-२। 9. ಗುರುಹಿರಿಯರು ಊಟಮಾಡಿ ಉಳಿದ ಅನ್ನ. 10. ಪ್ರಕಾಶ, ಬೆಳಕು. "न प्रसादमुचितं गमिता द्यौर्नोद्धतं तिमिरमद्रिवनेभ्य:" किरा० ९-२५।

**प्रसादन ಪ್ರಸಾದನ** (न०) 1. ತಿಳಿಯಾಗಿ ಮಾಡುವುದು, ಸ್ವಚ್ಛವಾಗಿ ಮಾಡುವುದು. प्र + षद्लृ (विशरणादौ) भावे "ल्युट्" (३-३-११५)। 2. ಸಂತೋಷಪಡಿಸುವುದು, ಪ್ರಸನ್ನನಾಗಿ ಮಾಡುವುದು. 3. ಶಾಂತನನ್ನಾಗಿ ಮಾಡುವುದು. ಸಮಾಧಾನ ಪಡಿಸುವುದು, ಮುನಿಸನ್ನು ತಿಳಿಗೊಳಿಸುವುದು. (वि०) 4. ಸಮಾಧಾನ ಪಡಿಸುವ, ಒಲಿಸಿಕೊಳ್ಳುವ. 5. ತಿಳಿಯಾಗಿ ಮಾಡುವ, ಸ್ವಚ್ಛವಾಗಿ ಮಾಡುವ. 6. ಸಂತೋಷ ಪಡಿಸುವ, ಪ್ರಸನ್ನನಾಗಿ ಮಾಡುವ. "प्रसादनं दृष्टिमन:श्रुतीनामदिव्यमास्कन्दितदिव्यमासीत्" याद० १३-८१। णिच् "युच्" (३-३-१०७)। -सादना -ಸಾದನಾ. 7. ಸೇವೆ, ಶುಶ್ರೂಷೆ. 8. ಪೂಜೆ. 9. ಶುದ್ಧಮಾಡುವುದು.

**प्रसादयत् ಪ್ರಸಾದಯತ್** (वि०) 1. ಪ್ರಸನ್ನನಾಗಿ ಮಾಡುತ್ತಿರುವ, ಸಂತೋಷಪಡಿಸುತ್ತಿರುವ. प्र + षद्लृ (विशरणादौ) + णिच् "शतृ" (३-२-१२४)। "मृदङ्गनादेन मृगाङ्कमौलिं प्रसादयन् पालयतीह दैत्यान्" याद० १८-२७। 2. ಸ್ವಚ್ಛವಾಗಿ ಮಾಡುತ್ತಿರುವ. 3. ಶಾಂತಗೊಳಿಸುತ್ತಿರುವ, ಸಮಾಧಾನಪಡಿಸುತ್ತಿರುವ. 4. ಒಲಿಸಿಕೊಳ್ಳುತ್ತಿರುವ. स्त्रियां "ङीप्" (४-१-६)। -यन्ती -ಯಂತೀ.

**प्रसादित ಪ್ರಸಾದಿತ** (वि०) 1. ಅನುಗ್ರಹಿಸಲ್ಪಟ್ಟ, ಕೃಪೆ ತೋರಿಸಲ್ಪಟ್ಟ. प्र+षद्लृ (विशरणादौ)+णिच् "क्त:" (३-२-१०२)। 2. ನಿರ್ಮಲವಾಗಿ ಮಾಡಲ್ಪಟ್ಟ. "अभवत् प्रसादितसुरो महोत्सव: प्रमदाजनस्य स चिराय माधव:" माघ० १३-३८। 3. ಪ್ರಸನ್ನನಾಗಿ ಮಾಡಲ್ಪಟ್ಟ, ಸಂತೋಷಪಡಿಸಲ್ಪಟ್ಟ. 4. ಸಮಾಧಾನಗೊಳಿಸಲ್ಪಟ್ಟ, ಸಂತೈಸಲ್ಪಟ್ಟ. 5. ಶುದ್ಧವಾಗಿ ಮಾಡಲ್ಪಟ್ಟ, ಸ್ವಚ್ಛವಾಗಿ ಮಾಡಲ್ಪಟ್ಟ.

**प्रसादिन् ಪ್ರಸಾದಿನ್** (वि०) 1. ಅನುಗ್ರಹಿಸುವ ಸ್ವಭಾವದ, ದಯೆಯ ಸ್ವಭಾವದ. 2. ಪ್ರಸಾದಗುಣದಿಂದ ಕೂಡಿದ. प्रसादोऽस्यास्ति "इनि:" (५-२-११५)। "प्रसिद्धार्थपदत्वं यत्स प्रसादो निगद्यते"। "ओजस्विवर्णोज्ज्वलवृत्तशालिन: प्रसादनोऽनुज्झितगोत्रसंविद:" माघ० १२-३५।

**प्रसादिस्थल ಪ್ರಸಾದಿಸ್ಥಲ** (न०) (ವೀರಶೈವ ಮತದಲ್ಲಿ) ಸಾಧನೆಯ ಆರು ಸೋಪಾನಮಾರ್ಗಗಳಲ್ಲಿ ಮೂರನೆಯ ಸೋಪಾನ. ಅಂತರಂಗವು ಪ್ರಶಾಂತವಾಗಿದ್ದು ಜ್ಞಾನೋದಯವಾಗುವುದರಿಂದ ಎಲ್ಲದರಲ್ಲೂ ಶಿವನನ್ನು ಕಾಣುವ ಬುದ್ಧಿಯೂ ಎಲ್ಲವನ್ನೂ ಶಿವನ ಕಾರ್ಯಗಳನ್ನಾಗಿ ತಿಳಿಯುವ ಬುದ್ಧಿಯೂ ತಾನು ಶಿವನ ಪೋಷಣೆಗೆ ಒಳಪಟ್ಟು ಶಿವನ ಮೂಲಕ ಎಲ್ಲವನ್ನೂ ಪ್ರಸಾದರೂಪವಾಗಿ ಪಡೆಯುತ್ತಿರುವನೆಂಬ ಜ್ಞಾನವೂ ಈ ಮೂರನೆಯದಾದ ಪ್ರಸಾದಿಸ್ಥಲದಿಂದ ಲಭಿಸುವುವು. ಸಾಧನದಿಂದ ಎಲ್ಲವನ್ನೂ ಶಿವನಿಗೆ ಅರ್ಪಿಸಿ ಆಮೇಲೆ ತಾನು ಸ್ವೀಕರಿಸುವುದು ಪ್ರಸಾದಿಯ ಲಕ್ಷಣ.

**प्रसाधन ಪ್ರಸಾಧನ** (न०) 1. ಅಲಂಕರಿಸುವುದು, ಶೃಂಗರಿಸುವುದು. प्र + साध (संसिद्धौ) + णिच् "ल्युट्" (३-३-११५)। "अकुर्वत प्रथमसमागमोचितं चिरोज्झितं सुरगणिका: प्रसाधनम्" माघ० १७-३४। 2. ಆಭರಣ, ಒಡವೆ. प्रसाध्यतेऽनया — प्र + साध "ल्युट्" (३-३-११७)। "भूतार्थशोभाह्रियमाणनेत्रा: प्रसाधने सन्निहितेऽपि नार्य:" कुमा० ७-१३। (वि०) 3. ಅಲಂಕರಿಸುವವನು, ಶೃಂಗರಿಸುವವನು. प्र+साध+णिच् "ल्यु:" (३-१-१३४)। (न०) 4. ಬಾಚಣಿಗೆ.

**प्रसाधनी ಪ್ರಸಾಧನೀ** (स्त्री०) 1. ಬಾಚಣಿಗೆ. प्रसाध्यतेऽनेन—प्र+साध (संसिद्धौ)+णिच् "ल्युट्" (३-३-११७)। "केशप्रसाधनी केश्या रजोजन्तुमलापहा" सुश्रुत० चिकित्सा०। 2. ಸಿದ್ಧಿ.

**प्रसाधयत् ಪ್ರಸಾಧಯತ್** (वि०) ಅಲಂಕರಿಸುತ್ತಿರುವ, ಶೃಂಗರಿಸುತ್ತಿರುವ. प्र + साध (संसिद्धौ) + णिच्

"शतृ" (३-२-१२४)। स्त्रियां "ङीप्" (४-१-६)। **-यन्ती -ಯಂತೀ.** "प्रसाधयन्तीमवधीर्य धात्रीमङ्गै-रसंभावितभूषणाऽन्या" याद० १३-५३।

**प्रसाधिका ಪ್ರಸಾಧಿಕಾ** (स्त्री०) 1. ನೀವಾರ, ಒಂದು ಕಾಡು ಧಾನ್ಯ. प्र+साध (संसिद्धौ) "ण्वुल्" (३-१-१३३)। 2. ಅಲಂಕರಿಸುವ ಹೆಂಗಸು. प्र+साध +णिच् "ण्वुल्" (३-१-१३३)। "प्रसाधिकालम्बित-मग्रपादमाक्षिप्य काचित् द्रवरागमेव" कुमा० ७-५८।

**प्रसाधित ಪ್ರಸಾಧಿತ** (वि०) ಅಲಂಕರಿಸಲ್ಪಟ್ಟ, ಶೃಂಗರಿಸಲ್ಪಟ್ಟ. प्र+साध (संसिद्धौ)+णिच् "क्तः" (३-२-१०२)। "ग्रीवाद्भुतैवावटुशोभितापि प्रसाधिता माणवकेन सेयम्" नैष० ७-६६।

**प्रसार ಪ್ರಸಾರ** (पुं०) 1. ಹರಡುವುದು, ವ್ಯಾಪಿಸುವುದು. प्र+सृ (गतौ) "घञ्" (३-३-१८)। 2. ಮುಂದಕ್ಕೆ ನೀಡುವುದು, ಮುಂದೆ ಚಾಚುವುದು. "प्रसाराकुञ्चनाभ्नं निःशल्यमिति निर्दिशेत्" सुश्रुत० सूत्र०।

**प्रसारण ಪ್ರಸಾರಣ** (न०) 1. ಮುಂದಕ್ಕೆ ನೀಡುವುದು, ಐದು ವಿಧ ಕರ್ಮಗಳಲ್ಲೊಂದು ವಿಧ. प्र+सृ (गतौ)+णिच् "ल्युट्" (३-३-११५)। (1) उत्क्षेपणम् (2) अवक्षेपणम् (3) आकुञ्चनम् (4) प्रसारणम् ಮತ್ತು (5) गमनम् ಇವು ಐದು ಕರ್ಮಗಳು. 2. ಹೆಚ್ಚಿಸುವುದು, ವೃದ್ಧಿಪಡಿಸುವುದು.

**प्रसारयत् ಪ್ರಸಾರಯತ್** (वि०) ಹರಡುತ್ತಿರುವ, ಮುಂದಕ್ಕೆ ಚದರಿಸುತ್ತಿರುವ. प्र+सृ (गतौ)+णिच् "शतृ" (३-२-१२४)। "तटप्रदेशेषु तरङ्गहस्तैः प्रसारयन् संप्रति फेनपङ्क्तिम्" याद० १८-११२। स्त्रियां "ङीप्" (४-१-६)। **-यन्ती -ಯಂತೀ.**

**प्रसारिणी ಪ್ರಸಾರಿಣೀ** (स्त्री०) ಮುಳ್ಳುಗಸೆಗಿಡ. प्रसरति —प्र+सृ (गतौ) "णिनिः" (३-१-१३४)। "ङीप्"।

**प्रसारित ಪ್ರಸಾರಿತ** (वि०) 1. ಮುಂದಕ್ಕೆ ನೀಡಲ್ಪಟ್ಟ, ಮುಂದಕ್ಕೆ ಚಾಚಲ್ಪಟ್ಟ. प्र+सृ (गतौ)+णिच् "क्तः" (३-२-१०२)। "प्रत्युज्जगामेव गुरुप्रमोदप्रसारितो-त्तुङ्गतरङ्गबाहुः" माघ० ३-७८। 2. ಹರಡಲ್ಪಟ್ಟ, ವಿಸ್ತರಿಸಲ್ಪಟ್ಟ. "ध्वजांशुकैर्ध्रुवमनुकूलमारुतप्रसारितैः प्रसभक्कृतोपहूतयः" माघ० १७-४९।

**प्रसारिन् ಪ್ರಸಾರಿನ್** (वि०) 1. ಮುಂದಕ್ಕೆ ನೀಡುವ, ಮುಂದಕ್ಕೆ ಚಾಚುವ. प्रसारयति—प्र+सृ (गतौ)+णिच् "घिनुण्" (३-२-१४५)। 2. ಹರಡುವ ಸ್ವಭಾವದ, ವ್ಯಾಪಿಸುವ ಸ್ವಭಾವದ. 3. ಹೆಚ್ಚುವ, ವೃದ್ಧಿಹೊಂದುವ. स्त्रियां "ङीप्" (४-१-५)। **-सारिणी -ಸಾರಿಣೀ.** "अनास्थया सूनकरप्रसारिणीं ददर्श दूनः स्थलपद्मिनीं नलः" नैष० १-८८। "प्रसारिणी सपदि नभस्थले ततः समीरणभ्रमितपरागरूषिता" माघ० १७-४४।

**प्रसित ಪ್ರಸಿತ** (न०) 1. ಕೀವು. प्र+षो (अन्तकर्मणि) "क्तः" (३-२-१०२)। (वि०) 2. ಆಸಕ್ತನಾದ, ತತ್ಪರನಾದ. प्र+षिञ् (बन्धने) "क्तः" (३-२-१०२)। 3. ಯಾವಾಗಲೂ ಇರುತ್ತಿದ್ದ, ನಿತ್ಯವೂ ಇರುತ್ತಿದ್ದ. "अवसितं हसितं प्रसितं मुदा विलसितं ह्लसितं स्मर-भासितम्" भट्टि० १०-६। "तत्परे प्रसितासक्ता-विष्टार्थोद्युक्त उत्सुकः" अम०। 4. ಕಟ್ಟಲ್ಪಟ್ಟ, ಬಂಧಿಸಲ್ಪಟ್ಟ. 5. ಅಪೇಕ್ಷಿಸಲ್ಪಟ್ಟ.

**प्रसिद्ध ಪ್ರಸಿದ್ಧ** (वि०) 1. ಅಲಂಕರಿಸಲ್ಪಟ್ಟ, ಶೃಂಗರಿಸಲ್ಪಟ್ಟ. प्र+षिधु (संराद्धौ) कर्म० "क्तः" (३-२-१०२)। "यथा प्रसिद्धैर्मधुरं शिरोरुहैर्जटाभिरप्येवमभूत्तदाननम्" कुमा० ५-९। 2. ಪ್ರಸಿದ್ಧಿಪಡೆದ, ಖ್ಯಾತಿಯನ್ನು ಗಳಿಸಿದ, ಕೀರ್ತಿಯನ್ನು ಸಂಪಾದಿಸಿದ, ಹೆಸರುವಾಸಿಯಾದ. "एकान्तमौग्ध्यानवबुद्धविभ्रमैः प्रसिद्धविस्तारगुणैर्विलोचनैः" माघ० १२-३९।

**प्रसिद्धि ಪ್ರಸಿದ್ಧಿ** (स्त्री०) 1. ಖ್ಯಾತಿ, ಹೆಸರುವಾಸಿ, ಕೀರ್ತಿ. प्र+षिधु (संराद्धौ) "क्तिन्" (३-३-९४)। "विद्या-श्रुतस्त एवैता इति नो गुरुदर्शनम्। पृथक् पृथक् प्रसिद्धयर्थं यासु लोको व्यवस्थितः" कामन्द०। 2. ಭೂಷಣ, ಆಭರಣ, ಒಡವೆ. 3. ಕಾರ್ಯಸಿದ್ಧಿ, ಕಾರ್ಯ ಕೈಗೂಡುವುದು. "आधिद्विषामा तपसां प्रसिद्धेरस्मद्विना मा भृशमुन्मनीभूः" किरा० ३-३९।

**प्रसुप्त ಪ್ರಸುಪ್ತ** (वि०) 1. ಮಲಗಿರುವ, ನಿದ್ರಿಸುತ್ತಿರುವ. प्र+ञि ष्वप् (शये) "क्तः" (३-४-७२)। 2. ಚೆನ್ನಾಗಿ ನಿದ್ರಿಸುವ. प्रकर्षेण सुप्तः। "कथं प्रियवचनेनैव मे वक्षसि प्रसुप्ता" उ० रा० १।

**प्रसुप्ति ಪ್ರಸುಪ್ತಿ** (स्त्री०) ನಿದ್ರೆ. प्र+ञि ष्वप् (शये) "क्तिन्" (३-३-९४)।

**प्रसू ಪ್ರಸೂ** (स्त्री०) 1. ತಾಯಿ, ಜನನಿ. प्रसूयते—षूङ् (प्राणिप्रसवे) "क्विप्" (३-२-६१)। "प्रसूप्रसादाधि-गता प्रसूनमाला नलस्योद्भ्रमवीक्षितस्य" नैष० ६-४९। 2. ಹೆಣ್ಣು ಕುದುರೆ. 3. ಲತೆ, ಬಳ್ಳಿ. 4. ಜಿಂಕೆ.

(वि०) 5. ಪ್ರಸವಿಸುವ, ಮಕ್ಕಳನ್ನು ಹೆರುವ. "स्त्रीप्रसूश्चाधिवेत्तव्या पुरुषद्वेषिणी तथा" याज्ञ० १-७३। "प्रसूरश्वाजनन्योश्च कदलीवीरुधोरपि" विश्व०।

**प्रसूका ಪ್ರಸೂಕಾ** (स्त्री०) ಹೆಣ್ಣು ಕುದುರೆ. प्रसूरेव प्रसूका।

**प्रसूत ಪ್ರಸೂತ** (न०) 1. ಪುಷ್ಪ, ಕುಸುಮ, ಹೂವು. प्रसूयते—प्र+षूङ् (प्राणिप्रसवे) "क्तः" (३-२-१०२)। (वि०) 2. ಜನಿಸಿದ, ಹುಟ್ಟಿದ. प्र + षूङ् (प्राणिगर्भविमोचने) "क्तः" (३-४-७२)। "तदन्वये शुद्धिमति प्रसूतः शुद्धिमत्तरः" रघु० १-१२। 3. ಉತ್ಪನ್ನವಾದ, ಉಂಟಾದ. "यत्र स्रुतक्षीरतया प्रसूतः सानूनि गन्धः सुरभीकरोति" कुमा० १-९।

**प्रसूता ಪ್ರಸೂತಾ** (स्त्री०) ಪ್ರಸವಿಸಿದ ಹೆಂಗಸು, ಮಗುವನ್ನು ಹೆತ್ತ ಹೆಂಗಸು. प्रसूते स्म—प्र+षूङ् (प्राणिगर्भविमोचने) "क्तः" (३-४-७२)। "अकाले च प्रसूता स्त्री स्नेहपानं विवर्जयेत्" सुश्रुत० चिकित्सा० ३२-४८।

**प्रसूति ಪ್ರಸೂತಿ** (स्त्री०) 1. ಜನನ, ಹುಟ್ಟುವುದು. प्र+षूङ् (प्राणिगर्भविमोचने) भावे "क्तिन्" (३-३-९४)। "प्रसूतिभाजः सर्गस्य तावेव पितरौ स्मृतौ" कुमा० २-७। 2. ಪ್ರಸವ, ಹೆರುವುದು. प्र+षूङ् (प्राणिप्रसवे) "क्तिन्" (३-३-९४)। "कृष्णा वचा चापि जलेन पिष्टा सैरण्डतैला खलु नाभिलेपात्। सुखं प्रसूतिं कुरुतेऽङ्गनानां निपीडितानां बहुभिः प्रमादैः" भावप्र०। 3. ಹಕ್ಕಿಗಳು ಮೊಟ್ಟೆಯಿಡುವುದು. "मदेकपुत्रा जननी जरातुरा नवप्रसूतिर्वरटा तपस्विनी" नैष० १-१३५। 4. ಉತ್ಪತ್ತಿ, (ಪುಷ್ಪವು ಗಿಡಗಳಲ್ಲಿ) ಬೆಳೆಯುವುದು. "आद्ये वः कुसुमप्रसूतिसमये यस्या भवत्युत्सवः" शाकु० ४-८। 5. ಸಂತಾನ, ಸಂತತಿ, ಪ್ರಜೆ, ಮಕ್ಕಳು. "स्थित्यै दण्डयतो दण्ड्यान् परिणेतुः प्रसूतये" रघु० १-२५। 6. ಉತ್ಪತ್ತಿಯ ಸ್ಥಾನ. "त्वं सर्वस्य भुवनस्य प्रसूतिः त्वमेवाग्रे भवसि प्रतिष्ठा" भा० आदि०। 7. ಉತ್ಪತ್ತಿಗೆ ಕಾರಣ. "न केवलानां पयसां प्रसूतिमवेहि मां कामदुघां प्रसन्नाम्" रघु० २-६३। 8. ದಕ್ಷನ ಪತ್ನಿ, ಸತೀದೇವಿಯ ತಾಯಿ. 9. ಪ್ರೇರಣೆ. षू (प्रेरणे) "अप्" (३-३-५७)।

**प्रसूतिका ಪ್ರಸೂತಿಕಾ** (स्त्री०) ಪ್ರಸವಿಸಿದ ಹೆಂಗಸು, ಮಕ್ಕಳನ್ನು ಹಡೆದ ಹೆಂಗಸು. प्रसूता "कन्" (५-३-७५)।

**प्रसूतिज ಪ್ರಸೂತಿಜ** (न०) ಕಷ್ಟ, ನೋವು.

**प्रसून ಪ್ರಸೂನ** (न०) 1. ಕುಸುಮ, ಪುಷ್ಪ, ಹೂವು. प्रसूयते स्म — प्र + षूङ् (प्राणिगर्भविमोचने) "क्तः" (३-२-१०२)। निष्ठातस्य नकारः (८-२-४५)। "ततः प्रसूने च फले च मञ्जुले स संमुखस्याङ्गुलिना जनाधिपः" नैष० १-७६। 2. ಫಲ, ಹಣ್ಣು. (वि०) 3. ಹುಟ್ಟಿದ, ಉತ್ಪನ್ನವಾದ. "प्रसूनो वाच्यवज्जाते क्लीवं तु फलपुष्पयोः" मेदि०।

**प्रसूनधन्वन् ಪ್ರಸೂನಧನ್ವನ್** (पुं०) ಮನ್ಮಥ, ಕಾಮದೇವ. प्रसूनं पुष्पं धनुर्यस्य "अनङ्" (५-४-१३३)। "प्रसूनधन्वा शरसात्करोति मामिति क्रुधाक्रुश्यत तेन केतकम्" नैष० १-८१।

**प्रसूनवृष्टि ಪ್ರಸೂನವೃಷ್ಟಿ** (स्त्री०) ಪುಷ್ಪವೃಷ್ಟಿ, ಧಾರಾಕಾರವಾಗಿ ಪುಷ್ಪವು ಬೀಳುವುದು.

**प्रसृत ಪ್ರಸೃತ** (पुं०) 1. ಅರ್ಧಾಂಜಲಿ, ಅರ್ಧ ಬೊಗಸೆ, ನೀರು ನಿಲ್ಲುವಂತೆ ಗುಳಿಯಾಗಿ ಮಾಡಿದ ಹಸ್ತ. प्र + सृ (गतौ) "क्तः" (३-४-७२)। प्रकृतं सृतमस्य इति वा। (न०) 2. 2 ಪಲಗಳ ಪ್ರಮಾಣ. (वि०) 3. ಮುಂದಕ್ಕೆ ನೀಡಲ್ಪಟ್ಟ, ಮುಂದಕ್ಕೆ ಚಾಚಲ್ಪಟ್ಟ. प्र + सृ "क्तः" (३-२-१०२)। 4. ದೀರ್ಘವಾದ, ಉದ್ದವಾದ. "अक्षोभि प्रसृतविलोलबाहुपक्षैर्योषाणामुरुभिरुरोजगण्डशैलैः" माघ० ८-२५। 5. ವಿನಯಶಾಲಿ, ವಿಧೇಯ, ವಿನೀತ. 6. ಹೆಚ್ಚಿರುವ, ವೃದ್ಧಿ ಹೊಂದಿರುವ, ಬೆಳೆದಿರುವ. "न तेजस्तेजस्वी प्रसृतमपरेषां विषहते स तस्य स्वो भावः प्रकृतिनियतत्वादकृतकः" उ० रा० ६-१४। 7. ಹೊರಗೆ ಹರಡಿರುವ, ವ್ಯಾಪಿಸಿರುವ, ಹೊಮ್ಮಿ ಹೊರಗೆ ಬರುವ. "स्फुरन्मणिप्रसृतमरीचिसूचिभिः" माघ० १७-५१। 8. ವೇಗವಾದ. 9. ಮುಂದೆ ನಡೆದ, ಮುಂದೆ ಹೋಗುತ್ತಿರುವ. "प्रसृतं रभसादयोऽभिनीला प्रतिपादं परितोऽभिवेष्टयन्ती" माघ० २०-५१। (स्त्री०) **—ता —ತಾ.** 10. ಜಂಘೆ, ಮೊಳಕಾಲು. प्रस्रियते स्म — प्र + सृ (गतौ) "क्तः" (३-२-१०२)। "प्रसृतः सुप्रसारे स्याद्विनीते वेगिते त्रिषु। अर्धाञ्जलौ तु पुंलिङ्गो जङ्घायां प्रसृता मता" मेदि०।

**प्रसृति ಪ್ರಸೃತಿ** (स्त्री०) 1. ಮುನ್ನಡೆ, ಪ್ರಗತಿ, ಬೆಳವಣಿಗೆ. प्र+सृ (गतौ) "क्तिन्" (३-३-९४)। 2. ಅರ್ಧಾಂಜಲಿ, ಅರ್ಧ ಬೊಗಸೆ, ಗುಳಿಯಾಗಿ ಮಾಡಲ್ಪಟ್ಟ ಹಸ್ತ. 3. 2 ಪಲಗಳ ಪ್ರಮಾಣ. 4. ಸಂತತಿ, ಸಂತಾನ, ಪ್ರಜೆ, ಮಕ್ಕಳು. "वर्धितानि प्रसृत्या वै विनताकुलकर्तृभिः" भा० उद्योग० १०१-३।

**प्रसेक ಪ್ರಸೇಕ** (पुं०) 1. ಸೇಚನೆಮಾಡುವುದು, ಸಿಂಪಿಸುವುದು, ಚಿಮುಕಿಸುವುದು. प्र+षिच (क्षरणे) "घञ्" (३-३-१८)। 2. ಒಂದು ರೋಗ. "श्वासकासप्रतिश्याय-प्रसेकारोचकज्वरान्। हन्ति मूलकयूषस्तु कफमेदोगलामयान्" सुश्रुत० सूत्र० ४६।

**प्रसेदिवस् ಪ್ರಸೇದಿವಸ್** (वि०) ಪ್ರಸನ್ನನಾದ, ಸಂತುಷ್ಟನಾದ, ಸುಪ್ರೀತನಾದ. प्र+षदॢ (विशरणगत्यवसादनेषु) "क्वसुः" (३-२-१०८)। "प्रसेदिवांसं तमुपाससाद वमन्निवान्ते विनयेन जिष्णुः" किरा० ३-२४। नैष० २-१७।

**प्रसेव ಪ್ರಸೇವ** (पुं०) 1. ಬಿದಿರಿನ ತಟ್ಟೆ. प्र+षिवु (तन्तुसन्ताने) "घञ्" (३-३-१९)। 2. ವೀಣೆಯ ಹೆರಳು, ವೀಣಾದಂಡದ ಕೆಳಗೆ ಗಂಭೀರವಾದ ಶ್ರಾವ್ಯವಾದ ಶಬ್ದ ಹೊರಡಲು ಇಟ್ಟಿರುವ ಸೋರೆ ಬುರುಡೆ. "प्रसेवः पुंसि वीणाङ्गे स्यूते च" मेदि०।

**प्रसेवक ಪ್ರಸೇವಕ** (पुं०) 1. ವೀಣಾದಂಡದ ಕೆಳಗೆ ಮಧುರವಾದ ಶಬ್ದ ಹೊರಡಲು ಇಟ್ಟಿರುವ ಬುರುಡೆ. ಸೋರೆ ಬುರುಡೆ. प्रसेव स्वार्थे "कन्"। 2. ಬಿದಿರಿನ ತಟ್ಟೆ.

**प्रस्कन्दन ಪ್ರಸ್ಕಂದನ** (न०) 1. ಕೆಳಗೆ ಜಾರಿ ಬೀಳುವುದು. प्र+स्कन्दिर् (गतिशोषणयोः) भावे "ल्युट्" (३-३-११५)। 2. ವಿರೇಕ, ಭೇದಿ. 3. ದಾರಿತಪ್ಪಿ ನಡೆಯುವುದು, ಅಪರಾಧವೆಸಗುವುದು.

**प्रस्कन्न ಪ್ರಸ್ಕನ್ನ** (वि०) 1. ಕೆಳಗೆ ಜಾರಿಬಿದ್ದ. प्र+स्कन्दिर् (गतिशोषणयोः) "क्तः" (३-४-७२)। 2. ದಾರಿತಪ್ಪಿ ನಡೆದ, ಅಪರಾಧವೆಸಗಿದ.

**प्रस्खलत् ಪ್ರಸ್ಖಲತ್** (वि०) ಎಡವಿ ಬೀಳುತ್ತಿರುವ, ಮುಗ್ಗರಿಸುತ್ತಿರುವ.

**प्रस्खलन ಪ್ರಸ್ಖಲನ** (न०) ಎಡವಿ ಬೀಳುವುದು, ಮುಗ್ಗರಿಸಿ ಬೀಳುವುದು. प्र+स्खल (सञ्चलने) "ल्युट्" (३-३-११५)।

**प्रस्खलित ಪ್ರಸ್ಖಲಿತ** (वि०) ಎಡವಿದ, ಮುಗ್ಗರಿಸಿ ಬಿದ್ದ. प्र+स्खल (सञ्चलने) "क्तः" (३-४-७२)।

**प्रस्तर ಪ್ರಸ್ತರ** (पुं०) 1. ಶಿಲೆ, ಕಲ್ಲು. प्रस्तृणाति—प्र+स्तृञ् (आच्छादने) "अच्" (३-१-१३४)। "पाषाण-प्रस्तरग्रावोपलाश्मानःशिला दृषत्" अम०। 2. ಮಣಿ, ರತ್ನ. 3. ಹಾಸಿಗೆ, ಸುಪ್ಪತ್ತಿಗೆ, ಮೆತ್ತೆ. 4. ಎಲೆ ಚಿಗುರು ಕುಸುಮ ಇವುಗಳಿಂದ ನಿರ್ಮಿಸಲ್ಪಟ್ಟ ಹಾಸಿಗೆ. "पल्लवाद्यैर्विरचिते शयनीये तु संस्तरः। प्रस्तरः प्रस्तिरश्चेति प्रस्तारोऽपि च कुत्रचित्"। 5. ದರ್ಭೆಯ ಒಂದು ಮುಷ್ಟಿ. 6. ಸಮವಾಗಿರುವ ಒಂದು ವಸ್ತುವಿನ ಮೇಲ್ಮೈ.

**प्रस्तरण ಪ್ರಸ್ತರಣ** (न०) 1. ಹಾಸಿಗೆ, ಸುಪ್ಪತ್ತಿಗೆ, ಮೆತ್ತೆ. 2. ಹರಡುವುದು, ಹಾಸುವುದು.

**प्रस्तवन ಪ್ರಸ್ತವನ** (न०) 1. ಚೆನ್ನಾಗಿ ಸ್ತೋತ್ರ ಮಾಡುವುದು. 2. ಚೆನ್ನಾಗಿ ಶ್ಲಾಘಿಸುವುದು,–ಕೊಂಡಾಡುವುದು. प्र+ष्टुञ् (स्तुतौ) "ल्युट्" (३-३-११५)।

**प्रस्तवनीय ಪ್ರಸ್ತವನೀಯ** (वि०) 1. ಚೆನ್ನಾಗಿ ಸ್ತೋತ್ರ ಮಾಡಲ್ಪಡುವ. 2. ಚೆನ್ನಾಗಿ ಶ್ಲಾಘಿಸಲ್ಪಡುವ, –ಕೊಂಡಾಡಲ್ಪಡುವ. प्र+ष्टुञ् (स्तुतौ) कर्म० "अनीयर्" (३-१-९६)। 3. ಚೆನ್ನಾಗಿ ಹೊಗಳಬೇಕಾದ. 4. ಚೆನ್ನಾಗಿ ಕೊಂಡಾಡಬೇಕಾದ. 5. ಹೊಗಳಲು ಯೋಗ್ಯನಾದ, ಸ್ತೋತ್ರಮಾಡಲು ಅರ್ಹನಾದ. 6. ಕೊಂಡಾಡಲು ಅರ್ಹನಾದ, ಶ್ಲಾಘಿಸಲು ಅರ್ಹನಾದ. "तव्यः" (३-१-९६)। –स्तोतव्यः –ಸ್ತೋತವ್ಯ:

**प्रस्तव्य ಪ್ರಸ್ತವ್ಯ** (वि०) ಸ್ತುತಿಗೆ ಅರ್ಹನಾದ, ಹೊಗಳಿಕೆಗೆ ಅರ್ಹನಾದ. प्र+स्तवमर्हति "यः" (५-१-६६)।

**प्रस्तार ಪ್ರಸ್ತಾರ** (पुं०) 1. ಹರಡುವುದು, ವ್ಯಾಪಿಸುವುದು. प्र+स्तृञ् (आच्छादने) "घञ्" (३-३-३२)। 2. ಛಂದಃಶಾಸ್ತ್ರದಲ್ಲಿ ವೃತ್ತಗಳ ಪ್ರಭೇದಗಳನ್ನು ತಿಳಿಯುವ ಒಂದು ಉಪಾಯ. "पादे सर्वगुरावाद्येलघुं न्यस्य गुरोरधः। यथोपरि तथा शेषं भूयः कुर्यादमुं विधिम्॥ ऊने दद्याद्गुरूनेष यावत्सर्वलघुर्भवेत्। प्रस्तारोऽयं समाख्यातश्छन्दोविचितिवेदिभिः" वृ० र०। 3. ವನ, ಕಾಡು. 4. ಒಂದು ವಸ್ತುವಿನ ಸಮತಲವಾಗಿರುವ ಮೇಲ್ಮೈ. 5. ಪುಷ್ಪಲತಾದಿಗಳಿಂದ ರಚಿತವಾದ ಹಾಸಿಗೆ.

**प्रस्ताव ಪ್ರಸ್ತಾವ** (पुं०) 1. ಪೀಠಿಕೆ, ಒಂದು ಗ್ರಂಥದಲ್ಲಿನ ಪ್ರತಿಪಾದ್ಯ ವಿಷಯಗಳ ಸೂಕ್ಷ್ಮ ಪರಿಚಯ. 2. ಅವಕಾಶ, ಅವಸರ, ಸರಿಯಾದ ಕಾಲ, ಸಂದರ್ಭ. प्र+ष्टुञ् (स्तुतौ) "घञ्" (३-३-२७)। "शिष्याय बृहतां पत्युः प्रस्तावमदिशद्दृशा" माघ० २-६८। 3. ಉಲ್ಲೇಖ, ಸೂಚನೆ, ನಿರ್ದೇಶ. "अपि नाम मृगतृष्णिकेव नाममात्र-प्रस्तावो मे विषादाय कल्पते" शाकु० ७। 4. ಪ್ರಕರಣ, ಸಂದರ್ಭ, ಸನ್ನಿವೇಶ. "प्रस्तावदेशकालादेर्वैशिष्ट्यात् प्रतिभाजुषाम्" काव्यप्र०। 5. ಪ್ರಾರಂಭ, ಉಪಕ್ರಮ.

**प्रस्तावना ಪ್ರಸ್ತಾವನಾ** (स्त्री०) 1. ಪ್ರಾರಂಭ, ಉಪಕ್ರಮ. प्रस्तावयति कार्यादिकम्—प्र+ष्टुञ् (स्तुतौ)+

णिच् "युच्" (३-३-१०७)। "टङ्कारध्वनिरार्यबालचरितप्रस्तावनाडिण्डिमः" म० वी० १-५४। 2. ಪೀಠಿಕೆ, ಉಪೋದ್ಘಾತ. "प्रस्तावना खल्वेषा कपटनाटकस्य" मालती० २। 3. ಆಮುಖ, ನಾಟಕ (ರೂಪಕ) ಗಳ ಪ್ರಾರಂಭದಲ್ಲಿ ನಟಿ ವಿದೂಷಕ ಅಥವಾ ಪಾರಿಪಾರ್ಶ್ವಕನು ಸೂತ್ರಧಾರನೊಡನೆ ಕಲೆತು ಮಾತನಾಡುವುದು, ನಟಿ ಸೂತ್ರಧಾರರು ತಮ್ಮ ಸ್ವಂತ ವ್ಯವಹಾರದಿಂದ ನಾಟಕದ ಕಥಾವಸ್ತುವನ್ನು ಸೂಚಿಸಿ ಮುಂದಿನ ಪಾತ್ರಪ್ರವೇಶ ವನ್ನು ಸೂಚಿಸುವುದು. "नटी विदूषको वापि पारिपार्श्वक एव वा। सूत्रधारेण सहिताः संलापं यत्र कुर्वते। चित्रैर्वाक्यैः स्वकार्योत्थैः प्रस्तुताक्षेपिभिर्मिथः। आमुखं तत्तु विज्ञेयं नाम्ना प्रस्तावनापि सा" सा० द० ६-३१, ३२।

**प्रस्तावित ಪ್ರಸ್ತಾವಿತ** (वि०) ನಿರ್ದೇಶಿಸಿ ಹೇಳಲ್ಪಟ್ಟ, ಉಲ್ಲೇಖ ಮಾಡಲ್ಪಟ್ಟ. प्र + ष्टुञ् (स्तुतौ) + णिच् "क्तः" (३-२-२०२)। "शाकुन्तलादीनितिहासवादान प्रस्तावितानन्यपरैर्वचोभिः" मालती० ३-३।

**प्रस्तिर ಪ್ರಸ್ತಿರ** (पुं०) ಹೂವು ಚಿಗುರುಗಳಿಂದ ನಿರ್ಮಿತ ವಾದ ಹಾಸಿಗೆ, ಮೆತ್ತೆ, ಸುಪ್ಪತ್ತಿಗೆ. प्रस्तर पृषो०।

**प्रस्तुत ಪ್ರಸ್ತುತ** (वि०) 1. ಚೆನ್ನಾಗಿ ಸ್ತೋತ್ರ ಮಾಡ ಲ್ಪಟ್ಟ, ಕೊಂಡಾಡಲ್ಪಟ್ಟ. प्रकर्षेण स्तुतः। 2. ಪ್ರಕರಣ ದಿಂದ ಲಬ್ಧವಾದ, ಸಂದರ್ಭದಿಂದ ಒದಗಿದ. 3. ಪ್ರಾರಂಭಿ ಸಲ್ಪಟ್ಟ, ಉಪಕ್ರಮಿಸಲ್ಪಟ್ಟ, ಕೈಗೊಳ್ಳಲ್ಪಟ್ಟ. 4. (ಅಲಂಕಾರಶಾಸ್ತ್ರದಲ್ಲಿ) ಪ್ರಕೃತವಾದ, ಪ್ರಸಕ್ತವಾದ, ವರ್ಣ್ಯ. "अप्रस्तुतप्रशंसा स्यात् सा यत्र प्रस्तुताश्रया" चन्द्रा०। 5. ಪ್ರತೀಕ್ಷಿಸಲ್ಪಟ್ಟ, ಎದುರು ನೋಡಲ್ಪಟ್ಟ. (न०) 6. ಸ್ತುತಿ, ಹೊಗಳಿಕೆ. 7. ಪ್ರಾರಂಭ, ಉಪಕ್ರಮ.

**प्रस्तुतवत् ಪ್ರಸ್ತುತವತ್** 1. ಚೆನ್ನಾಗಿ ಸ್ತೋತ್ರ ಮಾಡಿ ದವನು, ಚೆನ್ನಾಗಿ ಹೊಗಳಿದವನು. 2. ಪ್ರಾರಂಭಿಸಿದವನು, ಉಪಕ್ರಮಿಸಿದವನು. प्र + ष्टुञ् (स्तुतौ) "क्तवतुः" (३-२-१०२)।

**प्रस्तुवत् ಪ್ರಸ್ತುವತ್** (वि०) 1. ಚೆನ್ನಾಗಿ ಸ್ತೋತ್ರ ಮಾಡು ತ್ತಿರುವ. 2. ಶ್ಲಾಘಿಸುತ್ತಿರುವ, ಕೊಂಡಾಡುತ್ತಿರುವ. प्र + ष्टुञ् (स्तुतौ) "शतृ" (३-२-१२४)। स्त्रियां "ङीप्" (४-१-६)। **–ಸ್ತುವತೀ –स्तुवती.** "शानच्" (३-२-१२४)। **–स्तुवानः –ಸ್ತುವಾನಃ.**

**प्रस्तूयमान ಪ್ರಸ್ತೂಯಮಾನ** (वि०) 1. ಸ್ತೋತ್ರ ಮಾಡಲ್ಪಡುತ್ತಿರುವ, ಹೊಗಳಲ್ಪಡುತ್ತಿರುವ. प्र+ष्टुञ् (स्तुतौ) कर्म० "शानच्" (३-२-१२४)। 2. ಶ್ಲಾಘಿಸ ಲ್ಪಡುತ್ತಿರುವ, ಕೊಂಡಾಡಲ್ಪಡುತ್ತಿರುವ. 3. ಪ್ರಸ್ತಾವ ಮಾಡಲ್ಪಡುತ್ತಿರುವ, ಪ್ರಾರಂಭಿಸಲ್ಪಡುತ್ತಿರುವ.

**प्रस्तृत ಪ್ರಸ್ತೃತ** (वि०) ಆಚ್ಛಾದಿಸಲ್ಪಟ್ಟ, ಮರೆಮಾಡ ಲ್ಪಟ್ಟ. प्र+स्तृञ् (आच्छादने) "क्तः" (३-२-१०२)।

**प्रस्तोतव्य ಪ್ರಸ್ತೋತವ್ಯ** (वि०) "प्रस्तवनीय" ಪದದಲ್ಲಿ ನೋಡಿ.

**प्रस्तोतृ ಪ್ರಸ್ತೋತೃ** (वि०) 1. ಸ್ತುತಿಸುವವನು, ಹೊಗಳುವವನು. 2. ಶ್ಲಾಘಿಸುವವನು, ಕೊಂಡಾಡು ವವನು. प्र + ष्टुञ् (स्तुतौ) "तृच्" (३-१-१३४)। स्त्रियां "ङीप्" (४-१-६)। **–स्तोत्री –ಸ್ತೋತ್ರೀ.**

**प्रस्थ ಪ್ರಸ್ಥ** (पुं०) 1. ಸಾನುಪ್ರದೇಶ, ಬೆಟ್ಟದ ಸಮ ಪ್ರದೇಶ, – ಸಮವಾದ ಭೂಭಾಗ. प्रतिष्ठन्तेऽत्र—प्र+ ष्ठा (गतिनिवृत्तौ) "कः" (वा० ३-३-५८)। "प्रस्थं हिमाद्रेर्मृगनाभिगन्धि किञ्चित्क्वणत्किन्नरमध्युवास" कुमा० १-५४। 2. ಉನ್ನತವಾದ ವಸ್ತು. 3. ಪರ್ವತದ ಶಿಖರ, ಬೆಟ್ಟದ ತುದಿ. "यतः परार्घ्यानि भृतान्यनूनैः प्रस्थैर्मुहुर्भूरिभिरुच्छिखानि" माघ० ४-११। 4. ಪೂರ್ವ ಕಾಲದ ಧಾನ್ಯದ ಒಂದು ಅಳತೆ, ಬಳ್ಳ, ಸೇರು. प्रस्थीयतेऽनेन — प्र + ष्ठा "कः" (वा० ३-३-५८)। (वि०) 5. ಸ್ಥಿರವಾದ, ದೃಢವಾದ. "प्रस्थोऽस्त्री मानभेदे स्यात् सानावुन्मितवस्तुनि" मेदि०।

**प्रस्थपुष्प ಪ್ರಸ್ಥಪುಷ್ಪ** (पुं०) ಮರುವಕ, ಮರುಗ. प्रस्थे सानौ पुष्प्यति—पुष्प (विकसने) "अच्" (३-१-१३४)।

**प्रस्थातृ ಪ್ರಸ್ಥಾತೃ** (वि०) ಹೊರಟುಬರುವವನು, ಪ್ರಯಾಣ ಮಾಡುವವನು. प्र + ष्ठा (गतिनिवृत्तौ) "तृच्" (३-१-१३३)। स्त्रियां "ङीप्" (४-१-५)। **–स्थात्री –ಸ್ಥಾತ್ರೀ.**

**प्रस्थान ಪ್ರಸ್ಥಾನ** (न०) 1. ಪ್ರಯಾಣ, ಹೊರಟು ಬರುವುದು. प्र+ष्ठा (गतिनिवृत्तौ) "ल्युट्" (३-३-११५)। "प्रस्थानप्रणतिभिरङ्गुलीषु चक्रुर्मौलिस्रक्च्युतमकरन्दरेणुगौरम्" रघु० ४-८८। 2. ಸಂಚಾರ, ಗಮನ, ನಡೆ. "काले गते बहुतिथे मम सैव जाता प्रस्थानविक्लवगतेरवलम्बनार्थी" शाकु० ५-३। 3. ಆಗಮನ, ಬರುವುದು. "मन्ये मत्पावनायैव प्रस्थानं भवतामिह" कुमा० ६-६१। 4. ಜೈತ್ರಯಾತ್ರೆಗಾಗಿ ರಾಜನ ಪ್ರಯಾಣ. "प्रस्थानकालक्षमवेषकल्पनाकृतक्षणक्षेपमुदैक्षताच्युतम्" माघ० १२-१। 5. ದರ್ಶನಗಳ ಪದ್ಧತಿ.

**प्रस्थानक ಪ್ರಸ್ಥಾನಕ** (ನಂ) ಹದಿನೆಂಟು ಉಪರೂಪಕ ಗಳಲ್ಲೊಂದು ವಿಧ.

**प्रस्थानीय ಪ್ರಸ್ಥಾನೀಯ** (ವಿಂ) 1. ಅವಶ್ಯವಾಗಿ ಹೊರಡ ಬೇಕಾದ. 2. ಅವಶ್ಯವಾಗಿ ಹೊರಡಲು ಯೋಗ್ಯವಾದ. प्र + ष्ठा (गतिनिवृत्तौ) "अनीयर्" (३-१-९६)। "तव्यः" (३-१-९६)। **–स्थातव्यम् –ಸ್ಥಾತವ್ಯಮ್.**

**प्रस्थापन ಪ್ರಸ್ಥಾಪನ** (ನಂ) 1. ಹೊರಡಿಸುವುದು, ಕಳು ಹಿಸುವುದು. प्र + ष्ठा (गतिनिवृत्तौ) + णिच् "ल्युट्" (३-३-११५)। 2. ಚೆನ್ನಾಗಿ ಇಡುವುದು, –ಇರಿಸುವುದು.

**प्रस्थापनीय ಪ್ರಸ್ಥಾಪನೀಯ** (ವಿಂ) 1. ಹೊರಡಿಸ ಲ್ಪಡುವ, ಕಳುಹಿಸಿ ಕೊಡಲ್ಪಡುವ. प्र + ष्ठा (गति-निवृत्तौ) + णिच्" "अनीयर्" (३-१-९६)। 2. ಹೊರಡಿಸಬೇಕಾದ, ಕಳುಹಿಸಿಕೊಡಬೇಕಾದ. 3. ಇರಿಸ ಲ್ಪಡುವ. 4. ಇರಿಸಬೇಕಾದ. "तव्यः"। **–स्थापयितव्यः –ಸ್ಥಾಪಯಿತವ್ಯಃ.**

**प्रस्थापित ಪ್ರಸ್ಥಾಪಿತ** (ವಿಂ) 1. ಹೊರಡಿಸಲ್ಪಟ್ಟ, ಕಳುಹಿಸಲ್ಪಟ್ಟ. प्र+ष्ठा (गतिनिवृत्तौ)+णिच् "क्तः" (३-२-१०२)। "त्वयि स्मराधेः सततास्मितेन प्रस्थापितो भूमिभृतास्मि तेन" नैष० ३-११५। 2. ಚೆನ್ನಾಗಿ ಇರಿಸಲ್ಪಟ್ಟ.

**प्रस्थित ಪ್ರಸ್ಥಿತ** (ವಿಂ) 1. ಹೊರಟಿರುವ, ಹೊರಟು ಬಂದಿರುವ. प्र+ष्ठा (गतिनिवृत्तौ) "क्तः" (३-४-७२)। "प्रस्थिताभिरधिनाथनिवासं ध्वंसितप्रियसखीवचनाभिः" किरा० ९-३६। 2. ಹೊರಟಿರುವ, ಪ್ರವೃತ್ತವಾದ. "प्राप्य नाभिह्रदमज्जनमाशु प्रस्थितं निवसनग्रहणाय" माघ० १०-६०। 3. ಹೊರಟುಹೋಗಿದ್ದ. "प्रस्थिता-मभिनिवेशवान् पुनः प्रत्यपद्यत धृतिं पुरन्दरः" याद० १७-७३। 4. ಪಲಾಯನಮಾಡಿದ, ಓಡಿಹೋದ. "प्रेक्ष्य दुर्मदविवेकयोरिव प्रस्थितेव चकिताऽमरावती" याद० १७-७८।

**प्रस्थिति ಪ್ರಸ್ಥಿತಿ** (ಸ್ತ್ರೀಂ) 1. ಮುಂದೆ ನಡೆಯುವುದು. 2. ಪ್ರಯಾಣ ಮಾಡುವುದು, ಹೊರಟುಬರುವುದು. प्र+ष्ठा (गतिनिवृत्तौ) "क्तिन्" (३-३-९४)। "प्रस्थितौ परिमेयानि पश्चादुपचितानि सा" याद० २२-२४०।

**प्रस्नव ಪ್ರಸ್ನವ** (ಪುಂ) ಸೋರುವುದು, ಹರಿಯುವುದು, ಸುರಿಯುವುದು. प्र + ष्णु (प्रस्रवणे) "अप्" (३-३-५७)। "प्रस्नवेनाभिवर्षन्ती वत्सालोकप्रवर्तिना" रघु० १-८४।

**प्रस्निग्ध ಪ್ರಸ್ನಿಗ್ಧ** (ವಿಂ) 1. ಹೆಚ್ಚು ಪ್ರೀತಿಯುಳ್ಳ, ಹೆಚ್ಚು ವಿಶ್ವಾಸವುಳ್ಳ. प्रकर्षेण स्निग्धः। 2. ನುಣುಪಾ ಗಿರುವ. "प्रस्निग्धाः क्वचिदिङ्गुदीफलभिदः सूच्यन्त एवोपलाः" शाकु० १-१३।

**प्रस्नुत ಪ್ರಸ್ನುತ** (ವಿಂ) ಸೋರುತ್ತಿರುವ, ಸ್ರವಿಸುತ್ತಿರುವ. प्र+ष्णु (प्रस्रवणे) "क्तः" (३-४-७२)। "तमुत्सुकाश्च क्रु-रवेक्षणोत्सुकं गवां गणाः प्रस्नुतपीवरौधसः" किरा० ४-१०।

**प्रस्नुषा ಪ್ರಸ್ನುಷಾ** (ಸ್ತ್ರೀಂ) ಮೊಮ್ಮಗನ ಹೆಂಡತಿ, ಸೊಸೆಯ ಸೊಸೆ. स्नुषायाः स्नुषा -- पृषो०।

**प्रस्पन्दन ಪ್ರಸ್ಪಂದನ** (ನಂ) ಅದಿರುವುದು, ಕಂಪಿಸುವುದು, ಚಲಿಸುವುದು, ನಡುಗುವುದು. प्र+स्पदि (किञ्चिच्चलने) "ल्युट्" (३-३-११५)।

**प्रस्पन्दमान ಪ್ರಸ್ಪಂದಮಾನ** (ವಿಂ) ಅದಿರುತ್ತಿರುವ, ನಡುಗುತ್ತಿರುವ, ಕಂಪಿಸುತ್ತಿರುವ. प्र+स्पदि (किञ्चि-च्चलने) "शानच्" (३-२-१२४)। "प्रस्पन्दमानः पुनरूरुरस्याः रामं पुरस्तात् स्थितमाचचक्षे" रामा०।

**प्रस्पन्दित ಪ್ರಸ್ಪಂದಿತ** (ವಿಂ) 1. ಅದಿರಿದ, ಚಲಿಸಿದ. प्र + स्पदि (किञ्चिच्चलने) "क्तः" (३-४-७२)। (ನಂ) 2. ಅದಿರುವುದು, ಚಲಿಸುವುದು.

**प्रस्फुट ಪ್ರಸ್ಫುಟ** (ವಿಂ) 1. ವಿಕಾಸಹೊಂದಿದ, ಅರಳಿದ. प्र + स्फुट (विकसने) "कः" (३-१-१३५)। 2. ಸ್ಪಷ್ಟವಾದ, ವ್ಯಕ್ತವಾದ.

**प्रस्फुटित ಪ್ರಸ್ಫುಟಿತ** (ವಿಂ) 1. ವಿಕಾಸಹೊಂದಿದ, ಅರಳಿದ. प्र + स्फुट (विकसने) "क्तः" (३-४-७२)। (ನಂ) 2. ಅರಳುವುದು, ವಿಕಾಸಹೊಂದುವುದು. भावे "क्तः" (३-३-११४)। 3. ತಾಡನ, ಹೊಡೆಯುವುದು.

**प्रस्फुरण ಪ್ರಸ್ಫುರಣ** (ನಂ) 1. ಅದಿರುವುದು, ಚಲಿಸು ವುದು, ಕಂಪಿಸುವುದು. प्र + स्फुर (स्फुरणे संचलने च) भावे "ल्युट्" (३-३-११५)। 2. ಮನಸ್ಸಿಗೆ ಹೊಳೆ ಯುವುದು, ಹೊಸದಾಗಿ ಮನಸ್ಸಿಗೆ ತೋರುವುದು. 3. ಹಾರುವುದು, ನೆಗೆಯುವುದು, ಜಿಗಿಯುವುದು, ಚಿಮ್ಮು ವುದು. 4. ಹೊರಳಾಡುವುದು. 5. ಪ್ರಕಾಶಕ್ಕೆ ಬರು ವುದು, ಪ್ರಭಾವಶಾಲಿಯಾಗುವುದು. 6. ಹೊಳೆಯು ವುದು, ಪ್ರಕಾಶಿಸುವುದು.

**प्रस्फुरत् ಪ್ರಸ್ಫುರತ್** (ವಿಂ) 1. ಅದಿರುತ್ತಿರುವ, ಚಲಿಸು ತ್ತಿರುವ. प्र + स्फुर (स्फुरणे सञ्चलने च) "शतृ"

(३-२-१२४)। "रिरसयिषति भूयः शष्पमग्रे विकीर्णं पटुतरचपलौष्ठः प्रस्फुरत्प्रोथमश्वः" माघ० ११-११। 2. ಹೊರಳಾಡುತ್ತಿರುವ. "उत्क्षिप्योच्चैः प्रस्फुरन्तं रदाभ्यामीषादन्तः कुञ्जरं शात्रवीयम्" माघ० १८-३८। 3. ಹೊಳೆಯುತ್ತಿರುವ, ಪ್ರಕಾಶಿಸುತ್ತಿರುವ. 4. ಹಾರುತ್ತಿರುವ, ಜಿಗಿಯುತ್ತಿರುವ, ಚಿಮ್ಮುತ್ತಿರುವ. 5. ಮನಸ್ಸಿಗೆ ಹೊಳೆಯುತ್ತಿರುವ, ಮನಸ್ಸಿಗೆ ತೋರುತ್ತಿರುವ. 6. ಪ್ರಕಾಶಕ್ಕೆ ಬರುತ್ತಿರುವ, ಪ್ರಸಿದ್ಧಿ ಪಡೆಯುತ್ತಿರುವ.

**प्रस्फुरित ಪ್ರಸ್ಫುರಿತ** (न०) 1. ಅದಿರುವುದು, ಚಲಿಸುವುದು. प्र + स्फुर (स्फुरणे) भावे "क्तः" (३-३-११४)। 2. ಹೊರಳಾಡುವುದು. (वि०) 3. ಅದಿರಿದ, ಚಲಿಸಿದ, ನಡುಗಿದ. "गुरुपुत्रमुवाचेदं रुषा प्रस्फुरिताधरः"। 4. ಹೊರಳಾಡಿದ. 5. ಮನಸ್ಸಿಗೆ ಹೊಳೆದ. 6. ಚಿಮ್ಮಿದ, ಮೇಲಕ್ಕೆ ಹಾರಿದ.

**प्रस्फोटन ಪ್ರಸ್ಫೋಟನ** (न०) 1. ಅರಳುವುದು. ವಿಕಾಸ ಹೊಂದುವುದು. प्र+स्फुट (विकसने) भावे "ल्युट्" (३-३-११५)। 2. ಬಿರಿಯುವುದು, ಬಾಯಿಬಿಡುವುದು, ಬಾಯಿ ತೆರೆಯುವುದು. 3. ಧಾನ್ಯವನ್ನು ತೂರುವುದು. 4. ಶೂರ್ಪ, ಮೊರ, ಧಾನ್ಯವನ್ನು ತೂರುವ ಕೊಂಗ.

**प्रस्मृत ಪ್ರಸ್ಮೃತ** (वि०) 1. ವಿಸ್ಮೃತವಾದ, ಮರೆತು ಹೋದ, ಮರೆಯಲ್ಪಟ್ಟ. प्र+स्मृ (आध्याने) "क्तः" (३-२-१०२)। "प्रस्मृतं न त्वया तावद्यन्मोहनविमोहितः। अतृप्तोऽधरपानेषु रसनामपिबं तव" नैष० २०-७८। 2. ಮರೆಯದೆ ಇರುವ, ಅವಿಸ್ಮೃತ. "प्रस्मृतत्वदुपकारपद्धतेः" याद० १७-११८।

**प्रस्यन्द ಪ್ರಸ್ಯಂದ** (पुं०) ಸ್ರವಿಸುವುದು, ಸೋರುವುದು. प्र + स्यन्दू (प्रस्रवणे) "घञ्" (३-३-१८)।

**प्रस्यन्दिन् ಪ್ರಸ್ಯಂದಿನ್** (वि०) ಸೋರುವ, ಸ್ರವಿಸುವ, ಜಿನುಗುವ. प्र+स्यन्दू (प्रस्रवणे) "णिनिः" (३-१-१३४)।

**प्रस्रवण ಪ್ರಸ್ರವಣ** (पुं०) 1. ಮಾಲ್ಯವತ್ಪರ್ವತ. "सन्ततमभिष्यन्दमानमेघमेदुरितनीलिमा जनस्थानमध्यगो गिरिः प्रस्रवणो नाम" उ० रा० १। (न०) 2. ಸೋರುವುದು, ಸ್ರವಿಸುವುದು, ಜಿನುಗುವುದು. प्र + स्रु (गतौ) भावे "ल्युट्" (३-३-११५)। 3. ಚಿಲುಮೆ, ನೀರು ಜಿನುಗುವ ಸ್ಥಳ, ಊಟೆ. प्रस्रवति जलमस्मिन्—प्र+स्रु अधि० "ल्युट्" (३-३-११७)। "तडाकान्युदपानानि वाप्यः प्रस्रवणानि च" मनु० ८-२४८। 4. ಸ್ತನದಿಂದ ಹೊರಡುವ ಕ್ಷೀರ. "अतन्द्रिता सा स्वयमेव वृक्षकान् घटस्तनप्रस्रवणैर्व्यवर्धयत्" कुमा० ५-१४। 5. ಬೆವರು, ಸ್ವೇದ.

**प्रस्रवत् ಪ್ರಸ್ರವತ್** (वि०) ಸ್ರವಿಸುತ್ತಿರುವ, ಜಿನುಗುತ್ತಿರುವ, ಸೋರುತ್ತಿರುವ. प्र + स्रु (गतौ) "शतृ" (३-२-१२४)। स्त्रियां "ङीप्" (४-१-६)। **-स्रवन्ती -ಸ್ರವಂತೀ.**

**प्रस्राविन् ಪ್ರಸ್ರಾವಿನ್** (वि०) (ಹಾಲು) ಜಿನುಗುತ್ತಿರುವ. (ಹಾಲು) ಸೋರುತ್ತಿರುವ. प्रस्रवोऽस्त्यस्य "इनिः" (५-२-११५)। स्त्रियां "ङीप्" (४-१-५)। **-स्राविणी -ಸ್ರಾವಿಣೀ.** "ददर्श राजा जननीमिव स्वां गामग्रतः प्रस्राविणीं न सिंहम्" रघु० २-६१।

**प्रस्राव ಪ್ರಸ್ರಾವ** (पुं०) 1. ಚೆನ್ನಾಗಿ ಸೋರುವುದು, ಹೆಚ್ಚು ಸೋರುವುದು. प्र+स्रु (गतौ) "घञ्" (३-३-२७)। 2. ಮೂತ್ರ.

**प्रस्नुत ಪ್ರಸ್ನುತ** (वि०) ಜಿನುಗಿದ, ಸೋರಿದ, ಸ್ರವಿಸಿದ.

**प्रस्वान ಪ್ರಸ್ವಾನ** (पुं०) ಗಟ್ಟಿಯಾದ ಶಬ್ದ, ಎತ್ತರದ ಧ್ವನಿ. प्र + स्वन (शब्दे) "घञ्" (३-३-१८)।

**प्रस्वाप ಪ್ರಸ್ವಾಪ** (पुं०) 1. ಮಲಗಿ ನಿದ್ರಿಸುವುದು. प्र+ञि ष्वप् (शये) "घञ्" (३-३-१८)। "मत्तस्य सेयं मदनद्विपस्य प्रस्वापवप्रोच्चकुचास्तु वास्तु" नैष० ७-८५। 2. ಶತ್ರುಗಳಿಗೆ ನಿದ್ರೆಯನ್ನುಂಟುಮಾಡುವ ಅಸ್ತ್ರ, ಸಂಮೋಹನಾಸ್ತ್ರ. प्रस्वाप्यते शत्रुरनेन—प्र + ञि ष्वप् (शये) + णिच् "अच्" (३-३-५६)। करण "ल्युट्" (३-३-११७)। **-स्वापनम्- ಸ್ವಾಪನಮ್.** "गान्धर्वमस्त्रं कुसुमास्त्रकान्तः प्रस्वापनं स्वप्ननिवृत्तलौल्यः" रघु० ७-६१। (न०) 3. ನಿದ್ರೆಯನ್ನುಂಟು ಮಾಡುವುದು, ನಿದ್ರಿಸುವಂತೆ ಮಾಡುವುದು. भावे "ल्युट्" (३-३-११५)।

**प्रस्विन्न ಪ್ರಸ್ವಿನ್ನ** (वि०) ಚೆನ್ನಾಗಿ ಬೆವತಿರುವ. प्र + ञि ष्विदा (स्नेहने) "क्तः" (३-४-७२)। प्रस्विन्नश्चैत्रः।

**प्रस्वेद ಪ್ರಸ್ವೇದ** (पुं०) ಬೆವರು, ಸ್ವೇದ. प्र+ञि ष्विदा (स्नेहने) "घञ्" (३-३-१२१)। "प्रस्वेदवारिसविशेषविषक्तमङ्गे कूर्पासकं क्षतनखक्षतमुत्क्षिपन्ती" माघ० ५-२३।

**प्रस्वेदित ಪ್ರಸ್ವೇದಿತ** (वि०) ಚೆನ್ನಾಗಿ ಬೆವತಿರುವ. प्र + ञि ष्विदा (स्नेहने) "क्तः" (३-४-७२)। वा इडागमः (७-२-१७)। इडभावपक्षे **-प्रस्विन्नः -ಪ್ರಸ್ವಿನ್ನಃ.** ञि

ष्विदा (गात्रप्रक्षरणे) दिवा०। –प्रस्विदित:–ಪ್ರಸ್ವಿದಿತಃ. ನಿತ್ಯವಾಗಿ ಇಡಾಗಮ ಬರುವುದು.

**प्रहत ಪ್ರಹತ** (वि०) 1. ವಿಸ್ತಾರಗೊಂಡ, ಹರಡಿರುವ. प्र + हन (हिंसागत्योः) "क्तः" (३-४-७२)। 2. ತುಳಿದು ಸವೆದಿರುವ (ದಾರಿ). "प्रहतं वितते क्षुण्णे" मेदि०। 3. ಹೊಡೆಯಲ್ಪಟ್ಟ, ಬಾರಿಸಲ್ಪಟ್ಟ (ನಗಾರಿ). "सङ्गीताय प्रहतमुरजाः स्निग्धगम्भीरघोषम्" मेघ० २-१। 4. ಹಿಮ್ಮೆಟ್ಟಿದ, ಪರಾಭವಗೊಂಡು ಹಿಂದಕ್ಕೆ ಓಡಿದ.

**प्रहर ಪ್ರಹರ** (पुं०) ಒಂದು ದಿವಸದ ಎಂಟನೆಯ ಒಂದು ಭಾಗ. ಒಂದು ಯಾಮ, ಒಂದು ಜಾವ. प्रह्रियते ढक्कादिरस्मिन्—प्र + हृञ् (हरणे) संज्ञायां "घः" (३-३-११८)। "चत्वारः प्रहराः स्मरार्तिभिरभूत् सापि क्षपा दुःक्षया तत्तस्यां कृपयाखिलैव विधिना रात्रिस्त्रियामा कृता" नैष० १-१५८।

**प्रहरण ಪ್ರಹರಣ** (न०) 1. ಅಸ್ತ್ರ, ಆಯುಧ. प्रह्रियतेऽनेन—प्र + हृञ् (हरणे) "ल्युट्" (३-३-११७)। "प्रागवीराननुपात्य तत्प्रहरणान्याच्छिद्य विश्रामतः" मालती० ८-९। 2. ಯುದ್ಧ, ಸಂಗ್ರಾಮ. प्रह्रियतेऽस्मिन्—प्र+हृञ् अधि० "ल्युट्" (३-३-११७)। 3. ಏಟು, ಹೊಡೆತ. 4. ಸುತ್ತಲೂ ವಸ್ತ್ರದ ತೆರೆಯಿಂದ ಮುಚ್ಚಲ್ಪಟ್ಟ ಶಿಬಿಕೆ, ಮೇನಾ. 5. ಒಯ್ಯುವುದು, भावे "ल्युट्"।

**प्रहरत् ಪ್ರಹರತ್** (वि०) 1. ಹೊಡೆಯುತ್ತಿರುವ. प्र+हृञ् (हरणे) "शतृ" (३-२-१२४)। "हृदि विदर्भभुवः प्रहरन् शरैरतिपतिर्निषधाधिपतेः कृते" नैष० ४-१९। 2. ಒಯ್ಯುತ್ತಿರುವ. स्त्रियां "ङीप्" (४-१-६)। –हरन्ती–ಹರನ್ತೀ.

**प्रहरिन् ಪ್ರಹರಿನ್** (वि०) ಕಾವಲುಗಾರ, ಯಾಮದ ಸರದಿಯಂತೆ ಕಾಯುವವನು. प्रहरोऽस्त्यस्य "इनिः" (५-२-११५)।

**प्रहर्तृ ಪ್ರಹರ್ತೃ** (वि०) 1. ಹೊಡೆಯುವವನು. प्र+हृञ् (हरणे) "तृच्" (३-१-१३३)। 2. ಯುದ್ಧಮಾಡುವವನು. 3. ಬಿಲ್ಲುಗಾರ, ಬಾಣವನ್ನು ಪ್ರಯೋಗಿಸುವವನು. "प्रहर्तुरेवोरगराजरज्जवो जवेन कण्ठं सभयाः प्रपेदिरे" माघ० १-५६।

**प्रहर्ष ಪ್ರಹರ್ಷ** (पुं०) ಅತಿಶಯವಾದ ಆನಂದ. ಹೆಚ್ಚು ಸಂತೋಷ. प्र + हृष (तुष्टौ) "घञ्" (३-३-१८) "महोदधेः पूर इवेन्दुदर्शनात् गुरुः प्रहर्षः प्रबभूव नात्मनि" रघु० ३-१७।

**प्रहर्षण ಪ್ರಹರ್ಷಣ** (पुं०) 1. ಬುಧಗ್ರಹ. प्रहर्षयति प्र + हृष (तुष्टौ) + णिच् "ल्युः" (३-१-१३४)। 2. ಆನಂದ, ಸಂತೋಷ. भावे "ल्युट्"। "स्निग्धगम्भीरया वाचा प्रहर्षणकरी विभो" भा० शान्ति० ३४४-३०। (न०) 3. ಸಂತೋಷವುಂಟುಮಾಡುವುದು. 4. ಪ್ರಹರ್ಷಣಾಲಂಕಾರ, ಅರ್ಥಾಲಂಕಾರದ ಒಂದು ಭೇದ. ಇದು (1) ಯತ್ನವಿಲ್ಲದೆ ಅಪೇಕ್ಷಿತಫಲಸಿದ್ಧಿ, (2) ಅಪೇಕ್ಷಿತಕ್ಕಿಂತಲೂ ಅಧಿಕಫಲಸಿದ್ಧಿ ಮತ್ತು (3) ಫಲಸಿದ್ಧಿಗಾಗಿ ಉಪಾಯವನ್ನು ಹುಡುಕುವ ಪ್ರಯತ್ನದಿಂದಲೇ ಫಲಪ್ರಾಪ್ತಿ ಎಂದು ಮೂರು ವಿಧ. **ಲಕ್ಷಣ:** ಕ್ರಮವಾಗಿ (1) "उत्कण्ठितार्थसंसिद्धिः विना यत्नं प्रहर्षणम्"। (2) "वाञ्छितादधिकार्थस्य संसिद्धिश्च प्रहर्षणम्"। (3) "यत्नादुपायसिद्ध्यर्थात्साक्षाल्लाभः फलस्य च"। **ಉದಾ:** ಕ್ರಮವಾಗಿ (1) "तामेव ध्यायते तस्मै निसृष्टा सैव दूतिका"। (2) "दीपमुद्योजयेद्यावत्तावदभ्युदितो रविः"। (3) "निध्यञ्जनौषधीमूलं खनता साधितो निधिः"। (वि०) 5. ಸಂತೋಷವನ್ನುಂಟುಮಾಡುವ. "नानापक्षिरुतं रम्यं कद्रूपुत्रप्रहर्षणम्" भा० आदि० २७९।

**प्रहर्षिणी ಪ್ರಹರ್ಷಿಣೀ** (स्त्री०) 1. ಹರಿದ್ರೆ, ಅರಿಶಿನ. प्रहर्षयति—प्र + हृष (तुष्टौ) + णिच् "ल्युः" (३-१-१३४)। 2. ವೃತ್ತರತ್ನಾಕರೋಕ್ತವಾದ ಹದಿಮೂರನೆಯ ಛಂದಸ್ಸಿನ ಒಂದು ವೃತ್ತ. ಪ್ರತಿ ಪಾದದಲ್ಲೂ ಮಗಣ ನಗಣ ಜಗಣ ರಗಣ ಮತ್ತು ಒಂದು ಗುರುವರ್ಣವಿದ್ದಲ್ಲಿ "प्रहर्षिणी" ವೃತ್ತವಾಗುವುದು. "म्नौ ज्रौ गस्त्रिदशयतिः प्रहर्षिणीयम्" वृ० २०। **ಈ ವೃತ್ತದ ಗಣವಿನ್ಯಾಸ:**

म न ज र ग।
UUU III IUI UIU U

**प्रहसत् ಪ್ರಹಸತ್** (वि०) 1. ಗಟ್ಟಿಯಾಗಿ ನಗುತ್ತಿರುವ. 2. ಅಪಹಾಸ್ಯ ಮಾಡುತ್ತಿರುವ, ಅವಹೇಳನ ಮಾಡುತ್ತಿರುವ. प्र + हसे (हसने) "शतृ" (३-२-१२४)। 3. ಅಣಕಿಸುತ್ತಿರುವ. "प्रहसन् बहुशः प्रहेलिकाभिः मतिमौढ्यं विदधे मनस्विनीनाम्" याद० २४-८२। स्त्रियां "ङीप्" (४-१-६)। –हसन्ती–ಹಸನ್ತೀ.

**प्रहसन ಪ್ರಹಸನ** (न०) 1. ಗಟ್ಟಿಯಾಗಿ ನಗುವುದು. प्र + हसे (हसने) भावे "ल्युट्" (३-३-११५)।

2. ಅಣಕಿಸುವುದು. 3. ಹಾಸ್ಯಮಾಡುವುದು. 4. ದಶ ರೂಪಕಗಳಲ್ಲೊಂದು ವಿಧ ರೂಪಕ. प्रहसन्त्यनेन । करं० "ल्युट्" ।

**प्रहसनीय ಪ್ರಹಸನೀಯ** (वि०) 1. ಗಟ್ಟಿಯಾಗಿ ನಗಬೇಕಾದ. 2. ಹಾಸ್ಯಮಾಡಲ್ಪಡುವ. 3. ಹಾಸ್ಯಮಾಡಬೇಕಾದ. 4. ಅಣಕಿಸಲ್ಪಡುವ. 5. ಅಣಕಿಸಬೇಕಾದ. प्र + हसे (हसने) "अनीयर्" (३-१-९६)। "तव्यः" –हसितव्यः –ಹಸಿತವ್ಯಃ.

**प्रहसन्ती ಪ್ರಹಸನ್ತೀ** (स्त्री०) 1. ಕಾಡುಮಲ್ಲಿಗೆ. 2. ಕಾಡಿರುವಂತಿಗೆ. 3. ದೊಡ್ಡ ಅಗ್ಗಿಷ್ಟಿಗೆ.

**प्रहसित ಪ್ರಹಸಿತ** (वि०) 1. ಹಾಸ್ಯಮಾಡಲ್ಪಟ್ಟ. 2. ಅಣಕಿಸಲ್ಪಟ್ಟ. (न०) 3. ಹಾಸ್ಯಮಾಡುವುದು. 4. ಅಣಕಿಸುವುದು. 5. ಹಾಸ, ನಗು. "तच्छ्रुत्वा सापि प्रहसितवदना पुलकाङ्कितसर्वाङ्गी" पञ्चतं० १ ।

**प्रहस्त ಪ್ರಹಸ್ತ** (पुं०) 1. ಬೆರಳುಗಳನ್ನು ನೀಡಿರುವ ಅಂಗೈ. प्रसृतो हस्तः । 2. ರಾವಣನ ಒಬ್ಬ ಮಂತ್ರಿ. "प्रहस्तमर्षयाञ्चक्रे योद्धुमद्भुतविक्रमम्" भट्टि० १४-८८।

**प्रहाण ಪ್ರಹಾಣ** (न०) ತ್ಯಜಿಸುವುದು, ದೂರಮಾಡುವುದು. प्र + ओ हाक् (त्यागे) "ल्युट्" (३-३-११५) । "मैत्र्यादिचित्तपरिकर्मविदो विधाय क्लेशप्रहाणमिह लब्धसबीजयोगाः" माघ० ४-५५ ।

**प्रहापण ಪ್ರಹಾಪಣ** (न०) ದೂರಮಾಡಿಸುವುದು, ದೂರಕ್ಕೆ ಹೋಗುವಂತೆ ಮಾಡುವುದು, ತ್ಯಜಿಸುವಂತೆ ಮಾಡುವುದು. प्र+ओ हाक् (त्यागे)+णिच् "ल्युट्" (३-३-११५)। "न्याय्याया अपि ते लक्ष्म्याः कुर्वन्त्याशु प्रहापणम्" भट्टि० ९-१०४।

**प्रहापयत् ಪ್ರಹಾಪಯತ್** (त्रि०) ತ್ಯಜಿಸುವಂತೆ ಮಾಡುತ್ತಿರುವ.

**प्रहार ಪ್ರಹಾರ** (पुं०) ಏಟು, ಹೊಡೆತ. प्र+हृञ् (हरणे) "घञ्" (३-३-१८) । "प्रहारमूर्च्छापगमे रथस्था यन्तॄनुपालभ्य निवर्तिताश्वान्" रघु० ७-४४।

**प्रहास ಪ್ರಹಾಸ** (पुं०) 1. ಗಟ್ಟಿಯಾದ ನಗು. प्रकृष्टो हासः । "तेऽपि मर्माण्यभिघ्नन्ति प्रहासेनापि संसदि" कामन्द० । 2. ನಟ, ನರ್ತಕ. प्रकृष्टो हासो यस्मात् । 3. ಪರಶಿವ, ಪರಮೇಶ್ವರ. 4. ಪ್ರಕಾಶ, ತೋರಿಕೆ. "उद्घातक्वणितविलोलहेमघण्टः प्रालम्बद्विगुणितचामरप्रहासः" वेणी० २-२९ ।

**प्रहासिन् ಪ್ರಹಾಸಿನ್** (वि०) 1. ಹಾಸ್ಯಗಾರ, ನಗಿಸುವವನು. प्रकृष्टं हासयति — प्र + हसे (हसने) + णिच् "णिनिः" (३-२-७८) । 2. ನಗುವವನು. प्र+हसे "णिनिः" (३-१-१३४) । "विकीर्णसप्तर्षिबलिप्रहासिभिस्तथा न गाङ्गैः सलिलैर्दिवश्च्युतैः" कुमा० ५-३७ ।

**प्रहि ಪ್ರಹಿ** (पुं०) ಕೂಪ, ಬಾವಿ. प्रह्रियते — प्र + हृञ् (हरणे) "इः" (उ० ४-१३४)। टिलोपश्च । "पुंस्येवान्धुः प्रहिः कूपः" अम० ।

**प्रहिण्वत् ಪ್ರಹಿಣ್ವತ್** (वि०) ಕಳುಹಿಸುತ್ತಿರುವ. प्र+हि (गतौ वृद्धौ च) "शतृ" (३-२-१२४) । "प्रहिण्वन्तो हनूमन्तं प्रमीणन्तं द्विषन्मतीः" भट्टि० ९-९७ ।

**प्रहित ಪ್ರಹಿತ** (वि०) 1. ಕಳುಹಿಸಲ್ಪಟ್ಟ. प्र + हि (गतौ वृद्धौ च) "क्तः" (३-२-१०२) । "प्रहितः प्रधनाय माधवानहमाकारयितुं महीभृता" माघ० १६-५२। 2. ಬಿಡಲ್ಪಟ್ಟ, ಪ್ರಯೋಗಿಸಲ್ಪಟ್ಟ (ಬಾಣ). प्र + हि "क्तः" (३-२-१०२) । "रतिपतिप्रहितानिलहेतितां प्रतियती सुदती मलयानिले" नैष० ४-४० । 3. ಮುಂದಕ್ಕೆ ನೀಡಲ್ಪಟ್ಟ, ಮುಂದೆ ಚಾಚಲ್ಪಟ್ಟ. "अनुवपुरपरेण बाहुमूलप्रहितभुजाकलितस्तनेन निन्ये" माघ० ७-२१ । 4. ಇಡಲ್ಪಟ್ಟ, ಇರಿಸಲ್ಪಟ್ಟ. प्र + डु धाञ् (धारणपोषणयोः) "क्तः" (३-२-१०२) ।

**प्रहीण ಪ್ರಹೀಣ** (वि०) ಪರಿತ್ಯಜಿಸಲ್ಪಟ್ಟ, ಬಿಡಲ್ಪಟ್ಟ, ದೂರಮಾಡಲ್ಪಟ್ಟ. प्र + ओ हाक् (त्यागे) "क्तः" (३-२-१०२)। निष्ठातस्य नः (८-२-४५)। "प्रहीणजीवितं कुर्युर्ये न शत्रुमुपस्थितम्" भट्टि० ९-१०४।

**प्रहुत ಪ್ರಹುತ** (न०) ಭೂತಯಜ್ಞ, ಗೃಹಸ್ಥನು ಪ್ರತಿದಿನ ಆಚರಿಸಬೇಕಾದ ಪಂಚಯಜ್ಞಗಳಲ್ಲೊಂದು. प्रहूयते स्म—प्र + हु (दानादनयोः) "क्तः" (३-२-१०२) । "जपोऽहुतो हुतो होमः प्रहुतो भौतिको बलिः । ब्राह्मं हुतं द्विजाग्र्यार्चा प्राशितं पितृतर्पणम्" मनु० ३-७४ ।

**प्रहृत ಪ್ರಹೃತ** (वि०) 1. ಹೊಡೆಯಲ್ಪಟ್ಟ. 2. ವಶಪಡಿಸಿಕೊಳ್ಳಲ್ಪಟ್ಟ, ಬಲಾತ್ಕಾರವಾಗಿ ಸ್ವಾಧೀನಪಡಿಸಿಕೊಳ್ಳಲ್ಪಟ್ಟ. प्र + हृञ् (हरणे) "क्तः" (३-२-१०२) । (न०) 3. ಏಟು, ಹೊಡೆತ, ಪ್ರಹಾರ. भावे "क्तः" (३-३-११४) ।

**प्रहृष्ट ಪ್ರಹೃಷ್ಟ** (वि०) 1. ಸಂತೋಷಗೊಂಡ. प्र+हृष (तुष्टौ) "क्तः" (३-४-७२) । "प्रद्योतनसमं पौराः प्रहृष्टाः प्रत्युपासत" याद० २२-२३६ । 2. ರೋಮಾಂಚವುಂಟಾಗಿರುವ, ಪುಲಕಿತವಾದ,

**प्रहृष्यत् ಪ್ರಹೃಷ್ಯತ್** (वि०) 1. ಸಂತೋಷಪಡುತ್ತಿರುವ, ಆನಂದವನ್ನು ಅನುಭವಿಸುತ್ತಿರುವ. प्र+हृष (तुष्टौ) "शतृ" (३-२-१२४)। "प्रहृष्यता जाम्बवता निवेदितां प्रवालजाम्बूनदरत्नसंहतिम्" याद० १४-६२। 2. ರೋಮಾಂಚಗೊಳ್ಳುತ್ತಿರುವ, ಸಂತೋಷದಿಂದ ಮೇಲಕ್ಕೆ ಏಳುತ್ತಿರುವ. "स्वामिदर्शनसन्तोषात्प्रहृष्यद्भिस्तनूरुहैः" याद० १६-५४।

**प्रहेला ಪ್ರಹೇಲಾ** (स्त्री०) ಸಲಿಗೆಯ ಮಾತು, ವಿನೋದದ ಸಂಭಾಷಣೆ. प्रहेलयति अभिप्रायं सूचयति— प्र + हिल (भावकरणे) + णिच् "अच्" (३-१-१३४)। "भीतभीतैः पुरा शत्रुर्मन्दं मन्दं विसर्पति। भूमौ प्रहेलया पश्चात् जारहस्तोऽङ्गनास्विव" पञ्चतं० २-५०।

**प्रहेलिका ಪ್ರಹೇಲಿಕಾ** (स्त्री०) ಸಮಸ್ಯೆ, ಒಗಟು, ಗೂಢಾರ್ಥವುಳ್ಳ ಮಾತು. प्रहेलयति–अभिप्रायं सूचयति— प्र+हिल (भावकरणे)+णिच् "ण्वुल्" (३-१-१३३)। "व्यक्तीकृत्य कमप्यर्थं स्वरूपार्थस्य गोपनात्। यत्र बाह्यान्तरावर्थौ कथ्येते सा प्रहेलिका"।

**प्रह्लन्न ಪ್ರಹ್ಲನ್ನ** (वि०) ಸಂತೋಷಪಟ್ಟ, ತೃಪ್ತಿ ಹೊಂದಿರುವ. प्रह्लाद्यते स्म — प्र + ह्लादी (सुखे च) "क्तः" (३-४-७२)।

**प्रह्लाद ಪ್ರಹ್ಲಾದ** (पुं०) 1. ಅಧಿಕವಾದ ಸಂತೋಷ, ಅತಿಶಯವಾದ ಆನಂದ. प्र + ह्लादी (सुखे च) भावे "घञ्" (३-३-१८)। 2. ಅವ್ಯಕ್ತ ಶಬ್ದ. 3. ಹಿರಣ್ಯಕಶಿಪುವಿನ ಕುಮಾರ, ಕಯಾಧುವಿನಲ್ಲಿ ಜನಿಸಿದ ಹಿರಣ್ಯಕಶಿಪುವಿನ ಪುತ್ರ. ಮಾತೃಗರ್ಭದಲ್ಲಿದ್ದಾಗ ನಾರದ ಮಹರ್ಷಿಯ ತತ್ತ್ವೋಪದೇಶದಿಂದಲೂ ಜನ್ಮಾಂತರ ಸಂಸ್ಕಾರದಿಂದಲೂ ಪ್ರಹ್ಲಾದನು ಪರಮವಿಷ್ಣುಭಕ್ತನಾದನು: ಗುರುಕುಲದಲ್ಲಿ ತನ್ನೊಡನೆ ವಿದ್ಯಾಭ್ಯಾಸ ಮಾಡುತ್ತಿದ್ದ ಬಾಲಕರಿಗೂ ತತ್ತ್ವೋಪದೇಶ ಮಾಡುತ್ತಿದ್ದನು. ಸಹೋದರನಾದ ಹಿರಣ್ಯಾಕ್ಷನ ಸಂಹಾರದಿಂದ ವಿಷ್ಣುವಿನಲ್ಲಿ ಪರಮ ದ್ವೇಷವನ್ನಿಟ್ಟಿದ್ದ ಹಿರಣ್ಯಕಶಿಪುವಿಗೆ ಪ್ರಹ್ಲಾದನ ಈ ವಿಷ್ಣುಭಕ್ತಿಯು ಸಹಿಸದೆ ನಾನಾ ವಿಧವಾದ ಚಿತ್ರಹಿಂಸೆಗಳಿಂದ ಪ್ರಹ್ಲಾದನನ್ನು ಪೀಡಿಸುತ್ತಿದ್ದನು. ಪರಮಾತ್ಮನ ಕೃಪೆಯಿಂದ ಎಲ್ಲಾ ವಿಪತ್ತುಗಳಿಂದಲೂ ಪಾರಾಗುತ್ತಿದ್ದನು. "आहामर्षरुषाविष्टः कषायीभूतलोचनः। वध्यतामाश्वयं वध्यो निःसारयत नैर्ऋताः॥ सर्वैरुपायैर्हन्तव्यः संभोजशयनासनैः। सुहृल्लिङ्गधरः शत्रुर्मुनेर्दुष्टमिवेन्द्रियम्॥ नैर्ऋतास्ते समादिष्टाः भर्त्रा वै शूलपाणयः। तिग्मदंष्ट्रकरालास्यास्ताम्रश्मश्रुशिरोरुहाः॥ नदन्तो भैरवान्नादांश्छिन्धि भिन्धीति वादिनः। आसीनं चाहनन् शूलैः प्रह्लादं सर्वमर्मसु॥ परे ब्रह्मण्यनिर्देश्ये भगवत्यखिलात्मनि। युतात्मन्यफला आसन्नपुण्यस्येव सत्क्रियाः" भाग० ७-६। ಈ ರೀತಿ ಪೀಡಿಸಲ್ಪಟ್ಟರೂ ವಿಷ್ಣುವು ಸರ್ವಶಕ್ತ, ಸರ್ವಜ್ಞ ಮತ್ತು ಸರ್ವವ್ಯಾಪಿ ಎಂದು ತಂದೆಗೂ ಹೇಳುತ್ತಿದ್ದನು. ಇದರಿಂದ ಕುಪಿತನಾದ ಹಿರಣ್ಯಕಶಿಪುವು ವಿಷ್ಣುವು ಸರ್ವವ್ಯಾಪಿಯಾಗಿದ್ದಲ್ಲಿ ಈ ಕಂಬದಲ್ಲಿ ನನಗೆ ಮೈದೋರಲಿ ಎಂದು ಕಂಬವನ್ನು ಕಾಲಿನಿಂದ ಒದ್ದನು. ಭಕ್ತವತ್ಸಲನಾದ ಪರಮಾತ್ಮನು ಕಂಬವನ್ನು ಸೀಳಿಕೊಂಡು ನೃಸಿಂಹರೂಪದಿಂದ ಬಂದು ಹಿರಣ್ಯಕಶಿಪುವನ್ನು ಸಂಹರಿಸಿ ಪ್ರಹ್ಲಾದನಿಗೆ ಪಟ್ಟಕಟ್ಟಿ ರಾಜ್ಯವನ್ನು ವಹಿಸಿದನು. ಪ್ರಹ್ಲಾದನೂ ತನ್ನ ತಂದೆಯು ಅವಿವೇಕದ ಕೃತ್ಯಗಳನ್ನು ಕ್ಷಮಿಸಿ ಸದ್ಗತಿಯನ್ನೀಯಬೇಕೆಂದು ಪರಮಾತ್ಮನಲ್ಲಿ ಪ್ರಾರ್ಥಿಸಿದನು. "वरं वरय एतत्ते वरदेशान्महेश्वर। यदनिन्दत् पिता मे त्वामविद्वांस्तेज ऐश्वरम्। विद्धामर्षाशयः साक्षात् सर्वलोकगुरुं प्रभुम्। भ्रातृहेति मृषादृष्टिस्त्वद्भक्ते मयि चाघवान्। तस्मात्पिता मे पूयेत दुरन्ताद्दुस्तरादघात्। पूतस्तेऽपाङ्गसंदृष्टस्तदा कृपणवत्सल॥" ಪರಮಾತ್ಮನು "त्रिःसप्तभिः पिता पूतः पितृभिः सह तेऽनघ। यत्साधोऽस्य गृहे जातो भवान् वै कुलपावनः॥ पित्र्यं च स्थानमातिष्ठ यथोक्तं ब्रह्मवादिभिः। मय्यावेश्य मनस्तात कुरु कर्माणि मत्परः" भाग० ७-१०। ಎಂದು ಅನುಗ್ರಹಿಸಿದನು.

**प्रह्लादन ಪ್ರಹ್ಲಾದನ** (न०) 1. ಸಂತೋಷವುಂಟು ಮಾಡುವುದು. प्र + ह्लादी (सुखे च) + णिच् भावे "ल्युट्" (३-३-११५)। "यथा प्रह्लादनाच्चन्द्रः प्रतापात्तपनो यथा। तथैव सोऽभूदन्वर्थो राजा प्रकृतिरञ्जनात्" रघु० ४-१२। (वि०) 2. ಸಂತೋಷವುಂಟುಮಾಡುವ. प्रह्लादयते — प्र + ह्लादी + णिच् "ल्युः" (३-१-१३४)। "अबिन्धनं वह्निमसौ बिभर्ति प्रह्लादनं ज्योतिरजन्यनेन" रघु० १३-४।

**प्रह्व ಪ್ರಹ್ವ** (वि०) 1. ನಮ್ರ, ಬಗ್ಗಿರುವ, ವಿಧೇಯತೆಯಿಂದ ಕೂಡಿರುವ. प्र+ह्वेञ् (स्पर्धायां शब्दे च) "वन्" (उ० २-१५१)। निपा०। "भक्तिप्रह्वं कथमपि यवीयांसमुत्सृज्य चापारोपव्यग्राङ्गुलिकिसलयं मेघनादक्षयाय" म० वी० ६–३७। 2. ಇಳಿಜಾರಾಗಿರುವ, ಕೆಳಗಡೆಗೆ ಓಟವಾಗಿರುವ. "प्रह्वानतीव क्वचिदुद्धतिश्रितः

क्वचित्प्रकाशानथ गह्वरानपि" माघ० १२-५६। 3. ಬಗ್ಗಿದ, ಮಣಿದ. "प्रह्वेष्वनिर्बन्धरुषो हि सन्तः" रघु० १६-८०।

**प्रह्वीकृत ಪ್ರಹ್ವೀಕೃತ** (वि०) 1. ಬಗ್ಗಿಸಲ್ಪಟ್ಟ. 2. ಆವರ್ಜಿತ, ವಶಪಡಿಸಿಕೊಳ್ಳಲ್ಪಟ್ಟ. "तथापि निघ्नं नृप तावकीनैः प्रह्वीकृतं मे हृदयं गुणौघैः" किरा० ३-१२।

**प्रह्वीभवत् ಪ್ರಹ್ವೀಭವತ್** (वि०) ನಮ್ರನಾಗುತ್ತಿರುವ. ಬಗ್ಗುತ್ತಿರುವ. "प्रह्वीभवन्नुत्तरेण मूर्ध्ना नमश्चकाराङ्घ्रियुगं स्वमातुः" कुमा० १३-३।

**प्रह्वीभूत ಪ್ರಹ್ವೀಭೂತ** (वि०) ನಮ್ರನಾಗಿರುವ, ಬಗ್ಗಿರುವ.

**प्रांशु ಪ್ರಾಂಶು** (पुं०) 1. ಎತ್ತರವಾದ ಮನುಷ್ಯ. प्रकृष्टा अंशवो यस्य। "प्रांशुलभ्ये फले लोभादुद्बाहुरिव वामनः" रघु० १-३। (वि०) 2. ಎತ್ತರವಾದ, ಉನ್ನತವಾದ. "व्यूढोरस्को वृषस्कन्धः शालप्रांशुर्महाभुजः" रघु० १-१३। 3. ಉದ್ದವಾದ, ನೀಳವಾದ. "नैतच्चित्रं यदयमुदधिश्यामसीमां धरित्रीमेकः कृत्स्नां नगरपरिघप्रांशुबाहुर्भुनक्ति" शाकु० २-१५।

**प्राक् ಪ್ರಾಕ್** (अव्य०) 1. ಮುಂಚೆ, ಮೊದಲು, ಪೂರ್ವದಲ್ಲಿ. "प्राक् नाभिवर्धनात् पुंसो जातकर्म विधीयते" मनु० २-२९। "प्रागन्तरिक्षगमनात् स्वमपत्यजातम्" शाकु० ५-२२। (त्रि०) 2. ಪೂರ್ವದೇಶ. 3. ಪೂರ್ವದಿಕ್ಕು. 4. ಪೂರ್ವಕಾಲ. 5. ಪೂರ್ವದೇಶದಲ್ಲಿ. 6. ಪೂರ್ವಕಾಲದಲ್ಲಿ. 7. ಪೂರ್ವದಿಕ್ಕಿನಲ್ಲಿ. 8. ಪೂರ್ವದೇಶದಿಂದ. 9. ಪೂರ್ವಕಾಲದಿಂದ. "प्रागतीतार्थकम्" अम०। "दिग्देशकाले पूर्वादौ प्रागुदक्प्रत्यगादयः" अम०। "प्राच्छब्दो दिशि देशे च काले च वाच्यलिङ्गकः" मेदि०। "दिक्छब्देभ्यः सप्तमीपञ्चमीप्रथमाभ्यो दिग्देशकालेष्वस्तातिः" (५-३-२७)। अञ्चेर्लुक् (५-३-३०)। इति अस्तातेर्लुक्। प्राच्यां दिशि प्राच्या दिशः प्राची दिक्। प्राचि देशे काले च, प्राचो देशात् कालाच्च। प्राङ् देशः कालश्च। 10. ಪ್ರಭಾತ, ಪ್ರಾತಃಕಾಲ. 11. ಮುಂಭಾಗದಲ್ಲಿ. 12. ಕಳೆದುಹೋದ, ಅತೀತವಾದ. 13. ಹಿಂದೆ, ಹಿಂದಿನ ಸಂದರ್ಭದಲ್ಲಿ. "इति प्रागेव निर्दिष्टम्"।

**प्राकरणिक ಪ್ರಾಕರಣಿಕ** (वि०) 1. ಪ್ರಕರಣದಿಂದ ಬಂದ, ಪ್ರಸಕ್ತವಾದ ವಿಷಯಕ್ಕೆ ಸಂಬಂಧಿಸಿದ. प्रकरणादागतः "ठक्"। 2. ಉಪಮೇಯ, ವರ್ಣ್ಯ, ಪ್ರಕೃತ.

**प्राकषिक ಪ್ರಾಕಷಿಕ** (वि०) ಪರಸ್ತ್ರೀಯ ಆಸರೆಯಿಂದ ಜೀವಿಸುವವನು. प्राकषति हिनस्ति — प्र + आ + कष (हिंसायाम्) "किकन्" (उ० २-४२)।

**प्राकाम्य ಪ್ರಾಕಾಮ್ಯ** (न०) 1. ಪರಮೇಶ್ವರನ ಎಂಟು ಐಶ್ವರ್ಯ (ವಿಭೂತಿ)ಗಳಲ್ಲೊಂದು. प्रकामस्य भावः "ष्यञ्" (५-१-१२४)। "अणिमा महिमा चैव गरिमा लघिमा तथा। प्राप्तिः प्राकाम्यमीशित्वं वशित्वं चाष्टभूतयः"। 2. ಇಚ್ಛಾಸ್ವಾತಂತ್ರ್ಯ. ನಿರ್ಬಂಧವಿಲ್ಲದ ಸ್ವಾತಂತ್ರ್ಯ. "व्यक्तो व्यक्तेतरश्चासि प्राकाम्यं ते विभूतिषु" कुमा० २-११।

**प्राकार ಪ್ರಾಕಾರ** (पुं०) 1. ಸುತ್ತುಗೋಡೆ, ಮನೆಯ ಸುತ್ತಲೂ ರಕ್ಷಣೆಗಾಗಿ ಹಾಕುವ ಗೋಡೆ. प्रक्रियते—प्र+डुकृञ् (करणे) कर्म० "घञ्" (३-३-१९)। दीर्घः (६-३-१२२)। "कुतूहलेनेव जवादुपेत्य प्राकारभित्त्या सहसा निषिद्धः" माघ० ३-४१। 2. ಬೇಲಿ.

**प्राकारीय ಪ್ರಾಕಾರೀಯ** (वि०) ಪ್ರಾಕಾರಕ್ಕೆ ಬೇಕಾದ ಇಟ್ಟಿಗೆ ಗಾರೆ ಮೊದಲಾದುದು. प्राकारायेदम् "छः" (४-२-११४)।

**प्राकाश्य ಪ್ರಾಕಾಶ್ಯ** (न०) ಪ್ರಸಿದ್ಧಿ, ಪ್ರಕಾಶಗೊಳ್ಳುವುದು, ಕೀರ್ತಿ ಪಡೆಯುವುದು, ಎಲ್ಲರ ದೃಷ್ಟಿಗೂ ಬೀಳುವುದು. प्रकाशस्य भावः "ष्यञ्" (५-१-१२४)। "प्राकाश्यं स्वगुणोदयेन गुणिनो गच्छन्ति किं जन्मना" पञ्चतं० १-१०३।

**प्राकृत ಪ್ರಾಕೃತ** (पुं०) 1. ಒಬ್ಬ ಸಾಮಾನ್ಯ ಮನುಷ್ಯ, ಸಂಸ್ಕೃತಿಯಿಲ್ಲದ ಮನುಷ್ಯ, ಅಸಭ್ಯ, ಪಾಮರ. (न०) 2. ಪ್ರಾಕೃತ ಭಾಷೆ, ಸಂಸ್ಕೃತ ಭಾಷೆಯೇ ಪ್ರಕೃತಿಯಾಗಿರುವ ಭಾಷೆ. प्रकृतेरागतः "अण्" (४-३-७४)। प्रकृतौ भवः "अण्" (४-३-५३) वा। "प्रकृतिः संस्कृतं तत्र भवत्वात् प्राकृतं स्मृतम्। तद्भवं तत्समं देशीत्येवमेतत् त्रिधा मतम्"। ಈ ಭಾಷೆಯು (1) अर्धमागधी (2) शौरसेनी (3) पैशाची (4) महाराष्ट्री (5) मागधी ಮತ್ತು (6) अपभ्रंशः ಎಂದು ಮುಖ್ಯವಾಗಿ ಆರು ವಿಧ. (वि०) 3. ಪ್ರಕೃತಿಸಂಬಂಧವಾದ. प्रकृतेरिदम्। 4. ಸ್ವಭಾವವಾಗಿ ಉಂಟಾದ. प्रकृत्या स्वभावेन निर्वृत्तः। ನಾಟಕಾದಿರೂಪಕಗಳಲ್ಲಿ ಉತ್ತಮಪುರುಷಪಾತ್ರಗಳು ಸಂಸ್ಕೃತಭಾಷೆಯನ್ನೂ ಅವರ ಪತ್ನಿಯರು ಶೌರಸೇನಿಯನ್ನೂ ಉಪಯೋಗಿಸಬೇಕು. ರಾಜನ ಅಂತಃಪುರದ ವಾಮನ ಕಂಚುಕಿ ಮೊದಲಾದವರು ಮಾಗಧೀಭಾಷೆ

ಯನ್ನೂ ಚೇಟ ಪ್ರತೀಹಾರ ಮೊದಲಾದವರು ಅರ್ಧ ಮಾಗಧಿಯನ್ನೂ ಧೂರ್ತಪಾತ್ರಗಳು ಅವನ್ತೀಭಾಷೆ ಯನ್ನೂ ಉಪಯೋಗಿಸಬೇಕು. 5. ಪ್ರಾಕೃತಶತ್ರು. प्रकृत्या सिद्धः प्राकृतः शत्रुः। ತನ್ನ ಸಮೀಪದೇಶ (ಅವ್ಯವಹಿತ ದೇಶ) ದ ರಾಜನು ಪ್ರಾಕೃತ ಶತ್ರು. "विषयानन्तरो राजा शत्रुः" अम०। 6. ಪ್ರಾಕೃತಮಿತ್ರ, ಸ್ವಭಾವವಾಗಿಯೇ ಮಿತ್ರನಾಗಿರುವವನು. प्रकृत्या स्वभावेन मित्रम्। ಪ್ರಾಕೃತ ಶತ್ರುವಿನ ಮುಂದಿನ ದೇಶದ ರಾಜನು ಪ್ರಾಕೃತ ಮಿತ್ರ. ಈ ಪ್ರಾಕೃತಮಿತ್ರ ಮತ್ತು ಅಮಿತ್ರರು ಸಹಜಕೃತ್ರಿಮಮಿತ್ರಾಮಿತ್ರರಂತಲ್ಲದೆ ಎಂದೆಂದಿಗೂ ಮಿತ್ರ ಮತ್ತು ಅಮಿತ್ರರಾಗಿಯೇ ಇರುತ್ತಾರೆ. "सखा गरीयान् शत्रुश्च कृत्रिमस्तौ हि कार्यतः। स्याताममित्रौ मित्रे च सहजप्राकृतावपि" माघ० २-३६।

**प्राकृतज्वर ಪ್ರಾಕೃತಜ್ವರ** (ಪುಂ) ವರ್ಷಋತು ಶರದೃತು ಮತ್ತು ವಸಂತ ಋತುಗಳಲ್ಲಿ ಕ್ರಮವಾಗಿ ಬರುವ ವಾತ ಪಿತ್ತ ಮತ್ತು ಕಫ ಜ್ವರ. प्राकृतः प्रकृतिसम्बन्धी ज्वरः। ವರ್ಷಋತುವಿನಲ್ಲಿ ಬರುವ ಜ್ವರವು ವಾತಜ್ವರ. ಶರದೃತುವಿನಲ್ಲಿ ಬರುವುದು ಪಿತ್ತಜ್ವರ. ವಸಂತಋತುವಿನಲ್ಲಿ ಬರುವ ಜ್ವರವು ಕಫಜ್ವರ. "वर्षाशरद्वसन्तेषु वाताद्यैः प्राकृतः क्रमात्"।

**प्राकृतप्रलय ಪ್ರಾಕೃತಪ್ರಲಯ** (ಪುಂ) ಪ್ರಕೃತಿಯ ನಾಶ ರೂಪವಾದ ಒಂದು ವಿಧ ಪ್ರಳಯ, ಪ್ರಕೃತಿಸಂಬಂಧ ವಾದ ಪ್ರಳಯ. प्राकृतः प्रकृतिसम्बन्धी प्रलयः। ಪ್ರಳಯವು ನಿತ್ಯ ನೈಮಿತ್ತಿಕ ಪ್ರಾಕೃತ ಮತ್ತು ಆತ್ಯಂತಿಕ ಗಳೆಂದು ನಾಲ್ಕು ವಿಧ. ಬ್ರಹ್ಮನಿಗೆ ಎರಡು ಪರಾರ್ಧಗಳು ಕಳೆದ ನಂತರ ಮಹತ್ತು ಅಹಂಕಾರ ಪಂಚಭೂತಗಳೆಂಬ ಏಳು ಪ್ರಕೃತಿಗಳೂ ಲಯಹೊಂದುವುವು. ಇದೇ ಪ್ರಾಕೃತ ಪ್ರಳಯ. **ಈ ಏಳು ಪ್ರಕೃತಿಗಳ ನಾಶಕ್ರಮ:** ಪರ್ಜನ್ಯನು ನೂರು ವರ್ಷಗಳ ಕಾಲ ಮಳೆಯನ್ನು ಸುರಿಸು ವುದಿಲ್ಲ. ಪ್ರಜೆಗಳು ಅನ್ನಾಹಾರವಿಲ್ಲದೆ ಪರಸ್ಪರ ಕೊಂದು ತಿನ್ನುವರು. ಪ್ರಳಯಕಾಲದ ಸೂರ್ಯನು ಸಮುದ್ರ ಭೂಮಿ ಮತ್ತು ಪ್ರಾಣಿಗಳ ದೇಹಗಳಲ್ಲಿರುವ ದ್ರವವನ್ನು ಶೋಷಿಸುತ್ತ ಎಲ್ಲವನ್ನೂ ತನ್ನ ಕಿರಣಗಳಿಂದ ದಹಿಸಿಬಿಡು ವನು. ಸಂಕರ್ಷಣರೂಪಿಯಾದ ಪರಮಾತ್ಮನ ಮುಖ ದಿಂದ ಹೊರಟ ಪ್ರಳಯಾಗ್ನಿಯು ಪ್ರಚಂಡ ವಾಯುವಿನ ಸಾಹಾಯ್ಯದಿಂದ ಪಾತಾಳಾದಿ ವಿವರಗಳನ್ನು ದಹಿಸುತ್ತ ಬರುವುದು. ಈ ಸೂರ್ಯಾಗ್ನಿಗಳ ಜ್ವಾಲೆಗಳಿಂದ ನಾನಾ ದಿಕ್ಕುಗಳಲ್ಲಿಯೂ ಬ್ರಹ್ಮಾಂಡವು ದಗ್ಧವಾಗುವುದು. ಆಗ ಪ್ರಚಂಡವಾದ ಬಿರುಗಾಳಿಯೊಂದು ಹೊರಟು ನೂರು ವರ್ಷಗಳ ಕಾಲ ಬೀಸುತ್ತಾ ಆಕಾಶವೆಲ್ಲವನ್ನೂ ಧೂಳಿನಿಂದ ಮುಚ್ಚಿಬಿಡುವುದು. ಮೇಘಗಳು ಭಯಂಕರವಾಗಿ ಗರ್ಜಿ ಸುತ್ತ ನೂರು ವರ್ಷಗಳ ಕಾಲ ಸತತವಾಗಿ ಮಳೆಯನ್ನು ಸುರಿಸುವುವು. ಇದರಿಂದ ಪ್ರಪಂಚವೆಲ್ಲಾ ಜಲಮಯವಾಗು ವುದು. ಭೂಮಿಯ ಗಂಧಗುಣವು ಹೋಗಿ ಜಲದಲ್ಲಿ ಲಯ ಹೊಂದುವುದು. ಜಲದ ರಸಗುಣವು ತೇಜಸ್ಸಿನಿಂದ ಆಕರ್ಷಿಸಲ್ಪಟ್ಟು ಜಲವು ತೇಜಸ್ಸಿನಲ್ಲಿ ಲಯಿಸುವುದು, ತೇಜಸ್ಸು ವಾಯುವಿನಲ್ಲಿ ಲಯಹೊಂದುವುದು. ಸ್ಪರ್ಶ ಗುಣವು ಆಕಾಶದಿಂದ ಆಕರ್ಷಿಸಲ್ಪಟ್ಟು ವಾಯುವು ಆಕಾಶ ದಲ್ಲಿ ಲಯಹೊಂದುವುದು. ಆಕಾಶವು ತಾಮಸಾಹಂಕಾರ ದಲ್ಲೂ ಆಮೇಲೆ ರಾಜಸ ತಾಮಸ ಸಾತ್ತ್ವಿಕಾಹಂಕಾರಗಳು ಮಹತ್ತತ್ತ್ವದಲ್ಲೂ ಲಯಹೊಂದುವುವು. ಮಹತ್ತತ್ತ್ವ ವನ್ನು ಸತ್ತ್ವಾದಿ ಗುಣಗಳು (ತ್ರಿಗುಣಾತ್ಮಕವಾದ ಪ್ರಕೃತಿಯು) ಗ್ರಹಿಸುವುವು. ಆಮೇಲೆ ಆ ಪ್ರಕೃತಿಯು ಪರಮಾತ್ಮನಲ್ಲಿ ಐಕ್ಯಹೊಂದುವುದು. ಈ ರೀತಿ ಪ್ರಾಕೃತ ಪ್ರಳಯದಲ್ಲಿ ಪೃಥಿವಿ ಮೊದಲಾದ ಮಹತ್ತತ್ತ್ವದವರೆಗಿನ ತತ್ತ್ವಗಳೆಲ್ಲವೂ ಲಯಹೊಂದಿ ಪರಬ್ರಹ್ಮನ ಸ್ವರೂಪ ಮಾತ್ರ ಉಳಿಯುವುದು. "शतेऽनन्तासनो विश्वमात्मसात्कृत्य चात्मभूः। द्विपरार्धे त्वतिक्रान्ते ब्रह्मणः परमेष्ठिनः। तदा प्रकृतयः सप्त कल्पन्ते प्रलयाय वै। एष प्राकृतिको राजन् प्रलयो यत्र लीयते। अण्डकोशस्तु संघातो विघात उपसादिते। पर्जन्यः शतवर्षाणि भूमौ राजन् न वर्षति। तदा निरन्ने ह्यन्योन्यं भक्षमाणाः क्षुधान्विताः। क्षयं यास्यन्ति शनकैः कालेनोपद्रुताः प्रजाः। सामुद्रं दैहिकं भौमं रसं सांवर्तको रविः। रश्मिभिः पिबते घोरैः सर्वं नैव विमुञ्चति। ततः संवर्तको वह्निः सङ्कर्षणमुखोत्थितः। दहत्यनिलवेगोत्थः शून्यान् भूविवरानथ। उपर्यधः समन्ताच्च शिखाभिर्वह्निसूर्ययोः। दह्यमानं विभात्यण्डं दग्धगोमयपिण्डवत्। ततः प्रचण्डपवनो वर्षाणामधिकं शतम्। परः सांवर्तको वाति धूम्रं खं रजसावृतम्। ततो मेघकुलान्यङ्ग चित्रवर्णान्यनेकशः। शतं वर्षाणि वर्षन्ति नदन्ति रभसस्वनैः। तत एकोदकं विश्वं ब्रह्माण्डविवरान्तरम्। ग्रस्तगन्धा तु पृथिवी प्रलयत्वाय कल्पते। अपां रसमथो तेजः ता लीयन्तेऽथ नीरसाः। ग्रसते तेजसो रूपं वायुस्तद्रहितं तदा। लीयते चानिले तेजो वायोः खं ग्रसते गुणम्। स वै विशति खं राजन् ततश्च नभसो गुणम्। शब्दं ग्रसति भूतादिर्नभस्तमनुलीयते। महान् ग्रसत्यहंकारं गुणाः सत्त्वादयश्च तम्। ग्रसतेऽव्याकृतं राजन् गुणान्-

कालेन चोदितम् । लयः प्राकृतिको ह्येषः पुरुषाव्यक्तयोर्यदा । शक्तयः सम्प्रलीयन्ते विवशाः कालविद्रुताः" भाग० १२-४ ।

**प्राकृतमानुष ಪ್ರಾಕೃತಮಾನುಷ** (पुं०) ಸಾಮಾನ್ಯ ಮನುಷ್ಯ, ಕೆಳದರ್ಜೆಯ ಮನುಷ್ಯ, ಸಂಸ್ಕೃತಿಯಿಲ್ಲದ ಮನುಷ್ಯ.

**प्राकृतमित्र ಪ್ರಾಕೃತಮಿತ್ರ** (न०) ಸ್ವಭಾವವಾಗಿಯೇ ಮಿತ್ರನಾಗಿರುವವನು. ["प्राकृत" ಪದದಲ್ಲಿ ನೋಡಿ.]

**प्राक्तन ಪ್ರಾಕ್ತನ** (वि०) 1. ಹಿಂದಿನ ಜನ್ಮದಲ್ಲಿ ಉಂಟಾದ, ಪೂರ್ವಜನ್ಮಸಂಬಂಧವಾದ. प्राक् पूर्वस्मिन् जन्मनि भवः "ट्युल्" (४-३-२३) । तुट् च । "फलानुमेयाः प्रारम्भाः संस्काराः प्राक्तना इव" रघु० १-२० । 2. ಹಿಂದಿನ, ಪೂರ್ವದ. "स्थिरोपदेशामुपदेशकाले प्रपेदिरे प्राक्तनजन्मविद्याः" कुमा० १-३० । 3. ಹಿಂದಿನದಾದ, ಹಳೆಯದಾದ, ಪುರಾತನವಾದ.

**प्राक्फल्गुनी ಪ್ರಾಕ್‌ಫಲ್ಗುನೀ** (स्त्री०) ಪೂರ್ವಫಲ್ಗುನೀ ನಕ್ಷತ್ರ. प्राची फल्गुनी ।

**प्राक्फल्गुनीभव ಪ್ರಾಕ್‌ಫಲ್ಗುನೀಭವ** (पुं०) ಬೃಹಸ್ಪತಿ. प्राक्फल्गुन्यां भवः ।

**प्राक्फाल्गुनेय ಪ್ರಾಕ್‌ಫಾಲ್ಗುನೇಯ** (पुं०) ಬೃಹಸ್ಪತಿ. प्राक्फल्गुन्यां भवः "ढक्" । "प्राक्फाल्गुनेयस्तु तथ्यानुजः" त्रिकाण्ड० ।

**प्राखर्य ಪ್ರಾಖರ್ಯ** (न०) 1. ತೀಕ್ಷ್ಣವಾಗಿರುವಿಕೆ, ಬಹಳ ಚೂಪಾಗಿರುವಿಕೆ. 2. ಬಹಳ ಬಿಸಿಯಾಗಿರುವಿಕೆ. 3. ಕಟುವಾಗಿರುವಿಕೆ, ಖಾರವಾಗಿರುವಿಕೆ, ಮನಸ್ಸನ್ನು ನೋಯಿಸುವಂತಿರುವಿಕೆ. प्रखरस्य भावः "ष्यञ्" ।

**प्रागग्र ಪ್ರಾಗಗ್ರ** (वि०) ಪೂರ್ವಾಭಿಮುಖವಾದ.

**प्रागभाव ಪ್ರಾಗಭಾವ** (पुं०) ಪೂರ್ವದಲ್ಲಿ ಇಲ್ಲದಿರುವಿಕೆ, ಒಂದು ವಸ್ತುವಿನ ಉತ್ಪತ್ತಿಗೆ ಪೂರ್ವದಲ್ಲಿ ಆ ವಸ್ತುವು ಇಲ್ಲದಿರುವಿಕೆ. उत्पत्तेः प्राक् समवायिकारणे कार्यस्य संसर्गाभावः । ಉತ್ಪನ್ನ ವಸ್ತುವಿಗೇ ಪುನಃ ಉತ್ಪತ್ತಿಯನ್ನು ಹೇಳುವ ದೋಷಪರಿಹಾರಕ್ಕಾಗಿ प्रागभावः ಎಂಬ ಒಂದು ಅಭಾವವನ್ನು ಅಂಗೀಕರಿಸಬೇಕು. ನಾಲ್ಕು ವಿಧ ಅಭಾವಗಳಲ್ಲಿ ಇದು ಒಂದು ವಿಧ.

**प्रागल्भ्य ಪ್ರಾಗಲ್ಭ್ಯ** (न०) 1. ದಿಟ್ಟತನ, ಧೈರ್ಯ. प्रगल्भस्य भावः "ष्यञ्" (५-१-१२४) । "निःसाध्वसत्वं प्रागल्भ्यम्" सा० द० । "समाश्लिष्टाः समाश्लेषैः चुम्बिताश्चुम्बनैरपि । दृष्टाश्च दर्शनैः कान्तं दासीकुर्वन्ति योषितः" सा० द० । 2. ಪ್ರಾವೀಣ್ಯ, ಕೌಶಲ, ನಿಪುಣತೆ, ಜಾಣತನ. 3. ವಾಕ್‌ಸಂಪತ್ತು, ವಾಗ್ಮಿತ್ವ, ಮಾತಿನಲ್ಲಿ ಪಟುವಾಗಿರುವಿಕೆ, ಮಾತಿನ ವೈಖರಿ. "प्रागल्भ्यहीनस्य नरस्य विद्या शस्त्रं यथा कापुरुषस्य हस्ते । न तृप्तिमुत्पादयते शरीरे वृद्धस्य दारा इव दर्शनीयाः" । "शास्त्रे प्रतिष्ठा सहजश्च बोधः प्रागल्भ्यमभ्यस्तगुणा च वाणी" मालती० ३-११ । 4. ಮರ್ಯಾದೆಯಿಲ್ಲದಿರುವಿಕೆ, ಉದ್ಧಟತನ.

**प्रागार ಪ್ರಾಗಾರ** (पुं०) ಗೃಹ, ಮನೆ.

**प्रागुदीची ಪ್ರಾಗುದೀಚೀ** (स्त्री०) ಪೂರ್ವ ಮತ್ತು ಉತ್ತರ ದಿಕ್ಕುಗಳ ಮಧ್ಯದ ವಿದಿಕ್ಕು, ಈಶಾನ್ಯದಿಕ್ಕು. प्राच्याश्च उदीच्याश्च दिशोऽन्तरालम् प्रागुदीची ।

**प्राग्ज्योतिष ಪ್ರಾಗ್‌ಜ್ಯೋತಿಷ** (पुं०) 1. ಕಾಮರೂಪ ದೇಶ. (न०) 2. ಒಂದು ಪಟ್ಟಣ. ಇದು ಪೂರ್ವದಲ್ಲಿ ನರಕಾಸುರನ ಪಟ್ಟಣವಾಗಿತ್ತು. "प्रययौ दीप्तसन्नाहः प्राग्ज्योतिषपुरं प्रभुः" याद० १७-७१ ।

**प्राग्दक्षिण ಪ್ರಾಗ್ದಕ್ಷಿಣ** (पुं०) ಪೂರ್ವ ಮತ್ತು ದಕ್ಷಿಣದ ಮಧ್ಯದೇಶ, ಪ್ರಾಚ್ಯದೇಶ.

**प्राग्भक्त ಪ್ರಾಗ್ಭಕ್ತ** (न०) ಆಹಾರಕ್ಕೆ ಮೊದಲು ಔಷಧವನ್ನು ತೆಗೆದುಕೊಳ್ಳುವುದು, ಊಟಕ್ಕೆ ಮುಂಚೆ ಔಷಧಸೇವನೆ ಮಾಡುವುದು. "प्राग्भक्तं नाम यत् प्राक् भक्तस्योपयुज्यते" सुश्रुत० उत्तरतं० ६४-६८ ।

**प्राग्भार ಪ್ರಾಗ್ಭಾರ** (पुं०) ಪರ್ವತದ ಅಗ್ರಭಾಗ, ಬೆಟ್ಟದ ತುದಿಯ ಪ್ರದೇಶ, ಶಿಖರ. "शैलाग्रे शिखरं शृङ्गं दन्तः प्राग्भार इत्यपि" त्रिकाण्ड० । "क्रन्दत्फेरवचण्डधात्कृतिभृतप्राग्भारभीमैस्तटैः" मालती० ५-१९ ।

**प्राग्र ಪ್ರಾಗ್ರ** (वि०) ಉನ್ನತವಾದ, ಎತ್ತರವಾದ.

**प्राग्रसर ಪ್ರಾಗ್ರಸರ** (वि०) 1. ಮುಖ್ಯ, ಪ್ರಧಾನ, ಮುಂದಾಳು. प्रकर्षेण अग्रे सरति—सृ (गतौ) "अच्" (३-१-१३४) । "त्वमर्हतां प्राग्रसरः स्मृतोऽसि यत् शकुन्तला मूर्तिमती च सत्क्रिया" शाकु० ५-१५ । 2. ಮುಂದೆ ನಡೆಯುವ, ಮುಂಭಾಗದಲ್ಲಿ ಹೋಗುವ.

**प्राग्रहर ಪ್ರಾಗ್ರಹರ** (वि०) ಶ್ರೇಷ್ಠವಾದ, ಉತ್ತಮವಾದ. प्राग्रे हरति — प्र + हृञ् (हरणे) "अच्" (३-२-९) । "तथेति तस्याः प्रणयं प्रतीतः प्रत्यग्रहीत्प्राग्रहरो रघूणाम्" रघु० १६-२३ ।

**प्राग्राट ಪ್ರಾಗ್ರಾಟ** (पुं०) ಹೆಪ್ಪುಹಾಕಿದ ನಂತರ ಘನರೂಪಕ್ಕೆ ಬರುತ್ತಿರುವ ತೆಳ್ಳಗಿರುವ ಮೊಸರು. प्राग्रे अटति — अट (गतौ) "अच्" (३-१-१३४) ।

**प्राग्य ಪ್ರಾಗ್ರ್ಯ** (वि०) ಶ್ರೇಷ್ಠವಾದ, ಉತ್ತಮವಾದ. प्राग्रे भवः "यत्" (४-४-११६)।

**प्राग्वंश ಪ್ರಾಗ್ವಂಶ** (पुं०) 1. ಹೋಮದ್ರವ್ಯವಿರುವ ಗೃಹಕ್ಕೆ ಪೂರ್ವಭಾಗದಲ್ಲಿರುವ ಗೃಹ, ಯಜಮಾನ ಮತ್ತು ಋತ್ವಿಕ್ಕುಗಳು ಇರುವ ಮನೆ. प्राक् वंशोऽत्र। 2. ವಿಷ್ಣು. प्राचां पूर्वेषां अनाद्यविद्यानित्यमुक्तानां सूरीणां वंशः स्वरूपाविर्भावनिबन्धनभूततया समुद्भवभूमिः। "अनादिमुक्ताः प्राञ्चो ये तेषामुद्भवभूमिदः। प्राग्वंश इति विख्यातः सप्तार्णो मनुरुत्तमः" इति निरुक्तिः। "प्राग्वंशो वंशवर्धनः" वि० स०।

**प्रागवत् ಪ್ರಾಗ್ವತ್** (अव्य०) 1. ಪೂರ್ವದೇಶದಂತೆ. 2. ಪೂರ್ವಕಾಲದಂತೆ. प्रागिव—"वतिः" (५-१-११६)।

**प्राघात ಪ್ರಾಘಾತ** (पुं०) ಯುದ್ಧ, ಕಾಳಗ. प्राहन्यतेऽत्र —प्र + आ + हन (हिंसागत्योः) "घञ्" (३-३-१२१)।

**प्राघार ಪ್ರಾಘಾರ** (पुं०) ಹೋಮದಲ್ಲಿ ಅಗ್ನಿಗೆ ಮಾಡುವ ಆಜ್ಯಾಹುತಿ. प्र + घृ (क्षरणे) भावे "घञ्" (३-३-१८)। दीर्घः (६-३-१२२)।

**प्राघुण ಪ್ರಾಘುಣ** (पुं०) ಅತಿಥಿ. प्रघोणते भ्राम्यति—प्र+आ+घुण (भ्रमणे) "कः" (३-१-१३५)। स्वार्थे "कः"। **प्राघुणकः ಪ್ರಾಘುಣಕಃ.** "तदागच्छ प्राघुणकन्यायेन अस्मदावासम्" प्रञ्चतं० ४।

**प्राघुणिक ಪ್ರಾಘುಣಿಕ** (पुं०) ಅತಿಥಿ. प्रघुण "ठक्"। "श्रवणप्राघुणिकीकृता जनैः" नैष० २-५६।

**प्राङ् ಪ್ರಾಙ್** (वि०) 1. ಪೂರ್ವದಿಕ್ಕು. 2. ಪೂರ್ವ ಕಾಲ. 3. ಪೂರ್ವದೇಶ. प्रकर्षेण अञ्चति—प्र+अञ्चु (गतौ) "क्विन्" (३-२-५९)। प्राची दिक्। प्राङ् देशः कालो वा।

**प्राङ्ग ಪ್ರಾಂಗ** (नं०) ಪಣವವಾದ್ಯ, ಗೋಮುಖಿ, ಮೃದಂಗದ ಒಂದು ಭೇದ. प्रकृष्टमङ्गं यस्य।

**प्राङ्गणम् ಪ್ರಾಂಗಣಮ್** (नं०) 1. ಪಣವವಾದ್ಯ. प्रकृष्टमङ्गनमङ्गं यस्य। 2. ಮನೆಯ ನೆಲ. प्रकृष्टमङ्गनं गमनं यत्र। 3. ಅಂಗಳ, ಸುತ್ತಲೂ ಗೋಡೆಗಳಿಂದ ಆವೃತವಾದ ಪ್ರದೇಶ. "उदयशिखरिशृङ्गप्राङ्गणेष्वेव रिङ्गन्" माघ० ११-४७।

**प्राङ्मुख ಪ್ರಾಙ್ಮುಖ** (वि०) ಪೂರ್ವಾಭಿಮುಖವಾದ, ಪೂರ್ವದಿಕ್ಕಿಗೆ ಮುಖಮಾಡಿಕೊಂಡಿರುವ. "पश्चिमां दिशमाक्रम्य प्राङ्मुखं रथमास्थितम्" याद० २२-१०३।

**प्राचण्ड्य ಪ್ರಾಚಂಡ್ಯ** (नं०) 1. ಭಯಂಕರವಾಗಿರುವಿಕೆ. प्रचण्डस्य भावः "ष्यञ्" (५-१-१२४)। "कीलालव्यतिकरगुल्फदघ्नपङ्कः प्राचण्ड्यं वहति नखायुधस्य मार्गः" मालती० ३-१७। 2. ಬಹಳ ಜೋರಾಗಿರುವಿಕೆ, ರಭಸವಾಗಿರುವಿಕೆ.

**प्राचिका ಪ್ರಾಚಿಕಾ** (स्त्री०) 1. ಕಾಡುನೊಣ. 2. ಒಂದು ಹೆಣ್ಣು ಗಿಡಗ ಹಕ್ಕಿ.

**प्राची ಪ್ರಾಚೀ** (स्त्री०) ಪೂರ್ವದಿಕ್ಕು. प्रथममञ्चति सूर्यम्—प्र + अञ्चु (गतौ) "क्विन्" (३-२-५९)। "ङीप्" (४-१-६)। "प्राची दिशा दिनपतिं परिभोक्तुकामा" याद० १९-१६।

**प्राचीन ಪ್ರಾಚೀನ** (नं०) 1. ಊರಿನ ಸುತ್ತಲೂ ಇರುವ ಬೇಲಿ, ಊರಿನ ಸುತ್ತಲೂ ಹಾಕಿರುವ ಮುಳ್ಳಿನ ಬೇಲಿ. प्रागेव—प्राक् वा "खः" (५-४-८)। खस्येनादेशः (७-१-२)। (वि०) 2. ಪೂರ್ವದಿಕ್ಕಿನಲ್ಲಿರುವ. 3. ಪೂರ್ವ ದೇಶದಲ್ಲಿರುವ, ಮುಂಭಾಗದಲ್ಲಿರುವ. 4. ಪೂರ್ವಕಾಲದ. (अव्य०) 5. ಪ್ರದಕ್ಷಿಣವಾಗಿ.

**प्राचीनपनस ಪ್ರಾಚೀನಪನಸ** (पुं०) ಬಿಲ್ವವೃಕ್ಷ.

**प्राचीनबर्हिस् ಪ್ರಾಚೀನಬರ್ಹಿಸ್** (पुं०) 1. ಇಂದ್ರ, ದೇವತೆಗಳ ಪ್ರಭು. "स ययौ प्रथमं प्राचीं तुल्यः प्राचीनबर्हिषा" रघु० ४-२८। 2. ಒಬ್ಬ ದೊರೆ. ಈ ರಾಜನ ರಾಜ್ಯದಲ್ಲಿ ದರ್ಭೆಗಳು ಪೂರ್ವಾಗ್ರವಾಗಿ ಬೆಳೆದಿದ್ದುದರಿಂದ ಈ ರಾಜನಿಗೆ ಈ ಹೆಸರುಂಟಾಯಿತು. "प्राचीनाग्राः कुशास्तस्य पृथिव्यां विश्रुता मुने। प्राचीनबर्हिर्भगवान् ख्यातो भुवि महाबलः"।

**प्राचीना ಪ್ರಾಚೀನಾ** (स्त्री०) ಅಗುರು ಶುಂಠಿ. प्राचि भवा "खः" (५-४-८)।

**प्राचीनावीत ಪ್ರಾಚೀನಾವೀತ** (नं०) ಎಡತೋಳಿನ ಕೆಳಗಡೆ ಬರುವಂತೆ ಧರಿಸಲ್ಪಟ್ಟ ಯಜ್ಞೋಪವೀತ. प्राचीनम् आनीयते—आ+अज (गतिक्षेपणयोः) "वी" आदेशः (२-४-५६)। "क्तः" (३-२-१०२)। ಪಿತೃಕಾರ್ಯಗಳಲ್ಲಿ ಮಾತ್ರ ಹೀಗೆ ಧರಿಸಬೇಕು. "सव्यं बाहुं समुद्धृत्य दक्षिणे तु धृतं द्विजाः। प्राचीनावीतमित्युक्तं पित्र्ये कर्मणि योजयेत्" कूर्मपु०।

**प्राचीनावीतिन् ಪ್ರಾಚೀನಾವೀತಿನ್** (वि०) ಪ್ರಾಚೀನಾವೀತ ಯಜ್ಞೋಪವೀತವನ್ನು ಧರಿಸಿರುವ. प्राचीनावीतमस्यास्ति—"इनिः" (५-२-११५)।

**प्राचीपति ಪ್ರಾಚೀಪತಿ** (ಪುಂ) ಪೂರ್ವದಿಕ್ಕಿಗೆ ಅಧಿಪತಿಯಾದ ಇಂದ್ರ. प्राच्या: पति:।

**प्राचीर ಪ್ರಾಚೀರ** (ನಂ) ಊರಿನ ಸುತ್ತಲೂ ಹಾಕುವ ಮುಳ್ಳಿನ ಬೇಲಿ. प्राचीयते—प्र + आ + चिञ् (चयने) "क्रन्" (ಉಂ ೨-೨೫)।

**प्राचुर्य ಪ್ರಾಚುರ್ಯ** (ನಂ) ಸಮೃದ್ಧಿ, ಪುಷ್ಕಳವಾಗಿರುವಿಕೆ, ಹೇರಳವಾಗಿರುವಿಕೆ. प्रचुरस्य भाव: "ष्यञ्" (೫-೧-೧೨೪)।

**प्राचेतस ಪ್ರಾಚೇತಸ** (ಪುಂ) 1. ವಾಲ್ಮೀಕಿಮಹರ್ಷಿ. 2. ವರುಣನ ಪುತ್ರ. प्रचेतसोऽपत्यं "अण्" (೪-೧-೯೨)। "वाचं निशम्य भगवान् स तु नारदस्य प्राचेतस: प्रवचसां प्रथम: कवीनाम्" च० रा०। (ಪುಂ ಬಂ ವಂ) 3. ಪ್ರಾಚೀನ ಬರ್ಹಿಸ್ಸೆಂಬ ರಾಜನ ಮಕ್ಕಳು. ಈ ಅರ್ಥದಲ್ಲಿ ಸಕಾರಾಂತ ಬಹುವಚನದ ರೂಪ.

**प्राच्य ಪ್ರಾಚ್ಯ** (ವಿಂ) 1. ಪೂರ್ವದಿಕ್ಕಿನಲ್ಲಿರುವ. प्राचि भव: "यत्" (೪-೨-೧೦೧)। 2. ಪೂರ್ವದಿಕ್ಕಿನಲ್ಲಿ ಹುಟ್ಟಿದ. प्राचि जात: "यत्" (೪-೨-೧೦೧)। (ಪುಂ) 3. ಪ್ರಾಚ್ಯದೇಶ, ಶರಾವತೀನದಿಯವರೆಗಿನ ದೇಶ, ಶರಾವತೀ ನದಿಯ ಪೂರ್ವ ದಕ್ಷಿಣ ದೇಶ. "शरावत्यास्तु योऽवधे:। देश: प्राग्दक्षिण: प्राच्य:" अम०।

**प्राजक ಪ್ರಾಜಕ** (ಪುಂ) ಸಾರಥಿ, ರಥವನ್ನು ನಡಸುವವನು. प्राजयति प्रकर्षेण गमयति अश्वादीन्—प्र + अज (गतिक्षेपणयो:) "ण्वुल्" (೩-೧-೧೩೩)। "यत्रापवर्तते युग्यं वैगुण्यात् प्राजकस्य च। तत्र स्वामी भवेद्दण्डचो हिंसायां द्विशतं दमम्" मनु० ८-२९३।

**प्राजन ಪ್ರಾಜನ** (ನಂ) ಚಾವಟಿ, ಬಾರುಗೋಲು. प्रवीयतेऽनेन—प्र+अज (गतिक्षेपणयो:) कर० "ल्युट्" (೩-೩-೧೧೭)। "त्यक्तप्राजनरश्मिरङ्कितधनु: पार्थाङ्कितैर्मार्गणै:" वेणी० ३-१०।

**प्राजापत्य ಪ್ರಾಜಾಪತ್ಯ** (ನಂ) 1. ಹನ್ನೆರಡು ದಿನಗಳಲ್ಲಿ ಮಾಡಬಹುದಾದ ಒಂದು ವ್ರತ, ಇದೊಂದು ಪ್ರಾಯಶ್ಚಿತ್ತ. 2. ರೋಹಿಣೀ ನಕ್ಷತ್ರ. प्रजापतिर्देवताऽस्य "ण्य:" (೪-೧-೮೫)। (ಪುಂ) 3. ಬ್ರಹ್ಮನ ಮಾನಸಪುತ್ರರು. प्रजापतेरिमे। "जहु: परिग्रहव्रीडां प्राजापत्यास्तपस्विन:" कुमा० ६-३४। 4. ಎಂಟು ವಿಧ ವಿವಾಹಗಳಲ್ಲೊಂದು. ಇಬ್ಬರೂ ಧರ್ಮಕಾರ್ಯಗಳನ್ನು ಆಚರಿಸುತ್ತಿರಬೇಕೆಂದು ಹೇಳಿ ಕನ್ಯಾಪ್ರದಾನಮಾಡುವುದು "ಪ್ರಾಜಾಪತ್ಯ" ವಿವಾಹ. "सहोभौ चरतां धर्ममिति वाचानुभाष्य च। कन्याप्रदानमभ्यर्च्य प्राजापत्यो विधि: स्मृत:" मनु० ३-३०। (ವಿಂ) 5. ಪ್ರಜಾಪತಿಸಂಬಂಧವಾದ. प्रजापतेरिदम्। "प्राजापत्यं ब्राह्मणानां स्मृतं स्थानं क्रियावताम्" मार्क०। (स्त्री०) –पत्या –ಪತ್ಯಾ. 6. ಸಂನ್ಯಾಸಾಶ್ರಮವನ್ನು ಸ್ವೀಕರಿಸುವ ಮೊದಲು ಮಾಡಬೇಕಾದ ಪ್ರಜಾಪತಿ ದೇವತಾಕವಾದ ಒಂದು ಇಷ್ಟಿ. प्रजापतिर्देवताऽस्या: "ण्य:" (೪-೧-೮೫)। "प्राजापत्यां निरूप्येष्टिं सर्ववेदसदक्षिणाम्। आत्मन्यग्नीन् समारोप्य ब्राह्मण: प्रव्रजेद्गृहात् मनु० ६-३८।

**प्राजितृ ಪ್ರಾಜಿತೃ** (ಪುಂ) ಸೂತ, ಸಾರಥಿ. प्राजति—प्र + अज (गतिक्षेपणयो:) "तृच्" (೩-೧-೧೩೩)। "रंहोभाजामक्षधू: स्यन्दनानां हाहाकारं प्राजितु: प्रत्यनन्दत्" माघ० १८-७।

**प्राजेश ಪ್ರಾಜೇಶ** (ನಂ) ರೋಹಿಣೀನಕ್ಷತ್ರ. प्रजेश: प्रजापति: देवताऽस्य "अण्" (೪-೨-೨೪)।

**प्राज्ञ ಪ್ರಾಜ್ಞ** (ಪುಂ) 1. ಪಂಡಿತ, ವಿದ್ವಾಂಸ, ಜ್ಞಾನಿ. प्रज्ञास्यास्ति "ण:" (೫-೨-೧೦೧)। "देवद्विजगुरुप्राज्ञपूजनं शौचमार्जवम्" गीता १७-१४। 2. ಒಂದು ಜಾತಿಯ ಗಿಳಿ. (ವಿಂ) 3. ಬುದ್ಧಿವಂತ, ಜಾಣ. "नामधेयस्य ये केचिदभिवादं न जानते। तान् प्राज्ञोऽहमिति ब्रूयात्स्त्रिय: सर्वास्तथैव च" मनु० २-१२३। (स्त्री०) –ज्ञा –ಜ್ಞಾ. 1. ಬುದ್ಧಿ. प्रज्ञा स्वार्थे "ण:" (೫-೨-೧೦೧)। 2. ಬುದ್ಧಿಶಾಲಿನಿಯಾದ ಹೆಂಗಸು. प्रज्ञाऽस्त्यस्या: "ण:"। "प्राज्ञा तु धीमती" अम०। –ज्ञी –ಜ್ಞೀ. ಪಂಡಿತೆ, ತಿಳಿದವಳು, ಜ್ಞಾನಸಂಪನ್ನೆಯಾದ ಹೆಂಗಸು. प्रज्ञ एव प्राज्ञ: स्वार्थे "अण्" (೫-೪-೩೮)। "ङीप्" (೪-೧-೧೫)।

**प्राज्ञम्मन्य ಪ್ರಾಜ್ಞಂಮನ್ಯ** (ವಿಂ) ತಾನೇ ಪ್ರಾಜ್ಞನೆಂದು ತಿಳಿದಿರುವ. प्राज्ञमात्मानं मन्यते—"खश्" (೩-೨-೮೩)। मुमागम: (೬-೩-೬೭)। चाण्णिनि:। **प्राज्ञमानी ಪ್ರಾಜ್ಞಮಾನೀ.**

**प्राज्य ಪ್ರಾಜ್ಯ** (ವಿಂ) 1. ಪ್ರಚುರವಾದ, ಹೇರಳವಾದ, ಸಮೃದ್ಧವಾದ. प्रवीयते—अज (गतौ) "ण्यत्" (೩-೧-೧೨೪)। वीभावो न। "विजित्य य: प्राज्यमयच्छदुत्तरान् कुरूनकुप्यं वसु वासवोपम:" किरा० १-३५। 2. ಹೇರಳವಾದ ತುಪ್ಪವುಳ್ಳ. प्रभूतमाज्यं घृतं यस्य। (ನಂ) 3. ಹೇರಳವಾದ ತುಪ್ಪ. प्रभूतमाज्यम्।

**प्राञ्जलि ಪ್ರಾಂಜಲಿ** (ವಿಂ) 1. ಅಂಜಲಿಬದ್ಧನಾಗಿರುವ, ಕೈಗಳನ್ನು ಜೋಡಿಸಿಕೊಂಡಿರುವ, ಗೌರವ ತೋರಿಸಲು

ಎರಡು ಹಸ್ತಗಳನ್ನೂ ಜೋಡಿಸಿಕೊಂಡಿರುವ. प्रबद्धो-ञ्जलिर्येन। "वाचस्पतिरुवाचेदं प्राञ्जलिर्जलजासनम्" कुमा० २-३०। 2. ಹಸ್ತಗಳ ಜೋಡಣೆ, ಅಂಜಲಿ, ಬೊಗಸೆ.

**प्राट् ಪ್ರಾಟ್** (वि०) ಪ್ರಶ್ನೆಮಾಡುವವನು. प्रच्छ (ज्ञीप्सायाम्) "क्विप्" संप्रसारणाभाव: दीर्घश्च (उ० २-५८)।

**प्राड्विवाक ಪ್ರಾಡ್ವಿವಾಕ** (पुं०) ನ್ಯಾಯಾಧಿಪತಿ, ವ್ಯವಹಾರಗಳನ್ನು ವಿಚಾರಣೆಮಾಡಿ ತೀರ್ಮಾನಿಸುವ ಅಧಿಕಾರಿ. प्राट् च विवाकश्च प्राड्विवाकौ प्रश्नविवाकावस्य स्त: "अच्" (५-२-१२७)। ವಾದಿ ಪ್ರತಿವಾದಿಗಳ ವಿವಾದಾಸ್ಪದವಾದ ಮಾತುಗಳನ್ನು ಕೇಳಿ ವಿಚಾರಣೆಯ ಪೂರ್ವಕ ನಿರ್ಣಯವನ್ನು ಮಾಡುವುದರಿಂದ ನ್ಯಾಯಾಧೀಶನು ಪ್ರಾಡ್ವಿವಾಕನು. "विवादानुगतं पृष्ट्वा पूर्ववाक्यं प्रयत्नत:। विचारयति येनासौ प्राड्विवाकस्तत: स्मृत:"। ವಾದಿ ಪ್ರತಿವಾದಿಗಳ ವಿರುದ್ಧ ಮತ್ತು ಅವಿರುದ್ಧ ಮಾತುಗಳನ್ನು ಕೇಳಿ ಸಭಿಕ (ಪಂಚಾಯಂತದಾರ) ರೊಡನೆ ವಿವೇಚನೆ ಮಾಡಿ ತೀರ್ಮಾನಿಸುವವನಾದುದರಿಂದ ನ್ಯಾಯಾಧೀಶನು ಪ್ರಾಡ್ವಿವಾಕನು. "विवादानुगतं पृष्ट्वा ससभ्यस्तत्प्रयत्नत:। विचारयति येनासौ प्राड्विवाकस्तत: स्मृत:"।

**प्राण ಪ್ರಾಣ** (पुं०) 1. ಬ್ರಹ್ಮ, ಚತುರ್ಮುಖ. प्राणिति चिरकालं जीवति — प्र + अन (प्राणने) "अच्" (३-१-१३४)। "कञ्ज: प्राणश्च वेदीशवेदगर्भपुराणगा:" त्रिकाण्ड०। 2. ಶರೀರದೊಳಗಿರುವ ಪಂಚವಾಯುಗಳಲ್ಲೊಂದು. प्राणित्यनेन — प्र + अन कर० "घञ्" (३-३-१२१)। ಈ ಪ್ರಾಣವಾಯುವು ಹೃದಯದಲ್ಲಿರುವುದು. "हृदि प्राणो गुदेऽपान: समानो नाभिसंस्थित:" अम०। (पुं० ब० व०) 3. ಶರೀರದೊಳಗಿರುವ ಪಂಚಪ್ರಾಣ ವಾಯುಗಳು. (1) प्राण: (2) अपान: (3) समान: (4) उदान: ಮತ್ತು (5) व्यान: ಇವು ಪಂಚವಾಯುಗಳು.

**ದೇಹದಲ್ಲಿ ಪಂಚಪ್ರಾಣವಾಯುಗಳ ಸ್ಥಾನ :** ಹೃದಯದಲ್ಲಿ ಪ್ರಾಣವಾಯು. ಗುದಪ್ರದೇಶದಲ್ಲಿ ಅಪಾನವಾಯು. ನಾಭಿಯಲ್ಲಿ ಸಮಾನವಾಯು. ಕಂಠ ಪ್ರದೇಶದಲ್ಲಿ ಉದಾನವಾಯು ಮತ್ತು ಶರೀರದ ಎಲ್ಲಾ ಭಾಗಗಳಲ್ಲೂ ವ್ಯಾನವಾಯು. "हृदि प्राणो गुदेऽपान: समानो नाभिसंस्थित:। उदान: कण्ठदेशस्थो व्यान: सर्वशरीरग:"।

**ಈ ಐದು ವಾಯುಗಳ ಹೆಸರು :** (1) नाग: (2) कूर्म: (3) कृकर: (4) देवदत्त: ಮತ್ತು (5) धनञ्जय:। ಉದ್ಗಾರ (ತೇಗುವುದು, ವಾಕರಿಸುವುದು), ಉನ್ಮೀಲನ (ತೆರೆಯುವುದು), ಉತ್ಸರ್ಜನ ವಿಸರ್ಜನೆಗಳಿಗೆ ತಡೆಯಿಲ್ಲದೆ ಮಾಡುವುದು. ಸೀನನ್ನುಂಟುಮಾಡುವುದು, ಆಕಳಿಕೆಯ ಸಮಯದಲ್ಲಿ ಬಾಯನ್ನು ಅಗಲಿಸುವುದು. ಜೀವ ಹೋದರೂ ಶರೀರವೆಲ್ಲವನ್ನೂ ವ್ಯಾಪಿಸಿಕೊಂಡಿರುವುದು ಈ ಐದು ವಾಯುಗಳ ವ್ಯಾಪಾರ. "उद्गारे नाग आख्यात: कूर्म उन्मीलने स्थित:। कृकराच्च क्षुतं ज्ञेयं देवदत्ताद्विजृम्भणम्। न जहाति मृतं वापि सर्वव्यापी धनञ्जय:"। ಮತ್ತು ಈ ಪಂಚಪ್ರಾಣಗಳೂ ಕ್ರಮವಾಗಿ ಅನ್ನಪ್ರವೇಶನ ಮಲಮೂತ್ರಾದಿಗಳ ಉತ್ಸರ್ಜನ ಅನ್ನವಿಪಾಚನ ಭಾಷಣ ಮತ್ತು ನಿಮೇಷ ಮೊದಲಾದ ಕಾರ್ಯಗಳನ್ನುಂಟುಮಾಡುವುವು. 4. ಬಾಣಂತಿ ಬೋಳ. 5. ಕಾವ್ಯದ ಜೀವ, ಕಾವ್ಯದ ಮುಖ್ಯವಾದ ಸಾರ. 6. ಬಲ, ಸಾರ, ಶಕ್ತಿ. 7. ವಾಯು, ಗಾಳಿ. 8. ಬಹಳ ಪ್ರಿಯವಾದ ವಸ್ತು ಅಥವಾ ಪ್ರೀತಿಪಾತ್ರನಾದ ಮನುಷ್ಯ. "अर्था वहिश्चरा: प्राणा:"। 9. ಜ್ಞಾನೇಂದ್ರಿಯ ಮತ್ತು ಕರ್ಮೇಂದ್ರಿಯಗಳು. "स्पृष्ट्वैतान् अशुचिर्नित्यमद्भि: प्राणानुपस्पृशेत्। गात्राणि चैव सर्वाणि नाभिं पाणितलेन तु" मनु० ४-१४३। (वि०) 10. ತುಂಬಲ್ಪಟ್ಟ. "प्राणो हृन्मारुते बोले काव्यजीवेऽनिले बले। पुंलिङ्ग: पूरिते वाच्यलिङ्ग: पुंभूम्नि चासुषु" मेदि०।

**प्राणक ಪ್ರಾಣಕ** (पुं०) 1. ಇಂದ್ರಿಯ ಶಕ್ತಿಯುಳ್ಳ ಪ್ರಾಣಿ, ಚೈತನ್ಯವಿರುವ ಪ್ರಾಣಿ. प्राणेन कायति — कै (शब्दे) "क:" (३-२-३)। 2. ಹೊನ್ನೆಮರ. 3. ಗಂಡಸರ ನಿಲುವಂಗಿ, ಉದ್ದದ ಅಂಗಿ. "प्राणक: सत्त्वजातीये जीवकद्रुमचोलयो:" मेदि०।

**प्राणघातक ಪ್ರಾಣಘಾತಕ** (वि०) ಜೀವವನ್ನು ಹೋಗಲಾಡಿಸುವ, ಜೀವಕ್ಕೆ ಹಾನಿಯುಂಟುಮಾಡುವ. प्राणान् हन्ति—हन (हिंसागत्यो:) "ण्वुल्" (३-१-१३३)।

**प्राणच्छिद् ಪ್ರಾಣಚ್ಛಿದ್** (वि०) ಪ್ರಾಣವನ್ನು ಅಪಹರಿಸುವ, ಕೊಲ್ಲುವ. "प्राणच्छिदां दैत्यपतेर्नखानाम्" माघ० ३-१४।

**प्राणच्छेद ಪ್ರಾಣಚ್ಛೇದ** (पुं०) ಹತ್ಯೆ, ಕೊಲೆ, ಖೂನಿ. प्राणस्य छेद:।

**प्राणजीवन ಪ್ರಾಣಜೀವನ** (पुं०) ವಿಷ್ಣು.

**प्राणत् ಪ್ರಾಣತ್** (वि०) ಜೀವಿಸಿರುವ, ಜೀವಸಹಿತ ಬದುಕಿರುವ. प्र + अन (प्राणने) "शतृ" (३-२-१२४)। स्त्रियां "ङीप्" (४-१-६)। **प्राणती ಪ್ರಾಣತೀ.**

**प्राणत्याग ಪ್ರಾಣತ್ಯಾಗ** (पुं०) 1. ಪ್ರಾಣವನ್ನು ಬಿಡುವುದು, ಆತ್ಮಹತ್ಯೆ. प्राणस्य त्याग:। "वरं प्राणत्यागो न च पिशुनवाक्येष्वभिरुचि:"। 2. ಮರಣ.

**प्राणथ ಪ್ರಾಣಥ** (पुं०) 1. ವಾಯು, ಗಾಳಿ. प्राणित्यनेन—प्र + अन (प्राणने) "अथ:" (उ० ३-११३)। 2. ಪ್ರಜಾಪತಿ, ಬ್ರಹ್ಮ. 3. ಪುಣ್ಯತೀರ್ಥ. (वि०) 4. ಬಲಶಾಲಿ, ಶಕ್ತಿವಂತ. प्राणिति — कर्त० "अथ:"।

**प्राणद ಪ್ರಾಣದ** (पुं०) 1. ವಿಷ್ಣು. (1) प्राणं बलं ददाति — सूरिभ्य: सदा दर्शनरूपस्वानुभवपरिचरणानुकूलबलद: —डु दाञ् (दाने) "क:" (३-२-३)। ನಿತ್ಯಸೂರಿಗಳಿಗೆ ಪರಿಚರ್ಯೆ ಮೊದಲಾದ ಕಾರ್ಯಗಳಿಗೆ ಬಲವನ್ನು ಕೊಡುವುದರಿಂದ ಈ ಹೆಸರು. "सूरिभ्य: परिचर्यादौ बलद: प्राणद: स्मृत:" इति निरुक्ति:। "ईशान: प्राणद: प्राण:" वि० स०। (2) प्राणं मरुतां मथनोचितं बलं ददाति। ದೇವತೆಗಳಿಗೆ ಸಮುದ್ರಮಥನಕ್ಕೆ ಬೇಕಾದ ಬಲವನ್ನು ಕೊಟ್ಟದ್ದರಿಂದ ಈ ಹೆಸರು. "मरुतां बलदानाद्धि समुद्रमथने भृशम्। प्राणदश्च समुद्दिष्ट: कूर्मरूपतया हि स:" इति निरुक्ति:। "अच्युत: प्रथित: प्राण: प्राणदो वासवानुज:" वि० स०। (3) विषयविषमूर्च्छितेभ्य: आत्मभ्य: प्राणम् आत्मोज्जीवनं ददाति इति च। ವಿಷಯಗಳೆಂಬ ವಿಷದಿಂದ ಕಲುಷಿತರಾದ ಜೀವಾತ್ಮರಿಗೆ ದಯೆಯಿಂದ ಆತ್ಮೋಜ್ಜೀವನವನ್ನು ಅನುಗ್ರಹಿಸುವುದರಿಂದ ಪರಮಾತ್ಮನಿಗೆ ಈ ಹೆಸರು, "कान्तादिविषयव्याप्त्या नष्टात्मभ्य: कृपावशात्। सदात्मोज्जीवनं योऽसौ ददाति प्राणद: स्मृत:" इति निरुक्ति:। "ऊर्ध्वग: सत्पथाचार: प्राणद: प्रणव: पण:" वि० स०। 2. ಜೀವಕವೃಕ್ಷ, ಹೊನ್ನೆಮರ. (न०) 3. ಜಲ, ನೀರು. 4. ರಕ್ತ. प्राणं ददाति—डु दाञ् "क:" (३-२-३)। (वि०) 5. ಪ್ರಾಣದಾನ ಮಾಡುವವನು. "अर्थप्रदानमेवाहु: संसारे सुमहत् तप:। अर्थद: प्राणद: प्रोक्त: प्राणा ह्यर्थेषु कीलिता:" कथास०। (स्त्री०)—दा —ದಾ. 6. ಅಳಲೆಗಿಡ. प्राणं जीवनं बलं वा ददाति। 7. ಪ್ರಾಣದಾನಮಾಡುವ ಹೆಂಗಸು.

**प्राणदण्ड ಪ್ರಾಣದಂಡ** (पुं०) ಮರಣದಂಡನೆ, ಪ್ರಾಣ ತೆಗೆಯುವ ಶಿಕ್ಷೆ.

**प्राणदातृ ಪ್ರಾಣದಾತೃ** (वि०) ಪ್ರಾಣದಾನ ಮಾಡುವವನು, ವಿಪತ್ತಿನಿಂದ ಪಾರುಮಾಡುವವನು, ಆಪತ್ಕಾಲದಲ್ಲಿ ರಕ್ಷಿಸುವವನು. प्राणं ददाति — डु दाञ् (दाने) "तृच्" (३-१-१३३)। स्त्रियां "ङीप्" (४-१-५)। —दात्री —ದಾತ್ರೀ.

**प्राणदान ಪ್ರಾಣದಾನ** (न०) ಪ್ರಾಣವನ್ನು ಉಳಿಸುವುದು, ವಿಪತ್ತಿನಿಂದ ಪಾರುಮಾಡುವುದು, ಪ್ರಾಣಾಪತ್ತಿನಿಂದ ರಕ್ಷಿಸುವುದು.

**प्राणधारण ಪ್ರಾಣಧಾರಣ** (न०) 1. ಪ್ರಾಣವನ್ನು ಇಟ್ಟುಕೊಂಡಿರುವುದು, ಬದುಕಿರುವುದು, ಜೀವಿಸಿರುವುದು. (वि०) 2. ಜೀವನೋಪಾಯ, ಬದುಕಿಗೆ ಆಧಾರಭೂತವಾದ ಸಾಧನ.

**प्राणधृत् ಪ್ರಾಣಧೃತ್** (पुं०) 1. ವಿಷ್ಣು. प्राणान् मातृवद्धरति -- धृ (धारणे) "क्विप्" (३-२-७६)। "प्राणधृत् प्राणजीवन:" वि० स०। 2. ಜೀವ, ಪ್ರಾಣಿ.

**प्राणन ಪ್ರಾಣನ** (पुं०) 1. ಕಂಠ, ಕುತ್ತಿಗೆ. प्राणित्यनेन प्र + अन (प्राणने) कर० "ल्युट्" (३-३-११७)। 2. ಜಲ, ನೀರು. (न०) 3. ಬದುಕುವುದು, ಜೀವಿಸುವುದು. प्र+अन (प्राणने) भावे "ल्युट्" (३-३-११५)। 4. ಬದುಕಿಸುವುದು, ರಕ್ಷಿಸುವುದು. प्र+अन (प्राणने)+ णिच् "ल्युट्" (३-३-११५)। "प्रह्लादाह्लादनानि प्रणतसुरगणप्राणनप्रीणनानि"।

**प्राणनाथ ಪ್ರಾಣನಾಥ** (पुं०) 1. ಪತಿ, ಗಂಡ. प्राणानां नाथ:। "चाटुकारमपि प्राणनाथं रोषादपास्य या। पश्चात्तापमवाप्नोति कलहान्तरिता तु सा" सां० द० ३। 2. ಎಲ್ಲಾ ಪ್ರಾಣಿಗಳಿಗೂ ಒಡೆಯನಾದ ಯಮ. (स्त्री०) —नाथा —ನಾಥಾ. ಪತ್ನಿ. "विष्णोर्विश्वात्मनस्तां विपुलगुणमयीं प्राणनाथां प्रणौमि"।

**प्राणनीय ಪ್ರಾಣನೀಯ** (वि०) 1. ಬದುಕಿರಬೇಕಾದ. 2. ಬದುಕಿರಲು ಅರ್ಹನಾದ. प्र + अन (प्राणने) "अनीयर्" (३-१-९६)। 3. ಬದುಕಿಸಲ್ಪಡುವ, ರಕ್ಷಿಸಲ್ಪಡುವ. प्र + अन + णिच् "अनीयर्" (३-१-९६)। 4. ಬದುಕಿಸಬೇಕಾದ, ರಕ್ಷಿಸಬೇಕಾದ. 5. ರಕ್ಷಿಸಲು ಅರ್ಹನಾದ. "तव्य:"। **प्राणितव्य: ಪ್ರಾಣಿತವ್ಯಃ.** णिचि — **प्राणयितव्य: ಪ್ರಾಣಯಿತವ್ಯಃ.**

**प्राणन्त ಪ್ರಾಣಂತ** (पुं०) 1. ವಾಯು, ಗಾಳಿ. प्राणित्यनेन — प्र + अन (प्राणने) "झच्" (उ० ३-१२७)। झोऽन्त: (७-२-३)। 2. ರಸಾಂಜನ. (स्त्री०) **प्राणन्ती ಪ್ರಾಣಂತೀ.** "ङीष्" (४-१-४१)। 1. ಕ್ಷುತ್ತು, ಹಸಿವು. 2. ಬಿಕ್ಕಬಿಕ್ಕಿ ಅಳುವುದು. 3. ಬಿಕ್ಕೆ, ಬಿಕ್ಕಳಿಕೆ.

**प्राणप्रद ಪ್ರಾಣಪ್ರದ** (ವಿ०) ಪ್ರಾಣವನ್ನು ರಕ್ಷಿಸುವವನು, ಜೀವದಾನ ಮಾಡುವವನು. प्राणं प्रददाति—प्र+डु दाञ् (दाने) "कः" (३-१-१३६)। "प्राणप्रदः सुहृत् सार्थवाहसुतः वसुदत्तो मया स्मृतः" कथास०। **–प्रदा –ಪ್ರದಾ.** ಋದ್ಧಿಯೆಂಬ ಒಂದು ಗಂದಿಗರ ಸರಕು. ಒಂದು ಓಷಧಿ.

**प्राणभास्वत् ಪ್ರಾಣಭಾಸ್ವತ್** (ಪುं०) ಸಮುದ್ರ, ಕಡಲು.

**प्राणभृत् ಪ್ರಾಣಭೃತ್** (ಪುं०) ಜೀವ, ಪ್ರಾಣಿ. प्राणान् बिभर्ति—डु भृञ् (धारणे) "क्विप्" (३-२-७६)। "अन्तर्गतं प्राणभृतां हि वेद सर्वं भवान् भावमतोऽभिधास्ये" रघु० २-४३।

**प्राणमयकोश ಪ್ರಾಣಮಯಕೋಶ** (ಪುं०) ಐದು ಕರ್ಮೇಂದ್ರಿಯಗಳಿಂದ ಕೂಡಿದ ಪ್ರಾಣ. "कर्मेन्द्रियैः पञ्चभिरञ्चितोऽयं प्राणो भवेत् प्राणमयस्तु कोशः" विवेकचू०। ಇದು ಜೀವನಿಗೆ ಆಚ್ಛಾದಕವಾದ ದೇಹ ಮೊದಲಾದ ಐದು ಕೋಶಗಳಲ್ಲೊಂದು. ["पञ्चकोश" ಪದದಲ್ಲಿ ನೋಡಿ.]

**प्राणयत् ಪ್ರಾಣಯತ್** (वि०) ಬದುಕಿಸುತ್ತಿರುವ. प्राणयति—प्र + अन (प्राणने) + णिच् "शतृ" (३-२-१२४)। "प्राणयन्तमरिं प्रोचे राक्षसेन्द्रो विभीषणम्" भट्टि० ९-१०१।

**प्राणयम ಪ್ರಾಣಯಮ** (ಪುं०) ಪ್ರಾಣಾಯಾಮ. प्राणा यम्यन्तेऽनेन—यम (उपरमे) कर० "अप्" (३-३-६३)।

**प्राणयात्रा ಪ್ರಾಣಯಾತ್ರಾ** (स्त्री०) 1. ಶ್ವಾಸ ಮತ್ತು ಉಚ್ಛ್ವಾಸರೂಪವಾದ ಪ್ರಾಣದ ವ್ಯಾಪಾರ. 2. ಭೋಜನ, ಪ್ರಾಣ ಧರಿಸಿರಲು ಬೇಕಾಗುವ ವ್ಯಾಪಾರ. 3. ಬದುಕಿರುವುದು, ಜೀವಿಸಿರುವುದು. "पिण्डपातमात्रप्राणयात्रां भगवतीम्" मालती० १।

**प्राणयोनि ಪ್ರಾಣಯೋನಿ** (ಪುं०) 1. ಪರಮಾತ್ಮ. 2. ವಾಯು, ಗಾಳಿ. (स्त्री०) 3. ಜೀವನಾಧಾರ, ಜೀವನೋಪಾಯ.

**प्राणरन्ध्र ಪ್ರಾಣರಂಧ್ರ** (ನ०) 1. ಬಾಯಿ. 2. ಮೂಗಿನ ಹೊಳ್ಳೆ.

**प्राणरोध ಪ್ರಾಣರೋಧ** (ಪುं०) ಶ್ವಾಸೋಚ್ಛ್ವಾಸಗಳನ್ನು ತಡೆಯುವುದು, ಉಸಿರಾಡುವುದನ್ನು ನಿರೋಧಿಸುವುದು.

**प्राणलिङ्गिस्थल ಪ್ರಾಣಲಿಂಗಿಸ್ಥಲ** (ನ०) ವೀರಶೈವ ಮತದಲ್ಲಿ ಸಾಧನೆಯ ಷಟ್ಸ್ಥಲ ಮಾರ್ಗದ ನಾಲ್ಕನೆಯ ಸೋಪಾನ. ಭಕ್ತಸ್ಥಲ ಮಹೇಶಸ್ಥಲ ಮತ್ತು ಪ್ರಸಾದಿ ಸ್ಥಲಗಳಲ್ಲಿ ಕರ್ಮಕ್ಕೇ ಪ್ರಾಧಾನ್ಯವಿರುವುದು. ಜ್ಞಾನವು ಸಂಪೂರ್ಣವಾಗಿ ವಿಕಾಸಹೊಂದದೆ ಗೌಣವಾಗಿರುವುದು. ಪ್ರಾಣಲಿಂಗಿಸ್ಥಲದಿಂದ ಜ್ಞಾನವೇ ಪ್ರಧಾನವಾಗಿ ಕರ್ಮವು ಗೌಣವಾಗುವುದು. ಚಂಚಲವಾದ ಮನಸ್ಸನ್ನು ಸ್ಥಿರವಾಗಿ ಒಂದು ಕಡೆ ನಿಲ್ಲಿಸುವುದರಿಂದ ಹೊರಗೆ ಕಂಡ ದೇವರು ಒಳಗೆ ಇರುವನೆಂಬ ಜ್ಞಾನವು ಉಂಟಾಗುವುದು. ಇದರಿಂದ ಮುಂದೆ ಆತ್ಮಸ್ವರೂಪ ಜ್ಞಾನವುಂಟಾಗುವುದು. ಲಿಂಗದಲ್ಲಿ ಪ್ರಾಣವನ್ನು ನಿಲ್ಲಿಸಿ ಪ್ರಾಣದಲ್ಲಿ ಲಿಂಗವನಿರಿಸುವ ಕಾರಣ ಪ್ರಾಣಲಿಂಗವಾಯಿತು.

**प्राणवत् ಪ್ರಾಣವತ್** (ಪುं०) ಪ್ರಾಣವಾಯುವಿನಿಂದ ಕೂಡಿದ ಜೀವ, ಪ್ರಾಣಿ. प्राण "मतुप्" (५-२-९४)। "यामाहुः सर्वबीजप्रकृतिरिति यया प्राणिनः प्राणवन्तः" शाकु० १।

**प्राणवियोग ಪ್ರಾಣವಿಯೋಗ** (ಪುं०) ಪ್ರಾಣವು ಶರೀರದಿಂದ ಬೇರೆಯಾಗುವುದು, ಮರಣ.

**प्राणवृत्ति ಪ್ರಾಣವೃತ್ತಿ** (स्त्री०) ಈ ದೇಹದೊಳಗಿರುವಾಗ ಜೀವದ ವ್ಯಾಪಾರ.

**प्राणशरीर ಪ್ರಾಣಶರೀರ** (ಪುं०) ಪರಮಾತ್ಮ, ಪರಮೇಶ್ವರ. प्राणः शरीरं स्वरूपं यस्य।

**प्राणसंयम ಪ್ರಾಣಸಂಯಮ** (ಪುं०) ಪ್ರಾಣವನ್ನು ತಡೆಹಿಡಿಯುವುದು, ಪ್ರಾಣವು ಹೋಗದಂತೆ ನಿರೋಧಿಸುವುದು.

**प्राणसद्मन् ಪ್ರಾಣಸದ್ಮನ್** (ನ०) ಪ್ರಾಣಗಳಿಗೆ ಮನೆಯಾಗಿರುವ ಶರೀರ.

**प्राणसम ಪ್ರಾಣಸಮ** (ಪುं०) 1. ಪತಿ, ಗಂಡ. (वि०) 2. ಪ್ರಾಣಕ್ಕೆ ಸಮನಾದ, ಬಹಳ ಪ್ರೀತಿಪಾತ್ರನಾದ. "रामस्य दयिता भार्या नित्यं प्राणसमा हिता" रामा०। (स्त्री०) **–समा –ಸಮಾ.** ಪತ್ನಿ.

**प्राणसार ಪ್ರಾಣಸಾರ** (वि०) ಬಲವೇ ಸಾರವಾಗಿರುವ, ಬಲವೇ ತಿರುಳಾಗಿರುವ, ಬಲಶಾಲಿಯಾಗಿರುವ. प्राणो बलमेव सारः स्थिरांशो यत्र। "अपचितमपि गात्रं व्यायतत्वादलक्ष्यं गिरिचर इव नागः प्राणसारं बिभर्ति" शाकु० २-४।

**प्राणहर ಪ್ರಾಣಹರ** (वि०) 1. ಪ್ರಾಣವನ್ನು ಒಂದು ದೇಹದಿಂದ ಮತ್ತೊಂದು ದೇಹಕ್ಕೆ ಒಯ್ಯುವ. 2. ಬಲವನ್ನು ಕಳೆಯುವ. प्राणं हरति देहाद्देहान्तरं प्रापयति प्राणं बलं वा हरति—हृञ् (हरणे) "अच्" (३-२-९)। "शुष्कं मांसं स्त्रियो वृद्धाः बालार्कस्तरुणं दधि। प्रभाते मैथुनं निद्रा सद्यः प्राणहराणि षट्"। "ण्वुल्" (३-१-१३३)।

–हारकः –ಹಾರಕ. "णिनिः" (३-१-१३४)। –हारिन् –ಹಾರಿನ್.

**प्राणाः ಪ್ರಾಣಾಃ** (ಪುಂ॰ ಬಂ॰ ವಂ॰) ದೇಹದೊಳಗಿರುವ ಪಂಚ ಪ್ರಾಣಗಳು. प्राणित्येभिः — प्र + अन (प्राणने) ಕರಂ॰ "घञ्" (३-३-१२१)। ["प्राण" ಪದದಲ್ಲಿ ನೋಡಿ.] "प्राणैः पणैः स्वं निपुणं भणन्तः" नैष॰ ३-८८।

**प्राणा ಪ್ರಾಣಾ** (ಸ್ತ್ರೀ॰) ಒಂದು ಪಕ್ಷಿ, ಒಂದು ಹೆಣ್ಣು ಹಕ್ಕಿ. प्राणिति बहुकालम् — प्र + अन (प्राणने) "अच्" (३-१-१३४)।

**प्राणात्यय ಪ್ರಾಣಾತ್ಯಯ** (ಪುಂ॰) 1. ಪ್ರಾಣನಾಶ. 2. ಪ್ರಾಣಹೋಗುವ ಸಮಯ.

**प्राणाधिक ಪ್ರಾಣಾಧಿಕ** (ವಿ॰) ಪ್ರಾಣಕ್ಕಿಂತಲೂ ಅಧಿಕವಾದ, ಜೀವಕ್ಕಿಂತಲೂ ಹೆಚ್ಚು ಪ್ರಿಯವಾದ. प्राणेभ्योऽप्यधिकः।

**प्राणायतन ಪ್ರಾಣಾಯತನ** (ನಂ॰) ಪ್ರಾಣಗಳಿಗೆ ಮುಖ್ಯ ಸ್ಥಾನವಾದ ದೇಹದ ನವರಂಧ್ರಗಳು. ಕಣ್ಣುಗಳು 2 ಕರ್ಣಕುಹರಗಳು 2 ಪಾಯು 1 ಉಪಸ್ಥ 1 ಆಸ್ಯ 1 ನಾಸಿಕೆಯ ಹೊಳ್ಳೆಗಳು 2 ಇವು ನವರಂಧ್ರಗಳು. "अक्षिणी कर्णरन्ध्रे च पायूपस्थास्यनासिकाः। नवच्छिद्राणि तान्येव प्राणस्यायतनानि तु"।

**प्राणायाम ಪ್ರಾಣಾಯಾಮ** (ಪುಂ॰) ಪ್ರಾಣವಾಯುವಿನ ನಿರೋಧ, ಪ್ರಾಣವಾಯುವನ್ನು ತಡೆದು ನಿಲ್ಲಿಸುವುದು. प्राणा आयम्यन्तेऽनेन—आ+यम (उपरमे) ಕರಂ॰ "घञ्" (३-३-१२१)। ಇದು ಅಷ್ಟಾಂಗ ಯೋಗದ ಒಂದು ಅಂಗ. ಲೋಕದಲ್ಲಿ ದೇಹ ಮತ್ತು ಪ್ರಾಣವಾಯುಗಳ ಸಂಬಂಧವೇ ಜೀವನ. ಶರೀರದಲ್ಲಿ ಪ್ರಾಣವಾಯುವು ಇರುವವರೆಗೆ ಮಾತ್ರ ಮನುಷ್ಯನ (ಪ್ರಾಣಿ ಸಾಮಾನ್ಯದ) ಜೀವನ. ಈ ಪ್ರಾಣವಾಯುವು ಶರೀರದಿಂದ ನಿರ್ಗಮಿಸಿದ ನಂತರ ಮರಣವು ಸಿದ್ಧ. ಆದುದರಿಂದ ದೇಹದಲ್ಲಿ ಪ್ರಾಣವಾಯುವನ್ನು ತಡೆದು ನಿಲ್ಲಿಸಿದಷ್ಟು ಕಾಲವೂ ಮನುಷ್ಯನು ಬದುಕಿರಬಹುದು. ಇದಕ್ಕೆ ಉಪಾಯ ಪ್ರಾಣಾಯಾಮ. "यावद्वायुः स्थितो देहे तावज्जीवनमुच्यते। मरणं तस्य निष्क्रान्तिस्ततो वायुं निरोधयेत्" हठ॰ २-३। ದೇಹದೊಳಗೆ ನಾಡಿಗಳು ಮಲದಿಂದ ವ್ಯಾಪ್ತವಾಗಿರುವುದರಿಂದ ಪ್ರಾಣವಾಯುವು ಸುಷುಮ್ನಾ ಮಾರ್ಗದಲ್ಲಿ ಪ್ರವಹಿಸುವುದಿಲ್ಲ. ನಾಡೀಚಕ್ರವು ಶುದ್ಧವಾದರೆ ಮಾತ್ರ ಯೋಗಿಗೆ ಪ್ರಾಣಾಯಾಮವು ಸುಗಮವಾಗುವುದು. "मलाकुलासु नाडीषु मारुतो नैव मध्यगः। कथं स्यादुन्मनीभावः कार्यसिद्धिः कथं भवेत्। शुद्धिमेति यदा सर्वं नाडीचक्रं मलाकुलम्। तदैव जायते योगी प्राणसंग्रहणे क्षमः"। ಸುಷುಮ್ನಾನಾಡಿಯಲ್ಲಿ ಮಲಶುದ್ಧಿಯಾದ ನಂತರ ಪ್ರಾಣಾಯಾಮವನ್ನು ಮಾಡಬೇಕು. "प्राणायामं ततः कुर्यान्नित्यं सात्त्विकया धिया। यथा सुषुम्णानाडीस्था मलाः शुद्धिं प्रयान्ति च" हठ॰ २-६।

**ಪ್ರಾಣಾಯಾಮ ವಿಧಾನ:** ಮೂಲಮಂತ್ರ ಅಥವಾ ಪ್ರಣವವನ್ನು ಹದಿನಾರು ಸಲ ಜಪಿಸಿ ಎಡಮೂಗಿನಿಂದ ವಾಯುವನ್ನು ಮೊದಲು ತುಂಬಬೇಕು. **ಇದು ಪೂರಕ.** ಬಳಿಕ ಅರವತ್ತನಾಲ್ಕು ಸಲ ಜಪಿಸಿ ಅದನ್ನು ದೇಹದೊಳಗೆ (ಹೊಟ್ಟೆಯಲ್ಲಿ) ತಡೆದೇ ನಿಲ್ಲಿಸಬೇಕು. ಇದು **ಕುಂಭಕ.** ಆಮೇಲೆ ಮೂವತ್ತೆರಡು ಸಲ ಜಪಿಸಿ ಅದನ್ನು ಹೊರಕ್ಕೆ ಬಿಡಬೇಕು. ಇದು **ರೇಚಕ.** ಪುನಃ ದಕ್ಷಿಣ (ಬಲ) ನಾಸಿಕೆಯಿಂದ ತುಂಬಿ ವಾಮ ದಕ್ಷಿಣ ಎರಡರಿಂದಲೂ ತಡೆದು ನಿಲ್ಲಿಸಿ ವಾಮ (ಎಡ) ನಾಸಿಕೆಯಿಂದ ಹೊರಕ್ಕೆ ಬಿಡಬೇಕು. ಮತ್ತೆ ವಾಮ ನಾಸಿಕೆಯಿಂದ ತುಂಬಿ ವಾಮ ಮತ್ತು ದಕ್ಷಿಣ ನಾಸಿಕೆಗಳೆರಡರಿಂದಲೂ ತಡೆದು ನಿಲ್ಲಿಸಿ ದಕ್ಷಿಣ ನಾಸಿಕೆಯಿಂದ ಬಿಡಬೇಕು. ಈ ರೀತಿ ಮೂರು ಸಲ ಪ್ರಾಣಾಯಾಮ ಮಾಡಬೇಕು. "पूरयेत् षोडशभिर्वायुं धारयेत्तच्चतुर्गुणैः। रेचयेत् कुम्भकार्धेन अशक्त्या तत्तुरीयकैः॥ प्राणायामत्रयं कुर्यान्मूलेन प्रणवेन वा। अथवा मन्त्रबीजेन यथोक्तविधिना सुधीः"। ಯೋಗಿಯು ಪದ್ಮಾಸನದಲ್ಲಿ ಕುಳಿತು ಇಡಾ (ಚಂದ್ರ) ನಾಡಿಯಿಂದ ವಾಯುವನ್ನು ತುಂಬಬೇಕು. ಅದನ್ನು ಯಥಾಶಕ್ತಿ ಹೊಟ್ಟೆಯಲ್ಲಿ ತಡೆದು ನಿಲ್ಲಿಸಿ ಪುನಃ ಪಿಂಗಳಾ (ಸೂರ್ಯ) ನಾಡಿಯಿಂದ ಹೊರಕ್ಕೆ ಬಿಡಬೇಕು. ಇದಕ್ಕೆ ಕ್ರಮವಾಗಿ ಪೂರಕ ಕುಂಭಕ ರೇಚಕಗಳೆಂದು ಹೆಸರು. "पूरकं पूरणं वायोः कुम्भकः स्थापनं क्वचित्। बहिर्निःसारणं तस्य रेचकः परिकीर्तितः"॥ "बद्धपद्मासनो योगी प्राणं चन्द्रेण पूरयेत्। धारयित्वा यथाशक्ति भूयः सूर्येण रेचयेत्॥ प्राणं सूर्येण चाकृष्य पूरयेदुदरं शनैः। विधिवत्कुम्भकं कृत्वा पुनश्चन्द्रेण रेचयेत्॥ येन त्यजेत्तेन पीत्वा धारयेदतिरोधतः। रेचयेच्च ततोऽन्येन शनैरेव न वेगतः" हठ॰ २-७, ८, ९।

**ಪ್ರಾಣಾಯಾಮಲಕ್ಷಣ:** "प्राणाख्यमनिलं वश्यमभ्यासात् कुरुते तु यत्। प्राणायामः स विज्ञेयः सबीजोऽबीज एव च"। ಪ್ರಾಣಾಯಾಮವಿಲ್ಲದೆ ಮಂತ್ರಜಪ ಮತ್ತು ಪೂಜಾಕಾರ್ಯಕ್ಕೆ ಅರ್ಹತೆಯಿಲ್ಲ. "प्राणायामं विना मन्त्रपूजने न हि योग्यता"। ಆಚಾರ್ಯಮುಖ್ಯ

ದಿಂದ ಉಪದಿಷ್ಟವಾದ ರೀತಿಯಲ್ಲಿ ಪ್ರಾಣಾಯಾಮ ಮಾಡಿದರೆ ಸಕಲ ವ್ಯಾಧಿಗಳ ನಿವಾರಣೆಯೂ ಆಗುವುದು. ಕ್ರಮತಪ್ಪಿದ ಪ್ರಾಣಾಯಾಮದಿಂದ ಸಕಲ ರೋಗಗಳೂ ಉದ್ಭವಿಸುವುವು. "प्राणायामेन युक्तेन सर्वरोगक्षयो भवेत्। अयुक्ताभ्यासयुक्तेन सर्वरोगसमुद्भवः" ಹಠ० २-१६।

**ಗಾಯತ್ರೀಪ್ರಾಣಾಯಾಮ:** "सव्याहृतिं सप्रणवां गायत्रीं शिरसा सह। त्रिः पठेदायतप्राणः प्राणायामः स उच्यते। प्राणायामत्रयं कृत्वा प्राणायामैस्त्रिभिस्त्रिभिः। अहोरात्रकृतात् पापान्मुच्यते नात्र संशयः"।

**प्राणाहुति ಪ್ರಾಣಾಹುತಿ** (स्त्री०) ಭೋಜನಕ್ಕೆ ಪೂರ್ವದಲ್ಲಿ ಪ್ರಾಣರೂಪವಾದ ಅಗ್ನಿಯನ್ನು ಉದ್ದೇಶಿಸಿ ಮಾಡುವ ಹವಿಸ್ಸಿನ ಆಹುತಿ. प्राणरूपेभ्यः अग्निभ्यः आहुतिः।

**प्राणित ಪ್ರಾಣಿತ** (वि०) 1. ಬದುಕಿರುವವನು, ಜೀವಿಸಿರುವವನು. प्र+अन (प्राणने) "क्तः" (३-४-७२)। 2. ಬದುಕಿಸಲ್ಪಟ್ಟ, ಉಜ್ಜೀವನಗೊಳಿಸಲ್ಪಟ್ಟ. प्र+अन+णिच् "क्तः" (३-२-१०२)। "प्रास्थित प्रतिबलावसथाय प्राणितत्रिदशभूतिरनन्तः" याद० २१-२८।

**प्राणितवत् ಪ್ರಾಣಿತವತ್** (वि०) 1. ಬದುಕಿದವನು. प्र+अन (प्राणने) "क्तवतुः" (३-२-१०२)। 2. ಬದುಕಿಸಿದವನು, ರಕ್ಷಿಸಿದವನು. प्र+अन+णिच् "क्तवतुः" (३-२-१०२)।

**प्राणिद्यूत ಪ್ರಾಣಿದ್ಯೂತ** (न०) ಕುದುರೆ ಟಗರು ಕೋಳಿ ಮೊದಲಾದ ಪ್ರಾಣಿಗಳ ಜೂಜು. प्राणिभिः कृतं द्यूतम्।

**प्राणिन् ಪ್ರಾಣಿನ್** (पुं०) 1. ಜೀವ, ಚೇತನ, ಪ್ರಾಣಸಹಿತವಾದ ಮತ್ತು ಉತ್ಪತ್ತಿಯುಳ್ಳ ಮನುಷ್ಯ ಪಶು ಪಕ್ಷಿ ಮೊದಲಾದುವು. प्राणोऽस्यास्ति "इनिः" (५-२-११५)। "यामाहुः सर्वबीजप्रकृतिरिति यया प्राणिनः प्राणवन्तः" शाकु० १-१। (वि०) 2. ಪ್ರಾಣಸಹಿತವಾದ, ಪ್ರಾಣವಾಯುವಿನಿಂದ ಕೂಡಿದೆ.

**प्राणिहिता ಪ್ರಾಣಿಹಿತಾ** (स्त्री०) ಪಾದುಕೆ, ಪಾದರಕ್ಷೆ.

**प्राणीत्य ಪ್ರಾಣೀತ್ಯ** (न०) ಋಣ, ಸಾಲ.

**प्राणेश ಪ್ರಾಣೇಶ** (पुं०) 1. ವಾಯು, ಗಾಳಿ. 2. ಪತಿ, ಗಂಡ. "प्राणेशानभि विदधुर्विधूतहस्ताः" माघ० ८-१३। **-ईश्वरः -ಈಶ್ವರಃ.** स्त्रियां **-ईशा -ಈಶಾ. -ईश्वरी -ಈಶ್ವರೀ.** ಪತ್ನಿ, ಭಾರ್ಯೆ. "प्राणेश्वरीं प्राप्तुमियेष शौरिः" याद० १३-१।

**प्रातःकृत्य ಪ್ರಾತಃಕೃತ್ಯ** (न०) ಪ್ರತಿದಿನ ಪ್ರಾತಃಕಾಲದಲ್ಲಿ ಮಾಡಬೇಕಾದ ಕಾರ್ಯ.

**प्रातःकाल ಪ್ರಾತಃಕಾಲ** (पुं०) ಪ್ರಭಾತ, ಹಗಲಿನ ಪ್ರಾರಂಭಕಾಲ.

**प्रातःसन्ध्या ಪ್ರಾತಃಸಂಧ್ಯಾ** (स्त्री०) ಸೂರ್ಯೋದಯಕ್ಕೆ ಪೂರ್ವದಲ್ಲಿ ಆಕಾಶದಲ್ಲಿ ಹರಡುವ ಪ್ರಕಾಶ, ರಾತ್ರಿಯು ಕಳೆದು ಮರುದಿನ ಸೂರ್ಯೋದಯಕ್ಕೆ ಪೂರ್ವದಲ್ಲಿ ಒಂದು ಮುಹೂರ್ತಕಾಲವು ಪ್ರಾತಃಸಂಧ್ಯಾಕಾಲ. सम्यक् ध्यायन्त्यस्याम्—ध्यै (चिन्तायाम्) "अङ्" (३-३-१०६)। ಜಪಮಾಡುವಕಾಲ. प्रातः सन्ध्या। सन्धौ भवा इति वा। ರಾತ್ರಿಗೆ "ತ್ರಿಯಾಮಾ" ಎಂದು ಹೆಸರಿರುವುದರಿಂದ ರಾತ್ರಿಯ ಪ್ರಾರಂಭದಲ್ಲಿ ಒಂದು ಮುಹೂರ್ತವೂ ಕೊನೆಯಲ್ಲಿ ಒಂದು ಮುಹೂರ್ತವೂ ಸಂಧ್ಯಾಕಾಲವಾಗುವುದು. "सूर्योदयाच्च प्रथमं यदा स्यादरुणोदयः। प्रातःसन्ध्या तदोदेति देवानां प्रीतिकारिणी। अस्तंगते ततः सूर्ये शोणपद्मनिभा सदा। उदेति सायंसन्ध्यापि पितॄणां मोदकारिणी" कालिकापु०।

**प्रातःस्नान ಪ್ರಾತಃಸ್ನಾನ** (न०) ಪ್ರಾತಃಕಾಲದಲ್ಲಿ ಮಾಡುವ ಸ್ನಾನ. ಅವಗಾಹನ ಸ್ನಾನವು ಪ್ರಾತಃಕಾಲದಲ್ಲಿ ವಿಹಿತವಾಗಿದೆ. "उषःकाले तु संप्राप्ते कृत्वाचावश्यकं बुधः। स्नायान्नदीषु शुद्धासु शौचं कृत्वा यथाविधि॥ प्रातःस्नानेन पूयन्ते येऽपि पापकृतो जनाः। तस्मात्सर्वप्रयत्नेन प्रातःस्नानं समाचरेत्"॥

**प्रातर् ಪ್ರಾತರ್** (अव्य०) ಪ್ರಭಾತ, ಪ್ರಾತಃಕಾಲ, ಮುಂಜಾನೆ. प्रातति—प्र+अत (सातत्यगमने) "अरन्" (उ० ५-५९)। "प्रातरहिमकरताम्रतनुर्विषजद्रुमोऽपर इवाभवद्द्रुमः" माघ० १५-४१।

**प्रातराश ಪ್ರಾತರಾಶ** (पुं०) ಪ್ರಾತಃಕಾಲದ ಭೋಜನ, ಬೆಳಗಿನ ಊಟ. प्रातरश्यते भुज्यते — अश (भोजने) "घञ्" (३-३-१९)। प्रातः प्रातःकाले आशो भोजनम् इति वा। "प्रातराशवदिहास्य भुज्यते सप्तलोकतिलकस्य चारुता" याद० १७-३९।

**प्रातर्गेय ಪ್ರಾತರ್ಗೇಯ** (पुं०) ಸ್ತುತಿಪಾಠಕ, ಹೊಗಳುಭಟ.

**प्रातर्भोक्तृ ಪ್ರಾತರ್ಭೋಕ್ತೃ** (पुं०) 1. ವಾಯಸ, ಕಾಗೆ. प्रातः भुङ्क्ते — भुज (परिपालनाभ्यवहारयोः) "तृच्" (३-१-१३३)। (वि०) 2. ಪ್ರಾತಃಕಾಲದಲ್ಲಿ ಊಟಮಾಡುವ.

**प्रातर्भोजन ಪ್ರಾತರ್ಭೋಜನ** (ನಂ) ಬೆಳಗಿನ ಊಟ. प्रातः प्रभाते भोजनम् ।

**प्रातस्तराम् ಪ್ರಾತಸ್ತರಾಮ್** (अव्य०) ಪ್ರಾತಃಕಾಲದಲ್ಲಿ, ಅರುಣೋದಯಕಾಲದಲ್ಲಿ, ಮುಂಜಾನೆ ಹೊತ್ತಿಗೆ ಮುಂಚೆ. प्रातः अतिशायने "तरप्" (५-३-५७)। "आमुः" (५-४-११)। "प्रातस्तरां पतत्रिभ्यः प्रबुद्धः प्रणमन् रविम्" भट्टि० ४-१४।

**प्राति ಪ್ರಾತಿ** (स्त्री०) 1. ಪೂರ್ತಿಮಾಡುವುದು, ತುಂಬುವುದು. प्रा (पूरणे) "क्तिन्" (३-३-९४)। 2. ಒಂದು ಚೋಟಿನ ಅಳತೆ, ಒಂದು ಪ್ರಾದೇಶದ ಅಳತೆ. ತರ್ಜನಿ ಬೆರಳಿನೊಡನೆ ನೀಡಿದ ಹೆಬ್ಬೆರಳಿನ ಅಳತೆ ಪ್ರಾದೇಶವಾಗುವುದು. ಈ ಅಳತೆಗೆ ಚೋಟು ಎಂದು ಹೆಸರು. "प्रातिः पूर्तिप्रादेशयोःस्त्रियाम्" मेदि०।

**प्रातिका ಪ್ರಾತಿಕಾ** (स्त्री०) ದಾಸಿವಾಳದಗಿಡ, ಜಪಾವೃಕ್ಷ. प्र + अत (सातत्यगमने) "ण्वुल्" (३-१-१३३)।

**प्रातिकूलिक ಪ್ರಾತಿಕೂಲಿಕ** (वि०) ಪ್ರತಿಕೂಲವಾಗಿರುವ, ವಿರುದ್ಧವಾಗಿರುವ. प्रतिकूलं वर्तते—"ठक्" (४-४-२८)। स्त्रियां "ङीप्" (४-४-१५)। **–कूलिकी –ಕೂಲಿಕೀ.** "तां प्रातिकूलिकीं मत्वा जिहीर्षुर्भीमविग्रहः" भट्टि० ५-१४।

**प्रातिकूल्य ಪ್ರಾತಿಕೂಲ್ಯ** (न०) ಪ್ರತಿಕೂಲವಾಗಿರುವಿಕೆ, ವಿರುದ್ಧವಾಗಿರುವಿಕೆ. प्रतिकूलस्य भावः "ष्यञ्" (५-१-१२४)।

**प्रातिजनीन ಪ್ರಾತಿಜನೀನ** (वि०) ಪ್ರತಿಯೊಬ್ಬನಲ್ಲೂ ಒಳ್ಳೆಯವನಾಗಿರುವ, ಪ್ರತಿಯೊಬ್ಬನಿಗೂ ಅನುಕೂಲವಾಗಿರುವ. प्रतिजनं साधुः "खञ्" (४-४-९९)।

**प्रातिपक्ष ಪ್ರಾತಿಪಕ್ಷ** (वि०) ಪ್ರತಿಪಕ್ಷ ಸಂಬಂಧವಾದ, ಶತ್ರುಸಂಬಂಧವಾದ. प्रतिपक्षस्यायम् "अण्" (४-३-१२०)। "प्रत्यासन्ने दन्तिनि प्रातिपक्षे यन्त्रा नागः प्रास्तवक्त्रच्छदोऽपि" माघ० १८-२८।

**प्रातिपथिक ಪ್ರಾತಿಪಥಿಕ** (वि०) ಮಾರ್ಗಕ್ಕೆ ಅಭಿಮುಖವಾಗಿ ಹೋಗುವವನು, ದಾರಿಯಕಡೆಗೆ ಹೋಗುವವನು. प्रतिपथं गच्छति "ठक्" (४-४-४२)। सूत्रे चकारात् ठनि **–प्रतिपथिकः– ಪ್ರತಿಪಥಿಕः.**

**प्रातिपद ಪ್ರಾತಿಪದ** (वि०) ಪ್ರತಿಪತ್ತಿನ (ಪಾಡ್ಯದ) ದಿನ ಉಂಟಾಗುವ. प्रतिपदि भवः "अण्" (४-३-१६)।

**प्रातिपदिक ಪ್ರಾತಿಪದಿಕ** (पु०) 1. ಪ್ರತಿಪತ್ ತಿಥಿಯಲ್ಲಿ ಹುಟ್ಟಿದ ಅಗ್ನಿ. प्रतिपत्तिथौ भवः "ठञ्" (४-३-११)। "इत्थम्भूतो महानग्निर्ब्रह्मक्रोधोद्भवो महान्। उवाच देवं ब्रह्माणं तिथिर्मे दीयतां प्रभो। यस्यामहं समस्तस्य जगतः ख्यातिमाप्नुयाम्॥ देवानामथ यक्षाणां गन्धर्वाणां च सत्तम। आदौ प्रतिपदा येन त्वमुत्पन्नोऽसि पावक। त्वत्पदात् प्रातिपदिकं सम्भविष्यन्ति देवताः। अतस्ते प्रतिपन्नाम तिथिरेषा भविष्यति" वराहपु०। (न०) 2. ಒಂದು ಸಂಜ್ಞೆ. ಧಾತು ಪ್ರತ್ಯಯ ಮತ್ತು ಪ್ರತ್ಯಯಾಂತ ಭಿನ್ನವಾದ ಅರ್ಥವತ್ತಾದ ಶಬ್ದ ಸ್ವರೂಪವು ಪ್ರಾತಿಪದಿಕ ಸಂಜ್ಞೆಯನ್ನು ಹೊಂದುವುದು. "अर्थवदधातुरप्रत्ययः प्रातिपदिकम्" पा० सू० १-२-४५। प्रतिपदे धातुभिन्नपदे भवः।

**प्रातिभ ಪ್ರಾತಿಭ** (न०) ಪ್ರತಿಭೆ. ಹೊಸಹೊಸದಾಗಿ ವಿಷಯಗಳು ಹೊಳೆಯುವ ಬುದ್ಧಿ. प्रतिभा स्वार्थे "अण्" (५-४-३८)। "प्रातिभं त्रिसरकेण गतानां वक्रवाक्यरचनारमणीयः" माघ० १०-१२।

**प्रातिभाव्य ಪ್ರಾತಿಭಾವ್ಯ** (न०) 1. ಜಾಮೀನು, ಹೊಣೆಗಾರಿಕೆ. प्रतिभुवो भावः "ष्यञ्" (५-१-१२४)। 2. ಜಾಮೀನಾದವನು ಕೊಡಬೇಕಾದ ಧನ. "प्रातिभाव्यं वृथादानमाक्षिकं सौरिकं च यत्। दण्डशुल्कावशेषं च न पुत्रो दातुमर्हति" मनु० ८-१५९।

**प्रातिभासिक ಪ್ರಾತಿಭಾಸಿಕ** (वि०) ತೋರಿಕೆಯಿಂದ ಮಾತ್ರ ಕಣ್ಣಿಗೆ ಕಾಣುವ, ವಾಸ್ತವವಾಗಿಲ್ಲದ. प्रतिभासादागतः। ಸತ್ತ್ವವು (ವಸ್ತುವಿನ ಇರುವಿಕೆ) पारमार्थिकम् व्यावहारिकम् ಮತ್ತು प्रातिभासिकम् ಎಂದು ಮೂರು ವಿಧ. ತ್ರಿಕಾಲಗಳಲ್ಲೂ ಅಬಾಧಿತವಾಗಿರುವುದರಿಂದ ಬ್ರಹ್ಮನ ಸತ್ತ್ವವು ಪಾರಮಾರ್ಥಿಕ. ವ್ಯವಹಾರಕಾಲದಲ್ಲಿ ಬಾಧೆಯಿಲ್ಲದಿರುವುದರಿಂದ ಘಟ ಮೊದಲಾದುವುಗಳ ಸತ್ತ್ವವು ವ್ಯಾವಹಾರಿಕ. ಪ್ರತಿಭಾಸದ (ತೋರಿಕೆ) ಕಾಲದಲ್ಲಿ ಮಾತ್ರ ಕಾಣುವುದರಿಂದ (ಅನಂತರ ಬಾಧಿತವಾಗುವುದರಿಂದ) ಶುಕ್ತಿಯಲ್ಲಿ ರಜತದ ಜ್ಞಾನವು ಪ್ರಾತಿಭಾಸಿಕ.

**प्रातिलोमिक ಪ್ರಾತಿಲೋಮಿಕ** (वि०) ಪ್ರತಿಕೂಲವಾಗಿರುವ, ನೀತಿಗೆ ವಿರುದ್ಧವಾಗಿರುವ. प्रतिलोमं वर्तते "ठक्" (४-४-२८)।

**प्रातिलोम्य ಪ್ರಾತಿಲೋಮ್ಯ** (न०) ವಿಪರ್ಯಯ, ತಲೆಕೆಳಗಾಗುವುದು, ಹಿಂದುಮುಂದಾಗುವುದು, ನೀತಿಗೆ ವಿರುದ್ಧವಾಗಿರುವಿಕೆ. प्रतिलोमस्य भावः "ष्यञ्" (५-१-१२४)।

**प्रातिवेशिक ಪ್ರಾತಿವೇಶಿಕ** (वि०) ನೆರೆಮನೆಯವನು, ಪಕ್ಕದ ಮನೆಯವನು. प्रतिवेशे भवः।

**प्रातिवेश्य ಪ್ರಾತಿವೇಶ್ಯ** (वि०) ಪಕ್ಕದಮನೆಯವನು, ನೆರೆಮನೆಯವನು. प्रतिवेशे भवः। "प्रातिवेश्यानुवेश्यौ च कल्याणे विंशतिद्विजे" मनु० ८-३९२।

**प्रातिशाख्य ಪ್ರಾತಿಶಾಖ್ಯ** (न०) ವೇದದ ಪ್ರತಿಯೊಂದು ಶಾಖೆಗೂ ಇರುವ ವ್ಯಾಕರಣ. प्रतिशाखं भवः "ञ्यः" (वा० ४-३-५९)। ಪ್ರಾತಿಶಾಖ್ಯವು ಪ್ರತಿಯೊಂದು ಶಾಖೆಗೂ ಬೇರೆಬೇರೆಯಾಗಿದೆ. ಸಂಹಿತಾಪಾಠಗಳಲ್ಲಿನ ಉಚ್ಚಾರಣೆ ಸ್ವರ ಸಂಧಿ ಆಯಾಸ್ಥಾನಗಳಲ್ಲಿ ಹ್ರಸ್ವದೀರ್ಘಗಳು ಮೊದಲಾದ ಎಲ್ಲಾ ವಿಷಯಗಳೂ ಪ್ರಾತಿಶಾಖ್ಯದಲ್ಲಿ ಪರಿಶೀಲಿಸಲ್ಪಟ್ಟಿವೆ. ಸಂಹಿತೆಗಳ ಮಂತ್ರಗಳ ಉದಾಹರಣೆಗಳೊಡನೆ ಎಲ್ಲವನ್ನೂ ವಿವೇಚನೆ ಮಾಡಲಾಗಿದೆ. ಇವುಗಳಲ್ಲಿ ಋಗ್ವೇದದ ಪ್ರಾತಿಶಾಖ್ಯವು ಬಹಳ ಪ್ರಾಚೀನವಾದುದು. ಆಶ್ವಲಾಯನರ ಗುರುಗಳಾದ ಶೌನಕರು ಈ ಋಗ್ವೇದದ ಪ್ರಾತಿಶಾಖ್ಯವನ್ನು ರಚಿಸಿದ್ದಾರೆ. ಇದಕ್ಕೆ ಶಿಕ್ಷಾಶಾಸ್ತ್ರವೆಂದು ಹೆಸರೂ ಉಂಟು.

ಸಾಮವೇದ ಪ್ರಾತಿಶಾಖ್ಯಗಳಲ್ಲಿ ಪುಷ್ಪಋಷಿವಿರಚಿತವಾದ "ಪುಷ್ಪಸೂತ್ರ" ಮತ್ತು ಶಾಕಟಾಯನ ರಚಿತವಾದ "ಋಕ್‌ತಂತ್ರ" ಇವೆರಡೂ ಮುಖ್ಯವಾದುವು.

ತೈತ್ತಿರೀಯ ಪ್ರಾತಿಶಾಖ್ಯದಲ್ಲಿ ಎರಡು ಪ್ರಶ್ನೆಗಳಿವೆ. ಇದು ಸೂತ್ರಾತ್ಮಕವಾದುದು. ಪ್ರಥಮಪ್ರಶ್ನದಲ್ಲಿ ವರ್ಣಸಮಾಮ್ನಾಯ ಶಬ್ದಸ್ಥಾನ ಶಬ್ದೋತ್ಪತ್ತಿಯ ರೀತಿ ನಾನಾವಿಧವಾದ ಸ್ವರಗಳು ವಿಸರ್ಗಸಂಧಿ ಮುಂತಾದ ವಿಚಾರಗಳೂ ಎರಡನೆಯ ಪ್ರಶ್ನದಲ್ಲಿ ಣತ್ವವಿಧಾನ ಅನುಸ್ವಾರ ಅನುನಾಸಿಕ ಸ್ವರಿತ ಸಂಹಿತಾಸ್ವರೂಪ ಮುಂತಾದ ವಿಚಾರಗಳೂ ಪ್ರತಿಪಾದಿಸಲ್ಪಟ್ಟಿವೆ.

ಶುಕ್ಲಯಜುರ್ವೇದದ ಪ್ರಾತಿಶಾಖ್ಯವನ್ನು ಶಾಕಟಾಯನ ಮುನಿಗಳು ರಚಿಸಿರುತ್ತಾರೆ. ಇದರಲ್ಲಿ ಎಂಟು ಅಧ್ಯಾಯಗಳಿವೆ.

**प्रातिस्विक ಪ್ರಾತಿಸ್ವಿಕ** (वि०) 1. ಅಸಾಧಾರಣಧರ್ಮ. 2. ಪ್ರತಿಯೊಬ್ಬನಲ್ಲೂ ಇರುವ, ಪ್ರತಿಯೊಂದರಲ್ಲೂ ಇರುವ (ವಿಶೇಷಧರ್ಮ). ಘಟದಲ್ಲಿ ಘಟನಿಷ್ಠವಾದ ವ್ಯಕ್ತಿತ್ವವು ವಿಶೇಷಧರ್ಮ. ಇದು ಪ್ರಾತಿಸ್ವಿಕ.

**प्रातिहारिक ಪ್ರಾತಿಹಾರಿಕ** (पुं०) ಮಾಯಾಕಾರ, ಯಕ್ಷಿಣಿಯವನು, ಗಾರುಡಿಗ. प्रतिहारः प्रतिहरणं प्रयोजनमस्य "ठक्" (५-१-१०९)। "मायाकारस्तु प्रातिहारिकः" अम०।

**प्रातीतिक ಪ್ರಾತೀತಿಕ** (वि०) ಕೇವಲ ಜ್ಞಾನದಿಂದ ಉಂಟಾದ, ವಸ್ತುತಃ ಇಲ್ಲದಿದ್ದರೂ ಭ್ರಾಂತಿಯಿಂದ ಉಂಟಾದ. प्रतीत्या निर्वृत्तम् "ठक्" (५-१-७९)।

**प्रातीप ಪ್ರಾತೀಪ** (पुं०) ಪ್ರತೀಪರಾಜನ ಮಗ, ಶಂತನುರಾಜ. प्रतीपस्यायम् "अण्" (४-३-१२०)।

**प्रातीपिक ಪ್ರಾತೀಪಿಕ** (वि०) ಪ್ರತಿಕೂಲವಾಗಿ ನಡೆಯುತ್ತಿರುವ, ವಿರುದ್ಧವಾಗಿರುವ. प्रतीपं वर्तते "ठक्" (४-४-२८)।

**प्रात्ययिक ಪ್ರಾತ್ಯಯಿಕ** (वि०) ಜಾಮೀನುದಾರ, ಸಾಲಗಾರನಿಗೋಸ್ಕರ ಜಾಮೀನಾಗಿ ನಿಲ್ಲುವವನು.

**प्राथमकल्पिक ಪ್ರಾಥಮಕಲ್ಪಿಕ** (पुं०) ಮೊದಲನೆಯ ಶಾಸ್ತ್ರವನ್ನು ಅಧ್ಯಯನ ಮಾಡುವ ವಿದ್ಯಾರ್ಥಿ. प्रथमकल्पं प्रथमशास्त्रमधीते — "ठक्" (वा० ४-२-६०)।

**प्राथमिक ಪ್ರಾಥಮಿಕ** (वि०) 1. ಮೊದಲು ಉಂಟಾದ. प्रथमे भवः "ठक्" (४-३-७२)। 2. ಮೊದಲನೆಯ.

**प्राथम्य ಪ್ರಾಥಮ್ಯ** (न०) ಮೊದಲನೆಯದಾಗಿರುವಿಕೆ. प्रथमस्य भावः "ष्यञ्" (५-१-१२४)।

**प्रादि ಪ್ರಾದಿ** (पुं०) ಉಪಸರ್ಗಗಳ ಗಣ. प्र ಮೊದಲಾದ ಉಪಸರ್ಗಗಳ ಗುಂಪು. प्र परा अप सम् अनु अव निस निर् दुस् दुर् वि आङ् नि अधि अपि अति सु उत् अभि प्रति परि उप ಇವು ಪ್ರಾದಿಗಳು.

**प्रादुर्भाव ಪ್ರಾದುರ್ಭಾವ** (पुं०) 1. ಕಾಣಿಸಿಕೊಳ್ಳುವುದು, ದರ್ಶನಕೊಡುವುದು, ತೋರ್ಕೆ. प्रादुस्+भू (सत्तायाम्) भावे "घञ्" (३-३-१८)। 2. ಹುಟ್ಟುವುದು, ಜನ್ಮವೆತ್ತುವುದು. "वपुःप्रादुर्भावादनुमितमिदं जन्मनि पुरा पुरारे न क्वापि क्वचिदपि भवन्तं प्रणतवान्" कुव०।

**प्रादुर्भूत ಪ್ರಾದುರ್ಭೂತ** (वि०) 1. ಹುಟ್ಟಿದ, ಉತ್ಪತ್ತಿಹೊಂದಿದ. 2. ಕಾಣಿಸಿಕೊಂಡ, ಪ್ರಕಟವಾಗಿರುವ.

**प्रादुस् ಪ್ರಾದುಸ್** (अव्य०) ಕಾಣಿಸಿಕೊಳ್ಳುವಿಕೆ, ಪ್ರಕಟಪಡಿಸಿಕೊಳ್ಳುವಿಕೆ. प्र + अद (भक्षण) "उस्" बाहु०। "महाभूतादि वृत्तौजाः प्रादुरासीत्तमोनुदः" मनु० १-६।

**प्रादुष्कृत ಪ್ರಾದುಷ್ಕೃತ** (वि०) ಪ್ರಕಟಿಸಲ್ಪಟ್ಟ, ಸ್ಪಷ್ಟವಾಗಿ ತೋರಿಸಲ್ಪಟ್ಟ. "प्रादुष्कृतं लाघवमुल्बणेन" याद० २०-८।

**प्रादेश ಪ್ರಾದೇಶ** (पुं०) 1. ಒಂದು ಜೋಟಿನ ಅಳತೆ, ತರ್ಜನಿ ಬೆರಳಿನೊಡನೆ ನೀಡಿದ ಹೆಬ್ಬೆರಳಿನ ಅಳತೆ. प्रदिश्यते — प्र + दिश (अतिसर्जने) "घञ्" (३-३-१२१)। दीर्घः (६-३-१२२)। "प्रमाणतो भीमसेनः प्रादेशेनाधिकोऽर्जुनात्"। 2. ಪ್ರದೇಶ, ಸ್ಥಾನ, ಸ್ಥಳ. प्रदेश स्वार्थे "अण्" (५-४-३८)। "प्रादेशो देशमात्रे च तर्जन्यङ्गुष्ठसम्मिते" मेदि०।

**प्रादेशन ಪ್ರಾದೇಶನ** (ನಂ) ದಾನ, ಕೊಡುವುದು. प्र+ आ + दिश (अतिसर्जने) "ल्युट्" (३-३-११५)।

**प्रादेशिक ಪ್ರಾದೇಶಿಕ** (ವಿಂ) ಪ್ರದೇಶದಲ್ಲಿ ಇರುವ, ಪ್ರದೇಶದಲ್ಲಿ ಉಂಟಾದ. प्रदेशे भवः "ठक्"।

**प्रादोष ಪ್ರಾದೋಷ** (ವಿಂ) 1. ಪ್ರದೋಷಕಾಲದ ಸಂಬಂಧವಾದ. प्रदोषस्यायम् "अण्" (४-३-१२०)। 2. ಪ್ರದೋಷಕಾಲದಲ್ಲಿ ಕೂಗುವ ಮೃಗ. प्रदोषे व्याहरति "अण्" (४-३-५१)। प्रदोषे व्याहरति प्रादोषो मृगः। 3. ಪ್ರದೋಷಕಾಲದಲ್ಲಿ ಅಧ್ಯಯನಮಾಡಿದ ವಿದ್ಯಾರ್ಥಿ. प्रदोषसहचरितं अध्ययनं सोढमस्य "अण्" (४-३-१४)। वा "ठञ्"। **–प्रादोषिकः –ಪ್ರಾದೋಷಿಕಃ.**

**प्राधनिक ಪ್ರಾಧನಿಕ** (ನಂ) ಯುದ್ಧಕ್ಕೆ ಬೇಕಾಗುವ ಆಯುಧ, ಯುದ್ಧದಲ್ಲಿ ಉಪಯೋಗಿಸಲ್ಪಡುವ ಆಯುಧ. प्रधनं संग्रामः प्रयोजनमस्य "ठक्" (५-१-१०९)। "सूर्येन्दुवाय्वग्न्यगमं त्रिधामभिः परिक्रमत्प्राधनिकैर्दुरासदम्" भाग० ३-८-३१।

**प्राधान्य ಪ್ರಾಧಾನ್ಯ** (ನಂ) ಮುಖ್ಯವಾಗಿರುವಿಕೆ, ಎಲ್ಲಕ್ಕಿಂತಲೂ ಮಿಗಿಲಾಗಿರುವಿಕೆ, ಸರ್ವೋತ್ಕೃಷ್ಟವಾಗಿರುವಿಕೆ. प्रधानस्य भावः "ष्यञ्" (५-१-१२४)।

**प्राधीत ಪ್ರಾಧೀತ** (ನಂ) 1. ಸರಿಯಾಗಿ ಅಧ್ಯಯನ ಮಾಡುವುದು, ಚೆನ್ನಾಗಿ ವೇದಶಾಸ್ತ್ರಗಳನ್ನು ಕಲಿಯುವುದು. प्रकृष्टमधीतम्। (ವಿಂ) 2. ವೇದಶಾಸ್ತ್ರಗಳನ್ನು ಅಧ್ಯಯನ ಮಾಡಿದವನು. प्रकृष्टमधीतं येषाम्। "अनन्ययोगात्स रथो बभार प्राधीतवेद्यां प्रणवप्रवृत्तिम्" याद० २३-२३।

**प्राध्व ಪ್ರಾಧ್ವ** (ನಂ) 1. ನರ್ಮ, ಪರಿಹಾಸ. "प्राध्वमध्वनि मुधा विदधासि"। 2. ಬಹಳ ದೂರದಮಾರ್ಗ. 3. ಬಂಧನ, ಕಟ್ಟು. (ವಿಂ) 4. ನಮ್ರನಾದ, ಬಗ್ಗಿರುವ, "प्राध्वं सुप्रणते चातिदूरवर्त्मनि बन्धने" विश्व०। (ಅವ್ಯಂ) 5. ಅನುಕೂಲವಾಗಿ. "सभाजने मे भुजमूर्ध्वबाहुः सव्येतरं प्राध्वमितः प्रयुङ्क्ते" रघु० १३-४३। 6. ವಕ್ರವಾಗಿ, ಡೊಂಕಾಗಿ.

**प्रान्त ಪ್ರಾಂತ** (ಪುಂ) 1. ಎಲ್ಲೆ, ಗಡಿ. 2. ಕೊನೆಯಭಾಗ, ತುದಿಯಲ್ಲಿರುವ ಪ್ರದೇಶ. प्रकृष्टोऽन्तः। "प्रान्तेषु संसक्तनमेरुशाखं ध्यानास्पदं भूतपतेर्विवेश" कुमा० ३-४३। 3. ಪಾರ್ಶ್ವ, ಪಕ್ಕ. "अमी वेदिं परितः क्लृप्तधिष्ण्याः समिद्वन्तः प्रान्तसंस्तीर्णदर्भाः" शाकु० ४-७। 4. ಕೋಣ, ಮೂಲೆ. "ईषत्तिर्यग्वलनविषमं कूणितप्रान्तमेतत्" मालती० ४-२।

**प्रान्ततस् ಪ್ರಾಂತತಸ್** (ಅವ್ಯಂ) ಪ್ರಾಂತಭಾಗದಲ್ಲಿ, ಕೊನೆಯಭಾಗದಲ್ಲಿ, ಸುತ್ತಲೂ. प्रान्त "तसिः" (वा० ५-४-४४)।

**प्रान्तर ಪ್ರಾಂತರ** (ನಂ) 1. ಬಹಳದೂರ ನಡೆಯಬೇಕಾದ ದಾರಿ. प्रकृष्टमन्तरं व्यवधानमत्र। 2. ಬಹಳದೂರ ಮರ ನೆರಳು ನೀರು ಯಾವುದೂ ಇಲ್ಲದ ದಾರಿ. दूरं शून्यो दूरशून्यः जलादिवर्जितः अध्वा प्रान्तरं भवति। 3. ಅರಣ್ಯ, ಕಾಡು. 4. ಕೋಟರ, ಮರದ ಪೊಟರೆ. "प्रान्तरं विपिने दूरशून्यवर्त्मनि कोटरे" मेदि०।

**प्रान्तशून्य ಪ್ರಾಂತಶೂನ್ಯ** (ನಂ) ಮರ ನೆರಳು ನೀರು ಯಾವುದೂ ಇಲ್ಲದ ಶೂನ್ಯವಾದ ಮಾರ್ಗ.

**प्रापक ಪ್ರಾಪಕ** (ವಿಂ) 1. ಹೊಂದುವವನು, ಪಡೆಯುವವನು. प्र+आप्लृ (व्याप्तौ) "ण्वुल्" (३-१-१३३)। 2. ಹೊಂದಿಸುವ, ಸೇರಿಸುವ. प्र + आप्लृ + णिच् "ण्वुल्" (३-१-१३४)। 3. ಸಾಗಿಸುವ, ಒಯ್ಯುವ. 4. ಗಳಿಸಿಕೊಡುವ, ಸಂಪಾದಿಸಿಕೊಡುವ. "त्वत्प्रापकस्त्रस्यति नैनसोऽपि त्वय्येव दास्येऽपि न लज्जते यत्" नैष० ३-११०।

**प्रापण ಪ್ರಾಪಣ** (ನಂ) 1. ಒಯ್ಯುವುದು, ಸಾಗಿಸುವುದು. 2. ಸೇರಿಸುವುದು, ಹೊಂದಿಸುವುದು. प्र+आप्लृ (व्याप्तौ) + णिच् "ल्युट्" (३-३-११५)। 3. ಸಂಪಾದಿಸಿಕೊಡುವುದು, ದೊರಕಿಸಿಕೊಡುವುದು. 4. ಹೊಂದುವುದು, ಪಡೆಯುವುದು. प्र + आप्लृ "ल्युट्" (३-३-११५)। 5. ಹೊಂದುವುದು, ಸೇರುವುದು, ತಲುಪುವುದು.

**प्रापणिक ಪ್ರಾಪಣಿಕ** (ಪುಂ) ವ್ಯಾಪಾರಮಾಡುವವನು, ವರ್ತಕ. प्र + आ + पण (व्यवहारे स्तुतौ च) "किकन्" (उ० २-४२)। "आढ्यादिव प्रापणिकादजस्रं जग्राह रत्नान्यमितानि लोकः" माघ० ४-११।

**प्रापणीय ಪ್ರಾಪಣೀಯ** (ವಿಂ) 1. ಪಡೆಯಬೇಕಾದ, ಹೊಂದಬೇಕಾದ. 2. ಪಡೆಯಲ್ಪಡುವ, ಹೊಂದಲ್ಪಡುವ. 3. ಪಡೆಯಲು ಶಕ್ಯವಾದ, ಹೊಂದಲು ಸಾಧ್ಯವಾದ. 4. ಸೇರಲು ಶಕ್ಯವಾದ, ತಲುಪಲು ಸಾಧ್ಯವಾದ. प्र+आप्लृ (व्याप्तौ) "अनीयर्" (३-१-९६)। 5. ಸೇರಿಸಲ್ಪಡುವ. 6. ಸೇರಿಸಲು ಶಕ್ಯವಾದ. 7. ಸಾಗಿಸಲ್ಪಡುವ. 8. ಹೊಂದಿಸಲ್ಪಡುವ. 9. ತಲುಪಿಸಲ್ಪಡುವ. "धूमज्योतिः सलिलमरुतां संनिपातः क्व मेघः संदेशार्थाः क्व पटुकरणैः प्राणिभिः प्रापणीयाः" मेघ० १-५।

10. ಹೊಂದಿಸಬೇಕಾದ. 11. ತಲುಪಿಸಬೇಕಾದ, 12. ಸಾಗಿಸಬೇಕಾದ. "तव्य:" (३-१-९६)। प्राप्तव्यम् ಪ್ರಾಪ್ತವ್ಯಮ್. "प्राप्तव्यमर्थं लभते मनुष्यो देवोऽपि तं लङ्घयितुं न शक्त:" पञ्चतं० २-११२। प्र + आप्लृ+ णिच् "तव्य:" (३-१-९६)। प्रापयितव्य: ಪ್ರಾಪಯಿತವ್ಯಃ.

**प्रापयत् ಪ್ರಾಪಯತ್** (वि०) 1. ಹೊಂದಿಸುತ್ತಿರುವ. प्र+आप्लृ (व्याप्तौ)+णिच् "शतृ" (३-२-१२४)। "प्रापयन् पवनव्याधेर्गिरमुत्तरपक्षताम्" माघ० २-१५। 2. ಸೇರಿಸುತ್ತಿರುವ, ತಲುಪಿಸುತ್ತಿರುವ. 3. ಸಾಗಿಸುತ್ತಿರುವ, ಒಯ್ಯುತ್ತಿರುವ. 4. ಸಂಪಾದಿಸಿಕೊಡುತ್ತಿರುವ. स्त्रियां "ङीप्"(४-१-६)। -यन्ती -ಯನ್ತೀ. "शानच्" (३-२-१२४)। प्रापयमाण: ಪ್ರಾಪಯಮಾಣಃ.

**प्रापयितृ ಪ್ರಾಪಯಿತೃ** (वि०) 1. ಹೊಂದಿಸುವ. प्र+आप्लृ (व्याप्तौ) + णिच् "तृच्" (३-१-१३३)। 2. ಸೇರಿಸುವ, ತಲುಪಿಸುವ. 3. ಸಾಗಿಸುವ, ಒಯ್ಯುವ. 4. ಸಂಪಾದಿಸಿಕೊಡುವ. स्त्रियां "ङीप्" (४-१-५)। -यित्री -ಯಿತ್ರೀ.

**प्रापित ಪ್ರಾಪಿತ** (वि०) 1. ಹೊಂದಿಸಲ್ಪಟ್ಟ. प्र+आप्लृ (व्याप्तौ) + णिच् "क्त:" (३-२-१०२)। "प्रापितेव चटुकाकुविडम्बं लम्भितेन बहुयाचनलज्जाम्" नैष० ५-८४। 2. ಸೇರಿಸಲ್ಪಟ್ಟ. "प्रापितस्तव परं पदं त्वया निर्विशेम निविशेमहि त्वयि" याद० १७-९४। 3. ಒಯ್ಯಲ್ಪಟ್ಟ, ಸಾಗಿಸಲ್ಪಟ್ಟ. 4. ತಲುಪಿಸಲ್ಪಟ್ಟ. 5. ಸಂಪಾದಿಸಿಕೊಡಲ್ಪಟ್ಟ.

**प्रापितवत् ಪ್ರಾಪಿತವತ್** (वि०) 1. ಸೇರಿಸಿದವನು. 2. ತಲುಪಿಸಿದವನು. 3. ಸಾಗಿಸಿದವನು, ಒಯ್ದವನು. प्र+आप्लृ+णिच् "क्तवतु:" (३-२-१०२)।

**प्रापिपयिषत् ಪ್ರಾಪಿಪಯಿಷತ್** (वि०) 1. ಒಯ್ಯಲು ಅಪೇಕ್ಷಿಸುತ್ತಿರುವ. प्र+आप्लृ (व्याप्तौ)+सन् "शतृ" (३-२-१२४)। 2. ಸೇರಿಸಲು ಇಚ್ಛಿಸುತ್ತಿರುವ. 3. ತಲುಪಿಸಲು ಅಪೇಕ್ಷಿಸುತ್ತಿರುವ.

**प्रापिपयिषा ಪ್ರಾಪಿಪಯಿಷಾ** (स्त्री०) 1. ಒಯ್ಯಲು ಅಪೇಕ್ಷೆ, ಸಾಗಿಸಲು ಅಪೇಕ್ಷೆ. 2. ತಲುಪಿಸಲು ಅಪೇಕ್ಷೆ. 3. ಹೊಂದಿಸಲು ಅಪೇಕ್ಷೆ. प्र+आप्लृ (व्याप्तौ)+सन् "अ:" (३-३-१०२)।

**प्रापिपयिषु ಪ್ರಾಪಿಪಯಿಷು** (वि०) 1. ಒಯ್ಯಲು ಅಪೇಕ್ಷೆಯುಳ್ಳ. प्र+आप्लृ (व्याप्तौ)+सन् "उ:" (३-२-१६८)। "प्रतीतस्तत्किं मामतिभरमथ: प्रापिपयिषु:" माघ० ५-६९। 2. ಸೇರಿಸಲು ಇಚ್ಛಿಸುವ. 3. ತಲುಪಿಸಲು ಅಪೇಕ್ಷಿಸುವ.

**प्राप्त ಪ್ರಾಪ್ತ** (वि०) 1. ಹೊಂದಲ್ಪಟ್ಟ, ಪಡೆಯಲ್ಪಟ್ಟ. प्र+आप्लृ (व्याप्तौ) "क्त:" (३-२-१०२)। "प्राप्ता: कृच्छ्राद्दृष्यशृङ्गोपचारै: पुण्यश्रीका: कोसलेन्द्रेण पुत्रा:" म० वी० १-२४। 2. ಅನುಭವಿಸಲ್ಪಟ್ಟ, ಈಡುಮಾಡಲ್ಪಟ್ಟ. "आमृश्य रात्रिमरुणोदयजातपुष्पां प्राप्तानुताप इव सत्पथलङ्घनेन" याद० १९-४०। "तेन प्राप्तं गर्भवासादि दु:खम्" मु० मा०। 3. ಸೇರಲ್ಪಟ್ಟ, ತಲುಪಲ್ಪಟ್ಟ. 4. ಪಡೆಯಲ್ಪಟ್ಟ, ಸಂಪಾದಿಸಲ್ಪಟ್ಟ. "न तस्थौ भर्तृत: प्राप्तमानसंप्रतिपत्तिषु" माघ० १९-३८। 5. ಉಂಟಾದ, ಸಂಭವಿಸಿದ. "एतस्मिन्नेनसि प्राप्ते वसित्वा गर्दभाजिनम्" मनु० ११-१२२। 6. ಹೊಂದಿದ, ಸೇರಿದ, ತಲುಪಿದ. "परिष्कृति भारतवर्षसीम्न: प्राप्ता वयं पर्वतसार्वभौमम्"याद० १८-३३। 7. ಹೊಂದಿದ, ಪಡೆದ, ಸಂಪಾದಿಸಿದ. "प्राप्तो मौक्तिकहारमुन्नतकुचाभोगस्तदीयद्विषाम्" माघ० १६-८४। 8. ಅನುಭವಿಸಿದ, ತಾಳ್ಮೆಯಿಂದ ಸಹಿಸಿದ. "प्राप्तोऽभिमानव्यसनादसह्यं दन्तीव दन्तव्यसनाद्विकारम्" किरा० ३-४५। 9. ಬಂದಿರುವ, ಆಗಮಿಸಿರುವ. "प्राप्तावेकरथारूढौ पृच्छन्तौ त्वामितस्तत:" वेणी० ५-२५। 10. ಬಂದು ಸೇರಿದ, ಉಪಸ್ಥಿತವಾದ. "प्राप्तार्थग्रहणं द्रव्यपरीवर्तोऽनुरोधनम्" हितो० २-१०३। 11. ಬಂದ, ಒದಗಿದ, ಬಂದು ಸೇರಿದ. "असाध्य: कुरुते कोपं प्राप्ते काले गदो यथा" माघ० २-७४।

**प्राप्तकाल ಪ್ರಾಪ್ತಕಾಲ** (पुं०) 1. ಸರಿಯಾದ ಕಾಲ, ಯೋಗ್ಯವಾದ ಸಮಯ. (वि०) 2. ಅನುಕೂಲವಾದ ಕಾಲವನ್ನು ಹೊಂದಿರುವ, ಯೋಗ್ಯವಾದ ಕಾಲವುಳ್ಳ.

**प्राप्तप्रसव ಪ್ರಾಪ್ತಪ್ರಸವ** (वि०) ಪ್ರಸವಕಾಲವು ಸಮೀಪಿಸಿರುವ, ಹೆರಿಗೆಯ ಸಮಯವು ಒದಗಿರುವ. "प्राप्तप्रसवमात्मानं गङ्गादेव्यां विमुञ्चति" उ० रा० ७-२।

**प्राप्तमनोरथ ಪ್ರಾಪ್ತಮನೋರಥ** (वि०) ಇಷ್ಟಸಿದ್ಧಿಯನ್ನು ಹೊಂದಿದ, ಅಪೇಕ್ಷೆಯು ಕೈಗೂಡಿದ.

**प्राप्तरूप ಪ್ರಾಪ್ತರೂಪ** (वि०) 1. ಪಂಡಿತ, ವಿದ್ವಾಂಸ. 2. ಮನೋಹರವಾದ, ರಮಣೀಯವಾದ. "प्राप्तरूपो ज्ञरम्ययो:" मेदि०।

**प्राप्तवत् ಪ್ರಾಪ್ತವತ್** (वि०) 1. ಪಡೆದ, ಸಂಪಾದಿಸಿದ, ಹೊಂದಿದ. प्र+आप्लृ (व्याप्तौ) "क्तवतु:"(३-२-१०२)।

"पद्मनाभचरणाङ्कितास्मसु प्राप्तवत्स्वमृतविप्रुषो नवाः" ಕುಮಾ० ७-२३। 2. ಹೊಂದಿದ, ಸೇರಿದ, ತಲುಪಿದ. 3. ಆಗಮಿಸಿದ, ಬಂದು ಸೇರಿದ. 4. ಹೊಂದಿದ, ಪಡೆದ. स्त्रियां "ङीप्"। **-वती -ವತೀ.** "रम्या इति प्राप्तवती: पताका रागं विविक्ता इति वर्धयन्ती:" माघ० ३-५३।

**प्राप्ति ಪ್ರಾಪ್ತಿ** (स्त्री०) 1. ಹೊಂದುವುದು, ಪಡೆಯುವುದು. प्र+आप्लृ (व्याप्तौ) "क्तिन्" (३-३-९४)। "परस्परप्राप्तिनिराशयोर्वरं शरीरनाशोऽपि समानुरागयो:" माल० ३-१६। 2. ಸೇರುವುದು, ತಲುಪುವುದು. 3. ಆಗಮನ, ಬರುವುದು. 4. ಉತ್ಪತ್ತಿ, ಉದಯ, ಆವಿರ್ಭಾವ. "गच्छन्त्यात्मप्रसादेन विदुषां प्राप्तिमव्ययाम्" भा० आश्व० ४८-३। 5. ಜನ್ಮಾಂತರದಲ್ಲಿ ಮಾಡಿದ ಪಾಪಪುಣ್ಯಕಾರ್ಯಗಳ ಫಲ. 6. ಅಣಿಮಾದಿ ಅಷ್ಟಸಿದ್ಧಿಗಳಲ್ಲೊಂದು. "अणिमा महिमा चैव गरिमा लघिमा तथा। प्राप्ति: प्राकाम्यमीशित्वं वशित्वं चाष्टभूतय:" अम०। 7. ಲಾಭ, ಸಂಪಾದನೆ. 8. ಸಂಗ್ರಹ, ಒಟ್ಟುಗೂಡಿಸುವುದು. ಕೂಡಿಡುವುದು. 9. ಭಾಗ, ಅಂಶ. 10. ಅದೃಷ್ಟ. 11. ಸಂಯೋಗ, ಸಂಬಂಧ. 12. ಮುಖಸಂಧಿಯ ಒಂದು ಅಂಗ.

**प्राप्त्याशा ಪ್ರಾಪ್ತ್ಯಾಶಾ** (स्त्री०) 1. ಹೊಂದುವ ಅಪೇಕ್ಷೆ, ಪಡೆಯುವ ಆಸೆ. 2. ಫಲಾಪೇಕ್ಷೆಯಿಂದ ಪ್ರಾರಂಭಿಸಲ್ಪಟ್ಟ ಕಾರ್ಯದ ಐದು ಅವಸ್ಥೆಗಳಲ್ಲೊಂದು. (1) आरम्भ: (2) यत्न: (3) प्राप्त्याशा (4) नियताप्ति: ಮತ್ತು (5) फलागम: ಮೂರನೆಯ ಅವಸ್ಥೆಯು ಪ್ರಾಪ್ತ್ಯಾಶೆ. ಉಪಾಯ ಮತ್ತು ಅಪಾಯ (ಪ್ರತಿಬಂಧಕ) ಶಂಕೆಗಳಿಂದ ಫಲಪ್ರಾಪ್ತಿಯ ವಿಷಯದಲ್ಲಿ ಉಂಟಾಗುವ ಸಂಶಯ. "उपायापायशङ्काभ्यां प्राप्त्याशा प्राप्तिसंभव:" (संभावना) सा० द० ६-७२।

**प्राप्नुवत् ಪ್ರಾಪ್ನುವತ್** (वि०) 1. ಹೊಂದುತ್ತಿರುವ, ಪಡೆಯುತ್ತಿರುವ. 2. ತಲುಪುತ್ತಿರುವ, ಸೇರುತ್ತಿರುವ. प्र+आप्लृ (व्याप्तौ) "शतृ" (३-२-१२४)। "शुद्धा: सङ्गं न क्वचित्प्राप्नुवन्त: दूरान्मुक्ता: शीघ्रतां दर्शयन्त:" माघ० १८-१३। स्त्रियां "ङीप्" (४-१-६)। **-वती -ವತೀ.**

**प्राप्य ಪ್ರಾಪ್ಯ** (वि०) 1. ಹೊಂದಲ್ಪಡುವ. 2. ಆಶ್ರಯಿಸಲ್ಪಡುವ. 3. ಸೇರಲ್ಪಡುವ, ತಲುಪಲ್ಪಡುವ. प्र+आप्लृ (व्याप्तौ) "ण्यत्" (३-१-१२४)। 4. ವ್ಯಾಕರಣಶಾಸ್ತ್ರದಲ್ಲಿ ಉಕ್ತವಾದ ನಾಲ್ಕು ವಿಧ ಕರ್ಮಗಳಲ್ಲೊಂದು. (1) निर्वर्त्यम् (2) विकार्यम् (3) प्राप्यम् ಮತ್ತು (4) अनीप्सितम् ಇವು ನಾಲ್ಕು ವಿಧ ಕರ್ಮಗಳು. "देवदत्त: शालां गच्छति" ಎಂಬಲ್ಲಿ ಶಾಲೆಯು ಪ್ರಾಪ್ಯಕರ್ಮವಾಗುವುದು. (अव्य०) 5. ಹೊಂದಿ, ಪಡೆದು. 6. ಸೇರಿ, ತಲುಪಿ. "प्राप्य यादवपतिस्त्रिविष्टपं देवमातुरुपनीतकुण्डल:" याद० १७-५।

**प्राबल्य ಪ್ರಾಬಲ್ಯ** (न०) 1. ಹೆಚ್ಚು ಬಲದಿಂದ ಕೂಡಿರುವಿಕೆ, ಸಾಮರ್ಥ್ಯ, ಪ್ರಭಾವ. प्रबलस्य भाव: "ष्यञ्" (५-१-१२४)। 2. ಅಭ್ಯುದಯ, ಏಳಿಗೆ, ಏರಿಕೆ.

**प्राबोधिक ಪ್ರಾಬೋಧಿಕ** (पुं०) 1. ಪ್ರಾತಃಕಾಲ, ಉಷಃಕಾಲ. प्रबोधाय हित: "ठक्"। 2. ಮಾಗಧ, ಪ್ರಾತಃಕಾಲದಲ್ಲಿ ರಾಜನನ್ನು ಎಬ್ಬಿಸಲು ಹಿತಕರವಾದ ರಾಗದಿಂದ ಗಾನಮಾಡುವ ಸ್ತುತಿಪಾಠಕ. प्रबोध: प्रबोधनं तत्र नियुक्त: "ठक्" (४-४-६९)। (वि०) 3. ಪ್ರಬೋಧವೇ (ಎಬ್ಬಿಸುವುದೇ) ಪ್ರಯೋಜನವಾಗಿರುವ. प्रबोध: प्रबोधनं प्रयोजनं यस्य "ठञ्" (५-१-१०९)। स्त्रियां **प्राबोधिकी ಪ್ರಾಬೋಧಿಕೀ.** "प्राबोधिकीभिरुपसेदुरितीव वाग्भि: स्वाधीनमर्त्यतनयं श्रुतिवन्दिनस्तम्" याद० १९-१।

**प्राभञ्जन ಪ್ರಾಭಂಜನ** (न०) ಸ್ವಾತೀನಕ್ಷತ್ರ. प्रभञ्जनो देवताऽस्य "अण्" (४-२-२४)।

**प्राभञ्जनि ಪ್ರಾಭಂಜನಿ** (पुं०) ವಾಯುವಿನ ಮಗನಾದ ಹನುಮಂತ. प्रभञ्जनस्य अपत्यम् "इञ्" (४-१-९५)। "आयूंषि त्वक्षु निर्भिद्य प्राभञ्जनिरमोचयत्" भट्टि० ९-६७।

**प्राभव ಪ್ರಾಭವ** (न०) 1. ಪ್ರಭುತ್ವ, ಆಡಳಿತ, ಆಜ್ಞೆ. प्रभोर्भाव: "अण्" (५-१-१३१)। 2. ಶ್ರೇಷ್ಠತೆ. ಉತ್ಕೃಷ್ಟವಾಗಿರುವಿಕೆ.

**प्राभवत्य ಪ್ರಾಭವತ್ಯ** (न०) 1. ವಿಭುತ್ವ. 2. ಅಧಿಕಾರ. प्रभवतो भाव: "ष्यञ्" (५-१-१२४)। "अनिच्छत: प्राभवत्याद्राज्ञा दण्ड्य: शतानि षट्" मनु० ८-४१२।

**प्राभाकर ಪ್ರಾಭಾಕರ** (पुं०) 1. ಪ್ರಭಾಕರಮತಾನುಯಾಯಿ. (न०) 2. ಪ್ರಭಾಕರನ ಸಂಬಂಧವಾದ. प्रभाकरमतं वेत्ति प्रभाकरसम्बन्धि वा "अण्" (४-२-५९, ४-३-१२०)।

**प्राभातिक ಪ್ರಾಭಾತಿಕ** (वि०) ಉಷಃಕಾಲದ ಸಂಬಂಧವಾದ, ಪ್ರಾತಃಕಾಲದಲ್ಲಿರುವ. प्रभाते भव: "ठक्"।

"प्रालेयलेशमिश्रे मरुति प्राभातिके च वाति जडे" पञ्चतं० १-३४१।

**प्राभृत ಪ್ರಾಭೃತ** (नं०) ಕಾಣಿಕೆ, ರಾಜನ ಸಂದರ್ಶನಕ್ಕೆ ಹೋದಾಗ ಕೊಡುವ ಉಪಹಾರ. प्राभ्रियते—प्र+आ+भृञ् (भरणे) "क्तः" (३-२-१०२)। "तं दत्तप्राभृतं दूतं स संमान्य व्यसर्जयत्" कथास०।

**प्राभृतक ಪ್ರಾಭೃತಕ** (नं०) ಕಾಣಿಕೆ, ರಾಜನಿಗೆ ಒಪ್ಪಿಸುವ ಉಪಹಾರ. प्राभृत स्वार्थे "कः"।

**प्रामाणिक ಪ್ರಾಮಾಣಿಕ** (वि०) 1. ಪ್ರಮಾಣದಿಂದ ಸಿದ್ಧವಾದ, ಯಥಾರ್ಥಾನುಭವಕ್ಕೆ ಕಾರಣವಾದ ಪ್ರತ್ಯಕ್ಷಾದಿ ಉಪಾಯಗಳಿಂದ ಸಿದ್ಧವಾದ. प्रमाणेन निर्वृत्तः "ठक्" (५-१-७९)। 2. ಶಾಸ್ತ್ರಸಿದ್ಧವಾದ. 3. ವಿಶ್ವಾಸಾರ್ಹವಾದ, ನಂಬಿಕೆಗೆ ಯೋಗ್ಯವಾದ. 4. ಹೇತುವಾದಿ, ನೈಯಾಯಿಕ.

**प्रामाण्य ಪ್ರಾಮಾಣ್ಯ** (नं०) 1. ಒಂದು ವಿಷಯವನ್ನು ಸಮರ್ಥಿಸುವುದಕ್ಕೆ ಬೇಕಾದ ಸಾಕ್ಷ್ಯ, –ರುಜುವಾತು. प्रमाणस्य भावः "ष्यञ्" (५-१-१२४)। 2. ವಿಶ್ವಾಸಕ್ಕೆ ಯೋಗ್ಯವಾಗಿರುವಿಕೆ, ನಂಬಲು ಅರ್ಹವಾಗಿರುವಿಕೆ.

**प्रामादिक ಪ್ರಾಮಾದಿಕ** (वि०) ಅಜಾಗರೂಕತೆಯಿಂದ ಉಂಟಾದ, ಎಚ್ಚರಿಕೆಯಿಲ್ಲದ ಕಾರಣದಿಂದ ಸಂಭವಿಸಿದ. प्रमादेन निर्वृत्तः "ठक्" (४-४-१९)।

**प्रामीत्य ಪ್ರಾಮಿತ್ಯ** (नं०) 1. ಋಣ, ಸಾಲ, 2. ಮರಣ.

**प्राय ಪ್ರಾಯ** (पुं०) 1. ಮರಣ ಹೊಂದಲು ಮಾಡುವ ಉಪವಾಸ. प्रकृष्टमयनम्— इण् (गतौ) "अच्" (३-३-५६)। "अहं वः प्रतिजानामि न गमिष्याम्यहं पुरीम्। इहैव प्रायमासिष्ये श्रेयो मरणमेव च" रामा०। 2. ಮರಣ. 3. ಹೆಚ್ಚು ಸಂಖ್ಯೆ, ಅಧಿಕಾಂಶ. 4. ಸಮೃದ್ಧಿ, ಹೇರಳ. 5. ಪಾಪ. 6. ತಪಸ್ಸು. (ಸಮಾಸದ ಕೊನೆಯಲ್ಲಿ) (अव्य०) 7. ಬಹುಮಟ್ಟಿಗೆ, ಅನೇಕವಾಗಿ. (वि०) 8. ಸಮೃದ್ಧವಾದ, ತುಂಬಿದ. "स्फुटितकमलामोदप्रायाः प्रवान्तु वनानिलाः" उ० रा० ३-२४। 9. ಬಹಳವಾದ, ಪ್ರಚುರವಾದ, ಅಧಿಕವಾದ. "मिलितवेत्रपाणिवर्षवरप्रायपुरुषपरिवारा" मालती० १। 10. ತುಲ್ಯವಾದ, ಸದೃಶವಾದ. "वर्षशतप्रायं दिनम्"। "पीयूषप्रायं प्रभाषणम्" ಇತ್ಯಾದಿ.

**प्रायत्य ಪ್ರಾಯತ್ಯ** (नं०) ಪರಿಶುದ್ಧನಾಗಿರುವಿಕೆ. प्रयतस्य भावः "ष्यञ्" (५-१-१२४)।

**प्रायशस् ಪ್ರಾಯಶಸ್** (अव्य०) ಬಹುಪಾಲು, ಬಹುಮಟ್ಟಿಗೆ, ಅನೇಕವಾಗಿ. "आशाबन्धः कुसुमसदृशं प्रायशो ह्यङ्गनानां सद्यः पाति प्रणयि हृदयं विप्रयोगे रुणद्धि" मेघ० १-१०।

**प्रायश्चित्त ಪ್ರಾಯಶ್ಚಿತ್ತ** (नं०) ಪ್ರಾಯಶ್ಚಿತ್ತ, ಪಾಪಪರಿಹಾರಕ್ಕಾಗಿ ಮಾಡುವ ಶಾಸ್ತ್ರವಿಹಿತವಾದ ಕರ್ಮ. प्रायस्य पापस्य चित्तं विशोधनम्। "प्रायः पापं समुद्दिष्टं चित्तं तस्य विशोधनम्" स्मृतिः। प्रायः तपः तस्य चित्तं निश्चयः। "प्रायो नाम तपः प्रोक्तं चित्तं निश्चय उच्यते। तपोनिश्चयसंयुक्तं प्रायश्चित्तमिति स्मृतम्"। निश्चयसंयुक्तं पापक्षयसाधनत्वेन निश्चितम् इति वा। ತಪಸ್ಸು ವೃದ್ಧಿಹೊಂದಿ ಪೀಡಿಸುತ್ತಿರುವ ಪಾಪವನ್ನು ಪರಿಹರಿಸುವುದರಿಂದ ಅದು ಪ್ರಾಯಶ್ಚಿತ್ತ, ಶಾರೀರವಾದ ಕರ್ಮದೋಷದಿಂದ ಮನುಷ್ಯನು ಸ್ಥಾವರತ್ವವನ್ನೂ ವಾಚಿಕದೋಷದಿಂದ ಪಕ್ಷಿ ಮತ್ತು ಮೃಗ ಜನ್ಮಗಳನ್ನೂ ಮಾನಸದೋಷದಿಂದ ಅಂತ್ಯಜತ್ವವನ್ನೂ ಹೊಂದುತ್ತಾನೆ. "शरीरजैः कर्मदोषैः याति स्थावरतां नरः। वाचिकैः पक्षिमृगतां मानसैरन्त्यजातिताम्" मनु० १२-९। ಈ ಮೂರು ವಿಧವಾದ ದೋಷದ ಪರಿಹಾರಕ್ಕಾಗಿ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. "अकुर्वन् विहितं कर्म निषिद्धं तु समाचरन्। प्रसजंश्चेन्द्रियार्थेषु प्रायश्चित्तीयते नरः॥ काम्यानां सफलार्थं च दोषघातार्थमेव च। अतः काम्यं नैमित्तिकञ्च प्रायश्चित्तमिति स्थितिः"॥

**प्रायश्चित्ति ಪ್ರಾಯಶ್ಚಿತ್ತಿ** (स्त्री०) ಪ್ರಾಯಶ್ಚಿತ್ತ.

**प्रायस् ಪ್ರಾಯಸ್** (अव्य०) 1. ಬಹುಮಟ್ಟಿಗೆ, ಅನೇಕವಾಗಿ. प्र+इण् (गतौ) "असुन्" (उ० ४-१८९)। "स पौरकन्याकरविप्रकीर्णान् प्रायः प्रतीच्छन्नुपचारलाजान्" याद० १३-६३। 2. ಉತ್ಪ್ರೇಕ್ಷಾವ್ಯಂಜಕ ಶಬ್ದ. "मन्ये शङ्के ध्रुवं प्रायो नूनमित्येवमादिभिः। उत्प्रेक्षा व्यज्यते शब्दैरिवशब्दोऽपि तादृशः"। "मालिन्ययोगमपनीय करावमर्शैः प्रायो यथार्हमनुलिम्पति कुङ्कुमेन" याद० १९-२७। 3. ಸಾಮಾನ್ಯವಾಗಿ. "प्रायः प्रत्ययमादत्ते स्वगुणेषूत्तमादरः" कुमा० ६-२०।

**प्रायिक ಪ್ರಾಯಿಕ** (वि०) ಬಹುಮಟ್ಟಿಗೆ ಉಂಟಾಗುವ, ಅನೇಕವಾಗಿ ಸಂಭವಿಸುವ, ಎಲ್ಲಾ ವಿಷಯಗಳಲ್ಲೂ ಪ್ರವರ್ತಿಸದಿರುವ, ವಿಕಲ್ಪವಾದ. प्रायेण भवम् "ठक्" (४-३-३९)।

**प्रायेण ಪ್ರಾಯೇಣ** (अव्य०) 1. ಹೆಚ್ಚಾಗಿ, ಬಹುಪಾಲು, ಸಾಮಾನ್ಯವಾಗಿ. "प्रायेण सामग्र्यविधौ गुणानां पराङ्मुखी

विश्वसृजः प्रवृत्तिः'' कुमा० ३-२८। 2. ಬಹುಶಃ, ಬಹುಮಟ್ಟಿಗೆ, ಅನೇಕವಾಗಿ. "प्रायेण नीचानपि मेदिनीभृतो जनः समेनैव पथाधिरोहति" माघ० १२-४६। 3. ಉತ್ಪ್ರೇಕ್ಷಾವ್ಯಂಜಕ ಶಬ್ದ. "प्रदक्षिणावृत्तशिखाकलापः प्रायेण नीराजनमाततान" याद० १३-८५।

**प्रायोज्य ಪ್ರಾಯೋಜ್ಯ** (वि०) ಉಪಯೋಗಿಸಲ್ಪಡುವ, ಉಪಯೋಗಾರ್ಹವಾದ. प्र+आ+युजिर् (योगे)+णिच् कर्म० "यत्" (३-१-९७)। "प्रायोज्यं न विभज्येत"। ಉಪಯೋಗಾರ್ಹವಾದ ಪುಸ್ತಕಾದಿಗಳನ್ನು ಭಾಗಮಾಡಿ ಕೊಳ್ಳಕೂಡದು.

**प्रायोपविष्ट ಪ್ರಾಯೋಪವಿಷ್ಟ** (वि०) 1. ನಿರಶನವ್ರತವನ್ನು ಕೈಗೊಂಡು ಕುಳಿತಿರುವ, ಉದ್ದೇಶಪಟ್ಟ ಕಾರ್ಯದ ಸಫಲತೆಗಾಗಿ ಉಪವಾಸಮಾಡಿ ದೇವರ ಮುಂದೆ ಕುಳಿತಿರುವ. प्रायेण मरणार्थमनशनेन उपविष्टः। 2. ಆಮರಣ ಉಪವಾಸವನ್ನು ಕೈಗೊಂಡು ಕುಳಿತಿರುವ. "प्रायोपविष्टे नृपतौ मणलूरेश्वरे तदा" भा० आश्व० ७१-१।

**प्रायोपवेश ಪ್ರಾಯೋಪವೇಶ** (पुं०) 1. ಒಂದು ಕಾರ್ಯದ ಸಾಧನೆಗಾಗಿ ದೇವರ ಮುಂದೆ ಉಪವಾಸಮಾಡಿ ಕೂಡುವುದು. प्रायेण मरणपर्यन्तमनशनेन उपवेशः। "प्रायोपवेशमस्माकं मरणं च जटायुषः" रामा०। 2. ಮರಣಪರ್ಯಂತ ನಿರಶನ ವ್ರತವನ್ನು ಕೈಗೊಂಡು ಕುಳಿತಿರುವುದು. "प्रायोपवेशो राजर्षेः विप्रशापात् परीक्षितः" भाग०। भावे "ल्युट्" (३-३-११५)। **–उपवेशनम् –ಉಪವೇಶನಮ್.**

**प्रायौगिक ಪ್ರಾಯೌಗಿಕ** (वि०) ಪ್ರಯೋಗಕ್ಕೆ ಅರ್ಹವಾದ. प्रयोगमर्हति – प्रयोग "ठक्" (५-१-६४)। उभयपदवृद्धिः (७-३-२०)।

**प्रारब्ध ಪ್ರಾರಬ್ಧ** (वि०) 1. ಪ್ರಾರಂಭಿಸಲ್ಪಟ್ಟ, ಉಪಕ್ರಮಿಸಲ್ಪಟ್ಟ. प्र + आ + रभ (राभस्ये) "क्तः" (३-२-१०२)। "अथाभिषेकं रघुवंशकेतोः प्रारब्धमानन्दजलैर्जनन्योः। निर्वर्तयामासुरमात्यवृद्धास्तीर्थाहृतैः काञ्चनकुम्भतोयैः" रघु० १४-७। "प्रारब्धमुत्तमगुणा न परित्यजन्ति" भर्तृ० १-७२। 2. ಪ್ರಾರಬ್ಧ ಕರ್ಮ, ಪುನರ್ಜನ್ಮಕ್ಕೆ ಕಾರಣವಾದ ಜನ್ಮಾಂತರದ ಕರ್ಮ. ಅನುಭವಿಸಲು ಪ್ರಾರಂಭವಾದ ಕರ್ಮವು ಪ್ರಾರಬ್ಧ ಕರ್ಮ. ಕರ್ಮವು ಪ್ರಾರಬ್ಧ ಮತ್ತು ಸಂಚಿತಗಳೆಂದು ಎರಡು ವಿಧ. ಪ್ರಾರಬ್ಧಕರ್ಮವನ್ನು ಅದು ಕೊನೆಗೊಳ್ಳುವವರೆಗೂ ಅನುಭವಿಸಿಯೇ ತೀರಬೇಕು, ಸಂಚಿತ (ಕೂಡಿಟ್ಟ) ಕರ್ಮವು ಪ್ರಾಯಶ್ಚಿತ್ತ, ಜ್ಞಾನ ಮತ್ತು ಪುಣ್ಯಕಾರ್ಯಗಳಿಂದ ಕ್ಷಯ ಹೊಂದುವುದು. "अवश्यमेव भोक्तव्यं कृतं कर्म शुभाशुभम्। नाभुक्तं क्षीयते कर्म कल्पकोटिशतैरपि"। "ज्ञानाग्निः सर्वकर्माणि भस्मसात् कुरुतेऽर्जुन" गीता ४-३७। (न०) 3. ಪ್ರಾರಂಭ, ಉಪಕ್ರಮ. भावे "क्तः" (३-३-११४)।

**प्रारब्धवत् ಪ್ರಾರಬ್ಧವತ್** (वि०) ಪ್ರಾರಂಭಿಸಿದ, ಉಪಕ್ರಮಿಸಿದ. प्र+आ+रभ (राभस्ये) "क्तवतुः"।

**प्रारब्धि ಪ್ರಾರಬ್ಧಿ** (स्त्री०) 1. ಪ್ರಾರಂಭ, ಉಪಕ್ರಮ. प्र+आ+रभ (राभस्ये) भावे "क्तिन्" (३-३-९४)। 2. ಆನೆಯನ್ನು ಕಟ್ಟುವ ಹಗ್ಗ. प्र + आ + रभ करं० "क्तिन्" (३-३-९४)।

**प्रारब्धव्य ಪ್ರಾರಬ್ಧವ್ಯ** (वि०) 1. ಪ್ರಾರಂಭಿಸಲ್ಪಡುವ, ಉಪಕ್ರಮಿಸಲ್ಪಡುವ. प्र+आ+रभ (राभस्ये) "तव्यः" (३-१-९६)। 2. ಪ್ರಾರಂಭಿಸಬೇಕಾದ, ಉಪಕ್ರಮಿಸಬೇಕಾದ, 3. ಉಪಕ್ರಮಿಸಲು ಅರ್ಹವಾದ. प्र+आ+रभ "अनीयर्" (३-१-९६)। **–आरम्भणीयः –ಆರಂಭಣೀಯಃ.**

**प्रारभमाण ಪ್ರಾರಭಮಾಣ** (वि०) ಪ್ರಾರಂಭಿಸುತ್ತಿರುವ, ಉಪಕ್ರಮ ಮಾಡುತ್ತಿರುವ. प्र+आ+रभ (राभस्ये) "शानच्" (३-२-१२४)।

**प्रारभ्य ಪ್ರಾರಭ್ಯ** (वि०) 1. ಉಪಕ್ರಮಿಸಲ್ಪಡುವ, ಪ್ರಾರಂಭಿಸಲ್ಪಡುವ. प्र+आ+रभ (राभस्ये) "ण्यत्" (३-१-१२४)। (अव्य०) 2. ಪ್ರಾರಂಭಮಾಡಿ, ಉಪಕ್ರಮಿಸಿ.

**प्रारम्भ ಪ್ರಾರಂಭ** (पुं०) 1. ಉಪಕ್ರಮ, ಮೊದಲು ಮಾಡುವುದು, ಪ್ರಾರಂಭಿಸುವುದು. प्र + आ + रभ (राभस्ये) भावे "घञ्" (३-३-१८)। "प्रारम्भेऽपि त्रियामा तरुणयति निजं नीलिमानं वनेषु" मालती० ५-६। 2. ಯೋಗಿ. प्रकृष्टः आरम्भो योगो यस्य। "दिवसं शारदमिव प्रारम्भसुखदर्शनम्" रघु० १०-९। (वि०) 3. ಪ್ರಾರಂಭಿಸಲ್ಪಡುವ, ಉಪಕ್ರಮಿಸಲ್ಪಡುವ. (ಸಾಮಾನ್ಯವಾಯ ಪ್ರಯೋಗ). प्र+आ+रभ कर्म० "घञ्" (३-३-१९)। "फलानुमेयाः प्रारम्भाः संस्काराः प्राक्तना इव" रघु० १-२०। भावे "ल्युट्" (३-३-११५)। **–आरम्भणम् –ಆರಂಭಣಮ್.**

**प्रारम्भणीय ಪ್ರಾರಂಭಣೀಯ** (वि०) 1. ಪ್ರಾರಂಭಿಸಲ್ಪಡುವ, ಉಪಕ್ರಮಿಸಲ್ಪಡುವ. प्र+आ+रभ (राभस्ये)

कर्म० "अनीयर्" (३-१-९६)। 2. ಪ್ರಾರಂಭಿಸಬೇಕಾದ. 3. ಪ್ರಾರಂಭಿಸಲು ಅರ್ಹವಾದ. 4. ಪ್ರಾರಂಭವೇ ಪ್ರಯೋಜನವಾಗಿರುವ. प्रारम्भणं प्रयोजनमस्य "छः" (५-१-१११)।

**प्रारोह ಪ್ರಾರೋಹ** (वि०) ಬೆಳೆಯುವ ಸ್ವಭಾವದ (ಚಿಗುರು). प्ररोहः शीलमस्य "णः" (४-४-६२)।

**प्रार्ण ಪ್ರಾರ್ಣ** (न०) ಮೂಲಭೂತವಾದ ಋಣ, ಸಾಲ.

**प्रार्थना ಪ್ರಾರ್ಥನಾ** (स्त्री०) 1. ಯಾಚನೆ, ಬೇಡಿಕೆ, ಕೋರಿಕೆ. प्र+अर्थ (उपयाच्ञायाम्)+ णिच् "युच्" (३-३-१०७)। "ये वर्तन्ते धनपतिपुरः प्रार्थनादुःखभाजो ये चाल्पत्वं दधति विषयाक्षेपपर्याप्तिबुद्धेः" भर्तृ० ३-२८। 2. ಅಪೇಕ್ಷೆ, ಅಭಿಲಾಷೆ. "अथवा लब्धावकाशा मे प्रार्थना" शाकु० १। "उत्सर्पिणी खलु महतां प्रार्थना" शाकु०। भावे "ल्युट्" (३-३-११५)। **प्रार्थनम् ಪ್ರಾರ್ಥನಮ್.** "युगक्षयकृता धर्माः प्रार्थनानि विकुर्वते" भा० वन० ५१-३८।

**प्रार्थनासिद्धि ಪ್ರಾರ್ಥನಾಸಿದ್ಧಿ** (स्त्री०) ಇಷ್ಟಸಿದ್ಧಿ, ಮನೋರಥವು ಕೈಗೂಡುವುದು. प्रार्थनायाः सिद्धिः। "पवनस्यानुकूलत्वात्प्रार्थनासिद्धिशंसिनः" रघु० १-४२।

**प्रार्थनीय ಪ್ರಾರ್ಥನೀಯ** (वि०) 1. ಪ್ರಾರ್ಥಿಸಲ್ಪಡುವ, ಬೇಡಲ್ಪಡುವ, ಯಾಚಿಸಲ್ಪಡುವ. प्र+अर्थ (उपयाच्ञायाम्) + णिच् "अनीयर्" (३-१-९६)। 2. ಪ್ರಾರ್ಥಿಸಬೇಕಾದ. 3. ಪ್ರಾರ್ಥಿಸಲು ಅರ್ಹವಾದ. "तव्यः" (३-१-९६)। **-यितव्यः -ಯಿತವ್ಯಃ.** "न दृश्यते प्रार्थयितव्य एव ते" कुमा० ५-४६।

**प्रार्थयमान ಪ್ರಾರ್ಥಯಮಾನ** (वि०) ಬೇಡುತ್ತಿರುವ, ಯಾಚಿಸುತ್ತಿರುವ. प्र + अर्थ (उपयाच्ञायाम्) + णिच् "शानच्" (३-२-१२४)।

**प्रार्थयितृ ಪ್ರಾರ್ಥಯಿತೃ** (वि०) ಬೇಡುವವನು, ಯಾಚಿಸುವವನು. प्र + अर्थ (उपयाच्ञायाम्) + णिच् "तृच्" (३-१-१३३)। स्त्रियां "ङीप्" (४-१-५)। **-यित्री -ಯಿತ್ರೀ.**

**प्रार्थित ಪ್ರಾರ್ಥಿತ** (वि०) 1. ಪ್ರಾರ್ಥಿಸಲ್ಪಟ್ಟ, ಯಾಚಿಸಲ್ಪಟ್ಟ. प्र + अर्थ (उपयाच्ञायाम्) + णिच् "क्तः" (३-२-१०२)। 2. ಅಪೇಕ್ಷಿಸಲ್ಪಟ್ಟ. "भविष्यति प्रार्थितदुर्लभः कथम्" कुमा० ५-४६। 3. ಕೋರಲ್ಪಟ್ಟ. "अङ्गव्ययप्रार्थितकार्यसिद्धिः स्थाण्वाश्रमं हैमवतं जगाम" कुमा० ३-२३। 4. ಶತ್ರುವಿನಿಂದ ತಡೆಯಲ್ಪಟ್ಟ. 5. ಕೊಲ್ಲಲ್ಪಟ್ಟ.

**प्रार्थितवत् ಪ್ರಾರ್ಥಿತವತ್** (वि०) 1. ಬೇಡಿದವನು, ಯಾಚಿಸಿದವನು. 2. ಅಪೇಕ್ಷಿಸಿದವನು. 3. ಕೋರಿದವನು. 4. ಶತ್ರುವನ್ನು ತಡೆದವನು. 5. ಕೊಂದವನು. प्र + अर्थ (उपयाच्ञायाम्) + णिच् "क्तवतुः" (३-२-१०२)।

**प्रार्थिन् ಪ್ರಾರ್ಥಿನ್** (वि०) 1. ಬೇಡುವವನು, ಯಾಚಿಸುವವನು. 2. ಅಪೇಕ್ಷಿಸುವವನು. प्र+अर्थ (उपयाच्ञायाम्) णिच् "णिनिः" (३-१-१३४)। "मन्दः कवियशःप्रार्थी गमिष्याम्यपहास्यताम्" रघु० १-३। 3. ಮೇಲೆ ಬೀಳುವವನು, ದಾಳಿಮಾಡುವವನು.

**प्रार्थ्य ಪ್ರಾರ್ಥ್ಯ** (वि०) 1. ಬೇಡಲ್ಪಡುವ. 2. ಕೋರಲ್ಪಡುವ. 3. ಅಪೇಕ್ಷಿಸಲ್ಪಡುವ. 4. ದಾಳಿಮಾಡಲ್ಪಡುವ. प्र+अर्थ (उपयाच्ञायाम्) + णिच् "यत्" (३-१-९७)।

**प्रालम्ब ಪ್ರಾಲಂಬ** (पुं०) 1. ಮುತ್ತಿನ ಸರ. "प्रालम्बद्विगुणितचामरप्रहासः" वेणी० २-२८। (न०) 2. ಕಂಠದಿಂದ ಎದೆಯ ಮೇಲೆ ಜೋಲಾಡುವ ಪುಷ್ಪಮಾಲೆ. प्रालम्बते — प्र+आ + लबि (अवस्रंसने) "अच्" (३-१-१३४)। "विस्रस्तमंसादपरो विलासी रत्नानुविद्धाङ्गदकोटिलग्नम्। प्रालम्बमुत्कृष्य यथावकाशं निनाय साचीकृतचारुवक्त्रः" रघु० ६-१४। (वि०) 3. ಜೋಲಾಡುತ್ತಿರುವ.

**प्रालम्बिका ಪ್ರಾಲಂಬಿಕಾ** (स्त्री०) ಚಿನ್ನದ ಸರ, ಚಿನ್ನದ ಕಂಠಾಭರಣ. प्रालम्बते—प्र+आ + लबि (अवस्रंसने) "ण्वुल्" (३-१-१३३)।

**प्रालेय ಪ್ರಾಲೇಯ** (न०) ಹಿಮ, ಮಂಜು. प्रलीयन्ते पदार्था अत्र प्रलयो हिमाद्रिः, तत आगतम् "अण्" (४-३-७४)। इयादेशः (७-३-२)। "प्रालेयशीतमचलेश्वरमीश्वरोऽपि सान्द्रेभचर्मवसनावरणोऽधिशेते" माघ० ४-६४।

**प्रालेयरश्मि ಪ್ರಾಲೇಯರಶ್ಮಿ** (पुं०) 1. ಚಂದ್ರ. 2. ಕರ್ಪೂರ.

**प्रालेयशैल ಪ್ರಾಲೇಯಶೈಲ** (पुं०) ಹಿಮಾಚಲ, ಹಿಮವತ್ಪರ್ವತ. "प्रालेयशैलात् प्रथितानुभावा प्रवर्तते वागिव वश्यवाचः" याद० १८-४७।

**प्रालेयांशु ಪ್ರಾಲೇಯಾಂಶು** (पुं०) 1. ಚಂದ್ರ. प्रालेयवत् शीता अंशवोऽस्य। "प्रालेयांशोः सपदि रुचयः शान्तमानान्तरायाः" माघ० ९-८७। 2. ಕರ್ಪೂರ.

**प्रालेयाद्रि ಪ್ರಾಲೇಯಾದ್ರಿ** (पुं०) ಹಿಮಾಚಲ, ಹಿಮವತ್ಪರ್ವತ. "प्रालेयाद्रेरुपतटमतिक्रम्य तांस्तान् विशेषान्" मेघ० १-५७।

**प्रावट ಪ್ರಾವಟ** (पुं०) ಯವ, ಬಾರ್ಲಿ.

**प्रावण ಪ್ರಾವಣ** (नं०) ಖನಿತ್ರ, ಗುದ್ದಲಿ, ನೆಲವನ್ನು ಅಗೆಯುವ ಒಂದು ಸಾಧನ.

**प्रावर ಪ್ರಾವರ** (पुं०) ಊರಿನ ಸುತ್ತಲೂ ಹಾಕಿರುವ ಬೇಲಿ. प्र + आ + वृञ् (वरणे) कर० "अप्" (३-३-५८)।

**प्रावरण ಪ್ರಾವರಣ** (नं०) ಉತ್ತರೀಯ, ಹೊದೆಯುವ ವಸ್ತ್ರ. प्रावृणोत्यनेन शरीरम्—प्र+आ+वृञ् (वरणे) कर० "ल्युट्" (३-३-११७)।

**प्रावार ಪ್ರಾವಾರ** (पुं०) ಉತ್ತರೀಯ, ಹೊದೆಯುವ ವಸ್ತ್ರ. प्राव्रियते शरीरमनेन — प्र + आ + वृञ् (वरणे) "घञ्" (३-३-५४)। "आच्छादयसि प्रावारानश्नासि पिशितौदनम्" भा० सभा०।

**प्रावारक ಪ್ರಾವಾರಕ** (पुं०) ಹೊದೆಯುವ ವಸ್ತ್ರ, ಉತ್ತರೀಯ.

**प्रावास ಪ್ರಾವಾಸ** (वि०) 1. ಪ್ರವಾಸಕಾಲದಲ್ಲಿ ಕೊಡಲ್ಪಡುವ. 2. ಪ್ರವಾಸಕಾಲದಲ್ಲಿ ಮಾಡಲ್ಪಡುವ. प्रवासे दीयते कार्यं वा "अण्" (५-१-९७)।

**प्रावासिक ಪ್ರಾವಾಸಿಕ** (वि०) 1. ಪ್ರಯಾಣಕಾಲದಲ್ಲಿ ಸಾಧುವಾಗಿರುವ, ಪ್ರವಾಸಕ್ಕೆ ಯೋಗ್ಯವಾಗಿರುವ. प्रवासाय साधुः "ठञ्" (४-४-१०३)। 2. ಪ್ರವಾಸಕ್ಕೆ ಉಪಯುಕ್ತವಾದ, ಪ್ರವಾಸಕ್ಕೆ ಅನುಕೂಲವಾಗಿರುವ. प्रवासाय प्रभवति "ठञ्" (५-१-१०१)।

**प्रावीण्य ಪ್ರಾವೀಣ್ಯ** (नं०) ಜಾಣತನ, ನಿಪುಣತೆ, ನುರಿತಿರುವಿಕೆ, ಕುಶಲತೆ, ಚೆನ್ನಾಗಿ ತಿಳಿದಿರುವಿಕೆ. प्रवीणस्य भावः "ष्यञ्" (५-१-१२४)। "आविष्कृतं कथाप्रावीण्यं वत्सेन" उ० रा० ४।

**प्रावृट्(ष्) ಪ್ರಾವೃಟ್(ಷ್)** (स्त्री०) ವರ್ಷಾಕಾಲ, ವರ್ಷಋತು, ಮಳೆಗಾಲ. प्रावर्षत्यत्र—वृषु (सेचने) अधि० "क्विप्" (वा० ३-३-१०८)। "पश्चात् हिमे प्रावृषि खञ्जरीटान् क्षिप्नुर्यमादाय विधिः क्वचित्तान्" नैष० १०-१२०।

**प्रावृट्काल ಪ್ರಾವೃಟ್ ಕಾಲ** (पुं०) ವರ್ಷಾಕಾಲ, ಮಳೆಗಾಲ.

**प्रावृडत्यय ಪ್ರಾವೃಡತ್ಯಯ** (पुं०) 1. ಶರದೃತು. प्रावृषः अत्ययो नाशो यत्र। 2. ವರ್ಷಋತುವು ಕೊನೆಗೊಳ್ಳುವುದು. प्रावृषः अत्ययः।

**प्रावृत ಪ್ರಾವೃತ** (नं०) 1. ಅವಗುಂಠನ, ಮುಸುಕು, ತೋಳಿಲ್ಲದ ಮೇಲಂಗಿ. प्र+आ+वृञ् (वरणे) कर्म० "क्तः" (३-२-१०२)। (वि०) 2. ಹೊದಿಸಲ್ಪಟ್ಟ, ಸುತ್ತಲೂ ಆವರಿಸಲ್ಪಟ್ಟ.

**प्रावृति ಪ್ರಾವೃತಿ** (स्त्री०) 1. ಹೊದಿಕೆ, ಆವರಣ, ಮುಸುಕು, ಅವಗುಂಠನ. 2. ಊರಿನ ಸುತ್ತಲೂ ಹಾಕಿರುವ ಬೇಲಿ. प्रावृणोति प्रकर्षेणाच्छादयति दृष्टिमार्गम्—प्र+आ+वृञ् (वरणे) "क्तिन्" (३-३-९४)। 3. ಮಲ, ಅಶುಚಿ, ಆತ್ಮನ ಸ್ವರೂಪವನ್ನು ಮರೆಮಾಡುವ ಮಾಯೆಯ ಕಾರ್ಯ. प्रावृणोति आच्छादयति आत्मनो दर्शनक्रिये।

**प्रावृत्तिक ಪ್ರಾವೃತ್ತಿಕ** (पुं०) ಸಮಾಚಾರವನ್ನು ಒಯ್ಯುವ ದೂತ.

**प्रावृषा ಪ್ರಾವೃಷಾ** (स्त्री०) ವರ್ಷಾಕಾಲ, ವರ್ಷಋತು. प्रावृष् हलन्तत्वात् "टाप्"। "आपं चैव हलन्तानाम्"।

**प्रावृषायणी ಪ್ರಾವೃಷಾಯಣೀ** (स्त्री०) ನಸುಗುನ್ನಿಗಿಡ. प्रावृषामयते—कर्त० "ल्युट्" (३-३-११३)।

**प्रावृषिक ಪ್ರಾವೃಷಿಕ** (पुं०) 1. ಮಯೂರ, ನವಿಲು. प्रावृषि वर्षाकाले कायति—कै (शब्दे) "कः" (३-२-३)। (वि०) 2. ವರ್ಷಾಕಾಲದಲ್ಲಿ ಉಂಟಾದ, ವರ್ಷಋತುವಿನಲ್ಲಿ ಉಂಟಾದ. प्रावृषि भवः "ठप्" (४-३-२६)। सप्तम्या अलुक् (६-३-१५)।

**प्रावृषिज ಪ್ರಾವೃಷಿಜ** (पुं०) 1. ಬಿರುಗಾಳಿ, ಚಂಡಮಾರುತ. (वि०) 2. ವರ್ಷಋತುವಿನಲ್ಲಿ ಉಂಟಾದ, ವರ್ಷಾಕಾಲದಲ್ಲಿ ಹುಟ್ಟಿದ. पावृषि जातः— जनी (प्रादुर्भावे) "डः" (३-२-९७)। सप्तम्या अलुक् (६-३-१५)। "इति पूर इवोदकस्य यः सरितां प्रावृषिजस्तटद्रुमैः" माघ० १६-७५।

**प्रावृषेण्य ಪ್ರಾವೃಷೇಣ್ಯ** (पुं०) 1. ಕುಟಜವೃಕ್ಷ, ಬೆಟ್ಟಮಲ್ಲಿಗೆ ಗಿಡ. 2. ಈಚಲುಮರ, ಕದಂಬವೃಕ್ಷ. प्रावृषि भवः "एण्यः" (४-३-१७)। (नं०) 3. ಪ್ರಾಚುರ್ಯ, ಪುಷ್ಕಲವಾಗಿರುವಿಕೆ, ಹೇರಳವಾಗಿರುವಿಕೆ. (वि०) 4. ವರ್ಷಾಕಾಲದಲ್ಲಿರುವ, ವರ್ಷಋತುವಿನಲ್ಲಿ ಉಂಟಾದ. "प्रावृषेण्यं पयोवाहं विद्युदैरावताविव" रघु० १-३६। 5. ವರ್ಷಾಕಾಲದಲ್ಲಿ ಕೊಡಲ್ಪಡುವ. 6. ವರ್ಷಾಕಾಲದಲ್ಲಿ

ಮಾಡಲ್ಪಡುವ. प्रावृषि दीयते कार्यं वा "एण्यः" (५-१-९६)। (स्त्री०) -ण्या -ಣ್ಯಾ. 7. ನಸುಗುನ್ನಿ ಗಿಡ. 8. ಕೊಮ್ಮೆಗಿಡ.

**प्रावृष्य ಪ್ರಾವೃಷ್ಯ** (पुं०) 1. ಕುಟಜವೃಕ್ಷ, ಬೆಟ್ಟಮಲ್ಲಿಗೆ ಗಿಡ. 2. ಕದಂಬವೃಕ್ಷ, ಈಚಲುಮರ. प्रावृषि भवः। 3. ಹುಳಿಬೇಲ. (न०) 4. ವೈಡೂರ್ಯ. (वि०) 5. ವರ್ಷಾಕಾಲದಲ್ಲಿ ಉಂಟಾದ.

**प्रावेशन ಪ್ರಾವೇಶನ** (न०) 1. ಶಿಲ್ಪಶಾಲೆ, ಕೈಗಾರಿಕೆಯ ಮನೆ. प्राविशन्त्यत्र—प्र+आ+विश (प्रवेशने) अधि० "ल्युट्" (३-३-११७)। (वि०) 2. ಪ್ರವೇಶಸಮಯದಲ್ಲಿ ಕೊಡಲ್ಪಡುವ. 3. ಪ್ರವೇಶಸಮಯದಲ್ಲಿ ಮಾಡಲ್ಪಡುವ. प्रवेशने दीयते कार्यं वा "अण्" (५-१-९७)।

**प्रावेशिक ಪ್ರಾವೇಶಿಕ** (वि०) ಪ್ರವೇಶಕ್ಕೆ ಸಂಬಂಧಿಸಿದ, ಪ್ರವೇಶಕ್ಕೆ ಅನುಕೂಲವಾದ.

**प्राव्रज्य ಪ್ರಾವ್ರಜ್ಯ** (न०) 1. ಸಂನ್ಯಾಸ ಧರ್ಮ, ಸಂನ್ಯಾಸ ಜೀವನ. प्रव्रज्यायाः भावः "ष्यञ्" (५-१-१२४)। 2. ಪರ್ಯಟನ, ಗ್ರಾಮೈಕರಾತ್ರಸಂಚಾರ.

**प्राश ಪ್ರಾಶ** (पुं०) 1. ತಿನ್ನುವುದು, ಭಕ್ಷಿಸುವುದು, ಭೋಜನ ಮಾಡುವುದು. प्र+अश (भोजने) "घञ्" (३-३-१८)। भावे "ल्युट्" (३-३-११५)। -अशनम् -ಅಶನಮ್. 2. ಆಹಾರ.

**प्राशन ಪ್ರಾಶನ** (न०) 1. ತಿನ್ನುವುದು, ಊಟಮಾಡುವುದು. प्र + अश (भोजने) "ल्युट्" (३-३-११५)। 2. ಆಹಾರ.

**प्राशनीय ಪ್ರಾಶನೀಯ** (वि०) 1. ತಿನ್ನಲ್ಪಡುವ, ಭಕ್ಷಿಸಲ್ಪಡುವ. 2. ತಿನ್ನಬೇಕಾದ, ಭುಜಿಸಬೇಕಾದ. 3. ತಿನ್ನಲು ಯೋಗ್ಯವಾದ, ಊಟಮಾಡಲು ಅರ್ಹವಾದ. प्र+अश (भोजने) "अनीयर्" (३-१-९६)। "तव्यः"। -अशितव्यम् -ಅಶಿತವ್ಯಮ್.

**प्राशस्त्य ಪ್ರಾಶಸ್ತ್ಯ** (न०) ಸರ್ವೋತ್ಕೃಷ್ಟವಾಗಿರುವಿಕೆ, ಶ್ರೇಷ್ಠವಾಗಿರುವಿಕೆ, ಎಲ್ಲಕ್ಕೂ ಮೇಲಾಗಿರುವಿಕೆ. प्रशस्तस्य भावः "ष्यञ्" (५-१-१२४)।

**प्राशित ಪ್ರಾಶಿತ** (वि०) 1. ತಿನ್ನಲ್ಪಟ್ಟ, ಭಕ್ಷಿಸಲ್ಪಟ್ಟ. प्र + अश (भोजने) "क्तः" (३-२-१०२)। (न०) 2. ಊಟಮಾಡುವುದು, ಭಕ್ಷಿಸುವುದು. भावे "क्तः" (३-३-११४)।

**प्राशितवत् ಪ್ರಾಶಿತವತ್** (वि०) ಊಟಮಾಡಿದ, ಭೋಜನಮಾಡಿದ. प्र + अश (भोजने) "क्तवतुः" (३-२-१०२)।

**प्राश्नत् ಪ್ರಾಶ್ನತ್** (वि०) ತಿನ್ನುತ್ತಿರುವ, ಊಟಮಾಡುತ್ತಿರುವ. प्र + अश (भोजने) "शतृ" (३-२-१२४)। स्त्रियां "ङीप्" (४-१-६)। -अश्नती -ಅಶ್ನತೀ.

**प्राश्निक ಪ್ರಾಶ್ನಿಕ** (वि०) 1. ಪ್ರಶ್ನೆಮಾಡುವವನು, ಪರೀಕ್ಷಾರ್ಥವಾಗಿ ಕೇಳುವವನು. 2. ನ್ಯಾಯದ ತೀರ್ಪುಗಾರ, ಪ್ರಶ್ನಿಸಿ ವ್ಯವಹಾರವನ್ನು ತೀರ್ಮಾನ ಮಾಡುವವನು. "तदत्र भगवत्या प्राश्निकपदमध्यासितव्यम्" माल० १।

**प्राश्य ಪ್ರಾಶ್ಯ** (वि०) ಊಟಮಾಡಲ್ಪಡುವ, ತಿನ್ನಲ್ಪಡುವ, ಭಕ್ಷಿಸಲ್ಪಡುವ. प्र+अश (भोजने) "ण्यत्" (३-१-१२४)।

**प्रास ಪ್ರಾಸ** (पुं०) 1. ಎಸೆಯುವುದು. प्र+असु (क्षेपणे) "घञ्" (३-३-१८)। 2. ಕುಂತಾಯುಧ. प्रास्यते—प्र+असु (क्षेपणे) कर्म० "घञ्" (३-३-१९)। "गदाभिरसिभिः प्रासैर्बाणैश्चानतपर्वभिः" भा० भीष्म० ७०-२३। 3. ಅನುಗುಣವಾದ ಮತ್ತು ಪ್ರಕೃಷ್ಟವಾದ ವರ್ಣಗಳ ಅಥವಾ ಪದಗಳ ನ್ಯಾಸ, ಸಮಾನವರ್ಣಗಳ ಅಥವಾ ಸಮಾನವಾದ ಶಬ್ದಗಳ ನ್ಯಾಸ. प्रकृष्टः आसः न्यासः। ರಸಾದಿಗಳಿಗೆ ಅನುಕೂಲವಾದ ಸಜಾತೀಯವರ್ಣಗಳ ಆವೃತ್ತಿಯು ಪ್ರಾಸವೆನಿಸುವುದು. ಈ ಪ್ರಾಸವು (ಸಜಾತೀಯವರ್ಣಗಳ ಆವೃತ್ತಿಯು) ರಸಾದಿಗಳಿಗೆ ಅನುಕೂಲವಾಗಿರುವುದರಿಂದ ಇದಕ್ಕೆ "अनुप्रासः" ಎಂದು ಹೆಸರು. "अनुप्रासः शब्दसाम्यं वैषम्येऽपि स्वरस्य यत्" सा० द० १०-३। ಈ ಅನುಪ್ರಾಸವು (1) छेकानुप्रासः (2) वृत्यनुप्रासः (3) श्रुत्यनुप्रासः (4) अन्त्यानुप्रासः ಮತ್ತು (5) लाटानुप्रासः ಎಂದು ಐದು ವಿಧ. [ವಿವರಕ್ಕೆ ಆಯಾ ಪದಗಳಲ್ಲಿ ನೋಡಿ.]

**प्रासक ಪ್ರಾಸಕ** (पुं०) 1. ಕುಂತಾಯುಧ. 2. ಪಗಡೆಯಾಟದ ದಾಳ. प्रास संज्ञायां "कन्" (४-३-१४७)।

**प्रासङ्ग ಪ್ರಾಸಂಗ** (पुं०) ಎತ್ತನ್ನು ಪಳಗಿಸುವಾಗ ಅದರ ಕತ್ತಿಗೆ ಸೇರಿಸಿ ಕಟ್ಟುವ ನೊಗ. प्रसज्यते — प्र + षञ्ज (सङ्गे) "घञ्" (३-३-१९)। ಈ ನೊಗವು ಗಾಡಿಯ ನೊಗಕ್ಕಿಂತಲೂ ಭಿನ್ನವಾದುದು. "प्रासङ्गो ना युगान्तरम्" अम०।

**प्रासङ्गिक ಪ್ರಾಸಂಗಿಕ** (वि०) ಪ್ರಸಂಗದಿಂದ ಪ್ರಾಪ್ತವಾದ, ಒಂದು ವಿಷಯದ ಪ್ರಸ್ತಾವದಿಂದ ಬಂದ. प्रसङ्गादागतः "ठक्"। स्त्रियां "ङीप्"। प्रासङ्गिकी ಪ್ರಾಸಂಗಿಕೀ. "प्रासङ्गिकीनां विषयः कथानाम्" उ० रा०।

**प्रासङ्ग्य ಪ್ರಾಸಂಗ್ಯ** (ಪುಂ०) ಪಳಗಿಸುವ ಕಾಲದಲ್ಲಿ ಕತ್ತಿನ ಮೇಲೆ ಕಟ್ಟುವ ನೊಗವನ್ನು ಹೊರುವ ಎತ್ತು. प्रासङ्गं वहति "यत्" (४-४-७६)। "युगादीनां तु वोढारो युग्यप्रासङ्ग्यशाकटाः" अम०।

**प्रासाद ಪ್ರಾಸಾದ** (ಪುಂ) 1. ಉಪ್ಪರಿಗೆಯ ಮನೆ, ಶ್ರೀಮಂತರ ಮಾಹಡಿಯಮನೆ. प्रसीदति मनोऽत्र–"घञ्"(३-३-१२१)। दीर्घः (६-३-१२२)। "प्रासादमालासु बभूवुरित्थं त्यक्तान्यकार्याणि विचेष्टितानि" कुमा० ७-५६। 2. ದೇವಸ್ಥಾನ. 3. ರಾಜಗೃಹ, ಅರಮನೆ. "पूर्वं गाधिसुतेन सामिघटिता मुक्ता नु मन्दाकिनी यत्प्रासादुकूलवल्लिरनिलान्दोलैरखेलद्दिवि" नैष० २-१०२। "प्रासादो देवनृपयोर्गृहे" मेदि०।

**प्रासादकुक्कुट ಪ್ರಾಸಾದಕುಕ್ಕುಟ** (ಪುಂ) ಪಾರಾವತ, ಪಾರಿವಾಳದ ಹಕ್ಕಿ. प्रासादस्य कुक्कुट इव।

**प्रासादतल ಪ್ರಾಸಾದತಲ** (न०) ಅರಮನೆ ಮಹಡಿಯ ಮೇಲ್ಭಾವಣಿಯ ಸಮಪ್ರದೇಶ.

**प्रासिक ಪ್ರಾಸಿಕ** (ಪುಂ०) ಕುಂತಾಯುಧವನ್ನು ಧರಿಸಿರುವ ಭಟ, –ಯೋಧ. प्रासः प्रहरणमस्य "ठक्" (४-४-५७)।

**प्रासादिक ಪ್ರಾಸಾದಿಕ**(वि०)1. ಪ್ರಸನ್ನತೆಯಲ್ಲಿ ಹುಟ್ಟಿದ, ಪ್ರಸಾದ ಗುಣದಿಂದ ಉಂಟಾದ. प्रसादे भवम् "ठञ्"। "अहो प्रासादिकं रूपमनुभावश्च पावनः" उ० रा० ६-२०। 2. ಸುಂದರವಾದ, ರಮ್ಯವಾದ.

**प्रास्ताविक ಪ್ರಾಸ್ತಾವಿಕ** (वि०) ಪ್ರಸ್ತಾವದಿಂದ ಬಂದ, ಒಂದು ವಿಷಯದ ಸಂಬಂಧದಿಂದ ಬಂದ. प्रस्तावादागतः "ठञ्"।

**प्रास्थानिक ಪ್ರಾಸ್ಥಾನಿಕ** (वि०) ಪ್ರಯಾಣಕಾಲಕ್ಕೆ ಸಂಬಂಧಿಸಿದ, ಪ್ರಯಾಣದ ಸಮಯಕ್ಕೆ ಉಚಿತವಾದ, ಹೊರಟುಬರುವ ವೇಳೆಗೆ ಯೋಗ್ಯವಾದ. प्रस्थानं प्रयोजनमस्य "ठञ्" (५-१-१०१)। "प्रातर्यथोक्तव्रतपारणान्ते प्रास्थानिकं स्वस्त्ययनं प्रयुज्य" रघु० २-७०।

**प्रास्थिक ಪ್ರಾಸ್ಥಿಕ** (वि०) 1. ಒಂದು ಪ್ರಸ್ಥದ ಅಳತೆಯುಳ್ಳ. प्रस्थं परिमाणमस्य "ठञ्" (५-१-५७)। "प्रास्थिको धान्यराशिः"। 2. ಒಂದು ಪ್ರಸ್ಥಧಾನ್ಯದಿಂದ ಕೊಳ್ಳಲ್ಪಟ್ಟ. प्रस्थेन क्रीतम्—"ठञ्" (५-१-३७)। 3. ಒಂದು ಪ್ರಸ್ಥದ ತೂಕವುಳ್ಳ.

**प्रास्रवण ಪ್ರಾಸ್ರವಣ** (वि०) ಚಿಲುಮೆಯಿಂದ ಹೊರಟಿರುವ, ಬುಗ್ಗೆಯಿಂದ ಹುಟ್ಟಿರುವ. प्रस्रवणादागतः "अण्" (४-३-७४)।

**प्राह्व ಪ್ರಾಹ** (ಪುಂ०) ನೃತ್ಯದ ಉಪದೇಶ, ನೃತ್ಯದ ಶಿಕ್ಷಣ.

**प्राह्ण ಪ್ರಾಹ್ಣ** (ಪುಂ०) ಪೂರ್ವಾಹ್ಣ, ಹಗಲಿನ ಪೂರ್ವಭಾಗ. प्रथमं च तदहश्च–"टच्" (५-४-९१)। अह्लादेशः (५-४-८८)। णत्वम् (८-४-७)।

**प्राह्णेतन ಪ್ರಾಹ್ಣೇತನ** (वि०) ಹಗಲಿನ ಪೂರ್ವಾರ್ಧದ, ಪೂರ್ವಾಹ್ಣದ ಸಂಬಂಧವಾದ. प्राह्णे भवः "टचुः" (४-३-२३)। तुट् च। एदन्तत्वं निपा०। "क्रियां प्राह्णेतनीं कृत्वा निषेधन् पाणिना सखीम्" नैष० २०-११।

**प्राह्णेतराम् ಪ್ರಾಹ್ಣೇತರಾಮ್** (अव्य०) ಪ್ರಾತಃಕಾಲ ಹೊತ್ತಿಗೆ ಮುಂಚೆ. अतिशयेन प्राह्णे "तरप्" (५-३-५७)। आमुः (५-४-११)। "तमप्" (५-३-५५)। आमुः (५-४-११)। **प्राह्णेतमाम् ಪ್ರಾಹ್ಣೇತಮಾಮ್.**

**प्रिय ಪ್ರಿಯ** (ಪುಂ०) 1. ಪತಿ, ಗಂಡ. प्रीणाति—प्रीञ् (तर्पणे) "कः" (३-१-१३५)। "उपवनं निरभर्त्सयत प्रियान्वियुवतीर्युवतीः शिशिरानिलः" माघ० ६-६२। "प्रियेषु सौभाग्यफला हि चारुता" कुमा० ५-१। 2. ಜಾಮಾತ, ಅಳಿಯ. "राजर्त्विक्स्नातकगुरून् प्रियश्वशुरमातुलान्" मनु० ३-११९। 3. ಒಂದು ಜಾತಿಯ ಜಿಂಕೆ. 4. ಪಣ್ಯಾಗ. (वि०) 5. ಹಿತವಾದ, ಮನೋಹರವಾದ, ಆಹ್ಲಾದಕರವಾದ. "प्रियवचनशतैरुदारवादी रहसि मनः श्रुतिरञ्जकैर्विचित्रैः" याद० २४-६०। 6. ಇಷ್ಟವಾದ. 7. ಪ್ರೀತಿಪಾತ್ರವಾದ.

**प्रियंवद ಪ್ರಿಯಂವದ** (ಪುಂ०) 1. ಒಬ್ಬ ಗಂಧರ್ವ, "अवेहि गन्धर्वपतेस्तनूजं प्रियंवदं मां प्रियदर्शनस्य" रघु० ५-५३। (वि०) 2. ಹಿತವಾಗಿ ಮಾತಾಡುವವನು. प्रियं वदति—वद (व्यक्तायां वाचि) "खच्" (३-२-३८)। मुमागमः। "प्रियंवदोऽपि नैवाहं ब्रुवे मिथ्या परन्तप" भट्टि० ६-१०१। स्त्रियाम् **–वदा –ವದಾ.** "तदप्यपाकीर्णमतः प्रियंवदां वदन्त्यपर्णेति च तां पुराविदः" कुमा० ५-२८।

**प्रियंवदा ಪ್ರಿಯಂವದಾ** (स्त्री०) ಹನ್ನೆರಡನೆಯ ಛಂದಸ್ಸಿನ ಒಂದು ವೃತ್ತ. ಪ್ರತಿ ಪಾದದಲ್ಲೂ ನಗಣ ಭಗಣ ಜಗಣ ಮತ್ತು ರಗಣಗಳಿದ್ದಲ್ಲಿ "प्रियंवदा" ವೃತ್ತವಾಗುವುದು. "भुवि भवेन्नभजरैः प्रियंवदा" वृ० र०। **ಗಣವಿನ್ಯಾಸ :**

न भ ज र।

।।। ऽ।। ।ऽ। ऽ।ऽ

**प्रियक ಪ್ರಿಯಕ** (ಪುಂ०) 1. ಕದಂಬ ವೃಕ್ಷ, ಈಚಲು ಮರ. प्रीणाति—प्रीञ् (तर्पणे) "क्वुन्" (उ० २-३२)।

2. ಹೊನ್ನೆಮರ. 3. ಒಂದು ಜಾತಿಯ ಜಿಂಕೆ, ಚಿತ್ರಮೃಗ, ಮೈಮೇಲೆ ಚುಕ್ಕಿಗಳಿರುವ ಜಿಂಕೆ. "रुचिरचित्रतनूरुह-शालिभिः विचलितः परितः प्रियकव्रजैः" माघ० ४-३२। 4. ಭ್ರಮರ, ದುಂಬಿ. 5. ಪ್ರಿಯಂಗು ವೃಕ್ಷ, ಪ್ರೇಂಕಣ ಗಿಡ. 6. ಕುಂಕುಮ ಕೇಸರಿ. "प्रियकः पीतसालके। नीपे चित्रमृगे चाली प्रियङ्गौ कुङ्कुमेऽपि च" मेदि०। (ನ०) 7. ಹೊನ್ನೆ ಹೂವು. "उषिद्रप्रियकमनोरमं रमण्याः संरेजे सरसि वपुः प्रकाशमेव" माघ० ८-२८।

**प्रियकृत् ಪ್ರಿಯಕೃತ್** (ಪು०) 1. ವಿಷ್ಣು. (ವಿ०) 2. ಹಿತವಾದ ಕಾರ್ಯವನ್ನು ಮಾಡುವ.

**प्रियङ्कर ಪ್ರಿಯಂಕರ** (ವಿ०) ಹಿತವನ್ನು ಉಂಟುಮಾಡುವ, ಹಿತವಾದ ಕಾರ್ಯವನ್ನು ಮಾಡುವ. प्रियं करोति—प्रिय + डु कृञ् (करणे) वा "खच्" (३-२-४४)। पक्षे "अण्"। प्रियकारः ಪ್ರಿಯಕಾರः. "पितुः प्रियङ्करो भर्ता क्षेमकारस्तपस्विनाम्" भट्टि० ५-७७।

**प्रियङ्करी ಪ್ರಿಯಂಕರೀ** (स्त्री०) 1. ಅಶ್ವಗಂಧಾ ಗಿಡ. 2. ಹೆಗ್ಗುಳ್ಳದ ಗಿಡ.

**प्रियङ्गु ಪ್ರಿಯಂಗು** (स्त्री०) 1. ಪ್ರೇಂಕಣಗಿಡ. प्रियं गच्छति — गम्ऌ (गतौ) "कुः" (उ० १-३७)। निपा०। "प्रियङ्गुश्यामाङ्गप्रकृतिरपि चापाण्डु मधुरम्" मालती० ३-९। 2. ಕರಿಸಾಸವೆ. 3. ಹಿಪ್ಪಲಿ. 4. ನವಣೆ. "प्रियङ्गुः स्त्री राजिकाकणयोरपि। फलिन्यां कङ्गुसस्ये च" मेदि०।

**प्रियजन ಪ್ರಿಯಜನ** (ಪು०) ಪ್ರೀತಿಪಾತ್ರನಾದ ಮನುಷ್ಯ. प्रियो जनः।

**प्रियजीव ಪ್ರಿಯಜೀವ** (ಪು०) 1. ಹೆಮ್ಮರ. (ವಿ०) 2. ಜೀವವು ಬಹಳ ಪ್ರಿಯವಾಗಿರುವ, ಬಹುಕಾಲ ಜೀವಿಸುವ. प्रियो जीवो यस्य।

**प्रियतम ಪ್ರಿಯತಮ** (ಪು०) 1. ಅತಿಶಯವಾದ ಪ್ರೇಮವುಳ್ಳ ಪತಿ. अतिशयेन प्रियः। "शिप्रावातः प्रियतम इव प्रार्थनाचाटुकारः" मेघ० १-३१। (ವಿ०) 2. ಹೆಚ್ಚು ಪ್ರೀತಿಯುಳ್ಳ. अयमेषामतिशयेन प्रियः—प्रिय "तमप्" (५-३-५५)। (स्त्री०) **-तमा -ತಮಾ.** ಪತ್ನಿ, ಹೆಂಡತಿ.

**प्रियतर ಪ್ರಿಯತರ** (ವಿ०) ಇಬ್ಬರಲ್ಲಿ ಹೆಚ್ಚು ಪ್ರೀತಿಯುಳ್ಳ ಒಬ್ಬ. अयमनयोरतिशयेन प्रियः। "पुत्रादपि प्रियतरं खलु तेन दानं मन्ये पशोरपि विवेकविवर्जितस्य" पञ्चतं० २-५५।

**प्रियता ಪ್ರಿಯತಾ** (स्त्री०) ಪ್ರೇಮ, ಪ್ರೀತಿ, ವಿಶ್ವಾಸ. प्रियस्य भावः "तल्" (५-१-११९)। "न भक्षयति यो मांसं विधिं हित्वा पिशाचवत्। स लोके प्रियतां याति व्याधिभिश्च न पीड्यते" मनु० ५-५०। "त्वः" (५-१-११९)। प्रियत्वम् ಪ್ರಿಯತ್ವಮ್.

**प्रियदर्शन ಪ್ರಿಯದರ್ಶನ** (ಪು०) 1. ಶುಕಪಕ್ಷಿ, ಗಿಣಿ. प्रियं दर्शनं यस्य। 2. ಹಾಲೆಗಿಡ. 3. ಒಬ್ಬ ಗಂಧರ್ವ. "अवेहि गन्धर्वपतेस्तनूजं प्रियंवदं मां प्रियदर्शनस्य" रघु० ५-५३। (ವಿ०) 4. ಸುಂದರಪುರುಷ. ನೋಡಲು ವಿಶ್ವಾಸ ಹುಟ್ಟಿಸುವ ಚೆಲುವಾದ ಮನುಷ್ಯ. "तत्तद्भूमिपतिः पत्न्यै दर्शयन् प्रियदर्शनः" रघु० १-४७।

**प्रियदर्शिन् ಪ್ರಿಯದರ್ಶಿನ್** (ವಿ०) ಪ್ರೀತಿಯಿಂದ ನೋಡುವ ಸ್ವಭಾವದ, ಎಲ್ಲವನ್ನೂ ವಿಶ್ವಾಸದಿಂದ ನೋಡುವ. प्रियं पश्यति — दृशिर् (प्रेक्षणे) "णिनिः" (३-२-७८)।

**प्रियप्राय ಪ್ರಿಯಪ್ರಾಯ** (ವಿ०) 1. ಹೆಚ್ಚು ಪ್ರೀತಿಯುಳ್ಳ, ಅತಿಶಯವಾದ ವಿಶ್ವಾಸದಿಂದ ಕೂಡಿದ. "प्रियप्राया वृत्तिः विनयमधुरो वाचि नियमः प्रकृत्या कल्याणी मतिरनवगीतः परिचयः" उ० रा० २-२। (ನ०) 2. ಮಧುರವಾದ ಮಾತು, ವಿಶ್ವಾಸದ ಮಾತು. प्रियस्य प्रायो यस्मिन्।

**प्रियप्रेप्सु ಪ್ರಿಯಪ್ರೇಪ್ಸು** (ವಿ०) ಅಪೇಕ್ಷಿತವಾದುದನ್ನು ಹೊಂದಲು ಅಪೇಕ್ಷಿಸುವ, ಇಷ್ಟವಾದುದನ್ನು ಪಡೆಯಲು ಉತ್ಸುಕನಾದ. प्रियं प्राप्तुमिच्छुः—प्र+ आप्ऌ (व्याप्तौ) + सन् "उः" (३-२-१६८)।

**प्रियभाषण ಪ್ರಿಯಭಾಷಣ** (ನ०) ಮಧುರವಾದ ಮಾತು, ಪ್ರೀತಿಯುಕ್ತವಾದ ಮಾತು. प्रियं भाषणम्।

**प्रियभाषिन् ಪ್ರಿಯಭಾಷಿನ್** (ವಿ०) ಪ್ರೀತಿಯಿಂದ ಮಾತಾಡುವವನು, ಮಧುರವಾಗಿ ಮಾತಾಡುವವನು. प्रियं भाषते — भाष (व्यक्तायां वाचि) "णिनिः" (३-२-७८)।

**प्रियमण्डन ಪ್ರಿಯಮಂಡನ** (ವಿ०) ಆಭರಣಗಳಲ್ಲಿ ಬಹಳ ಪ್ರೀತಿಯುಳ್ಳ, ಒಡವೆಗಳನ್ನು ತೊಡುವುದರಲ್ಲಿ ಆಸೆಯುಳ್ಳ. प्रियं मण्डनं यस्य। "नादत्ते प्रियमण्डनापि भवतां स्नेहेन या पल्लवम्" शाकु० ४-८।

**प्रियमधु ಪ್ರಿಯಮಧು** (ಪು०) 1. ಬಲರಾಮ. प्रियं मधु मद्यं यस्य। (ವಿ०) 2. ಮದ್ಯವು ಬಹಳ ಪ್ರಿಯವಾಗಿರುವ.

**प्रियवयस्य ಪ್ರಿಯವಯಸ್ಯ** (ಪು०) ಪ್ರೀತಿಪಾತ್ರನಾದ ಮಿತ್ರ. प्रियो वयस्यः।

3. ಕಾಡುದ್ದಿನ ಗಿಡ. 4. ಕಾಚಿಸೊಪ್ಪು, ಗಣಿಕೆಸೊಪ್ಪು. 5. ಹಾಗಲ ಗಿಡ. **–फली – ಫಲೀ.** 6. ನೆಲ್ಲಿ ಗಿಡ.

**बहुबीज ಬಹುಬೀಜ** (पुं०) 1. ಸೀತಾಫಲದ ಗಿಡ. (न०) 2. ಸೀತಾಫಲದ ಹಣ್ಣು.

**बहुमञ्जरी ಬಹುಮಂಜರೀ** (स्त्री०) ತುಲಸಿ ಗಿಡ.

**बहुमत ಬಹುಮತ** (वि०) 1. ಗೌರವಿಸಲ್ಪಟ್ಟ, ಮರ್ಯಾದೆಯಿಂದ ನೋಡಲ್ಪಟ್ಟ. बहु + मन (ज्ञाने) "क्तः" (३-२-१०२)। "ययातेरिव शर्मिष्ठा भर्तुर्बहुमता भव" शाकु० ४-६। 2. ಅನೇಕರ ಅಭಿಪ್ರಾಯಗಳನ್ನು ಹೊಂದಿರುವ. बहूनां मतानि यस्य।

**बहुमति ಬಹುಮತಿ** (स्त्री०) 1. ಸಂಮಾನ, ಗೌರವ. 2. ಅರ್ಹತೆಯ ಪರಿಗಣನೆ. "कान्तानां बहुमतिमाययुः पयोदा नाल्पीयान् बहु सुकृतं हिनस्ति दोषः" किरा० ७-१५।

**बहुमल ಬಹುಮಲ** (न०) ಸೀಸ ಲೋಹ.

**बहुमान ಬಹುಮಾನ** (पुं०) 1. ಹೆಚ್ಚು ಗೌರವ, ಹೆಚ್ಚು ಮರ್ಯಾದೆ. "तमातिथेयी बहुमानपूर्वया सपर्यया प्रत्युदियाय पार्वती" कुमा० ५-३१। (न०) 2. ಪಾರಿತೋಷಿಕ, ಪ್ರೀತಿಯ ಕೊಡುಗೆ, ವಿಶ್ವಾಸದಿಂದ ಮಾಡುವ ದಾನ, ಸಂಮಾನ.

**बहुमान्य ಬಹುಮಾನ್ಯ** (वि०) 1. ಗಣ್ಯ, ಗೌರವಿಸಲ್ಪಡುವವನು, ಮರ್ಯಾದೆಗೆ ಅರ್ಹನಾದವನು. (अव्य०) 2. ಗೌರವಿಸಿ, ಮರ್ಯಾದೆಮಾಡಿ.

**बहुमार्गगा ಬಹುಮಾರ್ಗಗಾ** (स्त्री०) 1. ಅನೇಕ ಮಾರ್ಗಗಳಲ್ಲಿ ಹರಿಯುವ ಗಂಗಾನದಿ. 2. ಸ್ವೈರಿಣಿ, ವ್ಯಭಿಚಾರಿಣಿ, ವೇಶ್ಯೆ.

**बहुमुख ಬಹುಮುಖ** (वि०) ನಾನಾ ರೀತಿಯ, ಅನೇಕ ವಿಧವಾದ.

**बहुमूल्य ಬಹುಮೂಲ್ಯ** (न०) 1. ದೊಡ್ಡ ಮೊತ್ತ. (वि०) 2. ಹೆಚ್ಚು ಬೆಲೆಬಾಳುವ, ಅಧಿಕ ಬೆಲೆಯುಳ್ಳ. बहु मूल्यमस्य। "बहुमूल्यं महाधनम्" अम०।

**बहुरूप ಬಹುರೂಪ** (पुं०) 1. ವಿಷ್ಣು. 2. ಶಿವ, ಪರಮೇಶ್ವರ. 3. ಮನ್ಮಥ, ಕಾಮದೇವ. 4. ಓತಿಕೇತ, ಕೃಕಲಾಸ, ಹೆಂಟೆಗೊದ್ದ. 5. ಸಜ್ಜರಸ, ಮತ್ತಿಮರದ ಹಾಲು. "बहुरूपः शिवे विष्णौ सरटे धूपके स्मरे" मेदि०। 6. ಕೇಶ, ಕೂದಲು. (वि०) 7. ಅನೇಕ ರೂಪಗಳುಳ್ಳ.

**बहुल ಬಹುಲ** (पुं०) 1. ಅಗ್ನಿ, ಬೆಂಕಿ. बहून् लाति—ला (आदाने) "कः" (३-२-३)। 2. ಕೃಷ್ಣಪಕ್ಷ, ಚಾಂದ್ರಮಾಸದ ಎರಡನೆಯ ಅರ್ಧ. "ज्यानिनादमथ गृह्णती तयोः प्रादुरास बहुलक्षपाच्छविः" रघु० ११-१५। (न०) 3. ಆಕಾಶ, ಅಂತರಿಕ್ಷ. 4. ಬಿಳಿ ಮೆಣಸು. (वि०) 5. ಹೆಚ್ಚಾದ, ಅಧಿಕವಾದ. "जन्मनि क्लेशबहले" हितो०। 6. ಅನೇಕವಾದ, ಎರಡಕ್ಕಿಂತಲೂ ಹೆಚ್ಚಾದ. "तरुणतमालनीलबहुलोन्नमदम्बुधराः" मालती० ९-१८। 7. ಕಪ್ಪುಬಣ್ಣದ. (स्त्री०) **–ला – ಲಾ.** 8. ನೀಲಿಗಿಡ. 9. ಯಾಲಕ್ಕಿ ಗಿಡ. 10. ಗೋವು, ಹಸು, ಆಕಳು. 11. ಭೂಮಿ. (स्त्री०ब०व०) 12. ಕೃತ್ತಿಕಾ ನಕ್ಷತ್ರ. "बहुला नीलिकायां स्यादेलायां गवि योषिति। कृत्तिकासु स्त्रियां भूम्नि विहायसि नपुंसकम्। पुंस्यग्नौ कृष्णपक्षे च वाच्यवत् प्राज्यकृष्णयोः" मेदि०। "स्त्री स्यात् पृथिव्यामुस्रायामेलायां कृत्तिकासु च" वैज०।

**बहुलगन्धा ಬಹುಲಗಂಧಾ** (स्त्री०) ಯಾಲಕ್ಕಿ ಗಿಡ.

**बहुलीकरण ಬಹುಲೀಕರಣ** (न०) 1. ಧಾನ್ಯವನ್ನು ತೂರುವುದು. 2. ಹೆಚ್ಚಿಸುವುದು.

**बहुलीकृत ಬಹುಲೀಕೃತ** (वि०) 1. ಕಣದಲ್ಲಿ ತೂರಿ ರಾಶಿ ಹಾಕಿದ ಧಾನ್ಯ, ಹೊಟ್ಟಿನಿಂದ ಬೇರ್ಪಡಿಸಿ ಶುದ್ಧವಾಗಿ ಮಾಡಲ್ಪಟ್ಟ ಧಾನ್ಯ. अबहुलं बहुलमकारि। "ऋद्धमावसितं धान्यं पूतं तु बहुलीकृतम्" अम०। 2. ವಿಸ್ತಾರವಾಗಿ ಮಾಡಲ್ಪಟ್ಟ, ಹೆಚ್ಚಿಸಲ್ಪಟ್ಟ.

**बहुवचन ಬಹುವಚನ** (न०) 1. ಎರಡಕ್ಕಿಂತಲೂ ಅಧಿಕ ಸಂಖ್ಯೆಯನ್ನು (ಬಹುತ್ವವನ್ನು) ತೋರಿಸುವ (ಬಹು) ವಚನ. बहुत्वं वक्ति—वच (परिभाषणे) "ल्युः" (३-१-१३४)। "जस्" ಮೊದಲಾದ "सुप्" ವಿಭಕ್ತಿಗಳು. मानवाः अङ्गनाः अपत्यानि ಇತ್ಯಾದಿ. 2. ಕ್ರಿಯಾಪದದ "झि" ಮೊದಲಾದ "तिङ्" ವಿಭಕ್ತಿಗಳು. तिष्ठन्ति धावन्ति कुर्वन्ति राजन्ते ಇತ್ಯಾದಿ.

**बहुवल्क ಬಹುವಲ್ಕ** (पुं०) ಪ್ರಿಯಾಲವೃಕ್ಷ, ಮೊರಟೆಗಿಡ.

**बहुवारक ಬಹುವಾರಕ** (पुं०) ಚಳ್ಳೆಗಿಡ. बहून् वारयति —वृञ् (वरणे) + णिच् "क्वुन्" (उ० २-३२)।

**बहुविध ಬಹುವಿಧ** (वि०) ನಾನಾ ವಿಧವಾದ, ಅನೇಕ ಪ್ರಕಾರವಾದ. बहवो विधा यस्य। "एवं बहुविधा यज्ञा वितता ब्रह्मणो मुखे" गीता ४-३२।

**बहुवीर्य ಬಹುವೀರ್ಯ** (पुं०) 1. ವಿಭೀತಕ ವೃಕ್ಷ, ತಾರೆಗಿಡ. 2. ಶಾಲ್ಮಲಿ ವೃಕ್ಷ, ಬೂರುಗದ ಮರ. 3. ಮರುಗ. (वि०) 4. ಹೆಚ್ಚು ವೀರ್ಯವುಳ್ಳ.

5725–78. ಬೆಂಗಳೂರು ಪ್ರೆಸ್, ಬೆಂಗಳೂರು–560 018

श्रीः

# शब्दार्थकौस्तुभः

(प्रायौगिक संस्कृत—कर्णाटक शब्दकोशः)

# ಸಂಸ್ಕೃತ – ಕನ್ನಡ ಶಬ್ದಕೋಶ

ಸಂಪುಟ ೫

ಪದಗಳು : बहुव्रीहि—वेदान्त


ಸಾಹಿತ್ಯ ವಿದ್ವಾನ್

ಚಕ್ರವರ್ತಿ ಶ್ರೀನಿವಾಸ ಗೋಪಾಲಾಚಾರ್ಯ



ಬಾಪ್ಕೊ ಪ್ರಕಾಶನ

ಬೆಂಗಳೂರು ಪ್ರೆಸ್, ಬೆಂಗಳೂರು

॥ श्रीः ॥

श्रीमते हयग्रीवाय नमः।

# शब्दार्थकौस्तुभः।

## (संस्कृत-कर्णाटक शब्दकोशः)

## ಸಂಸ್ಕೃತ-ಕನ್ನಡ ಶಬ್ದಕೋಶ

ಪಂಚಮ ಭಾಗ

---

लक्ष्मीं तनोतु व्यवधूय चित्ते वितर्कडोलां विविधार्थराशेः।
लक्ष्मीहयास्यः स्फुरिताक्षमालो लक्ष्मीलसद्वत्सतलः सदा नः॥

त्रयीचयसुधानिधिप्रचयभूतहेषारवा सुधोदधिसुतायुता प्रचितसर्वदोषापहा।
नतेष्टफलदायिका बुधहृदब्जमित्रायिता परिस्फुरतु मे सदा हयमुखी परा देवता॥

राकासुधाकरसुधामलदिव्यमूर्ते श्रीनाथ भव्यमतिदायक सैन्धवास्य।
अस्पृष्टसंशयकलङ्कपदार्थजातं वागीश तेऽद्य कृपया हृदि मे चकास्तु॥

नत्वा लक्ष्मीहयग्रीवौ गुरुवन्दनपूर्वकम्।
शब्दार्थकौस्तुभस्यास्य पञ्चमं भागमारभे॥

---

**बहुव्रीहि** ಬಹುವ್ರೀಹಿ (पुं०) 1. ಅನ್ಯಪದಾರ್ಥಪ್ರಧಾನವಾದ ಒಂದು ಸಮಾಸ. "शेषो बहुव्रीहिः" ಎಂಬ ಅಧಿಕಾರ ಸೂತ್ರದಿಂದ ವಿಧಿಸಲ್ಪಡುವ ಒಂದು ಸಮಾಸ. उक्तादन्यः शेषः। "द्वितीया श्रित ..." (२-१-२४), "तृतीया तत्कृत" (२-१-३०), "चतुर्थी तदर्थ ..." (२-१-३६), "पञ्चमी भयेन" (२-१-३७), "षष्ठी" (२-२-८), "सप्तमी शौण्डैः" (२-१-४०) ಈ ಸೂತ್ರಗಳಿಂದ ದ್ವಿತೀಯಾದಿ ವಿಭಕ್ತಿಗಳನ್ನು ನಿರ್ದೇಶಿಸಿ ಅನೇಕ ಸಮಾಸಗಳನ್ನು ಹೇಳಿ ಪ್ರಥಮಾವಿಭಕ್ತಿಗೆ ಯಾವ ಸಮಾಸವನ್ನೂ ಹೇಳದಿರುವುದರಿಂದ ಇಲ್ಲಿ "शेष" ಪದಕ್ಕೆ ಪ್ರಥಮಾವಿಭಕ್ತಿಯೆಂದು ಅರ್ಥವು. ಅನೇಕ ಪ್ರಥಮಾವಿಭಕ್ತ್ಯಂತಪದಗಳು ಅನ್ಯಪದಾರ್ಥಪ್ರಧಾನವಾಗಿದ್ದರೆ ಅಲ್ಲಿ ಬಹುವ್ರೀಹಿ ಸಮಾಸ. दत्ता दक्षिणा यस्मै सः दत्तदक्षिणो द्विजः ಎಂಬಲ್ಲಿ ಪ್ರಥಮಾಂತವಾದ ಎರಡು ಪದಗಳೂ (ಸ್ವತಂತ್ರವಾದ ಅರ್ಥವನ್ನು ಹೊಂದದೆ) द्विज (अन्य) ಪದಾರ್ಥಕ್ಕೆ ಸಂಬಂಧಿಸಿರುವುದರಿಂದ (ಇಲ್ಲಿ) ಬಹುವ್ರೀಹಿ ಸಮಾಸ. पीताम्बरः त्रिलोचनः ಇತ್ಯಾದಿ (वि०) 2. ಹೆಚ್ಚು ಧಾನ್ಯವುಳ್ಳ. "तत्पुरुष, कर्मधारय येनाहं स्यां सदा बहुव्रीहिः" उद्भ०।

**बहुशस्** ಬಹುಶಸ್ (अव्य०) 1. ಅನೇಕವಾಗಿ, ಬಹಳವಾಗಿ. बहु "शस्" (५-४-४२)। "पश्यन्तीनां न खलु बहुशो न स्थलीदेवतानां मुक्तास्थूलास्तरुकिसलयेष्वश्रुलेशाः पतन्ति" मेघ० २-४३। 2. ಅನೇಕ ಸಲ ಅನೇಕಾವೃತ್ತಿ. "चलापाङ्गां दृष्टिं स्पृशसि बहुशो वेपथुमतीं रहस्याख्यायीव स्वनसि मृदु कर्णान्तिकचरः' शाकु० १-२०। 2. ಸಾಮಾನ್ಯವಾಗಿ.

**बहुशाल ಬಹುಶಾಲ** (पुं०) ಸ್ನುಹೀವೃಕ್ಷ, ಕಳ್ಳಿ ಗಿಡ.

**बहुशिखा ಬಹುಶಿಖಾ** (स्त्री०) ನೀರುಹಿಪ್ಪಲಿ.

**बहुशिरस् ಬಹುಶಿರಸ್** (पुं०) 1. ವಿಷ್ಣು. बहूनि शिरांसि अस्य। "रुद्रो बहुशिरा बभ्रुः" वि० स०। (वि०) 2. ಅನೇಕ ತಲೆಗಳುಳ್ಳ.

**बहुश्रुत ಬಹುಶ್ರುತ** (वि०) 1. ಅನೇಕ ಶಾಸ್ತ್ರಾಭ್ಯಾಸ ವುಳ್ಳವನು, ಪಂಡಿತ, ವಿದ್ವಾಂಸ. बहूनि श्रुतानि शास्त्राणि यस्य। "शत्रुघातिनि शत्रुघ्ने सुबाहौ च बहुश्रुते" रघु० १५-३६। 2. ವೇದಾಭ್ಯಾಸ ಮಾಡಿದವನು. "गुरुं वा बालवृद्धौ वा ब्राह्मणं वा बहुश्रुतम्। आततायिनमायान्तं हन्यादेवाविचारयन्" मनु० ८-३५०।

**बहुसन्तति ಬಹುಸಂತತಿ** (स्त्री०) 1. ಒಂದು ಜಾತಿಯ ಬಿದಿರು. बह्वी सन्ततिरस्याः। (वि०) 2. ಅನೇಕ ಸಂತಾನವುಳ್ಳವನು, ಬಹುಮಂದಿ ಮಕ್ಕಳುಳ್ಳವನು.

**बहुसार ಬಹುಸಾರ** (पुं०) ಖದಿರ ವೃಕ್ಷ, ಬಿಳಿಯ ಕಗ್ಗಲಿ ಮರ.

**बहुसुता ಬಹುಸುತಾ** (स्त्री०) 1. ಪಿಲ್ಲಪಿಚ್ಚರ, ಶತಮೂಲಿ ಗಿಡ, ಶತಾವರಿ. बहवः सुता यस्याः। (वि०) **-सुत -ಸುತ.** 2. ಅನೇಕ ಮಂದಿ ಮಕ್ಕಳುಳ್ಳ.

**बहुसू ಬಹುಸೂ** (स्त्री०) 1. ಹೆಣ್ಣು ಹಂದಿ. 2. ಹೆಚ್ಚು ಮಕ್ಕಳನ್ನು ಹಡೆದ ಹೆಂಗಸು. बहून् सूते—षूङ् (प्राणिगर्भविमोचने) "क्विप्" (३-२-६१)।

**बहुसूति ಬಹುಸೂತಿ** (स्त्री०) 1. ಹೆಚ್ಚು ಕರುಹಾಕಿದ ಹಸು. बहुः सूतिः यस्याः। 2. ಅನೇಕ ಮಂದಿ ಮಕ್ಕಳನ್ನು ಹಡೆದ ಹೆಂಗಸು.

**बहूदक ಬಹೂದಕ** (पुं०) ನಾಲ್ಕುವಿಧ ಸಂನ್ಯಾಸಿಗಳಲ್ಲೊಬ್ಬ. (1) कुटीचकः (2) बहूदकः (3) हंसः ಮತ್ತು (4) परमहंसः ಎಂದು ಸಂನ್ಯಾಸಿಗಳು ನಾಲ್ಕು ವಿಧ. ಬಹೂದಕನು ಕಾಷಾಯ ಮತ್ತು ತ್ರಿದಂಡವನ್ನು ಧರಿಸಿ ಏಳು ಮನೆಗಳಲ್ಲಿ ಭಿಕ್ಷೆ ಬೇಡಿ ಜೀವಿಸಬೇಕು. ಈ ಸಂನ್ಯಾಸಿಗೆ ನೀರಿನ ಖರ್ಚು ಹೆಚ್ಚಾಗಿರುವುದರಿಂದ ಈ ಹೆಸರು.

**बहूदित ಬಹೂದಿತ** (न०) ಹರಟೆ, ಅರ್ಥವಿಲ್ಲದ ಅಪ್ರಯುಕ್ತವಾದ ಮಾತು.

**बह्वाशिन् ಬಹ್ವಾಶಿನ್** (वि०) ಹೆಚ್ಚಾಗಿ ಊಟಮಾಡುವವನು, ಹೆಚ್ಚು ಆಹಾರವನ್ನು ತಿನ್ನುವವನು. बहु अश्नाति —अश (भोजने) "णिनिः" (३-२-७८)। "बह्वाशी स्वल्पसन्तुष्टः सुनिद्रः शीघ्रचेतनः। प्रभुभक्तश्च शूरश्च ज्ञातव्याः षट् शुनो गुणाः" चाणक्य०।

**बह्वृच् ಬಹ್ವೃಚ್** (स्त्री०) 1. ಋಗ್ವೇದ. (न०) 2. ಸೂಕ್ತ. बह्वयो ऋचो यस्मिन्।

**बह्वृच ಬಹ್ವೃಚ** (वि०) 1. ಋಗ್ವೇದವನ್ನು ಅಧ್ಯಯನ ಮಾಡಿದವನು, ಋಕ್‌ಶಾಖೆಯವನು. बह्वयो ऋचः अध्येतव्या येन "अः" (५-४-७४)। "यत्नेन भोजयेत् श्राद्धे बह्वृचं वेदपारगम्" मनु० ३-१४५। (स्त्री०) 2. **-ची -ಚೀ.** ಋಕ್‌ಶಾಖೆಯವನ ಪತ್ನಿ. बह्वृचस्य स्त्री।

**बाडव ಬಾಡವ** (पुं०) 1. ಬಾಡಬಾಗ್ನಿ. ಸಮುದ್ರದಲ್ಲಿ ರುವ ಕುದುರೆಯ ಮುಖದಿಂದ ಹುಟ್ಟಿದ ಅಗ್ನಿ. बडवायां भवः "अण्" (४-३-५३)। 2. ಬ್ರಾಹ್ಮಣ. (पुंन०) 3. ಪಾತಾಳಲೋಕ. (न०) 4. ಕುದುರೆಗಳ ಗುಂಪು, ಅಶ್ವಗಳ ಸಮೂಹ. बडवानां समूहः "अञ्" (४-२-४५)। (वि०) 5. ಬಡವಾಸಂಬಂಧವಾದ. बडवाया अयम् "अण्" (४-३-१२०)। (स्त्री०) **-वा -ವಾ.**

**बाडवाग्नि ಬಾಡವಾಗ್ನಿ** (पुं०) ಬಡಬಾನಲ, ಸಮುದ್ರದಲ್ಲಿ ಕುದುರೆಯ ಮುಖದಿಂದ ಹುಟ್ಟಿದ ಅಗ್ನಿ.

**बाडवेय ಬಾಡವೇಯ** (पुंद्विव०) ಅಶ್ವಿನೀಕುಮಾರರು. बडवाया घोटकरूपधारिण्याः सूर्यपत्न्याः अपत्ये। बडवा "ढक्" (४-१-१२०)।

**बाडव्य ಬಾಡವ್ಯ** (न०) ಬ್ರಾಹ್ಮಣರ ಸಮೂಹ. बाडवानां समूहः "यन्" (४-२-४२)।

**बाढ ಬಾಢ** (वि०) 1. ಅತಿಶಯವಾದ, ಹೆಚ್ಚಾದ. 2. ದೃಢವಾದ, ಬಲವಾದ, ಸ್ಥಿರವಾದ. (अव्य०) 3. ಸತ್ಯವಾಗಿ, ನಿಜವಾಗಿ. बाहृ (प्रयत्ने) "क्तः" निपा० (७-२-१८)। "बाढमेष दिवसेषु पार्थिवः कर्म साधयति पुत्रजन्मने" रघु० १९-५२। 4. ಅತಿಶಯವಾಗಿ, ಹೆಚ್ಚಾಗಿ. "वपुरादरातिशयशंसि पुनः प्रतिपत्तिमूढमपि बाढमभूत्" माघ० ९-७७। (न०) 5. ಪ್ರತಿಜ್ಞೆ. 6. ಅಂಗೀಕಾರ, ಒಪ್ಪಿಗೆ.

**बाण ಬಾಣ** (पुं०) 1. ಬಾಣ, ಅಂಬು. बण (शब्दे) भावे "घञ्" (३-३-१८)। बाणः शब्दः अस्यास्ति "अच्" (५-२-१२७)। "जम्भद्विषत्प्रभृतिदिक्पतिचापमुक्ता बाणाः शिता दनुजनायकबाणसङ्घान्" कुमा० १७-३। 2. ಹಸುವಿನ ಕೆಚ್ಚಲು. 3. ಶಬ್ದ, ಸದ್ದು. बण (शब्दे) भावे "घञ्" (३-३-१८)। 4. ಗರಿಯಿಲ್ಲದ ಕೇವಲ ಬಾಣ. 5. ಅಗ್ನಿ. 6. ಕರಿಯ ಹೂವಿನ ಗೋರಂಟಿ ಮರ. "बाणो वृक्षविशेषे स्यात् शरस्यावयवे शरे" हेम०। 7. ಬಾಣಾಸುರ, ಬಲಿಚಕ್ರವರ್ತಿಯ ಮಗ

[ಇವನು ಶಿವಭಕ್ತ. ಮಹಾಕಾಲನೆಂದು ಇವನಿಗೆ ಬೇರೊಂದು ಹೆಸರೂ ಉಂಟು. ಈಶ್ವರನ ಅನುಗ್ರಹದಿಂದ ಇವನು ಸಾವಿರ ತೋಳುಗಳನ್ನು ಪಡೆದನು. ಇವನ ಮಗಳಾದ ಉಷೆಯನ್ನು ಅನಿರುದ್ಧನು ಅಪಹರಿಸಿ ಮದುವೆಯಾದನು.] "बाणः सहस्रेण भुजैः प्रमाथन् आत्मानुरूपैरसुरैः समेतः" याद० २०-३५। 8. ಬಾಣಭಟ್ಟ, ಹರ್ಷವರ್ಧನನ ಆಸ್ಥಾನದಲ್ಲಿದ್ದ ಒಬ್ಬ ಮಹಾಕವಿ. ಹರ್ಷವರ್ಧನನ ವರ್ಣನಾತ್ಮಕವಾದ ಹರ್ಷಚರಿತ, ಕಾದಂಬರಿಯೆಂಬ ಒಂದು ಕಲ್ಪಿತಕಥೆ ಮುಂತಾದುವು ಈ ಕವಿಯಿಂದ ರಚಿತವಾದುವು. 9. ಐದು ಸಂಖ್ಯೆ. (स्त्री०) **–णा –ಣಾ.** 10. ಬಾಣದ ಮೂಲಭಾಗ, ಬಾಣದ ಬುಡ. (पुंस्त्री०) **–णः –ಣಃ. –णा –ಣಾ.** 11. ಕರಿಯ ಹೂವಿನ ಗೋರಂಟಿ ಮರ. "बाणः स्याद्गोस्तने दैत्यभेदे केवलकाण्डयोः। बाणा तु बाणमूले स्त्री नीलझिण्ट्यां पुनर्द्वयोः" मेदि०। "बाणः स्यात् केवले काण्डे काण्डावयवदैत्ययोः। बाणा झिण्टयाम्" विश्व०।

**बाणधि ಬಾಣಧಿ** (पुं०) ಬತ್ತಳಿಕೆ, ಬಾಣಗಳ ಚೀಲ. बाणाः धीयन्तेऽस्मिन्—डुधाञ् (धारणपोषणयोः) "किः" (३-३-९३)।

**बाणवृष्टि ಬಾಣವೃಷ್ಟಿ** (स्त्री०) ಬಾಣಗಳ ಸುರಿಮಳೆ. बाणानां वृष्टिः।

**बाणसन्धान ಬಾಣಸಂಧಾನ** (न०) ಬಿಲ್ಲಿಗೆ ಬಾಣವನ್ನು ಏರಿಸುವುದು, ಬಾಣವನ್ನು ಪ್ರಯೋಗಿಸಲು ಹದೆಯೊಡನೆ ಸೇರಿಸುವುದು. बाणस्य सन्धानम्। "का कथा बाणसन्धाने ज्याशब्देनैव दूरतः" शाकुं० ३-१।

**बाणसुता ಬಾಣಸುತಾ** (स्त्री०) ಬಾಣಾಸುರನ ಮಗಳು, ಉಷಾದೇವಿ. ["उषा" ಪದದಲ್ಲಿ ನೋಡಿ.]

**बादर ಬಾದರ** (पुं०) 1. ಹತ್ತಿಯ ಗಿಡ. बदर स्वार्थे "अण्" (५-४-३८)। 2. ಎಲಚಿ ಗಿಡ, ಬೋರೆ ಗಿಡ. (न०) 3. ಹತ್ತಿಯ ನೂಲು. 4. ಎಲಚಿಹಣ್ಣು, ಬೋರೆ ಹಣ್ಣು. 5. ಹತ್ತಿಯ ಕಾಯಿ. "बदरी कोलिकार्पास्योर्बादरं तु तयोः फले" हेम०। (वि०) 6. ಎಲಚಿಗಿಡದ ಸಂಬಂಧವಾದ ಎಲೆ ಹಣ್ಣು ಕೊಂಬೆ ಮುಂತಾದುವು. 7. ಹತ್ತಿಯ ಗಿಡದ ಸಂಬಂಧವಾದ ಎಲೆ, ಕಾಯಿ, ನೂಲು, ವಸ್ತ್ರ ಮುಂತಾದುವು. बदराया विकारः "अण्" (४-३-१३५)। तस्य लुक् (४-३-१६३)। बदरस्य विकारः "अण्" (४-३-१३४)।

**बादरायण ಬಾದರಾಯಣ** (पुं०) ಬ್ರಹ್ಮಸೂತ್ರಗಳನ್ನು ರಚಿಸಿದ ವೇದವ್ಯಾಸ ಮಹರ್ಷಿ, ಶುಕ ಮಹರ್ಷಿಯ ತಂದೆ. बदर्यां भवः "फक्" (४-१-९९)।

**बादरिक ಬಾದರಿಕ** (वि०) 1. ಬದರಿ ಫಲ ಬಿಡುವ ಕ್ಷೇತ್ರ. 2. ಭೂಮಿಯಲ್ಲಿ ಬಿದ್ದಿರುವುದನ್ನು ಒಂದೊಂದಾಗಿ ಆರಿಸಿ ತೆಗೆದುಕೊಳ್ಳುವವನು.

**बाध ಬಾಧ** (पुं०) 1. ಅಡ್ಡಿ, ಆತಂಕ, ಪ್ರತಿಬಂಧ. बाधृ (विलोडने) "घञ्" (३-३-१८)। 2. (ನ್ಯಾಯಶಾಸ್ತ್ರದಲ್ಲಿ) ಸಾಧ್ಯವಿಲ್ಲದ ಪಕ್ಷ. "साध्याभाववान् पक्षः" "ह्रदो वह्निमान् धूमात्" ಎಂಬಲ್ಲಿ ಪಕ್ಷವಾದ ಹ್ರದದಲ್ಲಿ ಸಾಧ್ಯವಾದ ವಹ್ನಿಯಿಲ್ಲದಿರುವುದು (ವಹ್ನಿಯಿಲ್ಲದ ಹ್ರದವು) ಬಾಧವು.

**बाधक ಬಾಧಕ** (वि०) 1. ಅಡ್ಡಿಯಾಗಿರುವ, ತಡೆಯಾಗಿರುವ, ಪ್ರತಿಬಂಧಕವಾಗಿರುವ. (पुं०) 2. ಸ್ತ್ರೀಯರಿಗೆ ಋತುಕಾಲದಲ್ಲಿ ಗರ್ಭ ಧರಿಸಲು ಅಡ್ಡಿಯಾಗುವ ಒಂದು ರೋಗ. ಈ ರೋಗವು (1) ರಕ್ತಮಾದ್ರೀಬಾಧಕ. (2) ಷಷ್ಠೀಬಾಧಕ. (3) ಅಂಕುರಬಾಧಕ ಮತ್ತು (4) ಜಲಕುಮಾರಬಾಧಕಗಳೆಂದು ನಾಲ್ಕು ವಿಧ.

(1) ಸೊಂಟ ಹೊಕ್ಕಳಿನ ಕೆಳಭಾಗ ಪಕ್ಕೆಗಳು ಮತ್ತು ಎದೆ ಇವುಗಳಲ್ಲಿ ನೋವುಂಟಾಗಿ ಕಾಲಕ್ಲೃಪ್ತಿಯಿಲ್ಲದೆ ಅಕ್ರಮವಾಗಿ ಬಹಿಷ್ಠೆಯಾಗುವುದರಿಂದ **ರಕ್ತಮಾದ್ರೀ ಬಾಧಕ** (ದೋಷ)ವುಂಟಾಗಿ ಗರ್ಭಧಾರಣೆಯ ಶಕ್ತಿ ಕಡಮೆಯಾಗುವುದು.

(2) ಕಣ್ಣುಗಳು ಕೈಗಳು ಮತ್ತು ಜನನೇಂದ್ರಿಯಗಳಲ್ಲಿ ಉರಿತವೂ, ಜೊಲ್ಲು ಬೆರೆತ ರಕ್ತವೂ ಒಂದು ತಿಂಗಳಲ್ಲಿ ಎರಡು ಸಲ ಬಹಿಷ್ಠೆಯಾಗುವುದೂ **ಷಷ್ಠೀಬಾಧಕ** ದೋಷದ ಕಾರ್ಯಗಳು.

(3) ಮನಸ್ಸಿನಲ್ಲಿ ಒಂದು ವಿಧ ಕಳವಳವೂ ದೇಹದಲ್ಲಿ ಭಾರವೂ ರಕ್ತಸ್ರಾವವೂ ಹೊಕ್ಕಳ ಕೆಳಭಾಗದಲ್ಲಿ ಶೂಲೆಯೂ ಮೂರು ನಾಲ್ಕು ತಿಂಗಳಿಗೊಂದಾವೃತ್ತಿ ಬಹಿಷ್ಠೆಯಾಗುವುದೂ ದೇಹವು ಕೃಶವಾಗುವುದೂ ಕೈಕಾಲುಗಳಲ್ಲಿ ಉರಿತವೂ **ಅಂಕುರಬಾಧಕದ** ಲಕ್ಷಣ. ಅಂಕುರಬಾಧಕದ ದೋಷದಿಂದ ದೇಹವು ಶುಷ್ಕವಾಗುವುದು. ಗರ್ಭ ಧರಿಸಿದರೂ ಯಾವಾಗಲೂ ಉದರಶೂಲೆ ಮೊದಲಾದ ಬಾಧೆಗಳಿರುವುವು.

(4) ದೇಹವು ಕೃಶವಾಗಿದ್ದು ಕ್ರಮೇಣ ಸ್ಥೂಲವಾಗುವುದು ಅಕಾಲದಲ್ಲಿ ಅಕ್ರಮವಾಗಿ ಬಹಿಷ್ಠೆಯಾಗುವುದು ಸ್ತನಗಳು ದಪ್ಪವಾಗುವುದು ಮೈಯಲ್ಲಿ ರಕ್ತವು ಕಡಮೆಯಾಗುವುದು. ಇವು **ಜಲಕುಮಾರಬಾಧಕ** ಲಕ್ಷಣಗಳು.

**बाधन ಬಾಧನ** (नं०) 1. ಪೀಡಿಸುವುದು, ತೊಂದರೆ ಪಡಿಸುವುದು. बाधृ (विलोडने) भावे "ल्युट्" (३-३-११५)। 2. ಅಡ್ಡಿಮಾಡುವುದು, ತಡೆಯುವುದು. (वि०) 3. ಪೀಡಿಸುವ, ತೊಂದರೆಪಡಿಸುವ. बाधृ "ल्युः" (३-१-१३४)। 4. ತಡೆಯುವ. ಪ್ರತಿಬಂಧಿಸುವ.

**बाधा ಬಾಧಾ** (स्त्री०) 1. ಪೀಡೆ, ತೊಂದರೆ, ಹಿಂಸೆ, ನೋವು. बाधृ (विलोडने) "अः" (३-३-१०३)। "दुर्वृत्ताः सन्ति शतशः दानवाः पापयोनयः। तेभ्यो न स्याद्यथा बाधा मुनीनां त्वं तथा कुरु" मार्क०। 2. ನಿಷೇಧ. 3. ಅಡ್ಡಿ, ತಡೆ. 4. ವಿರೋಧ.

**बाधित ಬಾಧಿತ** (वि०) 1. ಪೀಡಿಸಲ್ಪಟ್ಟ, ಹಿಂಸಿಸಲ್ಪಟ್ಟ. बाधृ (विलोडने) "क्तः" (३-२-१०२)। 2. ತಡೆಯಲ್ಪಟ್ಟ, ಅಡ್ಡಿಪಡಿಸಲ್ಪಟ್ಟ. 3. ನಿಷೇಧಿಸಲ್ಪಟ್ಟ. (ನ್ಯಾಯಶಾಸ್ತ್ರದಲ್ಲಿ) ವಿರೋಧಿಸಲ್ಪಟ್ಟ, ತಪ್ಪೆಂದು ಸಮರ್ಥಿಸಲ್ಪಟ್ಟ. ಇದು ಐದು ವಿಧ ಹೇತ್ವಾಭಾಸಗಳಲ್ಲೊಂದು ವಿಧ. "साध्याभाववत्पक्षको हेतुः"। "वह्निरनुष्णः द्रव्यत्वात्" ಎಂಬಲ್ಲಿ ವಹ್ನಿಯಲ್ಲಿರುವ ಉಷ್ಣತ್ವವು ತ್ವಗಿಂದ್ರಿಯದಿಂದ ತಿಳಿಯಲ್ಪಡುವುದಾದುದರಿಂದ ಪಕ್ಷವಾದ ವಹ್ನಿಯಲ್ಲಿ ಸಾಧ್ಯವಾದ ಅನುಷ್ಣತ್ವವು ಇಲ್ಲವಾಯಿತು. ಆದುದರಿಂದ ಹೇತುವು ದುಷ್ಟವಾಗಿ ಬಾಧಿತವಾಯಿತು.

**बाधिर्य ಬಾಧಿರ್ಯ** (नं०) ಕಿವುಡು. बधिरस्य भावः "ष्यञ्" (५-१-१२४)। "यदा शब्दवहं वायुः स्रोत आवृत्य तिष्ठति। शुद्धः श्लेष्मान्वितो वापि बाधिर्यं तेन जायते"।

**बाध्य ಬಾಧ್ಯ** (वि०) 1. ಬಾಧಿಸಲ್ಪಡುವ, ಪೀಡಿಸಲ್ಪಡುವ. बाधृ (विलोडने) "ण्यत्" (३-१-१२४)। 2. ವಿರೋಧಿಸಲ್ಪಡುವ, ತಪ್ಪೆಂದು ಸಮರ್ಥಿಸಲ್ಪಡುವ. 3. ತಡೆಯಲ್ಪಡುವ, ಅಡ್ಡಿಪಡಿಸಲ್ಪಡುವ.

**बान्धकिनेय ಬಾಂಧಕಿನೇಯ** (वि०) ಕುಲಟೆಯ ಮಗ, ವ್ಯಭಿಚಾರಿಣಿಯ ಮಗ. बन्धक्या अपत्यम् — बन्धकी "ढक्" "इनङ्" च (४-१-१२६)। "अथ बान्धकिनेयः स्याद्बन्धुलश्चासतीसुतः" अम०।

**बान्धव ಬಾಂಧವ** (पुं०) 1. ಬಂಧು, ನೆಂಟ, ಒಂದೇ ಕುಲದಲ್ಲಿ ಹುಟ್ಟಿದವನು. बन्धुरेव "अण्" (५-४-३८)। "त्वय्यस्याः कथमप्यबान्धवकृतां स्नेहप्रवृत्तिं च ताम्" शाकु० ४-१६। 2. ಮಿತ್ರ, ಸುಹೃತ್ತು, ಗೆಳೆಯ. [ವಿವರಕ್ಕೆ "बन्धु" ಪದದಲ್ಲಿ ನೋಡಿ.] 3. ಸಹೋದರ. 4. ಮಾತುಲ, ಸೋದರಮಾವ ಮುಂತಾದವರು.

**बान्धव्य ಬಾಂಧವ್ಯ** (नं०) ಬಂಧುತ್ವ, ಒಂದೇ ವಂಶದಲ್ಲಿ ಹುಟ್ಟಿರುವಿಕೆ, ನೆಂಟತನ. बन्धोर्भावः "ष्यञ्" (५-१-१२४)।

**बारकीर ಬಾರಕೀರ** (पुं०) 1. ಭಾವಮೈದುನ, ಪತ್ನಿಯ ಸಹೋದರ. "श्यालो बारकीरः" त्रिकाण्ड०। 2. ಪೂಜಿಸಲ್ಪಟ್ಟ ಕುದುರೆ.

**बार्बटीर ಬಾರ್ಬಟೀರ** (पुं०) 1. ತವರ. 2. ಮಾವಿನ ಹಣ್ಣಿನ ತಿರುಳು. 3. ಅಂಕುರ, ಮೊಳಕೆ. 4. ಅಸತೀಪುತ್ರ, ಕುಲಟೆಯ ಮಗ, ವ್ಯಭಿಚಾರಿಣಿಯ ಮಗ. "बर्बटीरो रङ्ग आम्रास्थ्यङ्कुरे गणिकासुते" मेदि०।

**बार्हत ಬಾರ್ಹತ** (नं०) ಬೃಹತೀಫಲ, ಹೆಗ್ಗುಳ್ಳದಕಾಯಿ, ಮುಳ್ಳುಬದನೆಯಕಾಯಿ. बृहत्याः फलम् "अण्" (४-३-१६४)।

**बार्हस्पत ಬಾರ್ಹಸ್ಪತ** (वि०) ಬೃಹಸ್ಪತಿಸಂಬಂಧವಾದ. बृहस्पतेरिदम् "अण्" (४-३-१२०)।

**बार्हस्पत्य ಬಾರ್ಹಸ್ಪತ್ಯ** (पुं०) 1. ನಾಸ್ತಿಕ, ಬೃಹಸ್ಪತಿಯಿಂದ ಹೇಳಲ್ಪಟ್ಟ ಗ್ರಂಥವನ್ನು ಅಧ್ಯಯನಮಾಡುವವನು. बार्हस्पत्यं बृहस्पतिना प्रोक्तं शास्त्रमधीयमानत्वेनास्त्यस्य "अच्" (५-२-१२७)। ಬೃಹಸ್ಪತಿಯು ಚಾರ್ವಾಕಮತಪ್ರವರ್ತಕನಾದುದರಿಂದ ಅವನ ಅನುಯಾಯಿಗಳೆಲ್ಲರೂ ನಾಸ್ತಿಕರು. (नं०) 2. ಬೃಹಸ್ಪತಿಯಿಂದ ಹೇಳಲ್ಪಟ್ಟ ಶಾಸ್ತ್ರ. बृहस्पतिना प्रोक्तम् "ण्यः" (४-३-१०१)। 3. ಬೃಹಸ್ಪತಿಯ ಕಾರ್ಯ, ಬೃಹಸ್ಪತಿಯ ಧರ್ಮ. बृहस्पतेः कर्म "यक्" (५-१-१२८)।

**बाल ಬಾಲ** (पुं०) 1. ಶಿಶು, ಸಣ್ಣ ಮಗು. बल (प्राणने) "णः" (३-१-१४०)। 2. ಹುಡುಗ, ಹದಿನಾರು ವರ್ಷ ವಯಸ್ಸಿನೊಳಗಿರುವ ಬಾಲಕ. "आषोडशाद्भवेद्बालः तरुणस्तत उच्यते। वृद्धः स्यात्सप्ततेरूर्ध्वं वर्षीयान् नवतेः परम्"। 3. ಅಜ್ಞ, ತಿಳುವಳಿಕೆಯಿಲ್ಲದವನು, ಮೂರ್ಖ. "अज्ञो भवति वै बालः पिता भवति मन्त्रदः" मनु० २-१५३। 4. ಕೇಶಪಾಶ, ತಲೆಯ ಕೂದಲು. 5. ಕುದುರೆಯ ಬಾಲ. 6. ಆನೆಯ ಬಾಲ. 7. ತೆಂಗಿನ ಮರ. 8. ಐದು ವರ್ಷ ವಯಸ್ಸಿನ ಆನೆಯ ಮರಿ. 9. ಕುದುರೆಯ ಮರಿ. "पञ्चवर्षो गजो बालः स्यात् पोतो दशवर्षकः" वैज०। (पुं०नं०) 10. ಮುಡಿವಾಳವೆಂಬ ಗಂಧಿಗರ ಒಂದು ಸುಗಂಧ ದ್ರವ್ಯ. (वि०) 11. ಎಳೆಯದಾದ, ಚಿಕ್ಕದಾದ, ದೊಡ್ಡದಾಗಿ ಬೆಳೆಯದಿರುವ. "दिनावसानोत्सुकबालवत्सा विसृज्यतां धेनुरियं महर्षेः"

रघु० २-४५। (स्त्री०) बाला ಬಾಲಾ. 12. ಅರಿಶಿನ. 13. ಒಂದು ಜಾತಿಯ ಮಲ್ಲಿಗೆ. "बालो ना कुन्तलेऽश्वस्य करिणश्चापि वालधौ। नारिकेले हरिद्रायां मल्लिकाभिद्यपि स्त्रियाम्। वाच्यलिङ्गोऽर्भके मूर्खे ह्रीबेरे पुन्नपुंसकम्" मेदि०। 14. ಬಾಲಿಕೆ, ಹುಡುಗಿ. "सा बाला परवतीति मे विदितम्" शाकु० ३-२।

**बालक ಬಾಲಕ** (पुं०) 1. ಶಿಶು, ಸಣ್ಣ ಮಗು. बाल एव स्वार्थे "कन्"। 2. ಹುಡುಗ. 3. ಆನೆಯ ಬಾಲ. 4. ಕುದುರೆಯ ಬಾಲ. 5. ಅಜ್ಞ, ಮೂರ್ಖ, ತಿಳಿಗೇಡಿ. 6. ಕಪ್ಪು ಬತ್ತ. 7. ಮುಡಿವಾಳ. 8. ಉಂಗುರ. 9. ಬಳೆ, ವಲಯ. (स्त्री०) **बालिका ಬಾಲಿಕಾ.** 10. ಹುಡುಗಿ. "बालकस्तु शिशावज्ञे वालधौ हयहस्तिनोः। अङ्गुरीयक ह्रीबेरवलये पुंसि बालिका। बालायाम्" मेदि०। 11. ಕರ್ಣಾಭರಣ. 12. ಸೈಕತ, ಮರಳು. [ವಿಶ್ವ ಪ್ರಕಾಶದಲ್ಲಿ ಮುಡಿವಾಳ, ಉಂಗುರ ಮತ್ತು ಬಳೆ ಈ ಅರ್ಥಗಳಲ್ಲಿ ನಪುಂಸಕಲಿಂಗವೆಂದು ಉಕ್ತವಾಗಿದೆ.]

**बालकीय ಬಾಲಕೀಯ** (वि०) ಹುಡುಗನ ಸಂಬಂಧವಾದ, ಮಕ್ಕಳಿಗೆ ಸಹಜವಾದ.

**बालकृमि ಬಾಲಕೃಮಿ** (पुं०) ಹೇನು, ಕೂರೆ.

**बालकृष्ण ಬಾಲಕೃಷ್ಣ** (पुं०) ಎಳೆವಯಸ್ಸಿನ ಶ್ರೀಕೃಷ್ಣ. बाल: कृष्ण:।

**बालक्रीडन ಬಾಲಕ್ರೀಡನ** (न०) 1. ಮಕ್ಕಳ ಆಟ. 2. ಮಕ್ಕಳ ಆಟದ ಬೊಂಬೆ ಮೊದಲಾದುವು. बाला: क्रीडन्त्यनेन — क्रीड् "ल्युट्" (३-३-११७)।

**बालक्रीडनक ಬಾಲಕ್ರೀಡನಕ** (पुं०) ಮಕ್ಕಳ ಆಟದ ಸಾಮಾನು, ಚೆಂಡು ಕವಡೆ ಮೊದಲಾದುದು.

**बालक्रीडा ಬಾಲಕ್ರೀಡಾ** (स्त्री०) ಮಕ್ಕಳ ಆಟ. बालानां क्रीडा।

**बालगर्भिणी ಬಾಲಗರ್ಭಿಣೀ** (स्त्री०) ಮೊದಲನೆಯ ಸಲ ಗರ್ಭಧರಿಸಿದ ಹಸು. बाला चासौ गर्भिणी च।

**बालगोपाल ಬಾಲಗೋಪಾಲ** (पुं०) ಶ್ರೀ ಬಾಲಕೃಷ್ಣ ಮೂರ್ತಿ.

**बालग्रह ಬಾಲಗ್ರಹ** (पुं०) ಶಿಶುಗಳನ್ನು ಪೀಡಿಸುವ ಒಂದು ಗ್ರಹ. बालानां बालकानां ग्रह:। ತಾಯಿ ತಂದೆಗಳ ಅನಾಚಾರದಿಂದ ಗ್ರಹಗಳು ಶಿಶುಗಳನ್ನು ಪೀಡಿಸುವುವು. "बालग्रहा अनाचारात् पीडयन्ति शिशुं यत:। तस्मात्तदुपसर्गेभ्यो रक्षेद्बालं प्रयत्नत:"। ಆದುದರಿಂದ ಇಂತಹ ಉಪದ್ರವಗಳಿಂದ ಮಕ್ಕಳನ್ನು ರಕ್ಷಿಸಬೇಕು.

**बालचन्द्र ಬಾಲಚಂದ್ರ** (पुं०) ವೃದ್ಧಿಹೊಂದುತ್ತಿರುವ ಚಂದ್ರ.

**बालतनय ಬಾಲತನಯ** (पुं०) ಖದಿರವೃಕ್ಷ, ಕಗ್ಗಲಿಮರ. बालास्तनया: पत्राण्यस्य।

**बालतन्त्र ಬಾಲತಂತ್ರ** (न०) ಸೂಲಗಿತ್ತಿತನ, ಶಿಶುವಿನ ರಕ್ಷಣೆಯ ಉಪಾಯ, ಕುಮಾರ ಭೃತ್ಯ. बालार्थं तद्रक्षणार्थं तन्त्रमुपाय:। ಇದು ಆಯುರ್ವೇದದ ಅಷ್ಟಾಂಗಗಳಲ್ಲೊಂದು. ಗರ್ಭಿಣಿಯ ಉಪಚಾರದಿಂದ ಶಿಶುವಿನ ರಕ್ಷಣೆಯಾಗಬೇಕಾಗಿರುವುದರಿಂದ ಇದಕ್ಕೆ ಕೌಮಾರಭೃತ್ಯವೆಂದು ಹೆಸರು.

**ಆಯುರ್ವೇದದ ಎಂಟು ಅಂಗಗಳು:** (1) शल्यम् (2) शालाक्यम् (3) कायचिकित्सा (4) भूतविद्या (5) कौमारभृत्यम् (6) अगदतन्त्रम् (7) रसायनतन्त्रम् ಮತ್ತು (8) वाजीकरणतन्त्रम्। "कुमारभृत्या स्याद्बालतन्त्रम् गर्भिण्यवेक्षणम्" त्रिकाण्ड०।

**बालपत्र ಬಾಲಪತ್ರ** (पुं०) ಖದಿರವೃಕ್ಷ, ಕಗ್ಗಲಿಮರ. बाल इव अल्पं पत्रमस्य।

**बालपाश्या ಬಾಲಪಾಶ್ಯಾ** (स्त्री०) ಜಡೆಬಿಲ್ಲೆ, ತಲೆಯಲ್ಲಿ ಜಡೆಯ ಮೇಲೆ ಹಾಕಿಕೊಳ್ಳಬಹುದಾದ ಒಂದು ಆಭರಣ. बालपाशे केशसमूहे साधु: "यत्" (४-४-९८)।

**बालबोध ಬಾಲಬೋಧ** (पुं०) 1. ಮಕ್ಕಳಿಗೆ ಬೋಧನೆ ಮಾಡುವುದು, ಹುಡುಗರಿಗೆ ಪಾಠಹೇಳುವುದು. 2. ಮಕ್ಕಳ ಶಕ್ತಿಗೆ ತಕ್ಕಂತೆ ರಚಿಸಲ್ಪಟ್ಟ ಪಠ್ಯಪುಸ್ತಕ, ಮಕ್ಕಳ ವಯಸ್ಸಿಗೆ ಅನುಗುಣವಾಗಿ ಬೋಧನೆ ಮಾಡಲು ರಚಿತವಾದ ಪಾಠದ ಪುಸ್ತಕ.

**बालभद्रक ಬಾಲಭದ್ರಕ** (पुं०) ಒಂದು ಜಾತಿಯ ವಿಷ, ವಿಷದ ಒಂದು ಭೇದ.

**बालभार ಬಾಲಭಾರ** (पुं०) ಕೇಶಪಾಶ, ಕೇಶಸಮೂಹ. बालस्य भार:। "बाधेतोल्काक्षपितचमरीबालभारो दवाग्नि:" मेघ० १-५३।

**बालभाव ಬಾಲಭಾವ** (पुं०) ಬಾಲ್ಯ, ಶೈಶವ, ಹುಡುಗನಾಗಿರುವಿಕೆ. बालस्य भाव:।

**बालभैषज्य ಬಾಲಭೈಷಜ್ಯ** (न०) ರಸಾಂಜನ. बालस्य शिशोर्भैषज्यम्।

**बालभोज्य ಬಾಲಭೋಜ್ಯ** (न०) 1. ಚಣಕ, ಕಡಲೆ. (वि०) 2. ಮಕ್ಕಳಿಂದ ತಿನ್ನಲ್ಪಡುವ. 3. ಮಕ್ಕಳು ತಿನ್ನಲು ಯೋಗ್ಯವಾದ. बालैर्भुज्यते।

**बालमूषिका ಬಾಲಮೂಷಿಕಾ** (स्त्री०) ಚಿಟ್ಟಿಲಿ, ಸಣ್ಣ ಜಾತಿಯ ಇಲಿ. बाला चासौ मूषिका च।

**बालराज ಬಾಲರಾಜ** (पुं०) 1. ಶ್ರೇಷ್ಠನಾದ ಹುಡುಗ. ಒಳ್ಳೆಯ ಹುಡುಗ. (न०) 2. ವೈಡೂರ್ಯಮಣಿ. बाल: अल्पोऽपि राजते।

**बालरोग ಬಾಲರೋಗ** (पुं०) ಸಣ್ಣ ಮಕ್ಕಳಿಗೆ ಬರುವ ವ್ಯಾಧಿ. बालानां रोग:। ಚಿಕ್ಕ ಮಕ್ಕಳನ್ನು ಸಾಕುವ ತಾಯಿ ಅಥವಾ ದಾದಿಯು ಗುರುವಾದ ಆಹಾರವನ್ನು ಸೇವಿಸುವುದರಿಂದ ವಾತ ಪಿತ್ತ ಕಫಗಳು ಕೆಟ್ಟು ಅವರ ಸ್ತನ್ಯವು (ಎದೆಯ ಹಾಲು) ಕೆಡುವುದರಿಂದ ಮಕ್ಕಳಿಗೆ ಅನೇಕ ವ್ಯಾಧಿಗಳು ಸಂಭವಿಸುವುವು. "धात्र्यास्तु गुरुभिर्भोज्यैर्विषमैर्दोषजैस्तथा। दोषा देहे प्रकुप्यन्ति तत: स्तन्यं प्रदुष्यति। मिथ्याहारविहारिण्या दुष्टा वातादय: स्त्रिया:। दूषयन्ति पयस्तेन जायन्ते व्याधय: शिशो:।" ವಾತದೋಷದಿಂದ ಕೆಟ್ಟ ಹಾಲನ್ನು ಕುಡಿದ ಶಿಶುವು ವಾತ ರೋಗ ಪೀಡಿತವಾಗುವುದು. ಅದರ ಸ್ವರವು ಕುಗ್ಗುವುದು. ದೇಹವು ಕೃಶವಾಗುವುದು. ಮಲಮೂತ್ರಗಳೂ ಬಂಧಿಸುವುವು. ಪಿತ್ತದೋಷದಿಂದ ಕೆಟ್ಟ ಹಾಲನ್ನು ಕುಡಿದ ಮಗುವಿನ ದೇಹವು ಬೆವರುವುದು. ಯಾವಾಗಲೂ ಬಾಯಾರುವುದು. ದೇಹವು ಯಾವಾಗಲೂ ಉಷ್ಣವಾಗಿರುವುದು. ಇದರಿಂದ ಕಾಮಾಲೆ ರೋಗವೂ ಬರುವುದು. "वातदुष्टं शिशु: स्तन्यं पिबन् वातगदातुर:। क्षामस्वर: कृशाङ्ग: स्याद्बद्धविण्मूत्रमारुत:"। "स्विन्नो भिन्नमलो बाल: कामलापित्तरोगवान्। तृष्णालुरुष्णसर्वाङ्ग: पित्तदुष्टं पय: पिबन्"। ಕಫ ದೋಷದಿಂದ ಕೆಟ್ಟಿರುವ ಸ್ತನ್ಯವನ್ನು ಕುಡಿದ ಮಗುವಿನ ಬಾಯಲ್ಲಿ ಯಾವಾಗಲೂ ಜೊಲ್ಲು ಸುರಿಯುವುದು. ಎದೆಯಲ್ಲಿ ಕಫ ಸೇರುವುದು. ಮಗುವು ಮಂಕಾಗುವುದು. ಮುಖ ಕಣ್ಣುಗಳು ಊದಿಕೊಳ್ಳುವುವು. ಕುಡಿದ ಹಾಲನ್ನು ವಾಂತಿ ಮಾಡುವುದು. "श्लेष्मदुष्टं पिबन् क्षीरं लालालु: श्लेष्मरोगवान्। निद्रार्दितो जड: शूनवक्त्राक्ष: छर्दन: शिशु:"। ದೊಡ್ಡವರಿಗೆ ಬರುವ ಜ್ವರ ಮೊದಲಾದ ವ್ಯಾಧಿಗಳು ಶಿಶುಗಳಿಗೆ ಬರುವುದಲ್ಲದೆ ಶಿಶುಗಳಿಗೇ ಬರುವ ರೋಗಗಳೂ ಅನೇಕವಾಗಿವೆ. तालुकंटकम् महापद्मम् कुकूणक: तुण्डिगुदपाक: अहिपूतनम् पारगर्भिकम् ಮುಂತಾದ ವ್ಯಾಧಿಗಳು ಶಿಶುಗಳಿಗೆ ಮಾತ್ರ ಬರುವುವು. [ಇವುಗಳ ಸ್ವರೂಪ ಮತ್ತು ಚಿಕಿತ್ಸೆಗಳಿಗೆ "भावप्रकाश" ಗ್ರಂಥದಲ್ಲಿ ನೋಡಿ.]

**बाललता ಬಾಲಲತಾ** (स्त्री०) ಎಳೆಯ ಲತೆ, ಹೊಸದಾಗಿ ಚಿಗುರಿರುವ ಬಳ್ಳಿ. बाला चासौ लता च। "अवाकिरन् बाललता: प्रसूनैराचारलाजैरिव पौरकन्या:" रघु० २-१०।

**बालव ಬಾಲವ** (पुं०) ಬವ ಮೊದಲಾದ ಹನ್ನೊಂದು ಕರಣಗಳಲ್ಲಿ ಎರಡನೆಯದು.

**बालवत्स ಬಾಲವತ್ಸ** (पुं०) ಕಂದುಬಣ್ಣದ ಕಪೋತ, ಬೂದಿಬಣ್ಣದ ಪಾರಿವಾಳ. "कपोतो बालवत्स: स्यात्" वैज०।

**बालवायज ಬಾಲವಾಯಜ** (न०) ವೈಡೂರ್ಯಮಣಿ. वालवाये देशविशेषे जायते — जनी (प्रादुर्भावे) "ड:" (३-२-९७)।

**बालवाह्य ಬಾಲವಾಹ್ಯ** (पुं०) ಕಾಡುಮೇಕೆ. बाला: पोता: वाह्या यस्य। ಕಾಡುಮೇಕೆಗಳು ಏನಾದರೂ ಭಯವುಂಟಾದರೆ ಮರಿಗಳನ್ನು ಬೆನ್ನಿನ ಮೇಲೆ ಹೊತ್ತುಕೊಂಡು ಓಡುವುದರಿಂದ ಈ ಹೆಸರು. (वि०) 2. ಬಾಲಕರಿಂದ ಹೊರಲ್ಪಡುವ. ಮಕ್ಕಳಿಂದ ಒಯ್ಯಲ್ಪಡುವ.

**बालव्यजन ಬಾಲವ್ಯಜನ** (न०) ಚಾಮರ. बालेन चमरीमृगबालेन निर्मितं व्यजनम्. "यस्यार्थयुक्तं गिरिराजशब्दं कुर्वन्ति बालव्यजनैश्चमर्य:" कुमा० १-१३।

**बालहस्त ಬಾಲಹಸ್ತ** (पुं०) ಕೂದಲುಗಳಿಂದ ತುಂಬಿದ ಬಾಲ.

**बाला ಬಾಲಾ** (स्त्री०) 1. ಹುಡುಗಿ, ಹೆಣ್ಣುಮಗು, ಕುಮಾರಿ. 2. ಯುವತಿ, ತರುಣಿ, ಪ್ರಾಯದ ಹೆಂಗಸು. "सा बाला परवतीति मे विदितम्" शाकु० ३-२। 3. ಅರಿಶಿನ. 4. ತೆಂಗಿನಕಾಯಿ. 5. ಸಣ್ಣ ಯಾಲಕ್ಕಿ. 6. ಒಂದು ಜಾತಿಯ ಮಲ್ಲಿಗೆ ಗಿಡ.

**बालार्क ಬಾಲಾರ್ಕ** (पुं०) ಎಳೆಯ ಸೂರ್ಯ, ಆಗತಾನೆ ಉದಯಿಸಿದ ಸೂರ್ಯ, ಪ್ರಾತಃಕಾಲದ ಸೂರ್ಯ. बालश्चासौ अर्कश्च।

**बालिका ಬಾಲಿಕಾ** (स्त्री०) 1. ಹುಡುಗಿ. ಕುಮಾರಿ. 2. ಪ್ರಾಯದ ಹೆಂಗಸು, ಯುವತಿ, ತರುಣಿ. 3. ಮರಳು. "बालायां वालुकायां च बालिकाशब्द इष्यते" शाश्व०। 4. ಎಲೆಗಳ ಮರ್ಮರಶಬ್ದ. 5. ಕಿವಿಯ ಒಂದು ಆಭರಣ. "बालिका कर्णभूषणे। पिछोलायां बालुकायां बालायाम्" हेम०। "बालिका। बालायां बालुका पत्रकाहले कर्णभूषणे" मेदि०।

**बालिश ಬಾಲಿಶ** (पुं०) 1. ಸಣ್ಣ ಮಗು, ಎಳೆಯ ಮಗು, ಶಿಶು. बाडृ (आप्लाव्ये) "इन्" (उ० ४-११७)। बाडिं वृद्धिं स्यति — शो (तनूकरणे) "क:"

(३-२-३)। "बालिशा बत यूयं वा अधर्मे धर्ममानिनः" भाग० ४-१४-२३। (वि०) 2. ಮೂರ್ಖ, ಅಜ್ಞ, ತಿಳಿಗೇಡಿ. "अपाङ्क्तधो यावतः पाङ्क्तयान् भुञ्जानाननुपश्यति। तावतां न फलं तत्र दाता प्राप्नोति बालिशः" मनु० ३-१७६। (न०) 3. ಉಪಧಾನ, ತಲೆದಿಂಬು.

**बालिशता ಬಾಲಿಶತಾ** (स्त्री०) ಅಜ್ಞತೆ, ತಿಳಿಗೇಡಿತನ, ಮೂರ್ಖತನ. बालिशस्य भावः "तल्" (५-१-११९)। "त्वः"। **बालिशत्वम् ಬಾಲಿಶತ್ವಮ್.**

**बालेय ಬಾಲೇಯ** (पुं०) 1. ಬಲಿಚಕ್ರವರ್ತಿಯ ಮಗ. बलेरपत्यम् "ढञ्" (४-१-१३६)। "बलेः पुत्राश्च पौत्राश्च शतशोऽथ सहस्रशः। बालेयो नाम विख्यातो गणो विक्रान्तपौरुषः"। 2. ರಾಸಭ, ಗರ್ದಭ, ಕತ್ತೆ. 3. ಗರ್ದಭ ರೂಪದಿಂದಿದ್ದ ಬಲಿಚಕ್ರವರ್ತಿ. "एवमुक्तो भगवता महेन्द्रः पृथिवीं तदा। चचारैरावतस्कन्धमधिरुह्य श्रिया वृतः। ततो ददर्श स बलिं खरवेषेण संवृतम्। यथाख्यातं भगवता शून्यागारकृतालयम्" भा० भीष्म० २३०-१२, १३। (वि०) 4. ಮೃದುವಾದ, ಮೆದುವಾದ. 5. ಪೂಜೆಗೆ ಹಿತವಾದ, ಉಪಹಾರಕ್ಕೆ ಯೋಗ್ಯವಾದ. बलये इमे "ढञ्" (५-१-१३)। "पुष्पं फलं चार्तवमाहरन्त्यो बीजं च बालेयमकृष्टरोहि" रघु० १४-७७।

**बालेयशाक ಬಾಲೇಯಶಾಕ** (पुं०) ಭಾರಂಗಿ ಗಿಡ. बालेयस्य गर्दभस्य शाकः। ಇದನ್ನು ಕತ್ತೆಯು ತಿನ್ನುವುದರಿಂದ ಈ ಹೆಸರು.

**बालेष्ट ಬಾಲೇಷ್ಟ** (पुं०) ಬದರವೃಕ್ಷ, ಎಲಚಿಮರ, ಬೋರೆಗಿಡ. बालानामिष्टः।

**बालोपवीत ಬಾಲೋಪವೀತ** (न०) 1. ಯಜ್ಞೋಪವೀತ. 2. ಮಕ್ಕಳು ಹೊದೆಯುವ ವಸ್ತ್ರ. बालानामुपवीतमिव।

**बाल्य ಬಾಲ್ಯ** (न०) 1. ಶೈಶವ, ಹುಡುಗತನ. बालस्य भावः "ष्यञ्" (५-१-१२४)। "रम्यां रघुप्रतिनिधिः स नवोपकार्यां बाल्यात्परामिव दशां मदनोऽध्युवास" रघु० ५-६३। 2. ಚಿಕ್ಕದಾಗಿರುವಿಕೆ, ಅಭಿವೃದ್ಧಿಹೊಂದುವುದಕ್ಕೆ ಪೂರ್ವದ ಅವಸ್ಥೆ, ಬೆಳೆಯುವ ಮೊದಲಿನ ಅವಸ್ಥೆ. "दिवापि निष्ठ्यूतमरीचिभासा बाल्यादनाविष्कृतलाञ्छनेन" कुमा० ७-३५। 3. ಹುಡುಗಾಟ, ಮಕ್ಕಳಾಟ, ತಿಳಿವಳಿಕೆಯಿಲ್ಲದಿರುವಿಕೆ.

**बाष्प ಬಾಷ್ಪ** (पुं०) 1. ಹಬೆ, ನೀರಿನ ಆವಿ. बाधृ (विलोडने) "पः" घस्य षश्च (उ० ३-२८)। 2. ನೇತ್ರಜಲ, ಕಣ್ಣೀರು. "बाष्पो नेत्रजलोष्मणोः" विश्व०। ನೇತ್ರಜಲವು ಸಂತೋಷದಿಂದಲೂ ಮತ್ತು ದುಃಖದಿಂದಲೂ ಹೊರಡುವುದು. "आनन्दबाष्पविसरो नयने प्रजानामाविर्बभूव मकरन्द इवारविन्दे" चं० रा०। "यास्यत्यद्य शकुन्तलेति हृदयं संस्पृष्टमुत्कण्ठया कण्ठः स्तम्भितबाष्पवृत्तिकलुषश्चिन्ताजडं दर्शनम्" शाकु० ४-५।

**बाष्पिका ಬಾಷ್ಪಿಕಾ** (स्त्री०) ಹಿಂಗಿನ ಗಿಡ.

**बास्त ಬಾಸ್ತ** (वि०) ಹೋತದ ಸಂಬಂಧವಾದ. बस्तस्य छागस्येदम् "अण्" (४-३-१२०)। "कार्ष्णरौरवबास्तानि चर्माणि ब्रह्मचारिणः" मनु० २-४१।

**बाह ಬಾಹ** (पुं०) 1. ಭುಜ, ತೋಳು. बाहुरेव। पृषो०। 2. ಕುದುರೆ. "बाहोऽश्वभुजयोः पुमान्" इति दामोदरः।

**बाहा ಬಾಹಾ** (स्त्री०) ಭುಜ, ತೋಳು. बाहुरेव। पृषो०। "बाहुर्वाहा भुजाभुजः"। "स्कन्धो दोःशिखरोंऽसोऽस्त्री बाहा बाहुभुजौ न पण्" वैज०। "चूतसंगतापि मां प्रत्यालिङ्गेतोगताभिः शाखाबाहाभिः" शाकु० ४।

**बाहीक ಬಾಹೀಕ** (वि०) 1 ಹೊರಗಡೆ ಇರುವ, ಹೊರಗಿನ. बहिः भवः "ईकक्" टिलोपश्च (वा० ४-१-८५)। (पुं०ब०व०) 2. ಬಾಹೀಕ ದೇಶದ ಜನರು. (पुं०) 3. ಬಾಹೀಕ ದೇಶದಲ್ಲಿ ವಾಸಮಾಡುವವನು.

**बाहु ಬಾಹು** (पुं०) 1. ಭುಜ, ತೋಳು. बाधते—बाधृ (विलोडने) "कुः" हश्चादेशः (उ० १-२७)। "बाहुप्रतिष्टम्भविवृद्धमन्युरभ्यर्णमागस्कृतमस्पृशद्भिः" रघु० २-३२। ಸಾಮುದ್ರಿಕ ಲಕ್ಷಣದಂತೆ ದೀರ್ಘವಾದ ತೋಳುಗಳುಳ್ಳವನು ರಾಜನಾಗುವನು. ತೂಗಾಡುವ ತೋಳುಗಳುಳ್ಳವನು ಉತ್ತಮವಾದ ಐಶ್ವರ್ಯವನ್ನು ಹೊಂದುವನು. ಹ್ರಸ್ವವಾದ (ಮೋಟು) ತೋಳುಗಳುಳ್ಳವನು ದಾಸನಾಗುತ್ತಾನೆ (ಇತರರಿಗೆ ಸೇವಕನಾಗುತ್ತಾನೆ). ಎಡಭುಜದಲ್ಲಿ ಸುಳಿಯಿರುವವನೂ ಉದ್ದವಾದ ತೋಳುಗಳುಳ್ಳವನೂ ರಾಜನಾಗುವನು. "दीर्घबाहुर्भवेद्राजा समुद्रवचनं यथा। प्रलम्बबाहुरैश्वर्यं प्राप्नुयाद्गुणसंयुतम्। ह्रस्वबाहुर्भवेद्दासः परप्रेष्यकरस्तथा। वामावर्तभुजा ये तु ये च दीर्घभुजा नराः। संपूर्णबाहवो ये तु राजानस्ते प्रकीर्तिताः"। 2. ಮೊಳಕೈಯ ಮೇಲುಭಾಗ. "मुखं बाहू प्रबाहू च मनः सर्वेन्द्रियाणि च। रक्षत्वव्याहतैश्वर्यस्तव नारायणोऽव्ययः" विष्णुपु० ५-५-१९। 3. ರಥದ ಮೂಕಿಯ ಮರ.

**बाहुक ಬಾಹುಕ** (ಪುಂ) ಋತುಪರ್ಣರಾಜನ ಅಶ್ವಪಾಲ (ಕುದುರೆಯ ರಕ್ಷಕ) ರೂಪದಿಂದಿದ್ದ ನಳಮಹಾರಾಜ. [ಪುಷ್ಕರನಿಂದ ಜೂಜಿನಲ್ಲಿ ಪರಾಜಯ ಹೊಂದಿದ ನಳ ಚಕ್ರವರ್ತಿಯು ಗ್ರಹಚಾರ ದೋಷದಿಂದ ಧರ್ಮಪತ್ನಿ ಯಾದ ದಮಯಂತಿಯೊಡನೆ ಅರಣ್ಯಕ್ಕೆ ಹೋಗಿ ಅಲ್ಲಿ ಅವಳನ್ನು ಬಿಟ್ಟು ಅವಳಿಗೆ ತಿಳಿಯದಂತೆ ಓಡಿಹೋದನು. ಮುಂದೆ ಹೋಗುತ್ತಿದ್ದಾಗ ಕಾಡುಕಿಚ್ಚಿನಲ್ಲಿ ಸಿಕ್ಕಿಕೊಂಡು ಚೀರಾಡುತ್ತಿದ್ದ ಕಾರ್ಕೋಟಕನೆಂಬ ಸರ್ಪವನ್ನು ಬದುಕಿಸಿ ಅದರ ಸಲಹೆಯಂತೆ ಋತುಪರ್ಣರಾಜನ ನಗರದಲ್ಲಿ ರಾಜನ ಅಶ್ವಪಾಲಕನಾಗಿ ಸೇರಿಕೊಂಡನು. ನಳನು ಋತುಪರ್ಣನಿಗೆ ಅಶ್ವವಿದ್ಯೆಯನ್ನು ಹೇಳಿಕೊಟ್ಟು ಅವ ನಿಂದ ಅಕ್ಷವಿದ್ಯೆಯನ್ನು ಕಲಿತನು. ಇದರಿಂದ ಪುಷ್ಕರ ನನ್ನು ಜೂಜಿನಲ್ಲಿ ಸೋಲಿಸಿ ರಾಜ್ಯವನ್ನು ಪಡೆದು ದಮಯಂತಿಯೊಡನೆ ಸುಖವಾಗಿ ರಾಜ್ಯವಾಳುತ್ತಿದ್ದನು.]

**बाहुकुण्ठ ಬಾಹುಕುಂಠ** (ವಿ೦) ಮೊಂಡಾದ ತೋಳು ಗಳುಳ್ಳ, ತುಂಡು ತೋಳುಗಳುಳ್ಳ. बाहौ कुण्ठः।

**बाहुकुन्थ ಬಾಹುಕುಂಥ** (ಪುಂ) ಹಕ್ಕಿಯ ಗರಿ. बाहूरिव कुथ्नाति — कुन्थ (संश्लेषणे) "अच्" (३-१-१३४)।

**बाहुज ಬಾಹುಜ** (ಪುಂ) 1. ಕ್ಷತ್ರಿಯ. बाहुभ्यां परमात्मनः भुजाभ्यां बाहोर्वा जायते — जनी (प्रादुर्भावे) "ड:" (३-२-९७, ९८ वा)। "बाहू राजन्यः कृतः" श्रुतिः। 2. ಶುಕ, ಗಿಣಿ. 3. ತಾನಾಗಿ ಹುಟ್ಟಿ ಬೆಳೆದ ಎಳ್ಳು. (ವಿ೦) 4. ತೋಳಿನಲ್ಲಿ ಹುಟ್ಟಿದ.

**बाहुत्राण ಬಾಹುತ್ರಾಣ** (ನ೦) ಬಾಣಗಳ ಪೆಟ್ಟು ಬೀಳದಿರು ವಂತೆ ತೋಳಿಗೆ ಹಾಕುವ ಲೋಹಕವಚ. बाहुः त्रायतेऽनेन — त्रैङ (पालने) "ल्युट्" (३-३-११७)।

**बाहुदा ಬಾಹುದಾ** (ಸ್ತ್ರೀ೦) ಬಾಹುದಾ ನದಿ. [ಪ್ರಸೇನ ಜಿತ್ತಿನ ಪತ್ನಿಯಾದ ಗೌರಿಯು ಪತಿಯ ಶಾಪದಿಂದ ಈ ನದಿಯ ರೂಪವನ್ನು ಪಡೆದಳು. ಈ ನದಿಯು ಹಿಮಾಚಲದಿಂದ ಹರಿದು ಬರುವುದು. ಲಿಖಿತ ಮುನಿಯು ತಾನು ಮಾಡಿದ ಪಾಪಕೃತ್ಯಗಳ ಪ್ರಾಯಶ್ಚಿತ್ತಕ್ಕಾಗಿ ತನ್ನ ಕೈಗಳನ್ನು ಕತ್ತರಿಸಿಕೊಂಡನು. ಅಣ್ಣನಾದ ಶಂಖನ ಮಾತಿ ನಂತೆ ಈ ನದಿಯಲ್ಲಿ ಸ್ನಾನಮಾಡಿದುದರಿಂದ ಮತ್ತೆ ತೋಳುಗಳು ಬಂದುವು. ಇದರಿಂದ ಈ ನದಿಗೆ "बाहुदा" ಎಂಬ ಹೆಸರಾಯಿತು.] "तस्य तद्वचनं श्रुत्वा शङ्खस्य लिखितस्तदा। अवगाह्यापगां पुण्यामुदकार्थं प्रचक्रमे। प्रादुरास्तां ततस्तस्य करौ जलजसन्निभौ। ततः स विस्मितो भ्रातुर्दर्शयामास तौ करौ" भा० शान्ति० २३।

**बाहुभूषा ಬಾಹುಭೂಷಾ** (ಸ್ತ್ರೀ೦) ತೋಳಿನ ಆಭರಣ, ಕೇಯೂರ, बाह्वोर्भूषा आभरणम्।

**बाहुमात्र ಬಾಹುಮಾತ್ರ** (ವಿ೦) ಒಂದು ತೋಳಿನ ಅಳತೆ ಯುಳ್ಳ. बाहुः परिमाणमस्य "मात्रच्" (५-२-३७)।

**बाहुमूल ಬಾಹುಮೂಲ** (ನ೦) ಕಕ್ಷ, ಕಂಕಳು. बाहोर्मूलम्।

**बाहुयुद्ध ಬಾಹುಯುದ್ಧ** (ನ೦) ಪರಸ್ಪರ ತೋಳುಗಳನ್ನು ಹಿಡಿದು ಮಾಡುವ ಯುದ್ಧ, ಕೈ ಕಾಳಗ. बाहुभिर्युद्धम्।

**बाहुल ಬಾಹುಲ** (ಪುಂ) 1. ವಹ್ನಿ, ಬೆಂಕಿ. बहुलानां कृत्तिकानामयम् "अण्"। [ಕೃತ್ತಿಕಾನಕ್ಷತ್ರವು ಅಗ್ನಿ ದೇವತಾಕವಾದುದು.] 2. ಕಾರ್ತಿಕಮಾಸ. बहुलाभिः कृत्तिकाभिर्युक्ता पौर्णमासी — "अण्" (४-२-३)। साऽस्मिन्नस्ति "अण्" (४-२-२१)। (ಸ್ತ್ರೀ೦) **—ला —ಲಾ.** 3. ಕಾರ್ತಿಕಮಾಸದ ಹುಣ್ಣಿಮೆ. बहुलाभिः कृत्तिकाभिः युक्ता पौर्णमासी "अण्" (४-२-३)।

**बाहुलक ಬಾಹುಲಕ** (ನ೦) ವ್ಯಾಕರಣ ಶಾಸ್ತ್ರದಲ್ಲಿ ಯಾವು ದೊಂದು ನಿಯಮಕ್ಕೂ ಒಳಪಡದ ವಿಧಿನಿಷೇಧಗಳ ವಿಧಾನ ಮೊದಲಾದುದು. ಒಂದು ಕಡೆ ವಿಹಿತವಾದ ಶಾಸ್ತ್ರವು ಕೆಲವು ಕಡೆ ಬರದೆ ಇರುವುದು, ಕೆಲವು ಕಡೆ ವಿಕಲ್ಪ ವಾಗಿ ಬರುವುದು ಇತ್ಯಾದಿ. (बहुल ಗ್ರಹಣದಿಂದ) बहुलेन बहुलग्रहणेन निर्वृत्तम् "अञ्" (४-२-७५)। संज्ञायां "कन्"।

**बाहुलेय ಬಾಹುಲೇಯ** (ಪುಂ) ಕಾರ್ತಿಕೇಯ, ಷಣ್ಮುಖ, ಕುಮಾರಸ್ವಾಮಿ. बहुलानां कृत्तिकानक्षत्राणामपत्यम् "ढक्" (४-१-१२०)।

**बाहुल्य ಬಾಹುಲ್ಯ** (ನ೦) ಸಮೃದ್ಧಿ, ಹೇರಳವಾಗಿರುವಿಕೆ, ಪುಷ್ಕಲವಾಗಿರುವಿಕೆ. बहुलस्य भावः "ष्यञ्" (५-१-१२४)।

**बाहुशालिन् ಬಾಹುಶಾಲಿನ್** (ವಿ೦) ಭುಜಪರಾಕ್ರಮ ದಿಂದ ಪ್ರಕಾಶಿಸುವ. बाहुभ्यां तद्विक्रमाधिक्येन शालते — शालृ (कत्थने) "णिनिः" (३-२-७८)। "अंस-कस्तूरिका भूमिर्भवतां बाहुशालिनाम्" याद० २२-७।

**बाहूबाहवि ಬಾಹೂಬಾಹವಿ** (ಅವ್ಯ೦) ಕೈಕಾಳಗ, ತೋಳು ಗಳಿಂದ ಪರಸ್ಪರ ಹೊಡೆದಾಡಿ ಮಾಡುವ ಯುದ್ಧ. बाहुभ्यां बाहुभ्यां प्रहृत्येदं प्रवृत्तं युद्धम् "इच्" (५-४-१२७)।

**बाह्य ಬಾಹ್ಯ** (ವಿ೦) 1. ಹೊರಗಿನ, ಹೊರಗಡೆ ಇರುವ. बहिः भवः "यञ्" टिलोपश्च (वा० ४-१-८५)। "यस्य चोपवनं बाह्यं गन्धवद्गन्धमादनम्" कुमा० ६-४६। 2. ಒಂದು ವಸ್ತುವಿನೊಡನೆ ಅಥವಾ ಒಂದು ವಿಷಯ

ದೊಡನೆ ಸೇರದಿರುವ, ಒಂದು ವಿಷಯದಿಂದ ದೂರವಾಗಿರುವ, ಯಾವುದೊಂದು ವಿಷಯದೊಡನೆ ಸೇರಲು ಅರ್ಹತೆಯಿಲ್ಲದೆ ಹೊರಗಿರುವ. "लब्ध्वापि लोके परिणाहि रूपं जातास्तदूर्वोरुपमानबाह्याः" कुमा० १-३६। 3. ಹೊರಗಿನವನು, ಹೊಸಬ, ಅಪರಿಚಿತ. "त्यक्ताश्चाभ्यन्तरा येन बाह्याश्चाभ्यन्तरीकृताः" पञ्चतं० १-२८२।

**बाह्लिक ಬಾಹ್ಲಿಕ** (पुं० ब० व०) 1. ಬಾಹ್ಲಿಕ ದೇಶ. 2. ಬಾಹ್ಲಿಕ ದೇಶದ ಜನರು. (पुं०) 3. ಬಾಹ್ಲಿಕ ದೇಶದ ಕುದುರೆ. (न०) 4. ಹಿಂಗು. 5. ಕುಂಕುಮಕೇಸರಿ. "अथ बाह्लिकः। देशभेदेऽश्वभेदे च बाह्लिकं हिङ्गु कुङ्कुमम्" हेम०।

**बाह्लीक ಬಾಹ್ಲೀಕ** (पुं०) 1. ಬಾಹ್ಲೀಕ ದೇಶದ ಕುದುರೆ. (पुं० ब० व०) 2. ಬಾಹ್ಲೀಕ ದೇಶ. (न०) 3. ಹಿಂಗು. 4. ಕುಂಕುಮಕೇಸರಿ. "बाह्लीकं कुङ्कुमं हिङ्गु" वैज०।

**बिड ಬಿಡ** (न०) 1. ತೊಳೆದು ಕಾಯಿಸಿದ ಉಪ್ಪು. (वि०) 2. ಭೇದಕವಾದ, ಒಡೆಯುವ.

**बिडाल ಬಿಡಾಲ** (पुं०) 1. ಬೆಕ್ಕು, ಮಾರ್ಜಾರ. बिड (आक्रोशे) "कालन्" (उ० १-११५)। 2. ಕಣ್ಣಿನ ಗುಡ್ಡೆ. स्त्रियां "ङीष्" (४-१-६३)। **बिडाली ಬಿಡಾಲೀ.** 3. ಒಂದು ಪಕ್ಷಿ.

**बिडालक ಬಿಡಾಲಕ** (पुं०) 1. ಬೆಕ್ಕು, ಮಾರ್ಜಾರ. 2. ಕಣ್ಣಿನ ಹೊರಗಡೆಗೆ ಮುಲಾಮನ್ನು ಹಚ್ಚುವುದು. (न०) 3. ಹರಿದಳ.

**बिडालपदक ಬಿಡಾಲಪದಕ** (न०) ಹದಿನಾರು ಮಾಷಗಳ ತೂಕ.

**बिडौजस् ಬಿಡೌಜಸ್** (पुं०) ಮಹೇಂದ್ರ, ದೇವೇಂದ್ರ. बिडमोजोऽस्य।

**बिन्दु ಬಿಂದು** (पुं०) 1. ಕಣ, ಹನಿ, ತೊಟ್ಟು. बिदि (अवयवे) "उः" बाहु०। "जलबिन्दुनिपातेन क्रमशः पूर्यते घटः"। 2. ಚುಕ್ಕಿ, ಬೊಟ್ಟು. 3. ಆನೆಯ ಮೈಮೇಲೆ ಇರುವ ಬಣ್ಣಬಣ್ಣದ ಬೊಟ್ಟು. "न्यस्ताक्षरा धातुरसेन यत्र भूर्जत्वचः कुञ्जरबिन्दुशोणाः" कुमा० १-७। 4. ಸೊನ್ನೆ, ಪೂಜ್ಯ, ಶೂನ್ಯ. "न रोमकूपौघमिषाज्जगत्कृता कृताश्च किं दूषणशून्यबिन्दवः" नैष० १-२१। 5. ಅಕ್ಷರಗಳ ಪಕ್ಕದಲ್ಲಿ ಅಥವಾ ಮೇಲುಗಡೆ ಇರುವ ಅನುಸ್ವಾರ. 6. ನಾಟಕೀಯ ಸಂಧಿಗಳಿಗೆ ಸಂಬಂಧಿಸಿದ ಒಂದು ಅರ್ಥಪ್ರಕೃತಿ, ನಾಟಕದಲ್ಲಿ ಮುಖ್ಯ ಫಲಪ್ರಾಪ್ತಿಗೆ ಕಾರಣವಾದ ಐದು ಅರ್ಥಪ್ರಕೃತಿಗಳಲ್ಲೊಂದು. "बीजं बिन्दुः पताका च प्रकरी कार्यमेव च। अर्थप्रकृतयः पञ्च" सा० द० ६-६४। ಬಿಂದುರೂಪವಾದ ಈ ಅರ್ಥಪ್ರಕೃತಿಯು ರೂಪಕಗಳಲ್ಲಿ ಅವಾಂತರಪ್ರಯೋಜನಗಳಿಂದ ಪ್ರಕೃತಕಾರ್ಯಕ್ಕೆ ವಿಚ್ಛೇದವುಂಟಾದರೆ ಅದರ ಅವಿಚ್ಛೇದಕ್ಕೆ ಕಾರಣವಾಗಿರುವುದು. "अवान्तरार्थविच्छेदे बिन्दुरच्छेदकारणम्" सा० द० ६-६६। 7. ದಂತಕ್ಷತ, ಪ್ರಿಯತಮನು ಪ್ರೇಯಸಿಯ ಅಧರಾಮೃತ ಪಾನಮಾಡುವಾಗ ಅವಳ ತುಟಿಯಲ್ಲಿ ಉಂಟಾಗುವ ಗಾಯ. 8. ಹುಬ್ಬುಗಳ ಮಧ್ಯಭಾಗ. (वि०) 9. ತಿಳಿವಳಿಕೆಯುಳ್ಳವನು. (स्त्री०) 10. ಮೃತಾಪತ್ಯವುಳ್ಳ ಹೆಂಗಸು, ಬಾಲ್ಯದಲ್ಲೇ ಸಾಯುವ ಮಕ್ಕಳನ್ನು ಹಡೆಯುವ ಹೆಂಗಸು. "बिन्दुर्दन्तक्षतान्तरे। भ्रुवोर्मध्ये रूपकार्थप्रकृतौ पृषते पुमान्। वेदितर्यन्यलिङ्गः स्यात्" मेदि०। "बिन्दुर्विप्रुड्ज्ञात्रोरदक्षते" हेम०। "नश्यत्प्रसूतिर्बिन्दुः स्यात्" वैज०।

**बिन्दुजालक ಬಿಂದುಜಾಲಕ** (न०) 1. ಆನೆಯ ಮುಖದ ಮೇಲಿರುವ ಬಣ್ಣಬಣ್ಣದ ಚುಕ್ಕಿಗಳು, ಆನೆಯ ಮುಖದಲ್ಲಿರುವ ಮತ್ತಿಗಳು. 2. ಬಿಂದುಗಳ ರಾಶಿ, ದ್ರವವಸ್ತುವಿನ ಕಣಗಳ ರಾಶಿ, ಹನಿಗಳ ಸಮೂಹ.

**बिन्दुतन्त्र ಬಿಂದುತಂತ್ರ** (पुं०) 1. ಚತುರಂಗದ ಆಟ. 2. ಪಗಡೆಯಾಟದ ಹಾಸು. "बिन्दुतन्त्रः पुमान् शारिफलके चतुरङ्गके" मेदि०। ಹೇಮ ಮತ್ತು ವಿಶ್ವಪ್ರಕಾಶ ಕೋಶಗಳಲ್ಲಿ "बिन्दुतन्त्रं विदुः शारिफलके चतुरङ्गके" ಎಂದು ನಪುಂಸಕಲಿಂಗದಲ್ಲಿರುವುದು.

**बिन्दुदेव ಬಿಂದುದೇವ** (पुं०) ಪರಶಿವ, ಪರಮೇಶ್ವರ.

**बिन्दुपत्र ಬಿಂದುಪತ್ರ** (पुं०) ಬೂರುಗದ ಮರ.

**बिन्दुमाधव ಬಿಂದುಮಾಧವ** (पुं०) ಕಾಶೀಕ್ಷೇತ್ರದಲ್ಲಿ ನೆಲೆಸಿರುವ ವಿಷ್ಣು.

**बिन्दुसरस् ಬಿಂದುಸರಸ್** (न०) ಗಂಗೆಯನ್ನು ಭೂಲೋಕಕ್ಕೆ ಕರೆತರಲು ಭಗೀರಥನು ತಪಸ್ಸುಮಾಡಿದ ಸ್ಥಳ. [ಭಗೀರಥನ ಪ್ರಾರ್ಥನೆಯಿಂದ ಗಂಗೆಯು ವೇಗವಾಗಿ ಭೂಮಿಗೆ ಇಳಿಯುತ್ತಿರಲಾಗಿ ಪರಮೇಶ್ವರನು ತನ್ನ ಜಟಾಕುಹರದಲ್ಲಿ ಅಡಗಿಸಿಕೊಳ್ಳಲು ಕೋಪಗೊಂಡ ಗಂಗೆಯ ಜಲಬಿಂದುಗಳು ನೆಲದಲ್ಲಿ ಬಿದ್ದು ಈ ಸರಸ್ಸು ಉಂಟಾದುದರಿಂದ ಇದಕ್ಕೆ ಬಿಂದುಸರಸ್ಸೆಂಬ ಹೆಸರಾಯಿತು.] "भवोत्तमाङ्गे पतिता संरुद्धा योगमायया। तस्या ये बिन्दवः केचित् क्षुब्धायाः पतिता भुवि। कृतं तु तैर्बिन्दुसरस्ततो बिन्दुसरः स्मृतम्" मत्स्यपु० अध्या० १०१।

**बिब्बोक ಬಿಬ್ಬೋಕ** (ಪುಂ) ಹೆಂಗಸರ ಶೃಂಗಾರಭಾವದಿಂದ ಉಂಟಾಗುವ ಒಂದು ಕಾರ್ಯ, ಗರ್ವದಿಂದ ಇಷ್ಟವಸ್ತುವಿನಲ್ಲೂ ಅನಾದರ ತೋರಿಸುವುದು. "बिब्बोकस्त्वतिगर्वेण वस्तुनीष्टेऽप्यनादरः" सा० द० ३-१००। "स्त्रीणां विलासबिब्बोकविभ्रमा ललितं तथा। हेला लीलेत्यमी हावाः क्रियाः शृङ्गारभावजाः" अम०।

**बिभीषिका ಬಿಭೀಷಿಕಾ** (स्त्री०) ಭಯಪಡಿಸುವುದು, ಹೆದರಿಸುವುದು.

**बिभ्यत् ಬಿಭ್ಯತ್** (वि०) ಭಯಪಡುತ್ತಿರುವ, ಹೆದರುತ್ತಿರುವ. ञि भी (भये) "शतृ" (३-२-१२४)। "बिभ्यद्भिरनघादेशाद्वाआदिव समुद्यतात्" याद० २२-५। स्त्रियां "ङीप्" (४-१-६)। **बिभ्यती ಬಿಭ್ಯತೀ.**

**बिभ्रत् ಬಿಭ್ರತ್** (वि०) ಧರಿಸಿರುವ, ಹೊಂದಿರುವ, ಹೊತ್ತಿರುವ. डु भृञ् (धारणपोषणयोः) "शतृ" (३-२-१२४)। "बिभ्रती मधुरतामतिमात्रं रागिभिर्युगपदेव पपाते" माघ० १०-८। स्त्रियां "ङीप्" (४-१-६)। **बिभ्रती ಬಿಭ್ರತೀ.**

**बिभ्राण ಬಿಭ್ರಾಣ** (वि०) ಧರಿಸಿರುವ, ಹೊಂದಿರುವ, ಹೊತ್ತಿರುವ. डु भृञ् (धारणपोषणयोः) "शानच्" (३-२-१२४)। "बिभ्राणमायतिमतीमवृथा शिरोधिप्रत्यग्रतामतिरसामधिकं दधन्ति" माघ० ५-६५। स्त्रियां **बिभ्राणा ಬಿಭ್ರಾಣಾ.** "बिभ्राणया बहलयावकपङ्कपिङ्गपिच्छावचूडमनुमाधवधाम जग्मुः" माघ० ५-१३।

**बिम्ब ಬಿಂಬ** (पुंन०) 1. ಸೂರ್ಯಚಂದ್ರರ ಮಂಡಲ. वी (गतौ) बन् नुम् ह्रस्वश्च निपा० (उ० ४-९५)। "बिम्बोऽस्त्री मण्डलं त्रिषु" अम०। "पतन्ति बिम्बादुततिग्मतेजसः" किरा० १४-५३। 2. ಮಂಡಲದಂತೆ ವರ್ತುಲವಾಗಿರುವ ಒಂದು ಆಕಾರ. "आरोहैर्निबिडबृहन्नितम्बबिम्बैः" माघ० ८-८। 3. ಪ್ರತಿಮೆ, ವಿಗ್ರಹ. 4. ಪ್ರತಿಬಿಂಬ, ಛಾಯೆ. "प्रभवति मणिर्बिम्बग्राहे मणिर्न मृदादयः" उ० रा० २-४। 5. ಪ್ರತಿಬಿಂಬವನ್ನು ಕೊಡುವ ಮೂಲವಸ್ತು. 6. ಮುಖ. 7. ಚಿಹ್ನೆ, ಗುರುತು. (पुं०) 8. ಕೃಕಲಾಸ, ಓತಿಕೇತ. (न०) 9. ತೊಂಡೆಹಣ್ಣು. [ಸ್ತ್ರೀಯರ ತುಟಿಗೆ ಈ ಹಣ್ಣಿನ ಸಾಮ್ಯ ಕೊಡುವರು.] "बिम्बोष्ठं बहु मनुते तुरङ्गवक्त्रश्चुम्बन्तं मुखमिह किन्नरं प्रियायाः" माघ० ४-३८। "बिम्बोऽस्त्री मण्डलसमप्रतिमामुखलक्ष्मसु। प्रतिबिम्बे तत्प्रकृतौ क्ली तु स्याद्बिम्बिकाफले" वैज०।

**बिम्बक ಬಿಂಬಕ** (न०) 1. ಸೂರ್ಯಚಂದ್ರರ ಮಂಡಲ. 2. ತೊಂಡೆಹಣ್ಣು.

**बिम्बिका ಬಿಂಬಿಕಾ** (स्त्री०) 1. ತೊಂಡೆಗಿಡ. बिम्बीं कारयति—कै (शब्दे) "कः" (३-२-३)। 2. ಸೂರ್ಯಚಂದ್ರರ ಮಂಡಲ.

**बिम्बित ಬಿಂಬಿತ** (वि०) ಪ್ರತಿಫಲಿಸಿರುವ, ಪ್ರತಿಬಿಂಬ ಹೊಂದಿರುವ, ಪ್ರತಿಬಿಂಬಿಸಿರುವ. बिम्बोऽस्य सञ्जातः "इतच्" (५-२-३६)। "अन्तरिक्षमणिदर्पणान्तरे बिम्बितेव भवती विभाव्यते" याद० १७-२५।

**बिल ಬಿಲ** (न०) 1. ರಂಧ್ರ, ತೂತು, ಹುತ್ತ ಮೊದಲಾದ ಕುಳಿ. बिलति—बिल (छेदने) "कः" (३-१-१३५)। "उद्वामेन्द्रसिक्ता भूर्बिलमग्नाविवोरगौ" रघु० १२-५। 2. ಗುಹೆ, ಗವಿ. [ದೈವನಿರ್ಮಿತವಾದ ಸ್ವಭಾವವಾದ ಗುಹೆ.] "बिले तदीये विबुधालयोपमे विकल्प्यमानाकृतिमप्सरोगणैः" याद० १४-५९। 3. ಗುಳಿ, ಗುಂಡಿ, ಹಳ್ಳ. 4. ಸ್ತ್ರೀಯರ ಇಂದ್ರಿಯನಾಳ, ಯೋನಿನಾಳ. (पुं०) 5. ಉಚ್ಚೈಃಶ್ರವಸ್ಸು, ಇಂದ್ರನ ಅಶ್ವ. "बिलं छिद्रे गुहायां च पुमानुच्चैःश्रवोहये" मेदि०।

**बिलकारिन् ಬಿಲಕಾರಿನ್** (पुं०) 1. ಮೂಷಕ, ಇಲಿ. (वि०) 2. ಬಿಲವನ್ನು ಮಾಡುವ, ಗುಂಡಿಯನ್ನು ತೋಡುವ.

**बिलयोनि ಬಿಲಯೋನಿ** (वि०) ಬಿಲದಲ್ಲಿ ಹುಟ್ಟಿದ. बिलं योनिरुत्पत्तिस्थानं यस्य। "जितसिंहभया नागा यत्राश्वा बिलयोनयः" कुमा० ६-३९।

**बिलेशय ಬಿಲೇಶಯ** (पुं०) 1. ಸರ್ಪ, ಹಾವು. बिले शेते—शीङ् (स्वप्ने) "अच्" (३-२-१५)। सप्तम्या वा "अलुक्" (६-३-१८)। पक्षे **बिलशयः ಬಿಲಶಯಃ.** 2. ಮೂಷಕ, ಇಲಿ. "बिलेशयस्तु पुंलिङ्गो मूषके च भुजङ्गमे" मेदि०। (वि०) 3. ಬಿಲದಲ್ಲಿ ವಾಸಮಾಡುವ.

**बिलौकस् ಬಿಲೌಕಸ್** (पुं०) 1. ಸರ್ಪ, ಹಾವು. 2. ಮೂಷಕ, ಇಲಿ. बिलमोकोऽस्य। (वि०) 3. ಬಿಲದಲ್ಲಿ ವಾಸಮಾಡುವ.

**बिल्ल ಬಿಲ್ಲ** (न०) 1. ಆಲವಾಲ, ಗಿಡಮರಗಳ ಕೆಳಗೆ ನೀರು ನಿಲ್ಲಲು ಮಾಡುವ ಪಾತಿ. 2. ಗುಣಿ, ಗುಂಡಿ ಹಳ್ಳ. 3. ಹಿಂಗು.

**बिल्व ಬಿಲ್ವ** (पुं०) 1. ಬಿಲ್ವಪತ್ರೆಯ ಮರ. बिल (भेदने) "वन्" (उ० ४-९५)। निपा०। वबयोरभेदः। (न०) 2. ಬಿಲ್ವದ ಕಾಯಿ.

**बिल्वकीया ಬಿಲ್ವಕೀಯಾ** (स्त्री०) ಬಿಲ್ವವೃಕ್ಷಗಳಿಂದ ಕೂಡಿದ ಭೂಮಿ.

**बिल्वपत्र ಬಿಲ್ವಪತ್ರ** (न०) ಬಿಲ್ವವೃಕ್ಷದ ಎಲೆ, ಬಿಲ್ವ ದಳ.

**बिल्वपेशिका ಬಿಲ್ವಪೇಶಿಕಾ -पेशी -ಪೇಶೀ** (स्त्री०) ಒಣಗಿದ ಬಿಲ್ವದ ಕಾಯಿ, ಬಿಲ್ವದ ಚಿಪ್ಪು.

**बिल्ववन ಬಿಲ್ವವನ** (न०) ಬಿಲ್ವವೃಕ್ಷಗಳ ಕಾಡು, ಬಿಲ್ವ ಮರಗಳ ತೋಪು.

**बिस ಬಿಸ** (न०) 1. ತಾವರೆಯ ದಂಟು, ತಾವರೆಬಳ್ಳಿಯ ಕಾಂಡ. बिस्यति—बिस (प्रेरणे) "क:" (३-१-१३५)। "अर्धोपभुक्तेन बिसेन जायां संभावयामास रथाङ्गनामा" कुमा० ३-३७। 2. ತಾವರೆದಂಟಿನ ನಾರು. -ತಂತು, -ಎಳೆ.

**बिसकण्ठिका ಬಿಸಕಂಠಿಕಾ** (स्त्री०) ಸಣ್ಣ ಜಾತಿಯ ಕೊಕ್ಕರೆ, ಒಂದು ಜಾತಿಯ ಬಕಪಕ್ಷಿ, ಬೆಳ್ಳಕ್ಕಿ. बिसमिव कण्ठोऽस्या: "कप्"।

**बिसकण्ठिन् ಬಿಸಕಂಠಿನ್** (पुं०) ಬೆಳ್ಳಕ್ಕಿ, ಬಕಪಕ್ಷಿಯ ಒಂದು ಭೇದ. बिसमिव कण्ठोऽस्त्यस्य "इनि:"। (५-२-११५)।

**बिसकुसुम ಬಿಸಕುಸುಮ** (न०) ತಾವರೆಯ ಹೂವು, ಕಮಲ, ಪದ್ಮ. बिसस्य कुसुमम्। -पुष्पम् -ಪುಷ್ಪಮ್, -प्रसूनम् -ಪ್ರಸೂನಮ್. "जक्षुर्बिसं घृतविकासिबिसप्रसूना:" माघ० ५-२८।

**बिसज ಬಿಸಜ** (न०) ಕಮಲ, ತಾವರೆಹೂವು.

**बिसतन्तु ಬಿಸತಂತು** (पुं०) ತಾವರೆದಂಟಿನ ಎಳೆ, -ನಾರು.

**बिसिनी ಬಿಸಿನೀ** (स्त्री०) 1. ಪದ್ಮಲತೆ, ತಾವರೆಯ ಬಳ್ಳಿ. 2. ತಾವರೆಬಳ್ಳಿಯಿಂದ ಕೂಡಿದ ದೇಶ. 3. ತಾವರೆ ಬಳ್ಳಿಗಳ ಸಮೂಹ. बिस "इनि:" (५-२-१३५)।

**बिस्त ಬಿಸ್ತ** (पुं०) ಚಿನ್ನದ ಒಂದು ತೂಕ, ಒಂದು ಕರ್ಷದ ತೂಕ, 20 ಗುಲಗಂಜಿಗಳ ತೂಕ. [ಐದು ಗುಲಗಂಜಿಗಳ ತೂಕ ಒಂದು ಆದ್ಯಮಾಷಕ. ಹದಿನಾರು ಆದ್ಯಮಾಷಕಗಳ ತೂಕ ಒಂದು ಕರ್ಷ. ಚಿನ್ನದ ಕರ್ಷ ತೂಕವು ಒಂದು ಬಿಸ್ತ] "गुञ्जा: पञ्चाद्यमाषका:। ते षोडशाक्ष: कर्षोऽस्त्री"। "सुवर्णबिस्तौ हेम्नोऽक्षे" अम०।

**बीज ಬೀಜ** (न०) 1. ಹೇತು, ಕಾರಣ. वजति कार्यं गच्छति — वज (गतौ) "अच्" (३-१-१३४)। वबयोरभेद:। पृषोदरादित्वात् ईत्वम्। 2. ಮೂಲ ಕಾರಣ. "यामाहु: सर्वबीजप्रकृतिरिति यया प्राणिन: प्राणवन्त:" शाकु० १-१। 3. ಬೀಜ, ಕಾಳು, ಧಾನ್ಯ. "अरण्यबीजाञ्जलिदानलालितास्तथा च तस्यां हरिणा विशश्वसु:" कुमा० ५-१५। 4. ಪುರುಷನ ವೀರ್ಯ, ಧಾತು. "उभ एव क्षमे वोढुमुभयोर्बीजमाहितुम्" कुमा० २-६०। 5. ನಾಟಕ (ರೂಪಕ) ಗಳಲ್ಲಿ ಮುಖ್ಯ ಫಲಪ್ರಾಪ್ತಿಗೆ ಸಾಧಕವಾದ (ಮೂಲ) ಕಾರಣ. ಇದು ಪ್ರಾರಂಭದಲ್ಲಿ ಸೂಕ್ಷ್ಮವಾಗಿದ್ದು ಕ್ರಮೇಣ ಬೆಳೆದು ವಿಸ್ತಾರವಾಗಿ ಮುಖ್ಯಫಲಕ್ಕೆ ಕಾರಣವಾಗುವುದು. "स्तोकोद्दिष्ट: कार्यहेतु: वीजं विस्तार्यनेकधा" दशरू०। ಶ್ರೀಹರ್ಷನ ರತ್ನಾವಳಿಯಲ್ಲಿ ರತ್ನಾವಳಿಯ ಪ್ರಾಪ್ತಿಗೆ ಕಾರಣವಾದ ಯೌಗಂಧರಾಯಣನ ವ್ಯಾಪಾರವು ಬೀಜ. ವೇಣೀಸಂಹಾರದಲ್ಲಿ. ದ್ರೌಪದಿಯು ಬಿಚ್ಚಿದ್ದ ಕೇಶಪಾಶವನ್ನು ಪುನಃ ಗಂಟುಹಾಕಲು ಮೂಲಕಾರಣವಾದ ಯುಧಿಷ್ಠಿರನ ಉತ್ಸಾಹವು ಬೀಜ. 6. ಹಣ್ಣಿನ ತಿರುಳು. 7. ಅನ್ನ, ಆಹಾರ. "बीजं शुक्रे फलास्थ्यन्ने" वैज०। 8. ತತ್ತ್ವ. 9. ಮಹಾಮಂತ್ರಗಳ ಮುಖ್ಯಭಾಗವಾದ ಬೀಜಾಕ್ಷರ. 10. ದೇಹದೊಳಗಿನ ಸಾರ, ಮಜ್ಜೆ. "बीजं रेतसि तत्त्वे च हेतावङ्कुरकारणे" विश्व०।

**बीजकोश ಬೀಜಕೋಶ** (पुं०) ತಾವರೆಹೂವಿನಲ್ಲಿರುವ ಬೀಜಗಳ ಕೋಶ, ತಾವರೆಯ ಕಾಯಿ. बीजस्य कोश:।

**बीजगणित ಬೀಜಗಣಿತ** (न०) ಸಂಖ್ಯಾ ವಿಷಯಗಳನ್ನು ಅಕ್ಷರಗಳ ಸಂಜ್ಞೆಯ ಮೂಲಕ ಪ್ರತಿಪಾದನೆ ಮಾಡುವ ಶಾಸ್ತ್ರ.

**बीजन्यास ಬೀಜನ್ಯಾಸ** (पुं) ರೂಪಕದಲ್ಲಿ ಕಾವ್ಯಾರ್ಥದ (ಕಥಾವಸ್ತುವಿನ) ಮೂಲವು ತಿಳಿಯುವಂತೆ ಮಾಡುವುದು, ಕಾವ್ಯಾರ್ಥದ ಉತ್ಪತ್ತಿ, ಕಾವ್ಯಾರ್ಥದ ಸೂಚನೆ.

**बीजपुरुष ಬೀಜಪುರುಷ** (पुं०) ಒಂದು ವಂಶದ ಮೂಲ ಪುರುಷ.

**बीजपुष्प ಬೀಜಪುಷ್ಪ** (पुं०) 1. ಮತ್ತೂರಿಗಿಡ. (न०) 2. ಮರುಗ.

**बीजपूर ಬೀಜಪೂರ** (पुं०) 1. ಮಾದಳ ಗಿಡ. बीजै: पूर्यते — पूरी (आप्यायने) "क:" (३-१-१३५)। (न०) 2. ಮಾದಳ ಹಣ್ಣು.

**बीजमन्त्र ಬೀಜಮಂತ್ರ** (पुं०) ರಹಸ್ಯಾರ್ಥವನ್ನೊಳಗೊಂಡ ಪದದಿಂದ ಪ್ರಾರಂಭವಾಗುವ ಮಹಾಮಂತ್ರ, ಪರಮಾರ್ಥವನ್ನು ಪ್ರತಿಪಾದಿಸುವ ರಹಸ್ಯಾರ್ಥಗರ್ಭಿತವಾದ ಮಂತ್ರ.

**बीजमातृका ಬೀಜಮಾತೃಕಾ** (स्त्री०) ಬೀಜಕೋಶ, ಸಸ್ಯದ ಪಕ್ವವಾದ ಬೀಜದ ಆವರಣ.

**बीजवपन ಬೀಜವಪನ** (ನಂ) 1. ಕ್ಷೇತ್ರ, ಭೂಮಿ, ನೆಲ. बीजानि उप्यन्तेऽत्र — डु वप् (बीजसन्ताने) अधि० "ल्युट्" (३-३-११७)। 2. ನೆಲದಲ್ಲಿ ಬೀಜವನ್ನು ಬಿತ್ತುವುದು. बीजानां वपनम्। डुवप् भावे "ल्युट्" (३-३-११५)।

**बीजवर ಬೀಜವರ** (ಪುಂ) ಮಾಷ, ಉದ್ದು.

**बीजवाप ಬೀಜವಾಪ** (ಪುಂ) 1. ಬೀಜಗಳ ಬಿತ್ತನೆ. बीजानां वाप: — डु वप् (बीजसन्ताने) भावे "घञ्" (३-३-१८)। (वि०) 2. ಬೀಜಗಳನ್ನು ಬಿತ್ತುವವನು.

**बीजसञ्चय ಬೀಜಸಂಚಯ** (ಪುಂ) ಬಿತ್ತನೆಗೆ ಯೋಗ್ಯವಾದ ಬೀಜಗಳ ಸಂಗ್ರಹ.

**बीजसू ಬೀಜಸೂ** (स्त्री०) ಕ್ಷೇತ್ರ, ಭೂಮಿ, ನೆಲ.

**बीजाकृत ಬೀಜಾಕೃತ** (ನಂ) ಬೀಜ ಬಿತ್ತಿದ ಮೇಲೆ ಉಳಲ್ಪಟ್ಟ ಕ್ಷೇತ್ರ. बीजेन सहकृतं कृष्टम् — "डाच्" (५-४-५८)।

**बीजाङ्कुर ಬೀಜಾಂಕುರ** (ಪುಂ) ಬೀಜದಿಂದ ಹೊರಡುವ ಮೊಳಕೆ, ಬೀಜದ ಮೊಳಕೆ. बीजस्याङ्कुर:। "बीजाङ्कुर: प्रागुदयादिवाम्भ:" कुमा० ३-१८।

**बीजाम्ल ಬೀಜಾಮ್ಲ** (ನಂ) ಹುಣಿಸೆಹಣ್ಣು.

**बीजिन् ಬೀಜಿನ್** (ಪುಂ) 1. ಕ್ಷೇತ್ರದಲ್ಲಿ ಬೀಜಾವಾಪ ಮಾಡಿದ ತಂದೆ, ಜನಕ. बीजमस्यास्ति "इनि:" (५-२-११५)। "फलं त्वनभिसन्धाय क्षेत्रिणां बीजिनां तथा" मनु० ९-५२। (वि०) 2. ಬೀಜವನ್ನು ಹೊಂದಿರುವವನು, ಧಾನ್ಯ (ಕಾಳು) ಗಳನ್ನು ಹೊಂದಿರುವವನು. 3. ಬೀಜವನ್ನು ಹೊಂದಿರುವ ಕಾಯಿ.

**बीज्य ಬೀಜ್ಯ** (वि०) 1. ಬೀಜದಿಂದ ಹುಟ್ಟಿದ. 2. ಯಾವುದಾದರೂ ಒಂದು ವಂಶದಲ್ಲಿ ಹುಟ್ಟಿದ. बीजमस्यास्ति— "यप्" (वा० ५-२-१२०)।

**बीभत्स ಬೀಭತ್ಸ** (ಪುಂ) 1. ಬೀಭತ್ಸರಸ, ಶೃಂಗಾರ ವೀರ ಮೊದಲಾದ ಒಂಬತ್ತು ರಸಗಳಲ್ಲೊಂದು. बध (बन्धने) + चित्तविकारे "सन्" (वा० ३-१-६) "अ:" (३-३-१०२)। बीभत्सास्यास्ति "अच्" (५-२-१२७)। ಬೀಭತ್ಸ ರಸಕ್ಕೆ ಸ್ಥಾಯಿಭಾವ ಜುಗುಪ್ಸೆ. ಇದು ಮಹಾಕಾಲ ದೇವತಾಕವಾದುದು. ಕೊಳೆತು ನಾರುವ ಮಾಂಸ ರಕ್ತ ಮೊದಲಾದುವು ಆಲಂಬನವಿಭಾವ. ಅವುಗಳಿಂದ ಹೊರಟು ಹರಿಯುತ್ತಿರುವ ಕ್ರಿಮಿಕೀಟಗಳು ಉದ್ದೀಪನ ವಿಭಾವ. ಉಗುಳುವುದು ಕಣ್ಣು ಮುಚ್ಚಿಕೊಳ್ಳುವುದು ಮೊದಲಾದುವು ಅನುಭಾವಗಳು. ಮೋಹ ಆವೇಗ ವ್ಯಾಧಿ ಮೊದಲಾದುವು ವ್ಯಭಿಚಾರಿ ಭಾವಗಳು. "जुगुप्सास्थायिभावस्तु बीभत्स: कथ्यते रस:। नीलवर्णो महाकालदैवतोऽयमुदाहृत:। दुर्गन्धमांसरुधिरमेदांस्यालम्बनं मतम्। तत्रैव कृमिपाताद्यमुद्दीपनमुदाहृतम्" ಇತ್ಯಾದಿ. सा० द० ३। 2. ಅರ್ಜುನ. (वि०) 3. ಕ್ರೂರ. 4. ಅಸಹ್ಯವಾದ, ಜುಗುಪ್ಸೆ ಹುಟ್ಟಿಸುವ. 5. ಅಸೂಯೆ ಪಡುವ. 6. ಚಿತ್ತವಿಕಾರ ಹೊಂದಿದ. "बीभत्सो नार्ज्जुने क्रूरघृणात्मविकृते त्रिषु" मेदि०।

**बीभत्सु ಬೀಭತ್ಸು** (ಪುಂ) 1. ಅರ್ಜುನ. बीभत्सति—बध (बन्धने) चित्तविकारार्थे "सन्" "उ:" (३-२-१६८)। ಇದು ಅರ್ಜುನನ ಹತ್ತು ಹೆಸರುಗಳಲ್ಲೊಂದು. "अर्जुन: फल्गुनो जिष्णु: किरीटी श्वेतवाहन:। बीभत्सुर्विजय: कृष्ण: सव्यसाची धनञ्जय:" भा० विरा० ४०-९। ಯುದ್ಧದಲ್ಲಿ ಅರ್ಜುನನು ಅಸಹ್ಯವಾದ ಕೆಲಸವನ್ನು ಮಾಡುವುದಿಲ್ಲವಾದುದರಿಂದ ಅವನಿಗೆ ಈ ಹೆಸರು. "न कुर्यां कर्म बीभत्सं युध्यमान: कथंचन। तेन देवमनुष्येषु बीभत्सुरिति विश्रुत:" भा० विरा० ४०-१८।

**बुक्क ಬುಕ್ಕ** (ಪುನಂ) 1. ಹೃದಯ, ಎದೆ. 2. ಹೃದಯದೊಳಗಿನ ಮಾಂಸಖಂಡ. बुक्कयति — बुक् बुक् इति अव्यक्तशब्दं करोति। (ಪುಂ) 3. ಛಾಗ, ಆಡು. (ಪುಂस्त्री०) 4. ಸಮಯ, ವೇಳೆ, ಕಾಲ. (स्त्री०) —क्का —ಕ್ಕಾ. 5. ಶೋಣಿತ, ರಕ್ತ.

**बुक्कन ಬುಕ್ಕನ** (ನಂ) 1. ನಾಯಿ ಬಗುಳುವುದು, ನಾಯಿಯ ಕೂಗು. 2. ತಿರ್ಯಕ್‌ಪ್ರಾಣಿಗಳ ಶಬ್ದ. बुक्क (भषणे) भावे "ल्युट्" (३-३-११५)।

**बुक्कार ಬುಕ್ಕಾರ** (ಪುಂ) ಸಿಂಹದ ನಾದ, ಸಿಂಹದ ಗರ್ಜನೆ. "बुक्कार: सिंहनादक:" हारा०।

**बुद्ध ಬುದ್ಧ** (ಪುಂ) 1. ತತ್ತ್ವಜ್ಞಾನ ಹೊಂದಿದ ಒಬ್ಬ ಮಹಾಪುರುಷ, ಬುದ್ಧದೇವ, ಮಹಾವಿಷ್ಣುವಿನ ಒಂದು ಅವತಾರ. बुध्यते — बुध (अवगमने) "क्त:" (३-२-१८८)। ಕಲಿಯುಗವು ಪ್ರಾರಂಭವಾದ ಮೇಲೆ ರಾಕ್ಷಸರನ್ನು ಮೋಹಗೊಳಿಸಲು ಮಾಡಿದ ಒಂದು ಅವತಾರವಿದು. "तत: कलौ संप्रवृत्ते संमोहाय सुरद्विषाम्। बुद्धो नाम्ना जिनसुत: कीकटेषु भविष्यति" भाग० १-३-२४। ಬುದ್ಧನಿಂದ ಪ್ರಚಾರಕ್ಕೆ ಬಂದ ದರ್ಶನವು ಬೌದ್ಧಮತ. ಈ ಬೌದ್ಧಮತವು ವೇದವನ್ನೂ ವೇದವಿಹಿತ ಕರ್ಮಗಳನ್ನೂ ಬಹಿಷ್ಕರಿಸುವುದರಿಂದ ಇದು ಅವೈದಿಕಮತ. ಗೀತಗೋವಿಂದದಲ್ಲಿ ಜಯದೇವ ಕವಿಯು ಬೌದ್ಧಾವತಾರವು ಒಂಬತ್ತನೆಯದೆಂದು ಹೇಳಿರು

ತ್ತಾನೆ. "निन्दसि यज्ञविधेरहह श्रुतिजातं सहृदयहृदय-दर्शितपशुघातम्। केशव ! धृतबुद्धशरीर, जयजगदीश हरे" गीतगो० १-९। [ಬುದ್ಧನು ಶಾಕ್ಯಸಿಂಹ ಸರ್ವಾರ್ಥ ಸಿದ್ಧಿ ಗೌತಮ ಮತ್ತು ಅರ್ಕಬಂಧು ಎಂಬ ನಾಮಧೇಯ ಗಳಿಂದ ಪ್ರಸಿದ್ಧನಾಗಿದ್ದನು. ಈತನು ಕಪಿಲವಸ್ತುರಾಜ ನಾದ ಶುದ್ಧೋದನನಿಗೆ ಮಾಯಾದೇವಿಯಲ್ಲಿ ಪುತ್ರನಾಗಿ ಅವತರಿಸಿದನು. ಈತನು ಪ್ರಾಪ್ತವಯಸ್ಕನಾದಾಗ ಜಗತ್ತಿ ನಲ್ಲಿ ವ್ಯಾಧಿ ಜರಾಮರಣಗಳಿಂದ ಸಂಕಟಪಡುತ್ತಿರುವ ಜನರನ್ನು ನೋಡಿ ವೈರಾಗ್ಯಹೊಂದುವನೆಂದು ದೈವಜ್ಞ ರಿಂದ ತಿಳಿದ ಶುದ್ಧೋದನನು ರತಿಕೇಳಿಕುಶಲರಾದ ಅನೇಕ ಯುವತಿಯರನ್ನು ಅಂತಃಪುರದಲ್ಲಿ ಸೇರಿಸಿ ಇವನಿಗೆ ಬಾಹ್ಯ ಪ್ರಪಂಚದ ಸಂಪರ್ಕವೇ ಇಲ್ಲದಂತೆ ಮಾಡಿದನು. ಆದರೆ ಇಂತಹ ಭೋಗಗಳಿಗೆ ಸ್ವಲ್ಪವೂ ಸೋಲದೆ ಗೌತಮನು ಪ್ರಪಂಚದ ಪರ್ಯಟನೆಗಾಗಿ ತಂದೆಯ ಅನುಮತಿಯನ್ನು ಪಡೆದು ಹೊರಟು ಅಲ್ಲಲ್ಲಿ ನಾನಾ ವಿಧವಾದ ವ್ಯಾಧಿ ಗಳಿಂದಲೂ ಜರೆಯಿಂದ ಬಂಧುಜನರ ತಿರಸ್ಕಾರಕ್ಕೆ ಪಾತ್ರರಾದ ಜನರ ನರಳಿಕೆಗಳಿಂದಲೂ ಸಂಕಟಪಡುತ್ತಿದ್ದವ ರನ್ನು ನೋಡಿ ಅದರಿಂದ ಸಂಪೂರ್ಣ ವೈರಾಗ್ಯವನ್ನು ಹೊಂದಿ ವೈಶಾಲಿನಗರಕ್ಕೆ ಹೋಗಿ ಪರಮವಿರಕ್ತ ಶಿಖಾಮಣಿಯಾದ ಒಬ್ಬ ಗುರುವನ್ನು ಸೇರಿ ಅವರಿಂದ ಉಪದೇಶ ಪಡೆದು ತತ್ತ್ವಜ್ಞಾನಿಯಾಗಿ ಸಂಕಟಗಳಿಗೆ ಸಿಲುಕಿದ ಜನರ ಕಷ್ಟಗಳನ್ನು ನಿವಾರಿಸಲು ಸಂಕಲ್ಪಿಸಿ ಎಲ್ಲರಿಗೂ ಜ್ಞಾನೋಪದೇಶಮಾಡಿದನು.] "विकीर्य विज्ञानमयीं प्रभां प्रभुर्जगत्प्रदीपः प्रथितः प्रभाकरः। बुद्धः स राशिर्महसां महोज्ज्वलो ज्वलंश्च निर्वाणपदं परं गतः॥ प्रक्षाल्य त्रैलोक्यमलं मलीमसं प्रवृद्धहिंसार-सदूषितं विभुः। प्रबोधधाराधरभूरिवारिभी रराज देवो भुवि बोधभास्करः"॥ [ವಿವರಕ್ಕೆ "बौद्ध" ಪದದಲ್ಲಿ ನೋಡಿ.] 2. ವಿದ್ವಾಂಸ, ಪಂಡಿತ, ಜ್ಞಾನ ಸಂಪಾದಿಸಿದವನು, ಬುದ್ಧಿವಂತ. (वि०) 3. ತಿಳಿವಳಿಕೆ ಯುಳ್ಳವನು. 4. ಎಚ್ಚರವುಳ್ಳವನು 5. ತಿಳಿಯಲ್ಪಟ್ಟ, ಅರಿಯಲ್ಪಟ್ಟ. बुध "क्तः" (३-२-१०२)। (न०) 6. ಜ್ಞಾನ, ತಿಳಿವಳಿಕೆ, ಅರಿವು. बुध भावे "क्तः" (३-३-११४)।

**बुद्धगया ಬುದ್ಧಗಯಾ** (स्त्री०) ಕೀಕಟ ದೇಶದಲ್ಲಿರುವ ಬೌದ್ಧರ ಗಯೆ. ಇದೊಂದು ಯಾತ್ರಾಸ್ಥಳ. ಇದು ಮಗಧ ದೇಶದ ಮಧ್ಯದಲ್ಲಿರುವುದು.

**बुद्धगुरु ಬುದ್ಧಗುರು** (पुं०) ಬುದ್ಧನ ತತ್ತ್ವೋಪದೇಶ ಮಾಡುವ ಆಚಾರ್ಯ, ಬೌದ್ಧಮತಾನುಯಾಯಿ.

**बुद्धधर्म ಬುದ್ಧಧರ್ಮ** (पुं०) ಅಹಿಂಸಾರೂಪವಾದ ಬುದ್ಧನ ಧರ್ಮ.

**बुद्धपुराण ಬುದ್ಧಪುರಾಣ** (न०) ಬುದ್ಧದೇವನ ಅವತಾರ ಮತ್ತು ಚರಿತ್ರೆಯನ್ನು ತಿಳಿಸುವ ಒಂದು ಪುರಾಣ.

**बुद्धवत् ಬುದ್ಧವತ್** (वि०) ತಿಳಿದವನು, ಅರಿತವನು. बुध (अवगमने) "क्तवतुः" (३-२-१०२)। स्त्रियां "ङीप्" (४-१-६)। **–वती –ವತೀ.**

**बुद्धि ಬುದ್ಧಿ** (स्त्री०) 1. ಜ್ಞಾನ, ಅರಿವು, ತಿಳಿವಳಿಕೆ. बुध (अवगमने) "क्तिन्" (३-३-९४)। ಯಾವುದಾದ ರೊಂದು ಇಂದ್ರಿಯದಿಂದ ವಿಷಯಗಳನ್ನು ಗ್ರಹಿಸುವ ಶಕ್ತಿಯು ಬುದ್ಧಿಯೆನಿಸುವುದು. ಇದು ಆತ್ಮನಿಷ್ಠವಾದ ಆತ್ಮಗುಣ. ಬುದ್ಧಿಯು (1) ಸಾತ್ತ್ವಿಕ (2) ರಾಜಸ ಮತ್ತು (3) ತಾಮಸಗಳೆಂದು ಮೂರು ವಿಧ. (1) ಅಭ್ಯುದಯ ಸಾಧನಭೂತವಾದ ಪ್ರವೃತ್ತಿಧರ್ಮ ಮತ್ತು ಮೋಕ್ಷ ಸಾಧನಭೂತವಾದ ನಿವೃತ್ತಿಧರ್ಮಗಳನ್ನೂ ದೇಶಕಾಲಾದಿ ಗಳಿಗೆ ಅನುಗುಣವಾಗಿ ಕಾರ್ಯ ಮತ್ತು ಅಕಾರ್ಯ ಗಳನ್ನೂ ಶಾಸ್ತ್ರಾತಿಕ್ರಮ ಮತ್ತು ಶಾಸ್ತ್ರವನ್ನು ಅನುಸರಿಸಿ ಮಾಡುವ ಅನುಷ್ಠಾನಗಳನ್ನೂ (ಭಯಾಭಯ ಸ್ಥಾನ ಗಳನ್ನೂ) ಸಂಸಾರಯಾಥಾತ್ಮ್ಯ ಮತ್ತು ಮೋಕ್ಷ ಯಾಥಾತ್ಮ್ಯಗಳನ್ನು ತಿಳಿದಿರುವ ಬುದ್ಧಿಯು **ಸಾತ್ತ್ವಿಕ.** "प्रवृत्तिं च निवृत्तिं च कार्याकार्ये भयाभये। बन्धं मोक्षं च या वेत्ति बुद्धिः सा पार्थ सात्त्विकी" गीता १८-३०। (2) ಮೇಲೆ ಹೇಳಿದ ಪ್ರವೃತ್ತಿ ಮತ್ತು ನಿವೃತ್ತಿಧರ್ಮಗಳನ್ನೂ ಕಾರ್ಯಾಕಾರ್ಯಗಳನ್ನೂ ಭಯಾಭಯಗಳನ್ನೂ ವಿರುದ್ಧವಾಗಿ (ಅಯಥಾರ್ಥವಾಗಿ) ಯಾವುದರಿಂದ ತಿಳಿಯುವನೋ ಅದು **ರಾಜಸಬುದ್ಧಿ.** "यया धर्ममधर्मं च कार्यं चाकार्यमेव च। अयथावत् प्रजानाति बुद्धिः सा पार्थ राजसी" गीता १८-३१। (3) ಧರ್ಮವನ್ನು ಅಧರ್ಮವನ್ನಾಗಿಯೂ ಅಧರ್ಮವನ್ನು ಧರ್ಮವನ್ನಾಗಿಯೂ ಹೀಗೆಯೇ ಸಕಲವಿಷಯಗಳನ್ನೂ ಯಥಾರ್ಥವಾಗಿ ತಿಳಿಯದೆ ವಿಪರೀತವಾಗಿ ಯಾವುದ ರಿಂದ ತಿಳಿಯುವನೋ ಅದು **ತಾಮಸಬುದ್ಧಿ.** "अधर्मं धर्ममिति या मन्यते तमसावृता। सर्वार्थान् विपरीतांश्च बुद्धिः सा पार्थ तामसी" गीता १८-३२। 2. (ನೈಯಾಯಿಕ ಮತದಲ್ಲಿ) ಸಕಲವ್ಯವಹಾರಗಳಿಗೂ ಕಾರಣವಾದ ಜ್ಞಾನ. "अर्थं बुद्ध्वा शब्दरचना" ಎಂಬ ನ್ಯಾಯದಿಂದ ಸಕಲಶಬ್ದಪ್ರಯೋಗಕ್ಕೂ ಕಾರಣವಾದ ಜ್ಞಾನವೇ ಬುದ್ಧಿ. "सर्वव्यवहारहेतुर्ज्ञानं

बुद्धिः" ನ೦ ಸ೦। ಈ ಬುದ್ಧಿಯು (1) स्मृतिः (2) अनुभवः ಎಂದು ಎರಡು ವಿಧ. ಅನುಭವವು (1) प्रत्यक्षम् ಮತ್ತು (2) अनुमितिः ಎಂದು ಎರಡು ವಿಧ. ಇಂದ್ರಿಯಾರ್ಥಸನ್ನಿಕರ್ಷದಿಂದ ಉಂಟಾಗುವ ಜ್ಞಾನವು ಪ್ರತ್ಯಕ್ಷ. ಇದು (1) घ्राणजम्, (2) रासनम्, (3) श्रावणम्, (4) चाक्षुषम्, (5) स्पार्शनम् ಮತ್ತು (6) मानसम् ಎಂದು ಆರು ವಿಧ. ["प्रत्यक्ष" ಪದದಲ್ಲಿ ನೋಡಿ.] ಅನುಮಿತಿಯು (1) केवलान्वयि, (2) केवलव्यतिरेकि ಮತ್ತು (3) अन्वयव्यतिरेकि ಎಂದು ಮೂರು ವಿಧ. 3. ಶೀಘ್ರವಾಗಿ ಗ್ರಹಿಸುವ ಶಕ್ತಿ, ಚುರುಕು ಬುದ್ಧಿ. "शास्त्रेष्वव्याहता बुद्धिः मौर्वी धनुषि चातता" ರಘು೦ ೧-೧೯। 4. ವಿಷಯಗಳ ಪರಿಜ್ಞಾನ, ಎಲ್ಲಾ ವಿಷಯಗಳಲ್ಲೂ ಒಳ್ಳೆಯ ಪರಿಚಯ. "बुद्धेर्बुद्धिमतां लोके नास्त्यगम्यं हि किंचन" ಪಞ್ಚತಂ೦ ೫-४६। 5. ಮನಸ್ಸು, ಚಿತ್ತ. "पुराणमित्येव न साधु सर्वं न चापि काव्यं नवमित्यवद्यम्। सन्तः परीक्ष्यान्यतरद्भजन्ते मूढः परप्रत्ययनेयबुद्धिः" ಮಾಲ೦ ೧-೨। 6. ಅಭಿಪ್ರಾಯ, ಭಾವನೆ, ತೋರುವುದು. 7. ನಂಬಿಕೆ, ವಿಶ್ವಾಸ. "अनयैव बुद्ध्या तपोवनगतोऽपि घातितस्तपस्वी नन्दवंशीयः सर्वार्थसिद्धिः" ಮುದ್ರಾ೦ ೧। 8. ಪ್ರಜ್ಞೆ, ಕುಗ್ಗಿಹೋಗಿದ್ದು ಮತ್ತೆ ಬಂದ ಜ್ಞಾನ. 9. ಧರ್ಮಪುರುಷನ ಹದಿಮೂರು ಮಂದಿ ಪತ್ನಿಯರಲ್ಲೊಬ್ಬಳು. 10. ಸಾಂಖ್ಯತತ್ತ್ವಗಳಲ್ಲಿ ಎರಡನೆಯದಾದ ಮಹತ್ತತ್ತ್ವ. "महत्तत्त्वमिति प्रोक्तं बुद्धितत्त्वं तदुच्यते"।

**ಬುದ್ಧಿಯ ಐದು ಗುಣಗಳು :** (1) इष्टानिष्टविपत्तिः (2) व्यवसायः, (3) समाधिता, (4) संशयः ಮತ್ತು (5) प्रतिपत्तिः। (1) ಇಷ್ಟವಾದ ಮತ್ತು ಅನಿಷ್ಟವಾದ ವೃತ್ತಿಗಳ ನಾಶ. ಇದು ನಿದ್ರಾರೂಪವಾದುದು. (2) ಉತ್ಸಾಹ. (3) ಚಿತ್ತಸ್ಥೈರ್ಯ (ಚಿತ್ತವೃತ್ತಿ ನಿರೋಧ). (4) ಸಂಶಯ ಮತ್ತು (5) ಪ್ರತ್ಯಕ್ಷ ಮೊದಲಾದ ಪ್ರಮಾಣವೃತ್ತಿ.

**ಬುದ್ಧಿಯ ಸಪ್ತ (7) ಗುಣಗಳು :** (1) शुश्रूषा, (2) श्रवणम्, (3) ग्रहणम्, (4) धारणम्, (5) ऊहापोहः, (6) अर्थविज्ञानम् ಮತ್ತು (7) तत्त्वज्ञानम्।

**ಬುದ್ಧಿಯ ನಾಶಕ್ಕೆ ಕಾರಣವಾದ ಹನ್ನೆರಡು ವಿಧ ಮಲಗಳು :** (1) शोकः (ದುಃಖ), (2) क्रोधः (ಕೋಪ), (3) लोभः (ಅತಿಯಾದ ಆಸೆ). (4) कामः (ಆಸೆ, ಫಲಾಪೇಕ್ಷೆ), (5) मोहः (ಕೃತ್ಯಾಕೃತ್ಯ ವಿವೇಕವಿಲ್ಲದಿರುವಿಕೆ), (6) परासुता, (7) ईर्ष्या (ಅಸಹನೆ), (8) मानः (ಗರ್ವ), (9) विचिकित्सा (ಸಂಶಯ), (10) हिंसा, (11) असूया (ಇತರರ ಗುಣದಲ್ಲಿ ದೋಷ ಹೇಳುವುದು) ಮತ್ತು (12) जुगुप्सा (ಪರನಿಂದೆ).

**बुद्धिगम्य ಬುದ್ಧಿಗಮ್ಯ** (ವಿ೦) ಬುದ್ಧಿಯಿಂದ ಹೊಂದಲ್ಪಡುವ, ಜ್ಞಾನದಿಂದ ತಿಳಿಯಲ್ಪಡುವ.

**बुद्धिजीविन् ಬುದ್ಧಿಜೀವಿನ್** (ವಿ೦) ಜ್ಞಾನಬಲದಿಂದ ಬದುಕುವವನು, ವಿಚಾರಶೀಲ, ಯುಕ್ತಾಯುಕ್ತ ವಿವೇಚನೆ ಮಾಡುವವನು, ಯುಕ್ತಿಯಿಂದ ಸಿದ್ಧವಾಗದಿರುವುದನ್ನು ತಿರಸ್ಕರಿಸುವವನು. बुद्ध्या जीवति।

**बुद्धितत्त्व ಬುದ್ಧಿತತ್ತ್ವ** (ನ೦) ಸಾಂಖ್ಯತತ್ತ್ವಗಳಲ್ಲಿ ಎರಡನೆಯದಾದ ಮಹತ್ತತ್ತ್ವ. "महत्तत्त्वमिति प्रोक्तं बुद्धितत्त्वं तदुच्यते"।

**बुद्धिपूर्व ಬುದ್ಧಿಪೂರ್ವ** (ವಿ೦) ಉದ್ದೇಶಪೂರ್ವಕವಾದ, ಬೇಕೆಂದು ಮಾಡಿದ. बुद्धिः पूर्वं यस्मिन् कर्मणि। (अव्य०) **–पुरःसरम् –ಪುರಃಸರಮ್, –पूर्वकम् –ಪೂರ್ವಕಮ್.** ಉದ್ದೇಶಪೂರ್ವಕವಾಗಿ. "द्रुमराक्षसविध्वंसमकार्षं बुद्धिपूर्वकम्" ಭಟ್ಟಿ೦ ೯-१२८।

**बुद्धिभ्रम ಬುದ್ಧಿಭ್ರಮ** (ಪುಂ೦) ಬುದ್ಧಿಯು ಕೆರಳುವುದು, ಚಿತ್ತವು ವಿಕಾರ ಹೊಂದುವುದು, ಹುಚ್ಚು ಹಿಡಿಯುವುದು. बुद्धेः भ्रमः। **–भ्रमणम् –ಭ್ರಮಣಮ್.** भ्रम् (चलने) भावे "ल्युट्" (३-३-११५)।

**बुद्धिमत् ಬುದ್ಧಿಮತ್** (ವಿ೦) 1. ಬುದ್ಧಿಶಾಲಿ, ಚುರುಕು ಬುದ್ಧಿಯುಳ್ಳವನು. 2. ಉನ್ನತಮಟ್ಟದ ಜ್ಞಾನವುಳ್ಳವನು. बुद्धिरस्यास्ति—प्रशंसायां "मतुप्" (५-२-९४)। स्त्रियां "ङीप्" (४-१-६)। **–मती –ಮತೀ.** "बुद्धेर्बुद्धिमतां लोके नास्त्यगम्यं हि किंचन" ಪಞ್ಚತಂ೦ ५-४६।

**बुद्धिमत्ता ಬುದ್ಧಿಮತ್ತಾ** (ಸ್ತ್ರೀ೦) 1. ಬುದ್ಧಿವಂತನಾಗಿರುವಿಕೆ, ಚುರುಕುಬುದ್ಧಿಯಿಂದ ಕೂಡಿರುವಿಕೆ. बुद्धिमतो भावः "तल्" (५-१-११९)। "त्वः" (५-१-११९)। **–मत्त्वम् –ಮತ್ತ್ವಮ್.**

**बुद्धियोग ಬುದ್ಧಿಯೋಗ** (ಪುಂ೦) ಮುಖ್ಯವಾದ ಫಲದಲ್ಲಿ ತ್ಯಾಗಬುದ್ಧಿ ಮತ್ತು ಸಿದ್ಧಿ ಅಸಿದ್ಧಿಗಳಲ್ಲಿ ಸಮತ್ವಬುದ್ಧಿ ಹೊಂದುವುದು. ಫಲಸಂಗವನ್ನು ತ್ಯಜಿಸದೆ ಮಾಡುವ ಕರ್ಮಾಚರಣೆಯಿಂದ ದುಃಖರೂಪವಾದ ಸಂಸಾರಬಂಧನಕ್ಕೆ ಒಳಗಾಗುವನು. ಬುದ್ಧಿಯೋಗದಿಂದ ಸಾಂಸಾರಿಕ ದುಃಖನಿವೃತ್ತಿ ಹೊಂದಿ ಮೋಕ್ಷ ಸಂಪಾದನೆಯಾಗುವುದು. "योगस्थः कुरु कर्माणि संगं त्यक्त्वा धनञ्जय। सिद्ध्यसिद्ध्योः समो भूत्वा समत्वं योग उच्यते॥ दूरेण ह्यवरं

कर्म बुद्धियोगाद्धनञ्जय। बुद्धौ शरणमन्विच्छ कृपणाः फलहेतवः ॥ बुद्धियुक्तो जहातीह उभे सुकृतदुष्कृते। तस्माद्योगाय युज्यस्व योगः कर्मसु कौशलम्" गीता २-४८-५०।

**बुद्धिलक्षण ಬುದ್ಧಿಲಕ್ಷಣ** (ನಂ) ಉತ್ತಮ ಬುದ್ಧಿಯ ಲಕ್ಷಣ, ತಿಳಿವಳಿಕೆಯ ಗುರುತು.

**बुद्धिशस्त्र ಬುದ್ಧಿಶಸ್ತ್ರ** (ವಿಂ) ಜ್ಞಾನವೆಂಬ ಆಯುಧವುಳ್ಳ, ಬುದ್ಧಿಯಿಂದಲೇ ಎಲ್ಲಾ ಕಾರ್ಯಗಳನ್ನೂ ಸಾಧಿಸುವ. बुद्धिरेव शस्त्रं यस्य। "बुद्धिशस्त्रः प्रकृत्यङ्गो घनसंवृतिकञ्चुकः। चारेक्षणो दूतमुखो पुरुषः कोऽपि पार्थिवः" माघ० २-८२।

**बुद्धिशालिन् ಬುದ್ಧಿಶಾಲಿನ್** (ವಿಂ) ಜ್ಞಾನದಿಂದ ಪ್ರಕಾಶಿಸುವ, ಚುರುಕುಬುದ್ಧಿಯುಳ್ಳ, ಉನ್ನತಮಟ್ಟದ ಅರಿವುಳ್ಳ. बुद्ध्या शालते—शालृ (कत्थने) "णिनिः" (३-२-७८)।

**बुद्धिसहाय ಬುದ್ಧಿಸಹಾಯ** (ಪುಂ) ಅಮಾತ್ಯ, ಮಂತ್ರಿ, ಬುದ್ಧಿಯಿಂದ ಹಿತವನ್ನು ಮಾಡುವ ಸಲಹೆಗಾರ. बुद्धौ सहायः बुद्ध्या सहायो वा।

**बुद्धिहीन ಬುದ್ಧಿಹೀನ** (ವಿಂ) ಬುದ್ಧಿಯಿಲ್ಲದವನು.

**बुद्धीन्द्रिय ಬುದ್ಧೀಂದ್ರಿಯ** (ನಂ) ಜ್ಞಾನೇಂದ್ರಿಯ. बुद्ध्याः इन्द्रियम् (1) ಶ್ರೋತ್ರ, (2) ತ್ವಕ್, (3) ನೇತ್ರ, (4) ಜಿಹ್ವೆ ಮತ್ತು (5) ನಾಸಿಕೆ ಇವು ಐದೂ ಜ್ಞಾನೇಂದ್ರಿಯಗಳು. "श्रोत्रं त्वक् चक्षुषी जिह्वा नासिका चैव पञ्चमी। बुद्धीन्द्रियाणि" मनु०।

**बुद्बुद ಬುದ್ಬುದ** (ಪುಂ) 1. ನೊರೆ, ನೀರಿನ ಮೇಲಿನ ಗುಳ್ಳೆ. बुद् इत्यव्यक्तध्वनिं बुन्दति करोति—बुन्दिर् (निशामने) "कः" (वा० ३-२-५)। "सततं जातविनष्टाः पयसामिव बुद्बुदाः पयसि" पिञ्चतं० ५-७। 2. ಗರ್ಭದ ಒಂದು ಅವಸ್ಥೆ, ಐದು ದಿನಗಳ ಕಾಲ ಬೆಳೆದ ಗರ್ಭ, ಐದು ದಿನಗಳು ತುಂಬಿದ ಗರ್ಭ.

**बुध ಬುಧ** (ಪುಂ) 1. ಪಂಡಿತ, ವಿದ್ವಾಂಸ. बुध (अवगमने) "कः" (३-१-१३५)। "यदि शमगिरो वैयासिक्यो बुधैश्च समागमः" प्रबोध० ४-१२॥ 2. ದೇವತೆ. "निपीय यस्य क्षितिरक्षिणः कथास्तथाद्रियन्ते न बुधाः सुधामपि" नैष० १-१। 3. ಬುಧಗ್ರಹ, ಬೃಹಸ್ಪತಿಯ ಪತ್ನಿ ತಾರೆಯಲ್ಲಿ ಚಂದ್ರನಿಂದ ಜನಿಸಿದ ಮಗ. "क्रूरग्रहः सकेतुः चन्द्रमसंपूर्णमण्डलमिदानीम्। अभिभवितुमिच्छति बलात् रक्षत्येनं तु बुधयोगः" मुद्रा० १-६। "अपि लङ्घितमध्वानं बुबुधे न बुधोपमः" रघु० १-४७।

**ಬುಧನ ಉತ್ಪತ್ತಿ :** [ಚತುರ್ಮುಖ ಬ್ರಹ್ಮನ ಪುತ್ರನಾದ ಅತ್ರಿಮಹರ್ಷಿಯ ಮಗ ಚಂದ್ರನನ್ನು ಬ್ರಹ್ಮನು ಸಮಸ್ತ ಓಷಧಿ ದ್ವಿಜ ಮತ್ತು ನಕ್ಷತ್ರಗಳಿಗೆ ಅಧಿಪತಿಯನ್ನಾಗಿ ಮಾಡಿದನು. ಇದರಿಂದ ಗರ್ವಿತನಾದ ಚಂದ್ರನು ಬೃಹಸ್ಪತಿಯ ಪತ್ನಿಯಾದ ತಾರೆಯನ್ನು ಬಲಾತ್ಕಾರದಿಂದ ಅಪಹರಿಸಿದನು. ಬ್ರಹ್ಮ ಮೊದಲಾದ ಸಕಲ ದೇವತೆಗಳು ಎಷ್ಟು ಹೇಳಿದರೂ ಅವಳನ್ನು ಬಿಟ್ಟುಕೊಡಲಿಲ್ಲ. ಕೊನೆಗೆ ಚಂದ್ರನ ಸಹಾಯ್ಯಕ್ಕೆ ಬಂದ ಶುಕ್ರಶಿಷ್ಯರಾದ ಅಸುರರಿಗೂ ದೇವತೆಗಳಿಗೂ ಘೋರವಾದ ಯುದ್ಧ ನಡೆದು ಜಗತ್ತೆಲ್ಲವೂ ತಲ್ಲಣಿಸಿಹೋಗಲು ಬ್ರಹ್ಮನು ಎಲ್ಲರನ್ನೂ ಸಮಾಧಾನಗೊಳಿಸಿ ತಾರೆಯನ್ನು ಬೃಹಸ್ಪತಿಗೆ ಒಪ್ಪಿಸುವಂತೆ ಚಂದ್ರನಿಗೆ ಹೇಳಿ ಅವಳನ್ನು ಬೃಹಸ್ಪತಿಯೊಡನೆ ಸೇರಿಸಿದನು. ಆಗ ಚಂದ್ರನಿಂದ ಗರ್ಭ ಧರಿಸಿದ್ದ ತಾರೆಯು ಬೃಹಸ್ಪತಿಯ ಮಾತಿನಂತೆ ಗರ್ಭವನ್ನು ಒಂದು ಜೊಂಡು ಹುಲ್ಲಿನ ಪೊದೆಯಲ್ಲಿ ಬಿಟ್ಟಳು. ಬಿಟ್ಟಕೂಡಲೆ ಅದು ದಿವ್ಯ ತೇಜಸ್ಸಿನಿಂದ ಕೂಡಿದ ಶಿಶುವಾಗಿ ಎಲ್ಲರ ಮನಸ್ಸನ್ನೂ ಆಕರ್ಷಿಸಿತು. ಈ ಮಗುವು ಯಾರಿಗೆ ಸೇರಿದ್ದೆಂದು ಎಲ್ಲರೂ ಬಲಾತ್ಕಾರವಾಗಿ ಕೇಳಲು ತಾರೆಯು ಚಂದ್ರನ ಮಗನೆಂದು ಲಜ್ಜೆಯಿಂದ ಹೇಳಿ ಒಪ್ಪಿಕೊಂಡಳು. ಆಗ ಎಲ್ಲರೂ ಬುಧನು ಚಂದ್ರನ ಮಗನೆಂದು ನಿಶ್ಚಯಿಸಿದರು.] विष्णुपु० ४-६। ಬುಧನಿಗೆ ಮಿಥುನ ಮತ್ತು ಕನ್ಯಾರಾಶಿಗಳು ಕ್ಷೇತ್ರ. ಕನ್ಯಾರಾಶಿಯು ಉಚ್ಚ. ಮೀನರಾಶಿಯು ನೀಚ. ಇವನಿಗೆ ರವಿ ಶುಕ್ರರು ಮಿತ್ರರು. ಚಂದ್ರನು ಶತ್ರು. ಬುಧನು ಶುಭಗ್ರಹ. ವೈಶ್ಯ. ಪೀತವರ್ಣವುಳ್ಳವನು. ಬುಧಗ್ರಹದ ದಶೆಯ ಕಾಲ ಹದಿನೇಳು (17) ವರ್ಷಗಳು.

**ಬುಧಗ್ರಹದ ದಶೆಯಲ್ಲಿ ತನ್ನ (ಸ್ವ) ಮತ್ತು ಇತರ ಗ್ರಹಗಳ ಅಂತರ್ದಶಾ (ಭುಕ್ತಿ) ಮಾನ :**

| ಭುಕ್ತಿ | ವರ್ಷ | ಮಾಸಗಳು | ದಿನಗಳು |
|---|---|---|---|
| ಸ್ವಭುಕ್ತಿ | 2 | 4 | 27 |
| ಕೇತು ಭುಕ್ತಿ | 0 | 11 | 27 |
| ಶುಕ್ರ ಭುಕ್ತಿ | 2 | 10 | 0 |
| ರವಿ ಭುಕ್ತಿ | 0 | 10 | 6 |
| ಚಂದ್ರ ಭುಕ್ತಿ | 1 | 5 | 0 |
| ಕುಜ ಭುಕ್ತಿ | 0 | 11 | 27 |
| ರಾಹು ಭುಕ್ತಿ | 2 | 6 | 18 |
| ಗುರು ಭುಕ್ತಿ | 2 | 3 | 6 |
| ಶನಿ ಭುಕ್ತಿ | 2 | 8 | 9 |

ತನ್ನ (ಸ್ವ) ಮತ್ತು ಇತರ ಗ್ರಹಗಳ ದಶೆಗಳಲ್ಲಿ ಬುಧನ ಅಂತರ್ದಶಾ (ಭುಕ್ತಿ) ಮಾನ :

| ದಶೆ | ವರ್ಷ | ಮಾಸಗಳು | ದಿನಗಳು |
|---|---|---|---|
| ರವಿದಶೆ | 0 | 10 | 6 |
| ಚಂದ್ರದಶೆ | 1 | 5 | 0 |
| ಕುಜದಶೆ | 0 | 11 | 27 |
| ರಾಹುದಶೆ | 2 | 6 | 18 |
| ಗುರುದಶೆ | 2 | 3 | 6 |
| ಶನಿದಶೆ | 2 | 8 | 9 |
| ಸ್ವದಶೆ | 2 | 4 | 27 |
| ಕೇತುದಶೆ | 0 | 11 | 27 |
| ಶುಕ್ರದಶೆ | 2 | 10 | 0 |

**बुध – अवगमने** (भ्वा० पर० सक० से०)। बोधति। बुबोध बुबुधतुः बुबुधुः। बोधिता। बोधिष्यति। बोधतु। अबोधत्। बोधेत्। ಇತ್ಯಾದಿ. ತಿಳಿದುಕೊ, ಅರಿ.

**कर्मणि :**—बुध्यते। बुबुधे। ಇತ್ಯಾದಿ.

**णिचि :**—बोधयति। बोधयां चकार, –चक्रे, –बभूव, –आस। ಇತ್ಯಾದಿ.

**बुध – अवगमने** (दिवा० आत्म० सक० अनि०)। बुध्यते। बुबुधे। बोद्धा। बुध्यताम्। अबुध्यत। बुध्येत। अबोधि, अबुद्ध। ಇತ್ಯಾದಿ. 1. ತಿಳಿದುಕೊ, ಅರಿ. "विभुर्विभक्तावयवं पुमानिति क्रमादमुं नारद इत्यबोधि सः" माघ० १-३। "नाबुद्ध कल्पद्रुमतां विहाय जातं तमात्मन्यसिपत्रवृक्षम्" रघु० १४-४८। 2. ನಿದ್ರೆಯಿಂದೇಳು, ಎಚ್ಚರಗೊಳ್ಳು. "ते च प्रापुरुदन्वन्तं बुबुधे चादिपूरुषः" रघु० १०-६। 3. ಪ್ರಜ್ಞೆಹೊಂದು, ಚೇತರಿಸಿಕೊ. "शनैरबोधि सुग्रीवः सोऽलुञ्चीत्कर्णनासिकम्" भट्टि० १५-५७।

**कर्मणि :**—ಮೇಲಿನಂತೆ ರೂಪಗಳಾಗುವುವು.

**णिचि :**—बोधयतीत्यादिरूपाणि।

**कृत्सु :**—बोद्धव्यम्। बोधनीयम्। बोध्यम्। बुद्धः। बुद्धवान्। बुध्यमानः। बोद्धुम्। बुद्धम्। बोधनम्। बुध्वा। विबुध्य। "बोद्धव्यं किमिव हि यत्त्वया न बुद्धम्" भट्टि० १०-७४।

ಈ ಧಾತುವಿಗೆ ಉಪಸರ್ಗಗಳ ಯೋಗದಿಂದ ಉಂಟಾಗುವ ಅರ್ಥಭೇದಗಳು :

(1) उद्+बुध=उद्बुद्धयते। उद्बोधनम्। उद्बुद्धः। उद्बोधयत्। 1. ಎಚ್ಚರಗೊಳ್ಳು, ನಿದ್ರೆಯಿಂದೇಳು. 2. ಚೇತನಗೊಳಿಸು, ಬದುಕಿಸು, ಉಸಿರಾಡುವಂತೆ ಮಾಡು. 3. ಉತ್ತೇಜನ ಕೊಡು, ಕೆರಳಿಸು, ಹುರಿದುಂಬಿಸು.

(2) नि+बुध = निबोधति। निबोधतु। 1. ತಿಳಿ, ಅರಿತುಕೊ. "सखी तदीया तमुवाच वर्णिनं निबोध साधो तव चेत् कुतूहलम्" कुमा० ५-५२। 2. ಕೇಳು, ಗಮನಿಸು, ಆಲಿಸು.

(3) दुर् + बुध = दुर्बोधः। दुर्बोधनम्। ಕಷ್ಟದಿಂದ ತಿಳಿದುಕೊ. "निसर्गदुर्बोधमबोधविक्लवाः क्व भूपतीनां चरितं क्व जन्तवः" किरा० १-६।

(4) प्र + बुध = प्रबुद्धः। प्रबोधनम्। प्रबोधितः। प्रबोधयत्। 1. ಎಚ್ಚರಗೊಳ್ಳು, ನಿದ್ದೆಯಿಂದೇಳು. "प्रथमप्रबुद्धनदराजसुतावदनेन्दुनेव तुहिनद्युतिना" माघ० ९-३०। 2. ಅರಳು, ವಿಕಾಸಹೊಂದು. "साभ्रेऽह्नीव स्थलकमलिनीं न प्रबुद्धां न सुप्ताम्" मेघ० २-२७। 3. ತಿಳಿಸು, ಜ್ಞಾಪಿಸು. "तमभ्यनन्दत् प्रथमं प्रबोधितः प्रजेश्वरः शासनहारिणा हरेः" रघु० ३-६८।

(5) प्रति+बुध = प्रतिबुद्धः। प्रतिबोधितः। प्रतिबोध्यमानः। 1. ನಿದ್ದೆಯಿಂದ ಎಚ್ಚರಗೊಳ್ಳು, ನಿದ್ದೆಯಿಂದೇಳು. 2. ಅರಳು, ವಿಕಾಸಹೊಂದು. "अप्रतिबुद्धोऽपि चूतप्रसवोऽत्र बन्धनभंगसुरभिर्भवति" शाकु० ६। 3. ಎಚ್ಚರಗೊಳಿಸು, ನಿದ್ದೆಯಿಂದೆಬ್ಬಿಸು. 4. ತಿಳಿಸು, ಜ್ಞಾಪಿಸು. "प्रथमं सारङ्गाक्ष्या प्रियया प्रतिबोध्यमानमपि सुप्तम्" शाकु० ६-७।

(6) सम् + बुध = संबुद्धिः। सम्बोधनम्। 1. ಸಂಬೋಧಿಸು, ಉದ್ದೇಶಿಸಿ ಕರೆ. "सम्बुद्धौ शाकल्यस्येतावनार्षे" पा० सू० १-१-१६। 2. ತಿಳಿ, ಅರಿ. "सम्भुत्सीष्ठाः सुनयनयनैर्विद्विषामीहितानि" भट्टि० १९-३०। 3. ತಿಳಿಸು, ಜ್ಞಾಪಿಸು. "मृग्यश्च दर्भाङ्कुरनिर्व्यपेक्षास्तवागतिज्ञं समबोधयन्माम्" रघु० १३-२५।

**बुधचक्र ಬುಧಚಕ್ರ** (ನಂ) ಬುಧಗ್ರಹವು ಬೇರೆ ರಾಶಿಗಳಲ್ಲಿ ಸಂಚರಿಸುವಾಗ ಸುಖಾದಿ ಸ್ಥಾನಗಳಲ್ಲಿ ಶುಭಾಶುಭ ಫಲಗಳನ್ನು ತಿಳಿಸುವ ಚಕ್ರ. बुधस्य चक्रम्।

**बुधचार ಬುಧಚಾರ** (ಪುಂ) ಬುಧಗ್ರಹವು ದ್ವಾದಶ ರಾಶಿಗಳಲ್ಲಿ ಸಂಚರಿಸುವಿಕೆ.

**बुधजन ಬುಧಜನ** (ಪುಂ) ಪಂಡಿತ, ವಿದ್ವಾಂಸ.

**बुधतनय ಬುಧತನಯ, –सुत –ಸುತ** (ಪುಂ) ಪುರೂರವಸ್ಸು, ವೈವಸ್ವತಮನುವಿನ ಮಗಳಾದ ಇಳೆಯಲ್ಲಿ ಜನಿಸಿದ ಬುಧನ ಮಗ.

**बुधवार ಬುಧವಾರ, -वासर -ವಾಸರ** (ಪುಂ) ಬುಧನು ಅಧಿಪತಿಯಾಗಿರುವ ವಾರ (ದಿವಸ). बुधस्य वारः वासरो वा। ಬುಧವಾರ ಹುಟ್ಟಿದವನು ಗುಣಶಾಲಿ. ಇತರರ ಗುಣಗಳನ್ನೂ ತಿಳಿಯುವ ಶಕ್ತಿಯುಳ್ಳವನು. ಕಾರ್ಯಗಳಲ್ಲಿ ದಕ್ಷನು. ವಿಲಾಸಸ್ವಭಾವದವನು. ಬುದ್ಧಿವಂತ. ವಿಧೇಯ. ಮೃದುಸ್ವಭಾವದವನು. ಸುಂದರಾಕಾರವುಳ್ಳವನು. "गुणी गुणज्ञः कुशली क्रियादौ विलासशाली मतिमान् विनीतः। मृदुस्वभावः कमनीयमूर्तिः बुधस्य वारे प्रभवो मनुष्यः"।

**बुधा ಬುಧಾ** (ಸ್ತ್ರೀ೦) ಜಟಾಮಾಂಸಿ. बुध (अवगमने) "कः" (३-१-१३५)।

**बुधान ಬುಧಾನ** (ಪುಂ) 1. ವೇದವನ್ನು ಕಲಿಸುವ ಗುರು. बोधयति—बुधिर् (बोधने) "आनच्" (उ० २-९०)। (वि०) 2. ಚೆನ್ನಾಗಿ ತಿಳಿದವನು, ವಿವೇಚನೆ ಮಾಡುವವನು. ಯುಕ್ತಾಯುಕ್ತ ಪರಿಜ್ಞಾನವುಳ್ಳವನು. 3. ಬುದ್ಧಿವಂತ. ಚುರುಕುಬುದ್ಧಿಯುಳ್ಳವನು. 4. ಪ್ರೀತಿಯಿಂದ ಮಾತಾಡುವವನು. 5. ತತ್ತ್ವೋಪದೇಶ ಮಾಡುವವನು. "बुधानस्तु गुरौ विज्ञे" मेदि०।

**बुधित ಬುಧಿತ** (ವಿ೦) ತಿಳಿಯಲ್ಪಟ್ಟ. बुध (अवगमने) "क्तः" (३-२-१०२)। भ्वादि० बुध ಧಾತುವು ಸೇಟ್ಕ. दिवा० ಧಾತುವು ಅನಿಟ್ಕ.

**बुधिल ಬುಧಿಲ** (ವಿ೦) ಪಂಡಿತ, ವಿದ್ವಾಂಸ. बुध (अवगमने) "किलच्" (उ० १-५६)।

**बुध्न ಬುಧ್ನ** (ಪುಂ) 1. ವೃಕ್ಷದ ಮೂಲ ಭಾಗ, ಮರದ ಬೇರು. बध्नाति — बन्ध (बन्धने) "नक्" बुधी आदेशश्च (उ० ३-५)। 2. ಪಾತ್ರೆಯ ತಳಭಾಗ. 3. ಪರಶಿವ, ಪರಮೇಶ್ವರ. "बुध्नो गिरिशमूलयोः" हेम०।

**बुभुक्षा ಬುಭುಕ್ಷಾ** (ಸ್ತ್ರೀ೦) ಊಟಮಾಡಲು ಇಚ್ಛೆ. ಹಸಿವು. भोक्तुमिच्छा—भुज (परिपालनाभ्यवहारयोः) + सन् "अः" (३-३-१०२)।

**बुभुक्षित ಬುಭುಕ್ಷಿತ** (ವಿ೦) ಹಸಿದಿರುವವನು, ಊಟ ಮಾಡಲು ಅಪೇಕ್ಷಿಸುವವನು. बुभुक्षास्य सञ्जाता "इतच्" (५-२-३६)। "अजीगर्तः सुतं हन्तुमुपासर्पद्बुभुक्षितः" मनु० १०-१०५।

**बुभुक्षु ಬುಭುಕ್ಷು** (ವಿ೦) ಹಸಿದಿರುವವನು, ಊಟ ಮಾಡಲು ಅಪೇಕ್ಷಿಸುವವನು. भोक्तुमिच्छुः—भुज (परिपालनाभ्यवहारयोः) + सन् "उः" (३-२-१६८)।

**बुभुत्सा ಬುಭುತ್ಸಾ** (ಸ್ತ್ರೀ೦) ತಿಳಿದುಕೊಳ್ಳಲು ಅಪೇಕ್ಷೆ, ತಿಳಿಯಲು ಆಸೆ. बोद्धुमिच्छा — बुध (अवगमने) + सन् "अः" (३-२-१०२)।

**बुभुत्सु ಬುಭುತ್ಸು** (ವಿ೦) ತಿಳಿದುಕೊಳ್ಳಲು ಅಪೇಕ್ಷಿಸುವ, ತಿಳಿಯಲು ಆಸೆಯುಳ್ಳ. बोद्धुमिच्छुः—बुध (अवगमने) + सन् "उः" (३-२-१६८)। "बुभुत्सवो द्रुतं सीतां भुत्सीध्वं प्रब्रवीमि वः" भट्टि० ७-१००।

**बुभूषा ಬುಭೂಷಾ** (ಸ್ತ್ರೀ೦) 1. ಆಗಲು ಆಸೆ, 2. ಇರಲು ಅಪೇಕ್ಷೆ. भवितुमिच्छा—भू (सत्तायाम्) + सन् "अः" (३-३-१०२)।

**बुभूषु ಬುಭೂಷು** (ವಿ೦) 1. ಆಗಲು ಆಸೆಪಡುವ. 2. ಇರಲು ಅಪೇಕ್ಷಿಸುವ. भवितुमिच्छुः—भू (सत्तायाम्) + सन् "उः" (३-२-१६८)। "प्रभुर्बुभूषुर्भुवनत्रयस्य यः शिरोऽतिरागाद्दशमं चिकर्तिषुः" माघ० १-४९।

**बुस ಬುಸ** (ನ೦) 1. ಜಳ್ಳು ತೆನೆಯ ಹುಲ್ಲು, ತಿರುಳಿಲ್ಲದ, ಧಾನ್ಯದ ಕಡ್ಡಿ. बुस्यते उत्सृज्यते—बुस (उत्सर्गे) (३-२-१३५)। 2. ಮೊಸರಿನ ಮೇಲಿನ ತೆಳುವಾದ ಭಾಗ.

**बुस्त ಬುಸ್ತ** (ನ೦) 1. ಹಲಸು ಮೊದಲಾದ ಹಣ್ಣಿನ ಸಿಪ್ಪೆ ಹುಲ್ಲು ದಿಂಡು ಮೊದಲಾದುದು (ಬಿಸಾಡುವ ವಸ್ತು). बुस (अनादरे) "क्तः" (३-२-१०२)। 2. ಪಾತ್ರೆಯಲ್ಲಿ ಬೇಯಿಸಲ್ಪಟ್ಟ ಮಾಂಸ.

**बृहज्जातक ಬೃಹಜ್ಜಾತಕ** (ನ೦) ವರಾಹಮಿಹಿರಾಚಾರ್ಯರಿಂದ ರಚಿತವಾದ ಒಂದು ಜ್ಯೋತಿಷ ಗ್ರಂಥ.

**बृहड्ढक्का ಬೃಹಡ್ಢಕ್ಕಾ** (ಸ್ತ್ರೀ೦) ಭೇರೀವಾದ್ಯ, ನಗಾರಿ.

**बृहत् ಬೃಹತ್** (ಪುಂ) 1. ವಿಷ್ಣು. बृह (वृद्धौ) "अतिः" (उ० २-८४)। "स भूमिं विश्वतो वृत्वा अत्यतिष्ठद्दशाङ्गुलम्" "अणोरणीयान् महतो महीयान्" ಇತ್ಯಾದಿ ಶ್ರುತಿವಾಕ್ಯಗಳಿಂದ ಪರಮಾತ್ಮನ ಸರ್ವಾತಿಶಾಯಿ ಮಹಿಮೆಯು ವರ್ಣಿತವಾಗಿರುವುದರಿಂದ ಪರಮಾತ್ಮನು ಎಲ್ಲಕ್ಕಿಂತಲೂ ಬೃಹತ್ತಾದವನು. "विपुलं परमव्योम महिम्ना चुलकीकृतम्। येन नाम्ना बृहत् स स्यात् षडर्णश्च बृहत्वदः" इति निरुक्तिः। "अणुर्बृहत् कृशः स्थूलः" वि० स०। (वि०) 2. ದೊಡ್ಡದಾದ, ದಪ್ಪವಾದ. "वितरति बृहदश्मा पर्वतः प्रीतिमक्ष्णोः" मालती० ९-५। 3. ಅಗಲವಾದ, ವಿಸ್ತಾರವಾದ, ವಿಶಾಲವಾದ. "दिलीपसूनोः स बृहद्भुजान्तरं प्रविश्य भीमासुरशोणितोचितः" रघु० ३-५४। 4. ಉದ್ದವಾದ, ನೀಳ

ವಾದ. "धातुताम्राधर: प्रांशुर्देवदारुबृहद्भुज:" कुमा० ६-५१। 5. ಅಧಿಕವಾದ, ಹೆಚ್ಚಾದ. "बृहत्सहाय: कार्यान्ते क्षोदीयानपि गच्छति" माघ० २-१००। 6. ಧಾರಾಳವಾದ, ಹೇರಳವಾದ. स्त्रियां "ङीप्" (४-१-६)। बृहती ಬೃಹತೀ.

**बृहतिका ಬೃಹತಿಕಾ** (स्त्री०) ಉತ್ತರೀಯ, ಹೊದೆಯುವ ವಸ್ತ್ರ. बृहत्येव "कन्" (५-४-६)।

**बृहती ಬೃಹತೀ** (स्त्री०) 1. ಮಾತು. बृह (वृद्धौ) "अति:" (उ० २-८४)। "ङीप्" (४-१-६)। 2. ಹೆಗ್ಗುಳ್ಳದ ಗಿಡ, ಬಿಳಿ ಬದನೆ ಗಿಡ. 3. ದೊಡ್ಡ ವೀಣೆ. 4. ವೃತ್ತರತ್ನಾಕರೋಕ್ತವಾದ ಒಂಬತ್ತನೆಯ ಛಂದಸ್ಸು. "गायत्र्युष्णिगनुष्टुप्च बृहती पङ्क्तिरेव च" वृ० र०। 5. ನಾರದರ ವೀಣೆ. 6. ಉತ್ತರೀಯ, ಹೊದೆಯುವ ವಸ್ತ್ರ. 7. ನೀರು ತುಂಬಿಡುವ ಪಾತ್ರೆ. "बृहती क्षुद्रवार्ताक्यां छन्दोवसनभेदयो:। महत्यां वाचि वर्षन्याम्" हेम०।

**बृंहित ಬೃಂಹಿತ** (न०) ಆನೆಯ ಗರ್ಜನೆ, ಆನೆಯ ಕೂಗು. बृहि (वृद्धौ) "क्त:" (३-३-११४)।

**बृहत्कथा ಬೃಹತ್ಕಥಾ** (स्त्री०) ಗುಣಾಢ್ಯ ಕವಿ ರಚಿತವಾದ ಒಂದು ಗ್ರಂಥ.

**बृहत्काय ಬೃಹತ್ಕಾಯ** (वि०) ದೊಡ್ಡ ದೇಹವುಳ್ಳವನು. बृहन् कायो यस्य।

**बृहत्कुक्षि ಬೃಹತ್ಕುಕ್ಷಿ** (वि०) ದೊಡ್ಡ ಹೊಟ್ಟೆಯುಳ್ಳವನು. बृहन् कुक्षिर्यस्य।

**बृहत्तिक्ता ಬೃಹತ್ತಿಕ್ತಾ** (स्त्री०) ಅಗುರು ಶುಂಠಿ. बृहन् तिक्तो रसो यस्य।

**बृहत्पाद ಬೃಹತ್ಪಾದ** (पुं०) 1. ಆಲದ ಮರ. (वि०) 2. ದೊಡ್ಡ ಕಾಲುಗಳುಳ್ಳವನು.

**बृहत्संहिता ಬೃಹತ್ಸಂಹಿತಾ** (स्त्री०) ವರಾಹಮಿಹಿರಾಚಾರ್ಯ ವಿರಚಿತ ಒಂದು ಜ್ಯೋತಿಷ ಗ್ರಂಥ.

**बृहदङ्ग ಬೃಹದಂಗ** (पुं०) 1. ಗಜ, ಆನೆ. बृहन्त्यङ्गानि अस्य। (वि०) 2. ದೊಡ್ಡ ದೇಹವುಳ್ಳವನು.

**बृहदारण्यक ಬೃಹದಾರಣ್ಯಕ** (न०) ವೇದದ ಒಂದು ಭಾಗ, ಒಂದು ಉಪನಿಷತ್ತು.

**बृहद्गोल ಬೃಹದ್ಗೋಲ** (न०) ಕಲ್ಲಂಗಡಿ ಹಣ್ಣು.

**बृहद्भानु ಬೃಹದ್ಭಾನು** (पुं०) 1. ಅಗ್ನಿ, ಬೆಂಕಿ. 2. ಹರಳು ಗಿಡ.

**बृहन्नला ಬೃಹನ್ನಲಾ** (स्त्री०) ಅರ್ಜುನ. ಪಾಂಡವರ ಅಜ್ಞಾತವಾಸ ಕಾಲದಲ್ಲಿ ವಿರಾಟನ ಅರಮನೆಯಲ್ಲಿ ನಾಟ್ಯಾಚಾರ್ಯನಾಗಿದ್ದ ಅರ್ಜುನನ ಹೆಸರು.

**बृहद्रथ ಬೃಹದ್ರಥ** (पुं०) 1. ಇಂದ್ರ. 2. ಜರಾಸಂಧನ ತಂದೆ.

**बृहस्पति ಬೃಹಸ್ಪತಿ** (पुं०) 1. ದೇವತೆಗಳ ಗುರು, ದೇವತೆಗಳ ಪುರೋಹಿತ. बृहतां पति:—सुडागम: तलोपश्च (वा० ६-१-१५७)। 2. ಒಂದು ಗ್ರಹ. ಬೃಹಸ್ಪತಿಗೆ ಧನುಸ್ಸು ಮತ್ತು ಮೀನರಾಶಿಗಳು ಕ್ಷೇತ್ರ. ಕರ್ಕಾಟಕ ರಾಶಿಯು ಉಚ್ಚ, ಮಕರರಾಶಿ ನೀಚಸ್ಥಾನ. ರವಿ ಚಂದ್ರ ಮತ್ತು ಕುಜರು ಮಿತ್ರರು. ಶನಿ ಸಮ. ಬುಧ ಶುಕ್ರರು ಶತ್ರುಗಳು. ಗುರುವು ಶುಭಗ್ರಹ, ಶ್ವೇತವರ್ಣದ ದೇಹವುಳ್ಳವನು. ಪುರುಷಗ್ರಹ. ಬೃಹಸ್ಪತಿ ಗ್ರಹದ ದಶಾಕಾಲ ಹದಿನಾರು (16) ವರ್ಷಗಳು.

**ಬೃಹಸ್ಪತಿ (ಗುರು) ಗ್ರಹದ ದಶೆಯಲ್ಲಿ ತನ್ನ (ಸ್ವ) ಮತ್ತು ಇತರ ಗ್ರಹಗಳ ಅಂತರ್ದಶಾ (ಭುಕ್ತಿ) ಮಾನ:**

| ಭುಕ್ತಿ | ವರ್ಷ | ಮಾಸ | ದಿನಗಳು |
|---|---|---|---|
| ಸ್ವಭುಕ್ತಿ | 2 | 1 | 18 |
| ಶನಿ ಭುಕ್ತಿ | 2 | 6 | 12 |
| ಬುಧ ಭುಕ್ತಿ | 2 | 3 | 6 |
| ಕೇತು ಭುಕ್ತಿ | 0 | 11 | 6 |
| ಶುಕ್ರ ಭುಕ್ತಿ | 2 | 8 | 0 |
| ರವಿ ಭುಕ್ತಿ | 0 | 9 | 18 |
| ಚಂದ್ರ ಭುಕ್ತಿ | 1 | 4 | 0 |
| ಕುಜ ಭುಕ್ತಿ | 0 | 11 | 6 |
| ರಾಹು ಭುಕ್ತಿ | 2 | 4 | 24 |

**ತನ್ನ (ಸ್ವ) ಮತ್ತು ಇತರ ಗ್ರಹಗಳ ದಶೆಗಳಲ್ಲಿ ಗುರುವಿನ ಅಂತರ್ದಶಾ (ಭುಕ್ತಿ) ಮಾನ:**

| ದಶೆ | ವರ್ಷ | ಮಾಸ | ದಿನಗಳು |
|---|---|---|---|
| ರವಿ ದಶೆ | 0 | 9 | 18 |
| ಚಂದ್ರ ದಶೆ | 1 | 4 | 0 |
| ಕುಜ ದಶೆ | 0 | 11 | 6 |
| ರಾಹು ದಶೆ | 2 | 4 | 24 |
| ಸ್ವದಶೆ | 2 | 1 | 18 |
| ಶನಿ ದಶೆ | 2 | 6 | 12 |
| ಬುಧ ದಶೆ | 2 | 3 | 6 |
| ಕೇತು ದಶೆ | 0 | 11 | 6 |
| ಶುಕ್ರ ದಶೆ | 2 | 8 | 0 |

**बृहस्पतिवार ಬೃಹಸ್ಪತಿವಾರ, -वासर -ವಾಸರ** (ಪುಂ) ಗುರುವಾರ, ಬೃಹಸ್ಪತಿಯು ಅಧಿಪತಿಯಾಗಿರುವ ವಾರ.

**बेर ಬೇರ** (ನಂ) ವಿಗ್ರಹ, ಪ್ರತಿಮೆ, ಮೂರ್ತಿ. "प्रतिच्छन्दः प्रतिनिधिः बेरं च प्रतिरूपकम्" वैजं ।

**बैजिक ಬೈಜಿಕ** (ವಿಂ) 1. ಬೀಜದಿಂದ ಉಂಟಾದ, ರೇತಸ್ಸಿನಿಂದ ಹುಟ್ಟಿದ. बीजेन निर्वृत्तम् "ठञ्" (५-१-७९)। 2. ಧಾನ್ಯರೂಪ ಬೀಜದಿಂದ ಹುಟ್ಟಿದ.

**बैडाल ಬೈಡಾಲ** (ವಿಂ) ಬೆಕ್ಕಿಗೆ ಸಂಬಂಧಿಸಿದ, ಮಾರ್ಜಾರ ಸಂಬಂಧವಾದ. बिडालस्येदम् "अण्" (४-३-१२०)।

**बैम्ब ಬೈಂಬ** (ವಿಂ) ಬಿಂಬ ಸಂಬಂಧವಾದ,

**बैम्बिक ಬೈಂಬಿಕ** (ವಿಂ) ಸ್ತ್ರೀಲೋಲ, ಕಾಮಾಸಕ್ತ, ಪ್ರಣಯಿ. "दाक्षिण्यं नाम बिम्बोष्ठि बैम्बिकानां कुलव्रतम्" मालं ४-१४।

**बैल्व ಬೈಲ್ವ** (ವಿಂ) 1. ಬಿಲ್ವವೃಕ್ಷಕ್ಕೆ ಸಂಬಂಧಿಸಿದ, ಬಿಲ್ವಪತ್ರೆ ಮರದ ಸಂಬಂಧವಾದ. बिल्वस्येदम् "अण्" (४-३-१२०)। (ನಂ) 2. ಬಿಲ್ವಫಲ, ಬಿಲ್ವಪತ್ರಕಾಯಿ.

**बोक्काण ಬೋಕ್ಕಾಣ** (ಪುಂ) ಕುದುರೆಯು ಹುರುಳಿ ಮೊದಲಾದ ಆಹಾರವನ್ನು ತಿನ್ನುವ ಚೀಲ. "युग्यासनप्रसेवे तु द्वौ बोक्काणप्रसेहकौ" वैजं ।

**बोध ಬೋಧ** (ಪುಂ) 1. ವಿವೇಕ, ಜ್ಞಾನ, ತಿಳುವಳಿಕೆ, ಅರಿವು. बुध (अवगमने) "घञ्" (३-३-१८)। "धूत्वा बोधजलैरबोधबहुलं तल्लोभजन्यं रजः" प्रबोधं ४-२३। 2. ತಿಳಿದುಕೊಳ್ಳುವುದು, ಅರ್ಥಮಾಡಿಕೊಳ್ಳುವುದು, ಗ್ರಹಿಸುವುದು. "बालानां सुखबोधाय क्रियते तर्कसंग्रहः" तं सं। "अधीतिबोधाचरणप्रचारणैर्दशाश्चतस्रः प्रणयन्नुपाधिभिः" नैषं। 3. ಎಚ್ಚರದಿಂದಿರುವುದು, ಜಾಗೃತಿ, ಎಚ್ಚತ್ತಿರುವುದು. 4. ಚೈತನ್ಯ. 5. ಉಪದೇಶಿಸುವುದು, ಬುದ್ಧಿವಾದ, ಸಲಹೆ. 6. ಶಿಕ್ಷಣ, ಬೋಧನೆ.

**बोधक ಬೋಧಕ** (ವಿಂ) 1. ತಿಳಿಯಪಡಿಸುವ, ತಿಳುವಳಿಕೆಯುಂಟುಮಾಡುವ, ಜ್ಞಾನವನ್ನುಂಟುಮಾಡುವ. बोधयति — बुध (अवगमने) + णिच् "ण्वुल्" (३-१-१३३)। "वर्णाः पदं प्रयोगार्हानन्वितैकार्थबोधकाः" सां दं २-४। 2. ಉಪದೇಶಿಸುವ, ಶಿಕ್ಷಣ ಕೊಡುವ. 3. ನಿವೇದಿಸುವ, ಅರುಹುವ, ಶ್ರುತಪಡಿಸುವ. 4. ಎಚ್ಚರಗೊಳಿಸುವ, ಎಬ್ಬಿಸುವ. 5. ಸಲಹೆ ಕೊಡುವ. 6. ಜ್ಞಾಪಿಸುವ, ನೆನಪುಕೊಡುವ. स्त्रियां "टाप्" (४-१-४)। **बोधिका ಬೋಧಿಕಾ.**

**बोधकर ಬೋಧಕರ** (ಪುಂ) 1. ರಾಜನನ್ನು ಪ್ರಾತಃಕಾಲ ನಿದ್ದೆಯಿಂದ ಎಬ್ಬಿಸುವವನು. बोधं करोति — डु कृञ् (करणे) "टः" (३-२-२०)। (ವಿಂ) 2. ಉಪದೇಶಿಸುವವನು, ಶಿಕ್ಷಣಕೊಡುವವನು. 3. ತಿಳಿಯಪಡಿಸುವವನು. 4. ಎಚ್ಚರಗೊಳಿಸುವ, ಎಬ್ಬಿಸುವ.

**बोधन ಬೋಧನ** (ನಂ) 1. ಜ್ಞಾನ, ತಿಳುವಳಿಕೆ, बुध भावे "ल्युट्" (३-३-११५)। "परिचयं चललक्ष्यनिपातने भयरुषोश्च तदिङ्गितबोधनम्" रघुं ९-४९। 2. ಉಪದೇಶ, ಶಿಕ್ಷಣ. बुध (अवगमने) + णिच् "ल्युट्" (३-३-११५)। 3. ಎಬ್ಬಿಸುವುದು, ಎಚ್ಚರಗೊಳಿಸುವುದು. "समयेन तेन चिरसुप्तमनोभवबोधनं सममबोधिषत" माघं ९-२४। 4. ನಿವೇದಿಸುವುದು, ಅರುಹುವುದು, ವಿಜ್ಞಾಪಿಸುವುದು, ಶ್ರುತಪಡಿಸುವುದು. 5. ತಿಳಿಸುವುದು, ಸೂಚಿಸುವುದು. (ವಿಂ) 6. ಉಪದೇಶಿಸುವ, ಶಿಕ್ಷಣಕೊಡುವ. 7. ನಿವೇದಿಸುವ, ಶ್ರುತಪಡಿಸುವ. 8. ಎಬ್ಬಿಸುವ, ಎಚ್ಚರಗೊಳಿಸುವ. 9. ಸೂಚಿಸುವ. बुध कर्तं "ल्युः" (३-१-१३४)।

**बोधनी ಬೋಧನೀ** (ಸ್ತ್ರೀಂ) 1. ತಿಪ್ಪಲಿ, ಹಿಪ್ಪಲಿ. बोध्यतेऽनया — बुध (अवगमने) + णिच् "ल्युट्" (३-३-११७)। "बोधनी गन्धपिप्पल्याम्" मेदिं। 2. ಕಾರ್ತಿಕ ಶುದ್ಧ ಏಕಾದಶಿ.

**बोधनीय ಬೋಧನೀಯ** (ವಿಂ) 1. ಬೋಧಿಸಲ್ಪಡುವ, ತಿಳಿಯಪಡಿಸಲ್ಪಡುವ. 2. ತಿಳಿಯಪಡಿಸಬೇಕಾದ, 3. ತಿಳಿಯಪಡಿಸಲು ಅರ್ಹವಾದ. बुध (अवगमने) "अनीयर्" (३-१-९६)। "तव्यः"। **बोधितव्यः ಬೋಧಿತವ್ಯಃ.** बुध + णिच् "तव्यः" (३-१-९६)। **बोधयितव्यः ಬೋಧಯಿತವ್ಯಃ.** "अस्मदभिप्रायमुपनिषद्विवेकेन बोधयितव्या" प्रबोधं ६।

**बोधयत् ಬೋಧಯುತ್** (ವಿಂ) 1. ಉಪದೇಶಿಸುತ್ತಿರುವ, ಶಿಕ್ಷಣಕೊಡುತ್ತಿರುವ, ಕಲಿಸುತ್ತಿರುವ. बुध (अवगमने) + णिच् "शतृ" (३-२-१२४)। 2. ಹಿತವನ್ನು ತಿಳಿಸುತ್ತಿರುವ, ಸಲಹೆ ಕೊಡುತ್ತಿರುವ. "रावणं गमय प्रीतिं बोधयन्तं हिताहितम्" भट्टिं ८-८२। 3. ನಿವೇದಿಸುತ್ತಿರುವ, ಅರುಹುತ್ತಿರುವ, ವಿಜ್ಞಾಪಿಸುತ್ತಿರುವ. 4. ಎಬ್ಬಿಸುತ್ತಿರುವ, ಎಚ್ಚರಗೊಳಿಸುತ್ತಿರುವ. 5. ಸೂಚಿಸುತ್ತಿರುವ. 6. ತಿಳಿಯಪಡಿಸುತ್ತಿರುವ, ಹೇಳುತ್ತಿರುವ. "मच्चित्ता मद्गतप्राणा बोधयन्तः परस्परम्" गीता १०-९।

**बोधान ಬೋಧಾನ** (ಪುಂ) 1. ಬೃಹಸ್ಪತಿ, ಗುರು. 2. ವಿದ್ವಾಂಸ, ಪಂಡಿತ. (ವಿಂ) 3. ಬುದ್ಧಿವಂತ, ಜಾಣ, ತಿಳಿದವನು. बुध (अवगमने) "शानच्" (३-२-१२४)।

**बोधि ಬೋಧಿ** (ಪುಂ) 1. ಅಶ್ವತ್ಥವೃಕ್ಷ, ಅರಳಿಮರ. बुध्यते—बुध (अवगमने) "इन्" (उ० ४-११७)। 2. ಜ್ಞಾನ, ತಿಳಿವಳಿಕೆ. 3. ಬೌದ್ಧರ ಸಮಾಧಿ. 4. ಬುದ್ಧದೇವ. 5. ಕುಕ್ಕುಟ, ಕೋಳಿ. 6. ಉತ್ತಮಜ್ಞಾನ, ಸಂಪೂರ್ಣ ಜ್ಞಾನ. (ವಿಂ) 7. ಜ್ಞಾನಿ, ತಿಳಿದವನು. "बोधिः समाधौ च कुक्कुटाश्वत्थबुद्धिषु" नानार्थर०।

**बोधित ಬೋಧಿತ** (ವಿಂ) 1. ತಿಳಿಸಲ್ಪಟ್ಟ, ಸೂಚಿಸಲ್ಪಟ್ಟ. बुध (अवगमने) + णिच् "क्तः" (३-२-१०२)। 2. ಜ್ಞಾಪಿಸಲ್ಪಟ್ಟ, ನೆನಪುಕೊಡಲ್ಪಟ್ಟ. "स्मरिष्यति त्वां न स बोधितोऽपि सन्" शाकु० ४-१। 3. ಎಚ್ಚರಿಸಲ್ಪಟ್ಟ, ಎಚ್ಚರಗೊಳಿಸಲ್ಪಟ್ಟ. "मदपटुनिनदद्भिर्बोधितो राजहंसैः सुरगज इव गाङ्गं सैकतं सुप्रतीकः" रघु० ५-७५। 4. ನಿವೇದಿಸಲ್ಪಟ್ಟ, ತಿಳಿಸಲ್ಪಟ್ಟ, ವಿಜ್ಞಾಪಿಸಲ್ಪಟ್ಟ. 5. ಉಪದೇಶಿಸಲ್ಪಟ್ಟ, ಕಲಿಸಲ್ಪಟ್ಟ.

**बोधिद्रुम ಬೋಧಿದ್ರುಮ** (ಪುಂ) ಅಶ್ವತ್ಥವೃಕ್ಷ, ಅರಳಿಮರ. बोधिश्चासौ द्रुमश्च।

**बोधिसत्त्व ಬೋಧಿಸತ್ತ್ವ** (ಪುಂ) 1. ಬುದ್ಧದೇವ. बोधिर्ज्ञानं सत्त्वं यस्य। "बुद्धस्तु श्रीघनः शास्ता बोधिसत्त्वो विनायकः" वैज०। 2. ಸರಿಯಾದ ಜ್ಞಾನ ಸಂಪಾದನೆಯ ಪ್ರಯತ್ನದಲ್ಲಿರುವ ಬೌದ್ಧಸಂನ್ಯಾಸಿ. "एवंविधैर्विलसितैरतिबोधसत्त्वैः" मालती० १०-२१।

**बोध्य ಬೋಧ್ಯ** (ವಿಂ) ತಿಳಿಯಲ್ಪಡುವ, ಅರಿಯಲ್ಪಡುವ. बुध (अवगमने) "ण्यत्" (३-१-१२४)। कर्त० "तव्यः" (३-१-९६)। **बोद्धव्यम् ಬೋದ್ಧವ್ಯಮ್.** ಅವಶ್ಯವಾಗಿ ತಿಳಿಯಬೇಕಾದ.

**बौद्ध ಬೌದ್ಧ** (ಪುಂ) 1. ಬುದ್ಧದೇವನಿಂದ ಉಪದೇಶಿಸಲ್ಪಟ್ಟ ಶಾಸ್ತ್ರವನ್ನು ಅಧ್ಯಯನಮಾಡುವವನು, —ತಿಳಿದವನು. बुद्धेन प्रोक्तं शास्त्रमधीते वेद वा "अण्" (४-२-५९)। 2. ಬುದ್ಧನ ಮತಾನುಯಾಯಿ, ಬುದ್ಧನ ಮತವನ್ನು ಆಶ್ರಯಿಸಿರುವವನು. ಬೌದ್ಧರು (1) माध्यमिकाः, (2) योगाचाराः, (3) सौत्रान्तिकाः ಮತ್ತು (4) वैभाषिकाः ಎಂದು ನಾಲ್ಕು ವಿಧ. [ವಿವರಕ್ಕೆ "बौद्धदर्शन" ಪದದಲ್ಲಿ ನೋಡಿ.] (ನಂ) 3. ಬೌದ್ಧಶಾಸ್ತ್ರ. बुद्धेन प्रोक्तम् "अण्" (४-३-१०१)। (ವಿಂ) 4. ಬುದ್ಧನ ಸಂಬಂಧವಾದ. 5. ಬುದ್ಧಿಯ ಸಂಬಂಧವಾದ. बुद्धस्य बुद्धेर्वा इदम् "अण्" (४-३-१२०)।

**बौद्धदर्शन ಬೌದ್ಧದರ್ಶನ** (ನಂ) ಬೃಹಸ್ಪತಿಯಿಂದ ರಚಿತವಾಗಿ ಬುದ್ಧದೇವನಿಂದ ಪ್ರಚಾರಕ್ಕೆ ಬಂದ ಒಂದು ದರ್ಶನ. ಬೌದ್ಧರಿಗೆ ವೇದವು ಪ್ರಮಾಣವಲ್ಲ. ವೇದವಿಹಿತ ಕರ್ಮಗಳಲ್ಲಿ ನಂಬಿಕೆಯಿಲ್ಲ. ಆದುದರಿಂದ ಇದೊಂದು ನಾಸ್ತಿಕ ದರ್ಶನ. ಬೌದ್ಧಸಿದ್ಧಾನ್ತದ ತತ್ತ್ವಗಳಾದ ಶೂನ್ಯವಾದವೇ ಮೊದಲಾದುವು ಉಪನಿಷತ್ತುಗಳಲ್ಲಿ ಖಂಡಿಸಲ್ಪಟ್ಟಿರುವುದರಿಂದ ಈ ಸಿದ್ಧಾನ್ತವು ಅನಾದಿಕಾಲದಿಂದಲೂ ಪ್ರಚಾರದಲ್ಲಿತ್ತೆಂದು ತಿಳಿಯಬಹುದಾಗಿದೆ. ಬುದ್ಧನು "तापात् वेधाच्च निकषात् सुवर्णमिव पण्डितैः। परीक्ष्य भिक्षवः ग्राह्यं न तु मद्वाक्यगौरवात्"ಎಂದು ಹೇಳಿರುವನು. ಬುದ್ಧನ ನಿರ್ವಾಣದ ಅನಂತರ ಮಹಾಸ್ಥವಿರರೆಂಬ ವಿದ್ವಾಂಸರು ಬುದ್ಧನ ಉಪದೇಶಗಳನ್ನು ಸಂಗ್ರಹಿಸಿಟ್ಟರು. ಅವರಲ್ಲಿ ಮತಭೇದದಿಂದ ತ್ರಿಪಿಟಕಸಂಪ್ರದಾಯವು ಪ್ರಾರಂಭವಾಯಿತು. ಈ ಪಿಟಕತ್ರಯಕ್ಕೂ ಸಂಸ್ಕೃತದಲ್ಲಿ ಸೂತ್ರೋಪದೇಶ ವಿನಯಭಾಷಾ ಮತ್ತು ಅಭಿಧರ್ಮವಿಭಾಷಾ ಎಂಬ ಮೂರು ಗ್ರಂಥಗಳು ರಚಿತವಾದುವು. **ಮಾಧ್ಯಮಿಕರು** ಮತ್ತು **ಯೋಗಾಚಾರರು** "ಅಭಿಧರ್ಮವಿಭಾಷಾ" ಸಂಪ್ರದಾಯದವರು. **ಸೌತ್ರಾಂತಿಕರು** "**ಸೂತ್ರೋಪದೇಶ**" ಸಂಪ್ರದಾಯಕ್ಕೆ ಸೇರಿದವರು. **ವೈಭಾಷಿಕರು** "ವಿನಯಭಾಷಾ" ಸಂಪ್ರದಾಯಸ್ಥರು.

(1) **ಮಾಧ್ಯಮಿಕರ ಮತ**—ಬಾಹ್ಯವೂ ಇಲ್ಲ ಅಂತರವೂ ಇಲ್ಲವೆಂಬ **ಶೂನ್ಯವಾದ** ಇವರದು.

(2) **ಯೋಗಾಚಾರರು**—ಬಾಹ್ಯ ವಸ್ತುಗಳೆಲ್ಲವನ್ನೂ ವಿಜ್ಞಾನವೆಂಬ ಮನಸ್ಸಿನಲ್ಲಿ ಸೇರಿಸಿ ವೈರಾಗ್ಯೋಪದೇಶದಲ್ಲಿರುವವರು.

(3) **ಸೌತ್ರಾಂತಿಕರು** ಮತ್ತು **ವೈಭಾಷಿಕರು**—ಬಾಹ್ಯಾಂತರ ವಸ್ತುಗಳನ್ನು ಒಪ್ಪಿಕೊಂಡು ಅವುಗಳಿಗೆ ಕ್ಷಣಿಕತ್ವವನ್ನು ಹೇಳುವರು. ಇವರದು ಕ್ಷಣಿಕವಾದ. ಈ ಕ್ಷಣಿಕವಾದಿಗಳು ವಸ್ತುಗಳು ಸ್ಥಿರವೆಂಬ ಭಾವನೆಯಿಂದ ದುಃಖಮಯಸಂಸಾರಕ್ಕೆ ಕಾರಣವಾಗುವುದೆಂದೂ ಕ್ಷಣಿಕತ್ವವನ್ನು ಹೇಳಿದರೆ ಪರಮವೈರಾಗ್ಯಕ್ಕೆ ಕಾರಣವಾಗುವುದೆಂದೂ ಹೇಳುವರು. ಆದರೆ ಪ್ರತಿ ವಸ್ತುವೂ ಅನಿತ್ಯ ಅಶಾಶ್ವತ ಮತ್ತು ನಶ್ವರ ಎಂಬ ಭಾವನೆಯಿಂದ ವೈರಾಗ್ಯ ಹುಟ್ಟಬಹುದೆಂದು ವಸ್ತುಸ್ಥಿರವಾದಿಗಳ ಅಭಿಪ್ರಾಯ. ಸೌತ್ರಾಂತಿಕರೂ ವೈಭಾಷಿಕರೂ ಬಾಹ್ಯಾಂತರವಸ್ತುಗಳನ್ನು ಅಂಗೀಕರಿಸಿರುವುದರಿಂದ ಇವರನ್ನು ಸರ್ವಾಸ್ತಿವಾದಿಗಳು ಎನ್ನುವರು. ಯೋಗಾಚಾರ ಮತದಲ್ಲಿ ಬಾಹ್ಯ ವಸ್ತುಗಳು ಇಲ್ಲವೆಂದರೂ ಮಾಧ್ಯಮಿಕ ಮತದಲ್ಲಿ ಸರ್ವ

ವಸ್ತುಗಳು ಇಲ್ಲವೆಂದರೂ ಈ ಶೂನ್ಯವಾದವು ಪರಮಾರ್ಥ ದೃಷ್ಟಿಯಲ್ಲಿ ಮಾತ್ರ. ವ್ಯವಹಾರದೃಷ್ಟಿಯಲ್ಲಿ ಯಾವು ದನ್ನೂ ನಿರಾಕರಿಸುವುದಿಲ್ಲ.

ಬೌದ್ಧರಿಗೆ ಬುದ್ಧನೇ ದೇವರು. ಪ್ರಪಂಚವೆಲ್ಲವೂ ನಶ್ವರವಾದುದು, ದುಃಖ ಸಮುದಯ ಮಾರ್ಗ ಮತ್ತು ನಿರೋಧಗಳೆಂಬ ನಾಲ್ಕು ಆರ್ಯಸತ್ಯಸಂಪ್ರದಾಯಕ್ಕೆ ಸೇರಿದ ತತ್ತ್ವಗಳು. ಇವರಿಗೆ ಸರ್ವಾಸ್ತಿವಾದವು ಇಷ್ಟ ವಾದುದು. ಪ್ರಪಂಚವೆಲ್ಲವೂ ದುಃಖಮಯವಾದುದ ರಿಂದ ಅದೇ ದುಃಖ. ಈ ದುಃಖವು ರೂಪ ವಿಜ್ಞಾನ ವೇದನಾ ಸಂಜ್ಞಾ ಮತ್ತು ಸಂಸ್ಕಾರಗಳೆಂದು ಐದು ಸ್ಕಂಧ ಗಳಾಗಿರುವುವು. ಈ ಸ್ಕಂಧಪಂಚಕವು ದುಃಖಮೂಲ ಮತ್ತು ದುಃಖಮಿಶ್ರವಾಗಿರುವುದರಿಂದ ಇದೊಂದು ದುಃಖರಾಶಿ. ಬೌದ್ಧರಿಗೆ ಈ ಸ್ಕಂಧಪಂಚಕಗಳಿಗಿಂತ ಅತಿರಿಕ್ತ ಆತ್ಮನಿಲ್ಲ. "सर्वकार्यशरीरेषु मुक्त्वाङ्गस्कन्धपञ्चकम् । सौगतानामिवात्मान्यो नास्ति मन्त्रो महीभृताम्" माघ० २-२८। "बौद्धानां सुगतो देवो विश्वं च क्षणभङ्गुरम्। आर्यसत्याख्यया तत्त्वचतुष्टयमिदं क्रमात्। दुःखमायतनं चैव ततः समुदयो मतः। मार्गश्चेत्यस्य च व्याख्या क्रमेण श्रूयतामतः। दुःखं संसारिणः स्कन्धास्ते च पञ्च प्रकीर्तिताः। विज्ञानं वेदना संज्ञा संस्कारो रूपमेव च" स० द० सं०।

**ನೈರಾತ್ಮ್ಯವಾದ**—ಬೌದ್ಧರು ಆತ್ಮನನ್ನು ಒಪ್ಪುವು ದಿಲ್ಲ. ಆತ್ಮನನ್ನು ಅಂಗೀಕರಿಸಿದರೆ ನಾನು ನನ್ನದು ಎಂಬ ಅಹಂಕಾರ ಮಮಕಾರಗಳು ಹುಟ್ಟುವುವು. ನೈರಾತ್ಮ್ಯ ಭಾವನೆಯಿಂದ ಮಮಕಾರವು ನಾಶವಾಗುವುದು. ಈ ನೈರಾತ್ಮ್ಯದರ್ಶನವೇ ನಿರ್ವಾಣವೆಂಬ ಮೋಕ್ಷಕ್ಕೆ ಕಾರಣ ವಾಗುವುದು. ಬೋಧಿಸತ್ತ್ವಪದವಿಯು ನಿರ್ವಾಣಕ್ಕೆ ಮುಖ್ಯ ಕಾರಣ.

ಬೋಧಿಸತ್ತ್ವನಾಗಬೇಕಾದರೆ ತನ್ನ ಅಪರಾಧಗಳನ್ನು ಮಹಾತ್ಮರಲ್ಲಿ ತಿಳಿಸಿ ಕ್ಷಮೆಯನ್ನು ಯಾಚಿಸಬೇಕು. ಮನೋನಿಗ್ರಹವಾಗಬೇಕು. ಜೀವನ್ಮುಕ್ತನಾಗಿರಬೇಕು. ಬುದ್ಧಶಿಷ್ಯನು ತನ್ನ ಭೋಜನಕಾಲದಲ್ಲಿ "ಈ ಭೋಜನ ದಿಂದ ದೇಹದಲ್ಲಿರುವ ಸಕಲಕ್ರಿಮಿಕೀಟಾದಿಗಳನ್ನೂ ಪೋಷಿಸುತ್ತೇನೆ. ಬೋಧಿಸತ್ತ್ವನಾದನಂತರ ಸಕಲ ಪ್ರಾಣಿಗಳನ್ನೂ ಉದ್ಧರಿಸಲು ಯತ್ನಿಸುತ್ತೇನೆ" ಎಂದು ಸಂಕಲ್ಪಮಾಡಬೇಕು.

ಬುದ್ಧದೇವನು ಭೂಮ್ಯಾಕಾಶಗಳು ಇರುವವರೆಗೂ ಲೋಕದ ಪಾಪಗಳನ್ನು ಪರಿಹರಿಸುವುದಕ್ಕಾಗಿ ತಾನಿರ ಬೇಕೆಂದೂ ಎಲ್ಲರ ಪಾಪಗಳೂ ತನ್ನ ತಲೆಯ ಮೇಲೆ ಬಿದ್ದು ಎಲ್ಲರೂ ಮೋಕ್ಷ ಹೊಂದಲಿ ಎಂದೂ ಪ್ರಾರ್ಥಿಸಿರುವನು. "आकाशस्य स्थितिर्यावत् यावदप्यवनेः स्थितिः। तावन्मम स्थितिर्भूयात् लोकपापानि निघ्नतः"।

**ನಿರ್ವಾಣ**—ಬೋಧಿಸತ್ತ್ವರಿಗೆ ತಮ್ಮ ಪೂರ್ವಪುಣ್ಯ ಮತ್ತು ಜ್ಞಾನಸಂಪತ್ತುಗಳಿಂದ ಮಹಾತ್ಮರ ಕುಲದಲ್ಲಿ ಜನ್ಮವೂ ಲೋಕಾನುಗ್ರಹಕ್ಕಾಗಿ ಉಪದೇಶವೂ ಲಭಿಸು ವುವು. ಸಮಸ್ತ ರಾಗದ್ವೇಷಾದಿ ಕ್ಲೇಶಾವರಣವೂ ಜ್ಞೇಯಾ ವರಣವೂ ಮಾಯವಾಗಿ ಸರ್ವಜ್ಞತ್ವವು ಪ್ರಾಪ್ತವಾಗಿ ಸಕಲ ದುಃಖಗಳನ್ನೂ ಪರಿಹರಿಸುವ ಕರುಣಾಮಯವಾದ ಬುದ್ಧಪದವಿಯು ಲಭ್ಯವಾಗುವುದು. ಇದೇ ಪರಮಾ ನಂದ. ಇದೇ ನಿರ್ವಾಣ (ಮೋಕ್ಷ). "रागादिज्ञानसन्तानवासनोच्छेदसंभवा। चतुर्णामपि बौद्धानां मुक्तिरेषा प्रकीर्तिता"।

**ब्रध्न ಬ್ರಧ್ನ** (ಪುಂ) 1. ರವಿ, ಸೂರ್ಯ. बध्नाति तिमिरम् —बन्ध (बन्धने) "नक्" ब्रधि आदेशश्च (उ० ३-५)। 2. ವೃಕ್ಷದ ಮೂಲಭಾಗ, ಮರದ ಬುಡ. 3. ಅರ್ಕ ವೃಕ್ಷ, ಎಕ್ಕದ ಗಿಡ. 4. ಶಿವ, ಪರಮೇಶ್ವರ. 5. ದಿವಸ, ಹಗಲು. 6. ಅಶ್ವ, ಕುದುರೆ.

**ब्रह्मकर्मन् ಬ್ರಹ್ಮಕರ್ಮನ್** (ನಂ) 1. ಬ್ರಾಹ್ಮಣನ ಕರ್ತವ್ಯವಾದ ಮತಸಂಬಂಧವಾದ ಕಾರ್ಯ, ಬ್ರಾಹ್ಮಣನು ಪ್ರತಿದಿನವೂ ಮಾಡಬೇಕಾದ ಸಂಧ್ಯಾವಂದನಾದಿ ಕಾರ್ಯ. "अहरहः सन्ध्यामुपासीत"। 2. ಯಾಗದಲ್ಲಿ ಋತ್ವಿಕ್ಕು ಗಳಲ್ಲೊಬ್ಬನಾದ ಬ್ರಹ್ಮ.

**ब्रह्मकर्मसमाधि ಬ್ರಹ್ಮಕರ್ಮಸಮಾಧಿ** (ಪುಂ) ಬ್ರಹ್ಮ ರೂಪವಾದ ಕರ್ಮದಲ್ಲಿ ಚಿತ್ತದ ಏಕಾಗ್ರತೆಯುಳ್ಳವನು, ಹವಿಸ್ಸು ಅಗ್ನಿ ಹವಿಸ್ಸನ್ನು ಅರ್ಪಿಸುವ ಕರ್ತೃ ಎಲ್ಲವೂ ಬ್ರಹ್ಮಭೂತವಾದುದು (ಬ್ರಹ್ಮಮಯ) ಎಂದು ತಿಳಿಯು ವವನು. ब्रह्मात्मके कर्मणि समाधिः अनुसन्धानं (चित्तैकाग्र्यं) यस्य। ಯಾಗದಲ್ಲಿ ಉಪಯೋಗಿಸುವ ಸೌಟು ಮೊದಲಾದ ಉಪಕರಣಗಳು ಹವಿಸ್ಸನ್ನು ಅರ್ಪಿಸುವ ಕರ್ತೃ ಅರ್ಪಿಸಲ್ಪಡುವ ಹವಿಸ್ಸು ಅಗ್ನಿ ಎಲ್ಲವೂ ಬ್ರಹ್ಮ ಕಾರ್ಯವಾದುದರಿಂದ ಬ್ರಹ್ಮಮಯವಾದ ಅಗ್ನಿಯಲ್ಲಿ ಬ್ರಹ್ಮನಾದ ಕರ್ತೃವು ಬ್ರಹ್ಮರೂಪವಾದ ಹವಿಸ್ಸನ್ನು ಸಮರ್ಪಿಸುವವನು. ಹೀಗೆ ಎಲ್ಲವೂ ಬ್ರಹ್ಮಮಯವೆಂದು ತಿಳಿಯುವವನು ಬ್ರಹ್ಮಕರ್ಮಸಮಾಧಿಯಾಗುವನು. ಇವನು ಬ್ರಹ್ಮಭೂತವಾದ ಆತ್ಮಸ್ವರೂಪವನ್ನು ಹೊಂದು ತ್ತಾನೆ. "ब्रह्मार्पणं ब्रह्म हविः ब्रह्माग्नौ ब्रह्मणा हुतम्। ब्रह्मैव तेन गन्तव्यं ब्रह्मकर्मसमाधिना" गीता ४-२४।

**ब्रह्मकल्प ಬ್ರಹ್ಮಕಲ್ಪ** (ಪುಂ) ಚತುರ್ಮುಖಬ್ರಹ್ಮನ ವಯಸ್ಸು, ಬ್ರಹ್ಮನ ಆಯುಸ್ಸಿನ ಕಾಲ.

**ब्रह्मकाण्ड ಬ್ರಹ್ಮಕಾಂಡ** (ಪುಂ) ಆತ್ಮಜ್ಞಾನಕ್ಕೆ ಸಂಬಂಧಿಸಿದ ವೇದದ ಒಂದು ಭಾಗ.

**ब्रह्मकाष्ठ ಬ್ರಹ್ಮಕಾಷ್ಠ** (ಪುಂ) ಹಿಪ್ಪನೇರಳೆ ಗಿಡ.

**ब्रह्मकुण्ड ಬ್ರಹ್ಮಕುಂಡ** (ನಂ) ದೇವತೆಗಳ ಸ್ನಾನಕ್ಕಾಗಿ ಬ್ರಹ್ಮನಿಂದ ನಿರ್ಮಿತವಾದ ಒಂದು ಸರಸ್ಸು (ಕೊಳ). ब्रह्मणा निर्मितं कुण्डम्। "पाण्डुनाथस्योत्तरस्यां ब्रह्मकुण्डाह्वयं सरः। ब्रह्मणा निर्मितं पूर्वं स्नानाय स्वर्गवासिनाम्। आयामेन शतव्यामं विस्तीर्णेन तदर्धकम्। सर्वपापहरं पुण्यं देवलोकात् समागतम्"।

**ब्रह्मकूट ಬ್ರಹ್ಮಕೂಟ** (ಪುಂ) ಒಂದು ಪರ್ವತ. ಬ್ರಹ್ಮಕುಂಡದಲ್ಲಿ ಸ್ನಾನಮಾಡಿ ಪರಮೇಶ್ವರನನ್ನು ಪೂಜಿಸಿ ಈ ಪರ್ವತವನ್ನು ಏರಿದವರು ಮೋಕ್ಷ ಪಡೆಯುತ್ತಾರೆ. "ब्रह्मकुण्डजले स्नात्वा पूजयित्वा उमापतिम्। ब्रह्मकूटं समारुह्य मुक्तिमेवाप्नुयान्नरः" कालिकापु०।

**ब्रह्मकूर्च ಬ್ರಹ್ಮಕೂರ್ಚ** (ನಂ) ಪಂಚಗವ್ಯಪ್ರಾಶನ, ಒಂದು ವ್ರತ. ಅಹೋರಾತ್ರ ಉಪವಾಸ ಮಾಡಿ ಮರುದಿನ ಪ್ರಾತಃಕಾಲ ಮಾಡುವ ಪಂಚಗವ್ಯಪ್ರಾಶನವು ಬ್ರಹ್ಮಕೂರ್ಚವೆನಿಸುವುದು. ಹುಣ್ಣಿಮೆಯ ದಿನ ಈ ವ್ರತಾಚರಣೆಯು ಇನ್ನೂ ವಿಶೇಷವಾದುದು. "अहोरात्रोषितो भूत्वा पौर्णमास्यां विशेषतः। पञ्चगव्यं पिबेत्प्रातः ब्रह्मकूर्चविधिः स्मृतः"।

**ब्रह्मकोश ಬ್ರಹ್ಮಕೋಶ** (ಪುಂ) 1. ವೇದಗಳ ರಾಶಿ, ಸಮಗ್ರವಾದ ವೇದ. 2. ಬ್ರಹ್ಮಾಂಡ, ಜಗತ್ತು. "क्षात्रो धर्मः श्रित इव तनुं ब्रह्मकोशस्य गुप्त्यै" उ० रा० ६-९।

**ब्रह्मकोशी ಬ್ರಹ್ಮಕೋಶೀ** (स्त्री०) ಅಜವಾನ. ವಾದಕ್ಕಿ. ಓಮ.

**ब्रह्मग्रन्थि ಬ್ರಹ್ಮಗ್ರಂಥಿ** (ಪುಂ) 1. ದೇಹದೊಳಗಿನ ಮೂಳೆಗಳ ಕೀಲು. ಮೂಳೆಗಳ ಸಂಧಿ. 2. ಯಜ್ಞೋಪವೀತದ ಗಂಟು.

**ब्रह्मघातक ಬ್ರಹ್ಮಘಾತಕ** (ಪುಂ) ಬ್ರಹ್ಮಹತ್ಯೆ ಮಾಡುವವನು, ಬ್ರಾಹ್ಮಣನನ್ನು ಕೊಲ್ಲುವವನು. ब्रह्माणं विप्रं हन्ति — हन (हिंसागत्योः) "ण्वुल्" (३-१-१३३)। "पङ्क्तिभेदी वृथापाकी नित्यं ब्राह्मणनिन्दकः। आदेशी वेदविक्रेता पञ्चैते ब्रह्मघातकाः"। "णिनिः"(३-२-७८)। **-घातिन् -ಘಾತಿನ್.** स्त्रियां "ङीप्" (४-१-५)। **-घातिनी -ಘಾತಿನೀ.**

**ब्रह्मघोष ಬ್ರಹ್ಮಘೋಷ** (ಪುಂ) ವೇದಘೋಷ, ವೇದಪಾರಾಯಣದ ಶಬ್ದ. ब्रह्मणः घोषः।

**ब्रह्मघ्न ಬ್ರಹ್ಮಘ್ನ** (ಪುಂ) 1. ಬ್ರಹ್ಮಹತ್ಯೆ ಮಾಡುವವನು, ಬ್ರಾಹ್ಮಣನನ್ನು ಕೊಲ್ಲುವವನು. ब्रह्माणं हन्ति — हन (हिंसागत्योः) "कः" (वा० ३-२-५)।

**ब्रह्मचर्य ಬ್ರಹ್ಮಚರ್ಯ** (ನಂ) 1. ಬ್ರಹ್ಮಚರ್ಯೆ, ವೇದಾಧ್ಯಯನ ಕಾಲದಲ್ಲಿ ಕೈಗೊಳ್ಳುವ ಒಂದು ವ್ರತ, -ನಿಯಮ. ब्रह्मणे वेदार्थं वेदाध्ययनार्थं चर्यम् आचरणीयम्। ನಾಲ್ಕು ಆಶ್ರಮಗಳಲ್ಲೊಂದು. ವೇದಾಧ್ಯಯನ ಕಾಲದಲ್ಲಿ ಈ ವ್ರತಕ್ಕಾಗಿ ಸ್ವೀಕರಿಸುವ ಆಶ್ರಮವು ಬ್ರಹ್ಮಚರ್ಯಾಶ್ರಮ. ಬ್ರಹ್ಮಚರ್ಯಾಶ್ರಮದಲ್ಲಿರುವವನು ಅಷ್ಟಾಂಗಮೈಥುನವನ್ನು ತ್ಯಜಿಸಬೇಕು.

**ಅಷ್ಟಾಂಗ ಮೈಥುನಗಳು:** (1) स्मरणम् (ಪುರುಷನಿಗೆ ಸ್ತ್ರೀಸ್ಮರಣೆ ಹೆಂಗಸಿಗೆ ಪುರುಷನ ಸ್ಮರಣೆ), (2) कीर्तनम्, (3) केलिः (ಕ್ರೀಡೆ), (4) प्रेक्षणम् (ನಿಯಮಕ್ಕೆ ವಿರುದ್ಧವಾದ ದೃಶ್ಯಗಳ ದರ್ಶನ), (5) गुह्यभाषणम् (ರಹಸ್ಯವಾಗಿ ಮಾತಾಡುವುದು), (6) संकल्पः, (7) अध्यवसायः (ಲೌಕಿಕ ಕಾರ್ಯಗಳಲ್ಲಿ ಪ್ರಯತ್ನ) ಮತ್ತು (8) क्रियानिर्वृत्तिः ಇವೆಲ್ಲವೂ ಬ್ರಹ್ಮಚರ್ಯಕ್ಕೆ ಘಾತುಕಗಳು. ಇದು ಸ್ತ್ರೀಪುರುಷರಿಗೆ ಸಮಾನವಾದುದು. "अविप्लुतब्रह्मचर्यो गृहस्थाश्रममाविशेत्" मनु० ३-२। "ये दीप्रस्य श्रेयसः पारकामाश्चत्वारोऽपि ब्रह्मचर्यं चरन्ति" म० वी० १-२४। 2. ಯೋಗದ ಅಷ್ಟಾಂಗಗಳಲ್ಲೊಂದಾದ ಯಮದ ಒಂದು ಭೇದ. (1) अहिंसा, (2) असत्यम्, (3) अस्तेयम्, (4) ब्रह्मचर्यम् ಮತ್ತು (5) अपरिग्रहः ಇವು ಐದೂ ಯಮದ ಭೇದಗಳು.

**ब्रह्मचारिन् ಬ್ರಹ್ಮಚಾರಿನ್** (ಪುಂ) 1. ಬ್ರಹ್ಮಚರ್ಯಾಶ್ರಮದಲ್ಲಿರುವವನು, ವೇದಾಧ್ಯಯನಕ್ಕಾಗಿ ವ್ರತವನ್ನು ಕೈಗೊಂಡಿರುವವನು, ಉಪನೀತನಾಗಿ ವೇದಾಧ್ಯಯನ ಮಾಡುವವನು. ब्रह्म वेदः, तदध्ययनार्थं व्रतमपि ब्रह्म, ब्रह्म चरितुं शीलमस्य "णिनिः" (३-२-७८)। ब्रह्म तपो ज्ञानं वा चरति अर्जयत्यवश्यम् "णिनिः" (३-३-१७०)। इति वा। ಉಪನಯನವಾದನಂತರ ಗುರುವಿನ ಸನ್ನಿಧಿಯಲ್ಲಿ ಷಡಂಗಸಹಿತವಾಗಿ ವೇದಾಧ್ಯಯನ ಮಾಡುವವನು ಬ್ರಹ್ಮಚಾರಿ. 2. ವಿವಾಹವಿಲ್ಲದೆ ಜೀವನ ಯಾತ್ರೆಯನ್ನು ನಿರ್ವಹಿಸುವವನು.

**ಬ್ರಹ್ಮಚಾರಿಯ ನಿಯಮಗಳು:** ಪ್ರತಿದಿನವೂ ಸ್ನಾನಮಾಡಿದನಂತರ ದೇವರ್ಷಿಪಿತೃತರ್ಪಣಗಳನ್ನೂ ದೇವತಾರ್ಚನೆ ಮತ್ತು ಸಮಿದಾಧಾನಗಳನ್ನೂ ಮಾಡ

ಬೇಕು. "नित्यं स्नात्वा शुचिः कुर्याद्देवर्षिपितृतर्पणम्। देवताभ्यर्चनं चैव समिदाधानमेव च" मनु० २-१७६। ಮಧು (ಜೇನುತುಪ್ಪ) ಮಾಂಸ ಕರ್ಪೂರ ಚಂದನ ಮೊದಲಾದ ಸುಗಂಧದ್ರವ್ಯಗಳು ಪುಷ್ಪ, ಇಂದ್ರಿಯಗಳನ್ನು ಉದ್ರೇಕಗೊಳಿಸುವ ವಸ್ತುಗಳ ಭಕ್ಷಣ ಪ್ರಾಣಿಗಳ ಹಿಂಸೆ ಅಭ್ಯಂಗಸ್ನಾನ ನೇತ್ರಾಂಜನ ಪಾದರಕ್ಷೆ ಛತ್ರಧಾರಣೆ ಕಾಮ ಕ್ರೋಧ ಲೋಭ ನೃತ್ಯ ಗಾನ ಜೂಜು ವೃಥಾಲಾಪ ಪರದೂಷಣ ಮಿಥ್ಯೆ ಸ್ತ್ರೀಯರ ವೀಕ್ಷಣೆ ಮತ್ತು ಆಲಿಂಗನ ಪರಾಪಕಾರ ಇವೆಲ್ಲಾ ಬ್ರಹ್ಮಚಾರಿಗೆ ವರ್ಜ್ಯಗಳು. ವೇದಾಧ್ಯಯನಸಂಪನ್ನರಾದವರ ಮನೆಯಲ್ಲಿ ಮಾತ್ರ ಭಿಕ್ಷೆಯನ್ನು ತರಬೇಕು. "वर्जयेन्मधु मांसं च गन्धं माल्यं रसान् स्त्रियः। शुक्तानि यानि सर्वाणि प्राणिनां चैव हिंसनम्। अभ्यङ्गमञ्जनं चाक्ष्णोरुपानच्छत्रधारणम्। कामं क्रोधं च लोभं च नर्तनं गीतवादनम्। द्यूतं च जनवादं च परिवादं तथानृतम्। स्त्रीणां च प्रेक्षणालम्भमुपघातं परस्य च" मनु० २-१७६–१७९। ಈ ನಿಯಮಗಳನ್ನು ಪಾಲಿಸುತ್ತ ಜಿತೇಂದ್ರಿಯನಾಗಿ ಗುರುಗಳಲ್ಲಿ ವೇದಾಧ್ಯಯನ ಮಾಡಬೇಕು. 3. ಸ್ಕಂದ, ಷಣ್ಮುಖ. "ब्रह्मचारी व्रती स्कन्दो दुर्गा तु ब्रह्मचारिणी" वैज०। **–चारिणी –ಚಾರಿಣೀ.** 1. ದುರ್ಗಾದೇವಿ. "वेदेषु चरते यस्मात् तेन सा ब्रह्मचारिणी" देवीपु०। 2. ಬ್ರಹ್ಮಚರ್ಯದಿಂದ ಕೂಡಿದ ಹೆಂಗಸು. "आसीतामरणात् क्षान्ता नियता ब्रह्मचारिणी" मनु० ५-१५८।

**ब्रह्मज ಬ್ರಹ್ಮಜ** (पुं०) ಕಾರ್ತಿಕೇಯ, ಷಣ್ಮುಖ.

**ब्रह्मजन्मन् ಬ್ರಹ್ಮಜನ್ಮನ್** (न०) 1. ಉಪನಯನವಾದನಂತರ ಉಂಟಾಗುವ ಬ್ರಾಹ್ಮಣ ಜನ್ಮ. 2. ಆಧ್ಯಾತ್ಮಿಕ ಶಕ್ತಿಯಿಂದ ಕೂಡಿದ ಜನ್ಮ.

**ब्रह्मजिज्ञासा ಬ್ರಹ್ಮಜಿಜ್ಞಾಸಾ** (स्त्री०) ಪರಬ್ರಹ್ಮವನ್ನು ತಿಳಿದುಕೊಳ್ಳುವ ಇಚ್ಛೆ, ಪರಬ್ರಹ್ಮದ ಸ್ವರೂಪವನ್ನು ಅರಿಯುವ ಅಪೇಕ್ಷೆ. ज्ञातुमिच्छा जिज्ञासा, ब्रह्मणो जिज्ञासा। "अथातो ब्रह्मजिज्ञासा" ब्र० सू० १-१-१।

**ब्रह्मजीविन् ಬ್ರಹ್ಮಜೀವಿನ್** (पुं०) 1. ಜೀವನಕ್ಕಾಗಿ ವೇದವನ್ನು ಹೇಳಿಕೊಡುವವನು, ಸಂಬಳ ಪಡೆದು ವೇದಪಾಠ ಹೇಳುವವನು. 2. ವೇದವಿಹಿತ ಕರ್ಮಾಚರಣೆಯಿಂದ ಜೀವಿಸುವವನು. ब्रह्मणा वेदेन जीवति—जीव (प्राणधारणे) "णिनिः" (३-१-१३४)।

**ब्रह्मज्ञ ಬ್ರಹ್ಮಜ್ಞ** (पुं०) 1. ವಿಷ್ಣು. ब्रह्म वेदं जानाति अर्थपर्यन्तं साक्षात् करोति — ज्ञा (अवबोधने) "कः" (३-२-३)। "यो वेदानर्थतो वेत्ति सोऽपि ब्रह्मज्ञविश्रुतः" इति निरुक्तिः। "ब्रह्मविद् ब्राह्मणो ब्रह्मी ब्रह्मज्ञो ब्राह्मणप्रियः" वि० स०। 2. ಕಾರ್ತಿಕೇಯ, ಷಣ್ಮುಖ. "ब्रह्मप्रियो ब्राह्मणसव्रती त्वं ब्रह्मज्ञो वै ब्राह्मणानां च नेता" भा० वन० २३३-११। (वि०) 3. ಬ್ರಹ್ಮಸ್ವರೂಪವನ್ನು ಅರಿತವನು, ಪರಮಪುರುಷನ ಸ್ವರೂಪವನ್ನು ಸಾಕ್ಷಾತ್ಕರಿಸಿಕೊಂಡವನು, ಬ್ರಹ್ಮಜ್ಞಾನವನ್ನು ಸಂಪಾದಿಸಿದವನು. 4. ವೇದಾಧ್ಯಯನ ಮಾಡಿದವನು.

**ब्रह्मज्ञान ಬ್ರಹ್ಮಜ್ಞಾನ** (न०) 1. ತತ್ತ್ವಜ್ಞಾನ, ಬ್ರಹ್ಮವಿಷಯಕವಾದ ಜ್ಞಾನ, ಬ್ರಹ್ಮಸ್ವರೂಪಲಕ್ಷಣಗಳ ತಿಳಿವಳಿಕೆ. 2. (ಪಾತಂಜಲ ಮತದಲ್ಲಿ) ಕ್ಲೇಶಕರ್ಮವಿಪಾಕಾಶಯ ನಿವರ್ತಕವಾದ ಪರಮಾತ್ಮಜ್ಞಾನ. 3. ಬ್ರಹ್ಮವಿದ್ಯೆಯ ಅರಿವು. 4. ಬ್ರಹ್ಮೋಪಾಸನೆ. 5. ಪ್ರಕೃತಿಪುರುಷರ ವಿವೇಕ ವಿಷಯ ಜ್ಞಾನ.

**ब्रह्मज्ञानिन् ಬ್ರಹ್ಮಜ್ಞಾನಿನ್** (वि०) ತತ್ತ್ವಜ್ಞಾನವುಳ್ಳವನು, ಬ್ರಹ್ಮಸ್ವರೂಪವನ್ನು ತಿಳಿದವನು, ಪರಮಾತ್ಮಜ್ಞಾನವನ್ನು ಪಡೆದವನು. ब्रह्मज्ञानमस्यास्ति "इनिः" (५-२-११५)।

**ब्रह्मणस्पति ಬ್ರಹ್ಮಣಸ್ಪತಿ** (पुं०) ವಿಷ್ಣು, ನಾರಾಯಣ. ब्रह्मणः चतुर्मुखस्य वेदस्य वा पतिः।

**ब्रह्मण्य ಬ್ರಹ್ಮಣ್ಯ** (पुं०) 1. ವಿಷ್ಣು, ನಾರಾಯಣ. ब्रह्मणे हितः "यत्" (५-१-७)। ಪ್ರಕೃತಿ ಮತ್ತು ಜೀವಾತ್ಮರ ಸರ್ವಾವಸ್ಥೆಗಳಲ್ಲೂ ಸ್ಥಿತಿ ಮತ್ತು ಭೋಗಾದಿಗಳಿಗೆ ಕಾರಣನಾಗಿರುವುದರಿಂದ ಪರಮಾತ್ಮನು ಬ್ರಹ್ಮಣ್ಯ. "जीवात्मा प्रकृतिश्चापि ब्रह्मेति व्यपदिश्यते। ताभ्यां यः स्थितिभोगादेः सर्वावस्थासु कारणम्। ब्रह्मण्यः स च विज्ञेयः सप्तार्णो भोगदायकः" इति निरुक्तिः। "ब्रह्मण्यो ब्रह्मकृद्ब्रह्मा ब्रह्म ब्रह्मविवर्धनः" वि० स०। 2. ವೇದಾಧ್ಯಯನ ಮಾಡಿದವನು. ब्रह्मणि साधुः "यत्" (४-४-९८)। 3. ಮುಂಜತೃಣ. 4. ಹತ್ತಿಯ ಗಿಡ. 5. ಹೂವರಿಚಿ ಮರ. "तूदस्तु पूगः क्रमुको ब्रह्मण्यो ब्रह्मदारु च" अम०। 6. ಶನೈಶ್ಚರ, ಶನಿಗ್ರಹ. "ब्रह्मण्यः स्यात् ब्रह्मसाधुब्रह्मदारुशनैश्चरे" मेदि०। 7. ಹಿಪ್ಪನೇರಳೆ ಗಿಡ. (वि०) 8. ಬ್ರಾಹ್ಮಣನಿಗೆ ಅನುಕೂಲವಾದ, ಬ್ರಾಹ್ಮಣನಿಗೆ ಹಿತವಾದ.

**ब्रह्मण्यदेव ಬ್ರಹ್ಮಣ್ಯದೇವ** (पुं०) ವಿಷ್ಣು, ಪರಮಾತ್ಮ. ब्रह्मण्यो देवः।

**ब्रह्मता ಬ್ರಹ್ಮತಾ** (स्त्री०) 1. ಬ್ರಹ್ಮನಾಗುವಿಕೆ, ಬ್ರಹ್ಮನಲ್ಲಿ ಐಕ್ಯವಾಗುವಿಕೆ. 2. ಬ್ರಾಹ್ಮಣತ್ವ, ಬ್ರಾಹ್ಮಣ

ನಾಗುವಿಕೆ. ब्रह्मणो भाव: "तल्" (५-१-११९)। "त्व:" (५-१-११९)। **ब्रह्मत्वम् ಬ್ರಹ್ಮತ್ವಮ್.** 3. ಯಾಗದಲ್ಲಿ ಋತ್ವಿಕ್ಕಿನ ಕಾರ್ಯ. होत्रावाचिनो ब्रह्मन् शब्दस्य "त्व:" (५-१-१३६)। **ब्रह्मत्वम् ಬ್ರಹ್ಮತ್ವಮ್.**

**ब्रह्मद ಬ್ರಹ್ಮದ** (पुं०) 1. ಆಚಾರ್ಯ, ಗುರು, ವೇದಾಧ್ಯಯನ ಮಾಡಿಸುವ ಉಪಾಧ್ಯಾಯ. 2. ಬ್ರಹ್ಮವಿದ್ಯೆಯನ್ನು ಉಪದೇಶಿಸುವ ಗುರು. ब्रह्म ददाति — डु दाञ् (दाने) "क:" (३-२-३)।

**ब्रह्मदण्ड ಬ್ರಹ್ಮದಂಡ** (पुं०) 1. ಬ್ರಾಹ್ಮಣನ ಶಾಪ. ब्रह्मणो ब्राह्मणस्य शापरूपो दण्ड:। "ब्रह्मदण्डहता ये च विद्युदग्निहताश्च ये। तेषामुद्धरणार्थाय इमं पिण्डं ददाम्यहम्"॥ 2. ಬ್ರಾಹ್ಮಣನ ಸಿದ್ಧಯಷ್ಟಿ, ಬ್ರಾಹ್ಮಣನ ತಪಃಸಿದ್ಧಿರೂಪವಾದ ದಂಡ. ब्रह्मणो ब्राह्मणस्य दण्ड: सिद्धयष्टि:। ವಸಿಷ್ಠಮಹರ್ಷಿಯ ಬ್ರಹ್ಮದಂಡ. "एकेन ब्रह्मदण्डेन सर्वास्त्राणि हतानि मे" रामा०। 3. ಬ್ರಾಹ್ಮಣನಿಗೆ ನೀಡಿದ ದಾನ. 4. ಶಿವ, ಪರಮೇಶ್ವರ.

**ब्रह्मदर्भा ಬ್ರಹ್ಮದರ್ಭಾ** (स्त्री०) ಅಜವಾನ, ಓಮ, ವಾದಕ್ಕಿ.

**ब्रह्मदाय ಬ್ರಹ್ಮದಾಯ** (पुं०) ವೇದಾಧ್ಯಯನ ಪೂರ್ಣವಾದ ನಂತರ (ಸಮಾವರ್ತನವಾದನಂತರ) ಪೂರ್ವದಲ್ಲಿ ರಾಜನು ಬ್ರಾಹ್ಮಣನಿಗೆ ಕೊಡುತ್ತಿದ್ದ ಧನ ಮತ್ತು ಭೂರೂಪವಾದ ದಾನ. ब्रह्मणे विप्राय राज्ञा दीयते—डु दाञ् (दाने) कर्म० "घञ्" (३-३-१९)।

**ब्रह्मदायाद ಬ್ರಹ್ಮದಾಯಾದ** (पुं०) 1. ವಂಶಪಾರಂಪರ್ಯವಾಗಿ ವೇದಾಧ್ಯಯನ ಮಾಡಿದವನು, ಬ್ರಾಹ್ಮಣ. 2. ಬ್ರಾಹ್ಮಣ ಕುಲದಲ್ಲಿ ಜನಿಸಿದವನು.

**ब्रह्मदारु ಬ್ರಹ್ಮದಾರು** (न०) 1. ಹೂವರಿಚಿ ಮರ. 2. ಹಿಪ್ಪನೇರಿಳೆ ಗಿಡ.

**ब्रह्मदिन ಬ್ರಹ್ಮದಿನ** (न०) ಚತುರ್ಮುಖ ಬ್ರಹ್ಮನ ಒಂದು ಹಗಲು (ಅಹಸ್ಸು), ಬ್ರಹ್ಮನ ಒಂದು ದಿನದ ಅರ್ಧಭಾಗ. ब्रह्मणो दिनम् अह:। ಮನುಷ್ಯನ ಒಂದು ಸೌರ ವರ್ಷ ಅಥವಾ 365½ ದಿನಗಳು ದೇವತೆಗಳಿಗೆ ಒಂದು ದಿನ. ಮನುಷ್ಯನ 360 ವರ್ಷಗಳು ದೇವತೆಗಳಿಗೆ ಒಂದು ವರ್ಷ. [ನಿಮೇಷಾದಿ ಕಾಲವಿಭಾಗಕ್ಕೆ "काल" ಪದದಲ್ಲಿ ನೋಡಿ.] ಮನುಷ್ಯನ ಒಂದು ವರ್ಷದಲ್ಲಿ ಆರು ತಿಂಗಳು ಉತ್ತರಾಯಣ ಮತ್ತು ಆರು ತಿಂಗಳು ದಕ್ಷಿಣಾಯನಗಳೆಂದು ಎರಡು ಅಯನಗಳು ಇರುವುವು. ಬ್ರಹ್ಮಜ್ಞಾನಿಗಳು ಉತ್ತರಾಯಣದಲ್ಲಿ ಅರ್ಚಿರಾದಿಮಾರ್ಗದಲ್ಲಿ ಹೋಗಿ ಪುನರಾವೃತ್ತಿಯಿಲ್ಲದೆ ಪರಮಾತ್ಮನನ್ನು ಸೇರುತ್ತಾರೆ. ಪುಣ್ಯಕರ್ಮಮಾಡಿದವರು ದಕ್ಷಿಣಾಯನದಲ್ಲಿ ಧೂಮಾದಿಮಾರ್ಗದಲ್ಲಿ ಹೋಗಿ ಚಂದ್ರನನ್ನು ಸೇರುತ್ತಾರೆ. ಮತ್ತೆ ಹಿಂತಿರುಗುತ್ತಾರೆ. "अग्निर्ज्योतिरह: शुक्ल: षण्मासा उत्तरायणम्। तत्र प्रयाता गच्छन्ति ब्रह्म ब्रह्मविदो जना:॥ धूमो रात्रिस्तथा कृष्ण: षण्मासा दक्षिणायनम्। तत्र चान्द्रमसं ज्योति: योगी प्राप्य निवर्तते" गीता ८-२४, २५। "तद्य इत्थं विदुर्ये चेमे अरण्ये श्रद्धा तप इत्युपासते तेऽर्चिषमभिसम्भवन्ति"। "अथ य इमे ग्राम इष्टापूर्ते दत्तमित्युपासते ते धूममभिसंभवन्ति" छान्दोग्य०। 12,000 ದೇವವರ್ಷಗಳು ಅಥವಾ 43,20.000 ಮಾನುಷ ವರ್ಷಗಳು ಒಂದು ಚತುರ್ಯುಗದ (ಕೃತ, ತ್ರೇತಾ, ದ್ವಾಪರ ಮತ್ತು ಕಲಿ) ಕಾಲ. ದೇವತೆಗಳ 1000 ಚತುರ್ಯುಗಗಳು (ದೇವ ವರ್ಷಗಳು 1,20,00,000 ಅಥವಾ ಮಾನುಷ ವರ್ಷಗಳು 4.32,00,00.000) ಬ್ರಹ್ಮನಿಗೆ ಒಂದು ಹಗಲು. ಮತ್ತು 1000 ಚತುರ್ಯುಗಗಳ ಕಾಲ ಬ್ರಹ್ಮನಿಗೆ ಒಂದು ರಾತ್ರಿ. "सहस्रयुगपर्यन्तमहर्यद्ब्रह्मणो विदु:। रात्रिं युगसहस्रान्तां तेऽहोरात्रविदो जना:" गीता ८-१७। ಹಗಲಿನ ಪ್ರಾರಂಭದಲ್ಲಿ ಚತುರ್ಮುಖನ ದೇಹಾವಸ್ಥಾರೂಪವಾದ ಅವ್ಯಕ್ತದಿಂದ ಮೂರು ಲೋಕಗಳೊಳಗಿರುವ ದೇಹೇಂದ್ರಿಯಾದಿ ವಸ್ತುಗಳೆಲ್ಲವೂ ಹುಟ್ಟುತ್ತವೆ. ರಾತ್ರಿಯ ಪ್ರಾರಂಭಕಾಲದಲ್ಲಿ ಎಲ್ಲವೂ ಚತುರ್ಮುಖನ ದೇಹದೊಳಗೇ ಲೀನವಾಗುತ್ತವೆ. "अव्यक्ताद्व्यक्तय: सर्वा: प्रभवन्त्यहरागमे। रात्र्यागमे प्रलीयन्ते तत्रैवाव्यक्तसंज्ञके" गीता ८-१८। ಬ್ರಹ್ಮನ ಹಗಲಿನಲ್ಲಿ ಜಗತ್ತಿನ ಸೃಷ್ಟಿಕಾರ್ಯವು ನಡೆಯುವುದು. ರಾತ್ರಿಕಾಲದಲ್ಲಿ ಸಮಸ್ತ ಪ್ರಾಣಿವರ್ಗವೂ ಅವನ ಶರೀರದಲ್ಲೇ ಲಯಹೊಂದುವುವು. ಈ ರಾತ್ರಿಕಾಲದಲ್ಲಿ ನಡೆಯುವ ಈ ಪ್ರಲಯವು ನೈಮಿತ್ತಿಕ ಪ್ರಲಯ.

**ब्रह्मदूषक ಬ್ರಹ್ಮದೂಷಕ** (वि०) ವೇದವನ್ನು ನಿಂದಿಸುವವನು, ವೇದವನ್ನು ಖಂಡಿಸುವವನು. ब्रह्म दूषयति— दुष (वैकृत्ये) + णिच् "ण्वुल्" (३-१-१३३)। उपधाया ऊत्वम् (६-४-९०)।

**ब्रह्मदेय ಬ್ರಹ್ಮದೇಯ** (पुं०) 1. ಬ್ರಾಹ್ಮಧರ್ಮದಿಂದ ವಿವಾಹವಾದವನು. (न०) 2. ವೇದಾಧ್ಯಯನ ಮಾಡಿಸುವುದು. (वि०) 3. ವಂಶಪರಂಪರೆಯಿಂದ ವೇದಾಧ್ಯಯನ ಮಾಡಿಸುವ ಕುಲದವನು.

**ब्रह्मदैत्य ಬ್ರಹ್ಮದೈತ್ಯ** (ಪುಂ) ಬ್ರಹ್ಮರಾಕ್ಷಸ, ಬ್ರಹ್ಮ ಪಿಶಾಚ. ब्रह्मा ब्राह्मणरूपो दैत्यः।

**ब्रह्मद्विष् ಬ್ರಹ್ಮದ್ವಿಷ್** (ವಿ०) 1. ವೇದವನ್ನು ದ್ವೇಷಿಸುವವನು. 2. ಬ್ರಾಹ್ಮಣನನ್ನು ದ್ವೇಷಿಸುವವನು. ब्रह्म द्वेष्टि—द्विष (अप्रीतौ) "क्विप्" (३-२-६१)। "ब्रह्मद्विट् परिवित्तिश्च गणाभ्यन्तर एव च" मनु० ३-१५४। "ब्रह्मद्विषो ह्येष निहन्ति सर्वान्" म० वी० १-६२।

**ब्रह्मद्वेष ಬ್ರಹ್ಮದ್ವೇಷ** (ಪುಂ) 1. ವೇದವನ್ನು ದ್ವೇಷಿಸುವುದು, ವೇದವನ್ನು ನಿಂದಿಸುವುದು. 2. ಬ್ರಾಹ್ಮಣನನ್ನು ದ್ವೇಷಿಸುವುದು,

**ब्रह्मद्वेषिन् ಬ್ರಹ್ಮದ್ವೇಷಿನ್** (ವಿ०) 1. ವೇದದಲ್ಲಿ ದ್ವೇಷ ಬುದ್ಧಿಯುಳ್ಳವನು, ವೇದವನ್ನು ದ್ವೇಷಿಸುವವನು. 2. ಬ್ರಾಹ್ಮಣನನ್ನು ದ್ವೇಷಿಸುವವನು.

**ब्रह्मन् ಬ್ರಹ್ಮನ್** (ಪುಂ) 1. ವಿಪ್ರ, ಬ್ರಾಹ್ಮಣ. बृंहति—बृहि (वृद्धौ) "मनिन्" नकारस्याकारश्च (उ० ४-१४६)। "ब्रह्मादयो ब्रह्महिताय तप्त्वा परःसहस्रं शरदस्तपांसि" म० वी० १-४२। 2. ಚತುರ್ಮುಖ, ಹಿರಣ್ಯಗರ್ಭ, ಪಿತಾಮಹ. बृंहति वर्धयति प्रजाः "मनिन्" (उ० ४-१४६)। 3. ವಿಷ್ಕಂಭ ಮೊದಲಾದ 27 ಯೋಗಗಳಲ್ಲೊಂದು. 4. ಸೂರ್ಯ. 5. ಋತ್ವಿಕ್ಕು. 6. ಚಂದ್ರ. 7. ಅಗ್ನಿ, ಬೆಂಕಿ. 8. ಯಜ್ಞ. 9. ಸದ್ಯೋಜಾತ ಮೊದಲಾದ ಮಂತ್ರ. "ब्रह्माङ्गभूर्ब्रह्मणि योजितात्मा" कुमा० ३-१५। 10. ರುದ್ರ. 11. ಇಂದ್ರ. 12. ಜೀವಾತ್ಮ. (ನಂ) 13. ಶ್ರುತಿ, ವೇದ. बृहि "मनिन्"। "तेने ब्रह्म हृदा य आदिकवये मुह्यन्ति यत्सूरयः" भाग० १-१-१। "यद्ब्रह्म सम्यगाम्नातं यदग्नौ विधिना हुतम्। यच्च तप्तं तपस्तस्य विपक्वं फलमद्य नः" कुमा० ६-१६। 14. ಪರಮಾತ್ಮ, ಪರಬ್ರಹ್ಮ. "निरतिशयकल्याणगुणगणैः स्वरूपगुणविभवैश्च बृंहति विश्वमनापेक्षिकं बृंहयति च। बृहत्वाद् बृंहणत्वाच्च ब्रह्मेति परिकीर्त्यते"। "ब्रह्म ब्रह्मविवर्धनः" वि० स०। "यद्वाचानभ्युदितं येन वागभ्युद्यते। तदेव ब्रह्म त्वं विद्धि नेदं यदिदमुपासते" केन०। "वदन्ति तत्तत्त्वविदस्तत्त्वं यज्ज्ञानमद्वयम्। ब्रह्मेति परमात्मेति भगवानिति शब्द्यते" भाग० १-२-११। "ब्रह्मणोऽस्तु तव शक्तिलतायां मूर्ध्नि विश्वमथ पत्युरहीनाम्" नैष० २१-१०१।

**ದಾರ್ಶನಿಕರು ಅಂಗೀಕರಿಸಿರುವ ಪರಬ್ರಹ್ಮ ಸ್ವರೂಪ:**

**ದ್ವೈತದರ್ಶನ:** ವಿಷ್ಣುವೇ ಪರಬ್ರಹ್ಮ. ಸಚ್ಚಿದಾನಂದ ಸ್ವರೂಪನು. ಸಕಲಕಲ್ಯಾಣಗುಣಗಣಪರಿಪೂರ್ಣನು. ಜಗತ್ತಿಗೆ ಆದಿಕಾರಣನು. ಸರ್ವಾಂತರ್ಯಾಮಿ ಮತ್ತು ಸ್ವತಂತ್ರನು. "स्वतन्त्रो भगवान् विष्णुः निर्दोषोऽशेषसद्गुणः" तत्त्ववि०। ಇದು ಇವರ ಸಿದ್ಧಾಂತ.

**ಅದ್ವೈತದರ್ಶನ:** ಚೈತನ್ಯಸ್ವರೂಪನಾದ ಪರಮಾತ್ಮನೇ ಪರಬ್ರಹ್ಮ. ಪರಬ್ರಹ್ಮವು ಸಗುಣ ಮತ್ತು ನಿರ್ಗುಣ ಭೇದಗಳಿಂದ ಎರಡು ವಿಧ. ಮಾಯೆಯೆಂಬ ಅವಿದ್ಯಾವಿಶಿಷ್ಟನಾದ ಮತ್ತು ಜಗತ್ಕಾರಣನಾದ ಈಶ್ವರನು ಸಗುಣಬ್ರಹ್ಮ. ಮಾಯಾತೀತ ಮತ್ತು ಜಾಗ್ರದಾದ್ಯವಸ್ಥಾತ್ರಯಾತೀತವಾದುದು ನಿರ್ಗುಣ ಬ್ರಹ್ಮ. ಮಾಯಾವಿಶಿಷ್ಟನಾದ ಈಶ್ವರನು ಜಗತ್ತಿಗೆ ಉಪಾದಾನಕಾರಣ. ಮತ್ತು ಜಗತ್ತಿನ ಸೃಷ್ಟಿಸ್ಥಿತಿಲಯಗಳಿಗೆ ಕಾರಣನಾಗಿರುವನು. "यतो वा इमानि भूतानि जायन्ते। येन जातानि जीवन्ति। यत्प्रयन्त्यभिसंविशन्ति। तद्विजिज्ञासस्व। तद्ब्रह्म" तै० उ०। "निर्गुणं निष्कलं शान्तं निरवद्यं निरञ्जनम्" श्वेता० उप०। "अयमात्मा ब्रह्म"। "सर्वं खल्विदं ब्रह्म" ಎಂಬ ವಾಕ್ಯಗಳಿಂದ ಬ್ರಹ್ಮವೇ ಸಕಲ ಪ್ರಪಂಚವೆಂದು ಇವರ ಸಿದ್ಧಾಂತ.

**ವಿಶಿಷ್ಟಾದ್ವೈತ:** ಲಕ್ಷ್ಮೀನಾರಾಯಣನೇ ಪರಬ್ರಹ್ಮ. ಇವನು ಸಕಲಜಗನ್ನಿಯಾಮಕ. ಜಗತ್ತಿನ ಸೃಷ್ಟಿಸ್ಥಿತಿ ಪ್ರಲಯಗಳಿಗೆ ಕಾರಣನು. "जन्माद्यस्य यतः" ब्र० सू० १-१-२। "यतो वा इमानि भूतानि जायन्ते। येन जातानि जीवन्ति। यत्प्रयन्त्यभिसंविशन्ति। तद्विजिज्ञासस्व। तद्ब्रह्म" तै० उ०। ಸೂಕ್ಷ್ಮ ಚಿದಚಿದ್ವಿಶಿಷ್ಟ ರೂಪದಿಂದ ಪರಮಾತ್ಮನು ಜಗತ್ತಿಗೆ ಉಪಾದಾನ ಕಾರಣನೂ ನಿಮಿತ್ತಕಾರಣನೂ ಆಗಿರುವನು. ಹೇಯ ಗುಣರಹಿತನಾಗಿರುವುದರಿಂದ ನಿರ್ಗುಣನೂ ಸಕಲ ಕಲ್ಯಾಣ ಗುಣಪರಿಪೂರ್ಣನಾದುದರಿಂದ ಸಗುಣನೂ ಆಗಿರುವನು. ಸಕಲ ಜೀವರೂ ಪರಮಾತ್ಮನಿಗೆ ಶರೀರವಾಗಿರುವುದರಿಂದ ಜೀವರು ಶೇಷರು. ಪರಮಾತ್ಮನು ಶೇಷಿ. ಈ ಶೇಷ ಶೇಷಿಭಾವವು ವಿಶಿಷ್ಟಾದ್ವೈತ ಸಿದ್ಧಾಂತದಲ್ಲಿ ಒಂದು ವಿಶೇಷವಾದ ಅಂಶವಾಗಿದೆ. ಪರಮಾತ್ಮನು ಸರ್ವ ಸ್ವತಂತ್ರನು. ಲಕ್ಷ್ಮಿಗೆ ಪರಮಾತ್ಮನ ಅಧೀನವಾದ ಸ್ವಾತಂತ್ರ್ಯ. ಉಳಿದೆಲ್ಲಾ ವಿಷಯಗಳಲ್ಲೂ ಸರ್ವಸಾಮ್ಯವಿರುವುದು. "वासुदेवः परं ब्रह्म कल्याणगुणसंयुतः।

भुवनानामुपादानं कर्ता जीवनियामकः"। ಪರಮಾತ್ಮನು ಸರ್ವಪ್ರಾಣಿಗಳ ಹೃದಯದಲ್ಲೂ ಅಂತರ್ಯಾಮಿಯಾಗಿರುವನು. ಸಕಲ ಜೀವಾತ್ಮರ ಕರ್ಮಾನುಗುಣವಾಗಿ ಅವರವರ ವ್ಯಾಪಾರಗಳಿಗೆ ಪ್ರೇರಕನಾಗಿರುತ್ತಾನೆ. "य आत्मनि तिष्ठन्नात्मानमन्तरो यमयति" इति श्रुतिः। "तदेव वासुदेवाख्यं परं ब्रह्म निगद्यते। अन्तर्यामी जीवसंस्थो जीवप्रेरक ईरितः"। ಇದು ಇವರ ಸಿದ್ಧಾಂತ.

**ಶಕ್ತಿವಿಶಿಷ್ಟಾದ್ವೈತ—ವೀರಶೈವದರ್ಶನ:** ಪತಿ ಪರಶಿವ ಪರಮಾತ್ಮ ಎಂದು ಹೇಳಲ್ಪಡುವ ನಿತ್ಯವಾದ ಸತ್ಯವಸ್ತುವು ಪರಬ್ರಹ್ಮ. ನಮ್ಮ ಇಂದ್ರಿಯಗಳಿಗೆ ಗೋಚರವಾಗುವ ಮತ್ತು ಪ್ರತಿಕ್ಷಣದಲ್ಲೂ ಪರಿವರ್ತನ ಹೊಂದುವ ಸ್ವಭಾವದ ಪ್ರಪಂಚಕ್ಕಿಂತಲೂ ಭಿನ್ನವಾದುದು ಈ ಸತ್ಯವಸ್ತು. ಇದು ಸಚ್ಚಿದಾನಂದ ಸ್ವರೂಪವುಳ್ಳದ್ದು ಮತ್ತು ಪರಿಪೂರ್ಣವಾದುದು. ಪರಮಾತ್ಮನು ಸರ್ವಶಕ್ತಿ ಸಂಪನ್ನನು. ಸಕಲ ಪ್ರಾಣಿಗಳ ಕರ್ಮಾನುಸಾರವಾಗಿ ಪರಮಾತ್ಮನು ಜಗತ್ತನ್ನು ಸೃಷ್ಟಿಸುವನು. "अज्ञो जन्तुरनीशोऽयमात्मनः सुखदुःखयोः। ईश्वरप्रेरितो गच्छेत् स्वर्गं वा श्वभ्रमेव वा" ಸಂ ದಂ ಸಂ। ಸಕಲ ಜಗತ್ತಿಗೂ ಸೃಷ್ಟಿಕರ್ತನಾದುದರಿಂದ ಪರಮಾತ್ಮನು ಸರ್ವಜ್ಞ. "सर्वज्ञः सर्वकर्तृत्वात् साधनाङ्गफलैः सह। यो यज्जानाति कुरुते स तदेवेति सुस्थितम्"। ಪರಶಿವನು ನಿರಾಕಾರ, ನಿರವಯವ. ಆದರೂ ನಿರಾಕಾರಬ್ರಹ್ಮನ ಧ್ಯಾನಪೂಜಾದಿಗಳು ಸಾಧ್ಯವಿಲ್ಲವಾದುದರಿಂದ ಭಕ್ತಾನುಗ್ರಹಕ್ಕಾಗಿ ಈಶಾನಮಸ್ತಕ, ತತ್ಪುರುಷವಕ್ತ್ರ, ಅಘೋರ ಹೃದಯ, ವಾಮದೇವಗುಹ್ಯ ಮತ್ತು ಸದ್ಯೋಜಾತಪಾದಗಳೆಂಬ ಐದು ಶರೀರಗಳನ್ನು ಸ್ವೀಕರಿಸುವನು. ಮಲ ಕರ್ಮ ಮಾಯೆ ಮೊದಲಾದ ಪಾಶಜಾಲಸಂಬಂಧವಿಲ್ಲದಿರುವುದರಿಂದ ಇವು ಪ್ರಾಕೃತ ಶರೀರವಲ್ಲ. "मलाद्यसंभवाच्छाक्तं वपुर्नैतादृशं प्रभोः। तद्वपुः पञ्चभिर्मन्त्रैः पञ्चकृत्योपयोगिभिः। ईशतत्पुरुषाघोरवामाद्यैर्मस्तकादिमत्। साधकस्य तु रक्षार्थं तस्य रूपमिदं स्मृतम्" ಸಂ ದಂ ಸಂ। ಇದು ಇವರ ಸಿದ್ಧಾಂತ. 15. ತತ್ತ್ವ. 16. ತಪಸ್ಸು. 17. ಆಕಾಶ. 18. ಅನ್ನ. 19. ಅಧ್ಯಾತ್ಮವಿದ್ಯೆ. 20. ವೇದಜ್ಞಾನ. "ब्रह्मा विरिञ्चिद्विजयोः ऋत्विक्चन्द्रार्कयोगयोः। ब्रह्म प्रोक्तं तपोऽध्यात्मवेदज्ञानेषु सूरिभिः" विश्वं। 21. ಬ್ರಹ್ಮತೇಜಸ್ಸು. "ब्रह्मा रुद्रेन्द्रभृग्वादिविप्रर्त्विक्यज्ञधातृषु। अर्केऽग्नौ क्ली तु वेदेऽन्ने खाध्यात्मात्मतपस्सु च" वैजं। 22. ಬ್ರಹ್ಮಚರ್ಯ, ವೈರಾಗ್ಯ, ವಿಷಯ ಪರಿತ್ಯಾಗ. "भगवान् काश्यपः शाश्वते ब्रह्मणि स्थित इति प्रकाशः। इयं च वः प्रियसखी तदात्मजेति कथमेतत्" शाकुं १। 23. ವೇದೋಕ್ತ ಕರ್ಮ. 24. ಸತ್ಯ. 25. ಪ್ರಕೃತಿ. "तस्मादेतद्ब्रह्म नाम रूपमन्नं च जायते" मुण्डकं। "मम योनिर्महद्ब्रह्म तस्मिन् गर्भं दधाम्यहम्" गीता १४-३। 26. ಪ್ರಣವ. "ओमित्येकाक्षरं ब्रह्म व्याहरन् मामनुस्मरन्" गीता ८-१३। 27. ಜೀವಾತ್ಮ.

**ब्रह्मनिर्वाण ಬ್ರಹ್ಮನಿರ್ವಾಣ** (ನಂ) ಬ್ರಹ್ಮತ್ವವನ್ನು ಹೊಂದುವುದು, ಬ್ರಹ್ಮನಲ್ಲಿ ಐಕ್ಯಹೊಂದುವುದು, ಬ್ರಹ್ಮನಲ್ಲಿ ಲಯಹೊಂದುವುದು, ಮೋಕ್ಷ. "एषा ब्राह्मी स्थितिः पार्थ नैनां प्राप्य विमुह्यति। स्थित्वास्यामन्तकालेऽपि ब्रह्मनिर्वाणमृच्छति" गीता २-७२। ಸಕಲ ವಿಧವಾದ ಪ್ರಾಪಂಚಿಕ ಅನಿಷ್ಟಗಳೂ ನಿವೃತ್ತಿಹೊಂದಿ ಪರಮಾನಂದ ಪ್ರಾಪ್ತಿಯಾಗುವುದೇ ಮೋಕ್ಷ. ಅಜ್ಞಾನವು ನಿವೃತ್ತಿಹೊಂದಿ "अहं ब्रह्मास्मि" ಎಂಬ ಜ್ಞಾನವುಂಟಾಗುವುದೇ ಸಚ್ಚಿದಾನಂದಸ್ವರೂಪವಾದ ಪರಬ್ರಹ್ಮದಲ್ಲಿ ಐಕ್ಯಹೊಂದುವುದು. ब्रह्मनिर्वाणं ब्रह्मनिर्वृतिं मोक्षं ऋच्छति गच्छति ಎಂದು ಶ್ರೀ ಶಂಕರಭಗವತ್ಪಾದಾಚಾರ್ಯರ ವ್ಯಾಖ್ಯಾನ. (ಶ್ರೀ ಶಂಕರಭಾಷ್ಯ.) ब्रह्मनिर्वाण ಪದಕ್ಕೆ ಷಷ್ಠೀಸಮಾಸ ಹೇಳದೆ निर्वाणमयं ब्रह्म गच्छति सुखैकतानमात्मानं अवाप्नोति ಸುಖೈಕಸ್ವರೂಪನಾದ ಆತ್ಮನನ್ನು ಹೊಂದುತ್ತಾನೆ ಎಂದು ಶ್ರೀ ರಾಮಾನುಜಾಚಾರ್ಯರ ವ್ಯಾಖ್ಯಾನ (ಭಾಷ್ಯ).

अपरिगणितानन्तगुणगणं नारायणाख्यं परं ब्रह्म अपरोक्षज्ञानी ऋच्छति ಅಪರೋಕ್ಷ ಜ್ಞಾನಿಯು ಸಕಲಗುಣಗಣಪರಿಪೂರ್ಣನಾದ ಶ್ರೀ ನಾರಾಯಣನೆಂಬ ಪರಬ್ರಹ್ಮವನ್ನು ಹೊಂದುತ್ತಾನೆ ಎಂದು ಶ್ರೀಮದಾನನ್ದತೀರ್ಥ ಶ್ರೀಪಾದರ ವ್ಯಾಖ್ಯಾನ (ಭಾಷ್ಯ).

**ब्रह्मपत्र ಬ್ರಹ್ಮಪತ್ರ** (ನಂ) ಪಲಾಶಪತ್ರ, ಮುತ್ತುಗದ ಎಲೆ. "भोजनं ब्रह्मपत्रेषु कथयालोचनं हरेः। दर्शनं वैष्णवानां च महापातकनाशनम्"।

**ब्रह्मपद ಬ್ರಹ್ಮಪದ** (ನಂ) 1. ಪರಬ್ರಹ್ಮದ ಸ್ಥಾನ. 2. ಬ್ರಾಹ್ಮಣನ ಸ್ಥಾನ, ಬ್ರಾಹ್ಮಣನ ಪದವಿ.

**ब्रह्मपवित्र ಬ್ರಹ್ಮಪವಿತ್ರ** (ಪುಂ) ಕುಶ, ದರ್ಭೆ.

**ब्रह्मपरिषद् ಬ್ರಹ್ಮಪರಿಷದ್** (ಸ್ತ್ರೀಂ) ಬ್ರಾಹ್ಮಣರ ಸಭೆ, ಬ್ರಾಹ್ಮಣರ ಗೋಷ್ಠಿ.

**ब्रह्मपादप ಬ್ರಹ್ಮಪಾದಪ** (ಪುಂ) 1. ಪಲಾಶವೃಕ್ಷ, ಮುತ್ತುಗದ ಮರ. ब्रह्मा तदाख्यया प्रसिद्धः पादपः। 2. ಉದುಂಬರವೃಕ್ಷ, ಅತ್ತಿಮರ.

**ब्रह्मपारायण ಬ್ರಹ್ಮಪಾರಾಯಣ** (न०) ಸಂಪೂರ್ಣ ವೇದಾಧ್ಯಯನ. ब्रह्मणो वेदस्य पारायणं समग्राध्ययनम्। "तेषामिदानीं दायादो वृद्धः सीरध्वजो नृपः। याज्ञवल्क्यो मुनिर्यस्मै ब्रह्मपारायणं जगौ" म० वी० १-१४।

**ब्रह्मपाश ಬ್ರಹ್ಮಪಾಶ** (पुं०) ಬ್ರಹ್ಮಾಸ್ತ್ರ. ब्रह्मणा दत्तः पाशः। "अबध्नादपरिस्कन्दं ब्रह्मपाशेन विस्फुरन्" भट्टि० ९-७६।

**ब्रह्मपुत्र ಬ್ರಹ್ಮಪುತ್ರ** (पुं०) 1. ಒಂದು ನದ, ಒಂದು ಗಂಡು ಹೊಳೆ. ಪೂರ್ವದಿಕ್ಕಿಗೆ ಹರಿಯುವ ಹೊಳೆಯು ನದಿ. ಪಶ್ಚಿಮದಿಕ್ಕಿಗೆ ಹರಿಯುವ ಹೊಳೆಯು ನದ. ಬ್ರಹ್ಮಪುತ್ರವು ಹಿಮಾಲಯದ ಪೂರ್ವಭಾಗದಲ್ಲಿ ಹುಟ್ಟಿ ಬಂಗಾಳಕೊಲ್ಲಿಯನ್ನು ಸೇರುವುದು. 2. ಕಾಕೋಲಾದಿ ವಿಷಗಳಲ್ಲಿ ಒಂದು ಭೇದ. ब्रह्मणः पुत्रः। "त्वं विष ब्रह्मणः पुत्रः सत्ये धर्मे व्यवस्थितः" याज्ञ० २-११०। "ब्रह्मपुत्रः क्ष्वेडभेदे नदभेदे च पुंस्ययम्" मेदि०। 3. ಬ್ರಹ್ಮನ ಮಗ. ನಾರದ ಮೊದಲಾದ ಹತ್ತು ಮಂದಿ ಬ್ರಹ್ಮನ ಮಾನಸಪುತ್ರರು. 4. ರುದ್ರ. "ब्रह्मपुत्रस्तु रुद्रेऽपि" वैज०। (स्त्री०) **-पुत्री -ಪುತ್ರೀ.** ಸರಸ್ವತೀ ನದಿ.

**ब्रह्मपुरी ಬ್ರಹ್ಮಪುರೀ** (स्त्री०) 1. ಬ್ರಹ್ಮನ ಸ್ಥಾನ, ಜಪಕ್ಕಾಗಿ ಧ್ಯಾನಮಾಡಲ್ಪಡುವ ಪರಬ್ರಹ್ಮದ ಸ್ಥಾನವಾದ ಹೃದಯಕಮಲ, ಷೋಡಶದಳಾತ್ಮಕವಾದ ನಾಡೀಚಕ್ರ. ब्रह्मणः पुरी। 2. ಕಾಶೀನಗರ. "विद्याप्रबोधोदयजन्मभूमिर्वाराणसी ब्रह्मपुरी निरत्यया" प्रबोध० २-१२।

**ब्रह्मबन्धु ಬ್ರಹ್ಮಬಂಧು** (पुं०) 1. ಬ್ರಾಹ್ಮಣನಿಂದ ಜನ್ಮ ಪಡೆದು ಬ್ರಾಹ್ಮಣೋಚಿತವಾದ ಯಾವ ಆಚಾರವೂ ಇಲ್ಲದವನು, ನಿಂದ್ಯನಾದ ಬ್ರಾಹ್ಮಣ. ब्रह्मा विप्रः बन्धुरुत्पादको यस्य ब्रह्मा ब्राह्मणजातिः बन्धुरस्य वा। "वपनं द्रविणादानं स्थानान्निर्वासनं तथा। एष हि ब्रह्मबन्धूनां वधो नान्योऽस्ति दैहिकः" भाग० १-७-५७। 2. ನಿರ್ದೇಶ, ತೋರಿಸುವುದು. ದ್ವೇಷಾದಿಗಳಿಂದ ಹೆಸರನ್ನು ಹೇಳಲು ಇಷ್ಟವಿಲ್ಲದೆ ನಿರ್ದೇಶಮಾಡಿ ಹೇಳುವುದು. 3. ಅಧಿಕ್ಷೇಪ, ತಿರಸ್ಕಾರ. "ब्रह्मबन्धुरधिक्षेपे निर्देशे" अम०। "ब्रह्मबन्धुरधिक्षिप्ते निर्देशे ब्राह्मणस्य ना" मेदि०।

**ब्रह्मबिन्दु ಬ್ರಹ್ಮಬಿಂದು** (पुं०) ವೇದಾಧ್ಯಯನ ಕಾಲದಲ್ಲಿ ಬಾಯಿಂದ ಬೀಳುವ ನೀರಿನ ಹನಿ. ब्रह्मणो बिन्दवः। "पाठे विप्रुषो ब्रह्मबिन्दवः" अम०।

**ब्रह्मब्रुवाण ಬ್ರಹ್ಮಬ್ರುವಾಣ** (पुं०) 1. (ಬ್ರಾಹ್ಮಣನಲ್ಲದವನು) ತಾನು ಬ್ರಾಹ್ಮಣನೆಂದು ಹೇಳಿಕೊಳ್ಳುವವನು. आत्मानं ब्राह्मणं ब्रूते—ब्रूञ् (व्यक्तायां वाचि) "शानच्" (३-२-१२४)। ಕರ್ಣನು ತಾನು ಬ್ರಾಹ್ಮಣನೆಂದು ಹೇಳಿ ಪರಶುರಾಮನಲ್ಲಿ ಅಸ್ತ್ರವಿದ್ಯೆಯನ್ನು ಕಲಿತನು. 2. ಅಯೋಗ್ಯನಾದ ಬ್ರಾಹ್ಮಣ, ಹೆಸರಿಗೆ ಮಾತ್ರ ಬ್ರಾಹ್ಮಣ, ಜಾತಿ ಮಾತ್ರದಿಂದ ಬ್ರಾಹ್ಮಣನೆಂದು ಹೇಳಿಕೊಳ್ಳುವವನು.

**ब्रह्मभद्रा ಬ್ರಹ್ಮಭದ್ರಾ** (स्त्री०) ಕಹಿದಸರಿ, ನೀರಾಮೆ ಬಳ್ಳಿ.

**ब्रह्मभाग ಬ್ರಹ್ಮಭಾಗ** (पुं०) ಯಾಗದಲ್ಲಿ ಋತ್ವಿಕ್ಕಿಗೆ ಕೊಡಬೇಕಾದ ಭಾಗ. ब्रह्मणो भागः।

**ब्रह्मभुवन ಬ್ರಹ್ಮಭುವನ** (न०) ಬ್ರಹ್ಮಲೋಕ, ಸತ್ಯಲೋಕ. ब्रह्मणो भुवनम्। ಬ್ರಹ್ಮಲೋಕವು ವಿರಾಟ್ ಪುರುಷನ ಅವಯವಗಳಲ್ಲೊಂದಾದ ಶಿರೋಭಾಗದಲ್ಲಿ ಇರುವುದು. ಇದು ಏಳು ಊರ್ಧ್ವಲೋಕಗಳಲ್ಲೊಂದು. "मूर्धभिः सत्यलोकस्तु ब्रह्मलोकः सनातनः" भाग० २। "आब्रह्मभुवनाल्लोकाः पुनरावर्तिनोऽर्जुन" गीता ८-१६।

**ब्रह्मभूत ಬ್ರಹ್ಮಭೂತ** (वि०) 1. ಬ್ರಹ್ಮಭಾವವನ್ನು ಹೊಂದಿದವನು. शां० भा०। 2. ಅಪರಿಚ್ಛಿನ್ನವಾದ ಜ್ಞಾನವನ್ನು ಹೊಂದಿ ಪರಮಾತ್ಮನಿಗೆ ಶೇಷನಾಗಿರುವ ನಂಬ ಸ್ವಭಾವದ ಆತ್ಮಸ್ವರೂಪವುಳ್ಳವನು. रा० भा०। "ब्रह्मभूतः प्रसन्नात्मा न शोचति न काङ्क्षति। समः सर्वेषु भूतेषु मद्भक्तिं लभते पराम्" गीता १८-५४।

**ब्रह्मभूय ಬ್ರಹ್ಮಭೂಯ** (न०) 1. ಬ್ರಹ್ಮತ್ವ, ಬ್ರಹ್ಮಭಾವ, ಬ್ರಹ್ಮನಾಗುವಿಕೆ, ಬ್ರಹ್ಮನಲ್ಲೇ ಲಯಹೊಂದುವಿಕೆ, ಮೋಕ್ಷ. ब्रह्मणि भावः—भू (सत्तायाम्) "क्यप्" (३-१-१०७)। ब्रह्मणो भावो वा। 2. ಆತ್ಮಾನುಭವ, ಬ್ರಹ್ಮಸಾಮ್ಯ. 3. ಸರ್ವದಾ ಬ್ರಹ್ಮಮನಸ್ಕನಾಗಿರುವಿಕೆ. "अहङ्कारं बलं दर्पं कामं क्रोधं परिग्रहम्। विमुच्य निर्ममः शान्तो ब्रह्मभूयाय कल्पते" गीता १८-५३। "यशोभिराब्रह्मसभं प्रकाशः स ब्रह्मभूयं गतिमाजगाम" रघु० १८-२८। 4. ಬ್ರಾಹ್ಮಣತ್ವ, ಬ್ರಾಹ್ಮಣನಾಗುವಿಕೆ.

**ब्रह्ममय ಬ್ರಹ್ಮಮಯ** (वि०) ಬ್ರಹ್ಮಸ್ವರೂಪದ, ವೇದಸ್ವರೂಪದ. ब्रह्मन् "मयट्" (५-४-२२)। "अथाजिनाषाढधरः प्रगल्भवाग्ज्वलन्निव ब्रह्ममयेन तेजसा" कुमा० ५-३०।

**ब्रह्ममङ्गलदेवता ಬ್ರಹ್ಮಮಂಗಲದೇವತಾ** (ಸ್ತ್ರೀ೦) ಮಹಾಲಕ್ಷ್ಮಿ.

**ब्रह्ममह ಬ್ರಹ್ಮಮಹ** (ಪ್ರಂ) ಬ್ರಾಹ್ಮಣರ ಸಂತೋಷಾರ್ಥ (ಗೌರವಾರ್ಥ) ನಡೆಸುವ ಉತ್ಸವ, ಸಂತೋಷಕೂಟ.

**ब्रह्ममीमांसा ಬ್ರಹ್ಮಮೀಮಾಂಸಾ** (ಸ್ತ್ರೀ೦) ಬ್ರಹ್ಮ ಸ್ವರೂಪವನ್ನು ತಿಳಿಸುವ ಶಾಸ್ತ್ರ, ವೇದಾಂತ, ವ್ಯಾಸ ಮಹರ್ಷಿಪ್ರಣೀತವಾದ ಬ್ರಹ್ಮಸೂತ್ರ, ಉತ್ತರ ಮೀಮಾಂಸೆ.

**ब्रह्मयज्ञ ಬ್ರಹ್ಮಯಜ್ಞ** (ಪ್ರಂ) ವೇದಾಧ್ಯಯನ ಮತ್ತು ವೇದಾಧ್ಯಾಪನ, ವೇದವನ್ನು ಹೇಳುವುದು (ಪಾರಾಯಣ ಮಾಡುವುದು) ಮತ್ತು ಹೇಳಿಕೊಡುವುದು. ಇದು ಪ್ರತಿ ದಿನವೂ ಗೃಹಸ್ಥನು ಮಾಡಬೇಕಾದ ಪಂಚಮಹಾಯಜ್ಞ ಗಳಲ್ಲೊಂದು. "अध्यापनं ब्रह्मयज्ञः पितृयज्ञस्तु तर्पणम्। होमो दैवो बलिर्भौतो नृयज्ञोऽतिथिपूजनम्" ಮನು೦ ೩-೭೦। ಇಲ್ಲಿ "अध्यापन" ಪದವು ಅಧ್ಯಯನಕ್ಕೂ ಉಪಲಕ್ಷಣ.

**ब्रह्मयोग ಬ್ರಹ್ಮಯೋಗ** (ಪ್ರಂ) ಬ್ರಹ್ಮಜ್ಞಾನ ಸಂಪಾದನೆ.

**ब्रह्मयोनि ಬ್ರಹ್ಮಯೋನಿ** (ಪ್ರಂ) 1. ಬ್ರಹ್ಮನ ಪುತ್ರ. ब्रह्मा योनिः कारणं यस्य। "त्वयैवं चिन्त्यमानस्य गुरुणा ब्रह्मयोनिना" ರಘು೦ ೧-೬೪। (ವಿ೦)2. ಬ್ರಹ್ಮ ನಿಂದ ಹುಟ್ಟಿದ. 3. ವೇದಗಳಿಗೆ ಕಾರಣನಾದ. 4. ಬ್ರಹ್ಮನ ಉತ್ಪತ್ತಿಗೆ ಕಾರಣನಾದ. "यस्य चेतसि वर्तेथाः स तावत् कृतिनां वरः। किं पुनर्ब्रह्मयोनेर्यः तव चेतसि वर्तते" ಕುಮಾ೦ ೬-೧೮। 5. ಬ್ರಹ್ಮಪ್ರಾಪ್ತಿಗೆ ಕಾರಣವಾದ ಬ್ರಹ್ಮಧ್ಯಾನ. "ब्राह्मणा ब्रह्म योनिस्थाः ये स्वकर्मण्यवस्थिताः" ಮನು೦ ೧೦-೭೪।

**ब्रह्मयोनी ಬ್ರಹ್ಮಯೋನೀ** (ಸ್ತ್ರೀ೦) ಒಂದು ತೀರ್ಥ. ಇದು ಕುರುಕ್ಷೇತ್ರದಲ್ಲಿ ಸರಸ್ವತೀ ನದೀತೀರದಲ್ಲಿರುವುದು. ब्रह्मा योनिरुत्पत्तिकारणं यस्याः।

**ब्रह्मरन्ध्र ಬ್ರಹ್ಮರಂಧ್ರ** (ನ೦) ತಲೆಯಲ್ಲಿರುವ ಒಂದು ರಂಧ್ರ, ತಲೆಯಿಂದ ಪ್ರಾಣವಾಯುವು ಹೊರಡುವ ಒಂದು ತೂತು. ब्रह्मणे ब्रह्मप्राप्तये रन्ध्रम्। ಈ ರಂಧ್ರ ದಿಂದ ಪ್ರಾಣವಾಯುವು ನಿರ್ಗಮಿಸಿದರೆ ಬ್ರಹ್ಮಲೋಕ ಪ್ರಾಪ್ತಿಯಾಗುವುದು. ಇದರಿಂದ ಬ್ರಹ್ಮಸಾಕ್ಷಾತ್ಕಾರ ವಾಗುವುದು. ಗುರುಮುಖದಿಂದ ಸುಷುಮ್ನಾ (ಮಧ್ಯ ನಾಡೀ) ಭೇದನ ಪ್ರಕಾರವನ್ನೂ ತಿಳಿದು ಪ್ರಾಣವಾಯುವು ಮಧ್ಯನಾಡಿಯಲ್ಲಿ ಸಂಚರಿಸುವಂತೆ ಮಾಡಿ ಬ್ರಹ್ಮರಂಧ್ರ ದಲ್ಲಿ ತಡೆದು ನಿಲ್ಲಿಸಬೇಕು. ಹೀಗೆ ನಿರೋಧಿಸಲ್ಪಟ್ಟ ಪ್ರಾಣವಾಯುವು ಅಲ್ಲಿ ಲಯಹೊಂದಿದ ನಂತರ ಮನಸ್ಸೂ ಲಯಹೊಂದುವುದು. ಪ್ರಾಣವಾಯು ಮತ್ತು ಮನಸ್ಸು ಲಯಹೊಂದಿದ ಮೇಲೆ ಅಬಾಧಿತವಾದ ಬ್ರಹ್ಮಸಾಕ್ಷಾತ್ಕಾರವಾಗುವುದು. ಆಗ ಪುರುಷನು ಜೀವನ್ಮುಕ್ತನಾಗುವನು. "ज्ञात्वा सुषुम्णासद्भेदं कृत्वा वायुं च मध्यगम्। स्थित्वा सदैव सुस्थाने ब्रह्मरन्ध्रे निरोधयेत्" ಹಠ೦ ೪-೧೬। "सुषुम्णा मध्यनाडी तस्याः सद्भेदं शोभनं भेदनप्रकारं ज्ञात्वा गुरुमुखाद्विदित्वा वायुं प्राणं मध्यगं मध्यनाडीसंचारिणं कृत्वा ब्रह्मरन्ध्रे मूर्धवकाशे निरोधयेत् नितरां रुद्धं कुर्यात्। प्राणस्य ब्रह्मरन्ध्रे निरोधो लयः। प्राणलये जाते मनोऽपि लीयते। प्राणमनसोर्लये सति भावनाविशेषरूपसमाधिसहकृतेनान्तःकरणेन अबाधितात्मसाक्षात्कारो भवति। तदा जीवन्नेव पुरुषो मुक्तो भवति" इति टीका।

**ब्रह्मराक्षस ಬ್ರಹ್ಮರಾಕ್ಷಸ** (ಪ್ರಂ) ಹಿಂಸಾಕೃತ್ಯಗಳಿಂದ ರಾಕ್ಷಸತ್ವವನ್ನು ಹೊಂದಿದ ಬ್ರಾಹ್ಮಣ, ಬ್ರಾಹ್ಮಣನಾಗಿ ಹುಟ್ಟಿ ಪರಸ್ತ್ರೀಹರಣ ಪರಧನಾಪಹರಣ ಇತ್ಯಾದಿಗಳಿಂದ ರಾಕ್ಷಸ ಜನ್ಮ ಪಡೆದ ಆತ್ಮ. (ಭೂತ, ಪಿಶಾಚ). "परस्य योषितं हृत्वा परस्वमपहृत्य च। अरण्ये निर्जले देशे भवति ब्रह्मराक्षसः" ಯಾಜ್ಞ೦ ೩-೨೧೨। "संयोगं पतितैर्गत्वा परस्यैव च योषितम्। अपहृत्य च विप्रस्वं भवति ब्रह्मराक्षसः" ಮನು೦ ೧೨-೬೦।

**ब्रह्मरात ಬ್ರಹ್ಮರಾತ** (ಪ್ರಂ) ಶುಕಮಹರ್ಷಿ.

**ब्रह्मरात्रि ಬ್ರಹ್ಮರಾತ್ರಿ** (ಸ್ತ್ರೀ೦) ಚತುರ್ಮುಖ ಬ್ರಹ್ಮನ ರಾತ್ರಿ. ದೇವತೆಗಳ 1000 ಚತುರ್ಯುಗಗಳ (1,20,00,000 ದೇವವರ್ಷಗಳು ಅಥವಾ 4,32,00,00,000 ಮಾನುಷ ವರ್ಷಗಳು) ಕಾಲ. ಬ್ರಹ್ಮನ ಈ ರಾತ್ರಿಕಾಲದಲ್ಲಿ ತ್ರೈಲೋಕ್ಯದೊಳಗಿನ ಚರಾ ಚರಾತ್ಮಕ (ಸ್ಥಾವರ ಜಂಗಮ) ಸಕಲ ವಸ್ತುಗಳೂ ಬ್ರಹ್ಮನ ದೇಹಾವಸ್ಥಾರೂಪವಾದ ಅವ್ಯಕ್ತದಲ್ಲಿ ಲಯಹೊಂದು ವುವು. ಇದು ನೈಮಿತ್ತಿಕ ಪ್ರಲಯ. "अव्यक्ताद्व्यक्तयः सर्वाः प्रभवन्त्यहरागमे। रात्र्यागमे प्रलीयन्ते तत्रैवाव्यक्तसंज्ञके" ಗೀತಾ ೮-೧೮। [ವಿವರಕ್ಕೆ "ब्रह्मदिन" ಪದದಲ್ಲಿ ನೋಡಿ.] "दैविकानां युगानान्तु सहस्रं परिसंख्यया। ब्राह्ममेकमहर्ज्ञेयं तावती रात्रिरेव च" ಮನು೦ ೧-೭೨। "ब्राह्मो नैमित्तिको नाम तस्यान्ते प्रतिसंचरः। तदा हि दह्यते सर्वं त्रैलोक्यं भूर्भुवादिकम्" ವಿಷ್ಣುಪು೦ ೧-೩-೨೨। ನೈಮಿತ್ತಿಕ ಪ್ರಳಯದಲ್ಲಿ ರುದ್ರರೂಪಿಯಾದ ವಿಷ್ಣುವು ಮೂರು ಲೋಕಗಳನ್ನು ದಹಿಸಿ ತನ್ನ ನಿಶ್ವಾಸ

ದಿಂದ ಮೇಘಗಳನ್ನು ಸೃಷ್ಟಿಸುವನು. ಈ ಮೇಘಗಳು ನೂರು ವರ್ಷಗಳ ಕಾಲ ಸತತವಾಗಿ ಭಯಂಕರವಾದ ಸಿಡಿಲುಗುಡುಗುಗಳೊಡನೆ ಮಳೆಯನ್ನು ಸುರಿಸಿ ಪ್ರಳಯಾಗ್ನಿಯನ್ನು ಶಾಂತಗೊಳಿಸುವುವು. ಮತ್ತೆ ಪರಮಾತ್ಮನ ನಿಶ್ವಾಸದಿಂದ ಹೊರಟ ವಾಯುವು ಆ ಮೇಘಗಳನ್ನು ಚೆದುರಿಸಿದನಂತರ ಆ ವಾಯುವನ್ನು ಪಾನಮಾಡಿ ವಿಷ್ಣುವು ಏಕಾಕಾರವಾದ ಆ ಮಹಾಸಮುದ್ರದಲ್ಲಿ ಶೇಷಶಾಯಿಯಾಗಿ ಜನಲೋಕ ನಿವಾಸಿಗಳಾದ ಸನಕಾದಿ ಮಹರ್ಷಿಗಳಿಂದ ಸ್ತುತಿಸಲ್ಪಡುತ್ತ ಯೋಗನಿದ್ರೆಯಲ್ಲಿ ಮಗ್ನನಾಗಿರುವನು. "एकार्णवे तु त्रैलोक्ये ब्रह्मा नारायणात्मकः। भोगिशय्यां गतः शेते त्रैलोक्यग्रासबृंहितः" विष्णुपु० १-३-२४।

**ब्रह्मरीति ಬ್ರಹ್ಮರೀತಿ** (स्त्री०) ಹಿತ್ತಾಳೆ.

**ब्रह्मरेखा ಬ್ರಹ್ಮರೇಖಾ** (स्त्री०) ಹಣೆಯ ಬರಹ, ಬ್ರಹ್ಮನು ಮನುಷ್ಯನ ಕರ್ಮಾನುಗುಣವಾದ ಫಲಗಳನ್ನು ಸೂಚಿಸಲು ಹಣೆಯಲ್ಲಿ ಬರೆಯುವ ರೇಖೆ, ಅದೃಷ್ಟವನ್ನು ಸೂಚಿಸುವ ರೇಖೆ, ಲಲಾಟ ರೇಖೆ.

**ब्रह्मर्षि ಬ್ರಹ್ಮರ್ಷಿ** (पुं०) 1. ಬ್ರಹ್ಮನ ಸ್ವರೂಪವನ್ನು ಅರಿತಿರುವ ಋಷಿ, ಬ್ರಹ್ಮಜ್ಞಾನಿಯಾದ ಋಷಿ. 2. ಸಂಪೂರ್ಣ ವೇದಜ್ಞಾನವನ್ನು ಪಡೆದ ಋಷಿ. ब्रह्म परब्रह्म वेदं वा ऋषति वेत्ति — ऋषी (गतौ) "इन्" (उ० ४-१२०)। ವಸಿಷ್ಠ ಮೊದಲಾದ ಋಷಿಗಳು. "ब्रह्मर्षयो वसिष्ठाद्याः सुश्रुताद्याः श्रुतर्षयः"। "ब्रह्मर्षिशब्दमतुलं स्वार्जितैः कर्मभिः शुभैः। यदि मे भगवन्नाह ततोऽहं विजितेन्द्रियः" भा०।

**ब्रह्मर्षिदेश ಬ್ರಹ್ಮರ್ಷಿದೇಶ** (पुं०) ಕುರುಕ್ಷೇತ್ರ ಮೊದಲಾದ ನಾಲ್ಕು ದೇಶಗಳು, ಬ್ರಹ್ಮರ್ಷಿಗಳ ವಾಸಕ್ಕೆ ಯೋಗ್ಯವಾದ ದೇಶಗಳು. ब्रह्मर्षीणां देशः वासयोग्यो देशः। ಕುರುಕ್ಷೇತ್ರ, ಮತ್ಸ್ಯದೇಶ, ಪಂಚಾಲದೇಶ ಮತ್ತು ಶೂರಸೇನ ದೇಶ ಇವು ಬ್ರಹ್ಮರ್ಷಿದೇಶಗಳು. "कुरुक्षेत्रं च मत्स्याश्च पञ्चालाः शूरसेनकाः। एष ब्रह्मर्षिदेशो वै ब्रह्मावर्तादनन्तरः" मनु० २-१९।

**ब्रह्मलोक ಬ್ರಹ್ಮಲೋಕ** (पुं०) ಬ್ರಹ್ಮನ ಜಗತ್ತು, ಸತ್ಯಲೋಕ. ब्रह्मणो लोकः।

**ब्रह्मवद्य ಬ್ರಹ್ಮವದ್ಯ** (नं०) ಬ್ರಹ್ಮನ ವಾಕ್ಯ, ವೇದ. ब्रह्मणः वदनम् वाक्यम् — वद (व्यक्तायां वाचि) भावे "यत्" (३-१-१०६)।

**ब्रह्मवर्चस ಬ್ರಹ್ಮವರ್ಚಸ** (नं०) 1. ತಪಸ್ಸು, ವೇದಾಧ್ಯಯನ ಇವುಗಳಿಂದ ಉಂಟಾದ ತೇಜಸ್ಸು. ब्रह्मणा तपसा वेदेन वा वर्चः "अच्" (५-४-७८)। ವೇದೋಕ್ತವಾದ ಆಚಾರಪರಿಪಾಲನವು ವೃತ್ತ, ಗುರುಮುಖದಿಂದ ವೇದಾಧ್ಯಯನವು ಅಧ್ಯಯನ. ಈ ವೃತ್ತ ಮತ್ತು ಅಧ್ಯಯನಗಳಿಂದ ಉಂಟಾಗುವ ತೇಜಸ್ಸಿನ ಅಭಿವೃದ್ಧಿಯು ಬ್ರಹ್ಮವರ್ಚಸ. "पुरुषायुषजीविन्यो निरातङ्का निरीतयः। यन्मदीयाः प्रजास्तस्य हेतुस्त्वद्ब्रह्मवर्चसम्" रघु० १-६३। 2. ಅಂತಃಸತ್ತ್ವ. "भवतु, दृष्टं ब्रह्मवर्चसम्" शाकु० ६।

**ब्रह्मवर्चस्विन् ಬ್ರಹ್ಮವರ್ಚಸ್ವಿನ್** (पुं०) ಬ್ರಹ್ಮವರ್ಚಸ್ಸುಳ್ಳವನು, ತಪಸ್ಸು ಮತ್ತು ವೇದಾಧ್ಯಯನಗಳಿಂದ ತೇಜಸ್ವಿಯಾಗಿರುವವನು. ब्रह्मवर्चस् "विनिः" (५-२-१२१)। "ब्रह्मवर्चस्विनः पुत्रा जायन्ते शिष्टसंमताः" मनु० ३-३९।

**ब्रह्मवर्धन ಬ್ರಹ್ಮವರ್ಧನ** (नं०) ತಾಮ್ರಲೋಹ.

**ब्रह्मवाद ಬ್ರಹ್ಮವಾದ** (पुं०) 1. ವೇದಪಠನ, ವೇದಪಾರಾಯಣ. ब्रह्मणो वेदस्य वादः वदनम् पठनमित्यर्थः। "बृहस्पतिर्ब्रह्मवादे आत्मतत्त्वे स्वयं हरिः" भाग० ४-२२-६२। 2. ಬ್ರಹ್ಮನಿರ್ಣಾಯಕ ವಾಕ್ಯ, ಬ್ರಹ್ಮತತ್ತ್ವವನ್ನು ನಿರ್ಣಯಿಸುವ ವಾಕ್ಯ. (वि०) 3. ಬ್ರಹ್ಮ (ವೇದ) ಪಠನ ಮಾಡುವವನು, ವೇದಪಾರಾಯಣ ಮಾಡುವವನು. ब्रह्मवादो वेदपाठोऽस्यास्ति "अच्"।

**ब्रह्मवादिन् ಬ್ರಹ್ಮವಾದಿನ್** (पुं०) 1. ವೇದಪಠನ ಮಾಡುವವನು. ब्रह्मवादः वेदवादोऽस्यास्ति "इनिः" (५-२-११५)। "तस्मादोमित्युदाहृत्य यज्ञदानतपःक्रियाः। प्रवर्तन्ते विधानोक्ताः सततं ब्रह्मवादिनाम्" गीता १७-२४। 2. ವೇದಾಂತಪ್ರತಿಪಾದ್ಯವಾದ ಪರಬ್ರಹ್ಮದ ವಿಚಾರದಲ್ಲಿ ವಾದಮಾಡುವವನು. "यद्ब्रह्मवादिभिरुपासितवन्द्यपादे" मं० वी० ४–२१।

**ब्रह्मवादिनी ಬ್ರಹ್ಮವಾದಿನೀ** (स्त्री०) ಗಾಯತ್ರಿ.

**ब्रह्मविद् ಬ್ರಹ್ಮವಿದ್** (पुं०) 1. ವಿಷ್ಣು. ब्रह्म अनन्तशाखं वेदं वेत्ति जानाति—विद (ज्ञाने) "क्विप्" (३-२-६१)। "यो वेदानन्ततो वेत्ति स ब्रह्मविद् उदीरितः" इति निरुक्तिः। "ब्रह्मविद् ब्राह्मणो ब्रह्मी" वि० स०। 2. ಬ್ರಹ್ಮಸ್ವರೂಪವನ್ನು ತಿಳಿದವನು, ಬ್ರಹ್ಮಜ್ಞಾನವನ್ನು ಪಡೆದವನು, ब्रह्म परमात्मानं वेत्ति। ಬ್ರಹ್ಮಜ್ಞಾನಿಯಾದವನು ಪರಮಪದವನ್ನು ಹೊಂದುತ್ತಾನೆ. "ब्रह्मविदाप्नोति परम्" तै० उप०। 3. ವೇದಾಧ್ಯಯನ ಮಾಡಿದವನು, ಸಂಪೂರ್ಣ ವೇದಾರ್ಥವನ್ನು ತಿಳಿದವನು.

**ब्रह्मविद्या ಬ್ರಹ್ಮವಿದ್ಯಾ** (ಸ್ತ್ರೀ०) 1. ಬ್ರಹ್ಮಜ್ಞಾನ, ಬ್ರಹ್ಮ ಸ್ವರೂಪವನ್ನು ತಿಳಿಯುವಿಕೆ. ब्रह्मणो विद्या। "न्यायागतधनः शान्तो ब्रह्मविद्यापरायणः। स्वधर्मपालको नित्यं सोऽमृतत्वाय कल्पते" कूर्मपु०। 2. ಬ್ರಹ್ಮ ಜ್ಞಾನವನ್ನು ಉಂಟುಮಾಡುವ ಉಪನಿಷತ್ತು.

**ब्रह्मविवर्धन ಬ್ರಹ್ಮವಿವರ್ಧನ** (ಪುं०) ವಿಷ್ಣು. ब्रह्मणः तपसो विवर्धनः। "तपो ब्रह्मेति" श्रुतिः। "तपोविवर्धनान्नित्यं स्मृतो ब्रह्मविवर्धनः" इति निरुक्तिः। "ब्रह्म ब्रह्मविवर्धनः" वि० स०।

**ब्रह्मवृक्ष ಬ್ರಹ್ಮವೃಕ್ಷ** (ಪುं०) 1. ಪಲಾಶವೃಕ್ಷ, ಮುತ್ತುಗದ ಮರ. 2. ಉದುಂಬರ ವೃಕ್ಷ, ಅತ್ತಿಮರ.

**ब्रह्मवृत्ति ಬ್ರಹ್ಮವೃತ್ತಿ** (ಸ್ತ್ರೀ०) ಬ್ರಾಹ್ಮಣನ ಜೀವನೋಪಾಯ. ब्रह्मणो ब्राह्मणस्य वृत्तिः जीवनोपायः। "स्वदत्तां परदत्तां वा ब्रह्मवृत्तिं हरेत्तु यः। षष्टिवर्षसहस्राणि विष्ठायां जायते कृमिः" भाग०।

**ब्रह्मवेद ಬ್ರಹ್ಮವೇದ** (ಪುं०) 1. ಬ್ರಹ್ಮಜ್ಞಾನ. 2. ಬ್ರಹ್ಮ ಸ್ವರೂಪವನ್ನು ತಿಳಿಸುವ ವೇದಾಂತ. ब्रह्मणो वेदः ज्ञानम्।

**ब्रह्मवेदिन् ಬ್ರಹ್ಮವೇದಿನ್** (ಪುं०) ಬ್ರಹ್ಮಜ್ಞಾನವುಳ್ಳವನು, ಬ್ರಹ್ಮಸ್ವರೂಪವನ್ನು ಅರಿತವನು, ವೇದಾಂತಿ. ब्रह्म वेत्ति—विद (ज्ञाने) "णिनिः" (३-१-१३४)।

**ब्रह्मवैवर्त ಬ್ರಹ್ಮವೈವರ್ತ** (ನ०) ಬ್ರಹ್ಮವೈವರ್ತಪುರಾಣ, 18,000 ಗ್ರಂಥವುಳ್ಳ ಒಂದು ಮಹಾಪುರಾಣ. विवृतिरेव वैवर्तम्। ब्रह्मणो वैवर्तम् विवृतिः यत्र। ಬ್ರಹ್ಮ ಸ್ವರೂಪವು ಇದರಲ್ಲಿ ಸಂಪೂರ್ಣವಾಗಿ ವಿವರಿಸಲ್ಪಟ್ಟಿರುವುದರಿಂದ ಇದಕ್ಕೆ ಈ ಹೆಸರು. "विवृतं ब्रह्म कार्त्स्न्येन कृष्णेन यत्र शौनक। ब्रह्मवैवर्तकं तेन प्रवदन्ति पुराविदः"।

**ब्रह्मशासन ಬ್ರಹ್ಮಶಾಸನ** (ನ०) 1. ಬ್ರಹ್ಮನ ಆಜ್ಞೆ, ಮನುಷ್ಯನು ಕರ್ತವ್ಯಗಳನ್ನು ನಡೆಸುವ ವಿಷಯದಲ್ಲಿ ಪರಮಾತ್ಮನು ಮಾಡಿರುವ ಕಟ್ಟಪ್ಪಣೆ. [ಸೂರ್ಯನು ಜಗತ್ತನ್ನು ಪ್ರಕಾಶಗೊಳಿಸಲೂ ಭೂಮಿಯು ಎಲ್ಲವನ್ನೂ ವಹಿಸಲೂ ಪರಮಾತ್ಮನ ಆಜ್ಞೆಯಾಗಿರುವಂತೆ ಮತ್ತು ಆ ಆಜ್ಞೆಯನ್ನು ಅವರು ಪಾಲಿಸುವಂತೆ ಮಾನವರು ವರ್ಣಾಶ್ರಮ ಧರ್ಮಗಳನ್ನು ಆಚರಿಸಲೂ ಪರಮಾತ್ಮನ ಆಜ್ಞೆಯಾಗಿರುವುದು. "श्रुतिस्मृती ममैवाज्ञे यस्ते उल्लङ्घ्य वर्तते। आज्ञाच्छेदी मम द्वेषी नरकं प्रतिपद्यते"। 2. ವೇದದಲ್ಲಿ ಬ್ರಾಹ್ಮಣರಿಗೆ ಹೇಳಿರುವ ಉಪದೇಶ. 3. ಬ್ರಹ್ಮದ ವಿಚಾರಮಾಡುವ ಗೋಷ್ಠಿ.

**ब्रह्मशिरस् ಬ್ರಹ್ಮಶಿರಸ್** (ನ०) ದ್ರೋಣಾಚಾರ್ಯರು ಅಶ್ವತ್ಥಾಮ ಮತ್ತು ಅರ್ಜುನರಿಗೆ ಉಪದೇಶಿಸಿದ ಒಂದು ಅಸ್ತ್ರ.

**ब्रह्मसत्र ಬ್ರಹ್ಮಸತ್ರ** (ನ०) ವೇದಪಾಠ, ವೇದಾಧ್ಯಯನ, ಬ್ರಹ್ಮಯಜ್ಞ. "नैत्यके नास्त्यनध्यायो ब्रह्मसत्रं हि तत् स्मृतम्" मनु० २-१०६।

**ब्रह्मसंभव ಬ್ರಹ್ಮಸಂಭವ** (ಪುं०) 1. ನಾರದಮಹರ್ಷಿ. 2. ಮರೀಚಿ. 3. ಅತ್ರಿ. 4. ಅಂಗಿರಸ್ಸು. 5. ಪುಲಸ್ತ್ಯ. 6. ಪುಲಹ. 7. ಕ್ರತು. 8. ಪ್ರಚೇತಸ್ಸು. 9. ವಸಿಷ್ಠ ಮತ್ತು 10. ಭೃಗು. ಈ ದಶ ಪ್ರಜಾಪತಿಗಳು ಬ್ರಹ್ಮನಿಂದ ಸೃಷ್ಟಿಸಲ್ಪಟ್ಟವರು.

**ब्रह्मसायुज्य ಬ್ರಹ್ಮಸಾಯುಜ್ಯ** (ನ०) 1. ಬ್ರಹ್ಮನಿಗೆ ಸಮಾನವಾದ ಗುಣಗಳನ್ನು ಹೊಂದಿರುವಿಕೆ, ಮೋಕ್ಷ. समानेन गुणेन युक् सयुक्, ब्रह्मणा समानगुणः तस्य भावः सायुज्यम्। "एष आत्मा अपहतपाप्मा विरजो विमृत्युर्विशोको विजिघत्सोऽपिपासः सत्यकामः सत्यसंकल्पः" ಎಂಬ ವಾಕ್ಯದಲ್ಲಿ ಉಕ್ತವಾಗಿರುವ ಎಂಟು ಗುಣಗಳು ಪರಮಾತ್ಮನಿಗೂ ಜೀವಾತ್ಮನಿಗೂ ಸಮಾನವಾದ ಗುಣಗಳು. ಸಂಸಾರಾವಸ್ಥೆಯಲ್ಲಿ ಜೀವನಿಗೆ ಈ ಗುಣಗಳು ಕರ್ಮವಶದಿಂದ ತಿರೋಹಿತವಾಗಿದ್ದು ಆತ್ಯಂತಿಕಕರ್ಮನಾಶವಾದನಂತರ ಮತ್ತೆ ಆವಿರ್ಭಾವ ಹೊಂದುವುವು. युज्यते प्राप्यते इति युक् गुणाष्टकं समानं युक् ययोः तौ सयुजौ, सयुजोर्भावः सायुज्यम् ಎಂಬ ವ್ಯುತ್ಪತ್ತಿಯಿಂದ ಸಾಯುಜ್ಯ ಶಬ್ದವು ಜೀವಾತ್ಮ ಪರಮಾತ್ಮರುಗಳಿಗೆ ಸಮಾನ ಗುಣತ್ವವನ್ನು ತೋರಿಸುವುದು. ಪರಮಾತ್ಮನಿಗೆ ಅಸಾಧಾರಣವಾದ ಜಗದ್ವ್ಯಾಪಾರಾದಿ ಧರ್ಮಕ್ಕಿಂತಲೂ ಅತಿರಿಕ್ತವಾದ ಜ್ಞಾನಾನಂದ ಸತ್ಯಸಂಕಲ್ಪತ್ವಾದಿ ಗುಣಗಳ ಸಾಮ್ಯವು ಸಾಯುಜ್ಯಪದದಿಂದ ಉಕ್ತವಾಗಿದೆ. 2. ಸಮಾನ ಭೋಗ್ಯತ್ವ. 3. ಬ್ರಹ್ಮಕ್ಕೆ ಸಮಾನವಾದ ಗುಣಗಳ ಸಂಬಂಧ. 4. ಬ್ರಹ್ಮಭಾವ, ಬ್ರಹ್ಮದಲ್ಲಿ ಐಕ್ಯ ಹೊಂದುವುದು, ಬ್ರಹ್ಮದಲ್ಲಿ ಲಯಹೊಂದುವುದು. सयुजो भावः "ष्यञ्" (५-१-१२४)। ब्रह्मणः सायुज्यम्। ಬ್ರಹ್ಮದಲ್ಲಿ ಲಯಹೊಂದುವುದು ಮೋಕ್ಷ.

**ब्रह्मसावर्णि ಬ್ರಹ್ಮಸಾವರ್ಣಿ** (ಪುं०) ಹದಿನಾಲ್ಕು ಮಂದಿ ಮನುಗಳಲ್ಲಿ ಒಬ್ಬ, ಹತ್ತನೆಯ ಮನ್ವಂತರದ ಅಧಿಪತಿ. ಈ ಮನ್ವಂತರದಲ್ಲಿ ಶಂಭುವೆಂಬ ಇಂದ್ರನು ಸ್ವರ್ಗಾಧಿಪತ್ಯ ನಡೆಸುವನು.

**ब्रह्मसुत ಬ್ರಹ್ಮಸುತ, —सूनु —ಸೂನು** (ಪುं०) ಮರೀಚಿ ಅತ್ರಿ ವಸಿಷ್ಠ ನಾರದ ಮೊದಲಾದ ದಶ ಪ್ರಜಾಪತಿಗಳು.

**ब्रह्मसू ಬ್ರಹ್ಮಸೂ** (ಪುಂ) 1. ಕಾಮದೇವ, ಮನ್ಮಥ. ब्रह्म तपः सुवति प्रेरयति चालयतीति यावत् — षू (प्रेरणे) "क्विप्" (३-२-७६)। "ब्रह्मसूर्विश्वकेतुः स्यात्" अम०। 2. ಅನಿರುದ್ಧ. ಅನಿರುದ್ಧಮೂರ್ತಿಯಾದ ಪರಮಾತ್ಮನಿಂದ ಬ್ರಹ್ಮನು ಜನಿಸಿದನು. "अनिरुद्धात्ततो ब्रह्मा तन्नाभिकमलोद्भवः" ब्रह्मपु०।

**ब्रह्मसूत्र ಬ್ರಹ್ಮಸೂತ್ರ** (ನಂ) 1. ಯಜ್ಞಸೂತ್ರ, ಯಜ್ಞೋಪವೀತ. ब्रह्मणि वेदाध्ययनसमये उपनयनकाले धृतं सूत्रम्। "तस्योपनीयमानस्य सावित्रीं सविताब्रवीत्। बृहस्पतिर्ब्रह्मसूत्रं मेखलां कश्यपोऽददात्" भाग० ८-१८-१४। 2. ವ್ಯಾಸಮಹರ್ಷಿಯಿಂದ ರಚಿತವಾದ ವೇದಾಂತಸೂತ್ರ, ಬ್ರಹ್ಮಸ್ವರೂಪವನ್ನು ಪ್ರತಿಪಾದಿಸುವ ಮತ್ತು ನಿರ್ಣಯಿಸುವ ಸೂತ್ರ, ಶಾರೀರಕಸೂತ್ರ. ब्रह्मप्रतिपादकं सूत्रम्। "ऋषिभिर्बहुधा गीतं छन्दोभिर्विविधैः पृथक्। ब्रह्मसूत्रपदैश्चापि हेतुमद्भिर्विनिश्चितैः" गीता १३-४। ಬ್ರಹ್ಮಸೂತ್ರಗಳಿಗೆ ಎಲ್ಲಾ ಆಚಾರ್ಯರುಗಳೂ ತಮ್ಮ ತಮ್ಮ ಮತಾನುಸಾರ ಭಾಷ್ಯಗಳನ್ನು ಬರೆದಿರುತ್ತಾರೆ.

**ब्रह्मसूनु ಬ್ರಹ್ಮಸೂನು** (ಪುಂ) "ब्रह्मसुत" ಪದವನ್ನು ನೋಡಿ.

**ब्रह्मस्तम्ब ಬ್ರಹ್ಮಸ್ತಂಬ** (ಪುಂ) ಬ್ರಹ್ಮಾಂಡ, ಪ್ರಪಂಚ, ಜಗತ್ತು. "ब्रह्मस्तम्बं निकासद्रुममिव रभसाद्विप्रकर्तुं क्षमा ये" म० वी० ५-३२।

**ब्रह्मस्तेय ಬ್ರಹ್ಮಸ್ತೇಯ** (ನಂ) ನ್ಯಾಯವಲ್ಲದ ರೀತಿಯಲ್ಲಿ ಜ್ಞಾನಸಂಪಾದನೆ ಮಾಡುವುದು, ಒಬ್ಬನು ವೇದಾಧ್ಯಯನ ಮಾಡುತ್ತಿರುವಾಗ ಅವನ ಅನುಮತಿಯಿಲ್ಲದೆ ಕೇಳಿ ತಿಳಿದುಕೊಳ್ಳುವುದು.

**ब्रह्मस्व ಬ್ರಹ್ಮಸ್ವ** (ನಂ) ಬ್ರಾಹ್ಮಣನ ಸ್ವತ್ತು, ಬ್ರಾಹ್ಮಣನ ಸಂಪತ್ತು, ಬ್ರಾಹ್ಮಣನ ಧನ. ब्रह्मणो ब्राह्मणस्य स्वं धनम्। "ब्रह्मस्वं वा गुरुस्वं वा देवस्वं वापि यो हरेत्। स कृतघ्न इति ज्ञेयो महापापी च भारते"।

**ब्रह्महत्या ಬ್ರಹ್ಮಹತ್ಯಾ** (ಸ್ತ್ರೀಂ) ಬ್ರಾಹ್ಮಣನ ವಧೆ, ಬ್ರಾಹ್ಮಣನ ಕೊಲೆ. ब्रह्मणो हत्या हननम्। ಇದು ಪಂಚಮಹಾಪಾತಕಗಳಲ್ಲೊಂದು. "ब्रह्महत्या सुरापानं स्तेयं गुर्वङ्गनागमः। महान्ति पातकान्याहुः संसर्गश्चापि तैः सह" मनु० ११-५४।

**ब्रह्महन् ಬ್ರಹ್ಮಹನ್** (ಪುಂ) ಬ್ರಾಹ್ಮಣನನ್ನು ಕೊಂದವನು. ब्रह्माणं ब्राह्मणं हतवान्।

**ब्रह्माङ्गभू ಬ್ರಹ್ಮಾಂಗಭೂ** (ಪುಂ) 1. ಅಶ್ವ, ಕುದುರೆ. ब्रह्मणः अङ्गात् भवति — भू "क्विप्" (३-२-१७९)। 2. ಸದ್ಯೋಜಾತಾದಿ ಮಂತ್ರಗಳ ಅಂಗಭೂತವಾದ ಹೃದಯಾದಿ ಮಂತ್ರಗಳ ಸ್ಥಾನ. ब्रह्मणां सद्योजातादिमन्त्राणामङ्गानि हृदयादिमन्त्राः तेषां स्थानम्। "स च त्वदेकेषुनिपातसाध्यो ब्रह्माङ्गभूर्ब्रह्मणि योजितात्मा" कुमा० ३-१५। (वि०) 3. ಬ್ರಹ್ಮನ ಅಂಗದಿಂದ ಹುಟ್ಟಿದ.

**ब्रह्माञ्जलि ಬ್ರಹ್ಮಾಂಜಲಿ** (ಪುಂ) 1. ವೇದಾಧ್ಯಯನದ ಪ್ರಾರಂಭದಲ್ಲಿ ಮತ್ತು ಕೊನೆಯಲ್ಲಿ ಆಚಾರ್ಯನಿಗೆ ಕೈಜೋಡಿಸಿ ಮಾಡುವ ನಮಸ್ಕಾರ. ब्रह्मणोऽञ्जलिः। "ब्रह्मारम्भेऽवसाने च पादौ ग्राह्यौ गुरोः सदा। संहत्य हस्तावध्येयं स हि ब्रह्माञ्जलिः स्मृतः" मनु० २-७१। 2. ವೇದಾಧ್ಯಯನದ ಕಾಲದಲ್ಲಿ ಗೌರವದಿಂದ ಮಾಡುವ ನಮಸ್ಕಾರ. "अध्येष्यमाणस्त्वाचान्तो यथाशास्त्रमुदङ्मुखः। ब्रह्माञ्जलिकृतोऽध्याप्यो लघुवासा जितेन्द्रियः" मनु० २-७०। "पाठे ब्रह्माञ्जलिः" अम०।

**ब्रह्माणी ಬ್ರಹ್ಮಾಣೀ** (ಸ್ತ್ರೀಂ) 1. ಬ್ರಹ್ಮನ ಪತ್ನಿ, ಸರಸ್ವತಿ, ಸಾವಿತ್ರಿ, ಗಾಯತ್ರಿ. ब्रह्माणमानयति जीवयति—अन (प्राणने) + णिच् "अण्" (३-२-१)। "ङीप्" (४-१-१५)। ಬ್ರಹ್ಮನು ಧ್ಯಾನಮಾಡುತ್ತಿದ್ದಾಗ ಅವನ ದೇಹವನ್ನು ಭೇದಿಸಿಕೊಂಡು ಅರ್ಧ ಸ್ತ್ರೀರೂಪ ಮತ್ತು ಅರ್ಧ ಪುರುಷರೂಪವುಳ್ಳ ಒಂದು ಆಕೃತಿಯು ಆವಿರ್ಭವಿಸಿತು. ಆ ಸ್ತ್ರೀರೂಪವೇ ಸರಸ್ವತಿ ಸಾವಿತ್ರಿ ಮತ್ತು ಗಾಯತ್ರಿ. "ततः संजपतस्तस्य भित्त्वा देहमकल्मषम्। स्त्रीरूपमर्धमकरोदर्धं पुरुषरूपवत्। शतरूपा च सा ख्याता सावित्री च निगद्यते। सरस्वत्यथ गायत्री ब्रह्माणी च परन्तप" मत्स्यपु०। 2. ದುರ್ಗಾದೇವಿ. "ब्रह्माणी ब्रह्मजननात् ब्रह्माक्षरपरा मता" देवीपु०।

**ब्रह्माण्ड ಬ್ರಹ್ಮಾಂಡ** (ನಂ) ಪ್ರಪಂಚ, ಜಗತ್ತು, ಸೃಷ್ಟಿಕರ್ತನಾದ ಬ್ರಹ್ಮನು ಹುಟ್ಟಿದ ಸ್ವರ್ಣದ ಅಂಡ. (ಸ್ವರ್ಣದಂತೆ ಶುದ್ಧ ಮತ್ತು ಸ್ವಚ್ಛವಾದ ತತ್ತಿ.) ಬ್ರಹ್ಮಾಂಡದಲ್ಲಿ ಚತುರ್ದಶಲೋಕಗಳೂ ಅಡಗಿರುತ್ತವೆ. ಪರಮಾತ್ಮನು ನಾನಾವಿಧವಾದ ಪ್ರಜೆಗಳನ್ನು ಸೃಷ್ಟಿಸಲು ಪ್ರಥಮವಾಗಿ "आपो जायन्ताम् ಎಂದು ಧ್ಯಾನಮಾಡಿದ ಮಾತ್ರದಿಂದಲೇ ಜಲಸೃಷ್ಟಿಯಾಯಿತು. ಅದರಲ್ಲಿ ಶಕ್ತಿರೂಪವಾದ ಬೀಜವನ್ನು ಇಟ್ಟನು. ಆ ಬೀಜವು ಸೂರ್ಯನಂತೆ ಪ್ರಕಾಶಮಾನವಾದ ಒಂದು ಸುವರ್ಣದ ಅಂಡವಾಯಿತು. ಆ ಅಂಡದಲ್ಲಿ ಸಕಲಜಗತ್ತಿಗೂ ಪಿತಾಮಹನಾದ

ಚತುರ್ಮುಖಬ್ರಹ್ಮನ ಆವಿರ್ಭಾವವಾಯಿತು. ಚತುರ್ಮುಖನು ಆದರಲ್ಲಿ (ಬ್ರಹ್ಮಮಾನದ) ಸಂವತ್ಸರ ಕಾಲ ಇದ್ದು ಧ್ಯಾನದಿಂದ ಆ ಅಂಡವನ್ನು ಎರಡು ಭಾಗವಾಗಿ ಮಾಡಿ ಆ ಎರಡು ಶಕಲಗಳಿಂದ ಸ್ವರ್ಗಲೋಕ ಮತ್ತು ಭೂಲೋಕಗಳನ್ನೂ ಮಧ್ಯೆ ಅಂತರಿಕ್ಷವನ್ನೂ ಅಷ್ಟದಿಕ್ಕುಗಳನ್ನೂ ಸಮುದ್ರವನ್ನೂ ಸೃಷ್ಟಿಸಿ ಆನಂತರ ಮಹದಾದಿ ಕ್ರಮದಿಂದ ಜಗತ್ತಿನ ಸೃಷ್ಟಿಕಾರ್ಯವನ್ನು ಮಾಡುತ್ತಾನೆ.

**ब्रह्मात्मभू ಬ್ರಹ್ಮಾತ್ಮಭೂ** (ಪುಂ) ಅಶ್ವ, ಕುದುರೆ. ब्रह्मणः आत्मनः शरीराद्भवति—ब्रह्मात्मन् + भू "क्विप्" (३-२-१७९)।

**ब्रह्माधिगम ಬ್ರಹ್ಮಾಧಿಗಮ** (ಪುಂ) ವೇದಾಧ್ಯಯನ ಮಾಡುವುದು, ಗುರುಗಳಿಂದ ವೇದವನ್ನು ಸ್ವೀಕರಿಸುವುದು (ಹೇಳಿಸಿಕೊಳ್ಳುವುದು). ब्रह्मणः वेदस्य अधिगमः प्राप्तिः।

**ब्रह्मानन्द ಬ್ರಹ್ಮಾನಂದ** (ಪುಂ) 1. ಆನಂದಸ್ವರೂಪವಾದ ಬ್ರಹ್ಮದ ಆನಂದ. ब्रह्मणः आनन्दः। ಸಂಪ್ರದಾಯಬದ್ಧನಾಗಿ ಸ್ವರಾಕ್ಷರಭ್ರಂಶವಿಲ್ಲದೆ ಸಾಂಗ ವೇದಾಧ್ಯಯನ ಸಂಪನ್ನನಾಗಿಯೂ ಆಶುತರಕ್ರಿಯೆಗಳಿಂದ ಕೂಡಿ ಹಿರಿಯರ ಆಶೀರ್ವಾದಕ್ಕೆ ಪಾತ್ರನಾಗಿಯೂ ಶಾರೀರ ಮತ್ತು ಮನೋಬಲಗಳಿಂದ ದೃಢಕಾಯನಾಗಿಯೂ ಇರುವ ಈ ಎಲ್ಲಾ ಆಧ್ಯಾತ್ಮಿಕ ಸಾಧನಸಂಪನ್ನನಾದ ಯುವಕನಿಗೆ ಸಕಲ ಪೃಥ್ವೀಮಂಡಲದಲ್ಲೂ ಸಕಲ ಭೋಗಸಾಧನವಾದ ದೃಷ್ಟಾರ್ಥ ಮತ್ತು ಕರ್ಮಸಾಧನವಾದ ಅದೃಷ್ಟಾರ್ಥಗಳು ತುಂಬಿ ತುಳುಕಾಡುತ್ತಿರುವುದರಿಂದ ಅದರಿಂದ ಲಭಿಸುವ ಆನಂದವು ಮಾನುಷವಾದ ಆನಂದ. "युवा स्यात् साधु युवाध्यायिकः। आशिष्ठो द्रढिष्ठो बलिष्ठः। तस्येयं पृथिवी सर्वा वित्तस्य पूर्णा स्यात्। स एको मानुष आनन्दः" ತೈ० ಉ०। ಈ ರೀತಿ ವಿಷಯೋಪಭೋಗಾಪೇಕ್ಷೆಯಿಲ್ಲದ ಶ್ರೋತ್ರಿಯನ ಆನಂದಕ್ಕೆ ನೂರರಷ್ಟು ಅಧಿಕವಾದ ಆನಂದವು ಮನುಷ್ಯಗಂಧರ್ವರಿಗೆ ಒಂದು ಆನಂದವಾಗುವುದು. ಮನುಷ್ಯಗಂಧರ್ವರ ಆನಂದಕ್ಕೆ ನೂರರಷ್ಟು ಆನಂದವು ದೇವಗಂಧರ್ವರಿಗೆ ಒಂದು ಆನಂದ. (ಮನುಷ್ಯನ ಕರ್ಮ ಮತ್ತು ವಿಶೇಷ ವಿದ್ಯೆಗಳ ಪ್ರಭಾವದಿಂದ ಅಂತರ್ಧಾನಾದಿ ಶಕ್ತಿಯನ್ನು ಸಂಪಾದಿಸಿ ಗಂಧರ್ವತ್ವವನ್ನು ಪಡೆದವರು ಮನುಷ್ಯಗಂಧರ್ವರು, ಅಂತರಿಕ್ಷ ಲೋಕವಾಸಿಗಳಾದ ಗಂಧರ್ವರು ದೇವಗಂಧರ್ವರು.) "ते ये शतं मानुषा आनन्दाः। स एको मनुष्यगन्धर्वाणामानन्दः। श्रोत्रियस्य चाकामहतस्य। ते ये शतं मनुष्यगन्धर्वाणामानन्दाः। स एको देवगन्धर्वाणामानन्दः" ತೈ० ಉ०। ದೇವಗಂಧರ್ವರ ಆನಂದಕ್ಕೆ ನೂರರಷ್ಟು ಆನಂದವು ಪಿತೃಗಳಿಗೆ ಒಂದು ಆನಂದವಾಗುವುದು. ಪಿತೃಗಳ ಆನಂದಕ್ಕೆ ನೂರರಷ್ಟು ಆನಂದವು ಆಜಾನಜದೇವತೆಗಳಿಗೆ ಒಂದು ಆನಂದ. ಆಜಾನಜದೇವತೆಗಳ ಆನಂದಕ್ಕೆ ನೂರ್ಮಡಿಯಷ್ಟು ಆನಂದವು ಕರ್ಮದೇವತೆಗಳಿಗೆ ಒಂದು ಆನಂದ. ಕರ್ಮದೇವತೆಗಳ ಆನಂದಕ್ಕೆ ನೂರ್ಮಡಿಯಷ್ಟು ಆನಂದವು ದೇವತೆಗಳಿಗೆ ಒಂದು ಆನಂದ. ದೇವತೆಗಳ ಆನಂದಕ್ಕೆ ನೂರುಭಾಗ ಅಧಿಕವಾದ ಆನಂದವು ಇಂದ್ರನಿಗೆ ಒಂದು ಆನಂದ. ಇಂದ್ರನ ಆನಂದಕ್ಕೆ ನೂರುಪಾಲು ಅಧಿಕವಾದ ಆನಂದವು ಬೃಹಸ್ಪತಿಗೆ ಒಂದು ಆನಂದ. ಬೃಹಸ್ಪತಿಯ ಆನಂದಕ್ಕೆ ನೂರರಷ್ಟು ಅಧಿಕವಾದ ಆನಂದವು ಪ್ರಜಾಪತಿ (ಚತುರ್ಮುಖ)ಗೆ ಒಂದು ಆನಂದ. ಪ್ರಜಾಪತಿಯ ಆನಂದಕ್ಕೆ ನೂರ್ಮಡಿಯಷ್ಟು ಆನಂದವು ಬ್ರಹ್ಮದ ಒಂದು ಆನಂದ. ಇದೇ ಬ್ರಹ್ಮಾನಂದ.

**ब्रह्मारण्य ಬ್ರಹ್ಮಾರಣ್ಯ** (ನ०) ವೇದಾಭ್ಯಾಸ ಮಾಡುವ ಸ್ಥಳ. ब्रह्मणो वेदस्य अरण्यमिव। "स्याद्गायत्री तु सावित्री ब्रह्मारण्यं तु पाठभूः" त्रिकाण्ड०।

**ब्रह्मारम्भ ಬ್ರಹ್ಮಾರಂಭ** (ಪುಂ) ವೇದಾಧ್ಯಯನದ ಪ್ರಾರಂಭ. ब्रह्मणो वेदस्य आरम्भः। "ब्रह्मारम्भेऽवसाने च पादौ ग्राह्यौ गुरोः सदा" मनु० २-७१।

**ब्रह्मार्पण ಬ್ರಹ್ಮಾರ್ಪಣ** (ನ०) 1. ಮಾಡಿದ ಕರ್ಮಗಳನ್ನು ಪರಮಾತ್ಮನಲ್ಲಿ ಅರ್ಪಿಸುವುದು. ब्रह्मणि अर्पणम् सर्वकर्मणां न्यासः। ಮಾಡಿದ ಕರ್ಮಗಳನ್ನೆಲ್ಲಾ ಪರಮಾತ್ಮನಲ್ಲಿ ಅರ್ಪಿಸುವ ಬಗೆ : ನಾನು ಕರ್ತನಲ್ಲ. ಮಾಡಿದವನು ಮಾಡಿಸಿದವನು ಎಲ್ಲವೂ ಪರಮಾತ್ಮನೇ ಎಂಬ ಭಾವನೆಯಿಂದ ಅವನಲ್ಲಿ ಅರ್ಪಣೆ ಮಾಡಬೇಕು. ಅದು ಬ್ರಹ್ಮಾರ್ಪಣವಾಗುವುದು. "नाहं कर्ता सर्वमेतद्ब्रह्मैव कुरुते तथा। एतद् ब्रह्मार्पणं प्रोक्तं ऋषिभिस्तत्त्वदर्शिभिः"। ಈ ಕರ್ಮಾಚರಣೆಯಿಂದ ಪರಮಾತ್ಮನು ಸಂತುಷ್ಟನಾಗಲಿ ಎಂಬ ಭಾವನೆಯಿಂದ ಕರ್ಮಗಳನ್ನು ಭಗವತ್ಪ್ರೀತ್ಯರ್ಥ ಮಾಡುವುದೂ ಬ್ರಹ್ಮಾರ್ಪಣವಾಗುವುದು. "प्रीणातु भगवानीशः कर्मणानेन शाश्वतः। करोति सततं बुद्ध्या ब्रह्मार्पणमिदं परम्"। ಮಾಡಿದ ಕರ್ಮಗಳ ಫಲವನ್ನು ಪರಮಾತ್ಮನಲ್ಲೇ ಅರ್ಪಿಸುವುದೂ ಬ್ರಹ್ಮಾರ್ಪಣವಾಗುವುದು. "यद्वा फलानां संन्यासं प्रकुर्यात्परमेश्वरे। कर्मणामेतदप्याहुः ब्रह्मार्पणमनुत्तमम्" कूर्मपु०। 2. ಬ್ರಹ್ಮಕ್ಕೆ ಅರ್ಪಿಸಲ್ಪಡುವ ಹವಿಸ್ಸು. ब्रह्म यस्य हविषोऽर्पणं तद्ब्रह्मार्पणम्। 3. ಪರಮಾತ್ಮನ ಕೈಂಕರ್ಯಕ್ಕಾಗಿ ಅವನ ಸನ್ನಿಧಿಯಲ್ಲಿ ಮಾಡುವ ಆತ್ಮಸಮರ್ಪಣ.

**ब्रह्मावर्त** ಬ್ರಹ್ಮಾವರ್ತ (ಪುಂ) ಸರಸ್ವತೀ ಮತ್ತು ದೃಷದ್ವತೀ ನದಿಗಳ ಮಧ್ಯಪ್ರದೇಶ. ब्रह्मणां ब्रह्मनिष्ठब्राह्मणानामावर्त इव। "सरस्वतीदृषद्वत्योर्देवनद्योर्यदन्तरम्। तं देवनिर्मितं देशं ब्रह्मावर्तं प्रचक्षते" मनु० २-१७।

**ब्रह्मासन** ಬ್ರಹ್ಮಾಸನ (ನಂ) 1. ಧ್ಯಾನಸಮಯದಲ್ಲಿ ಹಾಕುವ ಸ್ವಸ್ತಿಕಾಸನ ಪದ್ಮಾಸನ ಮೊದಲಾದ ಆಸನ, ಬ್ರಹ್ಮಸಾಕ್ಷಾತ್ಕಾರಕ್ಕಾಗಿ ಧ್ಯಾನಮಾಡಲು ಯೋಗ್ಯವಾದ ಆಸನ. ब्रह्मप्राप्त्यै आसनम्। ಧ್ಯಾನಾಸನ ಮತ್ತು ಯೋಗಾಸನಗಳೆಂದು ಬ್ರಹ್ಮಾಸನವು ಎರಡು ವಿಧ. ಪರಮಾರ್ಥಚಿಂತನೆಗಾಗಿ ಧ್ಯಾನಾಸನ. ಚಿತ್ತವೃತ್ತಿನಿರೋಧಕ್ಕಾಗಿ ಯೋಗಾಸನ. 2. ಯಾಗದಲ್ಲಿ ಋತ್ವಿಕ್ಕಿಗೆ ಹಾಕುವ ಆಸನ.

**ब्रह्मास्त्र** ಬ್ರಹ್ಮಾಸ್ತ್ರ (ನಂ) ಬ್ರಹ್ಮದೇವತಾಕವಾದ ಅಸ್ತ್ರ. ब्रह्मदेवताकमस्त्रम्।

**ब्रह्मिन्** ಬ್ರಹ್ಮಿನ್ (ಪುಂ) 1. ವಿಷ್ಣು, ಪರಮಾತ್ಮ. ब्रह्म सर्वमेतत् प्रमाणप्रमेयरूपवस्त्वस्यास्ति "इनिः" (५-२-११५)। "मानमेयस्वरूपत्वात् स्वयं ब्रह्मीति कथ्यते" इति निरुक्तिः। "ब्रह्मविद् ब्राह्मणो ब्रह्मी ब्रह्मज्ञो ब्राह्मणप्रियः" वि० स०। 2. ವೇದ ಮತ್ತು ವೇದಾರ್ಥಗಳನ್ನು ತಿಳಿದವನು. ब्रह्म वेदो वेद्यतयास्त्यस्य "इनिः" (५-२-११५)।

**ब्रह्मिष्ठ** ಬ್ರಹ್ಮಿಷ್ಠ (ಪುಂ) 1. ರಘುವಂಶದ ಒಬ್ಬ ದೊರೆ, ಸೂರ್ಯವಂಶದ ಹಿರಣ್ಯನಾಭನ ಮಗನಾದ ಕೌಸಲ್ಯ ರಾಜನ ಮಗ. (ವಿಂ) 2. ವೇದ ಮತ್ತು ವೇದಾರ್ಥಗಳನ್ನು ಚೆನ್ನಾಗಿ ತಿಳಿದವನು. ब्रह्मन् "इष्ठन्" (५-३-५५)। "ब्रह्मिष्ठमाधाय निजेऽधिकारे ब्रह्मिष्ठमेव स्वतनुप्रसूतम्" रघु० १८-२८।

**ब्रह्मिष्ठा** ಬ್ರಹ್ಮಿಷ್ಠಾ (ಸ್ತ್ರೀಂ) ದುರ್ಗಾದೇವಿ.

**ब्रह्मी** ಬ್ರಹ್ಮೀ (ಸ್ತ್ರೀಂ) ಹೊನಗೊನ್ನೆ ಸೊಪ್ಪು.

**ब्राह्म** ಬ್ರಾಹ್ಮ (ಪುಂ) 1. ಬ್ರಾಹ್ಮಮುಹೂರ್ತ, ರಾತ್ರಿಯ ಕೊನೆಯ ಯಾಮದ ಮುಹೂರ್ತ, ಅರುಣೋದಯಕ್ಕೆ ಪೂರ್ವದಲ್ಲಿ ಒಂದು ಮುಹೂರ್ತಕಾಲ. (ಒಂದು ಮುಹೂರ್ತಕ್ಕೆ 48 ನಿಮಿಷಗಳು.) "रात्रेश्च पश्चिमे यामे मुहूर्तो ब्राह्म उच्यते"। ಬ್ರಾಹ್ಮಮುಹೂರ್ತದಲ್ಲಿ ಮನಸ್ಸು ನಿರ್ಮಲವಾಗಿರುವುದರಿಂದ ಹಾಸಿಗೆಯಿಂದ ಎದ್ದು ಧರ್ಮಾರ್ಥಗಳ ವಿಷಯವಾಗಿಯೂ ವೇದಾರ್ಥಗಳ ವಿಷಯವಾಗಿಯೂ ಚಿಂತಿಸಬೇಕು. "ब्राह्मे मुहूर्ते बुध्येत धर्मार्थौ चानुचिन्तयेत्। कायक्लेशांश्च तन्मूलान् वेदतत्त्वार्थमेव च" मनु० ४-९२। 2. ಎಂಟು ವಿಧ ವಿವಾಹಗಳಲ್ಲೊಂದು. (1) ब्राह्मः, (2) दैवः, (3) आर्षः, (4) प्राजापत्यः, (5) आसुरः, (6) गान्धर्वः, (7) राक्षसः, ಮತ್ತು (8) पैशाचः ಎಂದು ವಿವಾಹವು ಎಂಟು ಬಗೆ. ವಸ್ತ್ರಮಾಲ್ಯಾದಿಗಳಿಂದ ಅಲಂಕೃತನಾದ ಗುಣಶಾಲಿಯಾದ ವರನನ್ನು ಪೂಜಿಸಿ ಉತ್ತಮ ವಸ್ತ್ರಾಲಂಕಾರಾದಿಗಳಿಂದ ಭೂಷಿತಳಾದ ಕನ್ಯೆಯನ್ನು ಆವನಿಗೆ ಕೊಟ್ಟು ಶಾಸ್ತ್ರೋಕ್ತವಾಗಿ ನಡೆಸುವ ವಿವಾಹವು ಬ್ರಾಹ್ಮವೆನಿಸುವುದು. "आच्छाद्य चार्चयित्वा च श्रुतिशीलवते स्वयम्। आहूय दानं कन्याया: ब्राह्मो धर्मः प्रकीर्तितः" मनु० ३-२१। 3. ನಾರದಮಹರ್ಷಿ. 4. ಪಾದರಸ. 5. ರಾಜನ ಒಂದು ಧರ್ಮ, ರಾಜನು ತನ್ನ ಶ್ರೇಯಸ್ಸಿಗಾಗಿ ಕೈಗೊಳ್ಳುವ ಕರ್ತವ್ಯಗಳಲ್ಲೊಂದು. ವೇದಾಧ್ಯಯನ ಪೂರ್ತಿಮಾಡಿ ಗುರುಕುಲದಿಂದ ಹಿಂತಿರುಗಿದ ಸ್ನಾತಕನನ್ನು ಪೂಜಿಸಿ ಗೌರವಿಸುವುದು ರಾಜನ ಕರ್ತವ್ಯಗಳಲ್ಲೊಂದು. "आवृत्तानां गुरुकुलात् विप्राणां पूजको भवेत्। नृपाणामक्षयो ह्येष ब्राह्मो धर्मो विधीयते" मनु० ७-८२। (ನಂ) 6. (ಅಂಗೈ) ಅಂಗುಷ್ಠದ ಮೂಲದಲ್ಲಿಟ್ಟುಕೊಂಡು ಆಚಮನ ಮಾಡುವ ತೀರ್ಥ. ब्रह्मा देवता अस्य "अण्" (४-२-२४)। ಈ ತೀರ್ಥದಿಂದ ಆಚಮನವು ವಿಹಿತವಾಗಿರುವುದರಿಂದ ಈ ಹೆಸರು. 7. ಬ್ರಾಹ್ಮಪುರಾಣ, ಅಷ್ಟಾದಶ ಪುರಾಣಗಳಲ್ಲಿ 10,000 ಗ್ರಂಥಗಳುಳ್ಳ ಒಂದು ಮಹಾಪುರಾಣ. 8. ಬ್ರಹ್ಮದೇವತಾಕವಾದ ರೋಹಿಣೀ ನಕ್ಷತ್ರ. 9. ಬ್ರಹ್ಮದೇವತಾಕವಾದ ಅಸ್ತ್ರ (ಬ್ರಹ್ಮಾಸ್ತ್ರ.) "अमोघं सन्दधे चास्मै धनुष्येकधनुर्धरः। ब्राह्ममस्त्रं प्रियाशोकशल्यनिष्कर्षणौषधम्" रघु० १२-९७। (ವಿಂ) 10. ಪರಬ್ರಹ್ಮ ಸಂಬಂಧವಾದ. 11. ಚತುರ್ಮುಖ ಬ್ರಹ್ಮನ ಸಂಬಂಧವಾದ. ब्रह्मण: इदम् "अण्" (४-३-१२०)। "ब्राह्मं सरः कारणमाप्तवाचो बुद्धेरिवाव्यक्तमुदाहरन्ति" रघु० १३-६०। 12. ಬ್ರಾಹ್ಮಣನ ಸಂಬಂಧವಾದ. 13. ವೇದ ಸಂಬಂಧವಾದ. (ಸ್ತ್ರೀಂ) **ब्राह्मी** ಬ್ರಾಹ್ಮೀ. 14. ಭಾಷೆ, ವಾಕ್ಯ, ಮಾತು. 15. ವಾಗ್ದೇವಿ, ಸರಸ್ವತೀ ದೇವಿ. 16. ಬ್ರಹ್ಮಶಕ್ತಿ. 17. ಹೊನಗೊನ್ನೆ ಸೊಪ್ಪು. 18. ಕೀರೆಸೊಪ್ಪು.

**ब्राह्मण** ಬ್ರಾಹ್ಮಣ (ಪುಂ) 1. ನಾಲ್ಕು ವರ್ಣಗಳಲ್ಲಿ ಮೊದಲನೆಯ ವರ್ಣದವನು. ब्रह्मणोऽपत्यम् "अण्" (४-१-९२)। "ब्राह्मणातिक्रमत्यागो भवतामेव भूतये। जामदग्न्यश्च वो मित्रमन्यथा दुर्मनायते" म० वी० २-१०।

2. ವೇದಾಧ್ಯಯನ ಮಾಡಿದವನು. ब्रह्माधीते "अण्" (४-२-५९)। 3. ಪರಬ್ರಹ್ಮದ ಸ್ವರೂಪವನ್ನು ಅರಿತವನು, ಬ್ರಹ್ಮಸ್ವರೂಪವನ್ನು ಚೆನ್ನಾಗಿ ತಿಳಿದವನು. ब्रह्म जानाति "अण्" (४-२-९२)। (ನಂ) 4. ವೇದದಲ್ಲಿ ಬ್ರಾಹ್ಮಣವೆಂಬ ಒಂದು ಭಾಗ. ಸಂಹಿತೆಗಳು ಪ್ರಾಯಶಃ ಛಂದೋಬದ್ಧವಾಗಿದ್ದರೆ ಬ್ರಾಹ್ಮಣಗಳು ಗದ್ಯರೂಪದಲ್ಲಿ ಇವೆ. ಸಂಹಿತೆಗಳಲ್ಲಿ ಸ್ತುತಿ ಇಹಪರಗಳ ಫಲಗಳಿಗಾಗಿ ಮಾಡುವ ಪ್ರಾರ್ಥನೆಗಳು ನಿಂದೆ ಮತ್ತು ಪ್ರಶಂಸೆಗಳು ರೋಗನಿವಾರಣ ಸಂಗ್ರಾಮವಿಧಾನ ವಿಜಯಸಾಧನೆ ಮುಂತಾದುವುಗಳನ್ನು ಪ್ರಾರ್ಥಿಸುವ ಸೂಕ್ತಗಳೂ ದರ್ಶಪೌರ್ಣಮಾಸಾದಿ ಇಷ್ಟಿಗಳೂ ಮತ್ತು ಸೋಮಯಾಗ ಇವುಗಳ ಮಂತ್ರಗಳೂ ಇವೆ. ಬ್ರಾಹ್ಮಣಗಳಲ್ಲಿ ಯಜ್ಞವನ್ನು ಮಾಡಬೇಕಾದ ವಿಧಾನ ಆದಕ್ಕೆ ಯೋಗ್ಯವಾದ ಕಾಲ ಅದಕ್ಕೆ ಬೇಕಾದ ಸಾಧನ ಸಂಪತ್ತುಗಳು ಯಜ್ಞವನ್ನು ಮಾಡಲು ಅಧಿಕಾರಿ ಮಂತ್ರಗಳನ್ನು ವಿನಿಯೋಗಿಸುವ ಪ್ರಕರಣ ಮತ್ತು ರೀತಿ ಇವನ್ನು ವಿವೇಚಿಸಿ ಹೇಳುವುದರಿಂದ ಬ್ರಾಹ್ಮಣಗಳು "ವಿಧಿ" ರೂಪದಲ್ಲಿವೆಯೆಂದು ಹೇಳಬಹುದು.

**ಋಗ್ವೇದ ಬ್ರಾಹ್ಮಣಗಳು : 2**

**(1) ಐತರೇಯ ಬ್ರಾಹ್ಮಣ.** ಈ ಬ್ರಾಹ್ಮಣದಲ್ಲಿ 40 ಅಧ್ಯಾಯಗಳಿವೆ. ಇವು ಐದೈದು ಅಧ್ಯಾಯಗಳಿಗೊಂದರಂತೆ ಎಂಟು ಪಂಚಿಕೆಗಳಾಗಿ ವಿಭಾಗಿಸಲ್ಪಟ್ಟಿವೆ. ಈ ಬ್ರಾಹ್ಮಣದಲ್ಲಿ ಯಜ್ಞದ ವಿಷಯ ಪ್ರಧಾನವಾಗಿದೆ.

**(2) ಕೌಷೀತಕೀ ಬ್ರಾಹ್ಮಣ.** ಇದರಲ್ಲಿ 30 ಅಧ್ಯಾಯಗಳಿವೆ. ಇವುಗಳಲ್ಲಿ ಅಗ್ನ್ಯಾಧಾನ ಅಗ್ನಿಹೋತ್ರ ದರ್ಶಪೂರ್ಣಮಾಸ ಸೋಮಯಾಗ ಈ ವಿಷಯಗಳು ವಿವರಿಸಲ್ಪಟ್ಟಿವೆ.

**ಯಜುರ್ವೇದ ಬ್ರಾಹ್ಮಣಗಳು : 2**

**(1) ತೈತ್ತಿರೀಯ ಬ್ರಾಹ್ಮಣ.** ಕೃಷ್ಣಯಜುರ್ವೇದ ಬ್ರಾಹ್ಮಣಗಳಲ್ಲಿ ಉಪಲಬ್ಧವಾಗಿರುವುದು ಇದೊಂದು ಮಾತ್ರ. ಈ ಬ್ರಾಹ್ಮಣದಲ್ಲಿ 3 ಕಾಂಡಗಳಿವೆ. ಇವುಗಳಿಗೆ ಅಷ್ಟಕಗಳೆಂದು ಹೆಸರು. 1 ಮತ್ತು 2ನೆಯ ಕಾಂಡಗಳಲ್ಲಿ ಎಂಟೆಂಟು ಪ್ರಪಾಠಕಗಳೂ 3ನೆಯ ಕಾಂಡದಲ್ಲಿ 12 ಪ್ರಪಾಠಕಗಳೂ ಇವೆ. 1ನೆಯ ಕಾಂಡದಲ್ಲಿ ಅಗ್ನ್ಯಾಧಾನ ಗವಾಮಯನ ವಾಜಪೇಯ ನಕ್ಷತ್ರೇಷ್ಟಿ ಮತ್ತು ರಾಜಸೂಯ ಇವುಗಳ ವಿಷಯ ವಿವರಿಸಲ್ಪಟ್ಟಿದೆ. 2ನೆಯ ಕಾಂಡದಲ್ಲಿ ಅಗ್ನಿಹೋತ್ರ ಉಪಹೋಮ ಬೃಹಸ್ಪತಿಸವ ಮುಂತಾದ ಯಾಗಗಳ ವರ್ಣನೆಗಳಿವೆ. 3ನೆಯ ಕಾಂಡದಲ್ಲಿ ನಕ್ಷತ್ರೇಷ್ಟಿಯ ವಿಸ್ತಾರವಾದ ವರ್ಣನೆಯಿದೆ.

**(2) ಶತಪಥ ಬ್ರಾಹ್ಮಣ.** ಇದು ಶುಕ್ಲಯಜುರ್ವೇದ ಬ್ರಾಹ್ಮಣ. ಬ್ರಾಹ್ಮಣ ಗ್ರಂಥಗಳಲ್ಲೆಲ್ಲಾ ಇದು ಬಹಳ ದೊಡ್ಡದು. ಇದರಲ್ಲಿ ಕಾಣ್ವ ಮತ್ತು ಮಾಧ್ಯಂದಿನಗಳೆಂದು ಎರಡು ಪಾಠಗಳುಂಟು. ಕಾಣ್ವಶಾಖೆಯಲ್ಲಿ 17 ಕಾಂಡಗಳೂ ಮಾಧ್ಯಂದಿನ ಶಾಖೆಯಲ್ಲಿ 14 ಕಾಂಡಗಳೂ ಇವೆ.

**ಸಾಮವೇದೀಯ ಬ್ರಾಹ್ಮಣಗಳು : 9**

(1) ತಾಂಡ್ಯಮಹಾಬ್ರಾಹ್ಮಣ, (2) ಷಡ್ವಿಂಶಬ್ರಾಹ್ಮಣ, (3) ಸಾಮವಿಧಾನಬ್ರಾಹ್ಮಣ, (4) ಆರ್ಷೇಯ ಬ್ರಾಹ್ಮಣ, (5) ದೈವತಬ್ರಾಹ್ಮಣ, (6) ಉಪನಿಷದ್‌ಬ್ರಾಹ್ಮಣ, (7) ಸಂಹಿತೋಪನಿಷದ್‌ಬ್ರಾಹ್ಮಣ, (8) ವಂಶಬ್ರಾಹ್ಮಣ ಮತ್ತು (9) ಜೈಮಿನೀಯ ಬ್ರಾಹ್ಮಣ.

**ಅಥರ್ವವೇದ ಬ್ರಾಹ್ಮಣ : 1**

**ಗೋಪಥಬ್ರಾಹ್ಮಣ.** ಈ ವೇದಕ್ಕೆ ಸೇರಿದ ಬ್ರಾಹ್ಮಣಗಳಲ್ಲಿ ಉಪಲಬ್ಧವಾಗಿರುವುದು ಇದೊಂದು ಮಾತ್ರ. ಈ ಬ್ರಾಹ್ಮಣದಲ್ಲಿ ಪೂರ್ವ ಗೋಪಥ ಮತ್ತು ಉತ್ತರ ಗೋಪಥಗಳೆಂದು ಎರಡು ಭಾಗಗಳಿವೆ. ಮೊದಲನೆಯದರಲ್ಲಿ ಐದು ಪ್ರಪಾಠಕಗಳೂ ಎರಡನೆಯದರಲ್ಲಿ ಆರು ಪ್ರಪಾಠಕಗಳೂ ಇರುವುವು. 5. ಬ್ರಾಹ್ಮಣರ ಸಮೂಹ. ब्राह्मणानां समूहः "अण्" (४-२-३७)। "ब्राह्मणं ब्रह्मसंघाते वेदभागे नपुंसकम्। भूमिदेवे तु पुंलिङ्गः" मेदि०। (ಸ್ತ್ರೀ०) **–ಣೀ –ಣೀ.** 6. ಬ್ರಾಹ್ಮಣನ ಪತ್ನಿ. 7. ಬ್ರಾಹ್ಮಣ ಹೆಂಗಸು. "ब्राह्मणीं यद्यगुप्तां तु गच्छेतां वैश्यपार्थिवौ। वैश्यं पञ्चशतं कुर्यात्क्षत्रियं तु सहस्रिकम्" मनु० ८-३७६। 8. ಭಾರಂಗಿ. "ब्राह्मणी हञ्जिका-स्पृक्काद्विजपत्नीषु विश्रुता" विश्व०। 9. ಕಂಚು. 10. ಕೆಂಪುಬಾಲದ ಹಲ್ಲಿ (ಗೌಳಿ). "हालाहलस्त्वञ्ज-निका ब्राह्मणी रक्तपुच्छिका" वैज०। 11. ಕಪಿಲ ವರ್ಣದ ದೊಡ್ಡ ಇರುವೆ, ಕಣಜದ ಹುಳ. "लूतातः स्यात् पिपीलिका। ब्राह्मणी च महान् पिङ्गः" वैज०।

**ब्राह्मणचक्षुस् ಬ್ರಾಹ್ಮಣಚಕ್ಷುಸ್** (ನಂ) ವೇದ ಮತ್ತು ಸ್ಮೃತಿಗಳು. ब्राह्मणस्य चक्षुरिव सर्वार्थप्रकाशकत्वात्। "श्रुतिस्मृती च विप्राणां चक्षुषी देवनिर्मिते। काणस्त-त्रैकया हीनः द्वाभ्यामन्धः प्रकीर्तितः" हारीत०।

**ब्राह्मणचण्डाल ಬ್ರಾಹ್ಮಣಚಂಡಾಲ** (ಪುಂ) 1. ಕರ್ತವ್ಯಗಳನ್ನು ಬಿಟ್ಟು ಅಕೃತ್ಯಗಳನ್ನು ಮಾಡುವ ಬ್ರಾಹ್ಮಣ, ನಿಷಿದ್ಧಕಾರ್ಯಗಳನ್ನು ಮಾಡುವ ಬ್ರಾಹ್ಮಣ. ब्राह्मण-श्चण्डाल इव। 2. ಬ್ರಾಹ್ಮಣಸ್ತ್ರೀಯಲ್ಲಿ ಶೂದ್ರನಿಂದ

ಜನಿಸಿದವನು. "यस्तु तत्कारयेन्मोहात् सजात्या स्थितयान्यया। यथा ब्राह्मणचण्डाल: पूर्वदृष्टस्तथैव स:" मनु० ९-८७।

**ब्राह्मणजीविका ಬ್ರಾಹ್ಮಣಜೀವಿಕಾ** (स्त्री०) ಬ್ರಾಹ್ಮಣನ ಜೀವನೋಪಾಯ, ಬ್ರಾಹ್ಮಣನು ಜೀವನಕ್ಕಾಗಿ ಆಶ್ರಯಿಸುವ ವೃತ್ತಿ. ಬ್ರಾಹ್ಮಣನು ಷಟ್‌ಕರ್ಮನಿರತನಾಗಿರಬೇಕು. (1) ಅಧ್ಯಯನ (ವೇದ ಮತ್ತು ಶಾಸ್ತ್ರಾಭ್ಯಾಸ), (2) ಅಧ್ಯಾಪನ (ವೇದ ಮತ್ತು ಶಾಸ್ತ್ರಗಳ ಪ್ರವಚನ), (3) ಯಜನ (ಯಾಗಮಾಡುವುದು), (4) ಯಾಜನ (ಯಾಗ ಮಾಡಿಸುವುದು), (5) ದಾನ (ಕೊಡುವುದು) ಮತ್ತು (6) ಪ್ರತಿಗ್ರಹ (ತೆಗೆದುಕೊಳ್ಳುವುದು) ಇವು ಷಟ್ (6) ಕರ್ಮಗಳು. ಇವುಗಳಲ್ಲಿ ಯಾಜನ ಅಧ್ಯಾಪನ ಮತ್ತು ಪ್ರತಿಗ್ರಹಗಳನ್ನು ಜೀವನಕ್ಕಾಗಿ ಇಟ್ಟುಕೊಳ್ಳಬೇಕು. "ब्राह्मणा ब्रह्मयोनिस्था ये स्वकर्मण्यवस्थिताः। ते सम्यगुपजीवेयु: षट्कर्माणि यथाक्रमम्। अध्यापनमध्ययनं यजनं याजनं तथा। दानं प्रतिग्रहश्चैव षट्कर्माण्यग्रजन्मन:। षण्णां तु कर्मणामस्य त्रीणि कर्माणि जीविका। याजनाध्यापने चैव विशुद्धाच्च प्रतिग्रह:" मनु०।

**ब्राह्मणप्रिय ಬ್ರಾಹ್ಮಣಪ್ರಿಯ** (पुं०) ವಿಷ್ಣು. ब्राह्मणा: वेदाधिकारिण: प्रिया अस्य। "वेदाधिकारिणो विप्रा: प्रिया यस्येति वै सदा। ब्राह्मणप्रिय इत्युक्तो नवार्णो धर्मदो मनु:" इति निरुक्ति:। "ब्रह्मज्ञो ब्राह्मणप्रिय:" वि० स०।

**ब्राह्मणब्रुव ಬ್ರಾಹ್ಮಣಬ್ರುವ** (पुं०) ಜಾತಿಮಾತ್ರದಿಂದ ಬ್ರಾಹ್ಮಣನೆಂದು ಹೇಳಿಕೊಳ್ಳುವವನು, ವಿಹಿತವಾದ ಕರ್ಮಗಳನ್ನು ಆಚರಿಸದಿರುವ ಬ್ರಾಹ್ಮಣ. ब्राह्मणं जातिमात्रतया आत्मानं ब्रवीति — ब्रूञ् (व्यक्तायां वाचि) "क:" (३-१-१३५)। "विप्र: संस्कारयुक्तो न नित्यं सन्ध्यादि कर्म य:। नैमित्तिकं तु नो कुर्यात् ब्राह्मणब्रुव उच्यते" पाद्मपु०।

**ब्राह्मणयष्टिका ಬ್ರಾಹ್ಮಣಯಷ್ಟಿಕಾ** (स्त्री०) ಭಾರಂಗಿ ಮರ.

**ब्राह्मणलक्षण ಬ್ರಾಹ್ಮಣಲಕ್ಷಣ** (न०) ಬ್ರಾಹ್ಮಣನಿಗೆ ಅಸಾಧಾರಣವಾದ ಧರ್ಮ (ಲಕ್ಷಣ). ಯೋಗ ತಪಸ್ಸು ದಮ ದಾನ ಸತ್ಯ ಶೌಚ ದಯೆ ಶಾಸ್ತ್ರಾಭ್ಯಾಸ ವಿದ್ಯೆ ಆಸ್ತಿಕ್ಯ ವಿಜ್ಞಾನ ಇವು ಬ್ರಾಹ್ಮಣನ ಲಕ್ಷಣ. "योगस्तपो दमो दानं सत्यं शौचं दया श्रुतम्। विद्या विज्ञानमास्तिक्यमेतद्ब्राह्मणलक्षणम्"।

**ब्राह्मणायन ಬ್ರಾಹ್ಮಣಾಯನ** (पुं०) ಸತ್ಕುಲಪ್ರಸೂತನಾದ ಬ್ರಾಹ್ಮಣನ ಮಗ, ಸದಾಚಾರಸಂಪನ್ನನಾದ ಬ್ರಾಹ್ಮಣನ ಮಗ. ब्राह्मणस्यापत्यम् "फक्" (४-१-९९)।

**ब्राह्मणशस्त्र ಬ್ರಾಹ್ಮಣಶಸ್ತ್ರ** (न०) ಅಭಿಚಾರಮಂತ್ರ ರೂಪವಾದ ಬ್ರಾಹ್ಮಣನ ಮಾತು, ಬ್ರಾಹ್ಮಣನ ಶಾಪ. ब्राह्मणस्य शस्त्रमिव। "वाक्शस्त्रं वै ब्राह्मणस्य तेन हन्यादरीन् द्विज:" मनु०।

**ब्राह्मण्य ಬ್ರಾಹ್ಮಣ್ಯ** (पुं०) 1. ಶನಿಗ್ರಹ. (न०) 2. ಬ್ರಾಹ್ಮಣನ ಧರ್ಮ. ["ब्राह्मणलक्षण:" ಪದದಲ್ಲಿ ನೋಡಿ.] 3. ಬ್ರಾಹ್ಮಣರ ಸಮೂಹ. ब्राह्मणानां समूह: "यन्" (४-२-४२)। 4. ಬ್ರಾಹ್ಮಣತ್ವ, ಬ್ರಾಹ್ಮಣಭಾವ. ब्राह्मणस्य भाव: "ष्यञ्" (५-१-१२४)। "शूद्रां शयनमारोप्य ब्राह्मणो यात्यधोगतिम्। जनयित्वा सुतं तस्यां ब्राह्मण्यादेव हीयते" मनु० ३-१७। "ब्राह्मण्यं ब्राह्मणत्वे च समूहे च द्विजन्मनाम्" मेदि०।

**ब्राह्ममुहूर्त ಬ್ರಾಹ್ಮಮುಹೂರ್ತ** (पुं०) "ब्राह्म" ಪದದಲ್ಲಿ ನೋಡಿ.

**ब्राह्माहोरात्र ಬ್ರಾಹ್ಮಾಹೋರಾತ್ರ** (पुं०) ಚತುರ್ಮುಖ ಬ್ರಹ್ಮನ ಹಗಲು ಮತ್ತು ರಾತ್ರಿ. ದೇವತೆಗಳ 1000 ಚತುರ್ಯುಗಗಳು (1,20,00,000 ದೇವವರ್ಷಗಳು, 432,00,00,000 ಮಾನುಷ ವರ್ಷಗಳು) ಕಳೆದರೆ ಬ್ರಹ್ಮನಿಗೆ ಒಂದು ಹಗಲು. ಇದು ಜಗತ್ತಿನ ಸೃಷ್ಟಿಕಾಲ. ಇಷ್ಟೇ ಕಾಲವು ಬ್ರಹ್ಮನಿಗೆ ಒಂದು ರಾತ್ರಿ. ಇದು ಪ್ರಲಯ ಕಾಲ. ब्रह्मणोऽयम् "अण्" (४-३-१२०)। ब्राह्मोऽहोरात्र:।

**ब्राह्मी ಬ್ರಾಹ್ಮೀ** (स्त्री०) "ब्राह्म" ಪದದಲ್ಲಿ ನೋಡಿ.

**ब्रुवत् ಬ್ರುವತ್** (वि०) ಹೇಳುತ್ತಿರುವ, ಮಾತಾಡುತ್ತಿರುವ. ब्रूञ् (व्यक्तायां वाचि) "शतृ" (३-२-१२४)। "इति ब्रुवन्तं तमुवाच स व्रती न वाच्यमित्थं पुरुषोत्तम त्वया" माघ० १-३१। स्त्रियां "ङीप्" (४-१-६)। **ब्रुवती ಬ್ರುವತೀ.**

**ब्रुवाण ಬ್ರುವಾಣ** (वि०) ಹೇಳುತ್ತಿರುವ, ಮಾತಾಡುತ್ತಿರುವ. ब्रूञ् (व्यक्तायां वाचि) "शानच्" (३-२-१२४)। "इति ब्रुवाणेन महेन्द्रसूनुं महर्षिणा तेन तिरोबभूवे" किरा० ३-३०।

**ब्रूञ् — व्यक्तायां वाचि** (अदा० उभ० सक० से०)। लट्—पर० ಈ ಲಕಾರದಲ್ಲಿ ಮೊದಲ ಐದು ವಚನಗಳಿಗೆ

(तिप् तस् झि सिप् थस् ಗಳಿಗೆ) णल् अतुस् उस् थल् अथुस् ಮತ್ತು आह ಎಂಬ ಆದೇಶಗಳು ವಿಕಲ್ಪವಾಗಿ ಬರುವುವು.

| | | | |
|---|---|---|---|
| पक्षे— | {आह / ब्रवीति | आहतुः / ब्रूतः | आहुः। / ब्रुवन्ति। |
| | {आत्थ / ब्रवीषि | आहथुः / ब्रूथः | — / ब्रूथ। |
| | ब्रवीमि | ब्रूवः | ब्रूमः |
| आत्म० | ब्रूते | ब्रुवाते | ब्रुवते। |
| | ब्रूषे | ब्रुवाथे | ब्रूध्वे। |
| | ब्रुवे | ब्रूवहे | ब्रूमहे। |

लिट्— ब्रुवो वच्यादेशः

| | | | |
|---|---|---|---|
| पर० | उवाच | ऊचतुः | ऊचुः। |
| | उवचिथ / उवक्थ | ऊचथुः | ऊच। |
| | उवाच / उवच | ऊचिव | ऊचिम। |
| आत्म० | ऊचे | ऊचाते | ऊचिरे। |
| | ऊचिषे | ऊचाथे | ऊचिध्वे। |
| | ऊचे | ऊचिवहे | ऊचिमहे। |

| | | | |
|---|---|---|---|
| लुट्— | वक्ता | वक्तारौ | वक्तारः। |
| पर० | वक्तासि | वक्तास्थः | वक्तास्थ। |
| आत्म० | वक्तासे | वक्तासाथे | वक्ताध्वे। |

| | | | | | |
|---|---|---|---|---|---|
| लृट्— | पर० | वक्ष्यति | आत्म० | वक्ष्यते। | |

| | | | | |
|---|---|---|---|---|
| लोट्— | पर० | ब्रवीतु / ब्रूतात् | ब्रूताम् | ब्रुवन्तु। |
| | | ब्रूहि / ब्रूतात् | ब्रूतम् | ब्रूत। |
| | | ब्रवाणि | ब्रवाव | ब्रवाम। |
| | आत्म० | ब्रूताम् | ब्रुवाताम् | ब्रुवताम्। |
| | | ब्रूष्व | ब्रुवाथाम् | ब्रूध्वम्। |
| | | ब्रवै | ब्रवावहै | ब्रवामहै। |
| लङ्— | पर० | अब्रवीत् | अब्रूताम् | अब्रुवन्। |
| | | अब्रवीः | अब्रूतम् | अब्रूत। |
| | | अब्रवम् | अब्रूव | अब्रूम। |
| | आत्म० | अब्रूत | अब्रुवाताम् | अब्रुवत। |

विधिलिङ्—

| | | |
|---|---|---|
| पर० | ब्रूयात् | ब्रूयाताम् |
| आत्म० | ब्रुवीत | ब्रुवीयाताम् ಇತ್ಯಾದಿ. |

**कर्मणि**:—उच्यते। ऊचे। वक्ता। वक्ष्यते। उच्यताम्। औच्यत। उच्येत। वक्षीष्ट। अवाचि। अवक्ष्यत।

**कृत्सु**:—वक्तव्यम्। वचनीयम्। वाच्यम्, वाक्यम्। उक्तः। उक्तवान्। ब्रुवन्, ब्रुवती, ब्रुवाणः। वक्तुम्। उक्तम्। वचनम्। उक्त्वा। प्रोच्य। उक्त्वोक्त्वा। वाचंवाचम्।

**इति "ब" कारादिपदार्थनिरूपणम्।**

---

# भ

**भ ಭ** ಇದು ವ್ಯಂಜನಾಕ್ಷರಗಳಲ್ಲಿ "प" ವರ್ಗದ ನಾಲ್ಕನೆಯ ಮತ್ತು ಆಭ್ಯಂತರ ಸ್ಪೃಷ್ಟ ಪ್ರಯತ್ನದಿಂದ ಓಷ್ಠಸ್ಥಾನದಲ್ಲಿ ಹುಟ್ಟುವ ಮಹಾಪ್ರಾಣವರ್ಣ. "कादयो मावसानाः स्पर्शाः"। "स्पृष्टं प्रयतनं स्पर्शानाम्"।

**भ ಭ** (पुं०) 1. ಶುಕ್ರಾಚಾರ್ಯರು, ದೈತ್ಯರ ಗುರು. 2. ಶುಕ್ರಗ್ರಹ. 3. ಶಂಭು, ಪರಮೇಶ್ವರ. 4. ಭ್ರಮರ, ದುಂಬಿ. 5. ಭಾವ, ಸ್ವಭಾವ. 6. ಕಿರಣ. 7. ಮೇಘ, ಮೋಡ. "भः शंभौ भ्रमरे भावे शुक्रांशौ जलदे पुमान्" नानार्थर०। (न०) 8. ಗಗನ, ಆಕಾಶ. 9. ರಾಶಿ. 10. ನಕ್ಷತ್ರ. 11. ಪುಂಡ್ರ (ತ್ರಿಪುಂಡ್ರ ಮತ್ತು ಊರ್ಧ್ವಪುಂಡ್ರ). 12. ಚಕ್ರ. "क्लीबे तु गगने राशौ तारायां पुण्ड्रचक्रयोः" नानार्थर०।

**भकार ಭಕಾರ** (पुं०) "ಭ" ವರ್ಣ, ಭ ಎಂಬ ಅಕ್ಷರ.

**भकूट ಭಕೂಟ** (न०) ವಿವಾಹಕ್ಕಾಗಿ ವಧೂವರರ (ಜಾತಕಗಳ) ನಕ್ಷತ್ರಗಳ ಹೊಂದಿಕೆಗೆ ನೋಡುವ ದ್ವಾದಶಕೂಟಗಳು.

**भक्त ಭಕ್ತ** (ನಂ) 1. ಅನ್ನ, भज्यते — भज (सेवायाम्) "क्तः" (३-२-१०२)। "गन्धेन स्फुरता मनागनुसृतो भक्तस्य सर्पिष्मतः कर्कन्धूफलमिश्रशाकपचनामोदः परिस्तीर्यते" ಉ० ರಾ० ४-१। 2. ಆಹಾರ, ಧಾನ್ಯ. "यस्य त्रैवार्षिकं भक्तं पर्याप्तं भृत्यवृत्तये। अधिकं वापि विद्येत स सोमं पातुमर्हति" मनु० ११-७। (वि०) 3. ಪೂಜೆ ಮಾಡುವವನು, ಆರಾಧಿಸುವವನು, ಉಪಾಸನೆ ಮಾಡುವವನು. 4. ನಿಷ್ಠೆಯುಳ್ಳವನು, (ದೇವರು ಗುರುಹಿರಿಯರಲ್ಲಿ) ಪ್ರೀತಿಯುಳ್ಳವನು. "भक्तोऽसि मे सखा चेति रहस्यं ह्येतदुत्तमम्" गीता ४-३। ಭಗವದ್ಭಕ್ತರು ಸರ್ವಶ್ರೇಷ್ಠರು. ಸಕಲ ಪುಣ್ಯತೀರ್ಥಗಳೂ ಅವರ ಶರೀರದಲ್ಲಿವೆ. ಅವರ ಪಾದ ಧೂಳಿಯಿಂದ ಸಕಲ ಪೃಥ್ವೀಮಂಡಲವೂ ಪರಿಶುದ್ಧವಾಗುವುದು. ಮಂತ್ರೋಪಾಸಕರಾಗಿ ಭಗವನ್ನಿವೇದಿತವಾದ ಅನ್ನವನ್ನು ಭುಜಿಸುವ ಭಗವದ್ಭಕ್ತರು ಪರಮಾತ್ಮನ ಪ್ರಾಣಕ್ಕಿಂತಲೂ ಅಧಿಕರು. ಇಂತಹ ಭಕ್ತರು ಕಲಿಯುಗದಲ್ಲಿ 10,000 ವರ್ಷಗಳ ಕಾಲ ಮಾತ್ರ ಭೂಮಿಯಲ್ಲಿರುವರು. ಅನಂತರ ವರ್ಣಭೇದವೆಲ್ಲಾ ನಾಶವಾಗಿ ಎಲ್ಲರೂ ಒಂದೇ ವರ್ಣದವರಾಗುವರು. "पृथिव्यां यानि तीर्थानि पुण्यान्यपि च जाह्नवि। मद्भक्तानां शरीरेषु सन्ति पूतेषु सन्ततम्। मद्भक्तपादरजसा सद्यः पूता वसुन्धरा। मन्मन्त्रोपासका विप्रा ये मदुच्छिष्टभोजिनः। मामेव नित्यं ध्यायन्ते ते मत्प्राणाधिकाः प्रियाः। कलेर्दशसहस्राणि मद्भक्ताः सन्ति भूतले। एकवर्णा भविष्यन्ति मद्भक्तेषु गतेषु च" ब्रह्मवै०। 5. ಭಾಗಮಾಡಿಕೊಂಡಿರುವ. भज कर्त० "क्तः" (३-४-७२)। 6. ಭಾಗಮಾಡಲ್ಪಟ್ಟ. भज कर्म० "क्तः" (३-२-१०२)।

**भक्तकंस ಭಕ್ತಕಂಸ** (ಪುಂ) ಅನ್ನದ ಪಾತ್ರೆ.

**भक्तकार ಭಕ್ತಕಾರ** (ಪುಂ) ಅಡಿಗೆಯವನು. भक्तं करोति — डु कृञ् (करणे) "अण्" (३-२-१)।

**भक्तदास ಭಕ್ತದಾಸ** (ಪುಂ) ಅನ್ನಕ್ಕಾಗಿ ಜೀತಮಾಡುವವನು, ಹೊಟ್ಟೆಪಾಡಿಗಾಗಿ ಮತ್ತೊಬ್ಬನ ಸೇವೆ ಮಾಡುವವನು. भक्तेन दासः।

**भक्तपुलाक ಭಕ್ತಪುಲಾಕ** (ಪುಂ) ಅನ್ನದ ಅಗಳು. भक्तस्य पुलाकः।

**भक्तमण्ड ಭಕ್ತಮಂಡ** (ನಂ) ಅನ್ನದ ಮೇಲಿನ ಕೆನೆ.

**भक्तरोचन ಭಕ್ತರೋಚನ** (ವಿಂ) ಅನ್ನವು ರುಚಿಸುವಂತೆ ಮಾಡುವ ವಸ್ತು, ಹಸಿವನ್ನುಂಟುಮಾಡುವ ಪದಾರ್ಥ. भक्तं रोचयते — रुच (दीप्तौ) + णिच् "ल्युः" (३-१-१३४)।

**भक्तवत्सल ಭಕ್ತವತ್ಸಲ** (ಪುಂ) 1. ವಿಷ್ಣು. भक्तेषु वत्सलः। "विशेषं वक्ति भक्तेषु योऽसौ स्यात् भक्तवत्सलः" इति निरुक्तिः। "लोकबन्धुर्लोकनाथो माधवो भक्तवत्सलः" वि० स०। (वि०) 2. ಭಕ್ತರಲ್ಲಿ ಪ್ರೀತಿಯುಳ್ಳ, ಭಕ್ತರಲ್ಲಿ ದಯೆಯುಳ್ಳ. "भक्तिमन्त इह भक्तवत्सले सन्ततस्मरणरीणकल्मषाः" माघ० १४-६३।

**भक्ति ಭಕ್ತಿ** (ಸ್ತ್ರೀಂ) 1. ದೇವರು ಮತ್ತು ಗುರುಹಿರಿಯರಲ್ಲಿ ಇಡುವ ನಿರತಿಶಯವಾದ ಪ್ರೀತಿ, –ಗೌರವಬುದ್ಧಿ, –ಅನುರಾಗ, ಜೀವಾತ್ಮ ಪರಮಾತ್ಮ ಯಾಥಾರ್ಥ್ಯ ಜ್ಞಾನದಿಂದ ಮಾಡುವ ಪರಮಪುರುಷನ ಪಾದಾರವಿಂದಗಳ ಧ್ಯಾನ भज (सेवायाम्) "क्तिन्" (३-३-९४)। ನಿರ್ಮಲ ಚಿತ್ತದಿಂದ ಮಾಡುವ ಪರಮಾತ್ಮನ ಕಥಾಶ್ರವಣ ಕೀರ್ತನ ಪಾದಸೇವನೆ ಅರ್ಚನೆ ಪ್ರಣಾಮ ಇತ್ಯಾದಿ 9 ಅಂಗಗಳಿಂದ ಕೂಡಿದ ಧ್ಯಾನವು ಭಕ್ತಿಯೆನಿಸುವುದು. "श्रवणं कीर्तनं विष्णोः स्मरणं पादसेवनम्। अर्चनं वन्दनं दास्यं सख्यमात्मनिवेदनम्। इति पुंसार्पिता विष्णौ भक्तिश्चेन्नवलक्षणा" भाग० ७-५-२३। "सर्वोपाधिविनिर्मुक्तं तत्परत्वेन निर्मलम्। हृषीकेण हृषीकेशसेवनं भक्तिरुच्यते"। "स्नेहपूर्वमनुध्यानं भक्तिरित्यभिधीयते"। सा च परानुरक्तिरीश्वरे। "स्वदत्तयैव स्वपदाब्जभाजा भक्त्या स्वयं तारयसे भवाब्धिम्" याद० २०-८३। "भक्त्या गुरौ मय्यनुकम्पया च" रघु० २-६३। 2. ಬೇರೆಯಾಗುವುದು, ಭಾಗವಾಗುವುದು. 3. ರಚನೆ, ಗ್ರಥನೆ, ಜೋಡಣೆ. "भवति विरलभक्तिर्म्लानिपुष्पोपहारः" रघु० ५-७४। 4. ಸೇವೆ, ಪೂಜೆ, ಉಪಾಸನೆ, ಆರಾಧನೆ. "सेवा भक्तिरुपास्तिः" इति कोशः। 5. ಶ್ರದ್ಧೆ. 6. ಗೌಣವೃತ್ತಿ, ಮುಖ್ಯವಾದ ಗುಣವನ್ನು ಆಶ್ರಯಿಸಿದ ವೃತ್ತಿ. 7. ಭಂಗಿ, ಛಕ್ಕಿ. "भक्तिः सेवागौणवृत्त्योः भङ्ग्यां श्रद्धाविभागयोः" हेम०। 8. ಅನಂದವಾಗುವಂತೆ ಗಂಧ ಪುಷ್ಪ ಆಭರಣ ಇವುಗಳಿಂದ ಅಲಂಕರಿಸುವುದು. "कनककलशयुक्तं भक्तिशोभासनाथं क्षितिविरचितशय्यं कौतुकागारमागात्" कुमा० ७-९४।

**भक्तिनम्र ಭಕ್ತಿನಮ್ರ** (ವಿಂ) ಭಕ್ತಿಯಿಂದ ಬಗ್ಗಿರುವ, ಭಕ್ತಿಯಿಂದ ತಗ್ಗಿರುವ. भक्त्या नम्रः।

**भक्तिपूर्वक ಭಕ್ತಿಪೂರ್ವಕ** (ಅವ್ಯಂ) ಪ್ರೀತಿಪುರಃಸರವಾಗಿ, ಭಕ್ತಿಯೊಡನೆ. भक्तिः पूर्वं यस्मिन् कर्मणि।

**भक्तिभाज् ಭಕ್ತಿಭಾಜ್** (ವಿಂ) ಭಕ್ತಿಯುಳ್ಳ, ವಿಶೇಷವಾದ ಪ್ರೀತಿ ಗೌರವಗಳನ್ನಿಟ್ಟಿರುವ. भक्ति भजति — भज (सेवायाम्) "ण्विः" (३-२-६२)। "भरताय परं नमोऽस्तु तस्मै प्रथमोदाहरणाय भक्तिभाजाम्" ಪಾದ್ಮಂ ಸಂ।

**भक्तिमत् ಭಕ್ತಿಮತ್** (ವಿಂ) ಭಕ್ತಿಯುಳ್ಳ, ದೇವರು ಮತ್ತು ಗುರುಹಿರಿಯರಲ್ಲಿ ವಿಶೇಷವಾದ ಪ್ರೀತಿಯಿಟ್ಟಿರುವ. भक्तिरस्यास्ति "मतुप्" (५-२-९४)। "भक्तिमन्त इह भक्तवत्सले सन्ततस्मरणरीणकल्मषाः" माघ० १४-६३। स्त्रियां "ङीप्" (४-१-६)। **–मती –ಮತೀ.**

**भक्तियोग ಭಕ್ತಿಯೋಗ** (ಪುಂ) ಪರಮಾತ್ಮನ ಸಾಕ್ಷಾತ್ಕಾರಕ್ಕಾಗಿ ಭಕ್ತಿರೂಪವಾದ ಒಂದು ಉಪಾಯ, ಆತ್ಮದರ್ಶನಕ್ಕಾಗಿ ಕೈಗೊಳ್ಳುವ ಒಂದು ಸಾಧನ. ಮೋಕ್ಷ ಹೊಂದಲು ಅವಶ್ಯವಾದ ಉಪಾಯಗಳಲ್ಲೊಂದು. भक्तिरेव योगः। ಪರಮಾತ್ಮಸಾಕ್ಷಾತ್ಕಾರಕ್ಕೆ ಕರ್ಮ (ಯೋಗ) ಜ್ಞಾನ (ಯೋಗ) ಮತ್ತು ಭಕ್ತಿ (ಯೋಗ) ಇವು ಮೂರು ಸಾಧನಗಳು.

**ಕರ್ಮಯೋಗ:** ಮುಮುಕ್ಷುವು ತನ್ನ ಸ್ವರೂಪ ಜ್ಞಾನವನ್ನು ಪಡೆದು ಫಲಾಪೇಕ್ಷೆಯಿಲ್ಲದೆ ಆಚರಿಸುವ ಕರ್ಮದಿಂದ ಸಿದ್ಧಿಯನ್ನು ಪಡೆಯುವನು. ಈ ಕರ್ಮವು ಮೋಕ್ಷಕ್ಕೆ ಪರಂಪರೆಯಾಗಿ ಸಾಧನವಾದ ಒಂದು ಕ್ರಿಯೆ. ಇದು (ನ್ಯಾಯ್ಯಾರ್ಜಿತ ದ್ರವ್ಯದಿಂದ ದೇವತಾರ್ಚನೆ, ದಾನ, ಹೋಮ ಮುಂತಾದುವನ್ನು ಆಚರಿಸುವ) ದ್ರವ್ಯಯಜ್ಞ, (ಕೃಚ್ಛ್ರ, ಚಾಂದ್ರಾಯಣ ಉಪವಾಸರೂಪವಾದ) ತಪೋಯಜ್ಞ (ಪುಣ್ಯತೀರ್ಥಪುಣ್ಯಕ್ಷೇತ್ರಾಟನರೂಪವಾದ) ಯೋಗಯಜ್ಞ, ಸ್ವಾಧ್ಯಾಯ ಮತ್ತು ಜ್ಞಾನಯಜ್ಞ ಈ ರೀತಿ ಅನೇಕ ವಿಧ. ಇಂತಹ ಕರ್ಮಾನುಷ್ಠಾನದಿಂದಲೇ ಜನಕಾದಿ ಮಹಾತ್ಮರೆಲ್ಲರೂ ಸಿದ್ಧಿಯನ್ನು ಪಡೆದಿರುತ್ತಾರೆ. ಈ ಕರ್ಮಾನುಷ್ಠಾನವು ಜನತೆಗೆ ಮಾರ್ಗದರ್ಶನವಾಗಿರಬೇಕು. ಫಲಾಪೇಕ್ಷೆಯಿಲ್ಲದ ಕರ್ಮಾಚರಣೆಗಾಗಿಯೇ ದ್ರವ್ಯಾರ್ಜನೆ ಮಾಡಬೇಕಲ್ಲದೆ ಆತ್ಮಪ್ರಯೋಜನಕ್ಕಾಗಿ ಮಾಡುವ ದ್ರವ್ಯಾರ್ಜನೆಯಿಂದ ಕರ್ಮಬಂಧನಕ್ಕೊಳಗಾಗುವನು. "यज्ञार्थात् कर्मणोऽन्यत्र लोकोऽयं कर्मबन्धनः। तदर्थं कर्म कौन्तेय मुक्तसङ्गः समाचर" गीता ३-९। "तस्मादसक्तः सततं कार्यं कर्म समाचर। असक्तो ह्याचरन् कर्म परमाप्नोति पूरुषः॥ कर्मणैव हि संसिद्धिमास्थिता जनकादयः। लोकसङ्ग्रहमेवापि संपश्यन् कर्तुमर्हसि" गीता ३-१९, २०। "द्रव्ययज्ञास्तपोयज्ञा योगयज्ञास्तथापरे। स्वाध्यायज्ञानयज्ञाश्च यतयः संशितव्रताः" गीता ४-२८।

**ಜ್ಞಾನಯೋಗ:** ಪರಬ್ರಹ್ಮಸಾಕ್ಷಾತ್ಕಾರಕ್ಕೆ ಸಾಧನವಾದ ಭಕ್ತಿಗೆ ಉಪಾಯವಾದ ಆತ್ಮಚಿಂತನೆ, ಕರ್ಮಯೋಗದಿಂದ ಚಿತ್ತನೈರ್ಮಲ್ಯ ಹೊಂದಿ ಪರಮಾತ್ಮನಿಗೆ ತಾನು ಶೇಷಭೂತನೆಂದು ತಿಳಿದು ಮಾಡುವ ಪ್ರಕೃತಿವಿಯುಕ್ತನಾದ ಆತ್ಮನ ಚಿಂತನೆ, ಬ್ರಹ್ಮಜ್ಞಾನವನ್ನು ಹೊಂದುವ ಒಂದು ಉಪಾಯ. ಮೋಕ್ಷಾಭಿಲಾಷೆಯಿಂದ ಮಾತ್ರ ಜ್ಞಾನಯೋಗಕ್ಕೆ ಅಧಿಕಾರಿಯಾಗುವುದಿಲ್ಲ. ಕರ್ಮಯೋಗದಿಂದ ಪಾಪಗಳನ್ನು ಕಳೆದುಕೊಂಡು ಅನಂತರ ಜ್ಞಾನಯೋಗವನ್ನು ಕೈಗೊಳ್ಳಬೇಕು. ಕರ್ಮಯೋಗವನ್ನು ಬಿಟ್ಟು ಜ್ಞಾನಯೋಗವನ್ನೇ ಆಚರಿಸುವವನಿಗೆ ಪ್ರಾಚೀನ ವಾಸನೆಯಿಂದ ಉಂಟಾದ ರಾಗದ್ವೇಷಾದಿಗಳು ಇಂದ್ರಿಯಗಳನ್ನು ಆಯಾ ವಿಷಯಗಳಲ್ಲಿ ಪ್ರೇರಿಸುತ್ತವೆಯಾದುದರಿಂದ ಮೊದಲೇ ಜ್ಞಾನಯೋಗಕ್ಕೆ ಯತ್ನಿಸಬಾರದು. ಕರ್ಮಯೋಗದಿಂದ ಪ್ರತಿಬಂಧಕರೂಪವಾದ ಎಲ್ಲಾ ದೋಷಗಳನ್ನು ಪರಿಹರಿಸಿಕೊಂಡು, ಜ್ಞಾನಯೋಗವನ್ನು ಆಚರಿಸಬೇಕು. ಕರ್ಮವು ದ್ರವ್ಯಮಯ ಮತ್ತು ಜ್ಞಾನಮಯಗಳೆಂಬ ಎರಡು ಅಂಶಗಳಿಂದ ಕೂಡಿದ್ದು ಅವುಗಳಲ್ಲಿ ಜ್ಞಾನಮಯವೇ ಶ್ರೇಯಸ್ಕರ. ಫಲ ಸಂಗವಿಲ್ಲದ ಎಲ್ಲಾ ಕರ್ಮಗಳೂ ಜ್ಞಾನದಲ್ಲಿ ಪರಿಸಮಾಪ್ತಿ ಹೊಂದುವುದರಿಂದ ಜ್ಞಾನಯಜ್ಞವು ಶ್ರೇಷ್ಠವಾದುದು. "सर्वेऽप्येते यज्ञविदो यज्ञक्षपितकल्मषाः। यज्ञशिष्टामृतभुजो यान्ति ब्रह्म सनातनम्" गीता ४-३०। "इन्द्रियस्येन्द्रियस्यार्थे रागद्वेषौ व्यवस्थितौ। तयोर्न वशमागच्छेत् तौ ह्यस्य परिपन्थिनौ" गीता ३-३४। "तस्मात्त्वमिन्द्रियाण्यादौ नियम्य भरतर्षभ। पाप्मानं प्रजहिह्येनं ज्ञानविज्ञाननाशनम्" गीता ३-४१। "श्रेयान् द्रव्यमयाद्यज्ञात् ज्ञानयज्ञः परन्तप। सर्वं कर्माखिलं पार्थ ज्ञाने परिसमाप्यते" गीता ४-३३। ಜ್ಞಾನಯೋಗದಿಂದ ಸಂಪಾದಿಸಿದ ಆತ್ಮಜ್ಞಾನವು ಅನಾದಿಕಾಲಪ್ರವೃತ್ತವಾದ ಸಕಲ ಕರ್ಮರಾಶಿಯನ್ನೂ ನಾಶಪಡಿಸುವುದು. "ज्ञानाग्निः सर्वकर्माणि भस्मसात् कुरुतेऽर्जुन" गीता ४-३७। ಆತ್ಮಜ್ಞಾನಕ್ಕೆ ಸಮಾನವಾದುದೂ ಅದಕ್ಕಿಂತಲೂ ಪವಿತ್ರವಾದುದೂ ಯಾವುದೂ ಇಲ್ಲ. ಪ್ರತಿದಿನವೂ ಆಚರಿಸಲ್ಪಡುವ ಜ್ಞಾನಾಕಾರವಾದ ಕರ್ಮಯೋಗದಿಂದ ಕಾಲಕ್ರಮದಲ್ಲಿ ಆತ್ಮಜ್ಞಾನವನ್ನು ಸಂಪಾದಿಸಿ ಅದರಿಂದ ನಿರತಿಶಯವಾದ ಮೋಕ್ಷವನ್ನು ಪಡೆಯಬಹುದು. "न हि ज्ञानेन सदृशं पवित्रमिह विद्यते। तत् स्वयं योग-

संसिद्धः कालेनात्मनि विन्दति । श्रद्धावान् लभते ज्ञानं तत्परः संयतेन्द्रियः । ज्ञानं लब्ध्वा परां शान्तिमचिरेणाधिगच्छति " गीता ४-३८, ३९ । ಜ್ಞಾನಯೋಗವು ಕಠಿನವಾದುದರಿಂದಲೂ ಕರ್ಮಯೋಗದಿಂದ ಶೀಘ್ರವಾಗಿ ಸಿದ್ಧಿಯುಂಟಾಗುವುದರಿಂದಲೂ ಕರ್ಮಯೋಗವೇ ಒಳ್ಳೆಯದು.

**ಭಕ್ತಿಯೋಗ:** ಆತ್ಮದರ್ಶನಕ್ಕಾಗಿ ಕೈಗೊಳ್ಳುವ ಒಂದು ಉಪಾಯ. ಆತ್ಮಜ್ಞಾನಪೂರ್ವಕ ಕರ್ಮಯೋಗದ ಅನುಷ್ಠಾನದಿಂದ ಆತ್ಮಾವಲೋಕನವಾಗುವುದರಿಂದ ಆತ್ಮಜ್ಞಾನಿಯಾದವನು ಭಗವದುಪಾಸಕನಾಗುತ್ತಾನೆ. ಧ್ಯೇಯವಸ್ತುವು ಬಹಳ ಪ್ರಿಯವಾದುದರಿಂದ ಬಹಳ ಪ್ರಿಯರೂಪವಾದ ಸ್ಮೃತಿಸಂತಾನವೇ ಉಪಾಸನೆ. ಇದೇ ಬ್ರಹ್ಮಪ್ರಾಪ್ತಿಗೆ ಸಾಧನವಾದ ಭಕ್ತಿಯೋಗ. ಲೋಕದಲ್ಲಿ ಪುಣ್ಯಕರ್ಮಮಾಡಿದವರು ಪರಮಾತ್ಮನಲ್ಲಿ ಶರಣಾಗತಿ ಮಾಡುತ್ತಾರೆ. ಅವರು ಆರ್ತರು ಅರ್ಥಾರ್ಥಿಗಳು ಜಿಜ್ಞಾಸುಗಳು ಮತ್ತು ಜ್ಞಾನಿಗಳೆಂದು ನಾಲ್ಕು ವಿಧ. ಐಶ್ವರ್ಯವನ್ನು ಕಳೆದುಕೊಂಡು ಮತ್ತೆ ಅದನ್ನು ಪಡೆಯಲು ಅಪೇಕ್ಷಿಸುವವನು ಆರ್ತ. ದಾರಿದ್ರ್ಯದಿಂದ ಕಷ್ಟಕ್ಕೊಳಗಾಗಿ ಐಶ್ವರ್ಯವನ್ನು ಅಪೇಕ್ಷಿಸುವವನು ಅರ್ಥಾರ್ಥಿ. ಪ್ರಕೃತಿವಿಯುಕ್ತನಾದ ಆತ್ಮನ ಸ್ವರೂಪವನ್ನು ಪಡೆಯಲಿಚ್ಛಿಸುವವನು ಜಿಜ್ಞಾಸು. ಪರಮಾತ್ಮನೇ ಪರಮಪ್ರಾಪ್ಯನೆಂದು ತಿಳಿದು ಅವನನ್ನು ಪಡೆಯಲು ಅಪೇಕ್ಷಿಸುವವನು ಜ್ಞಾನಿ. ಈ ನಾಲ್ಕು ವಿಧ ಭಕ್ತರಲ್ಲಿ ಜ್ಞಾನಿಯು ಸರ್ವಶ್ರೇಷ್ಠನು. ಅವನೇ ಪರಮಾತ್ಮನಿಗೆ ಪ್ರಿಯನಾದವನು. ಜ್ಞಾನಿಗೂ ಪರಮಾತ್ಮನು ಬಹಳ ಪ್ರಿಯನಾಗುತ್ತಾನೆ. "चतुर्विधा भजन्ते मां जनाः सुकृतिनोऽर्जुन । आर्तो जिज्ञासुरर्थार्थी ज्ञानी च भरतर्षभ ।। तेषां ज्ञानी नित्ययुक्तः एकभक्तिर्विशिष्यते । प्रियो हि ज्ञानिनोऽत्यर्थमहं स च मम प्रियः" गीता ७-१६, १७ । ಈ ನಾಲ್ಕು ವಿಧ ಭಕ್ತರಲ್ಲಿ ಮೊದಲನೆಯ ಮೂವರು ಪರಮಾತ್ಮನಿಂದ ಫಲವನ್ನು ಹೊಂದಿ ಅವನ ಮಹಿಮೆಯನ್ನು ಕೊಂಡಾಡುತ್ತಾರೆ. ಜ್ಞಾನಿಯಾದರೋ ಬೇರೆ ಫಲವನ್ನು ಅಪೇಕ್ಷಿಸದೆ ಪರಮಾತ್ಮನಲ್ಲೇ ಭಕ್ತಿಯಿಟ್ಟಿರುವುದರಿಂದ ಶರೀರಕ್ಕೆ ಆತ್ಮನು ಆಧಾರವಾಗಿರುವಂತೆ ಪರಮಾತ್ಮನಿಗೆ ಆತ್ಮನಾಗಿರುತ್ತಾನೆ. "उदाराः सर्व एवैते ज्ञानी त्वात्मैव मे मतम् । आस्थितः स हि युक्तात्मा मामेवानुत्तमां गतिम्" गीता ७-१८ । ಅನೇಕ ಜನ್ಮಗಳಲ್ಲಿ ಮಾಡಿದ ಪುಣ್ಯಕರ್ಮಗಳಿಂದ ಪರಮಾತ್ಮನ ಪ್ರಾಪ್ತಿಗೆ ವಿರೋಧಿಯಾದ ಪಾಪವನ್ನು ಕಳೆದುಕೊಂಡು ದ್ವಂದ್ವಮೋಹದಿಂದ ಮುಕ್ತರಾಗಿ ಜರಾಮರಣಮೋಕ್ಷಕ್ಕಾಗಿಯೂ ಪರಮಾತ್ಮಪ್ರಾಪ್ತಿರೂಪವಾದ ಐಶ್ವರ್ಯಕ್ಕಾಗಿಯೂ ಸಂಕಲ್ಪಮಾಡಿದ ಭಕ್ತರು ಭಕ್ತಿಯಿಂದ ಪರಮಾತ್ಮನನ್ನೇ ಭಜಿಸುತ್ತಾರೆ. "येषां त्वन्तगतं पापं जनानां पुण्यकर्मणाम् । ते द्वन्द्वमोहनिर्मुक्ता भजन्ते मां दृढव्रताः" गीता ७-२८ । ಪ್ರಕೃತಿ ವಿಯುಕ್ತನಾದ ಆತ್ಮನ ಸ್ವರೂಪದರ್ಶನಕ್ಕಾಗಿ ಪರಮಾತ್ಮನ ಆರಾಧನ (ಉಪಾಸನಾ) ರೂಪವಾದ ಪ್ರಯತ್ನವನ್ನು ಕೈಗೊಳ್ಳುವವರು ಬ್ರಹ್ಮವನ್ನೂ ಅಧ್ಯಾತ್ಮವನ್ನೂ ಅಖಿಲವಾದ ಕರ್ಮವನ್ನೂ ತಿಳಿಯುತ್ತಾರೆ. "जरामरणमोक्षाय मामाश्रित्य यतन्ति ये । ते ब्रह्म तद्विदुः कृत्स्नमध्यात्मं कर्म चाखिलम्" गीता ७-२९ । ಇದು ಪರಮಾತ್ಮಪ್ರಾಪ್ತಿಗೆ ಸಾಧನವಾದ ಭಕ್ತಿಯೋಗ.

**भक्तृ ಭಕ್ತೃ** (वि०) 1. ಪೂಜಿಸುವವನು, ಉಪಾಸನೆ ಮಾಡುವವನು. भज (सेवायाम्) "तृच्" (३-१-१३३)। 2. ಭಾಗಮಾಡುವವನು, ಬೇರೆಮಾಡುವವನು.

**भक्ष — अदने** (चुरा० उभ० सक० से०) । भक्षयति, –ते । भक्षयामास, –चकार । भक्षयिता । भक्षयिष्यति, –ते । भक्षयतु, –ताम् । अभक्षयत्, –त । भक्षयेत्, –त । ಇತ್ಯಾದಿ. ತಿನ್ನು, ಊಟಮಾಡು.

**कर्मणि :**—भक्ष्यते । "यथामिषं जले मत्स्यैर्भक्ष्यते श्वापदैर्भुवि" पञ्चतं० २-१२२ ।

**सनि :**—बिभक्षति, –ते ।

**कृत्सु :**—भक्षयितव्यः । भक्षणीयः । भक्ष्यः । भक्षयन्, –न्ती । भक्षितः । भक्षणम् । भक्षयित्वा । "भक्षयित्वा बहून् मत्स्यानुत्तमाधममध्यमान्" पञ्चतं० १-२३२ ।

**भक्ष ಭಕ್ಷ** (पुं०) 1. ಆಹಾರ, ಊಟ. 2. ಊಟಮಾಡುವುದು, ತಿನ್ನುವುದು. 3. ತಿಂಡಿ.

**भक्षक ಭಕ್ಷಕ** (वि०) 1. ತಿನ್ನುವವನು, ಊಟಮಾಡುವವನು. भक्ष (अदने) + णिच् "ण्वुल्" (३-१-१३३)। "भक्ष्यभक्षकयोः प्रीतिर्विपत्तेः कारणं महत्" हितो० १-५५ । 2. ಹೊಟ್ಟೆಬಾಕ, ಮಿತಿಮೀರಿ ಊಟಮಾಡುವವನು.

**भक्षकार ಭಕ್ಷಕಾರ** (पुं०) ತಿಂಡಿಯನ್ನು ಮಾಡುವವನು. भक्षं करोति — डु कृञ् (करणे) "अण्" (३-२-१) ।

**भक्षण ಭಕ್ಷಣ** (न०) ತಿನ್ನುವುದು, ಊಟಮಾಡುವುದು. भक्ष (अदने) + णिच् "ल्युट्" (३-३-११५) । "न मांसभक्षणे दोषो न मद्ये न च मैथुने" मनु० ५-५६ ।

**भक्षणीय ಭಕ್ಷಣೀಯ** (वि०) 1. ತಿನ್ನಲ್ಪಡುವ. 2. ತಿನ್ನಲು ಯೋಗ್ಯವಾದ. 3. ತಿನ್ನಬೇಕಾದ. भक्ष (अदने) + णिच् "अनीयर्" (३-१-९६)। "त्वद्वचनेन भक्षणीयास्ते दायादा:" पञ्चतं० ४। "तव्य:" (३-१-९६)। **-यितव्य: -ಯಿತವ್ಯ:.**

**भक्षित ಭಕ್ಷಿತ** (न०) 1. ತಿನ್ನುವುದು. भक्ष (अदने) + णिच् "क्त:" (३-३-११४)। 2. ಆಹಾರ. (वि०) 3. ತಿನ್ನಲ್ಪಟ್ಟ. भक्ष्यते स्म—भक्ष "क्त:" (३-२-१०२)। "ते च तेन शनै:शनैर्भक्षिता:" पञ्चतं० ४।

**भक्ष्य ಭಕ್ಷ್ಯ** (न०) 1. ತಿಂಡಿ. ಗಟ್ಟಿಯಾದ ಆಹಾರ ವಸ್ತು, ತಿನ್ನಲ್ಪಡುವ ವಸ್ತು. भक्ष (अदने) कर्म० "ण्यत्" (३-१-१२४)। "भक्ष्यभक्षकयो: प्रीति-विपत्ते: कारणं महत्" हितो० १-५५। (वि०) 2. ತಿನ್ನಲು ಯೋಗ್ಯವಾದ, ಭಕ್ಷಿಸಲು ಅರ್ಹವಾದ.

**भक्ष्यकार ಭಕ್ಷ್ಯಕಾರ** (पुं०) ತಿಂಡಿಯನ್ನು ತಯಾರಿಸುವವನು, ಭಕ್ಷ್ಯಗಳನ್ನು ಮಾಡುವವನು. भक्ष्यं करोति—डु कृञ् (करणे) "अण्" (३-२-१)।

**भग ಭಗ** (पुं०) 1. ಸೂರ್ಯ, ದ್ವಾದಶ (12) ಆದಿತ್ಯರಲ್ಲೊಬ್ಬ. भज (सेवायाम्) "घ:" (३-३-११८)। (1) धाता, (2) मित्र:, (3) अर्यमा, (4) शक्र:, (5) वरुण:, (6) अंश:, (7) भग:, (8) विवस्वान्, (9) पूषा, (10) सविता, (11) त्वष्टा ಮತ್ತು (12) विष्णु:। ಈ ಹನ್ನೆರಡು ಮಂದಿ ಆದಿತ್ಯರೂ ಪ್ರಳಯ ಸಮಯದಲ್ಲಿ ಏಕಕಾಲದಲ್ಲಿ ಪ್ರಕಾಶಿಸುವರು. 2. ಐಶ್ವರ್ಯ, ಸಂಪತ್ತು. 3. ಕಾಮ, ಅಪೇಕ್ಷೆ, ಬಯಕೆ, ಇಚ್ಛೆ. 4. ಮಾಹಾತ್ಮ್ಯ. 5. ಪ್ರಯತ್ನ. 6. ಅಣಿಮಾದಿ ಐಶ್ವರ್ಯ. 7. ಮುಕ್ತಿ, ಮೋಕ್ಷ. 8. ಧರ್ಮ. 9. ಜ್ಞಾನ. 10. ವೈರಾಗ್ಯ. 11. ಕೀರ್ತಿ, ಯಶಸ್ಸು. 12. ವೀರ್ಯ, ಪರಾಕ್ರಮ. 13. ತಪಸ್ಸು. 14. ಕಾಂತಿ, ಸೌಂದರ್ಯ, ಸೊಬಗು. 15. ಯೋನಿ, ಸ್ತ್ರೀಯರ ಗುಹ್ಯೇಂದ್ರಿಯ. ಮೇದಿನೀ ಕೋಶಕಾರರು ಆದಿತ್ಯ ಎಂಬ ಅರ್ಥದಲ್ಲಿ ಮಾತ್ರ ಪುಂಲಿಂಗವೆಂದು ಹೇಳಿ ಉಳಿದೆಲ್ಲ ಅರ್ಥಗಳಲ್ಲೂ ನಪುಂಸಕಲಿಂಗವೆಂದು ಹೇಳಿರುತ್ತಾರೆ. "भगं श्रीयोनिवीर्येच्छाज्ञानवैराग्यकीर्तिषु। माहात्म्यैश्वर्य-यत्नेषु धर्मे मोक्षे च ना रवौ" मेदि०। ನಾನಾರ್ಥ ರತ್ನಮಾಲೆ ಮತ್ತು ವೈಜಯನ್ತೀ ಕೋಶಗಳಲ್ಲಿ ಯೋನಿ ಎಂಬ ಅರ್ಥದಲ್ಲಿ ಮಾತ್ರ ನಪುಂಸಕಲಿಂಗವೆಂದು ಹೇಳಿ ಉಳಿದೆಲ್ಲ ಅರ್ಥಗಳಲ್ಲೂ ಭಗ ಶಬ್ದವು ಪುಂಲಿಂಗವೆಂದು ಹೇಳಿದೆ. "भग: श्रीकाममाहात्म्ययत्नैश्वर्यार्कमुक्तिषु। इच्छावीर्यतप:कीर्तिवैराग्यज्ञानकान्तिषु। योनौ तु स्याद्भगं क्लीबे" नानार्थर०। "भगं योन्यां भगो यत्ने यशो-वीर्यार्कभूतिषु। कान्तीच्छाज्ञानवैराग्यधर्मैश्वर्यतपस्सु च" वैज०। (पुं०) 16. ಚಂದ್ರ. (न०) 17. ಪೂರ್ವ ಫಲ್ಗುನೀ ನಕ್ಷತ್ರ. 18. ಸೌಭಾಗ್ಯ, ಅದೃಷ್ಟ. "यस्य राष्ट्रे प्रजा: सर्वा: त्रस्यन्ते साध्व्यसाधुभि:। तस्य मत्तस्य नश्यन्ति कीर्तिरायुर्भगो गति:" भाग० १-१७-१०।

**भगण ಭಗಣ** (पुं०) 1. ರಾಶಿಗಳ ಸಮೂಹ. 2. ನಕ್ಷತ್ರಗಳ ಸಮೂಹ. भानां नक्षत्राणां गण: समूह:।

**भगदत्त ಭಗದತ್ತ** (पुं०) ನರಕಾಸುರನ ಹಿರಿಯ ಮಗ. ಇವನು ಪ್ರಾಗ್ಜ್ಯೋತಿಷಪುರದ ದೊರೆ. "ऋतुमत्यां तु जायायां कालेन नरक: क्रमात्। भगदत्तं महाशीर्षं मदवन्तं सुमालिनम्। चतुरो जनयामास पुत्रांस्तांश्च क्षिते: सुत:" कालिकापु०।

**भगदैवत ಭಗದೈವತ** (न०) ಪೂರ್ವಫಲ್ಗುನೀ ನಕ್ಷತ್ರ. भगो दैवतं देवताऽस्य।

**भगन्दर ಭಗಂದರ** (पुं०) ಆಸನ ಕುರು, ಗುಹ್ಯಸ್ಥಾನದ ವ್ರಣ, "ಫಿಸ್ತುಲಾ" ಎಂಬ ಒಂದು ವ್ಯಾಧಿ. भगं दारयति—दृ (विदारणे) + णिच् "खच्" (३-२-४६)। मुमागम: (६-३-६७)। ಭಗಂದರವು ಗುದಪ್ರದೇಶದಲ್ಲಿ ಉಂಟಾಗುವ ಒಂದು ವ್ಯಾಧಿ. ಇದು ವಾತ ಪಿತ್ತ ಶ್ಲೇಷ್ಮ ಸನ್ನಿಪಾತ ಮತ್ತು ಆಗಂತು ನಿಮಿತ್ತವಾದ (ಕ್ರಮವಾಗಿ) ಶತಪೋನಕ ಉಷ್ಟ್ರಗ್ರೀವ ಪರಿಸ್ರಾವಿ ಶಂಬೂಕಾವರ್ತ ಮತ್ತು ಉನ್ಮಾರ್ಗಿಗಳೆಂದು ಐದು ವಿಧ. "वातपित्त-श्लेष्मसन्निपातागन्तुनिमित्ता: शतपोनकोष्ट्रग्रीवपरिस्रावि-शम्बूकावर्तोन्मार्गिणो यथासंख्यं पञ्च भगन्दरा भवन्ति" सुश्रुत० निदान० ४-३।

**ಭಗಂದರದ ಪೂರ್ವರೂಪ:** ಗುದಪ್ರದೇಶದಲ್ಲಿ ಮೊದಲು ಪಿರ್ರೆಗಳ ನೋವು ನವೆ ಉರಿತ ಮತ್ತು ಊತಗಳು ಉಂಟಾಗುವುವು. "कटीकपालवेदना कण्डूर्दाह: शोफश्च गुदस्य भवति" सुश्रुत० निदान० ४-४।

**(1) ವಾತಿಕ (ಶತಪೋನಕ) ಭಗಂದರ:** ಈ ಮೇಲಿನ ವಿಕಾರಗಳುಂಟಾದಾಗ ಅಪಥ್ಯಾಹಾರ ಸೇವನೆಯಿಂದ ವಾಯುವು ಪ್ರಕೋಪಗೊಂಡು ಅಲ್ಲೇ ನೆಲೆಸಿ ಗುದಪ್ರದೇಶದ ಸುತ್ತಲೂ ಒಂದೆರಡು ಅಂಗುಲಗಳಷ್ಟು ಮಾಂಸರಕ್ತಗಳನ್ನು ಕೆಡಿಸಿ ಅಲ್ಲಿ ರಕ್ತಕುರುಗಳನ್ನುಂಟುಮಾಡುವುದು. ಆದರಿಂದ ಅತೀವ ವೇದನೆಯುಂಟಾಗುವುದಲ್ಲದೆ ಅದು ಬಲಿತು ಪಕ್ವವಾಗಿ ಮೂತ್ರಾಶಯದ ಸಮೀಪದಲ್ಲಿರುವುದರಿಂದ ಆ ಕುರುವು ತೊಯ್ದುಹೋಗಿ

ಜಲ್ಲಡಿಯಂತಿರುವ ಸಣ್ಣ ಸಣ್ಣ ರಂಧ್ರಗಳ ಮೂಲಕ ನೀರಿನಿಂದ ತುಂಬಿ ಕೊಸರಿಹೋಗಿ ಅನವರತವೂ ನೊರೆಯಿಂದ ಕೂಡಿದ ರಕ್ತವು ಸೋರುತ್ತಿರುವುದು. ಆ ವ್ರಣದಿಂದ ಯಾವಾಗಲೂ ದುಡಿತವೂ ಕತ್ತರಿಯಿಂದ ಕತ್ತರಿಸಲ್ಪಟ್ಟಂತೆಯೂ ಸೂಜಿಯಿಂದ ಚುಚ್ಚಲ್ಪಟ್ಟಂತೆಯೂ ಬಹಳ ವೇದನೆಯುಂಟಾಗುವುದು. ಇದಕ್ಕೆ ಪ್ರತೀಕಾರ ನಡೆಯುದಿದ್ದರೆ ವಾತ ಮೂತ್ರ ಮಲ ಮತ್ತು ರೇತಸ್ಸುಗಳೆಲ್ಲವೂ ಈ ರಂಧ್ರಗಳ ಮೂಲಕವೇ ಹೊರಗೆ ಬರುವುವು. ಇದು ವಾತನಿಮಿತ್ತವಾದ "**ಶತಪೋನಕ**" ಭಗಂದರ. "तत्रापथ्यसेविनां वायुः प्रकुपितः सन्निवृत्तः स्थिरीभूतो गुदमभितोऽङ्गुले द्व्यङ्गुले वा मांसशोणिते प्रदूष्यारुणवर्णां पिडकां जनयति। सास्य तोदादीन् वेदनाविशेषाञ्जनयति। अप्रतिक्रियमाणा च पाकमुपैति। मूत्राशयाभ्याशगतत्वाच्च व्रणः प्रक्लिन्नः शतपोनकवदणुमुखैश्छिद्रैरापूर्यते। तानि च छिद्राण्यजस्रमच्छं फेनानुविद्धमधिकमास्रावं स्रवन्ति। व्रणश्च ताड्यते भिद्यते छिद्यते सूचीभिरिव निस्तुद्यते गुदं चावदीर्यते। उपेक्षिते च वातमूत्रपुरीषरेतसामप्यागमश्च तैरेव छिद्रैर्भवति। तं भगन्दरं शतपोनकमित्याचक्षते" सुश्रुत० निदान० ४-५।

**(2) ಪೈತ್ತಿಕ (ಉಷ್ಟ್ರಗ್ರೀವ) ಭಗಂದರ:** ಪಿತ್ತವು ಪ್ರಕೋಪಗೊಂಡು ವಾಯುವಿನಿಂದ ಕೆಳಕ್ಕೆ ತಳ್ಳಲ್ಪಟ್ಟು ಒಂದೆರಡು ಅಂಗುಲಗಳಷ್ಟು ಮಾಂಸರಕ್ತಗಳನ್ನು ಕೆಡಿಸಿ ಅಲ್ಲೇ ನೆಲೆಯಾಗಿ ನಿಂತು ಉಷ್ಟ್ರಗ್ರೀವದ (ಒಂಟೆಯ ಕತ್ತಿನ) ಆಕಾರದ ಕೆಂಪು ಕುರುಗಳನ್ನು ಉಂಟುಮಾಡುವುದು. ಈ ರಕ್ತಕುರುಗಳು ಉರಿತವೇ ಮೊದಲಾದ ಅನೇಕ ವಿಧವಾದ ಅಸಹ್ಯ ವೇದನೆಯನ್ನುಂಟುಮಾಡುವುವು. ಇದಕ್ಕೆ ಪ್ರತೀಕಾರ ನಡೆಯುದಿದ್ದರೆ ಬಲಿತು ಪಕ್ವವಾದ ವ್ರಣವು ಬೆಂಕಿಯಿಂದ ಸುಟ್ಟಂತೆ ಅತೀವ ವೇದನೆಯನ್ನು ಉಂಟುಮಾಡುವುದು. ಮತ್ತು ದುರ್ಗಂಧದ ರಕ್ತವು ಸೋರುತ್ತಿರುವುದು. ಇದಕ್ಕೆ ಚಿಕಿತ್ಸೆ ನಡೆಯುದಿದ್ದರೆ ಇದರ ಮೂಲಕವೇ ವಾತ ಮೂತ್ರ ಮಲ ಮತ್ತು ರೇತಸ್ಸುಗಳು ಹೊರಡುವುವು. ಇದು "**ಉಷ್ಟ್ರಗ್ರೀವ**" ಭಗಂದರ. "पित्तं तु प्रकुपितमनिलेनाधः प्रेरितं पूर्ववदवस्थितं रक्तां तन्वीमुच्छ्रितामुष्ट्रग्रीवाकारां पिडकां जनयति। सास्य चोषादीन् वेदनाविशेषान् जनयति। अप्रतिक्रियमाणा च पाकमुपैति। व्रणश्च अग्निक्षाराभ्यामिव दह्यते। दुर्गन्धमुष्णमास्रावं स्रवति। उपेक्षितश्च वातमूत्रपुरीषरेतांसि विसृजति। तं भगन्दरमुष्ट्रग्रीवमित्याचक्षते" सुश्रुत० निदान० ४-६।

**(3) ಶ್ಲೈಷ್ಮಿಕ (ಪರಿಸ್ರಾವಿ) ಭಗಂದರ:** ಶ್ಲೇಷ್ಮ (ಕಫ)ವು ಪ್ರಕೋಪಗೊಂಡು ವಾಯುವಿನಿಂದ ಕೆಳಕ್ಕೆ ತಳ್ಳಲ್ಪಟ್ಟು ರಕ್ತ ಮಾಂಸಗಳನ್ನು ಕೆಡಿಸಿ ಅಲ್ಲೇ ನೆಲೆ ಮಾಡಿಕೊಂಡು ನವೆಯಿಂದ ಕೂಡಿದ ಶಾಶ್ವತವಾದ ಬಿಳಿಯ ಕುರುಗಳನ್ನು ಉಂಟುಮಾಡುವುದು. ಇದರಿಂದ ತಾಳಲಾರದಷ್ಟು ನವೆಯುಂಟಾಗುವುದು. ಇದಕ್ಕೆ ಸರಿಯಾದ ಚಿಕಿತ್ಸೆ ನಡೆಯುದಿದ್ದರೆ ಕುರುವು ಬಲಿತು ವ್ರಣವಾಗಿ ಬಹಳ ಕಠಿನವಾಗಿ ಊದಿಕೊಂಡು ಅಸಹ್ಯವಾದ ನವೆಯನ್ನುಂಟುಮಾಡಿ ಯಾವಾಗಲೂ ಸೋರುತ್ತಿರುವುದು. ಇದು ಶ್ಲೇಷ್ಮನಿಮಿತ್ತವಾದ "**ಪರಿಸ್ರಾವಿ**" ಭಗಂದರ. "श्लेष्मा तु प्रकुपितः समीरणेनाधः प्रेरितः पूर्ववदवस्थितः शुक्लावभासां स्थिरां कण्डूमतीं पिडकां जनयति। सास्य कण्ड्वादीन् वेदनाविशेषान् जनयति। अप्रतिक्रियमाणा च पाकमुपैति। व्रणश्च कठिनः संरम्भी कण्डूप्रायः पिच्छिलमजस्रमास्रावं स्रवति। उपेक्षितश्च वातमूत्रपुरीषरेतांसि विसृजति। तं भगन्दरं परिस्राविणमाचक्षते" सुश्रुत० निदान० ४-७।

**(4) ಸಾನ್ನಿಪಾತಿಕ (ಶಂಬೂಕಾವರ್ತ) ಭಗಂದರ:** ವಾಯುವು ಪ್ರಕೋಪಗೊಂಡು ಪಿತ್ತ ಮತ್ತು ಶ್ಲೇಷ್ಮಗಳೊಡನೆ ಕೆಳಕ್ಕೆ ಹೋಗಿ ಅಲ್ಲೇ ನಿಂತು ಪಾದಾಂಗುಷ್ಠ ಗಾತ್ರದ ಕುರುವನ್ನುಂಟುಮಾಡುವುದು. ಈ ಕುರುವು ಬಹಳ ನೋವು ಉರಿತ ಮತ್ತು ನವೆಗಳನ್ನುಂಟುಮಾಡುವುದು. ಇದಕ್ಕೆ ತಕ್ಕ ಚಿಕಿತ್ಸೆ ನಡೆಯುದಿದ್ದರೆ ವ್ರಣವು ಬಲಿತು ನಾನಾ ವರ್ಣದ ಕೀವು ರಕ್ತಗಳು ಸೋರುವುವು. ಇದು ಶಂಬೂಕದ (ಕಪ್ಪೆಚಿಪ್ಪಿನ) ಆಕಾರದಲ್ಲಿದ್ದು ವಿಶೇಷವಾದ ವೇದನೆಯನ್ನು ಉಂಟುಮಾಡುವುದರಿಂದ "**ಶಂಬೂಕಾವರ್ತ**" ಭಗಂದರ. "वायुः प्रकुपितः प्रकुपितौ पित्तश्लेष्माणौ परिगृह्याधो गत्वा पूर्ववदवस्थितः पादाङ्गुष्ठप्रमाणां पिडकां जनयति। सास्य तोददाहकण्ड्वादीन् वेदनाविशेषान् जनयति। अप्रतिक्रियमाणा च पाकमुपैति। व्रणश्च नानाविधवर्णमास्रावं स्रवति। पूर्णनदीशम्बूकावर्तवच्चात्र समुत्तिष्ठन्ति वेदनाविशेषाः। तं भगन्दरं शम्बूकावर्तमित्याचक्षते" सुश्रुत० निदान० ४-८।

**(5) ಆಗಂತುಕ (ಶಲ್ಯಜ, ಉನ್ಮಾರ್ಗಿ) ಭಗಂದರ:** ಅನ್ನದೊಡನೆ ಮಾಂಸ ತಿನ್ನುವವನು ಅದರಲ್ಲಿದ್ದ ಎಲುಬಿನ ಚೂರನ್ನು ತಿಳಿಯದೆ ನುಂಗಿದಾಗ ಆ ಎಲುಬಿನ ಚೂರು ಪುರೀಷ (ಮಲ) ದೊಡನೆ ಬೆರೆತುಹೋಗಿ ಅಪಾನ ವಾಯುವಿನಿಂದ ಕೆಳಕ್ಕೆ ತಳ್ಳಲ್ಪಟ್ಟು ಮಾರ್ಗ ತಪ್ಪಿ ಬರು

ವುದರಿಂದ ಗುದದಲ್ಲಿ ಗಾಯವುಂಟಾಗುವುದು. ಆ ಗಾಯವು ಕೊಳೆತು ದುರ್ಗಂಧವುಂಟಾಗುವುದು. ಆ ಗಾಯದಲ್ಲಿ ರಕ್ತ ಕೀವುಗಳು ತುಂಬಿಕೊಂಡು ಕ್ರಿಮಿಗಳು ಹುಟ್ಟಿಕೊಳ್ಳುವುವು. ಕ್ರಮೇಣ ಆ ಕ್ರಿಮಿಗಳು ಗುದಪ್ರದೇಶವನ್ನು ತಿನ್ನುತ್ತ ಬಂದು ಕೊನೆಗೆ ಪಾರ್ಶ್ವದಲ್ಲಿ ಗುದವನ್ನು ಸೀಳುವುದು. ಆದರ ಮೂಲಕ ವಾತ ಮಲ ಮೂತ್ರ ಮತ್ತು ರೇತಸ್ಸುಗಳು ಹೊರಕ್ಕೆ ಬರುವುವು. ಇದು ಆಗಂತುಕ "ಉನ್ಮಾರ್ಗಿ" ಭಗಂದರ. "मूढेन मांसलुब्धेन यदस्थिशल्यमन्नेन सहाभ्यवहृतं यदाऽवगाढपुरीषोन्मिश्रमपानेनाधःप्रेरितम् असम्यगागतं गुदमपक्षिणोति तदा क्षतनिमित्तः कोथ उपजायते। तस्मिंश्च क्षते पूयरुधिरावकीर्णमांसकोथे भूमाविव जलक्लिन्नायां क्रिमयः संजायन्ते। ते भक्षयन्तो गुदम् अनेकधा पार्श्वतो दारयन्ति। तैर्मार्गैः वातमूत्रपुरीषरेतांस्यभिनिःसरन्ति। तं भगन्दरमुन्मार्गिणमित्याचक्षते" सुश्रुत० निदान० ४-९।

**भगभक्षक ಭಗಭಕ್ಷಕ** (पुं०) ತಲೆಹಿಡುಕ, ದುರ್ವ್ಯವಹಾರದಿಂದ ಜೀವಿಸುವವನು. भगं योनिः तमुपाश्रित्य भक्षयति जीविकां निर्वाहयति—भक्ष (अदने) "ण्वुल्" (३-१-१३३)।

**भगवत् ಭಗವತ್** (पुं०) 1. ಹರಿ, ವಿಷ್ಣು. 2. ಹರ, ಪರಶಿವ. 3. ಬುದ್ಧದೇವ. ಅಣಿಮಾದಿ ಅಷ್ಟೈಶ್ವರ್ಯ ವೀರ್ಯ ಯಶಸ್ಸು ಸಂಪತ್ತು ಜ್ಞಾನ ಮತ್ತು ವೈರಾಗ್ಯ ಈ ಆರು ಐಶ್ವರ್ಯಗಳಿಂದ ಕೂಡಿರುವುದರಿಂದ ಭಗವಂತನು. भगः षडैश्वर्यमस्त्यस्य भग—नित्ययोगे "मतुप्" (५-२-९४)। मस्य वः (८-२-९)। "ऐश्वर्यस्य समग्रस्य वीर्यस्य यशसः श्रियः। ज्ञानवैराग्ययोश्चापि षण्णां भग इतीरणा"। "भगवानपि ता रात्रीः शारदोत्फुल्लमल्लिकाः। वीक्ष्य रन्तुं मनश्चक्रे योगमायामुपाश्रितः" भाग० १०-२९-१। (वि०) 4. ಪೂಜ್ಯ, ಸನ್ಮಾನ್ಯ. "भजतु प्रथमार्हणां यथार्हं भगवानेष भवार्णवैकसेतुः" याद० १५-८२। स्त्रियां "ङीप्" (४-१-६)। **-वती-ವತೀ.** 5. ಗೌರಿ, ಪಾರ್ವತಿ, ದುರ್ಗಾದೇವಿ. 6. ಲಕ್ಷ್ಮಿ. "भगवत्युमा भगवान् बुद्धे पूज्ये हरे हरौ" वैज०। 7. ಸರಸ್ವತಿ. 8. ಗಂಗೆ, 9. ಪೂಜ್ಯಳು, ಆರಾಧಿಸಲು ಅರ್ಹಳು. 10. ಅದೃಷ್ಟಶಾಲಿನಿ.

**भगवद्गीता ಭಗವದ್ಗೀತಾ** (स्त्री०) ಶ್ರೀಕೃಷ್ಣ ಪರಮಾತ್ಮನು ಅರ್ಜುನನಿಗೆ ಕರ್ಮ ಭಕ್ತಿ ಜ್ಞಾನಯೋಗಗಳನ್ನು ಉಪದೇಶಿಸಿದ ಒಂದು ಪವಿತ್ರ ಗ್ರಂಥ. ಇದರಲ್ಲಿ ಹದಿನೆಂಟು ಅಧ್ಯಾಯಗಳಿರುವುವು. [ವಿವರಕ್ಕೆ "गीता" ಪದದಲ್ಲಿ ನೋಡಿ.]

**भगवद्भक्त ಭಗವದ್ಭಕ್ತ** (पुं०) ಪರಮಾತ್ಮನಲ್ಲಿ ಭಕ್ತಿಯುಳ್ಳವನು. ಪರಮಾತ್ಮನ ಚರಣಾರವಿಂದಗಳ ಧ್ಯಾನ ಅರ್ಚನೆ ಪ್ರಣಾಮ ಪೂಜೆ ಇತ್ಯಾದಿಗಳಲ್ಲಿ ಆಸಕ್ತನಾದವನು. भगवतो भक्तः।

**भगाङ्कुर ಭಗಾಂಕುರ** (पुं०) ಅರ್ಶಸ್ಸು, ಮೂಲವ್ಯಾಧಿ. भगे अङ्कुर इव।

**भगाल ಭಗಾಲ** (न०) ತಲೆಯೋಲುಬು, ತಲೆಬುರುಡೆ. भजति सुखदुःखादिकमनेन—भज (सेवायाम्) "कालन्" बाहु०। कुत्वम् (७-३-५३)।

**भगालिन् ಭಗಾಲಿನ್** (पुं०) ಪರಶಿವ, ಪರಮೇಶ್ವರ. भगालं नृकपालमस्यास्ति "इनिः" (५-२-११५)। "शम्भुर्भगाली कपिशाञ्जनश्च" त्रिकाण्ड०।

**भगिन् ಭಗಿನ್** (वि०) ಅದೃಷ್ಟಶಾಲಿ.

**भगिनी ಭಗಿನೀ** (स्त्री०) 1. ಸಹೋದರೆ, ಒಡಹುಟ್ಟಿದವಳು, ಅಕ್ಕ ಮತ್ತು ತಂಗಿ. भगं इच्छा यत्नो वास्त्यस्याः "इनिः" (५-२-११५)। "ङीप्" (४-१-५)। 2. ಹೆಂಗಸು. 3. ಅದೃಷ್ಟಶಾಲಿನಿಯಾದ ಹೆಂಗಸು.

**भगिनीपति ಭಗಿನೀಪತಿ** (पुं०) ಅಕ್ಕತಂಗಿಯರ ಪತಿ, ಸಹೋದರಿಯ ಗಂಡ. भगिन्याः पतिः।

**भगीरथ ಭಗೀರಥ** (पुं०) ಇಕ್ಷ್ವಾಕುವಂಶದ ದಿಲೀಪರಾಜನ ಮಗ, ಸಗರ ಚಕ್ರವರ್ತಿಯ ಮೊಮ್ಮಗನಾದ ಅಂಶುಮಂತನ ಮೊಮ್ಮಗ. ಜಿತೇಂದ್ರಿಯನೂ ಪರಮ ಸಾಹಸಿಯೂ ಆದ ಭಗೀರಥನು ಕಪಿಲಮಹರ್ಷಿಯಿಂದ ದಗ್ಧರಾದ ತನ್ನ ಮುತ್ತುತಂದೆರಾದ ಅರವತ್ತುಸಹಸ್ರ ಮಂದಿ ಸಗರಚಕ್ರವರ್ತಿಯ ಪುತ್ರರಿಗೆ ಸದ್ಗತಿಯನ್ನುಂಟುಮಾಡಲು ಅನೇಕ ವರ್ಷಗಳ ಕಾಲ ಉಗ್ರವಾದ ತಪಸ್ಸನ್ನು ಆಚರಿಸಿ ಗಂಗಾನದಿಯನ್ನು ದೇವಲೋಕದಿಂದ ಭೂಲೋಕ ಮತ್ತು ಪಾತಾಲಲೋಕಗಳಿಗೆ ಕರೆತಂದು ಆ ನದಿಯ ನೀರಿನಿಂದ ಪಿತೃಕ್ರಿಯೆಯನ್ನು ಮಾಡಿ ಎಲ್ಲರಿಗೂ ದೇವತ್ವವನ್ನು ಸಂಪಾದಿಸಿಕೊಟ್ಟನು.

**भगीरथप्रयत्न ಭಗೀರಥಪ್ರಯತ್ನ** (पुं०) ಮಹಾ ಪ್ರಯತ್ನ, ಬಹಳ ಪ್ರಯಾಸದ ಯತ್ನ, ಬಹಳ ಕಷ್ಟ ಸಾಧ್ಯವಾದ ಕಾರ್ಯಸಾಧನೆಗೆ ನಡೆಸುವ ಪ್ರಯತ್ನ. ದೇವಲೋಕದಿಂದ ಗಂಗಾನದಿಯನ್ನು ಭೂಲೋಕಕ್ಕೆ ತರಲು ಭಗೀರಥನು ಮಹಾಪ್ರಯತ್ನ (ಪ್ರಯಾಸ)

ಪಟ್ಟಿದ್ದರಿಂದ ಇಂತಹ ಪ್ರಯತ್ನಕ್ಕೆ ಭಗೀರಥಪ್ರಯತ್ನ ವೆಂದು ಜನರು ಹೇಳುವರು.

**भगोल ಭಗೋಲ** (ಪುಂ) ನಕ್ಷತ್ರಗಳ ಮಂಡಲ, ರಾಶಿಚಕ್ರ.

**भग्न ಭಗ್ನ** (ನಂ) 1. ಕಾಲು ಮೊದಲಾದುವುಗಳ ಮೂಳೆ ಮುರಿಯುವುದು, ಎಲುಬು ಮುರಿದುಹೋಗುವುದು. भज्यते आमर्द्यते विश्लिष्यते—भञ्जो (आमर्दने) भावे "क्तः" (३-३-११४)। ಮೂಳೆಯ ಮುರಿತವು (1) ಸಂಧಿಮುಕ್ತ ಮತ್ತು (2) ಕಾಂಡಭಗ್ನ ಎಂದು ಎರಡು ವಿಧ. ಸಂಧಿಮುಕ್ತವು (1) ಉತ್ಪಿಷ್ಟ, (2) ವಿಶ್ಲಿಷ್ಟ, (3) ವಿವರ್ತಿತ, (4) ಅವಕ್ಷಿಪ್ತ, (5) ಅತಿಕ್ಷಿಪ್ತ ಮತ್ತು (6) ತಿರ್ಯಕ್‌ಕ್ಷಿಪ್ತ ಎಂದು ಆರು ವಿಧ. ಕಾಂಡಭಗ್ನವು (1) ಕರ್ಕಟಕ, (2) ಅಶ್ವಕರ್ಣ, (3) ಚೂರ್ಣಿತ, (4) ಪಿಚ್ಚಿತ, (5) ಅಸ್ಥಿಚ್ಛಲ್ಲಿತ, (6) ಕಾಂಡಭಗ್ನ, (7) ಮಜ್ಜಾನುಗತ, (8) ಅತಿಪಾತಿತ, (9) ವಕ್ರ, (10) ಭಿನ್ನ, (11) ಪಾಟಿತ ಮತ್ತು (12) ಸ್ಫುಟಿತ ಎಂದು ಹನ್ನೆರಡುವಿಧ. सुश्रुत० निदान० १५-५,८। ಮಣಿಕಟ್ಟು ಮೊಳಕೈ ಜಾನು (ಮಂಡಿ) ಪಿರ್ರೆ ಬೆನ್ನೆಲುಬು ಇವುಗಳು ಮುರಿದರೆ ಚಿಕಿತ್ಸೆಯಿಂದ ಎಲುಬುಗಳನ್ನು ಮತ್ತೆ ಸೇರಿಸಲು ಸಾಧ್ಯ. "मणिबन्धे कूर्परे च जानौ भग्ने कटौ तथा। पृष्ठवंशे विभग्ने च साध्यान्येतानि सत्तम"। ಹೆಗಲು ಮತ್ತು ಮೊಳಕೈಗಳ ಮಧ್ಯಭಾಗ ಬೆನ್ನೆಲುಬಿನ ಕೆಳಭಾಗ ಎದೆ ಮತ್ತು ತೊಡೆಗಳ ಎಲುಬುಗಳು ಮುರಿದರೆ ಚಿಕಿತ್ಸೆಗೆ ಸಾಧ್ಯವಾಗುವುದಿಲ್ಲ. "स्कन्धकूर्परमध्ये च तथा च त्रिकमध्यतः। उरसि क्रोडके चैव विभग्नं तदसाध्यकम्"। (ವಿಂ) 2. ಒಡೆಯಲ್ಪಟ್ಟ, ಮುರಿಯಲ್ಪಟ್ಟ, ಚೂರುಮಾಡಲ್ಪಟ್ಟ. भञ्जो (आमर्दने) "क्तः" (३-२-१०२)। "भग्नद्रुमाश्चक्रुरितस्ततो दिशः समुल्लसत्केतनकाननाकुलाः" माघ० १२-४९। 3. ಕೆಡಿಸಲ್ಪಟ್ಟ, ವ್ಯರ್ಥಗೊಳಿಸಲ್ಪಟ್ಟ. 4. ಪರಾಜಯಗೊಳಿಸಲ್ಪಟ್ಟ, ಸೋಲಿಸಲ್ಪಟ್ಟ. "आः कथमिदानीं भग्ना अपि पुनः प्रतिनिवृत्ताः पृष्ठानुसारिणः पर्यवष्टम्भयन्ति मां चमूपतयः" ಉಂ ರಾಂ ೫। 5. ನಾಶಪಡಿಸಲ್ಪಟ್ಟ.

**भग्नपादर्क्ष ಭಗ್ನಪಾದರ್ಕ್ಷ** (ನಂ) ಒಂದು ಪಾದವನ್ನು ಮುರಿದ ನಕ್ಷತ್ರ, ಮೂರು ಪಾದಗಳು ಒಂದು ರಾಶಿಗೆ ಸೇರಿದ ನಕ್ಷತ್ರ, ತ್ರಿಪಾದಿ ನಕ್ಷತ್ರ. ಕೃತ್ತಿಕೆ, ಪುನರ್ವಸು, ಉತ್ತರಫಲ್ಗುನಿ, ವಿಶಾಖೆ, ಉತ್ತರಾಷಾಢ ಮತ್ತು ಪೂರ್ವಾಭಾದ್ರ ಈ ಆರು ನಕ್ಷತ್ರಗಳು ಭಗ್ನಪಾದ ನಕ್ಷತ್ರಗಳು. ಇವಕ್ಕೆ ಪುಷ್ಕರವೆಂಬ ಸಂಜ್ಞೆ. भग्नपादं ऋक्षम्। "पुनर्वसूत्तराषाढा कृत्तिकोत्तरफल्गुनी। पूर्वभाद्रं विशाखा च षडेते पुष्कराः स्मृताः"। ಇವುಗಳ ಒಂದೊಂದು ಪಾದಗಳು ಬೇರೆ ಬೇರೆ ರಾಶಿಗಳಿಗೆ ಸೇರುವುದರಿಂದ ಇವು ಭಗ್ನಪಾದರ್ಕ್ಷಗಳು.

**भग्नपृष्ठ ಭಗ್ನಪೃಷ್ಠ** (ವಿಂ) 1. ಎದುರಾಗಿ ಬರುತ್ತಿರುವ, ಸಮ್ಮುಖವಾಗಿರುವ. भग्नं पृष्ठं यस्मिन्। "भग्नपृष्ठस्तु संमुखः" त्रिकाण्ड०। 2. ಬೆನ್ನು ಮುರಿದಿರುವ, ಭಗ್ನವಾದ ಬೆನ್ನೆಲುಬುಳ್ಳ. "भग्नपृष्ठकटिग्रीवं स्तब्धदृष्टि ह्यधोमुखम्। कष्टेन लिखितं पुस्तं यत्नेन परिपालयेत्"।

**भग्नप्रक्रम ಭಗ್ನಪ್ರಕ್ರಮ** (ಪುಂ) ಕ್ರಮಭಂಗ, ಪ್ರಾರಂಭಿಸಿದ ರೀತಿಯನ್ನು ಬಿಟ್ಟು ಬೇರೆ ಕ್ರಮದಲ್ಲಿ ಹೇಳುವುದು. भग्नः प्रक्रमः। ಇದು ಪ್ರಕ್ರಮಭಂಗವಾಗುವುದು. "एवमुक्तो मन्त्रिमुख्यैः रावणः प्रत्यभाषत" ಇಲ್ಲಿ ವಚ ಧಾತುವಿಗೆ ಕ್ರಮಭಂಗ ಬಂದಿರುವುದು. ಇದೊಂದು ಕಾವ್ಯದೋಷ.

**भग्नप्रतिज्ञ ಭಗ್ನಪ್ರತಿಜ್ಞ** (ವಿಂ) ಪ್ರತಿಜ್ಞೆಯನ್ನು ಮುರಿದವನು, ಕೊಟ್ಟ ಮಾತಿನಂತೆ ನಡೆಯದಿರುವವನು. भग्ना प्रतिज्ञा येन।

**भग्नमनस् ಭಗ್ನಮನಸ್** (ವಿಂ) ಉತ್ಸಾಹಭಂಗ ಮಾಡಲ್ಪಟ್ಟ, ಧೈರ್ಯ ಕೆಡಿಸಲ್ಪಟ್ಟ. भग्नं मनो यस्य।

**भग्नमनोरथ ಭಗ್ನಮನೋರಥ** (ವಿಂ) ಆಶಾಭಂಗ ಮಾಡಲ್ಪಟ್ಟ, ವಿಫಲವಾದ ಅಭಿಲಾಷೆಯುಳ್ಳ. भग्नो मनोरथो यस्य। "तथा समक्षं दहता मनोभवं पिनाकिना भग्नमनोरथा सती" कुमा० ५-१।

**भग्नव्रत ಭಗ್ನವ್ರತ** (ವಿಂ) ನಿಯಮವನ್ನು ಮುರಿದವನು, ನಿಯಮದಂತೆ ನಡೆಯದಿರುವವನು.

**भग्नसन्धि ಭಗ್ನಸಂಧಿ** (ವಿಂ) ದೇಹದಲ್ಲಿ ಮುರಿಯಲ್ಪಟ್ಟ ಎಲುಬುಗಳ ಕೀಲುಗಳುಳ್ಳವನು. भग्नः सन्धिः यस्य।

**भग्नसन्धिक ಭಗ್ನಸಂಧಿಕ** (ನಂ) ತಕ್ರ, ಮಜ್ಜಿಗೆ. भग्नो विश्लिष्टः दध्नः सन्धिरत्र।

**भग्नात्मन् ಭಗ್ನಾತ್ಮನ್** (ಪುಂ) ಚಂದ್ರ. भग्नः आत्मा शरीरं (कृष्णपक्षे) यस्य।

**भग्नाश ಭಗ್ನಾಶ** (ವಿಂ) ಆಶಾಭಂಗ ಮಾಡಲ್ಪಟ್ಟ, ವಿಫಲವಾದ ಅಭಿಲಾಷೆಯುಳ್ಳ. भग्ना आशा यस्य। "भग्नाशस्य करण्डपिण्डिततनोर्म्लानेन्द्रियस्य क्षुधा" भर्तृ० १-८२।

**भग्नोत्साह ಭಗ್ನೋತ್ಸಾಹ** (ವಿಂ) ಉತ್ಸಾಹವಿಲ್ಲದವನಾಗಿ ಮಾಡಲ್ಪಟ್ಟ, ಧೈರ್ಯ ಕೆಡಿಸಲ್ಪಟ್ಟ, ಎದೆಗುಂದಿಸಲ್ಪಟ್ಟ. भग्नः उत्साहः यस्य।

**भग्नोद्यम ಭಗ್ನೋದ್ಯಮ** (वि०) ವಿಫಲವಾದ ಪ್ರಯತ್ನವುಳ್ಳ, ವ್ಯರ್ಥವಾದ ಪ್ರಯತ್ನವುಳ್ಳ. भग्नः उद्यमः यस्य। "मन्ये दुर्जनचित्तवृत्तिहरणे धातापि भग्नोद्यमः" हितो० १-१६५।

**भङ्क्तृ ಭಂಕ್ತೃ** (वि०) ಒಡೆಯುವವನು, ಸೀಳುವವನು. भञ्जो (आमर्दने) "तृन्" (३-२-१३५)। "प्राकारस्य च भेत्तारं परिखाणां च पूरकम्। द्वाराणां चैव भङ्क्तारं क्षिप्रमेव प्रवासयेत्" मनु० ९-२८९।

**भङ्गः ಭಂಗ** (पुं०) 1. ಒಡೆಯುವುದು, ಮುರಿಯುವುದು. भञ्जो (आमर्दने) भावे "घञ्" (३-३-१८)। "बभौ स भिन्दन् बृहतस्तरङ्गान् वार्यर्गलाभङ्ग इव प्रवृत्तः" रघु० ५-४५। 2. ಎಳೆದುಕೊಳ್ಳುವುದು, ಸಂಕೋಚ ಮಾಡಿಕೊಳ್ಳುವುದು, ಬಗ್ಗಿಸಿ ಹಿಂದಕ್ಕೆ ಹೆಣೆದುಕೊಳ್ಳುವುದು. "ग्रीवाभङ्गाभिरामं मुहुरनुपतति स्यन्दने बद्धदृष्टिः" शाकु० १-७। 3. ಪ್ರತಿಬಂಧ, ತಡೆ. "प्रत्यब्रवीच्चैनमिषुप्रयोगे तत्पूर्वभङ्गे वितथप्रयत्नः" रघु० २-४२। 4. ಪರಾಜಯ, ಸೋಲು. "धनुषा सममाशु विद्विषां कुलमाशङ्कितभङ्गमानतिम्" माघ० १६-६३। 5. ತುಂಡು, ಚೂರು. "चित्रद्विपाः पद्मवनावतीर्णाः करेणुभिर्दत्तमृणालभङ्गाः" रघु० १६-१६। 6. ತಿರಸ್ಕಾರ, ನಿರಾಕರಣೆ. "अभ्यर्थनाभङ्गभयेन साधुर्माध्यस्थ्यमिष्टेऽप्यवलम्बतेऽर्थे" कुमा० १-५२। 7. ಚೆದರಿಹೋಗುವುದು. "अनन्तरं च यात्राभङ्गप्रचलितस्य महतः पौरनैगमजनस्य संकुलेन विघटितायां तस्याम्" मालती० १। 8. ಸೀಳು, ಬಿರುಕು, ಒಡಕು. 9. ಬೇರ್ಪಡಿಸುವುದು, ಪ್ರತ್ಯೇಕಗೊಳಿಸುವುದು. 10. ಒಂದು ರೋಗ. 11. ಅಲೆ, ತರಂಗ. भञ्जो कर्म० "घञ्" (३-३-१९)। 12. ಗಮನ, ಚಲನ. 13. ನಾಲೆ, ಕಾಲುವೆ. 14. ನಾಶ, ಅಳಿವು. "प्रसभं भङ्गमभङ्गुरोदयः" माघ० १६-७२। 15. ವಂಚನೆ, ಮೋಸ. 16. ಕೌಟಿಲ್ಯ, ವಕ್ರತೆ. "भ्रूभङ्गे रचितेऽपि दृष्टिरधिकं सोत्कण्ठमुद्वीक्षते" अमरु० २८।

**भङ्गवासा ಭಂಗವಾಸಾ** (स्त्री०) ಹರಿದ್ರೆ, ಅರಿಶಿನ. भङ्गेन वासः सौरभं यस्याः।

**भङ्गा ಭಂಗಾ** (स्त्री०) ಸಣಬಿನ ಗಿಡ. भज्यते — भञ्जो (आमर्दने) "घञ्" (३-३-१२१)।

**भङ्गि ಭಂಗಿ, भङ्गी ಭಂಗೀ** (स्त्री०) 1. ರೂಪಾಂತರ, ಬೇರೆ ಪ್ರಕಾರ, ಬೇರೆ ರೀತಿ. भञ्जो (आमर्दने) "इन्" (उ० ४-११७)। कुत्वम् (७-३-५३)। वा "ङीष्" (ग० ५०)। "पर्यायोक्तं तु गम्यस्य वचो भङ्ग्यन्तराश्रयम्"। 2. ಮುರುಕು, ಒಡಕು, ಬಿರುಕು. 3. ವಿಚ್ಛಿತ್ತಿ, ಸೌಂದರ್ಯವನ್ನುಂಟುಮಾಡುವ ವರ್ಣಕ್ರಿಯೆ. "यानादवातरददूरमहीतलेन मार्गेण भङ्गिरचितस्फटिकेन रामः" रघु० १३-६९। 4. ವಂಚನೆ, ಮೋಸ, ಠಕ್ಕು. 5. ವ್ಯಾಜ, ನೆಪ, ಸಬೂಬು. "यः पाञ्चजन्यप्रतिबिम्बभङ्ग्या धाराम्भसः फेनमिव व्यनक्ति" विक्र० देवच०। 6. ವೀಚಿ, ತರಂಗ, ಅಲೆ. 7. ಸಮಯೋಚಿತವಾದ ಉತ್ತರ. 8. ಡೊಂಕುಮಾರ್ಗ, ಸೊಟ್ಟು ದಾರಿ. 9. ವಿನಯ, ಗರ್ವವಿಲ್ಲದಿರುವಿಕೆ. 10. ವ್ಯಂಗ್ಯೋಕ್ತಿ, ಹಾಸ್ಯದಿಂದ ಕೂಡಿದ ವ್ಯಂಗ್ಯದ ಮಾತು. 11. ಅವಕಾಶ, ನಡುವಣ ಕಾಲ. 12. ಘಕ್ಕೆ, ಚಾತುರ್ಯ.

**भङ्गिन् ಭಂಗಿನ್** (वि०) ನಾಶಸ್ವಭಾವದ, ನಶ್ವರವಾದ, ಶಾಶ್ವತವಲ್ಲದ, ಕ್ಷಣಿಕವಾದ. भङ्गः नाशोऽस्यास्ति "इनिः" (५-२-११५)। "तदपि तत्क्षणभङ्गि करोति चेदहह कष्टमपण्डितता विधेः" भर्तृ० १-८६।

**भङ्गुर ಭಂಗುರ** (वि०) 1. ನಶ್ವರವಾದ, ನಾಶದ ಸ್ವಭಾವದ. भञ्जो (आमर्दने) "घुरच्" (३-२-१६१)। "सन्दृश्य क्षणभङ्गुरं तदखिलं धन्यस्तु संन्यस्यति" भर्तृ० ३-२०। 2. ಒಡೆಯುವ ಸ್ವಭಾವದ, ತುಂಡಾಗುವ, ಒಡೆದು ಚೂರಾಗುವ ಸ್ವಭಾವದ. 3. ವಕ್ರವಾದ, ಡೊಂಕಾದ, ಕುಟಿಲವಾದ. "शशिमुखि तव भाति भङ्गुरभ्रूः युवजनमोहकरालकालसर्पी" गीतगो० १०-३। 4. ವಂಚನೆಯ, ಮೋಸದ. 5. ಬದಲಾವಣೆಯ ಸ್ವಭಾವದ. (पुं०) 6. ನದಿಯ ಡೊಂಕು. (स्त्री०) —रा —ರಾ. 7. ಅತಿಬಜೆ.

**भङ्गय ಭಂಗ್ಯ** (न०) 1. ಸಣಬು ಬೆಳೆಯುವ ಭೂಮಿ. भङ्गानां भवनं क्षेत्रम् वा "यत्" (५-२-४)। पक्षे "खञ्" (५-२-१)। **भाङ्गीनम् ಭಾಂಗೀನವ್.** (वि०) 2. ಮುರಿಯಲ್ಪಡುವ. 3. ತೊಂದರೆಪಡಿಸಲ್ಪಡುವ. 4. ನೋಯಿಸಲ್ಪಡುವ.

**भचक्र ಭಚಕ್ರ** (न०) 1. ರಾಶಿಚಕ್ರ. 2. ನಕ್ಷತ್ರಮಂಡಲ.

**भज — सेवायाम्** (भ्वा० उभ० सक० अनि०)। भजति, —ते। बभाज, भेजे। भक्ता। भक्ष्यति, —ते। भजतु, —ताम्। अभजत्, —त। भजेत्, —त। ಇತ್ಯಾದಿ. 1. ಭಾಗಮಾಡು, ವಿಭಾಗಿಸು. "भजेरन् पैतृकं रिक्थमनीशास्ते हि जीवतोः" मनु० ९-१०४। 2. ಪಾಲು

ತೆಗೆದುಕೊ, ಹಂಚಿಕೊ. "पित्र्यं वा भजते शीलं मातुर्वोभयमेव वा" मनु० १०-५९। 3. ಸ್ವೀಕರಿಸು, ಅಂಗೀಕರಿಸು. "भजतु प्रथमार्हणां यथार्हं भगवानेष भवार्णवैकसेतुः" याद० १५-८२। 4. ಆಶ್ರಯಹೊಂದು, ಅವಲಂಬಿಸು. "न कश्चिद्वर्णानामपथमपकृष्टोऽपि भजते" शाकु० ५-१०। 5. ಆಚರಿಸು, ಪಾಲಿಸು. "जुगोपात्मानमत्रस्तो भेजे धर्ममनातुरः" रघु० १-२१। 6. ಸೇವಿಸು, ಪೂಜಿಸು. "भजन्ति यस्मिन् पदयोरमुष्य न्यासं शुभं निश्चितयोगलक्ष्याः" याद० १८-५६। 7. ಪಡೆ, ಹೊಂದು, ತಾಳು. "अनुभूय हिरण्यरावणत्वे भजते सम्प्रति चेदिराजभावम्" याद० १५-१५। 8. ಹೊಂದು, ಅನುಭವಿಸು, ಗುರಿಯಾಗು. "भजन्ति विपदस्तूर्णमतिक्रामन्ति सम्पदः" भट्टि० १८-४। 9. ಸೇವಿಸು, ಉಪಚರಿಸು. "दोहावसाने पुनरेव दोग्ध्रीं भेजे भुजोच्छिन्नरिपुर्निषण्णाम्" रघु० २-२३। 10. ಆರಿಸು, ಆಯ್ದುಕೊ. "सन्तः परीक्ष्यान्यतरद्भजन्ते मूढः परप्रत्ययनेयबुद्धिः" माल० १-२। 11. ಅನುಗ್ರಹಿಸು, ಕೃಪೆಮಾಡು, ದಯೆ ತೋರಿಸು.

**कर्मणि** :—भज्यते। भज्यताम्। अभज्यत। भज्येत। अभाजि।

**केवलात् कृत्सु** :—भक्तव्यम्। भजनीयम्। भाग्यम्। भक्तः। भक्तवान्। भजन्, भजन्ती। भजमानः। भक्ष्यन्, –ती, भक्ष्यन्ती। भक्ष्यमाणः। भक्ताम्। भक्तुम्। भजनम्। भक्त्वा। विभज्य। भाजंभाजम्। भक्त्वाभक्त्वा।

**भजत् ಭಜತ್** (वि०) 1. ಪೂಜಿಸುತ್ತಿರುವ, ಸೇವಿಸುತ್ತಿರುವ. भज (सेवायाम्) "शतृ" (३-२-१२४)। 2. ಸೇವಿಸುತ್ತಿರುವ, ಉಪಚರಿಸುತ್ತಿರುವ. 3. ಆಶ್ರಯ ಪಡೆಯುತ್ತಿರುವ, ಅವಲಂಬಿಸುತ್ತಿರುವ. 4. ಸ್ವೀಕರಿಸುತ್ತಿರುವ, ಅಂಗೀಕರಿಸುತ್ತಿರುವ. 5. ಹೊಂದುತ್ತಿರುವ, ಪಡೆಯುತ್ತಿರುವ. "दोषं तस्य तथाविधस्य भजतश्चापस्य गृह्णन् गुणम्" नैष० १२-९७। स्त्रियां "ङीप्" (४-१-६)। **–न्ती –ನ್ತೀ.** "सरित इव मृगीदृशस्तमेकं महितगुणौघमहोदधिं भजन्त्यः" याद० २४-६९।

**भजन ಭಜನ** (न०) 1. ಸೇವಿಸುವುದು, ಪೂಜಿಸುವುದು. भज (सेवायाम्) "ल्युट्" (३-३-११५)। 2. ಸೇವಿಸುವುದು, ಉಪಚರಿಸುವುದು. 3. ಆಶ್ರಯಿಸುವುದು. 4. ಭಾಗಿಸುವುದು, ಭಾಗಮಾಡುವುದು.

**भजमान ಭಜಮಾನ** (वि०) 1. ಭಾಗಮಾಡುವವನು. भज (सेवायाम्) "शानच्" (३-२-१२४)। 2. ಸೇವಿಸುವವನು, ಪೂಜಿಸುವವನು. 3. ಉಪಚರಿಸುವವನು. 4. ನ್ಯಾಯವಾಗಿ ಬಂದ, ತಿಳಿದವರು ಸಮ್ಮತಿಸಿದ, ಯುಕ್ತವಾದ. भज ताच्छील्ये "चानश्" (३-२-१२९)। "युक्तमौपयिकं लभ्यं भजमानाभिनीतवत्" अम०।

**भञ्जक ಭಂಜಕ** (वि०) 1. ಮುರಿಯುವವನು, ಒಡೆಯುವವನು. भञ्जो (आमर्दने) "ण्वुल्" (३-१-१३३)। 2. ತಡೆಯುವವನು, ಅಡ್ಡಿಪಡಿಸುವವನು. 3. ಕೆಡಿಸುವವನು, ವ್ಯರ್ಥಪಡಿಸುವವನು. 4. ನಿವಾರಿಸುವವನು, ಹೋಗಲಾಡಿಸುವವನು.

**भञ्जत् ಭಂಜತ್** (वि०) 1. ಮುರಿಯುತ್ತಿರುವ, ಒಡೆಯುತ್ತಿರುವ. 2. ನೋವುಂಟುಮಾಡುತ್ತಿರುವ. 3. ಅಡ್ಡಿಪಡಿಸುತ್ತಿರುವ. 4. ವ್ಯರ್ಥಪಡಿಸುತ್ತಿರುವ. भञ्जो (आमर्दने) "शतृ" (३-२-१२४)। स्त्रियां "ङीप्" (४-१-६)। **भञ्जती ಭಂಜತೀ.**

**भञ्जन ಭಂಜನ** (न०) 1. ಮುರಿಯುವುದು, ಒಡೆಯುವುದು. भञ्जो (आमर्दने) "ल्युट्" (३-३-११५)। "अवमर्दः प्रतीघातः केतनानाञ्च भञ्जनम्" भा० शान्ति० ५८-६५। 2. ಕೆಡಿಸುವುದು, ವ್ಯರ್ಥಪಡಿಸುವುದು. 3. ಕ್ಲೇಶಪಡಿಸುವುದು, ನೋಯಿಸುವುದು. 4. ಅಡ್ಡಿಪಡಿಸುವುದು, ತಡೆಯುವುದು. 5. ನಿವಾರಿಸುವುದು, ಹೋಗಲಾಡಿಸುವುದು, ಪರಿಹರಿಸುವುದು. "तदुदितभयभञ्जनाय यूनां त्वदधरसीधुसुधैव सिद्धमन्त्रः" गीतगो० १०-३। (वि०) 6. ಮುರಿಯುವ, ಒಡೆಯುವ. भञ्जो कर्त० "ल्युः" (३-१-१३४)। 7. ಕೆಡಿಸುವ, ವ್ಯರ್ಥಪಡಿಸುವ. 8. ನೋಯಿಸುವ. 9. ನಿವಾರಿಸುವ, ಹೋಗಲಾಡಿಸುವ. 10. ಅಡ್ಡಿಪಡಿಸುವ, ತಡೆಯುಂಟುಮಾಡುವ.

**भञ्जनीय ಭಂಜನೀಯ** (वि०) 1. ಒಡೆದುಹಾಕಲ್ಪಡುವ. 2. ಒಡೆಯಬೇಕಾದ. 3. ಒಡೆಯಲು ಸಾಧ್ಯವಾದ. 4. ಒಡೆಯಲು ಅರ್ಹವಾದ. भञ्जो (आमर्दने) "अनीयर्" (३-१-९६)। 5. ಹೋಗಲಾಡಿಸಲ್ಪಡುವ. 6. ಹೋಗಲಾಡಿಸಲು ಶಕ್ಯವಾದ. 7. ನಿವಾರಿಸಬೇಕಾದ. 8. ನಿವಾರಿಸಲು ಶಕ್ಯವಾದ. 9. ತಡೆಯಲ್ಪಡುವ. 10. ತಡೆಯಬೇಕಾದ, ಅಡ್ಡಿಪಡಿಸಬೇಕಾದ. 11. ತಡೆಯಲು ಅರ್ಹವಾದ. 12. ತಡೆಯಲು ಶಕ್ಯವಾದ. 13. ವ್ಯರ್ಥಪಡಿಸಲ್ಪಡುವ. 14. ವ್ಯರ್ಥಪಡಿಸಬೇಕಾದ. 15. ವ್ಯರ್ಥ

ಪಡಿಸಲು ಅರ್ಹವಾದ. 16. ವ್ಯರ್ಥಪಡಿಸಲು ಸಾಧ್ಯವಾದ. 17. ನೋಯಿಸಲ್ಪಡುವ. 18. ನೋಯಿಸಬೇಕಾದ. 19. ನೋಯಿಸಲು ಸಾಧ್ಯವಾದ. 20. ನೋಯಿಸಲು ಅರ್ಹವಾದ. "तव्य:" (३-१-९६)। **भङ्क्तव्यम् ಭಂಕ್ತ್ವ್ಯಮ್.**

**भञ्जनक ಭಂಜನಕ** (पुं०) ಕಫ ಮತ್ತು ವಾತದೋಷದಿಂದ ಮುಖವನ್ನು ವಕ್ರವಾಗಿಸುವ ಮತ್ತು ಹಲ್ಲನ್ನು ಉದುರಿಸುವ ಒಂದು ವಿಧ ಮುಖರೋಗ. भनक्ति — भञ्जो (आमर्दने) "ल्यु:" (३-१-१३४)। संज्ञायां "कन्"। "वक्त्रं वक्रं भवेद्यस्य दन्तभङ्गश्च जायते। कफवातकृतो व्याधि: स भञ्जनकसंज्ञित:"।

**भट ಭಟ** (पुं०) 1. ಸೈನಿಕ, ಯುದ್ಧಮಾಡುವವನು, ಸಿಪಾಯಿ. भटति—भट (भृतौ) "अच्" (३-१-१३४)। "तैर्भृत्वापि समं विद्वान् सन्तोषं न भटा ययु:" कुमा० १६-३५। 2. ಮ್ಲೇಚ್ಛಜಾತಿಯವನು. 3. ಕೂಲಿಗಾಗಿ ಕೆಲಸಮಾಡುವ ಸೈನಿಕ. 4. ವೀರಪುರುಷ. "पदे पदे सन्ति भटा रणोद्भटा न तेषु हिंसारस एष पूर्यते" नैष० १-१३२। 5. ಪಾಮರ. "भट: पामरभेदे च वीरे च" विश्व०। 6. ರಾಕ್ಷಸ.

**भटा ಭಟಾ** (स्त्री०) ಇಂದ್ರವಾರುಣಿ, ಹಾವುಮೆಕ್ಕೆಗಿಡ.

**भटित्र ಭಟಿತ್ರ** (न०) ಶೂಲದಲ್ಲಿಟ್ಟು ಬೇಯಿಸಲ್ಪಟ್ಟ ಮಾಂಸ, ಸಲಾಕಿಯ ತುದಿಯಲ್ಲಿ ಪಕ್ವವಾದ ಮಾಂಸ. भट (भृतौ) "इत्र:" (उ० ४-१७३)। "शूलाकृतं भटित्रं च" अम०।

**भट्ट ಭಟ್ಟ** (पुं०) 1. ಸ್ತುತಿಪಾಠಕ, ಹೊಗಳುಭಟ್ಟ. भट (भृतौ) "तन्" बाहु०। 2. ಹೊಗಳುವ ಪ್ರವೃತ್ತಿಯುಳ್ಳ ಮಿಶ್ರಜಾತಿಯವನು. "क्षत्रियाद्विप्रकन्यायां भट्टो जातोऽनुवाचक:"। 3. ವಿದ್ವಾಂಸರ ಹೆಸರಿನೊಡನೆ ಸೇರಿಸುವ ಒಂದು ಬಿರುದು. "तदामुष्यायणस्य तत्रभवतो भट्टगोपालस्य पौत्र: पदवाक्यप्रमाणज्ञो भवभूतिर्नाम" मालती० १। भट्टनारायण: ಇತ್ಯಾದಿ. 4. ಪಂಡಿತ, ವಿದ್ವಾಂಸ. (न०) 5. ಸ್ವಾಮಿತ್ವ, ಯಜಮಾನತನ.

**भट्टनारायण ಭಟ್ಟನಾರಾಯಣ** (पुं०) ವೇಣೀಸಂಹಾರ ನಾಟಕವನ್ನು ರಚಿಸಿದ ಒಬ್ಬ ಕವಿ.

**भट्टाचार्य ಭಟ್ಟಾಚಾರ್ಯ** (पुं०) ಉತ್ತಮ ಉಪದೇಶಕನಿಗೆ ಅಥವಾ ದೊಡ್ಡ ಪಂಡಿತನಿಗೆ ಕೊಡುವ ಒಂದು ಬಿರುದು.

**भट्टार ಭಟ್ಟಾರ** (पुं०) 1. ಸ್ವಾಮಿ, ಯಜಮಾನ. भट्टं स्वामित्वं ऋच्छति — ऋ (गतौ) "अण्" (३-२-१)। 2. ಹೆಸರಿನೊಡನೆ ಸೇರಿಸಲ್ಪಡುವ ಒಂದು ಗೌರವದ ಪದ, -ಬಿರುದು. (वि०) 3. ಪೂಜ್ಯ, ಗೌರವಾರ್ಹ. "भट्टारो भगवान् पूज्य:" त्रिकाण्ड०।

**भट्टारक ಭಟ್ಟಾರಕ** (पुं०) 1. ರಾಜ, ದೊರೆ. (ನಾಟಕಗಳಲ್ಲಿ ಮಾತ್ರ ಈ ಪ್ರಯೋಗ). भट्टार संज्ञायां "कन्"। 2. ದೇವತೆ. 3. ತಪೋಧನ, ಋಷಿ. "भट्टारको नृपे नाट्यवाचा देवे तपोधने" मेदि०।

**भट्टारिका ಭಟ್ಟಾರಿಕಾ** (स्त्री०) 1. ರಾಜಮಾತೆ, ರಾಜನ ತಾಯಿ (ನಾಟಕದಲ್ಲಿ ಮಾತ್ರ ಈ ಪ್ರಯೋಗ.) "भट्टारिका राजमाता तत्पुत्री भर्तृदारिका" वैज०। 2. ದೇವಾಂಗನೆ.

**भट्टि ಭಟ್ಟಿ** (पुं०) ರಾಮಚರಿತವೆಂಬ ಒಂದು ಮಹಾಕಾವ್ಯವನ್ನು ರಚಿಸಿದ ಒಬ್ಬ ಮಹಾಕವಿ. ಈ ಕವಿಯು ಮಹಾವೈಯಾಕರಣ. ಈತನ ಕಾವ್ಯವು ಕವಿಯ ಹೆಸರಿನಲ್ಲೇ ಪ್ರಸಿದ್ಧವಾಗಿ "भट्टिकाव्यम्" ಎಂದು ವ್ಯವಹರಿಸಲ್ಪಟ್ಟಿದೆ. ಈ ಭಟ್ಟಿಕಾವ್ಯವು ವ್ಯಾಕರಣಶಾಸ್ತ್ರದ ಅಧ್ಯಯನದ ಫಲವಾಗಿ ರಚಿತವಾಗಿದೆ.

**भट्टिनी ಭಟ್ಟಿನೀ** (स्त्री०) 1. ರಾಣಿ, ಮಹಿಷಿ, ರಾಜನ ಪತ್ನಿ (ನಾಟಕಗಳಲ್ಲಿ ಮಾತ್ರ ಈ ಪ್ರಯೋಗ). 2. ಬ್ರಾಹ್ಮಣನ ಪತ್ನಿ. "भट्टिनी द्विजभार्यायां नाट्योक्तौ राजयोषिति" मेदि०।

**भड ಭಡ** (पुं०) ಒಬ್ಬ ಮಿಶ್ರಜಾತಿಯವನು.

**भडिल ಭಡಿಲ** (पुं०) 1. ವೀರ, ಶೂರ. 2. ಸೇವಕ. भडि (परिभाषणे) "इलच्" (उ० १-५४)। "भडिलौ शूरसेवकौ"।

**भणक ಭಣಕ** (वि०) ಮಾತಾಡುವವನು. भण (शब्दे) "ण्वुल्" (३-१-१३३)।

**भणत् ಭಣತ್** (वि०) ಮಾತಾಡುತ್ತಿರುವ, ಹೇಳುತ್ತಿರುವ. भण (शब्दे) "शतृ" (३-२-१२४)। "स एष पक्षीति भणन्तमभ्यधात्" नैष० ९-१२८।

**भणन ಭಣನ** (न०) ಮಾತಾಡುವುದು. भण (शब्दे) भावे "ल्युट्" (३-३-११५)।

**भणित ಭಣಿತ** (वि०) ಹೇಳಲ್ಪಟ್ಟ. भण (शब्दे) "क्त:" (३-२-१०२)। "श्रीजयदेवभणितमतिसुन्दरमोहनमधुरिपुरूपम्" गीतगो० २-८।

**भणिति ಭಣಿತಿ** (स्त्री०) ಮಾತು, ವಾಕ್ಕು, ವಾಕ್ಯ. भण (शब्दे) "क्तिन्" (३-३-९४)। "न येषामानन्दं जयति जगन्नाथभणिति:" भा० वि०।

**भण्टाकी ಭಂಟಾಕೀ** (स्त्री०) ಬದನೆಗಿಡ. भट (भृतौ) "आकः" (उ० ४-१५)। निपा०।

**भण्टुक ಭಂಟುಕ** (पुं०) ಶ್ಯೋನಾಕ ವೃಕ್ಷ, ಹೆಮ್ಮರ.

**भण्ड ಭಂಡ** (पुं०) ವಿದೂಷಕ, ಹಾಸ್ಯಗಾರ. भडि (परिभाषणे) "अच्" (३-१-१३४)।

**भण्डक ಭಂಡಕ** (पुं०) ದಾಸರಿ ಹಕ್ಕಿ.

**भण्डन ಭಂಡನ** (न०) 1. ಕವಚ, ಅಂಗಿ. 2. ಯುದ್ಧ, ಕಾಳಗ. 3. ವಂಚನೆ, ಮೋಸ. भडि (परिभाषणे) "ल्युट्" (३-३-११५, ११७)। "भण्डनं कवचे युधि। खलीकारे" हेम०।

**भण्डहासिनी ಭಂಡಹಾಸಿನೀ** (स्त्री०) ವೇಶ್ಯೆ, ಸೂಳೆ. भण्डेन सह हसति—हसे (हसने) "णिनिः" (३-२-७८)। "ङीप्" (४-१-५)।

**भण्डिल ಭಂಡಿಲ** (पुं०) 1. ಶಿರೀಷವೃಕ್ಷ, ಬಾಗೆಮರ. भडि (परिभाषणे) "इलच्" (उ० १-५४)। "अथ भण्डिले। कपीतनः शिरीषश्च" वैज०। 2. ದೂತ. 3. ಕಲ್ಯಾಣ, ಶುಭ, ಮಂಗಳ. "भण्डिलो दूतः कल्याणं च" उणा०।

**भण्डी ಭಂಡೀ** (स्त्री०) 1. ಬಾಗೆಮರ. 2. ಮಂಜಿಷ್ಠೆ.

**भण्डीर ಭಂಡೀರ** (पुं०) 1. ಬಾಗೆಮರ, ಶಿರೀಷವೃಕ್ಷ. 2. ಚಿಲುಕೀರೆ. भडि (परिभाषणे) "ईरन्" बाहु०। 3. ಆಲದಮರ.

**भण्डीरी ಭಂಡೀರೀ** (स्त्री०) ಮಂಜಿಷ್ಠೆ.

**भण्डील ಭಂಡೀಲ** (पुं०) ಮಂಜಿಷ್ಠೆ.

**भण्डूक ಭಂಡೂಕ** (पुं०) 1. ಒಂದು ಜಾತಿಯ ಮೀನು. 2. ಶ್ಯೋನಾಕ ವೃಕ್ಷ, ಹೆಮ್ಮರ.

**भदन्त ಭದಂತ** (पुं०) 1. ಬೌದ್ಧಭಿಕ್ಷು, ಬೌದ್ಧ ಸಂನ್ಯಾಸಿ. 2. ಜೈನ ಸಂನ್ಯಾಸಿ (ನಾಟಕಗಳಲ್ಲಿ ಮಾತ್ರ ಈ ಪ್ರಯೋಗ). "अथ नाटयोक्तयो राजा देवो भट्टारकोऽपि च .... भदन्ताः स्युः शाक्यक्षपणकादयः" वैज०। "भदन्त! निरूप्यतां तावदस्माकं प्रस्थानयोग्यदिवसः" मुद्रा० ४।

**भदाक ಭದಾಕ** (पुं०) ಶುಭ, ಮಂಗಳ. भदि (कल्याणे सुखे च) "आकः" (उ० ४-१५)। नलोपश्च।

**भद्र ಭದ್ರ** (पुं०) 1. ಶಿವ, ಪರಮೇಶ್ವರ. भदि (कल्याणे सुखे च) "रक्" नलोपश्च (उ० २-२९)। 2. ಶ್ರೀರಾಮಚಂದ್ರ. 3. ಶ್ರೀರಾಮನ ಒಬ್ಬ ದೂತ. "पप्रच्छ भद्रं विजितारिभद्रः" रघु० १४-३१। 4. ದಾಸರಿ ಹಕ್ಕಿ, ಗೀಜಗನ ಹಕ್ಕಿ. 5. ವೃಷಭ, ಎತ್ತು. 6. ಒಂದು ಜಾತಿಯ ಆನೆ. 7. ಮೇರುಪರ್ವತ. 8. ಕದಂಬ ವೃಕ್ಷ. (न०) 9. ಶುಭ, ಮಂಗಳ, ಕಲ್ಯಾಣ. "भद्रं भद्रं वितर भगवन् भूयसे मङ्गलाय" मालती० १-५। "विधाता भद्रं नो वितरतु मनोज्ञाय विधये" मालती० ६-७। 10. ವಿವಾಹ ಮೊದಲಾದ ಉತ್ಸವ. 11. ಮುಸ್ತಕ, ಕೊನ್ನಾರಿ. 12. ಸೌಖ್ಯ. 13. ಸ್ವರ್ಣ, ಚಿನ್ನ. (वि०) 14. ಶ್ರೇಷ್ಠ. "पप्रच्छ भद्रं विजितारिभद्रः" रघु० १४-३१। 15. ಸಾಧುವಾದ, ಒಳ್ಳೆಯದಾದ. (स्त्री०) –द्रा –ದ್ರಾ. 16. ಗಂಗಾನದಿ. 17. ಸಣ್ಣರಾಷ್ಟೆ. 18. ಮುಳ್ಳುಗಸೆ ಗಿಡ. 19. ಶೀಟಕ ಸಂಧಿ. 20. ತೇಗದ ಮರ. 21. ಹಿಪ್ಪಲಿಗಿಡ. 22. ಎರಡೂ ಪಕ್ಷಗಳ ಬಿದಿಗೆ, ಸಪ್ತಮಿ ಮತ್ತು ದ್ವಾದಶೀ ತಿಥಿಗಳು. (स्त्रीन०) 23. ಜ್ಯೋತಿಷದಲ್ಲಿ ಬವ ಮೊದಲಾದ ಕರಣಗಳಲ್ಲಿ ಏಳನೆಯದು. ಬವ ಬಾಲವ ಕೌಲವ ತೈತುಲ ಗರಜ ವಣಿಕ್ ಭದ್ರ ಶಕುನಿ ಚತುಷ್ಪಾತ್ ನಾಗವ ಮತ್ತು ಕಿಂಸ್ತುಘ್ನ ಇವು ಹನ್ನೊಂದು ಕರಣಗಳು. "भद्रो रुद्रे वृषे रामचन्द्रे मेरुकदम्बयोः" विश्व०। "भद्रं कल्याणसौख्ययोः" वैज०। "भद्रः शिवे खञ्जरीटे वृषभे च कदम्बके। करिजातिविशेषे ना क्लीबं मङ्गलमुस्तयोः। काञ्चने च स्त्रियां रास्नाकृष्णाव्योमनदीषु च। तिथिभेदे प्रसारिण्यां कट्फलानन्दयोरपि। त्रिषु श्रेष्ठे च साधौ च न पुंसि करणान्तरे" मेदि०।

**भद्रकर्ण ಭದ್ರಕರ್ಣ** (पुं०) ಗೋಕರ್ಣಕ್ಷೇತ್ರ.

**भद्रकर्णेश्वर ಭದ್ರಕರ್ಣೇಶ್ವರ** (पुं०) ಗೋಕರ್ಣ (ಕ್ಷೇತ್ರ) ದಲ್ಲಿರುವ ಶಿವಲಿಂಗ.

**भद्रकाली ಭದ್ರಕಾಲೀ** (स्त्री०) 1. ದುರ್ಗಾದೇವಿ. 2. ಕಣಜದ ಹುಳ. "भद्रकाली तु गन्धोल्यां कात्यायन्यामपि स्त्रियाम्" मेदि०।

**भद्रकाष्ठ ಭದ್ರಕಾಷ್ಠ** (न०) ದೇವದಾರು ಮರ.

**भद्रकुम्भ ಭದ್ರಕುಂಭ** (पुं०) ಪೂರ್ಣಕುಂಭ, ನೀರಿನಿಂದ ತುಂಬಿದ ಪೂರ್ಣಕಲಶ. भद्रः कुम्भः।

**भद्रदारु ಭದ್ರದಾರು** (पुंन०) ದೇವದಾರು ವೃಕ್ಷ. भद्रं दारु।

**भद्रपर्णी ಭದ್ರಪರ್ಣೀ** (स्त्री०) ಶೀವನೆಯ ಮರ.

**भद्रपीठ ಭದ್ರಪೀಠ** (न०) 1. ಮಂಗಳಾಸನ, ವೈಭವಯುತವಾದ ರಾಜನ ಆಸನ. 2. ದೇವತೆಗಳನ್ನು ಪ್ರತಿಷ್ಠೆ ಮಾಡಿ ಪೂಜಿಸುವ ಆಸನ. 3. ಗುರುಹಿರಿಯರನ್ನು

ಕುಳ್ಳಿರಿಸಿ ಸತ್ಕರಿಸುವ ಆಸನ. "उपतस्थुः प्रकृतयो भद्रपीठोपवेशितम्" रघु० १७-१०।

**भद्रबला ಭದ್ರಬಲಾ** (स्त्री०) ಮುಳ್ಳುಗಸೆ ಗಿಡ, ಸಾರಣಿ ಗಿಡ. भद्रं बलमस्याः।

**भद्रमुख ಭದ್ರಮುಖ** (वि०) ಮಂಗಳಕರವಾದ ಮುಖವುಳ್ಳವನು, ಒಳ್ಳೆಯ ಮಾತನಾಡುವವನು, ಸೌಮ್ಯವಾದ ಮುಖವುಳ್ಳವನು. [ಸುಶಿಕ್ಷಿತನ ವಿಷಯದಲ್ಲಿ ಆದರ ಮತ್ತು ವಿನಯದಿಂದ ಕೂಡಿದ ಸಂಬೋಧನೆ.] "भद्रमुख, न खल्वयं मुनिकुमारः" शाकु० ७। स्त्रियां "ङीष्" (४-१-५४)। **–मुखी –ಮುಖೀ.**

**भद्रमुस्तक ಭದ್ರಮುಸ್ತಕ** (पुं०) ಕೆಂಪು ಬಣ್ಣದ ಕೊನ್ನಾರಿ.

**भद्रमृग ಭದ್ರಮೃಗ** (पुं०) ಉತ್ತಮ ಜಾತಿಯ ಒಂದು ಆನೆ.

**भद्रयव ಭದ್ರಯವ** (पुं०) ಗಿರಿಮಲ್ಲಿಗೆಯ ಬೀಜ.

**भद्ररेणु ಭದ್ರರೇಣು** (पुं०) ಐರಾವತ,

**भद्ररोहिणी ಭದ್ರರೋಹಿಣೀ** (स्त्री०) ಕಟುಕ ರೋಹಿಣಿ.

**भद्रश्री ಭದ್ರಶ್ರೀ** (स्त्री०) ಗಂಧದ ಮರ.

**भद्रा ಭದ್ರಾ** (स्त्री०) "भद्र" ಪದದಲ್ಲಿ ನೋಡಿ.

**भद्राकरण ಭದ್ರಾಕರಣ** (न०) ಕ್ಷೌರ, ಆಯುಷ್ಕರ್ಮ, ಚೌಲ. भद्र + डाच् (वा० ५-४-६७)। कृञ् "ल्युट्" (३-३-११५)।

**भद्राङ्ग ಭದ್ರಾಂಗ** (पुं०) ಬಲರಾಮ.

**भद्राश्व ಭದ್ರಾಶ್ವ** (न०) ಜಂಬೂದ್ವೀಪದ ಒಂಬತ್ತು ವರ್ಷಗಳಲ್ಲೊಂದು.

**भद्राश्रय ಭದ್ರಾಶ್ರಯ** (पुं०) ಗಂಧದ ಮರ. भद्रस्य मङ्गलस्याश्रयः।

**भद्रासन ಭದ್ರಾಸನ** (न०) 1. ವೈಭವಯುತವಾದ ರಾಜನ ಆಸನ, ರಾಜನ ರತ್ನಸಿಂಹಾಸನ. भद्रं च तदासनं च। 2. ಧ್ಯಾನಕ್ಕಾಗಿ ಕೂಡುವ ಒಂದು ಆಸನ, ತಪಸ್ಸಿಗಾಗಿ ಕೂಡುವಾಗ ಮಾಡಿಕೊಳ್ಳುವ ಒಂದು ವಿಧ ಅಂಗವಿನ್ಯಾಸ. 3. ಮಂಗಳಾಸನ, ಹಸೆಮಣೆ. "भद्रासनं काञ्चनपादपीठम्" कुमा० १२-२०।

**भद्रैला ಭದ್ರೈಲಾ** (स्त्री०) ದಪ್ಪ ಜಾತಿಯ ಯಾಲಕ್ಕಿ.

**भद्रिका ಭದ್ರಿಕಾ** (स्त्री०) 1. (ಎರಡು ಪಕ್ಷಗಳ) ಬಿದಿಗೆ ಸಪ್ತಮಿ ಮತ್ತು ದ್ವಾದಶಿ ತಿಥಿಗಳು. 2. ಎರಡು ನಗಣಗಳು ರಗಣ ಒಂದು ಲಘು ಮತ್ತು ಒಂದು ಗುರುವರ್ಣ ಇವುಗಳಿಂದ ಕೂಡಿದ ಹನ್ನೊಂದನೆಯ ಛಂದಸ್ಸಿನ ಒಂದು ವೃತ್ತ. "ननरलगुरुभिश्च भद्रिका" वृ० र०। 3. ತಾಯಿತ, ರಕ್ಷಾಕರಂಡಕ.

**भपञ्जर ಭಪಂಜರ** (न०) ನಕ್ಷತ್ರಮಂಡಲ.

**भपति ಭಪತಿ** (पुं०) 1. ಚಂದ್ರ, ನಕ್ಷತ್ರಗಳ ಅಧಿಪತಿ. 2. ರಾಶಿಯ ಅಧಿಪತಿ. **ದ್ವಾದಶ ರಾಶಿಗಳ ಅಧಿಪತಿಗಳು:**

| | |
|---|---|
| ಮೇಷ ಮತ್ತು ವೃಶ್ಚಿಕ ರಾಶಿಗಳಿಗೆ | ಕುಜ |
| ವೃಷಭ ಮತ್ತು ತುಲಾ ,, | ಶುಕ್ರ |
| ಮಿಥುನ ಮತ್ತು ಕನ್ಯಾ ,, | ಬುಧ |
| ಕರ್ಕಾಟಕ ರಾಶಿಗೆ | ಚಂದ್ರ |
| ಸಿಂಹ ರಾಶಿಗೆ | ರವಿ |
| ಧನುಸ್ಸು ಮತ್ತು ಮೀನ ರಾಶಿಗಳಿಗೆ | ಗುರು |
| ಮಕರ ಮತ್ತು ಕುಂಭ ,, | ಶನಿ |

**भय ಭಯ** (न०) 1. ಭೀತಿ, ಹೆದರಿಕೆ. ञि भी (भये) "अच्" (वा० ३-३-५६)। "भयस्य पूर्वावतरस्तरस्विना मनस्सु येन द्युसदां न्यधीयत" माघ० १-४३। 2. ದಿಗಿಲು, ಕಳವಳ, ಗಾಬರಿ. "अमोघत्वयशोभङ्गभयादिव निवर्तते। अखण्डितबले तस्मिन् दण्डो दण्डधरार्पितः" याद० १६-३५। 3. ಕುಬ್ಜಕ ವೃಕ್ಷದ ಹೂವು. 4. ಅಪಾಯ. (वि०) 5. ಭಯಕ್ಕೆ ಕಾರಣವಾದ, ಭಯವನ್ನು ಉಂಟುಮಾಡುವ, ಘೋರವಾದ. बिभेत्यस्मादिति—ञि भी (भये) "अच्" (वा० ३-३-५६)। "भयं प्रतिभये घोरे प्रसूने कुब्जकस्य च" मेदि०।

**भयकृत् ಭಯಕೃತ್** (पुं०) 1. ಶ್ರೀ ಮಹಾವಿಷ್ಣು. भयं करोति स्वशासनातिवर्तिनाम्—भय + कृञ् (करणे) "क्विप्" (३-२-७६)। "आज्ञातिलङ्घिनां पुंसां नरकादिभयंकरः। भयकृत् स समाख्यातः सप्तार्णो भववर्धनः" इति निरुक्तिः। "अमूर्तिरनघोऽचिन्त्यो भयकृत् भयनाशनः" वि० स०। (वि०) 2. ಭಯವನ್ನುಂಟುಮಾಡುವ. 3. ಅಪಾಯಕರವಾದ.

**भयङ्कर ಭಯಂಕರ** (वि०) ಭಯವನ್ನುಂಟುಮಾಡುವ. भयं करोति—ञि भी (भये) कृञ् (करणे) "खच्" (३-२-४३)। "भयङ्करः प्राणभृतां मृत्योर्भुज इवापरः" किरा० ११-१७।

**भयडिण्डिम ಭಯಡಿಂಡಿಮ** (पुं०) ಭೇರಿ, ನಗಾರಿ, ಯುದ್ಧದಲ್ಲಿ ಹೊಡೆಯುವ ತಮಟೆ. भयाय शत्रुभयोत्पादनाय डिण्डिमः। "रणतूर्यं तु संग्रामपटहो भयडिण्डिमः" त्रिकाण्ड०।

**भयद्रुत ಭಯದ್ರುತ** (वि०) ಭಯದಿಂದ ಓಡಿದವನು. भयात् द्रुतः। "कान्दिशीको भयद्रुतः" अम०।

**भयन ಭಯನ** (न०) ಭಯ, ಭೀತಿ, ಹೆದರಿಕೆ. ञि भी (भये) भावे "ल्युट्" (३-३-११५)। "तंकोऽस्त्री भीर्भिया भीतिः साध्वसं भयनं भयम्" वैज०।

**भयनाशन ಭಯನಾಶನ** (पुं०) 1. ಶ್ರೀ ಮಹಾವಿಷ್ಣು. भयं आज्ञानुवर्तिनां भयं नाशयति—णश (अदर्शने)+णिच् "ल्युः" (३-१-१३४)। "आज्ञानुवर्तिनां स्वस्य भयं नाशयतीति यः। भयनाशन इत्युक्तो नवार्णः कर्मकारकः" इति निरुक्तिः। "भयकृत् भयनाशनः" वि० स०। (वि०) 2. ಭಯವನ್ನು ಹೋಗಲಾಡಿಸುವ.

**भयनाशिन् ಭಯನಾಶಿನ್** (वि०) 1. ಭಯವನ್ನು ಹೋಗಲಾಡಿಸುವವನು. भयं नाशयति—णश (अदर्शने) "णिनिः" (३-१-१३४)। स्त्रियां "ङीप्" (४-१-५)। **-नाशिनी -ನಾಶಿನೀ.** 2. ನೀರಾಮ ಬಳ್ಳಿ.

**भयभीत ಭಯಭೀತ** (वि०) ಭಯದಿಂದ ಹೆದರಿದ. भयात् भीतः।

**भयभ्रष्ट ಭಯಭ್ರಷ್ಟ** (वि०) ಭಯದಿಂದ ಓಡಿದವನು. भयात् भ्रष्टः।

**भयहेतु ಭಯಹೇತು** (पुं०) 1. ಭಯದ ಕಾರಣ. भयस्य हेतुः कारणम्। (वि०) 2. ಭಯಕ್ಕೆ ಕಾರಣವಾದ.

**भयानक ಭಯಾನಕ** (पुं०) 1. ವ್ಯಾಘ್ರ, ಹುಲಿ. 2. ರಾಹು. 3. ಭಯಾನಕ ರಸ, ಶೃಂಗಾರಾದಿ ರಸಗಳಲ್ಲಿ ಭಯಸ್ಥಾಯಿಭಾವವುಳ್ಳ ಒಂದು ರಸ.

**ಈ ರಸಕ್ಕೆ ಆಲಂಬನ ವಿಭಾವಾದಿಗಳು:**

ಭಯಕ್ಕೆ ಕಾರಣವಾದುದು ಆಲಂಬನ ವಿಭಾವ. ಅದರ ಭಯಂಕರ ವ್ಯಾಪಾರವು ಉದ್ದೀಪನ ವಿಭಾವ. ಪ್ರಲಯ ಸ್ವೇದ ರೋಮಾಂಚ ನಡುಕ ಮುಂತಾದುವು ವ್ಯಭಿಚಾರಿ ಭಾವಗಳು. ಗದ್ಗದ ಸ್ವರದಿಂದ ಮಾತಾಡುವುದು ಅನುಭಾವ. "भयानको भयस्थायिभावः कालाधिदैवतः। यस्मादुत्पद्यते भीतिस्तदत्रालम्बनं मतम्। चेष्टा घोरतरास्तस्य भवेदुद्दीपनं पुनः। अनुभावोऽत्र वैवर्ण्यगद्गदस्वरभाषणम्। प्रलयस्वेदरोमाञ्चकम्पदिक्प्रेक्षणादयः। जुगुप्सावेगसंमोहसंत्रासग्लानिदीनताः। ......व्यभिचारिणः" सा० द० ३-२३५-२३८। (वि०) 4. ಭಯವನ್ನು ಉಂಟುಮಾಡುವ, ಭಯಂಕರವಾದ. बिभेत्यस्मात् —ञि भी (भये) "आनकः" (उ० ३-८२)। "वक्त्राणि ते त्वरमाणा विशन्ति दंष्ट्राकरालानि भयानकानि" गीता ११-२७। "भयानकः स्मृतो व्याघ्रे रसे राहौ भयङ्करे" मेदि०। "मुरद्विषः स्वनितभयानकानकम्" माघ० १७-२०।

**भयापह ಭಯಾಪಹ** (पुं०) 1. ವಿಷ್ಣು. भयमपहन्यात् अप+हन (हिंसागत्योः) "डः" (३-२-४९)। "अनन्तरूपोऽनन्तश्रीजितमन्युर्भयापहः" वि० स०। "अनाथत्वभयं हन्ति वात्सल्येनैव मादृशाम्। भयापहः समाख्यातो वस्वर्णो मनुरुत्तमः" इति निरुक्तिः। 2. ರಾಜ, ದೊರೆ, ಮಂಡಲಾಧಿಪತಿ. "राजाधिपो मण्डलेशः एकजन्मा भयापहः" त्रिकाण्ड०। (वि०) 3. ಭಯವನ್ನು ಹೋಗಲಾಡಿಸುವ.

**भयार्त ಭಯಾರ್ತ** (वि०) ಭಯದಿಂದ ಪೀಡಿಸಲ್ಪಟ್ಟ. भयेन आर्तः।

**भयावह ಭಯಾವಹ** (वि०) ಭಯವನ್ನು ಉಂಟು ಮಾಡುವ. भयमावहति—आ+वह (प्रापणे) "अच्" (३-१-१३४)। "स्वधर्मे निधनं श्रेयः परधर्मो भयावहः" गीता ३-३५।

**भर ಭರ** (पुं०) 1. ಅತಿಶಯ, ಆಧಿಕ್ಯ, ಹೆಚ್ಚಿಗೆ. भृञ् (भरणे) "अच्" (३-१-१३४)। "पीनपयोधरभारभरेण हरिं परिरम्य सरागम्" गीतगो० १-४०। 2. ಪುಂಜ, ಸಮೂಹ, ರಾಶಿ. "स्फुरदुज्ज्वलाधरदलेविलसद्दशनांशुकेशरभरैः परितः" माघ० ९-४७। 3. ಭಾರ, ಹೊರೆ. "फलभरपरिणामश्यामजम्बूनिकुञ्जस्खलनमुखरभूरिस्रोतसो निर्झरिण्यः" उ० रा० २-२०। "भरोऽतिशयभारयोः" मेदि०। "रामकृष्णाविति भुवो भगवानहरद्भरम्" भाग० १-३-२३।

**भरट ಭರಟ** (पुं०) ಕುಂಭಕಾರ, ಕುಂಬಾರ.

**भरण ಭರಣ** (पुं०) 1. ಭರಣೀ ನಕ್ಷತ್ರ. (न०) 2. ಕೂಲಿ. 3. ಸಂಬಳ. भ्रियतेऽनेन—भृञ् (भरणे) "ल्युट्" (३-३-११७)। 4. ಪೋಷಿಸುವುದು, ಸಾಕುವುದು. भावे "ल्युट्"। "प्रजानां विनयाधानाद्रक्षणाद्भरणादपि" रघु० १-२४। 5. ಧರಿಸುವುದು, ಉಡುವುದು. 6. ಹೊರುವುದು. (वि०) 7. ಪೋಷಿಸುವವನು, ಸಾಕುವವನು. 8. ಧರಿಸುವವನು, ಉಡುವವನು. कर्त० "ल्युः"।

**भरणिक ಭರಣಿಕ** (वि०) ಕೂಲಿ ತೆಗೆದುಕೊಂಡು ಮೂಟೆ ಹೊರುವವನು. भरणेन हरति—भरण "ष्ठन्" (४-४-१६)। स्त्रियां "ङीष्" (४-१-४१)। **भरणिकी ಭರಣಿಕೀ.**

**भरणी ಭರಣೀ** (स्त्री०) 1. ಭರಣೀ ನಕ್ಷತ್ರ, ಅಶ್ವಿನೀ ಮೊದಲಾದ ಇಪ್ಪತ್ತೇಳು ನಕ್ಷತ್ರಗಳಲ್ಲಿ ಎರಡನೆಯದು. भरण "ङीष्" (४-१-४१)। ಈ ನಕ್ಷತ್ರವು ಯಮ ದೇವತಾಕವಾದುದು. ಇದು ಮೇಷರಾಶಿಗೆ ಸೇರಿದ ನಕ್ಷತ್ರ. 2. ಕಹಿ ಹೀರೆಗಿಡ. "भरणी घोषके ऋक्षे" मेदि०।

**भरणीभू ಭರಣೀಭೂ** (पुं०) ರಾಹುಗ್ರಹ. भरणी भूरुत्पत्तिस्थानं यस्य।

**भरणीय ಭರಣೀಯ** (वि०) 1. ಪೋಷಿಸಲ್ಪಡುವವನು, ಸಾಕಲ್ಪಡುವವನು. 2. ಪೋಷಿಸಲು ಅರ್ಹನಾದವನು. 3. ಪೋಷಿಸಬೇಕಾದವನು. भृञ् (भरणे) "अनीयर्" (३-१-९६)। "सर्वं भवतु ते राज्यं पञ्च ग्रामान् विसर्जय। अवश्यं भरणीया हि पितुस्ते राजसत्तम" भा० उद्योग० १५०-१७। "तव्य:" (३-१-९६)। भर्तव्य: ಭರ್ತವ್ಯಃ.

**भरण्ड ಭರಂಡ** (पुं०) 1. ಸ್ವಾಮಿ, ಯಜಮಾನ. भृञ् (भरणे) "अण्डच्" (उ० १-१२६)। 2. ರಾಜ, ದೊರೆ. 3. ವೃಷಭ, ಎತ್ತು. 4. ಕ್ರಿಮಿ, ಹುಳ.

**भरण्य ಭರಣ್ಯ** (न०) 1. ಸಂಬಳ. 2. ಕೂಲಿ. भरणे साधु "यत्" (४-४-९८)। "भरण्यं भरणं भर्म वेतनं निष्क्रयो भृति:" वैज०।

**भरत ಭರತ** (पुं०) 1. ದುಷ್ಯಂತನಿಗೆ ಶಕುಂತಲೆಯಲ್ಲಿ ಜನಿಸಿದ ಮಗ ಭರತ ಕುಮಾರ, ಭರತಚಕ್ರವರ್ತಿ. ಇವನಿಗೆ ಸರ್ವದಮನನೆಂದೂ ಹೆಸರು. ಇವನು ವಿದರ್ಭ ರಾಜನ ಮೂವರು ಕನ್ಯೆಯರನ್ನು ವಿವಾಹ ಮಾಡಿಕೊಂಡು ಅವರಲ್ಲಿ ಮಕ್ಕಳನ್ನು ಪಡೆದನು. ಭರತನು ಪಟ್ಟಾಭಿಷಿಕ್ತನಾಗಿ ಧರ್ಮದಿಂದ ರಾಜ್ಯ ಪರಿಪಾಲನ ಮಾಡುತ್ತ ಗಂಗಾತೀರ ದಲ್ಲಿ ಐವತ್ತೈದು ಅಶ್ವಮೇಧ ಯಾಗಗಳನ್ನೂ ಯಮುನಾ ತೀರದಲ್ಲಿ ಇಪ್ಪತ್ತೆಂಟು ಅಶ್ವಮೇಧ ಯಾಗಗಳನ್ನೂ ಮಾಡಿದನು. 2. ದಶರಥನಿಗೆ ಕೈಕಯಿಯಲ್ಲಿ ಜನಿಸಿದ ಒಬ್ಬ ಪುತ್ರ, ಶ್ರೀರಾಮನ ತಮ್ಮ. [ಇವನು ಕುಶಧ್ವಜನ ಮಗಳಾದ ಮಾಂಡವಿಯನ್ನು ಮದುವೆಯಾಗಿದ್ದನು. ಭರತನು ಮಾತುಲನಾದ ಯುಧಾಜಿತ್ತಿನ ಮನೆಯಲ್ಲಿದ್ದಾಗ ಶ್ರೀರಾಮನು ವನವಾಸಕ್ಕೆ ತೆರಳಿದನು. ಮಾವನ ಮನೆ ಯಿಂದ ಬಂದ ಭರತನು ಈ ವಿಷಯವನ್ನು ಕೇಳಿ ಬಹಳ ಖಿನ್ನನಾಗಿ ಅರಣ್ಯಕ್ಕೆ ಹೋಗಿ ಶ್ರೀರಾಮನನ್ನು ರಾಜ್ಯ ಸ್ವೀಕರಿಸುವಂತೆ ಅನೇಕ ವಿಧವಾಗಿ ಪ್ರಾರ್ಥಿಸಿದರೂ ಶ್ರೀರಾಮನು ಅದಕ್ಕೆ ಸಮ್ಮತಿಸದಿರಲು ಶ್ರೀರಾಮನ ಪಾದುಕೆಗಳನ್ನು ಪಡೆದು ನಂದಿಗ್ರಾಮದಲ್ಲಿ ಪಾದುಕಾ ಪಟ್ಟಾಭಿಷೇಕ ಮಾಡಿ ಪೂಜಿಸುತ್ತ ಪಾದುಕೆಗಳ ಆಜ್ಞೆ ಪಡೆದು ಶ್ರೀರಾಮನು ಅರಣ್ಯದಿಂದ ಬರುವವರೆಗೂ ಅವುಗಳ ಹೆಸರಿನಲ್ಲಿ ರಾಜ್ಯವನ್ನಾಳುತ್ತಿದ್ದು ಅರಣ್ಯದಿಂದ ಬಂದನಂತರ ಸಂತೋಷದಿಂದ ಸ್ವಾಗತಿಸಿ ಶ್ರೀರಾಮನಿಗೆ ಪಟ್ಟಾಭಿಷೇಕ ಮಾಡಿ ರಾಜ್ಯವನ್ನು ಒಪ್ಪಿಸಿ ಭಕ್ತಾಗ್ರೇಸರ ನೆಂದು ಖ್ಯಾತಿಪಡೆದನು.] "भरताय परं नमोऽस्तु तस्मै प्रथमोदाहरणाय भक्तिभाजाम्। यदुपज्ञमशेषत: पृथिव्यां प्रथितो राघवपादुकाप्रभाव:" पादु० स०। 3. ಜಡಭರತ, ಋಷಭದೇವನ ಜ್ಯೇಷ್ಠ ಪುತ್ರ. ["जडभरत" ಪದದಲ್ಲಿ ನೋಡಿ.] 4. ಋತ್ವಿಕ್ಕು, ಯಾಗದ ಪುರೋಹಿತ. "याजका भरता यज्ञलिह:" वैज०। 5. ನಾಟ್ಯಾಚಾರ್ಯ ರಾದ ಭರತಮುನಿ, ನಾಟ್ಯಶಾಸ್ತ್ರವನ್ನು ರಚಿಸಿದ ಒಬ್ಬ ಮುನಿ. 6. ಶೈಲೂಷ, ನಟ. भृञ् (भरणे) "अतच्" (उ० ३-११०)। भरतेन प्रोक्तं नाटयशास्त्रमधीते "अण्" (४-२-५९)। अणो लुक् (४-२-६४)। 7. ಒಂದು ವಾದ್ಯ. 8. ನೇಯಿಗೆಯವನು. 9. ಭಾರತ ವರ್ಷ. ಋಷಭದೇವನ ಜ್ಯೇಷ್ಠ ಪುತ್ರನಾದ ಜಡಭರತನು ಈ ದೇಶವನ್ನು ಆಳಿದ್ದರಿಂದ ಇದಕ್ಕೆ ಭಾರತವರ್ಷವೆಂದು ಹೆಸರಾಯಿತು. "भरतो ज्यष्ठ: श्रेष्ठगुण आसीद्येनेदं वर्षं भारतमिति व्यपदिशन्ति" भाग० ५-४-९। 10. ಶಬರ, ಕಿರಾತ. 11. ಕ್ಷೇತ್ರ. 12. ಸಂಚರ, ಮಾರ್ಗ. "भरत: शबरे रामानुजे भारतवर्षके। दुष्यन्तजे नटे नाटयशास्त्रकृत्तन्तुवाययो:" नानार्थर०। "भरतो वाद्यभेदेऽपि दौष्यन्तौ सञ्चरे नटे। रामानुजे च भरतस्तन्तुवायेऽपि च क्वचित्" विश्व०। "भरत: शबरे नटे। क्षेत्रे रामानुजे शास्त्रे दौष्यन्तावृषभात्मजे" हेम०।

**भरतखण्ड ಭರತಖಂಡ** (न०) ಭಾರತ ವರ್ಷದ ಒಂದು ಭಾಗ.

**भरतपुत्रक ಭರತಪುತ್ರಕ** (पुं०) ಶೈಲೂಷ, ನಟ. भरतस्य नाटयशास्त्रप्रणेतु: पुत्र इव कायति—कै (शब्दे) "क:" (३-२-३)।

**भरतप्रसू ಭರತಪ್ರಸೂ** (स्त्री०) 1. ಶಕುಂತಲೆ, ಭರತ ಚಕ್ರವರ್ತಿಯ ತಾಯಿ. 2. ಕೈಕಯೀ, ದಶರಥ ಚಕ್ರವರ್ತಿಯ ಕಿರಿಯ ಹೆಂಡತಿ. 3. ಋಷಭದೇವನ ಪತ್ನಿ, ಜಡಭರತನ ತಾಯಿ.

**भरतर्षभ ಭರತರ್ಷಭ** (पुं०) ಭರತವಂಶದಲ್ಲಿ ಶ್ರೇಷ್ಠ ನಾದವನು.

**भरतवर्ष ಭರತವರ್ಷ** (ಪುಂ) ಭಾರತ ದೇಶ.

**भरतवाक्य ಭರತವಾಕ್ಯ** (ನಂ) ನಾಟಕದ ಕೊನೆಯ ಶ್ಲೋಕ, ನಾಟಕಾಭಿನಯ ಪೂರ್ತಿಯಾದನಂತರ ಸಾಮಾಜಿಕರಿಗೆ ನಟನಿಂದ ಹೇಳಲ್ಪಡುವ ಆಶೀರ್ವಚನ. "तथापीदमस्तु भरतवाक्यम्"। "प्रवर्ततां प्रकृतिहिताय पार्थिवः सरस्वती श्रुतमहतां महीयसाम्। ममापि च क्षपयतु नीललोहितः पुनर्भवं परिगतशक्तिरात्मभूः" शाकुं० ७-३४। ಇದು (ಭರತವಾಕ್ಯ) ಪ್ರತಿಯೊಂದು ನಾಟಕದ ಕೊನೆಯಲ್ಲೂ ನಟನ ವಾಕ್ಯವಾಗಿರುವುದು.

**भरताग्रज ಭರತಾಗ್ರಜ** (ಪುಂ) ಶ್ರೀರಾಮಚಂದ್ರ, ಭರತನ ಜ್ಯೇಷ್ಠ ಸಹೋದರ. भरतस्याग्रजः।

**भरथ ಭರಥ** (ಪುಂ) 1. ಅಗ್ನಿ, ಬೆಂಕಿ. 2. ಲೋಕಪಾಲ, ಅಷ್ಟದಿಕ್ಪಾಲಕರಲ್ಲೊಬ್ಬ. भृञ् (भरणे) "अथः" (उ० ३-११४)।

**भरद्वाज ಭರದ್ವಾಜ** (ಪುಂ) 1. ಭರದ್ವಾಜ ಮುನಿ, ಅಣ್ಣನಾದ ಉತಥ್ಯನ ಪತ್ನಿ ಮಮತೆಯಲ್ಲಿ ಬೃಹಸ್ಪತಿಯಿಂದ ಜನಿಸಿದ ಒಬ್ಬ ಋಷಿ. द्वाभ्यां जातः द्वाजः। पृषो०। ಒಬ್ಬನ (ಉತಥ್ಯನ) ಕ್ಷೇತ್ರ (ಪತ್ನಿ) ದಲ್ಲಿ ಇನ್ನೊಬ್ಬ (ಬೃಹಸ್ಪತ್ಯಾಚಾರ್ಯ) ರಿಂದ ಜನಿಸಿದ್ದರಿಂದ ಈತನು ದ್ವಾಜನಾದನು. [ಪತಿಗೆ (ಉತಥ್ಯನಿಗೆ) ಹೆದರಿ ಶಿಶುವನ್ನು ಬಿಟ್ಟು ಹೋಗುತ್ತಿದ್ದ ಮಮತೆಯನ್ನು ಕರೆದು भर (ಪುಷಾಣ) द्वाजम् (ಇಬ್ಬರ ಮಗುವಾದ ಈತನನ್ನು ಪೋಷಿಸು) ಎಂದು ಬೃಹಸ್ಪತ್ಯಾಚಾರ್ಯರು ಹೇಳಲು ಆವಳು ಅಕ್ರಮವಾಗಿ ಜನಿಸಿದ ಈ ಶಿಶುವನ್ನು ಪೋಷಿಸುವುದಿಲ್ಲ त्वमिमं भर ಎಂದು ಹೇಳುತ್ತ ಹೊರಟುಹೋದಳು. ಈ ಕಾರಣದಿಂದ ಈ ಮುನಿಗೆ "भरद्वाजः" ಎಂಬ ಹೆಸರಾಯಿತು. "मूढे भर द्वाजमिमं भर द्वाजं बृहस्पते। यातौ यदुक्त्वा पितरौ भरद्वाजस्ततस्त्वयम्" भाग० ९-२०-५। [ಈ ಮುನಿಯು ಗಂಗಾತೀರದಲ್ಲಿ ತಪಸ್ಸು ಮಾಡುತ್ತಿದ್ದಾಗ ಘೃತಾಚಿಯೆಂಬ ಅಪ್ಸರಸಿಯಲ್ಲಿ ಮೋಹಗೊಂಡು ವೀರ್ಯವನ್ನು ಒಂದು ದ್ರೋಣ (ದೊನ್ನೆ) ದಲ್ಲಿ ಬಿಟ್ಟನು. ಆದರಿಂದ ದ್ರೋಣಾಚಾರ್ಯರು ಜನಿಸಿದರು.] 2. ವಾಲ್ಮೀಕಿ ಮಹರ್ಷಿಯ ಶಿಷ್ಯನಾದ ಒಬ್ಬ ಋಷಿ. [ವನವಾಸಕ್ಕಾಗಿ ಹೊರಟ ಶ್ರೀರಾಮನು ಪ್ರಯಾಗಕ್ಷೇತ್ರದಲ್ಲಿ ವಾಸಿಸುತ್ತಿದ್ದ ಈ ಮಹರ್ಷಿಯ ಮಾತಿನಂತೆ ಚಿತ್ರಕೂಟ ಪರ್ವತಕ್ಕೆ ಬಂದು ವಾಸಿಸುತ್ತಿದ್ದನು. ಭರತನು ಶ್ರೀರಾಮನನ್ನು ಅಯೋಧ್ಯೆಗೆ ಕರೆತರಬೇಕೆಂದು ಅರಣ್ಯಕ್ಕೆ ಹೋಗಿದ್ದಾಗ ಆವನಿಗೂ ಅವನ ಪರಿವಾರಕ್ಕೂ ದಿವ್ಯವಾದ ಆತಿಥ್ಯವನ್ನು ನೀಡಿದನು. ಶ್ರೀರಾಮನು ವನವಾಸ ಮುಗಿಸಿಕೊಂಡು ಬರುವಾಗ ಈ ಮುನಿಯ ಆಶ್ರಮದಿಂದಲೇ ಹನುಮಂತನ ಮೂಲಕ ಅಯೋಧ್ಯೆಗೆ ತಾನು ಬರುತ್ತಿರುವ ವಿಷಯವನ್ನು ಹೇಳಿ ಕಳುಹಿಸಿದನು.] 3. ಭರದ್ವಾಜಪಕ್ಷಿ. "भरद्वाजः पक्षिभेदे बृहस्पतिसुतेऽपि च" हेम०।

**भरित ಭರಿತ** (ವಿಂ) 1. ಪೂರ್ಣವಾದ, ತುಂಬಿರುವ. भरोऽस्य सञ्जातः "इतच्" (५-२-३६)। 2. ಪೋಷಿಸಲ್ಪಟ್ಟ, ಸಾಕಲ್ಪಟ್ಟ.

**भरिमन् ಭರಿಮನ್** (ಪುಂ) 1. ಕುಟುಂಬ, ಸಂಸಾರ. डु भृञ् (धारणपोषणयोः) कर्म० "इमनिच्" (उ० ४-१४७)। "भरिमा कुटुम्बम्" उणा०। 2. ಪೋಷಿಸುವುದು, ಸಾಕುವುದು. डु भृञ् भावे "इमनिच्"। 3. ವಿಷ್ಣು. कर्त० इमनिच्।

**भरु ಭರು** (ಪುಂ) 1. ಸ್ವಾಮಿ, ಯಜಮಾನ. 2. ಪತಿ, ಗಂಡ. भरति—भृञ् (भरणे) "उः" (उ० १-७)। 3. ಸ್ವರ್ಣ, ಚಿನ್ನ. 4. ಹರ, ಪರಶಿವ. "भरुः स्वर्णे हरे पुंसि" मेदि०। "भरुर्भर्तृकनकयोः" हेम०। 5. ವಿಷ್ಣು. 6. ಸಮುದ್ರ.

**भरुज ಭರುಜ** (ಪುಂ) ಸೃಗಾಲ, ಜಂಬುಕ, ನರಿ. भेति शब्देन रोजयति—रुज (हिंसायाम्) "कः" (३-१-१३५)। "सृगालो भरुजः क्रोष्टा श्वभीरुर्मृगमस्तकः" वैज०। स्त्रियां वा "ङीष्" (४-१-४५)। **भरुजा ಭರುಜಾ, भरुजी ಭರುಜೀ.**

**भरुटक ಭರುಟಕ** (ನಂ) 1. ಹುರಿಯಲ್ಪಟ್ಟ ಮಾಂಸ. 2. ಕರಿಯಲ್ಪಟ್ಟ ಮಾಂಸ. "अङ्गारेषु विपक्वं मांसं भूतिभिर्भरुटकं भ्रष्टम्" अभिधानर०।

**भर्ग ಭರ್ಗ** (ಪುಂ) 1. ಈಶ್ವರ, ಪರಶಿವ, ಮಹಾದೇವ. भृज्यन्तेऽनेन कामादयः—भृजी (भर्जने) "घञ्" (३-३-१२१)। कुत्वम् (७-३-७२)। "......भूतवर्गेण भर्गगृहिणीं रुधिरैर्धिनोमि" प्रबोध० ३-१५। 2. ಸೂರ್ಯನಲ್ಲಿರುವ ಈಶ್ವರಸಂಬಂಧವಾದ ಒಂದು ತೇಜಸ್ಸು. "आदित्यान्तर्गतं तेजो भर्गाख्यं तन्मुमुक्षुभिः। जन्ममृत्युविनाशाय दुःखस्य त्रितयस्य च। ध्यानेन पुरुषैर्यच्च द्रष्टव्यं सूर्यमण्डले" योगियाज्ञ०।

**भर्जन ಭರ್ಜನ** (ನಂ) 1. ಹುರಿಯುವುದು. 2. ಕರಿಯುವುದು. भृजी (भर्जने) भावे "ल्युट्" (३-३-११५)। 3. ಬಾಣಲೆ, ಹುರಿಯುವ ಓಡು. भृज्यतेऽत्र —भृजी अधि० "ल्युट्" (३-३-११७)। (ವಿಂ) 4. ಹುರಿಯು

ವವನು. 5. ಕರಿಯುವವನು. भृजी कर्तं० "ल्युः" (३-१-१३४)।

**भर्जित ಭರ್ಜಿತ** (वि०) 1. ಹುರಿಯಲ್ಪಟ್ಟ. 2. ಕರಿಯಲ್ಪಟ್ಟ. भृजी (भर्जने) कर्मं० "क्तः" (३-२-१०२)।

**भर्तृ ಭರ್ತೃ** (पुं०) 1. ಯಜಮಾನ, ಪತಿ, ಗಂಡ. बिभर्ति—डु भृञ् (धारणपोषणयोः) "तृच्" (३-१-१३३)। "स्त्रीणां भर्ता धर्मदाराश्च पुंसामित्यन्योन्यं वत्सयोर्ज्ञातमस्तु" मालती० ६-१८। "भर्तृभिः प्रणयसंभ्रमदत्तां वारुणीमतिरसां रसयित्वा" किरा० ९-५४। 2. ಸ್ವಾಮಿ, ಯಜಮಾನ, ಒಡೆಯ. "शापेनास्तंगमितमहिमा वर्षभोग्येण भर्तुः" मेघ० १-१। 3. ವಿಷ್ಣು. साधून् आत्मदानैकशीलः बिभर्ति पुष्णाति—डु भृञ् "तृन्" (३-२-१३५)। "यस्तान् पुष्णात्यात्मदानात् स भर्ता परिकीर्तितः" इति निरुक्तिः। "संभवो भावनो भर्ता प्रभवः प्रभुरीश्वरः" वि० स०। 4. ಸೃಷ್ಟಿಕರ್ತನಾದ ಚತುರ್ಮುಖ. (वि०) 5. ಪೋಷಕ, ಸಾಕುವವನು. "भर्ता स्वामिनि पुंसि स्यात् त्रिषु धातरि पोष्टरि" मेदि०। 6. ಯಜಮಾನ, ಮುಖಂಡ, ಮುಂದಾಳು. ನಾಯಕ. "स्वभर्तृनामग्रहणाद्बभूव सान्द्रे रजस्यात्मपरावबोधः" रघु० ७-४१। "भर्तारौ स्वामिधारकौ" शाश्व०।

**भर्तृघ्नी ಭರ್ತೃಘ್ನೀ** (स्त्री०) ಪತಿಯನ್ನು ಕೊಲ್ಲುವ ಲಕ್ಷಣದ ಹಸ್ತದ ಒಂದು ರೇಖೆ. भर्तारं हन्ति—हन (हिंसागत्योः) "टक्" (३-२-५३)। "पतिघ्नी पाणिरेखा" सि० कौ०।

**भर्तृदारक ಭರ್ತೃದಾರಕ** (पुं०) ರಾಜಕುಮಾರ. भर्तुः अधिपस्य राज्ञः दारकः पुत्रः। [ನಾಟಕಗಳಲ್ಲಿ ಮಾತ್ರ ಇದರ ಪ್ರಯೋಗ.]

**भर्तृदारिका ಭರ್ತೃದಾರಿಕಾ** (स्त्री०) ರಾಜಕುಮಾರಿ. भर्तुः राज्ञः दारिका पुत्री। [ನಾಟಕಗಳಲ್ಲಿ ಮಾತ್ರ ಇದರ ಪ್ರಯೋಗ.]

**भर्तृमती ಭರ್ತೃಮತೀ** (स्त्री०) ಸುಮಂಗಲಿ, ಪತಿಯುಳ್ಳ ಹೆಂಗಸು. "सतीमपि ज्ञातिकुलैकसंश्रयां जनोऽन्यथा भर्तृमतीं विशङ्कते" शाकु० ५-१७।

**भर्तृहरि ಭರ್ತೃಹರಿ** (पुं०) ವಾಕ್ಯಪದೀಯ ಶೃಂಗಾರ ನೀತಿ ಮತ್ತು ವೈರಾಗ್ಯಶತಕಗಳನ್ನು ರಚಿಸಿದ ಒಬ್ಬ ಕವಿ.

**भर्त्सन ಭರ್ತ್ಸನ** (न०) ಅಪಕಾರದ ಮಾತು, ಹೆದರಿಕೆಯ ಮಾತು. भर्त्स (तर्जने) + णिच् भावे "ल्युट्" (३-३-११५)। "युच्" (३-३-१०७)। (स्त्री०) **भर्त्सना ಭರ್ತ್ಸನಾ.** "भर्त्सनाश्च मधुरस्मितगर्भाः" माघ० १०-६९।

**भर्त्सयत् ಭರ್ತ್ಸಯತ್** (वि०) ಹೆದರಿಸಿ ಮಾತನಾಡುತ್ತಿರುವ. भर्त्स (तर्जने) + णिच् "शतृ" (३-२-१२४)। स्त्रियां "ङीप्" (४-१-६)। **—यन्ती —ಯಂತೀ.** "शानच्" (३-२-१२४)। **—यमानः —ಯಮಾನಃ.** "भर्त्सयन्निव वाग्जालैः प्रज्ञयोपहसन्निव" प्रबोध० २-२।

**भर्त्सित ಭರ್ತ್ಸಿತ** (वि०) 1. ಹೆದರಿಸಲ್ಪಟ್ಟ, ಬೆದರಿಸಿ ಮಾತನಾಡಿಸಲ್ಪಟ್ಟ. भर्त्स (तर्जने) + णिच् "क्तः" (३-२-१०२)। (न०) 2. ಹೆದರಿಸಿ ಮಾತನಾಡುವುದು. भर्त्स भावे "क्तः" (३-३-११४)।

**भर्मण्या ಭರ್ಮಣ್ಯಾ** (स्त्री०) ವೇತನ, ಕೂಲಿ, ಸಂಬಳ. भर्मणि भरणे साधुः—भर्मन् "यत्" (४-४-९८)।

**भर्मन् ಭರ್ಮನ್** (न०) 1. ಸುವರ್ಣ, ಚಿನ್ನ. 2. ಕೂಲಿ, ಸಂಬಳ. भृञ् (भरणे) "मनिन्" (उ० ४-१४५)। "भृतिकाञ्चनयोर्भर्म" त्रिकाण्ड०। "भर्म स्यात् काञ्चने भृतौ" मेदि०। 3. ಪೋಷಣೆ, ಸಾಕುವುದು, ಕಾಪಾಡುವುದು, ಸಲಹುವುದು. "भिषग्भिराप्तैरथ गर्भभर्मणि" रघु० ३-१९। 4. ಭಾರ, ಹೊರೆ. 5. ನಾಭಿ, ಹೊಕ್ಕಳು. "भर्म स्वर्णे भृतौ भारे" विश्व०। 6. ರೇತಸ್ಸು, ವೀರ್ಯ. "हेम्नि रेतसि भर्म स्यात्" नानार्थर०।

**भर्मिन् ಭರ್ಮಿನ್** (पुं०) ಬ್ರಾಹ್ಮಣನಿಂದ ಪುಲ್ಕಸಿಯಲ್ಲಿ ಜನಿಸಿದವನು. "पुल्कसी भर्मिणं सूते" वैज०।

**भलुह ಭಲುಹ** (पुं०) ನಾಯಿ. "कौलेयकोऽस्थिखादश्च भवनो भलुहोऽपि च" वैज०।

**भल्ल ಭಲ್ಲ** (पुं०) 1. ಭಲ್ಲೂಕ, ಕರಡಿ. 2. ಅರ್ಧಚಂದ್ರಾಕಾರದ ಒಂದು ಶಸ್ತ್ರ. भल्ल (परिभाषणहिंसादानेषु) "अच्" (३-१-१३४)। "भल्लः स्यात्पुंसि भल्लूके शस्त्रभेदे पुनर्द्वयोः" मेदि०। "भल्लेन शितधारेण भिन्नोऽपि रिपुणाश्वगः" कुमा० १६-४४। "क्वचिदाकर्णविकृष्टभल्लवर्षी" रघु० ९-६६।

**भल्लात ಭಲ್ಲಾತ** (पुं०) ಗೇರುಮರ.

**भल्लातक ಭಲ್ಲಾತಕ** (त्रि०) 1. ಗೇರುಮರ. भल्ल इवातति—अत (सातत्यगमने) "क्वुन्" (उ० २-३२)। "वीरवृक्षोऽरुष्करोऽग्निमुखी भल्लातकी त्रिषु" अम०। स्त्रियां **भल्लातकी ಭಲ್ಲಾತಕೀ.** (न०) 2. ಗೇರುಹಣ್ಣು.

**भल्ली ಭಲ್ಲೀ** (स्त्री०) 1. ಒಂದು ವಿಧ ಶಸ್ತ್ರ. "भल्लो भल्ली च बाणे स्यात् भल्लो भल्लक उच्यते" विश्व०। 2. ಗೇರುಮರ. "भल्लातक्यां स्त्रियां भल्ली" मेदि०।

**भल्लु(ल्लू)क ಭಲ್ಲು(ಲ್ಲೂ)ಕ** (पुं०) 1. ಕರಡಿ. भल्लति हिनस्ति—भल्ल (हिंसायाम्) "उ:" बाहु०। "कन्" (५-३-८५)। "ऊक:" (उ० ४-४१)। स्त्रियां "ङीष्" (४-१-६३)। **भल्लु(ल्लू)की ಭಲ್ಲು(ಲ್ಲೂ)ಕೀ.** "भल्लूको भल्लुकोऽपि च" शब्दभेद०। "अथ भल्लुके। ऋक्षाच्छभल्लभल्लूका:" अम०। "दधति कुहरभाजामत्र भल्लूकयूनाम्" उ० रा० २-२१। 2. ವಾನರ, ಕಪಿ. "कपि: शाखामृगो हरि:। महावेगो दधिमुख: कुरङ्गो भल्लुक: पृथु:" वैज०।

**भव ಭವ** (पुं०) 1. ಮಹಾದೇವ, ಶಂಕರ, ಪರಶಿವ, ಪರಮೇಶ್ವರ. भवति भवते वा—भू (प्राप्तौ) "अच्" (३-१-१३४)। "आलम्बताग्रकरमत्र भवो भवान्या:" किरा० ५-२९। "तावत्स वह्निर्भवनेत्रजन्मा" कुमा० ३-७२। 2. ಸಂಸಾರ. "तदिच्छामो विभो स्रष्टुं सेनान्यं तस्य शान्तये। कर्मबन्धच्छिदं धर्मं भवस्येव मुमुक्षव:" कुमा० २-५१। 3. ಜನ್ಮ, ಉತ್ಪತ್ತಿ, ಹುಟ್ಟು. भू "अप्" (३-३-५७)। "बभूव सर्वं शुभशंसि तत्क्षणं भवो हि लोकाभ्युदयाय तादृशाम्" रघु० ३-१४। 4. ಸತ್ತೆ, ಇರುವಿಕೆ. 5. ಪ್ರಾಪ್ತಿ, ಹೊಂದುವಿಕೆ. 6. ಕ್ಷೇಮ, ಕುಶಲ, ಸೌಖ್ಯ. "भव: क्षेमेशसंसारे सत्तायां प्राप्तिजन्मनो:" मेदि०। (न०) 7. ಫಲ.

**भवच्छिद् ಭವಚ್ಛಿದ್** (वि०) ಸಂಸಾರವನ್ನು ನಿವೃತ್ತಿಗೊಳಿಸುವ, ಇಹಲೋಕದ ಜೀವನವನ್ನು ಕೊನೆಗಾಣಿಸುವ. भवं संसारं छिनत्ति—छिदिर् (द्वैधीकरणे) "क्विप्" (३-२-६१)। "आगमादिव तमोऽपहादित: संभवन्ति मतयो भवच्छिद:" किरा० ५-२२।

**भवच्छेद ಭವಚ್ಛೇದ** (पुं०) ಸಂಸಾರದ ನಿವೃತ್ತಿ, ಇಹಲೋಕದ ಜೀವನವನ್ನು ಕೊನೆಗಾಣಿಸುವುದು. भवस्य संसारस्य छेद:।

**भवच्छेदकर ಭವಚ್ಛೇದಕರ** (वि०) ಸಂಸಾರಬಂಧನವನ್ನು ಬಿಡಿಸುವ. भवस्य छेदं करोति—कृञ् (करणे) "ट:" (३-२-२०)। "भवान् भवच्छेदकरै: करोत्यध:" माघ० १-३५।

**भवत् ಭವತ್** (त्रि०) 1. ನೀನು ಎಂಬ ಅರ್ಥದಲ್ಲಿ ಗೌರವದ ಪದ. भातीति भवान्—भा (दीप्तौ) "डवतु:" (उ० १-६३)। (पुं०) भवान् भवन्तौ भवन्त:। "भवद्गिरामवसरप्रदानाय वचांसि न:" माघ० २-८। "भवल्लब्धवरोदीर्णस्तारकाख्यो महासुर:" कुमा० २-३२। (स्त्री०) भवती भवत्यौ भवत्य:। "देवि, प्रबलचिन्ताकुलहृदयामिव भवतीमवलोकयामि" प्रबोध० ५। ಈ भवत् ಪದವು अत्र ಮತ್ತು तत्र ಪದಗಳೊಡನೆ ಸೇರಿದಾಗ ಪೂಜ್ಯಾರ್ಥಕವಾಗುವುದು. "सङ्गीतरचनां कृत्वा अत्रभवतो दूतं प्रेषयतम्" माल० १। "आदिष्टोऽस्मि तत्रभवता काश्यपेन" शाकु० ४। 2. ವರ್ತಮಾನ ಕಾಲದ, ಈಗ ನಡೆಯುತ್ತಿರುವ ಕಾಲದ. भू "शतृ" (३-२-१२४)। "भूतं भवद्भावि च यच्च किञ्चित् सर्वज्ञ सर्वं तव गोचरं तत्" कुमा० १२-४४। 3. ಹುಟ್ಟುವ, ಉಂಟಾಗುವ, ಸಂಭವಿಸುವ. "भवन् भयाय लोकानामाकम्पितमहीतल:" माघ० १९-४। 4. ಆಗಿರುವ, ಉಂಟಾಗಿರುವ. "भव्यो भवन्नपि मुनेरिह शासनेन क्षात्रे स्थित: पथि तपस्य हतप्रमाद:" किरा० ५-४९। स्त्रियां "ङीप्" (४-१-६)। **भवन्ती ಭವನ್ತೀ.**

**भवती ಭವತೀ** (स्त्री०) ವಿಷಲೇಪನ ಮಾಡಿದ ಬಾಣ.

**भवदीय ಭವದೀಯ** (वि०) ನಿನ್ನ ಸಂಬಂಧವಾದ. भवत: अयम् "छस्" (४-२-११५)। "डवतु" ಪ್ರತ್ಯಯಾಂತವಾದ ಸರ್ವನಾಮ भवत् ಶಬ್ದಕ್ಕೆ ಮಾತ್ರ "छस्" ಪ್ರತ್ಯಯ ಬರುವುದು. "शतृ" ಪ್ರತ್ಯಯಾಂತ भवत् ಶಬ್ದಕ್ಕೆ "अण्" ಪ್ರತ್ಯಯ ಬಂದು **भावत: ಭಾವತಃ** ಎಂದು ರೂಪವಾಗುವುದು. "अपि दृष्टमपि श्रुतं प्रभावं भवदीयं भविनस्तमोऽभिभूता:" याद० १५-२५।

**भवन ಭವನ** (न०) 1. ಗೃಹ, ಮನೆ. भवन्त्यत्र—भू (सत्तायाम्) "ल्युट्" (३-३-११७)। "भवनोदरेषु परिमन्दतया शयितोऽलस: स्फटिकयष्टिरुच:" माघ० ९-३९। "भवनवलभीतुङ्गवातायनस्था" मालती० १-१८। 2. ಭಾವ, ಅಭಿಪ್ರಾಯ. 3. ಸತ್ತೆ, ಅಸ್ತಿತ್ವ, ಇರುವಿಕೆ. भू भावे "ल्युट्" (३-३-११५)। "भवनं स्यात् गृहे भावे" मेदि०। 4. ಸ್ಥಾನ, ಆಶ್ರಯ. 5. ಜನ್ಮ, ಉತ್ಪತ್ತಿ. "जन्माश्रयश्च भवनम्" त्रिकाण्ड०। 6. ಉಂಟಾಗುವುದು, ಸಂಭವಿಸುವುದು. (पुं०) 7. ನಾಯಿ. "कौलेयकोऽस्थिखादश्च भवनो भलुहोऽपि च" वैज०।

**भवनीय ಭವನೀಯ** (वि०) ಆಗಬೇಕಾದ, ಸಂಭವಿಸಬೇಕಾದ. भवितुमर्हम् भू "अनीयर्" (३-१-९६)। "तव्य:" (३-१-९६)। **भवितव्यम् ಭವಿತವ್ಯಮ್.**

"विपत्तौ किं विषादेन सम्पत्तौ हर्षणेन किम्। भवितव्यं भवत्येव कर्मणामीदृशी गतिः"।

**भवभूति ಭವಭೂತಿ** (पुं०) ಒಬ್ಬ ಮಹಾಕವಿ. ಈ ಕವಿಯು ಕ್ರಿ.ಶ. 7 ನೆಯ ಶತಮಾನದ ಕೊನೆಯಲ್ಲಿದ್ದನೆಂದು ಚರಿತ್ರೆಯಿಂದ ತಿಳಿಯಬಹುದಾಗಿದೆ. ಈತನು ವಿದರ್ಭದೇಶದ ಪದ್ಮಪುರದಲ್ಲಿ ಜನಿಸಿದವನು. ನೀಲಕಂಠನೆಂಬುವನು ಈತನ ತಂದೆ. ಜಾತುಕರ್ಣಿಯು ತಾಯಿ, ಶ್ರೀಕಂಠನೆಂದು ಈ ಕವಿಯ ನಾಮಕರಣದ ಹೆಸರು. ಈತನಿಗೆ ಆಶ್ರಯದಾತನಾಗಿದ್ದ ಯಶೋವರ್ಮರಾಜನು "साम्बा पुनातु भवभूतिपवित्रमूर्तिः" ಎಂಬ ಈ ಕವಿಯ ಶ್ಲೋಕದಿಂದ ಸಂತೋಷಗೊಂಡು ಇವನಿಗೆ "भवभूतिः" ಎಂಬ ಹೆಸರನ್ನಿಟ್ಟು ಅದೇ ಹೆಸರಿನಿಂದ ಪ್ರಸಿದ್ಧಿಗೊಳಿಸಿದನು. ಪರಮೇಶ್ವರನೇ ಸಾಕ್ಷಾತ್ತಾಗಿ ಬಂದು ಈತನಿಗೆ ಭೂತಿಯನ್ನು ಕೊಟ್ಟು ಅನುಗ್ರಹಿಸಿದುದರಿಂದ भवाद्भूतिरस्य ಎಂದು ಈತನಿಗೆ ಅನ್ವರ್ಥನಾಮವಾಯಿತೆಂದು ಒಂದು ಕಥೆ. ಈ ಕವಿಯಿಂದ (1) महावीरचरितम्, (2) मालतीमाधवम् ಮತ್ತು (3) उत्तररामचरितम् ಎಂಬ ಮೂರು ರೂಪಕಗಳು ರಚಿತವಾಗಿವೆ. ಮೊದಲ ಎರಡು ರೂಪಕಗಳ ಶೈಲಿಯು ಕ್ಲಿಷ್ಟವಾದುದು. "उत्तरे रामचरिते भवभूतिर्विशिष्यते" ಎಂದು ಕೊಂಡಾಡಲ್ಪಟ್ಟ ಈ ಕವಿಯ ಶೈಲಿಯು ಉತ್ತರರಾಮಚರಿತದಲ್ಲಿ ದ್ರಾಕ್ಷಾಪಾಕಕ್ಕಿಳಿದು ಭಾವುಕರಿಗೆ ಪರಮ ಭೋಗ್ಯವಾಗಿರುವುದು.

**भववीति ಭವವೀತಿ** (स्त्री०) ಸಂಸಾರಬಂಧವಿಮೋಚನೆ, ಸಂಸಾರದಿಂದ ಬಿಡುಗಡೆ. भवाद्वीतिः। "भववीतये हतबृहत्तमसामवबोधवारि रजसः शमनम्" किरा० ६-४१।

**भवातिग ಭವಾತಿಗ** (वि०) ಸಂಸಾರವನ್ನು ದಾಟಿದವನು, ಸಂಸಾರಬಂಧವಿಮೋಚನೆ ಹೊಂದಿದವನು. भवं संसारमतिगच्छति—गम्लृ (गतौ) "डः" (वा० ३-२-४८)।

**भवात्मज ಭವಾತ್ಮಜ** (पुं०) 1. ಕಾರ್ತಿಕೇಯ, ಷಣ್ಮುಖ. 2. ವಿನಾಯಕ, ಗಣಪತಿ. भवस्य आत्मजः।

**भवादृश् ಭವಾದೃಶ್** (वि०) ನಿನ್ನಂತಹ, ನಿನ್ನಂತಿರುವ. भवानिव दृश्यते—दृशिर् (प्रेक्षणे) "क्विन्" (३-२-६०)। आत्वम् (६-३-९१)। "कञ्" (३-२-६०)। **भवादृशः ಭವಾದೃಶಃ.** "क्सः" (वा० ३-२-५७)। **भवादृक्षः ಭವಾದೃಕ್ಷಃ.** क्विनि कञि च "ङीप्" (४-१-५, ४-१-१५)। **भवादृशी ಭವಾದೃಶೀ.** क्से "टाप्" (४-१-४)। **भवादृक्षा ಭವಾದೃಕ್ಷಾ.** "ध्वंसते यदि भवादृशस्ततः कः प्रयातु वद तेन वर्त्मना" किरा० १३-४१। "भवादृशेषु प्रमदाजनोदितं भवत्यधिक्षेप इवानुशासनम्" किरा० १-२८।

**भवानी ಭವಾನೀ** (स्त्री०) ಭವನ ಪತ್ನಿ, ಪರಮೇಶ್ವರನ ಸತಿ, ಪಾರ್ವತೀದೇವಿ. भवस्य पत्नी—भव "ङीष्" आनुक् आगमश्च (४-१-४९)। "आलम्बताग्रकरमत्र भवो भवान्याश्च्योतन्निदाघसलिलाङ्गुलिना करेण" किरा० ५-२९।

**भवान्तकृत् ಭವಾಂತಕೃತ್** (पुं०) 1. ಚತುರ್ಮುಖ ಬ್ರಹ್ಮ. "यदा स्वपिति शान्तात्मा तदा सर्वं निमीलति" मनु० १-५२। 2. ಸಂಸಾರಬಂಧವನ್ನು ಬಿಡಿಸುವ ಪರಮಾತ್ಮಜ್ಞಾನ.

**भवायनी ಭವಾಯನೀ** (स्त्री०) ಗಂಗಾನದಿ. भवः अयनं स्थानं यस्याः। गौरा० "ङीष्" (४-१-४१)।

**भविक ಭವಿಕ** (न०) 1. ಕುಶಲ, ಕ್ಷೇಮ. प्रशस्तो भवो भद्रप्राप्तिरत्रास्ति "ठन्" (५-२-११५)। (वि०) 2. ಶುಭಕರವಾದ, ಕ್ಷೇಮವನ್ನುಂಟುಮಾಡುವ.

**भवितव्य ಭವಿತವ್ಯ** (वि०) ಆಗಬೇಕಾದ, ಸಂಭವಿಸಬೇಕಾದ. भवितुमर्हम् "तव्यः" (३-१-९६)। "विपत्तौ किं विषादेन सम्पत्तौ हर्षणेन किम्। भवितव्यं भवत्येव कर्मणामीदृशी गतिः"। "भवितव्यं भवत्येव यद्विधेर्मनसि स्थितम्"।

**भवितव्यता ಭವಿತವ್ಯತಾ** (स्त्री०) ಅವಶ್ಯವಾಗಿ ಆಗಬೇಕಾಗುವಿಕೆ, ಅವಶ್ಯವಾಗಿ ಸಂಭವಿಸುವಿಕೆ. भवितव्यस्य भावः "तल्" (५-१-११९)। "सर्वंकषा भगवती भवितव्यतैव" मालती० १-२३।

**भवितृ ಭವಿತೃ** (वि०) 1. ಮುಂದೆ ಆಗುವ, ಭವಿಷ್ಯತ್ ಕಾಲದಲ್ಲಿ ಸಂಭವಿಸುವ. भू (सत्तायाम्) "तृन्" (३-२-१३५)। 2. ಮುಂದೆ ಚೆನ್ನಾಗಿ ಆಗುವ ಸ್ವಭಾವದ, ಒಳ್ಳೆಯದಾಗಿ ಆಗುವ. स्त्रियां "ङीप्" (४-१-५)। **भवित्री ಭವಿತ್ರೀ.** "नृपं तमावर्तमनोज्ञनाभिः सा व्यत्यगादन्यवधूर्भवित्री" रघु० ६-५२।

**भविन् ಭವಿನ್** (वि०) 1. ಸಂಸಾರಿ, ಸಂಸಾರಬಂಧನಕ್ಕೆ ಒಳಗಾದವನು. भवोऽस्यास्ति "इनिः" (५-२-११५)। 2. ಜೀವಿಸಿರುವವನು, ಬದುಕಿರುವವನು.

**भविल ಭವಿಲ** (पुं०) 1. ಜಾರ, ವ್ಯಭಿಚಾರಿ, ಉಪಪತಿ. भू "इलच्" (उ० १-५४)। "पीठकेलिः पीठमर्दो भविलश्छिद्रुरो विटः" त्रिकाण्ड०। (न०) 2. ಗೃಹ,

ಮನೆ. 3. ಭವ್ಯವಾದ ಭವಿಷ್ಯತ್ತು, ಶುಭವಾದ ಮುಂದಿನ ಕಾಲ. "भविलं भवने भव्ये" वैज० ।

**भविष्णु ಭವಿಷ್ಣು** (वि०) 1. ಮುಂದೆ ಚೆನ್ನಾಗಿ ಆಗುವ ಸ್ವಭಾವದ, ಮುಂದೆ ಅಭಿವೃದ್ಧಿ ಹೊಂದುವ ಸ್ವಭಾವದ. भू (सत्तायाम्) "इष्णुच्" (३-२-१३८)। ಸಿದ್ಧಾಂತ ಕೌಮುದಿಯಂತೆ ಈ ಪ್ರಯೋಗ. ಮಹಾಭಾಷ್ಯದಲ್ಲಿ "भवः इट्प्रतिषेधश्च" ಎಂದಿರುವುದರಿಂದ "भविष्णु" ಪದವು ನಿರಂಕುಶ ಕವಿಗಳ ಪ್ರಯೋಗ. 2. ಆಗುವ, ಸಂಭವಿಸುವ, ಒದಗುವ. "सहेलहासच्छुरिताननेन्दुस्ततः कुमारः पुरतो भविष्णुः" कुमा० १३-१३ ।

**भविष्य(त्) ಭವಿಷ್ಯ(ತ್)** (पुं०) 1. ಮುಂದಿನ ಕಾಲ, ಮುಂದೆ ಬರುವ ಕಾಲ. भू (सत्तायाम्) "स्यः" (३-१-३३)। वा "शतृ" (३-३-१४)। (वि०) 2. ಮುಂದಿನ ಕಾಲದ, ಮುಂದಿನ ಕಾಲದಲ್ಲಿ ಉಂಟಾಗುವ, ಮುಂದಿನ ಕಾಲದಲ್ಲಿ ಸಂಭವಿಸುವ. "भविष्यतः पत्युरुमा च शम्भोः समाससाद प्रतिहारभूमिम्" कुमा० ३-५८। स्त्रियां "ङीप्" (४-१-६)। **–ष्यन्ती –ಷ್ಯಂತೀ.** "अव्याक्षेपो भविष्यन्त्याः कार्यसिद्धेर्हि लक्षणम्" रघु० १०-६। (न०) 3. ಭವಿಷ್ಯ ಪುರಾಣ, ಮುಂದಿನ ಕಾಲದಲ್ಲಿ ನಡೆಯುವ ವಿಷಯಗಳನ್ನು ಕುರಿತು ಬರೆದ ಪುರಾಣ.

**भविष्यत्काल ಭವಿಷ್ಯತ್‌ಕಾಲ** (पुं०) ಮುಂದಿನ ಕಾಲ, ಮುಂದೆ ನಡೆಯುವ ಕಾಲ.

**भविष्यवादिन् ಭವಿಷ್ಯವಾದಿನ್** (वि०) ಮುಂದಿನ ಕಾಲದಲ್ಲಿ ನಡೆಯುವುದನ್ನು ಹೇಳುವವನು, ಭವಿಷ್ಯ ನುಡಿಯುವವನು. भविष्यं वदति—वद "णिनिः" (३-२-७८)।

**भव्य ಭವ್ಯ** (न०) 1. ಕುಶಲ, ಕ್ಷೇಮ, ಶುಭ. भवति—भू (सत्तायाम्) वा कर्त० "यत्" (३-४-६८)। पक्षे भूयतेऽनेन—भावे "यत्"। "भव्यमुख्याः समारम्भाः प्रत्यवेक्ष्या निरत्ययाः" रघु० १७-५३। 2. ಅಸ್ಥಿ, ಎಲುಬು. 3. ಭವಿಷ್ಯತ್‌ಕಾಲ, ಮುಂದೆ ನಡೆಯುವ ಕಾಲ. 4. ಸತ್ಯ, ನಿಜ. 5. ಅದೃಷ್ಟ, ಭಾಗ್ಯ. (वि०) 6. ಸತ್ಯವಾದ, ನಿಜವಾದ. 7. ಶುಭಕರ, ಮಂಗಳವನ್ನುಂಟು ಮಾಡುವ. 8. ಯೋಗ್ಯನಾದ, ಅರ್ಹನಾದ. "इति त्याज्ये भवे भव्यो मुक्तावुत्तिष्ठते जनः" किरा० ११-१३। 9. ಅದೃಷ್ಟವಂತ, ಭಾಗ್ಯಶಾಲಿ, ಪುಣ್ಯಶಾಲಿ. "सा भूधराणामधिपेन तस्यां समाधिमत्यामुदपादि भव्या" कुमा० १-२२। 10. ಶ್ರೇಷ್ಠನಾದ, ಉತ್ತಮನಾದ. "यत्पादपद्ममभवाय भजन्ति भव्याः" भाग०। 11. ಭವಿಷ್ಯತ್‌ಕಾಲದ, ಮುಂದಿನ ಕಾಲದಲ್ಲಿ ನಡೆಯುವ. 12. ಅವಶ್ಯವಾಗಿ ನಡೆಯಬೇಕಾದ, ಅವಶ್ಯವಾಗಿ ಆಗಬೇಕಾದ. "अवश्यभव्येष्वनवग्रहग्रहा यया दिशा धावति वेधसः स्पृहा" नैष० १-१२०। 13. ಶಾಂತನಾದ, ಸೌಮ್ಯನಾದ, ತಾಳ್ಮೆಯುಳ್ಳ. "भव्यो भवन्नपि मुनेरिह शासनेन" किरा० ५-४९। 14. ಸಾಧು, ಒಳ್ಳೆಯವನು. "वीतस्पृहाणामपि मुक्तिभाजां भवन्ति भव्येषु हि पक्षपातः" किरा० ३-१२। (पुं०) 15. ಕಡಾರದ ಗಿಡ, ದೊಡ್ಡ ಜಾತಿಯ ಹಿರಳೆ ಗಿಡ. (स्त्री०) **–व्या –ವ್ಯಾ.** 16. ಗಜಪಿಪ್ಪಲಿ. 17. ಅಗಸೆ ಗಿಡ. "भव्यं शुभे च सत्ये च योग्ये भाविनि च त्रिषु। कर्मरङ्गतरौ पुंसि स्त्रियां करिकणोमयोः। क्लीबमस्थनि" मेदि०।

**भष ಭಷ** (पुं०) 1. ಶ್ವಾನ, ನಾಯಿ. भषति—भष (भर्त्सने) "अच्" (३-१-१३४)। (स्त्री०) **–षा –ಷಾ.** 2. ಘಂಟಾಮಣಿ ಸೊಪ್ಪು, ಕಂಕೋಷ್ಠ.

**भषक ಭಷಕ** (पुं०) ಶ್ವಾನ, ನಾಯಿ. भष (भर्त्सने) "क्वुन्" (उ० २-३२)। "शुनको भषकः श्वा स्यात्" अम०। स्त्रियां "ङीष्" (४-१-६१)। **–की –ಕೀ.**

**भषण ಭಷಣ** (पुं०) 1. ನಾಯಿ, ಶ್ವಾನ. भषति—भष (भर्त्सने) "ल्युः" (३-१-१३४)। "श्वा सारमेयः शुनको भषणो मृगदंशकः" वैज०। (न०) 2. ನಾಯಿಯ ಕೂಗು, ನಾಯಿ ಬಗುಳುವುದು. भष भावे "ल्युट्" (३-३-११५)। "बुक्कनं श्वकृतध्वाने भषणं भषितं शुनः" वैज०।

**भषित ಭಷಿತ** (न०) ನಾಯಿಯ ಶಬ್ದ, ನಾಯಿಯ ಕೂಗು. भष (भर्त्सने) भावे "क्तः" (३-३-११४)। "भषणं भषितं शुनः" वैज०।

**भसत् ಭಸತ್** (पुं०) 1. ಪಕ್ಷಿ, ಹಕ್ಕಿ. "नीडोद्भवः शुको नीडी मल्लूको विप्रुषो भसन्" वैज०। 2. ಕಾಲ, ವೇಳೆ. "कालस्त्वपष्ठुर्जहको भसन्तो भसदित्यपि" त्रिकाण्ड०।

**भसद् ಭಸದ್** (स्त्री०) 1. ಗಣದೇವತೆ. 2. ಮಾಂಸ. 3. ಯೋನಿ, ಸ್ತ್ರೀಯರ ಗುಹ್ಯಪ್ರದೇಶ, ಗುಹ್ಯಾಂಗ. भस (भर्त्सनदीप्त्योः) "अदिः" (उ० १-१२७)। "भसद्भास्वरमांसयोः" हेम०। "भसद्स्त्री भास्वरे योनौ" मेदि०।

**भसन्त ಭಸಂತ** (पुं०) ಕಾಲ, ವೇಳೆ. बभस्ति—भस (भर्त्सनदीप्त्योः) "झच्" बाहु०।

**भसित ಭಸಿತ** (ನಂ) ವಿಭೂತಿ, ಭಸ್ಮ, ಬೂದಿ. भस (दीप्तौ) "क्तः" (३-३-९४)। "भूतिर्भसितं भस्म क्षारं रक्षा च निर्दिष्टा" अभिं. र०।

**भस्त्रका ಭಸ್ತ್ರಕಾ** (स्त्री०) 1. ತೊಗಲಿನ ಚೀಲ. 2. ತೊಗಲಿನತಿದಿ. 3. ತೊಗಲಿನ ಪಾತ್ರೆ. भस (दीप्तौ) "ष्ट्रन्" (उ० ४-१६७)। "टाप्" (४-१-४)। स्वार्थे "कन्"। वा इत् (७-३-४७)। इत्त्वपक्षे **भस्त्रिका ಭಸ್ತ್ರಿಕಾ.**

**भस्त्रा ಭಸ್ತ್ರಾ** (स्त्री०) 1. ತೊಗಲಿನ ಚೀಲ. 2. ತೊಗಲಿನ ತಿದಿ. 3. ತೊಗಲಿನ ಪಾತ್ರೆ. भस (दीप्तौ) "ष्ट्रन्" (उ० ४-१६७)।

**भस्मक ಭಸ್ಮಕ** (नं०) 1. ಹೆಚ್ಚು ಹಸಿವನ್ನುಂಟುಮಾಡುವ ಒಂದು ರೋಗ, ತಿಂದ ಆಹಾರವನ್ನು ಬೇಗ ಜೀರ್ಣ ಮಾಡುವ ಒಂದು ರೋಗ. भस्मन् संज्ञायां "कन्"। ಬಹಳ ರೂಕ್ಷವಾದ (ವೇಗವಾದ) ಆಹಾರ ಸೇವನೆಯಿಂದ ಕಫವು ಕಡಮೆಯಾಗಿ ವಾತ ಮತ್ತು ಪಿತ್ತಗಳು ವೃದ್ಧಿ ಹೊಂದಿ ಅಗ್ನಿಯು ವೇಗವಾಗುವುದರಿಂದ ತಿಂದ ಆಹಾರವು ಬೇಗ ಜೀರ್ಣವಾಗುವುದು. ಇದಕ್ಕೆ ಭಸ್ಮಕ ರೋಗವೆಂದು ಹೆಸರು. ಇದನ್ನು ಉಪೇಕ್ಷಿಸಿದರೆ ಕ್ಷಯರೋಗಕ್ಕೆ ತುತ್ತಾಗ ಬೇಕಾಗುವುದು. "कट्वादिरूक्षान्नभुजां नराणां क्षीणे कफे मारुतपित्तवृद्धौ। अतिप्रवृद्धः पवनान्वितोऽग्निः भुक्तं क्षणाद्भस्म करोति यस्मात्। तस्मादसौ भस्मकसंज्ञकोऽभूदुपेक्षितोऽयं पचते च धातून्"॥ ಜಾಠರಾಗ್ನಿಯ ವೇಗದಿಂದ ಬಾಯಾರಿಕೆ ಬೆವರು ಸಂತಾಪ (ಜ್ವರ) ಮೂರ್ಛೆ ಮುಂತಾದ ತೊಂದರೆಗಳಾಗಿ ಕ್ರಮವಾಗಿ ಧಾತುಗಳು ನಾಶವಾಗುವುವು. "तृट्स्वेददाहमूर्च्छादीन् कृत्वैवात्यग्निसंभवान्। पक्वान्नमाशु धात्वादीन् स क्षिप्रं नाशयेद्ध्रुवम्" भावप्र०। 2. ವಾಯಿವಿಳಂಗ. 3. ಸ್ವರ್ಣ, ಚಿನ್ನ. 4. ರಜತ, ಬೆಳ್ಳಿ. "भस्मकं रोगभेदे स्याद्विडङ्गकलधौतयोः" विश्व०।

**भस्मगन्धा ಭಸ್ಮಗಂಧಾ** (स्त्री०) ರೇಣುಕ ಎಂಬ ಒಂದು ಗಂಧದ್ರವ್ಯ. भस्मन इव गन्धोऽस्याः।

**भस्मगन्धिनी ಭಸ್ಮಗಂಧಿನೀ** (स्त्री०) ರೇಣುಕ ಎಂಬ ಒಂದು ಗಂಧದ್ರವ್ಯ. भस्मनः गन्धोऽस्त्यस्याः "इनिः" (५-२-११५)। "ङीप्" (४-१-५)। "हरेणू रेणुका कौन्ती कपिला भस्मगन्धिनी" अम०।

**भस्मगर्भा ಭಸ್ಮಗರ್ಭಾ** (स्त्री०) ಕಪಿಲವರ್ಣದ ಅಗುರು. "अथ पिच्छिलाऽगुरुशिंशपाः। कपिला भस्मगर्भा सा" अम०।

**भस्मतूल ಭಸ್ಮತೂಲ** (नं०) 1. ಗ್ರಾಮಗಳ ಸಮೂಹ, ಹಳ್ಳಿಗಳ ಗುಂಪು. भस्म तूलयति—तूल (निष्कर्षे) + णिच् "कः" (३-१-१३५)। 2. ಧೂಳಿನ ಸುರಿಮಳೆ. 3. ಹಿಮ, ಮಂಜು. "भस्मतूलं ग्रामकूटे पांसुवर्षे हिमेऽपि च" मेदि०।

**भस्मधारण ಭಸ್ಮಧಾರಣ** (नं०) ವಿಭೂತಿಯ ಧಾರಣೆ, ವಿಭೂತಿಯನ್ನು ಹಚ್ಚಿಕೊಳ್ಳುವುದು. भस्मनो धारणम्। **—लेपनम् —ಲೇಪನಮ್.**

**ಭಸ್ಮಧಾರಣ ವಿಧಿ:** ಕಾಂತಿ ಮತ್ತು ಸೌಖ್ಯವನ್ನು ಅಪೇಕ್ಷಿಸುವವರು ಅಮಂತ್ರಕವಾದ ಗಂಧ ಅಗುರು ಮತ್ತು ಕೇಸರಿ ಇವುಗಳನ್ನು ತಿರ್ಯಕ್‌ಪುಂಡ್ರವಾಗಿ ಧರಿಸಬೇಕು. ಈ ಪುಂಡ್ರವನ್ನು ಧರಿಸಿದರೂ ಭಸ್ಮಧಾರಣೆಯಾಗಬೇಕು. "वैदिकैः मन्त्रैः रहितं चन्दनागुरुकुङ्कुमम्। तिर्यक्पुण्ड्रात्मना धार्यं कान्तिसौख्याभिलाषिभिः। पुण्ड्रे धृतश्चन्दनाद्यैरपि भस्म न संत्यजेत्। दह्येत भस्मसंत्यागी सतीशक्रोधवह्नितः। चन्दनादुपरि प्राज्ञो धारयेद्भस्म वैदिकम्। लौकिकं चन्दनाद्यं तु भस्मोपरि न धारयेत्"। ಭಸ್ಮಧಾರಣೆಮಾಡಿ ಅದರ ಮೇಲೆ ಚಂದನಾದಿ ತ್ರಿಪುಂಡ್ರವನ್ನು ಧರಿಸಕೂಡದು. ಭಸ್ಮಧಾರಣೆಯಿಲ್ಲದೆ ಮಾಡುವ ಶಿವಪೂಜೆಯಿಂದ ಫಲವಿಲ್ಲ. "विना भस्मत्रिपुण्ड्रेण विना रुद्राक्षमालया। महादेवोऽर्चितो येन न च तस्य फलप्रदः" लिङ्गपु०।

**भस्मन् ಭಸ್ಮನ್** (नं०) 1. ಭಸ್ಮ, ಬೂದಿ. भस (दीप्तौ) "मनिन्" (३-२-७५)। 2. ವಿಭೂತಿ, ಧಾರಣೆಗಾಗಿ ಮಂತ್ರಪೂರ್ವಕ ಬೆರಣಿ ಮೊದಲಾದುವುಗಳಿಂದ ತಯಾರಿಸಲ್ಪಟ್ಟ ಬೂದಿ. "भस्मानुलिप्ते वपुषि स्वकीये सहेलमादर्शतलं विमृज्य" कुमा० ९-२८।

**भस्मसात् ಭಸ್ಮಸಾತ್** (अव्य०) ಭಸ್ಮವಾಗಿ, ಸಂಪೂರ್ಣ ಬೂದಿಯಾಗಿ. भस्म कार्त्स्न्येन सम्पन्नम्—भस्मन् वा "सातिः" (५-४-५२)। ಈ साति ಪ್ರತ್ಯಯವು कृञ्, भू ಮತ್ತು अस ಧಾತುಗಳ ಯೋಗವಿದ್ದಲ್ಲಿ ಅಭೂತ ತದ್ಭಾವಾರ್ಥದಲ್ಲಿ ವಿಕಲ್ಪವಾಗಿ ಬರುವುದು. भस्मसाद्भवति, भस्मीभवति। अग्निसाद्भवति, अग्नीभवति, भस्मसात्करोति, भस्मीकरोति ಇತ್ಯಾದಿ.

**भस्मावशेष ಭಸ್ಮಾವಶೇಷ** (वि०) ಭಸ್ಮರೂಪದಲ್ಲಿ ಉಳಿದಿರುವ. भस्मैवावशेषो यस्य। "तावत्स वह्निर्भवनेत्रजन्मा भस्मावशेषं मदनं चकार" कुमा० ३-७२।

**भस्मासुर ಭಸ್ಮಾಸುರ** (पुं०) ಒಬ್ಬ ಅಸುರ. [ಈ ಅಸುರನು ಪರಮೇಶ್ವರನನ್ನು ಕುರಿತು ತಪಸ್ಸುಮಾಡಿ ತನಗೆ ಯಾರಿಂದಲೂ ಮರಣ ಕೊಡದೆಂದೂ ತಾನು ಯಾರ ತಲೆಯ ಮೇಲೆ ಕೈಯಿಟ್ಟರೂ ಅವರು ಭಸ್ಮವಾಗ ಬೇಕೆಂದೂ ವರ ಪಡೆದನು. ಈ ವರವನ್ನು ಪರೀಕ್ಷಿಸಲು ಒಂದು ಸಲ ಈಶ್ವರನ ತಲೆಯ ಮೇಲೆ ಕೈಯಿಡಲು ಹೋಗಲಾಗಿ ಈಶ್ವರನು ಈ ವಿಷಯವನ್ನು ವಿಷ್ಣುವಿಗೆ ತಿಳಿಸಿದನು. ವಿಷ್ಣುವು ಮೋಹಿನೀ ರೂಪ ಧರಿಸಿ ತಾನು ಮಾಡುವಂತೆಯೇ ನರ್ತನ ಮಾಡಿದರೆ ಅವನ ವಶವಾಗು ವುದಾಗಿ ಹೇಳಿ ನರ್ತನದ ಸಮಯದಲ್ಲಿ ವಿಷ್ಣುವು ತನ್ನ ತಲೆಯ ಮೇಲೆ ಕೈಯಿಟ್ಟಾಗ ಭಸ್ಮಾಸುರನೂ ತನ್ನ ತಲೆಯ ಮೇಲೆ ಕೈಯಿಟ್ಟು ನರ್ತನಮಾಡಲು ಕೂಡಲೇ ಭಸ್ಮವಾದನು.]

**भस्माह्वय ಭಸ್ಮಾಹ್ವಯ** (पुं०) ಕರ್ಪೂರ.

**भस्मीकरण ಭಸ್ಮೀಕರಣ** (न०) ಭಸ್ಮವಾಗಿ ಮಾಡುವುದು, ಸಂಪೂರ್ಣವಾಗಿ ಬೂದಿಯನ್ನಾಗಿ ಮಾಡುವುದು. भस्मन्+कृञ् अभूततद्भावे "च्विः" (५-४-५०)। भावे "ल्युट्" (३-३-११५)। ईत् (७-४-३२)।

**भस्मीकृत ಭಸ್ಮೀಕೃತ** (वि०) ಭಸ್ಮವಾಗಿ ಮಾಡಲ್ಪಟ್ಟ. भस्मन्+कृञ् अभूततद्भावे "च्विः" (५-४-५०)। कर्म० "क्तः" (३-२-१०२)। "भस्मीकृतानां सगरात्मजानां प्राहुःसुधां प्रापितदेवभावाम्" याद० १८-४६।

**भस्मीभूत ಭಸ್ಮೀಭೂತ** (वि०) ಸಂಪೂರ್ಣವಾಗಿ ಬೂದಿ ಯಾದ. भस्मन्+भू अभूततद्भावे "च्विः" (५-४-५०)। कर्त० "क्तः" (३-४-७२)। ईत् (७-४-३२)। "भस्मीभूतस्य देहस्य पुनरागमनं कुतः"।

**भा — दीप्तौ** (अदा० पर० अक० अनि०)। भाति भातः भान्ति। बभौ बभतुः बभुः। भाता। भास्यति। भातु। अभात् अभाताम् अभुः। भायात्। अभासीत्। अभास्यत्। ಪ್ರಕಾಶಿಸು, ಹೊಳೆ. "अमुना धनैः क्षितिभृतातिभृता समतीत्य भाति जगती जगती" किरा० ५-२०। "बभौ च प्रेयसीवक्त्रं पत्युरुन्नमयन् करः" नैष० २०-५१। "भातु नाम सुदृशां दशनाङ्कः पाटलो धवलगण्डतलेषु" माघ० १०-८६।

**कृत्सु:**—भातव्यः। भानीयः। भेयः। भातः। भान्। भातम्। भात्वा। ಇತ್ಯಾದಿ.

**भा ಭಾ** (स्त्री०) 1. ಕಾಂತಿ, ಪ್ರಭೆ, ದೀಪ್ತಿ. भा (दीप्तौ) "अङ्" (३-३-१०४)। "अस्मत्किल श्रोत्रसुधां विधाय रम्भा चिरं भामतुलां नलस्य" नैष० ३-२६। 2. ಸೌಂದರ್ಯ, ಸೊಬಗು. "तावद्भा भारवेर्भाति यावन्माघस्य नोदयः" उद्भ०। 3. ಭೂಮಿ. 4. ಅಲಂಕಾರ. "भा भुव्यलंकृतौ दीप्तौ" नानार्थर०।

**भाकुट ಭಾಕುಟ** (पुं०) ಒಂದು ಜಾತಿಯ ಮೀನು. भया दीप्त्या कुटति—कुट (कौटिल्ये) "कः" (३-१-१३५)।

**भाकूट ಭಾಕೂಟ** (पुं०) 1. ಒಂದು ಜಾತಿಯ ಮೀನು. 2. ಒಂದು ಪರ್ವತ, ಒಂದು ಬೆಟ್ಟ. भायुक्ताः कूटाः शिखराणि यस्य। "भाकूटः शैलझषयोर्भेदे" मेदि०।

**भाकोश ಭಾಕೋಶ** (पुं०) ಸೂರ್ಯ. भानां दीप्तीनां कोश इव। "दिनमणिहरिहेलिब्रध्नभाकोशभासुः" त्रिकाण्ड०।

**भाक्त ಭಾಕ್ತ** (वि०) 1. ಗೌಣವೃತ್ತಿಯಿಂದ ಬಂದ, ಗೌಣ ವೃತ್ತಿಯಿಂದ ಬೋಧಿತವಾದ. भक्तेः गौणवृत्तेरागतः "अण्" (४-३-७६)। 2. ಅನ್ನದ ಸಂಬಂಧವಾದ. भक्तस्य अयम् "अण्" (४-३-१२०)। 3. ನಿಯತ ವಾಗಿ ಅನ್ನ ಕೊಡಲ್ಪಡುವವನು, ಆಶ್ರಿತ. भक्तमस्मै नियतं दीयते—वा "अण्" (४-४-६८)। पक्षे "ठक्" भाक्तिकः ಭಾಕ್ತಿಕ.

**भाक्तिक ಭಾಕ್ತಿಕ** (वि०) "भाक्त" ಪದದಲ್ಲಿ ನೋಡಿ.

**भाग ಭಾಗ** (पुं०) 1. ಭಾಗ, ಪಾಲು, ಹಿಸ್ಸೆ. भज (सेवायाम्) भावे "घञ्" (३-३-१८)। "भागो यवीयसां तत्र यदि विद्यानुपालिनः" मनु० ९-२०४। 2. ಒಂದು ವಸ್ತುವಿನ ಅಂಶ, ಒಂದು ಪದಾರ್ಥದ ಏಕದೇಶ. भज कर्म० "घञ्" (३-३-१९)। 3. ಒಂದು ವಸ್ತುವಿನ ನಾಲ್ಕನೆಯ ಒಂದು ಭಾಗ. 4. ಅದೃಷ್ಟ, ಭಾಗ್ಯ. 5. ರೂಪಾಯಿಯ ಅರ್ಧಭಾಗ, ಅರ್ಧ ರೂಪಾಯಿ. "भागो रूप्यार्धके भाग्यैकदेशयोः" मेदि०। 6. ಸ್ಥಾನ, ಜಾಗ, ಅವಕಾಶ. "उरस्यपर्याप्तनिवेशभागा प्रौढीभविष्यन्तमुदीक्षमाणा" रघु० १८-४७। 7. ರಾಶಿಯ 30ನೆಯ ಒಂದು ಭಾಗ. "त्रिंशांशकस्तथा राशेर्भाग इत्यभिधीयते"। "भागा भाग्यांशतुर्यांशाः" वैज०।

**भागधेय ಭಾಗಧೇಯ** (न०) 1. ಭಾಗ್ಯ, ಅದೃಷ್ಟ. भाग एव स्वार्थे "धेयः" (वा० ५-४-२५)। "भागधेयपरिपाकतस्तदा वासवो वसतिमभ्युपागतम्" याद० १७-६। 2. ಅಂಶ, ಪಾಲು. "अपत्यैरिव नीवारभागधेयोचितैर्मृगैः" रघु० १-५०। 3. ತೆರಿಗೆ, ಕಂದಾಯ, ಸರ್ಕಾರಕ್ಕೆ

ಕೊಡಬೇಕಾದ ರಾಜಧನ. भागेन धीयतेऽसौ—धाञ् कर्मं० "यत्" (३-१-९७)। (ಪುಂ०) 4. ದಾಯಾದ, ಜ್ಞಾತಿ, ಪಾಲುದಾರ. "भागो भाग्ये भागधेयं दायादे तु पुमानयम्" नानार्थर०।

**भागवत ಭಾಗವತ** (ನಂ०) 1. ಶ್ರೀಮದ್ಭಾಗವತ, ವ್ಯಾಸ ಮಹರ್ಷಿಪ್ರಣೀತವಾದ ಅಷ್ಟಾದಶ ಪುರಾಣಗಳಲ್ಲೊಂದು, ಶ್ರೀಕೃಷ್ಣಮಹಿಮೆಯನ್ನು ವರ್ಣಿಸುವ ಒಂದು ಪುರಾಣ ಗ್ರಂಥ. भगवतः इदम् "अण्" (४-३-१२०)। ಈ ಪುರಾಣದಲ್ಲಿ 12 ಸ್ಕಂಧಗಳೂ ಹದಿನೆಂಟು ಸಹಸ್ರ ಗ್ರಂಥಗಳೂ ಇವೆ. ಇದರಲ್ಲಿ ಶ್ರೀವಿಷ್ಣುವಿನ 24 ಅವತಾರ ಗಳು ನಾರದಮಹರ್ಷಿಯ ಉಪದೇಶಪಡೆದ ವ್ಯಾಸ ಮಹರ್ಷಿಯಿಂದ ಭಾಗವತ ರಚನಾರಂಭ ಪರೀಕ್ಷಿತ್ತಿನ ಜನನ ಅವನಿಗೆ ರಾಜ್ಯಲಾಭ ಅವನಿಂದ ಕಲಿಪುರುಷನ ನಿಗ್ರಹ ಪರಮಾತ್ಮನ ವಿರಾಡ್‌ರೂಪ ತತ್ತ್ವಗಳ ಉತ್ಪತ್ತಿ ಬ್ರಹ್ಮಾಂಡನಿರ್ಮಾಣ ವಿಷ್ಣುವಿನ ನಾಭಿಕಮಲದಿಂದ ಬ್ರಹ್ಮೋತ್ಪತ್ತಿ ದಶವಿಧಸೃಷ್ಟಿ ಭಕ್ತಿಯೋಗದಿಂದ ಪ್ರಕೃತಿಯ ತಿರೋಧಾನ ಜಡಭರತನ ವೃತ್ತಾಂತ ಹಿರಣ್ಯಾಕ್ಷ ಹಿರಣ್ಯಕಶಿಪುಸಂಹಾರ ಅಸುರರಿಂದ ದೇವತೆ ಗಳ ಪರಾಜಯ ಸಮುದ್ರಮಥನ ಮಹಾಲಕ್ಷ್ಮಿಯ ಆವಿರ್ಭಾವ ದೇವತೆಗಳ ಅಮೃತಪಾನದಿಂದ ವಂಚಿತರಾದ ದೈತ್ಯರ ಪರಾಜಯ ವಾಮನಾವತಾರ ಬಲಿನಿಗ್ರಹ ಶ್ರೀರಾಮಚರಿತ ಪರಶುರಾಮನಿಂದ ಕ್ಷತ್ರಿಯರ ಸಂಹಾರ ಶ್ರೀಕೃಷ್ಣಾವತಾರ ಶ್ರೀಕೃಷ್ಣನ ಬಾಲಲೀಲೆ ಶಕಟ ತೃಣಾ ವರ್ತಾದಿ ಅಸುರರ ವಧೆ ಇಂದ್ರಮಖಭಂಗ ಗೋವಿಂದ ಪಟ್ಟಾಭಿಷೇಕ ಕಂಸವಧೆ ರುಕ್ಮಿಣೀಕಲ್ಯಾಣ ಶಿಶುಪಾಲ ದಂತವಕ್ತ್ರರ ವಧೆ ಶ್ರೀಕೃಷ್ಣನಿಂದ ಉದ್ಧವನಿಗೆ ಜ್ಞಾನೋಪ ದೇಶ ಸತ್ಸಂಗಮಹಿಮೆ ಭಕ್ತಿಯ ಮಹತ್ತ್ವ ಧ್ಯಾನಯೋಗ ಪರಮಾತ್ಮನ ವಿಭೂತಿವರ್ಣನೆ ಧರ್ಮನಿರೂಪಣೆ ತತ್ತ್ವ ಗಳ ಸಂಖ್ಯೆ ಪ್ರಕೃತಿಪುರುಷವಿವೇಕ ಕಲಿಧರ್ಮನಿರೂಪಣೆ ಪರೀಕ್ಷಿತ್ತಿನ ದೇಹತ್ಯಾಗ ವೇದಗಳ ಶಾಖಾವಿಭಾಗ ಮಾರ್ಕಂಡೇಯನಿಂದ ಭಗವನ್ಮಾಯಾನಿರ್ಮಿತವಾದ ಮಹಾಪ್ರಳಯಲೀಲಾದರ್ಶನ ಪುರಾಣಗಳ ಶ್ಲೋಕ ಸಂಖ್ಯೆ ಶ್ರೀಮದ್ಭಾಗವತಮಹತ್ತ್ವ ಇತ್ಯಾದಿ ವಿಷಯ ಗಳು ವರ್ಣಿತವಾಗಿವೆ. 2. ದೇವೀಭಾಗವತ. ದೇವಿಯ ಮಹಿಮೆಯನ್ನು ವರ್ಣಿಸುವ ಒಂದು ಉಪಪುರಾಣ. भगवत्याः दुर्गायाः इदम् "अण्" (४-३-१२०)। "भगवत्याश्च दुर्गायाश्चरितं यत्र विद्यते। तत्तु भागवतं प्रोक्तं न तु देवीपुराणकम्" शिवपु०। (ವಿ०) 3. ಭಗವದ್ಭಕ್ತ. भगवान् श्रीमन्नारायणः भगवती दुर्गा वा देवताऽस्य "अण्" (४-२-२४)। "सर्वभूतेषु यः पश्येत् भगवद्भावमात्मनः। भूतानि भगवत्यात्मन्येष भागवतोत्तमः" भाग० ११-२-४५। "सदाचाररताः शिष्टाः सर्वभूतानुकम्पकाः। शुचयस्त्यक्तरागा ये सदा भागवता हि ते" स्कान्द०। 4. ಪರಮಾತ್ಮನ ಸಂಬಂಧ ವಾದ.

**भागशस् ಭಾಗಶಸ್** (अव्य०) ಭಾಗವಾಗಿ, ಒಂದು ಅಂಶ ವಾಗಿ. भाग "शस्" (५-४-४२)।

**भागिक ಭಾಗಿಕ** (ವಿ०) ಒಂದು ಅಂಶವನ್ನು ಹೊಂದಿರುವ, ಒಂದು ಭಾಗವುಳ್ಳ (ಒಂದು ಮೊತ್ತ) ಶೇಕಡಾವಾರು ಬಡ್ಡಿ ಯುಳ್ಳ (ಒಂದು ಮೊತ್ತ). भागो वृद्ध्यादिरस्मिन् दीयते—वा "ठन्" (५-१-४९)। पक्षे "यत्"। **भाग्यम् ಭಾಗ್ಯಮ್.** भागिकं शतम्। भागिका विंशतिः।

**भागिन् ಭಾಗಿನ್** (ವಿ०) 1. ಅಂಶವಿಶಿಷ್ಟವಾದ, ಭಾಗ ಗಳಿಂದ ಕೂಡಿದ. भागोऽस्यास्ति "इनिः" (५-२-११५)। 2. ಪಾಲುದಾರ, ಭಾಗ ಹೊಂದುವ ಹಕ್ಕುಳ್ಳವನು. भज (सेवायाम्) "घिनुण्" (३-२-१४२)। स्त्रियां "ङीप्" (४-१-५)। **भागिनी ಭಾಗಿನೀ.** "तस्येह भागिनौ दृष्टौ बीजी क्षेत्रिक एव च" मनु० ९-५३। 3. ಹಂಚಿ ಕೊಳ್ಳುವವನು, ಭಾಗಮಾಡಿಕೊಳ್ಳುವವನು. 4. ಭಾಗ ಪಡೆಯಲು ಅರ್ಹತೆಯುಳ್ಳವನು. "औरसक्षेत्रजौ पुत्रौ पितृरिक्थस्य भागिनौ" मनु० ९-१६५।

**भागिनेय ಭಾಗಿನೇಯ** (ಪುಂ०) ಸಹೋದರಿಯ ಮಗ, ಒಡಹುಟ್ಟಿದವಳ ಮಗ, ಅಕ್ಕ ತಂಗಿಯರ ಮಗ. भगिन्या अपत्यम् "ढक्" (४-१-१२०)। स्त्रियां "ङीप्" (४-१-१५)।

**भागीरथी ಭಾಗೀರಥೀ** (ಸ್ತ್ರೀ०) ಗಂಗಾನದಿ, ಭಗೀರಥನು ದೇವಲೋಕದಿಂದ ಭೂಲೋಕಕ್ಕೆ ಕರೆತಂದ ದೇವಲೋಕದ ನದಿ. भगीरथस्य अयम् "अण्" (४-३-१२०)। [ಕಪಿಲಮಹರ್ಷಿಯ ಕೋಪಾಗ್ನಿಯಿಂದ ದಗ್ಧರಾಗಿ ಭಸ್ಮೀ ಭೂತರಾಗಿದ್ದ ತನ್ನ ಪೂರ್ವಜರಾದ 60 ಸಹಸ್ರ ಮಂದಿ ಸಗರ ಚಕ್ರವರ್ತಿಯ ಮಕ್ಕಳಿಗೆ ಸದ್ಗತಿಯುಂಟುಮಾಡಲು ಭಗೀರಥನು ಉಗ್ರ ತಪಸ್ಸನ್ನು ಕೈಗೊಂಡು ದೇವಲೋಕ ದಿಂದ ಈ ನದಿಯನ್ನು ಭೂಲೋಕಕ್ಕೆ ಕರೆತಂದಿದ್ದರಿಂದ ಈ ನದಿಗೆ "**भागीरथी**" ಎಂಬ ಹೆಸರಾಯಿತು.] "भगीरथेन सा नीता तेन भागीरथी स्मृता" ब्रह्मवै०। "भागीरथीपावकक्कृत्तिकानामानन्दबाष्पाकुललोचनानाम्" कुमा० ११-३।

**भागुरि ಭಾಗುರಿ** (ಪುಂ) ಒಬ್ಬ ವ್ಯಾಕರಣಶಾಸ್ತ್ರಪ್ರವರ್ತಕನಾದ ಋಷಿ. "वष्टि भागुरिरल्लोपमवाप्योरुपसर्गयोः। आपंचैव हलन्तानां यथा वाचा निशा दिशा" सि० कौ०।

**भाग्य ಭಾಗ್ಯ** (ನಂ) 1. ಅದೃಷ್ಟ, ಶುಭ ಮತ್ತು ಅಶುಭಗಳನ್ನು ಸೂಚಿಸುವ ಹಣೆಯಬರಹ, ಶುಭಾಶುಭ ಕರ್ಮಗಳ ಪರಿಣಾಮ. भज्यते—भज (सेवायाम्) "ण्यत्" (३-१-१२४)। "स्त्रियश्चरित्रं पुरुषस्य भाग्यं देवो न जानाति कुतो मनुष्यः"। "सा निन्दन्ती स्वानि भाग्यानि बाला बाहूत्क्षेपं क्रन्दितुं च प्रवृत्ता" शाकुं० ५-३०। 2. ಅದೃಷ್ಟ, ಸುದೈವ, ದೈವಯೋಗ. "ग्रहैस्ततः पञ्चभिरुच्चसंश्रयैरसूर्यगैः सूचितभाग्यसम्पदम्" रघु० ३-१३। 3. ಐಶ್ವರ್ಯ, ಧನಸಂಪತ್ತು. "भूयिष्ठं भव दक्षिणा परिजने भाग्येष्वनुत्सेकिनी यान्त्येवं गृहिणीपदं युवतयो वामाः कुलस्याधयः" शाकुं० ४-१७। 4. ಜನ್ಮಾಂತರದ ಪಾಪ ಮತ್ತು ಪುಣ್ಯಕಾರ್ಯ. 5. ಕಾರ್ಯ, ಕೆಲಸ. "भाग्यं कर्मण्यन्यजन्मकर्मण्यपि शुभाशुभे" वैजं०। (ವಿಂ) 6. ಭಾಗಕ್ಕೆ ಅರ್ಹನಾದ, ಪಾಲು ಹೊಂದಲು ಯೋಗ್ಯನಾದ. भागमर्हति "यत्" (५-१-६६)। 7. ಒಂದು ಅಂಶವನ್ನು ಹೊಂದಿರುವ, ಒಂದು ಭಾಗವುಳ್ಳ (ಒಂದು ಮೊತ್ತ), ಶೇಕಡಾವಾರು ಬಡ್ಡಿಯುಳ್ಳ (ಒಂದು ಮೊತ್ತ). भागो वृद्ध्यादिरस्मिन् दीयते — वा "यत्" (५-१-४९)। पक्षे "ठन्" (५-१-४९)। भागिकम् ಭಾಗಿಕಮ್.

**भाग्यक्रम ಭಾಗ್ಯಕ್ರಮ** (ಪುಂ) ಅದೃಷ್ಟದ ಸರದಿ, ಶುಭಾಶುಭ ಕರ್ಮಗಳ ಫಲವಾದ ಶುಭ ಮತ್ತು ಅಶುಭಗಳ ಪರ್ಯಾಯ. भाग्यस्य क्रमः। "सत्यं न मे विभवनाशकृतास्ति चिन्ता भाग्यक्रमेण हि धनानि भवन्ति यान्ति" मृच्छ० १-१३।

**भाग्ययोग ಭಾಗ್ಯಯೋಗ** (ಪುಂ) ಅದೃಷ್ಟವು ಕೂಡಿಬರುವುದು, ಅದೃಷ್ಟಕಾಲವು ಸೇರಿಬರುವುದು. भाग्यस्य योगः।

**भाग्यवत् ಭಾಗ್ಯವತ್** (ವಿಂ) ಅದೃಷ್ಟಶಾಲಿ, ಭಾಗ್ಯವಂತ. भाग्यमस्यास्ति "मतुप्" (५-२-९४)। मस्य वः (८-२-९)। स्त्रियां "ङीप्" (४-१-६)। **-वती -ವತೀ.**

**भाग्यवशात् ಭಾಗ್ಯವಶಾತ್** (ಅವ್ಯಂ) ದೈವಯೋಗದಿಂದ, ಸುದೈವದಿಂದ, ಭಾಗ್ಯಬಲದಿಂದ, ಅದೃಷ್ಟ ವಿಶೇಷದಿಂದ.

**भाग्यविप्लव ಭಾಗ್ಯವಿಪ್ಲವ** (ಪುಂ) ಅದೃಷ್ಟವು ವಿಪರೀತವಾಗುವುದು, ದುರದೃಷ್ಟದ ಪ್ರಾಪ್ತಿ, ದೌರ್ಭಾಗ್ಯದ ಘಟನೆ. भाग्यस्य विप्लवः।

**भाङ्गीन ಭಾಂಗೀನ** (ನಂ) ಸಣಬು ಬೆಳೆಯುವ ಭೂಮಿ. भङ्गाया भवनं क्षेत्रम्—वा "खञ्" (५-२-१)। पक्षे "यत्" (५-२-४)। भङ्ग्यम् ಭಂಗ್ಯಮ್.

**भाजक ಭಾಜಕ** (ವಿಂ) ಭಾಗಿಸುವ, ಭಾಗಮಾಡುವ. भज (सेवायाम्) "ण्वुल्" (३-१-१३३)।

**भाजन ಭಾಜನ** (ನಂ) 1. ಪಾತ್ರೆ (ತಪ್ಪಲೆ, ಬಟ್ಟಲು, ಕೊಳದಪ್ಪಲೆ ಮುಂತಾದುವು). भाज (पृथक्कर्मणि) + णिच् "ल्युट्" (३-३-११३)। "राजतैर्भाजनैरेषामथो वा रजतान्वितैः" मनु० ३-२०२। 2. ಆಶ್ರಯ, ಆಧಾರ, ಪಾತ್ರ. "कल्याणानां त्वमसि महसां भाजनं विश्वमूर्ते" मालती० १-३। 3. ಯೋಗ್ಯ, ಅರ್ಹ. "भवादृशा एव भवन्ति भाजनान्युपदेशानाम्" काद०। 4. ಭಾಗಮಾಡುವುದು. भाज भावे "ल्युट्"(३-३-११५)। 5. (ಗಣಿತದಲ್ಲಿ) ಭಾಗಿಸುವುದು.

**भाजित ಭಾಜಿತ** (ವಿಂ) 1. ಭಾಗಿಸಲ್ಪಟ್ಟ, ಬೇರೆ ಮಾಡಲ್ಪಟ್ಟ. भाज (पृथक्कर्मणि)+णिच् "क्तः" (३-२-१०२)। (ನಂ) 2. ಭಾಗ, ಪಾಲು, ಅಂಶ. भाज भावे "क्तः" (३-३-११४)।

**भाज्य ಭಾಜ್ಯ** (ವಿಂ) 1. ವಿಭಾಗಿಸಲ್ಪಡುವ, ಭಾಗಮಾಡಲ್ಪಡುವ. भज्यते विभज्यते—भज (सेवायाम्) कर्म० "ण्यत्" (३-१-१२४)। 2. ಭಾಗಮಾಡಬೇಕಾದ. 3. ಭಾಗಮಾಡಲು ಅರ್ಹವಾದ, ಭಾಗಮಾಡಬಹುದಾದ. 4. ಪಿತ್ರಾರ್ಜಿತ ಆಸ್ತಿ.

**भाटक ಭಾಟಕ** (ಪುಂನಂ) ಬಾಡಿಗೆ, ಕೂಲಿ, ಇತರರ ಮನೆ ಗಾಡಿ ಮುಂತಾದುವನ್ನು ಉಪಯೋಗಿಸಿಕೊಳ್ಳಲು ಕೊಡುವ ಹಣ. भट (भृतौ) "ण्वुल्" (३-१-१३३)। "गृहवाप्यापणादीनि गृहीत्वा भाटकेन यः। स्वामिनो नार्पयेद्यावत्तावद्दाप्यः स भाटकम्"।

**भाटि ಭಾಟಿ** (ಸ್ತ್ರೀಂ) 1. ಬಾಡಿಗೆ, ಕೂಲಿ. 2. ವೇಶ್ಯೆಯ ಸಂಪಾದನೆ.

**भाट्ट ಭಾಟ್ಟ** (ಪುಂ) ಮೀಮಾಂಸಾದರ್ಶನಕಾರರಾದ ಕುಮಾರಿಲಭಟ್ಟರ ಅನುಯಾಯಿ (ಶಿಷ್ಯ).

**भाण ಭಾಣ** (ಪುಂ) ದಶವಿಧ ರೂಪಕಗಳಲ್ಲೊಂದು ರೂಪಕ. **ದಶರೂಪಕಗಳು:** (1) नाटकम्, (2) प्रकरणम्, (3) भाणः, (4) प्रहसनम्, (5) डिमः, (6) व्यायोगः, (7) समवकारः, (8) वीथी, (9) अङ्कः ಮತ್ತು (10) ईहामृगः ಭಾಣದಲ್ಲಿ ಧೂರ್ತನಾಯಕನ ಚರಿತ್ರೆಯು ಪ್ರತಿಪಾದ್ಯ ವಿಷಯ. ಒಂದೇ ಅಂಕ. ಒಂದೇ ಪಾತ್ರ. ಆಕಾಶ

ಭಾಷಿತದಿಂದ ಉಕ್ತಿ ಪ್ರತ್ಯುಕ್ತಿಗಳು ನಡೆಯುತ್ತವೆ. ಶೃಂಗಾರ ಮತ್ತು ವೀರರಸಗಳು ಸೂಚಿತವಾಗಿರಬೇಕು. ಕಥೆಯು ಕಲ್ಪಿತವಾಗಿರಬೇಕು. ಮುಖ ಮತ್ತು ನಿರ್ವಹಣ ಸಂಧಿಗಳು ಮಾತ್ರ. "भाणस्तु धूर्तचरितो नानावस्थान्तरात्मकः। एकाङ्क एक एवात्र निपुणः पण्डितो विटः। सम्बोधनोक्तिप्रत्युक्ती कुर्यादाकाशभाषितैः। सूचयेद्वीरशृङ्गारौ शौर्यसौभाग्यवर्णनैः। तत्रेतिवृत्तमुत्पाद्यं वृत्तिः प्रायेण भारती। मुखनिर्वहणे सन्धी लास्याङ्गानि दशापि च" सा० द०।

**भाण्ड ಭಾಂಡ** (ನಂ) 1. ಪಾತ್ರ (ಬಿದಿಗೆ, ಬಟ್ಟಲು, ತಪ್ಪಲೆ ಮುಂತಾದುವು). भणति—भण (शब्दे) "डः" (उ० १-११४)। "अण्" (५-४-३८)। "हृत्वा तु काञ्चनं भाण्डं कृमियोनौ प्रजायते" भा० अनु० १७३-१०२। 2. ವರ್ತಕನ ಮೂಲಧನ. 3. ಅಶ್ವದ ಆಭರಣ, ಕುದುರೆಗೆ ತೊಡಿಸುವ ಒಡವೆ. 4. ನದಿಯ ಪಾತ್ರ, ಎರಡು ತೀರಗಳ ಮಧ್ಯೆ ಹೊಳೆಯು ಹರಿಯುವ ಭಾಗ. 5. ಭೂಷಣ, ಒಡವೆ. "भाण्डं मूलवणिग्वित्ते तुरङ्गाणां च मण्डने। नदीकूलद्वयीमध्ये भूषणे भाजनेऽपि च" हेम०। 6. ಘಟ, ಒಂದು ವಾದ್ಯ. 7. ಉಗ್ರಾಣ, ಸರಕುಗಳನ್ನು ತುಂಬಿಡುವ ಗೃಹ. "ब्रह्माण्डभाण्डोदरभ्राम्यत्पिण्डितचण्डिमा" म० वी० १-५४। 8. ಪೆಟ್ಟಿಗೆ, ಕರಂಡ, ಡಬ್ಬಿ, ಸಂಪುಟ, ಚೀಲ.

**भाण्डपुट ಭಾಂಡಪುಟ** (ಪುಂ) ನಾಪಿತ, ನಾಯಿಂದ, ಕ್ಷೌರಿಕ. भाण्डे पुटा यस्य।

**भाण्डागार ಭಾಂಡಾಗಾರ** (ಪುನಂ) 1. ಉಗ್ರಾಣ, ಸರಕುಗಳನ್ನು ತುಂಬಿಡುವ ಮನೆ. भाण्डानामगारः "भाण्डागारायुधागारान् धान्यागारांश्च सर्वशः" भा० शान्ति० ६८-५१। 2. ಆಶ್ರಯ, ಆಧಾರ, ಸ್ಥಾನ.

**भाण्डागारिक ಭಾಂಡಾಗಾರಿಕ** (ಪುಂ) ಉಗ್ರಾಣದ ಅಧಿಕಾರಿ, ಉಗ್ರಾಣದ ಯಜಮಾನ. भाण्डागारे नियुक्तः "ठन्" (४-४-७०)।

**भाण्डार ಭಾಂಡಾರ** (ನಂ) ಉಗ್ರಾಣ, ಸರಕು ಮೊದಲಾದುವುಗಳನ್ನು ತುಂಬಿಡುವ ಮನೆ. भाण्डं तदाकारमृच्छति—ऋ (गतौ) "अण्" (३-२-१)। पुस्तकभाण्डारम् ज्ञानभाण्डारम् ಇತ್ಯಾದಿ.

**भाण्डारिन् ಭಾಂಡಾರಿನ್** (ಪುಂ) ಭಂಡಾರದ ಅಧಿಕಾರಿ, ಉಗ್ರಾಣದ ಯಜಮಾನ. भाण्डारमस्यास्ति "इनिः" (५-२-११५)। "तृषितः क्षुधितः कामी विद्यार्थी कृषिकारकः। भाण्डारी च प्रवासी च सप्त सुप्तान् प्रबोधयेत्"।

**भाण्डि ಭಾಂಡಿ** (ಸ್ತ್ರೀಂ) ನಾಪಿತನ ಪೆಟ್ಟಿಗೆ, ಕ್ಷೌರಿಕನ ಚೀಲ.

**भाण्डिल ಭಾಂಡಿಲ** (ಪುಂ) ನಾಪಿತ, ನಾಯಿಂದ.

**भाण्डिवाह ಭಾಂಡಿವಾಹ** (ಪುಂ) ನಾಪಿತ, ಕ್ಷೌರಿಕ, ನಾಯಿಂದ. भाण्डिं वहति—वह (प्रापणे) "अण्" (३-२-१)।

**भाण्डिशाला ಭಾಂಡಿಶಾಲಾ** (ಸ್ತ್ರೀಂ) ಕ್ಷೌರದ ಮನೆ, ನಾಯಿಂದನ ಅಂಗಡಿ, ಆಯುಷ್ಕರ್ಮದ ಶಾಲೆ.

**भाण्डीर ಭಾಂಡೀರ** (ಪುಂ) ವಟವೃಕ್ಷ, ಆಲದ ಮರ.

**भात ಭಾತ** (ನಂ) 1. ಪ್ರಭಾತ, ಪ್ರಾತಃಕಾಲ. भा (दीप्तौ) "क्तः" (३-४-७१)। 2. ದೀಪ್ತಿ, ಪ್ರಕಾಶ. भा भावे "क्तः" (३-३-११४)। (ವಿಂ) 3. ಪ್ರಕಾಶಿಸುವ, ಹೊಳೆಯುವ.

**भाति ಭಾತಿ** (ಸ್ತ್ರೀಂ) ಶೋಭೆ, ಕಾಂತಿ, ಪ್ರಕಾಶ. भा (दीप्तौ) "क्तिन्" (३-३-९४)।

**भातु ಭಾತು** (ಪುಂ) 1. ರವಿ, ಸೂರ್ಯ. भा (दीप्तौ) "तुन्" (उ० १-७२)। "भातुरादित्यः" उणादिः। (ವಿಂ) 2. ಪ್ರಕಾಶಮಾನವಾದ, ಶೋಭಿಸುವ.

**भाद्र ಭಾದ್ರ** (ಪುಂ) 1. ಭಾದ್ರಪದಮಾಸ, ಚೈತ್ರ ಮೊದಲುಗೊಂಡು ಆರನೆಯ ತಿಂಗಳು. भाद्री पौर्णमास्यस्मिन् "अण्" (४-२-२१)। (ಸ್ತ್ರೀಂ) **भाद्रा ಭಾದ್ರಾ**. 2. ಪೂರ್ವಾಭಾದ್ರಾ ಮತ್ತು ಉತ್ತರಾಭಾದ್ರಾ ನಕ್ಷತ್ರಗಳು. **भाद्री ಭಾದ್ರೀ**. 3. ಭಾದ್ರಪದ ಮಾಸದ ಹುಣ್ಣಿಮೆ. भद्रया युक्ता पौर्णमासी।

**भाद्रपद ಭಾದ್ರಪದ** (ಪುಂ) 1. ಭಾದ್ರಪದ ಮಾಸ, ಚೈತ್ರ ಮೊದಲುಗೊಂಡು ಆರನೆಯ ತಿಂಗಳು. भाद्रपदी पौर्णमास्यस्मिन् "अण्" (४-२-२१)। (ಸ್ತ್ರೀಂ ಬಂ ವಂ) **-पदा -ಪದಾ**. 2. ಪೂರ್ವಾಭಾದ್ರಪದಾ ಮತ್ತು ಉತ್ತರಾಭಾದ್ರಪದಾ ನಕ್ಷತ್ರಗಳು. **-पदी -ಪದೀ**. ಭಾದ್ರಪದಮಾಸದ ಹುಣ್ಣಿಮೆ.

**भाद्रमातुर ಭಾದ್ರಮಾತುರ** (ಪುಂ) ಪತಿವ್ರತೆಯ ಮಗ, ಸದಾಚಾರಸಂಪನ್ನಳಾದ ಹೆಂಗಸಿನ ಮಗ. भद्रमातुरपत्यम् "अण्" (४-१-११५)।

**भान ಭಾನ** (ನಂ) 1. ಕಾಣಿಸಿಕೊಳ್ಳುವುದು, ತೋರಿಸಿಕೊಳ್ಳುವುದು. 2. ಪ್ರಕಾಶ, ಕಾಂತಿ, ದೀಪ್ತಿ. 3. ಜ್ಞಾನ,

ತಿಳಿವಳಿಕೆ, ಗ್ರಹಣಶಕ್ತಿ. भा (दीप्तौ) भावे "ल्युट्" (३-३-११५)।

**भानु ಭಾನು** (पुं०) 1. ಸೂರ್ಯ. भाति—भा (दीप्तौ) "नुः" (उ० ३-३२)। "तनोति भानोः परिवेष-कैतवात् तदा विधिः कुण्डलनां विधोरपि" नैष० १-१४। 2. ಕಿರಣ, ರಶ್ಮಿ, ಕದಿರು. "भानुर्ना किरणे सूर्ये" मेदि०। 3. ವಿಷ್ಣು. अतिभास्वरेण भास्करेणापि उपजीव्यतेजा भाति इति भानुः। "रवेस्तेजस्करत्वाच्च भानुरित्यभिधीयते" इति निरुक्तिः। "अमृतांशूद्भवो भानुः शशबिन्दुः सुरेश्वरः" वि० स०। 4. ದಿವಸ, ಒಂದು ದಿನ. "भानुरंशौ रवौ दिने" हेम०। 5. ಹರ, ಪರಶಿವ, ಪರಮೇಶ್ವರ. "भानवोऽर्कहरांशवः" वैज०। 6. ಅರ್ಕವೃಕ್ಷ, ಎಕ್ಕದ ಗಿಡ. 7. ರಾಜ, ದೊರೆ.

**भानुज ಭಾನುಜ** (पुं०) 1. ಸೂರ್ಯನ ಮಗ. (स्त्री०) **–जा –ಜಾ.** 2. ಸೂರ್ಯನ ಪುತ್ರಿ ಕಾಳಿಂದೀ ನದಿ.

**भानुमत् ಭಾನುಮತ್** (पुं०) 1. ಸೂರ್ಯ. भानवः किरणा अस्य सन्ति "मतुप्" (५-२-९४)। "विशोषितां भानुमतो मयूखैः मन्दाकिनीपुष्करबीजमालाम्" कुमा० ३-६५। 2. ಅರ್ಕವೃಕ್ಷ, ಎಕ್ಕದ ಗಿಡ. (स्त्री०) **–मती –ಮತೀ.** ದುರ್ಯೋಧನನ ಪತ್ನಿ.

**भानेमि ಭಾನೇಮಿ** (पुं०) 1. ಸೂರ್ಯ. भानां नेमिरिव। 2. ಅರ್ಕವೃಕ್ಷ, ಎಕ್ಕದ ಗಿಡ. "दिनप्रणीस्त्वव्यथिषो भानेमिरपरव्रतः" त्रिकाण्ड०।

**भाम ಭಾಮ** (पुं०) 1. ರವಿ, ಸೂರ್ಯ. भा (दीप्तौ) "मन्" (उ० १-१३७)। 2. ದೀಪ್ತಿ, ಪ್ರಕಾಶ, ಕಾಂತಿ. 3. ಕ್ರೋಧ, ಕೋಪ. भाम (क्रोधे) "घञ्" (३-३-१८)। "भामः क्रोधे रुचौ रवौ" हेम०। 4. ಸೋದರಿಯ ಗಂಡ, ಅಕ್ಕತಂಗಿಯರ ಗಂಡ. (स्त्री०) **–मा –ಮಾ.** 5. ಶ್ರೀಕೃಷ್ಣನ ಪತ್ನಿ ಸತ್ಯಭಾಮೆ. "भामया भगवता च भाषिते" याद० १७-१३१।

**भामिन् ಭಾಮಿನ್** (वि०) 1. ಕೋಪವುಳ್ಳವನು. भाम (क्रोधे) "णिनिः" (३-३-१७०)। भामिन् स्त्रियां "ङीप्" (४-१-५)। **भामिनी ಭಾಮಿನೀ.** 2. ಕೋಪವುಳ್ಳ ಹೆಂಗಸು. "उपचीयत एव कापि शोभा परितो भामिनि ते मुखस्य नित्यम्" भामि० वि०।

**भामिनीविलास ಭಾಮಿನೀವಿಲಾಸ** (पुं०) ಜಗನ್ನಾಥ ಪಂಡಿತ ವಿರಚಿತವಾದ ಒಂದು ಕಾವ್ಯ.

**भार ಭಾರ** (पुं०) 1. ಹೊರೆ, ತೂಕವುಳ್ಳ ಗಂಟು. भ्रियते—भृञ् (भरणे) "घञ्" (३-३-१९)। "भारः कायो जीवितं वज्रकीलं काष्ठाः शून्या निष्फलानीन्द्रियाणि" मालती० ९-३७। 2. ತೂಕ, ಭಾರ, 3. ಸಮೂಹ, ಗುಂಪು. "स्ववालभारस्य तदुत्तमाङ्गजैः स्वयं चमर्येव तुलाभिलाषिणः" नैष० १-२५। 4. ಅತಿರೇಕ, ಅತಿಶಯ, ಆಧಿಕ್ಯ. "सा मुक्तकण्ठं व्यसनातिभाराच्चक्रन्द विग्ना कुररीव भूयः" रघु० १४-६८। 5. ವಿಷ್ಣು. 6. ಕಾವಡಿ, ಅಡ್ಡೆ. 7. 2000 ಪಲಗಳ ತೂಕ.

| | |
|---|---|
| 5 ಗುಲಗಂಜಿಗಳ ತೂಕ | 1 ಆದ್ಯಮಾಷಕ |
| 16 ಆದ್ಯಮಾಷಕಗಳು | 1 ಕರ್ಷ |
| 4 ಕರ್ಷಗಳು | 1 ಪಲ |
| 100 ಪಲಗಳು | 1 ತುಲೆ |
| 20 ತುಲೆಗಳು ಅಥವಾ 2000 ಪಲಗಳು | 1 ಭಾರ |

"भारः स्याद्वीवधे विष्णौ पलानां द्विसहस्रके" मेदि०।

**भारत ಭಾರತ** (न०) 1. ವೇದವ್ಯಾಸಮಹರ್ಷಿಪ್ರಣೀತವಾದ ಶ್ರೀಮನ್ಮಹಾಭಾರತ ಗ್ರಂಥ, ಭರತ ಚಕ್ರವರ್ತಿಯ ವಂಶದ ದೊರೆಗಳ ಚರಿತ್ರೆಯನ್ನು ವರ್ಣಿಸುವ ಒಂದು ಇತಿಹಾಸ. भरतान् भरतवंशीयान् अधिकृत्य कृतो ग्रन्थः "अण्" (४-३-८७)। ವೇದಾದಿ ಸಕಲ ಶಾಸ್ತ್ರಗಳ ಸಾರಾಂಶವನ್ನು ಇದರಲ್ಲಿ ವಿಸ್ತರಿಸಿ ಹೇಳಿರುವುದರಿಂದ ಇದಕ್ಕೆ "ಭಾರತ"ವೆಂದು ಹೆಸರು. भारं वेदादिशास्त्रेभ्योऽपि सारांशं तनोति—तनु (विस्तारे) "डः" (३-२-१०१)। "तपसा ब्रह्मचर्येण व्यस्य वेदं सनातनम्। इतिहासमिमं चक्रे पुण्यं सत्यवतीसुतः" भा० आदि० १-३८। "महत्त्वाद्भारवत्त्वाच्च महाभारतमुच्यते" ಈ ಕಾರಣದಿಂದಲೂ ಇದು ಮಹಾಭಾರತವಾಗಿದೆ. ಶಕುಂತಲಾ-ದುಷ್ಯಂತರ ಪುತ್ರನಾದ ಭರತ ಚಕ್ರವರ್ತಿಯ ವಂಶಸಂಭೂತರಾದ ರಾಜರ ಚರಿತ್ರೆಯನ್ನು ಒಳಗೊಂಡಿರುವುದರಿಂದಲೂ ಇದಕ್ಕೆ ಭಾರತವೆಂದು ಹೆಸರಾಯಿತು.

ಕೌರವ-ಪಾಂಡವರ ಯುದ್ಧ ವ್ಯಾಜದಿಂದ ಪರಮಾತ್ಮನು ಭೂಭಾರವನ್ನು ಇಳಿಸಿದ್ದರಿಂದ ಇದೊಂದು ಬೃಹತ್ತಾದ ಇತಿಹಾಸವಾಯಿತು. ಮಹಾಭಾರತವು ಒಂದು ಲಕ್ಷ ಗ್ರಂಥಾತ್ಮಕವಾದುದು. ದೈವಯೋಗದಿಂದ ಕೌರವ ಪಾಂಡವರಿಗೆ ವೈರವುಂಟಾಗಿ ಪಾಂಡವರನ್ನು ರಾಜ್ಯಭ್ರಷ್ಟರನ್ನಾಗಿ ಮಾಡಲು ಯತ್ನಿಸಿದ ದುರ್ಯೋಧನನು ದ್ಯೂತ

ದಲ್ಲಿ ಧರ್ಮರಾಜನನ್ನು ಸೋಲಿಸಿ ಪತ್ನೀ ಮತ್ತು ಸಹೋದರರೊಡನೆ ವನವಾಸಕ್ಕೆ ಕಳುಹಿದನು. ವನವಾಸ ಮತ್ತು ಅಜ್ಞಾತವಾಸಗಳನ್ನು ಮುಗಿಸಿ ಬಂದ ಧರ್ಮರಾಜನಿಗೆ ಧರ್ಮಪ್ರಾಪ್ತವಾದ ರಾಜ್ಯವನ್ನು ಕೊಡದೆ ದ್ರೋಹ ಮಾಡಲು ಸಂಕಲ್ಪಿಸಿದ ದುರ್ಯೋಧನನಿಗೂ ಪಾಂಡವರಿಗೂ ಘೋರಯುದ್ಧ ನಡದು ಎರಡು ಪಕ್ಷಗಳಲ್ಲಿಯೂ ಮಹಾಪರಾಕ್ರಮಿಗಳಾದ ಅನೇಕ ರಾಜಾಧಿರಾಜರು ಹತರಾದರು. ಶ್ರೀಕೃಷ್ಣನ ಸಾಹಾಯ್ಯದಿಂದ ಪಾಂಡವರು ಭೀಷ್ಮ ದ್ರೋಣ ಅಶ್ವತ್ಥಾಮ ಕರ್ಣ ಮೊದಲಾದವರನ್ನು ಸೋಲಿಸಿ ಬಾಲ್ಯದಿಂದಲೂ ತಮಗೆ ಪರಮದ್ರೋಹ ಮಾಡುತ್ತಿದ್ದ ದುರ್ಯೋಧನಾದಿ ಸಕಲ ಕೌರವರನ್ನೂ ಯುದ್ಧದಲ್ಲಿ ನಾಮಾವಶೇಷ ಮಾಡಿ ರಾಜ್ಯವನ್ನು ಸಂಪಾದಿಸಿದರು. ಶ್ರೀಕೃಷ್ಣನ ಕೃಪೆಯಿಂದಲೂ ಭೀಷ್ಮಾಚಾರ್ಯರ ಅನುಮತಿಯಿಂದಲೂ ಧರ್ಮರಾಜನು ಪಟ್ಟಾಭಿಷಿಕ್ತನಾಗಿ ಸಹೋದರರೊಡನೆ ಧರ್ಮದಿಂದ ರಾಜ್ಯವಾಳಿದನು. ಶ್ರೀಮನ್ಮಹಾಭಾರತವು ಕೌರವ-ಪಾಂಡವರ ಯುದ್ಧವನ್ನು ವರ್ಣಿಸುವ ಇತಿಹಾಸ ಮಾತ್ರವಲ್ಲ. ಇದೊಂದು ನವರಸ ಪರಿಪೂರ್ಣವಾದ ಮಹಾಕಾವ್ಯ. ಸಕಲ ವೇದಾರ್ಥಗಳನ್ನೂ ಪ್ರತಿಪಾದಿಸಿರುವುದರಿಂದ ಇದೊಂದು ಸ್ಮೃತಿಗ್ರಂಥವೂ ಆಗಿದೆ. ರಾಜಧರ್ಮ ವರ್ಣಾಶ್ರಮಧರ್ಮ ಯುದ್ಧ ಧರ್ಮ ಮುಂತಾದುವುಗಳನ್ನೂ ಹೇಳಿರುವುದರಿಂದ ಇದೊಂದು ಧರ್ಮಗ್ರಂಥ. ರಾಜನೀತಿಯನ್ನು ಬೋಧಿಸುವುದರಿಂದ ನೀತಿಗ್ರಂಥ. ಮೋಕ್ಷಧರ್ಮನಿರೂಪಣೆಯಿರುವುದರಿಂದ ಮೋಕ್ಷಶಾಸ್ತ್ರ. ಇದರಲ್ಲಿ ಚಾತುರ್ವರ್ಣ್ಯ ಪುರಾಣಗಳು ತಪಸ್ಸು ಬ್ರಹ್ಮಚರ್ಯ ಪೃಥಿವಿ ಸೂರ್ಯ ಚಂದ್ರ ಗ್ರಹಗಳು ನಕ್ಷತ್ರಗಳು ಯುಗಪ್ರಮಾಣ ಜಗತ್ತಿನ ಸೃಷ್ಟಿಕ್ರಮ ಪ್ರಲಯಪ್ರಕಾರ ಧರ್ಮ ಅರ್ಥ ಕಾಮ ಮತ್ತು ಮೋಕ್ಷರೂಪವಾದ ಪುರುಷಾರ್ಥ ಚತುಷ್ಟಯ ಮೊದಲಾದ ಅನೇಕ ಜನಜೀವನ ಜೀವಾತುವಾದ ವಿಷಯಗಳು ಪ್ರತಿಪಾದಿತವಾಗಿವೆ. ಇದರಲ್ಲಿ ಪ್ರತಿಪಾದಿತವಾಗಿರುವ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷ ಮೊದಲಾದ ಎಲ್ಲಾ ವಿಷಯಗಳೂ ಬೇರೆ ಗ್ರಂಥಗಳಲ್ಲಿರಬಹುದು. ಇದರಲ್ಲಿ ಹೇಳದಿರುವ ವಿಷಯವನ್ನು ಮತ್ತಾವ ಗ್ರಂಥದಲ್ಲೂ ನೋಡಲಾರೆವು. "यदिहास्ति तदन्यत्र यन्नेहास्ति न तत् क्वचित्" भा० स्वर्गा० ५-५० ।

ಶ್ರೀಮದ್ರಾಮಾಯಣದಂತೆ ಮಹಾಭಾರತವು ಎಲ್ಲಾ ಕವಿಗಳ ಕಾವ್ಯರಚನೆಗೂ ಆಕರವಾಗಿದೆ. ಮಹಾಭಾರತವು ಅಜ್ಞಾನಾಂಧಕಾರದಿಂದ ಅಂಧನಾಗಿರುವ ಮಾನವನಿಗೆ ನೇತ್ರಾಂಜನದಂತಿರುವುದು. ಪುರುಷಾರ್ಥಚತುಷ್ಟಯ ನಿರೂಪಣೆಯಿಂದ ಮಾನವನ ಅಜ್ಞಾನವನ್ನು ಹೋಗಲಾಡಿಸಿ ಅವನ ಹೃದಯವನ್ನು ಪರಿಶುದ್ಧಗೊಳಿಸುವುದು. ಮತ್ತು ಬುದ್ಧಿಯನ್ನು ವಿಕಾಸಗೊಳಿಸುವುದು. ಭಾರತೀಯರ ಸನಾತನಧರ್ಮ ಮತ್ತು ಸಂಸ್ಕೃತಿಗಳ ಸಂಪೂರ್ಣ ಪರಿಚಯಮಾಡಿಕೊಡುವ ಜ್ಞಾನದೀವಿಗೆಯಾಗಿದೆ. ಇಂತಹ ಸರ್ವಾಂಗಪರಿಪೂರ್ಣವಾದ ಮಹಾಭಾರತದ ಪಠನ ಮತ್ತು ಪಾಠನಗಳಿಂದ ಜನರೆಲ್ಲರೂ ಸುಸಂಸ್ಕೃತರಾಗಿ ಬಾಳುವರು. ಲೌಕಿಕ ಮತ್ತು ಪಾರಮಾರ್ಥಿಕ ವ್ಯವಹಾರಗಳಲ್ಲೂ ನಿಷ್ಣಾತರಾಗುವರು. "सर्वेषां कविमुख्याना-मुपजीव्यो भविष्यति । पर्जन्य इव भूतानामक्षयो भारत-द्रुमः"। "धर्मार्थकाममोक्षार्थैः समासव्यासकीर्तनैः । त्वया भारतसूर्येण नृणां विनिहतं तमः"। "येन त्वया भारततैलपूर्णः प्रज्वालितो ज्ञानमयः प्रदीपः"।

ಭಾರತವನ್ನು ನಿತ್ಯವೂ ಕೇಳುವವನಿಗೂ ಪಠನಮಾಡುವವನಿಗೂ ನಿತ್ಯವೂ ಪೂಜಿಸುವವನಿಗೂ ಯಾವಾಗಲೂ ಜಯವು ಹಸ್ತಗತವಾಗುವುದು. "भारतं शृणुयान्नित्यं भारतं परिकीर्तयेत् । भारतं भवने यस्य तस्य हस्तगतो जयः"। 2. ಭಾರತದೇಶ, ಜಂಬೂದ್ವೀಪದೊಳಗಿರುವ (ನಮ್ಮ) ದೇಶ, ಭರತ ಚಕ್ರವರ್ತಿಯು ಆಳಿದ ದೇಶ. भरतस्य राज्ञः इदम् "अण्" (४-३-१२०)। "एत-दुद्वहगुरुभार भारतं वर्षमद्य मम वर्तते वशे" माघ० १४-५। 3. ಭರತ ಚಕ್ರವರ್ತಿಯ ವಂಶದಲ್ಲಿ ಹುಟ್ಟಿದವನು. भरतस्य गोत्रापत्यम् "अण्" (४-१-९२)। 4. ಭರತಮುನಿ ಪ್ರಣೀತವಾದ ನಾಟ್ಯಶಾಸ್ತ್ರ. (ಪುಂ ಹ೦ ಕ೦) 5. ಭರತಮುನಿಪ್ರಣೀತನಾಟ್ಯಶಾಸ್ತ್ರವನ್ನು ಅಭ್ಯಾಸಮಾಡುವ ನಟರು, ಶೈಲೂಷರು. भरतेन प्रोक्त-मधीयते "अण्" (४-२-५९)। "उवाच स महातेजा ब्रह्माणं परमेष्ठिनम् । कृतं मयेदं भगवन् काव्यं परमपूजितम् ॥ ब्रह्मन् वेदरहस्यं च यच्चान्यत् स्थापितं मया । साङ्गोपनिषदां चैव वेदानां विस्तर-क्रिया । इतिहासपुराणानामुन्मेषं निमिषं च यत् । भूतं भव्यं भविष्यच्च त्रिविधं कालसंज्ञितम्" भा० आदि० १।

**भारतवर्ष ಭಾರತವರ್ಷ** (ಪುಂನ೦) ಭಾರತವರ್ಷ, ಜಂಬೂದ್ವೀಪದೊಳಗಿರುವ ಒಂದು ದೇಶ, ಹಿಮಾಚಲಕ್ಕೆ ದಕ್ಷಿಣದಲ್ಲಿರುವ ಭಾರತದೇಶ. भारतं भरतसम्बन्धि वर्षम् । ಭಾರತವರ್ಷವು ಜಂಬೂದ್ವೀಪದೊಳಗಿನ ಒಂಬತ್ತು ವರ್ಷ (ಭಾಗ) ಗಳಲ್ಲೊಂದು. **ಜಂಬೂದ್ವೀಪದ ಒಂಬತ್ತು ವರ್ಷಗಳು:** (1) ಕುರು, (2) ಹಿರಣ್ಮಯ, (3) ರಮ್ಯಕ, (4) ಇಲಾವೃತ, (5) ಹರಿ, (6) ಕೇತುಮಾಲ,

(7) ಭದ್ರಾಶ್ವ, (8) ಕಿನ್ನರ ಮತ್ತು (9) ಭಾರತ. ಋಷಭ ದೇವನ ಜ್ಯೇಷ್ಠಪುತ್ರನಾದ ಭರತನು ಆಳುತ್ತಿದ್ದ ಅಜನಾಭ ದೇಶಕ್ಕೆ "**ಭಾರತವರ್ಷ**"ವೆಂದು ಹೆಸರಾಯಿತು. ["जडभरत" ಪದದಲ್ಲಿ ನೋಡಿ.] "भरतो ज्येष्ठः श्रेष्ठगुण आसीद्येनेदं वर्षं भारतमिति व्यपदिशन्ति" भाग० ५-४-९।

**रती ಭಾರತೀ** (स्त्री०) 1. ವಾಕ್ಕು, ಮಾತು, ಭಾಷೆ. बिभर्ति—भृञ् (भरणे) "अतच्" (उ० ३-११०)। "अण्" (५-४-३८)। "ङीप्" (४-१-१५)। "भारतीमाहितभरामथानुद्धतमुद्धवः" माघ० २-६९। 2. ವಾಗ್ದೇವಿ, ವಾಕ್ಕಿಗೆ ಅಧಿದೇವತೆಯಾದ ಸರಸ್ವತಿ. "वीणापुस्तकरञ्जितहस्ते भगवति भारति देवि नमस्ते"। 3. ಭಾರತೀವೃತ್ತಿ, ಭಾಷೆಯ ಒಂದು ವಿಧ ಶೈಲಿ. वर्तते रसोऽनया ಎಂಬ ವ್ಯುತ್ಪತ್ತಿಗೆ ಅನುಗುಣವಾಗಿ ಶೃಂಗಾರಾದಿ ರಸಗಳನ್ನು ಪ್ರತಿಪಾದಿಸುವ ನಾಯಕಾದಿವ್ಯಾಪಾರ ಮತ್ತು ಭಾಷೆಗಳ ಶೈಲಿಯು ವೃತ್ತಿಯೆನಿಸುವುದು. ಈ ವೃತ್ತಿಯು (1) कैशिकी (ಕೈಶಿಕೀ), (2) सात्वती, (3) आरभटी ಮತ್ತು (4) भारती ಎಂದು ನಾಲ್ಕು ವಿಧ. ಈ ವೃತ್ತಿಗಳು ನಾಟ್ಯಕ್ಕೆ ಮಾತೃಸ್ಥಾನದಲ್ಲಿರುವುವು. "चतस्रो वृत्तयो ह्येताः सर्वनाटचस्य मातृकाः। स्युर्नायकादिव्यापारविशेषा नाटकादिषु" सा० द० ६-१२३। ಭಾರತೀವೃತ್ತಿಯು ಶೃಂಗಾರಾದಿ ಎಲ್ಲಾ ರಸಗಳಲ್ಲೂ ಇರುವುದು. "शृङ्गारे कैशिकी वीरे सात्वत्यारभटी पुनः। रसे रौद्रे च बीभत्से वृत्तिः सर्वत्र भारती" सा० द० ६-१२२। ಸಂಸ್ಕೃತಮಯವಾದ ನಟನ ಭಾಷೆಯು ಭಾರತೀವೃತ್ತಿಯೆನಿಸುವುದು. "भारती संस्कृतप्रायो वाग्व्यापारो नटाश्रयः" सा० द० ६-२९। ಭಾರತೀವೃತ್ತಿಯ ಸ್ವರೂಪ "या वाक्प्रधाना पुरुषप्रयोज्या स्त्रीवर्जिता संस्कृतवाक्ययुक्ता। स्वनामधेयैर्भरतैः प्रयुक्ता सा भारती नाम भवेत्तु वृत्तिः"। 4. ಲಾವಕ್ಕಿ. 5. ತುಲಸೀಗಿಡ. "अथ भारती। वचने च सरस्वत्यां पक्षिवृत्तिप्रभेदयोः" मेदि०। "सुगन्धौ श्वेतसुरसा भारती तुलसी शिवा" वैज०।

**रद्वाज ಭಾರದ್ವಾಜ** (पुं०) 1. ದ್ರೋಣಾಚಾರ್ಯರು. भरद्वाजस्यापत्यम् "अण्" (४-१-९२)। ["भरद्वाज" ಪದದಲ್ಲಿ ನೋಡಿ.] 2. ಬೃಹಸ್ಪತಿಯ ಮಗ. 3. ಭಾರದ್ವಾಜಗೋತ್ರ ಪ್ರವರ್ತಕರಾದ ಒಬ್ಬ ಋಷಿ. 4. ಭರದ್ವಾಜಪಕ್ಷಿ. "भारद्वाजः स्मृतो मुनौ। द्रोणे च वनकार्पास्यां भारद्वाजी च कथ्यते। भारद्वाजो गुरोः पुत्रे व्याघ्राटाख्यविहङ्गमे" विश्व०। (न०) 5. ಅಸ್ಥಿ, ಮೂಳೆ. "भारद्वाजं स्वदयितं सारसंघातकर्कराः" वैज०। (स्त्री०) **-जी -ಜೀ.** 6. ಕಾಡುಹತ್ತಿ ಗಿಡ. "भारद्वाजी तु सा वन्या" अम०।

**भारभृत् ಭಾರಭೃತ್** (पुं०) 1. ವಿಷ್ಣು. मुक्तानां च बन्धस्रंसनस्वरूपाविर्भावस्वप्राप्तिभारं बिभर्ति—भृञ् (भरणे) "क्विप्" (३-२-६१)। "मुक्तानां बन्धमोक्षादिभारस्य भरणाद्धि सः। भारभृत् सप्तवर्णः स्यात् कार्यनिर्वाहशक्तिदः" इति निरुक्तिः। "भारभृत् कथितो योगी" वि० स०। 2. ಮೂಟೆ ಹೊರುವವನು. भारं बिभर्ति—भृञ् "क्विप्"।

**भारयष्टि ಭಾರಯಷ್ಟಿ** (स्त्री०) ಅಡ್ಡೆಕೋಲು, ಹೊರೆಯನ್ನು ಹೊರುವ ಅಡ್ಡೆ.

**भारवह ಭಾರವಹ** (न०) ಕುದುರೆಯ ನೇರವಾದ ಓಟ, ಕುದುರೆಯ ಕುಪ್ಪಳಿಸಿದ ನಡಗೆ, ಅಶ್ವದ ರೇಚಿತವೆಂಬ ಒಂದು ವಿಧ ನಡಗೆ. "रेचितं स्याद्भारवहं तच्चावक्रगतिर्द्रुता" वैज०।

**भारवाह ಭಾರವಾಹ** (पुं०) ಮೂಟೆ ಹೊರುವವನು, ಕೂಲಿಯಾಳು. भारं वहति—वह (प्रापणे) "अण्" (३-२-१)। स्त्रियां "ङीप्" (४-१-१५)। **-वाही -ವಾಹೀ.** "ण्वुल्" (३-१-१३३)। **-वाहकः -ವಾಹಕಃ** स्त्रियां "टाप्" (४-१-४)। **-वाहिका ವಾಹಿಕಾ.** "णिनिः" (३-२-७८)। **-वाहिन् (ही)-ವಾಹಿನ್ (ಹೀ).** स्त्रियां "ङीप्" (४-१-५)। **-वाहिनी -ವಾಹಿನೀ.**

**भारवि ಭಾರವಿ** (पुं०) ಕಿರಾತಾರ್ಜುನೀಯ ಕಾವ್ಯವನ್ನು ರಚಿಸಿದ ಒಬ್ಬ ಕವಿ. "तावद्भा भारवेर्भाति यावन्माघस्य नोदयः। उदिते च पुनर्माघे भारवेर्भा रवेरिव" उद्भटः।

**भारसह ಭಾರಸಹ** (पुं०) ಗರ್ದಭ, ಕತ್ತೆ. भारं सहते—षह (मर्षणे) "अच्" (३-१-१३४)। "रूक्षस्वरो धूम्रकर्णो नेमिभारसहः शलः" वैज०।

**भारहार ಭಾರಹಾರ** (पुं०) ಮೂಟೆ ಹೊರುವವನು, ಕೂಲಿಯಾಳು. भारं हरति—हृञ् (हरणे) "अण्" (३-२-१)। "अच्" (३-१-१३४)। **-हरः -ಹರಃ.** ಮೂಟೆಯನ್ನು ಮೇಲಕ್ಕೆ ಎತ್ತುವ ಅರ್ಥದಲ್ಲಿ "अण्" ಪ್ರತ್ಯಯವೂ ಬೇರೆ ಕಡೆಗೆ ಒಯ್ಯುವ ಅರ್ಥದಲ್ಲಿ "अच्" ಪ್ರತ್ಯಯವೂ ಬರುವುವು. स्त्रियां **भारहारी ಭಾರಹಾರೀ.** ಮತ್ತು **भारहारा ಭಾರಹಾರಾ.**

**भारिक ಭಾರಿಕ** (ಪುಂ०) ಮೂಟೆ ಹೊರುವವನು, ಕೂಲಿಯಾಳು. भारोऽस्यास्ति वाह्यत्वेन "ठन्" (५-२-११५)। स्त्रियां "ङीप्" (४-१-५)। **भारिकी ಭಾರಿಕೀ.** "भारवाहस्तु भारिकः" अम०।

**भारिन् ಭಾರಿನ್** (ಪುಂ०) ಮೂಟೆ ಹೊರುವವನು, ಕೂಲಿಯಾಳು. भारोऽस्त्यस्य "इनिः" (५-२-११५)। "चक्रिणो दशमीस्थस्य रोगिणो भारिणः स्त्रियाः। स्नातकस्य च राज्ञश्च पन्था देयो वरस्य च" मनु० २-१३८।

**भार्गव ಭಾರ್ಗವ** (ಪುಂ०) 1. ಶುಕ್ರಾಚಾರ್ಯರು, ದೈತ್ಯರ ಗುರು. भृगोरपत्यम् "अण्" (४-१-११४)। 2. ಗಜ, ಆನೆ. 3. ಕುಲಾಲ, ಪಾಂಡವರು ಬಿಡಾರ ಮಾಡಿದ್ದ ಮನೆಯ ಯಜಮಾನ ಕುಂಬಾರ. "गत्वा तु तां भार्गव-कर्मशालां पार्थौ पृथां प्राप्य महानुभावौ" भा० १-१९०-१। 4. ಧನುರ್ಧರ, ಬಿಲ್ಲುಗಾರ. 5. ಪರಶುರಾಮ. "भार्गवो गजधन्विनोः। शुक्रे परशुरामे च" मेदि०। "कृत्वा रघूद्वहगतौ क्षणमन्तरायं यद्भार्गवः परगतेर्विहृतिं प्रपेदे" चं० रा०। (स्त्री०) **-वी -ವೀ.** 6. ಲಕ್ಷ್ಮಿ. 7. ಪಾರ್ವತಿ. 8. ಗರಿಕೆಹುಲ್ಲು. "भार्गवी पार्वतीश्रियोः। दूर्वायाम्" मेदि०। 9. ಭೃಗುವಂಶದ ಹೆಂಗಸು. "कस्माच्चिरायितोऽसीति पृष्टस्तामाह भार्गवीम्" भा० १-७६-३५।

**भार्गवप्रिय ಭಾರ್ಗವಪ್ರಿಯ** (ಪುಂ०) ವಜ್ರ, ಹೀರಕ. ಶುಕ್ರಗ್ರಹಕ್ಕೆ ವಜ್ರವು ಪ್ರಿಯವಾದುದು.

**भार्गी ಭಾರ್ಗೀ** (स्त्री०) ಭಾರಂಗಿ ಮರ.

**भार्या ಭಾರ್ಯಾ** (स्त्री०) ಧರ್ಮಪತ್ನಿ, ಮದುವೆಯಾದ ಹೆಂಡತಿ. भ्रियते—डु भृञ् (धारणपोषणयोः) "ण्यत्" (३-१-१२४)। "सा भार्या या गृहे दक्षा सा भार्या या प्रियंवदा (प्रजावती)। सा भार्या या पतिप्राणा सा भार्या या पतिव्रता" भा० १-७४-४०। ಮನುಷ್ಯನಿಗೆ ಭಾರ್ಯೆಯಿದ್ದರೆ ಹರ್ಷ. ಮಂಗಲಕ್ಕೆ ಭಾರ್ಯೆಯೇ ಕಾರಣ. ಸಂಸಾರಕ್ಕೂ ಭಾರ್ಯೆಯೇ ಕಾರಣ. ಸಕಲ ವಿಧ ಸಂಸಾರ ಸೌಖ್ಯಕ್ಕೂ ಭಾರ್ಯೆಯೇ ಮೂಲಕಾರಣ. ಪತ್ನಿಯು ರಥದಲ್ಲಿ ಕುಳಿತು ಸಂಚರಿಸುವವನಿಗೆ ರಥವಿರುವಂತೆ ಗೃಹಸ್ಥನಿಗೆ ಮನೆಯಿರುವಂತೆ. ಆದುದರಿಂದ ಸಕಲವಿಧಭೋಗ ಮತ್ತು ಧರ್ಮಕಾರ್ಯಗಳಿಗೂ ಭಾರ್ಯೆಯೇ ಮೂಲಕಾರಣ. "भार्यामूलः सदा हर्षः भार्यामूलञ्च मङ्गलम्। भार्यामूलश्च संसारः भार्यामूलञ्च सौरतम्। यथा रथश्च रथिनां गृहिणां च तथा गृहम्। सारथिस्तु यथा तेषां गृहस्थानां तथा प्रिया" ब्रह्मवै०।

**भार्याट ಭಾರ್ಯಾಟ** (ಪುಂ०) 1. ಜೀವನಕ್ಕಾಗಿ ತನ್ನ ಪತ್ನಿಯನ್ನು ವಿಕ್ರಯಿಸಲು ಹೊರಟಿರುವವನು, ತನ್ನ ಪತ್ನಿಯ ವೇಶ್ಯಾವೃತ್ತಿಯಿಂದ ಜೀವಿಸುವವನು. भार्यां तद्दानमटति —अट (गतौ) "अण्" (३-२-१)। 2. ತಮಟೆ ಹೊಡೆದು ಜೀವಿಸುವವನು. "भार्याटः पटहाजीवो लोभात्स्वस्त्रीसमर्पके" हेम०।

**भार्याटिक ಭಾರ್ಯಾಟಿಕ** (ಪುಂ०) 1. ಪತ್ನಿಯಿಂದ ಜಯಿಸಲ್ಪಟ್ಟವನು, ಪತ್ನಿಗೆ ವಶನಾದವನು, ಪತ್ನಿಗೆ ಹೆದರುವವನು. भार्यया आटः गतिः प्रयोजनमस्य "ठक्" (५-१-१०९)। 2. ಒಂದು ಜಾತಿಯ ಜಿಂಕೆ. "भार्याटिको भवेद्भार्यानिर्जिते हरिणान्तरे" विश्व०।

**भार्यापती ಭಾರ್ಯಾಪತೀ** (ಪುಂ० द्विव०) ಪತ್ನಿ ಮತ್ತು ಪತಿ, ಗಂಡ ಹೆಂಡಿರು, ದಂಪತಿಗಳು. भार्या च पतिश्च।

**भार्यारु ಭಾರ್ಯಾರು** (ಪುಂ०) 1. ಒಂದು ಪರ್ವತ. 2. ಒಂದು ಜಾತಿಯ ಜಿಂಕೆ. 3. ನಿಯೋಗವಿಲ್ಲದೆ ಪರಸ್ತ್ರೀಯಲ್ಲಿ ಮಕ್ಕಳನ್ನು ಪಡೆದವನು. भार्यां परभार्यामृच्छति —ऋ (गतौ) "उण्" (उ० १-१)। "भार्यारुः शैलभेदे स्यात् मृगभेदे च तत्र च। क्रीडया परभार्यायां पुत्रो येनोपपादितः" मेदि०।

**भार्योढ ಭಾರ್ಯೋಢ** (ಪುಂ०) ಮದುವೆಯಾದವನು, ಪತ್ನಿಯನ್ನು ಪಡೆದವನು. ऊढा भार्या येन—वा परनिपातः (२-२-३७)। पक्षे **ऊढभार्यः ಊಢಭಾರ್ಯ**ः.

**भाल ಭಾಲ** (न०) 1. ಹಣೆ, ನೊಸಲು, ಲಲಾಟ. भां दीप्तिं लाति—ला (आदाने) "कः" (३-२-३)। 2. ಪ್ರಕಾಶ, ಬೆಳಕು. "भालं तेजोललाटयोः" मेदि०। "स्वामिन् भङ्गुरयालकं सतिलकं भालं विलासिन् कुरु" सा० द० ३।

**भालनेत्र ಭಾಲನೇತ್ರ** (ಪುಂ०) 1. ಪರಮೇಶ್ವರ, ಮಹಾದೇವ. भाले नेत्रमस्य। **-लोचनः -ಲೋಚನಃ.** (स्त्री०) **-लोचना -ಲೋಚನಾ.** 2. ದುರ್ಗಾದೇವಿ.

**भालाङ्क ಭಾಲಾಂಕ** (ಪುಂ०) 1. ಪರಮೇಶ್ವರ, ಮಹಾದೇವ, ಪರಶಿವ. भाले अङ्कोऽस्य। 2. ಗರಗಸ. 3. ಒಂದು ವಿಧ ಶಾಕ. 4. ಕಚ್ಛಪ, ಆಮೆ. 5. ಕೆಂಪುಮೀನು. 6. ಹಣೆಯಲ್ಲಿ ಮಹಾಪುರುಷನ ಲಕ್ಷಣವುಳ್ಳ ಪುರುಷ. "भालाङ्कः करपत्रे स्यात् शाकभेदे च रोहिते। महालक्षणसंपन्नपुरुषे कच्छपे हरे" मेदि०।

**भालु ಭಾಲು** (पुं०) ಆದಿತ್ಯ, ಸೂರ್ಯ.

**भालूक ಭಾಲೂಕ** (पुं०) ಕರಡಿಯಾಕಾರದ ಒಂದು ಪ್ರಾಣಿ. भल (हिंसायाम्) "ऊक:" (उ० ४-४१)। "कोलङ्कस्तु जलको भालूको भल्लुकाकृति:" वैज०।

**भाव ಭಾವ** (पुं०) 1. ಆಶಯ, ಅಭಿಪ್ರಾಯ. भू (सत्तायाम्) + णिच् "अच्" (३-१-१३४)। "प्रसह्य चेत:सु समासजन्तमसंस्तुतानामपि भावमार्द्रम्" किरा० ३-२। 2. ಮನಸ್ಸಿನ ಅಭಿಪ್ರಾಯವನ್ನು ತಿಳಿಸುವ ಒಂದು ಸಾತ್ತ್ವಿಕ ಭಾವ. भावयति ज्ञापयति मनोगतम् —भू + णिच् "अच्" (३-१-१३४)। "भावसूचितमदृष्टविप्रियम्" कुमा० ८-१५। ಸಾತ್ತ್ವಿಕ ಭಾವವು (1) स्तम्भ:, (2) प्रलय:, (3) रोमाञ्च:, (4) स्वरभङ्ग:, (5) वेपथु:, (6) वैवर्ण्यम्, (7) अश्रु ಮತ್ತು (8) स्वेद: ಎಂದು ಎಂಟು ವಿಧ. "स्तम्भ: स्वेदोऽथ रोमाञ्च: स्वरभङ्गोऽथ वेपथु: । वैवर्ण्यमश्रुप्रलय इत्यष्टौ सात्त्विका: स्मृता:" सा० द० ३-१३५। 3. ನಿರ್ವೇದ ಮೊದಲಾದ ಮೂವತ್ತಮೂರು ವ್ಯಭಿಚಾರಿಭಾವಗಳು. [सा० द० ३-१४१ ನೋಡಿ] 4. ರತಿ ಮೊದಲಾದ ಸ್ಥಾಯಿಭಾವಗಳು. ಇವು 8 ಅಥವಾ 9. (1) रति:, (2) हास:, (3) शोक:, (4) क्रोध:, (5) उत्साह:, (6) भयम्, (7) जुगुप्सा ಮತ್ತು (8) विस्मय: ಎಂದು ಎಂಟು ವಿಧ. ಕೆಲವರು ಶಾಂತಿರಸವನ್ನೂ ಅಂಗೀಕರಿಸಿ ಶಮವನ್ನೂ ಸೇರಿಸಿ ಸ್ಥಾಯಿಭಾವಗಳು 9 ಎಂದು ಹೇಳುವರು. "रतिर्हासश्च शोकश्च क्रोधोत्साहौ भयं तथा। जुगुप्सा विस्मयश्चेत्यमष्टौ प्रोक्ता: शमोऽपि च" सा० द० ३-१७५। "नानाभिनयसंबन्धाद्भावयन्ति रसान्यत:। तस्माद्भावा अमी प्रोक्ता: स्थायि सञ्चारि (व्यभिचारि) सात्विका:" सा० द० ३-१८१। "कमपरमवशं न विप्रकुर्यु: विभुमपि तं यदमी स्पृशन्ति भावा:" कुमा० ६-९५। 5. ಆಲಂಬನ ಮತ್ತು ಉದ್ದೀಪನ ವಿಭಾವಗಳು. "भ्रमति भुवने कन्दर्पाज्ञा विकारि च यौवनं ललितमधुरास्ते ते भावा: क्षिपन्ति च धीरताम्" मालती० १-२०। 6. ಸತ್ತ್ವ, ಇರುವಿಕೆ, ಅಸ್ತಿತ್ವ. "नासतो विद्यते भावो नाभावो विद्यते सत:। उभयोरपि दृष्टोन्तस्त्वनयोस्तत्त्वदर्शिभि:" गीता २-१६। 7. ಸ್ಥಿತಿ, ದೆಸೆ, ಅವಸ್ಥೆ. "वसुदेववधूस्तनन्धयं तत् किमपि ब्रह्म किशोरभावदृश्यम्" गोपालविं०। 8. ವಿಷ್ಣು, ಪರಮಾತ್ಮ. सर्वविभूतिभिर्विशिष्टतया भवति — भू (सत्तायाम्) "ण:" काशिकावृत्ति: (३-१-१४३)। भावयति — भू (प्राप्तौ) + णिच् "अच्" (३-१-१३४) वा। "भाव: प्रपञ्चात्मतया भाति सत्तास्वरूपत:" इति निरुक्ति:। "भूतकृत् भूतभृद्भाव:" वि० स०। 9. ವಸ್ತು, ವಿಷಯ, ಪದಾರ್ಥ. "जगति जयिनस्ते ते भावा नवेन्दुकलादय: प्रकृतिमधुरा: सन्त्येवान्ये मनो मदयन्ति च" मालती० १-३९। 10. ಪ್ರೀತಿ, ವಿಶ್ವಾಸ. "बबन्ध सा नोत्तमसौकुमार्या कुमुद्वती भानुमतीव भावम्" रघु० ६-३६। 11. ದರ್ಜೆ, ಪದವಿ, ಅಂತಸ್ತು. "प्रेष्यभावेन नामेयं देवीशब्दक्षमा सती। स्नानीयवस्त्रक्रियया पत्रोर्णंवोपयुज्यते" माल० ५-१२। 12. ವಸ್ತುವಿನ ಅಸಾಧಾರಣ ಧರ್ಮ. "तस्य भावस्त्वतलौ". (५-१-११९)। गोर्भाव: गोत्वम्। घटस्य भाव: घटत्वम्। 13. ಚಿತ್ತವೃತ್ತಿ, ಪಾರಮಾರ್ಥಿಕವಾದ ಸತ್ಯವಾದ ಬುದ್ಧಿ, ಭಕ್ತಿ. "अहं सर्वस्य प्रभवो मत्त: सर्वं प्रवर्तते। इति मत्वा भजन्ते मां बुधा भावसमन्विता:" गीता १०-८। 14. ಭಾವನೆ, ಕ್ರಿಯೆ, ಸಕಲ ಧಾತುವಾಚ್ಯವಾದ ಕ್ರಿಯಾಸಾಮಾನ್ಯ, ಸಿದ್ಧಾವಸ್ಥೆಯನ್ನು ಹೊಂದಿರುವ ಧಾತ್ವರ್ಥ. सिद्धावस्थापन्ने धात्वर्थे वाच्ये धातो: "घञ्" सि० कौ०। पाक ಶಬ್ದವು पच ಧಾತುವಿಗೆ ಭಾವಾರ್ಥದಲ್ಲಿ ವಿಹಿತವಾದ "घञ्" ಪ್ರತ್ಯಯದಿಂದ ಪಾಕರೂಪವಾದ ಕ್ರಿಯೆಯನ್ನು ಬೋಧಿಸುವುದರಿಂದ ಸಿದ್ಧಾವಸ್ಥೆಯನ್ನು ಹೊಂದಿದ ಧಾತ್ವರ್ಥದಲ್ಲಿ ಪ್ರಯುಕ್ತವಾಗಿದೆ. 15. ಸ್ವಭಾವ, ಸಹಜವಾದ ಗುಣ, ಸ್ವರೂಪಲಕ್ಷಣ, ಧರ್ಮ, ಪ್ರಕೃತಿ, ಹುಟ್ಟುಗುಣ. "न तेजस्तेजस्वी प्रसृतमपरेषां विषहते स तस्य स्वो भाव: प्रकृतिनियतत्वादकृतक:" उ० रा० ६-१४। 16. ಅರ್ಥ, ಅಭಿಪ್ರಾಯ, ತಾತ್ಪರ್ಯ, ಸಾರಾಂಶ. 17. ಮನಸ್ಸು, ಚಿತ್ತ, ಹೃದಯ. "मन:प्रसाद: सौम्यत्वं मौनमात्मविनिग्रह:। भावसंशुद्धिरित्येतत्तपो मानसमुच्यते" गीता १७-१६। 18. ರಂಗಸ್ಥಲದ ವಿದ್ವಾಂಸ, ನಾಟ್ಯದಲ್ಲಿ ಸಂಭಾವಿತನಾದ ಮನುಷ್ಯ (ನಟ). "भावो विद्वान्" अम०। 19. ಜನ್ಮ, ಹುಟ್ಟು. 20. ವಿಭೂತಿ. 21. ಶುದ್ಧವಾದ ಧಾತ್ವರ್ಥ, ಕೇವಲ ಧಾತುವಿನ ಅರ್ಥ. "धात्वर्थ: केवल: शुद्धो भाव इत्यभिधीयते"। 22. ಪದಾರ್ಥಗಳ ಉತ್ಪತ್ತಿ ಮೊದಲಾದ ಆರು ವಿಕಾರಗಳು. (1) ಉತ್ಪತ್ತಿ, (2) ಸ್ಥಿತಿ, (3) ವಿಪರಿಣಾಮ, (4) ಬೆಳವಣಿಗೆ (ವರ್ಧನ), (5) ಕ್ಷಯ ಮತ್ತು (6) ನಾಶ ಇವು ವಸ್ತುವಿನ ಆರು ವಿಕಾರಗಳು. "उत्पत्त्यादिरूपषड्भावविकारयुक्त: पदार्थ:" इति यास्क:। 23. ನವಗ್ರಹಗಳ ಚೇಷ್ಟೆ, ಗ್ರಹಗಳ 12 ವಿಧ

ವ್ಯಾಪಾರ, ಕೆಲಸ. "शयनं चोपवेशश्च नेत्रपाणिः प्रकाशनम् । गमनं गमनेच्छा च सभायां वसतिस्तथा । आगमनं भोजनञ्च नृत्यलिप्सा च कौतुकम् । निद्रा ग्रहाणां भावाश्च द्वादशैते प्रकीर्तिताः" । 24. ಆತ್ಮ. 25. ಪರ್ಯಾಲೋಚನೆ, ಚಿಂತನೆ, ವಿವೇಚನೆ. "यदा भावेन भवति सर्वभावेषु निःस्पृहः । तदा सुख मवाप्नोति प्रेत्य चेह च शाश्वतम्" मनु० ६-८० । 26. ಒಂದು ವಿಧ ಅಭಿನಯ. 27. ಜಂತು, ಪ್ರಾಣಿ. 28. ಗೌರವಹೊಂದಿದ, ಮಾನ್ಯ, ಪೂಜ್ಯ. "भावो गौरविते जन्तौ पदार्थेऽभिनयान्तरे" त्रिकाण्ड० । 29. ಲಗ್ನ ಮೊದಲುಗೊಂಡು ತನು ಮೊದಲಾದ ಹನ್ನೆರಡು ಭಾವ ಗಳು. (1) ತನು. (2) ಧನ, ಕುಟುಂಬ, ವಾಕ್ಕು, ಪ್ರಯಾಣ, ನೇತ್ರ, ಮುಖ ಮುಂತಾದುವು. (3) ಭಗಿನಿ, ಸಹೋದರ, ಸತ್ತ್ವ, ಪರಾಕ್ರಮ ಮುಂತಾದುವು. (4) ಮಾತೃ, ಬಂಧು, ಸುಖ, ಪುಸ್ತಕ, ಗೃಹ, ಶಯ್ಯೆ, ಪಶು, ಧಾನ್ಯ ಮುಂತಾದುವು. (5) ಸಂತತಿ (ಸಂತಾನ), ಪ್ರತಿಭೆ ಮುಂತಾದುವು. (6) ಶತ್ರು, ರೋಗ, ಭಯ, ಪಾಪ, ಶಸ್ತ್ರ, ಆಪಣ (ಅಂಗಡಿ), ಜ್ಞಾತಿ ಮುಂತಾದುವು. (7) ಕಾಮ, ಪತ್ನಿ, ದ್ಯೂತ, ವಾಣಿಜ್ಯ, ಕ್ರಯ ವಿಕ್ರಯ, ವಿವಾಹ, ಭೋಗ, ಅಲಂಕಾರ ಮುಂತಾದುವು. (8) ನಿಧನ, ನಾಶ, ಆಯುಷ್ಯ, ಜೀವನೋಪಾಯ, ಮೋಕ್ಷ ಮುಂತಾ ದುವು. (9) ಸುಕೃತ, ಗುರು, ಭಾಗ್ಯ, ಪಿತೃಜ್ಞಾನ, ದಯೆ, ಭಕ್ತಿ, ದೇವತೋಪಾಸನೆ, ಆನಂದ ಮುಂತಾದುವು. (10) ಪುಣ್ಯ, ಸತ್ಕರ್ಮ, ವೀರ್ಯ ಮುಂತಾದುವು. (11) ಆಯುಸ್ಸು, ಅರ್ಥಲಾಭ, ಜಯ ಮುಂತಾದುವು. (12) ವ್ಯಯ, ನರಕ, ನಾಶ ಮುಂತಾದುವು. ಇವು ತನ್ವಾದಿ ದ್ವಾದಶ (12) ಭಾವಗಳು. 30. ಸ್ತ್ರೀಯರಿಗೆ ಯೌವನ ದಲ್ಲಿ ಸ್ವಭಾವವಾಗಿ ಉಂಟಾಗುವ 28 ವಿಧ ಅಲಂಕಾರ ಗಳಲ್ಲಿ ಶರೀರದಲ್ಲಿ ಉಂಟಾಗುವ ಒಂದು ಅಲಂಕಾರ, ಹುಟ್ಟಿದ ಮೊದಲುಗೊಂಡು ಯಾವ ರೀತಿಯ ವಿಕಾರ ವನ್ನೂ ಹೊಂದದಿರುವ ಮನಸ್ಸಿನಲ್ಲಿ ಪ್ರಥಮತಃ ಉಂಟಾ ಗುವ ವಿಕಾರ. "निर्विकारात्मके चित्ते भावः प्रथम-विक्रिया" सा० द० ३-९३ । 31. ಯೋನಿ. 32. ಬುಧ, ಪಂಡಿತ. 33. ಲೀಲೆ. 34. ಉಪದೇಶ, ಸಲಹೆ. 35. ಶಬ್ದದ ಪ್ರವೃತ್ತಿಗೆ ಕಾರಣ. "भावोऽभिप्राय-वस्तुनोः । स्वभावजन्मसत्तात्मक्रियालीलाविभूतिषु । चेष्टायोन्योर्बुधे जन्तौ शृङ्गारादेश्च कारणे । शब्दप्रवृत्ति-हेतौ च" हेम० । 36. (ಸಾಂಖ್ಯ ಮತದಲ್ಲಿ) ಧರ್ಮ ಮೊದಲಾದ ಎಂಟು ವಿಧವಾದ ಭಾವಗಳು. (1) धर्मः, (2) अधर्मः, (3) ज्ञानम्, (4) अज्ञानम्, (5) वैराग्यम्, (6) अवैराग्यम्, (7) ऐश्वर्यम् ಮತ್ತು (8) अनैश्वर्यम् ಇವು 8 ವಿಧ ಭಾವಗಳು. 37. (ದ್ವೈತಮತದಲ್ಲಿ) ಚೇತನ ಮತ್ತು ಅಚೇತನ ಎಂಬ ಎರಡು ಭೇದಗಳಿಂದ ಕೂಡಿದ ಅಸ್ವತಂತ್ರ ತತ್ತ್ವ. 38. (ವೈಶೇಷಿಕ ಮತದಲ್ಲಿ) ದ್ರವ್ಯ ಗುಣ ಕರ್ಮ ಸಾಮಾನ್ಯ ವಿಶೇಷ ಮತ್ತು ಸಮವಾಯ ಗಳೆಂಬ ಆರು ಪದಾರ್ಥಗಳು. "द्रव्यादिषट्कान्यतमत्वं भावत्वम्" सि० मुक्ता० ।

**भावक ಭಾವಕ** (पुं०) 1. ಚಿತ್ತವಿಕಾರ, ಭಾವನೆ. भाव स्वार्थे "कः" । (वि०) 2. ಭಾವಿಸುವ, ಕಲ್ಪಿಸುವ, ಊಹಿಸುವ. 3. ಉತ್ಪಾದಿಸುವ, ಸೃಷ್ಟಿಸುವ, ಕಾರ್ಯ ರೂಪಕ್ಕೆ ತರುವ. भू + णिच् "ण्वुल्" (३-१-१३३) ।

**भावज ಭಾವಜ** (पुं०) ಕಾಮ, ಮನ್ಮಥ. भावे मनसि जायते — जनी "डः" (३-२-९७) ।

**भावज्ञ ಭಾವಜ್ಞ** (वि०) 1. ಮನಸ್ಸನ್ನು ಅರಿತವನು. 2. ಅಭಿಪ್ರಾಯವನ್ನು ತಿಳಿದವನು. भावं चित्तं आशयं वा जानाति — ज्ञा (अवबोधने) "कः" (३-२-३) ।

**भावत ಭಾವತ** (वि०) ಉತ್ಪತ್ತಿಹೊಂದುವ ವಸ್ತುವಿನ ಸಂಬಂಧವಾದ, ಮುಂದೆ ಹುಟ್ಟುವ ಪದಾರ್ಥಸಂಬಂಧ ವಾದ. भू (सत्तायाम्) "शतृ" (३-२-१२४) । भवतः इदम् "अण्" (४-३-१२०) ।

**भावत्क ಭಾವತ್ಕ** (वि०) ನಿನ್ನ ಸಂಬಂಧವಾದ. भवतः इदम् — "ठक्" (४-२-११५) । ವೃದ್ಧ ಸಂಜ್ಞೆಯುಳ್ಳ भवत् ಶಬ್ದಕ್ಕೆ ठक् ಪ್ರತ್ಯಯವೂ शतृ ಪ್ರತ್ಯಯಾಂತ भवत् ಶಬ್ದಕ್ಕೆ अण् ಪ್ರತ್ಯಯವೂ ಬರುವುದು.

**भावन ಭಾವನ** (पुं०) 1. ವಿಷ್ಣು. अनिष्टनिवारणादिना भावयति उज्जीवयति — भू (सत्तायाम्) + णिच् "ल्युः" (३-१-१३४) । "जनित्वोज्जीवयति यो जनान् स्यात् भावनस्तु सः" इति निरुक्तिः । "संभवो भावनो भर्ता प्रभवः प्रभुरीश्वरः" वि० स० । 2. ಪರಶಿವ, ಪರಮೇಶ್ವರ. (स्त्रीन०) **–ना –ನಾ, –नम् –ನಮ್.** 3. ಧ್ಯಾನ, ಚಿಂತನೆ. भू (सत्तायाम्) + णिच् "युच्" (३-३-१०७) । भावे "ल्युट्" (३-३-११५) वा । "नास्ति बुद्धिरयुक्तस्य न चायुक्तस्य भावना" गीता २-६६ । 4. ಶ್ರದ್ಧೆ, ನಂಬಿಕೆ, ವಿಶ್ವಾಸ. "मन्त्रे तीर्थे द्विजे देवे दैवज्ञे भेषजे गुरौ । यादृशी भावना यस्य सिद्धिर्भवति तादृशी" पञ्चतं० ५-९९ । 5. ಮನಸ್ಸಿನಲ್ಲಿ ಉಂಟಾಗುವ ಕಲ್ಪನೆ, ಕಲ್ಪನೆಯ ಬಿಂಬ. "मुहुरवलोकित-मण्डनलीला मधुरिपुरहमिति भावनशीला" गीतगो०

६-४। 6. ಲೇಪನ, ಬಳಿಯುವುದು, ಪೂಸುವುದು. 7. ವಾಸನೆ ಕಟ್ಟುವುದು. "भावना लेपने ध्याने" विश्व०। 8. ಜನ್ಮಾಂತರದ ವಾಸನೆ, ಅನುಭೂತವಸ್ತುವಿನ ಸ್ಮೃತಿಗೆ ಕಾರಣವಾದ ಸಂಸ್ಕಾರ. 9. ಪ್ರಯತ್ನ. चैत्रः तण्डुलं पचति ಎಂಬಲ್ಲಿ ಆಖ್ಯಾತಾರ್ಥವಾದ ಪ್ರಯತ್ನವು ಭಾವನೆ. 10. ಧಾತುವಾಚ್ಯವಾದ ವ್ಯಾಪಾರ. पचति ಎಂಬಲ್ಲಿ ಪಾಕಾನುಕೂಲ ವ್ಯಾಪಾರವು ಭಾವನೆ. "व्यापारो भावना सैवोत्पादना सैव च क्रिया"। 11. (ವೈದ್ಯಶಾಸ್ತ್ರದಲ್ಲಿ) ಔಷಧವನ್ನು ತಯಾರಿಸಲು ಮಾಡುವ ಒಂದು ಸಂಸ್ಕಾರ, ದ್ರವ ವಸ್ತುವಿನಲ್ಲಿ ಚೂರ್ಣವನ್ನು ಬೆರಸಿ ಔಷಧಕ್ಕೆ ಮಾಡುವ ಸಂಸ್ಕಾರ. 12. ಪರ್ಯಾಲೋಚನೆ.

**भावबोधक ಭಾವಬೋಧಕ** (वि०) ಅಭಿಪ್ರಾಯವನ್ನು ಸೂಚಿಸುವ, ಮನೋಗತವನ್ನು ತಿಳಿಸುವ. (ರೋಮಾಂಚ ಭ್ರೂಭಂಗ ಮೊದಲಾದುವು.) भावं बोधयति—बुध (अवगमने) + णिच् "ण्वुल्" (३-१-१३३)।

**भावमिश्र ಭಾವಮಿಶ್ರ** (पुं०) (ನಾಟಕದಲ್ಲಿ) ಪೂಜ್ಯ, ಗೌರವಾರ್ಹ. "प्रसीदन्तु भावमिश्राः" शाकुं० ६।

**भाववचन ಭಾವವಚನ** (नं०) ಧಾತ್ವರ್ಥವನ್ನು ಹೇಳುವ ಪದ, ಕ್ರಿಯೆಯನ್ನು ಹೇಳುವ ಪದ. भावः क्रिया उच्यतेऽनेन।

**भाववाचक ಭಾವವಾಚಕ** (नं०) ಧಾತ್ವರ್ಥವನ್ನು ಹೇಳುವ ಪದ. भावस्य धात्वर्थक्रियाया वाचकम्।

**भावशबलता ಭಾವಶಬಲತಾ** (स्त्री०) ಭಾವಗಳ ಮಿಶ್ರಣ, ಪರಸ್ಪರ ವಿರುದ್ಧವಾದ ಅಥವಾ ಉದಾಸೀನವಾದ ಭಾವಗಳ ಮಿಶ್ರಣ. "बाध्यबाधकभावमापन्नानाम् उदासीनानां वा भावानां शबलता व्यामिश्रणम्" रसगं०। "क्वाकार्यं शशलक्ष्मणः क्व च कुलं भूयोऽपि दृश्येत सा दोषाणां प्रशमाय मे श्रुतमहो कोपेऽपि कान्तं मुखम्। किं वक्ष्यन्त्यपकल्मषाः कृतधियः स्वप्नेऽपि सा दुर्लभा चेतः स्वास्थ्यमुपैहि कः खलु युवा धन्योऽधरं पास्यति" विक्र०। ಇಲ್ಲಿ ವಿತರ್ಕ ಔತ್ಸುಕ್ಯ ಮತಿವಿಸ್ಮರಣ ಶಂಕಾ ಮುಂತಾದ ಭಾವಗಳ ಮಿಶ್ರಣ.

**भावशान्ति ಭಾವಶಾಂತಿ** (स्त्री०) ಭಾವಗಳ ನಾಶ, ವಿರುದ್ಧ ಸಾಮಗ್ರಿಯ ಬಲದಿಂದ ಭಾವಗಳು ಶಾಂತವಾಗುವಿಕೆ. भावस्य शान्तिः शमः। "सुतनु जहिहि कोपं पश्य पादानतं मां न खलु तव कदाचित् कोप एवं-विधोऽभूत्। इति निगदति नाथे तिर्यगामीलिताक्ष्या नयनजलमनल्पं मुक्तमुक्तं न किञ्चित्" ಇಲ್ಲಿ ಕಣ್ಣೀರು ಬಿಟ್ಟಿದ್ದರಿಂದ ಈರ್ಷ್ಯಾರೂಪ ಸಂಚಾರಿ ಭಾವಕ್ಕೆ ನಾಶ.

**भावशून्य ಭಾವಶೂನ್ಯ** (वि०) 1. ಅನುರಾಗಶೂನ್ಯ, ವಿಶ್ವಾಸವಿಲ್ಲದ, ಪ್ರೀತಿಯಿಲ್ಲದ. भावेन शून्यः रहितः। "उपचारविधिर्मनस्विनीनां न तु पूर्वाभ्यधिकोऽपि भाव-शून्यः" माल० ३-३। 2. ಅಭಿಪ್ರಾಯವಿಲ್ಲದ, ಮನಸ್ಸಿಲ್ಲದ, ಉದ್ದೇಶವಿಲ್ಲದ. "इत्येवं त्यक्तहस्ते सपदि सुरगणे भावशून्ये समस्ते"।

**भावसन्धि ಭಾವಸಂಧಿ** (पुं०) ಭಾವಗಳ ಸಂಧಿ, ವಿರುದ್ಧವಾದ (ಸಂಚಾರಿ) ಭಾವಗಳಿಗೆ ಒಂದು ಕಡೆ ಸಮಾವೇಶ. अन्योन्याभिभूतयोः अन्योन्याभिभवनयोग्ययोर्भावयोः सामानाधिकरण्यं भावसन्धिः रसगं०। "नयनयुगासेचनकं मानसवृत्त्यापि दुष्प्रापम्। रूपमिदं मदिराक्ष्या मदयति हृदयं दुनोति च मे" ಇಲ್ಲಿ ಹರ್ಷ ಮತ್ತು ವಿಷಾದಗಳಿಗೆ ಸಮಾವೇಶವಿರುವುದು.

**भावसमाहित ಭಾವಸಮಾಹಿತ** (वि०) 1. ಭಕ್ತಿಸಂಪನ್ನ, ಭಕ್ತ. 2. ಶ್ರದ್ಧಾಳು, ಧರ್ಮಬುದ್ಧಿಯುಳ್ಳವನು.

**भावस्थ ಭಾವಸ್ಥ** (वि०) ಅನುರಾಗವುಳ್ಳವನು, ಪ್ರೀತಿಯುಳ್ಳವನು, ವಿಶ್ವಾಸವುಳ್ಳವನು. भावे तिष्ठति—ष्ठा (गतिनिवृत्तौ) "कः" (३-२-४)। "यदा बुधैः सर्वगतस्त्वमुच्यसे न वेत्सि भावस्थमिमं कथं जनम्" कुमा० ५-५८।

**भावस्थिर ಭಾವಸ್ಥಿರ** (वि०) ಮನಸ್ಸಿನಲ್ಲಿ ಬೇರೂರಿರುವ, ಜನ್ಮಾಂತರವಾಸನೆಯಿಂದ ಹೃದಯದಲ್ಲಿ ಸ್ಥಿರವಾಗಿರುವ. भावैः स्थिरम्। "तच्चेतसा स्मरति नूनमबोधपूर्वं भावस्थिराणि जननान्तरसौहृदानि" शाकुं० ५-२।

**भावाट ಭಾವಾಟ** (पुं०) 1. ಭಾವಕ. 2. ಸಾಧು. 3. ನಿವೇಶ. 4. ಕಾಮುಕ. 5. ನಟ. भावेन अटति—अट (गतौ) "अण्" (३-२-१)। "भावाटो भावके साधौ निवेशे कामुके नटे" मेदि०।

**भावानुग ಭಾವಾನುಗ** (वि०) 1. ಅಭಿಪ್ರಾಯವನ್ನು ಅನುಸರಿಸಿ ನಡೆಯುವವನು, ಆಶಯದಂತೆ ನಡೆಯುವವನು. भावमनुसृत्य गच्छति—गम्लृ (गतौ) "डः" (वा० ३-२-४८)। (स्त्री०) **-अनुगा -ಅನುಗಾ.** 2. ಛಾಯೆ, ನೆರಳು.

**भाविक ಭಾವಿಕ** (नं०) 1. ಅರ್ಥಾಲಂಕಾರದ ಒಂದು ಭೇದ. ಹಿಂದೆ ನಡೆದ ಅಥವಾ ಮುಂದೆ ನಡೆಯುವ ವಿಷಯದ ಸಾಕ್ಷಾತ್ಕಾರವರ್ಣನೆ, ಭೂತ ಮತ್ತು ಭವಿಷ್ಯತ್

ವಿಷಯಗಳು ಪ್ರತ್ಯಕ್ಷವಾಗಿ ನಡೆಯುವಂತೆ ವರ್ಣಿಸುವುದು. "भाविकं भूतभाव्यर्थसाक्षात्कारस्य वर्णनम्" चन्द्रा०। "अहं विलोकयेऽद्यापि युध्यन्तेऽत्र सुरासुराः"। (वि०) 2. ಭಾವಪ್ರಧಾನವಾದ, ರಸಪ್ರಧಾನವಾದ. भावेन निर्वृत्तम्।

**भावित ಭಾವಿತ** (वि०) 1. ಹೊಂದಲ್ಪಟ್ಟ, ಪಡೆಯಲ್ಪಟ್ಟ. भू (प्राप्तौ) + णिच् "क्तः" (३-२-१०२)। "मा स्म भैष्ट मयि गोप्तरि स्थिते भावितानि भवुकानि सन्तु वः" याद० १७-१२५। 2. ಪವಿತ್ರಗೊಳಿಸಲ್ಪಟ್ಟ, ಶುದ್ಧಮಾಡಲ್ಪಟ್ಟ. "ये चैनं प्रतिपद्यन्ते भक्तियोगेन भाविताः। तेषामेवात्मनात्मानं दर्शयत्येष हृच्छयः" भा० अनु० ४७-३९। 3. ಮಿಶ್ರಮಾಡಲ್ಪಟ್ಟ, ಬೆರಸಲ್ಪಟ್ಟ. भू (अवकल्कने) + णिच् "क्तः" (३-२-१०२)। 4. ಚಿಂತಿಸಲ್ಪಟ್ಟ, ಧ್ಯಾನಮಾಡಲ್ಪಟ್ಟ. अवकल्कनं मिश्रीकरणमित्येके। चिन्तनमित्यन्ये सि० कौ०। 5. ಊಹಿಸಲ್ಪಟ್ಟ, ಕಲ್ಪಿಸಲ್ಪಟ್ಟ. "भावितेयं त्वया साधु नवरागा खलु त्वयि" नैष० २०-३८। 6. ಸಮರ್ಪಿಸಲ್ಪಟ್ಟ, ಒಪ್ಪಿಸಲ್ಪಟ್ಟ. "एतत् संसूचितं ब्रह्मन् तापत्रयचिकित्सितम्। यदीश्वरे भगवति कर्म ब्रह्मणि भावितम्" भाग० १-५-३२। 7. ಪ್ರದರ್ಶಿಸಲ್ಪಟ್ಟ, ತೋರಿಸಲ್ಪಟ್ಟ. 8. ವಾಸನೆ ಕಟ್ಟಲ್ಪಟ್ಟ. 9. ತಿಳಿಯಲ್ಪಟ್ಟ, ಗ್ರಹಿಸಲ್ಪಟ್ಟ.

**भावितात्मन् ಭಾವಿತಾತ್ಮನ್** (वि०) ಶುದ್ಧಾತ್ಮ, ಪರಮಾತ್ಮನ ಧ್ಯಾನಾದಿಗಳಿಂದ ಪರಿಶುದ್ಧವಾದ ಹೃದಯವುಳ್ಳ. भावितः आत्मा यस्य।

**भावित्र ಭಾವಿತ್ರ** (न०) ತ್ರೈಲೋಕ್ಯ, ಸ್ವರ್ಗ ಮರ್ತ್ಯ ಮತ್ತು ಪಾತಾಳಲೋಕಗಳು. भू (सत्तायाम्) "णित्रन्" (उ० ४-१७०)।

**भाविन् ಭಾವಿನ್** (पुं०) 1. ಮುಂದಿನ ಕಾಲ, ಭವಿಷ್ಯತ್ತು. भू (सत्तायाम्) "इनिः" (उ० ४-८)। "पदे पदे भाविनि भाविनी तं यथा करप्राप्यमवैति नूनम्" नैष० ३-११। (वि०) 2. ಮುಂದಿನ ಕಾಲದ, ಭವಿಷ್ಯತ್ ಕಾಲದ. भू "इनिः" (३-३-६)। "भूतं भवद्भावि च यच्च किञ्चित्" कुमा० १२-४४। "साह स्म नैवाशकुनीभवेन्मे भाविप्रियावेदक एष हंसः" नैष० ३-९। 3. ಉಂಟಾಗುವ, ಸಂಭವಿಸುವ. "प्रस्थानं ते कथमपि सखे लम्बमानस्य भावि" मेघ० १-४१। 4. ಅವಶ್ಯವಾಗಿ ಆಗಬೇಕಾದ, ಹಣೆಯಲ್ಲಿ ಮೊದಲೇ ಬರೆದಿಟ್ಟಿರುವ. "यदभावि न तद्भावि भावि चेन्न तदन्यथा" हितो० ४-८। 5. ಚಿಂತಿಸುವ, ಧ್ಯಾನಿಸುವ. स्त्रियां "ङीप्" (४-१-५)। **-नी -ನೀ.** "पदे पदे भाविनि भाविनी तम्" नैष० ३-११।

**भाविनी ಭಾವಿನೀ** (स्त्री०) 1. ಪ್ರಶಸ್ತವಾದ ಆಶಯವುಳ್ಳ ಹೆಂಗಸು, ಒಳ್ಳೆಯ ಅಭಿಪ್ರಾಯವುಳ್ಳ ಹೆಂಗಸು. प्रशस्तो भावोऽस्या अस्ति "इनिः" (५-२-११५)। "अनेन धर्मः सविशेषमद्य मे त्रिवर्गसारः प्रतिभाति भाविनि" कुमा० ५-३८। 2. ಪತಿವ್ರತೆ, ಗುಣಶಾಲಿಯಾದ ಹೆಂಗಸು. 3. ಸುಂದರಿಯಾದ ಹೆಂಗಸು.

**भावुक ಭಾವುಕ** (पुं०) 1. ಸಹೋದರಿಯ ಪತಿ, ಒಡಹುಟ್ಟಿದವಳ ಗಂಡ (ನಾಟಕದಲ್ಲಿ ಮಾತ್ರ). भू (सत्तायाम्) "उकञ्" (३-२-१५४)। "भावुको भगिनीपतिः" अभि० र०। (न०) 2. ಮಂಗಳ, ಕುಶಲ, ಕ್ಷೇಮ. "भावुकं भवुकं भव्यं कुशलं क्षेममस्त्रियाम्" अम०। (वि०) 3. ಮಂಗಳಕರ, ಶುಭವನ್ನುಂಟುಮಾಡುವ. 4. ಹುಟ್ಟುವ ಸ್ವಭಾವದ. "प्रजनिष्णुस्तु भावुकः" वैज०। 5. ಸಾಹಿತ್ಯದಲ್ಲಿ ಅಭಿರುಚಿಯುಳ್ಳವನು, ರಸಿಕ.

**भाव्य ಭಾವ್ಯ** (वि०) 1. ಅವಶ್ಯವಾಗಿ ಆಗಬೇಕಾದ, ತಪ್ಪದೆ ನಡೆಯಬೇಕಾದ. भू (सत्तायाम्) "ण्यत्" (३-१-१२५)। 2. "भव्य" ಪದದ ಅರ್ಥ.

**भाषण ಭಾಷಣ** (न०) 1. ಮಾತಾಡುವುದು. भाष (व्यक्तायां वाचि) "ल्युट्" (३-३-११५)। 2. ಮಾತು, ನುಡಿ, ವಾಣಿ. 3. ನಿರ್ವಹಣಸಂಧಿಯ ಒಂದು ಅಂಗ. "सामदानादि भाषणम्" सा० द० ६-११३।

**भाषणी ಭಾಷಣೀ** (स्त्री०) ನಿಂದೆ, ದೂಷಣೆ, ಬೈಗಳು. "परिवाग् भाषणीति च" वैज०।

**भाषा ಭಾಷಾ** (स्त्री०) 1. ಮನುಷ್ಯನ ಪರಸ್ಪರ ವ್ಯವಹಾರಕ್ಕೆ ಸಾಧನವಾದ ವಾಕ್ಕು, ಮಾತು, ನುಡಿ. भाष (व्यक्तायां वाचि) "अः" (३-३-१०३)। [ಸಂಸ್ಕೃತ ಕನ್ನಡ ತಮಿಳು ತೆಲುಗು ಹಿಂದಿ ಮರಾಠಿ ಪ್ರಾಕೃತ ಬಂಗಾಳಿ ಮೊದಲಾದ ಪ್ರಾಂತ ಭಾಷೆಗಳು.] 2. ವಾಕ್ಯ, ವಾಙ್ಮಯ. "कथा हि सर्वभाषाभिः संस्कृतेन च बध्यते। भूतभाषामयीं प्राहुरद्भुतार्थां बृहत्कथाम्" काव्या० १-३८। 3. ಸರಸ್ವತಿ, ವಾಗ್ದೇವಿ, ಮಾತಿನ ಅಧಿದೇವತೆ. 4. (ವ್ಯವಹಾರದಲ್ಲಿ) ದೋಷಾರೋಪ, ಫಿರ್ಯಾದು, ರಾಜನಲ್ಲಿ ಅಥವಾ ನ್ಯಾಯಾಲಯದಲ್ಲಿ ದೂರು ಹೇಳುವುದು. "यदावेदयते राज्ञे तद्भाषेत्यभि-

धीयते"। 5. ಲಕ್ಷಣ, ಸ್ವರೂಪವನ್ನು ತಿಳಿಸುವ ಮಾತು. "स्थितप्रज्ञस्य का भाषा समाधिस्थस्य केशव" गीता २-५४।

**भाषापरिच्छेद ಭಾಷಾಪರಿಚ್ಛೇದ** (ಪುಂ) ನ್ಯಾಯ ವೈಶೇಷಿಕ ಸಾಂಕೇತಿಕ ಶಬ್ದಗಳು ಮತ್ತು ಅರ್ಥನಿರ್ಣಯವನ್ನು ಪ್ರತಿಪಾದಿಸುವ ಒಂದು ಗ್ರಂಥ, ನ್ಯಾಯವೈಶೇಷಿಕ ಸಮ್ಮತವಾದ ಪದಾರ್ಥಗಳನ್ನು ವಿವರಿಸುವ ಗ್ರಂಥ.

**भाषासम ಭಾಷಾಸಮ** (ಪುಂ) ಶಬ್ದಾಲಂಕಾರದ ಒಂದು ಭೇದ, ಒಂದೇ ವಿಧವಾದ (ಒಂದೇ ಆನುಪೂರ್ವಿಯುಳ್ಳ) ನಾನಾಭಾಷೆಗಳ ಶಬ್ದಗಳಿಂದ ಕೂಡಿದ ವಾಕ್ಯ. "शब्दैरेकविधैरेव भाषासु विविधास्वपि। वाक्यं यत्र भवेत् सोऽयं भाषासम इतीष्यते" सा० द० १०-१०। "मञ्जुल मणिमञ्जीरे कलगम्भीरे विहारसरसीतीरे। विरसासि केलिकीरे किमालि धीरे च गन्धसारसमीरे" ಇದು ಸಂಸ್ಕೃತ ಪ್ರಾಕೃತ ಶೌರಸೇನೀ ಪ್ರಾಚೀ ಅವಂತೀ ಮೊದಲಾದ ಭಾಷೆಗಳಲ್ಲಿ ಒಂದೇ ರೀತಿಯ ಆನುಪೂರ್ವಿಯುಳ್ಳ ಶ್ಲೋಕ.

**भाषित ಭಾಷಿತ** (ನಂ) 1. ವಚನ, ವಾಕ್ಯ, ಮಾತು, ನುಡಿ. भाष (व्यक्तायां वाचि) भावे "क्त:" (३-३-११४)। "आकारैरिङ्गितैर्गत्या चेष्टया भाषितेन च। नेत्रवक्त्रविकारैश्च गृह्यतेऽन्तर्गतं मन:" मनु० ८-२६। (वि०) 2. ಹೇಳಲ್ಪಟ್ಟ, ನುಡಿಯಲ್ಪಟ್ಟ. भाष कर्म० "क्त:" (३-२-१०२)। "फणिभाषितभाष्यफक्किका विषमा कुण्डलनामवापिता" नैष० २-९५।

**भाषिन् ಭಾಷಿನ್** (वि०) ಮಾತಾಡುವ, ಹೇಳುವ. भाष (व्यक्तायां वाचि) "णिनि:" (३-१-१३४)। स्त्रियां "ङीप्" (४-१-५)। **भाषिणी ಭಾಷಿಣೀ.** "तत: प्रतीच्छ प्रहरेति भाषिणी परस्परोल्लासितशल्यपल्लवे" नैष० १-६८।

**भाष्य ಭಾಷ್ಯ** (ನಂ) 1. ಸೂತ್ರಗಳ ವ್ಯಾಖ್ಯಾನಗ್ರಂಥ, ಸೂತ್ರಗಳ ಪದಗಳಿಗೆ ಸೂತ್ರಾನುಸಾರವಾದ ಅರ್ಥ ವಿವರಣೆ. "सूत्रस्थं पदमादाय वाक्यै: सूत्रानुसारिभि:। स्वपदानि च वर्ण्यन्ते भाष्यं भाष्यविदो विदु:"। (वि०) 2. ಹೇಳಲ್ಪಡುವ. 3. ಹೇಳಬೇಕಾದ. भाष "ण्यत्" (३-१-१२४)।

**भाष्यकार ಭಾಷ್ಯಕಾರ** (ಪುಂ) ಸೂತ್ರಗ್ರಂಥಗಳಿಗೆ ವ್ಯಾಖ್ಯಾನ (ಭಾಷ್ಯ) ಬರೆದವರು. भाष्यं करोति—डुकृञ् (करणे) "अण्" (३-२-१)।

**ಸೂತ್ರಗ್ರಂಥಗಳು ಮತ್ತು ಅವುಗಳ ವ್ಯಾಖ್ಯಾನ (ಭಾಷ್ಯ) ಕಾರರು :**

| ಸೂತ್ರಗ್ರಂಥ | ವ್ಯಾಖ್ಯಾನಕಾರರು | ಭಾಷ್ಯ |
|---|---|---|
| 1. ಪಾಣಿನಿ ಸೂತ್ರಗಳು | ಪತಂಜಲಿಮುನಿ | ಮಹಾಭಾಷ್ಯ |
| 2. ಬ್ರಹ್ಮ ಸೂತ್ರಗಳು | (1) ಶ್ರೀಶಂಕರಾಚಾರ್ಯರು | ಶ್ರೀಶಾಂಕರ ಭಾಷ್ಯ |
| | (2) ಶ್ರೀರಾಮಾನುಜಾಚಾರ್ಯರು | ಶ್ರೀಭಾಷ್ಯ |
| | (3) ಶ್ರೀಮಧ್ವಾಚಾರ್ಯರು | ಶ್ರೀಸುಧಾ |
| | (4) ಶ್ರೀ ಶ್ರೀಪತಿ ಪಂಡಿತಾರಾಧ್ಯರು | ಶ್ರೀಕರಭಾಷ್ಯ |
| 3. ಯೋಗ ಸೂತ್ರಗಳು | ವೇದವ್ಯಾಸರು | — |
| 4. ಸಾಂಖ್ಯ ಸೂತ್ರಗಳು | ವಿಜ್ಞಾನಭಿಕ್ಷು | ಸಾಂಖ್ಯ ಪ್ರವಚನಭಾಷ್ಯ |
| 5. ಗೌತಮ ಸೂತ್ರಗಳು | (1) ವಾತ್ಸ್ಯಾಯನ | ನ್ಯಾಯಭಾಷ್ಯ |
| | (2) ಮಸ್ಕರಿ | ಮಸ್ಕರಿಭಾಷ್ಯ |
| 6. ಕಣಾದ ಸೂತ್ರಗಳು | ಪ್ರಶಸ್ತಪಾದ | ಪ್ರಶಸ್ತಪಾದ ಭಾಷ್ಯ |
| 7. ಮೀಮಾಂಸಾ ಸೂತ್ರಗಳು | ಶಬರಸ್ವಾಮಿ ಇತ್ಯಾದಿ | ಶಾಬರಭಾಷ್ಯ |

**भाष्यकृत् ಭಾಷ್ಯಕೃತ್** (ಪುಂ) "भाष्यकार" ಪದದ ಅರ್ಥ.

**भास् ಭಾಸ್** (स्त्री०) 1. ದೀಪ್ತಿ, ಕಾಂತಿ, ಪ್ರಕಾಶ. भासृ (दीप्तौ) "क्विप्" (३-२-१७७)। "रोधोभुवां मुहुरमुत्र हिरण्मयीनां भासस्तटिद्विलसितानि विडम्बयन्ति" किरा० ५-४६। 2. ಮಯೂಖ, ಕಿರಣ. "अस्तापास्तसमस्तभासि नभस: पारं प्रयाते रवौ" रत्ना० १-२३। 3. ಇಚ್ಛೆ, ಅಪೇಕ್ಷೆ. 4. ಪ್ರಭಾವ, ಮಹಿಮೆ. 5. ಕರಣ, ಸಾಧನ. (ನಂ) 6. ಗಗನ, ಆಕಾಶ. 7. ರಾಶಿ. 8. ನಕ್ಷತ್ರ. 9. ಪುಂಡ್ರ. (ತಿರ್ಯಕ್ ಪುಂಡ್ರ ಮತ್ತು ಊರ್ಧ್ವಪುಂಡ್ರ) 10. ಚಕ್ರ. "स्त्रियां भा: करणे द्युतौ। क्लीबे तु गगने राशौ तारायां पुण्ड्रचक्रयो:" नानार्थर०।

**भास ಭಾಸ** (ಪುಂ) 1. ದೀಪ್ತಿ, ಕಾಂತಿ, ಪ್ರಕಾಶ. भासृ (दीप्तौ) भावे "घञ्" (३-३-१८)। 2. ಗೋಷ್ಠ, ಹಸುವಿನ ಕೊಟ್ಟಿಗೆ. भासन्ते गावोऽत्र—भासृ अधि०

"घञ्" (३-३-१९)। 3. ಗೃಧ್ರ, ಹದ್ದು. 4. ಪಕ್ಷಿ, ಹಕ್ಕಿ. "भासस्तु भासि गृध्रशकुन्तयोः" हेम०। 5. ಕುಕ್ಕುಟ, ಕೋಳಿ. "भासो भासि समाख्यातो गोष्ठकुक्कुटगृध्रयोः" विश्व०। 6. ಭಾಸಮಹಾಕವಿ. ಈ ಕವಿಯ ಗ್ರಂಥಗಳು ಸಂಸ್ಕೃತವಾಙ್ಮಯದಲ್ಲಿ ಬಹಳ ಪ್ರಸಿದ್ಧವಾಗಿವೆ. ಈತನು ಕವಿಕುಲತಿಲಕನಾದ ಕಾಳಿದಾಸನಿಗಿಂತಲೂ ಪ್ರಾಚೀನನು. ಕಾಳಿದಾಸನು ತನ್ನ ಮಾಲವಿಕಾಗ್ನಿಮಿತ್ರನಾಟಕದಲ್ಲಿ "प्रथितयशसां भाससौमिल्लकविपुत्रादीनां प्रबन्धानतिक्रम्य वर्तमानकवेः कालिदासस्य क्रियायां कथं बहुमानः" ಎಂದು ಭಾಸನನ್ನು ಹೊಗಳಿದ್ದಾನೆ.

ಭಾಸಕವಿಯಿಂದ ರಚಿತವಾದ ಹದಿಮೂರು (13) ನಾಟಕ (ರೂಪಕ) ಗಳು :

(1) ಪ್ರತಿಜ್ಞಾಯೌಗಂಧರಾಯಣ
(2) ಪಂಚರಾತ್ರ
(3) ಸ್ವಪ್ನವಾಸವದತ್ತ
(4) ಚಾರುದತ್ತ
(5) ಪ್ರತಿಮಾ
(6) ಅಭಿಷೇಕ
(7) ಮಧ್ಯಮ ವ್ಯಾಯೋಗ
(8) ದೂತಘಟೋತ್ಕಚ
(9) ದೂತವಾಕ್ಯ
(10) ಬಾಲಚರಿತ
(11) ಅವಿಮಾರಕ
(12) ಕರ್ಣಭಾರ
(13) ಊರುಭಂಗ

(स्त्री०) **भासी ಭಾಸೀ.** ಗರುಡನ ಪತ್ನಿಯರಲ್ಲೊಬ್ಬಳು.

**भासक ಭಾಸಕ** (वि०) 1. ಪ್ರಕಾಶಪಡಿಸುವ, ಹೊಳೆಯುವಂತೆ ಮಾಡುವ. 2. ತಿಳಿಯಪಡಿಸುವ, ತೋರುವಂತೆ ಮಾಡುವ. भासृ (दीप्तौ) "ण्वुल्" (३-१-१३३)।

**भासन ಭಾಸನ** (न०) 1. ಹೊಳೆಯುವುದು, ಪ್ರಕಾಶಿಸುವುದು. भासृ (दीप्तौ) भावे "ल्युट्" (३-३-११५)। 2. ಹೊಳೆಯುವುದು, ತೋರುವುದು.

**भासनीय ಭಾಸನೀಯ** (वि०) 1. ಪ್ರಕಾಶಪಡಿಸಬೇಕಾದ. 2. ಪ್ರಕಾಶಪಡಿಸಲು ಶಕ್ಯವಾದ. 3. ಪ್ರಕಾಶಪಡಿಸಲು ಅರ್ಹವಾದ. 4. ತೋರ್ಪಡಿಸಬೇಕಾದ, ತೋರುವಂತೆ ಮಾಡಬೇಕಾದ. 5. ತೋರುವಂತೆ ಮಾಡಲು ಶಕ್ಯವಾದ. 6. ತೋರುವಂತೆ ಮಾಡಲು ಅರ್ಹವಾದ. भासृ (दीप्तौ) "अनीयर्" (३-१-९६)। "तव्यः" (३-१-९६)। **-सितव्यम् -ಸಿತವ್ಯಮ್.**

**भासमान ಭಾಸಮಾನ** (वि०) 1. ಪ್ರಕಾಶಿಸುತ್ತಿರುವ, ಹೊಳೆಯುತ್ತಿರುವ. 2. ಮನಸ್ಸಿಗೆ ತೋರುತ್ತಿರುವ, ಮನಸ್ಸಿನಲ್ಲಿ ಹೊಳೆಯುತ್ತಿರುವ. भासृ (दीप्तौ) "शानच्" (३-२-१२४)।

**भासित ಭಾಸಿತ** (न०) 1. ಹೊಳೆಯುವುದು, ಪ್ರಕಾಶಿಸುವುದು. 2. ಹೊಳೆಯುವುದು, ಮನಸ್ಸಿಗೆ ತೋರುವುದು. भासृ (दीप्तौ) भावे "क्तः" (३-३-११४)। (वि०) 3. ಪ್ರಕಾಶಗೊಂಡ, ಹೊಳೆದ. 4. ತೋರಿದ, ಮನಸ್ಸಿನಲ್ಲಿ ಹೊಳೆದ. भासृ कर्त० "क्तः" (३-४-७२)।

**भासितवत् ಭಾಸಿತವತ್** (वि०) 1. ಪ್ರಕಾಶಿಸಿದ, ಹೊಳೆದ. 2. ಮನಸ್ಸಿನಲ್ಲಿ ಹೊಳೆದ, ಮನಸ್ಸಿಗೆ ತೋರಿದ. भासृ (दीप्तौ) "क्तवतुः" (३-२-१०२)। स्त्रियां "ङीप्" (४-१-६)। **-वती -ವತೀ.**

**भासन्त ಭಾಸಂತ** (पुं०) 1. ಸೂರ್ಯ. भासृ (दीप्तौ) "झच्" (उ० ३-१२८)। भासन्तः सूर्यः उणा०। 2. ಚಂದ್ರ. 3. ನಕ್ಷತ್ರ. 4. ಭಾಸಪಕ್ಷಿ. (वि०) 5. ಸುಂದರವಾದ ಆಕಾರವುಳ್ಳ. "भासन्तो भे सूर्ये रम्यभासयोः" हेम०। "भासन्तः सुन्दराकारे त्रिषु ना भासपक्षिणि" मेदि०। (स्त्री०) **-न्ती -ನ್ತೀ.** ನಕ್ಷತ್ರ.

**भासु ಭಾಸು** (पुं०) ಸೂರ್ಯ. भासृ (दीप्तौ) "उण्" बाहु०। "भासुः पीतुस्तमोहन्ता" त्रिकाण्ड०।

**भासुर ಭಾಸುರ** (पुं०) 1. ಸ್ಫಟಿಕಶಿಲೆ. 2. ವೀರ, ಶೂರ. (न०) 3. ಕಲ್ಯಾಣ, ಮಂಗಳ, ಶುಭ. "भासुरं भविकं भव्यं कल्याणं श्वोवसीयसम्" वैज०। (वि०) 4. ಪ್ರಕಾಶಮಾನವಾದ, ಹೊಳೆಯುವ. भासृ (दीप्तौ) "घुरच्" (३-२-१६१)। "मणिमयूखचयांशुकभासुराः सुरवधूपरिभुक्तलतागृहाः" किरा० ५-५।

**भासृ - दीप्तौ** (भ्वा० आत्म० अक० से०)। भासते। बभासे। भासिता। भासिष्यते। भासताम्। अभासत। भासेत। अभासिष्ट। ಇತ್ಯಾದಿ.

**भावे :**—भास्यते। भास्यताम्। अभास्यत। ಇತ್ಯಾದಿ.

**कृत्सु :**—भासितव्यः। भासनीयः। भास्यः। भासितः। भासितवान्, -वती। भासमानः। भासितम्। भासनम्।

**भास्कर ಭಾಸ್ಕರ** (पुं०) 1. ಸೂರ್ಯ. भासं करोति—कृञ् "टः" (३-३-२१)। "तोयान्तर्भास्करालीव रेजे

मुनिपरम्परा" कुमा० ६-४९। 2. ಅಗ್ನಿ, ಬೆಂಕಿ. "भास्करोऽग्नौ प्रभाकरे" मेदि०। 3. ಭಾಸ್ಕರಾಚಾರ್ಯರು, ಸಿದ್ಧಾಂತಶಿರೋಮಣಿಯ ಗ್ರಂಥಕಾರರು. 4. ವೀರ. 5. ಪರಮೇಶ್ವರ, ಮಹಾದೇವ. (न०) 6. ಸ್ವರ್ಣ, ಚಿನ್ನ.

**भास्करद्युति ಭಾಸ್ಕರದ್ಯುತಿ** (पुं०) 1. ವಿಷ್ಣು. परपरिभावुकप्रभावत्वात् भास्करस्येव द्युतिरस्य। "परप्रभावाभिभवलक्षणद्युतिमांश्च यः। स भास्करद्युतिः प्रोक्तो नेत्रवैमल्यदो मनुः" इति निरुक्तिः। "चन्द्रांशुभास्करद्युतिः" वि० स०। (स्त्री०) 2. ಸೂರ್ಯನ ಪ್ರಕಾಶ, ಬಿಸಿಲು. भास्करस्य द्युतिः।

**भास्करावर्त ಭಾಸ್ಕರಾವರ್ತ** (पुं०) ತಲೆನೋವಿನ ಒಂದು ಭೇದ, ಸೂರ್ಯೋದಯವಾದ ಮೇಲೆ ಬರುವ ಒಂದು ವಿಧ ತಲೆನೋವು. ಈ ರೋಗವು ಸೂರ್ಯೋದಯವಾದ ನಂತರ ಪ್ರಾರಂಭಿಸಿ ಸೂರ್ಯನು ಬೆಳೆದಂತೆಲ್ಲಾ ಇದೂ ಅಧಿಕವಾಗಿ ಸೂರ್ಯಾಸ್ತವಾದ ಕೂಡಲೆ ಶಮನವಾಗುವುದು. "सूर्योदयं या प्रति मन्दमन्दमक्षिभ्रुवं रुक् समुपैति गाढम्। विवर्धते चांशुमता सहैव सूर्यापवृत्तौ विनिवर्तते च। शीतेन शान्ति लभते कदाचित् उष्णेन जन्तुः सुखमाप्नुयाच्च। तं भास्करावर्तमुदाहरन्ति सर्वात्मकं कष्टतमं विकारम्" सुश्रुत० उत्तरतं० २५-११, १२।

**भास्करि ಭಾಸ್ಕರಿ** (पुं०) ಸೂರ್ಯಪುತ್ರ (1) ವೈವಸ್ವತ ಮನು. (2) ಶನಿಗ್ರಹ ಮತ್ತು (3) ಕರ್ಣ. भास्करस्यापत्यम् "इञ्" (४-१-९५)।

**भास्वत् ಭಾಸ್ವತ್** (पुं०) 1. ಸೂರ್ಯ. भासःसन्त्यस्य "मतुप्" (५-२-९४)। "नृपनीलमणीगृहत्विषामुपवेश्य भयेन भास्वतः" नैष० २-७५। 2. ಅರ್ಕವೃಕ್ಷ, ಎಕ್ಕದ ಗಿಡ. 3. ಚಂದ್ರ. (वि०) 4. ಪ್ರಕಾಶಿಸುವ, ಹೊಳೆಯುವ. "भास्वन्ति रत्नानि महौषधीश्च पृथूपदिष्टां दुदुहुर्धरित्रीम्" कुमा० १-२। 5. ತೇಜಶ್ಶಾಲಿಯಾದ. "न केवलं दरीसंस्थं भास्वतां दर्शनेन वः। अन्तर्गतमपास्तं मे रजसोऽपि परं तमः" कुमा० ६-६०। "भास्वानिन्दौ भास्वरेऽर्के" वैज०। स्त्रियां "ङीप्" (४-१-६)। **-ती -ತೀ.**

**भास्वद्वंश ಭಾಸ್ವದ್ವಂಶ** (पुं०) ಸೂರ್ಯವಂಶ.

**भास्वर ಭಾಸ್ವರ** (पुं०) 1. ಸೂರ್ಯ. 2. ಅಗ್ನಿ. 3. ಹಗಲು. 4. ಎಕ್ಕದ ಗಿಡ. भासृ (दीप्तौ) "वरच्" (३-२-१७५)। (पुं० ब० व०) 5. ಗಣದೇವತೆಗಳು. "आदित्यविश्ववसवस्तुषिताभास्वरानिलाः" अम०। (वि०) 6. ಪ್ರಕಾಶಿಸುವ, ಹೊಳೆಯುವ.

**भिक्षण ಭಿಕ್ಷಣ** (न०) ಬೇಡುವುದು, ಯಾಚಿಸುವುದು. भिक्ष (भिक्षायामलाभे लाभे च) "ल्युट्" (३-३-११५)।

**भिक्षमाण ಭಿಕ್ಷಮಾಣ** (वि०) ಯಾಚಿಸುತ್ತಿರುವ, ಬೇಡುತ್ತಿರುವ. भिक्ष (भिक्षायामलाभे लाभे च) "शानच्" (३-२-१२४)। "संदृश्य शरणं शून्यं भिक्षमाणो वनं प्रियाम्। प्राणान् दुहन्निवात्मानं शोकं चित्तमवारुधत्" भट्टि० ६-९।

**भिक्षा ಭಿಕ್ಷಾ** (स्त्री०) 1. ಭಿಕ್ಷೆ, ತಿರುಪೆ, ಯಾಚನೆ. भिक्ष (भिक्षायामलाभे लाभे च) "अः" (३-३-१०३)। "वाणिज्ये वसते लक्ष्मीः तदर्धं कृषिकर्मणि। तदर्धं राजसेवायां भिक्षायां नैव नैव च"। 2. ಭಿಕ್ಷೆ, ಉಪಾದಾನ, ಬೇಡಿ ತಂದ ವಸ್ತು. ಬ್ರಹ್ಮಚಾರಿಗಳು ಮತ್ತು ಯತಿಗಳು ಗೃಹಸ್ಥರ ಮನೆಯಲ್ಲಿ ಭಿಕ್ಷೆ ತೆಗೆದು ಭೋಜನ ಮಾಡಬೇಕು. ಗೃಹಸ್ಥನೂ ಅವರಿಗೆ ಭಿಕ್ಷೆ ನೀಡಬೇಕು. "भिक्षां च भिक्षवे दद्याद्विधिवत् ब्रह्मचारिणे" मनु० ३-९४। 3. ವೇತನ, ಕೂಲಿ, ಸಂಬಳ. 4. ಸೇವೆ. "भिक्षा सेवाप्रार्थनयोर्भृतौ भिक्षितवस्तुषु" हेम०।

**भिक्षाक ಭಿಕ್ಷಾಕ** (पुं०) 1. ಭಿಕ್ಷುಕ, ಯಾಚಕ, ಭಿಕ್ಷೆ ಬೇಡುವವನು. भिक्ष (भिक्षायामलाभे लाभे च) "षाकन्" (३-२-१५५)। 2. ಯತಿ, ಸಂನ್ಯಾಸಿ. 3. ಬ್ರಹ್ಮಚಾರಿ. (स्त्री०) **-की -ಕೀ.** ಭಿಕ್ಷುಕಿ, ಭಿಕ್ಷೆ ಬೇಡುವ ಹೆಂಗಸು.

**भिक्षाचर ಭಿಕ್ಷಾಚರ** (पुं०) ಭಿಕ್ಷುಕ, ಭಿಕ್ಷೆ ಬೇಡುವವನು. भिक्षां चरति—चर (गतिभक्षणयोः) "टः" (३-२-१७)।

**भिक्षाटन ಭಿಕ್ಷಾಟನ** (न०) 1. ಭಿಕ್ಷೆಗಾಗಿ ತಿರುಗುವುದು, ಯಾಚನೆಗಾಗಿ ಅಲೆದಾಡುವುದು. 2. ಭಿಕ್ಷೆಗಾಗಿ ಸಂಚರಿಸುವುದು, ಯತಿ ಮತ್ತು ಬ್ರಹ್ಮಚಾರಿಗಳು ಭಿಕ್ಷಾನ್ನಕ್ಕಾಗಿ ಮನೆ ಮನೆಗೆ ಹೋಗುವುದು. भिक्षायै अटनम्। "अर्धं दानववैरिणा गिरिजयाप्यर्धं शिवस्याहृतं देवेत्थं जगतीतले स्मरहराभावे समुन्मीलति। गङ्गा सागरमम्बरं शशिकला नागाधिपः क्ष्मातलं सर्वज्ञत्वमधीश्वरत्वमगमत्त्वां मां च भिक्षाटनम्"।

**भिक्षान्न ಭಿಕ್ಷಾನ್ನ** (न०) ಭಿಕ್ಷೆ ಬೇಡಿ ತಂದ ಅನ್ನ.

**भिक्षार्थिन् ಭಿಕ್ಷಾರ್ಥಿನ್** (पुं०) ಭಿಕ್ಷೆ ಬೇಡುವವನು, ಯಾಚಕ. भिक्षामर्थयते—अर्थ (याच्ञायाम्) "णिनिः" (३-१-१३४)।

**भिक्षावृत्ति ಭಿಕ್ಷಾವೃತ್ತಿ** (स्त्री०) 1. ಭಿಕ್ಷೆಯಿಂದ ಮಾಡುವ ಜೀವನ, ಸಂನ್ಯಾಸಿ ಮತ್ತು ಬ್ರಹ್ಮಚಾರಿಯ ಜೀವನ. 2. ಯಾಚನೆಯಿಂದ ಮಾಡುವ ಜೀವನ.

**भिक्षाशिन् ಭಿಕ್ಷಾಶಿನ್** (वि०) ಭಿಕ್ಷೆ ಬೇಡಿ ತಿನ್ನುವವನು, ಭಿಕ್ಷುಕ. भिक्षामश्नाति — अश (भोजने) "णिनिः" (३-२-७८)।

**भिक्षित ಭಿಕ್ಷಿತ** (वि०) ಯಾಚಿಸಲ್ಪಟ್ಟ, ಬೇಡಲ್ಪಟ್ಟ. भिक्ष (भिक्षायामलाभे लाभे च) "क्तः" (३-२-१०२)। "भिक्षिता पातमती सुकृतं यत्तत्परिश्रमविदः स्वविभूतौ" नैष० ५-२१।

**भिक्षु ಭಿಕ್ಷು** (पुं०) 1. ಯತಿ, ಸಂನ್ಯಾಸಿ. 2. ಬ್ರಹ್ಮಚಾರಿ. भिक्ष (भिक्षायाम्) "उः" (३-२-१६८)। "भिक्षां च भिक्षवे दद्याद्विधिवत् ब्रह्मचारिणे" मनु० ३-९४। 3. ಸಂನ್ಯಾಸ, ನಾಲ್ಕನೆಯ ಆಶ್ರಮ. 4. ಬೌದ್ಧ ಸಂನ್ಯಾಸಿ. "चीवरी श्रमणो भिक्षुर्वल्यरचैत्रः" त्रिकाण्ड०।

**भिक्षुक ಭಿಕ್ಷುಕ** (पुं०) ಭಿಕ್ಷೆ ಬೇಡುವವನು, ಯಾಚನೆ ಮಾಡುವವನು, ಭಿಕ್ಷೆಯಿಂದ ಜೀವಿಸುವವನು. भिक्ष (भिक्षायाम्) "उकन्" बाहु०। "आकीर्णं भिक्षुकैर्वान्यैरगारमुपसंव्रजेत्" मनु० ६-५१। "ब्राह्मणं भिक्षुकं वापि भोजनार्थमुपस्थितम्। ब्राह्मणैरभ्यनुज्ञातः शक्तितः प्रतिपूजयेत्" मनु० ३-२४३। ಬ್ರಹ್ಮಚಾರಿ, ಸಂನ್ಯಾಸಿ, ವಿದ್ಯಾರ್ಥಿ, ಗುರುಪೋಷಕ (ಭಿಕ್ಷಾನ್ನದಿಂದ ಗುರುವನ್ನು ಕಾಪಾಡುವವನು), ಅಧ್ವಗ (ಪ್ರಯಾಣದಲ್ಲಿದ್ದು ಮನೆಗೆ ಬಂದವನು), ಕ್ಷೀಣವೃತ್ತಿ (ಜೀವನೋಪಾಯವಿಲ್ಲದವನು) ಈ ಆರು ಮಂದಿ ಭಿಕ್ಷುಕರು. "ब्रह्मचारी यतिश्चैव विद्यार्थी गुरुपोषकः। अध्वगः क्षीणवृत्तिश्च षडेते भिक्षुकाः स्मृताः"।

**भिक्षुसंघाटी ಭಿಕ್ಷುಸಂಘಾಟೀ** (स्त्री०) ಚೀವರ, ಭಿಕ್ಷುಗಳ ವಸ್ತ್ರ. भिक्षु + सम् + घट "अण्" (३-२-१)। गौरा० "ङीष्" (४-१-४१)। "पुरीषं कौक्कुटं केशान् चर्म सर्पत्वचं तथा। जीर्णं च भिक्षुसंघाटीं धूमनायोपकल्पयेत्" सुश्रुत० उत्तरतं० ३३-६।

**भित्त ಭಿತ್ತ** (न०) ಶಕಲ, ತುಂಡು, ಚೂರು. भिदिर् (विदारणे) "क्तः" (३-२-१०२)। नत्वाभावः निपा० (८-२-५९)।

**भित्ति ಭಿತ್ತಿ** (स्त्री०) 1. ಕುಡ್ಯ, ಗೋಡೆ. भिद्यते—भिदिर् (विदारणे) "क्तिन्" (३-३-९४)। "ज्योत्स्नाशंकामिह वितरति हंसश्येनीमध्येऽप्यह्नः स्फटिकरजतभित्तिच्छाया" किरा० ५-३१। 2. ತುಂಡು, ಶಕಲ, ಚೂರು. 3. ಆಶ್ರಯ, ಪ್ರದೇಶ, ಸ್ಥಾನ. "सैवेयं मम चित्रकर्मरचना भित्तिं विना वर्तते" मुद्रा० २-४। 4. ಅವಕಾಶ, ಬಿರುಕು, ಸಂದು. 5. ಪ್ರಕಾಶ. 6. ಭೇದನ, ಒಡೆಯುವಿಕೆ, ಮುರಿಯುವಿಕೆ. "भित्तिः कुड्ये भेदने स्यात् अवकाशप्रकाशयोः" नानार्थर०। "भित्तिः कुड्ये प्रदेशे च" हेम०।

**भित्तिका ಭಿತ್ತಿಕಾ** (स्त्री०) 1. ಕುಡ್ಯ, ಗೋಡೆ. भिदिर् (विदारणे) "तिकन्" (उ० ३-१४७)। 2. ಗೌಳಿ, ಹಲ್ಲಿ.

**भित्तिचोर ಭಿತ್ತಿಚೋರ** (पुं०) ಗೋಡೆಯಲ್ಲಿ ಕನ್ನ ಕೊರೆದು ಕದಿಯುವವನು. भित्त्या भित्तिभेदनेन चोरयति—चुर (स्तेये) + णिच् "अच्" (३-१-१३४)।

**भित्तिपातन ಭಿತ್ತಿಪಾತನ** (पुं०) ಹೆಗ್ಗಣ. भित्तिं पातयति —पत्लृ (गतौ) + णिच् "ल्युः" (३-१-१३४)।

**भिद् ಭಿದ್** (स्त्री०) 1. ಭೇದ, ತಾರತಮ್ಯ, ವ್ಯತ್ಯಾಸ. भिदिर् (विदारणे) "क्विप्" (वा० ३-३-९४)। 2. ಭೇದನ, ತುಂಡುಮಾಡುವುದು, ಒಡೆಯುವುದು. 3. ಭೇದ, ಬಗೆ, ವಿಧ. (वि०) 4. ಒಡೆಯುವ, ಭೇದಿಸುವ, ತುಂಡುಮಾಡುವ (ಸಮಾಸದ ಕೊನೆಯಲ್ಲಿ). गोत्रभिद्, बलभिद् ಇತ್ಯಾದಿ. "खण्डितविग्रहं बलभिदो धनुरिह विविधाः" किरा० ५-४३। 5. ಅಗೆಯುವ, (ನೆಲವನ್ನು) ತೋಡುವ. "तुरगविचयव्यग्रानुर्वीभिदः सगराध्वरे" उ० रा० १-२३।

**भिदक ಭಿದಕ** (पुं०) 1. ಖಡ್ಗ, ಕತ್ತಿ. भिनत्ति—भिदिर् (विदारणे) "क्वुन्" (उ० २-३७)। (न०) 2. ವಜ್ರ. 3. ಇಂದ್ರನ ವಜ್ರಾಯುಧ.

**भिदा ಭಿದಾ** (स्त्री०) 1. ಭೇದ, ವ್ಯತ್ಯಾಸ, ತಾರತಮ್ಯ. भिदिर् (विदारणे) "अङ्" (३-३-१०४)। 2. ಭೇದನ, ಒಡೆಯುವಿಕೆ, ಭಾಗಮಾಡುವಿಕೆ. "विदूरपातेन भिदामुपेयुषश्च्युताः प्रवाहादभितः प्रसारिणः" किरा० ८-१०। 3. ಭೇದ, ವಿಧ, ಬಗೆ. 4. ಬೇರೆಯಾಗುವಿಕೆ, ಪ್ರತ್ಯೇಕವಾಗುವಿಕೆ. 5. ಧ್ವನಿಯು.

**भिदि ಭಿದಿ** (पुं०) ವಜ್ರಾಯುಧ. भिनत्ति—भिदिर् (विदारणे) "इः" (उ० ४-१४२)। भिदिर्वज्रम् सि० कौ०।

**भिदिर्—विदारणे** (रुधा० उभ० सक० अनि०)। भिनत्ति। भिन्ते। बिभेद, बिभिदे। भेत्ता। भिनत्तु, भिन्ताम्। अभिनत्, अभिन्त। ಇತ್ಯಾದಿ.

कर्मणि:—भिद्यते। भिद्यताम्। अभिद्यत। भिद्येत। इत्यादि.

कृत्सु:—भेत्तव्यम्। भेदनीयम्। भेद्यम्। भित्त्वा। भिन्दन्, —न्ती। भिन्दानः। भिन्नम्। भेदनम्। 1. ಭೇದಿಸು, ಒಡೆ, ಚೂರುಮಾಡು, ತುಂಡುಮಾಡು. "ये सत्यमेव न गुरून् प्रतिमानयन्ति तेषां कथं नु हृदयं न भिनत्ति लज्जा" मुद्रा० ३-३३। 2. ವಿಕಾಸಹೊಂದು, ಅರಳು. "सूर्यांशुभिर्भिन्नमिवारविन्दम्" कुमा० १-३२। 3. ಪ್ರತ್ಯೇಕವಾಗು, ಬೇರೆ ಬೇರೆಯಾಗು. "यद्वायुरन्विष्ट-मृगैः किरातैरासेव्यते भिन्नशिखण्डिबर्हः" कुमा० १-१५। 4. ಭಂಗಮಾಡು, ಮೀರಿ, ಉಲ್ಲಂಘಿಸು, ಅತಿಕ್ರಮಿಸು. "विद्वानपि तयोर्द्वास्थः समयं लक्ष्मणोऽभिनत्" रघु० १५-९४। 5. ಚದರಿಹೋಗು, ದಿಕ್ಕಾಪಾಲಾಗಿ ಓಡಿಹೋಗು. "मूर्तो विघ्नस्तपस इव नो भिन्नसारङ्गयूथः" शाकु० १-२९। 6. ಸಡಿಲಿಸು, ಶಿಥಿಲವಾಗಿ ಮಾಡು. "शनैः कृतप्राणविमुक्तिरीशः पर्यङ्कबन्धं निबिडं बिभेद" कुमा० ३-५९। 7. ವ್ಯತ್ಯಾಸ ಹೊಂದು, ಬದಲಾಗು. "न कारणात् स्वाद्बिभिदे कुमारः प्रवर्तितो दीप इव प्रदीपात्" रघु० ५-३७। 8. ಹೊರಗೆಡಹು, ಬಯಲು ಮಾಡು, ಬಹಿರಂಗಪಡಿಸು. "षट्कर्णो भिद्यते मन्त्रः चतुष्कर्णः स्थिरो भवेत्। तस्मात्सर्वप्रयत्नेन षट्कर्णं वर्जयेत् सुधीः" पञ्चतं० १-१०८। 9. ಬದಲಾಯಿಸು, ಮಾರ್ಪಡಿಸು. "न दुर्वहश्रोणिपयोधरार्ता भिन्दन्ति मन्दां गतिमश्वमुख्यः" कुमा० १-११। 10. ಕದಲಿಸು, ಸ್ಥಾನಪಲ್ಲಟಮಾಡು, ಉಚ್ಚಾಟನೆಮಾಡು. "आनन्दजः शोकजमश्रु बाष्पस्तयोरशीतं शिशिरो बिभेद" रघु० १४-३।

**भिदिर ಭಿದಿರ** (न०) ಇಂದ್ರನ ವಜ್ರಾಯುಧ. भिदिर् (विदारणे) "किरच्" (उ० १-५१)। भिदिरं वज्रम् सि० कौ०। "शतधारं शतारं चाश्रोत्थं भिदिरमम्बुजम्" त्रिकाण्ड०। भिदिर् "कुः" (उ० १-२४)। **भिदुः ಭಿದುಃ**. "वज्राशनिर्भिदुर्भिद्रः" त्रिकाण्ड०। भिदिर् "रक्" (उ० २-१३)। **भिद्रः ಭಿದ್ರಃ**.

**भिदुर ಭಿದುರ** (पुं०) 1. ಪ್ಲಕ್ಷವೃಕ್ಷ, ಬಸುರಿಮರ. (न०) 2. ಇಂದ್ರನ ವಜ್ರಾಯುಧ. भिनत्ति—भिदिर् (विदारणे) "कुरच्" (३-२-१६२)। "कुलिशं भिदुरं पविः" अम०। (वि०) 3. ಮಿಶ್ರವಾದ, ಬೆರೆತಿರುವ. "नीलाश्मद्युतिभिदुराम्भसोऽपरत्र" माघ० ४-२६। 4. ಭೇದಿಸುವ, ಒಡೆಯುವ.

**भिद्य ಭಿದ್ಯ** (पुं०) ನದ, ಗಂಡುಹೊಳೆ. भिनत्ति तीरम् —भिदिर् (विदारणे) "क्यप्" (३-१-११५)। निपा०। ಪೂರ್ವದಿಕ್ಕಿಗೆ ಹರಿಯುವ ಹೊಳೆ ನದಿ. ಪಶ್ಚಿಮ ದಿಕ್ಕಿಗೆ ಹರಿಯುವ ಹೊಳೆ ನದ. "तोयदागम इवोद्ध्यभिद्ययोर्नामधेयसदृशं विचेष्टितम्" रघु० ११-८।

**भिन्दत् ಭಿಂದತ್** (वि०) 1. ಒಡೆಯುತ್ತಿರುವ, ಸೀಳುತ್ತಿರುವ. भिदिर् (विदारणे) "शतृ" (३-२-१२४)। 2. ಅತಿಕ್ರಮಿಸುತ್ತಿರುವ, ಉಲ್ಲಂಘಿಸುತ್ತಿರುವ, ಮೀರುತ್ತಿರುವ. "निहतश्च स्थितिं भिन्दन् दानवोऽसौ बलद्विषा" भट्टि० ७-६८। 3. ಹೊರಗೆಡಹುತ್ತಿರುವ, ಬಯಲು ಮಾಡುತ್ತಿರುವ. 4. ಸಡಿಲಿಸುತ್ತಿರುವ. 5. ಕದಲಿಸುತ್ತಿರುವ. 6. ಮಾರ್ಪಡಿಸುತ್ತಿರುವ. 7. ಚದರಿಸುತ್ತಿರುವ. 8. ಬೇರ್ಪಡಿಸುತ್ತಿರುವ. "शानच्" **भिन्दानः ಭಿಂದಾನಃ**.

**भिन्दि ಭಿಂದಿ** (पुं०) ಒಡೆಯುವುದು, ಸೀಳುವುದು.

**भिन्दिपाल ಭಿಂದಿಪಾಲ** (पुं०) 1. ಕೈಯಿಂದ ಎಸೆಯಬಹುದಾದ ಸಣ್ಣ ಈಟಿ. 2. ಕವಣೆ, ದೂರಕ್ಕೆ ಕಲ್ಲನ್ನು ಎಸೆಯುವ ಹಗ್ಗ ಅಥವಾ ಚರ್ಮದಿಂದ ಮಾಡಿದ ಒಂದು ಸಾಧನ.

**भिन्न ಭಿನ್ನ** (वि०) 1. ಮಿಶ್ರವಾದ, ಬೆರೆತಿರುವ. भिदिर् (विदारणे) "क्तः" (३-४-७२)। "भिन्नेषु रत्नकिरणैः किरणेष्विवेन्दोरुच्चावचैरुपगतेषु सहस्रसंख्याम्" माघ० ४-४६। 2. ಬೇರೆಯಾದ, ವಿಯುಕ್ತವಾದ. "विच्छित्तिर्नवचन्दनेन वपुषो भिन्नोऽधरोऽलक्तकैः" माघ० १६-८४। 3. ಅನೇಕ ವಿಧವಾದ, ನಾನಾ ಬಗೆಯ. "संमूर्च्छन्नलघुविमानरन्ध्रभिन्नः प्रस्थानं समभिदधे मृदङ्गनादः" किरा० ७-१। 4. ಬೇರೆಯಾದ, ಬೇರೆ ರೀತಿಯಾದ. "भिन्नस्वरमुखवर्णः शङ्कितदृष्टिः समुत्पतिततेजाः" पञ्चतं० १-२१०। 5. ವಿಕಾಸಹೊಂದಿದ, ಅರಳಿದ. "नवोषसा भिन्नमिवैकपङ्कजम्" शाकु० ७-१६। 6. ಚದರಿಹೋದ, ದಿಕ್ಕಾಪಾಲಾಗಿ ಓಡಿಹೋದ. "मूर्तो विघ्नस्तपस इव नो भिन्नसारङ्गयूथः" शाकु० १-२९। 7. ಒಡೆಯಲ್ಪಟ್ಟ, ಸೀಳಲ್ಪಟ್ಟ. "भिन्नोरस्कौ शत्रुणाकृष्य दूरात् आसन्नत्वात्कौचिदेकेषुणैव" माघ० १८-६५। 8. ಶಿಥಿಲವಾದ, ಸಡಿಲವಾದ. 9. ಬದಲಾಯಿಸಲ್ಪಟ್ಟ, ಮಾರ್ಪಡಿಸಲ್ಪಟ್ಟ. 10. ವ್ಯತ್ಯಾಸ ಹೊಂದಿದ, ಬದಲಾವಣೆ ಹೊಂದಿದ. 11. ಒಡೆದಿರುವ, ಮುರಿದಿರುವ. "भिन्नानीक इव ध्यायन्" भट्टि० ५-८८।

**भिन्नक ಭಿನ್ನಕ** (पुं०) 1. ಬೌದ್ಧ. (वि०) 2. ಸ್ವಲ್ಪ ವ್ಯತ್ಯಾಸ ಹೊಂದಿದ.

**भिन्नकट ಭಿನ್ನಕಟ** (वि०) ಗಂಡಸ್ಥಳದಲ್ಲಿ ಮದೋದಕ ಸುರಿಯುತ್ತಿರುವ, ಮದಿಸಿರುವ. भिन्नः स्रवन्मदः कटो यस्य। "भेजे भिन्नकटैर्नागैरन्यानुपरुरोध यैः" रघु० ४-८३।

**भिन्नकुम्भ ಭಿನ್ನಕುಂಭ** (वि०) 1. ಜಾಮೀನಿನಿಂದ ಬಿಡುಗಡೆ ಹೊಂದಿ ಸ್ವತಂತ್ರನಾಗಿರುವ. 2. ಸಾಲ ತೀರಿಸಿ ಜೀತದಿಂದ ಬಿಡುಗಡೆ ಹೊಂದಿದ. "स्वस्कन्दो भिन्नकुम्भश्च भुजिष्यो दास्यमोचितः" वैज०।

**भिन्नकूट ಭಿನ್ನಕೂಟ** (वि०) ಉಪನಾಯಕನಿಂದ ಬೇರ್ಪಟ್ಟ ಸೈನ್ಯ, ಉಪನಾಯಕನನ್ನು ಕಳೆದುಕೊಂಡ ಸೈನ್ಯ. "सैन्यं तु भिन्नकूटं तन्नष्टावान्तरनायकम्" वैज०।

**भिन्नक्रम ಭಿನ್ನಕ್ರಮ** (वि०) ಕ್ರಮವಿಲ್ಲದ, ಕ್ರಮದ ಬದಲಾವಣೆ ಹೊಂದಿದ, ವ್ಯತ್ಯಾಸ ಹೊಂದಿದ ಕ್ರಮವುಳ್ಳ. भिन्नः क्रमो यत्र। ವಾಕ್ಯ ಅಥವಾ ಶೈಲಿಯು ಕ್ರಮಭಂಗ ಹೊಂದಿದರೆ "भिन्नक्रम" ವಾಗುವುದು. ಇದಕ್ಕೆ "ಭಗ್ನಪ್ರಕ್ರಮ" ಎಂದು ಹೆಸರು. ಇದೊಂದು ಕಾವ್ಯದೋಷ. "एवमुक्तो मन्त्रिमुख्यैः रावणः प्रत्यभाषत" ಎಂಬಲ್ಲಿ ವಚ ಧಾತುವಿನಿಂದ ಪ್ರಾರಂಭವಾದ ವಾಕ್ಯವು ಆ ಧಾತುವಿನಿಂದಲೇ ಕೊನೆಗೊಳ್ಳದೆ ಭಷ ಧಾತುವಿನಿಂದ ಪ್ರತಿವಚನವು ಹೇಳಲ್ಪಟ್ಟಿರುವುದರಿಂದ ಇಲ್ಲಿ ಭಗ್ನ ಪ್ರಕ್ರಮ ರೂಪವಾದ ಕಾವ್ಯದೋಷವಿರುವುದು.

**भिन्नदेश ಭಿನ್ನದೇಶ** (पुं०) 1. ಬೇರೆ ಬೇರೆ ಪ್ರದೇಶ, ಬೇರೆ ಬೇರೆ ಸ್ಥಳ. भिन्नो देशः। (वि०) 2. ಬೇರೆ ಬೇರೆ ಸ್ಥಳವುಳ್ಳ, ಬೇರೆ ಬೇರೆ ಸ್ಥಳದ ಸಂಬಂಧವಿರುವ. भिन्नो देशः ययोः। "कृत्ययोर्भिन्नदेशत्वाद्द्वैधीभवति मे मनः" शाकु० २-१७।

**भिन्नप्रकार ಭಿನ್ನಪ್ರಕಾರ** (वि०) ಬೇರೆ ವಿಧವಾದ, ಬೇರೆ ರೀತಿಯದಾದ. भिन्नः प्रकारो यस्य।

**भिन्नदेह ಭಿನ್ನದೇಹ** (वि०) ಗಾಯಗೊಂಡ ಮೈಯುಳ್ಳ, ಮುರಿದ ದೇಹವುಳ್ಳ.

**भिन्नमर्मन् ಭಿನ್ನಮರ್ಮನ್** (वि०) ಹೃದಯದಲ್ಲಿ ಏಟು ಬಿದ್ದಿರುವ, ಮರ್ಮಸ್ಥಾನದಲ್ಲಿ ಗಾಯಗೊಂಡಿರುವ.

**भिन्नमर्याद ಭಿನ್ನಮರ್ಯಾದ** (वि०) 1. ಎಲ್ಲೆಮೀರಿದ, ಹದ್ದುಮೀರಿದ, ಉಲ್ಲಂಘಿಸಿದ, ಅತಿಕ್ರಮಿಸಿದ. भिन्ना मर्यादा येन। 2. ಸ್ವೇಚ್ಛೆಯಿಂದಿರುವ, ತಹಬಂದಿಯಲ್ಲಿಲ್ಲದ, ಅಂಕೆಯಲ್ಲಿಲ್ಲದ.

**भिन्नरुचि ಭಿನ್ನರುಚಿ** (वि०) 1. ಬೇರೆ ಬೇರೆ ಅಭಿರುಚಿಯುಳ್ಳ. भिन्ना रुचिः यस्य। "नाट्यं भिन्नरुचेर्जनस्य बहुधाप्येकं समाराधकम्" माल० १-४। 2. ಬೇರೆ ಬೇರೆ ವಸ್ತುವಿನಲ್ಲಿ ಪ್ರೀತಿಯುಳ್ಳ, "नासौ न काम्यो न च वेद सम्यक् द्रष्टुं न सा भिन्नरुचिर्हि लोकः" रघु० ६-३०।

**भिन्नलिङ्ग ಭಿನ್ನಲಿಂಗ** (पुं०) ಬೇರೆ ಬೇರೆ ಲಿಂಗದ ಶಬ್ದಗಳು. भिन्नं लिङ्गं येषाम्। "कृतोऽत्र भिन्नलिङ्गानामनुक्तानां क्रमादृते" अम०।

**भिन्नवृत्त ಭಿನ್ನವೃತ್ತ** (वि०) 1. ಬೇರೆ ಬೇರೆ ಜೀವನೋಪಾಯವುಳ್ಳ. भिन्नं वृत्तं यस्य। 2. ಹೀನವಾದ ಜೀವನವುಳ್ಳ, ಕಷ್ಟದ ಜೀವನವುಳ್ಳ. 3. ಛಂದೋನಿಯಮಕ್ಕೆ ವಿರುದ್ಧವಾದ ವೃತ್ತವುಳ್ಳ. 4. ಬೇರೆ ಬೇರೆ ಆಚಾರವುಳ್ಳ.

**भिन्नवृत्ति ಭಿನ್ನವೃತ್ತಿ** (वि०) 1. ಬೇರೆ ಬೇರೆ ಜೀವನೋಪಾಯವುಳ್ಳ. 2. ನಿಕೃಷ್ಟವಾದ ಜೀವನವುಳ್ಳ. भिन्ना वृत्तिर्यस्य।

**भिया ಭಿಯಾ** (स्त्री०) ಭಯ, ಹೆದರಿಕೆ. भीयते — ञि भी (भये) "अङ्" (३-३-१०४)। "तङ्कोऽस्त्री भीर्भिया भीतिः साध्वसं भयनं भयम्" वैज०।

**भिल्ल ಭಿಲ್ಲ** (पुं०) ಕಿರಾತ, ಬೇಡರವನು, ಒಬ್ಬ ಬೆರಕೆ ಜಾತಿಯವನು. "पुलिन्दाः शबरा भिल्लाः किराताश्चान्त्यजाः पृथक्" त्रिकाण्ड०। "देशे देशे जडिमकुरङ्गास्तेजोभल्लैर्दिनकरभिल्ले" चं० भा०।

**भिल्लतरु ಭಿಲ್ಲತರು** (पुं०) ಲೋಧ್ರಗಿಡ.

**भिल्लभूषण ಭಿಲ್ಲಭೂಷಣ** (पुं०) ಗುಲಗಂಜಿ ಗಿಡ.

**भिषज् ಭಿಷಜ್** (पुं०) 1. ವೈದ್ಯ, ರೋಗದ ಚಿಕಿತ್ಸೆ ನಡೆಸುವವನು. बिभेत्यस्मात् रोगः—ञि भी (भये) "अजिः" प्रकृतेः षुगागमश्च (उ० १-१३५)। "आप्तेन तक्ष्णा भिषजेव तत्क्षणं प्रचक्रमे लङ्घनपूर्वकः क्रमः" माघ० १२-२५। 2. ವಿಷ್ಣು, ನಾರಾಯಣ. भिषज्यति सम्यग्विदितनिदानतया चिकित्सति। "भवरोगनिदानज्ञो योऽसौ भिषगुदीरितः" इति निरुक्तिः। "त्रिसामा सामगः साम निर्वाणं भेषजं भिषक्" वि० स०। 3. ಔಷಧ.

**भिस्सटा ಭಿಸ್ಸಟಾ** (स्त्री०) ಸೀದುಹೋದ ಅನ್ನ. भिस्सामन्नं टीकते—टीकृ (गतौ) "डः" (३-२-१०१)। "भिस्सटा दग्धिका" अम०।

**भिस्सा ಭಿಸ್ಸಾ** (स्त्री०) ಅನ್ನ. बभस्ति — भस (दीप्तौ) "सः" बाहु०। इत्वम् (७-४-७८)।

**भिस्सिटा ಭಿಸ್ಸಿಟಾ** (स्त्री०) ಸೀದುಹೋದ ಅನ್ನ. भिस्सां टीकते — पृषो० । "दग्धान्नं भिस्सिटा झिल्ली" वैज० ।

**त्रि भी – भये** (जुहो० पर० अक० अनि०) । बिभेति बिभित: बिभीत: बिभ्यति । बिभाय । भेता । भेष्यति । बिभेतु । अबिभेत् । बिभियात् । ಇತ್ಯಾದಿ. ಹೆದರು, ಭಯಪಡು, ಅಂಜು. "निर्जरा: प्रतिनिशामयमाना: बिभ्यति स्म जगदुश्च जयोक्तिम्" याद० २१-४४ ।

**भावे :**—भीयते । बिभयां चक्रे, –बभूवे, –आसे । बिभ्ये । भायिता, भेता । भायिष्यते, भेष्यते । भीयताम् । भीयेत ಇತ್ಯಾದಿ.

**णिचि :**—भापयति, भीषयते, भाययति, –ते ಇತ್ಯಾದಿ.

**कृत्सु :**—भेतव्यम् । भयनीयम् । भेयम् । भीत: । भीतवान्, –वती । बिभ्यत्, –ती । भीतम् । भयनम् । भीत्वा । बिभीय । भायंभायम् । भीत्वा भीत्वा ।

**भी ಭೀ** (स्त्री०) ಭಯ, ಹೆದರಿಕೆ, ಅಂಜಿಕೆ. त्रि भी (भये) "क्विप्" (वा० ३-३-९४)। "स चिन्तयत्येव भियस्त्वदेष्यतीरहो दुरन्ता बलवद्विरोधिता" किरा० १-२३ ।

**भीकर ಭೀಕರ** (वि०) ಭಯವನ್ನುಂಟುಮಾಡುವ, ಭಯವನ್ನು ಹುಟ್ಟಿಸುವ ಸ್ವಭಾವದ. भियं करोति — कृञ् (करणे) "ट:" (३-२-२०) ।

**भीत ಭೀತ** (न०) 1. ಭಯ, ಹೆದರಿಕೆ. त्रि भी (भये) भावे "क्त:" (३-३-११४) । "भीतं भये भययुते" हेम० । (वि०) 2. ಹೆದರಿದ, ಭಯಗೊಂಡ. भी कर्त० "क्त:" (३-४-७२) । "प्रलम्बहन्तु: प्रसमीक्ष्य वेगं भीता: पलायन्त भृशार्तनादा:" याद० २०-१२ ।

**भीति ಭೀತಿ** (स्त्री०) 1. ಭಯ, ಹೆದರಿಕೆ, ಅಂಜಿಕೆ. त्रि भी (भये) "क्तिन्" (३-३-९४) । "भीतिकोपसमवायरूपया दोलयेव समकृष्यत द्विषा" याद० १७-४६ । 2. ಕಂಪನ, ನಡುಕ. "भीति: साध्वसकम्पयो:" हेम० ।

**भीतिनाटितक ಭೀತಿನಾಟಿತಕ** (न०) ಭಯದ ಅಭಿನಯ, ಭಯಗೊಂಡವನಂತೆ ನಟಿಸುವುದು.

**भीम ಭೀಮ** (पुं०) 1. ಭೀಮಸೇನ, ಪಾಂಡುರಾಜನ ಮಗ, ಮಧ್ಯಮ ಪಾಂಡವ. [ಭೀಮಸೇನನು ಕುಂತೀ ದೇವಿಯಲ್ಲಿ ವಾಯುದೇವನಿಂದ ಜನಿಸಿದವನು. ಕುಂತಿಯು ದುರ್ವಾಸ ಮಹರ್ಷಿಯಿಂದ ಉಪದೇಶಹೊಂದಿದ ವಾಯುದೇವತಾಕ ಮಂತ್ರದ ಮಹಿಮೆಯಿಂದ ಈತನನ್ನು ಪಡೆದಳು. ಯುಧಿಷ್ಠಿರನು ಇವನ ಅಣ್ಣ. ಅರ್ಜುನನು ಇವನ ತಮ್ಮ. ನಕುಲ ಸಹದೇವರು ಇವನ ಬಲತಾಯಿಯ ಮಕ್ಕಳು. ಇವನು ಚಿಕ್ಕಮಗುವಾಗಿದ್ದಾಗ ಒಂದು ದಿನ ತಾಯಿಯ ಮಡಿಲಿನಿಂದ ಉರುಳಿ ಶತಶೃಂಗಪರ್ವತದ ಮೇಲೆ ಬಿದ್ದ. ಆ ಪರ್ವತವು ಪುಡಿ ಪುಡಿಯಾಯಿತು. ಭೀಮನು ಬಾಲ್ಯದಿಂದಲೂ ಅಸಾಧಾರಣ ಶಕ್ತಿ ಹೊಂದಿದ್ದರಿಂದ ಇವನಿಗೆ ಭೀಮನೆಂದು ಹೆಸರಾಯಿತು. ಬಾಲ್ಯದಲ್ಲಿ ದುರ್ಯೋಧನಾದಿಗಳೊಡನೆ ಆಟವಾಡುತ್ತಿದ್ದು ಅವರನ್ನು ಸೋಲಿಸುತ್ತಿದ್ದನು. ಭೀಮನು ಬಲರಾಮನಲ್ಲಿ ಗದಾಯುದ್ಧವನ್ನು ಕಲಿತನು. ದುರ್ಯೋಧನನ ಮೋಸವನ್ನು ಅರಿತ ಭೀಮಸೇನನು ಅರಗಿನ ಮನೆಯಿಂದ ತಾಯಿ ಮತ್ತು ಸಹೋದರರೊಡನೆ ಅರಣ್ಯವನ್ನು ಸೇರಿ ಅಲ್ಲಿ ಹಿಡಿಂಬ ರಾಕ್ಷಸನನ್ನು ಸಂಹರಿಸಿ ಅವನ ತಂಗಿಯಾದ ಹಿಡಿಂಬಿ (ಕಮಲಪಾಲಿಕೆ) ಯನ್ನು ಮದುವೆಯಾದನು. ಅವಳಲ್ಲಿ ಘಟೋತ್ಕಚನು ಜನಿಸಿದನು. ದ್ರೌಪದಿ, ಹಿಡಿಂಬೆ ಮತ್ತು ಜಲಂಧರೆಯೆಂಬ ಮೂವರು ಇವನ ಪತ್ನಿಯರು. ಯುಧಿಷ್ಠಿರನ ರಾಜಸೂಯಯಾಗದ ಸಂದರ್ಭದಲ್ಲಿ ಜರಾಸಂಧನಲ್ಲಿಗೆ ಹೋಗಿ ಅವನನ್ನು ಬಾಹುಯುದ್ಧದಲ್ಲಿ ಸಂಹರಿಸಿದನು. ಸಭೆಯಲ್ಲಿ ದ್ರೌಪದಿಯ ಮಾನಭಂಗಕ್ಕೆ ಯತ್ನಿಸಿದ ದುರ್ಯೋಧನನ ಊರುಭಂಗಮಾಡುವುದಾಗಿ ಪ್ರತಿಜ್ಞೆ ಮಾಡಿದನು. ವನವಾಸದಲ್ಲಿದ್ದಾಗ ಕಿಮ್ಮೀರ ರಾಕ್ಷಸನನ್ನು ಕೊಂದನು. ವಿರಾಟನಗರದಲ್ಲಿ ಅಜ್ಞಾತವಾಸದಲ್ಲಿದ್ದಾಗ ಇವನಿಗೆ ವಲಲನೆಂಬ ಹೆಸರು. ಪಾಂಡವರು ರಹಸ್ಯವಾಗಿ ಇವನನ್ನು ಜಯೇಶನೆಂದು ಕರೆಯುತ್ತಿದ್ದರು. ವಿರಾಟನಗರದಲ್ಲಿ ದ್ರೌಪದಿಯ ಮಾನಭಂಗಕ್ಕೆ ಯತ್ನಿಸಿದ ಕೀಚಕನನ್ನೂ ಉಪಕೀಚಕರನ್ನೂ ಸಂಹರಿಸಿದನು. ಮಹಾಭಾರತದ ಏಳನೆಯ ದಿನದ ಯುದ್ಧದಲ್ಲಿ ದುರ್ಯೋಧನನ ಎಂಟು ಮಂದಿ ಸಹೋದರರನ್ನೂ ಕೊಂದು ಭೀಷ್ಮಾಚಾರ್ಯರನ್ನೂ ಸೋಲಿಸಿದನು. ಯುದ್ಧದಲ್ಲಿ ಕರ್ಣನಿಗೆ ಸಹಾಯ್ಯ ಮಾಡಲು ಬಂದ ದುರ್ಜಯನನ್ನು ಕೊಂದು ಕರ್ಣನನ್ನು ಓಡಿಸಿದನು. ಶಕುನಿಯನ್ನು ಯುದ್ಧದಲ್ಲಿ ಪರಾಜಯಗೊಳಿಸಿ ಎಲ್ಲರೂ ನೋಡುತ್ತಿದ್ದಂತೆಯೇ ದುಃಶಾಸನನ ತೋಳುಗಳನ್ನು ಮುರಿದು ಅವನನ್ನು ಸಂಹರಿಸಿ ಅವನ ರಕ್ತಪಾನ ಮಾಡಿದನು. ಕೊನೆಗೆ ದುರ್ಯೋಧನನು ತಪ್ಪಿಸಿಕೊಂಡು ಹೋಗಿ ಒಂದು ಮಡುವಿನಲ್ಲಿ ಮುಳುಗಿರುವನೆಂದು ತಿಳಿದು ಕೃಷ್ಣನೊಡನೆ ಭೀಮನು ಅಲ್ಲಿಗೆ ಹೋಗಿ ವೀರವಾದಪೂರ್ವಕ ಗದಾಯುದ್ಧ ಮಾಡಿ ದುರ್ಯೋಧನನ ಊರು (ತೊಡೆ) ಗಳನ್ನು ಮುರಿದು ಅವನನ್ನು ಸಂಹರಿಸಿ ಪ್ರತಿಜ್ಞೆಯನ್ನು ಪೂರೈಸಿ ದ್ರೌಪದಿಗೆ ಸಂತೋಷವುಂಟುಮಾಡಿದನು.] 2. ವಿದರ್ಭದೇಶದ ದೊರೆ, ದಮಯಂತಿಯ

ತಂದೆ. 3. ವಿಷ್ಣು. बिभ्यति अस्मात् स्वनिदेशातिवर्तिनः—त्रि भी (भये) "मक्" (उ० १-१४५)। "भीमो यस्मात् बिभ्यति तु शरभात् पवनादयः" इति निरुक्तिः। "अतुलः शरभो भीमः" वि० स०। 4. ಶಿವ, ಪರಮೇಶ್ವರ. 5. ಭಯಾನಕ ರಸ. 6. ಹುಳಿ ಹಚ್ಚೆ ಗಿಡ. (वि०) 7. ಭಯಂಕರವಾದ, ಭಯವನ್ನು ಹುಟ್ಟಿಸುವ. "भीमकान्तैर्नृपगुणैः स बभूवोपजीविनाम्" रघु० १-१६।

**भीमतिथि ಭೀಮತಿಥಿ** (स्त्री०) ಭೀಮೈಕಾದಶಿ, ಮಾಘ ಶುಕ್ಲ ಏಕಾದಶಿ. भीमेनोपासिता तिथिः।

**भीमद्वादशी ಭೀಮದ್ವಾದಶೀ** (स्त्री०) ಮಾಘ ಶುಕ್ಲ ದ್ವಾದಶಿ.

**भीमनाद ಭೀಮನಾದ** (पुं०) 1. ಸಿಂಹ. भीमो भयंकरो नादो यस्य। 2. ಭಯಂಕರ ಶಬ್ದ. भीमो नादः। 3. ಪ್ರಳಯಕಾಲದಲ್ಲಿ ಕಾಣಿಸಿಕೊಳ್ಳುವ ಏಳು ಮೇಘಗಳಲ್ಲೊಂದು. (वि०) 4. ಭಯಂಕರ ಶಬ್ದವುಳ್ಳ.

**भीमपराक्रम ಭೀಮಪರಾಕ್ರಮ** (वि०) ಭಯಂಕರವಾದ ಪರಾಕ್ರಮವುಳ್ಳ.

**भीमपुर ಭೀಮಪುರ** (न०) ಕುಂಡಿನನಗರ, ವಿದರ್ಭದೇಶದ ರಾಜಧಾನಿ.

**भीमरथ ಭೀಮರಥ** (पुं०) ಧೃತರಾಷ್ಟ್ರನ ಒಬ್ಬ ಮಗ.

**भीमरथी ಭೀಮರಥೀ** (स्त्री०) 1. ಮನುಷ್ಯನ ಆಯುಸ್ಸಿನಲ್ಲಿ 77ನೆಯ ವರ್ಷದ 7ನೆಯ ತಿಂಗಳ 7 ನೆಯ ರಾತ್ರಿ. ಈ ರಾತ್ರಿಯು ಬಹಳ ಕ್ರೂರವಾದುದರಿಂದ ಶಾಂತಿ ಮಾಡಿಸಿಕೊಳ್ಳಬೇಕು. "सप्तसप्ततिवर्षाणां सप्तमे मासि सप्तमी। रात्रिर्भीमरथी नाम नराणामतिदुस्तरा"। 2. ಒಂದು ನದಿ. ಈ ನದಿಯು ಸಹ್ಯಾದ್ರಿಯಲ್ಲಿ ಹುಟ್ಟಿ ಹರಿಯುವುದು. "गोदावरी भीमरथी कृष्णवेण्यादिकास्तथा। सह्यपादोद्भवा नद्यः स्मृताः पापभयापहाः" विष्णुपु०।

**भीमसेन ಭೀಮಸೇನ** (पुं०) ಮಧ್ಯಮ ಪಾಂಡವ, ಕುಂತೀಪುತ್ರ, ಧರ್ಮರಾಜನ ತಮ್ಮ. ["भीम" ಪದದಲ್ಲಿ ನೋಡಿ.]

**भीमा ಭೀಮಾ** (स्त्री०) ಒಂದು ನದಿ.

**भीमादेवी ಭೀಮಾದೇವೀ** (स्त्री०) ದುರ್ಗಾದೇವಿ. भीमाख्या देवी। "पुनश्चाहं यदा भीमं रूपं कृत्वा हिमाचले। रक्षांसि क्षपयिष्यामि मुनीनां त्राणकारणात्। तदा मां मुनयः सर्वे स्तोष्यन्त्यानम्रमूर्तयः। भीमादेवीति विख्यातं तन्मे नाम भविष्यति" देवीमा०।

**भीमैकादशी ಭೀಮೈಕಾದಶೀ** (स्त्री०) ಮಾಘ ಶುಕ್ಲ ಏಕಾದಶಿ.

**भीर ಭೀರ** (वि०) ಭಯವನ್ನುಂಟುಮಾಡುವ, ಭೀತಿಯನ್ನು ಹುಟ್ಟಿಸುವ. भियं राति—रा (दाने) "कः" (३-२-३)। "भूरिभिर्भारिभिर्भीरैर्भूभारैरभिरेभिरे" माघ० १९-६६।

**भीरु ಭೀರು** (पुं०) 1. ಇಂಗುದೀವೃಕ್ಷ, ಗಾರೆಗಿಡ. "कृसरे भीरुमार्जाररकिंशुका इङ्गुदी न षण्" वैज०। 2. ಸೌತೆ ಗಿಡ. "भीरुस्त्विर्वारुकर्कटी" वैज०। (स्त्री०) 3. ಭಯಸ್ವಭಾವದ ಹೆಂಗಸು. त्रि भी (भये) "क्रुः" (३-२-१७४)। "शुभाननाः साम्बुरुहेषु भीरवः" किरा० ८-४२। (वि०) 4. ಭಯಸ್ವಭಾವದವನು. "तेषामर्थे नियुञ्जीत शूरान् दक्षान् कुलोद्गतान्। शुचीनाकरकर्मान्ते भीरूनन्तर्निवेशने" मनु० ७-६२।

**भीरुक ಭೀರುಕ** (वि०) ಭಯಸ್ವಭಾವದವನು, ಹೆದರುವ ಸ್ವಭಾವದವನು, ಅಂಜುಬುರುಕ. त्रि भी (भये) "क्रुकन्" (वा० ३-२-१७४)।

**भीरुपर्णी ಭೀರುಪರ್ಣೀ** (स्त्री०) ಶತಾವರೀ ಗಿಡ.

**भीलुक ಭೀಲುಕ** (वि०) ಭಯದ ಸ್ವಭಾವದವನು. त्रि भी (भये) "क्लुकन्" (३-२-१७४)।

**भीरू ಭೀರೂ** (स्त्री०) ಹೆದರುವ ಸ್ವಭಾವದ ಹೆಂಗಸು. भीरु "ऊङ्" (४-१-६६)।

**भीषण ಭೀಷಣ** (पुं०) 1. ಭಯಾನಕ ರಸ. भीषयते—त्रि भी (भये) + णिच् षुक् (७-६-४०)। "ल्युः" (३-१-१३४)। 2. ಆನೆಬೇಲ. 3. ಕಪೋತ, ಪಾರಿವಾಳ. "भीषणो रसे सल्लक्यां ना गाढे दारुणे त्रिषु" मेदि०। (न०) 4. ಭಯಪಡಿಸುವುದು, ಹೆದರಿಸುವುದು. भी + णिच् + षुक् "ल्युट्" (३-३-११५)। "कर्षणं भीषणं चैव युद्धे चैव बहुक्षयम्" भा० आश्रम० ८-४। (वि०) 5. ಭಯಂಕರವಾದ, ಭಯವುಂಟುಮಾಡುವ. "स बिभर्ति भीषणभुजङ्गभुजः पृथु विद्विषां भयविधायि धनुः" किरा० ६-३२।

**भीषा ಭೀಷಾ** (स्त्री०) 1. ಭಯ, ಹೆದರಿಕೆ. 2. ಭಯಪಡಿಸುವುದು, ಹೆದರಿಸುವುದು. त्रि भी (भये) + णिच् षुक् भावे "अः" (३-३-१०३)।

**भीष्म ಭೀಷ್ಮ** (पुं०) 1. ಭೀಷ್ಮಾಚಾರ್ಯ, ಗಂಗೆಯಲ್ಲಿ ಶಂತನುರಾಜನಿಗೆ ಜನಿಸಿದ ಪುತ್ರ. [ವಸಿಷ್ಠರಿಂದ ಶಾಪ

4. ವ್ಯತ್ಯಾಸ ತೋರಿಸುವ. 5. ರಹಸ್ಯವನ್ನು ಬಹಿರಂಗ ಪಡಿಸುವ. 6. ಮಲವಿಸರ್ಜನೆ ಮಾಡಿಸುವ. भिदिर् (विदारणे) "ण्वुल्" (३-१-१३३)। स्त्रियां भेदिका ಭೇದಿಕಾ.

**भेदन ಭೇದನ** (ನಂ) 1. ಸೀಳುವುದು, ಒಡೆಯುವುದು. 2. ಬೇರ್ಪಡಿಸುವುದು, ಬೇರೆ ಮಾಡುವುದು. 3. ರಂಧ್ರ ಮಾಡುವುದು, ತೂತು ಕೊರೆಯುವುದು. 4. ವ್ಯತ್ಯಾಸ ತೋರಿಸುವುದು. 5. ರಹಸ್ಯವನ್ನು ಬಹಿರಂಗಪಡಿಸುವುದು. 6. ಮಲವಿಸರ್ಜನೆ ಮಾಡಿಸುವುದು. भिदिर् (विदारणे) भावे "ल्युट्" (३-३-११५)। (वि०) 7. ಸೀಳುವ. 8. ಬೇರ್ಪಡಿಸುವ. 9. ರಂಧ್ರ ಮಾಡುವ. 10. ಗುಟ್ಟನ್ನು ಹೊರಗೆಡಹುವ. 11. ವ್ಯತ್ಯಾಸ ತೋರಿಸುವ. 12. ಮಲವಿಸರ್ಜನೆ ಮಾಡಿಸುವ. भिदिर् +णिच् "ल्युः" (३-१-१३४)। (पुं०) 13. ಸೂಕರ, ವರಾಹ, ಹಂದಿ. 14. ಅಮ್ಲವೇತಸ, ಹುಳಿಹಬ್ಬೆ.

**भेदनीय ಭೇದನೀಯ** (वि०) 1. ಭೇದಿಸಬೇಕಾದ, ಸೀಳಬೇಕಾದ, ಒಡೆಯಬೇಕಾದ. 2. ಬೇರ್ಪಡಿಸಬೇಕಾದ. 3. ರಂಧ್ರ ಮಾಡಬೇಕಾದ. 4. ವ್ಯತ್ಯಾಸ ತೋರಿಸಬೇಕಾದ. 5. ಬಹಿರಂಗಪಡಿಸಬೇಕಾದ. 6. ಮಲ ವಿಸರ್ಜನೆ ಮಾಡಿಸಬೇಕಾದ. भिदिर् (विदारणे) "अनीयर्" (३-१-९६)। "तव्यः" (३-१-९६)। भेत्तव्यः ಭೇತ್ತವ್ಯ.

**भेदित ಭೇದಿತ** (वि०) 1. ಸೀಳಲ್ಪಟ್ಟ, ಭೇದಿಸಲ್ಪಟ್ಟ. 2. ಬೇರ್ಪಡಿಸಲ್ಪಟ್ಟ, ತುಂಡುಮಾಡಲ್ಪಟ್ಟ. 3. ರಂಧ್ರ ಮಾಡಲ್ಪಟ್ಟ, ತೂತು ಕೊರೆಯಲ್ಪಟ್ಟ. 4. ವ್ಯತ್ಯಾಸ ತೋರಿಸಲ್ಪಟ್ಟ. 5. (ರಹಸ್ಯ) ಬಹಿರಂಗಪಡಿಸಲ್ಪಟ್ಟ. 6. ವಿರೇಚನ ಮಾಡಿಸಲ್ಪಟ್ಟ. भिदिर्—(विदारणे) + णिच् "क्तः" (३-२-१०२)।

**भेदिन् ಭೇದಿನ್** (वि०) 1. ಸೀಳುವ, ಭೇದಿಸುವ. 2. ಬೇರ್ಪಡಿಸುವ, ಬೇರೆ ಮಾಡುವ. 3. ರಂಧ್ರ ಕೊರೆಯುವ. 4. ವ್ಯತ್ಯಾಸತೋರಿಸುವ. 5. ಗುಟ್ಟನ್ನು ಬಹಿರಂಗಪಡಿಸುವ. 6. ವಿರೇಚನ ಮಾಡಿಸುವ. भिदिर् (विदारणे) "णिनिः" (३-२-७८)। (पुं०) 7. ಹುಳಿಹಬ್ಬೆ.

**भेदुर ಭೇದುರ** (ನಂ) ವಜ್ರಾಯುಧ. भिदुर पृषो०।

**भेद्य ಭೇದ್ಯ** (वि०) 1. ಸೀಳಲ್ಪಡುವ. 2. ಬೇರೆ ಮಾಡಲ್ಪಡುವ, ಬೇರ್ಪಡಿಸಲ್ಪಡುವ. 3. ರಂಧ್ರ ಮಾಡಲ್ಪಡುವ. 4. ವ್ಯತ್ಯಾಸ ತೋರಿಸಲ್ಪಡುವ. 5. (ರಹಸ್ಯ) ಬಹಿರಂಗಪಡಿಸಲ್ಪಡುವ. भिदिर् (विदारणे) "ण्यत्" (३-१-१२४)। 6. ವಿಶೇಷ್ಯ. भेदं नित्यमर्हति "यत्" (५-१-६४)।

**भेद्यगामि ಭೇದ್ಯಗಾಮಿ** (वि०) ವಿಶೇಷ್ಯಾಧೀನವಾದ. भेद्यं विशेष्यं गच्छति—गम्लृ (गतौ) "णिनिः" (३-२-७८)। "त्रिष्वेषां भेद्यगामि यत्" अम०।

**भेद्यलिङ्ग ಭೇದ್ಯಲಿಂಗ** (वि०) ವಿಶೇಷ್ಯಾಧೀನ ಲಿಂಗವುಳ್ಳ (ಶಬ್ದ).

**भेन ಭೇನ** (पुं०) 1. ಸೂರ್ಯ, ರವಿ. 2. ಚಂದ್ರ. भानां गभस्तीनां नक्षत्राणां वा इनः। "भेनः सूर्ये निशाकरे" वैज०।

**भेर ಭೇರ** (पुं०) ಪಟಹ, ಭೇರಿ, ನಗಾರಿ बिभेत्यस्मात् —ञि भी (भये) "रन्" (उ० २-२९)। निपा०।

**भेरि ಭೇರಿ, भेरी ಭೇರೀ** (स्त्री०) ನಗಾರಿ. ञि भी (भये) "क्रिन्" (उ० ४-६६)। "रन्" (उ० २-२९) वा। "ङीष्" (४-१-४१)। "शङ्खान् दध्मुस्ताडयन्ति स्म भेरीः" चं० भा०।

**भेरुण्ड ಭೇರುಂಡ** (पुं०) 1. ಭೇರುಂಡ ಪಕ್ಷಿ, ಒಂದು ಜಾತಿಯ ಹಕ್ಕಿ. (ನಂ) 2. ಗರ್ಭಧಾರಣೆ, ಗರ್ಭ ಧರಿಸುವುದು. (वि०) 3. ಭಯಂಕರವಾದ. (स्त्री०) 4. ಯಕ್ಷಿಣಿ, ಯಕ್ಷ ಹೆಂಗಸು. 5. ಒಂದು ದೇವತೆ. "भेरुण्डो देवताभेदे पक्षिभेदे भयङ्करे" नानार्थर०। "भेरुण्डा देवताभेदयक्षिण्यन्तरयोः स्त्रियाम्। भयानके वाच्यवत्" मेदि०।

**भेल ಭೇಲ** (पुं०) 1. ಸಣ್ಣ ಜಾತಿಯ ಹುಲಿ. ञि भी (भये) "रन्" (उ० २-२९)। रस्य लत्वम्। "हुण्डश्चालस्तरक्षुः द्वीपी चुलको भेलमेहितौ" वैज०। 2. ತೆಪ್ಪ, ಹರಿಗೋಲು. 3. ಒಬ್ಬ ಮುನಿ. (वि०) 4. ಭಯ ಸ್ವಭಾವದವನು. 5. ಮೂರ್ಖ, ಬುದ್ಧಿಯಿಲ್ಲದವನು, ದಡ್ಡ. "भेलः प्लवे मुनिभेदे भीरौ बुद्धिविवर्जिते" हेम०। 6. ಚಂಚಲವಾದ.

**भेलक ಭೇಲಕ** (पुंन०) ತೆಪ್ಪ, ಹರಿಗೋಲು. भेल स्वार्थे "कः"।

**भेष ಭೇಷ** (पुं०) ರೋಗಭಯ.

**भेषज ಭೇಷಜ** (ನಂ) ಔಷಧ, ಮದ್ದು. भेषं रोगभयं जयति—जि (जये) "डः" (३-२-१०१)। "अतिवीर्यवतीव भेषजे बहुरल्पीयसि दृश्यते गुणः" किरा० २-४। [ಔಷಧ ಸೇವನೆಯ ಕಾಲ ಮತ್ತು ಕ್ರಮಗಳಿಗೆ "भैषज्य" ಪದದಲ್ಲಿ ನೋಡಿ.]

**भेषजाङ्ग ಭೇಷಜಾಙ್ಗ** (न०) ಅನುಪಾನ, ಔಷಧಸೇವನೆಯ ನಂತರ ತೆಗೆದುಕೊಳ್ಳುವ ನೀರು ಮೊದಲಾದುದು. भेषजस्याङ्गम्।

**भैक्ष ಭೈಕ್ಷ** (न०) 1. ಭಿಕ್ಷೆ, ಬೇಡುವಿಕೆ, ಯಾಚಿಸುವುದು. भिक्षा स्वार्थे "अण्"। 2. ಭಿಕ್ಷೆಯಿಂದ ತಂದ ವಸ್ತು. "मृतं क्ली याचितं भैक्षममृतं स्यादयाचितम्" वैज०। 3. ಭಿಕ್ಷೆಯ ಸಮೂಹ, ಯಾಚಿಸಿ ತಂದ ವಸ್ತುಗಳ ರಾಶಿ. भिक्षाणां समूहः "अण्" (४-२-३८)। 4. ಭಿಕ್ಷೆಯ ಕ್ರಮವನ್ನು ಹೇಳುವ ಗ್ರಂಥದ ವ್ಯಾಖ್ಯಾನ. भिक्षा "अण्" (४-३-७३)।

**भैक्षचर्या ಭೈಕ್ಷಚರ್ಯಾ** (स्त्री०) ಭಿಕ್ಷಾಟನೆ, ಭಿಕ್ಷೆಗಾಗಿ ತಿರುಗಾಟ.

**भैक्षजीविका ಭೈಕ್ಷಜೀವಿಕಾ** (स्त्री०) ಭಿಕ್ಷೆಯಿಂದ ಜೀವಿಸುವಿಕೆ, ಯಾಚನೆಯ ಆಹಾರದಿಂದ ಬದುಕುವುದು. भैक्षेण जीविका।

**भैक्षुक ಭೈಕ್ಷುಕ** (न०) ಭಿಕ್ಷುಕರ ಸಮೂಹ, ಯಾಚಕರ ಗುಂಪು. भिक्षुकाणां समूहः "अञ्" (४-२-४५)।

**भैक्ष्य ಭೈಕ್ಷ್ಯ** (न०) ಭಿಕ್ಷೆ, ತಿರುಪೆಯಿಂದ ಪಡೆದ ಆಹಾರ. भिक्षा स्वार्थे "ष्यञ्" (वा० ५-१-१२४)।

**भैदिक ಭೈದಿಕ** (वि०) ನಿತ್ಯವೂ ಒಡೆಯಲು ಅರ್ಹವಾದ. भेदं नित्यमर्हति "ठक्" (५-१-६४)।

**भैमी ಭೈಮೀ** (स्त्री०) 1. ಭೀಮ್ಯೇಕಾದಶಿ, ಮಾಘ ಶುಕ್ಲ ಏಕಾದಶಿ. भीमेन उपासिता भीमस्येयं वा "अण्" (४-३-१२०)। "माघमासे शुक्लपक्षे मूर्यर्क्षेण युता पुरा। एकादशी तथा चैषा भीमेन समुपोषिता"। 2. ಭೀಮರಾಜನ ಪುತ್ರಿ ದಮಯಂತಿ. भीमस्य राज्ञः अपत्यं स्त्री "अण्" (४-१-९२)। "भैमीं निरीक्ष्याभिमुखीं मघोनः स्वाराज्यलक्ष्मीरभृताभ्यसूयाम्। दृष्ट्वा ततस्तत्परिहारिणीं तां व्रीडं बिडौजःप्रवणाम्यपादि" नैष० १४-३५।

**भैमरथी ಭೈಮರಥೀ** (स्त्री०) ಮನುಷ್ಯನ ಜೀವಮಾನದಲ್ಲಿ 77ನೆಯ ವರ್ಷದ 7ನೆಯ ಮಾಸದ 7ನೆಯ ರಾತ್ರಿ. ಇದು ಮನುಷ್ಯನಿಗೆ ಒಂದು ಗಂಡಕಾಲವಾದುದರಿಂದ ಈ ದಿವಸ ಶಾಂತಿ ಮಾಡಿಕೊಳ್ಳಬೇಕು. "या सप्तसप्ततितमे वर्षे मासि च सप्तमे। सप्तमी प्राणिनां घोरा रात्रिर्भैमरथी हि सा" वैज०।

**भैमसेनि ಭೈಮಸೇನಿ** (पुं०) ಭೀಮಸೇನನ ಮಗ. भीमसेनस्यापत्यम् "इञ्" (४-१-९५)।

**भैरव ಭೈರವ** (पुं०) 1. ಪರಶಿವ, ಶಂಕರ, ಪರಮೇಶ್ವರ भीर्भयङ्करो रवो यस्य भीरवः ततः स्वार्थे "अण्"। 2. ಸಂಗೀತದ ರಾಗದ ಒಂದು ಭೇದ. ಈ ರಾಗವು ಮಹಾದೇವನ ಮುಖದಿಂದ ಹೊರಟಿದ್ದರಿಂದ ಈ ಹೆಸರು. 3. ಪರ್ವತ, ಬೆಟ್ಟ. "अप्यद्रौ शृङ्गिभैरवौ" वैज०। 4. ಭಯಾನಕ ರಸ. भीरोरिदं भैरवम् "अण्" (४-३-१२०)। 5. ಭಯ, ಹೆದರಿಕೆ. (वि०) 6. ಭಯಂಕರವಾದ, ಭಯವನ್ನುಂಟುಮಾಡುವ. "भैरवो भीषणे रुद्रे रागभेदेऽथ माधवः" हेम०।

**भैरवी ಭೈರವೀ** (स्त्री०) ದುರ್ಗಾದೇವಿ, ಚಾಮುಂಡಿಕಾ. भैरव "ङीप्" (४-१-१५)। "चामुण्डा चर्चिका चर्ममुण्डा मार्जारकर्णिका। कर्णमोटी महागन्धा भैरवी च कपालिनी"।

**भैषज्य ಭೈಷಜ್ಯ** (न०) ಔಷಧ, ಮದ್ದು. भेषज स्वार्थे "ष्यञ्" (५-४-२३)। ಆರೋಗ್ಯವನ್ನು ಕಾಪಾಡತಕ್ಕ ವಸ್ತುವು (ಔಷಧ) ಭೈಷಜ್ಯ. "तदेव युक्तं भैषज्यं यदारोग्याय कल्पते" चरक० सूत्र० २।

**ಆಯಾ ರೋಗಗಳಿಗನುಸಾರವಾಗಿ ಔಷಧ ಸೇವನೆಯ ಕಾಲ ಮತ್ತು ಕ್ರಮ:**

ಸಾಮಾನ್ಯವಾಗಿ ಔಷಧವನ್ನು ಅದರಲ್ಲೂ ಕಷಾಯವನ್ನು ಪ್ರಾತಃಕಾಲ (ಬೆಳಿಗ್ಗೆ) ಸೇವಿಸಬೇಕು. ಔಷಧವನ್ನು ಐದು ಕಾಲಗಳಲ್ಲಿ ಸೇವಿಸಬೇಕು. (1) ಸೂರ್ಯೋದಯ ಕಾಲ (2) ಹಗಲು ಊಟದ ಕಾಲ (3) ಸಾಯಂಕಾಲ (4) ರಾತ್ರಿ ಭೋಜನಕಾಲ ಮತ್ತು (5) ಅರ್ಧರಾತ್ರಿ. "भैषज्यमभ्यवहरेत् प्रभाते प्रायशो बुधः। कषायांस्तु विशेषेण तत्र भेदस्तु दर्शितः। ज्ञेयः पञ्चविधः कालो भैषज्यग्रहणे नृणाम्। किञ्चित्सूर्योदये जाते तथा दिवसभोजने। सायन्तने भोजने च मुहुश्चापि तथा निशि"॥

ಪಿತ್ತ ಮತ್ತು ಕಫ (ಶ್ಲೇಷ್ಮ) ಉಲ್ಬಣವಾದಾಗಲೂ ಭೇದಿ ಮತ್ತು ವಾಂತಿಗಾಗಿ ಔಷಧ ಸೇವಿಸುವಾಗಲೂ ಶಸ್ತ್ರಚಿಕಿತ್ಸೆಯ ಕಾಲದಲ್ಲಿಯೂ ಪ್ರಾತಃಕಾಲ (ಸೂರ್ಯೋದಯ ಕಾಲ) ದಲ್ಲಿ ಖಾಲಿ ಹೊಟ್ಟೆಯಲ್ಲಿ ಔಷಧ ಸೇವಿಸಬೇಕು. "प्रायः पित्तकफोद्रेके विरेकवमनार्थयोः। लेखनार्थे च भैषज्यं प्रभातेऽनन्नमाहरेत्"।

ಅಪಾನವಾಯುವು ವ್ಯತ್ಯಾಸವಾದಾಗ ಹಗಲು ಭೋಜನದ ಕೊನೆಯಲ್ಲಿ ಔಷಧ ಸೇವಿಸಬೇಕು. "भैषज्यं विगुणेऽपाने भोजनाग्रे प्रशस्यते। अरुचौ चित्रभोज्यैश्च मिश्रं रुचिरमाहरेत्"।

ಸಮಾನವಾಯುವು ವ್ಯತ್ಯಾಸಗೊಂಡಾಗ ಅಗ್ನಿಯು ಮಂದವಾಗುವುದರಿಂದ ವೈದ್ಯನು ತೀಕ್ಷ್ಣವಾದ ಔಷಧವನ್ನು ಊಟದ ಮಧ್ಯದಲ್ಲಿ ಕೊಡಬೇಕು. "समानवाते विगुणे मन्देऽग्नावतिदीपनम्। दद्याद्भोजनमध्ये च भेषज्यं कुशलो भिषक्"।।

ವ್ಯಾನವಾಯುವು ಉದ್ರೇಕಗೊಂಡಾಗ ಭೋಜನಾನಂತರ ಔಷಧ ಸೇವಿಸಬೇಕು. ಬಿಕ್ಕಳಿಕೆಗೂ ವಾತರೋಗಗಳಿಗೂ ಊಟಕ್ಕೆ ಮುಂಚೆಯೂ ಅನಂತರವೂ ಸೇವಿಸಬೇಕು. "व्यानकोपे तु भैषज्यं भोजनान्ते समाहरेत्। हिक्काक्षेपककम्पेषु पूर्वमन्ते च भोजनात्"।

ಉದಾನವಾಯುವು ಪ್ರಕುಪಿತವಾದಾಗ ಸ್ವರದಲ್ಲಿ ದೋಷಹೆಂದರೆ ಸಾಯಂಕಾಲ ಭೋಜನ ಕಾಲದಲ್ಲಿ ಪ್ರತಿ ಕಬಳದ ಮಧ್ಯದಲ್ಲೂ ಔಷಧ ಸೇವಿಸಬೇಕು. "उदाने कुपिते वाते स्वरभङ्गादिकारिणि। ग्रासग्रासान्तरे देयं भैषज्यं सान्ध्यभोजने"।

ಪ್ರಾಣವಾಯುವು ವ್ಯತ್ಯಾಸಗೊಂಡಾಗ ಸಾಯಂಕಾಲದ ಊಟದ ನಂತರ ಔಷಧ ಸೇವಿಸಬೇಕು. "प्राणे प्रदुष्टे सान्ध्यस्य भुक्तस्यान्ते प्रदीयते। औषधं प्रायशो धीरैः कालोऽयं स्यात् तृतीयकः"।।

ಪದೇ ಪದೇ ದಾಹ ವಾಂತಿ ಬಿಕ್ಕಳಿಕೆ ಮತ್ತು ಉಬ್ಬಸ ಬಾಧೆಗಳುಂಟಾದಾಗ ರಾತ್ರಿ ಊಟದ ಸಮಯದಲ್ಲೇ ಔಷಧವನ್ನು ಕೊಡಬೇಕು. ಇದು ನಾಲ್ಕನೆಯ ಕಾಲ. "मुहुर्मुहुश्च तृट्छर्दिहिक्काश्वासगरेषु च। सान्नं च भेषजं दद्यादिति कालश्चतुर्थकः"।। "ऊर्ध्वजत्रुविकारेषु लेखने बृंहणे तथा। पाचने शमने देयमनन्नं भेषजं निशि" ಇದು ಐದನೆಯ ಕಾಲ.

**भोक्तव्य ಭೋಕ್ತವ್ಯ** (ವಿ०) 1. ಭುಜಿಸಲ್ಪಡುವ, ತಿನ್ನಲ್ಪಡುವ. 2. ತಿನ್ನಬೇಕಾದ. 3. ತಿನ್ನಲು ಅರ್ಹವಾದ. 4. ಅನುಭವಿಸಲ್ಪಡುವ. 5. ಅನುಭವಿಸಬೇಕಾದ. 6. ಅನುಭವಿಸಲು ಯೋಗ್ಯವಾದ. "प्रारब्धं किल भोक्तव्यं शुभं वाप्यथवाशुभम्"। भुज (परिपालनाभ्यवहारयोः) "तव्यः" (३-१-९६)। "अनीयर्" (३-१-९६)। **भोजनीयम् ಭೋಜನೀಯಮ್.**

**भोक्तृ ಭೋಕ್ತೃ** (ಪುं०) 1. ವಿಷ್ಣು. भक्तैरर्पितं घृतक्षीरमधुपर्कसहिततण्डुलपक्वपायसादिकं अमृतमिव भुङ्क्ते-भुनक्ति पालयति वा — भुज (पालनाभ्यवहारयोः) "तृच्" (३-१-१३३)। "भोक्तार्पितस्य भोक्तृत्वात् भोक्ता स्यादमृतस्य वा" इति निरुक्तिः। "भ्राजिष्णुर्भोजनं भोक्ता" वि० स०। (ವಿ०) 2. ಭೋಜನ ಮಾಡುವವನು, ಊಟಮಾಡುವವನು. भुज "तृच्"। 3. ಸುಖವನ್ನು ಅನುಭವಿಸುವವನು. 4. ಕಾಪಾಡುವವನು, ಸಲಹುವವನು. 5. ಅನುಭವಿಸುವವನು, ಉಪಯೋಗಿಸುವವನು.

**भोग ಭೋಗ** (ಪುं०) 1. ಸುಖ, ಸೌಖ್ಯ. भुज (पालनाभ्यवहारयोः) "घञ्" (३-३-१८)। "तं रागबन्धिष्ववितृप्तमेव भोगेषु सौभाग्यविशेषभोग्यम्" रघु० १८-१९। 2. ದುಃಖ. 3. ಸುಖ ದುಃಖಗಳ ಅನುಭವ. 4. ಭೋಜನ, ಊಟ. 5. ಪೋಷಣೆ, ಪಾಲನೆ. 6. ದೇಹ, ಶರೀರ. 7. ಬಾಡಿಗೆ. 8. ವೇಶ್ಯೆಯ ಬಾಡಿಗೆ, ಸೂಳೆಗೆ ಕೊಡುವ ಹಣ. 9. ಧನ, ಸಂಪತ್ತು. 10. ಸರ್ಪದ ದೇಹ. 11. ಸರ್ಪದ ಹೆಡೆ. 12. ರಾಜ್ಯ. 13. ಭೂಮಿಯ ಫಲಾನುಭವ. 14. ಸ್ರಕ್ ಚಂದನಾದಿ ಸುಖದ ವಸ್ತುಗಳು. 15. ಭೋಜನಕೂಟ, ಔತಣದ ಸಮಾರಂಭ. "भोगो राज्ये धने सौख्ये पालनाभ्यवहारयोः। फणे देहे च सर्पस्य वेश्यादीनां भृतावपि" वैज०। 16. ಮೇಷಾದಿ ದ್ವಾದಶ ರಾಶಿಗಳಲ್ಲಿ ಸೂರ್ಯಾದಿ ಗ್ರಹಗಳ ಸಂಚಾರ.

**भोगगृह ಭೋಗಗೃಹ** (ನ०) 1. ವಾಸಮಾಡುವ ಮನೆ. भोगार्थं गृहम्। 2. ದೇಹ, ಶರೀರ. 3. ಅಂತಃಪುರ.

**भोगदेह ಭೋಗದೇಹ** (ಪುं०) ಪಾಪಪುಣ್ಯಗಳ ಫಲಗಳನ್ನು ಅನುಭವಿಸುವ ಶರೀರ. भुज्यते सुखदुःखादिकमत्र—भुज (पालनाभ्यवहारयोः) अधि० "घञ्" (३-३-१२१)। स चासौ देहश्च।

**भोगभूमि ಭೋಗಭೂಮಿ** (ಸ್ತ್ರೀ०) ಸುಖವನ್ನು ಅನುಭವಿಸಲು ಏರ್ಪಟ್ಟ ಭೂಮಿ, ಭಾರತ ವರ್ಷಕ್ಕಿಂತಲೂ ಅತಿರಿಕ್ತವಾದ ಭೂಮಿ, ಸ್ವರ್ಗ. भोगार्था भूमिः। ಭಾರತವು ಕರ್ಮಭೂಮಿ. ಉಳಿದವು ಪುಣ್ಯಫಲವನ್ನು ಅನುಭವಿಸುವ ಭೋಗಭೂಮಿಗಳು. "अत्रापि भारतं श्रेष्ठं जम्बूद्वीपे महामुने। यतो हि कर्मभूरेषा ह्यतोऽन्या भोगभूमयः" विष्णुपु० २-३-२२।

**भोगवत् ಭೋಗವತ್** (ಪುं०) 1. ಸರ್ಪ, ಹಾವು. भोगः फणाऽस्यास्ति "मतुप्" (५-२-९४)। 2. ನಾಟ್ಯ. "भोगवान् नाट्यनागयोः" त्रिकाण्ड०। (ವಿ०) 3. ಸುಖವನ್ನು ಅನುಭವಿಸುವವನು, ಸುಖಪಡುವವನು. भोगोऽस्यास्ति। स्त्रियां "ङीन्" (४-१-७३)। **-वती -ವತೀ.** 4. ಪಾತಾಳ ಲೋಕ, ಸರ್ಪಗಳ ಲೋಕ. 5. ಪಾತಾಳ ಗಂಗೆ. 6. ಹೆಣ್ಣು ಹಾವು. "नागा बहुफणाः

सर्पास्तेषां भोगवती पुरी" वैज०। "भोगवती भुजङ्गानां नगरीसरितोरपि" विश्व०।

**भोगसद्मन् ಭೋಗಸದ್ಮನ್** (ನಂ) 1. ವಾಸದ ಮನೆ. भोगार्थं सद्म। 2. ರಾಣಿವಾಸ, ಅಂತಃಪುರ.

**भोगावली ಭೋಗಾವಲೀ** (स्त्री०) ಸ್ತುತಿಪಾಠಕನ ಪ್ರಶಂಸಾವಚನ.

**भोगावास ಭೋಗಾವಾಸ** (पुं०) 1. ರಾಣಿವಾಸ, ಅಂತಃಪುರ. भोगार्थं आवासः। 2. ವಾಸದ ಮನೆ.

**भोगिक ಭೋಗಿಕ** (पुं०) ಅಶ್ವಪಾಲಕ, ಕುದುರೆಯನ್ನು ಉಪಚರಿಸುವವನು.

**भोगिकान्त ಭೋಗಿಕಾಂತ** (पुं०) ವಾಯು, ಗಾಳಿ. "भोगिकान्तः कम्पलक्ष्मा पश्वधारावनिश्च सः" त्रिकाण्ड०।

**भोगिन् ಭೋಗಿನ್** (पुं०) 1. ರಾಜ, ದೊರೆ. 2. ಸರ್ಪ, ಹಾವು. "भोगिवेष्टनमार्गेषु चन्दनानां समर्पितम्" रघु० ४-४८। 3. ಗ್ರಾಮಾಧಿಪತಿ, ಗ್ರಾಮದ ಯಜಮಾನ. 4. ನಾಪಿತ, ಕ್ಷೌರಿಕ. 5. ಆಶ್ಲೇಷಾನಕ್ಷತ್ರ. (वि०) 6. ವಿಷಯಾಸಕ್ತ, ವಿಷಯ ಲಂಪಟ, ಸೌಖ್ಯವನ್ನು ಅನುಭವಿಸುವವನು. भोगोऽस्यास्ति "इनिः" (५-२-११५)। स्त्रियां "ङीप्" (४-१-५)। **भोगिनी ಭೋಗಿನೀ.** 1. ಸೌಖ್ಯವನ್ನು ಅನುಭವಿಸುವ ಹೆಂಗಸು. 2. ರಾಜನ ಪಟ್ಟಮಹಿಷಿಗಿಂತ ಬೇರೆಯಾದ ಇತರ ಪತ್ನಿಯರು. "भोगी भुजङ्गमे राज्ञि ग्रामण्यां नापितेऽपि च। विहाय महिषीं चान्ययोषिति भोगिनी" मेदि०।

**भोगिभुज् ಭೋಗಿಭುಜ್** (पुं०) 1. ಮಯೂರ, ನವಿಲು. भोगिनं भुङ्क्ते—भुज (पालनाभ्यवहारयोः) "क्विप्" (३-२-७६)। 2. ಮುಂಗುಸಿ, ಕೀರ.

**भोगीन्द्र ಭೋಗೀಂದ್ರ, —ईश ಈಶ** (पुं०) 1. ಆದಿಶೇಷ, ಸರ್ಪಗಳ ರಾಜ. 2. ವಾಸುಕಿ. भोगिनामिन्द्रः ईशो वा।

**भोग्य ಭೋಗ್ಯ** (नं०) 1. ಧನ, ಸಂಪತ್ತು. भुज (परिपालनाभ्यवहारयोः) "ण्यत्" (३-१-१२४)। 2. ಧಾನ್ಯ, ಕಾಳು. (वि०) 3. ಅನುಭವಿಸಲ್ಪಡುವ. "शापेनास्तंगमितमहिमा वर्षभोग्येन भर्तुः" मेघ० १-१। 4. ಅನುಭವಿಸಲು ಯೋಗ್ಯವಾದ. 5. ಸುಖವನ್ನು ಅನುಭವಿಸಲು ಅರ್ಹವಾದ. "तं रागबन्धिष्ववितृप्तमेव भोगेषु सौभाग्यविशेषभोग्यम्" रघु० १८-१९। (स्त्री०) **भोग्या ಭೋಗ್ಯಾ.** 6. ವೇಶ್ಯೆ, ಸೂಳೆ.

**भोज ಭೋಜ** (पुं०) 1. ಭೋಜರಾಜ, ಮಾಲವದೇಶದ ಸಿಂಧುಲರಾಜನ ಪುತ್ರ. ಇವನ ರಾಜಧಾನಿ ಧಾರಾನಗರ. [ಸಿಂಧುಲ ರಾಜನು ತನ್ನ ವೃದ್ಧತ್ವದಲ್ಲಿ ರಾಜ ವನ್ನು ತಮ್ಮನಾದ ಮುಂಜನಿಗೆ ವಹಿಸಿ 5 ವರ್ಷದ ಭೋಜಕುಮಾರನನ್ನೂ ಅವನಿಗೇ ಒಪ್ಪಿಸಿದನು. ಒಂದು ದಿನ ರಾಜನು ಸಭೆಯಲ್ಲಿದ್ದಾಗ ಒಬ್ಬ ಜ್ಯೋತಿಷಿಯು ಬಂದು ಭೋಜರಾಜನು ಐವತ್ತೈದು ವರ್ಷಗಳು ಏಳು ತಿಂಗಳು ಮತ್ತು ಮೂರು ದಿನಗಳಕಾಲ ದಕ್ಷಿಣಾಪಥವನ್ನು ಆಳುವನೆಂದು ಹೇಳಿದಾಗ ಮುಂಜನು ಚಿಂತಾಕ್ರಾಂತನಾಗಿ ಸಾಮಂತ ರಾಜನಾದ ವತ್ಸರಾಜನ ಮೂಲಕ ಭೋಜಕುಮಾರನ ವಧೆಗೆ ಆಜ್ಞಾಪಿಸಿದನು. ವತ್ಸರಾಜನು ರಾಜಾಜ್ಞೆಯಿಂದ ಕುಮಾರನ ವಧೆಗೆ ಯತ್ನಿಸಿದಾಗ ಅವನ ಸಹೋದರನ "एक एव सुहृद्धर्मो निधनेऽप्यनुयाति यः। शरीरेण समं नाशं सर्वमन्यच्च गच्छति" ಎಂಬ ವಾಕ್ಯವನ್ನು ಕೇಳಿ ವೈರಾಗ್ಯ ಹೊಂದಿದವನಾಗಿ ಭೋಜನನ್ನು ರಕ್ಷಿಸಿ ಕೃತ್ರಿಮವಾದ ಅವನ ಶಿರಸ್ಸನ್ನು ತಂದು ರಾಜನಿಗೆ ಒಪ್ಪಿಸಿದನು. ಶಿರಶ್ಛೇದನ ಸಮಯದಲ್ಲಿ ಭೋಜನು ಹೇಳಿದನೆಂಬ "मान्धाता च महीपतिः कृतयुगालङ्कारभूतो गतः सेतुर्येन महोदधौ विरचितः क्वासौ दशास्यान्तकः। अन्ये चापि युधिष्ठिरप्रभृतयो याता दिवं भूतले नैकेनापि समं गता वसुमती मुञ्ज त्वया यास्यति" ಈ ಶ್ಲೋಕವನ್ನೂ ಕೇಳಿ ರಾಜನು ಬಹಳ ದುಃಖಿತನಾಗಿ ಕೆಳಗೆ ಬಿದ್ದು ಒದ್ದಾಡಿದನು. ಬಳಿಕ ಇದಕ್ಕೆ ಶಾಸ್ತ್ರಜ್ಞರಿಂದ ಹೇಳಲ್ಪಟ್ಟ ಪ್ರಾಯಶ್ಚಿತ್ತಕ್ಕಾಗಿ ರಾಜನು ಅಗ್ನಿಪ್ರವೇಶಕ್ಕೆ ಸಿದ್ಧನಾಗಲು ಒಬ್ಬ ಕಾಪಾಲಿಕನು ಬಂದು ಭೋಜಕುಮಾರನನ್ನು ಬದುಕಿಸಿಕೊಡುವುದಾಗಿ ಹೇಳಿ ವತ್ಸರಾಜನು ತನ್ನ ಮನೆಯಲ್ಲಿ ರಕ್ಷಿಸಿಟ್ಟಿದ್ದ ಭೋಜನನ್ನು ಕರೆತಂದು ರಾಜನಿಗೆ ಒಪ್ಪಿಸಿದನು. ಮುಂಜನು ಬಹಳ ಸಂತೋಷಗೊಂಡು ಭೋಜಕುಮಾರನಿಗೆ ಪಟ್ಟಾಭಿಷೇಕಮಾಡಿ ರಾಜ್ಯವನ್ನು ಅವನಿಗೆ ಒಪ್ಪಿಸಿ ತಾನು ಅರಣ್ಯಕ್ಕೆ ತೆರಳಿದನು. ಭೋಜರಾಜನು ಸುಖವಾಗಿ ಧರ್ಮದಿಂದ ರಾಜ್ಯವನ್ನಾಳಿದನು. ಭೋಜನು ರಾಜನು ಮಾತ್ರವಲ್ಲದೆ ಸಂಸ್ಕೃತದಲ್ಲಿ ದೊಡ್ಡ ಕವಿಯೂ ಆಗಿದ್ದನು. ಚಂಪೂರಾಮಾಯಣ ಸರಸ್ವತೀ ಕಂಠಾಭರಣ ಇತ್ಯಾದಿ ಗ್ರಂಥಗಳು ಭೋಜರಾಜವಿರಚಿತವಾದವು.] 2. ವಿದರ್ಭದೇಶದ ಒಬ್ಬ ದೊರೆ. "अथेश्वरेण क्रथकैशिकानां स्वयंवरार्थं स्वसुरिन्दुमत्याः। आप्तः कुमारानयनोत्सुकेन भोजेन दूतो रघवे विसृष्टः" रघु० ५-३९। (पुं० ब० व०) 3. ಭೋಜದೇಶ. 4. ಭೋಜದೇಶದ ಜನರು.

**भोजक ಭೋಜಕ** (ವಿಂ) 1. ಊಟ ಮಾಡುವವನು. भुज (परिपालनाभ्यवहारयोः) "ण्वुल्" (३-१-१३३)। 2. ರಸಾಸ್ವಾದ ಮಾಡುವವನು. 3. ಊಟ ಮಾಡಿಸುವವನು. भुज + णिच् "ण्वुल्" (३-१-१३३)।

**भोजकट ಭೋಜಕಟ** (ಪುಂ) 1. ಭೋಜ ದೇಶ. (ನಂ) 2. ಭೋಜಕಟಪುರ. ರುಕ್ಮಿಣಿಯ ಸಹೋದರನಾದ ರುಕ್ಮಿಯಿಂದ ನಿರ್ಮಿತವಾದ ಒಂದು ನಗರ. ಇದು ವಿದರ್ಭ ದೇಶದ ರಾಜಧಾನಿ.

**भोजदेव ಭೋಜದೇವ** (ಪುಂ) ಭೋಜ ಮಹಾರಾಜ. ಧಾರಾ ನಗರದ ದೊರೆ.

**भोजन ಭೋಜನ** (ನಂ) 1. ಊಟ. भुज (पालनाभ्यवहारयोः) "ल्युट्" (३-३-११५)।

**ಭೋಜನ ಕ್ರಮ :** ಮೊದಲು ದ್ರವರೂಪದ ಆಹಾರವನ್ನೂ ಮಧ್ಯದಲ್ಲಿ ಕಠಿನವಾದ ಆಹಾರವನ್ನೂ ಕೊನೆಯಲ್ಲಿ ದ್ರವಾಹಾರವನ್ನೂ ಸೇವಿಸುವವನಿಗೆ ಬಲ ಮತ್ತು ಆರೋಗ್ಯ ಕೆಡುವುದಿಲ್ಲ. "प्राग्द्रवं पुरुषोऽश्नन् वै मध्ये च कठिनाशनः। पुनरन्ते द्रवाशी तु बलारोग्ये न मुञ्चति"।

**ಭೋಜನಕ್ಕೆ ಕೂಡಲು ದಿಕ್ಕಿನ ನಿಯಮ :** ಆಯುಸ್ಸನ್ನು ಅಪೇಕ್ಷಿಸುವವನು ಪೂರ್ವಾಭಿಮುಖನಾಗಿಯೂ ಯಶಸ್ಸನ್ನು ಅಪೇಕ್ಷಿಸುವವನು ದಕ್ಷಿಣಾಭಿಮುಖನಾಗಿಯೂ ಐಶ್ವರ್ಯವನ್ನು ಅಪೇಕ್ಷಿಸುವವನು ಪಶ್ಚಿಮಾಭಿಮುಖನಾಗಿಯೂ ಸತ್ಯದ ಫಲವನ್ನು ಅಪೇಕ್ಷಿಸುವವನು ಉತ್ತರಾಭಿಮುಖನಾಗಿಯೂ ಕುಳಿತು ಭೋಜನ ಮಾಡಬೇಕು. "आयुष्यं प्राङ्मुखो भुङ्क्ते यशस्यं दक्षिणामुखः। श्रियं प्रत्यङ्मुखो भुङ्क्ते ऋतं भुङ्क्ते ह्युदङ्मुखः" मनु० २-५२।

**ಭೋಜನದ ಪ್ರಮಾಣ :** ಜಠರದ (ಹೊಟ್ಟೆಯ) ಅರ್ಧ ಭಾಗವನ್ನು ಆಹಾರ (ಅನ್ನ) ದಿಂದಲೂ ಕಾಲು ಭಾಗ ನೀರಿನಿಂದಲೂ ತುಂಬಿ ಕಾಲು ಭಾಗದಷ್ಟು ಅವಕಾಶವನ್ನು ವಾಯು ಸಂಚಾರಕ್ಕಾಗಿ ಬಿಡಬೇಕು "जठरं पूरयेदर्धमन्नैर्भागं जलेन च। वायोः सञ्चरणार्थं तु चतुर्थमवशेषयेत्" विष्णुपु०।

ಬಾಯಾರಿಕೆಯಿಂದ ಪೀಡಿತನಾದಾಗ ಮೊದಲು ಆಹಾರವನ್ನು ತೆಗೆದುಕೊಂಡರೆ ಗುಲ್ಮರೋಗವೂ ಹಸಿದಿರುವಾಗ ನೀರನ್ನು ಕುಡಿದರೆ ಜಲೋದರರೋಗವೂ ಬರುವುದು. "तृषितस्तु न चाश्नीयात्क्षुधितो न जलं पिबेत्। तृषितस्तु भवेद्गुल्मी क्षुधितस्तु जलोदरी"। ಭೋಜನ ಸಮಯದಲ್ಲಿ ಹೆಚ್ಚಾಗಿ ನೀರನ್ನು ಕುಡಿದರೂ ನೀರು ಕುಡಿಯದೆ ಊಟಮಾಡಿದರೂ ಅನ್ನವು ಸರಿಯಾಗಿ ಜೀರ್ಣವಾಗುವುದಿಲ್ಲ. ಆದುದರಿಂದ ಜಾಠರಾಗ್ನಿವೃದ್ಧಿಗಾಗಿ ಊಟಮಾಡುವಾಗ ಪದೇ ಪದೇ ಮಿತವಾಗಿ ನೀರನ್ನು ಕುಡಿಯಬೇಕು. "अत्यम्बुपानान्न विपच्यतेऽन्नमनम्बुपानाच्च स एव दोषः। तस्मान्नरो वह्निविवर्धनाय मुहुर्मुहुर्वारि पिबेदभूरि"। ಪರಮಾತ್ಮನು ಅನುಗ್ರಹಿಸಿ ಕೊಟ್ಟುದನ್ನು ಅವನಿಗೆ ಅರ್ಪಿಸಿ ಬಳಿಕ ನಾವು ಅದನ್ನು ಉಪಯೋಗಿಸಬೇಕು. ಯಜ್ಞದಿಂದ ಸಂತುಷ್ಟರಾದ ದೇವತೆಗಳು ನಮಗೆ ಸಕಲ ಸುಖಸಾಧನಗಳನ್ನೂ ಅನುಗ್ರಹಿಸುತ್ತಾರೆ. ಅವರು ಕೊಟ್ಟಿದ್ದನ್ನು ಅವರಿಗೆ ನಿವೇದಿಸದೆ ಉಪಯೋಗಿಸುವುದು ದೊಡ್ಡ ಅಪರಾಧ. ಹಾಗೆ ಮಾಡುವವನು ಕಳ್ಳನೆನಿಸಿಕೊಳ್ಳುತ್ತಾನೆ. "इष्टान् भोगान् हि वो देवा दास्यन्ते यज्ञभाविताः। तैर्दत्तानप्रदायैभ्यो यो भुङ्क्ते स्तेन एव सः" गीता ३-१२। 2. ವಿಷ್ಣು. उपासितृभिः सुखेन भुज्यते अनुभूयते — भुज कर्मं० "ल्युट्" (३-३-११३)। लिङ्गमशिष्यं लोकाश्रयात्। "सुखेन भोजनं प्राहुर्यो भक्तैरनुभूयते" इति निरुक्तिः। "भ्राजिष्णुर्भोजनं भोक्ता" वि० स०। (ವಿಂ) 3. ಊಟ ಮಾಡಿಸುವವನು, ಪೋಷಿಸುವವನು, ಸಲಹುವವನು.

**भोजनीय ಭೋಜನೀಯ** (ವಿಂ) 1. ಊಟಮಾಡಲು ಅರ್ಹವಾದ. 2. ಊಟ ಮಾಡಬಹುದಾದ. 3. ಊಟ ಮಾಡಲ್ಪಡುವ. भुज (अभ्यवहारे) "अनीयर्" (३-१-९६)। 4. ಊಟಮಾಡಿಸಲು ಅರ್ಹವಾದ. 5. ಊಟಮಾಡಿಸಬಹುದಾದ. 6. ಊಟಮಾಡಿಸಲ್ಪಡುವ. भुज + णिच् "अनीयर्" (३-१-९६)। "तत्र ये भोजनीयाः स्युः ये च वर्ज्या द्विजोत्तमाः" मनु० ३-१२४। "तव्यः"। **भोजयितव्यः ಭೋಜಯಿತವ್ಯ.**

**भोजपति ಭೋಜಪತಿ** (ಪುಂ) ಭೋಜ ವಂಶದ ದೊರೆ, ಕಂಸ. भोजानां तद्वंशीयानां पतिः।

**भोजपुर ಭೋಜಪುರ** (ನಂ) ಭೋಜರಾಜನ ನಗರ, ಧಾರಾನಗರ. भोजस्य पुरम्।

**भोजयत् ಭೋಜಯತ್** (ವಿಂ) 1. ಊಟ ಮಾಡಿಸುತ್ತಿರುವ, ತಿನ್ನಿಸುತ್ತಿರುವ. भुज (परिपालनाभ्यवहारयोः) + णिच् "शतृ" (३-२-१२४)। 2. ಪಾಲಿಸುತ್ತಿರುವ, ಪೋಷಿಸುತ್ತಿರುವ. स्त्रियां "ङीप्" (४-१-६)। **-यन्ती -ಯಂತೀ.**

**भोजयितृ ಭೋಜಯಿತೃ** (ವಿಂ) 1. ಊಟಮಾಡಿಸುವ, ಭೋಜನಮಾಡಿಸುವ. 2. ಪೋಷಿಸುವ, ಸಾಕುವ, ಸಲಹುವ. भुज (परिपालनाभ्यवहारयोः) + णिच्

"तृच्" (३-१-१३३)। स्त्रियां "ङीप्" (४-१-५)। **-यित्री -ಯಿತ್ರೀ.**

**भोजिन् ಭೋಜಿನ್** (वि०) ಊಟಮಾಡುವವನು, ತಿನ್ನುವವನು. (ಸಾಮಾನ್ಯವಾಗಿ ಸಮಾಸದ ಕೊನೆಯಲ್ಲಿ ಪ್ರಯೋಗ.) भुज (अभ्यवहारे) "णिनिः" (३-२-७८)। उष्णभोजी शीघ्रभोजी ಇತ್ಯಾದಿ. स्त्रियां "ङीप्" (४-१-५)। **भोजिनी ಭೋಜಿನೀ.**

**भोज्य ಭೋಜ್ಯ** (वि०) 1. ಭುಂಜಿಸಲು ಯೋಗ್ಯವಾದ, ತಿನ್ನಲು ಅರ್ಹವಾದ. भुज (अभ्यवहारे) "ण्यत्" (३-१-१२४)। (न०) 2. ಆಹಾರ, ಅನ್ನ ಮೊದಲಾದ ಭೋಜನದ್ರವ್ಯ, ಆರು ವಿಧ ಆಹಾರಗಳಲ್ಲೊಂದು. ಆರು ವಿಧ ಆಹಾರಗಳು "आहारं षड्विधं चूष्यं पेयं लेह्यं तथैव च। भोज्यं भक्ष्यं तथा चर्व्यं गुरु विद्याद्यथोत्तरम्"। ಹೀರಿ ಕುಡಿಯುವ ರಸವುಳ್ಳ ವಸ್ತು **ಚೂಷ್ಯ.** ಕಬ್ಬು ಮೊದಲಾದುದು. ನೀರು ಪಾನಕ ಮೊದಲಾದುದು **ಪೇಯ.** ನಾಲಗೆಯಿಂದ ನೆಕ್ಕಿ ರಸಾಸ್ವಾದನೆ ಮಾಡಿ ತಿನ್ನುವ ಆಹಾರ **ಲೇಹ್ಯ.** ಊಟಮಾಡುವ ಅನ್ನ ಮೊದಲಾದುದು **ಭೋಜ್ಯ.** ತಿಂಡಿ ತಿನಸು ಮೊದಲಾದ ತಿನ್ನುವ ಆಹಾರ **ಭಕ್ಷ್ಯ.** ದಂತದಿಂದ ಅಗಿದು ತಿನ್ನುವ ಹುರಿಗಡಲೆ ಮೊದಲಾದುದು **ಚರ್ವ್ಯ.** "त्वमेव हव्यं होता च भोज्यं भोक्ता च शाश्वतः" कुमा० २-१५। 3. ಹಬ್ಬದ ಊಟ. "क्षणः पर्व च कल्याणं भोज्यं तु जठरोत्सवः" वैज०। (स्त्री०) **-ज्या -ಜ್ಯಾ.** 4. ಇಂದುಮತಿ, ಅಜ ಮಹಾರಾಜನ ಪತ್ನಿ. भोजस्य गोत्रापत्यम् स्त्री "ष्यञ्" (ग० ४-१-८०)। "पूर्वानुशिष्टां निजगाद भोज्याम्" रघु० ६-५९।

**भोज्यसंभव ಭೋಜ್ಯಸಂಭವ** (पुं०) ಶರೀರದೊಳಗಿನ ರಸಧಾತು. संभवत्यस्मात् इति संभवः — सम् + भू "अप्" (३-३-५७)। भोज्यं संभवोऽस्य।

**भोल ಭೋಲ** (पुं०) ನಟಿಯಲ್ಲಿ ವೈಶ್ಯನಿಂದ ಹುಟ್ಟಿದವನು. (ವ್ರಾತ್ಯನಾದ ಕ್ಷತ್ರಿಯನಿಂದ ಸವರ್ಣ ಹೆಂಗಸಿನಲ್ಲಿ ಹುಟ್ಟಿದವಳು ನಟಿ.) "मैत्री वाटं नटी भोलं प्रसूते कालुषीकिटम्" वैज०।

**भोलि ಭೋಲಿ** (पुं०) ಉಷ್ಟ್ರ, ಒಂಟೆ. "भोलिर्बहुकरो वक्रग्रीवः" त्रिकाण्ड०।

**भोस् (भोः) ಭೋಸ್ (ಭೋಃ)** (अव्य०) 1. ಕರೆ, ಸಂಬೋಧನೆ. भाति—भा (दीप्तौ) "डोस्" बाहु०। ಹಿರಿಯರನ್ನೂ ಪೂಜ್ಯರಾದವರನ್ನೂ ಕರೆಯುವಾಗಲೂ ನಮಸ್ಕರಿಸುವಾಗಲೂ ಇದರ ಪ್ರಯೋಗ. "भोः शब्दं कीर्तयेदन्ते स्वस्य नाम्नोऽभिवादने। नाम्नां स्वरूपभावो हि भोभावो ऋषिभिः स्मृतः" मनु० १-१२४। 2. ಸಾಮಾನ್ಯ ಜನರ ಸಂಬೋಧನೆ. "भोभोः शङ्करगृहाधिवासिनो जानपदाः" मालती० ३।

**भौजङ्ग ಭೌಜಂಗ** (पुं०) 1. ಸರ್ಪದೇವತಾಕವಾದ ಆಶ್ಲೇಷಾ ನಕ್ಷತ್ರ. 2. ಸರ್ಪ ಸಂಬಂಧವಾದ. भुजङ्गस्येदम् "अण्" (४-३-१२०)।

**भौत ಭೌತ** (पुं०) 1. ದೇವಲಕ. ಜೀವನಕ್ಕಾಗಿ ದೇವರ ಪೂಜೆ ಮಾಡುವವನು. 2. ಭೂತಯಜ್ಞ, ಗೃಹಸ್ಥನು ಪ್ರತಿದಿನವೂ ಮಾಡಬೇಕಾದ ಪಂಚಮಹಾಯಜ್ಞಗಳಲ್ಲೊಂದು. "होमो दैवो बलिर्भौतो नृयज्ञोऽतिथिपूजनम्" मनु० ३-७०। 3. ಪಿಶಾಚಗಳ ಆರಾಧಕ, ಭೂತಗಳ ಉಪಾಸಕ. (स्त्री०) **-ती -ತೀ.** 4. ರಾತ್ರಿ. "श्यामा याम्या दोषा तुङ्गी भौती शताक्षी च" त्रिकाण्ड०। (वि०) 5. ಪ್ರಾಣಿಗಳಿಗೆ ಸಂಬಂಧಿಸಿದ.

**भौतिक ಭೌತಿಕ** (पुं०) 1. ಪರಮೇಶ್ವರ, ಮಹಾದೇವ. "एकपाद्भौतिको भद्रः" त्रिकाण्ड०। (न०) 2. ಮುತ್ತು, ಮೌಕ್ತಿಕ, ಮುಕ್ತಾಫಲ. भूतानां विकारः "ठक्"। (वि०) 3. ಭೂತಗಳಿಗೆ ಸಂಬಂಧಿಸಿದ (ಪ್ರಾಣಿಗಳನ್ನು ಉದ್ದೇಶಿಸಿ ಮಾಡುವ ಭೂತಯಜ್ಞ.) "जपोऽहुतो हुतो होमः प्रहुतो भौतिको बलिः" मनु० ३-७४। 4. ಪಂಚಭೂತಗಳಿಂದ ಉಂಟಾದ (ಉಪದ್ರವ). ["आधिभौतिक" ಪದದಲ್ಲಿ ನೋಡಿ.] 5. ಪಂಚಭೂತಗಳಿಂದ ಉಂಟಾದ (ಶರೀರ ಮುಂತಾದುದು.) "एकान्तविध्वंसिषु मद्विधानां पिण्डेष्वनास्था खलु भौतिकेषु" रघु० २-५७। 6. ಪಿಶಾಚಗಳಿಗೆ ಸಂಬಂಧಿಸಿದ.

**भौम ಭೌಮ** (पुं०) 1. ಅಂಗಾರಕ, ಕುಜಗ್ರಹ. 2. ನರಕಾಸುರ. भूमेरपत्यम् "अण्" (४-१-११२)। "त्वयि भौमं गते जेतुमरौत्सीत्स पुरीमिमाम्" माघ० २-३९। 3. ಆಕಾಶ, ಗಗನ. (वि०) 4. ಭೂಮಿಯಲ್ಲಿ ಹುಟ್ಟಿದ, ಭೂಮಿಯಲ್ಲಿ ಇರುವ. "भौमो मुनेः स्थानपरिग्रहोऽयम्" रघु० १३-३६। 5. ಭೂಮಿಯ ಸಂಬಂಧವಾದ. 6. ಕುಜಗ್ರಹಕ್ಕೆ ಸಂಬಂಧಿಸಿದ.

**भौमन ಭೌಮನ** (पुं०) ದೇವಶಿಲ್ಪಿಯಾದ ವಿಶ್ವಕರ್ಮ. भूमा ब्रह्मा, तस्यापत्यम् "अण्" (४-१-९२)।

**भौमरत्न ಭೌಮರತ್ನ** (न०) ಪ್ರವಾಳ, ಹವಳ.

**भौमवासर ಭೌಮವಾಸರ** (पुं०) ಮಂಗಳವಾರ.

**भौमिक ಭೌಮಿಕ** (वि०) 1. ಭೂಮಿಯಲ್ಲಿರುವ, ಭೂಮಿಯಲ್ಲಿ ವಾಸಿಸುವ. 2. ಭೂಮಿಯಲ್ಲಿ ನಿಂತಿರುವ. "स्पृशन्ति बिन्दवः पादौ य आचामयतः परान्। भौमिकैस्ते समा ज्ञेया न तैरप्रयतो भवेत्" मनु० ५-१४२।

**भौमी ಭೌಮೀ** (स्त्री०) ಸೀತಾದೇವಿ, ಜಾನಕಿ.

**भौरिक ಭೌರಿಕ** (पुं०) ಸುವರ್ಣಾಧ್ಯಕ್ಷ, ಬೊಕ್ಕಸದಲ್ಲಿರುವ ಸುವರ್ಣದ ಅಧಿಕಾರಿ. भूरिणि सुवर्णे नियुक्तः "ठक्" (४-४-६९)।

**भ्रंश ಭ್ರಂಶ** (पुं०) 1. ಕೆಳಗೆ ಕಳಚಿಕೊಳ್ಳುವುದು, ಕಳಚಿ ಬೀಳುವುದು. भ्रंशु (अवस्रंसने) भावे "घञ्"(३-३-१८)। "स्नेहोऽस्य न भ्रंशमतो न लोभात्स तुल्यपुष्पाभरणो हि धीरः" रघु० १६-७४। 2. ನ್ಯಾಯವಾದ ಸ್ಥಾನದಿಂದ ಕೆಳಕ್ಕೆ ಬರುವುದು, ಪದಚ್ಯುತನಾಗುವುದು. 3. ನಾಶ, ಕಳೆದುಕೊಳ್ಳುವುದು. "स्मृतिभ्रंशाद्बुद्धिनाशः बुद्धिनाशात्प्रणश्यति" गीता २-६३। 4. ಕಡಮೆಯಾಗುವುದು, ಇಳಿಮುಖವಾಗುವುದು, ಕ್ಷೀಣವಾಗುವುದು. 5. ತಪ್ಪಿಸಿಕೊಳ್ಳುವುದು, ಗುಂಪನ್ನು ಬಿಟ್ಟು ಹೋಗುವುದು, ಗುಂಪಿನಿಂದ ತಪ್ಪಿಸಿಕೊಂಡು ಹೋಗುವುದು. भावे "ल्युट्" (३-३-११५)। **भ्रंशनम् ಭ್ರಂಶನಮ್.**

**भ्रंशनीय ಭ್ರಂಶನೀಯ** (वि०) 1. ಕೆಳಕ್ಕೆ ಜಾರಿ ಬೀಳಬೇಕಾದ. 2. ಜಾರಿ ಬೀಳಲು ಅರ್ಹವಾದ. भ्रंशु (अवस्रंसने) "अनीयर्" (३-१-९६)। 3. ಕೆಳಕ್ಕೆ ಬೀಳಿಸಬೇಕಾದ. 4. ಕೆಳಕ್ಕೆ ಬೀಳಿಸಲ್ಪಡುವ. 5. ಕೆಳಕ್ಕೆ ಬೀಳಿಸಲು ಶಕ್ಯವಾದ. भ्रंशु + णिच् "अनीयर्" (३-१-९६)। "तव्यः"। **भ्रंशितव्यम् ಭ್ರಂಶಿತವ್ಯಮ್.**

**भ्रंशित ಭ್ರಂಶಿತ** (वि०) ಕೆಳಕ್ಕೆ ಬೀಳಿಸಲ್ಪಟ್ಟ. भ्रंशु (अवस्रंसने) + णिच् "क्तः" (३-२-१०२)।

**भ्रंशिन् ಭ್ರಂಶಿನ್** (वि०) 1. ಕಳಚಿಕೊಳ್ಳುವ, ಜಾರಿ ಕೆಳಗೆ ಬೀಳುವ. भ्रंशु (अवस्रंसने) "णिनिः" (३-१-१३४)। 2. ಕ್ಷಯಹೊಂದುವ, ಕಡಮೆಯಾಗುವ, ಇಳಿಮುಖವಾಗುವ. 3. ಗುಂಪಿನಿಂದ ತಪ್ಪಿಸಿಕೊಳ್ಳುವ. 4. ಒಂದು ಸ್ಥಾನದಿಂದ ಕೆಳಕ್ಕೆ ಬರುವ, ಪದಚ್ಯುತನಾಗುವ. 5. ನಾಶವಾಗುವ, ಕಳೆದುಹೋಗುವ.

**भ्र(भ्रु)(भ्रू)कुंस ಭ್ರ(ಭ್ರು)(ಭ್ರೂ)ಕುಂಸ** (पुं०) ಸ್ತ್ರೀವೇಷಧಾರಿಯಾಗಿ ಕುಣಿಯುವ ಗಂಡಸು. भ्रुवा कुंसो भाषणं शोभा वा अस्य। भ्रुवा कुंसयति — कुंसि (भाषार्थे) + णिच् "अच्" (३-१-१३४) वा। भ्रूशब्दस्य ह्रस्वः अकारादेशश्च (वा० ६-३-६१)। "भ्रकुंसश्च भ्रुकुंसश्च भ्रूकुंसश्चेति नर्तकः। स्त्रीवेषधारी पुरुषः" अम०।

**भ्र(भ्रु)(भ्रू)कुटि ಭ್ರ(ಭ್ರು)(ಭ್ರೂ)ಕುಟಿ** (स्त्री०) ಹುಬ್ಬು ಗಂಟುಹಾಕುವುದು. भ्रुवोः कुटिः—कुट(कौटिल्ये) "इन्" (उ० ४-१२०)। "भ्रकुंस"ದಂತೆ ಇದಕ್ಕೂ ಮೂರು ರೂಪಗಳು. "बडबानलधूमराजिरूक्षा भ्रुकुटिस्तस्य मुखे परिस्फुरन्ती" याद० १५-१०२।

**भ्रमु – चलने** (भ्वा० पर० अक० से०)। भ्रमति, भ्राम्यति। बभ्राम। भ्रमतु, भ्राम्यतु। अभ्रमीत्। ಇತ್ಯಾದಿ. 1. ಅಲೆ, ಸುತ್ತಾಡು, ತಿರುಗಾಡು. "मनो निष्ठाशून्यं भ्रमति च किमप्यालिखति च" मालती० १-३४। 2. ಸಂಚರಿಸು, ತಡೆಯಿಲ್ಲದೆ ಓಡಾಡು. "भ्रमति च भुवने कन्दर्पाज्ञा विकारि च यौवनम्" मालती० १-२०।

**णिचि**:—भ्रमयति, –ते। भ्रमयिता। भ्रमयतु, –ताम्। ಇತ್ಯಾದಿ.

**भ्रम ಭ್ರಮ** (पुं०) 1. ಚಲನೆ, ಸುತ್ತಾಡುವುದು, ಅಲೆದಾಡುವುದು. भ्रमु (चलने) भावे "घञ्" (३-३-१८)। 2. ತಿರುಗುವುದು, ಗಿರಗಿರನೆ ತಿರುಗುವುದು, ವೃತ್ತಾಕಾರದ ಕಕ್ಷೆಯಲ್ಲಿ ಹೋಗುವುದು. 3. ಭ್ರಾಂತಿ, ತಪ್ಪು ತಿಳಿವಳಿಕೆ, ಅದಲ್ಲದ ವಸ್ತುವಿನಲ್ಲಿ (ಅದರ ಸಾದೃಶ್ಯದಿಂದ) ಅದು ಎಂಬ ಜ್ಞಾನ. शुक्तौ रजतत्वज्ञानं भ्रमः। 4. ಮಿಥ್ಯಾಜ್ಞಾನ. "देवो जगाद तं भद्र कोऽयं ते मनसि भ्रमः" राजत०। 5. ಸಾಣೆಹಿಡಿಯುವ ಚಕ್ರ, ಕತ್ತಿ ಮಸೆಯುವ ಯಂತ್ರ. "आरोप्य चक्रभ्रममुष्णतेजास्त्वष्ट्रेव यत्नोल्लिखितो विभाति" रघु० ६-३२। 6. ಬೀಸುವ ಕಲ್ಲು. 7. ಸುಳಿ, ಆವರ್ತ. 8. ಸಂಶಯ, ಸಂದೇಹ. "विचिकित्सा तु सन्देहः संशयो विशयो भ्रमः" वैज०। 9. ಬೈರಿಗೆ, ವಜ್ರ ಕೊರೆಯುವ ತಿರುಪುಳಿ. "आस्फोटनी वेधनिका भ्रमः" वैज०। 10. ಜಲನಿರ್ಗಮಸ್ಥಾನ, ನೀರು ದಾರಿ, ತೂಬು. "भ्रमागतैरम्बुभिरम्बुराशिः" माघ० ३-३८।

**भ्रमण ಭ್ರಮಣ** (न०) 1. ತಿರುಗಾಡುವುದು, ಸುತ್ತಾಡುವುದು. भ्रमु (चलने) भावे "ल्युट्" (३-३-११५)। 2. ಗಿರಗಿರನೆ ತಿರುಗುವುದು. "भ्रमणरयविकीर्णस्वर्णभासा खगेन" नैष० २-१०८। 3. ಸಂಚಾರ, ನಡೆದಾಡುವುದು. 4. ಪುನಃ ಪುನಃ ಬರುವುದು. "नवाग्निधूमसंरोधो दिङ्मोहो भ्रमणानि च" काम० नी०। 5. ತತ್ತರಿಸುವುದು, ದಿಗ್ಭ್ರಮೆಯಾಗುವುದು.

**भ्रमणी ಭ್ರಮಣೀ** (स्त्री०) 1. ಕ್ರೀಡಾಸಂಚಾರ, ವಿನೋದ ಸಂಚಾರ. 2. ಜಲೌಕೆ, ಜಿಗಣೆ. भ्रमु (चलने) कर० "ल्युट्" (३-३-११७)। "भ्रमणी काण्डिकायां क्रीडाटयायामधीशितुः मेदि०। 3. ಆಟದ ಸಾಮಾನು.

**भ्रमणीय ಭ್ರಮಣೀಯ** (वि०) 1. ತಿರುಗಿಸಲ್ಪಡುವ, ಸುತ್ತಿಸಲ್ಪಡುವ. भ्रमु (चलने) + णिच् "अनीयर्" (३-१-९६)। 2. ಓಡಾಡಿಸಲ್ಪಡುವ, ನಡೆಸಲ್ಪಡುವ. 3. ಸುತ್ತಿಸಬೇಕಾದ, ತಿರುಗಿಸಬೇಕಾದ. 4. ತಿರುಗಾಡಿಸಬೇಕಾದ. भ्रमु "अनीयर्"। 5. ಭ್ರಾಂತಿಪಡಬೇಕಾದ. 6. ಸಂದೇಹಪಡಬೇಕಾದ.

**भ्रमत् ಭ್ರಮತ್** (वि०) 1. ತಿರುಗುತ್ತಿರುವ, ಚಕ್ರದಂತೆ ಸುತ್ತುತ್ತಿರುವ. भ्रमु (चलने) "शतृ" (३-२-१२४)। "प्रलयोदन्वदावर्ते भ्रमन्त इव पर्वताः" याद० २२-१०८। 2. ತಿರುಗಾಡುತ್ತಿರುವ, ಓಡಾಡುತ್ತಿರುವ. "भ्रमन्नमुष्या-मुपकारिकायामायस्य भैमीविरहात्क्रशीयान्" नैष० ६-३६। 3. ಚಲಿಸುತ್ತಿರುವ. 4. ಅಲೆಯುತ್ತಿರುವ. स्त्रियां "ङीप्" (४-१-६)। **भ्रमन्ती ಭ್ರಮನ್ತೀ.**

**भ्रमत्कुटी ಭ್ರಮತ್ಕುಟೀ** (स्त्री०) ಓಲೆಗರಿ ಹುಲ್ಲು ಮೊದಲಾದವುಗಳಿಂದ ತಯಾರಿಸಲ್ಪಟ್ಟ ಕೊಡೆ. भ्रमन्ती कुटीव। "कावारी जङ्गमकुटी भ्रमत्कुटयथ खर्परः" त्रिकाण्ड०।

**भ्रमन्त ಭ್ರಮನ್ತ** (पुं०) ಸಣ್ಣ ಮನೆ. "गर्भागारोऽपवरको भ्रमन्तो गृहकोऽल्पकः" वैज०।

**भ्रमर ಭ್ರಮರ** (पुं०) 1. ಮಧುಕರ, ಭೃಂಗ, ದುಂಬಿ. भ्रमु (अनवस्थाने) "अरः" (उ० ३-१३२)। "भ्रमर-कुलाकुलोल्बणसुगन्धिपुष्पतरुः" भट्टि० २१-२१। 2. ಕಾಮುಕ, ಸ್ತ್ರೀಲೋಲ, ಶೃಂಗಾರಪ್ರಿಯ.

**भ्रमरक ಭ್ರಮರಕ** (पुं०) 1. ಹಣೆಯ ಮೇಲೆ ಜೋಲಾಡುತ್ತಿರುವ ಗುಂಗುರು ಕೂದಲು. भ्रमर इव कायति—कै (शब्दे) "कः" (३-२-३)। "ते ललाटे भ्रमरकाः" अम०। 2. ಭ್ರಮರ, ದುಂಬಿ. भ्रमर स्वार्थे "कः"। 3. ನೀರಿನ ಸುಳಿ, ಆವರ್ತ. 4. ಬೈರಿಗೆ, ವಜ್ರ ಕೊರೆಯುವ ತಿರುಪುಳಿ. 5. ಚಟ್ಟಿಲಿ, ಸಣ್ಣ ಜಾತಿಯ ಇಲಿ. 6. ಗೈರಿಕ, ಬೆಟ್ಟದಲ್ಲಿ ಹುಟ್ಟಿದ ಧಾತು ಮೊದಲಾದುವು. 7. ಜಲ, ನೀರು. "भ्रमरको जले भृङ्गे गिरिजे चूर्ण-कुन्तले" विश्व०। 8. ಜೇನುತುಪ್ಪ. "भ्रमरं तु भ्रमरकं क्षौद्रं सारघमाक्षिके" वैज०।

**भ्रमरकरण्डक ಭ್ರಮರಕರಂಡಕ** (पुं०) ದುಂಬಿಗಳಿಂದ ತುಂಬಿದ ಪೆಟ್ಟಿಗೆ. [ಕಳ್ಳರು ಪೆಟ್ಟಿಗೆಯಲ್ಲಿ ದುಂಬಿಗಳನ್ನು ತುಂಬಿಕೊಂಡು ಹೋಗಿ ಅವನ್ನು (ತಾವು ಕಳ್ಳತನಕ್ಕೆ ನುಗ್ಗುವ ಮೊದಲು) ಮನೆಯೊಳಕ್ಕೆ ಬಿಡುತ್ತಾರೆ. ಅವು ದೀಪದ ಮೇಲೆ ಸಂಚರಿಸಿ ದೀಪವನ್ನು ಆರಿಸಿದಾಗ ತಾವು ಮನೆಯೊಳಕ್ಕೆ ಪ್ರವೇಶಿಸುತ್ತಾರೆ.]

**भ्रमरकीट ಭ್ರಮರಕೀಟ** (पुं०) ಕಣಜಿಗ, ಕಣಜದ ಹುಳ.

**भ्रमरालक ಭ್ರಮರಾಲಕ** (पुं०) ಹಣೆಯ ಮೇಲೆ ಜೋಲಾಡುತ್ತಿರುವ ಗುಂಗುರು ಕೂದಲು.

**भ्रमरी ಭ್ರಮರೀ** (स्त्री०) ಹೆಣ್ಣು ದುಂಬಿ. भ्रमर "ङीष्" (४-१-६३)। "अमरीकबरीभारभ्रमरीमुखरीकृतम्। दूरीकरोतु दुरितं गौरीचरणपङ्कजम्" कुव०।

**भ्रमरेष्ट ಭ್ರಮರೇಷ್ಟ** (पुं०) ಹೆಮ್ಮರ, ತಿಗಡುಮರ. भ्रमरस्येष्टः।

**भ्रमरोत्सवा ಭ್ರಮರೋತ್ಸವಾ** (स्त्री०) ಮಾಧವೀಲತೆ, ಕಾಡಿರುವಂತಿಕೆ ಗಿಡ. भ्रमराणामुत्सवो मदो यस्मात्।

**भ्रमासक्त ಭ್ರಮಾಸಕ್ತ** (वि०) (ಸಾಣೆಕಲ್ಲಿನ ಮೇಲೆ) ಕತ್ತಿ ಮಸೆಯುವವನು. भ्रमे निशानार्थे चक्रभ्रमणे आसक्तः।

**भ्रमि ಭ್ರಮಿ –मी –ಮೀ** (स्त्री०) 1. ಭ್ರಮಣ, ತಿರುಗುವಿಕೆ. भ्रमु (अनवस्थाने) "इक्" (वा० ३-३-१०८)। "नेत्रच्छटाभारभीमोत्तमाङ्गभ्रमिप्रस्तुतालातचक्र०…… ……" मालती० ५-२३। 2. ಜಲಾವರ್ತ, ನೀರಿನ ಸುಳಿ. 3. ಸುಂಟರಗಾಳಿ. 4. ಮಂಡಲಾಕಾರವಾಗಿ ಸುತ್ತುವುದು, ಮಂಡಲಾಕಾರದ ಗಮನ, –ನಡಗೆ. "अचीकरच्चारु हयेन या भ्रमीर्निजातपत्रस्य तलस्थले नलः" नैष० १-७३। 5. ಮಂಡಲಾಕಾರದ ಸೈನ್ಯರಚನೆ. "वीरान् सहस्रशो दृष्ट्वा भ्रमिभिः पर्यवस्थितान्"। 6. ತಪ್ಪು, ದೋಷ, ಅಶುದ್ಧ.

**भ्रमितव्य ಭ್ರಮಿತವ್ಯ** (वि०) 1. ತಿರುಗಿಸಬೇಕಾದ, ಸುತ್ತಿಸಬೇಕಾದ. 2. ಸಂದೇಹಪಡಬೇಕಾದ. 3. ಭ್ರಾಂತಿಪಡಬೇಕಾದ. 4. ತಿರುಗಿಸಲು ಯೋಗ್ಯವಾದ. 5. ಸಂದೇಹಪಡಲು ಅರ್ಹವಾದ, ಸಂಶಯಕ್ಕೆ ಅರ್ಹವಾದ 6. ಭ್ರಾಂತಿಪಡಲು ತಕ್ಕುದಾದ. भ्रमु (अनवस्थाने) "तव्यः" (३-१-९६)।

**भ्रमिन् ಭ್ರಮಿನ್** (वि०) 1. ಸುತ್ತುತ್ತಿರುವ, ಚಕ್ರದಂತೆ ತಿರುಗುತ್ತಿರುವ. भ्रमति — भ्रमु (चलने) "णिनिः" (३-१-१३४)। 2. ಸಂಚರಿಸುತ್ತಿರುವ, ತಿರುಗಾಡುತ್ತಿರುವ. "भ्रमी कदम्बसम्पन्नः पवनः शमिनामपि"

भट्टि० ७-५। 3. ಭ್ರಾಂತಿಯುಳ್ಳ, ಮಿಥ್ಯಾಜ್ಞಾನವುಳ್ಳ. 4. ಸಂಶಯವುಳ್ಳ, ಸಂದೇಹವುಳ್ಳ. भ्रमोऽस्य विद्यते "इनि:" (५-२-११५)।

**भ्रम्य ಭ್ರಮ್ಯ** (वि०) 1. ಸುತ್ತಿಸಲ್ಪಡುವ, ತಿರುಗಿಸಲ್ಪಡುವ. 2. ಸಂದೇಹಿಸಲ್ಪಡುವ. भ्रमु (अनवस्थाने) "यत्" (३-१-९८)।

**भ्रशिमन् ಭ್ರಶಿಮನ್** (पुं०) ಬಹಳ ಹೆಚ್ಚಾಗಿರುವಿಕೆ, ಅತಿಶಯವಾಗಿರುವಿಕೆ. भृशस्य भाव: "इमनिच्" (५-१-१२३)। रत्वं (वा० ५-१-१२३)।

**भ्रश्यत् ಭ್ರಶ್ಯತ್** (वि०) 1. ಕೆಳಗೆ ಕಳಚಿ ಬೀಳುತ್ತಿರುವ, ಜಾರಿ ಬೀಳುತ್ತಿರುವ. 2. ಕೆಳಕ್ಕೆ ಬೀಳುತ್ತಿರುವ. भ्रंशु (अवस्रंसने अध:पतने वा) "शतृ" (३-२-१२४)। स्त्रियां "ङीप्" (४-१-६)। **—न्ती —ಂತೀ.**

**भ्रष्ट ಭ್ರಷ್ಟ** (वि०) 1. ಕೆಳಕ್ಕೆ ಕಳಚಿಕೊಂಡ. 2. ಕೆಳಗೆ ಬಿದ್ದಿರುವ. भ्रंशु (अवस्रंसने अध:पतने वा) "क्त:" (३-४-७२)। "पतगेन्द्रध्वजत्रासाद् भ्रष्टकुण्डलितात्मनाम्" याद० २२-१९५। 3. ತಪ್ಪಿಸಿಕೊಂಡ, ಒಂದು ಸಮೂಹದಿಂದ ಬೇರೆಯಾದ, ಸಮೂಹವನ್ನು ಬಿಟ್ಟು ಹೋಗಿರುವ. 4. ನ್ಯಾಯದಿಂದ ಹೊರಗಿರುವ, ನ್ಯಾಯವನ್ನು ಮೀರಿ ನಡೆದಿರುವ. 5. ಪದಚ್ಯುತನಾದವನು, ಒಂದು ಪದವಿಯನ್ನು ಕಳೆದುಕೊಂಡವನು. राज्याद् भ्रष्ट:। अधिकाराद् भ्रष्ट:।

**भ्राजृ —दीप्तौ** (भ्वा० आत्म० अक० से०)। भ्राजते। बभ्राजे बभ्राजाते बभ्राजिरे। भ्राजिता। भ्राजिष्यते। भ्राजताम्। अभ्राजत। ಇತ್ಯಾದಿ. ಪ್ರಕಾಶಿಸು, ಹೊಳೆ.
**कृत्सु :—**भ्राजितव्य:। भ्राजनीय:। भ्राज्य:। भ्राजित:। भ्राजितवान्। भ्राजमान:। भ्राजनम्। भ्राजितम्। भ्राजित्वा।

**भ्राजक ಭ್ರಾಜಕ** (न०) 1. ಪಿತ್ತ. (वि०) 2. ಪ್ರಕಾಶಿಸುವ, ಹೊಳೆಯುವ. भ्राजृ (दीप्तौ) "ण्वुल्" (३-१-१३३)।

**भ्राजन ಭ್ರಾಜನ** (न०) ಪ್ರಕಾಶಿಸುವುದು, ಹೊಳೆಯುವುದು. भ्राजृ (दीप्तौ) "ल्युट्" (३-३-११५)।

**भ्राजथु ಭ್ರಾಜಥು** (पुं०) ಪ್ರಕಾಶ, ಕಾಂತಿ. टु भ्राजृ (दीप्तौ) "अथुच्" (३-३-८९)।

**भ्राजमान ಭ್ರಾಜಮಾನ** (वि०) ಪ್ರಕಾಶಿಸುತ್ತಿರುವ, ಹೊಳೆಯುತ್ತಿರುವ. भ्राजृ (दीप्तौ) "शानच्" (३-२-१२४)।

**भ्राजित ಭ್ರಾಜಿತ** (वि०) 1. ಪ್ರಕಾಶಗೊಂಡ. भ्राजृ (दीप्तौ) "क्त:" (३-४-७२)। 2. ಪ್ರಕಾಶಪಡಿಸಲ್ಪಟ್ಟ, ಹೊಳಪು ಕೊಡಲ್ಪಟ್ಟ. भ्राजृ + णिच् "क्त:" (३-२-१०२)। (न०) 3. ಪ್ರಕಾಶಿಸುವುದು, ಹೊಳೆಯುವುದು. भ्राजृ भावे "क्त:"।

**भ्राजिष्णु ಭ್ರಾಜಿಷ್ಣು** (पुं०) 1. ವಿಷ್ಣು. भ्राजृ (दीप्तौ) "इष्णुच्" (३-२-१३८)। ಉಪಾಸಕರಿಗೆ ಪ್ರಕಾಶನ ಸ್ವಭಾವದವನು ಪರಮಾತ್ಮ. "उपासितृभ्यो भ्राजिष्णु: स्वप्रकाशनशीलत:" इति निरुक्ति:। "भ्राजिष्णुर्भोजनं भोक्ता" वि० स०। (वि०) 2. ಹೊಳೆಯುವ, ಪ್ರಕಾಶಿಸುವ.

**भ्रातृ ಭ್ರಾತೃ** (पुं०) 1. ಸಹೋದರ, ಒಡಹುಟ್ಟಿದವನು. भ्राजते—भ्राजृ (दीप्तौ) "तृन्" जलोपश्च निपा० (उ० २-९६)। "भ्रातुस्ते तनयेन शौरिगुरुणा श्यालेन गाण्डीविन:" वेणी० ६-२७। "भ्रातरि न्यस्य यातो मां मृगाविन् मृगयामसौ" भट्टि० ५-८२। 2. ವಿಶ್ವಾಸಪಾತ್ರನಾದ ಗೆಳೆಯ. 3. ಸಾಮಾನ್ಯ ಗೆಳೆಯ. "भ्रात: पर्वणि पश्य दानवपति: शीर्षविशेषाकृति:" भर्तृ० १-२६। (पुं० द्विव०) 4. ಸಹೋದರ ಮತ್ತು ಸಹೋದರಿ. भ्राता च स्वसा च भ्रातरौ—एकशेष: (१-२-६८)। "भ्रातृभगिन्यौ भ्रातरावुभौ" अम०।

**भ्रातृक ಭ್ರಾತೃಕ** (वि०) ಸಹೋದರನಿಗೆ ಸಂಬಂಧಿಸಿದ, ಸಹೋದರನಿಂದ ಬಂದ. भ्रातृ "ठञ्" (४-२-७७)।

**भ्रातृज ಭ್ರಾತೃಜ** (पुं०) ಸಹೋದರನ ಪುತ್ರ, ಒಡಹುಟ್ಟಿದವನ ಮಗ. भ्रातुर्जायते—जनी (प्रादुर्भावे) "ड:" (३-२-९८)। **—जा —ಜಾ.** —ಮಗಳು.

**भ्रातृजाया ಭ್ರಾತೃಜಾಯಾ** (स्त्री०) ಸಹೋದರನ ಪತ್ನಿ, ಒಡಹುಟ್ಟಿದವನ ಹೆಂಡತಿ. भ्रातुर्जाया।

**भ्रातृत्व ಭ್ರಾತೃತ್ವ** (न०) ಸಹೋದರ ಭಾವ.

**भ्रातृद्वितीया ಭ್ರಾತೃದ್ವಿತೀಯಾ** (स्त्री०) ಕಾರ್ತಿಕ ಶುಕ್ಲ ದ್ವಿತೀಯಾ. [ಕಾರ್ತಿಕ ಶುದ್ಧ ಬಿದಿಗೆಯ ದಿನ ಹೆಣ್ಣು ಮಕ್ಕಳು ತಮ್ಮ ಸಹೋದರನನ್ನು ಮನೆಗೆ ಕರೆತಂದು ಊಟೋಪಚಾರಗಳಿಂದ ಸತ್ಕರಿಸುತ್ತಾರೆ. ಯಮುನೆಯೂ ಸಹ ಆ ದಿವಸ ತನ್ನ ಸಹೋದರನಾದ ಯಮಧರ್ಮರಾಯನನ್ನು ಕರೆದು ಸತ್ಕರಿಸಿದುದರಿಂದ ಈ ಬಿದಿಗೆಗೆ ಯಮದ್ವಿತೀಯಾ ಎಂದೂ ಹೆಸರು.] "यस्यां तिथौ यमुनया यमराजदेव: संभोजित: प्रतिजगत् स्वसृसौहृदेन। तस्यां स्वसु: करतलादिह यो भुनक्ति प्राप्नोति रत्नसुखधान्यमनुत्तमं स:"।

**भ्रातृव्य ಭ್ರಾತೃವ್ಯ** (ಪುಂ) 1. ಸಹೋದರನ ಪುತ್ರ. भ्रातुरपत्यम् "व्यत्" (४-१-१४४)। "जयराजानुजं राज्ञा यशोराजं निवेशितम्। तन्मतेनानुचस्कन्द भ्रातृव्यं राजकाभिधः"। 2. ಶತ್ರು, ವೈರಿ. भ्रातृ "व्यन्" (४-१-१४५)। "भ्रातृव्यमेतं त्वमदभ्रवीर्यमुपेक्षयाध्येधितमप्रमत्तः" ಭಾಗ० ५-११-१७।

**भ्रातृश्वशुर ಭ್ರಾತೃಶ್ವಶುರ** (ಪುಂ) 1. ಪತಿಯ ಜ್ಯೇಷ್ಠ ಸಹೋದರ, ಪತಿಯ ಹಿರಿಯ ಅಣ್ಣ. भ्राता श्वशुर इव पूज्यत्वात्। 2. ಸಹೋದರನ ಪತ್ನಿಯ ತಂದೆ, ಸಹೋದರನ ಮಾವ. भ्रातुः श्वशुरः।

**भ्रात्र ಭ್ರಾತ್ರ** (ಪುಂ) 1. ಬಿಳಿ ಸಾಸವೆ. "त्रिष्टुभभ्रात्ररक्षोघ्नाः" वैज०। (वि०) 2. ಸಹೋದರನ ಸಂಬಂಧವಾದ. भ्रातुरिदम् "अण्" (४-३-१२०)।

**भ्रात्रीय ಭ್ರಾತ್ರೀಯ** (ಪುಂ) ಸಹೋದರನ ಪುತ್ರ, ಒಡಹುಟ್ಟಿದವನ ಮಗ. भ्रातुरपत्यम् "छः" (४-१-१४४)। "भ्रात्रीयो भ्रातृजे" अम०।

**भ्रान्त ಭ್ರಾಂತ** (वि०) 1. ಭ್ರಮೆಗೊಂಡ, ಸಂಶಯ ಹೊಂದಿದ. 2. ಮಿಥ್ಯಾಜ್ಞಾನವುಳ್ಳವನು, ಅದಲ್ಲದ ವಸ್ತುವಿನಲ್ಲಿ ಅದು ಎಂಬ ಜ್ಞಾನವುಳ್ಳವನು. भ्रमु (चलने) कर्त० "क्तः" (३-४-७२)। 3. ಸುತ್ತಾಡಿದ, ತಿರುಗಾಡಿದ. 4. ಸುತ್ತಿದ, ಚಕ್ರದಂತೆ ತಿರುಗಿದ. (न०) 5. ಭ್ರಮಣ, ಚಕ್ರದಂತೆ ತಿರುಗುವಿಕೆ, ಸುತ್ತಾಟ. 6. ಸಂಚಾರ, ತಿರುಗಾಡುವುದು, ಸುತ್ತಾಡುವುದು. भ्रमु भावे "क्तः"। (ಪುಂ) 7. ದತ್ತೂರಿಗಿಡ. 8. ಮದಿಸಿದ ಆನೆ.

**भ्रान्ति ಭ್ರಾಂತಿ** (स्त्री०) 1. ಮಿಥ್ಯಾಜ್ಞಾನ, ತಪ್ಪು ತಿಳಿವಳಿಕೆ. भ्रमु (चलने) भावे "क्तिन्" (३-३-९४)। "श्रितासि चन्दनभ्रान्त्या दुर्विपाकं विषद्रुमम्" उ० रा० १-४७। 2. ಸಂಶಯ, ಸಂದೇಹ. 3. ಭ್ರಮಣ, ಚಕ್ರದಂತೆ ತಿರುಗುವುದು. 4. ಸುತ್ತಾಡುವುದು, ತಿರುಗಾಡುವುದು, ಅಲೆದಾಡುವುದು.

**भ्रान्तिमत् ಭ್ರಾಂತಿಮತ್** (ಪುಂ) 1. ಅರ್ಥಾಲಂಕಾರದ ಒಂದು ಭೇದ. ಸಾದೃಶ್ಯದಿಂದ ಒಂದು ವಸ್ತುವಿನಲ್ಲಿ ಮತ್ತೊಂದು ವಸ್ತುವಿನ ಭ್ರಮೆಯುಂಟಾಗುವಲ್ಲಿ ಭ್ರಾಂತಿಮದಲಂಕಾರವಾಗುವುದು. ಉದಾ: "अयं प्रमत्तमधुपः त्वन्मुखं वेत्ति पङ्कजम्"। ಇಲ್ಲಿ ಮುಖದಲ್ಲಿ ಪಂಕಜತ್ವ ಭ್ರಮೆಯು ವರ್ಣಿತವಾಗಿರುವುದರಿಂದ ಭ್ರಾಂತಿಮದಲಂಕಾರ. (वि०) 2. ಭ್ರಾಂತಿಯಿಂದ ಕೂಡಿದ, ತಪ್ಪು ತಿಳಿವಳಿಕೆಯುಳ್ಳ. भ्रान्तिरस्त्यस्य "मतुप्" (५-२-९४)। 3. ಸುತ್ತುತ್ತಿರುವ, ತಿರುಗುತ್ತಿರುವ. "बिन्दुक्षेपान् पिपासुः परिसरति शिखी भ्रान्तिमद्वारियन्त्रम्" माल० २-१२। स्त्रियां "ङीप्" (४-१-६)। **–मती –ಮತೀ.**

**भ्रान्तिहर ಭ್ರಾಂತಿಹರ** (ಪುಂ) 1. ಸಚಿವ, ಮಂತ್ರಿ, ಅಮಾತ್ಯ. (वि०) 2. ಮಿಥ್ಯಾಜ್ಞಾನವನ್ನು ನಿವಾರಿಸುವ, ತಪ್ಪು ತಿಳಿವಳಿಕೆಯನ್ನು ಹೋಗಲಾಡಿಸುವ. भ्रान्तिं हरति—हृञ् (हरणे) "अच्" (३-२-९)।

**भ्राम ಭ್ರಾಮ** (ಪುಂ) 1. ಚಕ್ರದಂತೆ ತಿರುಗುವುದು, ಸುತ್ತುವುದು. 2. ಸಂಚರಿಸುವುದು, ತಿರುಗಾಡುವುದು. 3. ಮಿಥ್ಯಾಜ್ಞಾನ, ತಪ್ಪು ತಿಳಿವಳಿಕೆ. भ्रमु (चलने) "णः" (३-१-१४०)।

**भ्रामक ಭ್ರಾಮಕ** (ಪುಂ) 1. ಜಂಬುಕ, ನರಿ. 2. ಅಯಸ್ಕಾಂತ ಮಣಿ, ಸೂಜಿಗಲ್ಲು. 3. ಧೂರ್ತ, ವಂಚಕ, ಮೋಸಗಾರ. 4. ಸೂರ್ಯಕಾಂತಿ ಹೂವು. भ्रमु (चलने) + णिच् "ण्वुल्" (३-१-१३३)। "भ्रामको जम्बुके धूर्ते सूर्यावर्ताश्मभेदयोः" विश्व० ಮತ್ತು मेदि०। (वि०) 5. ತಿರುಗಿಸುವ, ಸುತ್ತಿಸುವ, ಸುತ್ತಲೂ ಚಲಿಸುವಂತೆ ಮಾಡುವ. 6. ಮಿಥ್ಯಾಜ್ಞಾನವುಂಟುಮಾಡುವ, ತಪ್ಪು ತಿಳಿವಳಿಕೆ ಕೊಡುವ.

**भ्रामण ಭ್ರಾಮಣ** (न०) ತಿರುಗುವಂತೆ ಮಾಡುವುದು, ಚಕ್ರದಂತೆ ತಿರುಗಿಸುವುದು, ಸುತ್ತುವಂತೆ ಮಾಡುವುದು. भ्रमु (चलने) + णिच् "ल्युट्" (३-३-११५)।

**भ्रामयत् ಭ್ರಾಮಯತ್** (वि०) ತಿರುಗಿಸುತ್ತಿರುವ, ಸುತ್ತಿಸುತ್ತಿರುವ. भ्रमु (चलने) + णिच् "शतृ" (३-२-१२४)। "ईश्वरः सर्वभूतानां हृद्देशेऽर्जुन तिष्ठति। भ्रामयन् सर्वभूतानि यन्त्रारूढानि मायया" गीता १८-६१।

**भ्रामर ಭ್ರಾಮರ** (ಪುಂ) 1. ಅಯಸ್ಕಾಂತ ಶಿಲೆ, ಸೂಜಿಗಲ್ಲು. (न०) 2. ಮಧು, ಜೇನುತುಪ್ಪ. भ्रमरेण कृतम् "अण्" (४-३-११९)। "भ्रामरं मधुनि स्मृतम्। पुंसि प्रस्तरभेदे" मेदि०। (वि०) 3. ಭ್ರಮರ ಸಂಬಂಧವಾದ. भ्रमरस्येदम् "अण्" (४-३-१२०)।

**भ्रामरी ಭ್ರಾಮರೀ** (स्त्री०) ಪಾರ್ವತಿ, ದುರ್ಗಾದೇವಿ. भ्रामरो भ्रमरवर्णः अस्या अस्ति "अच्" (५-२-१२७)। "ङीष्" (४-१-४१)।

**भ्राष्ट्र ಭ್ರಾಷ್ಟ್ರ** (ಪುಂ) 1. ಬಾಣಲಿ, ಹುರಿಯುವ ಓಡು. भृज्यतेऽत्र—भ्रस्ज (पाके) "ष्ट्रन्" (उ० ४-१६०)।

"रौद्रे चक्षुषि तज्जितस्तनुमनुभ्राष्ट्रं च यच्चिक्षिपे" नैष० ३-१२८। 2. ಆಕಾಶ, ಅಂತರಿಕ್ಷ.

**भ्राष्ट्रक ಭ್ರಾಷ್ಟ್ರಕ** (पुंन०) ಬಾಣಲಿ, ಹುರಿಯುವ ಓಡು. भ्राष्ट्र स्वार्थे "कः"। "उत्पतितोऽपि हि चणकः शक्तः किं भ्राष्ट्रकं भङ्क्तुम्" पञ्चतं० (१-१-४३)।

**भ्रुकुंस ಭ್ರುಕುಂಸ** (पुं०) "भ्रकुंस" ಪದದಲ್ಲಿ ನೋಡಿ.

**भ्रुकुटि(टी) ಭ್ರುಕುಟಿ(ಟೀ)** (स्त्री०) "भ्रकुटि" ಪದದಲ್ಲಿ ನೋಡಿ. "भ्रुकुटीकठोरितललाटमाननम्" माघ० १५-९। "भ्रुकुटी तस्य मुखे परिस्फुरन्ती" याद० १५-१०१।

**भ्रू ಭ್ರೂ** (स्त्री०) ಹುಬ್ಬು, ಕಣ್ಣಿನ ಮೇಲೆ ಇರುವ ರೋಮ ಪಙ್ತಿ. भ्रमु (अनवस्थाने) "डू:" (उ० २-६९)। "भ्रुवा स्फुरन्त्या मदनस्य मौर्वी ज्याघातरेखामभिदर्शयन्ती" याद० १३-५४।

**भ्रूकुटि ಭ್ರೂಕುಟಿ** (स्त्री०) "भ्रकुटि" ಪದದಲ್ಲಿ ನೋಡಿ.

**भ्रूकुंस ಭ್ರೂಕುಂಸ** (पुं०) "भ्रकुंस" ಪದದಲ್ಲಿ ನೋಡಿ.

**भ्रूक्षेप ಭ್ರೂಕ್ಷೇಪ** (पुं०) ಹುಬ್ಬನ್ನು ಕುಣಿದಾಡಿಸುವುದು, ಹುಬ್ಬುಗಳ ಮೂಲಕ ಮಾಡುವ ಸಂಜ್ಞೆ. भ्रुवोः क्षेपः। ಯಾವುದಾದರೂ ವಿಷಯವನ್ನು ರಹಸ್ಯವಾಗಿ ಅಥವಾ ಮೌನದಿಂದ ಸೂಚಿಸಲು ಹುಬ್ಬುಗಳನ್ನು ಆಡಿಸುವುದು ಒಂದು ಸಂಕೇತ. "प्रवेशयामास च भर्तुरेनां भ्रूक्षेपमात्रानुमतप्रवेशाम्" कुमा० ३-६०।

**भ्रूजाहृ ಭ್ರೂಜಾಹ** (न०) ಹುಬ್ಬಿನ ಮೂಲಭಾಗ, ಹುಬ್ಬಿನ ಪ್ರಾರಂಭದ ಭಾಗ. भ्रुवः मूलम् "जाहच्" (५-२-२४)।

**भ्रूण ಭ್ರೂಣ** (पुं०) 1. ಹೆಂಗಸರ ಗರ್ಭ. 2. ಶಿಶು, ಬಾಲಕ. भ्रूण्यते—भ्रूण (आशाविशङ्कयोः) "घञ्" (३-३-१९)। "भ्रूणोऽर्भके स्त्रैणगर्भे" अम०।

**भ्रूणघ्न ಭ್ರೂಣಘ್ನ** (वि०) 1. ಭ್ರೂಣಹತ್ಯೆ ಮಾಡುವವನು, ಶಿಶುವನ್ನು ಕೊಲ್ಲುವವನು. 2. ಸ್ತ್ರೀಯರ ಗರ್ಭವನ್ನು ನಾಶಪಡಿಸುವವನು. भ्रूणं हन्ति—हन (हिंसागत्योः) "कः" (वा० ३-२-५)।

**भ्रूणहत्या ಭ್ರೂಣಹತ್ಯಾ** (स्त्री०) 1. ಸ್ತ್ರೀಯರ ಗರ್ಭವನ್ನು ನಾಶಪಡಿಸುವುದು. 2. ಶಿಶುವನ್ನು ಕೊಲ್ಲುವುದು. भ्रूणस्य हत्या।

**भ्रूभङ्ग ಭ್ರೂಭಂಗ** (पुं०) ಹುಬ್ಬನ್ನು ಗಂಟುಹಾಕುವುದು, ಅಸಮಾಧಾನ ತೋರಿಸಲು ಹುಬ್ಬು ಗಂಟಿಕ್ಕುವುದು. "सभ्रूभङ्गं मुखमिव पयो वेत्रवत्याश्चलोर्मि" मेघ० १-२४।

**भ्रूभेद ಭ್ರೂಭೇದ** (पुं०) "भ्रूभङ्ग" ಪದದ ಅರ್ಥ.

**भ्रूभेदिन् ಭ್ರೂಭೇದಿನ್** (वि०) ಅಸಮಾಧಾನ ಅಥವಾ ಕೋಪವನ್ನು ಸೂಚಿಸಲು ಗಂಟುಹಾಕಿದ ಹುಬ್ಬುಳ್ಳ. भ्रूभेदोऽस्यास्ति "इनिः" (५-२-११५)।

**भ्रेष ಭ್ರೇಷ** (पुं०) 1. ಚಲನ, ಅಲುಗಾಡುವುದು, ಅಳ್ಳಾಡುವುದು. भ्रेषृ (गतौ) "घञ्" (३-३-१८)। 2. ಯೋಗ್ಯವಾದ ಒಂದು ಸ್ಥಾನದಿಂದ (ಪದವಿ ಅಥವಾ ವೃತ್ತಿ) ಕೆಳಕ್ಕೆ ಬರುವುದು, ಉಚಿತವಾದ ಸ್ಥಾನವು ತಪ್ಪುವುದು. "भ्रेषो भ्रंशो यथोचितात्" अम०। 3. ತಪ್ಪುರಿಸಿ ನಡೆಯುವುದು, ತಪ್ಪು ಹೆಜ್ಜೆ ಹಾಕುವುದು. 4. ದಾರಿ ಬಿಟ್ಟು ಹೋಗುವುದು, ತಪ್ಪು ದಾರಿಯಲ್ಲಿ ನಡೆಯುವುದು. भावे "ल्युट्" (३-३-११५)। **भ्रेषणम् ಭ್ರೇಷಣಮ್.**

**भ्रौवेय ಭ್ರೌವೇಯ** (पुं०) ಭ್ರೂ ಎಂಬ ಹೆಂಗಸಿನ ಮಗ. भ्रूर्नाम काचित् स्त्री, तस्या अपत्यम् "ढक्" (४-१-१२५)। वुगागमश्च।

**भ्लक्ष ಭ್ಲಕ್ಷ** (पुं०) ತಿನ್ನುವುದು, ಊಟಮಾಡುವುದು. भ्लक्ष (अदने) "घञ्" (३-३-१८)।

इति "भ" कारादिपदार्थनिरूपणम्।

# म

**म ಮ** ಇದು ವ್ಯಂಜನಾಕ್ಷರಗಳಲ್ಲಿ "ಪ" ವರ್ಗದ ಐದನೆಯ ಮತ್ತು ಅಭ್ಯಂತರ ಸ್ಪೃಷ್ಟಪ್ರಯತ್ನದಿಂದ ಓಷ್ಠ ಮತ್ತು ನಾಸಿಕೆಗಳಲ್ಲಿ ಹುಟ್ಟುವ ಅನುನಾಸಿಕ ವರ್ಣ. "कादयो मावसानाः स्पर्शाः"। "स्पृष्टं प्रयतनं स्पर्शानाम्"। "उपूपध्मानीयानामोष्ठौ"। "ञमङणनानां नासिका च" सि० कौ०।

**म ಮ** (ಪುं०) 1. ಸಮಯ, ಕಾಲ. 2. ಶ್ರೀಕೃಷ್ಣ. 3. ಬ್ರಹ್ಮ, ಚತುರ್ಮುಖ. 4. ಮಹಾದೇವ, ಪರಶಿವ, ಪರಮೇಶ್ವರ. 5. ಯಮ. 6. ಚಂದ್ರ. 7. ವಿಷ. "मः शिवश्चन्द्रमा वेधाः" एका०। 8. ಇಂದ್ರ. 9. ಬಂಧನ. 10. ಮೂರು ಗುರುವರ್ಣಗಳುಳ್ಳ "ಮ" ಗಣ. 11. ಶಿರಸ್ಸು, ತಲೆ. "मो यमे समयेऽपि स्यात् विषे च मधुसूदने" मेदि०। (न०) 12. ಜಲ, ನೀರು. "मः शम्भौ धातरीन्द्रे च जले तु स्यान्नपुंसकम्। मः शिरो मा च मध्ये च बन्धने मः प्रकीर्तितः" रत्न०। (स्त्री०) **मा ಮಾ.** 13. ಮಧ್ಯಮ ಸ್ವರ. 14. ಲಕ್ಷ್ಮಿ. "मा स्त्री पद्मालयायां स्यात् पुंलिङ्गश्चन्द्रशेखरे" मेदि०।

**मकर ಮಕರ** (ಪುं०) 1. ಮತ್ಸ್ಯದ ಒಂದು ಭೇದ. मङ्कते —मकि (भूषायाम्) "अच्" (३-१-१३४)। मकं राति—रा (दाने) "कः" (३-२-३)। "झषाणां मकरश्चास्मि" गीता १०-३१। 2. ಮೇಷ ಮೊದಲಾದ ರಾಶಿಗಳಲ್ಲಿ ಹತ್ತನೆಯ ರಾಶಿ. 3. ಕುಬೇರನ ಒಂಬತ್ತು ನಿಧಿಗಳಲ್ಲೊಂದು. मं विषं किरति—कॄ (विक्षेपे) "अप्" (३-३-५७)।

**मकरकुण्डल ಮಕರಕುಂಡಲ** (न०) ಮಕರಾಕಾರದ ಒಂದು ಕರ್ಣಾಭರಣ, ಹತ್ತಕಡುಕ. कुण्डलं मकर इव। "महाकिरीटकटकः स्फुरन्मकरकुण्डलः" भाग० ३-४-३७।

**मकरकेतन ಮಕರಕೇತನ** (ಪುं०) ಮನ್ಮಥ, ಕಾಮದೇವ. मकरः केतनम् अस्य। एवं मकरकेतुः---ध्वजः ಇತ್ಯಾದಿ. "शरीरिणा जैत्रशरेण यत्र निःशङ्कमूषे मकरध्वजेन" माघ० ३-६१।

**मकरन्द ಮಕರಂದ** (ಪುं०) 1. ಪುಷ್ಪರಸ, ಹೂವಿನ ರಸ. मकरं द्यति—दो (अवखण्डने) "कः" (३-२-३)। पृषो०। "प्रस्थानप्रणतिभिरङ्गुलीषु चक्रुर्मौलिस्रक्च्युत-मकरन्दरेणुगौरम्" रघु० ४-८८। (न०) 2. ಕೇಸರ, ಕಿಂಜಲ್ಕ, ಹೂವಿನ ಕುಸುರು.

**मकरव्यूह ಮಕರವ್ಯೂಹ** (ಪುं०) ಮಕರದ ಆಕಾರದಲ್ಲಿ ನಿಲ್ಲಿಸುವ ಸೈನ್ಯಗಳ ಗುಂಪು. मकराकारः व्यूहः।

**मकरसंक्रान्ति ಮಕರಸಂಕ್ರಾಂತಿ** (स्त्री०) 1. ಸೂರ್ಯನು ಮಕರ ರಾಶಿಗೆ ಪ್ರವೇಶಿಸುವುದು. 2. ಸೂರ್ಯನು ಮಕರ ರಾಶಿಗೆ ಪ್ರವೇಶಿಸುವ ದಿವಸ. मकरे मकरराशौ (रवेः) संक्रान्तिः।

**मकराङ्क ಮಕರಾಂಕ** (ಪುं०) ಮನ್ಮಥ, ಕಾಮದೇವ.

**मकरालय ಮಕರಾಲಯ** (ಪುं०) ಸಮುದ್ರ. मकराणामालयः।

**मकरिन् ಮಕರಿನ್** (ಪುं०) ಸಮುದ್ರ. मकरोऽस्यास्ति "इनिः" (५-२-११५)।

**मकुट ಮಕುಟ** (न०) ಕಿರೀಟ. मङ्क्तेऽनेन—मकि (मण्डने) "उटः" बाहु०। "अधराहितचारुवंशनालाः मकुटालम्बिमयूरपिञ्छमालाः" याद० १५-९०।

**मकुति ಮಕುತಿ** (ಪುं०) ಸರ್ಕಾರವು ಶೂದ್ರನಿಗೆ ಕೊಡುವ ಆಜ್ಞಾಪತ್ರ. "मकुतिः शूद्रशासनम्" त्रिकाण्ड०।

**मकुर ಮಕುರ** (ಪುं०) 1. ದರ್ಪಣ, ಕನ್ನಡಿ. मकि (मण्डने) "उरच्" (उ० १-४०)। 2. ಕುಂಬಾರನ ದಂಡ, ಕುಂಬಾರನು ಚಕ್ರವನ್ನು ತಿರುಗಿಸುವ ಕೋಲು. 3. ವಕುಳವೃಕ್ಷ. 4. ಕೋರಕ, ಮೊಗ್ಗು. "मुकुरो मकुरो यथा। कुलालदण्डे वकुले कोरकादर्शयोरपि" हेम०।

**मकुल ಮಕುಲ** (ಪುं०) 1. ವಕುಳವೃಕ್ಷ, ಪವಳದ ಗಿಡ. मकि (मण्डने) "उलच्" बाहु०। पृषो०। 2. ಮೊಗ್ಗು.

**मकुष्टक ಮಕುಷ್ಟಕ** (ಪುं०) ಕಾಡುಹೆಸರು. मकि (मण्डने) "उः" बाहु०। मकुं स्तकति—ष्टक (प्रतिघाते) "अच्" (३-१-१३४)।

**मकुष्ठ ಮಕುಷ್ಠ** (ಪುं०) 1. ಕಾಡುಹೆಸರು. (वि०) 2. ಮೆಲ್ಲನೆಯ, ನಿಧಾನವಾದ, ತಾಮಸದ. "मकुष्ठो व्रीहिभेदे ना मन्थरे पुनरन्यवत्" मेदि०। "मकुष्ठो वनमुद्गः स्यान्मकुष्ठकमुकुष्ठकौ"।

**मकूलक ಮಕೂಲಕ** (ಪುं०) ಜಾಪಾಳ. मकि (मण्डने) "ऊलच्" (उ० ३-९०)।

**मक्कोल ಮಕ್ಕೋಲ** (ಪುं०) ಒಂದು ಗೈರಿಕ ಧಾತು. "शिलाधातुः सितोपलः मक्कोलः" त्रिकाण्ड०।

**मक्वण ಮಕ್ವಣ** (ಪುಂ) 1. ಚಿಕ್ಕ ಆನೆ, ಸಣ್ಣ ಆಕಾರದ ಆನೆ. 2. ಕಾಲದಲ್ಲಿ ದಂತ ಹುಟ್ಟದಿರುವ ಆನೆ. "कालेऽप्यजातदन्तश्च स्वल्पाङ्गोऽपि च मक्वणः" वैजं०।

**मक्ष ಮಕ್ಷ** (ಪುಂ) 1. ಸಿಟ್ಟು, ಕೋಪ. 2. ರಾಶಿ, ಗುಂಪು, ಸಮೂಹ. 3. ಕಪಟ, ದಂಭಾಚಾರ. मक्ष (संघाते रोषे च) "घञ्" (३-३-१८)। 4. ತನ್ನ ತಪ್ಪನ್ನು ಮುಚ್ಚಿಕೊಳ್ಳುವಿಕೆ, ಮಾಡಿದ ಅಪರಾಧವನ್ನು ಇಲ್ಲವೆಂದು ಹೇಳುವುದು. "स्वदोषाच्छादनं मक्षः" हारा०।

**मक्षवीर्य ಮಕ್ಷವೀರ್ಯ** (ಪುಂ) ಪ್ರಿಯಾಲವೃಕ್ಷ, ಮೊರಟೆ ಗಿಡ. मक्षं वीर्यमस्य।

**मक्षिका ಮಕ್ಷಿಕಾ** (स्त्री०) ನೊಣ. मक्ष (संघाते रोषे च) "ण्वुल्" (३-१-१३३)। "चुलकगतसमुद्रास्वादने कुम्भयोनेरितरकरनिरस्ता मक्षिकोत्सारणीया" चं० रा०। **मक्षीका ಮಕ್ಷೀಕಾ.** पृषो०।

**मक्षिकामल ಮಕ್ಷಿಕಾಮಲ** (न०) ಜೇನುಮೇಣ. मक्षिकाया मलम्।

**मख ಮಖ** (ಪುಂ) ಯಜ್ಞ, ಯಾಗ, ದೇವತೆಗಳ ಪೂಜೆ. मखन्ति देवा अत्र—मख (गतौ) "घञ्" (३-३-१२१)। "मखेष्वखिन्नोऽनुमतः पुरोधसा धिनोति हव्येन हिरण्यरेतसम्" किरा० १-२२।

**मखत्रातृ ಮಖತ್ರಾತೃ** (ಪುಂ) ಶ್ರೀರಾಮಚಂದ್ರ. मखस्य विश्वामित्रयागस्य त्राता रक्षकः। "रावणारिर्मखत्राता सीतायाः पतिरित्यपि"।

**मखद्विष् ಮಖದ್ವಿಷ್** (ಪುಂ) 1. ರಾಕ್ಷಸ, ಅಸುರ. (वि०) 2. ಯಜ್ಞವನ್ನು ದ್ವೇಷಿಸುವವನು, ಯಜ್ಞಕ್ಕೆ ವಿಘ್ನ ವುಂಟುಮಾಡುವವನು. मखं द्वेष्टि — द्विष (अप्रीतौ) "क्विप्" (३-२-६१)। "त्रिलोकनाथेन सदा मखद्विषस्त्वया नियम्या ननु दिव्यचक्षुषा" रघु० ३-४५।

**मखाग्नि ಮಖಾಗ್ನಿ** (ಪುಂ) ಸಂಸ್ಕಾರ ಹೊಂದಿದ ಯಾಗಾಗ್ನಿ. एवं **मखानलः ಮಖಾನಲಃ** ಇತ್ಯಾದಿ. "महावीरो मखानलः" त्रिकाण्ड०।

**मगध ಮಗಧ** (ಪುಂ ಬಂ ವಂ) 1. ಮಗಧದೇಶ, ಈಗಿನ ಬಿಹಾರ ಪ್ರಾಂತದ ದಕ್ಷಿಣಭಾಗ. "मगधाः कीकटा मताः" त्रिकाण्ड०। "अस्ति मगधेषु पुष्पपुरी नाम नगरी" दशकु०। 2. ಮಗಧ ದೇಶದ ಜನರು. "इङ्गितज्ञाश्च मगधाः प्रेक्षितज्ञाश्च कोसलाः" भा० कर्ण० ३८-३४।

**मगधा ಮಗಧಾ** (स्त्री०) ಹಿಪ್ಪಲಿ.

**मगधेश ಮಗಧೇಶ, –ईश्वर –ಈಶ್ವರ** (ಪುಂ) 1. ಜರಾಸಂಧ. 2. ಮಗಧ ದೇಶದ ದೊರೆ. मगधानामीशः ईश्वरो वा। "प्राक्सन्निकर्षं मगधेश्वरस्य नीत्वा कुमारीमवदत्सुनन्दा" रघु० ६-२०।

**मग्न ಮಗ್ನ** (वि०) 1. ಮುಳುಗಿದ, ನೀರಿನೊಳಗೆ ಹೋಗಿರುವ. टु मस्जो (शुद्धौ) "क्तः" (३-४-७२)। तकारस्य नत्वम् (८-२-४५)। "कृतः प्रयत्नो न च देव लब्धं मग्नं पयस्याभरणोत्तमं ते" रघु० १६-७६। 2. ಒಳಗೆ ಅಡಗಿರುವ, ಒಳಕ್ಕೆ ಹುದುಗಿಕೊಂಡ, ಒಳಗೆ ಸೇರಿಕೊಂಡಿರುವ. "मग्नां द्विपच्छद्मनि पङ्कभूते संभावनां भूतिमिवोद्धरिष्यन्" किरा० ३-३९।

**मघ ಮಘ** (ಪುಂ) 1. ಒಂದು ದ್ವೀಪ. 2. ಒಂದು ದೇಶ. मघि (गतौ) "अच्" (३-१-१३४)। पृषो०। (न०) 3. ಒಂದು ಜಾತಿಯ ಪುಷ್ಪ. 4. ಧನ, ಐಶ್ವರ್ಯ.

**मघवत् ಮಘವತ್** (ಪುಂ) 1. ಇಂದ್ರ, ದೇವತೆಗಳ ರಾಜ. मह्यते पूज्यते — मह (पूजायाम्) "कनिः" (उ० १-१५७)। निपा०। मघवा मघवानौ मघवानः। "तव प्रयातस्य जयाय तेषां क्रियादघानां मघवा विघातम्" किरा० ३-५२। "मघवा बहुलम्" (६-४-१२८) इति "तृ" आदेशे मघवान् मघवन्तौ मघवन्तः इति रूपम्। "हविर्जक्षति निःशङ्को मखेषु मघवानसौ" भट्टि० १८-१९। (वि०) 2. ಧನವುಳ್ಳವನು, ಐಶ್ವರ್ಯವಂತ. मघं धनमस्यास्ति "मतुप्" (५-२-९४)।

**मघा ಮಘಾ** (स्त्री०) ಅಶ್ವಿನಿ ಮೊದಲಾಗಿ ಹತ್ತನೆಯ ನಕ್ಷತ್ರ. ಇದು ಪಂಚತಾರಾತ್ಮಕವಾದುದು. ಒಂದು ಮನೆಯ ಆಕಾರವುಳ್ಳದ್ದು. ಪಿತೃಗಣವು ಇದರ ಅಧಿಷ್ಠಾತೃ ದೇವತೆ. ಮಖಾನಕ್ಷತ್ರದಲ್ಲಿ ಜನಿಸಿದವನು ಕಠಿನ ಮನಸ್ಸುಳ್ಳವನು. ಮಾತಾಪಿತೃಗಳಲ್ಲಿ ಭಕ್ತಿಯುಳ್ಳವನು. ತೀಕ್ಷ್ಣಸ್ವಭಾವದವನು. ಶುದ್ಧ ವಿದ್ಯಾವಂತ. ಶತ್ರುಗಳನ್ನು ಜಯಿಸುವ ಬುದ್ಧಿಯುಳ್ಳವನು. **मघी ಮಘೀ.** ಒಂದು ಧಾನ್ಯ.

**मघात्रयोदशी ಮಘಾತ್ರಯೋದಶೀ** (स्त्री०) ಮಘಾ ನಕ್ಷತ್ರದಿಂದ ಕೂಡಿದ ತ್ರಯೋದಶೀ ತಿಥಿ, ಭಾದ್ರಪದ ಕೃಷ್ಣ ತ್ರಯೋದಶಿ.

**मङ्कु ಮಂಕು** (ಪುಂ) ಮೈಮೇಲಿನ ಚಿಬ್ಬು, ಚರ್ಮದ ಮೇಲಿನ ಮಚ್ಚೆ. "मङ्कुस्तु सिध्म सिध्मं च" वैजं०।

**मङ्कुर ಮಂಕುರ** (ಪುಂ) ದರ್ಪಣ, ಕನ್ನಡಿ. मकि (मण्डने) "उरच्" बाहु०।

**मङ्कुश ಮಂಕುಶ** (ಪುಂ०) ಸಂಗೀತ ಮತ್ತು ಕುಣಿತ ಬಲ್ಲವನು.

**मङ्क्तृ ಮಂಕ್ತೃ** (ವಿ०) ಸ್ನಾನಮಾಡುವವನು. टु मस्जो (शुद्धौ) "तृच्" (३-१-१३३)। नुम् (७-१-६०)।

**मङ्क्षु ಮಂಕ್ಷು** (अव्य०) 1. ಜಾಗ್ರತೆಯಾಗಿ, ಶೀಘ್ರವಾಗಿ, ಕೂಡಲೆ. मज्जति — टुमस्जो (शुद्धौ) "सुः" बाहु०। नुमागमः (७-१-६०)। "यद्गन्तिनः कटकटाहतटान्मिमङ्क्षोर्मङ्क्षूदपाति परितः पटलैरलीनाम्" माघ० ५-३७। 2. ಅಧಿಕವಾಗಿ, ಹೆಚ್ಚಾಗಿ. 3. ನಿಜವಾಗಿ, ವಾಸ್ತವವಾಗಿ, ಯಥಾರ್ಥವಾಗಿ. "मङ्क्षु शीघ्रे भृशे तत्त्वे" हेम०।

**मङ्ग ಮಂಗ** (पुंन०) ಹಡಗಿನ ತುದಿ, ನೌಕೆಯ ಶಿಖರ. मगि (गतौ) "अच्" (३-१-१३४)। "नौशिरो मङ्गमस्त्रियाम्" वैज०।

**मङ्गल ಮಂಗಲ** (न०) 1. ಮಂಗಳ ಗ್ರಹ, ಅಂಗಾರಕ, ಕುಜ. मगि (गतौ) "अलच्" (उ० ५-७०)। "कुजारमङ्गलाङ्गाराः लोहिताङ्गो महीसुतः" वैज०। 2. ಆನಂದ, ಹರ್ಷ, ಸುಖ. "भद्रं भद्रं वितर भगवन् भूयसे मङ्गलाय" मालती० १-३। 3. ಮಲ್ಲಿಗೆ ಹೂವಿನ ವಾಸನೆ, ಮಲ್ಲಿಗೆ ಹೂವಿನಲ್ಲಿರುವ ಪರಿಮಳ. "मल्लिकायां स्थितो गन्धो मङ्गल्यो मङ्गलश्च सः" वैज०। 4. ಕಲ್ಯಾಣ, ಮಂಗಳ, ಶುಭ. "प्रध्मातशङ्खे परितो दिगन्तांस्तूर्यस्वने मूर्च्छति मङ्गलार्थे" रघु० ६-९। 5. ಶ್ರೇಯಸ್ಸು, ಕ್ಷೇಮ. "संगः सतां किमु न मङ्गलमातनोति"। 6. ಶುಭನಿಮಿತ್ತ, ಒಳ್ಳೆಯ ಶಕುನ. (स्त्री०) **-ला - ಲಾ.** 7. ಬಿಳಿ ಗರಿಕೆ. 8. ದುರ್ಗಾದೇವಿ, ಪಾರ್ವತಿ. "मङ्गला सितदूर्वायामुमायां पुंसि भूमिजे। नपुंसकन्तु कल्याणे सर्वार्थलक्षणे" मेदि०। 9. ಪತಿವ್ರತೆ, ಪತಿಗೆ ಅನುಕೂಲವಾಗಿರುವ ಹೆಂಗಸು, ಪತಿಸೇವೆಯಲ್ಲಿ ನಿರತಳಾದ ಹೆಂಗಸು. 10. ಅರಿಶಿನ.

**मङ्गलकर ಮಂಗಲಕರ** (वि०) ಮಂಗಳವನ್ನು ಉಂಟುಮಾಡುವ, ಕ್ಷೇಮವನ್ನುಂಟುಮಾಡುವ, ಶ್ರೇಯಸ್ಸನ್ನು ಉಂಟುಮಾಡುವ. मङ्गलं करोति — डुकृञ् (करणे) "टः" (३-२-२०)।

**मङ्गलकारक ಮಂಗಲಕಾರಕ** (वि०) ಶುಭವನ್ನುಂಟುಮಾಡುವ, ಕ್ಷೇಮವನ್ನುಂಟುಮಾಡುವ. मङ्गलं करोति — कृञ् (करणे) "ण्वुल्" (३-१-१३३)।

**मङ्गलकार्य ಮಂಗಲಕಾರ್ಯ** (न०) ಶುಭಕಾರ್ಯ, ವಿವಾಹ ಮೊದಲಾದ ಕಲ್ಯಾಣಕಾರ್ಯ, ಹಬ್ಬದ ಆಚರಣೆ.

**मङ्गलग्रह ಮಂಗಲಗ್ರಹ** (ಪುಂ०) 1. ಕುಜಗ್ರಹ, ಅಂಗಾರಕ. 2. ಶುಭಗ್ರಹ, ಶುಭ ಫಲವನ್ನು ಕೊಡುವ ಗ್ರಹ.

**मङ्गलच्छाय ಮಂಗಲಚ್ಛಾಯ** (ಪುಂ०) ಪ್ಲಕ್ಷವೃಕ್ಷ. मङ्गला मङ्गलजनिका छायास्य।

**मङ्गलतूर्य ಮಂಗಲತೂರ್ಯ, -वाद्य -ವಾದ್ಯ** (न०) ಮಂಗಳಕಾರ್ಯಗಳಲ್ಲಿ ನಡೆಯುವ ವಾದ್ಯ. "मुखश्रवा मङ्गलतूर्यनिस्वनाः प्रमोदनृत्यैः सह वारयोषिताम्" रघु० ३-१९।

**मङ्गलपाठक ಮಂಗಲಪಾಠಕ** (ಪುಂ०) ಮಂಗಳವನ್ನು ಪಠಿಸುವವನು, ಸ್ತುತಿಸುವವನು, ಹೊಗಳುಭಟ. पठति— पठ (व्यक्तायां वाचि) "ण्वुल्" (३-१-१३३)। मङ्गलस्य पाठकः।

**मङ्गलप्रद ಮಂಗಲಪ್ರದ** (वि०) ಮಂಗಳವನ್ನುಂಟುಮಾಡುವ, ಕ್ಷೇಮವನ್ನುಂಟುಮಾಡುವ, ಶ್ರೇಯಸ್ಸನ್ನುಂಟುಮಾಡುವ. मङ्गलं प्रददाति — प्र + डुदाञ् (दाने) "कः" (३-२-६)। (स्त्री०) **-प्रदा -ಪ್ರದಾ.** ಅರಿಶಿನ.

**मङ्गलवार ಮಂಗಲವಾರ** (ಪುಂ०) ಕುಜವಾರ.

**मङ्गलसूत्र ಮಂಗಲಸೂತ್ರ** (न०) 1. ಸೌಭಾಗ್ಯವನ್ನು ಕೊಡುವ ಸೂತ್ರ, ಶುಭಸೂಚಕ ಸೂತ್ರ, ಕೈಗೆ ಕಟ್ಟುವ ಪ್ರತಿಸರ, ಶುಭಕಾರ್ಯಗಳಲ್ಲಿ ಕಟ್ಟುವ ಕಂಕಣ. 2. ವಿವಾಹದಲ್ಲಿ ಹೆಂಗಸರಿಗೆ ಕಂಠದಲ್ಲಿ ಕಟ್ಟುವ ಮಂಗಳ ಸೂತ್ರ, ಮಾಂಗಲ್ಯದ ಸೂತ್ರ.

**मङ्गल्य ಮಂಗಲ್ಯ** (ಪುಂ०) 1. ನೀರಾಮೆ ಬಳ್ಳಿ. 2. ಅಶ್ವತ್ಥ ವೃಕ್ಷ, ಅರಳಿಮರ. 3. ಬಿಲ್ವವೃಕ್ಷ, ಬಿಲ್ವಪತ್ರೆ ಮರ. 4. ಕಾಡುಕಡಲೆ. (न०) 5. ಮಲ್ಲಿಗೆ ಹೂವಿನ ವಾಸನೆಯುಳ್ಳ ಅಗುರು. "मङ्गल्यं मल्लिगन्धि यत्" अम०। 6. ದಧಿ, ಮೊಸರು. 7. ಕುಂಕುಮಕೇಸರಿ ಪಚ್ಚ ಕರ್ಪೂರ ಹರಿದ್ರೆ ಮುರೆ ಮುಸ್ತೆ ಮುಂತಾದ ಸುಗಂಧದ್ರವ್ಯಗಳಿಂದ ಮಿಶ್ರವಾದ ನೀರಿನ ಸ್ನಾನ. "यत्तु सर्वौषधिस्नानं तन्मङ्गल्यम्" वैज०। (वि०) 8. ಮಂಗಳಕರವಾದ, ಶುಭಕರವಾದ, ಕಲ್ಯಾಣವನ್ನುಂಟುಮಾಡುವ. मङ्गलाय हितम् "यत्" (५-१-५)। (स्त्री०) **-ल्या -ಲ್ಯಾ.** 9. ಶಮೀವೃಕ್ಷ, ಬನ್ನಿಮರ. 10. ಕಾಡುಸಬ್ಬಸಿಗೆ. 11. ಬೆಂಡೆಗಿಡ. 12. ಬಿಳಿ ಬಜೆ. 13. ಮಲ್ಲಿಗೆ ಹೂವಿನ ವಾಸನೆ. "मल्लिकायां स्थितो गन्धः मङ्गल्या मङ्गलश्च सः" वैज०। 14. ಶಂಖಪುಷ್ಪದ ಗಿಡ. 15. ಪ್ರೇಂಕಣ ಗಿಡ, ಪ್ರಿಯಂಗುಲತೆ. 16. ಕಪಿತ್ಥ

वृक्ष. 17. ಗೋರೋಚನ. "मङ्गल्यः स्यात् त्रायमाणाश्वत्थबिल्वमसूरके। स्त्रियां शम्यामथः पुष्पीमिसीशुक्लवचासु च। रोचनायामथो दध्नि क्लीबं शिवकरे त्रिषु" मेदि०।

**मङ्गल्यक ಮಂಗಲ್ಯಕ** (पुं०) ಕಾಡುಕಡಲೆ. मङ्गले साधुः "यत्" (४-४-९८)। स्वार्थे "कन्"।

**मङ्गिनी ಮಂಗಿನೀ** (स्त्री०) ನೌಕೆ, ಹಡಗು.

**मचर्चिका ಮಚರ್ಚಿಕಾ** (स्त्री०) ಪ್ರಶಸ್ತವಾದ, ಶ್ರೇಷ್ಠವಾದ. ನಾಮಪದದ ಕೊನೆಯಲ್ಲಿ ಇದರ ಪ್ರಯೋಗ गोमचर्चिका ಶ್ರೇಷ್ಠವಾದ ಹಸು.

**मज्जकृत् ಮಜ್ಜಕೃತ್** (न०) ದೇಹದೊಳಗಿನ ಎಲುಬು. मज्जानं करोति—डुकृञ् (करणे) "क्विप्" (३-२-७६)। ಊಟಮಾಡಿದ ಅನ್ನವು ರಸವಾಗಿ ಪರಿಣಮಿಸಿ ಕ್ರಮೇಣ ರಕ್ತ ಮಾಂಸ ಮೇದಸ್ಸು ಅಸ್ಥಿ ಮಜ್ಜೆ ಮತ್ತು ಶುಕ್ರ ಧಾತುಗಳನ್ನು ಉಂಟುಮಾಡುವುದು. "रसाद्रक्तं ततो मांसं मांसान्मेदः प्रजायते। मेदसोऽस्थि ततो मज्जा मज्जः शुक्रं तु जायते" सुश्रुत० सूत्र० १४-१०।

**मज्जत् ಮಜ್ಜತ್** (वि०) ನೀರಿನಲ್ಲಿ ಮುಳುಗುತ್ತಿರುವ, ಸ್ನಾನಮಾಡುತ್ತಿರುವ. टुमस्जो (शुद्धौ) "शतृ" (३-२-१२४)। "यद्गोप्रतरकल्पोऽभूत् संमर्दस्तत्र मज्जताम्" रघु० १५-१०१।

**मज्जन् ಮಜ್ಜನ್** (पुं०) 1. ಎಲುಬಿನೊಳಗಿನ ನೆಣ, ದೇಹಸಾರ. टुमस्जो (शुद्धौ) "कनिः" (उ० १-१५७)। निघ०। "एते निष्कृष्य जङ्घानलकमुदयिनीर्मज्जधाराः पिबन्ति" मालती० ५-१७। 2. ಮರದ ಚೇಗು, ಮರದ ಸಾರ.

**मज्जन ಮಜ್ಜನ** (न०) 1. ನೀರಿನೊಳಗೆ ಮುಳುಗುವುದು, ನೀರಿನಲ್ಲಿಳಿದು ಸ್ನಾನಮಾಡುವುದು. टु मस्जो (शुद्धौ) "ल्युट्" (३-३-११५)। "इति धौतपुरन्ध्रिमत्सरान् सरसि मज्जनेन" माघ० ८-७१। 2. ಮಜ್ಜೆ, ದೇಹಸಾರ.

**मज्जा ಮಜ್ಜಾ** (स्त्री०) 1. ಎಲುಬಿನೊಳಗಿನ ನೆಣ, ದೇಹಸಾರ, ಸತ್ವ. मज्जति—टु मस्जो (शुद्धौ) "अच्" (३-१-१३४)। "लज्जावद्राजवन्मज्जा मांससारास्थिसारयोः" इति भागुरिः। "मज्जोक्ता मज्जया सह" द्विरूप०। 2. ಮರದ ಸಾರ, ಮರದ ರಸ.

**मज्जाज ಮಜ್ಜಾಜ** (न०) 1. ವೀರ್ಯ, ಶುಕ್ರಧಾತು. मज्जाया जायते—जनी (प्रादुर्भावे) "डः" (३-२-९८)। 2. ಗುಗ್ಗುಳ.

**मज्जारस ಮಜ್ಜಾರಸ** (पुं०) ಶುಕ್ರಧಾತು, ವೀರ್ಯ. मज्जाया रसः।

**मज्जासार ಮಜ್ಜಾಸಾರ** (पुं०) ಜಾಯಿಕಾಯಿ. मज्जायां सारोऽस्य।

**मञ्च ಮಂಚ** (पुं०) 1. ಮಂಚ, ಪಲ್ಲಂಗ. मञ्चते—मचि (धारणोच्छ्रायपूजनेषु) "अच्" (३-१-१३४)। 2. ಉನ್ನತವಾದ ಆಸನ, ಎತ್ತರವಾದ ಪೀಠ. "स तत्र मञ्चेषु मनोज्ञवेषान् सिंहासनस्थानुपचारवत्सु" रघु० ६-१। 3. ಅಟ್ಟಣೆ, ಕಾವಲುಗಾರನಿಗಾಗಿ ಎತ್ತರವಾಗಿ ಕಟ್ಟುವ ಗುಡಿಸಲು, ಎತ್ತರದ ಜೋಪಡಿ.

**मञ्चक ಮಂಚಕ** (पुं०) 1. ಪರ್ಯಂಕ, ಮಂಚ. मञ्च स्वार्थे "कः"। "वृद्धोऽन्धः पतिरेष मञ्चकगतः स्थूणावशेषं गृहम्" सा० द०। 2. ಅಟ್ಟಣೆ, ಎತ್ತರವಾಗಿ ಕಟ್ಟಿದ ಗುಡಿಸಲು, ಎತ್ತರದ ಜೋಪಡಿ.

**मञ्चकाश्रय ಮಂಚಕಾಶ್ರಯ** (पुं०) ಮತ್ಕುಣ, ತಿಗಣೆ. मञ्चकः आश्रयो यस्य।

**मञ्चमण्डप ಮಂಚಮಂಡಪ** (पुं०) ಹೊಲಗಳಲ್ಲಿ ಪೈರುಗಳನ್ನು ಕಾಯಲು ನಾಲ್ಕು ಕಂಬಗಳ ಮೇಲೆ ಕಟ್ಟುವ ಗುಡಿಸಲು, ಎತ್ತರದ ಜೋಪಡಿ.

**मञ्चिका ಮಂಚಿಕಾ** (स्त्री०) 1. ಕುರ್ಚಿ, ನಾಲ್ಕು ಪಾದಗಳ ಆಸನ. 2. ದನಕರುಗಳಿಗೆ ನೀರು ಹಾಕುವ ಹರಿದೋಣಿ, ತೊಟ್ಟಿ. 3. ಉದ್ದದ ತಟ್ಟೆ.

**मञ्जर ಮಂಜರ** (न०) 1. ತಿಲಕವೃಕ್ಷ. 2. ಮುತ್ತು. 3. ಲತೆ.

**मञ्जरि(री) ಮಂಜರಿ(ರೀ)** (स्त्री०) 1. ಹೂವು ಮೊದಲಾದುವುಗಳ ಗೊಂಚಲು. मञ्जु मनोहरतां ऋच्छति — ऋ (गतौ) "इः" (उ० ४-१३९)। "स्फुरन्नखांशूत्करमञ्जरीभृतः" किरा० ८-५। 2. ಅಂಕುರ, ಹೊಸದಾಗಿ ಹೊರಟಿರುವ ಚಿಗುರು. "मञ्जर्युदारा शुशुभेऽर्जुनस्य" रघु० १६-५१। 3. ದಪ್ಪ ಮುತ್ತು. 4. ತುಲಸಿ. 5. ತಿಲಕವೃಕ್ಷ. 6. ಲತೆ.

**मञ्जा ಮಂಜಾ** (स्त्री०) 1. ಆಡು. 2. ಹೂವು ಮೊದಲಾದುವುಗಳ ಗೊಂಚಲು. 3. ಲತೆ.

**मञ्जि ಮಂಜಿ** (स्त्री०) 1. ಮಂಜರಿ, ಗೊಂಚಲು. 2. ಲತೆ, ಬಳ್ಳಿ. "चमरी मञ्जरं नता। मञ्जिश्च" त्रिकाण्ड०।

**मञ्जिका ಮಂಜಿಕಾ** (स्त्री०) ವೇಶ್ಯೆ, ಸೂಳೆ.

**मञ्जिष्ठा ಮಂಜಿಷ್ಠಾ** (स्त्री०) ಮಂಜಿಷ್ಠೆ.

**मञ्जीर ಮಂಜೀರ** (पुं०) 1. ನೂಪುರ, ಕಾಲಿನ ಒಂದು ಆಭರಣ, ಗೆಜ್ಜೆ ಸರಪಣಿ. मञ्जु (ध्वनौ) [सौत्रधातुः] "इरन्" बाहु०। 2. ಮೊಸರು ಕಡೆಯುವ ಮಂತಿನ ಹಗ್ಗವನ್ನು ಕಟ್ಟುವ ಕಂಬ.

**मञ्जीरक ಮಂಜೀರಕ** (वि०) ನೂಪುರದಂತೆ ಶಬ್ದ ಮಾಡುವವನು. मञ्जीर इव कायति — कै (शब्दे) "कः" (३-२-३)।

**मञ्जु ಮಂಜು** (वि०) 1. ರಮಣೀಯವಾದ, ಮನೋಹರವಾದ. मञ्ज (मार्जने शब्दे च) "कुः" (उ० १-३७)। "चरणसञ्चरणरणरणायमानमञ्जुमञ्जीररणितानुविद्ध- ......" मालती० १। 2. ಇಂಪಾದ, ಮಧುರವಾದ (ಧ್ವನಿ). "स्खलदसमञ्जसमञ्जुजल्पितं ते" उ० रा० ४-४।

**मञ्जुकेशिन् ಮಂಜುಕೇಶಿನ್** (पुं०) 1. ಶ್ರೀಕೃಷ್ಣ. (वि०) 2. ಸುಂದರವಾದ ಕೂದಲುಳ್ಳ.

**मञ्जुघोष ಮಂಜುಘೋಷ** (पुं०) 1. ಇಂಪಾದ ಧ್ವನಿ, ಮನೋಹರವಾದ ಶಬ್ದ. मञ्जुर्मञ्जुलो घोषः शब्दः। (वि०) 2. ಇಂಪಾದ ಧ್ವನಿಯುಳ್ಳ.

**मञ्जुभाषिन् ಮಂಜುಭಾಷಿನ್** (वि०) ಇಂಪಾಗಿ ಮಾತಾಡುವ. मञ्जु भाषते—भाष (व्यक्तायां वाचि) "णिनिः" (३-१-१३४)। स्त्रियां "ङीप्" (४-१-५)। **–भाषिणी –ಭಾಷಿಣೀ, –वादिन् –ವಾದಿನ್, –वादिनी –ವಾದಿನೀ.**

**मञ्जुभाषिणी ಮಂಜುಭಾಷಿಣೀ** (स्त्री०) ವೃತ್ತರತ್ನಾಕರದಲ್ಲಿ ಉಕ್ತವಾದ 13ನೆಯ ಛಂದಸ್ಸಿನ ಒಂದು ವೃತ್ತ. "सजसा जगौ भवति मञ्जुभाषिणी" वृ० र०। **ಇದರ ಗಣವಿನ್ಯಾಸ:**

स ज स ज गु।
IIU IUI IIU IUI U

**मञ्जुवाच् ಮಂಜುವಾಚ್** (वि०) ಇಂಪಾದ ಮಾತುಳ್ಳ, ಮನೋಹರವಾಗಿ ಮಾತಾಡುವ. मञ्जुः वाक् यस्य। "अनुवदति शुकस्ते मञ्जुवाक्पञ्जरस्थः" रघु० ५-७४।

**मञ्जुल ಮಂಜುಲ** (पुं०) 1. ನೀರುಕೋಳಿ. मञ्जु "लच्" (५-२-९७)। (न०) 2. ಲತಾಗೃಹ, ನಿಕುಂಜ, ಪೊದೆ. 3. ನೀರಿನ ಬುಗ್ಗೆ, ಊಟೆ. 4. ಚಿತ್ರವರ್ಣ, ಶಬಲವರ್ಣ. (वि०) 5. ಮಧುರವಾದ, ಇಂಪಾದ (ಧ್ವನಿ). 6. ಮನೋಹರವಾದ, ಸುಂದರವಾದ. "मञ्जुलन्तु जलाचले। रम्ये कुञ्जे मञ्जुलस्तु दात्यूहे" हेम०।

**मञ्जूषा ಮಂಜೂಷಾ** (स्त्री०) 1. ಪೆಟ್ಟಿಗೆ. टु मस्जो (शुद्धौ) "ऊषन्" (उ० ४-७७) नुम् च। 2. ಪುರ, ನಗರ, ಪಟ್ಟಣ. "पेठा पुरी च मञ्जूषा" वैज०। 3. ಬಿದಿರಿನ ಬುಟ್ಟಿ, ಮಂಕರಿ. "भक्ष्याशयाहिमञ्जूषां दष्ट्वाखुस्तेन भक्षितः" चन्द्रा०। 4. ಮಂಜಿಷ್ಠೆ. 5. ಪಾಷಾಣ, ಶಿಲೆ.

**मटची ಮಟಚೀ** (स्त्री०) ಆಲಿಕಲ್ಲು ಮಳೆ, ಶಿಲಾವೃಷ್ಟಿ. "घनोपलस्तु करकः पुञ्जिका मटचीति च" वैज०।

**मठ ಮಠ** (पुं०) 1. ವಿದ್ಯಾರ್ಥಿನಿಲಯ. मठत्यत्र —मठ (मदनिवासयोः) "घञ्" (३-३-१२१)। "मठश्छात्रादिनिलयः" अम०। 2. ಸಣ್ಣ ಕೊಠಡಿ, ಚಿಕ್ಕ ಕೋಣೆ. 3. ಸಂನ್ಯಾಸಿಯ ವಾಸಸ್ಥಾನ, ಮುನಿಯ ಆಶ್ರಮ. 4. ಗುಡಿ, ದೇವಾಲಯ. 5. ಎತ್ತುಗಳು ಎಳೆಯುವ ಗಾಡಿ.

**मठर ಮಠರ** (पुं०) 1. ಕಠಿನತೆ, ಗಟ್ಟಿಯಾಗಿರುವಿಕೆ, ಬಿರುಸಾಗಿರುವಿಕೆ. (वि०) 2. ಗಟ್ಟಿಯಾದ, ಕಠಿನವಾದ, ಬಿರುಸಾಗಿರುವ. "कर्कशे परुषो रूक्षो मठरः खोरणः खरः" वैज०। 3. ಮದ್ಯಪಾನದಿಂದ ಅಮಲೇರಿದವನು, ಕುಡಿದು ಮದವೇರಿದವನು.

**मड्डु ಮಡ್ಡು** (पुं०) ಒಂದು ಚರ್ಮದ ವಾದ್ಯ, ಡಿಕ್ಕಿಯೆಂಬ ವಾದ್ಯ. "वाद्यप्रभेदा डमरुमड्डुडिण्डिमझर्झराः" अम०।

**मड्डुक ಮಡ್ಡುಕ** (पुं०) ಡಿಕ್ಕಿಯೆಂಬ ಒಂದು ಚರ್ಮವಾದ್ಯ.

**मणि ಮಣಿ** (पुं०स्त्री०) 1. ರತ್ನ, ವಜ್ರ, ಮುತ್ತು ಮುಂತಾದುವು. मण्यते—मण (शब्दे) "इन्" (उ० ४-११७)। ಸ್ತ್ರೀಲಿಂಗದಲ್ಲಿ ವಿಕಲ್ಪವಾಗಿ "ङीष्" (ग० ४-१-४५)। **मणी ಮಣೀ.** "मणौ वज्रसमुत्कीर्णे सूत्रस्येवास्ति मे गतिः" रघु० १-४। 2. ಮಣಿಬಂಧ, ಮಣಿಕಟ್ಟು, ಹಸ್ತದ ಮೂಲಭಾಗ. "मणिबन्धो मणिः पाणिमूले" वैज०। 3. ಆಡಿನ ಕತ್ತಿನಲ್ಲಿ ಜೋಲಾಡುವ ಮಾಂಸದ ಬುಗುಟಿ (ಗಂಟು), ಅಜಾಗಲಸ್ತನ. 4. ಗುಡಾಣ, ದೊಡ್ಡ ಮಣ್ಣಿನ ಪಾತ್ರೆ, ನೀರು ತುಂಬಿಡುವ ಮಡಕೆ. "अक्ली मणिरजाकण्ठस्तने रत्नेऽप्यलिञ्जरे" वैज०। 5. ಲಿಂಗದ ಅಗ್ರಭಾಗ. "मणिः स्त्रीपुंसयोरश्मजातौ मुक्तादिकेऽपि च। कण्ठदेशस्तनेऽजाया लिङ्गाग्रेऽलिञ्जरेऽपि च" मेदि०।

**मणिक ಮಣಿಕ** (पुं०) ಗುಡಾಣ, ನೀರು ಮುತ್ತು ಸಾಮಾನುಗಳನ್ನು ತುಂಬಿಡುವ ದೊಡ್ಡ ಮಣ್ಣಿನ ಪಾತ್ರೆ. मणि

संज्ञायां "कन्" (५-३-७५)। "अलिञ्जरः स्यान्मणिकः" अम०।

**मणिकर्णिका ಮಣಿಕರ್ಣಿಕಾ** (स्त्री०) ಕಾಶೀಕ್ಷೇತ್ರದಲ್ಲಿರುವ ಒಂದು ಪುಣ್ಯತೀರ್ಥ.

**मणिकार ಮಣಿಕಾರ** (पुं०) ವಜ್ರವ್ಯಾಪಾರ ಮಾಡುವವನು, ಮುತ್ತು ರತ್ನ ವಜ್ರಗಳ ಆಭರಣಗಳನ್ನು ಮಾಡುವವನು, ಅಕ್ಕಸಾಲಿ. मणिं करोति — डुकृञ् (करणे) "अण्" (३-२-१)। "मणिकारो वैघटिकः शैल्बिकस्ताम्रकुट्टकः" वैज०।

**मणिग्रीव ಮಣಿಗ್ರೀವ** (पुं०) ಕುಬೇರನ ಮಗ.

**मणिच्छिद्रा ಮಣಿಚ್ಛಿದ್ರಾ** (स्त्री०) 1. ಹೆಗಿಗೆ ಹಾಲೆಯೆಂಬ ಒಂದು ಮೂಲಿಕೆ. 2. ಮೇದಾ ಎಂಬ ಮೂಲಿಕೆ. "मणिच्छिद्रा तु मेदायामृषभाख्यौषधेऽपि च" मेदि०।

**मणित ಮಣಿತ** (न०) ರತಿಕಾಲದ ಶಬ್ದ, ಸಂಭೋಗ ಕಾಲದಲ್ಲಿ ಸ್ತ್ರೀಯರ ಅವ್ಯಕ್ತ ಶಬ್ದ. मण (शब्दे) "क्तः" (३-३-११४)। "सीत्कृतानि मणितं करुणोक्तिः स्निग्धमुक्तमलमर्थवचांसि" माघ० १०-७५।

**मणितारक ಮಣಿತಾರಕ** (पुं०) ಸಾರಸ ಪಕ್ಷಿ, ನೀರು ಹಕ್ಕಿ, ತಾವರೆ ಹಕ್ಕಿ. मणिरिव तारकाऽस्य। स्त्रियां जाति० "ङीष्" (४-१-६३)।

**मणिदर्पण ಮಣಿದರ್ಪಣ** (न०) ರತ್ನಕನ್ನಡಿ, ರತ್ನಖಚಿತವಾದ ಕನ್ನಡಿ.

**मणिदीप ಮಣಿದೀಪ** (पुं०) 1. ರತ್ನ ಕೆತ್ತಿದ ದೀಪ. मणिखचितो दीपः। 2. ದೀಪದಂತೆ ಬೆಳಗುವ ರತ್ನ. मणिर्दीप इव।

**मणिपीठ ಮಣಿಪೀಠ** (न०) ರತ್ನ ಕೆತ್ತಿದ ಆಸನ, ಮಣಿಮಯವಾದ ಮಣೆ. मणिमयं पीठम्। "अनारतं यौ मणिपीठशायिनावरञ्जयद्राजशिरःस्रजां रजः" किरा० १-४०।

**मणिपुष्पक ಮಣಿಪುಷ್ಪಕ** (पुं०) ಸಹದೇವನ ಶಂಖ. "नकुलः सहदेवश्च सुघोषमणिपुष्पकौ" गीता १-१६।

**मणिपुर ಮಣಿಪುರ** (न०) ಕಳಿಂಗದೇಶದ ಮುಖ್ಯ ಪಟ್ಟಣ, ಬಭ್ರುವಾಹನ (ಅರ್ಜುನನ ಮಗ)ನ ರಾಜಧಾನಿ.

**मणिपूर ಮಣಿಪೂರ** (न०) ನಾಭಿಯಲ್ಲಿ ಷಟ್‌ಚಕ್ರಾಂತರ್ಗತವಾದ ಒಂದು ಪದ್ಮ. ಇದು ಸುಷುಮ್ನಾನಾಡಿಯೊಳಗೆ ಷಟ್‌ಚಕ್ರಗಳ ಮಧ್ಯದಲ್ಲಿ ನಾಭಿಯಲ್ಲಿರುವುದು. "तदूर्ध्वे नाभिदेशे तु मणिपूरं महाप्रभम्। मेघाभं विद्युदाभं च बहुतेजोमयं ततः"।

**मणिबन्ध ಮಣಿಬಂಧ** (पुं०) 1. ಮಣಿಕಟ್ಟು, ಹಸ್ತದ ಮೂಲಭಾಗ. मणिर्बध्यतेऽत्र—बन्ध (बन्धने) "घञ्" (३-३-१२१)। 2. ರತ್ನ ಮುತ್ತು ಮುಂತಾದವನ್ನು ಕಟ್ಟುವುದು. "उपनतमणिबन्धे मूर्ध्नि पौलस्त्यशत्रोः सुरभि सुरविमुक्तं पुष्पवर्षं पपात" रघु० १२-१०२।

**मणिबन्धन ಮಣಿಬಂಧನ** (न०) 1. ಅಲಂಕಾರಕ್ಕಾಗಿ ಮುತ್ತು ರತ್ನಗಳನ್ನು ಕಟ್ಟುವುದು. 2. ಮಣಿಕಟ್ಟು, ಹಸ್ತದ ಮೂಲಭಾಗ. मणिर्बध्यतेऽत्र—बन्ध (बन्धने) अधि० "ल्युट्" (३-३-११७)।

**मणिबीज ಮಣಿಬೀಜ** (पुं०) 1. ದಾಳಿಂಬೆ ಗಿಡ. (न०) 2. ದಾಳಿಂಬೆ ಹಣ್ಣು.

**मणिमण्टप ಮಣಿಮಂಟಪ** (पुं०) 1. ರತ್ನಖಚಿತವಾದ ಮಂಟಪ. मणिमयो मण्टपः। 2. ಆದಿಶೇಷನ ವಾಸಸ್ಥಾನ.

**मणिमाला ಮಣಿಮಾಲಾ** (स्त्री०) 1. ಮುತ್ತಿನ ಹಾರ. 2. ರತ್ನದ ಹಾರ. 3. ಹನ್ನೆರಡನೆಯ ಛಂದಸ್ಸಿನ ಒಂದು ವೃತ್ತ. "त्यौ त्यौ मणिमाला छिन्ना गुहवक्त्रैः" वृ० र०। ಪ್ರತಿ ಪಾದದಲ್ಲಿಯೂ ತಗಣ ಯಗಣ ತಗಣ ಯಗಣಗಳಿದ್ದು ಆರು ವರ್ಣಗಳಿಗೆ ಯತಿಯಿರುವುದು "**ಮಣಿಮಾಲಾ**" ವೃತ್ತವಾಗುವುದು.

त य त य।
UU। ।UU UU। ।UU

ಇದು ಈ ವೃತ್ತದ ಗಣವಿನ್ಯಾಸ. 4. ದಂತಕ್ಷತ, ಸಂಭೋಗ ಕಾಲದಲ್ಲಿ ಉಂಟಾಗುವ ಹಲ್ಲಿನ ಗಾಯ. "मणिमाला तु हारे दन्तक्षतान्तरे" मेदि०। 5. ದೀಪ್ತಿ, ಪ್ರಕಾಶ. 6. ಲಕ್ಷ್ಮಿ.

**मणिमेखला ಮಣಿಮೇಖಲಾ** (स्त्री०) ರತ್ನಖಚಿತವಾದ ವಡ್ಯಾಣ, –ಡಾಬು, –ನಡುಕಟ್ಟು.

**मणिसानु ಮಣಿಸಾನು** (पुं०) ಮೇರುಪರ್ವತ.

**मणीच ಮಣೀಚ** (पुं०) 1. ಹಸ್ತದ ಅಗ್ರಭಾಗ, ಕೈಯ ತುದಿ. 2. ಮುತ್ತು. 3. ಪುಷ್ಪ, ಹೂವು. "मणीचमग्रहस्तेऽपि पुष्पमौक्तिकयोरपि" वैज०।

**मणीचक ಮಣೀಚಕ** (न०) ಪುಷ್ಪ, ಹೂವು. "मणीचकं प्रसूनं च सूनं सुमनसः स्त्रियः" वैज०।

**मण्ड ಮಂಡ** (पुं०) 1. ಅನ್ನದ ಮೇಲಿನ ಕೆನೆ, ಗಂಜಿ. मण्ड्यते — मडि (भूषायाम्) "घञ्" (३-३-१८)। "सर्वरसाग्रे मण्डमस्त्रियाम्" अम०। "नीवारौदनमण्डमिश्रमधुरं सद्यःप्रसूतप्रियापीतादभ्यधिकं तपोवनमृगः

पर्यन्तमाचामति" उ० रा० ४-१ । 2. ಮೊಸರಿನ ಮೇಲಿನ ಕೆನೆ. 3. ಆಭರಣ, ಒಡವೆ. 4. ಹರಳುಗಿಡ. 5. ಸಾರ, ತಿರುಳು, ಸತ್ತ್ವಾಂಶ. 6. ಹಕ್ಕಿಯ ಪುಕ್ಕ. 7. ಒಂದು ಶಾಕ. 8. ಕೆನೆ, ನೊರೆ, ಮೇಲಿನ ರಸ. 9. ಮಂಡೂಕ, ಕಪ್ಪೆ. मण्डति वर्षाकाले हृष्यति—मडि "अच्" (३-१-१३४) । (स्त्री०) **मण्डा ಮಂಡಾ.** 10. ನೆಲ್ಲಿ ಗಿಡ. "मण्डो मस्तुनि भूषायामेरण्डे सार-पिच्छयोः । शाके मण्डात्वामलक्याम्" हेम० ।

**मण्डक ಮಂಡಕ** (पुं०) ಗೋಧಿಹಿಟ್ಟಿನಿಂದ ಮಾಡಿದ ಒಂದು ವಿಧ ಭಕ್ಷ್ಯ, ಮಂಡಿಗೆ. मण्ड संज्ञायां "कन्" ।

**मण्डन ಮಂಡನ** (न०) 1. ಭೂಷಣ, ಒಡವೆ, ಆಭರಣ. मडि (भूषायाम्) "ल्युट्" (३-३-११७) । "विपक्ष-चित्तोन्मथना नखव्रणास्तिरोहिता विभ्रममण्डनेन" किरा० ८-३४ । "सा मण्डनान्मण्डनमन्वभुङ्क्त" कुमा० ७-५ । 2. ಅಲಂಕರಿಸುವಿಕೆ, ಶೃಂಗರಿಸುವಿಕೆ. मडि भावे "ल्युट्" (३-३-११५)। "मामक्षमं मण्डन-कालहानेर्वेत्तीव बिम्बाधरबद्धतृष्णम्" रघु० १३-१६ । (वि०) 3. ಅಲಂಕರಿಸುವ, ಶೃಂಗರಿಸುವ. मण्डयति — मडि (भूषायाम्) "युच्" (३-२-१५१) । "मण्डनं स्यादलङ्कारेऽलङ्करिष्णुनि वाच्यवत्" विश्व० ।

**मण्डप ಮಂಡಪ** (पुंन०) 1. ತೆರೆದ ಚಪ್ಪರ, ಸುತ್ತಲೂ ಮರೆಯಿಲ್ಲದ ಚಪ್ಪರ, ಜನರ ವಿಶ್ರಾಂತಿ ಸ್ಥಳ, ಚಾವಡಿ. 2. ದೇವಾಲಯ, ಗುಡಿ. 3. ಮದುವೆ ಮುಂಜಿ ಮುಂತಾದ ಸಮಯದಲ್ಲಿ ಹಾಕುವ ಚಪ್ಪರ. "दीर्घेष्वमी नियमिताः पटमण्डपेषु निद्रां विहाय वनजाक्ष वनायुदेश्याः" रघु० ५-७३ । 4. ಲತಾಗೃಹ, ಪೊದೆ, ಪೊದರು. मडि (भूषायाम्) "घञ्" (३-३-१८) । मण्डं पाति—पा "कः" (३-२-३) । "प्रत्यासन्नो कुरवकवृतेर्माधवी-मण्डपस्य" मेघ० २-१५ । (वि०) 5. ಹಾಲು ಮೊಸರು ಮುಂತಾದುವುಗಳ ಮೇಲಿನ ಕೆನೆಯನ್ನು ಕುಡಿಯುವ. मण्डं मस्तु पिबति — पा (पाने) "कः"।

**मण्डनीय ಮಂಡನೀಯ** (वि०) 1. ಅಲಂಕರಿಸಲ್ಪಡುವ. 2. ಅಲಂಕರಿಸಬೇಕಾದ. 3. ಅಲಂಕರಿಸಲು ಅರ್ಹವಾದ. मडि (भूषायाम्) + णिच् "अनीयर्" (३-१-९६) । "तव्यः" । **मण्डयितव्यः ಮಂಡಯಿತವ್ಯಃ.**

**मण्डयत् ಮಂಡಯತ್** (वि०) ಅಲಂಕರಿಸುತ್ತಿರುವ, ಶೃಂಗರಿಸುತ್ತಿರುವ. मडि (भूषायाम्) + णिच् "शतृ" (३-२-१२४) । स्त्रियां "ङीप्" (४-१-६) । **-यन्ती -ಯಂತೀ.** "प्रचलितचटुलभ्रूताण्डवैर्मण्डयन्त्या" उ० रा० ३-१७ ।

**मण्डयन्त ಮಂಡಯಂತ** (पुं०) 1. ಅಲಂಕಾರ, ಆಭರಣ, ಒಡವೆ, ಭೂಷಣ. मडि (भूषायाम्) + णिच् "झच्" (उ० ३-१२८)। झस्यान्तादेशः (७-१-३)। 2. ಅನ್ನ. 3. ನಟ, ನರ್ತಕ. 4. ಸ್ತ್ರೀಯರ ಸಮೂಹ.

**मण्डयन्ती ಮಂಡಯಂತೀ** (स्त्री०) ಹೆಂಗಸು. मण्डयति — मडि (भूषायाम्) + णिच् "झच्" (उ० ३-१२८) । "स्त्रीवधूर्योषिता रामा मण्डयन्ती वधूजनः" त्रिकाण्ड० ।

**मण्डल ಮಂಡಲ** (पुं०) 1. ಶರೀರದೊಳಗಿನ ಎಂಟು ವಿಧ ಸಂಧಿಗಳಲ್ಲೊಂದು. **ಎಂಟು ವಿಧ ಸಂಧಿಗಳು:** (1) कोराः, (2) उलूखलाः, (3) सामुद्गाः, (4) प्रतराः, (5) तुन्नसेविन्यः, (6) वायसतुण्डाः, (7) मण्डलाः ಮತ್ತು (8) शङ्खावर्ताः । ಬೆರಳು ಮಣಿಕಟ್ಟು ಗುಲ್ಫ (ಕಾಲಿನ ಗಂಟು) ಜಾನು (ಮಂಡಿ) ಮತ್ತು ಕೂರ್ಪರ (ಮೊಳಕೈ)ಗಳಲ್ಲಿ **ಕೋರಸಂಧಿಗಳೂ** ಕಂಕಳು ತೊಡೆಗಳ ಸಂಧಿ ಮತ್ತು ದಂತಗಳಲ್ಲಿ **ಉಲೂಖಲಸಂಧಿಗಳೂ** ಹೆಗಲು ಗುದಪ್ರದೇಶ ಯೋನಿ ಮತ್ತು ನಿತಂಬಗಳಲ್ಲಿ **ಸಾಮುದ್ಗಸಂಧಿಗಳೂ** ಕತ್ತು ಮತ್ತು ಬೆನ್ನೆಲುಬುಗಳಲ್ಲಿ **ಪ್ರತರಸಂಧಿಗಳೂ** ಶಿರಸ್ಸು, ಪಿರ್ರೆ ಮತ್ತು ಕಪಾಲ (ತಲೆಯ ಚಿಪ್ಪು)ಗಳಲ್ಲಿ **ತುನ್ನಸೇವನೀಸಂಧಿಗಳೂ** ಕೆನ್ನೆಯ ಮೇಲುಭಾಗಗಳಲ್ಲಿ **ವಾಯಸತುಂಡಸಂಧಿಗಳೂ** ಕಂಠ ಹೃದಯ ನೇತ್ರಗಳು ಮೂತ್ರಕೋಶ ಮತ್ತು ನಾಡಿಗಳಲ್ಲಿ **ಮಂಡಲಸಂಧಿಗಳೂ** ಶ್ರೋತ್ರ (ಕಿವಿ) ಶೃಂಗಾಟಕಗಳಲ್ಲಿ **ಶಂಖಾವರ್ತಸಂಧಿಗಳೂ** ಇರುವುವು. सुश्रुत० शारीर० ५-२७ । 2. ಕುಕ್ಕುರ, ನಾಯಿ. "यक्ष इन्द्रमहश्चालः कपिलो मण्डलः शुनः" वैज० । (त्रि०) 3. ಸೂರ್ಯಚಂದ್ರರ ಮಂಡಲ, -ಬಿಂಬ. "अपर्वणि ग्रहकलुषेन्दुमण्डला" माल० ४-१६ । 4. ದೇಶ, ರಾಷ್ಟ್ರ. "तेन सिंहासनं पित्र्यमखिलं चारि-मण्डलम्" रघु० ४-४ । 5. ಒಂದು ಜಾತಿಯ ಸರ್ಪ, ಮಂಡಲದ ಹಾವು. 6. ಪರಿಧಿ, ಸೂರ್ಯಚಂದ್ರರ ಸುತ್ತಲೂ ಕಟ್ಟುವ (ಚಕ್ರಾಕಾರದ) ಪರಿವೇಷ. 7. ಹನ್ನೆರಡು ರಾಜರುಗಳ ಸಮೂಹ. 8. ಕುಷ್ಠ ರೋಗ "मण्डलो बिम्बदेशयोः । भुजङ्गभेदे परिधौ शुनि द्वादश राजके । सङ्घाते कुष्ठभेदे च" हेम० । (न०) 9. ಸಮೂಹ, ಸಮುದಾಯ, ರಾಶಿ, ಗುಂಪು. "छायामण्डल-लक्ष्येण तमदृश्या किल स्वयम्" रघु० ४-५ । "स्फुरति सुरमुनीनां मण्डलं व्यस्तमेतत्" माघ० ११-३

10. ಹಳ್ಳಿಗಳ ಸಮುದಾಯ, ಗ್ರಾಮಗಳ ಸಮೂಹ. 11. ಹನ್ನೆರಡು ರಾಜರುಗಳಿಂದ ಕೂಡಿದ ದೇಶ. 12. ಪ್ರತಿಬಿಂಬ, ಛಾಯೆ. त्रिलिङ्गं मण्डलं वृन्दे ग्रामौघ प्रतिबिम्बयोः। उपसूर्ये कुष्ठरोगे देशे द्वादशराजके" वैजಂ। ವೈಜಯನ್ತಿಯಲ್ಲಿ ನಾಯನ್ನು ಪುಂಲಿಂಗ ಮತ್ತು ಉಳಿದೆಲ್ಲವನ್ನೂ ತ್ರಿಲಿಂಗಗಳಲ್ಲೂ ಹೇಮಕೋಶ (ಅನೇಕಾರ್ಥಸಂಗ್ರಹ) ದಲ್ಲಿ ಎಲ್ಲವನ್ನೂ ಪುಂಲಿಂಗ ದಲ್ಲೂ ಮೇದಿನೀಕೋಶದಲ್ಲಿ ನಾಯನ್ನು ಪುಂಲಿಂಗದಲ್ಲೂ ಸಮೂಹ ಮತ್ತು ಬಿಂಬಗಳನ್ನು ತ್ರಿಲಿಂಗಗಳಲ್ಲೂ ಪರಿಧಿ ಕುಷ್ಠ ದೇಶ ಮತ್ತು ಹನ್ನೆರಡು ರಾಜರ ಸಮೂಹ ಈ ಅರ್ಥಗಳಲ್ಲಿ ನಪುಂಸಕಲಿಂಗದಲ್ಲೂ ಹೇಳಿರು ತ್ತಾರೆ. "मण्डलं परिधौ कोठे देशे द्वादशराजसु। क्लीबेऽथ निवहे बिम्बे त्रिषु पुंसि तु कुक्कुरे" मेदिಂ। 13. ಸೈನ್ಯಗಳ ಸಮೂಹ. 14. ಗೋಳ, ವಲಯ, ವರ್ತುಲ, ವೃತ್ತ. "प्रशासदावारिधि मण्डलं भुवः" किराಂ १-२३। 15. ಬಿಲ್ಲುಗಾರನು ನಿಲ್ಲುವ ಒಂದು ರೀತಿ, ಮೂರಡಿಯ ಅಗಲದಲ್ಲಿ ಕಾಲುಗಳನ್ನು ಇಟ್ಟು ಕೊಂಡು (ಬಾಣ ಪ್ರಯೋಗಕ್ಕಾಗಿ) ನಿಲ್ಲುವಿಕೆ. "त्रिवितस्त्यन्तरौ पादौ मण्डलं तोरणाकृती" वैजಂ। 16. ಋಗ್ವೇದದ ಒಂದು ಭಾಗ. [ಋಗ್ವೇದವು ಹತ್ತು ಮಂಡಲಗಳಾಗಿ ಭಾಗಿಸಲ್ಪಟ್ಟಿರುವುದು.] 17. ಹುಲಿ ಯುಗುರು ಗಿಡ. 18. ಜಿಲ್ಲೆ, ದೇಶದ ಒಂದು ಭಾಗ.

**मण्डलक ಮಂಡಲಕ** (ನಂ) 1. ಸಮೂಹ, ಗುಂಪು. मण्डल स्वार्थे "कः"। 2. ಸೂರ್ಯಚಂದ್ರರ ಬಿಂಬ. 3. ವಲಯ, ಗೋಳ, ವೃತ್ತ. 4. ಸೈನ್ಯದ ವ್ಯೂಹ, ಸೇನೆಗಳ ಸಮೂಹ. 5. ದರ್ಪಣ, ಕನ್ನಡಿ. 6. ಕುಷ್ಠ ರೋಗ. 7. ದೇಶ, ರಾಷ್ಟ್ರ. (ಪುಂ) 8. ಕುಕ್ಕುರ, ನಾಯಿ. "भवेन्मण्डलकं बिम्बे कुष्ठभेदे च दर्पणे" मेदिಂ।

**मण्डलनृत्य ಮಂಡಲನೃತ್ಯ** (ನಂ) ಚಕ್ರದ ಆಕಾರದಲ್ಲಿ ಸುತ್ತುತ್ತ ಮಾಡುವ ನೃತ್ಯ.

**मण्डलपत्रिका ಮಂಡಲಪತ್ರಿಕಾ** (स्त्रीಂ) 1. ಕೆಂಪು ಕೊಮ್ಮೆ ಗಿಡ. 2. ಕಪಿಲವರ್ಣದ ಅಗುರು. "कपिला पिच्छिला भस्मगर्भा मण्डलपत्रिका" वैजಂ।

**मण्डलाग्र ಮಂಡಲಾಗ್ರ** (ಪುಂ) ಖಡ್ಗ, ತುದಿಯಲ್ಲಿ ಬಗ್ಗಿ ರುವ ಕತ್ತಿ. मण्डलमिवाग्रमस्य। "कौक्षेयको मण्डलाग्रः" अमಂ।

**मण्डलाधिप ಮಂಡಲಾಧಿಪ, –अधिपति –ಅಧಿಪತಿ** (ಪುಂ) 1. ರಾಷ್ಟ್ರಪತಿ, ರಾಷ್ಟ್ರದ ಒಡೆಯ. 2. ಜಿಲ್ಲೆಯ ಅಧಿಕಾರಿ. 3. ರಾಜ, ದೊರೆ. मण्डलस्य अधिपः। अधिपतिर्वा।

**मण्डलावृत्ति ಮಂಡಲಾವೃತ್ತಿ** (स्त्रीಂ) ಮಂಡಲಾಕಾರ ವಾಗಿ ಚಲಿಸುವುದು, ಚಕ್ರದಂತೆ ಸುತ್ತುವುದು. मण्डलमिव आवृत्तिः। "भ्रमिषु कृतपुटान्तर्मण्डलावृत्तिचक्षुःप्रचलितचटुलभ्रूताण्डवैर्मण्डयन्त्या" उಂ राಂ ३-१९।

**मण्डलिन् ಮಂಡಲಿನ್** (ಪುಂ) 1. ರಾಜ, ದೊರೆ. मण्डलमस्त्यस्य "इनिः" (५-२-११५)। 2. ಸರ್ಪ, ಹಾವು. 3. ನಾಯಿ. 4. ಅಜಗರ, ಹೆಬ್ಬಾವು. 5. ಬಿಡಾಲ, ಬೆಕ್ಕು. 6. ಸೂರ್ಯ. 7. ಇಂದ್ರ. "मण्डली ना राज्ञि सूर्ये शक्रेऽहौ श्वबिडालयोः" नानार्थरಂ।

**मण्डली ಮಂಡಲೀ** (स्त्रीಂ) 1. ಗರಿಕೆ ಹುಲ್ಲು. 2. ವೃತ್ತ, ವಲಯ, ಗೋಳ. 3. ಸಮೂಹ, ಗುಂಪು. 4. ಚಕ್ರಾ ಕಾರವಾಗಿ ಚಲಿಸುವುದು. मण्डल गौराಂ "ङीष्" (४-१-४१)।

**मण्डलेश ಮಂಡಲೇಶ, –ईश्वर –ಈಶ್ವರ** (ಪುಂ) "मण्डलाधिप" ಪದದ ಅರ್ಥ.

**मण्डहारक ಮಂಡಹಾರಕ** (ಪುಂ) ಮದ್ಯ ತೆಗೆಯುವವನು, ಬಟ್ಟಿ ಇಳಿಸುವವನು. मण्डं हरति — हृञ् (हरणे) "ण्वुल्" (३-१-१३३)।

**मण्डा ಮಂಡಾ** (स्त्रीಂ) ನೆಲ್ಲಿ ಗಿಡ. मडि (भूषायाम्) "अच्" (३-१-१३४)। "आमलक्यां स्त्रियां मण्डा" मेदिಂ।

**मण्डित ಮಂಡಿತ** (विಂ) ಅಲಂಕರಿಸಲ್ಪಟ್ಟ, ಶೃಂಗರಿಸ ಲ್ಪಟ್ಟ. मडि (भूषायाम्) "क्तः" (३-२-१०२)। "भाति केसरवतेव मण्डिता बन्धुजीवतिलकेन कन्यका" कुमाಂ ८-४०।

**मण्डूक ಮಂಡೂಕ** (ಪುಂ) 1. ಕಪ್ಪೆ. मण्डयति वर्षाकालम् —मडि (भूषायाम्) "ऊकण्" (उಂ ४-४२)। स्त्रियां जातिಂ "ङीष्" (४-१-६३)। **मण्डूकी ಮಂಡೂಕೀ.** "पशुमण्डूकमार्जारश्वसर्पनकुलाखुभिः" मनुಂ ४-१२६। 2. ಹೆಮ್ಮರ, ತಿಗಡೆ ಮರ. 3. ಒಬ್ಬ ಮುನಿ. "मण्डूको भेकशोणकौ" हेमಂ। (ನಂ) 4. ಒಂದು ವಿಧ ಸುರತ ಬಂಧ.

**मण्डूकपर्ण ಮಂಡೂಕಪರ್ಣ** (ಪುಂ) ಹೆಮ್ಮರ, ತಿಗಡು ಮರ. मण्डूक इव पर्णमस्य।

**मण्डूकपर्णी ಮಂಡೂಕಪರ್ಣೀ** (स्त्रीಂ) 1. ಮಂಜಿಷ್ಠೆ. मण्डूक इव पर्णमस्याः "ङीष्" (४-१-६४)। "मण्डूकपर्णी

मण्डीरी भण्डी योजनवल्यपि" अम०। 2. ಬ್ರಾಹ್ಮಣೀ ಗಿಡ, ಭಾರಂಗಿ ಗಿಡ. "मण्डूकपर्णी मञ्जिष्ठाब्राह्म्यो-र्ना तु शोणके" मेदि०। 3. ಒಂದೆಲಗನ ಗಿಡ. 4. ಹೊನಗೊನ್ನೆ ಸೊಪ್ಪು.

**मण्डूकप्लुति ಮಂಡೂಕಪ್ಲುತಿ** (स्त्री०) ಕಪ್ಪೆಯ ನಡಗೆ ಕಪ್ಪೆಯ ನೆಗೆತ. ಕಪ್ಪೆಯು ನಡೆಯುವಾಗ ಭೂಮಿಯ ಸ್ಪರ್ಶವಿಲ್ಲದೆ ನೆಗೆದು ಹೋಗುವಿಕೆ. मण्डूकस्य प्लुतिः। ವ್ಯಾಕರಣಶಾಸ್ತ್ರದಲ್ಲಿ ಒಂದು ಸೂತ್ರದಿಂದ ಪದಗಳ ಅನುವೃತ್ತಿಯು ಮಂಡೂಕಪ್ಲುತಿಯಂತಿರುವುದು. ಒಂದು ಸೂತ್ರದ ಪದಗಳನ್ನೂ ಮಧ್ಯದಲ್ಲಿರುವ ಸೂತ್ರಗಳನ್ನೂ ಬಿಟ್ಟು ದೂರದ ಸೂತ್ರಾರ್ಥಕ್ಕೆ ಸಂಬಂಧಿಸಿದಂತೆ ಅನುವೃತ್ತಿ ಮಾಡುವುದು. ಈ ಪದಗಳು ಮಂಡೂಕದಂತೆ ಹಾರಿಹೋಗಿ ದೂರದ ಸೂತ್ರದಲ್ಲಿ ಅನ್ವಯ ಹೊಂದುವುದರಿಂದ ಇದಕ್ಕೆ ಮಂಡೂಕಪ್ಲುತಿ ಎಂದು ವ್ಯವಹಾರ. "मण्डूकप्लुत्यानुवर्तते" सि० कौ०।

**मण्डूकमातृ ಮಂಡೂಕಮಾತೃ** (स्त्री०) ಬ್ರಾಹ್ಮೀಲತೆ, ಹೊನಗೊನ್ನೆ ಗಿಡ.

**मण्डूका ಮಂಡೂಕಾ** (स्त्री०) ಮಂಜಿಷ್ಠೆ.

**मण्डूकी ಮಂಡೂಕೀ** (स्त्री०) 1. ಹೆಣ್ಣು ಕಪ್ಪೆ. 2. ಹೊನಗೊನ್ನೆ ಗಿಡ. 3. ಗಡುಸಾದ ಹೆಂಗಸು, ಧೈರ್ಯಶಾಲಿಯಾದ ಹೆಂಗಸು.

**मण्डूर ಮಂಡೂರ** (न०) ಲೋಹದ ಮಲ, ಕಬ್ಬಿಣದ ಕಿಲುಬು, ತುಕ್ಕು. मण्डति — मडि (भूषायाम्) "ऊरः" (उ० ४-९०)।

**मत ಮತ** (न०) 1. ಅಭಿಪ್ರಾಯ, ಮನೋಗತ, ಆಶಯ. मन (ज्ञाने) "क्तः" (३-३-११४)। "मम तावन्मत-मिदं श्रूयतामङ्ग वामपि" माघ० २-१२। 2. ಒಂದು ಪಕ್ಷ, ಯಾವುದಾದರೊಂದು ಕಕ್ಷಿ. "सुहृदः सहजास्तथे-तरे मतमेषां न विलङ्घयन्ति ये" किरा० २-४५। 3. ಸಂಮತಿ, ಒಪ್ಪಿಗೆ, ಅಂಗೀಕಾರ. 4. ಉಪದೇಶ, ತತ್ತ್ವಬೋಧನೆ. "ये मे मतमिदं नित्यमनुतिष्ठन्ति मानवाः" गीता ३-३१। 5. ಉದ್ದೇಶ. 6. ಜ್ಞಾನ, ತಿಳಿವಳಿಕೆ. 7. ಪೂಜೆ, ಗೌರವ. (वि०) 8. ತಿಳಿಯಲ್ಪಟ್ಟ. 9. ಸಂಮತಿಸಲ್ಪಟ್ಟ, ಒಪ್ಪಿಗೆ ಕೊಡಲ್ಪಟ್ಟ. 10. ಪೂಜಿಸಲ್ಪಟ್ಟ, ಗೌರವಿಸಲ್ಪಟ್ಟ. "बभौ च सा तेन सतां मतेन श्रद्धेव साक्षाद्विधिनोपपन्ना" रघु० २-१६। 11. ಉದ್ದೇಶಿಸಲ್ಪಟ್ಟ. 12. ಅಭಿಪ್ರಾಯಕೊಡಲ್ಪಟ್ಟ. "मतं तु सम्मते ज्ञाते" मेदि०। "मतं स्यात्सम्मतेऽर्चिते" हेम०।

**मतङ्ग ಮತಂಗ** (पुं०) 1. ಮತಂಗ ಋಷಿ. "मतङ्ग-शापादवलेपमूलादवाप्तवानस्मि मतङ्गजत्वम्" रघु० ५-५३। 2. ಗಜ, ಆನೆ. 3. ಮೇಘ, ಮೋಡ.

**मतङ्गज ಮತಂಗಜ** (पुं०) ಗಜ, ಆನೆ. मतङ्गाद्दृषेर्जायते — जनी (प्रादुर्भावे) "डः" (३-२-९८)। "त्वयात्म-हस्तेन मही मदच्युता मतङ्गजेन स्रगिवापवर्जिता" किरा० १-२९। स्त्रियां जाति० "ङीष्" (४-१-६३)।

**मतल्लिका ಮತಲ್ಲಿಕಾ** (स्त्री०) ಪ್ರಶಸ್ತ, ಶ್ರೇಷ್ಠ, ಉತ್ತಮ. मतं मतिमलति — अल (भूषणादौ) "ण्वुल्" (३-१-१३३)। पृषो०। ಇದು ನಿಯತಲಿಂಗ. ಸಮಾಸದ ಕೊನೆಯಲ್ಲಿ ಇದರ ಪ್ರಯೋಗ. **गोमतल्लिका** ಗೋಮತಲ್ಲಿಕಾ. ಶ್ರೇಷ್ಠವಾದ ಹಸು.

**मतानुग ಮತಾನುಗ** (वि०) 1. ಅಭಿಪ್ರಾಯದಂತೆ ನಡೆಯುವ, ಆಶಯವನ್ನು ಅನುಸರಿಸಿ ನಡೆಯುವ. 2. ಉಪದೇಶದಂತೆ ನಡೆಯುವ, मतमनुसृत्य गच्छति—अनु+गम्लृ (गतौ) "डः" (वा० ३-२-४८)। "वसिष्ठस्य मतानुगः" रामा०।

**मतान्तर ಮತಾಂತರ** (न०) 1. ಬೇರೆ ಮತ, ಬೇರೆ ಪಂಥ. 2. ಅಭಿಪ್ರಾಯಭೇದ, ಭಿನ್ನವಾದ ಅಭಿಪ್ರಾಯ. 3. ಭಿನ್ನವಾದ ಉದ್ದೇಶ. अन्यत् मतम्।

**मतावलम्बन ಮತಾವಲಂಬನ** (न०) ಒಂದು ಮತವನ್ನು ಹೊಂದುವುದು, ಒಂದು ಮತವನ್ನು ಆಶ್ರಯಿಸುವುದು. मतस्यावलम्बनम्।

**मति ಮತಿ** (स्त्री०) 1. ಜ್ಞಾನ, ತಿಳಿವಳಿಕೆ. मन्यते अनया — मन (ज्ञाने) "क्तिन्" (३-३-९४)। "क्व सूर्य-प्रभवो वंशः क्व चाल्पविषया मतिः" रघु० १-२। 2. ಬುದ್ಧಿ, ಪ್ರಜ್ಞೆ, ವಿಚಾರಮಾಡುವ ಶಕ್ತಿ. "कुरु तन्मतिमेव विक्रमे नृप निर्धूय तमःप्रमादजम्" किरा० २-२२। 3. ಇಚ್ಛೆ, ಅಪೇಕ್ಷೆ. 4. ಸ್ಮೃತಿ, ಸ್ಮರಣೆ, ನೆನಪು. 5. ಉದ್ದೇಶ. 6. ಪ್ರಣವ. "मतिः स्त्रीच्छा-धियोः स्मृतौ" मेदि०। "ओंकारः प्रणवस्तारस्तारकं सर्वविन्मतिः" वैज०। 7. ಅಭಿಪ್ರಾಯ, ನಂಬಿಕೆ, ವಿಶ್ವಾಸ. "विधिरहो बलवानिति मे मतिः" भर्तृ० १-८५। 8. ಗೌರವ, ಮರ್ಯಾದೆ. 9. ಸಲಹೆ, ಉಪದೇಶ. 10. ಅಭಿಪ್ರಾಯ, ಮನೋಗತ, ಆಶಯ. "मतिभेदतमस्तिरोहिते गहने कृत्यविधौ विवेकिनाम्" किरा० २-३३। 11. ಚಿತ್ತ, ಮನಸ್ಸು. "मम तु मतिर्न मनागपैतु धर्मात्" भामि० वि०।

**मतिपूर्व ಮತಿಪೂರ್ವ** (वि०) 1. ಬುದ್ಧಿಪೂರ್ವಕವಾದ. (क्रि० वि०) 2. ಬುದ್ಧಿಪೂರ್ವಕವಾಗಿ, ಉದ್ದೇಶಪೂರ್ವಕವಾಗಿ, **-पूर्वकम् -ಪೂರ್ವಕಮ್.**

**मतिभेद ಮತಿಭೇದ** (पुं०) 1. ಉದ್ದೇಶಭೇದ, ಬೇರೆಯಾದ ಉದ್ದೇಶ. 2. ಅಭಿಪ್ರಾಯಭೇದ, ಭಿನ್ನವಾದ ಅಭಿಪ್ರಾಯ. मतेर्भेदः। "मतिभेदतमस्तिरोहिते गहने कृत्यविधौ विवेकिनाम्" किरा० २-३३।

**मतिभ्रम ಮತಿಭ್ರಮ** (पुं०) 1. ಚಿತ್ತಭ್ರಮೆ, ಬುದ್ಧಿಯು ಕದಲುವಿಕೆ, ಬುದ್ಧಿಯು ತಾರುಮಾರಾಗುವಿಕೆ. मतेर्भ्रमः। "स्वप्नो नु माया नु मतिभ्रमो नु क्लिष्टं नु तावत्फलमेव पुण्यम्" शाकु० ६-१०। 2. ತಪ್ಪು ತಿಳಿವಳಿಕೆ, ವ್ಯತ್ಯಾಸವಾಗಿ ತಿಳಿದುಕೊಳ್ಳುವಿಕೆ.

**मतिभ्रंश ಮತಿಭ್ರಂಶ** (पुं०) ಬುದ್ಧಿನಾಶ, ಬುದ್ಧಿಯ ಪಲ್ಲಟ, ಉನ್ಮಾದ, ಹುಚ್ಚು. मतेर्भ्रंशः।

**मतिभ्रान्ति ಮತಿಭ್ರಾಂತಿ** (स्त्री०) 1. ಚಿತ್ತಭ್ರಮೆ, ಬುದ್ಧಿಯು ಕದಲುವಿಕೆ, ಬುದ್ಧಿಯು ತಾರುಮಾರಾಗುವಿಕೆ. 2. ತಪ್ಪು ತಿಳಿವಳಿಕೆ. मतेर्भ्रान्तिः।

**मतिविभ्रम ಮತಿವಿಭ್ರಮ** (पुं०) ಬುದ್ಧಿಯ ನಾಶ, ಉನ್ಮಾದ, ಹುಚ್ಚು.

**मतिमत् ಮತಿಮತ್** (वि०) ಬುದ್ಧಿಶಾಲಿ, ಉತ್ತಮ ಪ್ರಜ್ಞೆಯುಳ್ಳವನು. प्रशस्ता मतिरस्यास्ति "मतुप्" (५-२-९४)। "मतिमान् विनयप्रमाथिनः समुपेक्षेत समुन्नतिं द्विषः" किरा० २-५२। स्त्रियां "ङीप्" (४-१-६)। **-मती -ಮತೀ.**

**मतिशालिन् ಮತಿಶಾಲಿನ್** (वि०) ಬುದ್ಧಿಶಾಲಿ, ಜಾಣ. मत्या शालते—शालृ (कत्थने) "णिनिः" (३-१-१३४)। स्त्रियां "ङीप्" (४-१-५)। **-शालिनी -ಶಾಲಿನೀ.**

**मतिहीन ಮತಿಹೀನ** (वि०) ಬುದ್ಧಿಯಿಲ್ಲದವನು, ಮೂರ್ಖ, ದಡ್ಡ. मत्या हीनः। "मतिहीनः पशुरेष मर्षणीयः" याद० १५-६२।

**मत्क ಮತ್ಕ** (पुं०) 1. ತಿಗಣೆ, ಮಂಚದ ಹುಳ. मदी (हर्षे) "क्विप्" (३-२-७६)। मद् स्वार्थे "कन्"। (वि०) 2. ನನ್ನ ಸಂಬಂಧವಾದ, ನನ್ನದಾದ. ममेदम् "कन्" (५-२-७८)। "नैतन्मतं मत्कमिति ब्रुवाणः सहस्रशोऽसौ शपथानशप्यत्" भट्टि० ३-३२।

**मत्कुण ಮತ್ಕುಣ** (पुं०) 1. ತಿಗಣೆ, ಮಂಚದ ಹುಳ. मद (तृप्तियोगे) "क्विप्" (३-२-७६)। मद् कुणति —कुण (शब्दे) "अच्" (३-१-१३४)। "मत्कुणाविव पुरा परिप्लवौ सिन्धुनाथशयने निषेदुषः" माघ० १४-६८। 2. ದಂತವಿಲ್ಲದ ಗಜ, ಕೊಂಬು ಬೆಳೆಯದ ಆನೆ. 3. ಗಡ್ಡವಿಲ್ಲದ ಪುರುಷ, ಗಡ್ಡ ಬೆಳೆಯದ ಮನುಷ್ಯ. "अथ मत्कुणः। खट्वाकीटे निर्विषाणगजे निश्मश्रुपूरुषे" नानार्थर०। 4. ತೆಂಗಿನ ಮರ. "मत्कुणोऽश्मश्रुपूरुषे। उद्दंशे नारिकेले च निर्विषाणगजेऽपि च" हेम०। (न०) 5. ಮೊಣಕಾಲಿನ ಹೊದಿಕೆ, ಜಂಘಾತ್ರಾಣ. "जङ्घात्राणं तु मत्कुणम्" वैज०। (स्त्री०) **-णी -ಣೀ.** ತರುಣಿಯ ಜನನೇಂದ್ರಿಯ, ಯುವತಿಯ ಗುಹ್ಯೇಂದ್ರಿಯ.

**मत्कुणारि ಮತ್ಕುಣಾರಿ** (पुं०) ಸೆಣಬಿನ ಗಿಡ, ಗಾಂಜಾ ಗಿಡ, ಬಂಗಿ.

**मत्त ಮತ್ತ** (पुं०) 1. ಮದಿಸಿದ ಆನೆ, ಅಮಲೇರಿದ ಆನೆ. माद्यति—मदी (हर्षे) "क्तः" (३-४-७२)। 2. ಅಮಲೇರಿದ ಮನುಷ್ಯ. 3. ಪಿಕ, ಕೋಗಿಲೆ. 4. ಮಹಿಷ, ಎಮ್ಮೆ. 5. ದತ್ತೂರಿಗಿಡ. (वि०) 6. ಕುಡಿದು ಅಮಲೇರಿದವನು. 7. ಸಂತೋಷಗೊಂಡವನು. 8. ವಿವೇಕಶೂನ್ಯ, ಅವಿವೇಕಿ. "हृष्टे मत्तस्तृप्तः प्रह्लन्नः प्रमुदितः प्रीतः" अम०।

**मत्तकाशिनी ಮತ್ತಕಾಶಿನೀ** (स्त्री०) ಉತ್ತಮ ಹೆಂಗಸು, ಮೋಹಗೊಳಿಸುವ ಹೆಂಗಸು. मत्तेव काशते—काशृ (दीप्तौ) "णिनिः" (३-२-७९)। "वरारोहा मत्तकाशिन्युत्तमा वरवर्णिनी" अम०।

**मत्तमयूर ಮತ್ತಮಯೂರ** (पुं०) 1. ಮೇಘ, ಮೋಡ. मत्तो मयूरो यस्मात्। 2. ಸಂತೋಷಗೊಂಡ ನವಿಲು. (न०) 3. ಹದಿಮೂರನೆಯ ಛಂದಸ್ಸಿನ ಒಂದು ವೃತ್ತ, ಪ್ರತಿ ಪಾದದಲ್ಲಿಯೂ ಮಗಣ ತಗಣ ಯಗಣ ಸಗಣ ಮತ್ತು ಒಂದು ಗುರುವರ್ಣವಿರುವ ಒಂದು ವೃತ್ತ. **ಇದರ ಲಕ್ಷಣ:** "वेदैरन्ध्रैर्म्तौ यसगा मत्तमयूरम्" वृ० र०। **ಇದರ ಗಣವಿನ್ಯಾಸ:**

म त य स गु।
ऽऽऽ ऽऽ। ।ऽऽ ।।ऽ ऽ

**मत्तर ಮತ್ತರ** (वि०) ನನಗಿಂತಲೂ ಅಧಿಕನಾದ, ನನಗಿಂತಲೂ ಅತಿಶಯನಾದ. अस्मत् "तरप्"।

**मत्तवारण ಮತ್ತವಾರಣ** (पुं०) 1. ಮದಿಸಿದ ಆನೆ, ಅಮಲೇರಿದ ಆನೆ. मत्तो वारणः। 2. ವಲಭಿ, ಮನೆಯ ಸೂರಿಗೆ ಆಧಾರವಾಗಿಟ್ಟಿರುವ ಮುಂದಕ್ಕೆ ಚಾಚಿದ ಮರದ ಪಟ್ಟಿ, ಕಪೋತ ಪಾಲಿಕೆ. "कूटागारं तु वलभी निर्यूहो मत्तवारणम्" वैज०। 3. ಪಲ್ಯಂಕ, ಮಂಚ. "आसन्दी मञ्चकः खट्वापाश्रयो मत्तवारणम्" वैज०। 4. ಮನೆಯ

ಮಹಡಿಯ ಮುಂದಿನ ಪಡಸಾಲೆ, ವರಂಡ. "अथो मत्तवारणः। प्रासादवीथीवरण्डे मत्तहस्तिन्यपाश्रये" हेम०।

**मत्ता ಮತ್ತಾ** (स्त्री०) 1. ಮದ್ಯ, ಹೆಂಡ. मदोऽस्त्यस्मात् "अच्" (५-२-१२७)। 2. ಪ್ರತಿ ಪಾದದಲ್ಲಿಯೂ ಮಗಣ ಭಗಣ ಸಗಣ ಮತ್ತು ಒಂದು ಗುರು ವರ್ಣಗಳಿಂದ ಕೂಡಿದ ಒಂದು ವೃತ್ತ. **ಇದರ ಲಕ್ಷಣ:** "मत्ता ज्ञेया मभसगयुक्ता" वृ० र०। **ಇದರ ಗಣವಿನ್ಯಾಸ:**

म भ स ग
000 011 110 0

**मत्ताक्रीडा ಮತ್ತಾಕ್ರೀಡಾ** (स्त्री०) ವೃತ್ತರತ್ನಾಕರೋಕ್ತವಾದ ಇಪ್ಪತ್ತಮೂರನೆಯ ಛಂದಸ್ಸಿನ ಒಂದು ವೃತ್ತ. **ಇದರ ಲಕ್ಷಣ:** "मत्ताक्रीडा मोम्तौ नौ नाविति लगिति च वसुशरदशयतिका" वृ० र०। **ಇದರ ಗಣವಿನ್ಯಾಸ:**

म म त न न न न ल ग
000 000 001 111 111 111 111 1 0

**मत्तालम्ब ಮತ್ತಾಲಂಬ** (पुं०) ವಸಾರೆ, ಪಡಸಾಲೆ, ಜಗುಲಿ, ವರಂಡ. मत्तैरालम्ब्यते—आ+लबि (अवस्रंसने) "घञ्" (३-३-१९)।

**मत्तेभ ಮತ್ತೇಭ** (पुं०) 1. ಮದಿಸಿದ ಗಜ, ಅಮಲೇರಿದ ಆನೆ. मत्तः इभः। "मत्तेभरदनोत्कीर्णव्यक्तविक्रमलक्षणम्" रघु० ४-५९। (न०) 2. ವೃತ್ತರತ್ನಾಕರೋಕ್ತವಾದ ಇಪ್ಪತ್ತೆರಡನೆಯ ಛಂದಸ್ಸಿನ ಒಂದು ವೃತ್ತ, ಪ್ರತಿ ಪಾದದಲ್ಲಿಯೂ ತಗಣ ಭಗಣ ಯಗಣ ಜಗಣ ಸಗಣ ರಗಣ ನಗಣ ಮತ್ತು ಒಂದು ಗುರುವರ್ಣದಿಂದ ಕೂಡಿದ ಒಂದು ವೃತ್ತ. **ಇದರ ಲಕ್ಷಣ:** "तो भो यजौ सरनगाः पङ्क्तिसूर्ययति मत्तेभमत्र कथितम्" वृ० र०। **ಇದರ ಗಣವಿನ್ಯಾಸ:**

त भ य ज स र न ग
001 011 100 101 110 010 111 0

**मत्य ಮತ್ಯ** (न०) 1. ಉತ್ತ ಭೂಮಿಯನ್ನು ಸಮಮಾಡುವ ಒಂದು ಹಲಗೆ, ಹಲುಬೆ, ಕುಂಟೆ. मते समीकरणे साधु "यत्" (४-४-९८)। 2. ಕೊಡಗೋಲು ಮಚ್ಚುಕತ್ತಿ ಮುಂತಾದುವುಗಳ ಹಿಡಿ.

**मत्स ಮತ್ಸ** (पुं०) 1. ಮತ್ಸ್ಯ. 2. ಮತ್ಸ್ಯರಾಜ. माद्यति—मदी (हर्षे) "सन्" बाहु०।

**मत्सर ಮತ್ಸರ** (पुं०) 1. ಮಾತ್ಸರ್ಯ, ಹೊಟ್ಟೆಕಿಚ್ಚು, ಇತರರ ಉತ್ತಮ ಸ್ಥಿತಿಯನ್ನು ಕಂಡು ದ್ವೇಷಿಸುವುದು. मदी (हर्षे) "सरः" (उणा० ३-७३)। "त्वयि मत्सरादिव निरस्तदयः सुतरां क्षिणोति खलु तां मदनः" माघ० ९-६३। 2. ಕ್ರೋಧ, ಕೋಪ. 3. ವೈರ, ದ್ವೇಷ, ಹಗೆತನ, ಶತ್ರುತ್ವ. "विरोधिसत्त्वोज्झितपूर्वमत्सरम्" कुमा० ५-१७। 4. ಗರ್ವ, ಅಹಂಕಾರ, ಅಭಿಮಾನ. "इति धौतपुरन्ध्रिमत्सरान्" माघ० ८-७१। 5. ಲೋಭ, ಅತಿಯಾದ ಆಸೆ, ಕಾರ್ಪಣ್ಯ. (वि०) 6. ಕೃಪಣ, ಲೋಭಿ, ಅತಿಯಾದ ಆಸೆಯುಳ್ಳವನು. 7. ಅಸೂಯೆಯುಳ್ಳವನು, ಇತರರ ಭಾಗ್ಯವನ್ನು ನೋಡಿ ಸಹಿಸದವನು. "धनवन्तमदातारं पुरुषं मत्सरं विदुः" शाश्व०। "मत्सरः परसम्पत्त्यक्षमायां तद्वति क्रुधि। कृपणे" हेम०। (पुंस्त्री०) 8. ನೊಣ. स्त्रियां मत्सरा। "मक्षिकायां च मत्सरः" त्रिकाण्ड०। "मत्सरा मक्षिकायां स्यात्" मेदि०।

**मत्सरिन् ಮತ್ಸರಿನ್** (वि०) 1. ದ್ವೇಷವುಳ್ಳವನು, ವೈರಿ, ಹಗೆ, ಶತ್ರು. मत्सरोऽस्यास्ति "इनिः" (५-२-११५)। "वैरायितारस्तरलाः स्वयं मत्सरिणः परे" माघ० २-११५। 2. ಅಸೂಯೆಯುಳ್ಳವನು, ಇತರರ ಸಂಪತ್ತನ್ನು ನೋಡಿ ಸಹಿಸದವನು, ಇತರರ ಏಳಿಗೆಯನ್ನು ದ್ವೇಷಿಸುವವನು. "परवृद्धिमत्सरि मनो हि मानिनाम्" माघ० १५-१।

**मत्स्य ಮತ್ಸ್ಯ** (पुं०) 1. ಮೀನು. माद्यति—मदी (हर्षे) "स्यन्" (उ० ४-२)। "नादेया मधुरा मत्स्याः गुरवो मारुतापहाः" सुश्रुत० सूत्र० ४६-११४। 2. ಮಹಾವಿಷ್ಣುವಿನ ಒಂದು ಅವತಾರ, ವಿಷ್ಣುವಿನ ಹತ್ತು ಅವತಾರಗಳಲ್ಲಿ ಮೊದಲನೆಯ ಅವತಾರ.

ಸೋಮಕನೆಂಬ ರಾಕ್ಷಸನು ವೇದಗಳನ್ನು ಅಪಹರಿಸಿಕೊಂಡು ಹೋಗಲಾಗಿ ವಿಷ್ಣುವು ಮತ್ಸ್ಯರೂಪದಿಂದ ಅವತರಿಸಿ ಆ ರಾಕ್ಷಸನನ್ನು ಸಂಹರಿಸಿ ವೇದಗಳ ಉದ್ಧಾರ ಮಾಡಿದನು. [ಸೂರ್ಯಪುತ್ರನಾದ ವೈವಸ್ವತಮನುವು ವಿಷ್ಣುವನ್ನು ಕುರಿತು ತಪಸ್ಸುಮಾಡಿ ಪ್ರಳಯ ಕಾಲದಲ್ಲಿ ಸ್ಥಾವರಜಂಗಮಾತ್ಮಕವಾದ ಸಕಲಜಗತ್ತನ್ನೂ ಕಾಪಾಡುವ ಸಾಮರ್ಥ್ಯವನ್ನು ಪಡೆದನು. ಒಂದುದಿನ ಮನುವು ತರ್ಪಣ ಮಾಡುತ್ತಿದ್ದಾಗ ತನ್ನ ಮೇಲೆ ಬಿದ್ದ ಒಂದು ಮೀನನ್ನು ದಯೆಯಿಂದ ಕಾಪಾಡಲು ತನ್ನ ಒಂದು ಪಾತ್ರೆಯಲ್ಲಿ ಇಟ್ಟನು. ಅದು ಕ್ರಮವಾಗಿ ಹದಿನಾರು ಅಂಗುಲದಷ್ಟು ಬೆಳೆದು ತನ್ನನ್ನು ರಕ್ಷಿಸಬೇಕೆಂದು ಹೇಳಿತು. ಅನಂತರ ಬೃಹದಾಕಾರವನ್ನು ಹೊಂದಿ ಸಮುದ್ರವನ್ನು ಸೇರಿತು. ಆಗ ಮತ್ಸ್ಯಾವತಾರಿಯಾದ ವಿಷ್ಣುವು ಇನ್ನು ಕೆಲವು

ಕಾಲದಲ್ಲೇ ನೀರಿನಲ್ಲಿ ಮುಳುಗಿಹೋಗಲಿರುವ ಚರಾಚರ ಜಗತ್ತನ್ನು ದೇವನಿರ್ಮಿತವಾದ ಈ ಹಡಗಿನಲ್ಲಿಟ್ಟು ರಕ್ಷಿಸಬೇಕೆಂದೂ ಪ್ರಳಯವಾತದಿಂದ ಹಡಗು ವಿಚಲಿತವಾದರೆ ನನ್ನ ಕೋಬಿನ ಮೇಲೆ ಇಟ್ಟು ರಕ್ಷಿಸಬೇಕೆಂದೂ ಪ್ರಳಯಾನಂತರ ಪ್ರಾರಂಭವಾಗಲಿರುವ ಕೃತಯುಗದಲ್ಲಿ ನೀನೇ ಜಗತ್ತಿಗೆಲ್ಲಾ ಅಧಿಪತಿಯಾಗುವೆಯೆಂದೂ ಲೋಕೋತ್ತರವಾದ ಧೈರ್ಯ ಶಕ್ತಿ ಸಾಮರ್ಥ್ಯಗಳು ನಿನಗೆ ಲಭಿಸುವುವೆಂದೂ ಹೇಳಿದನು.] "युगान्तवाताभिहता यदा भवति नौर्नृप। शृङ्गेऽस्मिन् मम राजेन्द्र तदेमां संयमिष्यसि॥ ततो लयान्ते सर्वस्य स्थावरस्य चरस्य च। प्रजापतिस्त्वं भविता जगतः पृथिवीपते" मत्स्यपु०। 3. ಮೀನರಾಶಿ, ಹನ್ನೆರಡು ರಾಶಿಗಳಲ್ಲಿ ಕೊನೆಯ ರಾಶಿ. (ಪುಂ ಶಂ ಶಂ) 4. ವಿರಾಟರಾಜನು ಆಳುತ್ತಿದ್ದ ಮತ್ಸ್ಯದೇಶ, ಈ ದೇಶವು ಈಗಿನ ಜಯಪುರ ಸಂಸ್ಥಾನ ಆಳ್ವಾರ್ ಸಂಸ್ಥಾನ ಮತ್ತು ಭರತಪುರದ ಕೆಲವು ಭಾಗಗಳಿಂದ ಕೂಡಿತ್ತು. ಪಾಂಡವರು ಹನ್ನೆರಡು ವರ್ಷ ವನವಾಸ ಮಾಡಿ ಅಜ್ಞಾತವಾಸವನ್ನು ಇಲ್ಲಿ ಕಳೆದರು. 5. ಮತ್ಸ್ಯದೇಶದ ಜನರು.

**मत्स्यकरण्डिका ಮತ್ಸ್ಯಕರಂಡಿಕಾ** (स्त्री०) ಮೀನಿನ ಬುಟ್ಟಿ.

**मत्स्यगन्धा ಮತ್ಸ್ಯಗಂಧಾ** (स्त्री०) ಸತ್ಯವತಿ, ದಾಶರಾಜನ ಸಾಕುಮಗಳು, ವ್ಯಾಸಮಹರ್ಷಿಯ ತಾಯಿ. मत्स्यस्येव गन्धोऽस्याः। [ಈಕೆಯು ಉಪರಿಚರವಸುವಿನ ವೀರ್ಯವನ್ನು ನುಂಗಿದ ಒಂದು ಮತ್ಸ್ಯದ ಗರ್ಭದಲ್ಲಿ ಜನಿಸಿ ದಾಶರಾಜನಿಂದ ಪೋಷಿಸಲ್ಪಟ್ಟವಳು. ಇವಳಿಗೆ ಸತ್ಯವತೀ ಯೋಜನಗಂಧಾ ಎಂಬ ಹೆಸರೂ ಉಂಟು. ಒಂದು ದಿನ ದಾಶರಾಜನ ಭೋಜನಕಾಲದಲ್ಲಿ ನದಿಯನ್ನು ದಾಟಲು ಬಂದ ಪರಾಶರರನ್ನು ತಂದೆಯ ಆದೇಶದಂತೆ ನದಿಯ ಆಚೆ ದಡಕ್ಕೆ ಸೇರಿಸಿದಳು. ಅವಳ ಸೌಂದರ್ಯ ನೋಡಿ ಮೋಹಗೊಂಡ ಪರಾಶರರಿಂದ ತಮ್ಮಿಬ್ಬರ ಸಂಗಮವು ತಾಯಿ ತಂದೆಗಳಾರಿಗೂ ತಿಳಿಯಕೂಡದೆಂದೂ ಕನ್ಯಾವಸ್ಥೆಯು ಲುಪ್ತವಾಗಕೂಡದೆಂದೂ ತನ್ನ ದೇಹದಲ್ಲಿ ಸರ್ವದಾ ಸೌಗಂಧ್ಯವಿರಬೇಕೆಂದೂ ವರವನ್ನು ಪಡೆದಳು. ಇವಳ ಗರ್ಭದಲ್ಲಿ ಕೃಷ್ಣದ್ವೈಪಾಯನರು (ವ್ಯಾಸರು) ಜನಿಸಿದರು.]

**मत्स्यजीविन् ಮತ್ಸ್ಯಜೀವಿನ್** (पुं०) ಮತ್ಸ್ಯದಿಂದ ಜೀವನಮಾಡುವ ಬೆಸ್ತ. मत्स्येन जीवति — जीव (प्राणधारणे) "णिनिः" (३-२-१३४)।

**मत्स्यण्डी ಮತ್ಸ್ಯಂಡೀ** (स्त्री०) ಕಾಕಂಬಿ, ಜೋನುಬೆಲ್ಲ, ಕಚ್ಚಾ ಸಕ್ಕರೆಯ ಪಾಕ. मदं मधुररसं स्यन्दते — स्यन्दू (प्रस्रवणे) "अण्" (३-२-१)। पृषो०। "मत्स्यण्डी फाणितं खण्डविकारे" अम०। "इक्षो रसो यः संपक्वो घनः किञ्चिद्द्रवान्वितः। मदवत् स्यन्दते यस्मात् मत्स्यण्डीति निगद्यते" भावप्र०।

**मत्स्यदेश ಮತ್ಸ್ಯದೇಶ** (पुं०) ವಿರಾಟ ರಾಜನು ಆಳುತ್ತಿದ್ದ ಒಂದು ದೇಶ.

**मत्स्यधानी ಮತ್ಸ್ಯಧಾನೀ** (स्त्री०) ಮೀನಿನ ಬುಟ್ಟಿ, ಮೀನನ್ನು ಹಿಡಿದು ತುಂಬುವ ಬುಟ್ಟಿ. मत्स्याः धीयन्तेऽत्र — डु धाञ् (धारणपोषणयोः) "ल्युट्" (३-३-११७)।

**मत्स्यनाशन ಮತ್ಸ್ಯನಾಶನ** (पुं०) 1. ಕುರುವಹಕ್ಕಿ, ಮೀನು ತಿನ್ನುವ ಒಂದು ಜಾತಿಯ ಹಕ್ಕಿ, ಕಡಲ ಹದ್ದು. मत्स्यान् नाशयति—णश (अदर्शने) "ल्युः" (३-१-१३४)। (वि०) 2. ಮತ್ಸ್ಯಗಳನ್ನು ನಾಶಪಡಿಸುವವನು.

**मत्स्यपित्ता ಮತ್ಸ್ಯಪಿತ್ತಾ** (स्त्री०) ಕಟುಕರೋಹಿಣಿ. मत्स्यस्य पित्तमिव रसोऽस्त्यस्याः "अच्" (५-२-१२७)।

**मत्स्यपुराण ಮತ್ಸ್ಯಪುರಾಣ** (न०) ಅಷ್ಟಾದಶ ಪುರಾಣಗಳಲ್ಲೊಂದು. ಮತ್ಸ್ಯರೂಪದಿಂದ ಅವತರಿಸಿದ ಪರಮಾತ್ಮನಿಂದ ಉಕ್ತವಾದುದರಿಂದ ಈ ಪುರಾಣಕ್ಕೆ ಈ ಹೆಸರು. "पुण्यं पवित्रमायुष्यमिदानीं शृणुत द्विजाः। मात्स्यं पुराणमखिलं यज्जगाद गदाधरः" मत्स्यपु०। ಈ ಪುರಾಣದಲ್ಲಿ 14,000 ಶ್ಲೋಕಗಳಿವೆ.

**मत्स्यबन्धक ಮತ್ಸ್ಯಬಂಧಕ** (पुं०) ಬೆಸ್ತರವನು, ಮೀನು ಹಿಡಿಯುವವನು. मत्स्यान् बध्नाति—बन्ध (बन्धने) "ण्वुल्" (३-१-१३३)। स्त्रियां "ङीष्" (४-१-६३)। —बन्धकी —ಬಂಧಕೀ.

**मत्स्यबन्धन ಮತ್ಸ್ಯಬಂಧನ** (न०) ಮೀನನ್ನು ಹಿಡಿಯುವ ಗಾಳ. मत्स्याः बध्यन्तेऽनेन—बन्ध (बन्धने) "ल्युट्" (३-३-११७)।

**मत्स्यबन्धिन् ಮತ್ಸ್ಯಬಂಧಿನ್** (वि०) ಮೀನು ಹಿಡಿಯುವವನು, ಬೆಸ್ತರವನು. मत्स्यान् बध्नाति—बन्ध (बन्धने) "णिनिः" (३-२-७८)। स्त्रियां "ङीप्" (४-१-६३)। —बन्धिनी —ಬಂಧಿನೀ.

**मत्स्यमुद्रा ಮತ್ಸ್ಯಮುದ್ರಾ** (स्त्री०) ಬಲಗೈಯ ಕೆಳಗೆ ಎಡಗೈಯನ್ನು ಇಟ್ಟು ಎರಡು ಹೆಬ್ಬೆರಳುಗಳನ್ನೂ ಆಡಿಸುತ್ತಿರುವ ಒಂದು ಮುದ್ರೆ. "दक्षपाणिपृष्ठदेशे वामपाणितलं न्यसेत्। अङ्गुष्ठौ चालयेत्सम्यक् मुद्रेयं मत्स्यरूपिणी" तन्त्रसा०।

**मत्स्यराज ಮತ್ಸ್ಯರಾಜ** (ಪುಂ) 1. ವಿರಾಟರಾಜ, ಮತ್ಸ್ಯ ದೇಶದ ದೊರೆ. मत्स्यानां राजा। 2. ರೋಹಿತವೆಂಬ ಒಂದು ಜಾತಿಯ ಮೀನು.

**मत्स्यवेधन ಮತ್ಸ್ಯವೇಧನ** (ನಂ) 1. ಮೀನು ಹಿಡಿಯುವ ಗಾಳ. मत्स्या विध्यन्ते अनेन — व्यध (ताडने) "ल्युट्" (३-३-११७)। (स्त्री०) -वेधनी ವೇಧನೀ. "ङीप्" (४-१-१५)। 2. ಮೀನು ಹಿಡಿದು ತಿನ್ನುವ ಒಂದು ಜಾತಿಯ ಕಡಲಹಕ್ಕಿ.

**मत्स्याक्षी ಮತ್ಸ್ಯಾಕ್ಷೀ** (स्त्री०) 1. ಹೊನಗೊನ್ನೆಸೊಪ್ಪು. मत्स्याक्षीवास्त्यस्याः पुष्पम् "षच्" (५-४-११३)। गौरा० "ङीष्" (४-१-४१)। 2. ಕೀರೆಸೊಪ್ಪು. 3. ಸೋಮಲತೆ.

**मत्स्यादन ಮತ್ಸ್ಯಾದನ, -अशन -ಅಶನ** (ಪುಂ) 1. ಮೀನು ತಿನ್ನುವವನು. मत्स्यानत्ति अश्नाति वा अद (भक्षणे) अश (भोजने) वा "ल्युः" (३-१-१३४)। 2. ಸಮುದ್ರದ ಪಕ್ಷಿ, ಕಡಲ ಹಕ್ಕಿ. (स्त्री०) -अदनी -ಅದನೀ 3. ನೀರುಹಿಪ್ಪಲಿ.

**मत्स्यावतार ಮತ್ಸ್ಯಾವತಾರ** (ಪುಂ) ವಿಷ್ಣುವಿನ ಹತ್ತು ಅವತಾರಗಳಲ್ಲಿ ಮೊದಲನೆಯ ಅವತಾರ. मत्स्यरूपेण अवतारः।

**मथन ಮಥನ** (ಪುಂ) 1. ಉಜ್ಜಿ ಬೆಂಕಿಯನ್ನು ಸೃಷ್ಟಿಸುವ ಒಂದು ಮರ. 2. ಕಡೆಯುವುದು. 3. ಕಲಕುವುದು. 4. ಹಿಂಸಿಸುವುದು, ಗಾಯಮಾಡುವುದು. 5. ಅರೆಯುವುದು. 6. ನಾಶಪಡಿಸುವುದು, ಕೊಲ್ಲುವುದು. मथे (विलोडने) भावे "ल्युट्" (३-३-११५)। (वि०) 7. ಕಡೆಯುವ. 8. ಹಿಂಸಿಸುವ. 9. ಕಲಕುವ, ಕೀಳು ಮೇಲು ಮಾಡುವ. 10. ಅರೆಯುವ. 11. ನಾಶಪಡಿಸುವ, ಕೊಲ್ಲುವ. मथे कर्त० "ल्युः" (३-१-१३४)। "मधुमथनदये त्वां वारिधाराविशेषैः" दयाश०।

**मथित ಮಥಿತ** (ನಂ) 1. ನೀರು ಬೆರಸದೆ ಕಡೆದ ಮೊಸರು. मथे (विलोडने) कर्म० "क्तः" (३-२-१०२)। (वि०) 2. ಕಡೆಯಲ್ಪಟ್ಟ. "प्रमथितभूभृतः प्रतिपथं मथितस्य भृशं महीभृता" माघ० ३-८२। 3. ಕಲಕಲ್ಪಟ್ಟ, ಬುಡಮೇಲು ಮಾಡಲ್ಪಟ್ಟ. "मथिताम्भसो रयविकीर्णमृदितकदलीगवेधुकाः" किरा० १२-५१। 4. ಹಿಂಸಿಸಲ್ಪಟ್ಟ, ಗಾಯಗೊಳಿಸಲ್ಪಟ್ಟ. 5. ಅರೆಯಲ್ಪಟ್ಟ. 6. ನಾಶಪಡಿಸಲ್ಪಟ್ಟ. "मथितं पुनः। क्लीबं निर्जलघोले स्यात् त्रिष्वालोडितघृष्टयोः" मेदि०।

**मथिन् ಮಥಿನ್** (ಪುಂ) (ಮೊಸರು ಕಡೆಯುವ) ಕಡೆಗೋಲು, ಮಂಥನ ದಂಡ. मथ्यतेऽनेन—मन्थ (विलोडने) "इनिः" (उ० ४-११)। "मुहुः प्रणुन्नेषु मथां विवर्तनैर्नदत्सु कुम्भेषु मृदङ्गमन्थरम्" किरा० ४-१६।

**मथुरा ಮಥುರಾ** (स्त्री०) ಮಧುರಾ ನಗರ, ಶೂರಸೇನ ದೇಶದ ದೊರೆ ಸುಷೇಣನ ನಗರ. ["मधुरा" ಪದದಲ್ಲಿ ನೋಡಿ.] "कलिन्दकन्या मथुरां गतापि गङ्गोर्मिसंसक्तजलेव भाति" रघु० ६-४८।

**मथ्नत् ಮಥ್ನತ್** (वि०) 1. ಕಡೆಯುತ್ತಿರುವ. 2. ಹಿಂಸಿಸುತ್ತಿರುವ. 3. ಕಲಕುತ್ತಿರುವ. 4. ನಾಶಪಡಿಸುತ್ತಿರುವ. 5. ಅರೆಯುತ್ತಿರುವ. मन्थ (विलोडने) "शतृ" (३-२-१२४)। स्त्रियां "ङीप्" (४-१-६)। -त्नी -ತ್ನೀ.

**मथ्यमान ಮಥ್ಯಮಾನ** (वि०) 1. ಕಡೆಯಲ್ಪಡುತ್ತಿರುವ. 2. ಹಿಂಸಿಸಲ್ಪಡುತ್ತಿರುವ. 3. ಕಲಕಲ್ಪಡುತ್ತಿರುವ. 4. ನಾಶಪಡಿಸಲ್ಪಡುತ್ತಿರುವ. 5. ಅರೆಯಲ್ಪಡುತ್ತಿರುವ. मथे (विलोडने) कर्म० "शानच्" (३-२-१२४)।

**मद ಮದ** (ಪುಂ) 1. ಮತ್ತು, ಅಮಲು. मदी (हर्षे) "अप्" (३-३-६७)। "घूर्णयन् मदिरास्वादमदपाटलितद्युती" माघ० २-१६। 2. ಗರ್ವ, ಅಹಂಕಾರ. "प्रभवन्त्यभिमानशालिनां मदमुत्तम्भयितुं विभूतयः" किरा० २-४८। 3. ದರ್ಪ, ಕೊಬ್ಬು. "मदमानसमुद्धतं नृपं न वियुङ्क्ते नियमेन मूढता" किरा० २-४९। 4. ಮದೋದಕ, ಆನೆಯ ಕುಂಭಸ್ಥಲದಿಂದ ಹೊರಡುವ ರಸಿಕೆ, ಮದಜಲ. "मदानिलैरधिमधुचूतगन्धिभिर्द्विपा द्विपानभिययुरेव रंहसा" माघ० १७-६७। 5. ಹರ್ಷ, ಸಂತೋಷ. 6. ಮದ್ಯ, ಹೆಂಡ. 7. ವೀರ್ಯ, ರೇತಸ್ಸು. 8. ಕಸ್ತೂರಿ. "मदो रेतसि कस्तूर्यां गर्वे हर्षेभदानयोः" मेदि०। "मदो रेतस्यहंकारे मद्ये हर्षेभदानयोः। कस्तूरिकायां क्षैब्ये च" हेम०। 9. ಉನ್ಮಾದದ ಪೂರ್ವಾವಸ್ಥೆ, ಹುಚ್ಚು ಹಿಡಿಯುವ ಪೂರ್ವದ ಸ್ಥಿತಿ.

**मदकल ಮದಕಲ** (ಪುಂ) 1. ಮದಿಸಿದ ಆನೆ, ಅಮಲೇರಿದ ಆನೆ. मदेन कलः अव्यक्तध्वनिरस्य। मदेन कलो मनोज्ञो वा। (वि०) 2. ಮದದಿಂದ ಅಸ್ಪಷ್ಟವಾಗಿ ಮಾತಾಡುವ. 3. ಮದದಿಂದ ಅವ್ಯಕ್ತ ಧ್ವನಿಮಾಡುವ. "विकचतामरसा गृहदीर्घिका मदकलोदकलोलविहङ्गमाः" रघु० ९-३७। 4. ಹುಚ್ಚು ಹಿಡಿದವನು, ಉನ್ಮತ್ತ.

**मदगन्ध ಮದಗಂಧ** (ಪುಂ) 1. ಸಪ್ತಚ್ಛದ, ಏಳೆಲೆ ಬಾಳೆ ಗಿಡ. (स्त्री०) -गन्धा -ಗಂಧಾ. 2. ಮದ್ಯ. 3. ಅತಸೀ ಗಿಡ, ಅಗಸೆ ಗಿಡ.

**मदच्युत् ಮದಚ್ಯುತ್** (वि०) 1. ಮದಜಲವನ್ನು ಸುರಿಸುವ. मदं मदजलं च्योतति — च्युतिर् (आसेचने) "क्विप्" (३-२-७६)। "त्वयात्महस्तेन मही मदच्युता मतङ्गजेन स्रगिवापवर्जिता" किरा० १-२९। 2. ಕಾಮುಕ, ಕಾಮಾಸಕ್ತ.

**मदजल ಮದಜಲ** (न०) ಆನೆಯ ಕುಂಭಸ್ಥಲದಿಂದ ಹೊರಡುವ ನೀರು (ರಸಿಕೆ).

**मदन ಮದನ** (पुं०) 1. ಮನ್ಮಥ, ಕಾಮದೇವ. मदयति —मदी (हर्षग्लेपनयोः) + णिच् "ल्युः" (३-१-१३४)। माद्यत्यनेन — मदी करं० "ल्युट्" (३-३-११७) वा। "इदमिह मदनस्य जैत्रमस्त्रं सहजविलासनिबन्धनं शरीरम्" मालती० २-६। 2. ಕಾಮ, ವಿಷಯವಾಸನೆ. "मदनमुपदधे स एव तासां दुरधिगमा हि गतिः प्रयोजनानाम्" किरा० १०-४०। 3. ವಸಂತಋತು. 4. ಜೇನುಮೇಣ. 5. ದತ್ತೂರಿಗಿಡ. "मदनः स्मरधुत्तूरवसन्तद्रुमसिक्थकाः" विश्व०। 6. ವಕುಳವೃಕ್ಷ. 7. ಖದಿರವೃಕ್ಷ, ಕಗ್ಗಲಿ ಮರ. 8. ಭ್ರಮರ, ದುಂಬಿ. 9. ಪಕ್ಷಿ, ಹಕ್ಕಿ. "वशाकुमदनः पीतुमंशाको मद्गुरो द्विजः" वैज०। 10. ಕಾಮಶಾಸ್ತ್ರೋಕ್ತವಾದ ಒಂದು ಬಗೆ ಆಲಿಂಗನ. 11. ಮಂಗಾರೆ ಗಿಡ. (स्त्री०) **मदना ಮದನಾ**. 12. ಮದ್ಯ, ಹೆಂಡ. "मदिरा सुरा। मदना मोहकलिका" वैज०।

**मदनकण्टक ಮದನಕಂಟಕ** (पुं०) ರೋಮಾಂಚ, ಪ್ರೀತಿಯಿಂದ ಮೈಗೂದಲು ಎದ್ದು ನಿಲ್ಲುವಿಕೆ. मदननिमित्तः कण्टक इव।

**मदनकलह ಮದನಕಲಹ** (पुं०) ಮನ್ಮಥ ಯುದ್ಧ, ಸಂಭೋಗ, ಸ್ತ್ರೀಪುರುಷರ ಸಂಗಮ. "क्षिपन्निद्रामुद्रां मदनकलहच्छेदसुभगामुपात्तोत्कम्पानां विहगमिथुनानां प्रथमतः" मालती० २-१२।

**मदनगृह ಮದನಗೃಹ** (न०) 1. ಸ್ತ್ರೀಯರ ಜನನೇಂದ್ರಿಯ. मदनस्य गृहम्। 2. ಜಾತಕದಲ್ಲಿ ಲಗ್ನದಿಂದ ಏಳನೆಯ ಸ್ಥಾನ.

**मदनगोपाल ಮದನಗೋಪಾಲ** (पुं०) ಶ್ರೀಕೃಷ್ಣ. मदन इव गोपालः।

**मदनचतुर्दशी ಮದನಚತುರ್ದಶೀ** (स्त्री०) ಚೈತ್ರ ಶುದ್ಧ ಚತುರ್ದಶಿ. [ಮದನೋತ್ಸವವನ್ನು ಆಚರಿಸುವ ದಿನ.]

**मदनत्रयोदशी ಮದನತ್ರಯೋದಶೀ** (स्त्री०) ಚೈತ್ರ ಶುದ್ಧ ತ್ರಯೋದಶಿ. [ಮದನೋತ್ಸವವನ್ನು ಆಚರಿಸುವ ದಿನ.]

**मदनद्वादशी ಮದನದ್ವಾದಶಿ** (स्त्री०) ಚೈತ್ರ ಶುದ್ಧ ದ್ವಾದಶಿ. [ಮದನೋತ್ಸವವನ್ನು ಆಚರಿಸುವ ದ್ವಾದಶಿ.]

**मदनपाठक ಮದನಪಾಠಕ** (पुं०) ಕೋಗಿಲೆ.

**मदनमोहन ಮದನಮೋಹನ** (पुं०) ಶ್ರೀಕೃಷ್ಣ. मदनमपि मोहयति सौन्दर्येण।

**मदनलेख ಮದನಲೇಖ** (पुं०) ತಮ್ಮ ಪ್ರೀತಿ ವಿಶ್ವಾಸ (ಅನುರಾಗ)ಗಳನ್ನು ತಿಳಿಸಲು ನಾಯಿಕೆ ಮತ್ತು ನಾಯಕರು ಪರಸ್ಪರ ಕಳುಹಿಸುವ ಪ್ರೇಮಪತ್ರ. मदनज्ञापनार्थो लेखः पत्रम्। "तव न जाने हृदयं मम पुनः कामो दिवापि रात्रावपि। निर्घृण तपति बलीयस्त्वयि वृत्तमनोरथान्यङ्गानि" शाकु० ३-१३।

**मदनसदन ಮದನಸದನ** (न०) 1. ಸ್ತ್ರೀಯರ ಜನನೇಂದ್ರಿಯ. मदनस्य सदनम्। 2. ಜಾತಕದಲ್ಲಿ ಲಗ್ನದಿಂದ ಏಳನೆಯ ಸ್ಥಾನ.

**मदनाग्रक ಮದನಾಗ್ರಕ** (पुं०) ಹಾರಕ ಧಾನ್ಯ. मदनं मदनविकारजनकमग्रमस्य।

**मदनाङ्कुश ಮದನಾಂಕುಶ** (पुं०) 1. ಪುರುಷನ ಜನನೇಂದ್ರಿಯ, ಪುರುಷನ ಲಿಂಗ. 2. ಸಂಭೋಗ ಕಾಲದಲ್ಲಿ ಆಗುವ ನಖಕ್ಷತ.

**मदनान्तक ಮದನಾಂತಕ –अरि –ಅರಿ** (पुं०) ಪರಶಿವ, ಮಹಾದೇವ. मदनस्य अन्तकः अरिर्वा।

**मदनालय ಮದನಾಲಯ** (पुं०) 1. ಸ್ತ್ರೀಯರ ಜನನೇಂದ್ರಿಯ. मदनस्यालयः। 2. ಜಾತಕದಲ್ಲಿ ಲಗ್ನದಿಂದ ಏಳನೆಯ ಸ್ಥಾನ.

**मदनावस्था ಮದನಾವಸ್ಥಾ** (स्त्री०) ಕಾಮುಕರಿಗೆ ಮನ್ಮಥ ಬಾಧೆಯಿಂದ ಉಂಟಾಗುವ ಅವಸ್ಥೆ. दृक् मनःसङ्गः संकल्पः जागरः कृशता अरतिः। ह्रीत्यागः उन्मादः मूर्च्छा अन्तः ಇವು ಹತ್ತು ಮದನಾವಸ್ಥೆಗಳು.

**मदना ಮದನಾ** (स्त्री०) ಸುರೆ, ಮದ್ಯ, ಹೆಂಡ.

**मदनोत्सव ಮದನೋತ್ಸವ** (पुं०) 1. ಮನ್ಮಥನ ಪೂಜೆ, ಹೋಳಿಹಬ್ಬ. (स्त्री०) **–वा –ವಾ**. 2. ಸ್ವರ್ಗಲೋಕದ ವೇಶ್ಯೆ.

**मदयत् ಮದಯತ್** (वि०) 1. ಮದವನ್ನುಂಟುಮಾಡುತ್ತಿರುವ, ಕಾಮವಿಕಾರವನ್ನು ಹುಟ್ಟಿಸುತ್ತಿರುವ. मदी

(हर्षग्लेपनयोः) + णिच् "शतृ" (३-२-१२४)। 2. ಅಮಲೇರಿಸುತ್ತಿರುವ. 3. ಸಂತೋಷಪಡಿಸುತ್ತಿರುವ.

**मदयन्ती ಮದಯನ್ತೀ** (स्त्री०) ಕಾಡುಮಲ್ಲಿಗೆ.

**मदयितृ ಮದಯಿತೃ** (वि०) 1. ಕಾಮವಿಕಾರವನ್ನುಂಟು ಮಾಡುವ. 2. ಅಮಲೇರಿಸುವ, ಮದವನ್ನುಂಟು ಮಾಡುವ. मदी (हर्षग्लेपनयोः) + णिच् "तृच्" (३-१-१३३)। 3. ಸಂತೋಷವುಂಟುಮಾಡುವ. स्त्रियां "ङीप्" (४-१-६)। -यित्री -ಯಿತ್ರೀ.

**मदयित्नु ಮದಯಿತ್ನು** (पुं०) 1. ಮನ್ಮಥ, ಕಾಮದೇವ. मदी (हर्षे) + णिच् "इत्नुच्" (उ० ३-२९)। 2. ಮೇಘ, ಮೋಡ. "मदयित्नुर्वायुदारुर्व्योमधूमो नभोगजः" त्रिकाण्ड०। (न०) 3. ಮದ್ಯ, ಹೆಂಡ. (वि०) 4. ಮದ್ಯ ತೆಗೆಯುವವನು, ಹೆಂಡ ಇಳಿಸುವವನು. 5. ಮದವನ್ನುಂಟುಮಾಡುವ, ಅಮಲೇರಿಸುವ. 6. ಸಂತೋಷವುಂಟುಮಾಡುವ.

**मदलेखा ಮದಲೇಖಾ** (स्त्री०) 1. ವೃತ್ತರತ್ನಾಕರೋಕ್ತವಾದ ಏಳನೆಯ ಛಂದಸ್ಸಿನ ಒಂದು ವೃತ್ತ, ಪ್ರತಿ ಪಾದದಲ್ಲಿಯೂ ಮಗಣ ಸಗಣ ಮತ್ತು ಒಂದು ಗುರು ವರ್ಣದಿಂದ ಕೂಡಿದ ಒಂದು ವೃತ್ತ. ಇದರ ಲಕ್ಷಣ: "म्सौ गः स्यान्मदलेखा" वृ० र०। ಇದರ ಗಣವಿನ್ಯಾಸ :

म स गु।
ऽऽऽ ।।ऽ ऽ

2. ಮದೋದಕದ ಗೆರೆ, ಮದಜಲ ಬೀಳುವುದರಿಂದುಂಟಾಗುವ ಗೆರೆ.

**मदसार ಮದಸಾರ** (पुं०) ಹತ್ತಿಗಿಡ. मदं सारयति दूरीकरोति—सृ (गतौ) + णिच् "अण्" (३-२-१)।

**मदस्थान ಮದಸ್ಥಾನ** (न०) ಮದ್ಯದ ಮನೆ, ಹೆಂಡದ ಅಂಗಡಿ. मदस्य स्थानम्। "शुण्डापानं मदस्थानम्" वैज०।

**मदस्रुति ಮದಸ್ರುತಿ** (स्त्री०) ಮದಜಲವು ಸುರಿಯುವಿಕೆ, ಮದೋದಕವು ಸೋರುವುದು. मदस्य स्रुतिः। "दधति क्षतीः परिणतद्विरदे मुदितालियोषिति मदस्रुतिभिः" किरा० ६-७।

**मदाकुल ಮದಾಕುಲ** (वि०) ಮದದಿಂದ ಕೂಡಿದ, ಮದದಿಂದ ಆವೇಶಗೊಂಡ. मदेनाकुलः।

**मदाढ्य ಮದಾಢ್ಯ** (पुं०) 1. ತಾಳವೃಕ್ಷ, ತಾಳೆ ಮರ. मदेन मदजनकरसेन आढ्यः। (वि०) 2. ಮದದಿಂದ ಕೂಡಿದವನು, ಅಮಲೇರಿದವನು.

**मदात्यय ಮದಾತ್ಯಯ** (पुं०) ಮದ್ಯಪಾನದಿಂದುಂಟಾಗುವ ಒಂದು ರೋಗ. मदेन अत्ययो नाशोऽत्र। "विषस्य ये गुणा दृष्टाः सन्निपातप्रकोपनाः। त एव मद्ये दृश्यन्ते विषे तु बलवत्तराः। तस्मादविधिपीतेन तथा मात्राधिकेन च। युक्तेन चाहितैरन्नैरकाले सेवितेन च। मद्येन खलु जायन्ते मदात्ययमुखा गदाः" भावप्र०।

**मदाम्नात ಮದಾಮ್ನಾತ** (पुं०) ಆನೆಯ ಹೆಗಲ ಮೇಲೆ ಹೊರಿಸಲಾದ ನಗಾರಿ. मदाय मदोद्रेकाय आम्नातः।

**मदाम्बर ಮದಾಂಬರ** (पुं०) 1. ಮದಿಸಿದ ಆನೆ. मदोऽम्बरमिवास्य। 2. ಐರಾವತ, ಇಂದ್ರನ ಆನೆ.

**मदार ಮದಾರ** (पुं०) 1. ಮದಿಸಿದ ಆನೆ. 2. ವರಾಹ, ಸೂಕರ, ಹಂದಿ. 3. ದತ್ತೂರಿ ಗಿಡ. 4. ಕಾಮುಕ, ಸ್ತ್ರೀಲೋಲ. मदी (हर्षे) "आरन्" (उ० ३-१३४)। 5. ಧೂರ್ತ, ವಂಚಕ, ಮೋಸಗಾರ. "मदारो हस्तिधूर्तयोः" मेदि०।

**मदार्मन् ಮದಾರ್ಮನ್** (न०) ಮದದಿಂದುಂಟಾಗುವ ನೇತ್ರರೋಗ.

**मदार्मद ಮದಾರ್ಮದ** (पुं०) ಫಲಕಮತ್ಸ್ಯ. मदार्माणं मदजन्यं नेत्ररोगं ददाति। "राजग्रीवो मदार्मदः" त्रिकाण्ड०।

**मदालस ಮದಾಲಸ** (वि०) ಮದದಿಂದ ಬಳಲಿದವನು.

**मदालापिन् ಮದಾಲಾಪಿನ್** (पुं०) ಕೋಗಿಲೆ. मदेनालपति— आ + लप "णिनिः" (३-१-१३४)।

**मदाह्व ಮದಾಹ್ವ** (पुं०) ಕಸ್ತೂರಿ, ಮೃಗದ ಮದ. मदः मृगमदः आह्वाऽस्य। "कस्तूरी गन्धचेलिका। मदाह्वश्च" त्रिकाण्ड०।

**मदिर ಮದಿರ** (पुं०) 1. ರಕ್ತಖದಿರವೃಕ್ಷ, ಕೆಂಪು ಹೂವಿನ ಕಗ್ಗಲಿ ಮರ. मदी (हर्षे) "किरच्" (उ० १-५१)। (वि०) 2. ಮದವನ್ನುಂಟುಮಾಡುವ. 3. ಹರ್ಷವನ್ನುಂಟುಮಾಡುವ. 4. ಮದಿಸಿರುವ.

**मदिरा ಮದಿರಾ** (स्त्री०) ಮದ್ಯ, ಹೆಂಡ. माद्यत्यनेन— मदी (हर्षे) "किरच्" (उ० १-५१)। ಮದ್ಯವು (1) माध्वीकम् (2) पानसम् (3) द्राक्षम् (4) खार्जूरम् (5) तालम् (6) ऐक्षवम् (7) मैरेयम् (8) माक्षिकम् (9) टाङ्कम् (10) मधूकम् (11) नारिकेलजम् ಮತ್ತು (12) मुख्यम् ಎಂದು ಹನ್ನೆರಡು ವಿಧ. "न स्रजो रुरुचिरे रमणीभ्यश्चन्दनानि विरहे मदिरा वा" किरा० ९-३५।

**मदिराक्षी ಮದಿರಾಕ್ಷೀ** (स्त्री०) ಮೋಹಗೊಳಿಸುವ ನೇತ್ರಗಳುಳ್ಳ ಹೆಂಗಸು, ಮದನವಿಕಾರವನ್ನುಂಟುಮಾಡುವ ಕಣ್ಣುಗಳುಳ್ಳ ಹೆಂಗಸು. मदिरे इव अक्षिणी यस्याः "षच्" (५-४-११३)। "ङीष्" (४-१-४१)। मदिरे मत्ते अक्षिणी यस्याः वा। "मधुकर मदिराक्ष्याः शंस तस्याः प्रवृत्ति वरतनुरथवासौ नैव दृष्टा त्वया मे" विक्र० ४-४२।

**मदिरागृह ಮದಿರಾಗೃಹ** (न०) ಮದ್ಯದ ಮನೆ, ಹೆಂಡದ ಅಂಗಡಿ, ಬಟ್ಟಿಯನ್ನು ಇಳಿಸುವ ಮನೆ.

**मदिरासख ಮದಿರಾಸಖ** (पुं०) ಮಾವಿನಮರ. मदिराया सखा "टच्" (५-४-९१)।

**मदिष्ठा ಮದಿಷ್ಠಾ** (स्त्री०) ಮದ್ಯ, ಹೆಂಡ. अतिशयेन मदयित्री "इष्ठन्" (५-३-५५)। "मदिरा सुरा। मदना मोहकलिका मदिष्ठा काचमालिका" वैज०।

**मदी ಮದೀ** (स्त्री०) ಉತ್ತ ಭೂಮಿಯ ಮಣ್ಣಿನ ಹೆಂಟೆಗಳನ್ನು ಪುಡಿಮಾಡುವ ಕುಂಟೆ.

**मदीय ಮದೀಯ** (वि०) ನನ್ನ, ನನ್ನ ಸಂಬಂಧವಾದ, ನನಗೆ ಸಂಬಂಧಿಸಿದ. मम अयम् इदं वा—अस्मद् "छः" (४-२-११४)। "मः" (७-२-९८)। "ईयः" (७-१-२)। "स त्वं मदीयेन शरीरवृत्तिं देहेन निर्वर्तयितुं प्रसीद" रघु० २-४५। स्त्रियां **मदीया ಮದೀಯಾ.**

**मदोत्कट ಮದೋತ್ಕಟ** (पुं०) 1. ಮದವೇರಿದ ಆನೆ, ಅಮಲೇರಿದ ಆನೆ. मदेन मदोदकेन उत्कटः। 2. ಪಾರಿವಾಳದ ಹಕ್ಕಿ, ಕಪೋತ ಪಕ್ಷಿ. "पारावतः कलरवो रक्तदृष्टिर्मदोत्कटः" वैज०। (न०) 3. ಜೇನುತುಪ್ಪದಿಂದ ತಯಾರಿಸಿದ ಮದ್ಯ. "मधुमद्ये तु माध्वीकं कामिकान्तं मदोत्कटम्" वैज०। (वि०) 4. ಮದದಿಂದ ಉನ್ಮತ್ತನಾದ, ಹುಚ್ಚುಹಿಡಿದ. 5. ಮದದಿಂದ ಕೊಬ್ಬಿದ. "ते तान् ग्राम्यगजान् दृष्ट्वा सर्वे वनगजास्तदा। समाद्रवन्त वेगेन जिघांसन्तो मदोत्कटाः" भा०।

**मदोदग्र ಮದೋದಗ್ರ, –उद्धत –ಉದ್ಧತ** (वि०) ಮದದಿಂದ ಆವೇಶ ಹೊಂದಿದ, ಅಮಲಿನಿಂದ ಕುಪಿತವಾದ, ಮದವೇರಿದ. मदेन उदग्रः उद्धतो वा। "मदोदग्राः ककुद्मन्तः सरितां कूलमुद्रुजाः" रघु० ४-२२। "मदोद्धताः प्रत्यनिलं विचेरुः" कुमा० ३-३१।

**मदोद्गार ಮದೋದ್ಗಾರ** (पुं०) ಮದಸ್ರಾವ, ಮದ ಸುರಿಯುವುದು, ಮದೋದಕ ಸೋರುವುದು. मदस्योद्गारः। "खर्जूरीस्कन्धनद्धानां मदोद्गारसुगन्धिषु" रघु० ४-५७।

**मदोन्मत्त ಮದೋನ್ಮತ್ತ** (वि०) ಗರ್ವದಿಂದ ಕೊಬ್ಬಿರುವ, ಅಹಂಕಾರದಿಂದ ಉನ್ಮತ್ತನಾದ. मदेन उन्मत्तः।

**मद्गु ಮದ್ಗು** (पुं०) 1. ನೀರಿನಲ್ಲಿ ಮುಳುಗಿ ಮೀನು ಹಿಡಿದು ತಿನ್ನುವ ಒಂದು ಹಕ್ಕಿ, ಒಂದು ಜಲಚರ ಪಕ್ಷಿ. मज्जति—टु मस्जो (शुद्धौ) "उः" (उ० १-७)। कुत्वम् (७-३-५३)। सस्य दः (८-४-५३)। "मद्गुः-पानीयकाकिका"। 2. ಕಾಡಿನ ಪಶು ಪಕ್ಷಿಗಳನ್ನು ಕೊಲ್ಲುವ ಮನುಷ್ಯ. "मेदान्ध्रचुञ्चुमद्गूनामारण्यपशुहिंसनम्" वैज०। 3. ಉಡ ನಕ್ರ ಮೊದಲಾದುವನ್ನು ಹಿಡಿದು ಕೊಲ್ಲುವ ಬೇಡರವನು. 4. ಮೀನು ಹಿಡಿಯಲು ಅಪ್ಪಣೆ ಸಾರುವವನು. "स्यात् पारधेनुको वेनो गोधादिवधबन्धकृत्। स निषादो मत्स्यघातान् मद्गुराघोषणेन सः" वैज०। 5. ಮಾಗಧ ಜಾತಿಯ ಹೆಂಗಸಿನಲ್ಲಿ ಬ್ರಾಹ್ಮಣನಿಂದ ಹುಟ್ಟಿದ ಮಿಶ್ರಜಾತಿಯವನು.

**मद्गुर ಮದ್ಗುರ** (पुं०) 1. ಒಂದು ಜಾತಿಯ ಮೀನು. मज्जति—टु मस्जो (शुद्धौ) मदी (हर्षे) वा "उरच्" (उ० १-४१)। निपा०। 2. ಒಬ್ಬ ಮಿಶ್ರಜಾತಿಯವನು. 3. ಮುತ್ತಿನ ಚಿಪ್ಪಿಗಾಗಿ ನೀರಿನಲ್ಲಿ ಮುಳುಗುವವನು. स्वार्थे "कन्"। **मद्गुरकः ಮದ್ಗುರಕಃ.**

**मद्गुरप्रिया ಮದ್ಗುರಪ್ರಿಯಾ** (स्त्री०) ಮದ್ಗುರ ಜಾತಿಯ ಹೆಣ್ಣುಮೀನು. ಇದಕ್ಕೆ ಶೃಂಗಿಯೆಂದು ಹೆಸರು. "मद्गुरस्य प्रिया शृङ्गी" अम०।

**मद्य ಮದ್ಯ** (न०) 1. ಹೆಂಡ, ಸಾರಾಯಿ. माद्यत्यनेन—मदी (हर्षे) "यत्" (३-१-१००)। "मद्यमन्दविगलत्त्रपमीषच्चक्षुरुन्मिषितपक्ष्म दधत्या" माघ० १०-१७। (वि०) 2. ಮದವುಂಟುಮಾಡುವ, ಅಮಲೇರಿಸುವ. 3. ಹರ್ಷಗೊಳಿಸುವ, ಉಲ್ಲಾಸವುಂಟು ಮಾಡುವ. ಮದ್ಯವು 12 ವಿಧ. ["मदिरा" ಪದದಲ್ಲಿ ನೋಡಿ.]

**मद्यप ಮದ್ಯಪ** (वि०) ಮದ್ಯಪಾನ ಮಾಡುವವನು, ಹೆಂಡವನ್ನು ಕುಡಿಯುವವನು. मद्यं पिबति—पा (पाने) "कः" (३-२-३)।

**मद्यपान ಮದ್ಯಪಾನ** (न०) ಮದ್ಯವನ್ನು ಕುಡಿಯುವುದು. मद्यस्य पानम्।

**मद्यपुष्पा ಮದ್ಯಪುಷ್ಪಾ** (स्त्री०) ಮರಾಟಿಮೊಗ್ಗು. मद्यसाधनं पुष्पमस्याः।

**मद्यवासिनी ಮದ್ಯವಾಸಿನೀ** (स्त्री०) ಮರಾಟಿಮೊಗ್ಗಿನ ಗಿಡ.

**मद्यसन्धान ಮದ್ಯಸಂಧಾನ** (ನಂ) ಹೆಂಡವನ್ನು ತೆಗೆಯುವುದು, ಬಟ್ಟಿ ಇಳಿಸುವುದು.

**मद्र ಮದ್ರ** (ಪುಂ) 1. ಮದ್ರದೇಶದ ದೊರೆ. (ಪುಂ ಬಂ ವಂ) 2. ಮದ್ರ ದೇಶ. 3. ಮದ್ರ ದೇಶದ ಜನರು. [ಮದ್ರ ದೇಶವು ಈಗಿನ ಪಂಜಾಬ ದೇಶ. ಮದ್ರ ದೇಶದ ಮುಖ್ಯ ಪಟ್ಟಣ (ರಾಜಧಾನಿ) ಶಾಕಲ ನಗರ. ಚಂದ್ರಭಾಗಾ-ಇರಾವತೀನದಿಗಳ ಮಧ್ಯಭಾಗದ ಪ್ರದೇಶವು ಮದ್ರ ದೇಶ.]

**मद्रक ಮದ್ರಕ** (ವಿಂ) ಮದ್ರ ದೇಶದಲ್ಲಿ ಹುಟ್ಟಿದವನು. मद्रे जातः "कन्" (४-२-१३१)।

**मद्रकार ಮದ್ರಕಾರ** (ವಿಂ) ಹರ್ಷವನ್ನು ಉಂಟು ಮಾಡುವ, ಸಂತೋಷವನ್ನು ಉಂಟುಮಾಡುವ. मद्रं करोति—डु कृञ् (करणे) "अण्" (३-२-४४)। पक्षे "खच्" (३-२-४४)। **मद्रङ्करः ಮದ್ರಂಕರಃ.**

**मद्रराज ಮದ್ರರಾಜ** (ಪುಂ) ಮದ್ರದೇಶದ ದೊರೆ, ಶಲ್ಯ, ಋತಾಯನರಾಜನ ಮಗ, ಮಾದ್ರಿಯ ಸಹೋದರ. ["शल्य" ಪದದಲ್ಲಿ ನೋಡಿ.]

**मद्रसुता ಮದ್ರಸುತಾ** (ಸ್ತ್ರೀಂ) ಮದ್ರರಾಜನ ಮಗಳು, ಮಾದ್ರಿ, ಪಾಂಡುರಾಜನ ಪತ್ನಿ. मद्रस्य सुता।

**मद्वन् ಮದ್ವನ್** (ಪುಂ) ಶಿವ, ಪರಮೇಶ್ವರ. मदी (हर्षे) "वनिप्" (उ० ४-११२)।

**मद्वर्गीण ಮದ್ವರ್ಗೀಣ** (ವಿಂ) ನನ್ನ ಪಕ್ಷದಲ್ಲಿರುವ, ನನ್ನ ಕಡೆ ಇರುವ. मम वर्गे पक्षे भवः—वा "खः" (४-३-६४)। पक्षे "छः" (४-३-६४)। **मद्वर्गीयः ಮದ್ವರ್ಗೀಯಃ.** पक्षे "यत्" (४-३-६४)। **मद्वर्ग्यः ಮದ್ವರ್ಗ್ಯಃ.**

**मद्विध ಮದ್ವಿಧ** (ವಿಂ) ನನ್ನಂತಿರುವ. मम विधेव विधा यस्य। "मद्विधा विषमवृत्तिशालिनः" यादं० १७-९७।

**मधु ಮಧು** (ಪುಂ) 1. ಚೈತ್ರ ಮಾಸ. मन्यते—मन (ज्ञाने) "उः" (उ० १-१८)। नस्य धश्च। "रेजतुर्गति-वशात्प्रवर्तिनौ भास्करस्य मधुमाधवाविव" रघु० ११-७। 2. ವಸಂತ ಋತು. "निवेशयामास मधुर्द्विरेफान्नामाक्ष-राणीव मनोभवस्य" कुमा० ३-२७। 3. ಅಶೋಕ ವೃಕ್ಷ. 4. ಸೀಹಾಲೆ ಗಿಡ. 5. ಹಿಪ್ಪೆ ಮರ. 6. ಒಬ್ಬ ರಾಕ್ಷಸ. "शत्रुघ्नश्च मधोः पुत्रं लवणं नाम राक्षसम्। हत्वा मधुवने चक्रे मथुरां नाम वै पुरीम्," भाग० ९-११-१४। 7. ವಿಷ್ಣುವಿನ ಕರ್ಣಮಲದಿಂದ ಹುಟ್ಟಿದ ಒಬ್ಬ ರಾಕ್ಷಸ. ಇವನು ವಿಷ್ಣುವಿನೊಡನೆ ಯುದ್ಧಮಾಡಿ ಹತನಾದನು. भा० वन० २०६। (ನಂ) 8. ಅತಿಮಧುರ. 9. ಮಕರಂದ, ಪುಷ್ಪರಸ. "मधु द्विरेफः कुसुमैकपात्रे पपौ प्रियां स्वामनुवर्तमानः" कुमा० ३-३६। 10. ಮದ್ಯ, ಹೆಂಡ. "ततथा हि दयिताननदत्तं व्यानशे मधु रसातिशयेन" किरा० ९-५८। 11. ಜೇನುತುಪ್ಪ. "एतास्ता मधुनो धाराः श्च्योतन्ति सविषास्त्वयि" उ० रा० ३-३४। 12. ಮಧುರ ರಸ. 13. ಜಲ, ನೀರು. 14. ಕ್ಷೀರ, ಹಾಲು. "ना वसन्ते रसेऽसुरे। चैत्रे मधूके क्लीबत्वप्सु मद्ये पुष्परसे मधु" वैजं०। "गव्यं ज्येष्ठं मधु क्षीरम्" वैजं०। "मधु क्षौद्रे जले क्षीरे मद्ये पुष्परसे मधुः। दैत्ये चैत्रे वसन्ते च जीवा-शोके मधुद्रुमे" विश्व०। (ವಿಂ) 15. ಮಧುರವಾದ, ಸಿಹಿಯಾದ.

**मधुक ಮಧುಕ** (ಪುಂ) 1. ಸ್ತುತಿಪಾಠಕ, ಹೊಗಳುಭಟ. 2. ಅತಿಮಧುರ. 3. ಒಂದು ಜಾತಿಯ ಪಕ್ಷಿ. (ನಂ) 4. ಅಮೃತ ಬಳ್ಳಿ. मधु मधुरं कायति—कै (शब्दे) "कः" (३-२-३)। "मधुको वन्दिमेदे स्याज्ज्येष्ठयाह्वे विहगान्तरे। मधुकं मधुपर्ण्यां स्यात्" विश्व०। 5. ಹಳೆಯ ಜೇನುತುಪ್ಪ. "मधूलं तु मधुर्नस्त्री मधुकं तत् पुरातनम्" वैजं०।

**मधुकण्ठ ಮಧುಕಂಠ** (ಪುಂ) ಕೋಗಿಲೆ. मधुः मधुरः कण्ठोऽस्य। "मधुकण्ठो घोषयित्नुः कामतालः सुतर्दनः" त्रिकाण्ड०। स्त्रियां "ङीष्" (४-१-६३)। **-कण्ठी -ಕಂಠೀ.**

**मधुकर ಮಧುಕರ** (ಪುಂ) 1. ಭ್ರಮರ, ದುಂಬಿ. मधु करोति—डु कृञ् (करणे) ताच्छील्ये "टः" (३-२-२०)। "आमोक्ष्यन्ते त्वयि मधुकरश्रेणिदीर्घान् कटाक्षान्" मेघ० १-३५। स्त्रियां "ङीप्" (४-१-१५)। **मधुकरी ಮಧುಕರೀ.** 2. ಕಾಮುಕ, ಸ್ತ್ರೀಲಂಪಟ, ಕಾಮಾಸಕ್ತ.

**मधुकृत् ಮಧುಕೃತ್** (ಪುಂ) ಭ್ರಮರ, ದುಂಬಿ. मधु करोति—कृञ् "क्विप्" (३-२-७६)।

**मधुकैटभ ಮಧುಕೈಟಭ** (ಪುಂ ದ್ವಿವಂ) ಮಧು ಮತ್ತು ಕೈಟಭರೆಂಬ ರಾಕ್ಷಸರು. मधुश्च कैटभश्च। ["कैटभ" ಪದದಲ್ಲಿ ನೋಡಿ.] "मधुकैटभमेरुमर्दिनस्ते" याद० १५-१८।

**मधुकोश ಮಧುಕೋಶ** (ಪುಂ) ಜೇನುಗೂಡು. मध्वर्थं कृतः कोशः।

**मधुक्रम ಮಧುಕ್ರಮ** (ಪುಂ) ಮದ್ಯಪಾನದ ಕ್ರಮ.

**मधुखर्जूरी ಮಧುಖರ್ಜೂರೀ** (स्त्री०) ಓಂಡಖರ್ಜೂರ, ಮೆದುವಾದ (ಸಿಹಿ) ಖರ್ಜೂರ. मधुः मधुरा खर्जूरी।

**मधुगायन ಮಧುಗಾಯನ** (पुं०) ಕೋಗಿಲೆ. मधु गायति —गै (शब्दे) "ल्युट्" (३-१-१४७)। स्त्रियां "ङीप्" (४-१-१५)। **-गायनी -ಗಾಯನೀ.**

**मधुघोष ಮಧುಘೋಷ** (पुं०) ಕೋಗಿಲೆ. मधुर्मधुरः घोषः अस्य।

**मधुज ಮಧುಜ** (नं०) ಜೇನುಮೇಣ. मधुनो जायते— जनी (प्रादुर्भावे) "डः" (३-२-९८)।

**मधुजा ಮಧುಜಾ** (स्त्री०) 1. ಕಲ್ಲುಸಕ್ಕರೆ. 2. ಪೃಥ್ವಿ, ಭೂಮಿ. मधुनो जायते—जनी "डः" (३-२-९८)।

**मधुजित् ಮಧುಜಿತ್** (पुं०) ವಿಷ್ಣು. मधुं जितवान्— जि (जये) "क्विप्" (३-२-७६)।

**मधुतृण ಮಧುತೃಣ** (पुंन०) ಕಬ್ಬು. मधुः मधुरः तृणः मधुरं तृणं वा।

**मधुत्रय ಮಧುತ್ರಯ** (नं०) ಮಧುರವಾದ ಮೂರು ವಸ್ತುಗಳು. ತುಪ್ಪ ಜೇನುತುಪ್ಪ ಕಲ್ಲುಸಕ್ಕರೆ ಇವು ಮೂರು ಮಧುರ ವಸ್ತುಗಳು. मधूनां मधुरवस्तूनां त्रयम्।

**मधुदूत ಮಧುದೂತ** (पुं०) ಮಾವಿನ ಮರ. मधो- र्वसन्तस्य दूत इव।

**मधुद्रुम ಮಧುದ್ರುಮ** (पुं०) ಹಿಪ್ಪೆ ಮರ. मधुनामा द्रुमः। मध्वर्थं मधूत्पादको वा द्रुमः इति वा।

**मधुद्विष् ಮಧುದ್ವಿಷ್** (पुं०) ವಿಷ್ಣು, ನಾರಾಯಣ. "मधुद्विषो वर्णमुषां मणीनाम्" यादं० १८-१०७।

**मधुनिषूदन ಮಧುನಿಷೂದನ, -रिपु -ರಿಪು, -सूदन -ಸೂದನ** (पुं०) ವಿಷ್ಣು. मधुं मधुनामराक्षसं निषूदते मधोःरिपुः मधुं सूदयति वा। मधुं सूरीणां करणं सूदयति आत्मन्युपसंहरति इति वा—षूद (क्षरणे) + णिच् "ल्युः" (३-१-१३४)। "मध्वाख्यमसुरं हन्ति सूरीणां करणं च वा। उपसंहरति स्वस्मिन् मधुसूदन इष्यते" इति निरुक्तिः। "माधवो मधुसूदनः" वि० स०।

**मधुनेतृ ಮಧುನೇತೃ** (पुं०) ಭ್ರಮರ, ದುಂಬಿ. मधु नयति पुष्पेभ्यः—णीञ् (प्रापणे) "तृच्" (३-१-१३३)।

**मधुप ಮಧುಪ** (पुं०) 1. ಭ್ರಮರ, ದುಂಬಿ. मधु पिबति —पा (पाने) "कः" (३-२-३)। "वकुलपुष्परसासव- पेशलध्वनिरगान्निरगान्मधुपावलिः" माघ० ६-७। (वि०) 2. ಮದ್ಯಪಾನ ಮಾಡುವವನು, ಹೆಂಡ ಕುಡಿಯು ವವನು.

**मधुपर्क ಮಧುಪರ್ಕ** (पुं०) 1. ಮೊಸರು ತುಪ್ಪ ಜಲ ಜೇನುತುಪ್ಪ ಸಕ್ಕರೆ ಇವುಗಳ ಬೆರಕೆ. ಇವು ಐದನ್ನೂ ಬೆರಸಿ ಮನೆಗೆ ಬಂದ ಅತಿಥಿಗಳಿಗೂ ವಿವಾಹಕಾಲದಲ್ಲಿ ವರನಿಗೂ ಕೊಟ್ಟು ಪೂಜಿಸಬೇಕು. "दधि सर्पिर्जलं क्षौद्रं सिता चैतैश्च पञ्चभिः। प्रोच्यते मधुपर्कस्तु सर्वदेवौघ- तुष्टये"। ಇದು ಪೂಜಾಕಾಲದಲ್ಲಿ ಮಾಡುವ ಷೋಡಶೋಪಚಾರಗಳಲ್ಲೊಂದು. ಒಂದು ವರ್ಷದ ನಂತರ ಮನೆಗೆ ಬಂದ ರಾಜ ಋತ್ವಿಕ್ಕು ಸ್ನಾತಕ (ವಿದ್ಯಾಭ್ಯಾಸ ಪೂರ್ತಿಮಾಡಿದವನು) ಗುರು ಅಳಿಯ ಮಾವ (ಶ್ವಶುರ) ಮತ್ತು ಸೋದರಮಾವ ಇವರನ್ನು ಮಧುಪರ್ಕದಿಂದ ಸತ್ಕರಿಸಬೇಕು. "राजर्त्विक्स्नातकगुरून् प्रियश्वशुर- मातुलान्। अर्हयेन्मधुपर्केण परिसंवत्सरात् पुनः" मनु० ३-११९। (नं०) 2. ದಧಿ ಮಿಶ್ರವಾದ ಮಧು, ಮೊಸರು ಬೆರಸಿದ ಜೇನುತುಪ್ಪ. "मधुपर्कं दधिमधुघृतमपिहितं कांस्येन"। "असिस्वदद्यन्मधुपर्कमर्पितं स तद्व्यधात्तर्क- मुदर्कदर्शिने" नैष० १६-१३।

**मधुपर्णिका ಮಧುಪರ್ಣಿಕಾ** (स्त्री०) 1. ನೀಲಿಗಿಡ. 2. ಶೀವನೆ ಮರ. 3. ಅಮೃತಬಳ್ಳಿ. मध्विव पर्णा- न्यस्याः "ङीष्" (४-१-६४)। स्वार्थे "कन्" (५-३-७५)।

**मधुपर्णी ಮಧುಪರ್ಣೀ** (स्त्री०) 1. ಅಮೃತಬಳ್ಳಿ. मध्विव पर्णान्यस्याः "ङीष्" (४-१-६४)। 2. ಶೀವನೆ ಮರ. "मधुपर्णी च गाम्भीर्यां नीलीसंज्ञौषधावपि" मेदि०। 3. ನೀಲಿಗಿಡ. "अथ नीलीविशल्ययोः। मधुपर्णी" वैजं०।

**मधुपान ಮಧುಪಾನ** (नं०) ಮದ್ಯವನ್ನು ಕುಡಿಯುವುದು.

**मधुपायिन् ಮಧುಪಾಯಿನ್** (पुं०) 1. ಭ್ರಮರ, ದುಂಬಿ. (वि०) 2. ಮದ್ಯಪಾನ ಮಾಡುವವನು, ಹೆಂಡ ಕುಡಿಯು ವವನು. मधु पिबति—पा (पाने) "णिनिः" (३-१-१३४)। स्त्रियां **-पायिनी -ಪಾಯಿನೀ.**

**मधुपुरी ಮಧುಪುರೀ** (स्त्री०) ಮಧುರಾನಗರ. मधोः दैत्यस्य पुरी। "नैमिषं फाल्गुणं सेतुः प्रभासोऽथ कुशस्थली। वाराणसी मधुपुरी पम्पा बिन्दुसरस्तथा" भाग० ७-१४-३१।

**मधुपुष्प ಮಧುಪುಷ್ಪ** (पुं०) 1. ಹಿಪ್ಪೆಮರ. 2. ಬಾಗೆ ಮರ. 3. ಅಶೋಕವೃಕ್ಷ. 4. ಪವಳದ ಗಿಡ, ವಕುಳವೃಕ್ಷ.

**मधुप्रमेह ಮಧುಪ್ರಮೇಹ** (पुं०) ಮೂತ್ರರೋಗ, ಮೂತ್ರಾತಿಸಾರ.

**मधुप्रिय ಮಧುಪ್ರಿಯ** (ಪುಂ०) ಬಲರಾಮ. मधु मद्यं प्रियं यस्य।

**मधुबहुला ಮಧುಬಹುಲಾ** (स्त्री०) ಕಾಡಿರುವಂತಿಗೆ ಗಿಡ.

**मधुबीज ಮಧುಬೀಜ** (ಪುಂ०) 1. ದಾಳಿಂಬೆ ಗಿಡ. (ನಂ०) 2. ದಾಳಿಂಬೆ ಹಣ್ಣು.

**मधुमक्षिका ಮಧುಮಕ್ಷಿಕಾ** (स्त्री०) ಜೇನು ಹುಳ. मधुकर्त्री मक्षिका।

**मधुमत् ಮಧುಮತ್** (वि०) 1. ಜೇನುತುಪ್ಪದೊಡನೆ ಬೆರೆತಿರುವ. 2. ಸಿಹಿಯಾದ, ಮಧುರವಾದ. मधु मधुरसोऽस्त्यस्य "मतुप्" (५-२-९४)। स्त्रियां "ङीप्" (४-१-६)। **-मती -ಮತೀ.** (स्त्री०) 3. ಒಂದು ನದಿ. ಈ ನದಿಯು ಮಾಳವ ದೇಶದಲ್ಲಿ ಹುಟ್ಟಿ ಹರಿದು ಸಿಂಧು ನದಿಯೊಡನೆ ಸೇರುವುದು. "अयं च मधुमतीसिन्धुसंभेदपावनो भगवान् भवानीपतिः" मालती० ९।

**मधुमत्त ಮಧುಮತ್ತ** (वि०) ಮದ್ಯಪಾನದಿಂದ ಮದಿಸಿದವನು, ಹೆಂಡ ಕುಡಿದು ಅಮಲೇರಿದವನು. मधुना मत्तः।

**मधुमथन ಮಧುಮಥನ** (ಪುಂ०) ಮಧುವೆಂಬ ರಾಕ್ಷಸನನ್ನು ಸಂಹರಿಸಿದ ವಿಷ್ಣು. मधुं मथ्नाति—मन्थ (विलोडने) "ल्युः" (३-१-१३४)। "मधुमथनवधूरिवाह्वयन्ति" माघ० ७-२५।

**मधुमल्ली ಮಧುಮಲ್ಲೀ** (स्त्री०) ಮಾಲತೀಲತೆ, ಜಾಜಿ ಗಿಡ. मधुप्रधाना मल्ली।

**मधुमस्तक ಮಧುಮಸ್ತಕ** (ನಂ०) ಹಿಟ್ಟಿಗೆ ಜೇನುತುಪ್ಪ ತೈಲ ತುಪ್ಪಗಳನ್ನು ಬೆರಸಿ ಮಾಡುವ ಒಂದು ವಿಧ ಭಕ್ಷ್ಯ.

**मधुमेह ಮಧುಮೇಹ** (ಪುಂ०) ಮೂತ್ರರೋಗ, ಮೂತ್ರಾತಿಸಾರ.

**मधुयष्टि ಮಧುಯಷ್ಟಿ, -यष्टी -ಯಷ್ಟೀ** (स्त्री०) 1. ಕಬ್ಬು. 2. ಅತಿಮಧುರ. मधुः मधुरा यष्टिः।

**मधुयष्टिका ಮಧುಯಷ್ಟಿಕಾ** (स्त्री०) 1. ಅತಿಮಧುರ. 2. ಕಬ್ಬು.

**मधुर ಮಧುರ** (ಪುಂ०) 1. ಮಧುರ ರಸ, ಸಿಹಿರಸ. मधु माधुर्यं राति—रा (दाने) "कः" (३-२-४)। मधु माधुर्यमस्यास्ति "रः" (५-२-१०७) वा। "मधुरस्तु रसश्चिनोति केशान् वपुषः स्थैर्यबलौजोवीर्यदायी" राजनि०। (ನಂ०) 2. ವಿಷ. 3. ತವರ. (वि०) 4. ಮಧುರವಾದ, ಸಿಹಿಯಾದ, ರುಚಿಯಾದ. "मधुरं मधु पीयूषं तस्मात्तस्मात्कवेर्वचः" चन्द्रा०। "न धर्मशास्त्रं पठतीति कारणं न चापि वेदाध्ययनं दुरात्मनः। स्वभाव एवात्र तथातिरिच्यते यथा प्रकृत्या मधुरं गवां पयः" हितो० १-१७। 5. ಇಂಪಾದ. "अभिभवति मनः कदम्बवायौ मधुमधुरे च शिखण्डिनां निनादे" किरा० १०-२३। 6. ಅಂದವಾದ, ಚೆಲುವಾದ, ಸೊಗಸಾದ. "यथा प्रसिद्धैर्मधुरं शिरोरुहैर्जटाभिरप्येवमभूत्तदानीम्" कुमा० ५-९। 7. ಪ್ರಿಯವಾದ, ಹಿತವಾದ, ಸಂತೋಷಕರವಾದ. "मधुरं बहिरन्तरप्रियं कृतिनाऽवाचि वचस्तथा त्वया" माघ० १६-१७। 8. ಪ್ರಶಾಂತವಾದ, ಪ್ರಸನ್ನವಾದ, ಕ್ರೂರವಲ್ಲದ. "मधुरैरवशानि लम्भयन्नपि तिर्यञ्चि शमं निरीक्षितैः" किरा० ३-५५। (क्रि० वि०) 9. ಸಿಹಿಯಾಗಿ. 10. ಪ್ರಿಯವಾಗಿ, ಸಂತೋಷಕರವಾಗಿ. 11. ಪ್ರಶಾಂತವಾಗಿ. 12. ಇಂಪಾಗಿ. 13. ಸೊಗಸಾಗಿ, ಅಂದವಾಗಿ. "मधुरं विषम्। मधुरस्तु प्रिये स्वादौ रसे च रसवत्यपि" हेम०।

**मधुरक ಮಧುರಕ** (ಪುಂ०) ಹಕ್ಕಿಸಿಳ್ಳೆ ಗಿಡ.

**मधुरता ಮಧುರತಾ** (स्त्री०) 1. ಸಿಹಿ, ಮಾಧುರ್ಯ. मधुरस्य भावः "तल्" (५-१-११९)। "बिभ्रती मधुरतामतिमात्रं रागिभिर्युगपदेव पपाते" माघ० १०-८। 2. ರಮಣೀಯತೆ. 3. ಇಂಪು. 4. ಸೊಗಸು, ಚೆಲುವು. "त्वः" (५-१-११९)। **मधुरत्वम् ಮಧುರತ್ವಮ್.** "आहिते नु मधुना मधुरत्वे चेष्टितस्य गमिते नु विकासम्" किरा० ९-६९।

**मधुरत्रय ಮಧುರತ್ರಯ** (ನಂ०) "मधुत्रय" ನೋಡಿ.

**मधुरस ಮಧುರಸ** (ಪುಂ०) 1. ಕಬ್ಬು, ಇಕ್ಷು. 2. ತಾಳೆ ಮರ, ಪನೆಮರ, ತಾಟಿಮರ. मधुः मधुरो रसोऽस्य।

**मधुरसा ಮಧುರಸಾ** (स्त्री०) 1. ದ್ರಾಕ್ಷೆಹಣ್ಣು. मधुर्मधुरो रसोऽस्याः। 2. ಕುರಟಗೆ ಗಿಡ. 3. ಹಾಲುತೊಟ್ಟಿನ ಗಿಡ. "भवेन्मधुरसा द्राक्षामूर्विकादुग्धिकासु च" मेदि०।

**मधुरा ಮಧುರಾ** (स्त्री०) 1. ಮಧುರಾನಗರ, ಶ್ರೀಕೃಷ್ಣನು ಅವತರಿಸಿದ ಸ್ಥಳ, ಶೂರಸೇನನ ರಾಜಧಾನಿ. 2. ಅತಿಮಧುರ. 3. ಹುಳಿತ ಗಂಜಿ. 4. ಸಬ್ಬಸಿಗೆ. 5. ಸಕ್ಕರೆ ಕುಂಬಳ, ಸಿಹಿ ಕುಂಬಳ. 6. ಕುರುಟಗೆ ಗಿಡ. 7. ಅಜವಾನ, ಓಮ. मधुरस्त्यस्याः। "मधुरा मधुरापुर्यां यष्टिमोदामधूलिषु। मधुकर्कटिकायां च मिश्रेयाशतपुष्पयोः" हेम०। 8. ಲವಣಾಸುರನನ್ನು ಜಯಿಸಿ ಕಾಳಿಂದೀ ನದೀ ತೀರದಲ್ಲಿ ಶತ್ರುಘ್ನನು ನಿರ್ಮಿಸಿದ ಒಂದು ನಗರ.

"उपकूलं तु कालिन्द्याः पुरीं पौरुषभूषणः। निर्ममे निर्ममोऽर्थेषु मधुरां मधुराकृतिः" रघु० १५-२८।

**मधुराम्लक ಮಧುರಾಮ್ಲಕ** (पुं०) ಅಮಟೆ ಮರ.

**मधुरिका ಮಧುರಿಕಾ** (स्त्री०) ಸಬ್ಬಸಿಗೆಸೊಪ್ಪು. "छत्रा मधुरिका मिसिः" अम०।

**मधुरिपु ಮಧುರಿಪು** (पुं०) ವಿಷ್ಣು. मधोः असुरस्य रिपुः। "श्रीजयदेवभणितमतिसुन्दरमोहनमधुरिपुरूपम्" गीतगो० २-९।

**मधुल ಮಧುಲ** (न०) ಮದ್ಯ, ಹೆಂಡ. मधु पुष्परसं लाति कारणत्वेन स्वीकरोति—ला (आदाने) "कः" (३-२-४)।

**मधुलिका ಮಧುಲಿಕಾ** (स्त्री०) ಕರಿ ಸಾಸವೆ.

**मधुलिह् ಮಧುಲಿಹ್** (पुं०) ಭ್ರಮರ, ದುಂಬಿ. मधु लेढि—लिह (आस्वादने) "क्विप्" (३-२-७६)। "नयन्मधुलिहः श्वैत्यमुदग्रदशनांशुभिः" माघ० २-२१।

**मधुलेहिन् ಮಧುಲೇಹಿನ್** (पुं०) ಭ್ರಮರ, ದುಂಬಿ. मधु लेढि—लिह (आस्वादने) "णिनिः" (३-१-१३४)। मधु लेढुं शीलमस्य "णिनिः" (३-२-७८) वा। "दत्तावधानं मधुलेहिगीतौ प्रशान्तचेष्टं हरिणं जिघांसुः" भट्टि० २-७।

**मधुवन ಮಧುವನ** (न०) 1. ಮಧುವೆಂಬ ರಾಕ್ಷಸನು ವಾಸಮಾಡುತ್ತಿದ್ದ ಅರಣ್ಯ. ಇದು ಯಮುನಾ ತೀರದಲ್ಲಿದ್ದ ಒಂದು ವನ. 2. ಸುಗ್ರೀವನ ಉದ್ಯಾನವನ. (पुं०) 3. ಕೋಗಿಲೆ.

**मधुवर्ग ಮಧುವರ್ಗ** (पुं०) ಎಂಟು ವಿಧ ಜೇನುತುಪ್ಪ. "माक्षिकं भ्रामरं क्षौद्रं पौतिकं छात्रमेव च। आर्घ्यं औद्दालकं दालमित्यष्टौ मधुजातयः" योगर०।

(1) ನೀಲಿ ಬಣ್ಣದ ಮಧ್ಯಮಾಕೃತಿಯ ಜೇನುಹುಳಗಳಿಂದ ಮಾಡಲ್ಪಟ್ಟ ಜೇನುತುಪ್ಪವು **ಮಾಕ್ಷಿಕ.**

(2) ಭ್ರಮರ (ದುಂಬಿಗಳಿಗಿಂತ ಚಿಕ್ಕದಾದ ಅದೇ ಆಕಾರದ ಜೇನುದುಂಬಿ) ಗಳಿಂದ ಸಂಗ್ರಹಿಸಲ್ಪಟ್ಟ ಜೇನುತುಪ್ಪವು **ಭ್ರಾಮರ.**

(3) ಹಳದಿಬಣ್ಣದ ಚಿಕ್ಕ ಜೇನುನೊಣಗಳಿಂದ ಕೂಡಿಸಲ್ಪಟ್ಟ ಜೇನುತುಪ್ಪವು **ಕ್ಷೌದ್ರ** (ಕಿರಿ ಜೇನು).

(4) ಹಳದಿಬಣ್ಣದ ದೊಡ್ಡ ಜೇನುನೊಣಗಳಿಂದ ತಯಾರಿಸಲ್ಪಟ್ಟ ಜೇನುತುಪ್ಪವು **ಪೌತಿಕ.** (ಹೆಜ್ಜೇನು).

(5) ಕಪಿಲವರ್ಣದ ಜೇನುಹುಳಗಳಿಂದ ಸಂಗ್ರಹಿಸಲ್ಪಟ್ಟ ಜೇನುತುಪ್ಪವು **ಛಾತ್ರ** (ತುಡುವೆ).

(6) ಮಧುವೃಕ್ಷಗಳಲ್ಲಿ ಸ್ರವಿಸುವ ಸಾರವು **ಆರ್ಘ್ಯ.**

(7) ಗೆದ್ದಲುಹುಳುಗಳಿಂದ ಕಟ್ಟಲ್ಪಡುವ ಜೇನುತುಪ್ಪವು **ಔದ್ದಾಲಕ** (ನಸಲು).

(8) ಮರಗಳ ಪೊಟರೆಗಳಲ್ಲಿ ಹುಳಗಳು ಕಟ್ಟುವ ಅಥವಾ ಆಯಾ ಮರಗಳ ಪುಷ್ಪಗಳಿಂದ ಜಿನುಗಿದ ಮಕರಂದವು ಎಲೆಗಳ ಮೇಲೆ ಬೀಳುವುದರಿಂದಾಗುವ ಜೇನುತುಪ್ಪವು **ದಾಲ.** ಈ ಎಂಟು ವಿಧ ಜೇನುತುಪ್ಪಗಳೂ ಮಧುವರ್ಗಕ್ಕೆ ಸೇರಿದುವು.

**मधुवार ಮಧುವಾರ** (पुं०) ಮದ್ಯಪಾನದ ಕ್ರಮ, ಪದೇ ಪದೇ ಮದ್ಯಪಾನ ಮಾಡುವುದು, ಮದ್ಯಪಾನಾಭ್ಯಾಸ. मधुनो मद्यस्य वारः पर्यायः। "फुल्ललोचनविनीलसरोजैरङ्गनास्यचषकैर्मधुवारः" किरा० ९-५७।

**मधुव्रत ಮಧುವ್ರತ** (पुं०) ಭ್ರಮರ, ದುಂಬಿ. मधु तत्संग्रहो व्रतमस्य। "मालां मधुव्रतवरूथगिरापघुष्टाम्" भाग० ३-२८-२८। स्त्रियां "ङीष्"। "मधुव्रतीनां मधुरैः प्रणादैः प्रियंवदं प्रेषयतीव गन्धम्" याद० १८-११४।

**मधुशर्करा ಮಧುಶರ್ಕರಾ** (स्त्री०) ಜೇನುತುಪ್ಪದಿಂದಾದ ಸಕ್ಕರೆ. मधुजाता शर्करा।

**मधुशिग्रु ಮಧುಶಿಗ್ರು** (पुं०) ಕೆಂಪು ಹೂವಿನ ನುಗ್ಗೆ ಮರ. मधुप्रधानः शिग्रुः। "मधुशिग्रुः सरस्तिक्तः शोफघ्नो दीपनः कटुः" सुश्रुत० सूत्र० ४६-२३७।

**मधुशेष ಮಧುಶೇಷ** (न०) ಜೇನುಮೇಣ. मधुनः शेषोऽत्र।

**मधुश्रेणी ಮಧುಶ್ರೇಣೀ** (स्त्री०) ಕುರಟಿಗೆ ಗಿಡ. मधुनः श्रेणिरत्र। "मधूलिका मधुश्रेणी गोकर्णी पीलुपर्ण्यपि" अम०।

**मधुष्ठील ಮಧುಷ್ಠೀಲ** (पुं०) ಹಿಪ್ಪೆಮರ. मधु ष्ठीवति—ष्ठिवु (निरसने) "कः" (३-१-१३५)। पृषो०। "मधुपुष्पे मधुष्ठीलो वानप्रस्थो मधूकवत्" वैज०।

**मधुसख ಮಧುಸಖ** (पुं०) ಕಾಮದೇವ, ಮನ್ಮಥ. मधोर्वसन्तस्य सखा "टच्" (५-४-९१)।

**मधुसूदन ಮಧುಸೂದನ** (पुं०) 1. ಮಧುವೆಂಬ ರಾಕ್ಷಸನನ್ನು ಸಂಹರಿಸಿದ ವಿಷ್ಣು. मधुं सूदयति—षूद (क्षरणे) + णिच् "ल्युः" (३-१-१३४)। "भक्तानां कर्मणां चैव सूदनान्मधुसूदनः"। "मध्वाख्यमसुरं हन्ति सूरीणां करणं च वा। उपसंहरति स्वस्मिन् मधुसूदन इष्यते" इति निरुक्तिः। "माधवो मधुसूदनः" वि० स०।

2. ಭ್ರಮರ, ದುಂಬಿ. स्त्रियां "ङीष्" (४-१-६३)। "अथ मधुसूदनः। भ्रमरे केशवे" हेम०।

**मधुस्रव ಮಧುಸ್ರವ** (पुं०) 1. ಮೊರಟಗಿಡ. मधूनि स्रवन्त्यस्याः—स्रु (गतौ) "अप्" (३-३-५७)। (स्त्री०) **-स्रवा -ಸ್ರವಾ.** 2. ಅತಿಮಧುರ. 3. ಶ್ರಾವಣ ಮಾಸದ ಶುಕ್ಲ ತದಿಗೆ. 4. ಸೀಹಾಲೆ ಗಿಡ.

**मधुस्रवस् ಮಧುಸ್ರವಸ್** (पुं०) ಹಿಪ್ಪೆಮರ.

**मधुस्वर ಮಧುಸ್ವರ** (पुं०) 1. ಕೋಗಿಲೆ. मधुः मधुरः स्वरोऽस्य। (वि०) 2. ಮಧುರವಾದ ಕಂಠವುಳ್ಳ, ಇಂಪಾದ ಸ್ವರವುಳ್ಳ.

**मधूक ಮಧೂಕ** (पुं०) 1. ಹಿಪ್ಪೆಮರ. (न०) 2. ಹಿಪ್ಪೆ ಹೂವು. 3. ಅತಿಮಧುರ. मह (पूजायाम्) "ऊकः" (उ० ४-४१)। "पर्याक्षिपत्काचिदुदारबन्धं दूर्वावता पाण्डुमधूकदाम्ना" कुमा० ७-१६।

**मधूच्छिष्ट ಮಧೂಚ್ಛಿಷ್ಟ** (न०) ಜೇನುಮೇಣ. मधुनः उच्छिष्टम्।

**मधूत्सव ಮಧೂತ್ಸವ** (पुं०) ವಸಂತೋತ್ಸವ.

**मधूपघ्न ಮಧೂಪಘ್ನ** (पुं०) ಮಧುವೆಂಬ ರಾಕ್ಷಸನ ವಾಸಸ್ಥಾನವಾದ ಲವಣಪುರ, ಮಧುರೆ. मधुनः उपघ्नः आश्रयः। "स च प्राप मधूपघ्नं कुम्भीनस्याश्च कुक्षिजः" रघु० १५-१५।

**मधूल ಮಧೂಲ** (पुं०) 1. ನೀರುಹಿಪ್ಪೆ ಮರ. मधु लाति---ला (आदाने) "कः" (३-२-३)। स्वार्थे "कन्"। **मधूलकः ಮಧೂಲಕಃ.** 2. ಸಿಹಿ ಮತ್ತು ಕಹಿ ಮಿಶ್ರವಾದ ಕಷಾಯ ರಸ. "स्वादुतिक्तकषाये तु मधूलः" वैज०। (पुंन०) 3. ಜೇನುತುಪ್ಪ. "मधूलं तु मधुनं स्त्री" वैज०। (स्त्री०) **-ली -ಲೀ.** 4. ಸಿಹಿ ಕುಂಬಳ. 5. ಮಾವಿನ ಮರ. 6. ಅತಿಮಧುರ.

**मधूलिका ಮಧೂಲಿಕಾ** (स्त्री०) 1. ಕುರಟಗೆ ಗಿಡ. 2. ಅತಿಮಧುರ. मधूक स्वार्थे "कन्"। "टाप्"।

**मधूली ಮಧೂಲೀ** (स्त्री०) "मधूल" ನೋಡಿ.

**मध्य ಮಧ್ಯ** (पुंन०) 1. (a) ಶರೀರದ ಮಧ್ಯಭಾಗ, ನಡು, ಸೊಂಟ. मां शोभां धत्ते—डु धाञ् (धारणपोषणयोः) "यक्" (उ० ४-११२) निपा०। (b) ಸ್ತ್ರೀಯರ ಸೊಂಟದ ಮುಂಭಾಗ, ಜಘನ. "ननाम मध्योऽतिगुरुत्वभाजा नितान्तमाक्रान्त इवाङ्गनानाम्" माघ० ३-१५। 2. ಮಧ್ಯಭಾಗ, ಎರಡು ವಸ್ತುಗಳ ಅಂತರಪ್ರದೇಶ, ಎರಡು ವಸ್ತುಗಳ ಮಧ್ಯದ ಜಾಗ (ಸ್ಥಳ). 3. ಕಾಲದ ಮಧ್ಯಭಾಗ, ಮಧ್ಯಕಾಲ (ಕಾಲಾವಕಾಶ). 4. ವಸ್ತುವಿನ ಮಧ್ಯಭಾಗ, ಒಳಭಾಗ. 5. ವಸ್ತುವಿನ ಮಧ್ಯಭಾಗ. "एकं मुक्तागुणमिव भुवः स्थूलमध्येन्द्रनीलम्" मेघ० १-४६। 6. ಎರಡು ಸ್ಥಾನಗಳ ಮಧ್ಯಪ್ರದೇಶ. 7. ಮನುಷ್ಯನ ಆಯುಷ್ಕಾಲದ ಮಧ್ಯಮಾವಸ್ಥೆ, ಹದಿನಾರನೇ ವರ್ಷದಿಂದ ಎಪ್ಪತ್ತನೇ ವರ್ಷಗಳವರಗಿನ ಕಾಲ. ಬಾಲ್ಯ ಮಧ್ಯ ಮತ್ತು ವೃದ್ಧ ಎಂದು ವಯಸ್ಸು ಮೂರು ವಿಧ. ಹದಿನಾರು ವರ್ಷಗಳೊಳಗಿನ ವಯಸ್ಸಿನವರು ಬಾಲರು. ಬಾಲ್ಯಾವಸ್ಥೆಯಲ್ಲಿ ಒಂದು ವರ್ಷದವರೆಗೆ ಕ್ಷೀರವನ್ನು ಕುಡಿಯುವರು. ಎರಡು ವರ್ಷ ವಯಸ್ಸಿನವರೆಗೆ ಕ್ಷೀರ ಮತ್ತು ಅನ್ನ ತಿನ್ನುವರು. ಎರಡು ವರ್ಷಗಳನಂತರ ಅನ್ನಾದರು. ಹದಿನಾರು ವರ್ಷ ವಯಸ್ಸಿನನಂತರ ಎಪ್ಪತ್ತರವರೆಗೆ ಮಧ್ಯವಯಸ್ಸು. ಈ ಅವಸ್ಥೆಯಲ್ಲಿ ಬೆಳವಣಿಗೆ (ವೃದ್ಧಿ) ಯೌವನಸಂಪೂರ್ಣತೆ ಮತ್ತು ಪರಿಹಾನಿಗಳುಂಟಾಗುವುವು. ಇಪ್ಪತ್ತು ವರ್ಷಗಳವರೆಗೆ ವೃದ್ಧಿ. ಮೂವತ್ತರವರೆಗೆ ಯೌವನ (ಪ್ರಾಯ). ನಲವತ್ತು ವರ್ಷಗಳವರೆಗೆ ಸಕಲಧಾತುಗಳ ಮತ್ತು ಇಂದ್ರಿಯಗಳ ಬಲ ವೀರ್ಯ ಇವುಗಳ ಸಂಪೂರ್ಣತೆ ಯುಂಟಾಗುವುದು. ಅನಂತರ ಎಪ್ಪತ್ತನೇ ವಯಸ್ಸಿನ ವರಗೆ ಪರಿಹಾನಿ. ಎಪ್ಪತ್ತು ವರ್ಷಗಳನಂತರ ಧಾತು ಮತ್ತು ಇಂದ್ರಿಯಗಳ ಬಲವು ಕಡಮೆಯಾಗಿ ವೀರ್ಯೋತ್ಸಾಹಗಳು ಕುಗ್ಗುವುವು. ಕಾಸಶ್ವಾಸ ಮೊದಲಾದ ಉಪದ್ರವಗಳಿಂದ ಪೀಡಿತನಾಗಿ ಯಾವ ಕೆಲಸಕ್ಕೂ ಅಸಮರ್ಥನಾಗುವನು. ಇದು ವೃದ್ಧಾವಸ್ಥೆ. "वयस्तु त्रिविधम्—बाल्यम् मध्यम् वृद्धमिति। तत्रोनषोडशवर्षीया बालाः। ते च क्षीरपाः क्षीरान्नादाः अन्नादाः इति त्रिविधाः। संवत्सरपराः क्षीरपाः। द्विसंवत्सरपराः क्षीरान्नादाः। परतोऽन्नादाः। इयं बाल्यावस्था। षोडशसप्तत्योरन्तरे मध्यं वयः। तस्य विकल्पः (भेदः) वृद्धिः यौवनम् संपूर्णता परिहाणिरिति। आविंशतेः वृद्धिः। आत्रिंशतो यौवनम्। आचत्वारिंशतः सर्वधात्विन्द्रियबलवीर्यसंपूर्णता। अत ऊर्ध्वं ईषत्परिहाणिर्यावत् सप्ततिरिति। सप्ततेरूर्ध्वं क्षीयमाणधात्विन्द्रियबलवीर्योत्साहमहन्यहनि वलीपलितजुष्टं कासश्वासप्रभृतिभिः उपद्रवैः परिभूयमानं सर्वक्रियास्वसमर्थं वृद्धमाचक्षते" सुश्रुत० सूत्र० ३५-२९। (न०) 8. ಹದಿನಾರು ಅಂಕಗಳುಳ್ಳ ಒಂದು ಸಂಖ್ಯೆ. ["परार्ध" ಪದದಲ್ಲಿ ನೋಡಿ.] 9. ಒಂದು ಪ್ರದೇಶದ ಮಧ್ಯ (ನಡುವಣ) ಭಾಗ. "नेक्षेतोद्यन्तमादित्यं नास्तं यन्तं कदाचन। नोपसृष्टं न वारिस्थं न मध्यं नभसो

गतम्" मनु० ४-३७ । 10. ಅವಸಾನ, ವಿರಾಮ, ಅಂತ್ಯ. "अवसानं तु विरामो मध्यम्" त्रिकाण्ड० । 11. ನೃತ್ಯ ಗೀತ ಮತ್ತು ವಾದ್ಯಗಳ ವಿಲಂಬಿತ ಮತ್ತು ದ್ರುತಗತಿಗಳ ಮಧ್ಯಕಾಲ. "विलम्बितं द्रुतं मध्यं तत्त्वमोघो घनं क्रमात्" अम० । (वि०) 12. ನ್ಯಾಯಪ್ರಾಪ್ತವಾದ. 13. ಮಧ್ಯಕಾಲದ. 14. ಮಧ್ಯಪ್ರದೇಶದ. 15. ಮಧ್ಯದಲ್ಲಿರುವ, ಒಳಗಡೆಯಿರುವ. 16. ತಟಸ್ಥನಾದ, ಮಧ್ಯಸ್ಥನಾದ. 17. ಅಧಮ, ನೀಚ. "मध्यं विलग्ने न स्त्री स्यान्न्याय्येऽन्तरेऽधमेऽन्यवत्" मेदि० । 18. ಸಾಮಾನ್ಯವಾದ, ಉತ್ತಮ ಅಥವಾ ನಿಕೃಷ್ಟವಲ್ಲದ. "प्रारभ्य विघ्नविहता: विरमन्ति मध्या:" भर्तृ० । (क्रि० वि०) 19. ಒಂದು ಗುಂಪಿನ ಮಧ್ಯ, -ಮಧ್ಯದಿಂದ, -ಮಧ್ಯದಲ್ಲಿ.

**मध्यतस् ಮಧ್ಯತಸ್** (अव्य०) 1. ಮಧ್ಯಭಾಗ. 2. ಮಧ್ಯಭಾಗದಿಂದ. 3. ಮಧ್ಯಭಾಗದಲ್ಲಿ. मध्यं "तसि:" (वा० ५-४-४४) ।

**मध्यदेश ಮಧ್ಯದೇಶ** (पुं०) ಹಿಮಾಚಲ ಮತ್ತು ವಿಂಧ್ಯ ಪರ್ವತಗಳ ಮಧ್ಯದಲ್ಲಿ (ಗಂಗಾ-ಯಮುನೆಗಳ ಮಧ್ಯದಲ್ಲಿ) ಸರಸ್ವತೀನದಿಯು ಗುಪ್ತಗಾಮಿನಿಯಾಗುವ ಸ್ಥಳಕ್ಕೆ ಪೂರ್ವದಲ್ಲಿ ಮತ್ತು ಪ್ರಯಾಗಕ್ಕೆ ಪಶ್ಚಿಮ ಭಾಗದಲ್ಲಿ ಇರುವ ಪ್ರದೇಶ. "हिमवद्विन्ध्ययोर्मध्यं यत्प्राग्विनशनादपि । प्रत्यगेव प्रयागाच्च मध्यदेश: प्रकीर्तित:" मनु० २-२१ ।

**मध्यदेश्य ಮಧ್ಯದೇಶ್ಯ** (वि०) ಮಧ್ಯದೇಶದಲ್ಲಿ ಹುಟ್ಟಿದ, ಮಧ್ಯದೇಶದಲ್ಲಿರುವ. मध्यदेशे भव: "यत्" (४-३-५४) ।

**मध्यन्दिन ಮಧ್ಯಂದಿನ** (न०) ಹಗಲಿನ ಮಧ್ಯ, ಮಧ್ಯಾಹ್ನ. मध्यं दिनस्य । पृषो० ।

**मध्यम ಮಧ್ಯಮ** (पुं०) 1. ಸಂಗೀತದಲ್ಲಿ ಐದನೆಯ ಸ್ವರ. ಇದು ಕ್ರೌಂಚಪಕ್ಷಿಯ ಕಂಠಕ್ಕೆ ಸಮಾನವಾದ ಸ್ವರ. ನಿಷಾದ ಋಷಭ ಗಾಂಧಾರ ಷಡ್ಜ ಮಧ್ಯಮ ಧೈವತ ಮತ್ತು ಪಂಚಮಗಳೆಂದು ಸ್ವರಗಳು ಏಳು. "स्यु: षड्जर्षभगान्धारमध्यमा: पञ्चमस्तथा । धैवतश्च निषादश्च तन्त्रीकण्ठोद्भवा: स्वरा: । ते केकिचातकाजकुञ्चपिकभेकगजस्वरा:" वैज० । [ವಿವರಕ್ಕೆ "ऋषभ" ಪದದಲ್ಲಿ ನೋಡಿ.] 2. ಮಧ್ಯಪ್ರದೇಶ. ["मध्यदेश" ಪದದಲ್ಲಿ ನೋಡಿ.] 3. (ವ್ಯಾಕರಣ ಶಾಸ್ತ್ರದಲ್ಲಿ) ಮಧ್ಯಮ ಪುರುಷ. 4. ಮಧ್ಯವರ್ತಿಯಾದ ರಾಜ, ಉದಾಸೀನ, ತಟಸ್ಥ. ಇವನು ಎರಡು ಶತ್ರುರಾಷ್ಟ್ರಗಳ ಮಧ್ಯೆ ಇರುವ ದೊರೆ. "अरेश्च विजिगीषोश्च मध्यमो भूम्यनन्तर:" । "नृपा इवोपप्लविन: परेभ्यो धर्मोत्तरं मध्यममाश्रयन्ते" रघु० १३-७ । "मध्यमस्य प्रचारं च विजिगीषोश्च चेष्टितम्" मनु० ७-१५५ । (पुंन०) 5. ನಡು, ಸೊಂಟ. (वि०) 6. ಮಧ್ಯದಲ್ಲಿರುವ, ಮಧ್ಯದಲ್ಲಿ ಉಂಟಾದ. मध्ये भव: "म:" (४-३-८) । "तां देवतापित्रतिथिक्रियार्थामन्वग्ययौ मध्यमलोकपाल:" रघु० २-१६ । 7. ಮಧ್ಯಮ ದರ್ಜೆಯ, ಉತ್ತಮ ಮತ್ತು ಅಧಮಗಳ ಮಧ್ಯವರ್ತಿಯಾದ, ಮಧ್ಯಮ ತರಗತಿಯ. 8. ಮಧ್ಯದಲ್ಲಿ ಹುಟ್ಟಿದ (ಸಹೋದರ). "प्रणमति पितरौ वां मध्यम: पाण्डवोऽयम्" वेणी० ५-२६ । 9. ತಟಸ್ಥ, ಯಾವ ಪಕ್ಷವನ್ನೂ ಸೇರದಿರುವ. 10. ಸಾಧಾರಣವಾದ, ಹೆಚ್ಚುಕಡಮೆಯಿಲ್ಲದ. "तेन मध्यमशक्तीनि मित्राणि स्थापितान्यत:" रघु० १७-५८ ।

**मध्यमपद ಮಧ್ಯಮಪದ** (न०) ಸಮಸ್ತ ಪದಗಳ ಮಧ್ಯದಲ್ಲಿರುವ ಪದ.

**मध्यमपदलोपिन् ಮಧ್ಯಮಪದಲೋಪಿನ್** (पुं०) ತತ್ಪುರುಷ ಸಮಾಸದ ಒಂದು ಭೇದ, ಮಧ್ಯಮ ಪದಕ್ಕೆ ಲೋಪ ಬರುವ ಒಂದು ಸಮಾಸ. शाकप्रिय: पार्थिव: ಎಂಬಲ್ಲಿ ಪ್ರಿಯ ಪದಕ್ಕೆ ಲೋಪಬಂದು शाकपार्थिव: ಎಂದಾಗಿರುವುದು. छायाप्रधान: तरु: छायातरु: ಇತ್ಯಾದಿ.

**मध्यमपाण्डव ಮಧ್ಯಮಪಾಂಡವ** (पुं०) ಅರ್ಜುನ, ಪಾಂಡವ ಸಹೋದರರಲ್ಲಿ ಮಧ್ಯೆ ಹುಟ್ಟಿದವನು.

**मध्यमपुरुष ಮಧ್ಯಮಪುರುಷ** (पुं०) (ವ್ಯಾಕರಣ ಶಾಸ್ತ್ರದಲ್ಲಿ) ಕ್ರಿಯಾಪದದ ಮಧ್ಯಮಪುರುಷ. [ಸುಬಂತ ಶಬ್ದಗಳಿಗೆ ಏಳು ವಿಭಕ್ತಿಗಳಿರುವಂತೆ ತಿಙನ್ತ (ಕ್ರಿಯಾಪದ) ಗಳಿಗೆ 1. ಪ್ರಥಮಪುರುಷ, 2. ಮಧ್ಯಮಪುರುಷ ಮತ್ತು 3. ಉತ್ತಮಪುರುಷಗಳೆಂದು ಮೂರು ಪುರುಷಗಳಿರುವುವು.]

**मध्यमभृतक ಮಧ್ಯಮಭೃತಕ** (पुं०) ಕೃಷೀವಲ, ರೈತ, ಬೇಸಾಯಗಾರ. [ತನ್ನ ಮತ್ತು ತನ್ನ ಯಜಮಾನನ ಸಲುವಾಗಿ ಕೆಲಸಮಾಡುವುದರಿಂದ ರೈತನಿಗೆ ಈ ಹೆಸರು.]

**मध्यमलोक ಮಧ್ಯಮಲೋಕ** (पुं०) ಭೂಲೋಕ, ಸ್ವರ್ಗ ಮತ್ತು ಪಾತಾಳಗಳ ಮಧ್ಯೆ ಇರುವ ಲೋಕ.

**मध्यमलोकपाल ಮಧ್ಯಮಲೋಕಪಾಲ** (पुं०) ರಾಜ, ದೊರೆ, ಭೂಲೋಕವನ್ನು ಪಾಲಿಸುವ ಪ್ರಭು. "तां देवतापित्रतिथिक्रियार्थामन्वग्ययौ मध्यमलोकपाल:" रघु० २-१६ ।

**मध्यमवयस् ಮಧ್ಯಮವಯಸ್** (ನಂ) ಬಾಲ್ಯ ಮತ್ತು ವಾರ್ಧಕ (ಮುಪ್ಪು) ಗಳ ನಡುವಣ ವಯಸ್ಸು. ["मध्य" ಪದದಲ್ಲಿ ನೋಡಿ.]

**मध्यमसंग्रह ಮಧ್ಯಮಸಂಗ್ರಹ** (ಪುಂ) ಪುಷ್ಪ, ಆಭರಣ ವಸ್ತ್ರ ಇತ್ಯಾದಿ ವಸ್ತುಗಳನ್ನು ಕಳುಹಿಸಿ ಒಳಸಂಚಿನಿಂದ ಪರಸ್ತ್ರೀಯನ್ನು ಒಲಿಸಿಕೊಳ್ಳುವುದು. ಸಾಧಾರಣ ದರ್ಜೆಯ ಪುರುಷನು ಪರಸ್ತ್ರೀಯನ್ನು ವಶಪಡಿಸಿಕೊಳ್ಳಲು ಇದೊಂದು ಉಪಾಯ. "प्रेषणं गन्धमाल्यानां धूपभूषण वाससाम्। प्रलोभनं चान्नपानैर्मध्यमः संग्रहः स्मृतः"।

**मध्यमसाहस ಮಧ್ಯಮಸಾಹಸ** (ನಂ) 1. ಅಪರಾಧಿಗಳಿಗೆ ವಿಧಿಸುವ ಮೂರು ವಿಧ ಶಿಕ್ಷೆಗಳಲ್ಲಿ ಎರಡನೆಯದು. 250 ಪಣಗಳ ದಂಡವು ಪ್ರಥಮಸಾಹಸ. 500 ಪಣಗಳ ದಂಡವು ಮಧ್ಯಮಸಾಹಸ. 1000 ಪಣಗಳ ದಂಡವು ಉತ್ತಮಸಾಹಸ. "पणानां द्वे शते सार्धे प्रथमः साहसः स्मृतः। मध्यमः पञ्च विज्ञेयः सहस्रं त्वेव चोत्तमः" मनು ೮-೧೩೮। 2. ಇತರರ ಮನೆಯ ವಸ್ತ್ರ ಆಹಾರ ದನಕರುಗಳು ಮುಂತಾದುವನ್ನು ಅಪಹರಿಸುವ ಅಪರಾಧ.

**मध्यमा ಮಧ್ಯಮಾ** (ಸ್ತ್ರೀಂ) 1. ಮಧ್ಯದ ಬೆರಳು. 2. ತರುಣಿ, ಪ್ರಾಯದ ಹೆಂಗಸು, ವಿವಾಹಕ್ಕೆ ಯೋಗ್ಯವಾದ ವಯಸ್ಸಿನ ಕನ್ಯೆ, ಋತುಮತಿಯಾದ ಕನ್ಯೆ. 3. ಮೂರು ವಿಧ ಸ್ವೀಯಾ ನಾಯಿಕೆಯರಲ್ಲೊಬ್ಬಳು. ["मध्या" ಪದದಲ್ಲಿ ನೋಡಿ]. 4. ಪದ್ಮದ ಬೀಜಕೋಶ. 5. ಮೂರು ಅಕ್ಷರಗಳುಳ್ಳ ಒಂದು ವೃತ್ತ, ಒಂದು "ಮ" ಗಣ ಮಾತ್ರವಿರುವ ಮೂರನೆಯ ಛಂದಸ್ಸಿನ ಒಂದು ವೃತ್ತ. "मध्यमः....स्त्रियां दृष्टरजोनार्यां कर्णिकाङ्गुलिभेदयोः। त्र्यक्षरच्छन्दसि" मेदिಂ। 6. ಹೃದಯದಿಂದ ಹೊರಡುವ ಶಬ್ದದ ನಾಲ್ಕು ವಿಧ ಪ್ರವೃತ್ತಿಗಳಲ್ಲೊಂದು. ವೈಖರಿ ಮಧ್ಯಮಾ ಪಶ್ಯಂತೀ ಮತ್ತು ಪರಾ ಎಂದು ಶಬ್ದವು ಹೃದಯದಿಂದ ಹೊರಟು ಅದು ವಾಗ್ರೂಪವಾಗಿ ಗೋಚರವಾಗುವವರೆಗೂ ನಾಲ್ಕು ಪ್ರವೃತ್ತಿ (ಅವಸ್ಥೆ) ಗಳುಂಟು. "वैखरी शब्दनिष्पत्तिः मध्यमा श्रुतिगोचरा। द्योतितार्था च पश्यन्ती परा वागनपायिनी"। "पुराणस्य कवेस्तस्य चतुर्मुखसमीरिता। प्रवृत्तिरासीच्छब्दानां चरितार्था चतुष्टयी" ಕುಮಾ೦ ೨-೧೭। ["परा", "पश्यन्ती" ಪದಗಳಲ್ಲಿ ನೋಡಿ].

**मध्यमोपल ಮಧ್ಯಮೋಪಲ** (ಪುಂ) ನಾಯಕಮಣಿ, ಹಾರದ ಮಧ್ಯದ ಮಣಿ. "मध्यमोपलनिभे लसदंशावेकतश्च्युतिमुपेयुषि मानी" किराಂ ९-२।

**मध्यरात्र ಮಧ್ಯರಾತ್ರ** (ಪುಂ) ಅರ್ಧರಾತ್ರ, ನಡುವಿರುಳು. ರಾತ್ರಿಯ ಮೂರನೆಯ ಜಾವ. मध्यं रात्रेः "अच्" (५-४-८७)। पुंलिङ्गता (२-४-२९)।

**मध्यलोक ಮಧ್ಯಲೋಕ** (ಪುಂ) ಭೂಲೋಕ, ಸ್ವರ್ಗ ಮತ್ತು ಪಾತಾಲ ಲೋಕಗಳ ಮಧ್ಯೆ ಇರುವ ಮರ್ತ್ಯಲೋಕ. मध्यश्चासौ लोकश्च।

**मध्यवर्तिन् ಮಧ್ಯವರ್ತಿನ್** (ತ್ರಿಂ) 1. ಮಧ್ಯಸ್ಥ, ವ್ಯವಹಾರ ತೀರ್ಪಿಗಾಗಿ ವಾದಿ ಪ್ರತಿವಾದಿಗಳ ಮಧ್ಯೆ ನಿಲ್ಲುವ ಪಂಚಾಯತದಾರ. मध्ये वर्तते—वृतु (वर्तने) "णिनिः" (३-१-१३४)। 2. ಮಧ್ಯದಲ್ಲಿ ನಿಲ್ಲುವ, ಮಧ್ಯದಲ್ಲಿರುವ. स्त्रियां "ङीप्" (४-१-५)। -वर्तिनी -ವರ್ತಿನೀ.

**मध्यस्थ ಮಧ್ಯಸ್ಥ** (ತ್ರಿಂ) 1. ವಾದಿ ಪ್ರತಿವಾದಿಗಳ ಮಧ್ಯೆ ನಿಲ್ಲುವವನು. 2. ಉದಾಸೀನ, ತಟಸ್ಥ, ಯಾವ ಪಕ್ಷವನ್ನೂ ಸೇರದಿರುವವನು. मध्ये तिष्ठति—ष्ठा (गतिनिवृत्तौ) "कः" (३-२-४)। 3. ಮಧ್ಯದಲ್ಲಿರುವ.

**मध्या ಮಧ್ಯಾ** (ಸ್ತ್ರೀಂ) ಮೂರು ವಿಧ ಸ್ವೀಯಾ ನಾಯಿಕೆಯರಲ್ಲೊಬ್ಬಳು, ವಿಶೇಷ ಕಾಮವಿಕಾರವುಳ್ಳ ನಾಯಿಕೆ. "सापि कथिता त्रिभेदा मुग्धा मध्या प्रगल्भेति"। "मध्या विचित्रसुरता प्ररूढस्मरयौवना" साಂ दಂ ३।

**मध्याह्न ಮಧ್ಯಾಹ್ನ** (ಪುಂ) ಮಧ್ಯಹಗಲು, ಹಗಲಿನ ಮಧ್ಯಭಾಗ. मध्यमह्नः—अह्नादेशः (५-४-८८)। "मध्याह्नार्कमरीचिकास्विव पयःपूरो यदज्ञानतः" प्रबोधಂ १-१।

**मध्व ಮಧ್ವ** (ಪುಂ) ಮಧ್ವಾಚಾರ್ಯರು, ದ್ವೈತಸಿದ್ಧಾಂತಸ್ಥಾಪಕರಾದ ಶ್ರೀ ಪೂರ್ಣಪ್ರಜ್ಞರು. ["पूर्णप्रज्ञ" ಪದದಲ್ಲಿ ನೋಡಿ]. ವಾಯುದೇವರು ಶ್ರೀಮನ್ಮಧ್ವಾಚಾರ್ಯರಾಗಿ ಅವತರಿಸಿ ದ್ವೈತಮತ ಪ್ರಚಾರ ಮಾಡಿದರು.

**मध्वासव ಮಧ್ವಾಸವ** (ಪುಂ) ಹಿಪ್ಪೆ (ಮಧೂಕ) ಹೂವಿನ ರಸ (ಮಕರಂದ) ದಿಂದ ತಯಾರಿಸಲ್ಪಟ್ಟ ಆಸವ (ಮದ್ಯ). मधुना कृतः आसवः।

**मन – ज्ञाने** (दिवाಂ आत्मಂ सकಂ अनिಂ) मन्यते मन्येते मन्यन्ते। मेने मेनाते। मन्ता। मंस्यते। मन्यताम्। अमन्यत। मन्येत ಇತ್ಯಾದಿ. 1. ತಿಳಿ, ಊಹಿಸು. "मन्येऽमुना कर्णलतामयेन पाशद्वयेन च्छिदुरेतरेण। एकाकिपाशं वरुणं विजिग्येऽनङ्गीकृतायासलती रतीशः" नैषಂ ७-६४। 2. ಅಭಿಪ್ರಾಯಪಡು, ಭಾವಿಸು. "मन्यसेऽरिवधः श्रेयान् प्रीतये नाकिनामिति" माघಂ २-१०६। 3. ತಿಳಿದುಕೊ, ನಂಬು, ಎಣಿಸು. "अमंस्त चानेन परार्ध्यजन्मना

स्थितेरभेत्ता स्थितिमन्तमन्वयम्" रघु० ३-२७। 4. ಕಲ್ಪಿಸು, ಚಿಂತಿಸು, ಭಾವಿಸು. "अङ्कं केऽपि शशाङ्किरे जलनिधे: पङ्कं परे मेनिरे" कुव०।

**कर्मणि** :—कर्तरि ರೂಪದಂತೆ.

**कृत्सु** :—मन्तव्यम्। मननीयम्। मान्यम्। मतम्, मतवान्, –वती। मन्यमानः। मन्तुम्। मतम्। मननम्। मत्वा। ಇತ್ಯಾದಿ.

**मनन ಮನನ** (न०) 1. ಧ್ಯಾನ, ಚಿಂತನೆ. मन (ज्ञाने) भावे "ल्युट्" (३-३-११५)। 2. ಊಹೆ, ಕಲ್ಪನೆ.

**मननीय ಮನನೀಯ** (वि०) 1. ಧ್ಯಾನಿಸಲ್ಪಡುವ, ಚಿಂತಿಸಲ್ಪಡುವ. 2. ಧ್ಯಾನಿಸಬೇಕಾದ. 3. ಧ್ಯಾನಿಸಲು ಅರ್ಹವಾದ. मन (ज्ञाने) "अनीयर्" (३-१-९६)। 4. ಊಹಿಸಲ್ಪಡುವ. 5. ಊಹಿಸಬೇಕಾದ. 6. ಊಹಿಸಲು ತಕ್ಕುದಾದ. "मन (ज्ञाने) "तव्यः" (३-१-९६)। **मन्तव्यः ಮಂತವ್ಯಃ.** मनु (अवबोधने) "तव्यः" (३-१-९६)। **मनितव्यः ಮನಿತವ್ಯಃ.**

**मनःशिला ಮನಃಶಿಲಾ** (स्त्री०) 1. ಮಣಿಶಿಲೆ, ಒಂದು ಗೈರಿಕ ಧಾತು. मनःशब्दवाच्या शिला—शाकपार्थिवादिः। "अथाङ्गुलिभ्यां हरितालमार्द्रं माङ्गल्यमादाय मनःशिलां च" कुमा० ७-२३। 2. ಅರಿಶಿನ. वैजं०।

**मनःसङ्ग ಮನಃಸಂಗ** (पुं०) 1. ಮನಸ್ಸಿನ ಸಂಬಂಧ, ಮನಸ್ಸು ಒಂದು ವಸ್ತುವಿನೊಡನೆ ಸೇರುವುದು, ಮನಸ್ಸು ಒಂದು ವಸ್ತುವಿನಲ್ಲಿ ಅನುರಾಗ ಹೊಂದುವುದು. 2. ಹತ್ತು ವಿಧ ಮನ್ಮಥಾವಸ್ಥೆಗಳಲ್ಲೊಂದು. "चक्षुःप्रीतिर्मनःसङ्गो जागरः कृशताऽरतिः। ह्रीत्यागोन्मादमूर्च्छान्ता इत्यनङ्गदशा दश"।

**मनस् ಮನಸ್** (न०) 1. ಚಿತ್ತ, ಹೃದಯ. मन (ज्ञाने) "असुन्" (उ० ४-१८८)। "द्विषन्निमित्ता यदियं दशा ततः समूलमुन्मूलयतीव मे मनः" किरा० १-४१। 2. (ತಾರ್ಕಿಕ ಮತದಲ್ಲಿ) ಪೃಥಿವಿ ಮೊದಲಾದ ನವದ್ರವ್ಯಗಳಲ್ಲೊಂದು. "पृथिव्यप्तेजोवाय्वाकाशकालदिगात्ममनांसि" (नवद्रव्याणि)। ಇದು ಎಲ್ಲಾ ಇಂದ್ರಿಯಗಳನ್ನೂ ಕಾರ್ಯದಲ್ಲಿ ಪ್ರವರ್ತಿಸುವಂತೆ ಮಾಡುವ ಮತ್ತು ಸುಖಾದಿ ಸಾಕ್ಷಾತ್ಕಾರಕ್ಕೆ ಸಾಧನವಾದ ಒಂದು ಅಂತರಿಂದ್ರಿಯ. 3. (ದ್ವೈತ ಮತ್ತು ವಿಶಿಷ್ಟಾದ್ವೈತ ಮತ) ಮನಸ್ಸು ಜ್ಞಾನಕ್ರಿಯೋಭಯಸಾಧನವಾದ ಒಂದು ಜ್ಞಾನೇಂದ್ರಿಯ. 4. (ಅದ್ವೈತ ಮತ) ಸಂಕಲ್ಪವಿಕಲ್ಪಾತ್ಮಕವಾದ ಒಂದು ಅಂತಃಕರಣ. ಅಂತಃಕರಣವು ಮನಸ್ಸು ಬುದ್ಧಿ ಮತ್ತು ಅಹಂಕಾರ ಎಂದು ಮೂರು ವಿಧ. "मनो बुद्धिरहंकार इत्यन्तःकरणं त्रिधा"। ಅಂತಃಕರಣವು ಸುಖದುಃಖಾದಿಗಳಿಗೆ ಆಧಾರವಾದುದು. 5. (ಆಯುರ್ವೇದ ಶಾಸ್ತ್ರದಲ್ಲಿ) ಮಣಿಶಿಲೆಯೆಂಬ ಒಂದು ಗೈರಿಕ ಧಾತು. 6. ಭಾವನೆ, ಕಲ್ಪನೆ, ಊಹೆ. "सा दुष्प्रधर्षा मनसापि हिंस्रैरित्यद्रिशोभाप्रहितेक्षणेन" रघु० २-२७। 7. ಬುದ್ಧಿ, ಚಿಚ್ಛಕ್ತಿ. "मनश्चित्ते मनीषायाम्" मेदि०। 8. ಮನೋಧರ್ಮ, ಭಾವ, ಚಿತ್ತವೃತ್ತಿ. 9. ಅಪೇಕ್ಷೆ, ಅಭಿಲಾಷೆ, ಇಚ್ಛೆ. 10. ಉದ್ದೇಶ, ಆಶಯ.

**मनसा ಮನಸಾ** (स्त्री०) ಜರತ್ಕಾರು ಮಹರ್ಷಿಯ ಪತ್ನಿ, ವಾಸುಕಿಯ ಸಹೋದರಿ, ಆಸ್ತಿಕ ಋಷಿಯ ತಾಯಿ. ["जरत्कारु" ಪದದಲ್ಲಿ ನೋಡಿ]. ಇವಳೇ ಮನಸಾದೇವಿ.

**मनसिज ಮನಸಿಜ** (पुं०) ಮನ್ಮಥ, ಕಾಮದೇವ. मनसि जायते — जनी (प्रादुर्भावे) "डः" (३-२-९७)। सप्तम्या अलुक् (६-३-१४)। "सुरपतितनये परा निरासे मनसिजजैत्रशरं विलोचनार्धम्" किरा० १०-५२।

**मनस्कार ಮನಸ್ಕಾರ** (पुं०) ಮನಸ್ಸನ್ನು ಸುಖದಲ್ಲಿ ಆಸಕ್ತವನ್ನಾಗಿ ಮಾಡುವಿಕೆ, ಇಚ್ಛೆ, ಅಪೇಕ್ಷೆ. मनसः कारः व्यापारः—डु कृञ् (करणे) "घञ्" (३-३-१८)। "चित्ताभोगो मनस्कारः" अम०।

**मनस्ताप ಮನಸ್ತಾಪ** (पुं०) 1. ಮನೋವ್ಯಥೆ, ಮನಸ್ಸಿಗೆ ನೋವುಂಟಾಗುವಿಕೆ. मनसस्तापः। 2. ಪಶ್ಚಾತ್ತಾಪ.

**मनस्तुष्टि ಮನಸ್ತುಷ್ಟಿ** (पुं०) ಮನಸ್ಸಿಗೆ ಉಂಟಾಗುವ ಸಂತೋಷ, ತೃಪ್ತಿ. मनसस्तुष्टिः।

**मनस्विता ಮನಸ್ವಿತಾ** (स्त्री०) 1. ಉದಾತ್ತವಾದ ಮನಸ್ಸುಳ್ಳವನಾಗಿರುವಿಕೆ, ದೊಡ್ಡ ಮನಸ್ಸಿನಿಂದ ಕೂಡಿರುವಿಕೆ. मनस्विनो भावः "तल्" (५-१-११९)। 2. ಅಭಿಮಾನದಿಂದ ಕೂಡಿರುವಿಕೆ. "निराश्रया हन्त हता मनस्विता" किरा० १-४३।

**मनस्विन् ಮನಸ್ವಿನ್** (पुं०) 1. ಶರಭಮೃಗ. (वि०) 2. ಅಭಿಮಾನಶಾಲಿ, ಒಳ್ಳೆಯ ಮನಸ್ಸುಳ್ಳವನು. प्रशस्तं मनोऽस्यास्ति "विनिः" (५-२-१२१)। "स्थित्यतिक्रान्तिभीरूणि स्वच्छान्याकुलितान्यपि। तोयानि तोयराशीनां मनांसि च मनस्विनाम्" किरा० ११-५४। 3. ಧೀರ, ಶೂರ, ಧೈರ್ಯಶಾಲಿ. "अभिमानवतो मनस्विनः प्रियमुच्चैः पदमारुरुक्षतः" किरा० २-१३। 4. ಸ್ಥಿರಚಿತ್ತನಾದ. 5. ಬುದ್ಧಿಶಾಲಿಯಾದ. स्त्रियां "ङीप्" (४-१-५)। **–स्विनी –ಸ್ವಿನೀ.** 6. ಬುದ್ಧಿ

ಶಾಲಿನಿಯಾದ ಹೆಂಗಸು. "तया मेने मनस्विन्या लक्ष्म्या च वसुधाधिपः" रघु० १-३२। 7. ದೃಢಚಿತ್ತಳಾದ ಹೆಂಗಸು. "कदाचिदासन्नसखीमुखेन मनोरथज्ञं पितरं मनस्विनी" कुमा० ५-६।

**मनाक् ಮನಾಕ್** (अव्य०) 1. ಅಲ್ಪವಾಗಿ, ಕೊಂಚವಾಗಿ. मन (ज्ञाने) "आक्" बाहु०। "मनागनभ्यावृत्त्या वा कामं क्षाम्यतु यःक्षमी" माघ० २-४३। 2. ಮೆಲ್ಲಗೆ, ನಿಧಾನವಾಗಿ. "मनागप्यल्पमन्दयोः" मेदि०।

**मनाक्कर ಮನಾಕ್ಕರ** (वि०) ಸ್ವಲ್ಪವಾಗಿ ಮಾಡುವ. मनाक् करोति—कृञ् (करणे) "टः" (३-२-२०)।

**मनायी ಮನಾಯೀ** (स्त्री०) ಮನುವಿನ ಪತ್ನಿ. मनोः स्त्री—वा "ऐ" (३-१-३८)। पक्षे "औ" (३-१-३८)। **मनावी ಮನಾವೀ.** ಐ ಕಾರ ಅಥವಾ ಔ ಕಾರಾದೇಶಗಳು ಬಂದಾಗ ಮಾತ್ರ "ङीप्" ಪ್ರತ್ಯಯ ಬರುವುದು. [ಅದು ಸನ್ನಿಯೋಗ ಶಿಷ್ಟ.] ಈ ಆದೇಶಗಳಿಲ್ಲದಿದ್ದಾಗ मनु ಎಂದೇ ರೂಪ.

**मनित ಮನಿತ** (वि०) ತಿಳಿಯಲ್ಪಟ್ಟ, ಅರಿಯಲ್ಪಟ್ಟ. मनु (अवबोधने) "क्तः" (३-२-१०२)। "यस्य विभाषा" (७-२-१५)। इति निषेधस्यानित्यत्वात् इडागमः।

**मनितवत् ಮನಿತವತ್** (वि०) ತಿಳಿದವನು, ಅರಿತವನು. मनु (अवबोधने) "क्तवतुः" (३-२-१०२)।

**मनीक ಮನೀಕ** (न०) ಒಂದು ನೇತ್ರಾಂಜನ.

**मनीषा ಮನೀಷಾ** (स्त्री०) 1. ಬುದ್ಧಿ, ಪ್ರಜ್ಞೆ. मनसः ईषा। शकन्ध्वादित्वात् पररूपम्। "प्रविभज्य पृथङ्मनीषया स्वगुणं यत्किल तत् करिष्यसि" माघ० १६-४२। 2. ಇಚ್ಛೆ, ಅಪೇಕ್ಷೆ. "यो दुर्जनं वशयितुं तनुते मनीषाम्" भा० विरा० १-९५।

**मनीषित ಮನೀಷಿತ** (वि०) 1. ಅಪೇಕ್ಷಿಸಲ್ಪಟ್ಟ ವಸ್ತು, ಬೇಕಾದ ವಸ್ತು. मनसः ईषितम्। "मनीषितं द्यौरपि येन दुग्धा" रघु० ५-३३। 2. ಪ್ರಿಯವಾದ, ಪ್ರೀತಿ ಪಾತ್ರವಾದ. "मनीषिताः सन्ति गृहेषु देवताः तपः क्व वत्से क्व च तावकं वपुः" कुमा० ५-४।

**मनीषिन् ಮನೀಷಿನ್** (पुं०) 1. ಪಂಡಿತ, ವಿದ್ವಾಂಸ. मनीषा अस्त्यस्य "इनिः" (५-२-११६)। "संस्कारवत्येव गिरा मनीषी तया स पूतश्च विभूषितश्च" कुमा० १-२८। (वि०) 2. ಪೂಜ್ಯ, ಸತ್ಪುರುಷ. मनसः इषी। शक०। "गृहानुपैतुं प्रणयादभीप्सवो भवन्ति नापुण्यकृतां मनीषिणः" माघ० १-१४। स्त्रियां "ङीप्" (४-१-५)। **-षिणी -ಷಿಣೀ.**

**मनु ಮನು** (पुं०) ಸ್ವಾಯಂಭುವ ಮೊದಲಾದ ಹದಿನಾಲ್ಕು ಮಂದಿ ಮನುಗಳು. ಈ ಹದಿನಾಲ್ಕು ಮನುಗಳೂ ಚತುರ್ಮುಖನ ಒಂದು ಕಲ್ಪಕಾಲ (ಬ್ರಹ್ಮನ ಒಂದು ದಿನ) ದಲ್ಲಿ ರಾಜ್ಯಭಾರ ಮಾಡುವರು.

ಹದಿನಾಲ್ಕು ಮನುಗಳ ರಾಜ್ಯಭಾರ ಕಾಲದಲ್ಲಿ ಸ್ವರ್ಗದಲ್ಲಿ ಹದಿನಾಲ್ಕು ಮಂದಿ ಇಂದ್ರರು ಆಡಳಿತ ನಡೆಸುವರು.

**ಹದಿನಾಲ್ಕು ಮಂದಿ**

| ಮನುಗಳು | ಇಂದ್ರರು |
|---|---|
| (1) ಸ್ವಾಯಂಭುವ | ಯಜ್ಞ |
| (2) ಸ್ವಾರೋಚಿಷ | ರೋಚನ |
| (3) ಉತ್ತಮ | ಸತ್ಯಜಿತ್ |
| (4) ತಾಮಸ | ತ್ರಿಶಿಖ |
| (5) ರೈವತ | ವಿಭು |
| (6) ಚಾಕ್ಷುಷ | ಮಂತ್ರದ್ರುಮ |
| (7) ವೈವಸ್ವತ ( ಈಗ ನಡೆಯುತ್ತಿರುವ ಮನ್ವಂತರ) | ಪುರಂದರ |
| (8) ಸಾವರ್ಣಿ | ವೈರೋಚನ |
| (9) ದಕ್ಷಸಾವರ್ಣಿ | ಶ್ರುತ |
| (10) ಬ್ರಹ್ಮಸಾವರ್ಣಿ | ಶಂಭು |
| (11) ಧರ್ಮಸಾವರ್ಣಿ | ವೈಧೃತ |
| (12) ರುದ್ರಸಾವರ್ಣಿ | ಋತುಧಾಮ |
| (13) ದೇವಸಾವರ್ಣಿ | ದಿವಸ್ಪತಿ |
| (14) ಇಂದ್ರಸಾವರ್ಣಿ | ಶುಚಿ |

ಮನುವೆಂಬುದು ಅಧಿಕಾರದ ಹೆಸರು. ಒಬ್ಬ ವ್ಯಕ್ತಿಯ ಹೆಸರಲ್ಲ. ಈಗಿನ ಬ್ರಹ್ಮನಕಾಲದಲ್ಲಿ ಆರು ಮಂದಿ ಮನುಗಳ ಕಾಲಕಳೆದು ಏಳನೆಯ ವೈವಸ್ವತಮನ್ವಂತರ ನಡೆಯುತ್ತಿದೆ. ಈ ಮನ್ವಂತರದಲ್ಲಿ ಚತುರ್ಯುಗಗಳೂ ಇಪ್ಪತ್ತೇಳು ಸಲ ಕಳೆದು ಈಗ ಇಪ್ಪತ್ತೆಂಟನೆಯ ಕಲಿಯುಗವು ನಡೆಯುತ್ತಿದೆ. ಈ ಕಲಿಯುಗವು ಮುಗಿದ ನಂತರ ಹೀಗೆಯೇ ಚತುರ್ಯುಗಗಳು ಮತ್ತೆ ನಲವತ್ತಮೂರು ಸಲ ಕಳೆದರೆ ಈ ವೈವಸ್ವತ ಮನ್ವಂತರವು ಮುಗಿಯುವುದು. ಇನ್ನು ಮುಂದೆ ಸಾವರ್ಣಿ ಮೊದಲಾದ ಏಳು ಮಂದಿ ಮನುಗಳು ರಾಜ್ಯಭಾರ ಮಾಡುವರು. ಬ್ರಹ್ಮನಿಗೆ ಈಗ ಮೊದಲನೆಯ ಪರಾರ್ಧವು ಕಳೆದು ದ್ವಿತೀಯ ಪರಾರ್ಧವು ನಡೆಯುತ್ತಿದೆ. ಈಗ ಬ್ರಹ್ಮನ ಆಯುಸ್ಸಿನಲ್ಲಿ ಐವತ್ತೊಂದನೆಯ ವರ್ಷದ ಮೊದಲನೆಯ ತಿಂಗಳಲ್ಲಿ ಇಪ್ಪತ್ತೈದು

ದಿನಗಳು ಕಳೆದು ಇಪ್ಪತ್ತಾರನೆಯ ಹಗಲಿನ ಮೊದಲನೆಯ ಯಾಮವು ನಡೆಯುತ್ತಿದೆ. ಈಗ ನಾವು ಶ್ವೇತವರಾಹ ಕಲ್ಪದಲ್ಲಿದ್ದೇವೆ.

**मनुज ಮನುಜ** (पुं०) ಮನುಷ್ಯ. मनोर्जायते — जनी (प्रादुर्भावे) "ड:" (३-२-९८)। "अयमच्युतश्च वचनेन सरसिरुहजन्मनः प्रजाः। पातुमसुरनिधनेन विभू भुवमेत्य मनुजेषु तिष्ठतः" किरा० १२-३५। स्त्रियां गौरा० "ङीष्"। **मनुजी ಮನುಜೀ.**

**मनुजाधिप ಮನುಜಾಧಿಪ, -अधिपति -ಅಧಿಪತಿ** (पुं०) ಮನುಷ್ಯರ ರಾಜ, ದೊರೆ. मनुजानामधिपः अधिपतिर्वा।

**मनुज्येष्ठ ಮನುಜ್ಯೇಷ್ಠ** (पुं०) ಖಡ್ಗ, ಕತ್ತಿ.

**मनुष्य ಮನುಷ್ಯ** (पुं०) ಮನುಷ್ಯ, ಮಾನವ. मनु "यत्" षुक् च (४-१-१६१)। स्त्रियां "ङीष्" (४-१-६३)। "दिवौकसो देवगृहं विहाय मनुष्यसाधारणतामवाप्ताः" कुमा० १२-३७।

**मनुष्यधर्मन् ಮನುಷ್ಯಧರ್ಮನ್** (पुं०) ಕುಬೇರ. मनुष्यस्येव धर्मोऽस्य "अनिच्" (५-४-१२४)। "विभिन्नशङ्खः कलुषीभवन्मुहुर्मदेन दन्तीव मनुष्यधर्मणः" माघ० १-५५।

**मनुष्ययज्ञ ಮನುಷ್ಯಯಜ್ಞ** (पुं०) (ಗೃಹಸ್ಥನು ಪ್ರತಿದಿನ ಆಚರಿಸಬೇಕಾದ) ಪಂಚಮಹಾಯಜ್ಞಗಳಲ್ಲೊಂದು, ಅತಿಥಿ ಸತ್ಕಾರ. [ವಿವರಕ್ಕೆ "पञ्चमहायज्ञ" ಪದದಲ್ಲಿ ನೋಡಿ].

**मनुष्यलोक ಮನುಷ್ಯಲೋಕ** (पुं०) ಮನುಷ್ಯರು ವಾಸ ಮಾಡುವ ಲೋಕ, ಭೂಲೋಕ, ಮಧ್ಯಮಲೋಕ. मनुष्याणां लोकः।

**मनुष्यी ಮನುಷ್ಯೀ** (स्त्री०) ಮನುಷ್ಯಜಾತಿಯ ಹೆಂಗಸು. मनुष्य गौरा० "ङीष्" (४-१-४१)।

**मनुष्येश्वर ಮನುಷ್ಯೇಶ್ವರ** (पुं०) ಮನುಷ್ಯರ ಒಡೆಯ, ರಾಜ, ದೊರೆ. मनुष्याणामीश्वरः। "मार्गं मनुष्येश्वरधर्मपत्नी श्रुतेरिवार्थं स्मृतिरन्वगच्छत्" रघु० २-२।

**मनुसंहिता ಮನುಸಂಹಿತಾ** (स्त्री०) ಮನುಧರ್ಮಶಾಸ್ತ್ರ. ಮನುಸ್ಮೃತಿ. [ಮನುಸ್ಮೃತಿಯು ಮೊದಲನೆಯ ಮನುವಾದ ಸ್ವಾಯಂಭುವ ಮನುವಿನಿಂದ ರಚಿತವಾದುದು]. **-स्मृतिः -ಸ್ಮೃತಿಃ.**

**मनोगत ಮನೋಗತ** (वि०) ಮನಸ್ಸಿನಲ್ಲಿರುವ, ಹೃದಯದೊಳಗಿರುವ. मनसि गतम्। "मणिजालमम्भसि निमग्नमपि स्फुरितं मनोगतमिवाकृतयः" किरा० ६-९।

**मनोगुप्ता ಮನೋಗುಪ್ತಾ** (स्त्री०) 1. ಮಣಶಿಲೆ, ಒಂದು ಗೈರಿಕ ಧಾತು. मनसा गुप्ता। (वि०) 2. ಮನಸ್ಸಿನಲ್ಲಿ ಇಡಲ್ಪಟ್ಟ, ರಹಸ್ಯವಾಗಿ (ಮನದೊಳಗೇ) ರಕ್ಷಿಸಲ್ಪಟ್ಟ.

**मनोज ಮನೋಜ** (पुं०) 1. ಮನ್ಮಥ, ಕಾಮದೇವ. मनसि जायते — जनी (प्रादुर्भावे) "ड:" (३-२-९७)। 2. ಇಚ್ಛೆ, ಅಪೇಕ್ಷೆ. (वि०) 3. ಮನಸ್ಸಿನಲ್ಲಿ ಹುಟ್ಟಿದ.

**मनोजन्मन् ಮನೋಜನ್ಮನ್** (पुं०) 1. ಮನ್ಮಥ, ಕಾಮದೇವ. मनसि जन्म यस्य। (वि०) 2. ಮನಸ್ಸಿನಲ್ಲಿ ಹುಟ್ಟಿದ.

**मनोजव ಮನೋಜವ** (पुं०) 1. ವಿಷ್ಣು. मनसोऽन्तःकरणस्येव जवो वेगोऽस्य। "भक्तानां संपदः शीघ्रं करोतीति मनोजवः" इति निरुक्तिः। "मनोजवः तीर्थकरः" वि० स०। 2. ನಿಷಾದಸ್ತ್ರೀಯಲ್ಲಿ ಬ್ರಾಹ್ಮಣನಿಂದ ಹುಟ್ಟಿದವನು. "विप्रादावृतमुग्रस्त्री निषादी तु मनोजवम्" वैज०। 3. ಮನಸ್ಸಿನ ವೇಗ. मनसो जवः। (वि०) 4. ಮನಸ್ಸಿನಂತೆ ವೇಗವುಳ್ಳ. मनस इव वेगो यस्य। "मनोजवानां निजसायकानाम्" याद० २३-३७।

**मनोजवस ಮನೋಜವಸ** (वि०) ತಂದೆಯಂತಿರುವ, ತಂದೆಯನ್ನು ಹೋಲುವ. मनो जवतेऽस्मिन् पिता—जु "असच्" बाहु०। "मनोजवसः पितृसन्निभः" अम०।

**मनोजवा ಮನೋಜವಾ** (स्त्री०) ಅಗ್ನಿಯ ಏಳು (ಸಪ್ತ) ಜಿಹ್ವೆಗಳಲ್ಲೊಂದು. ಅಗ್ನಿಯ ಏಳು (ಸಪ್ತ) ಜಿಹ್ವೆಗಳು : "सप्त जिह्वा पुनः काली कराली विष्फुलिङ्गिनी। धूम्रवर्णी विश्वरुचिर्लोहिता च मनोजवा" वैज०।

**मनोज्ञ ಮನೋಜ್ಞ** (वि०) 1. ಮನೋಹರವಾದ, ಸುಂದರವಾದ, ರಮಣೀಯವಾದ. मनसा जानाति—ज्ञा (अवबोधने) "क:" (३-१-१३५)। "इयमधिकमनोज्ञा वल्कलेनापि तन्वी किमिव हि मधुराणां मण्डनं नाकृतीनाम्" शाकु० १-१७। (स्त्री०) **-ज्ञा -ಜ್ಞಾ.** 2. ಮಣಶಿಲೆ, ಒಂದು ಗೈರಿಕ ಧಾತು. 3. ಮದ್ಯ, ಹೆಂಡ. 4. ಜೀರಿಗೆ.

**मनोभव ಮನೋಭವ** (पुं०) 1. ಮನ್ಮಥ, ಕಾಮದೇವ. मनसि भवति—भू "अच्" (३-१-१३४)। "निवेशयामास मधुर्द्विरेफान्नामाक्षराणीव मनोभवस्य" कुमा० ३-२७। 2. ಕಾಮೇಚ್ಛೆ, ಕಾಮತೃಷ್ಣೆ. "अत्यारूढो हि नारीणामकालज्ञो मनोभवः" रघु० १२-३३। (वि०) 3. ಮನಸ್ಸಿನಲ್ಲಿ ಹುಟ್ಟುವ, ಮನಸಿನಲ್ಲಿ ಉಂಟಾಗುವ.

**मनोभू ಮನೋಭೂ** (पुं०) 1. ಮನ್ಮಥ, ಕಾಮದೇವ. मनसि भवति—भू (सत्तायाम्) "क्विप्" (३-२-१७९)। "उपैति शुष्यन् कलमः सहाम्भसा मनोभुवा तप्त इवाभिपाण्डुताम्" किरा० ४-३४। (वि०) 2. ಮನಸ್ಸಿನಲ್ಲಿ ಹುಟ್ಟುವ, ಮನಸ್ಸಿನಲ್ಲಿ ಉಂಟಾಗುವ.

**मनोयोनि ಮನೋಯೋನಿ** (पुं०) ಮನ್ಮಥ, ಕಾಮದೇವ. मनः योनिरुत्पत्तिस्थानं यस्य।

**मनोरथ ಮನೋರಥ** (पुं०) ಇಚ್ಛೆ, ಅಭಿಲಾಷೆ, ಬಯಕೆ. मन एव रथोऽत्र, मनः रथ इव वा। "उमास्तनोद्भेदमनु प्रवृद्धो मनोरथो यः प्रथमं बभूव" कुमा० ७-२४। "मनोरथाश्च सफलीकुरुष्व" किरा० ३-५४।

**मनोरम ಮನೋರಮ** (वि०) 1. ಸುಂದರವಾದ, ರಮ್ಯವಾದ, ಮನಸ್ಸಿಗೆ ಸಂತೋಷವುಂಟುಮಾಡುವ. मनो रमयति—रमु (क्रीडायाम्)+णिच् "अण्" (३-२-१)। "मनोरमं प्रापितमन्तरं भ्रुवोरलंकृतं केसररेणुनाणुना" किरा० ४-७। स्त्रियां **–रमा –ರಮಾ**. 2. ಸುಂದರಿ, ಚೆಲುವೆ. "मनोरमामात्मवधूमिव श्रियम्" किरा० १-३१। 3. ವೃತ್ತರತ್ನಾಕರೋಕ್ತವಾದ ಹತ್ತನೆಯ ಛಂದಸ್ಸಿನ ಒಂದು ವೃತ್ತ. ನ ಗಣ ರ ಗಣ ಜ ಗಣ ಮತ್ತು ಒಂದು ಗುರು ಇವುಗಳಿಂದ ಕೂಡಿದ ಒಂದು ವೃತ್ತ. **ಇದರ ಲಕ್ಷಣ:** "नरजगैर्भवेन्मनोरमा" वृ० र०। **ಇದರ ಗಣವಿನ್ಯಾಸ:**

न र ज गु।
III UIU IUI U

**मनोराज्य ಮನೋರಾಜ್ಯ** (न०) ಮನಸ್ಸಿನಲ್ಲಿ ಕಟ್ಟಿದ ರಾಜ್ಯ, ಆಕಾಶದಲ್ಲಿ ಕಟ್ಟಿದ ಅರಮನೆ.

**मनोव्यथा ಮನೋವ್ಯಥಾ** (स्त्री०) ಮನೋವೇದನೆ, ಮನಸ್ಸಿನ ನೋವು.

**मनोहत ಮನೋಹತ** (वि०) ಉತ್ಸಾಹ ಕುಂದಿದವನು, ಮನಸ್ಸು ಕೆಟ್ಟಿರುವವನು. मनसि हतः।

**मनोहर ಮನೋಹರ** (पुं०) 1. ಕುಂದವೃಕ್ಷ. (न०) 2. ಸ್ವರ್ಣ, ಚಿನ್ನ. (स्त्री०) **–हरा –ಹರಾ**. 3. ತಿಪ್ಪಲಿ, ಹಿಪ್ಪಲಿ. (वि०) 4. ಮನಸ್ಸನ್ನು ಆಕರ್ಷಿಸುವ, ಮನವನ್ನು ಸೆಳೆಯುವ, ಸುಂದರವಾದ. मनः हरति—हृञ् (हरणे) "अच्" (३-२-९)। "पर्याप्तपुष्पस्तबकस्तनाभ्यः स्फुरत्प्रवालोष्ठमनोहराभ्यः" कुमा० ३-३९।

**मनोहर्तृ ಮನೋಹರ್ತೃ** (वि०) ಮನಸ್ಸಿಗೆ ಹಿತವಾದ, ಮನೋಹರವಾದ, ಸುಂದರವಾದ, ಮನಸ್ಸನ್ನು ಸೆಳೆಯುವ. मनो हरति—हृञ् (हरणे) "तृच्" (३-१-१३३)। "णिनिः" (३-१-१३४)। **–हारिन् –ಹಾರಿನ್.** "अतोऽर्हसि क्षन्तुमसाधु साधु वा हितं मनोहारि च दुर्लभं वचः" किरा० १-४। स्त्रियां "ङीप्" (४-१-५)। **–हारिणी –ಹಾರಿಣೀ.**

**मनोह्लाद ಮನೋಹ್ಲಾದ** (पुं०) ಮನಸ್ಸಿನಲ್ಲಿ ಉಂಟಾಗುವ ಹರ್ಷ, ಮನಸ್ಸಿಗೆ ಆಗುವ ಆನಂದ.

**मनोह्वा ಮನೋಹ್ವಾ** (स्त्री०) ಮಣಶಿಲೆ, ಒಂದು ಗೈರಿಕ ಧಾತು. मनः ह्वयति—ह्वेञ् (स्पर्धायां शब्दे च) "कः" (३-२-३)।

**मन्तव्य ಮನ್ತವ್ಯ** (वि०) 1. ಧ್ಯಾನಿಸಲ್ಪಡುವ, ಚಿಂತಿಸಲ್ಪಡುವ. मन (ज्ञाने) "तव्यः" (३-१-९६)। "आत्मा वारे द्रष्टव्यः श्रोतव्यो मन्तव्यो निदिध्यासितव्यः" श्रुतिः। 2. ಸಾಕ್ಷಾತ್ಕರಿಸಲ್ಪಡುವ.

**मन्तु ಮಂತು** (पुं०) 1. ಅಪರಾಧ, ತಪ್ಪು. मन (ज्ञाने) "तुः" (उ० १-७२)। "सतीव्रतैस्तीव्रमिमं तु मन्तुमन्तर्वरं वचिणि मार्जितास्मि" नैष० ६-११०। 2. ಮನುಷ್ಯ. 3. ಪ್ರಜಾಪತಿ. "मन्तुः पुंस्यपराधेऽपि मनुष्येऽपि प्रजापतौ" मेदि०।

**मन्तृ ಮಂತೃ** (वि०) 1. ತಿಳಿಯುವವನು, ಅರಿಯುವವನು. मन्यते—मन (ज्ञाने) "तृच्" (उ० २-९५)। 2. ಧ್ಯಾನಿಸುವವನು, ಚಿಂತನೆಮಾಡುವವನು. 3. ಸಾಕ್ಷಾತ್ಕರಿಸುವವನು.

**मन्त्र ಮಂತ್ರ** (पुं०) 1. ರಹಸ್ಯ ಭಾಷಣ, ಗುಟ್ಟಾದ ಮಾತುಕತೆ. मन्त्र्यते—मत्रि (गुप्तभाषणे) "घञ्" (३-३-१९)। भावे "घञ्" (३-३-१८) वा। "मन्त्रो योध इवाधीरः सर्वाङ्गैः संवृतैरपि। चिरं न सहते स्थातुं परेभ्यो भेदशङ्कया" माघ० २-२९। 2. ವೇದ ಮಂತ್ರ, ದೇವತೆ ಮೊದಲಾದವರ ಅನುಗ್ರಹಸಂಪಾದನೆಗಾಗಿ ಹೇಳುವ ವೇದವಾಕ್ಯ. "संमोहनं नाम सखे ममास्त्रं प्रयोगसंहारविभक्तमन्त्रम्" रघु० ५-५७। 3. ವೇದದ ಒಂದು ಭಾಗ, ಬ್ರಾಹ್ಮಣವನ್ನುಳಿದು ಸಂಹಿತೆ ಸೇರಿದ ವೇದ. "मन्त्रो वेदविशेषे स्याद्देवादीनां च साधने। गुह्यवादेऽपि च पुमान्" मेदि०। 4. ಮಂತ್ರಾಲೋಚನೆ, ಸಲಹೆಗಾರರೊಡನೆ ನಡೆಸುವ ಮಾತುಕತೆ.

**मन्त्रकृत् ಮಂತ್ರಕೃತ್** (पुं०) 1. ಮಂತ್ರಿ, ಸಚಿವ, ಸಲಹೆಗಾರ. मन्त्रं करोति—डु कृञ् (करणे) "क्विप्" (३-२-८९)। 2. ಮಂತ್ರದ್ರಷ್ಟನಾದ ಋಷಿ,

"अध्यग्रणीर्मन्त्रकृतामृषीणां कुशाग्रबुद्धे कुशली गुरुस्ते" रघु० ५-४। 3. ಮಂತ್ರಗಳನ್ನು ಪ್ರಯೋಗಿಸುವ ಋಷಿ. "तव मन्त्रकृतो मन्त्रैः दूरात्प्रशमितारिभिः" रघु० १-६१।

**मन्त्रजिह्व ಮಂತ್ರಜಿಹ್ವ** (पुं०) ಅಗ್ನಿ, ಬೆಂಕಿ. मन्त्र एव जिह्वा यस्य। "अमृतं नाम यत्सन्तो मन्त्रजिह्वेषु जुह्वति" माघ० २-१०७। "मन्त्रजिह्वः सप्तजिह्वः सुजिह्वो हव्यवाहनः" वैज०।

**मन्त्रज्ञ ಮಂತ್ರಜ್ಞ** (पुं०) 1. ಮಂತ್ರಿ, ರಾಜನ ಸಲಹೆಗಾರ. 2. ಬ್ರಾಹ್ಮಣ. 3. ಗೂಢಚಾರ. मन्त्रं जानाति —ज्ञा (अवबोधने) "कः" (३-१-१३५)। (वि०) 4. ಮಂತ್ರವನ್ನರಿತವನು. 5. ರಾಜನಿಗೆ ಸಲಹೆ ಕೊಡಲು ನಿಪುಣನಾದವನು. "मन्त्रज्ञैर्मन्त्रिभिश्चैव विनीतः प्रविशेत्सभाम्" मनु० ८-१।

**मन्त्रण ಮಂತ್ರಣ** (न०) ಮಂತ್ರಾಲೋಚನೆ, ರಹಸ್ಯವಾಗಿ ಮಾತುಕತೆ ನಡೆಸುವುದು. मत्रि (गुप्तभाषणे) + णिच् "ल्युट्" (३-३-११५)। "युच्" (३-३-१०७)। **मन्त्रणा ಮಂತ್ರಣಾ.**

**मन्त्रद ಮಂತ್ರದ** (पुं०) ಗುರು, ಮಂತ್ರವನ್ನು ಉಪದೇಶಿಸುವ ಆಚಾರ್ಯ. मन्त्रं ददाति — डु दाञ् (दाने) "कः" (३-२-३)। "तृच्" (३-१-१३३)। **-दातृ -ದಾತೃ.** स्त्रियां "ङीप्" (४-१-५)। **-दात्री -ದಾತ್ರೀ.**

**मन्त्रदर्शिन् ಮಂತ್ರದರ್ಶಿನ್** (पुं०) ಮಂತ್ರವನ್ನು ಸಾಕ್ಷಾತ್ಕರಿಸುವವನು, ಮಂತ್ರವನ್ನು ನೋಡುವವನು. मन्त्रं पश्यति—दृशिर् (प्रेक्षणे) "णिनिः" (३-१-१३४)।

**मन्त्रदीधिति ಮಂತ್ರದೀಧಿತಿ** (पुं०) ವಹ್ನಿ, ಅಗ್ನಿ. मन्त्रेण दीधितिरस्य। "छागवाहनसृदाकुर्बर्हिषः स्वर्णसप्तघृत मन्त्रदीधितिः" त्रिकाण्ड०।

**मन्त्रपूत ಮಂತ್ರಪೂತ** (वि०) ಮಂತ್ರದಿಂದ ಪರಿಶುದ್ಧವಾದ. मन्त्रेण पूतः। "मन्त्रपूतमनुपप्लवं हविः" याद० १७-१२६।

**मन्त्रवादिन् ಮಂತ್ರವಾದಿನ್** (पुं०) 1. ವೇದಮಂತ್ರಗಳನ್ನು ಹೇಳುವವನು. 2. ಮಾಂತ್ರಿಕ, ಮಾಟಗಾರ, ಮಾಯಗಾರ. मन्त्रं वदति—वद (व्यक्तायां वाचि) "णिनिः" (३-१-१३४)। स्त्रियां "ङीप्" (४-१-५)। **-वादिनी -ವಾದಿನೀ.**

**मन्त्रविद् ಮಂತ್ರವಿದ್** (पुं०) 1. ಗೂಢಚಾರ. "सर्वं तत्त्वं मन्त्रविद्भ्यो निवेद्य" भा०। (वि०) 2. ವೇದಮಂತ್ರವನ್ನು ತಿಳಿದವನು. "सहस्रं हि सहस्राणामनृचां यत्र भुञ्जते। एकस्तान् मन्त्रवित् प्रीतः सर्वानर्हति धर्मतः" मनु० ३-१३१। 3. ರಾಜನಿಗೆ ಸಲಹೆ ಕೊಡುವವನು. मन्त्रं वेत्ति — विद (ज्ञाने) "क्विप्" (३-२-७६)।

**मन्त्रव्याख्याकृत् ಮಂತ್ರವ್ಯಾಖ್ಯಾಕೃತ್** (पुं०) ಗುರು, ಮಂತ್ರಗಳ ಅರ್ಥವನ್ನು ವಿವರಿಸಿ ಹೇಳುವ ಆಚಾರ್ಯ. मन्त्रस्य वेदस्य व्याख्यां करोति—डु कृञ् (करणे) "क्विप्" (३-२-७६)।

**मन्त्रसिद्धि ಮಂತ್ರಸಿದ್ಧಿ** (स्त्री०) ಮಂತ್ರದಿಂದ ಉಂಟಾಗುವ ಒಂದು ಶಕ್ತಿ. ಮಂತ್ರದ ಪ್ರಯೋಗವು ಫಲಿಸುವಂತೆ ಪಡೆಯುವ ಒಂದು ವಿಧ ಶಕ್ತಿ.

**मन्त्रित ಮಂತ್ರಿತ** (वि०) 1. ಮಂತ್ರಿಸಲ್ಪಟ್ಟ. मन्त्रोऽस्य सञ्जातः "इतच्" (५-२-३६)। अथवा मत्रि (गुप्तभाषणे) "क्तः" (३-२-१०२)। 2. ರಹಸ್ಯವಾಗಿ ಮಾತಾಡಲ್ಪಟ್ಟ.

**मन्त्रिन् ಮಂತ್ರಿನ್** (पुं०) 1. ಸಚಿವ, ಅಮಾತ್ಯ. मन्त्रो गुप्तभाषणमस्यास्ति "इनिः" (५-२-११५)। अथवा मन्त्रयते अवश्यम् — मत्रि (गुप्तभाषणे) "णिनिः" (३-३-१७०)। "मन्त्रज्ञैर्मन्त्रिभिश्चैव विनीतः प्रविशेत् सभाम्" मनु० ८-१। 2. ಮಾಯಗಾರ, ಮಾಟಗಾರ. (वि०) 3. ವೇದಮಂತ್ರಗಳಲ್ಲಿ ಪರಿಶ್ರಮ ಹೊಂದಿದವನು. 4. ಮಂತ್ರಾಲೋಚನೆಯಲ್ಲಿ ನಿಪುಣನಾದವನು.

**मन्थ ಮಂಥ** (पुं०) 1. ಕಡೆಗೋಲು, ಮಂತು. मथ्यतेऽनेन — मन्थ (विलोडने) कर० "घञ्" (३-३-१२१)। 2. ರವಿ, ಸೂರ್ಯ. मथ्नाति त्रिभुवनं स्वकिरणैः—मन्थ (विलोडने) "अच्" (३-१-१३४)। 3. ತುಪ್ಪ (ಮೊದಲಾದವುಗಳಿಂದ) ಬೆರಸಿದ ಹುರಿಹಿಟ್ಟು. "मन्थः स्यात् पुंसि मन्थाने सक्तवे च दिवाकरे" मेदि०। "चक्षुष्याः सक्तवः कणाः। ते घृतादियुता मन्थः" वैज०। 4. ನೇತ್ರಮಲ, ಕಣ್ಣಿನ ಪಿಸುರು. 5. ಸೂರ್ಯನ ಕಿರಣ. 6. ನೇತ್ರರೋಗ. "मन्थो रवौ मथि। सक्तवे नेत्ररोगे च" हेम०। 7. ಕಡೆಯುವುದು, ಕಲಕುವುದು. "प्राङ् मन्थादनभिव्यक्तरत्नोत्पत्तिरिवार्णवः" रघु० १०-३।

**मन्थदण्डक ಮಂಥದಂಡಕ** (पुं०) ಮಂತು, ಕಡೆಗೋಲು.

**मन्थन ಮಂಥನ** (पुं०) 1. ಕಡೆಗೋಲು, ಮಂತು. मथ्नात्यनेन — मन्थ (विलोडने) कर० "ल्युट्" (३-३-११७)। (न०) 2. ಕಡೆಯುವುದು, ಕಲಕುವುದು. मन्थ (विलोडने) भावे "ल्युट्" (३-३-११५)।

**मन्थनघटी ಮಂಥನಘಟೀ** (स्त्री०) ಮೊಸರು ಕಡೆಯುವ ಪಾತ್ರೆ. मन्थनार्था घटी।

**मन्थनी ಮಂಥನೀ** (स्त्री०) ಮೊಸರು ಕಡೆಯುವ ಪಾತ್ರೆ. मथ्यतेऽस्याम्—मन्थ (विलोडने) "ल्युट्" (३-३-११७)।

**मन्थर ಮಂಥರ** (पुं०) 1. ಕೋಶ, ಬೊಕ್ಕಸ. 2. ಕೋಪ, ಕ್ರೋಧ, ಸಿಟ್ಟು. 3. ಫಲ, ಹಣ್ಣು. 4. ಕಡೆಗೋಲು, ಮಂತು. 5. ಬಾಧೆ, ವಿಘ್ನ, ಅಡ್ಡಿ. 6. ಚಾಡಿ ಹೇಳುವವನು. (न०) 7. ಕುಸುಂಬೆ ಗಿಡ. (वि०) 8. ಮಂದಗಮನವುಳ್ಳ, ಮೆಲ್ಲಗೆ ನಡೆಯುವ. 9. ವಕ್ರವಾದ, ಡೊಂಕಾದ. 10. ಅಗಲವಾದ, ವಿಸ್ತಾರವಾದ. 11. ನಿಶ್ಚಲವಾದ, ಅಲುಗಾಡದಿರುವ, ಆಲಸ, ಜಡ. "मन्थरः सूचके कोशे वक्रे मन्दे पृथौ मथि। मन्थरं तु कुसुम्भ्यां स्यात्" हेम०। "मन्थरः कोशफलयोर्बाधमन्थानयोः पुमान्। कुसुम्भ्यां न द्वयोर्मन्दे पृथौ वक्रेऽभिधेयवत्" मेदि०। (स्त्री०) **-रा -ರಾ.** ಕೈಕಯಿಯ ದಾಸಿ, ಮಂಥರೆ.

**मन्थरु ಮಂಥರು** (पुं०) ಚಾಮರದ ಗಾಳಿ. "कठेरु र्मन्थरुः" त्रिकाण्ड०।

**मन्थशैल ಮಂಥಶೈಲ** (पुं०) ಮಂದರಪರ್ವತ. मन्थाय समुद्रमथनाय शैलः।

**मन्थान ಮಂಥಾನ** (पुं०) 1. ಕಡೆಗೋಲು, ಮೊಸರು ಕಡೆಯುವ ಕೋಲು. मन्थति—मन्थ (विलोडने) "चानश्" (३-२-१२९)। 2. ಪರಶಿವ, ಮಹಾದೇವ. 3. ಮಂದರಪರ್ವತ.

**मन्थिन् ಮಂಥಿನ್** (वि०) 1. ಮೊಸರು ಕಡೆಯುವ. (स्त्री०) **-नी -ನೀ.** 2. ಮೊಸರು ಕಡೆಯುವ ಪಾತ್ರೆ.

**मन्द ಮಂದ** (पुं०) 1. ಶನಿಗ್ರಹ. मन्दते—मदि (स्तुतिमोदमदस्वप्नकान्तिगतिषु) "अच्" (३-१-१३४)। "भौमगुरुशुक्रमन्दाश्चन्द्रान्मेषूरणर्क्षगाः प्रसवे। जनयन्ति नरं धीरं कुटुम्बयुक्तं धनोपेतम्" साराः। 2. ಒಂದು ಜಾತಿಯ ಆನೆ. 3. ಯಮಧರ್ಮರಾಯ. (वि०) 4. ನಿಧಾನವಾದ, ಚುರುಕಾಗಿಲ್ಲದ. "भिन्दन्ति मन्दां गतिमश्वमुख्यः" कुमा० १-११। 5. ಚಿಕ್ಕದಾದ, ಅಲ್ಪವಾದ, ಸೂಕ್ಷ್ಮವಾದ. 6. ಆಲಸ, ಸೋಮಾರಿ, ಚಟುವಟಿಕೆಯಿಲ್ಲದ. "प्रायेणाल्पायुषः सभ्य कलावस्मिन् युगे जनाः। मन्दाः सुमन्दमतयो मन्दभाग्या ह्युपद्रुताः" भाग० १-१-१०। 7. ಮೂಢ, ತಿಳಿವಳಿಕೆಯಿಲ್ಲದವನು, ಮತಿಹೀನ. "मन्दः कवियशःप्रार्थी गमिष्याम्युपहास्यताम्" रघु० १-३। 8. ಅದೃಷ್ಟಹೀನ, ಭಾಗ್ಯವಿಲ್ಲದವನು. 9. ಸ್ವತಂತ್ರ, ಇತರರ ಅಧೀನದಲ್ಲಿಲ್ಲದ. 10. ಮೂರ್ಖ, ವಿವೇಕವಿಲ್ಲದವನು. "प्रयोजनमनुद्दिश्य न मन्दोऽपि प्रवर्तते"। 11. ಅಶಕ್ತ, ಬಲವಿಲ್ಲದವನು. 12. ರೋಗಿ, ವ್ಯಾಧಿಗ್ರಸ್ತ. 13. ದುರ್ಜನ. "मन्दः पुंसि रवेः सूनौ गजभेदे त्वयं त्रिषु। खलमूर्खजडस्वैरस्वल्पनिर्भाग्यरोगिषु" नानार्थर०। "यमराड्यमुनाभ्राता मन्दो वैवस्वतोऽन्तकः" वैज०। (अव्य०) 14. ಮೆಲ್ಲಗೆ, ನಿಧಾನವಾಗಿ. "यातं यच्च नितम्बयोर्गुरुतया मन्दं विलासादिव" शाकु० २-२। 15. ಮೃದುವಾಗಿ, ಮೆತ್ತಗೆ, ಬಿರುಸಾಗಿಲ್ಲದೆ. "मन्दं मन्दं नुदति पवनश्चानुकूलो यथा त्वाम्" मेघ० २-९।

**मन्दग ಮಂದಗ** (पुं०) 1. ಶನಿಗ್ರಹ. (वि०) 2. ಮೆಲ್ಲಗೆ ನಡೆಯುವ. मन्दं गच्छति—गम्लृ (गतौ) "डः" (वा० ३-२-४८)। **-गतिः -ಗತಿಃ.**

**मन्दगामिन् ಮಂದಗಾಮಿನ್** (वि०) ನಿಧಾನವಾಗಿ ಸಂಚರಿಸುವ, ಮೆಲ್ಲಗೆ ನಡೆಯುವ. मन्दं गच्छति—गम्लृ (गतौ) "णिनिः" (३-२-७८)। स्त्रियां **-गामिनी -ಗಾಮಿನೀ.**

**मन्दधी ಮಂದಧೀ, -प्रज्ञ -बुद्धि -मति -ಪ್ರಜ್ಞ -ಬುದ್ಧಿ -ಮತಿ** (वि०) ಮೂರ್ಖ, ದಡ್ಡ, ಬುದ್ಧಿಯಿಲ್ಲದವನು, ತಿಳಿವಳಿಕೆಯಿಲ್ಲದವನು. मन्दा धीः प्रज्ञा बुद्धिः मतिर्वा यस्य।

**मन्दन ಮಂದನ** (न०) ಸ್ತೋತ್ರ, ಹೊಗಳಿಕೆ. मदि (स्तुतौ) "ल्युट्" (३-३-११५)।

**मन्दभाग्य ಮಂದಭಾಗ್ಯ** (वि०) ಅದೃಷ್ಟವಿಲ್ಲದವನು, ಭಾಗ್ಯಹೀನ. मन्दं भाग्यं यस्य।

**मन्दर ಮಂದರ** (पुं०) 1. ಮಂದರಪರ್ವತ, ಸಮುದ್ರವನ್ನು ಕಡೆದ ಪರ್ವತ. मदि "अरः" बाहु०। "शोभैव मन्दरक्षुब्धक्षुभिताम्भोधिवर्णना" माघ० २-१०७। ಅಮೃತಕ್ಕಾಗಿ ದೇವಾಸುರರು ಸಮುದ್ರವನ್ನು ಕಡೆಯಲು ಕಡೆಗೋಲಾಗಿ ಮಾಡಿಕೊಂಡ ಪರ್ವತವಿದು. "पृषतैर्मन्दरोद्धूतैः क्षीरोर्मय इवाच्युतम्" रघु० ४-२७। 2. ಮಂದಾರವೃಕ್ಷ, ಇಂದ್ರನ ಉದ್ಯಾನವನದಲ್ಲಿರುವ ಪಂಚ ದೇವತರುಗಳಲ್ಲೊಂದು. 3. ಎಂಟು ಎಳೆಗಳುಳ್ಳ ಮುತ್ತಿನ ಹಾರ. 4. ಸ್ವರ್ಗ, ದೇವಲೋಕ. (वि०) 5. ನಿಧಾನವಾದ, ತಡವಾದ, ಸಾವಕಾಶವಾದ. 6. ದೊಡ್ಡದಾದ, ದಪ್ಪವಾದ, ಸ್ಥೂಲವಾದ. "मन्दरस्तु पुमान्

मन्थशैले मन्दारपादपे। वाच्यवत् बहले मन्दे" मेदि०। "मन्दरो मन्थपर्वते। स्वर्गमन्दारयोर्मन्दे बहले" हेम०।

**मन्दाक ಮಂದಾಕ** (पुं०) 1. ಸ್ತುತಿ, ಹೊಗಳಿಕೆ. 2. ಪ್ರವಾಹ. मदि (स्तुत्यादौ) "आकः" बाहु०।

**मन्दाकिनी ಮಂದಾಕಿನೀ** (स्त्री०) 1. ಗಂಗಾನದಿ. मन्द मकितुं शीलमस्याः—अक (कुटिलायां गतौ) "णिनिः" (३-२-७८)। "मयूरपिञ्छातपवारणश्रीर्मन्दाकिनी-हेमसरोजभृङ्गैः" याद० १८-४९। 2. ದೇವನದಿ, ದೇವ ಗಂಗೆ, ಸ್ವರ್ಗಲೋಕದ ನದಿ. "मन्दाकिनीनन्दनयोर्विहारे देवे धवे देवरि माधवे च। श्रेयः श्रियां यातरि यच्च सख्यां तच्चेतसा भाविनि भावयस्व" नैष० ६-८३।

**मन्दाक्रान्ता ಮಂದಾಕ್ರಾಂತಾ** (स्त्री०) ವೃತ್ತರತ್ನಾಕರೋಕ್ತವಾದ ಹದಿನೇಳನೆಯ ಛಂದಸ್ಸಿನ ಒಂದು ವೃತ್ತ, ಪ್ರತಿ ಪಾದದಲ್ಲಿಯೂ ಮ ಗಣ ಭ ಗಣ ನ ಗಣ ತ ಗಣ ದ್ವಯ ಮತ್ತು ಗುರುದ್ವಯವಿದ್ದಲ್ಲಿ ಮಂದಾಕ್ರಾಂತಾ ವೃತ್ತ. **ಇದರ ಲಕ್ಷಣ:** "मन्दाक्रान्ता जलधिषडगैम्भौं नतौ तो गुरू चेत्" वृ० र०। **ಇದರ ಗಣ ವಿನ್ಯಾಸ:**

म भ न त त गु गु।
ऽऽऽ ऽ।। ।।। ऽऽ। ऽऽ। ऽ ऽ

**मन्दाक्ष ಮಂದಾಕ್ಷ** (न०) 1. ಲಜ್ಜೆ, ನಾಚಿಕೆ, ಸಂಕೋಚ. मन्दे सङ्कुचिते अक्षिणी यस्मात्। "मन्दाक्षमन्दाक्षर-मुद्रमुक्त्वा तस्यां समाकुञ्चितवाचि हंसः" नैष० ३-६१। (वि०) 2. ಬಲಹೀನವಾದ ನೇತ್ರಗಳುಳ್ಳವನು, ತ್ರಾಣವಿಲ್ಲದ ಕಣ್ಣುಗಳುಳ್ಳವನು. मन्दे अक्षिणी यस्य।

**मन्दाग्नि ಮಂದಾಗ್ನಿ** (पुं०) 1. ತಿಂದ ಆಹಾರವನ್ನು ಜೀರ್ಣಿಸಲಾಗದ ಜಾಠರಾಗ್ನಿ. ಜಾಠರಾಗ್ನಿಯು (1) मन्दः (2) तीक्ष्णः (3) विषमः ಮತ್ತು (4) समः ಎಂದು ನಾಲ್ಕು ವಿಧ. **ಮಂದಾಗ್ನಿಯು** ಕಫದಿಂದ ಉಂಟಾದ ವಿಕಾರಗಳನ್ನು ಉಂಟುಮಾಡುವುದು. **ತೀಕ್ಷ್ಣಾಗ್ನಿಯು** ಪಿತ್ತವಿಕಾರಗಳನ್ನು ಉಂಟುಮಾಡುವುದು. **ವಿಷಮಾಗ್ನಿಯು** ವಾತವಿಕಾರಗಳನ್ನು ಉಂಟುಮಾಡುವುದು. **ಸಮಾಗ್ನಿಯು** ತಿಂದ ಆಹಾರವನ್ನು ಚೆನ್ನಾಗಿ ಜೀರ್ಣ ಮಾಡುವುದು. "विषमो वातजान् रोगान् तीक्ष्णः पित्तसमुद्भवान्। करोत्यग्निस्तथा मन्दो विकारान् कफसम्भवान्। समो समाग्नेरशिता मात्रा सम्यग्विपच्यते"। (वि०) 2. ಅಜೀರ್ಣ ರೋಗವುಳ್ಳವನು.

**मन्दायमान ಮಂದಾಯಮಾನ** (वि०) ನಿಧಾನವಾಗಿ ಆಗುತ್ತಿರುವ, ಸಾವಕಾಶವಾಗಿ ಆಗುತ್ತಿರುವ. मन्द "क्यष्" (३-१-१३)। "शानच्" (३-२-१२४)। "मन्दायमानगमनो हरितायत्तरूं कपिः" भट्टि० ८-६५।

**मन्दार ಮಂದಾರ** (पुं०) 1. ಇಂದ್ರನ ಉದ್ಯಾನವನದಲ್ಲಿರುವ ಐದು ದೇವತರುಗಳಲ್ಲೊಂದು. मन्दयते मोदयते—मदि (स्तुत्यादौ) "आरन्" (उ० ३-१३४)। "मन्दाकिन्याः सलिलशिशिरैः सेव्यमाना मरुद्भिः मन्दाराणामनुतटरुहां छायया वारितोष्णाः" मेघ० २-४। 2. ಪಾರಿಜಾತದ ಗಿಡ. 3. ಅರ್ಕವೃಕ್ಷ, ಎಕ್ಕದ ಗಿಡ. "मन्दारः स्यात्सुरद्रुमे। पारिभद्रेऽर्कवृक्षे च" मेदि०। 4. ಉಮ್ಮತ್ತಿ ಗಿಡ. 5. ಗಜ, ಆನೆ. "मन्दारो हस्तिधूर्तयोः" मेदि०।

**मन्दारमाला ಮಂದಾರಮಾಲಾ** (स्त्री०) ಮಂದಾರ ವೃಕ್ಷದ ಪುಷ್ಪಗಳ ಹಾರ. "आमृष्टवक्षोहरिचन्दनाङ्का मन्दारमाला हरिणा पिनद्धा" शाकु० ७-२।

**मन्दिर ಮಂದಿರ** (पुं०) 1. ಸಮುದ್ರ. मदि "किरच्" (उ० १-५१)। 2. ದೇಹ, ಶರೀರ. "मन्दिरं देहपुर्योश्च" वैज०। (न०) 3. ಗೃಹ, ಮನೆ. मन्द्यते सुप्यतेऽत्र– मदि (स्तुत्यादौ) "किरच्" (उ० १-५१)। "मन्दिरो मकरावासे मन्दिरं नगरे गृहे" हेम०। 4. ನಗರ, ಪಟ್ಟಣ. "प्रावेशयन्मन्दिरमृद्धमेनमागुल्फकीर्णापणमार्गपुष्पम्" कुमा० ७-५५। 5. ವಾಸಸ್ಥಳ.

**मन्दीकुर्वत् ಮಂದೀಕುರ್ವತ್** (वि०) 1. ನಿಧಾನವಾಗಿ ಮಾಡುತ್ತಿರುವ, ತಡಮಾಡುತ್ತಿರುವ. 2. ಕಡಮೆ ಮಾಡುತ್ತಿರುವ. अमन्दं मन्दं संपद्यमानं कुर्वन् — मन्द + डु कृञ् (करणे) अभूतत० "च्विः" (वा० ५-४-५०)। "शतृ" (३-२-१२४)।

**मन्दीकृत ಮಂದೀಕೃತ** (वि०) 1. ನಿಧಾನವಾಗಿ ಮಾಡಲ್ಪಟ್ಟ. 2. ಕಡಮೆ ಮಾಡಲ್ಪಟ್ಟ. अमन्दः मन्दः संपद्यमानः कृतः—मन्द + डु कृञ् (करण) अभूतत० "च्विः" (वा० ५-४-५०)। "क्तः" (३-२-१०२)। "उद्घातिनी भूमिरिति मया रश्मिसंयमनाद्रथस्य मन्दीकृतो वेगः" शाकु० १।

**मन्दीभवत् ಮಂದೀಭವತ್** (वि०) 1. ನಿಧಾನವಾಗಿ ಆಗುತ್ತಿರುವ, ಮೆಲ್ಲಗಾಗುತ್ತಿರುವ. अमन्दः मन्दः संपद्यमानो भवन्—मन्द+भू (सत्तायाम्) अभूतत० "च्विः" (वा० ५-४-५०)। "शतृ" (३-२-१२४)। 2 ಕಡಮೆಯಾಗುತ್ತಿರುವ.

**मन्दीभूत ಮಂದೀಭೂತ** (वि०) 1. ನಿಧಾನವಾಗಿ ಆಗಿರುವ, ಮೆಲ್ಲಗಾಗಿರುವ. अमन्दः मन्दः संपद्यमानं भूतम् — मन्द + भू (सत्तायाम्) अभूततद० "च्विः" (वा० ५-४-५०)। "क्तः" (३-४-७२)। 2. ಕಡಮೆಯಾಗಿ ಆಗಿರುವ.

**मन्दुरा ಮಂದುರಾ** (स्त्री०) 1. ಅಶ್ವಶಾಲೆ, ಕುದುರೆಯ ಲಾಯ. मन्दन्तेऽत्र — मदि (स्तुत्यादौ) "उरच्" (उ० १-३८)। "प्रभ्रष्टोऽयं प्लवङ्गः प्रविशति नृपतेर्मन्दिरं मन्दुरायाः" रत्ना० २-२। 2. ಹಾಸಿಗೆ, ಸುಪ್ಪತ್ತಿಗೆ. "मन्दुरा वाजिशालायां शयनीयार्थवस्तुनि" मेदि०।

**मन्दोत्कण्ठ ಮಂದೋತ್ಕಂಠ** (वि०) ಕಡಮೆ ಉತ್ಸಾಹವುಳ್ಳ, ಕಡಮೆ ಆಸೆಯುಳ್ಳ. मन्दा उत्कण्ठा यस्य। "मन्दोत्कण्ठाः कृतास्तेन गुणाधिकतया गुरौ" रघु० ४-९।

**मन्दोष्ण ಮಂದೋಷ್ಣ** (न०) 1. ಕೊಂಚ ಉಷ್ಣ, ಸ್ವಲ್ಪ ಬಿಸಿ. मन्दं च तदुष्णं च। (वि०) 2. ಸ್ವಲ್ಪ ಬಿಸಿಯಾಗಿರುವ, ಬೆಚ್ಚಗಿರುವ. "कोष्णं कवोष्णं मन्दोष्णं कदुष्णं त्रिषु तद्वति" अम०।

**मन्दौत्सुक्य ಮಂದೌತ್ಸುಕ್ಯ** (वि०) ಕಡಮೆ ಉತ್ಸಾಹವುಳ್ಳ, ಹೆಚ್ಚು ಆಸೆಯಿಲ್ಲದ, ಉತ್ಸಾಹದ ಮನಸ್ಸಿಲ್ಲದ. मन्दमौत्सुक्यं यस्य। "मन्दौत्सुक्योऽस्मि नगरगमनं प्रति" शाकु० १।

**मन्द्र ಮಂದ್ರ** (पुं०) 1. ಗಂಭೀರವಾದ (ಧ್ವನಿ), ಶಾಂತವಾದ (ಶಬ್ದ), ಮೃದುವಾದ (ಶಬ್ದ). मदि (स्तुत्यादौ) "रक्" (उ० २-१३)। "मन्द्रस्निग्धैर्ध्वनिभिरबलावेणिमोक्षोत्सुकानि" मेघ० २-३६। 2. ಒಂದು ಜಾತಿಯ ಆನೆ. (वि०) 3. ಗಂಭೀರವಾದ ಧ್ವನಿಯುಳ್ಳ. "सध्वानं निपतितनिर्झरासु मन्द्रैः संमूर्च्छत्प्रतिनिनदैरधित्यकासु" किरा० ७-२२। "भद्रो मन्द्रो मृग इति गजाः संकरजास्तथा" वैज०।

**मन्द्रभद्र ಮಂದ್ರಭದ್ರ** (पुं०) ಮಂದ್ರ ಮತ್ತು ಭದ್ರ ಇವುಗಳ ಬೆರಕೆ ಜಾತಿಯ ಆನೆ. "मन्द्रभद्रादयोऽप्येवमिति संकरजा नव" वैज०।

**मन्द्रभद्रमृग ಮಂದ್ರಭದ್ರಮೃಗ** (पुं०) ಮಂದ್ರಭದ್ರ ಮೃಗಜಾತಿ ಇವುಗಳ ಬೆರಕೆ ಜಾತಿಯ ಆನೆ. "भद्रमन्द्रो भद्रमृगो मन्द्रभद्रमृगोऽपि च" वैज०।

**मन्मथ ಮನ್ಮಥ** (पुं०) 1. ಮದನ, ಕಾಮದೇವ. मनो मथ्नाति—मन्थ (विलोडने) "अच्" (३-१-१३४)। "मनो मथ्नाति सर्वेषां पञ्चबाणेन कामिनाम्। तन्नाम मन्मथस्तेन प्रवदन्ति मनीषिणः"। "मधुश्च ते मन्मथ साहचर्यादसावनुक्तोऽपि सहाय एव" कुमा० ३-२१। ಮನ್ಮಥನ ಉತ್ಪತ್ತಿಯ ಕಥೆ: "काम" ಪದದಲ್ಲಿ ನೋಡಿ. 2. ಕಾಮಚಿಂತೆ, ಮನೋವಿಕಾರ. "क्व वयं क्व परोक्षमन्मथो मृगशावैः सममेधितो जनः" शाकु० २-१८। 3. ಕಪಿತ್ಥವೃಕ್ಷ, ಬೇಲದಮರ.

**मन्मथालय ಮನ್ಮಥಾಲಯ** (पुं०) 1. ಚೂತವೃಕ್ಷ, ಮಾವಿನಮರ. मन्मथस्यालय इव। 2. ಸ್ತ್ರೀಯರ ಜನನೇಂದ್ರಿಯ.

**मन्मन ಮನ್ಮನ** (पुं०) ದಂಪತಿಗಳ ರಹಸ್ಯಭಾಷಣ. "सुरते कर्णमूले तु निजदेशीयभाषया। दम्पत्योः कथनं यत्तु मन्मनं तं विदुर्बुधाः"।

**मन्यमान ಮನ್ಯಮಾನ** (वि०) ಅರಿತಿರುವ, ತಿಳಿದುಕೊಂಡಿರುವ. मन (ज्ञाने) "शानच्" (३-२-१२४)। "तथा शृगालोऽयमिति मन्यमानेन ममोपरि स्वामिना यद्यवज्ञा क्रियते तदप्ययुक्तम्" पञ्चतं० १।

**मन्या ಮನ್ಯಾ** (स्त्री०) ಕತ್ತಿನ ಹಿಂದೆ ಇರುವ ನರ. मन्यतेऽनया — मन (ज्ञाने) "क्यप्" (३-३-९९)। "पश्चाद्ग्रीवासिरा मन्या" अम०।

**मन्यु ಮನ್ಯು** (पुं०) 1. ಕ್ರೋಧ, ಕೋಪ, ಸಿಟ್ಟು. मन (ज्ञाने) "युच्" (उ० ३-२०)। "वसूनि वाञ्छन्न वशी न मन्युना स्वधर्म इत्येव निवृत्तकारणः" किरा० १-१३। 2. ಶೋಕ, ದುಃಖ. "स वल्कवासांसि तवाधुना हरन् करोति मन्युं न कथं धनञ्जयः" किरा० १-३५। 3. ದೈನ್ಯ, ಕೀಳುತನ, ದುರವಸ್ಥೆ. 4. ಯಾಗ, ಯಜ್ಞ. "मन्युर्दैन्ये क्रतौ क्रुधि" अम०। 5. ಅಹಂಕಾರ, ಗರ್ವ.

**मन्वन्तर ಮನ್ವಂತರ** (न०) ಮನುವು ರಾಜ್ಯಭಾರ ಮಾಡುವ ಕಾಲ, ಹದಿನಾಲ್ಕು ಮಂದಿ ಮನುಗಳಲ್ಲಿ ಒಬ್ಬ ಮನುವಿನ ಆಳ್ವಿಕೆಯ ಕಾಲ, ದೇವತೆಗಳ ಎಪ್ಪತ್ತೊಂದು ಚತುರ್ಯುಗಗಳ ಕಾಲ. मनोरन्तरमस्मिन्। "मन्वन्तरं तु दिव्यानां युगानामेकसप्ततिः" अम०। [ವಿವರಕ್ಕೆ "मनु" ಪದದಲ್ಲಿ ನೋಡಿ]. मनवः स्वायंभुवादयः, तेषामन्तरमवकाशोऽवधिरस्मिन् इति वा। ಒಂದು ಚತುರ್ಯುಗಕ್ಕೆ 12000 ದೇವವರ್ಷಗಳು. 4320000 ಮಾನುಷವರ್ಷಗಳು. ದೇವತೆಗಳ 71 ಚತುರ್ಯುಗಗಳು ಒಂದು ಮನ್ವಂತರ. ಸ್ವಾಯಂಭುವ ಮೊದಲಾದ ಆರು

ಮನುಗಳ ಆಳ್ವಿಕೆಯ ಕಾಲ ಕಳೆದು ಏಳನೆಯ ಮನುವಾದ ವೈವಸ್ವತ ಮನುವಿನ ಆಳ್ವಿಕೆಯಲ್ಲಿ ಈಗ ನಾವಿರುವುದರಿಂದ ಇದು ವೈವಸ್ವತ ಮನ್ವಂತರ. ಮುಂದೆ ಸಾವರ್ಣಿ ಮೊದಲಾದ ಏಳು ಮನುಗಳ ಕಾಲ (ಏಳು ಮನ್ವಂತರಗಳು) ಕಳೆದರೆ ಈಗಿನ ಬ್ರಹ್ಮ (ಚತುರ್ಮುಖ)ನ ಒಂದು ಹಗಲು. ಈ ವೈವಸ್ವತಮನ್ವಂತರದಲ್ಲಿ ಬ್ರಹ್ಮನ ದ್ವಿತೀಯ ಪರಾರ್ಧವು ನಡೆಯುತ್ತಿದೆ. ಈಗ ಬ್ರಹ್ಮನ ಆಯುಸ್ಸಿನಲ್ಲಿ ಐವತ್ತೊಂದನೆಯ ವರ್ಷದ ಮೊದಲನೆಯ ತಿಂಗಳ ಇಪ್ಪತ್ತೈದು ದಿನಗಳು ಕಳೆದು ಇಪ್ಪತ್ತಾರನೆಯ ಹಗಲಿನ ಮೊದಲನೆಯ ಯಾಮವು ನಡೆಯುತ್ತಿದೆ. ನಾವು ಈಗ ಶ್ವೇತವರಾಹ ಕಲ್ಪದಲ್ಲಿದ್ದೇವೆ.

**मम ಮಮ** (अव्य०) ನನ್ನ, ನನ್ನ ಸಂಬಂಧವಾದ. "अस्मद्" ಶಬ್ದದ ಷಷ್ಠ್ಯರ್ಥದಲ್ಲಿ "मम" ಎಂಬುದು ಒಂದು ವಿಭಕ್ತಿಪ್ರತಿರೂಪಕಾವ್ಯಯ. ಈ ರೂಪವು ಲಿಂಗತ್ರಯದಲ್ಲೂ ಸಮಾನವಾದುದು.

**ममकार ಮಮಕಾರ** (पुं०) ಸ್ವಾರ್ಥಪರತೆ, ತನ್ನ ಪ್ರಯೋಜನದಲ್ಲಿ ಆಸಕ್ತಿ, ತನಗೆ ಎಂಬ ಭಾವನೆ.

**ममता ಮಮತಾ** (स्त्री०) 1. ನನ್ನದು ತನ್ನದು ಎಂಬ ಅಭಿಮಾನ. मम भावे "तल्" (५-१-११९)। "वत्स, ममतावासनानिबन्धनोऽयं व्यामोहः" प्रबोध० ५। 2. ದರ್ಪ, ಕೊಬ್ಬು. 3. ದೀರ್ಘತಮಸ್ಸಿನ ತಾಯಿ, ಉತಥ್ಯನ ಪತ್ನಿ. "त्वः" (५-१-११९)। **ममत्वम् ಮಮತ್ವಮ್.** "क्षुद्रेऽपि नूनं शरणं प्रपन्ने ममत्वमुच्चैःशिरसां सतीव" कुमा० १-१२।

**मम्मट ಮಮ್ಮಟ** (पुं०) ಕಾವ್ಯಪ್ರಕಾಶವನ್ನು ರಚಿಸಿದ ಒಬ್ಬ ಪಂಡಿತ.

**मय ಮಯ** (पुं०) 1. ಒಬ್ಬ ಅಸುರ, ದಾನವರ ಶಿಲ್ಪಿಯಾದ ಒಬ್ಬ ದೈತ್ಯ. [ಇವನು ಖಾಂಡವವನದಲ್ಲಿ ವಾಸವಾಗಿದ್ದನು. ಅಗ್ನಿಯು ಖಾಂಡವವನವನ್ನು ಸುಡಲು ತೊಡಗಿದಾಗ ಇವನು ಅರ್ಜುನನನ್ನು ಮರೆಹೊಕ್ಕು ಶ್ರೀಕೃಷ್ಣನಿಂದಲೂ ಅಭಯ ಪಡೆದನು. ಆ ಕೃತಜ್ಞತೆಯನ್ನು ಸೂಚಿಸಲು ಶ್ರೀಕೃಷ್ಣನ ಆಜ್ಞೆಯಂತೆ ಯುಧಿಷ್ಠಿರನಿಗೆ ಲೋಕೋತ್ತರವಾದ ಒಂದು ಸಭೆಯನ್ನು ನಿರ್ಮಿಸಿಕೊಟ್ಟನು. ಈ ಸಭಾಭವನದಲ್ಲೇ ಧರ್ಮರಾಜನು ರಾಜಸೂಯಯಾಗ ಮಾಡಿದನು. ಬ್ರಹ್ಮನಿಂದ ವರ ಪಡೆದು ತಾರಕಾಸುರನ ಮಕ್ಕಳಾದ ತಾರಾಕ್ಷ ಕಮಲಾಕ್ಷ ಮತ್ತು ವಿದ್ಯುನ್ಮಾಲಿಗಳಿಗೆ ಸುವರ್ಣಪುರ ರಜತಪುರ ಮತ್ತು ಅಯಃಪುರಗಳನ್ನು ನಿರ್ಮಿಸಿಕೊಟ್ಟನು.] 2. ಉಷ್ಟ್ರ, ಒಂಟೆ. मयते—मय (गतौ) "अच्" (३-१-१३४)। 3. ಹೇಸರಗತ್ತೆ, ಒಂದು ಬೆರಕೆಜಾತಿಯ ಪ್ರಾಣಿ. "मयो दैत्योष्ट्रवेसराः" हेम०। (वि०) 4. ಸಂಚರಿಸುವವನು.

**मय(यु)ष्टक ಮಯ(ಯು)ಷ್ಟಕ** (पुं०) ಕಾಡು ಹೆಸರು. मयुं स्तकति—ष्टक (प्रतिघाते) "अच्" (३-१-१३४)। पृषो०।

**मयट ಮಯಟ** (पुं०) ಹುಲ್ಲಿನ ಗುಡಿಸಲು.

**मयु ಮಯು** (पुं०) 1. ಮೃಗ, ಜಿಂಕೆ. डुमिञ् (प्रक्षेपणे) "उः" (उ० १-७)। 2. ಕಿನ್ನರ, ಕಿಂಪುರುಷ. "मयुर्ना किन्नरे मृगे" मेदि०।

**मयूख ಮಯೂಖ** (पुं०) 1. ಕಿರಣ, ರಶ್ಮಿ. मिमीते—माङ् (माने) "ऊखः" मयादेशश्च (उ० ५-२५)। "सक्ति जवादपनयत्यनिले लतानां वैरोचनैर्द्विगुणिताः सहसा मयूखैः" किरा० ५-४६। 2. ಕಾಂತಿ, ಪ್ರಭೆ, ತೇಜಸ್ಸು. "व्यक्तोदितस्मितमयूखविभासितोष्ठस्तिष्ठन् मुनेरभिमुखं स विकीर्णधाम्नः" किरा० २-५९। 3. ಜ್ವಾಲೆ, ಉರಿ. "मयूखः किरणेऽपि च। ज्वालायामपि शोभायाम्" मेदि०।

**मयूर ಮಯೂರ** (पुं०) 1. ನವಿಲು. मयते—मय (गतौ) "ऊरन्" (उ० १-६७)। "उद्ग्रीवैर्घनरवशङ्कया मयूरैः सोत्कण्ठं ध्वनिरुपशुश्रुवे रथानाम्" किरा० ७-२२। 2. ಓಮ, ಅಜವಾನ. 3. ಅಪಾಮಾರ್ಗ, ಉತ್ತರಣೆ ಗಿಡ. "मयूरो बर्हिचूडायामपामार्गे शिखण्डिनि" मेदि०। स्त्रियां "ङीप्"। **-री -ರೀ.**

**मयूरक ಮಯೂರಕ** (पुं०) 1. ಅಪಾಮಾರ್ಗ, ಉತ್ತರಣೆ ಗಿಡ. 2. ಮಯೂರ, ನವಿಲು. (न०) 3. ಮೈಲುತುತ್ತ. मयूरस्य प्रतिकृतिः "कन्" (४-३-९६)। "मयूरकस्त्वपामार्गे मयूरकन्तु तुत्थके" हेम०।

**मयूरकेतु ಮಯೂರಕೇತು** (पुं०) ಕಾರ್ತಿಕೇಯ, ಷಣ್ಮುಖ. मयूरः केतुः यस्य।

**मयूरग्रीवक ಮಯೂರಗ್ರೀವಕ** (न०) ಮೈಲುತುತ್ತ.

**मयूरचटक ಮಯೂರಚಟಕ** (पुं०) ಕುಕ್ಕುಟ, ಕೋಳಿ.

**मयूरचूडा ಮಯೂರಚೂಡಾ** (स्त्री०) 1. ನವಿಲಿನ ಜುಟ್ಟು. 2. ಕೋಳಿಯ ತಲೆಯ ಮೇಲಿನ ಜುಟ್ಟು.

**मयूरतुत्थ ಮಯೂರತುತ್ಥ** (न०) ಮೈಲುತುತ್ತ.

**मयूरध्वज ಮಯೂರಧ್ವಜ** (पुं०) ಮಣಿಪುರದ ದೊರೆ. [ಇವನು ಧರ್ಮರಾಜನ ಅಶ್ವಮೇಧದ ಕುದುರೆಯನ್ನು ಕಟ್ಟಿಹಾಕಿ ಯುದ್ಧಕ್ಕೆ ಬಂದ ಅರ್ಜುನನನ್ನು ಸೋಲಿಸಿದನು. ಕೃಷ್ಣಾರ್ಜುನರು ಆಗ ವಿಪ್ರವೇಷದಿಂದ ಇವನಲ್ಲಿಗೆ

ಹೋಗಿ ಇವನ ಶರೀರವನ್ನು ಇಬ್ಬರಿಗೂ ಅರ್ಧರ್ಧ ಭಾಗ ಮಾಡಿ ಕೊಡಬೇಕೆಂದು ಕೇಳಿಕೊಳ್ಳುವರು. ಮಯೂರ ಧ್ವಜನು ಅದಕ್ಕೆ ಒಪ್ಪಿ ತನ್ನ ಮಗ ತಾಮ್ರಧ್ವಜನಿಗೆ ಹೇಳಿ ತನ್ನ ಶರೀರವನ್ನು ಕೊಯ್ಯಲು ಅನುವಾಗಿ ಕುಳಿತನು. ಆಗ ಶ್ರೀಕೃಷ್ಣನು ಇವನ ಚಿತ್ತಸ್ಥೈರ್ಯಕ್ಕೆ ಮೆಚ್ಚಿ ನಿಜರೂಪ ವನ್ನು ಪ್ರದರ್ಶಿಸಿ ಅವನಿಂದ ಕುದುರೆಯನ್ನು ಬಿಡಿಸಿ ಕೊಂಡು ಹೊರಟನು.]

**मरक ಮರಕ** (पुं०) ಒಂದು ವಿಧ ಅಂಟುಜಾಡ್ಯ.

**मरकत ಮರಕತ** (न०) ಗಾರುತ್ಮತಮಣಿ, ಪಚ್ಚೆ. मरकं तरन्त्यनेन —तॄ (प्लवनतरणयोः) "डः" (वा० ३-२-४८)। "मरकतमणिमेदिनीषु भानोस्तरुविटपान्तरपातिनो मयूखाः" माघ० ४-५६।

**मरण ಮರಣ** (न०) 1. ನಿಧನ, ಸಾವು. मृङ् (प्राणत्यागे) भावे "ल्युट्" (३-३-११५)। "संभावितस्यचाकीर्तिर्मरणादतिरिच्यते"। 2. ವತ್ಸನಾಭವೆಂಬ ಒಂದು ವಿಷ.

**मरन्द ಮರಂದ** (पुं०) ಮಕರಂದ, ಪುಷ್ಪದರಸ. "मकरन्दो मरन्दोऽस्य रसे" वैजं०।

**मराल ಮರಾಲ** (पुं०) 1. ಹಂಸಪಕ್ಷಿ. मृङ् "कालन्" बाहु०। "कृतप्रियावृत्यमहोपकारमरालमोहद्रढिमानमूहे" नैष० ६-७२। स्त्रियां "ङीष्" (४-१-६३)। **मराली ಮರಾಲೀ.** 2. ಕೆಂಪು ಗಣಿಗಿಲೆ ಗಿಡ. "चण्डातोऽश्वरिपुः श्वेते मरालस्त्वतिलोहिते" वैजं०। (पुंन०) 3. ಕಾರಂಡವ ಪಕ್ಷಿ, ಒಂದು ಜಾತಿಯ ಬಾತುಕೋಳಿ. 4. ಕುದುರೆ. 5. ಮೇಘ, ಮೋಡ. 6. ದಾಳಿಂಬೆ ಗಿಡದ ಕಾಡು. 7. ವಂಚಕ, ಮೋಸಗಾರ. (वि०) 8. ಮೃದುವಾದ, ಕೋಮಲವಾದ. 9. ನಯವಾದ, ನುಣುಪಾದ.

**मरि(री)च ಮರಿ(ರೀ)ಚ** (पुं०) 1. ಮೆಣಸಿನ ಗಿಡ. (न०) 2. ಮೆಣಸು. म्रियते विषमनेन—मृङ् (प्राणत्यागे) "ईचः" बाहु०।

**मरिमन् ಮರಿಮನ್** (पुं०) ಮೃತ್ಯು.

**मरीचि ಮರೀಚಿ** (पुं०) 1. ಮರೀಚಿಮಹರ್ಷಿ, ಬ್ರಹ್ಮನ ಒಬ್ಬ ಮಾನಸಪುತ್ರ. 2. ಸ್ವಾಯಂಭುವ ಮನುವಿನಿಂದ ಸೃಷ್ಟಿಸಲ್ಪಟ್ಟ ದಶ ಪ್ರಜಾಪತಿಗಳಲ್ಲೊಬ್ಬ ಮಹರ್ಷಿ. मृङ् (प्राणत्यागे) "ईचिः" (उ० ४-७०)। "अहं प्रजाः सिसृक्षुस्तु तपस्तप्त्वा सुदुश्चरम्। पतीन् प्रजानामसृजं महर्षीनादितो दश॥ मरीचिमत्र्यङ्गिरसौ पुलस्त्यं पुलहं क्रतुम्। प्रचेतसं वसिष्ठं च भृगुं नारदमेव च" मनु० १-३४, ३५। 3. ಕೃಪಣ, ಜಿಪುಣ. (पुंस्त्री०) 4. ಕಿರಣ, ರಶ್ಮಿ. "जलदजालघनैरसिताश्मनामुपहतप्रचयेह मरीचिभिः" किरा० ५-४८। "मरीचिः कृपणे घृणौ। ऋषिभेदे" हेम०। (स्त्री०) 5. ಒಬ್ಬ ಅಪ್ಸರಸ್ಸು.

**मरीचिका ಮರೀಚಿಕಾ** (स्त्री०) ಸೂರ್ಯನ ಕಿರಣದಲ್ಲಿ ಉಂಟಾಗುವ ನೀರಿನ ಭ್ರಮೆ, ಬಿಸಿಲುಕುದುರೆ. मरीचिरिव "कन्" (५-३-९६)। "मध्याह्नार्कमरीचिकास्विव पयःपूरो यदज्ञानतः खं वायुर्ज्वलनो जलं क्षितिरिति त्रैलोक्यमुन्मीलति" प्रबोध० १-१।

**मरु ಮರು** (पुं०) 1. ಮರುಪ್ರದೇಶ, ನೀರಿಲ್ಲದ ಪ್ರದೇಶ. म्रियन्तेऽत्र प्राणिनः—मृङ् (प्राणत्यागे) "उः" (उ० १-७)। 2. ಪರ್ವತ, ಬೆಟ್ಟ. "मरुर्ना गिरिधन्वनोः" मेदि०। 3. ಕೆಂಪು ಗೋರಂಟಿಗಿಡ, ಕೆಂಪು ಹೂವಿನ ಮುಳ್ಳು ಗೋರಂಟಿಗಿಡ. (पुं० ब० व०) 4. ದಶೇರಕ ದೇಶ.

**मरुज ಮರುಜ** (पुं०) ನಖಿಯೆಂಬ ಒಂದು ಗಂಧದ್ರವ್ಯ.

**मरुत् ಮರುತ್** (पुं०) 1. ವಾಯು, ಗಾಳಿ. मृङ् (प्राणत्यागे) "उतिः" (उ० १-९४)। "परिरेभिरेऽभिमुखमेत्य सुखाः सुहृदः सखायमिव तं मरुतः" किरा० ६-३। 2. ದೇವತೆ. "व्याहृत्य मरुतां पत्याविति वाचमवस्थिते" किरा० ११-३७। 3. ವಾಯುದೇವತೆ. "इति दर्शितविक्रियं सुतं मरुतः कोपपरीतमानसम्" किरा० २-२५। 4. ಪ್ರಾಣವಾಯು. "अन्तश्चराणां मरुतां निरोधान्निवातनिष्कम्पमिव प्रदीपम्" कुमा० ३-४८।

**मरुत्तनय ಮರುತ್ತನಯ** (पुं०) 1. ಭೀಮಸೇನ. 2. ಆಂಜನೇಯ.

**मरुत्पथ ಮರುತ್ಪಥ** (पुं०) ಆಕಾಶ.

**मरुत्पुत्र ಮರುತ್ಪುತ್ರ** (पुं०) 1. ಭೀಮಸೇನ. 2. ಆಂಜನೇಯ. मरुतो वायोः पुत्रः।

**मरुत्प्लव ಮರುತ್ಪ್ಲವ** (पुं०) ಸಿಂಹ.

**मरुत्वत् ಮರುತ್ವತ್** (पुं०) 1. ಇಂದ್ರ, ದೇವತೆಗಳ ಒಡೆಯ. मरुतः सन्त्यस्य "मतुप्" (५-२-९४)। "विभिन्नपर्यन्तगमीनपङ्क्तयः पुरो विगाढाः सखिभिर्मरुत्वतः" किरा० ८-३०। 2. ಆಂಜನೇಯ, ಹನುಮಂತ. (वि०) 3. ವಾಯುಸಹಿತವಾದ, ಗಾಳಿಯಿಂದ ಕೂಡಿದ. "बभौ मरुत्वान् विकृतः समुद्रः बभौ मरुत्वान् विकृतः समुद्रः" भट्टि० १०-१९।

**मरुत्सख ಮರುತ್ಸಖ** (पुं०) 1. ಇಂದ್ರ. मरुतां देवानां सखा "टच्" (५-४-९१)। 2. ಅಗ್ನಿ. मरुतो वायोः सखा "टच्"। "मरुत्प्रयुक्ताश्च मरुत्सखाभं तमर्च्यमारादभिवर्तमानम्" रघु० २-१०। 3. ಚಿತ್ರಕವೃಕ್ಷ. ಚಿತ್ರಮೂಲದ ಗಿಡ.

**मरुत्सुत ಮರುತ್ಸುತ** (पुं०) 1. ಭೀಮಸೇನ. 2. ಆಂಜನೇಯ. मरुतो वायोः सुतः।

**मरुद्रथ ಮರುದ್ರಥ** (पुं०) 1. ಅಶ್ವ, ಕುದುರೆ. मरुद्वायुः रथ इवास्य। 2. ದೇವತೆಗಳ ರಥ.

**मरुद्रुम ಮರುದ್ರುಮ** (पुं०) ದುರ್ಗಂಧವುಳ್ಳ ಕಗ್ಗಲಿ ಮರ.

**मरुद्वाह ಮರುದ್ವಾಹ** (पुं०) 1. ಅಗ್ನಿ, ಬೆಂಕಿ. 2. ಧೂಮ, ಹೊಗೆ. मरुता वायुना उह्यतेऽसौ—वह (प्रापणे) कर्म० "घञ्" (३-३-१९)। "धूममम्भोमरुद्वाहखतमालशिखिध्वजाः" त्रिकाण्ड०।

**मरुद्विप ಮರುದ್ವಿಪ** (पुं०) ಉಷ್ಟ್ರ, ಒಂಟೆ. मरौ द्विप इव। "लम्बौष्ठाध्वगवासन्तकुलनाशमरुद्विपाः" त्रिकाण्ड०।

**मरुन्माला ಮರುನ್ಮಾಲಾ** (स्त्री०) ಸ್ಪೃಕ್ಕಾ ಎಂಬ ಒಂದು ಗಂಧದ್ರವ್ಯ.

**मरुप्रिय ಮರುಪ್ರಿಯ** (पुं०) ಉಷ್ಟ್ರ, ಒಂಟೆ. मरुः निर्जलप्रदेशः प्रियोऽस्य।

**मरुभू ಮರುಭೂ, -भूमि -ಭೂಮಿ** (स्त्री०) ಮರುಭೂಮಿ, ಊಷರಭೂಮಿ, ಜಲವಿಲ್ಲದ ಪ್ರದೇಶ, ನೀರಿಲ್ಲದ ದೇಶ.

**मरुल ಮರುಲ** (पुं०) 1. ಕಾರಂಡವ ಪಕ್ಷಿ. 2. ಜಲ, ನೀರು. "तोयं मरुलं मेघजं कथम्" वैज०।

**मरुवक ಮರುವಕ** (पुं०) 1. ಮರುಗ. मरौ वाति—वा (गतिगन्धनयोः) "क्वुन्" (उ० २-३२)। 2. ಮಂಗಾರೆ ಗಿಡ. "समीरणो मरुवकः" अम०। "पिण्डीतको मरुवकः श्वसनः करहाटकः" अम०।

**मरूक ಮರೂಕ** (पुं०) 1. ಮಯೂರ, ನವಿಲು. 2. ಕಟಿಜೀರ. मृङ् (प्राणत्यागे) "ऊकः" (उ० ४-३९)।

**मरूद्भवा ಮರೂದ್ಭವಾ** (स्त्री०) 1. ಹತ್ತಿಗಿಡ. 2. ಶೀಟಕ ಸಂಧಿ. मरौ उद्भवति—उद्+भू "अच्" (३-१-१३४)।

**मरोलि ಮರೋಲಿ** (पुं०) ಮಕರ, ಮೊಸಳೆ. मरौ निर्जलप्रदेशे लीयते—लीङ् (श्लेषणे) "इन्" (उ० ४-११७)। पृषो०। "जलरूपस्तु मकरो मरोलिरसिदंष्ट्रकः" त्रिकाण्ड०। स्वार्थे "कन्"। मरोलिकः ಮರೋಲಿಕಃ।

**मर्क ಮರ್ಕ** (पुं०) 1. ಪ್ರಾಣವಾಯು. 2. ದೇಹ, ಶರೀರ. 3. ಮರ್ಕಟ, ಕಪಿ.

**मर्कट ಮರ್ಕಟ** (पुं०) 1. ವಾನರ, ಕಪಿ, ಕೋತಿ. मर्कति—मर्क (गतौ) "अटन्" (उ० ४-८१)। स्त्रियां "ङीष्" (४-१-६३)। -टी -ಟೀ. 2. ಜೇಡರಹುಳ. 3. ಸುರತದ ಒಂದು ಭೇದ. "मर्कटस्तु कपावूर्णनाभे स्त्रीकरणान्तरे" हेम०।

**मर्कटक ಮರ್ಕಟಕ** (पुं०) 1. ವಾನರ, ಕಪಿ. 2. ಜೇಡರ ಹುಳ. 3. ಒಂದು ಸಸ್ಯ. "अथ मर्कटकः सस्यभेदे वानरलूतयोः" मेदि०।

**मर्कटपिप्पली ಮರ್ಕಟಪಿಪ್ಪಲೀ** (स्त्री०) ಅಪಾಮಾರ್ಗ, ಉತ್ತರಣೆ ಗಿಡ. मर्कटप्रिया पिप्पली।

**मर्कटास्य ಮರ್ಕಟಾಸ್ಯ** (न०) 1. ತಾಮ್ರಲೋಹ. मर्कटस्यास्यमिव। "ताम्रं शुल्वं मर्कटास्यं रक्तं व्यष्ठं कनीयसम्" वैज०। (वि०) 2. ಕಪಿಯ ಮುಖದಂತೆ ಮುಖವುಳ್ಳ. मर्कटस्यास्यमिवास्यं यस्य।

**मर्कटी ಮರ್ಕಟೀ** (स्त्री०) 1. ಅಪಾಮಾರ್ಗ, ಉತ್ತರಣೆ ಗಿಡ. 2. ಓಮ, ಅಜವಾನ, ವಾದಕ್ಕಿ. 3. ನಸಗುನ್ನಿ ಗಿಡ. 4. ಹೆಣ್ಣುಕಪಿ. 5. ಹುಲಿಯುಗುರು ಗಿಡ. "मर्कटी करञ्जभेदः स्यात् शूकशिम्बी च वानरी" हेम०।

**मर्कर ಮರ್ಕರ** (पुं०) 1. ಗರಗದ ಸೊಪ್ಪು. 2. ಪಾತ್ರೆ, ಬಿಂದಿಗೆ ಕೊಳದಪ್ಪಲೆ ಮೊದಲಾದುವು. (स्त्री०) -रा -ರಾ. 3. ದರಿ, ಡೊಗರು. 4. ಬಂಜೆ ಹೆಂಗಸು, ಗೊಡ್ಡು ಹೆಂಗಸು.

**मर्जू ಮರ್ಜೂ** (पुं०) 1. ರಜಕ, ಅಗಸ. (स्त्री०) 2. ಶುದ್ಧಿ, ಚೊಕ್ಕಟ. मृजू (शुद्धौ) "ऊः" (उ० १-८२)। (वि०) 3. ಶುದ್ಧಮಾಡುವವನು. "मर्जूः शुद्धौ रजकेऽपि च" हेम०।

**मर्त ಮರ್ತ** (पुं०) 1. ಮನುಷ್ಯ. 2. ಭೂಮಿ, ಭೂಲೋಕ. मृङ् (प्राणत्यागे) "तन्" (उ० ३-८६)।

**मर्त्य ಮರ್ತ್ಯ** (पुं०) 1. ಮನುಷ್ಯ, ಮಾನವಜಾತಿಯವನು. मर्ते भवः "यत्" (४-३-५३)। 2. ಭೂಲೋಕ. "क्षमाद्रिकीला च जगद्वहा च पुंसि स्थितौ मध्यमलोकमर्त्यौ" त्रिकाण्ड०। (न०) 3. ಶರೀರ, ದೇಹ. "तस्यास्तद्योगविधुतमार्त्यं मर्त्यमभूत्सरित्" भाग० ३-३३-३२। (वि०) 4. ಮರಣಸ್ವಭಾವದ.

**मर्त्यभाव ಮರ್ತ್ಯಭಾವ** (पुं०) ಮನುಷ್ಯಸ್ವಭಾವ.

**मर्त्यलोक ಮರ್ತ್ಯಲೋಕ** (ಪುಂ) ಭೂಲೋಕ. मर्त्यानां लोकः। "मर्त्यलोको जीवलोको मर्तोऽपि" वैजं। "क्षीणे पुण्ये मर्त्यलोकं विशन्ति" गीता ९-२१। "मर्त्यलोकदुरवापमवाप्तरसोदयम्" माघ० १३-६९।

**मर्द ಮರ್ದ** (ಪುಂ) 1. ಪುಡಿಮಾಡುವುದು. 2. ಉಜ್ಜುವುದು. 3. ಹಿಂಸಿಸುವುದು. 4. ನಾಶಪಡಿಸುವುದು. 5. ಒತ್ತುವುದು. मृद (क्षोदे) "घञ्" (३-३-१८)। (ವಿಂ) 6. ಒತ್ತುವ. 7. ಪುಡಿಮಾಡುವ. 8. ಹಿಂಸಿಸುವ. 9. ನಾಶಪಡಿಸುವ. 10. ಉಜ್ಜುವ, ತೀಡುವ, ತಿಕ್ಕುವ.

**मर्दक ಮರ್ದಕ** (ವಿಂ) "मर्दन" ಪದದ (ವಿಂ) ಅರ್ಥ. मृद (क्षोदे) "ण्वुल्" (३-१-१३३)।

**मर्दन ಮರ್ದನ** (ನಂ) 1. (ಕೈ ಕಾಲು ಮೊದಲಾದುವನ್ನು) ಒತ್ತುವಿಕೆ. मृद (क्षोदे) भावे "ल्युट्" (३-३-११५)। 2. ಚೂರ್ಣಮಾಡುವುದು, ಪುಡಿಮಾಡುವುದು. 3. ಉಜ್ಜುವುದು, ತಿಕ್ಕುವುದು, ತೀಡುವುದು. 4. ಹಿಂಸಿಸುವುದು, ಪೀಡಿಸುವುದು, ಚಿತ್ರಹಿಂಸೆ ಕೊಡುವುದು. 5. ನಾಶಪಡಿಸುವುದು, ಧ್ವಂಸಮಾಡುವುದು. (ವಿಂ) 6. ಪುಡಿಮಾಡುವ. 7. ಉಜ್ಜುವ, ತಿಕ್ಕುವ. 8. ಹಿಂಸಿಸುವ, ಪೀಡಿಸುವ. 9. ನಾಶಪಡಿಸುವ, ಧ್ವಂಸಮಾಡುವ. मृद "ल्युः" (३-१-१३४)। 10. ಒತ್ತುವ, ಹಿಸುಕುವ. (ಪುಂ) 11. ಮದ್ದಳೆ. "मड्डुको मर्दनो मेन्द्रः" त्रिकाण्ड०।

**मर्दनीय ಮರ್ದನೀಯ** (ವಿಂ) 1. ಒತ್ತಬೇಕಾದ. 2. ಪುಡಿಮಾಡಬೇಕಾದ. 3. ನಾಶಪಡಿಸಬೇಕಾದ. 4. ಹಿಂಸಿಸಬೇಕಾದ. 5. ಉಜ್ಜಬೇಕಾದ. 6. ಉಜ್ಜಲ್ಪಡುವ. 7. ಪುಡಿಮಾಡಲ್ಪಡುವ. 8. ನಾಶಪಡಿಸಲ್ಪಡುವ. 9. ಒತ್ತಲ್ಪಡುವ. 10. ಹಿಂಸಿಸಲ್ಪಡುವ. मृद (क्षोदे) "अनीयर्" (३-१-९६)। 11. ಒತ್ತಲು ಅರ್ಹವಾದ. 12. ಉಜ್ಜಲು ಅರ್ಹವಾದ. 13. ಪುಡಿಮಾಡಲು ಯೋಗ್ಯವಾದ. 14. ಹಿಂಸಿಸಲು ಅರ್ಹವಾದ. 15. ನಾಶಪಡಿಸಲು ಅರ್ಹವಾದ. "तव्यः"। **मर्दितव्यम् ಮರ್ದಿತವ್ಯಮ್.** मृद+णिच् "अनीयर्" (३-१-९६)। **मर्दयितव्यम्, मर्दनीयम्** ಇತ್ಯಾದಿ ಹೇತು ಮತ್ತು ಪ್ರೇರಣಾರ್ಥಗಳಲ್ಲಿ ರೂಪಗಳು.

**मर्दयत् ಮರ್ದಯತ್** (ವಿಂ) 1. ಒತ್ತಿಸುತ್ತಿರುವ. 2. ಪುಡಿಮಾಡಿಸುತ್ತಿರುವ. 3. ಹಿಂಸೆ ಮಾಡಿಸುತ್ತಿರುವ. 4. ನಾಶಪಡಿಸುವಂತೆ ಮಾಡುತ್ತಿರುವ. 5. ಉಜ್ಜಿಸುತ್ತಿರುವ. मृद (क्षोदे)+णिच् "शतृ" (३-२-१२४)। स्त्रियां "ङीप्" (४-१-६)। **–यन्ती –ಯನ್ತೀ.**

**मर्दयितृ ಮರ್ದಯಿತೃ** (ವಿಂ) 1. ಉಜ್ಜಿಸುವ, ಪೀಡಿಸುವ. 2. ನಾಶಪಡಿಸುವ. 3. ಒತ್ತಿಸುವ, ಹಿಸುಕುವಂತೆ ಮಾಡುವ. 4. ಪುಡಿಮಾಡಿಸುವ. 5. ಹಿಂಸಿಸುವ. मृद (क्षोदे)+णिच् "तृच्" (३-१-१३३)। स्त्रियां "ङीप्" (४-१-५)। **–यित्री –ಯಿತ್ರೀ.**

**मर्दल ಮರ್ದಲ** (ಪುಂ) ಮದ್ದಳೆಯೆಂಬ ಒಂದು ವಾದ್ಯ, ಮೃದಂಗ. मर्दमुपमर्दं लाति—ला (आदाने) "कः" (३-२-३)। "कृतसमार्जनमर्दलमण्डलध्वनिजया निजया स्वनसंपदा" माघ० ६-३१।

**मर्दित ಮರ್ದಿತ** (ವಿಂ) 1. ಪುಡಿಮಾಡಲ್ಪಟ್ಟ. 2. ಹಿಂಸಿಸಲ್ಪಟ್ಟ. 3. ನಾಶಪಡಿಸಲ್ಪಟ್ಟ. 4. ಉಜ್ಜಲ್ಪಟ್ಟ. 5. ಒತ್ತಲ್ಪಟ್ಟ. मृद (क्षोदे)+णिच् "क्तः" (३-२-१०२)। 6. ಅರೆಯಲ್ಪಟ್ಟ.

**मर्मकील ಮರ್ಮಕೀಲ** (ಪುಂ) ಪತಿ, ಗಂಡ. मर्मणि रहस्यविषये कील इव।

**मर्मघ्न ಮರ್ಮಘ್ನ** (ವಿಂ) ಹೃದಯವನ್ನು ಭೇದಿಸುವ, ಹೃದಯದಲ್ಲಿ ನೋವುಂಟುಮಾಡುವ. मर्म हन्ति—हन (हिंसागत्योः) "कः" (वा० ३-२-५)।

**मर्मच्छिद् ಮರ್ಮಚ್ಛಿದ್** (ವಿಂ) ಹೃದಯವನ್ನು ಕತ್ತರಿಸುವ. मर्म छिनत्ति—छिदिर् (द्वैधीकरणे) "क्विप्" (३-२-६१)।

**मर्मच्छेदिन् ಮರ್ಮಚ್ಛೇದಿನ್** (ವಿಂ) ಹೃದಯವನ್ನು ಕತ್ತರಿಸುವ. मर्म छिनत्ति—छिदिर् (द्वैधीकरणे) "णिनिः" (३-२-७८)। "प्रहरति विधिर्मर्मच्छेदी न कृन्तति जीवितम्" मालती० ९-१२।

**मर्मज्ञ ಮರ್ಮಜ್ಞ** (ವಿಂ) 1. ಮರ್ಮವನ್ನು ಅರಿತವನು, ಹೃದಯವನ್ನು ತಿಳಿದವನು, ಹೃದಯದ ಆಳವನ್ನು ಬಲ್ಲವನು. मर्म जानाति—ज्ञा (अवबोधने) "कः" (३-२-३)। 2. ರಹಸ್ಯವಿಷಯವನ್ನು ತಿಳಿದವನು. "तुल्यार्थं तुल्यसामर्थ्यं मर्मज्ञं व्यवसायिनम्। अर्धराज्यहरं भृत्यं यो न हन्यात् स हन्यते" पञ्चतं० १-२७१। 3. ತತ್ತ್ವವನ್ನು ಅರಿತವನು. 4. ಅವಯವಗಳ ಸಂಧಿಸ್ಥಾನಗಳನ್ನು ತಿಳಿದವನು. "तेषामापततां वीरः शीघ्रं पूर्वमथो दृढम्। क्षिप्रास्त्रो न्यवधीद् व्रातान् मर्मज्ञो मर्मभेदिभिः" भा०।

**मर्मत्र ಮರ್ಮತ್ರ** (ನಂ) ಕವಚ, ಅಂಗಿ. मर्म त्रायते—त्रैङ् (पालने) "कः" (३-२-३)।

**मर्मन् ಮರ್ಮನ್** (ನಂ) 1. ಹೃದಯ, ಎದೆ, ಶರೀರದೊಳಗಿನ ಜೀವಸ್ಥಾನ, ಪ್ರಾಣಾಧಾರಸ್ಥಾನ. म्रियतेऽनेन—मृङ् (प्राणत्यागे) "मनिन्" (ಉಂ ४-१४५)। "तथैव तीव्रो हृदि शोकशङ्कुर्मर्माणि कृन्तन्नपि किं न सोढः" ಉಂ ರಾಂ ३-३५। 2. ರಹಸ್ಯ, ಗುಟ್ಟು. 3. ಕಾವ್ಯದ ಸಾರ, ತಿರುಳು. ತತ್ತ್ವ, ಗೂಢಾರ್ಥ. "नत्वा गङ्गाधरं मर्मप्रकाशं तनुते गुरुम्। रसगङ्गाधरमणेरतिगूढार्थसंविदे" ರಸಗಂ। 4. (ಇನ್ನೊಬ್ಬನ) ಅಶಕ್ತಿ, ದೌರ್ಬಲ್ಯ. 5. (ಅವಯವಗಳ) ಕೀಲು, ಸಂದು, ಗಂಟು. 6. ಸತ್ಯ, ನಿಜ. 7. ಸ್ವರೂಪ, ತತ್ತ್ವ, ಯಾಥಾರ್ಥ್ಯ. "मृगया न विगीयते नृपैरपि धर्मागममर्मपारगैः" ನೈಷಂ २-९।

**मर्मभिद् ಮರ್ಮಭಿದ್** (ವಿಂ) 1. ಹೃದಯವನ್ನು ಭೇದಿಸುವ, ಎದೆಯನ್ನು ಸೀಳುವ. मर्म भिनत्ति—भिदिर् (विदारणे) "क्विप्" (३-२-६१)। "सुकुमारमेकमणु मर्मभिदामतिदूरगं युतममोघतया" ಕಿರಾಂ ६-४०। 2. ರಹಸ್ಯವನ್ನು ಒಡೆಯುವ.

**मर्मभेद ಮರ್ಮಭೇದ** (ಪುಂ) 1. ಎದೆಯನ್ನು ಸೀಳುವುದು. 2. ರಹಸ್ಯವನ್ನು ಒಡೆಯುವುದು. 3. ಇತರರ ಹೃದಯದ ಅಭಿಪ್ರಾಯವನ್ನು ಹೊರಗೆಡಹುವುದು. मर्मणः भेदः।

**मर्मभेदक ಮರ್ಮಭೇದಕ** (ವಿಂ) 1. ಹೃದಯವನ್ನು ಒಡೆಯುವ, ಎದೆಯನ್ನು ಸೀಳುವ. मर्म भिनत्ति—भिदिर् (विदारणे) "ण्वुल्" (३-१-१३३)। 2. ರಹಸ್ಯವನ್ನು ಒಡೆಯುವ.

**मर्मभेदन ಮರ್ಮಭೇದನ** (ನಂ) 1. ಎದೆಯನ್ನು ಸೀಳುವುದು. 2. ರಹಸ್ಯವನ್ನು ಒಡೆಯುವುದು. मर्मणः भेदनम्। (ವಿಂ) 3. ಹೃದಯವನ್ನು ಭೇದಿಸುವ, ಎದೆಯನ್ನು ಸೀಳುವ. 4. ರಹಸ್ಯವನ್ನು ಒಡೆಯುವ, ಗುಟ್ಟನ್ನು ಹೊರಗೆಡಹುವ. मर्म भिनत्ति—भिदिर् (विदारणे) "ल्युः" (३-१-१३४)।

**मर्मभेदिन् ಮರ್ಮಭೇದಿನ್** (ವಿಂ) "मर्मभेदन" ಪದದ 3 ಮತ್ತು 4ನೆಯ ಅರ್ಥ.

**मर्मर ಮರ್ಮರ** (ಪುಂ) 1. ಮರ್ಮರ ಶಬ್ದ, ತರಗೆಲೆಗಳ ಶಬ್ದ, ಗರಿಮುರಿಯಾದ ಬಟ್ಟೆಯ ಶಬ್ದ. "मदोद्धताः प्रत्यनिलं विचेरुर्वनस्थलीर्मर्मरपत्रमोक्षाः" ಕುಮಾಂ ३-३१। 2. ಅಸ್ಪಷ್ಟ ಶಬ್ದ. 3. ಮೆಲುನುಡಿ, ಗೊಣಗಾಟ. (ಸ್ತ್ರೀಂ) **-री -ರೀ.** 4. ದೇವದಾರು ವೃಕ್ಷ. "मर्मरो वस्त्रपर्णादिस्वने स्त्री पीतदारुणि" ಮೇದಿಂ।

**मर्मरीक ಮರ್ಮರೀಕ** (ಪುಂ) 1. ದರಿದ್ರ, ಬಡವ. मृङ् (प्राणत्यागे) "ईकन्" रुक् च (ಉಂ ४-६०)। ನಿಪಾಂ। 2. ನೀಚ, ಅಧಮ.

**मर्मविद् ಮರ್ಮವಿದ್** (ವಿಂ) "मर्मज्ञ" ಪದದ ಅರ್ಥ. विद (ज्ञाने) "क्विप्" (३-२-६१)। **-वेदिन् -ವೇದಿನ್.** विद "णिनिः" (३-१-१३४)।

**मर्मस्थल ಮರ್ಮಸ್ಥಲ, -स्थान -ಸ್ಥಾನ** (ನಂ) ಹೃದಯ ಮೊದಲಾದ ಜೀವಾಧಾರಸ್ಥಾನ, ಅವಯವಗಳ ಸಂಧಿಸ್ಥಾನ, ಕೀಲು, ಸಂದು. मर्मणः स्थलं स्थानं वा।

**मर्मस्पृश् ಮರ್ಮಸ್ಪೃಶ್** (ವಿಂ) ಹೃದಯವನ್ನು ಮುಟ್ಟುವ, ಮರ್ಮವನ್ನು ಭೇದಿಸುವ, ಮನಸ್ಸಿಗೆ ನೋವನ್ನು ಉಂಟುಮಾಡುವ. मर्म स्पृशति—स्पृश (संस्पर्शने) "क्विन्" (३-२-५८)।

**मर्माविध् ಮರ್ಮಾವಿಧ್** (ವಿಂ) ಹೃದಯ ಮೊದಲಾದ ಜೀವಸ್ಥಳಗಳನ್ನು ಭೇದಿಸುವ, ಮರ್ಮಸ್ಥಾನವನ್ನು ಕೊರೆಯುವ. मर्माणि विध्यति—व्यध (ताडने) "क्विप्" (३-२-७६)। पूर्वपदस्य दीर्घः (६-३-११६)। "परस्य मर्माविधमुज्झतां निजं द्विजिह्वतादोषमजिह्मगामिभिः" ಮಾಘಂ १-६३। मर्माविद् मर्माविधौ मर्माविधः।

**मर्या ಮರ್ಯಾ** (ಅವ್ಯಂ) ಎಲ್ಲೆ, ಗಡಿ. [ಈ ಅರ್ಥದಲ್ಲಿ ಸ್ತ್ರೀಲಿಂಗವೂ ಉಂಟೆಂದು ಕೆಲವರ.]

**मर्यादा ಮರ್ಯಾದಾ** (ಸ್ತ್ರೀಂ) 1. ಮರ್ಯಾದೆ, ನ್ಯಾಯವಾದ ಮಾರ್ಗದಲ್ಲಿರುವುದು. ಯೋಗ್ಯರೀತಿಯಲ್ಲಿ ಇರುವುದು. मर्या सीमा तत्र दीयते—डु दाञ् (दाने) "अङ्" (३-३-१०६)। "आः तातापवादिन्, भिन्नमर्याद अपि हि नाम प्रगल्भसे" ಉಂ ರಾಂ ५। 2. ಸೀಮೆ, ಎಲ್ಲೆ, ಗಡಿ. ಇದು ದೇಶರೂಪಮರ್ಯಾದೆ. 3. ಅವಧಿ, ಗಡು, ವಾಯಿದೆ. ಇದು ಕಾಲರೂಪಮರ್ಯಾದೆ. 4. ಕಡಲ ದಡ, ಸಮುದ್ರದ ತೀರ. "स्तम्भी स्तम्भिर्महोदधिः। कूलेऽस्य मर्यादा" ವೈಜಂ।

**मर्श ಮರ್ಶ** (ಪುಂ) ಆಲೋಚನೆ, ಸಾವಧಾನವಾಗಿ ವಿಚಾರಮಾಡುವುದು. मृश (आमर्शने) भावे "घञ्" (३-३-१८)।

**मर्शन ಮರ್ಶನ** (ನಂ) 1. ಆಲೋಚಿಸುವುದು, ವಿಮರ್ಶಿಸುವುದು, ದೀರ್ಘಕಾಲ ವಿಚಾರಮಾಡುವುದು. मृश (आमर्शने) भावे "ल्युट्" (३-३-११५)। 2. ಉಜ್ಜುವುದು, ತಿಕ್ಕುವುದು. 3. ವಿವರಿಸುವುದು, ವಿವರವಾಗಿ ತಿಳಿಸುವುದು.

**मर्ष ಮರ್ಷ** (पुं०) 1. ಸಹನೆ, ತಾಳ್ಮೆ. मृष (तितिक्षायाम्) "घञ्" (३-३-१८)। 2. ಕ್ಷಮೆ.

**मर्षक ಮರ್ಷಕ** (वि०) 1. ಸಹಿಸಿಕೊಳ್ಳುವ. 2. ಕ್ಷಮಿಸುವ. मृष (तितिक्षायाम्) "ण्वुल्" (३-१-१३३)।

**मर्षण ಮರ್ಷಣ** (न०) 1. ಕ್ಷಾಂತಿ, ಸಹನೆ, ತಾಳ್ಮೆ. मृष (तितिक्षायाम्) "ल्युट्" (३-३-११५)। 2. ಧರ್ಷಣ, ವ್ಯಭಿಚಾರ. "न चाप्यधर्मे न सुहृद्विभेदने परस्वहारे परदारमर्षणे" भा० वन० ३१४-२९। (वि०) 3. ಕ್ಷಮಿಸುವ. 4. ಸಹಿಸುವ. मृष+णिच् "ल्युः" (३-१-१३४)। "इदं पवित्रं परमीशचेष्टितं यशस्यमायुष्यमघौघमर्षणम्" भाग० ४-७-६१।

**मर्षणीय ಮರ್ಷಣೀಯ** (वि०) 1. ಸಹಿಸಲ್ಪಡುವ. 2. ಕ್ಷಮಿಸಲ್ಪಡುವ. 3. ಸಹಿಸಲು ಅರ್ಹವಾದ. 4. ಕ್ಷಮಿಸಲು ಅರ್ಹವಾದ. 5. ಕ್ಷಮಿಸಬೇಕಾದ. मृषु (सहने) "अनीयर्" (३-१-९६)। "तव्यः" (३-१-९६)। **मर्षितव्यः ಮರ್ಷಿತವ್ಯಃ** मृषु+णिच् "अनीयर्" **मर्षणीयः ಮರ್ಷಣೀಯಃ** मृषु+णिच् "तव्यः" (३-१-९६)। **मर्षयितव्यः ಮರ್ಷಯಿತವ್ಯಃ** "मनुजस्य तदर्चने विगायन् मतिहीनः पशुरेष मर्षणीयः" याद० १५-६२।

**मर्षयत् ಮರ್ಷಯತ್** (वि०) 1. ಕ್ಷಮಿಸುತ್ತಿರುವ. 2. ಸಹಿಸುತ್ತಿರುವ. मृष (तितिक्षायाम्)+णिच् "शतृ" (३-२-१२४)। स्त्रियां "ङीप्" (४-१-६)। -यन्ती -ಯನ್ತೀ.

**मर्षयितृ ಮರ್ಷಯಿತೃ** (वि०) 1. ಕ್ಷಮಿಸುವವನು. 2. ಸಹಿಸುವವನು. मृष (तितिक्षायाम्)+णिच् "तृच्" (३-१-१३३)। स्त्रियां "ङीप्" (४-१-५)। -यित्री -ಯಿತ್ರೀ.

**मर्षित ಮರ್ಷಿತ** (न०) 1. ಸಹಿಸುವುದು, ತಾಳುವುದು. 2. ಕ್ಷಮಿಸುವುದು. मृषु (सहने) भावे "क्तः" (३-३-११४)। (वि०) 3. ಸಹಿಸುವವನು, ತಾಳ್ಮೆಯಿಂದಿರುವವನು. मृषु कर्त० "क्तः" (३-४-७२)। 4. ಕ್ಷಮಿಸುವವನು, ಕ್ಷಮೆಯಿಂದ ಕೂಡಿರುವವನು. 5. ಸಹಿಸಲ್ಪಟ್ಟ, ತಾಳಲ್ಪಟ್ಟ. 6. ಕ್ಷಮಿಸಲ್ಪಟ್ಟ. मृषु कर्म० "क्तः" (३-२-१०२)।

**मर्षिन् ಮರ್ಷಿನ್** (वि०) ತಾಳ್ಮೆಯುಳ್ಳವನು, ಸ್ಥೈರಣೆಯುಳ್ಳವನು. मर्षोऽस्यास्ति "इनिः" (५-२-११५)।

**मल ಮಲ** (पुं०न०) 1. ದೇಹದೊಳಗಿನ ಮತ್ತು ಹೊರಗಿನ ಮಲ, ಶರೀರದೊಳಗಿನ ಮತ್ತು ಮೇಲಿನ ಕೊಳೆ. मल (धारणे) "अच्" (३-१-१३४)। ದೇಹದೊಳಗಿನ ಮತ್ತು ಮೇಲಿನ ಕೊಳೆ 12 ವಿಧ. **12 ವಿಧ ಮಲಗಳು:** (1) ಕೊಬ್ಬು, (2) ಶುಕ್ರಧಾತು (ವೀರ್ಯ), (3) ರಕ್ತ, (4) ಮಜ್ಜೆ, (5) ಮೂತ್ರ, (6) ವಿಷ್ಠೆ (ಪುರೀಷ), (7) ಕಿವಿಯ ಕೊಳೆ (ಗುಗ್ಗೆ), (8) ಸಿಂಬಳ, (9) ಶ್ಲೇಷ್ಮ (ಕಫ), (10) ಕಣ್ಣೀರು, (11) ನೇತ್ರಮಲ (ಕಣ್ಣಿನ ಪಿಸುರು) ಮತ್ತು (12) ಸ್ವೇದ (ಬೆವರು). मनु० ५-१३५। 2. ಕೊಳೆ, ಕಶ್ಮಲ, ಧೂಳು. "छाया न मूर्च्छति मलोपहतप्रसादे शुद्धे तु दर्पणतले सुलभावकाशा" शाकु० ७-३२। 3. ಪುರೀಷ, ವಿಷ್ಠೆ, ಹಿಕ್ಕೆ, ಸಗಣಿ. 4. ಪಾಪ, ಪಾತಕ. "पश्चिमां तु समासीनो मलं हन्ति दिवाकृतम्" मनु० २-१०२। 5. ಲೋಹದ ಕೊಳೆ, ಕಿಲುಬು. 6. ಕರ್ಪೂರ. 7. ವಾತ ಪಿತ್ತ ಮತ್ತು ಕಫ. 8. ಕಂಚು. "घण्टास्वनं भूरिलोहं रवणं लोहजं मलम्" वैज०। 9. ಚೇಳಿನ ಬಾಲದ ಕೊಂಡಿ. "वृश्चिके त्वाल्यलिद्रूणा मलं तत्पुच्छकण्टकः" वैज०। (वि०) 10. ಕೃಪಣ, ಜಿಪುಣ. "मलोऽस्त्री पापविट्किट्टे कृपणे त्वभिधेयवत्" मेदि०। 11. ದುಷ್ಟವಾದ, ದೋಷದಿಂದ ಕೂಡಿದ.

**मलघ्न ಮಲಘ್ನ** (पुं०) 1. ಬೂರುಗದ ಮರ. (वि०) 2. ಮಲವನ್ನು ನಾಶಪಡಿಸುವ, ಕೊಳೆಯನ್ನು ಹೋಗಲಾಡಿಸುವ. 3. ಪಾಪವನ್ನು ಹೋಗಲಾಡಿಸುವ. मलं हन्ति—हन (हिंसागत्योः) "टक्" (३-२-५३)। (स्त्री०) -घ्नी -ಘ್ನೀ. ನಾಗದಮನಿ ಗಿಡ.

**मलज ಮಲಜ** (न०) ಕೀವು. मलाज्जायते—जनी (प्रादुर्भावे) "डः" (३-२-९७)।

**मलदूषित ಮಲದೂಷಿತ** (वि०) ಮಲಿನವಾದ, ಮಾಸಿದ. मलेन दूषितम्।

**मलन ಮಲನ** (पुं०) 1. ಪಟವಾಸ, ವಸ್ತ್ರಗೃಹ, ಡೇರೆ. मलते धारयति वृष्टितापौ—मल (धारणे) "ल्युः" (३-१-१३४)। (न०) 2. ಅರೆಯುವುದು, ಮರ್ದಿಸುವುದು, ಪುಡಿಮಾಡುವುದು. मल भावे "ल्युट्" (३-३-११५)। "मलनः पटवासे ना मर्दने तु नपुंसकम्" मेदि०।

**मलपू ಮಲಪೂ** (पुं०) ಕಲ್ಲತ್ತಿಗಿಡ, ಬ್ರಹ್ಮಮೇಡಿ. मलं मलस्थानं पुनाति—पूञ् (पवने) "क्विप्" (३-२-७६)।

**मलभुज् ಮಲಭುಜ್** (पुं०) ವಾಯಸ, ಕಾಗೆ.

**मलमास ಮಲಮಾಸ** (पुं०) ಅಧಿಕಮಾಸ, ಸಂಕ್ರಮಣವಿಲ್ಲದ ಚಾಂದ್ರಮಾಸ, ಶೂನ್ಯಮಾಸ. मलो दुष्टो मासः।

ಎರಡು ಅಮಾವಾಸ್ಯೆಗಳ ಮಧ್ಯೆ ಸೂರ್ಯಸಂಕ್ರಮಣವು ಇಲ್ಲದ ಮಾಸವು ಮಲಮಾಸ. "अमावास्याद्वयं यत्र रविसंक्रान्तिवर्जितम्। मलमासः स विज्ञेयः"। ಮಲ ಮಾಸದಲ್ಲಿ ಶುಭಕಾರ್ಯವು ನಿಷಿದ್ಧ. "अधिमासे विवाहं यात्रां चूडां तथोपनयनादि। कुर्यान्न सावकाशं माङ्गल्यं न तु विशेषेज्याम्"।

**मलय ಮಲಯ** (पुं०) 1. ಮಲಯಪರ್ವತ, ಭಾರತ ದೇಶದ ದಕ್ಷಿಣ ಘಾಟನಲ್ಲಿ ದಕ್ಷಿಣದಿಕ್ಕಿನ ಒಂದು ಪರ್ವತ. मल (धारणे) "कयन्" (उ० ४-९९)। "दिनमुखानि रविर्हिमनिग्रहैर्विमलयन् मलयं नगमत्यजत्" रघु० ९-२५। ಇದು ಜಂಬೂದ್ವೀಪದ ಸಪ್ತಕುಲಪರ್ವತಗಳಲ್ಲೊಂದು. 2. ಮಲಯ ಪರ್ವತದ ಸಮೀಪದ ಒಂದು ದೇಶ, ಮಲೆಯಾಳ ಸೀಮೆ. 3. ಬೆಟ್ಟದ ಒಂದು ಭಾಗ. 4. ಆರಾಮ, ಉದ್ಯಾನವನ. 5. ನಂದನವನ. (स्त्री०) **-या -ಯಾ.** 6. ಕೆಂಪುತಿಗಡೆ. "मलयः पर्वतान्तरे। शैलांशे देश आरामे त्रिवृतायां तु योषिति" मेदि०। "उद्याने मलयं ना तु गिर्यंशगिरिभेदयोः" वैज०। ಎಂದು ವೈಜಯನ್ತಿಯಲ್ಲಿ ಉದ್ಯಾನವನದ ಅರ್ಥದಲ್ಲಿ ನಪುಂಸಕಲಿಂಗವಾಗಿ ಉಕ್ತವಾಗಿದೆ.

**मलयज ಮಲಯಜ** (पुं०) 1. ಚಂದನ ವೃಕ್ಷ, ಗಂಧದ ಮರ. मलये जातः — जनी (प्रादुर्भावे) "डः" (३-१-९७)। 2. ಮಲಯಪರ್ವತದ ಗಾಳಿ, ದಕ್ಷಿಣ ದಿಕ್ಕಿನಿಂದ ಬೀಸುವ ಗಾಳಿ. (वि०) 3. ಮಲಯಾಳ ದೇಶದಲ್ಲಿ ಹುಟ್ಟಿದ.

**मलयपर्वत ಮಲಯಪರ್ವತ, -अचल -ಅಚಲ, -अद्रि -ಅದ್ರಿ** (पुं०) ಮಲಯಪರ್ವತ, ಭಾರತದೇಶದಲ್ಲಿ ದಕ್ಷಿಣದಿಕ್ಕಿನಲ್ಲಿರುವ ಒಂದು ಬೆಟ್ಟ.

**मलयानिल ಮಲಯಾನಿಲ, -मारुत -ಮಾರುತ, -वात -ವಾತ, -समीर -ಸಮೀರ** (पुं०) ಮಲಯ ಪರ್ವತದ ಗಾಳಿ, ದಕ್ಷಿಣ ದಿಕ್ಕಿನಿಂದ ಬೀಸುವ ವಸಂತ ಕಾಲದ ಗಾಳಿ. "ललितलवङ्गलतापरिशीलनकोमलमलयसमीरे" गीतगो० १। ಮಲಯಮಾರುತವು ವಿರಹಿಗಳಿಗೆ ಕಾಮವೇದನೆಯನ್ನು ಹೆಚ್ಚಿಸುವುದೆಂದು ಕವಿಸಮಯಸಿದ್ಧ. "स एव सुरभिः कालः स एव मलयानिलः। सैवेयमबला किन्तु मनोऽन्यदिव दृश्यते" सा० द०।

**मलयू ಮಲಯೂ** (स्त्री०) ಕಲ್ಲತ್ತಿಗಿಡ, ಬ್ರಹ್ಮಮೇಡಿ. मलयूः पृषो०।

**मलाका ಮಲಾಕಾ** (स्त्री०) 1. ಕಾಮುಕಿ, ಕಾಮಾತುರವುಳ್ಳ ಹೆಂಗಸು. 2. ದೂತಿ. 3. ಹೆಣ್ಣು ಆನೆ. मल (धारणे) "आकः" (उ० ४-१४)।

**मलिन् ಮಲಿನ್** (वि०) 1. ದೋಷದಿಂದ ಕೂಡಿದ. 2. ಕೊಳಕಾಗಿರುವ. 3. ಪಾಪವುಳ್ಳ. मलमस्यास्ति "इनिः" (५-२-११५)।

**मलिन ಮಲಿನ** (न०) 1 ಜಲ, ನೀರು. मल "इनच्" (५-२-११४)। "सलिलं मलिनं तोयं मरुलं मेघजं कतम्" वैज०। (वि०) 2. ಮಾಸಿದ, ಕೊಳೆಯಾದ, ಧೂಳಿನಿಂದ ಕೂಡಿದ. "मलिनं रणरेणुभिर्मुहुर्द्विषतां क्षालितमङ्गनाश्रुभिः" माघ० १६-६२। 3. ದೂಷಿತವಾದ, ಕೆಡಿಸಲ್ಪಟ್ಟ. 4. ಪ್ರಕಾಶವಿಲ್ಲದ, ಕಾಂತಿಹೀನವಾದ. "मलिनमपि हिमांशोर्लक्ष्म लक्ष्मीं तनोति" शाकु० १-२०। 5. ನಿಕೃಷ್ಟ, ಕೆಳದರ್ಜೆಯ. "द्युतिमग्रहीत् ग्रहगणो लघवः प्रकटीभवन्ति मलिनाश्रयतः" माघ० ९-२३। (स्त्री०) **-ना -ನಾ., -नी -ನೀ.** 6. ರಜಸ್ವಲೆ, ಋತುಮತಿಯಾದ ಹೆಂಗಸು. "रजस्वला च मलिना स्त्रीधर्मिण्यृतुमत्यपि" वैज०। "मलिनी रजस्वलायाम् ಎಂದು ಈಕಾರಾಂತವಾಗಿ हैम०।

**मलिनता ಮಲಿನತಾ** (स्त्री०) 1. ಕೊಳೆಯಾಗಿರುವಿಕೆ. मलिनस्य भावः "तल्" (५-१-११९)। 2. ನೀಚತನ, ನಿಕೃಷ್ಟತೆ. "त्वः"। **मलिनत्वम् ಮಲಿನತ್ವಮ್.**

**मलिनमुख ಮಲಿನಮುಖ** (पुं०) 1. ಅಗ್ನಿ. 2. ಗೋಲಾಂಗೂಲ, ಹಸುವಿನ ಬಾಲದಂತೆ ಬಾಲವುಳ್ಳ ಒಂದು ಜಾತಿಯ ವಾನರ. (वि०) 3. ಕ್ರೂರ. "मलिनमुखोऽनलो गोलाङ्गूले पुंसि त्रिषु क्रूरे" मेदि०। 4. ಕಪ್ಪುಮುಖವುಳ್ಳ, ಮಾಸಿದ ಮುಖವುಳ್ಳ.

**मलिनिमन् ಮಲಿನಿಮನ್** (पुं०) 1. ಮಾಲಿನ್ಯ, ಕೊಳೆ. मलिनस्य भावः "इमनिच्" (५-१-१२२)। 2. ಕಪ್ಪು, ಮಾಸಲು ಕಪ್ಪು. "गुणवदाश्रयलब्धगुणोदये मलिनिमालिनि माधवयोषिताम्" माघ० ६-४।

**मलिनीकरण ಮಲಿನೀಕರಣ** (न०) ಕೊಳೆಯಾಗಿ ಮಾಡುವುದು, ಹೊಲಸಾಗಿ ಮಾಡುವುದು, ಕಪ್ಪಾಗಿ ಮಾಡುವುದು.

**मलिनीकृत ಮಲಿನೀಕೃತ** (वि०) 1. ಕೊಳಯಾಗಿ ಮಾಡಲ್ಪಟ್ಟ. 2. ಕಪ್ಪಾಗಿ ಮಾಡಲ್ಪಟ್ಟ, ಕಳೆಗೆಡಿಸಲ್ಪಟ್ಟ.

**मलिम्लुच ಮಲಿಮ್ಲುಚ** (पुं०) 1. ಚೋರ, ಕಳ್ಳ. मली सन् म्लोचति गच्छति — म्लुचु (गतौ) "कः"

(वा० ३-२-५)। "न परेषु महौजसश्छलादपकुर्वन्ति मलिम्लुचा इव" माघ० १६-५२। 2. ಮಶಕ, ಸೊಳ್ಳೆ. "मलिम्लुचास्तु मशका बम्भरीली तु मक्षिका" वैज०। 3. ಅಗ್ನಿ, ಬೆಂಕಿ. 4. ಅಧಿಕಮಾಸ, ಮಲಮಾಸ. "मलिम्लुचो मासभेदे चौरज्वलनयो: पुमान्" मेदि०। 5. ವಾಯು, ಗಾಳಿ. "मलिम्लुचस्तु तस्करे। वाते" हेम०। 6. ಪಂಚ ಮಹಾಯಜ್ಞಗಳನ್ನು ಮಾಡದೆ ಬಿಟ್ಟವನು. "यज्ञत्यागी वृथाजातोऽपञ्चयज्ञो मलिम्लुच:" वैज०।

**मलिष्ठा ಮಲಿಷ್ಠಾ** (स्त्री०) ರಜಸ್ವಲೆ, ಋತುಮತಿಯಾದ ಹೆಂಗಸು. अतिशयेन मलिनी "इष्ठन्" (५-३-५५)। "मलिष्ठा सरजा:" त्रिकाण्ड०।

**मलीमस ಮಲೀಮಸ** (वि०) 1. ಮಲಿನವಾಗಿರುವ, ಕಪ್ಪಗಿರುವ. मलोऽस्यास्ति "ईमसच्" (५-२-११४)। "ऋते रवे: क्षालयितुं क्षमेत क: क्षपातमस्काण्डमलीमसं नभ:" माघ० १-३८। 2. ಕಳಂಕದಿಂದ ಕೂಡಿದ, ದೋಷದಿಂದ ಕೂಡಿದ. "मा ते मलीमसविकारघना मतिर्भूत्" मालती० १-३५। 3. ನೀಚವಾದ, ಕ್ಷುದ್ರವಾದ, ನಿಂದ್ಯವಾದ. "पथ: श्रुतेर्दर्शयितार ईश्वरा मलीमसामाददते न पद्धतिम्" रघु० ३-४६। (न०) 4. ಕಬ್ಬಿಣ. 5. ಮೈಲುತುತ್ತ. 6. ಗಂಧಕಾಮ್ಲಲವಣ. "मलीमसं पुन:पुष्पकासीसे मलिनायसो:" हेम०। ಮೇದಿನೀಕೋಶದಲ್ಲಿ ಪುಂಲಿಂಗವೆಂದು ಉಕ್ತವಾಗಿದೆ. "मलीमसस्तु मलिने पुष्पकासीसलोहयो:" मेदि०।

**मल्ल ಮಲ್ಲ** (पुं०) 1. ಜಟ್ಟಿ, ಬಾಹುಬಲವನ್ನು ಪ್ರದರ್ಶಿಸಿ ಯುದ್ಧಮಾಡಬಲ್ಲವನು. मल्ल (धारणे) "अच्" (३-१-१३४)। "सुराधिपाधिष्ठितहस्तिमल्ललीलां दधौ राजतगण्डशैल:" माघ० ४-१३। 2. ಕುಡಿಯುವ ಪಾತ್ರೆ. 3. ಕಪೋಲ, ಕೆನ್ನೆ. 4. ಒಂದು ಜಾತಿಯ ಮೀನು. "मल्ल: पात्रे कपोले च मत्स्यभेदे बलीयसि" मेदि०। 5. ಬಲಶಾಲಿಯಾದ ಮನುಷ್ಯ. 6. ಜಾತಿಭ್ರಷ್ಟನಾದ ಕ್ಷತ್ರಿಯನಿಂದ ಕ್ಷತ್ರಿಯಸ್ತ್ರೀಯಲ್ಲಿ ಹುಟ್ಟಿದವನು. "लिच्छिवं क्षत्रिया व्रात्यात् जल्लं सा विप्रपूर्विका। व्रात्यपूर्वा तु सा मल्लं क्षत्रपूर्वा तु सा नटम्" वैज०। 7. ಒಂದು ದೇಶ. (न०) 8. ಭದ್ರ, ಮಂಗಳ, ಶುಭ. "भद्रं मल्लं शिवं तथा" त्रिकाण्ड०।

**मल्लक ಮಲ್ಲಕ** (पुंस्त्री०) 1. ದೀಪಸ್ತಂಭ. मल्यते ध्रियतेऽत्र—मल्ल (धारणे) "ण्वुल्" (३-१-१३३)। 2. ದೀಪ. 3. ದಂತ, ಹಲ್ಲು. 4. ತೆಂಗಿನ ಚಿಪ್ಪಿನಿಂದ ಮಾಡಿದ ಬಟ್ಟಲು. (स्त्री०) **-ल्लिका -ಲ್ಲಿಕಾ.**

**मल्लज ಮಲ್ಲಜ** (न०) ಮೆಣಸು. मल्ले मल्लदेशे जायते —जनी (प्रादुर्भावे) "ड:" (३-१-९७)।

**मल्लतूर्य ಮಲ್ಲತೂರ್ಯ** (न०) ಜಟ್ಟಿಗಳು ಬಾರಿಸುವ ಒಂದು ವಾದ್ಯ, ತುತ್ತೂರಿ ನಗಾರಿ ಮೊದಲಾದುವು.

**मल्लनाग ಮಲ್ಲನಾಗ** (पुं०) 1. ವಾತ್ಸ್ಯಾಯನ ಋಷಿ. 2. ಇಂದ್ರನ ಆನೆ, ಐರಾವತ. मल्लो बलिष्ठो नाग:। 3. ವಾರ್ತಾಪತ್ರಗಳನ್ನು ಒಯ್ಯುವವನು, ಲೇಖಹಾರ. 4. ಒಂದು ಕಾಮಶಾಸ್ತ್ರ ಗ್ರಂಥ. "लेखहारे मल्लनागो वात्स्यायनसुरेभयो:" हेम०।

**मल्लभू ಮಲ್ಲಭೂ, -भूमि -ಭೂಮಿ** (स्त्री०) ಜಟ್ಟಿಗಳ ಕಾಳಗದ ಭೂಮಿ, ಜಟ್ಟಿಗಳ ಯುದ್ಧಕ್ಷೇತ್ರ. मल्लानां भू: भूमिर्वा।

**मल्लयुद्ध ಮಲ್ಲಯುದ್ಧ** (न०) ಕುಸ್ತಿ, ಜಟ್ಟಿಗಳ ಕಾಳಗ. मल्लानां युद्धम्।

**मल्लशाला ಮಲ್ಲಶಾಲಾ** (स्त्री०) ಗರಡಿಮನೆ.

**मल्लिक ಮಲ್ಲಿಕ** (पुं०) 1. ಹಂಸದ ಒಂದು ಭೇದ, ಕಂದು ಬಣ್ಣದ ಕೊಕ್ಕು ಮತ್ತು ಕಾಲುಗಳುಳ್ಳ ಹಂಸ. मल्यते धार्यतेऽसौ — मल्ल (धारणे) "इन्" (उ० ४-११७)। स्वार्थे "कन्"। (स्त्री०) **-का -ಕಾ.** 2. ಮಲ್ಲಿಗೆ ಗಿಡ. "वनेषु सायन्तनमल्लिकानां विजृम्भणोद्गन्धिषु कुड्मलेषु" रघु० १६-४७। 3. ಮಲ್ಲಿಗೆ ಹೂವು. "स्नानार्द्रमुक्तेष्वनुधूपवासं विन्यस्तसायन्तनमल्लिकेषु" रघु० १६-५०। 4. ಮತ್ಸ್ಯ, ಮೀನು. 5. ಮೃತ್ಪಾತ್ರೆ, ಮಣ್ಣಿನ ಪಾತ್ರೆ. "मल्लिको हंसभिद्यपि। मल्लिका तृणशून्येऽपि मीनमृत्पात्रभेदयो:" मेदि०। 6. ಪಾನಪಾತ್ರೆ, ಕುಡಿಯುವ ಪಾತ್ರೆ.

**मल्लिकाक्ष ಮಲ್ಲಿಕಾಕ್ಷ** (पुं०) ಕಂದುಬಣ್ಣದ ಕೊಕ್ಕು ಮತ್ತು ಕಾಲುಗಳುಳ್ಳ ಹಂಸ. मल्लिकापुष्पमिव अक्षिणी यस्य "अच्" (५-४-७६)। "एतस्मिन्मदकलमल्लिकाक्षपक्षव्याधूतस्फुरदुरुदण्डपुण्डरीका:" उ० रा० १-३१।

**मल्लिकाख्य ಮಲ್ಲಿಕಾಖ್ಯ** (पुं०) ಕಂದುಬಣ್ಣದ ಕೊಕ್ಕು ಮತ್ತು ಕಾಲುಗಳುಳ್ಳ ಹಂಸ. मल्लिक इत्याख्या अस्य।

**मल्ली ಮಲ್ಲೀ** (स्त्री०) 1. ಮಲ್ಲಿಗೆ ಗಿಡ. मल्ल (धारणे) "इन्" (उ० ४-११७)। "मल्लीं चूतवनादिव स्नुहिवने म्लेच्छेन संस्थापिताम्" च० रा०। 2. ಬೇಯಿಸುವ ಪಾತ್ರೆ.

**मल्लीकर ಮಲ್ಲೀಕರ** (पुं०) ಚೋರ, ಕಳ್ಳ.

**मवित** ಮವಿತ (वि०) ಕಟ್ಟಲ್ಪಟ್ಟ, ಬಂಧಿಸಲ್ಪಟ್ಟ. मव (बन्धने) "क्त:" (३-२-१०२)।

**मश** ಮಶ (पुं०) 1. ಸೊಳ್ಳೆ. 2. ಕೋಪ, ಸಿಟ್ಟು.

**मशक** ಮಶಕ (पुं०) 1. ಸೊಳ್ಳೆ. मश (शब्दे रोषकृते) "अच्" (३-१-१३४)। संज्ञायां "कन्" (५-३-७५)। "तुदन्त्यामत्वचं दंशा: मशका मत्कुणादय:। रुदन्तं विगतज्ञानं क्रमय: क्रमिकं यथा" भाग० ३-३१-२७। 2. ನೀರು ತುಂಬುವ ತೊಗಲಿನ ಚೀಲ. 3. ಒಂದು ಚರ್ಮರೋಗ. "मशक: क्षुद्ररुग्जन्तुभेदयो:" हेम०।

**मशकहरी** ಮಶಕಹರೀ (स्त्री०) ಸೊಳ್ಳೆ ಪರದೆ.

**मशकिन्** ಮಶಕಿನ್ (पुं०) ಉದುಂಬರ ವೃಕ್ಷ, ಅತ್ತಿಮರ. मशका: सन्त्यस्मिन् "इनि:" (५-२-११५)।

**मशी** ಮಶೀ (स्त्री०) ಶಾಯಿ, ಮಶಿ.

**मशुन** ಮಶುನ (पुं०) ಶ್ವಾನ, ನಾಯಿ.

**मषि** ಮಷಿ, -षी -ಷೀ (स्त्री०) ಶಾಯಿ, ಮಶಿ. मष (हिंसायाम्) "इन्" (उ० ४-११७)। वा "ङीष्" (ग० ४-१-४५)।

**मषीधान** ಮಷೀಧಾನ (न०) ಮಸಿಯ ಕುಡಿಕೆ, ದೌತಿ. मषी धीयतेऽत्र — डु धाञ् (धारणपोषणयो:) कर० "ल्युट्" (३-३-११७)। "ङीप्" (४-१-१५) -धानी -ಧಾನೀ ಎಂದು ಸ್ತ್ರೀಲಿಂಗದ ರೂಪವೂ ಇದೇ ಅರ್ಥದಲ್ಲಿ ಉಂಟು.

**मस** ಮಸ (पुं०) ಅಳತೆ, ಪರಿಮಾಣ.

**मसन** ಮಸನ (न०) 1. ಅಳತೆ, ತೂಕ. 2. ಬಾಹುಜಿಗೆ ಗಿಡ.

**मसार** ಮಸಾರ (पुं०) ಇಂದ್ರನೀಲಮಣಿ. मसं परिमाणं ऋच्छति — ऋ (गतौ) "अण्" (३-२-१)। "मसारताराक्षि ससारमात्मना तनोषि संसारमसंशयं यत:" नैष० ९-१०४।

**मसि** ಮಸಿ, **मसी** ಮಸೀ (स्त्री०) 1. ಮಸಿ, ಶಾಯಿ. मस्यति — मसी (परिणामे) "इन्" (उ० ४-११७)। वा "ङीष्" (ग० ४-१-४५)। "वर्णिका मसी मसिर्ना" ಎಂದು ತ್ರಿಕಾಂಡಶೇಷದಲ್ಲಿ ಇಕಾರಾಂತ ಶಬ್ದವು ಪುಂಲಿಂಗವೆಂದೂ ಈಕಾರಾಂತವು ಸ್ತ್ರೀಲಿಂಗವೆಂದೂ ಉಕ್ತವಾಗಿದೆ. 2. ದೀಪದ ಕಪ್ಪು, ಕಾಡಿಗೆ.

**मसि(सी)धान** ಮಸಿ(ಸೀ)ಧಾನ (न०) ಮಸಿಯ ಕುಡಿಕೆ, ದೌತಿ. मसि:(सी)धीयतेऽत्र — डु धाञ् (धारणपोषणयो:) "ल्युट्" (३-३-११७)।

**मसि(सी)धानी** ಮಸಿ(ಸೀ)ಧಾನೀ (स्त्री०) ಮಸಿಯ ಕುಡಿಕೆ, ದೌತಿ. मसे: धानी।

**मसि(सी)पण्य** ಮಸಿ(ಸೀ)ಪಣ್ಯ (पुं०) ಗುಮಾಸ್ತೆ, ಲೇಖಕ, ಬರವಣಿಗೆಯಿಂದ ಜೀವಿಸುವವನು. मसि: पण्यमस्य।

**मसि(सी)प्रसू** ಮಸಿ(ಸೀ)ಪ್ರಸೂ (स्त्री०) ಲೇಖನಿ, ಮಸಿಯನ್ನು ತುಂಬಿರುವ ಕೊಳವೆ, ಮಸಿಯನ್ನು ಹೊರಕ್ಕೆ ತರುವ ಕೊಳವೆಯ ಲೇಖನಿ (Fountain pen).

**मसि(सी)भाजन** ಮಸಿ(ಸೀ)ಭಾಜನ (न०) ಮಸಿಯ ಕುಡಿಕೆ, ದೌತಿ. मसेर्भाजनम्।

**मसु(सू)र** ಮಸು(ಸೂ)ರ (पुंस्त्री०) 1. ಕಾಡುಕಡಲೆ. मस्यति — मसी (परिणामे) "उरन्" (उ० १-४३)। "ऊरन्" (उ० ५-३)। "मसुरस्तु मसूरक:। मङ्गल्यं पृथुसूप्यश्च" वैज०। 2. ವೇಶ್ಯೆ, ಸೂಳೆ. (पुं०) 3. ತಲೆದಿಂಬು. स्त्रियां **मसुरा** ಮಸುರಾ, **मसूरा** ಮಸೂರಾ. "मसूरा मसुरा वाना वेश्या व्रीहिप्रभेदयो:। उपधाने पुन: पुमान्" मेदि०। "मसूरो मसुरोऽपि च। मसुरा च मसूरा च चत्वार: पण्ययोषिति। तथा व्रीहिविशेषे च" हेम०।

**मसूरक** ಮಸೂರಕ (पुं०) 1. ತಲೆದಿಂಬು. 2. ಕಾಡುಕಡಲೆ. "मसुरस्तु मसूरक:" वैज०।

**मसूरिका** ಮಸೂರಿಕಾ (स्त्री०) 1. ಸೊಳ್ಳೆಪರದೆ, ಸೊಳ್ಳೆತೆರೆ. "दंशांश्च मशकांश्चैव वर्षाकाले निवारयेत्। मसूरिकाभि: प्रावृत्य मञ्चशायिनमच्युतम्" पाद्मपु०। 2. ತಲೆಹಿಡುಕಿ, ಕುಂಟ್ಲಗಿತ್ತಿ. 3. ಕಾಡುಕಡಲೆ. 4. ಸಿಡುಬುರೋಗ. "मङ्गल्यं पृथुसूप्यश्च व्रीहिकंको मसूरिका" वैज०।

**मसूरी** ಮಸೂರೀ (स्त्री०) 1. ಕೆಂಪುತಿಗಡೆ ಮರ. 2. ಸಿಡುಬುರೋಗ. "मसूरी क्षुद्ररोगे स्यादुपधाने पुन: पुमान्" मेदि०।

**मसृण** ಮಸೃಣ (वि०) 1. ಸ್ನಿಗ್ಧವಾದ, ಜಿಡ್ಡಾಗಿರುವ. समृणोति — ऋणु (गतौ) "क:" (३-१-१३५)। पृषो०। 2. ನಯವಾದ, ನುಣುಪಾದ. "अयं बाहु: कण्ठे शिशिरमसृणो मौक्तिकसर:" उ० रा० १-३८। 3. ಮೃದುವಾದ, ಮೆತ್ತಗಿರುವ, ಕೋಮಲವಾದ, ಕಠಿನವಲ್ಲದ. "करुणामसृणै: कटाक्षपातै: कुरु मामम्ब कृतार्थसार्थवाहम्"। 4. ಅನುರಾಗದಿಂದ ಕೂಡಿದ, ಪ್ರೇಮಪೂರ್ಣವಾದ. "मसृणमुकुलितानां प्रान्तविस्तारभाजाम्"

मालती० १-३०। (स्त्री०) –णा –ಣಾ. 5. ಅಗಸಿಗಿಡ. "मसृणोऽककर्कशे स्निग्धे त्रिषूमायां तु योषिति" मेदि०।

**मस्कर** ಮಸ್ಕರ (पुं०) 1. ವಂಶ, ಬಿದಿರು. मस्कतेऽनेन— मस्क (गतौ) "अर:" बाहु०। 2. ಟೊಳ್ಳು ಬೊಂಬು, ಒಳಗೆ ಪೊಟರೆಯಾಗಿರುವ ಬಿದಿರು. 3. ಜ್ಞಾನ. 4. ಗಮನ, ಚಲನೆ.

**मस्करिन्** ಮಸ್ಕರಿನ್ (पुं०) ಯತಿ, ಸಂನ್ಯಾಸಿ, ಭಿಕ್ಷು. मस्करो वेणुरस्यास्ति — "इनि:" (५-२-११५)। मस्करो ज्ञानमस्यास्ति इति वा "इनि:" (६-१-१५४)। निपा०।

**मस्त** ಮಸ್ತ (न०) ಶಿರಸ್ಸು, ತಲೆ. मस्यते स्म — मसी (परिणामे) "क्त:" (३-२-१०२)।

**मस्तक** ಮಸ್ತಕ (पुंन०) 1. ಶಿರಸ್ಸು, ತಲೆ. मस्त स्वार्थे "क:" (५-४-५)। "अतिलोभाभिभूतस्य चक्रं भ्रमति मस्तके" पञ्चतं० ५-२२। 2. ಶಿಖರ, ತುದಿ. "न ससत्त्वेषु गर्तेषु न गच्छन्नापि च स्थित:। न नदीतीरमासाद्य न च पर्वतमस्तके" मनु० ४-४७।

**मस्तकज्वर** ಮಸ್ತಕಜ್ವರ (पुं०) ತಲೆಶೂಲೆ, ತಲೆನೋವು.

**मस्तकस्नेह** ಮಸ್ತಕಸ್ನೇಹ (पुं०) ಮಿದುಳು, ಮಸ್ತಿಷ್ಕ.

**मस्तिष्क** ಮಸ್ತಿಷ್ಕ (न०) ತಲೆಯಲ್ಲಿರುವ ಸ್ನೇಹ, ಮಿದುಳು. मसी (परिणामे) "क्तिन्" (३-३-९४)। मस्ति मस्कते — मस्क (गतौ) "अच्" (३-१-१३४)। पृषो०। "मस्तिष्कान्त्रवसाभिपूरितमहामांसाहुतीर्जुह्वताम्" प्रबोध० ३-१३।

**मस्तु** ಮಸ್ತು (न०) ಮೊಸರಿನ ಮೇಲಿನ ಕೆನೆ. मसी (परिणामे) "तुन्" (उ० १-६९)। "अथ मस्तु प्राशाटो दधिमण्डके" वैज०।

**मस्तुलुङ्ग** ಮಸ್ತುಲುಂಗ (पुंन०) 1. ಮಿದುಳು, ತಲೆಯಲ್ಲಿರುವ ಸ್ನೇಹ. (न०) 2. ಮೊಸರಿನ ಮೇಲಿನ ಕೆನೆ. "मस्तुलुङ्ग: शिर:स्नेहे न स्त्री क्ली दधिमण्डके" वैज०। स्वार्थे "कन्"। –लुङ्गक: –ಲುಂಗಕಃ.

**मह** ಮಹ (पुं०) 1. ಉತ್ಸವ, ಹಬ್ಬ, ಸಂತೋಷದ ಕಾರ್ಯ. महति — मह (पूजायाम्) "अच्" (३-१-१३४)। "न खलु दूरगतोऽप्यतिवर्तते महमसाविति बन्धुतयोदितै:" माघ० ६-१९। 2. ತೇಜಸ್ಸು, ಕಾಂತಿ, ಪ್ರಭೆ. 3. ಯಜ್ಞ. 4. ಮಹಿಷ, ಎಮ್ಮೆ. "मह उत्सवतेजसो:" मेदि०।

**महत्** ಮಹತ್ (पुं०) 1. ದರ್ಶನಕಾರರು ಅಂಗೀಕರಿಸಿರುವ ತತ್ತ್ವಗಳಲ್ಲೊಂದಾದ ಮಹತ್ತತ್ತ್ವ. ["तत्त्व" ಪದದಲ್ಲಿ ನೋಡಿ.] "अन्या तु प्रकृतेर्विभज्य पुरुषस्योदाहरन्ती भिदां तत्त्वानां गणनापरा महदहंकारादिसर्गक्रमै:" प्रबोध० ६-२१। (न०) 2. ರಾಜ್ಯ, ಆಧಿಪತ್ಯ. "महद्राज्यविशालयो:" वैज०। 3. ಬ್ರಹ್ಮ. "श्रुतेन श्रोत्रियो भवति तपसा विन्दते महत्" भा० वन० ३१४-५०। (वि०) "महत्" ಶಬ್ದದ ಪುಂಲಿಂಗರೂಪ. महान् महान्तौ महान्त:। ಸ್ತ್ರೀಲಿಂಗದ ರೂಪ: महती महत्यौ महत्य:। ನಪುಂಸಕಲಿಂಗದ ರೂಪ: महत् महती महान्ति। (4) ದೊಡ್ಡದಾದ (ಆಕಾರದಲ್ಲಿ). "महता मन्त्रयुक्तेन वज्रेण ज्वलितात्मना" याद० १६-३३। 4. (क) ದೊಡ್ಡದಾದ (ವಿಸ್ತಾರದಲ್ಲಿ). "महतो दैत्यनगरात् निरगान्नरकासुर:" याद० १६-७८। ಕರ್ಮಧಾರಯ ಮತ್ತು ಬಹುವ್ರೀಹಿಸಮಾಸಗಳಲ್ಲಿ "महत्" ಶಬ್ದಕ್ಕೆ आ ಕಾರವು ಅಂತಾದೇಶವಾಗಿ ಬರುವುದು. **ಕರ್ಮಧಾರಯ:** "महागजानां गुरुभिस्तु गर्जितै:" कुमा० १४-४२। **ಬಹುವ್ರೀಹಿ:** "महात्मानोऽनुगृह्णन्ति भजमानान् रिपूनपि" माघ० २-१०४। "महानुभावा हि नितान्तमर्थिन:" माघ० १-१७। 5. ಅಧಿಕವಾದ, ಹೆಚ್ಚಾದ, ಹೇರಳವಾದ. "महत: कुकुरान्धकद्रुमानतिमात्रं दववद्दहन्नपि" माघ० १६-७९। "महताप्यर्थसारेण यो विश्वसिति शत्रुषु। भार्यासु च विरक्तासु तदन्तं तस्य जीवितम्" पञ्चतं० २-४८। 6. ಉತ್ತಮವಾದ, ಶ್ರೇಷ್ಠವಾದ, ಉತ್ಕೃಷ್ಟವಾದ. "महते फलाय तदवेक्ष्य शिवं विकसन्निमित्तकुसुमं स पुर:" किरा० ६-२८। 7. ಪ್ರಸಿದ್ಧನಾದ, ಪ್ರಖ್ಯಾತನಾದ, ಕೀರ್ತಿಶಾಲಿಯಾದ. "सदनागतसूदनापवादो महतां सम्प्रति मा च भूदयं व:" याद० १५-८१। 8. ದೊಡ್ಡವನಾದ, (ಗುಣದಲ್ಲಿ) ಹಿರಿಯನಾದ, ಸತ್ಪುರುಷನಾದ, ಶಾಸ್ತ್ರಪಾರಂಗತನಾದ. "तर्कोऽप्रतिष्ठ: श्रुतयो विभिन्ना: नैको मुनिर्यस्य मतं प्रमाणम्। धर्मस्य तत्त्वं निहितं गुहायां महाजनो येन गत: स पन्था:" भा० वन० ३१३-११७। 9. ಮುಖ್ಯವಾದ, ಪ್ರಧಾನವಾದ. 10. ಪೂಜ್ಯ, ಗೌರವಾರ್ಹ. "महतस्तरसा विलङ्घयन्निजदोषेण कुधीर्विनश्यति" माघ० १६-३५। "महती मेदिनी दीनं निजाङ्के पतितं सुतम्" याद० १६-१०९। 11. ಅಧಿಕವಾದ, ಸಹಿಸಲಶಕ್ಯವಾದ, ತಾಳಲಾರದ. "महदपि परदु:खं शीतलं सम्यगाहु: प्रणयमगणयित्वा यन्ममापद्गतस्य" विक्र० ४-२७। 12. ಉನ್ನತವಾದ, ಎತ್ತರವಾದ. "महान्तौ मण्डलं चेरुर्मध्ये प्रतिबलं

द्विपा:" याद० २२-१०८। 13. ಗಟ್ಟಿಯಾದ, ಎತ್ತರದ (ಧ್ವನಿ, ಶಬ್ದ). "महास्वनः सैन्यविमर्दसंभवः कर्णान्तकूलङ्कषतामुपेयिवान्" कुमा० १४-३२। 14. ಬಹು (ಮೂಲ್ಯದ) ಹೆಚ್ಚು (ಬೆಲೆಬಾಳುವ). "महार्हशय्यापरिवर्तनच्युतैः स्वकेशपुष्पैरपि या स्म दूयते" कुमा० ५-१२। "महतीमुपदां तेषां द्विपरत्नादिशालिनीम्" याद० २२-१८९। 15. ಮಂದವಾದ, ದಟ್ಟವಾದ, ಸಾಂದ್ರವಾದ, ನಿಬಿಡವಾದ. 16. ದೀರ್ಘವಾದ, ಉದ್ದವಾದ. "निर्द्वन्द्वो हि महाबाहो सुखं बन्धात् प्रमुच्यते" गीता ५-३। 17. ಬಲಿಷ್ಠ, ಹೆಚ್ಚು ಪರಾಕ್ರಮವುಳ್ಳವನು. "महद्भिः स्पर्धमानस्य विपदेव गरीयसी" पञ्चतं० १-४०४। 18. ಅಧಿಕವಾದ, ಅತಿಶಯವಾದ, ಹೆಚ್ಚಾದ. "महौजसो मानधना धनार्चिता धनुर्भृतः संयति लब्धकीर्तयः" किरा० १-१९। 19. ಹಿರಿಯನಾದ, (ಮಹಿಮೆಯಲ್ಲಿ) ಎಲ್ಲರಿಗಿಂತಲೂ ದೊಡ್ಡವನಾದ. "न वर्त्म कस्मैचिदपि प्रदीयतामिति व्रतं मे विहितं महर्षिणा" किरा० १४-१४। 20. ಅಧಿಕವಾದ, ಹೆಚ್ಚಾದ. (ಪರಿಮಾಣದಲ್ಲಿ). "न महानपि भूतिमिच्छता फलसंपत्प्रवणः परिक्षयः" किरा० २-८।

**महती ಮಹತೀ** (स्त्री०) 1. ನಾರದರ ವೀಣೆ. "रणद्भिराघट्टनया नभस्वतः पृथग्विभिन्नश्रुतिमण्डलैः स्वरैः। स्फुटीभवद्ग्रामविशेषमूर्च्छनामवेक्षमाणं महतीं मुहुर्मुहुः" माघ० १-१०। 2. ಒಂದು ವಿಧ ವೀಣೆ. 3. ಹೆಗ್ಗುಳ್ಳದ ಗಿಡ.

**महतीद्वादशी ಮಹತೀದ್ವಾದಶೀ** (स्त्री०) ಶ್ರವಣ ದ್ವಾದಶಿ, ಭಾದ್ರಪದಮಾಸದಲ್ಲಿ ಶ್ರವಣನಕ್ಷತ್ರದಿಂದ ಕೂಡಿದ ದ್ವಾದಶಿ. महतीति प्रख्याता द्वादशी। "मासि भाद्रपदे शुक्ले द्वादशी श्रवणान्विता। महती द्वादशी ज्ञेया उपवासे महाफला"।

**महत्तत्त्व ಮಹತ್ತತ್ತ್ವ** (न०) "महत्" ಪದದ 1 ನೆಯ ಅರ್ಥ.

**महत्तर ಮಹತ್ತರ** (वि०) 1. ಎರಡು ವಸ್ತುಗಳಲ್ಲಿ ಹೆಚ್ಚು ದೊಡ್ಡದಾದ ಒಂದು, ಹೆಚ್ಚು ಉದ್ದವಾದ, ಹೆಚ್ಚು ದಪ್ಪವಾದ. अयमनयोरतिशयेन महान्—महत् "तरप्" (५-३-५७)। "ददर्श भृशदुर्दर्शं सर्वदेवैरभिष्टुतम्। अणीयांसमणुभ्यश्च बृहद्भ्यश्च महत्तरम्" भा० द्रोण० २०२-६६। 2. ದೊಡ್ಡವನು, ಹಿರಿಯವನು. "रघुकुलमहत्तराणां वधूः" उ० रा० ४। 3. ಪ್ರಧಾನ, ಮುಖ್ಯ. स्त्रियां "ङीप्" (४-१-१५)। –तरी –ತರೀ.

**महत्तरी ಮಹತ್ತರೀ** (स्त्री०) ಆಶೀರ್ವಾದ ಮತ್ತು ಸ್ವಸ್ತಿವಾಚನಗಳನ್ನು ಬಲ್ಲ ವೃದ್ಧ ಹೆಂಗಸು. "आशीःस्वस्त्ययनाभिज्ञा या वृद्धा सा महत्तरी" वैज०।

**महत्त्व ಮಹತ್ತ್ವ** (न०) 1. ಉತ್ಕರ್ಷ, ಹಿರಿಮೆ, ದೊಡ್ಡತನ, ಘನತೆ. महतो भावः "त्वः" (५-१-११९)। "महत्त्वयोगाय महामहिम्नामाराधनीं तां नृप देवतानाम्" किरा० ३-२३। 2. ಶ್ರೇಷ್ಠತೆ. "जनश्च शूद्रोऽपि महत्त्वमीयात्" रामा०।

**महनीय ಮಹನೀಯ** (वि०) ಪೂಜ್ಯನಾದ, ಮಾನ್ಯನಾದ, ಗೌರವಾರ್ಹ, ಗಣ್ಯ. महाते—मह (पूजायाम्) "अनीयर्" (३-१-९६)। "इत्थं व्रतं धारयतः प्रजार्थं समं महिष्या महनीयकीर्तेः" रघु० २-२५।

**महर् ಮಹರ್** (अव्य०) ಸ್ವರ್ಲೋಕ ಮತ್ತು ಜನೋಲೋಕಗಳ ಮಧ್ಯೆ ಇರುವ ಒಂದು ಲೋಕ, ಭೂರಾದಿ ಸಪ್ತಲೋಕಗಳಲ್ಲಿ ನಾಲ್ಕನೆಯ ಲೋಕ. "स्वर्महश्च क्रमाल्लोकाः महरेव महानपि। प्राजापत्यो जनस्तस्मात् गोलोकस्तु तपो न पुम्" वैज०।

**महर्लोक ಮಹರ್ಲೋಕ** (पुं०) "महर्" ಪದ ನೋಡಿ. "भूर्भुवः स्वर्महश्चैव जनश्च तप एव च। सत्यलोकश्च सप्तैते लोकास्तु परिकीर्तिताः"। ಚತುರ್ಮುಖ ಬ್ರಹ್ಮನ ಹಗಲಿನ (ದಿನದ) ಕೊನೆಯಲ್ಲಿ ಭೂರಾದಿ ಮೂರು ಲೋಕಗಳೂ ದಗ್ಧವಾಗುವವು, ಆಗ ಆ ತಾಪವನ್ನು ತಡೆಯಲಾರದೆ ಮಹರ್ಲೋಕವಾಸಿಗಳು ಜನೋಲೋಕಕ್ಕೆ ತೆರಳುವರು. "चतुर्मुखदिनस्यान्ते जगदेतच्चराचरम्। तदा हि दह्यते सर्वं त्रैलोक्यं भूर्भुवादिकम्। जनं प्रयान्ति तापार्ता महर्लोकनिवासिनः"।

**महर्षि ಮಹರ್ಷಿ** (पुं०) ದೊಡ್ಡ ಋಷಿ, ಪ್ರಭಾವಶಾಲಿಯಾದ ಋಷಿ, ಹೆಚ್ಚು ಮಹಿಮೆಯುಳ್ಳ ಋಷಿ. महांश्चासौ ऋषिश्च। ವೇದವ್ಯಾಸ ಮೊದಲಾದವರು ಮಹರ್ಷಿಗಳು. "इति ब्रुवाणेन महेन्द्रसूनुं महर्षिणा तेन तिरोबभूवे" किरा० ३-३०।

**महल्ल(ल्लि)क ಮಹಲ್ಲ(ಲ್ಲಿ)ಕ** (पुं०) ರಾಜನ ಅಂತಃಪುರದ ಕಾವಲುಗಾರ. महान्तं चरित्रगुणं लाकयति आस्वादयति — लक (आस्वादने) + णिच् "अच्" (३-१ १३४)। महान्तं चरित्रगुणं लिखति वा — लिख "कः" (३-१-१३५)। पृषो०। "मुष्कशून्योऽनुपस्थो यः स्त्रीस्वभावो महल्लिकः"।

**महस् ಮಹಸ್** (न०) 1. ಉತ್ಸವ, ಹಬ್ಬ. मह (पूजायाम्) "असुन्" (उ० ४-१८९)। 2. ತೇಜಸ್ಸು, ಕಾಂತಿ, ಪ್ರಕಾಶ. "कल्याणानां त्वमसि महसां भाजनं विश्वमूर्ते धुर्यां लक्ष्मीमिह मयि भृशं धेहि देव प्रसीद" मालती० १-५। "महस्तूत्सवतेजसो:" अम०।

**महाकन्द ಮಹಾಕಂದ** (पुं०) 1. ಬೆಳ್ಳುಳ್ಳಿ. महत् कन्दमस्य। "लशुनं गृञ्जनारिष्टमहाकन्दरसोनका:" अम०। 2. ಹಸಿಶುಂಠಿ. "शृङ्गिबेरं महाकन्दं हंसच्छत्रं कलापकम्" वैज०।

**महाकाय ಮಹಾಕಾಯ** (पुं०) 1. ಗಜ, ಆನೆ. महान् कायोऽस्य। "दन्तावलो महाकायो वारण: कुञ्जरोऽसुर:" वैज०। 2. ದೊಡ್ಡ ದೇಹ, ಸ್ಥೂಲವಾದ ಶರೀರ. महांश्चासौ कायश्च। 3. ಈಶ್ವರನ ದ್ವಾರಪಾಲಕನಾದ ನಂದಿ. (वि०) 4. ದೊಡ್ಡ ಶರೀರವುಳ್ಳ.

**महाकाल ಮಹಾಕಾಲ** (पुं०) 1. ಪರಮೇಶ್ವರ, ಮಹಾದೇವ. "कलनात्सर्वभूतानां महाकाल: प्रकीर्तित:"। ಜಗತ್ತಿನ ಪ್ರಲಯಕಾಲದಲ್ಲಿ ಈಶ್ವರನ ರೂಪವಿದು. 2. ಪರಮೇಶ್ವರನ ದ್ವಾರಪಾಲಕನಾದ ನಂದಿ. 3. ಇಂದ್ರವಾರುಣಿ ಗಿಡ, ಹಾವುಮೆಕ್ಕೆ. "महाकालो महादेवे किम्पाके प्रमथान्तरे" मेदि०। 4. ಬಾಣಾಸುರ. "महाकालस्तु किम्पाके हरे बाणासुरेऽपि च" वैज०।

**महाकाली ಮಹಾಕಾಲೀ** (स्त्री०) ಪಾರ್ವತಿ, ದುರ್ಗಾದೇವಿ.

**महाकाव्य ಮಹಾಕಾವ್ಯ** (न०) ಸರ್ಗಬಂಧಗಳಿಂದ ಕೂಡಿದ ಕಾವ್ಯ. ಶಿಶುಪಾಲವಧ, ರಘುವಂಶ, ನೈಷಧ, ಕುಮಾರಸಂಭವ, ಕಿರಾತಾರ್ಜುನೀಯ ಮುಂತಾದುವು ಮಹಾಕಾವ್ಯಗಳು. **ಮಹಾಕಾವ್ಯದ ಲಕ್ಷಣ:** ಸರ್ಗಬಂಧಗಳಿಂದ ಕೂಡಿರಬೇಕು. ಸರ್ಗಗಳು ಅತಿ ಚಿಕ್ಕದಾಗಿಯೂ ಅತಿ ದೊಡ್ಡದಾಗಿಯೂ ಇರಕೂಡದು. ಎಂಟಕ್ಕಿಂತಲೂ ಹೆಚ್ಚು ಸರ್ಗಗಳಿರಬೇಕು. ಪ್ರತಿಯೊಂದು ಸರ್ಗದಲ್ಲೂ ಒಂದೇ ಜಾತಿಯ ವೃತ್ತವಿದ್ದು ಕೊನೆಯಲ್ಲಿ ಮಾತ್ರ ಭಿನ್ನವೃತ್ತವಿರಬೇಕು. ಕೆಲವೆಡೆ ಮಾತ್ರ ಭಿನ್ನವೃತ್ತಗಳಿಂದ ಕೂಡಿದ ಸರ್ಗವಿರಬಹುದು. (ಮಾಘದಲ್ಲಿ ನಾಲ್ಕನೆಯ ಸರ್ಗ ಕಿರಾತಾರ್ಜುನೀಯದಲ್ಲಿ ಐದನೆಯ ಸರ್ಗ) ಧೀರೋದಾತ್ತಗುಣದಿಂದ ಕೂಡಿದ ಒಬ್ಬ ಸುರ (ದೇವತೆ) ಅಥವಾ ಸತ್ಕುಲಪ್ರಸೂತನಾದ ಒಬ್ಬ ಕ್ಷತ್ರಿಯ (ರಾಜ)ನಾಗಲಿ ಒಂದೇ ವಂಶದ ಅನೇಕ ರಾಜರಾಗಲಿ ನಾಯಕ(ನಾ)ರಾಗಿರಬೇಕು. ಶೃಂಗಾರ ವೀರ ಶಾಂತ ಇವುಗಳಲ್ಲಿ ಯಾವುದಾದರೊಂದು ಪ್ರಧಾನ(ಅಂಗಿ) ರಸವಾಗಿರಬೇಕು. ಇತಿವೃತ್ತ(ಕಥೆ)ವು ಪುರಾಣಪ್ರಸಿದ್ಧವಾಗಿ ಅಥವಾ ಸತ್ಪುರುಷರ ವಿಷಯವಾಗಿ ಇರಬೇಕು. ಧರ್ಮಾರ್ಥಕಾಮಮೋಕ್ಷರೂಪ ಪುರುಷಾರ್ಥ ಚತುಷ್ಟಯವು ವರ್ಣಿತವಾಗಿ ಅವುಗಳಲ್ಲಿ ಯಾವುದಾದರೊಂದು ಮುಖ್ಯ ಫಲವಾಗಿರಬೇಕು. ಕಾವ್ಯದ ಪ್ರಾರಂಭದಲ್ಲಿ ಆಶೀರ್ವಾದ ನಮಸ್ಕಾರ ಅಥವಾ ವಸ್ತುನಿರ್ದೇಶರೂಪವಾದ ಮಂಗಳಾಚರಣೆಯಿರಬೇಕು. ಸತ್ಪುರುಷರ ಗುಣ ದುರ್ಜನರ ನಿಂದೆಗಳು ವರ್ಣಿತವಾಗಿರಬೇಕು. ಸರ್ಗದ ಕೊನೆಯಲ್ಲಿ ಮುಂದಿನ ಸರ್ಗದ ವಿಷಯ ಸೂಚಿತವಾಗಿರಬೇಕು. ಸಂಧ್ಯಾಕಾಲ ಸೂರ್ಯ ಚಂದ್ರ ರಾತ್ರಿ ಹಗಲು ಪ್ರಭಾತ ಬೇಟೆ ಶೈಲ ಋತು ನಗರ ಸಮುದ್ರ ಸಂಭೋಗ ಮತ್ತು ವಿಪ್ರಲಂಭಶೃಂಗಾರ ಸ್ವರ್ಗಯಾಗ ಪ್ರಯಾಣ ವಿವಾಹ ಮುಂತಾದ ವಿಷಯಗಳು ಯಥೋಚಿತವಾಗಿ ವರ್ಣಿತವಾಗಿರಬೇಕು. ಇತ್ಯಾದಿ. सा० द० ६-३१५-२५। "श्लोकैरिव महाकाव्यं व्यूहैस्तदभवद्बलम्" माघ० १९-४१।

**महाकुल ಮಹಾಕುಲ** (न०) 1. ಶ್ರೇಷ್ಠವಾದ ವಂಶ, ಉತ್ತಮ ಸಂತತಿ, ದೊಡ್ಡ ಪೀಳಿಗೆ. महच्च तत्कुलं च। 2. ಹತ್ತು ತಲೆಮೊರೆಯುವರೆಗೆ ವೇದಾಧ್ಯಯನ ಮಾಡಿದ ವಂಶ. "दशपूरुषविख्यातात् श्रोत्रियाणां महाकुलात्" याज्ञ० १-५४। (वि०) 3. ಶ್ರೇಷ್ಠವಾದ ವಂಶದಲ್ಲಿ ಹುಟ್ಟಿದ, ಉತ್ತಮ ಸಂತತಿಯಲ್ಲಿ ಹುಟ್ಟಿದ. महत् कुलं यस्य।

**महाकुलीन ಮಹಾಕುಲೀನ** (वि०) ಮಹಾಕುಲದಲ್ಲಿ ಜನಿಸಿದ, ಶ್ರೇಷ್ಠವಾದ ಸಂತತಿಯಲ್ಲಿ ಹುಟ್ಟಿದ. महाकुलस्यापत्यम् पक्षे "ख:" (४-१-१३९)।

**महाक्रतु ಮಹಾಕ್ರತು** (पुं०) 1. ವಿಷ್ಣು, ನಾರಾಯಣ. महान् सर्वसुकर: संस्कारस्वाद्वकृत: क्रतुर्यज्ञ: तदुपलक्षिताराधनं च अस्य। "सर्वैश्च सुकरा पूजा यस्य स्यात् स महाक्रतु:" इति निरुक्ति:। "महाक्रतुर्महायज्वा महायज्ञो महाहवि:" वि० स०। 2. ದೊಡ್ಡ ಯಜ್ಞ, ಅಶ್ವಮೇಧ ಮೊದಲಾದ ಯಾಗ. "तदङ्गमग्र्यं मघवन् महाक्रतोरमुं तुरङ्गं प्रतिमोक्तुमर्हसि" रघु० ३-४६।

**महाक्रम ಮಹಾಕ್ರಮ** (पुं०) ವಿಷ್ಣು, ನಾರಾಯಣ. महान् क्रम: परमनिम्नभवपातालात् जीवानारोहयतो महत्या रोहणसोपानपर्वानुपूर्वी अस्य। "परमोन्नतिमात्मानं सो निम्नाद्भवपातकात्। जीवान् समारोहयतो

ज्ञानभक्त्यादिरूपिणी। सर्वानुपूर्वी यस्यास्ति महाक्रम इतीरितः" इति निरुक्तिः। "महाक्रमो महाकर्मा" वि० स०।

**महाखर्व ಮಹಾಖರ್ವ** (पुं०) 1. ಒಂದು ದೊಡ್ಡ ಸಂಖ್ಯೆ, 100,000,000,000. (वि०) 2. ಬಹಳ ಕುಳ್ಳಗಿರುವ, ಮೋಟಾಗಿರುವ.

**महागण ಮಹಾಗಣ** (पुं०) ಒಂದು ದೊಡ್ಡ ಸಂಖ್ಯೆ, ಒಂದು ಲಕ್ಷ ಬೃಂದ. 100,000,000,000,000. "अन्ये त्वाहुः शतं कोटिः शङ्कुर्बृन्दं महागणः। पद्मं महाम्बुजं चेति क्रमाल्लक्षगुणोत्तरम्" वैज०।

**महागद ಮಹಾಗದ** (पुं०) 1. ಜ್ವರ. 2. ದೊಡ್ಡ ರೋಗ. महांश्चासौ गदश्च। "वातव्याधिः प्रमेहश्च कुष्ठमर्शो भगन्दरः। अश्मरी मूढगर्भश्च तथैवोदरमष्टमम्। अष्टावेते प्रकृत्यैव दुश्चिकित्स्या महागदाः" सुश्रुत० सूत्र० ३३-४। 3. ಒಂದು ಔಷಧ. (वि०) 4. ದೊಡ್ಡ ರೋಗವುಳ್ಳವನು.

**महागन्ध ಮಹಾಗಂಧ** (पुं०) 1. ನೀರುಹಬ್ಬೆ. महान् गन्धोऽस्य। (न०) 2. ಬಾಣಂತಿಬೋಳ. 3. ಅರಿಸಿನ ಬಣ್ಣದ ಚಂದನ. (वि०) 4. ಹೆಚ್ಚು ವಾಸನೆಯುಳ್ಳ. (स्त्री०) –गन्धा –ಗಂಧಾ. 5. ಬೋಳಂಗಡಲೆ.

**महागुरु ಮಹಾಗುರು** (पुं०) ತಾಯಿ ತಂದೆ ಮತ್ತು ಆಚಾರ್ಯ. ಇವರು ಮಹಾಗುರುಗಳು. "पिता माता तथाचार्यो महागुरुरिति स्मृतः"। ಹೆಂಗಸರಿಗೆ ಪತಿಯು ಮಹಾಗುರು. ಅವಿವಾಹಿತಕನ್ಯೆಗೆ ತಾಯಿ ತಂದೆಗಳು ಮಹಾಗುರುಗಳು.

**महाग्रीव ಮಹಾಗ್ರೀವ** (पुं०) 1. ಉಷ್ಟ್ರ, ಒಂಟೆ. महती ग्रीवाऽस्य। (वि०) 2. ಉದ್ದವಾದ ಕತ್ತುಳ್ಳ.

**महाघोष ಮಹಾಘೋಷ** (पुं०) 1. ದೊಡ್ಡ ಶಬ್ದ, ಗಟ್ಟಿಯಾದ ಶಬ್ದ. (न०) 2. ಅಂಗಡಿ, ವ್ಯಾಪಾರಸ್ಥಳ, ಸಂತೆ. (वि०) 3. ಗಟ್ಟಿಯಾದ ಶಬ್ದವುಳ್ಳ. (स्त्री०) –घोषा –ಘೋಷಾ. 4. ಆನೆಬೇಲ.

**महाङ्ग ಮಹಾಂಗ** (पुं०) ಉಷ್ಟ್ರ, ಒಂಟೆ. महान्त्यङ्गानि अस्य। "उष्ट्रे क्रमेलकमयमहाङ्गाः करभः शिशुः" अम०।

**महाजन ಮಹಾಜನ** (पुं०) 1. ಗುಣದಲ್ಲಿ ಹಿರಿಯವನಾದವನು, ದೊಡ್ಡ ಮನುಷ್ಯ, ವಿವೇಕಿಯಾದ ಮನುಷ್ಯ, ಆಸ್ತಿಕ, ವೇದ ಮತ್ತು ಶಾಸ್ತ್ರಗಳಲ್ಲಿ ನಂಬಿಕೆಯುಳ್ಳವನು. महांश्चासौ जनश्च। "धर्मस्य तत्त्वं निहितं गुहायां महाजनो येन गतः स पन्थाः" भा०। 2. ಮಂದಿ, ಜನಸಮೂಹ. "विलोक्य वृद्धोक्षमधिष्ठितं त्वया महाजनः स्मेरमुखो भविष्यति" कुमा० ५-७०। 3. ಪ್ರಸಿದ್ಧ ಮನುಷ್ಯ, ಹೆಸರಾಂತವನು, ಸತ್ಪುರುಷ. "महाजनस्य संसर्गः कस्य नोन्नतिकारकः"।

**महाजाली ಮಹಾಜಾಲೀ** (स्त्री०) ಹಳದಿಹೂವಿನ ಕಾಡು ಹೀರೆಗಿಡ.

**महातपस् ಮಹಾತಪಸ್** (पुं०) ವಿಷ್ಣು, ನಾರಾಯಣ. महत् पूज्यं तपः ज्ञानमस्य। "महत्पूज्यं तपो ज्ञानं यस्येति स महातपाः" इति निरुक्तिः। "अमृतः शाश्वतस्थाणुर्वरारोहो महातपाः" वि० स०।

**महातरु ಮಹಾತರು** (पुं०) 1. ದೊಡ್ಡ ಮರ, ಎತ್ತರವಾದ ಮರ. 2. ಕಳ್ಳಿ ಗಿಡ.

**महातल ಮಹಾತಲ** (न०) ಕೆಳಗಿನ ಸಪ್ತಲೋಕಗಳಲ್ಲೊಂದು. (1) अतलम् (2) वितलम् (3) सुतलम् (4) तलातलम् (5) महातलम् (6) रसातलम् ಮತ್ತು (7) पातालम् ಇವು ಏಳು ಅಧೋಲೋಕಗಳು.

**महातेजस् ಮಹಾತೇಜಸ್** (पुं०) 1. ವಿಷ್ಣು, ನಾರಾಯಣ. महत् तामसानामपि अनाद्यविद्यातमस्तस्करं तेजोऽस्य। "अनाद्यविद्यात्यतमोहारितेजो महद्यतः। महातेजाह्यतः ख्यातस्तेजदो वसुवर्णकः" इति निरुक्तिः। "महाक्रमो महाकर्मा महातेजा महोरगः" वि० स०। 2. ಕಾರ್ತಿಕೇಯ, ಷಣ್ಮುಖ. 3. ಶಂಕರ, ಪರಶಿವ, ಮಹಾದೇವ. 4. ಅಗ್ನಿ. 5. ಹರಳುಗಿಡ. 6. ಚಿತ್ರಮೂಲದ ಗಿಡ. (न०) 7. ಪಾದರಸ.

**महात्मन् ಮಹಾತ್ಮನ್** (पुं०) 1. ಪರಮಾತ್ಮ. "युगपत्तु प्रलीयन्ते यदा तस्मिन् महात्मनि। तदायं सर्वभूतात्मा सुखं स्वपिति निर्वृतः" मनु० १-५४। 2. ಮಹತ್ತತ್ತ್ವ. "मनः पृथिव्यां तामद्भिः तेजसापोऽनिलेन तत्। खे वायुं धारयंस्तच्च भूतादौ तं महात्मनि" भाग० ९-७-२५। (वि०) 3. ದೊಡ್ಡ ಮನಸ್ಸುಳ್ಳವನು, ಒಳ್ಳೆಯ ಸ್ವಭಾವದವನು, ಉದಾರಬುದ್ಧಿಯುಳ್ಳವನು. महान् आत्मा यस्य। "महात्मानोऽनुगृह्णन्ति भजमानान् रिपूनपि" माघ० २-१०४। 4. ದೊಡ್ಡವನು, ಘನಾಮಹಿಮಶಾಲಿ, ಕೀರ್ತಿಶಾಲಿ, ಸತ್ಪುರುಷ. "समुन्नयन् भूतिमनार्यसंगमाद्वरं विरोधोऽपि समं महात्मभिः" किरा० १-८।

**महादशा ಮಹಾದಶಾ** (स्त्री०) ಮನುಷ್ಯನ ಅದೃಷ್ಟ (ಪುಣ್ಯ ಪಾಪ) ಗಳನ್ನನುಸರಿಸಿ ಅವನ ಮೇಲೆ ರವಿ ಚಂದ್ರ

ಮೊದಲಾದ ಗ್ರಹಗಳು ತಮ್ಮ ಪ್ರಭಾವವನ್ನು ಬೀರುವ ಕಾಲ, ತಮ್ಮ ಅಧಿಕಾರಕ್ಕೊಳಪಟ್ಟಿರುವ ಮನುಷ್ಯನ ಮೇಲೆ ಗ್ರಹಗಳು ತಮ್ಮ ಪ್ರಭಾವವನ್ನು ಬೀರುವ ಕಾಲ. ಅವರವರ ಅದೃಷ್ಟಕ್ಕೆ ತಕ್ಕಂತೆ ಆಯಾ ಗ್ರಹಗಳು ಫಲವನ್ನು ಕೊಡುವುವು.

| ದಶಾಧಿಪತಿ ಗ್ರಹಗಳು | ದಶಾಕಾಲ | |
|---|---|---|
| ರವಿ | 6 | ವರ್ಷಗಳು |
| ಚಂದ್ರ | 10 | ,, |
| ಕುಜ | 7 | ,, |
| ರಾಹು | 18 | ,, |
| ಗುರು | 16 | ,, |
| ಶನಿ | 19 | ,, |
| ಬುಧ | 17 | ,, |
| ಕೇತು | 7 | ,, |
| ಶುಕ್ರ | 20 | ,, |

**महादान ಮಹಾದಾನ** (ನಂ) ಶ್ರೇಷ್ಠವಾದ ದಾನ. महच्च तत् दानं च। ಮಹಾದಾನವು ಹಿರಣ್ಯಗರ್ಭದಾನ, ಬ್ರಹ್ಮಾಂಡದಾನ, ಕಲ್ಪವೃಕ್ಷದಾನ, ಗೋಸಹಸ್ರದಾನ, ಸುವರ್ಣದ ಕಾಮಧೇನುದಾನ, ಸುವರ್ಣದ ಅಶ್ವದಾನ. ಭೂದಾನ, ಸುವರ್ಣಗಜದಾನ ಮುಂತಾಗಿ ಹದಿನಾರು ವಿಧ.

**महादारु ಮಹಾದಾರು** (ಪುಂ) ದೇವದಾರು ಮರ.

**महादेव ಮಹಾದೇವ** (ಪುಂ) 1. ಪರಮೇಶ್ವರ, ಪರಶಿವ. महांश्चासौ देवश्च। "ब्रह्मादीनां सुराणां च मुनीनां ब्रह्मवादिनाम्। तेषां च महतां देवो महादेवः प्रकीर्तितः"। 2. ವಿಷ್ಣು, ನಾರಾಯಣ. महानभ्यधिकः पूज्यो वा देवः तैः क्रीडनकैः क्रीडंश्चेति महादेवः। "ब्रह्मादिभिः क्रीडति यो महादेवः स उच्यते" इति निरुक्तिः। "आदिदेवो महादेवो देवेशो देवभृद्गुरुः" विं सं।

**महादेवी ಮಹಾದೇವೀ** (ಸ್ತ್ರೀಂ) 1. ಪಾರ್ವತೀದೇವಿ, ದುರ್ಗಾದೇವಿ. महती चासौ देवी च। 2. ಮಹಾರಾಣಿ, ರಾಜನ ಪಟ್ಟಮಹಿಷಿ. "पूज्यते या सुरैः सर्वैः महांश्चैव प्रमाणतः। धातुर्महेति पूजायां महादेवी ततः स्मृता" देवीपुं।

**महाद्रुम ಮಹಾದ್ರುಮ** (ಪುಂ) ಅಶ್ವತ್ಥವೃಕ್ಷ, ಅರಳಿಮರ. महांश्चासौ द्रुमश्च।

**महाद्वार ಮಹಾದ್ವಾರ** (ನಂ) ಹೊರಬಾಗಿಲು, ದೇವಸ್ಥಾನದ ಹೊರಗಡೆಯ ಹಿರಿಯ ಬಾಗಿಲು, ದೇವಸ್ಥಾನದ ಒಳಕ್ಕೆ ಪ್ರವೇಶಿಸುವ ಬಾಗಿಲು. महच्च तत् द्वारं च।

**महाधन ಮಹಾಧನ** (ನಂ) 1. ಸುವರ್ಣ, ಚಿನ್ನ. 2. ಅಧಿಕ ಬೆಲೆ. 3. ಅಧಿಕ ಬೆಲೆಯುಳ್ಳ ವಸ್ತ್ರ. 4. ಲೋಬಾನ, ತುರುಷ್ಕದೇಶದ ಸುಗಂಧದ್ರವ್ಯ. "महाधनं महामूल्ये सुवस्त्रे सिह्लकेऽपि च" मेदिं। (ವಿಂ) 5. ಬಹು ಬೆಲೆಯುಳ್ಳ, ಅಧಿಕ ಬೆಲೆ ಬಾಳುವ. "पुराधिरूढः शयनं महाधनं विबोध्यसे यः स्तुतिगीतिमङ्गलैः" किरां १-३८; 6. ಹೆಚ್ಚು ಐಶ್ವರ್ಯವುಳ್ಳವನು.

**महाधातु ಮಹಾಧಾತು** (ಪುಂ) 1. ಸ್ವರ್ಣ, ಚಿನ್ನ. 2. ಮೇದಸ್ಸು. 3. ಶಿವ, ಪರಮೇಶ್ವರ.

**महानट ಮಹಾನಟ** (ಪುಂ) ಶಿವ, ಪರಮೇಶ್ವರ. महान् नटः नर्तकः। "महाकालो महानटः" अमं।

**महानद ಮಹಾನದ** (ಪುಂ) ದೊಡ್ಡ ಗಂಡುಹೊಳೆ.

**महानदी ಮಹಾನದೀ** (ಸ್ತ್ರೀಂ) 1. ದೊಡ್ಡ ನದಿ, ಬಹಳ ದೂರ (ಸಮುದ್ರದವರೆಗೆ) ಹರಿಯುವ ಹೊಳೆ. महती च सा नदी च। "संभूयाम्भोधिमभ्येति महानद्या नगापगा" माघं २-१००। 2. ಗಂಗಾನದಿ. "अम्बुजमम्बुनि जातं जातु न जायते अम्बुजादम्बु। मुरहर तव विपरीतं पादाम्बुजान्महानदी जाता" उद्भं।

**महानन्द ಮಹಾನಂದ** (ಪುಂ) 1. ಅತಿಶಯವಾದ ಆನಂದ, ಹೆಚ್ಚು ಸಂತೋಷ. महान् आनन्दः। 2. ಅಪವರ್ಗ, ಮೋಕ್ಷ, ಮುಕ್ತಿ. महान् आनन्दोऽत्र। 3. ಒಂದು ವಿಧ ವೇಣುವಾದ್ಯ.

**महानन्दा ಮಹಾನಂದಾ** (ಸ್ತ್ರೀಂ) 1. ಮಾಘಶುಕ್ಲ ನವಮಿ. 2. ಒಂದು ನದಿ. 3. ಮದ್ಯ, ಹೆಂಡ. "माघमासस्य या शुक्ला नवमी लोकपूजिता। महानन्देति सा प्रोक्ता"।

**महानवमी ಮಹಾನವಮೀ** (ಸ್ತ್ರೀಂ) ಆಶ್ವಯುಜ ಶುದ್ಧ ನವಮಿ, ದುರ್ಗಾದೇವಿಯನ್ನು ಪೂಜಿಸುವ ನವಮಿ. महती चासौ नवमी च। "दुर्गातन्त्रेण मन्त्रेण कुर्याद्दुर्गामहोत्सवम्। महानवम्यां शरदि बलिदानं नृपादयः॥ आश्विने शुक्लपक्षस्य भवेद्या अष्टमी तिथिः। महाष्टमीति सा प्रोक्ता देव्याः प्रीतिकरा परा॥ ततोऽनुनवमी या स्यात् सा महानवमी स्मृता। सा तिथिः सर्वलोकानां पूजनीया शिवप्रिया" कालिकापुं।

**महानस ಮಹಾನಸ** (ನಂ) ಪಾಕಶಾಲೆ, ಅಡಿಗೆಯ ಮನೆ. महच्च तत् अनश्च "टच्" (५-४-९४)। ಮಹಾನಸವು ಶುಚಿಯಾದ ಜಾಗದಲ್ಲಿ ನಿರ್ಮಿತವಾಗಿರಬೇಕು. ಮಹಾನಸದೊಳಗೆ ನೈರ್ಮಲ್ಯವನ್ನು ಕಾಪಾಡಿಕೊಳ್ಳಬೇಕು. ಅಡಿಗೆ

ಪಾತ್ರೆಗಳು ಯಾವಾಗಲೂ ಶುಭ್ರವಾಗಿರಬೇಕು. ಜಾಲರಿಯಿಂದ ಕೂಡಿದ ಗವಾಕ್ಷಗಳಿದ್ದು ಗಾಳಿ ಬೆಳಕು ಚೆನ್ನಾಗಿರಬೇಕು. ಅಲ್ಲಿ ಕೆಲಸಮಾಡುವವರನ್ನು ಆಗಾಗ್ಗೆ ಪರೀಕ್ಷಿಸುತ್ತಿರಬೇಕು. ವೈದ್ಯಗುಣವುಳ್ಳವನನ್ನು ಮುಖ್ಯಪಾಚಕನನ್ನಾಗಿಯೂ ನೋಡಲು ಲಕ್ಷಣವಾಗಿರುವ ಶುಚಿಯಾಗಿರುವ ವಿನಯಸಂಪನ್ನರಾದ ಮತ್ತು ನಿಪುಣರಾದವರನ್ನು ಪಾಚಕರನ್ನಾಗಿಯೂ ನೇಮಿಸಬೇಕು. "प्रशस्तदिग्देशकृतं शुचिभाण्डं महच्छुचि। सजालकं गवाक्षाढ्यं आप्तवर्गनिषेवितम् ॥ परीक्षितस्त्रीपुरुषं भवेच्चापि महानसम्। तत्राध्यक्षं नियुञ्जीत प्रायो वैद्यगुणान्वितम्। शुचयो दक्षिणा दक्षा विनीताः प्रियदर्शनाः। तस्य चाज्ञाविधेयाः स्युः विविधाः परिकर्मिणः" सुश्रुत० कल्प० १।

**महानाटक ಮಹಾನಾಟಕ** (न०) ದೃಶ್ಯಕಾವ್ಯಗಳಲ್ಲಿ ಒಂದು ದೊಡ್ಡ ನಾಟಕ. ಇದು ಹನುಮದ್ವಿರಚಿತವಾದ ರಾಮಚರಿತ್ರಾತ್ಮಕವಾದ ಒಂದು ನಾಟಕ. ನಾಟಕಕ್ಕೆ ಹೇಳಿರುವ ಎಲ್ಲಾ ಪತಾಕಾಸ್ಥಾನಗಳಿಂದ ಕೂಡಿ ಹತ್ತು ಅಂಕಗಳಿಂದ ರಚಿತವಾದ ನಾಟಕವು ಮಹಾನಾಟಕವೆನಿಸುವುದು. "एतदेव यदा सर्वैः पताकास्थानकैर्युतम्। अङ्कैश्च दशभिर्धीरा महानाटकमूचिरे" सा० द० ६-२२३। "एष श्रीलहनूमता विरचिते श्रीमन्महानाटके वीरश्रीयुतरामचन्द्रचरिते प्रत्युद्धते विक्रमैः। मिश्रश्रीमधुसूदनेन कविना सन्दर्भ्य सज्जीकृते स्वर्गारोहणनामकोऽत्र नवमो यातोऽङ्क एवेत्यसौ"।

**महानाडी ಮಹಾನಾಡೀ** (स्त्री०) ಕಂಡರಾ ಎಂಬ ಮಹಾನಾಡಿ, ಮಹಾಸ್ನಾಯು. महती चासौ नाडी च। ["कण्डरा" ಪದದಲ್ಲಿ ವಿವರಕ್ಕೆ ನೋಡಿ.]

**महानाद ಮಹಾನಾದ** (पुं०) 1. ಗಜ, ಆನೆ. महान् नादोऽस्य। 2. ದೊಡ್ಡ ಶಬ್ದ, ಗಟ್ಟಿಯಾದ ಶಬ್ದ. महांश्चासौ नादश्च। 3. ಗರ್ಜಿಸುವ ಮೇಘ, ಗುಡುಗುವ ಮೋಡ. "महानादः कुञ्जरे स्याद्वर्षुकाब्दे महास्वने" मेदि०। 4. ಸಿಂಹ. "सिंहो मृगेन्द्रः पञ्चास्यः पारीन्द्रः श्वेतपिङ्गलः। व्यादीर्णास्यो महानादः शार्दूलस्तुल्यविक्रमः" वैज०। 5. ಕರ್ಣ, ಕಿವಿ. 6. ಉಷ್ಟ್ರ, ಒಂಟೆ. 7. ಗೋಸುಂಬೆ, ಘಳಿಗೆಗೊಂದು ಬಣ್ಣ ಬದಲಾಯಿಸುವ ಓತಿಕೇತ. 8. ಹೆಬ್ಬಾವು, ದಾಸರಹಾವು. (वि०) 9. ದೊಡ್ಡ ಶಬ್ದವುಳ್ಳ, ಗಟ್ಟಿಯಾದ ಸದ್ದುಳ್ಳ. "शरवर्षी महानादः स्फुरत्कार्मुककेतनः। नीलच्छविरसौ रेजे केशवच्छलनीरदः" माघ० १९-९६।

**महानिशा ಮಹಾನಿಶಾ** (स्त्री०) ರಾತ್ರಿಯ ಮಧ್ಯದ ಎರಡು ಜಾವ, ರಾತ್ರಿ ಒಂಬತ್ತು ಗಂಟೆಯಿಂದ ಮೂರು ಗಂಟೆಯುವರೆಗಿನ ಕಾಲ. "महानिशा तु विज्ञेया मध्यमं प्रहरद्वयम्। तत्र स्नानं न कुर्वीत काम्यनैमित्तिकादृते" ಎಂದು ವಚನವಿರುವುದರಿಂದ ಕಾಮ್ಯವ್ರತ ಮತ್ತು ನೈಮಿತ್ತಿಕ ಕಾರಣಗಳ ಹೊರತು ಮಧ್ಯರಾತ್ರಿಯಲ್ಲಿ ಸ್ನಾನಾದಿಗಳು ನಿಷಿದ್ಧ.

**महानील ಮಹಾನೀಲ** (पुं०) 1. ಇಂದ್ರನೀಲಮಣಿ, ನೀಲರತ್ನ. महांश्चासौ नीलश्च। "महामहानीलशिलारुचः पुरो निषेदिवान् कंसकृषः स विष्टरे" माघ० १-१६। 2. ಭೃಂಗರಾಜ, ಗರಗದ ಸೊಪ್ಪು. 3. ಒಂದು ಜಾತಿಯ ಆನೆ. "महानीलो भृङ्गराजे मणिनागविशेषयोः" मेदि०।

**महानुभाव ಮಹಾನುಭಾವ** (वि०) ಮಹಾತ್ಮನಾದ, ಮಹಾಮಹಿಮೆಯುಳ್ಳ, ಹೆಚ್ಚು ಪ್ರಭಾವಶಾಲಿಯಾದ. महान् अनुभावो यस्य। "ग्रहीतुमार्यान् परिचर्यया मुहुर्महानुभावा हि नितान्तमर्थिनः" माघ० १-१७।

**महापञ्चमूल ಮಹಾಪಂಚಮೂಲ** (न०) ಐದು ಮಹಾಮೂಲಿಕೆಗಳು. 1. ಬಿಲ್ವ 2. ಅಗ್ನಿಮಂಥ 3. ಶ್ಯೋನಾಕ (ಹೆಮ್ಮರ) 4. ಕಾಶ್ಮರೀ (ಶೀವನೆಯ ಮರ) ಮತ್ತು 5. ಪಾಟಲಾ (ಹಸುರು ಪಾದರಿ) ಇವು (ಐದೂ) ಮಹಾಪಂಚ ಮೂಲಗಳು.

**महापञ्चविष ಮಹಾಪಂಚವಿಷ** (न०) ದೊಡ್ಡ ವಿಷಪಂಚಕ. "शृङ्गी च कालकूटश्च मुस्तको वत्सनाभकः। शङ्खकर्णीति योगोऽयं महापञ्चविषाभिधः"।

**महापथ ಮಹಾಪಥ** (पुं०) 1. ಮುಖ್ಯ ರಸ್ತೆ, ರಾಜಮಾರ್ಗ, ಹೆದ್ದಾರಿ. महांश्चासौ पन्थाश्च "अः" (५-४-७४)। "सन्तानकाकीर्णमहापथं तच्चीनांशुकैः कल्पितकेतुमालम्" कुमा० ७-३। 2. ಹಿಮಾಚಲದಿಂದ ಸ್ವರ್ಗಕ್ಕೆ ಹತ್ತುವ ಮಾರ್ಗ.

**महापद्म ಮಹಾಪದ್ಮ** (पुं०) 1. ಕುಬೇರನ ಒಂಬತ್ತು ನಿಧಿಗಳಲ್ಲೊಂದು. "महापद्मश्च पद्मश्च शङ्खो मकरकच्छपौ। मुकुन्दः कुन्दनीलौ च वरश्च निधयो नव" अम०। 2. ಸರ್ಪ, ಹಾವು. "शङ्खपालो महापद्मः काकोदर इतीरिताः" वैज०। 3. ಅಷ್ಟದಿಗ್ಗಜಗಳಲ್ಲೊಂದು. 4. ಒಂದು ದೊಡ್ಡ ಸಂಖ್ಯೆ. "महापद्मः पुनर्निधौ। नागसंख्याभिदोः" हेम०। (न०) 5. ಬಿಳಿ ತಾವರೆ, ಶ್ವೇತಕಮಲ, ಪುಂಡರೀಕ. "पुण्डरीकं महापद्मं पवित्रं पुण्यगन्धिकम्" वैज०।

**महापातक ಮಹಾಪಾತಕ** (ನಂ) ಮಹಾಪಾಪ, ದೊಡ್ಡ ಪಾಪ, ಮಾಡಬಾರದ ಘೋರವಾದ ಪಾಪ. महच्च तत् पातकं च। "ब्रह्महत्या सुरापानं स्तेयं गुर्वङ्गनागमः। महान्ति पातकान्याहुः तत्संसर्गश्च पञ्चमः" मनु० ११-५५। ಇವು ಐದೂ ಮಹಾಪಾತಕಗಳು.

**महापातकिन् ಮಹಾಪಾತಕಿನ್** (ವಿಂ) ಮಹಾಪಾಪದಿಂದ ಕೂಡಿದವನು, ಬ್ರಹ್ಮಹತ್ಯೆ ಮೊದಲಾದ ಪಾಪಕಾರ್ಯ ಮಾಡಿದವನು. महापातकमस्यास्ति "इनिः" (५-२-११५)। "महापातकिनो ये च पतितास्ते प्रकीर्तिताः। पतितानां न दाहः स्यात् नान्त्येष्टिर्नास्थिसञ्चयः"।

**महापुराण ಮಹಾಪುರಾಣ** (ನಂ) ವ್ಯಾಸಮಹರ್ಷಿ ಪ್ರಣೀತವಾದ ಪುರಾಣಗಳು, ಸೃಷ್ಟಿ ಮೊದಲಾದ ಹನ್ನೊಂದು ಲಕ್ಷಣಗಳಿಂದ ಕೂಡಿದ ಪುರಾಣಗಳು. **ಪುರಾಣದ ಹನ್ನೊಂದು ಲಕ್ಷಣಗಳು:** "सृष्टिश्चापि विसृष्टिश्च स्थितिस्तेषां च पालनम्। कर्मणां वासना वार्ता मनूनां च क्रमेण च। वर्णनं प्रलयानां च मोक्षस्य च निरूपणम्। उत्कीर्तनं हरेरेव देवानां च पृथक् पृथक्। दशाधिकं लक्षणं च महतां परिकीर्तितम्" ब्रह्मवै०।

**महापुरुष ಮಹಾಪುರುಷ** (ಪುಂ) 1. ವಿಷ್ಣು, ನಾರಾಯಣ. 2. ಪರಮಪುರುಷ. 3. ಶ್ರೇಷ್ಠನಾದ ಮನುಷ್ಯ, ಉತ್ತಮ ಗುಣಗಳಿಂದ ಕೂಡಿದ ಮನುಷ್ಯ, ಗೌರವಾರ್ಹನಾದ ಮನುಷ್ಯ. महान् पुरुषः। 4. 32 ಲಕ್ಷಣಗಳಿಂದ ಕೂಡಿದ ಮನುಷ್ಯ.

**महापुष्पा ಮಹಾಪುಷ್ಪಾ** (ಸ್ತ್ರೀಂ) ವಿಷ್ಣುಕ್ರಾಂತ ಗಿಡ.

**महापृष्ठ ಮಹಾಪೃಷ್ಠ** (ಪುಂ) ಉಷ್ಟ್ರ, ಒಂಟೆ. महत् पृष्ठं यस्य।

**महाप्रभु ಮಹಾಪ್ರಭು** (ಪುಂ) 1. ದೊಡ್ಡ ಯಜಮಾನ. 2. ಪರಮೇಶ್ವರ. महांश्चासौ प्रभुश्च।

**महाप्रलय ಮಹಾಪ್ರಲಯ** (ಪುಂ) ಚತುರ್ಮುಖ (ಬ್ರಹ್ಮ)ನ ಆಯುಷ್ಯದ (ಬ್ರಹ್ಮಮಾನದಲ್ಲಿ ನೂರು ವರ್ಷಗಳ) ಕೊನೆಯಲ್ಲಿ ಆಗುವ ಜಗತ್ತಿನ ನಾಶ. ಬ್ರಹ್ಮನ ಒಂದು ಹಗಲಿನ ಕೊನೆಯಲ್ಲಿ ಸಾಮಾನ್ಯ ಪ್ರಲಯವಾಗುವುದು. ನೂರು ವರ್ಷಗಳ ಕೊನೆಯಲ್ಲಿ ಸಕಲ ಜಗತ್ತಿನ ನಾಶವಾಗುವುದು. [ವಿವರಕ್ಕೆ "प्राकृतप्रलय" ಪದದಲ್ಲಿ ನೋಡಿ.]

**महाप्रसाद ಮಹಾಪ್ರಸಾದ** (ಪುಂ)1. ಮಹಾವಿಷ್ಣುವಿನ ನೈವೇದ್ಯ ನಿರ್ಮಾಲ್ಯ ಪಾದತೀರ್ಥ ಮುಂತಾದುವು. "पादोदकं च निर्माल्यं नैवेद्यं च विशेषतः। महाप्रसाद इत्युक्त्वा ग्राह्यं विष्णोः प्रयत्नतः"। 2. ದೇವರು ಗುರುಹಿರಿಯರು ಮುಂತಾದವರ ಅನುಗ್ರಹ, ಒಲಿಮೆ.

**महाप्राण ಮಹಾಪ್ರಾಣ** (ಪುಂ) 1. ಅಕ್ಷರಗಳನ್ನು ಉಚ್ಚರಿಸಲು ನಡೆಯುವ ಒಂದು ಯತ್ನ. ಈ ಯತ್ನವು ಆಭ್ಯಂತರ ಮತ್ತು ಬಾಹ್ಯಗಳೆಂದು ಎರಡು ವಿಧ. ಈ ಮಹಾಪ್ರಾಣ ಯತ್ನವು ಹನ್ನೊಂದು ವಿಧ ಬಾಹ್ಯ ಪ್ರಯತ್ನಗಳಲ್ಲೊಂದು. **ಹನ್ನೊಂದು ವಿಧ ಬಾಹ್ಯ ಪ್ರಯತ್ನಗಳು:** (1) ವಿವಾರ, (2) ಸಂವಾರ, (3) ಶ್ವಾಸ, (4) ನಾದ, (5) ಘೋಷ, (6) ಅಘೋಷ, (7) ಅಲ್ಪಪ್ರಾಣ, (8) ಮಹಾಪ್ರಾಣ, (9) ಉದಾತ್ತ, (10) ಅನುದಾತ್ತ ಮತ್ತು (11) ಸ್ವರಿತ. 2. ಮಹಾಪ್ರಾಣ ಯತ್ನದಿಂದ ಉಚ್ಚರಿಸಲ್ಪಡುವ ವರ್ಣ (ಅಕ್ಷರ). **ಮಹಾಪ್ರಾಣ (ಬಾಹ್ಯ) ಪ್ರಯತ್ನದಿಂದ ಉಚ್ಚರಿಸಲ್ಪಡುವ ಅಕ್ಷರಗಳು:** ಕವರ್ಗ ಮೊದಲುಗೊಂಡು ಪ್ರತಿಯೊಂದು ವರ್ಗದ 2 ಮತ್ತು 4ನೆಯ ಅಕ್ಷರಗಳು. ख घ छ झ ठ ढ थ ध फ भ ಮತ್ತು श ष स ह ಇವು ಮಹಾಪ್ರಾಣ ವರ್ಣಗಳು. [**ಇಲ್ಲೊಂದು ತಿದ್ದುಪಡಿ:** ख घ छ झ ಮೊದಲಾದ ಮಹಾಪ್ರಾಣ ವರ್ಣಗಳು **ಅಭ್ಯಂತರ** ಪ್ರಯತ್ನದಿಂದ ಹುಟ್ಟಿದುವು ಎಂದು ಪ್ರಮಾದದಿಂದ ತಪ್ಪು ಬಿದ್ದಿರುವುದು. **"ಬಾಹ್ಯ ಮಹಾಪ್ರಾಣ ಪ್ರಯತ್ನ"** ಎಂದು ತಿದ್ದಿಕೊಳ್ಳಬೇಕು.] (ವಿಂ) 3. ಹೆಚ್ಚು ಶಕ್ತಿಯುಳ್ಳವನು. "एवं सुरगणान् क्रुद्धो भीषयन् वपुषा रिपून्। व्यनदत् सुमहाप्राणो येन लोका विचेतसः" भाग० ६-११-६। 4. ರಣಹದ್ದು, ಮಂಡಕಾಗೆ.

**महाफल ಮಹಾಫಲ** (ಪುಂ) 1. ಬಿಲ್ವವೃಕ್ಷ. (ನಂ) 2. ದೊಡ್ಡ ಫಲ. 3. ಅಧಿಕವಾದ ಪ್ರಯೋಜನ. (ವಿಂ)4. ದೊಡ್ಡ ಫಲವುಳ್ಳ. 5. ಅಧಿಕವಾದ ಪ್ರಯೋಜನವುಳ್ಳ.

**महाफला ಮಹಾಫಲಾ** (ಸ್ತ್ರೀಂ) 1. ಹಾವು ಮೆಕ್ಕೆ. 2. ದೊಡ್ಡ ಜಾತಿಯ ನೇರಳೆ ಗಿಡ, ರಾಜನೇರಳೆ. 3. ಕಹಿಸೋರೆ. 4. ಪಡವಲ ಗಿಡ.

**महाबल ಮಹಾಬಲ** (ಪುಂ) 1. ವೇಗವಾದ ವಾಯು. महत् बलं यस्य। "शुष्मिर्महाबलो वेगी नभोजातः सदागतिः" वैज०। 2. ವಿಷ್ಣು, ನಾರಾಯಣ. महत् बलम् अपरिमितक्रियत्वेऽपि अनाकलितश्रमत्वलक्षणशक्तिरस्य। "कर्त्रन्तरानपेक्षो यः सृष्टेः स स्यान्महाबलः" इति निरुक्तिः। "महोत्साहो महाबलः" वि० स०। 3. ಬುದ್ಧ. **ಬುದ್ಧನ ಹತ್ತು ಬಲಗಳು:** (1) दानम्, (2) शीलम्, (3) क्षमा, (4) वीर्यम्,

(5) ध्यानम्, (6) प्रज्ञा, (7) बलम्, (8) उपायः, (9) प्रणिधिः ಮತ್ತು (10) ज्ञानम्। (नं०) 4. ಸೀಸ ಲೋಹ. (वि०) 5. ಹೆಚ್ಚು ಬಲಶಾಲಿಯಾದ.

**महाबाहु ಮಹಾಬಾಹು** (पुं०) 1. ವಿಷ್ಣು, ನಾರಾಯಣ. (वि०) 2. ಉದ್ದವಾದ ತೋಳುಗಳುಳ್ಳವನು.

**महाबिल ಮಹಾಬಿಲ** (नं०) ಆಕಾಶ, ಅಂತರಿಕ್ಷ.

**महाभाग ಮಹಾಭಾಗ** (वि०) ಬಹಳ ಅದೃಷ್ಟಶಾಲಿ, ಪುಣ್ಯವಂತ, ದಶಾವಂತ. "महाभाग सदृशं खलु ते निर्माणस्य वचनमधुरतया" मालती० २।

**महाभाग्य ಮಹಾಭಾಗ್ಯ** (वि०) ಹೆಚ್ಚು ಅದೃಷ್ಟ, ಹೆಚ್ಚು ಐಶ್ವರ್ಯ, ಸಮೃದ್ಧಿ, ಅಭ್ಯುದಯ. महच्च तत् भाग्यं च।

**महाभारत ಮಹಾಭಾರತ** (नं०) ವ್ಯಾಸಮಹರ್ಷಿ ಪ್ರಣೀತವಾದ ಒಂದು ಇತಿಹಾಸ ಗ್ರಂಥ. महान्तं भारं तनोति — तनु (विस्तारे) "डः" (वा० ३-२-४८)। ಪೂರ್ವದಲ್ಲಿ ದೇವತೆಗಳೆಲ್ಲರೂ ಸೇರಿ ಒಂದು ತಕ್ಕಡಿಯಲ್ಲಿ ಒಂದು ಕಡೆ ನಾಲ್ಕು ವೇದಗಳನ್ನೂ ಇನ್ನೊಂದು ಕಡೆ ಮಹಾಭಾರತವನ್ನೂ ಇಟ್ಟು ತೂಗಿದರು. ನಾಲ್ಕು ವೇದಗಳಿಗಿಂತಲೂ ಮಹಾಭಾರತವೇ ಹೆಚ್ಚು ಭಾರವಾಗಿ ತೂಗಿತು. ಆಗಿನಿಂದ ವಿಷಯದ ಮಹತ್ತ್ವದಿಂದಲೂ ಗುರುತ್ವದಿಂದಲೂ ಈ ಗ್ರಂಥಕ್ಕೆ "ಮಹಾಭಾರತ"ವೆಂದು ಹೆಸರಾಯಿತು. "एकतश्चतुरो वेदा भारतं चैकदेशतः। पुरा किल सुरैः सर्वैः समेत्य तुलया धृतम्॥ चतुर्भ्यः सरहस्येभ्यो वेदेभ्यो ह्यधिकं यदा। तदाप्रभृति लोकेऽस्मिन् महाभारतमुच्यते॥ महत्त्वे च गुरुत्वे च ध्रियमाणं यतोऽधिकम्। महत्त्वाद्भारवत्त्वाच्च महाभारतमुच्यते" भा० आदि० १-२९७-९९। [ವಿವರಗಳಿಗೆ "भारत" ಪದದಲ್ಲಿ ನೋಡಿ.]

**महाभाष्य ಮಹಾಭಾಷ್ಯ** (नं०) 1. ದೊಡ್ಡ ವ್ಯಾಖ್ಯಾನ. 2. ಪತಂಜಲಿಮಹರ್ಷಿಯು ಪಾಣಿನಿಸೂತ್ರಗಳಿಗೆ ಬರೆದ ವ್ಯಾಕರಣ ಮಹಾಭಾಷ್ಯ.

**महाभीष्म ಮಹಾಭೀಷ್ಮ** (पुं०) ಶಂತನು ರಾಜ, ಭೀಷ್ಮನ ತಂದೆ. "महाभीष्मस्तु शन्तनुः प्रतीपः" त्रिकाण्ड०।

**महाभूत ಮಹಾಭೂತ** (पुं०) 1. ವಿಷ್ಣು, ನಾರಾಯಣ. महान्तः महात्मानः भूताः स्वभूता अस्य। "महाभूतो महात्मानः स्वभूता यस्यचोच्यते" इति निरुक्तिः। "महाभूतो महानिधिः" वि० स०। (नं०) 2. ಪೃಥಿವಿ ಜಲ ಆಕಾಶ ವಾಯು ಮತ್ತು ತೇಜಸ್ಸುಗಳೆಂಬ ಪಂಚಮಹಾಭೂತಗಳು. "तं वेधा विदधे नूनं महाभूतसमाधिना" रघु० १-२९।

**महाभैरव ಮಹಾಭೈರವ** (पुं०) 1. ಶರಭರೂಪಿಯಾದ ಪರಮೇಶ್ವರ. महान् भैरवः। (स्त्री०) **-भैरवी -ಭೈರವೀ.** 2. ಒಂದು ವಿದ್ಯೆ. "तन्महाभैरवीं विद्यां धर्मश्रद्धयोराहरणाय प्रस्थापयामः" प्रबोध० ३-२४।

**महाभोग ಮಹಾಭೋಗ** (वि०) 1. ಹೆಚ್ಚು ವೈಶಾಲ್ಯವುಳ್ಳ. महान् आभोगः पूर्णता यस्य। (स्त्री०) **-भोगा -ಭೋಗಾ.** 2. ದುರ್ಗಾದೇವಿ. महान् भोगः सुखरूपमस्याः। "महार्थसाधनी देवी महाभोगा ततः स्मृता" देवीपु०।

**महामनस् ಮಹಾಮನಸ್** (पुं०) 1. ಶರಭಮೃಗ. (वि०) 2. ದೊಡ್ಡ ಮನಸ್ಸುಳ್ಳ, ಉದಾರವಾದ ಮನಸ್ಸುಳ್ಳ. महत् उत्कृष्टं मनो यस्य।

**महामन्त्र ಮಹಾಮಂತ್ರ** (पुं०) ವೀರ್ಯವತ್ತಾದ ವೇದ ಮಂತ್ರ.

**महामांस ಮಹಾಮಾಂಸ** (नं०) ಪುರುಷನ ಮಾಂಸ. महत् निन्दितं मांसम्। "अशस्त्रपूतमव्याजं पुरुषाङ्गोपकल्पितम्। विक्रीयते महामांसं गृह्यतां गृह्यतामिति" मालती० ५-१२।

**महामात्र ಮಹಾಮಾತ್ರ** (पुं०) 1. ಪ್ರಧಾನಾಮಾತ್ಯ, ಮುಖ್ಯ ಮಂತ್ರಿ. महती मात्रा गौरवपरिमाणं यस्य। "मन्त्रे कर्मणि भूषायां वित्ते माने परिच्छदे। मात्रा च महती येषां महामात्रास्तु ते स्मृताः"। 2. ಮಾವಟಿಗರ ಯಜಮಾನ. "हस्त्यारोहा निषादिनः। तत्प्रधाना महामात्राः" वैज०। (वि०) 3. ಹೆಚ್ಚು ಐಶ್ವರ್ಯವಂತ, ದೊಡ್ಡ ಧನಿಕ. "लक्ष्मीवान् लक्ष्मणः श्रीलो महामात्रोऽधिकर्धिकः" वैज०।

**महामाया ಮಹಾಮಾಯಾ** (स्त्री०) ಅವಿದ್ಯೆ, ಒಂದು ವಸ್ತುವು ಮತ್ತೊಂದರಂತೆ ತೋರುವುದು. ಇದು ಜಗತ್ತಿಗೆ ಮೂಲಕಾರಣವಾದುದರಿಂದ ಮಹಾಮಾಯೆಯೆನಿಸುವುದು.

**महामाष ಮಹಾಮಾಷ** (पुं०) ಕಾರಾಮಣಿ, ಅಲಸಂದೆ.

**महामुनि ಮಹಾಮುನಿ** (पुं०) 1. ಅಗಸ್ತ್ಯಋಷಿ. 2. ಧನಿಯ, ಕೊತ್ತುಂಬರಿ. "अथ महामुनिः। अगस्तिकुस्तुम्बुरुणोः" हेम०।

**महामूल ಮಹಾಮೂಲ** (नं०) ರಾಜೀರುಳ್ಳಿ. महत् (वीर्यकारित्वात्) श्रेष्ठं मूलमस्य।

**महामूल्य ಮಹಾಮೂಲ್ಯ** (न०) 1. ಪದ್ಮರಾಗ, ಮಾಣಿಕ್ಯ. (वि०) 2. ಅಧಿಕ ಬೆಲೆಯುಳ್ಳ, ಹೆಚ್ಚು ಬೆಲೆ ಬಾಳುವ. "महामूल्यं महार्घे स्यात् पद्मरागमणावपि" विश्व० ।

**महामृग ಮಹಾಮೃಗ** (पुं०) 1. ಶರಭ, ಕಡವೆಮೃಗ. 2. ದೊಡ್ಡ ಮೃಗ, ಗಜ, ಆನೆ. महान् मृगः ।

**महामोह ಮಹಾಮೋಹ** (पुं०) 1. ಅರುಳು-ಮರಳು, ಬುದ್ಧಿನಾಶ, ಅವಿವೇಕ, ಅಜ್ಞಾನ. महान् मोहः । "वत्स, मया महामोहस्य विवेकसकाशादत्याहितं श्रुतम् । तेन तद्वृत्तान्तं प्रत्येतुमागतोऽस्मि" प्रबोध० २ । 2. ವಿಷಯೇಚ್ಛೆ, ಸುಖಾನುಭವದ ಆಸೆ. "तमोऽविवेको मोहः स्यात् अन्तःकरणविभ्रमः । महामोहस्तु विज्ञेयो ग्राम्यभोगसुखैषणा" ।

**महायज्ञ ಮಹಾಯಜ್ಞ** (पुं०) ಗೃಹಸ್ಥನು ಪ್ರತಿದಿನವೂ ಮಾಡಬೇಕಾದ ಪಂಚ ಮಹಾಯಜ್ಞಗಳು ; (1) ಬ್ರಹ್ಮಯಜ್ಞ (ವೇದಾಧ್ಯಯನ), (2) ದೇವಯಜ್ಞ (ಅಗ್ನಿಕಾರ್ಯ), (3) ಪಿತೃಯಜ್ಞ (ತರ್ಪಣ), (4) ಭೂತಯಜ್ಞ (ಬಲಿ) ಮತ್ತು (5) ಮನುಷ್ಯಯಜ್ಞ (ಅತಿಥಿಸತ್ಕಾರ). "अध्यापनं ब्रह्मयज्ञः पितृयज्ञस्तु तर्पणम् । होमो दैवो बलिर्भौतो नृयज्ञोऽतिथिपूजनम्" मनु० ३-७० ।

**महारजत ಮಹಾರಜತ** (न०) ಸುವರ್ಣ, ಚಿನ್ನ. महच्च तत् रजतं च ।

**महारजन ಮಹಾರಜನ** (न०) 1. ಕುಸುಂಬೆ ಹೂವು. 2. ಸ್ವರ್ಣ, ಚಿನ್ನ. "महारजनमुद्दिष्टं शातकुम्भकुसुम्भयोः" विश्व० ।

**महारथ ಮಹಾರಥ** (पुं०) 1. ದೊಡ್ಡ ರಥ. महान् रथः । 2. ಮಹಾಶೂರನಾದ ಯೋಧ. "एको दशसहस्राणि योधयेद्यस्तु धन्विनाम् । शस्त्रशास्त्रप्रवीणश्च विज्ञेयः स महारथः" । ಹತ್ತು ಸಹಸ್ರ ಯೋಧರೊಡನೆ ಯುದ್ಧಮಾಡಬಲ್ಲ ಮತ್ತು ಶಸ್ತ್ರವಿದ್ಯೆಯಲ್ಲಿ ನಿಪುಣನಾದ ಯೋಧನು ಮಹಾರಥ. 3. ತನ್ನನ್ನೂ ಸಾರಥಿಯನ್ನೂ ಕುದುರೆಗಳನ್ನೂ ರಕ್ಷಿಸಿಕೊಂಡು ಯುದ್ಧ ಮಾಡಬಲ್ಲವನು. "आत्मानं सारथिं चाश्वान् रक्षन् युध्येत यो नरः । स महारथसंज्ञः स्यात् इत्याहुर्नीतिकोविदाः" । "महारथः पुष्यरथं रथाङ्गी क्षिप्रं क्षपानाथ इवाधिरूढः" माघ० ३-२२ ।

**महारस ಮಹಾರಸ** (पुं०) 1. ಕಬ್ಬು. 2. ಖರ್ಜೂರದ ಮರ. महान् रसो यस्य । "इक्षुर्वृष्यो मधुतृणे मृत्युपुष्पो महारसः" वैज० । 3. ಬೆನ್ನುಮೂಳೆ. 4. ಪಾದರಸ. 5. ಗೂಡಿನಲ್ಲಿರುವ ರೇಷ್ಮೆಹುಳು. "महारसः स्यात् खर्जूरे कोशकारकशेरुणोः" मेदि० । (न०) 6. ಗಂಜಿ, ಅನ್ನದ ಮೇಲಿನ ಕೆನೆ. **–रसा –ರಸಾ.** 7. ವಿಷ್ಣುಕ್ರಾಂತ ಗಿಡ. "विष्णुक्रान्ता तु सुमुखी गवसी स्यान्महारसा" वैज० । 8. ನೀಲಿಗಿಡ. "श्रीफल्यां क्लीतकी नीली नीलकेशी महारसा" वैज० ।

**महाराज ಮಹಾರಾಜ** (पुं०) 1. ರಾಜ, ದೊರೆ, ಅರಸು. महांश्चासौ राजा च । 2. ನಾಟಕಗಳಲ್ಲಿ ರಾಜನನ್ನು ಸಂಬೋಧಿಸುವ ಗೌರವ ಪದ. "अथ नाट्योक्तयो राजा देवो भट्टारकोऽपि च । महाराजश्च" वैज० । 3. ನಖ, ಉಗುರು. "पुनर्भवः पाणिरुहो महाराजः पुनर्भवः" वैज० ।

**महाराजाधिराज ಮಹಾರಾಜಾಧಿರಾಜ** (पुं०) ಸಾರ್ವಭೌಮ, ಚಕ್ರವರ್ತಿ, ಸಾಮಂತ ರಾಜರ ಅಧಿಪತಿ, ಒಂದು ರಾಷ್ಟ್ರದ ಅಧಿಪತಿ, ಚಕ್ರಾಧಿಪತಿ.

**महाराजिक ಮಹಾರಾಜಿಕ** (पुं० ब० व०) ಗಣದೇವತೆಗಳು. महती राजिः पङ्क्तिर्येषाम् "कप्" (५-४-१५४)। "महाराजिकसाध्याश्च रुद्राश्च गणदेवताः" अम० ।

**महाराज्ञी ಮಹಾರಾಜ್ಞೀ** (स्त्री०) ಪಟ್ಟಮಹಿಷಿ, ಪಟ್ಟಾಭಿಷಿಕ್ತಳಾದ ರಾಜನ ಪತ್ನಿ.

**महारात्रि ಮಹಾರಾತ್ರಿ** (स्त्री०) 1. ರಾತ್ರಿಯ ಮಧ್ಯದ ಎರಡು ಜಾವಗಳ ಕಾಲ. "महानिशा" ಪದದಲ್ಲಿ ನೋಡಿ. 2. ಮಹಾಪ್ರಳಯ, ಬ್ರಹ್ಮನ ನೂರು ವರ್ಷಗಳ ಆಯಸ್ಸು ಕಳೆದ ನಂತರದ ಕಾಲ, ಮಹಾಕಲ್ಪ. "ब्रह्मणश्च निपाते च महाकल्पो भवेन्नृप । प्रकीर्तिता महारात्रिः" ।

**महाराष्ट्र ಮಹಾರಾಷ್ಟ್ರ** (पुं०) 1. ಒಂದು ದೊಡ್ಡ ದೇಶ. महान् राष्ट्रः । 2. ಮಹಾರಾಷ್ಟ್ರ ದೇಶ. (पुं० ब० व०) 3. ಮಹಾರಾಷ್ಟ್ರ ದೇಶದ ಜನರು.

**महाराष्ट्री ಮಹಾರಾಷ್ಟ್ರೀ** (स्त्री०) 1. ಮಹಾರಾಷ್ಟ್ರ ದೇಶದ ಭಾಷೆ, ಪ್ರಾಕೃತಭಾಷೆಯ ಒಂದು ಭೇದ. "महाराष्ट्राश्रयां भाषां प्रकृष्टं प्राकृतं विदुः" काव्या० १-३४ । 2. ನೀರುಹಿಪ್ಪಲಿ. स देशः कारणत्वेनास्त्यस्याः "अच्" (५-२-१२७)। "ङीष्" (४-१-४१)।

**महारोग ಮಹಾರೋಗ** (पुं०) ಎಂಟು ವಿಧ ಮಹಾವ್ಯಾಧಿಗಳು : (1) उन्मादः, (2) राजयक्ष्मा (ಕ್ಷಯರೋಗ), (3) श्वासः (ದಮ್ಮು ಉಬ್ಬಸ), (4) त्वग्दोषः (ಚರ್ಮವ್ಯಾಧಿ), (5) मधुमेहः (ಮೂತ್ರರೋಗ.),

(6) अश्मरी (ಮೂತ್ರಾತಿಸಾರ, ಸಕ್ಕರೆರೋಗ), (7) उदररोग: (ಹೊಟ್ಟೆಶೂಲೆ) ಮತ್ತು (8) भगन्दर (ಆಸನವ್ರಣ, ನಾಡೀವ್ರಣ). "उन्मादो राजयक्ष्मा च श्वासस्त्वग्दोष एव च। मधुमेहश्चाश्मरी च तथोदरभगन्दरौ। इत्येतेऽष्टौ महारोगा महापातकसंभवाः"।

**महारौरव ಮಹಾರೌರವ** (पुं०) ಇಪ್ಪತ್ತೆಂಟು ವಿಧ ನರಕಗಳಲ್ಲೊಂದು. [ವಿವರಕ್ಕೆ "नरक" ಪದದಲ್ಲಿ ನೋಡಿ.]

**महार्घ ಮಹಾರ್ಘ** (वि०) 1. ಬಹು ಬೆಲೆ ಬಾಳುವ. महान् अर्घो मूल्यं यस्य। (पुं०) 2. ಲಾವಕ್ಕಿ. "महार्घस्तु महामूल्ये तथा लावकपक्षिणि" विश्व०।

**महार्णव ಮಹಾರ್ಣವ** (पुं०) ದೊಡ್ಡ ಸಮುದ್ರ, ತುಂಬಿದ ಸಮುದ್ರ. महान् अर्णवः। पूर्णश्चन्द्रोदयाकाङ्क्षी दृष्टान्तोऽत्र महार्णवः" माघ० २-३१।

**महार्बुद ಮಹಾರ್ಬುದ** (न०) ಹತ್ತು ಅರ್ಬುದ, ನೂರು ಕೋಟಿ ಸಂಖ್ಯೆ.

**महार्ह ಮಹಾರ್ಹ** (वि०) ಹೆಚ್ಚು ಬೆಲೆ ಬಾಳುವ, ಅಧಿಕ ಬೆಲೆಯುಳ್ಳ. महान् अर्हः मूल्यं यस्य। "महार्हशय्यापरिवर्तनच्युतैः" कुमा० ५-१२।

**महालय ಮಹಾಲಯ** (पुं०) 1. ದೊಡ್ಡ ಮನೆ, ವಿಶಾಲವಾದ ಮತ್ತು ಎತ್ತರವಾದ ಮನೆ. महान् आलयः। 2. ದೇವಾಲಯ, ಗುಡಿ. 3. ತೀರ್ಥಸ್ಥಾನ, ಪುಣ್ಯಕ್ಷೇತ್ರ. 4. ಕನ್ಯಾಮಾಸದ ಕೃಷ್ಣಪಕ್ಷ. 5. ಯಾತ್ರಾಸ್ಥಳ. 6. ಪರಮಾತ್ಮ. महान् लयोऽत्र।

**महालक्ष्मी ಮಹಾಲಕ್ಷ್ಮೀ** (स्त्री०) 1. ಲಕ್ಷ್ಮೀದೇವಿ, ಮಹಾವಿಷ್ಣುವಿನ ಪತ್ನಿ. 2. ಎಂಟು ಭುಜಗಳಿಂದ ಕೂಡಿದ ದುರ್ಗಾದೇವಿ. "सेवे सैरिभमर्दिनीमिह महालक्ष्मीं सरोजस्थिताम्"।

**महावराह ಮಹಾವರಾಹ** (पुं०) ಆದಿವರಾಹ, ಹಿರಣ್ಯಾಕ್ಷನ ಸಂಹಾರಕ್ಕಾಗಿ ಮಹಾವಿಷ್ಣುವು ಕೈಗೊಂಡ ಮೂರನೆಯ ಅವತಾರ. "समुज्जिहीर्षुं जगतीं महाभरां महावराहं महतोऽर्णवादिव" किरा० १४-४०। "महावराहो गोविन्दः" वि० स०।

**महावरोह ಮಹಾವರೋಹ** (पुं०) ಆಲದಮರ, ವಟವೃಕ್ಷ. महान् अवरोहो यस्य।

**महावाक्य ಮಹಾವಾಕ್ಯ** (न०) ಅನೇಕ ಅವಾಂತರ ವಾಕ್ಯಗಳಿಂದ ಕೂಡಿದ ಒಂದು ದೊಡ್ಡ ವಾಕ್ಯ, ದೀರ್ಘವಾದ ವಾಕ್ಯ, ವಾಕ್ಯಗಳ ಸಮುದಾಯ. ಮಹಾರ್ಥವನ್ನು ಕೊಡುವ ವಾಕ್ಯ.

**महाविद्या ಮಹಾವಿದ್ಯಾ** (स्त्री०) ಹತ್ತು ವಿಧ ವಿದ್ಯೆಗಳಲ್ಲೊಂದು.

**महाविष ಮಹಾವಿಷ** (पुं०) ಎರಡು ತಲೆ ಹಾವು. महत् उत्कटं विषमस्य।

**महाविषुव ಮಹಾವಿಷುವ** (न०) ಮೇಷಸಂಕ್ರಾಂತಿ. महच्च तत् विषुवच्च—"वः" (५-२-१०१)। ಇಲ್ಲಿ विषु ಪದಕ್ಕೆ "व" ಪ್ರತ್ಯಯ ವಿಹಿತವಾಗಿದೆ.

**महाविष्णु ಮಹಾವಿಷ್ಣು** (पुं०) 1. ಶ್ರೀಮನ್ನಾರಾಯಣ. 2. ಕಪಿಲ ಮಹರ್ಷಿ. "कपिलस्तु महाविष्णुः" वैज०।

**महावीचि ಮಹಾವೀಚಿ** (पुं०) ಇಪ್ಪತ್ತೆಂಟು ನರಕಗಳಲ್ಲಿ ಒಂದು ನರಕ. महान् अवीचिरत्र।

**महावीर ಮಹಾವೀರ** (पुं०) 1. ಗರುಡ. 2. ಸಿಂಹ, 3. ಯಾಗದ ಅಗ್ನಿ. 4. ಇಂದ್ರನ ವಜ್ರಾಯುಧ. 5. ಬಿಳಿ ಕುದುರೆ. 6. ಗಿಡಗ, ಡೇಗೆ ಹಕ್ಕಿ. "महावीरस्तु गरुडे शूरे सिंहे मखानले। वज्रे श्वेततुरङ्गे च सञ्चानविहगेऽपि च" मेदि०। 7. ಕೋಗಿಲೆ. 8. ಪಕ್ಷಿ, ಹಕ್ಕಿ. 9. ಪುತ್ರ, ಮಗ. 10. ಹಂಸ. 11. ವಿಷ್ಣು. 12. ಯಾಗದ ಪಾತ್ರೆ. 13. ಒಳ್ಳೆಯ ಯೋಧ, ಉತ್ತಮ ಸೈನಿಕ. 14. ಅಗ್ನಿ. (वि०) 15. ಶ್ರೇಷ್ಠವಾದ, ಉತ್ತಮವಾದ. 16. ಶೂರ, ಪರಾಕ್ರಮಿ. "महावीरो यज्ञपात्रे गरुडे सुभटे खगे। वज्रेऽश्वे तनये हंसे शूरेऽग्नौ प्रवरे हरौ" वैज०। "महावीरः पवौ तार्क्ष्ये शूरे सिंहेऽपि कोकिले" विश्व०।

**महावीरचरित ಮಹಾವೀರಚರಿತ** (न०) ಭವಭೂತಿ ಕವಿ ರಚಿತವಾದ ಒಂದು ನಾಟಕ.

**महावीर्य ಮಹಾವೀರ್ಯ** (पुं०) 1. ಪರಮಾತ್ಮ. 2. ವಾರಾಹಿ ಗಿಡ. (वि०) 3. ಹೆಚ್ಚು ಬಲವುಳ್ಳವನು. (स्त्री०) **-वीर्या -ವೀರ್ಯಾ.** 4. ಸೂರ್ಯನ ಪತ್ನಿ, ಸಂಜ್ಞಾದೇವಿ. "त्रसरेणुर्महावीर्या स्वातिसूर्या सुवर्चला" त्रिकाण्ड०। 5. ಕಾಡುಹತ್ತಿ ಗಿಡ.

**महाव्यसन ಮಹಾವ್ಯಸನ** (न०) ದುರ್ಮಾರ್ಗ, ಕೆಟ್ಟ ಚಾಳಿ, ತಪ್ಪುದಾರಿ, ದುರ್ನಡತೆ. **ಮಹಾವ್ಯಸನವು ಏಳು ವಿಧ:** (1) मृगया (ಬೇಟೆ), (2) अक्षः (ಪಗಡೆಯಾಟ), (3) स्त्रियः (ಪರಸ್ತ್ರೀ ಸಹವಾಸ), (4) पानम् (ಕುಡಿತ), (5) वाक्पारुष्यम् (ಕಠಿನವಾಗಿ ಮಾತಾಡುವಿಕೆ, ಮನನೋಯಿಸುವಂತೆ ಮಾತಾಡುವುದು), (6) अर्थदूषणम् (1. ದುಂದುವೆಚ್ಚ. 2. ಇನ್ನೊಬ್ಬನ ಆಸ್ತಿ ಹಾಳುಮಾಡುವುದು. 3. ಅಪಾರ್ಥಮಾಡುವುದು) ಮತ್ತು

(7) दण्डपारुष्यम् (ಕಠಿನ ಶಿಕ್ಷೆ ಕೊಡುವುದು). "मृगयाक्षाः स्त्रियः पानं वाक्पारुष्यार्थदूषणे। दण्डपारुष्यमित्येतत् महाव्यसनसप्तकम्" वैज०।

**महाव्याहृति ಮಹಾವ್ಯಾಹೃತಿ** (स्त्री०) ಪ್ರಣವಪೂರ್ವಕವಾದ ಭೂರ್ಭುವಃ ಸುವಃ ಎಂಬ ಮೂರು ವ್ಯಾಹೃತಿಗಳು. "ओंकारपूर्विकास्तिस्रः महाव्याहृतयोऽव्ययाः। त्रिपदा चैव सावित्री विज्ञेयं ब्रह्मणो मुखम्" मनु० २-८१।

**महाव्रत ಮಹಾವ್ರತ** (न०) 1. ದೊಡ್ಡ ವ್ರತ, ದೊಡ್ಡ ನಿಯಮ, ಮತಸಂಬಂಧವಾದ ದೊಡ್ಡ ಕಾರ್ಯಾಚರಣೆ. महत् व्रतम्। "तीव्रं महाव्रतमिवात्र चरन्ति वप्राः" माघ० ४-५८। 2. ಮುಖ್ಯ ಕಾರ್ಯ, ಪ್ರಧಾನವಾದ ಧರ್ಮ, ಅವಶ್ಯವಾದ ಕಾರ್ಯ. "प्राणैरपि हिता वृत्तिरद्रोहो व्याजवर्जनम्। आत्मनीव प्रियाधानमेतन्मैत्रीमहाव्रतम्" म० वी० ५-५१।

**महाशङ्ख ಮಹಾಶಂಖ** (पुं०) 1. ಶಂಖು, ದೊಡ್ಡ ಶಂಖ. 2. ಮನುಷ್ಯನ ಎಲುಬು. 3. ಒಂದು ಸಂಖ್ಯೆ 1000000000000. ["परार्घ" ಪದದಲ್ಲಿ ನೋಡಿ.] 4. ಲಲಾಟ, ಹಣೆ. "महाशङ्खो मनुष्यास्थिसंख्याभेदालिकेषु च" मेदि०। 5. ಕುಬೇರನ ನವನಿಧಿಗಳಲ್ಲೊಂದು. "महाशङ्खो निधिभेदे संख्याभेदे नरास्थिनि" हेम०।

**महाशठ ಮಹಾಶಠ** (पुं०) 1. ದತ್ತೂರಿ ಗಿಡ. (वि०) 2. ದೊಡ್ಡ ಧೂರ್ತ, ಮಹಾ ವೇಷಧಾರಿ, ಮೋಸಗಾರ.

**महाशय ಮಹಾಶಯ** (पुं०) ಮಹಾತ್ಮ, ಮಹಾನುಭಾವ, ಉದಾರವಾದ ಮನಸ್ಸುಳ್ಳವನು. महान् उदारः आशयो यस्य।

**महाशल्क ಮಹಾಶಲ್ಕ** (पुं०) ಒಂದು ಜಾತಿಯ ಸಮುದ್ರದ ಮೀನು.

**महाशुक्ति ಮಹಾಶುಕ್ತಿ** (स्त्री०) ಮುತ್ತಿನ ಚಿಪ್ಪು. महती शुक्तिः।

**महाशूद्र ಮಹಾಶೂದ್ರ** (पुं०) 1. ಗೊಲ್ಲ, ಗೋಪಾಲಕ. स्त्रियां "ङीष्" (४-१-६३)। **-शूद्री -ಶೂದ್ರೀ.** ಗೊಲ್ಲರ ಜಾತಿಯ ಹೆಂಗಸು. "आभीरस्तु महाशूद्रः गोपो गोसंख्यगोदुहौ" वैज०। "आभीरी तु महाशूद्री" अम०। 2. ಉತ್ತಮ ಸ್ಥಿತಿಯಲ್ಲಿರುವ ಶೂದ್ರ.

**महाश्वास ಮಹಾಶ್ವಾಸ** (पुं०) ಕಾಸರೋಗ, ದಮ್ಮು, ಉಬ್ಬಸ.

**महाश्वेता ಮಹಾಶ್ವೇತಾ** (स्त्री०) 1. ಸರಸ್ವತಿ. महान् श्वेतो वर्णो यस्याः। 2. ನೀಲಿ ವಿಷ್ಣುಕ್ರಾಂತ. "विष्णुक्रान्ता परास्फोताश्वखुरी शीतलाऽत्र तु। नीलायां तु महाश्वेता" वैज०।

**महाषष्ठी ಮಹಾಷಷ್ಠೀ** (स्त्री०) ದುರ್ಗಾದೇವಿ. "ओं दुं दुं दुं दुर्गे दुर्गं नाशय नाशय हन हन दह दह मथ मथ वध वध सर्वहिंस्रान् महाषष्ठीरूपेण बालकं रक्ष रक्ष चिरजीविनं कुरु श्रीं ह्रीं ह्रूं फट् स्वाहा" महाषष्ठीकवचम्।

**महाष्टमी ಮಹಾಷ್ಟಮೀ** (स्त्री०) ಆಶ್ವಯುಜ ಶುಕ್ಲ ಪಕ್ಷದ ಅಷ್ಟಮಿ. महत्याः महादेव्याः अष्टमी। "आश्विने शुक्लपक्षस्य भवेद्या अष्टमीतिथिः। महाष्टमीति सा प्रोक्ता देव्याः प्रीतिकरा परा" कालिकापु०।

**महासत्त्व ಮಹಾಸತ್ತ್ವ** (पुं०) 1. ಒಂದು ದೊಡ್ಡ ಪ್ರಾಣಿ. (वि०) 2. ದೃಢವಾದ ಮನಸ್ಸುಳ್ಳವನು, ಸಂತೋಷ ಮತ್ತು ದುಃಖಗಳಿಂದ ಮನಸ್ಸು ಕೆಡದವನು. "अविकत्थनः क्षमावानतिगम्भीरो महासत्त्वः" सा० द०। 3. ಪ್ರಾಮಾಣಿಕ, ನೀತಿಜ್ಞ.

**महासर्ग ಮಹಾಸರ್ಗ** (पुं०) ಮಹಾಪ್ರಳಯದನಂತರ ಪುನಃ ನಡೆಯುವ ಜಗತ್ತಿನ ಸೃಷ್ಟಿ.

**महासर्ज ಮಹಾಸರ್ಜ** (पुं०) 1. ಪನಸವೃಕ್ಷ, ಹಲಸಿನ ಮರ. 2. ಹೊನ್ನೆಮರ.

**महासहा ಮಹಾಸಹಾ** (स्त्री०) 1. ದೊಡ್ಡ ಗೋರಂಟಿ. "अम्लानस्तु महासहा" अम०। 2. ಕಾಡುದ್ದಿನ ಗಿಡ. "माषपर्णी महासहा" अम०।

**महासुप्ति ಮಹಾಸುಪ್ತಿ** (स्त्री०) ಚತುರ್ಮುಖ ಬ್ರಹ್ಮನ ನಿದ್ರಾಸಮಯ, ಬ್ರಹ್ಮನ ರಾತ್ರಿ. "चतुर्युगसहस्रं तु कल्पस्तद्ब्रह्मणो दिनम्। तद्रात्रौ तु महासुप्तिः समसुप्तिर्जगत्क्षयः" वैज०।

**महासेन ಮಹಾಸೇನ** (पुं०) 1. ಸ್ಕಂದ, ಕುಮಾರಸ್ವಾಮಿ, ಷಣ್ಮುಖ. महती सेना यस्य। (वि०) 2. ದೊಡ್ಡ ಸೈನ್ಯ ಹೊಂದಿರುವ ಸೇನಾಪತಿ.

**महि ಮಹಿ** (स्त्री०) 1. ಭೂಮಿ. मह (पूजायाम्) "इः" (उ० ४-१३१)। वा "ङीष्" (ग० ४-१-४५)। **मही ಮಹೀ.** 2. ಮಹತ್ತತ್ತ್ವ. "विज्ञानशक्ति महिमामनन्ति सर्वात्मनोऽन्तःकरणं गिरित्रम्" भाग० २-१-३५। 3. ಮಹಿಮೆ. "तत ऐरावतो नाम वारणेन्द्रो विनिर्गतः। दन्तैश्चतुर्भिः श्वेताद्रेः हरन् भगवतो महिम्" भाग० ८-८-४।

**महिका ಮಹಿಕಾ** (स्त्री०) ಹಿಮ, ಮಂಜು. मह (पूजायाम्) "क्वुन्" (उ० २-३२)।

**महित** ಮಹಿತ (वि०) 1. ಪೂಜಿಸಲ್ಪಟ್ಟ, ಗೌರವಿಸಲ್ಪಟ್ಟ. मह (पूजायाम्) "क्तः" (३-२-१०२)। "गुणसंपदा समधिगम्य संपदं महिमानमत्र महिते जगताम्" किरा० ५-२४। 2. ಶ್ಲಾಘ್ಯವಾದ, ಶ್ರೇಷ್ಠವಾದ, ಪೂಜ್ಯವಾದ. "विविधकाममहिता महिताम्भसः स्फुटसरोजवना जवना नदीः" किरा० ५-७।

**महिन** ಮಹಿನ (न०) ರಾಜ್ಯ. मह्यते—मह (पूजायाम्) "इनन्" (उ० २-५७)। महिनम् राज्यम् सि० कौ०।

**महिमन्** ಮಹಿಮನ್ (पुं०) 1. ಮಹತ್ತ್ವ, ಉತ್ಕರ್ಷ, ಘನತೆ, ಹಿರಿಮೆ. महतो भावः — महत् "इमनिच्" (५-१-१२२)। "तृप्तियोगः परेणापि न महिम्ना महात्मनाम्" माघ० २-३१। 2. ಅಣಿಮಾದಿ ಎಂಟು ಐಶ್ವರ್ಯಗಳಲ್ಲಿ ಒಂದು. 3. ಶಕ್ತಿ, ಪ್ರಭಾವ. "तिसृभिस्त्वमवस्थाभिः महिमानमुदीरयन्" कुमा० २-६। "प्रायः स्वं महिमानं क्षोभात्प्रतिपद्यते हि जनः" शाकु० ६-३१।

**महिर** ಮಹಿರ (पुं०) 1. ಸೂರ್ಯ. 2. ಅರ್ಕವೃಕ್ಷ, ಎಕ್ಕದ ಗಿಡ. "मिहिरमहिरपीथाः कालकृत्पद्मपाणिः समणिरथशूरावंशुमानंशुमाली" त्रिकाण्ड०।

**महिला** ಮಹಿಲಾ (स्त्री०) 1. ಹೆಂಗಸು. मह्यते — मह (पूजायाम्) "इलच्" (उ० १-५४)। "चित्रं दिदर्शयिषुणा जनितस्य यस्यां मध्यं विनैव विधिना महिलाजनस्य" चं० भा०। 2. ಪ್ರಿಯಂಗು ಲತೆ, ಪ್ರೇಂಕಣ ಗಿಡ. "महिला फलिनीस्त्रियोः" मेदि०।

**महिष** ಮಹಿಷ (पुं०) 1. ಎಮ್ಮೆ, ಕೋಣ. मह (पूजायाम्) "टिषच्" (उ० १-४५)। "महिषक्षतागुरुतमालनलदसुरभिः सदागतिः" किरा० १२-५०। स्त्रियां "ङीष्" (४-१-६३)। **महिषी** ಮಹಿಷೀ. 2. ಮಹಿಷಾಸುರ.

**महिषमर्दिनी** ಮಹಿಷಮರ್ದಿನೀ (स्त्री०) ಮಹಿಷಾಸುರನನ್ನು ಸಂಹರಿಸಿದ ಚಾಮುಂಡಾದೇವಿ, ದುರ್ಗಾದೇವಿ. महिषं महिषासुरं मृद्नाति — मृद (क्षोदे) "णिनिः" (३-१-१३४)। "ङीष्" (४-१-५)।

**महिषवाहन** ಮಹಿಷವಾಹನ (पुं०) ಯಮಧರ್ಮರಾಯ.

**महिषासुर** ಮಹಿಷಾಸುರ (पुं०) ಮಹಿಷನೆಂಬ ರಾಕ್ಷಸ. [ಇಂದ್ರನು ದಿತಿಯ ಮಕ್ಕಳನ್ನೆಲ್ಲಾ ಸಂಹರಿಸಲು ದಿತಿಯು ಮಕ್ಕಳಿಲ್ಲದೆ ಸುಪಾರ್ಶ್ವಋಷಿಯ ಆಶ್ರಮದಲ್ಲಿ ಎಮ್ಮೆಯಂತೆ ನಿಂತು ತಪಸ್ಸುಮಾಡುತ್ತಿದ್ದಾಗ ಬ್ರಹ್ಮನು ಅಲ್ಲಿಗೆ ಬಂದು ನಿನಗೆ ಬಲಶಾಲಿಯಾದ ಮಗನು ಹುಟ್ಟುವನೆಂದು ಹೇಳಿ ಹೋದನು. ಸುಪಾರ್ಶ್ವಋಷಿಯು ನಿನಗೆ ಕೋಣದಂತೆ ಮಗನು ಹುಟ್ಟಲಿ ಎಂದು ಹೇಳಲಾಗಿ ಮತ್ತೆ ಬ್ರಹ್ಮನನ್ನು ಬೇಡಲು ಮುಖವು ಮಾತ್ರ ಎಮ್ಮೆಯಂತೆಯೂ ಮೈಯೆಲ್ಲಾ ಪುರುಷಾಕೃತಿಯಾಗಿಯೂ ಇರುವುದೆಂದು ಹೇಳಿದನು. ಅದರಂತೆ ಬಹಳ ಬಲಶಾಲಿಯಾದ ಮಹಿಷಾಸುರನು ಹುಟ್ಟಿ ಪರಶಿವನಿಂದ ಹೆಂಗಸಿನಿಂದ ಮಾತ್ರ ತನಗೆ ಮರಣವಾಗಬೇಕೆಂಬ ವರವನ್ನು ಪಡೆದನು. ಇವನ ಹಿಂಸೆಯನ್ನು ತಡೆಯಲಾರದ ದೇವತೆಗಳು ತಮ್ಮ ತೇಜಸ್ಸಿನಿಂದ ಸುಂದರಿಯೊಬ್ಬಳನ್ನು ಸೃಷ್ಟಿಸಿ ಅವಳಿಗೆ ತಮ್ಮ ಆಯುಧಗಳನ್ನು ಕೊಟ್ಟರು. ಈ ತ್ರಿಪುರಸುಂದರಿಯು ಹಿಮವತ್ಪರ್ವತದಲ್ಲಿ ವಿಹರಿಸುತ್ತಿದ್ದಾಗ ಮಹಿಷನು ಇವಳನ್ನು ಮೋಹಿಸಿ ಯುದ್ಧದಲ್ಲಿ ಇವಳಿಂದ ಹತನಾದನು.] शिवपु०।

**महिषी** ಮಹಿಷೀ (स्त्री०) 1. ಎಮ್ಮೆ. 2. ರಾಜನ ಪಟ್ಟಾಭಿಷಿಕ್ತಳಾದ ಪತ್ನಿ, ರಾಜನ ಮುಖ್ಯ ಪತ್ನಿ. "इत्थं व्रतं धारयतः प्रजार्थं समं महिष्या महनीयकीर्तेः" रघु० २-२५। "महिषी पशुराट्पत्न्योः" वैज०। 3. ಪುಷ್ಯಮಾಸದ ಹುಣ್ಣಿಮೆ. "पौषी तु महिषी मता" वैज०।

**मही** ಮಹೀ (स्त्री०) 1. ಭೂಮಿ. मह (पूजायाम्) "इः" (उ० ४-१३९)। महिः वा "ङीष्" (ग० ४-१-४५)। "अस्तशैलगहनं नु विवस्वानाविवेश जलधिं नु महीं नु" किरा० ९-७। 2. ಒಂದು ಹೊಳೆ. "मही नद्यन्तरे भूमौ मह उत्सवतेजसोः" मेदि०। 3. ರಾಜ್ಯ, ದೇಶ. "कृतप्रणामस्य महीं महीभुजे जितां सपत्नेन निवेदयिष्यतः" किरा० १-२।

**महीक्षित्** ಮಹೀಕ್ಷಿತ್ (पुं०) ರಾಜ, ದೊರೆ. मह्यां क्षियति—क्षि (निवासगत्योः) "क्विप्" (३-२-७६)। "आसीन्महीक्षितामाद्यः प्रणवश्छन्दसामिव" रघु० १-११।

**महीज** ಮಹೀಜ (पुं०) 1. ಅಂಗಾರಕ, ಕುಜಗ್ರಹ. मह्या जायते — जनी (प्रादुर्भावे) "डः" (३-२-९८)। 2. ನರಕಾಸುರ. 3. ವೃಕ್ಷ, ಮರ. (न०) 4. ಹಸಿಶುಂಠಿ. (स्त्री०) **-जा -ಜಾ.** 5. ಸೀತಾದೇವಿ.

**महीतल** ಮಹೀತಲ (न०) ಭೂಮಿ. मह्याः तलम्। "निजौजसोज्जासयितुं जगद्द्रुहामुपाजिहीथा न महीतलं यदि" माघ० १-३७।

**महीधर** ಮಹೀಧರ (पुं०) 1. ಪರ್ವತ, ಬೆಟ್ಟ. धरति —धृञ् (धारणे) "अच्" (३-१-१३४)। मह्याः

धरः। "महीधरं मार्गवशादुपेतं स्रोतोवहा सागरगामिनीव" रघु० ६-५२। 2. ವಿಷ್ಣು. "महीधरो महाभागो वेगवानमिताशनः" वि० स०।

**महीध्र ಮಹೀಧ್ರ** (पुं०) 1. ಪರ್ವತ, ಬೆಟ್ಟ. महीं धरति—धृञ् (धारणे) "कः" (वा० ३-२-५)। "यियासतस्तस्य महीध्ररन्ध्रभिदापटीयान् पटहप्रणादः" माघ० ३-२४। 2. ವಿಷ್ಣು.

**महीप ಮಹೀಪ** (पुं०) ರಾಜ, ದೊರೆ. महीं पाति—पा (रक्षणे) "कः" (३-२-३)।

**महीपति ಮಹೀಪತಿ** (पुं०) ರಾಜ, ದೊರೆ, ಅರಸು. मह्याः पतिः। "उपसान्त्वयितुं महीपतिर्द्विरदं दुष्टमिवोपचक्रमे" किरा० २-२५। **-पालः -ಪಾಲಃ.** "अलं महीपाल तव श्रमेण प्रयुक्तमप्यस्त्रमितो वृथा स्यात्" रघु० २-३४।

**महीभुज् ಮಹೀಭುಜ್** (पुं०) ರಾಜ, ದೊರೆ. महीं भुङ्क्ते—भुज (परिपालने) "क्विप्" (३-२-७६)। "प्रविश्य कृष्णासदनं महीभुजा तदाचचक्षेऽनुजसन्निधौ वचः" किरा० १-२६।

**महीभृत् ಮಹೀಭೃತ್** (पुं०) 1. ರಾಜ, ದೊರೆ. महीं बिभर्ति—डु भृञ् (धारणपोषणयोः) "क्विप्" (३-२-७६)। "दीपितस्त्वमनुभावसंपदा गौरवेण लघयन् महीभृतः" किरा० १३-३८। "सौगतानामिवात्मान्यो नास्ति मन्त्रो महीभृताम्" माघ० २-२८। 2. ಪರ್ವತ, ಬೆಟ್ಟ, ಗಿರಿ. "महीभृता पक्षवतेव भिन्ना विगाह्य मध्यं परवारणेन" किरा० १६-१३।

**महीयस् ಮಹೀಯಸ್** (वि०) 1. ಇಬ್ಬರಲ್ಲಿ ಬಹಳ ದೊಡ್ಡವನಾದ ಒಬ್ಬ, -ಬಹಳ ಶ್ರೇಷ್ಠನಾದ. अनयोरतिशयेन महान्—महत् "ईयसुन्" (५-३-५७)। "विरराम महीयांसः प्रकृत्या मितभाषिणः" माघ० २-१३। "महीयसां महति दिगन्तदन्तिनामनीकजे रजसि मुखानुषङ्गिनि" माघ० १७-५७। 2. ಎರಡರಲ್ಲಿ ಹೆಚ್ಚು ದೊಡ್ಡದಾದ ಒಂದು. "मुहुर्महिम्ना महसां महीयसाम्" माघ० १-६२। स्त्रियां "ङीप्" (४-१-५)। **महीयसी ಮಹೀಯಸೀ.**

**महीरुह् ಮಹೀರುಹ್** (पुं०) ವೃಕ್ಷ, ಮರ. मह्यां रोहति—रुह (बीजजन्मादौ) "क्विप्" (३-२-७६)। "यत्राधिरूढेन महीरुहोच्चैरुन्निद्रपुष्पाक्षिसहस्रभाजा" माघ० ४-१३।

**महीरुह ಮಹೀರುಹ** (पुं०) ವೃಕ್ಷ, ಮರ. मह्यां रोहति—रुह (बीजजन्मादौ) "कः" (३-१-१३५)। "दघुरायतवल्लिवेष्टितानामुपमानं मनुजा महीरुहाणाम्" माघ० २०-४९।

**महीलता ಮಹೀಲತಾ** (स्त्री०) ಎರುಬುಹುಳ, ಕೆಸರಿನ ಹುಳ, ಮಳೆಹುಳ. मह्या लतेव।

**महीसुत ಮಹೀಸುತ** (पुं०) ಭೂಮಿಯ ಪುತ್ರ (1) ಅಂಗಾರಕ. (2) ನರಕಾಸುರ. मह्याः सुतः। (स्त्री०) **-सुता -ಸುತಾ.** (3) ಸೀತಾದೇವಿ.

**महीसुर ಮಹೀಸುರ** (पुं०) ಭೂದೇವತೆ, ವಿಪ್ರ, ಪ್ರಥಮ ವರ್ಣದವನು. मह्याः सुर इव। "उच्चैर्गतिर्जगति सिद्ध्यति धर्मतश्चेत्तस्य प्रमा च वचनैः कृतकेतरैश्चेत्। तेषां प्रकाशनदशा च महीसुरैश्चेत् तानन्तरेण निपतेत् क्व नु मत्प्रणामः" चं० रा०।

**महीसूनु ಮಹೀಸೂನು** (पुं०) ಭೂಮಿಯ ಮಗ (1) ಅಂಗಾರಕ, ಕುಜಗ್ರಹ. (2) ನರಕಾಸುರ. मह्याः सूनुः।

**महेच्छ ಮಹೇಚ್ಛ** (वि०) 1. ಮಹಾಶಯ, ದೊಡ್ಡ ಮನಸ್ಸುಳ್ಳವನು, ಉದಾರವಾದ ಮನಸ್ಸುಳ್ಳವನು. महती इच्छा यस्य। "महीं महेच्छः परिकीर्य सूनौ मनीषिणे जैमिनयेऽर्पितात्मा" रघु० १८-३३। 2. ದೊಡ್ಡ ಆಸೆಯುಳ್ಳವನು, ಹಿರಿಮೆಯಲ್ಲಿ ಆಸೆಯುಳ್ಳವನು, ಯಶಸ್ಸನ್ನು ಅಪೇಕ್ಷಿಸುವವನು. "विद्यावतां महेच्छानां शिल्पविक्रमशालिनाम्" पञ्चतं० १-३८।

**महेज्य ಮಹೇಜ್ಯ** (पुं०) ವ್ಯವಧಾನವಿಲ್ಲದೆ ಯಜನವುಳ್ಳ ವಿಷ್ಣು, ನಾರಾಯಣ. महती अकामहता इज्या अव्यवधानेन यजनमस्य। "इज्या हि महती यस्य महेज्यः स उदाहृतः" इति निरुक्तिः। "यज्ञ इज्यो महेज्यश्च" वि० स०।

**महेन्द्र ಮಹೇಂದ್ರ** (पुं०) 1. ವಿಷ್ಣು, ನಾರಾಯಣ. पूर्णपरमैश्वर्यतया महांश्चासाविन्द्रश्च। "परमैश्वर्यवत्त्वेन महेन्द्र इति शब्द्यते" इति निरुक्तिः। "सुभुजो दुर्धरो वाग्मी महेन्द्रो वसुदो वसुः" वि० स०। 2. ದೇವೇಂದ್ರ, ದೇವತೆಗಳ ಒಡೆಯ. "इमं महेन्द्रप्रभृतीनधिश्रियः चतुर्दिगीशानवमत्य मानिनी" कुमा० ५-५३। 3. ಮಹೇಂದ್ರಪರ್ವತ. "स प्रतापं महेन्द्रस्य मूर्ध्नि तीक्ष्णं न्यवेशयत्" रघु० ४-३९।

**महेन्द्रधनुस् ಮಹೇಂದ್ರಧನುಸ್** (न०) ಇಂದ್ರನ ಧನುಸ್ಸು, ಕಾಮನಬಿಲ್ಲು, ಮಳೆಬಿಲ್ಲು. "शैलपतिरिव महेन्द्रधनुः परिवीतभीमगहनो विदिद्युते" किरा० १२-९।

**मार्जना ಮಾರ್ಜನಾ** (स्त्री०) 1. ಮದ್ದಳೆಯ ಶಬ್ದ, ಮೃದಂಗದ ಶಬ್ದ. मार्ज (शब्दे) + णिच् भावे "युच्" (३-३-१०७)। ಮೃದಂಗದ ಧ್ವನಿಯು (ಮಾರ್ಜನೆಯು) (1) ಮಾಯೂರೀ. (2) ಅರ್ಧಮಾಯೂರೀ ಮತ್ತು (3) ಕರ್ಮಾರವಿ ಎಂದು ಮೂರು ವಿಧ. "मायूरी चार्धमायूरी तथा कर्मारवीति च। तिस्रस्तु मार्जना ज्ञेयाः पुष्करेषु स्वराश्रयाः" भ० ना०। "निर्ह्रादिन्युपहित-मध्यमस्वरोत्था मायूरी मदयति मार्जना मनांसि" माल० १-२१। 2. ಶುದ್ಧಮಾಡುವಿಕೆ, ತೊಳೆಯುವಿಕೆ, ಬೆಳಗುವಿಕೆ. **–नी –ನೀ.** 3. ಬರಲು, ಕಸಬರಿಕೆ, ಪೊರಕೆ. मार्ज्यतेऽनया—मृजू (शुद्धौ) करः० "ल्युट्" (३-३-११७)।

**मार्जनीय ಮಾರ್ಜನೀಯ** (वि०) 1. ತೊಳೆಯಲ್ಪಡುವ, ಶುದ್ಧಮಾಡಲ್ಪಡುವ. 2. ಉಜ್ಜಲ್ಪಡುವ, ಅಳಿಸಲ್ಪಡುವ, ಒರೆಸಲ್ಪಡುವ. 3. ತೊಳೆಯಬೇಕಾದ. 4. ಅಳಿಸಬೇಕಾದ. मृजू (शौचालंकारयोः) + णिच् "अनीयर्" (३-१-९६)। "तव्यः" (३-१-९६)। **मार्जितव्यः ಮಾರ್ಜಿತವ್ಯಃ.** मृजू + णिच् "तव्यः" (३-१-९६)। **मार्जयितव्यः ಮಾರ್ಜಯಿತವ್ಯಃ.**

**मार्जयत् ಮಾರ್ಜಯತ್** (वि०) 1. ಶುದ್ಧಮಾಡಿಸುತ್ತಿರುವ, ತೊಳೆಯಿಸುತ್ತಿರುವ. मृजूष् (शुद्धौ) + णिच् "शतृ" (३-२-१२४)। 2. ಉಜ್ಜಿಸುತ್ತಿರುವ, ತಿಕ್ಕಿಸುತ್ತಿರುವ. 3. ತೊಡೆದುಹಾಕಿಸುತ್ತಿರುವ. स्त्रियां "ङीप्" (४-१-६)। **–यन्ती –ಯಂತೀ.** "शानच्" (३-२-१२४)। **–यमानः –ಯಮಾನಃ.**

**मार्जार ಮಾರ್ಜಾರ** (पुं०) 1. ಬೆಕ್ಕು, ಕೊತ್ತಿ. मार्ष्टि मुखम्—मृजू (शुद्धौ) "आरन्" (उ० ३-१३७)। "कपाले मार्जारः पय इति करान् लेढि शशिनः" काव्यप्र० १०। 2. ಕಾಡುಬೆಕ್ಕು. 3. ಪುನುಗುಬೆಕ್ಕು. "अथ मार्जारः स्यात् खट्टाशबिडालयोः" हेम०।

**मार्जारक ಮಾರ್ಜಾರಕ** (पुं०) 1. ಬೆಕ್ಕು. 2. ನವಿಲು. मार्जार संज्ञायां "कन्" (४-३-१४७)। "प्रचलाकी-सितापाङ्गशिखाचलगलव्रताः। मर्जारकः" त्रिकाण्ड०।

**मार्जारकण्ठ ಮಾರ್ಜಾರಕಂಠ** (पुं०) ಮಯೂರ, ನವಿಲು. मार्जारस्येव कण्ठ कण्ठस्वरोऽस्य। "मार्जार-कण्ठः केकालिर्विष्किरो नर्तनप्रियः" वैज०।

**मार्जारकर्णी ಮಾರ್ಜಾರಕರ್ಣೀ** (स्त्री०) ಚಾಮುಂಡಾ ದೇವಿ. "मार्जारकर्णी चामुण्डा कर्णमोटिश्च चर्चिका" त्रिकाण्ड०।

**मार्जारी ಮಾರ್ಜಾರೀ** (स्त्री०) 1. ಹೆಣ್ಣು ಬೆಕ್ಕು. 2. ಪುನುಗು ಬೆಕ್ಕು. 3. ಕಸ್ತೂರಿ.

**मार्जारीय ಮಾರ್ಜಾರೀಯ** (पुं०) 1. ಶೂದ್ರ. 2. ಬಿಡಾಲ, ಬೆಕ್ಕು. 3. ದೇಹವನ್ನು ಶುದ್ಧಗೊಳಿಸುವುದು, ಶರೀರವನ್ನು ತೊಳೆದು ಶುದ್ಧಮಾಡುವುದು. "मार्जारीयः स्मृतः शूद्रे बिडाले कायशोधने" मेदि०। 4. ಯಾಗ ಪಾತ್ರೆಗಳನ್ನು ತೊಳೆಯುವ ಸ್ಥಳ. "ओतौ चारौ धौतिदेशे मार्जारीयोऽङ्गशोधने" वैज०। (वि०) 5. ರಮ್ಯವಾದ, ಮನೋಹರವಾದ.

**मार्जालीय ಮಾರ್ಜಾಲೀಯ** (पुं०) 1. ಶೂದ್ರ. 2. ಬಿಡಾಲ, ಬೆಕ್ಕು. 3. ಶರೀರಶೋಧನೆ. मृजू (शुद्धौ) "आलीयच्" (उ० १-११३)। "मार्जालीयः शूद्र-बिडालयोः। शरीरशोधने" हेम०।

**मार्जित ಮಾರ್ಜಿತ** (वि०) 1. ತೊಳೆಯಲ್ಪಟ್ಟ, ಶುದ್ಧಮಾಡಲ್ಪಟ್ಟ. मृजू (शौचालंकारयोः) + णिच् "क्तः" (३-२-१०२)। 2. ಅಳಿಸಲ್ಪಟ್ಟ, ತೊಡೆಯಲ್ಪಟ್ಟ, ಒರೆಸಲ್ಪಟ್ಟ. 3. ಶಬ್ದಮಾಡಿಸಲ್ಪಟ್ಟ. मार्ज (शब्दे) + णिच् "क्तः" (३-२-१०२)।

**मार्जितव्य ಮಾರ್ಜಿತವ್ಯ** (वि०) "मार्जनीय" ನೋಡಿ.

**मार्जिता ಮಾರ್ಜಿತಾ** (स्त्री०) 1. ವ್ಯೋಷ (ಶುಂಠಿ ಹಿಪ್ಪಲಿ ಮತ್ತು ಮೆಣಸು) ಚತುರ್ಜಾತ (ಲವಂಗಪಟ್ಟೆ ಯಾಲಕ್ಕಿ ಜಾಪತ್ರೆ ಮತ್ತು ನಾಗಕೇಸರ) ಗುಡ (ಬೆಲ್ಲ) ಹಸಿಶುಂಠಿ ಮತ್ತು ಜೀರಿಗೆ ಇವುಗಳಿಂದ ಬೆರೆತ (ಹಸಿ) ಮೊಸರು. "अपक्वतक्रं सव्योषचतुर्जातगुडार्द्रकम्। सजीरकं रसालः स्यान्मार्जिता" वैज०। 2. ಒಂದು ವಿಧ ಭಕ್ಷ್ಯ. ಅರ್ಧ ಆಢಕ ಹಳೆಯ (ಹುಳಿ) ಮೊಸರು ಶುಭ್ರವಾದ ಕಲ್ಲುಸಕ್ಕರೆ ಹದಿನಾರು ಪಲದ ತೂಕ ಒಂದು ಪಲ ತುಪ್ಪ, ಒಂದು ಪಲ ಜೇನುತುಪ್ಪ ಎರಡು ಕರ್ಷ ಮೆಣಸು, ಅರ್ಧ ಪಲದ ತೂಕ ಶುಂಠಿ ಚತುರ್ಜಾತದ ಅರ್ಧ ಪಲ. ಇವುಗಳನ್ನು ಪುಡಿಮಾಡಿ ಅರೆದು ಪಚ್ಚಕರ್ಪೂರದ ವಾಸನೆಯನ್ನು ಕೊಟ್ಟು ಮಾಡಿದ ಒಂದು ಭಕ್ಷ್ಯ.

**मार्तण्ड ಮಾರ್ತಂಡ** (पुं०) 1. ಸೂರ್ಯ. मृतेऽण्डे भवः। शक०। 2. ಅರ್ಕವೃಕ್ಷ. 3. ಸೂಕರ, ಹಂದಿ. "मार्तण्डः क्रोडसूर्ययोः" मेदि०। "पुनर्मार्ताण्डमाभरत्" ಈ ಮಂತ್ರದಲ್ಲಿ ದೀರ್ಘಮಧ್ಯಪ್ರಯೋಗವಿರುವುದರಿಂದ "मार्ताण्डः" ಎಂದೂ ರೂಪವುಂಟು.

**मार्तण्डवल्लभा ಮಾರ್ತಂಡವಲ್ಲಭಾ** (स्त्री०) ಸೂರ್ಯನ ಪತ್ನಿ.

**मार्तिक ಮಾರ್ತ್ತಿಕ** (ಪುಂ) 1. ಹರಿವೆ, ಮಣ್ಣಿನ ಗಡಿಗೆ. मृत्तिकाया विकार: "ठक्" (४-३-१३४)। (वि०) 2. ಮಣ್ಣಿನಿಂದ ತಯಾರಾದ.

**मार्दङ्ग ಮಾರ್ದಂಗ** (न०) ಪಟ್ಟಣ, ನಗರ. "मार्दङ्गं पत्तनं विदु: "हारा०।

**मार्दङ्गिक ಮಾರ್ದಂಗಿಕ** (पुं०) ಮದ್ದಳೆಯನ್ನು ಬಾರಿಸುವವನು. मृदङ्गवादनं शिल्पमस्य "ठक्" (४-४-५५)।

**मार्दव ಮಾರ್ದವ** (न०) 1. ಮೃದುತ್ವ, ಕೋಮಲತೆ, ಸುಕುಮಾರತ್ವ. मृदोर्भाव: वा "अण्" (५-१-१२२)। पक्षे "इमनिच्"। **ಪ್ರದಿಮಾ ಮ್ರದಿಮಾ.** "तदानपेक्ष्य स्वशरीरमार्दवं तपो महत्सा चरितुं प्रचक्रमे" कुमा० ५-१८। 2. ಮೃದುಸ್ವಭಾವ, ಸೌಮ್ಯತೆ, ಶಾಂತವಾಗಿರುವಿಕೆ. "समवृत्तिरुपैति मार्दवं समये यश्च तनोति तिग्मताम्" किरा० २-३८। 3. ದಯೆ, ಕನಿಕರ, ಮನ ಕರಗುವಿಕೆ. "अतितप्तमयोऽपि मार्दवं भजते कैव कथा शरीरिणाम्" रघु० ८-४३।

**मार्द्वीक ಮಾರ್ದ್ವೀಕ** (पुंन०) ದ್ರಾಕ್ಷಿಹಣ್ಣಿನಿಂದ ತಯಾರಿಸಲ್ಪಟ್ಟ ಮದ್ಯ. मृद्वीका द्राक्षा तस्या विकार: "अण्" (५-१-१३४)। "मधु मार्द्वीकमद्वयो:" अम०।

**मार्मिक ಮಾರ್ಮಿಕ** (वि०) ಮರ್ಮವನ್ನು ಅರಿತವನು, ಒಳರಹಸ್ಯವನ್ನು ತಿಳಿದವನು. "परिणतमकरन्दमार्मिकास्ते जगति भवन्तु चिरायुषो मिलिन्दा:"।

**मार्ष्टि ಮಾರ್ಷ್ಟಿ** (स्त्री०) 1. ಶುದ್ಧಮಾಡುವಿಕೆ, ಶೋಧನೆ, ತೊಳೆಯುವುದು, ತಾರಿಸುವುದು. मृजू (शुद्धौ) "क्तिन्" (३-३-९४)। 2. ಸುಗಂಧದ್ರವ್ಯದಿಂದ ದೇಹಕ್ಕೆ ಲೇಪನ ಮಾಡುವುದು. "मार्ष्टिश्चर्चा च चर्चिक्यं समालम्भनमित्यपि" वैज०।

**माल ಮಾಲ** (पुं०) 1. ವಿಷ್ಣು. मां लक्ष्मीं लाति—ला (आदाने) "क:" (३-२-३)। 2. ಜನ, ಮನುಷ್ಯ. 3. ಮ್ಲೇಚ್ಛಜಾತಿಯವನು. (न०) 4. ಕಪಟ, ಠಕ್ಕು, ಬೂಟಾಟಿಕೆ. 5. ಅರಣ್ಯ, ಕಾಡು. "मालं तु कपटे वने। मालो जने स्यात्" हेम०। 6. ಉನ್ನತವಾದ ಪ್ರದೇಶ, ಎತ್ತರವಾದ ಭೂಮಿ. "मालमुन्नतभू:" नानार्थर०। "सद्य: सीरोत्कषणसुरभि क्षेत्रमारुह्य मालम्" मेघ०। 7. ಏಳು ಅಂತರ ದ್ವೀಪಗಳಲ್ಲೊಂದು. **ಏಳು ಅಂತರ ದ್ವೀಪಗಳು:** (1) ವೈದ್ಯುತ್ವತ, (2) ಮಾಲ, (3) ಮೈನ, (4) ವ್ರತ, (5) ಜಾಲ, (6) ನಾರ ಮತ್ತು (7) ಆಸಂಗ. ಈ ಅಂತರ ದ್ವೀಪಗಳು ಭಾರತಕ್ಕೆ ದಕ್ಷಿಣದಲ್ಲಿರುವುವು. "अथाप्यन्येऽन्तरद्वीपा: भारतात सप्त दक्षिणा:। एको वैद्युत्वतो नाम विद्युत्वान् यत्र पर्वत:। मालं मैनं व्रतं जालं नारासङ्गे पराणि षट्" वैज०। 8. ಕ್ಷೇತ್ರ, ಭೂಮಿ. "मालं क्षेत्रम्" मेदि०। 9. ಅರಿದಳ.

**मालक ಮಾಲಕ** (पुं०) 1. ಬೇವಿನಮರ. मलते—मल (धारणे) "ण्वुल्" (३-१-१३३)। "अरिष्ट: सर्वतोभद्रहिङ्गुनिर्यासमालका:" अम०। 2. ಅರಣ್ಯ, ಕಾಡು. 3. ಸ್ಥಲಪದ್ಮ, ನೆಲದಾವರೆ. 4. ತೆಂಗಿನ ಚಿಪ್ಪಿನಿಂದ ತಯಾರಿಸಲ್ಪಟ್ಟ ಪಾತ್ರೆ.

**मालती ಮಾಲತೀ** (स्त्री०) 1. ಜಾಜಿಗಿಡ. मां लक्ष्मीं लाति—ला (आदाने) "क:" (३-२-३)। मालं विष्णुं अतति—अत (सातत्यगमने) "अच्" (३-१-१३४)। "ङीष्" (४-१-४१)। "परिसुरपतिसूनुधाम सद्य: समुपदधन्मुकुलानि मालतीनाम्" किरा० १०-२०। 2. ಅಮೃತಬಳ್ಳಿ. 3. ಚಂದ್ರಿಕೆ, ಬೆಳದಿಂಗಳು. 4. ರಾತ್ರಿ. 5. ಯುವತಿ, ತರುಣಿ. 6. ಕಾಚಿಗಿಡ. 7. ಒಂದು ನದಿ. "मालती युवतौ काकमाच्यां जातीविशल्ययो:। ज्योत्स्नायां निशि नद्यां च" हेम०।

**मालतीतीरज ಮಾಲತೀತೀರಜ** (पुं०) ಟಂಕಣ, ಬಿಳಿಗಾರ.

**मालतीपत्रिका ಮಾಲತೀಪತ್ರಿಕಾ** (स्त्री०) ಜಾಯಿಪತ್ರೆ.

**मालतीफल ಮಾಲತೀಫಲ** (न०) ಜಾಯಿಕಾಯಿ.

**मालतीमाधव ಮಾಲತೀಮಾಧವ** (न०) ಭವಭೂತಿ ಕವಿ ರಚಿತವಾದ ಒಂದು ರೂಪಕ (ಪ್ರಕರಣ).

**मालय ಮಾಲಯ** (पुं०) 1. ಗಂಧದ ಮರ. मलये भव: "अण्" (४-३-५३)। (वि०) 2. ಮಲಯ ಪರ್ವತ ಸಂಬಂಧವಾದ. मलयस्येदम् "अण्" (४-३-१२०)।

**मालव ಮಾಲವ** (पुं० ब० व०) 1. ಮಾಲವದೇಶ, ಮಧ್ಯ ಭಾರತದಲ್ಲಿರುವ ಈಗಿನ ಮಾಲ್ವ. 2. ಮಾಲವ ದೇಶದ ಜನರು.

**मालवक ಮಾಲವಕ** (पुं०) ಗಂಡನು ಬದುಕಿರುವಾಗ ಜಾರನಿಂದ ಶೂದ್ರ ಸ್ತ್ರೀಯಲ್ಲಿ ಹುಟ್ಟಿದವನು. "शूद्रकुण्डो मालवक:" वैज०।

**माला ಮಾಲಾ** (स्त्री०) 1. ಮಾಲೆ, ಹಾರ. मां शोभां लाति—ला (आदाने) "क:" (३-२-३)। 2. ಪಙ್ಕ್ತಿ, ಸಾಲು, ಶ್ರೇಣಿ. "ददौ भुजालम्बमिवात्तशीकरस्तरङ्ग-

मालान्तरगोचरोऽनिल:" किरा० ८-२८। 3. ಜಪಸರ, ಅಕ್ಷಮಾಲೆ. 4. ಗೆರೆ, ಪಟ್ಟಿ, ಎಳೆ.

**मालाकण्ट ಮಾಲಾಕಂಟ** (ಪುಂ०) ಅಪಾಮಾರ್ಗ, ಉತ್ತರಣೆ ಗಿಡ.

**मालाकार ಮಾಲಾಕಾರ** (ಪುಂ०) 1. ಹೂವಾಡಿಗ, ಹೂವನ್ನು ಮಾರುವವನು. 2. ಹೂವಿನ ಮಾಲೆಯನ್ನು ತಯಾರಿಸುವವನು. मालां करोति—डु कृञ् (करणे) "अण्" (३-२-१)।

**मालातृण ಮಾಲಾತೃಣ** (ನ०) ಕಾದಂಬೆ ಹುಲ್ಲು, ಮಾರವಳಿ ಹುಲ್ಲು.

**मालादीपक ಮಾಲಾದೀಪಕ** (ನ०) ಅರ್ಥಾಲಂಕಾರದ ಒಂದು ಭೇದ, ದೀಪಕ ಮತ್ತು ಏಕಾವಳೀ ಅಲಂಕಾರಗಳ ಲಕ್ಷಣಗಳು ಇರುವಲ್ಲಿ ಮಾಲಾದೀಪಕಾಲಂಕಾರ. "दीपकैकावलीयोगान्मालादीपकमुच्यते" चन्द्रा०।

**मालिक ಮಾಲಿಕ** (ಪುಂ०) 1. ಮಾಲಾಕಾರ. माला पण्यमस्य "ठक्" (४-४-५१)। 2. ಒಂದು ಹಕ್ಕಿ. 3. ಬಣ್ಣ ಬಳಿಯುವವನು.

**मालिका ಮಾಲಿಕಾ** (ಸ್ತ್ರೀ०) 1. ಹಾರ, ಮಾಲೆ, ಸರ. 2. ಪಙ್ಕ್ತಿ, ಶ್ರೇಣಿ, ಸಾಲು. 3. ಪುತ್ರಿ, ಮಗಳು. 4. ಕಂಠಾಭರಣ. 5. ಒಂದು ನದಿ. 6. ವೀರಜಾಜಿ, ಹೆಜ್ಜಾಜಿ. "मालिका सप्तला पुत्रीग्रीवालंकरणेषु च। पुष्पमाल्ये नदीभेदे" मेदि०। 7. ಸುಣ್ಣ ಬಳಿದಿರುವ ಉಪ್ಪರಿಗೆ ಮನೆ. "सौधोऽस्त्री सुधया श्वेतं मेटो हर्म्यं च मालिका" वैज०। 8. ಮದ್ಯ, ಹೆಂಡ. "माध्वी च मधु माध्वीकं कापिशीका च मालिका" त्रिकाण्ड०। "आवलि: पद्धति: पङ्क्तिरालिर्लेखा च मालिका" वैज०।

**मालिन् ಮಾಲಿನ್** (ಪುಂ०) 1. ಹೂವಾಡಿಗ, ಹೂವನ್ನು ಮಾರುವವನು. माला पण्यत्वेनास्त्यस्य "इनि:" (५-२-११६)। 2. ಮಾಲೆಯನ್ನು ಧರಿಸಿರುವವನು. मालास्यास्ति "इनि:"। स्त्रियां "ङीप्" (४-१-५)।

**मालिनी ಮಾಲಿನೀ** (ಸ್ತ್ರೀ०) 1. ಹೂವಾಡಿಗನ ಹೆಂಡತಿ. 2. ಗೌರಿ, ಪಾರ್ವತಿ. 3. ಚಂಪಾನಗರ. 4. ಹದಿನೈದನೆಯ ಛಂದಸ್ಸಿನ ಒಂದು ವೃತ್ತ. "ननमयययुतेयं मालिनी भोगिलोकै:" वृ० र०। **ಇದರ ಗಣವಿನ್ಯಾಸ:**

न न म य य ।

।।। ।।। ऽऽऽ ।ऽऽ ।ऽऽ

"छन्दश्चम्पा च मालिनी" त्रिकाण्ड०। 5. ಮಾಲಿನೀ ನದಿ. 6. ವಿರಾಟನಗರದಲ್ಲಿದ್ದಾಗ ದ್ರೌಪದಿಯ ಹೆಸರು. 7. ಗಂಗಾನದಿ.

**मालिन्य ಮಾಲಿನ್ಯ** (ನ०) ಕೊಳೆ, ಕೊಳಕು, ಕಶ್ಮಲ. मलिनस्य भाव: "ष्यञ्" (५-१-१२४)।

**मालु ಮಾಲು** (ಸ್ತ್ರೀ०) 1. ಹೆಂಗಸು. 2. ಒಂದು ಲತೆ.

**मालुधान ಮಾಲುಧಾನ** (ಪುಂ०) 1. ಊಸರವಳ್ಳಿ ಹಾವು, ಚಿತ್ರಬಣ್ಣದ ಹಾವು. मालुरोषधी, तत्र धानमस्य। (स्त्री०) **–धानी –ಧಾನೀ.** 2. ಒಂದು ಲತೆ.

**मालूर ಮಾಲೂರ** (ಪುಂ०) 1. ಬಿಲ್ವಪತ್ರೆ ಮರ. मां परेषां लक्ष्मीं लुनाति—लूञ् (छेदने) "रक्" बाहु०। "बिल्वे शाण्डिल्यशैलूषौ मालूरश्रीफलावपि" अम०। 2. ಕಪಿತ್ಥ ವೃಕ್ಷ, ಬೇಲದ ಮರ.

**माल्य ಮಾಲ್ಯ** (ನ०) 1. ಪುಷ್ಪ, ಹೂವು. मालायां साधु "यत्" (४-४-९८)। 2. ಹೂವಿನ ಮಾಲೆ, ಪುಷ್ಪದ ಹಾರ. मालैव "ष्यञ्" (वा० ५-१-१२४)। "माल्यं मालाकुसुमयो:" हेम०। "नराधिपैर्माल्यमिवास्य शासनम्" किरा० १-२१।

**माल्यवत् ಮಾಲ್ಯವತ್** (ಪುಂ०) 1. ಸಪ್ತಕುಲಪರ್ವತಗಳಲ್ಲೊಂದು. 2. ಮಾಲ್ಯವಂತ, ರಾವಣನ ಮಂತ್ರಿಗಳಲ್ಲೊಬ್ಬ. (ವಿ०)3. ಹೂವಿನ ಮಾಲೆಯನ್ನು ಧರಿಸಿರುವ. माल्यमस्यास्ति "मतुप्" (५-२-९४)।

**माशब्दिक ಮಾಶಬ್ದಿಕ** (ವಿ०) ಶಬ್ದವನ್ನು ಮಾಡಬೇಡ ಎಂದು ಹೇಳಿದವನು. मा शब्दं कार्षी: इति य आह स: माशब्दिक:—माशब्द "ठक्" (वा० ४-४-१)।

**माष ಮಾಷ** (ಪುಂ०) 1. ಉದ್ದಿನ ಗಿಡ. 2. ಉದ್ದು. "माषस्तु मलदो नन्दी" वैज०। "तिलेभ्य: प्रतियच्छति माषान्" सि० कौ०। 3. ಎಂಟು ಗುಲಗಂಜಿ ತೂಕದ ಚಿನ್ನ, ಒಂದು ಪಣದ 20ನೆಯ ಒಂದು ಭಾಗ. 4. ಮೂರ್ಖ, ತಿಳಿಗೇಡಿ, ದಡ್ಡ. 5. ಚರ್ಮದ ದೋಷ. "माषो व्रीह्यन्तरे मूर्खे मानत्वग्दोषभेदयो:" विश्व०।

**माषपर्णी ಮಾಷಪರ್ಣೀ** (ಸ್ತ್ರೀ०) ಕಾಡು ಉದ್ದಿನ ಗಿಡ. माषस्येव पर्णान्यस्य।

**माषपर्पट ಮಾಷಪರ್ಪಟ** (ಪುಂ०) ಉದ್ದಿನ ಹಪ್ಪಳ.

**माषवर्धक ಮಾಷವರ್ಧಕ** (ಪುಂ०) ಸ್ವರ್ಣಕಾರ, ಅಕ್ಕಸಾಲಿಗ. माषं माषपरिमितं स्वर्णं वर्धयति—वर्ध (छेदने) + णिच् "ण्वुल्" (३-१-१३३)।

**माषाद ಮಾಷಾದ** (ಪುಂ०) ಕೂರ್ಮ, ಆಮೆ.

**माषीण ಮಾಷೀಣ** (ನ०) ಉದ್ದು ಬೆಳೆಯಲು ಯೋಗ್ಯವಾದ ಭೂಮಿ. माषाणां भवनं क्षेत्रम्—माष वा "खञ्" (५-२-४)। पक्षे "यत्" माष्यम्।

**मास् ಮಾಸ್** (पुं०) 1. ಮಾಸ, ತಿಂಗಳು. माङ् (माने) "असिः"। बाहु०। माः मासौ मासः। "चतुर्थे मासि कर्तव्यं गृहान्निष्क्रमणं शिशोः" मनु० २-३४। 2. ಚಂದ್ರ.

**मास ಮಾಸ** (पुं०) ಮಾಸ, ತಿಂಗಳು. मस्यते परिमीयतेऽनेन — मसी (परिमाणे) "घञ्" (३-३-१२१)। "न मासे प्रतिपत्तासे मां चेन्मर्तासि मैथिलि" भट्टि० ८-९५। ಮಾಸವು ಚಾಂದ್ರ ಸಾವನ ಮತ್ತು ಸೌರಗಳೆಂದು ಮೂರು ವಿಧ. ಶುಕ್ಲಪ್ರತಿಪತ್ತಿ (ಪಾಡ್ಯ)ನಿಂದ ಅಮಾವಾಸ್ಯೆ ವರೆಗೆ ಚಾಂದ್ರಮಾಸ. ಮೂವತ್ತು ದಿನಗಳು ಪೂರ್ಣವಾದರೆ ಸಾವನಮಾಸ. ಸೂರ್ಯನು ಒಂದು ರಾಶಿಯಲ್ಲಿರುವ ಕಾಲವು ಸೌರಮಾಸ. "चान्द्रः शुक्लादिदर्शान्तः सावनस्त्रिंशता बुधैः। एकराशौ रविर्यावत् कालं मासः स भास्करः"।

**मासजात ಮಾಸಜಾತ** (वि०) ಒಂದು ತಿಂಗಳಲ್ಲಿ ಹುಟ್ಟಿದ, ಹುಟ್ಟಿ ಒಂದು ತಿಂಗಳಾಗಿರುವ. मासो जातस्य।

**मासदेय ಮಾಸದೇಯ** (वि०) ಒಂದು ತಿಂಗಳಲ್ಲಿ ಕೊಡಬೇಕಾದ. मासे देयम्।

**मासप्रमित ಮಾಸಪ್ರಮಿತ** (वि०) ಪ್ರತಿಪಚ್ಚಂದ್ರ, ಪಾಡ್ಯದ (ಬಾಲ) ಚಂದ್ರ. मासं प्रमितः। मासं परिच्छेत्तुमारब्धवान् इत्यर्थः।

**मासप्रवेश ಮಾಸಪ್ರವೇಶ** (पुं०) ಮಾಸದ ಪ್ರಾರಂಭ, ತಿಂಗಳಿನ ಪ್ರಾರಂಭ.

**मासर ಮಾಸರ** (पुं०) ಅನ್ನದ ಕೆನೆ, ಅನ್ನದ ಮೇಲಿನ ಗಂಜಿ. मा श्रीः सरत्यत्र—सृ (गतौ) "घः" (३-३-११८)।

**मासावर ಮಾಸಾವರ** (वि०) ಒಂದು ತಿಂಗಳು ಚಿಕ್ಕವನು, ಒಂದು ತಿಂಗಳು ಕಿರಿಯವನು. मासेन अवरः।

**मासिक ಮಾಸಿಕ** (वि०) 1. ಪ್ರತಿಮಾಸದಲ್ಲೂ ಬರುವ, ಒಂದೊಂದು ತಿಂಗಳಲ್ಲೂ ಬರುವ. मासे भवम् "ठञ्" (४-३-११)। 2. ಪ್ರತಿ ತಿಂಗಳಲ್ಲೂ ಕೊಡಬೇಕಾದ (ಸಂಬಳ, ಕೂಲಿ, ಬಡ್ಡಿ ಇತ್ಯಾದಿ). 3. ಒಂದು ತಿಂಗಳಲ್ಲಿ ಕೊಡಬೇಕಾದ (ಸಾಲ). 4. ಪ್ರತಿ ತಿಂಗಳಲ್ಲಿ ಮಾಡಬೇಕಾದ ಶ್ರಾದ್ಧ.

**मासुरी ಮಾಸುರೀ** (स्त्री०) ಚಿಕ್ಕಮ್ಮ, ದೊಡ್ಡಮ್ಮ. "पितृष्वसा पितुर्भग्नी मातुर्भग्नी च मासुरी" ब्रह्मवै०।

**मास्म ಮಾಸ್ಮ** (अव्य०) ತಡೆ, ನಿವಾರಣೆ, ನಿಷೇಧ. मा च स्म चानयोः समाहारः।

**माहाकुल ಮಾಹಾಕುಲ** (वि०) ದೊಡ್ಡ ವಂಶದಲ್ಲಿ ಹುಟ್ಟಿದವನು, ಸತ್ಕುಲದಲ್ಲಿ ಜನಿಸಿದವನು. महाकुले भवः—वा "अञ्" "खञ्" च (४-१-१४१)। अञि माहाकुलः। खञि माहाकुलीनः। पक्षे "खः" (४-१-१३१)। महाकुलीनः।

**माहाजनिक ಮಾಹಾಜನಿಕ** (वि०) 1. ಮಹಾಜನರಿಗೆ ಹಿತವಾದ, ಮಹಾಜನರಿಗೆ ಅರ್ಹವಾದ. महाजनाय हितम् "ठञ्" (वा० ५-१-९)। स्त्रियां –जनिकी –ಜನಿಕೀ. 2. ಧನಿಕನಿಗೆ ಹಿತವಾದ.

**माहात्म्य ಮಾಹಾತ್ಮ್ಯ** (न०) 1. ಮಹಿಮೆ, ಪ್ರಭಾವ, ಮಹತ್ತ್ವ, ಹಿರಿಮೆ. महात्मनो भावः "ष्यञ्" (५-१-१२४)। "त्वं वह्निर्मुनयो वसिष्ठगृहिणी गङ्गा च यस्या विदुर्माहात्म्यं यदि वा रघोः कुलगुरुः देवः स्वयं भास्करः" उ० रा० ४-५। 2. ಮರ್ಯಾದೆ, ಗೌರವ.

**माहानस ಮಾಹಾನಸ** (वि०) 1. ದೊಡ್ಡ ಗಾಡಿಯ ಸಂಬಂಧವಾದ. 2. ಮಹಾನಸ (ಅಡಿಗೆ ಮನೆ) ಸಂಬಂಧವಾದ. महानसं इदम् महानसस्य इदं वा "अण्" (४-३-१२०)।

**माहिर ಮಾಹಿರ** (पुं०) ಇಂದ್ರ. मह्यते पूज्यते — मह (पूजायाम्) "इरण्"। बाहु०।

**माहिष ಮಾಹಿಷ** (वि०) ಮಹಿಷ ಸಂಬಂಧವಾದ. महिषस्येदम् "अण्" (४-३-१२०)।

**माहिषिक ಮಾಹಿಷಿಕ** (पुं०) 1. ಹಾದರಗಿತ್ತಿಯ ಗಂಡ, ವ್ಯಭಿಚಾರಿಣಿಯ ಗಂಡ, ಜಾರ. "महिषीत्युच्यते नारी या च स्याद्व्यभिचारिणी। तां दुष्टां कामयति यः स वै माहिषिकः स्मृतः"। 2. ವ್ಯಭಿಚಾರದ ಹಣದಿಂದ ಜೀವಿಸುವವನು. "महिषीत्युच्यते नार्या भगेनोपार्जितं धनम्। उपजीवति यस्तस्याः स वै माहिषिकः स्मृतः"।

**माहिष्मती ಮಾಹಿಷ್ಮತೀ** (स्त्री०) ಹೈಹಯ ರಾಜರ ರಾಜಧಾನಿ, ಹೈಹಯ ದೇಶದ ಮುಖ್ಯ ಪಟ್ಟಣ. "निरुद्धवीवधासारप्रसारा गा इव व्रजम्। उपरुन्धन्तु दाशार्हाः पुरीं माहिष्मतीं द्विषः" माघ० २-६४।

**माहिष्य ಮಾಹಿಷ್ಯ** (पुं०) 1. ವೈಶ್ಯ ಹೆಂಗಸಿನಲ್ಲಿ ಕ್ಷತ್ರಿಯನಿಗೆ ಹುಟ್ಟಿದ ಸಂಕರ ಜಾತಿಯವನು. "सूतं विप्रा नृपा-द्वैश्या माहिष्यम् (सूते)" वैज०। 2. ನೃತ್ಯ ಗೀತೆಗಳನ್ನು ತಿಳಿದಿರುವ ಬೇಡರ ಜಾತಿಯವನು. "निषादो मृगघातास्स माहिष्यो नृत्तगीतवित्" वैज०।

**माहेन्द्र ಮಾಹೇಂದ್ರ** (पुं०) 1. ಇಂದ್ರಕೀಲಪರ್ವತ, ಮಹೇಂದ್ರಗಿರಿ. "माहेन्द्रं नगमभित: करेणुवर्या: पर्यन्तस्थितजलदा दिव: पतन्त:" किरा० ७-२०। (वि०) 2. ಇಂದ್ರನಸಂಬಂಧವಾದ. महेन्द्रस्येदम् "अण्" (४-३-१२०)। "निदाघकालोल्बणतापयेव माहेन्द्रमम्म: प्रथमं पृथिव्या" कुमा० ७-८४। 3. ಪೂರ್ವದಿಕ್ಕಿನ ಸಂಬಂಧವಾದ. (स्त्री०) **-न्द्री -ನ್ದ್ರೀ.** 4. ಪೂರ್ವದಿಕ್ಕು. 5. ಇಂದ್ರನ ಪತ್ನಿ, ಶಚೀದೇವಿ. 6. ಹಸು, ಆಕಳು. 7. ಮಧುರಂಗದ ಬಾಳೆ ಗಿಡ. "कृष्णा तु लम्पा कदली माहेन्द्री तु बृहत्फला" वैज०।

**माहेय ಮಾಹೇಯ** (पुं०) 1. ಭೂಮಿಯ ಪುತ್ರ (1) ಕುಜ ಗ್ರಹ. (2) ನರಕಾಸುರ. मह्या अपत्यम् "ढक्" (४-१-१२०)। (स्त्री०) **-यी -ಯೀ.** 2. ಹಸು, ಆಕಳು. मह्यते पूज्यते—मह (पूजायाम्) "घ:" (३-३-११८)। "माहेयी सौरभेयी गौ:" अम०।

**माहेशी ಮಾಹೇಶೀ** (स्त्री०) ದುರ್ಗಾದೇವಿ.

**माहेश्वर ಮಾಹೇಶ್ವರ** (वि०) 1. ಪರಮೇಶ್ವರನ ಸಂಬಂಧವಾದ. महेश्वरस्येदम् "अण्" (४-३-१२०)। 2. ಪರಮೇಶ್ವರನಿಂದ ಬಂದ. महेश्वरादागतम् "अण्" (४-३-७४)। "महेश्वरादागतानि माहेश्वराणि" (चतुर्दशसूत्राणि अइउण् इत्यादीनि) सि० कौ०। (स्त्री०) **-री -ರೀ.** ಪಾರ್ವತಿ, ದುರ್ಗಾದೇವಿ.

**मित ಮಿತ** (वि०) 1. ಪರಿಮಿತವಾದ, ಅಲ್ಪವಾದ, ಒಂದು ಪರಿಮಿತಿಯುಳ್ಳ, ಒಂದು ಅಳತೆಗೊಳಪಟ್ಟಿರುವ. मा (माने) "क्त:" (३-४-७२)। इकारादेश: (७-४-४०)। "सुरभिगन्धिषु शुश्रुविरे गिर: कुसुमितासु मिता वनराजय:" रघु० ९-३४। "मितं च सारश्च वचो हि वाग्मिता" नैष० ९-८। 2. ಅಳೆಯಲ್ಪಟ್ಟ. माङ् (माने) "क्त:" (३-२-१०२)। 3. ಎಸೆಯಲ್ಪಟ್ಟ. डु मिञ् (प्रक्षेपणे) "क्त:" (३-२-१०२)। (अव्य०) 4. ಚಿಕ್ಕದಾಗಿ. 5. ಕೊಂಚವಾಗಿ. "किञ्चिन्मात्रं मितम्" वैज०। 6. ಹೇಳಿದ, ಶಬ್ದಮಾಡಿದ. माङ् (माने शब्दे च) "क्त:"।

**मितङ्गम ಮಿತಂಗಮ** (पुं०) 1. ಗಜ, ಆನೆ. (वि०) 2. ಸ್ವಲ್ಪ ನಡೆಯುವವನು. मितं गच्छति—गम्लृ (गतौ) "खच्" (वा० ३-२-३८)। मुमागम: (६-३-६७)। 3. ನಿಧಾನವಾಗಿ ನಡೆಯುವವನು. स्त्रियां "टाप्" (४-१-४)। **-गमा -ಗಮಾ.**

**मितद्रु ಮಿತದ್ರು** (पुं०) 1. ಸಮುದ್ರ. मितं द्रवति द्रु (गतौ) "डु:" (वा० ३-२-१८०)। "वार्धिर्मितद्रुतिमिकोशमहाशयाश्च" त्रिकाण्ड०। (वि०) 2. ಮಿತವಾಗಿ ನಡೆಯುವವನು. 3. ನಿಧಾನವಾಗಿ ನಡೆಯುವವನು.

**मितभाषिन् ಮಿತಭಾಷಿನ್** (वि०) ಸ್ವಲ್ಪವಾಗಿ ಮಾತನಾಡುವ, ಅವಶ್ಯವಾದಷ್ಟು ಮಾತ್ರ ಮಾತನಾಡುವ. मितं भाषितुं शीलं यस्य—भाष (व्यक्तायां वाचि) "णिनि:" (३-२-७८)। "त्यागाय संभृतार्थानां सत्याय मितभाषिणाम्" रघु० १-७। स्त्रियां "ङीप्" (४-१-५)। **-भाषिणी -ಭಾಷಿಣೀ.**

**मितम्पच ಮಿತಂಪಚ** (वि०) 1. ಕೃಪಣ, ಜಿಪುಣ. मितं परिमितं पचति—डु पचष् (पाके) "खच्" (३-२-३४)। मुमागम: (६-३-६७)। 2. ಕಡಮೆಯಾಗಿ ಅಡಿಗೆ ಮಾಡುವವನು, ಅಲ್ಪಪ್ರಮಾಣದಲ್ಲಿ ಅಡಿಗೆ ಮಾಡುವವನು. स्त्रियां "टाप्" (४-१-४)। **-पचा -ಪಚಾ.** "मितम्पचा ब्राह्मणी" सि० कौ०।

**मिति ಮಿತಿ** (स्त्री०) 1. ಪರಿಮಾಣ ಅಳತೆ. माङ् (माने शब्दे च) भावे "क्तिन्" (३-३-९४)। 2. ಜ್ಞಾನ, ತಿಳಿವಳಿಕೆ. 3. ಅವಚ್ಛೇದ, ನಿರ್ಣಯ, ನಿರ್ಧಾರ. 4. ಎಸೆಯುವುದು, ಬಿಸಾಡುವುದು. डुमिञ् (प्रक्षेपणे) "क्तिन्"। "मितिर्मानेऽप्यवच्छेदे" मेदि०।

**मित्र ಮಿತ್ರ** (पुं०) 1. ಅರ್ಕ, ಸೂರ್ಯ. ञिमिदा (स्नेहने) "क्त्र:" (उ० ४-१६४)। "मित्रस्य लुप्ततमसोऽप्यतिरागभाज:" याद० १९-७४। 2. ಅರ್ಕವೃಕ್ಷ, ಎಕ್ಕದ ಗಿಡ. (न०) 3. ಗೆಳೆಯ, ಸ್ನೇಹಿತ. "तस्य मित्राण्यमित्रास्ते ये च ये चोभये नृपा:" माघ० २-१०२। "तन्मित्रमापदि सुखे च समक्रियं यत्" भर्तृ० २-६८। 4. (ರಾಜನಿಗೆ) ತನ್ನ ಪಕ್ಕದ ದೇಶಕ್ಕೆ ಮುಂದಿನ ದೇಶದ ರಾಜ. "विषयानन्तरो राजा शत्रुर्मित्रमत: परम्" अम०। ಪ್ರತ್ಯಕ್ಷದಲ್ಲಿ (ಎದುರಿಗೆ) ಬೆಣ್ಣೆಯಂತೆ ಮಾತನಾಡುತ್ತ, ಪರೋಕ್ಷದಲ್ಲಿ ಕಾರ್ಯಘಾತುಕನಾಗಿ ದ್ರೋಹಮಾಡತಕ್ಕ ಸ್ನೇಹಿತನನ್ನು ದೂರದಲ್ಲಿಡಬೇಕು. "परोक्षे कार्यहन्तारं प्रत्यक्षे प्रियवादिनम्। वर्जयेत्तादृशं मित्रम् मायामयमरिं तथा" हितो० १-७७।

**मित्रकार्य ಮಿತ್ರಕಾರ್ಯ, -कृत्य -ಕೃತ್ಯ** (न०) ಸುಹೃತ್ಕಾರ್ಯ, ಸ್ನೇಹಿತನ ಕೆಲಸ. मित्रस्य कार्यं कृत्यं वा। "मित्रकृत्यमपदिश्य पार्श्वत: प्रस्थितं तमनवस्थितं प्रिया:" रघु० १९-३२।

**मित्रत्व ಮಿತ್ರತ್ವ** (ನಂ) ಗೆಳೆತನ, ಸ್ನೇಹ, ಮೈತ್ರಿ.

**मित्रध्रुह् ಮಿತ್ರದ್ರುಹ್** (ವಿಂ) ಸ್ನೇಹಿತನಿಗೆ ದ್ರೋಹ ಮಾಡುವವನು, ಗೆಳೆಯನಿಗೆ ಮೋಸಮಾಡುವವನು, ಮಿತ್ರನಿಗೆ ಕೆಡುಕುಮಾಡುವವನು. मित्राय द्रुह्यति—द्रुह (जिघांसायाम्) "क्विप्" (३-२-६१)।

**मित्रभेद ಮಿತ್ರಭೇದ** (ಪುಂ) ಸ್ನೇಹವನ್ನು ಮುರಿಯುವುದು, ಸ್ನೇಹಕ್ಕೆ ಭಂಗತಂದು ದ್ವೇಷವುಂಟುಮಾಡುವುದು, ಪರಸ್ಪರ ಜಗಳವುಂಟುಮಾಡುವುದು. मित्राणां भेदः।

**मित्रयु ಮಿತ್ರಯು** (ಪುಂ) 1. ಸ್ನೇಹಿತ, ಗೆಳೆಯ, ಮಿತ್ರ. मित्रं याति—या (प्रापणे) "कुः" (उ० १-३७)। (ವಿಂ) 2. ಸ್ನೇಹಮನೋಭಾವವುಳ್ಳವನು, ಸ್ನೇಹಿತರಲ್ಲಿ ಪ್ರೇಮವುಳ್ಳವನು. "सम्बन्धी गुणवान् सम्यङ्मित्रयुमित्रवत्सलः" त्रिकाण्ड०।

**मित्रलाभ ಮಿತ್ರಲಾಭ** (ಪುಂ) ಸ್ನೇಹಿತನ ಸಂಪಾದನೆ, ಪರಸ್ಪರ ಮೈತ್ರಿಯಿಂದ ಉಂಟಾಗುವ ಮಿತ್ರನ ಲಾಭ. मित्रस्य लाभः।

**मित्रविन्दा ಮಿತ್ರವಿಂದಾ** (ಸ್ತ್ರೀಂ) ಶ್ರೀಕೃಷ್ಣನ ಅಷ್ಟ ಮಹಿಷಿಯರಲ್ಲೊಬ್ಬಳು. ಇವಳು ಅವಂತಿ ದೇಶದ ದೊರೆಯಾದ ಜಯಸೇನನ ಮಗಳು. ವಸುದೇವನ ತಂಗಿಯಾದ ರಾಜಾಧಿದೇವಿಯು ಇವಳ ತಾಯಿ. ಮಿತ್ರವಿಂದೆಗೆ ವೃಕ ಹರ್ಷ ಅನಿಲ ಗೃಧ್ರ ವರ್ಧನ ಉನ್ನಾದ ಮಹಾಶ ಪಾವನ ವಹ್ನಿ ಮತ್ತು ಕ್ಷುಧಿಯೆಂಬ ಹತ್ತು ಮಂದಿ ಮಕ್ಕಳು.

**मित्रशी ಮಿತ್ರಶೀ** (ಪುಂ) ಮಿತ್ರನನ್ನು ಶಿಕ್ಷಿಸುವವನು. मित्रं शास्ति—शासु (अनुशिष्टौ) "क्विप्" (३-२-७६)। इत्वम् दीर्घश्च।

**मित्रसप्तमी ಮಿತ್ರಸಪ್ತಮೀ** (ಸ್ತ್ರೀಂ) ಮಾರ್ಗಶಿರ ಶುದ್ಧ ಸಪ್ತಮಿ. मित्रस्य सप्तमी। ಕಶ್ಯಪನಿಂದ ಅದಿತಿಯಲ್ಲಿ ಜನಿಸಿದ ಮಿತ್ರನೆಂಬ ಸೂರ್ಯನು ಮಾರ್ಗಶಿರ ಶುದ್ಧ ಸಪ್ತಮಿಯಲ್ಲಿ ಹುಟ್ಟಿದುದರಿಂದ ಈ ತಿಥಿಗೆ ಈ ಹೆಸರು. "अदितेः कश्यपाज्जज्ञे मित्रो नाम दिवाकरः। मार्गशीर्षस्य मासस्य शुक्ले पक्षे शुभे तिथौ। सप्तम्यां तेन सा ख्याता लोकेऽस्मिन् मित्रसप्तमी"।

**मित्रा ಮಿತ್ರಾ** (ಸ್ತ್ರೀಂ) 1. ಸುಮಿತ್ರೆ, ದಶರಥನ ಒಬ್ಬ ಪತ್ನಿ, ಲಕ್ಷ್ಮಣ ಶತ್ರುಘ್ನರ ತಾಯಿ. 2. ಒಬ್ಬ ಅಪ್ಸರಸ್ಸು.

**मिथस् ಮಿಥಸ್** (ಅವ್ಯಂ) 1. ಅನ್ಯೋನ್ಯವಾಗಿ, ಪರಸ್ಪರವಾಗಿ. मेथति—मेथृ (संगमे) "असुन्" (उ० ४-१७१)। पृषो०। "बलवदपि बलं मिथो विरोधि प्रभवति नैव विपक्षनिर्जयाय" किरा० १०-३७। 2. ರಹಸ್ಯವಾಗಿ, ಗುಟ್ಟಾಗಿ. "तथापि वाचालतया युनक्ति मां मिथस्त्वदाभाषणलोलुपं मनः" माघ० १-४०। "अथ विश्वात्मने देवी सन्दिदेश मिथः सखीम्" कुमा० ६-१।

**मिथि ಮಿಥಿ** (ಪುಂ) ನಿಮಿರಾಜನ ಪುತ್ರ, ಜನಕಮಹಾರಾಜ. मेथते शत्रुकुलम्—मेथृ (हिंसायाम्) "इन्" (उ० ४-११७)। पृषो०। "निमिः परमधर्मात्मा सर्वसत्त्ववतां वरः। तस्य पुत्रो मिथिर्नाम जनकः" रामा०।

**मिथिल ಮಿಥಿಲ** (ಪುಂ) 1. ಜನಕರಾಜ. "जन्मना जनकः सोऽभूत् वैदेहस्तु विदेहजः। मिथिलो मथनाज्जातो मिथिला येन निर्मिता" भाग० ९-१३। (ಪುಂ ಬಂ ವಂ) 2. ಮಿಥಿಲಾನಗರದ ಜನರು.

**मिथिला ಮಿಥಿಲಾ** (ಸ್ತ್ರೀಂ) ಮಿಥಿಲಾನಗರ, ವಿದೇಹ ದೇಶದ ರಾಜಧಾನಿ. मथ्यन्तेऽत्र रिपवः—मन्थ (विलोडने) "इलच्" अनुनासिकलोपः अकारस्य इत्वं च निपा० (उ० १-५७)।

**मिथुन ಮಿಥುನ** (ನಂ) 1. ದ್ವಂದ್ವ, ಎರಡು, ಒಂದು ಜೊತೆ. मिथि (सौत्रधातुः) "उनन्" (उ० ३-५५)। "तीरान्तराणि मिथुनानि रथाङ्गनाम्नां नीत्वा विलोलितसरोजवनश्रियस्ताः" किरा० ८-५६। 2. ಮೇಷ ಮೊದಲುಗೊಂಡು ಮೂರನೆಯ ರಾಶಿ (ಮಿಥುನ ರಾಶಿ). 3. ಘೃತ, ತುಪ್ಪ. 4. ಜೇನುತುಪ್ಪ. "मधु सर्पिश्च मिथुनम्" वैज०। 5. ಸ್ತ್ರೀ ಪುರುಷರ ಜೋಡಿ. "मिथुनं न द्वयो राशिभेदे स्त्रीपुंसयुग्मके" मेदि०। "मानिषाद प्रतिष्ठां त्वमगमः शाश्वतीः समाः। यत्क्रौञ्चमिथुनादेकमवधीः काममोहितम्" रामा०।

**मिथ्या ಮಿಥ್ಯಾ** (ಅವ್ಯಂ) 1. ಅಸತ್ಯ, ಸುಳ್ಳು, ಸಟೆ. मथे (विलोडने) "यक्" (उ० ४-११२) निपा०। "मिथ्यैव व्यसनं वदन्ति मृगयामीदृग्विनोदः कुतः" शाकु० २-५। 2. ವ್ಯರ್ಥವಾಗಿ, ಪ್ರಯೋಜನವಿಲ್ಲದೆ. "मिथ्या कारयते चारैर्घोषणां राक्षसाधिपः" भट्टि० ८-४४। (ಸ್ತ್ರೀಂ) 3. ಅಧರ್ಮದ ಪತ್ನಿ. ವಂಚಕರೆಲ್ಲರೂ ಇವಳನ್ನು ಪೂಜಿಸುವರು. ಇವಳು ಸತ್ಯ (ಕೃತ) ಯುಗದಲ್ಲಿ ಯಾರ ದೃಷ್ಟಿಗೂ ಬೀಳುವುದಿಲ್ಲ. ತ್ರೇತಾಯುಗದಲ್ಲಿ ಸೂಕ್ಷ್ಮರೂಪದಿಂದ ಗೋಚರವಾಗುವಳು. ದ್ವಾಪರ ಯುಗದಲ್ಲಿ ಭಯದಿಂದ ಅರ್ಧ ಮಾತ್ರ ಕಾಣಿಸಿಕೊಳ್ಳುತ್ತಾಳೆ. ಕಲಿಯುಗದಲ್ಲಿ ಅಧರ್ಮದ ಪ್ರಾಚುರ್ಯ

ವಾದಂತೆಲ್ಲಾ ಜಗತ್ತಿನಲ್ಲಿ ಎಲ್ಲಾ ಕಡೆಯಲ್ಲೂ ವ್ಯಾಪಿಸು ವಳು. ತನ್ನ ಸಹೋದರನಾದ ಕಪಟದೊಡನೆ ಸೇರಿ ಪ್ರತಿ ಯೊಂದು ಮನೆಯಲ್ಲೂ ಭಯವಿಲ್ಲದೆ ತನ್ನ ಮಹಿಮೆ ಯನ್ನು ತೋರುತ್ತಿರುವಳು. "अधर्मपत्नी मिथ्या सा सर्वभूतैश्च पूजिता। यया विना जगन्मुक्तमुच्छन्नविधि-निर्मितम्। सत्ये चादर्शना या च त्रेतायां सूक्ष्मरूपिणी। अर्धावयवरूपा च द्वापरे संवृता भिया। कलौ महाप्रमत्ता च सर्वत्र व्यापिका बलात्। कपटेन समं भ्रात्रा भ्रमत्येव गृहे गृहे" ब्रह्मवै०।

**मिथ्याग्रह ಮಿಥ್ಯಾಗ್ರಹ** (ಪುಂ) ತಪ್ಪುತಿಳಿವಳಿಕೆ, ತಪ್ಪಾಗಿ ತಿಳಿದುಕೊಳ್ಳುವುದು.

**मिथ्याचर्या ಮಿಥ್ಯಾಚರ್ಯಾ** (ಸ್ತ್ರೀ೦) ವೇಷ, ಬೂಟಾಟಿಕೆ, ಇನ್ನೊಬ್ಬರಿಗಾಗಿ ಮಾಡುವ ಕಪಟಾಚರಣೆ.

**मिथ्याचार ಮಿಥ್ಯಾಚಾರ** (ಪುಂ) 1. ಕಪಟಾಚಾರ, ಇನ್ನೊಬ್ಬನನ್ನು ಮೆಚ್ಚಿಸಲು ಮಾಡುವ ದಂಭಾಚಾರ. (ವಿ೦) 2. ಕಪಟಾಚಾರವುಳ್ಳವನು, ಇನ್ನೊಬ್ಬನಿಗಾಗಿ ವೇಷಧಾರಿ ಕೆಲಸಮಾಡುವವನು. मिथ्या आचारो यस्य। "कर्मेन्द्रियाणि संयम्य य आस्ते मनसा स्मरन्। इन्द्रियार्थान् विमूढात्मा मिथ्याचारः स उच्यते" गीता ३-६।

**मिथ्याज्ञान ಮಿಥ್ಯಾಜ್ಞಾನ** (ನ೦) ತಪ್ಪುತಿಳಿವಳಿಕೆ, ಭ್ರಾಂತಿ.

**मिथ्यादृष्टि ಮಿಥ್ಯಾದೃಷ್ಟಿ** (ಸ್ತ್ರೀ೦) 1. ನಿಜವಾಗಿ ಇರುವು ದನ್ನು ಸುಳ್ಳಾಗಿ ನೋಡುವುದು, ಇರುವ ವಸ್ತುವಿನಲ್ಲಿ ಇಲ್ಲವೆಂಬ ಬುದ್ಧಿ. 2. ಪರಲೋಕವಿಲ್ಲವೆಂಬ ಬುದ್ಧಿ, ನಾಸ್ತಿಕತೆ. मिथ्याचासौ दृष्टिश्च। 3. ವಿವೇಕಶತ್ರು ವಾದ ಮಹಾಮೋಹನ ಪತ್ನಿ. "श्रद्धां व्याकृष्टुं मिथ्या-दृष्टिरेव विलासिनी परं प्रगल्भेति तदस्मिन् विषये सैव नियुज्यताम्" प्रबोध० २।

**मिथ्याध्यवसिति ಮಿಥ್ಯಾಧ್ಯವಸಿತಿ** (ಸ್ತ್ರೀ೦) ಅರ್ಥಾ ಲಂಕಾರದ ಒಂದು ಭೇದ. ಒಂದು ವಿಷಯದ ಮಿಥ್ಯಾತ್ವ ಸಿದ್ಧಿಗಾಗಿ ಮತ್ತೊಂದು ಮಿಥ್ಯಾಭೂತವಿಷಯಕಲ್ಪ ನೆಯು ಮಿಥ್ಯಾಧ್ಯವಸಿತಿಯೆಂಬ ಅಲಂಕಾರವಾಗುವುದು. "किञ्चिन्मिथ्यात्वसिद्ध्यर्थं मिथ्यार्थान्तरकल्पनम्। मिथ्याध्यवसितिर्वेश्यां वशयेत् खस्रजं वहन्" चन्द्रा०।

**मिथ्याध्यवसाय ಮಿಥ್ಯಾಧ್ಯವಸಾಯ** (ಪುಂ) 1. ಮಿಥ್ಯೋತ್ಸಾಹ. 2. ಮಿಥ್ಯಾಪ್ರಯತ್ನ. मिथ्याभूतोऽध्यवसायः।

**मिथ्यानिरसन ಮಿಥ್ಯಾನಿರಸನ** (ನ೦) ಶಪಥ, ಪ್ರತಿಜ್ಞೆ. मिथ्या असत्यं निरस्यते अनेन — निर् + असु (क्षेपणे) कर० "ल्युट्" (३-३-११७)।

**मिथ्यापवाद ಮಿಥ್ಯಾಪವಾದ** (ಪುಂ) ಇಲ್ಲದ ದೋಷ ಹೇಳುವುದು, ಸಲ್ಲದ ದೂಷಣೆಯನ್ನು ಮಾಡುವುದು.

**मिथ्याप्रतिज्ञ ಮಿಥ್ಯಾಪ್ರತಿಜ್ಞ** (ವಿ೦) ಪ್ರತಿಜ್ಞೆಯನ್ನು ಸುಳ್ಳುಮಾಡಿದವನು, ಪ್ರತಿಜ್ಞಾಭಂಗಮಾಡಿದವನು. मिथ्या असत्या प्रतिज्ञा यस्य।

**मिथ्याभियोग ಮಿಥ್ಯಾಭಿಯೋಗ** (ಪುಂ) ಇಲ್ಲದ್ದನ್ನು ಆರೋಪಿಸಿ ಮಾತನಾಡುವುದು, ಸುಳ್ಳುಹೇಳಿ ವಾದಮಾಡು ವುದು, ಸುಳ್ಳು ಅಪಾದನೆ. मिथ्या असत्यमभियोगः।

**मिथ्याभिशंसन ಮಿಥ್ಯಾಭಿಶಂಸನ** (ನ೦) ಸುಳ್ಳುಹೇಳಿ ಅಪರಾಧ ಹೊರಿಸುವುದು, ಮಿಥ್ಯಾರೋಪ. मिथ्या असत्यस्य अभिशंसनम्।

**मिथ्याभिशाप ಮಿಥ್ಯಾಭಿಶಾಪ** (ಪುಂ) ಮಿಥ್ಯಾಪವಾದ, ಸುಳ್ಳು ಅಪಾದನೆ, ಸುಳ್ಳುಹೇಳಿ ತಪ್ಪುಹೊರಿಸುವುದು. मिथ्या अभिशापः।

**मिथ्यामति ಮಿಥ್ಯಾಮತಿ** (ಸ್ತ್ರೀ೦) ಭ್ರಾಂತಿ, ತಪ್ಪು ತಿಳಿವಳಿಕೆ, ಒಂದು ವಸ್ತುವನ್ನು ಬೇರೆ ವಸ್ತುವನ್ನಾಗಿ ತಿಳಿಯುವುದು. मिथ्याचासौ मतिश्च।

**मिथ्यावाद ಮಿಥ್ಯಾವಾದ** (ಪುಂ) ಸುಳ್ಳುಮಾತು, ಅಸತ್ಯ ವಾದ ಮಾತು.

**मिथ्यावादिन् ಮಿಥ್ಯಾವಾದಿನ್** (ವಿ೦) ಸುಳ್ಳು ಹೇಳು ವವನು, ಅಸತ್ಯವನ್ನು ನುಡಿಯುವವನು. मिथ्या वदति — वद (व्यक्तायां वाचि) "णिनिः" (३-२-७८)। स्त्रियां "ङीप्" (४-१-५)। **-वादिनी -ವಾದಿನೀ.** "मिथ्यावादिनि दूति बान्धवजनस्याज्ञातपीडागमे" अमरु० १०५।

**मिथ्यासाक्षिन् ಮಿಥ್ಯಾಸಾಕ್ಷಿನ್** (ವಿ೦) ಸುಳ್ಳು ಸಾಕ್ಷಿ, ನೋಡದಿದ್ದುದನ್ನು ನೋಡಿದುದಾಗಿ ಸುಳ್ಳು ಹೇಳುವ ಸಾಕ್ಷಿ. मिथ्याभाषी साक्षी।

**मिथ्योत्तर ಮಿಥ್ಯೋತ್ತರ** (ನ೦) ಸುಳ್ಳು ಉತ್ತರ, ಮಾತನ್ನು ಬದಲಾಯಿಸಿ ಹೇಳುವುದು, ಅಪಲಾಪ. **ಸುಳ್ಳು ಹೇಳುವುದು ನಾಲ್ಕು ವಿಧ:** (1) ಇದು ಸುಳ್ಳು. (2) ಇದು ನನಗೆ ತಿಳಿಯದು. (3) ನಾನು ಅಲ್ಲಿರಲಿಲ್ಲ. ಮತ್ತು (4) ನಾನು ಆಕಾಲದಲ್ಲಿ ಹುಟ್ಟಿಯೇ ಇರಲಿಲ್ಲ. "मिथ्यैतन्नाभिजानामि मम तत्र न सन्निधिः। अजातश्चास्मि तत्काले इति मिथ्या चतुर्विधम्"।

**मिद्ध ಮಿದ್ಧ** (ನಂ) 1. ಚಿತ್ತಸಂಕೋಚ. 2. ನಿದ್ರೆ. 3. ಸೋಮಾರಿತನ. "मिद्धं चित्ताभिसंक्षेपे निद्रायाम्" त्रिकाण्डं। "मिद्धं चित्ताभिसंक्षेपे क्लीबमालस्यनिद्रयोः" मेदिं।

**मिन्न ಮಿನ್ನ** (विं) 1. ಕೊಬ್ಬಿರುವ, ಪುಷ್ಟವಾಗಿರುವ. ञिमिदा (स्नेहने) "क्तः" (३-४-७२)। 2. ಕೊಬ್ಬು ಬಳಿದಿರುವ. 3. ಜಿಡ್ಡು ಬಳಿದಿರುವ. 4. ಪ್ರೀತಿಯ ಮನೋಭಾವವುಳ್ಳ.

**मिन्मिन ಮಿನ್ಮಿನ** (विं) ಅರೆಮೂಗ, ಅನುನಾಸಿಕ ಸಹಿತವಾಗಿ ಮಾತನಾಡುವವನು. ಕಫಸಹಿತವಾದ ವಾಯುವು ಧಮನಿಗಳನ್ನು ಆವರಿಸಿಕೊಂಡು ಮನುಷ್ಯನನ್ನು ಮೂಕನನ್ನಾಗಿಯೂ ಅರೆಮೂಗನನ್ನಾಗಿಯೂ ತೊದಲುತ್ತ ಮಾತಾಡುವವನನ್ನಾಗಿಯೂ ಮಾಡುವುದು. "आवृत्य वायुः सकफो धमनीः शब्दवाहिनीः। नरान् करोत्यक्रियकान् मूकमिन्मिनगद्गदान्"।

**मिमङ्क्षा ಮಿಮಂಕ್ಷಾ** (स्त्रीं) ನೀರಿನಲ್ಲಿ ಮುಳುಗಲು ಆಸೆ, ನೀರಿನಲ್ಲಿ ಇಳಿಯಲು ಅಪೇಕ್ಷೆ. मङ्क्तुमिच्छा टु मस्जो (शुद्धौ) + सन् "अः" (३-३-१०२)।

**मिमङ्क्षु ಮಿಮಂಕ್ಷು** (विं) ನೀರಿನಲ್ಲಿ ಮುಳುಗಲು ಅಪೇಕ್ಷಿಸುವ. मङ्क्तुमिच्छुः—टुमस्जो (शुद्धौ) + सन् "उः" (३-२-१६८)। "यद्दन्तिनः कटकटाहतटान्मिमङ्क्षोर्मङ्क्षूदपाति परितः पटलैरलीनाम्" माघं ५-३७।

**मिर्मिर ಮಿರ್ಮಿರ** (विं) ಎವೆಯಿಕ್ಕದ ಕಣ್ಣುಗಳುಳ್ಳ, ರೆಪ್ಪೆ ಮುಚ್ಚದೆ ನೋಡುತ್ತಿರುವ. "मिर्मिरः स्तब्धलोचनः" वैजं।

**मिलत् ಮಿಲತ್** (विं) 1. ಒಟ್ಟಿಗೆ ಸೇರುತ್ತಿರುವ, ಒಟ್ಟುಗೂಡುತ್ತಿರುವ. 2. ಎದುರುಗೊಳ್ಳುತ್ತಿರುವ. मिल (संगमे) "शतृ" (३-२-१२४)। "शानच्" (३-२-१२४)। मिलमानः ಮಿಲಮಾನಃ. स्त्रियां "ङीप्" (४-१-६)। —ती —ತೀ, —न्ती —ನ್ತೀ.

**मिलन ಮಿಲನ** (ನಂ) 1. ಒಟ್ಟಿಗೆ ಸೇರುವುದು, ಒಟ್ಟುಗೂಡುವುದು. मिल (संगमे) "ल्युट्" (३-३-११५)। 2. ಬೆರೆತಿರುವುದು, ಮಿಶ್ರವಾಗಿರುವುದು. 3. ಎದುರುಗೊಳ್ಳುವುದು. 4. ಭೇಟಿಯಾಗುವುದು.

**मिलित ಮಿಲಿತ** (विं) 1. ಒಟ್ಟಿಗೆ ಸೇರಿರುವ, ಒಂದುಗೂಡಿರುವ, ಒಂದು ಕಡೆ ಕಲೆತಿರುವ. मिल (संगमे) कर्तं "क्तः" (३-४-७२)। "मिलितेषु मिथो योद्धुं दन्तिषु प्रसभं भटाः" कुमां १६-३१। 2. ಬೆರೆತಿರುವ, ಮಿಶ್ರವಾಗಿರುವ. 3. ಒಂದಕ್ಕೊಂದು ಸಂಬಂಧ ಹೊಂದಿರುವ, ಅಂಟಿಕೊಂಡಿರುವ. "मिश्रितौष्ठ मिलिताधरं मिथः" नैषं १८-१५२। (ನಂ) 4. ಬೆರೆತಿರುವುದು, ಮಿಶ್ರವಾಗಿರುವುದು. मिल भावे "क्तः" (३-३-११४)।

**मिलितवत् ಮಿಲಿತವತ್** (विं) 1. ಒಂದುಗೂಡಿರುವ, ಒಂದು ಕಡೆ ಸೇರಿರುವ. मिल (संगमे) "क्तवतु" (३-२-१०२)। 2. ಬೆರೆತಿರುವ, ಮಿಶ್ರವಾಗಿರುವ. स्त्रियां "ङीप्" (४-१-६)। —वती —ವತೀ.

**मिलिन्द ಮಿಲಿಂದ** (पुं) ಭ್ರಮರ, ದುಂಬಿ. "परिणतमकरन्दमार्मिकास्ते जगति भवन्तु चिरायुषो मिलिन्दाः" भामिं विं।

**मिश्र ಮಿಶ್ರ** (पुं) 1. ಶ್ರೇಷ್ಠ, ಗೌರವದ ಮನುಷ್ಯ ಮತ್ತು ಪೂಜ್ಯರಲ್ಲಿ ಉಪಯೋಗಿಸುವ ಪದ. आर्यमिश्रः मण्डनमिश्रः कृष्णमिश्रः ಇತ್ಯಾದಿ. 2. ಒಂದು ಜಾತಿಯ ಆನೆ. 3. ಕೃತ್ತಿಕಾ ಮತ್ತು ವಿಶಾಖಾ ನಕ್ಷತ್ರಗಳ ಗುಂಪು. (ನಂ) 4. ಬೆರಕೆ, ಬೆರೆತಿರುವುದು. (विं) 5. ಬೆರೆತಿರುವ, ಒಟ್ಟಿಗೆ ಸೇರಿಕೊಂಡಿರುವ, ಕಲೆತಿರುವ. मिश्र (संपर्के) अच् (३-१-१३४)। "करम्बः कम्बरो मिश्रः संपृक्तः खचितः समाः" वैजं।

**मिश्रक ಮಿಶ್ರಕ** (ನಂ) 1. ದೇವೋದ್ಯಾನ, ದೇವತೆಗಳ ಉದ್ಯಾನವನ. "देवोद्यानानि वैभ्राजं मिश्रकं सिद्ध्रकारणम्" त्रिकाण्डं। 2. ಊಷರ ಲವಣ, ಉಪ್ಪು ಮಣ್ಣಿನಿಂದ ತಯಾರಾದ ಉಪ್ಪು. 3. ಬೆರಕೆ. ಒಟ್ಟಿಗೆ ಸೇರಿರುವುದು. (विं) 4. ಬೆರೆತಿರುವ, ಒಟ್ಟಿಗೆ ಸೇರಿರುವ.

**मिश्रज ಮಿಶ್ರಜ** (पुं) ಹೇಸರಗತ್ತೆ. मिश्रात् भिन्नजातीययोः संपर्कात् जायते — जनी (प्रादुर्भावे) "डः" (३-२-९८)।

**मिश्रजाति ಮಿಶ್ರಜಾತಿ** (स्त्रीं) 1. ಬೆರಕೆಜಾತಿ. (विं) 2. ಬೆರಕೆಜಾತಿಯ.

**मिश्रण ಮಿಶ್ರಣ** (ನಂ) ಬೆರಸುವುದು, ಒಂದಾಗಿ ಸೇರಿಸುವುದು. मिश्र (संपर्के) + णिच् "ल्युट्" (३-३-११५)।

**मिश्रणीय ಮಿಶ್ರಣೀಯ** (विं) 1. ಬೆರಸಲ್ಪಡುವ. 2. ಬೆರಸಬೇಕಾದ. 3. ಬೆರಸಲು ಅರ್ಹವಾದ. मिश्र (संपर्के) + णिच् "अनीयर्" (३-१-९६)। "तव्यः" (३-१-९६)। मिश्रितव्यः ಮಿಶ್ರಿತವ್ಯಃ.

**मिश्रपुष्पा ಮಿಶ್ರಪುಷ್ಪಾ** (स्त्रीं) ಮೆಂತ್ಯ. मिश्राणि परस्परं संश्लिष्टानि पुष्पाण्यस्याः।

**मिश्रवर्ण ಮಿಶ್ರವರ್ಣ** (नं०) 1. ಕೃಷ್ಣಾಗರು. 2. ಬೆರಕೆ ಬಣ್ಣ. 3. ಬೆರಕೆ ಜಾತಿ. (वि०) 4. ಬೆರಕೆಜಾತಿಯ. 5. ಬೆರಕೆ ಬಣ್ಣದ.

**मिश्रशब्द ಮಿಶ್ರಶಬ್ದ** (पुं०) ಬೆರಕೆಜಾತಿಯ ಹೇಸರಗತ್ತೆ. मिश्रः मिलितः अश्वरासभयोरिव शब्दोऽस्य ।

**मिश्रित ಮಿಶ್ರಿತ** (वि०) 1. ಗೌರವಿಸಲ್ಪಟ್ಟ. 2. ಬೆರಸಲ್ಪಟ್ಟ. 3. ಒಂದುಗೂಡಿಸಲ್ಪಟ್ಟ. मिश्र (संपर्के)+णिच् "क्तः" (३-२-१०२) । 4. ಒಟ್ಟಿಗೆ ಸೇರಿಕೊಂಡಿರುವ. "मिश्रितोरु मिलिताधरं मिथः" नैष० १८-१५२ ।

**मिश्रेया ಮಿಶ್ರೇಯಾ** (स्त्री०) ಸಬ್ಬಸಿಗೆಸೊಪ್ಪು. मिश्रयति—मिश्र (संपर्के)+णिच् "अच्" (३-१-१३४) । ईयते—इण् (गतौ) "यत्" (३-२-९७) । मिश्राचासौ एया च । शक० ।

**मिष ಮಿಷ** (नं०) 1. ವ್ಯಾಜ, ನೆಪ. मिष (स्पर्धायाम्) "कः" (३-१-१३५) । "प्रियासु बालासु रतक्षमासु च द्विपत्रितं पल्लवितं च बिभ्रतम् । स्मराजितं रागमहीरुहांकुरं मिषेण चञ्चवाश्चरणद्वयस्य च" नैष० १-११८ । 2. ಮೋಸ, ವಂಚನೆ. 3. ಸ್ಪರ್ಶ, ಸಂಬಂಧ. (पुं०) 4. ಸ್ಪರ್ಧೆ, ಮೇಲಾಟ. "इति ध्यायन् मिषं कृत्वा तदैवास्फुटया गिरा । निर्गत्यैव विशुद्धात्मा धनदेवान्तिकं ययौ" कथास० । "मिषं व्याजे स्पर्धने ना" मेदि० ।

**मिषत् ಮಿಷತ್** (वि०) 1. ನೋಡುತ್ತಿರುವ. मिष (स्पर्धायाम्) "शतृ" (३-२-१२४) । "यज्वभिः संभृतं हव्यं विततेष्वध्वरेषु सः । जातवेदोमुखान्मायी मिषतामाच्छिनत्ति नः" कुमा० २-४६ । 2. ಹೋರಾಡುತ್ತಿರುವ, ಸ್ಪರ್ಧಿಸುತ್ತಿರುವ. 3. ಚಲಿಸುತ್ತಿರುವ.

**मिषि ಮಿಷಿ** (स्त्री०) 1. ಜಟಾಮಾಂಸಿ. 2. ಸಬ್ಬಸಿಗೆ ಸೊಪ್ಪು. 3. ಕಾಡು ಸಬ್ಬಸಿಗೆ.

**मिषिका ಮಿಷಿಕಾ** (स्त्री०) ಜಟಾಮಾಂಸಿ.

**मिषित ಮಿಷಿತ** (वि०) ಚಲಿಸಿದ, ಹೊರಳಾಡಿದ. मिष (स्पर्धायाम्) "क्तः" (३-४-७२) ।

**मिषी ಮಿಷೀ** (स्त्री०) ಜಟಾಮಾಂಸಿ.

**मिष्ट ಮಿಷ್ಟ** (पुं०) 1. ಮಧುರರಸ, ಸಿಹಿ. मिषु (सेचने) "क्तः" (३-४-७२) । (नं०) 2. ಮಿಠಾಯಿ. (वि०) 3. ಮಧುರವಾದ, ಸಿಹಿಯಾದ. "तरुणं सर्षपशाकं नवौदनं पिच्छिलानि च दधीनि । अल्पव्ययेन सुन्दरि ग्राम्यजनो मिष्टमश्नाति" । 4. ಚಿಮುಕಿಸಲ್ಪಟ್ಟ, ತೇವಮಾಡಲ್ಪಟ್ಟ. 5. ಹೋರಾಡಲ್ಪಟ್ಟ, ಸ್ಪರ್ಧಿಸಲ್ಪಟ್ಟ. मिषु (सेचने, स्पर्धायां वा) "क्तः" (३-२-१०२) ।

**मिष्टान्न ಮಿಷ್ಟಾನ್ನ** (नं०) ಮಧುರರಸದಿಂದ ಕೂಡಿದ ಅನ್ನ ಮುಂತಾದುದು. मिष्टमन्नम् ।

**मिसि(सी) ಮಿಸಿ(ಸೀ)** (स्त्री०) 1. ಕಾಡು ಸಬ್ಬಸಿಗೆ. 2. ಸಬ್ಬಸಿಗೆಸೊಪ್ಪು. मसी (परिणामे) "इन्" (उ० ४-११७) । इकारः बाहु० । 3. ಜಟಾಮಾಂಸಿ. 4. ಅಜವಾನ, ಓಮ.

**मिहिका ಮಿಹಿಕಾ** (स्त्री०) ಹಿಮ, ಮಂಜು. मिह (सेचने) "क्वुन्" (उ० २-३२) । "तुषारस्तुहिनं हिमम् । प्रालेयं मिहिका" अम० । "विशति युवतित्यागे रात्रीमुचं मिहिकारुचम्" नैष० १९-३५ ।

**मिहिर ಮಿಹಿರ** (पुं०) 1. ರವಿ, ಸೂರ್ಯ. मिह (सेचने) "किरच्" (उ० १-५२) । "पृथुवर्तुलतन्नितम्बकृन्मिहिरस्यन्दनशिल्पशिक्षया" नैष० २-३६ । 2. ವೃದ್ಧ, ಮುದುಕ. "मिहिरो भास्करे वृद्धे" विश्व० । 3. ವಾಯು, ಗಾಳಿ. 4. ಮೇಘ, ಮೋಡ. 5. ಚಂದ್ರ. 6. ಅರ್ಕವೃಕ್ಷ, ಎಕ್ಕದ ಗಿಡ. 7. ಬುದ್ಧದೇವ. "मिहिरोऽर्केऽम्बुदे बुद्धे" हेम० । "मिहिरा वायुमेघार्काः" वैज० । 8. ವರಾಹಮಿಹಿರ, ವಿಕ್ರಮಾದಿತ್ಯನ ಆಸ್ಥಾನದಲ್ಲಿದ್ದ ನವರತ್ನಗಳಲ್ಲೊಬ್ಬ ಪಂಡಿತ (ರತ್ನ). "ख्यातो वराहमिहिरो नृपतेः सभायां रत्नानि वै वररुचिर्नव विक्रमस्य" ।

**मीढ ಮೀಢ** (पुं०) 1. ಟಗರು, ಮೇಷ. मिह (सेचने) "क्तः" (३-४-७२) । "एडकोऽप्युरणो मीढ उरभ्रो रोमशोऽप्यविः" वैज० । (वि०) 2. ಮೂತ್ರಿಸಲ್ಪಟ್ಟ. मिह "क्तः" (३-२-१०२) । (स्त्री०) –ढा –ಢಾ. 3. ಲಜ್ಜೆಯಿಲ್ಲದ ಹೆಂಗಸು. "प्रसभा निरिणा मीढा निर्लज्जा धर्षणीति च" वैज० ।

**मीन ಮೀನ** (पुं०) 1. ಮತ್ಸ್ಯ, ಮೀನು. मीयते — मीञ् (हिंसायाम्) "नक्" (उ० ३-३) । निपा० । "अथ स्फुरन्मीनविधूतपङ्कजा" किरा० ८-२७ । 2. ಮಹಾವಿಷ್ಣುವಿನ ಮೊದಲನೆಯ ಅವತಾರ, ಮತ್ಸ್ಯಾವತಾರ. 3. ಮೇಷ ಮೊದಲಾಗಿ ಹನ್ನೆರಡನೆಯ ಲಗ್ನ ಮತ್ತು ರಾಶಿ.

**मीनकेतन ಮೀನಕೇತನ** (पुं०) ಮನ್ಮಥ, ಕಾಮದೇವ. मीनः केतनं यस्य ।

**मीनगोषिका ಮೀನಗೋಧಿಕಾ** (स्त्री०) ಸರಸ್ಸು, ಕೊಳ, ಜಲಾಶಯ. "पल्वलं दीर्घिका वापी यष्टिका मीनगोधिका" त्रिकाण्ड०। वैज०।

**मीनघातिन् ಮೀನಘಾತಿನ್** (पुं०) 1. ಬಕಪಕ್ಷಿ. मीनं हन्ति — हन (हिंसागत्योः) "णिनिः" (३-२-७८)। (वि०) 2. ಮೀನನ್ನು ಹಿಡಿದು ಕೊಲ್ಲುವವನು.

**मीनरङ्क ಮೀನರಂಕ** (पुं०) ಮತ್ಸ್ಯವನ್ನು ಹಿಡಿದು ತಿನ್ನುವ ಪಕ್ಷಿ.

**मीना ಮೀನಾ** (स्त्री०) ಗುದ್ದಲಿಯ ಕಾವು. "यष्टिर्नकली स्त्रियां मीना खनित्रीं तु विशाखिका" वैज०।

**मीनाङ्क ಮೀನಾಂಕ** (पुं०) ಮದನ, ಮನ್ಮಥ. मीनः अङ्कोऽस्य। "कन्दर्पो दर्पकोऽनङ्गः मीनाङ्को मकरध्वजः" वैज०।

**मीनाक्षी ಮೀನಾಕ್ಷೀ** (स्त्री०) ಮತ್ಸ್ಯದಂತೆ ಕಣ್ಣುಗಳುಳ್ಳ ಹೆಂಗಸು. मीनस्य अक्षिणी इव अक्षिणी यस्याः।

**मीनाघ्रीण ಮೀನಾಘ್ರೀಣ** (पुं०) 1. ಕಾಡಿಗೆಸೊಗಸಿನ ಹಕ್ಕಿ, ದಾಸರಿಹಕ್ಕಿ. 2. ಮೀನಿನ ಸಾರು.

**मीमांसक ಮೀಮಾಂಸಕ** (पुं०) 1. (ಪೂರ್ವ) ಮೀಮಾಂಸಾ ಶಾಸ್ತ್ರವನ್ನರಿತವನು. 2. ಮೀಮಾಂಸಾಶಾಸ್ತ್ರವನ್ನು ಅಧ್ಯಯನ ಮಾಡುವವನು. मीमांसां वेत्ति अधीते वा "वुन्" (४-२-६१)। ಜೈಮಿನಿಯು **ಪೂರ್ವ ಮೀಮಾಂಸಾ** ಸೂತ್ರಗಳನ್ನು ರಚಿಸಿದರು. ಅದಕ್ಕೆ ಕುಮಾರಿಲಭಟ್ಟರು ವೃತ್ತಿಯನ್ನು - ಬರೆದರು. ಶಬರ ಸ್ವಾಮಿಯು ಭಾಷ್ಯವನ್ನು ರಚಿಸಿದರು. ವೇದವ್ಯಾಸ ಮುನಿಯು ಉತ್ತರ ಮೀಮಾಂಸಾ ಸೂತ್ರಗಳನ್ನು ಬರೆದರು. ಅವಕ್ಕೆ ಶ್ರೀ ಶಂಕರಾಚಾರ್ಯರು ಅದ್ವೈತ ಭಾಷ್ಯವನ್ನೂ ಶ್ರೀ ರಾಮಾನುಜಾಚಾರ್ಯರು ವಿಶಿಷ್ಟಾದ್ವೈತ ಭಾಷ್ಯವನ್ನೂ ಶ್ರೀ ಮಧ್ವಾಚಾರ್ಯರು ದ್ವೈತಭಾಷ್ಯವನ್ನೂ ಬರೆದರು.

**मीमांसा ಮೀಮಾಂಸಾ** (स्त्री०) 1. ವಿಚಾರ, ವಿಮರ್ಶೆ, ಶೋಧನೆ. ಅನ್ವೇಷಣ. मान (विचारे) + "सन्" (३-१-६)। "अः" (३-३-१०२)। "रसगङ्गाधरनाम्नीं करोति कुतुकेन काव्यमीमांसाम्" रसगं०। 2. ವೇದಾರ್ಥ ವಿಚಾರಮಾಡುವ ಗ್ರಂಥ. 3. ಮೀಮಾಂಸಾ ದರ್ಶನ. ಇದು ಮುಖ್ಯವಾದ ಆರು ದರ್ಶನಗಳಲ್ಲೊಂದು. [ವಿವರಕ್ಕೆ "मीमांसादर्शन" ಪದದಲ್ಲಿ ನೋಡಿ].

**मीमांसाकार ಮೀಮಾಂಸಾಕಾರ** (पुं०) ಮೀಮಾಂಸಾ ಸೂತ್ರಗಳನ್ನು ಬರೆದ ಜೈಮಿನಿಮುನಿ.

**मीमांसादर्शन ಮೀಮಾಂಸಾದರ್ಶನ, -शास्त्र -ಶಾಸ್ತ್ರ** (नं०) ಮೀಮಾಂಸಾಶಾಸ್ತ್ರ, ವೇದಾರ್ಥವಿಚಾರಶಾಸ್ತ್ರ. ಮೀಮಾಂಸಾಶಾಸ್ತ್ರವು कर्ममीमांसा (पूर्वमीमांसा) ಮತ್ತು ब्रह्ममीमांसा (उत्तरमीमांसा) ಎಂದು ಎರಡು ವಿಧ. ಧರ್ಮ ಅರ್ಥ ಕಾಮ ಮತ್ತು ಮೋಕ್ಷಗಳೆಂಬ ನಾಲ್ಕು ವಿಧ ಪುರುಷಾರ್ಥಗಳಲ್ಲಿ ಧರ್ಮವೆಂದರೆ ಮನುಷ್ಯನು ಇಹ ಪರದೃಷ್ಟಿಯಿಂದ ಮಾಡಬೇಕಾದ ಕರ್ಮ (ಕಾರ್ಯ) ಗಳು. ಈ ಕರ್ಮ (ಧರ್ಮ) ಗಳು ವೇದದಲ್ಲಿ ಉಕ್ತವಾಗಿರುವುದರಿಂದ ಇವುಗಳನ್ನು ವಿಚಾರ ಪೂರ್ವಕ ನಿರ್ಣಯಿಸುವ ಶಾಸ್ತ್ರಕ್ಕೆ कर्ममीमांसा (पूर्वमीमांसा) ಎಂದೂ ಬ್ರಹ್ಮಸ್ವರೂಪವನ್ನು ಪ್ರತಿಪಾದಿಸುವ ವೇದಾರ್ಥವಿಚಾರಕ್ಕೆ ब्रह्ममीमांसा (उत्तरमीमांसा) ಎಂದೂ ಹೆಸರು. ಈ ಪೂರ್ವಮೀಮಾಂಸಾಶಾಸ್ತ್ರಕ್ಕೆ ಜೈಮಿನಿಮುನಿಯು ಸೂತ್ರಗಳನ್ನು ರಚಿಸಿರುತ್ತಾರೆ. "अथातो धर्मजिज्ञासा" ಇದು ಮೊದಲನೆಯ ಸೂತ್ರ. ಮೊದಲು ಧರ್ಮವಿಚಾರವನ್ನು ಪ್ರಸ್ತಾಪಿಸಿ "चोदनालक्षणोऽर्थो धर्मः" ಎಂದು ಧರ್ಮಸ್ವರೂಪವನ್ನು ತಿಳಿಸಿ ಗ್ರಂಥವನ್ನು ಮುಂದುವರೆಸಿರುತ್ತಾರೆ. ಪ್ರಾಯಃ ಒಂದು ಹೊಸ ಪದ್ಧತಿಯು ಏರ್ಪಡಬೇಕಾದರೆ ಹಿಂದೆ ಅದಕ್ಕೆ ವಿರುದ್ಧವಾದ ಪದ್ಧತಿಯೊಂದು ಇರಲೇಬೇಕು. ಎಲ್ಲಕ್ಕೂ ವೈದಿಕಪದ್ಧತಿಯು ಪ್ರಾಚೀನವಾದುದರಿಂದ ಇದರಲ್ಲಿ ಜನರಿಗೆ ಆಲಸ್ಯವೇ ಹೊಸ ಪದ್ಧತಿಗೆ ಕಾರಣವಾಗಿರಬೇಕು. ಇಂತಹ ಆಲಸ್ಯಮೂಲಕವಾದ ಧರ್ಮವಿರುದ್ಧವಾದ ಪದ್ಧತಿಯು ಶುದ್ಧವಲ್ಲವಾದುದರಿಂದ ವೈದಿಕಮತೋದ್ಧಾರಕ್ಕಾಗಿ ಅದರ ಖಂಡನಾತ್ಮಕವಾದ ಹೊಸ ಮತವೊಂದು ಪ್ರಾರಂಭವಾಗಬೇಕಾಗುವುದು. ಲೋಕದಲ್ಲಿ ಕರ್ಮಾಚರಣೆಯು ಕ್ಲೇಶಕರವಾದುದರಿಂದ ಅದರಲ್ಲಿ ಆಲಸ್ಯವುಂಟಾಗಿ ಯಾವ ಕರ್ಮನಿರ್ಬಂಧವೂ ಇಲ್ಲದ ಹೇತು ದರ್ಶನಗಳು ಹುಟ್ಟಿದುವು. ಈ ಕರ್ಮನಿರ್ಬಂಧವಿಲ್ಲದೆ ಸ್ವೇಚ್ಛಾಚಾರಕ್ಕೆ ಅವಕಾಶವುಂಟಾಯಿತು. ಭಕ್ಷ್ಯಾಭಕ್ಷ್ಯ ವ್ಯವಸ್ಥೆಯಿಲ್ಲದಂತಾಯಿತು. ದೇಹವು ಸದಾ ಮಲಿನವೆಂದೂ ಆತ್ಮನೇ ಸದಾ ಪರಿಶುದ್ಧನೆಂದೂ ಸ್ನಾನಾದಿಗಳಿಂದ ಪ್ರಯೋಜನವಿಲ್ಲವೆಂದೂ ಅಹಿಂಸಾತತ್ತ್ವವೇ ಸರ್ವಶ್ರೇಷ್ಠವೆಂದೂ ಕೆಲವು ಜನರಲ್ಲಿ ಭಾವನೆಯುಂಟಾಯಿತು. ಇಂತಹ ಹೇತುವಾದದಲ್ಲಿ ದೃಷ್ಟಿಯಿಡದೆ ಕೇವಲ ಧರ್ಮದಲ್ಲೇ ದೃಷ್ಟಿಯುಳ್ಳ ಮಹಾಜನರಿಂದ ಪರಿಗೃಹೀತವಾದ ವೇದಕ್ಕೆ ಪ್ರಾಮಾಣ್ಯಕೊಡುವ ಉದ್ದೇಶದಿಂದ ಈ ಮೀಮಾಂಸಾದರ್ಶನವು ಹುಟ್ಟಿತು. ಇದಕ್ಕೆ ಪೂರ್ವದಲ್ಲಿದ್ದ

ಚಾರ್ವಾಕಾದಿಮತಗಳನ್ನು ನಿರಾಕರಿಸಲು ಈ ಮತವು ಹುಟ್ಟಬೇಕಾಯಿತು.

ವೇದವೆಂದರೆ ಅನಾದಿಸಂಪ್ರದಾಯದಿಂದ ಬಂದ ಮತ್ತು ಮಹಾಜನರಿಂದ ಪರಿಗೃಹೀತವಾದ ಗ್ರಂಥರಾಶಿ. ಇದು ನಿಯಮಪೂರ್ವಕವಾಗಿ ಗುರುಶಿಷ್ಯಪರಂಪರೆಯಿಂದ ಮಹಾತ್ಮರಾದ ಋಷಿಗಳ ಹೃದಯದಲ್ಲಿರುವುದು. ಪುರಾಣಗಳಲ್ಲಿ ಕಂಡುಬರುವ ವೇದವಾಕ್ಯಗಳು ಲೌಕಿಕವಾಕ್ಯಗಳಾದುದರಿಂದ ಅವಕ್ಕೆ ಅಧ್ಯಯನ ನಿಯಮವಿಲ್ಲ. ಅವನ್ನು ಎಲ್ಲರೂ ಅಧಿಕರಿಸಬಹುದು. ಈ ವಿಷಯವನ್ನು ಕುಮಾರಿಲಭಟ್ಟರು "तानेव वैदिकान् वर्णान् भारतादिनिवेशितान् । स्वाध्यायनियमं हित्वा लोकबुद्धया प्रयुञ्जते" ಎಂದು ಹೇಳಿರುತ್ತಾರೆ.

**मीर** ಮೀರ (पुं०) 1. ಸಮುದ್ರ. 2. ಎಲ್ಲೆ, ಗಡಿ. 3. ಜಲ, ನೀರು. 4. ಪರ್ವತದ ಒಂದು ಭಾಗ.

**मील – निमेषणे** (भ्वा० पर० सक० से०)। मीलति मीलतः मीलन्ति। मिमील मिमीलतुः मिमीलुः। मीलिता। मीलिष्यति। मीलतु। अमीलत्। मीलेत्। मील्यात्। ಇತ್ಯಾದಿ. ಮುಚ್ಚು, ಮುಚ್ಚಿಕೊ. "मीलत्यसौ कुमुदिनी सह तारकाभिः" यादव० १९-७४।

**कर्मणि** :—मील्यते। मिमीले। मीलिता। मील्यताम्। ಇತ್ಯಾದಿ.

**णिचि** :—मीलयति, –ते। मीलयां चकार –चक्रे, –बभूव, –आस। मीलयिता। मीलयतु, –ताम् ಇತ್ಯಾದಿ.

**कृत्सु** :—मीलितव्यम्। मीलनीयम्। मील्यम्। मीलितः। मीलितवान्। मीलन्, –न्ती। मीलितुम्। मीलितम्। मीलनम्। मीलित्वा। उन्मील्य।

**ಈ ಧಾತುವಿಗೆ ಉಪಸರ್ಗಗಳ ಯೋಗದಿಂದ ಉಂಟಾಗುವ ಅರ್ಥಭೇದಗಳು :**

(1) **उत् + मील** = उन्मीलति। उन्मीलनम्। उन्मीलितः। उन्मील्य। 1. ಬಿಚ್ಚು, (ಕಣ್ಣು) ತೆರೆ. "उन्मील्य नेत्रयुगमुत्तमपञ्जरस्थाः पात्रावशिष्टकदलीफलमायसानि"। 2. ಉದ್ರೇಕಗೊಳ್ಳು, ಉದ್ದೀಪಿತನಾಗು, ಪ್ರೇರಿತನಾಗು. "बोधितस्तनुशयस्तरुणीनामुन्मिमील विशदं विषमेषुः" माघ० १०-७४। 3. ಕಾಣಿಸಿಕೊ, ಪ್ರತ್ಯಕ್ಷನಾಗು. "खं वायुर्ज्वलनो जलं क्षितिरिति त्रैलोक्यमुन्मीलति" प्रबोध० १-१। 4. ಅರಳು, ವಿಕಾಸಗೊಳ್ಳು. "उन्मीलन्मुकुलकरालकुन्दकोशप्रच्योतद्घनमकरन्दगन्धबन्धो" मालती० २-४१। 5. ಪ್ರದರ್ಶಿಸು, ತೋರಿಸು. "त्वयाद्य साधुत्वमुन्मीलितम्"।

(2) **नि + मील** = निमीलति। निमीलितः। न्यमीलत्। 1. ಕಣ್ಣು ಮುಚ್ಚಿಕೊ. "शृङ्गेण च स्पर्शनिमीलिताक्षीं मृगीमकण्डूयत कृष्णसारः" कुमा० ३-३६। 2. (ಅರಳಿದ ಹೂವು) ಮುಕುಳಿತವಾಗುವುದು. "निमीलितानामिव पङ्कजानाम्"। 3. ಮರೆಯಾಗು, ಕಾಣಿಸದಿರು. "द्यौर्निमीलितनक्षत्रा"। 4. ಅಪ್ರಸಿದ್ಧನಾಗು, ಅಪ್ರಕಾಶನಾಗು. "सोऽहमिज्याविशुद्धात्मा प्रजालोपनिमीलितः" रघु० २-६८।

**मीलत्** ಮೀಲತ್ (वि०) 1. (ಕಣ್ಣು) ಮುಚ್ಚಿಕೊಳ್ಳುತ್ತಿರುವ. मील (निमेषणे) "शतृ" (३-२-१२४)। "मिषतां मीलतां वापि द्रुतं धावति जीविते। अनर्घं तनुत क्षेम्यमान्तरं धनमक्षयम्" याद० २२-४०। 2. ಅರಳುತ್ತಿರುವ, ವಿಕಾಸಹೊಂದುತ್ತಿರುವ.

**मीलन** ಮೀಲನ (न०) 1. ಕಣ್ಣು ಮುಚ್ಚುವುದು, ರೆಪ್ಪೆಯಾಡುವುದು. मील (निमेषणे) भावे "ल्युट्" (३-३-११५)। 2. ಮುಕುಳಿತವಾಗುವುದು, ಅರಳಿದ ಹೂವು ಮುಚ್ಚಿಕೊಳ್ಳುವುದು.

**मीलित** ಮೀಲಿತ (न०) 1. ಅರ್ಥಾಲಂಕಾರದ ಒಂದು ಭೇದ. ಸಾದೃಶ್ಯದಿಂದ ಎರಡು ವಸ್ತುಗಳಿಗೆ ಪರಸ್ಪರ ಭೇದವೇ ತಿಳಿಯದಿರುವ ಕಡೆ ಮೀಲಿತಾಲಂಕಾರ. "मीलितं यदि सादृश्याद्भेद एव न दृश्यते"। **ಉದಾ :** "रसो नालक्षि लाक्षायाश्चरणे सहजारुणे" चन्द्रा०। ಸಹಜವಾಗಿಯೇ ಕೆಂಪಾಗಿರುವ ಕಾಲಿಗೂ ಅದಕ್ಕೆ ಬಳಿದಿರುವ ಲಾಕ್ಷಾರಸಕ್ಕೂ ಭೇದವೇ ತಿಳಿಯಲಿಲ್ಲವೆಂದು ವರ್ಣಿತವಾಗಿರುವುದರಿಂದ ಇಲ್ಲಿ ಮೀಲಿತಾಲಂಕಾರ. (वि०) 2. ಮುಚ್ಚಿಕೊಂಡಿರುವ, ಮುಕುಳಿತವಾಗಿರುವ, ಅರಳದೆ ಇರುವ. (ಹೂವು) 3. ಮುಚ್ಚಿಕೊಂಡಿರುವ (ಕಣ್ಣು). 4. ಕಣ್ಮರೆಯಾದ, ತಿರೋಧಾನ ಹೊಂದಿದ.

**मीवर** ಮೀವರ (पुं०) ಸೇನೆಯ ಅಧಿಕಾರಿ, ಸೇನಾಪತಿ. डु मीञ् (हिंसायाम्) "ष्वरच्" (उ० ३-१)। निपा०।

**मीवा** ಮೀವಾ (स्त्री०) 1. ವಾಯು, ಗಾಳಿ. 2. ಹೊಟ್ಟೆಯಲ್ಲಿ ಅನ್ನನಾಳದಲ್ಲಿ ಸೇರಿ ಬಾಧೆ ಪಡಿಸುವ ಲಾಡಿಹುಳ. मीञ् (हिंसायाम्) "वन्" (उ० १-१५२)। निपा०। मीवा उदरकृमिः वायुश्च सि० कौ०। 3. ಶೀಕರ, ನೀರಿನ ಹನಿ. 4. ಸಾರ, ತಿರುಳು.

**मु** ಮು (पुं०) 1. ಪರಮೇಶ್ವರ. 2. ಸಂಸಾರಬಂಧನದಿಂದ ಬಿಡುಗಡೆ, ಮೋಕ್ಷ. 3. ನಿರ್ಬಂಧ, ಸೆರೆ, ಬಂಧನ.

**मुक ಮುಕ** (ಪುಂ०) 1. ಸಗಣಿಯ ವಾಸನೆ. 2. ಹಸುವಿನ ಗಂಜಲ (ಮೂತ್ರ) ದ ವಾಸನೆ. "उद्दंशे देहलिर्गोविण्मूत्रयोः मुकमुर्मुरौ" वैज०।

**मुकु ಮುಕು** (ಪುಂ०) ಅಪವರ್ಗ, ಮೋಕ್ಷ, ಸಂಸಾರ ಬಂಧನದಿಂದ ಬಿಡುಗಡೆ. मुच्लृ (मोक्षणे) "कुः" बाहु०।

**मुकुट ಮುಕುಟ** (ನ०) ಕಿರೀಟ. मङ्कतेऽनेन — मकि (मण्डने) "उटः" बाहु०। पृषो०। "मुकुटांशुरञ्जितपरागमग्रतः स न यावदाप शिरसा महीतलम्" माघ० १३-९।

**मुकुटी ಮುಕುಟೀ** (स्त्री०) ಬೆರಳುಗಳನ್ನು ಉಜ್ಜಿ ಚಿಟುಕಿ ಹಾಕುವುದು, ಬೆರಳುಗಳನ್ನು ಉಜ್ಜಿ ಶಬ್ದ ಮಾಡುವುದು.

**मुकुन्द ಮುಕುಂದ** (ಪುಂ०) 1. ಶ್ರೀಕೃಷ್ಣ, ವಿಷ್ಣು. मुकुं मोक्षं ददाति — डु दाञ् (दाने) "कः" (३-२-३)। पृषो०। "तैः प्रार्थितः स्वयं मुक्तिं मुकुन्दः स्याद्ददाति सः" इति निरुक्तिः। "जीवो विनयिता साक्षी मुकुन्दोऽमितविक्रमः" वि० स०। "मुकुन्द मूर्ध्ना प्रणिपत्य याचे भवन्तमेकान्तमियन्तमर्थम्" मु० मा०। 2. ಕುಬೇರನ ನವನಿಧಿಗಳಲ್ಲೊಂದು. "महापद्मश्च पद्मश्च शङ्खो मकरकच्छपौ। मुकुन्दः कुन्दनीलौ च वरश्च निधयो नव" अम०। 3. ಪಾದರಸ, ಪಾರದ. 4. ಒಂದು ಜಾತಿಯ ರತ್ನ. "मुकुन्दः पारदे रत्नविशेषे गरुडध्वजे" हेम०। 5. ಕುಂದುರುಷ್ಕವೆಂಬ ಗಂದಿಗರ ಒಂದು ಸರಕು, ಪಾಲಕ್ಕಿ. "मुकुन्दः निधिभिद्विष्णुरत्नभेदे च कुन्दुरौ" मेदि०।

**मुकुन्दक ಮುಕುಂದಕ** (ಪುಂ०) 1. ಈರುಳ್ಳಿ. "पलाण्डुस्तु श्वेतकन्दो मुकुन्दकः" वैज०। 2. ಒಂದು ಧಾನ್ಯ.

**मुकुम् ಮುಕುಮ್** (अव्य०) 1. ಭಕ್ತಿರಸ. 2. ಪ್ರೇಮ. "मुकुम् भक्तिरसप्रेमवचनं वेदसम्मतम्। यस्तद्ददाति भक्तेभ्यो मुकुन्दस्तेन कीर्तितः" ब्रह्मवै०। 3. ನಿರ್ವಾಣ, ಮೋಕ್ಷ. "मुकुमव्ययमान्तं च निर्वाणं मोक्षवाचकम्"।

**मुकुर ಮುಕುರ** (ಪುಂ०) 1. ದರ್ಪಣ, ಕನ್ನಡಿ. मङ्कते — मकि (मण्डने) "उरच्" (उ० १-४०)। उकारश्च निपा०। "मुकुरेण वेपथुभृतोऽतिभरात् कथमप्यपाति न वधूकरतः" माघ० ९-७३। 2. ರತ್ನಗನ್ನಡಿ. 3. ಕುಲಾಲನ ದಂಡೆ, ಕುಂಬಾರನ ಕೋಲು. "कुलालदण्डे मुकुरो दर्पणादर्शयोरपि" नानार्थर०। 4. ವಕುಳ ವೃಕ್ಷ. 5. ಕೋರಕ, ಮೊಗ್ಗು. "मुकुरो मकुरो यथा। कुलालदण्डे वकुले कोरकादर्शयोरपि" हेम०।

**मुकुल ಮುಕುಲ** (ಪುಂನ०) 1. ಅರಳುತ್ತಿರುವ ಮೊಗ್ಗು. मकि (मण्डने) "उलच्" बाहु०। निपा०। "कलिका कोरकश्चाथ कुड्मलो मुकुलोऽस्त्रियाम्" वैज०। 2. ಮೊಗ್ಗಿನಂತಿರುವ ವಸ್ತು. "आलक्ष्यदन्तमुकुलान्" शाकु० ७-१७।

**मुकुलित ಮುಕುಲಿತ** (ವಿ०) 1. ಹೂವಿನ ಮೊಗ್ಗು ಬಿಟ್ಟಿರುವ. मुकुलोऽस्य संजातः "इतच्" (५-२-३६)। 2. ಅರ್ಧ ಮೊಗ್ಗಾಗಿರುವ, ಅರ್ಧ ಅರಳಿರುವ. 3. ಅರ್ಧ ಮುಚ್ಚಿರುವ, ಅರ್ಧ ಮುಚ್ಚಿಕೊಂಡಿರುವ. "सपदि मुकुलिताक्षीं रुद्रसंरम्भभीत्या" कुमा० ३-७६।

**मुकूलक ಮುಕೂಲಕ** (ಪುಂ०) ಜಾಪಾಳ.

**मुक्त ಮುಕ್ತ** (ವಿ०) 1. ಬಿಡಲ್ಪಟ್ಟವನು, ಸ್ವತಂತ್ರನಾಗಿ ಮಾಡಲ್ಪಟ್ಟವನು. मुच्लृ (मोक्षणे) "क्तः" (३-२-१०२)। "मुक्ता बभूवुरधुना तदिमान् विहाय कतस्स्यमुं समरभूमिपशूपहारम्" कुमा० १७-९। 2. ಬಿಡುಗಡೆಹೊಂದಿದ, ಸ್ವತಂತ್ರನಾದ. 3. ಒಂದು ವಸ್ತುವಿನ ಸಂಬಂಧ ಬಿಟ್ಟುಬಂದಿರುವ, ಒಂದು ವಸ್ತುವಿನಿಂದ ಕಳಚಿ ಬಂದಿರುವ. "कृपाणभिन्नद्विपकुम्भमुक्ता मुक्ताः पतन्त्यो रणवप्रभूमौ" याद० २०-५२। मुच्लृ कर्त० "क्तः" (३-४-७२)। 4. ಮೋಕ್ಷ ಹೊಂದಿದವನು, ಸಂಸಾರಬಂಧನದಿಂದ ಬಿಡುಗಡೆ ಹೊಂದಿದವನು. "सुभाषितेन गीतेन युवतीनां च लीलया। मनो न भिद्यते यस्य स वै मुक्तोऽथवा पशुः"। 5. ತ್ಯಜಿಸಲ್ಪಟ್ಟ, ಬಿಡಲ್ಪಟ್ಟ. "मुक्तमूललघुरुज्झितपूर्वः पश्चिमे नभसि संभृतसान्द्रः" किरा० ९-५। 6. ಬಿಡಲ್ಪಟ್ಟ, ಎಸೆಯಲ್ಪಟ್ಟ, ಪ್ರಯೋಗಿಸಲ್ಪಟ್ಟ (ಬಾಣ). "मुक्तानेकशरं प्राणानहरद्भूयसां द्विषाम्" माघ० १९-१०१। 7. ಸುರಿಸಲ್ಪಟ್ಟ, ಕೆಳಕ್ಕೆ ಬೀಳಿಸಲ್ಪಟ್ಟ (ಮಳೆಯ ನೀರು). "मुक्तं मुक्तागौरमिह क्षीरमिवाभ्रैः वापीष्वन्तर्लीनमहानीलदलासु" माघ० ४-४४। 8. ಹೊರದೂಡಿಸಲ್ಪಟ್ಟ, ಹೊರಡಿಸಲ್ಪಟ್ಟ, ಅಟ್ಟಲ್ಪಟ್ಟ, ದಬ್ಬಲ್ಪಟ್ಟ.

**मुक्तक ಮುಕ್ತಕ** (ನ०) 1. ಯಂತ್ರ ಅಥವಾ ಬಂದೂಕು ಇದರಿಂದ ಹಾರಿಸಲಾಗುವ ಒಂದು ಅಸ್ತ್ರ, ಕ್ಷೆಪಣೆ. मुच्लृ (मोक्षणे) "क्तः" (३-२-१०२)। 2. ಒಂದು ವಿಧ ಕಾವ್ಯ. "वृत्तगन्धोज्झितं गद्यं मुक्तकं वृत्तगन्धि च" सा० द० ६।

**मुक्तकञ्चुक ಮುಕ್ತಕಂಚುಕ** (ಪುಂ०) ಪೊರೆಬಿಟ್ಟ ಹಾವು. मुक्तः कञ्चुको येन।

**मुक्तकण्ठ ಮುಕ್ತಕಂಠ** (वि०) 1. ಗಟ್ಟಿಯಾಗಿ ಕೂಗುತ್ತಿರುವ. (अव्य०) 2 ಗಟ್ಟಿಯಾಗಿ.

**मुक्तरसा ಮುಕ್ತರಸಾ** (स्त्री०) ಸಣ್ಣರಾಸ್ನೆ. मुक्तो रसो यस्याः।

**मुक्तलज्ज ಮುಕ್ತಲಜ್ಜ** (वि०) ಲಜ್ಜೆಯನ್ನು ತೊರೆದವನು, ನಾಚಿಕೆಯಿಲ್ಲದವನು. मुक्ता लज्जा येन।

**मुक्तसङ्ग ಮುಕ್ತಸಂಗ** (पुं०) 1. ಸಂನ್ಯಾಸಿ. मुक्तः सङ्गो विषयसम्बन्धो येन। (वि०) 2. ಫಲಸಂಗ ಪರಿತ್ಯಾಗಮಾಡಿದವನು. "मुक्तसङ्गोऽनहंवादी धृत्युत्साहसमन्वितः" गीता १८-२६।

**मुक्तहस्त ಮುಕ್ತಹಸ್ತ** (वि०) ದಾನಶೀಲ, (ದಾನಕ್ಕಾಗಿ) ತೆರೆದ ಕೈಯುಳ್ಳವನು. मुक्तो दानाय प्रसारितो हस्तो येन।

**मुक्ता ಮುಕ್ತಾ** (स्त्री०) 1. ಮುಕ್ತಾಫಲ, ಮುತ್ತು. मुच्यते शुक्तिभिः। "मुक्ताभिः सलिलरयास्तशुक्तिपेशी मुक्ताभिः क्षतरुचि सैकतं नदीनाम्" माघ० ८-९। 2. ಸ್ವೈರಿಣಿ, ವ್ಯಭಿಚಾರಿಣಿ. "पुंश्चल्यां मौक्तिके मुक्ता" वैज०।

**मुक्ताकलाप ಮುಕ್ತಾಕಲಾಪ** (पुं०) ಮುತ್ತಿನ ಹಾರ. मुक्तानां कलापः समूहोऽस्मिन्। "कण्ठस्य तस्याः स्तनबन्धुरस्य मुक्ताकलापस्य च निस्तलस्य" कुमा० १-४२।

**मुक्तागार ಮುಕ್ತಾಗಾರ** (न०) ಮುತ್ತಿನ ಚಿಪ್ಪು. मुक्तायाः अगारमिव।

**मुक्तादामन् ಮುಕ್ತಾದಾಮನ್** (न०) ಮುತ್ತಿನಹಾರ. "सुवानिष्यन्दिभिः स्थूलैः मुक्तादामभिरावृतम्" याद० १६-१३५।

**मुक्ताप्रसू ಮುಕ್ತಾಪ್ರಸೂ** (स्त्री०) ಮುತ್ತಿನ ಚಿಪ್ಪು. मुक्तां प्रसूते—प्र+षूङ् (प्राणिगर्भविमोचने) "क्विप्" (३-२-६१)।

**मुक्ताफल ಮುಕ್ತಾಫಲ** (न०) 1. ಮುತ್ತು. मुक्ता फलमिव। "विदन्ति मार्गं नखरन्ध्रमुक्तैः मुक्ताफलैः केसरिणां किराताः" कुमा० १-६। 2. ಕರ್ಪೂರ. 3. ಸೀತಾಫಲ. "मुक्ताफलं घनसारे मौक्तिके लवलीफले" हेम०।

**मुक्तालता ಮುಕ್ತಾಲತಾ** (स्त्री०) ಮುತ್ತಿನ ಹಾರ, ಮುತ್ತಿನ ಸರ. मुक्ताभिः लतेव।

**मुक्तावलि ಮುಕ್ತಾವಲಿ** (स्त्री०) 1. ಮುಕ್ತಾಹಾರ, ಮುತ್ತಿನ ಸರ. मुक्तानामावलिरत्र। 2. ಸಿದ್ಧಾನ್ತಮುಕ್ತಾವಲಿ, ಒಂದು ತರ್ಕಶಾಸ್ತ್ರದ ಗ್ರಂಥ.

**मुक्तास्फोट ಮುಕ್ತಾಸ್ಫೋಟ** (पुं०) ಮುತ್ತಿನ ಚಿಪ್ಪು. मुक्ताः स्फुटन्त्यत्र। स्फुट (विकसने) "घञ्" (३-३-१२१)।

**मुक्ति ಮುಕ್ತಿ** (स्त्री०) 1. ಬಿಡುಗಡೆ. ವಿಮೋಚನೆ. मुच्लृ (मोक्षणे) "क्तिन्" (३-३-९४)। 2. ಸಂಸಾರ ಬಂಧನ ನಿವೃತ್ತಿ, ಆನಂದಪ್ರಾಪ್ತಿ, ಅಪವರ್ಗ, ಮೋಕ್ಷ, ಸಂಸಾರ ಪಾಶದಿಂದ ವಿಮೋಚನೆ. "इति त्याज्ये भवे भव्यो मुक्तावुत्तिष्ठते जनः" किरा० ११-१३।

**ಮುಕ್ತಿಸ್ವರೂಪ:** ನಿರವಧಿಕಸುಖ, ಬ್ರಹ್ಮಾನುಭವ, ಅವಿದ್ಯಾನಾಶಪೂರ್ವಕ ಪರಮಾತ್ಮಾನುಭವ. ಭಕ್ತಿ ಅಥವಾ ಪ್ರಪತ್ತಿರೂಪವಾದ ಮೋಕ್ಷೋಪಾಯದಿಂದ ಪರಮಾತ್ಮನ ಅನುಗ್ರಹಕ್ಕೆ ಪಾತ್ರನಾಗಿ ದೇಹಾವಸಾನ ಸಮಯದಲ್ಲಿ ಸುಷುಮ್ನಾನಾಡೀಮೂಲಕ ಸುಖವಾಗಿ ಪ್ರಯಾಣಮಾಡಿ ಶ್ರೀವೈಕುಂಠದಲ್ಲಿ ಸಕಲವೈಭವದೊಡನೆ ಶ್ರೀಮಹಾಲಕ್ಷ್ಮೀಸಮೇತನಾಗಿ ಬಿಜಯಮಾಡಿಸಿರುವ ಶ್ರೀ ಪರವಾಸುದೇವನ ಸಮೀಪದಲ್ಲಿ ನಿತ್ಯಸೂರಿಗಳೊಡನೆ ನಿತ್ಯಕಿಂಕರನಾಗಿ ಪರಮಾತ್ಮಾನುಭವವೆಂಬ ಆನಂದವನ್ನು ಅನುಭವಿಸುವುದು ಮುಕ್ತಿ ಎಂದು **ವಿಶಿಷ್ಟಾದ್ವೈತ ಸಿದ್ಧಾನ್ತ.**

**ಅದ್ವೈತಸಿದ್ಧಾನ್ತದಲ್ಲಿ** ಈಶ್ವರಾರ್ಪಣಬುದ್ಧಿಯಿಂದ ಮಾಡಿದ ವಿಹಿತ ಕರ್ಮಾಚರಣೆಯಿಂದ ಚಿತ್ತಶುದ್ಧಿಯುಂಟಾಗಿ ಸಂಸಾರದಲ್ಲಿ ಅಸಾರತ್ವಬುದ್ಧಿಯೂ ಕರ್ಮಫಲದಲ್ಲಿ ಪ್ರಬಲವೈರಾಗ್ಯವೂ ಪುತ್ರಕಳತ್ರಾದಿಗಳಲ್ಲಿ ಜಿಹಾಸೆಯೂ ಉಂಟಾಗಿ ಸದ್ಗುರುವಿನಿಂದ ಉಪದೇಶವನ್ನು ಪಡೆದು ಶ್ರವಣಮನನ ನಿದಿಧ್ಯಾಸನಗಳ ಸಾಹಾಯ್ಯದಿಂದ ಪರಬ್ರಹ್ಮಸಾಕ್ಷಾತ್ಕಾರಹೊಂದಿ ಅಜ್ಞಾನನಿವೃತ್ತಿಯ ಮೂಲಕ ಸಂಸಾರದಿಂದ ಬಿಡುಗಡೆಹೊಂದಿ ಬ್ರಹ್ಮಸ್ವರೂಪವನ್ನು ಪಡೆಯುವುದೇ ಮುಕ್ತಿ.

**ದ್ವೈತಸಿದ್ಧಾನ್ತದಲ್ಲಿ** ಗುರುಕುಲವಾಸ ಗುರುಭಕ್ತಿ ಸಚ್ಛಾಸ್ತ್ರಶ್ರವಣ ಸಂಸಾರದುಃಖಾನುಭವದಿಂದ ಉಂಟಾಗುವ ವೈರಾಗ್ಯ ನಿವೃತ್ತಿಧರ್ಮಾನುಷ್ಠಾನ ತಾರತಮ್ಯಜ್ಞಾನ ಪರಮಾತ್ಮಭಕ್ತಿ ಮೊದಲಾದ ಸಾಧನಗಳಿಂದ ಅಪರೋಕ್ಷಜ್ಞಾನವುಂಟಾಗಿ ಅದರಿಂದ ಪರಮಾತ್ಮನ ಅನುಗ್ರಹಕ್ಕೆ ಪಾತ್ರನಾಗಿ ಪ್ರಕೃತಿಸಂಬಂಧವಿನಾಶವುಂಟಾಗುವುದು. ದೇಹಾವಸಾನಕಾಲದಲ್ಲಿ ಜೀವನು

ಬ್ರಹ್ಮನಾಡೀಮೂಲಕ ಹೊರಟು ಅರ್ಚಿರಾದಿಮಾರ್ಗ ದಲ್ಲಿ ಅನೇಕ ಲೋಕಾಧಿಪತಿಗಳಿಂದ ಸತ್ಕರಿಸಲ್ಪಟ್ಟು ಭಗವಲ್ಲೋಕದಲ್ಲಿ ತಾರತಮ್ಯಾನುಗುಣವಾಗಿ ಲಭಿಸುವ ಸಾಲೋಕ್ಯ ಸಾಮೀಪ್ಯ ಸಾರೂಪ್ಯ ಮತ್ತು ಸಾಯುಜ್ಯ ರೂಪವಾದ ಆನಂದಾನುಭವವೇ ಮೋಕ್ಷ (ಮುಕ್ತಿ).

**ಶಕ್ತಿವಿಶಿಷ್ಟಾದ್ವೈತಸಿದ್ಧಾಂತದಲ್ಲಿ** ಲಿಂಗಧಾರ ಣಾತ್ಮಕವಾದ ಶಿವದೀಕ್ಷೆಯಿಂದ ಭಕ್ತ ಮಹೇಶ ಪ್ರಸಾದಿ ಪ್ರಾಣಲಿಂಗಿ ಶರಣ ಮತ್ತು ಐಕ್ಯಗಳೆಂಬ ಷಟ್ ಸೋಪಾನಗಳ ಮೂಲಕ ಮಲತ್ರಯನಿವೃತ್ತಿಹೊಂದಿ ಬ್ರಹ್ಮಸಾಕ್ಷಾತ್ಕಾರವಾಗುವುದೇ ಮುಕ್ತಿ.

ಮುಕ್ತಿಯು ಎರಡು ವಿಧ. (1) ನಿರ್ವಾಣರೂಪ. (2) ಹರಿಭಕ್ತಿರೂಪ. ವೈಷ್ಣವರು ಹರಿಭಕ್ತಿರೂಪವಾದ ಮುಕ್ತಿಯನ್ನೂ ಇತರರು ನಿರ್ವಾಣರೂಪವಾದ ಮುಕ್ತಿ ಯನ್ನೂ ಅಪೇಕ್ಷಿಸುತ್ತಾರೆ. "मुक्तिस्तु द्विविधा साध्वि श्रुत्युक्ता सर्वसंमता। निर्वाणपददात्री च हरिभक्तिप्रदा नृणाम्। हरिभक्तिस्वरूपाञ्च मुक्तिं वाञ्छन्ति वैष्णवाः। अन्ये निर्वाणरूपाञ्च मुक्तिमिच्छन्ति साधवः" ब्रह्मवै०। 3. ಸ್ವಾತಂತ್ರ್ಯ, ದಾಸ್ಯದಿಂದ ಬಿಡುಗಡೆಹೊಂದುವುದು. 4. ಸಂಪೂರ್ಣ ದುಃಖ ನಿವೃತ್ತಿ, ಶಾಶ್ವತವಾದ ಸುಖಾನು ಭವ, ಕೈವಲ್ಯ.

**मुक्तिमार्ग ಮುಕ್ತಿಮಾರ್ಗ** .(पुं०) ಮೋಕ್ಷದ ಮಾರ್ಗ, ಮೋಕ್ಷದ ಉಪಾಯ. मुक्तेः मोक्षस्य मार्गः उपायः। "असंमतः कस्तव मुक्तिमार्गं पुनर्भवक्लेशभयात्प्रपन्नः" कुमा० ३-५।

**मुख ಮುಖ** (न०) 1. ಮುಖ, ಬಾಯಿ, ವದನ. खन्यते खनु (अवदारणे) "अच्" धातोर्मुडागमश्च (उ० ५-२०)। "प्राक् खनो मुडुदात्तश्च ततोऽच्च प्रत्ययो भवेत्। प्रजासृजा यतः खातं तस्मादाहुर्मुखं बुधाः" इति निरुक्तम्। "मुखेन सा पद्मसुगन्धिना निशि प्रवेपमानाधरपत्रशोभिना। तुषारवृष्टिक्षतपद्मसंपदां सरोजसन्धानमिवाकरोदपाम्" कुमा० ५-२७। ಮುಖ (ವದನ) ವು ಏಳು ಅವಯವಗಳಿಂದ ಕೂಡಿರುವುದು. (1) ತುಟಿಗಳು, (2) ತಾಲು, (ದವಡೆ), (3) ಗಲ (ಗಂಟಲು), (4) ದಂತ ಮೂಲ. (5) ದಂತ. (6) ಜಿಹ್ವೆ (ನಾಲಗೆ) ಮತ್ತು (7) ಗಲಾದಿ (ಗಂಟಲಿನ ಆದಿಭಾಗ) ಇವು ಮುಖದ (ಬಾಯಿಯ) ಏಳು ಅವಯವಗಳು. "ओष्ठौ च दन्तमूलानि दन्ता जिह्वा च तालु च। गलो गलादि सकलं सप्ताङ्गं मुखमुच्यते" भावप्र०। 2. ಮುಖ, ಮೋರೆ. "मुखैः सरोजानि च दीर्घलोचनैः सुरस्त्रियः साम्यगुणान्निरासिरे" किरा० ८-२९। 3. (ಪ್ರಾಣಿಗಳ) ಮೂತಿ, ಮುಸುಡಿ, ಬಾಯಿ. "मुखैरसौ विद्रुमभङ्गलोहितैः शिखाः पिशङ्गीः कलमस्य बिभ्रती" किरा० ५-३६। 4. ಬಾಣದ ಅಗ್ರಭಾಗ, ಬಾಣದ ಕೊನೆಯ ಭಾಗ (ತುದಿ). "बभूव युद्धं तुमुलं जयैषिणोरघोमुखैरूर्ध्वमुखैश्च पत्रिभिः" रघु० ३-५७। 5. ಪ್ರಾರಂಭ, ಆದಿಭಾಗ, ಉಪಕ್ರಮ. "अथ विधिमवसाय्य शास्त्रदृष्टं दिवसमुखोचितमञ्चिताक्षिपक्ष्मा" रघु० ५-७६। 6. ಮುಖ್ಯ, ಪ್ರಧಾನ, ಮುಖಂಡ, ನಾಯಕ. "राजा मुखं मनुष्याणां नदीनां सागरो मुखम्। नक्षत्राणां मुखं चन्द्र आदित्यस्तेजसां मुखम्" भा० सभा० ४१-२८। 7. ಸೈಂಧವಲವಣ. "विशुन्थलवणं सगं सिन्धि सिन्धूद्भवं मुखम्" वैज०। 8. ಉಪಾಯ. 9. ತಾಮ್ರಲೋಹ. 10. ಪ್ರಧಾನ ದ್ವಾರ, ಹೊರಬಾಗಿಲು. "मुखं तु वदने मुख्ये ताम्रे द्वाराभ्युपाययोः" वैज०। 11. ಮನೆಯಿಂದ ಹೊರಕ್ಕೆ ಬರುವ ದಾರಿ, ಬೀದಿಯ ಬಾಗಿಲಿನ ಪ್ರವೇಶ ಮಾರ್ಗ. "क्षिप्ते मुखं निःसरणम्" अम०। 12. ನಾಟಕದ ಪಂಚಸಂಧಿಗಳಲ್ಲಿ ಮೊದಲನೆಯದು. "मुखं प्रतिमुखं गर्भो विमर्श उपसंहृतिः" सा० द० ६-७५। 13. ಶಬ್ದ. "मुखं निःसरणे वक्त्रे प्रारम्भोपाययोरपि। सन्ध्यन्तरे नाटकादेः शब्देऽपि च नपुंसकम्" मेदि०। 14. ಸ್ತನಾಗ್ರ, ಚೂಚುಕ, ಸ್ತನದ ತುದಿ. "स्तनद्वयं पाण्डु तथा प्रवृद्धं। मध्ये यथा श्याममुखस्य तस्य मृणालसूत्रान्तरमप्यलभ्यम्" कुमा० १-४०। 15. ವೇದ. 16. ಅಗ್ರಭಾಗ. "तस्मात्सर्वप्रयत्नेन प्रबोधयितुमीश्वरीम्। ब्रह्मद्वारमुखे सुप्तां मुद्राभ्यासं समाचरेत्" हठ० ३-५।

**मुखकमल ಮುಖಕಮಲ** (न०) ಕಮಲದಂತಿರುವ ಮುಖ. मुखं कमलमिव। "मुखकमलमधूपमैः प्रकामम्" याद० २४-६०।

**मुखगन्धक ಮುಖಗಂಧಕ** (पुं०) ಈರುಳ್ಳಿ. मुखे गन्धोऽस्मात् "कप्" (५-४-१५४)।

**मुखज ಮುಖಜ** (पुं०) 1. ಬ್ರಾಹ್ಮಣ, ವಿಪ್ರ. ब्राह्मणो मुखाज्जायते—जनी (प्रादुर्भावे) "डः" (३-२-९८)। "ब्राह्मणोऽस्य मुखमासीत्" श्रुतिः। (वि०) 2. ಮುಖ ದಿಂದ ಹುಟ್ಟಿದ.

**मुखदूषण ಮುಖದೂಷಣ** (पुं०) ಪಲಾಂಡು, ಈರುಳ್ಳಿ. मुखं दूष्यतेऽनेन—दुष (वैकृत्ये) + णिच् "ल्युट्" (३-३-११७)।

**मुखदूषिका ಮುಖದೂಷಿಕಾ** (स्त्री०) ಮುಖವನ್ನು ವಿಕಾರಗೊಳಿಸುವ ಗುಳ್ಳೆ. मुखं दूषयति—दुष (वैकृत्ये) + णिच् "ण्वुल्" (३-१-१३३)।

**मुखदोष ಮುಖದೋಷ** (पुं०) ಮಾತಿನ ದೋಷ, ನಾಲಗೆಯ ದೋಷ, ಮಾತಾಡುವಾಗ ಉಂಟಾಗುವ ನಾಲಗೆಯ ದೋಷ.

**मुखधावन ಮುಖಧಾವನ** (न०) ಮುಖಪ್ರಕ್ಷಾಲನ, ಮುಖವನ್ನು ತೊಳೆಯುವುದು. मुखस्य धावनम्।

**मुखनिरीक्षक ಮುಖನಿರೀಕ್ಷಕ** (पुं०) ಅಲಸ, ಸೋಮಾರಿ. मुखं निरीक्षते—निर् + ईक्ष (दर्शने) "ण्वुल्" (३-१-१३३)।

**मुखनिवासिनी ಮುಖನಿವಾಸಿನೀ** (स्त्री०) ಸರಸ್ವತಿ, ವಾಗ್ದೇವಿ. मुखे निवसति—नि+वस (निवासे) "णिनिः" (३-१-१३४)। ಸರಸ್ವತಿಯು ವಾಗ್ದೇವತೆಯಾದುದರಿಂದ ಈ ಹೆಸರು.

**मुखपट ಮುಖಪಟ** (पुं०) ಪರದೆ, ಬುರುಕಿ, ಮುಸುಕು.

**मुखपाक ಮುಖಪಾಕ** (पुं०) ಬಾಯಿಯ ಉರಿತ.

**मुखप्रसाद ಮುಖಪ್ರಸಾದ** (पुं०) ಮುಖದಲ್ಲಿ ತೋರುವ ದಯೆ, ಮುಖದಲ್ಲಿ ಆನಂದವನ್ನು ಉಂಟುಮಾಡುವ ನೋಟ.

**मुखप्रिय ಮುಖಪ್ರಿಯ** (पुं०) 1. ಕಿತ್ತಳೆ. (न०) 2. ಲವಂಗ. (वि०) 3. ಬಾಯಿಗೆ ಹಿತವಾಗಿರುವ. मुखस्य प्रियः।

**मुखबन्ध ಮುಖಬಂಧ** (पुं०) ಪ್ರಸ್ತಾವನೆ, ಪೀಠಿಕೆ, ಉಪೋದ್ಘಾತ.

**मुखबन्धन ಮುಖಬಂಧನ** (न०) 1. ಪ್ರಸ್ತಾವನೆ, ಪೀಠಿಕೆ. 2. ಅನುಕ್ರಮಣಿಕೆ, ವಿಷಯಸಂಗ್ರಹ.

**मुखभूषण ಮುಖಭೂಷಣ** (न०) 1. ತಾಂಬೂಲ. 2. ಮುಖದ ಅಲಂಕಾರ, ಮುಖಕ್ಕೆ ಹಾಕುವ ಒಡವೆ.

**मुखभेद ಮುಖಭೇದ** (पुं०) ಮುಖವು ಒಡೆಯುವಿಕೆ, ಮುಖವು ವಿಕಾರಹೊಂದುವುದು.

**मुखमण्डन ಮುಖಮಂಡನ** (न०) ಮುಖದ ಅಲಂಕಾರ.

**मुखमण्डनक ಮುಖಮಂಡನಕ** (पुं०) 1. ತಿಲಕವೃಕ್ಷ. (वि०) 2. ಮುಖವನ್ನು ಅಲಂಕರಿಸುವ. मुखं मण्डयति—मडि (भूषायाम्) + णिच् "ल्युः" (३-१-१३४)।

**मुखयन्त्रण ಮುಖಯಂತ್ರಣ** (न०) ಕುದುರೆಯ ಕಡಿವಾಣ, ಲಗಾಮು. मुखं अश्वानां यन्त्र्यतेऽनेन—यत्रि (संकोचे) करं० "ल्युट्" (३-३-११७)।

**मुखर ಮುಖರ** (पुं०) 1. ಮುಂದಾಳು, ಮುಖಂಡ, ಪ್ರಧಾನ, ಮುಖ್ಯ. मुखं मुख्यकार्यं राति—रा (दाने) "कः" (३-२-३)। "न गणस्याग्रतो गच्छेत् सिद्धे कार्ये समं फलम्। यदि कार्यविपत्तिः स्यात् मुखरस्तत्र हन्यते" हितो० १-२९। 2. ಶಂಖ. 3. ಕಾಗೆ, ವಾಯಸ. (वि०) 4. ವಾಚಾಳಿ, ಹರಟೆಹೊಡೆಯುವವನು. 5. ಅಪ್ರಿಯವಾದ ಮಾತುಗಳನ್ನಾಡುವವನು, ಬಿರುನುಡಿಯಾಡುವವನು, ದುರ್ಮುಖ. "एका भार्या प्रकृतिमुखरा चञ्चला च द्वितीया"। 6. ಶಬ್ದಮಾಡುವ, ಸದ್ದುಮಾಡುವ. "वियद्गतः पुष्पकचन्द्रशालाः क्षणं प्रतिश्रुन्मुखराः करोति" रघु० १३-४०।

**मुखरज्जु ಮುಖರಜ್ಜು** (स्त्री०) ಮೂಗುದಾರ.

**मुखराग ಮುಖರಾಗ** (पुं०) ಮುಖದ ಬಣ್ಣ, ಮುಖದ ಛಾಯೆ, ಮುಖದ ಕಾಂತಿ. मुखस्य रागः। "ददृशुर्विस्मितास्तस्य मुखरागं समं जनाः" रघु० १२-८।

**मुखरित ಮುಖರಿತ** (वि०) ಶಬ್ದದಿಂದ ಕೂಡಿದ, ಸದ್ದಿನಿಂದ ಕೂಡಿದ, ಶಬ್ದವುಂಟಾದ. मुखरोऽस्य संजातः "इतच्" (५-२-३६)। "गण्डोड्डीनालिमालामुखरितककुभस्ताण्डवे शूलपाणेः" मालती० १-२।

**मुखरीकृत ಮುಖರೀಕೃತ** (वि०) ಶಬ್ದವುಳ್ಳದ್ದನ್ನಾಗಿ ಮಾಡಲ್ಪಟ್ಟ. "अमरीकबरीभारभ्रमरीमुखरीकृतम्" कुव०।

**मुखरोग ಮುಖರೋಗ** (पुं०) ಬಾಯೊಳಗೆ ಬರುವ ರೋಗ, ಹುಣ್ಣು ಅಮೃತಗ್ರಂಥಿ ಮೊದಲಾದುದು. ಮುಖಕ್ಕೆ ಸಪ್ತಾವಯವಗಳಿರುವುವು. ["मुख" 1. ನೋಡಿ.] ಈ ಸಪ್ತಾವಯವಗಳಿಗೂ 67 ವಿಧ ರೋಗಗಳು ಪ್ರಾಪ್ತವಾಗುವುವು. **ಅವುಗಳ ವಿವರ:**

| | | |
|---|---|---|
| (1) | ತುಟಿಗಳಿಗೆ | 8 ವಿಧ |
| (2) | ದಂತಮೂಲಕ್ಕೆ | 16 ,, |
| (3) | ದಂತಗಳಿಗೆ | 8 ,, |
| (4) | ನಾಲಗೆಗೆ | 5 ,, |
| (5) | ತಾಲುವಿ (ದವಡೆ) ಗೆ | 9 ,, |
| (6) | ಕಂಠಕ್ಕೆ | 18 ,, |
| | ಮತ್ತು | |
| (7) | ಎಲ್ಲಕ್ಕೂ | 3 ,, |
| | | — |
| | ಒಟ್ಟು | 67 ವಿಧ |

"स्युरष्टावोष्ठयोर्दन्तमूले तु दश षट् तथा। दन्तेष्वष्टौ रसज्ञायां पञ्च स्युर्नव तालुनि। कण्ठेत्वष्टादश प्रोक्तास्त्रयः सर्वेषु च स्मृताः" भावप्र०। ಇವಕ್ಕೆ ಕಾರಣ ಮತ್ತು ಚಿಕಿತ್ಸೆಗಳಿಗಾಗಿ ಭಾವಪ್ರಕಾಶದಲ್ಲಿ ಮುಖರೋಗಾಧಿಕಾರ ನೋಡಿ.

**मुखलाङ्गल ಮುಖಲಾಂಗಲ** (ಪುಂ) ವರಾಹ, ಹಂದಿ. मुखं लांगलमिवास्य।

**मुखवाद्य ಮುಖವಾದ್ಯ** (ನಂ) ಬಾಯಿಂದ ನುಡಿಸುವ ವಾದ್ಯ, ಬಾಯಿಂದ ಶಬ್ದಮಾಡಿಸುವ ವಾದ್ಯ. मुखेन वाद्यम्।

**मुखवास(न) ಮುಖವಾಸ(ನ)** (ಪುಂ) ಬಾಯನ್ನು ಸುಗಂಧವಾಗಿ ಮಾಡುವ ದ್ರವ್ಯ, ಬಾಯಿಗೆ ವಾಸನೆಯುಂಟುಮಾಡುವ ದ್ರವ್ಯ. मुखस्य वासः सौरभ्यमस्मात्। मुखं वासयति—वास (उपसेवायाम्)+णिच् "ल्युः" (३-१-१३४) इति वा।

**मुखविष्ठा ಮುಖವಿಷ್ಠಾ** (ಸ್ತ್ರೀಂ) ಜಿರಳೆ. मुखे विष्ठा मलमस्याः।

**मुखव्यादान ಮುಖವ್ಯಾದಾನ** (ನಂ) 1. ಬಾಯಿತೆರೆಯುವುದು. 2. ಆಕಳಿಕೆ. मुखस्य व्यादानम्।

**मुखशुद्धि ಮುಖಶುದ್ಧಿ** (ಸ್ತ್ರೀಂ) ಬಾಯನ್ನು ಶುದ್ಧಮಾಡುವಿಕೆ, ಬಾಯಿ ತೊಳೆಯುವುದು. मुखस्य शुद्धिः।

**मुखशोधन ಮುಖಶೋಧನ** (ನಂ) 1. ದಾಲ್ಚಿನ್ನಿ. 2. ಬಾಯನ್ನು ಶುದ್ಧಮಾಡುವುದು, ಬಾಯಿತೊಳೆಯುವುದು. (ವಿಂ) 3. ಬಾಯನ್ನು ಶುದ್ಧಗೊಳಿಸುವ. मुखं शोधयति—शुध (शौचे)+णिच् "ल्युः" (३-१-१३४)।

**मुखशोधिन् ಮುಖಶೋಧಿನ್** (ಪುಂ) ನಿಂಬೆ ಗಿಡ. मुखं शोधयति—शुध (शौचे)+णिच् "णिनिः" (३-१-१३४)।

**मुखश्री ಮುಖಶ್ರೀ** (ಸ್ತ್ರೀಂ) ಮುಖದ ಕಾಂತಿ, ಮುಖದ ಸೌಂದರ್ಯ. मुखस्य श्रीः।

**मुखस्राव ಮುಖಸ್ರಾವ** (ಪುಂ) ಲಾಲಾಜಲ, ಬಾಯಿಂದ ಬೀಳುವ ಜೊಲ್ಲು.

**मुखाग्नि ಮುಖಾಗ್ನಿ** (ಪುಂ) 1. ವಿಪ್ರ, ಬ್ರಾಹ್ಮಣ. मुखमग्निरिवास्य। 2. ದಾವಾಗ್ನಿ, ಕಾಡುಕಿಚ್ಚು. 3. ಕೊಳ್ಳಿಪಿಶಾಚ. ಇದರ ಬಾಯಲ್ಲಿ ಬೆಂಕಿ ಉರಿಯುತ್ತಿರುವುದು. 4. ಯೋಗಾಗ್ನಿ.

**मुखास्त्र ಮುಖಾಸ್ತ್ರ** (ಪುಂ) ನಳ್ಳಿ, ಏಡಿ. मुखं अस्त्रमिवास्य।

**मुख्य ಮುಖ್ಯ** (ಪುಂ) 1. ಉತ್ತಮ ಪಕ್ಷ, ಪ್ರಥಮ ಕಲ್ಪ. मुखमिव—मुख "यः" (५-३-१०३)। "मुख्यः स्यात् प्रथमः कल्पः" अम०। 2. ಶ್ರೇಷ್ಠವಾದ, ಉತ್ತಮವಾದ. 3. ಪ್ರಧಾನ, ಪ್ರಮುಖ.

**मुख्यमन्त्रिन् ಮುಖ್ಯಮಂತ್ರಿನ್** (ಪುಂ) ಪ್ರಧಾನ ಸಚಿವ, ಮಂತ್ರಿ ಮಂಡಲದಲ್ಲಿ ಮೊದಲನೆಯ ಮಂತ್ರಿ. मुख्यः प्रधानः मन्त्री।

**मुख्यार्थ ಮುಖ್ಯಾರ್ಥ** (ಪುಂ) ವಾಚ್ಯಾರ್ಥ, ಅಭಿಧಾವೃತ್ತಿಯಿಂದ ತೋರುವ ಶಬ್ದದ ಅರ್ಥ. "मुख्यार्थोऽभिधया बोध्यो लक्ष्यो लक्षणया मतः। व्यङ्ग्यो व्यञ्जनया ताः स्युः तिस्रः शब्दस्य शक्तयः" सा० द०।

**मुख्योपाय ಮುಖ್ಯೋಪಾಯ** (ಪುಂ) ಮುಖ್ಯವಾದ ನಾಲ್ಕು ಉಪಾಯಗಳು, ಉಪಾಯಚತುಷ್ಟಯ. (1) ಸಾಮ, (2) ದಾನ, (3) ಭೇದ ಮತ್ತು (4) ದಂಡ ಇವು ನಾಲ್ಕು ಮುಖ್ಯೋಪಾಯಗಳು.

**मुग्ध ಮುಗ್ಧ** (ವಿಂ) 1. ಅರಿವಿಲ್ಲದ, ತಿಳಿವಳಿಕೆಯಿಲ್ಲದ, ಅನುಭವವಿಲ್ಲದ, ಸರಳರೀತಿಯ. मुह (वैचित्ये) "क्तः" (३-४-७२)। "कदम्बगोलाकृतिमाश्रितः कथं विशुद्धमुग्धः कुलकन्यकाजनः" मालती० ७-१। 2. ಅಜ್ಞ, ತಿಳಿಗೇಡಿ, ಮೂರ್ಖ. "शशाङ्कः केन मुग्धेन सुधांशुरिति भाषितः" भा० वि०। 3. ಮಂಕುಹಿಡಿದ, ಮಬ್ಬುಹಿಡಿದ. 4. ತಬ್ಬಿಬ್ಬಾದ, ಗಾಬರಿಗೊಂಡ, ಕಳವಳಗೊಂಡ. 5. ಕೃತ್ರಿಮಸ್ವಭಾವವಿಲ್ಲದ, ಸ್ವಲ್ಪವೂ ಕಪಟವಿಲ್ಲದ, ಸರಳಸ್ವಭಾವದ. "अयमाचरत्यविनयं मुग्धासु तपस्विकन्यासु" शाकु० १-२१। 6. ಸುಂದರವಾದ, ಚೆಲುವಾದ, ಆಕರ್ಷಕವಾದ, ಸೌಮ್ಯವಾದ. मुह (वैचित्ये)+णिच् "क्तः" (३-४-७२)। "मुग्धाः स्वमुष्टिपरिमेयमनोज्ञमध्याः पर्ययिचापलतिका इव पञ्चबाणः" याद० १९-२४। 7. ನವೀನವಾದ, ಹೊಸದಾದ. "स मुग्धकान्तास्तनसङ्गभङ्गुरैरुरोविदारं प्रतिचस्करे नखैः" माघ० १-४७। 8. ಮೋಹಗೊಂಡ, ಮೋಹಪರವಶವಾದ. "मुग्धा दधामि कथमित्यमयापशङ्कां संक्रन्दनादिकपटः स्फुटमीदृशोऽयम्" नैष० १३-४६। (ಸ್ತ್ರೀಂ) **-ग्धा -ಗ್ಧಾ.** 9. ಸ್ವಕೀಯನಾಯಿಕೆಯರಲ್ಲಿ ಒಂದು ಭೇದ, ಯೌವನದಿಂದ ಮನವನ್ನಾಕರ್ಷಿಸುವ ಹೆಂಗಸು. ಮುಗ್ಧಾ ಮಧ್ಯಾ ಮತ್ತು ಪ್ರಗಲ್ಭಾ ಎಂದು ಸ್ವಕೀಯ ನಾಯಿಕೆಯ ಭೇದಗಳು ಮೂರು. ಹೊಸ ಯೌವನ ಮತ್ತು ಮದವಿಕಾರಗಳಿಂದ ಕೂಡಿ ರತಿಯಲ್ಲಿ ಅಪೇಕ್ಷೆಯಿದ್ದರೂ ಲಜ್ಜೆ

ಯಿಂದ (ರತಿ) ಪ್ರತಿಕೂಲಳಾಗಿರುವವಳು **ಮುಗ್ಧನಾಯಿಕಾ** "ಸಾಪಿ ಕಥಿತಾ ತ್ರಿಭೇದಾ ಮುಗ್ಧಾ ಮಧ್ಯಾ ಪ್ರಗಲ್ಭೇತಿ। ಪ್ರಥಮಾವತೀರ್ಣಯೌವನಮದವಿಕಾರಾ ರತೌ ವಾಮಾ। ಕಥಿತಾ ಮೃದುಶ್ಚ ಮಾನೇ ಸಮಧಿಕಲಜ್ಜಾವತೀ ಮುಗ್ಧಾ" ಸಾ० ದ० ೩-೫೭, ೫೮।

**ಮುಚಿರ ಮುಚಿರ** (ಪುಂ०) 1. ಧರ್ಮವೆಂದು ಮಾಡುವ ದಾನ, ಪರೋಪಕಾರಕ್ಕಾಗಿ ಮಾಡುವ ದಾನ. (ವಿ०) 2. ಉದಾರ ಸ್ವಭಾವದವನು, ಮುಕ್ತಹಸ್ತ, ಕೊಡುಗೈಯುಳ್ಳವನು, ದಾನಶೀಲ. "ಮುಚಿರೌ ಧರ್ಮದಾತಾರೌ" ವೈಜ०।

**ಮುಚುಕುನ್ದ ಮುಚುಕುಂದ** (ಪುಂ०) 1. ಸೂರ್ಯವಂಶದ ಒಬ್ಬ ದೊರೆ, ಮಾಂಧಾತೃರಾಜನ ಮಗ. ಪುರುಕುತ್ಸ ಮತ್ತು ಅಂಬರೀಷಮಹಾರಾಜ ಇವನ ಸಹೋದರರು. ಯುದ್ಧದಲ್ಲಿ ದೇವತೆಗಳಿಗೆ ಸಹಾಯ್ಯ ಮಾಡಿದ್ದಕ್ಕಾಗಿ ದೇವತೆಗಳು ಇವನಿಗೆ ಯಾರಿಂದಲೂ ತೊಂದರೆಯಾಗದ ಮತ್ತು ದೀರ್ಘವಾದ ನಿದ್ರಾರೂಪ ವರವನ್ನೂ ಯಾರಿಂದ ಲಾದರೂ ನಿದ್ರಾಭಂಗವಾದರೆ ಅವರು ಅಗ್ನಿಯಿಂದ ಭಸ್ಮವಾಗಲಿ ಎಂದು ವರವನ್ನೂ ಕೊಟ್ಟರು. ಶ್ರೀಕೃಷ್ಣನು ಕಾಲಯವನನನ್ನು ಸಂಹರಿಸಲು ಅಟ್ಟಿಕೊಂಡು ಬರುತ್ತಿರುವಾಗ ಅವನು ಮುಚುಕುಂದನು ನಿದ್ರಿಸುತ್ತಿದ್ದ ಗುಹೆಯೊಳಕ್ಕೆ ಸೇರಿದನು. ಆಗ ಮುಚುಕುಂದನ ನೇತ್ರಾಗ್ನಿಯಿಂದ ಕಾಲಯವನನು ದಗ್ಧನಾದನು. ಅದರಿಂದ ಮುಚುಕುಂದನು ಶ್ರೀಕೃಷ್ಣನ ಅನುಗ್ರಹಕ್ಕೆ ಪಾತ್ರನಾದನು. 2. ಒಂದು ಮರ. 3. ಒಬ್ಬ ಮುನಿ. 4. ಒಬ್ಬ ರಾಕ್ಷಸ. "ಮುಚುಕುನ್ದಸ್ತು ದ್ರುಭೇದೇ ಮುನಿದೈತ್ಯಯೋಃ" ಹೈಮ०।

**ಮುಚುಕುನ್ದಪ್ರಸಾದಕ ಮುಚುಕುಂದಪ್ರಸಾದಕ** (ಪುಂ०) ಮುಚುಕುಂದನನ್ನು ಅನುಗ್ರಹಿಸಿದ ಶ್ರೀಕೃಷ್ಣ. ["ಮುಚುಕುನ್ದ" ಪದದಲ್ಲಿ ನೋಡಿ.]

**ಮುಚುಟಿ ಮುಚುಟಿ** (ಸ್ತ್ರೀ०) ಮುಷ್ಟಿ, ಹಿಡಿ. "ಅಕ್ಲೀಬೌ ಮುಷ್ಟಿಮುಸ್ತ್ರೌ ದ್ವೌ ಸಂಗ್ರಾಹೋ ಮುಚುಟಿಃ ಸ್ತ್ರಿಯಾಮ್" ವೈಜ०।

**ಮುಚುಲಿನ್ದ ಮುಚುಲಿಂದ** (ಪುಂ०) ಕಡಾರದ ಗಿಡ, ದೊಡ್ಡ ಹರಿಳೆ ಗಿಡ.

**ಮುಚ್ಲೃ – ಮೋಕ್ಷಣೇ** (ತುದಾ० ಉಭ० ಸಕ० ಅನಿ०)। ಮುಞ್ಚತಿ, –ತೇ। ಮುಮೋಚ, ಮುಮುಚೇ। ಮೋಕ್ತಾ। ಮುಞ್ಚತು, ಮುಞ್ಚತಾಮ್। ಅಮುಞ್ಚತ್, –ತ। ಇತ್ಯಾದಿ. 1. ಬಿಡು, ಬಂಧನದಿಂದ ಬಿಡುಗಡೆಮಾಡು, ಸ್ವೇಚ್ಛೆಯಾಗಿರುವಂತೆ ಬಿಡು. "ವನಾಯ ಪೀತಪ್ರತಿಬದ್ಧವತ್ಸಾಂ ಯಶೋಧನೋ ಧೇನುಮೃಷೇರ್ಮುಮೋಚ" ರಘು० ೨-೧। 2. ಸಡಿಲಿಸು, ಬಿಗಿತಪ್ಪಿಸು. "ಕಣ್ಠಂ ಮುಞ್ಚತಿ ಬರ್ಹಿಣಃ ಸಮದನೋ ನೀಪಃ ಪ್ರದೀಪಾಯತೇ" ಮೃಚ್ಛ० ೫-೧೪। 3. ಬಿಡು, ಶಬ್ದಹೊರಡಿಸು, ಧ್ವನಿಯನ್ನು ಕೊಡು. "ಸಂಯಾಮವನ್ತೋ ಯತಿವನ್ನಿಗದಾನಪರೇಽಮುಚನ್" ಭಟ್ಟಿ० ೭-೫೭। 4. ಅಸ್ತ್ರವನ್ನು ಬಿಡು, ಪ್ರಯೋಗಮಾಡು, ಎಸೆ. "ಸ ತಾಮಬಿಭ್ರಮದ್ಭೀಮಾಂ ವಾನರೇನ್ದ್ರಸ್ಯ ಚಾಮುಚತ್" ಭಟ್ಟಿ० ೧೫-೫೩। 5. ಬಿಡು, ತ್ಯಜಿಸು, ಬಿಟ್ಟುಬಿಡು, ತೊರೆದುಬಿಡು. "ರಾತ್ರಿರ್ಗತಾ ಮತಿಮತಾಂ ವರ ಮುಞ್ಚ ಶಯ್ಯಾಮ್" ರಘು० ೫-೬೬। ಇತ್ಯಾದಿ.

**ಕರ್ಮಣಿ**:—ಮುಚ್ಯತೇ। ಮುಮುಚೇ। ಮುಚ್ಯತಾಮ್। ಅಮುಚ್ಯತ। ಮುಚ್ಯೇತ। ಇತ್ಯಾದಿ.

**ಣಿಚಿ**:—ಮೋಚಯತಿ, –ತೇ, ಮೋಚಯಾಂ ಚಕಾರ, –ಚಕ್ರೇ –ಬಭೂವ, ಆಸ। ಮೋಚಯಿತಾ। ಮೋಚಯತು, –ತಾಮ್। ಅಮೋಚಯತ್, –ತ। ಇತ್ಯಾದಿ.

**ಕೃತ್ಸು**:—ಮೋಕ್ತವ್ಯಃ। ಮೋಚನೀಯಃ। ಮೋಚ್ಯಃ। ಮುಕ್ತಃ। ಮುಕ್ತವಾನ್। ಮುಞ್ಚನ್, –ನ್ತೀ, –ತೀ। ಮುಞ್ಚಮಾನಃ। ಮೋಕ್ಷ್ಯನ್ –ತೀ, –ನ್ತೀ। ಮೋಕ್ತುಮ್। ಮುಕ್ತಮ್। ಮುಕ್ತ್ವಾ।

**ಮುಞ್ಚತ್ ಮುಂಚತ್** (ವಿ०) 1. ಬಿಡುತ್ತಿರುವ, ತ್ಯಜಿಸುತ್ತಿರುವ. ಮುಚ್ಲೃ (ಮೋಕ್ಷಣೇ) "ಶತೃ" (೩-೨-೧೨೪)। "ತತ್ಪ್ರತೀತಂ ಹಿ ತಾತೇನ ಮಾಂ ಚ ಪ್ರಾಣಾಂಶ್ಚ ಮುಞ್ಚತಾ" ಉ० ರಾ० ೧-೪೧। 2. ಸುರಿಸುತ್ತಿರುವ, ಕೆಳಕ್ಕೆ ಬೀಳಿಸುತ್ತಿರುವ. "ಸ್ನೇಹವ್ಯಕ್ತಿಶ್ಚಿರವಿರಹಜಂ ಮುಞ್ಚತೋ ಬಾಷ್ಪಮುಷ್ಣಮ್" ಮೇಘ० ೧-೧೨। 3. ಬಿಡುತ್ತಿರುವ, (ಬಾಣ) ಪ್ರಯೋಗಿಸುತ್ತಿರುವ. "ಮುಞ್ಚತೀಶೇ ಶರಾನ್ ಜಿಷ್ಣೌ ಪಿನಾಕಸ್ವನಪೂರಿತಃ" ಕಿರಾ० ೧೫-೩೪। "ಶಾನಚ್" (೩-೨-೧೨೪)। **ಮುಞ್ಚಮಾನಃ ಮುಂಚಮಾನಃ.** ಕರ್ಮ० "ಶಾನಚ್"। **ಮುಚ್ಯಮಾನಃ ಮುಚ್ಯಮಾನಃ,** ಬಿಡಲ್ಪಡುತ್ತಿರುವ. "ಮೋಹೇನಾನ್ತರ್ವರತನುರಿಯಂ ಲಕ್ಷ್ಯತೇ ಮುಚ್ಯಮಾನಾ" ವಿಕ್ರ० ೧-೯। ಸ್ತ್ರಿಯಾಂ "ಙೀಪ್" (೪-೧-೬)। **–ನ್ತೀ –ನ್ತೀ.** "ವಿಲೋಚನಾಮ್ಬು ಮುಞ್ಚನ್ತೀಮ್" ಭಟ್ಟಿ० ೯-೮೭।

**ಮುಞ್ಜ ಮುಂಜ** (ಪುಂ०) 1. ಹಗ್ಗವನ್ನು ಮಾಡುವ ಮುಂಜವೆಂಬ ಒಂದು ಜಾತಿಯ ಹುಲ್ಲು, ಬ್ರಹ್ಮಚಾರಿಯು ನಡುವಿಗೆ ಕಟ್ಟಿಕೊಳ್ಳುವ ಮೌಂಜಿಯನ್ನು ತಯಾರಿಸುವ ಹುಲ್ಲು. "ಮುಞ್ಜಾಲಾಭೇ ತು ಕರ್ತವ್ಯಾಃ ಕುಶಾಶ್ಮನ್ತಕಬಲ್ಬಜೈಃ। ತ್ರಿವೃತಾ ಗ್ರನ್ಥಿನೈಕೇನ ತ್ರಿಭಿಃ ಪಞ್ಚಭಿರೇವ ವಾ" ಮನು० ೨-೪೩। 2. ಭೋಜರಾಜನ ಚಿಕ್ಕಪ್ಪ, ಧಾರಾನಗರದ ದೊರೆ.

**ಮುಞ್ಜಕೇಶ ಮುಂಜಕೇಶ** (ಪುಂ०) 1. ವಿಷ್ಣು. 2. ಪರಮೇಶ್ವರ, ಪರಶಿವ. ಮುಞ್ಜ ಇವ ಕೇಶಾ ಅಸ್ಯ। "ಗದಾಗ್ರಜೋ ಮುಞ್ಜಕೇಶೋ ದಾಶಾರ್ಹೋ ದಶರೂಪಭೃತ್" ಅಮ०।

**मुञ्जन ಮುಂಜನ** (ನಂ) ಶಬ್ದ, ಧ್ವನಿ. मुजि (शब्दे) "ल्युट्" (३-३-११५)। "कणिह्लादो रसो घ्रूणा घोषो गुञ्जनमुञ्जने" वैजं०।

**मुञ्जर ಮುಂಜರ** (ನಂ) ಕಮಲ ನೈದಿಲೆ ಮೊದಲಾದುವು ಗಳ ಗಡ್ಡೆ.

**मुण्ड ಮುಂಡ** (ಪುಂ) 1. ರಾಹು. 2. ಒಬ್ಬ ದೈತ್ಯ. मुडि (खण्डने) भावे "घञ्" (३-३-१८)। मुण्डः मुण्डनम् अस्यास्ति "अच्" (५-२-१२७)। (ಪುನಂ) 3. ಶಿರಸ್ಸು, ತಲೆ. मुण्ड्यते — मुडि कर्मं० "घञ्" (३-३-१९)। 4. ನಾಪಿತ, ಕ್ಷೌರಿಕ. मुण्डो मुण्डनं जीविकात्वेनास्त्यस्य "अच्"। 5. ಅಯಸ್ಸು, ಕಬ್ಬಿಣ. (ವಿಂ) 6. ಮುಂಡನ (ಕ್ಷೌರ) ಮಾಡಲ್ಪಟ್ಟವನು. "मुण्डोऽस्त्री मस्तकोऽप्यस्त्री" वैजं०। मुण्डो मुण्डितशीर्षयोः। राहौ दैत्यान्तरे" हेमं०। (ಸ್ತ್ರೀಂ) **–ण्डा –ಣ್ಡಾ.** 7. ಮುಂಡೀರಿಕೆಯೆಂಬ ಗಿಡ. "मुण्डो दैत्यान्तरे राहुग्रहे ना मुण्डिते त्रिषु। मुण्डा मुण्डीरिकायां स्यात् स्त्रियामस्त्री तु मूर्धनि" मेदि०।

**मुण्डक ಮುಂಡಕ** (ಪುಂ) 1. ನಾಪಿತ, ಕ್ಷೌರಿಕ. मुण्डयति— मुडि (खण्डने) + णिच् "ण्वुल्" (३-१-१३३)। (ನಂ) 2. ಶಿರಸ್ಸು, ತಲೆ. मुण्ड स्वार्थे "कन्"। 3. ತಲೆಯೆಲ್ಲಾ ಸವರಿ ಗುಂಡಗೆ ಮಾಡಿರುವ ಮರ.

**मुण्डकोपनिषद् ಮುಂಡಕೋಪನಿಷದ್** (ಸ್ತ್ರೀಂ) ಅಥರ್ವವೇದದ ಒಂದು ಉಪನಿಷತ್ತು.

**मुण्डचणक ಮುಂಡಚಣಕ** (ಪುಂ) ನೆಲಗಡಲೆಕಾಯಿ.

**मुण्डन ಮುಂಡನ** (ನಂ) 1. ಕ್ಷೌರ, ಚೌಳ. मुडि (खण्डने) "ल्युट्" (३-३-११५)। 2. ರಕ್ಷಣೆ, ಪಾಲನೆ. "मुण्डनं रक्षणे क्षौरे" हेमं०। 3. ಉಜ್ಜುವುದು, ತಿಕ್ಕುವುದು. मुडि (मर्दने) "ल्युट्"।

**मुण्डनीय ಮುಂಡನೀಯ** (ವಿಂ) 1. ಕ್ಷೌರಮಾಡ ಬೇಕಾದ. 2. ಕ್ಷೌರಮಾಡಲ್ಪಡುವ. मुडि (खण्डने) "अनीयर्" (३-१-९६)। 3. ಉಜ್ಜಬೇಕಾದ. 4. ಉಜ್ಜಲ್ಪಡುವ. मुड (मर्दने) "अनीयर्"।

**मुण्डफल ಮುಂಡಫಲ** (ಪುಂ) 1. ತೆಂಗಿನ ಮರ. मुण्डवत् फलमस्य। (ನಂ) 2. ತೆಂಗಿನಕಾಯಿ.

**मुण्डमण्डली ಮುಂಡಮಂಡಲೀ** (ಸ್ತ್ರೀಂ) ಕೆಳಮಟ್ಟದ ಜನರ ಗುಂಪು, ಹೀನಜನರ ಗುಂಪು. "वरमल्पबलं सारं न कुर्यान्मुण्डमण्डलीम्" हितो० ३-८९।

**मुण्डलोह ಮುಂಡಲೋಹ** (ಪುನಂ) ಕಬ್ಬಿಣ.

**मुण्डशालि ಮುಂಡಶಾಲಿ** (ಪುಂ) ಮುಳ್ಳಿಲ್ಲದ ಬತ್ತ, ಕೊನೆಯಲ್ಲಿ ಚೂಪಾಗಿಲ್ಲದ ಬತ್ತ. मुण्डः शूकशून्यः शालिः।

**मुण्डित ಮುಂಡಿತ** (ವಿಂ) 1. ಕ್ಷೌರಮಾಡಲ್ಪಟ್ಟವನು. 2. ರೆಂಬೆ ಕತ್ತರಿಸಿ ಗುಂಡಗೆ ಮಾಡಲ್ಪಟ್ಟ (ಮರ.) मुडि (मण्डने) "क्तः" (३-२-१०२)।

**मुण्डिन् ಮುಂಡಿನ್** (ಪುಂ) ದಿವಾಕೀರ್ತಿ, ನಾಪಿತ, ಕ್ಷೌರಿಕ. मुण्डयति — मुडि (खण्डने) + णिच् "णिनिः" (३-१-१३४)।

**मुद् ಮುದ್** (ಸ್ತ್ರೀಂ) ಹರ್ಷ, ಸಂತೋಷ. मुद (हर्षे) "क्विप्" (वा० ३-३-९४)। "मुदे मुरारेरमरैः सुमेरोरानीय यस्योपचितस्य शृङ्गैः" माघ० ४-१०।

**मुदा ಮುದಾ** (ಸ್ತ್ರೀಂ) ಹರ್ಷ, ಸಂತೋಷ. मुद (हर्षे) "क्विप्" (वा० ३-३-९४)। "टाप्"। "आपं चैव हलन्तानां यथा वाचा निशा दिशा" भागुरिः।

**मुदित ಮುದಿತ** (ನಂ) 1. ಸಂತೋಷ, ಹರ್ಷ. (ವಿಂ) 2. ಆನಂದಗೊಂಡ, ಹರ್ಷಗೊಂಡ, ಸಂತೋಷಪಟ್ಟ. मुद (हर्षे) "क्तः" (३-४-७२)। "मुदितैस्तदेति दितिजन्मनां रिपौ" किरा० १३-२४। 3. ತೃಪ್ತಿ ಹೊಂದಿದ, ಸಮಾಧಾನ ಹೊಂದಿದ. "दधती क्षतीः परिणतद्विरदे मुदितालियोषिति मदस्रुतिभिः" किरा० ६-७।

**मुदितवत् ಮುದಿತವತ್** (ವಿಂ) ಸಂತೋಷಗೊಂಡ, ಹರ್ಷಹೊಂದಿದ. मुद "क्तवतुः" (३-२-१०२)। "ङीप्" (४-१-६)। **–वती –ವತೀ.**

**मुदिर ಮುದಿರ** (ಪುಂ) 1. ಮೇಘ, ಮೋಡ. मोदन्तेऽनेन —मुद (हर्षे) "किरच्" (उ० १-५१)। "मुञ्चसि नाद्यापि रुषं भामिनि मुदिरालिरुदियाय" भा० वि०। 2. ಕಾಮುಕ, ಸ್ತ್ರೀಲೋಲ. "मुदिरः कामुके मेघे" हेमं०। 3. ಮಂಡೂಕ, ಕಪ್ಪೆ.

**मुद्ग ಮುದ್ಗ** (ಪುಂ) 1. ಹೆಸರು. मुद (हर्षे) "गक्" (उ० १-१२५)। 2. ನೀರುಕಾಗೆ.

**मुद्गपर्णी ಮುದ್ಗಪರ್ಣೀ** (ಸ್ತ್ರೀಂ) ಕಾಡುಹೆಸರು ಗಿಡ. मुद्गपर्णसदृशः पर्णोऽस्याः "ङीष्" (४-१-६४)।

**मुद्गर ಮುದ್ಗರ** (ಪುಂ) 1. ಗದೆ, ಕಬ್ಬಿಣದ ಒಂದು ಅಸ್ತ್ರ. गॄ (निगरणे) "अच्" (३-१-१३४)। मुदो गरः। "पादपाविद्धपरिघः शिलानिष्पिष्टमुद्गरः" रघु० १२-७३।

2. ಚಮ್ಮಟಿಗೆ, ಕೊಡತಿ, ಸುತ್ತಿಗೆ. 3. ಕೋರಕ, ಮೊಗ್ಗು. "मुद्गर: कोरकास्त्रयो:। लोष्टादिभेदने" हेम०।

**मुद्रण ಮುದ್ರಣ** (ನ०) 1. ಅಚ್ಚುಮಾಡುವುದು, ಅಚ್ಚೊತ್ತುವುದು. 2. ಮುದ್ರೆ ಹಾಕುವುದು, ಮೊಹರು ಹಾಕುವುದು, ಠಸ್ಸೆಹಾಕುವುದು.

**मुद्रा ಮುದ್ರಾ** (ಸ್ತ್ರೀ०) 1. ಮೊಹರು, ಠಸ್ಸೆ, ಮುದ್ರೆ. मुद (हर्षे) "रक्" (उ० १-१७०)। "मुद्रा प्रत्ययकारिणी" त्रिकाण्ड०। 2. ಮುದ್ರೆಯ ಉಂಗುರ, ಮೊಹರು ಹಾಕುವ ಉಂಗುರ. "अनया मुद्रया मुद्रयैनम्" मुद्रा० १। 3. ಪರವಾನೆ, ರಹದಾರಿ, ಅಪ್ಪಣೆ ಚೀಟಿ. "अगृहीतमुद्र: सलेख: पुरुषो गृहीत:" मुद्रा० ५। 4. ನಾಣ್ಯ, ಅಂಕಿಗಳಿಂದ ಗುರುತಿಸಲ್ಪಟ್ಟ ಟಂಕೆ. 5. ಗುರುತು, ಚಿಹ್ನೆ, ಅಂಕಿತ. "नागमुद्रासनाथमङ्गुलीयकं स्निग्धं निभालयन्ती तवोपालम्भे पतितास्मि" माल० १। 6. ಬಿರುದಿನ ಬಿಲ್ಲೆ, ಪದಕ. 7. ದೇವರ ಪೂಜೆಯ ಸಮಯದಲ್ಲಿ ಮತ್ತು ಪ್ರವಚನ ಸಮಯದಲ್ಲಿ ಅಂಗುಷ್ಠದೊಡನೆ ಇತರ ಬೆರಳುಗಳನ್ನು ಸೇರಿಸಿಕೊಳ್ಳುವ ಒಂದು ರೀತಿ, –ಸ್ಥಿತಿ, –ಅವಸ್ಥೆ. 8. ಐದು ವಿಧ ಲಿಪಿಗಳಲ್ಲೊಂದು. (1) मुद्रालिपि: (2) शिल्पलिपि: (3) लेखनीलिपि: (4) गुण्डिकालिपि: ಮತ್ತು (5) घुणलिपि: ಇವು ಐದು ವಿಧ ಲಿಪಿಗಳು. "मुद्रालिपि: शिल्पलिपि: लिपिर्लेखनिसम्भवा। गुण्डिकाघुणसंभूता लिपय: पञ्चधा स्मृता:" वाराहीतन्त्रम्।

**मुद्राङ्कित ಮುದ್ರಾಂಕಿತ** (ವಿ०) 1. ಮೊಹರು ಹಾಕಲ್ಪಟ್ಟ, ಠಸ್ಸೆಹಾಕಲ್ಪಟ್ಟ. मुद्रया अङ्कित:। 2. ಗುರುತು ಮಾಡಲ್ಪಟ್ಟ, ಚಿಹ್ನೆಮಾಡಲ್ಪಟ್ಟ.

**मुद्रालिपि ಮುದ್ರಾಲಿಪಿ** (ಸ್ತ್ರೀ०) ಐದು ವಿಧ ಲಿಪಿಗಳಲ್ಲೊಂದು. ["मुद्रा" 8 ನೆಯ ಅರ್ಥ ನೋಡಿ.]

**मुद्रायन्त्र ಮುದ್ರಾಯಂತ್ರ** (ನ०) ಛಾಪಿಸುವ ಯಂತ್ರ, ಪುಸ್ತಕ ಮೊದಲಾದುವನ್ನು ಮುದ್ರಿಸುವ ಯಂತ್ರ, ಅಚ್ಚುಹಾಕುವ ಯಂತ್ರ.

**मुद्राराक्षस ಮುದ್ರಾರಾಕ್ಷಸ** (ನ०) ವಿಶಾಖದತ್ತ ಕವಿ ವಿರಚಿತವಾದ ಒಂದು ನಾಟಕ.

**मुद्रिका ಮುದ್ರಿಕಾ** (ಸ್ತ್ರೀ०) 1. ಮುದ್ರೆಯ ಉಂಗುರ, ಮೊಹರು ಹಾಕುವ ಉಂಗುರ. 2. ಮೊಹರು, ಮುದ್ರೆ, ಠಸ್ಸೆ. मुद्रा स्वार्थे "कन्"। 3. ಮುದ್ರೆ ಒತ್ತುವುದು. 4. ಅಂಕಿಗಳಿಂದ ಗುರುತಿಸಲ್ಪಟ್ಟ ನಾಣ್ಯ.

**मुद्रित ಮುದ್ರಿತ** (ವಿ०) 1. ಮುದ್ರೆ ಒತ್ತಲ್ಪಟ್ಟ, ಮುದ್ರೆಯಿಂದ ಗುರುತಿಸಲ್ಪಟ್ಟ. मुद्रा अस्य सञ्जाता "इतच्" (५-२-३६)। 2. ಗುರುತುಮಾಡಲ್ಪಟ್ಟ, ಚಿಹ್ನೆಮಾಡಲ್ಪಟ್ಟ. "त्याग: सप्तसमुद्रमुद्रितमहीनिर्व्याजदानावधि:" म० वी० २-३६। 3. ಅಚ್ಚುಹಾಕಲ್ಪಟ್ಟ, ಮುದ್ರಣ ಮಾಡಲ್ಪಟ್ಟ (ಪುಸ್ತಕ ಮೊದಲಾದುದು). 4. ಮುಚ್ಚಿಕೊಂಡಿರುವ, ಅರಳದಿರುವ (ಹೂವಿನ ಮೊಗ್ಗು). 5. ತಡೆಯಲ್ಪಟ್ಟ, ನಿರ್ಬಂಧಿಸಲ್ಪಟ್ಟ, ನಿವಾರಿಸಲ್ಪಟ್ಟ. "मुद्रितान्यजनसंकथन: सन्नारदं बलरिपु: समवादीत्" नैष० ५-१२।

**मुधा ಮುಧಾ** (अव्य०) 1. ವ್ಯರ್ಥವಾಗಿ, ಪ್ರಯೋಜನವಿಲ್ಲದೆ. मुह (वैचित्ये) "का" बाहु०। पृषो०। "मुधापवादो मुग्धाक्षि त्वन्मुखाभं किलाम्बुजम्" चन्द्रा०। "मुधार्पितं मूर्ध्नसु रत्नमेभि:" नैष० १०-६३। 2. ಸುಳ್ಳಾಗಿ, ಮಿಥ್ಯೆಯಾಗಿ.

**मुनि ಮುನಿ** (ಪು०) 1. ಋಷಿ. (ವ್ಯಾಸ ವಸಿಷ್ಠ ಪರಾಶರ ಮೊದಲಾದವರು). मन (ज्ञाने) "इन्" उच्च (उ० ४-१२३)। "हेतुं तदभ्यागमने परीप्सु: सुखोपविष्टं मुनिमाबभाषे" किरा० ३-४। 2. ತಪಸ್ವಿ, ಮೌನವ್ರತವುಳ್ಳವನು. ಸುಖದುಃಖಗಳನ್ನು ಸಮನಾಗಿ ಭಾವಿಸುವವನೂ ಕಾಮಕ್ರೋಧಭಯಗಳನ್ನು ತ್ಯಜಿಸಿದವನೂ ಮುನಿಯೆನಿಸುವನು. "दु:खेष्वनुद्विग्नमना: सुखेषु विगतस्पृह:। वीतरागभयक्रोध: स्थितधीर्मुनिरुच्यते" गीता २-५६। "मुनिरस्मि निरागस: कुतो मे भयमित्येष न भूतयेऽभिमान:" किरा० १३-७। 3. ಕುಶ, ದರ್ಭೆಹುಲ್ಲು. "कुशो मुनि: कुथो दर्भ:" वैज०। 4. ಪಲಾಶವೃಕ್ಷ. 5. ಪ್ರಿಯಾಲವೃಕ್ಷ, ಮೊರಟೆ ಗಿಡ. 6. ಜಿನದೇವ. 7. ಅಗಸ್ತ್ಯಮಹರ್ಷಿ. "मुनिर्वाचंयमेऽर्हति। प्रियालोऽगस्ति: पालाश:" हेम०। 8. ಬುದ್ಧದೇವ. "मुनीन्द्र: श्रीघन: शास्ता मुनि:" अम०। 9. ಸಪ್ತ (ಏಳು) ಸಂಖ್ಯೆ. "मुनिशरविरतिर्नीम्यौ पुटोऽयम्" वृ० र०।

**मुनिकुमार ಮುನಿಕುಮಾರ, –दारक –ದಾರಕ** (ಪು०) ಋಷಿಪುತ್ರ.

**मुनिच्छद ಮುನಿಚ್ಛದ** (ಪು०) ಏಳೆಲೆ ಬಾಳೆಗಿಡ. मुनिसंख्याका: छदा: यस्य।

**मुनित्रय ಮುನಿತ್ರಯ** (ನ०) ಪಾಣಿನಿ ಕಾತ್ಯಾಯನ ಮತ್ತು ಪತಂಜಲಿಮುನಿಗಳು.

**मुनिद्रुम ಮುನಿದ್ರುಮ** (पुं०) ಹೆಮ್ಮರ, ಅಗಸ್ತ್ಯವೃಕ್ಷ. मुनेरगस्त्यस्य प्रियो द्रुमः। "मुनिद्रुमः कोरकितः शितिद्युतिः वनेऽमुनाऽमन्यत सिंहिकासुतः" नैष० १-९६।

**मुनिपित्तल ಮುನಿಪಿತ್ತಲ** (नं०) ತಾಮ್ರಲೋಹ. मुनीनां पित्तलमिव।

**मुनिपुङ्गव ಮುನಿಪುಂಗವ** (पुं०) ಋಷಿಶ್ರೇಷ್ಠ. मुनिषु पुङ्गवः।

**मुनिपुत्रक ಮುನಿಪುತ್ರಕ** (पुं०) ಕಾಡಿಗೆಸೊಗಸಿನ ಹಕ್ಕಿ. "काकछदिः खञ्जखेलस्तातनो मुनिपुत्रकः" त्रिकाण्ड०।

**मुनिभेषज ಮುನಿಭೇಷಜ** (नं०) 1. ಅಳಲೆಕಾಯಿ. मुनीनां भेषजम्। 2. ಲಂಘನ, ಉಪವಾಸ. 3. ಅಗಸ್ತ್ಯವೃಕ್ಷ. "मुनिभेषजं त्वगस्तिपथ्यायां लङ्घनेऽपि च" हेम०।

**मुनिवृत्ति ಮುನಿವೃತ್ತಿ** (स्त्री०) 1. ಋಷಿಗಳ ಜೀವನ, ಋಷಿಯು ನಡೆಸುವ ಜೀವನ. मुनेः वृत्तिः। (वि०) 2. ಋಷಿಯಂತೆ ಜೀವನ ನಡೆಸುವವನು, ಋಷಿಯಂತೆ ಕಂದ ಮೂಲಾದಿಗಳನ್ನು ತಿಂದು ಜೀವಿಸುವವನು. मुनेः वृत्तिरिव वृत्तिर्यस्य। "वार्धके मुनिवृत्तीनां योगेनान्ते तनुत्यजाम्" रघु० १-८।

**मुनिव्रत ಮುನಿವ್ರತ** (नं०) ಋಷಿಗಳ ನಿಯಮ, ಋಷಿಗಳು ಆಚರಿಸುವ ಚಾಂದ್ರಾಯಣಾದಿವ್ರತ. मुनीनां व्रतम्। "मुनिव्रतैस्त्वामतिमात्रकर्शितां दिवाकराप्लुष्टविभूषणास्पदाम्" कुमा० ५-४८।

**मुनीन्द्र ಮುನೀಂದ್ರ** (पुं०) 1. ಋಷಿಶ್ರೇಷ್ಠ, ಮಹಾತಪಸ್ವಿಯಾದ ಋಷಿ. मुनीनां योगिनामिन्द्रः श्रेष्ठः। "उद्धृत्य मेघैस्तत एव तोयमर्थं मुनीन्द्रैरिव संप्रणीताः" माघ० ३-७५। 2. ಬುದ್ಧದೇವ.

**मुमुक्षत् ಮುಮುಕ್ಷತ್** (वि०) 1. ಮೋಕ್ಷಹೊಂದಲು ಅಪೇಕ್ಷಿಸುತ್ತಿರುವ, ಮುಕ್ತಿಪಡೆಯಲು ಇಚ್ಛಿಸುತ್ತಿರುವ. मुच्लृ (मोक्षणे) + सन् "शतृ" (३-२-१२४)। 2. ಬಿಡಲು ಅಪೇಕ್ಷಿಸುತ್ತಿರುವ, ತ್ಯಜಿಸಲು ಇಚ್ಛಿಸುತ್ತಿರುವ. 3. ಬಿಡುಗಡೆಮಾಡಲು ಇಚ್ಛಿಸುತ್ತಿರುವ.

**मुमुक्षा ಮುಮುಕ್ಷಾ** (स्त्री०) 1. ಮೋಕ್ಷಹೊಂದಲು ಅಪೇಕ್ಷೆ, ಮುಕ್ತಿಪಡೆಯಲು ಇಚ್ಛೆ. मुच्लृ (मोक्षणे) + सन् "अः" (३-३-१०२)। 2. ತ್ಯಜಿಸಲು ಅಪೇಕ್ಷೆ. 3. ಬಿಡುಗಡೆಮಾಡಲು ಇಚ್ಛೆ. 4. (ಬಾಣವನ್ನು) ಎಸೆಯಲು ಅಪೇಕ್ಷೆ, ಪ್ರಯೋಗಿಸಲು ಆಸೆ.

**मुमुक्षु ಮುಮುಕ್ಷು** (वि०) 1. ಮೋಕ್ಷಹೊಂದಲು ಅಪೇಕ್ಷಿಸುವ, ಮುಕ್ತಿಪಡೆಯಲು ಆಸೆಪಡುವ. मोक्तुमिच्छुः—मुच्लृ (मोक्षणे) + सन् "उः" (३-२-१६८)। "कर्मबन्धच्छिदं धर्मं भवस्येव मुमुक्षवः" कुमा० २-५१। 2. (ಬಾಣ) ಪ್ರಯೋಗಿಸಲು ಅಪೇಕ್ಷಿಸುವವನು. "तस्यापरेष्वपि मृगेषु शरान्मुमुक्षोः" रघु० ९-५८। 3. ಬಿಡುಗಡೆಮಾಡಲು ಅಪೇಕ್ಷಿಸುವ.

**मुमुषिषत् ಮುಮುಷಿಷತ್** (वि०) ಕದಿಯಲು ಅಪೇಕ್ಷಿಸುತ್ತಿರುವ, ಅಪಹರಿಸಲು ಇಚ್ಛಿಸುತ್ತಿರುವ. मुष (स्तेये) + सन् "शतृ" (३-२-१२४)।

**मुमुषिषा ಮುಮುಷಿಷಾ** (स्त्री०) ಕದಿಯಲು ಅಪೇಕ್ಷೆ, ಅಪಹರಿಸಲು ಆಸೆ. मोषितुमिच्छा—मुष (स्तेये) + सन् "अः" (३-३-१०२)।

**मुमुषिषु ಮುಮುಷಿಷು** (वि०) ಅಪಹರಿಸಲು ಆಸೆಪಡುವ, ಕದಿಯಲು ಇಚ್ಛಿಸುವ. मोषितुमिच्छुः —मुष (स्तेये) + सन् "उः" (३-२-१६८)।

**मुमूर्षत् ಮುಮೂರ್ಷತ್** (वि०) ಪ್ರಾಣಬಿಡಲು ಅಪೇಕ್ಷಿಸುತ್ತಿರುವ, ಜೀವವನ್ನು ತ್ಯಜಿಸಲು ಇಚ್ಛಿಸುತ್ತಿರುವ. मर्तुमिच्छन् —मृङ् (प्राणत्यागे) + सन् "शतृ" (३-२-१२४)।

**मुमूर्षा ಮುಮೂರ್ಷಾ** (स्त्री०) ಪ್ರಾಣಬಿಡಲು ಅಪೇಕ್ಷೆ, ಜೀವವನ್ನು ತ್ಯಜಿಸಲು ಆಸೆ. मर्तुमिच्छा —मृङ् (प्राणत्यागे) + सन् "अः" (३-३-१०२)। "ज्याघुष्टकठिनाङ्गुष्ठं राममायान्मुमूर्षया" भट्टि० ५-५७।

**मुमूर्षु ಮುಮೂರ್ಷು** (वि०) ಪ್ರಾಣಬಿಡಲು ಇಚ್ಛಿಸುವ, ಜೀವವನ್ನು ತ್ಯಜಿಸಲು ಆಸೆಪಡುವ. मर्तुमिच्छुः—मृङ् (प्राणत्यागे) + सन् "उः" (३-२-१६८)।

**मुर ಮುರ** (पुं०) 1. ಶ್ರೀಕೃಷ್ಣನಿಂದ ಹತನಾದ ಒಬ್ಬ ರಾಕ್ಷಸ. "यियक्षमाणेनाहूतः पार्थेनाथ द्विषन् मुरम्" माघ० २-१। (नं०) 2. ಆವರಿಸಿಕೊಳ್ಳುವಿಕೆ, ಸುತ್ತುವರಿಯುವುದು. मुर (संवेष्टने) भावे "कः" (३-१-१३५)। (स्त्री०) **-रा -रा.** 3. ಮುರೆಯೆಂಬ ಒಂದು ಗಂಧಿಗರ ವಸ್ತು.

**मुरज ಮುರಜ** (पुं०) 1. ಮೃದಂಗ, ಮದ್ದಳೆ. मुराद्वेष्टनाज्जातः— जनी (प्रादुर्भावे) "डः" (३-२-९८)। 2. ತಮಟೆ, ಡಬರಿ, ಟುಮಕು.

**मुरजित् ಮುರಜಿತ್** (पुं०) ಮುರಾಸುರನನ್ನು ಜಯಿಸಿದ ಶ್ರೀಕೃಷ್ಣ. मुरं जितवान् —जि (जये) "क्विप्"

(३-२-६१)। एवं -द्विष्-ದ್ವಿಷ್, -भिद्-ಭಿದ್, -विद्विष्-ವಿದ್ವಿಷ್. "मुखमभ्यरोहि मुरविद्विषः श्रिया" माघ० १३-११। "सुदृशो (वदनारविन्दम्) रराज मुरजिद्दिदृक्षया" माघ० १३-३५।

**मुररिपु ಮುರರಿಪು, -वैरिन्-ವೈರಿನ್** (पुं०) ಶ್ರೀಕೃಷ್ಣ. मुरस्य रिपुः वैरी वा। "न ममौ कपाटतटविस्तृतं तनौ मुरवैरिवक्ष उरसि क्षमाभुजः" माघ० १३-१०। "जिह्वे कीर्तय केशवं मुररिपुं चेतो भज श्रीधरम्" मु० मा०।

**मुरला ಮುರಲಾ** (स्त्री०) 1. ಮುರಲಾನದಿ, ಕೇರಳ ದೇಶದ ಒಂದು ನದಿ. मुरं वेष्टनं लाति—ला (आदाने) "कः" (३-२-३)। "मुरलामारुतोद्धूतमगमत्कैतकं रजः" रघु० ४-५५। 2. ನರ್ಮದಾನದಿ. "ततः प्रविशति नदीद्वयं तमसा मुरला च" उ० रा० २।

**मुरली ಮುರಲೀ** (स्त्री०) ಕೊಳಲು, ಬಿದರಿನ ಕೊಳವೆಯಿಂದ ತಯಾರಿಸಲ್ಪಟ್ಟ ಒಂದು ವಾದ್ಯ. "वंशे तु वंशिका पूरी मुरली वेणुका च सा" वैज०। "वादयन् मुरलीं कृष्णः शृङ्गं वेणुं तथापरम्"।

**मुरलीधर ಮುರಲೀಧರ** (पुं०) ಶ್ರೀಕೃಷ್ಣ, ವೇಣುಗೋಪಾಲ. मुरल्याः धरः।

**मुरारि ಮುರಾರಿ** (पुं०) 1. ಶ್ರೀಕೃಷ್ಣ, ಮುರನೆಂಬ ರಾಕ್ಷಸನ ವೈರಿ. मुरस्यारिः। "न केवलं यः स्वतया मुरारेरनन्यसाधारणतां दधानः" माघ० ३-१९। 2. ಅನರ್ಘರಾಘವವನ್ನು ರಚಿಸಿದ ಕವಿ.

**मुर्भणी ಮುರ್ಭಣೀ** (स्त्री०) ಅಗ್ನಿಷ್ಟಿಕೆ.

**मुर्मुर ಮುರ್ಮುರ** (पुं०) 1. ಸೂರ್ಯನ ಕುದುರೆ. 2. ಮನ್ಮಥ. 3. ತುಷಾಗ್ನಿ, ಹೊಟ್ಟಿನಿಂದ ಮಾಡಿದ ಬೆಂಕಿ. मुर (वेष्टने) "कः" (३-१-१३५)। पृषो०। "मुर्मुरस्तुषवह्नौ स्यात् मन्मथे रविवाजिनि" मेदि०। 4. ಗೋಮೂತ್ರ. 5. ಗೋಮಯು, ಸಗಣಿ. "उद्दंशे देहलिर्गोविण्मूत्रयोर्मुकमुर्मुरौ" वैज०।

**मुष—स्तेये** (क्र्या० पर० सक० से०)। मुष्णाति। मुमोष। मोषिता। मोषिष्यति। मुष्णातु, मुष्णीतात्। मुषाण। अमुष्णात्। मुष्णीयात्। ಇತ್ಯಾದಿ. 1. ಕದಿ, ಕಳ್ಳತನ ಮಾಡು. "पुरीमवस्कन्द लुनीहि नन्दनं मुषाण रत्नानि हरामराङ्गनाः" माघ० १-५१। 2. ಕಸಿದುಕೊ, ಸುಲಿಗೆ ಮಾಡು. 3. ಒಡಿಸು, ದೂರವಮಾಡು. "किं देव्याः कृतदीर्घरोषमुषितस्निग्धस्मितं तन्मुखम्" रत्ना० ३-१९। 4. ವಂಚಿಸು, ಮೋಸಮಾಡು. "शीघ्रं न यात यदि तन्मुषिताः स्थ मूढाः" रत्ना० ४-३। 5. ಆವರಿಸು, ಮುಚ್ಚು. "सैन्यरेणुमुषितार्कदीधितिः" रघु० ११-५१। 6. ಅತಿಶಯವಾಗಿರು, ಮೇಲಾಗಿರು, ಮೀರಿಸು. "मुष्णन्तमिव तेजांसि विस्तीर्णोरःस्थलं पुरः" भट्टि० ९-९२। ಇತ್ಯಾದಿ.

**कर्मणि**:—मुष्यते। मुमुषे। मोषिता। मुष्यताम्। अमुष्यत। ಇತ್ಯಾದಿ.

**कृत्सु**:—मोषितव्यम्। मोषणीयम्। मोष्यम्। मुषितः। मुषितवान्। मुष्णन्, -ती। मोषितुम्। मुषितम्। मोषणम्। मुषित्वा, मोषित्वा। परिमुष्य। परिमोष्य।

**मुष् ಮುಷ್** (वि०) (ಸಮಾಸಾಂತ್ಯದಲ್ಲಿ) 1. ಕದಿಯುವ. मुष (स्तेये) "क्विप्" (३-२-१७८)। 2. ವಂಚಿಸುವ. 3. ಮುಚ್ಚುವ, ಕವಿಯುವ, ಆವರಿಸುವ. 4. ಕಸಿದುಕೊಳ್ಳುವ, ಸುಲಿಗೆಹೊಡೆಯುವ. 5. ಮೀರುವ, ಅತಿಶಯವಾಗಿರುವ, ಮೇಲಾಗಿರುವ. "संप्रत्येष सरोरुहद्युतिमुषः पादांस्तवासेवितुम्" रत्ना० १-२२।

**मुषा ಮುಷಾ** (स्त्री०) (ಲೋಹವನ್ನು ಕರಗಿಸುವ) ಮೂಸೆ, ಕೂವೆ. मुष (स्तेये) "कः" (३-१-१३५)।

**मुषित ಮುಷಿತ** (न०) 1. ಕದಿಯುವುದು, ಕಳ್ಳತನ, ಅಪಹರಿಸುವುದು. मुष (स्तेये) भावे "क्तः" (३-३-११४)। (वि०) 2. ಕದಿಯಲ್ಪಟ್ಟ, ಅಪಹರಿಸಲ್ಪಟ್ಟ. मुष "क्तः" (३-२-१०२)। 3. ವಂಚಿಸಲ್ಪಟ್ಟ, ಮೋಸಮಾಡಲ್ಪಟ್ಟ. "शीघ्रं न यात यदि तन्मुषिताः स्थ मूढाः याता सुदूरमधुना गजगामिनी सा" रत्ना० ४-३। 4. ಕಸಿದುಕೊಳ್ಳಲ್ಪಟ್ಟ, ಸುಲಿಯಲ್ಪಟ್ಟ. 5. ಆವರಿಸಲ್ಪಟ್ಟ, ಕವಿಯಲ್ಪಟ್ಟ, ಮುಚ್ಚಲ್ಪಟ್ಟ. "उच्चचाल बलभित्सखो वशी सैन्यरेणुमुषितार्कदीधितिः" रघु० ११-५१। 6. ಮೀರಿಸಲ್ಪಟ್ಟ.

**मुष्क ಮುಷ್ಕ** (पुं०) 1. ಅಂಡಕೋಶ, ಬೀಜ, ವೃಷಣ. मुष्णाति रेतः—मुष (स्तेये) "कक्" (उ० ३-४१)। "स्थानाच्च्युतममुक्तं हि मुष्कयोरन्तरेऽनिलः" वाग्भटः। 2. ಮೋಕ್ಷಕವೃಕ್ಷ, ಮೊಕ್ಕೆ ಮರ. 3. ಸಮೂಹ, ಗುಂಪು, ರಾಶಿ. 4. ಚೋರ, ಕಳ್ಳ. 5. ಪರ್ವತ, ಬೆಟ್ಟ. "मुष्कोऽण्डकोशे मोक्षद्रौ" नानार्थर०। (वि०) 6. ಪುಷ್ಟಿಯಾಗಿ ಬೆಳೆದಿರುವ. "मुष्को मोक्षद्रुमे सङ्घे तस्करे मांसलाण्डयोः" हेम०।

**मुष्कक ಮುಷ್ಕಕ** (पुं०) 1. ಮೋಕ್ಷಕವೃಕ್ಷ, ಮೊಕ್ಕೆ ಮರ. 2. ಅಂಡಕೋಶ, ವೃಷಣ. मुष्क स्वार्थे "कः"।

**मुष्कर ಮುಷ್ಕರ** (वि०) ಜೋಲಾಡುವ ವೃಷಣಗಳುಳ್ಳವನು. प्रशस्तः मुष्कोऽस्यास्ति "रः" (५-२-१०७)।

**मुष्टि ಮುಷ್ಟಿ** (पुंस्त्री०) 1. ಹಿಡಿ, ಬಿಗಿಹಿಡಿದ ಕೈ, ಮುಚ್ಚಿದ ಹಸ್ತ. मुष्यतेऽनया—मुष (स्तेये) "क्तिन्" (३-३-९४)। "तस्यापरेष्वपि मृगेषु शरान्मुमुक्षोः कर्णान्तमेत्य बिभिदे निबिडोऽपि मुष्टिः" रघु० ९-५८। 2. ಒಂದು ಪಲದ ತೂಕ. 3. ತುಂಬಿದ ಒಂದು ಹಿಡಿ. "श्यामाकमुष्टिपरिवर्धितको जहाति सोऽयं न पुत्रकृतकः पदवीं मृगस्ते" शाकु० ४-१३। 4. ಖಡ್ಗದ ಮುಷ್ಟಿ, ಕತ್ತಿಯ ಹಿಡಿ. "मुष्टिर्द्वयोः पले। बद्धपाणौ त्सरौ" मेदि०। 5. ಕದಿಯುವುದು, ಕಳ್ಳತನ.

**मुष्टिक ಮುಷ್ಟಿಕ** (पुं०) 1. ಕಂಸನ ಆಸ್ಥಾನದ ಒಬ್ಬ ಜಟ್ಟಿ. ಇವನು ಬಲರಾಮ ಮತ್ತು ಶ್ರೀಕೃಷ್ಣರೊಡನೆ ಕುಸ್ತಿಮಾಡಿ ಹತನಾದನು. "मष्टिकासुरचाणूरमल्लयुद्धविशारदः"। 2. ಅಕ್ಕಸಾಲಿ, ಚಿನ್ನ ಬೆಳ್ಳಿ ಕೆಲಸದವನು. मुष्टिमोषणं प्रयोजनमस्य "ठक्" (५-१-१०९)।

**मुष्टिन्धय ಮುಷ್ಟಿಂಧಯ** (पुं०) 1. ಬಾಲಕ, ಸಣ್ಣ ಮಗು. मुष्टिं धयति पिबति—धेट् (पाने) "खश्" (३-२-३०)। मुमागमः (६-३-६७)। (वि०) 2. ನುಂಗುವ, ಕಬಳಿಸುವ. "अपि निखिललोकसुचरितमुष्टिन्धयदुरितमूर्च्छनादुष्टम्" दया०।

**मुष्टिबन्ध ಮುಷ್ಟಿಬಂಧ** (पुं०) ಕೈ ಬಿಗಿಹಿಡಿಯುವಿಕೆ, ಹಸ್ತವನ್ನು ಮುಚ್ಚಿ ಹಿಡಿಯುವಿಕೆ.

**मुष्णत् ಮುಷ್ಣತ್** (वि०) 1. ಕದಿಯುತ್ತಿರುವ, ಅಪಹರಿಸುತ್ತಿರುವ. मुष (स्तेये) "शतृ" (३-२-१२४)। 2. ನಿವಾರಿಸುತ್ತಿರುವ, ಹೋಗಲಾಡಿಸುತ್ತಿರುವ. "राजीवराजीवशलोलभृङ्गं मुष्णन्तमुष्णं ततिभिस्तरूणाम्" माघ० ४-९। 3. ಮೀರುತ್ತಿರುವ, ಮಿಗಿಲಾಗಿರುವ, ಅತಿಶಯವಾಗಿರುವ. "मुष्णन्तमिव तेजांसि विस्तीर्णोरःस्थलं पुरः" भट्टि० ९-९२)। 4. ವಂಚಿಸುತ್ತಿರುವ, ಮೋಸಪಡಿಸುತ್ತಿರುವ. 5. ಓಡಿಸುತ್ತಿರುವ, ದೂರಮಾಡುತ್ತಿರುವ. 6. ಮುಚ್ಚುತ್ತಿರುವ, ಕವಿಯುತ್ತಿರುವ, ಆವರಿಸುತ್ತಿರುವ. स्त्रियां "ङीप्" (४-१-६)। **–ती –ತೀ.**

**मुसल ಮುಸಲ** (पुंन०) 1. ಒನಕೆ. मुस्यत्यनेन—मुस (खण्डने) "कलच्" (उ० १-१०६)। "न्यपप्तन् मुसले गृध्रा दीप्तयापाति चोल्कया" भट्टि० १५-२७। 2. ಒನಕೆಯ ಶಬ್ದ, ಧಾನ್ಯವನ್ನು ಕುಟ್ಟುವಾಗ ಆಗುವ ಒನಕೆಯ ಸದ್ದು. "मुसलमिदमियं च पातकाले मुहुरनुयाति कलेन हुंकृतेन" मुद्रा० १-४। 3. ಗದೆ.

**मुसलपाणि ಮುಸಲಪಾಣಿ** (पुं०) ಬಲರಾಮ. मुसलः पाणौ यस्य। "संप्रत्यसांप्रतं वक्तुमुक्ते मुसलपाणिना" माघ० २-७०।

**मुसलायुध ಮುಸಲಾಯುಧ** (पुं०) ಬಲರಾಮ. मुसलमायुधं यस्य।

**मुसलिन् ಮುಸಲಿನ್** (पुं०) 1. ಬಲರಾಮ. मुसलमस्यास्ति "इनिः" (५-२-११५)। 2. ಬೇರೆ ಬೇರೆ ಬಣ್ಣದ ಕಾಲುಗಳುಳ್ಳ ಕುದುರೆ. "मुसल्यन्यप्रभैकाङ्घ्रिः कराली तु जरूर्दरः" वैज०।

**मुसली ಮುಸಲೀ** (स्त्री०) 1. ಗೌಳಿ, ಹಲ್ಲಿ. 2. ನೆಲತಾಳೆ. "गोधा निहाका मुसली"। "टट्टनी मुसली पल्ली" वैज०। "मुसली तालमूलिका" अम०।

**मुसल्य ಮುಸಲ್ಯ** (वि०) ಒನಕೆಯಿಂದ ಕೊಲ್ಲಲ್ಪಡುವವನು. मुसलेन वध्यः "यत्" (५-१-६६)। "विष्यो विषेण यो वध्यो मुसल्यो मुसलेन यः" अम०।

**मुस्त ಮುಸ್ತ** (पुं०) ಒಂದು ವಿಧ ವಿಷ. "वत्सनाभो हलाहलः। मुस्तः कुष्ठो मेषशृङ्गः इत्याद्याश्च" वैज०।

**मुस्तक ಮುಸ್ತಕ** (पुंन०) 1. ಭದ್ರಮುಸ್ತೆ, ಕೊನ್ನಾರಿಯ ಒಂದು ಭೇದ. मुस्तयति—मुस्त (संघाते) + णिच् "ण्वुल्" (३-१-१३३)। (पुं०) 2. ಒಂದು ವಿಧ ವಿಷ. "चत्वारि वत्सनाभानि मुस्तके द्वे प्रकीर्तिते" सुश्रुत० कल्प० २।

**मुस्ता ಮುಸ್ತಾ** (स्त्री०) ಭದ್ರಮುಸ್ತೆ, ಕೊನ್ನಾರಿಯ ಒಂದು ಭೇದ. मुस्तयति—मुस्त (संघाते) + णिच् "अच्" (३-१-१३४)। "विस्रब्धं क्रियतां वराहततिभिः मुस्ताक्षतिः पल्वले" शाकु० २-६।

**मुस्ताद ಮುಸ್ತಾದ** (पुं०) ವರಾಹ, ಹಂದಿ. मुस्तामत्ति —अद (भक्षणे) "अण्" (३-२-१)।

**मुस्तु ಮುಸ್ತು** (पुंस्त्री०) ಮುಷ್ಟಿ, ಹಿಡಿ, ಬಿಗಿಹಿಡಿದ ಕೈ. मुस्यति खण्डयत्यनेन—मुस (खण्डने) "तुक्" बाहु०। "अक्लीबौ मुष्टिमुस्तू द्वौ संग्राहो मुचुटिः स्त्रियाम्" वैज०।

**मुहिर ಮುಹಿರ** (पुं०) 1. ಕಾಮದೇವ, ಮನ್ಮಥ. 2. ಮೂರ್ಖ, ಅಜ್ಞ, ಅವಿವೇಕಿ. मुह्यति सभायाम् -मुह

(वैचित्ये) "किरच्" (उ० १-५२)। "मुहिर: काम-मूर्खयो: मेदि०।

**मुहुस् ಮುಹುಸ್** (अव्य०) 1. ಮತ್ತೆ, ಪುನಃ, ತಿರುಗಿ. मुह (वैचित्ये) "उस्" बाहु०। "जयमिच्छति तस्य जातशङ्के मनसीमं मुहुराददे वितर्कम्" किरा० १३-२। 2. ಸ್ವಲ್ಪಕಾಲ. "अस्रैस्तावन्मुहुरुपचितै: दृष्टिरालुप्यते मे" मेघ० २-४२। "मुहु: क्षणेऽनुक्षणे च" वैज०।

**मुहूर्त ಮುಹೂರ್ತ** (पुं०) 1. ಒಂದು ಮುಹೂರ್ತಕಾಲ, ನಲವತ್ತೆಂಟು (48) ನಿಮಿಷಗಳ ಕಾಲ, ಎರಡು ಘಳಿಗೆಗಳ ಕಾಲ, ಹನ್ನೆರಡು ಕ್ಷಣಗಳ ಕಾಲ, ದಿವಸದ ಹದಿನೈದನೆಯ ಒಂದು ಭಾಗ. हुर्छा (कौटिल्ये) "क्त:" मुडागमश्च (उ० ३-८९)। बाहु०।

| | |
|---|---|
| ಹದಿನೈದು ನಿಮೇಷಗಳು | 1 ಕಾಷ್ಠ |
| ಮೂವತ್ತು ಕಾಷ್ಠಗಳು | 1 ಕಲೆ |
| ಮೂವತ್ತು ಕಲೆಗಳು | 1 ಕ್ಷಣ |
| ಹನ್ನೆರಡು ಕ್ಷಣಗಳು | 1 ಮುಹೂರ್ತ. |

2. ಒಂದು ಕ್ಷಣಕಾಲ, ಅಲ್ಪಕಾಲ. "ते मुहूर्तमथ मूर्तिमपीप्यन् प्रेम मानमवधूय वधू: स्वा:" माघ० १०-२। "नवाम्बुदानीकमुहूर्तलाञ्छने धनुष्यमोघं समधत्त सायकम्" रघु० ३-५३। "मुहूर्तमल्पकाले स्याद्घटिकाद्वितयेऽपि च" हेम०।

**मूक ಮೂಕ** (पुं०) 1. ಒಬ್ಬ ದಾನವ, ಒಬ್ಬ ರಾಕ್ಷಸ. "सुरकृत्यमेतदवगम्य निपुणमिति मूकदानव:" किरा० १२-३६। 2. ಒಂದು ಜಾತಿಯ ಮೀನು. "आत्माशी शम्बरो मूक:" त्रिकाण्ड०। 3. ಹೇಸರಕತ್ತೆಯಿಂದ ಹೆಣ್ಣು ಕುದುರೆಯಲ್ಲಿ ಹುಟ್ಟಿದ ಪ್ರಾಣಿ. "मूकरुण्डौ तु वेसरात्" वैज०। 4. ದರಿದ್ರ, ಬಡವ. (वि०) 5. ಮೂಗ, ವಾಗಿಂದ್ರಿಯವಿಲ್ಲದವನು. मू इति शब्दं कायति —कै (शब्दे) "क:" (३-२-३)। "मौनान्मूक: प्रवचनपटुर्वाचिको जल्पको वा" भर्तृ० १-४७। "विरोधिवचसो मूकान् वागीशानपि कुर्वते" माघ० २-२५। "मूको दैत्याऽवाग्दीनेषु" हेम०।

**मूकाम्बा ಮೂಕಾಂಬಾ** (स्त्री०) ದುರ್ಗಾದೇವಿ.

**मूढ ಮೂಢ** (वि०) 1. ಅಜ್ಞ, ತಿಳಿಗೇಡಿ, ಅವಿವೇಕಿ, ಮೂರ್ಖ. मुह (वैचित्ये) "क्त:" (३-४-७२)। "मूढं बुद्धमिवात्मानं हैमीभूतमिवायसम्" कुमा० ६-५५। 2. ಮರುಳುಮಾಡಲ್ಪಟ್ಟ, ಭ್ರಮೆಹಿಡಿಸಲ್ಪಟ್ಟ, ತಬ್ಬಿಬ್ಬುಮಾಡಲ್ಪಟ್ಟ, ಮಂಕುಹಿಡಿಸಲ್ಪಟ್ಟ. "प्रत्यासन्नविपत्तिमूढमनसां प्रायो मति: क्षीयते" पञ्चतं० २-४। 3. ದಡ್ಡ, ಪೆದ್ದ, ಮಂಕ, ಮಡ್ಡಿ, ವಿವೇಚನಾಶಕ್ತಿಯಿಲ್ಲದವನು. "सन्त: परीक्ष्यान्यतरद्भजन्ते मूढ: परप्रत्ययनेयबुद्धि:" माल० १-२। 4. ಗಾಬರಿಗೊಂಡ, ಕಳವಳಗೊಂಡ. "ह्रीमूढानां भवति विफलप्रेरणा चूर्णमुष्टि:" मेघ० २-५। 5. ಪ್ರಜ್ಞೆತಪ್ಪಿದವನು, ಮೂರ್ಛೆರೋಗ ಹಿಡಿದವನು. 6. ಬುದ್ಧಿಯಿಲ್ಲದವನು, ಯೋಚನೆ ಮಾಡದವನು. "अल्पस्य हेतोर्बहु हातुमिच्छन् विचारमूढ: प्रतिभासि मे त्वम्" रघु० २-४७। 7. ಅಲಸ, ಸೋಮಾರಿ. "मूढे मूढो मोहिनि तन्द्रिते" वैज०। "मूढस्तन्द्रिते जडे" हेम०।

**मूढचेतन ಮೂಢಚೇತನ, —मति —ಮತಿ** (वि०) ಅಜ್ಞಾನಿ, ತಿಳಿವಳಿಕೆಯಿಲ್ಲದವನು, ಮೂರ್ಖ. मूढा चेतना यस्य। "अवगच्छति मूढचेतन: प्रियनाशं हृदि शल्यमर्पितम्" रघु० ८-८८।

**मूढता ಮೂಢತಾ** (स्त्री०) ಅಜ್ಞತೆ, ತಿಳಿಗೇಡಿತನ, ತಿಳಿವಳಿಕೆಯಿಲ್ಲದಿರುವಿಕೆ. मूढस्य भाव: "तल्" (५-१-११९)। "त्व:" **—त्वम् —ತ್ವಮ್.**

**मूढधी ಮೂಢಧೀ** (वि०) ದಡ್ಡ, ತಿಳಿಗೇಡಿ, ಮಂಕ, ಮಡ್ಡಿ. मूढा धीर्यस्य। "व्रजन्ति ते मूढधिय: पराभवं भवन्ति मायाविषु ये न मायिन:" किरा० १-३०।

**मूत ಮೂತ** (वि०) 1. ಕಟ್ಟಲ್ಪಟ್ಟ. मूङ् (बन्धने) "क्त:" (३-२-१०२)। 2. ಬಂಧಿಸಲ್ಪಟ್ಟ, ಸೆರೆಹಿಡಿಯಲ್ಪಟ್ಟ. "बद्धे सन्दानितं मूतमुद्दितं सन्दितं सितम्" अम०।

**मूत्र ಮೂತ್ರ** (न०) ಮೂತ್ರ, ಉಚ್ಚೆ. मूत्र (प्रस्रवणे) कर्म० "घञ्" (३-३-१९)। "नाप्सु मूत्रं पुरीषं वा ष्ठीवनं वा समुत्सृजेत्" मनु० ४-५६। ಆಹಾರದ ಸಾರಾಂಶವು ರಸವಾಗುವುದು. ಸಾರವಿಲ್ಲದ ವಸ್ತುವು ಮಲದ್ರವವಾಗುವುದು. ಆ ದ್ರವವಸ್ತುವು ಸಿರೆಗಳ ಮೂಲಕ ಬಸ್ತಿಗೆ ಬಂದು ಅದು ಮೂತ್ರವಾಗುವುದು. "आहारस्य रस: सार: सारहीनो मलद्रव:। सिराभिस्तज्जलं नीतं बस्तौ मूत्रत्वमाप्नुयात्"।

**मूत्रकृच्छ्र ಮೂತ್ರಕೃಚ್ಛ್ರ** (न०) ಉರಿಮೂತ್ರ, ಅಶ್ಮರೀ ರೋಗ, ಮೂತ್ರರೋಗ. मूत्रे कृच्छ्रम्।

**मूत्रकोश ಮೂತ್ರಕೋಶ** (पुं०) ಹೊಕ್ಕಳಿನ ಕೆಳಭಾಗ, ಬಸ್ತಿ.

**मूत्रक्षय ಮೂತ್ರಕ್ಷಯ** (पुं०) ಸರಿಯಾಗಿ ಮೂತ್ರ ಇಳಿಯದಿರುವಿಕೆ.

**मूत्रदोष ಮೂತ್ರದೋಷ** (ಪುಂ) ಮೇಹರೋಗ. मूत्रस्य दोषो यस्मात् ।

**मूत्रफल ಮೂತ್ರಫಲ** (ಪುಂ) ಪುನುಗು ಬೆಕ್ಕು.

**मूत्रपुट ಮೂತ್ರಪುಟ** (ನಂ) ನಾಭಿಯ ಅಧೋಭಾಗ, ಹೊಕ್ಕಳಿನ ಕೆಳಭಾಗ, ಕೆಳಹೊಟ್ಟೆ. मूत्रस्य पुटम् ।

**मूत्राघात ಮೂತ್ರಾಘಾತ** (ಪುಂ) ಮೂತ್ರವನ್ನು ತಡೆಗಟ್ಟುವ ಒಂದು ರೋಗ. ಈ ರೋಗವು ಹದಿಮೂರು ವಿಧ.

**मूत्राशय ಮೂತ್ರಾಶಯ** (ಪುಂ) ಹೊಕ್ಕಳಿನ ಕೆಳಭಾಗ. मूत्रस्याशयः ।

**मूर्ख ಮೂರ್ಖ** (ವಿಂ) 1. ದಡ್ಡ, ಮಂಕ, ಪೆದ್ದ. मुह्यति — मुह् (वैचित्ये) "खः" मूर्च (उं ५-२२)। 2. ಅಜ್ಞ, ತಿಳಿಗೇಡಿ, ವಿವೇಕವಿಲ್ಲದವನು, ವಿವೇಚನಾಶಕ್ತಿಯಿಲ್ಲದವನು. "भुजङ्गमपि कोपितं शिरसि पुष्पवद्धारयेत् न तु प्रतिनिविष्टमूर्खजनचित्तमाराधयेत्" भर्तृं० २-३। 3. ಮಾಷ, ಉದ್ದು. "मूर्खः पुरीषमो माषः" त्रिकाण्ड०।

**मूर्खता ಮೂರ್ಖತಾ** (ಸ್ತ್ರೀಂ) 1. ದಡ್ಡತನ, ಮಂಕು. 2. ತಿಳಿಗೇಡಿತನ, ಅವಿವೇಕ, ವಿವೇಚನಾಶಕ್ತಿಯಿಲ್ಲದಿರುವಿಕೆ. मूर्खस्य भावः "तल्" (५-१-११९)। "त्वः"। —त्वम् —ತ್ವಮ್.

**मूर्च्छना ಮೂರ್ಛನಾ** (ಸ್ತ್ರೀಂ) 1. ಸ್ವರದ ಬೆಳವಣಿಗೆ, ಧ್ವನಿಯು ವೃದ್ಧಿಹೊಂದುವುದು, ಸ್ವರಗಳ ಆರೋಹಣಾವರೋಹಣ. मुर्च्छा (मोहसमुच्छ्राययोः) "युच्" (३-३-१२८)। ಸ್ವರವು ಕ್ರಮವಾಗಿ ಬೆಳೆದು ರಾಗವಾಗಿ ಪರಿಣಮಿಸುವುದು ಮೂರ್ಛನೆ. ಇದು ಗ್ರಾಮದ (ಸ್ವರಗಳ ಸಮೂಹದ) ಏಳನೆಯ ಒಂದು ಭಾಗ. "स्वरः संमूर्च्छितो यत्र रागतां प्रतिपद्यते। मूर्च्छनामिति तामाहुः कवयो ग्रामसंभवाम्" सं० दा०। "स्फुटीभवद्ग्रामविशेषमूर्च्छनामवेक्षमाणं महतीं मुहुर्मुहुः" माघ० १-१०। 2. ಮೂರ್ಛೆ ರೋಗ.

**मूर्च्छा ಮೂರ್ಛಾ** (ಸ್ತ್ರೀಂ) 1. ಮೂರ್ಛೆರೋಗ. मुर्च्छा (मोहसमुच्छ्राययोः) "अङ्" (३-३-१०६)। "प्रहारमूर्च्छापगमे रथस्था यन्तॄनुपालभ्य निवर्तिताश्वान्" रघु० ७-४४। 2. ಲೋಹದ ಭಸ್ಮಗಳನ್ನು ಮಾಡುವ ವಿಧಾನ. 3. ಸ್ವರದ ಬೆಳವಣಿಗೆ, ಸ್ವರದ ಆರೋಹಣಾವರೋಹಣ. 4. ವೃದ್ಧಿಹೊಂದುವುದು, ಬೆಳೆಯುವುದು.

**मूर्च्छाल ಮೂರ್ಛಾಲ** (ವಿಂ) ಮೂರ್ಛೆರೋಗ ಹಿಡಿದವನು, ಜ್ಞಾನತಪ್ಪಿದವನು. मूर्च्छाऽस्त्यस्य "लच्" (५-२-९७)।

**मूर्च्छित ಮೂರ್ಛಿತ** (ವಿಂ) 1. ಮೂರ್ಛೆರೋಗ ಹಿಡಿದವನು. मूर्च्छाऽस्य संजातः "इतच्" (५-२-३६)। 2. ಬೆಳೆಸಲ್ಪಟ್ಟ, ವೃದ್ಧಿಹೊಂದಿಸಲ್ಪಟ್ಟ.

**मूर्त ಮೂರ್ತ** (ವಿಂ) 1. ಮೂರ್ಛೆರೋಗವುಳ್ಳವನು. मुर्च्छा (मोहसमुच्छ्राययोः) "क्तः" (३-४-७२)। न नत्वम् (८-२-५७)। 2. ಬೆಳೆಸಲ್ಪಟ್ಟ, ವೃದ್ಧಿಹೊಂದಿಸಲ್ಪಟ್ಟ. 3. ದಡ್ಡ, ಹೆಡ್ಡ, ಮಂಕ. 4. ಮೂರ್ತಿಯುಳ್ಳ, ಶರೀರವನ್ನು ತಾಳಿದ. "मूर्तो विघ्नस्तपस इव नो भिन्नसारङ्गयूथः" शाकुं० १-३३। 5. ಕಟ್ಟಲ್ಪಟ್ಟ, ಬಂಧಿಸಲ್ಪಟ್ಟ. मुर्वी (बन्धने) "क्तः" (३-२-१०२)। 6. ಕಠಿನವಾದ. ನ್ಯಾಯಮತದಲ್ಲಿ ಪೃಥಿವಿ ಜಲ ತೇಜಸ್ಸು ವಾಯು ಮತ್ತು ಮನಸ್ಸು ಇವು ಮೂರ್ತದ್ರವ್ಯಗಳು. "पृथिव्यप्तेजोवायुमनांसि मूर्तद्रव्याणि"। "क्रियाश्रयत्वं मूर्तत्वम्" न्यायबोधिनी।

**मूर्तत्व ಮೂರ್ತತ್ವ** (ನಂ) 1. ಒಂದು ಆಕಾರ ಹೊಂದಿರುವಿಕೆ, ರೂಪವನ್ನು ಹೊಂದಿರುವಿಕೆ. 2. ಗೊತ್ತಾದ ಒಂದು ಅಳತೆಯಿಂದ ಕೂಡಿರುವಿಕೆ ಅಥವಾ ಚಲನೆಯಿಂದ ಕೂಡಿರುವಿಕೆ. "परिच्छिन्नपरिमाणवत्त्वम् क्रियावत्त्वं वा मूर्तत्वम्"।

**मूर्ति ಮೂರ್ತಿ** (ಸ್ತ್ರೀಂ) 1. ಆಕಾರ, ರೂಪ, ದೇಹ. मुर्च्छा (मोहसमुच्छ्राययोः) "क्तिन्" (३-३-९४)। "ध्वजाग्रधामा ददृशेऽथ शौरेः संक्रान्तमूर्तिर्मणिमेदिनीषु" माघ० ३-२३। 2. ವಿಗ್ರಹ, ಪ್ರತಿಮೆ. 3. ಸ್ವರೂಪ. "आचार्यो ब्रह्मणो मूर्तिः पिता मूर्तिः प्रजापतेः। भ्राता मरुत्पतेर्मूर्तिः माता साक्षात् क्षितेस्तनूः" भाग० ६-७-२९। 4. ಸಾಕ್ಷಾತ್ಕಾರ, ಮೈದೋರುವಿಕೆ, ಕಾಣಿಸಿಕೊಳ್ಳುವಿಕೆ. 5. ಕಾಠಿನ್ಯ, ದೃಢತೆ. 6. ಕಾಗೆ, ವಾಯಸ. "मूर्तिर्देहप्रतिमयोःकाककाठिन्ययोरपि" वैजं०।

**मूर्तिमत् ಮೂರ್ತಿಮತ್** (ವಿಂ) 1. ದೇಹವನ್ನು ತಾಳಿದ, ಆಕಾರವನ್ನು ಹೊಂದಿದ. मूर्तिरस्यास्ति — "मतुप्" (५-२-९४)। "स्वयमागृहीतकमनीयकंकणस्तव मूर्तिमानिव महोत्सवः करः" मालती० ९-९। स्त्रियां "ङीप्" (४-१-६)। —मती —ಮತೀ. "शकुन्तला मूर्तिमती च सत्क्रिया" शाकुं० ५-१५। 2. ಕಠಿನವಾದ, ಗಟ್ಟಿಯಾದ. (ಪುಂ) 3. ದೇಹ, ಶರೀರ.

**मूर्धकर्परी ಮೂರ್ಧಕರ್ಪರೀ** (स्त्री०) ಛತ್ರಿ, ಕೊಡೆ. "कावारी मूर्धकर्परी" हारा० ।

**मूर्धज ಮೂರ್ಧಜ** (पुं०) ತಲೆಯ ಕೂದಲು. मूर्ध्नि जायते — जनी (प्रादुर्भावे) "ड:" (३-२-९७) । "बन्धे स्रंसिनि चैकहस्तयमिता: पर्याकुला मूर्धजा:" शाकु० १-२६ ।

**मूर्धन् ಮೂರ್ಧನ್** (पुं०) 1. ಶಿರಸ್ಸು, ತಲೆ. मुह्यन्त्यस्मिन् —मुह (वैचित्ये) "कनि:" (उ० १-१५७) । उपधा-दीर्घ: धोऽन्तादेश: रादेशश्च निपा० । "पादाहतं यदुत्थाय मूर्धानमधिरोहति" माघ० २-४६ । 2. ಶಿಖರ, ತುದಿ, ಮೇಲುಭಾಗ. "सप्रतापं महेन्द्रस्य मूर्ध्नि तीक्ष्णं न्यवेशयत्" रघु० ४-३९ । 3. ಮುಂಭಾಗ, ಮುಂದೆ ಇರುವ ಬಯಲು ಪ್ರದೇಶ. "स किल संयुगमूर्ध्नि सहायतां मघवत: प्रतिपद्य महारथ:" रघु० ९-१९ । 4. ಮುಂದಲೆ, ಹಣೆ. 5. ಮುಂದಾಳು, ಮುಖಂಡ.

**मूर्धन्य ಮೂರ್ಧನ್ಯ** (वि०) 1. ತಲೆಯಲ್ಲಿರುವ, ತಲೆಯ ಮೇಲಿರುವ. मूर्ध्नि भव: "यत्" (४-३-५५) । "स्वेदायतश्वसितवेगनिरस्तमुग्धमूर्धन्यरत्ननिकरैरिव हास्तिकानि" माघ० ५-३० । 2. ಮೂರ್ಧಸ್ಥಾನದಲ್ಲಿ ಹುಟ್ಟುವ ऋ टु (ट ठ ड ढ ण) र ಮತ್ತು ष ವರ್ಣಗಳು. "ऋटुरषाणां मूर्धा" । 3. ಪ್ರಧಾನ, ಮುಖ್ಯ, ಮುಖಂಡ.

**मूर्धपुष्प ಮೂರ್ಧಪುಷ್ಪ** (पुं०) ಶಿರೀಷವೃಕ್ಷ, ಬಾಗೆ ಮರ. मूर्ध्नि पुष्पमस्य ।

**मूर्धरस ಮೂರ್ಧರಸ** (पुं०) ಅನ್ನದ ಮೇಲಿನ ರಸ, ಮಂಡ, ಕೆನೆ. मूर्ध्नि भव: रस: ।

**मूर्धवेष्टन ಮೂರ್ಧವೇಷ್ಟನ** (न०) ರುಮಾಲು, ಶಿರಸ್ತ್ರಾಣ, ಪೇಟಾ. मूर्ध्न: वेष्टनम् ।

**मूर्धाभिषिक्त ಮೂರ್ಧಾಭಿಷಿಕ್ತ** (पुं०) 1. ರಾಜ್ಯದ ಸಿಂಹಾಸನಾರೋಹಣ ಸಮಯದಲ್ಲಿ ಪಟ್ಟಾಭಿಷೇಕ ಮಾಡಲ್ಪಟ್ಟ ರಾಜ, ಕ್ಷತ್ರಿಯ. मूर्ध्नि अभिषिक्त: । "महोव्रतेनाप्यभिनन्द्य मूर्ध्ना मूर्धाभिषिक्तं कुमुदो बभाषे" रघु० १६-८१ । 2. ಕ್ಷತ್ರಿಯ, ರಾಜ, ದೊರೆ. 3. ಮಂತ್ರಿ, ಸಚಿವ, ಅಮಾತ್ಯ. "मूर्धाभिषिक्तो भूपाले मन्त्रिणि क्षत्रियेऽपि च" मेदि० ।

**मूर्धाभिषेक ಮೂರ್ಧಾಭಿಷೇಕ** (पुं०) ಪಟ್ಟಾಭಿಷೇಕ, ಕ್ಷತ್ರಿಯನಿಗೆ ರಾಜದೀಕ್ಷೆಯನ್ನು ಕೊಡಲು ಮಾಡುವ ಅಭಿಷೇಕ.

**मूर्धावसिक्त ಮೂರ್ಧಾವಸಿಕ್ತ** (पुं०) 1. ಪಟ್ಟಾಭಿಷಿಕ್ತನಾದ ದೊರೆ. 2. ಸೇನಾಪತಿ. 3. ಧನುರ್ವಿದ್ಯೆಯನ್ನು ಕಲಿತವನು. 4. ಬಿಲ್ಲನ್ನು ಹಿಡಿದವನು, ಧನುರ್ಧರ. 5. ರತ್ನಪರೀಕ್ಷೆ ಮಾಡುವವನು, ರತ್ನದ ಗುಣವನ್ನರಿತವನು. 6. ಔಷಧಗಳ ಮೂಲಿಕೆಗಳನ್ನು ಬಲ್ಲವನು. मूर्धावसिक्तस्सेनेशो धनुर्वेद्यस्त्रधारक: । मणिरत्नौषधिज्ञश्च" वैज० । 7. ಬ್ರಾಹ್ಮಣನಿಂದ (ವಿವಾಹಿತ) ಕ್ಷತ್ರಿಯ ಸ್ತ್ರೀಯಲ್ಲಿ ಹುಟ್ಟಿದ ಒಬ್ಬ ಮಿಶ್ರಜಾತಿಯವನು.

**मूर्वा ಮೂರ್ವಾ** (स्त्री०) ಕುರಟಗೆ ಬಳ್ಳಿ. मूर्वति—मुर्वी (बन्धने) "अच्" (३-१-१३४) ।

**मूल ಮೂಲ** (पुंन०) 1. ಮೂಲನಕ್ಷತ್ರ, ಅಶ್ವಿನಿ ಮೊದಲುಗೊಂಡು ಹತ್ತೊಂಬತ್ತನೆಯ ನಕ್ಷತ್ರ. मूलति — मूल (प्रतिष्ठायाम्) "क:" (३-१-१३५) । "हस्ता स्वाती श्रवणा अक्लीबे मृगशिरो न पुंसि । स्यात् पुंसि पुनर्वसुपुष्यौ मूलं त्वस्त्री स्त्रियां शेषा:" । 2. ಶಿಫೆ, ಬಿಳಲು. 3. ನಿಕುಂಜ, ಪೊದರು. 4. ಬೇರು, ಗಿಡಮರಗಳನ್ನು ಭದ್ರವಾಗಿ ನಿಲ್ಲಿಸುವ ಭೂಮಿಯೊಳಗಿರುವ ಮರದ ಭಾಗ. "बद्धमूलस्य मूलं हि महद्वैरतरो:स्त्रिय:" माघ० २-३८ । 5. ಒಂದು ವಸ್ತುವಿನ ಕೆಳಭಾಗ, ಆದಿಭಾಗ, ಬುಡ. "कस्याश्चिदासीद्रशना तदानीमङ्गुष्ठ-मूलार्पितसूत्रशेषा" रघु० ७-१० । 6. ಮರದ ಬುಡ, ಮರದ ಅಡಿಯ ಭಾಗ, ಮರದ ಕೆಳಭಾಗ. 7. ಕಾರಣ, ನಿದಾನ. "तौ हि मूलमुदेष्यन्त्या: जिगीषोरात्मसंपद:" माघ० २-७६ । 8. ಪ್ರಾರಂಭ, ಮೊದಲು. 9. ಸಮೀಪ, ಹತ್ತಿರ. 10. ಶಿಲೆ, ಕಲ್ಲು. 11. ವಶೀಕರಣ. 12. ಪ್ರತಿಷ್ಠೆ. 13. ಆಧಾರ, ಮೂಲಕಾರಣ. "रक्षोगृहस्थिति-र्मूलमग्निशुद्धौ त्वनिश्चय:" उ० रा० १-६ । 14. ಮೂಲಗ್ರಂಥ, ವ್ಯಾಖ್ಯಾನದಿಂದ ವಿವರಿಸಲ್ಪಡುವ ಗ್ರಂಥ, ಮೂಲ ಪಾಠ. 15. (ರಾಜನ) ರಾಜ್ಯ, (ರಾಜನ) ವಾಸಸ್ಥಳ. "स गुप्तमूलप्रत्यन्त: शुद्धपार्ष्णिरयान्वित:" रघु० ४-२६ । 16. ಮೂಲಧನ, ಬಂಡವಾಳ. 17. ಪಾರ್ಶ್ವ, ಒಂದು ಪಕ್ಕ. 18. ತಳ, ಕೆಳಭಾಗ, "मूलं पार्श्वाद्ययोरुडौ । निकुञ्जशिफयो: स्वीये शिलायां च वशीकृतौ । प्रतिष्ठायाम्" हेम० । 19. ಹಿಪ್ಪಲಿ ಬೇರು. 20. ಸೂರಣ ಗಡ್ಡೆ. 21. ತನ್ನದಲ್ಲದ (ಇತರರ) ಆಸ್ತಿಯನ್ನು ಮಾರುವವನು. 22. ಮೂಲಕಾರಣ, ಮೂಲಪ್ರಕೃತಿ. 23. ಆದ್ಯಂತರಹಿತವಾದ ಪರಬ್ರಹ್ಮ, ಚರಾಚರಸಕಲ ಜಗತ್ತಿಗೂ ಕಾರಣನಾದ ಪರಮಾತ್ಮ.

**मूलक ಮೂಲಕ** (ನಂ) ಮೂಲಂಗಿ ಗೆಡ್ಡೆ. मूलयति—मूल (रोपणे) "क्वुन्" (उं २-३२)। "वर्जनीयं सदा विप्रैर्मूलकं मदिरासमम्" ब्राह्मपु०।

**मूलकर्मन् ಮೂಲಕರ್ಮನ್** (ನಂ) ಹಿಂಸಾಕೃತ್ಯಕ್ಕಾಗಿ ಮಾಡುವ ಮೂಲಿಕಾಪ್ರಯೋಗ, ಮೂಲಿಕೆಗಳ ಮೂಲಕ ವಶಪಡಿಸಿಕೊಳ್ಳುವ ಕಾರ್ಯ.

**मूलकार ಮೂಲಕಾರ** (ಪುಂ) ಮೂಲಗ್ರಂಥವನ್ನು ರಚಿಸಿದವನು. मूलं करोति—डु कृञ् (करणे) "अण्." (३-२-१)।

**मूलकारण ಮೂಲಕಾರಣ** (ನಂ) 1. ಆದ್ಯಕಾರಣ, ಪ್ರಧಾನಕಾರಣ. मूलं कारणम्। "क्रियाणां खलु धर्म्याणां सत्पत्न्यो मूलकारणम्" कुमा० ६-१३। 2. ಸಾಂಖ್ಯ ಮತೋಕ್ತವಾದ ಮೂಲಪ್ರಕೃತಿ.

**मूलकारिका ಮೂಲಕಾರಿಕಾ** (ಸ್ತ್ರೀಂ) 1. ಮೂಲ ಗ್ರಂಥದ ವಿಷಯವನ್ನು ವಿವರಿಸುವ ಪದ್ಯರೂಪವಾದ ಗ್ರಂಥ. 2. ಮೂಲಧನದ ಬಡ್ಡಿ.

**मूलज ಮೂಲಜ** (ನಂ) 1. ಬೇರು ಅಥವಾ ಗೆಡ್ಡೆಯಿಂದ ಹುಟ್ಟುವ. (1) ಹಸಿಶುಂಠಿ (2) ಅರಿಶಿನ (3 ಪದ್ಮ, ಕಮಲ. (ವಿಂ) 2. ಮೂಲನಕ್ಷತ್ರಗಳಲ್ಲಿ ಹುಟ್ಟಿದ. 3. ಮೂಲತತ್ತ್ವದಿಂದ ಹುಟ್ಟಿದ.

**मूलत्रिकोण ಮೂಲತ್ರಿಕೋಣ** (ನಂ) ರವಿ ಮೊದಲಾದ ಗ್ರಹಗಳ ರಾಶಿರೂಪವಾದ ಗೃಹ.

| | |
|---|---|
| ರವಿಗೆ | ಸಿಂಹ |
| ಚಂದ್ರನಿಗೆ | ವೃಷಭ |
| ಕುಜನಿಗೆ | ಮೇಷ |
| ಬುಧನಿಗೆ | ಕನ್ಯಾ |
| ಗುರುವಿಗೆ | ಧನುಸ್ಸು |
| ಶುಕ್ರನಿಗೆ | ತುಲಾ |
| ಶನಿಗೆ | ಕುಂಭ |

ಇವು ಮೂಲತ್ರಿಕೋಣಗಳು. "सिंहो वृषश्च मेषश्च कन्या धन्वी घटो घटः। अर्कादीनां त्रिकोणानि मूलानि राशयः क्रमात्"।

**मूलदेव ಮೂಲದೇವ** (ಪುಂ) ಕಂಸ. "कंसः स्यादुग्रसेनजः। कर्णीसुतो मूलदेवः" त्रिकाण्ड०।

**मूलद्रव्य ಮೂಲದ್ರವ್ಯ, –धन –ಧನ** (ನಂ) ಮೂಲಧನ, ಬಂಡವಾಳ.

**मूलधातु ಮೂಲಧಾತು** (ಪುಂ) ಕೀವು, ಲಸಿಕೆ, ಮೈನೀರು.

**मूलपर्णी ಮೂಲಪರ್ಣೀ** (ಸ್ತ್ರೀಂ) ಮಂಜಿಷ್ಠೆ. मूले पर्णमस्याः।

**मूलप्रकृति ಮೂಲಪ್ರಕೃತಿ** (ಸ್ತ್ರೀಂ) 1. ಪ್ರಧಾನ, ಜಗತ್ತಿನ ಸೃಷ್ಟಿಕಾರ್ಯಕ್ಕೆ ಮೂಲಕಾರಣವಾದ ಆದಿಶಕ್ತಿ. मूलाचासौ प्रकृतिश्च। ಸಕಲ ಜಗತ್ತಿಗೂ ತ್ರಿಗುಣಾತ್ಮಕವಾದ ಪ್ರಕೃತಿಯೇ ಮೂಲಕಾರಣವೆಂದು ಸಾಂಖ್ಯರ ಮತ. ಕೇವಲ ಪ್ರಕೃತಿಯೇ ಮೂಲಪ್ರಕೃತಿ. प्रकरोति इति प्रकृतिः ಎಂಬ ವ್ಯುತ್ಪತ್ತಿಯಿಂದ ಇದು ಮತ್ತೊಂದರ ವಿಕೃತಿಯಲ್ಲ. ಮಹದಾದಿತತ್ತ್ವಗಳ ಕಾರ್ಯಕ್ಕೆ ಇದು ಮೂಲವಾದುದರಿಂದ ಇದಕ್ಕೆ ಮೂಲವಾದುದು ಯಾವುದೂ ಇಲ್ಲ. "प्रकृतेर्महान् ततोऽहंकारस्तस्माद्गणश्च षोडशकः। तस्मादपि षोडशकात् पञ्चभ्यः पञ्च भूतानि" सां० का०। (ಪುಂ ಬಂ ವಂ) 2. ವಿಜಿಗೀಷು ಅರಿ ಮಧ್ಯಮ ಮತ್ತು ಉದಾಸೀನರೆಂಬ ರಾಷ್ಟ್ರ ಪ್ರಮುಖರು. ಅಮಾತ್ಯ ರಾಷ್ಟ್ರ ದುರ್ಗ ಮತ್ತು ಅರ್ಥ ಮುಂತಾದ ದ್ರವ್ಯಪ್ರಕೃತಿಗಳಿಗೆ ಮೇಲಿನ ನಾಲ್ಕು ಪ್ರಕೃತಿಗಳು ಮೂಲವು. "मध्यमस्य प्रचारं च विजिगीषोश्च चेष्टितम्। उदासीनप्रचारं च शत्रोश्चैव प्रयत्नतः। एताः प्रकृतयो मूलं मण्डलस्य समासतः" मनु० ७-१५५, १५६।

**मूलभृत्य ಮೂಲಭೃತ್ಯ** (ಪುಂ) ವಂಶಪರಂಪರೆಯಿಂದ ಬಂದಿರುವ ಸೇವಕ.

**मूलरस ಮೂಲರಸ** (ಪುಂ) ಕುರಟಿಗೆ ಬಳ್ಳಿ.

**मूलवित्त ಮೂಲವಿತ್ತ** (ನಂ) ಮೂಲಧನ, ಬಂಡವಾಳ.

**मूलवर्तिन् ಮೂಲವರ್ತಿನ್** (ವಿಂ) ಗೆಡ್ಡೆ ಗೆಣಸುಗಳನ್ನು ತಿಂದು ಜೀವಿಸುವವನು.

**मूलशाकट ಮೂಲಶಾಕಟ** (ನಂ) ಗೆಡ್ಡೆ ಗೆಣಸುಗಳನ್ನು ಬೆಳೆಯುವ ಭೂಮಿ. मूलानां भवनं क्षेत्रम्—मूल "शाकटः" (वा० ५-२-२९)। **–शाकिनम् –ಶಾಕಿನಮ್.**

**मूलस्थान ಮೂಲಸ್ಥಾನ** (ನಂ) 1. ಪರಬ್ರಹ್ಮ. 2. ತಳಹದಿ, ಆಧಾರ. 3. ವಾಯು, ಗಾಳಿ.

**मूला ಮೂಲಾ** (ಸ್ತ್ರೀಂ) ಶತಾವರೀ ಗಿಡ.

**मूलाधार ಮೂಲಾಧಾರ** (ಪುಂ) ಗುಹ್ಯಸ್ಥಾನ ಮತ್ತು ಜನನೇಂದ್ರಿಯಗಳ ಮಧ್ಯದ ಎರಡು ಅಂಗುಲಗಳ ಪ್ರದೇಶ. ಇದು ದೇಹದೊಳಗಿನ ಸಕಲ ನಾಡಿಗಳಿಗೂ ಮೂಲಸ್ಥಾನವಾಗಿರುವುದು. ಈ ಮೂಲಾಧಾರಸ್ಥಾನದಲ್ಲಿ ಸುವರ್ಣ ವರ್ಣದ ಚತುರ್ದಲ ಪದ್ಮವೊಂದಿರುವುದು. ಆ ಪದ್ಮದ ಮಧ್ಯದಲ್ಲಿ ಇಚ್ಛಾಜ್ಞಾನಕ್ರಿಯಾತ್ಮಕವಾದ ತ್ರಿಕೋಣ ವೊಂದಿರುವುದು. ಅದರ ಮಧ್ಯದಲ್ಲಿ ಕೋಟಿಸೂರ್ಯ ಸಮಾನಕಾಂತಿಯುಳ್ಳ ಸ್ವಯಂಭುಲಿಂಗವಿರುವುದು.

"मूलाधारे त्रिकोणाख्ये इच्छाज्ञानक्रियात्मके। मध्ये स्वयम्भुलिङ्गन्तु कोटिसूर्यसमप्रभम्" तन्त्रसा०।

**मूलाह्व ಮೂಲಾಹ್ವ** (न०) ಮೂಲಂಗಿ. मूलमाह्वा अस्य।

**मूलिन् ಮೂಲಿನ್** (पुं०) 1. ವೃಕ್ಷ, ಮರ, ಗಿಡ, ಲತೆ. मूलमस्यास्ति "इनिः" (५-२-११५)। "ठन्" **मूलिकः ಮೂಲಿಕಃ.** 2. ಸುಳ್ಳುಸಾಕ್ಷಿ. "मध्यस्थः प्राश्निकः साक्षी मूली स्याद्दुष्टसाक्षिणि" वैज०।

**मूलोच्छेदन ಮೂಲೋಚ್ಛೇದನ** (न०) ಬುಡವನ್ನು ಕಿತ್ತುಹಾಕುವುದು, ಬುಡಸಹಿತ ನಾಶಪಡಿಸುವುದು, ಸಂಪೂರ್ಣವಾಗಿ ನಾಶಪಡಿಸುವುದು. मूलस्योच्छेदनम्।

**मूलोत्पाटन ಮೂಲೋತ್ಪಾಟನ** (न०) ಬೇರುಸಹಿತ ಕಿತ್ತುಹಾಕುವುದು, ಬುಡಸಹಿತ ನಾಶಪಡಿಸುವುದು. मूल+उद्+पट (भासार्थे)+णिच् "ल्युट्" (३-३-११५)।

**मूल्य ಮೂಲ್ಯ** (न०) 1. ಬೆಲೆ, ಧಾರಣೆ. 2. ವೇತನ, ಕೂಲಿ. मूलेनानाम्यम् मूलेन समो वा "यत्" (४-४-९१)। "मल्यं वेतनवस्तयोः" वैज०। (वि०) 3. ಬೇರು ಸಹಿತ ಕೀಳಲ್ಪಡುವ, ಬುಡಸಹಿತ ಕೀಳಲು ಯೋಗ್ಯವಾದ. मूलतः उत्पाट्यते—मूलमार्बहि यस्य मूल्यो मुद्गादिः मूल "यत्" (४-४-८८)।

**मूष ಮೂಷ** (पुं०) 1. ಲೋಹವನ್ನು ಕರಗಿಸುವ ಮೂಸಿ, ಕೂವೆ. 2. ಮೂಷಕ, ಇಲಿ. मूष (स्तेये) "अच्" (३-१-१३४)। स्त्रियां जातिं "ङीष्" (४-१-६३)। **मूषी ಮೂಷೀ.**

**मूषक ಮೂಷಕ** (पुं०) 1. ಇಲಿ, ಹೆಗ್ಗಣ. मूष (स्तेये) "ण्वुल्" (३-१-१३३)। 2. ಚೋರ, ಕಳ್ಳ.

**मूषकपर्णी ಮೂಷಕಪರ್ಣೀ** (स्त्री०) ಇಲಿಯಾಲದ ಗಿಡ, ಇಲಿ ಕಿವಿಯ ಗಿಡ. मूषक इव पर्णान्यस्याः "ङीष्" (४-१-६४)। "प्रत्यक्श्रेणी सुतश्रेणी रण्डा मूषकपर्ण्यपि" अम०।

**मूषका ಮೂಷಕಾ** (स्त्री०) ಹೆಣ್ಣು ಇಲಿ. मूष (स्तेये) "ण्वुल्" (३-१-१३३)। "टाप्" (४-१-४)।

**मूषकाराति ಮೂಷಕಾರಾತಿ** (पुं०) ಮಾರ್ಜಾರ, ಬೆಕ್ಕು. मूषकस्यारातिः।

**मूषण ಮೂಷಣ** (न०) ಕಳ್ಳತನ, ಕಳವು. मूष (स्तेये) भावे "ल्युट्" (३-३-११५)।

**मूषणीय ಮೂಷಣೀಯ** (वि०) 1. ಕದಿಯಲ್ಪಡುವ. 2. ಕದಿಯಬೇಕಾದ. 3. ಕದಿಯಲು ಶಕ್ಯವಾದ. 4. ಕದಿಯಲು ಅರ್ಹವಾದ. मूष (स्तेये) "अनीयर्" (३-१-९६)। "तव्यः"। **मूषितव्यः ಮೂಷಿತವ್ಯಃ.**

**मूषत् ಮೂಷತ್** (वि०) ಕದಿಯುತ್ತಿರುವ, ಅಪಹರಿಸುತ್ತಿರುವ. मूष (स्तेये) "शतृ" (३-२-१२४)। स्त्रियां "ङीप्" (४-१-६)। **-न्ती -ತ್ನೀ.**

**मूषा ಮೂಷಾ** (स्त्री०) ಲೋಹವನ್ನು ಕರಗಿಸುವ ಮೂಸಿ, ಕೂವೆ. मूष (स्तेये) "कः" (३-१-१३५)। "बृहद्भाण्डे तुषैः पूर्णे मध्ये मूषां विधारयेत्। क्षिप्त्वाग्निं मुद्रयेद्भाण्डं तद्भाण्डं पुटमुच्यते" भावप्र०।

**मूषातुत्थ ಮೂಷಾತುತ್ಥ** (न०) ನೀಲ ಮೈಲುತುತ್ತ. मूषाजातं तुत्थम्।

**मूषिक ಮೂಷಿಕ** (पुं०) 1. ಇಲಿ. मुष्णाति धान्यादिकम् —मुष (स्तेये) "किकन्" (उ० २-४२)। दीर्घश्च। "धनेन बलवान् सर्वो धनाद्भवति पण्डितः। पश्यायं मूषिकः पापः स्वजातिसमतां गतः" हितो०। स्त्रियां "टाप्" (४-१-४)। **-का -ಕಾ.** 2. ಹೆಣ್ಣು ಇಲಿ. 3. ಕಾಡು ಇಲಿ. 4. ಜೇಡರಹುಳು. "मूषिका लूतिका लूता तन्तुवायश्च जालिकः" वैज०। 5. ಮೂಸಿ, ಕೂವೆ.

**मूषिकवाहन ಮೂಷಿಕವಾಹನ** (पुं०) ವಿನಾಯಕ, ಗಣಪತಿ.

**मूषिकाञ्चन ಮೂಷಿಕಾಂಚನ** (पुं०) ವಿನಾಯಕ, ಗಣಪತಿ.

**मूषिकाह्वय ಮೂಷಿಕಾಹ್ವಯ** (पुं०) ಇಲಿಯಾಲದ ಗಿಡ.

**मूषी ಮೂಷೀ** (स्त्री०) ಮೂಸಿ, ಕೂವೆ, ಲೋಹವನ್ನು ಕರಗಿಸುವ ಮಣ್ಣಿನ ಪಾತ್ರೆ.

**मृकण्डु ಮೃಕಂಡು** (पुं०) ಮೃಕಂಡು ಋಷಿ. मृगस्य कण्डुः पृषो० गलोपः।

**मृग ಮೃಗ** (पुं०) 1. ಜಿಂಕೆ, ಹುಲ್ಲೆ, ಚಿಗರಿ. मृग्यते व्याधैः —मृग (अन्वेषणे) "घञ्" (३-३-१९)। "अङ्काधिरोपितमृगश्चन्द्रमा मृगलाञ्छनः" माघ० २-५६। 2. ಪ್ರಾಣಿ, ಪಶು, ತಿರ್ಯಕ್‌ಜಂತು. "न विरोधिनी रुषमियाय पथि मृगविहङ्गसंहतिः" किरा० १२-४६। "नाभिषेको न संस्कारः सिंहस्य क्रियते मृगैः। विक्रमार्जितराज्यस्य स्वयमेव मृगेन्द्रता"। 3. ಅನ್ವೇಷಣ, ಹುಡುಕುವುದು. "पर्येषणा परीच्छा च मृगणान्वेषणा मृगः" वैज०। 4. ಮೃಗಶೀರ್ಷನಕ್ಷತ್ರ. "मृगस्तु मृगशीर्षऽपि" वैज०। 5. ಒಂದು ಜಾತಿಯ ಆನೆ.

6. ಯಾಚನೆ, ಬೇಡಿಕೆ. 7. ಬೇಟೆ. "मृगः कुरङ्गे याञ्चायां मृगयायां गजान्तरे। पशौ नक्षत्रभेदेऽपि" हेम०। 8. ಮಾರ್ಗಶೀರ್ಷಮಾಸ. 9. ಮಕರರಾಶಿ. "मृगकर्कटसंक्रान्ती द्वे तूदग्दक्षिणायने। विषुवती तुलामेषे गोलमध्ये तथापरा:"।

**मृगजल ಮೃಗಜಲ** (न०) ಮರೀಚಿಕೆ, ಬಿಸಿಲ್ಗುದುರೆ.

**मृगजालिका ಮೃಗಜಾಲಿಕಾ** (स्त्री०) ಮೃಗಗಳನ್ನು ಹಿಡಿಯಲು ಬೀಸುವ ಬಲೆ. मृगाणां जालिका।

**मृगजीवन ಮೃಗಜೀವನ** (पुं०) ವ್ಯಾಧ, ಕಿರಾತ, ಬೇಡರವನು. मृगैर्जीवति—जीव (प्राणधारणे) "ल्युः" (३-१-१३४)।

**मृगणा ಮೃಗಣಾ** (स्त्री०) ಅನ್ವೇಷಣ, ಹುಡುಕುವುದು. मृग (अन्वेषणे)+णिच् "युच्" (३-३-१०७)। "मार्गणं मृगणा मृगः" अम०।

**मृगतृष् ಮೃಗತೃಷ್** (स्त्री०) ಮರೀಚಿಕೆ, ಬಿಸಿಲ್ಗುದುರೆ. मृगाणां तृट् अस्त्यत्र। एवं **मृगतृषा ಮೃಗತೃಷಾ, —तृष्णा —ತೃಷ್ಣಾ.**

**मृगतृष्णिका ಮೃಗತೃಷ್ಣಿಕಾ** (स्त्री०) ಬಿಸಿಲ್ಗುದುರೆ. मृगतृष्णा स्वार्थे "कः"। "टाप्" (४-१-४)। "स्रोतोवहां पथि निकामजलामतीत्य जातःसखे प्रणयवान् मृगतृष्णिकायाम्" शाकु० ६-१६। ಬಾಯಾರಿದ ಜಿಂಕೆಗಳು ದೂರದಲ್ಲಿ ಸೂರ್ಯಕಿರಣವನ್ನು ನೋಡಿ ನೀರಿನ ಭ್ರಾನ್ತಿಯಿಂದ ಅಲ್ಲಿಗೆ ಓಡಿಹೋಗುವುದರಿಂದ ಈ ಹೆಸರು.

**मृगदंशक ಮೃಗದಂಶಕ** (पुं०) ನಾಯಿ. मृगान् दशति—दंश (दशने) "ण्वुल्" (३-१-१३३)। "कौलेयकः सारमेयः कुक्कुरो मृगदंशकः" अम०।

**मृगदृश् ಮೃಗದೃಶ್** (स्त्री०) ಜಿಂಕೆಯಂತೆ ಕಣ್ಣುಗಳುಳ್ಳ ಹೆಂಗಸು. मृगस्य दृगिव दृक् यस्याः। "हिमधाम्नि दर्पणतले च मुहुः स्वमुखश्रियं मृगदृशो ददृशुः" माघ० ९-५३।

**मृगद्विष् ಮೃಗದ್ವಿಷ್** (पुं०) 1. ಸಿಂಹ. 2. ವ್ಯಾಘ್ರ, ಹುಲಿ. मृगान् द्वेष्टि—द्विष (अप्रीतौ) "क्विप्" (३-२-६१)।

**मृगधर ಮೃಗಧರ** (पुं०) ಚಂದ್ರ. मृगस्य धरः।

**मृगधूर्त ಮೃಗಧೂರ್ತ** (पुं०) ಜಂಬುಕ, ನರಿ. मृगेषु धूर्तः। संज्ञायां "कन्" (५-३-७५)। **—धूर्तकः —ಧೂರ್ತಕಃ.**

**मृगनाभि ಮೃಗನಾಭಿ** (पुं०) ಮೃಗಮದ, ಕಸ್ತೂರಿ. मृगस्य नाभिः। "प्रस्थं हिमाद्रेर्मृगनाभिगन्धि किञ्चित्क्वणत्किन्नरमध्युवास" कुमा० १-५४।

**मृगनाभिजा ಮೃಗನಾಭಿಜಾ** (स्त्री०) ಮೃಗದ ನಾಭಿಯಲ್ಲಿ ಹುಟ್ಟಿದ ಕಸ್ತೂರಿ. मृगनाभौ जायते—जनी (प्रादुर्भावे) "डः" (३-२-९७)।

**मृगनेत्रा ಮೃಗನೇತ್ರಾ** (स्त्री०) ಮೃಗಶೀರ್ಷನಕ್ಷತ್ರವೇ ನಾಯಕನಾಗಿ ಉಳ್ಳ ರಾತ್ರಿಗಳು. मृगो मृगशीर्षं नेता यासां ता मृगनेत्रा रात्रयः— मृग + नेतृ "अप्" (वा० ५-४-११५)।

**मृगपति ಮೃಗಪತಿ** (पुं०) 1. ಮೃಗರಾಜ, ಸಿಂಹ. मृगाणां पतिः। "यल्लीलां मृगपतिराददेऽनवद्यामादातुं स्वजनमनांस्युदारवीर्यः" भाग० ५-२५-१०। 2. ಗಂಡು ಜಿಂಕೆ. 3. ವ್ಯಾಘ್ರ, ಹುಲಿ.

**मृगपिप्लु ಮೃಗಪಿಪ್ಲು** (पुं०) ಚಂದ್ರ, ಮೃಗವೇ ಲಾಂಛನವಾಗಿರುವ ಹಿಮಾಂಶು. मृगः कुरङ्गः पिप्लुरस्मिन्। "सुधांशमौ द्वौ मृगपिप्लुपक्षजौ दशाश्वसिप्रग्रहणेमिचन्दिराः" त्रिकाण्ड०।

**मृगपोत ಮೃಗಪೋತ** (पुं०) ಜಿಂಕೆಯ ಮರಿ. मृगस्य पोतः। **—पोतकः —ಪೋತಕಃ, —शावः —ಶಾವಃ, —शावकः —ಶಾವಕಃ.** "क्व वयं क्व परोक्षमन्मथो मृगशावैः सममेधितो जनः" शाकु० २-१८।

**मृगबन्धनी ಮೃಗಬಂಧನೀ** (स्त्री०) ಮೃಗಗಳನ್ನು ಹಿಡಿಯುವ ಬಲೆ. मृगा बध्यन्तेऽनया— बन्ध (बन्धने) "ल्युट्" (३-३-११७)। "ङीप्" (४-१-१५)।

**मृगबन्धिनी ಮೃಗಬಂಧಿನೀ** (स्त्री०) ಮೃಗಗಳನ್ನು ಹಿಡಿಯುವ ಬಲೆ. मृगान् बध्नाति—बन्ध (बन्धने) "णिनिः" (३-१-१३४)। "ङीप्" (४-१-५)।

**मृगमद ಮೃಗಮದ** (पुं०) ಕಸ್ತೂರಿ. मृगस्य मदः।

**मृगया ಮೃಗಯಾ** (स्त्री०) ಬೇಟೆ. मृग्यन्तेऽत्र मृगाः—मृग (अन्वेषणे) "शः" यक् च निपा० (वा० ३-३-१०१)। "मिथ्यैव व्यसनं वदन्ति मृगयामीदृग्विनोदः कुतः" शाकु० २-५।

**मृगयु ಮೃಗಯು** (पुं०) ವ್ಯಾಧ, ಬೇಟೆಗಾರ, ಬೇಡರವನು. मृगान् याति—या (प्रापणे) "कुः" (उ० १-३७)। "हन्ति नोपशयस्थोऽपि शयालुर्मृगयुर्मृगान्" माघ० २-८०।

**मृगराज् ಮೃಗರಾಜ್** (पुं०) 1. ಮೃಗಗಳ ರಾಜ, ಸಿಂಹ. मृगाणां राट्। "पतिते पतङ्गमृगराजि निजप्रतिबिम्बरोषित इवाम्बुनिधौ" माघ० ९-१८। **—राजः —ರಾಜಃ.** मृगाणां राजा। "टच्" (५-४-९१)। "शिलाविभङ्गै-

"मृगराजशावस्तुङ्गं नगोत्सङ्गमिवारुरोह" रघु० ६-३। 2. ಸಿಂಹರಾಶಿ. 3. ಚಂದ್ರ.

**मृगरिपु ಮೃಗರಿಪು** (पुं०) ಸಿಂಹ. मृगाणां रिपुः।

**मृगरोमन् ಮೃಗರೋಮನ್** (न०) ಉಣ್ಣೆ, ತುಪಟ. मृगस्य रोम।

**मृगरोमज ಮೃಗರೋಮಜ** (न०) ರಾಂಕವ, ಶಾಲು, ಉಣ್ಣೆಯ ಬಟ್ಟೆ. मृगस्य रोमभ्यो जायते—जनी (प्रादुर्भावे) "डः" (३-२-९८)।

**मृगलाञ्छन ಮೃಗಲಾಂಛನ** (पुं०) ಚಂದ್ರ. मृगो लाञ्छनं यस्य। "अङ्काधिरोपितमृगश्चन्द्रमा मृगलाञ्छनः" माघ० २-५३।

**मृगलोचन ಮೃಗಲೋಚನ** (पुं०) 1. ಚಂದ್ರ. (स्त्री०) **–लोचना –ಲೋಚನಾ.** 2. ಜಿಂಕೆಯ ಕಣ್ಣುಗಳಂತೆ ಕಣ್ಣುಗಳುಳ್ಳ ಹೆಂಗಸು. मृगस्य लोचने इव लोचने यस्याः।

**मृगवधाजीव ಮೃಗವಧಾಜೀವ** (पुं०) ಮೃಗಗಳನ್ನು ಕೊಂದು ಜೀವಿಸುವ ವ್ಯಾಧ, ಬೇಡರವನು. मृगवधेन आजीवति — आ + जीव (प्राणधारणे) "कः" (३-१-१३५)।

**मृगविद्विष् ಮೃಗವಿದ್ವಿಷ್** (पुं०) ಸಿಂಹ. मृगाणां विद्विट्। "मृगविद्विषामिव यदित्थमजनि मिषतां पृथासुतैः" माघ० १५-३४।

**मृगव्य ಮೃಗವ್ಯ** (न०) ಬೇಟೆ. मृगाः व्यय्यन्तेऽत्र—व्यय (गतौ) "डः" (वा० ३-२-१०१)। "अयमेव मृगव्यसत्रकामः प्रहरिष्यन् मयि मायया शमस्थे" किरा० १३-९।

**मृगशिरस् ಮೃಗಶಿರಸ್** (न०) ಮೃಗಶೀರ್ಷನಕ್ಷತ್ರ. मृगस्येव शिरोऽस्य। **–शिरा –ಶಿರಾ.** ಎಂದು ಸ್ತ್ರೀಲಿಂಗ ರೂಪವೂ ಉಂಟು.

**मृगशीर्ष ಮೃಗಶೀರ್ಷ** (न०) ಮೃಗಶೀರ್ಷ ನಕ್ಷತ್ರ. मृगस्येव शीर्षमस्य। **–शीर्षा –ಶೀರ್ಷಾ** (स्त्री०) **–शीर्षन् –ಶೀರ್ಷನ್** (पुं०) ರೂಪಗಳೂ ಉಂಟು.

**मृगहन् ಮೃಗಹನ್** (पुं०) ವ್ಯಾಧ, ಬೇಡರವನು, ಮೃಗಗಳನ್ನು ಕೊಲ್ಲುವವನು, ಬೇಟೆಗಾರ.

**मृगाक्षी ಮೃಗಾಕ್ಷೀ** (स्त्री०) 1. ಜಿಂಕೆಯಂತೆ ಕಣ್ಣುಗಳುಳ್ಳ ಹೆಂಗಸು. मृगस्येव अक्षिणी यस्याः "षच्" (५-४-११३)। "अपयाति सरोषया निरस्ते कृतकं कामिनि चुक्षुवे मृगाक्ष्या" माघ० ९-८३। 2. ಇಂದ್ರವಾರುಣೀ ಲತೆ, ಹಾವುಮೆಕ್ಕೆ ಗಿಡ. 3. ರಾತ್ರಿ. "मृगाक्षी मृगलोचना। त्रियामेन्द्रवारुणी च" हेम०।

**मृगाङ्क ಮೃಗಾಂಕ** (पुं०) ಚಂದ್ರ. मृगः अङ्को यस्य। "विनिद्रपत्रालिगतालिकैतवात् मृगाङ्कचूडामणिवर्जनार्जितम्" नैष० १-७८।

**मृगाङ्कमूर्ति ಮೃಗಾಂಕಮೂರ್ತಿ** (पुं०) ಚಂದ್ರ. मृगाङ्का मूर्तिरस्य। "उत्सङ्गसङ्गिहरिणस्य मृगाङ्कमूर्तेः" माघ० ४-२२।

**मृगाङ्गना ಮೃಗಾಂಗನಾ** (स्त्री०) ಹೆಣ್ಣುಜಿಂಕೆ, ಹುಲ್ಲೆ. मृगस्याङ्गना। "तया गृहीतं नु मृगाङ्गनाभ्यस्ततो गृहीतं नु मृगाङ्गनाभिः" कुमा० १-४६।

**मृगाजिन ಮೃಗಾಜಿನ** (न०) ಕೃಷ್ಣಾಜಿನ, ಜಿಂಕೆಯ ಚರ್ಮ. मृगस्य अजिनं चर्म।

**मृगाजीव ಮೃಗಾಜೀವ** (पुं०) 1. ವ್ಯಾಧ, ಮೃಗಗಳನ್ನು ಬೇಟೆಯಾಡಿ ಜೀವಿಸುವವನು. 2. ಚಿರತೆ, ಕಿರುಬ, ಶಿವಂಗಿ.

**मृगाण्डजा ಮೃಗಾಂಡಜಾ** (स्त्री०) ಕಸ್ತೂರಿ. मृगस्य अण्डाकारात् नाभिस्थितपिण्डात् जायते।

**मृगादन ಮೃಗಾದನ** (पुं०) ನಾಯಿಹುಲಿ, ಕತ್ತೆಕಿರುಬ. मृगान् अत्ति — अद (भक्षणे) "ल्युः" (३-१-१३४)।

**मृगाधिप ಮೃಗಾಧಿಪ** (पुं०) ಸಿಂಹ, ಮೃಗಗಳ ರಾಜ. मृगाणामधिपः। "किमपेक्ष्य फलं पयोधरान् ध्वनतः प्रार्थयते मृगाधिपः" किरा० २-२१। **–अधिराजः –ಅಧಿರಾಜಃ.** मृगाणामधिराजः। "इति प्रगल्भं पुरुषाधिराजो मृगाधिराजस्य वचो निशम्य" रघु० २-४१।

**मृगाराति ಮೃಗಾರಾತಿ** (पुं०) 1. ಸಿಂಹ. 2. ನಾಯಿ. 3. ಹುಲಿ, ವ್ಯಾಘ್ರ. मृगाणामरातिः।

**मृगित ಮೃಗಿತ** (वि०) ಅನ್ವೇಷಣೆಮಾಡಲ್ಪಟ್ಟ, ಹುಡುಕಲ್ಪಟ್ಟ. मृग (अन्वेषणे) "क्तः" (३-२-१०२)।

**मृगी ಮೃಗೀ** (स्त्री०) 1. ಹೆಣ್ಣುಜಿಂಕೆ, ಹುಲ್ಲೆ. 2. ಒಂದು ಜಾತಿಯ ಹೆಂಗಸು.

**मृगेक्षणा ಮೃಗೇಕ್ಷಣಾ** (स्त्री०) ಜಿಂಕೆಯಂತೆ ನೇತ್ರಗಳುಳ್ಳ ಹೆಂಗಸು. मृगस्येवेक्षणे यस्याः।

**मृगेन्द्र ಮೃಗೇಂದ್ರ** (पुं०) 1. ಸಿಂಹ, ಮೃಗಗಳ ರಾಜ. मृगाणामिन्द्रः। "आक्षिप्यमाणं रिपुभिः प्रमादात् नागैरिवालूनसटं मृगेन्द्रम्" किरा० ३-५०। 2. ಸಿಂಹರಾಶಿ. 3. ವ್ಯಾಘ್ರ, ಹುಲಿ.

**मृगेन्द्रचटक ಮೃಗೇಂದ್ರಚಟಕ** (पुं०) ಗಿಡಗಪಕ್ಷಿ, ಡೇಗೆ. मृगेन्द्र इव हिंस्रः चटकः।

**मृग्य ಮೃಗ್ಯ** (वि०) 1. ಹುಡುಕಲ್ಪಡುವ. 2. ಹುಡುಕಲು ಯೋಗ್ಯವಾದ. मृग (अन्वेषणे) "ण्यत्" (३-१-१२४)। "तत्र कोशो मृग्य:"। "तत्र मूलं मृग्यम्"।

**मृग्यमाण ಮೃಗ್ಯಮಾಣ** (वि०) ಹುಡುಕಲ್ಪಡುತ್ತಿರುವ. मृग्यते—मृग (अन्वेषणे) "शानच्" (३-२-१२४)। मुमागमः (७-२-८२)। "मृग्यमाणमपि यद्दुरासदं भूरिसारमुपनीय तत्स्वयम्" माघ० १४-३१।

**मृजा ಮೃಜಾ** (स्त्री०) 1. ಶುದ್ಧಮಾಡುವುದು, ತೊಳೆಯುವುದು. मृजूष् (शुद्धौ) "अङ्" (३-३-१०४)। 2. ಶುದ್ಧಿ, ಶುಚಿ, ನೈರ್ಮಲ್ಯ.

**मृजावत् ಮೃಜಾವತ್** (वि०) ನಿರ್ಮಲವಾದ, ಶುದ್ಧವಾದ, ಶುಚಿಯಾದ. मृजास्यास्ति "मतुप्" (५-२-९४)। "कमण्डलुकपालेन शिरसा च मृजावता" भट्टि० ५-६२।

**मृजत् ಮೃಜತ್** (वि०) 1. ಶುದ್ಧಮಾಡುತ್ತಿರುವ, ತೊಳೆಯುತ್ತಿರುವ. 2. ತಾರಿಸುತ್ತಿರುವ. 3. ಉಜ್ಜುತ್ತಿರುವ. मृजूष् (शुद्धौ) "शतृ" (३-२-१२४)। स्त्रियां "ङीप्" (४-१-६)। —ती —ತೀ.

**मृजित ಮೃಜಿತ** (न०) 1. ಶುದ್ಧಮಾಡುವುದು, ತೊಳೆಯುವುದು. 2. ತಾರಿಸುವುದು. 3. ಉಜ್ಜುವುದು, ತಿಕ್ಕುವುದು. मृजूष् (शुद्धौ) भावे "क्तः" (३-३-११४)। 4. ಶುದ್ಧಮಾಡಲ್ಪಟ್ಟ, ತೊಳೆಯಲ್ಪಟ್ಟ. 5. ತಾರಿಸಲ್ಪಟ್ಟ. 6. ಉಜ್ಜಲ್ಪಟ್ಟ, ತಿಕ್ಕಿ ಬೆಳಗಲ್ಪಟ್ಟ. मृजष् कर्म० "क्तः" (३-२-१०२)।

**मृजितवत् ಮೃಜಿತವತ್** (वि०) 1. ಶುದ್ಧಮಾಡಿದವನು. 2. ತಾರಿಸಿದವನು. 3. ಉಜ್ಜಿದವನು. मृजूष् (शुद्धौ) "क्तवतुः" (३-२-१०२)। स्त्रियां "ङीप्" (४-१-६)। —वती —ವತೀ.

**मृड ಮೃಡ** (पुं०) ಪರಶಿವ, ಪರಮೇಶ್ವರ, ಮಹಾದೇವ. मृड (सुखे) "कः" (३-१-१३५)।

**मृडानी ಮೃಡಾನೀ** (स्त्री०) ಈಶ್ವರನ ಪತ್ನಿ, ಪಾರ್ವತಿ. मृडस्य स्त्री—"ङीष्" आनुक् च (४-१-४९)।

**मृणाल ಮೃಣಾಲ** (पुंन०) 1. ಬಿಸ, ತಾವರೆಯ ದಿಂಡು (ದಂಟು). मृण्यते—मृण (हिंसायाम्) "कालन्" (उ० १-११५)। "मध्ये यथा श्याममुखस्य तस्य मृणालसूत्रान्तरमप्यलभ्यम्" कुमा० १-४०। (न०) 2. ಲಾಮಂಚದ ಬೇರು. "मृणालं नलदे क्लीबं पुंनपुंसकयोर्बिसे" मेदि०।

**मृणालसूत्र ಮೃಣಾಲಸೂತ್ರ** (न०) ತಾವರೆಯ ದಂಟಿನ ನಾರು, —ಎಳೆ, —ತಂತು. "मृणालसूत्रामलमन्तरेण स्थितश्च सच्चामरयोर्द्वयं सः" माघ० ३-३।

**मृणालिका ಮೃಣಾಲಿಕಾ** (स्त्री०) ತಾವರೆಯ ದಂಟಿನ ನಾರು, ಬಿಸತಂತು. मृणाली स्वार्थे "कन्"। "मृणालिकापेलवमेवमादिभिर्व्रतैः स्वमङ्गं ग्लपयन्त्यहर्निशम्" कुमा० ५-२९।

**मृणालिनी ಮೃಣಾಲಿನೀ** (स्त्री०) 1. ಕಮಲಲತೆ, ತಾವರೆಯ ಬಳ್ಳಿ. मृणालमस्या अस्ति "इनिः" (५-२-११५)। "ङीप्"। "मृणालिनीनामनुरञ्जितं त्विषा विभिन्नमम्भोजपलाशशोभया" किरा० ४-२०। 2. ಕಮಲಗಳ ಸಮೂಹ. 3. ಕಮಲಗಳಿಂದ ಕೂಡಿದ ದೇಶ. मृणालान्यत्र देशे सन्ति—"इनिः" (५-२-१३५)।

**मृणाली ಮೃಣಾಲೀ** (स्त्री०) ಬಿಸತಂತು, ತಾವರೆ ದಂಟಿನ ನಾರು, —ಎಳೆ. मृणाल गौरा० "ङीष्" (४-१-६३)। "परिमृदितमृणालीम्लानमङ्गं प्रवृत्तिः कथमपि परिवारप्रार्थनाभिः क्रियासु" मालती० १-२५।

**मृत ಮೃತ** (न०) 1. ಮೃತ್ಯು, ಮರಣ. मृङ् (प्राणत्यागे) भावे "क्तः" (३-३-११४)। 2. ಭಿಕ್ಷೆ ಬೇಡಿತಂದ ಆಹಾರ. "मृतं तु याचितं भैक्षम्" मनु० ४-५। ಬೇಡಿತಂದ ಆಹಾರದಿಂದ ಜೀವಿಸುವುದು ಮೃತಜೀವನ. ಬೇಡದೆ ತಾನಾಗಿ ಲಭಿಸಿದ ಆಹಾರವು ಅಮೃತ. (वि०) 3. ಮರಣಹೊಂದಿದ, ಪ್ರಾಣವನ್ನು ತ್ಯಜಿಸಿದ. मृङ् "क्तः" (३-४-७२)। 4. ಉಪಯೋಗಕ್ಕೆ ಬಾರದವನು, ವ್ಯರ್ಥಜೀವನವುಳ್ಳವನು. ಇಂತಹ ಮನುಷ್ಯನು ಮೃತಪ್ರಾಯ. "मृतो दरिद्रः पुरुषो मृतं मैथुनमप्रजम्। मृतमश्रोत्रियं श्राद्धं मृतो यज्ञस्त्वदक्षिणः" पञ्चतं० २-९४। "मृतं शरीरमुत्सृज्य काष्ठलोष्टसमं क्षितौ। विमुखा बान्धवा यान्ति धर्मस्तमनुगच्छति" मनु० ४-२४१।

**मृतक ಮೃತಕ** (न०) 1. ಮರಣಾಶೌಚ. मृतेन मरणेन कायति—कै (शब्दे) "कः" (३-२-४)। (वि०) 2. ಮರಣಹೊಂದಿದವನು.

**मृतकल्प ಮೃತಕಲ್ಪ** (वि०) ಸತ್ತವನಂತಿರುವ, ಪ್ರಜ್ಞೆ ತಪ್ಪಿರುವ, ಮೈಮರೆತಿರುವ. ईषदसमाप्तौ मृतः—"कल्पप्" (५-३-६७)।

**मृतजीव ಮೃತಜೀವ** (पुं०) ತಿಲಕದ ಮರ. मृतः नष्टः सन् पुनः जीवति।

**मृतवत्सा ಮೃತವತ್ಸಾ** (स्त्री०) 1. ಮಕ್ಕಳನ್ನು ಕಳೆದುಕೊಂಡ ತಾಯಿ. 2. ಕರುಸತ್ತ ಹಸು.

**मृतसञ्जीवन ಮೃತಸಂಜೀವನ** (न०) 1. ಸತ್ತವನು ಪುನಃ ಬದುಕಿಕೊಳ್ಳುವುದು, -ಮತ್ತೆ ಜೀವಿಸುವುದು. (वि०) 2. ಸತ್ತವನನ್ನು ಮತ್ತೆ ಬದುಕಿಸುವ. मृतं सञ्जीवयति — सम् + जीव (प्राणधारणे) "ल्युः" (३-१-१३४)।

**मृतसञ्जीवनी ಮೃತಸಂಜೀವನೀ** (स्त्री०) 1. ಸತ್ತವನನ್ನು ಬದುಕಿಸುವ ಮಂತ್ರ. 2. ಸತ್ತವನನ್ನು ಬದುಕಿಸುವ ಔಷಧ. मृतं सञ्जीवयति—सम्+जीव (प्राणधारणे) + णिच् "ल्युट्" (३-३-११३)। "ङीप्" (४-१-१५)।

**मृति ಮೃತಿ** (स्त्री०) ಮರಣ, ಸಾವು. मृङ् (प्राणत्यागे) "क्तिन्" (३-३-९४)।

**मृत्तिका ಮೃತ್ತಿಕಾ** (स्त्री०) ಮಣ್ಣು.

**मृत्कर ಮೃತ್ಕರ** (पुं०) ಕುಲಾಲ, ಕುಂಬಾರ. मृदां करः।

**मृत्यु ಮೃತ್ಯು** (पुं०) 1. ಯಮಧರ್ಮರಾಯ. 2. ಮರಣ, ಸಾವು. मृङ् (प्राणत्यागे) "त्युक्" (उ० ३-२१)। "भयङ्करः प्राणभृतां मृत्योर्भुज इवापरः" किरा० ११-१७। "मृत्युर्ना मरणे यमे" मेदि०।

**मृत्युञ्जय ಮೃತ್ಯುಂಜಯ** (पुं०) ಶಿವ, ಪರಮೇಶ್ವರ. मृत्युं जितवान् — जि (जये) "खच्" (३-२-४६)। मुमागमः (६-३-६७)।

**मृत्युनाशक ಮೃತ್ಯುನಾಶಕ** (वि०) 1. ಪಾದರಸ. (ರಸಾಯನ ಶಾಸ್ತ್ರರೀತ್ಯಾ) ಪಾದರಸವನ್ನು ಶೋಧಿಸಿ ಸೇವಿಸಿದರೆ ಸಾವನ್ನು ತಡೆಯುವುದು. (वि०) 2. ಸಾವನ್ನು ತಡೆಯುವ, ತಡೆಗಟ್ಟುವ.

**मृत्युनाशन ಮೃತ್ಯುನಾಶನ** (न०) ಸುಧೆ, ಅಮೃತ. ಅಮೃತಪಾನವು ಮೃತ್ಯುವನ್ನು ತಡೆಗಟ್ಟುವುದು.

**मृत्युफला ಮೃತ್ಯುಫಲಾ** (स्त्री०) ಕದಳಿ ಗಿಡ, ಬಾಳೆ ಗಿಡ. मृत्यवे फलमस्याः।

**मृत्युबीज ಮೃತ್ಯುಬೀಜ** (पुं०) ಬಿದಿರು. मृत्यवे आत्मनाशाय बीजमस्य। "मृत्युबीजस्तु वंशः स्यात् केतकः क्रकचच्छदः" त्रिकाण्ड०।

**मृत्युभृत्य ಮೃತ್ಯುಭೃತ್ಯ** (पुं०) ವ್ಯಾಧಿ, ರೋಗ. मृत्योः भृत्य इव।

**मृत्युसूति ಮೃತ್ಯುಸೂತಿ** (स्त्री०) ಏಡಿ, ನಳ್ಳಿ. मृत्यवे सूतिः प्रसवो यस्याः।

**मृत्सा ಮೃತ್ಸಾ** (स्त्री०) 1. ಉತ್ತಮವಾದ ಮಣ್ಣು, ಮೃತ್ತಿಕೆ. मृद् "सः" (५-४-४०)। 2. ತೊಗರಿಗಿಡ. "मृत्सा काश्यां श्रेष्ठमृदि" मेदि०।

**मृत्स्ना ಮೃತ್ಸ್ನಾ** (स्त्री०) 1. ಉತ್ತಮವಾದ ಮಣ್ಣು, ಶ್ರೇಷ್ಠವಾದ ಮೃತ್ತಿಕೆ. प्रशस्ता मृत् "स्नः" (५-४-४०)। "त्वमादिरन्तो जगतोऽस्य मध्यं घटस्य मृत्स्नेव परः परस्मात्" भाग० ८-६-१०। 2. ತೊಗರಿ. "मृत्स्ना मृत्सातुवर्योः स्त्री" मेदि०।

**मृद् ಮೃದ್** (स्त्री०) ಮೃತ್ತಿಕೆ, ಮಣ್ಣು. मृद्यते—मृद (क्षोदे) "क्विप्" (वा० ३-३-१०८)। "प्रभवति शुचिर्बिम्बग्राहे मणिर्न मृदां चयः" उ० रा० २-४। "टाप्"। **मृदा ಮೃದಾ.** "आपं चैव हलन्तानां यथा वाचा निशा दिशा"।

**मृदङ्ग ಮೃದಂಗ** (पुं०) 1. ಮದ್ದಳೆ, ತಬಲ. मृद्यते — मृद (क्षोदे) "अङ्गच्" (उ० १-११८)। "संमूर्च्छन्नलघुविमानरन्ध्रभिन्नः प्रस्थानं समभिदधे मृदङ्गनादः" किरा० ७-१। 2. ಘೋಷ, ಶಬ್ದ. "मृदङ्गः पटहे घोषे" मेदि०। 3. ಬಿದಿರಿನ ಜಲ್ಲೆ.

**मृदङ्गफल ಮೃದಂಗಫಲ** (पुं०) 1. ಹಲಸಿನ ಮರ. मृदङ्ग इव फलमस्य। (न०) 2. ಹಲಸಿನ ಹಣ್ಣು.

**मृदित ಮೃದಿತ** (वि०) 1. ಉಜ್ಜಲ್ಪಟ್ಟ, ತಿಕ್ಕಲ್ಪಟ್ಟ. "मृदितकिसलयः सुराङ्गनानां ससलिलवल्कलभारभुग्नशाखः" किरा० १०-९। "मृदितौ कण्ठभूषणैः" याद० १६-६६। 2. ಹಿಂಡಲ್ಪಟ್ಟ. 3. ಪುಡಿಮಾಡಲ್ಪಟ್ಟ. 4. ಒತ್ತಲ್ಪಟ್ಟ, ಹಿಸುಕಲ್ಪಟ್ಟ. मृद (क्षोदे) कर्म० "क्तः" (३-२-१०२)। "कलाशेषश्चन्द्रः सुरतमृदिता बालवनिता तनिम्ना शोभन्ते गलितविभवाश्चार्थिषु नृपाः" भर्तृ० १-३५।

**मृदु ಮೃದು** (वि०) 1. ಮೆದುವಾದ, ಮೆತ್ತಗಿರುವ, ಕಠಿನವಲ್ಲದ. मृद (क्षोदे) "कुः" (उ० १-२८)। "स्तृणता तृणैः प्रतिनिशं मृदुभिः शयनीयतामुपयतीं वसुधाम्" किरा० ६-२६। 2. ಕೋಮಲವಾದ, ಸುಕುಮಾರವಾದ. "मृदुचरणतलाग्रदुःस्थितत्वादसहतरा कुचकुम्भयोर्भरस्य" माघ० ७-४८। 3. ಶಾಂತವಾದ, ಸೌಮ್ಯವಾದ. "बाणं कृपामृदुमनाः प्रतिसंजहार" रघु० ९-५७। 4. ಅಶಕ್ತ, ದುರ್ಬಲ. "ततस्ते मृदवोऽभूवन् गन्धर्वाः शरपीडिताः" भा०। 5. ನಿಧಾನವಾದ, ವೇಗವಲ್ಲದ, ಮಂದಗತಿಯುಳ್ಳ. "खातमूलमनिलो नदीरयैः पातयत्यपि मृदुस्तटद्रुमम्" रघु० ११-७६। 6. ಮೊಂಡಾಗಿರುವ, ಹರಿತವಲ್ಲದ, ಮೊನಚಾಗಿಲ್ಲದ. (पुं०) 7. ಶನಿಗ್ರಹ. (न०) 8. ಮಾರ್ದವ, ಮೆತ್ತಗಿರುವಿಕೆ.

9. ಕೋಮಲವಾಗಿರುವಿಕೆ. (अव्य०) 10. ಮೆಲ್ಲಗೆ, ಮೆತ್ತಗೆ, ಕೋಮಲವಾಗಿ. "रहस्याख्यायीव स्वनसि मृदु कर्णान्तिकचरः" शाकु० १-२०। स्त्रियां वा "ङीप्" (४-१-४४)। मृद्वी मृदुः।

**मृदुचर्मिन् ಮೃದುಚರ್ಮಿನ್, -त्वच् -ತ್ವಚ್** (पुं०) 1. ಭುಜಪತ್ರೆಗಿಡ. मृदु कोमलं चर्मास्त्यस्य "इनिः" (५-२-११६)। 2. ಮುಂಜವೆಂಬ ಒಂದು ಜಾತಿಯ ಹುಲ್ಲು, ಬ್ರಹ್ಮಚಾರಿಯು ಧರಿಸುವ ನಡುಕಟ್ಟು (ಮೌಂಜಿ) ಮಾಡುವ ಹುಲ್ಲು. "मुञ्जस्तु यज्ञियो मेध्यो मृदुत्वक् ब्रह्ममेखलः" वैज०।

**मृदुच्छद ಮೃದುಚ್ಛದ** (पुं०) ಭುಜಪತ್ರೆ ಗಿಡ. मृदवः छदाः अस्य।

**मृदुता ಮೃದುತಾ** (स्त्री०) 1. ಮೃದುತ್ವ, ಮಾರ್ದವ. मृदोर्भावः "तल्" (५-१-११९। 2. ಸೌಮ್ಯಭಾವ, ಶಾಂತತೆ. "स चानुनीतः प्रणतेन पश्चात् मया महर्षिर्मृदुतामगच्छत्" रघु० ५-५४।

**मृदुत्वच् ಮೃದುತ್ವಚ್** (पुं०) ಭುಜಪತ್ರೆ ಗಿಡ. मृदु त्वक् यस्य। "भूर्जे चर्मिमृदुत्वचौ" अम०।

**मृदुपर्वक ಮೃದುಪರ್ವಕ** (पुं०) 1. ಬೆತ್ತದ ಹುಲ್ಲು. (वि०) 2. ಮೆದುವಾದ ಗಿಣ್ಣುಗಳುಳ್ಳ. मृदूनि पर्वाण्यस्य। "कप्"।

**मृदुपुष्प ಮೃದುಪುಷ್ಪ** (पुं०) 1. ಶಿರೀಷವೃಕ್ಷ, ಬಾಗೆ ಮರ. मृदूनि पुष्पाण्यस्य। (न०) 2. ಕೋಮಲವಾದ ಹೂವು. (वि०) 3. ಕೋಮಲವಾದ ಪುಷ್ಪಗಳುಳ್ಳ.

**मृदुफल ಮೃದುಫಲ** (पुं०) 1. ಹುಳಿಬೇಲದ ಮರ. मृदूनि फलान्यस्य। (न०) 2. ಕೋಮಲವಾದ ಹಣ್ಣು. (वि०) 3. ಕೋಮಲವಾದ ಹಣ್ಣುಗಳುಳ್ಳ. मृदूनि फलानि यस्य।

**मृदुरोमन् ಮೃದುರೋಮನ್** (पुं०) 1. ಶಶ, ಮೊಲ. मृदूनि रोमाण्यस्य। (न०) 2. ಕೋಮಲವಾದ ಕೂದಲು. (वि०) 3. ಕೋಮಲವಾದ ಕೂದಲುಳ್ಳ. मृदूनि रोमाणि यस्य।

**मृदुल ಮೃದುಲ** (वि०) 1. ಮೆತ್ತಗಿರುವ, ಮೆದುವಾಗಿರುವ. मृदुर्गुणोऽस्यास्ति "लच्" (५-२-९७)। 2. ಕೋಮಲವಾದ, ಸುಕುಮಾರವಾದ.

**मृद्वीका ಮೃದ್ವೀಕಾ** (स्त्री०) ದ್ರಾಕ್ಷಿಯಬಳ್ಳಿ. मृद्यते — मृद (क्षोदे) "कीकन्" (उ० ४-२५)।

**मृध ಮೃಧ** (न०) ಯುದ್ಧ, ಕಾಳಗ. मृधु (हिंसायाम्) घञर्थे "कः" (वा० ३-३-५८)। "मृधमास्कन्दनं संख्यं समीकं सांपरायिकम्" अम०।

**मृष–तितिक्षायाम्** (दिवा० उभ० सक० से०)। मृष्यति, –ते। ममर्ष, ममृषे। मर्षिता। मर्षिष्यति, –ते। मृष्यतु, मृष्यताम्। ಇತ್ಯಾದಿ. 1. ಸಹಿಸು, ತಾಳು. "मृष्यतां मम विभो व्यतिक्रमः प्रस्मृतत्वदुपकारपद्धतेः" याद० १७-११८। 2. ಕ್ಷಮಿಸು, ಮನ್ನಿಸು. "मृष्यन्त्विदानीं लवस्य बालिशतां तातपादाः" उ० रा० ६।

**कर्मणि** :—मृष्यते। ममृषे। मर्षिता। मृष्यताम्। अमृष्यत। ಇತ್ಯಾದಿ.

**कृत्सु** :—मर्षितव्यम्। मर्षणीयम्। मृष्यम्। मर्षितः। मर्षितवान्। मृष्यन् –न्ती। मर्षणम्। मर्षितम्।

**मृषा ಮೃಷಾ** (अव्य०) 1. ಮಿಥ್ಯೆ, ಸುಳ್ಳು. मृष्यते — मृषु (सहने) "का"। "न मृषा परमार्थमेव मे शृणु विज्ञापनमेकमग्रतः" स्तोत्ररं०। 2. ವ್ಯರ್ಥವಾಗಿ, ಪ್ರಯೋಜನವಿಲ್ಲದೆ.

**मृषार्थक ಮೃಷಾರ್ಥಕ** (न०) ಅಸಂಭವದ ಮಾತು, ಸುಳ್ಳು ಎಂಬುದನ್ನು ತಿಳಿಸುವ ಮಾತು. मृषाऽर्थो यस्य। "कूर्मलोमतनुत्राणः, शशशृङ्गधनुर्धरः। एष वन्ध्यासुतो याति, खपुष्पकृतशेखरः ಇತ್ಯಾದಿ.

**मृषाज्ञान ಮೃಷಾಜ್ಞಾನ** (न०) ತಪ್ಪುತಿಳಿವಳಿಕೆ.

**मृषाभाषिन् ಮೃಷಾಭಾಷಿನ್** (वि०) ಸುಳ್ಳುಹೇಳುವ ಸ್ವಭಾವದವನು. मृषा भाषते—भाष (व्यक्तायां वाचि) "णिनिः" (३-२-७८)। स्त्रियां "ङीप्" (४-१-५)। **-भाषिणी -ಭಾಷಿಣೀ. एवं -वादिन् -ವಾದಿನ್.** "ङीप्" **-वादिनी -ವಾದಿನೀ.**

**मृषावाद ಮೃಷಾವಾದ** (पुं०) ಸುಳ್ಳುಮಾತು, ನಿಜವಲ್ಲದ ಮಾತು.

**मृषासाक्षिन् ಮೃಷಾಸಾಕ್ಷಿನ್** (वि०) ಸುಳ್ಳುಸಾಕ್ಷಿ ಹೇಳುವವನು.

**मृषोद्य ಮೃಷೋದ್ಯ** (न०) ಮಿಥ್ಯಾವಚನ, ಸುಳ್ಳುಮಾತು. मृषा उद्यते — वद (व्यक्तायां वाचि) कर्म० "क्यप्" (३-१-११४)। "मृषोद्यं प्रवदन्तीं तां सत्यवद्यो रघूत्तमः" भट्टि० ५-६०।

**मृष्ट ಮೃಷ್ಟ** (न०) 1. ಮೆಣಸು. (वि०) 2. ಶೋಧಿಸಲ್ಪಟ್ಟ, ಶುದ್ಧಮಾಡಲ್ಪಟ್ಟ. मृजू (शुद्धौ) कर्म० "क्तः" (३-२-१०२)। 3. ತೊಳೆಯಲ್ಪಟ್ಟ, ಅಳಿಸಲ್ಪಟ್ಟ,

ತೊಡೆದುಹಾಕಲ್ಪಟ್ಟ. "मृष्टचन्दनविशेषकभक्तिभ्रंष्ट-भूषणकदर्थितमाल्य:" माघ० १०-८४ ।

**मृष्टेरुक ಮೃಷ್ಟೇರುಕ** (वि०) 1. ವದಾನ್ಯ, ದಾನಶೀಲ, ಕೊಡುಗೈಯುಳ್ಳವನು. 2. ಭೋಗಿ, ಮಿಷ್ಟಾನ್ನವನ್ನು ಭುಜಿಸುವವನು. 3. ಸ್ವಾರ್ಥಪರ, ಕೃಪಣ, ಜಿಪುಣ, ಅತಿಥಿಗಳನ್ನು ದ್ವೇಷಿಸುವವನು. "मृष्टेरुको वदान्येऽपि मिष्टाशिन्यतिथिद्विषि" मेदि० ।

**मेक ಮೇಕ** (पुं०) ಛಾಗ, ಆಡು, ಮೇಕೆ.

**मेकल ಮೇಕಲ** (पुं० ब० व०) 1. ವಿಂಧ್ಯಪರ್ವತದ ಸಮೀಪದಲ್ಲಿರುವ ಒಂದು ದೇಶ. 2. ಮಧ್ಯಪ್ರದೇಶಕ್ಕೆ ಸೇರಿದ ಒಂದು ದೇಶ. "मेकला: कुसया: सेरा जाङ्गला: पृथवा वृका: । पटच्चरादयश्चान्ये मध्यदेशस्य नीवृत:" वैज० । 3. ಒಂದು ಪರ್ವತ.

**मेकलकन्यका ಮೇಕಲಕನ್ಯಕಾ** (स्त्री०) ನರ್ಮದಾನದಿ. मेकलस्याद्रे: कन्यका । "रेवा तु नर्मदा सोमोद्भवा मेकलकन्यका" अम० ।

**मेखला ಮೇಖಲಾ** (स्त्री०) 1. ಡಾಬು, ವಡ್ಯಾಣ, ಹೊಂಗಸರ ನಡುಕಟ್ಟು. मखं गतिं लाति—ला (आदाने) "क:" (३-२-३) । पृषो० । "नारावं व्यतनुत मेखला-कलाप: कस्मिन् वा सजलगुणे गिरां पटुत्वम्" माघ० ८-४५ । 2. ಪರ್ವತದ ತಪ್ಪಲು ಪ್ರದೇಶ. "आमेखलं सञ्चरतां घनानां छायामध:सानुगतां निषेव्य" कुमा० १-५ । 3. ಮೌಂಜಿ, ಮುಂಜತೃಣದಿಂದ ಮಾಡಿದ ಬ್ರಹ್ಮಚಾರಿಯ ನಡುಕಟ್ಟು. "मौञ्जी त्रिवृत्समा श्लक्ष्णा कार्या विप्रस्य मेखला" मनु० २-४२ । 4. ಕತ್ತಿಯನ್ನು ತಗಲುಹಾಕುವ ನಡುಕಟ್ಟು. 5. ನಿತಂಬ, ಕಟಿಪ್ರದೇಶ. "अथ मेखला । श्रोणिस्थानेऽद्रिकटके कटिबन्धेऽसिबन्धने" वैज० ।

**मेखलिन् ಮೇಖಲಿನ್** (पुं०) ಬ್ರಹ್ಮಚಾರಿ.

**मेघ ಮೇಘ** (पुं०) 1. ಮೋಡ, ಮುಗಿಲು. मेहति—मिह (सेचने) "अच्" (३-१-१३४) । "उद्धृत्य मेघैस्तत एव तोयमर्थं मुनीन्द्रैरिव संप्रणीता:" माघ० ३-७५ । 2. ಕೊನ್ನಾರಿ ಹುಲ್ಲು. "मेघ:स्यान्मुस्तके घने" विश्व० ।

**मेघकफ ಮೇಘಕಫ** (पुं०) ಆಲಿಕಲ್ಲು, ಮುಗಿಲ್ಗಲ್ಲು. मेघानां कफ इव ।

**मेघघोष ಮೇಘಘೋಷ** (पुं०) ಮೋಡದ ಶಬ್ದ, ಗುಡುಗು. मेघानां घोष: । "सादृश्यं दधति गभीरमेघ-घोषै:" किरा० ७-३१ ।

**मेघचिन्तक ಮೇಘಚಿಂತಕ** (पुं०) 1. ಚಾತಕಪಕ್ಷಿ. मेघानां चिन्तक: । (वि०) 2. ಮೇಘದ ಚಿಂತೆಯುಳ್ಳವನು.

**मेघजीवन ಮೇಘಜೀವನ** (पुं०) ಚಾತಕಪಕ್ಷಿ. मेघो जीवनमस्य ।

**मेघज्योतिस् ಮೇಘಜ್ಯೋತಿಸ್** (पुंन०) ಮೋಡಗಳ ಪರಸ್ಪರ ತಿಕ್ಕಾಟದಿಂದ ಹೊರಡುವ ಮಿಂಚಿನ ಪ್ರವಾಹ, ಮೋಡದ ಕಾಂತಿ. मेघादुत्पन्नो ज्योति: ।

**मेघडम्बर ಮೇಘಡಂಬರ** (पुं०) ಮೇಘದ ಗರ್ಜನೆ, ಗುಡುಗು.

**मेघदीप ಮೇಘದೀಪ** (पुं०) ಮಿಂಚು. मेघस्य दीप इव ।

**मेघदूत ಮೇಘದೂತ** (न०) ಕಾಳಿದಾಸ ವಿರಚಿತವಾದ ಒಂದು ಕಾವ್ಯ.

**मेघद्वार ಮೇಘದ್ವಾರ** (न०) ಆಕಾಶ, ಗಗನ, ಅಂತರಿಕ್ಷ.

**मेघनाद ಮೇಘನಾದ** (पुं०) 1. ವರುಣ. मेघं नादयति —णद+णिच् "अण्" (३-२-१) । 2. ಮೇಘದ ಶಬ್ದ, ಗುಡುಗು. 3. ಇಂದ್ರಜಿತ್ತು. "मेघनादोऽम्बुदध्वाने वरुणे रावणात्मजे" हेम० । "मेघनाद: परिस्कन्दन् परिष्कन्दन्तमाश्वरिम्" भट्टि० ९-७५ । "गरुडापात-विश्लिष्टमेघनादास्त्रबन्धन:" रघु० १२-७६ ।

**मेघनादानुलासक ಮೇಘನಾದಾನುಲಾಸಕ, -अनुलासिन् -ಅನುಲಾಸಿನ್** (पुं०) ಮಯೂರ, ನವಿಲು. मेघनादमनुलसति — अनु + लस (श्लेषणक्रीडनयो:) "ण्वुल्" (३-१-१३३) । "णिनि:" (३-२-७८) वा । "शिखावल: शिखी केकी मेघनादानुलास्यपि" अम० ।

**मेघनामन् ಮೇಘನಾಮನ್** (पुं०) ಮುಸ್ತೆ, ಕೊನ್ನಾರಿ ಹುಲ್ಲು. मेघस्य नामेव नाम यस्य ।

**मेघनिर्घोष ಮೇಘನಿರ್ಘೋಷ** (पुं०) ಮೇಘದ ಶಬ್ದ, ಗುಡುಗು. मेघस्य निर्घोष: ।

**मेघपुष्प ಮೇಘಪುಷ್ಪ** (न०) 1. ಜಲ, ನೀರು. मेघस्य पुष्पमिव । 2. ನದಿಯ ನೀರು. 3. ಹಿಮದ ಗಡ್ಡೆ. "मेघपुष्पं तु नादेये पिण्डाभ्रे सलिलेऽपि च" हेम० । (पुं०) 4. ಇಂದ್ರನ ಕುದುರೆ. मेघ इव पुष्प्यति प्रकाशते — पुष्प (विकसने) "अच्" (३-१-१३४) ।

**मेघभूति ಮೇಘಭೂತಿ** (स्त्री०) ವಜ್ರಾಯುಧ. मेघात् भूतिरस्य ।

**मेघमाला ಮೇಘಮಾಲಾ** (स्त्री०) ಮೇಘಗಳ ಸಾಲು, ಮೇಘಗಳ ಪಙ್ಕ್ತಿ. मेघानां माला । "मेघमालेव यश्चायमारादिव विभाव्यते" उ० रा० २-२४ ।

**मेघयोनि ಮೇಘಯೋನಿ** (ಪುಂ) ಧೂಮ, ಹೊಗೆ. मेघस्य योनिः—उत्पत्तिकारणम् ।

**मेघवर्त्मन् ಮೇಘವರ್ತ್ಮನ್** (ನಂ) ಗಗನ, ಆಕಾಶ, ಅಂತರಿಕ್ಷ. मेघस्य वर्त्म ।

**मेघवह्नि ಮೇಘವಹ್ನಿ** (ಪುಂ) 1. ಬಳ್ಳಿ ಮಿಂಚು, ಸರಪಣಿ ಮಿಂಚು. 2. ಸಿಡಿಲು. मेघस्य वह्निः ।

**मेघवाहन ಮೇಘವಾಹನ** (ಪುಂ) 1. ಇಂದ್ರ. मेघा वाहनमस्य, मेघान् वाहयति—वह (प्रापणे) + णिच् "ल्युः" (३-१-१३४) वा । "अवलम्बितैलविलपाणि-पल्लवः श्रयति स्म मेघमिव मेघवाहनः" माघ० १३-१८ । 2. ರುದ್ರ, ಶಿವ. "रुद्रेन्द्रौ मेघवाहनौ" वैज० ।

**मेघवेश्मन् ಮೇಘವೇಶ್ಮನ್** (ನಂ) ಆಕಾಶ, ಗಗನ, ಅಂತರಿಕ್ಷ. मेघानां वेश्म ।

**मेघागम ಮೇಘಾಗಮ** (ಪುಂ) ವರ್ಷಾಕಾಲ, ವರ್ಷರ್ತು. मेघानामागमोऽत्र ।

**मेघानन्दिन् ಮೇಘಾನಂದಿನ್** (ಪುಂ) ಮಯೂರ, ನವಿಲು. मेघेन आनन्दति—टुनदि (समृद्धौ) "णिनिः" (३-२-७८) ।

**मेघान्त ಮೇಘಾಂತ** (ಪುಂ) ಶರತ್ಕಾಲ, ಶರದೃತು. मेघाना-मन्तोऽत्र ।

**मेघास्थि ಮೇಘಾಸ್ಥಿ** (ನಂ) ಆಲಿಕಲ್ಲು, ಮುಗಿಲ್ಗಲ್ಲು. मेघानामस्थीव । "करकः स्यात् घनकुको बीजोदक-मिराचरम् । मेघास्थि" त्रिकाण्ड० ।

**मेचक ಮೇಚಕ** (ಪುಂ) 1. ನವಿಲುಗರಿಯ ಕಣ್ಣು. मेचको वर्णोऽस्त्यस्य "अच्" (५-२-१२७) । "मेचको बर्ह-चन्द्रकः" वैज० । "प्रेङ्खद्भूरिमयूरमेचकचयैरुन्मेषिचाष-च्छदच्छाया" मालती० ६-५ । 2. ಕೃಷ್ಣವರ್ಣ, ನೀಲ ವರ್ಣ. 3. ಮೇಘ, ಮೋಡ. (ನಂ) 4. ಅಂಧಕಾರ, ತಿಮಿರ. "मेचकः श्यामले कृष्णे तिमिरे बर्हिचन्द्रके" हेम० । 5. ಸ್ರೋತೋಂಜನ, ಸೌವೀರಾಂಜನ. "मेचकस्तु मयूरस्य चन्द्रके श्यामले पुमान् । तद्युक्ते वाच्यवत् क्लीबं स्रोतोऽञ्जनान्वकारयोः" मेदि० । 6. ಚೂಚುಕ, ಸ್ತನಾಗ್ರ. "स्तनाग्रे पिप्पलं वृन्तं चूचुकं मेचकं शिखा" मेदि० । (ವಿ०) 7. ಕಪ್ಪಾಗಿರುವ, ಕೃಷ್ಣವರ್ಣದ. "गज-कदम्बकमेचकमुच्चकैर्नभसि वीक्ष्य नवाम्बुदमम्बरे" माघ० ६-२६ ।

**मेचटिक ಮೇಚಟಿಕ** (ಪುಂ) ಎಣ್ಣೆಯ ಗಬ್ಬು ನಾತ, ಹಳೆ ಯೆಣ್ಣೆಯ ದುರ್ವಾಸನೆ. "स्नेहदोषे मेचटिकः" वैज० ।

**मेट ಮೇಟ** (ಪುನಂ) ಸುಣ್ಣ ಬಳಿದ ಮಾಳಿಗೆಯ ಮನೆ. "सौधोऽस्त्री सुधया श्वेतं मेटो हर्म्यं च मालिका" वैज० ।

**मेठ ಮೇಠ** (ಪುಂ) ಹಸ್ತಿಪಕ, ಮಾವಟಿಗ, ಗಜಪಾಲಕ. "मेठो मेण्डो हस्तिपके" त्रिकाण्ड० ।

**मेढ्र ಮೇಢ್ರ** (ಪುಂ) 1. ಪುರುಷನ ಜನನೇಂದ್ರಿಯ. मेहत्यनेन—मिह (सेचने) "ष्ट्रन्" (३-२-१८२) । 2. ಟಗರು. स्त्रियां "ङीष्" (४-१-६३) ।

**मेण्ट ಮೇಂಟ** (ಪುಂ) ಹಸ್ತಿಪಕ, ಮಾವಟಿಗ.

**मेण्ढ ಮೇಂಢ** (ಪುಂ) ಟಗರು, ಕುರಿ.

**मेथि(धि) ಮೇಥಿ(ಧಿ)** (ಪುಂ) ಮೇಟಿಕಂಬ, ಕಣದಲ್ಲಿ ಕಡ್ಡಿಕಾಳುಗಳನ್ನು ತುಳಿಯಲು ಎತ್ತುಗಳನ್ನು ಕಟ್ಟುವ ಕಂಬ. मेथृ(धृ) (हिंसायाम्) "इन्" (उ० ४-११७) । "पुंसि मेथिः खले दारु न्यस्तं यत्पशुबन्धने" अम० ।

**मेथिका ಮೇಥಿಕಾ** (ಸ್ತ್ರೀ०) 1. ಮೆಂತ್ಯದ ಸೊಪ್ಪು. मेथृ (हिंसायाम्) "ण्वुल्" (३-१-१३३) । स्त्रियां "टाप्" । 2. ಮೆಂತ್ಯ.

**मेथी ಮೇಥೀ** (ಸ್ತ್ರೀ०) 1. ಮೆಂತ್ಯ. 2. ಮೆಂತ್ಯದ ಸೊಪ್ಪು. मेथृ (हिंसायाम्) कृदिकारादक्तिनः इति पक्षे "ङीष्" (ग० ४-१-४५) ।

**मेदक ಮೇದಕ** (ಪುಂ) ಮದ್ಯವನ್ನು ತಯಾರಿಸುವ ವಸ್ತು, ಬಟ್ಟಿ ಇಳಿಸುವ ವಸ್ತು. मेदति—ञि मिदा (स्नेहने) "ण्वुल्" (३-१-१३३) । "वुन्" (उ० ५-१३) । वा ।

**मेदस् ಮೇದಸ್** (ನಂ) ಕೊಬ್ಬು, ಮಾಂಸದಿಂದ ಉಂಟಾದ (ಧಾತು) ರಸ. ञि मिदा (स्नेहने) "असुन्" (उ० ४-१८९) । "मेदश्छेदकृशोदरं लघु भवत्युत्थानयोग्यं वपुः" शाकु० २-५ ।

**मेदस्कृत् ಮೇದಸ್ಕೃತ್** (ನಂ) ಮಾಂಸ. मेदः करोति—डु कृञ् (करणे) "क्विप्" (३-२-६१) ।

**मेदस्विन् ಮೇದಸ್ವಿನ್** (ವಿ०) ಬಲಶಾಲಿಯಾದ, ಧಾತು ಬಲವುಳ್ಳ, ರಸಪುಷ್ಟಿಯುಳ್ಳ. मेदोऽस्यास्ति—"विनिः" (५-२-१२१) । "मेदस्विनः सरभसोपगतानभीकान्" माघ० ५-६४ ।

**मेदिनी ಮೇದಿನೀ** (ಸ್ತ್ರೀ०) 1. ಭೂಮಿ, ನೆಲ. मेदति—मेदोऽस्या अस्ति "इनिः" (५-२-११५) । "स्वयं प्रदुग्धेऽस्य गुणैरुपस्नुता वसूपमानस्य वसूनि मेदिनी"

किरा० १-१८। 2. ಮೇದಿನಿಕರ ಪಂಡಿತನಿಂದ ರಚಿತವಾದ ನಾನಾರ್ಥಶಬ್ದಕೋಶವೆಂಬ ಒಂದು ನಿಘಂಟು.

**मेदिनीपति ಮೇದಿನೀಪತಿ** (पुं०) ರಾಜ, ದೊರೆ, ಭೂಮಿಯ ಒಡೆಯ. मेदिन्याः पतिः। "अधितिष्ठति लोकमोजसा स विवस्वानिव मेदिनीपतिः" किरा० २-३८।

**मेदिनीश ಮೇದಿನೀಶ** (पुं०) ರಾಜ, ದೊರೆ. मेदिन्या ईशः।

**मेदुर ಮೇದುರ** (वि०) 1. ದಟ್ಟವಾದ, ನಿಬಿಡವಾದ, ತುಂಬಿರುವ. ञि मिदा (स्नेहने) "घुरच्" (३-२-१६१)। "मेघैर्मेदुरमम्बरं वनभुवः श्यामास्तमालद्रुमैः" गीतगो० १-१। 2. ಬಹಳ ಮೃದುವಾದ, ಬಹಳ ನುಣುಪಾದ. "सान्द्रस्निग्धस्तु मेदुरः" अम०।

**मेदुरित ಮೇದುರಿತ** (वि०) ಸಾಂದ್ರವಾಗಿರುವ, ದಟ್ಟವಾಗಿರುವ, ನಿಬಿಡವಾಗಿರುವ. मेदुर "इतच्" (५-२-३६)। "सन्ततमभिष्यन्दमानमेघमेदुरितनीलिमा जनस्थानमध्यगो गिरिः" उ० रा० १।

**मेदोज ಮೇದೋಜ** (न०) ಅಸ್ಥಿ, ಮೂಳೆ, ಎಲುಬು. मेदसो जायते—जनी (प्रादुर्भावे) "डः" (३-२-९८)।

**मेध ಮೇಧ** (पुं०) 1. ಯಾಗ, ಯಜ್ಞ. मेध्यतेऽत्र—मेधृ (हिंसायाम्) "घञ्" (३-३-१२१)। "मेधः क्रतौ मेधा तु शेमुषी" हेम०। 2. ಯಾಗದ ಪಶು. मेधृ कर्म० "घञ्" (३-३-१९)।

**मेधा ಮೇಧಾ** (स्त्री०) 1. ಗ್ರಹಣಶಕ್ತಿಯುಳ್ಳ ಬುದ್ಧಿ, ಜ್ಞಾಪಕಶಕ್ತಿಯುಳ್ಳ ಬುದ್ಧಿ. मेधते संगच्छते सर्वमस्याम्—मेधृ (संगमे) "अः" (३-३-१०३)। "धीर्धारणावती मेधा" अम०। नञ् दुस् ಮತ್ತು सु ಇವುಗಳಿಗೆ ಪರದಲ್ಲಿರುವ ಮೇಧಾ ಶಬ್ದಕ್ಕೆ ಬಹುವ್ರೀಹಿಯಲ್ಲಿ "असिच्" (५-४-१२२) ಪ್ರತ್ಯಯ ಬಂದು अमेधाः दुर्मेधाः सुमेधाः ಎಂದು ರೂಪಗಳಾಗುವುವು. "नायमात्मा प्रवचनेन लभ्यो न मेधया न बहुना श्रुतेन। यमेवैष वृणुते तेन लभ्यस्तस्यैष आत्मा विवृणुते तनूं स्वाम्" मुण्डक०। 2. ಬುದ್ಧಿ. 3. ಧನ.

**मेधाजित् ಮೇಧಾಜಿತ್** (पुं०) ವರರುಚಿ ಮುನಿ, ಕಾತ್ಯಾಯನ ಮಹರ್ಷಿ. मेधां जितवान्। "अथ मेधाजित् कात्यः कात्यायनश्च सः" त्रिकाण्ड०।

**मेधातिथि ಮೇಧಾತಿಥಿ** (पुं०) 1. ಮನುಸ್ಮೃತಿಗೆ ವ್ಯಾಖ್ಯಾನ ಬರೆದ ಒಬ್ಬ ಋಷಿ. 2. ಕರ್ದಮಪ್ರಜಾಪತಿಯ ಒಬ್ಬ ಪುತ್ರ. मेधाया अतिथिरिव।

**मेधाविन् ಮೇಧಾವಿನ್** (पुं०) 1. ಶುಕಪಕ್ಷಿ, ಗಿಣಿ. मेधास्त्यस्य "विनिः" (५-२-१२१)। "शुकस्त्रिकेतुमेधावी श्रीमान् वाग्मी फलाशनः" वैज०। 2. ಪಂಡಿತ, ವಿದ್ವಾಂಸ. "विद्वान् सन् कोविदः सूरिर्मेधावी पण्डितो बुधः" वैज०। (वि०) 3. ಬುದ್ಧಿವಂತ, ಜ್ಞಾಪಕಶಕ್ತಿಯುಳ್ಳವನು. "यस्य यस्य हि यो भावः तस्य तस्य हि तं नरः। अनुप्रविश्य मेधावी क्षिप्रमात्मवशं नयेत्" पञ्चतं० १-७४। स्त्रियां "ङीप्" (४-१-५)। –विनी –ವಿನೀ.

**मेधाविनी ಮೇಧಾವಿನೀ** (स्त्री०) ಬ್ರಹ್ಮನ ಪತ್ನಿ. "मेधावी ना शुके ब्राह्म्यां स्त्रियां मेधान्विते त्रिषु" मेदि०।

**मेधि ಮೇಧಿ** (पुं०) ಮೇಟಿಕಂಬ, ಕಣದಲ್ಲಿ ಧಾನ್ಯಗಳನ್ನು ತುಳಿಯಲು ಎತ್ತುಗಳನ್ನು ಕಟ್ಟುವ ಕಂಬ. मेधृ (हिंसायाम्) "इन्" (उ० ४-११७)।

**मेधिर ಮೇಧಿರ** (वि०) ಬುದ್ಧಿಶಾಲಿ, ಜ್ಞಾಪಕಶಕ್ತಿಯುಳ್ಳವನು, ಧಾರಣಶಕ್ತಿಯುಳ್ಳವನು. मेधास्यास्ति "इरन्" (५-२-१०९)। इति काशिका।

**मेध्य ಮೇಧ್ಯ** (पुं०) 1. ಮುಂಜತೃಣ, ಮೌಂಜಿಹುಲ್ಲು, ಬ್ರಹ್ಮಚಾರಿಯು ನಡುವಿಗೆ ಕಟ್ಟುವ ಮೌಂಜಿಯನ್ನು ಮಾಡುವ ಒಂದು ವಿಧ ಹುಲ್ಲು. मेधायै हितः "यत्" (५-१-२)। "मुञ्जस्तु यज्ञियो मेध्यो मृदुत्वक् ब्रह्ममेखलः" वैज०। 2. ಕಗ್ಗಲಿ ಮರ. 3. ಮೇಕೆ. (वि०) 4. ಪವಿತ್ರವಾದ, ಶುದ್ಧವಾದ. मेध्यते—मेधृ "ण्यत्" (३-१-१२४)। "भुवं कोष्णेन कुण्डोध्नी मेध्येनावभृथादपि। प्रस्नवेनाभिवर्षन्ती" रघु० १-८४। 5. ಯಾಗಸಂಬಂಧವಾದ, ಯಾಗಕ್ಕೆ ಅರ್ಹವಾದ. मेधमर्हति —"यत्" (५-१-६३)। "गुरोर्यियक्षोः कपिलेन मेध्ये रसातलं संक्रमिते तुरङ्गे" रघु० १३-३। (स्त्री०) –ध्या –ಧ್ಯಾ. 6. ಕೆಂಪು ಬಜೆ. 7. ಬನ್ನಿಮರ. 8. ಕೆಂಪು ಬೂರುಗದ ಮರ.

**मेनका ಮೇನಕಾ** (स्त्री०) 1. ಹಿಮವಂತನ ಪತ್ನಿ, ಮೇನಕಾದೇವಿ. मेनैव मेनका। 2. ಒಬ್ಬ ಅಪ್ಸರಸ್ಸು, ಶಕುಂತಲೆಯ ತಾಯಿ.

**मेनकात्मजा ಮೇನಕಾತ್ಮಜಾ** (स्त्री०) ಮೇನಕೆಯ ಪುತ್ರಿ, ಪಾರ್ವತಿ. मेनकाया आत्मजा।

**मेना ಮೇನಾ** (स्त्री०) 1. ಹಿಮವಂತನ ಪತ್ನಿ, ಪಾರ್ವತಿಯ ತಾಯಿ. मान्यते पूज्यते—मान (पूजायाम्) "इनच्"

(उ० २-५०)। "मेनां मुनीनामपि माननीयामात्मानुरूपां विधिनोपयेमे" कुमा० १-१८। 2. ಒಂದು ನದಿ.

**मेनाद ಮೇನಾದ** (पुं०) 1. ಮಯೂರ, ನವಿಲು. 2. ಮೇಕೆ, ಆಡು. मे इति नादोऽस्य। 3. ಮಾರ್ಜಾರ, ಬೆಕ್ಕು. "मेनादः केकिनि च्छागे मार्जारे" हेम०।

**मेन्धिका ಮೇಂಧಿಕಾ** (स्त्री०) ಗೋರಂಟಿ ಗಿಡ. मां शोभां इन्धयति—प्रकाशयति।

**मेन्धी ಮೇಂಧೀ** (स्त्री०) ಗೋರಂಟಿ ಗಿಡ. मां शोभां इन्धयति—ञि इन्धी (दीप्तौ) + णिच् "अण्" (३-२-१)। "ङीप्" (४-१-१५)।

**मेय ಮೇಯ** (वि०) 1. ಅಳೆಯಲ್ಪಡುವ. 2. ಅಳೆಯಲು ಯೋಗ್ಯವಾದ. 3. ಅಳೆಯಬೇಕಾದ. 4. ಅಳೆಯಲು ಶಕ್ಯವಾದ. माङ् (माने) कर्म० "यत्" (३-१-९७)। 5. ತಿಳಿಯಲ್ಪಡುವ. 6. ತಿಳಿಯಲು ಯೋಗ್ಯವಾದ. 7. ತಿಳಿಯಬೇಕಾದ. 8. ತಿಳಿಯಲು ಶಕ್ಯವಾದ.

**मेरु ಮೇರು** (पुं०) 1. ಮೇರುಪರ್ವತ, ಸುಮೇರುಪರ್ವತ. मिनोति प्रक्षिपति ज्योतींषि—डु मिञ् (प्रक्षेपणे) "रुः" (उ० ४-१०१)। "प्रोषितार्यमणं मेरोरन्धकारस्तटीमिव" माघ० २-३९। 2. ಜಪಮಾಲೆಯ ಮಧ್ಯದ ಮಣಿ. 3. ಹಾರದ ಮಧ್ಯದ ಮಣಿ.

**मेरुक ಮೇರುಕ** (पुं०) ಯಕ್ಷಧೂಪ, ಸಾಲವೃಕ್ಷದ ರಸ. मिनोति क्षिपति गन्धान्—डु मिञ् (प्रक्षेपण) "रुः" (उ० ४-१०१)। संज्ञायां "कन्"।

**मेरुसावर्णि ಮೇರುಸಾವರ್ಣಿ** (पुं०) ಹದಿನಾಲ್ಕು ಮನುಗಳಲ್ಲಿ ಹನ್ನೊಂದನೆಯ ಮನು. "ततस्तु मेरुसावर्णिर्ब्रह्मसूनुर्मनुः स्मृतः। ऋतुश्च ऋतुधामा च विष्वक्सेनो मनुस्तथा" मत्स्यपु०।

**मेल ಮೇಲ** (पुं०) ಒಟ್ಟಿಗೆ ಸೇರುವುದು, ಒಂದುಕಡೆ ಕೂಡುವುದು. मिल (श्लेषणे) भावे "घञ्" (३-३-१८)।

**मेलक ಮೇಲಕ** (पुं०) 1. ಸಂಗಮ. 2. ಒಟ್ಟಿಗೆ ಸೇರುವುದು. मेल स्वार्थे "कः"।

**मेलन ಮೇಲನ** (न०) 1. ಸೇರುವುದು, ಒಂದು ಕಡೆ ಕೂಡುವುದು. 2. ಸಂಗಮ. मिल (श्लेषणे) "ल्युट्" (३-३-११५)। "यत्तया मेलनं तत्र लाभो मे यश्च तद्रतेः। तदेतत्काकतालीयमवितर्कितसंभवम्" चन्द्रा०।

**मेला ಮೇಲಾ** (स्त्री०) 1. ಸೇರುವಿಕೆ, ಒಂದು ಕಡೆ ಕೂಡುವುದು. 2. ಸಂಗಮ. 3. ಅಂಜನ. 4. ಮಸಿ, ಶಾಯಿ. "मेलात्वञ्जने मेलकेऽपि च" हेम०। "मेला मेलके मसौ" मेदि०।

**मेलानन्दा ಮೇಲಾನಂದಾ** (स्त्री०) ಮಸಿಯ ಕುಡಿಕೆ, ಮಸಿಯ ಪಾತ್ರೆ. मेलया आनन्दोऽस्याः।

**मेलान्धु ಮೇಲಾಂಧು** (स्त्री०) ಮಸಿಯ ಕುಡಿಕೆ, ದೌತಿ.

**मेलाम्बु ಮೇಲಾಂಬು** (पुं०) ಮಸಿಯ ಕುಡಿಕೆ, ದೌತಿ, "मेलानन्दा मसिघटी मेलाम्बुर्मलिनाम्बु च" वैज०।

**मेष ಮೇಷ** (पुं०) 1. ಟಗರು, ಗಂಡು ಕುರಿ. मिषति—मिष (स्पर्धायाम्) "अच्" (३-१-१३४)। "पितॄणां प्राभवाल्लेभे मेषस्य वृषणं वृषा" चं० रा०। 2. ಮೇಷ ರಾಶಿ, ದ್ವಾದಶರಾಶಿಗಳಲ್ಲಿ ಮೊದಲನೆಯ ರಾಶಿ, ಸೂರ್ಯನು ಅಶ್ವಿನಿ, ಭರಣಿ ಮತ್ತು ಕೃತ್ತಿಕೆಯ ಮೊದಲನೆಯ ಪಾದದಲ್ಲಿ ಸಂಚರಿಸುವ ರಾಶಿ. 3. ಮೇಷಲಗ್ನ. ಮೇಷಮಾಸದಲ್ಲಿ ಸೂರ್ಯೋದಯದ ಲಗ್ನ. 4. ಮೇಷ ಮಾಸ, ಸೂರ್ಯನು ಅಶ್ವಿನಿ, ಭರಣಿ ಮತ್ತು ಕೃತ್ತಿಕೆಯ ಮೊದಲನೆಯ ಪಾದದಲ್ಲಿ ಸಂಚರಿಸುವ ಮಾಸ (ಕಾಲ). "यदा तपनः मेषतुलयोर्वर्तते तदाहोरात्राणि समानानि भवन्ति, यदा वृषभादिषु पञ्चसु राशिषु चरति तदाहान्येव वर्धन्ते ह्रसति च मासि मास्येका घटिका रात्रिषु, यदा वृश्चिकादिषु पञ्चसु वर्तते तदाहोरात्राणि विपर्ययाणि भवन्ति" भाग० २१-४, ५।

**मेषकम्बल ಮೇಷಕಂಬಲ** (पुं०) ಕುರಿಯ ಕೂದಲಿ (ಉಣ್ಣೆ) ನಿಂದ ತಯಾರಾದ ಕಂಬಳಿ. मेषेण तल्लोम्ना निर्मितः कम्बलः। "मेषकम्बल ऊर्णायुः" अम०।

**मेषपाल ಮೇಷಪಾಲ** (पुं०) ಕುರಿ ಕಾಯುವವನು, ಕುರಿಯನ್ನು ರಕ್ಷಿಸುವವನು, ಕುರುಬ. मेषं पालयति—पाल (रक्षणे) "अण्" (३-२-१)। "ण्वुल्" (३-१-१३३)। —पालकः—ಪಾಲಕಃ.

**मेषशृङ्गी ಮೇಷಶೃಂಗೀ** (स्त्री०) ಬಲಮುರಿ ಗಿಡ, ಕುರುಟಿಗೆ ಗಿಡ.

**मेषा ಮೇಷಾ** (स्त्री०) ಸಣ್ಣ ಯಾಲಕ್ಕಿ. मिष्यते—मिष (स्पर्धायाम्) कर्म० "घञ्" (३-३-१९)।

**मेषाण्ड ಮೇಷಾಂಡ** (पुं०) ಇಂದ್ರ. मेषस्याण्डमिवाण्डमस्य।

**मेषी ಮೇಷೀ** (स्त्री०) ಕುರಿ.

**मेह ಮೇಹ** (पुं०) 1. ಕುರಿ, ಟಗರು. 2. ಮೂತ್ರ. मिह (सेचने) "अच्" (३-१-१३४)। 3. ಮೂತ್ರರೋಗ. मिहति शुक्रादिरनेन—मिह "घञ्" (३-३-१२१)।

**मेहघ्नी ಮೇಹಘ್ನೀ** (स्त्री०) ಹರಿದ್ರೆ, ಅರಿಶಿನ. मेहं हन्ति—हन (हिंसागत्योः) "टक्" (३-२-५३)।

**मेहन ಮೇಹನ** (न०) 1. ಶಿಶ್ನ, ಪುರುಷನ ಜನನೇಂದ್ರಿಯ, ಲಿಂಗ. मिहन्त्यनेन—मिह (सेचने) "ल्युट्" (३-३-११७)। 2. ಮೂತ್ರ. मिह कर्म० "ल्युट्" (३-३-११३)। "मेहनं मूत्रशिश्नयोः" मेदि०। 3. ಮೂತ್ರಿಸುವುದು, ಜಲವನ್ನು ವಿಸರ್ಜಿಸುವುದು. मिह भावे "ल्युट्" (३-३-११५)।

**मेहल ಮೇಹಲ** (पुं०) ಮೂತ್ರದ ದುರ್ವಾಸನೆ, ಮೂತ್ರದ ನಾತ. "चिस्रो यकृति पूये तु पूतिर्मूत्रे तु मेहलः" वैज०।

**मैत्र ಮೈತ್ರ** (पुं०) 1. ಬ್ರಾಹ್ಮಣ, ವಿಪ್ರ. "वक्त्रजस्त्वनमो विप्रो वर्णज्येष्ठः कठो द्विजः" त्रिकाण्ड०। 2. ಮಿತ್ರ, ಸುಹೃತ್ತು, ಸ್ನೇಹಿತ. मित्रमेव–स्वार्थे "अण्" (५-४-३८)। 3. ಸೂರ್ಯೋದಯದ ಮುಹೂರ್ತದಿಂದ ಮೂರನೆಯ ಮುಹೂರ್ತ. "आर्द्रः सार्द्रः तथा मैत्रः शुभो वासव एव च"। "मैत्रे मुहूर्ते शशलाञ्छनेन योगं गतासूत्तरफल्गुनीषु" कुमा० ७-६। 4. ಒಬ್ಬ ಮಿಶ್ರಜಾತಿಯವನು, ವೈಶ್ಯವ್ರಾತ್ಯ, ಸಂಸ್ಕಾರವಿಲ್ಲದ ವೈಶ್ಯನಿಂದ ಜನಿಸಿದವನು. "मैत्रं सा वैश्यपूर्विका" वैज०। (न०) 5. ಸ್ನೇಹ, ಗೆಳೆತನ. मित्रस्य भावः "अण्"। "लोभात् मोहाद्भयान्मैत्रात्कामात्क्रोधात्तथैव च। अज्ञानाद्बालभावाच्च साक्ष्यं वितथमुच्यते" मनु० ८-११८। 6. ಅನೂರಾಧಾ ನಕ್ಷತ್ರ. मित्रो देवतास्य "अण्" (४-२-२४)। 7. ಮಲವಿಸರ್ಜನೆ. (वि०) 8. ಮಿತ್ರ ಸಂಬಂಧವಾದ. मित्रस्येदम् "अण्" (४-३-१२०)। "ऋतं मैत्रं च भाषन्ते ते नराः स्वर्गगामिनः" भा०। 9. ಮಿತ್ರನಿಂದ ಬಂದ, ಸ್ನೇಹಿತನಿಂದ ಪ್ರಾಪ್ತವಾದ. मित्रादागतः "अण्" (४-३-७४)।

**मैत्रक ಮೈತ್ರಕ** (पुं०) ಬೌದ್ಧ ದೇವಾಲಯದ ಅರ್ಚಕ. "मारुषस्त्वर्चयेन्मातुः शाक्यचैत्यादि मैत्रकः" वैज०।

**मैत्रभ ಮೈತ್ರಭ** (न०) ಅನೂರಾಧಾ ನಕ್ಷತ್ರ. मैत्रं च तत् भञ्च।

**मैत्रावरुण ಮೈತ್ರಾವರುಣ** (पुं० द्विव०) 1. ಮಿತ್ರ ಮತ್ತು ವರುಣ ದೇವತೆಗಳು. मित्रश्च वरुणश्च "आनङ्" (६-३-२६)। (पुं०) 2. ವಸಿಷ್ಠ ಮಹರ್ಷಿ. "त्वां मैत्रावरुणोऽभिनन्दतु" उ० रा० ५-२८।

**मैत्रावरुणि ಮೈತ್ರಾವರುಣಿ** (पुं०) ಅಗಸ್ತ್ಯ ಮಹರ್ಷಿ. मित्रावरुणयोरपत्यम् "इञ्" (४-१-९५)।

**मैत्री ಮೈತ್ರೀ** (स्त्री०) ಸ್ನೇಹ, ಸೌಹಾರ್ದ. मित्रस्य भावः "ष्यञ्" (५-१-१२४)। "ङीष्" (४-१-४१)। "असन्मैत्री हि दोषाय कूलच्छायेव सेविता" किरा० ११-५५।

**मैत्रेय ಮೈತ್ರೇಯ** (पुं०) 1. ಒಬ್ಬ ಬ್ರಹ್ಮರ್ಷಿ. ಈ ಋಷಿಯು ಪರಾಶರಮುನಿಯಿಂದ ಶ್ರೀವಿಷ್ಣುಪುರಾಣವನ್ನು ಕೇಳಿ ತಿಳಿದುಕೊಂಡನು. "पराशरं मुनिवरं कृतपौर्वाह्णिकक्रियम्। मैत्रेयः परिपप्रच्छ प्रणिपत्याभिवाद्य च" विष्णुपु० १-१। 2. ಬುದ್ಧದೇವನ ಅನುಯಾಯಿ ಒಬ್ಬ ಬೌದ್ಧ. 3. ಒಬ್ಬ ಮಿಶ್ರಜಾತಿಯವನು.

**मैत्रेयी ಮೈತ್ರೇಯೀ** (स्त्री०) 1. ಒಂದು ಉಪನಿಷತ್ತು. 2. ಯಾಜ್ಞವಲ್ಕ್ಯಋಷಿಯ ಪತ್ನಿ.

**मैथिल ಮೈಥಿಲ** (पुं०) 1. ಮಿಥಿಲೆಯಲ್ಲಿ ಹುಟ್ಟಿದ ಜನಕ ರಾಜ. मिथिलायां भवः "अण्" (४-३-५३)। "तं न्यमन्त्रयत संभृतक्रतुः मैथिलः स मिथिलां व्रजन् वशी" रघु० ११-३२। (पुं० ब० व०) 2. ಮಿಥಿಲೆಯಲ್ಲಿ ವಾಸಿಸುವ ಜನರು.

**मैथिली ಮೈಥಿಲೀ** (स्त्री०) ಮೈಥಿಲಪುತ್ರಿಯಾದ ಸೀತಾದೇವಿ. मैथिलस्यापत्यं स्त्री "अण्" (४-१-९२)। "ङीप्" (४-१-१५)। "मायामृगेण तव मैथिलि वञ्चितायाः शाखामृगेण पुनरागतिरित्ययुक्तम्" चं० रा०।

**मैथिलेय ಮೈಥಿಲೇಯ** (पुं०) ಮೈಥಿಲಿಯ ಪುತ್ರ. 1. ಕುಶ. 2. ಲವ. मैथिल्या अपत्यम् "ढक्" (४-१-१२०)।

**मैथुन ಮೈಥುನ** (न०) 1. ಅಗ್ನಿಕಾರ್ಯ, ದಂಪತಿಗಳು ಮಾಡುವ ಅಗ್ನ್ಯಾಧಾನರೂಪವಾದ ಕಾರ್ಯ. मिथुनस्य स्त्रीपुंसयोर्युगलस्य कर्म "अञ्" (५-१-१२९)। 2. ಸ್ತ್ರೀಪುರುಷರ ಸಂಗಮ, ಸಂಭೋಗ, ಸುರತ, ರತಿಕ್ರೀಡೆ. "असपिण्डा तु या मातुः असगोत्रा च या पितुः। सा प्रशस्ता द्विजातीनां दारकर्मणि मैथुने"। "व्यवायो ग्राम्यधर्मो मैथुनं निधुवनं रतम्" अम०। 3. ಸಂಬಂಧ, ಒಟ್ಟುಗೂಡುವುದು, ಕೂಟ, ಒಟ್ಟಿಗೆ ಸೇರುವುದು. "सम्बन्धे मैथुनं रते" वैज०।

**मैनाक ಮೈನಾಕ** (पुं०) ಮೈನಾಕಪರ್ವತ, ಹಿಮವಂತನ ಪುತ್ರ, ಮೇನಾದೇವಿಯ ಮಗ. ರೆಕ್ಕೆಗಳ ಬಲದಿಂದ ಹಾರಾಡುತ್ತ ಜನರಿಗೆ ತೊಂದರೆ ಕೊಡುತ್ತಿದ್ದ ಪರ್ವತಗಳ ರೆಕ್ಕೆಗಳನ್ನು ಇಂದ್ರನು ಕತ್ತರಿಸುತ್ತಿದ್ದಾಗ ಮೈನಾಕ

ಪರ್ವತವು ಸಮುದ್ರದಲ್ಲಿ ಆಶ್ರಯ ಪಡೆದು ರೆಕ್ಕೆಗಳನ್ನು ರಕ್ಷಿಸಿಕೊಂಡು ಇಂದ್ರನಿಂದ ಒದಗಿದ್ದ ಭಯದಿಂದ ಪಾರಾಯಿತು. ಇದರಿಂದ ಮೈನಾಕನಿಗೆ ಸಮುದ್ರದ ಸ್ನೇಹವು ಬೆಳೆಯಿತು. "असूत सा नागवधूपभोग्यं मैनाकमम्भोनिधिबद्धसख्यम्। क्रुद्धेऽपि पक्षच्छिदि वृत्रशत्राववेदनाज्ञं कुलिशक्षतानाम्" कुमा० १-२०।

**मैनिक ಮೈನಿಕ** (पुं०) ಬೆಸ್ತರವನು, ಮೀನು ಹಿಡಿಯುವವನು. मीनं हन्ति—मीन "ठक्" (४-४-३५)।

**मैन्द ಮೈಂದ** (पुं०) 1. ಒಬ್ಬ ಅಸುರ. 2. ಒಬ್ಬ ವಾನರ.

**मैरेय ಮೈರೇಯ** (न०) ಇಕ್ಷುರಸ ಪುಷ್ಪರಸ ಮುಂತಾದವುಗಳಿಂದ ತಯಾರಿಸಲ್ಪಟ್ಟ ಮದ್ಯ, ಒಂದು ವಿಧ ಆಸವ. मिरायां भवम् "ढक्" (४-२-९७)। निपा०। "मैरेयं धातकीपुष्पगुडधानादिसंहितम्"। "अधिरजनि वधूभिः पीतमैरेयरिक्तं कनकचषकमेतद्रोचनालोहितेन" म०घ० ११-५१।

**मोक ಮೋಕ** (पुं०) 1. ಪಶು, ಚತುಷ್ಪಾದಪ್ರಾಣಿ. "पशुस्तु मल्लको मोकः" वैज०। 2. ವಿದ್ಯಾರ್ಥಿ, ಶಿಷ್ಯ. "छात्रस्तु शिष्यो मोकः स्यात्" वैज०।

**मोक्तृ ಮೋಕ್ತೃ** (वि०) 1. ಬಿಡುವ, ಬಿಡುಗಡೆಮಾಡುವ. 2. ಸ್ವತಂತ್ರನನ್ನಾಗಿ ಮಾಡುವ, ನಿರ್ಬಂಧವನ್ನು ತಪ್ಪಿಸುವ. मुच्लृ (मोक्षणे) "तृच्" (३-१-१३३)। स्त्रियां "ङीप्" (४-१-५)। **—क्त्री —ಕ್ತ್ರೀ.**

**मोक्ष ಮೋಕ್ಷ** (पुं०) 1. ಅಪವರ್ಗ, ಸಂಸಾರದಿಂದ ಬಿಡುಗಡೆ, ಜನ್ಮ ಮತ್ತು ಮರಣಗಳಿಂದ ಪಾರಾಗುವುದು, ಚತುರ್ವಿಧಪುರುಷಾರ್ಥಗಳಲ್ಲೊಂದು. "धर्मार्थकाममोक्षाणामवतार इवाङ्गवान्" रघु० १०-८४। "तदित्यनभिसन्धाय फलं यज्ञतपःक्रियाः। दानक्रियाश्च विविधाः क्रियन्ते मोक्षकाङ्क्षिभिः" गीता १७-२५। 2. ಸ್ವಾತಂತ್ರ್ಯ, ಬಂಧನದಿಂದ ಬಿಡುಗಡೆ. "लब्धमोक्षास्तदादेशात् यथेष्टगतयोऽभवन्" रघु० १७-२०। 3. ಬಿಡುಗಡೆ, ಬಿಟ್ಟುಕೊಡುವುದು. "ताभ्यो मोक्षस्तव यदि सखे धर्मलब्धस्य न स्यात्" मेघ० १-६१। 4. ಮೇರು ಪರ್ವತ, ದೇವತೆಗಳ ವಿಹಾರಸ್ಥಾನ. 5. ಮರಣ. "मोक्षस्तु मृत्यौ मरुद्गिरौ" वैज०। 6. ಮೊಕ್ಕೆಮರ. 7. ಬಾಣಗಳನ್ನು ಬಿಡುವುದು, ಬಾಣಗಳ ಪ್ರಯೋಗ. 8. ಕೆಳಕ್ಕೆ ಬೀಳುವುದು, ಕೆಳಕ್ಕೆ ಉದುರುವುದು. "मदोद्धताः प्रत्यनिलं विचेरुर्वनस्थलीमर्मरपत्रमोक्षाः" कुमा० ३-३१। 9. ಮೋಚನ, ಬಿಡಿಸುವುದು. "मोक्षोऽपवर्गे मृत्यौ च मोचने मुष्ककद्रुमे" नानार्थर०।

**मोक्षक ಮೋಕ್ಷಕ** (वि०) ಬಿಡಿಸುವವನು, ಬಿಡುಗಡೆ ಮಾಡಿಸುವವನು. मोक्ष "ण्वुल्" (३-१-१३३)। "असन्दितानां सन्दाता सन्दितानां च मोक्षकः" मनु० ८-३४२।

**मोक्षण ಮೋಕ್ಷಣ** (न०) 1. ಬಿಡಿಸುವುದು, ಬಿಡುಗಡೆ ಮಾಡಿಸುವುದು, ನಿರ್ಬಂಧ ತಪ್ಪಿಸುವುದು. 2. ಎಸೆಯುವುದು. 3. ಬಾಣವನ್ನು ಪ್ರಯೋಗಿಸುವುದು, ಬಾಣವನ್ನು ಬಿಡುವುದು. मोक्ष (असने) भावे "ल्युट्" (३-३-११५)।

**मोक्षार्थिन् ಮೋಕ್ಷಾರ್ಥಿನ್** (वि०) ಮೋಕ್ಷವನ್ನು ಅಪೇಕ್ಷಿಸುವವನು. मोक्षमर्थयते—अर्थ (उपयाच्ञायाम्) + णिच् "णिनिः" (३-१-१३४)। स्त्रियां "ङीप्" (४-१-५)। **—र्थिनी —ರ್ಥಿನೀ.**

**मोघ ಮೋಘ** (वि०) 1. ವ್ಯರ್ಥವಾದ, ಪ್ರಯೋಜನವಿಲ್ಲದ. मुह्यन्त्यस्मिन्—मुह (वैचित्त्ये) "घञ्" (३-३-१२१)। "तत्र नाहमनुमन्तुमुत्सहे मोघवृत्ति कलभस्य चेष्टितम्" रघु० ११-३९। 2. ದೀನ. 3. ಹೀನವಾದ, ಇಲ್ಲದಿರುವ. "सज्जन एव हि विद्या शोभायै भवति दुर्जने हीना"। (पुं०) 4. ಬೇಲಿ. "मोघो दीने निष्फले च मोघा स्यात्पाटलातरौ" हेम०। (स्त्री०) **—घा —ಘಾ.** 5. ಹಸುರು ಪಾದರಿ ಗಿಡ.

**मोघपुष्पा ಮೋಘಪುಷ್ಪಾ** (स्त्री०) ಬಂಜೆ, ಮಕ್ಕಳನ್ನು ಹಡೆಯದ ಹೆಂಗಸು.

**मोच ಮೋಚ** (पुं०) 1. ನುಗ್ಗೆಮರ. मुञ्चति त्वचम्—मुच्लृ (मोक्षणे) "अच्" (३-१-१३४)। "पनसांल्लिकुचान् मोचान् खर्जूरानम्लवेतसान्" भा०। (स्त्री०) **—चा —ಚಾ.** 2. ಶಾಲ್ಮಲಿ ವೃಕ್ಷ. 3. ಬಾಳೇಗಿಡ. "मोचः शोभाञ्जने पुंसि मोचा शाल्मलिरम्भयोः" मेदि०।

**मोचक ಮೋಚಕ** (पुं०) 1. ನುಗ್ಗೆಮರ. 2. ಬಾಳೆಗಿಡ. मुञ्चति त्वचम्—मुच्लृ (मोक्षणे) "ण्वुल्" (३-१-१३३)। 3. ಅಪವರ್ಗ, ಮೋಕ್ಷ, ಸಂಸಾರದಿಂದ ಬಿಡುಗಡೆ ಹೊಂದುವ ಸಾಧನ. मोचयति संसारात्—मुच्लृ + णिच् "ण्वुल्"। 4. ಯತಿ, ವಿರಕ್ತ, ವೈರಾಗ್ಯ ಹೊಂದಿದವನು. मुञ्चति विषयान्। 5. ಮೊಕ್ಕೆಮರ. "मोचको मोक्षकदली शिग्रुद्रुमविरागिषु" हेम०। (वि०) 6. ಬಿಡಿಸುವವನು, ಬಿಡುಗಡೆ ಮಾಡಿಸುವವನು, ನಿರ್ಬಂಧ

ದಿಂದ ಪಾರುಮಾಡುವವನು. मुच्लृ + णिच् "ण्वुल्" (३-१-१३३)।

**मोचन ಮೋಚನ** (नं०) 1. ಬಿಡಿಸುವುದು, ನಿರ್ಬಂಧದಿಂದ ಬಿಡುಗಡೆ ಮಾಡಿಸುವುದು. मुच्लृ (मोक्षणे) + णिच् "ल्युट्" (३-३-११५)। 2. ಮುಕ್ತಿ, ಮೋಕ್ಷ, ಅಪವರ್ಗ. मुच्लृ "ल्युट्"। 3. ಋಣವಿಮೋಚನೆ. ಸಾಲದ ತೀರ್ಪೆ. 4. ಬಿಡುಗಡೆಹೊಂದುವುದು. (वि०) 5. ಸಾಲವನ್ನು ತೀರಿಸುವ, ಋಣವನ್ನು ಪರಿಹರಿಸಿ ಕೊಡುವ. मुच्लृ (मोक्षणे) + णिच् "ल्यु:" (३-१-१३४)। स्त्रियां "टाप्" (४-१-४)। **-ना -ನಾ.** 6. ಬಿಡಿಸುವ, ನಿರ್ಬಂಧ ತಪ್ಪಿಸುವ.

**मोचयत् ಮೋಚಯತ್** (वि०) 1. ಬಿಡಿಸುತ್ತಿರುವ, ನಿರ್ಬಂಧ ತಪ್ಪಿಸುತ್ತಿರುವ. मुच्लृ (मोक्षणे) + णिच् "शतृ" (३-२-१२४)। 2. ಋಣವಿಮುಕ್ತನನ್ನಾಗಿ ಮಾಡಿಸುತ್ತಿರುವ, ಸಾಲವನ್ನು ತೀರಿಸಿಕೊಡುತ್ತಿರುವ. स्त्रियां "ङीप्" (४-१-६)। **-यन्ती -ಯನ್ತೀ.**

**मोचयितृ ಮೋಚಯಿತೃ** (वि०) 1. ಬಿಡಿಸುವ, ಬಿಡುಗಡೆ ಮಾಡಿಸುವ, ನಿರ್ಬಂಧ ತಪ್ಪಿಸುವ. मुच्लृ (मोक्षणे) + णिच् "तृच्" (३-१-१३३)। 2. ಋಣಬಾಧೆಯನ್ನು ತಪ್ಪಿಸುವ. स्त्रियां "ङीप्" (४-१-५)। **-यित्री -ಯಿತ್ರೀ.**

**मोचाट ಮೋಚಾಟ** (पुं०) 1. ಕರಿ ಜೀರಿಗೆ. 2. ಬಾಳೆ ದಿಂಡು. 3. ಗಂಧದ ಮರ. "मोचाट: कृष्णजीरे च रम्भास्थिन मलयोद्भवे" मेदि०।

**मोटक ಮೋಟಕ** (पुं०) ಶ್ರಾದ್ಧದಲ್ಲಿ ಉಪಯೋಗಿಸುವ ಮೂರು ದರ್ಭೆಗಳಿಂದ ಮಾಡಿದ ಭುಗ್ನ, ಎರಡಾಗಿ ಮಾಡಿಸಿದ ಕುಶತ್ರಯ. मुट (मर्दने) "घञ्" (३-३-१९)। स्वार्थे "कन्"।

**मोटन ಮೋಟನ** (नं०) 1. ಮರ್ದನ, ಜಜ್ಜುವುದು, ನಜ್ಜುಗುಜ್ಜುಮಾಡುವುದು. मुट (संचूर्णने) "ल्युट्" (३-३-११५)। (पुं०) 2. ವಾಯು, ಗಾಳಿ.

**मोट्टायित ಮೋಟ್ಟಾಯಿತ** (नं०) ಪ್ರಿಯನ ವಿರಹಕಾಲದಲ್ಲಿ ಸದಾ ಅವನ ಚಿಂತೆಯಲ್ಲೇ ಇರುವ ಪ್ರೇಯಸಿಯು ಅವನ ವಿಷಯವಾದ ಮಾತುಗಳನ್ನು ಕೇಳಿ ಕಿವಿಯನ್ನು ಕೆರೆಯುವುದು ಆಕಳಿಸುವುದು ಮೈಮುರಿಯುವುದು ಮೊದಲಾಗಿ ಮಾಡುವ ಚೇಷ್ಟೆ. "तद्भावभाविते चित्ते वल्लभस्य कथादिषु। मोट्टायितमिति प्राहु: कर्णकण्डूयनादिकम्" सा० द० ३-१०२।

**मोद ಮೋದ** (पुं०) ಹರ್ಷ, ಸಂತೋಷ. मुद (हर्षे) "घञ्" (३-३-१८)। "यत्रानन्दाश्च मोदाश्च यत्र पुण्याश्च संपद:। वैराजानाम ते लोकास्तैजसा: सन्तु ते शिवा:" उ० रा० २-१२।

**मोदक ಮೋದಕ** (पुंनं०) 1. ಕಡುಬು, ಇಡ್ಲಿ. मोदयति — मुद (हर्षे) + णिच् "ण्वुल्" (३-१-१३३)। "किमेतेन खण्डेन मोदका: क्रियन्ते?" रत्ना० १। (पुं०) 2. ಶೂದ್ರಸ್ತ್ರೀಯಲ್ಲಿ ಕ್ಷತ್ರಿಯನಿಂದ ಜನಿಸಿದ ಮಿಶ್ರಜಾತಿಯವನು. (वि०) 3. ಹರ್ಷವುಂಟುಮಾಡುವ, ಸಂತೋಷಪಡಿಸುವ.

**मोदन ಮೋದನ** (नं०) 1. ಸಂತೋಷಪಡಿಸುವುದು, ಹರ್ಷವುಂಟುಮಾಡುವುದು. मुद (हर्षे) + णिच् भावे "ल्युट्" (३-३-११५)। 2. ಹರ್ಷ, ಸಂತೋಷ. 3. ಸಂತೋಷಪಡುವುದು. मुद भावे "ल्युट्"। 4. ಜೇನುಮೇಣ. (वि०) 5. ಹರ್ಷವುಂಟುಮಾಡುವ, ಸಂತೋಷಪಡಿಸುವ. मुद+णिच् "ल्यु:" (३-१-१३४)।

**मोदनीय ಮೋದನೀಯ** (वि०) 1. ಸಂತೋಷಪಡಬೇಕಾದ. 2. ಸಂತೋಷಪಡಲು ಅರ್ಹವಾದ. मुद (हर्षे) "अनीयर्" (३-१-९६)। 3. ಸಂತೋಷಪಡಿಸಲ್ಪಡುವ. 4. ಸಂತೋಷಪಡಿಸಬೇಕಾದ. 5. ಸಂತೋಷಪಡಿಸಲು ಅರ್ಹನಾದ. मुद + णिच् "अनीयर्" (३-१-९६)। मुद "तव्य:" (३-१-९६)। **मोदितव्य: ಮೋದಿತವ್ಯ:.** मुद+णिच् "तव्य:"। **मोदयितव्य: ಮೋದಯಿತವ್ಯ:.**

**मोदमान ಮೋದಮಾನ** (वि०) ಸಂತೋಷಪಡುತ್ತಿರುವ. मुद (हर्षे) "शानच्" (३-२-१२४)।

**मोदयत् ಮೋದಯತ್** (वि०) 1. ಹರ್ಷವುಂಟುಮಾಡುತ್ತಿರುವ, ಸಂತೋಷಪಡಿಸುತ್ತಿರುವ. मुद (हर्षे) + णिच् "शतृ" (३-२-१२४)। 2. ಬೆರಸುತ್ತಿರುವ, ಮಿಶ್ರಮಾಡುತ್ತಿರುವ. मुद (संसर्गे) + णिच् "शतृ"। "ङीप्" (४-१-६)। **-यन्ती -ಯನ್ತೀ.** "शानच्" (३-२-१२४)। **-यमान: -ಯಮಾನ:.**

**मोदयितृ ಮೋದಯಿತೃ** (वि०) 1. ಸಂತೋಷಪಡಿಸುವ, ಹರ್ಷವುಂಟುಮಾಡುವ. मुद (हर्षे) + णिच् "तृच्" (३-१-१३३)। 2. ಬೆರಕೆಮಾಡಿಸುವ, ಮಿಶ್ರಮಾಡಿಸುವ. मुद (संसर्गे) + णिच् "तृच्"। स्त्रियां "ङीप्" (४-१-६)। **-यित्री -ಯಿತ್ರೀ.**

**मोदा ಮೋದಾ** (स्त्री०) ಅಜವಾನ, ಓಮ. मोदयति गन्धेन—मुद (हर्षे) + णिच् "अच्" (३-१-१३४)।

**मोदित ಮೋದಿತ** (वि०) ಸಂತೋಷಪಡಿಸಲ್ಪಟ್ಟ, ಹರ್ಷವುಂಟುಮಾಡಲ್ಪಟ್ಟ. मुद (हर्षे) + णिच् "क्तः" (३-२-१०२)।

**मोदितृ ಮೋದಿತೃ** (वि०) ಸಂತೋಷಪಡುವ. मुद (हर्षे) "तृच्" (३-१-१३३)। स्त्रियां "ङीप्" (४-१-६)। –त्री –ತ್ರೀ.

**मोदिन् ಮೋದಿನ್** (वि०) 1. ಹರ್ಷವುಂಟುಮಾಡುವ, ಸಂತೋಷಪಡಿಸುವ. मुद (हर्षे) + णिच् "णिनिः" (३-१-१३४)। 2. ಮಿಶ್ರಮಾಡುವ, ಬೆರಸುವ. मुद (संसर्गे) + णिच् "णिनिः"। स्त्रियां "ङीप्" (४-१-५)। **मोदिनी ಮೋದಿನೀ.**

**मोदिनी ಮೋದಿನೀ** (स्त्री०) 1. ಅಜವಾನ, ಓಮ. मोदयति—मुद (हर्षे) + णिच् "णिनिः" (३-१-१३४)। 2. ಕಸ್ತೂರಿ. 3. ಮದ್ಯ. 4. ಒಂದುಬಗೆ ಕಾಡುಮಲ್ಲಿಗೆ.

**मोरक ಮೋರಕ** (न०) ಕರುಹಾಕಿದ ಏಳು ದಿನಗಳ ನಂತರದ ಹಸುವಿನ ಹಾಲು. "आसप्ताहात्तु पीयूषं ततो मोरटमोरके" वैज०।

**मोरट ಮೋರಟ** (न०) 1. ಇಕ್ಷುಮೂಲ, ಕಬ್ಬಿನ ಬೇರು. मुर (संवेष्टने) "अटन्" (उ० ४-८१)। 2. ತಕ್ರ, ಮಜ್ಜಿಗೆ. 3. ಅಂಕೋಲೆ ಹೂವು. 4. ಕರುಹಾಕಿದ ಏಳು ದಿನಗಳನಂತರದ ಹಸುವಿನ ಹಾಲು. (स्त्री०) –टा –ಟಾ. 5. ಗರಿಕೆಹುಲ್ಲು. 6. ಕುರಟಗೆ ಗಿಡ. "दूर्वायां स्त्रीक्षुमूले क्लीं गोरसेऽपि च मोरटम्" वैज०। "मोरटं तु भवेदिक्षुमूलाङ्कोटसूनयोः। सप्तरात्रात्परक्षीरे मूर्विकायां तु मोरटा" मेदि०।

**मोष ಮೋಷ** (पुं०) 1. ಕದಿಯುವುದು, ಕಳ್ಳತನ, ಚೌರ್ಯ. मुष (स्तेये) "घञ्" (३-३-१८)। 2. ಅಪಹಾರ, ಸೂರೆ. "न पुष्पमोषमर्हत्युद्यानलता" मृच्छ० १।

**मोषक ಮೋಷಕ** (पुं०) ಚೋರ, ತಸ್ಕರ, ಕಳ್ಳ. मुष्णाति—मुष (स्तेये) "ण्वुल्" (३-१-१३३)। "दस्युतस्करमोषकाः" अम०।

**मोषण ಮೋಷಣ** (न०) 1. ಕದಿಯುವುದು. 2. ಕಳ್ಳತನ, ಕಳುವು. मुष (स्तेये) "ल्युट्" (३-३-११५)। (वि०) 3. ಕದಿಯುವವನು, ಅಪಹರಿಸುವವನು. मुष "ल्युः" (३-१-१३४)।

**मोषणीय ಮೋಷಣೀಯ** (वि०) 1. ಕದಿಯಲ್ಪಡುವ. 2. ಕದಿಯಬೇಕಾದ. 3. ಕದಿಯಲು ಶಕ್ಯವಾದ. 4. ಕದಿಯಲು ಅರ್ಹವಾದ. मुष (स्तेये) "अनीयर्" (३-१-९६)। "तव्यः" (३-१-९६)। **मोषितव्यम् ಮೋಷಿತವ್ಯಮ್.**

**मोषितृ ಮೋಷಿತೃ** (वि०) ಕದಿಯುವವನು, ಕಳ್ಳತನ ಮಾಡುವವನು. मुष (स्तेये) "तृन्" (३-२-१३५)। स्त्रियां "ङीप्" (४-१-५)। –त्री –ತ್ರೀ.

**मोह ಮೋಹ** (पुं०) 1. ಪ್ರಜ್ಞೆತಪ್ಪುವಿಕೆ, ಜ್ಞಾನ ಹೋಗುವಿಕೆ. मुह (वैचित्ये) "घञ्" (३-३-१८)। "तीव्राभिषङ्गप्रभवेण वृत्ति मोहेन संस्तम्भयतेन्द्रियाणाम्" कुमा० ३-७३। ವಾತಾದಿ ದೋಷಗಳಿಂದ ಪ್ರಜ್ಞೆಯು ಹರಿಯುವ ನಾಡಿಗಳಲ್ಲಿ ತಮಸ್ಸು (ತಮೋಗುಣ) ಸೇರುವುದು. ಇದು ಪ್ರಾಣಿಯ ಸುಖದುಃಖಾದಿ ಅನುಭವವನ್ನು ಹೋಗಲಾಡಿಸುವುದು. ಸುಖದುಃಖಾನುಭವದ ನಾಶದಿಂದ ಮನುಷ್ಯನು ಜ್ಞಾನವಿಲ್ಲದೆ ನೆಲಕ್ಕೆ ಬೀಳುವನು. ಇದೇ ಮೋಹ. "संज्ञावहासु नाडीषु पिहितास्वनिलादिभिः। तमोऽभ्युपैति सहसा सुखदुःखव्यपोहकृत्।। सुखदुःखव्यपोहाच्च नरः पतति काष्ठवत्। मोहो मूर्च्छेति तां प्राहुः" सुश्रुत० उत्तरतं० ४६-६, ७। 2. ಅಜ್ಞಾನ, ತಿಳಿಗೇಡಿತನ. "तितीर्षुर्दुस्तरं मोहादुडुपेनास्मि सागरम्" रघु० १-२। 3. ಅವಿದ್ಯೆ, ತತ್ತ್ವವನ್ನು ತಿಳಿಯಲು ಅಡ್ಡಿಯಾಗುವ ಅಜ್ಞಾನ. 4. ದಿಗ್ಭ್ರಮೆ, ತಬ್ಬಿಬ್ಬು. "यज्ज्ञात्वा न पुनर्मोहमेवं यास्यसि पाण्डव" गीता ४-३५। 5. ಕೋಪ, ಕ್ರೋಧ. 6. ಮೌರ್ಖ್ಯ, ಮೌಢ್ಯ, ದಡ್ಡತನ. "मोहः कुमौर्ख्यमूढताः" वैज०। 7. ಕಳವಳ, ಗಾಬರಿ. 8. ದುಃಖ. 9. ಅಭಿಮಾನ, ಪ್ರೀತಿ, ವಿಶ್ವಾಸ. "मोहो नृलिंगः स्यादविद्यायां च मूर्च्छने" मेदि०। 10. ಧರ್ಮವಿಷಯದಲ್ಲಿ ಮೌಢ್ಯ, ಧರ್ಮದ ಜ್ಞಾನವಿಲ್ಲದಿರುವಿಕೆ. "मोहो धर्मविमूढत्वं मानस्त्वात्माभिमानिता"। 11. ಅಜ್ಞಾನ, ಮಂಕು. "मोहान्मया सुतनु पूर्वमुपेक्षितस्ते" शाकु० ७-२५।

**मोहकलिका ಮೋಹಕಲಿಕಾ** (स्त्री०) ಮದ್ಯ, ಹೆಂಡ. "प्रसन्ना मदिरा सुरा। मदना मोहकलिका मदिष्ठा काचमालिका" वैज०।

**मोहकलिल ಮೋಹಕಲಿಲ** (न०) ಮೋಹರೂಪವಾದ ಕಾಲುಷ್ಯ. "यदा ते मोहकलिलं बुद्धिर्व्यतितरिष्यति" गीता २-५२।

**मोहन ಮೋಹನ** (पुं०) 1. ಮನ್ಮಥನ ಪಂಚಬಾಣಗಳಲ್ಲೊಂದು. मोहयति—मुह (वैचित्ये) + णिच् "ल्युः" (३-१-१३४)। "अस्य बाणा मोहनोन्मादनौ तथा।

सन्तापन: शोषणश्च निश्चेष्टाकरणोऽपि च " त्रिकाण्ड०। 2. ದತ್ತೂರಿ ಗಿಡ. (ನ೦) 3. ಸುರತ, ಸಂಭೋಗ. "नन्विमौ मानसं मोहनं परस्परमनुभवत:" मालती० ४। 4. ದಿಗ್ಭ್ರಮೆಯುಂಟುಮಾಡುವುದು, ತಬ್ಬಿಬ್ಬುಮಾಡುವುದು. 5. ಬುದ್ಧಿಗೆ ಮಂಕು ಹಿಡಿಸುವುದು. 6. ಸತೀತ್ವವನ್ನು ನಾಶಗೊಳಿಸುವುದು, ವಶಪಡಿಸಿಕೊಳ್ಳುವುದು. 7. ಮೂರ್ಛೆ. (ವಿ೦) 8. ಮೋಹಗೊಳಿಸುವ. 9. ವಶಪಡಿಸಿಕೊಳ್ಳುವ. "म्लानस्य जीवकुसुमस्य विकासनानि सन्तर्पणानि सकलेन्द्रियमोहनानि" मालती० ६-८। 10. ಮರುಳುಮಾಡುವ, ಭ್ರಮೆಯುಂಟುಮಾಡುವ. 11. ಮಂಕುಹಿಡಿಸುವ. 12. ಜ್ಞಾನ ತಪ್ಪಿಸುವ.

**मोहनास्त्र ಮೋಹನಾಸ್ತ್ರ** (ನ೦) ಪ್ರಜ್ಞೆ ತಪ್ಪಿಸುವ ಅಸ್ತ್ರ.

**मोहनीय ಮೋಹನೀಯ** (ವಿ೦) 1. ಮೋಹಗೊಳಿಸಲ್ಪಡುವ, ಮರುಳುಮಾಡಲ್ಪಡುವ. मुह (वैचित्ये) "अनीयर्" (३-१-९६)। 2. ಮೋಹಗೊಳಿಸಬೇಕಾದ. 3. ಮೋಹಗೊಳಿಸಲು ಶಕ್ಯವಾದ. 4. (ಬುದ್ಧಿಗೆ) ಮಂಕು ಹಿಡಿಸಲ್ಪಡುವ. 5. ಮಂಕು ಹಿಡಿಸಬೇಕಾದ. 6. ಮಂಕು ಹಿಡಿಸಲು ಶಕ್ಯವಾದ. 7. ಪ್ರಜ್ಞೆ ತಪ್ಪಿಸಲ್ಪಡುವ. 8. ಪ್ರಜ್ಞೆ ತಪ್ಪಿಸಬೇಕಾದ. 9. ಪ್ರಜ್ಞೆ ತಪ್ಪಿಸಲು ಅರ್ಹವಾದ. "तव्य:" (३-१-९६)। **मोहितव्य: ಮೋಹಿತವ್ಯಃ.**

**मोहयत् ಮೋಹಯತ್** (ವಿ೦) 1. ಮೋಹವುಂಟುಮಾಡುತ್ತಿರುವ. 2. ಮಂಕುಮಾಡುತ್ತಿರುವ. 3. ಭ್ರಾಂತಿಯುಂಟುಮಾಡುತ್ತಿರುವ. 4. ಪ್ರಜ್ಞೆ ತಪ್ಪಿಸುತ್ತಿರುವ. मुह (वैचित्ये) + णिच् "शतृ" (३-२-१२४)। स्त्रियां "ङीप्" (४-१-६)। **–यन्ती –ಯನ್ತೀ.** "शानच्" (३-२-१२४) **–यमान: –ಯಮಾನಃ.**

**मोहयितृ ಮೋಹಯಿತೃ** (ವಿ೦) 1. ಮೋಹಗೊಳಿಸುವ. 2. ಮಂಕುಹಿಡಿಸುವ. 3. ಜ್ಞಾನತಪ್ಪಿಸುವ. 4. ಭ್ರಾಂತಿಯುಂಟುಮಾಡುವ. मुह (वैचित्ये) + णिच् "तृच्" (३-१-१३३)। स्त्रियां "ङीप्" (४-१-५)। **–यित्री –ಯಿತ್ರೀ.**

**मोहरात्रि ಮೋಹರಾತ್ರಿ** (ಸ್ತ್ರೀ೦) ದೈನಂದಿನ ಪ್ರಳಯ, ಚತುರ್ಮುಖಬ್ರಹ್ಮನ ಪ್ರತಿದಿನದ (ಹಗಲಿನ) ಕೊನೆಯಲ್ಲಾಗುವ ಅವಾಂತರಪ್ರಳಯ, ಚತುರ್ಮುಖನ ಐವತ್ತು ವರ್ಷಗಳು ಕಳೆದು ಉಂಟಾಗುವ ಪ್ರತಿದಿನದ ಕೊನೆಯಲ್ಲಾಗುವುದು ಮೋಹರಾತ್ರಿ. ಉಳಿದ ದಿನಗಳ ಕೊನೆಯಲ್ಲಾಗುವ ಪ್ರಳಯವು ಕಾಲರಾತ್ರಿ. "एवं पञ्चाशदब्दे च गते तु ब्रह्मणो नृप। दैनन्दिनन्तु प्रलयं वेदेषु परिकीर्तितम्। मोहरात्रिश्च सा प्रोक्ता वेदविद्भि: पुरातनै:"। ಈ ಪ್ರಳಯಕಾಲದಲ್ಲಿ ಬ್ರಹ್ಮಲೋಕಕ್ಕೆ ಕೆಳಗಿರುವ ಎಲ್ಲಾ ಲೋಕಗಳೂ ನಷ್ಟವಾಗಿ ಆದಿತ್ಯರು ವಸುಗಳು ರುದ್ರರು ಎಲ್ಲಾ ಋಷಿಗಳು ಚಂದ್ರ ಸೂರ್ಯ ಮತ್ತು ದಿಕ್ಪಾಲಕರು ಮನುಗಳು ಇಂದ್ರರು ರಾಕ್ಷಸರು ಮತ್ತು ಸಕಲ ಮಾನವರೂ ನಾಶಹೊಂದಿ ಬ್ರಹ್ಮಲೋಕವನ್ನು ಸೇರುವರು. "तत्र सर्वे प्रणष्टाश्च चन्द्रार्कादिदिगीश्वरा:। आदित्या वसवो रुद्रा: मन्विन्द्रा मानवादय:। ऋषयो मुनयश्चैव गन्धर्वा राक्षसादय:। नाडीजङ्घो बकश्चैव सर्वे नष्टाश्च तत्र वै। ब्रह्मलोकादध: सर्वे लोका नागालयास्तथा। ब्रह्मलोकं ययु: सर्वे ब्रह्मलोकादधस्तथा"। ಈ ಪ್ರಳಯಕಾಲ ಕಳೆದನಂತರ ಚತುರ್ಮುಖನು ಪುನಃ ಜಗತ್ತಿನ ಸೃಷ್ಟಿಕಾರ್ಯವನ್ನು ಆರಂಭಿಸುವನು. "गते दैनन्दिने ब्रह्मा लोकांश्च ससृजे पुन:" ब्रह्मवै०।

**मोहशास्त्र ಮೋಹಶಾಸ್ತ್ರ** (ನ೦) ಮೋಹವನ್ನುಂಟುಮಾಡುವ ಶಾಸ್ತ್ರ, ಅವಿದ್ಯೆಯನ್ನು ಉಂಟುಮಾಡುವ ಶಾಸ್ತ್ರ.

**मोहित ಮೋಹಿತ** (ವಿ೦) 1. ಮೋಹವುಂಟುಮಾಡಲ್ಪಟ್ಟ. 2. ಮಂಕುಹಿಡಿಸಲ್ಪಟ್ಟ. 3. ಜ್ಞಾನತಪ್ಪಿಸಲ್ಪಟ್ಟ. 4. ಭ್ರಾಂತಿಯುಂಟುಮಾಡಲ್ಪಟ್ಟ. मुह (वैचित्ये) + णिच् "क्त:" (३-२-१०२)।

**मोहिन् ಮೋಹಿನ್** (ವಿ೦) "मोहयत्" ಪದದ ಅರ್ಥ. मुह (वैचित्ये) + णिच् "णिनि:" (३-१-१३४)। स्त्रियां "ङीप्" (४-१-५)। **मोहिनी ಮೋಹಿನೀ.**

**मोहिनी ಮೋಹಿನೀ** (ಸ್ತ್ರೀ೦) ಸಮುದ್ರಮಥನದ ನಂತರ ರಾಕ್ಷಸರನ್ನು ವಂಚಿಸಿ ದೇವತೆಗಳಿಗೆ ಅಮೃತವನ್ನು ಹಂಚಲು ಮಹಾವಿಷ್ಣುವು ತಾಳಿದ ಒಂದು ಅವತಾರ. मोहयति सौन्दर्यात्—मुह (वैचित्ये) + णिच् "णिनि:" (३-१-१३४)। "ङीप्" (४-१-५)।

**मौकुलि ಮೌಕುಲಿ** (ಪುಂ೦) ವಾಯಸ, ಕಾಗೆ. "गुञ्जत्कुञ्जकुटीरकौशिकघटाघूत्कारवत्कीचकस्तम्बाडम्बरमूकमौकुलिकुल: क्रौञ्चाभिधोऽयं गिरि:" उ० रा० २-२९।

**मौक्तिक ಮೌಕ್ತಿಕ** (ನ೦) ಮುತ್ತು, ಮುಕ್ತಾಫಲ. मुक्तैव "ठक्" (५-४-३४)। "घर्मजनितपुलकेन लसद्गजमौक्तिकावलिगुणेन वक्षसा" किरा० १२-४०। "शैले शैले न माणिक्यं मौक्तिकं न गजे गजे। साधवो न हि सर्वत्र चन्दनं न वने वने" चाणक्य०।

**मौक्तिकदाम** ಮೌಕ್ತಿಕದಾಮ (ನಂ) ನಾಲ್ಕು ಜಗಣ ಗಳಿಂದ ಕೂಡಿದ ಒಂದು ವೃತ್ತ. ಇದರ ಲಕ್ಷಣ: "चतुर्जगणं यदि मौक्तिकदाम"। ಈ ವೃತ್ತದ ಗಣವಿನ್ಯಾಸ:

ज ज ज ज ।
।ऽ। ।ऽ। ।ऽ। ।ऽ।

**मौक्तिकदामन्** ಮೌಕ್ತಿಕದಾಮನ್ (ನಂ) ಮುತ್ತಿನ ಸರ. मौक्तिकानां दाम।

**मौक्तिकसर** ಮೌಕ್ತಿಕಸರ (ಪುಂ) ಮುತ್ತಿನ ಸರ. मौक्तिकानां सरः। "अयं बाहुः कण्ठे शिशिरमसृणो मौक्तिकसरः" उ० रा० १-३८।

**मौक्य** ಮೌಕ್ಯ (ನಂ) ಮೂಕತನ, ಮೂಗು, ಮಾತಾಡುವ ಶಕ್ತಿಯಿಲ್ಲದಿರುವುದು. मूकस्य भावः "ष्यञ्" (५-१-१२४)।

**मौखर्य** ಮೌಖರ್ಯ (ನಂ) ವಾಚಾಳತನ, ಬಹುವಾಗಿ ಮಾತಾಡುವುದು, ಹರಟೆ. मुखरस्य भावः "ष्यञ्" (५-१-१२४)।

**मौख्य** ಮೌಖ್ಯ (ನಂ) ಮುಖ್ಯವಾಗಿರುವುದು, ಆದ್ಯತೆ, ಮೊದಲು ಬರುವುದು. मुख्यस्य भावः।

**मौग्ध्य** ಮೌಗ್ಧ್ಯ (ನಂ) 1. ತಿಳಿಗೇಡಿತನ, ಅಜ್ಞತೆ. मुग्धस्य भावः "ष्यञ्" (५-१-१२४)। 2. ಕಪಟವಿಲ್ಲದಿರುವಿಕೆ, ಸರಳತೆ, ಕೃತ್ರಿಮವಿಲ್ಲದಿರುವಿಕೆ. 3. ಸೌಂದರ್ಯ, ಲಾವಣ್ಯ, ಸೊಬಗು.

**मौञ्जी** ಮೌಂಜೀ (स्त्री०) ಬ್ರಹ್ಮಚಾರಿಯ ಕಟಿಸೂತ್ರ, ಮುಂಜತೃಣದಿಂದ ಮಾಡಿದ ಬ್ರಹ್ಮಚಾರಿಯ ಉಡುದಾರ. मुञ्जस्येयम् "अण्" (४-३-१२०)। "ङीप्" (४-१-१५)। "प्रतिक्षणं सा कृतरोमविक्रियां व्रताय मौञ्जीं त्रिगुणां बभार याम्" कुमा० ५-१०। "पिशङ्गमौञ्जीयुजमर्जुनच्छविम्" माघ० १-५।

**मौञ्जीबन्ध** ಮೌಂಜೀಬಂಧ (ಪುಂ) ಮೌಂಜಿಯನ್ನು ಧರಿಸುವುದು, ಉಪನಯನಕಾಲದಲ್ಲಿ ಮೌಂಜಿಯ ಕಟಿ ಸೂತ್ರವನ್ನು ಕಟ್ಟುವುದು. मौञ्ज्याः बन्धः बन्धनम्। "मौञ्जीबन्धः शुभः प्रोक्तश्चैत्रे मीनगते रवौ"।

**मौढ्य** ಮೌಢ್ಯ (ನಂ) 1. ದಡ್ಡತನ, ಮೂರ್ಖತನ. मूढस्य भावः "ष्यञ्" (५-१-१२४)। "यो मां सर्वेषु भूतेषु सन्तमात्मानमीश्वरम्। हित्वार्चां भजते मौढ्याद्भस्मन्येव जुहोति सः" भाग० ३-२९-२२। 2. ಬಾಲ್ಯ, ಹುಡುಗು ತನ. 3. ಪ್ರಜ್ಞೆ ತಪ್ಪುವುದು. (ಪುಂ) 4. ಮೂಢನ ಮಗ. मूढ "ण्यः" (४-१-१५१)।

**मौण्ड्य** ಮೌಂಡ್ಯ (ನಂ) 1. ಕ್ಷೌರ. 2. ಬಟ್ಟತಲೆ. मुण्डस्य भावः।

**मौद्गलि** ಮೌದ್ಗಲಿ (ಪುಂ) ವಾಯಸ, ಕಾಗೆ. "कारवः परभृत्युश्च लुण्टाको मौद्गलिर्द्विकः" त्रिकाण्ड०।

**मौद्गल्य** ಮೌದ್ಗಲ್ಯ (ಪುಂ) ಮುದ್ಗಲ ಋಷಿಯ ಮಗ.

**मौद्गीन** ಮೌದ್ಗೀನ (ನಂ) ಹೆಸರು ಬೆಳೆಯಲು ಯೋಗ್ಯ ವಾದ ಕ್ಷೇತ್ರ (ಭೂಮಿ). मुद्गानां भवनं क्षेत्रम् "खञ्" (५-२-१)।

**मौन** ಮೌನ (ನಂ) 1. ಮಾತಾಡದಿರುವಿಕೆ. मुनेः कर्म भावो वा "अण्" (५-१-१३१)। "मौनान्मूकः प्रवचनपटुर्वाचिको जल्पको वा" भर्तृ० १-४७। 2. ಗದ್ದಲ ವಿಲ್ಲದಿರುವಿಕೆ, ಶಬ್ದಮಾಡದಿರುವಿಕೆ. 3. ಮಾತನಾಡ ದಿರುವ ನಿಯಮ. "मौनेन व्रतनिष्ठानां स्वाक्रोशं मन्यते स्म सः" नैष० १७-१७८।

**मौनिन्** ಮೌನಿನ್ (ಪುಂ) 1. ಮುನಿ, ತಪಸ್ವಿ. मौनमस्यास्ति —"इनिः" (५-२-११५)। (ವಿಂ) 2. ಮಾತನಾಡ ದಿರುವ, ಮೌನವ್ರತವನ್ನಾಚರಿಸುವ. 3. ಮಾತನಾಡದೆ ಸುಮ್ಮನಿರುವ. 4. ಮಾತನಾಡದಿರುವ, ಗದ್ದಲವಾಡದಿ ರುವ. स्त्रियां "ङीप्" (४-१-५)। **मौनिनी** ಮೌನಿನೀ. "मौनिन्यामेव सा तस्यां तदुक्तीरिव शृण्वती" नैष० २०-६५।

**मौरजिक** ಮೌರಜಿಕ (ಪುಂ) ಮೃದಂಗವನ್ನು ಬಾರಿಸು ವವನು, ಮೃದಂಗ ವಿದ್ಯೆಯಲ್ಲಿ ನಿಪುಣನಾದವನು. मुरज- वाद्यं शिल्पमस्य "ठक्" (४-४-५५)। "मार्दङ्गिका मौरजिकाः" अम०।

**मौर्ख्य** ಮೌರ್ಖ್ಯ (ನಂ) ದಡ್ಡತನ, ಅವಿವೇಕ, ಮೂರ್ಖತನ. मूर्खस्य भावः "ष्यञ्" (५-१-१२४)।

**मौर्वी** ಮೌರ್ವೀ (स्त्री०) ಬಿಲ್ಲಿಗೆ ಕಟ್ಟುವ ತೊಗಲಿನ ಹಗ್ಗ, ಹೆದೆ. मूर्वाया विकारः "अण्" (४-३-१३५)। "ङीप्" (४-१-१५)। "शास्त्रेष्वकुण्ठिता बुद्धिर्मौर्वी धनुषि चातता" रघु० १-१९।

**मौल** ಮೌಲ (ಪುಂ) 1. ಅಪ್ಪನಾದ ಸಚಿವ, ವಂಶಪರಂಪರೆ ಯಿಂದ ಬಂದ ಮಂತ್ರಿ. "समौलरक्षोहरिभिः ससैन्यस्तूर्य- स्वनानन्दितपौरवर्गः" रघु० १४-१०। (ವಿಂ) 2. ಮೂಲಭೂತವಾದ, ಮೊದಲಿನಿಂದ ಬಂದ, ಬಹಳ ಹಿಂದಿನ. मूलादागतः "अण्" (४-३-७४)। 3. ಮೂಲ ವನ್ನು ಅರಿತವನು, ಗೃಹ ಕ್ಷೇತ್ರ ಮುಂತಾದುವುಗಳ ಹಿಂದಿನ ಸ್ಥಿತಿಗತಿಗಳನ್ನು ತಿಳಿದವನು. 4. ಮೂಲಸಂಬಂಧ ವಾದ, ಬುಡಕ್ಕೆ ಸಂಬಂಧಿಸಿದ.

**मौलि ಮೌಳಿ** (पुंस्त्री०) 1. ಮಸ್ತಕ, ತಲೆ, ಶಿರಸ್ಸು. मूलस्यादूरे भव: "इञ्" (४-२-८०)। "यदनेन मौलिदलनेऽप्युदासितं सुचिरं स्त्रियेव नृपचक्रसन्निधौ" वेणी० ३-३९। 2. ಕಿರೀಟ, ಮುಕುಟ. "करोति पादावुपगम्य मौलिना विनिद्रमन्दाररजोरुणाङ्गुली" कुमा० ५-८०। 3. ಜುಟ್ಟು. 4. ಜಡೆ, ಒಟ್ಟುಗೂಡಿಸಿದ ತಲೆಯ ಕೂದಲು, ಮುಡಿಗಂಟು. "दुःशासनेन कचकर्षणभिन्नमौलिः सा द्रौपदी कथयत क्व पुनः प्रदेशे" वेणी० ६-३५। 5. (ಪರ್ವತದ ಶಿಖರದ) ಅಗ್ರಭಾಗ, (ಶಿಖರದ) ತುದಿ. "मेघालम्बितमौलिनीलशिखराः क्षोणीभृतो दक्षिणाः" उ० रा० २-३०। (पुं०) 6. ಅಶೋಕವೃಕ್ಷ. (स्त्री०) 7. ಭೂಮಿ. "मौलिः किरीटे धम्मिल्ले चूडायामनपुंसकम्। नाऽशोकद्रौ स्त्रियां भूमौ" मेदि०। "मौलिः किरीटे धम्मिल्ले चूडाकङ्केलिमूर्धसु" हेम०।

**मौलिक ಮೌಳಿಕ** (पुं०) 1. ಬೇರುಗಳನ್ನು ಮಾರುವವನು, ಮೂಲಿಕೆಗಳ ವರ್ತಕ. मूलं पण्यमस्य "ठक्" (४-४-५१)। (वि०) 2. ಮೂಲಕ್ಕೆ ಸಂಬಂಧಿಸಿದ, ಮೊದಲಿನ, ಪ್ರಾರಂಭದ. 3. ಬೇರಿಗೆ ಸಂಬಂಧಿಸಿದ, ಬೇರಿನಿಂದ ಹುಟ್ಟಿದ. 4. ಮೂಲರೂಪದ, ಮೂಲರೂಪಕ್ಕೆ ಸಂಬಂಧಿಸಿದ. 5. ಮೊದಲನೆಯ, ಪ್ರಧಾನವಾದ, ಪ್ರಮುಖವಾದ. "सञ्जीवनोपायस्तु मौलिक एव रामभद्रस्य संनिहितः" उ० रा० ३।

**मौल्य ಮೌಲ್ಯ** (न०) 1. ಕ್ರಯ, ಬೆಲೆ, ಧಾರಣೆ. मूल्य स्वार्थे "अण्" (५-४-३८)। 2. ವೇತನ, ಕೂಲಿ.

**मौष्टा ಮೌಷ್ಟಾ** (स्त्री०) ಮುಷ್ಟಿಯೇ ಆಯುಧವಾಗಿರುವ ಕ್ರೀಡೆ. मुष्टिः प्रहरणमस्यां क्रीडायाम्—मुष्टि "णः" (४-२-५७)।

**मौष्टिक ಮೌಷ್ಟಿಕ** (पुं०) 1. ವಂಚಕ, ಮೋಸಗಾರ. 2. ಅಕ್ಕಸಾಲೆ. "नाडिन्धमः स्वर्णकारः कलादो मौष्टिकः समाः" वैज०।

**मौसल ಮೌಸಲ** (न०) 1. ಮೌಸಲಪರ್ವ, ಮಹಾಭಾರತದ ಒಂದು ಪರ್ವ. [ಈ ಪರ್ವದಲ್ಲಿ ಯಾದವರು ಪ್ರಭಾಸ ಕ್ಷೇತ್ರಕ್ಕೆ ಹೋಗಿ ಪರಸ್ಪರ ಮುಸಲಪ್ರಹಾರದಿಂದ ಹೊಡೆದಾಡಿ ಮಡಿದ ಕಥೆಯಿರುವುದು.] मुसलस्येदम् "अण्" (४-३-१२०)। 2. ಮುಸಲ (ಒನಕೆ) ದಿಂದ ಮಾಡುವ ಯುದ್ಧ.

**मौहूर्त ಮೌಹೂರ್ತ** (पुं०) ದೈವಜ್ಞ, ಜೋಯಿಸ, ಜ್ಯೋತಿಃಶಾಸ್ತ್ರ ತಿಳಿದವನು. मुहूर्तमधिकृत्य कृतं ग्रन्थमधीते वेद वा "अण्" (४-२-५९)। "भिक्षुकाः प्राड्विवाकाश्च मौहूर्ता दैवचिन्तकाः" भा० शान्ति० १२१-४६।

**मौहूर्तिक ಮೌಹೂರ್ತಿಕ** (पुं०) ದೈವಜ್ಞ, ಜೋಯಿಸ, ಜ್ಯೋತಿಃಶಾಸ್ತ್ರವನ್ನು ತಿಳಿದವನು. मुहूर्तमधिकृत्य कृतं ग्रन्थमधीते वेद वा "ठक्" (४-२-६०)।

**म्नात ಮ್ನಾತ** (वि०) 1. ಅಭ್ಯಾಸಮಾಡಲ್ಪಟ್ಟ, ಮತ್ತೆ ಮಾಡಲ್ಪಟ್ಟ. 2. ಅಭ್ಯಾಸಮಾಡಲ್ಪಟ್ಟ, ಕಲಿಯಲ್ಪಟ್ಟ. म्ना (अभ्यासे) "क्तः" (३-२-१०२)।

**म्रक्ष ಮ್ರಕ್ಷ** (पुं०) 1. ತನ್ನ ದೋಷವನ್ನು ಮುಚ್ಚಿಕೊಳ್ಳುವುದು, ತನ್ನ ತಪ್ಪು ಯಾರಿಗೂ ತಿಳಿಯದಿರುವಂತೆ ನಡೆದುಕೊಳ್ಳುವುದು. म्रक्ष (संघाते) "घञ्" (३-३-१८)। 2. ರಾಶಿ, ಗುಂಪು. "स्वदोषगूहनं म्रक्षः" त्रिकाण्ड०।

**म्रक्षण ಮ್ರಕ್ಷಣ** (न०) 1. ತೈಲ, ಎಣ್ಣೆ. म्रक्ष (संघाते) "ल्युट्" (३-३-११५)। 2. ರಾಶಿಹಾಕುವುದು, ಒಟ್ಟಿಗೆ ಕೂಡುಹಾಕುವುದು.

**म्रदिमन् ಮ್ರದಿಮನ್** (पुं०) 1. ಮೃದುತ್ವ, ಮಾರ್ದವ, ಮೆತ್ತಗಿರುವಿಕೆ. 2. ದೌರ್ಬಲ್ಯ, ಅಶಕ್ತತೆ. 3. ಶಾಂತತೆ, ಸೌಮ್ಯತೆ, ನಮ್ರತೆ. मृदोः भावः "इमनिच्" (५-१-१२२)। "तुल्येऽपराधे स्वर्भानुः भानुमन्तं चिरेण यत्। हिमांशुमाशु ग्रसते तन्म्रदिम्नः स्फुटं फलम्" माघ० २-४९।

**म्रदीयस् ಮ್ರದೀಯಸ್** (वि०) 1. ಬಹಳ ಮೃದುವಾದ, ಬಹಳ ಮೆತ್ತಗಿರುವ, ಕೋಮಲವಾದ. अतिशयेन मृदुः "ईयसुन्" (५-३-५७)। "म्रदीयसा स्नानजलस्य वाससा" नैष० १५-२४। 2. ಶಾಂತವಾಗಿರುವ, ಸೌಮ್ಯವಾಗಿರುವ. 3. ಬಹಳ ನುಣುಪಾಗಿರುವ, ಬಹಳ ನಯವಾಗಿರುವ. स्त्रियां "ङीप्" (४-१-६)। –यसी –ಯಸೀ. "म्रदीयसीमपि घनामनल्पगुणकल्पिताम्" माघ० २-७४।

**म्लान ಮ್ಲಾನ** (पुं०) 1. ಮನೆಯಲ್ಲಿ ಹುಟ್ಟಿದ ಕಪ್ಪೆ. म्लै (हर्षक्षये) "क्तः" (३-४-७२)। "मण्डूकश्चैष गृहजो म्लानः" वैज०। (वि०) 2. ಬಾಡಿದ, ಸೊರಗಿದ, ಕಳೆಗುಂದಿದ. "म्लानस्य जीवकुसुमस्य विकासनानि" मालती० ६-८। 3. ಮಲಿನವಾದ, ಕೊಳೆಯಾದ. "मलिनं कच्चरं म्लानं कश्मलं च मलीमसम्" अभि० चि०। 4. ದುರ್ಬಲವಾದ, ಶಕ್ತಿಯಿಲ್ಲದ. 5. ದಣಿದಿರುವ, ಆಯಾಸಗೊಂಡಿರುವ (न०) 6. ಬಾಡುವುದು. 7. ಮಲಿನವಾಗುವುದು. 8. ದುರ್ಬಲವಾಗುವುದು. 9. ದಣಿಯುವುದು.

**म्लानि ಮ್ಲಾನಿ** (स्त्री०) 1. ಬಾಡುವುದು, ಕಳೆಗುಂದುವುದು. म्लै (हर्षक्षये) "क्तिन्" (३-३-९४)।

2. ಮಾಲಿನ್ಯ, ಕೊಳೆ. "म्लानिस्पृश: स्पर्शनिषेधभूमे: सेयं त्रिशङ्कोरिव संपदस्य" नैष० २२-३६। 3. ದಣಿವು, ಆಯಾಸ. 4. ದೌರ್ಬಲ್ಯ, ಅಶಕ್ತತೆ.

**म्लानीय ಮ್ಲಾನೀಯ** (वि०) 1. ಬಾಡಬೇಕಾದ. 2. ದಣಿಯಬೇಕಾದ. म्लै (हर्षक्षये) "अनीयर्" (३-१-९६)। "तव्य:" (३-१-९६)। **म्लातव्य: ಮ್ಲಾತವ್ಯ:.** म्लै + णिच् "अनीयर्"। **म्लापनीय: ಮ್ಲಾಪನೀಯ:.** "तव्य:"। **म्लापयितव्य: ಮ್ಲಾಪಯಿತವ್ಯ:.** 3. ಬಾಡಿಸಬೇಕಾದ, ಕಳೆಗುಂದಿಸಬೇಕಾದ. 4. ದಣಿಸಬೇಕಾದ, ಆಯಾಸಗೊಳಿಸಬೇಕಾದ.

**म्लायत् ಮ್ಲಾಯತ್** (वि०) 1. ಬಾಡುತ್ತಿರುವ, ಸೊರಗುತ್ತಿರುವ, ಕಳೆಗುಂದುತ್ತಿರುವ. म्लै (हर्षक्षये) "शतृ" (३-२-१२४)। 2. ದುರ್ಬಲವಾಗುತ್ತಿರುವ. 3. ಮಲಿನವಾಗುತ್ತಿರುವ. म्लै+णिच् "शतृ" (३-२-१२४)। **म्लापयत् ಮ್ಲಾಪಯತ್.** 4. ಬಾಡಿಸುತ್ತಿರುವ, ಕಳೆಗುಂದಿಸುತ್ತಿರುವ. "म्लापयन्नभिमानोष्णैर्वनमालां मुखानिलै:" माघ० २-१७। 5. ಮಲಿನವಾಗಿ ಮಾಡುತ್ತಿರುವ, ಕೊಳೆ ಮಾಡುತ್ತಿರುವ. 6. ದಣಿಸುತ್ತಿರುವ, ಆಯಾಸಗೊಳಿಸುತ್ತಿರುವ. स्त्रियां "ङीप्" (४-१-६)। **म्लायन्ती ಮ್ಲಾಯನ್ತೀ. म्लापयन्ती ಮ್ಲಾಪಯನ್ತೀ.**

**म्लायिन् ಮ್ಲಾಯಿನ್** (वि०) 1. ಬಾಡುವ, ಕಳೆಗುಂದುವ, ಸೊರಗುವ. 2. ಕ್ಷೀಣವಾಗುವ, ನಾಶಹೊಂದುವ, ಇಳಿಮುಖವಾಗುವ. म्लायति—म्लै (हर्षक्षये) "णिनि:" (३-१-१३४)। "माने म्लायिनि खण्डिते च वसुनि व्यर्थे प्रयातेऽर्थिनि" भर्तृ० ३-७८।

**म्लिष्ट ಮ್ಲಿಷ್ಟ** (न०) 1. ಅಸ್ಪಷ್ಟವಾದ ಮಾತು, ಸ್ಫುಟವಾಗಿ ಆಡದ ಮಾತು, ಅರ್ಥವಾಗದ ಮಾತು. म्लेच्छ (अव्यक्ते शब्दे) "क्त:" (७-२-१८)। निपा०। (वि०) 2. ಅಸ್ಪಷ್ಟವಾಗಿ ಮಾತಾಡುವ. 3. ಬಾಡಿದ, ಸೊರಗಿದ, ಕಳೆಗುಂದಿದ. "म्लिष्टं त्रिष्वव्यक्तवाचि म्लाने" मेदि०। "अथ म्लिष्टमविस्पष्टभाषितम्" हेम०।

**म्लेच्छ ಮ್ಲೇಚ್ಛ** (पुं०) 1. ಅನಾಗರಿಕ, ಕಾಡುಮನುಷ್ಯ, ಮ್ಲೇಚ್ಛರ ಮಾತಾಡುವ ಕಿರಾತ. म्लेच्छ (अव्यक्ते शब्दे) "अच्" (३-१-१३४)। "म्लेच्छा: स्युर्विप्रकृष्टा ये म्लेच्छवाचो वनौकस:" वैज०। 2. ವ್ಯವಸಾಯ ಮತ್ತು ಆಯುಧ ತಯಾರಿಕೆ ಇವುಗಳಿಂದ ಜೀವಿಸುವವನು. "दस्युम्लेच्छगणानान्तु कृषिशस्त्रोपजीवनम्" वैज०। 3. ಮ್ಲೇಚ್ಛ ಜಾತಿ, ಕಿರಾತ ಜಾತಿ. 4. ತುರುಷ್ಕರ ಜಾತಿ, ಪಾಮರ ಜಾತಿ. 5. ಅನಾಗರಿಕ ಮಾತು. "अथ म्लेच्छो जातिभेदेऽपभाषणे" हेम०। "गोमांसस्वादको यस्तु विरुद्धं बहु भाषते। सर्वाचारविहीनश्च म्लेच्छ इत्यभिधीयते" बोधायन:। (न०) 6. ತಾಮ್ರಲೋಹ. "म्लेच्छं वरिष्ठं म्लेच्छास्यम्" वैज०।

**म्लेच्छकन्द ಮ್ಲೇಚ್ಛಕಂದ** (पुं०) ಲಶುನ, ಬೆಳ್ಳುಳ್ಳಿ. म्लेच्छप्रिय: कन्द:। "लशुनस्तु रसोन: स्यादुग्रगन्धो महौषधम्। अरिष्टो म्लेच्छकन्दश्च यवनेष्टो रसोनक:"।

**म्लेच्छजाति ಮ್ಲೇಚ್ಛಜಾತಿ** (स्त्री०) ಯಾವ ವಿಧವಾದ ಆಚಾರವೂ ಇಲ್ಲದ ಒಂದು ಜಾತಿ, ಗೋಮಾಂಸ ತಿನ್ನುವ ಜಾತಿ. म्लेच्छरूपा जाति:। "सर्वाचारविहीनश्च म्लेच्छ इत्यभिधीयते"।

**म्लेच्छदेश ಮ್ಲೇಚ್ಛದೇಶ** (पुं०) ತುರುಷ್ಕರು ವಾಸ ಮಾಡುವ ದೇಶ, ಜಾತಿ ಮತ್ತು ಆಚಾರವ್ಯವಸ್ಥೆಯಿಲ್ಲದ ದೇಶ, ಆರ್ಯಾವರ್ತಕ್ಕಿಂತಲೂ ಹೊರಗಿನ ದೇಶ. म्लेच्छानां देश:। "चातुर्वर्ण्यव्यवस्थानं यस्मिन् देशे न विद्यते। म्लेच्छदेश: स विज्ञेय: आर्यावर्त: तत: परम्"।

**म्लेच्छभाषा ಮ್ಲೇಚ್ಛಭಾಷಾ** (स्त्री०) ತುರುಷ್ಕರ ಭಾಷೆ, ಹಿಂದೂಸ್ತಾನಿ ಮಾತು. म्लेच्छानां भाषा।

**म्लेच्छभोजन ಮ್ಲೇಚ್ಛಭೋಜನ** (पुं०) 1. ಗೋಧಿ. भुज्यते — भुज (पालनाभ्यवहारयो:) कर्मणि "ल्युट्" (३-३-११३)। म्लेच्छानां भोजन:। "गोधूमो म्लेच्छभोजन:" त्रिकाण्ड०। (न०) 2. ಅಲಸಂದೆ.

**म्लेच्छभोज्य ಮ್ಲೇಚ್ಛಭೋಜ್ಯ** (पुं०) ಗೋಧುಮ, ಗೋಧಿ. म्लेच्छानां भोज्यम्। "गोधूमस्तु म्लेच्छभोज्य: सुमन: श्लेष्मलो गुरु:" वैज०।

**म्लेच्छमण्डल ಮ್ಲೇಚ್ಛಮಂಡಲ** (न०) ಮ್ಲೇಚ್ಛರ ದೇಶ. म्लेच्छानां मण्डलं समूहो यत्र।

**म्लेच्छमुख ಮ್ಲೇಚ್ಛಮುಖ** (न०) ತಾಮ್ರಲೋಹ. म्लेच्छे म्लेच्छदेशे मुखमुत्पत्तिरस्य। "शुल्बं म्लेच्छमुखं द्व्यष्टवरिष्ठोदुम्बराणि च" अम०।

**म्लेच्छाश ಮ್ಲೇಚ್ಛಾಶ** (पुं०) ಗೋಧೂಮ, ಗೋಧಿ. म्लेच्छैरश्यते—अश (भोजने) कर्मणि "घञ्" (३-३-१९)।

**म्लेच्छित ಮ್ಲೇಚ್ಛಿತ** (न०) 1. ಅಪಶಬ್ದ, ಮ್ಲೇಚ್ಛರ ಭಾಷೆ, ಹೊರ ದೇಶದ ಭಾಷೆ. 2. ಅಸ್ಪಷ್ಟವಾದ ಮಾತು, ಅರ್ಥವಾಗದ ಮಾತು. "म्लेच्छितं परभाषायाम्" हारा०।

**इति "म" कारादिपदार्थनिरूपणम्।**

---

# य

**य ಯ** ಇದು ವರ್ಣಮಾಲೆಯಲ್ಲಿ ಇಪ್ಪತ್ತಾರನೆಯ ವ್ಯಂಜನಾಕ್ಷರ. ಅವರ್ಗೀಯ ವ್ಯಂಜನಾಕ್ಷರಗಳಲ್ಲಿ ಮೊದಲನೆಯ ಹಲ್ ವರ್ಣ. ಈ ವರ್ಣ (ಅಕ್ಷರ) ವು ತಾಲು (ದವಡೆ) ಪ್ರದೇಶದಲ್ಲಿ ಅಭ್ಯಂತರಪ್ರಯತ್ನದಿಂದ ಹುಟ್ಟುವ ಅಂತಸ್ಥ ಅಲ್ಪಪ್ರಾಣಾಕ್ಷರ. "यरलवा अन्तस्थाः"। "वर्गाणां प्रथमतृतीययमौ यरलवाश्चाल्पप्राणाः" ಸಿಂ ಕೌಂ।

**य ಯ** (ಪುಂ) 1. ಯಶಸ್ಸು, ಕೀರ್ತಿ. 2. ವಾಯು, ಗಾಳಿ. याति वाति—या (प्रापणे) "डः"। 3. ತ್ಯಾಗ, ವರ್ಜಿಸುವುದು. 4. ನಡೆಯುವವನು, ಚಲಿಸುವವನು. 5. ರಥ, ವಾಹನ. 6. ದಾನಮಾಡುವವನು. "यशो यः कथितः प्राज्ञैर्यो वायुरिति शब्दितः। याने यातरि यस्त्यागे कथितः शब्दवेदिभिः" एका०। 7. ಯಮ. 8. ಮನೆ, ವಾಸಸ್ಥಳ. "यस्त्यागे निलये वायौ यमे दातरि यातरि" नानार्थर०। 9. ಆದಿಯಲ್ಲಿ ಲಘು ವರ್ಣವುಳ್ಳ ಮೂರು ವರ್ಣಗಳ ಒಂದು ಗಣ, ಯಗಣ. "आदिमध्यावसानेषु यरता यान्ति लाघवम्। भजसा गौरवं यान्ति मनौ तु गुरुलाघवम्" वृ० र०। 10. ಸಂಯಮ, ತಡೆ. (स्त्री०) **या ಯಾ.** 11. ವಾಹನ, ಬಂಡಿ, ಗಾಡಿ. 12. ಪುಷ್ಪಗುಚ್ಛ, ಹೂವಿನ ಗೊಂಚಲು. 13. ಶೋಭೆ, ಕಾಂತಿ. 14. ಲಕ್ಷ್ಮಿ. 15. ನಿರ್ಮಾಣ, ತಯಾರಿಕೆ. "या स्त्रियां यानमञ्जर्योः शोभालक्ष्म्योश्च निर्मितौ" नानार्थर०।

**यकार ಯಕಾರ** (ಪುಂ) "ಯ" ವರ್ಣ, ಯ ಎಂಬ ಅಕ್ಷರ.

**यकृत् ಯಕೃತ್** (ನಂ) 1. ಹೊಟ್ಟೆಯ ಬಲಗಡೆ ಇರುವ ಒಂದು ಮಾಂಸದ ಪಿಂಡ. यं संयमं करोति—डु कृञ् (करणे) "क्विप्" (३-२-७६)। "कालखण्डयकृती तु समे इमे" अम०। 2. ಈ ಮಾಂಸಪಿಂಡವನ್ನು ಬೆಳೆಸುವ ಒಂದು ರೋಗ. "अधो दक्षिणतश्चापि हृदयाद्यकृतः स्थितिः। तत्तु रञ्जकपित्तस्य स्थानं शोणितजं मतम्" भावप्र०।

**यकृदात्मिका ಯಕೃದಾತ್ಮಿಕಾ** (ಸ್ತ್ರೀಂ) ಜಿರಳೆ, ಜೊಂಡಿಗ. यकृत इव आत्मा स्वरूपं यस्याः।

**यकृद्वैरिन् ಯಕೃದ್ವೈರಿನ್** (ಪುಂ) ಮುಳ್ಳುಮುತ್ತುಗದ ಗಿಡ. यकृतो वैरी नाशकः। "प्लीहघ्नो मांसदलनो यकृद्वैरी चलच्छदः"।

**यक्ष ಯಕ್ಷ** (ಪುಂ) 1. ದೇವಯೋನಿವಿಶೇಷ, ಕುಬೇರನ ಅನುಚರರು, ಕುಬೇರನ ಬೊಕ್ಕಸ ಮತ್ತು ಉದ್ಯಾನಗಳನ್ನು ರಕ್ಷಿಸುವವರು. यक्ष्यते पूज्यते—यक्ष (पूजायाम्) "घञ्" (३-३-१९)। "यस्यां यक्षाः सितमणिमयान्येत्य हर्म्यस्थलानि" मेघ० २-३। 2. ಕುಬೇರ, ಯಕ್ಷರ ರಾಜ. ई लक्ष्मीमश्नोति — अशू (व्याप्तौ) "अण्" (३-२-१)। "यक्षो गुह्यकमात्रे च गुह्यकाधीश्वरेऽपि च" मेदि०। 3. ನಾಯಿ. "दीर्घनादी गृहमृगः कुक्कुरः श्वोषनः शुनिः। यक्ष इन्द्रमहश्चालः" वैज०। (ಪುಂನಂ) 4. ಪೂಜೆ.

**यक्षकर्दम ಯಕ್ಷಕರ್ದಮ** (ಪುಂ) ಪಚ್ಚಕರ್ಪೂರ ಅಗುರು ಕಸ್ತೂರಿ ತಕ್ಕೋಲ ಇವುಗಳ ಬೆರಕೆಯಿಂದ ಮಾಡಿದ ಒಂದು ಸುಗಂಧ ದ್ರವ್ಯ. यक्षप्रियः कर्दमः।

**यक्षतरु ಯಕ್ಷತರು** (ಪುಂ) ವಟವೃಕ್ಷ, ಆಲದ ಮರ. यक्षेण उपाश्रितो वृक्षः।

**यक्षधूप ಯಕ್ಷಧೂಪ** (ಪುಂ) ಸರ್ಜರಸ, ಸಾಲವೃಕ್ಷ (ಮತ್ತಿಮರ) ದ ಹಾಲು. यक्षप्रियो धूपः।

**यक्षप्रश्न ಯಕ್ಷಪ್ರಶ್ನ** (ಪುಂ) ಪಾಂಡವರು ವನವಾಸವನ್ನು ಮುಗಿಸಿಕೊಂಡು ಅಜ್ಞಾತವಾಸಕ್ಕೆ ಬರುವ ಮುಂಚೆ ಅವರನ್ನು ಪರೀಕ್ಷಿಸಲು ಯಮಧರ್ಮರಾಯನು ಜಿಂಕೆಯ ರೂಪದಿಂದ ಬಂದು ಅವರಿಗೆ ಹಾಕಿದ ಪ್ರಶ್ನೆ. ಯಮಧರ್ಮರಾಯನು ಜಿಂಕೆಯ ರೂಪವನ್ನು ತಾಳಿ ಪಾಂಡವರ ಆಶ್ರಮದ ಸಮೀಪದಲ್ಲಿದ್ದ ಒಬ್ಬ ಋಷಿಯ ಅರಣಿಯನ್ನು ಒಯ್ದನು. ಅದನ್ನು ಬಿಡಿಸಲು ಹೋದ ಭೀಮಾರ್ಜುನ ನಕುಲ ಸಹದೇವರನ್ನು ಮರೆಯಾಗಿ ನಿಂತು ಕೆಲವು ಪ್ರಶ್ನೆಗಳನ್ನು ಕೇಳಿ ಅವರು ಜ್ಞಾನತಪ್ಪಿ ಬೀಳುವಂತೆ ಮಾಡಿದನು. ಅನಂತರ ಧರ್ಮರಾಜನು ಬಂದು ಆ ಪ್ರಶ್ನೆಗಳಿಗೆ ಉತ್ತರವನ್ನು ಸಮರ್ಪಕವಾಗಿ ಹೇಳಿ ತಮ್ಮಂದಿರನ್ನು ಬದುಕಿಸಿದನು.

**यक्षरस ಯಕ್ಷರಸ** (ಪುಂ) ಒಂದು ವಿಧ ಮದ್ಯ.

**यक्षराज् ಯಕ್ಷರಾಜ್** (ಪುಂ) ಕುಬೇರ, ಯಕ್ಷರ ಒಡೆಯ. यक्षेषु राजते—राजृ (दीप्तौ) "क्विप्" (३-२-६१)। –राजः –ರಾಜಃ. यक्षाणां राजा "टच्" (५-४-९१)।

**यक्षरात्रि ಯಕ್ಷರಾತ್ರಿ** (ಸ್ತ್ರೀಂ) ಕಾರ್ತಿಕ ಹುಣ್ಣಿಮೆಯ ರಾತ್ರಿ. यक्षप्रिया रात्रिः।

**यक्षाधिप ಯಕ್ಷಾಧಿಪ** (ಪುಂ) ಕುಬೇರ.

**यक्षावास ಯಕ್ಷಾವಾಸ** (पुं०) ವಟವೃಕ್ಷ, ಆಲದ ಮರ. यक्षाणामावासः।

**यक्षिणी ಯಕ್ಷಿಣೀ** (स्त्री०) 1. ಕುಬೇರನ ಪತ್ನಿ. 2. ಯಕ್ಷನ ಪತ್ನಿ.

**यक्षी ಯಕ್ಷೀ** (स्त्री०) 1. ಕುಬೇರನ ಪತ್ನಿ. यक्षस्य स्त्री "ङीष्" (४-२-४८)। 2. ಯಕ್ಷನ ಪತ್ನಿ.

**यक्ष्मघ्नी ಯಕ್ಷ್ಮಘ್ನೀ** (स्त्री०) ದ್ರಾಕ್ಷಿ. यक्ष्माणं हन्ति —हन (हिंसागत्योः) "टक्" (३-२-५३)। "ङीप्" (४-१-१५)।

**यक्ष्मन् ಯಕ್ಷ್ಮನ್** (पुं०) ಕ್ಷಯರೋಗ. यक्ष्यते—यक्ष (पूजायाम्) "मनिन्" (उ० ४-१५०)। ಮಲಮೂತ್ರಗಳನ್ನು ಬಹಳ ಹೊತ್ತು ತಡೆಯುವದರಿಂದಲೂ ಧಾತುಕ್ಷಯದಿಂದಲೂ ಬಲಿಷ್ಠರೊಡನೆ ಹೋರಾಡುವುದರಿಂದಲೂ ಅತ್ಯಲ್ಪ ಭೋಜನ ಅಧಿಕ ಭೋಜನ ಅಥವಾ ಅಕಾಲ ಭೋಜನ ಇವುಗಳಿಂದಲೂ ಕ್ಷಯರೋಗವು ಬರುವುದು. "वेगरोधात् क्षयाच्चैव साहसाद्विषमाशनात्। त्रिदोषो जायते यक्ष्मा गदो हेतुचतुष्टयात्" चरक०। ಈ ರೋಗವು ಚಂದ್ರನಿಗೂ ಇರುವುದರಿಂದ ಇದಕ್ಕೆ "राजयक्ष्मा" ಎಂದು ಹೆಸರಾಯಿತು. "राज्ञश्चन्द्रमसो यस्मादभूदेष किलामयः। तस्मात्तं राजयक्ष्मेति केचिदाहुर्मनीषिणः"।

**यक्ष्मिन् ಯಕ್ಷ್ಮಿನ್** (वि०) ಕ್ಷಯರೋಗವುಳ್ಳವನು. यक्ष्मास्यास्ति "इनिः" (५-२-११५)। "यक्ष्मी च पशुपालश्च परिवेत्ता निराकृतिः" मनु० ३-१५४।

**यच्छत् ಯಚ್ಛತ್** (वि०) ದಾನಮಾಡುತ್ತಿರುವ, ಕೊಡುತ್ತಿರುವ. दाण् (दाने) "शतृ" (३-२-१२४)।

**यज – देवपूजासङ्गतिकरणदानेषु** (भ्वा० उभ० सक० अनि०)।

लट्— पर० यजति यजतः यजन्ति।
आत्म० यजते यजेते यजन्ते।
लिट्— पर० इयाज ईजतुः ईजुः।
इयजित / इयष्ठ ईजथुः ईज।
इयाज / इयज ईजिव ईजिम।
आत्म० ईजे ईजाते ईजिरे।
लुट्— पर० / आत्म० यष्टा यष्टारौ यष्टारः।
यष्टासि यष्टास्थः यष्टास्थ।
यष्टासे यष्टासाथे यष्टाध्वे।
लृट्— पर० यक्ष्यति यक्ष्यतः यक्ष्यन्ति।
आत्म० यक्ष्यते यक्ष्येते यक्ष्यन्ते।
लोट्— पर० यजतु / यजतात् यजताम् यजन्तु।
आत्म० यजताम् यजेताम् यजन्ताम्।
लङ्— पर० अयजत् अयजताम् अयजन्।
आत्म० अयजत अयजेताम् अयजन्त।

ಇತ್ಯಾದಿ. 1. ದೇವತೆಗಳನ್ನು ಪೂಜಿಸು, ಯಾಗ ಮಾಡು. "यजतां पाण्डवः स्वर्गमवत्विन्द्रस्तपत्विनः" माघ० २-६५। "ईजुर्देवान् पुरोहिताः" भट्टि० १४-९०। 2. ಅರ್ಪಿಸು, ಸಮರ್ಪಣೆ ಮಾಡು. "वाग्दैवत्यैश्च चरुभिर्यजेरंस्ते सरस्वतीम्" मनु० ८-१०५। 3. ಕೊಡು, ದಾನಮಾಡು.

कर्मणि :—इज्यते। ईजे। यष्टा। यक्ष्यते। इज्यताम्। ऐज्यत। ಇತ್ಯಾದಿ.

णिचि :—याजयति। याजयां चकार, –बभूव, –आस। याजयिता। याजयिष्यति। याजयतु। ಇತ್ಯಾದಿ.

सनि :—यियक्षति। यियक्षां चकार, –बभूव, –आस। यियक्षिता। यियक्षतु। अयियक्षत्। ಇತ್ಯಾದಿ.

कृत्सु :—यष्टव्यम्। यजनीयम्। याज्यम्। इष्टः। इष्टवान्। यजन्, –न्ती। यजमानः। यष्टुम्। इष्टम्। यजनम्। इष्ट्वा।

**यज ಯಜ** (पुं०) 1. ಯಜ್ಞ, ಯಾಗ. 2. ಅಗ್ನಿ. "सप्ततन्तुर्मखः सवः। सहसानुर्यजः सानुः वसुनो विश्वहर्यकः" वैज०।

**यजत ಯಜತ** (पुं०) ಋತ್ವಿಕ್ಕು, ಯಾಗದ ಕಾರ್ಯವನ್ನು ನಿರ್ವಹಿಸುವವನು. यजति—यज (देवपूजायाम्) "अतच्" (उ० ३-११०)।

**यजत् ಯಜತ್** (वि०) ಯಾಗ ಮಾಡುತ್ತಿರುವವನು. यज (देवपूजादौ) "शतृ" (३-२-१२४)। स्त्रियां "ङीप्" (४-१-६)। –न्ती –ನ್ತೀ.

**यजति ಯಜತಿ** (पुं०) ಯಾಗ, ಯಜ್ಞ. यज (देवपूजादौ) "अतिः" बाहु०।

**यजत्र ಯಜತ್ರ** (पुं०) ಯಾಗದ ಉಪಕರಣ. यज (देवपूजादौ) "अत्रन्" (उ० ३-१०४)। "अथ यज्ञोपकरणं यजत्रं यजनं च तत्" वैज०।

**यजन ಯಜನ** (न०) 1. ಯಾಗ. इज्यते—यज (देवपूजादौ) "ल्युट्" (३-३-११५)। 2. ಯಾಗದ ಸ್ಥಳ,

ಯಾಗ ಮಾಡುವ ಸ್ಥಾನ. इज्यतेऽत्र—अधि० "ल्युट्" (३-३-११७)। 3. ಯಾಗದ ಉಪಕರಣ. इज्यतेऽनेन —यज कर० "ल्युट्" (३-३-११७)। 4. ಯಾಗ ಮಾಡುವುದು. भावे "ल्युट्"। "अध्यापनं अध्ययनं यजनं याजनं तथा। दानं प्रतिग्रहश्चैव ब्राह्मणानामकल्पयत्" मनु० १०-८८।

**यजनीय ಯಜನೀಯ** (ವಿ०) 1. ಪೂಜಿಸಲ್ಪಡುವ. 2. ಪೂಜಿಸಲು ಯೋಗ್ಯವಾದ. 3. ಪೂಜಿಸಬೇಕಾದ. (ದೇವತೆ) यज (देवपूजादौ) "अनीयर्" (३-१-९६)।

**यजन्त ಯಜನ್ತ** (ಪುಂ०) ಯಾಗ ಮಾಡುವವನು. यज (देवपूजादौ) "झच्" बाहु०।

**यजमान ಯಜಮಾನ** (ಪುಂ०) 1. ಯಾಗ ಮಾಡುವವನು. ಯಾಗ ಮಾಡಿ ಅದರ ಫಲವನ್ನು ಅನುಭವಿಸುವವನು. यजते—यज (देवपूजादौ) कर्तं० "शानन्" (३-२-१२८)। "धुरं निधायैकनिधिर्गुणानां जगाम यज्वा यजमानलोकम्" रघु० १८-१२। 2. ಮುಖಂಡ, ಮುಖ್ಯ. (ಗೌಣಪ್ರಯೋಗ).

**यजि ಯಜಿ** (ಪುಂ०) 1. ಯಾಗ, ಯಜ್ಞ. यज (देवपूजादौ) "इन्" (उ० ४-११७)। "आजीवनार्थं धर्मस्तु दानमध्ययनं यजिः" मनु० १०-७९। 2. ಯಾಗ ಮಾಡುವವನು, ಯಜಮಾನ. 3. ಯಜ ಧಾತು. "इक्श्तिपौ धातुनिर्देशे" (वा० ३-३-१०८।

**यजुर्वेद ಯಜುರ್ವೇದ** (ಪುಂ०) ನಾಲ್ಕು ವೇದಗಳಲ್ಲೊಂದು. ವೇದವು ಋಗ್ವೇದ ಯಜುರ್ವೇದ ಸಾಮವೇದ ಮತ್ತು ಅಥರ್ವವೇದಗಳೆಂದು ನಾಲ್ಕು ವಿಧವಾಗಿ ವಿಂಗಡಿಸಲ್ಪಟ್ಟಿರುವುದು. ಅಖಂಡವಾದ ವೇದರಾಶಿಯನ್ನು ಮುಂದೆ ಅಲ್ಪಾಯುಗಳಾದ ಜನರು ಅಧ್ಯಯನ ಮಾಡಲು ಸಾಧ್ಯವಾಗಲಾರದೆಂದು ತಿಳಿದು ಮಹರ್ಷಿಗಳು ವಿಭಾಗ ಮಾಡಿದರು. "क्षीणायुषः क्षीणसत्त्वान् दुर्मेधान् वीक्ष्य कालतः। वेदान् ब्रह्मर्षयो व्यस्यन् हृदिस्थाच्युतचोदिताः" भाग० १२-६-४७। ಪರಾಶರಸುತರಾದ ವ್ಯಾಸಮಹರ್ಷಿಗಳು ಈ ವೇದರಾಶಿಯನ್ನು ಋಗ್ಯಜುಸ್ಸಾಮಾಥರ್ವಗಳೆಂದು ನಾಲ್ಕು ವಿಧವಾಗಿ ಮಾಡಿದರು. "पराशरात् सत्यवत्यामंशांशकलया विभुः। अवतीर्णो महाभाग वेदं चक्रे चतुर्विधम्। ऋगथर्वयजुःसाम्नां राशीनुद्धृत्य वर्गशः। चतस्रः संहिताश्चक्रे मन्त्रैर्मणिगणा इव" भाग० १२-६-४९, ५०। [ವಿವರಕ್ಕೆ "कृष्णयजुर्वेद" ಪದದಲ್ಲಿ ನೋಡಿ.]

**यजुस् ಯಜುಸ್** (ನ०) ಯಜುರ್ವೇದದ ಮಂತ್ರ. इज्यतेऽनेन -यज (देवपूजादौ) "उसिः" (उ० २-११)। ಋಕ್ಸಾಮಗಳಿಗಿಂತ ಬೇರೆಯಾದ ಗಾನರಹಿತವಾದ ಮಂತ್ರಗಳು ಯಜುರ್ವೇದ ಮಂತ್ರಗಳು. शेषे यजुःशब्दः। शेषे ऋक्सामभिन्ने मन्त्रजाते यन्मन्त्रजातं प्रश्लिष्यपठितं गानादिविच्छेदरहितं तद्यजुरिति जैमिनिः। ["कृष्णयजुर्वेद" ಪದದಲ್ಲಿ ನೋಡಿ.]

**यज्ञ ಯಜ್ಞ** (ಪುಂ०) 1. ಯಾಗ, ದೇವಪೂಜೆ. इज्यन्ते देवता अत्र—यज (देवपूजादौ) "नङ्" (३-३-९०)। "यज्ञेन यज्ञमयजन्त देवाः"। "दुदोह गां स यज्ञाय" रघु० १-२६। ಯಜ್ಞವು ಸಾತ್ತ್ವಿಕ ರಾಜಸ ಮತ್ತು ತಾಮಸಗಳೆಂದು ಮೂರು ವಿಧ. (1) ಕರ್ತವ್ಯವೆಂದು ತಿಳಿದು ಫಲಾಪೇಕ್ಷೆಯಿಲ್ಲದೆ ಶಾಸ್ತ್ರೋಕ್ತವಾಗಿ ಮಾಡುವ ಯಾಗವು **ಸಾತ್ತ್ವಿಕ.** "अफलाकाङ्क्षिभिर्यज्ञो विधिदृष्टो य इज्यते। यष्टव्यमेवेति मनः समाधाय स सात्त्विकः" गीता १७-११। (2) ಫಲಾಪೇಕ್ಷೆಯಿಂದ ದಂಭಕ್ಕಾಗಿ ಶಾಸ್ತ್ರೋಕ್ತವಾಗಿ ಮಾಡುವ ಯಜ್ಞವು **ರಾಜಸ.** "अभिसन्धाय तु फलं दम्भार्थमपि चैव यः। इज्यते भरतश्रेष्ठ तं यज्ञं विद्धि राजसम्" गीता १७-१२। (3) ಶಾಸ್ತ್ರವನ್ನು ಬಿಟ್ಟು ಅಶ್ರದ್ಧೆಯಿಂದಲೂ ಅಮಂತ್ರಕವಾಗಿಯೂ ಮಾಡುವ ಯಾಗವು **ತಾಮಸ.** "विधिहीनमसृष्टान्नं मन्त्रहीनमदक्षिणम्। श्रद्धाविरहितं यज्ञं तामसं परिचक्षते" गीता १७-१३। ಇದು ದ್ರವ್ಯಯಜ್ಞ ತಪೋಯಜ್ಞ ಜ್ಞಾನಯಜ್ಞ ಸ್ವಾಧ್ಯಾಯಯಜ್ಞ ಮುಂತಾಗಿ ನಾನಾವಿಧ. "द्रव्ययज्ञास्तपोयज्ञा योगयज्ञास्तथापरे। स्वाध्यायज्ञानयज्ञाश्च यतयः संशितव्रताः" गीता ४-२८। 2. ಗೃಹಸ್ಥನು ಪ್ರತಿದಿನ ಮಾಡಬೇಕಾದ ಪಂಚ ಮಹಾಯಜ್ಞಗಳು. ["पञ्चमहायज्ञ" ಪದದಲ್ಲಿ ನೋಡಿ.] 3. ವಿಷ್ಣು, ನಾರಾಯಣ. स्वाराधनधर्मसमृद्धिरिक्तानां तदर्थिनां स्वयमेव यज्ञः तादृशो धर्मः —यज "नङ्"। "जपयज्ञस्वरूपत्वात् यज्ञ इत्युच्यते बुधैः" इति निरुक्तिः। "यज्ञो यज्ञपतिर्यज्वा यज्ञाङ्गो यज्ञवाहनः" वि० स०। 4. ಆತ್ಮ, ಜೀವ. 5. ಅಗ್ನಿ, ಬೆಂಕಿ. "यज्ञोऽन्यात्महरीष्टिषु" वैज०।

**यज्ञकुण्ड ಯಜ್ಞಕುಂಡ** (ಪುಂ०) ಯಾಗಾಗ್ನಿಯನ್ನು ಪ್ರತಿಷ್ಠಿಸಲು ಮಾಡಿದ ಗುಳಿ.

**यज्ञकृत् ಯಜ್ಞಕೃತ್** (ಪುಂ०) 1. ವಿಷ್ಣು. जगद्धिताय यज्ञं करोति आदौ सृजति—डु कृञ् (करणे) "क्विप्" (३-२-६१)। "जगद्धिताय कृतवान्यज्ञमादौ स यज्ञकृत्"

इति निरुक्तिः। "यज्ञभृद्यज्ञकृद्यज्ञी यज्ञभुक् यज्ञसाधनः" वि० स०। (वि०) 2. ಯಾಗವನ್ನು ಮಾಡುವವನು. "तामागतां तत्र न कश्चनाद्रियत् विमानितां यज्ञकृतो भयाज्जनः" भाग० ४-४-७।

**यज्ञघ्न ಯಜ್ಞಘ್ನ** (पुं०) ರಾಕ್ಷಸ. यज्ञं हन्ति—हन (हिंसागत्योः) "कः" (वा० ३-२-५)।

**यज्ञदीक्षा ಯಜ್ಞದೀಕ್ಷಾ** (स्त्री०) ಯಾಗಕ್ಕಾಗಿ ಕೈಗೊಳ್ಳುವ ನಿಯಮ. यज्ञार्थं दीक्षा। "तृतीयं यज्ञदीक्षायां द्विजस्य श्रुतिचोदनात्" मनु० २-१६९।

**यज्ञपति ಯಜ್ಞಪತಿ** (पुं०) ವಿಷ್ಣು, ನಾರಾಯಣ. यज्ञस्य पतिः स्वाराधनफलप्रदतया स्वामी। "यज्ञस्य फलदो यस्मात्तस्माद्यज्ञपतिः स्मृतः" इति निरुक्तिः। "यज्ञो यज्ञपतिर्यज्वा" वि० स०।

**यज्ञपशु ಯಜ್ಞಪಶು** (पुं०) ಕುದುರೆ ಆಡು ಮೊದಲಾದುವು. यज्ञार्थः पशुः।

**यज्ञपुरुष ಯಜ್ಞಪುರುಷ** (पुं०) ಮಹಾವಿಷ್ಣು. यज्ञरूपः पुरुषः। "सत्रे ममास भगवान् हयशीरषाथो साक्षात्स यज्ञपुरुषस्तपनीयवर्णः" भाग० २-७-११।

**यज्ञभुज् ಯಜ್ಞಭುಜ್** (पुं०) ವಿಷ್ಣು. यज्ञं भुङ्क्ते भुनक्ति वा—भुज (पालनाभ्यवहारयोः) "क्विप्" (३-२-६१)। "भुङ्क्ते तान् वा भोजयति यज्ञभुक् स च कथ्यते" इति निरुक्तिः। "यज्ञभुग्यज्ञसाधनः" वि० स०।

**यज्ञभृत् ಯಜ್ಞಭೃತ್** (पुं०) ವಿಷ್ಣು, ನಾರಾಯಣ. यज्ञं विकलमपि स्वस्मरणपूर्णाहुतिभ्यां बिभर्ति पुष्णाति—भृञ् (पोषणे) "क्विप्" (३-२-६१)। "पूर्णाहुतिस्वस्मृतिभ्यां विफलं यज्ञमप्युत। पुष्णाति यज्ञभृत् स स्यात् सप्तार्णो मनुरुत्तमः" इति निरुक्तिः। "यज्ञभृद्यज्ञकृद्यज्ञी" वि० स०।

**यज्ञभोक्तृ ಯಜ್ಞಭೋಕ್ತೃ** (पुं०) ವಿಷ್ಣು. यज्ञं भुनक्ति—भुज (परिपालनाभ्यवहारयोः) "तृच्" (३-१-१३३)।

**यज्ञवराह ಯಜ್ಞವರಾಹ** (पुं०) ವರಾಹ ರೂಪವೆತ್ತಿದ ಮಹಾವಿಷ್ಣು, ಮಹಾವಿಷ್ಣುವಿನ ಮೂರನೆಯ ಅವತಾರ. यज्ञरूपो वराहः।

**यज्ञवल्ली ಯಜ್ಞವಲ್ಲೀ** (स्त्री०) ಸೋಮಲತೆ. यज्ञस्य वल्ली।

**यज्ञवाट ಯಜ್ಞವಾಟ** (पुं०) ಯಾಗ ಮಾಡುವ ಸ್ಥಳ. यज्ञस्य वाटः गृहम्। "इत्युक्त्वा मुनिपत्न्यस्ता यज्ञवाटं पुनर्गताः" भाग० १०-२३-३३।

**यज्ञवाहन ಯಜ್ಞವಾಹನ** (पुं०) ವಿಷ್ಣು. यज्ञं वाहयति निर्वर्तयति वहति निर्वहति वा—वह (प्रापणे) + णिच् "ल्युः" (३-१-१३४)। वह कर्त० "ल्युट्" वा। वाहनमाहितात् इति निपातः।

**यज्ञवेदि ಯಜ್ಞವೇದಿ** (स्त्री०) ಯಾಗದ ಜಗುಲಿ, ಯಾಗದ ಬಲಿಪೀಠ.

**यज्ञवृक्ष ಯಜ್ಞವೃಕ್ಷ** (पुं०) ಅತ್ತಿಯ ಮರ. यज्ञस्य वृक्षः।

**यज्ञशरण ಯಜ್ಞಶರಣ** (न०) ಯಾಗಶಾಲೆ.

**यज्ञशाला ಯಜ್ಞಶಾಲಾ** (स्त्री०) ಯಾಗದ ಮನೆ.

**यज्ञश्रेष्ठा ಯಜ್ಞಶ್ರೇಷ್ಠಾ** (स्त्री०) ಸೋಮಲತೆ.

**यज्ञसाधन ಯಜ್ಞಸಾಧನ** (पुं०) ವಿಷ್ಣು. यज्ञाः साधनानि ज्ञानद्वारा स्वसिद्ध्युपाया अस्य। "ज्ञानद्वारा सिद्ध्युपाये यः स स्यात् यज्ञसाधनः" इति निरुक्तिः। "यज्ञभुग्यज्ञसाधनः" वि० स०।

**यज्ञसूत्र ಯಜ್ಞಸೂತ್ರ** (न०) ಯಜ್ಞೋಪವೀತ. यज्ञे धृतं सूत्रम्।

**यज्ञसेन ಯಜ್ಞಸೇನ** (पुं०) ದ್ರುಪದರಾಜ.

**यज्ञस्थान ಯಜ್ಞಸ್ಥಾನ** (न०) ಯಾಗಶಾಲೆ. यज्ञस्य स्थानम्।

**यज्ञागार ಯಜ್ಞಾಗಾರ** (न०) ಯಾಗಶಾಲೆ.

**यज्ञाङ्ग ಯಜ್ಞಾಂಗ** (पुं०) 1. ವಿಷ್ಣು. समर्थानुष्ठितोऽपि अन्यो यज्ञः अङ्गं तदुच्छेषभूतमस्य। "शेषः शक्तकृतो यज्ञोऽप्यस्य यज्ञाङ्ग उच्यते" इति निरुक्तिः। "यज्ञाङ्गो यज्ञवाहनः" वि० स०। 2. ಉದುಂಬರ ವೃಕ್ಷ, ಅತ್ತಿ ಮರ. यज्ञमङ्गति प्राप्नोति अगि (गतौ) "अण्" (३-२-१)। "यज्ञाङ्गो ब्रह्मवृक्षश्च हेमदुग्धोऽप्युदुम्बरः"। "उदुम्बरो जन्तुफलो यज्ञाङ्गो हेमदुग्धकः" अम०। 3. ಕಪ್ಪು ಚುಕ್ಕಿಗಳುಳ್ಳ ಜಿಂಕೆ. "कृष्णस्तु कृष्णसारो निरञ्जनः। यज्ञाङ्ग एणः" वैज०। (न०) 4. ಯಾಗದ ಒಂದು ಭಾಗ. 5. ಯಾಗದ ಉಪಕರಣ, —ಸಾಮಗ್ರಿ. "यज्ञाङ्गयोनित्वमवेक्ष्य यस्य सारं धरित्रीधरणक्षमं च" कुमा० १-१७।

**यज्ञान्त ಯಜ್ಞಾಂತ** (पुं०) ಯಜ್ಞದ ಸಮಾರೋಪ, ಅವಭೃಥ ಸ್ನಾನ. यज्ञस्यान्तः।

**यज्ञान्तकृत् ಯಜ್ಞಾಂತಕೃತ್** (पुं०) ವಿಷ್ಣು, ನಾರಾಯಣ. यज्ञस्यान्तं पर्यवसानभूतं स्वतत्त्वज्ञानं करोति—कृञ् "क्विप्" (३-२-६१)। "समाप्तिं चैव यज्ञानां

स्वतत्त्वज्ञानतः क्षणात् । निरपेक्षं यः करोति स यज्ञान्तकृदुच्यते" इति निरुक्तिः। "यज्ञान्तकृद्यज्ञगुह्यः" वि० स०।

**यज्ञिक ಯಜ್ಞಿಕ** (पुं०) ಪಲಾಶವೃಕ್ಷ, ಮುತ್ತುಗದ ಮರ.

**यज्ञिय ಯಜ್ಞಿಯ** (पुं०) 1. ದ್ವಾಪರಯುಗ. यज्ञाय हितः। "कृतं सत्ययुगं त्रेताग्नायी द्वापरयज्ञियौ" त्रिकाण्ड०। 2. ದೇವತೆ. 3. ಮೌಂಜಿಹುಲ್ಲು. "मुञ्जस्तु यज्ञियो मेध्यो मृदुत्वक् ब्रह्ममेखलः" वैज०। 4. ಕಗ್ಗಲಿ ಮರ. 5. ಪಲಾಶವೃಕ್ಷ, ಮುತ್ತುಗದ ಮರ. (वि०) 6. ಯಾಗಕ್ಕೆ ಯೋಗ್ಯವಾದ, ಯಾಗಾರ್ಹವಾದ. "यज्ञियं यज्ञकर्मार्हे" वैज०। 7. ಯಾಗಸಂಬಂಧವಾದ.

**यज्ञियदेश ಯಜ್ಞಿಯದೇಶ** (पुं०) ಯಾಗಕ್ಕೆ ಯೋಗ್ಯವಾದ ದೇಶ. यज्ञियो देशः। "कृष्णसारस्तु चरति मृगो यत्र स्वभावतः। स ज्ञेयो यज्ञियो देशः म्लेच्छदेशस्ततः परः" मनु० १३-२३।

**यज्ञियशाला ಯಜ್ಞಿಯಶಾಲಾ** (स्त्री०) ಯಾಗಶಾಲೆ, ಯಾಗಮಂಟಪ. यज्ञिया शाला।

**यज्ञीय ಯಜ್ಞೀಯ** (पुं०) 1. ಉದುಂಬರ ವೃಕ್ಷ, ಅತ್ತಿ ಮರ. यज्ञ "छः" (४-२-१३८)। (वि०) 2. ಯಾಗ ಸಂಬಂಧವಾದ.

**यज्ञेश्वर ಯಜ್ಞೇಶ್ವರ** (पुं०) ವಿಷ್ಣು. यज्ञानामीश्वरः।

**यज्ञोपवीत ಯಜ್ಞೋಪವೀತ** (न०) ಮಂತ್ರಪೂರ್ವಕವಾಗಿ ಧರಿಸುವ ಯಜ್ಞಸೂತ್ರ, ಮುಮ್ಮಡಿಯಾದ ಪವಿತ್ರ ಸೂತ್ರ. यज्ञेन संस्कृतमुपवीतम्। ವಿಪ್ರನಿಗೆ ಕಾರ್ಪಾಸ (ಹತ್ತಿಯ) ಸೂತ್ರ, ಕ್ಷತ್ರಿಯನಿಗೆ ಶಣಸೂತ್ರ, ವೈಶ್ಯನಿಗೆ ಕುರಿಯ ಉಣ್ಣೆಯಿಂದ ಮಾಡಿದ ಸೂತ್ರ. "कार्पासमुपवीतं स्याद्विप्रस्योर्ध्ववृतं त्रिवृत्। शणसूत्रमयं राज्ञः वैश्यस्याविकसौत्रिकम्" मनु० २-४४।

**यज्यु ಯಜ್ಯು** (पुं०) ಯಜುರ್ವೇದವನ್ನು ತಿಳಿದ ಅಧ್ವರ್ಯು. यजति—यज (देवपूजायाम्) "युच्" (उ० ३-२०)।

**यज्वन् ಯಜ್ವನ್** (पुं०) 1. ಶಾಸ್ತ್ರಕ್ರಮದಲ್ಲಿ ಯಾಗ ಮಾಡಿದವನು. यजते—यज (देवपूजायाम्) "ङ्वनिप्" (३-२-१०३)। "ग्रामेष्वात्मविसृष्टेषु यूपचिह्नेषु यज्वनाम्" रघु० १-४४। "यज्वभिः संभृतं हव्यं विततेष्वध्वरेषु सः" कुमा० २-४६। 2. ವಿಷ್ಣು, ನಾರಾಯಣ. अशक्यानुष्ठेयं सन्ध्यादिकं कर्म स्वयमेवानुष्ठाय तदर्थं स्वयमेव यजते—यज "ङ्वनिप्"। "अशक्तं तु स्वयं यष्टा तं यज्वेति प्रचक्षते" इति निरुक्तिः। "यज्ञो यज्ञपतिर्यज्वा" वि० स०।

**यज्वर ಯಜ್ವರ** (पुं०) 1. ಅಶ್ವ, ಕುದುರೆ. 2. ಅಧ್ವರ, ಯಾಗ. "यज्वरौ तु हयाध्वरौ" वैज०।

**यत् ಯತ್** (अव्य०) ಹೇತು, ಕಾರಣ. ಯಾವ ಕಾರಣದಿಂದ. यम (उपरमे) "क्विप्" (३-२-१७८)। "अत्र स्थिता तृणमदाद्बहुशो यदेभ्यः" उ० रा० ३-२१।

**यत् ಯತ್** (वि०) ಹೋಗುತ್ತಿರುವ, ಚಲಿಸುತ್ತಿರುವ. इण् (गतौ) "शतृ" (३-२-१२४)। स्त्रियां "ङीप्" (४-१-६)। **यती ಯತೀ.** "अभिवीक्ष्य सामिकृतमण्डनं यतीः करुद्धनीविगलदंशुकाः स्त्रियः" माघ० १३-३१।

**यत ಯತ** (न०) 1. ಮಾವಟಿಗನು ಆನೆಯನ್ನು ಕಾಲಿನಿಂದ ನಡೆಸುವುದು. "आरोहा गजजीवनाः। पादकर्म यतं तेषाम्" वैज०। (वि०) 2. ವಿಧೇಯ, ವಿನೀತ, ನಮ್ರ. "प्रणयः प्रश्रितो वश्यो विधेयो निभृतो यतः" वैज०। 3. ವಿಶ್ರಾಂತಿಹೊಂದಿದ, ವಿರಾಮಹೊಂದಿದ. 4. ಬಂಧಿಸಲ್ಪಟ್ಟ, ಕಟ್ಟಲ್ಪಟ್ಟ. "बद्धोपरतयोर्यतः" वैज०। 5. ನಿರೋಧಿಸಲ್ಪಟ್ಟ, ನಿಗ್ರಹಿಸಲ್ಪಟ್ಟ, ವಶದಲ್ಲಿರಿಸಲ್ಪಟ್ಟ. "यतेन्द्रियमनोबुद्धिः मुनिर्मोक्षपरायणः" गीता ५-२८।

**यतत् ಯತತ್** (वि०) ಪ್ರಯತ್ನಮಾಡುತ್ತಿರುವ, ಪ್ರಯತ್ನಶೀಲನಾಗಿರುವ. यती (प्रयत्ने) "शतृ" (३-२-१२४)। ಆತ್ಮನೇಪದಿಯಾದ यती ಧಾತುವು ಪರಸ್ಮೈಪದದಲ್ಲಿಯೂ ಪ್ರಯೋಗಿಸಲ್ಪಟ್ಟಿದೆ. "यततो ह्यपि कौन्तेय पुरुषस्य विपश्चितः" गीता २-६०।

**यतन ಯತನ** (न०) ಪ್ರಯತ್ನ. यती (प्रयत्ने) भावे "ल्युट्" (३-३-११५)।

**यतनीय ಯತನೀಯ** (वि०) 1. ಯತ್ನಿಸಬೇಕಾದ. 2. ಯತ್ನಿಸಲು ಅರ್ಹವಾದ. यती (प्रयत्ने) "अनीयर्" (३-१-९६)। "तव्यः"। **यतितव्यम् ಯತಿತವ್ಯಮ್.**

**यतम ಯತಮ** (वि०) ಇವರ ಮಧ್ಯದಲ್ಲಿ ಯಾರು? ಈ ಬಹು ಮಂದಿಗಳಲ್ಲಿ ಯಾರು? ಈ ಅನೇಕ ವಸ್ತುಗಳಲ್ಲಿ ಯಾವುದು? एषां मध्ये यः? यद्—वा "डतमच्" (५-३-९३)। बहूनाम् मध्ये निर्धारणे वा डतमच्।

**यतमान ಯತಮಾನ** (वि०) ಪ್ರಯತ್ನಪಡುತ್ತಿರುವ. यती (प्रयत्ने) कर्त० "शानच्" (३-२-१२४)। "या न ययौ प्रियमन्यवधूभ्यः सारतरागमना यतमानम्" माघ० ४-४५।

**यतर ಯತರ** (वि०) ಈ ಇಬ್ಬರ ಮಧ್ಯೆ ಯಾರು? ಈ ಎರಡರ ಮಧ್ಯೆ ಯಾವುದು? एतयोर्मध्ये य: ?—यत् ?। यद् "डतरच्" (५-३-९२)।

**यतस् ಯತಸ್** (अव्य०) 1. ಯಾರಿಂದ? ಯಾವುದರಿಂದ? ಎಲ್ಲಿಂದ? यद् "तसिल्" (५-३-७)। यस्मात् ಎಂಬ ಅರ್ಥದಲ್ಲಿ—"अप्यग्रणीर्मन्त्रकृतामृषीणां कुशाग्रबुद्धे कुशली गुरुस्ते। यतस्त्वया ज्ञानमशेषमाप्तं लोकेन चैतन्यमिवोष्णरश्मेः" रघु० ५-४। "यतश्च भयमाशङ्केत् प्राचीं तां कल्पयेद्दिशम्" मनु० ७-१८९। 2. ಯಾವ ಕಾರಣದಿಂದ? ಯಾರಿಂದ? येन ಎಂಬ ಅರ್ಥದಲ್ಲಿ—यद् "तसिल्" (५-३-१४)। "यद्रूपं यदधिष्ठानं यतः सृष्टमिदं प्रभो" भाग० २-५-२। 3. ಎಲ್ಲಿ? ಯಾರಲ್ಲಿ? 4. ಯಾವಾಗ. यदा ಎಂಬ ಅರ್ಥದಲ್ಲಿ "विश्रामभीशांश्चतुरो यतः सुरान् अपास्य तं रागहृताः सिषेविरे" माघ० १-४४।

**यतस्त्य ಯತಸ್ತ್ಯ** (वि०) ಯಾವ ಕಡೆಯಿಂದ ಬಂದಿರುವ. यतः आगतः "त्यप्" (४-२-१०४)।

**यति ಯತಿ** (पुं०) 1. ಸಂನ್ಯಾಸಿ, ಇಂದ್ರಿಯಗಳನ್ನು ಜಯಿಸಿದವನು. यतते मोक्षाय—यती (प्रयत्ने) "इन्" (उ० ४-११७)। "ब्रह्मचारी गृहस्थश्च वानप्रस्थो यतिस्तथा। एते गृहस्थप्रभवाश्चत्वारः पृथगाश्रमाः" मनु० ६-८७। (स्त्री०) 2. ಸುಖವಾಗಿ ಉಚ್ಚರಿಸಲು ಸೌಕರ್ಯವಾಗುವಂತೆ ಛಂದಸ್ಸಿನ ಮಧ್ಯೆ ಮಧ್ಯೆ ಪದಗಳಿಗೆ ಕೊಡುವ ವಿರಾಮ, ಶ್ಲೋಕಗಳನ್ನು ಹೇಳುವಾಗ ನಾಲಗೆಗೆ ಮಧ್ಯೆ ಮಧ್ಯೆ ಕೊಡುವ ವಿರಾಮ. यम्यतेऽत्र जिह्वा—यम (उपरमे) "क्तिन्" (३-३-९४)। "ज्ञेयः पादश्चतुर्थोंऽशो यतिर्विच्छेदसंज्ञिका" वृ० र०। 3. ಕಾರಾಗೃಹ, ಸೆರೆಮನೆ. 4. ಸಂಯಮ, ಸ್ಮರಣೆ, ತಾಳ್ಮೆ. "कारासंयमयोर्यतिः" वैज०। 5. ಪರಿಭವ, ಅವಮಾನ. "यतिः स्त्री पाठविच्छेदे निकारयतिनोः पुमान्" मेदि०।

**यतित ಯತಿತ** (वि०) 1. ಪ್ರಯತ್ನಿಸಲ್ಪಟ್ಟ. 2. ತಿರಸ್ಕರಿಸಲ್ಪಟ್ಟ. यत (निकारोपस्कारयोः) "क्तः" (३-२-१०२)।

**यतिन् ಯತಿನ್** (पुं०) ಸಂನ್ಯಾಸಿ, ಭಿಕ್ಷು, ಇಂದ್ರಿಯಗಳನ್ನು ಜಯಿಸಿದವನು. यम (उपरमे) भावे "क्तः" (३-३-११४)। यतमस्यास्ति "इनिः" (५-२-११५)। "कर्मन्दी मस्करी यती" वैज०। "ये निर्जितेन्द्रियग्रामा यतिनो यतयश्च ते" अम०।

**यत्त ಯತ್ತ** (वि०) 1. ಪ್ರಯತ್ನಪಟ್ಟಿರುವ, ಪ್ರಯತ್ನ ನಡೆಸಿರುವ. यती (प्रयत्ने) "क्तः" (३-४-७२)। 2. ಎಚ್ಚರಿಕೆ ವಹಿಸಿರುವ, ಜಾಗರೂಕನಾಗಿರುವ, ಕಾವಲಾಗಿ ನಿಂತಿರುವ. 3. ಸಿದ್ಧನಾಗಿರುವ. "भृशमाराधने यत्तः स्वाराध्यस्य मरुत्वतः" किरा० ११-४४।

**यत्न ಯತ್ನ** (पुं०) 1. ಪ್ರಯತ್ನ, ಉದ್ಯೋಗ. यती (प्रयत्ने) "नङ्" (३-३-९०)। "न ज्ञातं तात यत्नस्य पौर्वापर्यममुष्य ते" किरा० ११-४२। 2. ಎಚ್ಚರಿಕೆ, ಕಾವಲು, ಜಾಗರೂಕತೆ. "भवानपीदं परवानवैति महान्हि यत्नस्तव देवदारौ" रघु० २-५६। 3. ಆಯಾಸ, ಶ್ರಮ, ಕಷ್ಟ. "सर्वाङ्गनिर्माणविधौ विधातुर्लावण्य उत्पाद्य इवास यत्नः" कुमा० १-३५। **यत्नेन ಯತ್ನೇನ यत्नतः ಯತ್ನತಃ यत्नात् ಯತ್ನಾತ್** (अव्य०) ಬಹಳ ಎಚ್ಚರಿಕೆಯಿಂದ, ಜಾಗರೂಕತೆಯಿಂದ.

**यत्नवत् ಯತ್ನವತ್** (वि०) ಪ್ರಯತ್ನವುಳ್ಳವನು. यत्नोऽस्यास्ति "मतुप्" (५-२-९४)।

**यत्र ಯತ್ರ** (अव्य०) ಎಲ್ಲಿ? ಯಾವ ಜಾಗದಲ್ಲಿ, ಯಾರಲ್ಲಿ, ಯಾವ ಕಾಲದಲ್ಲಿ. यद् "त्रल्" (५-३-१०)। "यत्र कोपैः कृताः स्त्रीणामाप्रसादार्थिनः प्रियाः" कुमा० ६-४५। यत्र यत्र ಯಾವ ಯಾವ ಕಡೆಯಲ್ಲಿ, ಯಾವ ಯಾವ ಜಾಗದಲ್ಲಿ. "यत्र यत्र धूमस्तत्रतत्राग्निः" त० स०। यत्र कुत्रचित् यत्र क्वचन ಯಾವುದಾದರೂ ಒಂದು ಕಡೆ, ಯಾವುದಾದರೂ ಒಂದು ಕಾಲದಲ್ಲಿ.

**यत्रत्य ಯತ್ರತ್ಯ** (वि०) ಯಾವ ಜಾಗದಲ್ಲಿರುವ, ಯಾವ ಕಡೆಯಿರುವ. यत्र "त्यप्" (४-२-१०४)।

**यथा ಯಥಾ** (अव्य०) ಈ ಕೆಳಗಿನ ಅರ್ಥಗಳಲ್ಲಿ ಇದರ ಪ್ರಯೋಗ. 1. ಹೇಗೆ, ಯಾವ ಪ್ರಕಾರವಾಗಿ, ಯಾವ ರೀತಿಯಾಗಿ. यद् "थाल्" (५-३-२३)। अत्वम् (७-२-१०२)। "यथा प्रह्लादनाच्चन्द्रः प्रतापात्तपनो यथा। तथैव सोऽभूदन्वर्थो राजा प्रकृतिरञ्जनात्" रघु० ४-१२। 2. ಸಾದೃಶ್ಯ, ಹೋಲಿಕೆ. "वितरति गुरुः प्राज्ञे विद्यां यथैव तथा जडे" उ० रा० २-४। 3. ಒಂದು ವಿಷಯವನ್ನಾಗಲಿ ಒಂದು ವಸ್ತುವನ್ನಾಗಲಿ ದೃಢವಾಗಿ ಸ್ಥಿರಪಡಿಸಿ ಹೇಳುವುದು. "अकथितोऽपि ज्ञायत एव यथायमाभोगस्तपोवनस्येति" शाकु० २। 4. ಯೋಗ್ಯತೆ, ಅನುರೂಪ್ಯ, ಸಾಮಂಜಸ್ಯ, ಹೊಂದಿಕೆ. 5. ಅನುಲ್ಲಂಘನೆ, ಆಜ್ಞೆಯನ್ನು ಮೀರದಿರುವುದು. "यथा सादृश्ययोग्यत्ववीप्सास्वर्थानतिक्रमे" वैज०। 6. ಕಾರಣ,

ಹೇತು. "यथेतोमुखागतैरस्माभिः कलकलः श्रुतस्तथा तर्कयामि पारक्यं बलमन्यदपि उपगतमिति" मालती० ८। 7. (यथा) ಹೇಗೋ (तथा) ಹಾಗೆ ಎನ್ನುವ ಅರ್ಥದಲ್ಲಿ ಪ್ರಯೋಗ. "यथा कस्यापि पिण्डखर्जूरैरुद्वेजितस्य तिन्तिण्यामभिलाषो भवेत् तथा स्त्रीरत्नपरिभाविनो भवत इयमभ्यर्थना" शाकु० २। 8. "यथा तथा" ಹೇಗೆ ಆಗಬೇಕೋ ಹಾಗೆ ಮಾಡು. "तस्मान्मुच्ये यथा तात संविधातुं तथार्हसि" रघु० १-७२। यथा ಪದವು ಪೂರ್ವದಲ್ಲಿ ಬರುವ ಅವ್ಯಯೀಭಾವ ಸಮಾಸದಲ್ಲಿ यथा ಪದವು ಅನುಗುಣ, ಅನುರೂಪ, ಅನತಿಕ್ರಮ, ಸಾದೃಶ್ಯ, ಯೋಗ್ಯ ಮುಂತಾದ ಅರ್ಥಗಳನ್ನು ಕೊಡುವುದು.

**यथाकामम् ಯಥಾಕಾಮಮ್** (अव्य०) 1. ಇಷ್ಟದಂತೆ, ಮನಸ್ಸಿಗೆ ತೋಚಿದಂತೆ. काममनतिक्रम्य यथाकामम्। अव्ययी०। "यथाविधि हुताग्नीनां यथाकामार्चितार्थिनाम्" रघु० १-६। 2. ಸ್ವಾತಂತ್ರ್ಯದಿಂದ, ಸ್ವೇಚ್ಛೆಯಿಂದ, ತನಗೆ ತೋರಿದಂತೆ, ಇಷ್ಟಬಂದಂತೆ. "स निर्विश्य यथाकामं तटेष्वालीनचन्दनौ" रघु० ४-५१। (वि०) 3. ಇಷ್ಟಕ್ಕೆ ಅನುಸಾರವಾದ.

**यथाकामिन् ಯಥಾಕಾಮಿನ್** (वि०) ಸ್ವತಂತ್ರನಾದ, ಸ್ವೇಚ್ಛೆಯಿಂದ ವರ್ತಿಸುವ, ಇಚ್ಛೆಗೆ ಮೀರದೆ ನಡೆಯುವ, ಇಷ್ಟಕ್ಕೆ ಅನುಸಾರವಾದ ನಡವಳಿಕೆಯುಳ್ಳ. यथाकामोऽस्यास्ति "इनिः" (५-२-११५)।

**यथाकालम् ಯಥಾಕಾಲಮ್** (अव्य०) ಕಾಲವನ್ನು ಮೀರದೆ, ಸಮಯವನ್ನು ಅತಿಕ್ರಮಿಸದೆ. कालमनतिक्रम्य यथाकालम्। अव्ययी०। "यथाकालप्रबोधिनाम्" रघु० १-६।

**यथाक्रमम् ಯಥಾಕ್ರಮಮ್** (अव्य०) ಕ್ರಮವನ್ನು ಮೀರದೆ, ಕ್ರಮವಾಗಿ, ಸರಿಯಾದ ರೀತಿಯಲ್ಲಿ. क्रममनतिक्रम्य यथाक्रमम्। अव्ययी०। "यथाक्रमं पुंसवनादिकाः क्रियाः धृतेश्च धीरः सदृशीर्व्यधत्त सः" रघु० ३-१०।

**यथागतम् ಯಥಾಗತಮ್** (अव्य०) ಬಂದಂತೆ, ಬಂದ ಮಾರ್ಗದಿಂದಲೇ. आगतमनतिक्रम्य। "तथेपि कामं प्रतिशुश्रुवान्रघोर्यथागतं मातलिसारथिर्ययौ" रघु० ३-६७।

**यथाजात ಯಥಾಜಾತ** (वि०) ಮೂರ್ಖ, ಅಜ್ಞ, ಅರಿವಿಲ್ಲದವನು, ತಿಳಿವಳಿಕೆಯಿಲ್ಲದವನು, ಹುಟ್ಟುವಾಗ ಇದ್ದಂತೆಯೇ ಇರುವವನು. जातं जन्मसमयमनतिक्रम्य यथाजातम्। अव्ययी०। यथाजातमस्यास्ति "अच्" (५-२-१२७)। "अज्ञे मूढयथाजातमूर्खवैधेयबालिशाः" अम०।

**यथातथम् ಯಥಾತಥಮ್** (अव्य०) 1. ನಿಜವಾಗಿ, ಸತ್ಯವಾಗಿ. तथानतिक्रम्य यथातथम्। अव्ययी०। यथावर्तते तथा। 2. ಯೋಗ್ಯವಾಗಿ, ಅನುರೂಪವಾಗಿ.

**यथापराधम् ಯಥಾಪರಾಧಮ್** (अव्य०) ಅಪರಾಧಕ್ಕೆ ತಕ್ಕಂತೆ, ತಪ್ಪಿಗೆ ಅನುಗುಣವಾಗಿ. अपराधमनतिक्रम्य। अव्ययी०। "यथापराधदण्डानाम्" रघु० १-६।

**यथापूर्व ಯಥಾಪೂರ್ವ** (वि०) ಮೊದಲಿನಂತಿರುವ, ಹಿಂದೆ ಇದ್ದಂತೆ ಇರುವ. यथापूर्वमस्यास्ति "अच्" (५-२-१२७)। "तैस्त्रयाणां शितैर्बाणैर्यथापूर्वविशुद्धिभिः" रघु० १२-४८।

**यथापूर्वम् ಯಥಾಪೂರ್ವಮ್** (अव्य०) ಪೂರ್ವದಲ್ಲಿ ಇದ್ದಂತೆಯೇ, ಮೊದಲು ಇದ್ದಂತೆ, ಹಿಂದೆ ಇದ್ದಂತೆ. पूर्वमनतिक्रम्य। अव्ययी०। "धाता यथापूर्वमकल्पयत्"।

**यथाप्रदेशम् ಯಥಾಪ್ರದೇಶಮ್** (अव्य०) ಯೋಗ್ಯವಾದ ಸ್ಥಳದಲ್ಲಿ, ಸರಿಯಾದ ಜಾಗದಲ್ಲಿ. प्रदेशमनतिक्रम्य। अव्ययी०। "सर्वोपमाद्रव्यसमुच्चयेन यथाप्रदेशं विनिवेशितेन" कुमा० १-४९।

**यथाप्रधानम् ಯಥಾಪ್ರಧಾನಮ್** (अव्य०) ಯೋಗ್ಯತೆಗೆ ಅನುಸಾರವಾಗಿ, ದರ್ಜೆಗೆ ಅನುಸಾರವಾಗಿ. प्रधानमनतिक्रम्य यथाप्रधानम्। अव्ययी०। "कम्पेन मूर्ध्नः शतपत्रयोनिं वाचा हरिं वृत्रहणं स्मितेन। आलोकमात्रेण सुरानशेषान् संभावयामास यथाप्रधानम्" कुमा० ७-४६।

**यथाप्राप्तम् ಯಥಾಪ್ರಾಪ್ತಮ್** (अव्य०) ಕ್ರಮಪ್ರಾಪ್ತವಾದ, ಯೋಗ್ಯವಾದ ರೀತಿಯಲ್ಲಿ ದೊರೆತ.

**यथाभागम् ಯಥಾಭಾಗಮ್** (अव्य०) ಯೋಗ್ಯವಾದ ಸ್ಥಳದಲ್ಲಿ, ಕ್ಲುಪ್ತವಾದ ಸ್ಥಳದಲ್ಲಿ. भागमनतिक्रम्य यथाभागम्। अव्ययी०। "कश्चिद्यथाभागमवस्थितेऽपि स्वसन्निवेशाद्व्यतिलङ्घिनीव" रघु० ६-१९।

**यथाभागशस् ಯಥಾಭಾಗಶಸ್** (अव्य०) ಭಾಗವನ್ನನುಸರಿಸಿ, ಪ್ರಮಾಣಕ್ಕೆ ತಕ್ಕಂತೆ.

**यथाभिलषितम् ಯಥಾಭಿಲಷಿತಮ್** (अव्य०) ಇಷ್ಟಕ್ಕೆ ತಕ್ಕಂತೆ, ಅಪೇಕ್ಷೆಗೆ ಅನುಗುಣವಾಗಿ. **–अभिरुचितम् –ಅಭಿರುಚಿತಮ್, –अभीष्टम् –ಅಭೀಷ್ಟಮ್.** अभिलषितम् अभिरुचितम् अभीष्टं वा अनतिक्रम्य। अव्ययी०।

**यथामुखीन ಯಥಾಮುಖೀನ** (वि०) ನೇರವಾಗಿ ಎದುರಿಗೆ ನೋಡುತ್ತಿರುವ. ಪ್ರತಿಬಿಂಬಕ್ಕೆ ಆಶ್ರಯವಾಗಿರುವಂತಿರುವ. मुखस्य सदृशं यथामुखम् प्रतिबिम्बम् सादृश्येऽव्ययीभावः। निपा०। दृश्यतेऽनेनेति दर्शनः— यथामुखं दर्शनः। "यथामुखीनः सीतायाः पुप्लुवे बहु लोभयन्" भट्टि० ५-४८।

**यथायथम् ಯಥಾಯಥಮ್** (अव्य०) 1. ಯೋಗ್ಯತೆಗೆ ಅನುಗುಣವಾಗಿ, ಗುಣಕ್ಕೆ ತಕ್ಕಂತೆ, ಸ್ವಭಾವಕ್ಕೆ ತಕ್ಕಂತೆ. यथा शब्दस्य वीप्सायां द्वित्वं निपा० (८-१-१४)। "असक्तमाराधयतो यथायथं विभज्य भक्त्या समपक्षपातया" किरा० १-११। 2. ತಮ್ಮ ಸ್ವಂತಕ್ಕೆ, ತಾವಾಗಿ.

**यथार्थ ಯಥಾರ್ಥ** (वि०) 1. ನಿಜವಾದ, ಸತ್ಯವಾದ. अर्थमनतिक्रान्तः। "सौम्येति चाभाष्य यथार्थभाषी" रघु० १४-४४। "यथार्थशौर्या यदुवीरयोधाः" याद० २०-१८। 2. ಅರ್ಥಕ್ಕೆ ಅನುಗುಣವಾದ. "करिष्यन्निव नामास्य यथार्थमरिनिग्रहात्" रघु० १५-६। (अव्य०) 3. ಅರ್ಥಕ್ಕೆ ಅನುಗುಣವಾಗಿ. 4. ನಿಜವಾಗಿ, ಸತ್ಯವಾಗಿ. अर्थमनतिक्रम्य। अव्ययी०।

**यथार्थतस् ಯಥಾರ್ಥತಸ್** (अव्य०) ತತ್ತ್ವರೂಪದಿಂದ, ಸತ್ಯರೂಪದಿಂದ. यथार्थ "तसिल्" (५-३-१४)। "रथाधिरूढं च रथं च रक्षन् यथार्थतो दर्शयति स्म यन्ता" याद० २३-२२।

**यथार्थनामन् ಯಥಾರ್ಥನಾಮನ್** (वि०) ಅನುರೂಪವಾದ ಹೆಸರುಳ್ಳವನು, ಅರ್ಥಕ್ಕೆ ಅನುಗುಣ (ಸರಿಯಾದ) ವಾದ ಹೆಸರುಳ್ಳವನು. यथार्थं नामास्य। "राजा प्रजारञ्जनलब्धवर्णः परन्तपो नाम यथार्थनामा" रघु० ६-२१।

**यथार्ह ಯಥಾರ್ಹ** (अव्य०) 1. ಯೋಗ್ಯತೆಗೆ ತಕ್ಕಂತೆ, ಅರ್ಹತೆಯನ್ನು ಮೀರದೆ. अर्हं योग्यमनतिक्रम्य। अव्ययी०। "यथार्हं संसृष्टो यदुभिरखिलैरर्चितपदः" याद० १५-१३४। (वि०) 2. ಉಚಿತವಾದ, ಯೋಗ್ಯವಾದ, ತಕ್ಕುದಾದ. अर्हमनतिक्रान्तः। "यथार्हसेवावसरे प्रमाद्यतां यदन्वितः सन्नभिगम्यतां ययौ" याद० १४-७५।

**यथार्हवर्ण ಯಥಾರ್ಹವರ್ಣ** (पुं०) ಗೂಢಚಾರ, ದೂತ. यथार्हं वर्णयति—वर्ण (वर्णक्रियाविस्तारगुणवचनेषु) + णिच् "अच्" (३-१-१३४)। "यथार्हवर्णः प्रणिधिरपसर्पश्चरः स्पशः" अम०।

**यथावकाशम् ಯಥಾವಕಾಶಮ್** (अव्य०) 1. ಅವಕಾಶಕ್ಕೆ ತಕ್ಕಂತೆ, ಸ್ಥಳಕ್ಕೆ ಅನುಗುಣವಾಗಿ. 2. ಬಿಡುವಿಗೆ ತಕ್ಕಂತೆ, ಪುರಸತ್ತಿಗೆ ಅನುಗುಣವಾಗಿ. ಸಮಯಕ್ಕೆ ಅನುಗುಣವಾಗಿ. 3. ಸ್ಥಾನವನ್ನು ಅತಿಕ್ರಮಿಸದೆ, ಸ್ವಸ್ಥಾನವನ್ನು ಮೀರದೆ. अवकाशं प्रदेशं कालं स्थानं वा अनतिक्रम्य। "प्रालम्बमुत्कृष्य यथावकाशं निनाय साचीकृतचारुवक्त्रः" रघु० ६-१४।

**यथावत् ಯಥಾವತ್** (अव्य०) 1. ಯೋಗ್ಯವಾಗಿ, ಸರಿಯಾಗಿ, ಶಾಸ್ತ್ರೋಕ್ತವಾಗಿ. यथा "वतिः" (५-१-११७)। "ततो यथावद्विहिताध्वराय तस्मै स्मयावेशविवर्जिताय" रघु० ५-१९। 2. ಕ್ರಮವಾಗಿ, ಸರಿಯಾಗಿ. "लिपेर्यथावद्ग्रहणेन वाङ्मयं नदीमुखेनेव समुद्रमाविशत्" रघु० ३-२८। 3. ನಿಜವಾಗಿ, ಸತ್ಯವಾಗಿ.

**यथाविधि ಯಥಾವಿಧಿ** (अव्य०) ನಿಯಮಕ್ಕೆ ತಕ್ಕಂತೆ, ಶಾಸ್ತ್ರಕ್ಕೆ ಅನುಸಾರವಾಗಿ. विधिमनतिक्रम्य। अव्ययी०। "यथाविधि हुताग्नीनाम्" रघु० १-६।

**यथावृद्धम् ಯಥಾವೃದ್ಧಮ್** (अव्य०) ಹಿರಿಯರ ಕ್ರಮದಲ್ಲಿ, ಹಿರಿಯರನ್ನು ಮೀರದೆ. वृद्धाननतिक्रम्य — अव्ययी०। "गगनादवतीर्णा सा यथावृद्धपरम्परा" कुमा० ६-४९।

**यथावृत्तम् ಯಥಾವೃತ್ತಮ್** (अव्य०) ನಡೆದಂತೆ, ನಡೆದಹಾಗೆ, ವಾಸ್ತವವಾಗಿ ನಡೆದಿರುವ ರೀತಿಯಲ್ಲಿ. वृत्तमनतिक्रम्य यथावृत्तम्।

**यथाशक्ति ಯಥಾಶಕ್ತಿ** (अव्य०) ಶಕ್ತಿಯನ್ನು ಮೀರದೆ, ಶಕ್ತಿಗೆ ಅನುಸಾರವಾಗಿ. शक्तिमनतिक्रम्य यथाशक्ति। अव्ययी०। "पश्य मां निर्जितं शत्रुवृत्रणायुधभुजं मृधे। घटमानं यथाशक्ति तव प्राणजिहीर्षया" भाग० ६-१२-१६।

**यथाशास्त्रम् ಯಥಾಶಾಸ್ತ್ರಮ್** (अव्य०) ಶಾಸ್ತ್ರ ರೀತಿಯಲ್ಲಿ, ಶಾಸ್ತ್ರಕ್ಕೆ ಅನುಸಾರವಾಗಿ. शास्त्रमनतिक्रम्य यथाशास्त्रम्। अव्ययी०। "सर्वेऽपि क्रमशस्त्वेते यथाशास्त्रं निषेविताः। यथोक्तकारिणं विप्रं नयन्ति परमां गतिम्" मनु० ६-८८।

**यथाश्रुतम् ಯಥಾಶ್ರುತಮ್** (अव्य०) 1. ಶಾಸ್ತ್ರಕ್ಕೆ ಅನುಸಾರವಾಗಿ, ಶಾಸ್ತ್ರರೀತಿಯಲ್ಲಿ. श्रुतमनतिक्रम्य। अव्ययी०। 2. ಕೇಳಿದ್ದಕ್ಕೆ ಅನುಸಾರವಾಗಿ, ಕೇಳಿದ ಹಾಗೆ. "सत्तामनन्यामिव सद्गुणानां यथाश्रुतं प्रैक्षत यादवेन्द्रः" याद० १३-२।

**यथासङ्ख्य ಯಥಾಸಂಖ್ಯ** (ನಂ) ಅರ್ಥಾಲಂಕಾರದ ಒಂದು ಭೇದ. ಸಮಸಂಖ್ಯೆಯಿಂದ ಕ್ರಮವಾಗಿ ಹೇಳಿದ ಪದಗಳಿಗೆ ಆ ಸಂಖ್ಯಾಕ್ರಮದಿಂದ ಅನ್ವಯ ಹೇಳುವಲ್ಲಿ **ಯಥಾಸಂಖ್ಯಾಲಂಕಾರ.** ಮೊದಲನೆಯ ಪದಕ್ಕೆ ಮೊದಲನೆಯ ಪದದೊಡನೆಯೂ ಎರಡನೆಯದಕ್ಕೆ ಎರಡನೆಯ ಪದದೊಡನೆಯೂ ಈ ರೀತಿ ಕ್ರಮವಾಗಿ ಹೇಳುವುದು ಯಥಾಸಂಖ್ಯವಾಗುವುದು. "यथासङ्ख्यं क्रमेणैव क्रमिकाणां समन्वयः"। ಉದಾ: "शत्रुं मित्रं विपत्तिं च जय रञ्जय भञ्जय"। ಇಲ್ಲಿ शत्रुं जय मित्रं रञ्जय विपत्तिं भञ्जय ಎಂದು ಕ್ರಮವಾಗಿ ಪದಗಳಿಗೆ ಅನ್ವಯವು ಹೇಳಲ್ಪಟ್ಟಿದೆ. "यथासङ्ख्यमनुदेशः समानाम्" ಪಾ० ಸೂ० १-३-१०।

**यथासमयम् ಯಥಾಸಮಯಮ್** (अव्य०) 1. ಸರಿಯಾದ ಕಾಲದಲ್ಲಿ. 2. ಒಪ್ಪಂದಕ್ಕೆ ಅನುಸಾರವಾಗಿ. समयमनतिक्रम्य।

**यथासुखम् ಯಥಾಸುಖಮ್** (अव्य०) ಸುಖಕರವಾಗಿ, ಸಂತೋಷವುಂಟಾಗುವಂತೆ. "सुखमनतिक्रम्य।" "अथ यथासुखमार्तवमुत्सवं समनुभूय विलासवतीसखः" ರಘು० ९-४८।

**यथास्थानम् ಯಥಾಸ್ಥಾನಮ್** (अव्य०) 1. ಯೋಗ್ಯವಾದ ಸ್ಥಾನದಲ್ಲಿ, ಸರಿಯಾದ ಸ್ಥಾನದಲ್ಲಿ. 2. ಮೊದಲಿನ ಸ್ಥಾನದಲ್ಲಿ. स्थानमनतिक्रम्य। "यथास्थानं प्रतिष्ठापयामि"।

**यथास्थित ಯಥಾಸ್ಥಿತ** (ವಿ०) 1. ಇದ್ದಂತೆ ಇರುವ, ಬದಲಾವಣೆಯಿಲ್ಲದ. 2. ನಿಜವಾದ, ಸತ್ಯವಾದ. स्थितमनतिक्रान्तः। "रामं यथास्थितं सर्वं भ्राता ब्रूते स्म विह्वलः" ಭಟ್ಟಿ० ६-८। (अव्य०) 3. ಪರಿಸ್ಥಿತಿಗೆ ತಕ್ಕಂತೆ. 4. ನಿಜವಾಗಿ, ಸತ್ಯವಾಗಿ.

**यथास्थिति ಯಥಾಸ್ಥಿತಿ** (अव्य०) 1. ಪರಿಸ್ಥಿತಿಗೆ ಅನುಗುಣವಾಗಿ, ಸಂದರ್ಭಕ್ಕೆ ಅನುಸಾರವಾಗಿ. 2. ವಾಡಿಕೆಯಂತೆ, ಪದ್ಧತಿಯಂತೆ.

**यथास्वम् ಯಥಾಸ್ವಮ್** (अव्य०) 1. ತಮ್ಮದನ್ನು ಅತಿಕ್ರಮಿಸದೆ, ತಮ್ಮ ತಮ್ಮ ಕ್ರಮದಲ್ಲಿ. स्वमनतिक्रम्य यथास्वम्। अव्ययी०। "अध्यासते चीरभृतो यथास्वं चिरोज्झितान्याश्रममण्डलानि" ರಘು० १३-२२। 2. ನಿಜವಾಗಿ, ಸತ್ಯವಾಗಿ. 3. ಪ್ರತ್ಯೇಕವಾಗಿ. 4. ಯೋಗ್ಯವಾಗಿ, ಕ್ರಮವಾಗಿ. "यथास्वमाश्रमैश्चक्रे वर्णैरपि षडंशभाक्" ರಘು० १७-६५।

**यथेच्छम् ಯಥೇಚ್ಛಮ್** (अव्य०) 1. ಇಷ್ಟಬಂದಂತೆ, ಮನಸ್ಸಿಗೆ ತೋಚಿದಂತೆ. इच्छामनतिक्रम्य। अव्ययी०। 2. ಇಷ್ಟಕ್ಕೆ ಅನುಸಾರವಾಗಿ, ಅಪೇಕ್ಷೆಗೆ ಅನುಗುಣವಾಗಿ. (ವಿ०)3. ಇಷ್ಟಕ್ಕೆ ಅನುಸಾರವಾದ, ಅಪೇಕ್ಷೆಗೆ ಅನುಗುಣವಾದ. **–इष्टम् –ಇಷ್ಟಮ್, –ईप्सितम् –ಈಪ್ಸಿತಮ್.** इष्टम् ईप्सितं वाऽनतिक्रम्य। "कुर्युर्यथेष्टं तत्सर्वमीशास्ते स्ववनस्य वै"। "तान् प्रत्यवादीदथ राघवोऽपि यथेप्सितं प्रस्तुतकर्म धर्म्यम्" ಭಟ್ಟಿ० २-२८।

**यथोक्त ಯಥೋಕ್ತ** (ವಿ०) 1. ಮೊದಲು ಹೇಳಲ್ಪಟ್ಟ, ಹಿಂದೆ ಹೇಳಲ್ಪಟ್ಟ. उक्तमनतिक्रान्तः। "प्रातर्यथोक्तव्रतपारणान्ते प्रास्थानिकं स्वस्त्ययनं प्रयुज्य" ರಘು० २-७०। (अव्य०) 2. ಮೇಲೆ ಹೇಳಲ್ಪಟ್ಟಂತೆ, ಹಿಂದೆ ಹೇಳಲ್ಪಟ್ಟಂತೆ.

**यथोचित ಯಥೋಚಿತ** (ವಿ०) 1. ಯೋಗ್ಯವಾದ, ಅನುರೂಪವಾದ. (अव्य०) 2. ಯೋಗ್ಯವಾಗಿ, ಅನುರೂಪವಾಗಿ, ಅನುಗುಣವಾಗಿ. उचितमनतिक्रम्य। "कर्माणि च यथाकालं यथादेशं यथाबलम्। यथोचितं यथावित्तमकरोद्ब्रह्मसात्कृतम्" ಭಾಗ० ४-२२-५०।

**यथोदित ಯಥೋದಿತ** (ವಿ०) 1. ಹಿಂದೆ ಹೇಳಲ್ಪಟ್ಟ, ಮೇಲೆ ಹೇಳಲ್ಪಟ್ಟ. (अव्य०) 2. ಹೇಳಿದ್ದಕ್ಕೆ ಅನುಸಾರವಾಗಿ, ಹೇಳಿದ್ದನ್ನು ಅತಿಕ್ರಮಿಸದೆ. उदितमनतिक्रम्य। अव्ययी०।

**यथोद्दिष्ट ಯಥೋದ್ದಿಷ್ಟ** (ವಿ०) 1. ಉದ್ದೇಶ ಮಾಡಿದ್ದಕ್ಕೆ ಅನುಗುಣವಾದ, ಸೂಚನೆ ಮಾಡಿ ತೋರಿಸಿದ್ದಕ್ಕೆ ಅನುಸಾರವಾದ. उद्दिष्टमनतिक्रान्तः। (अव्य०) 2. ಸೂಚನೆಗೆ ಅನುಸಾರವಾಗಿ. उद्दिष्टमनतिक्रम्य। अव्ययी०।

**यथोद्देशम् ಯಥೋದ್ದೇಶಮ್** (अव्य०) ಉದ್ದೇಶಕ್ಕೆ ಅನುಗುಣವಾಗಿ, ಸೂಚನೆಗೆ ಅನುಸಾರವಾಗಿ. उद्देशमनतिक्रम्य। अव्ययी०।

**यद् ಯದ್** (ತ್ರಿ०) ಇದೊಂದು ಸಂಬಂಧಾರ್ಥವನ್ನು ಕೊಡುವ ಸರ್ವನಾಮಪದ. **ಮೂರು ಲಿಂಗಗಳಲ್ಲಿಯೂ ಇದರ ರೂಪಗಳು:**

| (ಪುಂ) | | | |
|---|---|---|---|
| | यः | यौ | ये |
| | यम् | यौ | यान् |
| | येन | याभ्याम् | यैः |
| | यस्मै | ,, | येभ्यः |
| | यस्मात् | ,, | ,, |
| | यस्य | ययोः | येषाम् |
| | यस्मिन् | ,, | येषु। |

| | | | |
|---|---|---|---|
| (स्त्री०) | या | ये | याः |
| | याम् | ये | याः |
| | यया | याभ्याम् | याभिः |
| | यस्यै | ,, | याभ्यः |
| | यस्याः | ,, | ,, |
| | यस्याः | ययोः | यासाम् |
| | यस्याम् | ,, | यासु। |
| (न०) | यत् | ये | यानि |
| | ,, | ,, | ,, |
| | येन | याभ्याम् | यैः |

ಮುಂತಾಗಿ ಪುಂಲಿಂಗದಂತೆ ರೂಪಗಳು. ಯಾರು ಯಾವಳು ಯಾವುದು. ಇದಕ್ಕೆ ಸಂಬಂಧಪಟ್ಟ ತದ್ ಶಬ್ದದಿಂದ ವಾಕ್ಯ ಪೂರ್ತಿಯಾಗುವುದು. "यस्य चेतसि वर्तेथाः स तावत् कृतिनां वरः" ಕುಮಾ० ६-१८। "अभ्यूषुषो याम-भवज्जनस्य याः संपदस्ता मनसोऽप्यगम्याः" माघ० ३-५९। ಕೆಲವು ಕಡೆ अदस् इदम् ಮತ್ತು एतद् ಶಬ್ದಗಳಿಂದಲೂ ಇದರ ವಾಕ್ಯವು ಪೂರ್ತಿಯಾಗುವುದು. "जगत्यपर्याप्तसहस्रभानुना न यन्नियन्तुं समभावि भानुना। प्रसह्य तेजोभिरसह्यतां गतैरदस्त्वया नुत्तम-नुत्तमं तमः" माघ० १-२७। "आलप्यालमिदं बभ्रोर्यत्स दारानपाहरत्। कयापि खलु पापानामलमश्रेयसे यतः" माघ० २-४०। "यद्" ಶಬ್ದವು ಪ್ರಶ್ನಾರ್ಥಕ ಸರ್ವನಾಮವು ದೊಡನೆಯಾಗಲಿ ಸರ್ವನಾಮಾವ್ಯಯದೊಡನೆಯಾಗಲಿ ಸೇರಿದಾಗ ಅನಿರ್ದಿಷ್ಟವಾದ ಅರ್ಥವನ್ನೂ ಕೊಡುವುದು. "सूतो वा सूतपुत्रो वा यो वा को वा भवाम्यहम्" वेणी० ३-३३। ಇಲ್ಲಿ ಯಾವನಾದರೂ ಎಂಬ ಅರ್ಥವನ್ನೂ यत्रकुत्रापि यत्रक्वापि यत्रकुत्रचित् ಎಲ್ಲಾದರೂ ಒಂದು ಕಡೆ यःकश्चित् ಯಾವನಾದರೂ ಒಬ यत्किञ्चित् ಯಾವು ದಾದರೂ ಒಂದು याकाचित् ಯಾವಳಾದರೂ ಒಬ್ಬಳು ಇತ್ಯಾದಿ ಅನಿರ್ದಿಷ್ಟವಾದ ಅರ್ಥಗಳನ್ನೂ ಕೊಡುವುದು. (अव्य०) ಹೇತು, ಕಾರಣ. तद् ततः ಎಂಬ ಹೇತ್ವರ್ಥಕ ಅವ್ಯಯದಿಂದ ವಾಕ್ಯಪೂರ್ತಿಯಾಗುವುದು. "द्विषन्निमित्ता यदियं दशा ततः समूलमुन्मूलयतीव मे मनः" किरा० १-४१।

**यदर्थम् ಯದರ್ಥಮ್** (अव्य०) ಯಾತಕ್ಕೋಸ್ಕರ?, ಯಾತಕ್ಕಾಗಿ?, ಯಾರಿಗಾಗಿ? यस्मै इदम् यदर्थम्। अस्वपदविग्रहः (वा० २-१-३६)। "यदर्थमम्भोज-मिवोष्णवारणं कृतं तपःसाधनमेतया वपुः" कुमा० ५-५२।

**यदपि ಯದಪಿ** (अव्य०) ಆದರೂ, ಹಾಗಾದರೂ, ಹೀಗೆ ಆದರೂ. "वक्रः पन्था यदपि भवतः प्रस्थितस्योत्तरा-शाम्" मेघ० १-२७।

**यदा ಯದಾ** (अव्य०) 1. ಯಾವಾಗ?, ಯಾವ ಕಾಲದಲ್ಲಿ? "तदा" ಪದವು ಇದರ ವಾಕ್ಯ ಪೂರ್ತಿಮಾಡುವುದು. यद् काले "दा" (५-३-१५)। "यदा च तस्याधिगमे जगत्पतेरपश्यदन्यं न विधिं विचिन्वती। तदा सहास्माभिरनुज्ञया गुरोरियं प्रपन्ना तपसे तपोवनम्" कुमा० ५-५१। 2. ಯಾವ ಕಾರಣದಿಂದ? "यदा बुधैः सर्वगतस्त्वमुच्यसे न वेत्सि भावस्थमिमं कथं जनम्" कुमा० ५-५८। 3. —ರೆ. (ಆದರೆ, ಹೋದರೆ, ಬಂದರೆ, ಮಾಡಿದರೆ ಇತ್ಯಾದಿ ಅರ್ಥಗಳಲ್ಲಿ.)

**यदि ಯದಿ** (अव्य०) 1. —ರೆ, ಆದರೆ. यती (प्रयत्ने) "इन्" (उ० ४-११८)। पृषो०। यदि ಪದದ ಪ್ರಯೋಗವಿದ್ದಲ್ಲಿ ಅರ್ಥವು ಸಾಮಾನ್ಯವಾಗಿ तर्हि ಪದ ದಿಂದ ಪೂರ್ಣವಾಗುವುದು. "यदि प्रमाणीकृतमार्यचेष्टितं (तर्हि) किमित्यदोषेण तिरस्कृता वयम्" किरा० १४-११। ಕೆಲವೆಡೆ तत् ततः तदा ಮತ್ತು अत्र ಇವು ಗಳಿಂದಲೂ ಅರ್ಥವು ಪೂರ್ತಿಯಾಗುವುದು. "यदि कुत्रचित् तं जीवन्तं पश्यसि तद्गत्वा त्वमरण्यं शोधय" पञ्चतं० २। "यदि न स्यान्नरपतिः सम्यङ्नेता ततः प्रजा। अकर्णधारा जलधौ विप्लवेतेह नौरिव" पञ्चतं० ३-७१। "यदि स्यात् पावकः शीतः प्रोष्णो वा शशलाञ्छनः। स्त्रीणां तदा सतीत्वं स्यात् यदि स्याद् दुर्जनो हितः" पञ्चतं० ३-१९३। 2. —ರೆ. (ಆದರೆ, ಹೋದರೆ, ಬಂದರೆ, ಮಾಡಿದರೆ ಇತ್ಯಾದಿ ಅರ್ಥಗಳಲ್ಲಿ.) "निजौजसोज्जासयितुं जगद्द्रुहामुपाजिहीथा न महीतलं यदि" माघ० १-३७। 3. ಹಾಗಾದರೆ, ಒಂದುವೇಳೆ, ಪಕ್ಷಾಂತರದಲ್ಲಿ. "पूर्वं स्पृष्टं यदि किल भवेदङ्गमेभि-स्तवेति" मेघ० २-४४। 4. ಯಾವಾಗ? 5. ಸಂಭಾವನೆ, ಊಹೆ. 6. ನಿಂದೆ. 7. ವಿಕಲ್ಪ. "यदि गर्हाविकल्पयोः" मेदि०। यद्यपि—1. ಆದರೂ, ಹಾಗಾದರೂ. "यद्यप्येते न पश्यन्ति लोभोपहतचेतसः" गीता १-३८। 2. ಅವಧಾರಣ, ನಿಶ್ಚಯ. "भूयांसः क्वचिदपि काम-मस्खलन्तस्तुङ्गत्वं दधति च यद्यपि द्वयेऽपि" माघ० १६-८२। यदि वा ಅಥವಾ. "यद्वा जयेम यदिवा नो जयेयुः" गीता २-६।

**यदीय ಯದೀಯ** (वि०) ಯಾರ ಸಂಬಂಧವಾದ, ಯಾವುದರ ಸಂಬಂಧವಾದ; यस्यायं—यद् "छः"

(४-२-११४)। "यदीयभित्तौ प्रतिबिम्बिताङ्गमात्मानमालोक्य रुषा करीन्द्राः" कुमा० ९-४२।

**यदु ಯದು** (पुं०) 1. ಯಯಾತಿರಾಜನ ಹಿರಿಯ ಮಗ, ಯಾದವರ ಮೂಲಪುರುಷ, ಶುಕ್ರಾಚಾರ್ಯರ ಮಗಳಾದ ದೇವಯಾನಿಯ ಪುತ್ರ. ಇವನು ತಂದೆಯ ಮುದಿತನವನ್ನು ತೆಗೆದುಕೊಂಡು ತನ್ನ ಯೌವನವನ್ನು ತಂದೆಗೆ ಕೊಡಲು ಸಮ್ಮತಿಸದೆ ತಂದೆಯ ಶಾಪದಿಂದ ತನಗೂ ತನ್ನ ವಂಶದವರಿಗೂ ರಾಜ್ಯಾಧಿಕಾರವನ್ನು ಕಳೆದುಕೊಂಡನು. ಈ ಕಾರಣದಿಂದ ಇವನ ವಂಶದಲ್ಲಿ ಜನಿಸಿದ ಶ್ರೀಕೃಷ್ಣನೂ ಸಹ ಕಂಸನನ್ನು ಸಂಹರಿಸಿದ ನಂತರವೂ ಸಿಂಹಾಸನವನ್ನೇರಲಿಲ್ಲ. 2. ಯದುವಂಶದಲ್ಲಿ ಹುಟ್ಟಿದವನು.

**यदुनन्दन, –नाथ, –श्रेष्ठ ಯದುನಂದನ, –ನಾಥ, –ಶ್ರೇಷ್ಠ** (पुं०) ಶ್ರೀಕೃಷ್ಣ. "यदुनन्दनेन तदुदन्वतः पयः शशिनेव राजकुलमाप नन्दथुम्" माघ० १३-६५।

**यदुनाथ, –पति ಯದುನಾಥ, –ಪತಿ** (पुं०) ಶ್ರೀಕೃಷ್ಣ. यदूनां नाथः पतिर्वा।

**यदृच्छा ಯದೃಚ್ಛಾ** (स्त्री०) 1. ಸ್ವಾತಂತ್ರ್ಯ, ಇತರರಿಗೆ ಅಧೀನನಾಗಿಲ್ಲದಿರುವಿಕೆ, ಅಡ್ಡಿ ಆತಂಕಗಳಿಲ್ಲದಿರುವಿಕೆ. ऋच्छ (गतौ) "अः" (३-३-१०४)। याऋच्छा यदृच्छा। "यदृच्छयाचोपपन्नं स्वर्गद्वारमपावृतम्" गीता २-३२। 2. ಸ್ವೇಚ್ಛೆ, ತನ್ನ ಇಷ್ಟ. "ससञ्चरिष्णुर्भुवनान्तरेषु यां यदृच्छयाशिश्रयदाश्रयः श्रियः" माघ० १-४६। 3. ಅಕಸ್ಮಾತ್, ಅನಿರೀಕ್ಷಿತ, ದೈವಗತಿ. "वसिष्टधेनुश्च यदृच्छयागता श्रुतप्रभावा ददृशेऽथ नन्दिनी" रघु० ३-४०।

**यदृच्छालाभ ಯದೃಚ್ಛಾಲಾಭ** (पुं०) ಪ್ರಯತ್ನವಿಲ್ಲದೆ ತಾನಾಗಿ ಪ್ರಾಪ್ತವಾಗುವುದು, ಯಾಚಿಸದೆ ಅಕಸ್ಮಾತ್ತಾಗಿ ಬಂದೊದಗುವುದು. यदृच्छया लाभः। "यदृच्छालाभसंतुष्टः द्वन्द्वातीतो विमत्सरः" गीता ४-२२।

**यदृच्छाशब्द ಯದೃಚ್ಛಾಶಬ್ದ** (पुं०) ಸಂಜ್ಞೆಯ ಪದ, ಅರ್ಥವಿಲ್ಲದ ಶಬ್ದ, ಜಾತಿ ಗುಣ ಕ್ರಿಯಾದಿಗಳಿಲ್ಲದ ಶಬ್ದ. डित्थ डवित्थ ಮೊದಲಾದ ಶಬ್ದಗಳು ಒಬ್ಬನನ್ನು ಸಂಬೋಧಿಸಿ ಕರೆಯಲು ಮಾತ್ರ ಉಪಯೋಗಿಸುವ ಶಬ್ದಗಳೇ ಹೊರತು ಅವಕ್ಕೆ ಅರ್ಥವಿಲ್ಲ. "असंपादयतः कंचिदर्थं जातिक्रियागुणैः। यदृच्छाशब्दवत्पुंसः संज्ञायै जन्म केवलम्" माघ० २-४७।

**यदृच्छातस् ಯದೃಚ್ಛಾತಸ್** (अव्य०) ಅಕಸ್ಮಾತ್ತಾಗಿ, ಅನಿರೀಕ್ಷಿತವಾಗಿ. यदृच्छा "तसिल्" (५-३-७)।

**यद्यपि ಯದ್ಯಪಿ** (अव्य०) 1. ಆದರೂ, ಹಾಗಾದರೂ. "यद्यप्येते न पश्यन्ति कामोपहतचेतसः" गीता १-३८। 2. ಅವಧಾರಣೆ, ನಿಶ್ಚಯ. "तुङ्गत्वं दधति च यद्यपि द्वयेऽपि" माघ० १६-८२। ಇಲ್ಲಿ यद्यपि दधति दधत्येव ಎಂದು यद्यपि ಪದಕ್ಕೆ ಅವಧಾರಣೆಯ ಅರ್ಥ.

**यद्वत् ಯದ್ವತ್** (अव्य०) 1. ಪ್ರಶ್ನೆ. 2. ಸಂಶಯ. "यद्वत् प्रश्ने वितर्के च" मेदि०।

**यद्वा ಯದ್ವಾ** (अव्य०) ಅಥವಾ, ಒಂದು ಪಕ್ಷದಲ್ಲಿ, ಪಕ್ಷಾಂತರದಲ್ಲಿ. "यद्वा जयेम यदि वा नो जयेयुः" गीता २-६।

**यन्तृ ಯಂತೃ** (पुं०) 1. ಸಾರಥಿ, ರಥವನ್ನು ನಡೆಸುವವನು, ಗಾಡಿ ನಡೆಸುವವನು. यम (उपरमे) "तृच्" (३-१-१३३)। "अथ यन्तारमादिश्य धुर्यान् विश्रामयेति सः" रघु० १-५४। 2. ಮಾವಟಿಗ, ಆನೆಯ ಸವಾರ. "अङ्कुशं द्विरदस्येव यन्ता गम्भीरवेदिनः" रघु० ४-३९। "यन्ता यातुः प्रत्यरीभं द्विपस्य" माघ० १८-३०। (त्रि०) 3. ಅಂಕೆಯಲ್ಲಿಡುವವನು, ಹತೋಟಿಯಲ್ಲಿಡುವವನು.

**यन्त्र ಯಂತ್ರ** (न०) 1. ಕೋಟೆಯ ಕಂದಕದ ಹೊರಗಡೆ ಶತ್ರುಗಳನ್ನು ತಡೆಯಲು ಇಟ್ಟಿರುವ ಚಕ್ರ. यम (उपरमे) "ष्ट्रन्" (उ० ४-१५९)। "वारकादीनि यन्त्राणि परिखाया बहिर्भुवि" वैज०। 2. ಅಗಳಿ, ಬಾಗಿಲಿನ ಅಡ್ಡಪಟ್ಟಿ ಅಥವಾ ಬೀಗ. 3. ಭೀತಿ ಮತ್ತು ರೋಗ ನಿವಾರಣೆಗಾಗಿ ದೇವತೆ ಮತ್ತು ಮಂತ್ರಗಳನ್ನು ಬರೆದಿರುವ ಲೋಹದ ತಗಡು, ತಾಯಿತಿ, ರಕ್ಷಾಕರಂಡ. 4. ಉಪಕರಣ, ಸಾಧನ, ಕೆಲಸಕ್ಕೆ ಸಹಾಯಕವಾದ ಸಾಮಾನು (ವಸ್ತು). कूपयन्त्रम् ಬಾವಿಯಿಂದ ನೀರನ್ನು ಎಳೆಯುವ ರಾಟೆ. गृहयन्त्रम् ಮನೆಯ ಮೇಲೆ ಧ್ವಜ (ಬಾವುಟ) ವನ್ನು ಕಟ್ಟುವ ಕಂಬ. "गृहयन्त्रपताकाश्रीरपौरादरनिर्मिता" कुमा० ६-४१। 5. ಸಂಯಮ, ಅಂಕೆ, ನಿರ್ಬಂಧ. 6. ಬೈರಿಗೆ, ಬಡಗಿಯು ಮರವನ್ನು ಕೊರೆಯುವ (ತೂತುಮಾಡುವ) ಸಾಧನ. 7. ಔಷಧವನ್ನು ಕುದಿಯಿಸಿ ಪಾಕಮಾಡುವ ಭಾಂಡ. 8. ದೇವತೆಗಳನ್ನು ಆವಾಹನೆ ಮಾಡುವ ಚಕ್ರ ಮೊದಲಾದುದು. 9. ಅಗ್ನಿಯನ್ನು ಉಗುಳುವ ಬಂದೂಕ ಫಿರಂಗಿ ಮೊದಲಾದುದು. 10. ವೈದ್ಯನು ಶಸ್ತ್ರಚಿಕಿತ್ಸೆಯನ್ನು ಮಾಡುವಾಗ ಉಪಯೋಗಿಸುವ ಮೊಂಡಾದ ಹರಿತವಲ್ಲದ ಒಂದು ಆಯುಧ, ಚಿಮುಟ ಇಕ್ಕಳ ಮೊದಲಾದುದು.

ಈ ಯಂತ್ರವು ಸ್ವಸ್ತಿಕಯಂತ್ರ ಸಂದಂಶಯಂತ್ರ ತಾಲ ಯಂತ್ರ ನಾಡೀಯಂತ್ರ ಶಲಾಕಾಯಂತ್ರ ಮತ್ತು ಉಪ ಯಂತ್ರಗಳೆಂದು ಆರು (6) ವಿಧ. (1) ಸ್ವಸ್ತಿಕಯಂತ್ರವು ಇಪ್ಪತ್ತನಾಲ್ಕು (24) ವಿಧ. (2) ಸಂದಂಶಯಂತ್ರವು ಎರಡು (2) ವಿಧ. (3) ತಾಲಯಂತ್ರವು ಎರಡು (2) ವಿಧ. (4) ನಾಡೀಯಂತ್ರವು ಇಪ್ಪತ್ತು (20) ವಿಧ. (5) ಶಲಾಕಾಯಂತ್ರವು ಇಪ್ಪತ್ತೆಂಟು (28) ವಿಧ. (6) ಉಪಯಂತ್ರವು ಇಪ್ಪತ್ತೈದು (25) ವಿಧ. "तानि यन्त्राणि स्वस्तिकयन्त्राणि, संदंशयन्त्राणि, तालयन्त्राणि, नाडीयन्त्राणि, शलाकायन्त्राणि, उपयन्त्राणि चेति षट्प्रकाराणि" सुश्रुत० सूत्र० ७। 11. ಮರ ಮೊದಲಾದುವುಗಳಿಂದ ನಿರ್ಮಿತವಾದ ಯಂತ್ರದಂತಿರುವ ಪ್ರಕೃತಿ ಯೆಂಬ ಯಂತ್ರ. "ईश्वरः सर्वभूतानां हृद्देशेऽर्जुन तिष्ठति। भ्रामयन् सर्वभूतानि यन्त्रारूढानि मायया" गीता १८-६१।

**यन्त्रक ಯಂತ್ರಕ** (पुं०) 1. ಯಂತ್ರವನ್ನು ತಯಾರಿಸುವವನು. 2. ಯಂತ್ರಗಳ ವಿಷಯದಲ್ಲಿ ನುರಿತವನು. (न०) 3. ಗಾಯದ ಮೇಲೆ ಕಟ್ಟುವ ಪಟ್ಟಿ. 4. ಗುಡಿಗಾರನ ಚಕ್ರ, ಕಡತ ಹಿಡಿಯುವವನ ಚಕ್ರ. (वि०) 5. ತಡೆಯುವವನು, ಅಂಕೆಯಲ್ಲಿಡುವವನು. यन्त्रयति— यत्रि (संकोचे) + णिच् "ण्वुल्" (३-१-१३३)। 6. ಅಣೆಕಟ್ಟನ್ನು ನಿರ್ಮಿಸುವವನು.

**यन्त्रकरण्डिका ಯಂತ್ರಕರಂಡಿಕಾ** (स्त्री०) ತಾಯಿತಿ, ಮಂತ್ರ ಬರೆದಿರುವ ತಗಡನ್ನು ಇಡುವ ಕೊಳವೆ.

**यन्त्रकर्मकृत् ಯಂತ್ರಕರ್ಮಕೃತ್** (पुं०) 1. ಅಕ್ಕಸಾಲೆ, ಪಂಚಾಳ. 2. ಕಲೆಯನ್ನು ತಿಳಿದವನು, ಚಿತ್ರಕಲೆ ಮುಂತಾದುದರಲ್ಲಿ ನಿಪುಣನಾದವನು.

**यन्त्रगृह ಯಂತ್ರಗೃಹ** (न०) 1. ಎಣ್ಣೆಯ ಗಿರಣಿ. 2. ಯಂತ್ರಗಳಿಂದ ವಸ್ತುಗಳನ್ನು ತಯಾರಿಸುವ ಕಾರಖಾನೆ. यन्त्रस्य गृहम्। 3. ಎಣ್ಣೆಯಿಂದ ನಡೆಸುವ ಯಂತ್ರದ ಮನೆ.

**यन्त्रचेष्टित ಯಂತ್ರಚೇಷ್ಟಿತ** (न०) 1. ಮಂತ್ರ, ಮೋಹನ ವಿದ್ಯೆ. 2. ಮಂತ್ರಗಳಿಂದ ವಶಪಡಿಸಿಕೊಳ್ಳುವುದು.

**यन्त्रगोल ಯಂತ್ರಗೋಲ** (पुं०) ನೆಲಗಡಲೆ ಬಟಾಣಿ ಮುಂತಾದ ಕಾಳು (ಬೀಜ).

**यन्त्रण ಯಂತ್ರಣ** (न०) 1. ತಡೆಹಿಡಿಯುವುದು, ನಿರ್ಬಂಧದಲ್ಲಿಡುವುದು, ಅಂಕೆಯಲ್ಲಿಡುವುದು. यम (उपरमे) "ल्युट्" (३-३-११५)। "करयन्त्रणदन्तुरान्तरे व्यलिखच्चञ्चुपुटेन पक्षती" नैष० २-२। 2. ರಕ್ಷಣೆ. "यन्त्रणं रक्षणे स्मृतम्। बन्धने स्यान्नियमने" मेदि०। यम + णिच् "युच्" (३-३-१०७)। **यन्त्रणा ಯಂತ್ರಣಾ.** 3. ಅಂಕೆ, ಹತೋಟಿ, ನಿರ್ಬಂಧ. "ह्रीयन्त्रणां तत्क्षणमन्वभूवन्नन्योन्यलोलानि विलोचनानि" कुमा० ७-७५। 4. ಬಂಧಿಸುವುದು, ಕಟ್ಟುವುದು. "निबिडपीनकुचद्वययन्त्रणा तमपराधमधात् प्रतिबध्नती" नैष० ४-१०। 5. ಕ್ಲೇಶ, ತೊಂದರೆ, ಪೀಡೆ. "अलमलमुपचारयन्त्रणया" माल० ४।

**यन्त्रपेषणी ಯಂತ್ರಪೇಷಣೀ** (स्त्री०) ಅರೆಯುವ ಯಂತ್ರ, ಪುಡಿಮಾಡುವ ಯಂತ್ರ. यन्त्रमेव पेषणी।

**यन्त्रिका ಯಂತ್ರಿಕಾ** (स्त्री०) ಪತ್ನಿಯ ಕಿರಿಯ ತಂಗಿ, ಹೆಂಡತಿಯ ತಂಗಿ. यन्त्रयति पीडयति— यत्रि + णिच् "ण्वुल्" (३-१-१३३)। "कनिष्ठा श्यालिका हाली यन्त्रिका केलिकुञ्चिका" अभि० चि०।

**यन्त्रित ಯಂತ್ರಿತ** (वि०) 1. ಅಂಕೆಯಲ್ಲಿಡಲ್ಪಟ್ಟ, ನಿರ್ಬಂಧದಲ್ಲಿಡಲ್ಪಟ್ಟ. यत्रि (संकोचे) + णिच् "क्तः" (३-२-१०२)। 2. ಸೆರೆಹಿಡಿಯಲ್ಪಟ್ಟ, ಬೇಡಿ ಹಾಕಲ್ಪಟ್ಟ. 3. ಕಟ್ಟಲ್ಪಟ್ಟ.

**यन्त्रिन् ಯಂತ್ರಿನ್** (वि०) 1. ಕುದುರೆಯ ಅಲಂಕಾರ ವಸ್ತುಗಳನ್ನು ಹೊಂದಿರುವವನು. 2. ಯಂತ್ರಗಳನ್ನು ಹೊಂದಿರುವವನು. 3. ಬಂಧಿಸುವವನು, ಸೆರೆಹಿಡಿಯುವವನು. "अस्त्रेणोन्मुक्तमात्मानं ज्ञात्वा पैतामहाद्वरात्। मर्षयन् राक्षसान् वीरो यन्त्रिणस्तान् यदृच्छया" रामा०।

**यभन ಯಭನ** (न०) ಸಂಭೋಗ, ಸ್ತ್ರೀಪುರುಷರಿಬ್ಬರ ಸಂಗಮ. यभ (मैथुने) "ल्युट्" (३-३-११५)।

**यम – उपरमे** (भ्वा० पर० सक० अनि०)। यच्छति। ययाम येमतुः येमुः। येमिथ, ययन्थ येमथुः येम। ययाम, ययम येमिव येमिम। यन्ता। यंस्यति। यच्छतु। अयच्छत्। यच्छेत्। यम्यात्। 1. ತಡೆಗಟ್ಟು, ನಿರ್ಬಂಧಿಸು, ಅಂಕೆಯಲ್ಲಿಡು. 2. ನಿಲ್ಲಿಸು, ವಿರಾಮ ಹೊಂದು. "पापाद्यच्छति"। 3. ಕಟ್ಟು, ಕಟ್ಟಿಹಾಕು, ಬಂಧಿಸು.

**कर्मणि:**—यम्यते। येमे येमाते येमिरे। यन्ता। यंस्यते। यम्यताम्। अयम्यत। ಇತ್ಯಾದಿ.

**कृत्सु:**—यन्तव्यः। यमनीयः। यम्यः। यतः। यतवान्, –वती। यच्छन्, –न्ती। यन्तुम्। यतम्। यमनम्। यत्वा। संयम्य।

**यम – परिवेषणं** (चुरा० उभ० सक० से०)। यमयति, –ते। ಸುತ್ತುವರಿ, ಸುತ್ತುಗಟ್ಟು. "यमयति चन्द्रम्" परिवेष्टते इत्यर्थः।

**यम ಯಮ** (पुं०) 1. ಯೋಗದ ಎಂಟು ಅಂಗಗಳಲ್ಲೊಂದು. यम (उपरमे) वा "अप्" (३-३-६३)। पक्षे "घञ्"। **यामः ಯಾಮಃ.** ಯಮವು (1) अहिंसा (2) अस्तेयम् (3) सत्यम् (4) ब्रह्मचर्यम् ಮತ್ತು (5) अपरिग्रहः ಎಂದು ಐದು ವಿಧ. ಶರೀರಮಾತ್ರದಿಂದ ಯಾವಜ್ಜೀವವೂ ಮಾಡಬಹುದಾದ ಅಹಿಂಸೆ ಸತ್ಯ ಅಸ್ತೇಯ ಬ್ರಹ್ಮಚರ್ಯ ಮತ್ತು ಅಪರಿಗ್ರಹಗಳು ಯಮವು. "शरीरसाधनापेक्षं नित्यं यत्कर्म तद्यमः" अम०। "अहिंसासत्यास्तेयब्रह्मचर्यापरिग्रहाः यमाः" पा० यो० सू०। "यमनियमकृशीकृतस्थिराङ्गः परिददृशे विधृतायुधः स ताभिः" किरा० १०-१०। 2. ವಿಷ್ಣು. यच्छति अकण्टकम् अनुकूलं च निखिलम्—यम "अच्" (३-१-१३४)। "अकण्टकं चानुकूलं यच्छतीत्यखिलं यमः" इति निरुक्तिः। "धृतात्मा नियमो यमः" वि० स०। 3. ಅಂಕೆ, ಹತೋಟಿ, ನಿರ್ಬಂಧ. 4. ಆತ್ಮಸಂಯಮನ, ಇಂದ್ರಿಯನಿಗ್ರಹ. 5. ಯಮಧರ್ಮರಾಯ. 6. ಬಹಳ ಚಿಕ್ಕ ಅಥವಾ ದೊಡ್ಡ ಗಾತ್ರದ ಕುದುರೆ. "यमो हीनाधिकाङ्गकः" वैज०। 7. ಒಂದು ಜೊತೆ, ಒಂದು ಜೋಡಿ. "मिथुनं द्वितयं द्वैतं द्वयं द्वन्द्वं युगं यमम्" वैज०। 8. ಶನಿಗ್ರಹ. 9. ಕಾಗೆ, ವಾಯಸ. (वि०) 10. ಅವಳಿಯಾಗಿ ಹುಟ್ಟಿದವನು. यच्छति एकत्र गर्भाशये—यम (उपरमे) "अच्" (३-१-१३४)। "यमोऽन्यलिङ्गो यमजे ना काके शमने शनौ। शरीरसाधनापेक्षनित्यकर्मणि संयमे" मेदि०।

**यमक ಯಮಕ** (न०) 1. ಶಬ್ದಾಲಂಕಾರದ ಒಂದು ಭೇದ. यमं युग्मभावं कायति प्राप्नोति—कै (शब्दे) "कः" (३-२-३)। ಅಕ್ಷರಗಳ ಪದಗಳ ಮತ್ತು ಪಾದಗಳ ಆವೃತ್ತಿಯು ಯಮಕವೆನಿಸುವುದು. ಈ ಆವೃತ್ತಿಯು ಅವ್ಯವಹಿತವಾಗಿಯೂ ವ್ಯವಹಿತವಾಗಿಯೂ ಇರುವುದು. "अव्यपेतव्यपेतात्मा व्यावृत्तिर्वर्णसंहतेः। यमकम्"। ಈ ವಿಧವಾದ ಯಮಕವು ಪಾದಗಳ ಆದಿ ಮಧ್ಯ ಮತ್ತು ಅಂತ್ಯಗಳಲ್ಲೂ ಇದ್ದು ಮೂರು ವಿಧ ಯಮಕಗಳಾಗುವುವು. "तच्च पादानामादिमध्यान्तगोचरम्" काव्या० ३-१। ಈ ಮೂರು ಭೇದಗಳೂ ಪಾದಾದಿಗಳಲ್ಲೂ ಪಾದಮಧ್ಯಗಳಲ್ಲೂ ಪಾದಾಂತ್ಯಗಳಲ್ಲೂ ಒಂದು (ನಾಲ್ಕು ಪಾದಗಳಿರುವ ಶ್ಲೋಕಗಳಲ್ಲಿ) ಒಟ್ಟು ಹನ್ನೆರಡು ವಿಧಗಳಾಗುವುವು. "एकद्वित्रिचतुष्पादयमकानां विकल्पनाः। आदिमध्यान्त मध्यान्त मध्याद्याद्यन्तसर्वतः। अत्यन्तबहवस्तेषां भेदाः संभेदयोनयः" काव्या० ३-२, ३।

**ಪ್ರಥಮ ಪಾದಾದಿಯಮಕ**—"मानेन मानेन सखि प्रणयोऽभूत् प्रिये जने। खण्डिता कण्ठमाश्लिष्य तमेव कुरु सत्रपम्"।

**ದ್ವಿತೀಯ ಪಾದಾದಿಯಮಕ**—"मेघनादेन हंसानां मदनो मदनोदिना। नुन्नमानं मनः स्त्रीणां सह रत्या विराजते"॥

**ತೃತೀಯ ಪಾದಾದಿಯಮಕ**—"राजन्वत्यः प्रजा जाता भवन्तं प्राप्य सत्पतिम्। चतुरं चतुरम्भोधिरसनोर्वीकरग्रहे"॥

**ಚತುರ್ಥ ಪಾದಾದಿಯಮಕ**—"अरण्यं कैश्चिदाक्रान्तं कैश्चित्सद्म दिवौकसाम्। पदातिरथनागाश्वरहितैरहितैस्तव"।

**ಪ್ರಥಮ ದ್ವಿತೀಯ (ಆದಿಮಧ್ಯ) ಪಾದಗತ ಯಮಕ**—"मधुरं मधुरम्भोजवदने वदनेत्रयोः। विभ्रमं भ्रमरभ्रान्त्या विडम्बयति किं नु ते"॥

**ಪ್ರಥಮ ತೃತೀಯ (ಆದಿಮಧ್ಯ) ಪಾದಗತ ಯಮಕ**—"वारणो वारणोद्दामो हयो वा स्मर दुर्धरः। न यतो नयतोऽन्तं नः तदहो विक्रमस्तव"॥

**ಪ್ರಥಮ ಚತುರ್ಥ (ಆದಿಮಧ್ಯ) ಪಾದಗತ ಯಮಕ**—"राजितै राजितैक्ष्ण्येन जीयते त्वादृशैर्नृपैः। नीयते च पुनस्तृप्तिं वसुधा वसुधारया"॥ ಹೀಗೆಯೇ ದ್ವಿತೀಯ ತೃತೀಯಪಾದಗತ ದ್ವಿತೀಯ ಚತುರ್ಥಪಾದಗತ ತೃತೀಯ ಚತುರ್ಥಪಾದಗತ ಪ್ರಥಮ ದ್ವಿತೀಯ ತೃತೀಯಪಾದಗತ ದ್ವಿತೀಯ ತೃತೀಯ ಚತುರ್ಥಪಾದಗತ ಪ್ರಥಮ ತೃತೀಯ ಚತುರ್ಥ ಪಾದಗತ ಪ್ರಥಮ ದ್ವಿತೀಯ ತೃತೀಯ ಚತುರ್ಥ ನಾಲ್ಕೂ ಪಾದಗತ ಮುಂತಾದ ಅವ್ಯಪೇತ ಯಮಕಗಳೂ ಮುಂದೆ ವ್ಯಪೇತಯಮಕಗಳೂ ಅವ್ಯಪೇತವ್ಯಪೇತಮಿಶ್ರ ಯಮಕಗಳೂ ಸೇರಿ ಅಸಂಖ್ಯಾತ ಭೇದಗಳುಂಟಾಗುವುವು. 2. ವ್ಯೂಹ, ಸಮೂಹ. "यमकं मण्डलं कृत्वा तान् योधान् प्रत्यवारयत्" भा० विरा० ५७-४२। (पुं०) 3. ಸಂಯಮ, ಅಡ್ಡಿ, ಅಂಕೆ, ನಿರ್ಬಂಧ, ನಿಗ್ರಹ. यम भावे "अप्" (३-३-६३)। "यमकं यमजे शब्दालंकारे पुंसि संयमे" मेदि०। (वि०) 4. ಸದೃಶವಾದ, ಸಮಾನವಾದ. "मण्डलानि विचित्राणि यमकानीतराणि च।

सव्यानि च विचित्राणि दक्षिणानि च सर्वशः" भा० वन० १९-८। 5. ಅವಳಿಯಾಗಿ ಹುಟ್ಟಿದವನು.

**यमज ಯಮಜ** (पुं० द्विव०) ಅವಳಿಯಾಗಿ ಹುಟ್ಟಿದವರು, ಒಂದೇ ಗರ್ಭದಲ್ಲಿ ಜೊತೆಯಾಗಿ ಹುಟ್ಟಿದವರು. यमौ सन्तौ जायेते—जनी "ड:" (३-२-१०१)।

**यमदूत ಯಮದೂತ** (पुं०) ಯಮಧರ್ಮರಾಯನ ಸೇವಕ. यमस्य दूतः।

**यमदूतक ಯಮದೂತಕ** (पुं०) ವಾಯಸ, ಕಾಗೆ.

**यमदूतिका ಯಮದೂತಿಕಾ** (स्त्री०) ಹುಣಸೆ ಮರ.

**यमदेवता ಯಮದೇವತಾ** (स्त्री०) ಭರಣೀನಕ್ಷತ್ರ. यमो देवतास्याः।

**यमद्वितीया ಯಮದ್ವಿತೀಯಾ** (स्त्री०) ಕಾರ್ತಿಕ ಶುದ್ಧ ದ್ವಿತೀಯೆ (ಬಿದಿಗೆ). ಈ ಬಿದಿಗೆಯ ದಿನ ಹೆಣ್ಣುಮಕ್ಕಳು ತಮ್ಮ ಸಹೋದರರನ್ನು ಕರೆದು ಸತ್ಕರಿಸಬೇಕು. "कार्तिके तु द्वितीयायां शुक्लायां भ्रातृपूजनम्। या न कुर्यात् विनश्यन्ति (तस्याः) भ्रातरः सप्तजन्मनि"। "कार्तिके शुक्लपक्षस्य द्वितीयायां युधिष्ठिर। यमो यमुनया पूर्वं भोजितः स्वगृहे स्वयम्" भा०।

**यमन ಯಮನ** (पुं०) 1. ಯಮಧರ್ಮರಾಯ. यमयति नियमयति—यम (उपरमे)+णिच् "ल्युः" (३-१-१३४)। (न०) 2. ಬಂಧನ, ಕಟ್ಟುವುದು. 3. ತಡೆಯುವುದು, ನಿರ್ಬಂಧದಲ್ಲಿಡುವುದು, ಅಂಕೆಯಲ್ಲಿರಿಸುವುದು. 4. ಕೆಲಸದಿಂದ ವಿಶ್ರಾಂತಿಪಡೆಯುವುದು, ವಿರಾಮಹೊಂದುವುದು. यम भावे "ल्युट्" (३-३-११५)। "यमनं बन्धने चोपरतौ क्लीबं यमे पुमान्" मेदि०।

**यमनिका ಯಮನಿಕಾ** (स्त्री०) ತೆರೆ, ಪರದೆ.

**यमपत्नी ಯಮಪತ್ನೀ** (स्त्री०) ಯಮಧರ್ಮರಾಯನ ಪತ್ನಿ—(1) ಧೂಮೋರ್ಣೆ, (2) ವಿಜಯಾ. **–भार्या –ಭಾರ್ಯಾ.**

**यमप्रिय ಯಮಪ್ರಿಯ** (पुं०) ವಟವೃಕ್ಷ, ಆಲದಮರ.

**यमभगिनी ಯಮಭಗಿನೀ** (स्त्री०) ಯಮುನಾನದಿ, ಯಮಧರ್ಮರಾಯನ ತಂಗಿ. **–स्वसा –ಸ್ವಸಾ.**

**यमराज् ಯಮರಾಜ್** (पुं०) ಯಮಧರ್ಮರಾಜ. **–राजः –ರಾಜಃ.**

**यमल ಯಮಲ** (न०) 1. ಜೊತೆ, ಜೋಡಿ. यमं लाति—ला (आदाने) "क:" (३-२-३)। (पुं० द्विव०) 2. ಅವಳಿಯಾಗಿ ಹುಟ್ಟಿದವರು. "यमलार्जुनदृष्टबालकेलिं यमुनासाक्षिकयौवतं युवानम्" गोपालविं०। (स्त्री०) **–ली –ಲೀ.** 3. ವಸ್ತ್ರದ ಎರಡು ತುಂಡುಗಳಿಂದ ತಯಾರಿಸಿದ ಉಡುಪು. "यमलं युगले क्लीवं यमली चोटिकाद्वये" मेदि०।

**यमलपत्रक ಯಮಲಪತ್ರಕ** (पुं०) ಕೋವಿದಾರ ವೃಕ್ಷ, ಕೆಂಗಾಂಚಾಳ ಗಿಡ. यमलं यमजं पत्रमस्य "कप्" (५-४-१५४)।

**यमलार्जुन ಯಮಲಾರ್ಜುನ** (पुं० द्विव०) ನಂದಗೋಕುಲದಲ್ಲಿ ಹುಟ್ಟಿದ ಎರಡು ಮತ್ತಿ ಮರಗಳು. यमलौ च तौ अर्जुनौ च। ಕುಬೇರನ ಮಕ್ಕಳಾದ ನಳಕೂಬರ–ಮಣಿಗ್ರೀವರು ನಾರದಮಹರ್ಷಿಯ ಶಾಪದಿಂದ ಈ ವೃಕ್ಷಗಳಾಗಿ ಹುಟ್ಟಿ ಶ್ರೀಕೃಷ್ಣನ ಅನುಗ್ರಹದಿಂದ ಶಾಪವಿಮೋಚನೆ ಹೊಂದಿದರು.

**यमवत् ಯಮವತ್** (वि०) ಆತ್ಮಸಂಯಮವುಳ್ಳವನು, ಇಂದ್ರಿಯನಿಗ್ರಹವುಳ್ಳವನು, ಕಾಮಕ್ರೋಧಗಳನ್ನು ಜಯಿಸಿದವನು. यमोऽस्यास्ति "मतुप्" (५-२-९४)। "दशरथः प्रशशास महारथो यमवतामवतां च धुरि स्थितः" रघु० ९-१।

**यमवाहन ಯಮವಾಹನ** (पुं०) ಮಹಿಷ, ಎಮ್ಮೆ. यमस्य वाहनः।

**यमानिका ಯಮಾನಿಕಾ** (स्त्री०) ಅಜವಾನ, ಓಮ, ವಾದಕ್ಕಿ. यमानी स्वार्थे "कन्"।

**यमानी ಯಮಾನೀ** (स्त्री०) ಅಜವಾನ, ಓಮ.

**यमित ಯಮಿತ** (वि०) 1. ಕಟ್ಟಲ್ಪಟ್ಟ, ಗಂಟುಹಾಕಲ್ಪಟ್ಟ. यम (उपरमे)+णिच् "क्तः" (३-२-१०२)। "बन्धे स्रंसिनि चैकहस्तयमिताः पर्याकुला मूर्धजाः" शाकु० १-२६। 2. ತಡೆಯಲ್ಪಟ್ಟ, ನಿಗ್ರಹಿಸಲ್ಪಟ್ಟ, ನಿರ್ಬಂಧದಲ್ಲಿಡಲ್ಪಟ್ಟ.

**यमिन् ಯಮಿನ್** (वि०) ಇಂದ್ರಿಯನಿಗ್ರಹವುಳ್ಳವನು, ಆತ್ಮಸಂಯಮವುಳ್ಳವನು. यमोऽस्यास्ति — "इनिः" (५-२-११५)।

**यमितवत् ಯಮಿತವತ್** (वि०) 1. ಗಂಟುಹಾಕಿಸಿದವನು, ಕಟ್ಟಿಸಿದವನು. 2. ಇಂದ್ರಿಯವನ್ನು ಜಯಿಸಿದವನು. यम + णिच् "क्तवतुः" (३-२-१०२)।

**यमी ಯಮೀ** (स्त्री०) ಯಮುನಾನದಿ. "तापी तु यमुना यमी" त्रिकाण्ड०। "तृतीयां वडवामेके तासां संज्ञासुतास्त्रयः। यमो यमी श्राद्धदेवः छायायाश्च सुतान् शृणु" भाग० ८-१३-९।

**यमुना ಯಮುನಾ** (स्त्री०) 1. ಯಮುನಾನದಿ, ಕಾಳಿಂದೀ ನದಿ. यच्छति—यम (उपरमे) "उनन्" (उ० ३-६१)। "यमुनामतीतमथ शुश्रुवानमुं तपसस्तनूज इति नाधुनोच्यते" माघ० १३-१। 2. ಪಾರ್ವತಿ, ದುರ್ಗಾದೇವಿ.

**ययाति ಯಯಾತಿ** (पुं०) ನಹುಷ ಚಕ್ರವರ್ತಿಯ ಮಗ. यस्य वायोरिव याति: सर्वत्र रथगमनमस्य। [ಶುಕ್ರಾಚಾರ್ಯರ ಮಗಳಾದ ದೇವಯಾನಿ ಮತ್ತು ವೃಷಪರ್ವ ರಾಜನ ಮಗಳಾದ ಶರ್ಮಿಷ್ಠೆ ಇಬ್ಬರೂ ಯಯಾತಿಯ ಪತ್ನಿಯರು. ದೇವಯಾನಿಯ ಮಕ್ಕಳು ಯದು ಮತ್ತು ತುರ್ವಸು. ಶರ್ಮಿಷ್ಠೆಯ ಮಕ್ಕಳು ಅನು ದ್ರುಹ್ಯು ಮತ್ತು ಪೂರು. ದೇವಯಾನಿಯು ಯಯಾತಿಯನ್ನು ಮದುವೆಯಾದಾಗ ಶರ್ಮಿಷ್ಠೆಯನ್ನು ಮದುವೆಯಾಗ ಕೂಡದೆಂದೂ ಅವಳು ಎಂದೆಂದಿಗೂ ತನಗೆ ದಾಸಿಯಾಗಿರ ಬೇಕೆಂದೂ ಹೇಳಿ ಅವನಿಂದ ಮಾತು ಪಡೆದಿದ್ದಳು. ಅನಂತರ ಶರ್ಮಿಷ್ಠೆಯು ಯಯಾತಿಯಿಂದ ರಹಸ್ಯದಲ್ಲಿ ಮಕ್ಕಳನ್ನು ಪಡೆದ ವಿಷಯವನ್ನು ಕೇಳಿ ದೇವಯಾನಿಯು ತಾನು ಅಲ್ಲಿರುವುದಿಲ್ಲವೆಂದು ಹೇಳಿ ಹೊರಟುಹೋದಳು. ಈ ವಿಷಯವನ್ನು ತಿಳಿದ ಶುಕ್ರಾಚಾರ್ಯರು ಯಯಾತಿಗೆ ಮುದುಕನಾಗುವಂತೆ ಶಾಪವಿತ್ತರು. ಅನಂತರ ಇವನ ಪ್ರಾರ್ಥನೆಯಂತೆ ಬೇರೊಬ್ಬನ ಯೌವನವನ್ನು ಪಡೆದು ಮುದಿತನವನ್ನು ಅವನಿಗೆ ಕೊಡಬಹುದೆಂದು ಹೇಳಿದರು. ತಮ್ಮ ಯೌವನವನ್ನು ಕೊಡಲು ಸಮ್ಮತಿಸದ ಯದು ಅನು ದ್ರುಹ್ಯು ಮತ್ತು ತುರ್ವಸುಗಳಿಗೆ ಶಾಪವನ್ನಿತ್ತು ತನಗೆ ಯೌವನವನ್ನು ಕೊಟ್ಟು ಮುದಿತನವನ್ನು ಸ್ವೀಕರಿಸಿದ ಪೂರುವಿಗೆ ರಾಜ್ಯವನ್ನು ಕೊಟ್ಟನು. ಅನೇಕ ವರ್ಷಗಳ ಕಾಲ ಯೌವನಸೌಖ್ಯವನ್ನು ಅನುಭವಿಸಿ ಕೊನೆಗೆ ವೈರಾಗ್ಯ ಹೊಂದಿ ತನ್ನ ಮುದಿತನವನ್ನು ಹಿಂದಕ್ಕೆ ಪಡೆದು ತಪಸ್ಸಿಗೆ ತೆರಳಿದನು.]

**ययी ಯಯೀ** (पुं०) 1. ಅಶ್ವಮೇಧಯಾಗದ ಕುದುರೆ. या (प्रापणे) "ई:" (उ० ३-१३९)। 2. ಪರಮೇಶ್ವರ. यायते प्राप्यते भक्तैः—या "ई:"।

**ययु ಯಯು** (पुं०) 1. ಅಶ್ವಮೇಧಯಾಗದ ಕುದುರೆ. या (प्रापणे) "उ:" (उ० १-२१)। 2. ಅಶ್ವ, ಕುದುರೆ. "ययु: पुमानश्वमेधतुरङ्गे तुरगेऽपि च" मेदि०। "तूर्णमथ ययुमिवानुययुर्दमघोषसूनुमवनीशसूनव:" माघ० १५-६९। 3. ಮೋಕ್ಷಮಾರ್ಗ. (स्त्री०) 4. ಪ್ರಾಪ್ತಿ, ಹೊಂದುವುದು, ಪಡೆಯುವುದು. (वि०) 5. ಉದ್ದವಾದ ಕೋಲು ಹಿಡಿದಿರುವವನು. "ययुर्ना मोक्षमार्गेऽश्वे स्त्रीत्वाप्तौ दीर्घयष्टिके" वैज०।

**यर्हि ಯರ್ಹಿ** (अव्य०) ಯಾವಾಗ ?, ಯಾವ ಸಮಯದಲ್ಲಿ. यद् "र्हिल्" (५-३-२१)। ಇದೊಂದು ಸಂಬಂಧಾರ್ಥಕ ಅವ್ಯಯ. तर्हि एतर्हि ಇವು ಇದರ ಸಂಬಂಧ ಹೊಂದಿದಾಗ ವಾಕ್ಯ ಪೂರ್ತಿಯಾಗುವುದು.

**यव ಯವ** (पुं०) 1. ಜವೆಗೋಧಿ, ಯವಧಾನ್ಯ. यौति—यु (मिश्रणे) "अच्" (३-१-१३४)। "यवा: प्रकीर्णा न भवन्ति शालय:" मृच्छ० ४-१७। 2. ಹೆಬ್ಬೆರಳಿನಲ್ಲಿರುವ ಯವಾಕಾರದ ರೇಖೆ, ಧನಧಾನ್ಯಾದಿ ಲಾಭವನ್ನು ಸೂಚಿಸುವ ಒಂದು ರೇಖೆ. 3. ಆರು ಗೌರ ಸರ್ಷಪಗಳ ಅಥವಾ 576 ತ್ರಸರೇಣುಗಳ ಪರಿಮಾಣ. "जालान्तरगते भानौ यत् सूक्ष्मं दृश्यते रज:। तैश्चतुर्भिर्भवेल्लिख्या लिख्याषड्भिश्च सर्षप:। षट्सर्षपैर्यवस्त्वेको गुञ्जैका तु यवैस्त्रिभि:"। 4. ಬೇರ್ಪಡಿಸುವುದು. यु (अमिश्रणे) "अप्" (३-३-५७)। "यवो धान्ये पृथक्कृतौ" हेम०।

**यवक ಯವಕ** (पुं०) ಜವೆಗೋಧಿಯ ಒಂದು ಭೇದ. "यवके तोयपर्णिका" वैज०।

**यवक्य ಯವಕ್ಯ** (न०) ಗೋಧಿಯನ್ನು ಬೆಳೆಯುವ ಭೂಮಿ. यवकानां भवनं क्षेत्रम् "यत्" (५-२-३)।

**यवक्षार ಯವಕ್ಷಾರ** (पुं०) ಪೆಟ್ಲುಪ್ಪು, ಸೋರುಪ್ಪು. यवानां क्षार:।

**यवचूर्ण ಯವಚೂರ್ಣ** (न०) ಗೋಧಿಹಿಟ್ಟು.

**यवज ಯವಜ** (पुं०) ಯವಕ್ಷಾರ, ಪೆಟ್ಲುಪ್ಪು.

**यवजोद्भव ಯವಜೋದ್ಭವ** (न०) ತವಕ್ಷೀರ.

**यवद्वीप ಯವದ್ವೀಪ** (पुं०) ಆರು ಅನುದ್ವೀಪಗಳಲ್ಲೊಂದು. **ಆರು ಅನುದ್ವೀಪಗಳು :** (1) ಅಂಗದ್ವೀಪ (2) ಯವದ್ವೀಪ (3) ಮಲಯದ್ವೀಪ (4) ಶಂಖದ್ವೀಪ (5) ಕುಶದ್ವೀಪ ಮತ್ತು (6) ವರಾಹದ್ವೀಪ. "अनुद्वीपाश्च षट् तेषामङ्गद्वीपादयो यथा। अङ्गद्वीपं यवद्वीपं मलयद्वीपमित्यपि। शङ्खद्वीपं कुशद्वीपं वराहद्वीपमित्यपि" वैज०। ಈ ಯವದ್ವೀಪವು ಪೂರ್ವಸಮುದ್ರದಲ್ಲಿರುವುದು. "पूर्वाब्धौ तु यवद्वीपं यत्र कालोदकोऽर्णव:" वैज०।

**यवन ಯವನ** (पुं०) 1. ಕ್ಷತ್ರಿಯನಿಂದ ವೈಶ್ಯ ಸ್ತ್ರೀಯಲ್ಲಿ ಹುಟ್ಟಿದವನು. "सूतं विप्रा नृपाद्वैश्या माहिष्यं यवनश्च स:" वैज०। 2. ಆನೆಗಳನ್ನು ಹಿಡಿಯುವವನು. "निषादो व्यालादिवधाद्यवन: कुञ्जरग्रहात्" वैज०। 3. ಚೌಳುಪ್ಪು, ಉಪ್ಪುಮಣ್ಣಿನಿಂದ ತೆಗೆದ ಉಪ್ಪು.

"ऊषमूषरजं क्षेत्र्यं पांसुजं यवनं पटु" वैज०। 4. ಮಹಮ್ಮದೀಯ ಅಥವಾ ಮ್ಲೇಚ್ಛಜಾತಿಯವನು. "वृषलत्वं गता लोके ब्राह्मणा दर्शनेन च। पौण्ड्रकाश्चौड्रद्रविडाः काम्बोजा यवनाः शकाः। पारदाः पह्लवाश्चीनाः किराता दरदाः खशाः" मनु० १०-४४। (पुं० ब० व०) 5. ಉತ್ತರ ದಿಕ್ಕಿನಲ್ಲಿರುವ ಒಂದು ದೇಶ. "अथोदीच्या जनपदास्तत्र चीनाः स्वरम्भराः। गान्धारास्तु दिहुण्डाः स्युः यवनास्तु हुरुष्कराः" वैज०। 6. ಯವನ ದೇಶದ ಜನರು. 7. ಯವನ ದೇಶದ ರಾಜರು. "यदवस्तत्र निस्त्रासाः यवनैः स्तनयित्नुभिः" याद० २२-९१। 8. ವೇಗ. 9. ಅಧಿಕ ವೇಗವುಳ್ಳ ಕುದುರೆ. "यवनो देशभेदे ना वेगवेगाधिकाश्वयोः" मेदि०। (वि०) 10. ಅಧಿಕ ವೇಗವುಳ್ಳ. "तमश्ववारा यवनाश्वयायिनं प्रकाशरूपा मनुजेशमन्वयुः" नैष०।

**यवनानी ಯವನಾನೀ** (स्त्री०) ಯವನರ ಲಿಪಿ, ಯವನ ಭಾಷೆಯ ಅಕ್ಷರ. यवनानां लिपिः "आनुक्" "ङीप्" च (४-१-४९)।

**यवनिका ಯವನಿಕಾ** (स्त्री०) 1. ಪರದೆ, ತೆರೆ. युनात्यावृणोत्यनया—युञ् (बन्धने) "ल्युट्" (३-३-११७)। 2. ಯವನಜಾತಿಯ ಹೆಂಗಸು, ಮಹಮ್ಮದೀಯ ಹೆಂಗಸು.

**यवनी ಯವನೀ** (स्त्री०) ಯವನಜಾತಿಯ ಹೆಂಗಸು. यवन "ङीष्" (४-१-६३)। "यवनीमुखपद्मानां सेहे मधुमदं न सः" रघु० ४-६१।

**यवनेष्ट ಯವನೇಷ್ಟ** (पुं०) 1. ಹತ್ತು ವಿಧ ಈರುಳ್ಳಿಯಲ್ಲಿ ಒಂದು ಭೇದ. यवनानामिष्टः। "गृञ्जनो यवनेष्टश्च पलाण्डोर्दश जातयः" वैज०। 2. ಬೇವಿನ ಮರ. "पिचुमन्दः पारिभद्रो नेता काकफलश्च सः। यवनेष्टः पीतसारः" कल्पद्रु०। (न०) 3. ಸೀಸಲೋಹ. "अथ सीसोऽस्त्री योगेष्टं भुजगाह्वयम्। यवनेष्टं समोल्लकम्" वैज०। 4. ರಾಜೀರುಳ್ಳಿ. 5. ಬೆಳ್ಳುಳ್ಳಿ. 6. ಮೆಣಸು. "मरीचं मरिचं चापि मिरीचं मिरिचं पुनः। यवनेष्टं वृत्तफलम्" कल्पद्रु०। (स्त्री०) –नेष्टा –ನೇಷ್ಟಾ. ಖರ್ಜೂರದ ಮರ. "हयप्रिया तु निःश्रेणी यवनेष्टा दुरारुहा" कल्पद्रु०।

**यवफल ಯವಫಲ** (पुं०) 1. ಬಿದಿರು ಮೆಳೆ. यव इव फलान्यस्य। 2. ಬೆಟ್ಟಮಲ್ಲಿಗೆ. 3. ಜಟಾಮಾಂಸಿ. "भवेद्यवफलो वेणौ मांसीकुटजयोरपि" मेदि०।

**यवलास ಯವಲಾಸ** (पुं०) ಯವಕ್ಷಾರ, ಪೆಟ್ಲುಪ್ಪು.

**यवशूक ಯವಶೂಕ** (पुं०) ಯವಕ್ಷಾರ, ಪೆಟ್ಲುಪ್ಪು.

**यवस ಯವಸ** (न०) (ಹಸು ಎಮ್ಮೆ ಮೊದಲಾದುವು ತಿನ್ನಬಹುದಾದ) ಹುಲ್ಲು. यौति—यु (मिश्रणे अमिश्रणे च) "असच्" (उ० ३-११९)। "तत्स्यादायुधसंपन्नं धनधान्येन वाहनैः। ब्राह्मणैः शिल्पिभिर्यन्त्रैः यवसेनोदकेन च" मनु० ७-७५।

**यवा ಯವಾ** (स्त्री०) ದಾಸಿವಾಳದ ಗಿಡ. "ओड्रका प्रातिका सूर्यप्रिया चापि यवा पुनः" कल्पद्रु०।

**यवागू ಯವಾಗೂ** (स्त्री०) ಅಕ್ಕಿಯ ಗಂಜಿ, ಅನ್ನದ ಮೇಲಿನ ಅಂಬಲಿ. यौति—यु (मिश्रणे अमिश्रणे च) "आगूच्" (उ० ३-८१)।

**यवाग्रज ಯವಾಗ್ರಜ** (पुं०) ಯವಕ್ಷಾರ, ಪೆಟ್ಲುಪ್ಪು, ಸೋರುಪ್ಪು. यवाग्रात् जायते—जनी (प्रादुर्भावे) "डः" (३-२-९७)। "यवक्षारो यवाग्रजः" अम०।

**यवानी ಯವಾನೀ** (स्त्री०) ಅಜವಾನ, ಓಮ, ವಾದಕ್ಕಿ. दुष्टो यवः "आनुक्" (४-१-४९)। "ङीष्" च। "कन्" (५-३-९६)। **यवानिका ಯವಾನಿಕಾ.** "अजमोदातूग्रगन्धा ब्रह्मदर्भा यवानिका" अम०।

**यवापत्य ಯವಾಪತ್ಯ** (न०) ಯವಕ್ಷಾರ. यवस्यापत्यम्।

**यवास ಯವಾಸ** (पुं०) ತೀಟಕ ಸಂಧಿ. यु (मिश्रणे अमिश्रणे च) "आसः" (उ० ४-२)। "यासो यवासो दुस्पर्शः" अम०।

**यवासक ಯವಾಸಕ** (पुं०) ತೀಟಕ ಸಂಧಿ. यवास स्वार्थे "कन्"। "गुडूचीत्रिफलावासात्रायमाणायवासकैः। क्वथितैर्विधिवत् पक्वमेतैः कल्कीकृतैः समैः। पीतं सर्पिः क्षयश्वासकासजीर्णज्वरान् जयेत्" सुश्रुत० उत्तरतं० ३९।

**यविष्ठ ಯವಿಷ್ಠ** (वि०) ಇವರಲ್ಲಿ ಇವನು ಬಹಳ ಕಿರಿಯ, ಬಹಳ ಎಳೆಯ ಪ್ರಾಯದವನು. अयमेषामतिशयेन युवा—युवन् "इष्ठन्" (५-३-५५)। वनो लोपः गुणः अवादेशः (६-४-१५६)।

**यवीयस् ಯವೀಯಸ್** (पुं०) 1. ತಮ್ಮ, ಅನುಜ. (वि०) 2. ಇಬ್ಬರಲ್ಲಿ ಇವನು ಕಿರಿಯ, –ಎಳೆಯ, –ಚಿಕ್ಕ ವಯಸ್ಸಿನವನು. अयमनयोरतिशयेन युवा—युवन् "ईयसुन्" (५-३-५७)। वनो लोपः गुणः (६-४-१५६)। अवादेशः। स्त्रियां "ङीप्" (४-१-५)। **यवीयसी ಯವೀಯಸೀ.** "अवाच्यो दीक्षितो नाम्ना यवीयानपि यो भवेत्" मनु० २-१२८। (पुं०) यवीयान् यवीयांसौ

यवीयांसः। (स्त्री०) यवीयसी यवीयस्यौ यवीयस्यः। (न०) यवीयः यवीयसी यवीयांसि।

**यवीयस ಯವೀಯಸ** (न०) ರಜತ, ಬೆಳ್ಳಿ.

**यव्य ಯವ್ಯ** (पुं०) 1. ಒಂದು ಚಾಂದ್ರಮಾಸ. यवेभ्यो हितः "यत्" (५-१-७)। "यव्यद्वयं श्रावणादि सर्वा नद्यो- रजस्वलाः। तासु स्नानं न कुर्वीत वर्जयित्वा समुद्रगाः" प्रायश्चित्ततत्त्वम्। (न०) 2. ಜವೆಗೋಧಿಯನ್ನು ಬೆಳೆಯುವ ಕ್ಷೇತ್ರ (ಭೂಮಿ). यवानां भवनं क्षेत्रम् "यत्" (५-२-३)। (वि०) 3. ಗೋಧಿಗೆ ಹಿತವಾದ. यवाय हितः "यत्"।

**यशःपटह ಯಶಃಪಟಹ** (पुं०) ಡವಣೆ (ಢಕ್ಕೆ) ಯೆಂಬ ಒಂದು ವಾದ್ಯ. यशःसूचकः पटहः।

**यशःशरीर ಯಶಃಶರೀರ** (न०) ಕೀರ್ತಿಯ ರೂಪದಲ್ಲಿರುವ ದೇಹ, ಕೀರ್ತಿಯೆಂಬ ಶರೀರ. यश एव शरीरम्। "किमप्यहिंस्यस्तव चेन्मतोऽहं यशःशरीरे भव मे दयालुः" रघु० २-५७।

**यशःशेष ಯಶಃಶೇಷ** (वि०) ಕೀರ್ತಿಯಿಂದ ಮಾತ್ರ ಉಳಿದಿರುವವನು, ಭೌತಿಕ ಶರೀರವನ್ನು ತ್ಯಜಿಸಿದವನು. यश एव शेषो यस्य। **–शेषता ಶೇಷತಾ.** ಕೀರ್ತಿರೂಪವಾದ ಶರೀರದಿಂದ ಮಾತ್ರ ಉಳಿದಿರುವುದು. यशःशेषस्य भावः "तल्" (५-१-११९)।

**यशद ಯಶದ** (न०) ತವರವೆಂಬ ಒಂದು ಧಾತು. "यशदं तुवरं तिक्तं शीतलं कफपित्तहृत्" भावप्र०।

**यशस् ಯಶಸ್** (न०) ಕೀರ್ತಿ, ಖ್ಯಾತಿ, ಪ್ರತಿಷ್ಠೆ. अश्नोति व्याप्नोति—अशू (व्याप्तौ) "असुन्" (उ० ४-१९०)। युट् च। "यशोऽधिगन्तुं सुखलिप्सया वा मनुष्यसंख्यामतिवर्तितुं वा" किरा० ३-४०।

**यशस्कर ಯಶಸ್ಕರ** (वि०) ಕೀರ್ತಿಯನ್ನು ಉಂಟುಮಾಡುವ. यशः करोति—डु कृञ् (करणे) "टः" (३-२-२०)। विसर्गस्य सत्वम् (८-३-४६)। "एतेषां निग्रहो राज्ञः पञ्चानां विषये स्वके। साम्राज्यकृत्सजात्येषु लोके चैव यशस्करः" मनु० ८-३८७। स्त्रियां "ङीप्" (४-१-१५)। **यशस्करी ಯಶಸ್ಕರೀ.**

**यशस्य ಯಶಸ್ಯ** (वि०) 1. ಯಶಸ್ಸಿಗೆ ಹಿತವಾದ. यशसे हितम् "यत्" (५-१-५)। "आयुष्यं प्राङ्मुखो भुङ्क्ते यशस्यं दक्षिणामुखः। श्रियं प्रत्यङ्मुखो भुङ्क्ते ऋतं भुङ्क्ते ह्युदङ्मुखः" मनु० २-५२। **–स्या –ಸ್ಯಾ.** (स्त्री०) 2. ಜೀಕಾಲೆ ಗಿಡ.

**यशस्वत् ಯಶಸ್ವತ್** (वि०) ಕೀರ್ತಿ ಪಡೆದವನು, ಯಶಸ್ಸುಳ್ಳವನು. यशोऽस्यास्ति "मतुप्" (५-२-९४)।

**यशस्विन् ಯಶಸ್ವಿನ್** (वि०) ಕೀರ್ತಿಶಾಲಿ, ಯಶಸ್ಸನ್ನು ಪಡೆದವನು. यशोऽस्यास्ति "विनिः" (५-२-१२२)। स्त्रियां "ङीप्" (४-१-५)। **–स्विनी –ಸ್ವಿನೀ.**

**यशोद ಯಶೋದ** (पुं०) 1. ಪಾದರಸ, ರಸಧಾತು. "रसधातुर्हरतेजो यशोदः" कल्पद्रु०। (वि०) 2. ಯಶಸ್ಸನ್ನು ಉಂಟುಮಾಡುವ, ಕೀರ್ತಿಯನ್ನು ಕೊಡುವ. यशो ददाति—डु दाञ् (दाने) "कः" (३-२-३)। (स्त्री०) **–दा –ದಾ.** 3. ನಂದಗೋಪನ ಪತ್ನಿ, ಶ್ರೀಕೃಷ್ಣನ ಸಾಕುತಾಯಿ.

**यशोधन ಯಶೋಧನ** (वि०) ಕೀರ್ತಿಯೇ ಧನವಾಗಿ ಉಳ್ಳವನು, ಯಶಸ್ಸೇ ಐಶ್ವರ್ಯವಾಗಿ ಉಳ್ಳವನು. यश एव धनं यस्य। "वनाय पीतप्रतिबद्धवत्सां यशोधनो धेनुमृषेर्मुमोच" रघु० २-१।

**यशोधर ಯಶೋಧರ** (वि०) ಕೀರ್ತಿಶಾಲಿ, ಪ್ರಸಿದ್ಧಿಯನ್ನು ಪಡೆದವನು. धरति "अच्" (३-१-१३४)। यशसो धरः।

**यष्टि ಯಷ್ಟಿ** (पुंस्त्री०) 1. ದಂಡ, ಕೋಲು, ಬೆತ್ತ, ದೊಣ್ಣೆ. यक्ष्यते—यक्ष (पूजायाम्) "क्तिच्" (३-३-१७४)। कलोपः (८-२-२९)। ष्टुत्वम् (८-४-४१)। "दण्डोऽस्त्री लगुडः पुमान्। यष्टिर्द्वयोः स्त्रियां यष्टी" कल्पद्रु०। (स्त्री०) **यष्टी ಯಷ್ಟೀ.** 2. ಗದೆ. 3. ಕಂಬ, ಗಣೆ. 4. ಹಕ್ಕಿಗಳು ಕೂರುವ ಕೋಲು. 5. ಧ್ವಜದಂಡ, ಧ್ವಜ (ಪತಾಕೆ) ಏರಿಸುವ ಕಂಬ. 6. ಹಾರದ ಎಳೆ, ಮುಕ್ತಾಹಾರ. "विमुच्य सा हारमहार्यनिश्चया विलोलयष्टिप्रविलुप्तचन्दनम्" कुमा० ५-८। 7. ಉದ್ದವಾಗಿಯೂ ಮೃದು (ಕೋಮಲ) ವಾಗಿಯೂ ಇರುವ ಕತ್ತಿ. "हरकस्तरवारि स्त्री यष्टिश्चापि मृदौ पृथौ" वैज०। 8. ಅತಿಮಧುರ, ಜ್ಯೇಷ್ಠಮಧು. 9. ಭಾರಂಗಿ, ಭಾರ್ಗಿ. "यष्टिर्भार्ग्यां मधुयष्ट्यां ध्वजदण्डेऽस्त्रहारयोः" हेम०। (स्त्री०) 10. ಬಳ್ಳಿ, ಲತೆ. 11. ವೃಕ್ಷದ ಶಾಖೆ, ಮರದ ರೆಂಬೆ. "स्त्र्यावलि स्रग्लता यष्टिः" कल्पद्रु०। "चूतयष्टिरिवाभ्यासे मधौ परभृतोन्मुखी" कुमा० ६-२। (वि०) 12. ತೆಳುವಾದ, ಸಣ್ಣದಾದ. "तं वीक्ष्य वेपथुमती सरसाङ्गयष्टिः" कुमा० ५-८५। (पुं०) 13. ಭುಜದಂಡ, ತೋಳು. 14. ಕತ್ತಿಯ ಹಿಡಿ. "बद्धपाणौ त्सरौ यष्टिः पुंसि

स्याद्भुजदण्डके। द्वयोर्हारलताभार्गीमधुकाशस्त्रभेदयोः" मेदि०।

**यष्टिक ಯಷ್ಟಿಕ** (पुं०) 1. ನೀರುಕೋಳಿ. यष्टिरिव—"कन्" (५-३-९६)। 2. ದಂಡ, ಕೋಲು, ದೊಣ್ಣೆ. यष्टि स्वार्थे "कन्"।

**यष्टिका ಯಷ್ಟಿಕಾ** (स्त्री०) 1. ಹಾರ, ಸರ. यष्टि स्वार्थे "कन्"। 2. ವಾರಾಹಿ ಗಿಡ, ಹಂದಿಗಡ್ಡೆ. "अथ वाराही ब्रह्मपुत्री च यष्टिका" कल्पद्रु०। 3. ಪುಷ್ಕರಿಣಿ, ಸರಸ್ಸು, ಕೊಳ. "अथ पुष्करिणीत्यपि। दीर्घी स्त्री यष्टिका वापी" कल्पद्रु०। 4. ದೊಣ್ಣೆ, ಕೋಲು. "अथ शक्तिश्च शक्ती च यष्टिर्यष्टी च यष्टिका। दण्डः काण्डोऽपि लगुडः पशुघ्नो दण्डकोऽपि च" शब्दरत्नावलिः।

**यष्टिग्रह ಯಷ್ಟಿಗ್ರಹ** (वि०) ಕೋಲನ್ನು ಹಿಡಿದಿರುವವನು, ದೊಣ್ಣೆಯನ್ನು ಹಿಡಿದಿರುವವನು. यष्टिं गृह्णाति —ग्रह (उपादाने) "अच्" (वा० ३-२-९)।

**यष्टिनिवास ಯಷ್ಟಿನಿವಾಸ** (पुं०) ಹಕ್ಕಿಗಳು ಕೂರಲು ಮನೆಯಲ್ಲಿ ಹಾಕಿರುವ ಅಡ್ಡಕೋಲು ಅಥವಾ ಕಬ್ಬಿಣದ ಕಂಬಿ. यष्टिरेव निवासः वासस्थानम्। "वृक्षेशया यष्टिनिवासभङ्गान्मृदङ्गशब्दापगमादलास्याः" रघु० १६-१४।

**यष्टिमधु ಯಷ್ಟಿಮಧು** (न०) ಅತಿಮಧುರ, ಜ್ಯೇಷ್ಠಮಧು. यष्ट्यां मधु माधुर्यमस्य। "कप्" (५-४-१५४)। —मधुकम् —ಮಧುಕವು.

**यष्टी ಯಷ್ಟೀ** (स्त्री०) 1. ಅತಿಮಧುರ. यष्टि "ङीष्" (ग० ४-१-४५)। 2. ಒಂದು ವಿಧ ಹಾರ.

**यष्टीक ಯಷ್ಟೀಕ** (न०) ಅತಿಮಧುರ.

**यष्टीमधु ಯಷ್ಟೀಮಧು** (न०) ಅತಿಮಧುರ.

**यष्टृ ಯಷ್ಟೃ** (पुं०) ಯಜಮಾನ, ಯಾಗಮಾಡುವವನು. यजते —यज (देवपूजायाम्) "तृच्" (३-१-१३३)।

**यसु — प्रयत्ने** (दिवा० पर० अक० से०)। यस्यति, यसति। ययास। यसिता। यस्यतु, यसतु। ಇತ್ಯಾದಿ.

ಯತ್ನಿಸು, ಪ್ರಯತ್ನಪಡು, ಶ್ರಮಿಸು, ಹೋರಾಡು.

**या — प्रापणे** (अदा० पर० सक० अनि०)।

| | | | |
|---|---|---|---|
| लट्— | याति | यातः | यान्ति। |
| | यासि | याथः | याथ। |
| | यामि | यावः | यामः। |
| लिट्— | ययौ | ययतुः | ययुः। |
| | ययिथ / ययाथ | ययथुः | यय। |
| | ययौ | ययिव | ययिम। |
| लुट्— | याता | यातारौ | यातारः। |

लृट्— यास्यति। लोट्—यातु, यातात्, याहि, यातात्। लङ्—अयात्।

विधिलिङ्— यायात् यायाताम्। आशीर्लिङ्—यायात् यायास्ताम् यायासुः।

लुङ्— अयासीत्। लृङ्—अयास्यत्।

1. ಹೋಗು, ನಡೆ. "तां देवतापित्रतिथिक्रियार्थामन्वग्ययौ मध्यमलोकपालः" रघु० २-१६। 2. ಹೊರಡು, ಮುಂದೆ ಹೋಗು. "यास्यत्यद्य शकुन्तलेति हृदयं संस्पृष्टमुत्कण्ठते" शाकु० ४-५। 3. ಹೊಂದು, ಪಡೆ. "शिरीषपुष्पाधिकसौकुमार्यः खेदं स यायादपि भूषणेन" रघु० १८-४५। 4. ಹೊಂದು, ತಲುಪು, ಸೇರು. "या न ययौ प्रियमन्यवधूभ्यः सारतरागमना यतमानम्" माघ० ४-४५। 5. ಕಳೆದುಹೋಗು (ಕಾಲ). "विनयादिव यापयन्ति ते धृतराष्ट्रात्मजमात्मसिद्धये" किरा० २-४५। 6. ವಹಿಸಿಕೊ, ಕೈಗೊಳ್ಳು, ಕೈಗೆತೆಗೆದುಕೊ. 7. ಅದೃಶ್ಯವಾಗು, ಮರೆಯಾಗು. "भाग्यक्रमेण हि धनानि भवन्ति यान्ति" मृच्छ० १-१३।

**णिचि**:—यापयति, —ते। यापयां —चकार, —चक्रे, —बभूव, —आस। यापयिता —सि, —से, —हे। यापयतु, —ताम्। अयापयत्, —त। यापयेत्, —त। याप्यात्। ಇತ್ಯಾದಿ.

**कृत्सु**:—यातव्यः। यानीयः। येयः। यातः। यातवान्। यान्, यान्ती। यातुम्। यातम्। यानम्। यात्वा। प्रयाय।

**याग ಯಾಗ** (पुं०) ಯಜ್ಞ, ದೇವತೆಗಳನ್ನು ಉದ್ದೇಶಿಸಿ ಅಗ್ನಿಯಲ್ಲಿ ಮಾಡುವ ಹೋಮ. इज्यते — यज (देवपूजायाम्) "घञ्" (३-३-१९)।

**टु याचृ — यच्ञायाम्** (भ्वा० उभ० द्विक० से०)।

| | | | | |
|---|---|---|---|---|
| लट्— | पर० | याचति | याचतः | याचन्ति। |
| | आत्म० | याचते | याचेते | याचन्ते। |
| | | याचसे | याचेथे | याचध्वे। |
| | | याचे | याचावहे | याचामहे। |
| लिट्— | पर० | ययाच | ययाचतुः | ययाचुः। |
| | आत्म० | ययाचे | ययाचाते | ययाचिरे। |

लुट्— याचिता याचितारौ याचितारः। याचितासि, याचितासे। याचितास्मि, याचिताहे।
लृट्—याचिष्यति, –ते। लोट्—याचतु, याचताम्। लङ्—अयाचत्, –त।
विधिलिङ्—याचेत्, –त। आशीर्लिङ्—याच्यात्, याचिषीष्ट। ಇತ್ಯಾದಿ.
ಬೇಡು, ಯಾಚಿಸು. "याचते स्म परिवापिका: सखीः सा स्वनीविनिबिडक्रियां यदा" नैष० १८-५१। "केचित् संचुकुटुर्भीताः लेजिरेऽन्ये पराजिताः। संग्रामाद् बभ्रमुः केचित् ययाचुश्चापरेऽभयम्" भट्टि० १४-१०५।
कर्मणि :—याच्यते याच्येते याच्यन्ते। याच्यताम्। अयाच्यत। याच्येत। अयाचि ಇತ್ಯಾದಿ.
णिचि :—याचयति। याचयां चकार, –बभूव, –आस। याचयिता। याचयतु। अयाचयत् ಇತ್ಯಾದಿ.
कृत्सु :—याचितव्यम्। याचनीयम्। याच्यम्। याचितः। याचितवान्। याचन्, –न्ती, याचमानः। याचितम्। याचितुम्। याचनम्।

**याचक ಯಾಚಕ** (वि०) ಭಿಕ್ಷುಕ, ಭಿಕ್ಷೆ ಬೇಡುವವನು, ತಿರುಕ. टु याचृ (याच्ञायाम्) "ण्वुल्" (३-१-१३३)।

**याचत् ಯಾಚತ್** (वि०) 1. ಬೇಡುತ್ತಿರುವ. टु याचृ (याच्ञायाम्) "शतृ" (३-२-१२४)। "याचतः स्वगयाश्राद्धं भूतस्याविश्य कस्यन" नैष० १७-९०। 2. ಭಿಕ್ಷೆ ಬೇಡುತ್ತಿರುವ.

**याचन ಯಾಚನ** (न०) 1. ಪ್ರಾರ್ಥನೆ, ಕೋರಿಕೆ, ಬೇಡಿಕೆ. टु याचृ (याच्ञायाम्) भावे "ल्युट्" (३-३-११५)। "भीमजार्थपरयाचनचाटौ यूयमेव गुरवः करणीयाः" नैष० ५-११२। 2. ಯಾಚಿಸುವುದು, ಬೇಡುವುದು, ತಿರುಪೆ ಕೇಳುವುದು. (वि०) 3. ಬೇಡುವವನು, ಕೋರುವವನು. 4. ಯಾಚಿಸುವವನು, ಭಿಕ್ಷೆ ಬೇಡುವವನು. याचृ "ल्युः" (३-१-१३४)।

**याचनक ಯಾಚನಕ** (पुं०) ಯಾಚಕ, ಭಿಕ್ಷೆ ಬೇಡುವವನು, ತಿರುಕ. टु याचृ (याच्ञायाम्) "ल्युः" (३-१-१३४)। स्वार्थे "कन्" (५-४-५)। "वनीयको याचनको मार्गणो याचकार्थिनौ" अम०। "आचारहीनः क्लीबश्च नित्यं याचनकस्तथा" मनु० ३-१६।

**याचना ಯಾಚನಾ** (स्त्री०) 1. ಪ್ರಾರ್ಥನೆ, ಕೋರಿಕೆ. टु याचृ (याच्ञायाम्)+णिच् "युच्" (३-३-१०७)। "ज्यानिघातकठिनाङ्गुलिर्वृथा बध्यतामभययाचनाञ्जलिः" रघु० ११-७८। 2. ಭಿಕ್ಷೆ ಬೇಡುವುದು, ತಿರುಪೆ ಕೇಳುವುದು.

**याचनीय ಯಾಚನೀಯ** (वि०) 1. ಪ್ರಾರ್ಥಿಸಲ್ಪಡುವ, ಬೇಡಲ್ಪಡುವ. टु याचृ (याच्ञायाम्) "अनीयर्" (३-१-९६)। 2. ಪ್ರಾರ್ಥಿಸಲು ಅರ್ಹನಾದ. 3. ಪ್ರಾರ್ಥಿಸಬೇಕಾದ. 4. ಯಾಚಿಸಲ್ಪಡುವ, ಭಿಕ್ಷೆ ಬೇಡಲ್ಪಡುವ. 5. ಭಿಕ್ಷೆ ಬೇಡಲು ಅರ್ಹನಾದ. 6. ಭಿಕ್ಷೆ ಬೇಡಬೇಕಾದ. "तव्यः" (३-१-९६)। **याचितव्यः ಯಾಚಿತವ್ಯ.**

**याचमान ಯಾಚಮಾನ** (वि०) 1. ಬೇಡುತ್ತಿರುವ, ಪ್ರಾರ್ಥಿಸುತ್ತಿರುವ, ಕೋರುತ್ತಿರುವ. टु याचृ (याच्ञायाम्) "शानच्" (३-२-१२४)। 2. ಯಾಚಿಸುತ್ತಿರುವ, ಬೇಡುತ್ತಿರುವ. "याचमानजनमानसवृत्तेः पूरणाय बत जन्म न यस्य। तेन भूमिरतिभारवतीयं न द्रुमैर्न गिरिभिर्न समुद्रैः" नैष० ५-८८।

**याचित ಯಾಚಿತ** (न०) 1. ಬೇಡಿಕೆ, ಕೋರಿಕೆ. 2. ಭಿಕ್ಷೆ ಬೇಡುವುದು, ತಿರುಪೆ ಕೇಳುವುದು. टु याचृ (याच्ञायाम्) भावे "क्तः" (३-३-११४)। (वि०) 3. ಪ್ರಾರ್ಥಿಸಲ್ಪಟ್ಟ, ಕೋರಲ್ಪಟ್ಟ. 4. ಭಿಕ್ಷೆ ಬೇಡಲ್ಪಟ್ಟ. याचृ कर्म० "क्तः" (३-२-१०२)। "याचितश्चिरयति क्व नु धीरः प्राणने क्षणमपि प्रतिभूः कः" नैष० ५-१२६।

**याचितक ಯಾಚಿತಕ** (न०) ಭಿಕ್ಷೆ ಬೇಡಿ ತಂದ ವಸ್ತು. याचितेन निर्वृत्तम् "कन्" (४-४-२१)।

**याचितवत् ಯಾಚಿತವತ್** (वि०) 1. ಬೇಡಿದವನು, ಪ್ರಾರ್ಥಿಸಿದವನು, ಕೋರಿದವನು. टु याचृ (याच्ञायाम्) "क्तवतुः" (३-२-१०२)। "माममीभिरिह याचितवद्भिर्दातृजातमवमत्य जगत्याम्" नैष० ५-९०। 2. ಭಿಕ್ಷೆ ಬೇಡಿದವನು, ತಿರುಪೆ ಕೇಳಿದವನು.

**याचितव्य ಯಾಚಿತವ್ಯ** (वि०) "याचनीय" ನೋಡಿ.

**याचितृ ಯಾಚಿತೃ** (वि०) ಪ್ರಾರ್ಥಿಸುವವನು, ಕೋರುವವನು, ಬೇಡುವವನು. टु याचृ (याच्ञायाम्) "तृच्" (३-१-१३३)। "उमा वधूर्भवान् दाता याचितार इमे वयम्" कुमा० ६-८२। स्त्रियां "ङीप्" (४-१-५)। **याचित्री ಯಾಚಿತ್ರೀ.**

**याच्ञा ಯಾಚ್ಞಾ** (स्त्री०) 1. ಪ್ರಾರ್ಥಿಸುವುದು, ಬೇಡುವುದು. टु याचृ (याच्ञायाम्) "नङ्" (३-३-९०)। "तेनार्थित्वं त्वयि विधिवशाद्दूरबन्धुर्गतोऽहं याच्ञा मोघा वरमधिगुणे नाधमे लब्धकामा" मेघ० १-६। 2. ಭಿಕ್ಷೆ

ಬೇಡುವುದು, ತಿರುಪೆ ಕೇಳುವುದು. "अथास्ति शक्तिः कृतमेव याच्ञया" किरा० १४-२०।

**याच्य ಯಾಚ್ಯ** (वि०) 1. ಬೇಡಲ್ಪಡುವ, ಪ್ರಾರ್ಥಿಸಲ್ಪಡುವ. टु याचृ (याच्ञायाम्) "ण्यत्" (३-१-१२४)। 2. ಭಿಕ್ಷೆ ಬೇಡಲ್ಪಡುವ.

**याज ಯಾಜ** (पुं०) ಕಾಶ್ಯಪನ ಸಂತತಿಯಲ್ಲಿ ಹುಟ್ಟಿದ ಒಬ್ಬ ಮಹರ್ಷಿ. ಈ ಋಷಿಯು ದ್ರುಪದರಾಜನಿಂದ ಸಂತಾನಪ್ರಾಪ್ತಿಗಾಗಿ ಯಾಗ ಮಾಡಿಸಿದನು.

**याजक ಯಾಜಕ** (पुं०) 1. ಋತ್ವಿಕ್ಕು, ಯಜಮಾನನಿಂದ ದಕ್ಷಿಣೆ ಪಡೆದು ಯಾಗಕಾರ್ಯವನ್ನು ನಿರ್ವಹಿಸುವವನು. याजयति — यज (देवपूजादौ) + णिच् "ण्वुल्" (३-१-१३३)। 2. ಮದಿಸಿದ ಆನೆ. 3. ಯಾಗ ಮಾಡುವವನು. 4. ರಾಜನ ಆನೆ. "याजको राजकुञ्जरे। याज्ञिके च" हेम०।

**याजन ಯಾಜನ** (न०) ಯಾಗ ಮಾಡಿಸುವುದು. याज्यते— यज (देवपूजादौ) + णिच् "ल्युट्" (३-३-११५)। ಬ್ರಾಹ್ಮಣನಿಗೆ ವಿಹಿತವಾದ ಷಟ್ಕರ್ಮಗಳಲ್ಲೊಂದು. **ಷಟ್ ಕರ್ಮಗಳು :** (1) यजनम् (2) याजनम् (3) अध्ययनम् (4) आध्यापनम् (5) दानम् ಮತ್ತು (6) प्रतिग्रहः। "अध्यापनाध्ययने यजनं याजनं तथा। दानं प्रतिग्रहश्चैव षट्कर्माण्यग्रजन्मनः" मनु० १०-७५।

**याजनीय ಯಾಜನೀಯ** (वि०) 1. ಯಾಗ ಮಾಡಿಸಲ್ಪಡುವ. 2. ಯಾಗ ಮಾಡಿಸಬೇಕಾದ. 3. ಯಾಗ ಮಾಡಿಸಲು ಅರ್ಹನಾದ. यज (देवपूजादौ) + णिच् "अनीयर्" (३-१-९६)। "तव्यः" (३-१-९६)। **–यितव्यः –ಯಿತವ್ಯಃ.**

**याजयत् ಯಾಜಯತ್** (वि०) ಯಾಗ ಮಾಡಿಸುತ್ತಿರುವ. यज (देवपूजादौ) + णिच् "शतृ" (३-२-१२४)।

**याजयितृ ಯಾಜಯಿತೃ** (वि०) ಯಾಗ ಮಾಡಿಸುವವನು, ಋತ್ವಿಕ್ಕು. यज (देवपूजादौ) + णिच् "तृच्" (३-१-१३३)।

**याजि ಯಾಜಿ** (पुं०) 1. ಯಾಗವನ್ನು ಮಾಡುವವನು. यज (देवपूजादौ) "इञ्" (उ० ४-१२४)। 2. ಯಾಗ, ಯಜ್ಞ.

**याजित ಯಾಜಿತ** (वि०) 1. ಯಾಗ ಮಾಡಿಸಲ್ಪಟ್ಟವನು. यज (देवपूजादौ) + णिच् "क्तः" (३-२-१०२)। (न०) 2. ಯಾಗ ಮಾಡಿಸುವುದು. यज + णिच् भावे "क्तः"।

**याजितवत् ಯಾಜಿತವತ್** (वि०) ಯಾಗ ಮಾಡಿಸಿದವನು. यज (देवपूजायाम्) + णिच् "क्तवतुः" (३-२-१०२)।

**याजिन् ಯಾಜಿನ್** (वि०) (ಸಮಾಸಾಂತ್ಯದಲ್ಲಿ) ಯಾಗ ಮಾಡುವವನು. यजते — यज (देवपूजादौ) "णिनिः" (३-१-१३४)। "सोमपायिनि भविष्यते मया वाञ्छितोत्तमवितानयाजिना" माघ० १४-१०।

**याजुष ಯಾಜುಷ** (वि०) 1. ಯಜುರ್ವೇದ ಸಂಬಂಧವಾದ. यजुषः अयम् "अण्" (४-३-१२०)। 2. ಯಜುಃಶಾಖೆಗೆ ಸೇರಿದವನು, ಯಜುರ್ವೇದದ ಅಧ್ಯಯನ ಮಾಡುವವನು.

**याज्या ಯಾಜ್ಯಾ** (स्त्री०) ಋಗ್ವೇದಿ ಋತ್ವಿಕ್ಕು ಪಠಿಸುವ ಋಕ್ಕು. इज्यतेऽनया — यज (देवपूजादौ) "ण्यत्" (३-१-१२४)। "याज्यया यजनकर्मिणोऽत्यजन् द्रव्यजातमपदिश्य देवताम्" माघ० १४-२०।

**याज्ञवल्क्य ಯಾಜ್ಞವಲ್ಕ್ಯ** (पुं०) ಒಬ್ಬ ಸ್ಮೃತಿಕಾರರು, ಧರ್ಮಶಾಸ್ತ್ರ ಬರೆದ ಒಬ್ಬ ಮಹರ್ಷಿ. ಇವರು ರಚಿಸಿದ ಸ್ಮೃತಿಯು "ಯಾಜ್ಞವಲ್ಕ್ಯಸ್ಮೃತಿ" ಯೆಂದು ಪ್ರಸಿದ್ಧವಾಗಿದೆ. ಇದರಲ್ಲಿ ಆಚಾರ, ವ್ಯವಹಾರ ಮತ್ತು ಪ್ರಾಯಶ್ಚಿತ್ತಗಳೆಂಬ ಮೂರು ಅಧ್ಯಾಯಗಳಿವೆ. ಇವರು ಶುಕ್ಲಯಜುರ್ವೇದಪ್ರವರ್ತಕರಾದ ಒಬ್ಬ ಋಷಿ. ಈ ಋಷಿಯು ತಮ್ಮ ಗುರುಗಳಾದ ವೈಶಂಪಾಯನಋಷಿಯ ಶಿಷ್ಯರನ್ನು ತಿರಸ್ಕರಿಸಿ ಮಾತನಾಡಿದುದರಿಂದ ವೈಶಂಪಾಯನರ ಶಾಪಕ್ಕೆ ಪಾತ್ರರಾಗಿ ಅವರಿಂದ ಕಲಿತ ವೇದಗಳನ್ನು ವಾಂತಿ ಮಾಡಿದರು. ಆಗ ಇತರ ಋಷಿಗಳು ಆ ವೇದಗಳನ್ನು ತಿತ್ತಿರಿಪಕ್ಷಿರೂಪದಿಂದ ಪರಿಗ್ರಹಿಸಿದರು. ಅನಂತರ ಯಾಜ್ಞವಲ್ಕ್ಯಋಷಿಯು ಸೂರ್ಯನಿಂದ ಶುಕ್ಲಯಜುರ್ವೇದವನ್ನು ಪರಿಗ್ರಹಿಸಿ ಲೋಕದಲ್ಲಿ ಪ್ರಚಾರಪಡಿಸಿದರು.

**याज्ञसेनी ಯಾಜ್ಞಸೇನೀ** (स्त्री०) ಯಜ್ಞಸೇನನ ಮಗಳು, ದ್ರುಪದರಾಜನ ಮಗಳು, ದ್ರೌಪದೀದೇವಿ. यज्ञसेनस्य द्रुपदस्य अपत्यं स्त्री "इञ्" (४-१-९५)। "ङीष्" (४-१-६५)।

**याज्ञिक ಯಾಜ್ಞಿಕ** (पुं०) 1. ಯಾಗವಿದ್ಯೆ ತಿಳಿದ ಋತ್ವಿಕ್ಕು, ದಕ್ಷಿಣೆ ಪಡೆದು ಇನ್ನೊಬ್ಬನ ಯಾಗವನ್ನು ನಿರ್ವಹಿಸುವವನು. यज्ञं यज्ञविद्यामधीते वेद वा—यज्ञ "ठक्" (४-२-६०)। 2. ಯಾಗ ಮಾಡುವವನು, ಯಜಮಾನ. यज्ञः प्रयोजनमस्य "ठक्" (५-१-१०९)। "इष्ट्वेह देवता यज्ञैः स्वर्लोकं याति याज्ञिकः" भाग० ११-१०-२३।

3. ದರ್ಭೆ, ಕುಶ. यज्ञमर्हति—"ठक्" (५-१-६३)। 4. ಅಶ್ವತ್ಥವೃಕ್ಷ, ಅರಳಿ ಮರ. 5. ಖದಿರವೃಕ್ಷ, ಕಗ್ಗಲಿ ಮರ. 6. ಮುತ್ತುಗದ ಮರ.

**याज्ञिक्य ಯಾಜ್ಞಿಕ್ಯ** (न०) ಯಾಜ್ಞಿಕನ ಕಾರ್ಯ, ಯಾಜ್ಞಿಕನ ಧರ್ಮ, ಯಾಜ್ಞ. याज्ञिक "ष्यञ्" (४-३-१२९)।

**याज्य ಯಾಜ್ಯ** (पुं०) 1. ಯಜಮಾನ, ಯಾಗ ಮಾಡಿಸಲ್ಪಡುವವನು. यज (देवपूजादौ) "ण्यत्" (३-१-१२४)। "गुरौ शिष्यश्च याज्यश्च स्तेनो राजनि किल्बिषम्" मनु० ८-३१७। 2. ಯಾಗಕಾರ್ಯವನ್ನು ನಿರ್ವಹಿಸುವ ಋತ್ವಿಕ್ಕು. (न०) 3. ಯಾಗಭೂಮಿ. इज्यतेऽत्र—यज "ण्यत्" (३-१-१२४)। 4. ಋತ್ವಿಕ್ಕಿಗೆ ಕೊಡುವ ಸಂಭಾವನೆ. (स्त्री०) **–ज्या –ಜ್ಯಾ.** ಯಾಗದಲ್ಲಿ ಉಪಯೋಗಿಸುವ ಋಕ್ಕು. इज्यतेऽनया—यज कर० "ण्यत्" (३-१-१२४)। "याज्यया यजनकर्मिणोऽत्यजन् द्रव्यजातमपदिश्य देवताम्" माघ० १४-२०।

**यात् ಯಾತ್** (वि०) ಹೋಗುತ್ತಿರುವ, ನಡೆಯುತ್ತಿರುವ, ಚಲಿಸುತ್ತಿರುವ. या (प्रापणे) "शतृ" (३-२-१२४)। "यान्तोऽन्यतः प्लुतकृतस्वरमाशु दूरादुद्वाहुना जुहुविरे मुहुरात्मवर्ग्याः" माघ० ५-१५। स्त्रियां "ङीप्" (४-१-६)। **–ती –ತೀ, –न्ती –ನ್ತೀ.** "यान्तीनां सममसितभ्रुवां नतत्वादंसानां महति नितान्तमन्तरेऽपि" माघ० ८-२।

**यात ಯಾತ** (न०) 1. ಗಮನ, ನಡಗೆ, ಚಲನೆ. या (प्रापणे) भावे "क्तः" (३-३-११४)। "सलीलयातानि न भर्तुरभ्रमोर्न चित्रमुच्चैःश्रवसः पदक्रमम्" माघ० १-५२। 2. ಮುಂದೆ ನಡೆಯುವುದು, ಮುಂದೆ ಸಾಗುವುದು. 3. ಅಂಕುಶದಿಂದ ಆನೆಯನ್ನು ನಡೆಸುವುದು. "पादकर्म यतं तेषां यातमंकुशवारणम्" वैज०। (वि०) 4. ನಡೆದ, ಮುಂದೆ ಸಾಗಿದ. या कर्त० "क्तः" (३-४-७२)। 5. ಹೊರಟುಹೋದ. 6. ಕಳೆದು ಹೋದ (ಕಾಲ). 7. ಹೊಂದಿದ, ಸಂಪಾದಿಸಿದ, ಪಡೆದ, ಪ್ರಾಪ್ತವಾದ. "यातैश्चातुर्विध्यमस्त्रादिभेदादव्यासङ्गैः सौष्ठवाल्लाघवाच्च" माघ० १८-११।

**यातना ಯಾತನಾ** (स्त्री०) 1. ಹೆಚ್ಚು ವೇದನೆ, ಬಹಳ ನೋವು, ಸಹಿಸಲಾಗದ ನೋವು. यत (निकारोपस्कारयोः) + णिच् "युच्" (३-३-१०७)। "हिरण्यकशिपुः पुत्रं प्रह्लादं केशवप्रियम्। जिघांसुरकरोत्नानायातना मृत्युहेतवे" भाग० ७-१। 2. ನರಕಶಿಕ್ಷೆಯಿಂದ ಉಂಟಾಗುವ ನೋವು. "मा भीर्मन्दमनो विचिन्त्य बहुधा यामीश्चिरं यातनाः" मु० मा०।

**यातयाम ಯಾತಯಾಮ** (वि०) 1. ಹೆಚ್ಚು ಕಾಲ ಕಳೆದಿರುವ, ಹೆಚ್ಚು ವಯಸ್ಸು ಕಳೆದಿರುವ, ಮುದುಕ. याता यामाः यस्य। "यातयामं विजितवान् स रामो यदि किं ततः" भट्टि० ५-३९। 2. ಜೀರ್ಣವಾದ, ತಿಂದು ಅರಗಿದ. 3. ಉಪಭೋಗಿಸಲ್ಪಟ್ಟ, ಅನುಭವಿಸಿ ಬಿಡಲ್ಪಟ್ಟ. "जीर्णं च परिभुक्तं च यातयाममिदं द्वयम्" अम०। 4. ಪರ್ಯುಷಿತವಾದ, ಹಳೆಯದಾದ. यातो गतो यामः उपभोगकालो यस्य। 5. ಬಹಳ ಕಾಲದಿಂದಿರುವ ಆಹಾರ, ಹೆಚ್ಚು ಕಾಲ ಕಳೆದು ಗುಣವನ್ನು ಕಳೆದುಕೊಂಡಿರುವ ಆಹಾರ. "यातयामं गतरसं पूति पर्युषितञ्च यत्" गीता १७-१०।

**यातवत् ಯಾತವತ್** (वि०) ಹೊರಟಿರುವ. या (प्रापणे) "क्तवतुः" (३-१-९६)। स्त्रियां "ङीप्" (४-१-६)। **–वती –ವತೀ.**

**यातव्य ಯಾತವ್ಯ** (वि०) 1. ಹೋಗಬೇಕಾದ. 2. ಹೋಗಲು ಯೋಗ್ಯವಾದ. 3. ಹೊರಡಲು ಅರ್ಹವಾದ. या (प्रापणे) "तव्यः" (३-१-९६)। 4. ಎದುರಿಸಿ ಹೋಗಲು ಅರ್ಹನಾದ, ಯುದ್ಧಕ್ಕಾಗಿ ಹೊರಟು ಎದುರಿಸಲು ಯೋಗ್ಯನಾದ. "यातव्यपार्ष्णिग्राहादिमालायामधिकद्युतिः" माघ० २-९२। "अनीयर्" (३-१-९६)। **यानीयः ಯಾನೀಯಃ.**

**यातिक ಯಾತಿಕ** (वि०) ಪ್ರಯಾಣಿಕ, ಪಾಂಥ, ಯಾತ್ರಿಕ. यातमस्यास्ति "ठन्" (५-२-११५)।

**यातु ಯಾತು** (पुं०) 1. ಕಾಲ, ಸಮಯ. 2. ವಾಯು, ಗಾಳಿ. या (प्रापणे) "तुः" (उ० १-७२)। (न०) 3. ರಾಕ್ಷಸ. "यातु नः पदवी सैषा यातुनश्चास्य लक्ष्मण" चं० रा०। (वि०) 4. ಪ್ರಯಾಣಿಕ, ಯಾತ್ರಿಕ, ಪಥಿಕ. "यातुरध्वगकालयोः। रक्षसि क्लीबम्" सि० कौ०।

**यातुक ಯಾತುಕ** (पुं०) ಒಂದು ಯಾಮ, ಒಂದು ಜಾವ, ಮೂರು ಗಂಟೆಗಳ ಕಾಲ. "यामे प्रहरयातुकौ" वैज०।

**यातुधान ಯಾತುಧಾನ** (पुं०) ರಾಕ್ಷಸ. यातूनि रक्षांसि दधाति पुष्णाति—डु धाञ् (धारणपोषणयोः) "ल्युट्" (३-३-११३)। "एको दाशरथिः कामं यातुधानाः सहस्रशः" रघु० १२-४५। स्त्रियां "ङीप्" (४-१-१५)। **–धानी –ಧಾನೀ.**

**यातृ ಯಾತೃ** (ಪುಂ) 1. ಪ್ರಯಾಣಿಕ, ದಾರಿ ನಡೆಯುವವನು, ಪಥಿಕ. या (प्रापणे) "तृच्" (३-१-१३३)। याता यातारौ यातारः। "उल्का शुभदा पुरतो दिवाकरविनिःसृता यातुः" बृहत्सं० ३३-१३। 2. ಸಾರಥಿ, ರಥ ನಡೆಸುವವನು. "यानस्य चैव यातुश्च यानस्वामिन एव च" मनु० ८-२९०। (स्त्री०) 3. ಸಹೋದರನ ಪತ್ನಿ, ಅಣ್ಣತಮ್ಮಂದಿರ ಪತ್ನಿಯರು. (ಪರಸ್ಪರ). याता यातरौ यातरः। "भार्यास्तु भ्रातृवर्गस्य यातरः स्युः परस्परम्" अम०।

**यातृक ಯಾತೃಕ** (ಪುಂ) ಪಾಂಥ, ಪ್ರಯಾಣಿಕ.

**यात्य ಯಾತ್ಯ** (ಪುಂ) 1. ನರಕದಲ್ಲಿ ವಾಸಮಾಡುವ ಪ್ರಾಣಿಗಳು. "नारका जन्तवः प्रेता यात्या अप्यातिवाहिकाः" वैज०। (वि०) 2. ಪ್ರಯತ್ನಿಸಬೇಕಾದ. 3. ಪ್ರಯತ್ನಿಸಲು ಅರ್ಹವಾದ. यती (प्रयत्ने) "ण्यत्" (३-१-१२४)।

**यात्रा ಯಾತ್ರಾ** (ಸ್ತ್ರೀ०) 1. ಪ್ರಯಾಣ, ಗಮನ, ಹೊರಟು ಬರುವುದು. या (प्रापणे) "त्रन्" (उ० ४-१६७)। "यात्रा तौ परिवञ्चितुं किसलयं मारीचमायाविधिः" म० वी० ६-१। 2. ಜೈತ್ರಯಾತ್ರೆ, ಶತ್ರುಜಯಕ್ಕಾಗಿ ರಾಜನ ಪ್ರಯಾಣ. "शक्येष्वेवाभवद्यात्रा तस्य शक्तिमतः सतः" रघु० १७-५६। 3. ತೀರ್ಥಯಾತ್ರೆ, ಪುಣ್ಯಕ್ಷೇತ್ರಗಳಲ್ಲಿ ಕೈಗೊಳ್ಳುವ ಸಂಚಾರ. 4. ದೇವರ ಉತ್ಸವ, ಹಬ್ಬ, ಜಾತ್ರೆ. "अद्य खलु भगवतः कालप्रियानाथस्य यात्रायामार्यमिश्रान् विज्ञापयामि" उ० रा० १। 5. ಶರೀರಯಾತ್ರೆ, ದೇಹಪೋಷಣ, ದೇಹಧಾರಣೆ, ಜೀವನ. "शरीरयात्रापि च ते न प्रसिद्ध्येदकर्मणः" गीता ३-८। 6. ವ್ಯವಹಾರ, ನಡವಳಿಕೆ, ಸಾಮಾಜಿಕ ಕಾರ್ಯ. "प्रत्यहं लोकयात्रायाः प्रत्यक्षं स्त्रीनिबन्धनम्" मनु० ९-२७। 7. ಕಾಲ ಕಳೆಯುವುದು. "यात्रामात्रं त्वहरहर्दैवादुपनमत्युत" भाग० १०-८६-१५। 8. ಮೆರವಣಿಗೆ. "प्रत्यासन्नस्त्वरयतितरां जन्ययात्राप्रवेशः" मालती० ६-२। 9. ಸಂಪ್ರದಾಯ, ಪದ್ಧತಿ, ಆಚಾರ, ವಾಡಿಕೆ. "एषोदिता लोकयात्रा नित्यं स्त्रीपुंसयोः परा" मनु० ९-२५। 10. ಉಪಾಯ. "यात्रा तु यापनेऽपि स्याद्गमनोत्सवयोः स्त्रियाम्" मेदि०। "यात्रा तु यापनोपाये गतौ देवार्चनोत्सवे" विश्व०।

**यात्रिक ಯಾತ್ರಿಕ** (ಪುಂ) 1. ಪ್ರಯಾಣಿಕ, ಪಥಿಕ, ದಾರಿ ನಡೆಯುವವನು. 2. ಪುಣ್ಯಕ್ಷೇತ್ರಗಳಲ್ಲಿ ಸಂಚರಿಸುವವನು. 3. ದೇಹಯಾತ್ರೆ ನಡೆಸುವವನು, ಜೀವನ ನಡೆಸುವವನು. 4. ನಡೆಯುವವನು, ಹೋಗುವವನು. (ನ०) 5. ದಂಡಯಾತ್ರೆ, ಯುದ್ಧಕ್ಕಾಗಿ ಮಾಡುವ ಪ್ರಯಾಣ.

**याथातथ्य ಯಾಥಾತಥ್ಯ** (ನ०) 1. ನಿಜಸ್ಥಿತಿ, ಸತ್ಯ, ಇರಬೇಕಾದ ರೀತಿಯಲ್ಲಿ ಇರುವಿಕೆ. यथातथा भावः "ष्यञ्" (५-१-१२४)। 2. ಆರ್ಜವ, ಋಜುಸ್ವಭಾವ, ಸರಳತೆ, ಕಪಟವಿಲ್ಲದಿರುವಿಕೆ.

**याथार्थ्य ಯಾಥಾರ್ಥ್ಯ** (ನ०) ಅರ್ಥಕ್ಕೆ ಅನುಸಾರವಾಗಿರುವಿಕೆ, ನಿಜಸ್ಥಿತಿ. यथार्थस्य भावः "ष्यञ्" (५-१-१२४)। "गृहीतदिक्कैरपुनर्निवृत्तिभिश्चिराय याथार्थ्यमलम्भि दिग्गजैः" माघ० १-६४।

**यादःपति ಯಾದಃಪತಿ** (ಪುಂ) 1. ಸಮುದ್ರ, ಜಲಚರ ಪ್ರಾಣಿಗಳ ರಕ್ಷಕ. यादसां जलजन्तूनां पतिः। 2. ವರುಣ. "अथ वरुणे यादसां पतिः। यादःपतिश्च तावन्धौ" वैज०।

**यादव ಯಾದವ** (ಪುಂ) 1. ಶ್ರೀಕೃಷ್ಣ. यदोर्गोत्रापत्यं पुमान् "अण्" (४-१-९२)। "सखेति मत्वा प्रसभं यदुक्तं हे कृष्ण हे यादव माधवेति" गीता ११-४१। 2. ಯದುವಂಶದಲ್ಲಿ ಹುಟ್ಟಿದವನು. "यादवाम्भोनिधीन् रुन्धे वेलेव भवतः क्षमा" माघ० २-५८। (स्त्री०) **–वी –ವೀ.** (1) ಯದುವಂಶದ ಹೆಂಗಸು. (2) ದುರ್ಗಾದೇವಿ. (ನ०) 3. ಹಸು ಎಮ್ಮೆ ಮೊದಲಾದ ಸಂಪತ್ತು.

**यादस् ಯಾದಸ್** (ನ०) 1. ಜಲಚರ ಪ್ರಾಣಿ, ಜಲಜಂತು. यान्ति वेगेन—या (प्रापणे) "असुन्" (उ० ४-१८९)। "अवृष्यश्चाभिगम्यश्च यादोरत्नैरिवार्णवः" रघु० १-१६। 2. ಜಲ, ನೀರು. "जीवनं भुवनं यादः पावनं क्षणदं दकम्" कल्पद्रु०।

**यादसांनाथ ಯಾದಸಾಂನಾಥ, –पति –ಪತಿ** (ಪುಂ) 1. ಸಮುದ್ರ. 2. ವರುಣ. यादसां नाथः पतिर्वा—षष्ठ्या अलुक् (६-३-१४)। पक्षे **यादोनाथः, यादःपतिः**। "यादोनाथः शिवजलपथः कर्मणे नौचराणाम्" रघु० १७-८१।

**यादृक्ष ಯಾದೃಕ್ಷ** (ವಿ०) ಯಾವ ವಿಧವಾದ, ಯಾವ ತೆರನಾದ. य इव पश्यति—दृशिर् "क्सः" (वा० ३-२-५७)। "कञ्" (६-२-६०)। **यादृशः ಯಾದೃಶಃ** चात् "क्विन्" (३-२-६०)। **यादृश् ಯಾದೃಶ್.** "तत् क्षेत्रं यच्च यादृक् च यद्विकारि यतश्च यत्" गीता १३-३। स्त्रियां **यादृशी ಯಾದೃಶೀ.**

**यादृच्छिक ಯಾದೃಚ್ಛಿಕ** (ವಿ०) ಅಕಸ್ಮಾತ್ತಾಗಿ ಸಂಭವಿಸಿದ, ತಾನಾಗಿ ಒದಗಿಬಂದ, ಅನಿರೀಕ್ಷಿತವಾಗಿ ಬಂದು ಸೇರಿದ.

**यान ಯಾನ** (ನ०) 1. ವಾಹನ, ಆನೆ ಕುದುರೆ ರಥ ಮೊದಲಾದ ಸಂಚಾರದ ಸಾಧನ. यान्त्यनेन—या (प्रापणे) कर० "ल्युट्" (३-३-११७)। "यानाज्जनः परिजनैरवतार्यमाणा राज्ञीर्नरापनयनाकुलसौविदल्लाः" माघ० ५-१७। 2. ಗಮನ, ಸಂಚಾರ, ನಡೆ. या भावे "ल्युट्" (३-३-११५)। 3. ಪ್ರಯಾಣ, ಹೊರಟು ಬರುವುದು. "समेत्य सिंहीमिव तामनन्यां यानोद्यतं यादवपञ्चवक्त्रम्" याद० १३-३४। 4. ರಾಜನ ಆರು ಗುಣಗಳಲ್ಲೊಂದು. **ರಾಜನ ಆರು ಗುಣಗಳು:** (1) सन्धिः (2) विग्रहः (3) यानम् (4) आसनम् (5) द्वैधीभावः ಮತ್ತು (6) समाश्रयः। ಯಾನವು (1) विगृह्ययानम् (2) सन्धाययानम् ಮತ್ತು (3) संभूययानम् ಎಂದು ಮೂರು ವಿಧ.

(1) ಶತ್ರುವು ವ್ಯಸನಪೀಡಿತನೆಂದು ತಿಳಿದಾಗಲೂ ತನ್ನ ಸೈನ್ಯದಿಂದ ಪೀಡಿತರಾದ ಶತ್ರುವಿನ ಪ್ರಕೃತಿಗಳು ಅವನಲ್ಲಿ ಅನುರಾಗಶೂನ್ಯರಾಗಿರುವರೆಂದು ತಿಳಿದಾಗಲೂ ಶತ್ರುವಿಗೆ ಅಗ್ನಿ ಪ್ರವಾಹ ವ್ಯಾಧಿ ದುರ್ಭಿಕ್ಷ ಮುಂತಾದುವುಗಳಿಂದ ಕೋಶ ಮತ್ತು ರಕ್ಷಣೆಯ ಕೊರತೆಯುಂಟಾಗಿರುವುದು ಎಂದು ತಿಳಿದಾಗಲೂ ಕೈಗೊಳ್ಳುವ ಪ್ರಯಾಣವು **ವಿಗೃಹ್ಯಯಾನ.** "यदा वा पश्येत् "व्यसनी परः, स्वचक्रपीडिता विरक्ता वाऽस्य प्रकृतयः कर्शिता निरुत्साहाः परस्परं भिन्नाः, अग्न्युदकव्याधिदुर्भिक्षादिनिमित्तक्षीणपुरुषरक्षाविधानः" इति तदा विगृह्य यायात्" अर्थशा० अधि० ७–अध्या० ४।

(2) ವಿಗೃಹ್ಯಯಾನಕ್ಕೆ ಉಕ್ತವಾದ ಸನ್ನಿವೇಶವು ತನ್ನಲ್ಲಿಲ್ಲವೆಂದು ತಿಳಿದಾಗ ಕೈಗೊಳ್ಳುವ ಪ್ರಯಾಣವು **ಸಂಧಾಯಯಾನ.** "एतद्विपर्यये सन्धाय यायात्" अर्थशा० ७-४।

(3) ಸಹಾಯಕರಿಲ್ಲದೆ ತಾನೊಬ್ಬನೇ ಯುದ್ಧಕ್ಕೆ ಹೋಗುವುದು ಸಾಧ್ಯವಿಲ್ಲವೆಂದು ತಿಳಿದಾಗ ತನಗೆ ಸಮ, ತನಗಿಂತಲೂ ಬಲಿಷ್ಠ ಮತ್ತು ತನಗಿಂತಲೂ ಹೀನರಾದ ಸಾಮವಾಯಿಕರೊಡನೆ ಕೂಡಿ ಯುದ್ಧಕ್ಕೆ ಹೊರಡುವುದು **ಸಂಭೂಯಯಾನ.** "यदा वा पश्येत्—न शक्यमेकेन यातुं अवश्यं च यातव्यम्" इति तदा समहीनज्यायोभिः सामवायिकैः संभूय यायात्" अर्थशा० ७-४।

**यानपात्र ಯಾನಪಾತ್ರ** (ನ०) ಚಿಕ್ಕ ಹಡಗು, ಹುಟ್ಟು ಹಾಕಿ ನಡೆಸುವ ಹಡಗು. यानसाधनं पात्रम्।

**यानमुख ಯಾನಮುಖ** (ನ०) ಗಾಡಿಯ ಮೂಕಿ, ರಥದ ಮುಂಭಾಗ. यानस्य मुखम्।

**यान्त्रिक ಯಾಂತ್ರಿಕ** (ವಿ०) ಯಂತ್ರಸಂಬಂಧವಾದ, ಯಂತ್ರದಲ್ಲಿ ಉಂಟಾದ, ಯಂತ್ರವಿಷಯವನ್ನು ವಿವರಿಸುವ. यन्त्रविषयकग्रन्थस्य व्याख्यानो यन्त्रे भवो वा "ठक्" (४-३-७२)।

**यापन ಯಾಪನ** (ನ०) 1. ನಡೆಯಿಸುವುದು, ಮುಂದೆ ಸಾಗುವಂತೆ ಮಾಡುವುದು, ಹೊರಡಿಸುವುದು. 2. ಕಾಲ ಕಳೆಯುವುದು. या (प्रापणे) + णिच् "ल्युट्" (३-३-११५)। 3. ನೃತ್ಯ, ಕುಣಿದಾಟ. 4. ಎಸೆಯುವುದು, ಬಿಸಾಡುವುದು. "यापनं स्यान्निरसने नृत्ते प्रस्थापनेऽपि च" वैज०। "प्रस्थापने निरसने कालक्षेपे च यापनम्" नानार्थर०। 5. ರೋಗ ವಾಸಿಮಾಡುವುದು.

**यापित ಯಾಪಿತ** (ವಿ०) 1. ಕಳೆಯಲ್ಪಟ್ಟ (ಕಾಲ). 2. ಹೊರಡಿಸಲ್ಪಟ್ಟ, ಕಳುಹಿಸಲ್ಪಟ್ಟ. या (प्रापणे)+ णिच् "क्तः" (३-२-१०२)।

**याप्य ಯಾಪ್ಯ** (ವಿ०) 1. ಕೆಳದರ್ಜೆಯವನು, ನೀಚ, ಅಧಮ, ನಿಂದೆಗೆ ಅರ್ಹನಾದವನು. या (प्रापणे)+णिच् "यत्" (३-१-९७)। 2. ಚಿಕಿತ್ಸೆಗೆ ಅಸಾಧ್ಯವಾದ. "शोणितं तदसाध्यं स्याद्याप्यं संवत्सरोत्थितम्" सुश्रुत० निदान० १-५०। 3. ಚಿಕಿತ್ಸೆ ನಡೆಸಿದರೂ ಗುಣವಾಗದ ವ್ಯಾಧಿ, ಚಿಕಿತ್ಸೆಯನ್ನು ನಡೆಸಬಾರದ ವ್ಯಾಧಿ. "साध्या याप्या असाध्याश्च व्याधयस्त्रिविधाः स्मृताः। सुखसाध्यः कष्टसाध्यो द्विविधः साध्य उच्यते" भावप्र०। "यापनीयं तु तं विद्यात्क्रियां धारयते हिताम्। क्रियायां तु निवृत्तायां सद्यो यश्च विनश्यति। प्राप्ता क्रिया धारयति याप्यव्याधितमातुरम्" सुश्रुत० सूत्र० २३।

**याप्ययान ಯಾಪ್ಯಯಾನ** (ನ०) ಕೆಳದರ್ಜೆಯವರಿಂದ ಹೊರಲ್ಪಟ್ಟ ಒಂದು ವಾಹನ, ಮೇನಾ, ಪಲ್ಲಕ್ಕಿ. याप्यैः वाह्यं यानम्। "शिबिका याप्ययानं स्यात्" अम०।

**याभ ಯಾಭ** (ಪು०) ಮೈಥುನ, ಸ್ತ್ರೀಪುರುಷರ ಸಂಭೋಗ. यभ्यते—यभ (मैथुने) "घञ्" (३-३-१८)। "पीवानं श्मश्रुलं प्रेष्ठं मीढ्वांसं याभकोविदम्" भाग० ९-१९-६।

**याम ಯಾಮ** (ಪು०) 1. ಜಾವ, ದಿವಸದ ಎಂಟನೆಯ ಒಂದು ಭಾಗ, ಮೂರು ಗಂಟೆಗಳ ಕಾಲ. याति —या

(प्रापणे) "मन्" (उ० १-१४०)। "पश्चिमायामिनीयामात् प्रसादमिव चेतना" रघु० १७-१। "भृशमायामियामासु यामिनीष्वभितप्यते" किरा० ११-४९। 2. ಸಂಯಮ, ಇಂದ್ರಿಯ ನಿಗ್ರಹ, ತಾಳ್ಮೆ, ಸೈರಣೆ. "संयामसंयमौ यामः" वैज०। "यामौ प्रहरसंयमौ" हेम०। 3. ಕವಚ, ಅಂಗಿ. "कञ्चुको वारवाणो ना यामस्तूलयुतोऽप्यथ" कल्पद्रु०। 4. ಹಿರಿಯವನು, ವಯಸ್ಸಾದವನು. "झर्झरोऽपि च यामः स्याद्वर्षीयान् दशमीत्यपि" कल्पद्रु०।

**यामघोष** ಯಾಮಘೋಷ (पुं०) ಕುಕ್ಕುಟ, ಕೋಳಿ. यामे प्रतियामं घोषो रवोऽस्य। ರಾತ್ರಿ ಪ್ರತಿಯಾಮದಲ್ಲಿಯೂ ಕೋಳಿಯು ಕೂಗುವುದರಿಂದ ಈ ಹೆಸರು. (स्त्री०) **-घोषा** -ಘೋಷಾ. ರಾತ್ರಿವೇಳೆಯಲ್ಲಿ ಪ್ರತಿ ಯಾಮದಲ್ಲಿಯೂ ಜಾವದ ಗಂಟೆ ಹೊಡೆಯುವ ಗಡಿಯಾರ ಅಥವಾ ಜಾಗಟೆ.

**यामनाली** ಯಾಮನಾಲೀ (स्त्री०) ಜಾವದ ಗಂಟೆ ಹೊಡೆಯುವ ಜಾಗಟೆ. "नालीघटी यामनाली दण्डढक्का यमेरुका। यामघोषा:" त्रिकाण्ड०।

**यामल** ಯಾಮಲ (न०) 1. ಯುಗ್ಮ, ಒಂದು ಜೊತೆ, ದ್ವಂದ್ವ. "युगलद्वन्द्वयुग्मानि युगं यमलयामले" त्रिकाण्ड०। 2. ಒಂದು ತಂತ್ರಶಾಸ್ತ್ರ. ಇದು (1) आदियामलम् (2) ब्रह्मयामलम् (3) विष्णुयामलम् (4) रुद्रयामलम् (5) गणेशयामलम् ಮತ್ತು (6) आदित्ययामलम् ಎಂದು ಆರು ವಿಧ.

**यामवती** ಯಾಮವತೀ (स्त्री०) ರಾತ್ರಿ. यामाः प्रहराः सन्त्यस्याम् "मतुप्" (५-२-९४)। "तारावितानतरला इव यामवत्यः" किरा० ८-५६।

**यामि** ಯಾಮಿ, **-मी** -ಮೀ (स्त्री०) ಹೆಂಗಸು, ಮಹಿಳೆ. याति कुलात् कुलान्तरम्—या (प्रापणे) "मिः" बाहु०। "जोषिज्जोषा महेली च यामिर्यामी च जादिमे" कल्पद्रु०।

**यामिक** ಯಾಮಿಕ (पुं०) ರಾತ್ರಿಯ ವೇಳೆಯ ಕಾವಲುಗಾರ, ಪೋಲೀಸಿನವನು. यामे नियुक्तः "ठक्" (४-४-६९)। "यामिकाननुपमृद्य च मादृक् तां निरीक्षितुमपि क्षमते कः?" नैष० ५-११०। (स्त्री०) **-का** -ಕಾ.

**यामिनी** ಯಾಮಿನೀ (स्त्री०) 1. ರಾತ್ರಿ. यामाः सन्त्यस्याम्—याम "इनिः" (५-२-११५)। "ङीप्" (४-१-५)। "यामिनीदिवससन्धिसंभवे तेजसि व्यवहिते सुमेरुणा" कुमा० ८-५५। 2. ಅರಿಶಿನ.

**यामिनीपति** ಯಾಮಿನೀಪತಿ (पुं०) ಚಂದ್ರ. यामिन्याः पतिः। **-ईशः** -ಈಶಃ. "यामिनीपतिरिवैष दिनान्ते" भाग०।

**यामी** ಯಾಮೀ (स्त्री०) 1. ದಕ್ಷಿಣ ದಿಕ್ಕು. यमस्येयम् "अण्" (४-३-१२०)। "ङीप्" (४-१-१५)। 2. ಕುಲಸ್ತ್ರೀ, ಪತಿವ್ರತೆಯಾದ ಹೆಂಗಸು. "मातापितृभ्यां यामीभिः भ्रात्रा पुत्रेण भार्यया। दुहित्रा दासवर्गेण विवादं न समाचरेत्" मनु० ४-१८०। 3. ಧರ್ಮಪುರುಷನ ಪತ್ನಿ. (वि०) 4. ಯಮನ ಸಂಬಂಧವಾದ. "मा भीर्मन्दमनो विचिन्त्य बहुधा यामीश्चिरं यातनाः" मु० मा०।

**यामुन** ಯಾಮುನ (न०) 1. ಅಂಜನ, ಕಣ್ಣಿನ ಕಪ್ಪು, ಕಾಡಿಗೆ. "अथाञ्जनम्। नादेयं यामुनं कृष्णं चक्षुष्यं वारिसंभवम्" कल्पद्रु०। (वि०) 2. ಯಮುನಾ ನದಿಯ ಸಂಬಂಧವಾದ. यमुनाया इदम्। "आह्लादि कह्लारसमीरणाहते पुरः पपाताम्भसि यामुने रजः" माघ० १२-६६।

**यामेय** ಯಾಮೇಯ (पुं०) ಭಾಗಿನೇಯ, ಒಡಹುಟ್ಟಿದವಳ ಮಗ. यामेरपत्यं पुमान्—"ढक्" (४-१-१२०)।

**याम्य** ಯಾಮ್ಯ (पुं०) 1. ಅಗಸ್ತ್ಯಮಹರ್ಷಿ. यामी दिक् निवासोऽस्य "यत्"। 2. ಗಂಧದ ಮರ. (स्त्री०) **-म्या** -ಮ್ಯಾ. 3. ದಕ್ಷಿಣ ದಿಕ್ಕು. 4. ಭರಣೀ ನಕ್ಷತ್ರ. (वि०) 5. ದಕ್ಷಿಣದಿಕ್ಕಿನಲ್ಲಿರುವ. "याम्याऽवाच्यां भरण्यां च पुंस्यगस्त्ये च चन्दने" मेदि०।

**यायजूक** ಯಾಯಜೂಕ (पुं०) ಪದೇ ಪದೇ ಯಾಗ ಮಾಡುವ ಸ್ವಭಾವದವನು. पुनः पुनः यजते—यज (देवपूजादौ) "यङ्" (३-१-२२)। "ऊकः" (३-२-१६६)। "तं यायजूकाः सह भिक्षुमुख्यैः तपःकृशाः शान्त्युदकुम्भहस्ताः" भट्टि० २-२०।

**यायावर** ಯಾಯಾವರ (पुं०) 1. ಜರತ್ಕಾರು ಮಹರ್ಷಿ. "यायावरो जरत्कारुर्द्वैवसिस्तु कुशारणिः" वैज०। 2. ಅಶ್ವಮೇಧಯಾಗದ ಕುದುರೆ. पुनः पुनः याति देशाद्देशान्तरम्—या (प्रापणे) "यङ्" (३-१-२२)। "वरच्" (३-२-१७६)। "यायावरोऽश्वमेधीयः पारसीकः परादनः" त्रिकाण्ड०। 3. ಗ್ರಾಮೈಕರಾತ್ರ ಸಂಚರಿಸುವ ಸಂನ್ಯಾಸಿ.

**याव ಯಾವ** (पुं०) 1. ಅಲಕ್ತ, ಅರಗು. यौति — यु (मिश्रणेऽमिश्रणे च) "अच्" (३-१-१३४)। 2. ಯವ ಧಾನ್ಯದಿಂದ ತಯಾರಿಸಲ್ಪಟ್ಟ ಆಹಾರ. "यावोऽलक्ते पाकभिदि" हेम०।

**यावक ಯಾವಕ** (पुं०) 1. ಅರಗು, ಲಾಕ್ಷೆ. याव स्वार्थे "कन्" (५-४-२९)। "लम्यते स्म परिरक्तलयात्मा यावकेन वियतापि युवत्याः" माघ० १०-९। 2. ಯವ ಧಾನ್ಯದಿಂದ ತಯಾರಿಸಲ್ಪಟ್ಟ ಆಹಾರ. 3. ಮೊನೆಯಿಲ್ಲದ ಧಾನ್ಯ.

**यावत् ಯಾವತ್** (वि०) 1. ಎಷ್ಟು ಪರಿಮಾಣವುಳ್ಳ, ಯಾವ ಅಳತೆಯುಳ್ಳ. यत् परिमाणमस्य—यद् "वतुप्" (५-२-३९)। "पुरे तावन्तमेवास्य तनोति रविरातपम्। दीर्घिकाकमलोन्मेषो यावन्मात्रेण साध्यते" कुमा० २-३३। (अव्य०) 2. ಸಾಕಲ್ಯ, ಸಂಪೂರ್ಣತೆ. "यावद्दीयते तावद्भुज्यते"। 3. ಅವಧಿ, ಗಡು, ಅವರೆಗೆ, ಈವರೆಗೆ (ಆ ಕಾಲದವರೆಗೆ, ಈ ಮನೆಯವರೆಗೆ, ಕತ್ತಿನವರೆಗೆ). "मन्त्रियोगतः स्तन्यपानं यावत्पुत्रयोरवेक्षस्व" उ० रा० ७। "यावद्युगान्तानि यशोधनानि" याद० २०-५४। 4. ಅಷ್ಟರಲ್ಲಿ, ಈ ಮಧ್ಯೆ, ಈ ನಡುವೆ. "यावद्गृहिणीमाहूय संगीतकमनुतिष्ठामि" शाकु० १। 5. ಆ ಕೂಡಲೆ, ಆ ಸಮಯದಲ್ಲಿ, ಸಮಾನ ಕಾಲದಲ್ಲಿ. "आत्मानं ते चरणपतितं यावदिच्छामि कर्तुम्। अस्रैस्तावन्मुहुरुपचितैर्दृष्टिरालुप्यते मे" मेघ० २-४२। 6. ಎಷ್ಟು ಅಳತೆ, ಎಷ್ಟು ಪ್ರಮಾಣ. "यावद्दत्तं तावद् भुक्तम्"। 7. ಎಲ್ಲಿಯವರೆಗೆ, ಎಷ್ಟು ಕಾಲದವರೆಗೆ. "यावद्वित्तोपार्जनशक्तस्तावन्निजपरिवारो रक्तः" मोहमु०। 8. ಯಾವಾಗ. "यावदुत्थाय निरीक्षते तावद्धंसोऽवलोकितः काण्डेन हतः" हितो० ३। 9. ಆದುದರಿಂದ, ಈ ಕಾರಣದಿಂದ. "अहह श्रान्तोऽस्मि। यावदस्या गिरिणद्यास्तीरे तरङ्गवातमासेविष्ये" विक्र० ४। 10. ಮುಂಚೆ, ಮೊದಲು, ಪೂರ್ವದಲ್ಲಿ. "यावदेते सरसो नोत्पतन्ति तावदेतेभ्योऽवगमयितव्या प्रवृत्तिः" विक्र० ४। 11. ಅವಧಾರಣ, ನಿಶ್ಚಯ. "यावत् पात्रं तावद् ब्राह्मणानामन्त्रयस्व"। 12. ಎಷ್ಟು ಕಾಲದಲ್ಲಿ, ಯಾವ ಕಾಲದಲ್ಲಿ. "आश्रमवासिनो यावदवेक्ष्याहमुपावर्ते तावदार्द्रपृष्ठाः क्रियन्तां वाजिनः" शाकु० १।

**यावतिथ ಯಾವತಿಥ** (वि०) ಎಷ್ಟು ಪರಿಮಾಣವುಳ್ಳ, ಎಷ್ಟು ಅಳತೆಯುಳ್ಳ. यावतां पूरणः—यावत् "डट्" (५-२-४८)। "इथुक्" (५-२-५३)। "यो यो यावतिथश्चैषां स स तावद्गुणः स्मृतः" मनु० १-२०।

**यावन ಯಾವನ** (पुं०) 1. ಲೋಬಾನ, ತುರುಷ್ಕ ದೇಶದ ಒಂದು ವಾಸನಾದ್ರವ್ಯ. यवनदेशे भवः "अण्" (४-३-५३)। (वि०) 2. ಯವನರಿಗೆ ಸಂಬಂಧಿಸಿದ, ಯವನರ ಸಂಬಂಧವಾದ. यवनानामिदम् "अण्" (४-३-१२०)। स्त्रियां "ङीप्" (४-१-१५)। **यावनी ಯಾವನೀ.**

**याष्टीक ಯಾಷ್ಟೀಕ** (पुं०) ದೊಣ್ಣೆಯೇ ಆಯುಧವಾಗಿ ಉಳ್ಳವನು, ದೊಣ್ಣೆ ಹಿಡಿದು ಯುದ್ಧ ಮಾಡುವವನು. यष्टिः प्रहरणमस्य—यष्टि "ईकन्" (४-४-५९)।

**यास ಯಾಸ** (पुं०) 1. ಶೀಟಕ ಸಂಧಿ. यसनं यासः—यासोऽस्त्यस्य "अच्" (५-२-१२७)। 2. ಪ್ರಯತ್ನ. यसु (प्रयत्ने) "घञ्" (३-३-१८)।

**यास्क ಯಾಸ್ಕ** (पुं०) ನಿರುಕ್ತ ಗ್ರಂಥವನ್ನು ರಚಿಸಿದ ಒಬ್ಬ ಮುನಿ. [ವಿವರಕ್ಕೆ "निरुक्त" ಪದದಲ್ಲಿ ನೋಡಿ.]

**यियक्षमाण ಯಿಯಕ್ಷಮಾಣ** (वि०) ಯಾಗ ಮಾಡಲು ಅಪೇಕ್ಷಿಸುತ್ತಿರುವ. यज (देवपूजायाम्)+सन् "शतृ" (३-२-१२४)। "यियक्षमाणेनाहूतः पार्थेनाथ द्विषन् मुरम्" माघ० २-१।

**यियक्षा ಯಿಯಕ್ಷಾ** (स्त्री०) ಯಾಗ ಮಾಡಲು ಅಪೇಕ್ಷೆ. यष्टुमिच्छा — यज (देवपूजायाम्) + सन् "अः" (३-३-१०२)।

**यियक्षु ಯಿಯಕ್ಷು** (वि०) ಯಾಗ ಮಾಡಲು ಅಪೇಕ್ಷೆಯುಳ್ಳ. यष्टुमिच्छुः—यज (देवपूजायाम्) + सन् "उः" (३-२-१६८)।

**यियासत् ಯಿಯಾಸತ್** (वि०) ಹೊರಡಲು ಅಪೇಕ್ಷಿಸುತ್ತಿರುವ, ಹೋಗಲು ಆಸೆಪಡುತ್ತಿರುವ. या (प्रापणे)+सन् "शतृ" (३-२-१२४)। "यियासतस्तस्य महीध्ररन्ध्रभिदापटीयान् पटहप्रणादः" माघ० ३-२४।

**यियासा ಯಿಯಾಸಾ** (स्त्री०) ಹೊರಡಲು ಅಪೇಕ್ಷೆ, ಹೋಗಲು ಆಸೆ. यातुमिच्छा—या (प्रापणे) + सन् "अः" (३-३-१०२)।

**यियासित ಯಿಯಾಸಿತ** (वि०) ಹೊರಡಲು ಇಷ್ಟವಾದ, ಹೋಗಲು ಅಪೇಕ್ಷಿಸಲ್ಪಟ್ಟ. यातुमिष्टम्—या (प्रापणे) +सन् "क्तः" (३-२-१०२)। "यियासितामथ मधुभिद्विवस्वता जनो जरन्महिषविषाणधूसराम्" माघ० १७-४१।

**यियासु ಯಿಯಾಸು** (वि०) ಹೊರಡಲು ಅಪೇಕ್ಷೆಯುಳ್ಳ, ಹೋಗಲು ಆಸೆಯುಳ್ಳ. यातुमिच्छा—या (प्रापणे) + सन् "उ:" (३-२-१६८)। "महाहवाम्भोधिविगाहनोद्धतं यियासुमन्वागमदीशनन्दनम्" कुमा० १४-११।

**यु – मिश्रणे अमिश्रणे च** (अदा० पर० सक० से०)। यौति युत: युवन्ति। युयाव युयुवतु: युयुवु:। यविता। यौतु. युतात् युताम् युवन्तु। यायात्। ಇತ್ಯಾದಿ. 1. ಒಟ್ಟಿಗೆ ಸೇರು, ಒಟ್ಟುಗೂಡು. 2. ಬೆರಸು. 3. ಬೇರೆಯಾಗು. "यौति काले कुलस्त्रीभि: क्षत्रसन्तानवृद्धये"।

**युक्त ಯುಕ್ತ** (वि०) 1. ಸೇರಿಕೊಂಡಿರುವ, ಕೂಡಿಕೊಂಡಿರುವ. युजिर् (योगे) "क्त:" (३-४-७२)। "युक्ता: स्वशक्त्या मुनय: प्रजानां हितोपदेशैरुपकारवन्त:" किरा० १८-२४। 2. ಸರಿಯಾದ, ಯೋಗ್ಯವಾದ, ಸಮುಚಿತವಾದ. 3. ಜೊತೆಗೂಡಿರುವ, ಒಟ್ಟಿಗೆ ಕಲೆತಿರುವ. "ताराभिरिन्दुरिव भानुरिव प्रभाभि: युक्तो वशाभिरिव वारणयूथनाथ:" याद० २४-८७। 4. ನ್ಯಾಯವಾದ ರೀತಿಯಲ್ಲಿ ಬಂದ, ಸರಿಯಾದ ಮಾರ್ಗದಿಂದ ಪ್ರಾಪ್ತವಾದ (ದ್ರವ್ಯ). 5. ಸಿದ್ಧನಾದ, ಸನ್ನದ್ಧನಾದ. "युक्त: प्रजानामनुरञ्जने स्यास्तस्माद्यशो यत्परमं धनं व:" उ० रा० १-११। 6. ಅನುರೂಪವಾದ, ಸದೃಶವಾದ, ತಕ್ಕುದಾದ. "राघवप्लवगराजयोरिव प्रेम युक्तमितरेतराश्रयम्" किरा० १३-५७। 7. ಆಸಕ್ತನಾದ, ಉದ್ಯೋಗಶೀಲನಾದ. "युक्तानां खलु महतां परोपकारे कल्याणी भवति रुजत्स्वपि प्रवृत्ति:" किरा० ७-१३। 8. ನ್ಯಾಯವಾದ. 9. ಸಂಬಂಧ ಹೊಂದಿರುವ. (पुं०) 10. ಆತ್ಮವ್ಯತಿರಿಕ್ತವಾದ ಪ್ರಾಕೃತ ವಿಷಯಗಳಲ್ಲಿ ಸಂಬಂಧವನ್ನು ತ್ಯಜಿಸಿ ಆತ್ಮಾವಲೋಕವನ್ನು ಅಪೇಕ್ಷಿಸುವ ಯೋಗಿ. "युक्त इत्युच्यते योगी समलोष्टाश्मकाञ्चन:" गीता ६-८। (अव्य०) 11. ಸರಿಯಾಗಿ, ಯೋಗ್ಯವಾಗಿ. 12. ನ್ಯಾಯವಾಗಿ. 13. ಅನುರೂಪವಾಗಿ, ತಕ್ಕಂತೆ. "अन्त:सेनं विद्विषामाविशन्तो युक्तं चक्रु: सायका वाजितायाः" माघ० १८-१३।

**युक्तकर्मन् ಯುಕ್ತಕರ್ಮನ್** (न०) 1. ಯೋಗ್ಯವಾದ ಕೆಲಸ. 2. ಅನುರೂಪವಾದ ಕೆಲಸ. 3. ನ್ಯಾಯವಾದ ಕೆಲಸ. (वि०) 4. ಯೋಗ್ಯವಾದ ಕಾರ್ಯವುಳ್ಳ. 5. ತಕ್ಕ ಕೆಲಸವುಳ್ಳ. 6. ನ್ಯಾಯವಾದ ಕೆಲಸವುಳ್ಳ. 7. ಕಾರ್ಯದಲ್ಲಿ ನಿಯುಕ್ತನಾದವನು.

**युक्तदण्ड ಯುಕ್ತದಂಡ** (वि०) ನ್ಯಾಯವಾದ ಶಿಕ್ಷೆಯುಳ್ಳ, ಅಪರಾಧಕ್ಕೆ ತಕ್ಕ ಶಿಕ್ಷೆಯುಳ್ಳ. "स हि सर्वस्य लोकस्य युक्तदण्डतया मन:" रघु० ४-८।

**युक्तरसा ಯುಕ್ತರಸಾ** (स्त्री०) ಸಣ್ಣರಾಷ್ಟ್ರೆ. युक्तो रसो यस्या:।

**युक्तरूप ಯುಕ್ತರೂಪ** (वि०) ಬಹಳ ಯೋಗ್ಯವಾದ. अतिशयेन युक्तम् प्रशंसायां "रूपप्" (५-३-६६)। "अनुकारिणि पूर्वेषां युक्तरूपमिदं त्वयि" शाकु० २-१६।

**युक्ति ಯುಕ್ತಿ** (स्त्री०) 1. ಸೇರುವುದು, ಒಟ್ಟಿಗೆ ಸಂಬಂಧ ಹೊಂದುವುದು, ಒಟ್ಟುಗೂಡುವುದು. युजिर् (योगे) "क्तिन्" (३-३-९४)। 2. ಉಪಾಯ, ತಂತ್ರ. "तां पुत्र चिन्तयेर्युक्तिं त्वमन्यैर्भ्रातृभि: सह" कथास०। 3. ಹೇತು, ಕಾರಣ. 4. ನ್ಯಾಯ. "तस्य तद्वचनं श्रुत्वा धर्मयुक्तिसमन्वितम्" पञ्चतं० ३-१५६। 5. ರಚನೆ, ಕಲ್ಪನೆ. 6. ಅತಿಸಂಧಾನ, ಮೋಸ, ವಂಚನೆ. 7. ಪ್ರಯೋಗ, ಬಳಕೆ, ವ್ಯವಹಾರ. "धर्मशास्त्रविरोधे तु युक्तियुक्तो विधि: स्मृत:"। 8. ಯೋಗ, ಸಂಬಂಧ. "युक्ति: स्त्री न्याययोगयो:" मेदि०। 9. ಅನುಮಾನ. "युक्तिष्वप्यवसन्नासु शपथेनैनमर्दयेत्"।

**युक्तितस् ಯುಕ್ತಿತಸ್** (अव्य०) 1. ಉಪಾಯದಿಂದ, ತಂತ್ರದಿಂದ. 2. ನ್ಯಾಯವಾಗಿ.

**युक्तिमत् ಯುಕ್ತಿಮತ್** (वि०) 1. ಉಪಾಯವುಳ್ಳವನು, ತಂತ್ರದಿಂದ ಕೆಲಸಮಾಡಬಲ್ಲವನು. युक्तिरस्यास्ति "मतुप्" (५-२-९४)। 2. ಯುಕ್ತಿಯಿಂದ ಕೂಡಿದ, ನ್ಯಾಯಬದ್ಧವಾದ.

**युक्तियुक्त ಯುಕ್ತಿಯುಕ್ತ** (वि०) 1. ಯುಕ್ತಿಯಿಂದ ಕೂಡಿದ, ನ್ಯಾಯಬದ್ಧವಾದ. युक्त्या युक्त:। "युक्तियुक्तं वचो ग्राह्यं बालादपि शुकादपि"। 2. ಲೋಕವ್ಯವಹಾರ ಸಂಮತವಾದ. "धर्मशास्त्रविरोधे तु युक्तियुक्तो विधि: स्मृत:"। 3. ಉಪಾಯದಿಂದ ಕೂಡಿದ.

**युग ಯುಗ** (पुं०) 1. ನೇಗಿಲಿನ ವಸ್ತು, ಬಂಡಿಯ ನೊಗ. 2. ಗಾಡಿಯ ಮಧ್ಯದ ಉದ್ದದ ಮರ, ಬಂಡಿಯ ಮೂಕಿ ಮರ. युज्यते — युजिर् (योगे) "घञ्" (३-३-१९)। "युवा युगव्यायतबाहुरंसल: कपाटवक्षा: परिणद्धकन्धर:" रघु० ३-३४। (न०) 3. ಎರಡು, ಒಂದು ಜೊತೆ. "युग्मं तु युगलं युगम्" अम०। "उपनेतुमुन्नतिमतेव दिवं कुचयोर्युगेन तरसा कलिताम्" माघ० ९-७२। 4. ಕೃತ ತ್ರೇತಾ ದ್ವಾಪರ ಮತ್ತು ಕಲಿ ಎಂಬ ನಾಲ್ಕು

ಯುಗಗಳು. [ಯುಗಗಳ (ವರ್ಷ) ಪರಿಮಾಣಕ್ಕೆ "अब्द" ಪದದಲ್ಲಿ ನೋಡಿ.] ಚತುರ್ಯುಗ ಪರಿಮಾಣ (ಮಾನುಷ ವರ್ಷಗಳು) 432000 ವರ್ಷಗಳು. "परित्राणाय साधूनां विनाशाय च दुष्कृताम्। धर्मसंस्थापनार्थाय संभवामि युगे युगे"। 5. ನಾಲ್ಕು ಹಸ್ತಗಳ ಪ್ರಮಾಣ, ನಾಲ್ಕು ಮೊಳಗಳ ಅಳತೆ. "चतुर्हस्तो चतुर्दण्डो धनु धन्वन्तरं युगम्" वैजं। 6. ನಾಲ್ಕು ಸಂಖ್ಯೆ. 7. ಒಂದು ಸಂತತಿ, ಒಂದು ತಲೆಮೊರೆ. "जात्युत्कर्षो युगे ज्ञेयः पञ्चमे सप्तमेऽपि वा" याज्ञं १-९६। 8. ವೃದ್ಧಿಯೆಂಬ ಒಂದು ಗಂದಿಗೆರ ವಸ್ತು. "युगो रथहलाद्यंशे न द्वयोस्तु कृतादिषु। युग्मे हस्तचतुष्केऽपि वृद्धिनामौषधेऽपि च" मेदिं।

**युगकीलक ಯುಗಕೀಲಕ** (पुं०) ಕಡೆಗೂಟ, ನೊಗವು (ಎತ್ತಿನ ಕತ್ತಿನಿಂದ) ಜಾರದಿರಲು (ನೊಗದ ಕೊನೆಯಲ್ಲಿ) ಹಾಕುವ ಗೂಟ. युगस्य कीलः स्वार्थे "कन्"। "शम्या स्त्री युगकीलकः" अमं।

**युगन्धर ಯುಗಂಧರ** (पुं०) ಬಂಡಿಯ ಮೂಕಿ ಮರ. (ನೊಗವನ್ನಿಟ್ಟು ಕಟ್ಟುವ) ಗಾಡಿಯ ಮರ. युगं बन्धनकाष्ठं धारयति—धृञ् (धारणे) + णिच् "खच्" (३-२-४६)। मुमागमः (६-३-६७)।

**युगपत् ಯುಗಪತ್** (अव्य०) ಏಕಕಾಲದಲ್ಲಿ, ಒಂದೇ ಸಮಯದಲ್ಲಿ. "अथ रिरंसुममुं युगपद्गिरो कृतयथास्वतरुप्रसवश्रिया" माघं ६-१।

**युगपत्र ಯುಗಪತ್ರ** (पुं०) ಕೋವಿದಾರ ವೃಕ್ಷ. युगं पत्रं यस्य। स्वार्थे "कन्"। —पत्रकः—ಪತ್ರಕ.

**युगपार्श्वग ಯುಗಪಾರ್ಶ್ವಗ** (पुं०) ಪಳಗಿಸಲು ನೊಗಕ್ಕೆ ಕಟ್ಟಿರುವ ಎತ್ತು. युगस्य पार्श्वं गच्छति—गम्लृ (गतौ) "डः" (वा० ३-२-४८)। "प्रष्ठवाड् युगपार्श्वगः" अमं। ಎತ್ತುಗಳನ್ನು ಗಾಡಿಗೆ ಪಳಗಿಸಲು ಮೊದಲು ನೊಗದ ತುದಿಗೆ ಕಟ್ಟಿ ನಡೆಸುವರು.

**युगल ಯುಗಲ** (नं०) ಒಂದು ಜೊತೆ, ಎರಡು, ಒಂದು ಜೋಡಿ. युगं युग्मं लाति—ला (आदाने) "कः" (३-२-३)। "भुजयोस्तथापि युगलेन दीर्घयोः विकटीकृतेन परितोऽभिषस्वजे" माघं १३-१०।

**युगलमन्त्र ಯುಗಲಮಂತ್ರ** (पुं०) ಲಕ್ಷ್ಮೀನಾರಾಯಣ ಮಂತ್ರ, ಶರಣಾಗತಿ ಮಂತ್ರ. युगलाख्यो मन्त्रः।

**युगांशक ಯುಗಾಂಶಕ** (पुं०) ವರ್ಷ, ಸಂವತ್ಸರ. युगस्य अंशकः। "कालग्रन्थिः समाः संवन्मासमानो युगांशकः" हारा०। "वत्सरस्तु युगांशकः" त्रिकाण्डं।

**युगाद्या ಯುಗಾದ್ಯಾ** (स्त्री०) ಯುಗವು ಪ್ರಾರಂಭವಾಗುವ ತಿಥಿ. युगस्याद्या आदिभूता (तिथिः)। ವೈಶಾಖ ಶುಕ್ಲ ತೃತೀಯಾ ತಿಥಿಯು ಕೃತಯುಗಾದಿ ತಿಥಿ. ಕಾರ್ತಿಕ ಶುಕ್ಲಪಕ್ಷದ ನವಮಿಯು ತ್ರೇತಾಯುಗಾದಿಯ ತಿಥಿ. ಭಾದ್ರಪದ ಕೃಷ್ಣ ತ್ರಯೋದಶಿಯು ದ್ವಾಪರಯುಗಾದಿಯ ತಿಥಿ. ಮಾಘ ಶುಕ್ಲ ಹುಣ್ಣಿಮೆಯು ಕಲಿಯುಗಾದಿಯ ತಿಥಿ. "वैशाखे शुक्लपक्षे तु तृतीयायां कृतं युगम्। कार्तिके शुक्लपक्षे तु त्रेताथ नवमेऽहनि। अथ भाद्रपदे कृष्णत्रयोदश्यान्तु द्वापरम्। माघे च पौर्णमास्यां वै घोरं कलियुगं स्मृतम्" ब्राह्मपुं।

**युगान्त ಯುಗಾಂತ** (पुं०) 1. ಯುಗದ ಕೊನೆ, ಕೃತಯುಗ ಮೊದಲಾದ ನಾಲ್ಕು ಯುಗಗಳ ಕೊನೆಯಲ್ಲಿ ಆಗುವ ಪ್ರಳಯ. युगानामन्तो यत्र॥ "युगान्तकालप्रतिसंहृतात्मनो जगन्ति यस्यां सविकासमासत" माघं १-२३। 2. ನೊಗದ ಕೊನೆಯ ಭಾಗ.

**युगिन् ಯುಗಿನ್** (पुं०) ಸಾಂಗವೇದಾಧ್ಯಯನ ಮಾಡಿದವನು, ವೇದ ಮತ್ತು ವೇದಾಂಗಗಳನ್ನು ಓದಿದವನು. "अधीतसाङ्गवेदो यः सोऽनूचानो युगी गणिः" वैजं।

**युग्म ಯುಗ್ಮ** (नं०) 1. ಎರಡು, ಒಂದು ಜೊತೆ, ಒಂದು ಜೋಡಿ. युज्यते—युजिर् (योगे) "मक्" (उं १-१४३)। "तत्र युग्मचारिणोः क्रौञ्चयोरेकं व्याधेन वध्यमानं ददर्श" उं रा २। 2. ಮಿಥುನರಾಶಿ. 3. ಒಂದೇ ವಾಕ್ಯದಲ್ಲಿ ಅನ್ವಯವಾಗುವಂತೆ ಎರಡು ಶ್ಲೋಕಗಳ ರಚನೆ. "द्वाभ्यां युग्ममिति प्रोक्तं त्रिभिः श्लोकैर्विशेषकम्। कालापकं चतुर्भिः स्यात्तदूर्ध्वं कुलकं मतम्"। (वि०) 4. ಸಮವಾದ, ಸಮಸಂಖ್ಯೆಯು. "युग्मासु पुत्रा जायन्ते स्त्रियोऽयुग्मासु रात्रिषु" मनुं ३-४८।

**युग्मज ಯುಗ್ಮಜ** (वि०) ಅವಳಿಯಾಗಿ ಹುಟ್ಟಿದ.

**युग्मपत्र ಯುಗ್ಮಪತ್ರ** (पुं०) ಕೆಂಪು ಕಾಂಚವಾಳದ ಗಿಡ. युग्मं पत्रस्य।

**युग्य ಯುಗ್ಯ** (पुं०) 1. ಗಾಡಿಯನ್ನು ಎಳೆಯುವ ಎತ್ತು, ಕುದುರೆ ಮೊದಲಾದುವು. युगं वहति "यत्" (४-४-७६)। "हरियुग्यं रथं तस्मै प्रजिघाय पुरंदरः" रघुं १२-८४। (नं०) 2. ರಥ, ಗಾಡಿ, ವಾಹನ. "यत्रापवर्तते युग्यं वैगुण्यात्प्राजकस्य तु। तत्र स्वामी भवेद्दण्ड्यो हिंसायां द्विशतं दमम्" मनुं ८-२९३। 3. ಈಶ್ವರನ ಧನುಸ್ಸು, ಪರಶಿವನ ಬಿಲ್ಲು. "पिनाकोऽजगवं युग्यमजगावमजीमवम्" वैजं।

**युज्(क्)** ಯುಜ್(ಕ್) (वि०) 1. ಚಿತ್ತವೃತ್ತಿನಿರೋಧವುಳ್ಳ, ಸಮಾಧಿಯಲ್ಲಿರುವ. युज्यते — युज (समाधौ) "क्विप्" (३-२-६१)। 2. ಯುಗ್ಮ, ಜೋಡಿ, ಜೊತೆ. युज्यते परस्परम्। 3. ಸಮವಾದ, ಸಮಸಂಖ್ಯೆಯುಳ್ಳ. "युक्षु कुर्वन् दिनर्क्षेषु सर्वान् कामान् समश्नुते। अयुक्षु तु पितॄन् सर्वान् प्रजां प्राप्नोति पुष्कलाम्" मनु० ३-२७७।

**युज्(ङ्)** ಯುಜ್(ಙ್) (वि०) 1. ಸೇರಿಕೊಂಡಿರುವ, ಒಟ್ಟಿಗೆ ಕಲೆತಿರುವ, ಒಟ್ಟುಗೂಡಿರುವ. युजिर् (योगे) "क्विन्" (३-२-५९)। 2. ಸಮವಾದ, ಸಮಸಂಖ್ಯೆಯ. "युजोर्जेन सरिद्भर्तुः पथ्यावक्त्रं प्रकीर्तितम्" वृ० र०। 3. ಒಟ್ಟಿಗೆ ಸೇರಿಸುವವನು, ಒಟ್ಟಿಗೆ ಕೂಡಿಸುವವನು. "भ्रातरं युङ् भियः सह्वये घोषेणाऽऽपूरयन् दिशः" भट्टि० ६-११८।

**युजिर् – योगे** (रुधा० उभ० सक० अनि०)।

| | | |
|---|---|---|
| युनक्ति | युङ्क्तः | युञ्जन्ति। |
| युङ्क्ते | युञ्जाते | युञ्जते। |
| युयोज | युयुजतुः | युयुजुः। |
| युयुजे | युयुजाते | युयुजिरे। |
| योक्ता। | योक्तासि, | योक्तासे। |
| योक्ष्यति, –ते। | युनक्तु } युङ्क्तात् } | युङ्क्ताम् युञ्जन्तु। |
| युङ्क्ताम् | युञ्जाताम् | युञ्जताम्। |
| अयुनक् | अयुङ्क्ताम् | अयुञ्जन्। |
| अयुङ्क्त | अयुञ्जाताम् | अयुञ्जत। |
| | युञ्ज्यात्, | युञ्जीत। |

ಇತ್ಯಾದಿ. 1. ಒಟ್ಟಿಗೆ ಸೇರಿಸು, ಒಟ್ಟುಗೂಡಿಸು. "युयुजुः स्यन्दनानश्वैरीजुर्देवान् पुरोहिताः" भट्टि० १४-९०। 2. ಉಪಯೋಗಿಸು, ಪ್ರಯೋಗಿಸು. "प्रशस्ते कर्मणि तथा सच्छब्दः पार्थ युज्यते" गीता १७-२६। 3. (ಚಿತ್ತವನ್ನು ಒಂದೇ ಕಡೆ ಸ್ಥಿರವಾಗಿ ನಿಲ್ಲಿಸಿ ಧ್ಯೇಯವಸ್ತುವಿನೊಡನೆ) ಸೇರಿಸು. "तत्रैकाग्रं मनः कृत्वा यतचित्तेन्द्रियक्रियः। उपविश्यासने युञ्ज्याद्योगमात्मविशुद्धये" गीता ६-१२। 4. ಅನುರೂಪವಾಗಿರು, ತಕ್ಕಂತೆ ಇರು. ಸರಿಹೊಂದು. "या यस्य युज्यते तां खलु भूमिकां सर्वे वर्ग्याः पाठिताः" मालती० १।

कर्मणि :—

| | | | |
|---|---|---|---|
| लट्— | युज्यते | युज्येते | युज्यन्ते। |
| लोट्— | युज्यताम् | युज्याताम् | युज्यन्ताम्। |
| लङ्— | अयुज्यत | अयुज्येताम् | अयुज्यन्त। |
| विधिलिङ्— | युज्येत | युज्येयाताम् | युज्येरन्। |
| लुङ्— | अयोजि | अयोजिषाताम् | अयोजिषत। |

ಉಳಿದ ಎಲ್ಲಾ ಲಕಾರಗಳ ರೂಪಗಳೂ ಇದರ ಆತ್ಮನೇಪದದ ರೂಪಗಳಂತಾಗುವುವು.

ण्यन्तात् :—योजयति योजयतः योजयन्ति। योजयते योजयेते योजयन्ते। योजयां चकार, –चक्रे, –बभूव, –आस। योजयिता। सि, हे, से। अयोजयत्, –त। योजयेत्, –त। ಇತ್ಯಾದಿ. "पापान्निवारयति योजयते हिताय" भर्तृ० २-७१।

कृत्सु :—योक्तव्यम्। योजनीयम्। युग्यः—शकटादिना योक्तव्यः। प्रयोज्यः—प्रयोक्तुं शक्यः। नियोज्यः—नियोक्तुं शक्यः। योग्यः—योक्तुमर्हः। कर्म० "क्तः" युक्तः। युक्तवान् –वती। युञ्जन्, –न्ती। योक्तुम्। भावे "क्तः" युक्तम्। योजनम्। युक्त्वा। प्रयुज्य।

**ಈ ಧಾತುವಿಗೆ ಉಪಸರ್ಗಗಳ ಯೋಗದಿಂದ ಉಂಟಾಗುವ ಅರ್ಥ ಭೇದಗಳು :**

(1) अनु + युजिर् = अनुयुयोज। अन्वयुङ्क्त। 1. ಕೇಳು, ಪ್ರಶ್ನಿಸು. "स्वजनस्य वार्तमयमन्वयुङ्क्त च" माघ० १३-६८। 2. ಪರೀಕ್ಷಿಸು, ವಿಚಾರಣೆಮಾಡು. "प्राड्विवाकोऽनुयुञ्जीत विधिनानेन सान्त्वयन्" मनु० ८-७९।

(2) अभि + युजिर् = अभियुज्यते। अभियोगः। 1. ಉದ್ಯೋಗಶೀಲನಾಗು, ಕಾರ್ಯತತ್ಪರನಾಗು. "एते वयं स्वकर्मणि अभियुज्यामहे। प्रियं नः, वयमपि स्वकर्मणि अभियुज्यामहे" मुद्रा० ३। 2. ಆಕ್ರಮಿಸು, ಮೇಲೆಬೀಳು, ಮುತ್ತಿಗೆ ಹಾಕು. "स प्रापदप्राप्तपराभियोगं नरेन्द्रगुप्तं नगरं मुहूर्तात्" कुमा० ७-५०। 3. ಹೊಸದಾದ ಅವಮಾನ, ಪರಾಭವ. "अभियोग इमान् महीभुजो भवता तस्य कृतः कृतावधेः" किरा० २-४६। 4. ಅಪರಾಧದ ಆಪಾದನೆಗೊಳಗಾಗು. "अभियोगमनिस्तीर्य नैनं प्रत्यभियोजयेत्" याज्ञ० २-९। 5. ಅಭಿನಿವೇಶಹೊಂದು, ಆಸಕ್ತಿಹೊಂದು. "अथ कस्यां कलायामभियोगो भवतः?"। 6. ಹಕ್ಕಿನಿಂದ ಕೇಳು, ಅಧಿಕಾರದಿಂದ ಕೇಳು, ನಿರ್ಬಂಧಿಸಿ ಕೇಳು. "विभावितैकदेशेन देयं यदभियुज्यते" विक्र० ४-३३। 7. ತಡೆಗಟ್ಟು,

"क्षभितं वनगोचराभियोगात्" किरा० १३-१०। 8. ಹೇಳು, ಮಾತನಾಡು. "नाभियोक्तुमनृतं त्वमिष्यसे कस्तपस्विविशिखेषु चादरः" किरा० १३-५८।

(3) आ+युजिर्=आयुज्यते। आयुक्तः। आयोगः। आयोजितः। 1. (ಮನಸ್ಸನ್ನು) ಒಂದು ಕಡೆ ಸ್ಥಿರವಾಗಿ ನಿಲ್ಲಿಸು. "आयोजितस्तपस्यात्मा" काद०। 2. ನೇಮಿಸು, ನೇಮಕಮಾಡು. "कुशलोऽन्वेषणस्याहमायुक्तो दूतकर्मणि" भट्टि० ८-११५। 3. ಸೇರಿಸು, ಸಂಬಂಧ ಹೊಂದಿಸು.

(4) उद्+युजिर् = उद्युङ्क्ते। उद्युक्तः। उद्योगः। ಪ್ರಯತ್ನಿಸು. "भवन्तमभियोक्तुमुद्युङ्क्ते" दशकु०।

(5) उप + युजिर् = उपयुङ्क्ते। उपयुञ्जीत। उपयुक्तः। उपयोगः। 1. ಉಪಯೋಗಿಸು, ಬಳಸು. "षाड्गुण्यमुपयुञ्जीत शक्त्यपेक्षो रसायनम्" माघ० २-९३। 2. ಅನುಭವಿಸು. "सर्वाणि तावच्छ्रुतवृद्धयोगात्फलान्युपायुङ्क्त स दण्डनीतेः" रघु० १८-४६। 3. ಪ್ರೀತಿಸು, ಪ್ರೀತಿಯಿಡು. "न वै प्राज्ञा गतश्रीकं भर्तारमुपयुञ्जते"। 4. ಖರ್ಚುಮಾಡು, ಸ್ವಂತಕ್ಕೆ ಬಳಸು. "दातव्यं सर्ववर्णेभ्यो राज्ञा चोरैर्हृतं धनम्। राजा तदुपयुञ्जानः चोरस्याप्नोति किल्बिषम्" मनु० ८-४०।

(6) नि+युजिर् = नियुङ्क्ते। नियुक्तः। नियोगः। 1. ನೇಮಿಸು, ನೇಮಕಮಾಡು, ಒಂದು ಕೆಲಸಕ್ಕಾಗಿ ಆಜ್ಞೆ ಮಾಡು. "अवैमि ते सारमतः खलु त्वां कार्ये गुरुण्यात्मसमं नियोक्ष्ये कुमा० ३-१३। 2. ಪ್ರತಿನಿಧಿಯನ್ನಾಗಿ ಕಳುಹಿಸು. "यन्मां विधेयविषये सभवान् नियुङ्क्ते" मालती० १-१२।

(7) प्र + युजिर् = प्रयुङ्क्ते। प्रयुयुजे। प्रयोगः। प्रयुक्तः। 1. ಪ್ರಯೋಗಿಸು, ಬಳಸು. "सद्भावे साधुभावे च सदित्येतत् प्रयुज्यते" गीता १७-२६। 2. ಉಪಯೋಗಿಸು. "सभाजने मे भुजमूर्ध्वबाहुः सव्येतरं प्राध्वमितः प्रयुङ्क्ते" रघु० १३-४३। 3. ಅನುಗ್ರಹಿಸು, ದಯಪಾಲಿಸು. "आशिषं प्रयुयुजे न वाहिनीं सा हि रक्षणविधौ तयोः क्षमा" रघु० ११-६। 4. ಪ್ರೇರಿಸು, ಒತ್ತಾಯಪಡಿಸು. "अथावमानेन पितुः प्रयुक्ता दक्षस्य कन्या भवपूर्वपत्नी" कुमा० १-२१। 5. ಮಾಡು, ಆಚರಿಸು, ನೆರವೇರಿಸು. "इत्थं विधिज्ञेन पुरोहितेन प्रयुक्तपाणिग्रहणोपचारौ" कुमा० ७-८६। 6. ಪ್ರಯೋಗಿಸು, ಬಿಡು, ಎಸೆ. "अलं महीपाल तव श्रमेण प्रयुक्तमप्यस्त्रमितो वृथा स्यात्" रघु० २-३४। 7. ಅಭಿನಯಿಸು, ಮಾಡಿತೋರಿಸು. "तवाक्षिसादृश्यमिव प्रयुञ्जते" कुमा० ५-३५। ಇತ್ಯಾದಿ.

**युजिन** ಯುಜಿನ (पुं०) ವಾಯು, ಗಾಳಿ. युजिर् (योगे) "इनन्" (उ० २-४८)। "मातरिश्वा समीरणः। युजिनो लघुगो वातिः" वैज०।

**युञ्जान** ಯುಂಜಾನ (पुं०) 1. ಸಾರಥಿ, ರಥ ನಡೆಸುವವನು. 2. ಬ್ರಾಹ್ಮಣ. युजिर् (योगे) "शानच्" (३-२-१२४)। "युञ्जानः सारथौ विप्रे" वैज०। 3. ಬ್ರಹ್ಮಸಾಕ್ಷಾತ್ಕಾರ ಪಡೆಯಲು ಸಮಾಧಿಯಲ್ಲಿ ಇರುವ ಯೋಗಿ. युज (समाधौ) "शानच्" (३-२-१२४)। (वि०)4. ಒಟ್ಟಿಗೆ ಸೇರುವ, ಒಟ್ಟಿಗೆ ಕಲೆಯುವ, ಒಟ್ಟಿಗೆ ಒಂದೇ ಕಡೆ ಕೂಡುವ. "शतृ" (३-२-१२४)।

**युञ्जत्** ಯುಂಜತ್.

**युत** ಯುತ (न०) 1. ನಾಲ್ಕು ಹಸ್ತಗಳ ಪ್ರಮಾಣ, ನಾಲ್ಕು ಮೊಳಗಳ ಅಳತೆ. (वि०) 2. ಸೇರಿಕೊಂಡಿರುವ, ಕೂಡಿಕೊಂಡಿರುವ. "स्त्रीभिर्युतान्यप्सरसामिवौघैर्मेरोः शिरांसीव गृहाणि यस्याम्" भट्टि० १-७। 3. ಬೆರೆತಿರುವ, ಮಿಶ್ರವಾದ. 4. ಬೆರೆಯದಿರುವ, ಮಿಶ್ರವಾಗದಿರುವ, ಬೇರೆ ಬೇರೆಯಾಗಿರುವ. यु (मिश्रणेऽमिश्रणे च) "क्तः" (३-४-७२)। "पृथक् संयुक्तयोर्युतम्" वैज०। "युतो युक्तोऽपृथग्भूते क्लीबं हस्तचतुष्टये" मेदि०।

**युतक** ಯುತಕ (न०) 1. ಜೊತೆ, ಜೋಡಿ, ದ್ವಂದ್ವ. 2. ವಿವಾಹ ಸಮಯದಲ್ಲಿ ಮಗಳು ಮತ್ತು ಅಳಿಯನಿಗೆ ಕೊಡುವ ಉಡುಗೊರೆ. 3. ಹೆಂಗಸರು ಧರಿಸುವ ಉಡುಪು. 4. ಹೆಂಗಸರ ವಸ್ತ್ರದ ಅಂಚು, -ಸೆರಗು. 5. ಮೈತ್ರಿಯನ್ನು ಉಂಟುಮಾಡುವುದು, ಸ್ನೇಹವನ್ನು ಉಂಟುಮಾಡುವುದು. 6. ಮೊರದ ತುದಿಯ ಭಾಗ. 7. ಅನಾಥಾಶ್ರಮ, ಅನಾಥರ ರಕ್ಷಣಾಲಯ. 8. ಸಂಶಯ, ಸಂದೇಹ. (वि०) 9. ಸೇರಿಕೊಂಡಿರುವ, ಕೂಡಿಕೊಂಡಿರುವ. "युतकं युगले युक्ते यौतके वसनाञ्चले। संशयेऽग्रे च शूर्पस्य वस्त्रभेदे च योषितः" वैज०।

**युति** ಯುತಿ (स्त्री०) 1. ಸಂಬಂಧ ಹೊಂದಿರುವಿಕೆ, ಸೇರಿಕೊಂಡಿರುವಿಕೆ. 2. ಒಗ್ಗಟ್ಟು, ಐಕ್ಯ. 3. ಕೂಡುವುದು, ಸೇರುವುದು. यु (मिश्रणे) "क्तिन्" (३-३-९४)।

**युद्ध** ಯುದ್ಧ (न०) 1. ಸಮರ, ಕಾಳಗ. युध (संप्रहारे) भावे "क्तः" (३-३-११४)। "युद्धाय धावतां वीरं वीराणामितरेतरम्" कुमा० १६-३। 2. ರಾಶಿಗಳಲ್ಲಿ

ಗ್ರಹಗಳು ಸಂಚರಿಸುವಾಗ ಪರಸ್ಪರ ಸಂಭವಿಸುವ ಗ್ರಹಗಳ ಯುದ್ಧ.

**युद्धरङ्ग ಯುದ್ಧರಂಗ** (ಪುಂ) 1. ಯುದ್ಧ ಮಾಡುವ ಭೂಮಿ, ಯುದ್ಧದ ಕ್ಷೇತ್ರ. युद्धस्य रङ्गः। 2. ಕಾರ್ತಿಕೇಯ, ಷಣ್ಮುಖ. युद्धे रङ्गो रागोऽस्य। "अन्योन्यं जघ्निरे क्रुद्धाः युद्धरङ्गगता नराः" भा० द्रोण० १७-१८।

**युद्धवीर ಯುದ್ಧವೀರ** (ಪುಂ) 1. ವೀರ, ಶೂರ, ಪರಾಕ್ರಮಿ. 2. ನಾಯಕನ ಒಂದು ಭೇದ. ಉತ್ಸಾಹಸ್ಥಾಯಿ ಭಾವವುಳ್ಳ ವೀರರಸದಲ್ಲಿ ನಾಯಕನು (1) ದಾನವೀರ (2) ಧರ್ಮವೀರ (3) ಯುದ್ಧವೀರ ಮತ್ತು (4) ದಯಾವೀರ ಎಂದು ನಾಲ್ಕು ವಿಧ. ದಾನ ಧರ್ಮ ಯುದ್ಧ ಮತ್ತು ದಯೆ ಇವುಗಳಲ್ಲಿ ಉದಾತ್ತನಾಗಿ (ಎಲ್ಲರನ್ನೂ ಮೀರಿಸಿ) ಇರುವವನು ಆಯಾಸಂಜ್ಞೆ ಹೊಂದುತ್ತಾನೆ. "स च दानधर्मयुद्धैर्दयया च समन्वितः चतुर्धा स्यात्" सा० द० ३-२३४।

**युद्धक्षेत्र ಯುದ್ಧಕ್ಷೇತ್ರ** (ನಂ) –भू –ಭೂ –भूमि –ಭೂಮಿ (ಸ್ತ್ರೀಂ) ಯುದ್ಧಮಾಡುವ ಭೂಮಿ, ಕದನ ನಡೆಯುವ ಜಾಗ.

**युध् ಯುಧ್** (ಸ್ತ್ರೀಂ) ಯುದ್ಧ, ಕದನ, ಜಗಳ. युध (संप्रहारे) "क्विप्" (वा० ३-३-१०८)। "युधे परैः सह दृढबद्धकक्षया कलक्वणन्मधुपकुलोपगीतया" माघ० १७-२४।

**युधाजित् ಯುಧಾಜಿತ್** (ಪುಂ) ಕೇಕಯ ದೇಶದ ಅಶ್ವಪತಿ ರಾಜನ ಮಗ, ಕೈಕಯಿಯ ಸಹೋದರ, ಭರತನ ಸೋದರ ಮಾವ.

**युधान ಯುಧಾನ** (ಪುಂ) 1. ಯೋಧ, ಭಟ, ಸೈನಿಕ. युध (संप्रहारे) "आनच्" (उ० २-९०)। 2. ರಿಪು, ಶತ್ರು.

**युधिष्ठिर ಯುಧಿಷ್ಠಿರ** (ಪುಂ) 1. ಧರ್ಮರಾಜ, ಪಾಂಡುರಾಜನ ಹಿರಿಯ ಮಗ. युधि स्थिरः। षत्वम् (८-३-९५)। सप्तम्या अलुक् (६-३-९)। ಇವನಿಗೆ ಧರ್ಮಪುತ್ರ ಅಜಾತಶತ್ರು ಮುಂತಾದ ಹೆಸರುಗಳೂ ಉಂಟು. ಧರ್ಮರಾಜನು ಪಾಂಡುವಿನ ಹಿರಿಯ ಹೆಂಡತಿಯಲ್ಲಿ ಯಮಧರ್ಮರಾಜನ ಅನುಗ್ರಹದಿಂದ ಜನಿಸಿದನು. ಧರ್ಮರಾಜನಿಗೆ ಕೃಪಾಚಾರ್ಯ ಮತ್ತು ದ್ರೋಣಾಚಾರ್ಯರುಗಳಲ್ಲಿ ಅಸ್ತ್ರವಿದ್ಯಾಭ್ಯಾಸ ನಡೆಯಿತು. ಇವನಿಗೆ ಯೌವರಾಜ್ಯಾಭಿಷೇಕ ನಡೆದ ನಂತರ ದುರ್ಯೋಧನನು ಅಸೂಯೆಯಿಂದ ತಾಯಿ ಮತ್ತು ಸಹೋದರರೊಡನೆ ಇವನನ್ನು ಅರಗಿನ ಮನೆಯಲ್ಲಿ ನಾಶಪಡಿಸಲು ಯತ್ನಿಸಿದಾಗ ಈ ರಹಸ್ಯವನ್ನು ವಿದುರನಿಂದ ತಿಳಿದ ಭೀಮಸೇನನು ಸುರಂಗ ಮಾರ್ಗದ ಮೂಲಕ ಎಲ್ಲರನ್ನೂ ಹೊರಕ್ಕೆ ಸಾಗಿಸಿ ರಕ್ಷಿಸಿದನು. ಧರ್ಮರಾಜನು ಬ್ರಾಹ್ಮಣ ವೇಷದಿಂದ ಸಹೋದರರೊಡನೆ ದ್ರುಪದನ ನಗರಕ್ಕೆ ಪ್ರವೇಶಿಸಿ ದ್ರೌಪದೀ ಸ್ವಯಂವರವಾದನಂತರ ಯುದ್ಧದಲ್ಲಿ ದುರ್ಯೋಧನನನ್ನು ಸೋಲಿಸಿದನು. ಆನಂತರ ದ್ರೌಪದಿಯೊಡನೆ ಹಸ್ತಿನಾವತಿಗೆ ಪ್ರವೇಶಿಸಿ ಪಟ್ಟಾಭಿಷಿಕ್ತನಾದನು. ದ್ರೌಪದಿಯಲ್ಲಿ ಇವನಿಗೆ ಪ್ರತಿವಿಂಧ್ಯನೆಂಬ ಪುತ್ರನು ಜನಿಸಿದನು. ಇಂದ್ರಪ್ರಸ್ಥದಲ್ಲಿ ಮಯನಿರ್ಮಿತವಾದ ಸಭೆಯನ್ನು ಪ್ರವೇಶಿಸಿ ಶ್ರೀಕೃಷ್ಣನನ್ನು ಬರಮಾಡಿಕೊಂಡು ರಾಜಸೂಯಯಾಗವನ್ನು ಮಾಡಿದನು. ದ್ಯೂತದಲ್ಲಿ ಸೋತು ಹನ್ನೆರಡು ವರ್ಷಗಳ ಕಾಲ ಪತ್ನಿ ಮತ್ತು ಸಹೋದರರೊಡನೆ ಅರಣ್ಯವಾಸ ಅನುಭವಿಸಿದನು. ವನವಾಸದ ಸಮಯದಲ್ಲಿ ಸೂರ್ಯನನ್ನು ಪ್ರಾರ್ಥಿಸಿ ಅಕ್ಷಯ ಪಾತ್ರೆಯನ್ನು ಪಡೆದನು. ದುರ್ಯೋಧನನು ತನ್ನ ಸಕಲ ವೈಭವದೊಡನೆ ದ್ವೈತವನಕ್ಕೆ ಪ್ರವೇಶಿಸಿ ಪಾಂಡವರಿಗೆ ಸಂಕಟವುಂಟುಮಾಡಲು ಯತ್ನಿಸಿದಾಗ ಗಂಧರ್ವರಾಜನಾದ ಚಿತ್ರಸೇನನು ಹಿಂಗಟ್ಟು ಬಿಗಿದು ದುರ್ಯೋಧನನನ್ನು ಎತ್ತಿಕೊಂಡು ಹೋಗುತ್ತಿರಲು ದುರ್ಯೋಧನನ ಮಂತ್ರಿಗಳ ಪ್ರಾರ್ಥನೆಯನ್ನು ಆಲಿಸಿ ಧರ್ಮರಾಜನು ಅಪ್ಪಣೆಮಾಡಿ ಗಂಧರ್ವರಿಂದ ದುರ್ಯೋಧನನನ್ನು ಬಿಡಿಸಿ ಕಳುಹಿಸಿದನು. ಹನ್ನೆರಡು ವರ್ಷಗಳ ವನವಾಸ ಕಳೆದು ವಿರಾಟನಗರದಲ್ಲಿ ಒಂದು ವರ್ಷ ಅಜ್ಞಾತವಾಸ ಮಾಡುತ್ತಿರುವಾಗ ಧೃತರಾಷ್ಟ್ರನು ಸಂಜಯನನ್ನು ಸಂಧಿಗಾಗಿ ಧರ್ಮರಾಜನಲ್ಲಿಗೆ ಕಳುಹಿಸಲು ಇಂದ್ರಪ್ರಸ್ಥ ರಾಜ್ಯವನ್ನು ಕೊಡದಿದ್ದರೆ ಸಂಧಿಯಾಗುವುದಿಲ್ಲವೆಂದು ಹೇಳಿಕಳುಹಿಸಿದನು. ಅನಂತರ ಶ್ರೀಕೃಷ್ಣನ ಮೂಲಕ ಸಂಧಿಗಾಗಿ ಯತ್ನಿಸಿದಾಗ ಯುದ್ಧವಾಗಲೇ ಬೇಕೆಂದು ಶ್ರೀಕೃಷ್ಣನು ಹೇಳಲು ಸೇನಾಸಮೇತನಾಗಿ ಕುರುಕ್ಷೇತ್ರವನ್ನು ಪ್ರವೇಶಿಸಿ ತನ್ನ ಏಳು ಅಕ್ಷೌಹಿಣೀ ಸೈನ್ಯಕ್ಕೂ ದ್ರುಪದಾದಿಗಳನ್ನು ಪ್ರಮುಖರನ್ನಾಗಿ ಮಾಡಿ ಧೃಷ್ಟದ್ಯುಮ್ನನನ್ನು ಸರ್ವಸೇನಾಪತಿಯನ್ನಾಗಿ ಮಾಡಿದನು. ಯುದ್ಧರಂಗದಲ್ಲಿ ರಥದಿಂದ ಇಳಿದು ಭೀಷ್ಮ ದ್ರೋಣರನ್ನು ನಮಸ್ಕರಿಸಿ ಯುದ್ಧದಲ್ಲಿ ಜಯಪಡೆಯುವಂತೆ ವರ ಪಡೆದನು. ಹದಿನೆಂಟು ದಿನಗಳ ಯುದ್ಧದಲ್ಲಿ ಕೌರವರೆಲ್ಲರನ್ನೂ ನಾಶಪಡಿಸಿ ಬಂಧುಗಳ ನಾಶದಿಂದ ಧರ್ಮರಾಜನು ದುಃಖಿಗೊಂಡು ರಾಜ್ಯ ಪರಿತ್ಯಾಗಮಾಡಿ ತಪಸ್ಸಿಗಾಗಿ ಅರಣ್ಯಕ್ಕೆ ಹೊರಡಲು ಯತ್ನಿಸಿದಾಗ ರಾಜ್ಯ

ಬಿಟ್ಟು ಹೋಗುವುದು ಬಹಳ ಅವಮಾನಕರವೆಂದು ಭೀಮಾರ್ಜುನಾದಿಗಳು ಹೇಳಿ ತಡೆದರು. ಹಸ್ತಿನಾವತಿಯಲ್ಲಿ ಪಟ್ಟಾಭಿಷಿಕ್ತನಾಗಿ ಅನಂತರ ವ್ಯಾಸರಿಂದ ಕ್ಷತ್ರಿಯ ಧರ್ಮಗಳನ್ನು ತಿಳಿದುಕೊಂಡು ಭೀಷ್ಮಾಚಾರ್ಯರಿಂದ ರಾಜಧರ್ಮಗಳ ಉಪದೇಶ ಪಡೆದನು. ಬಂಧುಗಳ ಹತ್ಯೆಯಿಂದುಂಟಾದ ದೋಷಪರಿಹಾರಕ್ಕಾಗಿ ಅಶ್ವಮೇಧ ಯಾಗ ಮಾಡಿ ಧರ್ಮದಿಂದ ರಾಜ್ಯವಾಳಿದನು. 2. ಮಹೇಂದ್ರ, ದೇವರಾಜ, ಶಕ್ರ. "भूरिश्रवाश्चित्ररथ-स्सुनासीरो युधिष्ठिरः" वैज० ।

**युध्म ಯುಧ್ಮ** (पुं०) 1. ಯೋಧ, ಭಟ, ಸೈನಿಕ. 2. ಯುದ್ಧ. 3. ಬಾಣ. 4. ಧನಸ್ಸು, ಬಿಲ್ಲು. युध (संप्रहारे) "मक्" (उ० १-१४२) ।

**युध्यमान ಯುಧ್ಯಮಾನ** (वि०) ಯುದ್ಧಮಾಡುತ್ತಿರುವ. युध (संप्रहारे) "शानच्" (३-२-१२४)। "युध्यमाना हयारूढा देवानामपि दुर्जयाः" हितो० ३-८५।

**युयुत्सा ಯುಯುತ್ಸಾ** (स्त्री०) ಯುದ್ಧಮಾಡುವ ಆಸೆ, ಯುದ್ಧದ ಅಪೇಕ್ಷೆ. योद्धुमिच्छा—युध (संप्रहारे)+सन् "अः" (३-३-१०२)। "सपदि कंकुभामीशनम्यागमत्स युयुत्सया" कुमा० १६-४१ ।

**युयुत्सु ಯುಯುತ್ಸು** (पुं०) 1. ಧೃತರಾಷ್ಟ್ರನ ದಾಸಿಯ ಮಗ. (वि०) 2. ಯುದ್ಧ ಮಾಡಲು ಅಪೇಕ್ಷೆಯುಳ್ಳವನು. योद्धुमिच्छुः—युध (संप्रहारे) + सन् "उः" (३-२-१६८)। "धर्मक्षेत्रे कुरुक्षेत्रे समवेता युयुत्सवः। मामकाः पाण्डवाश्चैव किमकुर्वत सञ्जय" गीता १-१। "युयुत्सुनेव कवचं किमामुक्तमिदं त्वया" किरा० ११-१५।

**युयुधान ಯುಯುಧಾನ** (पुं०) 1. ಯದುವಂಶದ ಸತ್ಯಕನ ಮಗ ಸಾತ್ಯಕಿ. "शैनेयस्तु शिनेर्नप्ता युयुधानश्च सात्यकिः" त्रिकाण्ड०। ಇವನು ಮರುತ್ತುಗಳ ಅಂಶದಿಂದ ಜನಿಸಿದವನು. ಕೌರವರೊಡನೆ ಪಾಂಡವರು ಸಂಧಿಮಾಡಿಕೊಳ್ಳಕೂಡದೆಂದೂ ಯುದ್ಧದಲ್ಲಿ ಜಯಿಸಬೇಕೆಂದೂ ಇವನು ಸಂಧಿಯ ಪ್ರಯತ್ನವನ್ನು ತಡೆದನು. 2. ಇಂದ್ರ. 3. ಕ್ಷತ್ರಿಯ. 4. ಭಟ, ಯೋಧ.

**युवखलति ಯುವಖಲತಿ** (वि०) 1. ಬಕ್ಕತರುಣ, ಪಟ್ಟೆ ತಲೆಯ ತರುಣ. युवा खलतिः। (स्त्री०) **–खलती –ಖಲತೀ.** 2. ಪಟ್ಟೆ ತಲೆಯ ಹೆಂಗಸು.

**युवति ಯುವತಿ** (स्त्री०) 1. ಪ್ರಾಯದ ಹೆಂಗಸು. युवन् "तिः" (४-१-७७)। "हिमऋतावपि ताः स्म भृशस्विदो युवतयः सुतरामुपकारिणि" माघ० ६-६। 2. ಯಾವುದಾದರೂ ಹೆಣ್ಣು ಪ್ರಾಣಿ.

**युवती ಯುವತೀ** (स्त्री०) 1. ಪ್ರಾಯದ ಹೆಂಗಸು. यु (मिश्रणेऽमिश्रणे च) "शतृ" (३-२-१२४)। "ङीप्" (४-१-६)। "वियुवतीर्युवतीः शिशिरानिलः" माघ० ६-६२। 2. ಯಾವುದಾದರೂ ಹೆಣ್ಣು ಪ್ರಾಣಿ.

**युवन् ಯುವನ್** (पुं०) 1. ಪ್ರಾಯದ ಹುಡುಗ, ಹದಿನಾರು ವರ್ಷ ಮೀರಿದ ತರುಣ. यु (मिश्रणेऽमिश्रणे च) "कनिन्" (उ० १-१५४)। युवा युवानौ युवानः। "यस्यामसेवन्त नमद्वलीकाः समं वधूभिर्वलभीर्युवानः" माघ० ३-५३। "आषोडशाद्भवेद्बालः ततस्तरुण उच्यते"। (वि०) 2. ಸ್ವಭಾವವಾಗಿ ಶಕ್ತಿವಂತನಾದ. 3. ಶ್ರೇಷ್ಠ, ಉತ್ತಮ. "युवा स्यात्तरुणे श्रेष्ठे निसर्गबलशालिनि" मेदि०।

**युवराज ಯುವರಾಜ** (पुं०) ರಾಜಕುಮಾರ, ಅರಸಿನ ಮಗ. युवा चासौ राजा च। "निसर्गसंस्कारविनीत इत्यसौ नृपेण चक्रे युवराजशब्दभाक्" रघु० ३-३५।

**युष्मद् ಯುಷ್ಮದ್** (त्रि०) ನೀನು ಎಂಬ ಅರ್ಥಕೊಡುವ ಒಂದು ಸರ್ವನಾಮ ಪದ, ಕ್ರಿಯಾಪದದ ಮಧ್ಯಮ ಪುರುಷದ ಒಂದು ಕರ್ತೃಪದ. ಲಿಂಗತ್ರಯದಲ್ಲಿಯೂ ಇದರ ರೂಪ ಸಮಾನವಾದುದು. युष्मद् "त्व" आदेशः (७-२-९४)।

| | | |
|---|---|---|
| त्वम् | युवाम् | यूयम्। |
| त्वाम्<br>त्वा | युवाम्<br>वाम् | युष्मान्<br>वः । |
| त्वया | युवाभ्याम् | युष्माभिः। |
| तुभ्यम्<br>ते | युवाभ्याम्<br>वाम् | युष्मभ्यम्<br>वः । |
| त्वत् | युवाभ्याम् | युष्मत् । |
| तव<br>ते | युवयोः<br>वाम् | युष्माकम्<br>वः । |
| त्वयि | युवयोः | युष्मासु। |

"त्वमेव हव्यं होता च भोज्यं भोक्ता च शाश्वतः" कुमा० २-१५। "त्वामामनन्ति प्रकृतिं पुरुषार्थ-प्रवर्तिनीम्" कुमा० २-१३। "त्वया साधु समारम्भि नवे वयसि यत्तपः" किरा० ११-१०। "नमस्त्रिमूर्तये तुभ्यं प्राक्सृष्टेः केवलात्मने" कुमा० २-४। "स चिन्तयत्येव भियस्त्वदेष्यतीः" किरा० १-२३। "तवैव संकल्पकलांशतः क्वचित् समर्थवादाः परमेष्ठिनामपि"

यादः १४-३९। "त्वयि नस्तिष्ठते प्रीतिस्तुभ्यं तिष्ठामहे वयम्" भट्टिः ८-१२। ಬಹುವಚನ ವಿವಕ್ಷೆಯಿರುವಾಗ ಸಮಾಸದ ಆದಿಯಲ್ಲಿ ಈ ರೂಪವಿರುವುದು. युष्मच्छाला, युष्मत्पुत्रः, युष्मच्छासनम् ಇತ್ಯಾದಿ.

**युष्मदीय ಯುಷ್ಮದೀಯ** (विः) ನಿಮ್ಮ ಸಂಬಂಧವಾದ. युवयोः युष्माकं वा अयम् "छः" (४-३-१)।

**युष्मादृश् ಯುಷ್ಮಾದೃಶ್** (विः) ನಿಮ್ಮಂತಹ, ನಿಮಗೆ ಸಮಾನವಾಗಿರುವ. यूयमिव पश्यति— युष्मद् + दृशिर् (प्रेक्षणे) "क्विन्" (३-२-६०)। सूत्रे चकारात् "कञ्" च। युष्मादृशः ಯುಷ್ಮಾದೃಶಃ.

**यूक ಯೂಕ** (पुं०) ಹೇನು, ಕೂರೆ. यौति—यु (मिश्रणेऽमिश्रणे च) "कन्" (उ० ३-४७)। स्त्रियां "टाप्" (४-१-४)। यूका ಯೂಕಾ. "स्वेदजं दंशमशकं यूकामक्षिकमत्कुणम्" मनु० १-४५।

**यूति ಯೂತಿ** (स्त्री०) ಮಿಶ್ರಣ, ಬೆರಕೆ. यु (मिश्रणेऽमिश्रणे च) "क्तिन्" (३-३-९७)। दीर्घश्च निपा०।

**यूथ ಯೂಥ** (पुंन०) ತಿರ್ಯಕ್ ಪ್ರಾಣಿಗಳ ಗುಂಪು, ಪಶು ಪ್ರಾಣಿಗಳು ಮತ್ತು ಹಕ್ಕಿಗಳ ಸಮೂಹ. यौति — यु (मिश्रणे) "थक्" (उ० २-१२)। निपा०। "बृन्दे तिरश्चां यूथोऽस्त्री" वैज०। "यूथानि सञ्चार्य रविप्रतप्तः शीतं दिवा स्थानमिव द्विपेन्द्रः" शाकु० ५-५।

**यूथनाथ ಯೂಥನಾಥ** (पुं०) ಸಲಗ, ಕಾಡಾನೆಗಳ ಗುಂಪಿಗೆ ಮುಖಂಡವಾದ ಆನೆ. यूथस्य हस्तिबृन्दस्य नाथः। –पः –ಪಃ, –पतिः –ಪತಿಃ. यूथान् पाति यूथानां पतिर्वा।

**यूथिका ಯೂಥಿಕಾ** (स्त्री०) 1. ಕಾಡುಮಲ್ಲಿಗೆ. यूथमस्त्यस्याः "ठन्" (५-२-११५)। "उद्यानानां नवजलकणैर्यूथिकाजालकानि" मेघ० १-२६। 2. ದೊಡ್ಡ ಗೋರಂಟಿ ಮರ. "यूथिकाम्लानके पुष्पविशेषेऽपि च योषिति" मेदि०।

**यूथी ಯೂಥೀ** (स्त्री०) ಕಾಡುಮಲ್ಲಿಗೆ. यूथमस्त्यस्य "अच्" (५-२-१२७)।

**यूप ಯೂಪ** (पुं०) 1. ಯಾಗದ ಪಶುವನ್ನು ಕಟ್ಟುವ ಕಂಬ. यु (मिश्रणे) "पः" दीर्घश्च (उ० ३-२७)। "ग्रामेष्वात्मविसृष्टेषु यूपचिह्नेषु यज्वनाम्" रघु० १-४४। 2. ಜಯಸ್ತಂಭ. "अष्टादशद्वीपनिखातयूपः" रघु० ६-३८।

**यूपकटक ಯೂಪಕಟಕ** (पुं०) ಯಾಗದ ಪಶುವನ್ನು ಕಟ್ಟುವ ಕಂಬದ ತುದಿಯಲ್ಲಿರುವ ಬಳೆ. यूपस्य कटकः। "चषालो यूपकटकः" अम०।

**यूपाग्र ಯೂಪಾಗ್ರ** (न०) ಯಜ್ಞಪಶು ಸ್ತಂಭದ ಕೊನೆಯ ಭಾಗ.

**यूष ಯೂಷ** (न०) ಮಾಂಸದ ಸಾರು.

**येन ಯೇನ** (अव्य०) 1. ಯಾವ ಕಾರಣದಿಂದ. "किं तत् येन मनो हर्तुमलं स्यातां न शृण्वताम्" रघु० १५-६४। 2. ಯಾವುದರ ಮೂಲಕ. 3. ಯಾವುದರಿಂದ. "येनापविद्धसलिलः स्फुटनागसद्मा देवासुरैरमृतमम्बुनिधिर्ममन्थे" किरा० ५-३०। ಇತ್ಯಾದಿ. 4. ಆದರಿಂದ. "दर्शय तं चोरसिंहं येन व्यापादयामि" पञ्चतं० ४।

**योक्तृ ಯೋಕ್ತೃ** (विः) 1. ಒಟ್ಟಿಗೆ ಸೇರಿಸುವವನು, ಒಟ್ಟುಗೂಡಿಸುವವನು. युजिर् (योगे) "तृच्" (३-१-१३३)। 2. ಎತ್ತಿನ ಕತ್ತಿಗೆ ನೊಗವಿಟ್ಟು ಕಟ್ಟುವವನು. 3. ಸಾರಥಿ, ಗಾಡಿ ನಡೆಸುವವನು.

**योक्त्र ಯೋಕ್ತ್ರ** (न०) 1. ನೇಗಿಲಿನ ನೊಗಕ್ಕೆ ಕಟ್ಟುವ ಹಗ್ಗ. 2. ಎತ್ತಿನ ಕೊರಳಿಗೆ ನೊಗವನ್ನು ಸೇರಿಸಿ ಕಟ್ಟುವ ಹಗ್ಗ. युज्यतेऽनेन — युजिर् (योगे) "ष्ट्रन्" (३-२-१८२)। 3. ದನಕರುಗಳನ್ನು ಕಟ್ಟಿಹಾಕುವ ಹಗ್ಗ.

**योग ಯೋಗ** (पुं०) 1. ಒಟ್ಟಿಗೆ ಸೇರುವುದು, ಸಂಧಿಸುವುದು, ಪರಸ್ಪರ ಸಮಾಗಮ. युजिर् (योगे) भावे "घञ्" (३-३-१८)। "श्रियमतिशयिनीं समेत्य जग्मुः गुणमहतां महते गुणाय योगः" किरा० १०-२५। 2. ಮಿಶ್ರಣ, ಬೆರಕೆ, ಒಟ್ಟುಗೂಡಿಸುವುದು. 3. ಉಪಾಯ, ಸಾಧನ. 3(a). ಸಂಬಂಧ. "तमङ्कमारोप्य शरीरयोगजैः सुखैर्निषिञ्चन्तमिवामृतं त्वचि" रघु० ३-२६। 4. ಧ್ಯಾನ, ಧ್ಯೇಯವಸ್ತುವಿನಲ್ಲಿ ಮನಸ್ಸನ್ನು ಸ್ಥಿರವಾಗಿರಿಸುವುದು. युज (समाधौ) भावे "घञ्" (३-३-१८)। "वार्धके मुनिवृत्तीनां योगेनान्ते तनुत्यजाम्" रघु० १-६। ಇದು ಯೋಗದ ಎಂಟು ಅಂಗಗಳಲ್ಲೊಂದು. 5. ಯುಕ್ತಿ, ಉಪಾಯ, ತಂತ್ರ. 6. ಸನ್ನಾಹ, ಸಿದ್ಧತೆ, ಸಜ್ಜು. 7. ಸಾಮ ದಾನ ಮೊದಲಾದ ಉಪಾಯ. "तन्त्रावापविदा योगैर्मण्डलान्यधितिष्ठता" माघ० २-८८। 8. ನೊಗ. 9. ಕವಚ ಧಾರಣೆ, ಅಂಗಿ ತೊಡುವುದು. 10. ಅಪೂರ್ವ ಧನಲಾಭ, ಹೊಸ ಸಂಪಾದನೆ. 11. ಪ್ರಯತ್ನ. "इन्द्रियाणां जये योगं समातिष्ठेद्दिवानिशम्" मनु० ७-४४।

12. ಮೂಲಿಕೆ ಮೊದಲಾದುವುಗಳಿಂದ ಮಾಡುವ ಸ್ತಂಭನಾದಿ ಪ್ರಯೋಗ, ಮಂತ್ರಪ್ರಯೋಗ. 13. ದೇಹದಾರ್ಢ್ಯ. 14. ಔಷಧ. 14(a). ವಿಶ್ವಾಸಘಾತಕ, ನಂಬಿದವನಿಗೆ ದ್ರೋಹಮಾಡುವವನು. 15. ಧನ, ಐಶ್ವರ್ಯ, ಸಂಪತ್ತು. 16. ಪ್ರಯೋಗ, ಉಪಯೋಗಿಸುವುದು, ಬಳಸುವುದು. "सुरगज इव दन्तैः भग्नदैत्यासिधारैः नय इव पणबन्धव्यक्तयोगैरुपायैः" रघु० १०-८६। 17. (ಜ್ಯೋತಿಷದಲ್ಲಿ) ವಿಷ್ಕಂಭ ಮೊದಲಾದ ಇಪ್ಪತ್ತೇಳು ಯೋಗಗಳು. (1) ವಿಷ್ಕಂಭ (2) ಪ್ರೀತಿ (3) ಆಯುಷ್ಮಾನ್ (4) ಸೌಭಾಗ್ಯ (5) ಶೋಭನ (6) ಅತಿಗಂಡ (7) ಸುಕರ್ಮ (8) ಧೃತಿ (9) ಶೂಲ (10) ಗಂಡ (11) ವೃದ್ಧಿ (12) ಧ್ರುವ (13) ವ್ಯಾಘಾತ (14) ಹರ್ಷಣ (15) ವಜ್ರ (16) ಸಿದ್ಧಿ (17) ವ್ಯತೀಪಾತ (18) ವರೀಯಾನ್ (19) ಪರಿಘ (20) ಶಿವ (21) ಸಿದ್ಧ (22) ಸಾಧ್ಯ (23) ಶುಭ (24) ಶುಕ್ಲ (25) ಬ್ರಹ್ಮ (26) ಐಂದ್ರ ಮತ್ತು (27) ವೈಧೃತಿ ಇವು ಇಪ್ಪತ್ತೇಳು ಯೋಗಗಳು. 18. ತಿಥಿ, ವಾರ ಮತ್ತು ನಕ್ಷತ್ರಗಳ ಸಂಬಂಧದಿಂದ ಉಂಟಾಗುವ ಅಮೃತಾದಿ ಯೋಗಗಳು. 19. (ಸೂರ್ಯನನ್ನುಳಿದು) ಗ್ರಹಗಳ ಮಧ್ಯದಲ್ಲಿ ಚಂದ್ರನ ಸಂಚಾರದಿಂದ ಉಂಟಾಗುವ ಯೋಗ. अनफा सुनफा ಮತ್ತು दुरुधरा ಎಂದು ಈ ಯೋಗಗಳು ಮೂರು. "हित्वार्कं सुनफाऽनफा दुरुधराः स्वान्त्योभयस्थैर्ग्रहैः शीतांशोः" बृह० १३-३। "दधतेव योगमुभयग्रहान्तरस्थितिकारितं दुरुधराख्यमिन्दुना" माघ० १३-२२। 20. ಲಗ್ನ ಮೊದಲಾದ ಹನ್ನೆರಡು ಸ್ಥಾನಗಳಲ್ಲಿ ಗ್ರಹಗಳ ಪರಸ್ಪರ ಸಂಬಂಧದಿಂದ ಉಂಟಾಗುವ ರಾಜಯೋಗ, ನಾಭಸಯೋಗ ಇತ್ಯಾದಿ. 21. ಚಿತ್ತವೃತ್ತಿನಿರೋಧ, ಇತರ ಎಲ್ಲಾ ವಿಷಯಗಳಿಂದಲೂ ಮನಸ್ಸನ್ನು ತಡೆಯುವುದು. "योगश्चित्तवृत्तिनिरोधः" पा० यो० सू०। ಚಿತ್ತವೃತ್ತಿ ನಿರೋಧರೂಪವಾದ ಈ ಯೋಗದಿಂದ ಪರಿಶುದ್ಧವಾದ ಆತ್ಮಸಾಕ್ಷಾತ್ಕಾರವೂ ಪರಮಾತ್ಮಸಾಕ್ಷಾತ್ಕಾರವೂ ಆಗುವುವು. ಈ ಜೀವಾತ್ಮ-ಪರಮಾತ್ಮ ಸಂಯೋಗವೇ ಯೋಗವು. "संयोगो योग इत्युक्तो जीवात्मपरमात्मनोः" याज्ञ०। ಜೀವಾತ್ಮರು ಪರಮಾತ್ಮಸಮರಾಗಿ ಮೋಕ್ಷದಲ್ಲಿರುವರೆಂದೂ ಸರ್ವ ಪ್ರಪಂಚಸಂಬಂಧವನ್ನೂ ತ್ಯಜಿಸಿ ಜೀವಾತ್ಮನು ತನ್ನ ಸ್ವರೂಪದಲ್ಲಿ ಶಾಶ್ವತವಾಗಿ ನಿಲ್ಲುವುದೇ ಮೋಕ್ಷವೆಂದೂ ಈ ಯೋಗದರ್ಶನಕಾರರಾದ ಪತಂಜಲಿಮಹರ್ಷಿಯ ಅಭಿಪ್ರಾಯ. ಈ ಯೋಗಕ್ಕೆ (1) यमः (2) नियमः (3) आसनम् (4) प्राणायामः (5) प्रत्याहारः (6) धारणा (7) ध्यानम् ಮತ್ತು (8) समाधिः ಎಂದು ಎಂಟು ಅಂಗಗಳು ಇರುವುವು. [ಇವುಗಳ ಅರ್ಥವನ್ನು ಆಯಾ ಪದಗಳಲ್ಲಿ ನೋಡಿ]. ಚಿತ್ತವೃತ್ತಿ ನಿರೋಧರೂಪವಾದ ಈ ಯೋಗವು ರಾಜಯೋಗ ಮತ್ತು ಹಠಯೋಗಗಳೆಂದು ಎರಡು ವಿಧ. ಇವುಗಳಲ್ಲಿ ರಾಜಯೋಗವು ಪತಂಜಲಿ ಮಹರ್ಷಿಯಿಂದ ಉಕ್ತವಾದುದು. ಹಠಯೋಗವು ತಂತ್ರಶಾಸ್ತ್ರೋಕ್ತವಾದುದು. कर्मयोगः ज्ञानयोगः ಮತ್ತು भक्तियोगः ಎಂದು ಯೋಗ (ಉಪಾಯ) ವು ಮತ್ತೆ ಮೂರು ವಿಧ. "योगास्त्रयो मया प्रोक्ता नृणां श्रेयोविधित्सया। ज्ञानं कर्म च भक्तिश्च नोपायोऽन्योऽस्ति कुत्रचित्" भाग० ११-२०। "स्वधर्मस्थो यजन् यज्ञैः अनाशीः काम उद्धव। न याति स्वर्गनरकौ यद्यन्यन्न समाचरेत्। अस्मिल्लोके वर्तमानः स्वधर्मस्थोऽनघः शुचिः। ज्ञानं विशुद्धमाप्नोति मद्भक्तिं वा यदृच्छया" भाग० ११-२०। 22. ಶಬ್ದದ ವ್ಯುತ್ಪತ್ತಿಯಿಂದ ಉಂಟಾಗುವ ಒಂದು ಶಕ್ತಿ, ಪದದ ಅವಯವ ಶಕ್ತಿ. ಅಭಿಧಾ ವೃತ್ತಿಯಿಂದ ಅರ್ಥಕೊಡುವ ಶಬ್ದವು (1) ರೂಢ (2) ಯೋಗ ಮತ್ತು (3) ಯೋಗರೂಢವೆಂದು ಮೂರು ವಿಧ. (1) (ಶಬ್ದದ) ಕೇವಲ ಸಮುದಾಯ ಶಕ್ತಿಯಿಂದ ಅರ್ಥಕೊಡುವ ಶಬ್ದವು ರೂಢವೆನಿಸುವುದು. **ಉದಾ :** डित्थः डवित्थः ಇತ್ಯಾದಿ. (2) ಕೇವಲ ಅವಯವಶಕ್ತಿಯಿಂದ ಅರ್ಥಕೊಡುವ ಶಬ್ದವು ಯೋಗವೆನಿಸುವುದು. **ಉದಾ :** पाठकः पाचकः ಇತ್ಯಾದಿ. ಇಲ್ಲಿ ಅರ್ಥವು ಧಾತು ಮತ್ತು ಪ್ರತ್ಯಯಗಳ ಶಕ್ತಿಯಿಂದುಂಟಾಗುವುದು. ಇದು ಕೇವಲ ಅವಯವಾರ್ಥ. (3) ಶಬ್ದಸಮುದಾಯ ಮತ್ತು ಅವಯವ ಶಕ್ತಿಗಳಿಂದ ಅರ್ಥಕೊಡುವ ಶಬ್ದವು ಯೋಗರೂಢವೆನಿಸುವುದು. **ಉದಾ :** पङ्कजम्। ಪಂಕದಲ್ಲಿ ಮಂಡೂಕ ಮೊದಲಾದುವು ಹುಟ್ಟಿದರೂ ಶಬ್ದದ ಅವಯವ ಮತ್ತು ಸಮುದಾಯಶಕ್ತಿಗಳು ಕಮಲರೂಪವಾದ ಅರ್ಥದಲ್ಲೇ ಇರುವುದರಿಂದ पङ्कज ಶಬ್ದವು ಯೋಗರೂಢ. 23. ಸಾಮರ್ಥ್ಯ, ಪ್ರಭಾವ, ಮಹಿಮೆ.

**योगक्षेम ಯೋಗಕ್ಷೇಮ** (ನ.೦) ಹೊಸ ಸಂಪಾದನೆ ಮತ್ತು ಅದರ ರಕ್ಷಣೆ. योगश्च क्षेमं च अनयोः समाहारः। "अलब्धस्य लाभो योगः (स्यात्) क्षेमं तत्परिरक्षणम्"। "अनन्याश्चिन्तयन्तो मां ये जनाः पर्युपासते। तेषां नित्याभियुक्तानां योगक्षेमं वहाम्यहम्" गीता ९-२२। ಹೊಸದಾಗಿ ಲಭಿಸಿದ ಧನವು ಯೋಗ. ಅದರ ಸಂರಕ್ಷಣೆಯು ಕ್ಷೇಮ. ಇದು ಯೋಗಕ್ಷೇಮ. ಇದರಂತೆಯೇ ಪರಮಾತ್ಮಪ್ರಾಪ್ತಿಯು ಯೋಗವಾಗುವುದು. ಪರಮಾತ್ಮ

ಪ್ರಾಪ್ತಿಯಾದನಂತರ ಅಪುನರಾವೃತ್ತಿರೂಪವಾದ ಮೋಕ್ಷವು ಕ್ಷೇಮವಾಗುವುದು. योगक्षेमं वहाम्यहम् ಎಂಬ ಗೀತಾಚಾರ್ಯನ ಸೂಕ್ತಿಗೆ ಇದೇ ಅರ್ಥ.

**योगचक्षुस् ಯೋಗಚಕ್ಷುಸ್** (ಪುಂ०) ವಿಪ್ರ, ಪ್ರಥಮ ವರ್ಣದವನು.

**योगचूर्ण ಯೋಗಚೂರ್ಣ** (ನಂ०) ಮಂತ್ರಿಸಿದ ಪುಡಿ, ಜನರನ್ನು ವಶಪಡಿಸಿಕೊಳ್ಳಲು ತಯಾರಿಸುವ ಮಂಕು ಬೂದಿ. "कल्पितमनेन योगचूर्णमिश्रितमौषधं चन्द्रगुप्ताय" मुद्रा० २।

**योगनिद्रा ಯೋಗನಿದ್ರಾ** (ಸ್ತ್ರೀ०) 1. ಪ್ರಳಯಕಾಲದಲ್ಲಿ ಪರಮಾತ್ಮನ ಯೋಗದಶೆ, ಪ್ರಳಯಕಾಲದಲ್ಲಿ ಪರಮೇಶ್ವರನು ಸಕಲ ಜೀವರಾಶಿಗಳನ್ನೂ ತನ್ನ ಉದರದಲ್ಲಿ ಸೇರಿಸಿಕೊಂಡು ಮಾಡುವ ನಿದ್ರೆ, ಪ್ರಳಯಕಾಲದಲ್ಲಿ ಪರಮಾತ್ಮನು ಅಂತರ್ಮುಖನಾಗಿರುವಿಕೆ. योगरूपा निद्रा। योगो मनसो विषयान्तरव्यावृत्तिः तद्रूपा निद्रा। "योगनिद्रान्तविशदैः पावनैरवलोकनैः" रघु० १०-१४। 2. ಎಚ್ಚರ ಮತ್ತು ನಿದ್ರೆ ಇವುಗಳ ಮಧ್ಯದ ಅವಸ್ಥೆ, ಜಾಗ್ರದವಸ್ಥೆ ಮತ್ತು ಸುಷುಪ್ತ್ಯವಸ್ಥೆ ಇವುಗಳ ಮಧ್ಯದ ಅವಸ್ಥೆ, ಸಮಾಧ್ಯವಸ್ಥೆ. "ब्रह्मज्ञानाभ्यसनविधिना योगनिद्रां गतस्य" भर्तृ० ३-९८।

**योगपट्ट ಯೋಗಪಟ್ಟ** (ನಂ०) ಯೋಗಾಭ್ಯಾಸ ಸಮಯದಲ್ಲಿ ಬೆನ್ನು ಮತ್ತು ಮೊಣಕಾಲುಗಳನ್ನು ಬಳಸಿ (ಸುತ್ತಿ) ಕಟ್ಟುವ ವಸ್ತ್ರ. योगाभ्यासार्थं पट्टम्। "पृष्ठजान्वोः समायोगे वस्त्रं वलयवद्दृढम्। परिवेष्ट्य यदूर्ध्वज्ञः तिष्ठेत्तद्योगपट्टकम्"।

**योगपीठ ಯೋಗಪೀಠ** (ನಂ०) ಯೋಗಾಭ್ಯಾಸಕ್ಕೆ ತಕ್ಕ ಆಸನ. योगयोग्यमासनम्।

**योगमाया ಯೋಗಮಾಯಾ** (ಸ್ತ್ರೀ०) 1. ಪರಮಾತ್ಮನ ಜಗತ್ಸೃಷ್ಟಿಶಕ್ತಿ. 2. ಪರಮಾತ್ಮನ ಅನಿರ್ವಚನೀಯವಾದ ಒಂದು ಶಕ್ತಿ, ಮನುಷ್ಯ ಮೊದಲಾದ ಆಕಾರವನ್ನು ಹೊಂದುವ ಒಂದು ಶಕ್ತಿ. "नाहं प्रकाशः सर्वस्य योगमायासमावृतः। मूढोऽयं नाभिजानाति लोको मामजमव्ययम्" गीता ७-२५। 3. ದುರ್ಗಾದೇವಿ. योग एव माया। "ततश्च शौरिर्भगवत्प्रचोदितः सुतं समादाय स सूतिकागृहात्। यदा बहिर्गन्तुमियेष तह्यंजा या योगमायाजनि नन्दजायया" भाग० १०-३-४७।

**योगरूढ ಯೋಗರೂಢ** (ಪುಂ०) ಅವಯುವಶಕ್ತಿ ಮತ್ತು ಸಮುದಾಯಶಕ್ತಿಗಳಿಂದ ಅರ್ಥಕೊಡುವ ಶಬ್ದ. योगश्च रूढिश्च योगरूढी—तौ स्तोऽस्य "अच्" (५-२-१२७)। ಯೋಗ ಮತ್ತು ರೂಢಿಗಳ ಪರಸ್ಪರ ಸಹಕಾರದಿಂದ ಅರ್ಥವನ್ನು ಕೊಡುವ ಪದವು ಯೋಗರೂಢ. पङ्कज ಪದವು पङ्काज्जायते ಎಂಬ ಅವಯವ ಶಕ್ತಿಯಿಂದಲೂ ಪಂಕದಲ್ಲೇ ಹುಟ್ಟುವುದೆಂಬ ರೂಢಿಯಿಂದಲೂ ಕಮಲ ರೂಪವಾದ ಅರ್ಥವನ್ನು ಬೋಧಿಸುವುದರಿಂದ पङ्कज ಪದವು ಯೋಗರೂಢ.

**योगरूढि ಯೋಗರೂಢಿ** (ಸ್ತ್ರೀ०) ಶಬ್ದದ ಅವಯುವ ಶಕ್ತಿಯಿಂದ ಕೂಡಿದ ಸಮುದಾಯ ಶಕ್ತಿ. ಇದು ಅಭಿಧಾ ವೃತ್ತಿಯ ಒಂದು ಭೇದ. योगेन सहिता रूढिः। पङ्कज ಪದದಲ್ಲಿ ಪಂಕದಲ್ಲಿ ಹುಟ್ಟಿದ ಕಮಲರೂಪವಾದ ಅರ್ಥವೇ ರೂಢಿಯಾಗಿರುವುದು. ಇಲ್ಲಿ ಅವಯುವಶಕ್ತಿ ಮತ್ತು ಸಮುದಾಯಶಕ್ತಿಗಳೆರಡರಿಂದಲೂ ಕಮಲ ರೂಪವಾದ ರೂಢ್ಯರ್ಥಬೋಧವುಂಟಾಗುವುದರಿಂದ ಈ ಪದವು ಯೋಗರೂಢ. ಈ ಪದದಲ್ಲಿ ಈ ಅರ್ಥವು ರೂಢಿ. यत्र योगार्थान्वितरूढयर्थविबोधः तत्र सर्वत्र योगरूढिः।

**योगवाह ಯೋಗವಾಹ** (ಪುಂ०) ಅನುಸ್ವಾರ ವಿಸರ್ಗ ಜಿಹ್ವಾಮೂಲೀಯ ಮತ್ತು ಉಪಧ್ಮಾನೀಯ. योगं वर्णान्तरेण संबन्धं वाहयति—वह् (प्रापणे+णिच् "अण्" (३-२-१)।

**योगवाहिन् ಯೋಗವಾಹಿನ್** (ಪುಂ०) 1. ಪಾದರಸ. 2. ಅಮ್ಲತೆಯನ್ನು ಹೋಗಲಾಡಿಸುವ ಕ್ಷಾರ. (ನಂ०) 3. ಜೇನುತುಪ್ಪ.

**योगसार ಯೋಗಸಾರ** (ಪುಂ०) ಸಕಲ ರೋಗಗಳನ್ನೂ ನಿವಾರಿಸುವ ಉಪಾಯ. योगस्य औषधप्रयोगस्य सारः।

**योगसूत्र ಯೋಗಸೂತ್ರ** (ನಂ०) ಪತಂಜಲಿಮಹರ್ಷಿ ಪ್ರಣೀತವಾದ ಯೋಗಶಾಸ್ತ್ರದ ಸೂತ್ರಗಳು.

**योगारूढ ಯೋಗಾರೂಢ** (ವಿ०) ಯೋಗಸಿದ್ಧಿಯನ್ನು ಹೊಂದಿದವನು. ಆತ್ಮವ್ಯತಿರಿಕ್ತವಾದ ಪ್ರಾಕೃತ ವಿಷಯಗಳಲ್ಲಿಯೂ ತತ್ಸಂಬಂಧವಾದ ಕರ್ಮಗಳಲ್ಲಿಯೂ ಸಂಬಂಧವನ್ನು ತ್ಯಜಿಸಿ ಆತ್ಮಾವಲೋಕನ ಮಾಡುವವನು ಯೋಗಾರೂಢನಾಗುತ್ತಾನೆ. "यदा हि नेन्द्रियार्थेषु न कर्मस्वनुषज्जते। सर्वसंकल्पसंन्यासी योगारूढस्तदोच्यते" गीता ६-४।

**योगासन ಯೋಗಾಸನ** (ನಂ०) ಯೋಗಾಭ್ಯಾಸಕ್ಕಾಗಿ ಮಾಡಿಕೊಳ್ಳುವ ಅಂಗವಿನ್ಯಾಸ, ಬ್ರಹ್ಮಾಸನ, ಧ್ಯಾನಾಸನ. योगसाधनमासनम्। ಪದ್ಮಾಸನ, ಸ್ವಸ್ತಿಕಾಸನ,

ಕುಕ್ಕುಟಾಸನ, ಕೂರ್ಮಾಸನ, ಧನುರಾಸನ, ವೀರಾಸನ ಇತ್ಯಾದಿ. "ध्यानयोगासने ब्रह्मासनम्" अम०। "इत्युक्त्वा सर्वे एवास्थुः बद्ध्वा योगासनानि ते" भट्टि० ७-७७। [ಆಸನಗಳ ವಿವರಕ್ಕೆ "ಹಠಯೋಗ ಪ್ರದೀಪಿಕಾ" ಪ್ರಥಮೋಪದೇಶ ನೋಡಿ.]

**योगिन् ಯೋಗಿನ್** (ಪುಂ) 1. ಜಿತೇಂದ್ರಿಯನಾಗಿ ಪರಮಾತ್ಮನಲ್ಲೇ ಚಿತ್ತವನ್ನು ನಿಲ್ಲಿಸಿ ಲೌಕಿಕವಿಷಯ ಗಳಾವುದರಲ್ಲೂ ಆಸೆಯನ್ನು ತ್ಯಜಿಸಿದವನು, ಸ್ವರ್ಣ ಲೋಷ್ಟ ಗೃಹ ವನ ಮುಂತಾದ ಎಲ್ಲಾ ವಿಷಯಗಳಲ್ಲೂ ಸಮಬುದ್ಧಿಯುಳ್ಳ ಸನ್ಯಾಸಿ. युज (समाधौ) "घिनुण्" (३-२-१४२)। "स्वर्णे लोष्टे गृहेऽरण्ये सुहृन्नघे चन्दने तथा। समताभावना यस्य स योगी परिकीर्तितः" ब्रह्मवै०। 2. ಸುಖವಾಗಲಿ ದುಃಖವಾಗಲಿ ತನ್ನಂತೆಯೇ ಎಲ್ಲರಿಗೂ ಸಮಾನವಾದುದೆಂದು ತಿಳಿಯುವವನು. "आत्मौपम्येन सर्वत्र समं पश्यति योऽर्जुन। सुखं वा यदि वा दुःखं स योगी परमो मतः" गीता ६-३२। 3. ಬ್ರಹ್ಮಜ್ಞಾನವುಳ್ಳವನು, ಪರಮಾತ್ಮನ ಧ್ಯಾನದಲ್ಲಿ ನಿರತನಾದವನು. "त्वमेव साक्षात्करणीय इत्यतः किमस्ति कार्यं गुरु योगिनामपि" माघ० १-३१। 4. ಮಾಂತ್ರಿಕ, ಮಾಟಗಾರ. 5. ವಿಷ್ಣು. ಅಘಟಿತಾರ್ಥ ಘಟನರೂಪ ವಾದ ಪ್ರಭಾವವಿರುವುದರಿಂದ ಈ ಹೆಸರು. "योगोऽघ्न-घटितार्थस्य घटनं तेन सर्वदा। यस्यास्ति नित्यसंबन्धः स योगी परिकीर्तितः" इति निरुक्तिः। "भारभृत् कथितो योगी" वि० स०। (स्त्री०) –नी –ನೀ. 1. ದುರ್ಗಾದೇವಿ. 2. ಮಾಟಗಾರ್ತಿ, 3. ಧ್ಯಾನಾಸಕ್ತ ಳಾದ ಹೆಂಗಸು, ಯೋಗಾಭ್ಯಾಸ ಮಾಡಿದ ಹೆಂಗಸು.

**योगीश ಯೋಗೀಶ, –ईश्वर –ಈಶ್ವರ** (ಪುಂ) 1. ಯೋಗಿರಾಜ, ಶ್ರೇಷ್ಠನಾದ ಯೋಗಿ, ಶ್ರೇಷ್ಠನಾದ ತಪಸ್ವಿ. योगिनाम् ईशः ईश्वरो वा। 2. ಯಾಜ್ಞವಲ್ಕ್ಯಮುನಿ.

**योगीश्वरी ಯೋಗೀಶ್ವರೀ** (स्त्री०) ದುರ್ಗಾದೇವಿ.

**योगेश्वर ಯೋಗೇಶ್ವರ** (ಪುಂ) 1. ಶ್ರೀಕೃಷ್ಣ. योगानाम् ईश्वरः। "यत्र योगेश्वरः कृष्णो यत्र पार्थो धनुर्धरः। तत्र श्रीर्विजयो भूतिः ध्रुवा नीतिर्मतिर्मम" गीता १८-७८। "योगेश्वरो युवतिभिः सह मोदमानः" याद० २४-८७। 2. ಶಿವ, ಪರಮೇಶ್ವರ. "नमस्ते भगवन् देव नमस्ते भक्तवत्सल। योगेश्वर नमस्तेऽस्तु नमस्ते विश्वसंभव" भा० अनु०। –ईश्वरी –ಈಶ್ವರೀ. ದುರ್ಗಾದೇವಿ.

**योगेष्ट ಯೋಗೇಷ್ಟ** (ನಂ) ಸೀಸಲೋಹ. योगाय योजनाय इष्टम्। "नागसीसकयोगेष्टवप्राणि" अम०।

**योग्य ಯೋಗ್ಯ** (ಪುಂ) 1. ಪುಷ್ಯ ನಕ್ಷತ್ರ. युज्यते—युजिर् (योगे) "ण्यत्" (३-१-१२४)। "योग्यः सिद्धश्च पुष्यः स्यात्" वैज०। (ನಂ) 2. ವಾಹನ, ಗಾಡಿ, ರಥ. "वाहनं वाह्यधोरणे। योग्यं चास्मिन् चक्र्युते" वैज०। 3. ಕ್ಷೀರ, ಹಾಲು. "गव्यं ज्येष्ठं मधुक्षीरं योग्यम्" वैज०। 4. ಯಂತ್ರ. 5. ಚಂದನ, ಗಂಧ. 6. ಅಪೂಪ, ರೊಟ್ಟಿ. 7. ಅಭ್ಯಾಸ. 8. ಋದ್ಧಿಯೆಂಬ ಒಂದು ಗಂದಿಗರ ವಸ್ತು. "योग्यमृद्धिः सिद्धिलक्ष्म्यौ" अम०। (ವಿ०) 9. ನಿಪುಣ, ಸಮರ್ಥ, ಪ್ರವೀಣ. 10. ಶಕ್ತ, ಸಮರ್ಥ. 11. ಅರ್ಹನಾದ, ಯುಕ್ತನಾದ, ಒಪ್ಪುವ, ಹೊಂದಿಕೆಯುಳ್ಳ. "योग्यैर्व्रजद्भिः नृपजां वरीतुं वीरैरनर्हैः प्रसभेन हर्तुम्" नैष० १०-३। 12. ಯೋಗಾ ಭ್ಯಾಸಕ್ಕೆ ಅರ್ಹನಾದವನು. योगाय प्रभवति "यत्" (५-१-१०२)। 13. ಉಪಾಯವನ್ನು ಅರಿತವನು. (स्त्री०) –ग्या –ಗ್ಯಾ. 14. ಅಭ್ಯಾಸ. 15. ಸೂರ್ಯನ ಪತ್ನಿ. 16. ಪುಣ್ಯ. 17. ಭೂಮಿ. "योग्यं क्लीबेऽपूपयानचन्दनाभ्यासवाचकम्। प्रवीणोपायवच्छक्तयोगार्हेष्वप्ययं त्रिषु" नानार्थर०। "योग्यः प्रवीणयोगार्होपायिशक्तेषु वाच्यवत्। क्लीबमृद्ध्यौषधे पुष्ये ना स्त्र्यभ्यासार्कयोषितोः" मेदि०। "योग्याभ्यासः क्षमापुण्ये" वैज०।

**योग्यता ಯೋಗ್ಯತಾ** (स्त्री०) 1. ಶಕ್ತಿ, ಸಾಮರ್ಥ್ಯ. योग्यस्य भावः "तल्" (५-१-११९)। "न युद्धयोग्यतामस्य पश्यामि सह राक्षसैः" रामा० बाल०। 2. ಅರ್ಹತೆ, ಯೋಗ್ಯನಾಗಿರುವಿಕೆ. "शरीरभाजां भवदीयदर्शनं व्यनक्ति कालत्रितयेऽपि योग्यताम्" माघ० १-२६। 3. (ತಾರ್ಕಿಕ ಮತದಲ್ಲಿ) ಪದಾರ್ಥಗಳ ಪರಸ್ಪರ ಸಂಬಂಧದ ಅರ್ಹತೆ, ಪದಾರ್ಥಗಳಿಗೆ ಪರಸ್ಪರ ಬಾಧ ಯಿಲ್ಲದಿರುವಿಕೆ, ವಾಕ್ಯಾರ್ಥಬೋಧಕ್ಕೆ ಪ್ರಯೋಜಕವಾದ ಶಬ್ದಗಳ ಯೋಗ್ಯತೆ. "एकपदार्थेऽपरपदार्थसंसर्गो योग्यता" तर्ककौ०। "योग्यता पदार्थानां परस्परसंबन्धे बाधाभावः" सा० द०। "वह्निना सिञ्चति" ಎಂಬಲ್ಲಿ ವಹ್ನಿಗೆ ಸೇಚನಕರಣತ್ವವು ಬಾಧಿತವಾಗಿರುವುದರಿಂದ ಇಲ್ಲಿ ಶಬ್ದಗಳಿಗೆ ಪರಸ್ಪರ ಸಂಬಂಧದ ಯೋಗ್ಯತೆಯಿಲ್ಲದೆ ಶಾಬ್ದ ಬೋಧವುಂಟಾಗುವುದಿಲ್ಲ.

**योजक ಯೋಜಕ** (ವಿ०) 1. ಸೇರಿಸುವವನು, ಎತ್ತು ಗಳನ್ನು ನೊಗಕ್ಕೆ ಸೇರಿಸಿ ಕಟ್ಟುವವನು. युजिर् (योगे)

"ण्वुल्" (३-१-१३३)। 2. ಸೇರಿಸುವವನು, ಒಟ್ಟುಗೂಡಿಸುವವನು. 3. ಉಪಾಯವನ್ನರಿತವನು, ಯುಕ್ತಿವಂತ. "अमन्त्रमक्षरं नास्ति नानौषधिर्वनस्पतिः। अयोग्यः पुरुषो नास्ति योजकस्तत्र दुर्लभः"।

**योजन ಯೋಜನ** (न०) 1. ಎತ್ತಿನ ಕತ್ತಿಗೆ ನೊಗವನ್ನು ಸೇರಿಸಿ ಕಟ್ಟುವುದು. युजिर् (योगे) भावे "ल्युट्" (३-३-११५)। 2. ಸೇರಿಸುವಿಕೆ, ಒಟ್ಟುಗೂಡಿಸುವುದು. 3. ಒಟ್ಟುಗೂಡಿಸುವ ಸಾಧನ, ಸೇರಿಸುವ ಸಲಕರಣೆ. युजिर् कर० "ल्युट्" (३-३-११७)। 4. ನಾಲ್ಕು ಕ್ರೋಶಗಳ ದೂರದ ಅಳತೆ, ಎಂಟು ಮೈಲಿಗಳ ದೂರ. "योजनानि परिरम्भणेऽन्तरं रोमहर्षजमपि स्म बोधतः" नैष० १८-११३। "न योजनशतं दूरं बाध्यमानस्य तृष्णया। सन्तुष्टस्य करप्राप्तेऽप्यर्थे भवति नादरः" हितो० १-१४८। 5. ಪರಮಾತ್ಮ. 6. ಯೋಗ. "योजनं परमात्मनि। चतुष्क्रोश्यां च योगे" मेदि०। 7. ಏರ್ಪಾಡು, ವ್ಯವಸ್ಥೆ. (स्त्री०) –ना –ನಾ. 8. ವ್ಯಾಕರಣ ನಿಯಮದಂತೆ ವಾಕ್ಯಗಳ ಜೋಡಣೆ.

**योजनगन्धा ಯೋಜನಗಂಧಾ** (स्त्री०) 1. ಸತ್ಯವತಿ, ವ್ಯಾಸಮಹರ್ಷಿಯ ತಾಯಿ. 2. ಸೀತಾದೇವಿ. 3. ಕಸ್ತೂರಿ. "योजनगन्धा सीता कस्तूरी व्यासमाता च" वैज०।

**योजनीय ಯೋಜನೀಯ** (वि०) 1. ಸೇರಿಸಲ್ಪಡಬೇಕಾದ. 2. ಒಟ್ಟುಗೂಡಿಸಬೇಕಾದ. 3. ಒಟ್ಟಿಗೆ ಸೇರಿಸಲು ಅರ್ಹವಾದ. 4. ಸೇರಿಸಲು ಶಕ್ಯವಾದ. युजिर् (योगे) कर्मादौ "अनीयर्" (३-१-९६)। "तव्यः"। **योक्तव्यः ಯೋಕ್ತವ್ಯಃ.**

**योजयितृ ಯೋಜಯಿತೃ** (वि०) 1. ನೊಗಕ್ಕೆ ಎತ್ತುಗಳನ್ನು ಸೇರಿಸಿ ಕಟ್ಟುವವನು. 2. ಸೇರಿಸುವವನು, ಜೊತೆಗೂಡಿಸುವವನು. युजिर् (योगे) + णिच् "तृच्" (३-१-१३३)। "कनकभूषणसंग्रहणोचितो यदि मणिस्त्रपुणि प्रतिबध्यते। न स विरौति न चापि न शोभते भवति योजयितुर्वचनीयता" पञ्चतं० १-८१। स्त्रियां "ङीप्" (४-१-५)। **–यित्री –ಯಿತ್ರೀ.**

**योजित ಯೋಜಿತ** (वि०) 1. ಒಂದು ಕಾರ್ಯಕ್ಕಾಗಿ ನೇಮಿಸಲ್ಪಟ್ಟ. युजिर् (योगे) + णिच् "क्तः" (३-२-१०२)। "योजितोऽथ यदुवंशकेतुना ख्यातकीर्तिरमृतापहारतः" याद० १७-४५। 2. ಒಟ್ಟಿಗೆ ಸೇರಿಸಲ್ಪಟ್ಟ, ಒಂದುಗೂಡಿಸಲ್ಪಟ್ಟ. "योजितोद्धतकरौ युयुधाते दर्पदारुणदिशागजसत्त्वौ" याद० २१-५४।

**योत्र ಯೋತ್ರ** (न०) ಎತ್ತಿನ ಕತ್ತಿಗೆ ನೊಗವನ್ನು ಸೇರಿಸಿ ಕಟ್ಟುವ ಮಿಳಿ, –ಹಗ್ಗ. यु (मिश्रणे) "ष्ट्रन्" (३-२-१८२)।

**योद्धृ ಯೋದ್ಧೃ** (पुं०) ಯುದ್ಧಮಾಡುವವನು, ಕಾದಾಡುವವನು, ಭಟ. युध (संप्रहारे) "तृच्" (३-१-१३३)। "भग्नेऽपीभे स्वे परावर्त्य देहं योद्धा सार्धं व्रीडया मुञ्चतेषून्" माघ० १८-३९।

**योध ಯೋಧ** (पुं०) 1. ಭಟ, ಬಂಟ, ಯುದ್ಧಮಾಡುವ ಸೈನಿಕ. युध (संप्रहारे) "अच्" (३-१-१३४)। "मन्त्रो योध इवाधीरः सर्वाङ्गैः संवृतैरपि" माघ० २-२९। 2. ಯುದ್ಧ, ಕಾಳಗ, ಕದನ. युध भावे "घञ्" (३-३-१८)।

**योधन ಯೋಧನ** (पुं०) 1. ಸೈನಿಕ, ಭಟ. युध (संप्रहारे) "ल्युः" (३-१-१३४)। (न०) 2. ಅಸ್ತ್ರ, ಆಯುಧ. युध्यतेऽनेन — युध कर० "ल्युट्" (३-३-११७)। 3. ಯುದ್ಧದ ಶಬ್ದ. "युद्धध्वाने क्रन्दनयोधने" वैज०। 4. ಯುದ್ಧ, ಕದನ. युध भावे "ल्युट्" (३-३-११५)।

**योधसंराव ಯೋಧಸಂರಾವ** (पुं०) ವೀರರು ಪರಸ್ಪರ ಯುದ್ಧಕ್ಕೆ ಆಹ್ವಾನ ಕೊಡುವುದು.

**योनि ಯೋನಿ** (पुंस्त्री०) 1. ಮೂಲ, ಕಾರಣ. यौति—यु (मिश्रणे) "निः" (उ० ४-९१)। "ऋषयो राक्षसीमाहुर्वाचमुन्मत्तदृप्तयोः। सा योनिः सर्ववैराणां सा हि लोकस्य निर्ऋतिः" उ० रा० ५-२९। 2. ಸ್ಥಾನ, ಜಾಗ, ಸ್ಥಳ. 3. ತಾಮ್ರಲೋಹ. 4. ಗಣಿ. 5. ಸ್ತ್ರೀಯರ ಜನನೇಂದ್ರಿಯ. 6. ಪ್ರಾಣಿಗಳ ಉತ್ಪತ್ತಿಸ್ಥಾನ. "योनिश्च उत्पत्तिस्थाने भगेऽपि च" त्रिकाण्ड०। "योनिः स्त्रीणां भगस्थाने कारणे ताम्रकेऽप्यषण्" वैज०। "योनिः स्त्रीपुंसयोश्च स्यादाकरे स्मरमन्दिरे" मेदि०। ಪ್ರಾಣಿಗಳ ಉತ್ಪತ್ತಿಸ್ಥಾನವು ಎಂಬತ್ತನಾಲ್ಕು ಲಕ್ಷ ವಿಧ. ಪ್ರಾಣಿಗಳ ಉತ್ಪತ್ತಿಯು ನಾಲ್ಕು ವಿಧ. "चतुरशीति लक्षाणि चतुर्भेदाश्च जन्तवः। अण्डजाः स्वेदजाश्चैव उद्भिज्जाश्च जरायुजाः"॥ ಇವುಗಳಲ್ಲಿ

(1) ಪಕ್ಷಿ ಸರ್ಪ ಮೊದಲಾದ ಅಂಡಜಗಳು 21 ಲಕ್ಷ ವಿಧ.
(2) ಕ್ರಿಮಿ ನೊಣ „ ಸ್ವೇದಜಗಳು 21 ಲಕ್ಷ ವಿಧ.
(3) ಗಿಡ ಮರ „ ಉದ್ಭಿಜ್ಜಗಳು 21 ಲಕ್ಷ ವಿಧ.
(4) ಮನುಷ್ಯ ಪಶು „ ಜರಾಯುಜಗಳು 21 ಲಕ್ಷ ವಿಧ.

7. ಜಲ, ನೀರು. 8. ಉತ್ಪತ್ತಿ ಸ್ಥಾನ. 9. ಪೂರ್ವಫಲ್ಗುನೀ ನಕ್ಷತ್ರ.

परिणाहिना परम्" नैष० २-३७। 2. ಒಬ್ಬ ಅಪ್ಸರಸ್ಸು, ನಳಕೂಬರನ ಪತ್ನಿ, ಸ್ವರ್ಗಲೋಕದಲ್ಲೇ ಅತಿಸುಂದರಿಯಾದ ಹೆಂಗಸು. "रम्भा कदल्यप्सरसोः" मेदि०। 3. ವೇಶ್ಯೆ, ಸೂಳೆ. 4. ಹಸುಗಳು ಕೂಗುವ ಧ್ವನಿ. 5. ಗಟ್ಟಿಯಾಗಿ ಅರಚುವುದು, ಗಾಬರಿಯಿಂದ ಕೂಗಿಕೊಳ್ಳುವುದು. 6. ಬಿಳಿಯ ಎಲೆಯ ಬಾಳೆಯ ಗಿಡ. "कदली दीर्घपर्णी च रम्भा सा गौरपर्णिका" वैज०। 7. ನೂಲಿನ ಉಡುದಾರ, ನಡುವಿಗೆ ಕಟ್ಟುವ ನೂಲಿನ ದಾರ. "मौर्वीत्वेकलमात्रिका। सौत्री तु घटिनी रम्भा" वैज०।

**रम्भागर्भ ರಂಭಾಗರ್ಭ** (पुं०) ಬಾಳೆಯ ದಿಂಡು. रम्भाया गर्भः। "रम्भागर्भनिभं तवोरुयुगलं बाहू मृणालोपमौ" रत्ना० ३-११।

**रम्भित ರಂಭಿತ** (न०) ದನಗಳ ಕೂಗು, ಹಸುಗಳು ಕೂಗುವ ಶಬ್ದ. "रम्भितं च गवां ध्वनिः" वैज०।

**रम्य ರಮ್ಯ** (पुं०) 1. ಸಂಪಿಗೆ ಮರ. रम्यतेऽनेन—रमु (क्रीडायाम्) "यत्" (३-१-९८)। (न०) 2. ಪಡವಲದ ಬೇರು. (वि०) 3. ಅಂದವಾದ, ಸುಂದರವಾದ, ಮನೋಹರವಾದ. "गत्वा नूनं वैबुधं सद्म रम्यं मूर्च्छाभाजामाजगामान्तरात्मा" माघ० १८-६३। 4. ಸಂತೋಷವುಂಟುಮಾಡುವ, ಆನಂದವನ್ನುಂಟುಮಾಡುವ. "रम्यास्तपोधनानां प्रतिहतविघ्नाः क्रियाः समवलोक्य। ज्ञास्यसि कियद्भुजो मे रक्षति मौर्वीकिणाङ्क इति" शाकु० १-१२। (स्त्री०) **रम्या ರಮ್ಯಾ**. 5. ರಾತ್ರಿ. "रम्या रात्रौ चम्पके ना मनोज्ञेत्वभिधेयवत्। नपुंसकं पटोलस्य मूले सूरिभिरिष्यते" मेदि०।

**रम्यक ರಮ್ಯಕ** (न०) 1. ನೀಲಪರ್ವತಕ್ಕೆ ಉತ್ತರದಲ್ಲಿರುವ ಒಂದು ದೇಶ. "उदक् तु रम्यकं नैलं नीलाद्रेरुत्तरं हि यत्" वैज०। 2. ಪಡವಲದ ಬೇರು. "पटोलं स्याद्राजफलं तस्य मूले तु रम्यकम्" त्रिकाण्ड०।

**रय ರಯ** (पुं०) 1. ವೇಗ, ಜೋರು. रयतेऽनेन—रय (गतौ) "घः" (३-३-११८)। "शनैरनीयन्त रयात्पतन्तो रथाः क्षितिं हस्तिनखादखेदैः" माघ० ३-६८। 2. ನದಿಯ ಪ್ರವಾಹ. "तस्यास्तिक्तैर्वनगजमदैर्वासितं वान्तवृष्टिर्जम्बूकुञ्जप्रतिहतरयं तोयमादाय गच्छेः" मेघ० १-२०।

**रयी ರಯೀ** (स्त्री०) ಧನ, ಐಶ್ವರ್ಯ, ಸಂಪತ್ತು. "द्युम्नं स्त्रियौ रा रयी ना कोशोऽर्थो विभवेऽपि च" कल्पद्रु०।

**रल्लक ರಲ್ಲಕ** (पुं०) 1. ಕಂಬಳಿ, ಶಾಲು. रत् इच्छा, तां लाति—ला (आदाने) "कः" (३-२-३)। स्वार्थे "कन्"। रतं क्रीडां लाति—ला "क्वुन्" वा। 2. ಕಂಬಲಮೃಗ. ಈ ಮೃಗದ ಕೂದಲಿನಿಂದ ಶಾಲು ತಯಾರಾಗುವುದು. "रल्लकः कम्बले स्मृतः। तथैव कम्बलमृगे" हेम०। 3. ರೆಪ್ಪೆಯ ಕೂದಲು. "युवतिरल्लकमल्लसमाहतो भवति को न युवा गतचेतनः"।

**रव ರವ** (पुं०) 1. ಶಬ್ದ, ಧ್ವನಿ. रु (शब्दे) "अच्" (३-३-५७)। "रवः कठिनकर्षणत्रुटितचापजन्मा क्षणात्" चं० रा०। 2. ಮೃಗಗಳ ಶಬ್ದ, ಆನೆ ಮೊದಲಾದುವುಗಳ ಗರ್ಜನೆ. "इह मुहुर्मुदितैः कलभै रवः प्रतिदिशं क्रियते कलभैरवः" माघ० ४-६०।

**रवण ರವಣ** (पुं०) 1. ಒಂಟೆ. रौति—रु (शब्दे) "युच्" (३-२-१४८)। "अर्थोज्झितोद्गारविशृङ्खलस्वरः स्वनाम निन्ये रवणः स्फुटार्थताम्" माघ० १२-९। 2. ಶಬ್ದ, ಧ್ವನಿ, ಸದ್ದು. "निर्ह्रादो रवणो नादः" वैज०। 3. ಭ್ರಮರ, ದುಂಬಿ. "अथोष्ट्रेऽली रवणः" वैज०। 4. ಕಹಿಪಡವಲದ ಗಿಡ. "पटोलके तु राजीवान् रवणः कर्कशः पटुः" वैज०। (न०) 5. ಕಂಚು. "घण्टास्वनं भूरिलोहं रवणं लोहजं मलम्" वैज०। (वि०) 6. ಕೂಗಾಡುವ ಸ್ವಭಾವದ, ಶಬ್ದಮಾಡುವ ಸ್ವಭಾವದ. "उत्कण्ठावर्धनैः शुभ्रं रवणैरम्बरं ततम्" भट्टि० ७-१४। 7. ಚಂಚಲವಾದ. 8. ತೀಕ್ಷ್ಣವಾದ.

**रवथ ರವಥ** (पुं०) ಕೋಗಿಲೆ. रु (शब्दे) "अथः" (उ० ३-११३)।

**रवा ರವಾ** (स्त्री०) ಹತ್ತಿಗಿಡ.

**रवि ರವಿ** (पुं०) 1. ಸೂರ್ಯ. रूयते स्तूयते—रु (शब्दे) "इः" (उ० ४-१३९)। "प्रध्वंसितान्धतमसः तत्रोदाहरणं रविः" माघ० २-३३। "सहस्रगुणमुत्स्रष्टुमादत्ते हि रसं रविः" रघु० १-१८। 2. ಎಕ್ಕದ ಗಿಡ. 3. ಹನ್ನೆರಡು ಸಂಖ್ಯೆಯ ಸಂಕೇತ. (ಆದಿತ್ಯರ ಸಂಖ್ಯೆ 12).

**रविग्रावन् ರವಿಗ್ರಾವನ್** (पुं०) ಸೂರ್ಯಕಾಂತ ಶಿಲೆ. "स्फटिकोऽर्को रविग्रावा सूर्यकान्तोऽनलोपमः" वैज०।

**रविज ರವಿಜ, —तनय —ತನಯ, —पुत्र —ಪುತ್ರ, —सुत —ಸುತ, —सूनु —ಸೂನು** (पुं०) ಸೂರ್ಯನ ಪುತ್ರ. (1) ಸುಗ್ರೀವ. (2) ಕರ್ಣ. (3) ಶನಿಗ್ರಹ.

(4) ವೈವಸ್ವತಮನು. (5) ಧರ್ಮರಾಯ. (6) ಸಾವರ್ಣಿಮನು. [ಸಂಜ್ಞಾದೇವಿಯಲ್ಲಿ ವೈವಸ್ವತಮನುವೂ ಛಾಯಾದೇವಿಯಲ್ಲಿ ಸಾವರ್ಣಿಮನವೂ ಜನಿಸಿದರು.]

**रविदिन ರವಿದಿನ** (ನಂ) ಭಾನುವಾರ, ಆದಿತ್ಯವಾರ, ಮೊದಲನೆಯ ವಾರ.

**रविनेत्र ರವಿನೇತ್ರ** (ಪುಂ) ಮಹಾವಿಷ್ಣು. रविर्नेत्रं लोचनं यस्य ।

**रविप्रिय ರವಿಪ್ರಿಯ** (ಪುಂ) 1. ಗನ್ನೇರಳೆ ಗಿಡ. (ನಂ) 2. ತಾಮ್ರಲೋಹ. 3. ರಕ್ತಕಮಲ, ಕೆಂದಾವರೆ.

**रविरत्न ರವಿರತ್ನ** (ನಂ) ಮಾಣಿಕ್ಯ, ಪದ್ಮರಾಗ, ಕೆಂಪು. रवेः प्रियं रत्नम् ।

**रशना ರಶನಾ** (ಸ್ತ್ರೀಂ) 1. ವಡ್ಯಾಣ, ಡಾಬು. अश्नाति— अश (भोजने) "युच्" रशादेशश्च (उं २-७६) । "रशनाकलापकगुणेन वधूर्मकरध्वजद्विरदमाकलयत्" माघ० ९-४५ । 2. ಹಗ್ಗ, ರಜ್ಜು. 3. ಜಿಹ್ವೆ, ನಾಲಗೆ.

**रश्मि ರಶ್ಮಿ** (ಪುಂ) 1. ಕಿರಣ. अश्नुते — अशू (व्याप्तौ) "मिः" धातोः रशादेशश्च (उं ४-४६) । "सुदृशोऽभिभर्तृशशिरश्मिगलज्जलबिन्दुमिन्दुमणिदारुवधूम्" माघ० ९-३५ । 2. ರಜ್ಜು, ಹಗ್ಗ. "सयलसूतायतरश्मिभुग्नग्रीवाग्रसंसक्तयुगैस्तुरङ्गैः" माघ० ३-६८ । 3. ಅಗ್ನಿಜ್ವಾಲೆ, ಬೆಂಕಿಯ ಉರಿ. "रश्मिर्ज्वालाप्रग्रहौ च" वैज० । 4. ರೆಪ್ಪೆಯ ಕೂದಲು. "रश्मिः पुमान् दीधितौ स्यात् पक्ष्मप्रग्रहयोरपि" मेदि० । 5. ಕಾಂತಿ, ಪ್ರಭೆ. "रश्मिस्तु प्रग्रहे द्युतौ" नानार्थर० । 6. ಚಾವಟಿ, ಗಾಡಿಯ ಎತ್ತು ಕುದುರೆಗಳನ್ನು ಓಡಿಸಲು ಉಪಯೋಗಿಸುವ ಬಾರುಗೋಲು.

**रश्मिमालिन् ರಶ್ಮಿಮಾಲಿನ್** (ಪುಂ) ಸೂರ್ಯ. रश्मीनां मालाऽस्यास्ति — "इनिः" (५-२-११६) ।

**रस ರಸ** (ಪುಂ) 1. ಗಿಡ ಮರ ಮೊದಲಾದುವುಗಳ ಸಾರ. रस्यते — रस (आस्वादने) "घञ्" (३-३-१९) । 2. ಜಲ, ನೀರು. "सहस्रगुणमुत्स्रष्टुमादत्ते हि रसं रविः" रघु० १-१८ । 3. ಪಾದರಸ. "रसस्तु पारदः सूतो हिङ्गुलो दारदो रसः" वैज० । 4. ದ್ರವವಸ್ತು, ತಿಳಿಯಾದ ವಸ್ತು. "न्यस्ताक्षरा धातुरसेन यत्र भूर्जत्वचः कुञ्जरबिन्दुशोणाः" कुमा० २-७ । 5. ಮದ್ಯ. "वर्जयेन्मधु मांसं च गन्धं माल्यं रसान् स्त्रियः" मनु० २-१७७ । 6. ವಿಷ, ನಂಜು. "अस्मत्प्रयुक्तैः तीक्ष्णरसदायिभिः किमनुष्ठितम्" मुद्रा० २ । 7. ಆಹ್ಲಾದ, ಸಂತೋಷ. "विश्रामो हृदयस्य यत्र जरसा यस्मिन्नहार्यो रसः" उ० रा० १-३९ । 8. ಸ್ಪೃಹೆ, ಇಚ್ಛೆ, ಅಭಿಲಾಷೆ. "इष्टे वस्तुन्युपचितरसाः प्रेमराशी भवन्ति" मेघ० २-४९ । 9. ಮಧುರ (ಸಿಹಿ) ಮೊದಲಾದ ಆರು ಭೋಜ್ಯ (ಊಟದ) ರಸಗಳು. (1) ಮಧುರ (ಸಿಹಿ) (2) ಅಮ್ಲ (ಹುಳಿ) (3) ಲವಣ (ಉಪ್ಪು) (4) ಕಟು (ಕಾರ) (5) ತಿಕ್ತ (ಕಹಿ) ಮತ್ತು (6) ಕಷಾಯ (ಒಗರು) ಇವು ಆರು ಭೋಜ್ಯ ರಸಗಳು.

(1) ಪೃಥ್ವಿ ಮತ್ತು ಜಲದ ಅಧಿಕಾಂಶದಿಂದ ಮಧುರ ರಸವೂ

(2) ಪೃಥ್ವಿ ಮತ್ತು ಅಗ್ನಿಯ ಅಧಿಕಾಂಶದಿಂದ ಅಮ್ಲ ರಸವೂ

(3) ಜಲ ಮತ್ತು ಅಗ್ನಿಯ ಅಧಿಕಾಂಶದಿಂದ ಲವಣ ರಸವೂ

(4) ವಾಯು ಮತ್ತು ಅಗ್ನಿಯ ಅಧಿಕಾಂಶದಿಂದ ಕಟುರಸವೂ

(5) ವಾಯು ಮತ್ತು ಆಕಾಶದ ಅಧಿಕಾಂಶದಿಂದ ತಿಕ್ತರಸವೂ ಮತ್ತು

(6) ಪೃಥ್ವಿ ಮತ್ತು ವಾಯುವಿನ ಅಧಿಕಾಂಶದಿಂದ ಕಷಾಯರಸವೂ ಉತ್ಪತ್ತಿಹೊಂದುವುವು. ಮಧುರ ಅಮ್ಲ ಮತ್ತು ಲವಣಗಳು ವಾತಹರ. ಮಧುರ ತಿಕ್ತ ಮತ್ತು ಕಷಾಯಗಳು ಪಿತ್ತಹರ. ಕಟು ತಿಕ್ತ ಮತ್ತು ಕಷಾಯಗಳು ಶ್ಲೇಷ್ಮಹರ. 10. (ವಿಭಾವ ಅನುಭಾವ ಮತ್ತು ವ್ಯಭಿಚಾರಿಭಾವಗಳಿಂದ ಪುಷ್ಟವಾದ ರತಿ ಮೊದಲಾದ ಸ್ಥಾಯಿ ಭಾವಗಳುಳ್ಳ) ಶೃಂಗಾರ ಮೊದಲಾದ ಎಂಟು ಅಥವಾ ಒಂಬತ್ತು ರಸಗಳು. (1) ಶೃಂಗಾರ (2) ವೀರ (3) ಕರುಣ (4) ಅದ್ಭುತ (5) ಹಾಸ್ಯ (6) ಭಯಾನಕ (7) ಬೀಭತ್ಸ ಮತ್ತು (8) ರೌದ್ರ ಎಂದು ರಸಗಳು ಎಂಟು. (9) ಶಾಂತರಸವೂ ಸೇರಿ ಒಂಬತ್ತು. "शृङ्गारहास्यकरुणरौद्रवीरभयानकाः । बीभत्सोऽद्भुत इत्यष्टौ रसाः शान्तस्तथा मतः" सा० द० ३-१८२ । (1) ರತಿ (2) ಉತ್ಸಾಹ (3) ಶೋಕ (4) ವಿಸ್ಮಯ (5) ಹಾಸ (6) ಭಯ (7) ಜುಗುಪ್ಸೆ ಮತ್ತು (8) ಕ್ರೋಧ ಇವು ಶೃಂಗಾರ ಮೊದಲಾದ ರಸಗಳ ಸ್ಥಾಯಿಭಾವಗಳು. ಶಮ ಸ್ಥಾಯಿಭಾವವುಳ್ಳ ಶಾಂತರಸವೂ ಸೇರಿ ಒಂಬತ್ತು ರಸಗಳು. 11. ಧ್ವನಿ, ಶಬ್ದ, ಸದ್ದು. "क्ष्वेडो ध्वानो ध्वनिः कवः । कणिर्ह्रादो रसो घ्रणा" वैज० । 12. ಗಂಧರಸ, ರಕ್ತಬೋಳ. "प्राणो गन्धरसो रसः" वैज० । 13. ಮಂಗಾರೆ ಗಿಡ. "मदने तु फणी रसः । पिण्डीतको

मरुवकः" वैजं०। 14. ಹಸುರು ಈರುಳ್ಳಿ. "पलाण्डुस्तु श्वेतकन्दो मुकुन्दकः। हरितेऽस्मिन् लतार्कः स्यात् फरुण्डो दुद्रुमो रसः" वैजं०। 15. ದೇಹದ ಸಾರ, ಮೈಯೊಳಗಿನ ರಸಿಕೆ, ಶರೀರದೊಳಗಿನ ಸಪ್ತ ಧಾತುಗಳಲ್ಲೊಂದು. 16. ವೀರ್ಯ, ರೇತಸ್ಸು. 17. ವೀರ್ಯ, ಪರಾಕ್ರಮ. 18. ರುಚಿ, ಸವಿ. "स्वादनेन सुतनोरविचारात् ओष्ठतः समचरिष्ट रसोऽत्र" माघ० १०-७। 19. ಸುವರ್ಣ, ಚಿನ್ನ. 20. ಅಮೃತ. 21. ಪ್ರೀತಿ. 22. ವಸ್ತ್ರ, ಬಟ್ಟೆ. 23. ರೋಗ, ವ್ಯಾಧಿ. "रसो रागे विषे वीर्ये तिक्तादौ पारदे द्रवे। रेतस्यास्वादने हेम्नि निर्यासेऽमृतशब्दयोः" वैजं०। "रसः स्वादे जले वीर्ये शृङ्गारादौ विषे द्रवे। चोले रोगे देहधातौ तिक्तादौ पारदेऽपि च" हेम०। 24. ಬ್ರಹ್ಮಜ್ಞಾನ, ಬ್ರಹ್ಮಾನಂದ. "रसो वै सः। रसं ह्येवायं लब्ध्वानन्दी भवति" श्रुतिः।

**रसक ರಸಕ** (पुं०) 1. ಕಬ್ಬಿಣದ ಸಾರ. "रसकस्त्वयसः सारः" वैजं०। 2. ಹಿಂದೆ ಕಂಡು ಅನುಭವಿಸಿದ ವಸ್ತುವಿನ ವಿಷಯವಾದ ಸ್ವಪ್ನ. "संस्कारमात्रजः स्वप्नः कामिको रसकोऽपि च" वैजं०। 3. ಅಮ್ಲತೆಯನ್ನು ನಿವಾರಿಸುವ, ಯೋಗವಾಹಿ. 4. ಮಾಂಸದ ಸಾರು. ಅಂಬ್ರು. "रसको मांसनिष्क्वाथः पिष्टमांसकृतो रसः" वैजं०। 5. ಮದ್ಯ, ಹೆಂಡ. "चषको रसकः सीधुः" कल्पद्रु०।

**रसकर्पूर ರಸಕರ್ಪೂರ** (पुं०) ಪಾದರಸದ ಭಸ್ಮ.

**रसकर्मन् ರಸಕರ್ಮನ್** (न०) ಪಾದರಸವನ್ನು ತಯಾರಿಸುವ ಕಾರ್ಯ.

**रसकेसर ರಸಕೇಸರ** (न०) ಕರ್ಪೂರ.

**रसगर्भ ರಸಗರ್ಭ** (पुं०) 1. ರಸಾಂಜನ. 2. ಹಿಂಗುಳ, ಗಂಧರಸ, ಗಂಧಕಾಮ್ಲ.

**रसज ರಸಜ** (न०) 1. ರಕ್ತ. भुक्तान्नरसाज्जायते—जनी (प्रादुर्भावे) "डः" (३-२-९८)। (पुं०) 2. ಬೆಲ್ಲ ಸಕ್ಕರೆ ಕಾಕಂಬಿ. रसात् इक्षुरसात् जायते—जनी "डः"।

**रसज्ञ ರಸಜ್ಞ** (वि०) 1. ರಸಸ್ವರೂಪವನ್ನು ಅರಿತವನು. 2. ರಸವಾದಿ, ರಸಮಿಶ್ರಿತವಸ್ತುವನ್ನು ತಯಾರಿಸುವವನು. 3. ಕವಿ. रसं जानाति—ज्ञा (अवबोधने) "कः" (३-२-३)।

**रसज्ञा ರಸಜ್ಞಾ** (स्त्री०) ಜಿಹ್ವೆ, ನಾಲಗೆ. रसं जानाति—ज्ञा (अवबोधने) "कः" (३-२-३)।

**रसत् ರಸತ್** (वि०) ಶಬ್ದಮಾಡುತ್ತಿರುವ, ಕೂಗುತ್ತಿರುವ. रस (शब्दे) "शतृ" (३-२-१२४)। "रसत्ररोदीत् भृशमम्बुवर्षव्याजेन यस्या बहिरम्बुवाहः" माघ० ३-४२।

**रसदोष ರಸದೋಷ** (पुं०) ಶೃಂಗಾರಾದಿ ರಸಗತವಾದ ದೋಷ, ರಸದಲ್ಲಿ ಉಂಟಾಗುವ ದೋಷ. ರಸದ ವರ್ಣನೆಯ ಸಮಯದಲ್ಲಿ ರಸಶಬ್ದ ಶೃಂಗಾರ ವೀರ ಮೊದಲಾದ ಶಬ್ದ ಸ್ಥಾಯಿ ಸಂಚಾರಿಭಾವಗಳ ಶಬ್ದ ಇವುಗಳನ್ನು ಆಯಾ ಶಬ್ದಗಳಿಂದ ಹೇಳುವುದು ರಸಗತವಾದ ದೋಷವಾಗುವುದು. ಮತ್ತು ವಿರುದ್ಧ ರಸಗಳ ಅಂಗವಾದ ವಿಭಾವಾದಿಗಳ ವರ್ಣನೆ ಅಂಗಿ (ಪ್ರಧಾನ) ರಸದ ವಿಚ್ಛೇದ ಅಪ್ರಧಾನರಸದ ವರ್ಣನೆ ಅನುಚಿತವಾದ ಅರ್ಥ ವರ್ಣನೆ ಇವೂ ರಸಗತವಾದ ದೋಷಗಳು. "रसस्योक्तिः स्वशब्देन स्थायिसञ्चारिणोरपि। परिपन्थिरसाङ्गस्य विभावादेः परिग्रहः" ಇತ್ಯಾದಿ सा० द० ७-१२।

**ರಸ ಮತ್ತು ಶೃಂಗಾರಶಬ್ದ:** "तामुद्वीक्ष्य कुरङ्गाक्षीं रसो नः कोऽप्यजायत। चन्द्रमण्डलमालोक्य शृङ्गारे मग्नमन्तरम्।"

**ಸ್ಥಾಯಿಭಾವ ಶಬ್ದ:** "अजायत रतिस्तस्याः त्वयि लोचनगोचरे"।

**रसधातु ರಸಧಾತು** (पुं०) ಪಾದರಸ, ಪಾರದ. रसाख्यो धातुः।

**रसन ರಸನ** (स्त्रीन०) 1. ಆಸ್ವಾದನ, ರುಚಿ ನೋಡುವುದು. रस (आस्वादने) भावे "ल्युट्" (३-३-११५)। 2. ಜಿಹ್ವೆ, ನಾಲಗೆ. (न०) 3. ಶಬ್ದ ಮಾಡುವುದು, ಕೂಗಿಕೊಳ್ಳುವುದು. 4. ರುಚಿನೋಡುವ ಇಂದ್ರಿಯ. ಜಿಹ್ವೇಂದ್ರಿಯ. "इन्द्रियं रसग्राहकं रसनम्। तच्च जिह्वाग्रवृत्ति" त० सं०। 5. ಕಷಾಯ. 6. ಅನ್ನ. 7. ದ್ರವ. 8. ಸ್ನೇಹ, ಜಿಡ್ಡು. 9. ನಂಜು, ವಿಷ. 10. ಫಲ, ಹಣ್ಣು. 11. ನಿರ್ಯಾಸ, ಮರದ ಅಂಟು. 12. ಸ್ವರ್ಣ, ಚಿನ್ನ. 13. ರಜತ, ಬೆಳ್ಳಿ. "रसनं कली कषायेऽन्ने द्रवे स्नेहे विषे फले। निर्यासे हेम्नि रूप्ये च जिह्वास्वादनयोर्न ना" वैजं०।

**रसना ರಸನಾ** (स्त्री०) 1. ಜಿಹ್ವೆ, ನಾಲಗೆ. रसयति—रस (आस्वादने) + णिच् "ल्युः" (३-१-१३४)। "रसनाग्रलग्नकिरणाङ्कुरान् जनो हरिणान् गृहीतकवलानिवैक्षत" माघ० १३-५६। 2. ಸಣ್ಣರಾಶ್ಮೆ. "रसनं स्वादने ध्वनौ। जिह्वायां च न पुंसि स्यात् रास्नायां रसना स्त्रियाम्" मेदि०।

**रसनाथ ರಸನಾಥ** (पुं०) ಪಾರದ, ಪಾದರಸ. रसानां नाथः श्रेष्ठः।

**रसपाकज ರಸಪಾಕಜ** (पुं०) 1. ಬೆಲ್ಲ, ಗುಡ. रसपाकाज्जायते—जनी (प्रादुर्भावे) "डः" (३-२-९८)। 2. ರಕ್ತ.

**रसफल ರಸಫಲ** (पुं०) ತೆಂಗಿನ ಮರ. रसो जलं फले यस्य। "नारिकेलः शिरःफलः। सदाफलो रसफलः" कल्पद्रु०।

**रसभङ्ग ರಸಭಂಗ** (पुं०) ರಸದ ವಿಚ್ಛೇದ, ವಿರುದ್ಧ ರಸದ ವರ್ಣನೆಯಿಂದ ಪ್ರಕೃತರಸಾನುಭವಕ್ಕೆ ಉಂಟಾಗುವ ಅಡ್ಡಿ.

**रसमय ರಸಮಯ** (वि०) 1. ರಸಸ್ವರೂಪವಾದ, ರಸ ರೂಪವಾದ, ರಸಾತ್ಮಕವಾದ, ದ್ರವರೂಪವಾದ. रस "मयट्" (५-४-२१)। 2. ಪ್ರೀತಿಯಿಂದ ಕೂಡಿದ.

**रसमल ರಸಮಲ** (न०) ಪುರೀಷ, ವಿಷ್ಠೆ.

**रसमान ರಸಮಾನ** (वि०) ಶಬ್ದಮಾಡುವ ಸ್ವಭಾವದ, ಕೂಗುವ ಸ್ವಭಾವವುಳ್ಳ. रस (शब्दे) "चानश्" (३-२-१२९)। "परिरम्भरुचि ततिर्जलानामभिनद्धा रसमानसारसेन" माघ० ६-७५।

**रसराज ರಸರಾಜ** (पुं०) 1. ಪಾರದ, ಪಾದರಸ. 2. ರಸಾಂಜನ.

**रसवत् ರಸವತ್** (वि०) 1. ರಸದಿಂದ ಕೂಡಿದ, ರಸಭರಿತವಾದ. रसोऽस्यास्ति "मतुप्" (५-२-९५)। 2. ಅನುರಾಗದಿಂದ ಕೂಡಿದ, ಪ್ರೀತಿಯಿಂದ ಕೂಡಿರುವ. "नासेवन्ते रसवन्न नवरतममन्दरागवामरसदृशः" माघ० ४-५१। 3. ರುಚಿಯಾಗಿರುವ, ಹಿತವಾಗಿರುವ. "संसारसुखवृक्षस्य द्वे एव रसवत्फले। काव्यामृतसुखास्वादः संपर्कः सज्जनैः सह"। 4. ರಮಣೀಯವಾದ, ಸೊಗಸಾದ. स्त्रियाम् "ङीप्" (४-१-६)। -वती -ವತೀ. "रोषोऽपि रसवतीनां न कर्कशो वा चिरानुबन्धी वा"।

**रसवती ರಸವತೀ** (स्त्री०) ಪಾಕಶಾಲೆ, ಅಡಿಗೆಯ ಮನೆ. रसो स्वादुरसो विद्यतेऽत्र—रस "मतुप्" (५-२-९५)। "ङीप्" (४-२-६)। "वातायनं गवाक्षश्च रसवत्यां महानसम्" वैज०।

**रसवत्ता ರಸವತ್ತಾ** (स्त्री०) ರಮಣೀಯತೆ, ಸೊಗಸು, ಸೌಂದರ್ಯ. रसवतो भावः "तल्" (५-१-११९)। "त्वम्"। **रसवत्त्वम् ರಸವತ್ತ್ವಮ್.**

**रसवर ರಸವರ** (पुं०) ಪಾರದ, ಪಾದರಸ.

**रससिद्ध ರಸಸಿದ್ಧ** (वि०) 1. ಭಗವತ್ಸಾಕ್ಷಾತ್ಕಾರ ರೂಪವಾದ ಸಿದ್ಧಿಯನ್ನು ಪಡೆದಿರುವ. "रसो वै सः"। सिद्धो रसो यस्य। 2. ಕವಿ, ಶೃಂಗಾರ ಮೊದಲಾದ ರಸಸಿದ್ಧಿಯನ್ನು ಪಡೆದವನು, ನವರಸಭರಿತವಾದ ಕಾವ್ಯ ನಿರ್ಮಾಣದಲ್ಲಿ ನಿಪುಣನಾದವನು. सिद्धो रसो शृङ्गारादिः यस्य। "जयन्ति ते सुकृतिनो रससिद्धाः कवीश्वराः" भर्तृ० १-२०।

**रससिन्दूर ರಸಸಿಂದೂರ** (न०) ಸತು ಪಾದರಸ ಗಂಧ ಕಾಮ್ಲ ಮತ್ತು ಯವಕ್ಷಾರಗಳಿಂದ ತಯಾರಿಸಲ್ಪಟ್ಟ ಒಂದು ಔಷಧ, ಸಿಂದೂರ ರಸ. रसजातं सिन्दूरम्।

**रसा ರಸಾ** (स्त्री०) 1. ಪೃಥ್ವಿ, ಭೂಮಿ. रसोऽस्यामस्ति "अच्" (५-२-१२७)। "फणावतस्त्रासयितुं रसायास्तलं विवक्षन्निव पन्नगारिः" माघ० ३-२३। 2. ದ್ರಾಕ್ಷಿ. 3. ಅಗುರು ಶುಂಠಿ. "पाठाम्बष्ठा विद्धकर्णी प्राचीना श्रेयसी रसा" अम०। 4. ಜಿಹ್ವೆ, ನಾಲಗೆ. रस्यतेऽनया—रस (आस्वादने) "घञ्" (३-३-१२१)। 5. ಸಲ್ಲಕೀ ವೃಕ್ಷ, ಆನೆಬೇಲ. "रसा तु रसना पाठासल्लकीक्षितिकङ्गुषु" हेम०। 6. ನವಣೆ. 7. ಪಾತಾಳಲೋಕ, ಭೂಮಿಯ ಕೆಳಗಿನ ಲೋಕ. "रसातलं तलं नागलोको दैत्यक्षयो रसा" वैज०।

**रसाग्र ರಸಾಗ್ರ** (पुं०) ಅನ್ನದ ಮೇಲಿನ ಕೆನೆ, ಗಂಜಿ. "क्षैरेयी चाथ मण्डोऽस्त्री रसाग्रः" वैज०।

**रसाञ्जन ರಸಾಂಜನ** (न०) ಕಾಡಿಗೆ, ಒಂದು ವಿಧ ಅಂಜನ.

**रसातल ರಸಾತಲ** (पुं०) 1. ವಾಸನೆಕಟ್ಟಿದ ವೀಳ್ಯದೆಲೆಯ ತಟ್ಟೆ. "नागवल्लीपलाशानां तैलाक्तानां रसातलः" वैज०। (न०) 2. ಪಾತಾಳಲೋಕ. "जग्राह वेदानखिलान् रसातलगतो हरिः" भा०शान्ति० ३४७-५८। 3. ಸಪ್ತಪಾತಾಳ ಲೋಕಗಳಲ್ಲೊಂದು. अतलम् वितलम् सुतलम् तलातलम् महातलम् रसातलम् ಮತ್ತು पातालम ಇವು ಸಪ್ತ ಅಧೋಲೋಕಗಳು.

**रसाधार ರಸಾಧಾರ** (पुं०) ಸೂರ್ಯ. रसां पृथ्वीं धरति —धृञ् (धारणे) "अण्" (३-२-१)।

**रसाधिक ರಸಾಧಿಕ** (पुं०) 1. ಟಂಕಣ, ಬಿಳಿಗಾರ. रसानां स्वर्णादिलोहानां द्रावणाय अधिकः। (वि०) 2. ರುಚಿಯಾಗಿರುವ, ಸವಿಯಾಗಿರುವ. रसेन अधिकः। 3. ಸೊಗಸಾಗಿರುವ, ಉತ್ತಮವಾಗಿರುವ, ಶೃಂಗಾರಾದಿ ರಸಗಳು ಮತ್ತು ಮಧುರಾದಿ ರಸಗಳು ಇವುಗಳಿಂದ ಉತ್ತಮ

ವಾಗಿರುವ. "भवनेषु रसाधिकेषु सर्वं क्षितिरक्षार्थमुशन्ति ये निवासम्" शाकु० ७-२०।

**रसाधिका ರಸಾಧಿಕಾ** (स्त्री०) ದ್ರಾಕ್ಷಿ.

**रसाभास ರಸಾಭಾಸ** (पुं०) ಅಯೋಗ್ಯ ರೀತಿಯಲ್ಲಿ ನಡೆಯುವ ರಸವರ್ಣನೆ. [ಭರತಮುನಿಯು ಹೇಳಿರುವ ಸಂಪೂರ್ಣಲಕ್ಷಣಗಳಿಂದ ಕೂಡಿರದೆ ಕೆಲವು ಲಕ್ಷಣಗಳಿಂದ ಮಾತ್ರ ಕೂಡಿರುವುದು ಅನುಚಿತವಾದ ವರ್ಣನೆ (ಅಯೋಗ್ಯ ರೀತಿಯದು)]. ಸತ್ಕುಲಪ್ರಸೂತ ಮತ್ತು ಸದ್ವ್ಯವಹಾರಗಳಿಂದ ಕೂಡಿದ ನಾಯಿಕಾ ನಾಯಕರಿಗೆ ನಿಷಿದ್ಧ ನಾಯಕ ಮತ್ತು ನಾಯಿಕೆಯರಲ್ಲಿ ಅನುರಾಗ ವರ್ಣನೆಯು ಅನುಚಿತವಾದುದು. [ಉಪನಾಯಕ ಮುನಿ ಮುನಿಪತ್ನಿ ಗುರು ಗುರುಪತ್ನಿ ಇತ್ಯಾದಿ ನಿಷಿದ್ಧ ನಾಯಿಕಾ ನಾಯಕರು.] ನಾಯಿಕಾ ನಾಯಕರಿಬ್ಬರಲ್ಲೂ ಇಲ್ಲದೆ ಯಾರೊಬ್ಬರಲ್ಲಿ ಮಾತ್ರ ಅನುರಾಗ ವರ್ಣನೆಯೂ ನಾಯಿಕೆಗೆ ಅನೇಕ ನಾಯಕರಲ್ಲಿ ಮತ್ತು ಪ್ರತಿನಾಯಕನಲ್ಲಿ ಅನುರಾಗವರ್ಣನೆಯೂ ಅನುಚಿತವಾದುದರಿಂದ ಶೃಂಗಾರ ರಸಾಭಾಸ.

**ವೀರರಸ**ದಲ್ಲಿ ಅಧಮಪಾತ್ರದಿಂದ ಬ್ರಾಹ್ಮಣವಧ ವರ್ಣನೆ.

**ಕರುಣರಸ**ದಲ್ಲಿ ದೈವಿಕವಾದ ತೊಂದರೆಯಿಲ್ಲದ ವ್ಯಕ್ತಿಯಲ್ಲಿ ಶೋಕವರ್ಣನೆ.

**ಅದ್ಭುತರಸ**ದಲ್ಲಿ ಉದಾಸೀನವ್ಯಕ್ತಿಗತವಾದ ಆಶ್ಚರ್ಯ ವರ್ಣನೆ.

**ಹಾಸ್ಯರಸ**ದಲ್ಲಿ ಗುರುಹಿರಿಯರ ವಿಷಯದಲ್ಲಿ ಹಾಸ್ಯ ವರ್ಣನೆ.

**ಭಯಾನಕರಸ**ದಲ್ಲಿ ಉತ್ತಮಪಾತ್ರದಲ್ಲಿ ಭಯ ವರ್ಣನೆ.

**ಬೀಭತ್ಸರಸ**ದಲ್ಲಿ ತತ್ತ್ವಜ್ಞಾನಿವಿಷಯಕವಾದ ಜುಗುಪ್ಸಾವರ್ಣನೆ.

**ರೌದ್ರರಸ**ದಲ್ಲಿ ಗುರುಹಿರಿಯರ ವಿಷಯದಲ್ಲಿ ಕ್ರೋಧ ವರ್ಣನೆ.

**ಶಾಂತರಸ**ದಲ್ಲಿ ಹೀನಪಾತ್ರಗತವಾದ ಶಮವರ್ಣನೆ. ಇವೆಲ್ಲವೂ ಅನುಚಿತವಾದುದರಿಂದ ರಸಾಭಾಸವಾಗುವುದು. सा० द० ३-२६३-२६५।

**रसायन ರಸಾಯನ** (पुं०) 1. ಪಕ್ಷಿ, ಹಕ್ಕಿ. 2. ಪಕ್ಷಿರಾಜ, ಗರುಡ. (न०) 3. ಜರಾವ್ಯಾಧಿನಾಶಕವಾದ ಔಷಧ. रसाः रसरक्तादयः ईयन्ते अनेन—ईङ् (गतौ) "ल्युट्" (३-३-११७)। "षाड्गुण्यमुपयुञ्जीत शक्त्यपेक्षो रसायनम्" माघ० २-९३। "यज्जराव्याधिविध्वंसि वयसस्तम्भकं तथा। चक्षुष्यं बृंहणं वृष्यं भेषजं तद्रसायनम्"। "रसायनो विहङ्गमे। पक्षीन्द्रे, रसायनं तु जराव्याधिजिदौषधे" हेम०।

**रसायनफला ರಸಾಯನಫಲಾ** (स्त्री०) ಅಳಲೆ ಗಿಡ. रसायनमिव फलमस्याः। "रसायनफला पथ्या शक्रसृष्टा सुधोद्भवा" त्रिकाण्ड०।

**रसायनी ರಸಾಯನೀ** (स्त्री०) 1. ಅಮೃತಬಳ್ಳಿ. "विशल्यापि रसायनी" कल्पद्रु०। 2. ಕಾಚಿಗಿಡ, ಗಣಿಕೆ ಗಿಡ. "रसायनी काकमाची स्वादुपाका विराविणी" कल्पद्रु०। 3. ಕಬ್ಬು. "गोरक्षदुग्धा गोरक्षी ताम्रदुग्धा रसायनी" कल्पद्रु०।

**रसाल ರಸಾಲ** (पुं०) 1. ಮಾವಿನ ಮರ. रसमलति—अल (भूषणादौ) "अण्" (३-२-१)। "रसालवन्या मधुपानुविद्धं सौभाग्यमप्राप्तवसन्तयेव" नैष० ३-४६। 2. ಇಕ್ಷು, ಕಬ್ಬು. रसेन अलति—अल "अच्" (३-१-१३४)। "रसालश्चेक्षुचूतयोः" मेदि०। 3. ವ್ಯೋಷ (ಶುಂಠಿ ಹಿಪ್ಪಲಿ ಮತ್ತು ಮೆಣಸು) ಚತುರ್ಜಾತ (ಲವಂಗಪಟ್ಟೆ ದಾಲ್ಚಿನ್ನಿ) ಯಾಲಕ್ಕಿ ಜಾಪತ್ರೆ ಮತ್ತು ನಾಗಕೇಸರ (ನಾಗಸಂಪಿಗೆ) ಗುಡ ಆರ್ದ್ರಕ (ಹಸಿಶುಂಠಿ) ಮತ್ತು ಜೀರಿಗೆ ಇವನ್ನು ಬೆರಸಿದ ಹಸಿ ಮೊಸರು. "अपक्वतक्रं सव्योषचतुर्जातगुडार्द्रकम्। सजीरकं रसालः स्यात्" वैज०। 4. ಗೋಧಿ. "गोधूमः सुमनो यूपः क्षीरी निस्तुष इत्यपि। रसालश्च" कल्पद्रु०। (न०) 5. ಸಿಹ್ಲಕ, ಲೋಬಾನ, ತುರುಷ್ಕದೇಶದ ವಾಸನಾದ್ರವ್ಯ. 6. ಬಾಣಾತಿ ಬೋಳ. (स्त्री०) —ला—ಲಾ. 7. ಜಿಹ್ವೆ, ನಾಲಗೆ. 8. ಗರಿಕೆಹುಲ್ಲು. 9. ಬಿಳಿಯ ನೆಲಗುಂಬಳ. 10. ವ್ಯೋಷ ಚತುರ್ಜಾತ ಗುಡ ಆರ್ದ್ರಕ ಜೀರಿಗೆ ಇವುಗಳೊಡನೆ ಬೆರೆತ ಹಸಿ ಮೊಸರು. "रसाला रसनादूर्वाविदारीमार्जितासु च। रसालं सिह्लके बोले रसालश्चेक्षुचूतयोः" मेदि०।

**रसाली ರಸಾಲೀ** (स्त्री०) ಒಂದು ಜಾತಿಯ ಕಬ್ಬು, ರಸದಾಳಿ ಕಬ್ಬು.

**रसास्वाद ರಸಾಸ್ವಾದ** (पुं०) 1. ಮಧುರ ಮೊದಲಾದ ಭೋಜ್ಯರಸದ ಸವಿ ನೋಡುವುದು. रसस्य आस्वादः आस्वादनम्। 2. ಶೃಂಗಾರ ವೀರ ಮೊದಲಾದ ರಸಗಳ ಅನುಭವ. 3. ಬ್ರಹ್ಮಾನಂದಾನುಭವ. रसस्य मधुरादीनां शृङ्गारादीनां ब्रह्मानन्दस्य चास्वादः अनुभवः।

**रसास्वादिन् ರಸಾಸ್ವಾದಿನ್** (वि०) 1. ಮಧುರ (ಸಿಹಿ) ಮೊದಲಾದ ಭೋಜ್ಯರಸಗಳ ರುಚಿನೋಡುವವನು. 2. ಶೃಂಗಾರ ಮೊದಲಾದ ನಾಟ್ಯರಸಗಳನ್ನು ಅನುಭವಿಸುವವನು. 3. ಬ್ರಹ್ಮಾನಂದವನ್ನು ಅನುಭವಿಸುವವನು. रसमास्वदते — आ + स्वद (आस्वादने) "णिनिः" (३-१-१३४)। (पुं०) 4. ಭ್ರಮರ, ದುಂಬಿ. रसं पुष्परसमास्वदते — स्वद "णिनिः"। स्त्रियां "ङीप्" (४-१-५)। —आस्वादिनी — ಆಸ್ವಾದಿನೀ.

**रसिक ರಸಿಕ** (पुं०) 1. ಕಾಯಿಸಲ್ಪಡದ ಕಬ್ಬಿನ ರಸ. "पक्वैरिक्षुरसैस्त्री शीधुः पक्करसः शिवः। शीतपक्को रूक्षणीयोऽप्यपक्वैरसिकासवो" वैज०। 2. ಅಶ್ವ, ಕುದುರೆ. 3. ಗಜ, ಆನೆ. 4. ಸಾರಸಪಕ್ಷಿ, ತಾವರೆಹಕ್ಕಿ. (वि०) 5. ಸುಂದರವಾದ ವಸ್ತುವನ್ನು ಮೆಚ್ಚುವವನು, ಉತ್ತಮವಾದ ವಿಷಯದಲ್ಲಿ ಮೆಚ್ಚುಗೆಕೊಡುವವನು, ಗುಣಗ್ರಹಣಮಾಡುವವನು. "रसिकः प्रेक्षत नदीं रङ्गपर्यन्तनर्तकीम्" याद० २२-१६६। 6. ಮಧುರಾದಿ ಭೋಜ್ಯರಸದ ಸವಿಯನ್ನು ತಿಳಿದವನು. 7. ಶೃಂಗಾರಾದಿ ರಸಾನುಭವವುಳ್ಳವನು. रसोऽस्यास्ति — रस "ठन्" (५-२-११५)। 8. ಪ್ರೀತಿಯುಳ್ಳವನು. "तत्संपर्कं प्राप्य पुरा मोहनलीलां कामेकान्ते सा रसिका का कुरुते न" माघ० ६-७६। "पिबत भागवतं रसमालयं मुहुरहो रसिका भुवि मानवाः" भाग० १-१-३। 9. ಕಾವ್ಯರಸಾಭಿಜ್ಞ.

**रसिका ರಸಿಕಾ** (स्त्री०) 1. ಡಾಬು, ಹೆಂಗಸರ ನಡುಕಟ್ಟು. 2. ಜಿಹ್ವೆ, ನಾಲಗೆ. 3. ದ್ರಾಕ್ಷಿಬಳ್ಳಿ. 4. ಕಬ್ಬಿನ ರಸ.

**रसित ರಸಿತ** (न०) 1. ಮೇಘದ ಶಬ್ದ, ಗುಡುಗು. रस (शब्दे) भावे "क्तः" (३-३-११४)। "उरगेन्द्रमूर्धरुहरत्नसंनिधेर्मुहुरुन्नतस्य रसितैः पयोमुचः" माघ० १३-५८। 2. ಶಬ್ದ, ಸದ್ದು, ಧ್ವನಿ. "पर्यन्तभूधरनिकुञ्जविजृम्भणेन हेरम्बकण्ठरसितप्रतिमानमेति" मालती० ९-३। 3. ತಿರ್ಯಕ್‌ಪ್ರಾಣಿಗಳ ಶಬ್ದ, ಪಶು ಪಕ್ಷಿ ಮೊದಲಾದುವುಗಳ ಕೂಗು. (वि०) 4. ಸ್ವರ್ಣಖಚಿತವಾದ, ಚಿನ್ನದಿಂದ ಮೆರಗು ಕೊಡಲ್ಪಟ್ಟ. "रसितं स्वर्णादिलिप्ते रुतस्तनितयोरपि" हेम०। 5. ಶಬ್ದ ಮಾಡುವ. रस कर्त० "क्तः" (३-४-७२)। 6. ರೋದನಮಾಡುವ.

**रसितृ ರಸಿತೃ** (वि०) 1. ಕೂಗುವ, ಶಬ್ದಮಾಡುವ. रस (शब्दे) "तृच्" (३-१-१३३)। 2. ರೋದನ ಮಾಡುವ, ಅಳುವ. "आश्लिष्टभूमिं रसितारमुच्चैः लोलद्भुजाकारबृहत्तरङ्गम्" माघ० ३-७२।

**रसिन् ರಸಿನ್** (वि०) 1. ರಸವುಳ್ಳ, ರಸದಿಂದಕೂಡಿದ. 2. ರಸಾನುಭವವುಳ್ಳವನು. 3. ರಸಾಭಿಜ್ಞನಾದ. रसोऽस्यास्ति "इनिः" (५-२-११५)।

**रसेन्द्र ರಸೇಂದ್ರ** (पुं०) ಪಾರದ, ಪಾದರಸ. रसानामिन्द्रः। "असाध्यो यो भवेद्रोगो यस्य नास्ति चिकित्सतम्। रसेन्द्रो हन्ति तं रोगं नरकुञ्जरवाजिनाम्" भावप्र०।

**रसोत्तम ರಸೋತ್ತಮ** (पुं०) 1. ಉತ್ತಮವಾದ ರಸ. रसेषु उत्तमः। 2. ಮುದ್ಗ, ಹೆಸರು. रसः उत्तमो यस्य।

**रसोद्भव ರಸೋದ್ಭವ** (न०) 1. ಸಿಂದೂರ. रसात् पारदादुद्भवति — उद् + भू "अप्" (३-३-५७)। 2. ಮುತ್ತು. (वि०) 3. ಪಾದರಸದಿಂದ ಉಂಟಾದ.

**रसोन ರಸೋನ** (पुं०) ಬೆಳ್ಳುಳ್ಳಿ. रसे आस्वादने ऊन्यते पातकहेतुत्वात्—ऊन (परिहाणे) "घञ्" (३-३-१९)। स्वार्थे "कन्" (५-३-७५)। रसोनकः ರಸೋನಕಃ.

**रसोपल ರಸೋಪಲ** (न०) ಮುತ್ತು, ಮೌಕ್ತಿಕ. रसवत् उपलम्। "अथ मौक्तिकम्। रसोपलं शुक्तिबीजम्" त्रिकाण्ड०।

**रस्य ರಸ್ಯ** (न०) 1. ರಕ್ತ. रसात् भुक्तान्नरसात् आगतम्। (वि०) 2. ರಸವತ್ತಾದ, ರಸಭರಿತವಾದ. रस्यन्ते—रस (आस्वादने) "यत्" (३-१-९७)। "रस्याः स्निग्धाः स्थिरा हृद्या आहाराः सात्त्विकप्रियाः" गीता १७-८।

**रस्या ರಸ್ಯಾ** (स्त्री०) ಸಣ್ಣರಾಶ್ಮೆ. रसाय हिता। "रास्ना युक्तरसा रस्या सुवहा रसना रसा" भावप्र०।

**रहण ರಹಣ** (न०) ಬಿಡುವುದು, ತ್ಯಜಿಸುವುದು. रह (त्यागे) "ल्युट्" (३-३-११५)।

**रहस् ರಹಸ್** (न०) 1. ನಿರ್ಜನಪ್ರದೇಶ, ಏಕಾಂತ ಸ್ಥಳ. रह (त्यागे) "असुन्" (उ० ४-१८९)। "यद्यदेव रुरुचे रुचिरेभ्यः सुभ्रुवो रहसि तत्तदकुर्वन्" माघ० १०-७१। 2. ಸುರತ, ಸಂಭೋಗ. 3. ತತ್ತ್ವ, ನಿಜ, ಸತ್ಯ. 4. ಗೋಪ್ಯ, ಗುಟ್ಟು, ರಹಸ್ಯ. "रहस्तत्त्वे रते गुह्ये" मेदि०। (अव्य०) 5. ರಹಸ್ಯವಾಗಿ, ಗುಟ್ಟಾಗಿ. "तेन सहेह बिभर्ति रहः स्त्री सा रतरागमनायतमानम्" माघ० ४-४५। "विविक्तविजनच्छन्ननिःशलाकास्तथा रहः। रहश्चोपांशु चालिङ्गे" अम०।

**रहस्य ರಹಸ್ಯ** (न०) 1. ಗುಟ್ಟು. रहसि भवम् "यत्" (४-३-५४)। "रहस्यं साधूनामनुपधि विशुद्धं विजयते" उ० रा० २-२। 2. ಗೂಢವಾದ ವಿಷಯ, ಅರ್ಹರಲ್ಲದವರಿಗೆ ಉಪದೇಶಿಸಬಾರದಾದ ವಿಷಯ. "भक्तोऽसि मे सखा चेति रहस्यं ह्येतदुत्तमम्" गीता ४-३। (वि०) 3. ರಹಸ್ಯವಾದ, ಗುಟ್ಟಾದ, ಗೋಪ್ಯವಾದ. "गूढसूचितरहस्यसाहसः सुभ्रुवां प्रववृते परिहासः" माघ० १०-१२। (अव्य०) 4. ಗುಟ್ಟಾಗಿ, ಯಾರಿಗೂ ತಿಳಿಯದಂತೆ. "अनभिख्यातदोषस्तु रहस्यं व्रतमाचरेत्" याज्ञ० ३-३००। (स्त्री०) —स्या —ಸ್ಯಾ. 5. ಒಂದು ನದಿ. "रहस्या स्त्री नदीभेदे गोपनीयेऽभिधेयवत्" मेदि०।

**रहस्यभेद ರಹಸ್ಯಭೇದ** (पुं०) ಗುಟ್ಟಾದ ವಿಷಯವನ್ನು ಹೊರಗೆಡಹುವುದು, ಗುಟ್ಟನ್ನು ಪ್ರಕಾಶಪಡಿಸುವುದು. रहस्यस्य भेदः।

**रहित ರಹಿತ** (वि०) 1. ಬೇರೆಮಾಡಲ್ಪಟ್ಟ, ಪ್ರತ್ಯೇಕಿಸಲ್ಪಟ್ಟ. 2. ತ್ಯಜಿಸಲ್ಪಟ್ಟ, ಬಿಡಲ್ಪಟ್ಟ. रह (त्यागे) "क्त" (३-२-१०२)। "गुणलवरहितं मां गोप्तुकामा दये त्वम्" दयाश०। "रहितं कलाभिरखिलाभिः" माघ० १५-३।

**रा ರಾ** (ರೈ) (स्त्री०) 1. ಧನ, ಐಶ್ವರ್ಯ, ಸಂಪತ್ತು. रा (दाने) "डैः" (उ० २-६७)। राः रायौ रायः। "आत्मानमनु ये चेह ये रायः पशवो गृहाः। विसृज्य सर्वानन्यांश्च मामेवं विश्वतोमुखम्" भाग० ३-२५-३९। 2. ಸ್ವರ್ಣ, ಚಿನ್ನ. 3. ಮೋಕ್ಷ, ಮೋಡ. "रास्तु सुवर्णे जलदे धने" हेम०। 4. ಶಾಲೆ, ಮನೆ. 5. ಪ್ರಾರ್ಥನೆ, ಕೋರಿಕೆ. 6. ಗತಿ, ಗಮನ, ನಡಗೆ. रा (दाने) "क्विप्" (वा० ३-३-९४)। "रा स्त्रियां हेम्नि शालायामाशंसायां गतावपि" नानार्थर०।

**राक ರಾಕ** (पुं०) 1. ರವಿ, ಸೂರ್ಯ. रा (दाने) "कः" (उ० ३-४०)। "रागोऽनुरागे लाक्षादौ त्विषि राकस्तु पूष्णि च" वैज०। (स्त्री०) —का —ಕಾ. 2. ಪೂರ್ಣಿಮೆ, ಸಂಪೂರ್ಣಚಂದ್ರನುಳ್ಳ ತಿಥಿ. राति शुभम्—रा (दाने) "कः" (उ० ३-४०)। "पूर्णे राका निशाकरे" अम०। 3. ಯೌವನಾವಸ್ಥೆಯನ್ನು ಹೊಂದಿದ ಹೆಂಗಸು, ಯುವತಿ, ಪ್ರಾಯದ ಹುಡುಗಿ. "प्राप्तर्तुदिक्करी राका युवतिस्तत्लुनी चरी" वैज०। 4. ಒಂದು ನದಿ. 5. ನವೆ, ತುರಿ. "राका नद्यन्तरे कच्छ्वां नवजातरजःस्त्रियाम्। संपूर्णेन्दुतिथौ" मेदि०। 6. ಖರ ಮತ್ತು ಶೂರ್ಪಣಖಿಯರ ತಾಯಿ.

**राक्षस ರಾಕ್ಷಸ** (पुं०) 1. ರಾಕ್ಷಸ, ದೇವತೆಗಳ ಶತ್ರು. रक्ष एव—स्वार्थे "अण्" (५-४-३८)। "राक्षसानां मयि गते रामः प्रणिहनिष्यति" भट्टि० ८-१२१। स्त्रियां जाति० "ङीष्" (४-१-६३)। —सी —ಸೀ. ರಾಕ್ಷಸ ಹೆಂಗಸು. "तवोपशायिका यावद्राक्षस्यश्चेतयन्ति न" भट्टि० ८-१२३। 2. ಎಂಟು ವಿಧ ವಿವಾಹಗಳಲ್ಲೊಂದು ವಿಧ. "ब्राह्मो दैवस्तथैवार्षः प्राजापत्यस्तथासुरः। गान्धर्वो राक्षसश्चैव पैशाचश्चाष्टमोऽधमः" मनु० ३-२१। ಕನ್ಯೆಯ ಬಂಧುಗಳನ್ನು ಹೊಡೆದು ಬಡಿದು, ಗಟ್ಟಿಯಾಗಿ ಅಳುತ್ತಿರುವ ಕನ್ಯೆಯನ್ನು ಮನೆಯಿಂದ ಎಳೆದುಕೊಂಡು ಹೋಗಿ ಮಾಡಿಕೊಳ್ಳುವ ವಿವಾಹವು ರಾಕ್ಷಸವಿವಾಹ. "हत्वा छित्वा च भित्त्वा च क्रोशन्तीं रुदतीं गृहात्। प्रसह्य कन्याहरणं राक्षसो विधिरुच्यते" मनु० ३-३३। 3. ನಂದರಾಜನ ಮಂತ್ರಿ, ಅಮಾತ್ಯ ರಾಕ್ಷಸ. (वि०) 4. ರಾಕ್ಷಸ ಸಂಬಂಧವಾದ. स्त्रियां "ङीप्" (४-१-१५)। —सी —ಸೀ. "राक्षसीमकृत रक्षितप्रजस्तेजसाधिकविभीषणां पुरीम्" माघ० १४-८१। 5. ರಾಕ್ಷಸ ಕೃತ್ಯಕ್ಕೆ ಸಮಾನವಾದ, ಕ್ರೂರವಾದ. "मुनयो राक्षसीमाहुः वाचमुन्मत्तदृप्तयोः" उ० रा० ५-३०। (स्त्री०) —सी —ಸೀ. 6. ಕರಿಯ ಕಟೋರ. "अथ राक्षसी। चण्डा धनहरी क्षेमदुष्पत्रगणहासकाः" अम०। 7. ಕೋರೆ ಹಲ್ಲು. 8. ಸಂಧ್ಯಾಕಾಲ, ಸಾಯಂಕಾಲ. "साया ह्यस्त्रिमुहूर्तः स्यात् श्राद्धं तत्र न कारयेत्। राक्षसी नाम सा वेला गर्हिता सर्वकर्मसु"।

**राक्षसेन्द्र ರಾಕ್ಷಸೇಂದ್ರ** (पुं०) ರಾಕ್ಷಸರಾಜನಾದ ರಾವಣ. राक्षसानामिन्द्रः।

**राक्षा ರಾಕ್ಷಾ** (स्त्री०) ಯಾವಕ, ಅಲಕ್ತ, ಅರಗು. रक्ष्यतेऽनया—रक्ष (पालने) "अः" (३-३-१०३)।

**राग ರಾಗ** (पुं०) 1. ಪ್ರೀತಿ, ವಿಶ್ವಾಸ. रञ्ज (रागे) "घञ्" (३-३-१८)। "रागं दर्शयते सैषा वयस्याः सूनृतामृतैः। मम त्वमिति वक्तुं मां मौनिनी मानिनी पुनः" नैष० २०-३३। 2. ಪ್ರೇಮ, ಅನುರಾಗ. "रागकान्तनयनेषु नितान्तं विद्रुमारुणकपोलतलेषु" किरा० ९-६३। 3. ಕೆಂಪುಬಣ್ಣ. "अभ्युन्नताङ्गुष्ठनखप्रभाभिर्निक्षेपणाद्रागमिवोद्गिरन्तौ" कुमा० १-३३। 4. ಅಂಗರಾಗ, ಅನುಲೇಪನ, ಚಂದನ ಮೊದಲಾದುದು. "यो बाह्यः स खलु जलैर्निरासि रागो यश्चित्ते स तु

तदवस्थ एव तेषाम्" माघ० ८-५८। 5. ಬಣ್ಣ, ವರ್ಣ. "विसृष्टरागादधरान्निवर्तितः स्तनाङ्गरागारुणिताच्च कन्दुकात्" कुमा० ५-११। 6. ಸಂಗೀತದ ಕ್ರಮಬದ್ಧವಾದ ಸ್ವರ, ತಾಳಬದ್ಧವಾದ ಸ್ವರ; ವಸಂತ, ಲಲಿತ ಶಂಕರಾಭರಣ ತೋಡಿ ಭೈರವಿ ಮೊದಲಾದ ರಾಗಗಳು. ಮೂರು ಲೋಕ ನಿವಾಸಿಗಳಿಗೂ ಹೃದಯರಂಜಕವಾಗುವ ಸ್ವರವಿಶೇಷವೇ ರಾಗ. "यैस्तु चेतांसि रज्यन्ते जगत्त्रितयवर्तिनाम्। ते रागा इति कथ्यन्ते मुनिभिर्भरतादिभिः"। "तवास्मि गीतरागेण हारिणा प्रसभं हृतः" शाकु० १-५। 7. ಶೃಂಗಾರಾದಿ ರಸಾನುಗುಣವಾದ ರಾಗ. ಇದು (1) ಪುಂರಾಗ (2) ಸ್ತ್ರೀರಾಗ ಮತ್ತು (3) ನಪುಂಸಕರಾಗಗಳೆಂದು ಮೂರು ವಿಧ. ವೀರ ಅದ್ಭುತ ಮತ್ತು ರೌದ್ರ—ಪುಂರಾಗ. ಶೃಂಗಾರ ಹಾಸ್ಯ ಮತ್ತು ಕರುಣ—ಸ್ತ್ರೀರಾಗ. ಭಯಾನಕ ಬೀಭತ್ಸ ಮತ್ತು ಶಾಂತ—ನಪುಂಸಕರಾಗ. "रौद्रेऽद्भुते तथा वीरे पुंरागेण प्रगीयते। श्रृङ्गारहास्यकरुणाः स्त्रीरागेण प्रकीर्तिताः। भयानके च बीभत्से शान्ते गेयो नपुंसके"। "तौ सन्धिषु व्यञ्जितवृत्तिभेदं रसान्तरेषु प्रतिबद्धरागम्" कुमा० ७-९१। 8. ಸಂಗೀತದ ಮೂಲಭೂತವಾದ ರಾಗಗಳು. (1) ಭೈರವ (2) ಕೌಶಿಕ (3) ಹಿಂದೋಳ (4) ದೀಪಕ (5) ಶ್ರೀರಾಗ ಮತ್ತು (6) ಮೇಘರಾಗಗಳೆಂದು ರಾಗಗಳು ಆರು ವಿಧ. 9. ಮಾತ್ಸರ್ಯ, ಅಸೂಯೆ, ಹೊಟ್ಟೆಕಿಚ್ಚು. 10. ಇಷ್ಟವಾದ ವಿಷಯದಲ್ಲಿ ತೋರುವ ಅಪೇಕ್ಷೆ. ಇದು ಯೋಗಶಾಸ್ತ್ರೋಕ್ತವಾದ ಪಂಚಕ್ಲೇಶಗಳಲ್ಲೊಂದು. अविद्या अस्मिता रागः द्वेषः ಮತ್ತು अभिनिवेशः ಇವು ಪಂಚಕ್ಲೇಶಗಳು. अभिमतविषयाभिलाषः क्लेशः। 11. ರಾಜ, ದೊರೆ. 12. ಕಾಂತಿ, ಪ್ರಭೆ. "रागोऽनुरागे लाक्षादौ त्विषि राकस्तु पूष्णि च" वैज०। "रागस्तु मात्सर्ये लोहितादिषु। क्लेशादावनुरागे च गान्धारादौ नृपेऽपि च" मेदि०। 13. ಚಂದ್ರ. 14. ಸೂರ್ಯ.

**रागचूर्ण ರಾಗಚೂರ್ಣ** (पुं०) 1. ಮದನ, ಮನ್ಮಥ. रागस्य चूर्ण इव। 2. ಖದಿರವೃಕ್ಷ, ಕಗ್ಗಲಿ ಮರ. "रागचूर्णस्तु खदिरे मकरध्वजे" हेम०। 3. ಅರಗು, ಯಾವಕ. 4. ಕೆಂಪುಬಣ್ಣದ ಪುಡಿ.

**रागदालि ರಾಗದಾಲಿ** (पुं०) ಕಾಡುಕಡಲೆ.

**रागपुष्प ರಾಗಪುಷ್ಪ** (पुं०) 1. ದಾಸಿವಾಳದ ಗಿಡ. 2. ಕೆಂಪು ಗೋರಂಟಿ ಗಿಡ. रागयुक्तं पुष्पमस्य।

**रागबन्ध ರಾಗಬಂಧ** (पुं०) ರಂಜನೆಯೊಗುವಂತೆ ರಾಗಗಳ ನಿರೂಪಣೆ. रागाणां बन्धः रञ्जनत्वयोगः। "भावो भावं नुदति विषयाद्रागबन्धः स एव" माल० २-८।

**रागरज्जु ರಾಗರಜ್ಜು** (पुं०) ಮನ್ಮಥ. रागो रज्जुरिव यस्य।

**रागलता ರಾಗಲತಾ** (स्त्री०) ಮನ್ಮಥನ ಪತ್ನಿ, ರತಿ.

**रागवत् ರಾಗವತ್** (वि०) 1. ಪ್ರೇಮವುಳ್ಳ, ಪ್ರೀತಿಯುಳ್ಳ, ಅನುರಾಗವುಳ್ಳ. रागोऽस्यास्ति "मतुप्" (५-२-९४)। "मनसि रागवतामनुरागिता नवनवा वनवायुभिरादधे" माघ० ६-३२। 2. ರಕ್ತವರ್ಣದ, ಕೆಂಪು ಬಣ್ಣದಿಂದ ಕೂಡಿದ. "शशधरमहरादौ रागवानुष्णरश्मिः" माघ० ११-६२।

**रागसूत्र ರಾಗಸೂತ್ರ** (न०) 1. ರಕ್ತಸೂತ್ರ, ಕೆಂಪುದಾರ. 2. ಬಣ್ಣದ ದಾರ. 3. ರೇಷ್ಮೆ ದಾರ. 4. ತಕ್ಕಡಿಯ ದಾರ. "रागसूत्रं पट्टसूत्रे तुलासूत्रे नपुंसकम्" मेदि०।

**रागाढ्या ರಾಗಾಢ್ಯಾ** (स्त्री०) ಮಂಜಿಷ್ಠೆ.

**रागाशनि ರಾಗಾಶನಿ** (पुं०) ಬುದ್ಧದೇವ. रागस्य विषयस्य अशनिरिव।

**रागिन् ರಾಗಿನ್** (वि०) 1. ಕಾಮುಕ. रागोऽनुरागोऽस्यास्ति "इनिः" (५-२-११५)। "अनिमिषमविरामा रागिणां सर्वरात्रं नवनिधुवनलीलाः कौतुकेनातिवीक्ष्य" माघ० ११-१८। 2. ಬಣ್ಣ ಹಾಕುವವನು. 3. ಪ್ರೇಮವುಳ್ಳವನು, ಅನುರಾಗವುಳ್ಳವನು. "रागी कामिनि रञ्जके" हेम०। 4. ಪ್ರೀತಿಯುಳ್ಳವನು, ವಿಶ್ವಾಸವುಳ್ಳವನು. "स्याद्रक्तः कामी च रागिणौ" त्रिकाण्ड०। स्त्रियां "ङीप्" (४-१-५)। —णी —ಣೀ. ಕಾಮುಕಿ, ಹೆಚ್ಚು ಕಾಮವಿಕಾರವುಳ್ಳ ಹೆಂಗಸು.

**रागिणी ರಾಗಿಣೀ** (स्त्री०) 1. ಮೇನಕೆಯ ಹಿರಿಯ ಮಗಳು. "रागिणी नाम संजाता ज्येष्ठा मेनासुता मुने"। 2. ಲಕ್ಷ್ಮಿ.

**राघव ರಾಘವ** (पुं०) 1. ಶ್ರೀರಾಮ. 2. ರಘುವಂಶದಲ್ಲಿ ಹುಟ್ಟಿದ ದೊರೆ. रघोर्गोत्रापत्यं पुमान् "अण्" (४-१-९२)। "देवसूतभुजालम्बी जैत्रमध्यास्त राघवः" रघु० १२-८५। 3. ಸಮುದ್ರದ ದೊಡ್ಡ ಜಾತಿಯ ಮೀನು. "तिमिङ्गिलगिलोऽप्यस्ति तद्गिलोऽप्यस्ति राघवः"। "राघवोऽब्धेर्महामीनभेदे च रघुवंशजे" मेदि०।

**राङ्कव ರಾಂಕವ** (ನಂ) 1. ಶಾಲು, ರಂಕುವೆಂಬ ಮೃಗದ ರೋಮದಿಂದ ತಯಾರಿಸಲ್ಪಟ್ಟ ವಸ್ತ್ರ. रङ्कोर्विकार: "अण्" (४-३-१३७)। 2. ಕಂಬಳಿ. "राङ्कवं मृगरोमजम्" अम०। (ವಿಂ) 3. ರಂಕುಮೃಗ ಸಂಬಂಧವಾದ.

**राज् ರಾಜ್** (ಪುಂ) ರಾಜ, ದೊರೆ. राजृ (दीप्तौ) "क्विप्" (३-२-६१)। "समिताविति विक्रमानमृष्यन् गतभीराह्वत चेदिराण्मुरारिम्" माघ० २०-१।

**राजक ರಾಜಕ** (ನಂ) 1. ರಾಜರ ಸಮೂಹ. राज्ञां समूह: "वुञ्" (४-२-३९)। "मखविघ्नाय सकलमित्थमुत्थाप्य राजकम्" माघ० २-१०२। (ಪುಂ) 2. ರಾಜ, ದೊರೆ. "तवाङ्गं तिलशः कृत्वा श्वभ्यो दास्यामि राजक" हरिवं०।

**राजकीय ರಾಜಕೀಯ** (ವಿಂ) ರಾಜನ ಸಂಬಂಧವಾದ, ಸರ್ಕಾರದ ಸಂಬಂಧವಾದ. राजन् "छ:" ककारश्चान्तादेश: (४-२-१४०)।

**राजकुल ರಾಜಕುಲ** (ನಂ) 1. ರಾಜನ ವಂಶ, ರಾಜನ ಸಂತತಿ. 2. ರಾಜನ ವಾಸಗೃಹ, ಅರಮನೆ. राज्ञ: कुलम्। "यदुनन्दनेन तदुदन्वत: पय: शशिनेव राजकुलमाप नन्दथुम्" माघ० १३-६५।

**राजखर्जूरी ರಾಜಖರ್ಜೂರೀ** (ಸ್ತ್ರೀಂ) ಪಿಂಡಖರ್ಜೂರ. राजप्रिया खर्जूरी।

**राजगामिन् ರಾಜಗಾಮಿನ್** (ವಿಂ) ರಾಜನನ್ನು ಸೇರುವ. ರಾಜನ ಸಂಬಂಧವಾದ. राजानं गच्छति —गम्लृ (गतौ) "णिनि:" (३-१-१३४)। "अनृतं च समुत्कर्षे राजगामि च पैशुनम्। गुरोश्चालीकनिर्बन्ध: समानि ब्रह्महत्यया" मनु० ११-५५। ಪುತ್ರಸಂತಾನವಿಲ್ಲದವನ ಧನವು ಪತ್ನಿಗೆ ಸೇರುವುದು. ಪತ್ನಿಯಿಲ್ಲದಿದ್ದರೆ ತಾಯಿಗೆ. ತಾಯಿಯಿಲ್ಲದಿದ್ದರೆ ಸಹೋದರರು ಭಾಗಿಗಳು. ಅವರೂ ಇಲ್ಲದಿದ್ದರೆ ಅವರ ಪುತ್ರರು. ಅವರೂ ಇಲ್ಲದಿದ್ದರೆ ಆತನ ವಂಶದವರು. ಅವನ ಕುಲದವರು ಯಾರೂ ಇಲ್ಲದಾಗ ಬಂಧುಗಳು. ಬಂಧುಗಳು ಇಲ್ಲದಾಗ ಶಿಷ್ಯರು ಭಾಗಿಗಳು. ಶಿಷ್ಯರೂ ಇಲ್ಲದಿದ್ದರೆ ಸಹಾಧ್ಯಾಯಿಗೆ ಸೇರುವುದು. ಸಹಾಧ್ಯಾಯಿಯೂ ಇಲ್ಲದಿದ್ದರೆ ರಾಜನಿಗೆ ಸೇರುವುದು. (ರಾಜಗಾಮಿಯಾಗುವುದು).

**राजग्रीव ರಾಜಗ್ರೀವ** (ಪುಂ) ಒಂದು ಜಾತಿಯ ಮತ್ಸ್ಯ.

**राजघ ರಾಜಘ** (ವಿಂ) ರಾಜನನ್ನು ವಧಿಸುವವನು. राजानं हन्ति —हन (हिंसागत्यो:) "टक्" (वा० ३-२-५५)। "प्रदक्षिणीकृत्य जयाय सृष्टया रराज नीराजनया स राजघ:" नैष० १-१०।

**राजजम्बू ರಾಜಜಂಬೂ** (ಸ್ತ್ರೀಂ) 1. ಪಿಂಡಖರ್ಜೂರ. जम्बूनां राजा —परनिपात: (२-२-३१)। 2. ಜಂಬುನೇರಳೆ.

**राजत् ರಾಜತ್** (ವಿಂ) ಪ್ರಕಾಶಿಸುತ್ತಿರುವ, ಹೊಳೆಯುತ್ತಿರುವ. राजृ (दीप्तौ) "शतृ" (३-२-१२४)। "राजद्भि: पथि मरुतामभिन्नरूपैरुल्कार्चि:स्फुटगतिभिर्ध्वजांशुकानाम्" किरा० ७-६।

**राजत ರಾಜತ** (ವಿಂ) 1. ಬೆಳ್ಳಿಯ ಸಂಬಂಧವಾದ, ಬೆಳ್ಳಿಯಿಂದ ನಿರ್ಮಿತವಾದ. रजतस्य विकार: "अञ्" (४-३-१५४)। 2. ರಜತಮಯವಾದ. "सुराधिपाधिष्ठितहस्तिमल्ललीलां दधौ राजतगण्डशैल:" माघ० ४-१३। (ನಂ) 3. ಬೆಳ್ಳಿ.

**राजतरु ರಾಜತರು** (ಪುಂ) 1. ಕಕ್ಕೆಗಿಡ. 2. ಬೆಟ್ಟಗಣಗಿಲೆ. तरूणां राजा। परनिपात: (२-२-३१)।

**राजता ರಾಜತಾ** (ಸ್ತ್ರೀಂ) ರಾಜನ ಭಾವ, ರಾಜತ್ವ, ರಾಜನಾಗಿರುವಿಕೆ. राज्ञो भाव: "तल्" (५-१-११९)। "त्व:"। **राजत्वम् ರಾಜತ್ವಮ್.**

**राजताल ರಾಜತಾಲ** (ಪುಂ) ಅಡಕೆಮರ.

**राजदण्ड ರಾಜದಂಡ** (ಪುಂ) ರಾಜನು ವಿಧಿಸುವ ಶಿಕ್ಷೆ. राज्ञो दण्ड:।

**राजदन्त ರಾಜದನ್ತ** (ಪುಂ) ಮೇಲುಸಾಲಿನ ಮಧ್ಯದ ಎರಡು ಹಲ್ಲುಗಳು. दन्तानां राजा। परनिपात:। (२-२-३१)।

**राजधर्म ರಾಜಧರ್ಮ** (ಪುಂ) ರಾಜನ ಕರ್ತವ್ಯವಾದ ಪ್ರಜಾಪರಿಪಾಲನೆ. राज्ञो धर्म:। ಅರಾಜಕವಾದ ಲೋಕದಲ್ಲಿ ದುಷ್ಟರಿಂದ ಪೀಡಿತರಾದ ಪ್ರಜೆಗಳನ್ನು ರಕ್ಷಿಸಲು ಪರಮಾತ್ಮನು ರಾಜನನ್ನು ಸೃಷ್ಟಿಸಿದನು. "अराजके हि लोकेऽस्मिन् सर्वतो विद्रुते भयात्। रक्षार्थमस्य सर्वस्य राजानमसृजत्प्रभु:" मनु० ७-३। ರಾಜನು ಸದಾ ಉದ್ಯಮಶೀಲನಾಗಿರಬೇಕು. ಹಾಗಿಲ್ಲದಿದ್ದರೆ ಯಾರೂ ಅವನಲ್ಲಿ ವಿಶ್ವಾಸವಿಡುವುದಿಲ್ಲ. "नित्योद्युक्तेन वै राज्ञा भवितव्यं युधिष्ठिर। प्रशस्यते न राजा हि नारीवोद्यमवर्जित:" भा० शान्ति० ५६-१। ಗರ್ವದಿಂದ ಕರ್ತವ್ಯಾಕರ್ತವ್ಯಗಳನ್ನು ತಿಳಿಯದೆ ಉನ್ಮಾರ್ಗಪ್ರವೃತ್ತನಾದವನು ಆಚಾರ್ಯನಾಗಿದ್ದರೂ ಅವನನ್ನು ರಾಜನು ಪರಿತ್ಯಜಿಸಬೇಕು. "गुरोरप्यवलिप्तस्य कार्याकार्यमजानत:। उत्पथ

प्रतिपन्नस्य परित्यागो विधीयते " भा० शान्ति० ५६-७। ರಾಜನಿಗೆ ಪ್ರಜೆಗಳ ವಿಶ್ವಾಸಗಳಿಸುವುದೇ ಶಾಶ್ವತವಾದ ಧರ್ಮ. ಸತ್ಯ ಪರಿಪಾಲನೆ ವ್ಯವಹಾರಗಳಲ್ಲಿ ಋಜುವಾದ ಮಾರ್ಗ ಇವೂ ರಾಜನಿಗೆ ಮುಖ್ಯವಾದ ಧರ್ಮ. "लोकरञ्जनमेवात्र राज्ञां धर्मः सनातनः। सत्यस्य रक्षणं चैव व्यवहारस्य चार्जवम्" भा० शान्ति० ५६-११। ರಾಜನು ಚಾತುರ್ವರ್ಣ್ಯದ ಧರ್ಮಗಳನ್ನು ರಕ್ಷಿಸುತ್ತ ಧರ್ಮಗಳ ಸಾಂಕರ್ಯವುಂಟಾಗದಂತೆ ನೋಡಿಕೊಳ್ಳುವುದೂ ಅವನಿಗೆ ಮುಖ್ಯವಾದ ಸನಾತನಧರ್ಮ. "चातुर्वर्ण्यस्य धर्माश्च रक्षितव्या महीक्षिता। धर्मसंकररक्षा च राज्ञां धर्मः सनातनः" भा० शान्ति० ५६-१५। ಯಾವ ಸಮಯದಲ್ಲೂ ಸಜ್ಜನರಿಂದ ದ್ರವ್ಯವನ್ನು ಸ್ವೀಕರಿಸಕೂಡದು. ದುರ್ಜನರಿಂದ ಸ್ವೀಕರಿಸಿ ಅದನ್ನು ಸತ್ಪುರುಷರಿಗೆ ದಾನಮಾಡಬೇಕು. "न चाददीत वित्तानि सतां हस्तात्कदाचन। असद्भ्यश्च समादाय सद्भ्यस्तु प्रतिपादयेत्" भा० शान्ति० ५६-२१। ರಾಜನು ತನಗೆ ರಾಜ್ಯಭಾರನಿರ್ವಾಹಕಾರ್ಯದಲ್ಲಿ ಸಹಾಯಕರಾಗಿರುವವರಿಗೆ ಧನಕನಕಾದಿಗಳಿಂದ ತೃಪ್ತಿಯುಂಟುಮಾಡಿ ಭೋಗದಲ್ಲಿಯೂ ಇಬ್ಬರೂ ಸಮಾನರಾಗಿರಬೇಕು. ಆದರೆ ಛತ್ರ ಚಾಮರಾದಿ ಗೌರವ ಮತ್ತು ರಾಜಾಜ್ಞೆ ಈ ವಿಷಯಗಳಲ್ಲಿ ಮಾತ್ರ ರಾಜನು ಪ್ರಭುವಾಗಿರಬೇಕು. "सहायान् सततं कुर्याद्राजा भूतिपरिष्कृतान्। तैश्च तुल्यो भवेद्भोगैश्छत्रमात्राज्ञयाऽधिकः" भा० शान्ति० ५६-२५। ತಂದೆಯ ಮನೆಯಲ್ಲಿ ಪುತ್ರರು ಸೌಖ್ಯನೆಮ್ಮದಿಗಳಿಂದ ವಾಸಿಸುವಂತೆ ಯಾವನ ರಾಜ್ಯದಲ್ಲಿ ಪ್ರಜೆಗಳು ಸೌಖ್ಯ ಸಂಪತ್ತುಗಳಿಂದ ಕೂಡಿ ಭಯವಿಲ್ಲದೆ ಸಂಚರಿಸುವರೋ ಅಂತಹ ರಾಜನೇ ರಾಜಪುಂಗವನೆನಿಸಿಕೊಳ್ಳುತ್ತಾನೆ. "पुत्रा इव पितुर्गेहे विषये यस्य मानवाः। निर्भया विचरिष्यन्ति स राजा राजसत्तमः" भा० शान्ति० ५६-३३। ಯಾವ ರಾಜನ ದೇಶದಲ್ಲಿ ಪುರಜನರೆಲ್ಲರೂ ತಮ್ಮ ಸಂಪತ್ತನ್ನು ನಿಗೂಢವಾಗಿಡದೆ ಪ್ರಾಮಾಣಿಕರಾಗಿರುವರೋ ಮತ್ತು ನೀತಿ ಅನೀತಿಗಳನ್ನು ಅರಿತಿರುವರೋ ಅಂತಹವನೇ ರಾಜಶ್ರೇಷ್ಠನು. "अगूढविभवा यस्य पौरा राष्ट्रनिवासिनः। नयापनयवेत्तारः स राजा राजसत्तमः" भा० शान्ति० ५६-३४। ರಾಜನು ದೇಶದಲ್ಲಿ ಸುಳ್ಳು, ವಂಚನೆ ಮಾತ್ಸರ್ಯ ಮಾಯೆ ಮೊದಲಾದುವುಗಳಿಗೆ ಅವಕಾಶಕೊಡದೆ ಪ್ರಜೆಗಳನ್ನು ಸುರಕ್ಷಿತರನ್ನಾಗಿ ನೋಡಿಕೊಳ್ಳುವುದು ಅವನ ಸನಾತನಧರ್ಮ. "न यस्य कूटं कपटं न माया न च मत्सरः। विषये भूमिपालस्य तस्य धर्मः सनातनः" भा० शान्ति० ५६-३७। ಇತ್ಯಾದಿ.

**राजधान ರಾಜಧಾನ, -धानक -ಧಾನಕ** (ನಂ) ರಾಜನು ವಾಸಿಸುವ ನಗರ.

**राजधानी ರಾಜಧಾನೀ** (ಸ್ತ್ರೀಂ) ರಾಜನು ವಾಸವಾಡುವ ನಗರ, ರಾಜ್ಯಾಡಳಿತ ನಡೆಸುವ ಮುಖ್ಯನಗರ. राजानो धीयन्तेऽत्र — डु धाञ् (धारणपोषणयोः) "ल्युट्" (३-३-११७)। "ङीप्" (४-१-१५)। "स तक्षपुष्कलौ पुत्रौ राजधान्योस्तदाख्ययोः" रघु० १५-८९।

**राजधामन् ರಾಜಧಾಮನ್** (ನಂ) ರಾಜನ ವಾಸಗೃಹ, ಅರಮನೆ. राज्ञो धाम निवासः।

**राजन् ರಾಜನ್** (ಪುಂ) 1. ರಾಜ, ದೊರೆ, ಅರಸು. राजते — राजृ (दीप्तौ) "कनिन्" (उ० १-१५४)। "उदेतुमत्यजन्नीहां राजसु द्वादशस्वपि" माघ० २-८१। 2. ಚಂದ್ರ. "राजप्रियाः कैरविण्यो रमन्ते मधुपैः सह" मामि० वि०। 3. ಕ್ಷತ್ರಿಯ. "तत्सुराज्ञि भवति स्थिते पुनः कः क्रतुं यजतु राजलक्षणम्" माघ० १४-१४। 4. ಪ್ರಭು, ಸ್ವಾಮಿ, ಯಜಮಾನ. 5. ಸೋಮಲತೆ. "राजा तु क्षत्रिये चन्द्रे लताभेदे नृपे प्रभौ" वैज०। 6. ಶಕ್ರ, ಇಂದ್ರ. 7. ಯಕ್ಷ. "राजा प्रभौ च नृपतौ क्षत्रिये रजनीपतौ। यक्षे शक्रे च पुंसि स्यात्" मेदि०।

**राजनय ರಾಜನಯ, (ಪುಂ) -नीति -ನೀತಿ** (ಸ್ತ್ರೀಂ) 1. ರಾಜ್ಯಶಾಸ್ತ್ರ, ರಾಜ್ಯದ ಆಡಳಿತವನ್ನು ನಡೆಸಲು ಅನುಸರಿಸಬೇಕಾದ ವ್ಯವಹಾರದ ತಂತ್ರ. राज्ञो नयः नीतिर्वा। ಪ್ರಜಾಪರಿಪಾಲನೆಗಾಗಿ ರಾಜನು ರಾಜನೀತಿಯನ್ನು ಚೆನ್ನಾಗಿ ಅಭ್ಯಸಿಸಬೇಕು. ಸಾಮಾದಿ ಉಪಾಯಚತುಷ್ಟಯವನ್ನು ಸರಿಯಾಗಿ ಉಪಯೋಗಿಸಬೇಕು. ರಾಜ್ಯಭಾರವು ಸುಸೂತ್ರವಾಗಿ ಸುವ್ಯವಸ್ಥಿತವಾಗಿ ನಡೆಯಲು ಅವಶ್ಯವಾದ ದ್ರವ್ಯಾರ್ಜನೆಯನ್ನು ಧರ್ಮಕ್ಕೆ ವಿರೋಧವಿಲ್ಲದೆಯೂ ಪ್ರಜೆಗಳ ಹಿತಕ್ಕೆ ಕಿಂಚಿತ್ತೂ ಬಾಧೆಯು ಉಂಟಾಗದಂತೆಯೂ ಮಾಡಬೇಕು. ಇದರಿಂದ ಮಾತ್ರ ರಾಜನು ಕೀರ್ತಿಶಾಲಿಯಾಗಿಯೂ ಪ್ರಜಾನುರಾಗಸಂಪನ್ನನಾಗಿಯೂ ವಿರಾಜಿಸುವನು. "अविरोधेन धर्मस्य अर्थस्योपार्जनं च यत्। सर्वसत्त्वानुगमनं कामवर्गफलं च यत्। परत्रेह च यच्छ्रेयः पुत्र तत् कर्म चाचर। यथा श्लाघां प्रयास्यच यथा कीर्तिर्भवेत्तव" चाणक्यः। ರಾಜನು ತನಗೆ ಯಾರಿಂದಲೂ ಪರಿಭವವುಂಟಾಗದೆ ಗೌರವ

ದಿಂದ ನಡೆದುಕೊಳ್ಳುತ್ತಿರುವಾಗ ಶಾಂತಚಿತ್ತನಾಗಿ ಎಲ್ಲರಲ್ಲೂ ಕ್ಷಮೆಯನ್ನು ತೋರಿಸುತ್ತಿರಬೇಕು. ಪರಿಭವವೊದಗಿದಾಗ ಮಾತ್ರ ತನ್ನ ಪರಾಕ್ರಮವನ್ನು ಪ್ರದರ್ಶಿಸುತ್ತಾ ವಿರೋಧಿಗಳ ನಾಶಕ್ಕೆ ಯತ್ನಿಸಬೇಕು. ರಾಜನು ಸಾಮಾದ್ಯುಪಾಯಗಳನ್ನು ಸಮಯಾನುಸಾರವಾಗಿ ಉಪಯೋಗಿಸುತ್ತ ಚಾರರ ಮೂಲಕ ಸ್ವಪರರಾಷ್ಟ್ರಗಳ ವಿಚಾರಗಳನ್ನು ತಿಳಿದುಕೊಂಡು ವ್ಯವಸ್ಥಿತವಾಗಿ ರಾಜ್ಯವಾಳಬೇಕು. "इति क्रमात्प्रयुञ्जानो राजनीतिं चतुर्विधाम्। आतीर्थादप्रतीघातं स तस्याः फलमानशे" रघु० १७-६८। ರಾಜನು ಸದಾ ತನ್ನ ಅಭಿವೃದ್ಧಿಯನ್ನೂ ಶತ್ರುಗಳ ಅವನತಿಯನ್ನೂ ಗಮನದಲ್ಲಿಟ್ಟುಕೊಂಡು ವರ್ತಿಸಬೇಕು. ಕೇವಲ ಅಲ್ಪವಾದ ಸಂಪತ್ತಿನಿಂದಲೇ ತೃಪ್ತಿಹೊಂದಿ ಅದೇ ಸ್ಥಿರವೆಂದು ತಿಳಿದು ಪೌರುಷಹೀನನಾಗಿ ಕುಳಿತಿರುವ ಅಲ್ಪಸಂತುಷ್ಟನಾದ ರಾಜನನ್ನು ದೈವವು ಲಕ್ಷಿಸದೆ ಅವನ ಆ ಸಂಪತ್ತನ್ನು ಎಂದೆಂದಿಗೂ ಅಭಿವೃದ್ಧಿಪಡಿಸುವುದಿಲ್ಲ. "संपदा सुस्थिरंमन्यो भवति स्वल्पयापि यः। कृतकृत्यो विधिर्मन्ये न वर्धयति तस्य ताम्" माघ० २-३२। ಈ ಕಾರಣಗಳಿಂದ ರಾಜನು ತನ್ನ ಪ್ರಭುಶಕ್ತಿಗೆ ನಿದಾನಭೂತವಾದ ಮಂತ್ರೋತ್ಸಾಹ ಶಕ್ತಿಗಳನ್ನು ತನ್ನಲ್ಲಿ ಬೆಳೆಸಿಕೊಳ್ಳಲು ಯತ್ನಿಸಬೇಕು. "प्रज्ञोत्साहावतः स्वामी यतेताधातुमात्मनि। तौ हि मूलमुदेष्यन्त्या जिगीषोरात्मसंपदः" माघ० २-७६। ಪ್ರಜೆಗಳಿಗೆ ರಾಜನು ತಂದೆಯಂತೆಯೂ ರಾಜನಿಗೆ ಪ್ರಜೆಗಳು ಪುತ್ರರಂತೆಯೂ ಇರುವುದರಿಂದ ರಾಜನು ಪ್ರಜೆಗಳನ್ನು ತನ್ನ ಮಕ್ಕಳಂತೆ ಪಾಲಿಸಬೇಕು. "राजानः पितरः प्रोक्ताः पुत्रा जनपदास्तथा। अतो भूपाः पालयन्ति प्रजाः पुत्रानिवौरसान्"। ತನ್ನ ರಾಜ್ಯಕ್ಕೆ ಕಲ್ಯಾಣವುಂಟಾಗಬೇಕೆಂಬ ಅಪೇಕ್ಷೆಯುಳ್ಳ ರಾಜನು ಪ್ರತಿದಿನವೂ ಹಿತಾಹಿತಗಳ ವಿಷಯವಾಗಿ ಚಿಂತಿಸುತ್ತಿರಬೇಕು. "नृपाः कल्याणमिच्छन्तो निजराज्यशुभाशुभम्। पश्यन्ति नित्यं विप्रेन्द्र सत्वराश्चारचक्षुषः" पाद्मपु०। 2. ರಾಜ್ಯಶಾಸ್ತ್ರವನ್ನು ಪ್ರತಿಪಾದಿಸುವ ಗ್ರಂಥ. ಕಾಮಂದಕೀಯ ನೀತಿಶಾಸ್ತ್ರ, ಶುಕ್ರನೀತಿ ಮುಂತಾದುವು.

**राजन्य ರಾಜನ್ಯ** (पुं०) 1. ಕ್ಷತ್ರಿಯ, ರಾಜವಂಶದಲ್ಲಿ ಹುಟ್ಟಿದವನು. राज्ञोऽपत्यम् "यत्" (४-१-१३७)। "काकुत्स्थश्चिरविरहोत्सुकावरोधान् राजन्यान् स्वपुरनिवृत्तयेऽनुमेने" रघु० ४-८७। 2. ಅಗ್ನಿ.

**राजन्यक ರಾಜನ್ಯಕ** (न०) 1. ಕ್ಷತ್ರಿಯರ ಸಮೂಹ. राजन्यानां समूहः "वुञ्" (४-२-३९)। "राजन्यकान्युपायज्ञैरेकार्थानि चरैस्तव" माघ० २-११४। (पुं०) 2. ರಾಜಪುತ್ರ (ಕ್ಷತ್ರಿಯ)ರ ದೇಶ. राजन्य "वुञ्" (४-२-५३)।

**राजन्वत् ರಾಜನ್ವತ್** (वि०) ರಾಜಧರ್ಮಪರಾಯಣನಾದ ರಾಜನನ್ನು ಹೊಂದಿರುವ (ದೇಶ). शोभनो राजा यस्य — राजन् प्रशंसायां "मतुप्" (८-२-१४)। निपा०। राजन्वान् देशः। राजन्वती भूमिः। "कामं नृपाः सन्तु सहस्रशोऽन्ये राजन्वतीमाहुरनेन भूमिम्" रघु० ६-२२।

**राजपथ ರಾಜಪಥ** (पुं०) 1. ರಾಜನು ಸಂಚರಿಸಲು ಯೋಗ್ಯವಾದ ಮಾರ್ಗ, ಹತ್ತು ಧನಸ್ಸುಗಳಷ್ಟು ಅಗಲವಾದ ರಸ್ತೆ. राजगमनयोग्यः पन्थाः — पथिन् "अः" (५-४-७४)। "धनूंषि दश विस्तारे श्रीमान् राजपथः स्मृतः। नृवाजिरथनागानामसंबाधः सुसञ्चरः" देवीपु०। "तावत्पताकाकुलमिन्दुमौलिरुत्तोरणं राजपथं प्रपेदे" कुमा० ७-६३। 2. ವಿಸ್ತಾರವಾದ ರಸ್ತೆ, ಅಗಲವಾದ ರಸ್ತೆ, ಮುಖ್ಯ ರಸ್ತೆ. 3. ರಾಜನು ಅನುಸರಿಸುವ ಮಾರ್ಗ, –ಪದ್ಧತಿ, –ರೀತಿ. **–मार्गः –ಮಾರ್ಗಃ.**

**राजपलाण्डु ರಾಜಪಲಾಂಡು** (पुं०) ಕೆಂಪು ಈರುಳ್ಳಿ. पलाण्डूनां राजा। परनिपातः (२-२-३१)।

**राजपुत्र ರಾಜಪುತ್ರ** (पुं०) 1. ರಾಜಕುಮಾರ, ದೊರೆಯ ಮಗ. 2. ಚಂದ್ರನ ಮಗ, ಬುಧಗ್ರಹ. "बुधो हेमा राजपुत्र एकदेहः प्रहर्षणः" त्रिकाण्ड०। 3. ವೇಶ್ಯೆಯಲ್ಲಿ ಅಂಬಷ್ಠನಿಂದ ಹುಟ್ಟಿದ ಮಿಶ್ರಜಾತಿಯವನು.

**राजफल ರಾಜಫಲ** (पुं०) 1. ದೊಡ್ಡ ಜಾತಿಯ ಪಡವಲಗಿಡ. (स्त्री०) **–फला –ಫಲಾ.** 2. ನೇರಳೆ ಮರ.

**राजबला ರಾಜಬಲಾ** (स्त्री०) ಸಾರಣೆ ಗಿಡ, ಮುಳ್ಳುಗಸೆ ಗಿಡ. बलानां बलप्रदानां राजेव।

**राजबदर ರಾಜಬದರ** (न०) 1. ಲವಣ, ಉಪ್ಪು. 2. ಕೆಂಪು ನೆಲ್ಲಿ.

**राजबीजिन् ರಾಜಬೀಜಿನ್** (पुं०) ಕ್ಷತ್ರಿಯ ವಂಶದಲ್ಲಿ ಹುಟ್ಟಿದವನು, ರಾಜನ ಸಂತತಿಯಲ್ಲಿ ಜನಿಸಿದವನು. राज्ञो बीजमस्यास्ति "इनिः" (५-२-११५)। "राजबीजी राजवंश्यः" अम०।

**राजभद्रक ರಾಜಭದ್ರಕ** (पुं०) 1. ದೇವದಾರು ವೃಕ್ಷ. 2. ನಿಂಬ ವೃಕ್ಷ.

**राजभोग ರಾಜಭೋಗ** (पुं०) 1. ರಾಜನ ಆಹಾರ, ರಾಜಭೋಜನ. राज्ञो भोगः। 2. ರಾಜನು ಅನುಭವಿಸುವ ಆನಂದ, –ಸಂತೋಷ.

**राजभोग्य ರಾಜಭೋಗ್ಯ** (ಪುಂ) 1. ಪ್ರಿಯಾಲ ವೃಕ್ಷ, ಮೊರಟೆ ಮರ. (ನಂ) 2. ಜಾಯಿಕಾಯಿ. (ತ್ರಿಂ) 3. ರಾಜನು ಅನುಭವಿಸಲು ಯೋಗ್ಯವಾದ, ರಾಜನಿಂದ ಅನುಭವಿಸಲ್ಪಡುವ (ವಸ್ತು). राज्ञा भोक्तुं योग्यम् — भुज (परिपालनाभ्यवहारयोः) "ण्यत्" (३-१-१२४)।

**राजमल्ल ರಾಜಮಲ್ಲ** (ಪುಂ) ಉದ್ಧತ, ಕೊಬ್ಬಿದವನು.

**राजमार्ग ರಾಜಮಾರ್ಗ** (ಪುಂ) "राजपथ" ನೋಡಿ.

**राजमाष ರಾಜಮಾಷ** (ಪುಂ) 1. ಕಾರಾಮಣಿ, ಅಲಸಂದೆ, ತಡಗುಣಿ. 2. ದೊಡ್ಡ ಜಾತಿಯ ಉದ್ದು. माषेषु राजा। परनिपातः (२-२-३१)। "राजमाषस्तु बर्बटः" त्रिकाण्ड०।

**राजमुद्ग ರಾಜಮುದ್ಗ** (ಪುಂ) ದೊಡ್ಡ ಜಾತಿಯ ಹೆಸರು. मुद्गानां राजा। परनिपातः (२-२-३१)।

**राजयक्ष्मन् ರಾಜಯಕ್ಷ್ಮನ್** (ಪುಂ) ಕ್ಷಯರೋಗ. राजा चासौ यक्ष्मा च, राज्ञः चन्द्रस्य क्षयकारको यक्ष्मा वा। ಕ್ಷಯರೋಗವು ಸಕಲ ರೋಗಗಳಿಗೂ ಅರಸವಾದುದರಿಂದ ಈ ಹೆಸರು. "मा वेदि यदसावेको जेतव्यश्चेदिराडिति। राजयक्ष्मेव रोगाणां समूहः स महीभृताम्" माघ० २-९६। "अनेकरोगानुगतो बहुरोगपुरोगमः। राजयक्ष्मा क्षयः शोषो रोगराडिति च स्मृतः॥ नक्षत्राणां द्विजानां च राज्ञोऽभूद्यदयं पुरा। यच्च राजा च यक्ष्मा च राजयक्ष्मा ततो मतः"॥ इति वाग्भटः।

**राजयोग ರಾಜಯೋಗ** (ಪುಂ) 1. ಪರಮಪುರುಷಾರ್ಥ (ಮೋಕ್ಷ) ಸಾಧನವಾದ ಎರಡು ವಿಧ ಯೋಗಗಳಲ್ಲಿ ಒಂದು ವಿಧ. ಬಾಹ್ಯವಿಷಯಗಳಿಂದ ನಿರೋಧಿಸಲ್ಪಟ್ಟ ಇಂದ್ರಿಯಗಳಿಂದ ಮನಸ್ಸನ್ನು ಸ್ಥಿರಗೊಳಿಸಿ ಸಾಕ್ಷಾತ್ಕರಿಸ ಬೇಕಾದ ಪರಮಾತ್ಮನಲ್ಲಿ ಮನಸ್ಸು ನಿರಂತವಾಗಿ ನಿಲ್ಲುವಂತೆ (ಲಯ) ಮಾಡುವುದು ಯೋಗ. ಇದೇ ಸಮಾಧಿ. ಇದು ಪರಮಾತ್ಮಸಾಕ್ಷಾತ್ಕಾರಕ್ಕೆ ಉಪಾಯವಾದುದರಿಂದ ಇದಕ್ಕೆ ಯೋಗವೆಂದು ಹೆಸರು. ಈ ಯೋಗವು (1) ರಾಜಯೋಗ ಮತ್ತು (2) ಹಠಯೋಗಗಳೆಂದು ಎರಡು ವಿಧ. ಈ ರಾಜಯೋಗವು ಪತಂಜಲಿಮುನಿಯಿಂದ ಉಕ್ತವಾದುದು. योगानां राजा। परनिपातः।

ವೃತ್ತ್ಯಂತರ ನಿರೋಧಪೂರ್ವಕ ಧಾರಾವಾಹಿ ನಿರ್ವಿಕಲ್ಪ (ಜ್ಞಾತೃ ಮತ್ತು ಜ್ಞೇಯಗಳ ಭೇದತೋರದೆ ಧ್ಯೇಯ ವಸ್ತುವಿನಲ್ಲೇ ಲಯಹೊಂದಿದ) ಚಿತ್ತವೃತ್ತಿಯು ರಾಜ ಯೋಗ.

ರಾಜಯೋಗದಲ್ಲಿ ಮುಖ್ಯವಾದ ಧಾರಣಾಧ್ಯಾನ ಸಮಾಧಿಗಳಲ್ಲಿ ಧಾರಣೆಯಿಂದ ಪಂಚಭೂತಜಯವೂ ಪ್ರಕೃತಿವಶಿತ್ವ ಸರ್ವಜ್ಞತ್ವಾದಿ ಸಿದ್ಧಿಗಳೂ ಧ್ಯಾನದಿಂದ ಸಗುಣೇಶ್ವರಸಾಕ್ಷಾತ್ಕಾರವೂ ನಿರ್ವಿಕಲ್ಪಸಮಾಧಿಯಿಂದ ಸಚ್ಚಿದಾನಂದರೂಪವಾದ ಸ್ವರೂಪಾವಸ್ಥಿತಿಯೂ ಉಂಟಾಗುವುವು. ಇದೇ ಪರಮಪುರುಷಾರ್ಥವಾದ ಮೋಕ್ಷ.

ರಾಜಯೋಗವಿಲ್ಲದೆ ಹಠಯೋಗೋಕ್ತವಾದ ಆಸನಾದಿಗಳು ಅಪೂರ್ಣವಾಗುವುವು. ಆದುದರಿಂದ ರಾಜಯೋಗದಿಂದಲೇ ಹಠಯೋಗಕ್ಕೆ ಸಾರ್ಥಕ್ಯ. "राजयोगं विना पृथ्वी राजयोगं विना निशा। राजयोगं विना मुद्रा विचित्रापि न शोभते" हठ० ३-२६।

ರಾಜನ (ದೊರೆಯ) ಸಂಬಂಧವಿಲ್ಲದ ಭೂಮಿಗೆ ಕಳೆಯಿಲ್ಲದಿರುವಂತೆ ರಾಜಯೋಗವಿಲ್ಲದ ಪೃಥ್ವೀಶಬ್ದ ಲಕ್ಷಿತವಾದ ಆಸನಾದಿಗಳೂ ರಾಜನ (ಚಂದ್ರನ) ಸಂಬಂಧವಿಲ್ಲದ ಪ್ರಾಣಸಂಚಾರರಹಿತವಾದ ರಾತ್ರಿಯು ಶೋಭಿಸದಿರುವಂತೆ ನಿಶಾಶಬ್ದಲಕ್ಷಿತವಾದ ಪ್ರಾಣಸಂಚಾರವಿಲ್ಲದ ಕುಂಭಕವೂ ರಾಜಯೋಗವಿಲ್ಲದೆ ಶೋಭಿಸದು.

ರಾಜನ ಸಂಬಂಧವಿಲ್ಲದ ಮುದ್ರೆಗೆ (ಮೊಹರಿಗೆ) ಗೌರವವಿಲ್ಲದಿರುವಂತೆ ರಾಜಯೋಗವಿಲ್ಲದ ಮಹಾಮುದ್ರಾದಿಗಳು ವಿಚಿತ್ರವಾಗಿದ್ದರೂ ಶೋಭಿಸುವುದಿಲ್ಲ.

ರಾಜಯೋಗದಿಂದ ಜ್ಞಾನ ವಿದೇಹಮುಕ್ತಿ ಜೀವನ್ಮುಕ್ತಿ ಮತ್ತು ಅಣಿಮಾದಿಸಿದ್ಧಿಗಳು ಲಭಿಸುವುದರಿಂದ ರಾಜಯೋಗದ ಮಹಿಮೆಯು ಅಪಾರವಾದುದು. ಇದು ಆಚಾರ್ಯರ ಕೃಪಾಮಾತ್ರಲಭ್ಯ. "राजयोगस्य माहात्म्यं को वा जानाति तत्त्वतः। ज्ञानं मुक्तिः स्थितिः सिद्धिः गुरुवाक्येन लभ्यते" हठ० ४-८। 2. ರಾಜನಾಗುವುದನ್ನು ಸೂಚಿಸಲು ಮನುಷ್ಯನ ಜನನಕಾಲದಲ್ಲಿ ಅಳವಡಿಸುವ ಗ್ರಹಗಳ ಸಂಬಂಧ, ಇಂತಹ ಗ್ರಹಗಳ ಸಂಬಂಧದಿಂದ ಉಂಟಾಗುವ ಅನೇಕ ರಾಜಯೋಗಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ಕೊಡಲಾಗಿದೆ.

(1) **ಜನನಕಾಲದಲ್ಲಿ** ಚಂದ್ರನು ಮೀನದಲ್ಲಿಯೂ ಕುಜನು ಉಚ್ಚಸ್ಥಾನವಾದ ಮಕರದಲ್ಲಿಯೂ ಸೂರ್ಯನು ಸಿಂಹದಲ್ಲಿಯೂ ಶನಿಯು ಕುಂಭದಲ್ಲಿಯೂ ಇದ್ದರೆ ಸಕಲಕಲಾವಲ್ಲಭನಾದ ರಾಜನಾಗುತ್ತಾನೆ. "उदयति मीने शशिनि नरेन्द्रः सकलकलाढ्यः क्षितिसुत उच्चे। मृगपतिसंस्थे दशशतरश्मौ घटधरगे स्याद्दिनकरपुत्रे" सारा० ३५-१४।

(2) **ಜನನಕಾಲದಲ್ಲಿ** ಕುಂಭದಲ್ಲಿ ಶುಕ್ರನೂ ಮೇಷದಲ್ಲಿ ಕುಜನೂ ಉಚ್ಚಸ್ಥಾನದಲ್ಲಿ (ಕಟಕರಾಶಿಯಲ್ಲಿ)

ಗುರುವೂ ಇದ್ದರೆ ಒಳ್ಳೆಯ ಕೀರ್ತಿಶಾಲಿಯಾದ ರಾಜನಾಗುವನು. "शुक्रो घटे कुजो मेषे स्वोच्चे देवपुरोहितः। यदि राजा भवेन्नूनं स्वयशोधौतदिङ्मुखः" सारा० ३५-१७।

(3) ಗುರುವು ಧನುಸ್ಸಿನಲ್ಲೂ ಶನಿಯು ಚಂದ್ರನೊಡನೆ ತುಲಾರಾಶಿಯಲ್ಲೂ ಸೂರ್ಯನು ಉಚ್ಚನಾಗಿ ಲಗ್ನವಾದ ಮೇಷರಾಶಿಯಲ್ಲೂ ಇದ್ದರೆ ಬಹಳ ಕೀರ್ತಿಶಾಲಿಯಾದ ರಾಜನಾಗುತ್ತಾನೆ. "कार्मुके त्रिदशनायकमन्त्री भानुजो वणिजि चन्द्रसमेतः। मेषगस्तु तपनो यदि लग्ने भूपतिर्भवति सोऽतुलकीर्तिः" सारा० ३५-२५।

(4) ಶುಕ್ರ ಬುಧ ಮತ್ತು ಕುಜರು ಲಗ್ನದಲ್ಲಿಯೂ ಗುರುವಿನೊಡನೆ ಚಂದ್ರನು ಸಪ್ತಮದಲ್ಲಿಯೂ ಇದ್ದು ಶನಿಯಿಂದ ನೋಡಲ್ಪಟ್ಟರೆ ರಾಜನಾಗುತ್ತಾನೆ. "लग्नगाः सितशशाङ्कजभौमाः सप्तमे शशिनि वाक्पतियुक्ते। तिग्मरश्मितनयेन च दृष्टे जायते पृथुयशाः पृथिवीशः" सारा० ३५-७२।

(5) ಲಾಭ (ಏಕಾದಶ) ಮತ್ತು ಧರ್ಮ (ನವಮ) ಸ್ಥಾನಗಳಲ್ಲಿ ಸೌಮ್ಯಗ್ರಹಗಳೂ ಕರ್ಮ (ದಶಮ) ಸ್ಥಾನದಲ್ಲಿ ಪಾಪಗ್ರಹಗಳೂ ಇದ್ದರೆ ರಾಜನಾಗುತ್ತಾನೆ. "लाभधर्मस्थिताः सौम्याः पापाः कर्मणि संस्थिताः। नृपतीनामयं योगः भवेत्कलशसंज्ञितः" सारा० ३५-९६।

(6) ತನ್ನ ಉಚ್ಚಸ್ಥಾನದಲ್ಲಿರುವ ಲಗ್ನಾಧಿಪತಿಯು ಚಂದ್ರನನ್ನು ವೀಕ್ಷಿಸುತ್ತಿದ್ದರೆ ಗಜತುರಗಬಲದೊಡನೆ ಶತ್ರುಗಳನ್ನು ಜಯಿಸುವ ರಾಜನನ್ನಾಗಿ ಮಾಡುತ್ತಾನೆ. "लग्नाधिपतिः स्वोच्चे पश्यन् मृगलाञ्छनं नृपं कुरुते। बहुगजतुरगबलैः क्षपितविपक्षं महाविभवम्" सारा० ३५-११०।

**राजयोग्य ರಾಜಯೋಗ್ಯ** (वि०) ರಾಜನಿಗೆ ಅರ್ಹವಾದ, ರಾಜನು ಉಪಯೋಗಿಸಲು ಅರ್ಹವಾದ. राज्ञो योग्यः। (स्त्री०) **-योग्या -ಯೋಗ್ಯಾ.** ರಾಜನಿಗೆ ಯೋಗ್ಯಳಾದ ಹೆಂಗಸು. ಜಾತಕದಲ್ಲಿ ಬುಧಗ್ರಹವು ತ್ರಿಕೋಣ ಮತ್ತು ಕೇಂದ್ರಸ್ಥಾನಗಳಲ್ಲೂ ಪಾಪಗ್ರಹವು ಉಪಚಯ (3, 6, 10, 11) ಸ್ಥಾನದಲ್ಲಿಯೂ ಇರುವ ಹೆಂಗಸು ರಾಜಯೋಗ್ಯಳು. "त्रिकोणकण्टके सौम्ये पापे चोपचयस्थिते। राजयोग्या भवेन्नारी सुन्दरी कुलवर्द्धिनी" जातकामृतम्।

**राजरङ्ग ರಾಜರಂಗ** (न०) ರಜತ, ಬೆಳ್ಳಿ. राजार्हं रङ्गम्।

**राजराज ರಾಜರಾಜ** (पुं०) 1. ಧನಾಧಿಪತಿ, ಕುಬೇರ, ಯಕ್ಷರ ರಾಜ. राज्ञां यक्षाणां राजा — राजन् "टच्" (५-४-९१)। "इत्युक्त्वा सपदि हितं प्रियार्हं धाम स्वं गतवति राजराजभृत्ये" किरा० ५-५१। 2. ಸಾರ್ವಭೌಮ, ಚಕ್ರಾಧಿಪತಿ, ರಾಜರ ರಾಜ. राज्ञामपि राजा। 3. ಚಂದ್ರ. "राजराजः कुबेरेऽपि सार्वभौमे सुधाकरे" मेदि०।

**राजरीति ರಾಜರೀತಿ** (स्त्री०) ಹಿತ್ತಾಳೆ.

**राजर्षि ರಾಜರ್ಷಿ** (पुं०) 1. ಧಾರ್ಮಿಕ ಜೀವನ ಮತ್ತು ದೈವಭಕ್ತಿಯುಳ್ಳ ರಾಜ, ಋಷಿಯಂತೆ ನಿಯಮಗಳನ್ನು ಪಾಲಿಸುವ ದೊರೆ. राजा ऋषिरिव। "राजर्षिवंशस्य रविप्रसूतेरुपस्थितः पश्यत कीदृशोऽयम्" रघु० १४-३७। 2. ಜನಮೇಜಯ, ಪರೀಕ್ಷಿತ್ತಿನ ಮಗ. "राजर्षिर्जनमेजयसंज्ञकः। पारिक्षितोऽपि" त्रिकाण्ड०।

**राजलक्ष्मी ರಾಜಲಕ್ಷ್ಮೀ** (स्त्री०) 1. ರಾಜನ ಸಂಪತ್ತಿನ ಅಧಿಷ್ಠಾತೃ ದೇವತೆ. 2. ರಾಜನ ಮುಖದಲ್ಲಿ ತೋರುವ ಪ್ರಭುತ್ವದ ವರ್ಚಸ್ಸು. 3. ರಾಜನಿಗಿರಬೇಕಾದ ಛತ್ರ ಚಾಮರ ಮೊದಲಾದ ಚಿಹ್ನೆ. राज्ञो लक्ष्मीः।

**राजवंश्य ರಾಜವಂಶ್ಯ** (पुं०) ಕ್ಷತ್ರಿಯವಂಶದಲ್ಲಿ ಹುಟ್ಟಿದವನು. राजवंशे भवः "यत्" (४-३-५४)।

**राजवत् ರಾಜವತ್** (वि०) ರಾಜನುಳ್ಳ, ರಾಜನಿರುವ (ದೇಶ.) राजास्यास्ति "मतुप्" (५-२-९४)। ಶ್ರೇಷ್ಠನಾದ ರಾಜನಿಂದ ಕೂಡಿದ ದೇಶವು "राजन्वान्" ಎಂದೂ ಸಾಮಾನ್ಯ ರಾಜನಿರುವ ದೇಶವು "राजवान्" ಎಂದೂ ಆಗುವುದು.

**राजवर्त्मन् ರಾಜವರ್ತ್ಮನ್** (न०) ರಾಜಮಾರ್ಗ, ರಾಜನು ಸಂಚರಿಸಲು ಯೋಗ್ಯವಾದ ರಸ್ತೆ. राज्ञो वर्त्म।

**राजवाह ರಾಜವಾಹ** (पुं०) ಅಶ್ವ, ಕುದುರೆ. राजानं वहति — वह (प्रापणे) "अण्" (३-२-१)।

**राजवाह्य ರಾಜವಾಹ್ಯ** (पुं०) ರಾಜನನ್ನು ಒಯ್ಯುವ ಆನೆ. राज्ञां वाह्यः। "राजवाह्यो विजयकुञ्जरः" त्रिकाण्ड०।

**राजवृक्ष ರಾಜವೃಕ್ಷ** (पुं०) ಕಕ್ಕೆಗಿಡ.

**राजस ರಾಜಸ** (वि०) 1. ರಜೋಗುಣ ಸಂಬಂಧವಾದ, ರಜೋಗುಣದಿಂದ ಹುಟ್ಟಿದ. रजसः इदम् "अण्" (४-३-१२०)। 2. ರಜೋಗುಣ. 3. ಪ್ರಖ್ಯಾತಿ ಹೊಂದಲು ಮಾಡುವ ಕಾರ್ಯ, ಹೊಗಳಿಕೆಗಾಗಿ ಮಾಡುವ ಕಾರ್ಯ. राजसं ज्ञानम्। राजसी बुद्धिः। राजसं दानम्। "सत्कारमानपूजार्थं तपो दम्भेन चैव यत्। क्रियते तदिह प्रोक्तं राजसं चलमध्रुवम्" गीता। स्त्रियां **राजसी ರಾಜಸೀ.**

**राजसदन ರಾಜಸದನ** (ನಂ) ರಾಜನ ಗೃಹ, ಅರಮನೆ. राज्ञः सदनम्। "सौधोऽस्त्री राजसदनम्" अमं। —सद्मन् –ಸದ್ಮನ್.

**राजसभा ರಾಜಸಭಾ** (स्त्रीं) ರಾಜನ ಸಭೆ. राज्ञः सभा। ರಾಜಪರ್ಯಾಯಪದವು ಮಾತ್ರ ಪೂರ್ವದಲ್ಲಿರುವ ಸಭಾ ಪದವು ನಪುಂಸಕವಾಗುವುದು. इनसभम् ईश्वरसभम् ಇತ್ಯಾದಿ.

**राजसर्षप ರಾಜಸರ್ಷಪ** (ಪುಂ) 1. ಕರಿ ಸಾಸವೆ. सर्षपाणां राजा। परनिपातः (२-२-३१)। 2. ಇಪ್ಪತ್ತನಾಲ್ಕು ತ್ರಸರೇಣುಗಳ ಪರಿಮಾಣ. ಆರು ಪರಮಾಣುಗಳಿಂದ ಕೂಡಿದ ಧೂಳಿನ ಕಣವು ತ್ರಸರೇಣು. "त्रसरेणवोऽष्टौ विज्ञेया लिक्षैका परिमाणतः। ता राजसर्षपस्तिस्रस्ते त्रयो गौरसर्षपः" मनुं ८-१३३।

**राजसूय ರಾಜಸೂಯ** (ಪುಂ) ರಾಜನು (ಮಾತ್ರ) ಮಾಡಬೇಕಾದ ಯಾಗ. राज्ञा सोमलता सूयतेऽत्र — राज्ञा सूयते वा—षु (प्रसवैश्वर्ययोः) "क्यप्" (३-१-११४)। ರಾಜನು ಸಮಸ್ತ ರಾಜರನ್ನೂ ಜಯಿಸಿ ಸಾರ್ವಭೌಮನಾಗಿ ರಾಜಸೂಯ ಅಶ್ವಮೇಧ ಮೊದಲಾದ ಯಾಗಗಳನ್ನು ಮಾಡಬೇಕು. "यक्ष्यन्ति च नरव्याघ्रा निर्जित्य पृथिवीमिमाम्। राजसूयाश्वमेधाद्यैः क्रतुभिर्भूरिदक्षिणैः"।

**राजस्व ರಾಜಸ್ವ** (ನಂ) 1. ರಾಜನ ಧನ. 2. ರಾಜನಿಗೆ ಕೊಡಬೇಕಾದ ತೆರಿಗೆ, ಕಂದಾಯ. राज्ञो देयं (कररूपं) स्वं धनम्।

**राजस्कन्ध ರಾಜಸ್ಕಂಧ** (ಪುಂ) ಅಶ್ವ, ಕುದುರೆ. "राजस्कन्धो मरुद्रथः। वातायनश्चैकशफः" त्रिकाण्डं।

**राजहंस ರಾಜಹಂಸ** (ಪುಂ) 1. ಹಂಸಪಕ್ಷಿ, ಕೆಂಪು ಕೊಕ್ಕು ಮತ್ತು ಕಾಲುಗಳುಳ್ಳ ಹಂಸ. हंसानां राजा। परनिपातः (२-२-३१)। "राजहंसास्तु ते चञ्चुचरणैर्लोहितैः सिताः" अमं। "सा राजहंसैरिव संनताङ्गी गतेषु लीलाञ्चितविक्रमेषु" कुमां १-३४। 2. ದೊಡ್ಡ ಜಾತಿಯ ಪಕ್ಷಿ. 3. ಶ್ರೇಷ್ಠನಾದ ದೊರೆ. राजा हंस इव।

**राजादन ರಾಜಾದನ** (ನಂ) 1. ಪ್ರಿಯಾಲ ವೃಕ್ಷ, ಮೊರಟೆ ಗಿಡ. राजभिरद्यते — अद (भक्षणे) कर्मं "ल्युट्" (३-३-११३)। "राजादनं प्रियालः स्यात्" अमं। (ಪುಂ) 2. ಹಾಲೆಗಿಡ. 3. ಮುತ್ತುಗದ ಗಿಡ, ಕಿಂಶುಕವೃಕ್ಷ. "राजादनः प्रियालद्रौ क्षीरिकायां त्रिपत्रके" हेमं।

**राजाधिराज ರಾಜಾಧಿರಾಜ** (ಪುಂ) ಸಾರ್ವಭೌಮ, ಚಕ್ರವರ್ತಿ, ರಾಜರಿಗೆ ರಾಜ.

**राजाधिष्ठान ರಾಜಾಧಿಷ್ಠಾನ** (ನಂ) (ರಾಜನ) ರಾಜಧಾನಿ, ರಾಜನ ಮುಖ್ಯ ಪಟ್ಟಣ.

**राजापसद ರಾಜಾಪಸದ** (ಪುಂ) ನೀಚನಾದ ದೊರೆ, ಅಧಮನಾದ ರಾಜ, ಅಯೋಗ್ಯನಾದ ರಾಜ.

**राजार्क ರಾಜಾರ್ಕ** (ಪುಂ) ಬಿಳಿ ಎಕ್ಕದ ಗಿಡ. अर्काणां राजा। परनिपातः (२-२-३१)।

**राजालाबू ರಾಜಾಲಾಬೂ** (स्त्रीं) ಸಿಹಿ ಸೋರೆ. अलाबूनां राजा। परनिपातः (२-२-३१)।

**राजावर्त ರಾಜಾವರ್ತ** (ಪುಂ) 1. ಕೆಳದರ್ಜೆಯ ವಜ್ರ, ಕೆಳಮಟ್ಟದ ವಯಿರ. राजानमावर्तयति — आ + वृतु (वर्तने) + णिच् "अच्" (३-१-१३४)। (ನಂ) 2. ಚೀಟಿಬಟ್ಟೆ, ಚಿತ್ರವರ್ಣದ ಬಟ್ಟೆ. "राजावर्तं चित्रपटे" वैजं।

**राजार्ह ರಾಜಾರ್ಹ** (ನಂ) 1. ಅಗುರು ಚಂದನ. राजानमर्हति — अर्ह (पूजायाम्) "अण्" (३-२-१)। (ವಿಂ) 2. ರಾಜನಿಗೆ ಯೋಗ್ಯವಾದ (ವಸ್ತು). राज्ञामर्हम्। "राजार्हं जोङ्गके क्लीबं राजयोग्येऽभिधेयवत्" मेदिं।

**राजि ರಾಜಿ** (स्त्रीं) 1. ಪಂಕ್ತಿ, ಸಾಲು. राजति—राजृ (दीप्तौ) "इन्" (उं ४-११८)। "तं स द्विपेन्द्रतुलितातुलतुङ्गशृङ्गमभ्युल्लसत्कदलिकावनराजिमुच्चैः" माघं ५-२। 2. ರೇಖೆ, ಗೆರೆ. "चक्रुरेव ललनोरुषु राजीः स्पर्शलोभवशलोलकराणाम्। कामिनामनिभृतान्यपि रम्भास्तम्भकोमलतलेषु नखानि" माघं १०-६६।

**राजिका ರಾಜಿಕಾ** (स्त्रीं) 1. ಪಂಕ್ತಿ, ಸಾಲು. राजि स्वार्थे "कः"। 2. ರೇಖೆ, ಗೆರೆ. 3. ಕರಿ ಸಾಸವೆ. 4. ಕೇದಾರ, ಬತ್ತ ಮೊದಲಾದುವನ್ನು ಬೆಳೆಯುವ ಗದ್ದೆ. "राजिका चापि केदारे राजसर्षपरेखयोः" मेदिं। "राजिका पङ्क्तौ रेखायां केदारे राजसर्षपे" हेमं।

**राजिमत् ರಾಜಿಮತ್** (ಪುಂ) ಮಂಡಲದ ಹಾವು, ಮೈಮೇಲೆ ಪಟ್ಟೆಗಳಿರುವ ಹಾವು. "राजिमन्तो राजियुता राजीलाः" वैजं।

**राजिल ರಾಜಿಲ** (ಪುಂ) 1. ಎರಡು ತಲೆಗಳಿರುವ ವಿಷವಿಲ್ಲದ ಹಾವು. राजिः रेखास्यास्ति "लच्" (५-२-९७)। "समौ राजिलडुण्डुभौ" अमं। "किं महोरगविसर्पिविक्रमो राजिलेषु गरुडः प्रवर्तते" रघुं ११-२७।

2. ಮಂಡಲದ ಹಾವು, ಮೈಮೇಲೆ ಪಟ್ಟೆಗಳಿರುವ ಹಾವು. "राजिमन्तो राजियुता: राजीला राजिलाश्च ते" वैज० ।

**राजी ರಾಜೀ** (स्त्री०) ಪಂಕ್ತಿ, ಸಾಲು. राजति — राज् (दीप्तौ) "इन्" (उ० ४-११८)। "ङीष्" (ग० ५०)। "राजीवराजीवशलोलभृङ्गं मुष्णन्तमुष्णं ततिभिस्तरूणाम्" माघ० ४-९।

**राजीमत् ರಾಜೀಮತ್** (पुं०) ಮಂಡಲದ ಹಾವು.

**राजील ರಾಜೀಲ** (पुं०) ಮಂಡಲದ ಹಾವು, ಮೈಮೇಲೆ ಪಟ್ಟೆಗಳಿರುವ ಹಾವು. "राजिमन्तो राजियुता: राजीला राजिलाश्च ते" वैज० ।

**राजीव ರಾಜೀವ** (पुं०) 1. ಒಂದು ಜಾತಿಯ ಜಿಂಕೆ, ತಲೆಯಿಂದ ಬಾಲದವರೆಗೂ ಬೆನ್ನಿನ ಮೇಲೆ ಬಿಳಿಯ ಗೆರೆಯಿರುವ ಜಿಂಕೆ. राजिरस्यास्ति "व:" (वा० ५-२-१०९)। "यज्ञाङ्ग एणस्ताम्रस्तु हरिणस्तृणसञ्चर: । राजीवस्त्वेष राजीमान्" वैज० । 2. ಮೈಮೇಲೆ ಗೆರೆಗಳಿರುವ ಒಂದು ಜಾತಿಯ ಮೀನು. 3. ಗಜ, ಆನೆ. "हस्ती महामृगो पीलु: सिन्धुरो दीर्घमारुत: । राजीवो जलकाङ्क्षश्च" त्रिकाण्ड० । स्त्रियां "ङीष्" (४-१-६३)। (न०) 4. ಪದ್ಮ, ಕಮಲ, ತಾವರೆ. राजी दलराजिरस्यास्ति "व:" (वा० ५-२-१०९)। "राजीवराजीवशलोलभृङ्गं मुष्णन्तमुष्णं ततिभिस्तरूणाम्" माघ० ४-९।

**राजीवत् ರಾಜೀವತ್** (पुं०) ಪಡವಲ ಗಿಡ. "पटोलके तु राजीवान्" वैज० ।

**राजेन्दु ರಾಜೇಂದು** (पुं०) ಉತ್ತಮನಾದ ರಾಜ, ಶ್ರೇಷ್ಠನಾದ ದೊರೆ. राजा इन्दुरिव। "दिलीप इति राजेन्दुरिन्दु: क्षीरनिधाविव" रघु० १-१२।

**राजेन्द्र ರಾಜೇಂದ್ರ** (पुं०) ಉತ್ತಮನಾದ ರಾಜ, ಶ್ರೇಷ್ಠನಾದ ದೊರೆ. राजा इन्द्र इव। ನಾಲ್ಕು ಯೋಜನ ಪ್ರದೇಶದ ಅಧಿಪತಿಯು ನೃಪ. ಅದಕ್ಕೆ ನೂರರಷ್ಟು ಹೆಚ್ಚಿನವನು ಮಂಡಲೇಶ್ವರ. ಅದಕ್ಕೆ ಹತ್ತರಷ್ಟು ಅಧಿಕ ಪ್ರದೇಶದ ಅಧಿಪತಿಯು ರಾಜೇಂದ್ರ. "चतुर्योजनपर्यन्तमधिकारी नृपो भवेत्। यो राजा तच्छतगुण: स एव मण्डलेश्वर:। तस्माद्दशगुणो राजा राजेन्द्र:" ब्रह्मवै० ।

**राज्ञी ರಾಜ್ಞೀ** (स्त्री०) 1. ರಾಣಿ, ರಾಜನ ಮಹಿಷಿ, ದೊರೆಯ ಪತ್ನಿ. राज्ञ: स्त्री "ङीष्" (४-१-४८)। "यानाज्जन: परिजनैरवतार्यमाणा राज्ञीर्नरापनयनाकुलसौविदल्ला:" माघ० ५-१७। 2. ಚಿನ್ನದ ಬಣ್ಣದ ಹಿತ್ತಾಳೆ ಅಥವಾ ಕಂಚು. "काञ्चनी कपिला राज्ञी ब्राह्मणी कपिलोहकम्" वैज० । 3. ಸೂರ್ಯನ ಪತ್ನಿ. "राज्ञी राजप्रियायां च भार्यायां भास्करस्य च" मेदि० ।

**राज्य ರಾಜ್ಯ** (न०) 1. ರಾಜತ್ವ, ಪ್ರಭುತ್ವ, ದೊರೆತನ. राज्ञो भाव: "यक्" (५-१-१२८)। "किं नो राज्येन गोविन्द किं भोगैर्जीवितेन वा" गीता १-३२। 2. ಪ್ರಜಾಪರಿಪಾಲನರೂಪವಾದ ರಾಜನ ಕಾರ್ಯ. राज्ञ: कर्म "यक्" (५-१-१२८)। "स राज्यं गुरुणा दत्तं प्रतिपद्याधिकं बभौ" रघु० ४-१। 3. ರಾಷ್ಟ್ರ, ದೇಶ. "राज्येन किं तद्विपरीतवृत्त: प्राणैरुपक्रोशमलीमसैर्वा" रघु० २-५३। ಒಂದು ಲಕ್ಷ ಗ್ರಾಮಗಳುಳ್ಳ ಪ್ರದೇಶವು ರಾಜ್ಯ. ಹತ್ತು ಲಕ್ಷ ಗ್ರಾಮಗಳುಳ್ಳ ಪ್ರದೇಶವು ಸಾಮ್ರಾಜ್ಯ. ನೂರು ಲಕ್ಷ ಗ್ರಾಮಗಳುಳ್ಳ ಪ್ರದೇಶವು ಮಹಾಸಾಮ್ರಾಜ್ಯ. "लक्षाधिपत्यं राज्यं स्यात् साम्राज्यं दशलक्षके। शतलक्षे महेशानि महासाम्राज्यमुच्यते" वरदातन्त्रम् ।

**राज्यच्युत ರಾಜ್ಯಚ್ಯುತ** (वि०) ರಾಜ್ಯಭ್ರಷ್ಟನಾದ, ರಾಜ್ಯದ ಅಧಿಕಾರವನ್ನು ಕಳೆದುಕೊಂಡ. राज्यात् च्युत:। –भ्रष्ट: –ಭ್ರಷ್ಟ। राज्यात् भ्रष्ट:।

**राज्यतन्त्र ರಾಜ್ಯತಂತ್ರ** (न०) ರಾಜ್ಯಶಾಸ್ತ್ರ, ರಾಜ್ಯದ ಆಡಳಿತವನ್ನು ನಡೆಸಲು ಬೇಕಾದ ರಾಜನೀತಿ, ರಾಜ್ಯಭಾರದ ವ್ಯವಸ್ಥೆ, ರಾಜ್ಯಾಡಳಿತದ ಏರ್ಪಾಡು. राज्यस्य तन्त्रम्। "वृषल एव केवलं प्रधानप्रकृति: अस्मासु आरोपितराज्यतन्त्रभार: सततमुदास्ते" मुद्रा० १।

**राज्यधुरा ರಾಜ್ಯಧುರಾ** (स्त्री०) ರಾಜ್ಯಾಡಳಿತದ ಹೊಣೆಗಾರಿಕೆ. राज्यस्य धुरा। –भार: –ಭಾರ:।

**राज्यलोभ ರಾಜ್ಯಲೋಭ** (पुं०) ರಾಜ್ಯದ ಆಸೆ, ರಾಜ್ಯವನ್ನು ಆಳುವ ಅಪೇಕ್ಷೆ.

**राज्याङ्ग ರಾಜ್ಯಾಂಗ** (न०) ರಾಜ್ಯದ ಆಡಳಿತಕ್ಕೆ ಅವಶ್ಯವಾಗಿರಬೇಕಾದ ಅಂಗಗಳು, ರಾಜನು ಮಾಡಬೇಕಾದ ಪ್ರಜಾಪರಿಪಾಲನ ಕಾರ್ಯಕ್ಕೆ ಮುಖ್ಯವಾದ ಸಾಧನಗಳು. राज्यस्य अङ्गानि। ಈ ಅಂಗಗಳು (1) स्वामी (ರಾಜ) (2) अमात्य: (ಮಂತ್ರಿ) (3) सुहृत् (ಮಿತ್ರ) (4) कोश: (ಬೊಕ್ಕಸ) (5) राष्ट्रम् (ಜನಪದ) (6) दुर्गम् (ಕೋಟೆ) ಮತ್ತು (7) बलम् (ಸೈನ್ಯ) ಎಂದು ಏಳು. ಮತ್ತು ಪೌರರೂ ಸೇರಿ ಎಂಟು ರಾಜ್ಯಾಂಗಗಳು. "स्वाम्यमात्यश्च राष्ट्रं च दुर्गं कोशो बलं सुहृत्। परस्परोपकारीद

सप्ताङ्गं राज्यमुच्यते। पौरश्रेणिभिः सह अष्टाङ्गमपि राज्यम्" कामन्द०।

**राज्याधिकार ರಾಜ್ಯಾಧಿಕಾರ** (पुं०) ಪ್ರಭುತ್ವ, ರಾಜ್ಯದ ಒಡೆತನ, ರಾಜ್ಯದ ಮೇಲಿರುವ ಸ್ವಾಮಿತ್ವ. राज्यस्य अधिकारः स्वामित्वम्।

**राटि ರಾಟಿ** (स्त्री०) 1. ಜರಕಟಿ ಹಕ್ಕಿ. राटयति — रट (परिभाषणे) + स्वार्थे णिच् "इन्" (उ० ४-११८)। 2. ಯುದ್ಧ, ಸಮರ, ಕಾಳಗ. राटयति आह्लादयति अत्र — रट + णिच् "इन्" (उ० ४-११८)। **राटिः ರಾಟಿಃ, राटिः ರಾಟಿಃ.**

**राढा ರಾಢಾ** (स्त्री०) 1. ಶೋಭೆ, ಕಾಂತಿ, ಪ್ರಕಾಶ. 2. ಗೌಡ ದೇಶದ ಒಂದು ಜಿಲ್ಲೆ. 3. ಆ ಜಿಲ್ಲೆಯ ಮುಖ್ಯ ಪಟ್ಟಣ. "गौडं राष्ट्रमनुत्तमं निरुपमा तत्रापि राढापुरी" प्रबोध० २-७। 4. ಸುಹ್ಮದೇಶ. 5. ಸುಹ್ಮ ದೇಶದ ಜನರು. "आत्मा संरक्षितः सुह्मैर्वृत्तिमाश्रित्य वैतसीम्" रघु० ४-३५। "राढा स्त्री सुह्मशोभयोः" मेदि०।

**रात्र ರಾತ್ರ** (न०) 1. ಜ್ಞಾನ. "रात्रं च ज्ञानवचनं ज्ञानं पञ्चविधं स्मृतम्"। 2. ರಾತ್ರಿ. "क्षेत्रप्रतिग्रहे चैव ग्रहसूतकयोस्तथा। त्रीणि रात्राण्युपोषित्वा तेन पापाद्विमुच्यते" भा० अनु० १३६-११।

**रात्रक ರಾತ್ರಕ** (पुं०) 1. ಒಂದು ವರ್ಷಕಾಲ ವೇಶ್ಯಾ ಗೃಹದಲ್ಲಿ ವಾಸಿಸುವವನು. (न०) 2. ಐದು ರಾತ್ರಿಗಳ ಕಾಲ. रात्रं ज्ञानं तेन कायति — कै (शब्दे) "कः" (३-२-३)। "रात्रकं पञ्चरात्रे ना वेश्यावेश्माब्दवासिनि" मेदि०।

**रात्रि ರಾತ್ರಿ** (स्त्री०) 1. ರಾತ್ರಿ, ಇರುಳು. राति सुखम् — रा (दाने) "त्रिप्" (उ० ४-६७)। "प्रणिजगदुरकाकुश्रावकस्निग्धकण्ठाः परिणतिमिति रात्रेर्मागधा माधवाय" माघ० ११-१। 2. ಹರಿದ್ರ, ಅರಿಶಿನ. ಮನುಷ್ಯರ ಒಂದು ತಿಂಗಳಕಾಲ ಪಿತೃದೇವತೆಗಳಿಗೆ ಒಂದು ದಿನ (ಕೃಷ್ಣಪಕ್ಷ ಹಗಲು ಮತ್ತು ಶುಕ್ಲಪಕ್ಷ ರಾತ್ರಿ). ಮನುಷ್ಯರ ಒಂದು ವರ್ಷಕಾಲ ದೇವತೆಗಳಿಗೆ ಒಂದು ದಿನ. (ಉತ್ತರಾಯಣ ಹಗಲು ಮತ್ತು ದಕ್ಷಿಣಾಯನ ರಾತ್ರಿ). "मासेन च नराणां च पितॄणां तदहर्निशम्। कृष्णपक्षे दिनं प्रोक्तं शुक्ले रात्रिः प्रकीर्तिता।। वत्सरेण नराणां च देवानां च दिवानिशम्। उत्तरायणे दिनं प्रोक्तं रात्रिश्च दक्षिणायने" ब्रह्मवै०।

**रात्रिकर ರಾತ್ರಿಕರ** (पुं०) ಚಂದ್ರ. रात्रिं करोति — डु कृञ् (करणे) "टः" (३-२-२१)।

**रात्रिचर ರಾತ್ರಿಚರ** (पुं०) 1. ರಾಕ್ಷಸ. रात्रौ चरति — चर (गतौ) "टः" (३-२-१६)। पक्षे मुमभावः। स्त्रियां "ङीप्" (४-१-१५)। **-चरी -ಚರೀ.** "यान्तं वने रात्रिचरी डुढौके" भट्टि० २-२३। 2. ಚೋರ, ಕಳ್ಳ. 3. ಕಾವಲುಗಾರ. (वि०) 4. ರಾತ್ರಿಯಲ್ಲಿ ಸಂಚರಿಸುವವನು. मुमागमः (६-३-७२)। **रात्रिंचरः ರಾತ್ರಿಂಚರಃ.** स्त्रियां **-चरी -ಚರೀ.**

**रात्रिचर्या ರಾತ್ರಿಚರ್ಯಾ** (स्त्री०) ರಾತ್ರಿಕಾಲದಲ್ಲಿ ಮಾಡಬೇಕಾದ ಕಾರ್ಯ.

**रात्रिजागर ರಾತ್ರಿಜಾಗರ** (पुं०) 1. ರಾತ್ರಿಕಾಲದಲ್ಲಿ ಎಚ್ಚರವಾಗಿರುವುದು. रात्रौ जागरः। "आरुरोह कुमुदाकरोपमां रात्रिजागरपरो दिवाशयः" रघु० १९-३४। 2. ಕುಕ್ಕುರ, ನಾಯಿ. "जिह्वापानः पुरोगामी कृतज्ञो रात्रिजागरः" वैज०। 3. ಕಾವಲುಗಾರ. (वि०) 4. ರಾತ್ರಿಕಾಲದಲ್ಲಿ ಎಚ್ಚರವಾಗಿರುವವನು. रात्रौ जागर्ति — जागृ (निद्राक्षये) "अच्" (३-१-१३४)।

**रात्रिन्दिवम् ರಾತ್ರಿಂದಿವಮ್** (अव्य०) ರಾತ್ರಿಹಗಲು, ರಾತ್ರಿಯಲ್ಲೂ ಹಗಲಿನಲ್ಲೂ. रात्रौ च दिवा च। रात्रिशब्दस्य मान्तत्वं निपात्यते। दिवा इत्याकारान्तमव्ययम् (५-४-७७)। "भानुः सकृद्युक्ततुरङ्ग एव रात्रिन्दिवं गन्धवहः प्रयाति" शाकु० ५-४।

**रात्रिपुष्प ರಾತ್ರಿಪುಷ್ಪ** (न०) ಕನ್ನೈದಿಲೆ ಹೂವು, ಉತ್ಪಲ.

**रात्रिमट ರಾತ್ರಿಮಟ** (पुं०) 1. ರಾಕ್ಷಸ. रात्रौ अटति — अट (गतौ) "अच्" (३-१-१३४)। "सन्ध्याबलो रात्रिमटो हनूषः शमनीषदः" त्रिकाण्ड०। पक्षे मुमभावे **रात्र्यटः ರಾತ್ರ್ಯಟಃ.** (वि०) 2. ರಾತ್ರಿಯಲ್ಲಿ ಸಂಚರಿಸುವವನು.

**रात्रिमणि ರಾತ್ರಿಮಣಿ** (पुं०) 1. ಚಂದ್ರ. रात्रेर्मणिरिव। 2. ಕರ್ಪೂರ.

**रात्रिवासस् ರಾತ್ರಿವಾಸಸ್** (न०) 1. ರಾತ್ರಿಕಾಲದಲ್ಲಿ ಉಡುವ ವಸ್ತ್ರ. 2. ಅಂಧಕಾರ, ಕತ್ತಲೆ.

**रात्रिविगम ರಾತ್ರಿವಿಗಮ** (पुं०) ಪ್ರಭಾತ, ಪ್ರಾತಃಕಾಲ. रात्रेर्विगमो यस्मिन्।

**रात्रिविश्लेषगामिन् ರಾತ್ರಿವಿಶ್ಲೇಷಗಾಮಿನ್** (पुं०) ಚಕ್ರವಾಕ ಪಕ್ಷಿ. रात्रौ विश्लेषं विच्छेदं गच्छति — **गम्लृ** (गतौ) "णिनिः" (३-२-७८)।

**रात्रिहास ರಾತ್ರಿಹಾಸ** (पुं०) ಬಿಳಿನೈದಿಲೆ. रात्रौ हासो विकासो यस्य। रात्रेर्हास इव वा।

**रात्रिहिण्डक ರಾತ್ರಿಹಿಂಡಕ** (पुं०) ರಾಜನ ಅಂತಃಪುರದ ಕಾವಲುಗಾರ. रात्रौ हिण्डति भ्रमति—हिडि (गतौ) "ण्वुल्" (३-१-१३३)।

**रात्री ರಾತ್ರೀ** (स्त्री०) ರಾತ್ರಿ, ಇರುಳು. रा (दाने) "त्रिप्" (उ० ४-६७)। वा "ङीष्" (ग० ४-१-४५)।

**रात्र्यट ರಾತ್ರ್ಯಟ** (पुं०) 1. ರಾಕ್ಷಸ. रात्रौ अटति—अट (गतौ) "अच्" (३-१-१३४)। (वि०) 2. ರಾತ್ರಿಯ ಕಾಲದಲ್ಲಿ ಸಂಚರಿಸುವವನು.

**रात्र्यन्ध ರಾತ್ರ್ಯಂಧ** (पुं०) 1. ವಾಯಸ ಮುಂತಾದ ಪಕ್ಷಿ. रात्रावन्धः दृष्टिशून्यः। (वि०) 2. ಸಂಜೆಗಣ್ಣಿನವನು, ರಾತ್ರಿಕಾಲದಲ್ಲಿ ಕಣ್ಣು ಕಾಣಿಸದವನು. ದೇವದಾರುವಿನ ಚೂರ್ಣವನ್ನು ಆಡಿನ ಮೂತ್ರದಲ್ಲಿ ಕಲಸಿ ಇಪ್ಪತ್ತೊಂದು ವಾರಗಳಕಾಲ ಆ ಅಂಜನವನ್ನು ಕಣ್ಣಿಗೆ ಹಾಕಿದರೆ ಇರುಳುಗಣ್ಣಿನ ದೋಷವು ನಾಶವಾಗುವುದು. "देवदारोश्च वै चूर्णं अजामूत्रेण भावयेत्। एकविंशति वै वारमक्षिणी तेन चाञ्जयेत्। रात्र्यन्धता पटलता नश्येदिति विनिश्चयः" गरुडपुराणम्।

**राद्ध ರಾದ್ಧ** (वि०) 1. ಸಿದ್ಧವಾದ, ಪಕ್ವವಾದ. राध (संसिद्धौ) कर्त० "क्तः" (३-४-७२)। 2. ಸಫಲವಾದ, ಯಶಸ್ವಿಯಾದ. 3. ಸಿದ್ಧವಾದ, ಸಜ್ಜಾಗಿರುವ. 4. ಸಮಾಧಾನಪಡಿಸಲ್ಪಟ್ಟ, ಒಲಿಸಿಕೊಳ್ಳಲ್ಪಟ್ಟ. राध कर्म० "क्तः" (३-२-१०२)। 5. ಸಂಪಾದಿಸಲ್ಪಟ್ಟ, ಪಡೆಯಲ್ಪಟ್ಟ. "पूर्तेन तपसा यज्ञैर्दानैर्योगैः समाधिना। राद्धं निःश्रेयसं पुंसां मत्प्रीतिस्तत्त्वविन्मतम्" भाग० ३-९-४१। 6. ಸಾಧಿಸಲ್ಪಟ್ಟ, ನೆರವೇರಿಸಲ್ಪಟ್ಟ. 7. ಸಿದ್ಧವಾದ, ತೀರ್ಮಾನವಾದ.

**राद्धि ರಾದ್ಧಿ** (स्त्री०) 1. ಸಾಧನೆ, ನೆರವೇರಿಸುವಿಕೆ. राध (संसिद्धौ) "क्तिन्" (३-३-९४)। 2. ಸಫಲವಾಗುವಿಕೆ, ಕೈಗೂಡುವಿಕೆ. 3. ಪಡೆಯುವುದು, ಸಂಪಾದಿಸುವುದು.

**राध ರಾಧ** (पुं०) ವೈಶಾಖ ಮಾಸ. राधा विशाखा, तद्युता पौर्णमासी राधी—राधी अस्मिन्नस्ति "अण्" (४-२-२१)।

**राधन ರಾಧನ** (न०) 1. ಪ್ರಾಪ್ತಿ, ಲಾಭ, ಗಳಿಕೆ. राध (संसिद्धौ) भावे "ल्युट्" (३-३-११५)। 2. ಸಾಧನೆ. 3. ಉಪಾಯ. 4. ತೃಪ್ತಿ, ಸಂತೋಷ. "राधनं प्राप्तितोषयोः। साधने" हेम०। (स्त्री०) **—ना —ನಾ.** 5. ಭಾಷಣ. "राधनं साधने प्राप्तौ राधना भाषणे स्त्रियाम्" मेदि०।

**राधरङ्क ರಾಧರಂಕ** (पुं०) 1. ನೇಗಿಲು. 2. ಶೀಕರ, ನೀರಿನ ತುಂತುರು, ಜಲಕಣ. 3. ಆಲಿಕಲ್ಲು, ವರ್ಷೋಪಲ. "राधरङ्कः पुमान् सीरे शीकरे च घनोपले" मेदि०।

**राधा ರಾಧಾ** (स्त्री०) 1. ವಿಶಾಖಾನಕ್ಷತ್ರ. राध (संसिद्धौ) "अच्" (३-१-१३४)। "राधा विशाखा" अम०। 2. ಶ್ರೀಕೃಷ್ಣನ ಸಖಿಯಾದ ಒಬ್ಬ ಗೋಪಾಂಗನೆ. "मेघैर्मेदुरमम्बरं वनभुवः श्यामास्तमालद्रुमैः नक्तं भीरुरयं त्वमेव तदिमं राधे गृहं प्रापय। इत्थं नन्दनिदेशतश्चलितयोः प्रत्यध्वकुञ्जद्रुमं राधामाधवयोर्जयन्ति यमुनाकूले रहःकेलयः" गीतगो०। 3. ಕರ್ಣನ ಸಾಕುತಾಯಿ. 4. ವಿದ್ಯುತ್ತು, ಮಿಂಚು. 5. ವಿಷ್ಣುಕ್ರಾಂತ ಗಿಡ. 6. ಬಿಲ್ಲುಗಾರನ ಒಂದು ನಿಲುವು, ಬಾಣ ಪ್ರಯೋಗಿಸುವಾಗ ನಿಲ್ಲುವ ಒಂದು ಭಂಗಿ. 7. ನೆಲ್ಲಿಗಿಡ. "राधा चित्रभेदे च धन्विनाम्। गोपी विशाखामलकी विष्णुक्रान्तासु विद्युति" मेदि०। "राधा कर्णस्योपमाता विशाखागोपिकासु च। ना वैशाखे" नानार्थर०।

**राधाकान्त ರಾಧಾಕಾಂತ, —पति —ಪತಿ, —रमण —ರಮಣ** (पुं०) ರಾಧೆಯ ಪತಿಯಾದ ಶ್ರೀಕೃಷ್ಣ. राधायाः कान्तः पतिः रमणो वा।

**राधातनय ರಾಧಾತನಯ, —सुत —ಸುತ, —सूनु —ಸೂನು** (पुं०) ರಾಧೆಯ ಮಗನಾದ ಕರ್ಣ. राधायाः तनयः सुतः सूनुर्वा।

**राधी ರಾಧೀ** (स्त्री०) ವೈಶಾಖಮಾಸದ ಹುಣ್ಣಿಮೆ. राधया युक्ता पौर्णमासी।

**राधाभेदिन् ರಾಧಾಭೇದಿನ್** (पुं०) ಅರ್ಜುನ. राधां धन्विनां चित्रविशेषं भिनत्ति—भिदिर् (विदारणे) "णिनिः" (३-२-७८)।

**राधेय ರಾಧೇಯ** (पुं०) ರಾಧೆಯ ಮಗನಾದ ಕರ್ಣ. राधाया अपत्यम् "ढक्" (४-१-१२०)। ರಾಧೆಯು ಕರ್ಣನನ್ನು ಪುತ್ರನೆಂದು ಭಾವಿಸಿ ಪೋಷಿಸಿದುದರಿಂದ ಅಪತ್ಯಾರ್ಥದಲ್ಲಿ ಪ್ರತ್ಯಯ ವಿಹಿತವಾಗಿದೆ.

**राप्य ರಾಪ್ಯ** (वि०) ಹೇಳಲ್ಪಡುವ. रप (व्यक्तायां वाचि) कर्म० "ण्यत्" (३-१-१२६)।

**राभस्य ರಾಭಸ್ಯ** (न०) 1. ವೇಗ. रभसस्य भावः "ष्यञ्" (५-१-१२४)। 2. ಹರ್ಷ, ಸಂತೋಷ.

**राम ರಾಮ** (ಪುಂ०) 1. ಶ್ರೀರಾಮ, ರಾಮಚಂದ್ರ, ದಶರಥನ ಜ್ಯೇಷ್ಠ ಪುತ್ರ. रमन्ते योगिनोऽस्मिन्—रमु (क्रीडायाम्) "घञ्" (३-३-१२१)। "राशब्दो विश्ववचनो मश्चापीश्वरवाचकः। विश्वानामीश्वरो यो हि तेन रामः प्रकीर्तितः" ब्रह्मवै०। "पितुर्निदेशाद्वनवासमेवं निस्तीर्य रामः प्रतिपन्नराज्यः। धर्मार्थकामेषु समां प्रपेदे यथा तथैवावरजेषु वृत्तिम्" रघु० १४-२१। [ಶ್ರೀ ಮಹಾವಿಷ್ಣುವಿನ ಹತ್ತು ಅವತಾರಗಳಲ್ಲಿ ಶ್ರೀ ರಾಮಾವತಾರವು ಏಳನೆಯದು. ಶ್ರೀರಾಮನು ರಾಕ್ಷಸರ ನಿಗ್ರಹಕ್ಕಾಗಿ ದಶರಥನ ಜ್ಯೇಷ್ಠಪತ್ನಿಯಾದ ಕೌಸಲ್ಯೆಯ ಗರ್ಭದಲ್ಲಿ ಮನುಷ್ಯ ರೂಪದಿಂದ ಅವತರಿಸಿದನು. ಶಬ್ದಪ್ರಪಂಚದಲ್ಲಿ ಅತಿಮಧುರವೂ ಸರಳವೂ ಆಹ್ಲಾದಕರವೂ ಪಾವನವೂ ಸಕಲಸಂಕಷ್ಟಗಳನ್ನೂ ಪರಿಹರಿಸಿ ಪರಮಪುರುಷಾರ್ಥವನ್ನು ಕೊಡಲು ಸಮರ್ಥವೂ ಆದ "ರಾಮ" ಎಂಬ ನಾಮಧೇಯವನ್ನು ಮನಸಾ ಯೋಚಿಸಿ ವಸಿಷ್ಠಮಹರ್ಷಿಯು "ರಾಮ" ಎಂದು ನಾಮಕರಣಮಾಡಿದರು. "राम इत्यभिरामेण वपुषा तस्य चोदितः। नामधेयं गुरुश्चक्रे जगत्प्रथममङ्गलम्" रघु० १०-६७। ಪ್ರಾಪ್ತವಯಸ್ಕನಾದ ಶ್ರೀರಾಮನನ್ನು ವಿಶ್ವಾಮಿತ್ರ ಮಹರ್ಷಿಯು ತನ್ನ ಯಾಗದ ಸಂರಕ್ಷಣೆಯ ವ್ಯಾಜದಿಂದ ಕರೆದುಕೊಂಡುಹೋಗಿ ಜನಕರಾಜನ ತನುಜೆಯಾದ ಸೀತೆಯೊಡನೆ ವಿವಾಹ ಮಾಡಿಸಿದನು. ದಶರಥನು ಶ್ರೀರಾಮನಿಗೆ ಪಟ್ಟಾಭಿಷೇಕಕ್ಕೆ ಯತ್ನಿಸಿದಾಗ ಪರಮಾತ್ಮನು ತನ್ನ ಸಂಕಲ್ಪದಂತೆ ಕೈಕೆಯಿಯ ಮೂಲಕ ವಿಘ್ನವುಂಟುಮಾಡಿಸಿ ಅವತಾರದ ಉದ್ದೇಶದ ಸಾಫಲ್ಯಕ್ಕಾಗಿ ವನವಾಸದ ವ್ಯಾಜದಿಂದ ಅರಣ್ಯಕ್ಕೆ ತೆರಳಿ ಅಲ್ಲಿ ಮಹರ್ಷಿಗಳ ತಪಸ್ಸು ಮತ್ತು ಯಜ್ಞಗಳಿಗೆ ನಾನಾರೀತಿಯಿಂದ ತೊಂದರೆಯುಂಟು ಮಾಡುತ್ತಿದ್ದ ರಾಕ್ಷಸರನ್ನು ಸಂಹರಿಸುತ್ತ ಮುಖ್ಯವಾದ ರಾವಣನ ನಿಗ್ರಹಕ್ಕೆ ಸಂಕಲ್ಪಿಸಿ ಶೂರ್ಪಣಖೆಯ ಮೂಲಕ ರಾವಣನಿಗೆ ರಾಕ್ಷಸರ ವಧೆಯ ವೃತ್ತಾಂತ ತಿಳಿಯುವಂತೆ ಮಾಡಿ ರಾವಣನಿಂದ ಸೀತಾಪಹಾರ ರೂಪವಾದ ಅಪರಾಧ ಮಾಡಿಸಿ ರಾವಣನೊಡನೆ ಯುದ್ಧಕ್ಕಾಗಿ ವಾನರೇಶ್ವರನಾದ ಸುಗ್ರೀವನ ಸಖ್ಯವನ್ನು ಮಾಡಿಕೊಂಡು ವಾನರ ಸೇನೆಯೊಡನೆ ಸಮುದ್ರತರಣಮಾಡಿ ರಾವಣನನ್ನು ಯುದ್ಧದಲ್ಲಿ ಸಂಹರಿಸಿ ಸೀತಾದೇವಿಯೊಡನೆ ಅಯೋಧ್ಯೆಗೆ ಬಿಜಯಮಾಡಿ ಪಟ್ಟಾಭಿಷಿಕ್ತನಾಗಿ ಹನ್ನೊಂದು ಸಹಸ್ರ ವರ್ಷಗಳಕಾಲ ಧರ್ಮದಿಂದ ಪ್ರಜಾಪರಿಪಾಲನ ಮಾಡಿದನು.] 2. ಪರಶುರಾಮ, ಜಮದಗ್ನಿ ಮಹರ್ಷಿಯ ಪುತ್ರ. "रामेण त्रिःसप्तकृत्वो ह्रदानां चित्रं चक्रे पञ्चकं क्षत्रियास्रैः" माघ० १८-७०। ["परशुराम" ಪದದಲ್ಲಿ ನೋಡಿ]. 3. ಬಲರಾಮ. ಬಲರಾಮನು ವಸುದೇವನ ಪತ್ನಿಯಾದ ದೇವಕಿಯ ಏಳನೆಯ ಗರ್ಭದಲ್ಲಿ ಜನಿಸಿದನು. ಬಲರಾಮನು ಆದಿಶೇಷಾವತಾರ. [ವಿವರಕ್ಕೆ "बलराम" ಪದದಲ್ಲಿ ನೋಡಿ]. "ओष्ठेन रामो रामोष्ठबिम्बचुम्बनचुञ्चुना" माघ० २-१४। 4. ವರುಣ, ನೀರಿನ ಅಧಿದೇವತೆ. 5. ಅಶ್ವ, ಕುದುರೆ. 6. ಒಂದು ಜಾತಿಯ ಜಿಂಕೆ. (ನಂ०) 7. ಕುಷ್ಠರೋಗ. 8. ಚಕ್ಕೋತದ ಸೊಪ್ಪು. (ವಿಂ०) 9. ಕಪ್ಪಗಿರುವ, ಕೃಷ್ಣವರ್ಣದ. 10. ಬಿಳಿಯ ಬಣ್ಣದ. 11. ಸುಂದರವಾದ, ಮನೋಹರವಾದ. (स्त्री०) **-मा -ಮಾ.** 12. ಸುಂದರಿ, ಚೆಲುವಾದ ಹೆಂಗಸು. रमते—रमु (क्रीडायाम्) "णः" (३-१-१४०)। "आबद्धप्रचुरपरार्ध्यकिंकिणीको रामाणामनवरतोदगाहभाजाम्" माघ० ८-४५। 13. ಹಿಂಗು. 14. ನದಿ, ಹೊಳೆ. "रामा योषा हिङ्गुनद्योः क्लीबं वास्तूककुष्ठयोः। ना राघवे च वरुणे रैणुकेये हलायुधे। हये च पशुभेदे च त्रिषु चारौ सितेऽसिते" मेदि०।

**रामक ರಾಮಕ** (ಪುಂ०) 1. ಬಟ್ಟೆಯ ಹೊಲಿಗೆ ಮತ್ತು ಬಣ್ಣಹಾಕುವುದರಿಂದ ಜೀವಿಸುವವನು. "मौकल्यो रामको वस्त्रस्यूतिरञ्जनजीवनात्" वैज०। 2. ದೂತತನದಿಂದ ಜೀವಿಸುವವನು. "धीवरो मार्गसंत्राणात् रामको दौत्यजीवनात्" वैज०।

**रामगिरि ರಾಮಗಿರಿ** (ಪುಂ०) ಒಂದು ಪರ್ವತ. ಈ ಪರ್ವತವು ಮಧ್ಯಪ್ರದೇಶದಲ್ಲಿ ನಾಗಪುರದ ಸಮೀಪದಲ್ಲಿರುವುದು. ಪೂರ್ವದಲ್ಲಿ ಶಂಬೂಕನು ತಪಸ್ಸುಮಾಡುತ್ತಿದ್ದಾಗ ಶ್ರೀರಾಮನು ಆತನನ್ನು ಸಂಹರಿಸಿದ್ದು ಇದೇ ಪರ್ವತದಲ್ಲಿ. ಕಾಳಿದಾಸ ಕವಿಯು ಮೇಘದೂತ ಕಾವ್ಯದಲ್ಲಿ ವರ್ಣಿಸಿರುವುದೂ ಇದೇ ಪರ್ವತ. "यक्षश्चक्रे जनकतनयास्नानपुण्योदकेषु स्निग्धच्छायातरुषु वसतिं रामगिर्याश्रमेषु" मेघ० १-१।

**रामचन्द्र ರಾಮಚಂದ್ರ** (ಪುಂ०) ಶ್ರೀರಾಮ, ದಶರಥ ಮಹಾರಾಜನ ಜ್ಯೇಷ್ಠ ಪುತ್ರ, ಶ್ರೀಮಹಾವಿಷ್ಣುವಿನ ಒಂದು ಅವತಾರ. रामश्चन्द्र इव।

**रामजननी ರಾಮಜನನೀ** (स्त्री०) 1. ಶ್ರೀರಾಮನ ತಾಯಿ ಕೌಸಲ್ಯಾದೇವಿ. 2. ಪರಶುರಾಮನ ತಾಯಿ ರೇಣುಕಾದೇವಿ. 3. ಬಲರಾಮನ ತಾಯಿ ರೋಹಿಣೀ ದೇವಿ.

**रामठ ರಾಮಠ** (ನಂ०) 1. ಹಿಂಗು. रमन्तेऽनेन — रमु (क्रीडायाम्) "अठः" वृद्धिश्च (उ० १-१०१)।

"बाह्लीकं हिङ्गु रामठम्" अम०। (पुं०) 2. ಒಂದು ದೇಶ. 3. ಅಂಕೋಲೆ ಮರ.

**रामणीयक ರಾಮಣೀಯಕ** (ನಂ) 1. ಸೌಂದರ್ಯ. ಚೆಲುವು. रमणीयस्य भावः "वुञ्" (५-१-१३२)। "सा रामणीयकनिधेरधिदेवता वा सौन्दर्यसारसमुदायनिकेतनं वा" मालती० १-२४। (वि०) 2. ಸುಂದರವಾದ, ಚೆಲುವಾದ.

**रामदूत ರಾಮದೂತ** (पुं०) ಆಂಜನೇಯ, ಶ್ರೀರಾಮಚಂದ್ರನ ಒಬ್ಬ ಸೇವಕ. रामस्य दूतः।

**रामनवमी ರಾಮನವಮೀ** (स्त्री०) ಚೈತ್ರ ಶುಕ್ಲನವಮಿ, ಶ್ರೀರಾಮನ ಅವತಾರದ ದಿನ.

**रामभद्र ರಾಮಭದ್ರ** (पुं०) ಶ್ರೀರಾಮಚಂದ್ರ. राम एव भद्रः मङ्गलप्रदत्वात्।

**रामा ರಾಮಾ** (स्त्री०) "राम" ಪದದ (स्त्री०) ನೋಡಿ.

**रामायण ರಾಮಾಯಣ** (ನಂ) ಶ್ರೀರಾಮನ ಚರಿತ್ರೆಯನ್ನು ವರ್ಣಿಸುವ ಪ್ರಸಿದ್ಧವಾದ ಮಹಾಕಾವ್ಯ, ವಾಲ್ಮೀಕಿ ಮಹರ್ಷಿಯಿಂದ ರಚಿತವಾದ ಆದಿಕಾವ್ಯ ಮತ್ತು ಎಲ್ಲಾ ಕವಿಗಳಿಗೂ ಒಂದು ಆಕರಗ್ರಂಥ. रामस्य अयनमधिकृत्य कृतो ग्रन्थः "अण्" (४-३-८७)। ರಾಮಾಯಣ ಗ್ರಂಥದ ಪ್ರಮಾಣ :

| | |
|---|---|
| ಇದರ ಸರ್ಗಗಳು | 500 |
| ಒಟ್ಟು ಶ್ಲೋಕಗಳು | 24000 |

(1) ಬಾಲಕಾಂಡ (2) ಅಯೋಧ್ಯಾಕಾಂಡ (3) ಅರಣ್ಯಕಾಂಡ (4) ಕಿಷ್ಕಿಂಧಾಕಾಂಡ (5) ಸುಂದರಕಾಂಡ (6) ಯುದ್ಧಕಾಂಡ ಮತ್ತು (7) ಉತ್ತರಕಾಂಡಗಳೆಂದು ಸಪ್ತಕಾಂಡಗಳಿರುವುವು. "प्राप्तराज्यस्य रामस्य वाल्मीकिर्भगवान् ऋषिः। चकार चरितं कृत्स्नं विचित्रपदमर्थवत्। चतुर्विंशत्सहस्राणि श्लोकानामुक्तवान् ऋषिः। तथा सर्गशतान् पञ्च षट्काण्डानि तथोत्तरम्" रामा० बालकाण्डम्। ಶ್ರೀಮಹಾವಿಷ್ಣುವು ಶ್ರೀರಾಮರೂಪದಿಂದ ಅವತರಿಸಿದ ಪರತತ್ತ್ವವೆಂದು ಶ್ರೀರಾಮಾಯಣದ ಸಪ್ತಕಾಂಡಗಳಲ್ಲಿಯೂ ಪ್ರತಿಪಾದಿತವಾಗಿದೆ. "श्रीविष्णोः प्रथमेकाण्डे जगज्जननहेतुता। द्वितीये स्थितिहेतुत्वं तृतीये मोक्षदायिता। चतुर्थे गुणसम्पत्तिः पञ्चमे सर्वहर्तृता। षष्टे वेदान्तवेद्यत्वं सप्तमे स्रष्टृहेतुता। एवं विष्णुः परं तत्त्वं रामात्मेति सुनिश्चितम्"। ಈ ರೀತಿಯಾದ ಪರತತ್ತ್ವದ ಪ್ರಾಪ್ತಿಗೆ ಉಪಾಯಭೂತವಾದ ಶರಣಾಗತಿಯು ಶ್ರೀಮದ್ವಾಲ್ಮೀಕಿರಾಮಾಯಣದಲ್ಲಿ ಪ್ರಾರಂಭದಿಂದ ಉಪಸಂಹಾರದವರೆಗೂ ನಿರೂಪಿಸಲ್ಪಟ್ಟಿರುವುದರಿಂದ ಈ ರಾಮಾಯಣಕ್ಕೆ "**ಶರಣಾಗತಿ ಶಾಸ್ತ್ರ**"ವೆಂದು ಪ್ರಸಿದ್ಧಿಯಿದೆ. ಪ್ರಾರಂಭದಲ್ಲಿ "देवगन्धर्वयक्षाश्च ततस्त्वां शरणं गताः" ಎಂದು ರಾವಣವಧರೂಪವಾದ ಫಲಕ್ಕಾಗಿ ದೇವಜಾತಿಯ ಶರಣಾಗತಿಯು ಉಕ್ತವಾಗಿದೆ. ಅನಂತರ "इह मे स्थण्डिले शीघ्रं कुशानास्तर सारथे। आर्यं प्रत्युपवेक्ष्यामि यावन्मे न प्रसीदति" ಎಂದು ಶ್ರೀರಾಮಪಟ್ಟಾಭಿಷೇಕರೂಪ ಫಲಕ್ಕಾಗಿ ಭರತನ ಶರಣಾಗತಿ. "नगरस्थो वनस्थो वा त्वं नो राजा जनेश्वर" ಎಂದು ದಂಡಕಾರಣ್ಯವಾಸಿಗಳಾದ ಋಷಿಗಳಿಂದ ರಾಕ್ಷಸವಧರೂಪಫಲಕ್ಕಾಗಿ ಶರಣಾಗತಿ. "स पित्रा च परित्यक्तः सुरैश्च समहर्षिभिः। त्रीन् लोकान् संपरिक्रम्य तमेव शरणं गतः" ಎಂದು ಕಾಕಾಸುರನ ಶರಣಾಗತಿ. ಅನಂತರ ಸುಗ್ರೀವನ ಶರಣಾಗತಿ. "सर्वलोकशरण्याय राघवाय महात्मने। निवेदयत मां क्षिप्रं विभीषणमुपस्थितम्" ಎಂದು ವಿಭೀಷಣನ ಶರಣಾಗತಿ. ಈ ರೀತಿ ರಾಮಾಯಣದ ಆದ್ಯಂತ ಶರಣಾಗತಿ ನಿರೂಪಿತವಾಗಿರುವುದರಿಂದ ಇದು ಶರಣಾಗತಿಶಾಸ್ತ್ರವಾಯಿತು. "श्रीमद्भागवतं शास्त्रं मूलमन्त्रोपबृंहणम्। चरमश्लोकतात्पर्यग्राहकं भारतं महत्। इदं रामायणं शास्त्रं द्वयमन्त्रोपबृंहणम्"।

**रामिल ರಾಮಿಲ** (पुं०) 1. ಪತಿ, ಗಂಡ. 2. ಕಾಮ, ಮನ್ಮಥ. "रामिलो रमणे कामे" हेम०।

**राम्भ ರಾಂಭ** (पुं०) 1. ವೇಣುದಂಡ, ಬಿದಿರಿನ ಕೋಲು. 2. ಸಂನ್ಯಾಸಿಯ ದಂಡ. रम्भस्य वेणोः विकारः "अण्" (४-३-१४१)। "पालाशो दण्ड आषाढो व्रते राम्भस्तु वैणवः" अम०।

**राल ರಾಲ** (पुं०) ಸಜ್ಜರಸ, ಸರ್ಜವೃಕ್ಷದ ರಸ, ಮತ್ತಿಮರದ ಹಾಲು. न राति दुःखम् — रा (दाने) "लक्" बाहु०।

**राव ರಾವ** (पुं०) ಶಬ್ದ, ಸದ್ದು, ಧ್ವನಿ.

**रावण ರಾವಣ** (पुं०) ರಾಕ್ಷಸರ ರಾಜ, ರಾಕ್ಷಸಾಧಿಪತಿ, ಲಂಕಾಪುರದ ದೊರೆ. विश्रवसोऽपत्यं पुमान् "अण्" (४-१-९२)। प्रकृतेः रवणादेशः। रावयति—रु (शब्दे) + णिच् "ल्युः" (३-१-१३४)। इति वा। "यस्माल्लोकत्रयं चैतत् रावितं भयमागतम्। तस्मात्त्वं रावणो नाम नाम्ना वीरो भविष्यसि" रामा०। "स रावणो

नाम निकामभीषणं बभूव रक्षः क्षतरक्षणं दिवः" माघ० १-४८। [ರಾವಣನು ಬ್ರಹ್ಮನ ಮಾನಸಪುತ್ರನಾದ ಪುಲಸ್ತ್ಯಮುನಿಯ ಮೊಮ್ಮಗನಾದ ವಿಶ್ರವಸ್ಸಿನ ಮಗ. ಇವನ ತಾಯಿ ಕೈಕಸಿ. ಕುಂಭಕರ್ಣ ಮತ್ತು ವಿಭೀಷಣರು ಇವನ ಸಹೋದರರು. ರಾವಣನು ವೇದಾಧ್ಯಯನ ಸಂಪನ್ನ. ಇವನು ಗೋಕರ್ಣದಲ್ಲಿ ತಪಸ್ಸುಮಾಡಿ ಬ್ರಹ್ಮನನ್ನು ಮೆಚ್ಚಿಸಿ ಮನುಷ್ಯರು ಹೊರತು ಮತ್ತಾರಿಂದಲೂ ತನಗೆ ಮರಣ ಕೊಡದೆಂದು ವರವನ್ನು ಪಡೆದನು. ನಂದಿಯನ್ನು ಹಾಸ್ಯಮಾಡಿ ಕಪಿಗಳ ಮೂಲಕ ತನ್ನ ವಂಶ ನಿರ್ಮೂಲವಾಗಲೆಂದು ಶಾಪಹೊಂದಿದನು. ಕೈಲಾಸ ಪರ್ವತವನ್ನು ಎತ್ತಲು ಹೋಗಿ ಅದರ ಭಾರವನ್ನು ತಡೆಯಲಾರದೆ ಕೂಗಿಕೊಳ್ಳಲು ಪರಮೇಶ್ವರನು ಇವನಿಗೆ ದೀರ್ಘಾಯುಷ್ಯವನ್ನೂ ರಾವಣನೆಂಬ ಹೆಸರನ್ನೂ ಅನುಗ್ರಹಿಸಿದನು. ಬೃಹಸ್ಪತಿಯ ಮೊಮ್ಮಗಳಾದ ವೇದವತಿಯನ್ನು ಬಲಾತ್ಕರಿಸಿದಾಗ ಆಕೆ ಅಗ್ನಿಪ್ರವೇಶ ಮಾಡುತ್ತ "ಮತ್ತೊಂದು ಜನ್ಮದಲ್ಲಿ ಅಯೋನಿಜೆಯಾಗಿ ಹುಟ್ಟಿ ನಿನ್ನ ನಾಶಕ್ಕೆ ಕಾರಣಳಾಗುತ್ತೇನೆ" ಎಂದು ಶಪಿಸಿದಳು. ರಂಭೆಯನ್ನು ಬಲಾತ್ಕರಿಸಿ "ಪರಸ್ತ್ರೀಯನ್ನು ಮತ್ತೆ ಬಲಾತ್ಕರಿಸಿದರೆ ಅದೇ ನಿನಗೆ ಮೃತ್ಯುವಾಗಲಿ" ಎಂಬ ಶಾಪಪಡೆದನು. ಅಯೋನಿಜೆಯಾಗಿ ಜನಿಸಿದ (ವೇದವತಿ) ಸೀತೆಯು ಶ್ರೀರಾಮನೊಡನೆ ಅರಣ್ಯವಾಸದಲ್ಲಿದ್ದಾಗ ಅವಳ ಸೌಂದರ್ಯಾತಿಶಯವನ್ನು ಕೇಳಿ ತಿಳಿದ ರಾವಣನು ಮಾರೀಚನ ಸಾಹಾಯ್ಯದಿಂದ ಸೀತೆಯನ್ನು ಅಪಹರಿಸಿ ಲಂಕೆಯಲ್ಲಿಟ್ಟಿದ್ದನು. ವಿಭೀಷಣಾದಿಗಳು ಮಾಡಿದ ಉಪದೇಶವನ್ನೂ ತ್ರಿಜಟೆಯು ತಿಳಿಸಿದ ದುರ್ನಿಮಿತ್ತಗಳನ್ನೂ ಲಕ್ಷಿಸದೆ ಕುಂಭಕರ್ಣ ಮಹಾಪಾರ್ಶ್ವ ಮುಂತಾದವರ ಸಲಹೆಯಂತೆ ಯುದ್ಧಕ್ಕೆ ಸನ್ನದ್ಧನಾಗಿ ವಾನರಸೇನೆಯೊಡನೆ ಬಂದ ಶ್ರೀರಾಮನೊಡನೆ ಘೋರ ಯುದ್ಧ ಮಾಡಿ ಶ್ರೀರಾಮನಿಂದ ಹತನಾದನು.] "रावणस्यापि रामास्तो भित्वा हृदयमाशुगः। विवेश भुवमाख्यातुमुरगेभ्य इव प्रियम्" रघु० १२-९१। "रामरावणयोर्युद्धं रामरावणयोरिव"।

**रावणारि ರಾವಣಾರಿ** (पुं०) ಶ್ರೀರಾಮಚಂದ್ರ. रावणस्य अरिः।

**रावणि ರಾವಣಿ** (पुं०) ರಾವಣನ ಮಗ, ಇಂದ್ರಜಿತ್ತು. रावणस्य अपत्यं पुमान् "इञ्" (४-१-९५)।

**राशि ರಾಶಿ** (पुं०) 1. ಧಾನ್ಯ ಮೊದಲಾದುವುಗಳ ಗುಪ್ಪೆ, ಗುಡ್ಡೆ. अश्नुते — अश (व्याप्तौ) "इण्" रुडागमश्च (उ० ४-१३२)। "राशिर्मणीनामिव गारुडानां सपद्मरागः फलितो विभाति" रघु० १३-५३। 2. ಮೇಷ ಮೊದಲಾದ ಜ್ಯೋತಿರ್ಮಂಡಲದ ಹನ್ನೆರಡನೆಯ ಒಂದು ಭಾಗ. 27 ನಕ್ಷತ್ರಗಳ 12ನೆಯ ಒಂದು ಭಾಗ. ಎರಡೂ ಕಾಲು (2¼) ನಕ್ಷತ್ರಗಳ ಗುಂಪು. **ಹನ್ನೆರಡು ರಾಶಿಗಳು:** (1) मेषः (2) वृषभः (3) मिथुनम् (4) कर्काटकः (5) सिंहः (6) कन्या (7) तुला (8) वृश्चिकः (9) धनुः (10) मकरः (11) कुम्भः ಮತ್ತು (12) मीनः। 2¼ ನಕ್ಷತ್ರಗಳಿಗೆ ಒಂದು ರಾಶಿಯಂತೆ 27 ನಕ್ಷತ್ರಗಳಿಗೆ 12 ರಾಶಿಗಳು. ಒಂದು ನಕ್ಷತ್ರಕ್ಕೆ 4 ಪಾದಗಳು. 2¼ ನಕ್ಷತ್ರಗಳಿಗೆ 9 ಪಾದಗಳು. "राशिर्मेषादिपुञ्जयोः" मेदि०।

**ರವಿ ಮೊದಲಾದ ನವಗ್ರಹಗಳು ದ್ವಾದಶ (12) ರಾಶಿಗಳಲ್ಲಿ ಸಂಚರಿಸುವ ಕಾಲ:**

| | | |
|---|---|---|
| ಸೂರ್ಯನು ಒಂದು ರಾಶಿಯಲ್ಲಿ | | 1 ತಿಂಗಳು |
| ಚಂದ್ರ | ,, | 2¼ ದಿನಗಳು |
| ಕುಜ | ,, | ಮೂರು ಪಕ್ಷಗಳು (45 ದಿನಗಳು) |
| ಬುಧ | ,, | 18 ದಿನಗಳು |
| ಗುರು | ,, | 1 ವರ್ಷ (12 ತಿಂಗಳು) |
| ಶುಕ್ರ | ,, | 28 ದಿನಗಳು |
| ಶನಿ | ,, | 2½ ವರ್ಷಗಳು (30 ತಿಂಗಳು) |
| ರಾಹು ಮತ್ತು ಕೇತು | ,, | 1½ ವರ್ಷಗಳು (18 ತಿಂಗಳು) |

"रविर्मासं निशानाथः सपाददिवसद्वयम्। पक्षत्रयं भूमिपुत्रो बुधोऽष्टादशवासरान्॥ वर्षमेकं सुराचार्यश्चाष्टाविंशदिनं भृगुः। शनिः सार्धद्वयं वर्षं स्वर्भानुः सार्धवत्सरम्। एवं प्रमाणात् सकलाः स्वराशिं भुञ्जते ग्रहाः" ज्योतिस्तत्त्वम्।

**राशिचक्र ರಾಶಿಚಕ್ರ** (न०) ಮೇಷ ಮೊದಲಾದ ದ್ವಾದಶ (12) ರಾಶಿಗಳಿಂದ ಕೂಡಿದ ಒಂದು ಮಂಡಲ (ವೃತ್ತ). राशीनां चक्रम्। ರಾಶಿಗಳ ಮಂಡಲ, ಕುಂಡಲಿ.

**राशिभोग ರಾಶಿಭೋಗ** (पुं०) ದ್ವಾದಶ ರಾಶಿಗಳಲ್ಲಿ ಸೂರ್ಯ ಮೊದಲಾದ ಗ್ರಹಗಳ ಸಂಚಾರ.

**राश्यधिपति ರಾಶ್ಯಧಿಪತಿ** (ಪುಂ) ದ್ವಾದಶ (12) ರಾಶಿಗಳ ಅಧಿಪತಿಗಳು.

| ರಾಶಿಗಳು | ಅಧಿಪತಿ |
|---|---|
| ಮೇಷ, ವೃಶ್ಚಿಕ | ಕುಜ |
| ವೃಷಭ, ತುಲಾ | ಶುಕ್ರ |
| ಮಿಥುನ, ಕನ್ಯಾ | ಬುಧ |
| ಕರ್ಕಾಟಕ | ಚಂದ್ರ |
| ಸಿಂಹ | ಸೂರ್ಯ |
| ಧನುಸ್ಸು, ಮೀನ | ಗುರು |
| ಮಕರ, ಕುಂಭ | ಶನಿ |

**राष्ट्र ರಾಷ್ಟ್ರ** (ನಂ) 1. ಜನಪದ, ದೇಶ. राजति—राजृ (दीप्तौ) "ष्ट्रन्" (उ० ४-१५८)। ಇದು ಸಪ್ತ (7) ರಾಜ್ಯಾಂಗಗಳಲ್ಲೊಂದು. "स्वाम्यमात्यसुहृत्कोशराष्ट्रदुर्गबलानि च । राज्याङ्गानि" अम०। 2. ನೂರಕ್ಕಿಂತಲೂ ಹೆಚ್ಚು ಗ್ರಾಮಗಳಿಂದ ಕೂಡಿದ ದೇಶ. "राष्ट्रं तु विषयः सोऽपि युक्तो ग्रामैः शताधिकैः" वैज०। (ಪುಂ ನಂ) 3. ಜಂತು, ಪ್ರಾಣಿ. "राष्ट्रोऽस्त्री विषये जन्तौ" वैज०। 4. ಉಪದ್ರವ, ವಿಪ್ಲವ, ದುರ್ಘಟನೆ. "राष्ट्रं स्यादुपवर्तने। उपद्रवे क्लीबपुंसोः" मेदि०।

**राष्ट्रिक ರಾಷ್ಟ್ರಿಕ** (ಪುಂ) ರಾಷ್ಟ್ರದಲ್ಲಿ ವಾಸಮಾಡುವವನು.

**राष्ट्रिका ರಾಷ್ಟ್ರಿಕಾ** (स्त्री०) ಮುಳ್ಳು ಬದನೆಕಾಯಿ, ಹೆಗ್ಗುಳ್ಳ. "प्रचोदनी कुली क्षुद्रा दुस्पर्शा राष्ट्रिकेत्यपि" अम०।

**राष्ट्रिय ರಾಷ್ಟ್ರಿಯ** (ಪುಂ) 1. ರಾಷ್ಟ್ರದಲ್ಲಿ ಹುಟ್ಟಿ ವಾಸಮಾಡುವವನು. राष्ट्रे जातः भवो वा "घः" (४-२-९३)। "राष्ट्रियैः सह तद्राष्ट्रं क्षिप्रमेव विनश्यति" मनु० १०-६१। 2. (ನಾಟ್ಯೋಕ್ತಿಯಲ್ಲಿ) ರಾಜನ ಭಾವಮೈದುನ. राष्ट्रेऽधिकृतः—राष्ट्र "घः"। "राजश्यालस्तु राष्ट्रियः" अम०। 3. ರಾಜ, ದೊರೆ. "ततः संप्रेषयेद्राष्ट्रे राष्ट्रियाय च दर्शयेत्" भा० शान्ति० ८५-१२।

**रास ರಾಸ** (ಪುಂ) 1. ಗೋಪಾಲಕರ ಕ್ರೀಡೆ, ರಾಸಕ್ರೀಡೆ. रासृ (शब्दे) "घञ्" (३-३-१८)। "तत्रारभत गोविन्दो रासक्रीडामनुव्रतैः। स्त्रीरत्नैरन्वितः प्रीतैरन्योन्याबद्धबाहुभिः। रासोत्सवः सम्प्रवृत्तो गोपीमण्डलमण्डितः। योगेश्वरेण कृष्णेन तासां मध्ये द्वयोर्द्वयोः" भाग० १०-३३-२, ३। 2. ಶಬ್ದ, ಧ್ವನಿ, ಸದ್ದು. 3. ನರ್ತನ, ಕುಣಿತ.

**रासक ರಾಸಕ** (ನಂ) ಉಪರೂಪಕಗಳಲ್ಲೊಂದು ಭೇದ. **ಇದರ ಲಕ್ಷಣ:** ಇದರಲ್ಲಿ ಐದು ಪಾತ್ರಗಳಿರಬೇಕು. ಮುಖ ಮತ್ತು ನಿರ್ವಹಣ ಸಂಧಿಗಳು ಮಾತ್ರ. ಭಾರತೀ ಮತ್ತು ಕೈಶಿಕೀ ವೃತ್ತಿಗಳು. ಸೂತ್ರಧಾರನಿಲ್ಲ. ಒಂದು ಅಂಕ ಮಾತ್ರ. ಪ್ರಸಿದ್ಧಳಾದ ನಾಯಿಕೆ. ಮೂರ್ಖ ನಾಯಕ. ಈ ಲಕ್ಷಣಗಳಿಂದ ಕೂಡಿರುವುದು ರಾಸಕ. "रासकं पञ्चपात्रं स्यान्मुखनिर्वहणान्वितम्। भाषाविभाषाभूयिष्ठं भारती कैशिकीयुतम्। असूत्रधारमेकाङ्कं सवीथ्यङ्गं कलान्वितम्। श्लिष्टनान्दीयुतं ख्यातनायिकं मूर्खनायकम्" सा० द० ६-२८८-९०।

**रासन ರಾಸನ** (ನಂ) 1. ಶಬ್ದಮಾಡುವುದು, ಧ್ವನಿಕೊಡುವುದು. 2. ನರ್ತನ ಮಾಡಿಸುವುದು, ಕುಣಿದಾಡಿಸುವುದು. रासृ (शब्दे)+णिच् "ल्युट्" (३-३-११५)। (वि०) 3. ನಾಲಗೆಗೆ ಸಂಬಂಧಿಸಿದ. रसनाया इदम् "अण्" (४-३-१२०)।

**रासभ ರಾಸಭ** (ಪುಂ) ಗರ್ದಭ, ಕತ್ತೆ. रासते — रासृ (शब्दे) "अभच्" (उ० ३-१२५)। "भूरेणुना रासभधूसरेण तिरोहिते वर्त्मनि लोचनानाम्" किरा० १३-७। स्त्रियां "ङीष्" (४-१-६३)। -भी -ಭೀ.

**रासमण्डल ರಾಸಮಂಡಲ** (ನಂ) ನರ್ತನಕ್ಕಾಗಿ ಸರಪಣಿಯ ಹೆಣಿಗೆಯಂತೆ ಇಬ್ಬಿಬ್ಬರ ಮಧ್ಯದಲ್ಲಿ ಸುತ್ತಾಡಲು ಮಂಡಲಾಕಾರವಾಗಿ ನಿಲ್ಲುವುದು, ಶ್ರೀಕೃಷ್ಣನ ರಾಸಕ್ರೀಡಾ ಮಂಡಲ.

**रासेरस ರಾಸೇರಸ** (ಪುಂ) 1. ಗೋಷ್ಠಿ, ಸಭೆ. 2. ಕ್ರೀಡೆ, ಆಟ, ನರ್ತನ. 3. ಶೃಂಗಾರರಸ. 4. ಷಷ್ಠೀಜಾಗರ, ಪ್ರಸವವಾದನಂತರ ಆರನೆಯ ದಿನದ ರಾತ್ರಿ. 5. ರಸಸಿದ್ಧಿ, ರಸದ ನೈಪುಣ್ಯ. रासे क्रीडाविषये रसः "अलुक्" (६-३-९)।

**रास्ना ರಾಸ್ನಾ** (स्त्री०) 1. ಸಣ್ಣ ರಾಸ್ನೆ. रासृ (शब्दे) "नः" (उ० ३-१५)। "एलापर्णी तु सुवहा रास्ना युक्तरसा च सा" अम०। 2. ಈಶ್ವರೀಹಂಬು, ಸರ್ಪಾಕ್ಷಿ. "नाकुली सुरसा रास्ना सुगन्धा गन्धनाकुली" अम०।

**राहु ರಾಹು** (ಪುಂ) 1. ಒಬ್ಬ ರಾಕ್ಷಸ, ಸಿಂಹಿಕೆಯೆಂಬ ರಾಕ್ಷಸಿಯ ಮಗ. रहति गृहीत्वा त्यजति चन्द्रम्—रह (त्यागे) "उण्" बाहु०। ರಾಹುವು ನವಗ್ರಹಗಳಲ್ಲಿ ಎಂಟನೆಯ ಗ್ರಹ. ಸಮುದ್ರ ಮಥನದಿಂದ ಲಬ್ಧವಾದ ಅಮೃತವನ್ನು ಪರಮಾತ್ಮನು ದೇವತೆಗಳಿಗೆ ಹಂಚುತ್ತಿದ್ದಾಗ ದೇವತೆಗಳ ಮಧ್ಯದಲ್ಲಿ ರಾಹುವೂ ಬಂದು

ಕಳಿತಿದ್ದುದನ್ನು ಕೂಡ ಸೂರ್ಯ-ಚಂದ್ರರು ವಿಷ್ಣುವಿಗೆ ಈ ವಿಷಯವನ್ನು ತಿಳಿಸಿದರು. ವಿಷ್ಣುವು ರಾಹುವಿನ ಶಿರಶ್ಛೇದನ ಮಾಡಿದನು. ಅದರಿಂದ ಕುಪಿತನಾದ ರಾಹುವು ಸೂರ್ಯ-ಚಂದ್ರರಿಗೆ ಪರಮಶತ್ರುವಾಗಿ ಅವರ ಮೇಲೆ ಆಕ್ರಮಣ ಮಾಡುತ್ತಿರುವನು. ಅದೇ ಗ್ರಹಣ. ಶಿರಶ್ಛೇದನ ಮಾಡಿದಾಗ ರಾಹುವು ಕೊಂಚ ಅಮೃತಪಾನ ಮಾಡಿದ್ದರಿಂದ ಜೀವವು ಹೋಗದೆ ಶಿರಸ್ಸು ಮತ್ತು ದೇಹಗಳು ಬೇರೆ ಬೇರೆಯಾಗಿ ರಾಹು ಮತ್ತು ಕೇತು ಎಂಬ ಹೆಸರು ಪಡೆದವು. ರಾಹುವು ಒಂದು ಪಾಪಗ್ರಹ. ಕನ್ಯಾರಾಶಿ ಈ ಗ್ರಹಕ್ಕೆ ಸ್ವಕ್ಷೇತ್ರ. ಸಿಂಹರಾಶಿ ಮೂಲ ತ್ರಿಕೋಣ. ಮಿಥುನ ರಾಶಿಯು ಉಚ್ಚ. ಧನುಸ್ಸು ನೀಚ ರಾಶಿ. **ರಾಹುಗ್ರಹದ ದಶಾವರ್ಷಗಳು 18.** ಇತರ ಗ್ರಹಗಳ **ದಶೆಗಳಲ್ಲಿ ರಾಹುವಿನ ಅಂತರ್ದಶಾ (ಭುಕ್ತಿ) ಮಾನ:**

| ದಶೆ | ವರ್ಷ | ಮಾಸಗಳು | ದಿನಗಳು |
|---|---|---|---|
| ರವಿದಶೆ | — | 10 | 24 |
| ಚಂದ್ರದಶೆ | 1 | 6 | — |
| ಕುಜದಶೆ | 1 | 0 | 18 |
| ರಾಹುದಶೆ | 2 | 8 | 12 |
| ಗುರುದಶೆ | 2 | 4 | 24 |
| ಶನಿದಶೆ | 2 | 10 | 6 |
| ಬುಧದಶೆ | 2 | 6 | 18 |
| ಕೇತುದಶೆ | 1 | 0 | 18 |
| ಶುಕ್ರದಶೆ | 3 | 0 | 0 |

**ರಾಹುದಶೆಯಲ್ಲಿ ತನ್ನ (ಸ್ವ) ಮತ್ತು ಇತರ ಗ್ರಹಗಳ ಅಂತರ್ದಶಾ (ಭುಕ್ತಿ) ಮಾನ:**

| ಭುಕ್ತಿ | ವರ್ಷ | ಮಾಸಗಳು | ದಿನಗಳು |
|---|---|---|---|
| ಸ್ವಭುಕ್ತಿ | 2 | 8 | 12 |
| ಗುರುಭುಕ್ತಿ | 2 | 4 | 24 |
| ಶನಿಭುಕ್ತಿ | 2 | 10 | 6 |
| ಬುಧಭುಕ್ತಿ | 2 | 6 | 18 |
| ಕೇತುಭುಕ್ತಿ | 1 | 0 | 18 |
| ಶುಕ್ರಭುಕ್ತಿ | 3 | 0 | 0 |
| ರವಿಭುಕ್ತಿ | 0 | 10 | 24 |
| ಚಂದ್ರಭುಕ್ತಿ | 1 | 6 | 0 |
| ಕುಜಭುಕ್ತಿ | 1 | 0 | 18 |

ರಾಹುವು 3, 6 ಮತ್ತು 11 ರಲ್ಲಿದ್ದರೆ ಶುಭಫಲಪ್ರದ ನಾಗುವನು.

**राहुग्रसन ರಾಹುಗ್ರಸನ** (नं०) ಸೂರ್ಯ ಚಂದ್ರರ ಗ್ರಹಣ, ರಾಹುವು ಸೂರ್ಯ ಚಂದ್ರರನ್ನು ನುಂಗುವುದು. राहोः ग्रसनम्। **–ग्रासः –ಗ್ರಾಸಃ, –ग्राहः –ಗ್ರಾಹಃ, –स्पर्शः –ಸ್ಪರ್ಶಃ.**

**राहुग्रस्त ರಾಹುಗ್ರಸ್ತ** (वि०) ರಾಹುವಿನಿಂದ ನುಂಗಲ್ಪಟ್ಟ (ಸೂರ್ಯ, ಚಂದ್ರ). राहुणा ग्रस्तः।

**राहुच्छत्र ರಾಹುಚ್ಛತ್ರ** (नं०) ಹಸಿಶುಂಠಿ.

**राहुबृहस्पतियोग ರಾಹುಬೃಹಸ್ಪತಿಯೋಗ** (पुं०) ಬೃಹಸ್ಪತಿ ಮತ್ತು ರಾಹು ಇವರ ಸಮಾಗಮ, ರಾಹುವಿನೊಡನೆ ಬೃಹಸ್ಪತಿಯು ಸೇರುವುದು. राहोः बृहस्पतिना योगः। ರಾಹು ಮತ್ತು ಗುರು ಇವರು ಒಂದು ರಾಶಿಯಲ್ಲಿ ಸೇರಿದಾಗ ವಿವಾಹ ಉಪನಯನ ಮುಂತಾದ ಮಂಗಳಕಾರ್ಯ ನಿಷಿದ್ಧ. "एकराशौ स्थितौ स्यातां यदि राहुबृहस्पती। विवाहव्रतयज्ञादि सर्वं तत्र परित्यजेत्" स्मृतिसारः।

**राहुभेदिन् ರಾಹುಭೇದಿನ್** (पुं०) ವಿಷ್ಣು. राहुं भिनत्ति —भिदिर् (विदारणे) "णिनिः" (३-२-७८)।

**राहूच्छिष्ट ರಾಹೂಚ್ಛಿಷ್ಟ** (पुं०) ಲಶುನ, ಬೆಳ್ಳುಳ್ಳಿ. राहोरुच्छिष्टः। "राहूच्छिष्टो रसोनकः" त्रिकाण्ड०।

**रिक्त ರಿಕ್ತ** (पुं०) 1. ಕ್ಷೀಣತಿಥಿಯುಳ್ಳ ಪಕ್ಷ, ತಿಥಿಯು ಕಡಮೆಬರುವ ಪಕ್ಷ. "क्षीयमाणतिथिः प्रायः पक्षो रिक्तः" वैज०। (नं०) 2. ಅರಣ್ಯ, ಕಾಡು. (वि०) 3. ಶೂನ್ಯವಾದ, ಬರಿದಾದ. रिच्यते स्म — रिच (वियोजनसंपर्चनयोः) "क्तः" (३-२-१०२)। "रिक्तं शून्ये वने" मेदि०। "रुद्धे गजेन सरितः सरुषावतारे रिक्तोदपात्रकरमास्त चिरं जनौघः" माघ० ५-३३। 4. ದರಿದ್ರ, ಬಡವ. "रिक्तः सर्वो भवति हि लघुः पूर्णता गौरवाय" मेघ० १-२०। स्वार्थे "कः"। **रिक्तकः ರಿಕ್ತಕಃ.**

**रिक्तता ರಿಕ್ತತಾ** (स्त्री०) 1. ಶೂನ್ಯವಾಗಿರುವಿಕೆ, ಬರಿದಾಗಿರುವಿಕೆ. रिक्तस्य भावः "तल्" (५-१-११९)। "पयस्यभिद्रवति भुवं युगावधौ सरित्पतिर्न हि समुपैति रिक्तताम्" माघ० १७-४०। 2. ದಾರಿದ್ರ್ಯ, ಬಡತನ. "त्वः"। **रिक्तत्वम् ರಿಕ್ತತ್ವಮ್.**

**रिक्तपाणि ರಿಕ್ತಪಾಣಿ** (पुं०) 1. ಬರಿಯಕೈ, ಹಣ್ಣು ಹೂವು ಮೊದಲಾದವು ಯಾವುದೂ ಇಲ್ಲದ ಕೈ. (वि०) 2. ಬರಿಯ ಕೈಯುಳ್ಳ, ಶೂನ್ಯವಾದ ಹಸ್ತವುಳ್ಳ. रिक्तः पाणिः यस्य। "रिक्तपाणिर्न पश्येत्तु राजानं दैवतं

गुरुम्। दैवज्ञं पुत्रकं मित्रं फलेन फलमादिशेत्"। "अहमपि देवीं प्रेक्षितुमरिक्तपाणिर्भवामि" माल० १।
**–हस्तः –ಹಸ್ತಃ.**

**रिक्ता ರಿಕ್ತಾ,** (स्त्री०) ರಿಕ್ತತಿಥಿ, (ಶುಕ್ಲ ಮತ್ತು ಕೃಷ್ಣ) ಪಕ್ಷಗಳ ಚತುರ್ಥಿ, ನವಮಿ ಮತ್ತು ಚತುರ್ದಶಿ ತಿಥಿಗಳು. "नन्दा भद्रा जया रिक्ता पूर्णा च तिथयः क्रमात्" तिथितत्त्वम्।

**रिक्थ ರಿಕ್ಥ** (न०) 1. ಧನ, ಹಣ. रिच्यते—रिचिर् (विरेचने) "थक्" (उ० २-७)। "बालदायादिकं रिक्थं तावद्राजानुपालयेत्। यावत्स स्यात्समावृत्तो यावच्चातीतशैशवः" मनु० ८-२७। 2. ಸ್ವತ್ತು, ಆಸ್ತಿ. "ऊर्ध्वं पितुश्च मातुश्च समेत्य भ्रातरः समम्। भजेरन् पैतृकं रिक्थमनीशास्ते हि जीवतोः" मनु० ९-१०४।

**रिक्थग्राह ರಿಕ್ಥಗ್ರಾಹ** (वि०) ಪಿತ್ರಾರ್ಜಿತ ಆಸ್ತಿಯ ಪಾಲುದಾರ, ಆಸ್ತಿಯ ಹಕ್ಕುದಾರ. रिक्थं गृह्णाति—ग्रह (उपादाने) "अण्" (३-२-१)।

**रिक्थग्राहिन् ರಿಕ್ಥಗ್ರಾಹಿನ್** (वि०) ಆಸ್ತಿಯ ಹಕ್ಕುದಾರ, ಪಾಲುದಾರ. रिक्थं गृह्णाति—ग्रह (उपादाने) "णिनिः" (३-२-७८)। **–भागिन् –ಭಾಗಿನ್, –हारिन् –ಹಾರಿನ್.**

**रिक्थिन् ರಿಕ್ಥಿನ್** (वि०) 1. ಐಶ್ವರ್ಯವಂತ, ಧನಿಕ. रिक्थमस्यास्ति "इनिः" (५-२-११५)। 2. ಆಸ್ತಿಯ ಪಾಲುದಾರ.

**रिङ्खण ರಿಂಖಣ** (न०) 1. ತೆವಳುವುದು, ಅಂಬೆಗಾಲಿಡುವುದು, ಹರಿದಾಡುವುದು. रिखि (गतौ) भावे "ल्युट्" (३-३-११५)। "मुक्त्वाथ रिङ्खणविधिं पादचङ्क्रमणक्षमः। कुमारः पञ्चवर्षीयः कलाभ्यासं विधास्यति"। 2. ಮಾರ್ಗಬಿಟ್ಟುಹೋಗುವುದು, ದಾರಿತಪ್ಪಿ ನಡೆಯುವುದು.

**रिङ्खा ರಿಂಖಾ** (स्त्री०) 1. ಅಶ್ವಗತಿಯ ಒಂದು ಭೇದ. 2. ನರ್ತನ. 3. ನಸುಗುನ್ನಿ ಗಿಡ. 4. ಕುದುರೆಯ ಗೊರಸು.

**रिङ्गण ರಿಂಗಣ** (न०) "रिङ्खण" ಪದದ ಅರ್ಥ. रिगि (गतौ) "ल्युट्" (३-३-११५)।

**रिपु ರಿಪು** (पुं०) 1. ವೈರಿ, ಶತ್ರು, ಹಗೆ. रपति—रप (व्यक्तायां वाचि) "कुः" इत् च (उ० १-२६)। "ध्रियते यावदेकोऽपि रिपुस्तावत्कुतः सुखम्। पुरः क्लिश्नाति सोमं हि सैंहिकेयोऽसुरद्रुहाम्" माघ० २-३५। 2. (ಜ್ಯೋತಿಷದಲ್ಲಿ) ಲಗ್ನದಿಂದ ಆರನೆಯ ಸ್ಥಾನ, ಶತ್ರುಸ್ಥಾನ. "षष्ठं च रिपुरित्याहुः क्षत इत्यभिधीयते"। 3. ಕಾಮ ಕ್ರೋಧ ಲೋಭ ಮೋಹ ಮದ ಮತ್ತು ಮಾತ್ಸರ್ಯಗಳೆಂಬ ಆರು ಶತ್ರುಗಳು, ಅರಿಷಡ್ವರ್ಗ.

**रिपुघातिन् ರಿಪುಘಾತಿನ್, –घ्न –ಘ್ನ, –सूदन –ಸೂದನ** (वि०) ಶತ್ರುವನ್ನು ನಾಶಪಡಿಸುವ, ಹಗೆಯನ್ನು ಕೊಲ್ಲುವ. रिपुं हन्ति—हन (हिंसागत्योः) "णिनिः" (३-२-८६)। "कः" (वा० ३-२-५)। रिपुं सूदयति—षूद (क्षरणे) + णिच् "ल्युः" (३-१-१३४) वा। स्त्रियां "ङीप्" (४-१-५)। **–घातिनी –ಘಾತಿನೀ.** "टाप्" (४-१-४)। **–घ्ना –ಘ್ನಾ, –सूदना –ಸೂದನಾ.**

**रिपुञ्जय ರಿಪುಂಜಯ** (वि०) ಶತ್ರುವನ್ನು ಜಯಿಸುವವನು. रिपुं जयति—जि (जये) "खच्" (३-२-४६)। मुमागमः (६-३-६७)।

**रिप्फ ರಿಪ್ಫ** (पुं०) ಲಗ್ನದಿಂದ ಹನ್ನೆರಡನೆಯ ಸ್ಥಾನ.

**रिप्र ರಿಪ್ರ** (न०) 1. ಪಾಪ. 2. ಧೂಳು. (वि०) 3. ಅಧಮ, ನೀಚ.

**रिरंसमाण ರಿರಂಸಮಾಣ** (वि०) ರಮಿಸಲು ಇಚ್ಛಿಸುತ್ತಿರುವ, ಆಟವಾಡಲು ಅಪೇಕ್ಷಿಸುತ್ತಿರುವ. रन्तुमिच्छन्—रमु (क्रीडायाम्)+सन् "शानच्" (३-२-१२४)।

**रिरंसा ರಿರಂಸಾ** (स्त्री०) ಆಟವಾಡಲು ಅಪೇಕ್ಷೆ, ಕ್ರೀಡಿಸಲು ಆಸೆ. रन्तुमिच्छा—रमु (क्रीडायाम्) + सन् "अः" (३-३-१०२)।

**रिरंसु ರಿರಂಸು** (वि०) ಆಟವಾಡಲು ಅಪೇಕ್ಷೆಯುಳ್ಳ, ಕ್ರೀಡಿಸಲು ಇಚ್ಛೆಯುಳ್ಳ. रन्तुमिच्छुः—रमु—(क्रीडायाम्)+सन् "उः" (३-२-१६८)। "अथ रिरंसुममुं युगपद्गिरौ कृतयथास्वतरुप्रसवश्रिया" माघ० ६-१। "रिरंसवो यत्र सुराः प्रियाभिः" कुमा० ९-४५।

**रिश्य ರಿಶ್ಯ** (पुं०) ಜಿಂಕೆ, ಚಿಗರಿ, ಹುಲ್ಲೆ. रिशति—रिश (हिंसायाम्) "यक्" (उ० ४-१११)। "एणः कुरङ्गमो रिश्यः सादृश्यश्चारुलोचनः" त्रिकाण्ड०।

**रिषित ರಿಷಿತ** (वि०) ಹಿಂಸಿಸಲ್ಪಟ್ಟ, ಪೀಡಿಸಲ್ಪಟ್ಟ. रिष (हिंसायाम्) "क्तः" (३-२-१०२)। वा इडागमः (७-२-४८)। इडभावे रिष्टः।

**रिष्ट ರಿಷ್ಟ** (पुं०) 1. ಖಡ್ಗ, ಕತ್ತಿ. 2. ಅಂಟವಾಳದ ಗಿಡ. 3. ಸೀಗೆಗಿಡ. (न०) 4. ಕ್ಷೇಮ. 5. ಅಶುಭದ ಅಭಾವ, ಶುಭ. 6. ಅಶುಭ, ಅಮಂಗಳ. 7. ನಾಶ.

8. ಪಾಪ. 9. ತೊಂದರೆ, ಪೀಡೆ. (वि०) 10. ಪೀಡಿಸಲ್ಪಟ್ಟ. 11. ಅದೃಷ್ಟಹೀನ. रिष (हिंसायाम्) "क्तः" (३-२-१०२)। "रिष्टं क्षेमाशुभाभावे पुंसि खड्गे च फेनिले" मेदि०। "रिष्टं स्यादशुभक्षेमनाशनिस्त्रिंशपाप्मसु" नानार्थर०।

**रिष्टि ರಿಷ್ಟಿ** (पुं०) 1. ಖಡ್ಗ, ಕತ್ತಿ. रिष (हिंसायाम्) "क्तिच्" (३-३-१७४)। (स्त्री०) 2. ಅಶುಭ, ಅಮಂಗಳ. "रिष्टिः खड्गे नाऽशुभे स्त्री" मेदि०।

**रिष्य ರಿಷ್ಯ** (पुं०) ಜಿಂಕೆ, ಚಿಗರಿ, ಹುಲ್ಲೆ. रिष्यते—रिष (हिंसायाम्) "यक्" (उ० ४-१११)। "ऋश्य ऋष्यो रिश्यरिष्यौ एणः स्यादेणकोऽपि च" कोशः।

**रिष्व ರಿಷ್ವ** (वि०) ಘಾತುಕ, ಕೊಲ್ಲುವವನು. रिष (हिंसायाम्) "वन्" (उ० १-१५१)। निपा०।

**री ರೀ** (स्त्री०) 1. ಗತಿ, ಗಮನ, ಚಲನೆ. री (गतौ) "क्विप्" (३-२-१७८)। 2. ಶಬ್ದ, ಸದ್ದು. 3. ವಧೆ.

**रीढा ರೀಢಾ** (स्त्री०) 1. ಅವಹೇಳನ, ಅವಮಾನ, ತಿರಸ್ಕಾರ, ಪರಿಭವ. रिह (निन्दायाम्) "क्तः" निपा०। 2. ನಿಂದೆ, ದೂಷಣೆ. 3. ಅಗೌರವ.

**रीण ರೀಣ** (वि०) ಸೋರಿಹೋಗಿರುವ, ಸುರಿದುಹೋಗಿರುವ. रीङ् (प्रस्रवणे) "क्तः" (३-४-७२)।

**रीति ರೀತಿ** (स्त्री०) 1. ಹಿತ್ತಾಳೆ. रीयते—रीङ् (प्रस्रवणे) "क्तिच्" (३-३-१७४)। "रीतिः स्त्रियामारकूटः" अम०। 2. ಸ್ರವಿಸುವಿಕೆ, ಸೋರುವಿಕೆ. 3. ಲೋಹದ ಮಲ, ಕಬ್ಬಿಣ ಮೊದಲಾದುವುಗಳ ಕಿಲುಬು. 4. ಸೀಮೆ, ಎಲ್ಲೆ, ಗಡಿ. 5. ಸಂಚಾರ, ನಡೆ, ಗಮನ. "रीतिः प्रचारे स्यन्दे च लोहकिट्टारकूटयोः" विश्व०। "रीतिः स्त्रियां स्यन्दप्रचारयोः। पित्तले लोहकिट्टे च" मेदि०। 6. ವಾಕ್‌ಸರಣಿ, ವಾಕ್ಯಪ್ರಯೋಗದ ಕ್ರಮ, ರಸಾನುಗುಣವಾದ ಪದಗಳ ಜೋಡಣೆ, ಕಾವ್ಯಕ್ಕೆ ಆತ್ಮಭೂತವಾದ ರಸಗಳಿಗೆ ಅನುಗುಣವಾದ ಪದವಿನ್ಯಾಸ. "पदसंघटना रीतिरङ्गसंस्थाविशेषवत्। उपकर्त्री रसादीनाम्" सा० द० ९-१। ರೀತಿಯು ವೈದರ್ಭೀ ಗೌಡೀ ಪಾಂಚಾಲೀ ಮತ್ತು ಲಾಟೀ ಎಂದು ನಾಲ್ಕು ವಿಧ.

(1) ಲಲಿತ ಮತ್ತು ಕೋಮಲವರ್ಣಗಳಿಂದಲೂ ಮತ್ತು ಅಲ್ಪಸಮಾಸಗಳಿಂದಲೂ ಕೂಡಿದ ಪದವಿನ್ಯಾಸವು **ವೈದರ್ಭೀ ರೀತಿ.**

(2) ಸಮಾಸಭೂಯಿಷ್ಠವಾದ ಮತ್ತು ಮಹಾಪ್ರಾಣಾಕ್ಷರಗಳಿಂದ ಕೂಡಿದ ಸರಣಿಯು **ಗೌಡೀ ರೀತಿ.**

(3) ನಾಲ್ಕಾರು ಸಮಸ್ತಪದಗಳಿಂದಕೂಡಿದ ಶೈಲಿಯು **ಪಾಂಚಾಲೀ ರೀತಿ.**

(4) ವೈದರ್ಭೀಮಿಶ್ರವಾದ ಪಾಂಚಾಲೀರೀತಿಯು **ಲಾಟೀ ರೀತಿ.** सा० द० ९-२-५।

**रीतिपुष्प ರೀತಿಪುಷ್ಪ** (न०) ಕುಸುಮಾಂಜನ. रीतेः पित्तलस्य पुष्पमिव।

**रुक्प्रतिक्रिया ರುಕ್‌ಪ್ರತಿಕ್ರಿಯಾ** (स्त्री०) ರೋಗದ ಪ್ರತಿಕ್ರಿಯೆ, ಚಿಕಿತ್ಸೆ. रुजः प्रतिक्रिया।

**रुक्म ರುಕ್ಮ** (न०) 1. ಸುವರ್ಣ, ಚಿನ್ನ. रोचते शोभते —रुच (दीप्तौ) "मक्" कुश्च (उ० १-१४३)। 2. ಸ್ವರ್ಣಾಭರಣ, ಚಿನ್ನದ ಒಡವೆ. "परितश्च धौतमुखरुक्मविलसदहिमांशुमण्डलाः" माघ० १५-७८। 3. ಲೋಹ, ಕಬ್ಬಿಣ. (पुं०) 4. ಉಮ್ಮತ್ತಿ ಗಿಡ. 5. ನಾಗಕೇಸರ ವೃಕ್ಷ. 6. ಒಂದು ವಿಧ ಅಂಜನ. (वि०) 7. ಪ್ರಕಾಶಮಾನವಾದ. "रुक्मं हेम सुलोहं च" हेम०।

**रुक्मकारक ರುಕ್ಮಕಾರಕ** (पुं०) ಚಿನ್ನ ಮತ್ತು ಬೆಳ್ಳಿಯ ಕೆಲಸಮಾಡುವ ಅಕ್ಕಸಾಲೆ. रुक्मं स्वर्णाभरणं करोति—डुकृञ् (करणे) "अण्" (३-२-१)। स्वार्थे "कन्" (५-४-५)। "नाडिन्धमः स्वर्णकारः कलादो रुक्मकारके" अम०।

**रुक्मिणी ರುಕ್ಮಿಣೀ** (स्त्री०) ಭೀಷ್ಮಕರಾಜನ ಮಗಳು, ಶ್ರೀಕೃಷ್ಣನ ಹಿರಿಯ ರಾಣಿ. ರುಕ್ಮಿಣಿಯ ತಂದೆಯಾದ ಭೀಷ್ಮಕರಾಜನು ಇವಳನ್ನು ಶಿಶುಪಾಲನಿಗೆ ಕೊಟ್ಟು ವಿವಾಹ ಮಾಡಬೇಕೆಂದು ಗೊತ್ತುಮಾಡಿದ್ದು ರುಕ್ಮಿಣಿಗೆ ಇದು ಸಂಮತವಾಗದೆ ಶ್ರೀಕೃಷ್ಣನಿಗೆ ರಹಸ್ಯವಾಗಿ ಕಾಗದ ಬರೆದು ಕಳುಹಿಸಿದಳು. ಶ್ರೀಕೃಷ್ಣನು ಗೌರೀಪೂಜೆಗಾಗಿ ದೇವಸ್ಥಾನಕ್ಕೆ ಹೋಗಿದ್ದ ರುಕ್ಮಿಣಿಯನ್ನು ಅಪಹರಿಸಿ ಮದುವೆಯಾದನು. ರುಕ್ಮಿಣಿಯು ಮಹಾಲಕ್ಷ್ಮಿಯ ಅವತಾರವಾಗಿ ಶ್ರೀಕೃಷ್ಣನ ಪತ್ನಿಯಾದಳು. "राघवत्वेऽभवत् सीता रुक्मिणी कृष्णजन्मनि। अन्येषु चावतारेषु विष्णोरेषानपायिनी" पाद्मोत्तरखण्डः।

**रुक्मिन् ರುಕ್ಮಿನ್** (पुं०) 1. ಭೀಷ್ಮಕರಾಜನ ಹಿರಿಯ ಮಗ, ರುಕ್ಮಿಣಿಯ ಅಣ್ಣ. (वि०) 2. ಸ್ವರ್ಣವನ್ನು ಹೊಂದಿರುವವನು. रुक्ममस्यास्ति "इनिः" (५-२-११५)। 3. ಸ್ವರ್ಣದ ಆಭರಣವನ್ನು ಧರಿಸಿರುವವನು. 4. ಸ್ವರ್ಣದ ಮುಲಾಮು ಹಾಕಿದ ಆಭರಣ.

**रुक्ष ರುಕ್ಷ** (वि०) 1. ಕಠಿನವಾದ, ಒರಟಾಗಿರುವ. 2. ಸ್ನೇಹವಿಲ್ಲದ, ಜಿಡ್ಡಿನ ಅಂಶವಿಲ್ಲದ. 3. ನುಣುಪಾಗಿಲ್ಲದ,

**रुग्ण ರುಗ್ಣ** (वि०) 1. ರೋಗಪೀಡಿತನಾದವನು. 2. ಬಗ್ಗಿಸಲ್ಪಟ್ಟ, ವಕ್ರಮಾಡಲ್ಪಟ್ಟ. 3. ಒಡೆಯಲ್ಪಟ್ಟ, ಮುರಿಯಲ್ಪಟ್ಟ. रुजो (भङ्गे) "क्तः" (३-२-१०२)। नत्वम् (८-२-४५)। "भग्नोरुरोधः परिपूरिताम्भसः समस्थलीकृत्य पुरातनीर्नदीः" माघ० १२-६०।

**रुच–दीप्तावभिप्रीतौ च** (भ्वा० आत्म० अक० से०)। रोचते रोचेते रोचन्ते, रुरुचे रुरुचाते रुरुचिरे। रोचिता। रोचिष्यते। रोचताम्। अरोचत। ಇತ್ಯಾದಿ. लुङ्—वा परस्मैपदम्—अरोचत्, अरोचिष्ट।

**भावे** :—रुच्यते। रुच्यताम्। अरुच्यत। रुच्येत। अरोचि। ಇತ್ಯಾದಿ.

**णिचि** :—रोचयते। रोचयांचक्रे। रोचयिता। रोचयताम्। ಇತ್ಯಾದಿ.

1. ಪ್ರಕಾಶಿಸು, ಹೊಳೆ. "विकचबाणदलावलयोऽधिकं रुरुचिरे रुचिरेक्षणविभ्रमाः" माघ० ६-४७। 2. ಇಷ್ಟಪಡು, ಒಪ್ಪು, ಸಂಮತಿಸು. "यदेव रोचते यस्मै भवेत्तत्तस्य सुन्दरम्" हितो० २-५३। "न स्रजो रुरुचिरे रमणीभ्यः" किरा० ९-३५। "इयमिष्टगुणाय रोचतां रुचिरार्था भवतेऽपि भारती" किरा० २-५।

**रुच् ರುಚ್** (स्त्री०) 1. ಪ್ರಕಾಶ, ಬೆಳಕು. रुच (दीप्तौ) "क्विप्" (३-२-१७८)। "क्रान्तं रुचा काञ्चनवप्रभासा नवप्रभाजालभृतां मणीनाम्" माघ० ४-३। 2. ಕಾಂತಿ, ಪ್ರಭೆ. "भेजेऽभितः पातुकसिद्धसिन्धोरभूतपूर्वां रुचमम्बुराशेः" माघ० ३-३। 3. ಜ್ವಾಲೆ, ಉರಿ. 4. ಅಪೇಕ್ಷೆ, ಬಯಕೆ. "रुग्ज्वालाकान्तिवाञ्छासु" वैज०। 5. ಕಿರಣ, ಮರೀಚಿ. "क्षिप्ता इवेन्दोः स रुचोऽधिवेलं मुक्तावलीराकलयां चकार" माघ० ३-७३।

**रुचक ರುಚಕ** (पुं०) 1. ಮಾದಳದ ಗಿಡ. 2. ದಸ್ತ, ಹಲ್ಲು. 3. ಕಪೋತ, ಪಾರಿವಾಳ. 4. ನಿಷ್ಕ. रोचते—रुच (दीप्तावभिप्रीतौ च) "क्वुन्" (उ० २-३२)। (न०) 5. ಭೂಷಣ, ಅಶ್ವದ ಆಭರಣ. 6. ಹೂವಿನ ಮಾಲೆ. 7. ಲವಣ. 8. ಸದ್ಯಕ್ಷಾರ. 9. ಸೌವರ್ಚಲವಣ. 10. ಮಂಗಲದ್ರವ್ಯ. 11. ವಾಯಿವಿಳಂಗ. 12. ಗೋರೋಚನ. (वि०) 13. ಮನಸ್ಸಿಗೆ ಒಪ್ಪುವ, ರುಚಿಸುವ. 14. ಉತ್ಕಟವಾದ, ತೀಕ್ಷ್ಣವಾದ. "रुचको बीजपूरे च निष्के दन्तकपोतयोः। न द्वयोः सर्जिकाक्षारेऽप्यश्वाभरणमाल्ययोः। सौवर्चलेऽपि माङ्गल्यद्रव्ये चाप्युत्कटेऽपि च" मेदि०।

**रुचा ರುಚಾ** (स्त्री०) "रुच्" ಪದದ ಅರ್ಥ. रुच् वा "टाप्"। "आपं चैव हलन्तानां यथा वाचा निशा दिशा" भागुरिः।

**रुचि ರುಚಿ** (स्त्री०) 1. ಪ್ರಕಾಶ, ಬೆಳಕು. रुच (दीप्तावभिप्रीतौ च) "इन्" (उ० ४-११९)। 2. ಕಾಂತಿ, ಪ್ರಭೆ, ಶೋಭೆ. "रुचिमासने रुचिरधाम्नि बिभ्रतावलघुन्यथ न्यषदतां नृपाच्युतौ" माघ० १३-६४। 3. ಕಿರಣ, ರಶ್ಮಿ. "रुचिभर्तुरस्य विरहाधिगमादिति सन्ध्ययापि सपदि व्यगमि" माघ० ९-१७। 4. ಅಪೇಕ್ಷೆ, ಇಚ್ಛೆ, ಆಸೆ. "रुचिकरमपि नार्थवद्बभूव स्तिमितसमाधिशुचौ पृथातनूजे" किरा० १०-६२। 5. ಇಷ್ಟ, ಅಭಿರುಚಿ, ಪ್ರೀತಿ. "त्रैगुण्योद्भवमत्र लोकचरितं नानारसं दृश्यते नाट्यं भिन्नरुचेर्जनस्य बहुधाप्येकं समाराधनम्" माल० १-४। 6. ಅನುರಾಗ, ಪ್ರೇಮ, ಪ್ರೀತಿ. 7. ಆಸಕ್ತಿ 8. ಗೋರೋಚನ. 9. ರುಚಿ, ಸವಿ. 10. ಹಲ್ಲುಗಳು ಕಾಣುವಂತೆ ನಗುವುದು. "रुचिः स्त्री हसितं दृष्टदन्ते विहसितं श्रुते" वैज०। 11. ಹಸಿವು, ಊಟದ ಬಯಕೆ. "रुचिः स्त्री दीप्तौ शोभायामभिष्वङ्गाभिलाषयोः" मेदि०।

**रुचित ರುಚಿತ** (न०) 1. ಅಪೇಕ್ಷೆ, ಅಭಿಲಾಷೆ, ಬಯಕೆ. रुच (दीप्तावभिप्रीतौ च) "क्तः" (३-३-११४)। "वसामेह क्षपामेकां रुचितं यदि तेऽनघ" भा० वन० ९८-८२। (वि०) 2. ಇಷ್ಟವಾದ, ಅಪೇಕ್ಷಿತವಾದ. "मातले कश्चिदत्रापि रुचितस्ते वरो भवेत्" भा० उद्योग० १००-१६।

**रुचिर ರುಚಿರ** (न०) 1. ಮೂಲಂಗಿ. 2. ಲವಂಗ. 3. ಕುಂಕುಮ ಕೇಸರಿ. रुच (दीप्तौ) "किरच्" (उ० १-५२)। (वि०) 4. ಸುಂದರವಾದ, ಮನೋಹರವಾದ. "स्नान्तीनां बृहदमलोदबिन्दुचित्रौ रेजाते रुचिरदृशामुरोजकुम्भौ" माघ० ८-५३। 5. ಮಧುರವಾದ, ಸಿಹಿಯಾದ. रुचिं राति—रा (दाने) "कः" (३-२-३)। (स्त्री०) –रा –ರಾ. 6. ಗೋರೋಚನ.

**रुचिष्य ರುಚಿಷ್ಯ** (वि०) 1. ಸಿಹಿಯಾದ, ಮಧುರವಾದ. रुच्यते — रुच (दीप्तौ) "किष्यन्" (उ० ४-१७८)। "सिण्डाकी वातला सान्द्रा रुचिष्यानलदीपिनी" सुश्रुत०। 2. ಇಷ್ಟವಾದ.

**रुची ರುಚೀ** (स्त्री०) "रुचि" ಪದದಲ್ಲಿ ನೋಡಿ. वा "ङीष्" (ग० ४-१-४५)।

**रुचु ರುಚು** (पुं०) 1. ಕುರಿಯ ಆಕಾರದ ಬಿಳಿಯ ಜಿಂಕೆ. 2. ಹಂದಿಯ ಆಕಾರದ ಹಳದಿ ಜಿಂಕೆ. "रुचुस्तु शुक्लो मेषाभः स पीतः सूकराकृतिः" वैज०।

**रुच्य ರುಚ್ಯ** (पुं०) 1. ಪತಿ, ಗಂಡ. रोचते—रुच (दीप्तौ) "क्यप्" (३-१-११४)। "रुच्यः प्रियः पतिर्भर्ता सेक्ता वरयिता धवः" वैज०। 2. ಕತಕವೃಕ್ಷ, ಚಿಲ್ಲದ ಗಿಡ. "रुच्यस्तिक्तफलो गुच्छाफलः कतफलश्च सः" कल्पद्रु०। (न०) 3. ಸೌವರ್ಚಲವಣ, ಸದ್ಯಕ್ಷಾರ. "जरणं कृष्णलवणमक्ष्यं कोद्रविकं पुनः। रुच्यं स्यात्" कल्पद्रु०। (वि०) 4. ಸುಂದರವಾದ, ಮನೋಹರ ವಾದ. "कान्तं मनोहरं रुच्यम्" अम०।

**रुच्यकन्द ರುಚ್ಯಕಂದ** (पुं०) ಸೂರಣದ ಗಿಡ. रुच्यः कन्दो यस्य। "रुच्यकन्दस्तीव्रकन्दः सूरकन्दः सितोपरः" कल्पद्रु०।

**रुज् ರುಜ್** (स्त्री०) 1. ರೋಗ, ವ್ಯಾಧಿ, ಬೇನೆ. रुजति देहम्—रुजो (भङ्गे) "क्विप्" (वा० ३-२-१७८)। "इत्यदर्शितरुजोऽस्य मन्त्रिणः शश्वदूवुरघशङ्किनीः प्रजाः" रघु० १९-५२। 2. ಒಡೆಯುವಿಕೆ, ಮುರಿಯು ವಿಕೆ. "स्रस्ताङ्गसन्धौ विगताक्षपाटवे रुजा निकामं विकलीकृते रथे" माघ० १२-२५। 3. ನೋವು, ವೇದನೆ.

**रुजत् ರುಜತ್** (वि०) 1. ನೋವುಂಟುಮಾಡುತ್ತಿರುವ. 2. ಒಡೆಯುತ್ತಿರುವ, ಮುರಿಯುತ್ತಿರುವ. रुजो (भङ्गे) "शतृ" (३-२-१२४)। "रुजन्महेषून् बहुधाशुपातिनो मुहुः शरौघैरपवारयन् दिशः" किरा० १५-५१। स्त्रियां "ङीप्" (४-१-६)। **—ती —ತೀ, —न्ती —ನ್ತೀ.**

**रुजा ರುಜಾ** (स्त्री०) 1. ರೋಗ, ವ್ಯಾಧಿ. 2. ಭಂಗ, ಮುರಿಯುವಿಕೆ. रुजो (भङ्गे) "क्विप्" (वा० ३-२-१७८)। वा "टाप्"। 3. ನೋವು. "आपं चैव हलन्तानां यथा वाचा निशा दिशा" भागुरिः। "क्व रुजा हृदयप्रमाथिनी क्व च ते विस्मयनीयमायुधम्" माल० ३-२। "रुजात्वामयभङ्गयोः" हेम०। 4. ಹಿಂಸೆ, ಪೀಡೆ. रुज (हिंसायाम्) + णिच् "क्विप्"। "टाप्"।

**रुजाकर ರುಜಾಕರ** (पुं०) 1. ರೋಗ, ವ್ಯಾಧಿ. रुजायाः करः। (वि०) 2. ನೋವನ್ನುಂಟುಮಾಡುವ, ವೇದನೆಯನ್ನು ಕೊಡುವ.

**रुण्ड ರುಂಡ** (पुं०) 1. ತಲೆಯಿಲ್ಲದ ದೇಹ, ಕತ್ತಿಗೆ ಕೆಳಗಿನ ಶರೀರ. "रुण्डोऽशिराः कबन्धोऽस्त्री" वैज०। 2. ಶಿರಃಕಪಾಲ, ತಲೆಬುರುಡೆ. "वेल्लद्भैरवरुण्डखण्डनिकरैर्वीरो विधत्ते भुवम्" उ० रा० ५-६।

**रुण्डिका ರುಂಡಿಕಾ** (स्त्री०) 1. ಯುದ್ಧಭೂಮಿ. 2. ಮನೆಯ ಬಾಗಿಲಿನ ಹೊಸ್ತಿಲು. 3. ದೂತಿ. "रुण्डिका द्वारपिण्डयां च दूतिकायां रणक्षितौ" मेदि०।

**रुत ರುತ** (न०) ಶಬ್ದ, ಪಶು ಪಕ್ಷಿ ಮೊದಲಾದವುಗಳ ಕೂಗಾಟ. रु (शब्दे) "क्तः" (३-३-११४)। "तिरश्चां वाशितं रुतम्" अम०। "रुतमथ कृकवाकोस्तारमाकर्ण्य कल्ये" माघ० ११-९।

**रुतज्ञ ರುತಜ್ಞ** (वि०) ಪಕ್ಷಿಗಳ ಮಾತುಗಳನ್ನು ತಿಳಿದವನು, ಶಕುನ ಶಾಸ್ತ್ರವನ್ನು ತಿಳಿದವನು. रुतं जानाति—ज्ञा (अवबोधने) "कः" (३-२-३)।

**रुदत् ರುದತ್** (वि०) ಅಳುತ್ತಿರುವ, ರೋದನಮಾಡುತ್ತಿರುವ. रुदिर् (अश्रुविमोचने) "शतृ" (३-२-१२४)। "व्रीडया रुददिवालिविरावैर्नीलनीरजमगच्छदधस्तात्" माघ० १०-११। स्त्रियां "ङीप्" (४-१-६)। **—ती —ತೀ.** "दिवसं भृशोष्णरुचिपादहतां रुदतीमिवानवरतालिरुतैः" माघ० ९-३४।

**रुदथ ರುದಥ** (पुं०) 1. ಕುಕ್ಕುಟ, ಕೋಳಿ. रोदिति—रुदिर् (अश्रुविमोचने) "अथः" (उ० ३-११६)। 2. ಕುಕ್ಕುರ, ನಾಯಿ. "रुदथः कुक्कुटशुनोः" हेम०। 3. ಶಿಶು, ಮಗು.

**रुदित ರುದಿತ** (न०) ಅಳುವುದು, ರೋದನಮಾಡುವುದು. रुदिर् (अश्रुविमोचने) भावे "क्तः" (३-३-११४)। "नूनं तस्याः प्रबलरुदितोच्छूननेत्रं प्रियायाः" मेघ० २-२१।

**रुद्ध ರುದ್ಧ** (वि०) 1. ತಡೆಯಲ್ಪಟ್ಟ, ಪ್ರತಿಬಂಧಿಸಲಟ್ಟ. रुधिर् (आवरणे) "क्तः" (३-२-१०२)। "अम्भोधिरोधसि पृथुप्रतिमानभागरुद्धोरुदन्तमुसलप्रसरो निपेते" माघ० ५-३६। "रुद्धालोके नरपतिपथे सूचिभेद्यैस्तमोभिः" मेघ० १-३७। 2. ಆವರಿಸಲ್ಪಟ್ಟ, ಸುತ್ತುವರಿಯಲ್ಪಟ್ಟ. "गत्वोद्रेकं जघनपुलिने रुद्धमध्यप्रदेशः कामम्भूरुद्धमभुजलताः पूर्णनाभीह्रदान्तः" माघ० ७-७४। 3. ಮುತ್ತಿಗೆಹಾಕಲ್ಪಟ್ಟ. 4. ತಡೆದು ನಿಲ್ಲಿಸಲ್ಪಟ್ಟ.

**रुद्र ರುದ್ರ** (पुं०) 1. ಪರಶಿವ, ಪರಮೇಶ್ವರ, ಮಹಾದೇವ. रोदयति—रुदिर् (अश्रुविमोचने) + णिच् "रक्" (उ० २-२२)। णिचो लोपश्च। "इन्द्रो महेन्द्रः सुरनायको वा रुद्रस्त्रिणेत्रस्त्रिपुरान्तको वा" रामा०।

(ಪುಂ॰ ಬ॰ ವ॰) 2. ಏಕಾದಶ ರುದ್ರರು, ಗಣದೇವತೆಗಳ ಒಂದು ಗುಂಪು. रोदयन्त्यसुरान्। **ಏಕಾದಶ ರುದ್ರರು:** (1) अजैकपात् (2) अहिर्बुध्न्यः (3) विरूपाक्षः (4) सुरेश्वरः (5) जयन्तः (6) बहुरूपः (7) त्र्यम्बकः (8) अपराजितः (9) वैवस्वतः (10) सावित्रः ಮತ್ತು (11) हरः। "रुद्राणामपि मूर्धानः क्षतहुंकारशंसिनः" कुमा॰ २-२६। 3. ಅಗ್ನಿ, ಬೆಂಕಿ. 4. ಹನ್ನೊಂದು ಸಂಖ್ಯೆ. "रसै रुद्रैश्छिन्ना यमनसभलागः शिखरिणी" वृ॰ र॰।

**रुद्रकवच ರುದ್ರಕವಚ** (न॰) ಸಕಲ ಅವಯವಗಳನ್ನೂ ರಕ್ಷಿಸುವ ಈಶ್ವರನ ನಾಮಗಳು. "रुद्रो मामग्रतः पातु पृष्ठतः पातु शङ्करः। कपर्दी दक्षिणे पातु वामपार्श्वे तथा हरः। शिवःशिरो मे च पातु ललाटे नीललोहितः। नेत्रयोस्त्र्यम्बकः पातु मुखे पातु महेश्वरः। कर्णयोर्नासिकायां च जिह्वायां शम्भुरव्ययः। श्रीकण्टस्तु गले पातु बाह्वोः पातु पिनाकधृक्। हृदयं मे महादेवः ईश्वरस्तु तथोदरम्। नाभौ कुक्षौ कटिस्थाने पातु सर्वं प्रजापतिः। ऊरू जानू महादेवः पादौ पातु महेश्वरः। सर्वं रक्षतु भूतेशः सर्वगात्राणि यत्नतः" तन्त्रसा॰।

**रुद्रगण ರುದ್ರಗಣ** (पुं॰) ಈಶ್ವರನ ಪ್ರಮಥಗಣಗಳು.

**रुद्रज ರುದ್ರಜ** (पुं॰) 1. ಷಣ್ಮುಖ, ಕುಮಾರಸ್ವಾಮಿ. (न॰) 2. ಪಾದರಸ. रुद्रात् जायते—जनी (प्रादुर्भावे) "डः" (३-२-९८)।

**रुद्रभूमि ರುದ್ರಭೂಮಿ** (स्त्री॰) ಪಿತೃವನ.

**रुद्रविंशति ರುದ್ರವಿಂಶತಿ** (स्त्री॰) ಪ್ರಭವ ವಿಭವ ಮೊದಲಾದ ಅರವತ್ತು ಸಂವತ್ಸರಗಳಲ್ಲಿ ಮೂರನೆಯ (ಕೊನೆಯ) ಇಪ್ಪತ್ತು ಸಂವತ್ಸರಗಳು. ಮೊದಲನೆಯ ಇಪ್ಪತ್ತು ಸಂವತ್ಸರಗಳು ಬ್ರಹ್ಮದೇವತಾಕವಾದುವು. ಎರಡನೆಯ ಇಪ್ಪತ್ತು ಸಂವತ್ಸರಗಳು ವಿಷ್ಣುದೇವತಾಕವಾದುವು. ಮೂರನೆಯ (ಕೊನೆಯ) ಇಪ್ಪತ್ತು ಸಂವತ್ಸರಗಳು ರುದ್ರದೇವತಾಕವಾದುವು. "आद्या तु विंशतिर्ब्राह्मी द्वितीया वैष्णवी स्मृता। तृतीया रुद्रदैवत्या श्रेष्ठा मध्याधमा भवेत्"।

**रुद्रसावर्णि ರುದ್ರಸಾವರ್ಣಿ** (पुं॰) ಹದಿನಾಲ್ಕು ಮನುಗಳಲ್ಲಿ ಹನ್ನೆರಡನೆಯ ಮನು. ["इन्द्र" ಪದದಲ್ಲಿ ನೋಡಿ.]

**रुद्राक्ष ರುದ್ರಾಕ್ಷ** (पुं॰) 1. ರುದ್ರಾಕ್ಷ ವೃಕ್ಷ. (न॰) 2. ರುದ್ರಾಕ್ಷ ವೃಕ್ಷದ ಬೀಜ, ಜಪಮಾಲೆಗೆ ಉಪಯೋಗಿಸುವ ರುದ್ರಾಕ್ಷಿ. **ರುದ್ರಾಕ್ಷದ ಮಾಹಾತ್ಮ್ಯೆ.** "विना भस्मत्रिपुण्ड्रेण विना रुद्राक्षमालया। पूजितोऽपि महादेवो न स्यात्तस्य फलप्रदः"। **ರುದ್ರಾಕ್ಷದ ಭೇದಗಳು:** ರುದ್ರಾಕ್ಷವು ಒಂದರಿಂದ ಹದಿನಾಲ್ಕು ವದನಗಳವರೆಗೆ ಇರುವುದರಿಂದ ಹದಿನಾಲ್ಕು ಭೇದಗಳಾಗಿರುವುವು. ರುದ್ರಾಕ್ಷವನ್ನು ಮಂತ್ರವಿಲ್ಲದೆ ಧರಿಸಿದರೆ ದೋಷ. "विना मन्त्रेण यो धत्ते रुद्राक्षं भुवि मानवः। स याति नरकान् घोरान् यावदिन्द्राश्चतुर्दश"।

**रुद्राक्षमाला ರುದ್ರಾಕ್ಷಮಾಲಾ** (स्त्री॰) ರುದ್ರಾಕ್ಷಗಳಿಂದ ನಿರ್ಮಿತವಾದ ಜಪಮಾಲೆ. रुद्राक्षैः निर्मिता माला। "भस्मोद्धूलन भद्रमस्तु भवते रुद्राक्षमाले शुभं हा सोपानपरम्परे गिरिसुताकान्तालयालंकृते" कुव॰।

**रुद्राणी ರುದ್ರಾಣೀ** (स्त्री॰) ರುದ್ರನ ಪತ್ನಿ, ಪಾರ್ವತಿ. रुद्रस्य पत्नी — रुद्र "ङीष्" आनुक् च (४-१-४९)।

**रुद्रारि ರುದ್ರಾರಿ** (पुं॰) ಕಾಮ, ಮನ್ಮಥ. रुद्रोऽरिर्यस्य।

**रुधिर् – आवरणे** (रुधा॰ उभ॰ सक॰ अनि॰)। रुणद्धि, रुन्धे। रुरोध, रुरुधे। रोद्धा। रोत्स्यति, –ते। अरुधत्। अरौत्सीत्। ಇತ್ಯಾದಿ. 1. ತಡೆ, ಅಡ್ಡಿ ಮಾಡು, ಪ್ರತಿಬಂಧಿಸು. "आशाबन्धः कुसुमसदृशं प्रायशो ह्यङ्गनानां सद्यःपाति प्रणयि हृदयं विप्रयोगे रुणद्धि" मेघ॰ १-१०। 2. ಆವರಿಸು, ಸುತ್ತುವರಿ, ಬಳಸು. "रुणध्मि सवितुर्मार्गं भिनद्मि कुलपर्वतान्" भट्टि॰ ६-३५। 3. ತಡೆದು ನಿಲ್ಲಿಸು. "इदं रुणद्धि मां पद्मान्तःक्वणितषट्पदम्" विक्र॰ ४-४०। 4. ಮುತ್ತಿಗೆಹಾಕು. "रोत्स्यन्ति वारणघटा नगरं मदीयाः" मुद्रा॰ ४-१७।

**कर्मणि**:—रुध्यते। रुध्यताम्। अरुध्यत। रुध्येत। अरोधि। ಇತ್ಯಾದಿ.

**कृत्सु**:—रोद्धव्यम्। रोधनीयम्। रोध्यम्। रुद्धः। रुद्धवान्। रुन्धन्, –ती। रुन्धानः। रुद्धम्। रोधनम्।

**रुधिर ರುಧಿರ** (पुं॰) 1. ಅಂಗಾರಕ, ಕುಜ. 2. ಕೆಂಪು ಬಣ್ಣ. रुधिर् (आवरणे) "किरच्" (उ॰ १-५१)। (न॰) 3. ಮೈಯೊಳಗಿನ ಒಂದು ಧಾತು, ರಕ್ತ. "पानार्थे रुधिरं धातौ रक्षार्थं भुवनं शराः" माघ॰ १९-१०३। 4. ಕುಂಕುಮ ಕೇಸರಿ. "असृक्कुंकुमयोः क्लीबम्"। "रुधिरं भूसुते पुमान्" नानार्थर॰। "गन्धवद्रुधिरचन्दनोक्षिता" रघु॰ ११-२०।

**रुन्धत् ರುಂಧತ್** (वि॰) 1. ತಡೆಯುವ, ಅಡ್ಡಿ ಮಾಡುವ, ಪ್ರತಿಬಂಧಿಸುವ. रुधिर् (आवरणे) "शतृ" (३-२-१२४)।

2. ತಡೆಹಿಡಿಯುವ, ಹಿಡಿದು ನಿಲ್ಲಿಸುವ. स्त्रियां "ङीप्" (४-१-६)। —ती —ತೀ. "उत्तरीयविनयात् त्रपमाणा रुन्धती किल तदीक्षणमार्गम्" माघ० १०-४२।

**रुमा ರುಮಾ** (स्त्री०) 1. ಸುಗ್ರೀವನ ಹೆಂಡತಿ. 2. ಉಪ್ಪು ಸಮುದ್ರ. "रुमा सुग्रीवभार्यायां सैव स्याल्लवणाकरे" नानार्थर०।

**रुमाभव ರುಮಾಭವ** (न०) ಲವಣ, ಉಪ್ಪು.

**रुरु ರುರು** (पुं०) 1. ಹರಿಣ, ಜಿಂಕೆ, ಹುಲ್ಲೆ. रौति — रु (शब्दे) "क्रुन्" (उ० ४-१०३)। "तुरगवल्गनचञ्चलकुण्डलो विरुरुचे रुरुचेष्टितभूमिषु" रघु० ९-५१। 2. ಒಬ್ಬ ರಾಕ್ಷಸ. "दैत्यभेदे मृगे रुरुः" त्रिकाण्ड०। 3. ಸರ್ಪಕ್ಕಿಂತಲೂ ಕ್ರೂರವಾದ ಒಂದು ಪ್ರಾಣಿ. ಈ ಪ್ರಾಣಿಯಿಂದ ಈ ಲೋಕದಲ್ಲಿ ಪೀಡಿಸಲ್ಪಟ್ಟ ಜಂತುಗಳೇ ಮುಂದೆ ರುರುಗಳಾಗಿ ಹುಟ್ಟಿ ನರಕದಲ್ಲಿ ಅದನ್ನು ಹಿಂಸಿಸುವುವು. "इह लोकेऽमुना ये तु हिंसिता जन्तवः पुरा। त एव रुरवो भूत्वा परत्र पीडयन्ति तम्" देवीभा०। ಆದುದರಿಂದ ಆ ನರಕಕ್ಕೆ "रौरवः" ಎಂದು ಹೆಸರಾಯಿತು.

**रुरुक्षत् ರುರುಕ್ಷತ್** (वि०) 1. ಆವಿರ್ಭವಿಸಲು ಅಪೇಕ್ಷಿಸುತ್ತಿರುವ. रुह (बीजजन्मनि प्रादुर्भावे च) + सन् "शतृ" (३-२-१२४)। 2. ಬೆಳೆಯುಲು ಅಪೇಕ್ಷಿಸುವ.

**रुरुक्षा ರುರುಕ್ಷಾ** (स्त्री०) 1. ಆವಿರ್ಭವಿಸಲು ಅಪೇಕ್ಷೆ. रुह (बीजजन्मनि प्रादुर्भावे च) + सन् "अः" (३-३-१०२)। 2. ಬೆಳೆಯಲು ಅಪೇಕ್ಷೆ.

**रुरुक्षु ರುರುಕ್ಷು** (वि०) 1. ಆವಿರ್ಭವಿಸಲು ಅಪೇಕ್ಷಿಸುವ. रुह (बीजजन्मनि प्रादुर्भावे च)+सन् "उः" (३-२-१६८)। 2. ಬೆಳೆಯಲು ಅಪೇಕ್ಷಿಸುವ.

**रुरुदिषत् ರುರುದಿಷತ್** (वि०) ಅಳಲು ಇಚ್ಛಿಸುತ್ತಿರುವ. रोदितुमिच्छन् — रुदिर् (अश्रुविमोचने) + सन् "शतृ" (३-२-१२४)। स्त्रियां "ङीप्" (४-१-६)। —ती —ತೀ.

**रुरुदिषा ರುರುದಿಷಾ** (स्त्री०) ಅಳಲು ಆಸೆ. रोदितुमिच्छा —रुदिर् (अश्रुविमोचने)+सन् "अः" (३-३-१०२)। "रुरुदिषा वदनाम्बुरुहश्रियः सुतनु सत्यमलंकरणाय ते" माघ० ६-१७।

**रुरुदिषु ರುರುದಿಷು** (वि०) ಅಳಲು ಆಸೆಪಡುವ. रोदितुमिच्छुः — रुदिर् (अश्रुविमोचने) + सन् "उः" (३-२-१६८)।

**रुवथ ರುವಥ** (पुं०) 1. ಕುಕ್ಕುಟ, ಕೋಳಿ. 2. ಶಬ್ದ, ಸದ್ದು, ಧ್ವನಿ. "रुवथः कुक्कुटे ध्वनौ" वैज०।

**रुवु ರುವು** (पुं०) ಏರಂಡವೃಕ್ಷ, ಹರಳುಗಿಡ.

**रुवुक ರುವುಕ** (पुं०) ಏರಂಡವೃಕ್ಷ, ಹರಳುಗಿಡ.

**रुशत् ರುಶತ್** (वि०) ಹಿಂಸಿಸುತ್ತಿರುವ. रुश (हिंसायाम्) "शतृ" (३-२-१२४)। स्त्रियां "ङीप्" (४-१-६)। —ती —ತೀ, —न्ती —ನ್ತೀ.

**रुशती ರುಶತೀ** (स्त्री०) ಅಶುಭವಾದ ಮಾತು, ಅಮಂಗಳ ವಚನ. रुश (हिंसायाम्) "शतृ" (३-२-१२४)। "ङीप्" (४-१-६)।

**रुष् ರುಷ್** (स्त्री०) ಕೋಪ, ಸಿಟ್ಟು, ಮುನಿಸು. रुष (हिंसायाम्) "क्विप्" (वा० ३-३-९४)। "रुषा मिथो मिलद्दन्तिदन्तसंघर्षजोऽनलः" कुमा० १६-३२।

**रुषा ರುಷಾ** (स्त्री०) ಸಿಟ್ಟು, ಕೋಪ. रुष् "टाप्"। "आपं चैव हलन्तानां यथा वाचा निशा दिशा" भागुरिः।

**रुषित ರುಷಿತ** (वि०) 1. ಕೋಪಗೊಂಡ, ಸಿಟ್ಟುಮಾಡಿಕೊಂಡ. रुष (हिंसायाम्) "क्तः" (३-४-७२)। वा इडागमः (७-२-२८)। इडभावे **रुष्टः ರುಷ್ಟಃ**. "जघान रुषितो रुष्टान् त्वरितस्तूर्णमागतान्" भट्टि० ९-२०। (न०) 2. ರೋಷ, ಕೋಪ, ಸಿಟ್ಟು. ष भावे "क्तः" (३-३-११४)। स्त्रियां **रुष्टा ರುಷ್ಟಾ** "इत्थं शशापाद्रिसुता हुताशं रुष्टा रतानन्दसुखस्य भङ्गात्" कुमा० ९-१६।

**रुष्टि ರುಷ್ಟಿ** (स्त्री०) ಕ್ರೋಧ, ಕೋಪ, ಸಿಟ್ಟು. रुष (हिंसायाम्) "क्तिन्" (३-३-९४)।

**रुह — बीजजन्मनि प्रादुर्भावे च** (भ्वा० पर० अक० अनि०)। रोहति। रुरोह। रोढा। रोक्ष्यति। रोहतु। अरुक्षत्। 1. ಹುಟ್ಟು, ಜನ್ಮತಾಳು. 2. ಬೆಳೆ, ಚಿಗುರು, ಮೊಳಕೆಯೇಳು. "छिन्नोऽपि रोहति तरुः क्षीणोऽप्युपचीयते चन्द्रः" भर्तृ० १-७९।

**भावे**:—रुह्यते। रुरुहे। रोढा। रुह्यताम्। अरुह्यत। ಇತ್ಯಾದಿ.

**णिचि**:—रोपयति, —ते, रोहयति, —ते। रोहयां, रोपयां चकार, —चक्रे, —बभूव, —आस। रोपयिता, रोहयिता। रोपयतु, —ताम्, रोहयतु, —ताम्। ಇತ್ಯಾದಿ.

**ण्यन्तात् कर्मणि**:—रोप्यते, रोह्यते। रोपयां, —रोहयां चक्रे, —बभूवे, आसे। रोपयिता, रोपिता, रोहयिता, रोहिता। रोप्यताम्, रोह्यताम्। ಇತ್ಯಾದಿ.

कृत्सु :—रोढव्यम्। रोहणीयम्। रोह्यम्। रूढः। रूढवान्। रोहन्, –न्ती। रूढम्। रोहणम्।

ಈ ಧಾತುವಿಗೆ ಉಪಸರ್ಗಗಳ ಯೋಗದಿಂದ ಉಂಟಾಗುವ ಅರ್ಥಭೇದಗಳು :

आ + रुह् = आरोहति। आरूढः। आरुरोह। ಮೇಲಕ್ಕೆ ಹತ್ತು, ಮೇಲಕ್ಕೆ ಏರು. "आरूढः पतित इति स्वसंभवोऽपि" माघ० ८-५४।

अव + रुह् = अवरोहति। अवरुरोह। अवरोहः। ಕೆಳಗೆ ಇಳಿ. "तत्राक्षोभ्यं यशोराशिं निवेश्यावरुरोह सः" रघु० ४-८०।

**रुह् ರುಹ್** (वि०) (ಸಮಾಸದ ಕೊನೆಯಲ್ಲಿ) 1. ಹುಟ್ಟಿದ, 2. ಬೆಳೆದ. रुह् (बीजजन्मादौ) "क्विप्" (३-२-७६)। "विपाकपिङ्गास्तुहिनस्थलीरुहः" माघ० १-५।

**रुह ರುಹ** (वि०) (ಸಮಾಸದ ಕೊನೆಯಲ್ಲಿ) 1. ಹುಟ್ಟುವ, 2. ಬೆಳೆಯುವ. रोहति—रुह (बीजजन्मादौ) "कः" (३-१-१३५)। "विहङ्गराजाङ्गरुहैरिवायतैर्हिरण्मयोर्वीरुहवल्लितन्तुभिः" माघ० १-७। **–हा –ಹಾ.** ಗರಿಕೆ ಹುಲ್ಲು.

**रूक्ष ರೂಕ್ಷ** (पुं०) 1. ವೃಕ್ಷ, ಮರ. "तरुः शाखी कुठः कुजः। वसुः करालिकोऽगच्छो जर्णो रूक्षः पुलाकयपि" वैज०। (न०) 2. ಆನೆಯ ಮದೋದಕದ ವಾಸನೆ. 3. ಶ್ರೇಷ್ಠವಾದ ಕಬ್ಬಿಣ. "अथ कालायसं तीक्ष्णं सुलोह रूक्षमासुरम्" वैज०। (वि०) 4. ಕಠಿನವಾದ, ಗಟ್ಟಿಯಾದ, ಮೆದುವಾಗಿಲ್ಲದ, ಬಿರುಸಾದ ಶಬ್ದ. (ಮಾತು.) "रूक्षस्वरं वाशति वायसोऽयम्" मृच्छ० ९-१०। "विलङ्घितस्थितिमभिवीक्ष्य रूक्षया रिपोर्गिरा गुरुमपि गान्दिनीसुतम्" माघ० १७-१२। 5. ಕಠಿನವಾದ, ಒರಟಾಗಿರುವ. "कर्णार्पितो लोध्रकषायरूक्षे गोरोचनाक्षेपनितान्तगौरे" कुमा० ७-१७। 6. ಕಠಿನವಾಗಿ ಮಾತನಾಡುವವನು, ಬಿರುಸಾಗಿ ಮಾತನಾಡುವವನು. "शक्लो मधुरवाक् चाथ रूक्षो लक्षो विपर्यये" वैज०। 7. ದಯೆಯಿಲ್ಲದವನು. "नितान्तरूक्षाभिनिवेशमीशम्" रघु० १४-४३। 8. ನುಣುಪಾಗಿಲ್ಲದ, ಒರಟಾಗಿರುವ. "रूक्षो निष्प्रेम्ण्यचिक्कणे" वैज०। 9. ಒಣಗಿಹೋಗಿರುವ, ಬತ್ತಿಹೋದ, ರಸವಿಲ್ಲದೆ ಬೆಂದುಹೋಗಿರುವ. "स्निग्धश्यामाः क्वचिदपरतो भीषणाभोगरूक्षाः" उ० रा० २-१४।

**रूक्षगन्ध ರೂಕ್ಷಗಂಧ** (पुं०) ಗುಗ್ಗುಲು. रूक्षो गन्धो यस्य।

**रूक्षण ರೂಕ್ಷಣ** (न०) 1. ಒಣಗಿಸುವಿಕೆ. 2. ದೇಹದಲ್ಲಿ ಮೇದಸ್ಸನ್ನು ಕಡಮೆಮಾಡಲು ನಡೆಯುವ ಚಿಕಿತ್ಸೆ.

**रूक्षणीय ರೂಕ್ಷಣೀಯ** (पुं०) ಕಬ್ಬಿನ ರಸದಿಂದ ತಯಾರಿಸಲ್ಪಟ್ಟ ಮದ್ಯ, –ಹೆಂಡ. "पक्वैरिक्षुरसैरस्त्री शीधुः पक्वरसः शिवः। शीतपक्वो रूक्षणीयः" वैज०। (स्त्री०) **–या –ಯಾ.** ಕಾಡುಗೋಧಿ. "रूक्षणीया जन्तुफला गवेधुश्च गवेधुका" वैज०।

**रूक्षपत्र ರೂಕ್ಷಪತ್ರ** (पुं०) ಶಾಖೋಟವೃಕ್ಷ, ಕಾರೆಗಿಡ. रूक्षाणि पत्राण्यस्य।

**रूक्षस्वर ರೂಕ್ಷಸ್ವರ** (पुं०) 1. ಗರ್ದಭ, ಕತ್ತೆ. रूक्षः स्वरो यस्य। "रूक्षस्वरो धूम्रकर्णो नेमिभारसहः शलः" वैज०। 2. ವಾಯಸ, ಕಾಗೆ.

**रूक्षित ರೂಕ್ಷಿತ** (वि०) 1. ಕಠಿನವಾಗಿರುವ. 2. ಒರಟಾಗಿರುವ. रूक्षोऽस्य सञ्जातः "इतच्" (५-२-३६)। 3. ಒರಟಾಗಿ ಮಾಡಲ್ಪಟ್ಟ. 4. ಒಣಗಿಸಲ್ಪಟ್ಟ. रूक्ष (पारुष्ये) + णिच् "क्तः" (३-२-१०२)।

**रूढ ರೂಢ** (पुं०) 1. ಯವಧಾನ್ಯ. "यवे रूढो दीर्घशूकशितशूको महाद्रुमः" वैज०। 2. (ಪ್ರಕೃತಿ ಪ್ರತ್ಯಯಗಳ ಅರ್ಥವನ್ನು ಅಪೇಕ್ಷಿಸದೆ) ಸಮುದಾಯ ಶಕ್ತಿಯಿಂದ ಅರ್ಥವನ್ನು ಕೊಡುವ ಶಬ್ದ, ರೂಢಿ ಶಕ್ತಿಯಿಂದ ಅರ್ಥವನ್ನು ಕೊಡುವ ಶಬ್ದ, ಸಂಕೇತ ಶಬ್ದ, ವ್ಯುತ್ಪತ್ತಿರಹಿತವಾದ ಶಬ್ದ. "नस्वदे मुखसुरं प्रमदाभ्यो नाम रूढमपि च व्युदपादि" माघ० १०-२३। (वि०) 3. ಪ್ರಸಿದ್ಧವಾದ, ನಡೆನುಡಿಗಳಿಂದ ಪ್ರಸಿದ್ಧಿಪಡೆದ. "तस्य दाक्षिण्यरूढेन नाम्ना मगधवंशजा" रघु० १-३१। 4. ಅವಯವಾರ್ಥ (ವ್ಯುತ್ಪತ್ತಿ) ದಿಂದ ಪ್ರಸಿದ್ಧವಾದ, ಪ್ರಕೃತಿ ಪ್ರತ್ಯಯಾರ್ಥಗಳಿಂದ ಪ್ರಸಿದ್ಧಿಹೊಂದಿದ. "क्षतात् किल त्रायत इत्युदग्रः क्षत्रस्य शब्दो भुवनेषु रूढः" रघु० २-५३। 5. ಹುಟ್ಟಿದ, ಉತ್ಪತ್ತಿಹೊಂದಿದ, ಉಂಟಾದ. रुह (बीजजन्मादौ) "क्तः" (३-४-७२)। "येन श्रियः संश्रयदोषरूढं स्वभावलोलेत्ययशः प्रमृष्टम्" रघु० ६-४१। 6. ಬೆಳೆದ, ವೃದ್ಧಿಹೊಂದಿದ.

**रूढि ರೂಢಿ** (स्त्री०) 1. ಉತ್ಪತ್ತಿ, ಹುಟ್ಟುವುದು. 2. ಬೆಳವಣಿಗೆ, ವೃದ್ಧಿಹೊಂದುವುದು. रुह (बीजजन्मादौ) "क्तिन्" (३-३-९४)। 3. ಪ್ರಸಿದ್ಧಿ. 4. ಶಬ್ದದ ಸಮುದಾಯ ಶಕ್ತಿ, ಅವಯವಾರ್ಥವಿಲ್ಲದೆ ಶಬ್ದದ ಅರ್ಥಕ್ಕಿರುವ ಸಂಕೇತ.

**रूढिलक्षणा ರೂಢಿಲಕ್ಷಣಾ** (स्त्री०) "निरूढिलक्षणा" ಪದದ ಅರ್ಥ.

**रूप ರೂಪ** (ನಂ) 1. ಸೌಂದರ್ಯ ಲಾವಣ್ಯಾದಿಗಳಿಂದ ಕೂಡಿದ ಆಕಾರ. रूपमस्यास्ति "अच्" (५-२-१२७)। "मानुषीषु कथं वा स्यादस्य रूपस्य संभव:" शाकुं० १-२२। 2. ಆಕಾರ. "रूपमप्रतिविधानमनोज्ञं प्रेम कार्यमनपेक्ष्य विकासि" माघ० १०-३७। 3. ಸ್ವಭಾವ. 4. ಬಿಳುಪು ಹಸುರು ಕೆಂಪು ಮೊದಲಾದ ಬಣ್ಣ, ತಾರ್ಕಿಕರು ಹೇಳಿರುವ 24 ಗುಣಗಳಲ್ಲೊಂದು. ಈ ಗುಣವು ಚಕ್ಷು ರಿಂದ್ರಿಯದಿಂದ ಮಾತ್ರ ತಿಳಿಯಲ್ಪಡುವುದು. "चक्षुर्मात्र-ग्राह्यो गुणो रूपम्" त० सं०। ಇದು ಶುಕ್ಲ ನೀಲ ಪೀತ ರಕ್ತ ಹರಿತ ಕಪಿಶ ಮತ್ತು ಚಿತ್ರಗಳೆಂದು ಸಪ್ತವಿಧ. 5. ಸೌಂದರ್ಯ, ಸೊಬಗು. 6. ದೃಶ್ಯಕಾವ್ಯ, ನಾಟಕ ಮೊದಲಾದ ರೂಪಕ. 7. ಶ್ಲೋಕ, ಪದ್ಯ. 8. ಪಶು. 9. ಶಬ್ದ, ಪದ, (ಸುಬಂತ ಅಥವಾ ತಿಙಂತ). 10. ಗ್ರಂಥದ ಆವೃತ್ತಿ, ಕಂಠಸ್ಥವಾಗುವಂತೆ ಗ್ರಂಥವನ್ನು ಓದುವುದು. "रूपं स्वभावे सौन्दर्ये नाणके पशुशब्दयो:। ग्रन्थावृत्तौ नाटकादावाकारश्लोकयोरपि" विश्व०। 11. ತತ್ತ್ವ, ಲಕ್ಷಣ, ನಿಜಸ್ವರೂಪ. "रूपं तत्त्वं सतत्त्वं च स्वरूपं च सलक्षणम्" वैज०। "क्षणे क्षणे यन्नवता-मुपैति तदेव रूपं रमणीयताया:" माघ० ४-१७। 12. ರಜತಲೋಹ, ಬೆಳ್ಳಿ. "दुर्वर्णं पुंसि वा रूप्यं रूपं रौप्यं यवीयसम्" कल्पद्रु०। 13. ನಾಣ್ಯ. "रूपमाकार सौन्दर्यनाणकेष्वपि दृश्यते" त्रिकाण्ड०।

**रूपक ರೂಪಕ** (ಪುಂ) 1. ರೂಪಾಯಿ ನಾಣ್ಯ. (ನಂ) 2. ನಾಟಕ ಮೊದಲಾದ ದೃಶ್ಯಕಾವ್ಯ. ನಟನಲ್ಲಿ ರಾಮಾದಿಗಳ ಸ್ವರೂಪವನ್ನು ಆರೋಪಮಾಡುವುದರಿಂದ ದೃಶ್ಯಕಾವ್ಯವು ರೂಪಕವೆನಿಸುವುದು. "तद्रूपारोपात्तु रूपकम्" सा० द० ६-१। "यथा मुखादौ पद्मादेरारोपो रूपकं मतम्। तथैव नायकारोपो नटे रूपकमुच्यते"। ಈ ದೃಶ್ಯಕಾವ್ಯವು (ರೂಪಕವು) (1) नाटकम् (2) प्रकरणम् (3) भाण: (4) प्रहसनम् (5) डिम: (6) व्यायोग: (7) समवाकार: (8) वीथी (9) अङ्क: ಮತ್ತು (10) ईहामृग: ಎಂದು ಹತ್ತು ವಿಧ. सा० द० ६-३। 3. ಅರ್ಥಾಲಂಕಾರದ ಒಂದು ಭೇದ. ಉಪಮೇಯದಲ್ಲಿ ಉಪಮಾನದ ಆಹಾರ್ಯಾಭೇದ ಅಥವಾ ತಾದ್ರೂಪ್ಯ ರಂಜನವು ರೂಪಕಾಲಂಕಾರ. "विषयभेदताद्रूप्यरञ्जनं विषयस्य यत्। रूपकं तत्" चन्द्रा०। ರೂಪಕಾಲಂಕಾರವು ಅಭೇದ ಮತ್ತು ತಾದ್ರೂಪ್ಯಗಳೆಂದು ಎರಡು ವಿಧ ಇವೆರಡೂ ನ್ಯೂನ ಅಧಿಕ ಮತ್ತು ಅನುಭಯಭೇದಗಳಿಂದ ಆರು ವಿಧಗಳಾಗುವುವು. "त्रिधाधिक्यन्यूनत्वानु-भयोक्तिभि:" चन्द्रा०। (वि०) 4. ರೂಪವುಳ್ಳ, ಶರೀರವುಳ್ಳ.

**रूपण ರೂಪಣ** (ನಂ) ಸಾದೃಶ್ಯದಿಂದ ಒಂದು ವಸ್ತುವಿನಲ್ಲಿ ಮತ್ತೊಂದು ವಸ್ತುವಿನ ಆರೋಪ. रूप (रूपक्रियायाम्) + णिच् भावे "ल्युट्" (३-३-११५)।

**रूपतन्मात्र ರೂಪತನ್ಮಾತ್ರ** (ನಂ) ಉತ್ಕಟಾವಸ್ಥೆಯನ್ನು ಹೊಂದದ ರೂಪಗುಣವುಳ್ಳ ಮತ್ತು ರಸಶೂನ್ಯವಾದ ದ್ರವ್ಯ, ಪಂಚಭೂತಗಳಿಗೂ ಉಪಾದಾನಕಾರಣವಾದ ತನ್ಮಾತ್ರಗಳಲ್ಲೊಂದು. ರೂಪತನ್ಮಾತ್ರವು ತೇಜಸ್ಸಿಗೆ ಉಪಾದಾನಕಾರಣ.

**रूपधारिन् ರೂಪಧಾರಿನ್** (ಪುಂ) 1. ನಟ, ವೇಷಧರಿಸಿ ಅಭಿನಯ ಮಾಡುವವನು. रूपं धारयति—धृ धात्र (धारणे) + णिच् "णिनि:" (३-१-१३४)। (वि०) 2. ಸುಂದರ, ರೂಪವಂತ.

**रूपवत् ರೂಪವತ್** (ವಿಂ) 1. ಆಕಾರವುಳ್ಳ, ಮೂರ್ತಿಮತ್ತಾದ. रूपमस्यास्ति "मतुप्" (५-२-९५)। "वायोरपि विकुर्वाणात् कालकर्मस्वभावत:। उदपद्यत वै तेजो रूपवत् स्पर्शशब्दवत्" भाग० २-५-२७। 2. ಸೌಂದರ್ಯದಿಂದ ಕೂಡಿದ. "रूपवान् सुभग: श्रीमान् कन्दर्प इव मूर्तिमान्"। स्त्रियां "ङीप्" (४-१-६)। —वती —ವತೀ. ಸುಂದರಿ, ಚೆಲುವಾದ ಹೆಂಗಸು.

**रूपाजीवा ರೂಪಾಜೀವಾ** (ಸ್ತ್ರೀಂ) ಸೌಂದರ್ಯದಿಂದ ಜೀವಿಸುವ ವೇಶ್ಯೆ. रूपमाजीवो जीविका अस्या:। "वारस्त्री गणिका वेश्या रूपाजीवा" अम०।

**रूपिन् ರೂಪಿನ್** (ವಿಂ) 1. ರೂಪವನ್ನು ಹೊಂದಿದ, ಮೂರ್ತಿಮತ್ತಾದ, ದೇಹವನ್ನು ಧರಿಸಿದ. रूपमस्यास्ति —"इनि:" (५-२-११५)। "रूपी कोप इव व्याघ्र:" दशकु०। 2. ಸುಂದರವಾದ ಆಕಾರವುಳ್ಳ, ಚೆಲುವಾದ ಶರೀರವುಳ್ಳ. प्रशस्तं रूपं यस्य।

**रूप्य ರೂಪ್ಯ** (ನಂ) 1. ಮುದ್ರಿಸಿದ ಬೆಳ್ಳಿ ಅಥವಾ ಚಿನ್ನದ ನಾಣ್ಯ, ರೂಪಾಯಿ. आहतं रूपमस्य "यप्" (५-२-१२०)। 2. ಕರಗಿಸಿದ, ಕರಗಿಸದೆ ಗಟ್ಟಿಯಾಗಿರುವ ಚಿನ್ನ ಮತ್ತು ಬೆಳ್ಳಿ. 3. ಬೆಳ್ಳಿ, ರಜತಲೋಹ. 4. ಬೆಳ್ಳಿಯ ಒಡವೆ, ರಜತಲೋಹದ ಆಭರಣ. "राजते भूषणे रूप्यं रजते हेम्नि चाहते" वैज०। (ಪುಂ) 5. ಒಂದು ತದ್ಧಿತ ಪ್ರತ್ಯಯ. "हेतुमनुष्येभ्योऽन्यतरस्यां रूप्य:" पा० सू० (४-३-८१)। (वि०) 6. ಸುಂದರವಾದ, ಅಂದವಾದ. प्रशस्तं रूपं यस्य — रूप प्रशंसाय,

"यप्" (५-२-१२०)। "रूप्यः स्यात् सुन्दरे त्रिषु। आहतस्वर्णरजते रजते च नपुंसकम्" मेदि०।

**रूप्यक ರೂಪ್ಯಕ** (पुं०) ನಾಣ್ಯ, ರೂಪಾಯಿ.

**रूप्याध्यक्ष ರೂಪ್ಯಾಧ್ಯಕ್ಷ** (पुं०) 1. ಕೋಶಾಧಿಕಾರಿ, ಬೊಕ್ಕಸದ ಯಜಮಾನ. 2. ಟಂಕಸಾಲೆಯ ಅಧಿಕಾರಿ, ನಾಣ್ಯವನ್ನು ಮುದ್ರಿಸುವ ಶಾಲೆಯ ಅಧಿಕಾರಿ. रूप्यस्याध्यक्षः।

**रूबुक ರೂಬುಕ** (पुं०) ಏರಂಡ ವೃಕ್ಷ, ಹರಳು ಗಿಡ.

**रूषक ರೂಷಕ** (पुं०) ಬಣ್ಣ ಮೊದಲಾದುವನ್ನು ಬಳಿಯುವವನು, ಲೇಪನಮಾಡುವವನು. रूष (भूषायाम्) "ण्वुल्" (३-१-१३३)।

**रूषण ರೂಷಣ** (नं०) 1. ಬಳಿಯುವುದು, ಲೇಪನಮಾಡುವುದು. 2. ಅಲಂಕರಿಸುವುದು. रूष (भूषायाम्) भावे "ल्युट्" (३-३-११५)।

**रूषित ರೂಷಿತ** (वि०) 1. ಬಳಿಯಲ್ಪಟ್ಟ. 2. ಅಲಂಕರಿಸಲ್ಪಟ್ಟ. 3. ವ್ಯಾಪ್ತವಾದ. रूष (भूषायाम्) "क्तः" (३-२-१०२)। "परिश्रमंल्लोहितचन्दनोचितः पदातिरन्तर्गिरि रेणुरूषितः" किरा० १-३४। 4. ಬೆರಸಲ್ಪಟ್ಟ, ಮಿಶ್ರಮಾಡಲ್ಪಟ್ಟ.

**रे ರೇ** (अव्य०) ಸಂಬೋಧನಾರ್ಥಕ ಅವ್ಯಯ, ನೀಚ ಸಂಬೋಧನ. "रे रे राक्षस मा वधूं प्ररुदतीं मुञ्चेति गृध्राधिपः" चं० रा०।

**रेक ರೇಕ** (पुं०) 1. ಶಂಕೆ, ಸಂಶಯ, ಸಂದೇಹ. रेकृ (शङ्कायाम्) "घञ्" (३-३-१८)। 2. ವಿರೇಚನ, ಭೇದಿ. रिचिर् (विरेचने) "घञ्" (३-३-१८)। 3. ನೀಚ. "रेकः शङ्काविरेकयोः। हीनेऽपि" हेम०। "रेकः शङ्कानीचविरेचने" मेदि०।

**रेक्णस् ರೇಕ್ಣಸ್** (नं०) ಸುವರ್ಣ, ಚಿನ್ನ. रिचिर् (विरेचने) "असुन्" (उ० ४-१९८)। नुडागमश्च।

**रेखा ರೇಖಾ** (स्त्री०) 1. ಗೆರೆ, ಎಳೆ. लिख (अक्षरविन्यासे) "अङ्" (३-३-१०४)। लस्य रः। "रेखामात्रमपि क्षुण्णादा मनोर्वर्त्मनः परम्" रघु० १-१७। 2. ಪಂಕ್ತಿ, ಸಾಲು. 3. ಬರವಣಿಗೆ, ಬರೆಯುವುದು. "रेखा तु श्रेणिलेखयोः" नानार्थर०। 4. ಅಲ್ಪ, ಸ್ವಲ್ಪ. 5. ಕಪಟ, ಮೋಸ, ವಂಚನೆ. 6. ಆಭೋಗ, ಪೂರ್ಣವಾಗಿರುವಿಕೆ. "रेखा स्यादल्पके छद्मन्याभोगोल्लेखयोरपि" विश्व०। 7. ಚಿತ್ರಬರೆಯುವ ಮೊದಲು ಗುರುತಿಸುವ ಆಕೃತಿ ಸೂಚಕವಾದ ರೂಪರೇಖೆ. "तथापि तस्या लावण्यं रेखया किञ्चिदन्वितम्" शाकु० ६-१४।

**रेखागणित ರೇಖಾಗಣಿತ** (नं०) ಜ್ಯಾಮಿತಿ, ಗೆರೆಯ ಮೂಲಕ ಕ್ಷೇತ್ರಗಳ ಪ್ರಮಾಣಸಂಬಂಧವಾದ ಶಾಸ್ತ್ರ. रेखाया गणितं प्रमाणस्य रूपं यत्र।

**रेचक ರೇಚಕ** (पुं०) 1. ಯವಕ್ಷಾರ. रेचयति—रिच (वियोजनसंपर्चनयोः)+णिच् "ण्वुल्" (३-१-१३३)। "क्षारं तु स्याद्यवक्षारे यवशूकश्च रेचकः" त्रिकाण्ड०। 2. ತಿಲಕವೃಕ್ಷ. "तिलकाह्वस्तु रेचकः" कल्पद्रु०। 3. ಚೀರುಕೊಳವಿ, ಪಿಚಕಾರಿ. 4. ಉಸಿರನ್ನು ಹೊರಗೆ ಬಿಡುವುದು, ಶ್ವಾಸಕೋಶವನ್ನು ಖಾಲಿಮಾಡುವುದು. (नं०) 5. ಭೇದಿಮಾಡಿಸುವ ಔಷಧ. (वि०) 6. ಉಸಿರನ್ನು ಹೊರಗೆಬಿಡಿಸುವ. 7. ಮಲಬಂಧವನ್ನು ಪರಿಹರಿಸುವ, ಭೇದಿಮಾಡಿಸುವ. 8. ಹೊಟ್ಟೆಯನ್ನು ಬರಿದುಮಾಡುವ.

**रेचत् ರೇಚತ್** (वि०) 1. ಉಸಿರನ್ನು ಹೊರಗೆ ಬಿಡುತ್ತಿರುವ. 2. ಭೇದಿಮಾಡುತ್ತಿರುವ. 3. ಬರಿದುಮಾಡುತ್ತಿರುವ. रिचिर् (विरेचने) "शतृ" (३-२-१२४)।

**रेचन ರೇಚನ** (नं०) 1. ಭೇದಿಯಾಗುವಿಕೆ. 2. ಉಸಿರನ್ನು ಹೊರಗೆಬಿಡುವುದು. 3. ಹೊಟ್ಟೆಯನ್ನು ಬರಿದುಮಾಡುವುದು. रिचिर् (विरेचने) "ल्युट्" (३-३-११५)।

**रेचनी ರೇಚನೀ** (स्त्री०) 1. ಜಾಪಾಳ. 2. ಕೆಂಪು ತಿಗಡೆ ಮರ. "रेचनी गुन्द्रा दन्ती रोचनिका त्रिवृत्" हेम०।

**रेचनीय ರೇಚನೀಯ** (वि०) 1. (ಉಸಿರನ್ನು) ಹೊರಗೆ ಬಿಡಬೇಕಾದ. 2. ಹೊರಗೆಬಿಡಲ್ಪಡುವ. 3. ಬರಿದುಮಾಡಬೇಕಾದ. 4. ಬರಿದುಮಾಡಲ್ಪಡುವ. रिचिर् (विरेचने) "अनीयर् (३-१-९६)। 5. ಭೇದಿಮಾಡಿಸಬೇಕಾದ. 6. ಬರಿದುಮಾಡಿಸಬೇಕಾದ. 7. ಉಸಿರನ್ನು ಹೊರಗೆ ಬಿಡಿಸಬೇಕಾದ.

**रेचयत् ರೇಚಯತ್** (वि०) 1. (ಉಸಿರನ್ನು) ಹೊರಗೆ ಬಿಡಿಸುತ್ತಿರುವ. 2. ಬರಿದುಮಾಡುತ್ತಿರುವ. 3. ಭೇದಿಮಾಡಿಸುತ್ತಿರುವ. रिच (वियोजनसंपर्चनयोः) + णिच् "शतृ" (३-२-१२४)।

**रेचित ರೇಚಿತ** (वि०) 1. ಭೇದಿಮಾಡಿಸಲ್ಪಟ್ಟ. रिचिर् (विरेचने)+णिच् "क्तः" (३-२-१०२)। 2. ಖಾಲಿಮಾಡಿಸಲ್ಪಟ್ಟ, ಬರಿದುಮಾಡಿಸಲ್ಪಟ್ಟ. रिच (वियोजनसंपर्चनयोः) + णिच् "क्तः" (३-२-१०२)। "रेचितं परिजनेन महीयः केवलाभिरतदम्पति धाम" माघ०

१०-५५। (ನಂ) 3. ಕುದುರೆಯ ನಡಗೆಯ ಒಂದು ಭೇದ. रिचिर् (विरेचने) + णिच् भावे "क्तः" (३-३-११४)। "आस्कन्दितं धोरितकं रेचितं वल्गितं प्लुतम्" अम०। 4. ಒಂದು ಹುಬ್ಬನ್ನು ಮಾತ್ರ ಗಂಟು ಹಾಕುವುದು. "रेचितं त्वेकया भ्रुवा" वैज०। 5. ಉಸಿರನ್ನು ಹೊರಗೆ ಬಿಡುವುದು. 6. ಖಾಲಿಮಾಡುವುದು, ಹೊಟ್ಟೆಯನ್ನು ಬರಿದುಮಾಡುವುದು.

**रेच्य ರೇಚ್ಯ** (ಪುಂ) ಪ್ರಾಣಾಯಾಮಸಮಯದಲ್ಲಿ ಹೊರಗೆ ಬಿಡಲ್ಪಡುವ ವಾಯು.

**रेणु ರೇಣು** (ಪುಸ್ತ್ರೀ०) 1. ಧೂಳು, ಹುಡಿಮಣ್ಣು. री (गतिरेषणयोः) "णुः" (उ० ३-३८)। "नभस्तलं बहुलतरेण रेणुना ततोऽगमत् त्रिजगदिवैकतां स्फुटम्" माघ० १७-६५। 2. ಪರಾಗ, ಹೂವಿನ ಕೇಸರದ ಧೂಳು. (ಪುಂ) 3. ಪರ್ಪಟ, ಹಪ್ಪಳ.

**रेणुका ರೇಣುಕಾ** (ಸ್ತ್ರೀ०) 1. ಜಮದಗ್ನಿ ಮಹರ್ಷಿಯ ಪತ್ನಿ, ಪರಶುರಾಮನ ತಾಯಿ, ಪ್ರಸೇನಜಿತ್ತೆಂಬ ದೊರೆಯ ಮಗಳು. ರೇಣುಕೆಗೆ ರುಮಣ್ವಂತ ಸುಷೇಣ ವಸು ವಿಶ್ವಾವಸು ಮತ್ತು ಪರಶುರಾಮ ಎಂಬ ಐವರು ಪುತ್ರರು. ರೇಣುಕೆಯು ಒಂದು ದಿನ ಗಂಗಾನದಿಗೆ ನೀರು ತರಲು ಹೋಗಿದ್ದಾಗ ತನ್ನ ಪತ್ನಿಯರೊಡನೆ ಜಲಕ್ರೀಡೆ ಮಾಡುತ್ತಿದ್ದ ಚಿತ್ರರಥ ಗಂಧರ್ವನನ್ನು ನೋಡಿ ಮೋಹದಿಂದ ಅಲ್ಲೇ ಕೆಲವುಕಾಲವಿದ್ದು ಕಾಲಮೀರಿ ಆಶ್ರಮಕ್ಕೆ ಹೋಗಲಾಗಿ ಪಾತಿವ್ರತ್ಯಭಂಗವಾಯಿತೆಂದು ತಿಳಿದು ಇವಳ ಕತ್ತನ್ನು ಕತ್ತರಿಸುವಂತೆ ಜಮದಗ್ನಿಯು ತನ್ನ ಹಿರಿಯ ನಾಲ್ಕು ಮಕ್ಕಳಿಗೆ ಹೇಳಲು ಅವರು ಹಿಂಜರಿದರು. ಅವರನ್ನೂ ರೇಣುಕೆಯನ್ನೂ ಕೊಲ್ಲಲು ಪರಶುರಾಮನಿಗೆ ಅಜ್ಞಾಪಿಸಲಾಗಿ ಅವನು ಆ ಕಾರ್ಯವನ್ನು ಮಾಡಿದನು. ಇದರಿಂದ ಸಂತುಷ್ಟನಾದ ತಂದೆಯಿಂದ ವರವನ್ನು ಪಡೆದು ಎಲ್ಲರನ್ನೂ ಬದುಕಿಸಿದನು. 2. ಒಂದು ಸುಗಂಧ ದ್ರವ್ಯ.

**रेणुकातनय ರೇಣುಕಾತನಯ, -पुत्र -ಪುತ್ರ, -सूनु -ಸೂನು** (ಪುಂ) ರೇಣುಕಾದೇವಿಯ ಮಗ, ಪರಶುರಾಮ. रेणुकायाः तनयः पुत्रः सूनुर्वा।

**रेणुरूषित ರೇಣುರೂಷಿತ** (ಪುಂ) 1. ಗರ್ದಭ, ಕತ್ತೆ. (ವಿ०) 2. ಧೂಳಿನಿಂದ ವ್ಯಾಪ್ತವಾದ, ಧೂಳಿನಿಂದ ಬಳಿಯಲ್ಪಟ್ಟ. रेणुना रूषितः। "पदातिरन्तर्गिरि रेणुरूषितः" किरा० १-३४।

**रेणुवास ರೇಣುವಾಸ** (ಪುಂ) ಭ್ರಮರ, ದುಂಬಿ. "इन्दिन्दिरः पुष्पकीटः मधुद्रो मधुकेशटः। रेणुवासः" त्रिकाण्ड०।

**रेणुसार ರೇಣುಸಾರ** (ಪುಂ) ಕರ್ಪೂರ. "रेणुसारस्तु कर्पूरश्चन्द्रभस्म हिमाह्वयः" त्रिकाण्ड०।

**रेतस् ರೇತಸ್** (ನಂ) 1. ವೀರ್ಯ, ಶುಕ್ರಶೋಣಿತ, ದೇಹದೊಳಗಿನ ಮಜ್ಜೆಯನ್ನು ಉತ್ಪತ್ತಿಮಾಡುವ ಒಂದು ಧಾತು. रिणाति — री (गतिरेषणयोः) "असुन्" (उ० ४-२०१)। तुडागमश्च। 2. ಪಾದರಸ, ಪಾರದ. "रेतः शुक्रे पारदे च" मेदि०। 3. ಜಲ, ನೀರು. "रेतसी शुक्रमम्बु च" वैज०।

**रेत ರೇತ** (ನಂ) ವೀರ್ಯ, ಶುಕ್ರಶೋಣಿತ ಇತ್ಯಾದಿ. "रेतस्" ಪದದ ಅರ್ಥ. "सर्वे सान्ता अदन्ताश्च" ಎಂಬ ನ್ಯಾಯದಿಂದ "रेत" ಎಂದು ಅದಂತವೂ ಉಂಟು.

**रेतज ರೇತಜ** (ನಂ) 1. ಸಂತಾನ, ಶಿಶು. (ಸ್ತ್ರೀ०) -जा -ಜಾ. 2. ಮರಳು.

**रेतन ರೇತನ** (ನಂ) ಶುಕ್ರಧಾತು.

**रेत्र ರೇತ್ರ** (ನಂ) 1. ರೇತಸ್ಸು, ವೀರ್ಯ. 2. ಸುಧೆ, ಅಮೃತ. 3. ಸುಗಂಧಚೂರ್ಣ, ವಾಸನೆಯ ಪುಡಿ. 4. ಪಾರದ, ಪಾದರಸ. 5. ಸೂತಕ. "रेत्रं रेतसि पीयूषे पटवासे च सूतके" मेदि०।

**रेप ರೇಪ** (ವಿ०) 1. ಕ್ರೂರ, ದಯೆಯಿಲ್ಲದವನು. 2. ನೀಚ, ಅಧಮ. "रेपः क्रूरे विगर्हिते" हेम०।

**रेपस् ರೇಪಸ್** (ವಿ०) 1. ಅಧಮ, ನೀಚ. 2. ಕ್ರೂರ, ದಯೆಯಿಲ್ಲದವನು. 3. ಕೃಪಣ, ಜಿಪುಣ. "रेपाः स्यादधमे क्रूरे कृपणेऽप्यभिधेयवत्" मेदि०। 4. ದುಷ್ಟ.

**रेफ ರೇಫ** (ಪುಂ) 1. "र" ಎಂಬ ಅಕ್ಷರ, ರ ವರ್ಣ. र "इफः" (वा० ३-३-१०८)। (ವಿ०) 2. ನೀಚ, ಅಧಮ. रिफचते — रिफ (हिंसायाम्) "घञ्" (३-३-१९)। "रेफो वर्णे च पुंसि स्यात् कुत्सिते पुनरन्यवत्" मेदि०।

**रेफस् ರೇಫಸ್** (ವಿ०) "रेपस्" ಪದದ ಅರ್ಥ.

**रेभण ರೇಭಣ** (ನಂ) ಹಸುವಿನ ಶಬ್ದ, ಆಕಳುವಿನ ಕೂಗು. रेभृ (शब्दे) भावे "ल्युट्" (३-३-११५)। "हम्भा रेभणं च गवां ध्वनौ" त्रिकाण्ड०।

**रेरिहाण ರೇರಿಹಾಣ** (ಪುಂ) 1. ಶಿವ, ಪರಮೇಶ್ವರ. 2. ಒಬ್ಬ ಅಸುರ. "रेरिहाणस्तु पुंसि स्यात् महादेवेऽसुरेऽपि च" मेदि०।

**रेवट ರೇವಟ** (ಪುಂ) 1. ಸೂಕರ, ಹಂದಿ. रेवृ (प्लवगतौ) "अटच्" बाहु०। 2. ವೇಣು. 3. ಉನ್ಮತ್ತ, ಹುಚ್ಚ. 4. ವಿಷವೈದ್ಯ.

**रेवती ರೇವತೀ** (स्त्री०) 1. ಬಲರಾಮನ ಪತ್ನಿ, ರೇವತ ರಾಜನ ಮಗಳು. "रेवतीवदनोच्छिष्टपरिपूतपुटे दृशौ" माघ० २-१६। 2. ರೇವತೀನಕ್ಷತ್ರ. ಇಪ್ಪತ್ತೇಳು ನಕ್ಷತ್ರಗಳಲ್ಲಿ ಕೊನೆಯ ನಕ್ಷತ್ರ. 3. ಆಕಳು, ಹಸು. "रेवती हलिपत्न्यां भे" त्रिकाण्ड०। 4. ದುರ್ಗಾದೇವಿ. 5. ಒಂದು ನದಿ.

**रेवतीज ರೇವತೀಜ** (पुं०) 1. ಷಣ್ಮುಖ, ಸ್ಕಂದ. "षष्ठीप्रियो रेवतीजः पवित्रो मातृवत्सलः" कल्पद्रु०। 2. ಶನಿಗ್ರಹ. "सौरिः क्रोडो रेवतीजः" कल्पद्रु०।

**रेवतीरमण ರೇವತೀರಮಣ** (पुं०) ಬಲರಾಮ.

**रेवा ರೇವಾ** (स्त्री०) 1. ನರ್ಮದಾನದಿ. 2. ರತಿ, ಮನ್ಮಥನ ಪತ್ನಿ. 3. ನೀಲಿಗಿಡ. "अथ रेवा स्यान्नील्यां रत्यां नदीभिदि" मेदि०।

**रेषण ರೇಷಣ** (नं०) 1. ಹಿಂಸಿಸುವುದು, ಪೀಡಿಸುವುದು. रिष (हिंसायाम्) "ल्युट्" (३-३-११५)। 2. ಕುದುರೆ ಯಂತೆ ಕೆನೆಯುವುದು.

**रै ರೈ** (पुं०) 1. ಧನ, ಹಣ. राति सुखम् — रा (दाने) "डैः" (उ० २-६७)। 2. ಮೋಕ್ಷ, ಮೋಡ. 3. ಸ್ವರ್ಣ, ಚಿನ್ನ. "रास्तु सुवर्णे जलदे घने" हेम०। राः रायौ रायः। रायं रायौ रायः। राया राभ्याम् राभिः। ಇತ್ಯಾದಿ. (पुंस्त्री०) 4. ಧ್ವನಿ, ಶಬ್ದ, ಸದ್ದು. "रास्तु द्वयोर्ध्वनौ स्वर्णे" रत्न०।

**रैवत ರೈವತ** (पुं०) 1. ರೈವತಕ ಪರ್ವತ, ರೇವತೀನದಿಯ ಸಮೀಪದಲ್ಲಿರುವ ಒಂದು ಪರ್ವತ. रेवत्या अदूरे देशे भवः "अण्" (४-२-७०)। 2. ಶಿವ, ಪರಮೇಶ್ವರ. 3. ಕಕ್ಕೆಗಿಡ. "रैवतस्तु सुवर्णालौ शैलभेदेऽपि शङ्करे" मेदि०। 4. ಶನಿಗ್ರಹ. स्वार्थे "कः"। **रैवतकः ರೈವತಕಃ.** "रैवत" ಪದದ ಅರ್ಥ. "नीलोपलस्यूतविचित्रधातुमसौ गिरिं रैवतकं ददर्श" माघ० ४-१।

**रोक ರೋಕ** (पुं०) 1. ದೀಪ್ತಿ, ಪ್ರಕಾಶ. 2. ಅಂಶು, ಕಿರಣ. रुच (दीप्तौ) "घञ्" (३-३-१२१)। 3. ನಗದು ವ್ಯಾಪಾರ. (नं०) 4. ನೌಕೆ, ಹಡಗು, ಜಹಜು. 5. ರಂಧ್ರ, ವಿವರ, ಬಿಲ. "रोको रश्मौ बिले न पुम्" वैज०। (वि०) 6. ಚಲಿಸುವ. "रोकं क्रयणभेदे नावि बिले चले। रोकोंऽशौ" हेम०। "रोकस्तु क्रयभिद्दीप्त्योः रोकं नावि बिले चले" मेदि०।

**रोक्य ರೋಕ್ಯ** (नं०) ಶೋಣಿತ, ರಕ್ತ. "रुधिरं लोहितं रक्तमस्रं क्षतजमासुरम्। रोक्यं शोष्यम्" वैज०।

**रोग ರೋಗ** (पुं०) ವ್ಯಾಧಿ, ಜಾಡ್ಯ. रुजति — रुजो (भङ्गे) "घञ्" (३-३-१६)। "इति नरपतिरस्त्रं यद्यदाविश्चकार प्रकुपित इव रोगः क्षिप्रकारी विकारम्" माघ० २०-७६। ವ್ಯಾಧಿಯು (1) ಆಗಂತುಕ (2) ಶಾರೀರ (3) ಮಾನಸ ಮತ್ತು (4) ಸ್ವಾಭಾವಿಕ ಎಂದು ನಾಲ್ಕು ವಿಧ.

(1) ಅಭಿಘಾತ (ಅಪಘಾತ) ದಿಂದ ಉಂಟಾಗುವ ವ್ಯಾಧಿಯು ಆಗಂತುಕ.

(2) ಆಹಾರ ಪಾನೀಯಗಳ ದೋಷದ ಕಾರಣ ವಾತ ಪಿತ್ತ ಕಫ ಶೋಣಿತಾದಿಗಳ ವೈಷಮ್ಯದಿಂದ ಉಂಟಾಗುವ ವ್ಯಾಧಿಯು ಶಾರೀರ.

(3) ಕೋಪ ದುಃಖ ಭಯ ಈರ್ಷ್ಯೆ ಹರ್ಷ ಮಾತ್ಸರ್ಯ ಕಾಮ ಲೋಭ ಮುಂತಾದುವು ಮಾನಸವ್ಯಾಧಿಗಳು.

(4) ಹಸಿವು ಬಾಯಾರಿಕೆ ಮುಪ್ಪು ನಿದ್ರೆ ಮೊದಲಾದುವು ಸ್ವಾಭಾವಿಕವ್ಯಾಧಿಗಳು. ಇವುಗಳಲ್ಲಿ ಕೆಲವು ಜನ್ಮಾಂತರದಿಂದಲೂ ಕೆಲವು ಕರ್ಮದಿಂದಲೂ ಕೆಲವು ಎರಡರಿಂದಲೂ ಉಂಟಾಗುವುವು.

**रोगघ्न ರೋಗಘ್ನ** (नं०) 1. ಔಷಧ, ಮದ್ದು. रोगं हन्ति — हन् (हिंसागत्योः) "टक्" (३-२-५३)। 2. ವೈದ್ಯಶಾಸ್ತ್ರ, ಚಿಕಿತ್ಸಾಶಾಸ್ತ್ರ. (वि०) 3. ರೋಗವನ್ನು ಗುಣಪಡಿಸುವ, ವ್ಯಾಧಿಯನ್ನು ಹೋಗಲಾಡಿಸುವ.

**रोगभू ರೋಗಭೂ** (स्त्री०) ರೋಗಕ್ಕೆ ಆಶ್ರಯವಾದ ಶರೀರ, ರೋಗವು ಹುಟ್ಟಲು ಸ್ಥಾನವಾದ ದೇಹ. रोगाणां भूः।

**रोगराज ರೋಗರಾಜ** (पुं०) ಕ್ಷಯರೋಗ.

**रोगलक्षण ರೋಗಲಕ್ಷಣ** (नं०) ವ್ಯಾಧಿಯ ಗುರುತು, ರೋಗದ ಚಿಹ್ನೆ. ದೇಹದೊಳಗಿನ ಧಾತುಗಳ ವೈಷಮ್ಯದಿಂದ ರೋಗಗಳು ಕಾಣಿಸಿಕೊಳ್ಳುವುವು. ವಾತ ಪಿತ್ತ ಕಫಗಳ ಏರಿಳಿತಗಳಿಂದ ರೋಗಗಳ ಚಿಹ್ನೆಗಳು ಕಂಡುಬರುವುವು. ಅವು ಸಮವಾಗಿದ್ದರೆ ಆರೋಗ್ಯವೆಂದು ತಿಳಿಯಬೇಕು. "रोगस्तु दोषवैषम्यं दोषसाम्यमरोगता"।

**रोगशिला ರೋಗಶಿಲಾ** (स्त्री०) ಮಣಶಿಲೆಯೆಂಬ ಒಂದು ಧಾತು.

**रोगहर ರೋಗಹರ** (नं०) 1. ಔಷಧ. रोगान् हरति — हृञ् (हरणे) "अच्" (३-२-९)। (वि०) 2. ರೋಗವನ್ನು ವಾಸಿಮಾಡುವ.

**रोगहारिन् ರೋಗಹಾರಿನ್** (पुं०) 1. ವೈದ್ಯ, ಚಿಕಿತ್ಸಕ. रोगान् हरति—हृञ् (हरणे) "णिनिः" (३-२-७८)। (वि०) 2. ರೋಗವನ್ನು ವಾಸಿಮಾಡುವ.

**रोगिन् ರೋಗಿನ್** (वि०) ರೋಗವುಳ್ಳವನು, ವ್ಯಾಧಿಯಿಂದ ಕೂಡಿದವನು. रोगोऽस्यास्ति "इनिः" (५-२-११५)। "दर्शनस्पर्शनप्रश्नैः परीक्षेदथ रोगिणम्। आयुरादि दृशा स्पर्शाच्छीतादेः प्रश्नतोऽपरम्" वाग्भटः।

**रोचक ರೋಚಕ** (पुं०) 1. ಗೋಣಿಚೀಲ. "हस्तिकर्णस्तु रोचकः। शाणी गोणी छिद्रवस्त्रैश्चीरं कण्डलमस्त्रियाम्" हेम०। (न०) 2. ಹಸಿವು. 3. ಚಟ್ನಿ. 4. ಕದಳೀಫಲ, ಬಾಳೆಹಣ್ಣು. 5. ರಾಜೀರುಳ್ಳಿ. (वि०) 6. ಪ್ರಕಾಶಿಸುವ, ಹೊಳೆಯುವ. 7. ಸುಖಕರವಾದ, ಸಂತೋಷವುಂಟುಮಾಡುವ. 8. ಹಸಿವುಂಟುಮಾಡುವ. रुच (दीप्तौ) "ण्वुल्" (३-१-१३३)।

**रोचन ರೋಚನ** (पुं०) 1. ಕೆಂಪು ಬೂರುಗದ ಮರ, ಬೆಟ್ಟ ಬೂರುಗದ ಮರ. रोचयति—रुच (दीप्तावभिप्रीतौ च)+णिच् "ल्युः" (३-१-१३४)। 2. ಜೀರ್ಣಕಾರಿಯಾದ ಔಷಧ, ಹಸಿವನ್ನುಂಟುಮಾಡುವ ಔಷಧ. 3. ಮನ್ಮಥನ ಪಂಚಬಾಣಗಳಲ್ಲೊಂದು. 4. ಇಷ್ಟವಾಗುವ, ಮನಸ್ಸಿಗೆ ಒಪ್ಪುವ. (वि०) 5. ಪ್ರಕಾಶಿಸುವ, ಹೊಳೆಯುವ. 6. ಸುಂದರವಾದ, ಸೊಗಸಾದ. (स्त्री०) —ना —ನಾ 7. ಗೋರೋಚನ. "त्वं रोचनागौरशरीरयष्टिः" रघु० ६-६५। 8. ಕೆಂಪುನೈದಿಲೆ. 9. ಶ್ರೇಷ್ಠ ಹೆಂಗಸು, ಸುಂದರಿ. 10. ಈರುಳ್ಳಿ. 11. ಕಕ್ಕೆಗಿಡ. "रोचनः कूटशाल्मलौ। रोचना रक्तकह्लारे गोपित्ते वरयोषिति" हेम०। "रोचनः कूटशाल्मल्यां पुंसि स्याद्रोचके त्रिषु। रोचना रक्तकह्लारे गोपित्तवरयोषितोः" मेदि०।

**रोचनक ರೋಚನಕ** (पुं०) ನಿಂಬೆಗಿಡ. रोचनाय कायति —कै (शब्दे) "कः" (३-२-३)।

**रोचना ರೋಚನಾ** (स्त्री०) "रोचन" ನೋಡಿ.

**रोचनी ರೋಚನೀ** (स्त्री०) ಕಪಿಲೆಹಿಟ್ಟು ಎಂಬ ಓಷಧಿ.

**रोचमान ರೋಚಮಾನ** (पुं०) 1. ಕುದುರೆಯ ಕತ್ತಿನ ಮೇಲಿರುವ ಒಂದು ಸುಳಿ, —ರೋಮಾವರ್ತ. "श्रीवृक्षको हृदावर्तः रोचमानो गलोद्भवः" त्रिकाण्ड०। (वि०) 2. ಪ್ರಕಾಶಮಾನವಾದ, ಹೊಳೆಯುವ. रुच (दीप्तावभिप्रीतौ च) "शानच्" (३-२-१२४)। 3. ಇಷ್ಟವಾಗಿರುವ, ಸಂಮತವಾಗಿರುವ, ಒಪ್ಪುವ. "रोचमानः कुदृष्टिभ्यो रक्षोभ्यः प्रस्तवान् श्रियम्" भट्टि० ८-७३।

**रोचिष्णु ರೋಚಿಷ್ಣು** (वि०) ಪ್ರಕಾಶಿಸುವ, ಹೊಳೆಯುವ. रुच (दीप्तौ) "इष्णुच्" (३-२-१३६)। "रोचिष्णुकाञ्चनचयांशुपिशङ्गिताशा वंशध्वजैर्जलदसंहतिमुल्लिखन्त्यः" माघ० ५-२०।

**रोचिस् ರೋಚಿಸ್** (न०) ಪ್ರಭೆ, ಕಾಂತಿ, ಪ್ರಕಾಶ. रुच (दीप्तौ) "इसिः" (उ० २-१०८)। "रथाङ्गपाणेः पटलेन रोचिषामृषित्विषः संवलिता विरेजिरे" माघ० १-२१।

**रोटिका ರೋಟಿಕಾ** (स्त्री०) ರೊಟ್ಟಿ, ಹಿಟ್ಟಿನಿಂದ ತಯಾರಿಸಿದ ಒಂದು ವಿಧ ಭಕ್ಷ್ಯ.

**रोड ರೋಡ** (पुं०) 1. ಅರೆಯುವುದು, ಪುಡಿಮಾಡುವುದು. रोडृ (अनादरे) भावे "घञ्" (३-३-१८)। (वि०) 2. ತೃಪ್ತಿಹೊಂದಿದ, ಸಮಾಧಾನ ಹೊಂದಿದ. "रोडः क्षोदे भवेत्पुंसि तृप्ते तु वाच्यलिङ्गकः" मेदि०।

**रोदन ರೋದನ** (न०) ಅಳುವುದು. रुदिर् (अश्रुविमोचने) भावे "ल्युट्" (३-३-११५)। "दुर्बलस्य बलं राजा बालानां रोदनं बलम्। बलं मूर्खस्य मौनित्वं चोराणामनृतं बलम्" चाणक्य०। ಮೃತರಿಗಾಗಿ ಅತ್ತರೆ ಅವರಿಗೆ ನರಕಪ್ರಾಪ್ತಿಯಾಗುವುದು. "ज्ञानिनो मा रुदन्त्येव मा रोदीः पुत्र सांप्रतम्। रोदनाश्रुप्रपतनान्मृतानां नरकं ध्रुवम्" ब्रह्मवै०।

**रोदनिका ರೋದನಿಕಾ** (स्त्री०) ತೀಟಕಸಂಧಿ.

**रोदनी ರೋದನೀ** (स्त्री०) ತೀಟಕಸಂಧಿ.

**रोदनीय ರೋದನೀಯ** (वि०) 1. ಅಳಬೇಕಾದ. 2. ಅಳಲು ಅರ್ಹವಾದ. रुदिर् (अश्रुविमोचने) "अनीयर" (३-१-९६)। "तव्यः" (३-१-९६)। **रोदितव्यः ರೋದಿತವ್ಯಃ.**

**रोदस् ರೋದಸ್** (न०) 1. ಸ್ವರ್ಗ. 2. ಭೂಮಿ. रुदिर् (अश्रुविमोचने) "असुन्" (उ० ४-१५०)। 3. ಸ್ವರ್ಗ ಮತ್ತು ಭೂಮಿ. स्त्रियां "ङीष्" (४-१-४१)। **रोदसी ರೋದಸೀ.** "रोदोरन्ध्रं व्यश्नुवानानि लोलैरङ्गस्यान्तर्मापितैः स्थावराणि" माघ० १८-१५। "रोदश्च रोदसीति च। दिवि भूमौ पृथक् च स्यात् सहोक्त्याप्येतयोस्तथा" मेदि०।

**रोदसी ರೋದಸೀ** (स्त्री०) "रोदस्" ನೋಡಿ. रोदसी इत्यव्ययमपि। "रवः श्रवणभैरवः स्थगितरोदसीकन्दरः" वेणी० २-४।

**रोदस्यौ ರೋದಸ್ಯೌ** (स्त्री० द्विव०) ಸ್ವರ್ಗ ಮತ್ತು ಭೂಮಿ. "भूद्यावौ रोदस्यौ रोदसी च ते" अम०।

**रोद्धव्य ರೋದ್ಧವ್ಯ** (वि०) 1. ತಡೆಯಲ್ಪಡುವ, ಅಡ್ಡಿಮಾಡಲ್ಪಡುವ. रुधिर् (आवरणे) "तव्य:" (३-१-९६)। 2. ಆವರಿಸಲ್ಪಡುವ, ಸುತ್ತುವರಿಯಲ್ಪಡುವ. 3. ಮುತ್ತಿಗೆಹಾಕಲ್ಪಡುವ. 4. ತಡೆಯಬೇಕಾದ. 5. ಸುತ್ತುವರಿಯಬೇಕಾದ. 6. ಮುತ್ತಿಗೆ ಹಾಕಬೇಕಾದ. "अनीयर्" (३-१-९६)। **रोधनीयः ರೋಧನೀಯಃ.**

**रोद्धृ ರೋದ್ಧೃ** (वि०) ತಡೆಯುವವನು, ಅಡ್ಡಿಮಾಡುವವನು.

**रोध ರೋಧ** (पुं०) 1. ತಡೆಯುವುದು, ಅಡ್ಡಿಪಡಿಸುವುದು. रुधिर् (आवरणे) भावे "घञ्" (३-३-१८)। "विततशीकरराशिभिरुच्छ्रितैरुपलरोधविवर्तिभिरम्बुभिः" किरा० ५-१५। 2. ಆವರಿಸುವಿಕೆ, ಸುತ್ತುವರಿಯುವಿಕೆ. "प्रीतिरोधमसहिष्ट सा पुरी स्त्रीव कान्तपरिभोगमायतम्" रघु० ११-५२। 3. ತಡೆದುನಿಲ್ಲಿಸುವುದು. 4. ನದಿಯ ತೀರ, ಹೊಳೆಯ ದಡ. 5. ಶರ, ಬಾಣ. "चित्रपुङ्खो वीरशङ्कुः शरो रोध इषुर्न षण्" वैज०।

**रोधन ರೋಧನ** (न०) 1. ಅಡ್ಡಿಪಡಿಸುವುದು. ತಡೆಯುವುದು. रुधिर् (आवरणे) भावे "ल्युट्" (३-३-११५)। 2. ತಡೆದುನಿಲ್ಲಿಸುವುದು. 3. ಸುತ್ತುವರಿಯುವುದು. (वि०) 4. ಅಡ್ಡಿಪಡಿಸುವವನು. 5. ತಡೆದುನಿಲ್ಲಿಸುವವನು. 6. ಮುತ್ತಿಗೆಹಾಕುವವನು. रुधिर् कर्त० "ल्युः" (३-१-१३४)। (पुं०) 7. ಬುಧಗ್ರಹ. "स्यात् पश्चार्चिः श्रविष्ठाजश्यामाङ्गकाङ्गरोधनाः" त्रिकाण्ड०।

**रोधनीय ರೋಧನೀಯ** (वि०) "रोद्धव्य" ಪದದಲ್ಲಿ ನೋಡಿರಿ.

**रोधस् ರೋಧಸ್** (न०) ನದಿಯ ತೀರ, ಹೊಳೆಯ ದಡ. रुधिर् (आवरणे) "असुन्" (उ० ४-१८९)। "उच्छृङ्खितान्यवृषभाः सरितां नदन्तो रोधांसि धीरमपचस्करिरे महोक्षाः" माघ० ५-६३।

**रोधिन् ರೋಧಿನ್** (वि०) ತಡೆದು ನಿಲ್ಲಿಸುವವನು.

**रोधोवक्रा ರೋಧೋವಕ್ರಾ** (स्त्री०) ನದಿ, ಹೊಳೆ. रोधसा वक्रा। "नदी निर्झरिणी रोधोवक्रा सागरगामिनी" त्रिकाण्ड०।

**रोध्र ರೋಧ್ರ** (पुं०) 1. ಲೋಧ್ರವೃಕ್ಷ. (न०) 2. ಅಪರಾಧ, ತಪ್ಪು. 3. ಪಾಪ. रुध्यतेऽनेन—रुधिर् (आवरण) "रन्" बाहु०।

**रोप ರೋಪ** (पुं०) 1. ಶರ, ಬಾಣ, ಅಂಬು. रोप्यते—रूप (विमोहने) + णिच् "घञ्" (३-३-१९)। "एकौघैः समकालमभ्रमुदयी रोपैस्तदाऽऽतस्तरे" माघ० १९-१२०। 2. ಮೇಲಕ್ಕೆ ಏರಿಸುವುದು, ಹತ್ತಿಸುವುದು. 3. ಬೀಜ ಬಿತ್ತುವುದು, ಬೀಜ ನೆಡುವುದು. रुह (बीजजन्मादौ) + णिच् "घञ्" (३-३-१८)। (न०) 4. ರಂಧ್ರ, ಬಿಲ. "रोपौ रोपणेषु रोपं रन्ध्रे" हेम०।

**रोपण ರೋಪಣ** (न०) 1. ಏರಿಸುವುದು, ಹತ್ತಿಸುವುದು. रुह (बीजजन्मादौ) + णिच् "ल्युट्" (३-३-११५)। हृस्व पः (७-३-४३)। 2. ನೆಡುವುದು, ಗಿಡಗಳನ್ನು ನೆಟ್ಟು ಬೆಳಸುವುದು. 3. ಬತ್ತಿಸುವುದು, ಔಷಧಾದಿಗಳಿಂದ ವ್ರಣವನ್ನು ಒಣಗಿಸುವುದು, ಗಾಯವನ್ನು ವಾಸಿಮಾಡುವುದು. 4. ಅನ್ಯಥಾಜ್ಞಾನ, ಒಂದು ವಸ್ತುವನ್ನು ಮತ್ತೊಂದು ವಸ್ತುವನ್ನಾಗಿ ತಿಳಿಯುವುದು. (वि०) 5. ಏರಿಸುವವನು, ಹತ್ತಿಸುವವನು. 6. ಬಿತ್ತುವವನು, ಬಿತ್ತಿ ಬೆಳಸುವವನು. 7. ವ್ರಣವನ್ನು ಒಣಗಿಸುವವನು. 8. ಒಂದು ವಸ್ತುವನ್ನು ಅನ್ಯಥಾ ತಿಳಿಯುವವನು.

**रोपित ರೋಪಿತ** (वि०) 1. ನೆಡಲ್ಪಟ್ಟ, ಬಿತ್ತಲ್ಪಟ್ಟ. 2. ಏರಿಸಲ್ಪಟ್ಟ, ಹತ್ತಿಸಲ್ಪಟ್ಟ. 3. ಬೆಳಸಲ್ಪಟ್ಟ. रुह (बीजजन्मादौ) + णिच् "क्तः" (३-२-१०२)। हृस्व पः (७-३-४३)।

**रोमक ರೋಮಕ** (न०) ಪಾಂಸುಲವಣ.

**रोमकर्ण ರೋಮಕರ್ಣ** (पुं०) ಶಶ, ಮೊಲ. रोमाणि कर्णेऽस्य। "शशस्तु रोमकर्णः स्यान्मृदुरोमा च शूलिकः" वैज०।

**रोमकूप ರೋಮಕೂಪ** (पुं०) (ಮೈಯಲ್ಲಿ) ಕೂದಲು ಹುಟ್ಟುವ ಗುಳಿ. रोम्णां कूप इव।

**रोमगुत्स ರೋಮಗುತ್ಸ** (पुंन०) ಚಾಮರ. रोम्णां गुत्सः स्तबकः। "चामरं रोमगुत्सं च केसरं चावचूलकम्" त्रिकाण्ड०।

**रोमगुच्छक ರೋಮಗುಚ್ಛಕ** (पुं०) ಚಾಮರ.

**रोमन् ರೋಮನ್** (न०) ಮೈಗೂದಲು, ಮೈಯಲ್ಲಿ ಹುಟ್ಟುವ ತುಂಡು ಕೂದಲು. रु (शब्दे) "मनिन्" (उ० ४-१५०)। निपा०। "भ्रूयुगेन सपदि प्रतिपेदे रोमभिश्च सममेव विभेदः" माघ० १०-६३।

**रोमन्थ ರೋಮಂಥ** (पुं०) ಮೆಲಕುಹಾಕುವುದು, ತಿಂದ ಆಹಾರವನ್ನು ಪುನಃ ಬಾಯಿಗೆ ಬರಮಾಡಿಕೊಂಡು

ಅಗಿಯುವುದು. रोगं मथ्नाति—मन्थ (विलोडने) "अण्" (३-२-१)। पृषो०। "छायाबद्धकदम्बकं मृगकुलं रोमन्थमभ्यस्यतु" शाकु० २-६।

**रोमभूमि ರೋಮಭೂಮಿ** (स्त्री०) ಕೂದಲು ಹುಟ್ಟುವ ಸ್ಥಳ, ಚರ್ಮ. रोम्णां भूमिरिव।

**रोमरन्ध्र ರೋಮರಂಧ್ರ** (न०) ರೋಮಕೂಪ, ಕೂದಲು ಹುಟ್ಟುವ ಗುಳಿ. रोम्णां रन्ध्रम्।

**रोमराजि ರೋಮರಾಜಿ, –लता –ಲತಾ** (स्त्री०) ರೋಮಪಂಕ್ತಿ, ಕೂದಲಿನ ಸಾಲು. रोम्णां राजिः लतेव वा। "मदनरसमहौघपूर्णनाभीह्रदपरिवाहितरोमराजयस्ताः" माघ० ७-२३।

**रोमवत् ರೋಮವತ್** (वि०) ರೋಮಯುಕ್ತವಾದ, ಕೂದಲಿನಿಂದ ಕೂಡಿದ. रोमाणि सन्त्यस्य "मतुप्" (५-२-९४)।

**रोमविकार ರೋಮವಿಕಾರ** (पुं०) ರೋಮಾಂಚ. रोम्णां विकारः।

**रोमविभेद ರೋಮವಿಭೇದ** (पुं०) ರೋಮಾಂಚ, ಮೈ ಮುಳ್ಳು, ನಿಲುಗೂದಲು. रोम्णां विभेदः। "मानिनीमभिमुखाहितचित्तां शंसति स्म घनरोमविभेदः" किरा० ९-४६।

**रोमश ರೋಮಶ** (पुं०) 1. ಮೇಷ, ಟಗರು. रोमाणि सन्त्यस्य "शः" (५-२-१००)। "एडकोऽप्युरणो मीढ उरभ्रो रोमशोऽप्यविः" वैज०। स्त्रियां "ङीष्" (४-१-६३)। **–शी –ಶೀ.** 2. ನಿಂಬವೃಕ್ಷ, ಬೇವಿನ ಮರ. "निम्बे पार्वतकैडर्यद्वेषिच्छर्दनमाथिकाः। रोमशः पिचुमन्दश्च" वैज०। 3. ವರಾಹ, ಹಂದಿ. **–शी –ಶೀ.** ಹೆಣ್ಣು ಹಂದಿ. (वि०) 4. ಮೈಯಲ್ಲಿ ಹೆಚ್ಚು ಕೂದಲುಳ್ಳವನು, ಹೆಚ್ಚು ಕೂದಲುಳ್ಳ ಪ್ರಾಣಿ. स्त्रियां "ङीप्"। **–शी –ಶೀ.**

**रोमहर्ष ರೋಮಹರ್ಷ** (पुं०) ರೋಮಾಂಚ, ಮೈ ಮುಳ್ಳು, ನಿಲುಗೂದಲು. रोम्णां हर्ष इव। "वेपथुश्च शरीरे मे रोमहर्षश्च जायते" गीता १-२९।

**रोमहर्षण ರೋಮಹರ್ಷಣ** (पुं०) 1. ತಾರೆಗಿಡ. रोमाणि हर्षयति—हृष (तुष्टौ)+णिच् "ल्युः" (३-१-१३४)। (न०) 2. ರೋಮಾಂಚ, ನಿಲುಗೂದಲು. रोम्णां हर्षणम्। "स्याद्रोमहर्षणाख्या तु रोमोद्गमे विभीतके" हेम०। (वि०) 3. ರೋಮಾಂಚವುಂಟುಮಾಡುವ. "संवादमिममश्रौषमद्भुतं रोमहर्षणम्" गीता १८-७४।

**रोमाञ्च ರೋಮಾಂಚ** (पुं०) ಮೈ ಮುಳ್ಳುಬರುವುದು, ನಿಲುಗೂದಲು. रोम्णामञ्चनम्—अञ्चु (गतिपूजनयोः) "घञ्" (३-३-१८)। ಇದು ಎಂಟು ವಿಧ ಸಾತ್ತ್ವಿಕ ಭಾವಗಳಲ್ಲೊಂದು. "स्तम्भः स्वेदोऽथ रोमाञ्चः स्वरभङ्गोऽथ वेपथुः। वैवर्ण्यमश्रुप्रलयः इत्यष्टौ सात्त्विकाः स्मृताः" सा० द० ३-१३६। ಸಂತೋಷ ಆಶ್ಚರ್ಯ ಭಯ ಮೊದಲಾದ ಕಾರಣಗಳಿಂದ ರೋಮಾಂಚವುಂಟಾಗುವುದು. "हर्षाद्भुतभयादिभ्यो रोमाञ्चो रोमविक्रिया" सा० द० ३-१३७।

**रोमाञ्चित ರೋಮಾಂಚಿತ** (वि०) ರೋಮಾಂಚವುಂಟಾಗಿರುವ, ನಿಲುಗೂದಲುಂಟಾಗಿರುವ. रोमाञ्चः सञ्जातोऽस्य "इतच्" (५-२-३६)। "रोमाञ्चिताङ्गीमनु तत्कटाक्षे भ्रान्तेन कान्तेन रतेर्निदिष्टः" नैष० ६-२३।

**रोमालि ರೋಮಾಲಿ, –आवलि –ಆವಲಿ** (स्त्री०) ರೋಮಪಂಕ್ತಿ, ಹೊಕ್ಕಳಿನ ಮೇಲಿನ ಕೂದಲಿನ ಸಾಲು. रोम्णामालिः आवलिर्वा—वा "ङीष्" (ग० ४-१-४५)। आवली ಆವಲೀ. "लोभयति तव तनूदरि जघनतलादुपरि रोमाली"। "रोमावलीरज्जुमुरोजकुम्भौ" नैष० ७-८४।

**रोमोद्गम ರೋಮೋದ್ಗಮ, –उद्भेद –ಉದ್ಭೇದ** (पुं०) ರೋಮಾಂಚ. रोम्णामुद्गमः उद्भेदो वा। "रोमोद्गमः प्रादुरभूदुमायाः स्विन्नाङ्गुलिः पुंगवकेतुरासीत्" कुमा० ७-७७।

**रोलम्ब ರೋಲಂಬ** (पुं०) ಭ್ರಮರ, ದುಂಬಿ. रौति—रु (शब्दे) "विच्"। रौः कूजन् सन् लम्बते—लबि (अवस्रंसने) "अच्" (३-१-१३४)। "भ्रमरश्चञ्चरीकः स्याद्रोलम्बो मधुसूदनः" त्रिकाण्ड०।

**रोष ರೋಷ** (पुं०) ಕ್ರೋಧ, ಕೋಪ, ಸಿಟ್ಟು. रुष (हिंसायाम्) "घञ्" (३-३-१८)। "आर्द्रतां हृदयमाप च रोषो लोलति स्म वचनेषु वधूनाम्" माघ० १०-३६।

**रोषण ರೋಷಣ** (पुं०) 1. ಒರೆಗಲ್ಲು, ಚಿನ್ನ ಬೆಳ್ಳಿಗಳನ್ನು ಉಜ್ಜಿ ಬಣ್ಣ ನೋಡುವ ಕಲ್ಲು. 2. ಪಾದರಸ. 3. ಊಷರ ಭೂಮಿ, ಕರಳು ಭೂಮಿ. (न०) 4. ಕೋಪವನ್ನುಂಟು ಮಾಡುವುದು. रुष (हिंसायाम्) भावे "ल्युट्" (३-३-११५)। (वि०) 5. ಕೋಪವನ್ನುಂಟುಮಾಡುವ ಸ್ವಭಾವದವನು. रुष "युच्" (३-२-१५१)। 6. ಕೋಪವನ್ನುಂಟುಮಾಡುವ. रुष कर्त० "ल्युः" (३-१-१३४)।

**रोषणीय ರೋಷಣೀಯ** (वि०) 1. ಕೋಪವುಂಟು ಮಾಡಲ್ಪಡುವ. 2. ಕೋಪವುಂಟುಮಾಡಬೇಕಾದ. रुष (हिंसायाम्) "अनीयर्" (३-१-९६)। "तव्यः" (३-१-९६)। रोषितव्यः ರೋಷಿತವ್ಯಃ. इडभावे रोष्टव्यः ರೋಷ್ಟವ್ಯಃ.

**रोषित ರೋಷಿತ** (वि०) ಕೋಪವುಂಟುಮಾಡಲ್ಪಟ್ಟ. रुष (हिंसायाम्) + णिच् "क्तः" (३-२-१०२)।

**रोह ರೋಹ** (पुं०) 1. ಅಂಕುರ, ಮೊಳಕೆ. रुह (बीजजन्मादौ) "अच्" (३-१-१३४)। "अग्निः स्तोको वर्धतेऽप्याज्यसिक्तो बीजं चैकं रोहसाहस्रमेति। आयव्ययौ विपुलौ सन्निशाम्य तस्मादल्पं नावमन्येत वित्तम्" भा० शान्ति १२०-३८। 2. ಬೆಳೆಯುವುದು, ಅಭಿವೃದ್ಧಿ ಹೊಂದುವುದು. 3. ಮೇಲಕ್ಕೆ ಏರುವುದು, ಹತ್ತುವುದು. रुह भावे "घञ्" (३-३-१८)। (वि०) 4. ಬೆಳೆಯುವ, ವೃದ್ಧಿಹೊಂದುವ. 5. ಮೇಲಕ್ಕೆ ಏರುವ, ಹತ್ತುವ.

**रोहण ರೋಹಣ** (पुं०) 1. ಒಂದು ಪರ್ವತ. रोहत्यस्मिन् — रुह (बीजजन्मादौ) "ल्युट्" (३-३-११७)। (न०) 2. ಹತ್ತುವುದು. 3. ಬೆಳೆಯುವುದು, ವೃದ್ಧಿ ಹೊಂದುವುದು. रुह भावे "ल्युट्" (३-३-११५)। (वि०) 4. ಮೇಲಕ್ಕೆ ಹತ್ತುವ. 5. ಬೆಳೆಯುವ, ವೃದ್ಧಿ ಹೊಂದುವ.

**रोहन्त ರೋಹಂತ** (पुं०) 1. ವೃಕ್ಷ, ಮರ. (स्त्री०) —न्ती —ನ್ತೀ. 2. ಲತೆ, ಬಳ್ಳಿ.

**रोहि ರೋಹಿ** (पुं०) 1. ಧಾರ್ಮಿಕ ಮನುಷ್ಯ. 2. ವೃಕ್ಷ, ಮರ. 3. ಬೀಜ. 4. ಜಿಂಕೆ, ಹರಿಣ, ಹುಲ್ಲೆ. रुह (बीजजन्मादौ) "इन्" (उ० ४-११८)।

**रोहिण ರೋಹಿಣ** (पुं०) 1. ವಟವೃಕ್ಷ, ಆಲದಮರ. 2. ಮುಳ್ಳುಮುತ್ತಗದ ಮರ. 3. ಶಾಲ್ಮಲಿದ್ವೀಪದ ಒಂದು ಪರ್ವತ.

**रोहिणी ರೋಹಿಣೀ** (स्त्री०) 1. ರೋಹಿಣೀದೇವಿ, ವಸುದೇವನ ಪತ್ನಿ, ಬಲರಾಮನ ತಾಯಿ. 2. ಆಕಳು, ಕೆಂಪು ಹಸು. रोहित "ङीप्" नकारादेशश्च (४-१-३९)। "वर्धिष्णुधाराध्वनि रोहिणीः पयश्चिरं निदध्यौ दुहतः स गोदुहः" माघ० १२-४०। 3. ರೋಹಿಣೀ ನಕ್ಷತ್ರ, 27 ನಕ್ಷತ್ರಗಳಲ್ಲಿ 4ನೆಯದು. 4. ಮಿಂಚು. 5. ಕಟುಕರೋಹಿಣಿ. 6. ಒಂಬತ್ತು ವರ್ಷ ವಯಸ್ಸಿನ ಕನ್ಯೆ. "अष्टवर्षा भवेत्कन्या नववर्षा च रोहिणी"। 7. ಒಂದು ವಿಧ ಕಂಠರೋಗ. 8. ಬಿಳಿ ಕಗ್ಗಲಿ ಮರ. "रोहिणी कण्ठरुग्भिदि। तटित्कटम्भरासोमवल्केषु लोहितागवोः" मेदि०। 9. ಆಳಲೆ ಗಿಡ. 10. ಆಕಳು, ಹಸು. 11. ಪಾರ್ವತಿ. "रोहिणी रोहिता पथ्या कन्योमाकटुरोहिणी। गौस्तारा कण्ठरोगश्च" नानार्थर०।

**रोहिणीश ರೋಹಿಣೀಶ, —पति —ಪತಿ** (पुं०) 1. ರೋಹಿಣೀದೇವಿಯ ಪತಿಯಾದ ವಸುದೇವ. रोहिण्याः ईशः पतिर्वा। 2. ಚಂದ್ರ.

**रोहिणीजानि ರೋಹಿಣೀಜಾನಿ** (पुं०) 1. ವಸುದೇವ. 2. ಚಂದ್ರ. रोहिणी जाया यस्य — जायाया निङादेशः (५-४-१३४)।

**रोहिणीतनय ರೋಹಿಣೀತನಯ, —सुत —ಸುತ, —सूनु —ಸೂನು** (पुं०) 1. ಬಲರಾಮ. 2. ಬುಧಗ್ರಹ.

**रोहिण्यष्टमी ರೋಹಿಣ್ಯಷ್ಟಮೀ** (स्त्री०) ರೋಹಿಣೀ ನಕ್ಷತ್ರದಿಂದ ಕೂಡಿದ ಭಾದ್ರಪದ ಕೃಷ್ಣಾಷ್ಟಮಿ, ಶ್ರೀಕೃಷ್ಣ ಜನ್ಮಾಷ್ಟಮಿ.

**रोहित् ರೋಹಿತ್** (पुं०) 1. ಸೂರ್ಯ. रोहति — रुह (बीजजन्मादौ) "इतिः" (उ० १-९७)। 2. ಒಂದು ಜಾತಿಯ ಮತ್ಸ್ಯ, —ಮೀನು. (स्त्री०) 3. ಹೆಣ್ಣು ಜಿಂಕೆ. 4. ಒಂದು ಲತೆ. (वि०) 5. ಸುಂದರವಾದ, ಮನೋಹರವಾದ. "रोहिन्मृग्यां लताभेदे स्त्री नार्के ललितं त्रिषु" मेदि०।

**रोहित ರೋಹಿತ** (पुं०) 1. ಕೆಂಪುಬಣ್ಣ. रोहति — रुह (बीजजन्मादौ) "इतन्" (उ० ३-९४)। "लोहितो रोहितो रक्तः" अम०। 2. ಜಿಂಕೆ, ಚಿಗರಿ, ಹುಲ್ಲೆ. "गोकर्णपृषतैणर्श्यरोहिताः" अम०। 3. ರಕ್ತಮತ್ಸ್ಯ, ಕೆಂಪು ಮೀನು. ಈ ಮೀನಿನ ಹೊಟ್ಟೆ ಮುಖ ಕಣ್ಣು ಮತ್ತು ರೆಕ್ಕೆಗಳು ಕೆಂಪಗೂ ಮತ್ತು ರೆಕ್ಕೆಗಳು ತೆಳುವಾಗಿಯೂ ಇರುವುವು. "रक्तोदरो रक्तमुखो रक्ताक्षो रक्तपक्षतिः। रक्तपक्षो झषश्रेष्ठो रोहितः कथितो बुधैः" भावप्र०। 4. ಹರಿಶ್ಚಂದ್ರ ಮಹಾರಾಜನ ಮಗ. 5. ಮುಳ್ಳುಮುತ್ತಗದ ಮರ. "रोहिते रौहिषो रोही रक्तो रोहितकोऽपि च" वैज०। 6. ಜಂಬುಕ, ನರಿ. (न०) 7. ರಕ್ತ, ನೆತ್ತರು. 8. ನೆಟ್ಟಗಿರುವ ಇಂದ್ರಧನುಸ್ಸು. "रोहितमृजुशक्रास्त्रे रक्ते ना मृगमीनयोः" त्रिकाण्ड०। 9. ಕುಂಕುಮಕೇಸರಿ. "रोहितं कुङ्कुमे रक्ते ऋजुशक्रशरासने। पुंसि स्यान्मीनमृगयोर्भेदे रोहितकद्रुमे" मेदि०।

**रोहितक ರೋಹಿತಕ** (ಪುಂ) ಮುಳ್ಳುಮುತ್ತುಗದ ಮರ. रोहित "कन्" (५-३-७५)।

**रोहिताश्व ರೋಹಿತಾಶ್ವ** (ಪುಂ) 1. ಹರಿಶ್ಚಂದ್ರ ಮಹಾರಾಜನ ಮಗ. 2. ಅಗ್ನಿ, ಬೆಂಕಿ. "रोहिताश्वश्चित्रभानौ हरिश्चन्द्रनृपात्मजे" मेदि०।

**रोहिन् ರೋಹಿನ್** (ಪುಂ) 1. ರೋಹಿತಕವೃಕ್ಷ, ಮುಳ್ಳುಮುತ್ತುಗದ ಮರ. 2. ವಟವೃಕ್ಷ, ಆಲದ ಮರ. 3. ಅಶ್ವತ್ಥವೃಕ್ಷ, ಅರಳಿ ಮರ. "रोही रोहितकेऽश्वत्थे वटे" हेम०। (ವಿ०) 4. ಹತ್ತುವ, ಏರುವ. 5. ಬೆಳೆಯುವ, ವೃದ್ಧಿಹೊಂದುವ.

**रोहिष ರೋಹಿಷ** (ಪುಂ) 1. ಜಿಂಕೆ, ಹುಲ್ಲೆ. 2. ಕಾಚಿಹುಲ್ಲು, ಗಣಕೆಹುಲ್ಲು. 3. ಮತ್ಸ್ಯ, ಮೀನು. "अथ रोहिषः। मृगकत्तृणमत्स्येषु" हेम०।

**रौक्म ರೌಕ್ಮ** (ವಿ०) 1. ಸುವರ್ಣ ಸಂಬಂಧವಾದ. रुक्मस्येदम् "अण्" (४-३-१२०)। 2. ಸುವರ್ಣದಿಂದ ತಯಾರಿಸಲ್ಪಟ್ಟ, ಸುವರ್ಣದ ವಿಕಾರ. रुक्मस्य विकारः "अञ्" (४-३-१५४)। "रौक्मा रेजुः स्थासकामूर्तिभाजः" माघ० १८-५।

**रौक्मिणेय ರೌಕ್ಮಿಣೇಯ** (ಪುಂ) ರುಕ್ಮಿಣಿಯ ಪುತ್ರ ಪ್ರದ್ಯುಮ್ನ. रुक्मिण्याः अपत्यं पुमान् "ढक्" (४-१-१२०)।

**रौक्ष्य ರೌಕ್ಷ್ಯ** (ನ०) 1. ಪಾರುಷ್ಯ, ಕಾಠಿನ್ಯ, ಗಟ್ಟಿಯಾಗಿರುವಿಕೆ. रूक्षस्य भावः "ष्यञ्" (५-१-१२४)। 2. ಒರಟಾಗಿರುವಿಕೆ, ನಯವಿಲ್ಲದಿರುವಿಕೆ. 3. ದಯೆಯಿಲ್ಲದಿರುವಿಕೆ, ಕ್ರೂರತನ. "तस्मादुपच्छन्दयति प्रयोज्यं मयि त्वया न प्रतिषेधरौक्ष्यम्" रघु० ५-५८।

**रौद्र ರೌದ್ರ** (ಪುಂ) 1. ಶೃಂಗಾರ ಮೊದಲಾದ ಅಷ್ಟ (ನವ?) ರಸಗಳಲ್ಲೊಂದು. ರೌದ್ರರಸಕ್ಕೆ ಕ್ರೋಧವು ಸ್ಥಾಯಿಭಾವ. ರಕ್ತವರ್ಣ. ರುದ್ರಾಧಿದೇವತಾಕವಾದುದು ರೌದ್ರರಸ. ಶತ್ರುವು ಆಲಂಬನ ವಿಭಾವ. ಶತ್ರುವಿನ ಕ್ರೂರವಾದ ವ್ಯಾಪಾರವು ಉದ್ದೀಪನ ವಿಭಾವ. ಭ್ರೂಭಂಗ ಭುಜಾಸ್ಫಾಲನ ಆತ್ಮಪ್ರಶಂಸೆ ರೋಮಾಂಚ ಸ್ವೇದ ಮುಂತಾದುವು ಅನುಭಾವಗಳು. ಮೋಹ ಅಮರ್ಷ ಕ್ರೂರದೃಷ್ಟಿ ಮುಂತಾದುವು ವ್ಯಭಿಚಾರಿ ಭಾವಗಳು. रुद्रस्येदम् "अण्" (४-३-१२०)। "रौद्रः क्रोधस्थायिभावो रक्तो रुद्राधिदैवतः। आलम्बनमरिस्तत्र तच्चेष्टोद्दीपनं मतम्। भ्रूविभङ्गौष्ठनिर्दंशबाहुस्फोटनतर्जनाः। आत्मावदानकथनमायुधोत्क्षेपणानि च। उग्रतावेगरोमाञ्चस्वेदवेपथवो मदः। अनुभावास्तथाक्षेपक्रूरसन्दर्शनादयः। मोहामर्षादयस्तत्र भावाःस्युर्व्यभिचारिणः" सा० द० ३-२२७-३१। (ನ०) 2. ಆತಪ, ಬಿಸಿಲು. "अथातपो रौद्रमिद्धम्" वैज०। 3. ಕ್ರೌರ್ಯ. 4. ಭಯಂಕರವಾಗಿರುವಿಕೆ. (ವಿ०) 5. ಉಗ್ರವಾದ, ತೀಕ್ಷ್ಣವಾದ, ಬಿರುಸಾದ. 6. ಭಯಂಕರವಾದ. 7. ತೀವ್ರವಾದ. 8. ರುದ್ರಸಂಬಂಧವಾದ. (स्त्री०) -द्री -ದ್ರೀ. ಪಾರ್ವತಿ, ಗೌರಿ. "रौद्रो भीष्मे रसे तीव्रे रौद्री गौर्याम्" हेम०।

**रौप्य ರೌಪ್ಯ** (ನ०) ರಜತ, ಬೆಳ್ಳಿ. रूप्यम् स्वार्थे "अण्" (५-४-३८)।

**रौरव ರೌರವ** (ಪುಂ) 1. ಒಂದು ನರಕ, ತಾಮಿಸ್ರ ಮೊದಲಾದ ಇಪ್ಪತ್ತೆಂಟು ನರಕಗಳಲ್ಲೊಂದು. [ವಿವರಕ್ಕೆ "नरक" ಪದದಲ್ಲಿ ನೋಡಿ]. (ವಿ०) 2. ಭಯಂಕರವಾದ. "रौरवो भीषणे नरकान्तरे" हेम०। 3. ಜಿಂಕೆಯ ಸಂಬಂಧವಾದ. रुरोः मृगस्य इदम् "अण्" (४-३-१२०)।

**रौहिण ರೌಹಿಣ** (ಪುಂ) 1. ಚಂದನವೃಕ್ಷ, ಗಂಧದ ಮರ. 2. ಅಶ್ವತ್ಥವೃಕ್ಷ, ಅರಳಿ ಮರ.

**रौहिणेय ರೌಹಿಣೇಯ** (ಪುಂ) 1. ಬಲರಾಮ, ಶ್ರೀಕೃಷ್ಣನ ಅಣ್ಣ. रोहिण्याः अपत्यं पुमान् "ढक्" (४-१-१२०)। "यां रेवतीजानिरियेष हातुं न रौहिणेयो न च रोहिणीशः" माघ० ३-६०। 2. ಬುಧಗ್ರಹ. 3. ವತ್ಸ, ಕರು. "वत्से बले बुधे रौहिणेयः" त्रिकाण्ड०। (ನ०) 4. ಮರಕತಮಣಿ.

**रौहिष ರೌಹಿಷ** (ಪುಂ) 1. ಜಿಂಕೆ, ಚಿಗರಿ, ಹುಲ್ಲೆ. रोहिषं कत्तृणमत्ति—"अण्" (४-२-९१)। (ನ०) 2. ಕಾಚಿಹುಲ್ಲು, ಕೆಂಪು ಗಣಕೆಹುಲ್ಲು. (स्त्री०) -षी -ಷೀ. 3. ಹೆಣ್ಣು ಜಿಂಕೆ. 4. ಲತೆ, ಬಳ್ಳಿ. 5. ಒಂದು ಜಾತಿಯ ಗರಿಕೆ ಹುಲ್ಲು.

इति "रेफा" दिपदार्थनिरूपणम्।

# ಲ

**ल ಲ** ಇದು ಅವರ್ಗೀಯವ್ಯಂಜನಗಳಲ್ಲಿ ಮೂರನೆಯ ವರ್ಣ. ಇದು ದನ್ತಮೂಲದಲ್ಲಿ ಬಾಹ್ಯ ಪ್ರಯತ್ನದಿಂದ ಹುಟ್ಟುವ ಅಂತಃಸ್ಥ ಅಲ್ಪಪ್ರಾಣ ವರ್ಣ. "ऌतुलसानां दन्ताः"। "प्रथमतृतीययमौ यरलवाश्च अल्पप्राणाः"। "यरलवा अन्तःस्थाः" सि० कौ०।

**ल ಲ** (ಪುಂ) 1. ಇಂದ್ರ. 2. ದೀಪ್ತಿ, ಪ್ರಕಾಶ. 3. ಭೂಮಿ. 4. ದಾನ, ಕೊಡುಗೆ. 5. ವಾಯು, ಗಾಳಿ. 6. ಶ್ಲೇಷ. 7. ಲವಣ, ಉಪ್ಪು. 8. ಪ್ರಳಯ. 9. ಭಯ. 10. ಆಶ್ರಯ, ಅಭಿಪ್ರಾಯ. 11. ಸಾಧನ. 12. ಮನಸ್ಸು. 13. ವರುಣ. 14. ಸಮಾಧಾನಪಡಿಸುವುದು. 15. ಆಹ್ಲಾದನ, ಸಂತೋಷಪಡಿಸುವುದು. "लो दीप्तौ द्यां लश्च भूमौ भये चाह्लादनेऽपि च। लो वाते लवणे च स्याल्लो दाने च प्रकीर्तितः। लःश्लेषे चाशये चैव प्रलये साधनेऽपि लः। मानसे वरुणे चैव लकारः सान्त्वनेऽपि च" एका०। 16. (ಛಂದಃಶಾಸ್ತ್ರದಲ್ಲಿ) ಲಘು ವರ್ಣ. 17. (ವ್ಯಾಕರಣ ಶಾಸ್ತ್ರದಲ್ಲಿ) ಲಕಾರ. लट् लिट् लुट् लृट् लोट् लङ् आशीर्लिङ् विधिलिङ् लुङ् लृङ् ಇವು ಲಕಾರಗಳು. "लः कर्मणि च भावे चाकर्मकेभ्यः" पा० सू० ३-४-६९। 18. ಚಂದ್ರ.

**लकुच ಲಕುಚ** (ಪುಂ) 1. ಗಜನಿಂಬೆ ಗಿಡ. लकयते—लक (आस्वादने) "उचः" बाहु०। (ನಂ) 2. ಗಜನಿಂಬೆ ಹಣ್ಣು.

**लक्तक ಲಕ್ತಕ** (ಪುಂ) ಯಾವಕ, ಅರಗು, ಲಾಕ್ಷೆ. रक्तेन रक्तवर्णेन कायति—कै (शब्दे) "कः" (३-२-३)।

**लक्ष ಲಕ್ಷ** (ಸ್ತ್ರೀಂ) 1. ಒಂದು ನೂರು ಸಾವಿರ, ಒಂದು ಲಕ್ಷ, ಒಂದು ಸಾವಿರ ನೂರು. लक्षयति—लक्ष (दर्शनाङ्कनयोः) + णिच् "अच्" (३-१-१३४)। "लक्षैः क्वणत्काञ्चनकिङ्किणीकुलैरमज्जि धूलीजलवौ नभोगते" कुमा० १४-४६। (ನಂ) 2. ಲಕ್ಷ್ಯ, ಗುರಿ. लक्ष्यते—लक्ष (आलोचने) "घञ्" (३-३-१९)। 3. ಚಿಹ್ನೆ, ಗುರುತು. 4. ವ್ಯಾಜ, ನೆಪ. "लक्षं छद्मनि विख्यातं लक्षं संख्याशरव्ययोः" विश्व०। "संख्यायां तु न ना लक्षं क्लीबं व्याजशरव्ययोः" त्रिकाण्ड०।

**लक्षक ಲಕ್ಷಕ** (ಪುಂ) 1. ಲಕ್ಷಣಾವೃತ್ತಿಯಿಂದ ಅರ್ಥವನ್ನು ತಿಳಿಸುವ ಶಬ್ದ. लक्षयति—लक्ष (दर्शनाङ्कनयोः) "ण्वुल्" (३-१-१३३)। ["लक्षणा" ಪದದಲ್ಲಿ ನೋಡಿ.] 2. ಒಂದು ನೂರು ಸಾವಿರ, ಒಂದು ಲಕ್ಷ. (ವಿಂ) 3. ತೋರಿಸುವ, ಸೂಚಿಸುವ.

**लक्षण ಲಕ್ಷ್ಮಣ** (ಪುಂ) 1. ಲಕ್ಷ್ಮಣ, ಶ್ರೀರಾಮನ ತಮ್ಮ, ಸುಮಿತ್ರೆಯ ಮಗ. "लक्षणस्तु सौमित्री लक्ष्मणो यथा" हेम०। (ನಂ) 2. ಚಿಹ್ನೆ, ಗುರುತು. लक्षयति—लक्ष (दर्शनाङ्कनयोः) + णिच् "नः" अडागमश्च (उ० ३-७)। लक्ष्यतेऽनेन—करं० "ल्युट्" वा। "वधूदुकूलं कलहंस लक्षणं गजाजिनं शोणितबिन्दुवर्षि च" कुमा० ५-६७। 3. ಸೂಚನೆ. "अव्याक्षेपो भविष्यन्त्याः कार्यसिद्धेर्हि लक्षणम्" रघु० १०-६। 4. ಸ್ವರೂಪ ವಿವರಣೆ, ಗುಣ ನಿರೂಪಣೆ. "उपकारापकारौ हि लक्ष्यं लक्षणमेतयोः" माघ० २-३७। 5. ಹೆಸರು, ನಾಮಧೇಯ. "तेषां दिक्षु प्रथितविदिशालक्षणां राजधानीम्" मेघ० १-२४। 6. ಮುದ್ರೆ, ಮೊಹರು. 7. ಶ್ರೇಷ್ಠತೆ, ಮೇಲ್ಮೆ, ಗುಣೋತ್ಕರ್ಷ. "इक्ष्वाकुवंश्यः ककुदं नृपाणां काकुत्स्थ इत्याहितलक्षणोऽभूत्" रघु० ६-७१। 8. ತೆರಿಗೆಯ ದರ, ಸುಂಕದ ದರ, ನಿಗದಿಯಾದ ಸುಂಕ. "नदीतीरेषु तद्विद्यात् समुद्रे नास्ति लक्षणम्" मनु० ८-४०६। 9. ದರ್ಶನ, ನೋಟ. 10. ಅಸಾಧಾರಣ ಧರ್ಮ, ಇತರ ವ್ಯಾವರ್ತಕ ಧರ್ಮ. ಇದು ಸ್ವರೂಪಲಕ್ಷಣ ಮತ್ತು ತಟಸ್ಥಲಕ್ಷಣಗಳೆಂದು ಎರಡು ವಿಧ. "सच्चिदानन्दो ब्रह्म" "चोदनालक्षणोऽर्थो धर्मः" ಇಲ್ಲಿ ಸ್ವರೂಪ ಲಕ್ಷಣ. "पताकावत् देवदत्तगृहम्" "गन्धवती पृथिवी" ಇಲ್ಲಿ ತಟಸ್ಥಲಕ್ಷಣ. 11. ಆಲೋಚನೆ. 12. ಪ್ರತಿಪಾದ್ಯವಾದ ವಿಷಯ.

**लक्षणा ಲಕ್ಷಣಾ** (ಸ್ತ್ರೀಂ) 1. ಹೆಣ್ಣು ತಾವರೆ ಹಕ್ಕಿ, ಹೆಣ್ಣು ಸಾರಸ ಪಕ್ಷಿ. 2. ಒಂದು ವಾಕ್ಯದಲ್ಲಿ ಪ್ರಯುಕ್ತವಾದ ಪದಕ್ಕೆ ಆ ವಾಕ್ಯದಲ್ಲಿ ಮುಖ್ಯಾರ್ಥವು ಬಾಧಿತವಾಗಿ ಮುಖ್ಯಾರ್ಥದ ಶಕ್ಯಸಂಬಂಧದಿಂದ ಬೇರೊಂದು ಅರ್ಥವನ್ನು ಕೊಡುವ ಶಕ್ತಿ. ಮುಖ್ಯಾರ್ಥಸಂಬಂಧ ಹೊಂದುವುದರಿಂದ ರೂಢಿ ಅಥವಾ ಯಾವುದಾದರೊಂದು ಪ್ರಯೋಜನವಿರಬೇಕು. "गङ्गायां घोषः" ಎಂಬಲ್ಲಿ ಪ್ರವಾಹರೂಪವಾದ ಗಂಗೆಯಲ್ಲಿ ಘೋಷ (ಆಭೀರಪಲ್ಲಿ) ವಿರುವುದು ಅಸಂಭವವಾಗಿ गङ्गा ಪದಕ್ಕೆ ಗಂಗಾತೀರವೆಂಬ ಅರ್ಥವು ಲಕ್ಷಣಾವೃತ್ತಿಯಿಂದ ತೋರುವುದು. ಈ ರೀತಿ ಮುಖ್ಯಾರ್ಥಸಂಬಂಧದಿಂದ ಗಂಗಾತೀರದಲ್ಲಿ ಶೈತ್ಯ

ಮತ್ತು ಪಾವನತ್ವರೂಪವಾದ ಪ್ರಯೋಜನ ಲಭಿಸುವುದು. ಆದುದರಿಂದ गङ्गा ಪದಕ್ಕೆ ಗಂಗಾತೀರದಲ್ಲಿ ಲಕ್ಷಣೆ. "मुख्यार्थबाधे तद्युक्तो यथान्योऽर्थः प्रतीयते। रूढेः प्रयोजनाद्वासौ लक्षणा शक्तिरर्पिता" ಸಾ० ದ० २-५। लक्ष (दर्शनाङ्कनयोः) + णिच् "युच्" (३-३-१०७)। ಈ ಲಕ್ಷಣೆಯು ಅನೇಕ ವಿಧವಾಗಿರುವುದು. [ಕಾವ್ಯಪ್ರಕಾಶ ಮತ್ತು ಸಾಹಿತ್ಯದರ್ಪಣ ನೋಡಿ].

**लक्षा ಲಕ್ಷಾ** (स्त्री०) ಒಂದು ಲಕ್ಷ, ಒಂದು ನೂರು ಸಾವಿರ, ಒಂದು ಸಾವಿರ ನೂರು. लक्ष (दर्शनाङ्कनयोः) + णिच् "अच्" (३-१-१३४)। "टाप्"। "लक्षा न पुंसि संख्यायाम्" मेदि०।

**लक्षित ಲಕ್ಷಿತ** (वि०) 1. ಲಕ್ಷಣಾವೃತ್ತಿಯಿಂದ ತಿಳಿಸಲ್ಪಟ್ಟ ಅರ್ಥ. लक्ष (दर्शनाङ्कनयोः) + णिच् "क्तः" (३-२-१०२)। "गङ्गायां घोषः" ಎಂಬಲ್ಲಿ ಗಂಗಾತೀರ ರೂಪವಾದ ಅರ್ಥವು ಲಕ್ಷಣಾವೃತ್ತಿಯಿಂದ ಉಂಟಾದುದರಿಂದ ಈ ಅರ್ಥವು ಲಕ್ಷಿತ. 2. ನೋಡಲ್ಪಟ್ಟ. "द्रुतसमीरचलैः क्षणलक्षितव्यवहिता विटपैरिव मञ्जरी" माघ० ६-२८। 3. ಆಲೋಚಿಸಲ್ಪಟ್ಟ. लक्ष (आलोचने) + णिच् "क्तः" (३-२-१०२)।

**लक्षितलक्षणा ಲಕ್ಷಿತಲಕ್ಷಣಾ** (स्त्री०) ಲಕ್ಷಿತ ಪದದ ಶಕ್ಯಸಂಬಂಧದಿಂದ ಉಂಟಾಗುವ (ಲಕ್ಷಣೆ) ಅರ್ಥ. लक्षितस्य पदस्य लक्षणा। "द्विरेफ" ಪದದಿಂದ ಎರಡು ರೇಫಗಳುಳ್ಳ ಭ್ರಮರ ಪದಕ್ಕೆ ಲಕ್ಷಣಾ. ಈ ಲಕ್ಷಣೆಯಿಂದ ಭ್ರಮರರೂಪವಾದ ಅರ್ಥಕ್ಕೆ ಲಕ್ಷಣಾವೃತ್ತಿಯಿಂದ ಬೋಧವುಂಟಾಗುವುದು. ಆದುದರಿಂದ "द्विरेफ" ಪದಕ್ಕೆ ಭ್ರಮರದಲ್ಲಿ ಲಕ್ಷಿತಲಕ್ಷಣೆಯೆಂದು ತಿಳಿಯಬೇಕು.

**लक्ष्मण ಲಕ್ಷ್ಮಣ** (पुं०) 1. ಶ್ರೀರಾಮನ ಅನುಜ (ತಮ್ಮ), ದಶರಥನ ಪತ್ನಿ ಸುಮಿತ್ರೆಯಲ್ಲಿ ಜನಿಸಿದ ಜ್ಯೇಷ್ಠ ಪುತ್ರ. लक्ष्मणमस्त्यस्य "अच्" (५-२-१२७)। ಲಕ್ಷ್ಮಣನು ಶ್ರೀರಾಮನಲ್ಲಿ ಬಾಲ್ಯದಿಂದಲೂ ಭಕ್ತಿವಿಶ್ವಾಸಗಳಿಂದ ಇದ್ದು ಅವನ ಎಲ್ಲಾ ಕಷ್ಟ ಸುಖಗಳಲ್ಲಿಯೂ ಭಾಗಿಯಾಗಿದ್ದನು. ಶ್ರೀರಾಮನು ಸೀತಾದೇವಿಯನ್ನು ಮದುವೆಯಾದಾಗ ಲಕ್ಷ್ಮಣನೂ ಊರ್ಮಿಳೆಯನ್ನು ಮದುವೆಯಾದನು. ಇವನಿಗೆ ಅಂಗದ ಮತ್ತು ಚಂದ್ರಕೇತುಗಳೆಂಬ ಇಬ್ಬರು ಪುತ್ರರು. ಶ್ರೀರಾಮನ ಹದಿನಾಲ್ಕು ವರ್ಷಗಳ ವನವಾಸಕಾಲದಲ್ಲಿ ತಾನೂ ಜೊತೆಯಲ್ಲಿದ್ದು ಶ್ರೀರಾಮ ಮತ್ತು ಸೀತಾದೇವಿಯವರ ಚರಣಸೇವೆಯಲ್ಲಿ ನಿರತನಾಗಿದ್ದನು. ಅರಣ್ಯದಲ್ಲಿ ಶೂರ್ಪಣಖಿಯ ಕರ್ಣನಾಸಾಚ್ಛೇದನಮಾಡಿದನಂತರ ರಾವಣನಿಂದ ಸೀತೆಯು ಅಪಹರಿಸಲ್ಪಡಲು ಶ್ರೀರಾಮನೊಡನೆ ಲಂಕೆಗೆ ತೆರಳಿ ಅನೇಕ ರಾಕ್ಷಸರನ್ನೂ ಸಂಹರಿಸಿದನು. ಬಹಳ ಪರಾಕ್ರಮಿಯೆನಿಸಿದ ಇಂದ್ರಜಿತ್ತಿನ ನಾಗಪಾಶಪ್ರಯೋಗದಿಂದ ಮೂರ್ಛಿತನಾಗಿ ಆಂಜನೇಯನು ತಂದ ಸಂಜೀವನ ಮೂಲಿಕೆಗಳಿಂದ ಬದುಕಿದನು. ಇಂದ್ರಜಿತ್ತಿನ ವಧೆಯು ಹದಿನಾಲ್ಕು ವರ್ಷಗಳ ಬ್ರಹ್ಮಚರ್ಯೆಯಲ್ಲಿದ್ದವನಿಂದ ಆಗಬೇಕೆಂಬ ಬ್ರಹ್ಮನ ವರದಂತೆ ಲಕ್ಷ್ಮಣನು ಈ ಹದಿನಾಲ್ಕು ವರ್ಷಗಳಕಾಲ ನಿದ್ರಾಹಾರಗಳಿಲ್ಲದೆ ಬ್ರಹ್ಮಚರ್ಯೆಯಲ್ಲಿದ್ದು ನಿಕುಂಬಿಳಾಯಾಗಮಾಡುತ್ತಿದ್ದ ಇಂದ್ರಜಿತ್ತನ್ನು ಸಂಹರಿಸಿದನು. ರಾವಣನ ಸಂಹಾರಾನಂತರ ಸೀತಾರಾಮರೊಡನೆ ಅಯೋಧ್ಯೆಗೆ ತೆರಳಿ ಶ್ರೀರಾಮಚಂದ್ರನ ಪಟ್ಟಾಭಿಷೇಕ ಶುಭ ಸಮಾರಂಭದಲ್ಲಿ ಭಾಗವಹಿಸಿ ಸದಾ ಶ್ರೀರಾಮನ ಸೇವೆಯಲ್ಲಿ ನಿರತನಾಗಿದ್ದನು. 2. ತಾವರೆಹಕ್ಕಿ, ಸಾರಸಪಕ್ಷಿ, ಹಂಸದ ಒಂದು ಭೇದ. **-णा -ಣಾ.** ಹೆಣ್ಣು ತಾವರೆಹಕ್ಕಿ. (न०) 3. ಚಿಹ್ನೆ, ಗುರುತು. (वि०) 4. ಶುಭ ಚಿಹ್ನೆಯುಳ್ಳ.

**लक्ष्मन् ಲಕ್ಷ್ಮನ್** (न०) 1. ಚಿಹ್ನೆ, ಗುರುತು. लक्ष्यते— लक्ष (दर्शने) "मनिन्" (उ० ४-१४५)। "प्रतिदिशं प्लवगाधिपलक्ष्मणा विशिखसंहतितापितमूर्तिभिः" किरा० १४-६४। 2. ಕಲೆ, ಚುಕ್ಕಿ, ಬೊಟ್ಟು. "मलिनमपि हिमांशोर्लक्ष्म लक्ष्मीं तनोति" शाकु० १-१७। 3. ಪ್ರಧಾನ, ಮುಖ್ಯ. लक्ष्यतेऽनेन —लक्ष (दर्शने) "मनिन्" (उ० ४-१४५)। "लक्ष्म चिह्नप्रधानयोः" अम०। (वि०) 4. ಶ್ರೇಷ್ಠವಾದ, ಉತ್ತಮವಾದ. "लक्ष्म चिह्नवरिष्ठयोः" वैज०।

**लक्ष्मी ಲಕ್ಷ್ಮೀ** (स्त्री०) 1. ವಿಷ್ಣುವಿನ ಪತ್ನಿ, ಜಗನ್ಮಾತೆ. लक्षयति पश्यति नीतिज्ञम् —लक्ष (दर्शनाङ्कनयोः) "ईः" मुट् च (उ० ३-१६०)। ದೇವದಾನವರು ಅಮೃತಕ್ಕಾಗಿ ಕ್ಷೀರಸಮುದ್ರವನ್ನು ಮಥನಮಾಡಿದಾಗ ಮಹಾಲಕ್ಷ್ಮಿಯು ಆವಿರ್ಭವಿಸಿ ವಿಷ್ಣುವಿನ ಪಾಣಿಗ್ರಹಣ ಮಾಡಿದಳು. ದುರ್ವಾಸಮಹರ್ಷಿಯ ಶಾಪದಿಂದ ಇಂದ್ರನು ರಾಜ್ಯಭ್ರಷ್ಟನಾಗಲು ಲಕ್ಷ್ಮಿಯು ಸ್ವರ್ಗವನ್ನು ತ್ಯಜಿಸಿ ವೈಕುಂಠವನ್ನು ಸೇರಿದಳು. ಆಗ ಪರಮದುಃಖಾಕ್ರಾಂತರಾದ ದೇವತೆಗಳೆಲ್ಲರೂ ಚತುರ್ಮುಖ ಬ್ರಹ್ಮನನ್ನು ಪುರಸ್ಕರಿಸಿ ವೈಕುಂಠದಲ್ಲಿ ಪರಮಾತ್ಮನನ್ನು ಶರಣು ಹೊಂದಿದರು. ಪರಮದಯಾಳುವಾದ ವಿಷ್ಣುವಿನ ಆಜ್ಞೆಯಂತೆ ದೇವತೆಗಳು ಅಮೃತಕ್ಕಾಗಿ ಕ್ಷೀರಸಮುದ್ರವನ್ನು ಮಥಿಸಲು ಮಹೇಂದ್ರನ ಸಂಪತ್ಸ್ವರೂಪಿಣಿಯಾದ

ಮಹಾಲಕ್ಷ್ಮಿಯು ಅಲ್ಲಿ ಆವಿರ್ಭವಿಸಿ ದೇವತೆಗಳಿಗೆ ವರವನ್ನು ಅನುಗ್ರಹಿಸಿದಳು. ಮಹಾಲಕ್ಷ್ಮಿಯ ವರವನ್ನು ಪಡೆದು ದೇವತೆಗಳು ಅಸುರರನ್ನು ಜಯಿಸಿ ಮತ್ತೆ ರಾಜ್ಯವನ್ನು ಪಡೆದರು.

**ಲಕ್ಷ್ಮಿಯ ಅನುಗ್ರಹಕ್ಕೆ ಪಾತ್ರರು:** ಶೀಘ್ರಭೋಜಿಯೂ ಚಿರಸ್ನಾಯಿಯೂ ಪುಷ್ಪವನ್ನು (ಮೂಗಿನಿಂದ) ಆಘ್ರಾಣಮಾಡದವನೂ ನಗ್ನಸ್ತ್ರೀಯನ್ನು ನೋಡದಿರುವವನೂ ಮಹಾಲಕ್ಷ್ಮಿಯ ಅನುಗ್ರಹಕ್ಕೆ ಪಾತ್ರನಾಗುವನು. "चिरं स्नाति द्रुतं भुङ्क्ते पुष्पं प्राप्य न जिघ्रति। यो न पश्येत् स्त्रियं नग्नां नियतं स च मे प्रियः" ॥

ಧರ್ಮಶೀಲನೂ ಇಂದ್ರಿಯನಿಗ್ರಹವುಳ್ಳವನೂ ವಿದ್ಯೆಯಿಂದ ವಿನೀತನೂ ಇತರರನ್ನು ಹಿಂಸಿಸದವನೂ ಗರ್ವವಿಲ್ಲದವನೂ ಜನಾನುರಾಗ ಸಂಪಾದಿಸಿದವನೂ ಆದ ಪುರುಷನಲ್ಲಿ ಮಹಾಲಕ್ಷ್ಮಿಯು ಕೃಪೆಯು ಉಂಟಾಗುವುದು. "यो धर्मशीलो विजितेन्द्रियश्च विद्याविनीतो न परोपतापी। अगर्वितो यश्च जनानुरागी तस्मिन् सदाहं पुरुषे वसामि"।

(1) ಶಿರಸ್ಸನ್ನು (ಸ್ನಾನದಿಂದ) ಶುಚಿಯಾಗಿಟ್ಟುಕೊಳ್ಳುವುದು. (2) ಪಾದಗಳನ್ನು ಚೆನ್ನಾಗಿ ತೊಳೆದುಕೊಳ್ಳುವುದು. (3) ಉತ್ತಮಸ್ತ್ರೀಸಹವಾಸವು. (4) ಅಲ್ಪಭೋಜನ. (5) ವಸ್ತ್ರವನ್ನುಟ್ಟು ಮಲಗುವುದು ಮತ್ತು (6) ಪರ್ವಕಾಲ ಬಿಟ್ಟು ಸ್ತ್ರೀಸಂಗಮ ಇವು ಆರೂ ನಷ್ಟವಾದ ಐಶ್ವರ್ಯವನ್ನು ಮತ್ತೆ ಸಂಪಾದಿಸಿಕೊಡುವುವು. "शिरः सुधौतं चरणौ सुमार्जितौ वराङ्गनासेवनमल्पभोजनम्। अनग्नशायित्वमपर्वमैथुनं चिरप्रणष्टां श्रियमानयन्ति षट्"॥ 2. ಐಶ್ವರ್ಯ, ಸಂಪತ್ತು, ಭಾಗ್ಯ. "अचिरांशुविलासचञ्चला ननु लक्ष्मीः फलमानुषङ्गिकम्" किरा० २-१९। 3. ಕಾಂತಿ, ಸೊಬಗು, ಸೌಂದರ್ಯ. "सरसिजमनुविद्धं शैवलेनापि रम्यं मलिनमपि हिमांशोर्लक्ष्म लक्ष्मीं तनोति" शाकु० १-२०। 4. ಲವಂಗ. "लक्ष्मीरिव लवङ्गश्रीः पद्मायां कान्तिसम्पदोः" वैज०। 5. ಒಂಬತ್ತು ವಿಧ ವಿಷ್ಣುಶಕ್ತಿಗಳಲ್ಲೊಂದು. "आचारा वैष्णवी सूक्ष्मा लक्ष्मीः पुष्टिर्निरञ्जना। जीवनी मोहनी माया नवैता विष्णुशक्तयः" वैज०। 6. ಕರಿಗೆಜ್ಜುಗದ ಗಿಡ. 7. ಋದ್ಧಿಯೆಂಬ ಒಂದು ಔಷಧ. "लक्ष्मीः सम्पत्तिशोभयोः। ऋद्धौषधे च पद्मायां वृद्धिनामौषधेऽपि च। फलिन्याम्" मेदि०। 8. ವೈಭವ. "अखिलविबुधचमूनां प्राप्य लक्ष्मीमनूनाम्" कुमा० १३-५१।

**लक्ष्मीकान्त ಲಕ್ಷ್ಮೀಕಾಂತ, –पति –ಪತಿ, –रमण –ರಮಣ** (ಪುಂ) ಮಹಾವಿಷ್ಣು. लक्ष्म्याः कान्तः पतिः रमणो वा।

**लक्ष्मीगृह ಲಕ್ಷ್ಮೀಗೃಹ** (ನಂ) ಲಕ್ಷ್ಮಿಗೆ ವಾಸಸ್ಥಾನವಾದ ಉತ್ಪಲ. लक्ष्म्याः गृहम् वासस्थानम्।

**लक्ष्मीजनार्दन ಲಕ್ಷ್ಮೀಜನಾರ್ದನ** (ಪುಂ) ಮಹಾವಿಷ್ಣು, ನಾರಾಯಣ.

**लक्ष्मीनाथ ಲಕ್ಷ್ಮೀನಾಥ** (ಪುಂ) ಮಹಾವಿಷ್ಣು. लक्ष्म्याः नाथः।

**लक्ष्मीपति ಲಕ್ಷ್ಮೀಪತಿ** (ಪುಂ) 1. ವಿಷ್ಣು, ನಾರಾಯಣ. 2. ರಾಜ, ದೊರೆ. लक्ष्म्याः पतिः। "विहाय लक्ष्मीपतिलक्ष्म कार्मुकम्" किरा० १-४४। "लक्ष्मीपतिः पुमान् वासुदेवे नरपतावपि" मेदि०।

**लक्ष्मीपुत्र ಲಕ್ಷ್ಮೀಪುತ್ರ** (ಪುಂ) 1. ಕಾಮ, ಮನ್ಮಥ. 2. ಅಶ್ವ, ಕುದುರೆ. 3. ಲವ ಮತ್ತು ಕುಶ. लक्ष्म्याः पुत्रः।

**लक्ष्मीफल ಲಕ್ಷ್ಮೀಫಲ** (ಪುಂ) ಬಿಲ್ವಪತ್ರೆ ಮರ, ಬಿಲ್ವ ವೃಕ್ಷ. लक्ष्म्याः स्तनजं फलं यस्य।

**लक्ष्मीवत् ಲಕ್ಷ್ಮೀವತ್** (ಪುಂ) 1. ಕತಕದ ಬೀಜ, ನೀರನ್ನು ತಿಳಿಯಾಗಿಮಾಡುವ ಚಿಲ್ಲದ ಬೀಜ. लक्ष्मीः शोभाऽस्त्यस्य "मतुप्" (५-२-९४)। 2. ಮಹಾವಿಷ್ಣು. "सर्वलक्षणलक्षण्यो लक्ष्मीवान् समितिञ्जयः" वि० स०। (ವಿ०) 3. ಅದೃಷ್ಟಶಾಲಿ, ಭಾಗ್ಯವಂತ, ಪುಣ್ಯವಂತ. 4. ಐಶ್ವರ್ಯವಂತ. 5. ಸುಂದರವಾದ, ಲಕ್ಷಣವಾದ, ಕಾಂತಿಯುಕ್ತವಾದ. लक्ष्मीरस्यास्ति "मतुप्"। "लक्ष्मीवान् सरसि रराज केशहस्तः" माघ० ८-२७। 6. ಜಯಲಕ್ಷ್ಮಿಯೊಡನೆ ಕೂಡಿದ. "लक्ष्मीवतः क्षितिपतेस्तनयस्य वीर्यम्" किरा० १५-५३।

**लक्ष्मीवेष्ट ಲಕ್ಷ್ಮೀವೇಷ್ಟ** (ಪುಂ) ಸರಳವೃಕ್ಷದ ಹಾಲು ಮಡ್ಡಿ. लक्ष्मीयुक्तो वेष्टः।

**लक्ष्य ಲಕ್ಷ್ಯ** (ನಂ) 1. ಉದ್ದೇಶ, ಗುರಿ. लक्ष्यते—लक्ष (आलोचने) "अच्" (३-१-९७)। "उत्कर्षः स च धन्विनां यदिषवः सिद्ध्यन्ति लक्ष्ये चले" शाकु० २-५। 2. ವ್ಯಾಜ, ನೆಪ. लक्ष "ण्यत्" (३-१-१२४)। "रोमाञ्चलक्ष्येण स गात्रयष्टिं भित्त्वा निराक्रामदरालकेश्याः" रघु० ६-८१। "लक्ष्यं स्यादपदेशेऽपि शरव्येऽपि नपुंसकम्" मेदि०। 3. ಉದಾಹರಣೆ, ಲಕ್ಷಣದ ಸಮನ್ವಯ ಸ್ಥಳ. "अलङ्कारेषु बालानामवगाहनसिद्धये।

ललित: क्रियते तेषां लक्ष्यलक्षणसंग्रहः" चन्द्रा०। 4. ಲಕ್ಷಣಾವೃತ್ತಿಯಿಂದ ತಿಳಿಯುವ ಅರ್ಥ. (वि०) 5. ದೃಷ್ಟಿಗೆ ಗೋಚರವಾಗುವ, ನೋಡಬಹುದಾದ. "दूराल्लक्ष्यं सुरपतिधनुश्चारुणा तोरणेन" मेघ० २-१२। 6. ತಿಳಿಯಲು ಸಾಧ್ಯವಾದ, ತಿಳಿಯಬಹುದಾದ. "यमामनन्त्यात्मभुवोऽपि कारणं कथं स लक्ष्यप्रभवो भविष्यति" कुमा० ५-८१। 7. ಊಹಿಸಲು ಶಕ್ಯವಾದ. "प्रवेपमानाधरलक्ष्यकोपया" कुमा० ५-७४।

**लक्ष्यभेद ಲಕ್ಷ್ಯಭೇದ** (पुं०) ಗುರಿಯಿಟ್ಟು ಹೊಡೆಯುವುದು. लक्ष्यस्य भेदः। "सह पूर्वतरं नु चित्तवृत्तेरपतित्वा नु चकार लक्ष्यभेदम्" किरा० १३-२७।

**लक्ष्यमाण ಲಕ್ಷ್ಯಮಾಣ** (वि०) ಕಾಣುತ್ತಿರುವ, ದೃಷ್ಟಿಗೆ ಗೋಚರವಾಗುತ್ತಿರುವ. लक्ष (दर्शने) "शानच्" (३-२-१२४)। "स्रस्तावगुण्ठनपटाः क्षणलक्ष्यमाणवक्त्रश्रियः समयकौतुकमीक्षते स्म" माघ० ५-१७।

**लखण्ड ಲಖಂಡ** (न०) 1. ಸುಂದರವಾದ, ಮನೋಹರವಾದ. "लखण्डं भद्रकं न्युंखं लडहं चारु बन्धुरः" त्रिकाण्ड०। 2. ಇಂಪಾದ, ಮಧುರವಾದ.

**लगन ಲಗನ** (न०) ಸೇರುವುದು, ಸಂಬಂಧಹೊಂದುವುದು. लगे (सङ्गे) भावे "ल्युट्" (३-३-११५)।

**लगित ಲಗಿತ** (न०) 1. ಸೇರುವುದು, ಸಂಬಂಧಹೊಂದುವುದು. लगे (सङ्गे) भावे "क्तः" (३-३-११४)। (वि०) 2. ಸೇರಿಸಲ್ಪಟ್ಟ, ಸಂಬಂಧವುಂಟುಮಾಡಲ್ಪಟ್ಟ. लगे "क्तः" (३-३-१०२)।

**लगुड ಲಗುಡ** (पुं०) ಕೋಲು, ದಂಡ, ದೊಣ್ಣೆ. लगे (सङ्गे) "उडच्" बाहु०। "अलघुप्रयोजनकृतोत्तरप्रयासहृदूर्णलोष्टलगुडैः परितोऽनुविद्धम्" माघ० ५-२५।

**लग्न ಲಗ್ನ** (न०) 1. ಮೇಷ ವೃಷಭ ಮೊದಲಾದ ರಾಶಿಗಳ ಉದಯ. लगति फले — लगे (सङ्गे) "क्तः" (७-२-१८)। निपा०। ಒಂದು ದಿನದ ಹಗಲು ಮತ್ತು ರಾತ್ರಿಕಾಲಗಳಲ್ಲಿ ಹನ್ನೆರಡು ರಾಶಿಗಳು ಉದಯಿಸುವುವು. ಪೂರ್ವಾಚಲ ಸಂಬಂಧವೇ ಉದಯ. ಈ ಸಂಬಂಧದಿಂದ ಲಗ್ನವೆಂದು ಹೆಸರಾಯಿತು. "राशीनामुदयो लग्नं ते तु मेषवृषादयः" अम०। "लग्ने कर्कटके पुनर्वसुयुते मेषं गते पूषणि" चं० रा०।

**ದ್ವಾದಶ (12) ಲಗ್ನಗಳು:** (1) ಮೇಷ. (2) ವೃಷಭ. (3) ಮಿಥುನ (4) ಕರ್ಕಾಟಕ (5) ಸಿಂಹ (6) ಕನ್ಯಾ (7) ತುಲಾ (8) ವೃಶ್ಚಿಕ (9) ಧನಸ್ಸು (10) ಮಕರ (11) ಕುಂಭ ಮತ್ತು (12) ಮೀನ (पुं०) 2. ಸ್ತುತಿಪಾಠಕ, ಹೊಗಳುಭಟ. "लग्नाः प्रातर्गेयाः स्तुतिव्रताः" त्रिकाण्ड०। 3. ಮದಿಸಿದ ಆನೆ. "लग्नो मदकलो मत्तः प्रभिन्नोऽन्यथ निर्मदः" वैज०। (वि०) 4. ಸೇರಿಕೊಂಡಿರುವ, ಸಂಬಂಧಹೊಂದಿರುವ. "लग्नद्विरेफाञ्जनभक्तिचित्रं मुखे मधुश्रीस्तिलकं प्रकाश्य" कुमा० ३-३०। 5. ಲಜ್ಜಿತ, ನಾಚಿಕೆಗೊಂಡ. ओलस्जी (व्रीडायाम्) "क्तः"। तस्य नः (८-२-४५)। जस्य गः। निपा०। "लग्नं राश्युदये क्लीबं सक्तलज्जितयोस्त्रिषु" मेदि०।

**लग्नक ಲಗ್ನಕ** (पुं०) ಜಾಮೀನುದಾರ, ಹೊಣೆಗಾರ. लज्यते स्म — ओ लस्जी (व्रीडायाम्) "क्तः" (३-४-७२)। स्वार्थे "कन्" (५-४-५)। "स्युर्लग्नकाः प्रतिभुवः" अम०।

**लग्निका ಲಗ್ನಿಕಾ** (स्त्री०) ಋತುಮತಿಯಾದ ಕನ್ಯೆ.

**लघट ಲಘಟ** (पुं०) ವಾಯು, ಗಾಳಿ. लघि (गतौ) "अटिः" (उ० १-१३२)।

**लघयत् ಲಘಯತ್** (वि०) 1. ಲಘುವಾಗಿ ಮಾಡುತ್ತಿರುವ, ಹಗುರವಾಗಿ ಮಾಡುತ್ತಿರುವ. लघि (गतौ) + णिच् "शतृ" (३-२-१२४)। 2. ತಿರಸ್ಕರಿಸುತ್ತಿರುವ, ತುಚ್ಛವಾಗಿ ಮಾಡುತ್ತಿರುವ. "लघयन् खलु तेजसा जगन्न महानिच्छति भूतिमन्यतः" किरा० २-१८। 3. ಲಘುವಾಗಿ ಮಾಡುತ್ತಿರುವ, ಕೆಳಮಟ್ಟದ್ದಾಗಿ ಮಾಡುತ್ತಿರುವ. "समुदितं निचयेन तडित्त्वतीं लघयता शरदम्बुदसंहतिम्" किरा० ५-४।

**लघिमन् ಲಘಿಮನ್** (पुं०) 1. ಲಘುವಾಗಿರುವಿಕೆ, ಹಗುರವಾಗಿರುವಿಕೆ. लघोर्भावः—लघु "इमनिच्" (५-१-१२२)। "घ्राता हविर्गन्धि रजोविमुक्तः समश्नुते मे लघिमानमात्मा" रघु० १३-३७। 2. ಪರಮೇಶ್ವರನ ಅಷ್ಟವಿಧ ಐಶ್ವರ್ಯಗಳಲ್ಲೊಂದು. "अणिमा महिमा चैव गरिमा लघिमा तथा। प्राप्तिः प्राकाम्यमीशित्वं वशित्वं चाष्टभूतयः" अम०। 3. ಕೀಳುತನ, ತುಚ್ಛಭಾವ. "मानुषतासुलभो लघिमा मां प्रश्नकर्मणि नियोजयति" काद०। 4. ಸಣ್ಣದಾಗಿರುವಿಕೆ, ಚಿಕ್ಕದಾಗಿರುವಿಕೆ. 5. ಸಣ್ಣತನ, ಕೆಳಮಟ್ಟದಲ್ಲಿರುವಿಕೆ. "यदि मयि लघिमानमागतायाम्" माघ० ७-१४।

**लघिष्ठ ಲಘಿಷ್ಠ** (वि०) 1. ಎಲ್ಲಕ್ಕಿಂತಲೂ ಬಹಳ ಹಗುರವಾದ. अयमेतेषामतिशयेन लघुः — लघु "इष्ठन्"

(५-३-६५)। 2. ಎಲ್ಲರಿಗಿಂತಲೂ ಕೆಳವಟ್ಟದ, ಎಲ್ಲಕ್ಕಿಂತಲೂ ತುಚ್ಛವಾದ. 3. ಬಹಳ ಚಿಕ್ಕದಾದ, ಸಣ್ಣದಾದ.

**लघीयस् ಲಘೀಯಸ್** (वि०) 1. ಇಬ್ಬರಲ್ಲಿ ಬಹಳ ನಿಕೃಷ್ಟನಾದ ಒಬ್ಬ, ಗೌರವವಿಲ್ಲದ, ಮರ್ಯಾದೆಯಿಲ್ಲದ. अयमनयोरतिशयेन लघुः—लघु "ईयसुन्" (५-३-५७)। "उच्चैर्भवति लघीयसां हि धार्ष्ट्यम्" माघ० ८-६०। 2. ಎರಡರಲ್ಲಿ ಬಹಳ ಹಗುರವಾದ ಒಂದು. 3. ಬಹಳ ಚಿಕ್ಕದಾದ, ಸಣ್ಣದಾದ. स्त्रियां "ङीप्" (४-१-६)। —यसी —ಯಸೀ.

**लघु ಲಘು** (पुं०) 1. ಪ್ರಾಣಾಯಾಮದ ಒಂದು ಭೇದ. ಪ್ರಾಣಾಯಾಮವು ಲಘು ಮಧ್ಯ ಮತ್ತು ಉತ್ತಮ ಗಳೆಂದು ಮೂರು ವಿಧ. "लघुमध्योत्तराख्यः प्राणायामस्त्रिधोदितः"। "लघुर्द्वादशमात्रस्तु द्विगुणः स तु मध्यमः। त्रिगुणाभिस्तु मात्राभिरुत्तमः परिकीर्तितः"। (न०) 2. ಅಶ್ವಿನಿ ಪುಷ್ಯ ಮತ್ತು ಹಸ್ತ ನಕ್ಷತ್ರಗಳು. "लघु हस्ताश्विनपुष्याः पण्यरतिज्ञानभूषणकलासु। शिल्पौषधयानादिषु सिद्धिकराणि प्रदिष्टानि" बृहत्सं०। 3. ಅಗುರು 4. ಲಾಮಂಚದ ಬೇರು. "लामज्जकं लघु लयमवदाहेष्टकापथे" अम०। 5. ಶೀಘ್ರ, ಬೇಗ. "शीघ्रं त्वरितं लघुक्षिप्रमरं द्रुतम्" अम०। 6. ಹ್ರಸ್ವಾಕ್ಷರ (अ, इ, उ ಇತ್ಯಾದಿ.) (वि०) 7. ಶೀಘ್ರವಾದ, ವೇಗವಾದ, ಜಾಗ್ರತೆಯಾದ. "संहारविक्षेपलघुक्रियेण हस्तेन तीराभिमुखः सशब्दम्" रघु० ५-४५। 8. ಸುಲಭವಾದ, ಕಷ್ಟವಲ್ಲದ. "महार्णवपरिक्षेपं लङ्कायाः परिखालघुम्" रघु० १२-६६। 9. ನೀಚ, ಅಧಮ. "द्युतिमग्रहीद्ग्रहगणो लघवः प्रकटीभवन्ति मलिनाश्रयतः" माघ० ९-२३। 10. ಆಹ್ಲಾದಕರವಾದ, ಸಂತೋಷವುಂಟುಮಾಡುವ, ಪ್ರಿಯವಾದ. "पूर्वजन्मतनुषा समागतः सोऽतिमात्रलघुदर्शनोऽभवत्" रघु० ११-८०। 11. ಸಾರವಿಲ್ಲದ, ಒಳಗೆ ತಿರುಳಿಲ್ಲದ, ಅಂತಃಸತ್ತ್ವವಿಲ್ಲದ. 12. ಕೆಳವಟ್ಟದ, ತುಚ್ಛವಾದ. 13. ಎಳೆಯ ವಯಸ್ಸಿನ, ಪ್ರಾಯದ. "दीव्यत्युच्चैर्लघुरघुपतिः" म० वी० ६-५३। 14. ಚಿಕ್ಕದಾದ, ಸಣ್ಣದಾದ. 15. ಹಗುರವಾದ, ಭಾರವಿಲ್ಲದ. "मेदश्छेदकृशोदरं लघु भवत्युत्थानयोग्यं वपुः" शाकु० २-५। 16. ಸಂಗ್ರಹವಾದ, ಸಂಕ್ಷಿಪ್ತವಾದ. "लघुसन्देशपदा सरस्वती" रघु० ८-७७। 17. ಹ್ರಸ್ವವಾದ, ಉದ್ದವಲ್ಲದ. 18. ರೋಗವಿಲ್ಲದ, ಆರೋಗ್ಯದಿಂದ ಕೂಡಿದ. 19. ಮನೋಹರವಾದ, ಸೊಗಸಾದ. "लघुरगुरौ मनोज्ञे निःसारे वाच्यवत् क्लीबम्। कृष्णागुरुणि च पृक्कानामौषधी तु स्त्री" मेदि०। "अग्लास्नुरगदो नीरुग्नातङ्को लघुः पुनः" कल्पद्रु०। 20. ದೇಹವನ್ನು ಹಗುರವನ್ನಾಗಿ ಮಾಡುವ. "पित्तप्रकोपि तीक्ष्णोष्णं रूक्षं दीपनरोचनम्। रसे पाके च कटुकं कफघ्नं मरिचं लघु" अष्टाङ्ग०। 21. ಅಲ್ಪವಾದ, ಸ್ವಲ್ಪವಾದ, ಕೊಂಚವಾದ. "लघुतुषारतुषारजलश्च्युतं धृतसदानसदाननदन्तिनम्" किरा० ५-९। 22. ಶಕ್ತಿಯಿಲ್ಲದ, ಪೌರುಷ ಶೂನ್ಯವಾದ. "निदर्शनमसाराणां लघुर्बहुतृणं नरः" माघ० २-५०। (अव्य०) 23. ಜಾಗ್ರತೆಯಾಗಿ, ಶೀಘ್ರವಾಗಿ, ವೇಗವಾಗಿ. 24. ಸುಲಭವಾಗಿ, ಕಷ್ಟವಿಲ್ಲದೆ. 25. ಸುಂದರವಾಗಿ, ಸೊಗಸಾಗಿ. 26. ಹಗುರವಾಗಿ, ಭಾರವಿಲ್ಲದೆ. 27. ಅಲ್ಪವಾಗಿ, ಸ್ವಲ್ಪವಾಗಿ. "प्रथमोपकृतं मरुत्वतः प्रतिपत्त्या लघु मन्यते भवान्" शाकु० ७-१। स्त्रियां वा "ङीप्" (४-१-४४)। लघ्वी लघुः ಲಘ್ವೀ ಲಘುಃ. "कायस्य इति लघ्वी मात्रा" मुद्रा० १।

**लघु ಲಘು** (स्त्री०) ಸ್ಪೃಕ್ಕಾ ಎಂಬ ಓಷಧಿ.

**लघुकाय ಲಘುಕಾಯ** (पुं०) 1. ಆಡು, ಮೇಕೆ. लघुः कायोऽस्य। "अल्पायुर्लघुकायश्च मेनादः पर्णभोजनः" त्रिकाण्ड०। (वि०) 2. ಸಣ್ಣ ಮೈಯುಳ್ಳ, ಚಿಕ್ಕ ದೇಹವುಳ್ಳ.

**लघुगण ಲಘುಗಣ** (पुं०) ಅಶ್ವಿನಿ ಪುಷ್ಯ ಮತ್ತು ಹಸ್ತ ನಕ್ಷತ್ರಗಳ ಗುಂಪು.

**लघुचिर्भटी ಲಘುಚಿರ್ಭಟೀ** (स्त्री०) ಸಣ್ಣ ಜಾತಿಯ ಸೌತೆಗಿಡ.

**लघुजङ्गल ಲಘುಜಂಗಲ** (पुं०) ಲಾವಕಪಕ್ಷಿ, ಗೀಜಗದ ಹಕ್ಕಿ.

**लघुता ಲಘುತಾ** (स्त्री०) 1. ಸಣ್ಣತನ, ಕೆಳವಟ್ಟದಲ್ಲಿರುವಿಕೆ, ಅಲ್ಪತನ. लघोर्भावः "तल्" (५-१-११९)। "न च मेऽवगच्छति यथा लघुतां करुणां यथा च कुरुते स मयि" माघ० ९-५६। 2. ಹಗುರವಾಗಿರುವಿಕೆ, ಭಾರವಿಲ್ಲದಿರುವಿಕೆ. "व्रजदपि लघुतां बभूव भारः सपदि हिरण्मयमण्डनं सपत्न्याः" माघ० ७-५९। 3. ಸಣ್ಣದಾಗಿರುವಿಕೆ, ಚಿಕ್ಕದಾಗಿರುವಿಕೆ. 4. ಅಗೌರವ, ಅವಮರ್ಯಾದೆ. "त्वः" (५-१-११९)। लघुत्वम् ಲಘುತ್ವಮ್. "अभिपतितुमना लघुत्वभीतेरभवदमुञ्चति वल्लभेऽतिगुर्वी" माघ० ७-५१।

**लघुमांस ಲಘುಮಾಂಸ** (ನಂ) ತಿತ್ತಿರಿಪಕ್ಷಿ.

**लघुलय ಲಘುಲಯ** (ನಂ) ಲಾಮಂಚದ ಬೇರು. लघु लीयते—लीङ् (श्लेषणे) "अच्" (३-१-१३४)।

**लघुहस्त ಲಘುಹಸ್ತ** (ವಿಂ) ಶೀಘ್ರವಾಗಿ ಕೆಲಸಮಾಡುವ ಹಸ್ತಗಳುಳ್ಳ, ಚುರುಕಾದ ಕೈಗಳುಳ್ಳ. लघुः क्षिप्रकारी हस्तो यस्य।

**लघ्वी ಲಘ್ವೀ** (स्त्रीಂ) 1. ಸುಕುಮಾರಳಾದ ಹೆಂಗಸು, ಸೊಗಸಾಗಿ ಅಲಂಕರಿಸಿಕೊಳ್ಳುವ ಹೆಂಗಸು. 2. ಚಿಕ್ಕ ರಥ, ಹಗುರವಾದ ಗಾಡಿ. "लघ्वी लाघवयुक्तायां प्रभेदे स्यन्दनस्य च" मेदि०। "क्षिप्तावरोधाङ्गनमुत्पथेन गां विलङ्घ्य लघ्वीं करभौ बभञ्जतुः" माघ० १२-२४। 3. ಲಾಘವವುಳ್ಳ, ಗೌರವವಿಲ್ಲದ, ಮರ್ಯಾದೆಯಿಲ್ಲದ. 4. ಹಗುರವಾದ, ಭಾರವಿಲ್ಲದ.

**लङ्का ಲಂಕಾ** (स्त्रीಂ) 1. ಲಂಕಾಪಟ್ಟಣ, ರಾವಣನ ರಾಜಧಾನಿ. लक (आस्वादने) + णिच् "अच्" (३-३-५६)। पृषो०। "पयोधिमाबद्धचलज्जलाविलं विलङ्घ्य लङ्कां निकषा हनिष्यति" माघ० १-६८। 2. ಶಾಖೆ, ರೆಂಬೆ. 3. ವೇಶ್ಯೆ, ಸೂಳೆ. 4. ಶಾಕಿನಿ. "लङ्का रक्षःपुरीशाखाशाकिनीकुलटासु च" मेदि०।

**लङ्काधिपति ಲಂಕಾಧಿಪತಿ** (पुं०) ಲಂಕೆಯ ದೊರೆಯಾದ ರಾವಣ. –नाथः – ನಾಥಃ, –पतिः – ಪತಿಃ, –ईशः – ಈಶಃ, –ईश्वरः ಈಶ್ವರಃ.

**लङ्ग ಲಂಗ** (पुं०) 1. ಸಂಗ, ಸಂಬಂಧ. 2. ವಿಟ, ಸ್ತ್ರೀಲೋಲ, ಕಾಮುಕ, ಉಪಪತಿ. लङ्गति—लगि (गतौ) "अच्" (३-१-१३४)। "लङ्गस्तु सङ्गषिद्गयोः" मेदि०।

**लङ्गन ಲಂಗನ** (ನಂ) ಗಮನ, ಗತಿ, ನಡೆಯುವುದು. लगि (गतौ) "ल्युट्" (३-३-११५)।

**लङ्गूल ಲಂಗೂಲ** (ನಂ) ಲಾಂಗೂಲ, ಬಾಲ.

**लङ्घन ಲಂಘನ** (ನಂ) 1. ದಾಟುವುದು, ಹಾರುವುದು. लघि (गतौ अभोजने च) "ल्युट्" (३-३-११५)। "हंसा नभोलङ्घनलोलपक्षाः" रघु० १६-३३। 2. ಉಪವಾಸ. "तत्रामे लङ्घनं कार्यं विदग्धे वमनं हितम्। विष्टब्धे स्वेदनं पथ्यं रसशेषे शयीत च" सुश्रुत० सूत्र०। "आप्तेन तक्ष्णा भिषजेव तत्क्षणं प्रचक्रमे लङ्घनपूर्वकः क्रमः" माघ० १२-२५। 3. ಮೇಲಕ್ಕೆ ಏರುವುದು, ಉನ್ನತಸ್ಥಾನ ಹೊಂದುವುದು. "यथाश्रुतं वेदविदां वर त्वया जनोऽयमुच्चैः पदलङ्घनोत्सुकः" कुमा० ५-६४। 4. ಆಕ್ರಮಿಸುವುದು, ಮುತ್ತಿಗೆಹಾಕುವುದು. 5. ಮೀರುವುದು, ಅತಿಕ್ರಮಿಸುವುದು. "दीर्घदर्शिभिरकारि वधूनां लङ्घनं न नयनैः श्रवणस्य" माघ० १०-४०।

**लङ्घनीय ಲಂಘನೀಯ** (ವಿಂ) 1. ದಾಟಲ್ಪಡುವ. 2. ಮೀರಲ್ಪಡುವ. 3. ಆಕ್ರಮಿಸಲ್ಪಡುವ. 4. ಮೇಲಕ್ಕೆ ಏರಲ್ಪಡುವ. लघि (गतौ) "अनीयर्" (३-१-९६)। 5. ದಾಟಬೇಕಾದ. 6. ಮೀರಬೇಕಾದ, ಅತಿಕ್ರಮಿಸಬೇಕಾದ. 7. ಮೇಲಕ್ಕೆ ಏರಬೇಕಾದ. 8. ಆಕ್ರಮಿಸಬೇಕಾದ. 9. ದಾಟಲು ಶಕ್ಯವಾದ. 10. ಮೀರಲು ಶಕ್ಯವಾದ, ಅತಿಕ್ರಮಿಸಲು ಶಕ್ಯವಾದ. 11. ಆಕ್ರಮಿಸಲು ಶಕ್ಯವಾದ. 12. ಮೇಲಕ್ಕೆ ಹತ್ತಲು ಶಕ್ಯವಾದ. "आत्मोद्धतैरपि रजोभिरलङ्घनीया धावन्त्यमी मृगजवाक्षमयेव रथ्याः" शाकु० १-८। "तव्यः" (३-१-९६)। लङ्घितव्यम् ಲಂಘಿತವ್ಯಮ್.

**लङ्घयत् ಲಂಘಯತ್** (ವಿಂ) 1. ದಾಟುತ್ತಿರುವ. लघि (गतौ) + णिच् "शतृ" (३-२-१२४)। 2. ಅತಿಕ್ರಮಿಸುತ್ತಿರುವ, ಮೀರುತ್ತಿರುವ. "लङ्घयन्नहरहर्भवदाज्ञामस्मि हा विधिनिषेधमयीं यः" नैष० २१-११६। 3. ಆಕ್ರಮಿಸುತ್ತಿರುವ, ಮುತ್ತಿಗೆ ಹಾಕುತ್ತಿರುವ. 4. ಮೇಲಕ್ಕೆ ಏರುತ್ತಿರುವ.

**लङ्घित ಲಂಘಿತ** (ವಿಂ) 1. ದಾಟಲ್ಪಟ್ಟ. लघि (गतौ) "क्तः" (३-२-१०२)। "अब्धिर्लङ्घित एव वानरभटैः किं त्वस्य गम्भीरतामापातालनिमग्नपीवरतनुर्जानाति मन्थाचलः" अनर्घ०। 2. ಆಕ್ರಮಿಸಲ್ಪಟ್ಟ. "लङ्घित एष भूयोऽपि शकुन्तलाव्याधिना" शाकु० ६। 3. ಮೀರಲ್ಪಟ್ಟ, ಅತಿಕ್ರಮಿಸಲ್ಪಟ್ಟ. "ज्वालासटैर्लङ्घितमेघपङ्क्तिः" किरा० १६-५०।

**लङ्घ्य ಲಂಘ್ಯ** (ವಿಂ) 1. ದಾಟಲ್ಪಡುವ. 2. ದಾಟಲು ಶಕ್ಯವಾದ. 3. ದಾಟಬೇಕಾದ. लघि (गतौ) "ण्यत्" (३-१-१२४)। 4. ಮೀರಲ್ಪಡುವ. 5. ಮೀರಲು ಶಕ್ಯವಾದ. 6. ಮೀರಬೇಕಾದ. "अस्थानमध्वान्तविकारलङ्घ्यस्ततार ताराधिपखण्डधारी" कुमा० ७-४८।

**लज्जमान ಲಜ್ಜಮಾನ** (ವಿಂ) ನಾಚಿಕೆಪಡುತ್ತಿರುವ. ओ लस्जी (व्रीडायाम्) "शानच्" (३-२-१२४)। "अङ्कमारोपयामास लज्जमानामरुन्धती" कुमा० ६-९१।

**लज्जरी ಲಜ್ಜರೀ** (स्त्री०) ಮುಟ್ಟಿದರೆ ಮುನಿಯೆಂಬ ಗಿಡ.

**लज्जा ಲಜ್ಜಾ** (स्त्री०) 1. ನಾಚಿಕೆ, ಅವಮಾನ. ओ लस्जी (व्रीडायाम्) "अः" (३-३-१०३)। (ಮಾದ

ಬಾರದ ಅಕಾರ್ಯವನ್ನು ಮಾಡಿ ಇತರರಿಗೆ ಮುಖ ತೋರಿಸಲೂ ಅವಕಾಶಕೊಡದಿರುವ ಮನೋಭಾವ.) "स त्वं निवर्तस्व विहाय लज्जां गुरोर्भवान् दर्शितशिष्यभक्तिः" रघु० २-४०। 2. ನಾಚಿಕೆ, ಸಂಕೋಚ, ಸಿಗ್ಗು. "नितम्बिनीमिच्छसि मुक्तलज्जाम् कण्ठे स्वयंग्राहनिषक्तबाहुम्" कुमा० ३-७। 3. ಮುಟ್ಟಿದರೆ ಮುನಿಯೆಂಬ ಗಿಡ. "स्पर्शलज्जापि लज्जालुः स्याल्लज्जा लज्जरीत्यपि" कल्पद्रु०।

**लज्जालु ಲಜ್ಜಾಲು** (पुं०) ಮುಟ್ಟಿದರೆ ಮುನಿಯೆಂಬ ಗಿಡ. "स्पर्शलज्जापि लज्जालुः" कल्पद्रु०।

**लज्जावत् ಲಜ್ಜಾವತ್** (वि०) ನಾಚಿಕೆಯುಳ್ಳವನು.

**लज्जाशील ಲಜ್ಜಾಶೀಲ** (वि०) ನಾಚಿಕೆಯ ಸ್ವಭಾವದವನು, ಸಂಕೋಚದ ಸ್ವಭಾವದವನು. लज्जा शीलमस्य।

**लज्जित ಲಜ್ಜಿತ**(वि०)1. ನಾಚಿಕೆಗೊಂಡವನು. लज्जास्य संजाता "इतच्" (५-२-३६)। 2. ಅವಮಾನಗೊಂಡವನು. "लज्जितोदधिघोषेण लङ्काद्वीपमकम्पयत्" याद० २२-१८७।

**लञ्ज ಲಂಜ** (पुं०) 1. ಕಾಲು, ಪಾದ. 2. ಕಚ್ಚೆ, ನಡುವಿನೊಳಗೆ ಮಡಿಸಿ ಸಿಕ್ಕಿಸುವ ಉಡುವ ಪಂಚೆಯ ಸೆರಗು. "लञ्जः पदे च कच्छे च" हेम०। 3. ಪುಚ್ಛ, ಬಾಲ.

**लञ्जिका ಲಂಜಿಕಾ** (स्त्री०) ವೇಶ್ಯೆ, ಸೂಳೆ. लञ्जयति — लजि (भाषार्थे) "ण्वुल्" (३-१-१३३)।

**लट्वा ಲಟ್ವಾ** (स्त्री०) 1. ಗುಬ್ಬಚ್ಚಿ. 2. ಫಲ, ಹಣ್ಣು. 3. ಒಂದು ವಿಧ ವಾದ್ಯ. 4. ಹೊಂಗೆ ಮರ. "लट्वा करञ्जभेदे स्यात् फले वाद्ये खगान्तरे" मेदि०। 5. ಹಣೆಯ ಮೇಲಿರುವ ಗುಂಗುರು ಕೂದಲು. 6. ಕುಸುಂಭದ ಹೂವು. "लट्वा पक्षिकुसुम्भयोः" हेम०।

**लडह ಲಡಹ** (वि०) ಸುಂದರವಾದ, ಮನೋಹರವಾದ. "कथं नाम नववधूविस्रम्भणोपायाभिज्ञं लडहं विदग्धं मधुरभाषिणमरोषणं ते भ्रातरमासाद्य न दुर्मनायिष्यते मे प्रियसखी" मालती० ७।

**लड्डु ಲಡ್ಡು** (पुं०) ಲಾಡು, ಕಡಲೆಹಿಟ್ಟಿನ ಅರಳು ಮತ್ತು ಸಕ್ಕರೆಗಳಿಂದ ತಯಾರಿಸಿದ ಉಂಡೆ. लड (विलासे) "डुः" (वा० ३-२-१८०)। स्वार्थे "कः" लड्डुकः।

**लण्ड ಲಂಡ** (पुंन०) ಸಾಲಾಗಿ ಬಿದ್ದಿರುವ ಗಟ್ಟಿಯಾದ ಕುದುರೆಯ ಲದ್ದಿ, ಕುದುರೆಯ ಹಿಕ್ಕೆ, -ಮಲ. लडि (उत्क्षेपे) "घञ्" (३-३-१९)। "विष्ठा चाप्यथ लण्डोऽस्त्री विष्ठा राजियुता दृढा" वैज०।

**लण्ड्र ಲಂಡ್ರ** (पुं०) ಲಂಡನ್ ನಗರ, ಇಂಗ್ಲಿಷರ ರಾಜಧಾನಿ.

**लता ಲತಾ** (स्त्री०) 1. ಬಳ್ಳಿ, ಹಂಬು. लतति — लत (आघाते) "अच्" (३-१-१३४)। "निबद्धनिश्वासविकम्पिताधरा लता इव प्रस्फुरितैकपल्लवाः" किरा० ४-१५। 2. ಕವಲು ಹಂಬುಗಳಿಂದ ಹರಡಿಕೊಂಡಿರುವ ಬಳ್ಳಿ. "लता प्रतानिनी वीरुद्गुल्मिन्युलप इत्यपि" अम०। 3. ಪ್ರೇಂಖಣ ಗಿಡ. 4. ಶಾಖೆ, ರೆಂಬೆ. 5. ಮಾಧವೀಲತೆ, ಕಾಡಿರುವಂತಿಗೆ. 6. ಗರಿಕೆಹುಲ್ಲು. 7. ಸ್ಪೃಕ್ಕಾ ಎಂಬ ಒಂದು ಗಂಧದ್ರವ್ಯ. 8. ಜ್ಯೋತಿಷ್ಮತೀ ಲತೆ, ಕಂಗೊಂಗೆ ಗಿಡ. 9. ಕಸ್ತೂರಿ. "लता ज्योतिष्मतीदूर्वाशाखावल्लीप्रियङ्गुषु। स्पृक्कामाधव्योः कस्तूर्याम्" हेम०। 10. ಚಪ್ಪರದಬದನೆ ಗಿಡ. "वार्ताकी हिङ्गुदी कुली। लता बृहत्यां सुस्निग्धा धन्या प्रहसनी लता" वैज०। 11. ಚಾವಟಿಯ ಏಟು. 12. ಹೆಂಗಸು.

**लतागृह ಲತಾಗೃಹ** (न०) ಬಳ್ಳಿಗಳಿಂದ ಕೂಡಿದ ಮನೆ, ಲತೆಗಳಿಂದ ಆವೃತವಾದ ಮನೆ, ಪೊದರು. "लतागृहद्वारगतोऽथ नन्दी वामप्रकोष्ठार्पितहेमवेत्रः" कुमा० ३-४१।

**लताजिह्व ಲತಾಜಿಹ್ವ** (पुं०) ಸರ್ಪ, ಹಾವು. लतेव जिह्वास्य। —रसनः —ರಸನಃ.

**लतातरु ಲತಾತರು** (पुं०) 1. ಕಿತ್ತಳೆ ಗಿಡ. 2. ತಾಳೆ ಮರ. 3. ಸಾಲವೃಕ್ಷ, ಮತ್ತಿಮರ. लतेव दीर्घस्तरुः।

**लताप्रतान ಲತಾಪ್ರತಾನ** (पुंन०) ಬಳ್ಳಿಗಳ ಸಣ್ಣ ಕುಡಿ, ಬಳ್ಳಿಗಳ ಸಣ್ಣ ಹಂಬು. लतानां प्रतानः। "लताप्रतानोद्ग्रथितैः स केशैरधिज्यधन्वा विचचार दावम्" रघु० २-८।

**लताबृहती ಲತಾಬೃಹತೀ** (स्त्री०) ಚಪ್ಪರದ ಬದನೆ ಗಿಡ, ಸೀಮೆಬದನೆ ಗಿಡ.

**लताभवन ಲತಾಭವನ** (न०) ಲತಾಗೃಹ, ಪೊದರು. ಲತೆಗಳಿಂದ ಆವೃತವಾದ ಮನೆ.

**लतामणि ಲತಾಮಣಿ** (पुं०) ಪ್ರವಾಳ, ಹವಳ.

**लतामण्डप ಲತಾಮಂಡಪ** (पुंन०) ಲತಾಗೃಹ, ಪೊದರು, ಬಳ್ಳಿಗಳಿಂದ ಆವೃತವಾದ ಮನೆ.

**लतामाधवी ಲತಾಮಾಧವೀ** (स्त्री०) ಮಾಧವೀ ಲತೆ, ಕಾಡಿರುವಂತಿಗೆ ಗಿಡ. लताप्रधाना माधवी।

**लतायावक ಲತಾಯಾವಕ** (न०) ಪ್ರವಾಳ, ಹವಳ. "किसलयमपि तरुणां विदुर्लतायावकं प्रवालं च" हारा०।

**लतार्क ಲತಾರ್ಕ** (पुं०) ಹಸುರು ಈರುಳ್ಳಿ, ರಾಜ ಈರುಳ್ಳಿ. "पलाण्डुस्तु सुकन्दकः। लतार्कदुद्रुमौ तत्र हरिते" अम०।

**लतावेष्ट ಲತಾವೇಷ್ಟ** (पुं०) ಆಲಿಂಗನದ ಒಂದು ಭೇದ. ಸ್ತ್ರೀಯರನ್ನು ಅಪ್ಪಿಕೊಳ್ಳುವ ಒಂದು ರೀತಿ. "बाहुभ्यां पादयुग्माभ्यां वेष्टयित्वा स्त्रियं रमेत्। लघुलिङ्गताडनं योनौ लतावेष्टमुच्यते" रसम०। **–वेष्टितकम् –ವೇಷ್ಟಿತಕಮ್.**

**लतिका ಲತಿಕಾ** (स्त्री०) 1. ಸಣ್ಣ ಲತೆ, ಚಿಕ್ಕ ಬಳ್ಳಿ, ತೆಳುವಾದ ಬಳ್ಳಿ. लता स्वार्थे "कन्"। 2. ಹಾರದ ಒಂದು ಎಳೆ.

**लपत् ಲಪತ್** (वि०) ಮಾತಾಡುತ್ತಿರುವ, ನುಡಿಯುತ್ತಿರುವ. लप (व्यक्तायां वाचि) "शतृ" (३-२-१२४)। स्त्रियां "ङीप्" (४-१-६)। **–न्ती –ನ್ತೀ.**

**लपन ಲಪನ** (न०) 1. ಆನನ, ಮುಖ, ಬಾಯಿ. लप्यतेऽनेन —लप (व्यक्तायां वाचि) कर० "ल्युट्" (३-३-११७)। "संपूर्णलब्धललनालपनोपमानम्" माघ० ४-२२। 2. ಮಾತಾಡುವುದು. लप भावे "ल्युट्" (३-३-११५)।

**लपनीय ಲಪನೀಯ** (वि०) 1. ಮಾತಾಡಬೇಕಾದ. 2. ಮಾತಾಡಲು ಅರ್ಹವಾದ, 3. ಮಾತಾಡಬಹುದಾದ. लप (व्यक्तायां वाचि) "अनीयर्" (३-१-९६)। "तव्यः" (३-१-८६)। **लपितव्यम् ಲಪಿತವ್ಯಮ್.**

**लपित ಲಪಿತ** (न०) 1. ಮಾತಾಡುವುದು, ಹೇಳುವುದು, ನುಡಿಯುವುದು. लप (व्यक्तायां वाचि) भावे "क्तः" (३-३-११४)। (वि०) 2. ಹೇಳಲ್ಪಟ್ಟ, ನುಡಿಯಲ್ಪಟ್ಟ. लप कर्म० "क्तः" (३-२-१०२)।

**लपितवत् ಲಪಿತವತ್** (वि०) ಮಾತಾಡಿದವನು, ಹೇಳಿದವನು. लप (व्यक्तायां वाचि) "क्तवतुः" (३-२-१०२)। स्त्रियां "ङीप्" (४-१-६)। **–वती –ವತೀ.**

**लब्ध ಲಬ್ಧ** (वि०) 1. ಹೊಂದಲ್ಪಟ್ಟ, ಪಡೆಯಲ್ಪಟ್ಟ. लभ्यते स्म —डुलभष् (प्राप्तौ) "क्तः" (३-२-१०२)। "महौजसो मानधना धनार्चिता धनुर्भृतः संयति लब्धकीर्तयः" किरा० १-१९। "जगाद लब्धेऽवसरे सुरेन्द्रः" कुमा० १२-४३। 2. ತೆಗೆದುಕೊಳ್ಳಲ್ಪಟ್ಟ. (न०) 3. ಪಡೆಯುವುದು, ಹೊಂದುವುದು.

**लब्धकाम ಲಬ್ಧಕಾಮ** (वि०) ಇಷ್ಟವಾದುದನ್ನು ಪಡೆದವನು, ಬಯಸಿದುದನ್ನು ಹೊಂದಿದವನು. लब्धः कामो येन।

**लब्धकीर्ति ಲಬ್ಧಕೀರ್ತಿ** (वि०) ಕೀರ್ತಿಯನ್ನು ಸಂಪಾದಿಸಿದವನು, ಪ್ರಸಿದ್ಧಿ ಪಡೆದವನು. लब्धा कीर्तिर्येन सः। "धनुर्भृतः संयति लब्धकीर्तयः" किरा० १-१९।

**लब्धचेतस् ಲಬ್ಧಚೇತಸ್** (वि०) ಪ್ರಜ್ಞೆಯನ್ನು ಪಡೆದವನು, ಜ್ಞಾನ ಬಂದವನು. लब्धं चेतः येन।

**लब्धनामन् ಲಬ್ಧನಾಮನ್** (वि०) ಪ್ರಸಿದ್ಧಿ ಪಡೆದವನು, ಹೆಸರುವಾಸಿಯಾದವನು, ಕೀರ್ತಿ ಪಡೆದವನು. लब्धं नाम येन।

**लब्धलक्ष ಲಬ್ಧಲಕ್ಷ, –लक्ष्य –ಲಕ್ಷ್ಯ** (वि०) 1. ಗುರಿಯಿಟ್ಟು ಹೊಡೆದವನು. लब्धं लक्ष्यं येन। 2. ಗುರಿಯಿಟ್ಟು ಬಾಣಪ್ರಯೋಗದಲ್ಲಿ ನಿಪುಣನಾದವನು.

**लब्धवर्ण ಲಬ್ಧವರ್ಣ** (पुं०) 1. ಪಂಡಿತ, ವಿದ್ವಾಂಸ, ವಿದ್ಯಾವಂತ. लब्धो वर्णो वर्णनं स्तुतिः येन। "लब्धवर्णो विचक्षणः" अम०। (वि०) 2. ಪ್ರಸಿದ್ಧಿ ಪಡೆದವನು, ಖ್ಯಾತಿ ಪಡೆದವನು.

**लब्धविद्य ಲಬ್ಧವಿದ್ಯ** (वि०) ವಿದ್ಯೆ ಕಲಿತವನು, ವಿದ್ಯಾಭ್ಯಾಸ ಮಾಡಿದವನು. लब्धा विद्या येन।

**लब्धव्य ಲಬ್ಧವ್ಯ** (वि०) 1. ಅವಶ್ಯವಾಗಿ ಹೊಂದಬೇಕಾದ. 2. ಹೊಂದಲ್ಪಡುವ. डुलभष् (प्राप्तौ) "तव्यः" (३-१-९६)।

**लब्धानुज्ञ ಲಬ್ಧಾನುಜ್ಞ** (पुं०) ವಿದ್ಯಾಭ್ಯಾಸ ಮುಗಿಸಿ ಗುರುವಿನ ಅಪ್ಪಣೆಪಡೆದು ಹಿಂತಿರುಗಿದ ವಿದ್ಯಾರ್ಥಿ. लब्धा अनुज्ञा गुरोराज्ञा येन।

**लब्धि ಲಬ್ಧಿ** (स्त्री०) 1. ಪ್ರಾಪ್ತಿ, ಸಂಪಾದನೆ. डुलभष् (प्राप्तौ) "क्तिन्" (३-३-९४)। 2. ಆದಾಯ, ಲಾಭ, ವರಮಾನ.

**लभस ಲಭಸ** (पुं०) 1. ಧನ, ಸಂಪತ್ತು, ಐಶ್ವರ್ಯ. डुलभष् (प्राप्तौ) "असच्" (उ० ३-११७)। 2. ಯಾಚಕ, ತಿರುಕ, ಭಿಕ್ಷುಕ. लभसो धनं याचकश्च सि० कौ०। (न०) 3. ಕುದುರೆಯನ್ನು ಕಟ್ಟುವ ಹಗ್ಗ.

**लभ्य ಲಭ್ಯ** (वि०) 1. ಹೊಂದಲ್ಪಡುವ. 2. ಹೊಂದಬೇಕಾದ. "लभ्या धरित्री तव विक्रमेण ज्यायांश्च वीर्यास्त्रबलैर्विपक्षः" किरा० ३-१७। 3. ಹೊಂದಲು ಅರ್ಹವಾದ. 4. ಹೊಂದಲು ಶಕ್ಯವಾದ. डुलभष् (प्राप्तौ) "यत्" (३-१-९८)। "लभ्या कथं नु वैदेही शक्यो द्रष्टुं कथं रिपुः" भट्टि० ६-४७। 5. ನ್ಯಾಯವಾದ, ಯೋಗ್ಯವಾದ. "न्याय्यलब्धव्ययोर्लभ्यम्" वैज०।

**लमक ಲಮಕ** (पुं०) ವಿಟಪುರುಷ, ವ್ಯಭಿಚಾರಿ, ಕಾಮುಕ. रमते — रमु (क्रीडायाम्) "क्वुन्" (उ० २-३४)। रस्य वा लः। पक्षे रमकः ರಮಕಃ.

**लम्पट ಲಂಪಟ** (पुं०) 1. ಪರಸ್ತ್ರೀಲೋಲ, ಜಾರ, ಕಾಮುಕ. (वि०) 2. ಅತಿಯಾದ ಆಸೆಯುಳ್ಳ. रमु (क्रीडायाम्) "अटन्" (उ० ४-८१)। "एषोऽपि दधिभक्तलम्पटः एतत्पञ्जरमुद्घाट्य दुष्टवानरः अतिक्रान्तः" रत्ना० २।

**लम्पा ಲಂಪಾ** (स्त्री०) ಕರಿ ಬಾಳೆಗಿಡ. "कदली दीर्घपत्रा च रम्भा सा गौरपर्णिका। कृष्णा तु लम्पा कदली" वैज०।

**लम्पाक ಲಂಪಾಕ** (पुं०) 1. ಸ್ತ್ರೀಲೋಲ, ಕಾಮುಕ, ಜಾರ. (पुं०ब०व०) 2. ಉತ್ತರ ದಿಕ್ಕಿನ ಒಂದು ದೇಶ. "लम्पाको लम्पटे देशे" हेम०।

**लम्फ ಲಂಫ** (पुं०) ನೆಗೆಯುವುದು, ಹಾರುವುದು.

**लम्फन ಲಂಫನ** (न०) ನೆಗೆಯುವುದು, ಹಾರುವುದು.

**लम्ब ಲಂಬ** (पुं०) 1. ನರ್ತಕ, ಕುಣಿಯುವವನು. 2. ಅಂಗ, ಅವಯವ. 3. ಉತ್ಕೋಚ, ಲಂಚ. (वि०) 4. ಜೋಲಾಡುತ್ತಿರುವ. "पाण्डचोऽयमंसार्पितलम्बहारः क्लृप्ताङ्गरागो हरिचन्दनेन" रघु० ६-६०। 5. ಸುಂದರವಾದ, ಅಂದವಾದ. लबि (शब्देऽवस्रंसने च)। "अच्" (३-१-१३४)। 6. ದೀರ್ಘವಾದ, ಉದ್ದವಾದ. "दूरतः शोभते मूर्खः लम्बशाटपटावृतः। तावच्च शोभते मूर्खो यावत् किञ्चिन्न भाषते" चाणक्य०।

**लंबकर्ण ಲಂಬಕರ್ಣ** (पुं०) 1. ಆಡು, ಮೇಕೆ. 2. ಗರ್ದಭ, ಕತ್ತೆ. 3. ಗಜ, ಆನೆ. 4. ಶ್ಯೇನಪಕ್ಷಿ, ಗಿಡಗ. 5. ಜೋಲಾಡುವ ಕಿವಿ. "लम्बकर्णललाटां च लम्बोदरपयोधराम्" रामा०। 6. ರಾಕ್ಷಸ. 7. ಅಂಕೋಲೆ ಮರ. स्त्रियां "ङीष्" (४-१-६४)। **-कर्णी - ಕರ್ಣೀ** ಜೋಲು ಕಿವಿಯುಳ್ಳ ಹೆಂಗಸು. (वि०) 8. ಜೋಲು ಕಿವಿಯುಳ್ಳ. लम्बौ कर्णौ यस्य।

**लम्बकेश ಲಂಬಕೇಶ** (पुं०) 1. ಉದ್ದವಾದ ಕೂದಲು. 2. ಉದ್ದವಾದ ಅಗ್ರದಿಂದ ಕೂಡಿದ ದರ್ಭಾಸನ. "ऊर्ध्वकेशो भवेद्ब्रह्मा लम्बकेशस्तु विष्टरः"। (वि०) 3. ಉದ್ದವಾದ ಕೂದಲುಳ್ಳ. लम्बाः केशा यस्य।

**लम्बन ಲಂಬನ** (पुं०) 1. ಕಫ, ಶ್ಲೇಷ್ಮ. (न०) 2. ಸರ, ಹೊಕ್ಕಳಿನವರೆಗೂ ಜೋಲಾಡುವ ಹಾರ. लम्बते—लबि (अवस्रंसने) "ल्युः" (३-१-१३४)। 3. ಕುಚ್ಚು, ಗೊಂಡೆ. 4. ಧ್ವನಿ, ಶಬ್ದ.

**लम्बमान ಲಂಬಮಾನ** (वि०) ಜೋಲಾಡುತ್ತಿರುವ, ತೂಗಾಡುತ್ತಿರುವ. लबि (अवस्रंसने) "शानच्" (३-२-१२४)। "प्रस्थानं ते कथमपि सखे लम्बमानस्य भावि" मेघ० १-४१।

**लम्बा ಲಂಬಾ** (स्त्री०) 1. ಲಕ್ಷ್ಮಿ. 2. ಗೌರಿ, ಪಾರ್ವತಿ. 3. ಕಹಿ ಸೋರೆ. "लम्बा पद्मालयागौर्योः तिक्ततुम्ब्यामपि स्त्रियाम्" मेदि०। 4. ಲಂಚ, ಉತ್ಕೋಚ. "लम्बा तूत्कोच आमिषः" वैज०।

**लम्बिका ಲಂಬಿಕಾ** (स्त्री०) 1. ಕಿರುನಾಲಗೆ. लबि (अवस्रंसने) "ण्वुल्" (३-१-१३३)। 2. ತಾಲು, ದವಡೆ. "सुधास्रवा लम्बिका स्यात्" कल्पद्रु०। 3. ದುರ್ಗಾದೇವಿ. "वृषाकपायी षष्ठी स्यात्तामस्यपि च लम्बिका" कल्पद्रु०।

**लम्बित ಲಂಬಿತ** (वि०) 1. ಜೋಲಾಡುವ, ತೂಗಾಡುವ. लबि (अवस्रंसने) "क्तः" (३-४-७२)। 2. ಕೆಳಗೆ ಇಳಿದಿರುವ. 3. ಕೆಳಗೆ ಇಳಿಸಲ್ಪಟ್ಟ. लबि (अवस्रंसने) + णिच् "क्तः" (३-२-१०२)। 4. ತೂಗುಹಾಕಲ್ಪಟ್ಟ. 5. ಶಬ್ದಮಾಡಿಸಲ್ಪಟ್ಟ. लबि (शब्दे) + णिच् "क्तः" (३-२-१०२)। 6. ಚಾಚಿ ಇಡಲ್ಪಟ್ಟ, ಮುಂದಕ್ಕೆ ನೀಡಲ್ಪಟ್ಟ. "करेण वातायनलम्बितेन स्पृष्टस्त्वया चण्डि कुतूहलिन्या" रघु० १३-२१।

**लम्बोदर ಲಂಬೋದರ** (पुं०) 1. ಗಣಪತಿ, ವಿನಾಯಕ, ವಿಘ್ನೇಶ್ವರ. लम्बमुदरं यस्य। 2. ತಿಂಡಿಪೋತ, ಹೊಟ್ಟೆಬಾಕ. (वि०) 3. ದೊಡ್ಡ ಹೊಟ್ಟೆಯುಳ್ಳ. "लम्बोदरः स्याद्धाद्यूने प्रमथानां च नायके" हेम०।

**लम्बोष्ठ ಲಂಬೋಷ್ಠ** (पुं०) 1. ಉಷ್ಟ್ರ, ಒಂಟೆ. लम्बौ ओष्ठौ यस्य। "तालुनाशश्च लम्बोष्ठोऽध्वगो भोलिमेरुप्रियः" कल्पद्रु०। (वि०) 2. ಜೋಲಾಡುವ ತುಟಿಯುಳ್ಳ, ಉದ್ದವಾದ ತುಟಿಯುಳ್ಳ.

**लम्भन ಲಂಭನ** (न०) ಪ್ರಾಪ್ತಿ, ಪಡೆಯುವುದು. डुलभष् (प्राप्तौ) भावे "ल्युट्" (३-३-११५)।

**लम्भित ಲಂಭಿತ** (वि०) 1. ಸೇರಿಸಲ್ಪಟ್ಟ, ಪ್ರಯೋಗಿಸಲ್ಪಟ್ಟ, ಉಪಯೋಗಿಸಲ್ಪಟ್ಟ. डुलभष् (प्राप्तौ) + णिच् "क्तः" (३-२-१०२)। "अनारतं तेन पदेषु लम्भिता विभज्य सम्यग्विनियोगसत्क्रियाः" किरा० १-१५। 2. ಸೇರಿಸಲ್ಪಟ್ಟ, ಹೊಂದಿಸಲ್ಪಟ್ಟ. "चूर्णमुष्टिरिव लम्भितकान्तिर्वासवस्य दिशमंशसमूहः" किरा० ९-१७। 3. ಸ್ವೀಕರಿಸುವಂತೆ ಮಾಡಲ್ಪಟ್ಟ, ತೆಗೆದುಕೊಳ್ಳುವಂತೆ

ಮಾಡಲ್ಪಟ್ಟ. "स्वादितः स्वयमर्थवितमानं लम्भितः प्रियतमैः सह पीतः" किरा० ९-५५। 4. ಸ್ವೀಕರಿಸುವಂತೆ ಮಾಡಲ್ಪಟ್ಟ, ಕೈಗೊಳ್ಳುವಂತೆ ಮಾಡಲ್ಪಟ್ಟ. "गोपितुं भुवमिमां मरुत्वता शैलवासमनुनीय लम्भितः" किरा० १३-६७। 5. ಸಿಕ್ಕಿಸಲ್ಪಟ್ಟ, ಒಳಪಡುವಂತೆ ಮಾಡಲ್ಪಟ್ಟ. "चिरमतिरसलौल्याद्बन्धनं लम्भितानाम्" माघ० ११-६०।

**लय ಲಯ** (पुं०) 1. ಸಂಶ್ಲೇಷ, ಸೇರಿಕೊಂಡಿರುವಿಕೆ, ಅಂಟಿಕೊಂಡಿರುವಿಕೆ. लीङ् (श्लेषणे) "अच्" (३-३-५६)। 2. ನೃತ್ಯಗೀತವಾದ್ಯಗಳ ಕಾಲಸಾಮ್ಯ. ನೃತ್ಯ ಗೀತ ಮತ್ತು ವಾದ್ಯ ಇವುಗಳ ಏಕತಾನತಾರೂಪವಾದ ಸಾಮ್ಯ. "अङ्गैरन्तर्निहितवचनैः सूचितः सम्यगर्थः पादन्यासो लयमुपगतः तन्मयत्वं रसेषु" माल० २-८। 3. ಪ್ರಳಯಕಾಲ, ಜಗತ್ತಿನ ವಿನಾಶದ ಸಮಯ. 4. ಜಗತ್ತಿನ ನಾಶ, ಅಳಿವು. 5. ವಿವಿಧ ವಸ್ತುಗಳು ಒಂದುಗೂಡುವಿಕೆ, ಒಂದು ಮತ್ತೊಂದು ವಸ್ತುವಿನಲ್ಲಿ (ಕಾಣದೆ) ಸೇರಿಹೋಗುವಿಕೆ. 6. ಚಿತ್ತದ ಏಕಾಗ್ರತೆ, ಮನಸ್ಸನ್ನು ಒಂದೇ ವಿಷಯದಲ್ಲಿ ನಿಲ್ಲಿಸುವಿಕೆ, ಮನಸ್ಸಿಗೆ ವಿಷಯಾಂತರವೃತ್ತಿನಿರೋಧ. "पश्यन्ती शिवरूपिणं लयवशादात्मानमभ्यागता" मालती० ५-२। 7. (ಸಂಗೀತದಲ್ಲಿ) ನಿಲುಗಡೆ, ವಿರಾಮ, ಯತಿಸ್ಥಾನ. 8. ವಿಶ್ರಾಂತಿ ಸ್ಥಾನ. 9. ಮೂರ್ಛೆ, ಜ್ಞಾನತಪ್ಪುವುದು. 10. ಬಾಣದ ಅಧೋಮುಖವಾದ ವೇಗ, ಬಾಣವು ಕೆಳಮುಖವಾಗಿ ವೇಗದಿಂದ ಹೋಗುವುದು. "कैराती गतिरूर्ध्वाधःप्रकर्षस्तु गते लये" वैज०। 11. ವಾದ್ಯ. 12. ಆಲಿಂಗನ, ಆಶ್ಲೇಷ. "श्लेषवाद्ययोः। लयः" त्रिकाण्ड०। 13. ಪರಮಾತ್ಮ.

**लयन ಲಯನ** (न०) 1. ಗೃಹ, ಮನೆ. लीयतेऽत्र —लीङ् (श्लेषणे) अधि० "ल्युट्" (३-३-११७)। "लयनेषु लोहितकनिर्मिता भुवः शितिरत्नरश्मिहरितीकृतान्तराः" माघ० १३-५२। 2. ವಿಶ್ರಾಂತಿ. 3. ವಿಶ್ರಾಂತಿಸ್ಥಾನ. 4. ಸೇರಿಕೊಳ್ಳುವುದು, ಅಂಟಿಕೊಳ್ಳುವುದು.

**लल ಲಲ** (वि०) 1. ಪ್ರಕಾಶಿಸುವ, ಹೊಳೆಯುವ. ललति —लल (विलासे) "अच्" (३-१-१३४)। "ललौ लीलां ललोऽलोलः शशीशशिशुशीः शशन्" किरा० १५-५। 2. ಅಪೇಕ್ಷಿಸುವ, ಆಸೆಪಡುವ. 3. ಆಟವಾಡುವ. 4. ಜೋಲಾಡುತ್ತಿರುವ.

**ललजिह्व ಲಲಜಿಹ್ವ** (पुं०) 1. ಉಷ್ಟ್ರ, ಒಂಟೆ. 2. ನಾಯಿ. (वि०) 3. ಹಿಂಸಿಸುವ, ಕೊಲ್ಲುವ. 4. ಜೋಲಾಡುವ ನಾಲಗೆಯುಳ್ಳ. लला जिह्वा यस्य। "ललजिह्वोऽन्यवत् हिंस्रे क्रमेलकशुनोः पुमान्" हेम०।

**लल्जिह्व ಲಲಜ್ಜಿಹ್ವ** (पुं०) "ललजिह्व" ಪದದ ಅರ್ಥ.

**ललत् ಲಲತ್** (वि०) 1. ಆಡುತ್ತಿರುವ, ಆಲುಗಾಡುತ್ತಿರುವ. लल (विलासे) "शतृ" (३-२-१२४)। "प्रविगलदसृक्पङ्कः पाणिर्ललन्नरजाङ्गलः" मालती० ५-५। 2. ಜೋಲಾಡುತ್ತಿರುವ. 3. ಆಟವಾಡುತ್ತಿರುವ. 4. ಪ್ರಕಾಶಿಸುತ್ತಿರುವ.

**ललन ಲಲನ** (पुं०) 1. ಬಾಲಕ. 2. ಸಾಲವೃಕ್ಷ. 3. ಪ್ರಿಯಾಲವೃಕ್ಷ, ಮೊರಟಿ ಮರ. (न०) 4. ಆಟ, ಕ್ರೀಡೆ. 5. ಜೋಲಾಡುವುದು. लल (विलासे) "ल्युट्" (३-३-११५)।

**ललना ಲಲನಾ** (स्त्री०) 1. ಹೆಂಗಸು. ललते — लल (ईप्सायाम्) "ल्युः" (३-१-१३४)। "युच्" (उ० २-७८) वा। "प्रमदा मानिनी कान्ता ललना च नितम्बिनी" अम०। "शठ नाकलोकललनाभिरविरतरतं रिरंससे" माघ० १५-८८। 2. ಜಿಹ್ವೆ, ನಾಲಗೆ. 3. ಸ್ವೈರಿಣಿ, ಕಾಮುಕ ಹೆಂಗಸು. ललते—लल (विलासे) "ल्युः"। "ललना कामिनीनारीभेदजिह्वासु योषिति" मेदि०।

**ललनाप्रिय ಲಲನಾಪ್ರಿಯ** (पुं०) 1. ಕದಂಬವೃಕ್ಷ. ललनानां प्रियः। (न०) 2. ಮಡಿವಾಳ. (वि०) 3. ನಾಲಗೆಗೆ ಇಷ್ಟವಾದ. 4. ಸ್ತ್ರೀಯರಿಗೆ ಪ್ರಿಯವಾದ.

**ललनिका ಲಲನಿಕಾ** (स्त्री०) ದಯೆತೋರಿಸಲು ಅರ್ಹಳಾದ ಹೆಂಗಸು, ಸಣ್ಣ ಹೆಂಗಸು. ललना अल्पार्थे "कन्" (५-३-७६)।

**ललन्तिका ಲಲಂತಿಕಾ** (स्त्री०) 1. ಹೊಕ್ಕುಳಿನವರೆಗೂ ಜೋಲಾಡುವ ಹಾರ, ಉದ್ದವಾದ ಹಾರ. लडति —लड (विलासे) "शतृ" (३-३-१२४)। "ङीप्" (४-१-६)। ललन्त्येव —स्वार्थे "कन्" (५-४-५)। 2. ಹಲ್ಲಿ, ಗೌಳಿ.

**ललाट ಲಲಾಟ** (न०) ಫಾಲ, ಹಣೆ, ನೊಸಲು. ललमीप्सामटति—अट (गतौ) "अण्" (३-२-१)। "अयं दरिद्रो भवितेति वैधसीं लिपिं ललाटेऽर्थिजनस्य जाग्रतीम्" नैष० १-१५। "न्यस्तं ललाटे तिलकं दधानः" रघु० १८-४४।

**ललाटक ಲಲಾಟಕ** (न०) ಅದವಾದ ಹಣೆ.

2. ಸ್ವರ್ಣ, ಚಿನ್ನ, ಬಂಗಾರ. "लोभनं कनकं शुक्रं सुवर्णं चन्द्रकाञ्चने" वैजं०। 3. ಆಸೆತೋರಿಸುವುದು.

**लोभनीय ಲೋಭನೀಯ** (वि०) 1. ಚಿತ್ತಾಕರ್ಷಕವಾದ, ಅಪೇಕ್ಷಿಸಲು ಯೋಗ್ಯವಾದ. लुभ (गार्ध्ये) "अनीयर्" (३-१-९६)। "कुसुममिव लोभनीयं यौवनमङ्गेषु संनद्धम्" शाकुं० १-१८। 2. ಮರುಳುಮಾಡಲು ಯೋಗ್ಯನಾದ, ಆಸೆತೋರಿಸಿ ಮೋಹಗೊಳಿಸಲು ಅರ್ಹನಾದ. लुभ (विमोहने) "अनीयर्" (३-१-९६)।

**लोभिन् ಲೋಭಿನ್** (वि०) 1. ಅತಿ ಆಸೆಯುಳ್ಳವನು, ಪರಧನವನ್ನು ಕಸಿಯಲು ಆಸೆಪಡುವವನು. लोभोऽस्यास्ति" इनिः (५-२-११५)। 2. ಮೋಹಗೊಳಿಸುವವನು, ಮರುಳುಮಾಡುವವನು. लोभयति — लुभ (विमोहने) + णिच् "णिनिः" (३-१-१३४)।

**लोभ्य ಲೋಭ್ಯ** (वि०) 1. ಆಸೆಪಡಲು ಯೋಗ್ಯವಾದ. 2. ಅಪೇಕ್ಷಿಸಲ್ಪಡುವ. लुभ (गार्ध्ये) "ण्यत्" (३-१-१२४)। 3. ಮರುಳುಗೊಳಿಸಲ್ಪಡುವ. लुभ (विमोहने) + णिच् "यत्" (३-१-९७)। (पुं०) 4. ಹೆಸರುಕಾಳು. "मुद्गस्तु प्रतमो लोभ्यो बलाङ्गो हरितो हरिः" वैजं०।

**लोमकर्ण ಲೋಮಕರ್ಣ** (पुं०) 1. ಶಶ, ಮೊಲ. लोमानि कर्णे यस्य। स्त्रियां "ङीष्" (४-१-६४)। (वि०) 2. ಕೂದಲಿನಿಂದ ಕೂಡಿದ ಕಿವಿಯುಳ್ಳ. लोमयुक्तौ कर्णौ यस्य।

**लोमकूप ಲೋಮಕೂಪ** (पुं०) ಕೂದಲಿನ ಗುಳಿ, ಮೈಯಲ್ಲಿ ಕೂದಲು ಹುಟ್ಟುವ ರಂಧ್ರ. लोम्नां कूप इव।

**लोमगर्त ಲೋಮಗರ್ತ** (पुं०) ಕೂದಲಿನ ಗುಳಿ, ಮೈಯಲ್ಲಿ ಕೂದಲು ಹುಟ್ಟುವ ರಂಧ್ರ.

**लोमघ्न ಲೋಮಘ್ನ** (न०) ತಲೆಯ ಕೂದಲನ್ನು ಉದುರಿಸುವ ಒಂದು ರೋಗ. लोमानि हन्ति — हन (हिंसागत्योः) "टक्" (३-२-५३)। ರೋಮಕೂಪದ ಪಿತ್ತವು ವಾತದೊಡನೆ ಬೆರೆತು ಕೂದಲನ್ನು ಉದುರಿಸುವುದು. ಬಳಿಕ ಕಫವು ರಕ್ತದೊಡನೆ ಸೇರಿ ರೋಮಕೂಪವನ್ನು ಮುಚ್ಚುವುದರಿಂದ ಮುಂದೆ ಕೂದಲು ಬೆಳೆಯುವುದಿಲ್ಲ. ಇದರಿಂದ ಬಟ್ಟು ತಲೆಯವನಾಗುತ್ತಾನೆ.

**लोमन् ಲೋಮನ್** (न०) ಮೈ ಕೂದಲು. लूयते—लूञ् (छेदने) "मनिन्" (३-२-७५)। "षष्ठे मासि च नारीणां वैदिके नाधिकारिता। उदरस्थस्य बालस्य नखलोमप्रवर्तनात्" इति स्मृतिः।

**लोमपाद ಲೋಮಪಾದ** (पुं०) ಅಂಗದೇಶದ ಒಬ್ಬ ದೊರೆ. लोमानि पादयोरस्य। ಈ ದೊರೆಯು ಋಷ್ಯಶೃಂಗಋಷಿಯ ಶ್ವಶುರ (ಮಾವ). ರೋಮಪಾದನೆಂದೂ ಇವನಿಗೆ ನಾಮಾಂತರ. ಇವನು ದಶರಥನ ಪುತ್ರಿಯಾದ ಶಾಂತಾದೇವಿಯನ್ನು ಸಾಕುಮಗಳನ್ನಾಗಿ ಮಾಡಿಕೊಂಡು ಋಷ್ಯಶೃಂಗಮಹರ್ಷಿಗೆ ಕೊಟ್ಟು ವಿವಾಹಮಾಡಿದನು. ಅನಾವೃಷ್ಟಿಪೀಡಿತವಾಗಿದ್ದ ರೋಮಪಾದನ ರಾಜ್ಯಕ್ಕೆ ಈ ಋಷಿಯು ಪ್ರವೇಶಿಸಿದ ಕೂಡಲೆ ಒಳ್ಳೆಯ ಮಳೆಯಾಗಿ ದೇಶವು ಸುಭಿಕ್ಷವಾಯಿತು.

**लोमश ಲೋಮಶ** (पुं०) 1. ಟಗರು, ಗಂಡುಕುರಿ. लोमानि बाहुल्येन सन्त्यस्य "शः" (५-२-१००)। 2. ಒಬ್ಬ ಋಷಿ. (वि०) 3. ಹೆಚ್ಚು ಕೂದಲಿನಿಂದ ಕೂಡಿದ. "धान्यं हृत्वा तु पुरुषो लोमशः संप्रजायते" भा० अनु० १७४-१२०। "लोमशो मुनिमेषयोः। लोमान्विते च" मेदि०। (स्त्री०) **-शा -ಶಾ.** 4. ಹೆಣ್ಣು ನರಿ. 5. ನಸುಗುನ್ನಿ. 6. ಮಹಾಮೇದೆ. 7. ಶಾಕಿನಿ. **-शी -ಶೀ.** 8. ಜಟಾಮಾಂಸಿ.

**लोमशपर्णिका ಲೋಮಶಪರ್ಣಿಕಾ** (स्त्री०) ಕಾಡುದ್ದಿನ ಗಿಡ.

**लोमशपुष्पक ಲೋಮಶಪುಷ್ಪಕ** (पुं०) ಶಿರೀಷ ವೃಕ್ಷ, ಬಾಗೆಮರ.

**लोमशातन ಲೋಮಶಾತನ** (न०) ಕೂದಲನ್ನು ಉದುರಿಸುವ ಔಷಧ. लोमानि शातयति—शद्लृ (शातने) + णिच् "ल्युः" (३-१-१३४)।

**लोमहर्षण ಲೋಮಹರ್ಷಣ** (न०) 1. ರೋಮಾಂಚ, ಮೈಮುಳ್ಳು ಏಳುವುದು. लोम्नां हर्षणम्। (वि०) 2. ರೋಮಾಂಚವನ್ನುಂಟುಮಾಡುವ. "तस्मिन् महाभये घोरे तुमुले लोमहर्षणे" भा०।

**लोल ಲೋಲ** (पुं०) 1. ದೊಡ್ಡ ಯುದ್ಧ, ಘೋರವಾದ ಕದನ. "वीराशंसनमाजेर्भूर्घोरो लोलो महारणम्" वैजं०। (वि०) 2. ಚಂಚಲವಾದ, ಚಲಿಸುವ. लोडति — लुड (विलोडने) "अच्" (३-१-१३४)। डलयोरभेदः। "लोलदृष्टि वदनं दयितायाश्चुम्बति प्रियतमे रभसेन" किरा० ९-४७। 3. ಕಂಪಿಸುವ, ನಡುಗುವ, ಅಲುಗಾಡುವ. "लोलैरलोलद्युतिभाञ्जि मुष्णन् रत्नानि रत्नाकरतामवाप" माघ० ३-३८। 4. ಚಂಚಲವಾದ, ಕ್ಷಣಿಕವಾದ, ಸ್ಥಿರವಲ್ಲದ. "येन श्रियः संश्रयदोषरूढं स्वभावलोलेत्ययशः प्रमृष्टम्" रघु० ६-४१। 5. ಆಸೆಯಿಂದ

ಕೂಡಿದ, ಅಪೇಕ್ಷೆಯುಳ್ಳ. "वसनमपि निशान्ते नेष्यते तत्प्रदातुं रथचरणविशालश्रोणिलोलेक्षणेन" माघ० ११-२३। (स्त्री०) -ला -ಲಾ. 6. ಲಕ್ಷ್ಮಿ. 7. ಜಿಹ್ವೆ, ನಾಲಗೆ. "लोलः स्याद्वाच्यलिङ्गकः। सतृष्णे चञ्चले लोला जिह्वाकमलयोः स्त्रियाम्" मेदि०। 8. ವಿದ್ಯುತ್ತು, ಮಿಂಚು.

**लोलमान ಲೋಲಮಾನ** (वि०) ಚಂಚಲಸ್ವಭಾವದ. लुड (विलासे) "चानश्" (३-२-१२९)। "लोलमानवितताङ्गुलिहस्तैः" माघ० १०-५९।

**लोलम्ब ಲೋಲಂಬ** (पुं०) ಭ್ರಮರ, ದುಂಬಿ. "अलिद्विरेफो लोलम्बो भालसः पुष्पलोलुपः" वैज०।

**लोलिका ಲೋಲಿಕಾ** (स्त्री०) 1. ಕಾಡಿನಲ್ಲಿ ಬೆಳೆಯುವ ಒಂದು ತೃಣ ಧಾನ್ಯ. "अव्यादा लोलिका सेव्या जलजा तृणधान्यकम्" वैज०। 2. ಪುಲ್ಲಂಪುರಚಿ. "चाङ्गेरी चुक्रिका दन्तशठाम्बष्ठाम्ललोणिका" अम०। "क्षुद्रा दन्तशठाम्बष्ठा चाङ्गेरी लोलिका च सा"।

**लोलित ಲೋಲಿತ** (वि०) ಅಲುಗಾಡಿಸಲ್ಪಟ್ಟ, ಕಲಕಲ್ಪಟ್ಟ. लुड (विलोडने)+णिच् "क्तः" (३-२-१०२)। लडयोरभेदः।

**लोलुप ಲೋಲುಪ** (वि०) ಅತಿ ಆಸೆಯುಳ್ಳ, ತವಕಪಡುವ, ಆತುರಪಡುವ. गर्हितं लुम्पति—लुप्लृ (छेदने)+यङ् "अच्" (३-१-१३४)। "अभिनवमधुलोलुपस्त्वम्" शाकु० ५-१। "आश्लेषलोलुपवधूस्तनकार्कश्यसाक्षिणीम्" माघ० २-१७। "लुभ (गार्ध्ये) + यङ् "अच्" (३-१-१३४)। लोलुभः ಲೋಲುಭಃ. ಇದೇ ಅರ್ಥದಲ್ಲಿ.

**लोष्ट ಲೋಷ್ಟ** (न०) 1. ಮಣ್ಣಿನ ಹೆಂಟೆ. लोष्टते—लोष्ट (संघाते) "अच्" (३-१-१३४)। "उद्गूर्णलोष्टलगुडैः परितोऽनुविद्धम्" माघ० ५-२५। 2. ಲೋಹಮಲ, ಕಬ್ಬಿಣದ ತುಕ್ಕು.

**लोष्टभञ्जन ಲೋಷ್ಟಭಂಜನ** (पुं०) "लोष्टभेदन" ನೋಡಿ.

**लोष्टभेदन ಲೋಷ್ಟಭೇದನ** (पुं०) 1. ಮಣ್ಣಿನ ಹೆಂಟೆಯನ್ನು ಒಡೆಯುವ ಕೊಡಲಿ. लोष्टं भिनत्ति—भिदिर् (विदारणे) "ल्युः" (३-१-१३४)। "कोटिशो लोष्टभेदनः" अम०। 2. ಕುಂಟೆ, ಹೊಲವನ್ನು ಹರಗುವ ಸಲಿಕೆ, ಹಲುಬು. "प्रतोदः प्राजनं तोत्रं कोटिशो लोष्टभञ्जनः" वैज०।

**लोष्टु ಲೋಷ್ಟು** (पुं०) ಮಣ್ಣಿನ ಹೆಂಟೆ.

**लोह ಲೋಹ** (पुंन०) 1. ಕಬ್ಬಿಣ. लूयतेऽनेन—लूञ् (छेदने) "हः" बाहु०। 2. ಅಗರು. लुह्यते—लुह (गार्ध्ये) "घञ्" (३-३-१९)। "वंशकागुरुराजार्हलोहं क्रिमिजजोङ्गकम्" अम०। 3. ಧಾತುಸಾಮಾನ್ಯ, ಹಿತ್ತಾಳೆ ತಾಮ್ರ ಚಿನ್ನ ಬೆಳ್ಳಿ ಕಂಚು ತವರ ಸೀಸ ಮತ್ತು ಕಬ್ಬಿಣ ಉಕ್ಕು ಮೊದಲಾದ ಲೋಹಗಳು. "सर्वं स्यात्तैजसं लोहम्" अम०। 4. ಆಯುಧ. "लोहोऽस्त्री शस्त्रके लौहे जोङ्गके सर्वतैजसे" मेदि०। 5. ರಕ್ತ. (वि०) 6. ರಕ್ತವರ್ಣದ, ಕೆಂಪು ಬಣ್ಣದ. "भ्रमतश्च वराहस्य लोहस्य प्रमुखे समम्" भा० आदि०। 7. ಕಬ್ಬಿಣದ, ಲೋಹಮಯವಾದ. "तं शम्भुराक्षिप्तमहेषुजालं लोहैः शरैर्मर्मसु निस्तुतोद" किरा० १७-४३।

**लोहकान्त ಲೋಹಕಾಂತ** (पुं०) ಅಯಸ್ಕಾಂತಶಿಲೆ, ಸೂಜಿಗಲ್ಲು. लोहः कान्तोऽस्य।

**लोहकार ಲೋಹಕಾರ** (पुं०) ಲೋಹದ ವಸ್ತುಗಳನ್ನು ತಯಾರಿಸುವ ಕಮ್ಮಾರ, ಕಬ್ಬಿಣದ ಕೆಲಸವಮಾಡುವವನು, ಕಬ್ಬಿಣದ ಶಸ್ತ್ರಾಸ್ತ್ರಗಳನ್ನು ತಯಾರಿಸುವವನು. लोहं करोति—डु कृञ् (करणे) "अण्" (३-२-१)। "ण्वुल्" (३-१-१३३)। -कारकः -ಕಾರಕಃ.

**लोहकिट्ट ಲೋಹಕಿಟ್ಟ** (न०) ಕಬ್ಬಿಣದ ತುಕ್ಕು, ಕಿಲುಬು.

**लोहचूर्ण ಲೋಹಚೂರ್ಣ** (न०) ಲೋಹಮಲ, ಕಬ್ಬಿಣದ ತುಕ್ಕು, ಕಿಲುಬು.

**लोहज ಲೋಹಜ** (न०) ಲೋಹಮಲ, ಕಬ್ಬಿಣದ ತುಕ್ಕು, ಕಿಲುಬು. लोहाज्जायते—जनी (प्रादुर्भावे) "डः" (३-२-९८)।

**लोहद्राविन् ಲೋಹದ್ರಾವಿನ್** (पुं०) ಟಂಕಣ. ಬಿಳಿಗಾರ.

**लोहनाल ಲೋಹನಾಳ** (पुं०) ಬಾಣ. लोहस्य नालो यस्य।

**लोहपृष्ठ ಲೋಹಪೃಷ್ಠ** (पुं०) ಕಂಕಪಕ್ಷಿ, ರಣಹದ್ದು. लोहस्येव कठिनं पृष्ठमस्य।

**लोहप्रतिमा ಲೋಹಪ್ರತಿಮಾ** (स्त्री०) ಲೋಹಮಯ ವಿಗ್ರಹ. लोहमयी प्रतिमा।

**लोहल ಲೋಹಲ** (वि०) 1. ಅಸ್ಪಷ್ಟವಾದ ಮಾತುಳ್ಳವನು, ಅಸ್ಫುಟವಾಗಿ ಮಾತಾಡುವವನು. लुह (गार्ध्ये) भावे 'घञ्' (३-३-१८)। लोहं लाति—ला (आदाने) "कः" (३-२-३)। 2. ಕಬ್ಬಿಣದ ಸರಪಣಿಯ ಒಂದು ವಲಯ. "लोहलोऽस्फुटवादिनि। शृङ्खलाधार्ये" हेम०।

**लोहवर ಲೋಹವರ** (न०) ಸ್ವರ್ಣ,ಚಿನ್ನ. लोहेषु वरः

**लोहश्लेषण ಲೋಹಶ್ಲೇಷಣ** (पुं०) ಟಂಕಣ, ಬಿಳಿಗಾರ. लोहानि श्लेषयति—श्लिष+णिच् "ल्युः" (३-१-१३४)।

**लोहाभिसार ಲೋಹಾಭಿಸಾರ** (पुं०) 1. ರಾಜನು ವಿಜಯಯಾತ್ರೆಗೆ ಪೂರ್ವ ಮಹಾನವಮಿಯ ದಿನ ಮಾಡುವ ಆಯುಧಗಜಾಶ್ವಪೂಜೆ. लोहं शस्त्रं अभिसार्यते प्रस्याप्यतेऽत्र—अभि+सृ (गतौ)+णिच् "घञ्" (३-३-१२१)। 2. ರಾಜನು ಆಯುಧ ಗಜಾಶ್ವ ಪೂಜೆ ಮಾಡಿದ ನಂತರ ಆಯುಧಗಳನ್ನು ಧರಿಸಿ ಯುದ್ಧಕ್ಕೆ ಹೊರಟಾಗ ರಕ್ಷೆಯಾಗಿ ಅವನಿಗೆ ಆರತಿ ನಿವಾಳಿಸುವುದು.

**लोहाभिहार ಲೋಹಾಭಿಹಾರ** (पुं०) ಆಯುಧಗಳನ್ನು ಧರಿಸಿ ಯುದ್ಧಕ್ಕೆ ಹೊರಟ ರಾಜನಿಗೆ ರಕ್ಷೆಯಾಗಿ ಆರತಿ ಎತ್ತುವುದು.

**लोहि ಲೋಹಿ** (न०) ಬಿಳಿಯ ಟಂಕಣ.

**लोहिका ಲೋಹಿಕಾ** (स्त्री०) ಕಬ್ಬಿಣದ ಪಾತ್ರೆ.

**लोहित ಲೋಹಿತ** (पुं०) 1. ರಕ್ತವರ್ಣ, ಕೆಂಪು ಬಣ್ಣ. 2. ಒಂದು ಜಾತಿಯ ಜಿಂಕೆ. 3. ಒಂದು ನದ. 4. ಅಂಗಾರಕ, ಕುಜ. रुह (बीजजन्मादौ) "इतन्" रस्य वा लः (उ० ३-९४)। 5. ಮತ್ಸ್ಯ, ಮೀನು. (न०) 6. ತಾಮ್ರಲೋಹ. 7. ರಕ್ತ. "ततोऽनुपूर्वायतवृत्तबाहुःश्रीमान् क्षरल्लोहितदिग्धदेहः" किरा० १७-५०। 8. ಕುಂಕುಮಕೇಸರಿ. 9. ಯುದ್ಧ. 10. ರಕ್ತಚಂದನ. (वि०) 11. ರಕ್ತವರ್ಣದ, ಕೆಂಪು ಬಣ್ಣದ. "स्रस्तांसावतिमात्रलोहिततलौ बाहू घटोत्क्षेपणात्" शाकु० १-२६। स्त्रियां वा "ङीप्" तकारस्य नकारादेशश्च (४-१-३९)। **लोहिनी ಲೋಹಿನೀ.** पक्षे **लोहिता ಲೋಹಿತಾ.**

**लोहितक ಲೋಹಿತಕ** (पुं०) 1. ಪದ್ಮರಾಗ. लोहित एव स्वार्थे "कन्"। "लयनेषु लोहितकनिर्मिता भुवः शितिरत्नरश्मिहरितीकृतान्तराः" माघ० १३-५२। 2. ಅಂಗಾರಕ ಗ್ರಹ. (न०) 3. ಹಿತ್ತಾಳೆ. (वि०) 4. ರಕ್ತವರ್ಣದ, ಕೆಂಪು ಬಣ್ಣದ. "नीलपीतासितश्यामैः सितैर्लोहितकैरपि" भा० सभा०।

**लोहितकृष्ण ಲೋಹಿತಕೃಷ್ಣ** (वि०) ಕೆಂಪು ಮತ್ತು ಕಪ್ಪು ಬೆರತ ಬಣ್ಣ, ಎಳೆಗೆಂಪು ಬಣ್ಣ.

**लोहितचन्दन ಲೋಹಿತಚಂದನ** (पुं०) 1. ಕೆಂಪು ಗಂಧ. 2. ಕೇಸರಿ. लोहितं चन्दनम्। "परिभ्रमन् लोहितचन्दनोचितः पदातिरन्तर्गिरि रेणुरूषितः" किरा० १-३४।

**लोहितपुष्पक ಲೋಹಿತಪುಷ್ಪಕ** (पुं०) ದಾಳಿಂಬೆ ಗಿಡ. लोहितं पुष्पमस्य।

**लोहिताङ्ग ಲೋಹಿತಾಂಗ** (पुं०) 1. ಅಂಗಾರಕ ಗ್ರಹ. ಕುಜಗ್ರಹ. लोहितमङ्गमस्य। 2. ಕಪಿಲೆಹಿಟ್ಟು ಎಂಬ ಓಷಧಿ.

**लोहितानन ಲೋಹಿತಾನನ** (पुं०) ನಕುಲ, ಕೀರೆ, ಮುಂಗಸಿ.

**लोहितायस् ಲೋಹಿತಾಯಸ್** (न०) ತಾಮ್ರಲೋಹ. लोहितमयः।

**लोहितिमन् ಲೋಹಿತಿಮನ್** (पुं०) ಕೆಂಪು. लोहितस्य भावः—लोहित "इमनिच्" (५-१-१२२)।

**लौकायतिक ಲೌಕಾಯತಿಕ** (पुं०) ಚಾರ್ವಾಕಮತಾನುಯಾಯಿ, ಚಾರ್ವಾಕಮತ ತತ್ತ್ವವನ್ನು ಅಧ್ಯಯನಮಾಡಿದವನು ಮತ್ತು ತಿಳಿದವನು. लोकायतमधीते वेद वा "ठक्" (४-२-६०)।

**लौकिक ಲೌಕಿಕ** (वि०) 1. ಲೋಕದಲ್ಲಿ ಎಲ್ಲರಿಗೂ ತಿಳಿದಿರುವ, ಲೋಕಪ್ರಸಿದ್ಧವಾದ. लोके विदितः "ठञ्" (५-१-४४)। 2. ಲೋಕವ್ಯವಹಾರಸಿದ್ಧವಾದ. "जायापती लौकिकमेषणीयमार्द्राक्षतारोपणमन्वभूताम्" कुमा० ७-८८। 3. ಲೋಕವ್ಯವಹಾರವನ್ನು ತಿಳಿದಿರುವ. लोकं वेत्ति—"ठक्" (४-२-५९)। "लौकिकानां हि साधूनामर्थं वागनुवर्तते। ऋषीणां पुनराद्यानां वाचमर्थोऽनुधावति" उ० रा० १-१०।

**लौल्य ಲೌಲ್ಯ** (न०) 1. ಚಂಚಲತೆ, ಅಸ್ಥಿರವಾಗಿರುವಿಕೆ. 2. ಹೆಚ್ಚು ಆಸೆಯಿಂದ ಕೂಡಿರುವಿಕೆ, ಕುತೂಹಲದಿಂದಿರುವಿಕೆ. लोलस्य भावः "ष्यञ्" (५-१-१२४)। "नानेन लौल्यात् कुमुदेन नूनमुपात्तमन्तर्ह्रदवासिना तत्" रघु० १६-७६।

**लौह ಲೌಹ** (पुं०) 1. ಕಬ್ಬಿಣ, ಲೋಹ. लोह एव "अण्" (५-४-३८)। "लौहभारसहस्रेण निर्मिता निरकारि मे" भट्टि० १५-५४। (वि०) 2. ಲೋಹ ನಿರ್ಮಿತವಾದ, ಕಬ್ಬಿಣದಿಂದ ತಯಾರಿಸಲ್ಪಟ್ಟ. 3. ತಾಮ್ರಲೋಹ ಸಂಬಂಧವಾದ.

**लौहितीक ಲೌಹಿತೀಕ** (वि०) ಕೆಂಪಗಿರುವಂತೆ ಕಾಣುವ, ಬೇರೆ ವಸ್ತುವಿನ ಸಂಪರ್ಕದಿಂದ ಕೆಂಪಗೆ ಕಾಣುವ. लोहित इव "ईकक्" (५-३-११०)।

**लौहित्य ಲೌಹಿತ್ಯ** (न०) 1. ಕೆಂಪು. लोहितस्य भावः "ष्यञ्" (५-१-१२४)। (पुं०) 2. ಒಂದು ನದ, ಒಂದು ಗುಡುಹೊಳೆ. "लौहित्यं लोहितत्वे च क्लीबं पुंसि नदान्तरे" मेदि०। "चकम्पे तीर्णलौहित्ये तस्मिन् प्राग्ज्योतिषेश्वरः" रघु० ४-८१।

इति "ल" कारादिपदार्थनिरूपणम्।

# ವ

**ವ** ವ ಇದು ವರ್ಣಮಾಲೆಯಲ್ಲಿ ಇಪ್ಪತ್ತೊಂಬತ್ತನೆಯ ವ್ಯಂಜನಾಕ್ಷರ. ಅವರ್ಗೀಯ ವ್ಯಂಜನಾಕ್ಷರಗಳಲ್ಲಿ ನಾಲ್ಕನೆಯ ಹಲ್ವರ್ಣ. ಈ ವರ್ಣ (ಅಕ್ಷರ) ವು ದನ್ತ ಮತ್ತು ಓಷ್ಠಸ್ಥಾನಗಳಲ್ಲಿ ಈಷತ್ಸ್ಪೃಷ್ಟ ಪ್ರಯತ್ನದಿಂದ ಹುಟ್ಟುವ ಅಂತಃಸ್ಥ ಅಲ್ಪಪ್ರಾಣಾಕ್ಷರ. "यरलवा अन्तःस्थाः"। "ईषत्स्पृष्टमन्तःस्थानाम्"। "वर्गाणां प्रथमतृतीययमौ यरलवाश्चाल्पप्राणाः" सि० कौ०।

**व** ವ (ಪುಂ) 1. ವಾಯು, ಗಾಳಿ. 2. ವರುಣ, ಪಶ್ಚಿಮ ದಿಕ್ಕಿನ ಅಧಿಪತಿ. 3. ಸಾಂತ್ವನ, ಸಮಾಧಾನಪಡಿಸುವುದು. 4. ಸಂಯಮ. 5. ಮನ್ಮಥ. वा (गतिगन्धनयोः) "घञ्" (३-३-१८)। "वः सान्त्वने च वाते च वरुणे च निगद्यते" मेदि०। 6. ಕಲ್ಯಾಣ, ಮಂಗಳ. 7. ವರುಣನ ಗೃಹ. 8. ಕನ್ನೈದಿಲೆ ಕೆಂಪುನ್ನೈದಿಲೆ ಮೊದಲಾದುವುಗಳ ಗಡ್ಡೆ. (ನಂ) 9. ವರುಣ. (अव्य०) 10. ಇವ ಶಬ್ದದ ಅರ್ಥ. "वं प्रचेतसि जानीयात् इवार्थे च तदव्ययम्" मेदि०।

**वंश** ವಂಶ (ಪುಂ) 1. ಸಂತತಿ, ಕುಲ, ಬುಡಕಟ್ಟು. वश (कान्तौ) "घञ्" (३-३-१९)। नुम् (७-१-८०)। "क्व सूर्यप्रभवो वंशः क्व चाल्पविषया मतिः" रघु० १-२। 2. ಬಿದಿರು. "धनुर्वंशविशुद्धोऽपि निर्गुणः किं करिष्यति" हितो०। 3. ವೇಣು, ಕೊಳಲು ವಾದ್ಯ. "स कीचकैर्मारुतपूर्णरन्ध्रैः कूजद्भिरापादितवंशकृत्यम्" रघु० २-१२। 4. ಗುಂಪು, ರಾಶಿ, ಸಮೂಹ. "उत्थापितः संयति रेणुरश्वैः सान्द्रीकृतः स्यन्दनवंशचक्रैः" रघु० ७-३९। 5. ಬೆನ್ನಿನ ಮೂಳೆ. 6. ಬಿದಿರಿನ ಗಿಣ್ಣು. "वंशः संघेऽन्वये वेणौ पृष्ठाद्यवयवेऽपि च" हेम०। 7. ಇಕ್ಷು, ಕಬ್ಬು. 8. ಸಾಲವೃಕ್ಷ, ಮತ್ತಿಮರ.

**वंशक** ವಂಶಕ (ಪುಂ) 1. ಬಿದಿರಿನ ಗಿಣ್ಣು. 2. ಒಂದು ಜಾತಿಯ ಕಬ್ಬು. 3. ಒಂದು ಜಾತಿಯ ಮೀನು. 4. ಅಗುರು. वंश इव प्रतिकृतिः "कन्" (५-३-९६)।

**वंशकर** ವಂಶಕರ (ಪುಂ) ಪುತ್ರ, ಮಗ. "वंशस्थितिं वंशकरेण तेन संभाव्य भावी स सखा मघोनः" रघु० १८-३१।

**वंशचरित** ವಂಶಚರಿತ (ನಂ) ಒಂದು ಕುಟುಂಬದ ಚರಿತ್ರೆ.

**वंशज** ವಂಶಜ (ವಿಂ) 1. ಒಂದು ಸತ್ಕುಲದಲ್ಲಿ ಹುಟ್ಟಿದವನು. वंशे जायते –जनी (प्रादुर्भावे) "डः" (३-२-९७)। "तस्य दाक्षिण्यरूढेन नाम्ना मगधवंशजा" रघु० १-३१। (ಪುಂ) 2. ಸಂತಾನ. 3. ಬಿದಿರಿನ ಅಕ್ಕಿ. (ಸ್ತ್ರೀಂ) 4. ತವಕ್ಷೀರ.

**वंशतण्डुल** ವಂಶತಂಡುಲ (ಪುಂ) ಬಿದಿರಿನ ಅಕ್ಕಿ.

**वंशधर** ವಂಶಧರ (ಪುಂ) ಒಂದು ವಂಶವನ್ನು ಹೊಂದಿರುವ, ಒಂದು ವಂಶದಲ್ಲಿ ಹುಟ್ಟಿ ಬೆಳೆದಿರುವ, ಒಂದು ವಂಶದಲ್ಲಿ ಹುಟ್ಟಿ ಅದನ್ನು ಬೆಳಗುವ. "अन्तर्जले प्रसूतासि रघुवंशधरौ सुतौ" उ० रा० ७-३।

**वंशपरम्परा** ವಂಶಪರಂಪರಾ (ಸ್ತ್ರೀಂ) ವಂಶದ ಶ್ರೇಣಿ, ಸಂತತಿಯ ಅನುಕ್ರಮ, ಸಂತಾನವು ಒಂದಾದ ಮೇಲೆ ಮತ್ತೊಂದು ಬರುವಿಕೆ, ಅವಿಚ್ಛಿನ್ನವಾಗಿ ಬಂದ ಸಂತತಿ.

**वंशरोचना** ವಂಶರೋಚನಾ, –लोचना– ಲೋಚನಾ (ಸ್ತ್ರೀಂ) ತವಕ್ಷೀರ.

**वंशप्रतिष्ठा** ವಂಶಪ್ರತಿಷ್ಠಾ (ಸ್ತ್ರೀಂ) ವಂಶವು ಸ್ಥಿರವಾಗಿ ನಿಂತು ಭದ್ರವಾಗಿರುವಿಕೆ.

**वंशस्थिति** ವಂಶಸ್ಥಿತಿ (ಸ್ತ್ರೀಂ) ಕುಲವು ಬೆಳೆದು ಸ್ಥಿರವಾಗಿರುವುದು. वंशस्य स्थितिः।

**वंशाङ्कुर** ವಂಶಾಂಕುರ (ಪುಂ) 1. ಬಿದಿರಿನ ಮೊಳಕೆ. 2. ವಂಶದ ಚಿಗುರು, ವಂಶಕ್ಕೆ ಮೊಳಕೆಯಂತಿರುವ ಸಂತಾನ.

**वंशानुचरित** ವಂಶಾನುಚರಿತ (ನಂ) ವಂಶದ ಚರಿತ್ರೆಯ ವರ್ಣನೆ. वंशस्य अनुचरितम्। ಇದು ಪುರಾಣದ ಐದು ಲಕ್ಷಣಗಳಲ್ಲೊಂದು. "सर्गश्च प्रतिसर्गश्च वंशो मन्वन्तराणि च। वंशानुचरितं चेति लक्षणानां तु पञ्चकम्"।

**वंशावलि** ವಂಶಾವಲಿ (ಸ್ತ್ರೀಂ) ಒಂದು ವಂಶದ (ಸಂತತಿಯ) ಪರಂಪರೆ, ವಂಶದ ಅನುಕ್ರಮ, ಪೀಳಿಗೆ. वंशस्य आवलिः।

**वंशिक** ವಂಶಿಕ (ನಂ) ಅಗುರು ಚಂದನ. वंशोऽस्त्यस्य। "ठन्" (५-२-११५)।

**वंशी** ವಂಶೀ (ಸ್ತ್ರೀಂ) 1. ವೇಣುವಾದ್ಯ, ಕೊಳಲು. वंशः कारणत्वेनास्त्यस्याः "अच्" (५-२-१२७)। गौरा० "ङीष्" (४-१-४१)। 2. ರಕ್ತಕೋಶಕ್ಕೆ ರಕ್ತವನ್ನು ತುಂಬುವ ರಕ್ತನಾಳ. 3. ನಾಲ್ಕು ಕರ್ಷಗಳ ತೂಕ.

**वंश्य ವಂಶ್ಯ** (पुं०) 1. ಒಂದು ವಂಶದಲ್ಲಿ ಜನಿಸಿದವನು. वंशे भवः "यत्" (४-३-५४)। "नूनं मत्तः परं वंश्याः पिण्डविच्छेददर्शिनः" रघु० १-६६। (वि०) 2. ಸತ್ಕುಲದಲ್ಲಿ ಹುಟ್ಟಿದ. 3. ಒಂದು ವಂಶಕ್ಕೆ ಸಂಬಂಧಿಸಿದ, ಒಂದು ಕುಟುಂಬಕ್ಕೆ ಸೇರಿದ. 4. ವಂಶದಲ್ಲಿ ಉತ್ಪನ್ನವಾದ. "वंश्या गुणाः खल्वपि लोककान्ताः प्रारम्भसूक्ष्माः प्रथिमानमापुः" रघु० १८-४९। 5. ಮನೆಯ ಮೇಲುಭಾಗದ ಮರದ ದೂಲ, ತೊಲೆ. 6. ತೋಳಿನ ಎಲುಬು.

**वकुल ವಕುಳ** (पुं०) ವಕುಳವೃಕ್ಷ, ಪವಳದ ಗಿಡ. वङ्कते —वकि (गतौ) "उलच्"। बाहु०। "बभञ्जुरमितामोदान् वकुलान् वृष्णिकुञ्जराः" याद० २२-२१३।

**वक्तव्य ವಕ್ತವ್ಯ** (वि०) 1. ಹೇಳಲ್ಪಡುವ. 2. ಹೇಳಬೇಕಾದ. 3. ಹೇಳಲು ಅರ್ಹವಾದ. वच (परिभाषणे) "तव्यः" (३-१-९६)। 4. ನಿಂದಾರ್ಹ, ಅಸಭ್ಯ. 5. ನೀಚ, ಹೀನ. "वक्तव्यो वाच्यवद्गर्ह्ये वचोर्हहीनयोरपि" हेम०। (न०) 6. ವಚನ, ಮಾತು. वच भावे "तव्यः"। 7. ನಿಂದೆ, ಬೈಗುಳು.

**वक्तृ ವಕ್ತೃ** (वि०) 1. ಮಾತನಾಡುವವನು, ಹೇಳುವವನು. वच (परिभाषणे) "तृच्" (३-१-१३३)। "विशेषविदुषः शास्त्रं यत्तवोद्ग्राह्यते पुरः। हेतुः परिचयस्थैर्ये वक्तुर्गुणनिकैव सा" माघ० २-७४। 2. ಭಾಷಣ—, ಪ್ರವಚನ—, ಉಪನ್ಯಾಸ ಮಾಡುವವನು. "किं करिष्यन्ति वक्तारः श्रोता यत्र न विद्यते"। 3. ಪಂಡಿತ, ವಿದ್ಯಾವಂತ. 4. ಋಜುಮಾರ್ಗದಲ್ಲಿರುವ, ನ್ಯಾಯಪರನಾದ, ಕಪಟವಿಲ್ಲದ. 5. ವಾಗ್ಮಿ. स्त्रियां "ङीप्" (४-१-५)। **वक्त्री** ವಕ್ತ್ರೀ. "वक्त्री वेदान् भातु मे वाजिवक्त्रा" हयग्री०। "वक्ता तु पण्डितेऽपि स्याद्वाग्मिन्यप्यन्यलिङ्गकः" मेदि०।

**वक्त्र ವಕ್ತ್ರ** (न०) 1. ಮುಖ, ಬಾಯಿ. उच्यतेऽनेन—वच (परिभाषणे) "त्रः" (उ० ४-१६६)। "ककुभिकन्यावक्त्रान्तर्वासलब्धाधिवासया" माघ० २-२०। 2. ಛಂದಸ್ಸಿನ ಒಂದು ಭೇದ. "वक्त्रं नाद्यान्नसौ स्यातामब्धेर्योऽनुष्टुभि स्यातम्" वृ० र०। 3. ಬಾಣದ ಅಗ್ರಭಾಗ, ಬಾಣದ ಮೊನಚಾದ ಕೊನೆ. 4. ಪ್ರಾರಂಭ.

**वक्त्रखुर ವಕ್ತ್ರಖುರ** (पुं०) ದಂತ, ಹಲ್ಲು. वक्त्रस्य क्षुर इव। पृषो०।

**वक्त्रज ವಕ್ತ್ರಜ** (पुं०) 1. ವಿಪ್ರ, ಪ್ರಥಮ ವರ್ಣದವನು. वक्त्रात् ब्रह्मणो मुखात् जायते—जनी (प्रादुर्भावे) "डः" (३-२-९८)। "ब्राह्मणोऽस्य मुखमासीत्" श्रुतिः। (वि०) 2. ಮುಖದಿಂದ ಹುಟ್ಟಿದ.

**वक्त्रताल ವಕ್ತ್ರತಾಲ** (पुं०) ಮುಖವಾದ್ಯ, ಬಾಯಿಂದ ನುಡಿಸುವ ವಾದ್ಯ. वक्त्रस्य तालम्।

**वक्त्रपट्ट ವಕ್ತ್ರಪಟ್ಟ** (पुं०) ಕುದುರೆಗೆ ಕಾಳನ್ನು ತಿನ್ನಿಸುವ ಚೀಲ.

**वक्त्रभेदिन् ವಕ್ತ್ರಭೇದಿನ್** (पुं०) ತಿಕ್ತರಸ, ಕಹಿರಸ. वक्त्रं भिनत्ति—भिदिर् (विदारणे) "णिनिः" (३-२-७८)।

**वक्त्रवास ವಕ್ತ್ರವಾಸ** (पुं०) 1. ನಾರಂಗಫಲ, ಕಿತ್ತಳೆ ಹಣ್ಣು. वक्त्रं वासयति—वस+णिच् "अण्" (३-२-१)। 2. ಬಾಯಿಯ ವಾಸನೆ.

**वक्त्रशोधन ವಕ್ತ್ರಶೋಧನ** (न०) 1. ಬಾಯನ್ನು ತೊಳೆಯುವುದು, ಬಾಯನ್ನು ಶುದ್ಧಮಾಡುವುದು. वक्त्रस्य शोधनम्। 2. ನಿಂಬೆಯ ಹಣ್ಣು.

**वक्त्रशोधिन् ವಕ್ತ್ರಶೋಧಿನ್** (पुं०) 1. ನಿಂಬೆಯ ಗಿಡ. (वि०) 2. ಮುಖವನ್ನು (ಬಾಯನ್ನು) ಶುದ್ಧಮಾಡುವ. वक्त्रं शोधयति—शुध (शौचे) + णिच् "णिनिः" (३-२-७८)।

**वक्र ವಕ್ರ** (पुं०) 1. ಶನಿಗ್ರಹ. वञ्चयति—वञ्चु (प्रलोभने) +णिच् "रक्" (उ० २-१३)। 2. ಕುಜ, ಅಂಗಾರಕ ಗ್ರಹ. 3. ರುದ್ರ. 4. ಪರ್ಪಟ, ಹಪ್ಪಳ. 5. ವಕ್ರಗತಿಯುಳ್ಳ ಗ್ರಹ. (न०) 6. ಹೊಳೆಯ ತಿರುವು, ನದಿಯ ವಕ್ರತೆ. 7. ಗ್ರಹಗಳ ವಕ್ರಗತಿ, ಗ್ರಹಗಳ ಹಿಂಚಲನೆ. (वि०) 8. ವಕ್ರವಾಗಿರುವ, ಬಗ್ಗಿರುವ, ಡೊಂಕಾಗಿರುವ. "बालेन्दुवक्राण्यविकासभावाद्बभुः पलाशान्यतिलोहितानि" कुमा० ३-२९। 9. ನೇರವಲ್ಲದ, ಬಳಸಾದ, ಪ್ರತಿಕೂಲವಾದ, ವಿಷಯಕ್ಕೆ ಸಂಬಂಧಿಸದ. "प्रातिभं त्रिसरकेण गतानां वक्रवाक्यरचनारमणीयः" माघ० १०-१२। 10. ಕ್ರೂರವಾದ. "वक्रः शनैश्चरे पुंसि पुटभेदे नपुंसकम्। त्रिषु क्रूरे च कुटिले" मेदि०।

**वक्रकण्ट ವಕ್ರಕಂಟ** (पुं०) ಬದರವೃಕ್ಷ, ಎಲಚಿ ಮರ, ಬೋರೆ ಮರ. वक्राः कण्टाः कण्टकाः अस्य।

**वक्रकण्टक ವಕ್ರಕಂಟಕ** (पुं०) ಖದಿರವೃಕ್ಷ, ಕಗ್ಗಲಿ ಮರ.

**वक्रखड्ग ವಕ್ರಖಡ್ಗ** (पुं०) ಬಾಗುಕತ್ತಿ, ಕೊಂಕುಕತ್ತಿ, ಸ್ವಲ್ಪ ಬಗ್ಗಿರುವ ಕತ್ತಿ. वक्रः खड्गः।

**वक्रगति ವಕ್ರಗತಿ** (स्त्री०) 1. ಡೊಂಕು ನಡಗೆ, ವಕ್ರವಾಗಿ ಹೋಗುವುದು, ಬಳಸಿ ಹೋಗುವುದು. वक्रा गतिः । (वि०) 2. ಬಳಸಿಕೊಂಡು ಹೋಗುವ, ನೇರವಾಗಿ ಹೋಗದಿರುವ. वक्रा गतिर्यस्य । 3. ಹಿಂಚಲನೆ. **–गामिन् –ಗಾಮಿನ್.** वक्रं गच्छति — गम्लृ (गतौ) "णिनिः" (३-२-७८)। स्त्रियां "ङीप्" (४-१-५)। **–गामिनी –ಗಾಮಿನೀ.**

**वक्रग्रीव ವಕ್ರಗ್ರೀವ** (पुं०) ಉಷ್ಟ್ರ, ಒಂಟೆ. वक्रा ग्रीवा अस्य ।

**वक्रचञ्चु ವಕ್ರಚಂಚು** (पुं०) ಶುಕಪಕ್ಷಿ, ಗಿಣಿ. वक्रा चञ्चुर्यस्य ।

**वक्रता ವಕ್ರತಾ** (स्त्री०) 1. ಕುಟಿಲವಾಗಿರುವಿಕೆ, ಋಜುವಾಗಿಲ್ಲದಿರುವಿಕೆ. 2. ನೇರವಾಗಿಲ್ಲದಿರುವಿಕೆ. "ऋजुता वक्रतां प्राप वक्रता च तथार्जवम्" चं० रा० ।

**वक्रतुण्ड ವಕ್ರತುಂಡ** (पुं०) 1. ವಿನಾಯಕ, ಗಣಪತಿ. 2. ಶುಕಪಕ್ಷಿ, ಗಿಣಿ. वक्रं तुण्डं यस्य ।

**वक्रदंष्ट्र ವಕ್ರದಂಷ್ಟ್ರ** (पुं०) ಸೂಕರ, ಹಂದಿ. वक्रा दंष्ट्रा अस्य ।

**वक्रनक्र ವಕ್ರನಕ್ರ** (पुं०) 1. ಶುಕಪಕ್ಷಿ, ಗಿಣಿ. वक्रः नक्र इव हिंस्रश्च । 2. ದುರ್ಜನ. "वक्रनक्रस्तु पिशुने तथैव शुकपक्षिणि" मेदि० ।

**वक्रनासिक ವಕ್ರನಾಸಿಕ** (पुं०) ಉಲೂಕ, ಘೂಕ, ಗೂಬೆ.

**वक्रपुच्छ ವಕ್ರಪುಚ್ಛ** (पुं०) ಶ್ವಾನ, ನಾಯಿ. वक्रं पुच्छं यस्य । **–वालधि –ವಾಲಧಿ.**

**वक्रपुष्प ವಕ್ರಪುಷ್ಪ** (पुं०) ಕಿಂಶುಕವೃಕ್ಷ, ಮುತ್ತುಗದ ಮರ. वक्राणि पुष्पाण्यस्य ।

**वक्रभणित ವಕ್ರಭಣಿತ** (न०) ವಕ್ರವಾದ ಮಾತು, ವಿಷಯಕ್ಕೆ ಸಂಬಂಧಿಸದ ಮಾತು, ಪ್ರತಿಕೂಲವಾದ ಮಾತು. वक्रं कुटिलं भणितम् ।

**वक्रम ವಕ್ರಮ** (पुं०) ಪಲಾಯನ, ಓಡಿಹೋಗುವುದು. अव + क्रमु (पादविक्षेपे) भावे "घञ्" (३-३-१८)। अल्लोपः । "वष्टि भागुरिरल्लोपमवाप्योरुपसर्गयोः" ।

**वक्रवक्त्र ವಕ್ರವಕ್ತ್ರ** (पुं०) 1. ಸೂಕರ, ಹಂದಿ. वक्रं वक्त्रं यस्य । (वि०) 2. ವಕ್ರವಾದ ಮುಖವುಳ್ಳ.

**वक्राङ्ग ವಕ್ರಾಂಗ** (पुं०) 1. ಹಂಸ. वक्रमङ्गमस्य । (न०) 2. ವಕ್ರವಾದ ಅಂಗ, –ಅವಯವ. (वि०) 3. ವಕ್ರವಾದ ಅವಯವವುಳ್ಳ.

**वक्रिन् ವಕ್ರಿನ್** (वि०) 1. ವಕ್ರವಾಗಿರುವ, ಬಗ್ಗಿರುವ, ಡೊಂಕಾಗಿರುವ. वक्रोऽस्यास्ति "इनिः" (५-२-११५)। 2. ಹಿಂಚಲನೆಯುಳ್ಳ.

**वक्रिमन् ವಕ್ರಿಮನ್** (पुं०) 1. ಡೊಂಕಾಗಿರುವಿಕೆ, ಕೌಟಿಲ್ಯ. वक्रस्य भावः —"इमनिच्" (५-१-१२२)। 2. ಬಳಸಿಕೊಂಡು (ಮಾತು) ಆಡುವುದು, ಪ್ರತಿಕೂಲವಾಗಿ ಮಾತಾಡುವುದು. "तद्वक्त्राम्बुजसौरभं स च सुधास्यन्दी गिरां वक्रिमा" गीतगो० ३-५ ।

**वक्रीकृत ವಕ್ರೀಕೃತ** (वि०) ವಕ್ರವಾಗಿ ಮಾಡಲ್ಪಟ್ಟ, ಡೊಂಕಾಗಿ ಮಾಡಲ್ಪಟ್ಟ, ಬಗ್ಗಿಸಲ್ಪಟ್ಟ. अवक्रः वक्रः संपद्यमानः कृतः — वक्र + कृञ् (करणे) "च्विः" (वा० ५-४-५०)। "क्तः" (३-२-१०२)।

**वक्रीभूत ವಕ್ರೀಭೂತ** (वि०) ವಕ್ರವಾಗಿ ಆಗಿರುವ, ಬಗ್ಗಿರುವ, ಡೊಂಕಾಗಿರುವ. अवक्रः वक्रः संपद्यमानो भूतः — वक्र + भू (सत्तायाम्) "च्विः" (वा० ५-४-५०)। "क्तः" (३-४-७२) ।

**वक्रोक्ति ವಕ್ರೋಕ್ತಿ** (स्त्री०) 1. ಕುಟಿಲವಾದ ಮಾತು, ಸಂದಿಗ್ಧವಾದ ಮಾತು, ಶ್ಲೇಷಾರ್ಥವುಳ್ಳ ಮಾತು. वक्रा उक्तिः । 2. ಅರ್ಥಾಲಂಕಾರದ ಒಂದು ಭೇದ. ಒಬ್ಬನು ಹೇಳಿದ ಮಾತಿಗೆ ಶ್ಲೇಷ ಅಥವಾ ಕಾಕುವಿನಿಂದ ಅರ್ಥಾಂತರವನ್ನು ಕಲ್ಪಿಸಿ ಉತ್ತರ ಹೇಳುವುದು "ವಕ್ರೋಕ್ತಿ" ಅಲಂಕಾರವಾಗುವುದು. "वक्रोक्तिः श्लेषकाकुभ्यामपरार्थप्रकल्पनम्" चन्द्रा० । उदा: "मुञ्च मानं दिनं प्राप्तं नेह नन्दी हरान्तिके" चन्द्रा० ।

**वक्रोष्ठिका ವಕ್ರೋಷ್ಠಿಕಾ** (स्त्री०) ಮಂದಸ್ಮಿತ, ಮುಗುಳ್ನಗೆ. वक्रः ओष्ठोऽस्त्यस्याः "ठन्" (५-२-११५)।

**वक्षण ವಕ್ಷಣ** (न०) ವಕ್ಷಸ್ಸು, ಎದೆ. वक्षत्यनेन — वक्ष (रोषे संघाते च) "ल्युट्" (३-३-११७) ।

**वक्षस् ವಕ್ಷಸ್** (न०) ಎದೆ. वक्षति — वक्ष (संघाते) "असुन्" (उ० ४-१८९)। "तेनोपमीयेत तमालनीलमामुक्तमुक्तातलमस्य वक्षः" माघ० ३-८ ।

**वक्षःपीठी ವಕ್ಷಃಪೀಠೀ** (स्त्री०) ವಕ್ಷಃಸ್ಥಳವೇ ಪೀಠವಾಗಿ ಉಳ್ಳ.

**वक्षःस्थल ವಕ್ಷಃಸ್ಥಲ** (न०) ಎದೆ. वक्षसः स्थलम् ।

**वक्षोज ವಕ್ಷೋಜ** (न०) ಸ್ತನ, ಕುಚ. वक्षसि जायते — जनी (प्रादुर्भावे) "डः" (३-२-९७) । "उद्वीक्ष्य प्रियकरकुड्मलापविद्धवक्षोजद्वयमभिषिक्तमन्यनार्याः" माघ० ८-३७ ।

**वक्षोरुह ವಕ್ಷೋರುಹ** (ಪುಂ) ಸ್ತನ, ಕುಚ. वक्षसि रोहति — रुह (बीजजन्मनि प्रादुर्भावे च) "कः" (३-१-१३५)।

**वक्ष्यमाण ವಕ್ಷ್ಯಮಾಣ** (वि०) ಮುಂದೆ ಹೇಳಲ್ಪಡುವ, ಭವಿಷ್ಯತ್‌ಕಾಲದಲ್ಲಿ ಹೇಳಲ್ಪಡುವ. वच (परिभाषणे) + स्यः+शानच् (३-२-१२४)। मुगागमः (७-२-८२)।

**वगाह ವಗಾಹ** (ಪುಂ) ನೀರಿನಲ್ಲಿಳಿಯುವುದು, ನೀರಿನೊಳಕ್ಕೆ ಪ್ರವೇಶಿಸುವುದು. अव + गाहू (विलोडने) "घञ्" (३-३-११५)। अल्लोपः। "वष्टि भागुरिरल्लोपमवाप्योरुपसर्गयोः"।

**वग्नु ವಗ್ನು** (ಪುಂ) 1. ಮಾತನಾಡುವವನು. वच (परिभाषणे) "नुः" गश्च (उ० ३-३३)। 2. ಹೆಚ್ಚು ಮಾತನಾಡುವವನು, ಅತಿಯಾಗಿ ಹರಟೆಹೊಡೆಯುವವನು.

**वङ्क ವಙ್ಕ** (ಪುಂ) 1. ಕುದುರೆಯ ಜೀನಿನ ಅಗ್ರಭಾಗ. 2. ನದಿಯ ಪಾತ್ರ. 3. ನದಿಯ ತಿರುವು. ನದಿಯು ವಕ್ರವಾಗಿ ತಿರುಗಿ ಹರಿಯುವುದು. वकि (कौटिल्ये गतौ च) "अच्" (३-१-१३४)। "वङ्कःपर्याणभागे ना नदीपात्रे च भङ्गुरे" मेदि०।

**वङ्किल ವಙ್ಕಿಲ** (ಪುಂ) ಕಂಟಕ, ಮುಳ್ಳು. वकि (कौटिल्ये) "इलच्" बाहु०।

**वङ्क्रि ವಙ್ಕ್ರಿ** (ಪುನ०) 1. ಒಂದು ವಿಧ ವಾದ್ಯ. वकि (कौटिल्ये) "क्रिन्" (उ० ४-६६)। 2. ಪಾರ್ಶ್ವಾಸ್ಥಿ, ಪಕ್ಕೆಗಳ ಎಲುಬು. 3. ಮನೆಯ ಮೇಲುಛಾವಣಿಯ ಮರ. "वङ्क्रिर्वाद्यभेदो गृहदारु पार्श्वास्थि च" सि० कौ०।

**वङ्क्षण ವಙ್ಕ್ಷಣ** (ಪುಂ) ತೊಡೆಗಳ ಸಂಧಿ. वक्ष (संघाते) "ल्युट्" (३-३-११३)। नुमागमः (७-१-८०)।

**वङ्क्षु ವಙ್ಕ್ಷು** (स्त्री०) ಗಂಗಾನದಿಯ ಒಂದು ಶಾಖೆ.

**वङ्ग ವಙ್ಗ** (न०) 1. ಸೀಸಲೋಹ. 2. ತವರ. (ಪುಂ) 3. ಬದನೆ ಗಿಡ. 4. ಹತ್ತಿ. (ಪುಂ ಬ० ವ०) 5. ವಂಗದೇಶ. वगि (गतौ) "अच्" (३-१-१३४)। "वङ्गं सीसकरङ्गयोः। वार्ताकिऽपि च कार्पासे पुंभूम्नि नीवृदन्तरे" मेदि०। 6. ವಂಗದೇಶದ ರಾಜರು. "वङ्गानुत्खाय तरसा नेता नौसाधनोद्यतान्" रघु० ४-३६।

**वङ्गज ವಙ್ಗಜ** (न०) 1. ಸಿಂದೂರ. (वि०) 2. ವಂಗದೇಶದಲ್ಲಿ ಹುಟ್ಟಿದ. वङ्गात् वङ्गे वा जायते—जनी "डः" (३-२-९८, ९७।

**वच ವಚ** (ಪುಂ) 1. ಶುಕಪಕ್ಷಿ, ಗಿಣಿ. वक्ति — वच (परिभाषणे) "अच्" (३-१-१३४)। 2. ಬಜೆ. 3. ಮಾತನಾಡಬಲ್ಲ ಒಂದು ಪಕ್ಷಿ. "वचः कीरे वचौषधौ। शारिकायां च" मेदि०।

**वचक्नु ವಚಕ್ನು** (ಪುಂ) 1. ಬ್ರಾಹ್ಮಣ. वक्ति — वच (परिभाषणे) "अक्नुच्" (उ० ३-८१)। (वि०) 2. ವಾಗ್ಮಿ, ಚೆನ್ನಾಗಿ ಮಾತನಾಡುವವನು. "वचक्नुविप्रवाग्मिनोः" सि० कौ०। "वचक्नुस्तु पुमान् विप्रे वावदूकेऽभिधेयवत्" मेदि०।

**वचन ವಚನ** (न०) 1. ಮಾತು, ನುಡಿ. वच (परिभाषणे) भावे "ल्युट्" (३-३-११५)। "वचनैरसतां महीयसी न खलु व्येति गुरुत्वमुद्धतैः" माघ० १६-२७। 2. ಭಾಷಣ, ಹೇಳಿಕೆ, ಉಪನ್ಯಾಸ. "ननु वक्तृविशेषनिःस्पृहा गुणगृह्या वचने विपश्चितः" किरा० २-५। 3. ಅರ್ಥವನ್ನು ಹೇಳತಕ್ಕ ಪದ, ಅರ್ಥವನ್ನು ಕೊಡುವ ಶಬ್ದ. मेघवचनः पयोधरशब्दः। 4. (ವ್ಯಾಕರಣ ಶಾಸ್ತ್ರದಲ್ಲಿ) ಸಂಖ್ಯೆಯನ್ನು ಹೇಳುವ सुप् ಮತ್ತು तिङ् ಪ್ರತ್ಯಯ. ಏಕವಚನ ದ್ವಿವಚನ ಮತ್ತು ಬಹುವಚನಗಳೆಂದು ವಚನಗಳು ಮೂರು. ಈ ಮೂರು ವಚನಗಳೂ ಕ್ರಮವಾಗಿ ಒಂದು ಎರಡು ಮೂರು ಮತ್ತು ಅದಕ್ಕಿಂತಲೂ ಹೆಚ್ಚು ಸಂಖ್ಯೆಗಳನ್ನು ಹೇಳುವುವು. "द्व्येकयोर्द्विवचनैकवचने" पा० सू० १-४-२२। "बहुषु बहुवचनम्" पा० सू० १-४-२१। 5. ಶುಂಠಿ.

**वचनकर ವಚನಕರ** (वि०) ವಿಧೇಯ, ಹೇಳಿದುದನ್ನು ಮಾಡುವವನು. करोति—डु कृञ् (करणे) "अच्" (३-१-१३४)। वचनस्य करः।

**वचनकारिन् ವಚನಕಾರಿನ್** (वि०) ಮಾತಿನಂತೆ ನಡೆದುಕೊಳ್ಳುವವನು, ಹೇಳಿದ ಕೆಲಸವನ್ನು ಮಾಡುವವನು. वचन + डु कृञ् (करणे) "णिनिः" (३-२-७८)। स्त्रियां —**कारिणी — ಕಾರಿಣೀ.**

**वचनग्राहिन् ವಚನಗ್ರಾಹಿನ್** (वि०) ವಿಧೇಯ, ಆಜ್ಞೆಯಂತೆ ನಡೆದುಕೊಳ್ಳುವವನು. वचनं गृह्णाति — ग्रह (उपादाने) "णिनिः" (३-२-७८)। स्त्रियां —**ग्राहिणी — ಗ್ರಾಹಿಣೀ.**

**वचनीय ವಚನೀಯ** (वि०) 1. ಹೇಳಲ್ಪಡುವ. वच (परिभाषणे) "अनीयर्" (३-१-९६)। 2. ಹೇಳಬೇಕಾದ. "उच्यतां स वचनीयमशेषं नेश्वरे परुषता सखि साध्वी" किरा० ९-३९। 3. ಹೇಳಲು ಅರ್ಹ

ವಾದ. (ನಂ) 4. ನಿಂದೆ, ಬೈಗಳು. 5. ಅಪವಾದ. "ममात्र भावैकरसं मनःस्थितं न कामवृत्तिर्वचनीयमीक्षते" कुमा० ५-८२ ।

**वचनीयता ವಚನೀಯತಾ** (स्त्री०) ಲೋಕಾಪವಾದ, ಜನತೆಯ ನಿಂದೆ. वचनीयस्य भावः "तल्" (५-१-११९)।

**वचनेस्थित ವಚನೇಸ್ಥಿತ** (वि०) ಹೇಳಿದಂತೆ ನಡೆಯುವವನು, ವಿಧೇಯ. वचने स्थितः—सप्तम्याः "अलुक्" (६-३-१४) ।

**वचर ವಚರ** (पुं०) 1. ಕುಕ್ಕುಟ, ಕೋಳಿ. 2. ಚೋರ, ಕಳ್ಳ. 3. ಧೂರ್ತ, ವಂಚಕ, ಮೋಸಗಾರ. अव अन्तरे चरति —चर (गतौ) "अच्" (३-१-१३४) । अल्लोपः । "वष्टि भागुरिरल्लोपमवाप्योरुपसर्गयोः"।

**वचलु ವಚಲು** (पुं०) ವೈರಿ, ಶತ್ರು.

**वचस् ವಚಸ್** (नं०) 1. ಮಾತು, ನುಡಿ. उच्यते—वच (परिभाषणे) भावे "असुन्" (उ० ४-१८८)। "वचसस्तस्य सपदि क्रिया केवलमुत्तरम्" माघ० २-२२। 2. ಪಕ್ಷಿಗಳ ಗಾನ, ಹಕ್ಕಿಗಳ ಮಧುರವಾದ ಶಬ್ದ. "कलयता वचसः परिवादिनीस्वरजिता रजिता वशमाययुः" माघ० ६-९ ।

**वचःप्रवृत्ति ವಚಃಪ್ರವೃತ್ತಿ** (स्त्री०) ವಾಗ್ವ್ಯಾಪಾರ, ಮಾತನಾಡುವ ಪ್ರಯತ್ನ. वचसां प्रवृत्तिः । "अव्यक्तवर्णरमणीयवचःप्रवृत्तीन्" शाकु० ७-१७ ।

**वचसांपति ವಚಸಾಂಪತಿ** (पुं०) ಬೃಹಸ್ಪತಿ. वचसां वाचां पतिः । षष्ठ्या अलुक् । बाहु० ।

**वचस्कर ವಚಸ್ಕರ** (वि०) ವಿಧೇಯ, ಹೇಳಿದಂತೆ ಮಾಡುವವನು. वचसः करः ।

**वचा ವಚಾ** (स्त्री०) ಬಜೆ. वच (परिभाषणे) अन्तर्भावितणिच् "अच्" (३-१-१३४)। "वचोग्रगन्धा षड्ग्रन्था" अम० ।

**वचोग्रह ವಚೋಗ್ರಹ** (पुं०) ಕರ್ಣ, ಕಿವಿ. गृह्णाति—ग्रह (उपादाने) "अच्" (३-१-१३४)। वचसां ग्रहः ।

**वज्र ವಜ್ರ** (पुं०) 1. ವಿಷ್ಕಂಭ ಮೊದಲಾದ 27 ಯೋಗಗಳಲ್ಲೊಂದು. (पुंस्त्री०) 2. ಇಂದ್ರನ ವಜ್ರಾಯುಧ, ವೃತ್ರಾಸುರನ ವಧೆಕ್ಕಾಗಿ ಇಂದ್ರನ ಆಜ್ಞೆಯಂತೆ ದಧೀಚಿ ಮಹರ್ಷಿಯ ಅಸ್ಥಿಯಿಂದ ವಿಶ್ವಕರ್ಮನಿಂದ ನಿರ್ಮಿತವಾದ ಒಂದು ಆಯುಧ. वज (गतौ) "रन्" (उ० २-२८)। "आशंसन्ते सुरयुवतयो बद्धवैरा हि दैत्यैरस्याधिज्ये धनुषि विजयं पौरुहूते च वज्रे" शाकु० २-१५ । 3. ವಜ್ರ, ನವರತ್ನಗಳಲ್ಲೊಂದು ರತ್ನ. **ವಜ್ರ (ರತ್ನ) ದ ಗುಣ :** ಸರ್ವ ರೋಗಗಳನ್ನೂ ಗುಣಪಡಿಸುವುದು. ಸಕಲ ಪಾಪಗಳನ್ನೂ ನಿವಾರಣೆಮಾಡುವುದು. ಸಕಲವಿಧ ಸೌಖ್ಯವನ್ನೂ ಉಂಟುಮಾಡುವುದು. ಶರೀರಕ್ಕೆ ಬಲವನ್ನು ಕೊಡುವುದು. "मणौ वज्रसमुत्कीर्णे सूत्रस्येवास्ति मे गतिः" रघु० १-४। (नं०) 4. ಬಾಲಕ, ಮಗು. 5. ಆಮಲಕ. (स्त्री०) **-ज्रा -ಜ್ರಾ.** 6. ಕಳ್ಳಿಗಿಡ. 7. ಅಮೃತಬಳ್ಳಿ. 8. ಎಳ್ಳಿನ ಹೂವು. 9. ಉಕ್ಕು. **-ज्री -ಜ್ರೀ.** 10. ಕಳ್ಳಿಗಿಡದ ಒಂದು ಭೇದ. "वज्रं स्यात् बालके धात्र्यां क्लीबं योगान्तरे पुमान् । वज्रा स्नुह्यां गुडूच्यां च वज्री स्नुह्यन्तरे स्मृता । दम्भोलौ हीरकेऽप्यस्त्री" मेदि० । 11. ಬಂಗಾರ. 12. ವಜ್ರದಂತೆ ಕಠಿನವಾದ ವಸ್ತು. "वज्रादपि कठोराणि मृदूनि कुसुमादपि । लोकोत्तराणां चेतांसि को हि विज्ञातुमर्हति" उ० रा० २-७।

**वज्रक ವಜ್ರಕ** (नं०) ಒಂದು ತೈಲ. ಈ ತೈಲದ ಅಭ್ಯಂಗದಿಂದ ಕುಷ್ಠರೋಗ ನಿವಾರಣೆಯಾಗುವುದು. सुश्रुत० चिकित्सा० अध्या० ९ ।

**वज्रकङ्कट ವಜ್ರಕಂಕಟ** (पुं०) ಆಂಜನೇಯ, ಹನುಮಂತ. वज्रः दृढः कङ्कटो देहावरणमस्य ।

**वज्रकण्टक ವಜ್ರಕಂಟಕ** (पुं०) 1. ಕೊಳವಳಿಕೆ ಗಿಡ. 2. ಕಳ್ಳಿಗಿಡ.

**वज्रकील ವಜ್ರಕೀಲ** (पुं०) ವಜ್ರದಂತೆ ಕಠಿನವಾದ ಕೀಲು. "भारः कायो जीवितं वज्रकीलम्" मालती० ९-३७।

**वज्रजित् ವಜ್ರಜಿತ್** (पुं०) ಗರುಡ. वज्रं जयति—जि (जये) "क्विप्" (३-२-६१) ।

**वज्रज्वाला ವಜ್ರಜ್ವಾಲಾ** (स्त्री०) ವಿದ್ಯುತ್ತು, ಮಿಂಚು. वज्रस्य ज्वाला ।

**वज्रतुण्ड ವಜ್ರತುಂಡ** (पुं०) 1. ಗರುಡ. 2. ಗಣಪತಿ, ವಿನಾಯಕ. वज्रतुल्यं कठिनं तुण्डमस्य । 3. ಗೃಧ್ರ, ಹದ್ದು. 4. ಮಶಕ, ಸೊಳ್ಳೆ.

**वज्रदन्त ವಜ್ರದಂತ** (पुं०) 1. ಮೂಷಿಕ, ಇಲಿ. 2. ವರಾಹ, ಹಂದಿ. वज्रमिव कठिना दन्ता अस्य । **-रदः -ರದಃ, -रदनः -ರದನಃ.**

**वज्रद्रु ವಜ್ರದ್ರು** (पुं०) ಮುಂಡಕಳ್ಳಿ ಗಿಡ.

**वज्रधर ವಜ್ರಧರ** (पुं०) 1. ದೇವೇಂದ್ರ. वज्रस्य धरः। "ततः परं वज्रधरप्रभावस्तदात्मजः संयति वज्रघोषः" रघु० १८-२१। 2. ಉಲೂಕ, ಘೂಕ, ಗೂಬೆ. **-भृत् -ಭೃತ್.**

**वज्रनिर्घोष ವಜ್ರನಿರ್ಘೋಷ** (पुं०) ಸಿಡಿಲಿನ ಶಬ್ದ. वज्रस्य निर्घोषः।

**वज्रपाणि ವಜ್ರಪಾಣಿ** (पुं०) 1. ಇಂದ್ರ. वज्रं वज्रायुधं पाणौ यस्य। "जडीकृतस्त्र्यम्बकवीक्षणेन वज्रं मुमुक्षन्निव वज्रपाणिः" रघु० २-४२। 2. ಉಲೂಕ, ಗೂಬೆ.

**वज्रपात ವಜ್ರಪಾತ** (पुं०) ಸಿಡಿಲು ಬೀಳುವುದು, ಸಿಡಿಲಿನ ಹೊಡೆತ.

**वज्रपुष्प ವಜ್ರಪುಷ್ಪ** (न०) ಎಳ್ಳಿನ ಹೂವು. वज्रमिव पुष्पम्।

**वज्रपुष्पा ವಜ್ರಪುಷ್ಪಾ** (स्त्री०) ಕಾಡುಸಬ್ಬಸಿಗೆ. वज्रमिव पुष्पं यस्याः।

**वज्रलेप ವಜ್ರಲೇಪ** (पुं०) ಒಂದು ವಿಧ ಸಿಮೆಂಟು, ಕಲ್ಲು ಗಾರೆ, ಬೆಲ್ಲ ಉದ್ದಿನ ರಸ ಮುಂತಾದುವುಗಳಿಂದ ಕಲಸಿದ ಗಾರೆ. "प्रत्युप्तेव च वज्रलेपघटितेवोत्कीर्णरूपेव च" मालती० ५-१०।

**वज्रवृक्ष ವಜ್ರವೃಕ್ಷ** (पुं०) ಮುಂಡಕಳ್ಳಿ ಗಿಡ.

**वज्रशल्य ವಜ್ರಶಲ್ಯ** (पुं०) ಮುಳ್ಳುಹಂದಿ. वज्रमिव शल्यं लोमशलाका यस्य।

**वज्रसार ವಜ್ರಸಾರ** (वि०) ವಜ್ರದಂತೆ ಕಠಿನವಾಗಿರುವ, ವಜ್ರದಂತೆ ಬಲಶಾಲಿಯಾದ.

**वज्रा ವಜ್ರಾ** (स्त्री०) "वज्र" ಪದದ (स्त्री०) ನೋಡಿ.

**वज्राङ्ग ವಜ್ರಾಂಗ** (पुं०) 1. ಸರ್ಪ, ಹಾವು. वज्रमिवाङ्गमस्य। (वि०) 2. ವಜ್ರದಂತೆ ದೃಢವಾದ ಅಂಗವುಳ್ಳವನು.

**वज्राङ्गिन् ವಜ್ರಾಂಗಿನ್** (वि०) ವಜ್ರಖಚಿತವಾದ ಅಂಗವುಳ್ಳ. वज्राङ्गमस्यास्ति "इनिः" (५-२-११५)।

**वज्राघात ವಜ್ರಾಘಾತ** (पुं०) 1. ಸಿಡಿಲಿನ ಹೊಡೆತ. वज्रस्याघातः। 2. ಆಕಸ್ಮಿಕ ಘಟನೆಯಿಂದ ಉಂಟಾಗುವ ಗಾಬರಿ, ಅಕಸ್ಮಾತ್ತಾಗಿ ಸಂಭವಿಸುವುದರಿಂದ ಆಗುವ ಕಳವಳ.

**वज्रायुध ವಜ್ರಾಯುಧ** (न०) 1. ಇಂದ್ರನ ಆಯುಧ. (पुं०) 2. ಇಂದ್ರ. वज्रमायुधमस्य।

**वज्रिन् ವಜ್ರಿನ್** (पुं०) 1. ಇಂದ್ರ, ವಜ್ರಾಯುಧವನ್ನು ಹೊಂದಿರುವ ದೇವತೆಗಳ ಒಡೆಯ. वज्रमस्यास्ति — "इनिः" (५-२-११५)। "वज्रिणःशरणगः समापतन्वाहने खगपतौ मुरद्विषः" यादव० १७-५४। 2. ಉಲೂಕ, ಘೂಕ, ಗೂಬೆ.

**वज्री ವಜ್ರೀ** (स्त्री०) ಕಳ್ಳಿಗಿಡದ ಒಂದು ಭೇದ, ಮುಂಡಕಳ್ಳಿ.

**वञ्चक ವಂಚಕ** (पुं०) 1. ಜಂಬುಕ, ನರಿ. वञ्चयते प्रलोभयति — वञ्चु (प्रलोभने) + णिच् "ण्वुल्" (३-१-१३३)। 2. ಮನೆಯಲ್ಲಿ ಸಾಕಿದ ಮುಂಗುಸಿ. (वि०) 3. ಧೂರ್ತ, ಮೋಸಗಾರ. 4. ದುರ್ಜನ, ಅಸಭ್ಯ. "वञ्चकस्तु खले धूर्ते गृहबभ्रौ च जम्बुके" मेदि०।

**वञ्चथ ವಂಚಥ** (वि०) ಮೋಸಗಾರ, ಧೂರ್ತ. वञ्चति प्रलोभयति—वञ्चु (गतौ) "अथः" (उ० ३-११३)।

**वञ्चन ವಂಚನ** (न०) 1. ಮೋಸಮಾಡುವುದು. वञ्चु (गतौ) भावे "ल्युट्" (३-३-११५)। "वञ्चनं चापमानं च मतिमान्न प्रकाशयेत्" चाणक्यः। (स्त्री०) -ना -ನಾ. वञ्चु + णिच् "युच्" (३-३-१०७)। 2. ಮೋಸ, ಪ್ರತಾರಣೆ, ಭ್ರಾಂತಿಯುಂಟುಮಾಡುವುದು, ಮಿಥ್ಯಾಜ್ಞಾನವುಂಟುಮಾಡುವುದು. "स्वर्गाभिसन्धिसुकृतं वञ्चनामिव मेनिरे" कुमा० ६-४७। 3. ಅಡ್ಡಿ, ತಡೆ, ಪ್ರತಿಬಂಧ. "मन्यते स्म पिबतां विलोचनैः पक्ष्मपातमपि वञ्चनां मनः" रघु० ११-३६।

**वञ्चत् ವಂಚತ್** (वि०) ಹೋಗುತ್ತಿರುವ. वञ्चु (गतौ) "शतृ" (३-२-१२४)। स्त्रियां "ङीप्" (४-१-६)। -न्ती -ನ್ತೀ.

**वञ्चनीय ವಂಚನೀಯ** (वि०) 1. ಮೋಸಪಡಿಸಲ್ಪಡುವ. वञ्चु (गतौ) + णिच् "अनीयर्" (३-१-९६)। 2. ಮೋಸಪಡಿಸಬೇಕಾದ. 3. ಮೋಸಪಡಿಸಲು ಶಕ್ಯನಾದ. 4. ಮೋಸಪಡಿಸಲು ಯೋಗ್ಯನಾದ. 5. ಹೋಗಬೇಕಾದ, ತಲುಪಬೇಕಾದ. 6. ಹೋಗಲು ಶಕ್ಯವಾದ. 7. ಹೋಗಲು ಅರ್ಹವಾದ. वञ्चु (गतौ) "अनीयर्" (३-१-९६)। "तव्यः" (३-१-९६)। **वञ्चितव्यः ವಂಚಿತವ್ಯ.**

**वञ्चित ವಂಚಿತ** (वि०) 1. ಮೋಸಪಡಿಸಲ್ಪಟ್ಟ. वञ्चु (गतौ) + णिच् "क्तः" (३-२-१०२)। "अवैमि सौभाग्यमदेन वञ्चितं तव प्रियं यश्चतुरावलोकिनः" कुमा० ५-४९। 2. ತಡೆಯಲ್ಪಟ್ಟ, ಅಡ್ಡಿಪಡಿಸಲ್ಪಟ್ಟ.

**वञ्चुक ವಂಚುಕ** (वि०) ಮೋಸಪಡಿಸುವ ಸ್ವಭಾವದವನು. वञ्चु (गतौ) "उकञ्" बाहु०।

**वञ्च्य ವಂಚ್ಯ** (वि०) ಮೋಸಪಡಿಸಲ್ಪಡುವ. वञ्चु (गतौ) + णिच् "ण्यत्" (३-१-१२४)।

**वञ्जुल ವಂಜುಲ** (ಪುಂ) 1. ತಿನಿಶವೃಕ್ಷ, ನೆಮ್ಮಿಗಿಡ. वज (गतौ) "उलच्" बाहु॰ नुम् च। 2. ಹಚ್ಚೆಗಿಡ. 3. ಅಶೋಕವೃಕ್ಷ. "वञ्जुलः पुंसि तिनिशे वेतसाशोकयोरपि" मेदि॰। 4. ಬೆತ್ತ, ಟೊಳ್ಳುನಾಳದ ಗಿಡ. "आमञ्जुवञ्जुललतानि च तान्यमूनि" उ॰ रा॰ २-२३।

**वञ्जुलद्रुम ವಂಜುಲದ್ರುಮ, –वृक्ष –ವೃಕ್ಷ** (ಪುಂ) 1. ಅಶೋಕ ವೃಕ್ಷ. 2. ತಿನಿಶವೃಕ್ಷ. 3. ಹಚ್ಚೆಗಿಡ.

**वञ्जुला ವಂಜುಲಾ** (ಸ್ತ್ರೀಂ) 1. ಹೆಚ್ಚು ಹಾಲುಕರೆಯುವ ಹಸು. 2. ಒಂದು ನದಿ.

**वट ವಟ** (ಪುಂ) 1. ನ್ಯಗ್ರೋಧ ವೃಕ್ಷ, ಆಲದಮರ. वटति —वट (वेष्टने) "अच्" (३-१-१३४)। "त्वया पुरस्तादुपयाचितो यः सोऽयं वटः श्याम इति प्रतीतः" रघु॰ १३-५३। 2. ಸಾಮ್ಯ, ಸಾದೃಶ್ಯ. 3. ಹಗ್ಗ, ದಾರ. 4. ಒಂದು ಗುಂಡಾದ ಆಕೃತಿ. 5. ಕವಡೆ. 6. ಒಂದು ವಿಧ ಭಕ್ಷ್ಯ. "वटो गोले गुणे भक्ष्ये वृक्षे साम्यवराटयोः" हेम॰। **–पत्रम् –ಪತ್ರಮ್.** ಆಲದ ಎಲೆ.

**वटक ವಟಕ** (ಪುಂ) 1. ಒಂದು ಭಕ್ಷ್ಯ, ವಡೆ. 2. ಮಾತ್ರೆ, ಗುಳಿಗೆ.

**वटर ವಟರ** (ಪುಂ) 1. ಕುಕ್ಕುಟ, ಕೋಳಿ. 2. ಚೋರ, ಕಳ್ಳ. 3. ಚಾಪೆ. 4. ವಸ್ತ್ರ, ಬಟ್ಟೆ. (ವಿಂ) 5. ಶಠ, ಮೂರ್ಖ. "वटरः कुक्कुटे वस्त्रे शठे च" मेदि॰।

**वटवासिन् ವಟವಾಸಿನ್** (ಪುಂ) ಯಕ್ಷ. वटे वटवृक्षे वसति — वस (निवासे) "णिनिः" (३-२-७८)।

**वटाकर ವಟಾಕರ** (ಪುಂ) ನೂಲು, ದಾರ.

**वटारक ವಟಾರಕ** (ಪುಂ) ನೂಲು, ದಾರ, ಹಗ್ಗ.

**वटि ವಟಿ** (ಸ್ತ್ರೀಂ) ಗೆದ್ದಲು.

**वटिका ವಟಿಕಾ** (ಸ್ತ್ರೀಂ) ಮಾತ್ರೆ, ಗುಳಿಗೆ.

**वटी ವಟೀ** (ಸ್ತ್ರೀಂ) 1. ಮಾತ್ರೆ, ಗುಳಿಗೆ. वट (वेष्टने) "अच्" (३-१-१३४)। गौरा॰ "ङीष्" (४-१-४१)। (ತ್ರಿಂ) 2. ರಜ್ಜು, ಹಗ್ಗ.

**वटु ವಟು** (ಪುಂ) 1. ಬ್ರಹ್ಮಚಾರಿ. वट (परिभाषणे) "उः" (उ॰ १-८)। "निवार्यतामालि किमप्ययं वटुः पुनर्विवक्षुः स्फुरितोत्तराधरः" कुमा॰ ५-८३। 2. ಬಾಲಕ, ಹುಡುಗ.

**वटुक ವಟುಕ** (ಪುಂ) 1. ಬಾಲಕ, ಹುಡುಗ. वटु स्वार्थे "कन्"। 2. ಬ್ರಹ್ಮಚಾರಿ.

**वठर ವಠರ** (ಪುಂ) 1. ಮೂರ್ಖ, ದಡ್ಡ, ಅಜ್ಞ, ಅವಿವೇಕಿ. वच (परिभाषणे) "अरः" ठश्चादेशः (उ॰ ५-३९)। 2. ನೀಚ, ಅಸಭ್ಯ. 3. ವೈದ್ಯ.

**वडवा ವಡವಾ** (ಸ್ತ್ರೀಂ) 1. ಹೆಣ್ಣುಕುದುರೆ. 2. ಬ್ರಾಹ್ಮಣ ಹೆಂಗಸು. 3. ಕುಂಭದಾಸಿ, ಸೇವಕಿ, ದಾಸಿ. 4. ವೇಶ್ಯೆ, ಸೂಳೆ. "वडवा द्विजयोषिति। अश्वायां कुम्भदास्यां च नारीजात्यन्तरेऽपि च" मेदि॰। 5. ಒಂದು ಜಾತಿಯ ಹೆಂಗಸು. ["वडवा" ಪದದಲ್ಲಿ ನೋಡಿ.]

**वडवाग्नि ವಡವಾಗ್ನಿ** (ಪುಂ) ಸಮುದ್ರದಲ್ಲಿ ಕುದುರೆಯ ಮುಖದಿಂದ ಹೊರಟ ಅಗ್ನಿ. **–अनलः –ಅನಲಃ, –मुखः –ಮುಖಃ.**

**वड्र ವಡ್ರ** (ವಿಂ) ದೊಡ್ಡದಾದ, ಬೃಹತ್ತಾದ, ವಿಸ್ತಾರವಾದ. वल (संवरणे) "रक्" बाहु॰। लडयोरभेदः।

**वणिज् ವಣಿಜ್** (ಪುಂ) 1. ವರ್ತಕ, ವ್ಯಾಪಾರಿ. पण (व्यवहारे स्तुतौ च) "इजिः" पस्य वकारादेशश्च (उ॰ २-७०)। "यस्यागमः केवलजीविकायै तं ज्ञानपण्यं वणिजं वदन्ति" माल॰ १-१७। 2. ತುಲಾರಾಶಿ. (ಸ್ತ್ರೀಂ) 3. ವಾಣಿಜ್ಯ, ವ್ಯಾಪಾರ. 4. ಒಂದು ಕರಣ. "वणिग्वाणिज्यजीविनि। वाणिज्ये करणे भेदे" हेम॰।

**वणिज ವಣಿಜ** (ಪುಂ) 1. ವರ್ತಕ, ವ್ಯಾಪಾರಿ. 2. ತುಲಾರಾಶಿ.

**वणिज्या ವಣಿಜ್ಯಾ** (ಸ್ತ್ರೀಂ) ವ್ಯಾಪಾರ, ವರ್ತಕನು ಮಾಡುವ ಕ್ರಯ ಮತ್ತು ವಿಕ್ರಯ ಕಾರ್ಯ. वणिजि साधुः "यत्" (४-४-९८)। वणिज्यमपि।

**वण्ट ವಂಟ** (ಪುಂ) 1. ಮದುವೆಯಾಗದವನು, ಬ್ರಹ್ಮಚಾರಿ. 2. ಒಂದು ಭಾಗ, ಒಂದು ಅಂಶ. 3. ಕುಡುಗೋಲಿನ ಹಿಡಿ, ಕುಯಿಲು ಕತ್ತಿಯ ಮುಷ್ಟಿ.

**वण्टक ವಂಟಕ** (ಪುಂ) 1. ಭಾಗ, ಅಂಶ. वण्ट स्वार्थे "कन्"। "अंशभागौ तु वण्टकः" अम॰। (ವಿಂ) 2. ಭಾಗಮಾಡುವವನು. वटि (विभाजने) "ण्वुल्" (३-१-१३३)।

**वण्टाल ವಂಟಾಲ** (ಪುಂ) 1. ಒಂದು ವಿಧ ಯುದ್ಧ. 2. ನೌಕೆ, ಹಡಗು. 3. ಗುದ್ದಲಿಯೆಂಬ ಆಯುಧ, ಅಗೆಯುವ ಒಂದು ಸಾಧನ. "वण्टालो युद्धभेदे च नौकायां च खनित्रके" मेदि॰।

**वण्ठ ವಂಠ** (ಪುಂ) 1. ಕುಂತಾಯುಧ, ಕೊಂತ. 2. ವಾಮನ, ಕುಬ್ಜ, ಕುಳ್ಳ. 3. ಸೇವಕ, ಆಳು. 4. ಮದುವೆಯಾಗದವನು, ಬ್ರಹ್ಮಚಾರಿ. "वण्ठःस्यादकृतोद्वाहे खर्वे

कुन्तायुधेऽपि च" मेदि०। "वण्ठः कुन्तायुधे खर्वे भृत्याकृतविवाहयोः" हेम०।

**वण्ठर ವಂಠರ** (पुं०) 1. ಮೂರ್ಖ, ದಡ್ಡ. 2. ಶಠ, ಅಯೋಗ್ಯ. "वण्ठरो मूर्खशठयोः" हेम०। 3. ನಾಯಿಯ ಬಾಲ. 4. ತಾಳೆಗಿಡದ ಚಿಗುರು. 5. ಮೇಘ, ಮೋಡ. 6. ನಾಯಿ. 7. ಬಿದಿರಿನ ಚಿಗುರಿನ ಮೇಲಿನ ಪೊರೆ, –ಹೊದಿಕೆ.

**वतंस ವತಂಸ** (पुं०) 1. ಕರ್ಣಾಭರಣ, ಕಿವಿಯಲ್ಲಿ ಧರಿಸುವ ಒಡವೆ. अवतंस्यतेऽनेन — अव + तसि (अलङ्कारे) "घञ्" (३-३-१२१)। अल्लोपः। 2. ಶಿರೋಭೂಷಣ, ತಲೆಯಲ್ಲಿ ಧರಿಸಿರುವ ಒಡವೆ. "वतंसस्तु पुमान् कर्णपूर-शेखरयोरपि" मेदि०।

**वतू ವತೂ** (पुं०) 1. ರಸ್ತೆ, ಮಾರ್ಗ, ದಾರಿ. 2. ಕಣ್ಣಿನ ರೋಗ, ಒಂದು ವಿಧ ನೇತ್ರರೋಗ. (स्त्री०) 3. ದೇವ ನದಿ, ಆಕಾಶಗಂಗೆ.

**वतोका ವತೋಕಾ** (स्त्री०) ಪುತ್ರಸಂತಾನವಿಲ್ಲದ ಹೆಂಗಸು. अवगतं तोकं यस्याः। अल्लोपः इति भागुरिः।

**वत्स ವತ್ಸ** (पुं०) 1. ಹಸುವಿನ ಕರು. 2. ಪಶುಪ್ರಾಣಿಗಳ ಶಿಶು, –ಮರಿ. वदति—वद (व्यक्तायां वाचि) "सः" (उ० ३-६२)। "यं सर्वशैलाः परिकल्प्य वत्सं मेरौ स्थिते दोग्धरि दोहदक्षे" कुमा० १-२। 3. ಪುತ್ರ, ಮಗ, ಮಗು. ಈ ಅರ್ಥದಲ್ಲಿ ಬಹಳ ಪ್ರೀತಿ ಮತ್ತು ಅಭಿಮಾನಗಳಿಂದ ಮಾಡುವ ಪ್ರಯೋಗ. "उत्तिष्ठ वत्सेत्यमृतायमानं वचो निशम्योत्थितमुत्थितः सन्" रघु० २-६१। "वत्सायाश्च रघूद्वहस्य च शिशावस्मिन्नभिव्यज्यते" उ० रा० ४-२२। 4. ಸಂವತ್ಸರ, ವರ್ಷ. 5. ವತ್ಸದೇಶ, ಉದಯನನೆಂಬ ಹೆಸರುಳ್ಳ ವತ್ಸರಾಜನು ಆಳುತ್ತಿದ್ದ ದೇಶ. (पुं० ब० व०) 6. ಆ ದೇಶದ ಜನರು. (न०) 7. ಉರಃಸ್ಥಲ, ವಕ್ಷಸ್ಸು, ಎದೆ. "वत्सः पुत्रादिवर्षयोः। तर्णके नोरसि" मेदि०। वत्सा ವತ್ಸಾ. 8. ಹೆಣ್ಣು ಕರು. 9. ಪುತ್ರಿ, ಮಗಳು.

**वत्सक ವತ್ಸಕ** (पुं०) 1. ಸಣ್ಣ ಕರು, ಚಿಕ್ಕಕರು. वत्स ह्रस्वे "कन्" (५-३-८६)। 2. ಮಗು, ಶಿಶು. 3. ಬೆಟ್ಟಮಲ್ಲಿಗೆ. "कुटजः शक्रो वत्सको गिरिमल्लिका" अम०। (न०) 4. ಗಂಧಕಾಮ್ಲ ಲವಣ. वत्स संज्ञायां "कन्"।

**वत्सकामा ವತ್ಸಕಾಮಾ** (स्त्री०) 1. ಪುತ್ರಸಂತಾನವನ್ನು ಅಪೇಕ್ಷಿಸುವ ಹೆಂಗಸು. 2. ಕರುವಿಗಾಗಿ ಆಸೆಪಡುತ್ತಿರುವ ಆಕಳು. वत्सं कामयते—कमु (कान्तौ) + णिच् "अण्" (३-२-१)।

**वत्सतर ವತ್ಸತರ** (पुं०) ಪಳಗಿಸಲು ಅರ್ಹವಾದ ವಯಸ್ಸಿನ ಹೋರಿ. वत्स "ष्टरच्" (५-३-९१)। "महोक्षतां वत्सतरः स्पृशन्निव द्विपेन्द्रभावं कलभः श्रयन्निव" रघु० ३-३२। –तरी –ತರೀ, ಕಡಸು, ಕರುಹಾಕದಿರುವ ಎಳೆಯ ಹಸು. "श्रोत्रियायाभ्यागताय वत्सतरीं महोक्षं वा पचन्ति गृहमेधिनः" उ० रा० ४।

**वत्सनाभ ವತ್ಸನಾಭ** (पुं०) ಉಗ್ರವಾದ ಒಂದು ವಿಷ. वत्सान् नभ्नाति — णभ (हिंसायाम्) "अण्" (३-२-१)।

**वत्सपाल ವತ್ಸಪಾಲ** (पुं०) 1. ಶ್ರೀಕೃಷ್ಣ. वत्सान् पालयति—पाल (रक्षणे) + णिच् "अण्" (३-२-१)। 2. ಬಲರಾಮ. (वि०) 3. ಮಕ್ಕಳನ್ನು ರಕ್ಷಿಸುವವನು. "स तत्र वयसा तुल्यैः वत्सपालैः सहानघः"।

**वत्सर ವತ್ಸರ** (पुं०) 1. ಸಂವತ್ಸರ, ವರ್ಷ. वसन्ति ऋतुमासादयोऽत्र — वस (निवासे) "सरः" (उ० ३-७१)। सस्य तकारः (७-४-४९)। "दाताऽस्याः स्वर्गमाप्नोति वत्सरान् रोमसंमितान्" याज्ञ० १-२०५। 2. ವಿಷ್ಣು. "पुरुषार्थस्थापनाय सर्वान्तिर्वसनाच्च यः। धर्मात्मा वत्सरः स स्यात् मुन्यर्णो भीष्मदो मनुः" इति निरुक्तिः। "वत्सरो वत्सलो वत्सी" वि० स०।

**वत्सरान्तक ವತ್ಸರಾಂತಕ** (पुं०) ಫಾಲ್ಗುನ ಮಾಸ.

**वत्सल ವತ್ಸಲ** (पुं०) 1. ವಿಷ್ಣು. वत्सान् स्वोत्सुकान् कामयते—वत्स "लच्" (५-२-९८)। "सर्वस्यान्तर्निवसने हेतुः स्याद्वत्सलः स्मृतः" इति निरुक्तिः। "वत्सरो वत्सलो वत्सी" वि० स०। (वि०) 2. ಮಕ್ಕಳಲ್ಲಿ ಪ್ರೀತಿಯಿರುವ, ಮಕ್ಕಳನ್ನು ಪ್ರೀತಿಸುವ. वत्से पुत्रेऽभिलाषोऽस्त्यस्य "लच्" (५-२-९८)।

**वत्सादन ವತ್ಸಾದನ** (पुं०) 1. ವೃಕ, ತೋಳ. वत्सानामदनो भक्षकः। (स्त्री०) –अदनी –ಅದನೀ. 2. ಅಮೃತಬಳ್ಳಿ. वत्सैरद्यते—अद (भक्षणे) "ल्युट्" (३-३-११३)।

**वद – व्यक्तायां वाचि** (भ्वा० पर० अक० से०)। वदति। उवाद। वदिता। वदिष्यति। वदतु। अवदत्। वदेत्। उद्यात्। अवादीत्। अवदिष्यत्।

ಹೇಳು, ಮಾತನಾಡು. "वद विधुन्तुदमालि मदीरितैः त्यजसि किं द्विजराजधिया रिपुम्" नैष० ४-७० ।

**कर्मणि** :—उद्यते । ऊदे । वदिता । वदिष्यते । उद्यताम् । औद्यत । उद्येत । ಇತ್ಯಾದಿ.

**णिचि** :—वादयते । वादयां चक्रे, –बभूव, –आस । वादयिता । वादयिष्यते । वादयताम् । ಇತ್ಯಾದಿ.

**ण्यन्तात् कर्मणि** :—वाद्यते । वादयां चक्रे, –बभूवे, –आसे । वादयिता, वादिता । वाद्यताम् । अवाद्यत । ಇತ್ಯಾದಿ.

**कृत्सु** :—वदितव्यम् । वदनीयम् । अनुवाद्यम् । ब्रह्मोद्यम्, ब्रह्मवद्यम् । उदितः । उदितवान् । वदन्, –न्ती । विवदमानः । वदितुम् । उदितम् । वदनम् । उदित्वा । अनूद्य ।

**ಈ ಧಾತುವಿಗೆ ಉಪಸರ್ಗಗಳ ಯೋಗದಿಂದ ಉಂಟಾಗುವ ಅರ್ಥಭೇದಗಳು :**

(1) **अति + वद** = अतिवदति । अतिवादः । 1. ಹೆಚ್ಚು ಮಾತಾಡು, ಮಿತಿಮೀರಿ ಮಾತಾಡು. 2. ಕಠಿನವಾಗಿ ಮಾತಾಡು, ಎಲ್ಲೆಮೀರಿ ಮಾತಾಡು. "अतिवादान् तितिक्षेत नावमन्येत कञ्चन" मनु० ६-४७ ।

(2) **अनु + वद** = अनुवदति । अनुवादः । 1. ಹೇಳಿದುದನ್ನು ಮತ್ತೆ ಹೇಳುವುದು, ಒಬ್ಬನು ಹೇಳಿದುದನ್ನು ಪುನರುಚ್ಚರಿಸುವುದು. "अनुवदति शुकस्ते मञ्जुवाक्पञ्जरस्थः" रघु० ५-७४ । 2. ಪ್ರತಿಯಾಗಿ ಹೇಳು, ಪ್ರತಿಧ್ವನಿಸು. "सभाभित्तिप्रतिध्वानैः भयादन्ववदन्निव" माघ० २-६७ । 3. ಪುನಃ ಹೇಳು, ಮತ್ತೆ ಉಚ್ಚರಿಸು. "निजमनोरथमनुवदति" । 4. ವಿವರಿಸಿಹೇಳು. 5. ಭಾಷಾಂತರಮಾಡು, ಪರಿವರ್ತಿಸು. ಇತ್ಯಾದಿ.

(3) **अप + वद** = अपवदति । अपवादः । 1. ನಿಂದಿಸು, ತೆಗಳು, ಆಕ್ಷೇಪಿಸು. "नार्तोऽप्यपवदेद्विप्रान् न दत्वा परिकीर्तयेत्" मनु० ४-२३६ । 2. ನಿರಾಕರಿಸು, ತ್ಯಜಿಸು. "न्यायमपवदते" सि० कौ० । 3. ವಿರೋಧಿಸಿ ಹೇಳು, ತಪ್ಪೆಂದು ಹೇಳು, ತಪ್ಪೆಂದು ನಿರೂಪಿಸು. "स्नातानपवदेयुस्तानितिहासैः पुरातनैः" याज्ञ० ३-७ ।

(4) **प्र + वद** = प्रवादः । प्रवदति । 1. ಜೀದಿ ಮಾತು, ಸುದ್ದಿ, ಸಮಾಚಾರ. "अनुरागप्रवादस्तु वत्सयोः सार्वलौकिकः" मालती० १-१६ । 2. ನಿಂದೆ, ದೂಷಣೆ. "अनुपभोगनिरर्थकत्वदोषप्रावादममृजन्नगनिम्नगानाम्" माघ० ५-२८ । 3. ಪರಸ್ಪರ ಪ್ರತಿಭಟಿಸಿ ಮಾತಾಡುವುದು. "इत्थं प्रवादं युधि संप्रहारं प्रचक्रतू रामनिशाविहारौ" भट्टि० २-३६ ।

(5) **प्रति + वद** = प्रतिवदति । प्रतिवादः । प्रत्यवदत् । 1. ಪ್ರತಿಯಾಗಿ ಹೇಳು, ಉತ್ತರ ಹೇಳು. "नरेन्द्रसूनुः प्रतिसंहरन्निषुं प्रियंवदः प्रत्यवदत्सुरेश्वरम्" रघु० ३-६४ । 2. ಪ್ರತಿಯಾಗಿ ಹೇಳು, ವಿರುದ್ಧವಾಗಿ ಹೇಳು. 3. ತಿರಸ್ಕರಿಸಿ ಹೇಳು. ಇತ್ಯಾದಿ.

**वद ವದ** (वि०) ಮಾತಾಡುವವನು. वदति—वद (व्यक्तायां वाचि) "अच्" (३-१-१३४) ।

**वदत् ವದತ್** (वि०) ಮಾತಾಡುತ್ತಿರುವ, ಹೇಳುತ್ತಿರುವ. वद (व्यक्तायां वाचि) "शतृ" (३-२-१२४) । "इति वदति सखीजनेऽनुरागाद्दयिततमामपरश्चिरं प्रतीक्ष्य" माघ० ७-१३ । स्त्रियां "ङीप्" (४-१-६) । **वदन्ती ವದನ್ತೀ.**

**वदन ವದನ** (न०) 1. ಮುಖ, ಮೋರೆ. वदन्त्यनेन—वद (व्यक्तायां वाचि) करं० "ल्युट्" (३-३-११७) । "आसीद्विवृत्तवदना च विमोचयन्ती शाखासु वल्कलमसक्तमपि द्रुमाणाम्" शाकु० २-१२ । 2. ಬಾಯಿ. "रेवतीवदनोच्छिष्टपरिपूतपुटे दृशौ" माघ० २-१६ । 3. ಹೇಳುವುದು, ಮಾತಾಡುವುದು. वद भावे "ल्युट्" (३-३-११५) । 4. ಅಗ್ರಭಾಗ, ತುದಿ.

**वदनासव ವದನಾಸವ** (पुं०) ಅಧರಾಮೃತ.

**वदनीय ವದನೀಯ** (वि०) 1. ಹೇಳಲ್ಪಡುವ. 2. ಹೇಳಬೇಕಾದ. 3. ಹೇಳಬಹುದಾದ. वद (व्यक्तायां वाचि) "अनीयर्" (३-१-९६) । "तव्यः" (३-१-९६) । **वदितव्यम् ವದಿತವ್ಯಮ್.**

**वदान्य ವದಾನ್ಯ** (वि०) 1. ದಾನಶೀಲ, ಹೆಚ್ಚಾಗಿ ದಾನಮಾಡುವವನು. वद (व्यक्तायां वाचि) "आन्यः" (उ० ३-१०४) । "गतो वदान्यान्तरमित्ययं मे माभूत् परीवादनवावतारः" रघु० ५-२४ । 2. ವಾಗ್ಮಿ, ಚೆನ್ನಾಗಿ ಮಾತಾಡುವವನು. 3. ಉದಾರವಾಗಿ ನೀಡುವವನು, ಧಾರಾಳವಾದ ಮನಸ್ಸುಳ್ಳವನು. "वदान्यो दानशौण्डे च चारुवादिनि वाच्यवत्" मेदि० ।

**वदावद ವದಾವದ** (वि०) ಮಾತಾಡುವವನು. वदति—वद (व्यक्तायां वाचि) "अच्" (३-१-१३४) । वा द्वित्वम् आगागमश्च (वा० ३-१-१३४) । पक्षे वदः । "वदो वदावदो वक्ता" अम० ।

**वध ವಧ** (पुं०) ಸಂಹಾರ, ಕೊಲ್ಲುವುದು. हन (हिंसागत्योः) "अप्" (३-३-७६)। वधादेशश्च। "वधेन संख्ये पिशिताशनानां क्षत्रान्तकस्याभिभवेन चैव" भट्टि० ३-१।

**वधक ವಧಕ** (वि०) 1. ಸಂಹರಿಸುವವನು, ಕೊಲ್ಲುವವನು. हन्ति—हन (हिंसागत्योः) "क्वुन्" (उ० २-३७) वधादेशश्च। 2. ಹಿಂಸಿಸುವವನು, ಪೀಡಿಸುವವನು. 3. ಮೃತ್ಯು.

**वधकर्मन् ವಧಕರ್ಮನ್** (न०) ಪ್ರಾಣತೆಗೆಯುವ ಕಾರ್ಯ.

**वधकर्माधिकारिन् ವಧಕರ್ಮಾಧಿಕಾರಿನ್** (पुं०) ಪ್ರಾಣತೆಗೆಯುವ ಕಾರ್ಯವನ್ನು ಮಾಡಿಸುವ ಅಧಿಕಾರಿ.

**वधत्र ವಧತ್ರ** (न०) ಆಯುಧ. वध्यतेऽनेन—वध (हिंसायाम्) "अत्रन्" (उ० ३-१०५)।

**वधदण्ड ವಧದಂಡ** (पुं०) ಮರಣದಂಡನೆ, ಪ್ರಾಣತೆಗೆಯುವ ಶಿಕ್ಷೆ.

**वधाङ्गक ವಧಾಂಗಕ** (न०) ಕಾರಾಗಾರ, ಬಂದೀಖಾನೆ.

**वधार्ह ವಧಾರ್ಹ** (वि०) ವಧಿಸಲು ಅರ್ಹನಾದವನು. वधमर्हति—अर्ह (पूजायाम्) "अण्"। "वधार्हमपि काकुत्स्थ कृपया पर्यपालयः" रामा०।

**वधिन् ವಧಿನ್** (पुं०) ಕೊಲ್ಲುವವನು.

**वधू ವಧೂ** (स्त्री०) 1. ಮಹಿಳೆ, ಹೆಂಗಸು. वहति उह्यते वा—वह (प्रापणे) "ऊः" धश्च (उ० १-८३)। "राजावरोधनवधूरवतारयन्तः" माघ० ५-१८। 2. ಸೊಸೆ, ಮಗನ ಪತ್ನಿ. "वधूचतुष्केऽपि तथैव नान्या प्रिया तनूजास्य यथैव सीता" उ० रा० ४-१६। 3. ಮದುವೆಯ ಹೆಣ್ಣು, ಮದವಣಗಿತ್ತಿ. "वधूं द्विजः प्राह तवैष वत्से वह्निर्विवाहं प्रति कर्मसाक्षी" कुमा० ७-८३। 4. ಪತ್ನಿ, ಹೆಂಡತಿ. "वधूर्भक्तिमती चैनामर्चितामा तपोवनात्। प्रयता प्रातरन्वेतु सायं प्रत्युद्व्रजेदपि" रघु० १-९०। 5. ಕನ್ಯೆ, ವಿವಾಹವಾಗದಿರುವ ಮಹಿಳೆ. "विर्विविधत्ते विधुना वधूनां किमाननं काञ्चनसञ्चकेन" नैष० २२-४६। 6. ಕಿರಿಯ ಬಂಧುಗಳ ಪತ್ನಿ. 7. ಹೆಣ್ಣುಮೃಗ. 8. ಸ್ಪೃಕ್ಕಾ ಎಂಬ ಗಂಧದ್ರವ್ಯ. 9. ಸೊಗದೆ ಗಿಡ. 10. ಕಚೋರ. "वधूः स्त्री शारिवौषधौ। स्नुषाशटीनवोढासु भार्यापृक्काङ्गनासु च" मेदि०।

**वधूजन ವಧೂಜನ** (पुं०) 1. ಪತ್ನಿ. 2. ಹೆಂಗಸು.

**वधूटशयन ವಧೂಟಶಯನ** (न०) ಗವಾಕ್ಷ, ಕಿಟಕಿ.

**वधूटी ವಧೂಟೀ** (स्त्री०) 1. ತರುಣಿ, ಪ್ರಾಯದ ಹೆಂಗಸು. वधूट "ङीप्" (वा० ४-१-२०)। वधूटचिरण्टशब्दौ यौवनवाचिनौ" सि० कौ०। 2. ಸೊಸೆ, ಮಗನ ಪತ್ನಿ.

**वधोद्यत ವಧೋದ್ಯತ** (वि०) ವಧಿಸುವ ಪ್ರಯತ್ನವುಳ್ಳವನು, ಕೊಲೆಗಾರ.

**वध्य ವಧ್ಯ** (वि०) 1. ಕೊಲ್ಲಲ್ಪಡುವ, ವಧಿಸಲ್ಪಡುವ. हन (हिंसागत्योः) "ण्यत्" (३-१-१२४)। 2. ಕೊಲ್ಲಲು ಅರ್ಹನಾದವನು. वधमर्हति—वध "यत्" (५-१-६६)। 3. ಅಳಿವನ್ನು ಅಪೇಕ್ಷಿಸುವವನು, ಸಾಯಲು ಇಚ್ಛಿಸುವವನು. "अद्यापि बध्यमानां वध्यः को नेच्छति शिखां मे" मुद्रा० १-९। 4. ಮರಣದಂಡನೆ ವಿಧಿಸಲ್ಪಟ್ಟವನು, ಮರಣದಂಡನೆಗೆ ಗುರಿಯಾದವನು. "अर्थपये एतारमनो जीवितं परिरक्षन्तोऽप्रमत्ता एते अवाप्तवध्यस्थानं वध्यं व्यापादयन्ति" मुद्रा० ६।

**वध्यपटह ವಧ್ಯಪಟಹ** (पुं०) ಮರಣದಂಡನೆಯ ಸಮಯದಲ್ಲಿ ಹೊಡೆಯುವ ತಮಟೆ.

**वध्यपाल ವಧ್ಯಪಾಲ** (पुं०) ಕಾರಾಗೃಹದ ಅಧಿಕಾರಿ.

**वध्यभूमि ವಧ್ಯಭೂಮಿ** (स्त्री०) ಮರಣದಂಡನೆಯನ್ನು ಕಾರ್ಯಗೊಳಿಸುವ ಸ್ಥಳ.

**वन ವನ** (न०) 1. ಅರಣ್ಯ, ಕಾಡು. वनति—वन (संभक्तौ) "अच्" (३-१-१३४)। "यदेतदस्यानुतटं विभाति वनं ततानेकतमालतालम्" माघ० ४-३९। 2. ಜಲ, ನೀರು. वन्यते सेव्यते—वन "घः" (३-३-११८)। 3. ಚಿಲುಮೆ, ನೀರು ಜಿನುಗುವ ಸ್ಥಳ, ಊಟೆ. 4. ಗೃಹ, ಮನೆ, ವಾಸಸ್ಥಾನ. 5. ಪ್ರವಾಸ. 6. ಕಿರಣ, ರಶ್ಮಿ. वन्यते हिंस्यतेऽनेन तमः—वन (हिंसायाम्) "घः" (३-३-११८)। "वनं कानननीरयोः। प्रवासे निलये चापि वनं प्रस्रवणेऽपि च" विश्व०।

**वनकदली ವನಕದಲೀ** (स्त्री०) ಕಾಡುಬಾಳೆ.

**वनकुक्कुट ವನಕುಕ್ಕುಟ** (पुं०) ಕಾಡುಕೋಳಿ.

**वनगोचर ವನಗೋಚರ** (पुं०) 1. ವ್ಯಾಘ್ರ, ಹುಲಿ. वनं गोचरो यस्य। (वि०) 2. ಅರಣ್ಯದಲ್ಲಿ ಸಂಚರಿಸುವವನು. "इमानप्यनुयुञ्जीत पुरुषान् वनगोचरान्" मनु० ८-२५९। 3. ಜಲಚರ ಪ್ರಾಣಿ. "जहास चाहो वनगोचरो मृगः" भाग० ३-१८-२।

**वनज** ವನಜ (पुं०) 1. ಮುಸ್ತಕ, ಕೊನ್ನಾರಿ ಗೆಡ್ಡೆ. वने जले जायते—जनी (प्रादुर्भावे) "ड:" (३-२-९७)। 2. ಗಜ, ಆನೆ. (न०) 3. ಪದ್ಮ, ತಾವರೆ. "निद्रां विहाय वनजाक्ष वनायुदेश्या:" रघु० ५-७३। (वि०) 4. ನೀರಿನಲ್ಲಿ ಹುಟ್ಟಿದ. 5. ಅರಣ್ಯದಲ್ಲಿ ಹುಟ್ಟಿದ. (स्त्री०) **–जा–ಜಾ.** 6. ಕಾಡುಹೆಸರು ಗಿಡ. 7. ಕಾಡು ಹತ್ತಿ. 8. ಸಬ್ಬಸಿಗೆ. "वनजो मुस्तके स्तम्बेरमे वनजमम्बुजे। वनजा तु मुद्गपर्ण्याम्" हेम०।

**वनतिक्तका** ವನತಿಕ್ತಕಾ (स्त्री०) ಅಗುರು ಶುಂಠಿ.

**वनद** ವನದ (पुं०) ಮೇಘ, ಮೋಡ. वनं जलं ददाति—डु दाञ् (दाने) "क:" (३-२-३)।

**वनपिप्पली** ವನಪಿಪ್ಪಲೀ (स्त्री०) ಕಾಡುಹಿಪ್ಪಲಿ.

**वनप्रिय** ವನಪ್ರಿಯ (पुं०) 1. ಕೋಗಿಲೆ. वनं प्रियमस्य। "अयि वनप्रिय विस्मृत एव किं वलिभुजो विषसो भवताधुना" उद्भट:। (न०) 2. ಲವಂಗಪಟ್ಟೆ, ದಾಲ್ಚಿನ್ನಿ. (वि०) 3. ಅರಣ್ಯವೇ ಪ್ರಿಯವಾಗಿರುವ.

**वनमक्षिका** ವನಮಕ್ಷಿಕಾ (स्त्री०) ಕಾಡುನೊಣ.

**वनमल्ली** ವನಮಲ್ಲೀ (स्त्री०) ಕಾಡುಮಲ್ಲಿಗೆ.

**वनमाला** ವನಮಾಲಾ (स्त्री०) ಶ್ರೀಕೃಷ್ಣನು ಧರಿಸುವ ಮಾಲೆ. वनजातपुष्पनिर्मिता माला। "आजानुलम्बिनी माला सर्वर्तुकुसुमोज्ज्वला। मध्ये स्थूलकदम्बाढ्या वनमालेति कीर्तिता"।

**वनमालिन्** ವನಮಾಲಿನ್ (पुं०) ವಿಷ್ಣು. वनमालास्यास्ति "इनि:" (५-२-११६)। "वनमाली बलिध्वंसी कंसारातिरधोक्षज:" अम०। "वनमाली तु गोविन्दे" मेदि०। "धीरसमीरे यमुनातीरे वसति वने वनमाली" गीतगो०।

**वनमालिनी** ವನಮಾಲಿನೀ (स्त्री०) 1. ಹಂದಿ ಗಡ್ಡೆ. 2. ದ್ವಾರಕಾನಗರ. वनमाली अस्यामस्ति "इनि:" (५-२-११६)। "ङीप्" (४-१-५)। "द्वारका वनमालिनी" त्रिकाण्ड०। "वाराह्यां वनमालिनी" मेदि०।

**वनमुच्** ವನಮುಚ್ (पुं०) ಮೇಘ, ಮೋಡ. वनं जलं मुञ्चति—मुच्लृ (मोक्षणे) "क्विप्" (३-२-६१)।

**वनमुद्ग** ವನಮುದ್ಗ (पुं०) 1. ಕಾಡುಹೆಸರು. वनजातो मुद्ग:। (स्त्री०) **–द्गा ದ್ಗಾ.** 2. ಕಾಡುಹೆಸರು ಗಿಡ.

**वनरक्षक** ವನರಕ್ಷಕ (पुं०) ಅರಣ್ಯವನ್ನು ರಕ್ಷಿಸುವ ಅಧಿಕಾರಿ.

**वनराज** ವನರಾಜ (पुं०) ಸಿಂಹ. वनस्य राजा—राजन् "टच्" (५-४-९१)।

**वनवास** ವನವಾಸ (पुं०) ಅರಣ್ಯದಲ್ಲಿ ವಾಸಮಾಡುವುದು. वने वास:। "तरुभिरियं वनवासबन्धुभि:" शाकु० ४-९। "इच्छाविहारवनवासमहोत्सवानाम्" माघ० ५-५०।

**वनवासन** ವನವಾಸನ (पुं०) ಪುನುಗುಬೆಕ್ಕು. वनं वासयति—वस (स्नेहच्छेदापहरणेषु) + णिच् "ल्यु:" (३-१-१३४)। "गन्धौतु: खट्टाशो वनवासन:" त्रिकाण्ड०।

**वनवासिन्** ವನವಾಸಿನ್ (पुं०) 1. ವಾನಪ್ರಸ್ಥಾಶ್ರಮದಲ್ಲಿರುವವನು. (वि०) 2. ಅರಣ್ಯದಲ್ಲಿ ವಾಸಮಾಡುವವನು. वने वसति—वस (निवासे) "णिनि:" (३-२-७८)।

**वनशृङ्गाट** ವನಶೃಂಗಾಟ (पुं०) ನೆಗ್ಗಿಲು ಗಿಡ. वनस्य शृङ्गाट इव। "गोकण्टको गोक्षुरको वनशृङ्गाट इत्यपि" भावप्र०। स्वार्थे "कन्"। वनशृङ्गाटक:।

**वनश्वन्** ವನಶ್ವನ್ (पुं०) 1. ಸೃಗಾಲ, ಜಂಬುಕ, ನರಿ. वनस्य श्वा। 2. ವ್ಯಾಘ್ರ, ಹುಲಿ. 3. ಪುನುಗು ಬೆಕ್ಕು. "वनश्वा गन्धमार्जारे वञ्चकव्याघ्रयो: पुमान्" मेदि०।

**वनसङ्कट** ವನಸಂಕಟ (पुं०) ಕಾಡುಕಡಲೆ.

**वनसमूह** ವನಸಮೂಹ (पुं०) ಅರಣ್ಯಗಳ ಸಮೂಹ. वनानां समूह:।

**वनस्थ** ವನಸ್ಥ (पुं०) 1. ಮೃಗ, ಹರಿಣ, ಜಿಂಕೆ. वने तिष्ठति—ष्ठा (गतिनिवृत्तौ) "क:" (३-२-४)। 2. ವಾನಪ್ರಸ್ಥ, ಮೂರನೇ ಆಶ್ರಮದಲ್ಲಿರುವವನು. "त्रिगुणं स्याद्वनस्थानां यतीनां तु चतुर्गुणम्" मनु० ५-१३७। (वि०)3. ಅರಣ್ಯದಲ್ಲಿ ವಾಸಮಾಡುವವನು.

**वनस्थली** ವನಸ್ಥಲೀ (स्त्री०) ಅರಣ್ಯಪ್ರದೇಶ, ಅರಣ್ಯದ ಭೂಮಿ. वनस्य स्थली। "सद्यो वसन्तेन समागतानां नखक्षतानीव वनस्थलीनाम्" कुमा० ३-२९।

**वनस्पति** ವನಸ್ಪತಿ (पुं०) 1. ವೃಕ್ಷ, ಮರ. वनस्य पति:—सुडागम: (६-१-१५७)। "तमाशु विघ्नं तपसस्तपस्वी वनस्पतिं वज्र इवावभज्य" कुमा० ३-७४। 2. ಪುಷ್ಪವಿಲ್ಲದೆ ಫಲಿಸುವ ವೃಕ್ಷ. "वानस्पत्य: फलै: पुष्पात् तैरपुष्पाद्वनस्पति:" अम०। "अपुष्पा: फलवन्तो ये ते वनस्पतय: स्मृता:" मनु० १-४७।

**वनहरिद्रा ವನಹರಿದ್ರಾ** (स्त्री०) ಕಾಡು ಅರಿಶಿನ. वनसंजाता हरिद्रा ।

**वनाखु ವನಾಖು** (पुं०) ಮೊಲ, ಶಶ. वनस्य आखुः ।

**वनायु ವನಾಯು** (पुं०) ಒಂದು ದೇಶ.

**वनायुज ವನಾಯುಜ** (पुं०) ವನಾಯುದೇಶದಲ್ಲಿ ಹುಟ್ಟಿದ ಕುದುರೆ. वनायुदेशे जायते—जनी (प्रादुर्भावे) "डः" (३-२-९७) ।

**वनार्चक ವನಾರ್ಚಕ** (पुं०) ಹೂವಾಡಿಗ, ಪುಷ್ಪ ಮಾಲೆಯನ್ನು ತಯಾರಿಸುವವನು. वनस्य अर्चक इव ।

**वनाश्रम ವನಾಶ್ರಮ** (पुं०) ವಾನಪ್ರಸ್ಥಾಶ್ರಮ, ಮೂರನೇ ಆಶ್ರಮ.

**वनाश्रमिन् ವನಾಶ್ರಮಿನ್** (पुं०) ವಾನಪ್ರಸ್ಥಾಶ್ರಮದಲ್ಲಿ ಇರುವವನು. वनाश्रमोऽस्यास्ति "इनिः" (५-२-११५) ।

**वनाश्रय ವನಾಶ್ರಯ** (पुं०) 1. ಅರಣ್ಯದಲ್ಲಿ ವಾಸಮಾಡುವವನು. 2. ದ್ರೋಣಕಾಕ, ದೊಡ್ಡ ಜಾತಿಯ ಕಾಗೆ.

**वनि ವನಿ** (पुं०) 1. ಅಗ್ನಿ. वन (संभक्तौ) "इः" (उ० ४-१३९) । 2. ಪ್ರಾರ್ಥನೆ, ಯಾಚನೆ, ಬೇಡಿಕೆ. वनु (याचने) "इन्" (उ० ४-११८) ।

**वनिका ವನಿಕಾ** (स्त्री०) ಚಿಕ್ಕ ಅರಣ್ಯ, ಸಣ್ಣ ಕಾಡು.

**वनित ವನಿತ** (वि०) 1. ಯಾಚಿಸಲ್ಪಟ್ಟ, ಬೇಡಲ್ಪಟ್ಟ. वनु (याचने) "क्तः" (३-२-१०२) । 2. ಸೇವಿಸಲ್ಪಟ್ಟ, ಆರಾಧಿಸಲ್ಪಟ್ಟ.

**वनिता ವನಿತಾ** (स्त्री०) 1. ಮಹಿಳೆ, ಹೆಂಗಸು. वन्यते—वन (संभक्तौ) "क्तः" (३-२-१०२) । "पृथु निरन्तरमिष्टभुजान्तरं वनितयाऽनितया न विषेहिरे" माघ० ६-६० । 2. ಅನುರಾಗವುಳ್ಳ ಹೆಂಗಸು. 3. ಪತ್ನಿ, ಹೆಂಡತಿ. "वसिष्ठधेनोरनुयायिनं तमावर्तमानं वनिता वनान्तात्" रघु० २-१९ ।

**वनिन् ವನಿನ್** (पुं०) ವಾನಪ್ರಸ್ಥಾಶ್ರಮ ಸ್ವೀಕರಿಸಿದವನು.

**वनी ವನೀ** (स्त्री०) ಅರಣ್ಯ, ಕಾಡು.

**वनीक ವನೀಕ** (वि०) ಯಾಚಿಸುವವನು, ಬೇಡುವವನು.

**वनीयक ವನೀಯಕ** (वि०) ಯಾಚಕ, ಭಿಕ್ಷುಕ. वनिं याच्ञामिच्छति — "क्यच्" (३-१-८) । वनीय "ण्वुल्" (३-१-१३३) । "वनीयको याचनको मार्गणो याचकार्थिनौ" अम० । "वनीयकानां स हि कल्पभूरुहः" नैष० १५-६० ।

**वनेचर ವನೇಚರ** (पुं०) ಕಿರಾತ, ಬೇಟೆಗಾರ. वने चरति — चर (गतौ) "टः" (३-२-१६) । अलुक् (६-३-१४) । "स वर्णिलिङ्गी विदितः समाययौ युधिष्ठिरं द्वैतवने वनेचरः" किरा० १-१ ।

**वनौकस् ವನೌಕಸ್** (पुं०) 1. ಅರಣ್ಯದಲ್ಲಿ ವಾಸಿಸುವ ತಪಸ್ವಿ, ಋಷಿ. वनम् ओको यस्य । 2. ವಾನಪ್ರಸ್ಥ, ಮೂರನೇ ಆಶ್ರಮದಲ್ಲಿರುವವನು. 3. ವಾನರ, ಕಪಿ. "वनौकसां पत्युरहीन्द्रशोभिना" याद० १४-५६ ।

**वन्दक ವಂದಕ** (पुं०) 1. ಭಾರಂಗಿ. (वि०) 2. ನಮಸ್ಕರಿಸುವವನು.

**वन्दथ ವಂದಥ** (पुं०) 1. ಹೊಗಳುವವನು, ಸ್ತೋತ್ರ ಮಾಡುವವನು. वन्दते स्तौति—वदि (अभिवादनस्तुत्योः) "अथः" (उ० ३-११३) । 2. ಹೊಗಳಿಸಿಕೊಳ್ಳಲು ಅರ್ಹನಾದವನು. वन्दथः स्तोता स्तुत्यश्च सि० कौ० ।

**वन्दन ವಂದನ** (न०) 1. ನಮಸ್ಕಾರ, ಪ್ರಣಾಮ. वदि (अभिवादनस्तुत्योः) भावे "ल्युट्" (३-३-११५) । 2. ಪೂಜಿಸುವುದು, ಆರಾಧಿಸುವುದು. ಇದು ಹದಿನಾರು ವಿಧ ಭಕ್ತಿಗಳಲ್ಲೊಂದು. "आद्यं तु वैष्णवं प्रोक्तं शङ्खचक्राङ्कनं हरेः । धारणं चोर्ध्वपुण्ड्राणां तन्मन्त्राणां परिग्रहः ॥ अर्चनं च जपो ध्यानं तन्नामस्मरणं तथा । कीर्तनं श्रवणं चैव वन्दनं पादसेवनम् ॥ तत्पादोदकसेवा च तन्निवेदितभोजनम् । तदीयानां च संसेवा द्वादशीव्रतनिष्ठता ॥ तुलसीरोपणं विष्णोर्देवदेवस्य शार्ङ्गिणः । भक्तिः षोडशधा प्रोक्ता भवबन्धविमुक्तये" ॥ 3. ಹದಿನಾರು ವಿಧ ಪೂಜೋಪಚಾರಗಳಲ್ಲೊಂದು. (1) आसनम् (2) स्वागतम् (3) पाद्यम् (4) अर्घ्यम् (5) आचमनीयम् (6) मधुपर्कः (7) आचमनम् (8) स्नानम् (9) वसनम् (10) आभरणम् (11) गन्धः (12) पुष्पम् (13) धूपः (14) दीपः (15) नैवेद्यम् ಮತ್ತು (16) वन्दनम् ಇವು ಷೋಡಶೋಪಚಾರಗಳು.

**वन्दनमाला ವಂದನಮಾಲಾ** (स्त्री०) ಬಾಳೆಕಂಬಗಳನ್ನು ಕಟ್ಟಿ ಅಲ್ಲಿ ಹಾಕುವ ಮಾವಿನ ಎಲೆಯ ತೋರಣ. वन्दनार्था माला । "कुर्याद्वन्दनमालां यो रम्भास्तम्भैः सुशोभनैः । चूतवृक्षोद्भवैः पत्रैर्जगरे चक्रपाणिनः । युगानि पत्रसंख्यानां स्वर्गे तस्योत्सवो भवेत् । पूज्यते वासवाद्यैश्च क्रीडते चाप्सरोवृतः" । —मालिका —ಮಾಲಿಕಾ.

**वन्दना ವಂದನಾ** (स्त्री०) 1. ಸ್ತುತಿ, ಹೊಗಳಿಕೆ. वदि (अभिवादनस्तुत्योः) "युच्" (वा० ३-३-१०७) । 2. ಪೂಜೆ.

**वन्दनी ವಂದನೀ** (स्त्री०) 1. ಪ್ರಣಾಮ, ನಮಸ್ಕಾರ. 2. ಜೀವನೌಷಧ, ಬದುಕಿಸುವ ಔಷಧ. 3. ಯಾಚಿಸುವುದು, ಬೇಡುವುದು.

**वन्दनीय ವಂದನೀಯ** (वि०) 1. ನಮಸ್ಕರಿಸಲ್ಪಡುವ. 2. ನಮಸ್ಕರಿಸಲು ಯೋಗ್ಯನಾದ. 3. ಸ್ತುತಿಸಲ್ಪಡುವ, ಹೊಗಳಲ್ಪಡುವ. 4. ಸ್ತುತಿಸಲು ಅರ್ಹನಾದ. वदि (अभिवादनस्तुत्योः) "अनीयर्" (३-१-९६)।

**वन्दनीया ವಂದನೀಯಾ** (स्त्री०) ಗೋರೋಚನ.

**वन्दा ವಂದಾ** (स्त्री०) 1. ಬದನಿಕೆ ಗಿಡ, ಮರದ ಮೇಲೆ ಬೆಳೆಯುವ ಒಂದು ಬಳ್ಳಿ. वन्दते वृक्षान्तरम् — वदि (अभिवादनस्तुत्योः) "अच्" (३-१-१३४)। "टाप्" (४-१-४)। 2. ಭಿಕ್ಷುಕಿ, ಭಿಕ್ಷೆಬೇಡುವ ಹೆಂಗಸು. "वन्दा लतान्तरे स्मृता । भिक्षुक्यामपि" मेदि०।

**वन्दाक ವಂದಾಕ** (पुं०) ಬದನಿಕೆ ಗಿಡ. **वन्दाका ವಂದಾಕಾ, वन्दाकी ವಂದಾಕೀ.**

**वन्दारु ವಂದಾರು** (वि०) ನಮಸ್ಕರಿಸುವವನು. वदि (अभिवादनस्तुत्योः) "आरुः" (३-२-१७३)। "वन्दारुरभिवादकः" अम०।

**वन्दि ವಂದಿ** (पुं०) 1. ಸ್ತುತಿಪಾಠಕ. 2. ಸೆರೆಯಾಳು. (स्त्री०) 3. ಹೊಗಳಿಕೆ, ಸ್ತೋತ್ರ.

**वन्दिग्राह ವಂದಿಗ್ರಾಹ** (पुं०) ಚೋರ, ಕಳ್ಳ, ಡಕಾಯಿತ. वन्दिमिव गृह्णाति—ग्रह (उपादाने) "णः" (३-१-१४३)। "वन्दिग्राहान् तथा वाजिकुञ्जराणां च हारिणः। असह्यघातिनश्चैव शूलानारोपयेन्नरान्"।

**वन्दिचौर ವಂದಿಚೌರ** (पुं०) ಡಕಾಯಿತ, ಕಳ್ಳ, ಮನೆಯಲ್ಲಿರುವವನನ್ನು ಸೆರೆಹಿಡಿದು (ಕಟ್ಟಿಹಾಕಿ) ಎಲ್ಲವನ್ನೂ ದೋಚಿಕೊಳ್ಳುವವನು. वन्दिमिव कृत्वा चौरः।

**वन्दिन् ವಂದಿನ್** (पुं०) ಹೊಗಳುವವನು, ಸುತ್ತಿಸುವವನು, ಹೊಗಳುಭಟ. वन्दते स्तौति—वदि (अभिवादनस्तुत्योः) "णिनिः" (३-१-१३४)। "परिकल्पितसांनिध्या काले काले च वन्दिषु। स्तुत्यं स्तुतिभिरर्थ्याभिरुपतस्थे सरस्वती" रघु० ४-६।

**वन्दिपाठ ವಂದಿಪಾಠ** (पुं०) ಸ್ತೋತ್ರಗ್ರಂಥ. वन्दिः स्तोत्रं तस्य पाठोऽत्र।

**वन्दी ವಂದೀ** (स्त्री०) ಸ್ತೋತ್ರ, ಹೊಗಳಿಕೆ. वन्दि—वा "ङीप्" (ग० ४-१-४५)।

**वन्द्य ವಂದ್ಯ** (वि०) 1. ನಮಸ್ಕರಿಸಲ್ಪಡುವ. 2. ನಮಸ್ಕರಿಸಲು ಯೋಗ್ಯನಾದ. वदि (अभिवादनस्तुत्योः) "ण्यत्" (३-१-१२४)। "लङ्केश्वरप्रणतिभङ्गदृढव्रतं तद्वन्द्यं युगं चरणयोर्जनकात्मजायाः" रघु० १३-७८। 3. ಸ್ತುತಿಸಲ್ಪಡುವ, ಹೊಗಳಲ್ಪಡುವ. (स्त्री०) **-द्या -ದ್ಯಾ.** 4. ಗೋರೋಚನ.

**वन्द्र ವಂದ್ರ** (न०) 1. ಕಲ್ಯಾಣ, ಶುಭ. वन्द्यते स्तूयते—वदि (अभिवादनस्तुत्योः) "रक्" (उ० २-१३)। (वि०) 2. ಪೂಜಿಸುವವನು.

**वन्ध्य ವಂಧ್ಯ** (पुं०) 1. ಫಲಿಸದ ವೃಕ್ಷ, ಫಲಬಿಡದ ಮರ. बन्धे साधुः "यत्" (४-४-९८)। वबयोरभेदः। "सिक्तं स्वयमिव स्नेहाद्वन्ध्यमाश्रमवृक्षकम्" रघु० १-७०। 2. ಪ್ರಯೋಜನವಿಲ್ಲದ, ಫಲವಿಲ್ಲದ, ವ್ಯರ್ಥವಾದ. "वन्ध्यश्रमास्ते सरयूं विगाह्य तमूचुरम्लानमुखप्रसादाः" रघु० १६-७५। (स्त्री०) **-ध्या -ಧ್ಯಾ.** 3. ಗೊಡ್ಡು ಹೆಂಗಸು, ಬಂಜೆ ಹೆಂಗಸು, ಮಕ್ಕಳನ್ನು ಹಡೆಯದ ಹೆಂಗಸು. 4. ಕರುಹಾಕದಿರುವ ಹಸು, ಬಂಜೆ ಹಸು.

**वन्य ವನ್ಯ** (पुं०) 1. ಹಂದಿಗಡ್ಡೆ, ವಾರಾಹೀಕಂದ. 2. ಕಾಡುಪ್ರಾಣಿ. वने भवः "यत्"। 3. ಕರಿಯ ನೆಲಗುಂಬಳ. (न०) 4. ಲವಂಗಪಟ್ಟೆ. 5. ಕೊನ್ನಾರಿಯ ಒಂದು ಭೇದ. 6. ಅರಣ್ಯದಲ್ಲಿ ಹುಟ್ಟಿದ ಗೆಡ್ಡೆ ಗೆಣಸು. "रामोऽपि सह वैदेह्या वने वन्येन वर्तयन्" रघु० १२-२०। (वि०) 7. ಅರಣ್ಯದಲ್ಲಿ ಹುಟ್ಟಿದ. "वन्येभमस्तकनिखातनखाग्रमुक्तमुक्ताफलप्रकरभाञ्जि गुहागृहाणि" माघ० ५-१२।

**वन्या ವನ್ಯಾ** (स्त्री०) 1. ಅರಣ್ಯಗಳ ಸಮೂಹ, ದಟ್ಟವಾದ ಕಾಡು. वनानां समूहः "यः" (४-२-४९)। 2. ಜಲಪ್ರವಾಹ. "वन्यं त्रिषु वनोद्भूते स्त्री वनाम्बुसमूहयोः" मेदि०।

**वन्र् ವನ್ರ್** (पुं०) ಭಾಗವನ್ನು ಪಡೆಯುವವನು, ಪಾಲುದಾರ. वन (संभक्तौ) "रन्" (उ० २-२८)। "वन्रो विभागी" सि० कौ०।

**वपत् ವಪತ್** (वि०) 1. ಬೀಜವನ್ನು ಬಿತ್ತುತ್ತಿರುವವನು. डु वप् (बीजसन्ताने) "शतृ" (३-२-१२४)। 2. ಕ್ಷೌರ ಮಾಡುತ್ತಿರುವವನು. 3. ಬಟ್ಟೆ ನೇಯುತ್ತಿರುವವನು. "शानच्" (३-२-१२४)। **-मानः -ಮಾನಃ.**

**वपन ವಪನ** (न०) 1. ಬೀಜ ಬಿತ್ತುವುದು. 2. ಕ್ಷೌರ ಮಾಡುವುದು. ड वप् (बीजसन्ताने)। भावे "ल्युट्" (३-३-११५)। "वपनं बीजाधाने च मुण्डने" मेदि०।

**वापि(पी) ವಾಪಿ(ಪೀ)** (स्त्री०) ಸರಸ್ಸು, ಕೊಳ. उप्यतेऽस्यां पद्मादि —डु वप् (बीजसन्ताने) "इञ्" (उ० ४-१२४)। "वाप्यो भवन्ति विमलाः स्फुटन्ति कमलानि वापीषु। कमलेषु पतन्त्यलयः करोति संगीतमलिषु पदम्"। वा "ङीष्" (ग० ४-१-४५)।

**वापीह ವಾಪೀಹ** (पुं०) ಚಾತಕಪಕ್ಷಿ. वापीं जहाति—ओ हाक् (त्यागे) "कः" (३-२-३)।

**वाप्य ವಾಪ್ಯ** (न०) 1. ಚಂಗಲುಕೋಷ್ಠ. वाप्यां भवम् "यत्" (४-३-५४)। "वाप्यं पाकलमुत्पलम्" अम०। "वातश्लेष्मकरं वाप्यं सक्षारं कटुपित्तलम्" सुश्रुत० सूत्र० ४५। (वि०) 2. ಬಿತ್ತಲ್ಪಡುವ. 3. ಮುಂಡನ ಮಾಡಲ್ಪಡುವ. डु वप् (बीजसन्ताने) "ण्यत्" (३-१-१२४)।

**वाम ವಾಮ** (न०) 1. ಧನ, ಐಶ್ವರ್ಯ, ಸಂಪತ್ತು. वा (गतिगन्धनयोः) "मन्" (उ० १-१३७)। (वि०) 2. ಸುಂದರವಾದ, ಅಂದವಾದ, ಸೊಗಸಾದ. "वामभ्रुवां वलयपङ्क्तिषु सञ्चरन्त्यो मञ्जु क्वणन्ति मणिपञ्जरशारिकास्ते" याद० १९-१२। 3. ಎಡಗಡೆಯ, ಎಡ ಭಾಗದ. टु वमु (उद्गिरणे) "णः" (३-१-१४०)। "वामपादतललुप्तमन्मथश्रीमदेन मुखवीक्षिणानिशम्" नैष० १८-११०। 4. ಪ್ರತಿಕೂಲವಾದ, ವಿರುದ್ಧವಾದ. "यान्त्येवं गृहिणीपदं युवतयो वामाः कुलस्याधयः" शाकु० ४-१७। 5. ಅಧಮ, ನೀಚ. "आसक्तास्तास्वमी मूढा वामशीला हि जन्तवः" किरा० ११-२४। (पुं०) 6. ಪರಶಿವ, ಪರಮೇಶ್ವರ. 7. ಕಾಮ, ಮನ್ಮಥ. 8. ಪಯೋಧರ, ಸ್ತನ, ಕುಚ. "वामं धने पुंसि हरे कामदेवे पयोधरे। वल्गुप्रतीपसव्येषु त्रिषु" मेदि०। (स्त्री०) **—मा —ಮಾ.** 9. ಹೆಂಗಸು. **—मी —ಮೀ.** 10. ಹೆಣ್ಣುನರಿ. 11. ಹೆಣ್ಣು ಕುದುರೆ. "अथोष्ट्रवामीशतवाहितार्थं प्रजेश्वरं प्रीतमना महर्षिः" रघु० ५-३२। 12. ಹೆಣ್ಣು ಆನೆ. 13. ಹೆಣ್ಣು ಕತ್ತೆ. "नार्यां स्त्रियामथ। वामी शृगालीबडवा रासभीकरभीषु च" मेदि०।

**वामदृश् ವಾಮದೃಶ್** (स्त्री०) ಸುಂದರವಾದ ಕಣ್ಣುಗಳುಳ್ಳ ಹೆಂಗಸು. वामा मनोहरा दृक् यस्याः।

**वामदेव ವಾಮದೇವ** (पुं०) ಪರಮೇಶ್ವರ, ಮಹಾದೇವ. वामयति दुष्टानां मदम्—टु वमु (उद्गिरणे)+णिच् "अच्" (३-१-१३४)। वामश्चासौ देवश्च।

**वामक ವಾಮಕ** (वि०) 1. ಎಡಗಡೆಯ, ಎಡಭಾಗದ. 2. ಪ್ರತಿಕೂಲವಾದ, ವಿರುದ್ಧವಾದ, ವಿಪರೀತವಾದ. "विवृण्वतेव कल्याणमान्तरज्ञेन चक्षुषा। स्फुरता वामकेनापि दाक्षिण्यमवलम्बते" मालती० १-११।

**वामन ವಾಮನ** (पुं०) 1. ಮಹಾವಿಷ್ಣುವಿನ ಐದನೆಯ ಅವತಾರ, ಉಪೇಂದ್ರಾವತಾರ. वामयति दुष्टानां मदम् —डु वमु (उद्गिरणे)+णिच् "ल्युः" (३-१-१३४)। ಪರಮವಿಷ್ಣುಭಕ್ತನೂ ಪರಮಧಾರ್ಮಿಕನೂ ಆದ ಬಲಿ ಚಕ್ರವರ್ತಿಯು ಸಕಲ ದೇವತೆಗಳನ್ನೂ ಜಯಿಸಿ ಇಂದ್ರಲೋಕವನ್ನು ಸ್ವಾಧೀನಪಡಿಸಿಕೊಂಡು ರಾಜ್ಯವನ್ನಾಳುತ್ತಿದ್ದನು. ದೇವೇಂದ್ರನ ಈ ಪರಿಸ್ಥಿತಿಯನ್ನು ಕಂಡು ಕಶ್ಯಪನು ಪತ್ನಿಯೊಡನೆ ತಪಸ್ಸನ್ನಾಚರಿಸಿ ಮಹಾವಿಷ್ಣುವನ್ನು ಪೂಜಿಸಿ ತನಗೆ ಪುತ್ರನಾಗಿ ಜನಿಸಿ ಬಲಿನಿಗ್ರಹ ಮಾಡಿ ಇಂದ್ರನಿಗೆ ರಾಜ್ಯವನ್ನು ಸಂಪಾದಿಸಿಕೊಡಬೇಕೆಂಬ ವರ ಕೇಳಿಕೊಳ್ಳಲು ಪರಮಾತ್ಮನು ಅದಕ್ಕೆ ಸಮ್ಮತಿಸಿ ಅದಿತಿಯ ಗರ್ಭದಲ್ಲಿ ಇಂದ್ರನಿಗೆ ತಮ್ಮನಾಗಿ ಉಪೇಂದ್ರನಾಗಿ ಜನಿಸಿದನು. ಮೌಂಜ್ಯಜಿನದಂಡಧಾರಿಯಾಗಿ ಬ್ರಹ್ಮಚಾರಿವೇಷದಲ್ಲಿ ಅವತರಿಸಿದ ವಿಷ್ಣುವನ್ನು ಇಂದ್ರಾದಿ ದೇವತೆಗಳೆಲ್ಲರೂ ಸ್ತುತಿಸಿ ರಾಜ್ಯವನ್ನು ಸಂಪಾದಿಸಿ ಕೊಡಲು ಬೇಡಿದರು. ವಾಮನಾವತಾರ ಮಾಡಿದ ಬ್ರಹ್ಮಚಾರಿಯು ಬಲಿಚಕ್ರವರ್ತಿಯ ಯಾಗಶಾಲೆಗೆ ಹೋಗಿ ಮೂರು ಅಡಿಗಳಷ್ಟು ಭೂಮಿಯನ್ನು ಯಾಚಿಸಿದನು. ಮಹಾವಿಷ್ಣುವೇ ತನ್ನಲ್ಲಿಗೆ ಬಂದು ಯಾಚಿಸಿದಾಗ ಬಹಳ ಸಂತೋಷಗೊಂಡ ಬಲಿ ಚಕ್ರವರ್ತಿಯು ಅದಕ್ಕೆ ಸಮ್ಮತಿಸಲು ಸಕಲ ಪೃಥ್ವೀಮಂಡಲವನ್ನು ಒಂದು ಪಾದದಿಂದಲೂ ಬ್ರಹ್ಮಲೋಕವನ್ನು ಇನ್ನೊಂದು ಪಾದದಿಂದಲೂ ಆಕ್ರಮಿಸಿ ಮೂರನೆಯ ಪಾದವನ್ನು ಬಲಿ. ಚಕ್ರವರ್ತಿಯ ಶಿರಸ್ಸಿನಲ್ಲಿಟ್ಟು ಬಲಿಯನ್ನು ನಿಗ್ರಹಿಸಿ ಇಂದ್ರನಿಗೆ ರಾಜ್ಯವನ್ನು ಸಂಪಾದಿಸಿಕೊಟ್ಟನು. ಇದೇ ವಾಮನ ಅಥವಾ ತ್ರಿವಿಕ್ರಮಾವತಾರ. "प्रतिगृह्य बलेर्लोकान् वटुवेषेण दैत्यहा। महेन्द्राय ददौ प्रीत्या काश्यपिर्विष्णुरव्ययः" पाद्मोत्तरखण्डः। 2. ದಕ್ಷಿಣ ದಿಕ್ಕಿನ ದಿಗ್ಗಜ. 3. ಅಂಕೋಲದ ವೃಕ್ಷ. 4. ಪಾಣಿನಿಯ ಸೂತ್ರಗಳಿಗೆ ಕಾಶಿಕಾವೃತ್ತಿಯೆಂಬ ವ್ಯಾಖ್ಯಾನವನ್ನು ಬರೆದ ಒಬ್ಬ ಪಂಡಿತ. "वामनोऽप्यतिखर्वे च त्रिषु पुंसि तु दिग्गजे। हरावङ्कोटवृक्षे च" मेदि०। (वि०) 5. ಕುಳ್ಳ, ಗಿಡ್ಡ, ಪೋಟ. "प्रांशुलभ्ये फले लोभादुद्बाहुरिव वामनः" रघु० १-३। 6. ನೀಚ, ಅಧಮ.

**वामलूर ವಾಮಲೂರ** (ಪುಂ) ವಲ್ಮೀಕ, ಹುತ್ತ.

**वामा ವಾಮಾ** (ಸ್ತ್ರೀಂ) 1. ಹೆಂಗಸು. 2. ಗೌರಿ, ಪಾರ್ವತಿ. 3. ಲಕ್ಷ್ಮಿ. 4. ಸರಸ್ವತಿ. वमति सौन्दर्यम् — वमु (उद्गिरणे) "ण:" (३-१-१४०)। "श्लिष्यति कामपि चुम्बति कामपि कामपि रमयति वामाम्" गीतगो०।

**वामाचार ವಾಮಾಚಾರ** (ಪುಂ) 1. ರಮ್ಯವಾದ ಆಚಾರ, ಶ್ಲಾಘ್ಯವಾದ ಆಚಾರ. वाम: मनोहर: आचार:। 2. ವಿರುದ್ಧವಾದ ಆಚಾರ, ಪ್ರತಿಕೂಲವಾದ ಆಚಾರ. वाम: प्रतिकूल: आचार:। "क्वौ युवां युवानौ, कुतस्त्यौ, वामाचारवत् प्रतिभाति वामाचार:" चं० रा०।

**वामावर्त ವಾಮಾವರ್ತ** (ಪುಂ) ಬಲಗಡೆಯಿಂದ ಎಡಗಡೆಗೆ ಸುತ್ತಿರುವ ಸುಳಿ. वाम: आवर्त:।

**वामिल ವಾಮಿಲ** (ವಿಂ) 1. ಸುಂದರವಾದ, ಅಂದವಾದ. 2. ದಾಂಭಿಕ, ಕಪಟಿ. 3. ಗರ್ವವುಳ್ಳವನು, ದರ್ಪವುಳ್ಳವನು. "वामिलो दाम्भिके वामे" मेदि०।

**वामी ವಾಮೀ** (ಸ್ತ್ರೀಂ) "वाम" ಪದದಲ್ಲಿ ನೋಡಿ.

**वामोरू ವಾಮೋರೂ** (ಸ್ತ್ರೀಂ) ಸುಂದರವಾದ ತೊಡೆಗಳುಳ್ಳ ಹೆಂಗಸು. वामौ सुन्दरावूरू यस्या: — वामोरु "ऊङ्" (४-१-७०)। "त्रस्यन्ती चलशफरीविघट्टितोरूर्वामोरूरतिशयमाप विभ्रमस्य" माघ० ८-२४।

**वाय ವಾಯ** (ಪುಂ) ಬಟ್ಟೆ ನೇಯುವುದು. वेञ् (तन्तुसन्ताने) भावे "घञ्" (३-३-१८)।

**वायक ವಾಯಕ** (ಪುಂ) 1. ನೇಯಿಗೆಯವನು, ಬಟ್ಟೆ ನೇಯುವವನು. वेञ् (तन्तुसन्ताने) "ण्वुल्" (३-१-१३३)। 2. ಸಮೂಹ, ಗುಂಪು.

**वायन ವಾಯನ** (ನಂ) 1. ಬಟ್ಟೆ ನೇಯಿಸುವುದು. वेञ् (तन्तुसन्ताने) + णिच् "ल्युट्" (३-३-११५)। 2. ಒಂದು ವಿಧ ಸಿಹಿಭಕ್ಷ್ಯ.

**वायवी ವಾಯವೀ** (ಸ್ತ್ರೀಂ) ವಾಯು ದಿಕ್ಕು, ಉತ್ತರ ಪಶ್ಚಿಮ ದಿಕ್ಕು. वायोरियम् "अण्" (४-३-१२०)। "ङीप्" (४-१-१५)।

**वायव्य ವಾಯವ್ಯ** (ವಿಂ) 1. ವಾಯುಸಂಬಂಧವಾದ (ದಿಕ್ಕು). 2. ವಾಯುದೇವತಾಕವಾದ (ಹವಿಸ್ಸು). वायुर्देवता यस्य — वायु "यत्" (४-२-३१)। 3. ವಾಯು ದೇವತಾಕವಾದ ಅಸ್ತ್ರ. "वायव्यास्त्रेण तं पाणिं रामोऽच्छैत्सीत्सहायुधम्" भट्टि० १५-६७।

**वायस ವಾಯಸ** (ಪುಂ) 1. ಕಾಗೆ. वयते — वय (गतौ) "असच्" (उ० ३-१२०)। "विरसमिह रटन्तो रक्तगन्धानुलिप्तं बलिमिव परिभोक्तुं वायसास्तर्कयन्ति" मृच्छ० १०-३। 2. ಅಗುರುವೃಕ್ಷ. 3. ಸರಳ ವೃಕ್ಷದ ಹಾಲುಮಡ್ಡಿ. (ವಿಂ) 4. ವಾಯಸ ಸಂಬಂಧವಾದ.

**वायसादनी ವಾಯಸಾದನೀ** (ಸ್ತ್ರೀಂ) ಮಹಾಜ್ಯೋತಿಷ್ಮತೀ ಲತೆ.

**वायसाराति ವಾಯಸಾರಾತಿ** (ಪುಂ) ಉಲೂಕ, ಗೂಬೆ, ಘೂಕ. वायसस्याराति:।

**वायसी ವಾಯಸೀ** (ಸ್ತ್ರೀಂ) 1. ಕಲ್ಲತ್ತಿಗಿಡ. 2. ಕಾಚಿಗಿಡ, ಗಣಿಕೆ ಗಿಡ. "वायसी काकोदुम्बरी काकमाच्यपि" हेम०।

**वायसोली ವಾಯಸೋಲೀ** (ಸ್ತ್ರೀಂ) ಕಾಕೋಲಿಯೆಂಬ ವಿಷ.

**वायु ವಾಯು** (ಪುಂ) 1. ಗಾಳಿ. वाति — वा (गतिगन्धनयो:) "उण्" (उ० १-१)। युक् (७-३-३३)। ವಾಯುವು ಸಪ್ತಸ್ಕಂಧವಾಗಿ ಅಂತರಿಕ್ಷದಲ್ಲಿ ಸಂಚರಿಸುವುದು. (1) आवह: (2) प्रवह: (3) विवह: (4) परावह: (5) संवह: (6) उद्वह: ಮತ್ತು (7) परिवह:। ಈ ಏಳು ವಾಯುಗಳು ಅಂತರಿಕ್ಷದಲ್ಲಿ ಒಂದರ ಮೇಲೆ ಒಂದರಂತೆ ಮೇಲುಭಾಗದಲ್ಲಿ ಸಂಚರಿಸುವುವು. "भूवायुरावह इह प्रवहस्तदूर्ध्व: स्यादुद्वहस्तदनु संवहसंज्ञकश्च। अन्यस्ततोऽपि सुवह: परिपूर्वकोऽस्मात् वाह: परावह इमे पवना: प्रसिद्धा:" सिद्धान्तशि०। "तस्य द्वितीयहरिविक्रमनिस्तमस्कं वायोरिमं परिवहस्य वदन्ति मार्गम्" शाकु० ७-६। 2. ಉತ್ತರ ಪಶ್ಚಿಮ ದಿಕ್ಕುಗಳ ಮಧ್ಯದ ವಿದಿಕ್ಕಿನ ಅಧಿಪತಿ. 3. ಪಂಚ ಮಹಾಭೂತಗಳಲ್ಲಿ ನಾಲ್ಕನೆಯ ಒಂದು ಭೂತ. 4. ಶರೀರದೊಳಗಿರುವ ಪಂಚ ವಾಯುಗಳು. (1) प्राण: (2) अपान: (3) समान: (4) उदान: ಮತ್ತು (5) व्यान: ಇವು ಪಂಚವಾಯುಗಳು. **ಶರೀರದಲ್ಲಿ ಈ ಪಂಚವಾಯುಗಳ ಸ್ಥಾನ:**

| | |
|---|---|
| ಹೃದಯದಲ್ಲಿ | ಪ್ರಾಣವಾಯು |
| ಗುದಪ್ರದೇಶದಲ್ಲಿ | ಅಪಾನವಾಯು |
| ನಾಭಿಯಲ್ಲಿ | ಸಮಾನವಾಯು |
| ಕಂಠದಲ್ಲಿ | ಉದಾನವಾಯು |
| ಶರೀರದ ಎಲ್ಲಾ ಭಾಗಗಳಲ್ಲೂ | ವ್ಯಾನವಾಯು. |

ವಿವರಕ್ಕೆ "प्राण" ಪದದಲ್ಲಿ ನೋಡಿ. 5. ವಾಯು ದೇವತೆ.

**वायुकेतु ವಾಯುಕೇತು** (पुं०) ಧೂಳು. वायु: केतु: ध्वजो यस्य ।

**वायुगण्ड ವಾಯುಗಂಡ** (पुं०) ಉದರದಲ್ಲಿ ವಾಯು ತುಂಬಿರುವುದರಿಂದ ಉಂಟಾಗುವ ಅಜೀರ್ಣವ್ಯಾಧಿ. "अजीर्णो वायुगण्डोऽन्तर्वभिश्चपलताशय:" त्रिकाण्ड० ।

**वायुगुल्म ವಾಯುಗುಲ್ಮ** (पुं०) ನೀರಿನ ಸುಳಿ. वायुना कृत: गुल्म इव । "अम्भसां भ्रम: । तानूरो वायुगुल्मश्च" त्रिकाण्ड० ।

**वायुदारु ವಾಯುದಾರು** (पुं०) ಮೇಘ, ಮೋಡ. वायुना दीर्यते — दृ (विदारणे) "उण्" (उ० १-३) । "मदयित्नुर्वायुदारु:" त्रिकाण्ड० ।

**वायुपुत्र ವಾಯುಪುತ್ರ** (पुं०) 1. ಭೀಮಸೇನ. 2. ಆಂಜನೇಯ. वायो: पुत्र: । **–सुत: –ಸುತಃ, –सूनु: –ಸೂನುಃ.**

**वायुपुराण ವಾಯುಪುರಾಣ** (नं०) ಅಷ್ಟಾದಶ (18) ಪುರಾಣಗಳಿಗೆ ಸದೃಶವಾದ ಹದಿನೆಂಟು ಉಪಪುರಾಣಗಳಲ್ಲೊಂದು.

**वायुफल ವಾಯುಫಲ** (नं०) 1. ಇಂದ್ರಧನುಸ್ಸು. 2. ಆಲಿಕಲ್ಲು. वायुना फलति — फल (विशरणे) "अच्" (३-१-१३४) । "अथ वायुफलं शक्रकार्मुके करकेऽपि च" मेदि० ।

**वायुभक्ष ವಾಯುಭಕ್ಷ** (पुं०) ವಾಯುವೇ ಆಹಾರವಾಗಿ ಉಳ್ಳ 1. ತಪಸ್ವಿ. 2. ಸರ್ಪ. वायुं भक्षयति—भक्ष (अदने) + णिच् "अच्" (३-१-१३४) ।

**वायुवर्त्मन् ವಾಯುವರ್ತ್ಮನ್** (नं०) ಅಂತರಿಕ್ಷ, ಆಕಾಶ. वायोर्वर्त्म ।

**वायुवाह ವಾಯುವಾಹ** (पुं०) ಧೂಮ, ಹೊಗೆ. वायुना उह्यते — वह (प्रापणे) "घञ्" (३-३-१९) ।

**वायुवाहिनी ವಾಯುವಾಹಿನೀ** (स्त्री०) ಸಿರೆ, ಧಮನಿ, ನರ. वायुं वहति — वह (प्रापणे) "णिनि:" (३-१-१३४) । "ङीप्" (४-१-५) ।

**वायुसख ವಾಯುಸಖ** (पुं०) ಅಗ್ನಿ, ಬೆಂಕಿ. वायो: सखा — सखि "टच्" (५-४-९१) । वायु: सखाऽस्य ಎಂದು ಬಹುವ್ರೀಹಿಸಮಾಸವಾದಲ್ಲಿ सखि ಶಬ್ದಕ್ಕೆ "अनङ्" (७-१-९३) ಆದೇಶ ಬಂದು **वायुसखा** ಎಂದು ರೂಪವಾಗುವುದು.

**वार् ವಾರ್** (नं०) ಜಲ, ನೀರು. वारयति — वृञ् (वरणे) + णिच् "क्विप्" (३-२-१७८) । वा: वारी वारि । वारा वार्भ्याम वार्भि: ಇತ್ಯಾದಿ ರೂಪಗಳು.

**वार ವಾರ** (पुं०) 1. ಸೂರ್ಯ ಮೊದಲಾದ ಗ್ರಹಗಳು ಅಧಿಪತಿಯಾಗಿರುವ ದಿವಸ. **ವಾರಗಳಿಗೆ ಚರಕ್ಷಿಪ್ರಾದಿ ಸಂಜ್ಞೆಗಳು:** ಬುಧ–ಚರ, ಗುರು–ಕ್ಷಿಪ್ರ, ಶುಕ್ರ–ಮೃದು, ರವಿ–ಧ್ರುವ, ಶನಿ–ದಾರುಣ, ಭೌಮ (ಕುಜ)–ಉಗ್ರ, ಚಂದ್ರ–ಸಮ. "चरक्षिप्रै: प्रयातव्यं प्रवेष्टव्यं मृदुध्रुवै: । दारुणोग्रैश्च योद्धव्यं क्षत्रियैर्जयकाङ्क्षिभि: ।। नृपाभिषेकोऽग्निकार्यं सूर्यवारे प्रशस्यते । सोमे तु लेपयानं च कुर्याच्चैव गृहादिकम् ।। सैनापत्यं शौर्ययुद्धं शस्त्राभ्यास: कुजे तथा । सिद्धिकार्यं च मन्त्रश्च यात्रा चैव बुधे स्मृता ।। पठनं देवपूजा च वस्त्राद्याभरणे गुरौ । कन्यादानं गजारोह: शुक्रे स्यात् समय: स्त्रिया: ।। स्थाप्यं गृहप्रवेशश्च गजबन्ध: शनौ शुभ:" । ವಾರವು ಸೂರ್ಯೋದಯಾನಂತರ ಮರುದಿನ ಸೂರ್ಯೋದಯದವರೆಗೆ ಗಣಿಸಲ್ಪಡುವುದು. ಸೂರ್ಯನು ಸರ್ವದಾ ಸಂಚರಿಸುತ್ತಿರುವುದರಿಂದ ಅವನಿಗೆ ಉದಯಾಸ್ತಗಳಿಲ್ಲ. ನಮ್ಮ ದೃಷ್ಟಿಗೆ ಗೋಚರವಾದಾಗ ಉದಯ ಮತ್ತು ಹಗಲೆಂದೂ ಗೋಚರವಾಗದಾಗ ಅಸ್ತ ಮತ್ತು ರಾತ್ರಿಯೆಂದೂ ವ್ಯವಹಾರ. "नैवास्तमनमर्कस्य नोदय: सर्वदा सत: । उदयास्तमनाख्यं हि दर्शनादर्शनं रवे:" विष्णुपु० । 2. ದ್ವಾರ, ಬಾಗಿಲು. 3. ರಾಶಿ, ಗುಂಪು. 4. ಶಿವ, ಪರಮೇಶ್ವರ. 5. ಸಮೂಹ. "वारी वारै: सस्मरे वारणानाम्" माघ० १८-५६ । 6. ಸರದಿ, ಅವಕಾಶ, ಸಮಯ. "तेन दूतिविदितं निषेदुषा पृष्ठत: सुरतवाररात्रिषु" रघु० १९-१८ । 7. ಸಲ, ಸರತಿ, ಬಾರಿ. 8. ಸಂದರ್ಭ, ಸಮಯ, ಅವಕಾಶ. 9. ಕುಬ್ಜ ವೃಕ್ಷ. "वार: सूर्यादिवासरे । द्वारे हरे कुब्जवृक्षे वृन्दावसरयो:क्षणे" मेदि० । (नं०) 10. ಮದ್ಯದ ಪಾತ್ರೆ.

**वारक ವಾರಕ** (पुं०) 1. ಒಂದು ಜಾತಿಯ ಕುದುರೆ. 2. ಕುದುರೆಯ ಒಂದು ವಿಧ ನಡಿಗೆ. वृञ् (वरणे) + णिच् "ण्वुल्" (३-१-१३३) । (नं०) 3. ಕಷ್ಟದ ಸ್ಥಾನ, ತೊಂದರೆಯ ಸ್ಥಳ. 4. ವಮುಡಿವಾಳ. (वि०) 5. ತಡೆಯುವವನು, ನಿಷೇಧಿಸುವವನು.

**वारकिन् ವಾರಕಿನ್** (पुं०) 1. ಶತ್ರು, ವೈರಿ. वारकोऽस्त्यस्य "इनि:" (५-२-११५) । 2. ಪಯೋಧಿ, ಸಮುದ್ರ. 3. ಚಿತ್ರಾಶ್ವ. 4. ಎಲೆಗಳನ್ನು ತಿಂದು ಜೀವಿಸುವವನು. "वारकी शत्रुचित्राश्वपर्णाजीविपयोधिषु" मेदि० ।

**वारकीर ವಾರಕೀರ** (ಪುಂ०) 1. ಸ್ಯಾಲ, ಪತ್ನಿಯ ಸಹೋದರ. वारे अवसरे किरति — कृ (विक्षेपे) "कः" (३-१-१३५)। "नागरो देवरः श्यालो वारकीरः" त्रिकाण्ड०। 2. ಬಡಬಾಗ್ನಿ. 3. ಬಾಚಣಿಗೆ. 4. ಹೇನು. (वि०) 5. ಆರತಿಮಾಡಲ್ಪಟ್ಟ ಕುದುರೆ. 6. ಮೂಟೆ ಹೊರುವವನು. "वारकीरस्तु पुंसि स्यात् भारग्राहिणि बाडवे। यूकायां वेणिवेधिन्यां नीराजितहयेऽपि च मेदि०।

**वारङ्क ವಾರಂಕ** (ಪುಂ०) ಪಕ್ಷಿ, ಹಕ್ಕಿ. "स्युः खगोत्पतवारङ्ककण्ठाग्निर्व्योमचारिणः" त्रिकाण्ड०।

**वारङ्ग ವಾರಂಗ** (ಪುಂ०) ಕತ್ತಿ ಮೊದಲಾದ ಆಯುಧಗಳ ಹಿಡಿ. वृञ् (वरणे) "अङ्गच्" (उ० १-११९)। "मूलेऽङ्कुशवदावृत्तवारङ्गाणि स्वस्तिकयन्त्राणि" सुश्रुत० सूत्र० ७।

**वारट ವಾರಟ** (ನ०) 1. ಕ್ಷೇತ್ರ, ಭೂಮಿ, ಜಮೀನು. वार् जलमटति — अट (गतौ) "अच्" (३-१-१३४)। "क्षेत्रे वारटमुच्यते" त्रिकाण्ड०। 2. ಕ್ಷೇತ್ರಗಳ ಸಮೂಹ **-टा -ಟಾ.** (ಸ್ತ್ರೀ०) 3. ಹೆಣ್ಣು ಹಂಸ. वारि जले अटति—अट (गतौ) "अच्" (३-१-१३४)।

**वारण ವಾರಣ** (ಪುಂ०) 1. ಗಜ, ಆನೆ. वारयति शत्रून् — वृञ् (आवरणे) + णिच् "ल्युः" (३-१-१३४)। "नागेन लब्धपरवारणमारुतेन" माघ० ५-३६। 2. ಯುದ್ಧ ಕವಚ. "वारणा यस्य सौवर्णाः पृष्ठे भासन्ति दंशिताः" भा० विरा० ४२-२। (ನ०) 3. ಪ್ರತಿಷೇಧ, ತಡೆಯುವಿಕೆ, ನಿಷೇಧಿಸುವಿಕೆ, ಅಡ್ಡಿಪಡಿಸುವುದು. वृञ् + णिच् भावे "ल्युट्" (३-३-११५)। "न भवति बिसतन्तुर्वारणं वारणानाम्" भामि० वि०। "वारणं प्रतिषेधे स्याद्वारणस्तु मतङ्गजे" मेदि०। (वि०) 4. ತಡೆಯುವ, ಅಡ್ಡಿಪಡಿಸುವ. 5. ನಿಷೇಧಿಸುವ. 6. ನೀರಿನಲ್ಲಿ ಹುಟ್ಟಿದ. वारि जले रणति—रण (गतौ) "अच्" (३-१-१३४)।

**वारणबुसा ವಾರಣಬುಸಾ** (ಸ್ತ್ರೀ०) ಬಾಳೆಗಿಡ. वारणानां बुसा—बुस (उत्सर्गे) "कः" (३-१-१३५)। "कदली वारणबुसा" अम०।

**वारणवल्लभा ವಾರಣವಲ್ಲಭಾ** (ಸ್ತ್ರೀ०) ಕದಳೀ ವೃಕ್ಷ, ಬಾಳೆಗಿಡ. वारणानां वल्लभा प्रिया।

**वारणसी ವಾರಣಸೀ** (ಸ್ತ್ರೀ०) ವಾರಾಣಸಿ, ಕಾಶಿ. वरणा च असी च नदीद्वयम् — तस्य अदूरे भवा "अण्" (४-२-७०)। पृषो०।

**वारणा ವಾರಣಾ** (ಸ್ತ್ರೀ०) ತಡೆಯುವುದು, ಅಡ್ಡಿಪಡಿಸುವುದು, ನಿಷೇಧಿಸುವುದು. वृञ् (आवरणे) + णिच् "युच्" (३-३-१०७)। "वारणामिव विधातुमभीक्ष्णं कक्षया च वलयैश्च शिशिञ्जे" माघ० १०-६२।

**वारणावत ವಾರಣಾವತ** (ನ०) ಹಸ್ತಿನಾವತಿಗೆ ಸಮೀಪದಲ್ಲಿರುವ ಒಂದು ಪಟ್ಟಣ, ಪಾಂಡವರು ಕೆಲವುಕಾಲ ವಾಸವಾಗಿದ್ದ ಒಂದು ನಗರ. ಇದು ಪಾಂಡವರು ದುರ್ಯೋಧನನೊಡನೆ ಸಂಧಿಮಾಡಿಕೊಳ್ಳಲು ತಾವು ಕೇಳಿಕೊಂಡ ಐದು ಗ್ರಾಮಗಳಲ್ಲೊಂದು. (1) अविस्थलम् (2) वृकस्थलम् (3) माकन्दी (4) वारणावतम् ಮತ್ತು (5) ದುರ್ಯೋಧನನಿಗೆ ಇಷ್ಟವಾದ ಯಾವುದಾದರೂ ಒಂದು ಗ್ರಾಮ. ಇವು ಐದು ಗ್ರಾಮಗಳು. "अविस्थलं वृकस्थलं माकन्दीं वारणावतम्। अवसानं अवत्वत्र किंचिदेकं च पञ्चमम्" भा० विरा० ३१-१९।

**वारणीय ವಾರಣೀಯ** (ವಿ०) 1. ನಿಷೇಧಿಸಲ್ಪಡುವ. 2. ತಡೆಯಲ್ಪಡುವ, ಅಡ್ಡಿಪಡಿಸಲ್ಪಡುವ. 3. ನಿಷೇಧಿಸಬೇಕಾದ. 4. ತಡೆಯಬೇಕಾದ. 5. ನಿಷೇಧಿಸಲು ಅರ್ಹವಾದ. 6. ತಡೆಯಲು ಅರ್ಹವಾದ. वृञ् (आवरणे) + णिच् "अनीयर्" (३-१-९६)। "तव्यः"। **वारयितव्यः ವಾರಯಿತವ್ಯಃ.**

**वारत्र ವಾರತ್ರ** (ನ०) ತೊಗಲ ಹಗ್ಗ.

**वारवाण ವಾರವಾಣ** (ಪುಂನ०) 1. ಯುದ್ಧಕವಚ, ಯುದ್ಧದಲ್ಲಿ ಬಾಣವನ್ನು ತಡೆಯುವ ನಿಲುವಂಗಿ. बाणं वारयति वृञ् (आवरणे) + णिच् "अण्" (३-२-१)। परनिपातः (२-२-३१)। "पीनकुचतटनिपीडदलद्वारवाणमुरसालिलिङ्गिरे" माघ० १५-८४। 2. ಹೆಂಗಸರ ಕುಪ್ಪಸ. "वारवाणस्तु कूर्पासे कवचेऽपि च" हेम०।

**वारबुषा ವಾರಬುಷಾ** (ಸ್ತ್ರೀ०) ಕದಳೀವೃಕ್ಷ, ಬಾಳೆಗಿಡ.

**वारमुख्या ವಾರಮುಖ್ಯಾ** (ಸ್ತ್ರೀ०) ವೇಶ್ಯೆಯರಲ್ಲಿ ಮುಖ್ಯಳಾದವಳು, ಜನರಿಂದ ಗೌರವಿಸಲ್ಪಟ್ಟ ಸೂಳೆ. वारेषु वेश्यासमूहेषु मुख्या। "वारमुख्याश्च शतशो यानैस्तद्दर्शनोत्सुकाः" भाग० २-६-१९।

**वारयत् ವಾರಯತ್** (ವಿ०) 1. ತಡೆಯುತ್ತಿರುವ. 2. ನಿಷೇಧಿಸುತ್ತಿರುವ.

**वारयितृ ವಾರಯಿತೃ** (ವಿ०) 1. ತಡೆಯುವ, ಅಡ್ಡಿಪಡಿಸುವ. 2. ನಿಷೇಧಿಸುವ. वृञ् (आवरणे) + णिच् "तृच्" (३-१-१३३)। स्त्रियां "ङीप्" (४-१-५)। **-यित्री -ಯಿತ್ರೀ.**

**वारवधू ವಾರವಧೂ** (स्त्री०) ವೇಶ್ಯೆ, ಸೂಳೆ. वारस्य समूहस्य वधूः — सर्वसाधारणा ।

**वारला ವಾರಲಾ** (स्त्री०) 1. ಹೆಣ್ಣು ಹಂಸ. 2. ಕಣಜದ ಹುಳ. वारं लाति—ला (आदाने) "कः" (३-२-३)। "वरला वारला चापि गन्धोलीहंसकान्तयोः" मेदि०।

**वारवाणि ವಾರವಾಣಿ** (पुं०) 1. ವೇಣುವಾದ್ಯವನ್ನು ನುಡಿಸುವವನು. 2. ಗಾಯಕ, ಸಂಗೀತಗಾರ. 3. ಸಂವತ್ಸರ. 4. ನ್ಯಾಯಪಾಲ, ನ್ಯಾಯಾಧೀಶ. (स्त्री०) 5. ಸ್ವೈರಿಣಿ, ವೇಶ್ಯೆ, ಸೂಳೆ. "वेश्या शूला वारवाणिः" त्रिकाण्ड०।

**वारवाणी ವಾರವಾಣೀ** (स्त्री०) ಬಹುಜನರ ಆದರಕ್ಕೆ ಪಾತ್ರಳಾದ ವೇಶ್ಯೆ.

**वारविलासिनी ವಾರವಿಲಾಸಿನೀ** (स्त्री०) ವೇಶ್ಯೆ, ಸೂಳೆ. वारस्य जनसमूहस्य विलासिनी ।

**वारवृषा ವಾರವೃಷಾ** (स्त्री०) ಬಾಳೆಗಿಡ.

**वारसुन्दरी ವಾರಸುಂದರೀ** (स्त्री०) ವೇಶ್ಯೆ, ಸೂಳೆ. वारस्य जनसमूहस्य सुन्दरी।

**वारस्त्री ವಾರಸ್ತ್ರೀ** (स्त्री०) ವೇಶ್ಯೆ, ಸೂಳೆ. वारस्य जनसमूहस्य स्त्री० ।

**वारंवारम् ವಾರಂವಾರಮ್** (अव्य०) 1. ಪದೇ ಪದೆ, ಪುನಃ ಪುನಃ, ಮತ್ತೆ ಮತ್ತೆ. 2. ಪ್ರತಿಕ್ಷಣದಲ್ಲಿಯೂ. "वारंवारं तिरयति दृशावुद्गतो बाष्पपूरः" मालती० १-३८।

**वारांनिधि ವಾರಾಂನಿಧಿ** (पुं०) ಸಮುದ್ರ, ಕಡಲು. वारां निधिः — षष्ठया अलुक् बाहु० ।

**वाराणसी ವಾರಾಣಸೀ** (स्त्री०) ಕಾಶೀ ನಗರ. वरणा च असी च तयोर्नद्योरदूरे भवा "अण्" (४-२-७०)। पृषो०। "वरणासी च नद्यौ द्वे पुण्ये पापहरे उभे। तयोरन्तर्गता या तु सैषा वाराणसी स्मृता"।

**वाराणसेय ವಾರಾಣಸೇಯ** (वि०) 1. ವಾರಾಣಸಿಯಲ್ಲಿ ಹುಟ್ಟಿದವನು. 2. ವಾರಾಣಸಿಯಲ್ಲಿರುವವನು. वाराणस्यां जातो भवो वा "ढक्" (४-२-९७)।

**वाराशि ವಾರಾಶಿ** (पुं०) ಸಮುದ್ರ. वारां राशिरत्र ।

**वारासन ವಾರಾಸನ** (न०) 1. ಜಲಾಶಯ, ನೀರು ನಿಂತಿರುವ ಕೆರೆ ಕೊಳ ಮುಂತಾದುವು. वाराम् आसनम्। 2. ನೀರುತೊಟ್ಟಿ, ನೀರು ತುಂಬಿರುವ ತೊಟ್ಟಿ. "वारासनं वाःसदनम" त्रिकाण्ड०।

**वाराह ವಾರಾಹ** (पुं०) 1. ವರಾಹ, ಸೂಕರ, ಹಂದಿ. वराह एव — स्वार्थे "अण्" (५-४-३८)। 2. ಶ್ವೇತವರಾಹಕಲ್ಪ, ಚತುರ್ಮುಖನ ಮೂವತ್ತು ಕಲ್ಪಗಳಲ್ಲೊಂದು. "अयं तु कथितः कल्पो द्वितीयस्यापि भारत। वाराह इति विख्यातो यत्रासीत् सूकरो हरिः" भाग० ३-११-३७। (न०) 3. ಅಗುರು. (वि०) 4. ವರಾಹಸಂಬಂಧವಾದ. वराहस्येदम् "अण्" (४-३-१२०)। 5. ರಾಜಯೋಗ್ಯವಾದ.

**वाराही ವಾರಾಹೀ** (स्त्री०) 1. ಹಂದಿಗಡ್ಡೆ. वराहस्येदम् "अण्" (४-३-१२०)। "ङीप्" (४-१-१५)। "विष्वक्सेनप्रिया घृष्टिर्वाराही बदरेत्यपि" अम०। 2. ವರಾಹಾವತಾರವೆತ್ತಿದ ಶ್ರೀ ವಿಷ್ಣುವಿನ ಶಕ್ತಿ. "यज्ञवाराहमतुलं रूपं या बिभ्रतो हरेः। शक्तिः साप्यायया तत्र वाराहीं बिभ्रती तनुम्"। 3. ಒಂದು ಅಳತೆ. 4. ಬ್ರಾಹ್ಮೀ ಮೊದಲಾದ ಸಪ್ತ ಮಾತೃಕೆಯರಲ್ಲಿ ಐದನೆಯ ಮಾತೃಕೆ. "ब्राह्मी माहेश्वरी चैव कौमारी वैष्णवी तथा। वाराही चैव चैन्द्राणी चामुण्डाः सप्त मातरः" अम०। "वाराही मातृभेदे स्यात् विष्वक्सेनप्रियौषधौ। राजार्हजोङ्गके क्लीबं राजयोग्येऽभिधेयवत्" मेदि०।

**वारि ವಾರಿ** (न०) 1. ಜಲ, ನೀರು. वृञ् (वरणे)+णिच् "इञ्" (उ० ४-१२४)। "यस्याश्चलद्वारिधिवारिवीचिच्छटोच्छलच्छङ्खकुलाकुलेन" माघ० ३-३७। 2. ಮುಡಿವಾಳ. (स्त्री०) 3. ವಾಕ್ಕು. 4. ಸರಸ್ವತಿ. 5. ಗಜಬಂಧನಸ್ಥಲ, ಆನೆಯನ್ನು ಕಟ್ಟುವ ಜಾಗ. 6. ಆನೆಯನ್ನು ಕಟ್ಟುವ ಹಗ್ಗ, -ಸರಪಣಿ. "वारिर्गजबन्धन्योः स्त्री क्लीबेऽम्बुनि बालके। ह्रीबेरे" मेदि०। "बभौ स भिन्दन् बृहतस्तरङ्गान् वार्यर्गलाभङ्ग इव प्रवृत्तः" रघु० ५-४५। 7. ಸೆರೆಯಾಳು, ಬಂದಿ, ಕೈದಿ. 8. ಸಣ್ಣ ಬಿಂದಿಗೆ.

**वारिकण्टक ವಾರಿಕಂಟಕ** (पुं०) ಕುಬ್ಜಕ ವೃಕ್ಷ. वारिणः कण्टक इव। "कुब्जको वारिकण्टकः" त्रिकाण्ड०। **वारिकुब्जः -कुब्जकः** ಇತ್ಯಾದಿ.

**वारिक्रिमि ವಾರಿಕ್ರಿಮಿ** (पुं०) ಜಲೌಕೆ, ಜಿಗಣೆ. वारिणः क्रिमिः। "वारिक्रिमिस्तु जलमक्षिका" त्रिकाण्ड०।

**वारिचर ವಾರಿಚರ** (पुं०) 1. ಮತ್ಸ್ಯ, ಮೀನು. वारिषु चरति — चर (गतौ) "टः" (३-२-१६)। (वि०) 2. ಜಲಚರ ಪ್ರಾಣಿ. 3. ನೀರಿನಲ್ಲಿ ಸಂಚರಿಸುವ.

**वारिचामर ವಾರಿಚಾಮರ** (न०) ಶೈವಾಲ, ಪಾಚಿ. वारिणः चामरमिव ।

**वारिज ವಾರಿಜ** (न०) 1. ಕಮಲ, ತಾವರೆ, ಪದ್ಮ. वारिणि जायते—जनी (प्रादुर्भावे) "ड:" (३-२-९७)। "नारीभिर्गुरुजघनस्थलाहतानामास्यश्रीविजितविकासि-वारिजानाम्" माघ० ८-४७। 2. ಲವಂಗ. (पुं०) 3. ಶಂಖ. 4. ಕಪ್ಪೆಚಿಪ್ಪು. (वि०) 5. ನೀರಿನಲ್ಲಿ ಹುಟ್ಟಿದ.

**वारितस्कर ವಾರಿತಸ್ಕರ** (पुं०) ಮೇಘ, ಮೋಡ.

**वारित्रा ವಾರಿತ್ರಾ** (स्त्री०) ಛತ್ರಿ, ಕೊಡೆ. वारिणः त्रायते—त्रैङ् (पालने) "क:" (३-२-४)।

**वारिद ವಾರಿದ** (पुं०) 1. ಮೇಘ, ಮೋಡ. वारि ददाति—डु दाञ् (दाने) "क:" (३-२-३)। "नव-तमालनिभस्य नभस्तरोरचिररोचिररोचत वारिदैः" माघ० ६-२८। 2. ಮುಸ್ತೆ, ಕೊನ್ನಾರಿ. (वि०) 3. ನೀರನ್ನು ಕೊಡುವವನು. "वारिदस्तृप्तिमाप्नोति सुखमक्षय्यमन्नदः" मनु० ४-२२९।

**वारिधर ವಾರಿಧರ** (पुं०) ಮೇಘ, ಮೋಡ. वारिणो धरः। "विगतवारिधरावरणाः क्वचित् ददृशुरुल्लसिताऽसिलताऽसिताः" माघ० ६-५१।

**वारिधारा ವಾರಿಧಾರಾ** (स्त्री०) ಧಾರಾಕಾರವಾದ ಮಳೆ, ಸುರಿಮಳೆ.

**वारिधि ವಾರಿಧಿ** (पुं०) ಸಮುದ್ರ, ಕಡಲು. वारीणि धीयन्तेऽस्मिन्—डु धाञ् (धारणपोषणयोः) "किः" (३-३-९३)। "तस्य ते न खलु तत्त्ववेदिनो वारिधेरिव वयं तटस्थिताः" याद० १७-११३।

**वारिनाथ ವಾರಿನಾಥ** (पुं०) 1. ವರುಣ. 2. ಸಮುದ್ರ. वारीणां नाथः।

**वारिनिधि ವಾರಿನಿಧಿ** (पुं०) ಸಮುದ್ರ, ಕಡಲು. वारीणि निधीयन्तेऽत्र—नि + डु धाञ् (धारणपोषणयोः) "किः" (३-३-९२)।

**वारिपथिक ವಾರಿಪಥಿಕ** (वि०) ನೀರಿನ ಮಾರ್ಗದಿಂದ ಹೋಗುವ ಅಥವಾ ತರಲ್ಪಟ್ಟ. वारिपथेन गच्छति आहृतं वा "ठक्" (वा० ५-१-७७)।

**वारिपर्णी ವಾರಿಪರ್ಣೀ** (स्त्री०) ನೀರುಕಾಗೆ, ಕಡಲ ಹಕ್ಕಿ. वारिणि पर्णान्यस्याः "ङीष्" (४-१-६४)।

**वारिप्रवाह ವಾರಿಪ್ರವಾಹ** (पुं०) ಬೆಟ್ಟದಲ್ಲಿ ಹುಟ್ಟುವ ನದಿಯ ಪ್ರವಾಹ. वारिणः प्रवाहः।

**वारिमसि ವಾರಿಮಸಿ** (पुं०) ಮೇಘ, ಮೋಡ.

**वारिमुच् ವಾರಿಮುಚ್** (पुं०) ಮೇಘ, ಮೋಡ. वारि मुञ्चति—मुच्लृ (मोक्षणे) "क्विप्" (३-२-७६)। "आदानं हि विसर्गाय सतां वारिमुचामिव" रघु० ४-८६।

**वारिमूली ವಾರಿಮೂಲೀ** (स्त्री०) ನೀರುಕಾಗೆ, ಕಡಲ ಹಕ್ಕಿ. वारिणि मूलं यस्याः।

**वारिरथ ವಾರಿರಥ** (पुं०) 1. ದೋಣಿ. 2. ತೆಪ್ಪ. 3. ಹಡಗು. वारिणि रथ इव। "वारिरथो नौस्तरिकः प्लवः" त्रिकाण्ड०।

**वारिराशि ವಾರಿರಾಶಿ** (पुं०) 1. ಸಮುದ್ರ, ಕಡಲು. वारीणां राशयो यत्र। "वारिराशिरशनामवलिम्पन्" याद० २१-४८। 2. ತಟಾಕ, ಕೆರೆ, ಜಲಾಶಯ.

**वारिरुह् ವಾರಿರುಹ** (न०) 1. ಪದ್ಮ, ಕಮಲ, ತಾವರೆ. वारिणि रोहति—रुह (बीजजन्मनि प्रादुर्भावे च) "क:" (३-१-१३५)। "दयितावलोकविकसन्नयन प्रसरप्रणुन्नमिव वारिरुहम्" माघ० ९-७१। "विकच-वारिरुहं दधतं सरः" किरा० ५-१३। (वि०) 2. ನೀರಿನಲ್ಲಿ ಹುಟ್ಟಿದ.

**वारिलोमन् ವಾರಿಲೋಮನ್** (पुं०) ವರುಣ. वारि लोम्नि यस्य।

**वारिवास ವಾರಿವಾಸ** (पुं०) ಮದ್ಯವನ್ನು ಮಾರುವವನು. वारिसमीपे वासोऽस्य।

**वारिवाह ವಾರಿವಾಹ** (पुं०) ಮೇಘ, ಮೋಡ. वारि वहति—वह (प्रापणे) "अण्" (३-२-१)।

**वारिवाहक ವಾರಿವಾಹಕ** (पुं०) ಮೇಘ, ಮೋಡ. वारीणां वाहकः। —वाहनः—ವಾಹನಃ. "चातकः को वराकोऽयं यस्येन्द्रो वारिवाहकः" पञ्चतं० २-१४९।

**वारिसम्भव ವಾರಿಸಂಭವ** (न०) 1. ಲವಂಗ. 2. ಲಾಮಂಚದ ಬೇರು. 3. ಸೌವೀರಾಂಜನ.

**वारी ವಾರೀ** (स्त्री०) 1. ಆನೆಯನ್ನು ಹಿಡಿದುಹಾಕುವ ಸ್ಥಳ. 2. ಆನೆಯನ್ನು ಕಟ್ಟುವ ಹಗ್ಗ. वार्यतेऽनया—वृञ् (वरणे) + णिच् "इञ्" (उ० ४-१२५)। "वारी तु गजबन्धनी" अम०। 3. ಆನೆಯನ್ನು ಕಟ್ಟಿ ಹಾಕುವ ಸ್ಥಳ, ಗಜಶಾಲೆ. "वार्यर्गलाभङ्ग इव प्रवृत्तः" रघु० ५-४५। 4. ಕಲಶ, ಘಟ, ಬಿಂದಿಗೆ. "वारी स्याद्गजबन्धन्यां कलस्यामपि योषिति" मेदि०।

**वारीट ವಾರೀಟ** (पुं०) ಗಜ, ಆನೆ. वार्यामिटति—इट (गतौ) "क:" (३-१-१३५)।

**वारीश ವಾರೀಶ** (ಪುಂ) ಸಮುದ್ರ. वारीणामीशः।

**वारु ವಾರು** (ಪುಂ) ಯುದ್ಧದ ಆನೆ. वारयति शत्रून् — वृञ् (आवरणे) + णिच् "उण्" बाहु०।

**वारुण ವಾರುಣ** (ನಂ) 1. ಜಲ, ನೀರು. वरुणो देवताऽस्य "अण्" (४-२-२४)। 2. ಶತಭಿಷಾನಕ್ಷತ್ರ. (ಪುಂ) 3. ಭಾರತವರ್ಷದ ಒಂದು ಖಂಡ. (ವಿಂ) 4. ವರುಣ ಸಂಬಂಧವಾದ. वरुणस्येदम् "अण्" (४-३-१२०)। 5. ವರುಣ ದೇವತಾಕವಾದ. "स स्मेरवक्त्रकमलोऽन्धकशत्रुसूनुर्बाणासनेन समधत्त स वारुणास्त्रम्" कुमा० १७-४०।

**वारुणि ವಾರುಣಿ** (ಪುಂ) 1. ಅಗಸ್ತ್ಯಮಹರ್ಷಿ. वरुणस्यापत्यं पुमान् "इञ्" (४-१-९५)। "समुद्रं स समासाद्य वारुणिर्भगवानृषिः। उवाच सहितान् देवानृषींश्चैव समागतान्" भा० वन० १०५-१। 2. ಭೃಗುಮುನಿ. "सत्याग्निर्वारुणिर्विन्ध्यकूटो वातापिसूदनः" त्रिकाण्ड०। "भृगुर्वै वारुणिः। वरुणं पितरमुपससार" तै० उ०।

**वारुणी ವಾರುಣೀ** (ಸ್ತ್ರೀ०) 1. ಮದ್ಯ. वरुणस्येदम् "अण्" (४-३-१२०)। "वारुणीमदविशङ्कमथाविश्चक्षुषोऽभवदसाविव रागः" माघ० १०-१९। 2. ಮದ್ಯದ ಅಧಿದೇವತೆ. "किमेतदिति सिद्धानां दिवि चिन्तयतां ततः। बभूव वारुणी देवी मदाघूर्णितलोचना" विष्णुपु०। 3. ವರುಣನ ಪತ್ನಿ. 4. ಪಶ್ಚಿಮ ದಿಕ್ಕು. "किमु दिवं पुनरेति यदीदृशः पतित एष निषेव्य हि वारुणीम्" नैष० ४-७०। 5. ಒಂದು ಜಾತಿಯ ಗರಿಕೆಹುಲ್ಲು. "वारुणी गण्डदूर्वायां प्रतीचीसुरयोरपि" मेदि०। 6. ಶತಭಿಷಾನಕ್ಷತ್ರ ಕೂಡಿದ ಚೈತ್ರ ಕೃಷ್ಣ ತ್ರಯೋದಶಿ. 7. ವಾರುಣೀವಿದ್ಯೆ.

**वारुणीवल्लभ ವಾರುಣೀವಲ್ಲಭ** (ಪುಂ) ವರುಣ. वारुण्या वल्लभः।

**वारुण्ड ವಾರುಂಡ** (ಪುಂ) 1. ಸರ್ಪಗಳ ರಾಜ. (ಪುನಂ) 2. ದೋಣಿಯಿಂದ ನೀರನ್ನು ಹೊರಗೆ ಚೆಲ್ಲುವ ಪಾತ್ರೆ. 3. ನೇತ್ರಮಲ. 4. ಕರ್ಣಮಲ. (ಸ್ತ್ರೀ०)—ण्डी—ಣ್ಡೀ. 5. ಬಾಗಿಲ ಹೊಸ್ತಿಲಮೆಟ್ಟಲು "वारुण्डी द्वारपिण्डयां स्त्री फणिनां राजके पुमान्। न स्त्रियां सेकपात्रे च मलेऽक्ष्णः श्रवणस्य च" मेदि०।

**वारूढ ವಾರೂಢ** (ಪುಂ) 1. ಬಟ್ಟೆಯ ಸೆರಗು. 2. ಅಗ್ನಿ. ... ಪಂಜರ. 4. ಕವಾಟ, ಕದ, ಬಾಗಿಲು. 5. ತಟ, ದಡ. "वारूढः शम्बले वस्त्राञ्चलेऽग्नौ पञ्जरेऽररे" हेम०।

**वार्क्ष ವಾರ್ಕ್ಷ** (ನಂ) 1. ವನ, ಅರಣ್ಯ, ಕಾಡು. वृक्षाणां समूहः "अण्" (४-२-३७)। 2. ವೃಕ್ಷ ಸಂಬಂಧವಾದ. वृक्षस्येदम् "अण्" (४-३-१२०)।

**वार्णिक ವಾರ್ಣಿಕ** (ಪುಂ) ಗುಮಾಸ್ತೆ. वर्णलेखनं शिल्पमस्य "ठञ्" (४-४-५५)।

**वार्त्त ವಾರ್ತ್ತ** (ನಂ) 1. ಆರೋಗ್ಯ. "हरिराकुमारमखिलाभिधानवित् स्वजनस्य वार्त्तमयमन्वयुङ्क्त च" माघ० १३-६८। 2. ಜಾಣ್ಮೆ, ಚಾತುರ್ಯ, ನಿಪುಣತೆ. "अनुयुक्त इव स्ववार्त्तमुच्चैः परिरेभे नु भृशं विलोचनाभ्याम्" किरा० १३-३४। (ವಿಂ) 3. ರೋಗವಿಲ್ಲದವನು. वृत्तिरस्यास्ति "णः" (वा० ५-२-१०१)। 4. ಉದ್ಯೋಗಶಾಲಿ, ವೃತ್ತಿನಿರತ, ಕಸಬುದಾರ. वृत्तिरस्त्यस्य। 5. ಸಾರವಿಲ್ಲದ, ತಿರುಳಿಲ್ಲದ. "वार्त्तं स्वारोग्यारोगफल्गुषु। वृत्तिशालिनि" हेम०। "वार्त्तं पाटवमारोग्यम्" यादवः।

**वार्त्ता ವಾರ್ತ್ತಾ** (ಸ್ತ್ರೀ०) 1. ಜೀವನೋಪಾಯ, ಜೀವನಾಧಾರ, ಹೊಟ್ಟೆಪಾಡು. वृत्तिरस्त्यस्याम् — वृत्ति "णः" (वा० ५-२-१०१)। "आजीवो जीविका वार्त्ता" अम०। 2. ಕೃಷಿ, ವ್ಯವಸಾಯ, ವೈಶ್ಯನ ಉದ್ಯೋಗ, —ಕಸಬು. "ते सेतुवार्त्तागजबन्धमुख्यैरभ्युच्छ्रिताः कर्मभिरप्यवन्ध्यैः" रघु० १६-२। 3. ಬದನೆಗಿಡ. 4. ವೃತ್ತಾಂತ, ಸಮಾಚಾರ. 5. ಮಾತು. "वार्त्ताऽपि नासत्यपि सान्यमेति योगादरन्ध्रे हृदि यां निरुन्धे" नैष० ३-४४। 6. ದುರ್ಗಾದೇವಿ.

**वार्त्ताक ವಾರ್ತ್ತಾಕ** (ಪುಂ) ಬದನೆಗಿಡ. वार्त्तमारोग्यमाकयति — अक (कुटिलायां गतौ) + णिच् "अण्" (३-२-१)। जाति० "ङीष्" (४-१-६३)। **वार्त्ताकी ವಾರ್ತ್ತಾಕೀ.**

**वार्त्ताकिन् ವಾರ್ತ್ತಾಕಿನ್** (ಪುಂ) ಬದನೆಗಿಡ.

**वार्त्ताकु ವಾರ್ತ್ತಾಕು** (ಪುಂ) ಬದನೆಗಿಡ. वर्ततेऽनेन—वृतु (वर्तने) "काकुः" (उ० ३-७९)। "वातिङ्गणस्तु वार्त्ताकुः" त्रिकाण्ड०।

**वार्त्तायन ವಾರ್ತ್ತಾಯನ** (ಪುಂ) ಪ್ರಣಿಧಿ, ದೂತ, ಬಾಯಿಮಾತಿನಿಂದ ಸಮಾಚಾರ ತಿಳಿಸುವವನು. वार्त्तानामयनमनेन।

**वार्त्तावह ವಾರ್ತ್ತಾವಹ** (ಪುಂ) 1. ಅಡ್ಡೆ ಹೊರುವವನು, ಕಾವಡಿ ಹೊರುವವನು. 2. ಸಂದೇಶವನ್ನು ಒಯ್ಯುವವನು, ಬಾಯಿಮಾತನ್ನು ತಲುಪಿಸುವವನು. वार्तया: वहः। वार्त्तया हरः —**वार्त्ताहरः ವಾರ್ತ್ತಾಹರಃ.**

**वार्त्तिक ವಾರ್ತ್ತಿಕ** (पुं०) 1. ಸಮಾಚಾರವನ್ನು ತಿಳಿದವನು. वृत्तिं वेद "ठक्" (४-२-६०)। 2. ಚರ, ದೂತ, ಸಂದೇಶವನ್ನು ಒಯ್ಯುವವನು. "अथ वार्त्तिकः। वार्त्तायनः प्रवृत्तिज्ञः" त्रिकाण्ड०। (न०) 3. ಗ್ರಂಥ ಸೂತ್ರಗಳ ವಿವರಣೆಯನ್ನು ತಿಳಿಸುವ ಒಂದು ಗ್ರಂಥ, ಸೂತ್ರಗಳಲ್ಲಿರುವ ನ್ಯೂನಾತಿರೇಕಗಳನ್ನು ತಿಳಿಸುವ ಗ್ರಂಥ. "उक्तानुक्तदुरुक्तार्थचिन्ताकारि तु वार्त्तिकम्"। वृत्तिः ग्रन्थसूत्रविवरणम्, तत्र साधुः "ठक्" (४-४-१०२)।

**वार्त्रघ्न ವಾರ್ತ್ರಘ್ನ** (पुं०) 1. ಇಂದ್ರಪುತ್ರನಾದ ಅರ್ಜುನ. वृत्रघ्नः अपत्यं पुमान् — वृत्रहन् "अण्" (४-१-९२)। "सव्यसाची सुभद्रेशः शब्दभेदी कपिध्वजः। वार्त्रघ्नश्चापि बीभत्सुः" त्रिकाण्ड०। "अथ भूतानि वार्त्रघ्नशरेभ्यस्तत्र तत्रसुः" किरा० १५-१। 2. ಜಯಂತ. (वि०) 3. ಇಂದ್ರನ ಸಂಬಂಧವಾದ. वृत्रघ्नः इदम् "अण्" (४-३-१२०)।

**वार्दर ವಾರ್ದರ** (न०) 1. ಗುಲಗಂಜಿ. 2. ಬಲಗಡೆ ಸುಳಿಯಿರುವ ಶಂಖ. 3. ಜಲ, ನೀರು. 4. ಗುಲಗಂಜಿಯ ಬಳ್ಳಿ. 5. ಮಾತು, ವಾಕ್ಕು. "वार्दरं कृष्णलाबीज-दक्षिणावर्तशङ्खयोः। नीरे च काकचिञ्चायां भारत्यां च नपुंसकम्" मेदि०। 6. ಮಾವಿನ ಬೀಜ. "काकचिञ्चाम्रबीजेऽपि वाचि वार्दरमिष्यते" विश्व०।

**वार्दल ವಾರ್ದಲ** (न०) 1. ದುರ್ದಿನ, ಮೇಘದಿಂದ ಆವೃತವಾದ ದಿನ. वार्भिः दलति — दल (विशरणे) "घः" (३-३-११८)। (पुं०) 2. ಮಸಿಕುಡಿಕೆ. "वार्दलं दुर्दिने मेलानन्दायां वार्दलः स्मृतः" मेदि०।

**वार्द्धक ವಾರ್ದ್ಧಕ** (न०) 1. ಮುಪ್ಪು, ಮುದಿತನ. वृद्धस्य भावः "वुञ्" (५-१-१३३)। "वार्द्धके मुनिवृत्तीनां योगेनान्ते तनुत्यजाम्" रघु० १-८। 2. ವೃದ್ಧನ ಕಾರ್ಯ. वृद्धस्य कर्म "वुञ्" (५-१-१३३)। 3. ವೃದ್ಧರ ಸಮೂಹ. वृद्धानां समूहः "वुञ्" (वा० ४-२-३९)। "स्थितैः समादाय महर्षिवार्द्धकाद्वने तदातिथ्यमशिक्षि शाखिभिः" नैष० १-७७।

**वार्द्धक्य ವಾರ್ದ್ಧಕ್ಯ** (न०) ಮುಪ್ಪು, ಮುದಿತನ. वार्द्धक स्वार्थे "ष्यञ्" (५-१-१२४)।

**वार्धि ವಾರ್ಧಿ** (पुं०) ಸಮುದ್ರ, ಕಡಲು. वारि जलं धीयतेऽत्र — डु धाञ् (धारणपोषणयोः) "किः" (३-३-९३)।

**वार्धुषि ವಾರ್ಧುಷಿ** (पुं०) ಬಡ್ಡಿಯ ಹಣದಿಂದ ಜೀವಿಸುವವನು. वार्द्धुषिक पृषो० कलोपः।

**वार्धुषिक ವಾರ್ಧುಷಿಕ** (पुं०) ಬಡ್ಡಿಯ ಹಣದಿಂದ ಬದುಕುವವನು. वृद्ध्यर्थं द्रव्यं वृद्धिः, तां प्रयच्छति "ठक्" (४-४-३०)। वृद्धेः वृधुषिभावः (वा० ४-४-३०)।

**वार्धुष्य ವಾರ್ಧುಷ್ಯ** (न०) ಅಧಿಕ ಬಡ್ಡಿಯನ್ನು ಸಂಪಾದಿಸುವುದು. वार्धुषेर्भावः "ष्यञ्" (५-१-१२४)। "वार्धुष्यं धान्यवर्धनी" त्रिकाण्ड०।

**वार्ध्र ವಾರ್ಧ್ರ** (न०) ಚರ್ಮದ ಹಗ್ಗ. वध्र्यै इदम् "अञ्" (५-१-१५)।

**वार्ध्रीणस ವಾರ್ಧ್ರೀಣಸ** (पुं०) 1. ಖಡ್ಗಮೃಗ, ಘೇಂಡಾಮೃಗ. 2. ಕಾಡುಮೇಕೆ.

**वार्भट ವಾರ್ಭಟ** (पुं०) ಮೊಸಳೆ. वारि जले भट इव।

**वार्मण ವಾರ್ಮಣ** (न०) ಕವಚಗಳ ಸಮೂಹ. वर्मणां समूहः "अण्" (४-२-३८)।

**वार्मिण ವಾರ್ಮಿಣ** (न०) ಕವಚವನ್ನು ತೊಟ್ಟಿರುವ ಯೋಧರ ಸಮೂಹ. वर्मिणां समूहः "अण्" (४-२-३८)।

**वार्मुच् ವಾರ್ಮುಚ್** (पुं०) ಮೇಘ, ಮೋಡ. वाः वारि मुञ्चति — मुच्लृ (मोक्षणे) "क्विप्" (३-२-७६)।

**वार्य ವಾರ್ಯ** (वि०) 1. ಪ್ರಾರ್ಥಿಸಲ್ಪಡುವ, ಕೋರಲ್ಪಡುವ. 2. ಯಾಚಿಸಲ್ಪಡುವ, ಬೇಡಲ್ಪಡುವ. वृङ् (संभक्तौ) "ण्यत्" (३-१-१२४)।

**वार्यमाण ವಾರ್ಯಮಾಣ** (वि०) ತಡೆಯಲ್ಪಡುತ್ತಿರುವ. वृञ् (आवरणे)+णिच् कर्म० "शानच्" (३-२-१२४)। "सलुः सरोषपरिचारकवार्यमाणा दामाञ्चलस्खलित लोलपदं तुरङ्गाः" माघ० ५-६१।

**वार्वणा ವಾರ್ವಣಾ** (स्त्री०) ನೀಲಿನೊಣ.

**वार्ष ವಾರ್ಷ** (वि०) 1. ವರ್ಷಸಂಬಂಧವಾದ. 2. ಮಳೆಯ ಸಂಬಂಧವಾದ.

**वार्षिक ವಾರ್ಷಿಕ** (न०) 1. ಕಹಿದಸಿ, ನೀರಾಮ ಬಳ್ಳಿ. वर्षासु साधु "ठक्" (४-३-१८)। (वि०) 2. ವರ್ಷದಲ್ಲಿ ಉಂಟಾದ, ಒಂದು ಸಂವತ್ಸರದಲ್ಲಿ ಹುಟ್ಟಿದ. वर्षे भवः "ठञ्" (४-३-११)। "यात्राबलिविधानं च सर्ववार्षिकपर्वसु" भाग० ११-११-३७। 3. ವರ್ಷಾಕಾಲದಲ್ಲಿ ಉಂಟಾದ. वर्षासु भवम् "ठक्" (४-३-११)। "वार्षिकं संजहारेन्द्रो धनुर्जैत्रं रघुर्दधौ" रघु० ४-१६।

**वार्षिला ವಾರ್ಷಿಲಾ** (स्त्री०) ಆಲಿಕಲ್ಲು, ಶಿಲಾವೃಷ್ಟಿ, ವರ್ಷೋಪಲ. वारिजाता शिला। पृषो०।

**वार्षुक ವಾರ್ಷುಕ** (वि०) ಮಳೆಯನ್ನು ಸುರಿಸುವ, ನೀರನ್ನು ಸುರಿಸುವ. वृषु (सेचने) "उकञ्" (३-२-१५४)। स्वार्थे "अण्"।

**वार्ष्णेय ವಾರ್ಷ್ಣೇಯ** (पुं०) ವೃಷ್ಣಿವಂಶದಲ್ಲಿ ಹುಟ್ಟಿದವನು, ಯಾದವರ ಸಂತತಿಯಲ್ಲಿ ಜನಿಸಿದವನು. वृष्णे-र्गोत्रापत्यं पुमान्—वृष्णि "ढक्" (४-१-१२२)। "सरित्पतीनामिव सन्निपाते वार्ष्णेयदैतेयबलोदधीनाम्" याद० २०-२२।

**वाल ವಾಲ** (पुं०) ಕೇಶ, ಕೂದಲು. वलति—वल (प्राणने) "ण:" (३-१-१४०)। वबयोरभेदः। ಮುಂತಾಗಿ बाल ಪದದ ಅರ್ಥ.

**वालक ವಾಲಕ** (पुं०) "बालक" ಪದದಲ್ಲಿ ನೋಡಿ. वबयोरभेदः।

**वालिन् ವಾಲಿನ್** (पुं०) ಕಿಷ್ಕಿಂಧಾಧಿಪತಿಯಾಗಿದ್ದ ಒಬ್ಬ ವಾನರರಾಜ, ಇಂದ್ರನ ಪುತ್ರ, ಸುಗ್ರೀವನ ಅಣ್ಣ. ಇವನ ಪತ್ನಿ ತಾರೆ. ಅಂಗದನು ಇವನ ಪುತ್ರ. [ಋಕ್ಷರಜಸ್ಸೆಂಬ ವಾನರನೊಬ್ಬನು ಒಂದು ದಿನ ಸ್ತ್ರೀರೂಪ ಪಡೆದಿದ್ದಾಗ ಸೂರ್ಯನ ತೇಜಸ್ಸು ಕಂಠದ ಮೇಲೆ ಬಿದ್ದು ಅದರಿಂದ ಸುಗ್ರೀವನು ಹುಟ್ಟಿದನು. ಇಂದ್ರನ ತೇಜಸ್ಸು ಬಾಲದ ಮೇಲೆ ಬಿದ್ದು ವಾಲಿಯು ಹುಟ್ಟಿದನು. ಋಕ್ಷರಜಸ್ಸಿನ ತರುವಾಯ ವಾಲಿಯು ರಾಜನಾದನು. ವಾಲಿಯು ಮಹಾಬಲಶಾಲಿ. ಎದುರಾಳಿಯು ಯುದ್ಧ ಮಾಡುತ್ತಿದ್ದಾಗ ಅವನ ಅರ್ಧ ಶಕ್ತಿಯು ಇವನಿಗೆ ಬರುವಂತೆ ವರವನ್ನು ಪಡೆದಿದ್ದನು. ಒಂದು ಸಮಯದಲ್ಲಿ ತನಗೆ ಅಹಿತಕಾರ್ಯವನ್ನು ಮಾಡಿದನೆಂಬ ಶಂಕೆಯಿಂದ ಸುಗ್ರೀವನನ್ನೂ ರಾಜ್ಯದಿಂದ ಓಡಿಸಿಬಿಟ್ಟನು. ಇದರಿಂದ ಹೆದರಿದ ಸುಗ್ರೀವನು ವಾಲಿಗೆ ಪ್ರವೇಶವಿಲ್ಲದ ಮತಂಗಋಷಿಯ ಆಶ್ರಮಕ್ಕೆ ತನ್ನ ಸಂಗಡಿಗರೊಡನೆ ಹೋಗಿ ನೆಲಸಿದನು. ಸೀತಾಪಹಾರವಾದ ನಂತರ ಸೀತೆಯನ್ನು ಹುಡುಕಿಕೊಂಡು ಲಕ್ಷ್ಮಣನೊಡನೆ ಶ್ರೀರಾಮನು ಸುಗ್ರೀವನಿದ್ದ ಋಶ್ಯಮೂಕ ಪರ್ವತಕ್ಕೆ ಬರಲು ಸುಗ್ರೀವನು ಶ್ರೀರಾಮನೊಡನೆ ಸಖ್ಯವನ್ನು ಬೆಳೆಸಿ ತನ್ನ ಕಷ್ಟವನ್ನು ನಿವೇದಿಸಿಕೊಂಡನು. ಶ್ರೀರಾಮನ ಬಲದಿಂದ ಸುಗ್ರೀವನು ವಾಲಿಯೊಡನೆ ಯುದ್ಧ ಮಾಡಲು ಹೊರಟಾಗ ವಾಲಿಯು ಶ್ರೀರಾಮನಿಂದ ಹತನಾದನು. ಶ್ರೀರಾಮನು ಸುಗ್ರೀವನಿಗೆ ರಾಜ್ಯವನ್ನು ವಹಿಸಿಕೊಟ್ಟು ಅಂಗದನನ್ನು ಯುವರಾಜನನ್ನಾಗಿ ಮಾಡಿದನು.]

**वालुक ವಾಲುಕ** (न०) 1. ಸುರುಸುರುಕೆ ಗಿಡ. (स्त्री०) —का—ಕಾ. 2. ಮರಳು.

**वाल्क ವಾಲ್ಕ** (न०) 1. ನಾರುಬಟ್ಟೆ. वल्कस्य विकारः "अण्" (४-३-१३४)। (वि०) 2. ನಾರಿನಿಂದ ತಯಾರಿಸಲ್ಪಟ್ಟ.

**वाल्कल ವಾಲ್ಕಲ** (न०) 1. ನಾರುಬಟ್ಟೆ. (वि०) 2. ನಾರಿನಿಂದ ತಯಾರಿಸಲ್ಪಟ್ಟ. वल्कलस्येदम् "अण्" (४-३-१२०)।

**वाल्मीकि ವಾಲ್ಮೀಕಿ** (पुं०) ವಾಲ್ಮೀಕಿಮಹರ್ಷಿ, ರಾಮಾಯಣ (ಆದಿಕಾವ್ಯ) ವನ್ನು ರಚಿಸಿದ ಆದಿಕವಿ, ಪ್ರಚೇತಸನ ಪುತ್ರ. वल्मीके भवः वल्मीकस्यापत्यं वा "इञ्" (४-१-९५)। [ಈ ಮಹರ್ಷಿಯು ಬೇಡರ ಸಹವಾಸದಿಂದ ದೊಡ್ಡ ಚೋರನಾಗಿದ್ದನು. ಒಂದು ದಿನ ಸಪ್ತರ್ಷಿಗಳು ಮಾಡಿದ ಉಪದೇಶದಿಂದ ರಾಮಧ್ಯಾನ ಪರಾಯಣನಾಗಿದ್ದ ಈ ಋಷಿಯ ಮೇಲೆ ವಲ್ಮೀಕ (ಹುತ್ತ) ವು ಬೆಳೆದುಹೋಗಿದ್ದಿತು. ಮತ್ತೆ ಸಪ್ತರ್ಷಿಗಳು ಬಂದು ಇವನನ್ನು ಹುತ್ತದಿಂದ ಹೊರಗೆ ಬರಮಾಡಿ ವಾಲ್ಮೀಕಿಯೆಂದು ಹೆಸರಿಟ್ಟರು. ವಾಲ್ಮೀಕಿಮಹರ್ಷಿಯು ಒಮ್ಮೆ ನದಿಗೆ ಸ್ನಾನಕ್ಕಾಗಿ ಹೋಗಿದ್ದಾಗ ಕ್ರೌಂಚ ದಂಪತಿಗಳಲ್ಲಿ ಪುರುಷಪಕ್ಷಿಯೊಂದನ್ನು ಒಬ್ಬ ಬೇಡನು ಸಂಹರಿಸಿದ್ದನ್ನು ಕಂಡು ಅವನಿಗೆ ಕೊಟ್ಟ ಶಾಪವು ಛಂದೋಬದ್ಧವಾದ ವಾಕ್ಯವಾಗಿ ಹೊರಟಿತು. ಇದರಿಂದ ಚಿಂತೆಗೊಳಗಾಗಿದ್ದ ಈ ಋಷಿಯನ್ನು ಬ್ರಹ್ಮನು ಸಂಧಿಸಿ ಆ ವಾಕ್ಯವು ಮಂಗಳಾರ್ಥಪ್ರದವಾದುದೆಂದು ಹೇಳಿ ಈ ಮಂಗಳ ಶ್ಲೋಕದಿಂದ ಪ್ರಾರಂಭಿಸಿ ಶ್ರೀಮದ್ರಾಮಾಯಣವನ್ನು ರಚಿಸಬೇಕೆಂದು ಹೇಳಿ ಅಂತರ್ಧಾನನಾದನು. ಅನಂತರ ರಾಮಾಯಣದ ಕಥಾಸಾರವನ್ನು ನಾರದ ಮಹರ್ಷಿಯಿಂದ ತಿಳಿದುಕೊಂಡು ಕರತಲಾಮಲಕವಾದ ರಾಮಾಯಣ ಕಥೆಯನ್ನು ಇಪ್ಪತ್ತನಾಲ್ಕು ಸಹಸ್ರ ಗ್ರಂಥ (ಶ್ಲೋಕ) ಗಳಿಂದ ರಚಿಸಿದರು. ಇದರಿಂದ ಶ್ರೀಮದ್ ರಾಮಾಯಣಕ್ಕೆ **"ವಾಲ್ಮೀಕಿ ರಾಮಾಯಣ"** ಎಂದು ಹೆಸರಾಯಿತು. ಶ್ರೀರಾಮನ ಆಜ್ಞೆಯಂತೆ ಲಕ್ಷ್ಮಣನು ಸೀತಾದೇವಿಯನ್ನು ಅರಣ್ಯದಲ್ಲಿ ಬಿಟ್ಟುಹೋಗಲು ವಾಲ್ಮೀಕಿಮಹರ್ಷಿಯು ತನ್ನ ಆಶ್ರಮಕ್ಕೆ ಕರೆದುಕೊಂಡು ಹೋಗಿ ಋಷಿಪತ್ನಿಯರಮೂಲಕ ಸೀತೆಯನ್ನು ಉಪಚರಿಸಿದರು. ಅಲ್ಲಿ ಸೀತೆಯು ಪ್ರಸವಿಸಿದ ಅವಳಿ ಮಕ್ಕಳಿಗೆ ಲವಕುಶರೆಂದು ನಾಮಕರಣಮಾಡಿದರು. ಲವಕುಶರಿಗೆ ರಾಮಾಯಣವನ್ನು ಉಪದೇಶಿಸಿ ಶ್ರೀರಾಮನ ಬಳಿಗೆ ಬಂದು ಅವರಿಂದ ರಾಮಾಯಣವನ್ನು ಹಾಡಿಸಿದರು. ಇತ್ಯಾದಿ.] "वाल्मीकेररहितरामलक्ष्मणानां साधर्म्यं दधति गिरां महासरस्यः" माघ० ४-५९।

**वाल्लभ्य ವಾಲ್ಲಭ್ಯ** (न०) ಪ್ರೀತಿ, ಪ್ರೇಮ. वल्लभस्य भावः "ष्यञ्" (५-१-१२४)।

**वावदूक ವಾವದೂಕ** (वि०) ಹೆಚ್ಚು ಮಾತಾಡುವವನು, ಹರಟೆಹೊಡೆಯುವವನು. अतिशयेन वदति — वद (व्यक्तायां वाचि) + "यङ्" (३-१-२२)। "ऊकः" (उ० ४-४१)। यङो लुक् (२-४-७४)। "वावदूकोऽतिवक्तरि" अम०। "अनृतस्यावमन्तारो वक्तारो जनसंसदि। चरन्ति वसुधां कृत्स्नां वावदूका बहुश्रुताः" भा० शान्ति० १९-२८।

**वावय ವಾವಯ** (पुं०) ಒಂದು ಜಾತಿಯ ತುಲಸಿ.

**वावुट ವಾವುಟ** (पुं०) 1. ಹಡಗು. 2. ದೋಣಿ, 3. ತೆಪ್ಪ.

**वावृत्त ವಾವೃತ್ತ** (वि०) ಆರಿಸಲ್ಪಟ್ಟ, ಆಯ್ಕೆಮಾಡಲ್ಪಟ್ಟ. वावृतु (वर्तने) "क्तः" (३-२-१०२)।

**वावृत्यमान ವಾವೃತ್ಯಮಾನ** (वि०) ವರಿಸಲು ಅಪೇಕ್ಷೆಯುಳ್ಳವನು, ಆಯ್ಕೆ ಮಾಡುವವನು. वावृतु (वर्तने) "शानच्" (३-२-१२४)। "ततो वावृत्यमानाऽसौ रामशालां न्यविक्षत" भट्टि० ४-२८।

**वाशक ವಾಶಕ** (पुं०) 1. ಆಡುಸೋಗೆ. (वि०) 2. ಶಬ್ದ ಮಾಡುವ, ಸದ್ದುಮಾಡುವ. वाशृ (शब्दे) "ण्वुल्" (३-१-१३३)। "वाशको वाजिदन्तकः" अम०।

**वाशन ವಾಶನ** (न०) 1. ಶಬ್ದಮಾಡುವುದು, ಕೂಗಿಕೊಳ್ಳುವುದು. वाशृ (शब्दे) "ल्युट्" (३-३-११५)। 2. ಪಕ್ಷಿಗಳ ಕೂಗು, ಪಕ್ಷಿಗಳ ಧ್ವನಿ. 3. ದುಂಬಿಯ ಝೇಂಕಾರ. (वि०) 4. ಶಬ್ದಮಾಡುವ. 5. ಕೂಗಿಕೊಳ್ಳುವ. वाशृ "ल्युः" (३-१-१३४)।

**वाशिका ವಾಶಿಕಾ** (स्त्री०) ಆಡುಸೋಗೆ ಗಿಡ.

**वाशित ವಾಶಿತ** (न०) ಪಕ್ಷಿಗಳ ಶಬ್ದ, ಹಕ್ಕಿಗಳ ಕೂಗು. वाशृ (शब्दे) भावे "क्तः" (३-३-११४)। "नैरन्तर्याच्छिन्नदेहान्तरालं दुर्भक्षस्य ज्वालिना वाशितेन" माघ० १८-७६।

**वाशिता ವಾಶಿತಾ** (स्त्री०) 1. ಹೆಂಗಸು. 2. ಹೆಣ್ಣು ಆನೆ.

**वाशुरा ವಾಶುರಾ** (स्त्री०) ರಾತ್ರಿ. वाश्यतेऽस्याम्—वाशृ (शब्दे) "उरच्" (उ० १-३८)।

**वाश्र ವಾಶ್ರ** (पुं०) 1. ದಿವಸ, ಒಂದು ದಿನ. (न०) 2. ವಾಸಗೃಹ, ಮನೆ. 3. ಚತುಷ್ಪಥ, ನಾಲ್ಕು ರಸ್ತೆಗಳು ಕೂಡುವ (ಚೌಕ) ಜಾಗ. वाश्यतेऽत्र — वाशृ (शब्दे) "रक्" (उ० २-१३)। "वाश्रो ना दिवसे क्लीबं मन्दिरे च चतुष्पथे" मेदि०।

**वास ವಾಸ** (पुं०) 1. ಗೃಹ, ಮನೆ. वसन्त्यस्मिन् — वस (निवासे) "घञ्" (३-३-१२१)। "नैवंविधेषु वासेषु भयमस्ति वरानने" हरिवं०। 2. ವಸ್ತ್ರ, ಬಟ್ಟೆ. वास्यते —वास (उपसेवायाम्)+णिच् "घञ्" (३-३-१२१)। 3. ವಾಸಮಾಡುವುದು, ಇರುವುದು, ಅವಸ್ಥಾನ. वस (निवासे) "घञ्" (३-३-१८)। "वासो वेश्मन्यवस्थाने" हेम०। "सौधवासमुटजेन विस्मृतः" रघु० १९-२। 4. ಪರಿಮಳ, ಸೌರಭ, ಕಂಪು. 5. ಒಂದು ಜಾತಿಯ ಕಬ್ಬು.

**वासक ವಾಸಕ** (पुं०) 1. ಆಡುಸೋಗೆ ಗಿಡ. 2. ದಿವಸ. 3. ವಾಸಗೃಹ. (वि०) 4. ವಾಸನೆಯುಂಟುಮಾಡುವ.

**वासकर्णी ವಾಸಕರ್ಣೀ** (स्त्री०) 1. ಯಜ್ಞಶಾಲೆ, ಯಾಗ ನಡೆಯುವ ಜಾಗ. 2. ಪ್ರದರ್ಶನ ಶಾಲೆ.

**वासकसज्जा ವಾಸಕಸಜ್ಜಾ** (स्त्री०) ಸಂಕೇತದ ದಿವಸ, ಪ್ರಿಯನ (ನಾಯಕನ) ಸಮಾಗಮವನ್ನು ಪ್ರತೀಕ್ಷಿಸುತ್ತ ಶಯನಗೃಹಾಲಂಕಾರ ಮಾಡುವ ನಾಯಿಕೆ. वासके प्रियागमनवासरे सज्जति — षस्ज (गतौ) "अच्" (३-१-१३४)। "कुरुते मण्डनं यस्याः सज्जिते वासवेश्मनि। सा तु वासकसज्जा स्याद्विदितप्रियसंगमा" सा० द०।

**वासका ವಾಸಕಾ** (स्त्री०) ಆಡುಸೋಗೆ ಗಿಡ.

**वासगृह ವಾಸಗೃಹ** (न०) ಮನೆಯ ಒಳಭಾಗ, ಅಂತರ್ಗೃಹ, ಶಯನ ಗೃಹ. वासस्य गृहम्। "देव्यास्ततो विमनसः परिसान्त्वनाय धर्मासनाद्विशति वासगृहं नरेन्द्रः" उ० रा० १-७।

**वासतेय ವಾಸತೇಯ** (वि०) 1. ವಾಸಕ್ಕೆ ಯೋಗ್ಯವಾದ. वसतौ साधु "ढञ्" (४-४-१०४)। "वनेषु वासतेयेषु निवसन् पर्णसंस्तरः" भट्टि० ४-८। स्त्रियां "ङीप्" (४-१-१५)। **वासतेयी ವಾಸತೇಯೀ**. 2. ರಾತ್ರಿ. "वासागारं प्रभुरधिगतो वासतेयीं निनाय" याद० १८-१३६।

**वासभवन ವಾಸಭವನ** (न०) ವಾಸಮಾಡುವ ಮನೆ. **–मन्दिरम् –ಮಂದಿರಮ್, –सदनम् –ಸದನಮ್.**

**वासन ವಾಸನ** (न०) 1. ವಸ್ತ್ರ, ಬಟ್ಟೆ. वास्यते—वास (उपसेवायाम्) + णिच् "ल्युट्" (३-३-११३)। 2. ವಾಸನೆಕಟ್ಟುವುದು. वस (स्नेहने)+णिच् भावे "ल्युट्"

(३-३-११५)। 3. ಪ್ರೋತ್ಸಾಹಿಸುವುದು, ಉತ್ಸಾಹವನ್ನುಂಟುಮಾಡುವುದು. 4. ಗಿಂಡಿ ಹೂಜಿ ಮುಂತಾದ ನೀರು ತುಂಬಿಡುವ ಪಾತ್ರೆ. "वासनं धूपनेऽपि च। वारिधान्यां च वस्त्रे च" मेदि०। 5. ಜ್ಞಾನ, ತಿಳಿವಳಿಕೆ. 6. ವಾಸಮಾಡುವುದು. 7. (ಒಂದು ವಸ್ತುವಿಗೆ) ಆಧಾರವಾದ ಪೆಟ್ಟಿಗೆ, ವಸ್ತುವನ್ನಿಟ್ಟು ಮೊಹರು ಮಾಡಿದ ಪೆಟ್ಟಿಗೆ. (वि०) 8. ವಸ್ತ್ರಸಂಬಂಧವಾದ. वस्त्रस्येदम् "अण्" (४-३-१२०)। 9. ವಸ್ತ್ರದಿಂದ ಕೊಳ್ಳಲ್ಪಟ್ಟ. वसनेन क्रीतम् "अण्" (५-१-२७)। (स्त्री०) -ना-ನಾ. 10. ಪ್ರತ್ಯಾಶೆ, ಪ್ರತೀಕ್ಷೆ, ಎದುರು ನೋಡುವುದು. वस + णिच् "युच्" (३-३-१०७)। 11. ಜ್ಞಾನ. 12. ಸ್ಮರಣೆಯನ್ನು ಉಂಟುಮಾಡುವ ಸಹಜವಾದ ಒಂದು ಶಕ್ತಿ, ಜನ್ಮಾಂತರ ವಿಷಯವನ್ನು ಸ್ಮೃತಿಗೆ ತರುವ ಒಂದು ಶಕ್ತಿ. 13. ಒಲುವು, ಪ್ರೀತಿ, ವಾತ್ಸಲ್ಯ. 14. ವಾಸನೆಕಟ್ಟುವುದು. "प्रत्याशाज्ञानयो: स्त्रियाम्" मेदि०।

**वासन्त ವಾಸಂತ** (पुं०) 1. ಕೋಗಿಲೆ. वसन्ते भव: "अण्" (४-३-१६)। 2. ಒಂಟೆಯ ಮರಿ. 3. ಆನೆಯ ಮರಿ. 4. ಮಲಯ ಮಾರುತ, ಮಲಯ ಪರ್ವತದಿಂದ ಬೀಸುವ ದಕ್ಷಿಣ ದಿಕ್ಕಿನ ಗಾಳಿ. 5. ವಿಟಪುರುಷ, ವ್ಯಭಿಚಾರಿ. (वि०) 6. ವಸಂತಋತುವಿನ ಸಂಬಂಧವಾದ. वसन्तस्येदम् "अण्" (४-३-१२०)। 7. ವಸಂತಋತುವಿನಲ್ಲಿ ಉಂಟಾದ. वसन्ते भव: "अण्" (४-३-१६)। 8. ಗಮನಿಸುವ, ಲಕ್ಷ್ಯವಿಟ್ಟು ನೋಡುವ. "वासन्त: परपुष्टे स्यात्करभेऽवहिते विटे" हेम०।

**वासन्तक ವಾಸಂತಕ** (वि०) ವಸಂತಋತುವಿನಲ್ಲಿ ಬಿತ್ತಲ್ಪಟ್ಟ. वसन्ते उप्तम्—वा "वुञ्" (४-३-४६)। पक्षे वासन्तम्।

**वासन्तिक ವಾಸಂತಿಕ** (वि०) 1. ವಸಂತಋತುವನ್ನು ವರ್ಣಿಸುವ ಗ್ರಂಥವನ್ನು ಅಧ್ಯಯನ ಮಾಡುವವನು ಅಥವಾ ತಿಳಿದವನು. वसन्त: वसन्तवर्णनपरो ग्रन्थ:- तमधीते वेद वा—"ठक्" (४-२-६३)। 2. ವಸಂತ ಸಂಬಂಧವಾದ. वसन्तस्येदम् "ठञ्" (४-३-२०)। "सप्रणवशिरस्त्रिपदां सावित्रीं ग्रैष्मवासन्तिकान् मासानधीयानमप्यसमवेतरूपं ग्राहयामास" भाग० ५-९-५। (पुं०) 3. (ನಾಟಕಗಳಲ್ಲಿ) ವಿದೂಷಕ.

**वासन्ती ವಾಸಂತೀ** (स्त्री०) 1. ಕಾಡಿರುವಂತಿಗೆ ಗಿಡ. वसन्तस्येयम् "अण्" (४-३-१२०)। 2. ಒಂದು ಜಾತಿಯ ಕಾಡುಮಲ್ಲಿಗೆ. 3. ಹಸರು ಪಾದರಿ ಗಿಡ. "वासन्ती माधवी यूथीपाटलासु" हेम०।

**वासयोग ವಾಸಯೋಗ** (पुं०) ವಾಸನೆಯ ಪುಡಿ, ಸುಗಂಧ ಚೂರ್ಣ. वासाय योग: उपाय:।

**वासर ವಾಸರ** (पुंन०) 1. ದಿವಸ, ಹಗಲು. वासयति—वस (निवासे) + णिच् "अर:" (उ० ३-१३२)। "नवकनकपिशङ्गं वासराणां विधातु: ककुभि कुलिशपाणेर्भाति भासां वितानम्" माघ० ११-४३। (पुं०) 2. ಒಂದು ನಾಗ, ಒಂದು ಸರ್ಪ. "वासरस्तु पुमान् नागप्रभेदे दिवसेऽस्त्रियाम्" मेदि०।

**वासरपति ವಾಸರಪತಿ** (पुं०) ರವಿ, ಸೂರ್ಯ. वासरस्य दिवसस्य पति:।

**वासव ವಾಸವ** (पुं०) 1. ಶಕ್ರ, ಇಂದ್ರ. वसूनि रत्नान्यस्य सन्ति—वसु "अण्" (वा० ५-२-१०३)। "वासवस्य वचनं निशम्य तद्भावशुद्धिपरिकर्मिताक्षरम्" याद० १७-१२१। (न०) 2. ವಸುದೇವತಾಕವಾದ ಧನಿಷ್ಠಾ ನಕ್ಷತ್ರ. (वि०) 3. ಇಂದ್ರನ ಸಂಬಂಧವಾದ. वासवस्येदम् "अण्" (४-३-१२०)। स्त्रियां "ङीप्" (४-१-१५)। **वासवी ವಾಸವೀ.** "रक्षाहेतोर्नवशशिभृत: वासवीनां चमूनाम्" मेघ० १-४३।

**वासवी ವಾಸವೀ** (स्त्री०) ಸತ್ಯವತಿ, ವ್ಯಾಸಮಹರ್ಷಿಯ ತಾಯಿ. वसोरपत्यं स्त्री — वसु "अण्" (४-१-९२)। "ङीप्" (४-१-१५)। "दृष्ट्वैव स च तां धीमांश्चकमे चारुहासिनीम्। दिव्यां तां वासवीं कन्यां रम्भोरूं मुनिपुङ्गव:" भा० आदि० ६४-८६।

**वासस् ವಾಸಸ್** (न०) ವಸ್ತ್ರ, ಬಟ್ಟೆ. वस्यतेऽनेन—वस (आच्छादने) कर० "असुन्" (उ० ४-२१८)। "ग्रन्थिमुद्ग्रथयितुं हृदयेशे वासस: स्पृशति मानधनाया:" माघ० १०-६३। "उपानहौ च वासश्च धृतमन्यैर्न धारयेत्" मनु० ४-६६।

**वासागार ವಾಸಾಗಾರ** (न०) 1. ವಾಸಗೃಹ. 2. ಮನೆಯ ಒಳಗಿರುವ ಕೋಣೆ, ಶಯನಗೃಹ. वासस्य गृहम्। "वासागारं प्रभुरधिगत: वासतेयीं निनाय" याद० १८-१३६।

**वासि ವಾಸಿ** (पुं०) ಬಾಚಿ, ಮರವನ್ನು ಕೆತ್ತುವ ಮರಗೆಲಸದವನ (ಬಡಗಿಯ) ಒಂದು ಆಯುಧ. वस (निवासे) "इञ्" (उ० ४-१२४)।

**वासित ವಾಸಿತ** (न०) 1. ತಿರ್ಯಕ್ಪ್ರಾಣಿಗಳ ಶಬ್ದ, ಪಶುಪಕ್ಷಿಗಳ ಕೂಗು. वासृ (शब्दे) भावे "क्त:"

(३-३-११४)। 2. ಜ್ಞಾನ, ಅರಿವು, ತಿಳಿವಳಿಕೆ. (वि०) 3. ವಾಸನೆಕಟ್ಟಲ್ಪಟ್ಟ ವಸ್ತು. वास्यते — वस (स्नेहनादौ) + णिच् "क्तः" (३-२-१०२)। "वासितं भाविते स्ते" मेदि०। 4. ವಸ್ತ್ರದಿಂದ ಸುತ್ತಲ್ಪಟ್ಟ, ಬಟ್ಟೆಯಿಂದ ಮುಚ್ಚಲ್ಪಟ್ಟ. "वासितं सुरभीकृते। ज्ञानमात्रे खगारावे वासितं वस्त्रवेष्टिते" विश्व०।

**वासिता ವಾಸಿತಾ** (स्त्री०) 1. ಹೆಂಗಸು. 2. ಹೆಣ್ಣು ಆನೆ. वासयति — वस (निवासे) + णिच् "क्तः" (३-४-७२)। "वासिता करिणीनार्योः" विश्व०।

**वासिष्ठ ವಾಸಿಷ್ಠ** (पुं०) 1. ವಸಿಷ್ಠಮಹರ್ಷಿಯ ಪುತ್ರ. वसिष्ठस्यायम् "अण्" (४-३-१२०)। 2. ವಸಿಷ್ಠ ಮಹರ್ಷಿಯಿಂದ ರಚಿತವಾದ ಗ್ರಂಥ. वसिष्ठेन कृतो ग्रन्थः "अण्" (४-३-११६)। (वि०) 3. ವಸಿಷ್ಠ ಮಹರ್ಷಿಯ ಸಂಬಂಧವಾದ. वसिष्ठस्येदम् "अण्" (४-३-१२०)।

**वासी ವಾಸೀ** (स्त्री०) ಬಾಚಿ, ಮರವನ್ನು ಕೆತ್ತುವ (ಬಡಗಿಯ) ಒಂದು ಆಯುಧ.

**वासु ವಾಸು** (पुं०) ವಿಷ್ಣು, ನಾರಾಯಣ. वसन्त्यत्र सर्वे — वस (निवासे) "उण्" बाहु०। "कोकः पुराणपुरुषो नलिनेशयश्च वासुर्नरायणपुनर्वसुविश्वरूपाः" त्रिकाण्ड०।

**वासुकि ವಾಸುಕಿ** (पुं०) ಸರ್ಪಗಳ ರಾಜ. वसुकस्यापत्यम् "इञ्" (४-१-९५)। "वासुकिस्तु सर्पराजः" अम०। "ज्वलन्मणिशिखाश्चैनं वासुकिप्रहिता निशि" कुमा० २-३८।

**वासुकेय ವಾಸುಕೇಯ** (पुं०) ವಾಸುಕಿ, ಸರ್ಪಗಳ ರಾಜ. वसुकस्यापत्यम् "ढक्" (४-१-१२३)।

**वासुदेव ವಾಸುದೇವ** (पुं०) 1. ಶ್ರೀಕೃಷ್ಣ, ವಸುದೇವನ ಪುತ್ರ. वसुदेवस्यापत्यम् "अण्" (४-१-११४)। वसति — वस (निवासे) "उण्" बाहु०। वासुश्चासौ देवश्च इति वा। 2. ಮಹಾವಿಷ್ಣು, ಶ್ರೀಮನ್ನಾರಾಯಣ. "सर्वत्रासौ समस्तं वा वसत्यत्रेति वै यतः। ततोऽसौ वासुदेवेति विद्वद्भिः परिगीयते" विष्णुपु० १-२-१२। "वासुदेवः सर्वमिति स महात्मा सुदुर्लभः" गीता ७-१९।

**वासुरा ವಾಸುರಾ** (स्त्री०) 1. ಹೆಂಗಸು. 2. ರಾತ್ರಿ. 3. ಭೂಮಿ. "वासुरा वासिताराव्योर्भुवि" हेम०। "वासुरा वासितायां स्याद्वासितेय्यां मता भुवि" विश्व०। 4. ಹೆಣ್ಣು ಆನೆ.

**वासू ವಾಸೂ** (स्त्री०) ಬಾಲಿಕೆ, ಚಿಕ್ಕ ಹುಡುಗಿ. वास्यते स्वगृहे — वस (निवासे) + णिच् "उः" बाहु०। (ನಾಟಕದಲ್ಲಿ ಇದರ ಪ್ರಯೋಗ).

**वासौकस् ವಾಸೌಕಸ್** (न०) ವಾಸದ ಮನೆ, ಗರ್ಭಗೃಹ, ಒಳಮನೆ, ಶಯನಗೃಹ. वासाय ओकः।

**वास्तव ವಾಸ್ತವ** (न०) ನಿಜವಾದ ವಸ್ತು, ಸ್ಥಿರವಾದ ವಸ್ತು, ಶಾಶ್ವತವಾದ ವಸ್ತು. वस्तु स्वार्थे "अण्" (५-४-३८)। "धर्मः प्रोज्झितकैतवोऽत्र परमो निर्मत्सराणां सतां वेद्यं वास्तवमत्र वस्तु शिवदं तापत्रयोन्मूलनम्" भाग० १-१-२।

**वास्तविक ವಾಸ್ತವಿಕ** (वि०) ಶಾಶ್ವತವಾದ (ವಸ್ತು), ಸ್ಥಿರವಾದ (ವಸ್ತು), ನಿಜವಾಗಿರುವ (ವಸ್ತು). वस्तुना निर्वृत्तम् "ठक्" (५-१-७९)।

**वास्तव्य ವಾಸ್ತವ್ಯ** (वि०) ವಾಸಮಾಡುವವನು, ಇರುವವನು. वसति — वस (निवासे) "तव्यत्" (वा० ३-१-९६)। "प्रसूनक्लृप्तिं दधतः सदर्तवः पुरेऽस्य वास्तव्यकुटुम्बितां ययुः" माघ० १-६६।

**वास्तु ವಾಸ್ತು** (पुंन०) 1. ಗೃಹದ ನಿವೇಶನ, ಮನೆಯನ್ನು ಕಟ್ಟುವ ಸ್ಥಳ, ಗೃಹನಿರ್ಮಾಣಕ್ಕೆ ಯೋಗ್ಯವಾದ ಭೂಮಿ. वसन्त्यत्र — वस (निवासे) "तुन्" स च णित् (उ० १-७०)। "वेश्मभूर्वास्तुरस्त्रियाम्" अम०। ಗೃಹನಿರ್ಮಾಣ (ವಾಸ್ತು) ಶಾಸ್ತ್ರವು ಪ್ರಥಮತಃ ಬ್ರಹ್ಮನಿಂದ ಗರ್ಗಮಹರ್ಷಿಗೆ ಉಪದೇಶಿಸಲ್ಪಟ್ಟು ಅನಂತರ ಅವರಿಂದ ಪರಾಶರರಿಗೆ ಅವರಿಂದ ಬೃಹದ್ರಥನಿಗೆ ಈ ರೀತಿ ಮುನಿ ಪರಂಪರೆಯಿಂದ ವಿಶ್ವಕರ್ಮನಿಗೆ ಉಪದಿಷ್ಟವಾಗಿ ಈಗ ಜಗತ್ತಿನ ಹಿತಕ್ಕಾಗಿ ಪ್ರಚಾರಪಡಿಸಲ್ಪಟ್ಟಿದೆ. "वास्तुज्ञानमथातः कमलभवान्मुनिपरम्परायातम्। क्रियतेऽधुना मयेदं विदग्धसांवत्सरप्रीत्यै" बृहत्सं० ५३-१। "इति प्रोक्तं वास्तुशास्त्रं पूर्वं गर्गाय धीमते। गर्गात्पराशरः प्राप तस्मात्प्राप बृहद्रथः॥ बृहद्रथाद्विश्वकर्मा प्राप्तवान् वास्तुशास्त्रकम्। स विश्वकर्मा जगतो हितायाकथयत्पुनः" विश्वकर्मप्रकाशिका। **ವಾಸ್ತುಪುರುಷನ ಸೃಷ್ಟಿ:** ತನ್ನ ಶರೀರದಿಂದ ಭೂಮ್ಯಾಕಾಶಗಳನ್ನು ತಡೆದು ಅಡಚಣೆಯನ್ನುಂಟುಮಾಡುತ್ತಿದ್ದ ಒಂದು ಭೂತವನ್ನು ದೇವತೆಗಳು ನಿಗ್ರಹಿಸಿ ಅದನ್ನು ಅಧೋಮುಖವಾಗಿ ಇಟ್ಟು ಅದರ ಶರೀರದ ಮೇಲೆ ನಿಂತರು. ಬ್ರಹ್ಮನು ಅದನ್ನು ಅಮರವನ್ನಾಗಿ ಮಾಡಿ ವಾಸ್ತುಪುರುಷನನ್ನಾಗಿ ಕಲ್ಪಿಸಿದನು. "किमपि किल

भूतमभवद्रुन्धानं रोदसी शरीरेण। तदमरगणेन सहसा विनिगृह्याधोमुखं न्यस्तम् ॥ यत्र च येन गृहीतं विबुधेनाधिष्ठितः स तत्रैव । तदमरमयं विधाता वास्तुनरं कल्पयामास" बृहत्सं० ५३-२, ३। ಸಕಲ ದೇವದಾನವರೆಲ್ಲರೂ ಇದರ ಮೇಲೆ ನಿಂತಿರುವುದರಿಂದ ಇದಕ್ಕೆ ವಾಸ್ತುವೆಂಬ ಹೆಸರಾಯಿತು. "येन यत्रैव चाक्रान्तं स तत्रैवाभवत् पुनः। निवासात् सर्वदेवानां वास्तुरित्यभिधीयते" मत्स्यपु०। ಗೃಹನಿರ್ಮಾಣಾನಂತರ ಗೃಹಪ್ರವೇಶಸಮಯದಲ್ಲಿ ವಾಸ್ತುಪೂಜೆ ಹೋಮಗಳು ನಡೆಯಬೇಕು. ವಾಸ್ತುವಿನ ಮಧ್ಯೆ ಇಡುವ ಬಲಿಯೇ ವಾಸ್ತುಪುರುಷನಿಗೆ ಆಹಾರ. ಸಕಲವಿಘ್ನಪರಿಹಾರಪೂರ್ವಕ ಸನ್ಮಂಗಳಪ್ರಾಪ್ತಿಗಾಗಿ ಈ ವಾಸ್ತುಪೂಜಾ ಹೋಮಗಳು ನಡೆಯಬೇಕು. "ततो ब्रह्मादिभिः प्रोक्तं वास्तुमध्ये तु यो बलिः। आहारो वैश्वदेवान्ते न्यूनमस्मिन् भविष्यति। वास्तूपशमनो यज्ञस्तवाहारो भविष्यति। एवमुक्तस्ततो हृष्टः स वास्तुरभवत्तदा। वास्तुयज्ञः स्मृतस्तस्मात् ततः प्रभृति शान्तये" मत्स्यपु०। 2. ಗೃಹ, ಮನೆ. "रवेरविषये वास्तु किं न दीपः प्रकाशयेत्"।

**वास्तुक ವಾಸ್ತುಕ** (न०) ಚಕ್ಕೋತದ ಸೊಪ್ಪು. वास्तु स्वार्थे "कन्"। **वास्तूकम् ವಾಸ್ತೂಕಮ್.**

**वास्तेय ವಾಸ್ತೇಯ** (वि०) 1. ವಾಸಮಾಡಲು ಯೋಗ್ಯವಾದ. 2. ಹೊಟ್ಟೆಗೆ ಸಂಬಂಧಿಸಿದ. 3. ಮೇಕೆಯ ಸಂಬಂಧವಾದ. वस्ति "ढञ्" (४-३-५६)। 4. ವಸ್ತಿ ಸದೃಶವಾದ. वस्तिरिव—"ढञ्" (५-३-१०१)। स्त्रियां "ङीप्" (४-१-१५)। **वास्तेयी ವಾಸ್ತೇಯೀ.**

**वास्तोष्पति ವಾಸ್ತೋಷ್ಪತಿ** (पुं०) ಇಂದ್ರ. वास्तोः गृहक्षेत्रस्य पतिः। निपातनात् (४-२-३२) अलुक्। षत्वम् (८-३-४८)। "वास्तोष्पतिः सुरपतिः" अम०।

**वास्त्र ವಾಸ್ತ್ರ** (पुं०) 1. ವಸ್ತ್ರಗಳಿಂದ ಸುತ್ತಲೂ ಅಲಂಕರಿಸಲ್ಪಟ್ಟ ರಥ. वस्त्रेण परिवृतो रथः "अण्" (४-२-१०)। 2. ವಸ್ತ್ರಸಂಬಂಧವಾದ. वस्त्रस्येदम् "अण्" (४-३-१२०)।

**वास्र ವಾಸ್ರ** (पुं०) ದಿನ, ದಿವಸ. "वास्रो व्युष्टांशके दिनम्" त्रिकाण्ड०।

**वाह ವಾಹ** (पुं०) 1. ಅಶ್ವ, ಕುದುರೆ. उह्यतेऽनेन—वह (प्रापणे) करं० "घञ्" (३-३-१९)। "अभ्यभूयत वाहानां चरतां गात्रसिञ्जितैः" रघु० ४-५६। 2. ವೃಷಭ, ಎತ್ತು. "खे खेलगामी तमुवाह वाहः सशब्दचामीकरकिंकिणीकः" कुमा० ७-४९। 3. ವಾಯು, ಗಾಳಿ. 4. ಬಾಹು, ತೋಳು. 5. ನಾಲ್ಕು ಭಾರಗಳಿಗೆ ಸಮಾನವಾದ ಒಂದು ಅಳತೆ. "वाहो भुजे पुमान् मानभेदाश्ववृषवायुषु" मेदि०। "सार्धसूर्पो भवेत् खारी द्वे खार्यौ गोण्युदाहृता। तामेव भारं जानीयात् वाहो भारचतुष्टयम्"। 6. ಪ್ರವಾಹ. "गङ्गायमुनयोर्वाहौ भात सुगतये नृणाम्" कथास०। 7. ವಾಹನ, ಸಂಚಾರಸಾಧನ. "तच्छ्रुत्वा तत्र भेकानां राजा वाहसमुत्सुकः। जलादुत्तीर्य तत्पृष्ठमारोहत् गतभीर्मुदा" कथास०।

**वाहक ವಾಹಕ** (वि०) ಮೂಟೆ ಮೊದಲಾದುವನ್ನು ಹೊರುವವನು, ಹೊತ್ತು ತರುವವನು. वहति—वह (प्रापणे) "ण्वुल्" (३-१-१३३)। "आचेरुर्विविधाः क्रीडा: वाह्यवाहकलक्षणाः" भाग० १०-१८-२१।

**वाहद्विषत् ವಾಹದ್ವಿಷತ್** (पुं०) ಮಹಿಷ, ಎಮ್ಮೆ. वाहानां द्विषन्। "वाहद्विषत्कासरसैरिभाः" अम०।

**वाहन ವಾಹನ** (न०) 1. ಪ್ರಯಾಣಸಾಧನ, ಸಂಚಾರಸಾಧನ, ರಥ ಆನೆ ಕುದುರೆ ಮೊದಲಾದುವು. वाहयति—वह (प्रापणे) + स्वार्थे णिच् "ल्युट्" (३-३-११३)। "उह्यमान इव वाहनोचितः पादचारमपि न व्यभावयत्" रघु० ११-१०। 2. ಮೂಟೆ ಹೊರಿಸುವುದು. वह+ णिच् "ल्युट्" (३-३-११५)। (वि०) 3. ಮೂಟೆ ಮೊದಲಾದುವನ್ನು ಹೊತ್ತು ತರುವವನು. वह + णिच् "ल्युः" (३-१-१३४)।

**वाहस ವಾಹಸ** (पुं०) 1. ಅಜಗರ, ಹೆಬ್ಬಾವು, ದಾಸರಹಾವು. उह्यते—वह (प्रापणे) "असच्" (उ० ३-११९)। 2. ನೀರು ಹೊರಡುವುದು, ನೀರು ಹರಿಯುವುದು. 3. ನೀರುಚಂಚಲಿ ಗಿಡ. "वाहसः स्यादजगरेऽम्बुनिर्याणसुनिषण्णयोः" हेम०।

**वाहिक ವಾಹಿಕ** (वि०) ನಾಲ್ಕು ಭಾರಗಳಿಂದ ಕೊಳ್ಳಲ್ಪಟ್ಟ. वाहेन क्रीतः—वाह "ठक्" (५-१-२०)।

**वाहित्थ ವಾಹಿತ್ಥ** (न०) ಆನೆಯ ಕುಂಭಸ್ಥಳದ ಕೆಳಭಾಗ, ಆನೆಯ ಹಣೆಯ ಕೆಳಭಾಗ. अवश्यं वहति—वह (प्रापणे) "णिनिः" (३-३-१७०)। सः तिष्ठत्यत्र—ष्ठा (गतिनिवृत्तौ) "कः" (वा० ३-३-५८)। "अधः कुम्भस्य वाहित्थम्" अम०।

**वाहिनी ವಾಹಿನೀ** (स्त्री०) 1. ಸೈನ್ಯ, ಸೇನೆ. वाहाः वाजिप्रभृतयः सन्त्यस्याम् "इनिः" (५-२-११५)।

"हरेरपि प्रति परकीयवाहिनीरविस्यदं प्रववृतिरे चमूचराः" माघ० १७-५०। 2. ಮೂರು ಗಣಗಳ ಸೇನಾಸಮೂಹ.

| | |
|---|---|
| 3 ಪತ್ತಿಗಳು | 1 ಸೇನಾಮುಖ |
| 3 ಸೇನಾಮುಖ | 1 ಗುಲ್ಮ |
| 3 ಗುಲ್ಮಗಳು | 1 ಗಣ |
| 3 ಗಣಗಳು | 1 ವಾಹಿನಿ. |

81 ಆನೆಗಳು 81 ರಥಗಳು 243 ಕುದುರೆಗಳು 405 ಪದಾತಿಗಳು ಒಂದು ವಾಹಿನಿ. 3. ನದಿ, ಹೊಳೆ. वहति—वह (प्रापणे) "णिनिः" (३-१-१३४)। "नावः समुपकर्षध्वं तारयिष्याम वाहिनीम्" रामा०। "वाहिनी स्यात्तरङ्गिण्यां सेना सैन्यप्रभेदयोः" मेदि०।

**वाहिनीपति ವಾಹಿನೀಪತಿ** (पुं०) ಸೇನಾಪತಿ, ದಳಪತಿ. वाहिनीनां पतिः।

**वाह्य ವಾಹ್ಯ** (वि०) 1. ಹೊರಲ್ಪಡುವ, ವಹಿಸಲ್ಪಡುವ. वह (प्रापणे) "ण्यत्" (३-१-१२४)। "मनुष्यवाह्यं चतुरस्रयानमध्यास्य कन्या परिवारशोभि" रघु० ६-१०। 2. ಹೊರಲು ಯೋಗ್ಯವಾದ. 3. ಹೊರಲು ಶಕ್ಯವಾದ. (पुं०) 4. ಎತ್ತು, ವೃಷಭ. (न०) 5. ರಥ, ಗಾಡಿ.

**वि ವಿ** (पुं०) 1. ನೇತ್ರ, ಕಣ್ಣು. 2. ಆಕಾಶ. 3. ವಾಯು. 4. ಪರಮಾತ್ಮ. 5. ಪಕ್ಷಿ, ಹಕ್ಕಿ. "विश्चक्षुषि व्योम्नि वाते परमात्मनि पक्षिणि" नानार्थर०। वा (गतिगन्धनयोः) "इण्" (उ० ४-१३३)। "वीनासुपसरं दृष्ट्वा तेऽन्योन्योपह्वा गुहाम्" भट्टि० ७-६०। (अव्य०) 6. ನಿಯೋಗ. 7. ನಿಗ್ರಹ, ದಂಡಿಸುವುದು. 8. ಪಾದಪೂರಣ. 9. ನಿಶ್ಚಯ, ನಿರ್ಣಯ. 10. ಅಸಹನೆ. 11. ಹೇತು, ಕಾರಣ. 12. ಅಲ್ಪ, ಸ್ವಲ್ಪ. 13. ಪರಿಭವ, ಅವಮಾನ. 14. ವಿನಿಯೋಗ, ಉಪಯೋಗಿಸುವುದು. 15. ಅವ್ಯಾಪ್ತಿ. 16. ಶುದ್ಧಿ. 17. ಆಲಂಬನ, ಆಶ್ರಯ. 18. ವಿಜ್ಞಾನ. "वि निग्रहे नियोगे च तथैव पादपूरणे। निश्चयेऽसहने हेतावव्याप्तिविनियोगयोः। ईषदर्थे परिभवे शुद्धावालम्बनेऽपि च। विज्ञाने" मेदि०। ಇದೊಂದು ಉಪಸರ್ಗ. ಇದು ಕ್ರಿಯಾಪದ ಮತ್ತು ನಾಮಪದಗಳೊಡನೆ ಸೇರಿದಾಗ ಈ ಅರ್ಥಗಳಿಗೆ ದ್ಯೋತಕವಾಗುವುದು. 1. ಬೇರೆಯಾಗು, ಬೇರ್ಪಡು, ಪ್ರತ್ಯೇಕವಾಗು, ಅಗಲು. "वियोगभाजां हृदि कण्टकैः कटुर्निधीयसे कर्णिशरः स्मरेण यत्" नैष० १-७९। 2. ಲೀಲೆ, ಆಟ, ಅನಾಯಾಸ. "विहारसंक्षोभितवैरिसिन्धुः" याद० १३-२७। 3. ಹೆಚ್ಚಾಗು, ವೃದ್ಧಿ ಹೊಂದು. "यद्बहुर्बहिरवाप्य विकासं व्यानशे तनुरुहाण्यपि हर्षः" माघ० १०-५०। 4. ಕ್ರೀಡೆ, ಆಟ. "विहरस्यपरोत्तरक्रमेषु स्ववशैरेव सुरासुरैः स्वतन्त्रः" याद० १५-२२। 5. ಸಂಚಾರ. "विहरन् वने विजन एव महति दधदेष गोपताम्" माघ० १५-२५। 6. ವೈರೂಪ್ಯ. 7. ವಿಶೇಷ, ಶ್ರೇಷ್ಠ, ಉತ್ತಮ. "वपुर्विशेषेष्वतिगौरवाः क्रियाः" कुमा० ५-३१। 8. ವಿರುದ್ಧ, ವ್ಯತಿರಿಕ್ತ. क्रयः—विक्रयः। स्मृतिः—विस्मृतिः। 9. ವಿರೋಧ, ಅಡ್ಡಿ, ಅಡಚಣೆ. "विरोधि सिद्धेरिति कर्तुमुद्यतः स वारितः किं भवता न भूपतिः" किरा० १४-८। 10. ವ್ಯತ್ಯಾಸ, ಬದಲಾವಣೆ. "विकारं याति नो चित्तं वित्ते यस्य कदाचन" पञ्चतं० २-११६। 11. ಅನೇಕ, ನಾನಾ. "विविधपरागविभक्तचूर्णचित्रम्" याद० २४-२९। 12. ವ್ಯತ್ಯಾಸ, ತಾರತಮ್ಯ, ಅಂತರ.

**विंश ವಿಂಶ** (वि०) 1. ಇಪ್ಪತ್ತನೆಯ. विंशतेः पूरणः "डट्" (५-२-४८)। (पुं०) 2. ಇಪ್ಪತ್ತನೆಯ ಒಂದು ಭಾಗ. "कुर्युरर्घं यथापण्यं ततो विंशं नृपो हरेत" मनु० ८-३९८। स्त्रियां "ङीप्" (४-१-१५)। **विंशी ವಿಂಶೀ.**

**विंशक ವಿಂಶಕ** (वि०) ಇಪ್ಪತ್ತರಿಂದ ಕೊಳ್ಳಲ್ಪಟ್ಟ. विंशत्या क्रीतः—विंशति "ड्वुन्" (५-१-२४)। अकादेशः। तिलोपः (६-४-१४२)।

**विंशति ವಿಂಶತಿ** (स्त्री०) ಇಪ್ಪತ್ತು. द्वौ दशतौ परिमाणमस्य संघस्य "शतिच्" प्रकृतेः विन् भावः अनुस्वारश्च निपा० (५-१-५९)। "विंशत्याद्याः सदैकत्वे सर्वाः संख्येयसंख्ययोः" अम०। विंशति ಮೊದಲಾಗಿ ಎಲ್ಲಾ ಸಂಖ್ಯಾಶಬ್ದಗಳಿಗೂ ಏಕವಚನದಲ್ಲೇ ಪ್ರಯೋಗ. विंशतिर्गावः। विंशतिर्गजाः। त्रिंशत् हयाः। चत्वारिंशत् रथाः ಇತ್ಯಾದಿ.

**विंशतिक ವಿಂಶತಿಕ** (वि०) ಇಪ್ಪತ್ತಕ್ಕೆ ಅರ್ಹನಾದ. विंशति "कन्" (५-१-२४)।

**विंशतितम ವಿಂಶತಿತಮ** (वि०) ಇಪ್ಪತ್ತನೆಯ. विंशतेः पूरणः—वा "तमट्" (५-२-५६)। पक्षे "डट्"। **विंशः ವಿಂಶः.** स्त्रियां "ङीप्" (४-१-१५)। **—तमी —ತಮೀ.**

**विंशिन् ವಿಂಶಿನ್** (पुं०) ಇಪ್ಪತ್ತು ಗ್ರಾಮಗಳ ಅಧಿಪತಿ. विंशतिः ग्रामाः सन्त्यस्य "इनिः" (५-२-११५)। "दशी कुलं तु भुञ्जीत विंशी पञ्चकुलानि च" मनु० ७-११९।

**विक ವಿಕ** (ನಂ) ಸದ್ಯಃ ಕರುಹಾಕಿದ ಹಸುವಿನ ಹಾಲು. "क्षीरं सद्यः प्रसूतायाः पेयूषं पालनं विकम्"।

**विकङ्कत ವಿಕಂಕತ** (ಪುಂ) ಹುಳಿ ಬೇಲ. ಇದರಿಂದ ಯಜ್ಞದ ಪಾತ್ರೆಗಳನ್ನು ಮಾಡುವರು. वि + ककि (गतौ) "अतच्" बाहु०।

**विकच ವಿಕಚ** (वि०) 1. ವಿಕಸಿತವಾಗಿರುವ, ಅರಳಿರುವ. कचति—कच (बन्धने) "अच्" (३-१-१३४)। विगतः कचोऽस्मात्। "विकचकमलगन्धैरन्धयन् भृङ्गमालाः सुरभितमकरन्दं मन्दमावाति वातः" माघ० ११-१९। 2. ಕೇಶವಿಲ್ಲದ, ಕೂದಲು ಇಲ್ಲದ. 3. ವಿಸ್ತೃತವಾದ, ಹರಡಿರುವ. "धृतप्रेमा बाहुर्विकचविकरालव्रणमुखः" उ० रा० ५-२६। (ಪುಂ) 4. ಬೌದ್ಧಸಂನ್ಯಾಸಿ, ಕ್ಷಪಣಕ. 5. ಗುರುವಿನ 65 ಮಂದಿ ಮಕ್ಕಳು. "विकचा नाम गुरुसुताः सितैकताराः शिखापरित्यक्ताः" बृहत्सं० ११-१९। ಇವು ಪ್ರತಿಯೊಂದೂ ಏಕತಾರಾತ್ಮಕವಾದ ಶುಭ್ರವಾದ ಬಿಳಿಯ ನಕ್ಷತ್ರಗಳು. 6. ಕೇತು. "विकचः क्षपणे केतौ नाऽकेशे स्फुटितेऽन्यवत्" मेदि०।

**विकट ವಿಕಟ** (ಪುಂ) 1. ಧೃತರಾಷ್ಟ್ರನ ಒಬ್ಬ ಮಗ. "दुर्मदो दुष्प्रहर्षश्च विवित्सुर्विकटः समः" भा० आदि०। 2. ಹೊಪ್ಪೆ, ಕುರು. (वि०) 3. ವಿಶಾಲವಾದ, ಅಗಲವಾದ. "आवरिष्ट विकटेन विवोढुर्वक्षसैव कुचमण्डलमन्या" माघ० १०-४२। 4. ಭಯಂಕರವಾದ. "कर्णाभ्यर्णविदीर्णसृक्कविकटव्यादानदीप्ताग्निभिः" मालती० ५-१३। 5. ಸುಂದರವಾದ.

**विकत्थन ವಿಕತ್ಥನ** (ನಂ) 1. ಆತ್ಮಶ್ಲಾಘನೆ, ಜಂಬ, ಬಡಾಯಿ, ಆತ್ಮಸ್ತುತಿ. वि + कत्थ (श्लाघायाम्) भावे "ल्युट्" (३-३-११५)। "विकत्थनं संयति विक्लवानां वीरोदधौ गोष्पदवद्विलिल्ये" याद० २०-५६। (वि०) 2. ಆತ್ಮಶ್ಲಾಘನೆ ಮಾಡಿಕೊಳ್ಳುವವನು, ತನ್ನನ್ನು ತಾನೇ ಹೊಗಳಿಕೊಳ್ಳುವವನು. विकत्थते— वि +कत्थ "ल्युः" (३-१-१३४)। (स्त्री०) **-कत्थना -ಕತ್ಥನಾ.** ಆತ್ಮಸ್ತುತಿ, ತನ್ನನ್ನು ಹೊಗಳಿಕೊಳ್ಳುವುದು. वि+कत्थ+णिच् "युच्" (३-३-१०७)।

**विकत्थनीय ವಿಕತ್ಥನೀಯ** (वि०) 1. ಶ್ಲಾಘಿಸಲ್ಪಡುವ, ಹೊಗಳಲ್ಪಡುವ. वि+कत्थ (श्लाघायाम्) "अनीयर्" (३-१-९६)। "हृतस्य शेषानिव कुङ्कुमस्य तान् विकत्थनीयान् दधुरन्यथा स्त्रियः" किरा० ८-३४। 2. ಹೊಗಳಬೇಕಾದ. 3. ಹೊಗಳಲು ಅರ್ಹವಾದ.

**विकत्थमान ವಿಕತ್ಥಮಾನ** (वि०) ಆತ್ಮಸ್ತುತಿ ಮಾಡಿಕೊಳ್ಳುತ್ತಿರುವ, ತನ್ನನ್ನು ತಾನೇ ಹೊಗಳಿಕೊಳ್ಳುತ್ತಿರುವ. वि + कत्थ (श्लाघायाम्) "शानच्" (३-२-१२४)।

**विकत्थिन् ವಿಕತ್ಥಿನ್** (वि०) 1. ಆತ್ಮಶ್ಲಾಘನೆಯ ಸ್ವಭಾವದವನು. वि + कत्थ (श्लाघायाम्) "घिनुण्" (३-२-१४३)। 2. ಹೆಚ್ಚು ಗರ್ಜಿಸುವ ಸ್ವಭಾವದ. "विकत्थी याचते प्रत्तमविश्रम्भी मुहुर्जलम्" भट्टि० ७-११।

**विकम्पन ವಿಕಂಪನ** (ನಂ) ಹೆಚ್ಚು ಅಲುಗಾಡುವುದು, ಹೆಚ್ಚು ನಡುಗುವುದು. वि+कपि (चलने) भावे "ल्युट्" (३-३-११५)।

**विकम्पित ವಿಕಂಪಿತ** (वि०) ಹೆಚ್ಚು ನಡುಗಿದ, ಹೆಚ್ಚಾಗಿ ಅದುರಿದ. वि + कपि (चलने) "क्तः" (३-४-७२)।

**विकरण ವಿಕರಣ** (ಪುಂ) ತಿಙ್ ಮೊದಲಾದ ಪ್ರತ್ಯಯಗಳು ಪರವಾದಾಗ ಧಾತುಗಳಿಗೆ ವಿಧಿಸಲ್ಪಡುವ शप् ಮೊದಲಾದ ಪ್ರತ್ಯಯಗಳು. ಇವಕ್ಕೆ ವಿಕರಣಗಳೆಂದು ಸಂಜ್ಞೆ.

**विकराल ವಿಕರಾಲ** (वि०) ಭಯಂಕರವಾದ. विशेषेण करालः। "धृतप्रेमा बाहुर्विकचविकरालव्रणमुखः" उ० रा० ५-२६।

**विकर्ण ವಿಕರ್ಣ** (ಪುಂ) 1. ಕೌರವರ ಕಡೆಯ ಒಬ್ಬ ಯೋಧ. (वि०) 2. ಕರ್ಣಗಳಿಲ್ಲದವನು, ಕಿವಿಗಳನ್ನು ಕಳೆದುಕೊಂಡವನು. विगतौ कर्णौ यस्य।

**विकर्तन ವಿಕರ್ತನ** (ಪುಂ) 1. ರವಿ, ಸೂರ್ಯ. विकर्तयति रोगान्— वि + कृती (छेदने) + णिच् "ल्युट्" (३-३-११३)। "आरोग्यं भास्करादिच्छेत्"। 2. ಅರ್ಕವೃಕ್ಷ, ಎಕ್ಕದ ಗಿಡ.

**विकर्मकृत् ವಿಕರ್ಮಕೃತ್** (वि०) ನಿಷಿದ್ಧವಾದ ಕಾರ್ಯವನ್ನು ಮಾಡುವವನು. विकर्म निषिद्धं कर्म करोति— डुकृञ् (करणे) "क्विप्" (३-२-७६)। "न साक्षी नृपतिः कार्यः न कारुककुशीलवौ। नाध्यधीनो न वक्तव्यो न दस्युर्न विकर्मकृत्" मनु० ८-६६।

**विकर्मस्थ ವಿಕರ್ಮಸ್ಥ** (वि०) ನಿಷಿದ್ಧಕಾರ್ಯದಲ್ಲಿ ತೊಡಗಿರುವವನು, ವಿರುದ್ಧವ್ಯವಹಾರದಲ್ಲಿ ನಿರತನಾದವನು. विकर्मणि तिष्ठति—ष्ठा (गतिनिवृत्तौ) "कः" (३-२-४)। "पाषण्डिनो विकर्मस्थान् बैडालव्रतिकान् शठान्। हैतुकान् बकवृत्तींश्च वाङ्मात्रेणापि नार्चयेत्" मनु० ४-३०।

**विकर्ष ವಿಕರ್ಷ** (ಪುಂ) 1. ಬಾಣ. विकृष्यन्ते परप्राणा अनेन—वि+कृष (विलेखने) "घञ्" (३-३-१२१)। 2. ಎಳೆಯುವುದು. वि+कृष भावे "घञ्" (३-३-१८)।

**विकर्षण ವಿಕರ್ಷಣ** (ನಂ)1. ಆಕರ್ಷಣ, ಎಳೆಯುವುದು. वि + कृष (विलेखने) भावे "ल्युट्" (३-३-११५)। "अविलङ्घ्य विकर्षणं परैः प्रथितज्यारवकर्म कार्मुकम्" किरा० ३-५७। 2. ವಿಭಾಗಿಸುವುದು, ಭಾಗವಮಾಡು ವುದು, ವಿಂಗಡಿಸುವುದು. "ऋषीणां जन्मकर्माणि वेदस्य च विकर्षणम्" भाग० ३-७-२९।

**विकल ವಿಕಲ** (ವಿಂ) 1. ಯಾವುದಾದರೊಂದು ಕೊರತೆ ಯುಳ್ಳ, -ನ್ಯೂನತೆಯುಳ್ಳ. विगता कला यस्य। "भूयिष्ठद्विजबालवृद्धविकलस्त्रैणश्च पौरो जनः" उ० रा० ४-२५। 2. ಭಯದಿಂದ ಗಾಬರಿಗೊಂಡ, ಹೆದರಿಕೆ ಯಿಂದ ಕಳವಳಗೊಂಡ. "नादस्तावद्विकलकुररीकूजितस्निग्धतारः" मालती० ५-२०। 3. ಸ್ವಭಾವ ಶೂನ್ಯ ವಾದ, ಎದೆಗುಂದಿದ, ಶಕ್ತಿಯುಡುಗಿದ. "वहति विकलः कायो मोहं न मुञ्चति चेतनाम्" उ० रा० ३-३१।

**विकला ವಿಕಲಾ** (ಸ್ತ್ರೀಂ) ರಜಸ್ವಲೆಯಾಗಿರುವ ಹೆಂಗಸು. विगतः कलो मधुरशब्दो यस्याः। ಋತುಕಾಲದಲ್ಲಿ ಸ್ತ್ರೀಯರು ಮೌನವನ್ನು ಆಚರಿಸಬೇಕೆಂದು ಸದಾಚಾರ ವಿರುವುದು.

**विकलाङ्ग ವಿಕಲಾಂಗ** (ವಿಂ) ಯಾವುದಾದರೊಂದು ಅವಯವವಿಲ್ಲದ, ಅಂಗಹೀನನಾದ. विकलमङ्गं यस्य। "विकलाङ्गस्तु पोगण्डः" अम०।

**विकलेन्द्रिय ವಿಕಲೇಂದ್ರಿಯ** (ವಿಂ) ಇಂದ್ರಿಯವನ್ನು ಕಳೆದುಕೊಂಡಿರುವ, ಇಂದ್ರಿಯ ಶೂನ್ಯನಾದ. विकलानि इन्द्रियाणि यस्य।

**विकल्प ವಿಕಲ್ಪ** (ಪುಂ) 1. ಭ್ರಾಂತಿ, ಭ್ರಮೆ, ವಸ್ತುಸ್ಥಿತಿಗೆ ವಿರುದ್ಧವಾದ ಕಲ್ಪನೆ. वि + कृपू (सामर्थ्ये) "घञ्" (३-३-१८)। 2. ಸಂಶಯ, ಸಂದೇಹ. "रात्रिदिवविभागेषु यदादिष्टं महीक्षिताम्। तत्सिषेवे नियोगेन स विकल्पपराङ्मुखः" रघु० १७-४९। 3. ಅನೇಕವಿಧ, ನಾನಾಬಗೆ. "प्रच्छन्नं वा प्रकाशं वा तन्निषेवेत यो नरः। तस्य दण्डविकल्पः स्याद्यथेष्टं नृपतेस्तथा" मनु० ९-२२८। 4. ಉಪಾಯ, ತಂತ್ರ. "मायाविकल्परचितैरपि ये तदीयैर्न स्यन्दनैस्तुलितकृत्रिमभक्तिशोभाः" रघु० १३-७५। 5. (ವ್ಯಾಕರಣಶಾಸ್ತ್ರದಲ್ಲಿ) ಪಕ್ಷಾಂತರ, ಸಂದರ್ಭಕ್ಕೆ ತಕ್ಕಂತೆ ಇಚ್ಛೆಗೆ ಅನುಗುಣವಾಗಿ ಮಾರ್ಪಡಿಸು ವುದು, -ಬದಲಾಯಿಸುವುದು, ಎರಡು ವಿಧಿಗಳಲ್ಲಿ ಯಾವು ದಾದರೊಂದನ್ನು ಆಯ್ದು ವಿಧಿಸುವುದು. "व्रीहिभिर्वा यवैर्वा यजेत"। 6. ದೋಷ, ತಪ್ಪು. 7. ದೇವತೆ. "विकल्पः पुंसि भ्रान्तौ च कल्पने" मेदि०।

**विकल्पन ವಿಕಲ್ಪನ** (ನಂ) 1. ಸಂಶಯಪಡುವುದು. 2. ಇಚ್ಛೆಗೆ ಅನುಗುಣವಾಗಿ ಹೇಳುವುದು. 3. ಪರ್ಯಾಲೋಚಿಸದೆ ಕಾರ್ಯಮಾಡುವುದು, ದುಡುಕಿ ಕಾರ್ಯ ಮಾಡುವುದು. 4. ಒಂದು ನಿರ್ಣಯಕ್ಕೆ ಬಾರದಿರುವುದು. विपरीतं कल्पनम्।

**विकल्पित ವಿಕಲ್ಪಿತ** (ವಿಂ) ಸಂಶಯವುಂಟಾದ, ಸಂದೇಹ ವುಂಟಾದ (ಸದೃಶವಾಗಿರುವುದರಿಂದ ಸಂಶಯ). विकल्पोऽस्य सञ्जातः "इतच्" (५-२-३६)। "विकल्पितानि त्रिदिवेन भूमौ वर्षाणि दिव्यानि विलोकयेथाः" याद० १८-१२।

**विकल्प्यमान ವಿಕಲ್ಪ್ಯಮಾನ** (ವಿಂ) (ಸಮಾನವಾಗಿರು ವುದರಿಂದ) ಸಂಶಯವುಂಟುಮಾಡಲ್ಪಡುತ್ತಿರುವ. वि + कृपू (सामर्थ्ये) कर्म० "शानच्" (३-२-१२४)। "बिले तदीये विबुधालयोपमे विकल्प्यमानाकृतिमप्सरोगणैः" याद० १४-५९।

**विकस ವಿಕಸ** (ಪುಂ) ಚಂದ್ರ. विकसति — कस (गतौ) "अच्" (३-१-१३४)। "तारापीडः स्वचमसो विकसः सिन्धुनन्दनः" त्रिकाण्ड०।

**विकसत् ವಿಕಸತ್** (ವಿಂ) 1. ವಿಕಾಸವನ್ನು ಹೊಂದು ತ್ತಿರುವ, ಅರಳುತ್ತಿರುವ. वि + कस (गतौ) "शतृ" (३-२-१२४)। "दधति च विकसद्विचित्रकल्पद्रुमकुसुमैरभिगुम्फितानिवैताः" माघ० ४-५०। 2. ಪ್ರಸರಿಸು ತ್ತಿರುವ, ಹರಡುತ್ತಿರುವ. "यां चन्द्रकैर्मदजलस्य महानदीनां नेत्रश्रियं विकसतो विदधुर्गजेन्द्राः" माघ० ५-४०। 3. ವೃದ್ಧಿಹೊಂದುತ್ತಿರುವ, ಅಧಿಕವಾಗುತ್ತಿರುವ, ಹೆಚ್ಚು ತ್ತಿರುವ. 4. ಶೋಭಿಸುತ್ತಿರುವ, ಪ್ರಕಾಶಿಸುತ್ತಿರುವ. 5. ಸಂತೋಷಪಡುತ್ತಿರುವ. "परगुणपरमाणून् पर्वतीकृत्य नित्यं निजहृदि विकसन्तः सन्ति सन्तः कियन्तः" भर्तृ० १-७०।

**विकसन ವಿಕಸನ** (ನಂ) 1. ಅರಳುವುದು, ವಿಕಾಸಹೊಂದು ವುದು. 2. ಹೆಚ್ಚುವುದು, ಅಧಿಕವಾಗುವುದು. 3. ಪ್ರಸರಿಸು ವುದು, ಹರಡುವುದು. वि+कस (गतौ) भावे "ल्युट्" (३-३-११५)। 4. ಶೋಭಿಸುವುದು, ಪ್ರಕಾಶಿಸುವುದು.

**विकसा ವಿಕಸಾ** (स्त्री०) ಮಂಜಿಷ್ಠೆ. विकसति — वि + कस (गतौ) "अच्" (३-१-१३४)। "मञ्जिष्ठा विकसा जिङ्गी" अम०।

**विकसित ವಿಕಸಿತ** (वि०) 1. ವಿಕಾಸಹೊಂದಿದ, ಅರಳಿದ. वि + कस (गतौ) "क्तः" (३-४-७२)। "विकसितकुसुमाधरं हसन्तीं कुरवकराजिवधूं विलोकयन्तम्" किरा० १०-३२। 2. ಅಭಿವೃದ್ಧಿಹೊಂದಿದ, ಅಧಿಕವಾದ.

**विकस्वर ವಿಕಸ್ವರ** (वि०) 1. ಅರಳುವ ಸ್ವಭಾವದ. वि+कस (गतौ) "वरच्" (३-२-१७५)। "कुशेशयैरत्र जलाशयोषिता मुदा रमन्ते कलभा विकस्वरैः" माघ० ४-३३। 2. ಗಟ್ಟಿಯಾದ, ವಿಸ್ತರವಾದ, ಗಟ್ಟಿಯಾಗಿ ಕೇಳಿಸುವ (ಶಬ್ದ). "उदडीयत वैकृतात्करग्रहजादस्य विकस्वरस्वरैः" नैष० २-५।

**विकार ವಿಕಾರ** (पुं०) 1. ಸ್ವಭಾವದ ವ್ಯತ್ಯಾಸ, –ಬದಲಾವಣೆ, –ಮಾರ್ಪಾಡು. वि + डुकृञ् (करणे) "घञ्" (३-३-१८)। "विकारं याति नो चित्तं वित्ते यस्य कदाचन" पञ्चतं २-११६। 2. ಕೆರಳುವುದು, ಉದ್ರೇಕಗೊಳ್ಳುವುದು, ಕ್ಷೋಭೆಹೊಂದುವುದು. "प्रसेदिवांसं न तमाप कोपः कुतः परस्मिन् पुरुषे विकारः" किरा० १७-२३। 3. ವಕ್ರತೆ, ಹಾಸ್ಯಕ್ಕಾಗಿ ಮುಖವನ್ನು ವಕ್ರವಾಗಿ ಮಾಡುವುದು. "अपि शयनसखीभ्यो दत्तवाचं कथंचित्प्रमथमुखविकारैर्हासयामास गूढम्" कुमा० ७-९५। 4. ಭಾವನೆ, ಚಿತ್ತವೃತ್ತಿ ವಿಶೇಷ, ಮನೋಭಾವ. "तव स्पर्शे स्पर्शे मम हि परिमूढेन्द्रियगणो विकारश्चैतन्यं भ्रमयति च संमीलयति च" उ० रा० १-३५। 5. ಪ್ರಕೃತಿಯು ವಿಕಾಸಹೊಂದುವುದು, ಪ್ರಕೃತಿಯು ಬದಲಾವಣೆಹೊಂದುವುದು. 6. ರೋಗ, ವ್ಯಾಧಿ. "विकारं खलु परमार्थतोऽज्ञात्वाऽनारम्भः प्रतीकारस्य" शाकु० ४।

**विकारिन् ವಿಕಾರಿನ್** (वि०) ವಿಕಾರವನ್ನುಂಟುಮಾಡುವ ಸ್ವಭಾವದ, ಪ್ರಕೃತಿಯನ್ನು ಬದಲಾಯಿಸುವ ಸ್ವಭಾವದ, ಮನೋಭಾವವನ್ನು ವ್ಯತ್ಯಾಸಗೊಳಿಸುವ ಸ್ವಭಾವದ. वि + डुकृञ् (करणे) "णिनिः" (३-२-७८)। "भ्रमति भुवने कन्दर्पाज्ञा विकारि च यौवनं ललितमधुरास्ते ते भावाः क्षिपन्ति च धीरताम्" मालती० १-२०।

**विकाल ವಿಕಾಲ** (पुं०) ವಿರುದ್ಧವಾದ ಕಾಲ, ಕೆಲಸಕ್ಕೆ ಯೋಗ್ಯವಲ್ಲದ ಕಾಲ. विरुद्धः कालः। ಸಾಯಂಕಾಲವು ಯಾವ ಕಾರ್ಯಕ್ಕೂ ಅರ್ಹವಲ್ಲದ ಕಾಲ. "न लङ्घयेत्तथैवासूकृष्ठीवनोद्वर्तनानि च। नोद्यानादौ विकालेषु प्राज्ञस्तिष्ठेत्कदाचन" मार्क०।

**विकालिका ವಿಕಾಲಿಕಾ** (स्त्री०) ನೀರ್ಗಡಿಯಾರ, ಗಂಟೆ (ಕಾಲ) ಯನ್ನು ತಿಳಿಸುವ ಒಂದು ವಿಧ ಹಳೆಯ ಕಾಲದ ಗಡಿಯಾರ. विज्ञातः कालो यया। ಸುತ್ತಲೂ ಸಣ್ಣದಾಗಿ ರಂಧ್ರಮಾಡಿದ ಒಂದು ತಾಮ್ರದ ಪಾತ್ರೆಯನ್ನು ನೀರಿನಲ್ಲಿಟ್ಟು ಅದರೊಳಗೆ ನೀರು ತುಂಬಿದಂತೆಲ್ಲಾ ಸಮಯವನ್ನು (ಗಂಟೆಯನ್ನು) ತಿಳಿಯುವ ಪ್ರಾಚೀನ ಕಾಲದ ಒಂದು ವಿಧ ಗಡಿಯಾರವನ್ನು ಉಪಯೋಗಿಸುತ್ತಿದ್ದರು.

**विकाश ವಿಕಾಶ** (पुं०) 1. ಪ್ರಸಾರ, ಅಡ್ಡಿ ಆತಂಕಗಳಿಲ್ಲದ ಗತಿ. विशेषेण काशः प्रकाशः। "विकाशमीयुर्जगतीशमार्गणाः" जगतीशस्य अर्जुनस्य मार्गणाः बाणाः प्रसारमीयुः। 2. (ಪ್ರತಿರೋಧದಿಂದ) ವಿರುದ್ಧವಾದ ಗತಿ. ईशमार्गणाः गिरीशबाणाः विकाशं विषमगतिमीयुः। 3. ಉಲ್ಲಾಸ, ಸಂತೋಷ. जगतीशमार्गणाः दानवानां मारः मारकाः गणाः प्रमथाः विकाशमुल्लासमीयुः। 4. ಆಕಾಶ, ಅಂತರಿಕ್ಷ. जगतीशमार्गणाः त्रैलोक्यनाथस्य मार्गणाः अन्वेषकाः ऋषयो देवताश्च विकाशं (वीनां पक्षिणां काशो यत्र) आकाशमीयुः। "विकाशमीयुर्जगतीशमार्गणा विकाशमीयुर्जगतीशमार्गणाः। विकाशमीयुर्जगतीशमार्गणाः विकाशमीयुर्जगतीशमार्गणाः" किरा० १५-५२। 5. ವಿಕಾಸಹೊಂದುವುದು, ಅರಳುವುದು. 6. ರಹಸ್ಯ.

**विकास ವಿಕಾಸ** (पुं०) 1. ಅರಳುವುದು, ವಿಕಾಸಹೊಂದುವುದು. वि + कस (गतौ) "घञ्" (३-३-१८)। 2. ಶೋಭೆ, ಕಾಂತಿ. "विघृते दिवा सवयसा च पुरः परिपूर्णमण्डलविकासभृति" माघ० ९-५३। 3. ವೃದ್ಧಿ, ಆಧಿಕ್ಯ. "यद्वहुर्बहिरवाप्य विकासं व्यानशे तनुरुहाण्यपि हर्षः" माघ० १०-५०। 4. ಔತ್ಸುಕ್ಯ, ಉತ್ಸಾಹ. "युगपद्विकासमुदयाद्गमिते शशिनः शिलीमुखगणोऽलभत" माघ० ९-४१।

**विकासन ವಿಕಾಸನ** (न०) 1. ಅರಳಿಸುವುದು, ವಿಕಾಸಹೊಂದಿಸುವುದು. वि+कस (गतौ) + णिच् "ल्युट्" (३-३-११५)। 2. ವೃದ್ಧಿಪಡಿಸುವುದು, ಅಧಿಕಗೊಳಿಸುವುದು. 3. ಶೋಭಿಸುವಂತೆ ಮಾಡುವುದು.

**विकासयत् ವಿಕಾಸಯತ್** (वि०) 1. ಅರಳಿಸುತ್ತಿರುವ. वि + कस (गतौ) + णिच् "शतृ" (३-२-१२४)।

2. ಹೆಚ್ಚುತ್ತಿರುವ, ವೃದ್ಧಿಪಡಿಸುತ್ತಿರುವ. 3. ಪ್ರಕಾಶಪಡಿಸುತ್ತಿರುವ. स्त्रियां "ङीप्" (४-१-६)। –यन्ती –ಯಂತೀ.

**विकासित** ವಿಕಾಸಿತ (वि०) 1. ಅರಳಿಸಲ್ಪಟ್ಟ. 2. ವೃದ್ಧಿಪಡಿಸಲ್ಪಟ್ಟ. 3. ಕಾಂತಿಯುಂಟುಮಾಡಲ್ಪಟ್ಟ. वि+कस (गतौ)+णिच् "क्तः" (३-२-१०२)।

**विकासिन्** ವಿಕಾಸಿನ್ (वि०) 1. ಪ್ರಫುಲ್ಲವಾಗುವ, ಅರಳುವ. वि+कस (गतौ) "णिनिः" (३-१-१३४)। "नारीभिर्गुरुजघनस्थलाहतानामास्यश्रीविजितविकासिवारिजानाम्" माघ० ८-४७। 2. ಅಧಿಕವಾಗುವ, ವೃದ್ಧಿಹೊಂದುವ. "रूपमप्रतिविधानमनोज्ञं प्रेम कार्यमनपेक्ष्य विकासि" माघ० १०-३७। 3. ಪ್ರಕಾಶಿಸುವ, ಶೋಭಿಸುವ, ಹೊಳೆಯುವ. "असकलकलिकाकुलीकृतालिस्खलनविकीर्णविकासिकेसराणाम्" माघ० ७-२६।

**विकिर** ವಿಕಿರ (पुं०) 1. ಪಕ್ಷಿ, ಹಕ್ಕಿ. विकरति—वि+कॄ (विक्षेपे) "कः" (३-१-१३५)। "कक्कोलीफलजग्धमुग्धविकिरव्याहारिणस्तद्भुवो मागाः प्रेङ्खितमातुलुङ्गवृतयः प्रेयो विधास्यन्ति वाम्" मालती० ६-१९। 2. ಎರಚಲ್ಪಟ್ಟ ವಸ್ತು, ಬಿಸಾಡಿದ ಪದಾರ್ಥ. विकीर्यते—वि+कॄ घञर्थे "कः" (वा० ३-३-५८)। 3. ಕೂಪ, ಬಾವಿ. "अन्धुर्विकिरश्चूडकश्च सः" त्रिकाण्ड०।

**विकिरण** ವಿಕಿರಣ (न०) 1. ಎರಚುವುದು, ಚೆಲ್ಲುವುದು. वि+कॄ (विक्षेपे) भावे "ल्युट्" (३-३-११५)। 2. ಹರಡುವುದು. 3. ಹಿಂಸಿಸುವುದು. 4. ಜ್ಞಾನ, ಅರಿವು, ತಿಳಿವಳಿಕೆ. (पुं०) 5. ಅರ್ಕವೃಕ್ಷ, ಎಕ್ಕದ ಗಿಡ.

**विकिरत्** ವಿಕಿರತ್ (वि०) 1. ಎರಚುತ್ತಿರುವ, ಚೆಲ್ಲುತ್ತಿರುವ. वि+कॄ (विक्षेपे) "शतृ" (३-२-१२४)। 2. ಹರಡುತ್ತಿರುವ. 3. ಹಿಂಸಿಸುತ್ತಿರುವ. स्त्रियां "ङीप्" (४-१-६)।

**विकीर्ण** ವಿಕೀರ್ಣ (वि०) 1. ಚೆಲ್ಲಲ್ಪಟ್ಟ, ಎರಚಲ್ಪಟ್ಟ. वि+कॄ (विक्षेपे) "क्तः" (३-२-१०२)। 2. ಇಡಲ್ಪಟ್ಟ, ಹರಡಲ್ಪಟ್ಟ, ಹಾಕಲ್ಪಟ್ಟ. "रिरसयिषति भूयः शष्पमग्रे विकीर्णं पटुतरचपलौष्ठः प्रस्फुरत्प्रोथमश्वः" माघ० ११-११। 3. ಚೆಲ್ಲಾಪಿಲ್ಲಿಯಾಗಿ ಬಿದ್ದಿರುವ, ಚೆದುರಿಹೋಗಿರುವ. "रतिकलहविकीर्णैर्भूषणैरर्चितेषु" माघ० ११-३६। 4. ಪ್ರಸರಿಸಿರುವ, ಹರಡಿರುವ. "तिष्ठन्मुनेरभिमुखं स विकीर्णधाम्नः" किरा० २-५९।

**विकुक्षि** ವಿಕುಕ್ಷಿ (पुं०) ಇಕ್ಷ್ವಾಕುರಾಜನ ಒಬ್ಬ ಪುತ್ರ. "वैवस्वतमनोरासीदिक्ष्वाकुः पृथिवीपतिः। तस्य पुत्रशतं चासीद्विकुक्षिर्ज्येष्ठ उच्यते"।

**विकुर्वाण** ವಿಕುರ್ವಾಣ (वि०) 1. ಸಂತೋಷಪಡುತ್ತಿರುವ, ಹರ್ಷಗೊಂಡಿರುವ. विकुरुते—वि+कृञ (करणे) "शानच्" (३-२-१२४)। "हर्षमाणो विकुर्वाणः प्रमना हृष्टमानसः" अम०। 2. ವಿಕಾರವನ್ನು ಹೊಂದಿರುವ, ಬದಲಾವಣೆ ಹೊಂದಿದ. "आकाशस्तु विकुर्वाणः स्पर्शमात्रं ससर्ज ह। बलवानभवद्वायुः तस्य स्पर्शो गुणो मतः"। 3. ವಿವಿಧವಾದ ಸ್ವರವನ್ನು ಮಾಡುವ. "विकुर्वाणः स्वरानद्य बलं तस्य निहन्म्यहम्" भट्टि० ८-२०।

**विकुस्र** ವಿಕುಸ್ರ (पुं०) ಚಂದ್ರ. वि+कस (गतौ) "रक्" उपधायाः उत्त्वं च (उ० २-१८)। विकुस्रश्चन्द्रः सि० कौ०।

**विकृत** ವಿಕೃತ (न०) 1. ವ್ಯತ್ಯಾಸ, ಬದಲಾವಣೆ, ಮಾರ್ಪಾಡು. वि+डुकृञ् (करणे) भावे "क्तः" (३-३-११४)। 2. ವ್ಯಾಧಿ, ರೋಗ. 3. ಜುಗುಪ್ಸೆ. (वि०) 4. ಭಯಂಕರವಾದ. 5. ಜುಗುಪ್ಸೆಯುಂಟುಮಾಡುವ. 6. ರೋಗಿ, ವ್ಯಾಧಿಪೀಡಿತ. 7. ಅಂಗವಿಹೀನ, ಯಾವುದಾದರೊಂದು ಅವಯವವಿಲ್ಲದ. 8. ಉದ್ರೇಕವುಳ್ಳ, ಕೋಪಗೊಂಡ. "निभृतैरपि पूर्वमक्रमत्वात् विकृतस्याथ विरुद्धचेष्टितानि" याद० १५-१०७।

**विकृति** ವಿಕೃತಿ (स्त्री०) 1. ವಿಕಾರ, ರೂಪಬದಲಾವಣೆ, ರೂಪವ್ಯತ್ಯಾಸ. वि+डुकृञ् (करणे) "क्तिन्" (३-३-९४)। "शरीरमात्रं विकृतिं प्रपेदे तथैव तस्थुः फणरत्नशोभाः" कुमा० ७-३४। 2. ರೋಗ, ವ್ಯಾಧಿ. 3. ಉದ್ರೇಕ, ಕೆರಳುವುದು. "सावलेपमुपलिप्सिते परैरभ्युपैति विकृतिं रजस्यपि" किरा० १३-५६। 4. (ಸಾಂಖ್ಯಮತದಲ್ಲಿ) ಮೂರನೆಯ ತತ್ತ್ವವಾದ ಅಹಂಕಾರತತ್ತ್ವದಿಂದ ಉತ್ಪನ್ನವಾದ ಹದಿನಾರು ತತ್ತ್ವಗಳ ಸಮೂಹ, ಸಾತ್ತ್ವಿಕ ರಾಜಸ ಮತ್ತು ತಾಮಸಗಳೆಂಬ ಮೂರು ವಿಧ ತತ್ತ್ವಗಳಿಂದ ಹುಟ್ಟಿದ ಹದಿನಾರು ತತ್ತ್ವಗಳ ಗಣ. ಸಾತ್ತ್ವಿಕಾಹಂಕಾರದಿಂದ ಮನಸ್ಸೂ ಸೇರಿ ಏಕಾದಶೇಂದ್ರಿಯಗಳೂ ತಾಮಸಾಹಂಕಾರದಿಂದ ಪೃಥಿವಿ ಮೊದಲಾದ ಪಂಚಭೂತಗಳ ಸೂಕ್ಷ್ಮಾವಸ್ಥೆಗಳಾದ ಪಂಚತನ್ಮಾತ್ರೆಗಳೂ ಹುಟ್ಟುವುವು. ಇವೇ ಷೋಡಶ ಗಣ. ರಾಜಸಾಹಂಕಾರವು ಸಾತ್ತ್ವಿಕ ಮತ್ತು ತಾಮಸ

ಗಳಿಗೆ ಸಹಕಾರಿಯಾಗಿರುವುದು. "प्रकृतेर्महान् ततोऽहंकारस्तस्माद्गणश्च षोडशकः। तस्मादपि षोडशकात्पञ्चभ्यः पञ्च भूतानि" ಸಂ ದಂ ಸಂ। "षोडशकस्तु विकारः" सां॰ का॰। 5. ಭಯ ಮತ್ತು ಕೋಪ ಗಳಿಂದ ಉಂಟಾಗುವ ಮನೋವಿಕಾರ. "सत्त्वानामपि लक्ष्यते विकृतिमच्चित्तं भयक्रोधयोः" शाकु॰ २-५। 6. ಸ್ವಭಾವದ ಬದಲಾವಣೆ, ಚಿತ್ತವೃತ್ತಿಯ ವಿಕಾರ. 7. ಪ್ರಭವ ಮೊದಲಾದ ಅರವತ್ತು ಸಂವತ್ಸರಗಳಲ್ಲಿ ಇಪ್ಪತ್ತನಾಲ್ಕನೆಯ ಸಂವತ್ಸರ.

**विकृष्ट ವಿಕೃಷ್ಟ** (वि॰) 1. ಆಕರ್ಷಿಸಲ್ಪಟ್ಟ, ಎಳೆಯಲಟ್ಟ. वि + कृष (विलेखने) कर्म॰ "क्तः" (३-२-१०२)। "विकृष्टधन्वा विससर्ज बाणान्" याद॰ २०-७६। 2. ದರದರನೆ ಎಳೆದಾಡಲ್ಪಟ್ಟ, ಇಲ್ಲಿಂದಲ್ಲಿಗೆ ಎಳೆದಾಡಲ್ಪಟ್ಟ.

**विकृष्यमाण ವಿಕೃಷ್ಯಮಾಣ** (वि॰) 1. ಎಳೆಯಲ್ಪಡುತ್ತಿರುವ. वि + कृष (विलेखने) कर्म॰ "शानच्" (३-२-१२४)। "कर्णान्तमेत्य दितिजेन विकृष्यमाणं कोदण्डमेतदभितः सुषुवे शरौघान्" कुमा॰ १७-२०। 2. ದರದರನೆ ಎಳೆದಾಡಲ್ಪಡುತ್ತಿರುವ.

**विकोश ವಿಕೋಶ** (वि॰) ಕೋಶವಿಲ್ಲದ, ಒರೆಯಿಂದ ಹೊರಕ್ಕೆ ತೆಗೆದಿರುವ. विगतः कोशो यस्य। "विकोशनिर्धौततनोर्महासेः फणावतश्च त्वचि विच्युतायाम्" किरा॰ १७-४५।

**विक्क ವಿಕ್ಕ** (पुं॰) ಆನೆಯ ಮರಿ. विक् इति कायति शब्दं करोति—कै (शब्दे) "कः" (३-२-३)। "मदप्रयोगो व्यस्तारो विक्कस्तु करिशावकः" त्रिकाण्ड॰।

**विक्रम ವಿಕ್ರಮ** (पुं॰) 1. ವಿಷ್ಣು, ನಾರಾಯಣ. विना त्रयीमयेन वैनतेयेन क्रमः क्रमणमस्य—क्रमु (पादविक्षेपे) "घञ्" (३-३-१८)। "गमनं पक्षिराजेन यस्य विक्रम उच्यते" इति निरुक्तिः। "ईश्वरो विक्रमी धन्वी मेधावी विक्रमः क्रमः" वि॰ स॰। 2. ಶಕ್ತಿ, ಪರಾಕ್ರಮ. "विक्रमप्रभवे तेषां विजयश्रीस्वयंवरे। वन्दिकृत्यं द्विषश्चक्रुरप्सरोभिः स्वयंवृताः" याद॰ २२-१३६। 3. ಪಾದನ್ಯಾಸ, ಹೆಜ್ಜೆಯಿಡುವುದು. "सा राजहंसैरिव संनताङ्गी गतेषु लीलाञ्चितविक्रमेषु" कुमा॰ १-३४। 4. ಪ್ರಭವ ಮೊದಲಾದ ಅರವತ್ತು ಸಂವತ್ಸರಗಳಲ್ಲಿ ಹದಿನಾಲ್ಕನೆಯ ಸಂವತ್ಸರ. 5. ಅತಿಶಯವಾದ ಪರಾಕ್ರಮ, ಅನ್ಯಾದೃಶವಾದ ವೀರ್ಯ. "अन्योन्यदर्शनप्राप्तविक्रमावसरं चिरात्" रघु॰ १२-८७। 6. ಸ್ಥಿತಿ. "संप्लवः सर्वभूतानां विक्रमः प्रतिसंक्रमः" भाग॰ २-८-२०। 7. ಸಂಚರಿಸುವುದು, ನಡೆಯುವುದು. 8. ಉಜ್ಜಯಿನಿ ದೊರೆಯಾದ ವಿಕ್ರಮಾದಿತ್ಯ ರಾಜ. ಈ ರಾಜನ ಆಸ್ಥಾನದಲ್ಲಿ ನವಮಣಿ ಪ್ರಾಯರಾದ ಒಂಬತ್ತು ಮಂದಿ ಉದ್ದಾಮ ಪಂಡಿತರಿದ್ದರು. "धन्वन्तरिक्षपणकामरसिंहशङ्कुबेतालभट्टघटकर्परकालिदासाः। ख्यातो वराहमिहिरो नृपतेः सभायां रत्नानि वै वररुचिर्नव विक्रमस्य"।

**विक्रमण ವಿಕ್ರಮಣ** (न॰) 1. ಸಂಚರಿಸುವುದು, ನಡೆಯುವುದು. 2. ದೊಡ್ಡ ಹೆಜ್ಜೆಯಿಡುವುದು, ದಾಪುಗಾಲು ಹಾಕುವುದು. वि + क्रमु (पादविक्षेपे) भावे "ल्युट्" (३-३-११५)। "छलयसि विक्रमणे बलिमद्भुतवामन पदनखनीरजनितजनपावन" गीतगो॰ १-५।

**विक्रमादित्य ವಿಕ್ರಮಾದಿತ್ಯ** (पुं॰) ಉಜ್ಜಯಿನಿಯ ಅಧಿಪತಿಯಾದ ಒಬ್ಬ ದೊರೆ.

**विक्रमार्क ವಿಕ್ರಮಾರ್ಕ** (पुं॰) ವಿಕ್ರಮಾದಿತ್ಯ ದೊರೆ.

**विक्रमिन् ವಿಕ್ರಮಿನ್** (पुं॰) 1. ವಿಷ್ಣು, ನಾರಾಯಣ. विक्रमः नित्यमतिशयेनास्यास्ति "इनिः" (५-२-१३७)। "विक्रमं पौरुषं प्रोक्तः तद्वत्त्वात् विक्रमी बुधैः" इति निरुक्तिः। "ईश्वरो विक्रमी धन्वी" वि॰ स॰। 2. ಸಿಂಹ. (वि॰) 3. ಪರಾಕ್ರಮಶಾಲಿಯಾದ, ವೀರನಾದ. "व्योम्नि कथमपि चकर्थ पदं व्यपदिश्यसे जगति विक्रमीत्यतः" माघ॰ १५-२८।

**विक्रय ವಿಕ್ರಯ** (पुं॰) 1. ಮಾರಾಟ, ಕ್ರಯಮಾಡುವುದು, ಮಾರುವುದು. डु क्रीञ् (द्रव्यविनिमये) "अच्" (३-३-५६)। "नान्यदन्येन संसृष्टरूपं विक्रयमर्हति" मनु॰ ८-२०३। 2. ಮಾರುಕಟ್ಟೆ, ಮಾರಾಟದ ಸ್ಥಳ. विक्रीयतेऽस्मिन् इति विक्रयदेशो विक्रयः। "विक्रयाद्यो धनं किञ्चित् गृह्णीयात्कुलसन्निधौ" मनु॰ ८-२०१।

**विक्रयण ವಿಕ್ರಯಣ** (न॰) ಮಾರುವುದು, ಮಾರಾಟ. वि + डु क्रीञ् (द्रव्यविनिमये) भावे "ल्युट्" (३-३-११५)।

**विक्रयिक ವಿಕ್ರಯಿಕ** (वि॰) ಮಾರುವವನು, ದ್ರವ್ಯವನ್ನು ಕೊಟ್ಟು ಅದರ ಬೆಲೆಯನ್ನು ತೆಗೆದುಕೊಳ್ಳುವವನು, ವಸ್ತುವನ್ನು ಮಾರಿ ಅದರಿಂದ ಜೀವಿಸುವವನು. विक्रयेण जीवति— विक्रय "ठन्" (४-४-१३)। "दीक्षितस्य कदर्यस्य क्रतुविक्रयिकस्य च। तक्षणश्चर्मविकर्तुश्च पुंश्चल्या रजकस्य च। चिकित्सकस्य यच्चान्नमभोज्यं रक्षिणस्तथा" भा॰ शान्ति॰ ३५-२९, ३०।

**विक्रयिन् ವಿಕ್ರಯಿನ್** (वि०) ಮಾರುವವನು, ವಿಕ್ರಯಿಸುವವನು. विक्रीणाति — वि + डु क्रीञ् (द्रव्यविनिमये) "णिनिः" (३-१-१३४)।

**विक्रान्त ವಿಕ್ರಾಂತ** (वि०) 1. ವೀರ, ಪರಾಕ್ರಮಿ. विक्रामति—वि+क्रमु (पादविक्षेपे) "क्तः" (३-४-७२)। "विक्रान्तैर्नयशालिभिः सुसचिवैः श्रीर्वक्रनासादिभिः" मुद्रा० २-२३। (पुं०) 2. ಸಿಂಹ. (न०) 3. ಹೆಜ್ಜೆಯಿಡುವುದು. 4. ಪರಾಕ್ರಮ, ಶೌರ್ಯ. 5. ವೈಕ್ರಾಂತ ಮಣಿ. ["वैक्रान्त" ಪದದಲ್ಲಿ ನೋಡಿ.] 6. ವಾಮನಾವತಾರದಲ್ಲಿ ವಿಷ್ಣುವು ಎರಡನೆಯ ಹೆಜ್ಜೆಯಿಟ್ಟ ಅಂತರಿಕ್ಷ. "हे द्वितीयप्रक्रम त्वं विष्णोर्विक्रान्तं द्वितीयपादप्रक्षेपेण जितमन्तरिक्षमसि"।

**विक्रान्ति ವಿಕ್ರಾಂತಿ** (स्त्री०) 1. ಅಶ್ವದ ಒಂದು ವಿಧ ಗತಿ, ಕುದುರೆಯ ಒಂದು ವಿಧ ನಡಗೆ. वि + क्रमु (पादविक्षेपे) "क्तिन्" (३-३-९४)। "विक्रान्तिस्तु पलायितम्" त्रिकाण्ड०। 2. ಪಾದನ್ಯಾಸ, ಹೆಜ್ಜೆಯಿಡುವುದು. 3. ಪರಾಕ್ರಮ, ವೀರ್ಯ, ಶೌರ್ಯ.

**विक्रायक ವಿಕ್ರಾಯಕ** (वि०) ವಿಕ್ರಯಿಸುವವನು, ವರ್ತಕ, ಮಾರುವವನು. वि + डु क्रीञ् (द्रव्यविनिमये) "ण्वुल्" (३-१-१३३)।

**विक्रिया ವಿಕ್ರಿಯಾ** (स्त्री०) 1. ಮಾರ್ಪಾಟು, ಬದಲಾವಣೆ. वि + डु कृञ् (करणे) "शः" (३-३-१००)। "श्मश्रुप्रवृद्धिजनिताननविक्रियांश्च प्लक्षान् प्ररोहजटिलानिव मन्त्रिवृद्धान्" रघु० १३-७१। 2. ಮನೋವಿಕಾರ, ಮನಸ್ಸಿನಲ್ಲಿ ಉಂಟಾಗುವ ಉದ್ರೇಕ. "प्रयत्नसंस्तम्भितविक्रियाणां कथंचिदीशा मनसां बभूवुः" कुमा० ३-३४। 3. ವಿರುದ್ಧಕಾರ್ಯದಿಂದ ಉಂಟಾಗುವ ಅಪಚಾರ. "इत्याप्तवचनाद्रामो विनेष्यन् वर्णविक्रियाम्" रघु० १५-४८। 4. ಸ್ವಭಾವದ ವ್ಯತ್ಯಾಸ, ಸ್ವಭಾವದ ಬದಲಾವಣೆ. 5. ಕೋಪ ಈರ್ಷ್ಯೆ ಮುಂತಾದುವುಗಳ ಮನೋಭಾವ. "लिङ्गैर्मुदः संवृतविक्रियास्ते ह्रदाः प्रसन्ना इव गूढनक्राः" रघु० ७-३०।

**विक्रीणत् ವಿಕ್ರೀಣತ್** (वि०) ಮಾರುತ್ತಿರುವವನು, ಕ್ರಯಕ್ಕೆ ಕೊಡುತ್ತಿರುವವನು. वि + डु क्रीञ् (द्रव्यविनिमये) "शतृ" (३-२-१२४)। स्त्रियां "ङीप्" (४-१-६)। **विक्रीणती ವಿಕ್ರೀಣತೀ.** "शानच्" (३-२-१२४)। **विक्रीणानः ವಿಕ್ರೀಣಾನಃ.** "संभूय वणिजां पण्यमनर्घेणोपरुन्धताम्। विक्रीणतां वा विहितो दण्ड उत्तमसाहसः" याज्ञ० २-२५०।

**विक्रीत ವಿಕ್ರೀತ** (वि०) ವಿಕ್ರಯಿಸಲ್ಪಟ್ಟ, ಮಾರಲ್ಪಟ್ಟ. वि + डु क्रीञ् (द्रव्यविनिमये) "क्तः" (३-२-१०२)। "अदत्तत्यक्तविक्रीतं कृत्वा स्वं लभते धनी"। विक्रीतमपि विक्रेयं पूर्वक्रेतर्यगृह्णति" याज्ञ० २-२५५।

**विक्रुष्ट ವಿಕ್ರುಷ್ಟ** (न०) 1. ಕೂಗಿಕೊಳ್ಳುವುದು, ರಕ್ಷಣೆಗಾಗಿ ಕರೆಯುವುದು. वि + क्रुश (आह्वाने रोदने च) भावे "क्तः" (३-३-११४)। 2. ಅಳುವುದು, ಕಿರಿಚುವುದು. 3. ನಿಂದೆ, ಬೈಗುಳ. (वि०) 4. ನಿಷ್ಠುರವಾದ, ಕಠಿನವಾದ, ದಯೆಯಿಲ್ಲದ.

**विक्रेतृ ವಿಕ್ರೇತೃ** (वि०) ವರ್ತಕ, ಮಾರುವವನು. वि+डु क्रीञ् (द्रव्यविनिमये) "तृच्" (३-१-१३३)। "विक्रेतुर्दर्शनाच्छुद्धिः स्वामी द्रव्यं नृपो दमम्" याज्ञ० २-१७०। स्त्रियां "ङीप्" (४-१-५)। **-त्री -ತ್ರೀ.**

**विक्रेय ವಿಕ್ರೇಯ** (वि०) ವಿಕ್ರಯಿಸಲು ಅರ್ಹವಾದ, ಮಾರಲು ಯೋಗ್ಯವಾದ. विक्रेतुं योग्यम्—वि+डु क्रीञ् (द्रव्यविनिमये) "यत्" (३-१-९७)।

**विक्लव ವಿಕ್ಲವ** (वि०) 1. ಮೂಢವಾದ, ಸಾಮರ್ಥ್ಯವಿಲ್ಲದ. विक्लवते — वि + क्लुङ् (गतौ) "अच्" (३-१-१३४)। "निसर्गदुर्बोधमबोधविक्लवाः क्व भूपतीनां चरितं क्व जन्तवः" किरा० १-६। 2. ಭಯಗೊಂಡ, ಭೀತನಾದ. "आचकाङ्क्ष घनशब्दविक्लवाः ता विवृत्य विशतीर्भुजान्तरम्" रघु० १९-३८। 3. ಜುಗುಪ್ಸೆಹೊಂದಿದ, ಬೇಸರಗೊಂಡ. "ममापि काश्यपसुतामनुस्मृत्य मृगयाविक्लवं चेतः" शाकु० २। 4. ಶಕ್ತಿಕುಂದಿದ, ಬಳಲಿದ, ಸೋತಿರುವ. "प्रस्थानविक्लवगतेरवलम्बनार्था" शाकु० ५-३।

**विक्लिन्न ವಿಕ್ಲಿನ್ನ** (वि०) 1. ನೆನೆದಿರುವ, ಒದ್ದೆಯಾದ, ತೇವವಾದ. वि + क्लिदू (आर्द्रीभावे) "क्तः" (३-४-७२)। 2. ಮುಪ್ಪಿನಿಂದ ಜೀರ್ಣವಾದ. 3. ಶಿಥಿಲವಾದ, ಕ್ಷೀಣವಾದ. "विक्लिन्नो जरसा जीर्णे शीर्णे चार्द्रे च वाच्यवत्" मेदि०। 4. ಮೆದುವಾದ, ಮೃದುವಾದ, ಕೋಮಲವಾದ.

**विक्लित्ति ವಿಕ್ಲಿತ್ತಿ** (स्त्री०) ಮೆದುವಾಗುವುದು, ಪಾಕದಿಂದ (ತಂಡುಲ ಮೊದಲಾದುವು) ಮೃದುವಾಗುವುದು. वि + क्लिदू (आर्द्रीभावे) "क्तिन्" (३-३-९४)।

**विक्लिष्ट ವಿಕ್ಲಿಷ್ಟ** (न०) 1. ತಪ್ಪು ಉಚ್ಚಾರಣೆ, ಅಸ್ಪಷ್ಟವಾದ ಉಚ್ಚಾರಣೆ. (वि०) 2. ಪೀಡಿಸಲ್ಪಟ್ಟ, ತೊಂದರೆ ಪಡಿಸಲ್ಪಟ್ಟ. वि + क्लिशू (विबाधने) "क्तः" (३-२-१०२)।

**विक्लेद ವಿಕ್ಲೇದ** (ಪುಂ) 1. ಒದ್ದೆಯಾಗುವುದು, ತೇವವಾಗುವುದು. 2. ಕರಗುವುದು, ದ್ರವವಾಗುವುದು. वि + क्लिद्‌ (आर्द्रीभावे) "घञ्" (३-३-१८)। 3. ಮೆದುವಾಗುವುದು.

**विक्लेदन ವಿಕ್ಲೇದನ** (ನಂ) 1. ತೇವಮಾಡುವುದು, ಒದ್ದೆಮಾಡುವುದು. वि + क्लिद्‌ (आर्द्रीभावे) + णिच् "ल्युट्" (३-३-११५)। 2. ಕರಗಿಸುವುದು. 3. ಮೆದುಮಾಡುವುದು.

**विक्लेश ವಿಕ್ಲೇಶ** (ಪುಂ) ಅಸ್ಪಷ್ಟವಾದ ಉಚ್ಚಾರಣೆ, ಬಹಳ ಕಷ್ಟದಿಂದ ಮಾಡುವ ಉಚ್ಚಾರಣೆ. वि+क्लिशु (उपतापे) "घञ्" (३-३-१८)।

**विक्षत ವಿಕ್ಷತ** (ನಂ) 1. ಗಾಯದ ಹುಣ್ಣು, ವ್ರಣ. वि+क्षणु (हिंसायाम्) "क्त:" (३-४-७२)। (वि०) 2. ಗಾಯಮಾಡಲ್ಪಟ್ಟ. वि+क्षणु "क्त:" (३-२-१०२)।

**विक्षाव ವಿಕ್ಷಾವ** (ಪುಂ) 1. ಶಬ್ದ, ಸದ್ದು. वि + टु क्षु (शब्दे) "घञ्" (३-३-२५)। 2. ಸೀನುವುದು, ಸೀನುವ ಶಬ್ದ. "यात यूयं यमश्रायं दिशं नायेन दक्षिणाम्। विक्षावैस्तोयविश्रावं तर्जयन्तो महोदधे:" भट्टि० ७-३६।

**विक्षिपत् ವಿಕ್ಷಿಪತ್** (वि०) 1. ನೀಡುತ್ತಿರುವ, ಮುಂದಕ್ಕೆ ಚಾಚುತ್ತಿರುವ. 2. ಎಸೆಯುತ್ತಿರುವ. 3. ಬಿಡುತ್ತಿರುವ, ಪ್ರಯೋಗಿಸುತ್ತಿರುವ. 4. (ಗಮನವನ್ನು) ಬೇರೆ ಕಡೆಗೆ ತಿರುಗಿಸುತ್ತಿರುವ, ಮನಸ್ಸನ್ನು ಬೇರೆ ವಿಷಯಕ್ಕೆ ಎಳೆಯುತ್ತಿರುವ. 5. ತಿರಸ್ಕರಿಸುತ್ತಿರುವ. वि+क्षिप (प्रेरणे) "शतृ" (३-२-१२४)। "विक्षिपन् भुवि निस्त्रिंशो वक्त्रपुष्पाणि वैरिणाम्" याद० २२-१४०। 6. ಇಡುತ್ತಿರುವ, ಇರಿಸುತ್ತಿರುವ. 7. ಎರಚುತ್ತಿರುವ, ಚೆಲ್ಲುತ್ತಿರುವ. "विक्षिपन् भुवि निस्त्रिंश:" याद० २२-१४०।

**विक्षिप्त ವಿಕ್ಷಿಪ್ತ** (वि०) 1. ಎಸೆಯಲ್ಪಟ್ಟ, ಬಿಸಾಡಲ್ಪಟ್ಟ. 2. ಎರಚಲ್ಪಟ್ಟ, ಚೆಲ್ಲಲ್ಪಟ್ಟ. वि + क्षिप (प्रेरणे) "क्त:" (३-२-१०२)। "वायुविक्षिप्तकुसुमैस्तथान्यैरपि पादपै:" भा० आदि० २७-७। 3. ಬೇರೆ ಕಡೆಗೆ ತಿರುಗಿದ (ಮನಸ್ಸು). 4. ಬಿಡಲ್ಪಟ್ಟ, ಪ್ರಯೋಗಿಸಲ್ಪಟ್ಟ. (ಬಾಣ). 5. ತಿರಸ್ಕರಿಸಲ್ಪಟ್ಟ. 6. ಇಡಲ್ಪಟ್ಟ. 7. ಆಡಿಸಲ್ಪಟ್ಟ, ಅಲ್ಲಾಡಿಸಲ್ಪಟ್ಟ.

**विक्षेप ವಿಕ್ಷೇಪ** (ಪುಂ) 1. ಇಡುವುದು, ಇರಿಸುವುದು. 2. ಎರಚುವುದು, ಚೆಲ್ಲುವುದು. वि + क्षिप (प्रेरणे) "घञ्" (३-३-१८)। 3. ಬಿಡುವುದು, ಪ್ರಯೋಗಿಸುವುದು. 4. (ಮನಸ್ಸನ್ನು) ಬೇರೆ ಕಡೆಗೆ ತಿರುಗಿಸುವುದು. 5. ಎಸೆಯುವುದು, ಬಿಸಾಡುವುದು. 6. ಆಡಿಸುವುದು, ಅಲ್ಲಾಡಿಸುವುದು. "लाङ्गूलविक्षेपविसर्पिशोभैरितस्तत: चन्द्रमरीचिगौरै:" कुमा० १-१३। 7. ನೀಡುವುದು, ಮುಂದಕ್ಕೆ ಚಾಚುವುದು. "संहारविक्षेपलघुक्रियेण हस्तेन तीराभिमुख: सशब्दम्" रघु० ५-४५। वि+क्षिप भावे "ल्युट्" (३-३-११५)। **–क्षेपणम् –ಕ್ಷೇಪಣಮ್.**

**विक्षोभ ವಿಕ್ಷೋಭ** (ಪುಂ) 1. ಚಲಿಸುವುದು. 2. ಕಲಕುವುದು, ಕದಡುವುದು. 3. ತಿಕ್ಕಾಟ. 4. ಹೊಡೆತ, ಬಡಿತ. वि+क्षुभ (सञ्चलने) "घञ्" (३-३-१८)। "सरसीष्वरविन्दानां वीचिविक्षोभशीतलम्" रघु० १-४३।

**विखुर ವಿಖುರ** (ಪುಂ) 1. ರಾಕ್ಷಸ. "पलाशो विखुर: शंकु:" त्रिकाण्ड०। 2. ಚೋರ, ಕಳ್ಳ.

**विख्य ವಿಖ್ಯ** (वि०) ನಾಸಿಕೆಯಿಲ್ಲದವನು, ಮೂಗಿಲ್ಲದವನು. विगता नासिका यस्य। नासिकाया: ख्यादेश: (वा० ८-४-२८)।

**विख्यात ವಿಖ್ಯಾತ** (वि०) ಪ್ರಖ್ಯಾತಿಹೊಂದಿದ, ಪ್ರಸಿದ್ಧಿಹೊಂದಿದ. वि+ख्या (प्रकथने) "क्त:" (३-२-१०२)।

**विख्याति ವಿಖ್ಯಾತಿ** (स्त्री०) ಪ್ರಸಿದ್ಧಿ. वि + ख्या (प्रकथने) "क्तिन्" (३-३-९४)।

**विख्यापन ವಿಖ್ಯಾಪನ** (ನಂ) ಪ್ರಸಿದ್ಧಪಡಿಸುವುದು. वि + ख्या (प्रकथने) + णिच् "ल्युट्" (३-३-११५)।

**विख्यापयत् ವಿಖ್ಯಾಪಯತ್** (वि०) ಪ್ರಸಿದ್ಧಪಡಿಸುತ್ತಿರುವ. वि + ख्या (प्रकथने) + णिच् "शतृ" (३-२-१२४)। स्त्रियां "ङीप्" (४-१-६)। **–यन्ती –ಯಂತೀ.**

**विख्यापयितृ ವಿಖ್ಯಾಪಯಿತೃ** (वि०) ಪ್ರಸಿದ್ಧಪಡಿಸುವವನು. वि + ख्या (प्रकथने) + णिच् "तृच्" (३-१-१३३)। स्त्रियां "ङीप्" (४-१-५)। **–यित्री –ಯಿತ್ರೀ.**

**विगणन ವಿಗಣನ** (ನಂ) ಸಾಲ ಅಥವಾ ಕರ (ಕಂದಾಯ) ವನ್ನು ತೀರಿಸುವುದು, ಸಾಲವನ್ನು ತೀರಿಸುವುದು ಮತ್ತು ಕಂದಾಯ ಪಾವತಿಮಾಡುವುದು. वि + गण (संख्याने) + णिच् "ल्युट्" (३-३-११५)। विगणनम् ऋणादे: नियतिनम् सि० कौ० (१-३-३६)।

**विगत ವಿಗತ** (वि०) 1. ಹೊರಟುಹೋದ, ತೆರಳಿದ. वि + गम्लृ (गतौ) "क्त:" (३-४-७२)। 2. ಬಿಟ್ಟು

ಹೋದ, ಅದೃಶ್ಯವಾದ. "विगततिमिरपङ्कं पश्यति व्योम यावत् धुवति विरहखिन्नः पक्षती यावदेव" माघ० ११-२६। 3. ಇಲ್ಲದಿರುವ, ರಹಿತವಾದ. "विगत-सस्यजिघत्सऽघट्टयत् कलमगोपवधूर्न मृगव्रजम्" माघ० ६-४९। 4. ಪ್ರಕಾಶರಹಿತವಾದ, ಕಾಂತಿಶೂನ್ಯವಾದ, ಕತ್ತಲಾಗಿರುವ. 5. ಶಾಂತವಾಗಿರುವ. "विगतो निष्प्रभे वीते" हेम०। (न०) 6. ಪಕ್ಷಿಗಳ ಗಮನ, ಹಕ್ಕಿಗಳ ಹಾರಾಟ. वीनां पक्षिणां गतं गमनम्। "विगतं विगतं ललितं ललितम्" भट्टि० १०-९।

**विगतकल्मष** ವಿಗತಕಲ್ಮಷ (वि०) ಪಾಪವನ್ನು ಕಳೆದು ಕೊಂಡಿರುವ, ಶುದ್ಧಾತ್ಮನಾದ. विगतं कल्मषं यस्य।

**विगतस्पृह** ವಿಗತಸ್ಪೃಹ (वि०) ಅಪೇಕ್ಷೆಯಿಲ್ಲದವನು, ಆಸೆಯನ್ನು ತೊರೆದವನು. विगता स्पृहा यस्मात्।

**विगतार्तवा** ವಿಗತಾರ್ತವಾ (स्त्री०) ಮುಟ್ಟುನಿಂತು ಹೋದ ಹೆಂಗಸು. विगतमार्तवं रजोऽस्याः।

**विगम** ವಿಗಮ (पुं०) 1. ವಿರಾಮ, ಅವಸಾನ, ಕೊನೆ. वि + गम्लृ (गतौ) "अप्" (३-३-५८)। "चारु नृत्यविगमे च तन्मुखं स्वेदभिन्नतिलकं परिश्रमात्" रघु० १९-१५। 2. ನಾಶ, ಅಳಿವು. "आशास्यमीति-विगमप्रभृति प्रजानाम्" माल० ५-२०।

**विगर्हण** ವಿಗರ್ಹಣ (न०) 1. ನಿಂದೆ, ದೂಷಣೆ. वि + गर्ह (कुत्सायाम्) "ल्युट्" (३-३-११५)। 2. ಹೆದರಿಸುವಿಕೆ. "कृष्णे च भवतो द्वेष्ये वसुदेवविगर्हणात्"।

**विगर्हणा** ವಿಗರ್ಹಣಾ (स्त्री०) 1. ನಿಂದೆ, ದೂಷಣೆ. वि+गर्ह (कुत्सायाम्) + णिच् "युच्" (३-३-१०७)। "प्राप्ता नाम विगर्हणा स्थितिमतां मध्येऽनुजानामपि" वेणी० १-१२। 2. ಬೆದರಿಕೆ.

**विगर्हित** ವಿಗರ್ಹಿತ (वि०) 1. ನಿಂದಿಸಲ್ಪಟ್ಟ, ದೂಷಿಸಲ್ಪಟ್ಟ. वि + गर्ह (कुत्सायाम्) "क्तः" (३-२-१०२)। "विगर्हितं धर्मधनैर्निबर्हणं विशिष्य विश्वासजुषां द्विषामपि" नैष० १-१३१। 2. ನಿಷೇಧಿಸಲ್ಪಟ್ಟ, ಪ್ರತಿಬಂಧಿಸಲ್ಪಟ್ಟ, ಅಡ್ಡಿಮಾಡಲ್ಪಟ್ಟ. 3. ನೀಚ, ಅಸಭ್ಯ, ಅಧಮ. 4. ದುರ್ಜನ.

**विगलत्** ವಿಗಲತ್ (वि०) 1. ಕಡಮೆಯಾಗುತ್ತಿರುವ, ಇಳಿಮುಖವಾಗುತ್ತಿರುವ. वि + गल (अवस्रंसने) + णिच् "शतृ" (३-२-१२४)। "मद्यमन्दविगलत्त्रपमीषच्चक्षुरुन्मिषितपक्ष्म दधत्या" माघ० १०-१७। 2. ಹೆಚ್ಚಾಗಿ ಜಾರುತ್ತಿರುವ. 3. ಹೊರಡುತ್ತಿರುವ. "विगलन्मधुव्रतकुलाश्रुजलं न्यमिमीलदब्जनयनं नलिनी" माघ० ९-११। 4. ಕೆಳಗೆ ಬೀಳುತ್ತಿರುವ, ಕೆಳಗೆ ಉದುರುತ್ತಿರುವ. "कबरीकलापमंसावसक्तं विगलत्प्रसूनम्" कुमा० ९-२१।

**विगलित** ವಿಗಲಿತ (वि०) 1. ಜಾರಿದ, ಕೆಳಕ್ಕೆ ಸರಿದ. विशेषेण गलितः। "विगलितवसनं परिहृतरशनं घटय जघनमपिधानम्" गीतगो०। 2. ಜಿನುಗಿದ, ಸ್ರವಿಸಿದ. 3. ಶಿಥಿಲವಾದ, ಸಡಿಲವಾದ. "कौशेयं व्रजदपि गाढता-मजस्रं सस्रंसे विगलितनीवि नीरजाक्ष्याः" माघ० ८-६। 4. ನಾಶವಾದ, ಅಳಿದುಹೋದ. "सितकरवपुषासौ लक्ष्यते संप्रति द्यौर्विगलितकिरणेन व्यञ्जितैकेक्षणेव" माघ० ११-६३। 5. ಕಳಚಿ ಬಿದ್ದಿರುವ. "स्त्रीलोकः परिकलयांचकार तुल्यं पल्यङ्कैर्विगलितहारचारुभिः स्वैः" माघ० ८-९।

**विगाढ** ವಿಗಾಢ (वि०) 1. ಅತಿಯಾದ, ಬಹಳವಾದ, ಹೆಚ್ಚಾದ. वि+गाहू (विलोडने) "क्तः" (३-४-७२)। "अविन्दतस्त्वाममितामृतोदधिं विगाढतृष्णाविवशान्त-रात्मनः" याद० १४-५०। 2. ನೀರಿನ ಒಳಗೆ ಪ್ರವೇಶಿಸಿದ, ನೀರಿನೊಳಗೆ ಮುಳುಗಿ ಸ್ನಾನಮಾಡಿದ. "विगाढ-मात्रे रमणीभिरम्भसि प्रयत्नसंवाहितपीवरोरुभिः" किरा० ८-३१।

**विगाढृ** ವಿಗಾಢೃ (वि०) 1. ಒಳಗೆ ನುಗ್ಗುವವನು, ಒಳಗೆ ಪ್ರವೇಶಿಸುವವನು. 2. ನೀರಿನೊಳಗೆ ಮುಳುಗುವವನು, ಮುಳುಗಿ ಸ್ನಾನಮಾಡುವವನು. वि + गाहू (विलोडने) "तृच्" (३-१-१३३)। "विगाढारं वनस्यासौ शत्रूणां गाहिता कपिः" भट्टि० ९-२९।

**विगान** ವಿಗಾನ (न०) ನಿಂದೆ, ದೂಷಣೆ. विरुद्धं गानम्।

**विगाह** ವಿಗಾಹ (पुं०) 1. ನೀರಿನೊಳಗೆ ಇಳಿದು ಸ್ನಾನ ಮಾಡುವುದು. वि + गाहू (विलोडने) "घञ्" (३-३-१८)। 2. ಒಳಗೆ ಪ್ರವೇಶಿಸುವುದು.

**विगाहन** ವಿಗಾಹನ (न०) 1. ಒಳಗೆ ನುಗ್ಗುವುದು, ಒಳಗೆ ಪ್ರವೇಶಿಸುವುದು. वि + गाहू (विलोडने) भावे "ल्युट्" (३-३-११५)। 2. ನೀರಿನೊಳಗೆ ಇಳಿದು ಸ್ನಾನಮಾಡುವುದು.

**विगाहनीय** ವಿಗಾಹನೀಯ (वि०) 1. ಪ್ರವೇಶಿಸಲ್ಪಡುವ. 2. ಪ್ರವೇಶಿಸಲು ಸಾಧ್ಯವಾದ. 3. ಪ್ರವೇಶಿಸಲು ಅರ್ಹವಾದ. वि+गाहू (विलोडने) "अनीयर्" (३-१-९६)। "विगाहनीयाः प्रतिभान्ति वीचिका मरीचिकानामपि

भोगसंपदाम्" याद० १४-५०। 4. ಇಳಿದು ಸ್ನಾನ ಮಾಡಲ್ಪಡುವ. 5. –ಸ್ನಾನಮಾಡಲು ಶಕ್ಯವಾದ. 6. –ಸ್ನಾನಮಾಡಲು ಅರ್ಹವಾದ. "तव्य:" (३-१-९६)। –गाहितव्य: –ಗಾಹಿತವ್ಯಃ, –गाढव्य: –ಗಾಢವ್ಯಃ.

**विगाहमान ವಿಗಾಹಮಾನ** (वि०) 1. ಪ್ರವೇಶಿಸುತ್ತಿರುವ, ಒಳಗೆ ನುಗ್ಗುತ್ತಿರುವ. वि+गाहू (विलोडने) "शानच्" (३-२-१२४)। "स्वच्छन्दमेकचरमुज्ज्वलदानशक्तिमुत्सेकिना बलमदेन विगाहमानम्" मुद्रा० १-२६। 2. ನೀರಿನಲ್ಲಿ ಇಳಿದು ಸ್ನಾನಮಾಡುತ್ತಿರುವ. 3. ಕ್ಷೋಭೆಯುಂಟುಮಾಡುತ್ತಿರುವ. "नभो विमानेन विगाहमानो मनोतिवेगेन जगाम तत्र" कुमा० ११-४।

**विगाह्य ವಿಗಾಹ್ಯ** (वि०) 1. ಪ್ರವೇಶಿಸಲ್ಪಡುವ. 2. ಇಳಿದು ಸ್ನಾನಮಾಡಲ್ಪಡುವ. वि+गाहू (विलोडने) "ण्यत्" (३-१-१२४)।

**विगाह्यमान ವಿಗಾಹ್ಯಮಾನ** (वि०) 1. ಪ್ರವೇಶಿಸಲ್ಪಡುತ್ತಿರುವ. 2. ನೀರಿನೊಳಗೆ ಇಳಿದು ಸ್ನಾನಮಾಡಲ್ಪಡುತ್ತಿರುವ. वि + गाहू (विलोडने) कर्म० "शानच्" (३-२-१२४)। "ऋद्धापणं राजपथं स पश्यन् विगाह्यमानां सरयूं च नौभि:" रघु० १४-३०।

**विगीत ವಿಗೀತ** (वि०) 1. ನಿಂದಿಸಲ್ಪಟ್ಟ, ದೋಷದಿಂದ ಕೂಡಿದ. वि + गै (शब्दे) "क्त:" (३-२-१०२)। 2. ವಿರುದ್ಧವಾಗಿ ಹೇಳಲ್ಪಟ್ಟ. 3. ಚೆನ್ನಾಗಿ ಹಾಡಲ್ಪಟ್ಟ. विशेषेण गीतम्। 4. ತಪ್ಪಾಗಿ ಹಾಡಲ್ಪಟ್ಟ. विरुद्धं गीतम्। "यश्चाधरोत्तरानर्थान् विगीतान्नावबुध्यते" मनु० ८-५३।

**विगीति ವಿಗೀತಿ** (स्त्री०) 1. ನಿಂದೆ, ದೂಷಣೆ. 2. ತಪ್ಪಾಗಿ ಹೇಳುವುದು, ವಿರುದ್ಧವಾಗಿ ಹೇಳುವುದು. विरुद्धा गीति:।

**विगुण ವಿಗುಣ** (वि०) 1. ವಿರುದ್ಧವಾದ ಗುಣವುಳ್ಳ, ವಿಪರೀತವಾದ ಗುಣವುಳ್ಳ. विरुद्धो गुणो यस्य। "फलैर्हीना वृक्षा विगुणविधियोगादिव नता:" मुद्रा० ६-११। 2. ಗುಣಶೂನ್ಯನಾದ, ಯಾವುದೊಂದು ಗುಣವೂ ಇಲ್ಲದ. विगतो गुणो यस्य। "अवसन्नतापमतमिस्रमभावपदोपतैव विगुणस्य गुण:" माघ० ९-१२। 3. ದಾರವಿಲ್ಲದ, ಸೂತ್ರವಿಲ್ಲದ. 4. ಮೌರ್ವಿಯಿಲ್ಲದ, ಹೆದೆ (ತೊಗಲಿನ ಹಗ್ಗ) ಯಿಲ್ಲದ (ಧನುಸ್ಸು).

**विगूढ ವಿಗೂಢ** (वि०) 1. ಬಹಳ ರಹಸ್ಯವಾದ, ಬಹಳ ಗುಟ್ಟಾದ. विशेषेण गूढ:। 2. ನಿಂದಿತವಾದ, ತೆಗಳಲ್ಪಟ್ಟ. "विगूढो गर्हितेऽपि च। गुप्तेऽपि त्रिषु" मेदि०।

**विगृहीत ವಿಗೃಹೀತ** (वि०) 1. ಬಲಾತ್ಕಾರವಾಗಿ ಹಿಡಿಯಲ್ಪಟ್ಟ, ಬಲಾತ್ಕಾರವಾಗಿ ವಶಪಡಿಸಿಕೊಳ್ಳಲ್ಪಟ್ಟ. वि + ग्रह (उपादाने) "क्त:" (३-२-१०२)। 2. ಎದುರಿಸಲ್ಪಟ್ಟ, ಪ್ರತಿಭಟಿಸಲ್ಪಟ್ಟ. 3. ನಿಷೇಧಿಸಲ್ಪಟ್ಟ, ಅಡ್ಡಿಯುಂಟುಮಾಡಲ್ಪಟ್ಟ. "बन्धुना विगृहीतोऽहं भूयांसं जीवक: कथम्" भट्टि० ६-८६।

**विग्न ವಿಗ್ನ** (वि०) ಭಯಗ್ರಸ್ತವಾದ, ಹೆದರಿದ. ओविजी (भयचलनयो:) "क्त:" (३-४-७२। निष्ठातकारस्य नत्वम् (८-२-४५)। "महता मदगन्धेन तस्य विग्ना विबभ्रमु:" याद० १६-२०।

**विग्र ವಿಗ್ರ** (वि०) ಮೂಗಿಲ್ಲದವನು, ಮೂಗನ್ನು ಕಳೆದುಕೊಂಡವನು. विगता नासिका यस्य, नासिकाशब्दस्य ग्रादेश: (वा० ५-१-११८)। "विग्रस्तु गतनासिक:" अम०।

**विग्रह ವಿಗ್ರಹ** (पुं०) 1. ದೇಹ, ಶರೀರ. विविधं सुखं गृह्णाति—ग्रह (उपादाने) "अच्" (३-१-१३४)। विविधैर्व्याधिभि: गृह्यते वा—ग्रह "अप्" (३-३-५८)। "कुसुमकार्मुककार्मुकसंहतिद्रुतशिलीमुखखण्डितविग्रहा:" माघ० ६-१६। 2. ಪ್ರಣಯ ಕಲಹ, ಪ್ರೀತಿಯ ಜಗಳ. "करुणमपि समयं मानिनां मानभेदे रुदितमुदितमस्त्रं योषितां विग्रहेषु" माघ० ११-३५। 3. ಯುದ್ಧ, ಕದನ, ಸಂಗ್ರಾಮ. ರಾಜನಲ್ಲಿರಬೇಕಾದ ಆರು ಗುಣಗಳಲ್ಲೊಂದು. "सन्धिं च विग्रहं चैव यानमासनमेव च। द्वैधीभावं संश्रयं च षड्गुणांश्चिन्तयेत्सदा" मनु०। ಯುದ್ಧವು ಪ್ರಕಾಶಯುದ್ಧ ಕೂಟಯುದ್ಧ ಮೌನಯುದ್ಧಗಳೆಂದು ಮೂರು ವಿಧ. "विग्रहस्तव शक्रेण बृहस्पतिपुरोधसा। सार्धं कुमारसेनान्या शून्यश्चासीति को नय:" भट्टि० ५-७। 4. ವಿಭಾಗ, ಒಂದು ಪಾಲು. 5. ವಿಸ್ತರಿಸುವುದು. "विग्रहो युधि विस्तारे प्रविभागशरीरयो:" हेम०। 6. ಸಮಸ್ತ ಪದಗಳ ಅರ್ಥವು ಸರಿಯಾಗಿ ತಿಳಿಯುವಂತೆ ಪದಗಳನ್ನು ಬಿಡಿಸಿ ಹೇಳುವ ವಾಕ್ಯ, ಸಮಾಸವೃತ್ತಿಯೋಗ್ಯವಾದ ವಿಭಕ್ತ್ಯಂತ ಪದಗಳ ಸಮೂಹ. "वृत्त्यर्थविबोधकं वाक्यं विग्रह:" सि० कौ०। 7. ಪಕ್ಷಿಗಳನ್ನು ಹಿಡಿಯುವುದು. वीनां पक्षिणां ग्रहो ग्रहणम्।

**विग्रहवत् ವಿಗ್ರಹವತ್** (वि०) ಶರೀರವನ್ನು ಹೊಂದಿರುವ, ಮೂರ್ತಿಮತ್ತಾದ. विग्रहोऽस्यास्ति "मतुप्" (५-२-९४)। "एष विग्रहवान् धर्म:"। स्त्रियां "ङीप्" (४-२-६)। **विग्रहवती ವಿಗ್ರಹವತೀ.** "त्रयी विग्रहवत्येव सममध्यात्मविद्यया" -माल० १-१४।

**विग्रहावर ವಿಗ್ರಹಾವರ** (ನಂ) ಪೃಷ್ಠಭಾಗ, ದೇಹದ ಹಿಂಭಾಗ. विग्रहमावृणोति– आ+वृञ् (वरणे) "अच्" (३-१-१३४)।

**विघटन ವಿಘಟನ** (ನಂ) 1. ಒಡೆಯುವುದು, ಬೇರ್ಪಡುವುದು, ಪ್ರತ್ಯೇಕವಾಗುವುದು. वि + घट (चेष्टायाम्) भावे "ल्युट्" (३-३-११५)। 2. ಒಡೆಯುವುದು, ಬೇರ್ಪಡಿಸುವುದು, ಪ್ರತ್ಯೇಕಿಸುವುದು. वि + घट + णिच् "ल्युट्" (३-३-११५)। 3. ಚೆದರಿಹೋಗುವುದು, ಪ್ರಸರಿಸುವುದು. 4. ನಾಶ, ಅಳಿವು. 5. ನಾಶಮಾಡುವುದು, ಹಾಳುಮಾಡುವುದು.

**विघटनीय ವಿಘಟನೀಯ** (ವಿಂ) 1. ಬೇರ್ಪಡಿಸಲ್ಪಡುವ. 2. ಬೇರ್ಪಡಿಸಬೇಕಾದ. 3. ಬೇರ್ಪಡಿಸಲು ಯೋಗ್ಯವಾದ. 4. ಬೇರ್ಪಡಿಸಲು ಶಕ್ಯವಾದ. वि + घट (चेष्टायाम्) + णिच् "अनीयर्" (३-१-९६)। 5. ಚೆದರಿಸಲ್ಪಡುವ. 6. ಚೆದರಿಸಬೇಕಾದ. 7. ಚೆದರಿಸಲು ಯೋಗ್ಯವಾದ. 8. ಚೆದರಿಸಲು ಶಕ್ಯವಾದ. 9. ನಾಶಪಡಿಸಲ್ಪಡುವ. 10. ನಾಶಪಡಿಸಬೇಕಾದ. 11. ನಾಶಪಡಿಸಲು ಅರ್ಹವಾದ. 12. ನಾಶಪಡಿಸಲು ಶಕ್ಯವಾದ. "तव्यः" (३-१-९६)। –घटितव्यम् –ಘಟಿತವ್ಯಮ್.

**विघटिका ವಿಘಟಿಕಾ** (ಸ್ತ್ರೀಂ) ವಿಘಳಿಗೆ, ಘಳಿಗೆಯ 60ನೇ ಒಂದು ಭಾಗ.

**विघटित ವಿಘಟಿತ** (ವಿಂ) 1. ಒಡೆಯಲ್ಪಟ್ಟ, ಬೇರ್ಪಡಿಸಲ್ಪಟ್ಟ. वि + घट (चेष्टायाम्) + णिच् "क्तः" (३-२-१०२)। 2. ಚೆದರಿಸಲ್ಪಟ್ಟ. 3. ನಾಶಪಡಿಸಲ್ಪಟ್ಟ. "पौलस्त्यस्य जटायुषा विघटितः कार्ष्णायसोऽयं रथस्ते चैते पुरतः पिशाचवदनाः कङ्कालशेषाः खराः" ಉಂ ರಾಂ ३-४३। 4. ವಿಶ್ಲೇಷಹೊಂದಿದ, ಸಂಬಂಧಬಿಟ್ಟಿರುವ, ದೂರಸರಿದಿರುವ. "घटितविघटितः प्रियस्य वक्षस्तटभुवि कन्दुकविभ्रमं बभार" माघ० ७-१५।

**विघट्टन ವಿಘಟ್ಟನ** (ನಂ) 1. ಹೊಡೆತ, ತಿಕ್ಕಾಟ, ಉಜ್ಜಾಟ, ಘರ್ಷಣೆ. वि+घट्ट (चलने) भावे "ल्युट्" (३-३-११५)। "गाम्भीर्यं दधदपि रन्तुमङ्गनाभिः संक्षोभं जघनविघट्टनेन नीतः" माघ० ८-२६। 2. (ಕರಾರನ್ನು) ಮುರಿಯುವುದು, ಉಲ್ಲಂಘಿಸುವುದು. 3. ಚೆದರಿಸುವುದು, ಓಡಿಸುವುದು.

**विघट्टनीय ವಿಘಟ್ಟನೀಯ** (ವಿಂ) 1. ಅತಿಯಾಗಿ ಕುಲುಕಿಸಬೇಕಾದ, ಹೆಚ್ಚಾಗಿ ಅಳ್ಳಾಡಿಸಬೇಕಾದ. वि+घट्ट (चलने) + णिच् "अनीयर्" (३-१-९६)। 2. ಉಜ್ಜಬೇಕಾದ, ತಿಕ್ಕಬೇಕಾದ, ತೀಡಬೇಕಾದ.

**विघट्टित ವಿಘಟ್ಟಿತ** (ವಿಂ) 1. ಉಜ್ಜಲ್ಪಟ್ಟ, ತಿಕ್ಕಲ್ಪಟ್ಟ, ಹೊಡೆಯಲ್ಪಟ್ಟ. वि + घट्ट (चलने) "क्तः" (३-२-१०२)। "अस्यन्ती चलशफरीविघट्टितोरूर्वामोरूरतिशयमाप विभ्रमस्य" माघ० ८-२४। 2. ಚೆದರಿಸಲ್ಪಟ್ಟ, ಓಡಿಸಲ್ಪಟ್ಟ. "तदीयमातङ्गघटाविघट्टितैः कटस्थलप्रोषितदानवारिभिः" माघ० १-६४। 3. ಮುಚ್ಚಳ ತೆಗೆಯಲ್ಪಟ್ಟ, ಸಡಿಲಿಸಲ್ಪಟ್ಟ.

**विघन ವಿಘನ** (ಪುಂ) ಕಬ್ಬಿಣದ ಸುತ್ತಿಗೆ.

**विघस ವಿಘಸ** (ಪುಂ) 1. ಭೋಜನಶೇಷ, ದೇವತೆಗಳು ಪಿತೃಗಳು ಮತ್ತು ಅತಿಥಿಗಳು ಊಟಮಾಡಿದ ನಂತರ ಉಳಿದ (ಆಹಾರ) ಅನ್ನ. विशिष्टैः गुर्वादिभिरद्यते—अद (भक्षणे) "अप्" (३-३-५९)। अदेः घस्लृ आदेशः (२-४-३८)। 2. ಆಹಾರ. "अयि वनप्रिय विस्मृत एव किं बलिभुजो विघसो भवताऽधुना" उद्भटः। (ನಂ) 3. ಜೇನುಮೇಣ.

**विघसाशिन् ವಿಘಸಾಶಿನ್** (ವಿಂ) ಪಿತೃಗಳು ಗುರುಗಳು ಮತ್ತು ಅತಿಥಿಗಳು ಭೋಜನಮಾಡಿದನಂತರ ಉಳಿದ ಅನ್ನವನ್ನು ಊಟಮಾಡುವವನು. विघसमश्नाति — अश (भोजने) "णिनिः" (३-२-७८)।

**विघात ವಿಘಾತ** (ಪುಂ) 1. ವಿಘ್ನ, ಪ್ರತಿಬಂಧ. वि + हन (हिंसागत्योः) "घञ्" (३-३-१८)। "अजस्रदीक्षाप्रयतस्य मद्गुरोः क्रियाविघाताय कथं प्रवर्तसे" रघु० ३-४४। 2. ನಾಶ, ಅಳಿವು. "तव प्रयातस्य जयाय तेषां क्रियादधानां मघवा विघातम्" किरा० ३-५२। 3. ಸಂಹಾರ, ಕೊಲ್ಲುವುದು. "द्विषां विघाताय विधातुमिच्छतो रहस्यनुज्ञामधिगम्य भूभृतः" किरा० १-३। 4. ಏಟು, ಹೊಡೆತ.

**विघातक ವಿಘಾತಕ** (ವಿಂ) 1. ಅಡ್ಡಿಪಡಿಸುವ, ವಿಘ್ನವುಂಟುಮಾಡುವ. 2. ನಾಶಪಡಿಸುವ. 3. ಸಂಹರಿಸುವ. 4. ಹೊಡೆಯುವ. वि + हन (हिंसागत्योः) "ण्वुल्" (३-१-१३३)।

**विघातिन् ವಿಘಾತಿನ್** (ವಿಂ) 1. ನಾಶಪಡಿಸುವ. 2. ಹೊಡೆಯುವ. 3. ಸಂಹರಿಸುವ. विघातोऽस्यास्ति "इनिः" (५-२-११५)। 4. ವಿಘ್ನವುಂಟುಮಾಡುವ.

**विघूर्णत् ವಿಘೂರ್ಣತ್** (ವಿಂ) ಭ್ರಮಿಸುತ್ತಿರುವ, ಸುತ್ತಾಡುತ್ತಿರುವ. वि + घूर्ण (भ्रमणे) "शतृ"

(३-२-१२४)। "कापिशायनसुगन्धि विघूर्णन्नुन्मदोऽविशयितुं समशेत" माघ० १०-४०। स्त्रियां "ङीप्" (४-१-६)। **-घूर्णन्ती -ಘೂರ್ಣನ್ತೀ.**

**विघूर्णन ವಿಘೂರ್ಣನ** (न०) ತಿರುಗುವುದು, ಸುತ್ತಾಡುವುದು. वि+घूर्ण (भ्रमणे) भावे "ल्युट्" (३-३-११५)।

**विघूर्णयत् ವಿಘೂರ್ಣಯತ್** (वि०) ತಿರುಗಿಸುತ್ತಿರುವ, ಸುತ್ತಿಸುತ್ತಿರುವ. वि+घूर्ण (भ्रमणे)+णिच् "शतृ" (३-२-१२४)।

**विघूर्णित ವಿಘೂರ್ಣಿತ** (वि०) ತಿರುಗಿಸಲ್ಪಟ್ಟ, ಸುತ್ತಿಸಲ್ಪಟ್ಟ. वि+घूर्ण (भ्रमणे)+णिच् "क्तः" (३-२-१०२)।

**विघ्न ವಿಘ್ನ** (पुं०) 1. ಅಡ್ಡಿ, ಅಡಚಣೆ, ಎಡರು. विहन्यतेऽनेन — वि + हन (हिंसागत्योः) घञर्थे "कः" (वा० ३-३-५८)। "अतर्कयद्विघ्नमिवेष्टसाहसः प्रसादमिच्छासदृशं पिनाकिनः" माघ० १-४९। (वि०) 2. ವಿಘ್ನವುಂಟುಮಾಡುವ. "विराधं तपसां विघ्नम्" भट्टि० ९-१३३।

**विघ्नकर ವಿಘ್ನಕರ** (वि०) ವಿಘ್ನವನ್ನುಂಟುಮಾಡುವ, ಅಡ್ಡಿಪಡಿಸುವ. विघ्नस्य करः। डु कृञ् (करणे) "टः" (३-२-२०)।

**विघ्नकारिन् ವಿಘ್ನಕಾರಿನ್** (वि०) 1. ವಿಘ್ನವನ್ನುಂಟುಮಾಡುವ, ಅಡ್ಡಿಯನ್ನೊಡ್ಡುವ. विघ्नं कर्तुं शीलमस्य — डु कृञ् (करणे) "णिनिः" (३-२-७८)। 2. ಭಯಂಕರವಾಗಿ ಕಾಣುವ. "विघ्नकारी विघातस्य कारके घोरदर्शने" हेम०।

**विघ्नकृत् ವಿಘ್ನಕೃತ್** (वि०) ವಿಘ್ನವನ್ನುಂಟುಮಾಡುವ, ಅಡಚಣೆಯುಂಟುಮಾಡುವ. विघ्नं करोति — डु कृञ् (करणे) "क्विप्" (३-२-७६)।

**विघ्नध्वंस ವಿಘ್ನಧ್ವಂಸ** (पुं०) ವಿಘ್ನದ ನಾಶ, ವಿಘ್ನದ ನಿವಾರಣೆ. विघ्नस्य ध्वंसः।

**विघ्ननायक ವಿಘ್ನನಾಯಕ** (पुं०) ವಿಘ್ನಗಳಿಗೆ ಯಜಮಾನನಾದ ಗಣಪತಿ, ವಿಘ್ನಗಳನ್ನು ತನಗೆ ಅಧೀನವಾಗಿಟ್ಟುಕೊಂಡಿರುವುದರಿಂದ ಗಣಪತಿಗೆ ಈ ಹೆಸರು. विघ्नानां नायकः नियन्ता।

**विघ्ननाशक ವಿಘ್ನನಾಶಕ** (पुं०) 1. ಗಣಪತಿ. विघ्नान् नाशयति — णश (अदर्शने) "ण्वुल्" (३-१-१३३)। "ल्युः" (३-१-१३४)। **-नाशनः -ನಾಶನಃ.** (वि०) 2. ವಿಘ್ನಗಳನ್ನು ಪರಿಹರಿಸುವ.

**विघ्नराज ವಿಘ್ನರಾಜ** (पुं०) ಗಣಪತಿ. विघ्नानां राजा — राजन् "टच्" (५-४-९१)।

**विघ्नहारिन् ವಿಘ್ನಹಾರಿನ್** (पुं०) 1. ಗಣಪತಿ. विघ्नान् हरति — हृञ् (हरणे) "णिनिः" (३-२-७८)। (वि०) 2. ವಿಘ್ನಗಳನ್ನು ಪರಿಹರಿಸುವ. स्त्रियां "ङीप्" (४-१-५)। **-हारिणी -ಹಾರಿಣೀ.**

**विघ्नित ವಿಘ್ನಿತ** (वि०) ವಿಘ್ನವುಂಟಾದ, ಅಡಚಣೆಯುಂಟಾದ. विघ्नोऽस्य सञ्जातः "इतच्" (५-२-३६)।

**विघ्नेश ವಿಘ್ನೇಶ, -ईशान -ಈಶಾನ, -ईश्वर -ಈಶ್ವರ** (पुं०) ಗಣಪತಿ. विघ्नानामीशः ईशानः ईश्वरो वा।

**विङ्ख ವಿಂಖ** (पुं०) ಕುದುರೆಯ ಕಾಲಿನ ಗೊರಸು. "प्रतोदोऽथ खुरो विङ्खः पुटः" त्रिकाण्ड०।

**विचकिल ವಿಚಕಿಲ** (पुं०) 1. ಮದನವೃಕ್ಷ, ಮಂಗಾರೆ ಗಿಡ. 2. ಒಂದು ಜಾತಿಯ ಮಲ್ಲಿಗೆ. "भवेद्विचकिलो मल्लीप्रभेदे मदने पुमान्" मेदि०।

**विचक्षण ವಿಚಕ್ಷಣ** (पुं०) 1. ಪಂಡಿತ, ವಿದ್ವಾಂಸ. विचष्टे — वि+ चक्षिङ् (व्यक्तायां वाचि) "युच्" (३-२-१४९)। "हरिर्विप्रतिषेधं तमाचचक्षे विचक्षणः" माघ० २-६। (वि०) 2. ನಿಪುಣ, ಸಮರ್ಥ, ಪ್ರವೀಣ. "तस्मात् पुरःसरविभीषणदर्शितेन सेवाविचक्षणहरीश्वरदत्तहस्तः" रघु० १३-६९।

**विचक्षुस् ವಿಚಕ್ಷುಸ್** (वि०) 1. ಅಂಧ, ಕುರುಡ. 2. ತಬ್ಬಿಬ್ಬುಮಾಡಲ್ಪಟ್ಟವನು, ಭ್ರಮೆಹಿಡಿಸಲ್ಪಟ್ಟವನು.

**विचय ವಿಚಯ** (पुं०) ಅನ್ವೇಷಣ, ಹುಡುಕುವುದು. वि + चिञ् (चयने) "अच्" (३-३-५६)। "तुरगविचयव्यग्रानुर्वीभिदः सगराध्वरे कपिलमहसा रोषात्प्लुष्टान् पितुश्च पितामहान्" उ० रा० १-२३। भावे "ल्युट्" (३-३-११५)। **-चयनम् -ಚಯನಮ್.** "अन्वेषणं विचयनं मार्गणं मृगणा मृगः" अम०।

**विचरण ವಿಚರಣ** (न०) ಚಲಿಸುವುದು, ಸಂಚರಿಸುವುದು, ತಿರುಗಾಡುವುದು. वि + चर (गतौ) भावे "ल्युट्" (३-३-११५)।

**विचरणीय ವಿಚರಣೀಯ** (वि०) 1. ಸಂಚರಿಸಬೇಕಾದ, ತಿರುಗಾಡಬೇಕಾದ. 2. ಸಂಚರಿಸಲು ಯೋಗ್ಯವಾದ. वि + चर (गतौ) "अनीयर्" (३-१-९६)।

**विचरत् ವಿಚರತ್** (वि०) ಸಂಚರಿಸುತ್ತಿರುವ, ನಡೆಯುತ್ತಿರುವ, ತಿರುಗಾಡುತ್ತಿರುವ. वि + चर (गतौ) "शतृ" (३-२-१२४)। स्त्रियां "ङीप्" (४-१-६)। **-चरन्ती -ಚರನ್ತೀ.**

**विचरित ವಿಚರಿತ** (वि०) 1. ಸಂಚರಿಸಿದ, ತಿರುಗಾಡಿದ. वि + चर (गतौ) कर्तं० "क्तः" (३-४-७२)। (न०) 2. ಸಂಚರಿಸುವುದು, ಚಲಿಸುವುದು, ನಡೆಯುವುದು. वि + चर भावे "क्तः" (३-३-११४)।

**विचर्चिका ವಿಚರ್ಚಿಕಾ** (स्त्री०) ಕಜ್ಜಿ, ತುರಿ, ನವೆಯಿಂದ ಕೂಡಿದ ಒಂದು ಅಂಟುರೋಗ. विचर्च्यते — चर्च (अध्ययने) "ण्वुल्" (३-३-१०८)। "कच्छ्वां तु पाम पामा विचर्चिका" अम०।

**विचल ವಿಚಲ** (वि०) ಚಲಿಸುವ, ಕಂಪಿಸುವ, ಅಲ್ಲಾಡುವ. विशेषेण चलति—चल (कम्पने) "अच्" (३-१-१३४)।

**विचलत् ವಿಚಲತ್** (वि०) 1. ಚಲಿಸುತ್ತಿರುವ, ಸರಿಯುತ್ತಿರುವ. वि + चल (कम्पने) "शतृ" (३-२-१२४)। 2. ದಾರಿತಪ್ಪಿ ನಡೆಯುತ್ತಿರುವ, ಅಕ್ರಮವಾಗಿ ವರ್ತಿಸುತ್ತಿರುವ. स्त्रियां "ङीप्" (४-१-६)। **–चलन्ती –ಚಲನ್ತೀ.**

**विचलन ವಿಚಲನ** (न०) 1. ಚಲಿಸುವುದು, ಕಂಪಿಸುವುದು, ನಡುಗುವುದು. 2. ಭ್ರಷ್ಟನಾಗುವುದು, ದಾರಿತಪ್ಪಿ ನಡೆಯುವುದು, ಅಕ್ರಮವಾಗಿ ವರ್ತಿಸುವುದು. वि + चल (कम्पने) "ल्युट्" (३-३-११५)।

**विचलित ವಿಚಲಿತ** (वि०) 1. ಚಲಿಸಿದ, ಕದಲಿದ. वि + चल (कम्पने) कर्तं० "क्तः" (३-४-७२)। "रुचिरचित्रतनूरुहशालिभिर्विचलितः परितः प्रियकव्रजैः" माघ० ४-३२। 2. ದಾರಿತಪ್ಪಿ ನಡೆದ, ನಿಯಮವನ್ನು ಮೀರಿ ನಡೆದ, ಅಕ್ರಮವಾಗಿ ವರ್ತಿಸಿದ. "दण्डो हि सुमहत् तेजो दुर्धरश्चाकृतात्मभिः। धर्माद्विचलितं हन्ति नृपमेव सबान्धवम्" मनु० ७-२८। (न०) 3. ಚಲಿಸುವುದು, ಕದಲುವುದು. भावे "क्तः"। 4. ದಾರಿತಪ್ಪಿ ನಡೆಯುವುದು.

**विचार ವಿಚಾರ** (पुं०) 1. ಪರ್ಯಾಲೋಚನೆ, ವಿಮರ್ಶೆ. वि + चर (गतौ) "घञ्" (३-३-१८)। "अल्पस्य हेतोः बहु हातुमिच्छन् विचारमूढः प्रतिभासि मे त्वम्" रघु० २-४७। 2. ಚರ್ಚೆ, ಸಂದಿಗ್ಧವಾದ ವಿಷಯದಲ್ಲಿ ತತ್ತ್ವಪರೀಕ್ಷೆಗಾಗಿ ಪ್ರಮಾಣಪೂರ್ವಕ ಮಾಡುವ ವಾದ. 3. ತತ್ತ್ವನಿರ್ಣಯ. 4. ವಿಚಾರಣೆ, ಪರೀಕ್ಷೆ. "विषसलिलतुलाग्निप्रार्थिते मे विचारे क्रकचमिह शरीरे वीक्ष्य दातव्यमद्य" मृच्छ० ९-४३। 5. ಯುಕ್ತಿಯುಕ್ತವಾದ ಮಾತುಗಳಿಂದ ಪರೋಕ್ಷವಾದ ವಿಷಯವನ್ನು ಸಾಧಿಸುವುದು. "विचारो युक्तिवाक्यैर्यदप्रत्यक्षार्थसाधनम्" सा० द० ६-१८३। 6. ತನಿಖೆ, ವಿಚಾರಣೆ. 7. ವಿವೇಕ, ವಿವೇಚನೆ.

**विचारज्ञ ವಿಚಾರಜ್ಞ** (वि०) 1. ವಿಮರ್ಶಿಸಲು ತಿಳಿವಳಿಕೆಯುಳ್ಳವನು, ವಿಮರ್ಶೆಮಾಡಬಲ್ಲವನು. विचारं जानाति —ज्ञा (अवबोधने) "कः" (३-२-३)। 2. ನಿರ್ಣಯಿಸಬಲ್ಲವನು, ತೀರ್ಮಾನಕೊಡಲು ಶಕ್ತನಾದವನು, ತೀರ್ಪುಗಾರ.

**विचारण ವಿಚಾರಣ** (न०) 1. ವಿಮರ್ಶೆ, ವಿವೇಚನೆ. वि + चर (गतौ) + णिच् "ल्युट्" (३-३-११५)। 2. ಪರೀಕ್ಷೆ, ವಿಚಾರಣೆ. 3. ಸಂದಿಗ್ಧವಾದ ವಿಷಯದಲ್ಲಿ ತತ್ತ್ವಾಂಶವನ್ನು ತಿಳಿಯಲು ಮಾಡುವ ಚರ್ಚೆ. 4. ತನಿಖೆ. 5. ಶಂಕೆ, ಸಂಶಯ, ಅನಿಶ್ಚಯತೆ. वि + चर (संशये) + णिच् "युच्" (३-३-१०७)। **–चारणा –ಚಾರಣಾ.**

**विचारणीय ವಿಚಾರಣೀಯ** (वि०) 1. ವಿಮರ್ಶಿಸಲ್ಪಡುವ. 2. ವಿಮರ್ಶೆಮಾಡಬೇಕಾದ. 3. ವಿಚಾರಮಾಡಲು ಅರ್ಹವಾದ. वि + चर (गतौ) + णिच् "अनीयर्" (३-१-९६)। "वृद्धास्ते न विचारणीयचरितास्तिष्ठन्तु हुं वर्तते सुन्दस्त्रीमथनेऽप्यकुण्ठयशसो लोके महान्तो हि ते" उ० रा० ५-३४। 4. ಪರೀಕ್ಷಿಸಲ್ಪಡುವ. 5. ಪರೀಕ್ಷಿಸಬೇಕಾದ. 6. ಪರೀಕ್ಷಿಸಲು ಅರ್ಹವಾದ.

**विचारदृश् ವಿಚಾರದೃಶ್** (वि०) ವಿವೇಕವೇ ನೇತ್ರವಾಗಿರುವ, ವಿವೇಕದಿಂದ ಎಲ್ಲವನ್ನೂ ನೋಡುವ. विचारो विवेको दृगस्य। "अमित्रजिन्मित्रजिदोजसा स यद्विचारदृक्चारदृगप्यवर्तत" नैष० १-१३।

**विचारयत् ವಿಚಾರಯತ್** (वि०) 1. ಹೆಚ್ಚಾಗಿ ಸಂಚಾರಮಾಡಿಸುತ್ತಿರುವ. वि + चर (गतौ) + णिच् "शतृ" (३-२-१२४)। 2. ಚೆನ್ನಾಗಿ ಊಟಮಾಡಿಸುತ್ತಿರುವ. वि + चर (भक्षणे) + णिच् "शतृ" (३-२-१२४)।

**विचारित ವಿಚಾರಿತ** (वि०) 1. ವಿಮರ್ಶೆಮಾಡಲ್ಪಟ್ಟ, ಪರ್ಯಾಲೋಚಿಸಲ್ಪಟ್ಟ. 2 ಪರೀಕ್ಷಿಸಲ್ಪಟ್ಟ. वि+चर (गतौ) + णिच् "क्तः" (३-२-१०२)। "आपत्कल्पेन यो धर्मं कुरुतेऽनापदि द्विजः। स नाप्नोति फलं तस्य परत्रेति विचारितम्" मनु० ११-२८।

**विचाल ವಿಚಾಲ** (पुं०) 1. ಒಂದು ವಸ್ತುವನ್ನು ಅನೇಕ ಭಾಗಮಾಡಿ ಅದಕ್ಕೆ ಆ ಭಾಗಗಳ ಸಂಖ್ಯೆಯನ್ನೂ ಕೊಡುವುದು. एकं राशिं पञ्चधा कुरु ಎಂಬಲ್ಲಿ ಒಂದು ರಾಶಿಯನ್ನು ಐದು ಭಾಗಗಳಾಗಿ ಮಾಡಿ ಆ ಭಾಗಗಳಿಗೆ ಐದು

ಸಂಖ್ಯೆಯನ್ನು ಹೇಳುವ ಅರ್ಥದಲ್ಲಿ पञ्चन् ಶಬ್ದಕ್ಕೆ "धा" ಪ್ರತ್ಯಯ ಬಂದಿರುವುದು. (५-३-४३) ನೋಡಿ. 2. ಮಧ್ಯಭಾಗ, ಒಳಭಾಗ.

**विचालन ವಿಚಾಲನ** (नं०) ಕದಲಿಸುವುದು, ಅಲ್ಲಾಡಿಸುವುದು. वि + चल (कम्पने) + णिच् "ल्युट्" (३-३-११५)।

**विचालनीय ವಿಚಾಲನೀಯ** (वि०) 1. ಕದಲಿಸಲ್ಪಡುವ. 2. ಕದಲಿಸಬೇಕಾದ. 3. ಕದಲಿಸಲು ಶಕ್ಯವಾದ. 4. ಕದಲಿಸಲು ಅರ್ಹವಾದ. वि + चल (कम्पने) + णिच् "अनीयर्" (३-१-९६)। "तव्यः"। **–चालयितव्यः –ಚಾಲಯಿತವ್ಯಃ.**

**विचालित ವಿಚಾಲಿತ** (वि०) ಕದಲಿಸಲ್ಪಟ್ಟ, ಅಲ್ಲಾಡಿಸಲ್ಪಟ್ಟ. वि + चल (कम्पने) + णिच् "क्तः" (३-२-१०२)।

**विचाल्य ವಿಚಾಲ್ಯ** (वि०) 1. ಕದಲಿಸಲ್ಪಡುವ. 2. ಕದಲಿಸಲು ಶಕ್ಯವಾದ. वि + चल (कम्पने) + णिच् "यत्" (३-१-९७)।

**विचि ವಿಚಿ** (पुंस्त्री०) ತರಂಗ, ಅಲೆ, ತೆರೆ. विनक्ति जलानि पृथगिव करोति — विचिर् (पृथग्भावे) "इन्" (उ० ४-११९)।

**विचिकित्सा ವಿಚಿಕಿತ್ಸಾ** (स्त्री०) ಸಂಶಯ, ಸಂದೇಹ, ಒಂದು ವಸ್ತುವಿನಲ್ಲಿ ಅದಕ್ಕೆ ವಿರುದ್ಧವಾದ ಅನೇಕ ವಸ್ತುಗಳ ಜ್ಞಾನ. वि + कित (संशये) + सन् "अः" (३-३-१०२)।

**विचिचीषत् ವಿಚಿಚೀಷತ್** (वि०) ಅನ್ವೇಷಣಮಾಡಲು ಇಚ್ಛಿಸುತ್ತಿರುವ, ಹುಡುಕಲು ಇಷ್ಟಪಡುತ್ತಿರುವ. विचेतुमिच्छन् — वि + चिञ् (चयने) + सन् "शतृ" (३-२-१२४)।

**विचिचीषा ವಿಚಿಚೀಷಾ** (स्त्री०) ಹುಡುಕಲು ಅಪೇಕ್ಷೆ, ಹುಡುಕಲು ಇಚ್ಛೆ. वि + चिञ् (चयने) + सन् "अः" (३-३-१०२)।

**विचिचीषु ವಿಚಿಚೀಷು** (वि०) ಹುಡುಕಲು ಅಪೇಕ್ಷೆಯುಳ್ಳವನು, ಹುಡುಕಲು ಇಚ್ಛಿಸುವವನು. वि + चिञ् (चयने) + सन् "उः" (३-२-१६८)।

**विचित ವಿಚಿತ** (वि०) 1. ಅನ್ವೇಷಣ ಮಾಡಲ್ಪಟ್ಟ, ಹುಡುಕಲ್ಪಟ್ಟ. वि+चिञ् (चयने) "क्तः" ३-२-१०२। (नं०) 2. ಹುಡುಕುವುದು. भावे "क्तः" (३-३-११४)।

**विचिति ವಿಚಿತಿ** (स्त्री०) ಹುಡುಕುವುದು. वि + चिञ् (चयने) "क्तिन्" (३-३-९४)।

**विचित्र ವಿಚಿತ್ರ** (वि०) 1. ನಾನಾಬಗೆಯ, ಅನೇಕ ವಿಧವಾದ, ವಿವಿಧ ಬಣ್ಣದ. विशेषेण चित्रम्। "दधति च विकसद्विचित्रकल्पद्रुमकुसुमैरभिगुम्फितानिवैताः" माघ० ४-५०। 2. ಅದ್ಭುತವಾದ, ಆಶ್ಚರ್ಯಕರವಾದ. "रेजे विचित्रैरपि या सचित्रैः गृहैर्विशालैरपि भूरिशालैः" माघ० ३-५०। 3. ಅರ್ಥಾಲಂಕಾರದ ಒಂದು ಭೇದ. ವಿರುದ್ಧವಾದ ಫಲವನ್ನು ಪಡೆಯುವ ಆಸೆಯಿಂದ ನಡೆಸುವ ಪ್ರಯತ್ನದ ವರ್ಣನೆಯಿರುವಲ್ಲಿ **ವಿಚಿತ್ರಾಲಂಕಾರ.** "विचित्रं तत्प्रयत्नश्चेद्विपरीतफलेप्सया" चन्द्रा०। **ಉದಾ:** "नमन्ति सन्तस्त्रैलोक्यादपि लब्धुं समुन्नतिम्"। ಸತ್ಪುರುಷರು ಮೂರು ಲೋಕಕ್ಕಿಂತಲೂ ಔನ್ನತ್ಯವನ್ನು ಹೊಂದಲು ಬಗ್ಗಿ ನಡೆಯುತ್ತಾರೆ. ಇಲ್ಲಿ ಬಗ್ಗಿ ನಡೆಯುವ ಪ್ರಯತ್ನಕ್ಕೆ ಇನ್ನೂ ಅಧೋಗತಿಯು ಫಲವಾಗಬೇಕು. ಆದರೆ ಅದಕ್ಕೆ ವಿರುದ್ಧವಾದ ಔನ್ನತ್ಯರೂಪ ಫಲದ ಆಸೆಯಿಂದ ನಮನರೂಪ ಪ್ರಯತ್ನವು ನಡೆದಿರುವುದರಿಂದ ವಿಚಿತ್ರಾಲಂಕಾರ.

**विचित्रक ವಿಚಿತ್ರಕ** (पुं०) ಭೂರ್ಜವೃಕ್ಷ, ಭುಜಪತ್ರ ಗಿಡ.

**विचित्रवीर्य ವಿಚಿತ್ರವೀರ್ಯ** (पुं०) ಶಂತನು ರಾಜನಿಗೆ ಸತ್ಯವತಿಯಲ್ಲಿ ಜನಿಸಿದ ಒಬ್ಬ ದೊರೆ (ಪುತ್ರ). [ಅಂಬಿಕೆ ಮತ್ತು ಅಂಬಾಲಿಕೆ ಇವರು ವಿಚಿತ್ರವೀರ್ಯನ ಪತ್ನಿಯರು. ವಿಚಿತ್ರವೀರ್ಯನು ಸಂತಾನಹೀನನಾಗಿ ಕಾಲವಾಗಲು ಸತ್ಯವತಿಯ ಆಜ್ಞೆಯಿಂದ ವ್ಯಾಸಮಹರ್ಷಿಯ ಅನುಗ್ರಹದ ಫಲವಾಗಿ ಈತನ ಪತ್ನಿಯರಲ್ಲಿ ಧೃತರಾಷ್ಟ್ರ ಮತ್ತು ಪಾಂಡು ಎಂಬ ಪುತ್ರರು ಜನಿಸಿದರು.]

**विचित्रित ವಿಚಿತ್ರಿತ** (वि०) ನಾನಾಬಣ್ಣವಾಗಿ ಮಾಡಲ್ಪಟ್ಟ.

**विचिन्तन ವಿಚಿನ್ತನ** (नं०) 1. ಯೋಚಿಸುವುದು, ಚಿಂತಿಸುವುದು. 2. ಧ್ಯಾನಿಸುವುದು. वि + चिति (स्मृत्याम्) "ल्युट्" (३-३-११५)।

**विचिन्तनीय ವಿಚಿನ್ತನೀಯ** (वि०) 1. ಯೋಚಿಸಲ್ಪಡುವ. 2. ಧ್ಯಾನಿಸಲ್ಪಡುವ. 3. ಚಿಂತಿಸಬೇಕಾದ. 4. ಧ್ಯಾನಿಸಬೇಕಾದ. 5. ಚಿಂತಿಸಲು ಅರ್ಹವಾದ. 6. ಧ್ಯಾನಿಸಲು ಯೋಗ್ಯವಾದ. वि + चिति (स्मृत्याम्) "अनीयर्" (३-१-९६)। "तव्यः" (३-१-९६)। **–चिन्तितव्यः –ಚಿಂತಿತವ್ಯಃ.** 7. ವಿಮರ್ಶಿಸಲ್ಪಡುವ, ಪರ್ಯಾಲೋಚಿಸಲ್ಪಡುವ. 8. ವಿಮರ್ಶಿಸಬೇಕಾದ.

**विचिन्तयत् ವಿಚಿನ್ತಯತ್** (वि०) 1. ಚಿಂತಿಸುತ್ತಿರುವ. 2. ಧ್ಯಾನಿಸುತ್ತಿರುವ. वि + चिति (स्मृत्याम्) + णिच्

"शतृ" (३-२-१२४)। स्त्रियां "ङीप्" (४-१-६)। **-चिन्तयन्ती -ಚಿನ್ತಯನ್ತೀ.** "विचिन्तयन्ती यमनन्यमानसा तपोधनं वेत्सि न मामुपस्थितम्" शाकु० ४-१।

**विचिन्तित ವಿಚಿಂತಿತ** (वि०) ಯೋಚಿಸಲ್ಪಟ್ಟ, ವಿಮರ್ಶಿಸಲ್ಪಟ್ಟ. वि + चिति (स्मृत्याम्) + णिच् "क्तः"।

**विचिन्त्य ವಿಚಿಂತ್ಯ** (वि०) 1. ಯೋಚಿಸಲ್ಪಡುವ. 2. ಧ್ಯಾನಿಸಲ್ಪಡುವ. वि + चिति (स्मृत्याम्) "यत्" (३-१-९७)। 3. ವಿಮರ್ಶಿಸಲ್ಪಡುವ. (अव्य०) 4. ಯೋಚಿಸಿ, ಚಿಂತಿಸಿ. "अस्मान् साधु विचिन्त्य संयमधनानुच्चैः कुलं चात्मनः" शाकु० ४-१६। 5. ಚೆನ್ನಾಗಿ ವಿಮರ್ಶಿಸಿ. 6. ಧ್ಯಾನಮಾಡಿ.

**विचिन्वत् ವಿಚಿನ್ವತ್** (वि०) 1. ಹುಡುಕುತ್ತಿರುವ. वि + चिञ् (चयने) "शतृ" (३-२-१२४)। 2. ಪರಿಶೀಲಿಸುತ್ತಿರುವ, ವಿಮರ್ಶಿಸುತ್ತಿರುವ. 3. ಪರೀಕ್ಷಿಸುತ್ತಿರುವ, ಪರೀಕ್ಷಿಸಿ ವ್ಯತ್ಯಾಸ ತಿಳಿಯುತ್ತಿರುವ. "शानच्" (३-२-१२४)। **-चिन्वानः -ಚಿನ್ವಾನಃ.** स्त्रियां "ङीप्" (४-१-६)। **-चिन्वती -ಚಿನ್ವತೀ.** "विचिन्वतीः पान्थपतङ्गहिंसनैरपुण्यकर्माण्यलिकज्जलच्छलात्" नैष० १-८६।

**विचेतन ವಿಚೇತನ** (वि०) 1. ಬುದ್ಧಿಯಿಲ್ಲದವನು, ವಿವೇಕವಿಲ್ಲದವನು. 2. ಪ್ರಜ್ಞೆತಪ್ಪಿದವನು, ಜ್ಞಾನವಿಲ್ಲದವನು. विगता चेतना यस्य। "प्रमदाः पतिवर्त्मगा इति प्रतिपन्नं हि विचेतनैरपि" कुमा० ४-३३।

**विचेतव्य ವಿಚೇತವ್ಯ** (वि०) 1. ಹುಡುಕಲ್ಪಡುವ. 2. ಪರೀಕ್ಷಿಸಲ್ಪಡುವ. वि + चिञ् (चयने) "तव्यः" (३-१-९६)। "अनीयर्"। **-चयनीयः -ಚಯನೀಯಃ.** 3. ಹುಡುಕಬೇಕಾದ. 4. ಪರೀಕ್ಷಿಸಬೇಕಾದ, ವಿಮರ್ಶಿಸಬೇಕಾದ.

**विचेतस् ವಿಚೇತಸ್** (वि०) 1. ದುಃಖದಿಂದ ಕೂಡಿದ ಮನಸ್ಸುಳ್ಳವನು. 2. ಕೆಟ್ಟ ಮನಸ್ಸುಳ್ಳವನು. विगतं विरुद्धं वा चेतो यस्य। 3. ಪ್ರಜ್ಞೆತಪ್ಪಿದವನು. "एवं सुरगणान् क्रुद्धो भीषयन् वपुषा रिपून्। व्यनदत् सुमहाप्राणो येन लोका विचेतसः" भाग० ६-११-६।

**विचेय ವಿಚೇಯ** (वि०) 1. ಹುಡುಕಲ್ಪಡುವ. 2. ಹುಡುಕಬೇಕಾದ. 3. ಹುಡುಕಲು ಯೋಗ್ಯವಾದ. वि + चिञ् (चयने) "यत्" (३-१-९७)। "तनुप्रकाशेन विचेयतारका प्रभातकल्पा शशिनेव शर्वरी" रघु० ३-२।

**विचेष्ट ವಿಚೇಷ್ಟ** (वि०) 1. ಪ್ರಯತ್ನವಿಲ್ಲದವನು, ವ್ಯಾಪಾರವಿಲ್ಲದವನು. विगता चेष्टा यस्मात्। 2. ಕೆಲಸವಿಲ್ಲದವನು.

**विचेष्टन ವಿಚೇಷ್ಟನ** (न०) 1. ಹೆಚ್ಚು ಕೆಲಸಮಾಡುವುದು. 2. ಕಾಲಿನಿಂದ ಒದೆಯುವುದು. 3. ವಿರುದ್ಧವಾದ ಕಾರ್ಯಮಾಡುವುದು. वि + चेष्ट (चेष्टायाम्) भावे "ल्युट्" (३-३-११५)।

**विचेष्टनीय ವಿಚೇಷ್ಟನೀಯ** (वि०) 1. ಹೆಚ್ಚು ಕೆಲಸಮಾಡಬೇಕಾದ. 2. ಹೆಚ್ಚು ಕೆಲಸಮಾಡಲು ಶಕ್ಯನಾದ. 3. ಹೆಚ್ಚು ಕೆಲಸಮಾಡಲು ಅರ್ಹವಾದ. वि + चेष्ट (चेष्टायाम्) "अनीयर्" (३-१-९६)। "तव्यः" (३-१-९६)। **-चेष्टितव्यम् -ಚೇಷ್ಟಿತವ್ಯಮ್.** ಹೆಚ್ಚು ಪ್ರಯತ್ನಪಡಬೇಕಾದ.

**विचेष्टमान ವಿಚೇಷ್ಟಮಾನ** (वि०) 1. ಹೆಚ್ಚು ಕೆಲಸಮಾಡುತ್ತಿರುವ. 2. ಹೆಚ್ಚು ಪ್ರಯತ್ನಪಡುತ್ತಿರುವ. 3. ಹೆಚ್ಚು ನಡೆಯುತ್ತಿರುವ. वि + चेष्ट (चेष्टायाम्) "शानच्" (३-२-१२४)।

**विचेष्टा ವಿಚೇಷ್ಟಾ** (स्त्री०) 1. ಪ್ರಯತ್ನ, ಉದ್ಯಮ. विशिष्टा चेष्टा। 2. ನಡತೆ, ವರ್ತನೆ.

**विचेष्टित ವಿಚೇಷ್ಟಿತ** (न०) 1. ಕಾರ್ಯ, ಕೆಲಸ. वि + चेष्ट (चेष्टायाम्) भावे "क्तः" (३-३-११४)। "उरुक्रमस्याखिलबन्धमुक्तये समाधिनानुस्मर तद्विचेष्टितम्" भाग० १-५-१३। 2. ಚೇಷ್ಟೆ, ವ್ಯಾಪಾರ. "असुलभा सकलेन्दुमुखी च सा किमपि चेदमनङ्गविचेष्टितम्" विक्र० २-९। 3. ಪ್ರಯತ್ನ, ಪ್ರಯಾಸ. 4. ಭಾವಾಭಿನಯ. 5. ಹೆಚ್ಚು ಸಂಚಾರ, ಅಧಿಕವಾದ ನಡಿಗೆ. (वि०) 6. ಪ್ರಯತ್ನವಿಲ್ಲದವನು. 7. ಹೆಚ್ಚು ಕೆಲಸಮಾಡಿದವನು. 8. ವಿರುದ್ಧವಾದ ಕಾರ್ಯಮಾಡಿದವನು. विरुद्धं चेष्टितं यस्य।

**विच्छन्दक ವಿಚ್ಛಂದಕ** (पुं०) ಉಪ್ಪರಿಗೆ ಮನೆ, ಅನೇಕ ಮಹಡಿಗಳ ಮನೆ, ಧನಿಕರ ಗೃಹ. विशिष्टच्छन्दोऽत्र। "उपर्युपरि यद्गेहं तद्विच्छन्दकसंज्ञकम्"।

**विच्छर्दक ವಿಚ್ಛರ್ದಕ** (पुं०) "विच्छन्दक" ಪದದ ಅರ್ಥ.

**विच्छर्दन ವಿಚ್ಛರ್ದನ** (न०) ವಾಂತಿಮಾಡುವುದು. वि + छर्द (वमने) "ल्युट्" (३-३-११५)।

**विच्छर्दित ವಿಚ್ಛರ್ದಿತ** (वि०) 1. ವಾಂತಿಮಾಡಿಸಲ್ಪಟ್ಟ. वि + छर्द (वमने) + णिच् "क्तः" (३-२-१०२)।

2. ತ್ಯಜಿಸಲ್ಪಟ್ಟ, ಬಿಡಲ್ಪಟ್ಟ. "मदयन्तिकामात्र-विच्छर्दितजीवित:" ಮಾಲತೀ० ७। 3. ದುರ್ಬಲವಾಗಿ ಮಾಡಲ್ಪಟ್ಟ, ಶಕ್ತಿಕುಂದಿಸಲ್ಪಟ್ಟ.

**विच्छाय ವಿಚ್ಛಾಯ** (ವಿ०) 1. ಕಾಂತಿರಹಿತವಾದ, ಪ್ರಕಾಶವಿಲ್ಲದ, ತೇಜಸ್ಸಿಲ್ಲದ. विगता छाया कान्तिर्यस्य। "विलोक्योद्विग्नहृदयो विच्छायमनुजं नृप:। पृच्छति स्म सुहृन्मध्ये संस्मरन्नारदेरितम्" ಭಾಗ० १-१४-२४। 2. ನೆರಳಿಲ್ಲದ. विगता छाया यत्र। (ನ०) 3. ಪಕ್ಷಿಗಳ ನೆರಳು. वीनां पक्षिणां छाया—क्लीबत्वम् (२-४-२२)। (ಪುं०) 4. ಮಣಿ, ರತ್ನ. विशिष्टा छाया कान्तिर्यस्य।

**विच्छित्ति ವಿಚ್ಛಿತ್ತಿ** (ಸ್ತ್ರೀ०) 1. ವಿಚ್ಛೇದ, ನಿಲುಕಡೆ, ನಿಲ್ಲುವುದು. वि + छिदिर् (द्वैधीकरणे) "क्तिन्" (३-३-९४)। 2. ಮೈಗೆ ಗಂಧ ಮೊದಲಾದುವನ್ನು ಪೂಸಿ ಅಲಂಕರಿಸುವುದು, ದೇಹಕ್ಕೆ ಬಣ್ಣವನ್ನು ಹಾಕಿ ಶೃಂಗರಿಸುವುದು. "विच्छित्तिर्नवचन्दनेन वपुषो भिन्नोऽधरोऽलक्तकै:" ಮಾಘ० १६-८४। 3. ಒಂದು ವಿಧ ಹಾರ. 4. ಕತ್ತರಿಸುವುದು. 5. ವಿನಾಶ. 6. ವಿಭಾಗ, ಭಾಗಮಾಡುವುದು, ಪ್ರತ್ಯೇಕಿಸುವುದು. "विच्छित्तिरङ्गरागे विच्छेदे हारभेदे स्त्री" ಮೇದಿ०। 7. ಅಭಿಪ್ರಾಯ, ಆಶಯ. "विच्छित्ती भावलेपने" नानार्थर०। "भेदे विनाशे विच्छित्ति:" त्रिकाण्ड०। 8. ಮನೆಯ ಎಲ್ಲೆ, ಮನೆಯ ಸರಹದ್ದು, –ಮೇರೆ. 9. ಪದ್ಯಗಳಲ್ಲಿರಬೇಕಾದ ಯತಿ. 10. ನರ್ತನಮಾಡುವಾಗ ಮೈ ಕುಲುಕುವುದು. 11. ಸ್ತ್ರೀಯರ ಕಾಂತಿಯನ್ನು ಹೆಚ್ಚಿಸುವ ವೇಷರಚನೆ. 12. ವಿರಹ.

**विच्छिन्न ವಿಚ್ಛಿನ್ನ** (ವಿ०) 1. ಕತ್ತರಿಸಲ್ಪಟ್ಟ. वि+छिदिर् (द्वैधीकरणे) "क्त:" (३-२-१०२)। 2. ಪ್ರತ್ಯೇಕಿಸಲ್ಪಟ್ಟ, ಬೇರ್ಪಡಿಸಲ್ಪಟ್ಟ. "यदर्धे विच्छिन्नं भवति कृतसन्धानमिव तत्" ಶಾಕು० १-९। 3. ಬಣ್ಣ ಬಳಿದು ಅಲಂಕರಿಸಲ್ಪಟ್ಟ. 4. ಸಮಾಪ್ತಿಗೊಳಿಸಲ್ಪಟ್ಟ, ನಿಲ್ಲಿಸಲ್ಪಟ್ಟ, ಕೊನೆಗಾಣಿಸಲ್ಪಟ್ಟ. 5. ಅಡಿಯುಂಟುಮಾಡಲ್ಪಟ್ಟ, ತಡೆಯೊಡ್ಡಲ್ಪಟ್ಟ. 6. ಕುಟಿಲವಾದ, ವಕ್ರವಾದ, ಡೊಂಕಾಗಿರುವ. 7. ಶೃಂಗರಿಸಲ್ಪಟ್ಟ, ಅಲಂಕರಿಸಲ್ಪಟ್ಟ. "विच्छिन्नं तु कुटिले स्यात् समालब्धविभक्तयो:" ಹೇಮ०।

**विच्छुरित ವಿಚ್ಛುರಿತ** (ವಿ०) 1. ಮೇಲ್ಮಟ್ಟ ಸಮವಾಗಿರುವಂತೆ ಒಂದು ವಸ್ತುವಿನೊಳಗೆ ಸೇರಿಸಲ್ಪಟ್ಟ (ಇನ್ನೊಂದು ವಸ್ತು). 2. ಲೇಪನಮಾಡಲ್ಪಟ್ಟ, ಬಳಿಯಲ್ಪಟ್ಟ. वि + छुर (छेदने) "क्त:" (३-२-१०२)। "मन:शिलाविच्छुरिता निषेदु: शैलेयनद्धेषु शिलातलेषु" ಕುಮಾ० १-५५।

**विच्छेद ವಿಚ್ಛೇದ** (ಪುं०) 1. ಕತ್ತರಿಸುವುದು. वि+छिदिर् (द्वैधीकरणे) "घञ्" (३-३-१८)। 2. ತುಂಡಾಗುವುದು, ಬೇರೆ ಬೇರೆಯಾಗುವುದು. "अह्नाय स्तनकलशद्वयादुपेये विच्छेद: सहृदयेव हारयष्ट्या" ಮಾಘ० ८-५१। 3. ನಾಶ, ಅಳಿವು. "प्रमदमदनमाद्यद्यौवनोद्दामरामारमणरभसखेदस्वेदविच्छेददक्ष:" ಮಾಘ० ११-२२। 4. ನಿಲ್ಲುವುದು, ನಿಲುಕಡೆ, ಬಿಡುವು. ಶ್ಲೋಕಗಳಲ್ಲಿ ಶ್ರುತಿಸೌಖ್ಯಕ್ಕಾಗಿ ಪದಗಳು ಅಕ್ಷರಗಳ ಸಂಖ್ಯೆಗೆ ಸರಿಯಾಗಿ ನಿಲ್ಲುವಂತೆ ರಚಿಸುವುದು ಯತಿ. "यतिर्विच्छेदसंज्ञिका" ವೃ० र०। 5. ವಿಯೋಗ, ವಿರಹ. 6. ಲೋಪ, ನಿಂತು ಹೋಗುವುದು. "नूनं मत्त: परं वंश्या: पिण्डविच्छेददर्शिन:" ರಘು० १-६६। 7. ಬೇರೆಯಾಗುವುದು, ಪ್ರತ್ಯೇಕವಾಗುವುದು. 8. ತಡೆ, ಅಡ್ಡಿ.

**विच्यवन ವಿಚ್ಯವನ** (ನ०) 1. ಕೆಳಗೆ ಬೀಳುವುದು. वि + च्युङ् (गतौ) भावे "ल्युट्" (३-३-११५)। 2. ದಾರಿಬಿಟ್ಟು ಹೋಗುವುದು, ದಿಢೀರನೆ ಮಾರ್ಗಬಿಟ್ಟು ಬೇರೆ ಮಾರ್ಗಕ್ಕೆ ಹೋಗುವುದು. 3. ತಪ್ಪುಮಾಡುವುದು, ತಪ್ಪುದಾರಿ ಹಿಡಿಯುವುದು.

**विच्यवनीय ವಿಚ್ಯವನೀಯ** (ವಿ०) ಕೆಳಗೆ ಬೀಳಬಹುದಾದ. वि + च्युङ् (गतौ) "अनीयर्" (३-१-९६)। "तव्य:" विच्योतव्यम् ವಿಚ್ಯೋತವ್ಯಮ್. ದಾರಿಬಿಟ್ಟು ಹೋಗಬೇಕಾದ.

**विच्यवमान ವಿಚ್ಯವಮಾನ** (ವಿ०) 1. ಕೆಳಗೆ ಬೀಳುತ್ತಿರುವ. 2. ದಾರಿತಪ್ಪಿ ನಡೆಯುತ್ತಿರುವ, ತಪ್ಪುದಾರಿ ಹಿಡಿಯುತ್ತಿರುವ. वि + च्युङ् (गतौ) "शानच्" (३-२-१२४)।

**विच्युत ವಿಚ್ಯುತ** (ವಿ०) 1. ಕೆಳಗೆ ಬಿದ್ದಿರುವ, ಕೆಳಗೆ ಜಾರಿ ಬಿದ್ದಿರುವ, वि + च्युङ् (गतौ) कर्त० "क्त:" (३-४-७२)। 2. ತಪ್ಪುದಾರಿ ಹಿಡಿದಿರುವ, ದಾರಿತಪ್ಪಿ ನಡೆದಿರುವ.

**विच्युति ವಿಚ್ಯುತಿ** (ಸ್ತ್ರೀ०) 1. ಕೆಳಗೆ ಬೀಳುವುದು, ಮೇಲಿನಿಂದ ಕಳಚಿ ಬೀಳುವುದು. 2. ಬೇರೆಯಾಗುವುದು, ಪ್ರತ್ಯೇಕವಾಗುವುದು. 3. ದಾರಿತಪ್ಪಿ ನಡೆಯುವುದು, ನೀತಿಭ್ರಷ್ಟನಾಗುವುದು. 4. ಅವನತಿ ಹೊಂದುವುದು, ಕ್ಷಯಿಸುವುದು. वि+च्युङ् (गतौ) "क्तिन्" (३-३-९४)।

**विजन ವಿಜನ** (ವಿ०) ರಹಸ್ಯವಾದ, ಜನರಿಲ್ಲದ, ಜನರಹಿತವಾದ, ಜನರ ಸಂಚಾರವಿಲ್ಲದ (ಪ್ರದೇಶ). विगतो जनो

यस्मात्। "विजनमिति बलादमुं गृहीत्वा क्षणमथ वीक्ष्य विपक्षमन्तिकेऽन्या" माघ० ७-५१।

**विजनन ವಿಜನನ** (न०) ಜನನ, ಪ್ರಸವ, ಹುಟ್ಟು. वि + जनीं (प्रादुर्भावे) "ल्युट्" (३-३-११५)।

**विजन्मन् ವಿಜನ್ಮನ್** (न०) 1. ಹುಟ್ಟು, ಉತ್ಪತ್ತಿ. (पुं०) 2. ಜಾರನಿಂದ ಹುಟ್ಟಿದವನು, ವ್ಯಭಿಚಾರದಿಂದ ಹುಟ್ಟಿದವನು, ಅಕ್ರಮಸಂಬಂಧದಿಂದ ಜನಿಸಿದವನು. विरुद्धं जन्म यस्य। 3. ವರ್ಣಸಾಂಕರ್ಯದಿಂದ ಹುಟ್ಟಿದವನು. "वैश्यात्तु जायते व्रात्यात्सुधन्वाचार्य एव च। कारूषश्च विजन्मा च मैत्रः सात्त्वत एव च" मनु० १०-२३।

**विजय ವಿಜಯ** (पुं०) 1. ಜಯ, ಗೆಲವು. वि + जि (जये) भावे "अच्" (३-३-५६)। "अजितस्य जिगीषतो मयाऽसौ विजयारम्भमहोत्सवो विधेयः" याद० १५-९। 2. ಅರ್ಜುನ, ಕುಂತಿಯ ಪುತ್ರ. ಯುದ್ಧದಲ್ಲಿ ಶತ್ರುಗಳನ್ನು ಎದುರಿಸಿಹೋಗಿ ಅವರನ್ನು ಜಯಿಸದೆ ಹಿಂತಿರುಗುವುದಿಲ್ಲವಾದುದರಿಂದ ವಿಜಯನೆಂದು ಹೆಸರು. "अभिप्रयामि संग्रामे यदहं युद्धदुर्मदान्। नाजित्वा विनिवर्तामि तेन मां विजयं विदुः" भा० विरा० ४०-१४। 3. ವ್ಯೋಮಯಾನ, ವಿಮಾನ. "विजयो जये। पार्थे विमाने" हेम०। 4. ಯಮಧರ್ಮರಾಯ. 5. ಪ್ರಭವ ಮೊದಲಾದ ಅರವತ್ತು ಸಂವತ್ಸರಗಳಲ್ಲಿ ಇಪ್ಪತ್ತೇಳನೆಯ ಸಂವತ್ಸರ. 6. ಮಹಾವಿಷ್ಣುವಿನ ಒಬ್ಬ ದ್ವಾರಪಾಲಕ. (स्त्री०) –**जया –ಜಯಾ** 7. ಪಕ್ಷದ 3, 8 ಮತ್ತು 13ನೆಯ ತಿಥಿಗಳು, ತದಿಗೆ ಅಷ್ಟಮಿ ಮತ್ತು ತ್ರಯೋದಶೀ ತಿಥಿಗಳು.

**विजयकुञ्जर ವಿಜಯಕುಂಜರ** (पुं०) ರಾಜನು ವಿಜಯಕ್ಕಾಗಿ ಹತ್ತಿ ಹೊರಡುವ ಆನೆ. विजयाय कुञ्जरः।

**विजयच्छन्द ವಿಜಯಚ್ಛಂದ** (पुं०) ಐನೂರು ಎಳೆಗಳುಳ್ಳ ಒಂದು ವಿಧ ಹಾರ. "सुरभूषणं लतानां सहस्रमष्टोत्तरं चतुर्हस्तम्। इन्द्रच्छन्दो नाम्ना विजयच्छन्दस्तदर्धेन" बृहत्सं० ८१-३१।

**विजयडिण्डिम ವಿಜಯಡಿಂಡಿಮ, –मर्दल –ಮರ್ದಲ** (पुं०) ವಿಜಯಕ್ಕಾಗಿ ಬಾರಿಸುವ ಢಿಮಕಿ ಮತ್ತು ಢಕ್ಕೆಯೆಂಬ ವಾದ್ಯ. विजयार्थं डिण्डिमः मर्दलो वा। ಇವು ನಗಾರಿಯೆಂಬ ವಾದ್ಯದ ಭೇದಗಳು. "ढक्का विजयमर्दलः" त्रिकाण्ड०।

**विजयदशमी ವಿಜಯದಶಮೀ** (स्त्री०) ರಾಜನು ಶತ್ರುಗಳನ್ನು ಜಯಿಸಲು ಯಾತ್ರೆಯನ್ನು ಕೈಗೊಳ್ಳುವ ದಿವಸ, ಆಶ್ವಯುಜ ಶುದ್ಧ ದಶಮಿ. विजयाय दशमी।

**विजयन ವಿಜಯನ** (न०) ಜಯಿಸುವುದು, ಗೆಲ್ಲುವುದು. वि + जि (जये) भावे "ल्युट्" (३-३-११५)।

**विजयनगर ವಿಜಯನಗರ** (न०) ಆಂಧ್ರಪ್ರದೇಶದಲ್ಲಿರುವ ಒಂದು ಪಟ್ಟಣ.

**विजयसिद्धि ವಿಜಯಸಿದ್ಧಿ** (स्त्री०) ಜಯದಗಳಿಕೆ, ಗೆಲ್ಲುವುದು. विजयस्य सिद्धिः।

**विजया ವಿಜಯಾ** (स्त्री०) 1. ಪಕ್ಷದ 3, 8 ಮತ್ತು 13ನೆಯ ತಿಥಿಗಳು, ತದಿಗೆ ಅಷ್ಟಮಿ ಮತ್ತು ತ್ರಯೋದಶೀ ತಿಥಿಗಳು. ["जया" ಪದದಲ್ಲಿ ನೋಡಿ.] 2. ದುರ್ಗಾದೇವಿ, ಪಾರ್ವತಿ. 3. ಪಾರ್ವತಿಯ ಒಬ್ಬ ಅನುಚರಿ. 4. ವಿಶ್ವಾಮಿತ್ರಮಹರ್ಷಿಯು ತಮ್ಮ ತಪೋವನದಲ್ಲಿ ಶ್ರೀರಾಮನಿಗೆ ಉಪದೇಶಿಸಿದ ಒಂದು ವಿದ್ಯೆ. "विद्यामथैनं विजयां जयां च रक्षोगणं क्षिप्नुमविक्षतात्मा" भट्टि० २-२१। "विजयोमातत्सख्योस्तिथावपि" हेम०। 5. ಹಳದಿ ಮಲ್ಲಿಗೆ. 6. ಬಜೆ. 7. ಮಂಜಿಷ್ಟ. 8. ತಕ್ಕಿಲೆ ಗಿಡ. 9. ಒಂದು ವಿಧ ನೆಲ್ಲಿ ಗಿಡ. 10. ಯಮಧರ್ಮರಾಯನ ಪತ್ನಿ. 11. ರವಿವಾರದ ದಿನ ಬರುವ ಶುಕ್ಲಪಕ್ಷದ ಸಪ್ತಮಿ.

**विजयिन् ವಿಜಯಿನ್** (वि०) ವಿಜಯವನ್ನು ಪಡೆದವನು, ಜಯಶಾಲಿಯಾದವನು. विशेषेण जेतुं शीलमस्य — वि + जि (जये) "इनिः" (३-२-१५७)। "विजयिनमुपयान्तं वीक्ष्य सत्यासहायं व्यतनुत मुदितेव द्वारका वन्दिकृत्यम्" याद० १८-१३३।

**विजयोत्सव ವಿಜಯೋತ್ಸವ** (पुं०) 1. ಜಯ ಲಭಿಸಿದುದಕ್ಕಾಗಿ ನಡೆಯುವ ಸಂತೋಷ ಸಮಾರಂಭ. 2. ವಿಜಯದಶಮಿಯ ದಿನ ನಡೆಯುವ ದೇವರ ಉತ್ಸವ. ವಿಜಯಪ್ರಾಪ್ತಿಗಾಗಿ ಶಮೀವೃಕ್ಷದ ಕೆಳಗೆ ಶ್ರೀರಾಮನನ್ನು ಪೂಜಿಸಿ ಶಮೀವೃಕ್ಷದ ಪೂಜೆಯನ್ನು ನಡೆಸಬೇಕು. "राजोपचारैः श्रीरामं शमीवृक्षतलं नयेत्। सीताकान्तं शमीयुक्तं भक्तानामभयङ्करम्। अर्चयित्वा शमीवृक्षमर्चयेद्विजयाप्तये"।

**विजर ವಿಜರ** (वि०) ಮುಪ್ಪಿಲ್ಲದವನು. विगता जरा यस्य। "यः सर्वौषधियुक्तिज्ञः चक्रे सिद्धरसायनः। आत्मानं तं च राजानं विजरं चिरजीवितम्" कथास०।

**विजल ವಿಜಲ** (वि०) ಜಲರಹಿತವಾದ, ನೀರಿಲ್ಲದ. विगतं जलं यस्मात्। "नष्टार्कचन्द्रकिरणातिरजोऽवनद्धा तोयाशयाश्च विजलाः सरितोऽपि तन्व्यः" बृहत्सं० १९-२०।

**विजल्प ವಿಜಲ್ಪ** (पुं०) 1. ಮೂರ್ಖನ ಮಾತು. 2. ದ್ವೇಷದ ಮಾತು.

**विजात ವಿಜಾತ** (वि०) ವಿರುದ್ಧವಾದ ಜನ್ಮವುಳ್ಳವನು, ಅಕ್ರಮ ಸಂಬಂಧದಿಂದ ಜನಿಸಿದವನು, ಜಾರಜ. विरुद्धं जातं यस्य।

**विजाता ವಿಜಾತಾ** (स्त्री०) ಮಕ್ಕಳನ್ನು ಹೆತ್ತವಳು. विशेषेण जातो यस्याः। "विजातो विकृते जाते विजाता तु प्रसूतिका" हेम०।

**विजाति ವಿಜಾತಿ** (स्त्री०) ಭಿನ್ನಜಾತಿ, ಬೇರೆ ಜಾತಿ.

**विजातीय ವಿಜಾತೀಯ** (वि०) 1. ಬೇರೆ ಜಾತಿಯ, ಬೇರೆ ಕುಲದ, ಭಿನ್ನಜಾತಿಯಲ್ಲಿ ಹುಟ್ಟಿದ. विजाति "छः" (४-२-११४)। 2. ಭಿನ್ನವಸ್ತುವಿನ ಗುಂಪಿಗೆ ಸೇರಿದ. गोविजातीयो घटः—ಗೋವಿನಲ್ಲಿ ಗೋತ್ವವೂ ಘಟದಲ್ಲಿ ಘಟತ್ವವೂ ಇರುವುದರಿಂದ ಇವು ಭಿನ್ನಜಾತಿಗೆ (ಗುಂಪಿಗೆ) ಸೇರಿದವು. ಆದುದರಿಂದ ಇವು ವಿಜಾತೀಯವಾದುವು.

**विजानत् ವಿಜಾನತ್** (वि०) ತಿಳಿದಿರುವ, ಅರಿತಿರುವ. वि + ज्ञा (अवबोधने) "शतृ" (३-२-१२४)। "विजानता भावि शिरोनिकृन्तनं प्रज्ञेन शोकादिव तस्य मौलिना" कुमा० १५-२८। स्त्रियां "ङीप्" (४-१-६)। **-जानती -ಜಾನತೀ**. "शानच्"। **-जानानः -ಜಾನಾನಃ**.

**विजिगीषत् ವಿಜಿಗೀಷತ್** (वि०) ಜಯಿಸಲು ಅಪೇಕ್ಷಿಸುತ್ತಿರುವ. वि+जि (जये)+सन् "शतृ" (३-२-१२४)।

**विजिगीषा ವಿಜಿಗೀಷಾ** (स्त्री०) ಜಯಿಸಲು ಆಸೆ, ಜಯಗಳಿಸಲು ಇಚ್ಛೆ. विजेतुमिच्छा—वि+जि (जये) + सन् "अः" (३-२-१०२)।

**विजिगीषु ವಿಜಿಗೀಷು** (वि०) ಜಯಿಸಲು ಅಪೇಕ್ಷೆಯುಳ್ಳವನು, ಜಯಿಸಲು ಆಸೆಪಡುವವನು. विजेतुमिच्छुः—वि+ जि (जये) + सन् "उः" (३-२-१६८)। "विजिगीषोर्नृपतयः प्रयान्ति परिवारताम्" माघ० २-९०।

**विजित ವಿಜಿತ** (वि०) ಜಯಿಸಲ್ಪಟ್ಟ. वि + जि (जये) "क्तः" (३-२-१०२)। "नारीभिर्गुरुजघनस्थलाहतानामास्यश्रीविजितविकासिवारिजानाम्" माघ० ८-४७।

**विजिति ವಿಜಿತಿ** (स्त्री०) ವಿಜಯ, ಗೆಲುವು. वि + जि (जये) "क्तिन्" (३-३-९४)। "क्षितिविजितिस्थितिविहितिव्रतरतयः परगतयः" काव्या० ३-८५।

**विजिल ವಿಜಿಲ** (वि०) 1. ಜಿಡ್ಡಿನಿಂದ ಕೂಡಿದ, ಜಿಡ್ಡಾಗಿರುವ. 2. ಕೆನೆಯಿಂದ ಕೂಡಿದ ಅನ್ನ. 3. ರಸವಾಗಿರುವ ವ್ಯಂಜನ, ದ್ರವವಾಗಿರುವ ವ್ಯಂಜನ, ಸಾಂಬಾರ ಸಹಿತವಾದ ಗಂಜಿ. "स्यात्पिच्छिलं तु विजिलम्" अम०।

**विजिह्म ವಿಜಿಹ್ಮ** (वि०) ವಕ್ರವಾದ, ಕುಟಿಲವಾದ. विशेषेण जिह्मः। "न तेन सज्यं क्वचिदुद्यतं धनुः कृतं न वा कोपविजिह्ममाननम्" किरा० १-२१।

**विजुल ವಿಜುಲ** (पुं०) ಶಾಲ್ಮಲಿವೃಕ್ಷ, ಬೂರುಗದ ಮರ.

**विजृम्भण ವಿಜೃಂಭಣ** (न०) 1. ವಿಕಾಸಹೊಂದುವುದು, ಅರಳುವುದು. वि+जृभि (गात्रविनामे) भावे "ल्युट्" (३-३-११५)। "वनेषु सायन्तनमल्लिकानां विजृम्भणोद्गन्धिषु कुड्मलेषु" रघु० १६-४७। 2. ವೃದ್ಧಿಹೊಂದುವುದು, ಬೆಳೆಯುವುದು, ದೊಡ್ಡದಾಗುವುದು. 3. ಆಕಳಿಸುವುದು. 4. ಪ್ರತ್ಯಕ್ಷವಾಗುವುದು, ಮೈದೋರುವುದು, ಕಾಣಿಸಿಕೊಳ್ಳುವುದು.

**विजृम्भमाण ವಿಜೃಂಭಮಾಣ** (वि०) 1. ವಿಕಾಸಹೊಂದುತ್ತಿರುವ, ಅರಳುತ್ತಿರುವ. वि + जृभि (गात्रविनामे) "शानच्" (३-२-१२४)। 2. ಆಕಳಿಸುತ್ತಿರುವ. "स्वनाभितस्सप्तमजन्मभागिनो विजृम्भमाणस्य विधेर्यदृच्छया" याद० १४-२९। 3. ಬೆಳೆಯುತ್ತಿರುವ, ವೃದ್ಧಿಹೊಂದುತ್ತಿರುವ, ದೊಡ್ಡದಾಗುತ್ತಿರುವ. 4. ಪ್ರತ್ಯಕ್ಷವಾಗುತ್ತಿರುವ, ಮೈದೋರುತ್ತಿರುವ, ಕಾಣಿಸಿಕೊಳ್ಳುತ್ತಿರುವ.

**विजृम्भित ವಿಜೃಂಭಿತ** (न०) 1. ಆಕಳಿಕೆ. वि + जृभि (गात्रविनामे) भावे "क्तः" (३-३-११४)। 2. ದೊಡ್ಡದಾಗಿ ಬೆಳೆಯುವುದು. 3. ಕಾರ್ಯದ ರೀತಿ. "यस्याः पुरा परिचयप्रतिबद्धबीजमुद्भूतभूरिफलशालि विजृम्भितेन" मालती० १०-२१। 4. ವಿಕಾಸಹೊಂದುವುದು, ಅರಳುವುದು. 5. ಪ್ರತ್ಯಕ್ಷವಾಗುವುದು, ಕಾಣಿಸಿಕೊಳ್ಳುವುದು. (वि०) 6. ಆಕಳಿಸಿದ. "जलधरविवृद्धहनुना विजृम्भितमिवान्तरिक्षेण" मृच्छ० ५-५१। 7. ವಿಕಾಸಹೊಂದಿದ, ಅರಳಿದ. 8. ದೊಡ್ಡದಾಗಿ ಬೆಳೆದ. 9. ಪ್ರತ್ಯಕ್ಷವಾಗಿರುವ, ಕಾಣಿಸಿಕೊಂಡಿರುವ. 10. ವ್ಯಾಪ್ತವಾದ, ಹರಡಿರುವ. "आवृण्वतो लोचनमार्गमाजौ

(प्रापणे) "शतृ" (३-२-१२४)। "परिदृष्टपरावरस्तमीषद्विनयन् विष्णुपदीसुतो बभाषे" याद० १५-५५। 2. ಎಳೆಯುತ್ತಿರುವ, ತೆಗೆದುಹಾಕುತ್ತಿರುವ. "अम्बरं विनयतः प्रियपाणेर्योषितश्च करयोः कलहस्य" माघ० १०-६२। 3. ಒಯ್ಯುತ್ತಿರುವ.

**विनयन ವಿನಯನ** (न०) 1. ಪರಿಹರಿಸುವುದು, ಹೋಗಲಾಡಿಸುವುದು. वि + णीञ् (प्रापणे) "ल्युट्" (३-३-११५)। "वक्ष्यस्यध्वश्रमविनयने तस्य शृङ्गे निषण्णः शोभां शुभ्रत्रिनयनवृषोत्खातपङ्कोपमेयाम्" मेघ० १-५२। 2. ಒಯ್ಯುವುದು. 3. ಶಿಕ್ಷಣ, ತರಬೇತಿ.

**विनशन ವಿನಶನ** (न०) 1. ಕುರುಕ್ಷೇತ್ರ, ಗಂಗಾ ಮತ್ತು ಯಮುನಾ ನದಿಗಳ ಮಧ್ಯಪ್ರದೇಶ, ಗಂಗಾ ಯಮುನೆಗಳ ಸಂಗಮಸ್ಥಳ. ಈ ಪ್ರದೇಶದಲ್ಲಿ ಸರಸ್ವತೀನದಿಯು ಅಂತರ್ವಾಹಿನಿಯಾಗಿ ಪ್ರವಹಿಸುವುದರಿಂದ ಇದಕ್ಕೆ "विनशन" ಎಂದು ಹೆಸರು. विनश्यति अन्तर्दधाति सरस्वत्यत्र— वि + णश (अदर्शने) अधि० "ल्युट्" (३-३-११७)। "गङ्गायमुनयोर्मध्ये यत्र गुप्ता सरस्वती"। 2. ವಿನಾಶ.

**विनष्ट ವಿನಷ್ಟ** (वि०) 1. ನಾಶವಾದ. वि + णश (अदर्शने) "क्तः" (३-४-७२)। 2. ಕೆಟ್ಟುಹೋದ, ಹಾಳಾದ.

**विनष्टि ವಿನಷ್ಟಿ** (स्त्री०) 1. ವಿನಾಶ, ಕೇಡು. 2. ಕೆಡುವುದು, ಹಾಳಾಗುವುದು. वि+णश (अदर्शने) "क्तिन्" (३-३-९४)।

**विनस ವಿನಸ** (वि०) ಮೂಗಿಲ್ಲದವನು. विगता नासिका यस्य—नासिकाशब्दस्य "अच्" नसादेशश्च (५-४-११९)। "यद्यहं नाथ नाज्यास्यं विनसा हतबान्धवा" भट्टि० ५-८।

**विना ವಿನಾ** (अव्य०) ಹೊರತು, ಬಿಟ್ಟು, ಉಳಿದು. निषेधार्थात् विशब्दात् "ना" (५-२-२७)। ವಿನಾ ಪದದ ಯೋಗವಿದ್ದಲ್ಲಿ ತೃತೀಯಾ ಪಂಚಮೀ ಮತ್ತು ದ್ವಿತೀಯಾ ವಿಭಕ್ತಿಗಳು ವಿಕಲ್ಪವಾಗಿ ಬರುವುವು. (२-३-३२)।

**ತೃತೀಯಾ:** "त्वया विना सोऽपि समुत्सुको भवेत्सखीजनस्ते किमुतार्द्रसौहृदः" विक्र० १-११।

**ಪಂಚಮೀ:** "प्रियेषु यैः पार्थ विनोपपत्तेः विचिन्त्यमानैः क्लममेति चेतः" किरा० ३-५२।

**ದ್ವಿತೀಯಾ:** "विद्या हृद्यापि सावद्या विना विनयसम्पदम्"। "स्यादस्या नलदं विना न दलने तापस्य कोऽपि क्षमः" नैष० ४-११६।

**विनाकृत ವಿನಾಕೃತ** (वि०) ಬಿಡಲ್ಪಟ್ಟ, ಬೇರ್ಪಡಿಸಲ್ಪಟ್ಟ. विना अन्तरेण कृतम्।

**विनायक ವಿನಾಯಕ** (पुं०) 1. ಗಣಪತಿ. विशिष्टो नायकः विगतो नायको नियन्ता अस्य इति वा। ["गजानन" ಮತ್ತು "गणपति" ಪದಗಳಲ್ಲಿ ನೋಡಿ.] 2. ಗರುಡ. वीनां पक्षिणां नायकः। 3. ಬುದ್ಧ. 4. ವಿಘ್ನ. 5. ಗುರು, ಆಚಾರ್ಯ. "विनायकस्तु हेरम्बे तार्क्ष्ये विघ्ने जिने गुरौ" मेदि०।

**विनायिका ವಿನಾಯಿಕಾ** (स्त्री०) ಗರುತ್ಮಂತನ ಪತ್ನಿ.

**विनाश ವಿನಾಶ** (पुं०) 1. ನಾಶ, ಅಳಿವು. वि + णश (अदर्शने) "घञ्" (३-३-१८)। "विनाशमव्ययस्यास्य न कश्चित्कर्तुमर्हति" गीता २-१७। 2. ತಿರೋಧಾನ, ಮರೆಯಾಗುವುದು, ಅದರ್ಶನ.

**विनाशक ವಿನಾಶಕ** (वि०) ನಾಶಪಡಿಸುವವನು. वि+णश (अदर्शने) "ण्वुल्" (३-१-१३३)। "राजैव कर्ता भूतानां राजैव च विनाशकः। धर्मात्मा यः स कर्ता स्यादधर्मात्मा विनाशकः" भा० शान्ति० ९१-९।

**विनाशन ವಿನಾಶನ** (न०) 1. ನಾಶಪಡಿಸುವುದು, ಹಾಳುಮಾಡುವುದು. वि + णश (अदर्शने) + णिच् "ल्युट्" (३-३-११५)। (वि०) 2. ನಾಶಪಡಿಸುವವನು. वि+णश (अदर्शने) + णिच् "ल्युः" (३-१-१३४)।

**विनाशयत् ವಿನಾಶಯತ್** (वि०) ನಾಶಪಡಿಸುತ್ತಿರುವ. वि + णश (अदर्शने) + णिच् "शतृ" (३-२-१२४)। स्त्रियां "ङीप्" (४-१-६)। **–यन्ती – ಯಂತೀ.**

**विनाशिन् ವಿನಾಶಿನ್** (वि०) ನಾಶಹೊಂದುವ ಸ್ವಭಾವದ. वि + णश (अदर्शने) "णिनिः" (३-२-७८)।

**विनिक्षिपत् ವಿನಿಕ್ಷಿಪತ್** (वि०) 1. ಇಡುತ್ತಲಿರುವ, ಇರಿಸುತ್ತಲಿರುವ. वि + नि + क्षिप (प्रेरणे) "शतृ" (३-२-१२४)। 2. ಎಸೆಯುತ್ತಿರುವ, ಬಿಸಾಡುತ್ತಿರುವ.

**विनिक्षिप्त ವಿನಿಕ್ಷಿಪ್ತ** (वि०) 1. ಇಡಲ್ಪಟ್ಟ, ಇರಿಸಲ್ಪಟ್ಟ. वि+नि+क्षिप (प्रेरणे) "क्तः" (३-२-१०२)। 2. ಎಸೆಯಲ್ಪಟ್ಟ, ಬಿಸಾಡಲ್ಪಟ್ಟ.

**विनिगमना ವಿನಿಗಮನಾ** (स्त्री०) ಯುಕ್ತಿ, ಉಪಾಯ. "अयमेव पक्षो ग्राह्यः पक्षान्तरं न ग्राह्यमित्यत्र विनिगमनाविरहः"।

**विनिग्रह ವಿನಿಗ್ರಹ** (पुं०) 1. ತಡೆಯುವುದು, ಹತೋಟಿಯಲ್ಲಿ ಇಡುವುದು. वि+नि+ग्रह (उपादाने) "अप्"

(३-३-५८)। "आचार्योपासनं शौचं स्थैर्यमात्मविनिग्रहः" गीता १३-७। 2. ಪರಸ್ಪರ ವಿರುದ್ಧವಾದ ಹೋರಾಟ.

**विनिघ्नत् ವಿನಿಘ್ನತ್** (वि०) ಹೊಡೆಯುತ್ತಿರುವ, ಬಡಿಯುತ್ತಿರುವ. वि+नि+हन (हिंसागत्योः) "शतृ" (३-२-१२४)। "विनिघ्नतो दैत्यबलौघमग्रे चापाभियोगो युधि शम्बरारेः" याद० २०-४०।

**विनिद्र ವಿನಿದ್ರ** (वि०) 1. ವಿಕಾಸಹೊಂದಿದ, ಅರಳಿರುವ. विगता निद्रा यस्य। "करोति पादावुपगम्य मौलिना विनिद्रमन्दाररजोरुणाङ्गुली" कुमा० ५-८०। 2. ನಿದ್ರೆಯಿಲ್ಲದಿರುವ, ಎಚ್ಚರಗೊಂಡಿರುವ. "तामेकतस्तव विभर्ति गुरुर्विनिद्रस्तस्या भवानपरधुर्यपदावलम्बी" रघु० ५-६६।

**विनिद्राण ವಿನಿದ್ರಾಣ** (वि०) ನಿದ್ರಿಸುವ, ನಿದ್ದೆಮಾಡುವ, ನಿದ್ದೆಬಂದಿರುವ. वि + नि + द्रा (कुत्सायां गतौ) "क्तः" (३-४-७२)। नः (८-२-४३)।

**विनिपतत् ವಿನಿಪತತ್** (वि०) ಕೆಳಗೆ ಬೀಳುತ್ತಿರುವ. वि + नि + पत्लृ (गतौ) "शतृ" (३-२-१२४)।

**विनिपतन ವಿನಿಪತನ** (न०) 1. ಕೆಳಗೆ ಬೀಳುವುದು. वि + नि + पत्लृ (गतौ) "ल्युट्" (३-२-११५)। 2. ಅಧೋಗತಿ ಹೊಂದುವುದು, ನಾಶಹೊಂದುವುದು.

**विनिपात ವಿನಿಪಾತ** (पुं०) 1. ಕೆಳಗೆ ಬೀಳುವುದು. वि + नि + पत्लृ (गतौ) "घञ्" (३-३-१८)। 2. ವಿಪತ್ತು, ಅನರ್ಥ, ನಾಶ. "विवेकभ्रष्टानां भवति विनिपातः शतमुखः" भर्तृ० १-१०। 3. ಮರಣ. "भवतो भजतामनन्यसाध्यं विनिपातं प्रणिपातवृत्त्यनर्हः" याद० १५-१७। 4. ಅವಮಾನ. "मङ्गलाचारयुक्तानां नित्यं च प्रयतात्मनाम्। जपतां जुह्वतां चैव विनिपातो न विद्यते" मनु० ४-१४६।

**विनिमय ವಿನಿಮಯ** (पुं०) 1. ಪರಸ್ಪರ ಬದಲಾಯಿಸಿಕೊಳ್ಳುವುದು, ಒಂದನ್ನು ಕೊಟ್ಟು ಮತ್ತೊಂದನ್ನು ಪಡೆಯುವುದು, ಅದಲುಬದಲು ಮಾಡಿಕೊಳ್ಳುವುದು. वि+नि+मी (गतौ) "अच्" (३-३-५६)। "दुदोह गां स यज्ञाय सस्याय मघवा दिवम्। सम्पद्विनिमयेनोभौ दधतुर्भुवनद्वयम्" रघु० १-२६। 2. ಅಡವು, ಗಿರವಿ ಇಡುವುದು.

**विनियत ವಿನಿಯತ** (वि०) ಅಂಕೆಯಲ್ಲಿರುವ, ಹತೋಟಿಯಲ್ಲಿರುವ, ನಿರ್ಬಂಧದಲ್ಲಿರುವ. वि+नि+यम (उपरमे) "क्तः" (३-४-७२)।

**विनियम ವಿನಿಯಮ** (पुं०) ಹತೋಟಿ, ಹಿಡಿತ, ನಿರೋಧ, ಅಂಕೆ. वि+नि+यम (उपरमे) "अप्" (३-३-६३)।

**विनियुक्त ವಿನಿಯುಕ್ತ** (वि०) 1. ಉಪಯೋಗಿಸಲ್ಪಟ್ಟ. 2. ಹಂಚಲ್ಪಟ್ಟ, ಎಲ್ಲರಿಗೂ ಕೊಡಲ್ಪಟ್ಟ. "प्रत्येकं विनियुक्तात्मा कथं न ज्ञास्यसि प्रभो" कुमा० २-३१। वि + नि + युजिर् (योगे) "क्तः" (३-२-१०२)। 3. ನಿಯಮಿಸಲ್ಪಟ್ಟ. "वयं भवन्तो ये चान्ये महान्तः सर्व एव ते। विश्वगुप्तौ जगत्कर्त्रा विनियुक्ता विभूतयः" याद० २२-४। 4. ಬೇರ್ಪಡಿಸಲ್ಪಟ್ಟ.

**विनियोग ವಿನಿಯೋಗ** (पुं०) 1. ಕೊಡುವುದು. 2. ಹಂಚುವುದು. 3. ನಿಯಮಿಸುವುದು, ಒಂದು ಕಾರ್ಯ ಮಾಡುವಂತೆ ನೇಮಿಸುವುದು. वि+नि+युजिर् (योगे) "घञ्" (३-३-१८)। "विनियोगप्रसादा हि किंकराः प्रभविष्णुषु" कुमा० ६-६२। 4. ಉಪಯೋಗಿಸುವುದು. "बभूव विनियोगज्ञः साधनीयेषु वस्तुषु" रघु० १७-६७। 5. ಬೇರ್ಪಡಿಸುವುದು.

**विनिर्गत ವಿನಿರ್ಗತ** (वि०) ಹೊರಟುಹೋದ. वि + निर् + गम्लृ (गतौ) "क्तः" (३-४-७२)।

**विनिर्गम ವಿನಿರ್ಗಮ** (पुं०) 1. ಹೊರಡುವುದು. वि + निर् + गम्लृ (गतौ) "अप्" (३-३-५८)। 2. ಹೊರಟುಹೋಗುವುದು. भावे "ल्युट्" (३-३-११५)। –गमनम् –ಗಮನಮ್.

**विनिर्जय ವಿನಿರ್ಜಯ** (पुं०) ಸಂಪೂರ್ಣ ಜಯ. वि + निर् + जि (जये) "अच्" (३-३-५६)।

**विनिर्जित ವಿನಿರ್ಜಿತ** (वि०) ಸಂಪೂರ್ಣವಾಗಿ ಜಯಿಸಲ್ಪಟ್ಟ. वि+निर्+जि (जये) "क्तः" (३-२-१०२)।

**विनिर्णय ವಿನಿರ್ಣಯ** (पुं०) 1. ಪೂರ್ತಿ ತೀರ್ಮಾನ. 2. ಸಂಶಯವಿಲ್ಲದ ನಂಬಿಕೆ. वि + निर् + णीञ् (प्रापणे) "अच्" (३-३-५६)।

**विनिर्दिशत् ವಿನಿರ್ದಿಶತ್** (वि०) ಪ್ರದರ್ಶಿಸುತ್ತಿರುವ, ತೋರಿಸುತ್ತಿರುವ. वि + निर् + दिश (अतिसर्जने) "शतृ" (३-२-१२४)। "विनिर्दिशन् मार्गभवान् विशेषान् विश्वासयामास विदर्भकन्याम्" याद० १३-३८। स्त्रियां "ङीप्" (४-१-६)। –ती –ತೀ, –न्ती –ನ್ತೀ.

**विनिर्दिष्ट ವಿನಿರ್ದಿಷ್ಟ** (वि०) ತೋರಿಸಲ್ಪಟ್ಟ. वि + निर् + दिश (अतिसर्जने) "क्तः" (३-२-१०२)।

**विनिर्देश ವಿನಿರ್ದೇಶ** (पुं०) ಪ್ರದರ್ಶಿಸುವುದು, ತೋರಿಸುವುದು. वि + निर् + दिश (अतिसर्जने) "घञ्" (३-३-१८)।

**विनिर्मुक्त** ವಿನಿರ್ಮುಕ್ತ (वि०) ಬಿಡುಗಡೆಮಾಡಲ್ಪಟ್ಟ. वि + निर् + मुच्लृ (मोक्षणे) "क्तः" (३-२-१०२)।

**विनिर्मुक्ति** ವಿನಿರ್ಮುಕ್ತಿ (स्त्री०) ಸಂಪೂರ್ಣವಾದ ಬಿಡುಗಡೆ.

**विनिर्यत्** ವಿನಿರ್ಯತ್ (वि०) ಹೊರಗೆ ಹೊರಡುತ್ತಿರುವ. वि + निर् + इण् (गतौ) "शतृ" (३-२-१२४)। स्त्रियां "ङीप्" (४-१-६)। **-निर्यती -ನಿರ್ಯತೀ.** "विनिर्यतीनां गुरुखेदमन्थरं सुराङ्गनानामनुसानु वर्त्मनः" किरा० ८-२६।

**विनिर्वर्तित** ವಿನಿರ್ವರ್ತಿತ (वि०) ಸಂಪೂರ್ಣವಾಗಿ ನೆರವೇರಿಸಲ್ಪಟ್ಟ. वि + निर् + वृतु (वर्तने) "क्तः" (३-३-१०२)।

**विनिर्वृत्त** ವಿನಿರ್ವೃತ್ತ (वि०) 1. ಸಂಪೂರ್ಣವಾಗಿ ನೆರವೇರಿದ. वि + निर् + वृतु (वर्तने) "क्तः" (३-४-७२)। 2. ಸಿದ್ಧವಾದ.

**विनिवर्तन** ವಿನಿವರ್ತನ (न०) ಹಿಂತಿರುಗುವುದು, ಹೊರಟುಹೋಗುವುದು. वि + नि + वृतु (वर्तने) "ल्युट्" (३-३-११५)।

**विनिवर्तित** ವಿನಿವರ್ತಿತ (वि०) 1. ಹಿಂತಿರುಗಿಸಲ್ಪಟ್ಟ. 2. ತಡೆಯಲ್ಪಟ್ಟ. वि + नि + वृतु (वर्तने) + णिच् "क्तः" (३-२-१०२)।

**विनिवारित** ವಿನಿವಾರಿತ (वि०) ಪರಿಹರಿಸಲ್ಪಟ್ಟ, ಹೋಗಲಾಡಿಸಲ್ಪಟ್ಟ. वि + नि + वृञ् (आवरणे) + णिच् "क्तः" (३-२-१०२)। "विनिवारितभानुतापमेकं सकलस्यापि मुरद्विषो बलस्य" माघ० २०-१६।

**विनिवृत्त** ವಿನಿವೃತ್ತ (वि०) 1. ನಿವೃತ್ತಿಹೊಂದಿದ. 2. ಬಿಟ್ಟುಹೋದ. वि + नि + वृतु (वर्तने) "क्तः" (३-४-७२)। "निर्मानमोहा जितसङ्गदोषा अध्यात्मनित्या विनिवृत्तकामाः" गीता १५-५।

**विनिवृत्ति** ವಿನಿವೃತ್ತಿ (स्त्री०) 1. ತೆಗೆದುಹಾಕುವುದು, ತ್ಯಜಿಸುವುದು, ಪರಿಹರಿಸುವುದು. वि+नि+वृतु (वर्तने) "क्तिन्" (३-३-९४)। "अतिष्ठदेकोनशतक्रतुत्वे शक्राभ्यसूयाविनिवृत्तये यः" रघु० ६-७४। 2. ಮುಕ್ತಾಯ, ಸಮಾಪ್ತಿ.

**विनिवेदन** ವಿನಿವೇದನ (न०) ಅರುಹುವುದು, ವಿಜ್ಞಾಪಿಸುವುದು, ತಿಳಿಸುವುದು. वि+नि+विद (ज्ञाने) "ल्युट्" (३-३-११५)।

**विनिवेदनीय** ವಿನಿವೇದನೀಯ (वि०) 1. ವಿಜ್ಞಾಪಿಸಲ್ಪಡುವ, ಅರುಹಲ್ಪಡುವ, ತಿಳಿಸಲ್ಪಡುವ. 2. ವಿಜ್ಞಾಪಿಸಬೇಕಾದ, ತಿಳಿಸಬೇಕಾದ. 3. ತಿಳಿಸಲು ಅರ್ಹವಾದ. वि + नि + विद (ज्ञाने) "अनीयर्" (३-१-९६)। "तव्यः"। **-वेदयितव्यम् -ವೇದಯಿತವ್ಯಮ್.**

**विनिवेदयत्** ವಿನಿವೇದಯತ್ (वि०) ವಿಜ್ಞಾಪಿಸುತ್ತಿರುವ, ತಿಳಿಸುತ್ತಿರುವ. वि + नि + विद (ज्ञाने) + णिच् "शतृ" (३-२-१२४)। "विनिवेदयता रिपोरुदन्तं दिविषद्वैभवदावचित्रभानुम्" याद० १५-९।

**विनिवेदयितृ** ವಿನಿವೇದಯಿತೃ (वि०) ತಿಳಿಸುವವನು. वि+नि+विद (ज्ञाने) + णिच् "तृच्" (३-१-१३३)। स्त्रियां "ङीप्" (४-२-५)। **-यित्री -ಯಿತ್ರೀ.**

**विनिवेदित** ವಿನಿವೇದಿತ (वि०) ತಿಳಿಸಲ್ಪಟ್ಟ, ವಿಜ್ಞಾಪಿಸಲ್ಪಟ್ಟ. वि+नि+विद (ज्ञाने) "क्तः" (३-२-१०२)। "विनिवेदितविश्वकार्य इत्थं कृतिना तेन कृतार्हणो यथार्हम्" याद० १५-२९।

**विनिवेद्य** ವಿನಿವೇದ್ಯ (वि०) 1. ನಿವೇದಿಸಲ್ಪಡುವ, ತಿಳಿಸಲ್ಪಡುವ. वि+नि+विद (ज्ञाने) "ण्यत्" (३-१-१२४)। (अव्य०) 2. ತಿಳಿಸಿ, ನಿವೇದಿಸಿ, ವಿಜ್ಞಾಪಿಸಿ. वि+नि+विद "क्त्वा"। "ल्यप्" (७-१-३७)।

**विनिवेश** ವಿನಿವೇಶ (पुं०) ಇಡುವುದು, ಇರಿಸುವುದು. वि + नि + विश (प्रवेशने) "घञ्" (३-३-१८)। "कथमपि चरणोत्पलैश्चलद्भिर्भृशविनिवेशवशात्परस्परस्य" माघ० ७-६७।

**विनिवेशित** ವಿನಿವೇಶಿತ (वि०) ಇಡಲ್ಪಟ್ಟ. वि+नि+विश (प्रवेशने) "क्तः" (३-२-१०२)। "वक्त्रारविन्दविनिवेशितपाञ्चजन्यः" गोपालवि०।

**विनिश्चय** ವಿನಿಶ್ಚಯ (पुं०) 1. ನಿರ್ಣಯ. 2. ತೀರ್ಮಾನ. वि + निस् + चिञ् (चयने) "अप्" (३-३-५८)।

**विनिःश्वसत्** ವಿನಿಃಶ್ವಸತ್ (वि०) ನಿಟ್ಟುಸಿರುಬಿಡುತ್ತಿರುವ. वि + निस् + श्वस (प्राणने) "शतृ" (३-२-१२४)।

**विनिःश्वसन** ವಿನಿಃಶ್ವಸನ (न०) ನಿಟ್ಟುಸಿರುಬಿಡುವುದು. वि + निस् + श्वस (प्राणने) "ल्युट्" (३-३-११५)।

**विनिःश्वसित** ವಿನಿಃಶ್ವಸಿತ (न०) ನಿಟ್ಟುಸಿರು. वि + निस् + श्वस (प्राणने) "क्तः" (३-३-११४)।

**विनिःश्वास** ವಿನಿಃಶ್ವಾಸ (पुं०) ನಿಟ್ಟುಸಿರು. वि + निस् + श्वस (प्राणने) "घञ्" (३-३-१८)।

**विनिष्पेष ವಿನಿಷ್ಪೇಷ** (पुं०) ಅರೆಯುವುದು, ಪುಡಿಮಾಡುವುದು. वि + निस् + पिष (सञ्चूर्णने) "घञ्" (३-३-१८)। भावे "ल्युट्" (३-३-११५)। **–पेषणम् –ಪೇಷಣಮ್.**

**विनिहत ವಿನಿಹತ** (वि०) ವಧಿಸಲ್ಪಟ್ಟ, ಕೊಲ್ಲಲ್ಪಟ್ಟ. वि + नि + हन (हिंसागत्योः) "क्तः" (३-२-१०२)।

**विनिहित ವಿನಿಹಿತ** (वि०) ಇಡಲ್ಪಟ್ಟ, ಇರಿಸಲ್ಪಟ್ಟ. वि+नि+डु धाञ् (धारणपोषणयोः) "क्तः" (३-२-१०२)। "विनिहितं परितापिनि चन्दनं हृदि तया धृतबुद्बुदभावभौ" नैष० ४-२८।

**विनीत ವಿನೀತ** (वि०) 1. ಚೆನ್ನಾಗಿ ಶಿಕ್ಷಣ ಕೊಡಲ್ಪಟ್ಟ, ಚೆನ್ನಾಗಿ ಶಿಸ್ತಿನಲ್ಲಿಡಲ್ಪಟ್ಟ, ಚೆನ್ನಾಗಿ ತಿದ್ದಲ್ಪಟ್ಟ. वि+णीञ् (प्रापणे) "क्तः" (३-२-१०२)। 2. ನಮ್ರನಾಗಿರುವವನು, ವಿಧೇಯನಾಗಿರುವವನು, ಹೇಳಿದಂತೆ ನಡೆಯುವವನು. 3. ಗೌರವದಿಂದಿರುವವನು, ತಗ್ಗಿ ನಡೆಯುವವನು. "तत्प्राज्ञेन विनीतेन ज्ञानविज्ञानवेदिना" मनु० ९-४१। 4. ಚೆನ್ನಾಗಿ ಪಳಗಿಸಲ್ಪಟ್ಟ, ಶಾಂತ ಸ್ವಭಾವದ. "तपस्विसंसर्गविनीतसत्त्वे तपोवने वीतभया वसास्मिन्" रघु० १४-७५। 5. ಜಿತೇಂದ್ರಿಯನಾದ, ಇಂದ್ರಿಯಗಳನ್ನು ಜಯಿಸಿದ. "शान्तो दान्तः कुलीनश्च विनीतः शुद्धवेशवान्"। 6. ಕಳುಹಿಸಲ್ಪಟ್ಟ, ಹೊರ ದೂಡಲ್ಪಟ್ಟ. 7. ಒಯ್ಯಲ್ಪಟ್ಟ. 8. ದಂಡಿಸಲ್ಪಟ್ಟ, ಶಿಕ್ಷಿಸಲ್ಪಟ್ಟ. 9. ಶುದ್ಧಾತ್ಮನಾದ. (पुं०) 10. ಚೆನ್ನಾಗಿ ಪಳಗಿದ ಕುದುರೆ, ಚೆನ್ನಾಗಿ ತಿದ್ದಲ್ಪಟ್ಟ ಕುದುರೆ. 11. ವರ್ತಕ. "विनीतः सुवहाश्वे स्यात् वणिज्यपि पुमांस्त्रिषु। जितेन्द्रियेऽपनीते च निभृते विनयान्विते" मेदि०।

**विनीति ವಿನೀತಿ** (स्त्री०) 1. ಚೆನ್ನಾಗಿ ಪಳಗಿಸುವುದು. 2. ದಂಡಿಸುವುದು. 3. ಚೆನ್ನಾಗಿ ಗೌರವಿಸುವುದು.

**विनीय ವಿನೀಯ** (पुं०) 1. ಕಲ್ಕ, ಗಸಿ, ಗಷ್ಟು. 2. ಪಾಪ. वि+णीञ् (प्रापणे) "क्यप्" (३-१-११७)। निपा०।

**विनेतृ ವಿನೇತೃ** (पुं०) 1. ಗುರು, ಆಚಾರ್ಯ. 2. ರಾಜ, ದೊರೆ. "स तथेति विनेतुरुदारमतेः प्रतिगृह्य वचो विससर्ज मुनिम्" रघु० ८-९१। (वि०) 3. ನಿರ್ದೇಶನ ಮಾಡುವವನು, ಸನ್ಮಾರ್ಗದಲ್ಲಿ ನಡೆಯುವಂತೆ ಬೋಧಿಸುವವನು. वि + णीञ् (प्रापणे) "तृच्" (३-१-१३३)। 4. ದಂಡಿಸುವವನು, ಶಿಕ್ಷಿಸುವವನು. "अयं विनेता दृप्तानामेकवीरो जगत्पतिः। वयं वसिष्ठधौरेयाः सर्वे प्रतिभुवोऽत्र वः" म० वी० ३-४६। 5. ಶಿಕ್ಷಕ, ಬೋಧಕ, ಉಪಾಧ್ಯಾಯ. "विनेतुरद्रव्यपरिग्रहोऽपि बुद्धिलाघवं प्रकाशयति" माल० १। 6. ನಿಯಾಮಕ, ಆಜ್ಞೆಮಾಡುವವನು, ಆಳುವವನು. "तेनास लोकः पितृमान् विनेत्रा" रघु० १४-२३।

**विनेय ವಿನೇಯ** (वि०) ದಂಡಿಸಲ್ಪಡುವ, ಶಿಕ್ಷಿಸಲ್ಪಡುವ. वि+णीञ् (प्रापणे) "यत्" (३-१-९७)। "ज्योतिर्ज्ञानं तथोत्पातमविदित्वा तु ये नृणाम्। श्रावयत्यर्थलोभेन विनेयास्तेऽपि यत्नतः"।

**विनेष्यत् ವಿನೇಷ್ಯತ್** (वि०) 1. ಶಿಕ್ಷಿಸುವ. वि + णीञ् (प्रापणे) + स्यः "शतृ" (३-२-१२४)। "वन्यान् विनेष्यन्निव दुष्टसत्त्वान्" रघु० २-८। 2. ಪರಿಹರಿಸುವ. "विनेष्यन् वर्णविक्रियाम्" रघु० १५-४८।

**विनोद ವಿನೋದ** (पुं०) 1. ಆನಂದ, ಪ್ರಮೋದ, ಸಂತೋಷ. वि + णुद (प्रेरणे) "घञ्" (३-३-१८)। "जनयतु रसिकजनेषु मनोरमरतिरसभावविनोदम्" गीतगो०। 2. ವಿರಹ ಕಷ್ಟ ಮೊದಲಾದ ಕಾಲದಲ್ಲಿ ಕಾಲವನ್ನು ಕಳೆಯುವ ಉಪಾಯ; ಆಟ ಪಾಟ ಮೊದಲಾದುವು. "मत्सङ्गं वा हृदयनिहितारम्भमास्वादयन्ती प्रायेणैते रमणविरहेष्वङ्गनानां विनोदाः" मेघ० २-२४। 3. ದಬ್ಬುವುದು, ಅಟ್ಟುವುದು, ನೂಕುವುದು. 4. ಪರಿಹರಿಸಿಕೊಳ್ಳುವುದು. "विनोदमिच्छन्नथ दर्पजन्मनो रणेन कण्ड्वास्त्रिदशैः समं पुनः" माघ० १-४८। 5. ಅಶ್ಚರ್ಯದ ವಿಷಯವನ್ನು ನೋಡುವ ಆಸೆ, ಕುತೂಹಲ. "मिथ्यैव व्यसनं वदन्ति मृगयामीदृग्विनोदः कुतः" शाकु० २-५। 6. ಕ್ರೀಡೆ, ಆಟ. 7. ಒಂದು ವಿಧ ರಾಜಗೃಹ. 8. ನಾಯಿಕಾ ನಾಯಕರ ಒಂದು ವಿಧ ಆಲಿಂಗನ.

**विनोदन ವಿನೋದನ** (न०) 1. ಆನಂದಗೊಳಿಸುವುದು, ಸಂತೋಷಪಡಿಸುವುದು. वि + णुद (प्रेरणे) + णिच् "ल्युट्" (३-३-११५)। 2. ಮನಸ್ಸನ್ನು ಬೇರೆ ವಿಷಯದ ಕಡೆಗೆ ತಿರುಗಿಸುವುದು. 3. ಪರಿಹರಿಸುವುದು, ನಿವಾರಣೆ ಮಾಡುವುದು. 4. ಕ್ರೀಡಿಸುವುದು, ಆಟವಾಡುವುದು. (वि०) 5. ಸಂತೋಷಪಡಿಸುವ. 6. ಪರಿಹರಿಸುವ, ನಿವಾರಣೆಮಾಡುವ. वि + णुद + णिच् "ल्युः" (३-१-१३४)।

**विनोदनीय ವಿನೋದನೀಯ** (वि०) ಸಂತೋಷಪಡಿಸಲ್ಪಡುವ. वि + णुद (प्रेरणे) + णिच् "अनीयर्" (३-१-९६)। "तव्यः"। **विनोदयितव्यः ವಿನೋದಯಿತವ್ಯಃ.**

**विनोदयत् ವಿನೋದಯತ್** (वि०) 1. ಸಂತೋಷಪಡಿಸುತ್ತಿರುವ. 2. ಪರಿಹರಿಸುತ್ತಿರುವ. 3. ಉಪಾಯದಿಂದ ಕಾಲಯಾಪನೆ ಮಾಡಿಸುತ್ತಿರುವ. वि+णुद (प्रेरणे) + णिच् "शतृ" (३-२-१२४)। स्त्रियां "ङीप्" (४-१-६)। -यन्ती -ಯಂತೀ

**विनोदित ವಿನೋದಿತ** (वि०) 1. ಸಂತೋಷಪಡಿಸಲ್ಪಟ್ಟ. वि + णुद (प्रेरणे) + णिच् "क्तः" (३-२-१०२)। 2. ಪರಿಹರಿಸಲ್ಪಟ್ಟ, ನಿವಾರಣೆಮಾಡಲ್ಪಟ್ಟ. "विनोदित-दिनक्लमाः कृतरुचश्च कादम्बरम्" माघ० ४-६६।

**विन्ध्य ವಿಂಧ್ಯ** (पुं०) 1. ಒಂದು ಪರ್ವತ. विरुद्धं ध्यायति — ध्यै (चिन्तायाम्) "कः" (३-१-१३६)। पृषो०। ವಿಂಧ್ಯಪರ್ವತವು ಸೂರ್ಯನ ಸಂಚಾರವನ್ನೂ ತಡೆಗಟ್ಟುವ ರೀತಿಯಲ್ಲಿ ಬೆಳೆಯುತ್ತಿರಲು ಸೂರ್ಯನು ಅಗಸ್ತ್ಯಮುನಿಯ ಬಳಿ ಹೋಗಿ ತನ್ನ ಕಷ್ಟವನ್ನು ನಿವೇದಿಸಿಕೊಂಡನು. ಅಗಸ್ತ್ಯಮುನಿಯು ವಿಂಧ್ಯಪರ್ವತವು ಇನ್ನೂ ಮುಂದೆ ಬೆಳೆಯಕೂಡದೆಂದೂ ತನ್ನ ಶಿಖರವನ್ನು ತಗ್ಗಿಸಿಕೊಳ್ಳಬೇಕೆಂದೂ ಹೇಳಲಾಗಿ ಪರ್ವತವು ಮುಂದೆ ಬೆಳೆಯದೆ ತನ್ನ ಶಿಖರವನ್ನು ಕೆಳಗೆ ಇಳಿಸಿಕೊಂಡಿತು. "पुरा हि विन्ध्येन दिवाकरस्य गतिर्निरुद्धा गगनेचरस्य। रविस्ततः कुम्भभवं समेत्य होमावसाने वचनं बभाषे॥ समागतोऽहं च द्विजर्षभ त्वां कुरुष्व मय्युद्धरणं मुनीन्द्र। ददस्व दानं मम यन्मनीषितं चरामि येन त्रिदिवे मुनिर्वृतः॥ ........गत्वा वचः प्राह मुनिर्महीध्रं यास्ये महातीर्थवरं सुपुण्यम्। वृद्धोऽप्यशक्तश्च तवाधिरोढुं तस्माद्भवान् नीचतरोऽस्तु सद्यः॥ इत्येवमुक्तो मुनिसत्तमेन स नीचशृङ्गस्त्वभवन्महीध्रः॥ समाक्रमन्चापि महर्षिमुख्यः प्रोल्लङ्घ्य विन्ध्यं द्विज आह शैलम्। यावन्न भूयो निजमाव्रजामि महाश्रमं धौतवपुःसुतीर्थात्। त्वया न तावत्त्विह वर्धितव्यं न चेत् शपिष्येऽहमवज्ञया ते॥ विन्ध्योऽपि दृष्ट्वा गगने महाश्रमं वृद्धिं न यात्येव भयान्महर्षेः" वामनपु०। ಈ ಪರ್ವತದಿಂದ ತಪತೀ ಪಯೋಷ್ಣೀ ನಿರ್ವಿಂಧ್ಯಾ ಕ್ಷಿಪ್ರಾ ಋಷಭಾ ವೈತರಣೀ ಕುಮುದ್ವತೀ ಮುಂತಾದ ನದಿಗಳು ಹರಿಯುತ್ತವೆ. "अन्तरं पूरयामास विन्ध्यनीहारभूभृतोः" याद० २२-२२८। 2. ವ್ಯಾಧ, ಬೇಟೆಗಾರ.

**विन्ध्यकूट ವಿಂಧ್ಯಕೂಟ** (पुं०) ಅಗಸ್ತ್ಯಮಹರ್ಷಿ. विन्ध्ये कूटं माया यस्य।

**विन्ध्यवासिनी ವಿಂಧ್ಯವಾಸಿನೀ** (स्त्री०) ದುರ್ಗಾದೇವಿ.

**विन्ध्या ವಿಂಧ್ಯಾ** (स्त्री०) 1. ಲವಲೀ ಗಿಡ. 2. ಸಣ್ಣ ಯಾಲಕ್ಕಿ. "विन्ध्या त्रुटौ लवल्यां च" हेम०।

**विन्ध्यावली ವಿಂಧ್ಯಾವಲೀ** (स्त्री०) ಬಲಿಚಕ್ರವರ್ತಿಯ ಪತ್ನಿ, ಬಾಣಾಸುರನ ತಾಯಿ.

**विन्न ವಿನ್ನ** (वि०) 1. ವಿಚಾರಮಾಡಲ್ಪಟ್ಟ. विद्यते स्म— विद (विचारणे) "क्तः" (३-२-१०२)। वा नत्वम् (८-२-५५)। पक्षे **वित्तम् ವಿತ್ತಮ್.** 2. ಪಡೆಯಲ್ಪಟ್ಟ, ಹೊಂದಲ್ಪಟ್ಟ. विदलृ (लाभे) "क्तः" (३-२-१०२)। 3. ತಿಳಿಯಲ್ಪಟ್ಟ. विद (ज्ञाने) "क्तः"। 4. ಇರುವ. विद—(सत्तायाम्) "क्तः"।

**विन्यसन ವಿನ್ಯಸನ** (न०) ಕೆಳಗೆ ಇಡುವುದು, ಕೆಳಗೆ ಇರಿಸುವುದು. वि+नि+असु (क्षेपणे) "ल्युट्" (३-३-११५)।

**विन्यस्त ವಿನ್ಯಸ್ತ** (वि०) 1. ಇಡಲ್ಪಟ್ಟ, ಇರಿಸಲ್ಪಟ್ಟ. वि + नि + असु (क्षेपणे) "क्तः" (३-२-१०२)। "सन्तप्तचामीकरवल्गुवक्त्रं विभागविन्यस्तमहार्घरत्नम्" भट्टि० ३-३। 2. ಹುದುಗಿಸಲ್ಪಟ್ಟ, ಒಂದು ವಸ್ತುವಿನೊಳಗೆ ಸಮವಾಗಿ ಕೂರಿಸಲ್ಪಟ್ಟ. "विन्यस्तवैडूर्य-शिलातलेऽस्मिन्नाबद्धमुक्ताफलभक्तिचित्रे" कुमा० ७-१०। 3. ರಚಿಸಲ್ಪಟ್ಟ, ತಿದ್ದಿ ಬರೆಯಲ್ಪಟ್ಟ. "विन्यस्तशुक्लागुरु चक्रुरङ्गं गोरोचनापत्रविभक्तमस्याः" कुमा० ७-१५। 4. ನೆಲೆಯಾಗಿ ಮಾಡಲ್ಪಟ್ಟ, ಒಂದುಕಡೆಗೆ ತಿರುಗಿಸಿಡಲ್ಪಟ್ಟ, ಒಂದುಕಡೆ ನೆಲೆಯಾಗಿ ನಿಯಂತ್ರಿಸಲ್ಪಟ್ಟ. 5. ಒಪ್ಪಿಸಲ್ಪಟ್ಟ, ವಹಿಸಲ್ಪಟ್ಟ. "सुतविन्यस्तपत्नीकस्तया वानुगतो वनम्" याज्ञ० ३-४५।

**विन्यस्यत् ವಿನ್ಯಸ್ಯತ್** (वि०) ಇಡುತ್ತಿರುವ. वि+नि+असु (क्षेपणे) "शतृ" (३-२-१२४)।

**विन्यास ವಿನ್ಯಾಸ** (पुं०) 1. ನಿಕ್ಷೇಪ, ಭದ್ರವಾಗಿರಲು ಒಬ್ಬನಲ್ಲಿ ಇಟ್ಟಿರುವ ವಸ್ತು. विन्यस्यते—वि+नि+असु (क्षेपणे) कर्म० "घञ्" (३-३-१९)। 2. ನ್ಯಾಸ, ಇಡುವುದು. 3. ರಚನೆ, ರಚನಾಕ್ರಮ, ಜೋಡಣೆ. "तया कवितया किंवा तया वनितया च किम्। पदविन्यासमात्रेण यया नापहृतं मनः"। 4. ಒಂದು ವಸ್ತುವಿನೊಳಗೆ ಸಮತಲವಾಗಿ ಕೂಡಿಸುವುದು.

**विपक्व ವಿಪಕ್ವ** (वि०) 1. ಸಂಪೂರ್ಣವಾಗಿ ಹಣ್ಣಾಗಿರುವ. विशेषेण पक्वम्। 2. ಫಲಿಸಿದ, ಸಿದ್ಧಿಸಿದ. "यच्च तप्तं तपस्तस्य विपक्वं फलमद्य नः" कुमा० ६-१६।

**विपक्ष ವಿಪಕ್ಷ** (पुं०) 1. ಶತ್ರು, ವೈರಿ. विरुद्धः पक्षो यस्य। "विपक्षमखिलीकृत्य प्रतिष्ठा खलु दुर्लभा"

माघ० २-३४। 2. ವಿರುದ್ಧವಾದ ಪಕ್ಷ, ಸವತಿ ಮೊದಲಾದವರು. "विजनमिति बलादमुं गृहीत्वा क्षणमथ वीक्ष्य विपक्षमन्तिकेऽन्या" माघ० ८-५१। 3. ಸಾಧ್ಯವಿಲ್ಲದ ಪಕ್ಷ. निश्चितसाध्याभाववान् विपक्षः। पर्वतो वह्निमान् धूमात् ಎಂಬಲ್ಲಿ ಸಾಧ್ಯವಾದ ವಹ್ನಿಯು ಪರ್ವತದಲ್ಲಿರುವುದರಿಂದ ಪರ್ವತವು ಸಪಕ್ಷ. ह्रदो वह्निमान् ಎಂಬಲ್ಲಿ ಸಾಧ್ಯವಾದ ವಹ್ನಿಯು ಹ್ರದದಲ್ಲಿಲ್ಲದಿರುವುದರಿಂದ ಹ್ರದವು ವಿಪಕ್ಷ. (वि०) 4. ಯಾವುದೊಂದು ಪಕ್ಷವೂ ಇಲ್ಲದಿರುವ. विगतः पक्षो यस्य। 5. ಪ್ರತಿವಾದಿ, ಪ್ರತಿಪಕ್ಷಕ್ಕೆ ಸೇರಿದವನು. "हृतोत्तरं तत्त्वविचारमध्ये वक्तेव दोषैर्गुरुभिर्विपक्षम्" किरा० १७-४३।

**विपक्षभाव ವಿಪಕ್ಷಭಾವ** (पुं०) ಶತ್ರುತ್ವ, ವೈರ, ದ್ವೇಷ. विपक्षस्य भावः। "तथापि शत्रुव्यवहारनिष्ठुरे विपक्षभावे चिरमस्य तस्थुषः" रघु० ३-६२।

**विपञ्चिका ವಿಪಂಚಿಕಾ** (स्त्री०) ವೀಣೆ, ಒಂದು ತಂತೀವಾದ್ಯ. वि+पचि (विस्तारे) "ण्वुल्" (३-१-१३३)।

**विपञ्ची ವಿಪಂಚೀ** (स्त्री०) 1. ವೀಣೆ, ಒಂದು ತಂತೀವಾದ್ಯ. विपञ्चयति विस्तारयति शब्दम् वि + पचि (विस्तारे) + णिच् "अच्" (३-१-१३४)। गौरा० "ङीष्" (४-१-४१)। 2. ಕ್ರೀಡೆ, ಆಟ. "विपञ्ची-केलिवीणयोः" मेदि०।

**विपण ವಿಪಣ** (पुं०) 1. ವಿಕ್ರಯ, ಮಾರಾಟ. वि+पण (व्यवहारे) "घञ्" (३-३-१८)। "विपणेन च जीवन्तो वर्ज्याः स्युर्हव्यकव्ययोः" मनु० ३-१५२। 2. ಅಂಗಡಿಯ ಬೀದಿ. "प्रपाश्च विपणांश्चैव यथोद्देशं समादिशेत्" भा० शान्ति०।

**विपणि ವಿಪಣಿ** (पुं० स्त्री०) 1. ಅಂಗಡಿ ಬೀದಿ. विपण्यन्तेऽत्र —वि+पण (व्यवहारे) "इक्" (वा० ३-३-१०८)। "पर्यापतत्क्रयिकलोकमगण्यपण्यपूर्णापणा विपणिनो विपणीर्विभेजुः" माघ० ५-२४। 2 ಅಂಗಡಿಯಲ್ಲಿ ಮಾರಾಟಕ್ಕಾಗಿ ಇಟ್ಟಿರುವ ವಸ್ತು. 3. ಅಂಗಡಿ. "विपणिः पण्यवीथ्यां च भवेदापणपण्ययोः" मेदि०। (स्त्री०) **विपणी ವಿಪಣೀ**.

**विपणिन् ವಿಪಣಿನ್** (पुं०) ವರ್ತಕ, ಅಂಗಡಿಯಲ್ಲಿ ವಸ್ತುಗಳನ್ನು ವಿಕ್ರಯಿಸುವವನು. विपणः विक्रयोऽस्यास्ति — "इनिः" (५-२-११५)। "पर्यापतत्क्रयिकलोकमगण्यपण्यपूर्णापणा विपणिनो विपणीर्विभेजुः" माघ० ५-२४।

**विपत्ति ವಿಪತ್ತಿ** (स्त्री०) 1. ಕಷ್ಟ, ತೊಂದರೆ. वि+पद (गतौ) "क्तिन्" (३-३-९४)। 2. ಪದಾತಿ, ಕಾಲಾಳು. "स्यन्दना नो च तुरगाः सुरेभा वा विपत्तयः" किरा० १५-१६। 3. ನಾಶ, ಮರಣ, ನಿಧನ. "अस्यास्तु वत्स तव हेतुरहं विपत्तेर्यत्कारितोऽस्यविनयं न च रक्षितोऽसि" वेणी० ४-६। 4. ಯಾತನೆ, ನೋವು. "विपत्तिरपि यातनापदोर्योषिति" मेदि०।

**विपथ ವಿಪಥ** (पुं०) 1. ತಪ್ಪುದಾರಿ, ಕೆಟ್ಟಮಾರ್ಗ. विरुद्धः पन्थाः। 2. ಪ್ರತಿಕೂಲವಾದ ದಾರಿ. "सत्पथं कथमुत्सृज्य यास्यामि विपथं वद" भा० शान्ति०। "विपथेन सदैष विप्रधावन्" याद० १५-१७।

**विपद् ವಿಪದ್** (स्त्री०) 1. ಕಷ್ಟ, ತೊಂದರೆ. वि + पद (गतौ) "क्विप्" (वा० ३-३-९४)। "ऋतुगणेन निषेवितुमादधे भुवि पदं विपदन्तकृतं सताम्" माघ० ६-१। 2. ವಿನಾಶ, ಮರಣ. "वामे विधौ वद कथं विपदां निवृत्तिः"। "सिंहादवापद्विपदं नृसिंहः" रघु० १८-३५। "टाप्"। **विपदा ವಿಪದಾ**. भागुरिः।

**विपन्न ವಿಪನ್ನ** (वि०) 1. ನಾಶವಾದ, ಅಳಿದುಹೋದ. वि+पद (गतौ) "क्तः" (३-४-७२)। 2. ತೊಂದರೆಗೆ ಸಿಲುಕಿದ, ಕಷ್ಟವನ್ನು ಅನುಭವಿಸಿದ. (पुं०) 3. ಸರ್ಪ. "विपन्नो भुजगे नष्टे" हेम०।

**विपरिणमन ವಿಪರಿಣಮನ** (न०) ವಿಕಾರಹೊಂದುವುದು, ಬದಲಾವಣೆಹೊಂದುವುದು, ವ್ಯತ್ಯಾಸವಾಗುವುದು. वि+परि+णम (प्रह्वत्वे) "ल्युट्" (३-३-११५)। "घञ्" (३-३-१८)। **-परिणामः -ಪರಿಣಾಮಃ**.

**विपरीत ವಿಪರೀತ** (वि०) 1. ಪ್ರತಿಕೂಲವಾದ, ವಿರುದ್ಧವಾದ, ವ್ಯತ್ಯಾಸವಾದ. वि+परि+इण् (गतौ) "क्तः" (३-४-७२)। "राज्येन किं तद्विपरीतवृत्तेः प्राणैरुपक्रोशमलीमसैर्वा" रघु० २-५३। 2. ಹಿಂದುಮುಂದಾದ. "विपरीतगतिं सूर्यमुदीच्यास्तमजानत" याद० २२-१०२।

**विपरीता ವಿಪರೀತಾ** (स्त्री०) ಕಾಮುಕಹೆಂಗಸು, ವ್ಯಭಿಚಾರಿಣಿ.

**विपर्यय ವಿಪರ್ಯಯ** (पुं०) ವ್ಯತ್ಯಾಸ. वि+परि+इण् (गतौ) "अच्" (३-३-५६)। "विपर्ययो वा किं न स्याद्गतिर्धातुर्दुरत्यया" भाग० १०-१-५०।

**विपर्यस्त ವಿಪರ್ಯಸ್ತ** (वि०) ವ್ಯತ್ಯಾಸಹೊಂದಿದ, ಬದಲಾವಣೆಹೊಂದಿದ. वि + परि + असु (क्षेपणे) "क्तः" (३-४-७२)। "विपर्यस्तमनश्चेष्टः शिलाशकलवर्ष्मभिः" मृच्छ० ८-६।

**विपर्यास ವಿಪರ್ಯಾಸ** (पुं०) 1. ವ್ಯತ್ಯಾಸ, ಬದಲಾವಣೆ. वि + परि + असु (क्षेपणे) "घञ्" (३-३-१८)। "पुरा यत्र स्रोतः पुलिनमधुना तत्र सरितां विपर्यासं यातो घनविरलभावः क्षितिरुहाम्" उ० रा० २-२७। 2. ಪ್ರತಿಕೂಲವಾಗಿರುವಿಕೆ. 3. ಅಪರಾಧ, ತಪ್ಪು, ದೋಷ.

**विपश्चित् ವಿಪಶ್ಚಿತ್** (पुं०) ಪಂಡಿತ, ವಿದ್ವಾಂಸ. विप्रकृष्टं निश्चिनोति चिन्तयति वा पृषो०। "भवन्ति ते सभ्यतमा विपश्चितां मनोगतं वाचि निवेशयन्ति ये" किरा० १४-४।

**विपाक ವಿಪಾಕ** (पुं०) 1. ಫಲೋನ್ಮುಖವಾದ ಸ್ಥಿತಿ, ಫಲವನ್ನು ಕೊಡುವ ಅವಸ್ಥೆ. वि+डुपचष् (पाके) भावे "घञ्" (३-३-१८)। "कौरवैरनुकूलानां विपाकैरिव कर्मणाम्" याद० २२-१७। 2. ಪರಿಣಾಮ ಕಾಲ, ಫಲಕೊಡುವ ಕಾಲ. "धीरास्त्रिलोकीसुहृदः प्रसादात् विपाकरम्या विपदः प्रसेहुः" याद० २३-४। 3. ಜೀರ್ಣವಾಗುವುದು, ಆಹಾರವು ಪಚನವಾಗುವುದು. "जाठरेणाग्निना योगात् यदुदेति रसान्तरम्। रसानां परिणामान्ते स विपाक इति स्मृतः" सुश्रुत०। 4. ಬಲಿಯುವುದು, ಹಣ್ಣಾಗುವುದು. "पिशंगतां गता विपाकेन फलस्य शालयः" किरा० ४-२६। 5. ಕರ್ಮ ಫಲ, ಜನ್ಮಾಂತರದ ಪುಣ್ಯದ ಅಥವಾ ಪಾಪದ ಫಲ. "अतिरभसकृतानां कर्मणामाविपत्तेः भवति हृदयदाही शल्यतुल्यो विपाकः" भर्तृ० १-९५। 6. ದಶೆ, ಅವಸ್ಥೆ, ಅನಿರೀಕ್ಷಿತ ಪರಿಸ್ಥಿತಿ. "ईदृशानां विपाकोऽपि जायते परमाद्भुतः" उ० रा० ३-३।

**विपाट्(श्) ವಿಪಾಟ್(ಶ್)** (स्त्री०) ಪಂಜಾಬಿನಲ್ಲಿ ಹರಿಯುವ ಒಂದು ನದಿ.

**विपाठ ವಿಪಾಠ** (पुं०) ಬಾಣ.

**विपाण्डु ವಿಪಾಂಡು** (वि०) ಶುಭ್ರವಾದ, ಬೆಳ್ಳಗಿರುವ. विशेषेण पाण्डुः। "विपाण्डुभिर्म्लानितया पयोधरैः च्युताचिराभागुणहेमदामभिः" किरा० ४-२४।

**विपाण्डुर ವಿಪಾಂಡುರ** (वि०) ಶುಭ್ರವಾದ, ಬಿಳುಪಾದ. विशेषेण पाण्डुरः। "क्षुभितसैन्यपरागविपाण्डुरद्युतिरयं तिरयन्नुदभूद्दिशः" माघ० ६-६४।

**विपादिका ವಿಪಾದಿಕಾ** (स्त्री०) ಕಾಲು ಒಡೆಯುವುದು, ವಾತ ಮತ್ತು ಶ್ಲೇಷ್ಮದಿಂದ ಕಾಲು ಬಿರಿಯುವುದು. ಇದೊಂದು ರೋಗ. "कण्डूमती दाहरुजोपपन्ना विपादिका पादगतेयमेव" सुश्रुत०।

**विपाशा ವಿಪಾಶಾ** (स्त्री०) ಪಂಜಾಬಿನಲ್ಲಿ ಹರಿಯುವ ಒಂದು ನದಿ.

**विपिन ವಿಪಿನ** (न०) ಅರಣ್ಯ, ಕಾಡು. वेपन्तेऽत्र—टु वेपृ (कम्पने) "इनन्" धातोः ह्रस्वश्च (उ० २-५२)। "गोगर्भिणीप्रियनवोपलमालभारिसेव्योपकण्ठविपिनावलयो विभान्ति" मालती० ९-२।

**विपुल ವಿಪುಲ** (पुं०) 1. ಮೇರುವಿನ ಪಶ್ಚಿಮಭಾಗದ ಪರ್ವತ. "विपुलः पश्चिमे पार्श्वे सुपार्श्वश्चोत्तरे स्मृतः" मेदि०। 2. ಹಿಮಾಚಲ. (वि०) 3. ಅಗಲವಾದ, ವಿಸ್ತಾರವಾದ. "विपुलं नितम्बदेशे मध्ये क्षामं समुन्नतं कुचयोः" माल० ३-७। 4. ಅಗಾಧವಾದ, ಆಳವಾದ. ಗಾಢವಾದ. "प्रसन्नकर्कशा यत्र विपुलार्था च भारती" म० वी० १-२। 5. ಅಧಿಕವಾದ, ಹೆಚ್ಚಾದ, ಅತಿಶಯವಾದ. "तपसा तथा न मुदमस्य ययौ भगवान् यथा विपुलसत्त्वतया" किरा० १८-१४। 6. ಉದ್ಧವಾದ, ಪುಲಕ, ನೀಳವಾದ ರೋಮಾಂಚ. "विपुलेन निपीड्य निर्दयं मुदमायातु नितान्तमुन्मनाः" माघ० १६-३। 7. ಬೃಹತ್ತಾದ, ದೊಡ್ಡದಾದ. "विपुलेन सागरशयस्य कुक्षिणा भुवनानि यस्य पपिरे युगक्षये" माघ० १३-४०।

**विपुलरस ವಿಪುಲರಸ** (पुं०) ಕಬ್ಬು.

**विपुला ವಿಪುಲಾ** (स्त्री०) 1. ಪೃಥ್ವಿ, ಭೂಮಿ. वि+पुल (महत्त्वे) "कः" (३-१-१३५)। 2. ಆರ್ಯಾವೃತ್ತದ ಒಂದು ಭೇದ. ಪೂರ್ವಾರ್ಧ ಮತ್ತು ಉತ್ತರಾರ್ಧಗಳಲ್ಲಿ ಮೊದಲನೆಯ ಮೂರು ಗಣಗಳಿಗೆ ಒಂದು ಪಾದವಾಗುವಲ್ಲಿ ವಿಪುಲಾರ್ಯಾ ವೃತ್ತವಾಗುವುದು. "उल्लङ्घ्य गणत्रयमादिमं शकलयोर्द्वयोर्भवति पादः। यस्यास्तां पिङ्गलनागो विपुलामभिसमाख्याति" वृ० र०।

**विपूय ವಿಪೂಯ** (पुं०) ಮುಂಜತೃಣ, ಮೌಂಜಿಯಹುಲ್ಲು. वि + पूङ् (पवने) "क्यप्" (३-१-११७)। निपा०। "वासानां वल्कले शुद्धे विपूयैः श्लथमेखलाम्" भट्टि० ६-६०।

**विप्र ವಿಪ್ರ** (पुं०) 1. ದ್ವಿಜ, ಬ್ರಾಹ್ಮಣ. डु वप् (बीजसन्ताने) "रन्" (उ० २-२९)। विशेषेण प्राति पूरयति षट्कर्माणि—वि + प्रा (पूरणे) "कः" (३-१-१३६)। "जन्मना ब्राह्मणो ज्ञेयः संस्कारैर्द्विज उच्यते। विद्यया याति विप्रत्वं त्रिभिःश्रोत्रियलक्षणम्"। 2. ಅಶ್ವತ್ಥ ವೃಕ್ಷ, ಅರಳಿಮರ.

**विप्रकर्ष ವಿಪ್ರಕರ್ಷ** (पुं०) ಬಹಳ ದೂರ.

**विप्रकार ವಿಪ್ರಕಾರ** (पुं०) ಅಪಕಾರ, ಅವಮಾನ, वि + प्र + डुकृञ् (करणे) "भावे" घञ् (३-३-१८)। "नवीकृतोद्ग्राहितविप्रकाराम्" किरा० ३-५५।

**विप्रकृत ವಿಪ್ರಕೃತ** (वि०) 1. ಅಪಕಾರಮಾಡಲ್ಪಟ್ಟ. वि + प्र + कृञ् (करणे) "क्तः" (३-२-१०२)। 2. ಕೆಣಕಲ್ಪಟ್ಟ, ಕೆರಳಿಸಲ್ಪಟ್ಟ. "ज्वलति चलितेन्धनोऽग्निर्विप्रकृतः पन्नगः फणां कुरुते" शाकु० ६-३१। 3. ಪೀಡಿಸಲ್ಪಟ್ಟ, ಹಿಂಸಿಸಲ್ಪಟ್ಟ. 4. ಮುಯ್ಯಿ ತೀರಿಸಿಕೊಳ್ಳಲ್ಪಟ್ಟ, ಪ್ರತಿಯಾಗಿ ಅಪಕಾರಮಾಡಲ್ಪಟ್ಟ. 5. ಅವಮಾನಗೊಳಿಸಲ್ಪಟ್ಟ, ತಿರಸ್ಕರಿಸಲ್ಪಟ್ಟ. "त्वया विप्रकृतश्चेद्यः" माघ० २-३८।

**विप्रकृति ವಿಪ್ರಕೃತಿ** (स्त्री०) ಅಪಕಾರ, ಅವಮಾನ. वि + प्र + कृञ् "क्तिन्" (३-३-९४)।

**विप्रकृष्ट ವಿಪ್ರಕೃಷ್ಟ** (वि०) ಬಹಳ ದೂರದಲ್ಲಿರುವ. वि + प्र + कृष (विलेखने) "क्तः" (३-२-१०२)। "इदमस्तु संनिकृष्टं समीपतरवर्ति चैतदो रूपम्। अदसस्तु विप्रकृष्टं तदिति परोक्षे विजानीयात्"। "विप्रकृष्टं महेन्द्रस्य न दूरं विन्ध्यपर्वतात्" भट्टि० ८-१११। स्वार्थे "कन्"। **विप्रकृष्टकम् ವಿಪ್ರಕೃಷ್ಟಕಮ್.** "स्याद्दूरं विप्रकृष्टकम्" अम०।

**विप्रचित्ति ವಿಪ್ರಚಿತ್ತಿ** (पुं०) ದನುವಿನ ಮಗ. ದನುವಿನ ನಲವತ್ತು ಮಂದಿ ಮಕ್ಕಳಲ್ಲಿ ವಿಪ್ರಚಿತ್ತಿಯು ಜ್ಯೇಷ್ಠನು.

**विप्रतिपत्ति ವಿಪ್ರತಿಪತ್ತಿ** (स्त्री०) 1. ಸಂಶಯ, ವಿರುದ್ಧಾರ್ಥಗಳನ್ನು ಪ್ರತಿಪಾದಿಸುವ ಎರಡು ವಾಕ್ಯಗಳಿಂದ ಉಂಟಾಗುವ ಸಂದೇಹ. "पर्वतो वह्निमान्" ಮತ್ತು "पर्वतो न वह्निमान्" ಎಂಬ ಎರಡು ವಾಕ್ಯಗಳಿಂದ "पर्वतो वह्निमान् न वा" ಎಂಬ ಸಂಶಯವುಂಟಾಗುವುದರಿಂದ ಇಲ್ಲಿ ವಿಪ್ರತಿಪತ್ತಿ. 2. ವಿರೋಧ. 3. ಪರಸ್ಪರ ಸಂಬಂಧ.

**विप्रतिपन्न ವಿಪ್ರತಿಪನ್ನ** (वि०) 1. ಪರಸ್ಪರ ವಿರೋಧಿಸಲ್ಪಟ್ಟ. वि+प्रति+पद (गतौ) "क्तः" (३-२-१०२)। 2. ಸಂಶಯವುಂಟುಮಾಡಲ್ಪಟ್ಟ. 3. ಪರಸ್ಪರ ಸಂಬಂಧ ಹೊಂದಿರುವ.

**विप्रतिषेध ವಿಪ್ರತಿಷೇಧ** (पुं०) 1. ವಿರೋಧ. ಅನೇಕ ಕಾರ್ಯಗಳು ಏಕಕಾಲದಲ್ಲಿ ಸಂಭವಿಸಿದಾಗ ಯಾವುದನ್ನು ಕೈಗೊಳ್ಳಬೇಕೆಂಬ ನಿರ್ಣಯಕ್ಕೆ ಬಾರದಿರುವುದು ವಿಪ್ರತಿಷೇಧ. वि+प्रति+षिध (गत्याम्) "घञ्" (३-३-१८)। "गुरुद्वयाय गुरुणोरुभयोरथ कार्ययोः। हरिर्विप्रतिषेधं त माचचक्षे विचक्षणः" माघ० २-६। 2. ಅಂಕೆ, ನಿರ್ಬಂಧ, ಹತೋಟಿ. "क्रव्याद्भ्य इव भूतानामदान्तेभ्यः सदा भयम्। तेषां विप्रतिषेधार्थं राजा सृष्टः स्वयंभुवा" भा०। 3. (ವ್ಯಾಕರಣದಲ್ಲಿ) ಸಮಾನ ಬಲವುಳ್ಳ ಎರಡು ಶಾಸ್ತ್ರಗಳು ಒಂದು ಕಡೆ ಪ್ರಾಪ್ತವಾಗುವಲ್ಲಿ ಉಂಟಾಗುವ ವಿರೋಧ. ಇಂತಹ ತುಲ್ಯಬಲ ಶಾಸ್ತ್ರಗಳಿಗೆ ಪರಸ್ಪರ ವಿರೋಧವುಂಟಾದಾಗ ಪರಶಾಸ್ತ್ರದಿಂದ ಕಾರ್ಯವು ವಿಧಿಸಲ್ಪಡುವುದು. "विप्रतिषेधे परं कार्यम्" पा० सू० १-४-२। 4. ಪ್ರತಿಷೇಧ, ನಿಷೇಧ.

**विप्रतिसार ವಿಪ್ರತಿಸಾರ** (पुं०) 1. ಅನುಶಯ, ಪಶ್ಚಾತ್ತಾಪ. वि+प्रति+सृ (गतौ) "घञ्" (३-३-१८)। वा दीर्घः (६-३-१२२)। **–प्रतीसारः –ಪ್ರತೀಸಾರಃ.** "प्रापि चेतसि सविप्रतिसारे सुभ्रुवामवसरः सरकेण" माघ० १०-२०। 2. ರೋಷ, ಕೋಪ. 3. ಅಕೃತ್ಯ, ಅಕಾರ್ಯ.

**विप्रप्रिय ವಿಪ್ರಪ್ರಿಯ** (पुं०) ಪಲಾಶವೃಕ್ಷ, ಮುತ್ತುಗದ ಮರ. विप्राणां प्रियः।

**विप्रस्व ವಿಪ್ರಸ್ವ** (न०) ಬ್ರಾಹ್ಮಣನ ಆಸ್ತಿ, ಬ್ರಾಹ್ಮಣನ ಧನ, –ಐಶ್ವರ್ಯ.

**विप्रयुक्त ವಿಪ್ರಯುಕ್ತ** (वि०) ಬೇರೆಬೇರೆಯಾದ, ವಿಶ್ಲೇಷ ಹೊಂದಿದ. वि + प्र + युजिर् (योगे) "क्तः" (३-४-७२)।

**विप्रयोग ವಿಪ್ರಯೋಗ** (पुं०) 1. ನಾಯಿಕಾನಾಯಕರ ವಿರಹ, ಪತಿಪತ್ನಿಯರು ಅಗಲುವುದು. वि+प्र+युजिर् (योगे) "घञ्" (३-३-१८)। "सद्यःपाति प्रणयि हृदयं विप्रयोगे रुणद्धि" मेघ० १-१०। 2. ಸಂಯೋಗದ ಅಭಾವ, ಸಂಬಂಧವಿಲ್ಲದಿರುವಿಕೆ. "अशङ्खचक्रो हरिः" ಎಂಬಲ್ಲಿ ವಿಷ್ಣುವಿಗೆ ಕದಾಚಿತ್ ಶಂಖಚಕ್ರಸಂಬಂಧವಿಲ್ಲದಿರುವುದೂ ಉಂಟು. ಆದರೂ ಇಲ್ಲಿ ವಿಷ್ಣುವೆಂಬ ಅರ್ಥವನ್ನೇ ಕೊಡುವುದು.

**विप्रलब्ध ವಿಪ್ರಲಬ್ಧ** (वि०) ವಂಚಿಸಲ್ಪಟ್ಟ, ಮೋಸಪಡಿಸಲ್ಪಟ್ಟ. वि + प्र + डु लभष् (प्राप्तौ) "क्तः" (३-२-१०२)। (स्त्री०) **–ब्धा –ಬ್ಧಾ.** ನಾಯಕನು ಸಂಕೇತಸಮಯಕ್ಕೆ ಬರದೆ ವಂಚಿತಳಾದ ನಾಯಿಕೆ.

**विप्रलम्भ ವಿಪ್ರಲಂಭ** (पुं०) 1. ವಂಚನೆ, ಮೋಸ. वि + प्र + डु लभष् (प्राप्तौ) "घञ्" (३-३-१८)। "विप्रलम्भोऽपि लाभाय सति प्रियसमागमे" किरा० ११-२७। 2. ವ್ಯತ್ಯಾಸವಾಗಿ ಹೇಳುವುದು, ವಿರುದ್ಧ

ವಾಗಿ ಹೇಳುವುದು, ಪ್ರತಿಯಾಗಿ ನುಡಿಯುವುದು. 3. ವಿರಹ, ವಿಶ್ಲೇಷ, ಅಗಲುವುದು. 4. ಶೃಂಗಾರರಸದ ಒಂದು ಭೇದ, ನಾಯಿಕಾ ನಾಯಕರ ವಿರಹಕಾಲದಲ್ಲಿ ಅವರು ಅನುಭವಿಸುವ ವೇದನೆ. ನಾಯಿಕಾ ನಾಯಕರಲ್ಲಿ ಪ್ರೇಮವು ಬೆಳೆದು ಅವರಿಗೆ ಪರಸ್ಪರ ಸಂಗಮವೇರ್ಪಡದಿರುವಲ್ಲಿ ವಿಪ್ರಲಂಭಶೃಂಗಾರ. ವಿಪ್ರಲಂಭಶೃಂಗಾರವು (1) ಪೂರ್ವರಾಗ (2) ಮಾನ (3) ಪ್ರವಾಸ ಮತ್ತು (4) ಕರುಣಗಳೆಂದು ನಾಲ್ಕು ಭೇದ. "स च पूर्वरागमान प्रवासकरुणात्मकश्चतुर्धा स्यात्" सा० द० ३-१८७। (1) ನಾಯಿಕಾನಾಯಕರ ಗುಣಕಥನ ಶ್ರವಣದಿಂದ ಅಥವಾ ಪರಸ್ಪರ ದರ್ಶನದಿಂದ ಪ್ರೇಮವು ಬೆಳೆದು ಅವರ ಸಂಗಮವು ಏರ್ಪಡದಿರುವ ಅವಸ್ಥೆ **ಪೂರ್ವರಾಗ.** (2) ನಾಯಿಕಾನಾಯಕರಲ್ಲಿ ಪ್ರಣಯ ಅಥವಾ ಈರ್ಷ್ಯೆಯಿಂದ ಉದ್ಭವಿಸುವ ಕೋಪವು **ಮಾನವಿಪ್ರಲಂಭ.** (3) ಯಾವುದಾದರೊಂದು ಕಾರ್ಯನಿಮಿತ್ತ ಅಥವಾ ಶಾಪದಕಾರಣ ನಾಯಕನು ದೇಶಾಂತರದಲ್ಲಿದ್ದರೆ **ಪ್ರವಾಸ ವಿಪ್ರಲಂಭ.** (4) ನಾಯಿಕಾನಾಯಕರಲ್ಲಿ ಯಾರಾದರೊಬ್ಬರು ಲೋಕಾಂತರವನ್ನು ಸೇರಿ ಮತ್ತೆ ಸಮಾಗಮವೇರ್ಪಡುವುದಿಲ್ಲವೆಂದು ತಿಳಿದಾಗ ದುಃಖದಿಂದ ಪ್ರಲಪಿಸುವುದು **ಕರುಣವಿಪ್ರಲಂಭ.** ಆದರೆ ಅಶರೀರವಾಣಿಯ ಮೂಲಕ ಪುನಃ ಪ್ರಾಪ್ತಿಯುಂಟಾಗುವ ಪ್ರತ್ಯಾಶೆಯಿಂದ ರತಿಯು ಉದ್ಭವಿಸುವುದರಿಂದ ಇಂತಹ ಪ್ರಕರಣಗಳಲ್ಲಿ ಕರುಣವಿಪ್ರಲಂಭಶೃಂಗಾರರಸವೆಂದು ತಿಳಿಯಬೇಕು.

**विप्रलम्भन ವಿಪ್ರಲಂಭನ** (न०) ವಂಚನೆ, ಮೋಸ.

**विप्रलय ವಿಪ್ರಲಯ** (पुं०) ನಿವೃತ್ತಿ, ನಾಶ, ಲಯ. वि + प्र + लीङ् (श्लेषणे) "अच्" (३-३-५६)। "विद्याकल्पेन मरुता मेघानां भूयसामपि। ब्रह्मणीव विवर्तानां क्वापि विप्रलयः कृतः" उ० रा० ६-६।

**विप्रलाप ವಿಪ್ರಲಾಪ** (पुं०) 1. ವಿರೋಧವಾದ ಮಾತು, ವಿರೋಧವಾಗಿ ನುಡಿಯುವುದು. "वि + प्र + लप (व्यक्तायां वाचि) "घञ्" (३-३-१८)। "विप्रलापो विरोधोक्तिः" अम०। 2. ಅಪ್ರಯೋಜಕವಾದ ಮಾತು, ಅರ್ಥವಿಲ್ಲದ ಮಾತು. 3. ಮಾತಿಗೆ ತಪ್ಪಿ ನಡೆಯುವುದು, ಹೇಳಿದ ಮಾತಿನಂತೆ ನಡೆಯದಿರುವುದು. "विप्रलापो विरुद्धोक्तावनर्थकवचस्यपि" हेम०।

**विप्रवास ವಿಪ್ರವಾಸ** (पुं०) ದೇಶಾಂತರದಲ್ಲಿ ವಾಸಮಾಡುವುದು, ಸ್ವದೇಶವನ್ನು ಬಿಟ್ಟು ವಿದೇಶದಲ್ಲಿ ಸಂಚರಿಸುವುದು.

**विप्रश्निका ವಿಪ್ರಶ್ನಿಕಾ** (स्त्री०) ಮನುಷ್ಯರ ಲಕ್ಷಣವನ್ನು ನೋಡಿ ಶುಭಾಶುಭಗಳನ್ನು ಹೇಳುವವಳು. विविधः प्रश्नोऽस्त्यस्याः "ठन्" (५-२-११५)। "विप्रश्निका-त्वीक्षणिका दैवज्ञा" अम०।

**विप्रिय ವಿಪ್ರಿಯ** (पुं०) 1. ಅಪರಾಧ, ತಪ್ಪು. विरुद्धं प्रीणाति। "आनयैनमनुनीय कथं वा विप्रियाणि जनयन्ननुनेयः" किरा० ९-३९। (वि०) 2. ಪ್ರಿಯವಲ್ಲದ, ಸಂಮತವಲ್ಲದ.

**विप्रुष् ವಿಪ್ರುಷ್** (स्त्री०) 1. ಬಿಂದು, ನೀರಿನ ಹನಿ. "संतापं नवजलविप्रुषो गृहीत्वा" माघ० ८-४०। 2. ವೇದಪಾಠದ ಸಮಯದಲ್ಲಿ ಬಾಯಿಂದ ಬೀಳುವ ನೀರಿನ ತುಂತುರು. विशेषेण प्रोषति — प्रुषु (दाहे) "क्विप्" (३-२-६१)। "विप्रुषो ब्रह्मबिन्दवः" अम०।

**विप्रोषित ವಿಪ್ರೋಷಿತ** (वि०) ದೇಶಾಂತರದಲ್ಲಿರುವ, ವಿದೇಶದ ಪ್ರವಾಸದಲ್ಲಿರುವ. वि+प्र+वस (निवासे) "क्तः" (३-४-७२)।

**विप्लव ವಿಪ್ಲವ** (पुं०) 1. ಕೊಳ್ಳೆಹೊಡೆಯುವುದು, ಲೂಟಿ ಮಾಡುವುದು. वि+प्लुङ् (गतौ) "अप्" (३-३-५७)। 2. ಹರಿಯುವುದು, ಪ್ರವಹಿಸುವುದು. 3. ತೇಲಾಡುವುದು. 4. ಗೊಂದಲ, ಗಾಬರಿ, ಗಲಿಬಿಲಿ. 5. ಪರರಾಷ್ಟ್ರದಿಂದ ಸಂಭವಿಸುವ ಭಯ, ಶತ್ರುವಿನಿಂದ ಉಂಟಾಗುವ ಅಪಾಯದ ಭಯ. 6. ನಾಶ, ಅಳಿವು. 7. ಬಲಾತ್ಕಾರದಿಂದ ಸುಲಿಗೆ ಮಾಡುವುದು. 8. ಕೊಳೆ, ಮಾಲಿನ್ಯ. 9. ಪ್ರಮಾಣದ ಬಾಧೆ. "अपवर्जितविप्लवे शुचौ हृदयग्राहिणि मङ्गलास्पदे। विमला तव विस्तरे गिरां मतिरादर्श इवाभिदृश्यते" किरा० २-२६। 10. ಅತಿಕ್ರಮ, ಮೀರಿ ನಡೆಯುವುದು, ಉಲ್ಲಂಘಿಸುವುದು. "गुरूपदिष्टेन रिपौ सुतेऽपि वा निहन्ति दण्डेन स धर्मविप्लवम्" किरा० १-१३। 11. ಪಾಪ, ದೋಷ. 12. ಬಹಿರಂಗಪಡಿಸುವುದು, ಹೊರಗೆಡುಹುವುದು, ರಹಸ್ಯವನ್ನು ರಟ್ಟುಮಾಡುವುದು. 13. ಜಲಪ್ರಳಯ, ಜಲಪ್ರವಾಹದಿಂದ ಉಂಟಾಗುವ ಅನಾಹುತ.

**विप्लवन ವಿಪ್ಲವನ** (न०) 1. ಕುದುರೆಯ ಒಂದು ವಿಧ ನಡಗೆ. 2. ತೇಲಾಡುವುದು. 3. ಪ್ರವಹಿಸುವುದು.

**विप्लाव ವಿಪ್ಲಾವ** (पुं०) 1. ಅಶ್ವದ ಒಂದು ವಿಧ ಗತಿ, ಕುದುರೆಯ ನಾಗಾಲೋಟ. वि + प्लुङ् (गतौ) "घञ्" (३-३-१८)। 2. ಜಲಪ್ರಳಯ, ನೆರೆಯಿಂದಾಗುವ ಅನಾಹುತ.

**विप्लुत ವಿಪ್ಲುತ** (वि०) 1. ಕಷ್ಟದಿಂದ ಬಾಧೆಪಟ್ಟಿರುವ, ದುಃಖದಿಂದ ಪೀಡಿತನಾಗಿರುವ. (वि + प्लुङ् (गतौ) "क्तः" (३-४-७२)। 2. ಗಾಬರಿಗೊಂಡ, ಕಳವಳಗೊಂಡ. 3. ತೇಲಿಹೋದ. 4. ನಾಶಹೊಂದಿದ. 5. ಮುಚ್ಚಿಹೋದ. "विप्लुताम्बुजरुचि रजःकणैः" यादं० १७-२९।

**विफल ವಿಫಲ** (वि०) ಪ್ರಯೋಜನವಿಲ್ಲದ, ಸಾರ್ಥಕ್ಯವಿಲ್ಲದ. विगतं फलं यस्य। "विफलविनययत्नाः कामिनीनां वयस्याः" माघ० ११-३६।

**विफला ವಿಫಲಾ** (स्त्री०) ಕೇತಕೀವೃಕ್ಷ, ತಾಳೆಹೂವಿನ ಮರ.

**विबन्ध ವಿಬಂಧ** (पुं०) ಮಲಮೂತ್ರಬಂಧ, ಹೊಟ್ಟೆಯುಬ್ಬರ. वि + बन्ध (बन्धने) "घञ्" (३-३-१८)। "आनाहस्तु विबन्धःस्यात्" अम०।

**विबुध ವಿಬುಧ** (पुं०) 1. ದೇವತೆ, ಸುರ. विबुध्यन्ते — वि+बुध (अवगमने) "कः" (३-१-१३५)। "अवदच्च तमेतमग्रगण्यं विबुधानां पितरं पतिं गुरुं च" यादं० १५-३७। 2. ಪಂಡಿತ, ವಿದ್ವಾಂಸ. 3. ಚಂದ್ರ.

**विबुधान ವಿಬುಧಾನ** (पुं०) 1. ಆಚಾರ್ಯ, ಗುರು, ಉಪಾಧ್ಯಾಯ. वि + बुध (अवगमने) "शानच्" (३-२-१२४)। 2. ಪಂಡಿತ, ವಿದ್ವಾಂಸ.

**विबोध ವಿಬೋಧ** (पुं०) 1. ನಿದ್ರೆಯಿಂದ ಎಚ್ಚರಗೊಳ್ಳುವುದು, ನಿದ್ರೆಯು ಕಳೆದ ಮೇಲೆ ಆಗುವ ಎಚ್ಚರ. वि+बुध (अवगमने) "घञ्" (३-३-१८)। ಇದೊಂದು ವ್ಯಭಿಚಾರಿ ಭಾವ. "निद्रापगमहेतुभ्यो विबोधश्चेतनागमः" सा० द० ३-१५१। 2. ಜ್ಞಾನ, ತಿಳಿವಳಿಕೆ. "स एवमाराधितपादतीर्थादधीततत्त्वात्मविबोधमार्गः" भाग० ३-४-२०। 3. ಎಚ್ಚರಿಕೆಯಿಲ್ಲದಿರುವಿಕೆ, ಲಕ್ಷ್ಯಕೊಡದಿರುವಿಕೆ, ಗಮನಕೊಡದಿರುವಿಕೆ.

**विबोधन ವಿಬೋಧನ** (न०) 1. ಎಚ್ಚರಗೊಳಿಸುವುದು, ನಿದ್ರೆಯಿಂದ ಎಬ್ಬಿಸುವುದು. वि + बुध (अवगमने) "ल्युट्" (३-३-११५)। 2. ಜಾಗರಣೆ, ನಿದ್ದೆಯಿಲ್ಲದೆ ಎಚ್ಚರದಿಂದಿರುವುದು.

**विभक्त ವಿಭಕ್ತ** (वि०) 1. ಭಾಗಮಾಡಲ್ಪಟ್ಟ, ಪಾಲುಮಾಡಲ್ಪಟ್ಟ. वि + भज (सेवायाम्) "क्तः" (३-२-१०२)। "भ्रातॄणां जीवतोः पित्रोः सहवासो विधीयते। तदभावे विभक्तानां धर्मस्तेषां विवर्धते"। 2. ಬೇರೆ ಬೇರೆಯಾಗಿ ತಿಳಿಯಲ್ಪಟ್ಟ, ಪ್ರತ್ಯೇಕವಾಗಿ ನೋಡಲ್ಪಟ್ಟ. "विभुर्विभक्तावयवं पुमानिति क्रमादमुं नारद इत्यबोधि सः" माघ० १-३। 3. ಬೇರೆ ಬೇರೆಯಾದ, ಪೃಥಕ್ಕಾಗಿರುವ. 4. ಏಕಾಂತದಲ್ಲಿರಿಸಲ್ಪಟ್ಟ, ಪ್ರತ್ಯೇಕವಾಗಿರಿಸಲ್ಪಟ್ಟ. 5. ವಿವೇಚನೆಯಿಂದ ಪ್ರತಿಪಾದಿಸಲ್ಪಟ್ಟ, ವಿಮರ್ಶೆಯಿಂದ ಹೇಳಿ ತಿಳಿಸಲ್ಪಟ್ಟ. "विभक्तसामान्यविशेषधर्मा" यादं० २३-३१।

**विभक्तज ವಿಭಕ್ತಜ** (पुं०) ಆಸ್ತಿಯನ್ನು ಭಾಗಮಾಡಿಕೊಂಡ ನಂತರ ಹುಟ್ಟಿದವನು. विभक्ते सति जायते। "पित्रा सह विभक्ता ये सापत्न्या वा सहोदराः। जघन्यजाश्च ये तेषां पितृभागहरास्तु ते"।

**विभक्ति ವಿಭಕ್ತಿ** (स्त्री०) 1. ವಿಭಾಗ, ಪಾಲು. वि+भज (सेवायाम्) "क्तिन्" (३-३-९४)। 2. (ವ್ಯಾಕರಣದಲ್ಲಿ) ಸುಪ್ ಮತ್ತು ತಿಙ್ ಪ್ರತ್ಯಯಗಳ ಸಂಜ್ಞೆ.

| सुप् | तिङ् |
|---|---|
| सु औ जस् | तिप् तस् झि |
| अम् औट् शस् | सिप् थस् थ |
| टा भ्याम् भिस् | मिप् वस् मस् |
| ङे भ्याम् भ्यस् | त आताम् झ |
| ङसि भ्याम् भ्यस् | |
| ङस् ओस् आम् | थास् आथाम् ध्वम् |
| ङि ओस् सुप् | इट् वहि महिङ् |

ಈ ಎಲ್ಲಾ ವಚನಗಳನ್ನೂ ಒಳಗೊಂಡ ಸಪ್ತಕಗಳೂ ಪುರುಷತ್ರಯಗಳೂ "विभक्ति" ಎಂದು ಸಂಜ್ಞೆ. "सु औ जस् इत्यादीनां सप्तानां त्रिकाणां प्रथमादयः सप्तम्यन्ताः प्राचां संज्ञाः" सि० कौ०। "विभक्तिश्च" (१-४-१०४) "न विभक्तौ तुस्माः" (१-३-४)। सि० कौ०। "संख्यात्वव्याप्यसामान्यैः शक्तिमान् प्रत्ययस्तु यः। सा विभक्तिर्द्विधा प्रोक्ता सुप्तिङ् चेति प्रभेदतः"। "क्रियेत चेत् साधु विभक्तिचिन्ता व्यक्तिस्तदा सा प्रथमाभिधेया। या स्वौजसां साधयितुं विलासैः तावत् क्षमा नाम पदं बहु स्यात्" नैष० ३-२३। 3. ಬೇರೆಯಾಗುವುದು, ಬೇರ್ಪಡುವುದು. 4. ತಂದೆಯ ಆಸ್ತಿಯನ್ನು ಭಾಗಮಾಡುವುದು.

**विभङ्ग ವಿಭಂಗ** (पुं०) 1. ಒಡೆಯುವುದು, ಮುರಿಯುವುದು. वि+भञ्जो (आमर्दने) "घञ्" (३-३-१८)। 2. ಅಡ್ಡಿ, ತಡೆ, ಅಡಚಣೆ. 3. ಸಂಕೋಚ, ಚಿಕ್ಕದಾಗಿಮಾಡಿಕೊಳ್ಳುವುದು. "अङ्गुलीकिसलयाग्रतर्जनं भ्रूविभङ्गकुटिलं च वीक्षितम्" रघु० १९-१७। 4. ಸೋಪಾನ

ಪೆಟ್ಟಲು. "शिलाविभङ्गैर्मृगराजशावस्तुङ्गं नगोत्सङ्ग-मिवारुरोह" रघु० ६-३।

**विभङ्गुर ವಿಭಂಗುರ** (वि०) ಸ್ಖಲಿತವಾದ, ಎಡವಿದ. वि + भञ्जो (आमर्दने) "उरच्" (३-२-१६१)। "प्रेक्षणीयकमिव क्षणमासन् ह्रीविभङ्गुरविलोचनपाताः" माघ० १०-८२।

**विभजत् ವಿಭಜತ್** (वि०) ವಿಭಾಗವಮಾಡುವ, ಹಂಚುವ, ಪಾಲುಮಾಡಿಕೊಡುವ. वि+भज (सेवायाम्) "शतृ" (३-२-१२४)। स्त्रियां "ङीप्" (४-१-६)। **-भजन्ती -ಭಜನ್ತೀ.** "शानच्" (३-२-१२४)। **-भजमानः -ಭಜಮಾನಃ.**

**विभजन ವಿಭಜನ** (न०) ಭಾಗವಮಾಡುವುದು, ಪಾಲು ಮಾಡುವುದು, ಹಂಚುವುದು. वि + भज (सेवायाम्) "ल्युट्" (३-३-११५)।

**विभजनीय ವಿಭಜನೀಯ** (वि०) 1. ವಿಭಾಗವಮಾಡಲು ಯೋಗ್ಯವಾದ. 2. ವಿಭಾಗಿಸಲ್ಪಡುವ. 3. ವಿಭಾಗ ಮಾಡಬೇಕಾದ. वि + भज (सेवायाम्) "अनीयर्" (३-१-९६)। "तव्यः" (३-१-९६)। **-भक्तव्यम् -ಭಕ್ತವ್ಯಮ್.**

**विभव ವಿಭವ** (पुं०) 1. ಐಶ್ವರ್ಯ, ಸಂಪತ್ತು. विभवति — वि + भू (सत्तायाम्) "अच्" (३-१-१३४)। "विभवोचितमीश्वरानुरूपं सुहृदर्हं च समर्चयांबभूवुः" याद० १५-३१। 2. ಧನ, ಹಣ. 3. ಮೋಕ್ಷ, ಮುಕ್ತಿ. "भवता हरे स वृजिनोऽवसादितो नरसिंह नाथ विभवाय नो भव" भाग० ७-८-५५। 4. ಶಕ್ತಿ, ಬಲ, ಸಾಮರ್ಥ್ಯ, ಸತ್ತ್ವ. "रघूणामन्वयं वक्ष्ये तनुवाग्विभवोऽपि सन्" रघु० १-९। 5. ಪ್ರಭವ ಮೊದಲಾದ ಅರವತ್ತು ಸಂವತ್ಸರಗಳಲ್ಲಿ ಎರಡನೆಯದು. "सुभिक्षं क्षेममारोग्यं सर्वे व्याधिविवर्जिताः। प्रशान्ता मानवास्तत्र बहुशस्या वसुन्धरा। हृष्टास्तुष्टा जनाः सर्वे विभवे च वरानने"। "विभवो रैमोक्षैश्वर्ये" मेदि०।

**विभा ವಿಭಾ** (स्त्री०) 1. ಪ್ರಕಾಶ, ಬೆಳಕು. वि + भा (दीप्तौ) "कः" (३-१-१३६)। "कमलेव मतिर्मतिरिव कमला तनुरिव विभा विभेव तनुः। धरणीव धृति-धृतिरिव धरणी सततं विभाति बत यस्य तव" सा० द०। 2. ಕಿರಣ. 3. ಶೋಭೆ, ಕಾಂತಿ.

**विभाकर ವಿಭಾಕರ** (पुं०) ರವಿ, ಸೂರ್ಯ. विभां करोति — डुकृञ् (करणे) "टः" (३-२-२१)।

**विभाग ವಿಭಾಗ** (पुं०) 1. ಭಾಗ, ಪಾಲು, ಅಂಶ. वि+भज (सेवायाम्) "घञ्" (३-३-१९)। 2. ಪಿತ್ರಾರ್ಜಿತವಾದ ಆಸ್ತಿಯ ಭಾಗ, ತಂದೆಯ ಆಸ್ತಿಯ ಪಾಲು, ಹಿಸ್ಸೆ. "विभागोऽर्थस्य पित्र्यस्य पुत्रैर्यत्र प्रकल्प्यते। दायभाग इति प्रोक्तं तद्विवादपदं बुधैः"। 3. ಪ್ರತ್ಯೇಕ ವಿಂಗಡಣೆ. "गुणत्रयविभागाय प्रश्चाद्भेदमुपेयुषे" कुमा० २-४।

**विभाजक ವಿಭಾಜಕ** (वि०) ಭಾಗಮಾಡಿಕೊಡುವವನು. विभजते—वि+भज (सेवायाम्) "ण्वुल्" (३-१-१३३)।

**विभाजन ವಿಭಾಜನ** (न०) ಭಾಗಮಾಡಿಸಿ ಕೊಡುವುದು. वि + भज (सेवायाम्) + णिच् "ल्युट्" (३-३-११५)।

**विभाज्य ವಿಭಾಜ್ಯ** (वि०) 1. ಭಾಗವಮಾಡಲ್ಪಡುವ. 2. ಭಾಗಮಾಡಬೇಕಾದ. 3. ಭಾಗಮಾಡಲು ಯೋಗ್ಯವಾದ, ಭಾಗಮಾಡಬಹುದಾದ. वि + भज (सेवायाम्) "ण्यत्" (३-१-१२४)।

**विभाण्डक ವಿಭಾಂಡಕ** (पुं०) ಋಷ್ಯಶೃಂಗಮಹರ್ಷಿಯ ತಂದೆಯಾದ ಒಬ್ಬ ಋಷಿ.

**विभात ವಿಭಾತ** (न०) ಪ್ರಾತಃಕಾಲ. वि+भा (दीप्तौ) "क्तः" (३-४-७१)।

**विभाभाविन् ವಿಭಾಭಾವಿನ್** (वि०) ಹೆಚ್ಚು ಪ್ರಕಾಶವನ್ನು ಉಂಟುಮಾಡುವ, ಹೆಚ್ಚು ಬೆಳಕನ್ನು ಕೊಡುವ. विभां विशिष्टाभां भावयति संपादयति—भू (सत्तायाम्) + णिच् "णिनिः" (३-१-१३४)। "विभावी विभवी भाऽऽभो विभाभावी विवो विभिः" माघ० १९-८६।

**विभाव ವಿಭಾವ** (पुं०) 1. ಕಾವ್ಯನಾಟಕಗಳಲ್ಲಿ ನಾಯಿಕಾ ನಾಯಕನಿಷ್ಠವಾದ ರತಿಯನ್ನು ವೃದ್ಧಿಪಡಿಸುವ ಕಾರಣಗಳು. ರಾವಣಾದಿಗತವಾದ ರತಿಯನ್ನು ಉದ್ಬೋಧಗೊಳಿಸಲು ಸೀತೆ ಮೊದಲಾದವರು ಕಾರಣರು. विभाव्यन्ते आस्वादाङ्कुरप्रादुर्भावयोग्याः क्रियन्ते सामाजिकरत्यादि-भावाः एभिः। "रत्याद्युद्बोधका लोके विभावाः काव्य-नाट्ययोः" सा० द० ३-२८। ವಿಭಾವವು (1) ಆಲಂಬನ ವಿಭಾವ (2) ಉದ್ದೀಪನ ವಿಭಾವಗಳೆಂದು ಎರಡು ವಿಧ. "अलम्बनोद्दीपनाख्यौ तस्य भेदावुभौ स्मृतौ" सा० द० ३-२९। ಈ ವಿಭಾವಗಳು ರಸೋತ್ಪತ್ತಿಗೆ ಕಾರಣವಾಗುವುವು. ನಾಯಿಕಾ ನಾಯಕರು, ನಾಯಕ-ಪ್ರತಿನಾಯಕರು ಆಲಂಬನ ವಿಭಾವ. ಇವರಲ್ಲಿ ಉಂಟಾಗಿರುವ ರತ್ಯಾದಿ ಸ್ಥಾಯಿಭಾವಗಳನ್ನು ಉದ್ರೇಕಗೊಳಿಸಿ ರಸೋತ್ಪತ್ತಿಗೆ ಕಾರಣವಾದ ವಸ್ತು ಸನ್ನಿವೇಶಗಳು ಉದ್ದೀಪನ ವಿಭಾವ

ಗಳು. [ವಿವರಕ್ಕೆ "आलम्बन" ಪದದಲ್ಲಿ ನೋಡಿ.] "विभावेनानुभावेन व्यक्तः सञ्चारिणा तथा। रसतामेति रत्यादिः स्थायिभावः सचेतसाम्" सा० द० ३-१। 2. ಪರಿಚಯ, ಹಿಂದೆ ನೋಡಿದ ಗುರುತು. "विभावः स्यात्परिचये रसस्योद्दीपनादिषु" मेदि०।

**विभावन ವಿಭಾವನ** (न०) ಮನಸ್ಸಿನಲ್ಲಿ ಭಾವಿಸುವುದು, ಮನಸ್ಸಿನಲ್ಲಿ ಕಲ್ಪಿಸಿಕೊಳ್ಳುವುದು. वि+भू (सत्तायाम्)+ णिच् "ल्युट्" (३-३-११५)। "युच्" (३-३-१०७)। **–ना –ನಾ.**

**विभावना ವಿಭಾವನಾ** (स्त्री०) ಅರ್ಥಾಲಂಕಾರದ ಒಂದು ಭೇದ. ಕಾರಣವಿಲ್ಲದೆ ಕಾರ್ಯೋತ್ಪತ್ತಿ ವರ್ಣನೆಯಿರುವಲ್ಲಿ ವಿಭಾವನಾಲಂಕಾರ. "विभावना विनापि स्यात् कारणं कार्यजन्म चेत्"। उदा० "अप्यलाक्षारसासिक्तं रक्तं त्वच्चरणद्वयम्" चन्द्रा०।

**विभावरी ವಿಭಾವರೀ** (स्त्री०) 1. ರಾತ್ರಿ. विभाति नक्षत्रादिभिः—वि+भा (दीप्तौ) "क्वनिप्" (३-२-७४)। रादेशः "ङीप्" च (४-१-७)। "अपर्वणि ग्रहकलुषेन्दुमण्डला विभावरी कथय कथं भविष्यति" माल० ४-१६। 2. ಹರಿದ್ರೆ, ಅರಿಶಿನ. 3. ಕುಟ್ಟನಿ, ತಲೆಹಿಡುಕಿ. 4. ಹರಟುವ ಹೆಂಗಸು, ಅತಿಯಾಗಿ ಮಾತಾಡುವ ಹೆಂಗಸು. 5. ವಿವಾದ. 6. ವಸ್ತ್ರಗೃಹ, ಡೇರೆ. 7. ವಕ್ರವಾಗಿ ವ್ಯತಿರಿಕ್ತವಾಗಿ ಮಾತಾಡುವ ಹೆಂಗಸು. "विभावरी हरिद्रायां रजन्यां च विभावरी। विवादे वस्त्रकुट्यां च कुट्टन्यां वक्रयोषिति" विश्व०।

**विभावसु ವಿಭಾವಸು** (पुं०) 1. ರವಿ, ಸೂರ್ಯ. विभैव वसु समृद्धिर्यस्य। 2. ವಹ್ನಿ, ಅಗ್ನಿ. विभा प्रभा वसु धनं यस्य। "विभावसुः सारथिनेव वायुना घनव्यपायेन गभस्तिमानिव" रघु० ३-३७। 3. ಅರ್ಕವೃಕ್ಷ, ಎಕ್ಕದ ಗಿಡ. 4. ಒಂದು ವಿಧ ಹಾರ. विभावसुः पुमान् सूर्ये हारभेदे च पावके" मेदि०। 5. ಚಂದ್ರ. "विभावसुस्तु भास्करे। हुताशने हारभेदे चन्द्रे" हेम०। 6. ಚಿತ್ರ ಮೂಲದ ಗಿಡ.

**विभावित ವಿಭಾವಿತ** (वि०) 1. ಪಡೆಯಲ್ಪಟ್ಟ, ಸಂಪಾದಿಸಲ್ಪಟ್ಟ, ಹೊಂದಲ್ಪಟ್ಟ. वि+भू (सत्तायाम्) + णिच् "क्तः" (३-२-१०२)। "विभावितं शिक्षितनाटयवेदै रुद्राहसंगीतमुदारक्लृप्तम्" याद० १३-८१। 2. ಊಹಿಸಲ್ಪಟ್ಟ. 3. ನೋಡಿ ತಿಳಿಯಲ್ಪಟ್ಟ. "ततः शरीरीति विभाविताकृतिम्" माघ० १-३। 4. ಉತ್ಪಾದಿಸಲ್ಪಟ್ಟ. 5. ನೋಡಲ್ಪಟ್ಟ. "विभावितैकदेशेन देयं यदभियुज्यते" विक्र० ४-३३।

**विभाविन् ವಿಭಾವಿನ್** (वि०) ಪ್ರಭಾವಶಾಲಿಯಾದ. विभावोऽस्यास्ति—"इनिः" (५-२-११५)। "विभावी विभवी भाऽभो विभाभावी विवो विभीः" माघ० १९-८६।

**विभाव्य ವಿಭಾವ್ಯ** (वि०) 1. ಚೆನ್ನಾಗಿ ನೋಡಲು ಶಕ್ಯವಾದ, ಸ್ಫುಟವಾಗಿ ಕಾಣಬಹುದಾದ. वि+भू (सत्तायाम्) "ण्यत्" (३-१-१२४)। "विततवलिविभाव्यपाण्डुरेखाङ्कितपरभागविलीनरोमराजिः" माघ० ७-३३। 2. ವಿವೇಚಿಸಲ್ಪಡುವ. 3. ವಿವೇಚಿಸಲು ಅರ್ಹವಾದ.

**विभाषा ವಿಭಾಷಾ** (स्त्री०) ವಿಕಲ್ಪ, ಸಂದರ್ಭಕ್ಕೆ ತಕ್ಕಂತೆ ಇಚ್ಛೆಗೆ ಅನುಗುಣವಾಗಿ ಮಾರ್ಪಡಿಸುವುದು, ಎರಡು ವಿಧಿಗಳಲ್ಲಿ ಯಾವುದಾದರೊಂದನ್ನು ಆಯ್ದು ವಿಧಿಸುವುದು. विकल्पत्वेन भाष्यते—भाष (व्यक्तायां वाचि) "अः" (३-३-१०३)। "विभाषा ग्रहः" (३-१-१४३)। ಈ ಸೂತ್ರದಿಂದ ग्रह ಧಾತುವಿಗೆ "ण" ಪ್ರತ್ಯಯವು ವಿಕಲ್ಪವಾಗಿ ವಿಧಿಸಲ್ಪಟ್ಟಿದೆ. जलचरे ग्राहः। पक्षे "अच्"। ज्योतिषि ग्रहः।

**विभिन्दत् ವಿಭಿಂದತ್** (वि०) ಕೊರೆಯುತ್ತಿರುವ, ಚುಚ್ಚುತ್ತಿರುವ, ಪೀಡಿಸುತ್ತಿರುವ. वि+भिदिर् (विदारणे) "शतृ" (३-२-१२४)। "विभिन्दता दुष्कृतिनीं मम श्रुतिं दिगिन्द्रदुर्वीचिकसूचिसंचयैः" नैष० ९-६२। "शानच्" (३-२-१२४)। **–भिन्दानः –ಭಿಂದಾನಃ.**

**विभिन्न ವಿಭಿನ್ನ** (वि०) 1. ಚೆದರಿಹೋದ, ಗುಂಪನ್ನು ಬಿಟ್ಟು ಓಡಿಹೋದ. वि+भिदिर् (विदारणे) "क्तः" (३-४-७२)। "विभिन्नपर्यन्तगमीनपङ्क्तयः पुरो विगाढाः सखिभिर्मरुत्वतः" किरा० ८-३०। 2. ಸೀಳಲ್ಪಟ್ಟ, ಗಾಯಮಾಡಲ್ಪಟ್ಟ. "विभिन्नपातिताश्वीयनिरुद्धरथवर्त्मने" किरा० १५-२४। 3. ಭೇದಿಸಲ್ಪಟ್ಟ, ಒಡೆಯಲ್ಪಟ್ಟ. "विभिन्नं धन्विनां बाणैर्व्यथार्तमिव विह्वलम्" कुमा० १६-१२। 4. ಬೇರೆ ಬೇರೆಯಾದ, ನಾನಾವಿಧವಾದ, ಮಿಶ್ರವಾದ. "विभिन्नवर्णा गरुडाग्रजेन सूर्यस्य रथ्याः परितः स्फुरन्त्या" माघ० ४-१४। 5. ಭಿನ್ನವಾದ, ನಾನಾರೀತಿಯ, ಬೇರೆ ಬೇರೆಯಾದ, ವ್ಯತ್ಯಾಸವಾದ. "विभिन्नमतयः"। 6. ಹೊಡೆಯಲ್ಪಟ್ಟ. "विभिन्नशङ्कः कलुषीभवन् मुहुः" माघ० १-५५।

**विभी ವಿಭೀ** (वि०) ಭಯವಿಲ್ಲದ, ಹೆದರಿಕೆಯಿಲ್ಲದ. विगता भीर्यस्य। "विभाभावी विवो विभीः" माघ० १९-८६।

**विभीतक ವಿಭೀತಕ** (त्रि०) ತಾರೆಗಿಡ. विगतं भीतं रोग-भयमस्मात्। विशिष्टं भीतमस्माद्वा। ಭೂತ ಮತ್ತು ಕಲಿಗೆ ಆಶ್ರಯುವಾದುದರಿಂದ ಈ ಹೆಸರು.

**विभीषण ವಿಭೀಷಣ** (पुं०) 1. ವಿಶ್ರವಸ್ಸಿನಿಂದ ಕೈಕಸಿಯಲ್ಲಿ ಜನಿಸಿದ ನಾಲ್ಕನೆಯ ಪುತ್ರ. ರಾವಣ ಕುಂಭಕರ್ಣ ಇವರು ಇವನ ಅಣ್ಣಂದಿರು. ಶೂರ್ಪಣಖೆಯು ಇವನ ಸೋದರಿ. [ಸಂಧ್ಯಾಕಾಲದಲ್ಲಿ ಕೈಕಸಿಯು ವಿಶ್ರವಸ್ಸಿನಲ್ಲಿಗೆ ಹೋಗಿ ಪ್ರಾರ್ಥಿಸಿದ್ದರಿಂದ ಕ್ರೂರವಾದ ರಾವಣ ಕುಂಭಕರ್ಣರು ಹುಟ್ಟಿದರು. ಇದರಿಂದ ಖಿನ್ನಳಾಗಿ ಮತ್ತೆ ಪ್ರಾರ್ಥಿಸಲಾಗಿ ಧರ್ಮಾತ್ಮನೂ ಭಗವದ್ಭಕ್ತನೂ ಆದ ವಿಭೀಷಣನು ಜನಿಸಿದನು. ನಿರಂತರವೂ ಧರ್ಮಬುದ್ಧಿಯಿರುವಂತೆಯೂ ಚಿರಂಜೀವಿಯಾಗಿರುವಂತೆಯೂ ಬ್ರಹ್ಮನಿಂದ ವರವನ್ನು ಪಡೆದನು. ಲಂಕಾದಹನ ಮಾಡಿದ ಆಂಜನೇಯನನ್ನು ವಧಿಸಲು ಆಜ್ಞೆ ಮಾಡಿದ ರಾವಣನಿಗೆ ಉಪದೇಶಮಾಡಿ ದೂತವಧೆಯು ನಿಷಿದ್ಧವೆಂದು ಹೇಳಿ ರಾವಣನನ್ನು ತಡೆದನು. ಅಣ್ಣ ರಾವಣನಿಗೆ ಎಷ್ಟೇ ನೀತಿ ಬೋಧಿಸಿದರೂ ಎಲ್ಲವನ್ನೂ ಅವನು ತಿರಸ್ಕರಿಸಲು ಎಲ್ಲರನ್ನೂ ತ್ಯಜಿಸಿ ಶ್ರೀರಾಮನಲ್ಲಿಗೆ ಬಂದು ಶರಣಾಗತನಾದನು. ಶ್ರೀರಾಮನು ವಿಭೀಷಣನಿಗೆ ಅಭಯಪ್ರದಾನ ಮಾಡಿದನು. ಇಂದ್ರಜಿತ್ತು ಮಾಯಾಸೀತೆಯನ್ನು ಸಂಹರಿಸಿದಾಗ ಅದನ್ನು ನೋಡಿ ಪ್ರಲಪಿಸುತ್ತಿದ್ದ ಶ್ರೀರಾಮನನ್ನು ಸಮಾಧಾನಪಡಿಸಿ ಲಕ್ಷ್ಮಣನಿಗೆ ಇಂದ್ರಜಿತ್ತಿನ ರಹಸ್ಯವನ್ನು ತಿಳಿಸಿ ಲಕ್ಷ್ಮಣನಿಂದ ಇಂದ್ರಜಿತ್ತಿನ ಸಂಹಾರ ಮಾಡಿಸಿದನು. ರಾವಣನ ಸಂಹಾರಾನಂತರ ದುಃಖಿಸುತ್ತಿದ್ದ ವಿಭೀಷಣನನ್ನು ಸಮಾಧಾನಪಡಿಸಿ ಶ್ರೀರಾಮನು ವಿಭೀಷಣನಿಗೆ ಪಟ್ಟಾಭಿಷೇಕಮಾಡಿಸಿದನು. ಶ್ರೀರಾಮನು ಅಯೋಧ್ಯೆಗೆ ಹೊರಡಲು ವಿಭೀಷಣನು ಪುಷ್ಪಕವಿಮಾನವನ್ನು ತಂದೊಪ್ಪಿಸಿದನು. ಶ್ರೀರಾಮನ ಅನುಮತಿ ಪಡೆದು ಅಯೋಧ್ಯೆಯಲ್ಲಿ ನಡೆದ ಶ್ರೀರಾಮಪಟ್ಟಾಭಿಷೇಕ ಮಹೋತ್ಸವಕ್ಕೆ ಹೋಗಿ ತಾನೂ ಅದರಲ್ಲಿ ಭಾಗವಹಿಸಿ ಬಂದನು.] (त्रि०) 2. ಭಯವನ್ನು ಉಂಟುಮಾಡುವ. विशेषेण भीषयते—वि+ञिभी (भये)+णिच् "ल्युः" (३-१-१३४)।

**विभीषिका ವಿಭೀಷಿಕಾ** (स्त्री०) ಹೆದರಿಸುವುದು, ಭಯಪಡಿಸುವುದು. "यदि नो सन्ति सन्त्येव केयमद्य विभीषिका। किमुक्तैरेभिरधुना तां पताकां हरामि वः" उ० रा० ४-२८।

**विभु ವಿಭು** (वि०) 1. ಸರ್ವಗತ, ಸರ್ವವ್ಯಾಪಿ, ದೇಶಕಾಲ ಪರಿಚ್ಛೇದವಿಲ್ಲದ, ಜಗತ್ತಿನ ಸೃಷ್ಟಿ ಸಂರಕ್ಷಣ ಪ್ರಳಯರೂಪವಾದ ವಿವಿಧ ಕಾರ್ಯಗಳಲ್ಲಿ ಸಮರ್ಥನಾದುದರಿಂದ ನಿರತಿಶಯವಾದ ಮಹಿಮೆಯುಳ್ಳ. वि+भू (सत्तायाम्) "डुः" (३-२-१८०)। "विभुर्विभक्तावयवं पुमानिति क्रमादमुं नारद इत्यबोधि सः" माघ० १-३। "स त्वं कथं मम विभोऽक्षिपथः परात्मा योगेश्वरैः श्रुतिदृशामलहृद्विभाव्यः" भाग० १०-६४-२६। 2. ನಿತ್ಯ, ಶಾಶ್ವತ. 3. ಸ್ವತಂತ್ರ, ಇಂದ್ರಿಯಾದಿಗಳಿಗೆ ವಶನಾಗದಿರುವ. "कमपरमवशं न विप्रकुर्युर्विभुमपि तं यदमी स्पृशन्ति भावाः" कुमा० ६-९५। 4. ಸರ್ವಾಂತರ್ಯಾಮಿ. 5. ಪ್ರಭು, ಸ್ವಾಮಿ. "अप्यनारभमाणस्य विभोरुत्पादिताः परैः" माघ० २-९१। (पुं०) 6. ವಿಷ್ಣು. 7. ಶಂಕರ, ಮಹಾದೇವ. 8. ಬ್ರಹ್ಮ, ಚತುರ್ಮುಖ. 9. ಜೀವಾತ್ಮ. "न शक्यश्चक्षुषा द्रष्टुं देहे सूक्ष्मतमो विभुः। दृश्यते ज्ञानचक्षुर्भिस्तपश्चक्षुर्भिरेव च" सुश्रुत० शारीर०। "विभुः प्रभुः सर्वगतः शङ्करे द्रुहिणे पुमान्" मेदि०। "अनवच्छिन्नसद्भावं वस्तु यद्देशकालतः। तन्नित्यं विभु चेच्छन्तीत्यात्मनो विभुनित्यता" स० द० सं०।

**विभुत्व ವಿಭುತ್ವ** (न०) 1. ಸರ್ವಗತತ್ವ, ಸರ್ವತ್ರ ವ್ಯಾಪಕವಾಗಿರುವಿಕೆ. 2. ಸರ್ವವಿಧದಲ್ಲೂ ಇರುವ ಸಾಮರ್ಥ್ಯ. 3. ನಿತ್ಯತ್ವ, ದೇಶಕಾಲಪರಿಚ್ಛೇದವಿಲ್ಲದಿರುವಿಕೆ. 4. ನಿರತಿಶಯವಾದ ಮಾಹಾತ್ಮ್ಯ. विभोर्भावः "त्वः" (५-१-११९)। "तल्"। –ता –ತಾ.

**विभुग्न ವಿಭುಗ್ನ** (वि०) ಬಗ್ಗಿರುವ, ಮಡಿಚಿಕೊಂಡಿರುವ वि+भुजो (कौटिल्ये) "क्तः" (३-४-७२)। "कामिनामसकलानि विभुग्नैः स्वेदवारिमृदुभिः करजाग्रैः" माघ० १०-५७।

**विभूति ವಿಭೂತಿ** (स्त्री०) 1. ಐಶ್ವರ್ಯ, ಸಂಪತ್ತು. वि+भू (सत्तायाम्) "क्तिन्" (३-३-९४)। "चतुर्दिगावर्जितसंभृतां यो मृत्पात्रशेषामकरोद्विभूतिम्" रघु० ६-७६। 2. ಸಮೃದ್ಧಿ, ಹೇರಳ. "सरजसमकरन्दनिर्भरासु प्रसवविभूतिषु भूरुहां विरक्तः" माघ० ७-४२। 3. ಅಮಾನುಷವಾದ ಶಕ್ತಿ, ಮನುಷ್ಯನ ಶಕ್ತಿಗೆ ಮೀರಿದ ಶಕ್ತಿ, ದಿವ್ಯಶಕ್ತಿ. ಅಣಿಮಾದಿ ಅಷ್ಟೈಶ್ವರ್ಯ. (1) अणिमा (2) महिमा (3) गरिमा (4) लघिमा (5) प्राप्तिः (6) प्राकाम्यम् (7) ईशित्वम् ಮತ್ತು (8) वशित्वम् ಇವು ಎಂಟು ವಿಧ ಐಶ್ವರ್ಯಗಳು. "व्यक्तो व्यक्तेतरश्चासि प्राकाम्यं ते विभूतिषु" कुमा० २-११। 4. ಭಸ್ಮ, ಪರಶಿವನು ಧರಿಸಿದ ಗೋಮಯದ ಭಸ್ಮ. 5. ಪರಮಾತ್ಮನ ಮಹಿಮೆ, ಪರಮಾತ್ಮನ ನಿರಂಶಂಶ

ಐಶ್ವರ್ಯ ಮೊದಲಾದ ಅನನ್ತ ಕಲ್ಯಾಣ ಗುಣಗಣಗಳು. "सा विभूतिरनुभावसंपदां भूयसी तव यदायतायति" माघ० १४-५। ಪರಮಾತ್ಮನ ಮಹಿಮೆಯು ಅನನ್ತವಾದುದು. ಅವನ ಮಹಿಮೆಯು ಇಷ್ಟೇ ಎಂದು ಹೇಳಲು ಯಾರಿಗೂ ಸಾಧ್ಯವಿಲ್ಲ. ಸರ್ವಜ್ಞನಾದ ಪರಮಾತ್ಮನಿಗೂ ತನ್ನ ಮಹಿಮೆಯನ್ನು ಲೆಕ್ಕಹಾಕಿ ಎಣಿಸಲು ಸಾಧ್ಯವಿಲ್ಲ. "यतो वाचो निवर्तन्ते। अप्राप्य मनसा सह" श्रुतिः। "संख्यानं परमाणूनां कालेन क्रियते मया। न तथा मे विभूतीनां सृजतोऽण्डानि कोटिशः" भाग० ११-१६-३९। ಪರಮದಯಾಳುವಾದ ಈಶ್ವರನು ಸಕಲಮನುಜರಿಗೂ ಸಮಾಶ್ರಯಣ ಸುಲಭವಾದ ಮನುಷ್ಯಾವತಾರ ಮಾಡಿರುವುದನ್ನು ನೋಡಿ ತಮ್ಮ ಪಾಪಕರ್ಮಗಳಿಂದ ಮೂಢರಾದವರು ಅವನ ಪರತ್ವವನ್ನರಿಯದೆ ಅವನನ್ನು ಸಾಮಾನ್ಯ ಮನುಷ್ಯನೆಂದು ತಿಳಿದು ತಿರಸ್ಕಾರಭಾವದಿಂದ ನೋಡುತ್ತಾರೆ. "अवजानन्ति मां मूढा मानुषीं तनुमाश्रितम्। परं भावमजानन्तो मम भूतमहेश्वरम्" गीता ९-११। "परात्परतरं तत्त्वं परं ब्रह्मैकमव्ययम्। नित्यानन्दं स्वयं ज्योतिरद्वयं तमसः परम्। ऐश्वर्यं तस्य यन्नित्यं विभूतिरिति गीयते"।

**विभूषण ವಿಭೂಷಣ** (न०) ಒಡವೆ, ಆಭರಣ. विभूष्यतेऽनेन—वि + भूष (अलङ्कारे) "ल्युट्" (३-३-११७)। "उद्वोढुं कनकविभूषणान्यशक्तः सध्रीचा वलयितपद्मनालसूत्रः" माघ० ८-४४।

**विभूषणीय ವಿಭೂಷಣೀಯ** (वि०) 1. ಅಲಂಕರಿಸಲ್ಪಡುವ. 2. ಅಲಂಕರಿಸಬೇಕಾದ. 3. ಅಲಂಕರಿಸಲು ಅರ್ಹವಾದ. वि + भूष (अलङ्कारे) "अनीयर्" (३-१-९६)। "तव्यः" (३-१-९६)। **-भूषितव्यम् -ಭೂಷಿತವ್ಯಮ್.**

**विभूषयत् ವಿಭೂಷಯತ್** (वि०) ಅಲಂಕರಿಸುತ್ತಿರುವ, ಶೃಂಗರಿಸುತ್ತಿರುವ. वि + भूष (अलङ्कारे) + णिच् "शतृ" (३-२-१२४)। स्त्रियां "ङीप्" (४-१-६)। **-भूषयन्ती -ಭೂಷಯನ್ತೀ.**

**विभूषा ವಿಭೂಷಾ** (स्त्री०) 1. ಅಲಂಕಾರ, ಶೃಂಗಾರ. 2. ಒಡವೆ. ಆಭರಣ. वि + भूष (अलङ्कारे) "अः" (३-३-१०३)। "संपेदे श्रमसलिलोद्गमो विभूषां रम्याणां विकृतिरपि श्रियं तनोति" किरा० ७-५।

**विभूषित ವಿಭೂಷಿತ** (वि०) ಅಲಂಕರಿಸಲ್ಪಟ್ಟ, ಒಡವೆಗಳಿಂದ ಶೃಂಗರಿಸಲ್ಪಟ್ಟ. वि+भूष (अलङ्कारे) "क्तः" (३-२-१०२)।

**विभृत ವಿಭೃತ** (वि०) 1. ಪೋಷಿಸಲ್ಪಟ್ಟ, ಸಾಕಲ್ಪಟ್ಟ. वि+डु भृञ् (धारणपोषणयोः) "क्तः" (३-२-१०२)। 2. ಧರಿಸಲ್ಪಟ್ಟ.

**विभेद ವಿಭೇದ** (पुं०) 1. ಹರ್ಷ, ಸಂತೋಷ. वि+ भिदिर् (विदारणे) "घञ्" (३-३-१८)। 2. ಭಂಗ, ಗಂಟು ಬಿಚ್ಚುವುದು. "भ्रूयुगेन सपदि प्रतिपेदे रोमभिश्च सममेव विभेदः" माघ० १०-६३। 3. ಒಡೆಯುವುದು, ವಿಶ್ಲೇಷವುಂಟುಮಾಡುವುದು. "विभेदमन्तः पदवीनिरोधम्" किरा० १७-२७।

**विभ्रम ವಿಭ್ರಮ** (पुं०) 1. ಭ್ರಾಂತಿ, ಭ್ರಮೆ. वि+भ्रमु (चलने) "घञ्" (३-३-१८)। 2. ವಿಲಾಸ, ಸ್ತ್ರೀಯರ ಶೃಂಗಾರಭಾವದ ಕಾರ್ಯ. 3. ಹೆಂಗಸರ ಸ್ವಭಾವಸಿದ್ಧವಾದ ಒಂದು ಅಲಂಕಾರ, ಸ್ತ್ರೀಯರು ಆತುರ ಮತ್ತು ಸಂಭ್ರಮದಿಂದ ಮಾಡುವ ಕಾರ್ಯ. "त्वरया हर्षरागादेर्दयितागमनादिषु। अस्थाने विभ्रमादीनां विन्यासो विभ्रमो मतः" सा० द० ३-१०४। "विभ्रमं मधुमदः प्रमदानां धातुलीनमुपसर्ग इवार्थम्" माघ० १०-१५। 4. ವಿಕಾರ, ಆಕಸ್ಮಿಕವಾದ ವಿಚಿತ್ರಭಾವನೆ, ವಿಪರೀತ ಕಲ್ಪನೆ. "गन्तुमुत्थितमकारणतः स्म द्योतयन्ति मदविभ्रमसासाम्" माघ० १०-१६। 5. ಸೌಂದರ್ಯ, ಸೊಬಗು, ಶೋಭೆ. "विकचबाणदलावलयोऽधिकं रुरुचिरे रुचिरेक्षणविभ्रमाः" माघ० ६-४६। 6. ಸಂಶಯ, ಸಂದೇಹ. "कुर्वन्नकाण्डनिर्मेघवर्षासमयविभ्रमम्" कथास०। 7. ಭ್ರಮಣ, ಸುತ್ತಾಡುವುದು. वि+भ्रमु (अनवस्थाने) "घञ्"।

**विभ्राज् ವಿಭ್ರಾಜ್** (वि०) ಪ್ರಕಾಶಿಸುವ, ಶೋಭಿಸುವ. वि+भ्राजृ (दीप्तौ) "क्विप्" (३-२-१७७)।

**विभ्रान्त ವಿಭ್ರಾಂತ** (वि०) 1. ಭ್ರಾಂತಿಗೊಂಡ, ಭ್ರಮೆಯಿಂದ ಕೂಡಿದ, ಸಂಶಯಹೊಂದಿದ. वि+भ्रमु (चलने) कर्तं० "क्तः" (३-४-७२)। 2. ಮಿಥ್ಯಾಜ್ಞಾನವುಳ್ಳವನು, ಅದಲ್ಲದ ವಸ್ತುವಿನಲ್ಲಿ ಅದು ಎಂಬ ಜ್ಞಾನವುಳ್ಳವನು, ವಿಪರೀತ ಜ್ಞಾನವುಳ್ಳವನು. "अनेकचित्तविभ्रान्ता मोहजालसमावृताः" गीता १६-१६। 3. ಸುತ್ತಾಡಿದ, ತಿರುಗಾಡಿದ. भ्रमु (अनवस्थाने) कर्तं० "क्तः"। 4. ಚಕ್ರದಂತೆ ತಿರುಗಿದ. (न०) 5. ಭ್ರಮಣ. ಚಕ್ರದಂತೆ ತಿರುಗುವುದು. 6. ಸುತ್ತಾಟ, ತಿರುಗಾಡುವುದು. भ्रमु (अनवस्थाने) भावे "क्तः"।

**विभ्रान्ति ವಿಭ್ರಾನ್ತಿ** (स्त्री०) 1. ಭ್ರಮೆ, ಮಿಥ್ಯಾಜ್ಞಾನ. वि+भ्रमु (चलने) "क्तिन्" (३-३-९४)। "स्फुरद्द्वैत-

विश्रान्तिसन्तानसन्तप्तवन्दारुसंसारनिद्रापहारैकदक्ष" प्रबोध० ४। 2. ಸಂಶಯ. 3. ಗಾಬರಿ, ಕಳವಳ, ತಬ್ಬಿಬ್ಬು.

**विमत ವಿಮತ** (वि०) 1. ವಿರುದ್ಧವಾದ ಅಭಿಪ್ರಾಯವುಳ್ಳವನು. वि+मन (ज्ञाने) "क्तः" (३-४-७२)। 2. ತುಚ್ಛವಾಗಿ ಕಾಣಲ್ಪಟ್ಟ, ಕಡೆಗಣಿಸಲ್ಪಟ್ಟ, ಉಪೇಕ್ಷಿಸಲ್ಪಟ್ಟ. (पुं०) 3. ಶತ್ರು, ವೈರಿ. विरुद्धं मतं यस्य। "विहारास्तस्य जन्येषु विमतानेव निघ्नतः" याद० २२-८०।

**विमति ವಿಮತಿ** (स्त्री०) 1. ಭಿನ್ನಾಭಿಪ್ರಾಯ, ವಿರುದ್ಧವಾದ ಬುದ್ಧಿ. विरुद्धा मतिः। "विमतिं भजतस्तदर्हणायाम्" याद० १५-६९। 2. ಮೂರ್ಖತನ. (वि०) 3. ಮೂರ್ಖ. विरुद्धा मतिर्यस्य।

**विमथन ವಿಮಥನ** (न०) 1. ಕಡೆಯುವುದು. 2. ಕಲಕುವುದು. वि+मथे (विलोडने) भावे "ल्युट्" (३-३-११५)। 3. ಹಿಂಸಿಸುವುದು. 4. ಕೊಲ್ಲುವುದು.

**विमथनीय ವಿಮಥನೀಯ** (वि०) 1. ಕಡೆಯಲ್ಪಡುವ. 2. ಕಲಕಲ್ಪಡುವ. वि+मथे (विलोडने) "अनीयर्" (३-१-९६)। 3. ಕಡೆಯಬೇಕಾದ. 4. ಕಲಕಬೇಕಾದ. 5. ಹಿಂಸಿಸಬೇಕಾದ. 6. ಹಿಂಸಿಸಲ್ಪಡುವ. "तव्यः"। **–मथितव्यम् –ಮಥಿತವ್ಯಮ್.**

**विमथित ವಿಮಥಿತ** (वि०) 1. ಕಡೆಯಲ್ಪಟ್ಟ. 2. ಕಲಕಲ್ಪಟ್ಟ. वि+मथे (विलोडने) "क्तः" (३-२-१०२)।

**विमथ्नत् ವಿಮಥ್ನತ್** (वि०) 1. ಕಡೆಯುತ್ತಿರುವ. 2. ಕಲಕುತ್ತಿರುವ. वि+मन्थ (विलोडने) "शतृ" (३-२-१२४)। "लक्ष्मीसुधासञ्जननाय तूर्णं विमथ्नता वेगमनेन दत्तम्" याद० १८-३१। स्त्रियां "ङीप्" (४-१-६)। **–ती –ತೀ.**

**विमथ्यमान ವಿಮಥ್ಯಮಾನ** (वि०) 1. ಕಡೆಯಲ್ಪಡುತ್ತಿರುವ. 2. ಕಲಕಲ್ಪಡುತ್ತಿರುವ. वि+मथे (विलोडने) "शानच्" (३-२-१२४)। 3. ಹಿಂಸಿಸಲ್ಪಡುತ್ತಿರುವ. 4. ಲೂಟಿಮಾಡಲ್ಪಡುತ್ತಿರುವ. "विमथ्यमानात्स्वपुराद्यदूनां मन्थाचलेनेव महाबलेन" याद० २०-२०। 5. ಹಿಂಡಲ್ಪಡುತ್ತಿರುವ, ಹಿಸುಕಲ್ಪಡುತ್ತಿರುವ. "वनौकसां पत्युरहीन्द्रशोभिना विमथ्यमानादचलेन बाहुना" याद० १४-५६।

**विमत्सर ವಿಮತ್ಸರ** (वि०) ಮಾತ್ಸರ್ಯವಿಲ್ಲದವನು, ಇತರರ ಅಭಿವೃದ್ಧಿಯನ್ನು ದ್ವೇಷಿಸದಿರುವವನು. विगतो मत्सरो यस्य। "यदृच्छालाभसन्तुष्टो द्वन्द्वातीतो विमत्सरः" गीता ४-२२।

**विमनस् ವಿಮನಸ್** (वि०) 1. ದುಃಖದಿಂದ ಕೂಡಿದ ಮನಸ್ಸುಳ್ಳವನು. विगतं मनो यस्य। "देव्यास्ततो विमनसः परिसान्त्वनाय धर्मासनाद्विशति वासगृहं नरेन्द्रः" उ० रा० १-७। 2. ಬುದ್ಧಿ ಸರಿಯಾಗಿಲ್ಲದವನು, ಚಿತ್ತವಿಕ್ಷೋಭವುಳ್ಳವನು. 3. ತಿರಸ್ಕಾರಹೊಂದಿದವನು. 4. ದಿಗ್ಭ್ರಮೆಹಿಡಿದವನು. "कप्"। **–मनस्कः –ಮನಸ್ಕಃ.**

**विमर्द ವಿಮರ್ದ** (पुं०) 1. ಸಂಘರ್ಷ, ತಿಕ್ಕಾಟ, ಉಜ್ಜಾಟ. वि+मृद (क्षोदे) "घञ्" (३-३-१८)। "कस्तूरिकामृगविमर्दसुगन्धिरेति रागीव सक्तिमधिकां विषयेषु वायुः" माघ० ४-६१। 2. ಸ್ಪರ್ಶ, ಸಂಪರ್ಕ. "असौ महेन्द्रद्विपदानगन्धिस्त्रिमार्गगावीचिविमर्दशीतः" रघु० १३-२०। 3. ಅರೆಯುವುದು, ಪುಡಿಮಾಡುವುದು. 4. ಯುದ್ಧ, ಸಮರ, ಕಾಳಗ. "उपायानां भावादविरतविनोदव्यतिकरैर्विमर्दैर्वीराणां जनितजगदत्यद्भुतरसः" उ० रा० ३-४४। 5. ನಾಶ, ಅಳಿವು. "पुरा जनस्थानविमर्दशङ्की सन्धाय लङ्काधिपतिः प्रतस्थे" रघु० ६-६२। 6. ಕಲಹ, ಜಗಳ. "कार्यार्थिनां विमर्दो हि राज्ञां दोषाय कल्पते" रामा०। 7. ಕೆಡಿಸುವುದು, ಹಾಳುಮಾಡುವುದು, ನಾಶಪಡಿಸುವುದು. 8. ಸೂರ್ಯಚಂದ್ರರ ಸಮಾಗಮ, ಸೂರ್ಯ ಮತ್ತು ಚಂದ್ರ ಇವರು ಒಟ್ಟಿಗೆ ಸೇರುವುದು. 9. ಗ್ರಹಣ.

**विमर्दक ವಿಮರ್ದಕ** (वि०) 1. ಉಜ್ಜುವವನು, ತಿಕ್ಕುವವನು. वि+मृद (क्षोदे) "ण्वुल्" (३-१-१३३)। 2. ಅರೆಯುವವನು, ಪುಡಿಮಾಡುವವನು, 3. ನಾಶಪಡಿಸುವವನು. 4. ಸುಗಂಧ ದ್ರವ್ಯಗಳನ್ನು ಕುಟ್ಟಿ ಪುಡಿಮಾಡುವವನು.

**विमर्दन ವಿಮರ್ದನ** (न०) 1. ಅರೆಯುವುದು, ಪುಡಿಮಾಡುವುದು. वि+मृद (क्षोदे) भावे "ल्युट्" (३-३-११५)। 2. ಉಜ್ಜುವುದು, ತಿಕ್ಕುವುದು. 3. ನಾಶಪಡಿಸುವುದು.

**विमर्दनीय ವಿಮರ್ದನೀಯ** (वि०) 1. ಉಜ್ಜಲ್ಪಡುವ. 2. ಉಜ್ಜಬೇಕಾದ. 3. ಉಜ್ಜಬಹುದಾದ. वि+मृद (क्षोदे) "अनीयर्" (३-१-९६)। 4. ಅರೆಯಲ್ಪಡುವ. 5. ಅರೆಯಬೇಕಾದ. 6. ಅರೆಯಬಹುದಾದ. 7. ನಾಶಪಡಿಸಲ್ಪಡುವ. 8. ನಾಶಪಡಿಸಬೇಕಾದ. 9. ನಾಶಪಡಿಸಬಹುದಾದ. "तव्यः"। **–मर्दितव्यम् –ಮರ್ದಿತವ್ಯಮ್.**

णिचि "अनीयर्"। -मर्दनीयम् -ಮರ್ದನೀಯಮ್. "तव्यः"। -मर्दयितव्यम् -ಮರ್ದಯಿತವ್ಯಮ್.

**विमर्दयत्** ವಿಮರ್ದಯತ್ (वि०) 1. ಉಜ್ಜುತ್ತಿರುವ. 2. ಪುಡಿಮಾಡುತ್ತಿರುವ. 3. ನಾಶಪಡಿಸುತ್ತಿರುವ. वि+मृद (क्षोदे)+णिच् "शतृ" (३-२-१२४)। स्त्रियां "ङीप्" (४-१-६)। -यन्ती -ಯನ್ತೀ.

**विमर्दित** ವಿಮರ್ದಿತ (वि०) 1. ಅರೆಯಲ್ಪಟ್ಟ. 2. ಉಜ್ಜಲ್ಪಟ್ಟ, ತಿಕ್ಕಲ್ಪಟ್ಟ. 3. ನಾಶಪಡಿಸಲ್ಪಟ್ಟ. वि+मृद (क्षोदे)+णिच् "क्तः" (३-२-१०२)।

**विमर्श** ವಿಮರ್ಶ (पुं०) 1. ವಿವೇಚನೆ, ವಿಚಾರ. वि+मृश (आमर्शने) "घञ्" (३-३-१८)। ಸಾಧ್ಯತೆ-ಅಸಾಧ್ಯತೆ, ಲಾಭ-ನಷ್ಟ, ಕಷ್ಟ-ಸುಖ ಇವುಗಳ ಪರ್ಯಾಲೋಚನೆಯು ವಿಮರ್ಶೆ. ಸರಿಯಾಗಿ ವಿವೇಚಿಸಿ (ವಿಮರ್ಶೆಮಾಡಿ) ಕೆಲಸಮಾಡಬೇಕು. "प्रत्ययः स्त्रीषु मुष्णाति विमर्शं विदुषामपि" कथास०। "वृणते हि विमृश्यकारिणं गुणलुब्धाः स्वयमेव संपदः" किरा० २-३०। भावे "ल्युट्" (३-३-११५)। -मर्शनम् -ಮರ್ಶನಮ್. 2. ಸಂಶಯ, ವಿತರ್ಕ.

**विमर्शन** ವಿಮರ್ಶನ (न०) 1. ಜ್ಞಾನ. विमृश्यतेऽनेन—वि+मृश (आमर्शने) कर० "ल्युट्" (३-३-११७)। "कर्मणा कर्मनिर्हारो न ह्यात्यन्तिक इष्यते। अविद्वदधिकारित्वात् प्रायश्चित्तं विमर्शनम्" भाग०। 2. ವಿಮರ್ಶೆ, ಪರ್ಯಾಲೋಚನೆ, ವಿಚಾರಮಾಡುವುದು.

**विमर्शनीय** ವಿಮರ್ಶನೀಯ (वि०) 1. ಆಲೋಚಿಸಲ್ಪಡುವ, ವಿಚಾರಮಾಡಲ್ಪಡುವ, ವಿವೇಚಿಸಲ್ಪಡುವ. 2. ವಿವೇಚಿಸಬೇಕಾದ, ಆಲೋಚಿಸಬೇಕಾದ. 3. ವಿವೇಚಿಸಲು ಅರ್ಹವಾದ, ಆಲೋಚಿಸಲು ಯೋಗ್ಯವಾದ. वि+मृश (आमर्शने) "अनीयर्" (३-१-९६)। "तव्यः" (३-१-९६)। -मर्ष्टव्यम् -म्रष्टव्यम्, -ಮರ್ಷ್ಟವ್ಯಮ್ -ಮ್ರಷ್ಟವ್ಯಮ್.

**विमल** ವಿಮಲ (न०) 1. ಚಿನ್ನದ ಮುಲಾಮು ಹಾಕಿದ ಬೆಳ್ಳಿ, ಬೆಳ್ಳಿಯ ರೇಕಿನ ಮೇಲೆ ಹಾಕಿದ ಚಿನ್ನದ ಮುಲಾಮು. विगतं मलं यस्मात्। (वि०) 2. ನಿರ್ಮಲವಾದ, ಸ್ವಚ್ಛವಾದ. "दन्तोज्ज्वलासु विमलोपल मेखलासु सद्रत्नचित्रकटकासु बृहन्नितम्बाः" माघ० ४-४०। 3. ಸ್ವಚ್ಛವಾದ, ತಿಳಿಯಾದ (ನೀರು ಮುಂತಾದುದು), 4. ಶುದ್ಧವಾದ, ದೋಷವಿಲ್ಲದ. "रुचिरधाम्नि भर्तरि भृशं विमलाः परलोकमभ्युपगते विविशुः ज्वलनम्" माघ० ९-१३। (पुं०) 5. ಅರ್ಹಂತ, ಬೌದ್ಧಸಂನ್ಯಾಸಿ.

**विमलमणि** ವಿಮಲಮಣಿ (पुं०) ಸ್ಫಟಿಕ. विमलः स्वच्छो मणिः।

**विमला** ವಿಮಲಾ (स्त्री०) ಒಂದು ಜಾತಿಯ ಮುಂಡ ಕಳ್ಳಿ. "विमला सातला भूरिफेना चर्मकषेत्यपि" अम०।

**विमलाद्रि** ವಿಮಲಾದ್ರಿ (पुं०) ಶತ್ರುಂಜಯಪರ್ವತ.

**विमातृ** ವಿಮಾತೃ (स्त्री०) ಮಲತಾಯಿ, ಅಕ್ಕರೆಯಿಲ್ಲದ ತಾಯಿ. विरुद्धा माता। "मातुः पितुः कनीयांसं न नमेद्वयसाधिकः। नमस्कुर्याद्गुरोः पत्नीं भ्रातृजायां विमातरम्" स्मृतिः।

**विमातृज** ವಿಮಾತೃಜ (पुं०) ಮಲತಾಯಿಯ ಮಗ. विमातुर्जायते — जनी (प्रादुर्भावे) "ड:" (३-२-९८)।

**विमान** ವಿಮಾನ (पुंन०) 1. ವಿಮಾನ, ವಾಯುಮಾರ್ಗದಲ್ಲಿ ಹಾರುವ ಯಂತ್ರ, ಆಕಾಶದಲ್ಲಿ ಸಂಚರಿಸಲು ನಿರ್ಮಿತವಾದ ಒಂದು ಸಾಧನ. विगतं मानमुपमास्य। "खिलीभूते विमानानां तदापातभयात्पथि" कुमा० २-४५। 2. ವಾಹನ, ಸಂಚಾರಕ್ಕೆ ಸಾಧನವಾದ ರಥ ಬಂಡಿ ಮೊದಲಾದವು. 3. ಅಶ್ವ, ಕುದುರೆ. 4. ಚಿಕ್ಕ ಹಡಗು. 5. ಏಳು ಮಹಡಿಗಳುಳ್ಳ, ಸೌಧ, ಸಿರಿವಂತರ ಉಪ್ಪರಿಗೆಯ ಮನೆ. "नेत्रा नीताः सततगतिना यद्विमानाग्रभूमीरालेख्यानां नवजलकणैर्दोषमुत्पाद्य सद्यः" मेघ० २-६। "विमानो व्योमयाने च सार्वभौमगृहेऽपि च। घोटके यानपात्रे च पुंनपुंसकयोर्मतः" मेदि०।

**विमानना** ವಿಮಾನನಾ (स्त्री०) ಅವಮಾನ, ತಿರಸ್ಕಾರ. वि+मान (पूजायाम्)+णिच् "युच्" (३-३-१०७)। "अलभ्यशोकाभिभवेयमाकृतिर्विमानना सुभ्रु कुतः पितुर्गृहे" कुमा० ५-४३।

**विमानित** ವಿಮಾನಿತ (वि०) ಅವಮಾನಗೊಳಿಸಲ್ಪಟ್ಟ, ತಿರಸ್ಕರಿಸಲ್ಪಟ್ಟ. वि+मान (पूजायाम्) "क्तः" (३-२-१०२)।

**विमार्ग** ವಿಮಾರ್ಗ (पुं०) 1. ಕೆಟ್ಟಮಾರ್ಗ, ಕೆಟ್ಟರಸ್ತೆ. विरुद्धो मार्गः। 2. ದುರ್ಮಾರ್ಗ, ತಪ್ಪುದಾರಿ. "नियमयसि विमार्गप्रस्थितानात्तदण्डः प्रशमयसि विवादं कल्पसे रक्षणाय" शाकु० ५-८। 3. ಸಂಮಾರ್ಜನಿ. वि+मृजू (शुद्धौ) "ल्युट्" (३-३-११७)।

**विमार्गगा** ವಿಮಾರ್ಗಗಾ (स्त्री०) ದುರ್ಮಾರ್ಗದಲ್ಲಿ ನಡೆಯುವ ಹೆಂಗಸು, ಸ್ವೈರಿಣಿ, ಅಸಭ್ಯ ಹೆಂಗಸು. विमार्गे गच्छति—गम्लृ (गतौ) "ड:" (वा० ३-२-१०१)।

**विमार्गण** ವಿಮಾರ್ಗಣ (ನ०) ಅನ್ವೇಷಣ, ಹುಡುಕುವುದು. वि+मार्ग (अन्वेषणे) "ल्युट्" (३-३-११५)।

**विमार्गित** ವಿಮಾರ್ಗಿತ (वि०) ಹುಡುಕಲ್ಪಟ್ಟ. वि+मार्ग (अन्वेषणे) "क्तः" (३-२-१०२)।

**विमार्जना** ವಿಮಾರ್ಜನಾ (स्त्री०) 1. ಮೈತೊಳೆದು ಶುದ್ಧಮಾಡುವುದು. वि+मृजू (शौचालंकारयोः)+णिच् "युच्" (३-३-१०७)। 2. ಅಲಂಕರಿಸುವುದು, ಒಡವೆಗಳಿಂದ ಶೃಂಗರಿಸುವುದು.

**विमार्जयत्** ವಿಮಾರ್ಜಯತ್ (वि०) 1. ತೊಳೆದು ಶುದ್ಧಮಾಡುತ್ತಿರುವ. वि + मृजू (शौचालंकारयोः) + णिच् "शतृ" (३-२-१२४)। 2. ಅಲಂಕರಿಸುತ್ತಿರುವ, ಶೃಂಗರಿಸುತ್ತಿರುವ. स्त्रियां "ङीप्" (४-१-६)। **–यन्ती –ಯಂತೀ.** "विमार्जयन्ती वृजिनात् पुनीते विष्णोरियं विक्रमवैजयन्ती" याद० १८-४३।

**विमिश्र** ವಿಮಿಶ್ರ (वि०) ಬೆರೆತಿರುವ, ಕಲೆತಿರುವ. विशेषेण मिश्रः।

**विमिश्रित** ವಿಮಿಶ್ರಿತ (वि०) ಬೆರೆತಿರುವ, ಕಲೆತಿರುವ. वि + मिश्र (संपर्के) "क्तः" (३-४-७२)।

**विमुक्त** ವಿಮುಕ್ತ (वि०) 1. ಬಿಡಲ್ಪಟ್ಟ. वि + मुच्लृ (मोक्षणे) "क्तः" (३-२-१०२)। "वाजिनः स्यन्दने भानोर्विमुक्तप्रग्रहा इव" भट्टि० ७-५०। 2. ತ್ಯಜಿಸಲ್ಪಟ್ಟ, ತೊರೆಯಲ್ಪಟ್ಟ. "प्रसाधितदिशो युष्मान् विमुक्तान्यमहीभृतः। संपदः प्रतिपत्स्यन्ते सरितः सागरानिव" याद० २२-४५। 3. ತಪ್ಪಿಸಿಕೊಂಡ, ದೂರಸರಿದಿರುವ. "त्यक्त्वा भीतिवृतांस्तत्र विमुक्तान् जीविताशया" याद० १६-९४। 4. ಬಿಡಲ್ಪಟ್ಟ, ಪ್ರಯೋಗಿಸಲ್ಪಟ್ಟ. "विमुक्तमाशंसितशत्रुनिर्जयैरनेकमेकावसरं वनेचरैः" किरा० १४-५१। "संन्यासयोगयुक्तात्मा विमुक्तो मामुपैष्यसि" गीता ८-२८। 5. ಸಂಸಾರ ಬಂಧನದಿಂದ ಬಿಡುಗಡೆಹೊಂದಿದ.

**विमुक्ति** ವಿಮುಕ್ತಿ (स्त्री०) 1. ಬಿಡುಗಡೆ. वि + मुच्लृ (मोक्षणे) "क्तिन्" (३-३-९४)। 2. ಮೋಕ್ಷ, ಸಂಸಾರಪಾಶದಿಂದ ಬಿಡುಗಡೆ. "पितृन्नमस्ये दिवि ये च मूर्ताः स्वधाभुजः काम्यफलाभिसन्धौ। प्रदानशक्ताः सकलेप्सितानां विमुक्तिदा येऽनभिसंहितेषु"। 3. ಬಾಣಪ್ರಯೋಗ. 4. ತಪ್ಪಿಸಿಕೊಳ್ಳುವುದು. ಅಪಾಯದಿಂದ ದೂರಸರಿಯುವುದು.

**विमुख** ವಿಮುಖ (वि०) 1. ಮುಖವನ್ನು ತಿರುಗಿಸಿಕೊಂಡಿರುವ, ಹಿಮ್ಮುಖವಾದ. विनिवर्तितं मुखं यस्य। "श्वासाविलाकुलमुखा विमुखा रणस्य" कुमा० १७-६। 2. ಅನುಕೂಲವಲ್ಲದ, ವಿರುದ್ಧವಾಗಿರುವ. 3. ಒಲವಿಲ್ಲದ, ಇಷ್ಟವಿಲ್ಲದ, ಮನಸ್ಸಿಲ್ಲದ. "न क्षुद्रोऽपि प्रथमसुकृतापेक्षया संश्रयाय प्राप्ते मित्रे भवति विमुखः किं पुनर्यस्तथोच्चैः" मेघ० १-१७। 4. ವಿಫಲನಾದ, ನಿರಾಶನಾದ. "यस्यार्थिनो वा शरणागता वा नाशाभिभङ्गाद्विमुखाः प्रयान्ति" हितो० १-१९४। 5. ವಿವಿಧ ಮುಖಗಳುಳ್ಳ, ಅನೇಕ ಮುಖಗಳುಳ್ಳ. "धन्विनः संतुरगोपेतान् विमुखान् भुजगानिव" याद० २२-९। 6. ತಿರಸ್ಕೃತನಾದ, ಅವಮಾನಗೊಳಿಸಲ್ಪಟ್ಟ. "विमुखान् द्रष्टुमप्येनं जनंगम इव द्विजान्" नैष० १७-१२१।

**विमुच्यमान** ವಿಮುಚ್ಯಮಾನ (वि०) 1. ಬಿಡಲ್ಪಡುತ್ತಿರುವ, ತ್ಯಜಿಸಲ್ಪಡುತ್ತಿರುವ. वि+मुच्लृ (मोक्षणे) "विमुच्यमानैरपि तस्य मन्थरं गवां हिमानीविशदैः कदम्बकैः" किरा० ४-१२। 2. ಬಿಡುಗಡೆಮಾಡಲ್ಪಡುತ್ತಿರುವ.

**विमुञ्चत्** ವಿಮುಂಚತ್ (वि०) 1. ಬಿಡುತ್ತಿರುವ, 2. ತ್ಯಜಿಸುತ್ತಿರುವ. वि + मुच्लृ (मोक्षणे) "शतृ" (३-२-१२४)। 3. (ಬಾಣವನ್ನು) ಪ್ರಯೋಗಿಸುತ್ತಿರುವ. स्त्रियां "ङीप्" (४-१-६)। **–ती –ತೀ, –न्ती –ನ್ತೀ.**

**विमुद्र** ವಿಮುದ್ರ (वि०) 1. ಮುದ್ರೆಯಿಲ್ಲದಿರುವ, ಮೊಹರುಹಾಕದಿರುವ. 2. ವಿಕಸಿತವಾದ, ಅರಳಿರುವ. विगता मुद्रा यस्य।

**विमूढ** ವಿಮೂಢ (वि०) 1. ದಿಗ್ಭ್ರಮೆಗೊಂಡ, ದಾಬರಿಗೊಂಡಿರುವ, ತಬ್ಬಿಬ್ಬಾಗಿರುವ. 2. ಜ್ಞಾನತಪ್ಪಿಸಿ ಮೋಸಗೊಳಿಸಲ್ಪಟ್ಟ, ಮಂಕುಮಾಡಲ್ಪಟ್ಟ.

**विमृदित** ವಿಮೃದಿತ (वि०) 1. ಕುಟ್ಟಿಪುಡಿಮಾಡಲ್ಪಟ್ಟ. 2. ಉಜ್ಜಲ್ಪಟ್ಟ, ತಿಕ್ಕಲ್ಪಟ್ಟ. वि+मृद (क्षोदे) "क्तः" (३-२-१०२)। 3. ನಾಶಪಡಿಸಲ್ಪಟ್ಟ.

**विमृद्नत्** ವಿಮೃದ್ನತ್ (वि०) 1. ಪುಡಿಮಾಡುತ್ತಿರುವ, ಅರೆಯುತ್ತಿರುವ. वि+मृद (क्षोदे) "शतृ" (३-२-१२४)। 2. ಉಜ್ಜುತ್ತಿರುವ, ತಿಕ್ಕುತ್ತಿರುವ. 3. ನಾಶಪಡಿಸುತ್ತಿರುವ. स्त्रियां "ङीप्" (४-१-६)। **–ती –ತೀ.**

**विमृद्य** ವಿಮೃದ್ಯ (वि०) 1. ಪುಡಿಮಾಡಲ್ಪಡುವ. 2. ಉಜ್ಜಲ್ಪಡುವ. 3. ನಾಶಪಡಿಸಲ್ಪಡುವ. वि + मृद (क्षोदे) "ण्यत्" (३-१-१२४)।

**विमृशत् ವಿಮೃಶತ್** (वि०) 1. ವಿಮರ್ಶೆಮಾಡುತ್ತಿರುವ, ವಿಚಾರಮಾಡುತ್ತಿರುವ, ಪರ್ಯಾಲೋಚಿಸುತ್ತಿರುವ. वि + मृश (आमर्शने) "शतृ" (३-२-१२४)। 2. ಹುಡುಕಿ ನೋಡುತ್ತಿರುವ, ಮುಟ್ಟಿ ಹುಡುಕುತ್ತಿರುವ. "रागिणामित इतो विमृशद्भिः पाणिभिर्जगृहिरे हृदयानि" माघ० १०-५६।

**विमृश्य ವಿಮೃಶ್ಯ** (वि०) 1. ವಿಮರ್ಶೆಮಾಡಲ್ಪಡುವ, ವಿವೇಚನೆಮಾಡಲ್ಪಡುವ, ವಿಚಾರಮಾಡಲ್ಪಡುವ. वि+मृश (आमर्शने) "ण्यत्" (३-२ १२४)। 2. ಹುಡುಕಲ್ಪಡುವ. (अव्य०)3. ವಿಮರ್ಶಿಸಿ, ಚೆನ್ನಾಗಿ ಆಲೋಚಿಸಿ. "इदमत्रोत्तरं न्याय्यमिति बुद्धया विमृश्य य:" कुमा० ६-८७।

**विमृष्ट ವಿಮೃಷ್ಟ** (वि०) 1. ಆಲೋಚಿಸಲ್ಪಟ್ಟ, ವಿಮರ್ಶೆಮಾಡಲ್ಪಟ್ಟ. वि+मृश (आमर्शने) "क्त:" (३-२-१०२)। 2. ಶುದ್ಧಮಾಡಲ್ಪಟ್ಟ. वि + मृजू (शुद्धौ) "क्त:" (३-२-१०२)।

**विमोक्ष ವಿಮೋಕ್ಷ** (पुं०) 1. ಮೋಕ್ಷ, ಅಪವರ್ಗ. ಸಂಸಾರದಿಂದ ಬಿಡುಗಡೆ, ಮುಕ್ತಿ. वि+मोक्ष (अवसाने)+णिच् "अच्" (३-३-५६)। भावे "ल्युट्" (३-३-११५)। **-मोक्षणम् -ಮೋಕ್ಷಣಮ್**. 2. ತ್ಯಜಿಸುವುದು, ತೊರೆದು ಬಿಡುವುದು.

**विमोचन ವಿಮೋಚನ** (न०) 1. ಬಿಡುಗಡೆ, ದಾಸ್ಯದಿಂದ ಬಿಡಿಸುವುದು. वि + मुच्लृ (मोक्षणे) "ल्युट्" (३-३-११५)। 2. ಮುಕ್ತಿ, ಸಂಸಾರಬಂಧನದಿಂದ ಬಿಡುಗಡೆ. 3. ತ್ಯಜಿಸುವುದು.

**विमोचनीय ವಿಮೋಚನೀಯ** (वि०) 1. ಬಿಡುಗಡೆ ಮಾಡಲ್ಪಡುವ. 2. ಬಿಡುಗಡೆಮಾಡಬೇಕಾದ. 3. ಬಿಡುಗಡೆಮಾಡಲು ಅರ್ಹನಾದ. वि + मुच्लृ (मोक्षणे) "अनीयर्" (३-१-९६)। "तव्य:"। **-मोक्तव्य: -ಮೋಕ್ತವ್ಯಃ**.

**विमोच्य ವಿಮೋಚ್ಯ** (वि०) ಬಿಡಲ್ಪಡುವ, ಬಿಡುಗಡೆ ಮಾಡಲ್ಪಡುವ. वि + मुच्लृ (मोक्षणे) "ण्यत्" (३-१-१२४)।

**विमोह ವಿಮೋಹ** (पुं०) ಮಂಕುಜಾಡ್ಯ, ಭ್ರಮೆ. वि+मुह (वैचित्ये) "घञ्" (३-३-१८)। "ह्रीविमोहमहरद्दयितानामन्तिकं रतिसुखाय निनाय" माघ० १०-२२।

**विमोहक ವಿಮೋಹಕ** (वि०) ಪ್ರಲೋಭನದಿಂದ ಮರುಳುಮಾಡುವವನು. वि+मुह (वैचित्ये) "ण्वुल्" (३-१-१३३)।

**विमोहन ವಿಮೋಹನ** (न०) 1. ಆಸೆತೋರಿಸಿ ಮರುಳುಗೊಳಿಸುವುದು, ಉಪಾಯದಿಂದ ಮೋಸಗೊಳಿಸುವುದು. वि+मुह (वैचित्ये) "ल्युट्" (३-३-११५)। (वि०) 2. ಮೋಹಗೊಳಿಸುವವನು, ಆಸೆತೋರಿಸಿ ವಂಚಿಸುವವನು. वि+मुह (वचित्ये) "ल्यु:" (३-१-१३४)।

**विमोहनीय ವಿಮೋಹನೀಯ** (वि०) 1. ಮರುಳು ಮಾಡಲ್ಪಡುವ., ಆಸೆತೋರಿಸಿ ವಂಚಿಸಲ್ಪಡುವ. वि+मुह (वैचित्ये) "अनीयर्" (३-१-९६)। "तव्य:"। **-मोग्धव्यम् -मोढव्यम्, -ಮೋಗ್ಧವ್ಯಮ್ -ಮೋಢವ್ಯಮ್**. 2. ಮರುಳುಮಾಡಬೇಕಾದ. 3. ಮರುಳು ಮಾಡಲು ಶಕ್ಯನಾದ.

**विमोह्य ವಿಮೋಹ್ಯ** (वि०) ಮೋಹಗೊಳಿಸಲ್ಪಡುವ, ಮರುಳುಮಾಡಲ್ಪಡುವ, ಮೋಹಗೊಳಿಸಿ ವಂಚಿಸಲ್ಪಡುವ. वि+मुह (वैचित्ये) "ण्यत्" (३-१-१२४)।

**विमोहित ವಿಮೋಹಿತ** (वि०) 1. ವಂಚಿಸಲ್ಪಟ್ಟ, ಆಸೆತೋರಿಸಿ ಮರುಳುಮಾಡಲ್ಪಟ್ಟ. वि+मुह (वैचित्ये) "क्त:" (३-२-१०२)। 2. ಅವಿವೇಕಿಯಾಗಿ ಮಾಡಲ್ಪಟ್ಟ, ಮೂರ್ಖನಾಗಿ ಮಾಡಲ್ಪಟ್ಟ. "यक्ष्ये दास्यामि मोदिष्य इत्यज्ञानविमोहिता:" गीता १६-१५। 3. ಭ್ರಮೆಹಿಡಿಸಲ್ಪಟ್ಟ, ಬೆಡಗುಗೊಳಿಸಲ್ಪಟ್ಟ. "मदविमोहितचित्ता" माघ० १०-२१।

**वियत् ವಿಯತ್** (न०) ಆಕಾಶ, ಅಂತರಿಕ್ಷ. वियच्छति— वि+यम (उपरमे) "क्विप्" (३-२-१७८)। "वियत्पयोधिं तरतां विशालं विमानदीप्तेन गरुत्मता न:" याद० १८-१८। "वियति बहुतरं स्तोकमुर्व्यां प्रयाति" शाकु० १-७।

**वियद्गङ्गा ವಿಯದ್ಗಂಗಾ** (स्त्री०) ಆಕಾಶಗಂಗೆ. वियतो गङ्गा।

**वियद्भूति ವಿಯದ್ಭೂತಿ** (स्त्री०) ಅಂಧಕಾರ, ಕತ್ತಲೆ, ತಮಸ್ಸು. वियतो भूतिरिव।

**वियन्मणि ವಿಯನ್ಮಣಿ** (पुं०) ಸೂರ್ಯ. वियतो मणि:।

**वियम ವಿಯಮ** (पुं०) 1. ನಿರೋಧ, ಹತೋಟಿ, ಸಂಯಮ. वि+यम (उपरमे) "अप्" (३-३-६३)। 2. ಕಷ್ಟ, ಪೀಡೆ, ಯಾತನೆ. 3. ವಿರಾಮ, ನಿಲುಗಡೆ, ಬಿಡುವು. "घञ्" (३-३-१८)। **-वियाम: -ವಿಯಾಮಃ**.

**वियात ವಿಯಾತ** (वि०) 1. ಲಜ್ಜೆಯಿಲ್ಲದವನು, ನಾಚಿಕೆಯನ್ನು ತೊರೆದವನು. विरुद्धं यात:। 2. ಭಾಗ್ಯರಹಿತ, ಅದೃಷ್ಟಹೀನ.

**वियाम ವಿಯಾಮ** (पुं०) "वियम" ನೋಡಿ.

**वियुक्त ವಿಯುಕ್ತ** (वि०) ಬೇರೆಯಾದ, ಅಗಲಿದ. वि+युजिर् (योगे) "क्तः" (३-४-७२)। "परस्पराक्रन्दिनि चक्रवाकयोः पुरोवियुक्ते मिथुने कृपावती" कुमा० ५-२६।

**वियोग ವಿಯೋಗ** (पुं०) 1. ಅಗಲುವಿಕೆ, ಬೇರೆಯಾಗುವುದು, ದೂರದಲ್ಲಿರುವುದು. वि+युजिर् (योगे) "घञ्" (३-३-१८)। "सोत्कण्ठं किमपि पृथासुतः प्रदध्यौ संधत्ते भृशमरतिं हि सद्वियोगः" किरा० ५-५१। 2. ಕಳೆದುಕೊಳ್ಳುವುದು, ನಿರಂತರವಾಗಿ ಅಗಲುವುದು. "यस्य योगं न वाञ्छन्ति वियोगभयकातराः। भजन्ति चरणाम्भोजं मुनयो हरिमेधसः" भाग० ९-१३-९।

**वियोगभाज् ವಿಯೋಗಭಾಜ್** (वि०) ವಿಯೋಗವನ್ನು ಹೊಂದಿರುವ, ಪರಸ್ಪರ ಅಗಲಿರುವ. वियोगं विश्लेषं भजति—भज (सेवायाम्) "ण्विः" (३-२-६२)। "वियोगभाजां हृदि कण्टकैः कटुर्निधीयसे कर्णिशरः स्मरेण यत्" नैष० १-७९।

**वियोगिन् ವಿಯೋಗಿನ್** (वि०) 1. ಅಗಲಿಕೆಯುಳ್ಳ, ವಿಯೋಗಹೊಂದಿರುವ. वियोगोऽस्यास्ति "इनिः" (५-२-११५)। "वियोगिदाहाय कटूभवत्त्विषस्तुषारभानोरिव खण्डमाहृतम्" नैष० १६-७४। स्त्रियां "ङीप्" (४-१-५)। -नी -ನೀ. 2. ವಿರಹಹೊಂದಿರುವ ಹೆಂಗಸು.

**वियोगिनी ವಿಯೋಗಿನೀ** (स्त्री०) 1. ವಿರಹಹೊಂದಿರುವ ಹೆಂಗಸು. 2. ಪಕ್ಷಿಗಳ ಸಂಬಂಧಹೊಂದಿರುವ ವೃಕ್ಷ, ಲತೆ. वियोगोऽस्या अस्ति, वीनां पक्षिणां योगः सम्बन्धोऽस्यास्ति वा "इनिः" (५-२-११५)। "ङीप्" (४-१-५)। "वियोगिनीमैक्षत दाडिमीमसौ प्रियस्मृतेः स्पष्टमुदीतकण्टकाम्" नैष० १-८३।

**वियोजित ವಿಯೋಜಿತ** (वि०) ಅಗಲಿಸಲ್ಪಟ್ಟ, ಬೇರ್ಪಡಿಸಲ್ಪಟ್ಟ. वि + युजिर् (योगे) + णिच् "क्तः" (३-२-१०२)।

**विरक्त ವಿರಕ್ತ** (वि०) 1. ವೈರಾಗ್ಯದಿಂದ ಕೂಡಿದ, ಎಲ್ಲಾ ಲೌಕಿಕ ವಿಷಯಗಳಲ್ಲೂ ಪ್ರೀತಿಯನ್ನು ತೊರೆದಿರುವ. वि+रञ्ज (रागे) "क्तः" (३-४-७२)। "हानादानविरक्तमार्गनिरतः कश्चित्तपस्वी स्थितः" भर्तृ० ३-९५। 2. ಬಹಳ ಕೆಂಪಾದ. "विरक्तसन्ध्याकपिशं पुरस्तात् यतो रजः पार्थिवमुज्जिहीते" रघु० १३-६४। 3. ಯಾವ ಬಣ್ಣವೂ ಇಲ್ಲದ, ವರ್ಣರಹಿತವಾದ. 4. ಕಾಮ ಕ್ರೋಧಾದಿಗಳನ್ನು ತ್ಯಜಿಸಿರುವ.

**विरक्ता ವಿರಕ್ತಾ** (स्त्री०) ಪ್ರೀತಿಯಿಲ್ಲದ–ಇಷ್ಟವಿಲ್ಲದ–ಹೆಂಗಸು, ಅನುಕೂಲವಾಗಿಲ್ಲದ ಹೆಂಗಸು. "यां चिन्तयामि सततं मयि सा विरक्ता सा चान्यमिच्छति जनं स जनोऽन्यरक्तः। अस्मत्कृतेऽपि परितुष्यति काचिदन्या धिक् तां च तं च मदनं च इमां च मां च" नीतिशतकम्।

**विरक्ति ವಿರಕ್ತಿ** (स्त्री०) 1. ವೈರಾಗ್ಯ, ಲೌಕಿಕ ಎಲ್ಲಾ ವಿಷಯಗಳಲ್ಲೂ ಪ್ರೀತಿಯನ್ನು ತೊರೆಯುವಿಕೆ. वि+रञ्ज (रागे) "क्तिन्" (३-३-९४)। "देहो गुरुर्मम विरक्तिविवेकहेतुः" भाग० ११-९-२५। 2. ಅತೃಪ್ತಿ, ಅಸಮಾಧಾನ, ಸಂತೋಷವಿಲ್ಲದಿರುವಿಕೆ. 3. ವಿಶ್ವಾಸವಿಲ್ಲದಿರುವಿಕೆ. 4. ಇಷ್ಟವಿಲ್ಲದಿರುವಿಕೆ, ಅಪೇಕ್ಷೆಯಿಲ್ಲದಿರುವಿಕೆ.

**विरचन ವಿರಚನ** (न०) 1. ಏರ್ಪಾಡು, ವ್ಯವಸ್ಥೆ, ಕ್ರಮದಲ್ಲಿಡುವುದು, ಅಣಿಮಾಡುವುದು. वि+रच (प्रतियत्ने) +णिच् भावे "ल्युट्" (३-३-११५)। "दूष्यैरिव क्षितिभृतां द्विरदैरुदारतारावलीविरचनैर्व्यरुचन्निवासाः" माघ० ५-२१। 2. ರಚಿಸುವುದು, ನಿರ್ಮಿಸುವುದು. 3. ಉತ್ಪತ್ತಿಮಾಡುವುದು, ಸೃಷ್ಟಿಸುವುದು, ಉಂಟುಮಾಡುವುದು. 4. ರಚನೆ, ಗ್ರಥನ, ಜೋಡಣೆ. "युच्" (३-३-१०७)। -रचना -ರಚನಾ.

**विरचयत् ವಿರಚಯತ್** (वि०) 1. ರಚಿಸುತ್ತಿರುವ. 2. ನಿರ್ಮಿಸುತ್ತಿರುವ. 3. ಸೃಷ್ಟಿಸುತ್ತಿರುವ. 4 ಏರ್ಪಡಿಸುತ್ತಿರುವ. वि + रच (प्रतियत्ने) + णिच् "शतृ" (३-२-१२४)। स्त्रियां "ङीप्" (४-१-६)। -यन्ती -ಯನ್ತೀ.

**विरचित ವಿರಚಿತ** (वि०) 1. ಮಾಡಲ್ಪಟ್ಟ. 2. ರಚಿಸಲ್ಪಟ್ಟ (ಗ್ರಂಥ). वि+रच (प्रतियत्ने)+णिच् "क्तः" (३-२-१०२)। "इति विरचितवाग्भिर्वन्दिपुत्रैः कुमारः" रघु० ५-७५। 3. ನಿರ್ಮಿಸಲ್ಪಟ್ಟ. 4. ಏರ್ಪಡಿಸಲ್ಪಟ್ಟ.

**विरजस् ವಿರಜಸ್** (वि०) 1. ಧೂಳಿಲ್ಲದ. विगतं रजो धूलिर्यत्र। "एष नो विरजाः पन्थाः दृश्यते देवसद्मनः" भा०। 2. ಸ್ವಚ್ಛವಾದ, ಕೊಳೆಯಿಲ್ಲದ, ಮಾಲಿನ್ಯವಿಲ್ಲದ. 3. ದೋಷವಿಲ್ಲದ, ಶುದ್ಧವಾದ. 4. ರಜೋಗುಣವಿಲ್ಲದ. "असक्तदृष्टिर्विरजाः सदैव देवोऽपरः सुप्रभदेवनामा" माघ०। (स्त्री०) 5. ಮುಟ್ಟುನಿಂತುಹೋದ ಹೆಂಗಸು. विनिवृत्तं रजः शोणितं यस्याः। "कप्"। -रजस्का -ರಜಸ್ಕಾ.

**विरजस्तमस् ವಿರಜಸ್ತಮಸ್** (वि०) ರಜೋಗುಣ ಮತ್ತು ತಮೋಗುಣಗಳನ್ನು ಕಳೆದುಕೊಂಡಿರುವ, ರಜೋಗುಣ ಮತ್ತು ತಮೋಗುಣಗಳ ಕಾರ್ಯಗಳನ್ನು ಬಿಟ್ಟಿರುವ. विगते रजस्तमसी यस्मात्।

**विरजा ವಿರಜಾ** (स्त्री०) 1. ಗರಿಕೆಹುಲ್ಲು, 2 ನಹುಷನ ಪತ್ನಿ, ಯಯಾತಿಯ ತಾಯಿ. 3. ಒಂದು ನದಿ.

**विरत ವಿರತ** (वि०) 1. ನಿವೃತ್ತಿಹೊಂದಿದ, ವಿಶ್ರಾಂತಿ ಹೊಂದಿದ. वि+रमु (क्रीडायाम्) "क्तः" (३-४-७२)। 2 ವಿರಾಮಹೊಂದಿದ, ನಿಂತುಹೋದ.

**विरति ವಿರತಿ** (स्त्री०) 1. ನಿವೃತ್ತಿ, ವಿಶ್ರಾಂತಿ. 2. ವಿರಾಮ, ನಿಲ್ಲುವುದು, ನಿಲುಕಡೆ. वि+रमु (क्रीडायाम्) "क्तिन्" (३-३-९४)। "वितमसि विषये स्थिता इवासन् विरतिविहीनविहारजागरेण" याद० २४-७०।

**विरल ವಿರಲ** (वि०) 1. ಅವಕಾಶವುಳ್ಳ, ಮಧ್ಯೆ ಮಧ್ಯೆ ವ್ಯವಧಾನವುಳ್ಳ, ಮಧ್ಯೆ ಅಂತರವುಳ್ಳ. वि राति—रा (दाने) "कलन्" बाहु०। "पुरा यत्र स्रोतः पुलिनमधुना तत्र सरितां विपर्यासं यातो घनविरलभावः क्षितिरुहाम्" उ० रा० २-२७। 2. ಅಲ್ಪವಾದ, ಸ್ವಲ್ಪವಾದ. "विरलातपच्छविरनुष्णवपु परितो विपाण्डु दधदभ्रशिरः" माघ० ९-३। 3. ತೆಳುವಾದ, ಒತ್ತಾಗಿಲ್ಲದ. 4. ಅಪೂರ್ವವಾದ, ದುರ್ಲಭವಾದ, ಸಾಮಾನ್ಯವಾಗಿ ಕಾಣಬರದ. "स्तिमितोन्नतसंचारा जनसन्तापहारिणः। जायन्ते विरला लोके जलदा इव सज्जनाः" पञ्चतं० १-३०। (अव्य०) 5. ಅಪೂರ್ವವಾಗಿ, ದುರ್ಲಭವಾಗಿ. (न०) 6. ಮೊಸರು.

**विरस ವಿರಸ** (वि०) 1. ಸಂತೋಷವಿಲ್ಲದ, ಯಾತನೆಯಿಂದ ಕೂಡಿದ. विगतो रसो यस्मात्। "सरले साहसरागं परिहर रम्भोरु मुञ्च संरम्भम्। विरसं विरहायासं सोढुं तव चित्तमसहं मे" मालती० ६-१०। 2. ರಸವಿಲ್ಲದ, ರುಚಿಯಿಲ್ಲದ, ಮಧುರ ಮೊದಲಾದ ಭೋಜ್ಯರಸವಿಲ್ಲದ. 3. ಪ್ರೇಮವಿಲ್ಲದ, ಪ್ರೀತಿಯಿಲ್ಲದ, 4. ದ್ರವವಿಲ್ಲದ, ಸಾರವಿಲ್ಲದ. 5. ಶೃಂಗಾರಾದಿ ರಸಶೂನ್ಯವಾದ.

**विरह ವಿರಹ** (पुं०) 1. ಅಗಲಿಕೆ, ಬೇರೆಯಾಗಿರುವುದು, ನಾಯಿಕಾನಾಯಕರ ಪ್ರತ್ಯೇಕ ವಾಸ. वि+रहं (त्यागे) "घः" (३-३-११८)। "अमृतस्रुतोऽपि विरहाद्भवतो यदमूं दहन्ति हिमरश्मिरुचः" माघ० ९-६८। 2. ವಿಚ್ಛೇದ, ಪತಿಯನ್ನು ಬಿಟ್ಟು ಪತ್ನಿಯು ಪ್ರತ್ಯೇಕ ವಾಸಮಾಡುವುದು. ಇದು ಸ್ತ್ರೀಯರಿಗೆ ಉಕ್ತವಾಗಿರುವ ಆರು ವಿಧ ದೋಷಗಳಲ್ಲೊಂದು. "पानं दुर्जनसंसर्गः पत्या च विरहोऽटनम्। स्वप्नोऽन्यगेहे वासश्च नारीणां दूषणानि षट्" मनु० ९-१३। 3. ಪರಿತ್ಯಾಗ, ತೊರೆದು ಬಿಡುವುದು, ಬಿಟ್ಟುಹೋಗುವುದು. 4. ಏಕಾಂತದಲ್ಲಿರುವುದು, ಒಂಟಿಯಾಗಿರುವುದು, ಏಕಾಂಗಿಯಾಗಿರುವುದು.

**विरहिणी ವಿರಹಿಣೀ** (स्त्री०) 1. ಪತಿಯಿಂದ ತ್ಯಜಿಸಲ್ಪಟ್ಟು ಪ್ರತ್ಯೇಕವಾಗಿರುವ ಹೆಂಗಸು. 2. ಪತಿಯ ಪ್ರವಾಸಕಾಲದಲ್ಲಿ ಒಂಟಿಯಾಗಿ ವೇದನೆಯನ್ನು ಅನುಭವಿಸುತ್ತಿರುವ ಹೆಂಗಸು. विरहोऽस्या अस्ति "इनिः" (५-२-११५)। "ङीप्" (४-१-५)।

**विरहित ವಿರಹಿತ** (वि०) 1. ತ್ಯಜಿಸಲ್ಪಟ್ಟ, ಬಿಡಲ್ಪಟ್ಟ. वि+रह (त्यागे) "क्तः" (३-२-१०२)। "कररुद्धनीविदयितोपगतौ गलितं त्वराविरहितासनया" माघ० ९-७५। 2. ಒಂಟಿಯಾಗಿರುವ. 3. ದೂರದಲ್ಲಿರುವ ಪತ್ನಿಯ ವಿರಹವುಳ್ಳ.

**विरहिन् ವಿರಹಿನ್** (वि०) 1. ಬೇರೆಯಾಗಿರುವ, ಪ್ರತ್ಯೇಕವಾಗಿರುವ. 2. ದೂರದಲ್ಲಿದ್ದು ಅಗಲಿರುವ. विरहोऽस्यास्ति—विरह "इनिः" (५-२-११५)। "विरहिणः प्रहिणस्ति शरीरिणः" भर्तृ० २-८१। 3. ಒಂಟಿಯಾಗಿರುವ. ಏಕಾಂತದಲ್ಲಿರುವ.

**विराग ವಿರಾಗ** (पुं०) 1. ಅಪರಾಗ, ಅವಿಶ್ವಾಸ, ಪ್ರೀತಿಯಿಲ್ಲದಿರುವಿಕೆ. वि+रञ्ज (रागे) "घञ्" (३-३-१८)। "आर्येण तेषु तेषु विरागकारणेषु परिहृतेषु सुगृहीतनामधेये देवे चन्द्रगुप्ते दृढमनुरक्ताः प्रकृतयः" मुद्रा० १। 2. ಒಲವಿಲ್ಲದಿರುವಿಕೆ, ಮನಸ್ಸಿಲ್ಲದಿರುವಿಕೆ. 3. ಪ್ರಾಪಂಚಿಕ ವಿಷಯಗಳಲ್ಲಿ ಅನಾದರ, –ತಾತ್ಸಾರ. (वि०) 4. ನಾನಾ ವಿಧ ಬಣ್ಣಗಳಿಂದ ಕೂಡಿದ. 5. ಲೌಕಿಕ ವಿಷಯಗಳಲ್ಲಿ ಆಸಕ್ತಿಯಿಲ್ಲದ.

**विरागिन् ವಿರಾಗಿನ್** (वि०) 1. ಪ್ರೀತಿಯಿಲ್ಲದ, ವಿಶ್ವಾಸವಿಲ್ಲದ. "इदमपास्य विरागि परागिणीः" माघ० ६-११। 2. ಒಲವಿಲ್ಲದ. 3. ಸೌಖ್ಯದಲ್ಲಿ ಆದರವಿಲ್ಲದ.

**विराज् ವಿರಾಜ್** (पुं०) 1. ಕ್ಷತ್ರಿಯ. विशेषेण राजते—राज् (दीप्तौ) "क्विप्" (३-२-७६)। 2. ವಿರಾಟ್‌ಪುರುಷ, ಜಗತ್ತಿನ ಸೃಷ್ಟಿಕರ್ತನಾದ ಪರಮಾತ್ಮ. ಚತುರ್ಮುಖನ ದೇಹದಲ್ಲಿ ಅನುಪ್ರವೇಶಮಾಡಿದ ಪರಮಾತ್ಮನು ತನ್ನ ದೇಹವನ್ನು ಎರಡು ಭಾಗವಾಗಿ ಮಾಡಲು ಒಂದು ಅರ್ಧದಿಂದ ಪುರುಷನ ಉತ್ಪತ್ತಿಯಾಯಿತು. ಇನ್ನೊಂದು ಅರ್ಧವು ಸ್ತ್ರೀಯಾಗಿ ಆಸ್ತ್ರೀಯಲ್ಲಿ ವಿರಾಟ್‌ಪುರುಷನು

ಆವಿರ್ಭವಿಸಿದನು. ವಿರಾಟ್‌ಪುರುಷನು ತಪಸ್ಸುಮಾಡಿ ಜಗತ್ತಿನ ಸೃಷ್ಟಿಕಾರ್ಯಕ್ಕಾಗಿ ಮನುವನ್ನು ಸೃಷ್ಟಿಸಿದನು. "द्विधा कृत्वात्मनो देहमर्धेन पुरुषोऽभवत्। अर्धेन नारी तस्यां स विराजमसृजत्प्रभुः॥ तपस्तप्त्वाऽसृजद्यं तु स स्वयं पुरुषो विराट्। तं मां वित्तास्य सर्वस्य स्रष्टारं द्विजसत्तमाः" मनु० १-३२, ३३। ಈ ವಿರಾಟ್ ಪುರುಷನ ದೇಹದಲ್ಲಿ ಚತುರ್ದಶಭುವನಗಳೂ ಸೇರಿ ಕೊಂಡಿವೆ. ["चतुर्दशभुवन" ಪದದಲ್ಲಿ ನೋಡಿ].

**विराजमान ವಿರಾಜಮಾನ** (वि०) ಪ್ರಕಾಶಿಸುತ್ತಿರುವ, ಹೊಳೆಯುತ್ತಿರುವ. वि + राज् (दीप्तौ) "शानच्" (३-२-१२४)। "गण्डोज्ज्वलामुज्ज्वलनाभिचक्रया विराजमानां नवयोदरश्रिया" माघ० १२-८।

**विराजित ವಿರಾಜಿತ** (वि०) ಪ್ರಕಾಶಗೊಳಿಸಲ್ಪಟ್ಟ, ಶೋಭಿಸಲ್ಪಟ್ಟ. वि + राज् (दीप्तौ) "क्तः" (३-२-१०२)।

**विराट ವಿರಾಟ** (पुं०) ವಿರಾಟರಾಜ, ಮತ್ಸ್ಯದೇಶದ ಅಧಿಪತಿ. ಸುರಥೆ ಮತ್ತು ಸುದೇಷ್ಣೆ ಇವನ ಪತ್ನಿಯರು. ಶ್ವೇತ ಮತ್ತು ಶಂಖರೆಂಬುವರು ಸುರಥೆಯ ಪುತ್ರರು. ಉತ್ತರಕುಮಾರನೂ ಉತ್ತರೆಯೂ ಸುದೇಷ್ಣೆಯ ಮಕ್ಕಳು. [ಪಾಂಡವರು 12 ವರ್ಷ ವನವಾಸಮಾಡಿ ಒಂದು ವರ್ಷದ ಅಜ್ಞಾತವಾಸಕ್ಕಾಗಿ ವಿರಾಟನಲ್ಲಿಗೆ ಬಂದು ಸೇರಿದರು. ಎಲ್ಲರೂ ಬೇರೆ ಬೇರೆ ಹೆಸರುಗಳಿಂದ ವ್ಯವಹರಿಸುತ್ತ ರಾಜನಲ್ಲಿ ಆಶ್ರಯಪಡೆದರು. ಉತ್ತರಗೋಗ್ರಹಣ ಸಮಯದಲ್ಲಿ ಉತ್ತರಕುಮಾರನಿಗೆ ಸಾರಥಿಯಾಗಿದ್ದು ಕೌರವಸೇನೆಯನ್ನು ನೋಡಿ ಹೆದರಿಹೋದ ಉತ್ತರನ ಪರವಾಗಿ ಕೌರವರನ್ನು ಜಯಿಸಿ ಓಡಿಸಿದವನು ಅರ್ಜುನನೆಂದು ಕಂಕ (ಧರ್ಮರಾಜ)ನು ಹೇಳಲು ವಿರಾಟನು ಪಗಡೆಯ ದಾಳದಿಂದ ಧರ್ಮರಾಜನನ್ನು ಹೊಡೆದನು. ವಿರಾಟನು ಪಾಂಡವರ ನಿಜಸ್ಥಿತಿಯನ್ನು ತಿಳಿದನಂತರ ಭಯದಿಂದ ಕ್ಷಮೆಯನ್ನು ಬೇಡಿ ತನ್ನ ಪುತ್ರಿ ಉತ್ತರೆಯನ್ನು ಅರ್ಜುನನಿಗೆ ಕೊಟ್ಟು ಮದುವೆಮಾಡುವುದಾಗಿ ತಿಳಿಸಿದನು. ಭಾರತ ಮಹಾಯುದ್ಧದಲ್ಲಿ ವಿರಾಟನು ಪಾಂಡವರ ಪಕ್ಷದಲ್ಲಿದ್ದು ಬಹಳ ಹೋರಾಡಿದನು. ಉತ್ತರೆಯು ಅರ್ಜುನನ ಮಗನಾದ ಅಭಿಮನ್ಯುವನ್ನು ಮದುವೆಯಾದಳು.]

**विराद्ध ವಿರಾದ್ಧ** (वि०) ಅಪಕಾರಮಾಡಲ್ಪಟ್ಟ. वि+राध (संसिद्धौ) कर्म० "क्तः" (३-२-१०२)। "विराद्ध एवं भवता विराद्धा बहुधा च नः" माघ० २-४१।

**विराद्धृ ವಿರಾದ್ಧೃ** (वि०) ಅಪಕಾರಮಾಡುವ, ತೊಂದರೆ ಪಡಿಸುವ, ಪೀಡಿಸುವ. वि+राध (संसिद्धौ) "तृच्" (३-१-१३३)। "विराद्ध एवं भवता विराद्धा बहुधा च नः" माघ० २-४१।

**विराध ವಿರಾಧ** (पुं०) ಒಬ್ಬ ರಾಕ್ಷಸ. ಈ ರಾಕ್ಷಸನು ಪೂರ್ವದಲ್ಲಿ ತುಂಬುರು ಎಂಬ ಒಬ್ಬ ಗಂಧರ್ವ. [ಒಮ್ಮೆ ರಂಭೆಯನ್ನು ಅಡ್ಡಗಟ್ಟಿ ರಾಕ್ಷಸನಾಗಿ ಜನಿಸುವಂತೆ ಶಾಪ ಪಡೆದು ವಿರಾಧನೆಂಬ ಹೆಸರಿನಿಂದ ಲೋಕವನ್ನು ಪೀಡಿಸುತ್ತ ದಂಡಕಾರಣ್ಯದಲ್ಲಿ ರಾಮಲಕ್ಷ್ಮಣರೊಡನೆ ಬರುತ್ತಿದ್ದ ಸೀತೆಯನ್ನು ಅಪಹರಿಸಲು ರಾಮಲಕ್ಷ್ಮಣರು ಇವನ ಭುಜಗಳನ್ನು ಕತ್ತರಿಸಿಹಾಕಿದರು. ಆಗ ಇವನು ಗಂಧರ್ವಶರೀರವನ್ನು ಪಡೆದು ಹೊರಟುಹೋದನು.]

**विराधन ವಿರಾಧನ** (न०) ಪೀಡಿಸುವುದು, ಹಿಂಸಿಸುವುದು. वि+राध (संसिद्धौ) "ल्युट्" (३-३-११५)।

**विराम ವಿರಾಮ** (पुं०) 1. ವಿಶ್ರಾಂತಿ, ಬಿಡುವು, ನಿಲುಕಡೆ. वि + रम् (क्रीडायाम्) "घञ्" (३-३-१८)। "सुधां विना न प्रययुर्विरामम्" भर्तृ० १-७१। 2. ಸಮಾಪ್ತಿ, ಕೊನೆ. "सेकः शीकरिणा करेण विहितः कामं विरामे पुनः न स्नेहादनरालनाललनिलनीपत्रातपत्रं धृतम्" मालती० ९-३४। 3. ಕಾರ್ಯದ ಮಧ್ಯೆ ಕೊಡುವ ನಿಲುಕಡೆ, ಕೆಲಸದ ಮಧ್ಯದ ಅವಕಾಶ, ಕಾರ್ಯ ಮಾಡದೆ ಮಧ್ಯೆ ಸುಮ್ಮನಿರುವ ಕಾಲ. 4. ಸಂಗೀತದ ಮಧ್ಯೆ ಕೊಡುವ ಕಾಲಾವಕಾಶ. "वर्णानामपि मूर्च्छनान्तरगतं तारं विरामे द्रुतम्" मृच्छ० ३-५। 5. ವಿಷ್ಣು. वरप्रदैः ब्रह्मादिभिः अवध्यत्वादिभिः वरैः विरम्यतेऽस्मिन् — वि + रम् अधि० "घञ्" (३-३-१२१)। "वरप्रदैर्ब्रह्ममुख्यैरवध्यत्वादिभिर्वरैः। यस्मिन्विरम्यत इति स विरामः परिकीर्तितः" इति निरुक्तिः। "रामो विरामो विरतः" वि० स०।

**विराव ವಿರಾವ** (पुं०) ಶಬ್ದ, ಸದ್ದು. वि + रु (शब्दे) "घञ्" (३-३-२२)। "अनुपतति विरावैः पत्रिणां व्याहरन्ती रजनिमचिरजाता पूर्वसन्ध्या सुतेव" माघ० ११-४०।

**विराविन् ವಿರಾವಿನ್** (वि०) 1. ಶಬ್ದದಿಂದ ಕೂಡಿದ, ಸದ್ದುಮಾಡುತ್ತಿರುವ. 2. ಕೂಗಿಕೊಳ್ಳುವ, ಕಿರಿಚುವ. विरावोऽस्यास्ति "इनिः" (५-२-११५)।

**विरिक्त ವಿರಿಕ್ತ** (वि०) ವಿರೇಚನಮಾಡಿದ, ಹೊಟ್ಟೆಯನ್ನು ಬರಿದುಮಾಡಿದ.

**विरिञ्चि ವಿರಿಂಚಿ** (पुं०) 1. ಬ್ರಹ್ಮ, ಚತುರ್ಮುಖ. विरचयति — रच (प्रतियत्ने)।+ णिच् "इः" (उ० ४-१३९)। पृषो० अकारस्य इत्वम् नुम् च। इत्वाभावे विरञ्चिः इत्यपि रूपम्। "विरिञ्चिपूर्वैरपि दुर्निरीक्षं विश्वाश्रयं रूपमशेषमूर्तेः" याद० २३-३३। 2. ವಿಷ್ಣು. 3. ಶಿವ, ಪರಮೇಶ್ವರ.

**विरिब्ध ವಿರಿಬ್ಧ** (पुं०) ಉದಾತ್ತಾದಿ ಸ್ವರ. वि + रेभृ (शब्दे) "क्तः" (७-२-१८)। इडभावो निपा०। उपधाया इत्वमपि। "विधिविहितविरिब्धैः सामधेनीरधीत्य" माघ० ११-४१।

**विरुग्ण ವಿರುಗ್ಣ** (वि०) 1. ಮುರಿದುಹೋದ ಧಾರೆ (ಅಲುಗು)ಯುಳ್ಳ, ಬಗ್ಗಿರುವ, ಮಡಿಚಿಕೊಂಡಿರುವ. वि+रुजो (भङ्गे) "क्तः" (३-४-७२)। "विरुग्णोदग्रधाराग्रः कुलिशो मम वक्षसि" भट्टि० ५-२५। 2. ಭಿನ್ನವಾದ, ಒಡೆದುಹೋದ, ಭಗ್ನವಾದ. "विरुग्णसंकीर्णविपन्नभिन्नैः" भट्टि० १२-७५। 3. ಕುಟಿಲವಾದ, ವಕ್ರವಾಗಿರುವ, ಬಗ್ಗಿರುವ. 4. ರೋಗದಿಂದ ಕೂಡಿದ. "त्वया विहीनस्तव शोकरुग्णः" रामा०।

**विरुत ವಿರುತ** (न०) ಶಬ್ದ, ಧ್ವನಿ. विशेषं रुतम्। "संहर्षादलिविरुतैरितीव गायल्लोलोर्मौ पयसि महोत्पलं ननर्त" माघ० ८-२३।

**विरुद ವಿರುದ** (पुंन०) 1. ರಾಜಸ್ತುತಿ, ರಾಜನನ್ನು ಹೊಗಳುವ ಗದ್ಯಪದ್ಯಮಯ ಕಾವ್ಯ. "गद्यपद्यमयी राजस्तुतिर्विरुदमुच्यते" सा० द० ६-३३७। वबयोरभेदः। 2. ಕೂಗಾಟ, ಕಿರುಚಾಟ.

**विरुद्ध ವಿರುದ್ಧ** (वि०) 1. ತಡೆಯಲ್ಪಟ್ಟ, ಅಡಚಣೆಯುಂಟುಮಾಡಲ್ಪಟ್ಟ. वि+रुधिर् (आवरणे) "क्तः" (३-२-१०२)। 2. ವಿಪರೀತವಾದ, ಪ್ರತಿಕೂಲವಾದ, ವ್ಯತಿರಿಕ್ತವಾದ. "सुहृदर्थमीहितमजिह्मधियां प्रकृतेर्विराजति विरुद्धमपि" माघ० ९-६२। 3. ಶತ್ರುತ್ವವುಳ್ಳ, ದ್ವೇಷವುಳ್ಳ. 4. ಭಿನ್ನವಾದ, ಬೇರೆಯಾದ, ಅಸಂಗತವಾದ, ಸಮಂಜಸವಲ್ಲದ. 5. ನಿಷಿದ್ಧವಾದ, ನಿರೋಧಿಸಲ್ಪಟ್ಟ.

**विरूढ ವಿರೂಢ** (वि०) 1. ಮೊಳಕೆಹೊರಟು ಮೇಲಕ್ಕೆ ಬೆಳೆದಿರುವ. वि + रुह (बीजजन्मादौ) "क्तः" (३-४-७२)। "तास्वेव संप्रति विरूढतृणाङ्कुरासु बीजाञ्जलिः पतति" मृच्छ० १-९। 2. ಹುಟ್ಟಿರುವ. "गङ्गाप्रपातान्तविरूढशष्पं गौरीगुरोर्गह्वरमाविवेश" रघु० २-२६। 3. ಮೇಲಕ್ಕೆ ಹತ್ತಿರುವ, ಮೇಲಕ್ಕೆ ಏರಿರುವ. 4. ಬೆಳೆದಿರುವ, ಹುಟ್ಟಿಕೊಂಡಿರುವ. "लीलालूनपुनर्विरूढशिरसो वीरस्य लिप्सोर्वरम्" अनर्घ०।

**विरूप ವಿರೂಪ** (न०) 1. ವಿಕಾರವಾದ ರೂಪ. ಅಂದವಲ್ಲದ ರೂಪ. विकृतं रूपम्। (वि०) 2. ವಿಕಾರವಾದ ರೂಪವುಳ್ಳ, ಕೆಟ್ಟ ಆಕಾರವುಳ್ಳ. "सुरूपं वा विरूपं वा पुमानित्येव भुञ्जते" मनु० ९-१४। विकृतं रूपं यस्य। 3. ವಿರುದ್ಧವಾದ, ಅನುರೂಪವಲ್ಲದ, ಸದೃಶವಲ್ಲದ. "विरूपयोः संघटना या च तद्विषमं मतम्" सा० द०। "सद्यः करस्पर्शमवाप्य चित्रं रणे रणे यस्य कृपाणलेखा। तमालनीला शरदिन्दुपाण्डु यशस्त्रिलोकाभरणं प्रसूते"। (स्त्री०) -पा -ಪಾ. 4. ತೀಟಕಸಂಧಿ. 5. ಅತಿಬಜೆ.

**विरूपाक्ष ವಿರೂಪಾಕ್ಷ** (पुं०) 1. ಈಶ್ವರ, ಪರಶಿವ. विरूपे अक्षिणी यस्य। "या नः प्रीतिर्विरूपाक्ष त्वदनुध्यानसंभवा" कुमा० ६-२१। 2. ಒಬ್ಬ ರಾಕ್ಷಸ. "विरूपाक्षस्ततोऽक्रीडत् संग्रामे मत्तहस्तिना" भट्टि० १७-७८। (वि०) 3. ವಿಕಾರವಾದ ಕಣ್ಣುಗಳುಳ್ಳ. विरूपाण्यक्षीणि यस्य। "वपुर्विरूपाक्षमलक्ष्यजन्मता दिगम्बरत्वेन निवेदितं वसु" कुमा० ५-७२।

**विरेक ವಿರೇಕ** (पुं०) ವಿರೇಚನ, ಭೇದಿಯಾಗುವುದು. वि + रिचिर् (विरेचने) "घञ्" (३-३-१८)।

**विरेचन ವಿರೇಚನ** (न०) 1. ಮಲವಿಮೋಚನೆ, ಭೇದಿ. वि + रिचिर (विरेचने) "ल्युट्" (३-३-१८)। "हरीतकी समगुडा मधुना सह पेषिता। विरेचनकरी रुद्र भवतीति न संशयः"। (वि०) 2. ಭೇದಿಮಾಡಿಸುವ (ಔಷಧ). विशेषेण रेचयति — रिचिर् (विरेचने) + णिच् "ल्युः" (३-१-१३४)।

**विरेचित ವಿರೇಚಿತ** (वि०) ಭೇದಿಮಾಡಿಸಲ್ಪಟ್ಟ, ಹೊಟ್ಟೆ ಬರಿದುಮಾಡಲ್ಪಟ್ಟ. वि + रिचिर् (विरेचने) + णिच् "क्तः" (३-२-१०२)।

**विरोक ವಿರೋಕ** (पुं०) 1. ಸೂರ್ಯನ ಕಿರಣ. (न०) 2. ರಂಧ್ರ, ಛಿದ್ರ, ವಿವರ. वि + रुच (दीप्तौ) "घञ्" (३-३-१२१)। "नासाविरोकपवनोल्लसितं तनीयो रोमाञ्चतामिव जगाम रजःपृथिव्याः" माघ० ५-५४।

**विरोचन ವಿರೋಚನ** (पुं०) 1. ರವಿ, ಸೂರ್ಯ. विरोचते—वि + रुच (दीप्तौ) "युच्" (३-२-१४९)। "दीप्तिनिर्जितविरोचनादयं गां विरोचनसुतादभीप्सतः" माघ० १४-७४। 2. ಚಂದ್ರ. "तासां तद्वचनं श्रुत्वा

दक्ष: सोममथाब्रवीत् । समं वर्तस्व भार्यासु मा त्वां शप्से विरोचन" भा० । 3. ಅಗ್ನಿ. 4. ಪ್ರಹ್ಲಾದನ ಪುತ್ರ. "विरोचनः प्रह्लादस्य तनयेऽर्केऽग्निचन्द्रयोः" मेदि० । 5. ಅರ್ಕವೃಕ್ಷ, ಎಕ್ಕದ ಗಿಡ.

**विरोचनसुत ವಿರೋಚನಸುತ** (पुं०) ವಿರೋಚನನ ಪುತ್ರನಾದ ಬಲಿಚಕ್ರವರ್ತಿ. विरोचनस्य सुतः । "गां विरोचनसुतादभीप्सतः" माघ० १४-७४ ।

**विरोचिष्णु ವಿರೋಚಿಷ್ಣು** (वि०) ಪ್ರಕಾಶವಮಾನವಾದ, ಹೊಳೆಯುವ. वि + रुच (दीप्तौ) "इष्णुच्" (३-२-१३६) । "वायोरपि विकुर्वाणात् विरोचिष्णु तमोनुदम्" मनु० १-७७ ।

**विरोद्धव्य ವಿರೋದ್ಧವ್ಯ** (वि०) 1. ವಿರೋಧಕಟ್ಟಿಕೊಳ್ಳಲ್ಪಡುವ, ದ್ವೇಷಿಸಲ್ಪಡುವ. 2. ದ್ವೇಷಿಸಬೇಕಾದ. 3. ದ್ವೇಷಿಸಲು ಅರ್ಹನಾದ. वि + रुधिर् (आवरणे) "तव्यः" (३-१-९६)। 4. ತಡೆಯಲ್ಪಡುವ. 5. ಅಡ್ಡಿ ಮಾಡಲ್ಪಡುವ. 6. ತಡೆಯಬೇಕಾದ. 7. ಅಡ್ಡಿಮಾಡಬೇಕಾದ. "अनीयर्" (३-१-९६)। **–रोधनीयः –ರೋಧನೀಯಃ.**

**विरोद्धृ ವಿರೋದ್ಧೃ** (वि०) ದ್ವೇಷಿಸುವವನು. वि+रुधिर् (आवरणे) "तृच्" (३-१-१३३) ।

**विरोध ವಿರೋಧ** (पुं०) 1. ವೈರ, ದ್ವೇಷ, ಹಗೆತನ. वि + रुधिर् (आवरणे) "घञ्" (३-३-१८)। "विरोधो विश्रान्तः प्रसरति रसो निर्वृतिघनस्तदौद्धत्यं क्वापि व्रजति विनयः प्रह्वयति माम्" उ० रा० ६-११ । 2. ತಡೆ, ಅಡ್ಡಿ, ನಿರ್ಬಂಧ. 3. ತಡೆಯುವುದು, ಅಡ್ಡಗಟ್ಟುವುದು, ಅಡಚಣೆಯುಂಟುಮಾಡುವುದು. 4. ಅಸಂಗತವಾದ ವರ್ತನೆ, ಅಸಂಬದ್ಧ ನಡವಳಿಕೆ. 5. ಕಲಹ, ಜಗಳ. "विदधे विरोधमथ तेन सह" माघ० ९-५९ । "संजहार सहसा परिरब्धप्रेयसीषु विरहय्य विरोधम्" माघ० १०-४४ । 6. ವಿಪರೀತವಾದ ಅರ್ಥ. "श्रुति-स्मृतिविरोधे तु श्रुतिरेव गरीयसी" स्मृतिः । 7. ನಾಶ, ಅಳಿವು. "यस्त्वं प्राणविरोधेन कीर्तिमिच्छसि शाश्वतीम्" भा० । 8. ಒಂದು ಅರ್ಥಾಲಂಕಾರ, ಆಪಾತತಃ (ಮೇಲು ನೋಟಕ್ಕೆ) ವಿರೋಧವು ಕಂಡುಬಂದು ಕೊನೆಯಲ್ಲಿ ಅದಕ್ಕೆ ಪರಿಹಾರವಿರುವಲ್ಲಿ ವಿರೋಧಾಲಂಕಾರವಾಗುವುದು. ಇದನ್ನೇ "ವಿರೋಧಾಭಾಸ"ವೆಂದು ಹೇಳುವರು. "आभासत्वे विरोधस्य विरोधाभास उच्यते" । उदा: "विनापि तन्वि हारेण वक्षोजौ तव हारिणौ" । 9. ಏಕಕಾಲದಲ್ಲಿ ಒಂದೇ ಸ್ಥಳದಲ್ಲಿಲ್ಲದಿರುವಿಕೆ. ಘಟ ಮತ್ತು ಘಟಾಭಾವ ಇವೆರಡೂ ಏಕಕಾಲದಲ್ಲಿ ಏಕತ್ರ ಇರುವುದಿಲ್ಲವಾದುದರಿಂದ ಇಲ್ಲಿ ವಿರೋಧ. 10. ಆಡುವ ಮಾತಿನಲ್ಲಿ ಉಂಟಾಗಬಹುದಾದ ಬಾಧೆ. "स्ववाग्विरोधो यत्र स्यात् विरोधः स प्रकीर्तितः" । उदा: "वन्ध्या मे जननीत्येष विरोधः स्वोक्तिबाधतः"। ನನ್ನ ತಾಯಿ ಬಂಜೆ ಎಂದು ತಾಯಿಯ ಉದರದಲ್ಲಿ ಜನಿಸಿದವನು ಹೇಳುವ ಮಾತಿನಲ್ಲಿ ಕಂಡುಬರುವ ಬಾಧವೇ ವಿರೋಧ.

**विरोधन ವಿರೋಧನ** (न०) 1. ದ್ವೇಷಿಸುವುದು. वि + रुधिर् (आवरणे) "ल्युट्" (३-३-११५) । "ईदृक्-पापफलं पुत्र मातापित्रोर्विरोधनम्" । 2. ನಾಶ, ಅಳಿವು. "अदुष्टस्य हि संत्यागः सत्पथे निरतस्य च । निर्दहेदपि शक्रस्य द्युतिं धर्मविरोधनात्" रामा० । 3. (ನಾಟಕದಲ್ಲಿ) ವಿಮರ್ಶಸಂಧಿಯ ಒಂದು ಅಂಗ. ಕಾರ್ಯನಾಶದ ಜ್ಞಾನವು ವಿರೋಧನ. "कार्यात्ययोपगमनं विरोधनमिति स्मृतम्" सा० द० । "भीमेन प्रियसाहसेन रभसादल्पाव-शेषे जये सर्वे जीवितसंशयं वयममी वाचा समारोपिताः" वेणी० ६-१ ।

**विरोधिकृत् ವಿರೋಧಿಕೃತ್** (पुं०) ಪ್ರಭವಾದಿ ಅರವತ್ತು ಸಂವತ್ಸರಗಳಲ್ಲೊಂದು. विरोधिनं करोति — डु कृञ् (करणे) "क्विप्" (३-२-६१) ।

**विरोधिन् ವಿರೋಧಿನ್** (पुं०) 1. ವೈರಿ, ಶತ್ರು, ಹಗೆ. विरोधोऽस्यास्ति—"इनिः" (५-२-११५)। विरुणद्धि —वि + रुधिर् (आवरणे) "णिनिः" (३-२-७८) । "विरोधिनां विग्रहभेददक्षा मूर्तेव शक्तिः क्वचिद-स्खलन्ती" माघ० ३-१८ । 2. ಪ್ರಭವಾದಿ ಸಂವತ್ಸರಗಳಲ್ಲೊಂದು ಸಂವತ್ಸರ. (वि०) 3. ಪರಸ್ಪರ ವೈರವುಳ್ಳ, ದ್ವೇಷವುಳ್ಳ. "विरोधिसत्त्वोज्झितपूर्वमत्सरं द्रुमैरभीष्ट-प्रसवार्चितातिथि" कुमा० ५-१७ । 4. ಅಡ್ಡಗಟ್ಟುವ, ತಡೆಯುವ. 5. ಅಡ್ಡಿಯುಂಟುಮಾಡುವ. 6. ಸಾಮಂಜಸ್ಯವಿಲ್ಲದ, ಪರಸ್ಪರ ಹೊಂದಿಕೆಯಿಲ್ಲದ. 7. ಅಸಂಗತವಾದ ವರ್ತನೆಯುಳ್ಳ. 8. ಕಲಹಪ್ರಿಯನಾದ, ಜಗಳಗಂಟಿಯಾದ. 9. ಪ್ರತಿಕೂಲವಾದ, ಅನುಕೂಲವಲ್ಲದ.

**विरोपण ವಿರೋಪಣ** (न०) 1. ಗಿಡವನ್ನು ನೆಟ್ಟು ಬೆಳೆಸುವುದು. वि + रुह (बीजजन्मादौ) + णिच् "ल्युट्" (३-३-११५) । 2. (ಗಾಯವನ್ನು) ವಾಸಿಮಾಡುವುದು, –ಒಣಗಿಸುವುದು. (वि०) 3. (ಗಾಯವನ್ನು) ವಾಸಿಮಾಡುವ, –ಒಣಗಿಸುವ. कर्त० "ल्युः" (३-१-१३४) । "यस्य त्वया व्रणविरोपणमिङ्गुदीनां तैलं न्यषिच्यत मुखे कुशसूचिविद्धे" शाकु० ४-१३ ।

**विरोह ವಿರೋಹ** (ಪುಂ) ಬೆಳೆಯುವುದು. (ಸಸ್ಯಗಳು) ಬೆಳೆದು ಮೇಲಕ್ಕೆ ಏಳುವುದು. वि + रुह (बीजजन्मादौ) "घञ्" (३-३-१८)।

**विलक्ष ವಿಲಕ್ಷ** (वि०) 1. ವಿಸ್ಮಯಗೊಂಡ, ಆಶ್ಚರ್ಯದಿಂದ ಕೂಡಿದ. विशेषेण लक्ष्यते—लक्ष (आलोचने) + णिच् "अच्" (३-१-१३४)। "इति विज्ञाप्य सा देवी विषादाभावमात्मनः। विरराम ततस्तस्मै विलक्षा विश्वधारिणी" याद० १६-१२९। 2. ಲಜ್ಜೆಯುಳ್ಳ, ಅಪರಾಧದಿಂದ ನಾಚಿಕೆಪಡುವ. "विलूनमूलद्रुमसन्निभं स तं विलक्षमुत्थाप्य विहारयादवः" याद० १४-५४। "आत्मनः स्खलिते सम्यक् ज्ञातेऽन्यैर्यस्य जायते। अपत्रपाऽतिमहती स विलक्ष इति स्मृतः"।

**विलक्षण ವಿಲಕ್ಷಣ** (न०) 1. ಪ್ರಯೋಜನವಿಲ್ಲದ ಪರಿಸ್ಥಿತಿ. विगतं लक्षणम् आलोचनं यत्र — वि + लक्ष (आलोचने) "ल्युट्" (३-३-११५)। 2. ಆಲೋಚಿಸುವುದು. (वि०) 3. ಎಲ್ಲಕ್ಕಿಂತಲೂ ಭಿನ್ನವಾದ, ಅಸಾಧಾರಣವಾದ. "अथैवमखिललोकपालसमो विलक्षणैर्जडवद्भूतवेशभाषाचरितैरविलक्षितभगवत्प्रभावः" भाग० ५-६-६। 4. ವಿಶಿಷ್ಟವಾದ ಲಕ್ಷಣಗಳಿಂದ ಕೂಡಿದ. विशिष्टं लक्षणं यस्य। 5. ವಿರುದ್ಧಲಕ್ಷಣಗಳಿಂದ ಕೂಡಿದ.

**विलक्षित ವಿಲಕ್ಷಿತ** (वि०) 1. ಚೆನ್ನಾಗಿ ಆಲೋಚಿಸಲ್ಪಟ್ಟ. 2. ವಿಶೇಷವಾಗಿ ಪರಿಗಣಿಸಲ್ಪಟ್ಟ. 3. ತಬ್ಬಿಬ್ಬು ಉಂಟುಮಾಡಲ್ಪಟ್ಟ, ಕಿರಿಕಿರಿಯುಂಟುಮಾಡಲ್ಪಟ್ಟ, ದಿಗ್ಭ್ರಮೆಯುಂಟುಮಾಡಲ್ಪಟ್ಟ.

**विलग्न ವಿಲಗ್ನ** (पुंन०) 1. ಮಧ್ಯಪ್ರದೇಶ, ಕಟಿಭಾಗ, ಸೊಂಟ, ನಡು. विशेषेण लग्नम्। 2. ಜನ್ಮಲಗ್ನ, ಹುಟ್ಟಿದ ಲಗ್ನ. "गोचरे वा विलग्ने वा ये ग्रहा रिष्टसूचकाः। पूजयेत्तान् प्रयत्नेन पूजिताः स्युः शुभावहाः"। 3. ಮೇಷ ಮೊದಲಾದ ಲಗ್ನ. (वि०) 4. ತೆಳುವಾದ, ಸಣ್ಣದಾದ. "मध्येन सा वेदिविलग्नमध्या वलित्रयं चारु बभार बाला" कुमा० १-३९। 5. ಇಟ್ಟಿರುವ, ಸಂಕ್ರಾಂತವಾದ, ಸೇರಿಕೊಂಡಿರುವ. "स प्रापदप्राप्तपराभियोगं नरेन्द्रगुप्तं नगरं मुहूर्तात्। पुरोविलग्नैर्हरदृष्टिपातैः सुवर्णसूत्रैरिव कृष्यमाणम्" कुमा० ७-५०। 6. ಅಂಟಿಕೊಂಡಿರುವ, ಕೂಡಿಕೊಂಡಿರುವ, ಒಂದಾಗಿ ಸೇರಿಕೊಂಡಿರುವ. "किमलम्बताम्बरविलग्नमधः किमवर्धतोर्ध्वमवनीतलतः" माघ० ९-२०। "विलग्नं न स्त्रियां मध्ये त्रिषु स्याल्लग्नमात्रके" मेदि०।

**विलङ्घन ವಿಲಂಘನ** (न०) 1. (ಆಜ್ಞೆಯನ್ನು) ಮೀರುವುದು, —ಉಲ್ಲಂಘಿಸುವುದು. वि + लघि (गतौ) "ल्युट्" (३-३-११५)। 2. ಮೀರುವುದು, ಮೇಲಾಗಿರುವುದು, ಅತಿಶಯವಾಗಿರುವುದು.

**विलङ्घनीय ವಿಲಂಘನೀಯ** (वि०) 1. ದಾಟಲ್ಪಡುವ. 2. ದಾಟಬೇಕಾದ. 3. ದಾಟಬಹುದಾದ. 4. ದಾಟಲು ಸಾಧ್ಯವಾದ. 5. ಮೀರಲ್ಪಡುವ. 6. ಮೀರಬೇಕಾದ. 7. ಮೀರಬಹುದಾದ. 8. ಮೀರಲು ಸಾಧ್ಯವಾದ. वि+लघि (गतौ) "अनीयर्" (३-१-९६)। "तव्यः"। **—लङ्घितव्य: —ಲಂಘಿತವ್ಯ.**

**विलङ्घमान ವಿಲಂಘಮಾನ** (वि०) 1. ದಾಟುತ್ತಿರುವ. 2. ಮೀರುತ್ತಿರುವ, ಉಲ್ಲಂಘಿಸುತ್ತಿರುವ, वि + लघि (गतौ) "शानच्" (३-२-१२४)।

**विलङ्घयत् ವಿಲಂಘಯತ್** (वि०) 1. ದಾಟಿಸುತ್ತಿರುವ. वि + लघि (भासार्थे) + णिच् "शतृ" (३-२-१२४)। "विलङ्घयन् व्योमपथेन सिन्धुं त्वद्दर्शने दीप्तकुतूहलानाम्" याद० १८-११३। 2. ಮೀರಿಸುತ್ತಿರುವ, ಅತಿಶಯವಾಗುತ್ತಿರುವ. "विलङ्घयन्तः सुदृशां कटाक्षा विलिल्यिरे कृष्णमवाप्य लक्ष्यम्" याद० १३-७०।

**विलङ्घित ವಿಲಂಘಿತ** (वि०) 1. ದಾಟಲ್ಪಟ್ಟ. वि+लघि (गतौ) "क्तः" (३-२-१०२)। "निवेशयामास विलङ्घिताध्वा क्लान्तं रजोधूसरकेतु सैन्यम्" रघु० ५-४२। 2. ಮೀರಲ್ಪಟ್ಟ, ಉಲ್ಲಂಘಿಸಲ್ಪಟ್ಟ. "विलङ्घितस्थितिमभिवीक्ष्य रूक्षया रिपोर्गिरा गुरुमपि गान्दिनीसुतम्" माघ० १७-१२। 3. ಜಯಿಸಿರುವ, ಮೇಲುಗೈಯಾಗಿರುವ, ಅತಿಶಯವಾಗಿರುವ.

**विलज्ज ವಿಲಜ್ಜ** (वि०) ಲಜ್ಜೆಯಿಲ್ಲದ, ನಾಚಿಕೆಯನ್ನು ತೊರೆದಿರುವ. विगता लज्जा यस्य। "तनयगतदिनेशे शैशवे सौख्यभागी न भवति फलभागी यौवने व्याधियुक्तः। जनयति सुतमेकं निर्णयं नाशयित्वा चपलमतिविलज्जः क्रूरकर्मा कुचेलः"।

**विलपत् ವಿಲಪತ್** (वि०) 1. ಅಳುತ್ತಿರುವ, ರೋದನಮಾಡುತ್ತಿರುವ. वि + लप (व्यक्तायां वाचि) "शतृ" (३-२-१२४)। 2. ದುಃಖದಿಂದ ಮಾತಾಡುತ್ತಿರುವ. स्त्रियां "ङीप्" (४-१-६)। **—लपन्ती —ಲಪಂತೀ.**

**विलपन ವಿಲಪನ** (न०) 1. ಅಳುವುದು, ರೋದನ. वि+लप (व्यक्तायां वाचि) भावे "ल्युट्" (३-३-११५)। 2. ದುಃಖದಿಂದ ಆಡುವಮಾತು.

**विलम्ब ವಿಲಂಬ** (ಪುಂ) 1. ಸಾವಕಾಶ, ತಡ, ತಾಮಸ, वि + लबि (अवस्रंसने) "घञ्" (३-३-१८)। 2. ತೂಗಾಡುವುದು, ತೊಂಗುವುದು. भावे "ल्युट्" (३-३-११५)। **–लम्बनम् –ಲಂಬನಮ್.** "तन्मुग्धे विफलं विलम्बनमसौ रम्योऽभिसारक्षण:" गीतगो०।

**विलम्बमान ವಿಲಂಬಮಾನ** (वि०) ಜೋಲಾಡುತ್ತಿರುವ, ತೂಗಾಡುತ್ತಿರುವ. वि + लबि (अवस्रंसने) "शानच्" (३-२-१२४)। "विलम्बमानाकुलकेशपाशया कयाचिदाविष्कृतबाहुमूलया" किरा० ८-१८।

**विलम्बित ವಿಲಂಬಿತ** (नं०) 1. ವಿಲಂಬಕಾಲದ ನೃತ್ಯ, ಕರಚರಣ ಮೊದಲಾದುವುಗಳಿಂದ ನಿಧಾನವಾಗಿ ಅಭಿನಯಿಸುವ ನೃತ್ಯ (ಕುಣಿತ). विलम्ब्यन्ते करचरणादयोऽत्र — वि+लबि (अवस्रंसने) "क्त:" (३-४-७६)। (वि०) 2. ತೂಗುಹಾಕಿರುವ, ತೊಂಗಾಡುವ. 3. ಸಾವಕಾಶ ಮಾಡಲ್ಪಟ್ಟ. 4. ನಿಧಾನವಾಗಿರುವ, ತಡವಾಗಿರುವ. "विलम्बितफलै: कालं स निनाय मनोरथै:" रघु० १-३३।

**विलम्बिन् ವಿಲಂಬಿನ್** (पुंन०) 1. ಪ್ರಭವಾದಿ ಅರವತ್ತು ಸಂವತ್ಸರಗಳಲ್ಲಿ ಮೂವತ್ತೆರಡನೆಯ ಸಂವತ್ಸರ. (वि०) 2. ಜೋಲಾಡುತ್ತಿರುವ, ತೊಂಗುತ್ತಿರುವ, विलम्बते— वि + लबि (अवस्रंसने) "णिनि:" (३-१-१३४)। "विलम्बिनीलोत्पलकर्णपूरा: कपालभित्तीरिव लोध्रगौरी:" माघ० ४-८। 3. ತಡಮಾಡುವ, ತಾಮಸ ಮಾಡುವ. "भवति विलम्बिनि विगलितलज्जा विलपति रोदिति वासकसज्जा" गीतगो०।

**विलम्भ ವಿಲಂಭ** (ಪುಂ) ದಾನ. ಕೊಡುಗೆ. वि+डु लभष् (प्राप्तौ) "घञ्" (३-३-१८)।

**विलय ವಿಲಯ** (ಪುಂ) 1. ಪ್ರಳಯ, ಜಗತ್ತಿನ ನಾಶ, ಪ್ರಪಂಚದ ಅಳಿವು. विशेषेण लय: नाश:। विशेषेण लीयन्ते पदार्था: अस्मिन् — वि + लीङ् (श्लेषणे) "अच्" (३-३-५६)। इति वा। 2. ವಿನಾಶ, ಅಳಿವು. "दिवसोऽनुमित्रमगमद्विलयम्" माघ० ९-१७। 3. ಅವಸಾನ, ಕೊನೆ.

**विलयन ವಿಲಯನ** (नं०) ಕರಗಿಸುವುದು, ದ್ರವವಾಗಿ ಮಾಡುವುದು. वि + ली (द्रवीकरणे) "ल्युट्" (३-३-११५)।

**विलसत् ವಿಲಸತ್** (वि०) 1. ಪ್ರಕಾಶಿಸುವ, ಹೊಳೆಯುವ. वि + लस (श्लेषणक्रीडनयो:) "शतृ" (३-२-१२४)। "स्फुरदुज्ज्वलाधरदलैर्विलसद्दशनांशुकेसरभरै: परित:" माघ० ९-४७। 2. ಕ್ರೀಡಿಸುವ, ಆಟವಾಡುವ. 3. ಥಟ್ಟನೆ ಹೊಳೆಯುವ, ಥಟ್ಟನೆ ಸ್ಫುರಿಸುವ. स्त्रियां "ङीप्" (४-१-६)। **–लसन्ती –ಲಸಂತೀ.** "बहिरपि विलसन्त्य: काममानिन्यिरे यद्दिवसकररुचोऽन्तं ध्वान्तमन्तर्गृहेषु" माघ० ११-५१।

**विलसन ವಿಲಸನ** (नं०) 1. ಪ್ರಕಾಶಿಸುವುದು, ಹೊಳೆಯುವುದು. 2. ಆಟವಾಡುವುದು. वि + लस (श्लेषणक्रीडनयो:) भावे "ल्युट्" (३-३-११५)।

**विलसित ವಿಲಸಿತ** (नं०) 1. ವ್ಯಾಪಾರ, ವರ್ತನೆ. ಚೇಷ್ಟೆ. वि+लस (श्लेषणक्रीडनयो:) भावे "क्त:" (३-४-७२)। "विलसितमनुकुर्वती पुरस्ताद्धरणिरुहाधिरुहो वधूलताया:" माघ० ७-४६। 2. ಮಿನುಗು, ಸುಕ್ಕೆಳಕು, ಮಿಂಚಿನ ಬೆಳಕು. "रोधोभुवां मुहुरमुत्र हिरण्मयीनां भासस्तटिद्विलसितानि विडम्बयन्ति" किरा० ५-४६। 3. ಲೀಲೆ, ವಿನೋದ, ಆಟ. "अतिपिशुनानि चैकान्तनिष्ठुराणि दैवहतकस्य विलसितानि" काद०। 4. ಫಲ, ಪರಿಣಾಮ. "सुकृतविलसितानां स्थानमूर्जस्वलानाम्" मालती० २-९। (वि०) 5. ಹೊಳೆಯುವ, ಪ್ರಕಾಶಿಸುವ, 6. ಕ್ರೀಡಿಸುವ, ಆಟವಾಡುವ.

**विलाप ವಿಲಾಪ** (ಪುಂ) 1. ರೋದನ, ಅಳುವುದು. वि + लप (व्यक्तायां वाचि) "घञ्" (३-३-१८)। 2. ದುಃಖದಿಂದ ಆಡುವ ಮಾತು.

**विलापन ವಿಲಾಪನ** (नं०) 1. ಅಳುವಂತೆಮಾಡುವುದು. वि + लप (व्यक्तायां वाचि) + णिच् "ल्युट्" (३-३-११५)। (वि०) 2. ಅಳುವಂತೆಮಾಡುವವನು. वि + लप + णिच् कर्त० "ल्यु:" (३-१-१३४)। 3. ಕರಗಿಸುವುದು. वि + लीङ् (श्लेषणे) + णिच् "ल्युट्" (३-३-११५)।

**विलास ವಿಲಾಸ** (ಪುಂ) 1. ವಿನೋದಕ್ಕಾಗಿ ಏರ್ಪಟ್ಟ ಕ್ರೀಡೆ, ವಿಶ್ರಾಂತಿಗಾಗಿ ಆಡುವ ಆಟ. वि+लस (क्रीडने) भावे "घञ्" (३-३-१८)। 2. ಸ್ತ್ರೀಯರ ಶೃಂಗಾರ ಭಾವದ ಕಾರ್ಯ, ಸ್ತ್ರೀಯರ ಸ್ವಭಾವಸಿದ್ಧವಾದ ಲೀಲೆ, ಇಷ್ಟವಸ್ತುವಿನ ದರ್ಶನದಿಂದ ಉಂಟಾಗುವ ಶೃಂಗಾರ ಚೇಷ್ಟೆ. "यानस्थानासनादीनां मुखनेत्रादिकर्मणाम्। विशेषस्तु विलास: स्यात् इष्टसंदर्शनादिना" सा० द०। "स्निग्धं वीक्षितमन्यतोऽपि नयने यत्प्रेषयन्त्या तया यातं यच्च नितम्बयोर्गुरुतया मन्दं विलासादिव" शाकु०

२-२ । 3. ಸೌಂದರ್ಯ, ಸೊಬಗು, ಚೆಲುವು. "इदमिह मदनस्य जैत्रमस्त्रं सहजविलासनिबन्धनं शरीरम्" मालती० २-६ । 4. ಲೀಲೆ, ಕ್ರೀಡೆ, ಆಟ. 5. ಭೋಗ, ಸೌಖ್ಯ, ವಿಷಯಾನುಭವ.

**विलासमन्दिर ವಿಲಾಸಮಂದಿರ** (ನಂ) ಕ್ರೀಡಾಗೃಹ, ಆಟದ ಮನೆ, ವಿನೋದಕ್ಕಾಗಿ ಆಟವಾಡುವ ಗೃಹ. विलासस्य मन्दिरम् ।

**विलासवती ವಿಲಾಸವತೀ** (स्त्री०) ಹಾವಭಾವಗಳಿಂದ ಕೂಡಿದ ಅನುರಕ್ತಳಾದ ಹೆಂಗಸು.

**विलासिन् ವಿಲಾಸಿನ್** (वि०) 1. ಕ್ರೀಡಾಸಕ್ತನಾದ, ಆಟದ ಸ್ವಭಾವವುಳ್ಳ. वि + लस (श्लेषणक्रीडनयोः) "घिनुण्" (३-२-१४३)। "कुर्वद्भिर्मुखरुचिमुज्ज्वलामजस्रं यैस्तोयैरसिचत वल्लभां विलासी" माघ० ८-३८। 2. ಭೋಗಿ, ವಿಷಯಾಸಕ್ತ, ಸ್ತ್ರೀಲಂಪಟ "परभृताविरुतैश्च विलासिनः स्मरबलैरबलैकरसाः कृताः" रघु० ९-४३। (ಪುಂ) 3. ಕೃಷ್ಣ, ವಿಷ್ಣು. 4 ಚಂದ್ರ. 5 ಅಗ್ನಿ. 6. ಸರ್ಪ. 7. ಶಿವ, ಪರಮೇಶ್ವರ. 8. ಕಾಮದೇವ, ಮನ್ಮಥ.

**विलासिनी ವಿಲಾಸಿನೀ** (स्त्री०) 1. ಹಾವಭಾವಾದಿ ವಿಲಾಸವುಳ್ಳ ಹೆಂಗಸು. विलासोऽस्या अस्ति "इनिः" (५-२-११५)। "ङीप्" (४-१-५)। "विलासिनीबाहुलता वनालयो विलेपनामोदहृताः सिषेविरे" किरा० ८-५। 2. ಮಹಿಳೆ, ಹೆಂಗಸು. "इत्योषधिप्रस्थविलासिनीनां शृण्वन् कथाःश्रोत्रसुखास्त्रिनेत्रः" कुमा० ७-६९। 3. ವೇಶ್ಯೆ, ಸೂಳೆ. "सिद्धचारणगन्धर्वैः साध्यैर्याति विलासिनी" मा० वन० ४४-२९।

**विलिखत् ವಿಲಿಖತ್** (वि०) 1. ಬರೆಯುತ್ತಿರುವ. वि + लिख (अक्षरविन्यासे) "शतृ" (३-२-१२४)। 2. ಕೆರೆದುಕೊಳ್ಳುತ್ತಿರುವ. 3. ಚಿತ್ರಬರೆಯುತ್ತಿರುವ. 4. ಒಳಗಡೆ ಸೇರಿಸುತ್ತಿರುವ, ಒಳಭಾಗದಲ್ಲಿ ಇಡುತ್ತಿರುವ. स्त्रियां "ङीप्" (४-१-६)। **-लिखन्ती -ಲಿಖಂತೀ.**

**विलिखन ವಿಲಿಖನ** (ನಂ) 1. ಬರವಣಿಗೆ. 2. ಕೆರೆಯುವುದು. 3. ಬಣ್ಣ ಹಾಕುವುದು.

**विलिखित ವಿಲಿಖಿತ** (ನಂ) 1. ಬರವಣಿಗೆ, ಬರೆಯುವುದು. वि + लिख (अक्षरविन्यासे) भावे "क्तः" (३-३-११४)। 2 ಕೆರೆದುಕೊಳ್ಳುವುದು 3. ಚಿತ್ರ ಬರೆಯುವುದು. 4. ಒಳಗಡೆ ಸೇರಿಸುವುದು. 5. ಗೀರುವುದು, ಗೆರೆ ಹಾಕುವುದು. (वि०) 6. ಬರೆಯಲ್ಪಟ್ಟ. 7. ಕೆರೆದುಕೊಳ್ಳಲ್ಪಟ್ಟ. 8. ಚಿತ್ರಿಸಲ್ಪಟ್ಟ, ಬಣ್ಣಹಾಕಲ್ಪಟ್ಟ. 9. ಒಳಗಡೆ ಸೇರಿಸಲ್ಪಟ್ಟ. 10. ಗೆರೆಹಾಕಲ್ಪಟ್ಟ, ಗೀರಲ್ಪಟ್ಟ.

**विलिख्यमान ವಿಲಿಖ್ಯಮಾನ** (वि०) 1. ಬರೆಯಲ್ಪಡುತ್ತಿರುವ. 2. ಕೆರೆಯಲ್ಪಡುತ್ತಿರುವ. वि+लिख (अक्षरविन्यासे) कर्मं० "शानच्" (३-२-१२४)। 3. ಗೆರೆ ಹಾಕಲ್ಪಡುತ್ತಿರುವ. 4. ಚಿತ್ರಿಸಲ್ಪಡುತ್ತಿರುವ.

**विलिप्त ವಿಲಿಪ್ತ** (वि०) 1. ಬಳಿಯಲ್ಪಟ್ಟ, ಲೇಪನ ಮಾಡಲ್ಪಟ್ಟ. वि+लिप (उपदेहे) "क्तः" (३-२-१०२)। 2. ಮಲಿನವಾಗಿ ಮಾಡಲ್ಪಟ್ಟ.

**विलिप्यमान ವಿಲಿಪ್ಯಮಾನ** (वि०) ಬಳಿಯಲ್ಪಡುತ್ತಿರುವ, ಬಣ್ಣ ಹಾಕಲ್ಪಡುತ್ತಿರುವ. वि+लिप (उपदेहे) कर्मं० "शानच्" (३-२-१२४)।

**विलिम्पत् ವಿಲಿಂಪತ್** (वि०) 1. ಬಣ್ಣ ಹಾಕುತ್ತಿರುವ, ಬಣ್ಣ ಬಳಿಯುತ್ತಿರುವ. वि + लिप (उपदेहे) "शतृ" (३-२-१२४)। 2. ಮುಲಾಮು ಹಾಕುತ್ತಿರುವ. स्त्रियां "ङीप्" (४-१-६)। **-ती -ತೀ. -न्ती -ನ್ತೀ.** "शानच्" (३-२-१२४)। **-लिम्पमानः -ಲಿಂಪಮಾನಃ.**

**विलीन ವಿಲೀನ** (वि०) 1. ಕರಗಿರುವ, ದ್ರವವಾಗಿರುವ. वि + लीङ् (श्लेषणे) "क्तः" (३-४-७२)। 2. ಒಂದರೊಂದು ಅಂಟಿಕೊಂಡಿರುವ, ಬಿಡಿಸಲಾಗದಂತೆ ಸೇರಿಕೊಂಡಿರುವ. 3. ಒಂದರೊಳಗೆ ಸೇರಿಕೊಂಡಿರುವ, ಬೇರೆ ಬೇರೆ ಗುರುತಿಸಲಾಗದಂತೆ ಸೇರಿಹೋಗಿರುವ. "विततवलिविभाव्यपाण्डुरेखाश्रुतपरभागविलीनरोमराजिः" माघ० ७-३३। 4. ಒಳಗೆ ಅಡಗಿಕೊಂಡಿರುವ, ಒಳಗೆ ಸೇರಿರುವ.

**विलीयमान ವಿಲೀಯಮಾನ** (वि०) 1. ಕರಗಿಸಲ್ಪಡುತ್ತಿರುವ, ದ್ರವವಾಗಿ ಮಾಡಲ್ಪಡುತ್ತಿರುವ. वि + लीङ (श्लेषणे) कर्मं० "शानच्" (३-२-१२४)। 2. ಗುರುತು ಸಿಕ್ಕದಂತೆ ಒಂದರೊಳಗೊಂದು ಸೇರಿಸಲ್ಪಡುತ್ತಿರುವ. 3. ಅದೃಶ್ಯವಾಗಿ ಮಾಡಲ್ಪಡುತ್ತಿರುವ, ಕಾಣದಂತೆ ಮಾಡಲ್ಪಡುತ್ತಿರುವ.

**विलुञ्चत् ವಿಲುಂಚತ್** (वि०) 1. ತೆಗೆದುಹಾಕುತ್ತಿರುವ. ಸಿಪ್ಪೆ ಮೊದಲಾದುವನ್ನು ಎಡೆಯುತ್ತಿರುವ, –ಸುಲಿಯುತ್ತಿರುವ. वि+लुञ्च (अपनयने) "शतृ" (३-२-१२४)। 2. ಕಿತ್ತುಹಾಕುತ್ತಿರುವ. स्त्रियां "ङीप्" (४-१-६)। **-न्ती -ನ್ತೀ.**

**विलुञ्चन ವಿಲುಂಚನ** (ನಂ) 1. ತೆಗೆದುಹಾಕುವುದು, ಸಿಪ್ಪೆ ಮೊದಲಾದುವನ್ನು ಎಡೆಯುವುದು, –ಸುಲಿಯು

ವುದು. वि + लुञ्च (अपनयने) भावे "ल्युट्" (३-३-११५)। 2. ಕಿತ್ತುಹಾಕುವುದು.

**विलुञ्चनीय ವಿಲುಂಚನೀಯ** (वि०) 1. ತೆಗೆದುಹಾಕಲ್ಪಡುವ, ಸುಲಿಯಲ್ಪಡುವ. 2. ಸುಲಿಯಬೇಕಾದ. 3. ಸುಲಿಯಲು ಶಕ್ಯವಾದ. वि + लुञ्च (अपनयने) "अनीयर्" (३-१-९६)। -लुञ्चितव्यः -ಲುಂಚಿತವ್ಯಃ.

**विलुञ्चित ವಿಲುಂಚಿತ** (वि०) ಸುಲಿಯಲ್ಪಟ್ಟಿರುವ, ಎಡೆಯಲ್ಪಟ್ಟಿರುವ. वि + लुञ्च (अपनयने) "क्तः" (३-२-१०२)।

**विलुञ्च्य ವಿಲುಂಚ್ಯ** (वि०) ಸುಲಿಯಲ್ಪಡುವ, ಎಡೆಯಲ್ಪಡುವ. वि+लुञ्च (अपनयने) "ण्यत्" (३-१-१२४)।

**विलुठन ವಿಲುಠನ** (न०) ಹೊರಳಾಡುವುದು, ಉರುಳಾಡುವುದು. वि + लुठ (संश्लेषणे) भावे "ल्युट्" (३-३-११५)।

**विलुठित ವಿಲುಠಿತ** (वि०) ಕೆರಳಿಸಲ್ಪಟ್ಟ, ರೇಗಿಸಲ್ಪಟ್ಟ, ಉದ್ರೇಕಗೊಳಿಸಲ್ಪಟ್ಟ. वि + लुठ (संश्लेषणे) "क्तः" (३-२-१०२)।

**विलुण्टत् ವಿಲುಂಟತ್** (वि०) ಕದಿಯುತ್ತಿರುವ, ಅಪಹರಿಸುತ್ತಿರುವ. वि+लुटि (स्तेये) "शतृ" (३-२-१२४)।

**विलुण्टन ವಿಲುಂಟನ** (न०) ಕದಿಯುವುದು, ಅಪಹರಿಸುವುದು. वि + लुटि (स्तेये) "ल्युट्" (३-३-११५)।

**विलुण्टनीय ವಿಲುಂಟನೀಯ** (वि०) 1. ಕದಿಯಲ್ಪಡುವ, ಅಪಹರಿಸಲ್ಪಡುವ. 2. ಕದಿಯಬೇಕಾದ. 3. ಕದಿಯಲು ಶಕ್ಯವಾದ. वि+लुटि (स्तेये) "अनीयर्" (३-१-९६)। "तव्यः"। -लुण्टितव्यः -ಲುಂಟತವ್ಯಃ.

**विलुण्टित ವಿಲುಂಟಿತ** (वि०) ಕದಿಯಲ್ಪಟ್ಟ, ಅಪಹರಿಸಲ್ಪಟ್ಟ. वि + लुटि (स्तेये) "क्तः" (३-२-१०२)।

**विलुण्ट्य ವಿಲುಂಟ್ಯ** (वि०) ಅಪಹರಿಸಲ್ಪಡುವ. वि+लुटि (स्तेये) "ण्यत्" (३-१-१२४)।

**विलुप्त ವಿಲುಪ್ತ** (वि०) 1. ಹೋಗಲಾಡಿಸಲ್ಪಟ್ಟ, ತೊಡೆದುಹಾಕಲ್ಪಟ್ಟ. वि + लुप्लृ (छेदने) "क्तः" (३-२-१०२)। "विलुप्तमूर्धन्यलिपिक्रमाणां सुरेन्द्रचूडापदलालितानाम्" हयग्री०। 2. ಕತ್ತರಿಸಲ್ಪಟ್ಟ, ಒಡೆಯಲ್ಪಟ್ಟ, ತುಂಡುಮಾಡಲ್ಪಟ್ಟ. 3. ನಾಶಪಡಿಸಲ್ಪಟ್ಟ.

**विलुम्पक ವಿಲುಂಪಕ** (पुं०) 1. ಕಳ್ಳ, ಚೋರ. (वि०) 2. ಕತ್ತರಿಸುವವನು, ತುಂಡುಮಾಡುವವನು. वि+लुप्लृ (छेदने) "ण्वुल्" (३-१-१३३)।

**विलुलित ವಿಲುಲಿತ** (वि०) ಅಲುಗಾಡಿಸಲ್ಪಟ್ಟ, ಅಲ್ಲಾಡಿಸಲ್ಪಟ್ಟ. वि + लुल (विमर्दने) "क्तः" (३-२-१०२)। "विलुलितकमलौघः कीर्णवल्लीवितानः" माघ० ११-२८।

**विलून ವಿಲೂನ** (वि०) ಕತ್ತರಿಸಲ್ಪಟ್ಟ, ತುಂಡುಮಾಡಲ್ಪಟ್ಟ. वि + लूञ् (छेदने) "क्तः" (३-२-१०२)। तकारस्य नः (८-२-४४)। "विलूनमूलद्रुमसन्निभं स तं विलक्षमुत्थाप्य विहारयादवः" याद० १४-५४।

**विलेखन ವಿಲೇಖನ** (न०) 1. ಬರೆಯುವುದು. 2. ಗೆರೆ ಹಾಕುವುದು, ಗೀರುವುದು. 3. ಕೆರೆಯುವುದು. 4. ಬೇರ್ಪಡಿಸುವುದು, ಒಡೆಯುವುದು. 5. ಸಿಗಿದು ಗಾಯಗೊಳಿಸುವುದು. वि + लिख (अक्षरविन्यासे) "ल्युट्" (३-३-११५)।

**विलेप ವಿಲೇಪ** (पुं०) 1. ದೇಹಕ್ಕೆ ಪೂಸುವ ಗಂಧ ಮೊದಲಾದ ಸುವಾಸನೆಯ ವಸ್ತು. वि+लिप (उपदेहे) "घञ्" (३-३-१९)। "अथ व्रजन् राजपथेन माधवः स्त्रियं गृहीताङ्गविलेपभाजनाम्" भाग० १०-४२-१। 2. ಮನೆಗೆ ಬಳಿಯುವ ಸುಣ್ಣ ಅಥವಾ ಬಣ್ಣ. 3. ಗಾಯವಾಸಿಯಾಗಲು ಹಾಕುವ ಮುಲಾಮು. 4. ದೇಹದ ಸೌಂದರ್ಯಕ್ಕಾಗಿ ಪೂಸಿಕೊಳ್ಳುವ ವಾಸನೆಯ ಮುಲಾಮು.

**विलेपन ವಿಲೇಪನ** (न०) 1. ದೇಹಕ್ಕೆ ಗಂಧ ಮೊದಲಾದುವನ್ನು ಪೂಸುವುದು. वि+लिप (उपदेहे) भावे "ल्युट्" (३-३-११५)। 2. ಮನೆಗೆ ಸುಣ್ಣ ಮತ್ತು ಬಣ್ಣ ಬಳಿಯುವುದು. 3. ಗಾಯಕ್ಕೆ ಮುಲಾಮು ಹಾಕುವುದು. 4. ದೇಹದ ಸೌಂದರ್ಯಕ್ಕಾಗಿ ಸುಗಂಧ ದ್ರವ್ಯವನ್ನು ಬಳಿಯುವುದು. (वि०) 5. ದೇಹಕ್ಕೆ ಪೂಸುವ ಗಂಧ ಮೊದಲಾದುದು. विलिप्यन्तेऽङ्गान्यनेन — वि + लिप करं० "ल्युट्" (३-३-११७)। "न स्नानं न विलेपनं न कुसुमं नालंकृता मूर्धजाः" भर्तृ० १-१५। 6. ಮನೆಗೆ ಬಳಿಯುವ ಸುಣ್ಣ ಮತ್ತು ಬಣ್ಣ. 7. ಗಾಯಕ್ಕೆ ಹಾಕುವ ಮುಲಾಮು. 8. ದೇಹದ ಸೌಂದರ್ಯಕ್ಕಾಗಿ ಪೂಸುವ ಸುಗಂಧ ದ್ರವ್ಯ.

**विलेपनी ವಿಲೇಪನೀ** (स्त्री०) 1. ಸುಗಂಧದ್ರವ್ಯಗಳಿಂದ ಪೂಸಲ್ಪಟ್ಟ ಹೆಂಗಸು. 2. ಚೆನ್ನಾಗಿ ಅಲಂಕರಿಸಲ್ಪಟ್ಟ ಹೆಂಗಸು. विलिप्यते — वि + लिप (उपदेहे) कर्म० "ल्युट्" (३-३-११३)। 3. ಅಕ್ಕಿಯ ಗಂಜಿ. "विलेपनी सुवेषस्त्रीयवागवोरपि योषिति" मेदि०।

**विलेपिन् ವಿಲೇಪಿನ್** (वि०) ಲೇಪನಮಾಡುವವನು, ಬಣ್ಣ ಮೊದಲಾದುವನ್ನು ಬಳಿಯುವವನು. वि + लिप (उपदेहे) "णिनिः" (३-१-१३४)।

**विलेपी ವಿಲೇಪೀ** (स्त्री०) ಅಂಬಲಿ, ಗಂಜಿ.

**विलेप्य ವಿಲೇಪ್ಯ** (वि०) 1. ಲೇಪನವಮಾಡಲ್ಪಡುವ, ಪೂಸಲ್ಪಡುವ. 2. ಬಳಿಯಲ್ಪಡುವ. वि+लिप (उपदेहे) "ण्यत्" (३-१-१२४)।

**विलोक ವಿಲೋಕ** (पुं०) ನೋಟ, ದೃಷ್ಟಿಬೀಳಿಸುವುದು, ಕಣ್ಣೋಡಿಸುವುದು. वि + लोकृ (दर्शने) "घञ्" (३-३-१८)।

**विलोकन ವಿಲೋಕನ** (न०) ದರ್ಶನ, ನೋಡುವುದು, ದೃಷ್ಟಿಹಾಯಿಸುವುದು. वि + लोकृ (दर्शने) भावे "ल्युट्" (३-३-११५)। "विलोकनेनैव तवामुना मुने कृतः कृतार्थोऽस्मि निर्बर्हितांहसा" माघ० १-२९।

**विलोकनीय ವಿಲೋಕನೀಯ** (वि०) 1. ನೋಡಲ್ಪಡುವ. 2. ನೋಡಬೇಕಾದ. 3. ನೋಡಲು ಅರ್ಹವಾದ. 4. ನೋಡಲು ಶಕ್ಯವಾದ. वि + लोकृ (दर्शने) "अनीयर्" (३-१-९६)। "तव्यः"। **–लोकितव्यम् –ಲೋಕಿತವ್ಯಮ್.**

**विलोकमान ವಿಲೋಕಮಾನ** (वि०) ನೋಡುತ್ತಿರುವ. वि + लोकृ (दर्शने) "शानच्" (३-२-१२४)।

**विलोकयत् ವಿಲೋಕಯತ್** (वि०) ನೋಡುತ್ತಿರುವ. वि + लोकृ (भाषार्थे) + णिच् "शतृ" (३-२-१२४)। "विकसितकुसुमाधरं हसन्तीं कुरवकराजिवधूं विलोकयन्तम्" किरा० १०-३२। स्त्रियां "ङीप्" (४-१-६)। **–यन्ती –ಯನ್ತೀ.** "विलोकयन्त्यो वपुरापुरक्ष्णां प्रकामविस्तारफलं हरिण्यः" रघु० २-११।

**विलोकित ವಿಲೋಕಿತ** (वि०) ನೋಡಲ್ಪಟ್ಟ. वि+लोकृ (दर्शने) "क्तः" (३-२-१०२)। "बिलोकितानामिह न व्यवस्था नेदियसां देवि दवीयसां वा" याद० १८-७१।

**विलोक्य ವಿಲೋಕ್ಯ** (वि०) 1. ನೋಡಲ್ಪಡುವ. वि + लोकृ (दर्शने) "ण्यत्" (३-१-१२४)। (अव्य०) 2. ನೋಡಿ, ಅವಲೋಕಿಸಿ. वि + लोकृ "क्त्वा"। क्त्वो "ल्यप्" (७-१-३७)।

**विलोचन ವಿಲೋಚನ** (न०) 1. ನೇತ್ರ, ಕಣ್ಣು. विलोच्यते दृश्यतेऽनेन—वि+लोचृ (दर्शने) "ल्युट्" (३-३-११७)। "हरेरभिख्यामनुपाभिरम्यां विलोचनैर्वीतनिमेषविघ्नैः" याद० १३-६१। 2. ದರ್ಶನ, ನೋಡುವುದು. भावे "ल्युट्" (३-३-११५)।

**विलोडन ವಿಲೋಡನ** (न०) ಕಡೆಯುವುದು, ಮಥನ ಮಾಡುವುದು. वि + लुड (विलोडने) "ल्युट्" (३-३-११५)। "तात नोदधिविलोडनं प्रति त्वद्विनाथ वयमुत्सहामहे" माघ० १४-८३।

**विलोडित ವಿಲೋಡಿತ** (वि०) 1. ಮಥನಮಾಡಲ್ಪಟ್ಟ, ಕಡೆಯಲ್ಪಟ್ಟ. वि + लुड (विलोडने) "क्तः" (३-२-१०२)। (न०) 2. ತಕ್ರ, ಮಜ್ಜಿಗೆ. भावे "क्तः" (३-३-११४)।

**विलोप ವಿಲೋಪ** (पुं०) 1. ವಿಶೇಷವಾದ ಲೋಪ, –ಚ್ಯುತಿ, –ನಾಶ. वि + लुप्लृ (छेदने) "घञ्" (३-३-१८)। 2. ಕತ್ತರಿಸುವುದು. 3. ಅಪಹರಿಸುವುದು, ಲೂಟಿಮಾಡುವುದು, ಕೊಳ್ಳೆಹೊಡೆಯುವುದು. भावे "ल्युट्" (३-३-११५)। **–लोपनम् –ಲೋಪನಮ್.**

**विलोभ ವಿಲೋಭ** (पुं०) ಆಸೆತೋರಿಸಿ ಮೋಸಪಡಿಸುವುದು, ಮರುಳುಮಾಡುವುದು. वि + लुभ (विमोहने) "घञ्" (३-३-१८)। भावे "ल्युट्" (३-३-११५)। **–लोभनम् –ಲೋಭನಮ್.** "प्रयुज्य सामाचरितं विलोभनं भयं विभेदाय धियः प्रदर्शितम्" किरा० १४-७।

**विलोभनीय ವಿಲೋಭನೀಯ** (वि०) 1. ಮೋಸಪಡಿಸಲ್ಪಡುವ. 2. ಮೋಸಪಡಿಸಬೇಕಾದ. 3. ಮೋಸಪಡಿಸಲು ಅರ್ಹನಾದ. वि + लुभ (विमोहने) "अनीयर्" (३-१-९६)। "तव्यः"। **–लोभितव्यः –ಲೋಭಿತವ್ಯಃ.**

**विलोभित ವಿಲೋಭಿತ** (वि०) ಆಸೆತೋರಿಸಿ ಮೋಸಗೊಳಿಸಲ್ಪಟ್ಟ. वि +लुभ (विमोहने) + णिच् "क्तः" (३-२-१०२)।

**विलोभ्यमान ವಿಲೋಭ್ಯಮಾನ** (वि०) ಆಕರ್ಷಿಸಲ್ಪಡುತ್ತಿರುವ, ಮರುಳುಮಾಡಲ್ಪಡುತ್ತಿರುವ. वि+लुभ (विमोहने) + णिच् "शानच्" (३-२-१२४)।

**विलोम ವಿಲೋಮ** (पुं०) 1. ವರುಣ. 2. ಸರ್ಪ. 3. ನಾಯಿ. (न०) 4. ಏತ, ಬಾವಿಯಿಂದ ನೀರು ಎತ್ತಲು ಹಾಕಿರುವ ಚಕ್ರ. (वि०) 5. ಪ್ರತಿಕೂಲವಾದ, ವಿಪರೀತವಾದ. "विलोमस्तु प्रतीपे स्याद्भुजङ्गे वरुणे शुनि। आमलक्यां विलोमी च विलोमं चारघट्टके" मेदि०। स्वार्थे "कन्"। **–लोमकः –ಲೋಮಕಃ.**

**विलोमक्रिया ವಿಲೋಮಕ್ರಿಯಾ** (स्त्री०) ವಿರುದ್ಧವಾದ ಕೆಲಸ, ವ್ಯತಿರಿಕ್ತವಾದ ಕಾರ್ಯ.

**विलोमजिह्व ವಿಲೋಮಜಿಹ್ವ** (पुं०) ಗಜ, ಆನೆ. विलोमा जिह्वा यस्य।

**विलोमित ವಿಲೋಮಿತ** (वि०) ಹಿಮ್ಮುಖವಾಗಿ ಮಾಡಲ್ಪಟ್ಟ, ಹಿಂತಿರುಗಿಸಲ್ಪಟ್ಟ. "विलोमिता ह्लोरिकरणाद्रुहद्गादिता दृश्यविलोचनादि" नैष० २२-४६।

**विलोमी ವಿಲೋಮೀ** (वि०) ನಲ್ಲಿಗಿಡ.

**विलोल ವಿಲೋಲ** (वि०) 1. ಕದಲಿದ, ಜಾರಿದ. विशेषेण लोलः। "यावच्चलासनविलोलनितम्बबिम्बविस्रस्तवस्त्रमवरोधवधूः पपात" माघ० ५-७। 2. ಚಂಚಲವಾದ, ಅಲುಗಾಡಿದ. "विमुच्य सा हारमहार्यनिश्चया विलोलयष्टिप्रविलुप्तचन्दनम्" कुमा० ५-८। 3. ಕೆದರಿದ, ಬಿಚ್ಚಿದ, ಬಿಡಿಯಾದ, ಕಟ್ಟದೆ ಸಡಿಲವಾದ. "परिपाण्डुदुर्बलकपोलसुन्दरं दधती विलोलकबरीकमाननम्" उ० रा० ३-४। 4. ಉರುಳಾಡುವ, ಹೊರಳಾಡುವ.

**विलोलन ವಿಲೋಲನ** (न०) 1. ಹೊರಳಾಡುವುದು, ಉರುಳಾಡುವುದು. वि + लुड (विलोडने) "ल्युट्" (३-३-११५)। 2. ಆಡುವುದು, ಅಳ್ಳಾಡುವುದು. 3. ಚಲಿಸುವುದು, ಕದಲುವುದು. 4. ಕೆದಕುವುದು, ಕದಡುವುದು. 5. ಕೆರಳಿಸುವುದು, ಉದ್ರೇಕಗೊಳಿಸುವುದು. लडयोरभेदः।

**विलोलित ವಿಲೋಲಿತ** (वि०) 1. ಅಲುಗಾಡಿಸಲ್ಪಟ್ಟ, ಅಳ್ಳಾಡಿಸಲ್ಪಟ್ಟ. 2. ಕೆರಳಿಸಲ್ಪಟ್ಟ, ಉದ್ರೇಕಗೊಳಿಸಲ್ಪಟ್ಟ. 3. ಕದಲಿಸಲ್ಪಟ್ಟ. 4. ಕೆದಕಲ್ಪಟ್ಟ, ಕಲಕಲ್ಪಟ್ಟ. वि + लुड (विलोडने) "क्तः" (३-२-१०२)।

**विलोलुप ವಿಲೋಲುಪ** (वि०) ಆಸೆಯಿಲ್ಲದ, ಆಸೆಯನ್ನು ತೊರೆದಿರುವ. वि + लुप्लृ (छेदने) + यङ् "अच्" (३-१-१३४)।

**विलोहित ವಿಲೋಹಿತ** (पुं०) 1. ಮೂಗಿನಲ್ಲಿ ರಕ್ತಸುರಿಯುವ ಒಂದು ರೋಗ. (वि०) 2. ಬಹಳ ಕೆಂಪಾದ. विशेषेण लोहितः। "ततः स कृत्वा धनुरायतज्यं धनुर्धरः कोपविलोहिताक्षः" रघु० १६-७७।

**विलोहिता ವಿಲೋಹಿತಾ** (स्त्री०) ಅಗ್ನಿಯ ಸಪ್ತಜಿಹ್ವೆಗಳಲ್ಲೊಂದು.

**विल्ल ವಿಲ್ಲ** (न०) ಆಲವಾಲ, ಗಿಡಗಳ ಕೆಳಗೆ ನೀರು ನಿಲ್ಲಲು ಮಾಡಿರುವ ಪಾತಿ. "तल्लं विल्लं तलं च तत्। द्विजप्रपालवालम्" त्रिकाण्ड०।

**विवक्षत् ವಿವಕ್ಷತ್** (वि०) ಹೇಳಲು ಇಚ್ಛಿಸುವ, ಮಾತನಾಡಲು ಅಪೇಕ್ಷಿಸುವ. वक्तुमिच्छन्—वच (परिभाषणे) + सन् "शतृ" (३-२-१२४)। "विवक्षता दोषमपि च्युतात्मना त्वयैकमीशं प्रति साधु भाषितम्" कुमा० ५-८१।

**विवक्षा ವಿವಕ್ಷಾ** (स्त्री०) 1. ಮಾತನಾಡಲು ಇಚ್ಛೆ, ಹೇಳಲು ಅಪೇಕ್ಷೆ. वक्तुमिच्छा—वच (परिभाषणे) + सन् "अः" (३-३-१०२)। 2. ಅರ್ಥ, ಭಾವ, ಅಭಿಪ್ರಾಯ, ತಾತ್ಪರ್ಯ.

**विवक्षित ವಿವಕ್ಷಿತ** (वि०) ಹೇಳಲು ಅಪೇಕ್ಷಿಸಲ್ಪಟ್ಟ, ಹೇಳಲು ಇಚ್ಛಿಸಲ್ಪಟ್ಟ. वक्तुमिष्टम्। वच (परिभाषणे) + सन् "क्तः" (३-२-१०२)। "विवक्षितामर्थविदस्तत्क्षणप्रतिसंहृताम्" माघ० २-१५।

**विवक्षु ವಿವಕ್ಷು** (वि०) ಮಾತಾಡಲು ಅಪೇಕ್ಷಿಸುವ, ಹೇಳಲು ಇಚ್ಛಿಸುವ. वक्तुमिच्छुः—वच (परिभाषणे) + सन् "उः" (३-२-१६८)। "निवार्यतामालि किमप्ययं वटुः पुनर्विवक्षुः स्फुरितोत्तराधरः" कुमा० ५-८३।

**विवत्सा ವಿವತ್ಸಾ** (स्त्री०) 1. ಮಕ್ಕಳಿಲ್ಲದ ಹೆಂಗಸು. 2. ಕರುವಿಲ್ಲದ ಹಸು.

**विवदन ವಿವದನ** (न०) ವಿವಾದ, ವಾಗ್ಯುದ್ಧ, ಚರ್ಚೆ. वि + वद (व्यक्तायां वाचि) "ल्युट्" (३-३-११५)।

**विवदमान ವಿವದಮಾನ** (वि०) ವಿವಾದಮಾಡುತ್ತಿರುವ, ಚರ್ಚಿಸುತ್ತಿರುವ, ವಾಗ್ಯುದ್ಧ ಮಾಡುತ್ತಿರುವ. वि + वद (व्यक्तायां वाचि) "शानच्" (३-२-१२४)।

**विवदितव्य ವಿವದಿತವ್ಯ** (वि०) 1. ವಾಗ್ವಾದ ಮಾಡಲ್ಪಡುವ. 2. ವಾಗ್ವಾದ ಮಾಡಬೇಕಾದ. 3. ವಾಗ್ವಾದ ಮಾಡಬಹುದಾದ. वि + वद (व्यक्तायां वाचि) "तव्यः" (३-१-९६)। "अनीयर्" (३-१-९६)। —वदनीयः —ವದನೀಯಃ.

**विवदिषत् ವಿವದಿಷತ್** (वि०) ಮಾತಾಡಲು ಅಪೇಕ್ಷಿಸುತ್ತಿರುವ. वद (व्यक्तायां वाचि) + सन् "शतृ" (३-२-१२४)।

**विवदिषा ವಿವದಿಷಾ** (स्त्री०) ಮಾತಾಡಲು ಅಪೇಕ್ಷೆ. वद (व्यक्तायां वाचि) + सन् "अः" (३-३-१०२)।

**विवदिषु ವಿವದಿಷು** (वि०) ಮಾತಾಡಲು ಅಪೇಕ್ಷೆಯುಳ್ಳವನು. वद (व्यक्तायां वाचि)+सन् "उः" (३-२-१६८)।

**विवध ವಿವಧ** (पुं०) 1. ಸಾಮಾನುಗಳನ್ನು ಹೊರಲು ಹೆಗಲ ಮೇಲೆ ಇಟ್ಟುಕೊಳ್ಳುವ ಅಡ್ಡೆ, ಕಾವಡಿ. विविधो वधो हननं गमनं वा यत्र। वा दीर्घः (६-३-१३७)। वीवधः ವೀವಧಃ. 2. ಮಾರ್ಗ, ದಾರಿ. 3. ಭಾರ, ಹೊರೆ. "विवधो वीवधश्चापि पर्याहारेऽध्वभारयोः" मेदि०।

**विवधिक ವಿವಧಿಕ** (पुं०) ಕಾವಡಿ ಹೊರುವವನು, ಕಾವಡಿಯಲ್ಲಿ ಸಾಮಾನನ್ನು ಸಾಗಿಸುವವನು. विवधेन हरति—विवध "ष्ठन्" (४-४-१७)। वा दीर्घः (६-३-१३७)। वीवधिकः ವೀವಧಿಕಃ.

**विवन्दिषा ವಿವಂದಿಷಾ** (स्त्री०) 1. ನಮಸ್ಕರಿಸಲು ಅಪೇಕ್ಷೆ. 2. ಸ್ತುತಿಸಲು ಅಪೇಕ್ಷೆ. वदि (अभिवादनस्तुत्योः) + सन् "अः" (३-३-१०२)।

**विवन्दिषु ವಿವಂದಿಷು** (वि०) 1. ನಮಸ್ಕರಿಸಲು ಅಪೇಕ್ಷಿಸುವ. 2. ಸ್ತೋತ್ರಮಾಡಲು ಅಪೇಕ್ಷಿಸುವ. वदि (अभिवादनस्तुत्योः) + सन् "उः" (३-२-१६८)।

**विवर ವಿವರ** (न०) 1. ರಂಧ್ರ, ತೂತು. विवृणोति—वृञ् (वरणे) "अच्" (३-१-१३४)। "यश्चकार विवरं शिलाघने ताटकोरसि स रामसायकः रघु० ११-१८। 2. ನಿಂದೆ, ದೂಷಣೆ. "विवरं दूषणे गर्ते" मेदि०। 3. ದೋಷ, ತಪ್ಪು, ಅಪರಾಧ. 4. ಅವಕಾಶ, ನಡುವೆ ಬಿಟ್ಟಿರುವ ಸ್ಥಳ, ಕಂಡಿ, ಸಂದು.

**विवरण ವಿವರಣ** (न०) 1. ವ್ಯಾಖ್ಯಾನ, ವಿವರಿಸಿ ಹೇಳುವುದು. वि + वृञ् (वरणे) "ल्युट्" (३-३-११५)। 2. ಮುಚ್ಚದೆ ಇಡುವುದು, ತೆರೆದಿಡುವುದು. 3. ನಿರೂಪಿಸುವುದು, ವರ್ಣಿಸುವುದು.

**विवर्जन ವಿವರ್ಜನ** (वि०) ತ್ಯಜಿಸುವುದು, ತೊರೆದುಬಿಡುವುದು. वि+वृजी (वर्जने) भावे "ल्युट्" (३-३-११५)।

**विवर्जनीय ವಿವರ್ಜನೀಯ** (वि०) 1. ತ್ಯಜಿಸಲ್ಪಡುವ. 2. ತ್ಯಜಿಸಬೇಕಾದ. 3. ತ್ಯಜಿಸಲು ಅರ್ಹವಾದ. वि + वृजी (वर्जने) "अनीयर्" (३-१-९६)। "तव्यः"। –वर्जितव्यः –ವರ್ಜಿತವ್ಯಃ.

**विवर्जित ವಿವರ್ಜಿತ** (वि०) ತ್ಯಜಿಸಲ್ಪಟ್ಟ, ಬಿಡಲ್ಪಟ್ಟ. वि + वृजी (वर्जने) "क्तः" (३-२-१०२)।

**विवर्ण ವಿವರ್ಣ** (पुं०) 1. ನಿಮ್ನವರ್ಗದವನು. विरुद्धो वर्णः। "भैक्षचर्या विवर्णेषु जघन्या वृत्तिरिष्यते" मार्कं०। (वि०) 2. ಕಳೆಗುಂದಿದ, ಕಾಂತಿಯಿಲ್ಲದ. "नरेन्द्रमार्गाट्ट इव प्रपेदे विवर्णभावं स स भूमिपालः" रघु० ६-६७। 3. ಬಣ್ಣವಿಲ್ಲದ, ವರ್ಣಹೀನವಾದ. "इदमशिशिरैरन्तस्तापाद्विवर्णमणीकृतम्" शाकु० ३-१०।

**विवर्त ವಿವರ್ತ** (पुं०) 1. ಬದಲಾವಣೆ, ಪರಿಣಾಮ. वि + वृतु (वर्तने) "घञ्" (३-३-१८)। "एको रसः करुण एव निमित्तभेदाद्भिन्नः पृथक् पृथगिव श्रयते विवर्तान्" उ० रा० ३-४७। ತಾತ್ತ್ವಿಕವಲ್ಲದ ಅನ್ಯಥಾಭಾವ, ನಿಜವಲ್ಲದ ಬೇರೆ ರೂಪ, ಭ್ರಾಂತಿಯಿಂದ ತೋರುವ ರೂಪ, ಅವಿದ್ಯೆಯಿಂದ ತೋರುವ ರೂಪ. ಸರ್ಪವಲ್ಲದ ರಜ್ಜುವಿನಲ್ಲಿ ಸರ್ಪದ ಭ್ರಾಂತಿಯಂತೆ ಶುಕ್ತಿ (ಕಪ್ಪೆಚಿಪ್ಪು) ಯಲ್ಲಿ ರಜತದ ಭ್ರಾಂತಿಯಂತೆ ಜಗತ್ತಿನ ಸ್ವರೂಪವಲ್ಲದ ಬ್ರಹ್ಮದಲ್ಲಿ ಅವಿದ್ಯೆಯಿಂದ ಜಗತ್ತಿನ ಅಧ್ಯಾಸವು ವಿವರ್ತವಾಗುವುದು. ಈ ವಿವರ್ತವಾದವು ಸತ್ಕಾರ್ಯವಾದದ ಒಂದು ಭೇದ. ಪರಿಣಾಮವಾದವು ಇನ್ನೊಂದು ಭೇದ. ಪರಿಣಾಮವಾದವು ಶ್ರೀ ರಾಮಾನುಜಾಚಾರ್ಯರ ಮತ. ವಿವರ್ತವಾದವು ಶ್ರೀ ಶಂಕರಾಚಾರ್ಯರ ಮತ. ಕಾರಣವೇ ಕಾರ್ಯರೂಪದಿಂದ ತೋರುವುದರಿಂದ ಕಾರ್ಯವು ಬೇರೊಂದಿಲ್ಲ. ಆದುದರಿಂದ ಕಾರಣವು ಮಾತ್ರ ಸತ್ಯ. ಕಾರ್ಯವು ಸತ್ಯವಲ್ಲವೆಂದು ಇವರ ಮತ. ಇವರ ಮತದಂತೆ ಬ್ರಹ್ಮದಲ್ಲಿ ಅವಿದ್ಯೆಯಿಂದ ಜಗದಾದಿಗಳ ಅಧ್ಯಾಸವು ಉಂಟಾಗಿ ರಜತಜ್ಞಾನಕ್ಕೆ ಕಾರಣವಾದ ಶುಕ್ತಿಯಲ್ಲಿ ಶುಕ್ತಿಜ್ಞಾನವುಂಟಾಗಿ ರಜತದ ಭ್ರಾಂತಿಯು ನಿವೃತ್ತಿ ಹೊಂದುವಂತೆ ಬ್ರಹ್ಮಜ್ಞಾನದಿಂದ ಜಗದಾದಿಭೇದ ಜ್ಞಾನವು (ಭ್ರಾಂತಿಯು) ನಿವೃತ್ತಿಹೊಂದುವುದು. ಬ್ರಹ್ಮವೊಂದೇ ಸತ್ಯ. ಜಗತ್ತು ಮಿಥ್ಯೆ. "सर्वाजीवे सर्वसंस्थे बृहते अस्मिन् हंसो भ्राम्यते ब्रह्मचक्रे। पृथगात्मानं प्रेरितारं च मत्वा जुष्टस्ततस्तेनामृतत्वमेति" श्वेता० उप० १-६। "एक एव हि भूतात्मा भूते भूते व्यवस्थितः। एकधा बहुधा चैव दृश्यते जलचन्द्रवत्"। 2. ಸಮುದಾಯ, ಗಣ, ಸಮೂಹ. 3. ನೃತ್ಯ. 4. ಮುಂದೆ ನಡೆಯುವುದು, ಮುಂದೆ ಸಾಗುವುದು. "संवर्तप्रकटविवर्तसप्तपाथोनाथोर्मिव्यतिकरविभ्रमप्रचण्डः" म० वी० ६-२६। 5. ಪರಾಙ್ಮುಖವಾಗುವುದು, ಹಿಂದಕ್ಕೆ ಪೋಗುವುದು. "विवर्तः समुदाये स्यादपवर्तननृत्ययोः" मेदि०। 6. ಸುತ್ತಲೂ ಚಕ್ರದಂತೆ ತಿರುಗುವುದು.

**विवर्तन ವಿವರ್ತನ** (न०) 1. ಹೊರಳಾಡುವುದು, ಉರುಳಾಡುವುದು. वि+वृतु (वर्तने) "ल्युट्" (३-३-११५)। "शय्याप्रान्तविवर्तनैर्विगमयत्युन्निद्र एव क्षपाः" शाकु० ६-५। 2. ಹಿಂತಿರುಗುವುದು, ಹಿಂದಕ್ಕೆ ಹೋಗುವುದು. 3. ಪ್ರತಿಕೂಲವಾದ ಬದಲಾವಣೆ, ವಿರುದ್ಧವಾದ ವರ್ತನೆ. "पुतरकाण्डविवर्तनदारुणः प्रविशिनष्टि विधिर्मनसो रुजम्" मालती० ४-७। 4. ಪ್ರದಕ್ಷಿಣೆಯಕಾರ್ಯ, ಪರಿಭ್ರಮಣ. "कथयति शिवयोः शरीरयोगं विषमपदा पदवी विवर्तनेषु" किरा० ५-४०। 5. ಅಲೆದಾಡುವುದು. "तमिस्रादिषु चोग्रेषु नरकेषु विवर्तनम्" मनु० १२-७५। 6. ಪ್ರಸರಿಸುವುದು, ಹರಡುವುದು. "घर्माम्भोविसरविवर्तनैरिदानीम्" मालती० १-४०।

**विवर्तमान ವಿವರ್ತಮಾನ** (वि०) ಕಷ್ಟದಲ್ಲಿ ಇರುವ, ತೊಂದರೆಯನ್ನು ಅನುಭವಿಸುತ್ತಿರುವ. वि + वृतु

(वर्तने) "शानच्" (३-२-१२४)। "भवन्तमेतर्हि मनस्विगर्हिते विवर्तमानं नरदेव वर्त्मनि" किरा० १-३२।

**विवर्तवाद ವಿವರ್ತವಾದ** (पुं०) "विवर्त" ಪದದ 2ನೇ ಅರ್ಥ ನೋಡಿ.

**विवर्तयत् ವಿವರ್ತಯತ್** (वि०) ತಿರುಗಿಸುತ್ತಿರುವ, ಹೊರಳಾಡಿಸುತ್ತಿರುವ. वि + वृतु (वर्तने) + णिच् "शतृ" (३-२-१२४)। "विवर्तयन् मदकलुषीकृते दृशौ कराहतक्षितिकृतमैरवारव:" माघ० १७-१३।

**विवर्तित ವಿವರ್ತಿತ** (वि०) 1. ಮಂಡಲಾಕಾರವಾಗಿ ಮಾಡಲ್ಪಟ್ಟ, ವರ್ತುಲವಾಗಿ ಮಾಡಲ್ಪಟ್ಟ. वि+वृतु (वर्तने) "क्त:" (३-२-१०२)। "वात्याभिर्वियति विवर्तित: समन्तात् आधत्ते कनकमयातपत्रलक्ष्मीम्" किरा० ५-३९। 2. ಹಿಮ್ಮುಖವಾಗಿ ತಿರುಗಿಸಲ್ಪಟ್ಟ, ಮತ್ತೊಂದು ಕಡೆಗೆ ತಿರುಗಿಸಲ್ಪಟ್ಟ. "अथो वयस्यां परिपार्श्ववर्तिनीं विवर्तितानञ्जननेत्रमैक्षत" कुमा० ५-५१। 3. ಹೊಡೆದು ಕೊಚ್ಚಲ್ಪಟ್ಟ, ಒರಟೊರಟಾಗಿ ಕತ್ತರಿಸಲ್ಪಟ್ಟ. "संसक्तत्रुटितविवर्तितान्त्रजालव्याकीर्णस्फुरदपवृत्तरुण्डखण्ड:" मालती० ३-१७। 4. ಒಂದು ಸ್ಥಳದಿಂದ ಕದಲಿಸಲ್ಪಟ್ಟ, ಒಂದು ಜಾಗದಿಂದ ನೂಕಲ್ಪಟ್ಟ. "जनैस्तदा युगपरिवर्तवायुभिर्विवर्तिता गिरिपतय: प्रतीयिरे" माघ० १७-१२।

**विवर्तिन् ವಿವರ್ತಿನ್** (वि०) 1. ಹಿಂತಿರುಗುವ, ಹಿಂದಕ್ಕೆ ಹೋಗುವ. विवर्तते — वि + वृतु (वर्तने) "णिनि:" (३-१-१३४)। 2. ಸುತ್ತಲೂ ತಿರುಗುತ್ತಿರುವ, ಚಕ್ರದಂತೆ ಸುತ್ತುತ್ತಿರುವ. 3. ಹಿಮ್ಮುಖವಾಗಿ ತಿರುಗುವ, ಮುಖವನ್ನು ಹಿಂದಕ್ಕೆ ತಿರುಗಿಸುವ.

**विवर्धन ವಿವರ್ಧನ** (न०) 1. ಹೆಚ್ಚಿಸುವುದು, ಅಧಿಕಗೊಳಿಸುವುದು. वि + वृधु (वृद्धौ) + णिच् "ल्युट्" (३-३-११५)। 2. ಬೆಳೆಸುವುದು. 3. ಹೆಚ್ಚುವುದು, ಅಧಿಕವಾಗುವುದು. वि + वृधु "ल्युट्" (३-३-११५)। 4. ಬೆಳೆಯುವುದು, ಬೆಳೆತ. 5. ಕತ್ತರಿಸುವುದು, ತುಂಡು ಮಾಡುವುದು. वि+वर्ध (छेदने) "ल्युट्" (३-३-११५)। 6. ತುಂಬುವುದು.

**विवर्धनीय ವಿವರ್ಧನೀಯ** (वि०) 1. ಅಧಿಕಗೊಳಿಸಲ್ಪಡುವ. 2. ಅಧಿಕಗೊಳಿಸಬೇಕಾದ. 3. ಅಧಿಕಗೊಳಿಸಲು ಅರ್ಹವಾದ. 4. ಅಧಿಕಗೊಳಿಸಲು ಸಾಧ್ಯವಾದ. 5. ಬೆಳೆಸಲ್ಪಡುವ. 6. ಬೆಳೆಸಬೇಕಾದ. 7. ಬೆಳೆಸಲು ಅರ್ಹವಾದ. 8. ಬೆಳೆಸಲು ಸಾಧ್ಯವಾದ. वि + वृधु (वृद्धौ)+णिच् "अनीयर्" (३-१-९६)। "तव्य:"। **-वर्धितव्य: -ವರ್ಧಿತವ್ಯ:**

**विवर्धमान ವಿವರ್ಧಮಾನ** (वि०) 1. ಬೆಳೆಯುತ್ತಿರುವ. 2. ವೃದ್ಧಿ ಹೊಂದುತ್ತಿರುವ, ಅಧಿಕವಾಗುತ್ತಿರುವ. वि + वृधु (वृद्धौ) "शानच्" (३-२-१२४)। णिच् "शानच्" (३-२-१२४)। **-वर्धयमान: -ವರ್ಧಯಮಾನ:** 3. ಬೆಳೆಸುತ್ತಿರುವ. 4. ಅಧಿಕಗೊಳಿಸುತ್ತಿರುವ, ವೃದ್ಧಿಪಡಿಸುತ್ತಿರುವ.

**विवर्धित ವಿವರ್ಧಿತ** (वि०) 1. ಬೆಳೆಸಲ್ಪಟ್ಟ. 2. ಅಧಿಕಪಡಿಸಲ್ಪಟ್ಟ. वि + वृधु (वृद्धौ) + णिच् "क्त:" (३-२-१०२)। "वेश्यासौ मदनज्वालारूपेन्धन विवर्धिता" भर्तृ० २-५९। 3. ಕತ್ತರಿಸಲ್ಪಟ್ಟ, ತುಂಡುಮಾಡಲ್ಪಟ್ಟ. 4. ತುಂಬಲ್ಪಟ್ಟ. वि + वर्ध (छेदनपूरणयो:) "क्त:" (३-२-१०२)। (न०) 5. ಬೆಳವಣಿಗೆ. 6. ಅಧಿಕವಾಗುವುದು. वि + वृधु (वृद्धौ) "क्त:" (३-३-११४)।

**विवश ವಿವಶ** (वि०) 1. ಇನ್ನೊಬ್ಬನಿಗೆ ಅಧೀನನಲ್ಲದವನು, ಇನ್ನೊಬ್ಬನಿಗೆ ವಶನಾಗದವನು, ಯಾರಿಗೂ ಅಡಗದಿರುವವನು. विरुद्धं वष्टि — वि + वश (कान्तौ) "अच्" (३-१-१३४)। 2. ಇನ್ನೊಬ್ಬನಿಗೆ ವಶನಾಗಿರುವವನು, ಇನ್ನೊಬ್ಬನಿಗೆ ಅಧೀನನಾಗಿರುವವನು. "भयविह्वलमाशु दन्दशूकैर्विवशैराविविशे स्वमेव धाम" माघ० २०-५८। "मित्रस्नेहाद्विवशमधुना साहसे मां नियुङ्क्ते" मुद्रा० ६-१९। 3. ಪ್ರಜ್ಞಾಶೂನ್ಯ, ಜ್ಞಾನತಪ್ಪಿದವನು. "विवशा कामवधूर्विबोधिता" कुमा० ४-१। 4. ಅಶುಭದಿಂದ ಹೆದರಿದ ಬುದ್ಧಿಯುಳ್ಳವನು. 5. ಗತಿಸಿದ, ಪಂಚತ್ವವನ್ನು ಹೊಂದಿದ. "उपलब्धवती दिवश्च्युतं विवशा शापनिवृत्तिकारणम्" रघु० ८-८२।

**विवसन ವಿವಸನ** (वि०) ದಿಗಂಬರ, ವಸ್ತ್ರವನ್ನು ಧರಿಸದಿರುವವನು. विगतं वसनं यस्य।

**विवस्वत् ವಿವಸ್ವತ್** (पुं०) 1. ರವಿ, ಸೂರ್ಯ, विविधं वस्ते आच्छादयति — वस (आच्छादने) "क्विप्" (३-२-७६)। विवो रश्मि:। विवोऽस्यास्ति "मतुप्" (५-२-९४)। "विवस्वतानायिषतेव मिश्रा: स्वगोसहस्रेण समं जनानाम्। गावोऽपि नेत्रापरनामधेयास्तेनेदमान्ध्यं खलु नान्धकारे:" नैष० २२-३४। 2. ದೇವತೆ. 3. ಅರುಣ. 4. ವೈವಸ್ವತಮನು. 5. ಅರ್ಕವೃಕ್ಷ, ಎಕ್ಕದ ಗಿಡ. (स्त्री०) **-ती -ತೀ.** 6. ಸೂರ್ಯನ ನಗರ. "विवस्वान् विबुधे सूर्ये तन्नगर्यां विवस्वती" मेदि०।

**विवह ವಿವಹ** (पुं०) ಸಪ್ತವಾಯುಗಳಲ್ಲೊಂದು. विवहति — वि + वह (प्रापणे) "अच्" (३-१-१३४)।

"आवहो विवहश्चैव प्रवहश्च समीरणः। परावहः संवहश्च उद्वहश्च महाबलः। तथा परिवहः श्रीमान्" ಇವು ಸಪ್ತವಾಯುಗಳು.

**विवाद ವಿವಾದ** (पुं०) 1. ವ್ಯವಹಾರ, ವ್ಯಾಜ್ಯ, ಹೋರಾಟ. विरुद्धो वादः। ಆಸ್ತಿಯ ವಿಷಯದಲ್ಲಿ ನಡೆಸುವ ಮತ್ತು ಬೇರೆ ವಿಷಯಗಳಲ್ಲಿ ನಡೆಯುವ ಮೊಕದ್ದಮೆ. "विवादेऽन्विष्यते पत्रं तदभावेऽपि साक्षिणः" पञ्चतं० १-४३६। 2. ವಾಗ್ವಾದ, ವಾಗ್ಯುದ್ಧ, ಕಲಹ. "अलं विवादेन यथाश्रुतस्त्वया तथाविधस्तावदशेषमस्तु सः" कुमा० ५-८२। 3. ಚರ್ಚೆ, ವಾಗ್ವಾದದಿಂದ ವಿಚಾರಮಾಡುವುದು. 4. ಆಜ್ಞಾವಚನ, ರಾಜನ ಆಜ್ಞೆ. "तस्याननादुच्चरितो विवादश्चस्खाल वेलास्वपि नार्णवानाम्" रघु० १८-४३। ವಿವಾದಕ್ಕೆ ಹದಿನೆಂಟು ವಿಧ ಅವಕಾಶಗಳಿರುವುವು. ["अष्टादशविवादपद" ಪದದಲ್ಲಿ ನೋಡಿ.]

**विवादिन् ವಿವಾದಿನ್** (पुं०) 1. ನ್ಯಾಯಾಲಯದಲ್ಲಿ ವ್ಯಾಜ್ಯವನ್ನು ಹೂಡಿರುವ ವಾದಿ, ಕಕ್ಷಿಗಾರ, ವ್ಯವಹಾರದಲ್ಲಿ ತೊಡಗಿರುವವನು. विवादोऽस्यास्ति—विवाद "इनिः" (५-२-११५)। (वि०) 2. ಚರ್ಚೆಮಾಡುವವನು. 3. ಜಗಳವಾಡುವವನು.

**विवार ವಿವಾರ** (पुं०) ವಿಕಾಸಹೊಂದುವುದು, ಅಗಲವಾಗುವುದು. ಇದು ವರ್ಣೋತ್ಪತ್ತಿಗೆ ಪೂರ್ವದಲ್ಲಿ ಕಂಠದಲ್ಲಿ ನಡೆಯುವ ಪ್ರಯತ್ನಗಳಲ್ಲೊಂದು. (1) विवारः (2) संवारः (3) श्वासः (4) नादः (5) घोषः (6) अघोषः (7) अल्पप्राणः (8) महाप्राणः (9) उदात्तः (10) अनुदात्तः ಮತ್ತು (11) स्वरितः ಇವು ವರ್ಣೋಚ್ಚಾರಣೆಗೆ ಪೂರ್ವದಲ್ಲಿ ಬಾಯೊಳಗೆ ಕಂಠದಲ್ಲಿ ನಡೆಯುವ ಪ್ರಯತ್ನಗಳು.

**विवाह ವಿವಾಹ** (पुं०) ಪರಿಣಯ, ಮದುವೆ. विशिष्टं वहनम्—वि + वह (प्रापणे) "घञ्" (३-३-१८)। "वधूं द्विजः प्राह तवैष वत्से वह्निर्विवाहं प्रति कर्मसाक्षी" कुमा० ७-८३। ವಿವಾಹವು (1) ब्राह्मः (2) दैवः (3) आर्षः (4) प्राजापत्यः (5) आसुरः (6) गान्धर्वः (7) राक्षसः ಮತ್ತು (8) पैशाचः ಎಂದು ಎಂಟು ವಿಧ. [ವಿವರಕ್ಕೆ ಆಯಾಪದಗಳಲ್ಲಿ ನೋಡಿ.]

**विवाहित ವಿವಾಹಿತ** (वि०) ವಿವಾಹಮಾಡಿಕೊಂಡವನು, ಮದುವೆಯಾದವನು. विवाहोऽस्य सञ्जातः "इतच्" (५-२-३६)।

**विवाह्य ವಿವಾಹ್ಯ** (वि०) ವಿವಾಹವಾಗಲು ಯೋಗ್ಯ— (1) ವಧೂ (2) ವರ. वि + वह (प्रापणे) "ण्यत्" (३-१-१२४)।

**विविक्त ವಿವಿಕ್ತ** (वि०) 1. ನಿರ್ಜನವಾದ, ಜನಗಳ ಸಂಚಾರವಿಲ್ಲದ. विविञ्चन्ति जना अत्र—वि+विचिर् (पृथग्भावे) "क्तः" (३-४-७६)। "विविक्तदेशसेवित्वमरतिर्जनसंसदि" गीता १३-१०। 2. ಸ್ವಚ್ಛವಾದ, ನಿರ್ಮಲವಾದ. "प्रत्यग्रमज्जनविशेषविविक्तकान्तिः कौसुम्भरागरुचिरस्फुरदंशुकान्ता" रत्ना० १-२१। 3. ಶೇವವಿಲ್ಲದ, ಒಂದಕ್ಕೊಂದು ಅಂಟಿಕೊಳ್ಳದೆ ಧೂಳಾಗಿರುವ. "पुनरुषसि विविक्तैर्मातरिश्वाऽवचूर्ण्य ज्वलयति मदनाग्निं मालतीनां रजोभिः" माघ० ११-१७। 4. ರಹಿತವಾದ, ಶೂನ್ಯವಾದ. "प्रसन्नदिक्पांसुविविक्तवातं शङ्खस्वनानन्तरपुष्पवृष्टि" कुमा० १-२३। 5. ಒಂಟಿಯಾಗಿರುವ, ಏಕಾಕಿಯಾಗಿರುವ. 6. ಪರಿಶುದ್ಧವಾದ. 7. ವಿವೇಕಿಯಾದವನು. "विविक्तं त्रिष्वसंपृक्ते रहःपूतविवेकिषु" मेदि०। 8. ಬೇರೆ ಬೇರೆಯಾಗಿರುವ, ಒಂದಕ್ಕೊಂದು ಸೇರದಿರುವ, ಸ್ಪುಟವಾದ ಉಚ್ಚಾರಣೆಯುಳ್ಳ. "विविक्तवर्णाभरणा सुखश्रुतिः" किरा० १४-३। 9. ದೋಷವಿಲ್ಲದ, ಕಳಂಕವಿಲ್ಲದ. "स तर्कयामास विविक्ततर्कः" किरा० १६-१। (न०) 10. ಏಕಾಂತ, ರಹಸ್ಯ. "विविक्तं स्यादसंपृक्ते विवेकान्वितपूतयोः। वाच्यवद्दर्शितो धीरैर्विविक्तं रहसि स्मृतम्" विश्व०। (स्त्री०) —क्ता —ಕ್ತಾ. 11. ದುರದೃಷ್ಟಹೆಂಗಸು, ಪತಿಯನ್ನು ಪ್ರೀತಿಸದ ಹೆಂಗಸು.

**विविक्षत् ವಿವಿಕ್ಷತ್** (वि०) ಪ್ರವೇಶಿಸಲು ಅಪೇಕ್ಷಿಸುತ್ತಿರುವ, ಒಳಗೆ ಹೋಗಲು ಅಪೇಕ್ಷಿಸುತ್ತಿರುವ. विश (प्रवेशने) + सन् "शतृ" (३-२-१२४)।

**विविक्षा ವಿವಿಕ್ಷಾ** (स्त्री०) ಪ್ರವೇಶಿಸಲು ಅಪೇಕ್ಷೆ, ಒಳಗೆ ಹೋಗಲು ಆಸೆ. विश (प्रवेशने) + सन् "अः" (३-३-१०२)।

**विविक्षु ವಿವಿಕ್ಷು** (वि०) ಒಳಗೆ ಪ್ರವೇಶಿಸಲು ಅಪೇಕ್ಷಿಸುವ. विश (प्रवेशने) + सन् "उः" (३-२-१६८)। "कामस्तु बाणावसरं प्रतीक्ष्य पतङ्गवद्वह्निमुखं विविक्षुः" कुमा० ३-६४।

**विविग्न ವಿವಿಗ್ನ** (वि०) ಹೆದರಿದ, ಭಯಗೊಂಡ. वि+ओविजी (भयचलनयोः) "क्तः" (३-४-७२)। "दृष्टः कथंचिद्गवयैर्विविग्नैरसोढसिंहध्वनिरुन्ननाद" कुमा० १-५६।

**विवित्सा ವಿವಿತ್ಸಾ** (स्त्री०) ಹೊಂದಲು ಅಪೇಕ್ಷೆ, ಪಡೆಯಲು ಆಸೆ. वेत्तुमिच्छा—विद्लृ (लाभे) + सन्

"अः" (३-३-१०२)। "विवित्सावेतालीविगमपरिशुद्धेऽपि हृदये" दयाश०।

**विवित्सु ವಿವಿತ್ಸು** (वि०) ಹೊಂದಲು ಅಪೇಕ್ಷಿಸುವ. विद्लृ (लाभे) + सन् "उः" (३-२-१६८)।

**विविदिषा ವಿವಿದಿಷಾ** (स्त्री०) ತಿಳಿದುಕೊಳ್ಳಲು ಅಪೇಕ್ಷೆ. विद (ज्ञाने) + सन् "अः" (३-३-१०२)।

**विविदिषु ವಿವಿದಿಷು** (वि०) ತಿಳಿದುಕೊಳ್ಳಲು ಅಪೇಕ್ಷಿಸುವ. विद (ज्ञाने) + सन् "उः" (३-२-१६८)।

**विविध ವಿವಿಧ** (वि०) ನಾನಾಬಗೆಯಾದ, ಅನೇಕ ರೀತಿಯದಾದ, ನಾನಾರೂಪವಾದ. विचित्रा विधा यस्य। "संलक्ष्यते विविधरत्नकरानुविद्धमूर्ध्वप्रसारितसुराधिपचापचारु" माघ० ४-४९।

**विवीत ವಿವೀತ** (पुं०) 1. ತೃಣಕಾಷ್ಠಗಳಿಂದ ಕೂಡಿದ ಪ್ರದೇಶ. 2. ಹುಲ್ಲುಗಾವಲು, ಗೋಮಾಳ. **–भर्तृ –ಭರ್ತೃ.** ಹುಲ್ಲುಗಾವಲಿನ ಯಜಮಾನ.

**विवृण्वत् ವಿವೃಣ್ವತ್** (वि०) ಪ್ರಕಾಶಪಡಿಸುತ್ತಿರುವ, ಸ್ಫುಟವಾಗಿ ಹೇಳುತ್ತಿರುವ, ಸ್ಪಷ್ಟವಾಗಿ ತಿಳಿಸುತ್ತಿರುವ. वि+वृञ् (वरणे) "शतृ" (३-२-१२४)। "विवृण्वतेव कल्याणमान्तरज्ञेन चक्षुषा" मालती० १-११। स्त्रियां "ङीप्" (४-१-६)। **–वृण्वती –ವೃಣ್ವತೀ.** "विवृण्वती शैलसुतापि भावमङ्गैः स्फुरद्बालकदम्बकल्पैः" कुमा० ३-६८। "शानच्" (३-२-१२४)। **–वृण्वानः –ವೃಣ್ವಾನಃ.**

**विवृत ವಿವೃತ** (वि०) 1. ವಿಸ್ತಾರಗೊಂಡ. वि + वृञ् (वरणे) "क्तः" (३-४-७२)। 2. ಮುಂದಕ್ಕೆ ಚಾಚಲ್ಪಟ್ಟ, ಮುಂದಕ್ಕೆ ನೀಡಲ್ಪಟ್ಟ. वि+वृञ् कर्म० "क्तः" (३-२-१०२)। "विवृतोरुबाहुपरिघेण सरभसपदं निधित्सता" माघ० १५-५७। 3. ವಿವರಿಸಲ್ಪಟ್ಟ. 4. ಹರಡಿರುವ, ಪ್ರಸರಿಸಿರುವ. 5. ತೆರೆದಿರುವ, ಅಗಲವಾಗಿ ಮಾಡಿರುವ, ಮುಚ್ಚದಿರುವ. "दर्भैरधविलीढैः श्रमविवृतमुखभ्रंशिभिः कीर्णवर्त्मा" शाकु० १-७। 6. ವರ್ಣೋಚ್ಚಾರಣೆಗಾಗಿ ನಡೆಯುವ ಪ್ರಯತ್ನಗಳಲ್ಲಿ ಒಂದು, "विवृतमूष्मणां स्वराणां च। ह्रस्वस्यावर्णस्य प्रयोगे संवृतम्। प्रक्रियादशायां तु विवृतमेव" सि० कौ०।

**विवृताक्ष ವಿವೃತಾಕ್ಷ** (पुं०) ಕುಕ್ಕುಟ, ಕೋಳಿ. विवृते अक्षिणी यस्य।

**विवृति ವಿವೃತಿ** (स्त्री०) ವಿವರಣೆ, ವ್ಯಾಖ್ಯಾನ. वि+वृञ् (वरणे) "क्तिन्" (३-३-९४)। "वाक्यस्य शेषाद्विवृतेर्वदन्ति सान्निध्यतः सिद्धपदस्य वृद्धाः"।

**विवृत्त ವಿವೃತ್ತ** (वि०) ಅಡ್ಡಲಾಗಿ ಚಲಿಸಿದ, ತಿರುಗಿದ, ಸುತ್ತಾಡಿದ. वि+वृतु (वर्तने) "क्तः" (३-४-७२)। "विवृत्तपार्श्वं रुचिराङ्गहारं समुद्वहच्चारुनितम्बबिम्बम्" भट्टि० २-१६।

**विवृत्ति ವಿವೃತ್ತಿ** (स्त्री०) ತಿರುಗುವುದು, ಸುತ್ತಾಡುವುದು. वि + वृतु (वर्तने) "क्तिन्" (३-३-९४)।

**विवृद्ध ವಿವೃದ್ಧ** (वि०) 1. ಚೆನ್ನಾಗಿ ಬೆಳೆದಿರುವ. 2. ಹೆಚ್ಚಿರುವ, ವೃದ್ಧಿಹೊಂದಿರುವ. वि + वृधु (वृद्धौ) "क्तः" (३-४-७२)। "ततः किराताधिपतेरलघ्वीमाजिक्रियां वीक्ष्य विवृद्धमन्युः" किरा० १६-१।

**विवृद्धि ವಿವೃದ್ಧಿ** (स्त्री०) 1. ಬೆಳವಣಿಗೆ. वि + वृधु (वृद्धौ) "क्तिन्" (३-३-९४)। "न केवलं गच्छति तस्य काले ययुः शरीरावयवा विवृद्धिम्" रघु० १८-४९। 2. ಅಭಿವೃದ್ಧಿ, ಆಧಿಕ್ಯ, ಹೆಚ್ಚಿಗೆ. "गर्भं दधत्यर्कमरीचयोस्माद्विवृद्धिमत्राश्नुवते वसूनि" रघु० १३-४। 3. ಅಭಿವೃದ್ಧಿ, ಏಳಿಗೆ.

**विवेक ವಿವೇಕ** (पुं०) 1. ವಿವೇಚನೆ, ವಿಮರ್ಶೆ, ಸೂಕ್ಷ್ಮವಾಗಿ ಪರೀಕ್ಷಿಸುವುದು, ವಿಚಾರಮಾಡುವುದು. वि + विचिर् (पृथग्भावे) "घञ्" (३-३-१८)। "भ्रातुमक्षि पतति भ्रमरः स्म भ्रान्तिभाजि भवति क्व विवेकः" माघ० १०-५। 2. ಪೃಥಗ್ಭಾವ, ಭೇದ, ಬೇರೆ ಬೇರೆಯಾಗಿರುವಿಕೆ. "परात्मीयविवेकं च प्रामुष्णात् कपिरक्षसाम्" भट्टि० १७-६०। 3. ತಾರತಮ್ಯಜ್ಞಾನ, ಪರಸ್ಪರ ವ್ಯಾವರ್ತಕ ಧರ್ಮದಿಂದ ಉಂಟಾಗುವ ವಸ್ತುಸ್ವರೂಪ ನಿಶ್ಚಯಜ್ಞಾನ, ಪ್ರಕೃತಿಪುರುಷಭೇದಜ್ಞಾನ. ಈ ವಿವೇಕೋದಯಕ್ಕೆ "ಪ್ರಬೋಧಚಂದ್ರೋದಯ" ನೋಡಿ. 4. ನೀರು ತುಂಬಿಡುವ ಪಾತ್ರೆ. "विवेकः स्याज्जलद्रोण्यां पृथग्भावविचारयोः" मेदि०। 5. ಶಾಸ್ತ್ರಾಭ್ಯಾಸದಿಂದ ಉಂಟಾಗುವ ಜ್ಞಾನ. "विवेकवैराग्यविदेशवर्तिना" याद० १४-४७। 6. ಶುದ್ಧವಾದ ಆಹಾರದಿಂದ ಉಂಟಾಗುವ ಸತ್ತ್ವಶುದ್ಧಿ. "विवेको नामादुष्टादन्नात्सत्त्वशुद्धिः" रामानुजदर्शनम् स० द० सं०।

**विवेकिन् ವಿವೇಕಿನ್** (वि०) 1. ವಿವೇಕವುಳ್ಳವನು, ವಿವೇಚನೆಯುಳ್ಳವನು, ಸೂಕ್ಷ್ಮವಾಗಿ ಪರಿಶೀಲಿಸುವವನು. विवेकोऽस्यास्ति "इनिः" (५-२-११५)। "दम्भी भवति विवेकी प्रियवक्ता भवति धूर्तजनः" पञ्चतं० १-४५१। 2. ವಸ್ತುಸ್ವರೂಪವನ್ನರಿತವನು, ತಾರತಮ್ಯಜ್ಞಾನವುಳ್ಳವನು, ವಿವೇಕಶಾಲಿ.

**विवेक्तृ ವಿವೇಕ್ತೃ** (त्रि०) 1. ವಿವೇಚನೆಮಾಡುವವನು, ವಿಮರ್ಶೆಮಾಡುವವನು, ಸೂಕ್ಷ್ಮವಾಗಿ ಪರಿಶೀಲಿಸುವವನು. वि+विचिर् (पृथग्भावे) "तृच्" (३-१-१३३)। 2. ಪೃಥಕ್ಕರಿಸುವವನು, ಬೇರೆ ಬೇರೆ ಮಾಡುವವನು.

**विवेचक ವಿವೇಚಕ** (पुं०) "विवेक्तृ" ಪದದ ಅರ್ಥ. वि + विचिर् (पृथग्भावे) "ण्वुल्" (३-१-१३३)।

**विवेचन ವಿವೇಚನ** (नं०) 1. ವಿಚಾರಮಾಡುವುದು, ವಿಮರ್ಶಿಸುವುದು, ಸೂಕ್ಷ್ಮವಾಗಿ ಪರಿಶೀಲಿಸುವುದು. वि + विचिर् (पृथग्भावे) "ल्युट्" (३-३-११५)। 2. ನಿರ್ಣಯ, ತೀರ್ಮಾನ. "यस्य शूद्रस्तु कुरुते राज्ञो धर्मविवेचनम्। तस्य सीदति तद्राष्ट्रं पङ्के गौरिव पश्यतः" मनु० ८-२१।

**विवेचनीय ವಿವೇಚನೀಯ** (त्रि०) 1. ಚೆನ್ನಾಗಿ ವಿಮರ್ಶಿಸಲ್ಪಡುವ. 2. ವಿವೇಚನೆಮಾಡಬೇಕಾದ. 3. ವಿವೇಚನೆ ಮಾಡಬಹುದಾದ. 4. ನಿರ್ಣಯಿಸಲ್ಪಡುವ. 5. ನಿರ್ಣಯಿಸಬೇಕಾದ. 6. ನಿರ್ಣಯಿಸಬಹುದಾದ. वि+विचिर् (पृथग्भावे) "अनीयर्" (३-१-९६)। "तव्यः"। **-वेक्तव्यम् -ವೇಕ್ತವ್ಯಮ್.**

**विवोढृ ವಿವೋಢೃ** (पुं०) 1. ವರ, ಗಂಡ, ಮದುವೆಯಾದವನು. वि + वह (प्रापणे) "तृच्" (३-१-१३३)। "आवरिष्ट विकटेन विवोढुर्वक्षसैव कुचमण्डलमन्या" माघ० १०-४२। 2. ಅಳಿಯ, ಪುತ್ರಿಯ ಪತಿ.

**विश् ವಿಶ್** (पुं०) 1. ವೈಶ್ಯ, ತೃತೀಯ ವರ್ಣದವನು. विशति — विश (प्रवेशने) "क्विप्" (३-२-१७८)। "केशान्तिको ब्राह्मणस्य दण्डः कार्यः प्रमाणतः। ललाटसंमितो राज्ञः स्यात्तु नासान्तिको विशः" मनु० २-४६। 2. ಮಾನವ, ಮನುಷ್ಯ. "विट् पुंसि मनुजे वैश्ये" मेदि०। "अथ प्रदोषे दोषज्ञः संवेशाय विशांपतिम्। सूनुः सूनृतवाक् स्रष्टुर्विससर्जोर्जितश्रियम्" रघु० १-९३। 3. ಪ್ರವೇಶ. "विट् स्मृतो वैश्यमनुजप्रवेशे तु मनीषिभिः" विश्व०।

**विश ವಿಶ** (नं०) ಮೃಣಾಳ, ತಾವರೆಯ ದಂಟು. विश (प्रवेशने) "कः" (३-१-१३४)। "पद्मनालं मृणालं स्यात्तथा विशमिति स्मृतम्" भावप्र०।

**विशकलित ವಿಶಕಲಿತ** (त्रि०) ಚೆನ್ನಾಗಿ ವಿವೇಚನೆಮಾಡಲ್ಪಟ್ಟ, ಯೋಚಿಸಿ ವಿಮರ್ಶಿಸಲ್ಪಟ್ಟ. "इति विशकलितार्थामौद्धवीं वाचमेनाम्" माघ० २-११८।

**विशङ्क ವಿಶಙ್ಕ** (त्रि०) 1. ಭಯವಿಲ್ಲದ, ಹೆದರಿಕೆಯಿಲ್ಲದ. विगता शङ्का यस्य। "धनुर्भृतोऽप्यस्य दयार्द्रभावमाख्यातमन्तःकरणैर्विशङ्कैः" रघु० २-११। 2. ಸಂಶಯವಿಲ್ಲದ. (क्रि० वि०) 3. ಭಯವಿಲ್ಲದೆ, ಹೆದರಿಕೆಯಿಲ್ಲದೆ. 4. ಸಂಶಯವಿಲ್ಲದೆ. "वारुणीमदविशङ्कमथाविश्चक्षुषोऽभवदसाविव रागः" माघ० १०-१९।

**विशङ्कट ವಿಶಂಕಟ** (त्रि०) 1. ದೊಡ್ಡದಾದ, ಬೃಹತ್ತಾದ. वि "शङ्कटच्" (५-२-२८)। 2. ವಿಶಾಲವಾದ, ವಿಸ್ತಾರವಾದ, ಅಗಲವಾದ. "विशङ्कटो वक्षसि बाणपाणिः संपन्नतालद्वयसः पुरस्तात्" भट्टि० २-५०। 3. ಭಯಂಕರವಾದ, ಕರಾಳವಾದ, ರೌದ್ರ. 4. ಬಲಶಾಲಿ, ಪ್ರಚಂಡ. (अव्य०) 5. ವಿಶಾಲವಾಗಿ. 6. ದೊಡ್ಡದಾಗಿ. 7. ಭಯಂಕರವಾಗಿ.

**विशङ्कनीय ವಿಶಂಕನೀಯ** (त्रि०) 1. ಊಹಿಸಲ್ಪಡುವ. 2. ಊಹಿಸಬೇಕಾದ. 3. ಊಹಿಸಬಹುದಾದ. 4. ಊಹಿಸಲು ಶಕ್ಯವಾದ. वि + शकि (शङ्कायाम्) "अनीयर्" (३-१-९६)। "तव्यः"। **-शङ्कितव्यः -ಶಂಕಿತವ್ಯಃ.** 5. ಹೆದರಬೇಕಾದ, ಭಯಪಡಬೇಕಾದ.

**विशङ्कमान ವಿಶಂಕಮಾನ** (पुं०) 1. ಊಹಿಸುವ, ಸಂದೇಹಪಡುವ. विशङ्कते—वि+शकि (शङ्कायाम्) "शानच्" (३-२-१२४)। "विशङ्कमानो भवतः पराभवं नृपासनस्थोऽपि वनाधिवासिनः" किरा० १-७। 2. ಹೆದರುವ, ಭಯಪಡುವ.

**विशङ्का ವಿಶಂಕಾ** (स्त्री०) 1. ಭಯ, ಹೆದರಿಕೆ. 2. ಶಂಕೆ, ಸಂದೇಹ, ಊಹೆ. वि+शकि (शङ्कायाम्)

**विशङ्कित ವಿಶಂಕಿತ** (त्रि०) ಊಹಿಸಲ್ಪಟ್ಟ, ಸಂದೇಹಪಡಲ್ಪಟ್ಟ. वि + शकि (शङ्कायाम्) "क्तः" (३-२-१०२)।

**विशङ्किन् ವಿಶಂಕಿನ್** (त्रि०) 1. ಊಹಿಸುವ, ಸಂದೇಹಪಡುತ್ತಿರುವ. विशङ्काऽस्त्यस्य "इनिः" (५-२-११५)। "पश्यन् प्रतिद्विरदकुम्भविशङ्किचेताः" माघ० ५-३४। 2. ಹೆದರುವ, ಭಯಪಡುವ.

**विशङ्क्य ವಿಶಂಕ್ಯ** (त्रि०) ಊಹಿಸಲ್ಪಡುವ. वि+शकि (शङ्कायाम्) "ण्यत्" (३-१-१२४)।

**विशत् ವಿಶತ್** (त्रि०) ಪ್ರವೇಶಿಸುತ್ತಿರುವ, ಒಳಗೆ ಹೋಗುತ್ತಿರುವ. विश (प्रवेशने) "शतृ" (३-२-१२४)। "विशन्तो वाहिनीं तस्य त्रिस्रोतसमिवापराम्" याद० २२-१४५। स्त्रियां "ङीप्" (४-१-६)। **-ती -ತೀ, -न्ती -ನ್ತೀ.**

**विशद ವಿಶದ** (त्रि०) 1. ಶುಭ್ರವಾದ, ಸ್ವಚ್ಛವಾದ, ನಿರ್ಮಲವಾದ. वि + शद्लृ (शातने) "अच्"

(३-१-१३४)। "विशदप्रभापरिगतं विबभावुदयाचलव्यवहितेन्दुवपुः" माघ० ९-२६। 2. ಪ್ರಕಾಶಿಸುವ, ಹೊಳೆಯುವ. "ओष्ठस्ताम्बूलद्युतिविशदो विलासिनीनाम्" माघ० ८-७०। 3. ನಿರ್ಮಲವಾದ, ಕೊಳೆಯಿಲ್ಲದ. "स्पर्शभाजि विशदद्युतिचारौ कल्पिते मृगदृशां सुरताय" माघ० १०-३९। 4. ಸ್ವಚ್ಛವಾದ, ಸಂಶಯವಿಲ್ಲದ, ಸ್ಪಷ್ಟವಾದ. 5. ಬಿಳಿಯ, ಶ್ವೇತವರ್ಣದ. "ततोऽनुकुर्याद्विशदस्य तस्यास्ताम्रौष्ठपर्यस्तरुचः स्मितस्य" कुमा० १-४४। 6. ಸ್ಫುಟವಾದ, ವ್ಯಕ್ತವಾದ. "विशदोच्छ्वसितेन मेदिनी कथयामास कृतार्थतामिव" रघु० ८-३। 7. ನೆಮ್ಮದಿಯಿಂದ ಕೂಡಿದ, ಚಿಂತೆಯಿಲ್ಲದ. "जातो ममायं विशदः प्रकामम्" शाकु० ४-२१। (अव्य०) 8. ಸ್ಪಷ್ಟವಾಗಿ, ವ್ಯಕ್ತವಾಗಿ, ಸ್ಫುಟವಾಗಿ. "मधुमर्दनगीतगर्भया तद्विशदं नारदवीणयान्ववादि" याद० १५-८६। 9. ನಿರ್ಮಲವಾಗಿ. 10. ಸಂಶಯವಿಲ್ಲದೆ. (ಪುಂ०) 11. ಶ್ವೇತವರ್ಣ, ಬಿಳಿಯಬಣ್ಣ.

**विशदन ವಿಶದನ** (ನಂ०) 1. ವಿಶದಪಡಿಸುವುದು, ಸ್ಪಷ್ಟಪಡಿಸುವುದು, ಸ್ಫುಟವಾಗಿ ತಿಳಿಸುವುದು. वि + शद्लृ (शातने) "ल्युट्" (३-३-११५)। 2. ಸ್ವಚ್ಛವಾಗಿ ಮಾಡುವುದು. ತಿಳಿಯಾಗಿ ಮಾಡುವುದು. 3. ಕೊಳೆಯಿಲ್ಲದಂತೆ ಮಾಡುವುದು.

**विशदनीय ವಿಶದನೀಯ** (वि०) ವಿಶದಪಡಿಸಬೇಕಾದ, ಸ್ಪಷ್ಟಪಡಿಸಬೇಕಾದ. वि+शद्लृ (शातने) "अनीयर्" (३-१-९६)।

**विशदीकरण ವಿಶದೀಕರಣ** (ನಂ०) ಸ್ಪಷ್ಟಪಡಿಸುವುದು, ಸ್ಫುಟವಾಗಿ ತಿಳಿಸುವುದು. वि + शद्लृ (शातने) + कृञ् (करणे) "च्विः" (५-४-५०)। "ल्युट्" (३-३-११५)।

**विशब्दन ವಿಶಬ್ದನ** (ನಂ०) ಶಬ್ದದಿಂದ ಅಭಿಪ್ರಾಯ ಪ್ರಕಾಶನ, ಶಬ್ದದಿಂದ ಅಭಿಪ್ರಾಯ ತಿಳಿಸುವುದು. "शब्देन अभिप्रायप्रकाशनं विशब्दनम्" बालमनोरमा। "घुषिरविशब्दने" पा० सू० ७-२-२३।

**विशय ವಿಶಯ** (ಪುಂ०) 1. ಸಂಶಯ, ಸಂದೇಹ. वि+शीङ् (स्वप्ने) "अच्" (३-१-१३४)। ಇದು ಮೀಮಾಂಸಾ ಶಾಸ್ತ್ರದ ಅಧಿಕರಣಾಂಗಗಳಲ್ಲೊಂದು. "अधिकरण" ಪದದಲ್ಲಿ ನೋಡಿ. 2. ಆಶ್ರಯ, ರಕ್ಷಣಾಲಯ.

**विशयिन् ವಿಶಯಿನ್** (वि०) ಸಂಶಯವುಳ್ಳ, ಸಂದೇಹವುಳ್ಳ. विशयोऽस्यास्ति—"इनिः" (५-२-११५)।

**विशर ವಿಶರ** (ಪುಂ०) 1. ವಧೆ, ಕೊಲ್ಲುವುದು. वि + शॄ (हिंसायाम्) "अप्" (३-३-५७)। 2. ತುಂಡು ಮಾಡುವುದು, ಹರಿದುಹಾಕುವುದು.

**विशरण ವಿಶರಣ** (ನಂ०) ಮಾರಣ, ಕೊಲ್ಲುವುದು. वि+शॄ (हिंसायाम्) भावे "ल्युट्" (३-३-११५)।

**विशरारु ವಿಶರಾರು** (वि०) ಚೂರುಚೂರಾಗಿ ಬಿದ್ದಿರುವ, ಚೆಲ್ಲಾಪಿಲ್ಲಿಯಾಗಿ ಬಿದ್ದಿರುವ. वि + शॄ (हिंसायाम्) "आरुः" (३-२-१७२)। "तनुतरविशिखविताडनविघटितविशरारुताटकाताटकेय" रघु० ग०।

**विशल्य ವಿಶಲ್ಯ** (वि०) 1. ಶಲ್ಯವಿಲ್ಲದ, ಗೂಟವಿಲ್ಲದ, ಮೊನಚಾದ ಸಲಾಕಿಯಿಲ್ಲದ. विगतं शल्यं यस्मात्। 2. ಆತಂಕವಿಲ್ಲದ, ಕಳವಳವಿಲ್ಲದ. 3. ನೋವಿಲ್ಲದ. 4. ಚೂಪಾದ ಬಾಣವಿಲ್ಲದ. "विशल्यो विरुजः शीघ्रमुदतिष्ठन्महीतलात्" रामा०।

**विशल्यकरणी ವಿಶಲ್ಯಕರಣೀ** (स्त्री०) ದೇಹದಲ್ಲಿನ ಸಮಸ್ತ ನೋವು ಮತ್ತು ವ್ಯಾಧಿಗಳನ್ನು ಪರಿಹರಿಸುವ ಒಂದು ಔಷಧ. विशल्यं क्रियतेऽनया। विशल्य + कृञ् (करणे) "ल्युट्" (३-३-११७)।

**विशल्या ವಿಶಲ್ಯಾ** (स्त्री०) 1. ಅಮೃತಬಳ್ಳಿ. 2. ಜಾಪಾಳದ ಗಿಡ. 3. ಬೆಣ್ಣಬಿದಿರು. 4. ಅಜಪಾನ. 5. ಸಣ್ಣಯಾಲಕ್ಕಿ.

**विशसन ವಿಶಸನ** (ಪುಂ०) 1. ಖಡ್ಗ, ಕತ್ತಿ. विशसति—वि+शसु (हिंसायाम्) "ल्युः" (३-१-१३४)। **ಖಡ್ಗದ ಎಂಟು ಹೆಸರುಗಳು**: (1) असिः (2) विशसनः (3) खड्गः (4) तीक्ष्णधारः (5) दुरासदः (6) श्रीगर्भः (7) विजयः ಮತ್ತು (8) धर्मपालः। (ನಂ०) 2. ಮಾರಣ, ಕೊಲ್ಲುವುದು. वि + शसु "ल्युट्" (३-३-११५)। "तस्यास्त्वद्दुहितुस्तथा विशसनं किं दारुणे मृष्यथाः" उ० रा० ४-५।

**विशसित ವಿಶಸಿತ** (वि०) ವಧಿಸಲ್ಪಟ್ಟ, ಕೊಲ್ಲಲ್ಪಟ್ಟ. वि + शसु (हिंसायाम्) "क्तः" (३-२-१०२)।

**विशस्त ವಿಶಸ್ತ** (वि०) ಅವಿನೀತ, ದಿಟ್ಟತನವುಳ್ಳವನು. वि+शसु (हिंसायाम्) "क्तः" (३-४-७२)। अविनये इडागमाभावः (७-२-१९)।

**विशस्तृ ವಿಶಸ್ತೃ** (ಪುಂ०) ವಧಿಸುವವನು, ಕೊಲ್ಲುವವನು, ಕಟುಕ. वि+शसु (हिंसायाम्) "तृच्" (३-१-१३३)। "आहर्ता चानुमन्ता च विशस्ता क्रयविक्रयी। संस्कर्ता चोपभोक्ता च खादकः सर्व एव ते" भा० शान्ति०।

**विशस्त्र ವಿಶಸ್ತ್ರ** (वि०) ಆಯುಧವಿಲ್ಲದವನು, ಆಯುಧವನು ಧರಿಸದಿರುವವನು.

**विशाख ವಿಶಾಖ** (पुं०) 1. ಷಣ್ಮುಖ, ಸ್ಕಂದ, ಕುಮಾರಸ್ವಾಮಿ. विशाखायां जातः "अण्" (४-३-१६)। अणो लुक् (४-३-३४)। स्त्रीप्रत्ययस्य लुक् (१-२-४९)। 2. ಯಾಚಕ, ಭಿಕ್ಷುಕ. "विशाखो याचके स्कन्दे विशाखा भे कठिल्लके" हेम०। (वि०) 3. ಶಾಖೆಯಿಲ್ಲದ, ರಂಬೆಯಿಲ್ಲದ. विगता शाखा यस्य।

**विशाखा ವಿಶಾಖಾ** (स्त्री०) 1. ವಿಶಾಖಾನಕ್ಷತ್ರ, ಅಶ್ವಿನೀ ಮೊದಲಾದ ಇಪ್ಪತ್ತೇಳು ನಕ್ಷತ್ರಗಳಲ್ಲಿ ಹದಿನಾರನೆಯ ನಕ್ಷತ್ರ. विशाखति — शाखृ (व्याप्तौ) "अच्" (३-१-१३४)। ಇದು ಇಂದ್ರಾಗ್ನಿದೇವತಾಕವಾದ ನಕ್ಷತ್ರ. ವ್ಯಾಘ್ರಯೋನಿಗೆ ಸೇರಿದುದು. ರಾಕ್ಷಸಗಣ. ಈ ನಕ್ಷತ್ರದಲ್ಲಿ ಹುಟ್ಟಿದವರಿಗೆ ಜನ್ಮಕಾಲದಲ್ಲಿ ಗುರುದಶೆಯು ಪ್ರಾರಂಭವಾಗುವುದು. ಈ ದಶೆಯ ಪ್ರಮಾಣ ಹದಿನಾರು ವರ್ಷಗಳು. ವಿಶಾಖಾನಕ್ಷತ್ರದ ಮೊದಲ ಮೂರು ಪಾದಗಳು ತುಲಾರಾಶಿಗೂ ನಾಲ್ಕನೆಯ ಪಾದವು ವೃಶ್ಚಿಕರಾಶಿಗೂ ಸೇರಿದುದು. 2. ಹಾಗಲಗಿಡ. "विशाखा भे कठिल्लके" हेम०।

**विशातन ವಿಶಾತನ** (न०) 1. ಕೆಳಗೆ ಬೀಳಿಸುವುದು, ಕೆಳಗೆ ತಳ್ಳುವುದು. वि + शद्लृ (शातने) + णिच् "ल्युट्" (३-३-११५)। "यतमानाः प्रयत्नेन द्रोणानीकविशातने" भा० द्रोण० १३-२०। 2. ಕತ್ತರಿಸುವುದು, ಸೀಳುವುದು. 3. ಚೂಪುಮಾಡುವುದು, ಹರಿತವಾಗಿ ಮಾಡುವುದು. (वि०) 4. ಬಿಡುಗಡೆಮಾಡಿಸುವವನು, ಬಂಧನದಿಂದ ಬಿಡಿಸುವವನು. वि+शद्लृ+णिच् "ल्युः" (३-१-१३४)। "नमस्ते देवदेवेश सनातन विशातन" भा० द्रोण० ८३-१८।

**विशाय ವಿಶಾಯ** (पुं०) ಕಾವಲುಗಾರನು ಸರದಿಯಂತೆ ಮಲಗುವುದು. वि + शीङ् (स्वप्ने) "घञ्" (३-३-३९)। "उपशायो विशायश्च पर्यायशयनार्थकौ" अम०।

**विशारण ವಿಶಾರಣ** (न०) 1. ಸಂಹರಿಸುವುದು, ಕೊಲ್ಲುವುದು. वि+शॄ (हिंसायाम्) + स्वार्थे णिच् "ल्युट्" (३-३-११५)। 2. ಹರಿದುಹಾಕುವುದು, ಚೂರುಮಾಡುವುದು.

**विशारद ವಿಶಾರದ** (पुं०) 1. ಒಳ್ಳೆಯ ವಿದ್ವಾಂಸ, ಪಂಡಿತ. 2. ಬುದ್ಧಿವಂತ, ಜಾಣ, ಕುಶಲ. विशिष्टः शारदः। "विशारदो बुधे धृष्टे" हेम०। "अजिताधिगमाय मन्त्रिभिर्युयुजे नीतिविशारदैरजः" रघु० ८-१७।

**विशाल ವಿಶಾಲ** (वि०) 1. ದೊಡ್ಡದಾದ, ವಿಸ್ತಾರವಾದ, ಅಗಲವಾದ. विश (प्रवेशने) "कालन्" (उ० १-११५)। "वसनमपि निशान्ते नेष्यते तत्प्रदातुं रथचरणविशालश्रोणिलोलेक्षणेन" माघ० ११-२३। 2. ಸಂಪತ್ಸಮೃದ್ಧವಾದ. "पूर्वोद्दिष्टामनुसर पुरीं श्रीविशालां विशालाम्" मेघ० ३०। 3. ಉನ್ನತದರ್ಜೆಯ, ಶ್ರೇಷ್ಠವಾದ, ಘನವಾದ. (पुं०) 4. ವಿಸ್ತಾರವಾದ ಮನೆಯ ಏಕದೇಶ, ಗೃಹದ ಒಂದು ಭಾಗ. "गृहैर्विशालैरपि भूरिशालैः" माघ० ३-५०। 5. ಒಂದು ಜಾತಿಯ ಜಿಂಕೆ. 6. ಒಂದು ಜಾತಿಯ ಪಕ್ಷಿ. (स्त्री०) **-ला -ಲಾ.** 7. ಉಜ್ಜಯಿನೀ ನಗರ. 8. ಹಾವುಮೆಕ್ಕೆಗಿಡ. "विशालात्विन्द्रवारुण्यामुज्जयिन्यान्तु योषिति। मृगपक्षिभिदोः पुंसि पृथुलेत्वभिधेयवत्" मेदि०। **-ली -ಲೀ.** 9. ಅಜವಾನ.

**विशालाक्ष ವಿಶಾಲಾಕ್ಷ** (पुं०) 1. ವಿಷ್ಣು. 2. ಮಹೇಶ್ವರ. 3. ಗರುಡ. विशाले अक्षिणी यस्य "षच्" (५-४-११३)। (वि०) 4. ವಿಸ್ತಾರವಾದ ನೇತ್ರಗಳುಳ್ಳ. "विशालाक्षो महेश्वरे। तार्क्ष्ये विशालनेत्रे च" हेम०। (स्त्री०) **-अक्षी -ಅಕ್ಷೀ.** 5. ಪಾರ್ವತಿ. 6. ಉತ್ತಮಜಾತಿಯ ಹೆಂಗಸು.

**विशिख ವಿಶಿಖ** (पुं०) 1. ಶರ, ಬಾಣ. विशिष्टा शिखा अग्रमस्य। "अनिशं निर्जरकरुणः करुणं कुसुमेषुरुत्पतितैर्विशिखैः" माघ० ९-६७। 2. ಈಟಿ, ಭಲ್ಲೆ. (वि०) 3. ಶಿಖೆಯಿಲ್ಲದವನು, ಜುಟ್ಟಿಲ್ಲದವನು. (स्त्री०) **-शिखा -ಶಿಖಾ.** 4. ಮಾರ್ಗ, ರಸ್ತೆ. "विशिखान्तराण्यतिपपात सपदि जवनैः स वाजिभिः" माघ० १५-७०। 5. ನೆಲ ಅಗೆಯುವುದು ಹುಲ್ಲು ಕೆತ್ತುವುದು ಮುಂತಾದ ಕಾರ್ಯಗಳಿಗಾಗಿ ಉಪಯೋಗಿಸುವ ಗುದ್ದಲಿ, ಸನಿಕೆ. 6. ಕದಿರು, ದಾರಸುತ್ತುವ ಆಸರೆ ಕಂಬಿ.

**विशिप ವಿಶಿಪ** (न०) 1. ಗೃಹ, ಮನೆ. विशन्त्यत्र—विश (प्रवेशने) "कपन्" (उ० ३-१८५)। 2. ದೇವಾಲಯ. 3. ರಾಜಭವನ. "विशिपं मन्दिरम्" सि० कौ०।

**विशिष्ट ವಿಶಿಷ್ಟ** (वि०) 1. ಕೂಡಿರುವ, ಸೇರಿರುವ. वि + शिष्लृ (विशेषणे) "क्तः" (३-४-७२)। 2. ವಿಲಕ್ಷಣವಾದ, ವಿಶೇಷವಾದ, ಅಸಾಧಾರಣವಾದ. 3. ಹೊಂದಿರುವ, ಪಡೆದಿರುವ, 4. ಜ್ಞಾನದಿಂದ ಹಿರಿಯನಾದವನು. (पुं०) 5. ವಿಷ್ಣು, ನಾರಾಯಣ. विशिष्यते

स्वत एव तदनपेक्षवैलक्षण्यतया—वि+शिष्लृ "क्तः"। "विलक्षणो विशिष्टो यः सर्वांस्तान् अनपेक्ष्य सः" इति निरुक्तिः। "असंख्येयोऽप्रमेयात्मा विशिष्टः शिष्टकृत् शुचिः" वि० स०।

**विशिष्टाद्वैतदर्शन ವಿಶಿಷ್ಟಾದ್ವೈತದರ್ಶನ** (ನಂ) ಆಸ್ತಿಕ ದರ್ಶನಗಳಲ್ಲೊಂದಾದ ವೇದಾನ್ತದರ್ಶನದ ಒಂದು ಭೇದ. ಜೀವಾತ್ಮ ಪರಮಾತ್ಮ ಇವರಿಗಿರುವ ಭೇದ ಮತ್ತು ಚಿದಚಿದ್ವಿಶಿಷ್ಟನಾದ ಪರಮಾತ್ಮ ಎಂಬ ಒಂದೇ ತತ್ತ್ವ ಇವುಗಳನ್ನು ಪ್ರತಿಪಾದಿಸುವ ಶ್ರೀ ಭಗವದ್ರಾಮಾನುಜಾಚಾರ್ಯರ ಒಂದು ದರ್ಶನ.

**ಏಕತತ್ತ್ವವಾದ.** ಈ ಸಿದ್ಧಾನ್ತದಲ್ಲಿ ಸೂಕ್ಷ್ಮಚಿದಚಿದಾತ್ಮಕ ಶರೀರವಿಶಿಷ್ಟನಾದ ಕಾರಣರೂಪ ಪರಮಾತ್ಮನಿಗೂ ಸ್ಥೂಲಚಿದಚಿದಾತ್ಮಕಶರೀರವಿಶಿಷ್ಟನಾದ ಕಾರ್ಯರೂಪಪರಮಾತ್ಮನಿಗೂ ಐಕ್ಯ ಹೇಳಿರುವುದರಿಂದ विशिष्टयोरद्वैतम् ಎಂದು ಷಷ್ಠೀತತ್ಪುರುಷವನ್ನು ಹೇಳಬೇಕು. ಇದೇ ರಾಮಾನುಜದರ್ಶನದ ತತ್ತ್ವ. ಹೀಗೆ ಈಶ್ವರನೊಬ್ಬನೇ ತತ್ತ್ವವೆಂದು ಪ್ರತಿಪಾದಿಸಿರುವುದರಿಂದ ಇದಕ್ಕೆ "**ವಿಶಿಷ್ಟಾದ್ವೈತ**" ಎಂದು ಹೆಸರಾಯಿತು. ಸಕಲತತ್ತ್ವಗಳೂ ಈಶ್ವರನಲ್ಲಿ ಸೇರಿರುವುದರಿಂದ ಏಕತತ್ತ್ವವಾದವು ಸ್ಥಿರಪಡುವುದು.

**ಪದಾರ್ಥಗಳು ಮೂರು.** ಈಶ್ವರ ಚಿತ್ ಮತ್ತು ಅಚಿತ್ ಭೇದದಿಂದ ಪದಾರ್ಥಗಳು ಮೂರು. ಈಶ್ವರ ಚಿತ್ ಜೀವ ಮತ್ತು ಅಚಿತ್ ಜಡ. ಜೀವನು ಭೋಕ್ತಾ. ಜಡವಸ್ತುವು ಭೋಗ್ಯ. ಈಶ್ವರನು ನಿಯಾಮಕ. "ईश्वरः चिदचिच्चेति पदार्थत्रितयं हरिः। ईश्वरः चिदिति प्रोक्तो जीवः दृश्यमचित्पुनः"। ಈ ರೀತಿ ಭೋಕ್ತೃ ಭೋಗ್ಯ ನಿಯಾಮಕಭೇದದಿಂದ ಪದಾರ್ಥಗಳು ಮೂರೆಂದು ವ್ಯವಸ್ಥಿತವಾಯಿತು.

**ಆತ್ಮ.** "अत (सातत्यगमने) ಧಾತುವಿನಿಂದ ನಿಷ್ಪನ್ನವಾದ ಸತತಗಮನವುಳ್ಳ ಆತ್ಮನ್ ಶಬ್ದವಾಚ್ಯನಾದ ಪರಮಾತ್ಮನು ಶರೀರದೊಳಗೆ ಅಂತರ್ಯಾಮಿಯಾಗಿದ್ದು ಎಲ್ಲಕ್ಕೂ ಪ್ರೇರಕನಾಗಿರುವನು. "तदेव वासुदेवाख्यं परं ब्रह्म निगद्यते। अन्तर्यामी जीवसंस्थो जीवप्रेरक ईरितः"। ಪರಮಾತ್ಮನಿಗೆ ಸಕಲವಸ್ತುಗಳೂ ಶರೀರ. "चराचराणि भूतानि सर्वाणि भगवद्वपुः"। ಪರಮಾತ್ಮನು ಶರೀರಿ. ಮನುಷ್ಯ ಮೃಗ ಘಟ ಪಟ ಸೂರ್ಯ ಚಂದ್ರ ಮೊದಲಾದ ಸಕಲವೂ ಪರಮಾತ್ಮನ ಶರೀರವಾಗಿರುವಕಾರಣ ಸಕಲ ವಸ್ತುಗಳೂ ಜೀವಾತ್ಮಪರ್ಯನ್ತವಾಗಿ ಪರಮಾತ್ಮಪರ್ಯನ್ತವಾಗುವುವು. ದೇವದತ್ತ ಶಬ್ದವು ದೇವದತ್ತನೊಳಗಿರುವ ಜೀವಾತ್ಮನೊಳಗಿರುವ ಪರಮಾತ್ಮನೆಂಬ ಅರ್ಥವನ್ನು ಕೊಡುವುದು. ಶಬ್ದಗಳು ವಸ್ತುವಿನಲ್ಲಿ ಪರ್ಯವಸಾನವಾಗದೆ ಜೀವಾತ್ಮಪರ್ಯನ್ತ ಹೋಗಿ ಅಲ್ಲೂ ಪರ್ಯವಸಾನಹೊಂದದೆ ಪರಮಾತ್ಮಪರ್ಯನ್ತ ಹೋಗಿ ನಿಲ್ಲುವುವು. ಇದೇ ಅಪರ್ಯವಸಾನವೃತ್ತಿ. ಇದರಿಂದ ಸಕಲ ವಸ್ತುಗಳೂ ಬ್ರಹ್ಮಾತ್ಮಕವಾದುವೆಂದು ತಿಳಿಯಬೇಕು. "देवो मनुष्यो यक्षो वा पिशाचोरगराक्षसाः। पक्षी वृक्षो लता काष्ठं शिला तृणं घटः पटः। इत्यादयः सर्वे शब्दाः परमात्मपर्यन्तसंघातवाचकाः" स० द० स०।

**ಜೀವಾತ್ಮಸ್ವರೂಪ.** ಜೀವಾತ್ಮನು ಅಣುಪರಿಮಾಣವುಳ್ಳವನು. "वालाग्रशतभागस्य शतधा कल्पितस्य च। भागो जीवः स विज्ञेयः स चानन्त्याय कल्पते" श्वेता० उप० ५-९। ಈ ಜೀವನು ಸ್ತ್ರೀಯಲ್ಲ. ಪುರುಷನಲ್ಲ, ನಪುಂಸಕನೂ ಅಲ್ಲ. ಕರ್ಮಾಧೀನನಾಗಿ ತಾನು ಪಡೆಯುವ ಶರೀರದಿಂದ ಇವನ ರಕ್ಷಣೆಯಾಗುವುದು. "नैव स्त्री न पुमानेषः न चैवायं नपुंसकः। यद्यच्छरीरमादत्ते तेन तेन स रक्ष्यते" श्वेता० उप० ५-१०। ಜೀವನು ಉತ್ಪತ್ತಿಯಿಲ್ಲದಿರುವುದರಿಂದ ಅಜನು. ನಾಶರಹಿತನಾಗಿರುವುದರಿಂದ ನಿತ್ಯನು. ಸದಾ ಏಕರೂಪದಲ್ಲಿರುವುದರಿಂದ ಶಾಶ್ವತನು. ಯಾವಾಗಲೂ ಹೊಸಬನಾಗಿ ತೋರುವುದರಿಂದ ಪುರಾಣನು. ನಾಶಪಡಿಸಲಶಕ್ಯನಾದುದರಿಂದ ಅಚ್ಛೇದ್ಯ. ಅದಾಹ್ಯ ಅಕ್ಲೇದ್ಯ ಮತ್ತು ಅಶೋಷ್ಯ. ಅಣುಪರಿಮಾಣವುಳ್ಳವನು. ಪ್ರತಿಯೊಂದು ದೇಹದಲ್ಲಿಯೂ ಇರುವುದರಿಂದ ಅಸಂಖ್ಯಾತನು. ಜ್ಞಾನಸ್ವರೂಪನು ಮತ್ತು ಸುಖಸ್ವರೂಪನು. "अच्छेद्योऽयमदाह्योऽयमक्लेद्योऽशोष्य एव च। नित्यः सर्वगतः स्थाणुरचलोऽयं सनातनः" गीता २-२४। "न जायते म्रियते वा विपश्चिन्नायं भूत्वा भविता वा न भूयः। अजो नित्यः शाश्वतोऽयं पुराणो न हन्यते हन्यमाने शरीरे" कठ०।

ಫಲಾಪೇಕ್ಷೆಯಿಂದ ಮಾಡಿದ ಕರ್ಮದ ಫಲವನ್ನು ಅನುಭವಿಸುತ್ತ ಕರ್ಮಾಧೀನವಾದ ನಾನಾರೂಪಗಳನ್ನು ಪಡೆದು ಜೀವನು ತನ್ನ ಕರ್ಮಫಲಕ್ಕೆ ತಕ್ಕಂತೆ ಸಂಸರಿಸುವನು. "गुणान्वयो यः फलकर्मकर्ता कृतस्य तस्यैव स चोपभोक्ता। स विश्वरूपस्त्रिगुणस्त्रिवर्त्मा प्राणाधिपः संचरति स्वकर्मभिः" श्वेता० उप० ५-७।

ಈ ಜೀವಾತ್ಮತತ್ತ್ವವು ನಿತ್ಯ ಮುಕ್ತ ಮತ್ತು ಬದ್ಧ ಎಂದು ಮೂರು ವಿಧ.

ಸಂಸಾರವೆಂಬ ಪ್ರಕೃತಿಸಂಬಂಧವೇ ಇಲ್ಲದ ಅನನ್ತ ಗರುಡ ವಿಷ್ವಕ್ಸೇನಾದಿ ಪರಮಾತ್ಮನ ಪರಿಜನರು ನಿತ್ಯರು; ಇವರೇ ನಿತ್ಯಸೂರಿಗಳು. ಶುಕ ವಾಮದೇವ ಪರಾಶರ ವ್ಯಾಸ ಆಳ್ವಾರುಗಳು ಆಚಾರ್ಯರು ಮೊದಲಾದವರು ಮುಕ್ತರು. ಇವರು ಪ್ರಕೃತಿಸಂಬಂಧದಿಂದ ಮುಕ್ತರಾದವರು. ಈಗ ಪ್ರಕೃತಿಸಂಬಂಧಹೊಂದಿದ ಸಂಸಾರಿಗಳು ಬದ್ಧರು.

ಈ ಮತದಲ್ಲಿ ಸಕಲಜೀವಾತ್ಮವಸ್ತುಗಳಿಗೂ ಆವರಣವಾಗಿರುವ ಶರೀರಭೇದವೇಹೊರತು ಸ್ವರೂಪದಲ್ಲಿ ಯಾವುದೊಂದು ಭೇದವೂ ಇಲ್ಲ. ಎಲ್ಲಾ ವಿಷಯಗಳಲ್ಲೂ ಎಲ್ಲಾ ಆತ್ಮವಸ್ತುಗಳೂ ಸಮಾನವಾದುವು. ಆಧೇಯತ್ವ ವಿಧೇಯತ್ವ ಶೇಷತ್ವ ಪರತಂತ್ರತ್ವ ಮೊದಲಾದ ಗುಣಗಳಿಂದ ಕೂಡಿದ ಜೀವಾತ್ಮನು ಸರ್ವಾಧಾರನಾಗಿಯೂ ಸರ್ವನಿಯಾಮಕನಾಗಿಯೂ ಸರ್ವೇಶ್ವರನಾಗಿಯೂ ಇರುವ ಪರಮಾತ್ಮನಿಗಿಂತಲೂ ಭಿನ್ನನು. ಈ ಜೀವಾತ್ಮರಿಗೂ ಪರಮಾತ್ಮನಿಗೂ ಈ ಕೆಲವು ವಿಷಯಗಳು ಹೊರತು ಉಳಿದ ಎಲ್ಲಾ ವಿಷಯಗಳಲ್ಲೂ ಅತ್ಯಂತ ಸಾಮ್ಯವಿರುವುದು. ಇದರಿಂದ ಪ್ರತಿ ಜೀವಾತ್ಮನಿಗೂ ಪರಮಾತ್ಮಸಾಮ್ಯವೆಂಬ ಪರಮಪುರುಷಾರ್ಥವನ್ನು ಹೊಂದಲು ಅವಕಾಶವುಂಟು. ಈ ಪರಮಪುರುಷಾರ್ಥಪ್ರಾಪ್ತಿಗೆ ಪರಮಾತ್ಮನ ಪರಿಪೂರ್ಣಾನುಗ್ರಹವು ಮುಖ್ಯಕಾರಣ. ಈ ಅನುಗ್ರಹ ಸಂಪಾದನೆಗೆ ಅನೇಕ ರೀತಿಯಾದ ಸಾಧನಗಳುಂಟು. ಈ ಸಾಧನಗಳಿಂದ ಪ್ರತಿ ಜೀವಾತ್ಮನೂ ಯಾವ ವಿಧವಾದ ಜಾತಿ ಕುಲ ಪಶು ಪಕ್ಷಿ ಮೊದಲಾದ ಯಾವ ರೂಪದಲ್ಲಿದ್ದರೂ ಪರಮಪುರುಷಾರ್ಥ (ಮೋಕ್ಷ)ವನ್ನು ಪಡೆಯಬಹುದು. ಈ ಸಿದ್ಧಾನ್ತವು ಸರ್ವವಿಧದಿಂದಲೂ ಸಕಲ ಜೀವಾತ್ಮರೂ ಮೋಕ್ಷಸಾಮ್ರಾಜ್ಯವನ್ನು ಹೊಂದಬಹುದೆಂಬ ಔದಾರ್ಯ ತೋರಿಸಿರುವುದರಿಂದ ಶ್ರೀ ರಾಮಾನುಜಾಚಾರ್ಯರು ಪರಮಪದಕ್ಕೆ ಮಾರ್ಗದರ್ಶಕರೆಂದು ಖ್ಯಾತಿಪಡೆದಿರುವರು.

**ಪರಮಾತ್ಮ.** ಶ್ರೀಲಕ್ಷ್ಮೀನಾರಾಯಣನೇ ಪರಮಾತ್ಮ. ಈ ಪರಮಾತ್ಮನು ಸಕಲ ತತ್ತ್ವಗಳಿಗೂ ಧಾರಕನು, ನಿಯಾಮಕನು, ಶರೀರಿ. ಚರಾಚರ ಸಕಲ ಜಗತ್ತಿಗೂ ಕಾರಣನು. ದೋಷರಹಿತನು, ಸರ್ವಜ್ಞ, ಸರ್ವಶಕ್ತ, ಪರಮಕಾರುಣಿಕ. ಸಕಲ ಕಲ್ಯಾಣಗುಣಪರಿಪೂರ್ಣನು. ಸರ್ವಶಬ್ದವಾಚ್ಯನು. ಸರ್ವಕರ್ಮಸಮಾರಾಧ್ಯನು. ಸರ್ವಸಮಾಶ್ರಯಣೀಯನು. ಸರ್ವಾಭೀಷ್ಟಫಲಪ್ರದನು. ಪರಮಾನಂದಸ್ವರೂಪನು. ಪರಮಪ್ರಾಪ್ಯ ಮತ್ತು ಪ್ರಾಪಕನು. ಪರಮಾತ್ಮನ ದೇಹವು ಶುದ್ಧಸತ್ತ್ವಮಯ. ಅಪ್ರಾಕೃತ ದಿವ್ಯ ಮಂಗಳ ವಿಗ್ರಹ. ಮಹಾಲಕ್ಷ್ಮಿಗೂ ಇವೆಲ್ಲಾ ಸ್ವರೂಪಗಳಿದ್ದು ಸ್ವರೂಪದಲ್ಲಿ ಪರಮಾತ್ಮನಿಗೆ ಸರ್ವಸ್ವಾತಂತ್ರ್ಯ. ಲಕ್ಷ್ಮಿಗೆ ತದಧೀನ ಸ್ವಾತಂತ್ರ್ಯ. ಉಳಿದೆಲ್ಲಾ ವಿಷಯಗಳಲ್ಲಿ ಸರ್ವಸಾಮ್ಯವುಂಟು. ಬ್ರಹ್ಮಾದಿಸ್ತಂಬಪರ್ಯಂತವಾದ ಈ ಜಗತ್ತು ಯಾರಿಂದ ಉತ್ಪನ್ನವಾಯಿತೋ ಯಾರಿಂದ ಜೀವಿಸಿರುವುದೋ ಮತ್ತು ಯಾರಿಂದ ಪ್ರಲಯಹೊಂದುವುದೋ ಅದೇ ಪರಬ್ರಹ್ಮ "यतो वा इमानि भूतानि जायन्ते। येन जातानि जीवन्ति। यत्प्रयन्त्यभिसंविशन्ति" ತೈ೦ ಉಪ೦। ಪರಮಾತ್ಮನು ಸಕಲಜಗತ್ತಿಗೂ ಸೃಷ್ಟಿಕರ್ತನಾಗಿಯೂ ಉಪಾದಾನಕಾರಣನಾಗಿಯೂ ಇರುವನು. ಪರಮಾತ್ಮ ಪರಬ್ರಹ್ಮ ಪರಮೇಶ್ವರ ಪರವಾಸುದೇವ ಲಕ್ಷ್ಮೀನಾರಾಯಣ ಇತ್ಯಾದಿ ಪದಗಳು ಪರಮಾತ್ಮನನ್ನು ಬೋಧಿಸುವುವು. "वासुदेवः परं ब्रह्म कल्याणगुणसंयुतः। भुवनानामुपादानं कर्ता जीवनियामकः"।

**ಜೀವಾತ್ಮ–ಪರಮಾತ್ಮ ಸಂಬಂಧ.** ಚರಾಚರಾತ್ಮಕ ಸಕಲ ಪ್ರಪಂಚವೂ ಪರಮಾತ್ಮನ ಶರೀರವಾದುದರಿಂದ ಪರಮಾತ್ಮನಿಗೂ ಪ್ರಪಂಚಕ್ಕೂ ಶರೀರಾತ್ಮಭಾವ ಸಂಬಂಧವಿರುವುದೆಂದು ತಿಳಿಯಬೇಕು. ಶರೀರವೆಂದರೆ ಶರೀರಿಯಾದ ಪರಮಾತ್ಮನಿಗೆ ಆಧೇಯ ವಿಧೇಯ ಮತ್ತು ಶೇಷವಾಗಿ ಇರುವುದು. ಇದರಿಂದ ಪರಮಾತ್ಮನಿಗೂ ಜೀವಾತ್ಮನಿಗೂ ಶೇಷ ಶೇಷಿಭಾವವು ಸಿದ್ಧವಾಯಿತು. ಈ ಶೇಷ ಶೇಷಿಭಾವವು ವಿಶಿಷ್ಟಾದ್ವೈತದರ್ಶನದಲ್ಲಿರುವ ವೈಶಿಷ್ಟ್ಯಗಳಲ್ಲಿ ಪ್ರಧಾನವಾದುದು.

**ತತ್ತ್ವ.** ಸಮಸ್ತ ಚಿದಚಿದ್ವಿಶಿಷ್ಟನಾದ ಶ್ರೀಮನ್ನಾರಾಯಣನೇ ಪರಮತತ್ತ್ವವೆಂದು ಇವರ ಸಿದ್ಧಾನ್ತ. ಪ್ರತ್ಯಕ್ಷಾದಿ ಪ್ರಮಾಣಗಳಿಂದಲೂ ಇತರ ಶಾಸ್ತ್ರಗಳಿಂದಲೂ ತತ್ತ್ವವು ಅನೇಕವೆಂದು ಸ್ಪಷ್ಟಪಡುವುದಾದರೂ ಸಕಲ ತತ್ತ್ವಗಳೂ ವಸ್ತುಗಳೂ ಈಶ್ವರನಲ್ಲಿ ಅಡಗಿರುವುದರಿಂದ ಏಕತತ್ತ್ವವಾದಕ್ಕೂ ಅನೇಕ ತತ್ತ್ವವಾದಕ್ಕೂ ಪ್ರಾಮಾಣ್ಯವನ್ನು ಕೊಟ್ಟಂತಾಯಿತು. ಅನೇಕ ತತ್ತ್ವವಾದಿಗಳ ಮತದಂತೆ ತತ್ತ್ವಗಳು ("तत्त्व" ಪದದಲ್ಲಿ ನಿರೂಪಿಸಿರುವಂತೆ) ಇಪ್ಪತ್ತಾರು (26).

**ಮೋಕ್ಷೋಪಾಯ.** ಈ ಸಿದ್ಧಾನ್ತದಪ್ರಕಾರ ಇರುವ ವಿಷಯವು ತತ್ತ್ವ ಹಿತ ಪುರುಷಾರ್ಥ ಎಂದು ಮೂರು ವಿಧ. ತತ್ತ್ವನಿರೂಪಣೆಯನಂತರ ಹಿತನಿರೂಪಣೆ. ಕರ್ತವ್ಯವಾದ ಅಂಶವೇ ಹಿತ. ಈ ಕರ್ತವ್ಯದ ಅನುಷ್ಠಾನ

ದಿಂದ ಲಭಿಸುವ ಪ್ರಯೋಜನವೇ ಪುರುಷಾರ್ಥ. ಹಿತವು ಭಕ್ತಿಪ್ರಪತ್ತಿಗಳೆಂಬ ಕರ್ತವ್ಯದ ಅನುಷ್ಠಾನದಿಂದ ಉಂಟಾಗುವ ಪರಮಾತ್ಮನ ಅನುಗ್ರಹ. ಭಕ್ತಿಯೆಂದರೆ ಜೀವಾತ್ಮಪರಮಾತ್ಮಯಾಥಾತ್ಮ್ಯಜ್ಞಾನಪೂರ್ವಕ ಮಾಡಲ್ಪಡುವ ಪರಮಾತ್ಮನ ಪಾದಾರವಿಂದಗಳ ಧ್ಯಾನ ಅರ್ಚನೆ ಪ್ರಣಾಮ ಮೊದಲಾದುವು. ಇವೇ ಮೋಕ್ಷಕ್ಕೆ ಸಾಧನವಾದ ಉಪಾಯ. ಕರ್ಮಯೋಗದಿಂದ ಚಿತ್ತನೈರ್ಮಲ್ಯಹೊಂದಿ ಪರಮಾತ್ಮನಿಗೆ ತಾನು ಶೇಷಭೂತನೆಂದು ಮಾಡುವ ಆತ್ಮಚಿಂತನೆಯಿಂದ ಬ್ರಹ್ಮಜ್ಞಾನವು ಉಂಟಾಗುವುದು. ಈ ಬ್ರಹ್ಮಜ್ಞಾನವು ಭಕ್ತಿಗೆ ಉಪಾಯ. ಭಕ್ತಿಯು ಮೋಕ್ಷಕ್ಕೆ ಉಪಾಯವಾದ ಸಾಧನಗಳಲ್ಲೊಂದು. ಮೋಕ್ಷಕ್ಕೆ ಉಪಾಯವಾದ ಮತ್ತೊಂದು ಸಾಧನ ಪ್ರಪತ್ತಿ. [ಪ್ರಪತ್ತಿಯ ವಿವರಕ್ಕೆ "प्रपत्ति" ಪದದಲ್ಲಿ ನೋಡಿ.]

**ಮೋಕ್ಷ.** ಜೀವನು ಭಕ್ತಿ ಅಥವಾ ಪ್ರಪತ್ತಿಯಿಂದ ಪ್ರಸನ್ನನಾದ ಪರಮಾತ್ಮನ ಅನುಗ್ರಹದಿಂದ ಅವಸಾನ ಕಾಲದಲ್ಲಿ ಸಕಲವಿಧ ಶ್ರಮಗಳನ್ನೂ ಪರಿಹರಿಸಿಕೊಂಡು ಸುಷುಮ್ನಾನಾಡೀಮೂಲಕ ಸುಖವಾಗಿ ಪ್ರಯಾಣಮಾಡಿ ಅರ್ಚಿರಾದಿಮಾರ್ಗದಲ್ಲಿ ಅಗ್ನಿಲೋಕ ವಾಯುಲೋಕ ಸೂರ್ಯಲೋಕ ಚಂದ್ರಲೋಕ ವರುಣಲೋಕ ಬ್ರಹ್ಮಲೋಕಗಳಲ್ಲಿ ಮುಕ್ತರ ಉಪಚಾರಕ್ಕಾಗಿ ಪರಮಾತ್ಮನಿಂದ ನಿಯಮಿಸಲ್ಪಟ್ಟ ನಿತ್ಯಸೂರಿಗಳಿಂದ ಗೌರವಪೂರ್ವಕ ಸತ್ಕೃತನಾಗಿ ವಿರಜಾನದಿಯ ತೀರದಲ್ಲಿ ಪ್ರಾಕೃತಸೂಕ್ಷ್ಮಭೂತಗಳ ಸಂಬಂಧವನ್ನು ತ್ಯಜಿಸಿ ಅಪ್ರಾಕೃತ ದಿವ್ಯದೇಹವನ್ನು ಸ್ವೀಕರಿಸುವನು. ಇವನನ್ನು ಎದುರುಗೊಳ್ಳಲು ಬಂದಿರುವ ನಿತ್ಯಸೂರಿಗಳಿಂದ ಅನೇಕ ದಿವ್ಯಾಲಂಕಾರಗಳನ್ನು ಸ್ವೀಕರಿಸಿ ಅನಂತರತ್ನಸ್ತಂಭಸಮಲಂಕೃತವಾದ ಆನಂದಮಯ ದಿವ್ಯಮಂಟಪದಲ್ಲಿ ವೈಭವದೊಡನೆ ಕೋಟಿಸೂರ್ಯಸಮಾನನಾಗಿ ಪ್ರಕಾಶಿಸುತ್ತಿರುವ ಗಾಂಭೀರ್ಯ ಔದಾರ್ಯ ಸೌಲಭ್ಯಾದಿ ಕಲ್ಯಾಣಗುಣಗಣಪರಿಪೂರ್ಣನಾದ ಶ್ರೀಮಹಾಲಕ್ಷ್ಮೀಸಮೇತನಾದ ಪರವಾಸುದೇವನ ಸಮೀಪಕ್ಕೆ ಹೋಗಿ ಪರಮಕರುಣಾನಿಧಿಯಾದ ಪರಮಾತ್ಮನಿಂದ ಆಲಿಂಗಿಸಲ್ಪಡುವನು. ಆ ಕೂಡಲೆ सोऽपहतपाप्मा विरजः विमृत्युः विशोकः विजिघत्सः अपिपासः सत्यकामः सत्यसंकल्पः ಎಂಬ ಶ್ರುತ್ಯುಕ್ತವಾದ ಎಂಟುಗುಣಗಳೂ ಇವನಲ್ಲಿ ಆವಿರ್ಭವಿಸುವುವು. ಸರ್ವಜ್ಞನಾಗಿ ಯಾವತ್ಕಾಲವೂ ನಿತ್ಯಸೂರಿಗಳೊಡನೆ ಪರಮಾತ್ಮಾನುಭವವೆಂಬ ಆನಂದವನ್ನು ಅನುಭವಿಸುತ್ತಿರುವನು. ಇದೇ ಮುಕ್ತಿ, ಅಪುನರಾವೃತ್ತಿರೂಪ ಮೋಕ್ಷ, ಇದೇ ಪರಮ ಪುರುಷಾರ್ಥ. "नायमात्मा प्रवचनेन लभ्यो न मेधया न बहुना श्रुतेन। यमेवैष वृणुते तेन लभ्यः तस्यैष आत्मा विवृणुते तनूं स्वाम्" ಕಠ०। "तेषां सततयुक्तानां भजतां प्रीतिपूर्वकम्। ददामि बुद्धियोगं तं येन मामुपयान्ति ते" गीता १०-१०। "मामुपेत्य पुनर्जन्म दुःखालयमशाश्वतम्। नाप्नुवन्ति महात्मानः संसिद्धिं परमां गताः" गीता ८-१५।

**विशीर्ण ವಿಶೀರ್ಣ** (वि०) 1. ಶುಷ್ಕವಾದ, ಒಣಗಿಹೋಗಿರುವ. वि + शॄ (हिंसायाम्) "क्तः" (३-४-७२)। "स्वयं विशीर्णद्रुमपर्णवृत्तिता परा हि काष्ठा तपसस्तया पुनः" कुमा० ५-२८। 2. ಒಡೆದುಹೋಗಿರುವ, ಎರಡಾಗಿ ಹೋಳಾಗಿರುವ.

**विशीर्यमाण ವಿಶೀರ್ಯಮಾಣ** (वि०) ಒಡೆಯಲ್ಪಡುತ್ತಿರುವ. वि + शॄ (हिंसायाम्) कर्म० "शानच्" (३-२-१२४)। "विशीर्यमाणाश्मनिनादधीरं ध्वनिं वितन्वन्नकृशः कृशानुः" किरा० १६-५१।

**विशुद्ध ವಿಶುದ್ಧ** (वि०) 1. ಪರಿಶುದ್ಧವಾದ, ದೋಷವಿಲ್ಲದ. विशेषेण शुद्धः। "वाच्यस्त्वया मद्वचनात् स राजा वह्नौ विशुद्धामपि यत्समक्षम्" रघु० १४-६१। 2. ದೋಷವಿಲ್ಲದ, ಕಳಂಕರಹಿತವಾದ. "कदम्बगोलाकृतिमाश्रितः कथं विशुद्धमुग्धः खलु कन्यकाजनः" मालती० ७-१। 3. ಸರಿಯಾದ, ಯಥಾರ್ಥವಾದ, ತಪ್ಪಿಲ್ಲದ. 4. ಸರಳಸ್ವಭಾವದ, ಕಪಟವಿಲ್ಲದ. 5. ಪಾಪರಹಿತವಾದ. 6. ನಿರ್ಮಲವಾದ, ತಿಳಿಯಾದ, ಸ್ವಚ್ಛವಾದ. 7. ಶುದ್ಧವಾದ, ಮಿಶ್ರವಿಲ್ಲದ. 8. ಕಂಠದಲ್ಲಿರುವ ಷೋಡಶ (16) ಸ್ವರಗಳಿಂದ ಕೂಡಿದ ಷೋಡಶ (16) ದಳಪದ್ಮ.

**विशुद्धि ವಿಶುದ್ಧಿ** (स्त्री०) 1. ದೋಷವಿಲ್ಲದಿರುವಿಕೆ, ಪರಿಶುದ್ಧವಾಗಿರುವಿಕೆ. वि + शुध (शौचे) "क्तिन्" (३-३-९४)। "तदङ्गसंसर्गमवाप्य कल्पते ध्रुवं चिताभस्मरजो विशुद्धये" कुमा० ५-७९। 2. ಸ್ವಚ್ಛವಾಗಿರುವಿಕೆ, ಶುದ್ಧವಾಗಿರುವಿಕೆ, ಮಿಶ್ರವಿಲ್ಲದಿರುವಿಕೆ. "हेम्नः संलक्ष्यते ह्यग्नौ विशुद्धिः श्यामिकापि वा" रघु० १-१०। 3. ನಿರ್ಮಲವಾಗಿರುವಿಕೆ, ತಿಳಿಯಾಗಿರುವಿಕೆ. 4. ತಪ್ಪಿಲ್ಲದಿರುವುದು, ದೋಷವಿಲ್ಲದಿರುವುದು. "विशुद्धिमुक्तेरपरे विपश्चितः" किरा० १४-५। 5. ಕಪಟವಿಲ್ಲದಿರುವುದು

**विशूल ವಿಶೂಲ** (वि०) 1. ಶೂಲಾಯುಧವಿಲ್ಲದ. विगतं शूलं यस्य। "दुर्जयो रवणः शूली विशूलः प्रार्थ्यतामिति" रघु० १५-५। 2. ರೋಗವಿಲ್ಲದ.

**विशृङ्खल ವಿಶೃಂಖಲ** (वि०) 1. ಅಪ್ರತಿಹತವಾದ, ತಡೆಯಿಲ್ಲದ. विगता शृङ्खला यस्य। "मुदितमधुभुजो भुजेन शाखाश्चलितविशृङ्खलशङ्खकं धुवत्या:" माघ० ७-३०। (क्रि० वि०) 2. ತಡೆಯಿಲ್ಲದೆ, ನಿರ್ಬಂಧವಿಲ್ಲದೆ. "तीव्रोत्थितास्तावदसह्यरंहसो विशृङ्खलं शृङ्खलका: प्रतस्थिरे" माघ० १२-७।

**विशेष ವಿಶೇಷ** (पुं०) 1. ಭೇದ, ವ್ಯತ್ಯಾಸ, ತಾರತಮ್ಯ. वि + शिष (असर्वोपयोगे) "घञ्" (३-३-१८)। "प्रजनार्थं महाभागा: पूजार्हा गृहदीप्तय:। स्त्रिय: श्रियश्च गेहेषु न विशेषोऽस्ति कश्चन" मनु० ९-२६। 2. ಅತಿಶಯ, ಹೆಚ್ಚಿಗೆ, ಶ್ರೇಷ್ಠತೆ. "अनुभावविशेषात्तु सेनापरिवृताविव" रघु० १-३७। 3. ಬದಲಾವಣೆ, ವ್ಯತ್ಯಾಸ, ಮೇಲು, ಲೇಸು. "अस्ति मे विशेष:" शाकु० ३। 4. ಭೇದ, ಪ್ರಭೇದ, ಬಗೆ. "नागेन्द्रहस्तास्त्वचि कर्कशत्वादेकान्तशैत्यात्कदलीविशेषा:" कुमा० १-३६। 5. ವಿವಿಧವಾದ ವಿಷಯಗಳು, ಅನೇಕ ವಿಧ ಗುಣಗಳು. "अन्तस्तोयं मणिमयभुवस्तुङ्गमभ्रंलिहाग्रा: प्रासादास्त्वां तुलयितुमलं यत्र तैस्तैर्विशेषै:" मेघ० २-१। 6. ಅರ್ಥಾಲಂಕಾರದ ಒಂದು ಭೇದ. ವಿಶೇಷಾಲಂಕಾರವು ಮೂರು ವಿಧ.

(1) ಪ್ರಸಿದ್ಧವಾದ ಆಧಾರವಿಲ್ಲದೆ ಆಧೇಯ ವರ್ಣನೆ. "विशेष: ख्यातमाधारं विनाप्याधेयवर्णनम्। गतेऽपि सूर्ये दीपस्थास्तमश्छिन्दन्ति तत्करा:"।

(2) ಒಂದೇ ವಸ್ತುವು ಅನೇಕ ಸ್ಥಳಗಳಲ್ಲಿರುವಂತೆ ವರ್ಣಿಸುವುದು. "विशेष: सोऽपि यद्येकं वस्त्वनेकत्र वर्ण्यते। अन्तर्बहि: पुर: पश्चात् सर्वदिक्ष्वपि सैव मे"।

(3) ಅಲ್ಪಪ್ರಯತ್ನದಿಂದ ಪ್ರಯಾಸಸಾಧ್ಯವಾದ ಮಹಾಫಲಪ್ರಾಪ್ತಿ ವರ್ಣನೆ. "किञ्चिदारम्भतोऽशक्यवस्त्वन्तरकृतिश्च स:। त्वां पश्यता मया लब्धं कल्पवृक्षनिरीक्षणम्"। (वि०) 7. ಶ್ರೇಷ್ಠವಾದ, ಉತ್ಕೃಷ್ಟವಾದ. 8. ಅತಿಶಯವಾದ, ಹೆಚ್ಚಾದ, ಹೇರಳವಾದ. "शशाम वृष्ट्यापि विना दवाग्निरासीद्विशेषा फलपुष्पवृद्धि:" रघु० २-१४।

**विशेषक ವಿಶೇಷಕ** (पुंन०) 1. ಹಣೆಯ ಮೇಲೆ ಇಟ್ಟುಕೊಳ್ಳುವ ತಿಲಕ, ನೆತ್ತಿಯ ಬೊಟ್ಟು. विशिनष्टि — वि+शिष्लृ (विशेषणे) "ण्वुल्" (३-१-१३३)। "विशेषको वा विशिशेष यस्या: श्रियं त्रिलोकीतिलक: स एव" माघ० ३-६३। 2. ಸ್ತ್ರೀಯರ ದೇಹದ ಮೇಲೆ ಬಣ್ಣಗಳಿಂದ ಬರೆಯುವ ಚಿತ್ರ. "प्रत्याख्यातविशेषकं कुरवकं श्यामावदातारुणम्" माल० ३-५। 3. ವಸ್ತುಗಳ ಪರಸ್ಪರ ಭೇದ (ವ್ಯತ್ಯಾಸ) ವನ್ನು ತಿಳಿಸುವ ಗುಣ. (पुं०) 4. ಏಕಾನ್ವಯವುಳ್ಳ ಮೂರು ಶ್ಲೋಕಗಳ ಸಮುದಾಯ. "द्वाभ्यां युग्ममिति प्रोक्तं त्रिभि: श्लोकैर्विशेषकम्। कालापकं चतुर्भि: स्यात्तदूर्ध्वं कुलकं मतम्"। (वि०) 5. ಅತಿಶಯವನ್ನು ಉಂಟುಮಾಡುವ.

**विशेषकच्छेद्य ವಿಶೇಷಕಚ್ಛೇದ್ಯ** (न०) ಹಣೆಯಲ್ಲಿ ಬರೆಯುವ ತಿಲಕವನ್ನು ಅನೇಕ ರೀತಿಯಲ್ಲಿ ತಿದ್ದಿ ಕೊರೆಯುವುದು. ಇದು 64 ಕಲೆಗಳಲ್ಲಿ ಒಂದು ಕಲೆ.

**विशेषगुण ವಿಶೇಷಗುಣ** (पुं०) ವಸ್ತುಗಳ ಪರಸ್ಪರ ಭೇದವನ್ನು ತಿಳಿಸುವ ಧರ್ಮ. विशेषो गुण:।

**विशेषज्ञ ವಿಶೇಷಜ್ಞ** (वि०) ಹೆಚ್ಚು ವಿಷಯಗಳನ್ನು ತಿಳಿದಿರುವ, ಎಲ್ಲಾ ವಿಷಯಗಳನ್ನೂ ಅರಿತಿರುವ. विशेषं जानाति — ज्ञा (अवबोधने) "क:" (३-२-३)। "अज्ञ: सुखमाराध्य: सुखतरमाराध्यते विशेषज्ञ:। ज्ञानलवदुर्विदग्धं ब्रह्मापि नरं न रञ्जयति" भर्तृ० १-३।

**विशेषण ವಿಶೇಷಣ** (न०) 1. ವಿಶೇಷ್ಯಪದದ ಧರ್ಮ, ವಿಶೇಷ್ಯಪದದ ವಿಷಯವನ್ನು ವಿವರಿಸುವ ಗುಣ. विशिष्यतेऽनेन—वि+शिष्लृ (विशेषणे) कर० "ल्युट्" (३-३-११७)। 2. ವಿಶೇಷ್ಯಪದದ ಧರ್ಮವನ್ನು ತಿಳಿಸುವ ಪದ. ವಿಶೇಷಣವು ವ್ಯಾವರ್ತಕ ವಿಧೇಯ ಮತ್ತು ಹೇತುಗರ್ಭಗಳೆಂದು ಮೂರು ವಿಧ. "नीलो घट:" ಎಂಬಲ್ಲಿ ನೀಲವರ್ಣವು ಇತರ ವ್ಯಾವರ್ತಕ. "पर्वतो वह्निमान्" ಎಂಬಲ್ಲಿ ಪರ್ವತದಲ್ಲಿ ವಹ್ನಿಯು ವಿಧೇಯ. "स कीचकैर्मारुतपूर्णरन्ध्रै: कूजद्भिरापादितवंशकृत्यम्" ಎಂಬಲ್ಲಿ ಮಾರುತಪೂರ್ಣರಂಧ್ರತ್ವವು ಹೇತುಗರ್ಭವಿಶೇಷಣ. ವ್ಯಾವರ್ತಕವು ವಿಶೇಷಣ. ವ್ಯಾವರ್ತ್ಯವು ವಿಶೇಷ್ಯ. ಇದಕ್ಕೆ ಭೇದಕ ಮತ್ತು ಭೇದ್ಯಗಳೆಂದು ಅರ್ಥ.

**विशेषतस् ವಿಶೇಷತಸ್** (अव्य०) ಮುಖ್ಯವಾಗಿ, ಎಲ್ಲಕ್ಕಿಂತಲೂ ಹೆಚ್ಚಾಗಿ. विशेष "तसि:" (वा० ५-४-४४)। "विशेषतस्तु बालत्वात्तयोर्विवृतभावयो:। तेन माधवमालत्यो: कार्य: स्वमतिनिह्नव:" मालती० १-१५।

**विशेषविधि ವಿಶೇಷವಿಧಿ** (पुं०) ಕೆಲವು ಕಡೆ ಮಾತ್ರ ಪ್ರವರ್ತಿಸುವ ವಿಧಿ (ಕಾರ್ಯ). विशेषो विधि:। ಸಾಮಾನ್ಯ ಕಾರ್ಯವನ್ನು ಹೇಳಿ ಕೆಲವು ವಿಷಯಗಳಲ್ಲಿ ಮಾತ್ರ ವಿಧಿಸುವ ಕಾರ್ಯವು ವಿಶೇಷ ವಿಧಿ. ಸಾಮಾನ್ಯ ಕಾರ್ಯಕ್ಕಿಂತಲೂ ವಿಶೇಷ ವಿಧಿಯು ಪ್ರಬಲವಾದುದು.

ಸಾಮಾನ್ಯಕಾರ್ಯವು ಪ್ರವರ್ತಿಸುವ ವಿಷಯಗಳು ಹೆಚ್ಚು. ವಿಶೇಷಕಾರ್ಯವು ಕೆಲವು ವಿಷಯಗಳಲ್ಲಿ ಮಾತ್ರ ವಿಹಿತವಾಗುವುದು. ಇವಕ್ಕೆ ಸಾಮಾನ್ಯಶಾಸ್ತ್ರ ಮತ್ತು ವಿಶೇಷಶಾಸ್ತ್ರಗಳೆಂದು ಹೆಸರು. "तथा सामान्यशास्त्रेभ्यो विशेषकविधिर्बली। बह्वो विषया यस्य स सामान्यविधिर्भवेत्। अल्पः स्याद्विषयो यस्य स विशेषविधिर्मतः"। "ब्राह्मणेभ्यो दधि दीयताम् तक्रं कौण्डिन्याय" ಎಂಬಲ್ಲಿ ಕೌಂಡಿನ್ಯನು ಬ್ರಾಹ್ಮಣ ವಿಶೇಷವಾದುದರಿಂದ ಇದು ವಿಶೇಷವಿಧಿ.

**विशेषित ವಿಶೇಷಿತ** (वि०) 1. ವ್ಯತ್ಯಾಸತೋರಿಸಲ್ಪಟ್ಟ, ಭೇದತೋರಿಸಲ್ಪಟ್ಟ. वि + शिष्लृ (विशेषणे) + णिच् "क्तः" (३-२-१०२)। 2. ವ್ಯಾವೃತ್ತಿಮಾಡಲ್ಪಟ್ಟ, ಪ್ರತ್ಯೇಕಿಸಲ್ಪಟ್ಟ.

**विशेषोक्ति ವಿಶೇಷೋಕ್ತಿ** (स्त्री०) ಅರ್ಥಾಲಂಕಾರದ ಒಂದು ಭೇದ. ಸಮಗ್ರ ಕಾರಣವಿದ್ದರೂ ಕಾರ್ಯೋತ್ಪತ್ತಿಯಾಗದಿರುವ ವರ್ಣನೆಯು **"ವಿಶೇಷೋಕ್ತಿ"** ಅಲಂಕಾರ. "कार्याजनिर्विशेषोक्तिः सति पुष्कलकारणे" **ಉದಾ:** "हृदि स्नेहक्षयो नाभूत् स्मरदीपे ज्वलत्यपि"। ಸ್ಮರನೆಂಬ ದೀಪವು ಜ್ವಲಿಸುತ್ತಿದ್ದರೂ ಹೃದಯದಲ್ಲಿ ಸ್ನೇಹಕ್ಷಯವಾಗಲಿಲ್ಲವೆಂದು ವರ್ಣಿತವಾಗಿದೆ.

**विशेष्य ವಿಶೇಷ್ಯ** (वि०) ವಿಶೇಷಣಪದದಿಂದ ವಿವರಿಸಲ್ಪಡುವ ಗುಣದಿಂದ ಕೂಡಿದ. विषिष्यते गुणादिभिः — वि + शिष्लृ (विशेषणे) "ण्यत्" (३-१-१२४)। "विशेषणं विशेष्येण बहुलम्" (पा० सू० २-१-५७)। नीलम् उत्पलम् ಎಂಬಲ್ಲಿ ಇತರ ವರ್ಣವ್ಯಾವರ್ತಕವಾದ ನೀಲಪದವು ನೀಲಗುಣವಿಶಿಷ್ಟವಾದ ಉತ್ಪಲವನ್ನು ಬೋಧಿಸುವುದಾದುದರಿಂದ उत्पल ಪದವು ವಿಶೇಷ್ಯ.

**विशोक ವಿಶೋಕ** (पुं०) 1. ದುಃಖವಿಲ್ಲದಿರುವಿಕೆ. विगतः शोकः। "सुहृदां च विशोकाय स्वसुश्च प्रियकाम्यया" भाग० १-१०-७। (वि०) 2. ದುಃಖವಿಲ್ಲದ, ದುಃಖರಹಿತವಾದ. विगतः शोको यस्य।

**विशोका ವಿಶೋಕಾ** (स्त्री०) ಸಂಪ್ರಜ್ಞಾತ ಸಮಾಧಿ (ಸವಿಕಲ್ಪಕ ಸಮಾಧಿ)ಗೆ ಪೂರ್ವದಲ್ಲಿರುವ ಚಿತ್ತವೃತ್ತಿ. "विशोका वा ज्योतिष्मती" पा० यो० सू०।

**विशोधन ವಿಶೋಧನ** (न०) 1. ಶೋಧಿಸುವುದು, ಶುದ್ಧಮಾಡುವುದು. वि+शुध (शौचे) "ल्युट्" (३-३-११५)। 2. ಚೊಕ್ಕಟಮಾಡುವುದು, ನಿರ್ಮಲವಾಗಿ ಮಾಡುವುದು.

**विशोषण ವಿಶೋಷಣ** (न०) ಒಣಗಿಸುವುದು. वि+शुष (शोषणे) "ल्युट्" (३-३-११५)।

**विश्न ವಿಶ್ನ** (पुं०) ದೀಪ್ತಿ, ಕಾಂತಿ. विच्छ (गतौ) "नङ्" (३-३-९०)।

**विश्रणन ವಿಶ್ರಣನ** (न०) ದಾನ, ಕೊಡುಗೆ. वि + श्रण (दाने) भ्वा० "ल्युट्" (३-३-११५)। चुरा० श्रण (दाने) + णिच् "ल्युट्" (३-३-११५)। **–श्राणनम् –ಶ್ರಾಣನಮ್.** ದಾನ, ಕೊಡುಗೆ. "कथं नु शक्योऽनुनयो महर्षेर्विश्राणनादन्यपयस्विनीनाम्" रघु० २-५४।

**विश्राणित ವಿಶ್ರಾಣಿತ** (वि०) ದಾನಮಾಡಲ್ಪಟ್ಟ, ಕೊಡಲ್ಪಟ್ಟ. वि+श्रण (दाने)+णिच् "क्तः" (३-२-१०२)। "तमध्वरे विश्वजिति क्षितीशं निःशेषविश्राणितकोशजातम्" रघु० ५-१।

**विश्रब्ध ವಿಶ್ರಬ್ಧ** (वि०) 1. ವಿಶ್ವಾಸವುಳ್ಳ, ಭಯವಿಲ್ಲದ, ನಂಬಿಕೆಯುಳ್ಳ. वि + श्रम्भु (प्रमादे) "क्तः" (३-४-७२)। "सुविश्रब्धैरङ्गैः पथिषु विषमेष्वप्यचलता" मुद्रा० ३-३। 2. ನೆಮ್ಮದಿಯುಳ್ಳ, ಚಿತ್ತಶಾಂತಿಯುಳ್ಳ. 3. ಪ್ರೀತಿಯುಳ್ಳ, ಪ್ರೇಮವುಳ್ಳ. (अव्य०) 4. ನೆಮ್ಮದಿಯಿಂದ, ವಿಶ್ವಾಸದಿಂದ, ಭಯವಿಲ್ಲದೆ. "विश्रब्धं क्रियतां वराहततिभिर्मुस्ताक्षतिः पल्वले" शाकु० २-६। 5. ಧೈರ್ಯದಿಂದ, ಭಯವಿಲ್ಲದೆ. "वृषल विश्रब्धं पृच्छ ममापि बह्वाख्येयमत्र" मुद्रा० ३।

**विश्रम ವಿಶ್ರಮ** (पुं०) ವಿಶ್ರಾಂತಿ, ಶ್ರಮಪರಿಹಾರ. "विश्रमार्थमुपगूढमजस्रम्" माघ० १०-८८।

**विश्रम्भ ವಿಶ್ರಂಭ** (पुं०) 1. ವಿಶ್ವಾಸ, ನಂಬಿಕೆ. वि+श्रम्भु (प्रमादे) "घञ्" (३-३-१८)। 2. ರಹಸ್ಯ, ಗುಟ್ಟು. 3. ಪ್ರಣಯಕಲಹ. 4. ವಧೆ, ಕೊಲ್ಲುವುದು. 5. ಪ್ರೀತಿಯಿಂದ ಪ್ರಶ್ನೆಮಾಡುವುದು, ವಿಶ್ವಾಸದಿಂದ ಕೇಳುವುದು. "विश्रम्भः केलिकलहे विश्वासे प्रणये वधे" विश्व०।

**विश्रम्भण ವಿಶ್ರಂಭಣ** (न०) 1. ವಿಶ್ವಾಸ ಸಂಪಾದಿಸುವುದು. 2. ನಂಬುವುದು. 3. ಪ್ರೀತಿಸುವುದು.

**विश्रवस् ವಿಶ್ರವಸ್** (पुं०) ಪುಲಸ್ತ್ಯಮುನಿಯ ಪುತ್ರ. ವಿಶ್ರವಸ್ಸು ದೇವವರ್ಣಿ (ಇಲಬಿಲೆ) ಯಲ್ಲಿ ಕುಬೇರನನ್ನೂ ಕೇಕಸಿಯಲ್ಲಿ ರಾವಣ ಕುಂಭಕರ್ಣ ವಿಭೀಷಣ ಮತ್ತು ಶೂರ್ಪಣಖೆಯನ್ನೂ ಪಡೆದನು. "विश्रवःपितृकयाप्तुमनर्हम्" नैष० २१-७७।

**विश्रान्त ವಿಶ್ರಾಂತ** (वि०) 1. ವಿರಾಮಹೊಂದಿದವನು, ಕಾರ್ಯವನ್ನು ನಿಲ್ಲಿಸಿದವನು. वि+श्रमु (तपसि खेदे च) "क्तः" (३-४-७२)। 2. ವಿಶ್ರಾಂತಿ ಪಡೆದವನು, ಆಯಾಸ ಪರಿಹರಿಸಿಕೊಂಡವನು.

**विश्रान्ति ವಿಶ್ರಾಂತಿ** (स्त्री०) 1. ಕಾರ್ಯವನ್ನು ನಿಲ್ಲಿಸುವುದು, ವಿರಾಮಕೊಡುವುದು. 2. ಆಯಾಸ ಪರಿಹರಿಸಿಕೊಳ್ಳುವುದು. वि+श्रमु (तपसि खेदे च) "क्तिन्" (३-३-९४)। "जीर्णस्यास्य शरीरस्य विश्रान्तिमभिरोचये" रामा०।

**विश्राम ವಿಶ್ರಾಮ** (पुं०) 1. ವಿಶ್ರಾಂತಿ, ಶ್ರಮಪರಿಹಾರಕ್ಕಾಗಿ ಬಿಡುವು. वि+श्रमु (तपसि खेदे च) "घञ्" (३-३-१८)। "अद्वैतं सुखदुःखयोरनुगतं सर्वास्ववस्थासु यद्विश्रामो हृदयस्य यत्र जरसा यस्मिन्नहार्यो रसः" उ० रा० १-३९। 2. ವಿರಾಮ, ಬಿಡುವು. "विश्रामं लभतामिदं च शिथिलज्याबन्धमस्मद्धनुः" शाकु० २-६।

**विश्राव ವಿಶ್ರಾವ** (पुं०) 1. ಪ್ರಖ್ಯಾತಿ, ಹೆಚ್ಚು ಪ್ರಸಿದ್ಧಿ. वि+श्रु (श्रवणे) "घञ्" (३-३-२५)। "विश्रावस्तु प्रविख्यातिः" अम०। 2. ಧ್ವನಿ, ಶಬ್ದ, ಸದ್ದು. "विक्षावैः स्तोयविश्रावं तर्जयन्तो महोदधेः" भट्टि० ७-३६।

**विश्रुत ವಿಶ್ರುತ** (वि०) ಪ್ರಖ್ಯಾತನಾದವನು, ಹೆಚ್ಚು ಪ್ರಸಿದ್ಧಿಯನ್ನು ಪಡೆದವನು. वि+श्रु (श्रवणे) "क्तः" (३-२-१०२)।

**विश्रुति ವಿಶ್ರುತಿ** (स्त्री०) ಪ್ರಸಿದ್ಧಿ, ಪ್ರಖ್ಯಾತಿ. वि+श्रु (श्रवणे) "क्तिन्" (३-३-९४)।

**विश्लथ ವಿಶ್ಲಥ** (वि०) 1. ಶಿಥಿಲವಾದ, ಸಡಿಲವಾದ, ಬಿಗಿಯಾಗಿಲ್ಲದ. वि+श्लथ (दौर्बल्ये)+णिच् "अच्" (३-१-१३४)। "ऐरावतास्फालनविश्लथं यः संघट्टयन्नङ्गदमङ्गदेन" रघु० ६-७३। 2. ಜೋಲುಬಿದ್ದಿರುವ, ವೀರ್ಯವನ್ನು ಕಳೆದುಕೊಂಡಿರುವ, ಚಟುವಟಿಕೆಯಿಲ್ಲದ. "विश्लथैरवयवैर्निमीलया लोमभिर्द्रुतमितैर्विनिद्रताम्" नैष० १८-११७।

**विश्लिष्ट ವಿಶ್ಲಿಷ್ಟ** (वि०) ಒಟ್ಟಿಗೆ ಸೇರಿಕೊಂಡಿಲ್ಲದ, ಒಕ್ಕಟ್ಟಿಲ್ಲದ, ಬೇರೆ ಬೇರೆಯಾಗಿರುವ. वि + श्लिष (आलिङ्गने) "क्तः" (३-४-७२)।

**विश्लेष ವಿಶ್ಲೇಷ** (पुं०) 1. ಬೇರೆಯಾಗುವುದು, ಒಟ್ಟಿಗೆ ಸೇರದಿರುವುದು, ಒಕ್ಕಟ್ಟಿಲ್ಲದಿರುವುದು. वि + श्लिष (आलिङ्गने) "घञ्" (३-३-१८)। 2. ಅಗಲಿಕೆ, ಇಷ್ಟವಾದ ವಸ್ತುವು ದೂರದಲ್ಲಿರುವುದು, ಪತಿಪತ್ನಿಯರ ವಿರಹ, ಇಷ್ಟಬಂಧುವಿನ ವಿರಹ. "अङ्गेभ्यः कथमपि वामलोचनानां विश्लेषो बत नवरक्तकैः प्रपेदे" माघ० ८-६७। "पीडयन्ते गृहिणः कथं नु तनयाविश्लेषदुःखैर्नवैः" शाकु० ४-५।

**विश्लेषित ವಿಶ್ಲೇಷಿತ** (वि०) ಬೇರ್ಪಡಿಸಲ್ಪಟ್ಟ, ಪ್ರತ್ಯೇಕಿಸಲ್ಪಟ್ಟ. वि + श्लिष (श्लेषणे) + णिच् "क्तः" (३-२-१०२)। "सन्देशं मे हर धनपतिक्रोधविश्लेषितस्य" मेघ० १-७।

**विश्व ವಿಶ್ವ** (पुं० ब० व०) 1. ಗಣದೇವತೆಗಳ ಒಂದು ವರ್ಗ, ವಿಶ್ವೇದೇವತೆಗಳು. विशन्ति कर्मसु — विश (प्रवेशने) "क्वन्" (उ० १-१४९)। ಇವರು ಧರ್ಮಪುರುಷನಿಂದ ದಕ್ಷಪುತ್ರಿಯಾದ ವಿಶ್ವೆಯೆಂಬ ಪತ್ನಿಯಲ್ಲಿ ಜನಿಸಿದವರು. **ವಿಶ್ವೇದೇವತೆಗಳು:** (1) वसुः (2) सत्यः (3) क्रतुः (4) दक्षः (5) कालः (6) कामः (7) धृतिः (8) कुरुः (9) पुरूरवस् ಮತ್ತು (10) माद्रवः ಎಂದು ಹತ್ತುಮಂದಿ. "इष्टिश्राद्धे क्रतुर्दक्षः सत्यो नान्दीमुखे वसुः। नैमित्तिके कालकामौ काम्ये कुरुधृती मते। पुरूरवा माद्रवश्च पार्वणे समुदाहृतौ" स्मृतिः। 2. ಜೀವ, ಜೀವಾತ್ಮ. (न०) 3. ವಿಷ್ಣು, ನಾರಾಯಣ. विशत्यवयवान्—विश "क्वन्" (उ० १-१४९)। अनन्तमाङ्गल्यैकतानस्वरूपरूपगुणविभवैः परिपूर्णो भवति। "विश्वं सर्वत्र पूर्णत्वात् स्वरूपगुणवैभवैः" इति निरुक्तिः। "विश्वं विष्णुर्वषट्कारो भूतभव्यभवत्प्रभुः" वि० स०। 4. ಜಗತ್ತು, ಲೋಕ, ಪ್ರಪಂಚ. विशति स्वकारणम्—विश "क्वन्"। "इदं विश्वं पाल्यं विधिवदभियुक्तेन मनसा" उ० रा० ३-३०। "उपप्लुतं पातुमदो मदोद्धतैस्त्वमेव विश्वम्भर विश्वमीशिषे" माघ० १-३८। (स्त्रीन०) 5. ಶುಂಠಿ. (वि०) 6. ಸಕಲ, ಸಮಸ್ತ. "अविक्रियश्चेष्टयसि त्वमेको विश्वानि भूतानि विहारशक्त्या" याद० २०-८२। (स्त्री०) -विश्वा-ವಿಶ್ವಾ. 7. ಅತಿಬಜೆ. 8. ವಿಶ್ವೇದೇವತೆಗಳ ತಾಯಿ, ದಕ್ಷನ ಪುತ್ರಿ, ಧರ್ಮನ ಪತ್ನಿ.

**विश्वकद्रु ವಿಶ್ವಕದ್ರು** (पुं०) 1. ಬೇಟೆಯ ನಾಯಿ, ಬೇಟೆಯಲ್ಲಿ ಶಿಕ್ಷಣ ಪಡೆದ ನಾಯಿ. विश्वकं सर्वं द्रवति — द्रु (गतौ) "डुः" (वा० ३-२-१८)। 2. ಧ್ವನಿ, ಶಬ್ದ. (वि०) 3. ಖಲ, ನೀಚ, ಅಸಭ್ಯ. "विश्वकद्रुस्त्रिषु खले श्वानाखेटशुनोः पुमान्" मेदि०।

**विश्वकर्तृ ವಿಶ್ವಕರ್ತೃ** (पुं०) ಜಗತ್ತಿನ ಸೃಷ್ಟಿಕರ್ತನಾದ ಪರಮಾತ್ಮ. "विश्वकर्तुरवतार इति स्वं बह्वमंस्त बधिरो निगमेषु" याद० २१-५।

**विश्वकर्मन् ವಿಶ್ವಕರ್ಮನ್** (पुं०) 1. ದೇವಶಿಲ್ಪಿಯಾದ ವಿಶ್ವಕರ್ಮ. विश्वेषु कर्म यस्य। "दृष्ट्वा च विश्वकर्माणं

व्यादिदेश पितामहः" भा०। 2. ಒಬ್ಬ ಮುನಿ. 3. ಸೂರ್ಯ. "विश्वकर्मा सहस्रांशौ मुनिभिद्देवशिल्पिनोः" मेदि०। 4. ವಿಷ್ಣು. ब्रह्मसृष्टेः प्रागूर्ध्वं च विद्यमानं विश्वं कर्म जगद्व्यापारोऽस्य। "विश्वकर्मा मनुस्त्वष्टा" वि० स०।

**विश्वकर्मसुता ವಿಶ್ವಕರ್ಮಸುತಾ** (स्त्री०) ವಿಶ್ವಕರ್ಮನ ಮಗಳಾದ ಸಂಜ್ಞಾದೇವಿ, ಸೂರ್ಯನ ಪತ್ನಿ.

**विश्वकृत् ವಿಶ್ವಕೃತ್** (पुं०) 1. ಪರಮಾತ್ಮ. 2. ಬ್ರಹ್ಮ, ಚತುರ್ಮುಖ. 3. ವಿಶ್ವಕರ್ಮ. विश्वं करोति—डुकृञ् (करणे) "क्विप्" (३-२-७६)।

**विश्वकेतु ವಿಶ್ವಕೇತು** (पुं०) ಅನಿರುದ್ಧ. विश्वस्मिन् केतुरस्य।

**विश्वगुप्ति ವಿಶ್ವಗುಪ್ತಿ** (स्त्री०) ಜಗತ್ತಿನ ರಕ್ಷಣೆ. विश्वस्य गुप्तिः। "विश्वगुप्तौ जगत्कर्त्रा विनियुक्ता विभूतयः" याद० २२-४।

**विश्वगोप्तृ ವಿಶ್ವಗೋಪ್ತೃ** (पुं०) 1. ಪರಮಾತ್ಮ ಶ್ರೀಮನ್ನಾರಾಯಣ. विश्वस्य जगतः गोप्ता। (वि०) 2. ಜಗತ್ತನ್ನು ಸಂರಕ್ಷಿಸುವ.

**विश्वजनीन ವಿಶ್ವಜನೀನ** (वि०) ಎಲ್ಲಾ ಜನರಿಗೂ ಹಿತವಾದ. विश्वस्मै जनाय हितम्—विश्वजन "खः" (५-१-९)। "तदिन्द्रसन्दिष्टमुपेन्द्र यद्वचः क्षणं मया विश्वजनीनमुच्यते" माघ० १-४१।

**विश्वजित् ವಿಶ್ವಜಿತ್** (पुं०) 1. ವಿಶ್ವಜಿತ್ತೆಂಬ ಒಂದು ಯಾಗ. विश्वं जयति—जि (जये) "क्विप्" (३-२-६१)। "तमध्वरे विश्वजिति क्षितीशं निःशेषविश्राणितकोशजातम्" रघु० ५-१। 2. ಒಂದು ಅಗ್ನಿ. "यस्तु विश्वस्य जगतो बुद्धिमाक्रम्य तिष्ठति। तं प्राहुरध्यात्मविदो विश्वजिन्नामपावकम्" भा०। (वि०) 3. ಜಗತ್ತನ್ನು ಜಯಿಸಿದವನು.

**विश्वतस् ವಿಶ್ವತಸ್** (अव्य०) 1. ಎಲ್ಲಾ ಕಡೆಯಿಂದಲೂ. 2. ಎಲ್ಲಾ ಕಡೆಯಲ್ಲೂ. विश्व "तसिल्" (५-३-७)।

**विश्व(श्वे)देव ವಿಶ್ವ(ಶ್ವೇ)ದೇವ** (पुं०ब०व०) "विश्व" ಪದದಲ್ಲಿ ನೋಡಿ.

**विश्वधारिणी ವಿಶ್ವಧಾರಿಣೀ** (स्त्री०) ಪೃಥ್ವಿ, ಭೂಮಿ. विश्वं सकलं धारयति—धृ (धारणे)+णिच् "णिनिः" (३-१-१३४)।

**विश्वनाथ ವಿಶ್ವನಾಥ** (पुं०) ಪರಮೇಶ್ವರ, ಜಗತ್ತಿನ ಒಡೆಯ. विश्वस्य नाथः।

**विश्वपा ವಿಶ್ವಪಾ** (पुं०) 1. ಸಮಸ್ತ ಜಗತ್ತನ್ನೂ ರಕ್ಷಿಸುವ ಪರಮಾತ್ಮ. विश्वं पाति—पा (रक्षणे) "विच्" (३-३-७५)। 2. ಸೂರ್ಯ. 3. ಚಂದ್ರ. 4. ಅಗ್ನಿ.

**विश्वप्रकाश ವಿಶ್ವಪ್ರಕಾಶ** (पुं०) ಶ್ರೀ ಮಹೇಶ್ವರಕವಿ ವಿರಚಿತ ಒಂದು ಶಬ್ದಕೋಶ, —ನಿಘಂಟು.

**विश्वबन्धु ವಿಶ್ವಬಂಧು** (पुं०) ಲೋಕದಲ್ಲಿ ಎಲ್ಲರಿಗೂ ಸುಹೃತ್ತಾಗಿರುವ ಮಹಾತ್ಮ.

**विश्वभेषज ವಿಶ್ವಭೇಷಜ** (न०) ಒಣಶುಂಠಿ. विश्वस्यापि दोषस्य भेषजम्। "अथ शुण्ठी महौषधम्। स्त्रीनपुंसकयोर्विश्वं नागरं विश्वभेषजम्" अम०।

**विश्वभोक्तृ ವಿಶ್ವಭೋಕ್ತೃ** (पुं०) ಜಗತ್ತೆಲ್ಲವನ್ನೂ ಅನುಭವಿಸುವವನು. विश्वं भुङ्क्ते—भुज (परिपालनाभ्यवहारयोः) "तृच्" (३-१-१३३)। "विश्वभोक्तुरधिगम्य तितिक्षाम्" याद० २१-१०। स्त्रियां "ङीप्" (४-१-५)। **—भोक्त्री —ಭೋಕ್ತ್ರೀ.**

**विश्वमदा ವಿಶ್ವಮದಾ** (स्त्री०) ಅಗ್ನಿಯ ಸಪ್ತಜಿಹ್ವೆಗಳಲ್ಲೊಂದು.

**विश्वमूर्ति ವಿಶ್ವಮೂರ್ತಿ** (पुं०) 1. ಪರಮೇಶ್ವರ, ಪರಶಿವ. (वि०) 2. ಸಕಲ ಪ್ರಪಂಚವೂ ಶರೀರವಾಗಿರುವ (ಈಶ್ವರ). विश्वं मूर्तिर्यस्य। "कल्याणानां त्वमसि महसां भाजनं विश्वमूर्ते" मालती० १-५।

**विश्वम्भर ವಿಶ್ವಂಭರ** (पुं०) 1. ವಿಷ್ಣು. विश्वं बिभर्ति—डु भृञ् (धारणपोषणयोः) "खच्" (३-२-४६)। मुमागमः (६-३-६७)। "विश्वम्भर भरास्माकं विश्वस्माद्वा बहिः कुरु। अथ पक्षद्वयाभावे त्यज विश्वम्भरत्वकम्"। 2. ಇಂದ್ರ. "विश्वम्भरोऽच्युते शक्रे पुंसि विश्वम्भरा भुवि" मेदि०। (वि०) 3. ಜಗತ್ತೆಲ್ಲವನ್ನೂ ಧರಿಸಿರುವವನು. "उपप्लुतं पातुमदो मदोद्धतैस्त्वमेव विश्वम्भर विश्वमीशिषे" माघ० १-३८। (स्त्री०) **—भरा —ಭರಾ.** 4. ಭೂಮಿ. "आसन्नभारात्ययजातहर्षा विश्वम्भरा सैन्यभरं विषेहे" याद० २०-६।

**विश्वयोनि ವಿಶ್ವಯೋನಿ** (पुं०) 1. ವಿಷ್ಣು. 2. ಬ್ರಹ್ಮ, ಚತುರ್ಮುಖ. विश्वस्य योनिः कारणम्। 3. ಶಿವ.

**विश्वरूप ವಿಶ್ವರೂಪ** (पुं०) 1. ವಿಷ್ಣು. विश्वमेव रूपं यस्य। 2. ಪರಮೇಶ್ವರ. (वि०) 3. ನಾನಾರೂಪದಿಂದ ಎಲ್ಲಾ ಕಡೆಯಲ್ಲೂ ಇರುವ. "सृष्टिसंहरणरक्षणेषु ते विश्वरूप ननु कर्मकर्तृता" याद० १७-१०८।

**विश्वरेतस् ವಿಶ್ವರೇತಸ್** (पुं०) 1. ಬ್ರಹ್ಮ. विश्वे रेतः यस्य। 2. ವಿಷ್ಣು. विश्वं रेतः वीर्यं कार्यमस्य।

"ज्ञानेन्द्रियादिकं विश्वं परिचर्यार्थमेव हि। यः प्रजानां करोतीति विश्वरेताश्च स स्मृतः" इति निरुक्तिः। "विश्वरेताः प्रजाभवः" वि० स०।

**विश्ववेदस्** ವಿಶ್ವವೇದಸ್ (वि०) ಸಕಲವನ್ನೂ ತಿಳಿದಿರುವವನು, ಸರ್ವಜ್ಞ. विश्वं वेत्ति—विद (ज्ञाने) "असुन्" (उ० ३-१८८।

**विश्वसनीय** ವಿಶ್ವಸನೀಯ (वि०) ವಿಶ್ವಾಸವಿಡಲ್ಪಡುವ. ನಂಬುಗೆಯಿಡಲ್ಪಡುವ. वि+श्वस (प्राणने) "अनीयर्" (३-१-९६)। "तव्यः"। **–श्वसितव्यम् –ಶ್ವಸಿತವ್ಯಮ್.**

**विश्वसित** ವಿಶ್ವಸಿತ (वि०) ವಿಶ್ವಾಸಹೊಂದಿದ, ನಂಬಿದ. वि+श्वस (प्राणने) "क्तः" (३-४-७२)। "त्वदीक्षणाद्विश्वसितान्तरात्मनः" नैष० १-१३१।

**विश्वसृज्** ವಿಶ್ವಸೃಜ್ (पुं०) 1. ಬ್ರಹ್ಮ, ಚತುರ್ಮುಖ. विश्वं सृजति—सृज (विसर्गे) "क्विप्" (३-२-७६)। "प्रायेण सामग्र्यविधौ गुणानां पराङ्मुखी विश्वसृजः प्रवृत्तिः" कुमा० ३-२८। 2. ವಿಷ್ಣು. "विश्वं जगत् सृजति यः विश्वसृक् स प्रकीर्तितः" इति निरुक्तिः। "सुप्रसादः प्रसन्नात्मा विश्वसृड्विश्वभुग्विभुः" वि० स०।

**विश्वस्त** ವಿಶ್ವಸ್ತ (वि०) 1. ನಂಬುಗೆಯಿಟ್ಟಿರುವ. वि+श्वस (प्राणने) "क्तः" (३-४-७२)। "न विश्वसेदविश्वस्ते विश्वस्ते नातिविश्वसेत्। विश्वासाद्भयमुत्पन्नं मूलादपि निकृन्तति"। 2. ಧೈರ್ಯದಿಂದಿರುವ, ಹೆದರದಿರುವ. (स्त्री०) **–श्वस्ता –ಶ್ವಸ್ತಾ.** ಪತಿಯಿಲ್ಲದವಳು, ವಿಧವೆ.

**विश्वा** ವಿಶ್ವಾ (स्त्री०) 1. ಅತಿಬಜೆ. विश (प्रवेशने) "क्वन्" (उ० १-१४९)। 2. ಶತಾವರಿ.

**विश्वाची** ವಿಶ್ವಾಚೀ (स्त्री०) ಒಬ್ಬ ಅಪ್ಸರಸ್ಸು

**विश्वात्मन्** ವಿಶ್ವಾತ್ಮನ್ (पुं०) 1. ವಿಷ್ಣು. विश्वमेव आत्माऽस्य। "जन्म कर्म च विश्वात्मन्नजस्याकर्तुमात्मनः" भाग० १-८-३०। 2. ಮಹಾದೇವ, ಪರಮೇಶ್ವರ. "अथ विश्वात्मने गौरी संदिदेश मिथः सखीम्" कुमा० ६-१।

**विश्वामित्र** ವಿಶ್ವಾಮಿತ್ರ (पुं०) ವಿಶ್ವಾಮಿತ್ರಮಹರ್ಷಿ, ಬ್ರಹ್ಮರ್ಷಿ. विश्वमेव मित्रमस्य। दीर्घः (६-३-१३०)। [ವಿಶ್ವಾಮಿತ್ರಋಷಿಯು ಕುಶಿಕರಾಜನ ವಂಶದಲ್ಲಿ ಗಾಧಿರಾಜನ ಪುತ್ರನಾಗಿ ಹುಟ್ಟಿದ ಒಬ್ಬ ಕ್ಷತ್ರಿಯ. ಒಮ್ಮೆ ವಸಿಷ್ಠಮಹರ್ಷಿಯಿಂದ ಸತ್ಕೃತನಾಗಿ ನಂದಿನೀಧೇನುವಿನ ಮಹಿಮೆಯನ್ನು ಕಂಡು ಅದನ್ನು ತನಗೆ ಕೊಡಬೇಕೆಂದು ಬೇಡಲು ವಸಿಷ್ಠರು ಅದಕ್ಕೆ ಸಂಮತಿಸಲಿಲ್ಲ. ಅದಕ್ಕಾಗಿ ಬಹಳವಾಗಿ ಹೋರಾಡಿ ಪರಾಭವ ಹೊಂದಿ ಬ್ರಾಹ್ಮಣ್ಯವನ್ನು ಸಂಪಾದಿಸಲು ಅನೇಕಸಹಸ್ರವರ್ಷಗಳ ಕಾಲ ತಪಸ್ಸನ್ನಾಚರಿಸಿ ಕೊನೆಗೆ ವಸಿಷ್ಠಮಹರ್ಷಿಯಿಂದ ಬ್ರಹ್ಮರ್ಷಿಯೆನಿಸಿಕೊಂಡನು. ತಪಸ್ಸಿನ ಕಾಲದಲ್ಲಿ ತಪೋಭಂಗಕ್ಕಾಗಿಬಂದ ಮೇನಕೆಯೊಡನೆ ಕೆಲಕಾಲ ಸಂಸಾರಿಯಾಗಿದ್ದಾಗ ಶಕುಂತಲೆಯು ಹುಟ್ಟಿದಳು. ಬ್ರಹ್ಮರ್ಷಿಯಾಗಿ ತನ್ನ ತಪೋಮಹಿಮೆಯಿಂದ ತ್ರಿಶಂಕುವನ್ನು ಸಶರೀರನಾಗಿ ಸ್ವರ್ಗಕ್ಕೇರಿಸಲು ಯತ್ನಿಸಿದಾಗ ಇಂದ್ರನು ಗುರುಶಾಪದಿಂದ ಪತಿತನಾದ ಇವನನ್ನು ಸ್ವರ್ಗಕ್ಕೆ ಸೇರಿಸಲು ತಿರಸ್ಕರಿಸಲು ಕುಪಿತನಾದ ವಿಶ್ವಾಮಿತ್ರನು ತನ್ನ ತಪಶ್ಶಕ್ತಿಯಿಂದ ಸ್ವರ್ಗದ ಮಾರ್ಗದ ಮಧ್ಯದಲ್ಲೇ ಒಂದು ಸ್ವರ್ಗವನ್ನು ಸೃಷ್ಟಿಸಿ ಅಲ್ಲೇ ತ್ರಿಶಂಕುವನ್ನು ನಿಲ್ಲಿಸಿದನು. ಅದಕ್ಕೆ ತ್ರಿಶಂಕುಸ್ವರ್ಗವೆಂದು ಹೆಸರಾಯಿತು. ಋಚೀಕಮುನಿಯ ಮಧ್ಯಮ ಪುತ್ರನಾದ ಶುನಃಶೇಫನು ಹರಿಶ್ಚಂದ್ರರಾಜನ ಯಜ್ಞದಲ್ಲಿ ಯಜ್ಞಪಶುವಾಗಿ ಆಗಬೇಕಾದ ಸಂದರ್ಭದಲ್ಲಿ ವಿಶ್ವಾಮಿತ್ರನು ತನ್ನ ಮಂತ್ರಬಲದಿಂದ ಅವನನ್ನು ರಕ್ಷಿಸಿದನು. ಅಂದಿನಿಂದ ಶುನಃಶೇಫನು ಈ ಋಷಿಯ ಅಭಿಮಾನಪುತ್ರನಾದನು. ಈ ಮಹರ್ಷಿಯು ತನ್ನ ಯಾಗರಕ್ಷಣೆಯ ವ್ಯಾಜದಿಂದ ಶ್ರೀರಾಮಲಕ್ಷ್ಮಣರನ್ನು ಕರೆದುಕೊಂಡು ಹೋಗಿ ತಾಟಕಾಸಂಹಾರಮಾಡಿಸಿ ಮುಂದೆ ಜನಕರಾಜನ ಪಟ್ಟಣವನ್ನು ಪ್ರವೇಶಿಸಿ ಶ್ರೀರಾಮನಿಂದ ಶಿವಧನುರ್ಭಂಗಮಾಡಿಸಿ ಸೀತಾಸ್ವಯಂವರವನ್ನು ನೆರವೇರಿಸಿದನು. ಇತ್ಯಾದಿ.]

**विश्वाराज्** ವಿಶ್ವಾರಾಜ್ (पुं०) ಜಗತ್ತಿನ ಅಧಿಪತಿ. विश्वेषु राजते—विश्वेषां राट् राजा वा। दीर्घः (६-३-१२८)।

**विश्वावसु** ವಿಶ್ವಾವಸು (पुं०) 1. ಒಬ್ಬ ಗಂಧರ್ವ. विश्वं वसु यस्य—दीर्घ. (६-३-१२८)। "विश्वावसुप्राग्रहरैः प्रवीणैः संगीयमानत्रिपुरावदानः" कुमा० ७-४८। 2. ಪ್ರಭವಾದಿ ಅರವತ್ತು ಸಂವತ್ಸರಗಳಲ್ಲಿ ಮೂವತ್ತೊಂಬತ್ತನೆಯ ಸಂವತ್ಸರ. 3. ವಿಷ್ಣು. "विश्वावसुर्विश्वमूर्तिर्हि विश्वे विष्वक्सेनो विश्वकर्मा वशी च" भा० भीष्म० ६५-४७।

**विश्वास** ವಿಶ್ವಾಸ (पुं०) 1. ನಂಬುಗೆ ನಂಬಿಕೆ. वि+श्वस (प्राणने) "घञ्" (३-३-१८)। "नदीनां शस्त्रपाणीनां नखिनां शृङ्गिणां तथा। विश्वासो नैव कर्तव्यः स्त्रीषु राजकुलेषु च"। (स्त्री०) 2. ಅರ್ಧರಾತ್ರಿ, ನಡುರಾತ್ರಿ. "विश्वावसुः पुंसि। निशि गन्धर्वभेदे च" हेम०। 3. ಪ್ರೀತಿ.

**विश्वासघात ವಿಶ್ವಾಸಘಾತ** (ಪುಂ) 1. ವಿಶ್ವಾಸವನ್ನು ಒಡೆಯುವುದು, ವಿಶ್ವಾಸವನ್ನು ಕೆಡಿಸುವುದು. विश्वासस्य घातः। 2. ನಂಬುಗೆಯನ್ನು ಕೆಡಿಸುವುದು.

**विश्वासघातक ವಿಶ್ವಾಸಘಾತಕ** (ವಿಂ) ನಂಬಿಕೆಯನ್ನು ಕಳೆಯುವವನು, ನಂಬಿಕೆಯನ್ನು ಹೋಗಲಾಡಿಸುವವನು. विश्वासं हन्ति—हन (हिंसागत्योः) "ण्वुल्" (३-१-१३३)। "न भाराः पर्वता भाराः न भाराः सप्त सागराः। निन्दका हि महाभारा भारा विश्वासघातकाः'।

**विश्वासपात्र ವಿಶ್ವಾಸಪಾತ್ರ** (ನಂ) ನಂಬಿಕೆಗೆ ಯೋಗ್ಯನಾದವನು, ನಂಬಿಕೆಗೆ ಅರ್ಹನಾದವನು. विश्वासस्य पात्रम्। **-भूमिः -ಭೂಮಿಃ, -स्थानम् -ಸ್ಥಾನಮ್.**

**विश्वासभङ्ग ವಿಶ್ವಾಸಭಂಗ** (ಪುಂ) ನಂಬಿಕೆ ನಾಶವಾಗುವುದು, ನಂಬಿಕೆಯು ಕಳೆದುಹೋಗುವುದು. विश्वासस्य भङ्गः।

**विश्वेदेव ವಿಶ್ವೇದೇವ** (ಪುಂ ಬಂ ವಂ) "विश्व" ಪದದಲ್ಲಿ ನೋಡಿ.

**विश्वेश ವಿಶ್ವೇಶ** (ಪುಂ) 1. ವಿಷ್ಣು, ನಾರಾಯಣ. विश्वस्य जगतः ईशः। "अथ विश्वेश विश्वात्मन् विश्वमूर्ते स्वकेषु मे। स्नेहपाशमिमं छिन्धि दृढं पाण्डुषु वृष्णिषु" भाग० १-८-४१। 2. ಪರಶಿವ, ಪರಮೇಶ್ವರ. **-ईश्वरः -ಈಶ್ವರಃ.** ಕಾಶಿಯಲ್ಲಿ ನೆಲಸಿರುವ ಮಹಾದೇವ, ಪರಶಿವ.

**विश्वौषध ವಿಶ್ವೌಷಧ** (ನಂ) ಶುಂಠಿ. विश्वेषामौषधम्।

**विष ವಿಷ** (ಪುನಂ) 1. ವಿಷ, ನಂಜು. विषॢ (व्याप्तौ) "कः" (३-१-१३५)। "तीव्राणि तेनोज्झति कोपितोऽसौ सदानतोयेन विषाणि नागः" माघ० ४-६३। ವಿಷವು ಸ್ಥಾವರಜಂಗಮಗಳೆಂದು ಎರಡು ವಿಧ.

**ಸ್ಥಾವರವಿಷ:** ಕೆಲವು ಗಿಡ ಮರಗಳ ಬೇರು ಎಲೆ ಹೂವು ಹಣ್ಣು ತೊಗಟೆ ಹಾಲು ರಸಗಳೂ ಅರಿದಳ ಮೊದಲಾದ ಧಾತುಗಳೂ ಸ್ಥಾವರವಿಷ.

ಕೆಲವು ಪ್ರಾಣಿಗಳ ದೃಷ್ಟಿ, ಉಸಿರು ಹಲ್ಲು ನಖ ಮೂತ್ರ ಮಲ ರೇತಸ್ಸು ಜೊಲ್ಲು ಮುಖ ಸ್ಪರ್ಶ ಕಡಿತ ಗುದ ಅಸ್ಥಿ ಮುಳ್ಳುಗಳಲ್ಲಿ ವಿಷವಿರುವುದು. ಇದು **ಜಂಗಮವಿಷ.** (ನಂ) 2. ಜಲ, ನೀರು. "विषं जलधरैः पीतं मूर्च्छिताः पथिकाङ्गनाः"। (ಸ್ತ್ರೀಂ) **-षा -ಷಾ.** 3. ಅತಿಬಚೆ. "विषं जलेऽतिविषायां स्त्रियां क्ष्वेडे तु न स्त्रियाम्" मेदि०।

**विषकण्ठ ವಿಷಕಂಠ** (ಪುಂ) ವಿಷಪಾನಮಾಡಿದ ಪರಮೇಶ್ವರ.

**विषक्त ವಿಷಕ್ತ** (ವಿಂ) 1. ಸಂಬಂಧ ಹೊಂದಿರುವ, ಸೇರಿಕೊಂಡಿರುವ. वि+षञ्ज (सङ्गे) "क्तः" (३-४-७२)। "तुरगखुरहतस्तथा हि रेणुर्विटपविषक्तजलार्द्रवल्कलेषु" शाकु० १-२८। 2. ಅಂಟಿಕೊಂಡಿರುವ. "प्रस्वेदवारिसविशेषविषक्तमङ्गे कूर्पासकं क्षतनखक्षतमुत्क्षिपन्ती" माघ० ४-२३। 3. ಹುಟ್ಟಿದ, ಉಂಟಾದ. "अपत्ये यत्तादृक् दुरितमभवत्तेन महता विषक्तस्तीव्रेण व्रणितहृदयेन व्यथयता" उ० रा० ४-३।

**विषक्रिमि ವಿಷಕ್ರಿಮಿ** (ಪುಂ) ವಿಷದಲ್ಲಿ ಹುಟ್ಟಿಬೆಳೆದ ಹುಳ. विषे जातः क्रिमिः।

**विषङ्ग ವಿಷಂಗ** (ಪುಂ) ಸಂಬಂಧ, ಸೇರಿಕೊಂಡಿರುವಿಕೆ. वि + षञ्ज (सङ्गे) "घञ्" (३-३-१८)।

**विषङ्गिन् ವಿಷಂಗಿನ್** (ತ್ರಿಂ) ಸಂಬಂಧ ಹೊಂದಿರುವ, ಒಂದಕ್ಕೊಂದು ಸೇರಿಕೊಂಡಿರುವ. विषङ्गोऽस्यास्ति "इनिः" (५-२-११५)। "विषङ्गिभिर्भृशमितरेतरं क्वचित्तुरङ्गमैरुपरि निरुद्धनिर्गमाः" माघ० १७-५३।

**विषघ्न ವಿಷಘ್ನ** (ಪುಂ) 1. ಶಿರೀಷವೃಕ್ಷ, ಬಾಗೆಮರ. विषं हन्ति—हन (हिंसागत्योः) "टक्" (३-२-५३)। (ಸ್ತ್ರೀಂ) **-घ्ना -ಘ್ನಾ.** 2. ಅಮೃತಬಳ್ಳಿ. 3. ಕೆಂಪು ತಿಗಡೆ. "विषघ्नः शिरीषतरौ विषघ्ना त्रिवृताऽमृता" हेम०। **-घ्नी -ಘ್ನೀ.** 4. ಹಾವುಮೆಕ್ಕೆ. 5. ಕೊಮ್ಮೆ ಗಿಡ. 6. ಹರಿದ್ರ, ಅರಿಶಿನ.

**विषज्वर ವಿಷಜ್ವರ** (ಪುಂ) 1. ಮಹಿಷ, ಎಮ್ಮೆ. विषवत् मारको ज्वरोऽस्य। 2. ವಿಷಮಶೀತಜ್ವರ.

**विषण्ण ವಿಷಣ್ಣ** (ವಿಂ) ದುಃಖಿತನಾದವನು, ದುಃಖಿಗೊಂಡವನು. वि+षद्ऌ (विशरणादौ) "क्तः" (३-४-७२)। "इति विप्रियमाकर्ण्य गोप्यो गोविन्दभाषितम्। विषण्णा भग्नसंकल्पाः चिन्तामापुर्दुरत्ययाम्" भाग० १०-२९-२८।

**विषण्णता ವಿಷಣ್ಣತಾ** (ಸ್ತ್ರೀಂ) ದುಃಖಿಗೊಂಡಿರುವಿಕೆ. विषण्णस्य भावः "तल्" (५-१-११९)।

**विषद ವಿಷದ** (ಪುಂ) 1. ಮೇಘ, ಮೋಡ. विषं जलं ददाति—डु दाञ् (दाने) "कः" (३-२-३)। (ವಿಂ) 2. ವಿಷವನ್ನು ಕೊಡುವವನು. 3. ನೀರನ್ನು ಕೊಡುವವನು. विषं क्ष्वेडं जलं वा ददाति—दा "कः" (३-२-३)।

**विषदन्तक ವಿಷದನ್ತಕ** (ಪುಂ) ಸರ್ಪ. विषं दन्ते यस्य।

**विषदर्शनमृत्युक ವಿಷದರ್ಶನಮೃತ್ಯುಕ** (ಪುಂ) ಚಕೋರ ಪಕ್ಷಿ. विषदर्शने मृत्युर्यस्य। "कप्" (५-४-१५४)।

**विषदिग्ध ವಿಷದಿಗ್ಧ** (वि०) ವಿಷದಿಂದ ಬಳಿಯಲ್ಪಟ್ಟ ಬಾಣ ಮೊದಲಾದುದು. विषेण दिग्धः।

**विषद्रुम ವಿಷದ್ರುಮ** (पुं०) ವಿಷವೃಕ್ಷ.

**विषधर ವಿಷಧರ** (पुं०) 1. ಸರ್ಪ, ಹಾವು. धरति—धृ (धारणे) "अच्" (३-१-१३४)। विषस्य धरः। (वि०) 2. ವಿಷವನ್ನು ಹೊಂದಿರುವ.

**विषनाडी ವಿಷನಾಡೀ** (स्त्री०) ವಿಷದ ಸಮಯ, ಅನೇಕ ವಿಧ ತೊಂದರೆಗಳೇರ್ಪಡುವ ಕಾಲ. विषतुल्या नाडी।

**विषनाशक ವಿಷನಾಶಕ** (वि०) ವಿಷದ ದೋಷವನ್ನು ಹೋಗಲಾಡಿಸುವ. विषं विषजातं दोषं नाशयति—णश (अदर्शने)+णिच् "ण्वुल्" (३-१-१३३)। "ल्युः" (३-१-१३४)। **–नाशनः –ನಾಶನಃ.** "णिनिः" (३-१-१३४)। **–नाशिन् –ನಾಶಿನ್.** स्त्रियां "ङीप्" (४-१-५)। **–नाशिनी –ನಾಶಿನೀ.**

**विषपुच्छ ವಿಷಪುಚ್ಛ** (वि०) ಬಾಲದಲ್ಲಿ ವಿಷವಿರುವ, ಬಾಲದಲ್ಲಿ ವಿಷವನ್ನು ಹೊಂದಿರುವ. विषं पुच्छे यस्य।

**विषपुष्पक ವಿಷಪುಷ್ಪಕ** (पुं०) ಮದನವೃಕ್ಷ, ಮಂಗಾರೆ ಗಿಡ. विषयुक्तं पुष्पमस्य। "कप्"।

**विषभिषज् ವಿಷಭಿಷಜ್** (पुं०) ವಿಷವೈದ್ಯ.

**विषम ವಿಷಮ** (पुं०) 1. ವಿಷ್ಣು, ಸುಹೃದಯರಲ್ಲಿ ಕ್ಷೇಮಂಕರನಾಗಿಯೂ ಕುಟಿಲಹೃದಯರಲ್ಲಿ ಭಯಂಕರನಾಗಿಯೂ ಇರುವುದರಿಂದ ಪರಮಾತ್ಮನು ವಿಷಮನಾದನು. "भीतिक्षेमकरत्वाद्धि कुटिलाकुटिलात्मसु। विषमः स तु विख्यातः" इति निरुक्तिः। 2. ಬೆಸರಾಶಿ, ಮೇಷ ಮೊದಲಾದ ರಾಶಿಗಳಲ್ಲಿ ಅಯುಗ್ಮರಾಶಿ. 1 3 5 7 9 ಮತ್ತು 11 ನೆಯ ರಾಶಿಗಳು. (ಮೇಷ ಮಿಥುನ ಸಿಂಹ ತುಲಾ ಧನುಸ್ಸು ಮತ್ತು ಕುಂಭ ರಾಶಿಗಳು). 3. ಒಂದು ಜಾಠರಾಗ್ನಿ. ಜಾಠರಾಗ್ನಿಯು (1) मन्दः (2) तीक्ष्णः (3) विषमः ಮತ್ತು (4) समः ಎಂದು ನಾಲ್ಕು ವಿಧ. ವಿಷಮಜಾಠರಾಗ್ನಿಯು ವಾತದಿಂದ ಉಂಟಾದ ರೋಗಗಳನ್ನೂ ತೀಕ್ಷ್ಣವು ಪಿತ್ತದಿಂದ ಸಂಭವಿಸಿದ ರೋಗಗಳನ್ನೂ ಪರಿಹರಿಸುವುದು. 4. ಅರ್ಥಾಲಂಕಾರದ ಒಂದು ಭೇದ. ಇದು ಮೂರು ವಿಧ. (1) ಅನುರೂಪವಲ್ಲದ ಎರಡು ವಸ್ತುಗಳನ್ನು ಒಂದು ಕಡೆ ಸೇರಿಸಿ ವರ್ಣಿಸುವುದು **ವಿಷಮಾಲಂಕಾರ.** "विषमं वर्ण्यते यत्र घटनाननुरूपयोः"। उदा० "क्वेयं शिरीषमृदङ्गी क्व तादृङ्मदनज्वरः"। (2) ವಿರುದ್ಧವಾದ ಕಾರ್ಯೋತ್ಪತ್ತಿ ವರ್ಣನೆ. "विरूपकार्यस्योत्पत्तिरपरं विषमं मतम्"। उदा० "कीर्तिं प्रसूते धवलां श्यामा तव कृपाणिका"। (3) ಅನಿಷ್ಟಪ್ರಾಪ್ತಿಯ ವರ್ಣನೆ. "अनिष्टस्याप्यवाप्तिश्च तदिष्टार्थसमुद्यमात्"। उदा० "भक्ष्याशयाहिमञ्जूषां दष्ट्वाखुस्तेन भक्षितः" चन्द्रालोकः। (न०) 5. ಛಂದಃಶಾಸ್ತ್ರೋಕ್ತವಾದ ವೃತ್ತಗಳಲ್ಲಿ ಒಂದು ಭೇದ, ವಿಷಮವೃತ್ತ. ಶ್ಲೋಕದ ನಾಲ್ಕು ಪಾದಗಳಲ್ಲೂ ಭಿನ್ನಭಿನ್ನ ವೃತ್ತಲಕ್ಷಣಗಳಿರುವಲ್ಲಿ **ವಿಷಮವೃತ್ತ**ವಾಗುವುದು. "यस्य पादचतुष्केऽपि लक्ष्म भिन्नं परस्परम्। तदाहुर्विषमं वृत्तं छन्दःशास्त्रविशारदाः" वृ० र०। 6. ಕಷ್ಟದ ಪರಿಸ್ಥಿತಿ, ಅಪಾಯದ ಸ್ಥಿತಿ. "कुतस्त्वा कश्मलमिदं विषमे समुपस्थितम्" गीता २-२। 7. ಸಮವಾಗಿಲ್ಲದಿರುವಿಕೆ, ಒಂದೇ ಮಟ್ಟವಾಗಿಲ್ಲದಿರುವಿಕೆ. 8. ಕಡಿದಾಗಿರುವಿಕೆ. 9. ಸಮವಾಗಿರದ ಜಾಗ, ಹಳ್ಳತಿಟ್ಟುಗಳಿಂದ ಕೂಡಿದ ಸ್ಥಳ. (वि०) 10. ಹಳ್ಳತಿಟ್ಟಾಗಿರುವ, ಸಮವಾಗಿಲ್ಲದ. "रेवां द्रक्ष्यस्युपलविषमे विन्ध्यपादे विशीर्णाम्" मेघ० १-१९। 11. ಗೂಢವಾದ, ರಹಸ್ಯವಾದ, ದುರವಗಾಹವಾದ, ಕಷ್ಟದಿಂದ ತಿಳಿಯಬಹುದಾದ. "विषमोऽपि विगाह्यते नयः कृततीर्थः पयसामिवाशयः" किरा० २-३। 12. ಬಹಳ ತೀವ್ರವಾದ, ಸಹಿಸಲು ಕಷ್ಟವಾದ. "व्यनक्त्यन्तस्तापं तदयमतिधीरोऽपि विषमम्" मालती० २-९। 13. ಭಯಂಕರವಾದ. "श्रुत्वा स्वाम्युपरोधरौद्रविषमानाध्माततूर्यस्वरान्" मुद्रा० २-२१। 14. ಪ್ರತಿಕೂಲವಾದ. "आपदि येनापकृतं येन च हसितं दशासु विषमासु" पञ्चतं० ४-१७। 15. ಓರೆಯಾಗಿರುವ, ವಕ್ರವಾಗಿರುವ. "ईषत्तिर्यग्वलनविषमं कूणितप्रान्तमेतत्" मालती० ४-२। 16. ಸಮವಾಗಿಲ್ಲದ, ಹೆಚ್ಚು ಕಡಮೆಯಾದ. "भ्रातॄणामविभक्तानां यद्युत्थानं भवेत्सह। न पुत्रभागं विषमं पिता दद्यात्कथंचन" मनु० ९-२१५। 17. ಕಷ್ಟವಾದ, ತೊಂದರೆಯ. "कान्ताविश्लेषदुःखव्यतिकरविषमो यौवने चोपभोगः" भर्तृ० ३-३७। 18. ಇಕ್ಕಟ್ಟಾಗಿರುವ, ಪ್ರವೇಶಿಸಲು ಕಷ್ಟವಾದ. "विषमोऽपि विगाह्यते नयः कृततीर्थः पयसामिवाशयः" किरा० २-३। 19. ಪದೇ ಪದೇ ಬರುವ, ನಿಂತು ನಿಂತು ಬರುವ (ಜ್ವರ). (अव्य०) 20. ಎಲ್ಲಾಭಾಗದಲ್ಲೂ ಏಕರೀತಿಯಾಗಿಲ್ಲದೆ, ಒಂದೊಂದು ಭಾಗದಲ್ಲಿ ಒಂದೊಂದು ರೀತಿಯಾಗಿ. "तेषां तताम विषमग्रथितो विभागः" मालती० ९-४५। 21. ಭಯಂಕರವಾಗಿ. 22. ಹಳ್ಳತಿಟ್ಟಾಗಿ. 23. ಬೆಸನಾಗಿ, ಅಸಮವಾಗಿ. 24. ಅಸಮಾನವಾಗಿ, ಹೆಚ್ಚು ಕಡಮೆಯಾಗಿ.

25. ಬಹಳ ಗೂಢವಾಗಿ, ರಹಸ್ಯವಾಗಿ. 26. ಪ್ರತಿಕೂಲವಾಗಿ. 27. ವಕ್ರವಾಗಿ ಇತ್ಯಾದಿ.

**विषमच्छद** ವಿಷಮಚ್ಛದ (ಪುಂ) ಏಳಿಲೆ ಬಾಳೆಗಿಡ.

**विषमज्वर** ವಿಷಮಜ್ವರ (ಪುಂ) ಮಧ್ಯೆ ಮಧ್ಯೆ ಕಡಮೆಯಾಗಿ ಮತ್ತೆ ಮತ್ತೆ ಬರುವ ಜ್ವರ.

**विषमनेत्र** ವಿಷಮನೇತ್ರ (ವಿ೦) ಪರಮೇಶ್ವರ, ಪರಶಿವ. विषममयुग्मं नयनमस्य। –लोचन: –ಲೋಚನಃ.

**विषमविभाग** ವಿಷಮವಿಭಾಗ (ಪುಂ) ಹೆಚ್ಚುಕಡಮೆಯಾದ ಭಾಗ.

**विषमस्थ** ವಿಷಮಸ್ಥ (ವಿ೦) ಬಹಳ ಕಷ್ಟದ ಪರಿಸ್ಥಿತಿಯಲ್ಲಿರುವ. विषमे तिष्ठति – ष्ठा (गतिनिवृत्तौ) "क:" (३-२-४)।

**विषमाक्ष** ವಿಷಮಾಕ್ಷ (ಪುಂ) ಪರಮೇಶ್ವರ, ಪರಶಿವ. विषममयुग्ममक्षि यस्य। –ईक्षण: –ಈಕ್ಷಣ.

**विषमायुध** ವಿಷಮಾಯುಧ (ಪುಂ) ಮನ್ಮಥ. विषमाण्यायुधानि अस्य।

**विषय** ವಿಷಯ (ಪುಂ) 1. ಜ್ಞಾನೇಂದ್ರಿಯಗಳಿಂದ ತಿಳಿಯಲ್ಪಡುವ ವಸ್ತು, –ದ್ರವ್ಯ.

| | |
|---|---|
| ಚಕ್ಷುರಿಂದ್ರಿಯದಿಂದ | ರೂಪ |
| ಶ್ರೋತ್ರೇಂದ್ರಿಯದಿಂದ | ಶಬ್ದ |
| ಘ್ರಾಣೇಂದ್ರಿಯದಿಂದ | ಗಂಧ |
| ಜಿಹ್ವೇಂದ್ರಿಯದಿಂದ | ರಸ |
| ತ್ವಗಿಂದ್ರಿಯದಿಂದ | ಸ್ಪರ್ಶ. |

ಇವು ಇಂದ್ರಿಯಾರ್ಥ (ವಿಷಯ) ಗಳು. "रूपं शब्दो गन्धरसस्पर्शाश्च विषया अमी" अम०। विसिन्वन्ति इन्द्रियार्थान् निबध्नन्ति – वि + षिञ् (बन्धने) "अच्" (३-१-१३४)। षत्वम् (८-३-१७०)। 2. ದೇಶ, ಜನಪದ. "विजिग्ये विषमांस्तत्र विषयान् सत्वमास्थित:" याद० २२-२१६। 3. ಭೋಗ, ಇಂದ್ರಿಯಗಳ ಸುಖಾನುಭವ. "शैशवेऽभ्यस्तविद्यानां यौवने विषयैषिणाम्" रघु० १-८। 4. ಆಶ್ರಯ, ಆಸರೆ, ಅವಲಂಬನ. 5. ಉದ್ದೇಶ, ಗುರಿ. "कामं न तिष्ठति मदाननसंमुखीना भूयिष्ठमन्यविषया न तु दृष्टिरस्या:" शाकु० १-२७। 6. ವಿಷಯ, ವಸ್ತು. ಗ್ರಂಥದ ವಿಷಯ, ಭಾಷಣದ ವಿಷಯ, ನಿರೂಪಿಸಬೇಕಾದ ವಿಷಯ ಇತ್ಯಾದಿ. 7. ಸ್ಥಳ, ಜಾಗ, ಪ್ರದೇಶ. "परिसरविषयेषु लीढमुक्ता: हरिततृणोद्गमशङ्कया मृगीभि:" किरा० ५-३८। 8. ಒಂದು ವಸ್ತುವಿನ ಅಥವಾ ಒಂದು ವ್ಯಕ್ತಿಯ ಸಂಬಂಧ, –ಕುರಿತಾದ. "या तत्र स्याद्युवतिविषये सृष्टिराद्येव धातु:" मेघ० २-१९। 9. ಗೋಚರವಾಗುವುದು, ಅರಿವಾಗುವುದು. "मनोरथस्याविषयं मनोविषयमात्मन:" कुमा० ६-१७। 10. ಲಕ್ಷ್ಯ, ಗುರಿ. "शस्त्रेणापि हि तेन किं न विषयो जायेत यस्येदृश:" उ० रा० ५-१९। 11. ಕಾರ್ಯ, ವ್ಯವಹಾರ. "सर्वत्रौदरिकस्याभ्यवहार्यमेव विषय:" विक्र० ३। 12. ಆರೋಪಕ್ಕೆ ಆಶ್ರಯವಾದ ವ್ಯಕ್ತಿ ಅಥವಾ ವಸ್ತು. "गौर्वाहीक:" ಎಂಬಲ್ಲಿ ವಾಹೀಕನಲ್ಲಿ ಗೋತ್ವವನ್ನು ಆರೋಪಿಸಿರುವುದರಿಂದ ವಾಹೀಕನು ಆರೋಪಕ್ಕೆ ಆಶ್ರಯನು. 13. (ಮೀಮಾಂಸಾಶಾಸ್ತ್ರದಲ್ಲಿ) ಮೇಲುನೋಟಕ್ಕೆ ತೋರುವ ಸಂದಿಗ್ಧವಾದ ಅರ್ಥ. "आपातत: प्रतीत: संदिग्धोऽर्थो विषय:" जैमि० न्याय०। ಇದು ಐದು ಅಧಿಕರಣಗಳಲ್ಲೊಂದು. "विषयो विशयश्चैव पूर्वपक्षस्तथोत्तरम्। निर्णयश्चेति शास्त्रेऽस्मिन् पञ्चाधिकरणं स्मृतम्"।

**विषयिन्** ವಿಷಯಿನ್ (ಪುಂ) 1. ರಾಜ, ದೊರೆ. विषयोऽस्यास्ति "इनि:" (५-२-११५)। 2. ಕಾಮ, ಮನ್ಮಥ. 3. ಪ್ರಪಂಚದ ವ್ಯಕ್ತಿ, ಜಗತ್ತಿನಲ್ಲಿ ಖ್ಯಾತಿಪಡೆದ ವ್ಯಕ್ತಿ. 4. ಇಂದ್ರಿಯ. (ವಿ೦) 5. ವಿಷಯಾಪೇಕ್ಷೆಯುಳ್ಳವನು. ವಿಷಯಲಂಪಟ, ಭೋಗದಲ್ಲಿ ಆಸೆಯುಳ್ಳವನು. "विषयी स्यात् पुमान् राज्ञि वैषयिकजनेऽपि च। इन्द्रिये कामदेवे च विषयासक्तपूरुषे" मेदि०। 6. ರೂಪಕಾಲಂಕಾರದಲ್ಲಿ ವಿಷಯ (ಉಪಮೇಯ) ದಲ್ಲಿ ಆರೋಪಿಸಲ್ಪಡುವ ಉಪಮಾನ (ವಿಷಯಿ).

**विषलता** ವಿಷಲತಾ (ಸ್ತ್ರೀ೦) ಹಾವುಮೆಕ್ಕೆ.

**विषविद्या** ವಿಷವಿದ್ಯಾ (ಸ್ತ್ರೀ೦) ವಿಷವನ್ನು ಹೋಗಲಾಡಿಸುವ ಮಂತ್ರ.

**विषवृक्ष** ವಿಷವೃಕ್ಷ (ಪುಂ) ವಿಷದಿಂದ ತುಂಬಿದ ವೃಕ್ಷ, ವಿಷಪ್ರಧಾನವಾದ ವೃಕ್ಷ. "विषवृक्षोऽपि संवर्ध्य स्वयं छेत्तुमसाम्प्रतम्" कुमा० २-५५। –द्रुम: –ದ್ರುಮಃ. "श्रितासि चन्दनभ्रान्त्या दुर्विपाकं विषद्रुमम्" उ० रा० १-४६।

**विषवैद्य** ವಿಷವೈದ್ಯ (ಪುಂ) ವಿಷವನ್ನು ಇಳಿಸುವ ವೈದ್ಯ, –ಪಂಡಿತ. विषस्य वैद्य:।

**विषशूक** ವಿಷಶೂಕ (ಪುಂ) ಕಣಜದ ಹುಳ.

**विषहर** ವಿಷಹರ (ವಿ೦) ವಿಷವನ್ನು ಹೋಗಲಾಡಿಸುವ ಔಷಧ. विषस्य हर:।

**विषहरा** ವಿಷಹರಾ (ಸ್ತ್ರೀ೦) ಮನಸಾದೇವಿ, ಜರತ್ಕಾರುವಿನ ಪತ್ನಿ.

**विषा** ವಿಷಾ (स्त्री०) ಅತಿಬಜೆ.

**विषाण** ವಿಷಾಣ (त्रि०) 1. ಪಶುವಿನ ಕೊಂಬು. वि+अस (भुवि) "चानश्" (३-२-१२९)। अल्लोपः (६-४-१११)। "नस्यागृहीतोऽपि धुवन् विषाणयोर्युगं ससूत्कारविवर्तितत्रिकः" माघ० १२-१०। 2. ಆನೆಯ ದಂತ. "न जातु वैनायकमेकमुद्धृतं विषाणमद्यापि पुनः प्ररोहति" माघ० १-६०। 3. ವರಾಹದ ಹಲ್ಲು.

**विषाणिन्** ವಿಷಾಣಿನ್ (पुं०) 1. ಕೊಂಬುಗಳಿರುವ ಹಸು ಎಮ್ಮೆ ಹೋತ ಮುಂತಾದ ಪ್ರಾಣಿ. विषाण "इनिः" (५-२-११५)। 2. ಗಜ, ಆನೆ. "भग्नो निवासोऽयमिहास्य पुष्पैः सदा नतो येन विषाणिनागः" माघ० ४-६३। (वि०) 3. ಕೊಂಬುಗಳಿರುವ, ಕೊಂಬುಗಳಿಂದ ಕೂಡಿರುವ.

**विषाद** ವಿಷಾದ (पुं०) 1. ಬಲ ಕಡಮೆಯಾಗುವುದು, ಶಕ್ತಿಕುಂದುವುದು. वि + षद्लृ (विशरणादौ) "घञ्" (३-३-१८)। "नीवीबन्धोच्छ्वसनमधरस्पन्दनं दोर्विषादः" मालती० २-५। 2. ದುಃಖ. "एषापि प्रियेण विना गमयति रजनीं विषाददीर्घतराम्" शाकु० ५-१५। 3. ಉತ್ಸಾಹಭಂಗ, ನಿರಾಶೆ. "विषादलुप्तप्रतिपत्ति विस्मितं कुमारसैन्यं सपदि स्थितं च तत्" रघु० ३-४०। 4. ಮಂಕು.

**विषादिन्** ವಿಷಾದಿನ್ (वि०) 1. ನಿರಾಶನಾದ, ಎದೆ ಗುಂದಿದ. 2. ದುಃಖದಿಂದ ಕೂಡಿದ. विषादोऽस्यास्ति "इनिः" (५-२-११५)। 3. ಶಕ್ತಿಕುಂದಿದ.

**विषु** ವಿಷು (अव्य०) ಸಾಮ್ಯ, ಸಮಾನತೆ, ಹೆಚ್ಚುಕಡಮೆ ಯಿಲ್ಲದಿರುವುದು. विषु साम्ये अव्ययम्।

**विषुण** ವಿಷುಣ (पुं०) 1. ಸಮವಾದ ರಾತ್ರಿಹಗಲುಗಳುಳ್ಳ ಕಾಲ. विषु साम्यमस्मिन्नस्ति—"नः" (५-२-१००)। 2. ನಾನಾರೂಪ. विषु अञ्चति—विष्वङ् अस्यास्ति—विषु+अञ्चु मत्वर्थे "नः" उत्तरपदलोपश्च (वा० ५-२-१००)।

**विषुव** ವಿಷುವ (न०) ರಾತ್ರಿ ಹಗಲು ಸಮವಾಗಿರುವ ಕಾಲ. विषु साम्यमस्यास्ति "वः" (वा० ५-२-१०९)। ಮೇಷ ಮತ್ತು ತುಲಾ ಸಂಕ್ರಮಣಗಳಲ್ಲಿ ರಾತ್ರಿ ಹಗಲು ಸಮವಾಗಿರುವುವು.

**विषुवत्** ವಿಷುವತ್ (न०) ರಾತ್ರಿ ಹಗಲು ಸಮವಾಗಿರುವ ಕಾಲ, ಮೇಷ ಮತ್ತು ತುಲಾ ಸಂಕ್ರಮಣಗಳಲ್ಲಿ ರಾತ್ರಿ ಮತ್ತು ಹಗಲು ಸಮವಾಗಿರುವುವು.

**विषूचिका** ವಿಷೂಚಿಕಾ (स्त्री०) ಕಾಲರಾವ್ಯಾಧಿ, ವಾಂತಿ ಭೇದಿ ರೋಗ.

**विष्कम्भ** ವಿಷ್ಕಂಭ (पुं०) 1. ಇಪ್ಪತ್ತೇಳು ಯೋಗಗಳ ಲ್ಲೊಂದು. ಇದು ಮೊದಲನೆಯ ಯೋಗ. ಶುಭಕಾರ್ಯ ಗಳಲ್ಲಿ ಈ ವಿಷ್ಕಂಭ ಯೋಗದ ಮೊದಲ ಐದು ಘಳಿಗೆ ತ್ಯಾಜ್ಯ. 2. ಪ್ರತಿಬಂಧ, ಅಡ್ಡಿ, ತಡೆ, ಅಡಚಣೆ. 3. ಬಾಗಿಲಿನ ಅಗುಳಿ, ಅಡ್ಡಪಟ್ಟಿ. 4. ವಿಸ್ತಾರ. 5. ನಾಟಕಾದಿ ರೂಪಕಗಳ ಒಂದು ಅಂಗ. ವೃತ್ತ (ಹಿಂದೆ ನಡೆದ) ಮತ್ತು ವರ್ತಿಷ್ಯಮಾಣ (ಮುಂದೆ ನಡೆಯುವ) ಕಥೆಯನ್ನು ಸಂಕ್ಷೇಪವಾಗಿ ತಿಳಿಸುವುದು ವಿಷ್ಕಂಭ. ಅಂಕದ ಪ್ರಾರಂಭದಲ್ಲಿರಬೇಕು. ಮಧ್ಯಮ ಪಾತ್ರದಿಂದ ಸೂಚಿಸು ವುದು ಶುದ್ಧ ವಿಷ್ಕಂಭ. ಮಧ್ಯಮ ಮತ್ತು ನೀಚ ಪಾತ್ರ ಗಳಿಂದ ಸೂಚಿಸುವುದು ಸಂಕೀರ್ಣ (ಮಿಶ್ರ) ವಿಷ್ಕಂಭ. "वृत्तवर्तिष्यमाणानां कथांशानां निदर्शकः। संक्षिप्तार्थस्तु विष्कम्भः आदावङ्कस्य दर्शितः" सा० द० ६-५५। "विष्कम्भो योगभेदे स्याद्विस्तारप्रतिबन्धयोः। रूपकाङ्गप्रभेदे च बन्धभेदे च योगिनाम्" मेदि०। 6. ಯೋಗಾ ಭ್ಯಾಸದ ಒಂದು ಬಂಧ.

**विष्कम्भित** ವಿಷ್ಕಂಭಿತ (वि०) ತಡೆಯಲ್ಪಟ್ಟ.

**विष्कम्भिन्** ವಿಷ್ಕಂಭಿನ್ (पुं०) ಅಗುಳಿ, ಬಾಗಿಲಿನ ಅಡ್ಡ ಪಟ್ಟಿ. विष्कम्नाति—वि+स्कम्भु (रोधने) "णिनिः" (३-१-१३४)। षत्वम् (८-३-७७)।

**विष्किर** ವಿಷ್ಕಿರ (पुं०) 1. ಪಕ್ಷಿ, ಹಕ್ಕಿ. विकिरति—वि + कॄ (विक्षेपे) "कः" (३-१-१३५)। सुडागमः (६-१-१५०)। षत्वम् (८-३-७०)। "छायापस्किरमाणविष्किरमुखव्याकृष्टकीटत्वचः" उ० रा० २-९। 2. ಕುಕ್ಕುಟ, ಕೋಳಿ.

**विष्ट** ವಿಷ್ಟ (वि०) ಪ್ರವೇಶಿಸಿದ, ಒಳಕ್ಕೆ ಹೋದ. विश (प्रवेशने) "क्तः" (३-४-७२)।

**विष्टप** ವಿಷ್ಟಪ (न०) ಭುವನ, ಲೋಕ, ಜಗತ್ತು. विशन्त्यत्र—विश (प्रवेशने) "कपन्" (उ० ३-१४५)। निपा०। "सुराः समभ्यर्थयितार एते कार्यं त्रयाणामपि विष्टपानाम्" कुमा० ३-२०।

**विष्टब्ध** ವಿಷ್ಟಬ್ಧ (वि०) 1. ತಡೆಯಲ್ಪಟ್ಟ, ಅಡಚಣೆ ಯುಂಟುಮಾಡಲ್ಪಟ್ಟ. वि + स्तम्भु (रोधने) "क्तः" (३-२-१०२)। 2. ಆಕ್ರಮಿಸಲ್ಪಟ್ಟ. 3. ತಡೆದು ನಿಲ್ಲಿಸ ಲ್ಪಟ್ಟ, ಚಲಿಸದಿರುವಂತೆ ಮಾಡಲ್ಪಟ್ಟ.

**विष्टम्भ** ವಿಷ್ಟಂಭ (पुं०) 1. ಆಕ್ರಮಣ वि + स्तम्भु (रोधने) "घञ्" (३-३-१८)। "प्रविकर्षनिनाद-

भिन्नरन्ध्रः पदविष्टम्भनिपीडितस्तदानीम्" किरा० १३-१६। 2. ತಡೆದು ನಿಲ್ಲಿಸುವುದು. 3. ಅಡ್ಡಿಪಡಿಸುವುದು, ಪ್ರತಿಬಂಧಿಸುವುದು.

**विष्टर ವಿಷ್ಟರ** (पुं०) 1. ಆಸನ, ಪೀಠ. विस्तीर्यते— वि + स्तृ (आच्छादने) "स्तः" षत्वं च निपा० (८-३-९३)। "महामहानीलशिलारुचः पुरो निषेदिवान् कंसकृषः स विष्टरे" माघ० १-१६। 2. ವೃಕ್ಷ, ಮರ. 3. ದರ್ಭೆಯ ಮುಷ್ಟಿ. "विष्टरः कुशमुष्टौ स्यादासने च महीरुहे" मेदि०।

**विष्टरश्रवस् ವಿಷ್ಟರಶ್ರವಸ್** (पुं०) ಶ್ರೀಕೃಷ್ಣ, ಮಹಾವಿಷ್ಣು. विष्टरे अश्वत्थवृक्षे श्रूयते—श्रु (श्रवणे) "असुन्" (उ० ४-१८९)। "इष्टनिर्वहणनिर्वृतचित्तं विष्टरश्रवसमभ्युपपेदे" याद० २१-४५।

**विष्टि ವಿಷ್ಟಿ** (स्त्री०) 1. ಕೂಲಿಯಿಲ್ಲದೆ ನಿರ್ಬಂಧದಿಂದ ಮಾಡುವ ಕೆಲಸ. विशति क्लेशम्—विश (प्रवेशने) "क्तिच्" (३-३-१७४)। 2. ಕಾರ್ಯ, ಕೆಲಸ. 3. ವೇತನ, ಕೂಲಿ. 4. ವ್ಯಾಪಿಸುವುದು, ಹರಡುವುದು. 5. ಪ್ರೇಷಣ, ಕಳುಹಿಸುವುದು. 6. ಹನ್ನೊಂದು ವಿಧ ಕರಣಗಳಲ್ಲೊಂದು. 7. ನರಕವಾಸ. (वि०) 8. ಕೂಲಿಗಾಗಿ ಕೆಲಸಮಾಡುವವನು.

**विष्ठल ವಿಷ್ಠಲ** (न०) ದೂರದ ಪ್ರದೇಶ. विदूरं स्थलम्। वि + स्थलम् सस्य षः (८-३-९६)।

**विष्ठा ವಿಷ್ಠಾ** (स्त्री०) 1. ಪುರೀಷ, ಮಲ. वितिष्ठते उदरे—वि+ष्ठा (गतिनिवृत्तौ) "कः" (३-१-१३६)। "गुरोर्हितं प्रकर्तव्यं वाङ्मनःकायकर्मभिः। अहिताचरणादेव विष्ठायां जायते क्रिमिः" तन्त्रसा०। 2. ಉದರ, ಹೊಟ್ಟೆ.

**विष्णु ವಿಷ್ಣು** (पुं०) 1. ಮಹಾವಿಷ್ಣು, ಶ್ರೀಮನ್ನಾರಾಯಣ. वेवेष्टि—विष्लृ (व्याप्तौ) "नुः" (उ० ३-३९)। "विमार्जयन्ती वृजिनात्पुनीते विष्णोरियं विक्रमवैजयन्ती" याद० १८-४३। विशति सर्वभूतानि विशन्ति सर्वभूतान्यस्मिन् इति वा। "यस्माद्विश्वमिदं सर्वं तस्य शक्त्या महात्मनः। तस्मादेवोच्यते विष्णुः विशधातोः प्रवेशनात्" विष्णुपु०।

ಪರಮಾತ್ಮನೊಬ್ಬನೇ ಬ್ರಹ್ಮ ವಿಷ್ಣು ಮಹೇಶ್ವರರೆಂಬ ನಾಮರೂಪಗಳನ್ನು ಹೊಂದಿ ಸೃಷ್ಟಿ ಸ್ಥಿತಿ ಮತ್ತು ಲಯ ರೂಪಕಾರ್ಯಗಳನ್ನು ನಡೆಸುವನು. "सृष्टिस्थित्यन्तकरणीं ब्रह्मविष्णुशिवात्मिकाम्। स संज्ञां याति भगवानेक एव जनार्दनः" विष्णुपु० १-२-६६।

"रजोगुणमयं चान्यद्रूपं तस्यैव धीमतः। चतुर्मुखः स भगवान् जगत्सृष्टौ प्रवर्तते॥ सृष्टं च पाति सकलं विश्वात्मा विश्वतोमुखः। सत्त्वं गुणमुपाश्रित्य विष्णुर्विश्वेश्वरः स्वयम्॥ अन्तकाले स्वयं देवः सर्वात्मा परमेश्वरः। तमोगुणं समाश्रित्य रुद्रः संहरते जगत्" कूर्मपु०।

ಮಾಯೆಯನ್ನು ದೂರಮಾಡಿ ಭಕ್ತರನ್ನು ಸಂಸಾರದಿಂದ ಬಿಡಿಸುವುದರಿಂದ ವಿಷ್ಣು. [ಇನ್ನೂ ವಿವರಕ್ಕೆ "नारायण" ಪದದಲ್ಲಿ ನೋಡಿ]. 2. ದ್ವಾದಶಾದಿತ್ಯರಲ್ಲೊಬ್ಬ ಆದಿತ್ಯ. "एकादशस्तथा त्वष्टा द्वादशो विष्णुरुच्यते" मा० आदि० ६५-१६। 3. ಅಗ್ನಿ. 4. ಒಬ್ಬ ಸ್ಮೃತಿಕಾರರು. 5. ಶ್ರವಣನಕ್ಷತ್ರ.

**विष्णुऋक्ष ವಿಷ್ಣುಋಕ್ಷ** (न०) ವಿಷ್ಣುದೇವತಾಕವಾದ ಶ್ರವಣನಕ್ಷತ್ರ. विष्णवधिदेवताकं ऋक्षम्। "उपोष्य द्वादशीं पुण्यां विष्णुऋक्षेण संयुताम्। एकादश्युद्भवं पुण्यं नरः प्राप्नोत्यसंशयः"।

**विष्णुक्रान्ता ವಿಷ್ಣುಕ್ರಾಂತಾ** (स्त्री०) ವಿಷ್ಣುಕ್ರಾಂತಿಗಿಡ. "विष्णुक्रान्ताऽपराजिता" अम०।

**विष्णुगुप्त ವಿಷ್ಣುಗುಪ್ತ** (पुं०) ಚಾಣಕ್ಯ. "विष्णुगुप्तस्तु कौण्डिन्यश्चाणक्यो द्रोमिणोऽङ्गुलः। वात्स्यायनो मन्दनागः पक्षिलस्वामिनावपि" त्रिकाण्ड०।

**विष्णुगृह ವಿಷ್ಣುಗೃಹ** (न०) ವಿಷ್ಣುದೇವಾಲಯ. विष्णवे निर्मितं गृहम्। **ವಿಷ್ಣುದೇವಾಲಯನಿರ್ಮಾಣದ ಫಲ**: "अहन्यहनि योगेन यजतो यन्महाफलम्। प्राप्नोति तत्फलं विष्णोर्यः कारयति मन्दिरम्॥ प्रशस्तदेशे भूभागे प्रशस्तं भवनं हरेः। कारयत्यखिलान् लोकान् स नरः प्रतिपद्यते"॥

**विष्णुचक्र ವಿಷ್ಣುಚಕ್ರ** (न०) ಹಸ್ತದಲ್ಲಿ ರೇಖಾರೂಪವಾದ ಚಕ್ರ. विष्णोः चक्रमिव। "विष्णुचक्रं करे चिह्नं सर्वेषां चक्रवर्तिनाम्। भवत्यव्याहतो यस्य प्रभावस्त्रिदशैरपि" विष्णुपु०।

**विष्णुदैवत ವಿಷ್ಣುದೈವತ** (न०) 1. ಶ್ರವಣನಕ್ಷತ್ರ. विष्णुर्दैवतं यस्य। (वि०) 2. ವಿಷ್ಣುದೇವತಾಕವಾದ. **–दैवत्यम् –ದೈವತ್ಯಮ್.**

**विष्णुदैवत्या ವಿಷ್ಣುದೈವತ್ಯಾ** (स्त्री०) 1. ಏಕಾದಶೀ ತಿಥಿ. विष्णुर्दैवत्यमस्याः। 2. ದ್ವಾದಶೀತಿಥಿ. "एकादशी द्वादशी च प्रोक्ता श्रीचक्रपाणिनः। त्रयोदशीत्वनङ्गस्य शिवस्योक्ता चतुर्दशी" स्मृतिः।

**विष्णुधर्मोत्तर** ವಿಷ್ಣುಧರ್ಮೋತ್ತರ (ನಂ) ವಿಷ್ಣು ಪ್ರಧಾನವಾದ ಧರ್ಮಗಳನ್ನು ಪ್ರತಿಪಾದಿಸುವ ಒಂದು ಗ್ರಂಥ.

**विष्णुपञ्जर** ವಿಷ್ಣುಪಂಜರ (ನಂ) ವಿಷ್ಣುಕವಚ, ಪಂಜರದಂತಿರುವ ವಿಷ್ಣುವಿನ ನಾಮ ಮತ್ತು ಆಯುಧಗಳು. ಇವುಗಳ ರಕ್ಷಣೆಯಲ್ಲಿರುವವನಿಗೆ ಯಾವರೀತಿಯ ಭಯವೂ ಇರುವುದಿಲ್ಲ. विष्णुरेव पञ्जरमिव। "प्रवक्ष्याम्यधुनात्वेतद्वैष्णवं पञ्जरं शुभम्। नमो नमस्ते गोविन्द चक्रं गृह्य सुदर्शनम्। प्राच्यां रक्षस्व मां विष्णो त्वामहं शरणं गतः॥ गदां कौमोदकीं गृह्य पद्मनाभामितद्युते। याम्यां रक्षस्व मां विष्णो त्वामहं शरणं गतः॥ ಇತ್ಯಾದಿ. वामनपु०।

**विष्णुपद** ವಿಷ್ಣುಪದ (ನಂ) 1. ಅಂತರಿಕ್ಷ, ಆಕಾಶ. 2. ವಿಷ್ಣುವಿನ ಪಾದ. विष्णोः पदम्। "वसुन्धरा विष्णुपदं द्वितीयमध्यारुरोहेव रजश्छलेन" रघु० १६-२८। 3. ವಿಷ್ಣುವಿನ ಸ್ಥಾನ—(1) ಶ್ರೀ ವೈಕುಂಠ. (2) ಕ್ಷೀರಸಮುದ್ರ. "अपुण्यपुण्योपरमे क्षीणाशेषाप्तिहेतवः। यत्र गत्वा न शोचन्ति तद्विष्णोः परमं पदम्॥ धर्मध्रुवाद्यास्तिष्ठन्ति यत्र ते लोकसाक्षिणः। तत्साष्टर्योत्पन्नयोगेद्धास्तद्विष्णोः परमं पदम्॥ यत्रैतदोतं प्रोतं च यद्भूतं सचराचरम्। भाव्यं च विश्वं मैत्रेय तद्विष्णोः परमं पदम्" विष्णुपु० २-८। 4. ಪದ್ಮ, ಕಮಲ. 5. ಒಂದು ಪುಣ್ಯತೀರ್ಥ. 6. ಭ್ರೂಮಧ್ಯಸ್ಥಾನ, ಹುಬ್ಬುಗಳ ಮಧ್ಯದ ಸ್ಥಾನ. "अरुन्धतीं ध्रुवं चैव विष्णोस्त्रीणि पदानि च। आसन्नमृत्युर्नो पश्येच्चतुर्थं मातृमण्डलम्॥ अरुन्धती भवेज्जिह्वा ध्रुवो नासाग्रमुच्यते। विष्णोः पदानि भ्रूमध्ये नेत्रयोर्मातृमण्डलम्" काशीखं०।

**विष्णुपदी** ವಿಷ್ಣುಪದೀ (ಸ್ತ್ರೀ०) 1. ಗಂಗಾನದಿ. विष्णोः पदं स्थानं यस्याः। "गङ्गा विष्णुपदी जह्नुतनया सुरनिम्नगा" अम०। 2. ವೃಷಭ ಸಿಂಹ ವೃಶ್ಚಿಕ ಮತ್ತು ಕುಂಭ ಸಂಕ್ರಾಂತಿಗಳು. "धनुर्मिथुनकन्यासु मीने च षडशीतयः। वृषवृश्चिककुम्भेषु सिंहे विष्णुपदी स्मृता"। ವಿಷ್ಣುಪದೀ ಸಂಕ್ರಾಂತಿಯಲ್ಲಿ ಸಂಕ್ರಮಣಕ್ಕೆ ಮುಂಚೆಯೂ ಅನಂತರವೂ ಹದಿನಾರು ಘಳಿಗೆಗಳ ಕಾಲ ಪುಣ್ಯಕಾಲ. "पुण्यायां विष्णुपद्यां च प्राक्पश्चादपि षोडश"।

**विष्णुपाद** ವಿಷ್ಣುಪಾದ (ಪುಂ) ವಿಷ್ಣುವಿನ ಪಾದ, ಗಂಗಾನದಿಯ ಉತ್ಪತ್ತಿಸ್ಥಾನವಾದ ಪರಮಾತ್ಮನ ಪಾದ. "विष्णुपादोदकोद्भूता ब्रह्मलोकादुपागता"।

**विष्णुपुराण** ವಿಷ್ಣುಪುರಾಣ (ನಂ) ವ್ಯಾಸಮಹರ್ಷಿ ವಿರಚಿತ ಅಷ್ಟಾದಶ ಪುರಾಣಗಳಲ್ಲೊಂದು. ಈ ಪುರಾಣವು ಪರಾಶರಮುನಿಯಿಂದ ಮೈತ್ರೇಯಋಷಿಗೆ ಉಪದೇಶಿಸಲ್ಪಟ್ಟು ವ್ಯಾಸಮಹರ್ಷಿಯಿಂದ ಪ್ರಚಾರಪಡಿಸಲ್ಪಟ್ಟಿತು. [ಇದರಲ್ಲಿ ಸಂಕ್ಷಿಪ್ತವಾದ ಜಗತ್ಸೃಷ್ಟಿಕ್ರಮ ಕಾಲನಿರ್ಣಯ ವರಾಹಾವತಾರ ದೇವಾದಿಸೃಷ್ಟಿ ಮನುಷ್ಯಸೃಷ್ಟಿ ಲಕ್ಷ್ಮಿಯು ಭೃಗುಮಹರ್ಷಿಯ ಪುತ್ರಿಯಾಗಿ ಅವತರಿಸಿದುದು ಪ್ರಹ್ಲಾದಚರಿತ್ರೆ ಸೂರ್ಯರಥಸ್ಥಿತಿವರ್ಣನೆ ಮನ್ವಂತರಾನುವರ್ಣನೆ ವ್ಯಾಸಕೃತವೇದವಿಭಾಗಕ್ರಮ ಯಯಾತಿ ಚರಿತ್ರೆ ಸ್ಯಮಂತಕೋಪಾಖ್ಯಾನ ಶಿಶುಪಾಲವಧೆ ಕಲಿಯುಗದಲ್ಲಿ ಜನಿಸುವ ರಾಜರ ವಂಶವರ್ಣನೆ ಶ್ರೀಕೃಷ್ಣಾವತಾರ ರುಕ್ಮಿಣೀವಿವಾಹ ಷೋಡಶಸ್ತ್ರೀಪರಿಗ್ರಹ ಕಲಿಯುಗದಲ್ಲಿ ಉಂಟಾಗುವ ಸಾಂಕರ್ಯ ಪ್ರಳಯಗಳು ಮುಂತಾದ ವಸ್ತುಗಳು ಪ್ರತಿಪಾದಿತವಾಗಿವೆ.] "तत्त्वेन यश्चिदचिदीश्वरतत्स्वभावभोगापवर्गतदुपायगतीरुदारः। सन्दर्शयन्निरममीत पुराणरत्नं तस्मै नमो मुनिवराय पराशराय" विष्णुपु०। ಈ ವಿಷ್ಣುಪುರಾಣದಲ್ಲಿ 23,000 ಗ್ರಂಥ (ಶ್ಲೋಕ) ಗಳಿವೆ.

**विष्णुभक्ति** ವಿಷ್ಣುಭಕ್ತಿ (स्त्री०) 1. ಪರಮಾತ್ಮನಲ್ಲಿಡುವ ನಿರತಿಶಯಪ್ರೀತಿ, ಯಾಥಾರ್ಥ್ಯಜ್ಞಾನದಿಂದ ಮಾಡುವ ಪರಮಾತ್ಮನ ಧ್ಯಾನ. 2. ಪರಮಾತ್ಮನ ಸೇವೆ. भज (सेवायाम्) "क्तिन्"। विष्णौ भक्तिः। ಅನವರತವೂ ಮಾಡುವ ಪರಮಾತ್ಮನ ಸೇವೆಯೇ ಭಕ್ತಿ. ಈ ಭಕ್ತಿಯೇ ಪರಮಾತ್ಮನ ಕೃಪೆಗೆ ಕಾರಣವಾಗುವುದು. ಪರಮಾತ್ಮನ ಕೃಪೆಯೊಂದು ಒದಗಿದರೆ ಸಕಲ ಇಷ್ಟಾರ್ಥಗಳೂ ಸಿದ್ಧಿಸುವುವು. "विष्णुभक्तिं प्रवक्ष्यामि यया सर्वमवाप्यते। यथा भक्त्या हरिस्तुष्येत्तथा नान्येन केनचित्॥ भज इत्येष वै धातुः सेवायां परिकीर्तितः। तस्मात्सेवा बुधैः प्रोक्ता भक्तिसाधनभूयसी॥ ते भक्ता लोकनाथस्य नामकर्मादिकीर्तने। मुञ्चन्त्यश्रूणि संहर्षात् ये च हृष्टतनूरुहाः॥ ವೇದಗಳೆಲ್ಲವನ್ನೂ ಮೈಗೂಡಿಸಿಕೊಂಡಿದ್ದರೂ ಸಕಲಶಾಸ್ತ್ರಪಾರಂಗತನಾಗಿದ್ದರೂ ಸರ್ವೇಶ್ವರನಾದ ವಿಷ್ಣುವಿನ ಭಕ್ತನಾಗದಿದ್ದರೆ ಅಂತಹವನು ಅಧಮಾಧಮನಾಗುವನು. "अन्तर्गतोऽपि वेदानां सर्वशास्त्रार्थवेद्यपि। यो न सर्वेश्वरे भक्तः तं विद्यात्पुरुषाधमम्॥ ಎಂತಹ ದುರಾಚಾರನಿರತನಾಗಿದ್ದರೂ ಅನನ್ಯಮನಸ್ಕನಾಗಿ ಪರಮಾತ್ಮನನ್ನು ಸೇವಿಸುವವನು ಪರಮಸಾಧುವೆಂದು ತಿಳಿಯಬೇಕು. "अपि चेत्सुदुराचारो भजते मामनन्यभाक्। साधुरेव स मन्तव्यः सम्यग्व्यवसितो

हि सः" गीता ९-३०। ಎಷ್ಟೇ ದಾನಧರ್ಮಾದಿಗಳನ್ನು ಮಾಡಿದರೂ ಗಂಧಪುಷ್ಪಾದಿಗಳಿಂದ ಆರಾಧಿಸಿದರೂ ಭಕ್ತಿಯೊಂದಿಲ್ಲದಿದ್ದರೆ ಪರಮಾತ್ಮನಿಗೆ ಸಂತೋಷವಾಗಲಾರದು. "न दानैर्विविधैर्दत्तैर्न पुष्पैर्नानुलेपनैः। तोषमेति महात्मासौ यथा भक्त्या जनार्दनः"॥

**विष्णुमाया ವಿಷ್ಣುಮಾಯಾ** (स्त्री०) 1. ದುರ್ಗಾದೇವಿ. 2. ಭಗವದಿಚ್ಛೆ, ಪರಮಾತ್ಮನ ಸಂಕಲ್ಪ. विष्णोर्माया। ಈ ಮಾಯೆಯು ಸತ್ತ್ವರಜಸ್ತಮೋಮಯವಾದುದು. ಇದು ಪರಮಾತ್ಮನಿಂದಲೇ ಸೃಷ್ಟಿಸಲ್ಪಟ್ಟುದು. ಇದು ಪರಮಾತ್ಮನ ಸ್ವರೂಪವನ್ನು ಮರೆಸುವುದು. ಪರಮಾತ್ಮನ ಪರತ್ವವೂ ಇದರಿಂದ ತಿಳಿಯದಂತಾಗುವುದು. ತ್ರಿಗುಣಾತ್ಮಕವಾದ ಈ ಮಾಯೆಯನ್ನು ದಾಟಲು ಯಾರಿಗೂ ಸಾಧ್ಯವಾಗಲಾರದು. ಭಕ್ತಿಯಿಂದ ಯಾರು ಪರಮಾತ್ಮನನ್ನು ಆಶ್ರಯಿಸುವರೋ ಅವರಿಗೆ ಮಾತ್ರ ಈ ಮಾಯೆಯಿಂದ ವಿಮುಕ್ತಿಯುಂಟು. "त्रिभिर्गुणमयैर्भावैरेभिः सर्वमिदं जगत्। मोहितं नाभिजानाति मामेभ्यः परमव्ययम्॥ दैवी ह्येषा गुणमयी मम माया दुरत्यया। मामेव ये प्रपद्यन्ते मायामेतां तरन्ति ते" गीता ७-१३, १४। ಪರಮಾತ್ಮನಾದ ವಿಷ್ಣುವಿನಿಂದ ಸೃಷ್ಟಿಯ ಕಾಲದಲ್ಲಿ ಸೃಷ್ಟಿಸಲ್ಪಟ್ಟ ಮಾಯೆಯಿಂದ ಜಗತ್ತೆಲ್ಲವೂ ಮೋಹಪರವಶವಾಯಿತು. "सृष्ट्वा मायां पुरा सृष्टौ विष्णुना परमात्मना। मोहितं मायया विश्वं विष्णुमाया च कीर्तिता" ब्रह्मवै०।

**विष्णुयशस् ವಿಷ್ಣುಯಶಸ್** (पुं०) ಕಲ್ಕ್ಯವತಾರವನ್ನು ತಾಳಿದ ಪರಮಾತ್ಮನ ತಂದೆ. विष्णुना यशो यस्य। ಈತನು ಬ್ರಹ್ಮಯಶಸ್ಸಿನ ಪುತ್ರ.

**विष्णुरथ ವಿಷ್ಣುರಥ** (पुं०) ಗರುಡ. विष्णोः रथः। **—वाहनम् —ವಾಹನಮ್, —वाह्यः —ವಾಹ್ಯಃ.**

**विष्णुरात ವಿಷ್ಣುರಾತ** (पुं०) ಪರೀಕ್ಷಿದ್ರಾಜ.

**विष्णुलोक ವಿಷ್ಣುಲೋಕ** (पुं०) ವೈಕುಂಠಲೋಕ. विष्णोर्लोकः।

**विष्णुवल्लभा ವಿಷ್ಣುವಲ್ಲಭಾ** (स्त्री०) 1. ತುಲಸಿ. विष्णोर्वल्लभा। 2. ಮಹಾಲಕ್ಷ್ಮೀ.

**विष्णुशिला ವಿಷ್ಣುಶಿಲಾ** (स्त्री०) ಸಾಲಗ್ರಾಮ ಶಿಲೆ. ಈ ಸಾಲಗ್ರಾಮಶಿಲೆಯಲ್ಲಿರುವ ಪರಮಾತ್ಮನು ಕಲಿಯುಗದ ಹತ್ತುಸಹಸ್ರ ವರ್ಷಗಳನಂತರ ಭೂಮಿಯನ್ನು ತ್ಯಜಿಸುವನು. "अयुताब्दे कलेर्यति त्यजेद्विष्णुशिला महीम्"।

**विष्णुशृङ्खलक ವಿಷ್ಣುಶೃಂಖಲಕ** (पुं०) ಏಕಾದಶೀ ಮತ್ತು ದ್ವಾದಶೀ ಎರಡು ತಿಥಿಗಳ ಸಂಬಂಧ ಹೊಂದಿರುವ ಶ್ರವಣನಕ್ಷತ್ರದ ಒಂದು ಯೋಗ, ಶ್ರವಣದ್ವಾದಶೀ ಯೋಗ. "द्वादशी श्रवणस्पृष्टा स्पृशेदेकादशीं यदा। स एव वैष्णवो योगो विष्णुशृङ्खलसंज्ञितः"।

**विष्फार ವಿಷ್ಫಾರ** (पुं०) ಧನುಸ್ಸಿನ ಟಂಕಾರ ಶಬ್ದ. वि + स्फुर (स्फुरणे) "घञ्" (३-३-१८)। आत्वम् (६-१-४७)। षत्वम् (८-३-७६)।

**विष्य ವಿಷ್ಯ** (वि०) 1. ವಿಷಪ್ರಯೋಗದಿಂದ ಕೊಲ್ಲಲ್ಪಡುವವನು. विषेण वध्यः "यत्" (४-४-९१)। "विष्यो विषेण यो वध्यः" अम०। 2. ವಿಷದಿಂದ ಕೊಳ್ಳಲ್ಪಟ್ಟ. विषेण क्रीतम् "यत्" (५-१-२)। 3. ವಿಷಕ್ಕೆ ಹಿತವಾದ. विषाय हितम् "यत्" (५-१-२)।

**विष्यन्द ವಿಷ್ಯಂದ** (पुं०) ಸ್ರವಿಸುವುದು, ಸೋರುವುದು. वि + स्यन्दू (प्रस्रवणे) "घञ्" (३-३-१८)।

**विष्व ವಿಷ್ವ** (वि०) ಹಿಂಸಿಸುವ, ಪೀಡಿಸುವ.

**विष्वक् ವಿಷ್ವಕ್, विष्वञ्च् ವಿಷ್ವಂಚ್** (अव्य०) 1. ಸುತ್ತಲೂ, ಎಲ್ಲಾ ಕಡೆಯಲ್ಲೂ. "मुनेः शरौघेण तदुग्ररंहसा बलं प्रकोपादिव विष्वगायता" किरा० १४-५९। (वि०) 2. ಎಲ್ಲಾ ಕಡೆಯಲ್ಲೂ ಹರಡಿರುವ. विष्वङ्मोहः स्थगयति कथं मन्दभाग्यः करोति" उ० रा० ३-३८।

**विष्वक्सेन ವಿಷ್ವಕ್ಸೇನ** (पुं०) 1. ವಿಷ್ಣು. इनेन स्वामिना सह वर्तत इति सेना सेश्वरा चमूः, तदुपलक्षिताः रक्षकवन्तो जन्तवोऽस्य। "इनेन स्वामिना साकं वर्तते सेन इत्यतः। विष्वग्रक्ष्यो जनो यस्य विष्वक्सेन इतीरितः" इति निरुक्तिः। "विष्वक्सेनो जनार्दनः" वि० स०। "साम्यमाप कमलासखविष्वक्सेनसेवितयुगान्तपयोधेः" माघ० १०-५५। 2. ವಿಷ್ಣುವಿನ ಮುಖ್ಯ ಪರಿಚಾರಕ, ವಿಷ್ಣುವಿನ ನಿರ್ಮಾಲ್ಯವನ್ನು ಹೊಂದಿರುವವನು.

**विष्वक्सेनप्रिया ವಿಷ್ವಕ್ಸೇನಪ್ರಿಯಾ** (स्त्री०) 1. ಮಹಾಲಕ್ಷ್ಮೀ. 2. ವಾರಾಹೀಗಿಡ, ಹಂದಿಗೆಡ್ಡೆ. "विष्वक्सेनप्रिया लक्ष्म्यां वाराह्यामपि योषिति" मेदि०।

**विष्वक्सेना ವಿಷ್ವಕ್ಸೇನಾ** (स्त्री०) ಪ್ರೇಂಖಣ ಗಿಡ. "विष्वक्सेना फलिन्यां तु विष्वक्सेनो जनार्दनः" मेदि०।

**विष्वणन ವಿಷ್ವಣನ** (वि०) ಭೋಜನ, ಊಟ.

**विष्वद्र्यञ्च् ವಿಷ್ವದ್ರ್ಯಂಚ್** (ವಿ೦) ಎಲ್ಲಾ ಕಡೆಗೂ ಹೋಗುವ, ಎಲ್ಲಾ ಕಡೆಯಲ್ಲೂ ಹರಡುವ. विश्वगञ्चति —विष्वक् + अञ्चु (गतौ) "क्विन्" अद्रयादेशः (६-३-९२)। स्त्रियां "ङीप्" (४-१-६)। **विष्वद्रीची ವಿಷ್ವದ್ರೀಚೀ.** "विष्वद्रीचीर्विक्षिपन् सैन्यवीचीराजावन्तः क्वापि दूरं प्रयातम्" माघ० १८-२५।

**विष्वाण ವಿಷ್ವಾಣ** (ಪು೦) ಊಟಮಾಡುವುದು, ತಿನ್ನುವುದು.

**विस ವಿಸ** (ನ೦) ಮೃಣಾಳ, ತಾವರೆಯ ದಂಟು. विस्यति— विस (प्रेरणे) "कः" (३-१-१३५)।

**विसंयुक्त ವಿಸಂಯುಕ್ತ** (ವಿ೦) ಬೇರೆಯಾದ, ಪ್ರತ್ಯೇಕವಾಗಿರುವ. वि + सम् + युजिर् (योगे) "क्तः" (३-४-७२)।

**विसंयोग ವಿಸಂಯೋಗ** (ಪು೦) ಬೇರೆಯಾಗುವುದು, ಪ್ರತ್ಯೇಕವಾಗುವುದು. वि + सम् + युजिर् (योगे) "घञ्" (३-३-१८)।

**विसंवाद ವಿಸಂವಾದ** (ಪು೦) 1. ವಿರುದ್ಧವಾಗಿ ಮಾತಾಡುವುದು, ವ್ಯತ್ಯಾಸವಾಗಿ ಹೇಳುವುದು. विरुद्धो वादः। ಹೇಳಿದ ಮಾತಿಗೆ ವ್ಯತ್ಯಾಸವಾಗಿ ಹೇಳಿ ಮಾತಿಗೆ ತಪ್ಪುವುದು ವಿಸಂವಾದ. 2. ಅಸಂಗತವಾಗಿ–, ಅಸಂಬದ್ಧವಾಗಿ–, ಹೊಂದಿಕೆಯಿಲ್ಲದೆ ಮಾತಾಡುವುದು. 3. ಎದುರು ಮಾತಾಡುವುದು, ನಿಷೇಧಿಸಿ ಮಾತಾಡುವುದು.

**विसंवादित ವಿಸಂವಾದಿತ** (ವಿ೦) 1. ವಿರುದ್ಧವಾಗಿ ಮಾತಾಡಿಸಲ್ಪಟ್ಟ. 2. ಅಸಂಗತವಾಗಿ ಮಾತಾಡಿಸಲ್ಪಟ್ಟ. 3. ನುಡಿದಂತೆ ನಡೆಯದೆ ಇರುವಂತೆ ಮಾಡಲ್ಪಟ್ಟ. वि + सम् + वद (व्यक्तायां वाचि) + णिच् "क्तः" (३-२-१०२) "रमणीयः खलु अवधिः विधिना विसंवादितः" शाकु० ६।

**विसंवादिन् ವಿಸಂವಾದಿನ್** (ವಿ೦) 1. ಹೇಳಿದ ಮಾತಿಗೆ ವಿರುದ್ಧವಾಗಿ ಆಡುವವನು. 2. ಅಸಂಗತವಾಗಿ–, ಸಂಬಂಧವಿಲ್ಲದೆ ಮಾತಾಡುವವನು. 3. ತಪ್ಪೆಂದು ಹೇಳಿ ಎದುರಿಸಿ ಮಾತಾಡುವವನು. विसंवदति — वि + सम् + वद (व्यक्तायां वाचि) "णिनिः" (३-२-७८)। 4. ವ್ಯತ್ಯಾಸವಾಗಿರುವ, ಭಿನ್ನವಾಗಿರುವ, ಅಂಗೀಕರಿಸಬಾರದ, ಒಪ್ಪಲಾರದ, ಹೊಂದಿಕೆಯಿಲ್ಲದ, ಹೋಲದಿರುವ. "वयोवेषविसंवादि रामस्य च तयोस्तदा। जनता प्रेक्ष्य सादृश्यं नाक्षिकम्पं व्यतिष्ठत" रघु० १५-६७।

**विसंष्ठुल ವಿಸಂಷ್ಠುಲ** (ವಿ೦) 1. ಅಸ್ಥಿರವಾದ, ಅಲುಗಾಡುವ, ಕಂಪಿಸುವ, ಕ್ಷೋಭೆಹೊಂದಿದ. "प्रतिकूलबुद्धरक्षितावचनविवर्धितावेगव्यतिकरविसंष्ठुला" मालती० ७। 2. ಸಮವಾಗಿಲ್ಲದ, ಹಳ್ಳತಿಟ್ಟಾದ. "विसंष्ठुलद्वीपतयोपलक्ष्यैर्वैरिव्रणैरेव विभाति रूढैः" याद० १८-९०।

**विसर ವಿಸರ** (ಪು೦) 1. ಸಮೂಹ, ಗುಂಪು. विसरति— वि + सृ (गतौ) "अच्" (३-१-१३४)। "घर्माम्भोविसरविवर्तनैरिदानीं मुग्धाक्ष्याः परिजनवारसुन्दरीणाम्" मालती० १-४०। 2. ಹರಡುವುದು, ಪ್ರಸರಿಸುವುದು. "विसरः प्रसरे व्रजे" मेदि०।

**विसर्ग ವಿಸರ್ಗ** (ಪು೦) 1. ದಾನ, ಕೊಡುಗೆ. वि + सृज (विसर्गे) "घञ्" (३-३-१८)। "आदानं हि विसर्गाय सतां वारिमुचामिव" रघु० ४-८६। 2. ತ್ಯಜಿಸುವುದು, ಬಿಡುವುದು. 3. ಚಿಮುಕಿಸುವುದು, ಸುರಿಯುವುದು, ಚೆಲ್ಲುವುದು. "पुरं नवीचक्रुरपां विसर्गान्मेघा निदाघग्लपितामिवोर्वीम्" रघु० १६-३८। 4. ಕಳುಹಿಸುವುದು. 5. ಸೃಷ್ಟಿಸುವುದು. 6. ಕಾಂತಿ, ಪ್ರಭೆ. 7. ಮಲವಿಸರ್ಜನೆ. 8. ವಿಸರ್ಜನೀಯ, ಕಂಠದಲ್ಲಿ ವಾಯುವಿನ ಎಳೆತದಿಂದ ಹುಟ್ಟುವ ಮಹಾಪ್ರಾಣಸೂಚಕವಾಗಿ ಗುರುತಿಸಲ್ಪಡುವ ಎರಡು ಬಿಂದುಗಳು (ಃ). "विसर्गो विसर्जनीये वर्चसि त्यागदानयोः" हेम०। 9. ಮೋಕ್ಷ, ಮುಕ್ತಿ, ಸಂಸಾರಪಾಶದಿಂದ ಬಿಡುಗಡೆ. 10. ದಕ್ಷಿಣದಿಕ್ಕಿನಲ್ಲಿ ಸೂರ್ಯನ ಸಂಚಾರ. "विसर्गस्तु पुमान् दाने त्यागे च मलनिर्गमे। विसर्जनीयेऽप्ययनभेदेऽपि च विभावसोः" मेदि०।

**विसर्जन ವಿಸರ್ಜನ** (ನ೦) 1. ದಾನ, ಕೊಡುಗೆ. वि+सृज (विसर्गे) "ल्युट्" (३-३-११५)। 2. ಪರಿತ್ಯಾಗ, ತ್ಯಜಿಸುವುದು. "श्रुतदेहविसर्जनं पितुश्चिरमश्रूणि विमुच्य राघवः" रघु० ८-२७। 3. ಕಳುಹಿಸಿಕೊಡುವುದು, ಬಿಟ್ಟುಕೊಡುವುದು. 4 ವರ್ಷಿಸುವುದು, ಸುರಿಯುವುದು. "समतया वसुवृष्टिविसर्जनैर्नियमनादसतां च नराधिपः" रघु० ९-६। 5. ಆವಾಹನೆಮಾಡಿದ ದೇವತೆಗಳನ್ನು ಕಳುಹಿಸಿಕೊಡುವುದು. 6. ಮಲಮೂತ್ರಗಳನ್ನು ಹೊರಗೆ ಬಿಡುವುದು. "न कदाचन कुर्वीत विण्मूत्रस्यविसर्जनम्" मनु० ४-४८। (ವಿ೦) 7. ಸೃಷ್ಟಿಸಲ್ಪಟ್ಟ. "त्वया सृष्टमिदं विश्वं धातुर्गुणविसर्जनम्" भाग० १०-१६-५७।

**विसर्जनीय ವಿಸರ್ಜನೀಯ** (ಪು೦) 1. ವಿಸರ್ಗ, ಕಂಠದಲ್ಲಿ ಹುಟ್ಟುವ ಮಹಾಪ್ರಾಣಸೂಚಕವಾದ ಎರಡು (ಃ)

ಬಿಂದುಗಳು. (वि०) 2. ಬಿಡಲ್ಪಡುವ, ತ್ಯಜಿಸಲ್ಪಡುವ. 3. ಕಳುಹಿಸಲ್ಪಡುವ. 4. ಕಳುಹಿಸಬೇಕಾದ. 5. ಕೊಡಲ್ಪಡುವ, ದಾನಮಾಡಲ್ಪಡುವ. 6. ತ್ಯಜಿಸಬೇಕಾದ. वि + सृज (विसर्गे) "अनीयर्" (३-१-९६)। "तव्य:" (३-१-९६)। **–स्रष्टव्यम् – ಸ್ರಷ್ಟವ್ಯಮ್.**

**विसर्जयत् ವಿಸರ್ಜಯತ್** (वि०) 1. ಬಿಡಿಸುತ್ತಿರುವ, ತ್ಯಜಿಸುವಂತೆ ಮಾಡುತ್ತಿರುವ. वि+सृज (विसर्गे)+णिच् "शतृ" (३-२-१२४)। 2. ರವಾನೆಮಾಡಿಸುತ್ತಿರುವ. 3. ದಾನಮಾಡಿಸುತ್ತಿರುವ. 4. ಕಳುಹಿಸುವಂತೆ ಮಾಡುತ್ತಿರುವ. स्त्रियां "ङीप्" (४-१-६)। **–यन्ती – ಯಂತೀ.**

**विसर्जित ವಿಸರ್ಜಿತ** (वि०) 1. ಕಳುಹಿಸಲ್ಪಟ್ಟ, ಹೊರಗೆ ಹೊರಡಿಸಲ್ಪಟ್ಟ. वि+सृज (विसर्गे)+णिच् "क्त:" (३-२-१०२)। "अथ विसर्जितराजलोक: "विश्रम्यताम्" इति स्वयमेवाभिधाय कतिपयाप्तराजपुत्रपरिवृतो नरपतिरभ्यन्तरं प्राविशत्" काद०। 2. ಬಿಡಲ್ಪಟ್ಟ, ತ್ಯಜಿಸಲ್ಪಟ್ಟ, ತೊರೆಯಲ್ಪಟ್ಟ. 3. ದಾನವಾಗಿ ಕೊಡಲ್ಪಟ್ಟ. 4. ಬೀಳ್ಕೊಟ್ಟು ಕಳುಹಿಸಲ್ಪಟ್ಟ. 5. ಸಾಗಹಾಕಲ್ಪಟ್ಟ, ರವಾನೆಮಾಡಲ್ಪಟ್ಟ.

**विसर्प ವಿಸರ್ಪ** (पुं०) 1. ಮೆಲ್ಲಗೆ ಸರಿದುಹೋಗುವುದು. वि + सृप्लृ (गतौ) "घञ्" (३-३-१८)। 2. ವೇಗದಿಂದ ಸುತ್ತಲೂ ಹರಡುವುದು, ಬೇಗ ಬೇಗನೆ ಎಲ್ಲಾ ಕಡೆಯೂ ವ್ಯಾಪಿಸುವುದು. "प्रमोहो निद्रा वा किमु विषविसर्प: किमु मद:" उ० रा० १-३५। 3. ತುರಿ, ಕಜ್ಜಿ, ಕಡಿತ, ನವೆಯಿಂದ ಕೂಡಿದ ಒಂದು ರೋಗ. ಇದು ಅಂಟುರೋಗವಾದುದರಿಂದ ಶರೀರದಲ್ಲೆಲ್ಲಾ ಹರಡುವುದು. **ಅತಿಯಾಗಿ ಉಪಯೋಗಿಸುವ** ಉಪ್ಪು ಹುಳಿ ಕಹಿ ಉಷ್ಣವಸ್ತುಗಳಿಂದ ಉಂಟಾಗುವ ಈ ರೋಗವು ಏಳು ವಿಧ. "लवणाम्लकटूष्णादिसेवनाद्दोषकोपत:। विसर्प: सप्तधा ज्ञेय: सर्वत: परिसर्पणात्"।

**विसर्पण ವಿಸರ್ಪಣ** (न०) 1. ಮೆಲ್ಲಗೆ ಸರಿದುಹೋಗುವುದು. वि+सृप्लृ (गतौ) भावे "ल्युट्" (३-३-११५)। "शोषणं सागरस्येव मेरोरिव विसर्पणम्। पतनं भास्करस्येव न मृष्ये द्रोणपातनम्" भा०। 2. ಹರಡುವುದು, ವ್ಯಾಪಿಸುವುದು. "प्रसरस्तु विसर्पणम्" अम०।

**विसर्पि ವಿಸರ್ಪಿ** (पुं०) ಕಜ್ಜಿ, ತುರಿ, ಕಡಿತ, ನವೆಯಿಂದ ಕೂಡಿದ ಒಂದು ರೋಗ.

**विसर्पिन् ವಿಸರ್ಪಿನ್** (वि०) ಎಲ್ಲಾಕಡೆಯಲ್ಲೂ ಹರಡುವ. "परितो विसर्पि परितापि भृशम्" माघ० ९-३६।

**विसल ವಿಸಲ** (न०) ಚಿಗುರು. "विसलं किसलं चाथोत्कलिका ज्ञारिते समे" त्रिकाण्ड०।

**विसार ವಿಸಾರ** (पुं०) 1. ಮತ್ಸ್ಯ, ಮೀನು. विशेषेण सरति—सृ (गतौ) "घञ्" (वा० ३-३-१७)। 2. ಮೆಲ್ಲಗೆ ಸರಿದುಹೋಗುವುದು. 3. ಹರಡಿಕೊಳ್ಳುವುದು, ವ್ಯಾಪಿಸುವುದು. "घञ्" (३-३-२८)।

**विसारिन् ವಿಸಾರಿನ್** (वि०) 1. ಹರಡುವ, ಸರ್ವತ್ರ ವ್ಯಾಪಿಸುವ. विसारोऽस्यास्ति "इनि:" (५-२-११५)। "विसारिकाञ्चीमणिरश्मिलब्धया मनोहरोच्छ्रायनितम्बशोभया" किरा० ८-२३। 2. ಮೆಲ್ಲಗೆ ಸರಿದುಹೋಗುವ. (पुं०) 3. ಮತ್ಸ್ಯ, ಮೀನು.

**विसूची ವಿಸೂಚೀ** (स्त्री०) ಅಜೀರ್ಣರೋಗ. विशेषेण सूचयति—सूच (पैशुन्ये)+णिच् "अच्" (३-१-१३४)। ಅಜೀರ್ಣದಿಂದ ವಾಯುವು ದೇಹದಲ್ಲಿ ಸೂಜಿಯಂತೆ ಚುಚ್ಚುತ್ತಾ ಪೀಡಿಸುವುದು. "सूचीभिरिव गात्राणि तुदन् सन्तिष्ठतेऽनल:। यस्याजीर्णेन सा वैद्यैर्विसूचीति निगद्यते"। स्वार्थे "कन्"। **–सूचिका – ಸೂಚಿಕಾ.** ವಿವೇಚನೆಯಿಲ್ಲದೆ ಅಧಿಕವಾಗಿ ಆಹಾರ ತೆಗೆದುಕೊಳ್ಳುವವರಿಗೆ ಈ ರೋಗ (ಕಾಲರಾ) ವು ಬರುವುದು. ಮಿತಾಹಾರಿಗಳಿಗೆ ಈ ವ್ಯಾಧಿಯು ಬರುವುದಿಲ್ಲ. "न तां परिमिताहारा लभन्ते विदितागमा:। मूढास्तामजितात्मानो लभन्तेऽशनलोलुपा:"।

**विसृजत् ವಿಸೃಜತ್** (वि०) 1. ಬಿಡುತ್ತಿರುವ, (ಬಾಣ) ಪ್ರಯೋಗಿಸುತ್ತಿರುವ. वि + सृज (विसर्गे) "शतृ" (३-२-१२४)। 2. ಹೊರಗೆ ಹೊರಡಿಸುತ್ತಿರುವ. ಹೊರಗೆ ಬಿಡುತ್ತಿರುವ. "विसृजन्तो मुखैर्ज्वालां भीमा इव भुजङ्गमा:" कुमा० १६-८।

**विसृत ವಿಸೃತ** (वि०) ವ್ಯಾಪಿಸಿರುವ, ಹರಡಿರುವ. वि+सृ (गतौ) "क्त:" (३-४-७२)। "तदभिमुखमनङ्गचापयष्टिविसृतगुणेव समुन्ननाम काचित्" किरा० १०-५३।

**विसृत्वर ವಿಸೃತ್ವರ** (वि०) 1. ಹರಡುವ ಸ್ವಭಾವದ. वि+सृ (गतौ) "क्वरप्" (३-२-१६३)। "विसृत्वरैरम्बुरुहां रजोभि: यमस्वसुश्चित्र इवोदभार:" माघ० ३-११। 2. ಮೆಲ್ಲಗೆ ಸರಿದುಹೋಗುವ.

**विसृमर ವಿಸೃಮರ** (वि०) ಮೆಲ್ಲಗೆ ಸರಿದುಹೋಗುವ. वि + सृ (गतौ) "क्मरच्" (३-२-१६०)।

**विसृष्ट ವಿಸೃಷ್ಟ** (वि०) 1. ತ್ಯಜಿಸಲ್ಪಟ್ಟ, ಬಿಡಲ್ಪಟ್ಟ. वि + सृज (विसर्गे) कर्म० "क्तः" (३-२-१०२)। "विसृष्टरागादधरान्निवर्तितः स्तनाङ्गरागारुणिताच्च कन्दुकात्" कुमा० ५-११। 2. ಕಳುಹಿಸಲ್ಪಟ್ಟ. "आप्तः कुमारानयनोत्सुकेन भोजेन दूतो रघवे विसृष्टः" रघु० ५-३९। 3. ದಾನಮಾಡಲ್ಪಟ್ಟ, ಕೊಡಲ್ಪಟ್ಟ. "ग्रामेष्वात्मविसृष्टेषु यूपचिह्नेषु यज्वनाम्" रघु० १-४४। 4. ಪರಿತ್ಯಜಿಸಲ್ಪಟ್ಟ, ತೊರೆದುಬಿಡಲ್ಪಟ್ಟ. 5. ಸೃಷ್ಟಿಸಲ್ಪಟ್ಟ. 6. ಹೊರಗೆ ಹೊರಡಿಸಲ್ಪಟ್ಟ, ಹೊರದೂಡಲ್ಪಟ್ಟ. 7. ವಿಸರ್ಜಿಸಲ್ಪಟ್ಟ, ಬಿಟ್ಟು ಕಳುಹಿಸಲ್ಪಟ್ಟ. "विसृष्टपार्श्वानुचरस्य तस्य पार्श्वद्रुमाः पाशभृता समस्य" रघु० २-९। 8. (ದೃಷ್ಟಿ) ಇಡಲ್ಪಟ್ಟ, (ನೋಟ) ಬೀರಲ್ಪಟ್ಟ. "उद्विग्नचञ्चलकटाक्षविसृष्टदृष्टिः" मृच्छ० १-१७। 9. ಬಿಡಲ್ಪಟ್ಟ, ಪ್ರಯೋಗಿಸಲ್ಪಟ್ಟ (ಬಾಣ). "विसृष्टाः सुभटै रुष्टैः व्योम व्यानशिरे शराः" कुमा० १६-८।

**विस्तर ವಿಸ್ತರ** (पुं०) 1. ಪದಗಳ ಬಾಹುಳ್ಯ, ಶಬ್ದದ ವಿಸ್ತರಣೆ, ಗ್ರಂಥದ ವಿಸ್ತರಣೆ. वि+स्तृञ् (आच्छादने) "अप्" (३-३-५७)। "सुविस्तरतरा वाचो भाष्यभूता भवन्तु मे" माघ० २-२४। 2. ವೇದಾಂಗ. "सान्दीपनेः सकृत्प्रोक्तं ब्रह्माधीत्य सविस्तरम्" भाग० ३-३-२। 3. ಪ್ರಣಯ, ಪ್ರೇಮ. 4. ವಿಸ್ತಾರ, ವಿಸ್ತರಿಸುವುದು, ದೊಡ್ಡದುಮಾಡುವುದು. "विस्तरेणात्मनो योगं विभूतिं च जनार्दन। भूयः कथय तृप्तिर्हि शृण्वतो नास्ति मेऽमृतम्" गीता १०-१८। "विस्तरो वाक्प्रपञ्चे स्याद्विस्तारे प्रणयेऽपि च" मेदि०। (वि०) 5. ಬಹಳ ಹೆಚ್ಚಾದ, ಬಹಳ ದೊಡ್ಡದಾದ. "अपेक्षितं परित्यज्य नीरसं वस्तु विस्तरम्। यदा संदर्शयेच्छेषमामुखानन्तरं तदा" सा० द० ६।

**विस्तार ವಿಸ್ತಾರ** (पुं०) 1. ವಿಟಪ, ಮರಗಿಡಗಳ ಶಾಖೆ, ರೆಂಬೆ. वि+स्तृञ् (आच्छादने) "घञ्" (३-३-३३)। 2. ಹಿರಿದಾಗುವುದು, ದೊಡ್ಡದಾಗುವುದು, ಪ್ರಸರಿಸುವುದು, ವಿಸ್ತಾರಣ, ಹರಡುವುದು. "मसृणमुकुलितानां प्रान्तविस्तारभाजाम्" मालती० १-३०। 3. ವೈಶಾಲ್ಯ, ಅಗಲ. "विलोकयन्त्यो वपुरापुरक्ष्णां प्रकामविस्तारफलं हरिण्यः" रघु० २-११। 4. ವಿವರ, ಎಲ್ಲಾ ವಿಷಯಗಳ ವಿವರಣೆ. "अनया दुहितृमनोरथसंपत्त्या कण्वोऽपि तावत् श्रुतविस्तारः क्रियताम्" शाकु० ७। 5. ಗಾತ್ರದ ಹೊರಭಾಗ, ಸುತ್ತಳತೆಯ ಪ್ರಮಾಣ, ಹೊರಮೈಯ ಎಲ್ಲೆಕಡೆಯ ಭಾಗ. "मध्ये श्यामः स्तन इव भुवः शेषविस्तारपाण्डुः" मेघ० १-१८।

**विस्तारित ವಿಸ್ತಾರಿತ** (वि०) ಹರಡಲ್ಪಟ್ಟ, ಬಿಚ್ಚಿಹಾಸಲ್ಪಟ್ಟ. वि + स्तृञ् (आच्छादने) + णिच् "क्तः" (३-२-१०२)। "विस्तारितं मकरकेतनधीवरेण स्त्रीसंज्ञितं बडिशमत्र भवाम्बुराशौ" भर्तृ० १-५३।

**विस्तीर्ण ವಿಸ್ತೀರ್ಣ** (वि०) 1. ಅಗಲವಾದ, ವಿಶಾಲವಾದ. वि+स्तृञ् (आच्छादने) "क्तः" (३-२-१०२)। "पर्णानि स्वर्णवर्णानि विस्तीर्णकिर्णलोचने" उद्भटः। 2. ದೊಡ್ಡದಾದ. "विस्तीर्णमायामवतीलोललोकनिरन्तरा" माघ० ११-४३। 3. ವಿಸ್ತಾರಹೊಂದಿದ, ಹರಡಿದ, ಪ್ರಸರಿಸಿದ.

**विस्तृत ವಿಸ್ತೃತ** (वि०) 1. ವಿಸ್ತರಿಸಲ್ಪಟ್ಟ. वि + स्तृञ् (आच्छादने) "क्तः" (३-२-१०२)। "तत्त्वं ब्रह्मपरं ज्योतिराकाशमिव विस्तृतम्" भाग०। 2. ದೊಡ್ಡದಾಗಿ ಮಾಡಲ್ಪಟ್ಟ. 3. ಅಗಲವಾಗಿ ಮಾಡಲ್ಪಟ್ಟ, ವಿಶಾಲವಾಗಿ ಮಾಡಲ್ಪಟ್ಟ.

**विस्तृति ವಿಸ್ತೃತಿ** (स्त्री०) 1. ವಿಸ್ತಾರ, ಅಗಲ. 2. ದೊಡ್ಡದಾಗಿರುವಿಕೆ. 3. ಹರಡುವಿಕೆ. वि + स्तृञ् (आच्छादने) "क्तिन्" (३-३-९४)।

**विस्पष्ट ವಿಸ್ಪಷ್ಟ** (वि०) ಸ್ಪಷ್ಟವಾದ, ಸ್ಫುಟವಾದ. वि + स्पश (बाधनस्पर्शनयोः) "क्तः" (३-२-१०२)।

**विस्फार ವಿಸ್ಫಾರ** (पुं०) ಧನುಸ್ಸಿನ ಟಂಕಾರ, ಬಿಲ್ಲಿನ ಶಬ್ದ. वि + स्फुर (स्फुरणे) "घञ्" (३-३-१८)। धातोरात्वम् (६-१-४७)। वा षत्वम् (८-३-७६)। **विष्फारः ವಿಷ್ಫಾರಃ.** "विष्फारो धनुषः स्वानः" अम०। 2. ಕಂಪನ, ನಡುಕ.

**विस्फारित ವಿಸ್ಫಾರಿತ** (वि०) 1. ನಡುಗಿಸಲ್ಪಟ್ಟ. वि+स्फुर (स्फुरणे) + णिच् "क्तः" (३-२-१०२)। 2. ಶಬ್ದಮಾಡಿಸಲ್ಪಟ್ಟ, ಟಂಕಾರವುಂಟುಮಾಡಲ್ಪಟ್ಟ. "विकृष्टविस्फारितचापमण्डलः" किरा० १४-३१। 3. ವಿವರಿಸಲ್ಪಟ್ಟ, ವಿಸ್ತರಿಸಿ ಹೇಳಲ್ಪಟ್ಟ.

**विस्फार्यमाण ವಿಸ್ಫಾರ್ಯಮಾಣ** (वि०) ಆಕೃಷ್ಟವಾದ, ಕಿವಿಯವರೆಗೂ ಎಳೆಯಲ್ಪಡುತ್ತಿರುವ, ಬಾಣವನ್ನು ಹೂಡಿ ಹೆದೆಯೇರಿಸಲ್ಪಡುತ್ತಿರುವ. वि+स्फुर (स्फुरणे) कर्म० "क्तः" (३-२-१०२)। "विस्फार्यमाणस्य ततो भुजाभ्यां भूतानि भर्त्रा धनुरन्तकस्य" किरा० १७-२४।

**विस्फुरित ವಿಸ್ಫುರಿತ** (वि०) 1. ಅಲುಗಾಡಿಸಲ್ಪಟ್ಟ, ಕದಲಿಸಲ್ಪಟ್ಟ. 2. ಚಂಚಲವಾದ, ತಿರುಗಿಸಲ್ಪಟ್ಟ. "रक्तविस्फुरितेक्षणम्"।

**विस्फुलिङ्ग ವಿಸ್ಫುಲಿಂಗ** (पुं०) 1. ಬೆಂಕಿಯ ಕಿಡಿ. "निर्ददाह नगरीमथ काशीं विस्फुलिङ्ग इव माधवदीप्तेः" याद० २१-४१। 2. ವಿಷದ ಒಂದು ಭೇದ. स्फुना अनुकरणशब्देन फूत्कारेण लिङ्गति—वि+लिगि (गतौ) "अच्" (३-१-१३४)। विशिष्टः स्फुलिङ्गः।

**विस्फूर्जथु ವಿಸ್ಫೂರ್ಜಥು** (पुं०) 1. ಸಿಡಿಲಿನ ಶಬ್ದ. 2. ಘರ್ಜನೆ, ಆರ್ಭಟ. वि+टुओ स्फूर्जा (वज्रनिर्घोषे) "अथुच्" (३-३-८९)। 3. ಸಿಡಿಲಿನಂತೆ ಉಂಟಾಗುವ ಆಕಸ್ಮಿಕ ಆಘಾತ. "ममैव जन्मान्तरपातकानां विपाकविस्फूर्जथुरप्रसह्यः" रघु० १४-६२। 4. ಉಕ್ಕಿ ಬರುವುದು, ಹೊಮ್ಮಿ ಬರುವುದು. "वेलानिलाय प्रसृता भुजङ्गा महोर्मिविस्फूर्जथुनिर्विशेषाः" रघु० १३-१२।

**विस्फूर्जित ವಿಸ್ಫೂರ್ಜಿತ** (नं०) 1. ಫಲ, ಪರಿಣಾಮ. वि + स्फूर्जा (वज्रनिर्घोषे) "क्तः" (३-३-११४)। 2. ಸಿಡಿಲಿನ ಶಬ್ದ. 3. ಘರ್ಜನೆ.

**विस्फोट ವಿಸ್ಫೋಟ** (पुं०) 1. ಹೊಪ್ಪೆ, ಕುರು. वि + स्फुटिर् (विशरण) कर० "घञ्" (३-३-१९)। 2. ಸಿಡುಬು, ಅಮ್ಮ. 3. ಮೈಮೇಲಿನ ಸಣ್ಣ ಗುಳ್ಳೆ, ಮೊಡವೆ.

**विस्मय ವಿಸ್ಮಯ** (पुं०) 1. ಆಶ್ಚರ್ಯ, ಸೋಜಿಗ, ಕೌತುಕ. वि + ष्मिङ् (ईषद्धसने) "अच्" (३-३-५६)। "विस्मयः क इव वा जयश्रिया नैव मुक्तिरपि ते दवीयसी" किरा० १३-४०। 2. ಗರ್ವ, ಅಹಂಕಾರ, ದರ್ಪ. "यज्ञोऽनृतेन क्षरति तपः क्षरति विस्मयात्" मनु० ४-२३७। ಆಶ್ಚರ್ಯಾರ್ಥಕ ವಿಸ್ಮಯವು ಅದ್ಭುತ ರಸದ ಸ್ಥಾಯಿಭಾವ. ಲೋಕೋತ್ತರ (ಶ್ರೇಷ್ಠ) ವಾದ ವಸ್ತುಗಳ ದರ್ಶನದಿಂದ ಹೃದಯದಲ್ಲಿ ಉಂಟಾಗುವ ವಿಕಾಸವು ವಿಸ್ಮಯ. ಇದೇ ಅದ್ಭುತರಸದ ಸ್ಥಾಯಿಭಾವ. "विविधेषु पदार्थेषु लोकसीमातिवर्तिषु। विस्फारश्चेतसो यस्तु स विस्मय उदाहृतः" सा० द०। (वि०) 3. ಗರ್ವವಿಲ್ಲದವನು, ಗರ್ವವನ್ನು ಬಿಟ್ಟಿರುವವನು. विगतः स्मयो गर्वो यस्य।

**विस्मयन ವಿಸ್ಮಯನ** (नं०) ಆಶ್ಚರ್ಯಪಡುವುದು. वि+ष्मिङ् (ईषद्धसने) भावे "ल्युट्" (३-३-११५)।

**विस्मयनीय ವಿಸ್ಮಯನೀಯ** (वि०) 1. ಆಶ್ಚರ್ಯಪಡಬೇಕಾದ. 2. ಆಶ್ಚರ್ಯಪಡಲು ಅರ್ಹವಾದ. वि+ष्मिङ् (ईषद्धसने) "अनीयर्" (३-१-९६)।

**विस्मयमान ವಿಸ್ಮಯಮಾನ** (वि०) ಆಶ್ಚರ್ಯಪಡುತ್ತಿರುವ. वि + ष्मिङ् (ईषद्धसने) "शानच्" (३-२-१२४)।

**विस्मयान्वित ವಿಸ್ಮಯಾನ್ವಿತ** (वि०) ಆಶ್ಚರ್ಯದಿಂದ ಕೂಡಿದವನು, ಆಶ್ಚರ್ಯಪಟ್ಟವನು. विस्मयेनान्वितः। "विलक्षो विस्मयान्वितः"। **–आकुलः –ಆಕುಲಃ, –आविष्टः –ಆವಿಷ್ಟಃ.**

**विस्मरण ವಿಸ್ಮರಣ** (नं०) ಮರೆವು, ವಿಸ್ಮೃತಿ. वि+स्मृ (चिन्तायाम्) भावे "ल्युट्" (३-३-११५)। "मय्येव विस्मरणदारुणचित्तवृत्तौ वृत्तं रहः प्रणयमप्रतिपद्यमाने" शाकु० ५-२३।

**विस्मरणीय ವಿಸ್ಮರಣೀಯ** (वि०) 1. ಮರೆಯಲ್ಪಡುವ. 2. ಮರೆಯಬೇಕಾದ. 3. ಮರೆಯಲು ಅರ್ಹವಾದ. 4. ಮರೆಯಲು ಶಕ್ಯವಾದ. वि+स्मृ (चिन्तायाम्) "अनीयर्" (३-१-९६)। "तव्यः"। **–स्मर्तव्यः –ಸ್ಮರ್ತವ್ಯಃ.**

**विस्मरत् ವಿಸ್ಮರತ್** (वि०) ಮರೆಯುವ, ವಿಸ್ಮೃತಿ ಹೊಂದುವ. वि + स्मृ (चिन्तायाम्) "शतृ" (३-२-१२४)। स्त्रियां "ङीप्" (४-१-६)। **–न्ती –ನ್ತೀ.**

**विस्मापन ವಿಸ್ಮಾಪನ** (पुं०) 1. ಕಾಮ, ಮನ್ಮಥ. 2. ಗಂಧರ್ವನಗರ. (नं०) 3. ಆಶ್ಚರ್ಯಪಡಿಸುವುದು. वि+ष्मिङ् (ईषद्धसने)+णिच् "ल्युट्" (३-३-११५)। (वि०) 4. ಆಶ್ಚರ್ಯಪಡಿಸುವವನು. 5. ವಂಚಕ, ಮೋಸಗಾರ. "विस्मापनः स्यात्कुहके गन्धर्वनगरे स्मरे" मेदि०। पुगागमाभावे **विस्मायनः ವಿಸ್ಮಾಯನಃ.**

**विस्मापनीय ವಿಸ್ಮಾಪನೀಯ** (वि०) 1. ಆಶ್ಚರ್ಯಪಡಿಸಲ್ಪಡುವ. 2. ಆಶ್ಚರ್ಯಪಡಿಸಬೇಕಾದ. वि + ष्मिङ् (ईषद्धसने) + णिच् "अनीयर्" (३-१-९६)।

**विस्मापयत् ವಿಸ್ಮಾಪಯತ್** (वि०) ಆಶ್ಚರ್ಯಪಡಿಸುತ್ತಿರುವ. वि + ष्मिङ् (ईषद्धसने) + णिच् "शतृ" (३-२-१२४)। "विस्मापयन् विस्मितमात्मवृत्तौ सिंहोरुसत्त्वं निजगाद सिंहः" रघु० २-३३।

**विस्मारण ವಿಸ್ಮಾರಣ** (नं०) ಮರೆಸುವುದು, ಮರೆಯುವಂತೆ ಮಾಡುವುದು. वि+स्मृ (चिन्तायाम्) + णिच् "ल्युट्" (३-३-११५)।

**विस्मारणीय ವಿಸ್ಮಾರಣೀಯ** (वि०) 1. ಮರೆಯು ವಂತೆ ಮಾಡಲ್ಪಡುವ. वि+स्मृ (चिन्तायाम्)+णिच् "अनीयर्" (३-१-९६)। "तव्यः"। **–स्मारयितव्यः –ಸ್ಮಾರಯಿತವ್ಯಃ.** 2. ಮರೆಯುವಂತೆ ಮಾಡಬೇಕಾದ. 3. ಮರೆಯುವಂತೆ ಮಾಡಲು ಅರ್ಹವಾದ.

**विस्मारयत् ವಿಸ್ಮಾರಯತ್** (वि०) ಮರೆಯುವಂತೆ ಮಾಡುತ್ತಿರುವ. वि + स्मृ (चिन्तायाम्) + णिच् "शतृ" (३-२-१२४)। स्त्रियां "ङीप्" (४-१-६)। **–न्ती –ನ್ತೀ.**

**विस्मारित ವಿಸ್ಮಾರಿತ** (वि०) ಮರೆಯುವಂತೆ ಮಾಡಲ್ಪಟ್ಟ, ಮರೆಸಲ್ಪಟ್ಟ. वि + स्मृ (चिन्तायाम्) + णिच "क्तः" (३-२-१०२)। "शिलीमुखैश्शौरिधनुर्विमुक्तैः विस्मारितान् पूर्वविकत्थनानि" यादं० २०-३०।

**विस्मार्य ವಿಸ್ಮಾರ್ಯ** (वि०) ನೆನಪಿಲ್ಲದಂತೆ ಮಾಡಲ್ಪಡುವ, ಮರೆಯುವಂತೆ ಮಾಡಲ್ಪಡುವ. वि + स्मृ (चिन्तायाम्) + णिच् "ण्यत्" (३-१-१२४)।

**विस्मित ವಿಸ್ಮಿತ** (वि०) 1. ಆಶ್ಚರ್ಯಪಟ್ಟಿರುವವನು. वि + ष्मिङ् (ईषद्धसने) "क्तः" (३-४-७२)। "तं विस्मितं धेनुरुवाच साधो मायां मयोद्भाव्य परीक्षितोऽसि" रघु० २-६२। 2. ಅಹಂಕಾರದಿಂದ ಕೂಡಿರುವವನು, ಗರ್ವವುಳ್ಳವನು.

**विस्मिति ವಿಸ್ಮಿತಿ** (स्त्री०) 1. ಆಶ್ಚರ್ಯ. वि + ष्मिङ् (ईषद्धसने) "क्तिन्" (३-३-९४)। 2. ಗರ್ವ. ಅಹಂಕಾರ.

**विस्मृत ವಿಸ್ಮೃತ** (वि०) ಮರೆಯಲ್ಪಟ್ಟ. वि + स्मृ (आध्याने) "क्तः" (३-२-१०२)।

**विस्मृति ವಿಸ್ಮೃತಿ** (स्त्री०) ಮರವು. वि+स्मृ (आध्याने) "क्तिन्" (३-३-९४)।

**विस्मेय ವಿಸ್ಮೇಯ** (वि०) 1. ಆಶ್ಚರ್ಯಪಡಲು ಅರ್ಹವಾದ. 2. ಆಶ್ಚರ್ಯಪಡಬೇಕಾದ. वि+ष्मिङ् (ईषद्धसने) "यत्" (३-१-९७)। "विस्मेयमतिरस्मासु साधुवैलक्ष्यमीक्षसे" नैष० १७-१४१।

**विस्मेर ವಿಸ್ಮೇರ** (वि०) ಆಶ್ಚರ್ಯಪಟ್ಟಿರುವ. वि+ष्मिङ् (ईषद्धसने) "रः" (३-२-१६७)।

**विस्र ವಿಸ್ರ** (न०) 1. ಅಪಕ್ವದ ವಾಸನೆ. बिस (प्रेरणे) "रः" (उ० २-१३)। बाहु०। (वि०) 2. ಅಪಕ್ವದ ವಾಸನೆಯುಳ್ಳ. "विस्रं स्यादामगन्धि यत्" अम०।

**विस्रंसन ವಿಸ್ರಂಸನ** (न०) 1. ಕೆಳಗೆ ಜಾರಿಬೀಳುವುದು, ಕಳಚಿಬೀಳುವುದು. वि+स्रंसु (अवस्रंसने) भावे "ल्युट्" (३-३-११५)। 2. ಸಡಲಿಸುವುದು, ಗಂಟುಬಿಚ್ಚಿ ಸಡಿಲವಾಗಿ ಮಾಡುವುದು. (वि०) 3. ಕೆಳಗೆ ಬೀಳಿಸುವ. "मौलिघूर्णनचलन्मन्दारविस्रंसनः" गीतगो०। 4. ಸಡಿಲಿಸುವ, ಗಂಟುಬಿಚ್ಚಿ ಸಡಿಲವಾಗಿ ಮಾಡುವ. वि+स्रंसु "ल्युः" (३-१-१३४)। "अयं स रसनोत्कर्षी नीवीविस्रंसनः करः" काव्यप्र०।

**विस्रंसमान ವಿಸ್ರಂಸಮಾನ** (वि०) 1. ಕೆಳಗೆ ಜಾರಿಬೀಳುತ್ತಿರುವ. वि + स्रंसु (अवस्रंसने) "शानच्" (३-२-१२४)। 2. ಶಿಥಿಲವಾಗುತ್ತಿರುವ, ಸಡಿಲವಾಗುತ್ತಿರುವ.

**विस्रंसिन् ವಿಸ್ರಂಸಿನ್** (वि०) ಕೆಳಗೆ ಜಾರಿಬೀಳುವ, ಕಳಚಿಬೀಳುವ. वि + स्रंसु (अवस्रंसने) "णिनिः" (३-१-१३४)। "विस्रंसिधान्याञ्जलिना करेण व्याघात्मजां विश्वपतिः सिषेवे" याद० ४-३०।

**विस्रब्ध ವಿಸ್ರಬ್ಧ** (वि०) 1. ವಿಶ್ವಾಸದಿಂದ ಕೂಡಿದ. वि + स्रम्भु (विश्वासे) "क्तः" (३-४-७२)। (क्रि० वि०) 2. ವಿಶ್ವಾಸದೊಡನೆ, ಧೈರ್ಯದಿಂದ, ಭಯವಿಲ್ಲದೆ. "विस्रब्धं क्रियतां वराहततिभिः मुस्ताक्षतिः पल्वले" शाकु० २-६। 3. ಧೈರ್ಯವಾಗಿ, ವಿಶ್ವಾಸದಿಂದ, ಪ್ರೀತಿಯಿಂದ. "विस्रब्धं परिचुम्ब्य जातपुलकामालोक्य गण्डस्थलीम्" सा० द०।

**विस्रम्भ ವಿಸ್ರಂಭ** (पुं०) 1. ವಿಶ್ವಾಸ, ಪ್ರೀತಿ. वि+स्रम्भु (विश्वासे) "घञ्" (३-३-१८)। "विस्रम्भादुरसि निपत्य जातनिद्रामुन्मुच्य प्रियगृहिणीं गृहस्य लक्ष्मीम्" उ० रा० १-४९। 2. ಪ್ರಣಯ, ಪ್ರೀತಿ, ಪ್ರೇಮ.

**विस्रम्भिन् ವಿಸ್ರಂಭಿನ್** (वि०) 1. ವಿಶ್ವಾಸವುಳ್ಳ. विस्रम्भते—वि + स्रम्भु (विश्वासे) "घिनुण्" (३-२-१४३)। "कथं तदनुरूपाय गुणविस्रम्भ्युपक्रमेत्" भाग० ६-५-२०। 2. ಪ್ರೀತಿಯುಳ್ಳ, ಪ್ರೇಮವುಳ್ಳ. विस्रम्भ "इनिः" (५-२-११५)।

**विस्रसा ವಿಸ್ರಸಾ** (स्त्री०) ಜರೆ, ಮುಪ್ಪು. विस्रस्यतेऽनया—वि+स्रंसु (अवस्रंसने) "अङ्" (३-३-१०४)।

**विस्रस्त ವಿಸ್ರಸ್ತ** (वि०) 1. ಜಾರಿಬಿದ್ದಿರುವ, ಕಳಚಿಬಿದ್ದಿರುವ. वि+स्रंसु (अवस्रंसने) "क्तः" (३-४-७२)। "विस्रस्तसारथिकुलप्रवराः समन्तात्" कुमा० १७-३०। 2. ಸಡಿಲವಾದ, ಶಿಥಿಲವಾದ.

**विस्रव ವಿಸ್ರವ** (ಪುಂ) 1. ಸ್ರವಿಸುವುದು, ಸೋರುವುದು. वि + स्रु (गतौ) "अप्" (३-३-५७)। 2. ಹರಿಯುವುದು, ಪ್ರವಹಿಸುವುದು.

**विस्रवण ವಿಸ್ರವಣ** (ನಂ) 1. ಹರಿಯುವುದು, ಪ್ರವಹಿಸುವುದು. वि + स्रु (गतौ) "ल्युट्" (३-३-११५)। 2. ಸೋರುವುದು, ಜಿನುಗುವುದು. वि + स्रु णिच् "ल्युट्" (३-३-११५)। **-स्रावणम् -ಸ್ರಾವಣಮ್.** 1. ಸೋರುವಂತೆ ಮಾಡುವುದು. 2. ಹರಿಯುವಂತೆ ಮಾಡುವುದು.

**विस्रुत ವಿಸ್ರುತ** (ವಿಂ) 1. ಪ್ರವಹಿಸಿದ. वि + स्रु (गतौ) "क्तः" (३-४-७२)। 2. ಸ್ರವಿಸಿದ, ಸೋರಿದ.

**विहग ವಿಹಗ** (ಪುಂ) 1. ಪಕ್ಷಿ, ಹಕ್ಕಿ. विहायसि गच्छति—गम्लृ (गतौ) "डः" (वा० ३-२-४८)। विहायसः विहादेशः (वा० ३-२-४८)। "विहगाः कदम्बसुरभाविह गाः" माघ० ४-३६। 2. ಶರ, ಬಾಣ. "अयोमुखैश्च विहगैः द्रावयिष्ये महारथान्" भा०। 3. ಸೂರ್ಯ ಚಂದ್ರ ಮೊದಲಾದ ಗ್ರಹ. 4. ಸೂರ್ಯ. 5. ಚಂದ್ರ. 6. ಮೇಘ, ಮೋಡ.

**विहङ्ग ವಿಹಂಗ** (ಪುಂ) 1. ಪಕ್ಷಿ, ಹಕ್ಕಿ. विहायसा गच्छति—गम्लृ (गतौ) "खच्" (३-२-४७)। मुमागमः (६-३-६७)। डित्वात् टेः लोपः। "कृतचपलविहङ्गालापकोलाहलाभिः" माघ० ११-४४। 2. ಬಾಣ. 3. ಮೋಡ. 4. ಸೂರ್ಯ. 5. ಚಂದ್ರ. 6. ಗ್ರಹ. खचो डित्वस्य वैकल्पिकत्वात् टेः लोपाभावे। **विहङ्गमः ವಿಹಂಗಮಃ.** "विहङ्गमानां जलजातपत्रैः" माघ० ४-६।

**विहग(ङ्ग)राज ವಿಹಗ(ಙ್ಗ)ರಾಜ** (ಪುಂ) ಪಕ್ಷಿಗಳ ರಾಜ, ಗರುಡ. विहगा(ङ्गा)नां राजा "टच्" (५-४-९१)। "विहङ्गराजाङ्गरुहैरिवायतैर्हिरण्मयोर्वीरुहवल्लितन्तुभिः" माघ० १-७।

**विहङ्गिका ವಿಹಂಗಿಕಾ** (ಸ್ತ್ರೀಂ) ಕಾವಡಿಯ ಕೋಲು, ಅಡ್ಡೆಯನ್ನು ತೂಗುಹಾಕುವ ಕೋಲು. विहङ्गस्य प्रतिकृतिः "कन्" (५-३-९६)।

**विहत ವಿಹತ** (ವಿಂ) 1. ವಧಿಸಲ್ಪಟ್ಟ, ಕೊಲ್ಲಲ್ಪಟ್ಟ. वि + हन (हिंसागत्योः) "क्तः" (३-२-१०२)। 2. ಹೊಡೆಯಲ್ಪಟ್ಟ.

**विहति ವಿಹತಿ** (ಸ್ತ್ರೀಂ) 1. ವಧಿಸುವುದು, ಕೊಲ್ಲುವುದು. 2. ಹೊಡೆಯುವುದು.

**विहनन ವಿಹನನ** (ನಂ) 1. ಕೊಲ್ಲುವುದು. वि + हन (हिंसागत्योः) भावे "ल्युट्" (३-३-११५)। 2. ವಿಘ್ನ, ತಡೆ, ಅಡ್ಡಿ, ಅಡಚಣೆ. 3. ಹತ್ತಿಯನ್ನು ಹೊಡೆದು ಶುದ್ಧ ಮಾಡುವ ಬಿಲ್ಲಿನ ಆಕಾರದ ಒಂದು ಸಾಧನ (ಯಂತ್ರ). वि+हन कर० "ल्युट्" (३-३-११७)। "भवेद्विहननं विघ्नहिंसयोस्तूलपिञ्जले" मेदि०।

**विहर ವಿಹರ** (ಪುಂ) ವಿಯೋಗ, ಅಗಲಿಕೆ. विशेषेण ह्रियतेऽस्मिन्—हृञ् (हरणे) "घः" (३-३-११८)।

**विहरण ವಿಹರಣ** (ನಂ) 1. ವಿಹಾರ, ವಿನೋದಕ್ಕಾಗಿ ಸಂಚಾರ, ವಾಯುಸೇವನೆಗಾಗಿ ಸಂಚರಿಸುವುದು. वि+हृञ् (हरणे) "ल्युट्" (३-३-११५)। 2. ತರುವುದು. 3. ವಿನೋದ, ಕ್ರೀಡೆ, ವಿಶ್ರಾಂತಿಕಾಲದ ಆಟಪಾಟ.

**विहरत् ವಿಹರತ್** (ವಿಂ) 1. ವಿಹರಿಸುತ್ತಿರುವ, ವಿನೋದಕ್ಕಾಗಿ ಸಂಚರಿಸುತ್ತಿರುವ. वि+हृञ् (हरणे) "शतृ" (३-२-१२४)। 2. ಆಟವಾಡುತ್ತಿರುವ, ಕ್ರೀಡಿಸುತ್ತಿರುವ. "विहरन् वारुणीमाजा स वीरो विजयश्रिया" याद० २२-९९। 3. ತರುತ್ತಿರುವ. स्त्रियां "ङीप्" (४-१-६)। **-न्ती -ನ್ತೀ.**

**विहर्तृ ವಿಹರ್ತೃ** (ವಿಂ) 1. ಆಟವಾಡುವವನು. 2. ವಿನೋದಕ್ಕಾಗಿ ಸಂಚರಿಸುವವನು. 3. ಕದಿಯುವವನು, ಚೋರ. वि+हृञ् (हरणे) "तृच्" (३-१-१३३)।

**विहसन ವಿಹಸನ** (ನಂ) ನಗು. वि+हसे (हसने) भावे "ल्युट्" (३-३-११५)। भावे "क्तः" (३-३-११४)। **-हसितम् -ಹಸಿತಮ್.** भावे "घञ्" (३-३-१८)। **-हासः -ಹಾಸಃ.**

**विहस्त ವಿಹಸ್ತ** (ವಿಂ) 1. ವ್ಯಾಕುಲನಾದವನು, ದುಃಖಿತನಾದವನು. विक्षिप्तो हस्तोऽस्य। "रामापरित्राणविहस्तयोधं सेनानिवेशं तुमुलं चकार" रघु० ५-४९। 2. ಹಸ್ತವಿಲ್ಲದವನು, ಕೈಯಿಲ್ಲದವನು. विगतो हस्तो यस्य। 3. ಪಂಡಿತ, ವಿದ್ವಾಂಸ. "विहस्तः पण्डिते व्याकुले त्रिषु" मेदि०।

**विहा ವಿಹಾ** (ಅವ್ಯಂ) ಸ್ವರ್ಗ, ದೇವಲೋಕ. वि+ओ हाक् (त्यागे) "आ" (उ० ४-३६)। निपा०।

**विहापित ವಿಹಾಪಿತ** (ನಂ) 1. ದಾನ, ಕೊಡುಗೆ. वि+ओ हाक् (त्यागे) + णिच् "क्तः" (३-३-११४)। "त्यागो विहापितं दानम्" अम०। (ವಿಂ) 2. ತ್ಯಜಿಸುವಂತೆ ಮಾಡಲ್ಪಟ್ಟ, ತೊರೆದುಬಿಡುವಂತೆ ಮಾಡಲ್ಪಟ್ಟ. 3. ಬಲಾತ್ಕಾರದಿಂದ ಸುಲಿಯಲ್ಪಟ್ಟ, ಬಲಾತ್ಕಾರಪಡಿಸಿ ಕಿತ್ತುಕೊಳ್ಳಲ್ಪಟ್ಟ.

**विहायस् ವಿಹಾಯಸ್** (नपुं०) 1. ಗಗನ, ಅಂತರಿಕ್ಷ, ಆಕಾಶ. विशेषेण हाययति गमयति विमानादीन्—वि+हय (गतौ) + णिच् "असुन्" (उ० ४-१८८)। "गरुत्मतां संहतिभिर्विहायः क्षणप्रकाशाभिरिवावतेने". किरा० १६-४३। (पुं०) 2. ಪಕ್ಷಿ, ಹಕ್ಕಿ. विजहाति भुवम्—वि+ओ हाक् (त्यागे) "असुन्" (उ० ४-१८८)। "अमोचि चञ्चूपुटमौनमुद्रा विहायसा तेन विहस्य भूयः" नैष० ३-९९।

**विहायस ವಿಹಾಯಸ** (पुं०) ಪಕ್ಷಿ, ಹಕ್ಕಿ.

**विहायसा ವಿಹಾಯಸಾ** (अव्य०) ಅಂತರಿಕ್ಷ, ಆಕಾಶ. "स्वरादिनिपातमव्ययम्" (१-१-३७)। निपा०।

**विहार ವಿಹಾರ** (पुं०) 1. ವಿನೋದಕ್ಕಾಗಿ ಸಂಚರಿಸುವುದು. वि+हृञ् (हरणे) "घञ्" (३-३-१८)। "यच्चावहासार्थमसत्कृतोऽसि विहारशय्यासनभोजनेषु" गीता ११-४२। 2. ಕ್ರೀಡೆ, ಆಟ, ಲೀಲೆ. "अस्त्राणि तेन प्रहितानि तूर्णं विहारभूम्ना वितथानि कृत्वा" याद० २०-७१। 3. ಕೈಕಾಲುಗಳ ಚಲನೆ, ಕೈಕಾಲುಗಳ ವಿನ್ಯಾಸ. "व्यपोढपार्श्वैरपवर्तितत्रिका विकर्षणैः पाणिविहारहारिभिः" किरा० ४-१५। 4. ಭ್ರಮಣ, ಸುತ್ತಾಡುವುದು. 5. ಸ್ಕಂಧ, ಹೆಗಲು. 6. ಜೈನ ದೇವಾಲಯ. 7. ಬುದ್ಧನ ದೇವಾಲಯ. 8. ಹೆಗೆದು ಹಾಕುವುದು, ಸ್ಥಳಾಂತರಕ್ಕೆ ಒಯ್ಯುವುದು. "विहारो भ्रमणे स्कन्धे लीलायां सुगतालये" मेदि०।

**विहारिन् ವಿಹಾರಿನ್** (वि०) 1. ವಿನೋದಕ್ಕಾಗಿ ಸಂಚರಿಸುವವನು. विहर्तुं शीलमस्य—वि+हृञ् (हरणे) ताच्छील्ये "णिनिः" (३-२-७८)। 2. ಸುತ್ತಾಡುವವನು, ತಿರುಗಾಡುವವನು, ಸಂಚರಿಸುವವನು. "धार्यः कथं कारमहं भवत्या वियद्विहारी वसुधैकगत्या" नैष० ३-१५।

**विहित ವಿಹಿತ** (वि०) 1. ಮಾಡಲ್ಪಟ್ಟ. वि+डु धाञ् (धारणपोषणयोः) "क्तः" (३-२-१०२)। "विहितं मयाद्य सदसीदमपमृषितमच्युतार्चनम्" माघ० १५-४६। 2. ಹೇಳಲ್ಪಟ್ಟ. "विहितां प्रियया मनःप्रियामथ निश्चित्य गिरं गरीयसीम्" किरा० २-१। 3. ವಿಧಿಸಲ್ಪಟ್ಟ, ಶಾಸ್ತ್ರದಲ್ಲಿ ಉಕ್ತವಾದ. "विहितस्याननुष्ठानात् निन्दितस्य च सेवनात्। अनिग्रहाच्चेन्द्रियाणां नरः पतनमृच्छति"। 4. ವಿರ್ಪಡಿಸಲ್ಪಟ್ಟ, ನಿಗದಿಮಾಡಲ್ಪಟ್ಟ. 5. ಇಡಲ್ಪಟ್ಟ. (न०) 6. ನಿಯಮನ, ಆಜ್ಞೆ, ವಿಧಿ. "क्षितिविजितिस्थितिविहितिव्रतरतयः परगतयः" काव्या० ३-८५।

**विहीन ವಿಹೀನ** (वि०) ಇಲ್ಲದ, ಶೂನ್ಯ, ರಹಿತ, ಬಿಡಲ್ಪಟ್ಟ. वि+ओ हाक् (त्यागे) "क्तः" (३-२-१०२)। "संगीतसाहित्यकलाविहीनः साक्षात्पशुः पुच्छविषाणहीनः"।

**विहृत ವಿಹೃತ** (न०) ಸ್ತ್ರೀಯರ ಸ್ವಭಾವಸಿದ್ಧವಾದ ಹತ್ತು ವಿಧ ಅಲಂಕಾರಗಳಲ್ಲೊಂದು. वि+हृञ् (हरणे) "क्तः" (३-३-११४)। "लीला विलासो विच्छित्तिर्बिब्बोकः किलकिञ्चितम्। मोट्टायितं कुट्टमितं ललितं विहृतं तथा। विभ्रमश्चेत्यलङ्कारः स्त्रीणां स्वाभाविका दश"।

**विहृति ವಿಹೃತಿ** (स्त्री०) 1. ವಿಹಾರ, ವಿನೋದಕ್ಕಾಗಿ ಸಂಚರಿಸುವುದು. वि+हृञ् (हरणे) "क्तिन्" (३-३-९४)। 2. ಲೀಲೆ, ಕ್ರೀಡೆ, ಆಟ.

**विह्वल ವಿಹ್ವಲ** (वि०) 1. ಭಯ ಮೊದಲಾದುವುಗಳಿಂದ ಕಳವಳಗೊಂಡವನು, -ಆತಂಕವುಳ್ಳವನು. 2. ಭಯದಿಂದ ಶಕ್ತಿಯನ್ನು ಕಳೆದುಕೊಂಡವನು. वि+ह्वल (चलने) "अच्" (३-१-३४)। "वृष्णिवीरशरखण्डितायुधैर्विह्वलैरजनि वीतशक्तिभिः" याद० १७-६९। 3. ಕಷ್ಟಕ್ಕೆ ಒಳಗಾದವನು. 4. ತನ್ನ ದೇಹವನ್ನೂ ಎತ್ತಿಕೊಂಡು ತಿರುಗಾಡಲಾಗದವನು. 5. ವಿಲೀನವಾದ, ಕರಗಿದ, ದ್ರವವಾದ.

**वीक ವೀಕ** (पुं०) 1. ವಾಯು, ಗಾಳಿ. 2. ಪಕ್ಷಿ, ಹಕ್ಕಿ. अज (गतिक्षेपणयोः) "कन्" (उ० ३-४७)। धातोः वीभावः (२-४-५६)। "वीकः स्याद्वातपक्षिणोः" सि. कौ०। 3. ಮನಸ್ಸು.

**वीकाश ವೀಕಾಶ** (पुं०) 1. ರಹಸ್ಯಪ್ರದೇಶ, ಏಕಾಂತವಾದ ಸ್ಥಳ. विकाशतेऽत्र—वि+काशृ (दीप्तौ) अधि० "घञ्" (३-३-१२१)। दीर्घः (६-३-१२३)। 2. ಪ್ರಕಾಶ, ಬೆಳಕು. "रहःप्रकाशौ वीकाशौ" अम०।

**वीक्ष ವೀಕ್ಷ** (पुं०) 1. ದೃಷ್ಟಿ, ನೋಟ. 2. ಆಶ್ಚರ್ಯ.

**वीक्षण ವೀಕ್ಷಣ** (न०) 1. ದರ್ಶನ, ನೋಟ. वि+ईक्ष (दर्शने) "ल्युट्" (३-३-११५)। 2. ನೇತ್ರ, ಕಣ್ಣು.

**वीक्षा ವೀಕ್ಷಾ** (स्त्री०) ದರ್ಶನ, ನೋಟ. वि+ईक्ष (दर्शने) "अः" (३-३-१०२)। "अस्तु मास्म भवदित्यनन्यया वीक्षया जगदिदं नियच्छता" याद० १७-९२।

**वीक्षित ವೀಕ್ಷಿತ** (वि०) 1. ನೋಡಲ್ಪಟ್ಟ. वि+ईक्ष (दर्शने) "क्तः" (३-२-१०२)। "स्निग्धं वीक्षितमन्यतोऽपि नयने यत्प्रेषयन्त्या तया" शाकु० २-२।

(नं०) 2. ನೋಟ, ದರ್ಶನ. वि+ईक्ष भावे "क्तः" (३-३-११४)।

**वीक्ष्य ವೀಕ್ಷ್ಯ** (पुं०) 1. ನರ್ತಕ, ನಟ. 2. ಅಶ್ವ, ಕುದುರೆ. वि+ईक्ष (दर्शने) "ण्यत्" (३-१-१२४)। (नं०) 3. ವಿಸ್ಮಯ, ಆಶ್ಚರ್ಯ. (वि०) 4. ನೋಡಲ್ಪಡುವ. 5. ನೋಡಲು ಯೋಗ್ಯವಾದ. 6. ನೋಡಲು ಸಾಧ್ಯವಾದ. "वीक्ष्यं तु विस्मये दृश्ये पुंसि लासकवाजिनोः" मेदि०। (अव्य०) 7. ನೋಡಿ, ವೀಕ್ಷಿಸಿ.

**वीङ्खा ವೀಂಖಾ** (स्त्री०) 1. ಅಶ್ವದ ಒಂದು ವಿಧ ನಡಗೆ. 2. ನರ್ತನ, ಕುಣಿತ. 3. ನಸುಗುನ್ನಿ ಗಿಡ. 4. ನಡಗೆಯ ಒಂದು ರೀತಿ. 5. ಸಂಧಿ, ಸೇರುವುದು, ಕೂಡುವುದು. "वीङ्खा तु शूकशिम्बायां गतिभेदे च नर्तने" हेम०।

**वीचि ವೀಚಿ** (पुंस्त्री०) 1. ತರಂಗ, ಅಲೆ, ಊರ್ಮಿ. वयति जलं तटे—वेञ् (तन्तुसन्ताने) "ईचिः" (उ० ४-७२। "सरसीष्वरविन्दानां वीचिविक्षोभशीतलम्" रघु० १-४३। वा "ङीष्" (ग० ४-१-४५)। **वीची ವೀಚೀ.** "कर्णेभ्यः च्युतमसितोत्पलं वधूनां वीचीभिस्तटमनु यन्निरासुरापः" माघ० ८-५४। 2. ಸುಖ. 3. ಅಲ್ಪ, ಸ್ವಲ್ಪ. 4. ಕಿರಣ. 5. ಅವಕಾಶ, ಬಿಡುವು, ವಿಶ್ರಾಂತಿ. 6. ಪಙ್ಕ್ತಿ, ಶ್ರೇಣಿ, ಸಾಲು. "वीच्याल्यूर्म्योरवकाशे सुखाल्पयोः" हेम०। 7. ಹೆಂಗಸರ ತಲೆಕೂದಲು ವಕ್ರವಾಗಿರುವಿಕೆ, ತಲೆಯ ಕೂದಲು ಗುಂಗುರಾಗಿರುವಿಕೆ. "वीचिः कुन्तलवक्रत्वे स्वल्पे पङ्क्तितरङ्गयोः" नानार्थर०।

**वीचीतरङ्ग ವೀಚೀತರಂಗ** (पुं०) ಇದೊಂದು ನ್ಯಾಯ. ಶ್ರೋತ್ರೇಂದ್ರಿಯದಲ್ಲಿ ಶಬ್ದವು ಹುಟ್ಟುವುದಕ್ಕೆ ಕಾರಣ ರೂಪವಾದುದು ಈ ನ್ಯಾಯ. ನಾನಾದಿಕ್ಕುಗಳಲ್ಲಿ ಉಂಟಾಗುವ ಹೊರಗಿನ ಶಬ್ದವು ಕಿವಿಯೊಳಗೆ ಪ್ರವೇಶಿಸುವಾಗ ಅದರ ಹಿಂದೆ ಮತ್ತೊಂದು ಶಬ್ದವು ಹುಟ್ಟುವುದು. ಅದರಿಂದ ಇನ್ನೊಂದು ಶಬ್ದವು ಹುಟ್ಟಿ ಅದು ಮತ್ತೊಂದು ಶಬ್ದಕ್ಕೆ ಕಾರಣವಾಗುವುದು. ಹೀಗೆ ಶಬ್ದವು ಅಲೆಗಳಂತೆ ಒಂದರ ಹಿಂದೆ ಒಂದು ಹುಟ್ಟಿ ಕಿವಿಯೊಳಗೆ ಪ್ರವೇಶಿಸುವುದು. ಇದು "**ವೀಚೀತರಂಗನ್ಯಾಯ**".

**वीज ವೀಜ** (नं०) 1. ಕಾರಣ. विशेषेण कारणरूपेण अपत्यतया च जायते—वि+जनी (प्रादुर्भावे) "डः" (३-२-९९)। दीर्घः (६-३-१३७)। विशेषेण ईजते कुक्षिं गच्छति शरीरं वा—ईज (गतिक्षेपणयोः) "अच्" (३-१-१३४) वा। वबयोरभेदः। "बीजं मां सर्वभूतानां विद्धि पार्थ सनातनम्" गीता ७-१०। 2. ಮಹಾಮಂತ್ರಗಳಲ್ಲಿರುವ ಬೀಜಾಕ್ಷರ. 3. ಅಂಕುರ, ಮೊಳಕೆ. "न तस्य बीजं रोहति बीजकाले न चास्य वर्षं वर्षति वर्षकाले" भा०।

**वीजक ವೀಜಕ** (पुं०) ಮಾದಳದ ಗಿಡ.

**वीज्य ವೀಜ್ಯ** (वि०) ವಿಶೇಷವಾಗಿ ಪೂಜಿಸಲು ಅರ್ಹನಾದವನು. विशेषेण इज्यः।

**वीटि ವೀಟಿ** (स्त्री०) ತಾಂಬೂಲದ ಬಳ್ಳಿ, ವೀಳ್ಯದೆಲೆಯ ಹಂಬು. विशेषेण एटति यष्टयादिकम्—इट (गतौ) "इन्" (उ० ४-११८)। स्वार्थे "कन्"। **वीटिका ವೀಟಿಕಾ.** वा "ङीष्" (ग० ४-१-४५)। **–टी –ಟೀ.**

**वीणा ವೀಣಾ** (स्त्री०) 1. ವೀಣಾವಾದ್ಯ, ಒಂದು ತಂತೀವಾದ್ಯ. वेति जायते स्वरोऽस्याम्—वी (गतिव्याप्तिप्रजनादिषु) "नः" (उ० ३-१५)। णत्वं गुणाभावश्च निपा०। "उत्सङ्गे वा मलिनवसने सौम्य निक्षिप्य वीणां मद्गोत्राङ्कं विरचितपदं गेयमुद्गातुकामा" मेघ० २-२३। 2. ವಿದ್ಯುತ್ತು, ಮಿಂಚು. "वीणा विद्युति वल्लक्याम्" मेदि०।

**वीणादण्ड ವೀಣಾದಂಡ** (पुं०) ವೀಣೆಯ ದಂಡಿಗೆ, ವೀಣೆಯ ಸೋರೆಬುರುಡೆಯ ಮೇಲೆ ಉದ್ದಕ್ಕೆ ಇರುವ ದಂಡ. वीणाया दण्डः।

**वीणानुबन्ध ವೀಣಾನುಬಂಧ** (पुं०) ವೀಣೆಯ ತಂತಿಗಳನ್ನು ಕಟ್ಟುವ ಬಿರಡೆ. वीणाया अनुबन्धः। "वीणानुबन्धो धीमद्भिरुपनाहोऽभिधीयते" हारा०।

**वीणावाद ವೀಣಾವಾದ** (पुं०) ವೀಣೆಯನ್ನು ನುಡಿಸುವವನು. वीणां वादयति—वद (व्यक्तायां वाचि) + णिच् "अण्" (३-२-१)। "ण्वुल्"। **–वादकः –ವಾದಕಃ.**

**वीणास्य ವೀಣಾಸ್ಯ** (पुं०) ನಾರದಮುನಿ.

**वीत ವೀತ** (नं०) 1. ಯುದ್ಧಾದಿಗಳಿಗೆ ಅಸಮರ್ಥವಾದ ಆನೆ ಕುದುರೆಗಳ ಸಮೂಹ, ಶಕ್ತಿಯಿಲ್ಲದ ಆನೆ ಕುದುರೆಗಳ ಗುಂಪು. वेति स्म युद्धादिकार्यस्य—वी (गतिव्याप्तिप्रजनादिषु) "क्तः" (३-४-७२)। 2. ಅಂಕುಶದಿಂದ ಆನೆಯನ್ನು ಚುಚ್ಚುವುದು ಮತ್ತು ಕಾಲಿನಿಂದ ಒದೆಯುವುದು. "निर्धूतवीतमपि बालकमुल्ललन्तं यन्ता क्रमेण परिसान्त्वनतर्जनादिभिः" माघ० ५-४७। (वि०) 3. ಶಾಂತವಾದ, ಸಾಧುವಾದ, ಪಳಗಿದ. 4. ಇಲ್ಲದೆ ಹೋದ, ಮರೆಯಾದ, ಕಾಣದೇ ಹೋಗಿರುವ, ಮಾಯವಾದ. "ज्वरे निरस्ते गिरिशप्रयुक्ते वीतज्वरं विश्वमिदं

बभूव" याद० २-३२ । 5. ತೆರಳಿದ, ಹೊರಟುಹೋದ. वि+इण् (गतौ) "क्तः" (३-४-७२) । 6. ಕಳೆದು ಹೋದ, ನಿವೃತ್ತವಾದ. "वीतजन्मजरसं परं शुचि ब्रह्मणः पदमुपैतुमिच्छताम्" किरा० ५-२२ । 7. ಕೆಳಗೆ ಬಿದ್ದುಹೋಗಿರುವ. "वीतमाल्यकचहस्तसंयमव्यस्तहस्तयुगया स्फुटीकृतम्" नैष० १८-१२४ । 8. ಕಳೆದು ಕೊಂಡಿರುವ. "स मृण्मये वीतहिरण्मयत्वात्" रघु० ५-२ ।

**वीतंस ವೀತಂಸ** (ಪುಂ) 1. ಮೃಗಗಳ ಮತ್ತು ಪಕ್ಷಿಗಳ ಬಂಧನದ ಉಪಾಯ, ಅರಣ್ಯದ ಪ್ರಾಣಿಗಳನ್ನೂ ಹಕ್ಕಿಗಳನ್ನೂ ಹಿಡಿಯುವ ಉಪಾಯ (ಸಾಧನ). वितंस्यते—वि+तसि (अलङ्कारे) "घञ्" (३-३-१८)। दीर्घः (६-३-१२२)। "वीतंसस्तूपकरणं बन्धने मृगपक्षिणाम्" अम० । 2. ಪಕ್ಷಿಗಳ ಗೃಹ, ಹಕ್ಕಿಗಳನ್ನು ಕೂಡಿಡುವ ಗೂಡು. "वीतंसो बन्धनोपाये मृगाणामपि पक्षिणाम् । तेषामेव च विश्वासहेतोः प्रावरणेऽपि च" मेदि० ।

**वीतन ವೀತನ** (ಪುಂ द्विव०) ಕುತ್ತಿಗೆಯ ಎರಡು ಪಾರ್ಶ್ವಗಳು, ಕಂಠದ ಎರಡೂಕಡೆಯ ಭಾಗಗಳು. "कृकस्तु कन्धरामध्यं कृकपार्श्वौ तु वीतनौ" अभि० चि० ।

**वीतभय ವೀತಭಯ** (ಪುಂ) 1. ವಿಷ್ಣು, ಪರಮಾತ್ಮ. वीतं भयं यस्मात् । "वीतं भयं गजेन्द्रस्य यस्माद्वीतभयः स्मृतः" इति निरुक्तिः । "विद्वत्तमो वीतभयः पुण्यश्रवणकीर्तनः" वि० स० । (वि०) 2. ಭಯವಿಲ್ಲದ, ಭಯವನ್ನು ಕಳೆದುಕೊಂಡ.

**वीतराग ವೀತರಾಗ** (वि०) 1. ಆಸೆಯನ್ನು ತೊರೆದವನು. वीतो रागो विषयापेक्षा यस्य । "वीतरागभयक्रोधः स्थितधीर्मुनिरुच्यते" गीता २-५६ । "वीतरागधृतरागहृद्यताम्" याद० १७-३३ । 2. ಕೋಪವನ್ನು ತೊರೆದವನು, ಕ್ರೋಧವನ್ನು ಜಯಿಸಿದವನು, ಶಾಂತಚಿತ್ತನಾದವನು. 3. ಯಾವುದೂ ಬಣ್ಣವಿಲ್ಲದ. (ಪುಂ) 4. ಕೋಪವನ್ನು ತ್ಯಜಿಸಿದ ಸಂನ್ಯಾಸಿ.

**वीतस्पृह ವೀತಸ್ಪೃಹ** (वि०) ಆಸೆಯನ್ನು ತೊರೆದವನು.

**वीति ವೀತಿ** (ಪುಂ) 1. ಅಶ್ವ, ಕುದುರೆ. वेति—वी (गत्यादिषु) "क्तिच्" (३-३-१७४) । "उदग्रवेगानुदधेरनूपे वीतीन् क्षणं विश्रमयांबभूव" याद० १३-३९ । (स्त्री०) 2. ದೀಪ್ತಿ, ಪ್ರಕಾಶ. 3. ಗತಿ, ಗಮನ, ನಡೆಯುವುದು. 4. ಭೋಜನ, ಊಟ, ಆಹಾರ. 5. ಉತ್ಪತ್ತಿ. "वीतिरश्वेऽशने गतौ । प्रजने धावने दीप्तौ" हेम० ।

**वीतिहोत्र ವೀತಿಹೋತ್ರ** (ಪುಂ) 1. ವಹ್ನಿ, ಅಗ್ನಿ. वीतिः पुरोडाशादिः हूयतेऽत्र—हु (दानादनयोः) "त्रः" (उ० ४-१६८) । 2. ರವಿ, ಸೂರ್ಯ. "वीतिहोत्रोऽनलेऽर्के च" मेदि० ।

**वीथि ವೀಥಿ, वीथी ವೀಥೀ** (स्त्री०) 1. ಪಙ್ಕ್ತಿ, ಸಾಲು. विथ्यते—विथृ (याचने) "इन्" (उ० ४-११९) । वा "ङीष्" (ग० ४-१-४५)। 2. ಮಾರ್ಗ, ರಸ್ತೆ, ದಾರಿ. विथ्यतेऽनया—विथृ (याचने) "घञ्" (३-३-१९)। पृषो० । "आलापैः पिपतिषतां विलङ्घ्य वीथीम्" किरा० ७-१७ । 3. ಮಾರುಕಟ್ಟೆ, ಅಂಗಡಿ ಬೀದಿ. "घनवीथिवीथिमवतीर्णवतो निधिरम्भसामुपचयाय कलाः" माघ० ९-३२ । 4. ಗೃಹದ ಒಂದು ಭಾಗ, ಮನೆಯ ಮುಂಭಾಗದ ತಾರಸಿ, ಸಮತಲವಾಗಿ ನಿರ್ಮಿಸಿದ ಮುಂಭಾಗದ ಮಾಳಿಗೆ. 5. ಹತ್ತು ವಿಧ ರೂಪಕಗಳಲ್ಲೊಂದು ವಿಧ. "वीथी पङ्क्तौ गृहाङ्गे च रूपकान्तरवर्त्मनोः" मेदि० ।

**वीथिका ವೀಥಿಕಾ** (स्त्री०) 1. "वीथी" ಪದದ ಅರ್ಥ. वीथी स्वार्थे "कन्" । 2. ಚಿತ್ರಗಳನ್ನು ಪ್ರದರ್ಶಿಸುವ ಗೋಡೆ ಅಥವಾ ಬಟ್ಟೆಯ ತೆರೆ.

**वीध्र ವೀಧ್ರ** (न०) 1. ಅಂತರಿಕ್ಷ, ಆಕಾಶ, ಗಗನ. विशेषेण इन्धे—वि+ञि इन्धी (दीप्तौ) "क्रन्" (उ० २-२६)। 2. ವಾಯು. 3. ಅಗ್ನಿ. (वि०) 4. ವಿಮಲವಾದ, ಸ್ವಚ್ಛವಾದ. "वीध्रं तु विमलार्थकम्" अम० ।

**वीनाह ವೀನಾಹ** (ಪುಂ) ಬಾವಿಯಕಟ್ಟೆ, ಬಾವಿಯ ಮೇಲೆ ಕಟ್ಟುವ ಸುತ್ತುಗೋಡೆ. विनह्यतेऽनेन—वि + णह (बन्धने) "घञ्" (३-३-१२१)। "वीनाहो मुखबन्धनमस्य यत्" अम० ।

**वीप्सा ವೀಪ್ಸಾ** (स्त्री०) 1. ಹೆಚ್ಚಾಗಿ ಹೊಂದಲು ಅಪೇಕ್ಷೆ, ಅಧಿಕವಾಗಿ ಪಡೆಯಲು ಆಸೆ. विशेषेण आप्तुमिच्छा—वि + आप्लृ (व्याप्तौ) + सन् "अः" (३-३-१०२) । धातोः ईत् (७-४-५५) । 2. ನಡೆಯುತ್ತಿರುವ ಕಾರ್ಯವು ಇನ್ನೂ ಮುಂದಕ್ಕೂ ನಡೆಯುವುದೆಂಬುದನ್ನು ತಿಳಿಸುವಿಕೆ. ಈ ವೀಪ್ಸೆಯಿಂದ ಅದನ್ನು ಸೂಚಿಸುವ ಪದಕ್ಕೆ ದ್ವಿರ್ಭಾವ ಬರುವುದು. वृक्षं वृक्षं सिञ्चति ಎಂಬಲ್ಲಿ ಒಂದು ಗಿಡಕ್ಕೆ ಮಾತ್ರವಲ್ಲದೆ ತೋಟದ ಎಲ್ಲಾ ಗಿಡಗಳಿಗೂ ನೀರನ್ನು ಎರೆಯುವನು ಎಂಬ ಅರ್ಥವನ್ನು ಈ ದ್ವಿರುಕ್ತಿಯು ತಿಳಿಸುವುದು. ಈ ದ್ವಿರುಕ್ತಿಯು ವೀಪ್ಸೆಯಿಂದ ಬರುವುದು. (८-१-४)।

**वीर ವೀರ** (ಪುಂ)1. ಪರಾಕ್ರಮಿ, ಶೂರ, ಮಹಾಬಲಶಾಲಿ. वीरयति —वीर (विक्रान्तौ) + णिच् "अच्" (३-१-१३४)। "अभितोऽभ्यागतान् योद्धुं वीरान् रणमदोद्धतान्" कुमा० १६-२१। 2. ಜಿನ. 3. ವಿಷ್ಣು. अज (गतिक्षेपणयोः) "रक्" (उ० २-२३) वीभावः (२-४-५६)। "वीरः कम्पनहेतुत्वाद्रक्षसामतिभीमतः" इति निरुक्तिः। "वीरः शक्तिमतां श्रेष्ठः" वि० स०। 4. ನಟ, ನರ್ತಕ. 5. ಅಗ್ನಿ. 6. ಶೃಂಗಾರಾದಿ ನವರಸಗಳಲ್ಲೊಂದು, ವೀರರಸ. ವೀರರಸವು ದಾನವೀರ ದಯಾವೀರ ಧರ್ಮವೀರ ಮತ್ತು ಯುದ್ಧವೀರ ಎಂದು ನಾಲ್ಕು ವಿಧ. "स च दानधर्मयुद्धैर्दयया च समन्वितश्चतुर्धा" सा० द० ३-२३४। ವೀರರಸದಲ್ಲಿ ಒಳ್ಳೆಯ ಉದಾತ್ತಗುಣವುಳ್ಳ ಉತ್ತಮನಾದ ನಾಯಕನಿರಬೇಕು. ಉತ್ಸಾಹವು ಸ್ಥಾಯಿಭಾವ. ಜಯಿಸಲ್ಪಡುವ ಶತ್ರುವು ಆಲಂಬನ ವಿಭಾವ. ಪ್ರತಿನಾಯಕನ ವ್ಯಾಪಾರಗಳು ಉದ್ದೀಪನ ವಿಭಾವ. ಸಹಾಯಾನ್ವೇಷಣಾದಿಗಳು ಅನುಭಾವಗಳು. [ನಾಲ್ಕು ವಿಧ ವೀರರಸಗಳ ವಿವರಕ್ಕೆ ಆಯಾ ಪದಗಳಲ್ಲಿ ನೋಡಿ.] 7. ಚಿಲುಕೀರೆ. 8. ಗನ್ನೇರಳೆ. 9. ಅರ್ಜುನ ವೃಕ್ಷ, ಮತ್ತಿಮರ. 10. ಯಜ್ಞದ ಅಗ್ನಿ. (ನಂ) 11. ಲಾಳದ ಗಿಡ, ಜುಂಬು ಹುಲ್ಲು. 12. ಅಕ್ಕಿಯ ಗಂಜಿ. 13. ಹರಿಗೆ ಹಾಲೆ. 14 ಅತಿಬಜೆ. 15. ಲಾಮಂಚದ ಬೇರು. 16. ಮೆಣಸು. (ವಿಂ) 17. ಶ್ರೇಷ್ಠ. 18. ಧೈರ್ಯಶಾಲಿ, ಕೆಚ್ಚೆದೆಯುಳ್ಳವನು.

**वीरक ವೀರಕ** (ಪುಂ) 1. ಗನ್ನೇರಳೆ. 2. ವೀರಪುರುಷ, ಶೂರ. वीर स्वार्थे "कन्"। 3. ಸಮರ್ಥ, ನಿಪುಣ.

**वीरण ವೀರಣ** (ನಂ) ಲಾಮಂಚ. वि पक्षिणमीरयति— ईर (गतौ) + णिच् "ल्युः" (३-१-१३४)।

**वीरतर ವೀರತರ** (ಪುಂ) 1. ಹೆಚ್ಚು ಬಲಶಾಲಿಯಾದ ಯೋಧ. 2. ಬಾಣ. "वीरतरो वीरश्रेष्ठे शरे। वीरतरं पुनः वीरणे" हेम०। (ನಂ)3. ಲಾಮಂಚ. अतिशयेन वीरम् "तरप्" (५-३-५७)।

**वीरतरु ವೀರತರು** (ಪುಂ) 1. ಬಿಲ್ವವೃಕ್ಷ. 2. ಅರ್ಜುನ ವೃಕ್ಷ, ಮತ್ತಿಮರ. वीरस्तन्नाम्ना प्रसिद्धः तरुः। 3. ಗೇರುಮರ.

**वीरपत्नी ವೀರಪತ್ನೀ** (स्त्री०) ವೀರಯೋಧನ ಪತ್ನಿ. वीरः पतिः यस्याः—"नुक्" (४-१-३५)। "ङीप्" (४-१-५)।

**वीरपान(ण) ವೀರಪಾನ(ಣ)** (ನಂ) ಯುದ್ಧವಾದ ನಂತರ ಮತ್ತು ಯುದ್ಧ ನಡೆಯಬೇಕಾದಾಗ ವೀರರು ಮಾಡುವ ಪಾನ. वीराणां श्रमापनोदनाय पानम्। "वीरपानं तु यत्पानं वृत्ते भाविनि वा रणे" अम०। विकल्पेन णत्वम् (८-४-१०)।

**वीरबाहु ವೀರಬಾಹು** (ಪುಂ) ಬಲಶಾಲಿಯಾದ ಬಾಹು, ಶಕ್ತಿಯುತವಾದ ತೋಳು.

**वीरभद्र ವೀರಭದ್ರ** (ಪುಂ) 1. ಅಶ್ವಮೇಧಯಾಗದ ಕುದುರೆ. वीराणां भद्रं येन। 2. ಶ್ರೇಷ್ಠನಾದ ವೀರ. 3. ಲಾಮಂಚ. "वीरभद्रोऽश्वमेधाश्वे वीरश्रेष्ठे च वीरणे" मेदि०। 4. ಪರಮೇಶ್ವರನ ಪ್ರಮಥಗಣದಲ್ಲಿ ಒಬ್ಬ. [ಹಿಂದೆ ಒಮ್ಮೆ ದೇವಲೋಕದಲ್ಲಿ ನಡೆಯುತ್ತಿದ್ದ ಒಂದು ಯಾಗಕ್ಕೆ ಸಕಲ ದೇವತೆಗಳೂ ಋಷಿಗಳೂ ಬಂದಿದ್ದರು. ಆಗ ಅಲ್ಲಿಗೆ ಬಂದ ದಕ್ಷನನ್ನು ಎಲ್ಲರೂ ಎದ್ದುನಿಂತು ಗೌರವಿಸಿದರು. ಚತುರ್ಮುಖನೂ ಪರಶಿವನೂ ತಾವು ಕುಳಿತಿದ್ದ ಪೀಠದಿಂದ ಏಳದಿರಲು ದಕ್ಷನು ಕ್ರುದ್ಧನಾಗಿ ಈಶ್ವರನಿಗೆ ಯಾಗದಲ್ಲಿ ಹವಿರ್ಭಾಗವಿಲ್ಲದಿರಲೆಂದು ಹೇಳಿದನು. ಇದರಿಂದ ಕೋಪಗೊಂಡ ನಂದಿಯೂ ದಕ್ಷನು ಪಶುವೃತ್ತಿಯಿಂದ ಕುರಿಮುಖವುಳ್ಳವನಾಗಿ ಸಂಸಾರದಲ್ಲೇ ನವೆಯುತ್ತಿರಲಿ ಎಂದು ದಕ್ಷನನ್ನು ಶಪಿಸಿದನು. ದಕ್ಷನು ವಾಜಪೇಯ ಯಾಗವನ್ನು ಮಾಡಿ ಬೃಹಸ್ಪತಿಯಜ್ಞವನ್ನೂ ಮಾಡಲು ಆರಂಭಿಸಿದಾಗ ದಾಕ್ಷಾಯಿಣಿಯೂ ತನ್ನ ತಂದೆಯ ಯಾಗಕ್ಕೆ ಹೋಗಬೇಕೆಂದು ಪರಮೇಶ್ವರನನ್ನು ಪ್ರಾರ್ಥಿಸಿದಳು. ಪರಮೇಶ್ವರನು ಸಂಮತಿಸದಿದ್ದರೂ ಬಹಳ ಆಸೆಯಿಂದ ತಂದೆಯ ಮನೆಗೆ ಹೋದಾಗ ದಕ್ಷನು ಬಹಳ ತಿರಸ್ಕಾರದಿಂದ ಕಾಣಲು ಯೋಗಶಕ್ತಿಯಿಂದ ಸಮಾಧಿಜನ್ಯವಾದ ಯೋಗಾಗ್ನಿಯಿಂದ ಅಸುವನ್ನು ನೀಗಿದಳು. ಈ ವಿಷಯವನ್ನು ಕೇಳಿದ ಪರಶಿವನು ಬಹಳ ಕ್ರುದ್ಧನಾಗಿ ತನ್ನ ಜಟಾಕಲಾಪದಿಂದ ಒಂದು ಹಿಡಿ ಕೂದಲನ್ನು ಕಿತ್ತು ಎಸೆಯಲಾಗಿ ಭಯಂಕರಸ್ವರೂಪದ ಒಬ್ಬ ಪುರುಷನು ಆವಿರ್ಭವಿಸಿದನು. ಇವನೇ ವೀರಭದ್ರ. ಪರಮೇಶ್ವರನ ಆಜ್ಞೆಯಂತೆ ಈ ವೀರಭದ್ರನು ಸಕಲ ಪರಿವಾರದೊಡನೆ ಹೊರಟು ದಕ್ಷನ ಯಾಗಶಾಲೆಗೆ ಬಂದು ಯಜ್ಞಕ್ಕೆ ಬಂದಿದ್ದವರನ್ನೆಲ್ಲಾ ಹೆದರಿಸಿ ಯಾಗಶಾಲೆಯನ್ನು ನಾಶಪಡಿಸಿ ದಕ್ಷನ ಶಿರಸ್ಸನ್ನು ಉರುಳಿಸಿ ಯಾಗದ ಅಗ್ನಿಯಲ್ಲಿ ಸುಟ್ಟು ಈಶ್ವರನಲ್ಲಿಗೆ ಹೋಗಿ ಸೇರಿದನು.]

**वीरमातृ ವೀರಮಾತೃ** (स्त्री०) ವೀರಪುರುಷರನ್ನು ಪಡೆದ ತಾಯಿ. वीराणां माता।

**वीरविप्लावक ವೀರವಿಪ್ಲಾವಕ** (ಪುಂ) ಅವರ ವರ್ಗದವರಿಂದ ಸಂಪಾದಿಸಿದ ದ್ರವ್ಯದಿಂದ ಯಾಗಮಾಡುವವನು.

**वीरवृक्ष ವೀರವೃಕ್ಷ** (पुं०) 1. ಗೇರುಮರ. वीर इव वृक्षः दुःस्पर्शत्वात्। 2. ಮತ್ತಿಮರ.

**वीरसू ವೀರಸೂ** (स्त्री०) ವೀರರನ್ನು ಹೆತ್ತ ತಾಯಿ. वीरान् सूते—वीर+षूङ् (प्राणिगर्भविमोचने) "क्विप्" (३-२-६१)।

**वीरसेन ವೀರಸೇನ** (पुं०) ನಳಮಹಾರಾಜನ ತಂದೆ.

**वीरहन् ವೀರಹನ್** (पुं०) ವಿಷ್ಣು. स्वध्यानभञ्जकान् वीरान् हन्ति—हन (हिंसागत्योः) "क्विप्" (३-२-८७)। "स्वध्यानभञ्जकान् वीरान् हन्ति यः स तु वीरहा" इति निरुक्तिः। "वीरहा माधवो मधुः" वि० स०।

**वीरा ವೀರಾ** (स्त्री०) 1. ನೆಲನೆಲ್ಲಿಗಿಡ. 2. ಸುರುಸುರುಕೆ ಗಿಡ. 3. ಬಾಳೆಗಿಡ. 4. ಶೀವನೆಯ ಮರ. 5. ಮದ್ಯ. 6. ಕರಿಯ ನೆಲಗುಂಬಳ. 7. ಹಾಲುತೊಟ್ಟಿನ ಗಿಡ. 8. ಮಹಾಶತಾವರೀ ಗಿಡ. 9. ಕಲ್ಲತ್ತಿಗಿಡ. 10. ಹೊನಗೊನ್ನೆ. 11. ಅತಿಬಜೆ. 12. ಅಗುರು ಗಿಡ. "स्त्री सुराक्षीरकाकोलीतामलक्येलवालुके। पतिपुत्रवतीरम्भागम्भारीदुग्धिकासु च। मलपूक्षीरविदार्योः क्लीबं शृङ्गयां नलेऽपि च" मेदि०। 13. ಪತಿ ಮತ್ತು ಪುತ್ರ ಸಂಪತ್ತುಳ್ಳ ಹೆಂಗಸು.

**वीराशंसन ವೀರಾಶಂಸನ** (न०) 1. ಬಹಳ ಭಯಂಕರವಾದ ಯುದ್ಧಭೂಮಿ. वीराः आशंस्यन्ते अत्र —आ + शसि (इच्छायाम्) "ल्युट्" (३-३-११५)। वीरान् आशंसयति अद्य स्थास्यामि वा नवेति चिन्तां जनयति— आ+शंसु (स्तुतौ)+णिच् "ल्युः" वा (३-१-१३४)। "सा वीराशंसनं युद्धभूमिर्यातिभयप्रदा" अम०। 2. ಜೀವದ ಹಂಗಿಲ್ಲದೆ ಕೈಗೊಳ್ಳುವ ಸಾಹಸ ಕಾರ್ಯ.

**वीरासन ವೀರಾಸನ** (न०) ಯೋಗಾಸನಗಳಲ್ಲೊಂದು ವಿಧ. ದಕ್ಷಿಣ (ಬಲ) ಪಾದವನ್ನು ಎಡತೊಡೆಯ ಮೇಲಿರಿಸಿ ವಾಮ (ಎಡ) ಪಾದದ ಮೇಲೆ ಬಲತೊಡೆಯನ್ನಿಟ್ಟು ಕೊಡುವುದು ವೀರಾಸನವೆನಿಸುವುದು. "एकं पादं तथैकस्मिन्विन्यसेदूरुणि स्थितम्। इतरस्मिंस्तथाचोरुं वीरासनमितीरितम्" हठ० १-२७। ಈ ವೀರಾಸನವು ಜಪಕ್ಕೆ (ತಪಸ್ಸಿಗೆ) ಸಾಧನವಾದುದು. "वीरासनैर्ध्यानजुषामृषीणाममी समध्यासितवेदिमध्याः" रघु० १३-५२।

**वीरुध् ವೀರುಧ್** (स्त्री०) 1. ಹಬ್ಬಿರುವ ಲತೆ, ಹರಡಿಕೊಂಡು ಬೆಳೆದಿರುವ ಬಳ್ಳಿ. वि + रुधिर् (आवरणे) "क्विप्" (३-२-१७८)। दीर्घः (६-३-१३७)। "अपि त्वदावर्जितवारिसंभृतं प्रवालमासामनुबन्धि वीरुधाम्" कुमा० ५-३४। 2. ಲತೆ, ಶಾಖೆಗಳಿಲ್ಲದೆ ಬೆಳೆಯುವ ಬಳ್ಳಿ. "सपुष्पहासाः स निवेशवीरुधः" किरा० ४-१९। "टाप्" आपं चैव हलन्तानाम् भागुरिः। **वीरुधा ವೀರುಧಾ.**

**वीरेश ವೀರೇಶ, –ईश्वर –ಈಶ್ವರ** (पुं०) 1. ಪರಶಿವ, ಪರಮೇಶ್ವರ. 2. ಶ್ರೇಷ್ಠನಾದ ಒಬ್ಬ ಯೋಧ.

**वीरोज्झ ವೀರೋಜ್ಝ** (वि०) ಹೋಮ (ಅಗ್ನಿಕಾರ್ಯ) ಮಾಡದಿರುವ ಬ್ರಾಹ್ಮಣ.

**वीर्य ವೀರ್ಯ** (न०) 1. ಶಕ್ತಿ, ಪರಾಕ್ರಮ. वीरे साधु "यत्" (४-४-९८)। वीर्यतेऽनेन वीर (विक्रान्तौ)+ णिच् "यत्" (३-१-९७) वा। "परैरपर्यासितवीर्यसम्पदां पराभवोऽप्युत्सव एव मानिनाम्" किरा० १-४१। 2. ಶುಕ್ರಧಾತು, ರೇತಸ್ಸು. "अमी हि वीर्यप्रभवं भवस्य जयाय सेनान्यमुशन्ति देवाः" कुमा० ३-१५। 3. ಶಕ್ತಿ, ಬಲ, ಶರೀರ ಸಾಮರ್ಥ್ಯ, ತ್ರಾಣ. 4. ತೇಜಸ್ಸು, ಕಾಂತಿ. 5. ಪ್ರಭಾವ, ಗುಣ, ಪರಿಣಾಮಕಾರಿತ್ವ, ಕಾರ್ಯಕಾರಿತ್ವ. "अतिवीर्यवतीव भेषजे बहुरल्पीयसि दृश्यते गुणः" किरा० २-४। 6. ಸತ್ತ್ವ, ಬಲ, ಶಕ್ತಿ, ಪ್ರಭಾವ. "जाने तपसो वीर्यं सा बाला परवतीति मे विदितम्" शाकु० ३-२। "वीर्यं शुक्रे प्रभावे च तेजःसामर्थ्ययोरपि" मेदि०।

**वीर्यज ವೀರ್ಯಜ** (पुं०) ಪುತ್ರ, ಮಗ. वीर्याज्जायते— जनी (प्रादुर्भावे) "डः" (३-२-९८)।

**वीर्यवत् ವೀರ್ಯವತ್** (वि०) 1. ಶಕ್ತಿಯುತವಾದ. वीर्यमस्यास्ति "मतुप्" (५-२-९४)। "अतिवीर्यवतीव भेषजे बहुरल्पीयसि दृश्यते गुणः" किरा० २-४। 2. ಪರಾಕ್ರಮಶಾಲಿ. 3. ಪ್ರಭಾವಶಾಲಿ. 4. ಬಲಶಾಲಿ.

**वीवध ವೀವಧ** (पुं०) 1. ಅಡ್ಡೆ, ಕಾವಡಿ. विविधो वधो हननं गमनं वा अनेन वा। "उत्तरपदलोपः (वा० २-२-२४)। दीर्घः (६-३-१३७)। 2. ಹೊರಪ್ರದೇಶದಿಂದ ಊರೊಳಗೆ ಧಾನ್ಯ ಮೊದಲಾದುವು ಬರುವಿಕೆ. 3. ಮಾರ್ಗ, ದಾರಿ. 4. ಹೊರೆ, ಭಾರ. "निरुद्धवीवधासारप्रसारा गा इव व्रजम्" माघ० २-६४। "पर्याहारश्च मार्गश्च विवधौ वीवधौ च तौ" अम०।

**वीवधिक ವೀವಧಿಕ** (पुं०) ಅಡ್ಡೆಯಲ್ಲಿ ಸಾಮಾನು ಸಾಗಿಸುವವನು, ಕಾವಡಿಯಲ್ಲಿ ಸಾಮಾನು ಹೊರುವವನು. वीवधेन हरति—वीवध वा "ठञ्" (४-४-१७)। पक्षे "ठक्" (४-४-१५)। **वैवधिकः ವೈವಧಿಕಃ.**

**वृक ವೃಕ** (पुं०) 1. ತೋಳ. वर्कते—वृक (आदाने) "कक्" (उ० ३-४१)। "पापारम्भवतोर्मृगीव वृकयोर्भीरुर्गता गोचरम्" मालती० ५-२४। 2. ವಾಯಸ, ಕಾಗೆ. 3. ಸೃಗಾಲ, ನರಿ. 4. ರಾಕ್ಷಸ. 5. ಜಾಠರಾಗ್ನಿ. 6. ನೇಗಿಲು. 7. ಚೋರ. 8. ಕ್ಷತ್ರಿಯ. 9. ಬಕವೃಕ್ಷ. 10. ವಜ್ರಾಯುಧ. वर्कते शत्रुप्राणानादत्ते—वृक "क:" (३-१-१३५)।

**वृकदंश ವೃಕದಂಶ** (पुं०) ನಾಯಿ. वृकान् दशति—दंश (दशने) "अण्" (३-२-१)।

**वृकधूप ವೃಕಧೂಪ** (पुं०) 1. ಅನೇಕ ಸುಗಂಧ ವಸ್ತುಗಳಿಂದ ಮಾಡಿದ ಧೂಪ. वृक इव धूप:। 2. ಸರಲ ವೃಕ್ಷದ ರಸ, ಸರಳ ದೇವದಾರುವಿನ ರಸ. "वृकधूपस्तु सरलद्रवकृत्रिमधूपयो:" मेदि०।

**वृकधूर्त ವೃಕಧೂರ್ತ** (पुं०) ಜಂಬುಕ, ನರಿ. धूर्तो वृक:। परनिपात: (२-२-३१)।

**वृकाराति ವೃಕಾರಾತಿ** (पुं०) ನಾಯಿ. वृकस्याराति:। **—अरि: —ಅರಿಃ.**

**वृकोदर ವೃಕೋದರ** (पुं०) ಭೀಮಸೇನ. वृकस्येवोदरं यस्य। "उपपत्तिमदूर्जिताश्रयं नृपमूचे वचनं वृकोदर:" किरा० २-१। [ವಿವರಕ್ಕೆ "भीम" ಪದದಲ್ಲಿ ನೋಡಿ.]

**वृक्ण ವೃಕ್ಣ** (वि०) ಕತ್ತರಿಸಲ್ಪಟ್ಟ, ಸೀಳಲ್ಪಟ್ಟ, ತುಂಡು ಮಾಡಲ್ಪಟ್ಟ. ओ व्रश्चू (छेदने) "क्त:" (३-२-१०२)।

**वृक्ष ವೃಕ್ಷ** (पुं०) ಮರ. वृश्च्यते—ओ व्रश्चू (छेदने) "स:" (उ० ३-६६)।

**वृक्षक ವೃಕ್ಷಕ** (पुं०) ಸಣ್ಣಮರ, ಗಿಡ. ह्रस्वो वृक्ष:—अल्पार्थे "कन्" (५-३-८३)। "अतन्द्रिता सा स्वयमेव वृक्षकान् घटस्तनप्रस्रवणैर्व्यवर्धयत्" कुमा० ५-१४।

**वृक्षचर ವೃಕ್ಷಚರ** (पुं०) ವಾನರ, ಕಪಿ. वृक्षे चरति—चर (गतौ) "ट:" (३-२-१६)।

**वृक्षच्छाय ವೃಕ್ಷಚ್ಛಾಯ** (न०) ಮರಗಳ ನೆರಳು. वृक्षस्य वृक्षाणां वा छाया—वा क्लीबत्वम् (२-४-२५)। पक्षे **—छाया —ಛಾಯಾ.**

**वृक्षधूप ವೃಕ್ಷಧೂಪ** (पुं०) ಸರಳವೃಕ್ಷದ ಹಾಲುಮಡ್ಡಿ.

**वृक्षनाथ ವೃಕ್ಷನಾಥ** (पुं०) ವಟವೃಕ್ಷ, ಆಲದಮರ.

**वृक्षनिर्यास ವೃಕ್ಷನಿರ್ಯಾಸ** (पुं०) ಗೋಂದು, ಅಂಟು.

**वृक्षभिद् ವೃಕ್ಷಭಿದ್** (स्त्री०) ಕುಠಾರ, ಕೊಡಲಿ. वृक्षं भिनत्ति—भिदिर् (विदारणे) "क्विप्" (३-२-७६)।

**वृक्षभेदिन् ವೃಕ್ಷಭೇದಿನ್** (पुं०) 1. ಕೈಕೊಡಲಿ, ತುಂಡು ಕಾವಿನ ಕೊಡಲಿ. 2. ಮರವನ್ನು ಕಡಿಯುವ ಉಳಿ.

**वृक्षमर्कटिका ವೃಕ್ಷಮರ್ಕಟಿಕಾ** (स्त्री०) ಅಳಿಲು. वृक्षस्य मर्कटिका।

**वृक्षरुहा ವೃಕ್ಷರುಹಾ** (स्त्री०) ಬದನಿಕೆಗಿಡ. वृक्षे रोहति—रुह (बीजजन्मादौ) "क:" (३-१-१३५)।

**वृक्षवाटिका ವೃಕ್ಷವಾಟಿಕಾ** (स्त्री०) ಮಂತ್ರಿಗಳ ಮತ್ತು ವೇಶ್ಯೆಯರ ಉಪವನ, ಕೈತೋಟ. वृक्षाणां वाटिका।

**वृक्षादन ವೃಕ್ಷಾದನ** (पुं०) ಮರವನ್ನು ಕಡಿಯುವ ಉಳಿ. वृक्षमत्ति—अद (भक्षणे) "ल्युट्" (३-३-११३)। "वृक्षादनो वृक्षभेदी" अम०।

**वृक्षादनी ವೃಕ್ಷಾದನೀ** (स्त्री०) ಬದನಿಕೆ ಗಿಡ. वृक्षमत्ति—अद (भक्षणे) "ल्युट्" (३-३-११३)। "वन्दावृक्षादनी वृक्षरुहा जीवन्तिकेत्यपि" अम०।

**वृक्षाम्ल ವೃಕ್ಷಾಮ್ಲ** (पुं०) 1. ಅಮಟೆ ಮರ. वृक्षे अम्लो यस्य। (न०) 2. ಹುಣಿಸೆಹಣ್ಣು. वृक्षस्याम्लम्।

**वृक्षायुर्वेद ವೃಕ್ಷಾಯುರ್ವೇದ** (पुं०) ಮರಗಿಡಗಳಿಗೆ ಚಿಕಿತ್ಸೆಯನ್ನು ಹೇಳುವ ಆಯುರ್ವೇದ ಶಾಸ್ತ್ರ.

**वृक्षालय ವೃಕ್ಷಾಲಯ** (पुं०) ಪಕ್ಷಿ, ಹಕ್ಕಿ. वृक्ष: आलयो यस्य।

**वृजन ವೃಜನ** (न०) ಅಂತರಿಕ್ಷ, ಆಕಾಶ. वृजी (वर्जने) "क्यु:" (उ० २-८१)।

**वृजिन ವೃಜಿನ** (न०) 1. ಪಾಪ. वृजी (वर्जने) "इनच्" (उ० २-४७)। (पुं०) 2. ಕೇಶ, ಕೂದಲು. (वि०) 3. ಕುಟಿಲವಾದ, ವಕ್ರವಾದ. "वृजिनं कल्मषे क्लीबं केशे ना कुटिले त्रिषु" मेदि०। 4. ಕೆಂಪುಚರ್ಮ.

**वृत ವೃತ** (वि०) 1. ವರಿಸಲ್ಪಟ್ಟ, ಆಯ್ಕೆಮಾಡಲ್ಪಟ್ಟ. वृञ् (वरणे) "क्त:" (३-२-१०२)। "स्थाने वृता भूपतिभि: परोक्षै: स्वयंवरं साधुममंस्त भोज्या" रघु० ७-१३। 2. ಸುತ್ತುವರಿಯಲ್ಪಟ್ಟ, ಆವರಿಸಲ್ಪಟ್ಟ. वृञ् (आवरणे) "क्त:" (३-२-१०२)। "वृतस्त्वं पात्रसमितै: खट्वारूढ: प्रमादवान्" भट्टि० ५-१०। 3. ಮುಚ್ಚಲ್ಪಟ್ಟ, ಮರೆಮಾಡಲ್ಪಟ್ಟ. "संन्यास: कुलदूषणैरिव जनैर्मेघैर्वृतश्चन्द्रमा: विद्युन्नीचकुलोद्गतेव युवतिर्नैकत्र संतिष्ठते" मृच्छ० ५-१४। 4. ಪ್ರಾರ್ಥಿಸಲ್ಪಟ್ಟ, ಬೇಡಲ್ಪಟ್ಟ. "वृतं तेनेदमेव प्राक् मया चास्मै प्रतिश्रुतम्" कुमा० २-५६।

**वृति ವೃತಿ** (स्त्री०) 1. ಸುತ್ತುಗಟ್ಟುವುದು, ಆವರಿಸುವುದು. वृञ् (आवरणे) "क्तिन्" (३-३-९४)। 2. ವರಣ, ಆರಿಸುವುದು, ಆಯ್ಕೆಮಾಡುವುದು. वृञ् (वरणे) "क्तिन्" (३-३-९४)। 3. ಬೇಲಿ. "प्रत्यासन्नौ कुरवकवृतेर्माधवीमण्डपस्य" मेघ० २-१५।

**वृत्त ವೃತ್ತ** (वि०) 1. ನಡೆದುಹೋದ, ಕಳೆದುಹೋದ. वृतु (वर्तने) "क्तः" (३-४-७२)। "वृत्तवर्तिष्यमाणानां कथांशानां निदर्शकः" सा० द० ६-५५। 2. ವರ್ತುಲವಾದ, ಗುಂಡಾಗಿರುವ. "वृत्तानुपूर्वे च न चातिदीर्घे जङ्घे शुभे सृष्टवतस्तदीये" कुमा० १-३५। 3. ಉಂಟಾದ, ಉತ್ಪನ್ನವಾದ. "सम्बन्धमाभाषणपूर्वमाहुः वृत्तः स नौ संगतयोर्वनान्ते" रघु० २-५८। 4. ದೃಢವಾದ, ಸ್ಥಿರವಾದ. 5. ಓದಲ್ಪಟ್ಟ, ಅಭ್ಯಾಸಮಾಡಲ್ಪಟ್ಟ, ಅಧ್ಯಯನಮಾಡಲ್ಪಟ್ಟ. वृतु कर्म० "क्तः"। "वृत्तशस्त्रान् महारम्भान्" भट्टि० ९-१९। 6. ಆಚರಿಸಲ್ಪಟ್ಟ, ಅನುಷ್ಠಿಸಲ್ಪಟ್ಟ, ಮಾಡಲ್ಪಟ್ಟ. "स वृत्तचूडश्चलकाकपक्षकैरमात्यपुत्रैः सवयोभिरन्वितः" रघु० ३-२८। 7. ಮುಚ್ಚಲ್ಪಟ್ಟ, ಮರೆಮಾಡಲ್ಪಟ್ಟ. 8. ಗತಿಸಿದ, ಪ್ರಾಣವನ್ನು ತ್ಯಜಿಸಿದ. "वृत्तं युद्धे शूरमाश्लिष्य काचित्" माघ० १८-६०। 9. ತಿರುಗಿದ, ಸುತ್ತಿದ, ಸುತ್ತುತಿರುಗಿದ. 10. ಆವರಿಸಲ್ಪಟ್ಟ, ಸುತ್ತುಗಟ್ಟಲ್ಪಟ್ಟ. 11. ನಿಷ್ಪನ್ನವಾದ, ಸಿದ್ಧವಾದ. (पुं०) 12. ಕೂರ್ಮ, ಆಮೆ. (न०) 13. ನಡತೆ, ವರ್ತನೆ. "आपद्यपि सतीवृत्तं किं मुञ्चन्ति कुलस्त्रियः" कथास०। 14. ಪದ್ಯ, ಛಂದಃಶಾಸ್ತ್ರಲಕ್ಷಣದಿಂದ ಕೂಡಿದ ನಾಲ್ಕು ಪಾದಗಳುಳ್ಳ ಶ್ಲೋಕ. "पद्यं चतुष्पदी तच्च वृत्तं जातिरिति द्विधा। वृत्तमक्षरसंख्यातं जातिर्मात्राकृता भवेत्" छन्दोमं०। 15. ಚರಿತ್ರೆ, ಇತಿಹಾಸ, ಕಥೆ. "वृत्तं रामस्य वाल्मीकेः कृतिस्तौ किंनरस्वरौ" रघु० १५-६४। 16. ಸಮಾಚಾರ, ವೃತ್ತಾಂತ, ವಾರ್ತೆ. 17. ಆಚಾರ, ಅನುಷ್ಠಾನ, ಜೀವನದ ರೀತಿ. "धर्मेप्सवस्तु धर्मज्ञाः सतां वृत्तमनुष्ठिताः" मनु० १०-१२७। 18. ನಿಯಮಾನುಸಾರದ ವರ್ತನೆ, ಕರ್ತವ್ಯದ ಪಾಲನೆ, ಧರ್ಮದ ಗೆರೆಯನ್ನು ದಾಟದೆ ಧರ್ಮವನ್ನು ಪಾಲಿಸುವುದು. "किमत्र चित्रं यदि कामसूर्भूर्वृत्ते स्थितस्याधिपतेः प्रजानाम्" रघु० ५-३३। 19. ಸದಾಚಾರ. 20. ವಲಯ, ಮಂಡಲ.

**वृत्तगन्धि ವೃತ್ತಗಂಧಿ** (न०) ಗದ್ಯಕಾವ್ಯದ ಒಂದು ಭೇದ. वृत्तस्य पद्यस्य गन्धो लेशो यस्य। "वृत्तगन्धोज्झितं गद्यं मुक्तकं वृत्तगन्धि च" सा० द० ६-३३०।

**वृत्ततस् ವೃತ್ತತಸ್** (अव्य०) ವೃತ್ತದಿಂದ, ನಡತೆಯಿಂದ, ವರ್ತನೆಯಿಂದ. वृत्त "तसिः" (५-४-४६)। वृत्तेन न व्यथते न चलति इत्यर्थः।

**वृत्तफल ವೃತ್ತಫಲ** (पुं०) 1. ಬದರೀಗಿಡ, ಎಲಚಿಮರ. वृत्तं फलं यस्य। 2. ದಾಳಿಂಬೆ ಗಿಡ. (न०) 3. ಎಲಚಿ ಹಣ್ಣು. 4. ದಾಳಿಂಬೆ ಹಣ್ಣು. 5. ಮೆಣಸು.

**वृत्तशस्त्र ವೃತ್ತಶಸ್ತ್ರ** (वि०) ಶಸ್ತ್ರವಿದ್ಯೆಯನ್ನು ಕಲಿತವನು, ಶಸ್ತ್ರವಿದ್ಯಾಭ್ಯಾಸ ಮಾಡಿದವನು. वृत्तमधीतं शस्त्रं शस्त्रशास्त्रं येन। "वृत्तशस्त्रान् महारम्भान् अदान्तांस्त्रिदशैरपि" भट्टि० ९-१९।

**वृत्ताध्ययनर्द्धि ವೃತ್ತಾಧ್ಯಯನರ್ದ್ಧಿ** (स्त्री०) ವೇದವಿಹಿತವಾದ ಆಚಾರ ಮತ್ತು ನಿಯಮಪೂರ್ವಕ ವೇದಾಧ್ಯಯನ ಇವುಗಳಿಂದ ಉಂಟಾಗುವ ಬ್ರಹ್ಮವರ್ಚಸ್ಸಿನ ಅಭಿವೃದ್ಧಿ, –ವೃದ್ಧಿ.

**वृत्तान्त ವೃತ್ತಾಂತ** (पुं०) 1. ಸಮಾಚಾರ, ವಾರ್ತೆ. वृत्तस्य अन्तः समाप्तिः यत्र। "मातले न खलु विदितोऽयमाखण्डलेन वृत्तान्तः स्यात्?" शाकु० ७। 2. ಘಟನೆ, ಸಂಗತಿ, ಪ್ರಸಂಗ. "अनेन आरण्यकवृत्तान्तेन पर्याकुलाः स्मः" शाकु० १। 3. ಪ್ರಕ್ರಿಯೆ, ಅಧಿಕಾರ. 4. ಕಾರ್ತ್ಸ್ನ್ಯ, ಸಂಪೂರ್ಣತೆ. "वृत्तान्तः प्रक्रियायां स्यात् कार्त्स्न्यवार्ताप्रभेदयोः। प्रस्तावे" मेदि०।

**वृत्ति ವೃತ್ತಿ** (स्त्री०) 1. ಜೀವನೋಪಾಯ. वर्तन्ते जीवन्त्यनया—वृतु (वर्तने) "क्तिन्" (३-३-९४)। "प्राणानामनिलेन वृत्तिरुचिता सत्कल्पवृक्षे वने" शाकु० ७-१२। 2. ಸೂತ್ರಗಳ ವಿವರಣೆ, ಸೂತ್ರಗಳ ಅರ್ಥಗಳನ್ನು ವಿವರಿಸುವುದು. "सूत्रस्यार्थविवरणं वृत्तिः"। "सद्वृत्तिः सन्निबन्धना" माघ० २-११२। 3. ವ್ಯಾಪಾರ, ಕೆಲಸ, ಕ್ರಿಯೆ. "शतैस्तमक्ष्णामनिमेषवृत्तिभिर्हरिं विदित्वा हरिभिश्च वाजिभिः" रघु० ३-४३। 4. ನಡಗೆಯ ರೀತಿ, ನಡೆಯುವ ಕ್ರಮ. "विनयवारितवृत्तिरतस्तया न विवृतो मदनो न च संवृतः" शाकु० २-११। 5. ವರ್ತನೆ, ನಡವಳಿಕೆ, ವ್ಯವಹಾರ. "शुश्रूषस्व गुरून् कुरु प्रियसखीवृत्तिं सपत्नीजने" शाकु० ४-१७। 6. ಉದ್ಯೋಗ, ಜೀವನದ ಮುಖ್ಯ ಕರ್ತವ್ಯ, ಧರ್ಮ. "क्लिश्नाति लब्धपरिपालनवृत्तिरेनम्" शाकु० ५-६। 7. ಇರುವಿಕೆ. 8. ನಾಟಕಗಳಲ್ಲಿ ರಸಗಳನ್ನು ಪ್ರತಿಪಾದಿಸುವ ಕೈಶಿಕೀ ಮೊದಲಾದ ವೃತ್ತಿ, ರಸೋತ್ಪತ್ತಿಗೆ ಕಾರಣವಾಗುವ ವರ್ಣಗಳ ಜೋಡಣೆ, ಶೈಲಿ. (1) ಶೃಂಗಾರ

ರಸವನ್ನು ಪ್ರತಿಪಾದಿಸುವ ವೃತ್ತಿ ಕೈಶಿಕೀವೃತ್ತಿ. (2) ವೀರ ರಸದಲ್ಲಿ ಸಾತ್ತ್ವತೀವೃತ್ತಿ. (3) ರೌದ್ರರಸದಲ್ಲಿ ಆರಭಟೀ ವೃತ್ತಿ. (4) ಎಲ್ಲಾ ರಸಗಳಲ್ಲೂ ಭಾರತೀವೃತ್ತಿ. "शृङ्गारे कैशिकी वीरे सात्त्वत्यारभटी पुनः। रसे रौद्रे च बीभत्से वृत्तिः सर्वत्र भारती" सा० द० ६-१२२। 9. ವೇತನ, ಕೂಲಿ. 10. ಶಬ್ದದ ಅರ್ಥಬೋಧೆಗೆ ಕಾರಣವಾದ ಅಭಿಧಾದಿ ಮೂರು ಶಕ್ತಿಗಳು. (1) अभिधा (2) लक्षणा ಮತ್ತು (3) व्यञ्जना ಇವು ಮೂರು ಶಕ್ತಿಗಳು. "वाच्योऽर्थोऽभिधया बोध्यो लक्ष्यो लक्षणया मतः। व्यङ्ग्यो व्यञ्जनया ताः स्युः तिस्रः शब्दस्य शक्तयः" सा० द० २-३। 11. ಚಿತ್ತದ ಒಂದು ಅವಸ್ಥೆ. "योगश्चित्तवृत्तिनिरोधः"। 12. ಸುತ್ತಿ ತಿರುಗುವುದು. 13. ಜೀವನಕ್ರಮ, ಜೀವನದ ಪದ್ಧತಿ. "वार्धके मुनिवृत्तीनाम्" रघु० १-८। 14. ಗೌರವದಿಂದ ವರ್ತಿಸು ವುದು. "गुरोर्गुरौ सन्निहिते गुरुवद्वृत्तिमाचरेत्" मनु० २-२०४।

**वृत्तिकर्षित ವೃತ್ತಿಕರ್ಷಿತ** (वि०) ಜೀವನೋಪಾಯ ವಿಲ್ಲದೆ ಕಷ್ಟದಲ್ಲಿರುವವನು.

**वृत्तिस्थ ವೃತ್ತಿಸ್ಥ** (वि०) 1. ಒಳ್ಳೆಯ ನಡತೆಯುಳ್ಳ ವನು. 2. ಸರಿಯಾದ ಸ್ಥಿತಿಯಲ್ಲಿರುವವನು. 3. ಒಳ್ಳೆಯ ವಿಧೇಯನಾಗಿರುವವನು. वृत्तौ तिष्ठति — ष्ठा (गतिनिवृत्तौ) "कः" (३-२-४)।

**वृत्य ವೃತ್ಯ** (वि०) 1. ವರಿಸಲು ಯೋಗ್ಯವಾದ, ಆಯ್ಕೆ ಮಾಡಲು ಅರ್ಹವಾದ. 2. ವರಿಸಲ್ಪಡುವ, ಆಯ್ಕೆ ಮಾಡಲ್ಪಡುವ. वृञ् (वरणे) "क्यप्" (३-१-११०)।

**वृत्र ವೃತ್ರ** (पुं०) 1. ವೃತ್ರಾಸುರ, ಒಬ್ಬ ದಾನವ. ಇವನು ತ್ವಷ್ಟ್ರವಿನಿಂದ ಇಂದ್ರನ ಸಂಹಾರಕ್ಕಾಗಿ ಸೃಷ್ಟಿಸಲ್ಪಟ್ಟ ಒಬ್ಬ ಅಸುರ. ತ್ವಷ್ಟನು ಇಂದ್ರನಿಗೆ ಶತ್ರುವಾದ ಮಗ ನನ್ನು ಪಡೆಯುವ ಉದ್ದೇಶದಿಂದ ಮಾಡಿದ ಯಾಗದಲ್ಲಿ ಮಂತ್ರದ ಸ್ವರವ್ಯತ್ಯಾಸದಿಂದ ಇಂದ್ರನೇ ಶತ್ರುವಾಗಿರುವ ಮಗನು (ವೃತ್ರನು) ಜನಿಸಿ ಯುದ್ಧದಲ್ಲಿ ಇಂದ್ರನಿಂದ ಹತನಾದನು. 2. ರಿಪು, ಶತ್ರು. 3. ಮೇಘ, ಮೋಡ. 4. ಅಂಧಕಾರ. 5. ಒಂದು ಪರ್ವತ. "वृत्रो रिपौ घने ध्वान्ते शैलभेदे च दानवे" मेदि०। 6. ಇಂದ್ರ. 7. ಶಬ್ದ. "वृत्रो मेघे रिपौ ध्वान्ते दानवे वासवे गिरौ" हेम०।

**वृत्रशत्रु ವೃತ್ರಶತ್ರು** (पुं०) ಇಂದ್ರ. वृत्रस्य शत्रुः। —अरिः — ಅರಿಃ.

**वृत्रहन् ವೃತ್ರಹನ್** (पुं०) ಇಂದ್ರ. वृत्रं हतवान् वृत्र + हन (हिंसागत्योः) "क्विप्" (३-२-८७)।

**वृथा ವೃಥಾ** (अव्य०) 1. ವ್ಯರ್ಥವಾಗಿ, ನಿರರ್ಥಕವಾಗಿ. वृणोति—वृञ् (वरणे) "थाक्" बाहु०। 2. ವ್ಯರ್ಥ, ನಿಷ್ಪ್ರಯೋಜನ. "वृथा वृष्टिः समुद्रस्य तृप्तस्य भोजनं वृथा। वृथा दानं समृद्धस्य नीचस्य सुकृतं वृथा"।

**वृथाजन्मन् ವೃಥಾಜನ್ಮನ್** (न०) ಪ್ರಯೋಜನವಿಲ್ಲದ ಜನ್ಮ, ನಿರರ್ಥಕವಾದ ಜನ್ಮ. वृथा निरर्थकं जन्म। (1) ಪುತ್ರಸಂತಾನವಿಲ್ಲದವನ ಜನ್ಮ. (2) ಯಾವಾಗಲೂ ಧರ್ಮಕಾರ್ಯಗಳನ್ನು ಆಚರಿಸದವನ ಜನ್ಮ. (3) ಯಾವಾ ಗಲೂ ಪರಾನ್ನವನ್ನು ಭುಂಜಿಸುವವನ ಜನ್ಮ ಮತ್ತು (4) ಇತರರಿಗೆ ಯಾವಾಗಲೂ ತೊಂದರೆಯುಂಟುಮಾಡು ವವನ ಜನ್ಮ. ಈ ನಾಲ್ಕೂ ವೃಥಾ ಜನ್ಮಗಳು. "अपुत्रस्य वृथा जन्म धर्मबाह्या नराः सदा। परपाकं सदाऽश्नन्ति परतापरताश्च ये"।

**वृथादान ವೃಥಾದಾನ** (न०) ವ್ಯರ್ಥವಾದ ದಾನ. ಎಲ್ಲಾ ವಿಷಯಗಳಲ್ಲೂ ಒಳ್ಳೆಯ ಸೌಕರ್ಯಸಮೃದ್ಧಿಯಿರುವವ ನಿಗೆ ಮಾಡುವ ದಾನವು ವ್ಯರ್ಥ. "वृथा वृष्टिः समुद्रस्य तृप्तस्य भोजनं वृथा। वृथा दानं समृद्धस्य नीचस्य सुकृतं वृथा" गरुडपु०।

**वृद्ध ವೃದ್ಧ** (पुं०) 1. ಮುದುಕ, ಪ್ರಾಯ ಕಳೆದು ಹೆಚ್ಚು ವಯಸ್ಸಾದವನು. वृधु (वृद्धौ) "क्तः" (३-४-७२)। "वृद्धास्ते न विचारणीयचरिताः तिष्ठन्तु हुं वर्तते" उ० रा० ५-३४। ವಯಸ್ಸಾದ ಮಾತ್ರದಿಂದ ಮುದುಕ ನಲ್ಲ. ಸಕಾಲದಲ್ಲಿ ವಿದ್ಯಾಭ್ಯಾಸ ಮಾಡಿದವನು ವೃದ್ಧನು. "न तेन वृद्धो भवति येनास्य पलितं शिरः। यो वै युवाप्यधीयानः तं देवाः स्थविरं विदुः" मनु० २-१५६। 2. ಪಂಡಿತ, ವಿದ್ವಾಂಸ. (वि०) 3. ಹೆಚ್ಚಾಗಿರುವ, ವೃದ್ಧಿಹೊಂದಿರುವ. 4. ದೊಡ್ಡದಾಗಿರುವ. 5. ಚೆನ್ನಾಗಿ ಬೆಳೆದಿರುವ. 6. ಪೂಜ್ಯ, ಗೌರವಕ್ಕೆ ಅರ್ಹನಾದವನು. "वृद्धो जीर्णे प्रवृद्धे ज्ञे त्रिषु क्लीबं तु शैलजे" मेदि०। (न०) 7. ಒಂದು ಸುವಾಸನೆಯ ಧೂಪ.

**वृद्धकाक ವೃದ್ಧಕಾಕ** (पुं०) ದೊಡ್ಡಜಾತಿಯ ಕಾಗೆ, ಹೊಲೆ ಕಾಗೆ. वृद्धः काकः।

**वृद्धत्व ವೃದ್ಧತ್ವ** (न०) ಮುಪ್ಪು, ಮುದಿತನ. वृद्धस्य भावः "त्वः" (५-१-११९)। "तस्य धर्मरतेरासीद्वृद्धत्वं जरसा विना" रघु० १-२३।

**वृद्धदारक ವೃದ್ಧದಾರಕ** (पुं०) ಅನಂತನ ಗೊಂಡೆ ಸೊಪ್ಪು. वृद्धो दारकोऽस्मात्।

**वृद्धदारु ವೃದ್ಧದಾರು** (ನಂ) ವೃದ್ಧದಾರಕ ಗಿಡ, ಅನಂತನ ಗೊಂಡೆಸೊಪ್ಪು. वृद्धत्वनाशकं दारु यस्य ।

**वृद्धनाभि ವೃದ್ಧನಾಭಿ** (विं) ಬುಡ್ಡೆಯಾಗಿ ಬೆಳೆದ ಹೊಕ್ಕುಳುಳ್ಳವನು, ಉಬ್ಬಿರುವ ಹೊಕ್ಕುಳುಳ್ಳವನು. वृद्धः प्रवृद्धो नाभिर्यस्य ।

**वृद्धश्रवस् ವೃದ್ಧಶ್ರವಸ್** (पुं) ಇಂದ್ರ. वृद्धेभ्यः शृणोति — श्रु (श्रवणे) "असुन्" (उं ४-१८९) । वृद्धे श्रवसी यस्य इति वा ।

**वृद्धा ವೃದ್ಧಾ** (स्त्रीं) ಮುದುಕಿ, ಯೌವನ ಕಳೆದು ಐವತ್ತು ವಯಸ್ಸಿನ ಮೇಲೆ ಇರುವ ಹೆಂಗಸು. "बालेति गीयते नारी यावद्वर्षाणि षोडश । ततस्तु तरुणी ज्ञेया द्वात्रिंशद्वत्सरावधि । तदूर्ध्वमधिरूढा स्यात् पञ्चाशद्वत्सरावधि । वृद्धा तत्परतो ज्ञेया सुरतोत्सववर्जिता" भावप्रं ।

**वृद्धाङ्गुलि ವೃದ್ಧಾಂಗುಲಿ** (स्त्रीं) ಕೈಕಾಲುಗಳ ಹೆಬ್ಬೆರಳುಗಳು.

**वृद्धि ವೃದ್ಧಿ** (स्त्रीं) 1. ಹೆಚ್ಚುವುದು, ಅಧಿಕವಾಗುವುದು. वृधु (वृद्धौ) "क्तिन्" (३-३-९४) । "वृद्धिसङ्कोचविषमा गतागतसहायिनी । नियतिः केन लङ्घ्येत निजच्छायानुकारिणी" यादं १६-१२२ । 2. ಬೆಳೆಯುವುದು. "जन्मवृद्धिक्षयैर्नित्यं संसारयति चक्रवत्" मनुं १२-१२४ । 3. ಸಮೃದ್ಧಿ, ಅಭ್ಯುದಯ, ಅಭಿವೃದ್ಧಿ. "अथ तत्र पाण्डुतनयेन सदसि विहितं मधुद्विषः । मानमसहत न चेदिपतिः परवृद्धिमत्सरि मनो हि मानिनाम्" माघं १५-१ । 4. ವಿಷ್ಕಂಭ ಮೊದಲಾದ ಇಪ್ಪತ್ತೇಳು ಯೋಗಗಳಲ್ಲಿ ಹನ್ನೊಂದನೆಯ ಯೋಗ. 5. ಬಡ್ಡಿ, ಸಾಲದ ಹಣದ ಮೇಲಿನ ಅಧಿಕಾಂಶ. ["चक्रवृद्धि" ಪದದಲ್ಲಿ ನೋಡಿ.] 6. (ಚಂದ್ರನ) ಕಲೆಯೇರುವುದು, ದಿನ ದಿನಕ್ಕೆ ಕಲೆಯು ಹೆಚ್ಚುವುದು. ಕಲೆಯು ಏರುತ್ತಿರುವಾಗ (ಚಂದ್ರನು) ವೃದ್ಧಿ ಚಂದ್ರನಾಗುವನು. ಕ್ಷಯಹೊಂದುತ್ತಿರುವಾಗ ಕ್ಷೀಣಚಂದ್ರನಾಗುವನು. 7. ಬೆಳವಣಿಗೆ, ಹೆಚ್ಚುವುದು, ಅಧಿಕವಾಗುವುದು, ದೊಡ್ಡದಾಗುವುದು. 8. (ವ್ಯಾಕರಣಶಾಸ್ತ್ರದಲ್ಲಿ) आ ए ಮತ್ತು औ ವರ್ಣಗಳಿಗೆ ಉಕ್ತವಾದ ಒಂದು ಸಂಜ್ಞೆ. "वृद्धिरादैच्" पां सूं १-१-१ । 9. ಒಂದು ಔಷಧ. 10. ಹರ್ಷ, ಸಂತೋಷ. 11. ರಾಶಿ, ಗುಪ್ಪೆ, ಸಮೂಹ. 12. ಐಶ್ವರ್ಯ, ಸಂಪತ್ತು. "आपत्काले तु संप्राप्ते यन्मित्रं मित्रमेव तत् । वृद्धिकाले तु संप्राप्ते दुर्जनोऽपि सुहृद्भवेत्" पञ्चतं २-११८ । 13. ಜನನಾಶೌಚ, ಜ್ಞಾತಿಗಳಿಗೆ ಸಂತಾನೋತ್ಪತ್ತಿಯಾದಾಗ ವಿಹಿತವಾದ ಅಶುಚಿ. ಸಂತತಿಯು ವೃದ್ಧಿಯಾಗುವುದರಿಂದ ಅದಕ್ಕೆ "ವೃದ್ಧಿ" ಎಂದು ಹೆಸರು. 14. ಕಲ್ಲುಹೂವು.

**वृद्धिजीविका ವೃದ್ಧಿಜೀವಿಕಾ** (स्त्रीं) ಬಡ್ಡಿಯ ಹಣದಿಂದ ಜೀವಿಸುವುದು. वृद्ध्या जीविका ।

**वृद्धिद ವೃದ್ಧಿದ** (विं) ಬಡ್ಡಿಯನ್ನು ಕೊಡುವವನು. वृद्धिं ददाति — दाञ् (दाने) "कः" (३-२-३) ।

**वृद्धिमत् ವೃದ್ಧಿಮತ್** (विं) 1. ಸಮೃದ್ಧಿಯಿಂದ ಕೂಡಿದ, ಅಭಿವೃದ್ಧಿಯುಳ್ಳ. वृद्धि "मतुप्" (५-२-९४) । 2. ಐಶ್ವರ್ಯವಂತ, ಧನಿಕ. 3. ಏಳಿಗೆ ಹೊಂದಿರುವ, ಉಚ್ಛ್ರಾಯಸ್ಥಿತಿಯನ್ನು ಹೊಂದಿರುವ.

**वृद्धिश्राद्ध ವೃದ್ಧಿಶ್ರಾದ್ಧ** (नं) ಅಭ್ಯುದಯ ಶ್ರಾದ್ಧ, ಶುಭಕಾರ್ಯಗಳಲ್ಲಿ ಪಿತೃಗಳ ಸಂತೃಪ್ತಿಗಾಗಿ ಮಾಡುವ ಒಂದು ಕಾರ್ಯ.

**वृद्धोक्ष ವೃದ್ಧೋಕ್ಷ** (पुं) ಮುದಿ ಎತ್ತು, ವಯಸ್ಸಾದ ವೃಷಭ. उक्षा वृद्धः "अच्" (५-४-७७)। निपां ।

**वृद्ध्याजीव ವೃದ್ಧ್ಯಾಜೀವ** (विं) ಬಡ್ಡಿಯ ಹಣದಿಂದ ಜೀವಿಸುವವನು, ಬಡ್ಡಿಯೇ ಜೀವನೋಪಾಯವಾಗಿರುವವನು. वृद्ध्या आजीवति—आ+जीव (प्राणधारणे) "अच्" (३-१-१३४) । वृद्धिराजीवो जीविका यस्य ।

**वृधसान ವೃಧಸಾನ** (पुं) ಮನುಷ್ಯ. वृधु (वृद्धौ) "असानच्" (उं २-८७) ।

**वृधसानु ವೃಧಸಾನು** (पुं) 1. ಮನುಷ್ಯ. 2. ಪತ್ರ, ಎಲೆ. 3. ಕೃತಿ, ಕಾರ್ಯ.

**वृध्य ವೃಧ್ಯ** (विं) ಅಭಿವೃದ್ಧಿಪಡಿಸಲ್ಪಡುವ. वृधु (वृद्धौ) "क्यप्" (३-१-११०) ।

**वृन्त ವೃಂತ** (पुंनं) 1. ಹಣ್ಣು ಕಾಯಿ ಎಲೆ ಮೊದಲಾದುವುಗಳ ತೊಟ್ಟು, —ಕಾವು. वृणोति — वृञ् (वरणे) "क्तः" (उं ३-८९) नुम्च । बाहुं । "वृन्तात् श्लथं हरति पुष्पमनोकहानाम्" रघुं ५-६९ । 2. ಸ್ತನದ ಅಗ್ರಭಾಗ, ಕುಚದ ತುದಿ. "वृन्तं स्तनमुखे पुष्पबन्धे" हेमं ।

**वृन्ताक ವೃಂತಾಕ** (पुं) ಬದನೆ ಗಿಡ.

**वृन्ताकी ವೃಂತಾಕೀ** (स्त्रीं) ಬದನೆ ಗಿಡ.

**वृन्तिका ವೃಂತಿಕಾ** (स्त्रीं) ಸಣ್ಣ ತೊಟ್ಟು, ಸಣ್ಣ ಕಾವು.

**वृन्द ವೃಂದ** (नं) 1. ಸಮೂಹ; ಗುಂಪು. वृञ् (वरणे) "दन्" (उं ४-९८) । नुमागमः गुणाभावश्च निपां । "मन्दारप्रमुखस्य वृन्दारकतरुवृन्दस्य" चं रां ।

(ಪುಂ) 2. ಶತಕೋಟಿ ಸಂಖ್ಯೆ, ನೂರುಕೋಟಿ, ಮಹಾ ಬುರ್ಜದ, 1000000000.

**वृन्दा ವೃಂದಾ** (स्त्री०) 1. ಕಾಲನೇಮಿಯೆಂಬ ರಾಕ್ಷಸನ ಮಗಳು, ಜಲಂಧರರಾಕ್ಷಸನ ಹೆಂಡತಿ. 2. ಪರಮ ಭಾಗವತನಾದ ಕೇದಾರರಾಜನ ಮಗಳು. ಇವಳು ಲಕ್ಷ್ಮಿಯ ಅಂಶದಿಂದ ಜನಿಸಿ ದುರ್ವಾಸಮಹರ್ಷಿಯಿಂದ ವಿಷ್ಣು ಮಂತ್ರವನ್ನು ಪಡೆದು ಬಹಳ ವಿರಕ್ತಳಾಗಿ ಅರಣ್ಯಕ್ಕೆ ಹೋಗಿ ಅರವತ್ತುಸಹಸ್ರ ವರ್ಷಗಳಕಾಲ ತಪಸ್ಸನ್ನಾಚರಿಸಿ ಪ್ರಸನ್ನನಾದ ಶ್ರೀಕೃಷ್ಣನೇ ತನಗೆ ಪತಿಯಾಗಬೇಕೆಂಬ ವರವನ್ನು ಕೇಳಿದಳು. ಶ್ರೀಕೃಷ್ಣನು ಅವಳ ಅಪೇಕ್ಷೆಯಂತೆ ಬಹಳಕಾಲ ಅರಣ್ಯದಲ್ಲಿ ಅವಳೊಡನೆ ಸುಖವಾಗಿದ್ದನು. ಅವಳಿದ್ದ ವನಕ್ಕೆ "वृन्दावनम्" ಎಂದು ಹೆಸರಾಯಿತು.

**वृन्दार ವೃಂದಾರ** (वि०) 1. ಸುಂದರವಾದ, ಮನೋಹರವಾದ. 2. ಉತ್ತಮವಾದ. 3. ದೊಡ್ಡದಾದ, ಉದ್ದವಾದ.

**वृन्दारक ವೃಂದಾರಕ** (पुं०) 1. ದೇವತೆ. वृन्द "आरकन्" (वा० ५-२-१२२)। "मन्दारप्रमुखस्य वृन्दारकतरुवृन्दस्य" चं० रा०। 2. ಗುಂಪಿನ ಯಜಮಾನ. (वि०) 3. ಮನೋಹರವಾದ. 4. ಶ್ರೇಷ್ಠವಾದ. 5. ದೊಡ್ಡದಾದ. "वृन्दारको मनोरमे। सुरे श्रेष्ठे" हेम०।

**वृन्दावन ವೃಂದಾವನ** (न०) 1. ನಂದಗೋಕುಲದ ಸಮೀಪದ ಒಂದು ದೊಡ್ಡ ವನ. ಪೂತನಾ ಶಕಟಾಸುರ ತೃಣಾವರ್ತಾದಿ ರಾಕ್ಷಸರಿಂದ ಉಂಟಾದ ಭಯೋತ್ಪಾದಕ ಕೃತ್ಯಗಳಿಂದ ದೊಡ್ಡ ಉತ್ಪಾತವನ್ನು ಶಂಕಿಸಿದ ಸಕಲ ಯಾದವರೊಡನೆ ಗೋಕುಲವನ್ನು ಬಿಟ್ಟು ನಂದಗೋಪನು ಶ್ರೀರಾಮಕೃಷ್ಣರೊಡಗೂಡಿ ಬಂದು ವಾಸಮಾಡಿದ ವನವಿದು. "यावदौत्पातिकोऽरिष्टो व्रजं नाभिभवेदितः। तावद्बालानुपादाय यास्यामोऽन्यत्र सानुगाः। वनं वृन्दावनं नाम पशव्यं नवकाननम्। गोपगोपीगवां सेव्यं पुण्याद्रितृणवीरुधम्। तत्तत्राद्यैव यास्यामः शकटान् युङ्क्त माचिरम्। तच्छ्रुत्वैकधियो गोपा साधु साध्विति वादिनः। व्रजान् स्वान् स्वान् समायुज्य ययू रूढपरिच्छदाः। .......... गोप्यो रूढरथा नूत्न कुचकुङ्कुमकान्तयः। कृष्णलीला जगुः प्रीता निष्ककण्ठ्यः सुवाससः। तथा यशोदारोहिण्यावेकं शकटमास्थिते। रेजतुः रामकृष्णाभ्यां तत्कथाश्रवणोत्सुके। वृन्दावनं संप्रविश्य सर्वकालसुखावहम्। तत्र चक्रुर्व्रजावासं शकटैरर्धचन्द्रवत्" भाग० १०-११। 2. ತುಲಸೀಸಸ್ಯವನ್ನು ನೆಟ್ಟು ಬೆಳೆಸಲು ಸುತ್ತಲೂ ಕಟ್ಟೆ ಕಟ್ಟಿದ ಒಂದು ಮಣ್ಣಿನ ದಿಣ್ಣೆ.

**वृन्दावनान्तसञ्चारिन् ವೃಂದಾವನಾಂತಸಂಚಾರಿನ್** (पुं०) ಶ್ರೀಕೃಷ್ಣ. "वृन्दावनान्तसंचारी तुलसीदामभूषणः"।

**वृन्दावनेश्वर ವೃಂದಾವನೇಶ್ವರ** (पुं०) ಶ್ರೀಕೃಷ್ಣ.

**वृन्दावनेश्वरी ವೃಂದಾವನೇಶ್ವರೀ** (स्त्री०) ರಾಧಾದೇವಿ.

**वृन्दिष्ठ ವೃಂದಿಷ್ಠ** (वि०) 1. ಬಹಳ ದೊಡ್ಡದಾದ, ಬಹಳ ಹಿರಿದಾದ. 2. ಬಹಳ ಸುಂದರವಾದ. 3. ಬಹಳ ಶ್ರೇಷ್ಠವಾದ, ಬಹಳ ಮಂದಿಯಲ್ಲಿ ಶ್ರೇಷ್ಠನಾದ ಒಬ್ಬ. अयमेषामतिशयेन वृन्दारकः "इष्ठन्" (६-४-१५७)। वृन्दारकस्य वृन्दादेशश्च निपात्यते। "वृन्दिष्ठमार्चीद्रुसुधाधिपानां तं श्रेष्ठमेतं गुरुवद्गरिष्ठम्" भट्टि० २-४५।

**वृन्दीयस् ವೃಂದೀಯಸ್** (वि०) 1. ಇಬ್ಬರಲ್ಲಿ ಒಬ್ಬ ಅತಿಶಯವಾಗಿ ಶ್ರೇಷ್ಠನು. अयमनयोरतिशयेन वृन्दारकः—"ईयसुन्" (५-३-५७)। वृन्दादेशश्च निपा०। 2. ಇಬ್ಬರಲ್ಲಿ ಬಹಳ ಸುಂದರನಾದವನೊಬ್ಬ.

**वृश ವೃಶ** (पुं०) 1. ಆರ್ದ್ರಕ, ಹಸಿಶುಂಠಿ. वृश् (वरणे) "शक्" (उ० ४-१०४)। 2. ಮೂಲಂಗಿ. "वृश आर्द्रकं मूलकं च" सि० कौ०।

**वृश्चिक ವೃಶ್ಚಿಕ** (पुं०) 1. ಚೇಳು. व्रश्चू (छेदने) "किकन्" (उ० २-४०)। "कपिरपि च कापिशायनमदमत्तः वृश्चिकेन सन्दष्टः। अपि च पिशाचग्रस्तः किं ब्रूमो वैकृतं तस्य"। 2. ಏಡಿ, ನಳ್ಳಿ. 3. ಜರಿ, ಸಾವಿರಕಾಲು. 4. ಕಂಬಳಿಹುಳ. 5. ವೃಶ್ಚಿಕಮಾಸ. 6. ವೃಶ್ಚಿಕರಾಶಿ, ಮೇಷಾದಿ ಎಂಟನೆಯ ರಾಶಿ ಮತ್ತು ಲಗ್ನ. ವಿಶಾಖಾನಕ್ಷತ್ರದ 4ನೇ ಪಾದ ಅನೂರಾಧಾ ಮತ್ತು ಜ್ಯೇಷ್ಠಾನಕ್ಷತ್ರಗಳಿಂದ ಕೂಡಿದುದು ವೃಶ್ಚಿಕರಾಶಿ.

**वृष ವೃಷ** (पुं०) 1. ವೃಷಭ, ಎತ್ತು. वर्षति—वृषु (सेचने) "कः" (३-१-१३६)। "कैलासगौरं वृषमारुरुक्षोः पादार्पणानुग्रहपूतपृष्ठम्" रघु० २-३५। **ಒಳ್ಳೆಯ ಜಾತಿಯ ವೃಷಭದ ಲಕ್ಷಣ:** ಎದೆ ಬೆನ್ನು ತಲೆ ಹೊಟ್ಟೆ ಪಿರ್ರೆಗಳು ಇವು ಆರೂ ಪುಷ್ಟವಾಗಿ ಉಬ್ಬಿರುವ ವೃಷಭವು ಶ್ರೇಷ್ಠಜಾತಿಯದು. "उरः पृष्ठं शिरः कुक्षिः श्रोणी च वसुधाधिप। षडुन्नतानि धेनूनां पूजयन्ति विचक्षणाः" मत्स्यपु०। 2. ಪತಿ, ಗಂಡ. "स्ववृषं या परित्यज्य परवृषे वृषायते" काशीखं०।

3. ಧರ್ಮ. 4. ವೃಷಭರಾಶಿ ಮತ್ತು ವೃಷಭಲಗ್ನ. 5. ಮೂಷಿಕ, ಇಲಿ. 6. ಮನ್ಮಥ. 7. ಕಾಮಾಸಕ್ತ ಪುರುಷ. 8. ಆಡುಸೋಗೆ. 9. ಒಂದು ವಾಸ್ತು ಸ್ಥಾನ. 10. ಶತ್ರು. (वि०) 11. (ಸಮಸ್ತ ಪದಾಂತ್ಯದಲ್ಲಿ) ಶ್ರೇಷ್ಠ. 12. ಬಲಶಾಲಿ. 13. ವೀರ್ಯದ, ಜೀವಾಂಕುರದ. "वृषो गव्याखुधर्मयोः। पुंराशिभेदयोः श्रृङ्ग्यां वासके शुक्रलेऽपि च। श्रेष्ठे स्यादुत्तरस्थश्च" हेम०।

**वृषकर्मन् ವೃಷಕರ್ಮನ್** (पुं०) 1. ವಿಷ್ಣು, ನಾರಾಯಣ. वृषं तापत्रयनिर्वापणसुधासेकशीतलं कर्म यस्य। "श्रेयस्करं धर्मरूपं कर्म यस्य प्रचक्षते। वृषकर्मेति विख्यातः शुभकर्मप्रदो मनुः" इति निरुक्तिः। "वृषकर्मा वृषाकृतिः" वि० स०। (वि०) 2. ಧರ್ಮಕಾರ್ಯಗಳನ್ನು ಮಾಡುವವನು.

**वृषण ವೃಷಣ** (पुं०) 1. ಅಂಡಕೋಶ, ಬೀಜ. वर्षति— वृषु (सेचने) "क्युः" बाहु०। "युच्" (उ० २-७८) वा। (वि०) 2. ಚಿಮುಕಿಸುವ, ಸಿಂಪಡಿಸುವ.

**वृषणश्व ವೃಷಣಶ್ವ** (पुं०) ಇಂದ್ರನ ಕುದುರೆ.

**वृषदंशक ವೃಷದಂಶಕ** (पुं०) ಬಿಡಾಲ, ಬೆಕ್ಕು.

**वृषध्वज ವೃಷಧ್ವಜ** (पुं०) 1. ಪರಶಿವ, ಪರಮೇಶ್ವರ. वृषो ध्वजो यस्य। "जटाभिः स्निग्धताम्राभिराविरासीद्वृषध्वजः" काव्या० २-१२। 2. ಗಣಪತಿ.

**वृषन् ವೃಷನ್** (पुं०) 1. ಇಂದ್ರ, ದೇವೇಂದ್ರ. वर्षति— वृषु (सेचने) "कनिन्" (उ० १-१५४)। "प्राजापत्योपनीतं तदन्नं प्रत्यग्रहीन्नृपः। वृषेव पयसां सारमाविष्कृतमुदन्वता" रघु० १०-५२। 2. ವೃಷಭ, ಎತ್ತು. 3. ಕರ್ಣ. 4. ವೇದನೆಯು ತಿಳಿಯದಿರುವಿಕೆ. 5. ನೋವು. 6. ಅಗ್ನಿ. 7. ತುರಗ, ಕುದುರೆ. "वृषा तु वासवे। वृषभे तुरगे पुंसि" हेम०। "वृषा कर्णमहेन्द्रयोः" विश्व०। 8. ಮನುಷ್ಯ. (वि०) 9. ಮುಖ್ಯ, ಯಜಮಾನ, ಪ್ರಧಾನ. "प्राचेतसो मुनिवृषा प्रथमः कवीनाम्" म० वी० १-७।

**वृषपर्वन् ವೃಷಪರ್ವನ್** (पुं०) 1. ಪರಮೇಶ್ವರ, ಮಹಾದೇವ. 2. ಒಬ್ಬ ದೈತ್ಯ. ಇವನು ಶುಕ್ರಾಚಾರ್ಯರ ಬಲದಿಂದ ದೇವತೆಗಳೊಡನೆ ಬಹಳಕಾಲ ಯುದ್ಧಮಾಡಿದನು. ಇವನ ಮಗಳಾದ ಶರ್ಮಿಷ್ಠೆಯನ್ನು ಯಯಾತಿ ರಾಜನು ಮದುವೆಯಾಗಿದ್ದನು. 3. ವಿಷ್ಣು, ನಾರಾಯಣ. वृषाः वर्णाश्रमधर्माः पर्वाणि आरोहणसोपानपर्वाणि अस्य। "वृषा वर्णाश्रमा धर्माः पर्वाण्यारोहणे तु ते। यस्य सन्ति सदा सोऽयं वृषपर्वा प्रकीर्तितः" इति निरुक्तिः। "वृषाही वृषभो विष्णुः वृषपर्वा वृषोदरः" वि० स०।

**वृषभ ವೃಷಭ** (पुं०) 1. ಎತ್ತು. वृषु (सेचने) "अभच्" (उ० ३-१२४)। 2. ವಿಷ್ಣು, ನಾರಾಯಣ. वृषु (सेचने) "अभच्" (उ० ३-१२४)। अभिगच्छतो भक्तदयान् सिञ्चति इत्यर्थः। "अभिगच्छद्भक्तजनान् सुधावर्षणतोऽन्वहम्। वृषभश्च समाख्यातः सिञ्चन् भयहरो मनुः" इति निरुक्तिः। "वृषाही वृषभो विष्णुः" वि० स०। 3. ಹೆರಿಗೆಹಾಲೆಯೆಂಬ ಒಂದು ಮೂಲಿಕೆ. 4. ವೃಷಭರಾಶಿ ಮತ್ತು ಲಗ್ನ. 5. ನಾಲ್ಕು ಜಾತಿಯ ಪುರುಷರಲ್ಲೊಬ್ಬ. **ನಾಲ್ಕು ಜಾತಿಯ ಪುರುಷರು :** (1) शशकः (2) मृगः (3) वृषभः ಮತ್ತು (4) हयः। ಪದ್ಮಿನೀ ಚಿತ್ರಿಣೀ ಶಂಖಿನೀ ಮತ್ತು ಹಸ್ತಿನೀ ಎಂಬ ನಾಲ್ಕು ಜಾತಿಯ ಸ್ತ್ರೀಯರು ಕ್ರಮವಾಗಿ ಈ ನಾಲ್ಕು ಜಾತಿಯ ಪುರುಷರಿಂದ ತೃಪ್ತಿ ಹೊಂದುವರು. "शशके पद्मिनी तुष्टा चित्रिणी रमते मृगम्। वृषभे शङ्खिनी तुष्टा हस्तिनी रमते हयम्" रतिमञ्जरी। (वि०) 6. ಶ್ರೇಷ್ಠ. "जितमुडुपतिना नमः सुरेभ्यो द्विजवृषभा निरुपद्रवा भवन्तु" रत्ना० १-४।

**वृषभगति ವೃಷಭಗತಿ** (पुं०) ಪರಮೇಶ್ವರ. वृषभेण गतिर्यस्य।

**वृषभध्वज ವೃಷಭಧ್ವಜ** (पुं०) ಪರಮೇಶ್ವರ, ಪರಶಿವ. वृषभः ध्वजः चिह्नं यस्य। "अमुं पुरः पश्यसि देवदारुं पात्रीकृतोऽसौ वृषभध्वजेन" रघु० २-३६।

**वृषभासा ವೃಷಭಾಸಾ** (स्त्री०) ಅಮರಾವತಿ, ಇಂದ್ರನ ನಗರ. वृषेण धर्मेण भासते। "वृषभासा सुरपुरी वनमैन्द्रम्" त्रिकाण्ड०।

**वृषय ವೃಷಯ** (पुं०) ಆಶ್ರಯ, ಅವಲಂಬನ. वृञ् (वरणे) "कयन्" (उ० ३-१००)। विषयः आश्रयः सि० कौ०।

**वृषल ವೃಷಲ** (पुं०) 1. ಲಶುನ, ಬೆಳ್ಳುಳ್ಳಿ. वृषु (सेचने) "कलच्" (उ० १-१०६)। 2. ನಾಲ್ಕನೆಯ ವರ್ಣದವನು. वृषं धर्मं लाति — ला (आदाने) "कः" (३-२-३)। 3. ಚಂದ್ರಗುಪ್ತರಾಜ. "भवद्भिरेव मदन्तरेण प्रोत्साह्य रोषितो वृषलः" मुद्रा० ३। 4. ಕರ್ತವ್ಯ ಭ್ರಷ್ಟನಾದ ಬ್ರಾಹ್ಮಣ. 5. ಅಶ್ವ, ಕುದುರೆ. "वृषलस्तुरगे शूद्रे" हेम०।

**वृषली ವೃಷಲೀ** (स्त्री०) 1. ಶೂದ್ರಸ್ತ್ರೀ, ಶೂದ್ರನ ಪತ್ನಿ. वृषलस्य स्त्री—"ङीष्" (४-१-४८)। 2. ವಿವಾಹವಾಗದೆ ಋತುಮತಿಯಾಗಿ ತಂದೆಯ ಮನೆಯಲ್ಲಿರುವ ಕನ್ಯೆ. "पितुर्गेहे च या कन्या रजः पश्यत्यसंस्कृता। भ्रूणहत्या पितुस्तस्याः सा कन्या वृषली स्मृता"। 3. ತನ್ನ ಪತಿಯನ್ನು ಬಿಟ್ಟು ಪರಪುರುಷನನ್ನು ಸೇರಿರುವ ಹೆಂಗಸು. "स्ववृषं या परित्यज्य परवृषं वृषायते। वृषली सा हि विज्ञेया न शूद्री वृषली भवेत्" काशीखं०। 4. ರಜಸ್ವಲೆಯಾದ ಹೆಂಗಸು.

**वृषलीपति ವೃಷಲೀಪತಿ** (पुं०) ಶೂದ್ರಸ್ತ್ರೀಯನ್ನು ಮದುವೆಯಾದ ಬ್ರಾಹ್ಮಣ. "यस्तु तां वरयेत्कन्यां ब्राह्मणो ज्ञानदुर्बलः। अश्राद्धेयमपाङ्क्तेयं तं विद्याद्वृषलीपतिम्"।

**वृषलोचन ವೃಷಲೋಚನ** (पुं०) ಮೂಷಿಕ, ಇಲಿ. वृषस्य लोचन इव लोचनं यस्य।

**वृषवाहन ವೃಷವಾಹನ** (पुं०) ಪರಮೇಶ್ವರ. वृषो वाहनमस्य।

**वृषस्कन्ध ವೃಷಸ್ಕಂಧ** (वि०) ವೃಷಭದಂತೆ ಉಬ್ಬಿದ ಹೆಗಲುಳ್ಳವನು. वृषस्य वृषभस्य स्कन्ध इव स्कन्धो यस्य। "व्यूढोरस्को वृषस्कन्धः सालप्रांशुर्महाभुजः" रघु० १-१३।

**वृषस्यन्ती ವೃಷಸ್ಯನ್ತೀ** (स्त्री०) ಕಾಮೇಚ್ಛೆಯುಳ್ಳವಳು, ರತಿಗಾಗಿ ಪುರುಷನನ್ನು ಅಪೇಕ್ಷಿಸುವವಳು. वृषमात्मनः इच्छति—"क्यच्" (३-१-८)। असुगागमः (७-१-५१)। लटि "शतृ" (३-२-१२४)। "ङीप्" (४-१-६)। "लक्ष्मणं सा वृषस्यन्ती महोक्षं गौरिवाऽगमत्" भट्टि० ४-३०।

**वृषा ವೃಷಾ** (स्त्री०) ಇಲಿಯಾಲದ ಗಿಡ. वर्षति—वृषु (सेचने) "कः" (३-१-१३५)।

**वृषाकपायी ವೃಷಾಕಪಾಯೀ** (स्त्री०) 1. ಲಕ್ಷ್ಮಿ. 2. ಗೌರಿ, ಪಾರ್ವತಿ. वृषाकपेःस्त्री—ऐकारादेशः "ङीप्" च (४-१-३७)। "वृषाकपायी श्रीगौर्योः" अम०। 3. ಸ್ವಾಹಾದೇವಿ. 4. ಶಚೀದೇವಿ. 5. ಸೂರ್ಯನ ಪತ್ನಿ ಸಂಜ್ಞಾದೇವಿ. 6. ಶತಾವರಿ ಗಿಡ. 7. ಸೀಹಾಲೆ ಗಿಡ. "वृषाकपायी श्रीगौरीवरीजीवन्तिकासु च" मेदि०।

**वृषाकपि ವೃಷಾಕಪಿ** (पुं०) 1. ವಿಷ್ಣು. वृषं धर्मं न कम्पयति—कपि (किञ्चिच्चलने) + णिच् "इः" (उ० ४-१४३)। वृषो धर्मः तद्रूपश्चासौ कपिश्च श्रेष्ठवराहः इति वा। "कपिर्वराहश्श्रेष्ठश्च धर्मश्च वृष उच्यते। तस्माद् वृषाकपिः प्रोक्तो वस्वर्णोऽभीष्टदो मनुः" इति निरुक्तिः। "वृषाकपिरमेयात्मा" वि० स०। 2. ಪರಶಿವ, ಪರಮೇಶ್ವರ. वृषो धर्मः वृषा इन्द्रो वा कपिरिव वशे यस्य इति वा। वृष्णः इन्द्रस्य अकं वृषाकं पियति—पि (गतौ) अन्तर्भावितण्यर्थो वा। इन्द्रदुःखं प्राप्नोति प्रापयति वा दैत्यान् रक्षकत्वात् इति वा। वर्षति कामान्—वृषु "कः" (३-१-१३५)। आकम्पयति पापानि—कपि "इः"। वृषश्चासावाकपिश्च इति वा। 3. ಅಗ್ನಿ. 4. ಇಂದ್ರ. 5. ಸೂರ್ಯ. "वृषाकपिः पुमान् कृष्णे शङ्करे जातवेदसि" मेदि०।

**वृषाकृति ವೃಷಾಕೃತಿ** (पुं०) ವಿಷ್ಣು, ನಾರಾಯಣ. वृषा धर्मरूपा आकृतिः आकारोऽस्य। "धर्मरूपाकृतिर्यस्य स वृषाकृतिरुच्यते" इति निरुक्तिः। "वृषकर्मा वृषाकृतिः" वि० स०।

**वृषाङ्क ವೃಷಾಂಕ** (पुं०) 1. ಪರಮೇಶ್ವರ. वृषोऽङ्कोऽस्य। "पीते गरे वृषाङ्केण प्रीतास्तेऽमरदानवाः" भाग० ८-८-१। 2. ಸಾಧು, ಸತ್ಪುರುಷ. 3. ಗೇರುಮರ. 4. ಷಂಡ, ನಪುಂಸಕ. "वृषाङ्कौ शिवसज्जनौ" नानार्थर०। "वृषाङ्कौ शिवभल्लातौ" त्रिकाण्ड०। 5. ದೊಡ್ಡ ಎತ್ತು, ದೊಡ್ಡ ವೃಷಭ. "वृषाङ्कः शङ्करे साधौ भल्लातकमहोक्षयोः" विश्व०।

**वृषाङ्कज ವೃಷಾಂಕಜ** (पुं०) ಡಮರುವಾದ್ಯ.

**वृषाञ्चन ವೃಷಾಂಚನ** (पुं०) ಪರಮೇಶ್ವರ. वृषेण अञ्चति गच्छति—अञ्चु (गतौ) "ल्युः" (३-१-१३४)।

**वृषान्तक ವೃಷಾಂತಕ** (पुं०) ವಿಷ್ಣು. वृषस्य वृषभासुरस्य अन्तकः।

**वृषायण ವೃಷಾಯಣ** (पुं०) 1. ಶಿವ, ಮಹಾದೇವ. वृषेण अयनं गमनमस्य। 2. ಗುಬ್ಬಚ್ಚಿ.

**वृषाहार ವೃಷಾಹಾರ** (पुं०) ಬಿಡಾಲ, ಬೆಕ್ಕು. वृषः मूषिकः आहारोऽस्य।

**वृष्टि ವೃಷ್ಟಿ** (स्त्री०) ಮಳೆ, ಮೋಡದಿಂದ ನೀರು ಸುರಿಯುವುದು. वृषु (सेचने) "क्तिन्" (३-३-९४)। ಸೂರ್ಯನು ತನ್ನ ಕಿರಣಗಳಿಂದ ಸಮುದ್ರದ ನೀರನ್ನು ಆಕರ್ಷಿಸಿ ಮೇಘಗಳೊಡನೆ ಸೇರಿಸುವನು. ವಾಯು ಪ್ರೇರಿತವಾದ ಮೇಘವು ಪರಮಾತ್ಮನ ಇಚ್ಛೆಯಂತೆ ಯಥೋಚಿತವಾದ ಸ್ಥಳಗಳಲ್ಲಿ ಆಯಾಕಾಲಗಳಲ್ಲಿ ಮಳೆಯನ್ನು ಸುರಿಸುವುದು. "हस्ती समुद्रादादाय करेण

जलमीप्सितम्। दद्यादघनाय तद्वाद्वातेन प्रेरितो घनः। स्थाने स्थाने पृथिव्यां च काले काले यथोचितम्। ईश्वरेच्छयाविर्भूतं तूर्णं भूतं प्रतिबन्धकम्। भूतं भव्यं भविष्यं च महत् क्षुद्रं च मध्यमम्। धात्रा निरूपितं कर्म केन तात निवार्यते"॥ **ಮಳೆಬೀಳುವ ಸೂಚನೆಗಳು :** ಮಯೂರಗಳು ಮೇಘಗರ್ಜನೆಯನ್ನು ಕೇಳಿ ಸಂತೋಷದಿಂದ ಕೇಕೆಹಾಕುತ್ತ ನರ್ತನಮಾಡುತ್ತಿದ್ದರೆ ಮಳೆಯು ಸನ್ನಿಹಿತಕಾಲದಲ್ಲೇ ಬೀಳುವುದೆಂದು ತಿಳಿಯಬಹುದು. "मयूराः स्तनयित्नूनां शब्देन हृषिता मुहुः। केकायन्ति प्रतिवनं सततं वृष्टिसूचकाः"। ಈ ಮಳೆಯಿಂದ ಸಸ್ಯಗಳು. ಸಸ್ಯಗಳಿಂದ ಅನ್ನ. ಅನ್ನದಿಂದ ಪ್ರಜೆಗಳ ಉತ್ಪತ್ತಿ. "अन्नाद्वै प्रजाः प्रजायन्ते" तै० उ०।

**वृष्टिजीवन ವೃಷ್ಟಿಜೀವನ** (पुं०) ಮಳೆಯಿಂದ ಸಸ್ಯಗಳು ಬೆಳೆಯುವ ಭೂಮಿ. वृष्ट्या जीवनं यस्मिन्।

**वृष्टिभू ವೃಷ್ಟಿಭೂ** (पुं०) ಭೇಕ, ಮಂಡೂಕ, ಕಪ್ಪೆ. वृष्टौ वर्षाकाले भूरुत्पत्तिर्यस्य। वर्षाकाले भवति—भू (सत्तायाम्) "क्विप्" (३-२-१७९) वा।

**वृष्णि ವೃಷ್ಣಿ** (पुं०) 1. ಶ್ರೀಕೃಷ್ಣ. 2. ಯಾದವ. वृषु (सेचने) "निः" (उ० ४-८९)। "वृष्ण्यन्धका वैरिपुरीमवृण्वन्" याद० २०-१४। 3. ಟಗರು, ಮೇಷ. (वि०) 4. ಪಾಷಂಡ, ವೇದಬಾಹ್ಯ. (ನಾಸ್ತಿಕರಾದ ಕಾಪಾಲಿಕ ಮ್ಲೇಚ್ಛ ಜೈನ ಬೌದ್ಧ ಮೊದಲಾದವರು). 5. ಕುಪಿತ, ಕೋಪಗೊಂಡವನು.

**वृष्णिगर्भ ವೃಷ್ಣಿಗರ್ಭ** (पुं०) ಶ್ರೀಕೃಷ್ಣ.

**वृष्य ವೃಷ್ಯ** (वि०) 1. ಧರ್ಮಕ್ಕೆ ಹಿತವಾದ. वृषाय धर्माय (धर्मकार्याचरणाय) हितः—वृष "यत्" (६-१-५)। 2. ಕಾಮುಕನಿಗೆ ಹಿತವಾದ (ಕಾಮುಕನ ವೀರ್ಯವೃದ್ಧಿಗೆ ಹಿತವಾದ). वृष "यत्"। (पुं०) 3. ಮಾಷ, ಉದ್ದು. (न०) 4. ವಾಜೀಕರಣ, ಶಕ್ತಿಯನ್ನು ವೃದ್ಧಿಪಡಿಸುವುದು. वृषु (सेचने) वा "क्यप्" (३-१-१२०)। पक्षे वर्ष्यम्।

**वृष्या ವೃಷ್ಯಾ** (स्त्री०) 1. ಋದ್ಧಿಯೆಂಬ ಒಂದು ಔಷಧ. 2. ಶತಾವರಿ. 3. ನೆಲ್ಲಿಗಿಡ.

**वेकट ವೇಕಟ** (पुं०) 1. ತರುಣ, ಪ್ರಾಯದವನು. 2. ಅಕ್ಕಸಾಲೆ, ಚಿನ್ನ ಬೆಳ್ಳಿ ಆಭರಣವನ್ನು ತಯಾರಿಸುವವನು. 3. ಹಾಸ್ಯಗಾರ, ವಿದೂಷಕ.

**वेग ವೇಗ** (पुं०) 1. ರಭಸ, ಜೋರು, ಬಿರುಸು. ओ विजी (भयचलनयोः) "घञ्" (३-३-१८)। "खेदायतश्वसितवेगनिरस्तमुग्धमूर्धन्यरत्ननिकरैरिव हासितकानि" माघ० ५-३०। 2. ಪ್ರವಾಹ. 3. ಬಲ, ಶಕ್ತಿ. "मदनज्वरस्य वेगात्" काद०। 4. ವಿಷ ಮೊದಲಾದವುಗಳ ತೀವ್ರಗತಿ, —ಬೇಗ ವ್ಯಾಪಿಸುವುದು, —ಶೀಘ್ರವಾಗಿ ಹರಡುವುದು. "चिराद्वेगारम्भी प्रसृत इव तीव्रो विषरसः" उ० रा० २-२६। 5. ವಿಚಾರಮಾಡದೆ ಮುಂದೆ ತಳ್ಳುವುದು, ಥಟ್ಟನೆ ನೂಕುವುದು. "कृत्यं न कुरुते वेगात् न स सन्तापमाप्नुयात्" पञ्चतं० १-११८। 6. ವೀರ್ಯ, ರೇತಸ್ಸು. 7. ಒಬ್ಬನ ಊಟಕ್ಕಾಗಿ ಮಾಡುವ ಅಡಿಗೆ. "वेगो रयप्रवाहयोः। रेतःकिम्पाकयोश्चापि" हेम०। 8. ಮಲಮೂತ್ರಗಳು ಬಿರುಸಿನಿಂದ ಹೊರಡುವುದು. "स्वभावतः प्रवृत्तानां मलादीनां जिजीविषुः। न वेगान्धारयेद्धीरः कामादीनां च धारयेत्"। 9. ಪ್ರೇಮ, ಪ್ರೀತಿ. 10. ಸಂತೋಷ.

**वेगनाशन ವೇಗನಾಶನ** (पुं०) ಶ್ಲೇಷ್ಮ, ಕಫ.

**वेगविधारण ವೇಗವಿಧಾರಣ** (न०) ವೇಗವನ್ನು ತಡೆಯುವುದು. वेगस्य विधारणम्।

**वेगसर ವೇಗಸರ** (पुं०) ವೇಗವಾಗಿ ನಡೆಯುವ ಅಶ್ವ, ಕುದುರೆ. वेगेन सरति—सृ (गतौ) "अच्" (३-१-१३४)।

**वेगित ವೇಗಿತ** (वि०) ವೇಗವುಂಟಾಗಿರುವ, ಬಿರುಸಾಗಿರುವ. वेगोऽस्य सञ्जातः "इतच्" (५-२-३६)।

**वेगिन् ವೇಗಿನ್** (वि०) 1. ವೇಗವುಳ್ಳ, ಜೋರಾಗಿರುವ, ಬಿರುಸಾಗಿರುವ. वेगोऽस्यास्ति "इनिः" (५-२-११५)। "अश्वाश्च वेगिनः सन्ति रथा वायुजवा मम" हरिवं०। (पुं०) 2. ಗಿಡುಗ ಹಕ್ಕಿ.

**वेगिनी ವೇಗಿನೀ** (स्त्री०) ನದಿ, ಹೊಳೆ.

**वेण ವೇಣ** (पुं०) ವೈದೇಹಕನಿಂದ ಅಂಬಷ್ಠೆಯಲ್ಲಿ ಹುಟ್ಟಿದ ಒಬ್ಬ ಸಂಕರಜಾತಿಯವನು. "वैदेहकेन त्वम्बष्ठ्यामुत्पन्नो वेण उच्यते" मनु० १०-१९।

**वेणि ವೇಣಿ, —णी —ಣೀ** (स्त्री०) 1. ಹೆಣೆಯಲ್ಪಟ್ಟ ತಲೆಯ ಕೂದಲು, —ಹೆಂಗಸಿನ ತಲೆಯ ತುರುಬು. वेणति—वेणृ (निशामनादिषु) "इन्" (उ० ४-११८)। वी (गतिव्याप्त्यादौ) "निः" (उ० ४-४८) वा। "सिन्दूरितानेकपकङ्कणाङ्कितः तरङ्गिणी वेणिरिवायता भुवः" माघ० १२-७५। 2. ಪತಿಯ ವಿರಹಕಾಲದಲ್ಲಿ ಪತ್ನಿಯು ಕೇಶಸಂಸ್ಕಾರವಿಲ್ಲದೆ ಗಂಟುಹಾಕಿದ ಕೇಶಪಾಶ. "गुम्फिताः शिरसि वेणयोऽभवन्न प्रफुल्लसुरपादपस्रजः" माघ० १४-३०। 3. ಜಲಪ್ರವಾಹ. "त्वय्यारूढे

शिखरमचलः स्निग्धवेणीसवर्णे" मेघ० १-१८। 4. ನದಿಗಳ ಸಂಗಮ, ಎರಡು ಮೂರು ನದಿಗಳು ಒಟ್ಟಿಗೆ ಸೇರುವುದು. ಗಂಗಾ ಯಮುನಾ ಮತ್ತು ಸರಸ್ವತೀ ನದಿಗಳು ಪ್ರಯಾಗದಲ್ಲಿ ಸೇರುವುದು ತ್ರಿವೇಣೀ ಸಂಗಮ.

**वेणिका ವೇಣಿಕಾ** (स्त्री०) ಜಡೆ, ಹೆಣೆದ ಕೇಶಪಾಶ.

**वेणी ವೇಣೀ** (स्त्री०) ದೇವತಾಳ ವೃಕ್ಷ.

**वेणीबन्ध ವೇಣೀಬಂಧ** (पुं०) ತಿರುಚಿ ಗಂಟುಹಾಕಲ್ಪಟ್ಟ ಕೇಶಪಾಶ. वेण्या बन्धः। "मोक्ष्यध्वे सुरबन्दीनां वेणीबन्धानदूषितान्" रघु० १०-४७।

**वेणीसंहार ವೇಣೀಸಂಹಾರ** (पुं०) 1. ಬಿಚ್ಚಿದ್ದ ಕೇಶಪಾಶವನ್ನು ಸೇರಿಸಿ ಗಂಟುಹಾಕುವುದು. वेण्याः संहारः। "एष खलु पूरितप्रतिज्ञाभारो नाथस्ते वेणीसंहारं कर्तुं त्वामेवान्विष्यति" वेणी० ६। (न०) 2. ವೇಣೀಸಂಹಾರ ನಾಟಕ. वेण्याः संहारो मोक्षणं यत्र।

**वेणु ವೇಣು** (पुं०) 1. ವಂಶ, ಬಿದಿರು. अज (गतिक्षेपणयोः) "णुः" (उ० ३-३८)। वी इत्यादेशः (२-४-५६)। "वेणुमस्करतेजनाः" अम०। "सा वक्रनखधारिण्या वेणुकर्कशपर्वया" रघु० १२-६४। 2. ವೇಣುವಾದ್ಯ, ಕೊಳಲು. "अव्याजमञ्जुलमुखाम्बुजमुग्धभावैरास्वाद्यमाननिजवेणुविनोदनादम्" कृष्णक०।

**वेणुक ವೇಣುಕ** (पुं०) 1. ಸಣ್ಣ ಕೊಳಲುವಾದ್ಯ, ಚಿಕ್ಕ ವೇಣುವಾದ್ಯ. ह्रस्वो वेणुः "कन्" (५-३-८७)। 2. ಕಿರು ಬಿದಿರು.

**वेणुकर्कर ವೇಣುಕರ್ಕರ** (पुं०) ಗನ್ನೇರಳೆ ಗಿಡ.

**वेणुज ವೇಣುಜ** (पुं०) 1. ಬಿದಿರಿನ ಅಕ್ಕಿ, ಬಿದಿರಿನ ಕಾಳು (ಬೀಜ). वेणोर्जायते जनी (प्रादुर्भावे) "डः" (३-२-९८)। (वि०) 2. ಬಿದಿರಿನಿಂದ ಉಂಟಾದ.

**वेणुध्म ವೇಣುಧ್ಮ** (पुं०) ವೇಣುವಾದ್ಯವನ್ನು ನುಡಿಸುವವನು, ಪಿಳ್ಳಂಗೋವಿಯನ್ನು ಊದುವವನು. वेणु धमति — ध्मा (शब्दादौ) "कः" (३-२-३)।

**वेणुयव ವೇಣುಯವ** (पुं०) ಬಿದಿರಿನ ಅಕ್ಕಿ, ಬಿದಿರಿನ ಬೀಜ.

**वेणुवाद ವೇಣುವಾದ** (पुं०) ವೇಣುವಾದನ ಮಾಡುವವನು, ಪಿಳ್ಳಂಗೋವಿಯನ್ನು ಊದುವವನು. वेणु वादयति — वद (व्यक्तायां वाचि) + णिच् "अण्" (३-२-१)। वद + णिच् "ल्युः" (३-१-१३४)। —वादनः —ವಾದನಃ.

**वेत ವೇತ** (पुं०) ಬೆತ್ತ.

**वेतण्ड ವೇತಂಡ** (पुं०) ಗಜ, ಆನೆ. "प्रत्नं वेतण्डरत्नं सततपरिचलत्कर्णतालप्ररोहद्वाताङ्कुराजिहीर्षादरविवृतफणाश्रृङ्गभूषाभुजङ्गम्" चं० भा०। ಇದು ಗಜಮುಖ (ವಿನಾಯಕ)ನ ಸ್ತುತಿ (ಪ್ರಾರ್ಥನೆ).

**वेतन ವೇತನ** (न०) 1. ಸಂಬಳ. 2. ಕೂಲಿ. वी (गतिव्याप्तिप्रजनादौ) "तनन्" (उ० ३-१८०)। "खनिभिः सुषुवे रत्नं क्षेत्रैः सस्यं वनैर्गजान्। दिदेश वेतनं तस्मै रक्षासदृशमेव भूः" रघु० १७-६६। 3. ರಜತ, ಬೆಳ್ಳಿ.

**वेतनजीवन ವೇತನಜೀವನ** (न०) ಕೂಲಿಯಿಂದ ಜೀವನ ಮಾಡುವುದು.

**वेतनजीविन् ವೇತನಜೀವಿನ್** (वि०) ಕೂಲಿಕೆಲಸಮಾಡಿ ಜೀವನ ನಡೆಸುವವನು.

**वेतनिन् ವೇತನಿನ್** (वि०) 1. ಕೆಲಸಮಾಡಿ ಸಂಬಳ ಪಡೆಯುವವನು. 2. ಕೆಲಸಮಾಡಿ ಕೂಲಿ ಪಡೆಯುವವನು. वेतन "इनिः" (५-२-११५)।

**वेतस ವೇತಸ** (पुं०) 1. ಜೊಂಡು. 2. ಹಬ್ಬೆಗಿಡ. ऊयते — वेञ् (तन्तुसन्ताने) "असच्" तुट् च (उ० ३-११८)। "अविलम्बितमेधि वेतसस्तरुवन्माधव मा स्म भज्यथाः" माघ० १६-५३।

**वेतसाम्ल ವೇತಸಾಮ್ಲ** (पुं०) ಹುಳಿಹಬ್ಬೆ ಗಿಡ.

**वेतसी ವೇತಸೀ** (स्त्री०) ಹಬ್ಬೆಗಿಡ.

**वेतस्वत् ವೇತಸ್ವತ್** (पुं०) ಬಹಳ ಜೊಂಡು ಬೆಳೆದಿರುವ ಪ್ರದೇಶ. वेतसाः सन्त्यत्र—वेतस "ड्मतुप्" (४-२-८७)।

**वेताल ವೇತಾಲ** (पुं०) 1. ದ್ವಾರಪಾಲಕ, ಬಾಗಿಲು ಕಾಯುವವನು, ದ್ವಾರರಕ್ಷಕ. 2. ಪಿಶಾಚ, ವಾಯುರೂಪದಿಂದ ಸಂಚರಿಸುವ ಆತ್ಮ, ಮೃತಶರೀರವನ್ನು ಪ್ರವೇಶಿಸಿದ ಜೀವ, ಭೂತ. "प्रमुदितकटपूतनोत्तालवेतालतालस्फुटत्कर्णसंभ्रान्तगौरीघनाश्लेषहृष्यन्मनस्त्र्यम्बकानन्दि" मालती० ५-२३।

**वेतालभट्ट ವೇತಾಲಭಟ್ಟ** (पुं०) ವಿಕ್ರಮಾದಿತ್ಯರಾಜನ ಆಸ್ಥಾನದಲ್ಲಿದ್ದ ನವರತ್ನಗಳಲ್ಲೊಂದು ರತ್ನ, ಒಂಬತ್ತು ಮಂದಿ ಉದ್ದಾಮ ಪಂಡಿತರಲ್ಲೊಬ್ಬ ಪಂಡಿತ. "धन्वन्तरिः क्षपणकामरसिंहशङ्कुवेतालभट्टघटकर्परकालिदासाः। ख्यातो वराहमिहिरो नृपतेः सभायां रत्नानि वै वररुचिर्नव विक्रमस्य"।

**वेत्तृ ವೇತ್ತೃ** (वि०) 1. ತಿಳಿದವನು. विद (ज्ञाने) "तृच्" (३-१-१३३)। "यथा खरश्चन्दनभारवाही

भारस्य वेत्ता न तु चन्दनस्य"। 2. ಮದುವೆಯಾದ ಪತಿ. 3. ಋಷಿ.

**वेत्र ವೇತ್ರ** (ನಂ) 1. ಬೆತ್ತ. वी (गतिप्रजनादौ) "त्र:" (ಉಂ ४-१६६)। "आचार इत्यवहितेन मया गृहीता या वेत्रयष्टिरवरोधगृहेषु राज्ञ:" शाकु० ५-३। 2. ದಂಡ, ಕೋಲು. "वामप्रकोष्ठार्पितहेमवेत्र:" कुमा० ३-४१। 3. ಬಿದಿರು, ವಂಶ. "वेत्रशाककुजे शैले" किरा० १५-१८।

**वेत्रकीय ವೇತ್ರಕೀಯ** (ವಿಂ) ಗುಂಪುಗುಂಪಾಗಿ ಬೆತ್ತದ ಗಿಡಗಳು ಬೆಳೆದಿರುವ ಪ್ರದೇಶ. वेत्र "छ:" कुक् च (४-२-९१)।

**वेत्रधर ವೇತ್ರಧರ** (ಪುಂ) 1. ದ್ವಾರಪಾಲಕ, ಬಾಗಿಲು ಕಾಯುವವನು, ದ್ವಾರರಕ್ಷಕ. वेत्रस्य धर:। (ವಿಂ) 2. ಬೆತ್ತವನ್ನು ಹಿಡಿದಿರುವವನು.

**वेत्रयष्टि ವೇತ್ರಯಷ್ಟಿ** (स्त्री०) ಬೆತ್ತದ ಕೋಲು.

**वेत्रवती ವೇತ್ರವತೀ** (स्त्री०) 1. ಒಂದು ನದಿ, ಒಂದು ಹೊಳೆ. वेत्रमस्यामस्ति—वेत्र "मतुप्" (५-२-९४)। "सभ्रूभङ्गं मुखमिव पयो वेत्रवत्याश्चलोमि" मेघ० १-२४। 2. ದ್ವಾರಪಾಲಿಕೆಯಾದ ಹೆಂಗಸು.

**वेत्रिन् ವೇತ್ರಿನ್** (ವಿಂ) 1. ಬೆತ್ತವನ್ನು ಹಿಡಿದಿರುವವನು. (ಪುಂ) 2. ದ್ವಾರವನ್ನು ಕಾಯುವವನು. वेत्रमस्यास्ति—वेत्र "इनि:" (५-२-११५)।

**वेत्रासन ವೇತ್ರಾಸನ** (ನಂ) ಬೆತ್ತದ ಆಸನ, ಬೆತ್ತದ ಕುರ್ಚಿ ಮೊದಲಾದುದು. वेत्रस्यासनम्।

**वेद ವೇದ** (ಪುಂ) 1. ವಿಷ್ಣು, ಪರಮಾತ್ಮ. शास्त्राणि विन्दन्ति प्राप्नुवन्ति अस्मिन्—विद्लृ (लाभे) "घञ्" (३-३-१२१)। "संकर्षणत्वे शास्त्रार्थप्रदत्वात् वेद ईरित:" इति निरुक्ति:। "वेदो वेदविदव्यङ्गो वेदाङ्गो वेदवित् कवि:" वि० स०। 2. ಶ್ರುತಿ, ಧರ್ಮ ಮತ್ತು ಬ್ರಹ್ಮಜ್ಞಾನಬೋಧಕವಾದ ಅಪೌರುಷೇಯವಾಕ್ಯ ರಾಶಿ. विदन्त्यनेन धर्मम्—विद (ज्ञाने) "घञ्" (३-३-१२१)। ಯುಗಾಂತ್ಯದಲ್ಲಿ ಯಾರಿಗೂ ಗೋಚರವಾಗದೆ ಮರೆಯಾಗಿದ್ದ ಇತಿಹಾಸ ಮತ್ತು ವೇದಗಳನ್ನು ಮಹರ್ಷಿಗಳು ಚತುರ್ಮುಖನ ಅನುಜ್ಞೆ ಪಡೆದು ತಮ್ಮ ತಪಶ್ಶಕ್ತಿಯಿಂದ ಸಾಕ್ಷಾತ್ಕರಿಸಿದರು. "युगान्तेऽन्तर्हितान् वेदान् सेतिहासान् महर्षय:। लेभिरे तपसा पूर्वमनुज्ञाता: स्वयम्भुवा"। ಇದರಿಂದ ವೇದಗಳಿಗೆ ಅಪೌರುಷೇಯತ್ವ ಸಿದ್ಧವಾಯಿತು. ಮುಂದಿನ ಯುಗಗಳಲ್ಲಿ ಪ್ರಜೆಗಳೆಲ್ಲರೂ ಅಲ್ಪಾಯುಗಳಾಗಿ ಸಂಪೂರ್ಣಾಧ್ಯಯನಮಾಡಲು ಅಶಕ್ತರಾಗುವರೆಂದು ತಿಳಿದು ಮಹರ್ಷಿಗಳು ವೇದಗಳನ್ನು ವಿಭಾಗಮಾಡಿದರು. ಇದೇ ಸಮಯದಲ್ಲಿ ಲೋಕದಲ್ಲಿ ಧರ್ಮಸಂರಕ್ಷಣೆಗಾಗಿ ಬ್ರಹ್ಮಾದಿಗಳಿಂದ ಪ್ರಾರ್ಥಿಸಲ್ಪಟ್ಟ ಪರಮಾತ್ಮನು ಪರಾಶರಮಹರ್ಷಿಯಿಂದ ಸತ್ಯವತಿಯಲ್ಲಿ ತನ್ನ ಅಂಶದಿಂದ ವೇದವ್ಯಾಸರಾಗಿ ಅವತರಿಸಿ ವೇದಗಳನ್ನು ಋಗ್ಯಜುಃಸಾಮಾಥರ್ವಗಳೆಂದು ನಾಲ್ಕು ವಿಧವಾಗಿ ವಿಂಗಡಿಸಿ ತನ್ನ ಶಿಷ್ಯರಾದ (1) ಪೈಲನಿಗೆ ಋಗ್ವೇದವನ್ನೂ (2) ವೈಶಂಪಾಯನನಿಗೆ ಯಜುರ್ವೇದವನ್ನೂ (3) ಜೈಮಿನಿಗೆ ಸಾಮವೇದವನ್ನೂ (4) ಸುಮಂತುವಿಗೆ ಅಥರ್ವವೇದವನ್ನೂ ಉಪದೇಶಿಸಿದನು. ಮುಂದೆ ಅವರವರ ಶಿಷ್ಯರಿಗೆ ಅವರಿಂದ ಅವರ ಶಿಷ್ಯರಿಗೆ ಉಪದಿಷ್ಟವಾಗಿ ಪರಂಪರೆಯಾಗಿ ವೇದಗಳು ಲೋಕದಲ್ಲಿ ಶಾಶ್ವತವಾಗಿ ಸ್ಥಿರವಾಗಿ ನಿಲ್ಲುವಂತಾದುವು. ಪರಂಪರೆಯಾಗಿ ಉಪದೇಶದಿಂದ ಮಾತ್ರ ಪ್ರಾಪ್ತವಾದ ವೇದವು ಶ್ರೋತ್ರಕ್ಕೆ ಮಾತ್ರ ವಿಷಯವಾದುದರಿಂದ ವೇದವು ಶ್ರುತಿಯೆಂದು ವ್ಯವಹರಿಸಲ್ಪಡುವುದು. "क्षीणायुष: क्षीणसत्त्वान् दुर्मेधान् वीक्ष्य कालत:। वेदान् ब्रह्मर्षयो व्यस्यन् हृदिस्थाच्युतचोदिता:। अस्मिन्नप्यवसरे ब्रह्मन् भगवाँल्लोकभावन:। ब्रह्मेशाद्यैर्लोकपालैर्याचितो धर्मगुप्तये। पराशरात् सत्यवत्यामंशांशकलया विभु:। अवतीर्णो महाभाग वेदं चक्रे चतुर्विधम्" भाग० १२-६। "ब्रह्मणा चोदितो व्यास: वेदान् व्यस्तुं प्रचक्रमे। अथ शिष्यान् स जग्राह चतुरो वेदपारगान्। ऋग्वेदग्राहकं पैलं जग्राह सुमहामति:। वैशंपायननामानं यजुर्वेदस्य चाग्रहीत्। जैमिनिं सामवेदस्य तथैवाथर्ववेदवित्। सुमन्तु: तस्य शिष्योऽभूत् वेदव्यासस्य धीमत:" विष्णुपु०। ಎಲ್ಲಾ ವೇದಗಳೂ ಒಂದೇ ಆಗಿ ಒಂದೇ ಅರ್ಥವನ್ನು ಕೊಡುವುವು. ಆದರೂ ಶಾಖಾಭೇದದಿಂದ ಅವು ಬೇರೆ ಬೇರೆಯಾಗಿವೆ. "एक एव द्विजा वेदो वेदार्थश्चैक एव तु। तथापि मुनिशार्दूला: शाखाभेदेन भेदिता:"॥

**ಋಗ್ವೇದವು** ಸಂಹಿತೆ ಮತ್ತು ಬ್ರಾಹ್ಮಣಗಳೆಂದು ಎರಡು ಭಾಗಗಳನ್ನೊಳಗೊಂಡಿರುವುದು. ಮಂತ್ರಾತ್ಮಕ ಭಾಗವು ಸಂಹಿತೆ. ಉಳಿದ ಭಾಗವು ಬ್ರಾಹ್ಮಣ. ಋಗ್ವೇದವು ಹತ್ತು ಮಂಡಲಗಳಾಗಿ ಅಥವಾ ಎಂಟು ಅಷ್ಟಕಗಳಾಗಿ ಭಾಗಿಸಲ್ಪಟ್ಟಿದೆ. [ವಿವರಕ್ಕೆ "ऋग्वेद" ಪದದಲ್ಲಿ ನೋಡಿ.]

**ಯಜುರ್ವೇದವು** ಕೃಷ್ಣ ಮತ್ತು ಶುಕ್ಲ ಎಂದು ಎರಡು ಭೇದ. ಯಜುರ್ವೇದವು ಎಂಬತ್ತಾರು ಭೇದಗಳಿಂದ ಕೂಡಿದ್ದರೂ ದಕ್ಷಿಣದೇಶದಲ್ಲಿ ತೈತ್ತಿರೀಯ ಶಾಖೆಯು ಮಾತ್ರ ವ್ಯಾಪಕವಾಗಿದೆ. ಈ ಶಾಖೆಯಲ್ಲಿ ಸಂಹಿತೆ ಬ್ರಾಹ್ಮಣ ಆರಣ್ಯಕ ಮತ್ತು ಉಪನಿಷತ್ತುಗಳೆಂದು ನಾಲ್ಕು ಭಾಗಗಳಿರುವುವು. ಸಂಹಿತೆಯಲ್ಲಿ ಯಜ್ಞಮಂತ್ರಗಳೂ ಬ್ರಾಹ್ಮಣದಲ್ಲಿ ವಿಧಿವಾಕ್ಯಗಳೂ ಆರಣ್ಯಕದಲ್ಲಿ ಬ್ರಹ್ಮಮೇಧ ಪಿತೃಮೇಧ ಮುಂತಾದುವೂ ಉಪನಿಷತ್ತುಗಳಲ್ಲಿ ತತ್ತ್ವವಿಚಾರವೂ ಉಕ್ತವಾಗಿವೆ. [ವಿವರಕ್ಕೆ "कृष्णयजुर्वेद" ಪದದಲ್ಲಿ ನೋಡಿ.]

**ಶುಕ್ಲಯಜುರ್ವೇದವು** ಸೂರ್ಯನ ಅನುಗ್ರಹದಿಂದ ಯಾಜ್ಞವಲ್ಕ್ಯರಿಂದ ಸಂಪಾದಿತ. ಈ ವೇದವು 17 ಶಾಖೆಗಳಲ್ಲಿರುವುದಾದರೂ ಕಾಣ್ವ ಮತ್ತು ಮಾಧ್ಯಂದಿನ ಶಾಖೆಗಳೆರಡು ಮಾತ್ರ ಪ್ರಸಿದ್ಧವಾಗಿವೆ. ಕಾಣ್ವ ಶಾಖೆಯು ದಕ್ಷಿಣ ಭಾರತದಲ್ಲಿಯೂ ಮಾಧ್ಯಂದಿನ ಶಾಖೆಯು ಉತ್ತರ ಭಾರತದಲ್ಲಿಯೂ ಪ್ರಚಾರದಲ್ಲಿವೆ.

**ಸಾಮವೇದವು** ಸಹಸ್ರಶಾಖೆಗಳಿಂದ ಕೂಡಿರುವುದಾದರೂ ಕೆಲವು ಶಾಖೆಗಳು ಮಾತ್ರ ಪ್ರಚಾರದಲ್ಲಿವೆ. ಆರ್ಚಿಕಾ ಮತ್ತು ಉತ್ತರಾರ್ಚಿಕಾ ಎಂದು ಸಾಮವೇದದಲ್ಲಿ ಎರಡು ಭಾಗಗಳಿವೆ.

**ಅಥರ್ವವೇದವು** ಈ ಮೂರು ವೇದಗಳಂತೆ ಯಾಗಾದಿಕಾರ್ಯಗಳಿಗೆ ಸಂಬಂಧಪಡದೆ ಕೇವಲ ಲೌಕಿಕವಾದ ಸ್ತಂಭನ, ಮೋಹನ, ಉಚ್ಚಾಟನ, ಮಾರಣ, ಆಭಿಚಾರಿಕ ಕ್ರಿಯೆಗಳ ವಿಚಾರಗಳ ಮತ್ತು ಆಗ್ನೇಯ ವಾಯವ್ಯಾದಿ ಅಸ್ತ್ರಪ್ರಯೋಗಗಳ ವಿಷಯಗಳು ಉಕ್ತವಾಗಿರುವುದರಿಂದ ಇದು ವೇದತ್ರಯದೊಡನೆ ಸೇರಿಸಲ್ಪಟ್ಟಿರುವುದಿಲ್ಲ. ಈ ಕಾರಣದಿಂದಲೇ ವೇದತ್ರಯಕ್ಕೆ "**ತ್ರಯೀ**" ಎಂಬ ವ್ಯವಹಾರವಿರುವುದು.

**ಬ್ರಾಹ್ಮಣಗಳು:**

| | |
|---|---|
| ಋಗ್ವೇದ | ಐತರೇಯ ಮತ್ತು ಕೌಷೀಥಕೀ. |
| ಕೃಷ್ಣಯಜುರ್ವೇದ | ತೈತ್ತಿರೀಯ. |
| ಶುಕ್ಲಯಜುರ್ವೇದ | ಶತಪಥ. |
| ಸಾಮವೇದ | ತಾಂಡ್ಯ, ತಲವಕಾರ, ಷಡ್ವಿಂಶ, ಛಾಂದೋಗ್ಯ, ಸಾಮವಿಧಾನ, ದೇವತಾಧ್ಯಾಯ, ವಂಶ, ಸಂಹಿತೋಪನಿಷತ್, ಆರ್ಷೇಯ, ಮತ್ತು ಮಂತ್ರ. |
| ಅಥರ್ವವೇದ | ಗೋಪಥ. |

**ಆರಣ್ಯಕಗಳು:**

| | |
|---|---|
| ಋಗ್ವೇದ | ಐತರೇಯ ಮತ್ತು ಕೌಷೀಥಕೀ. |
| ಕೃಷ್ಣಯಜುರ್ವೇದ | ತೈತ್ತಿರೀಯ. |
| ಶುಕ್ಲಯಜುರ್ವೇದ | ಬೃಹದಾರಣ್ಯಕ. |
| ಸಾಮವೇದ | ಛಾಂದೋಗ್ಯ. |

**ಉಪನಿಷತ್ತುಗಳು:**

| | |
|---|---|
| ಋಗ್ವೇದ | ಐತರೇಯ ಮತ್ತು ಕೌಷೀಥಕೀ. |
| ಕೃಷ್ಣಯಜುರ್ವೇದ | ಕಠ, ಶ್ವೇತಾಶ್ವತರ, ಮೈತ್ರಾಯಣೀಯ, ಮಹಾನಾರಾಯಣೀಯ, ತೈತ್ತಿರೀಯ. |
| ಶುಕ್ಲಯಜುರ್ವೇದ | ಬೃಹದಾರಣ್ಯಕ, ಈಶಾವಾಸ್ಯ. |
| ಸಾಮವೇದ | ಛಾಂದೋಗ್ಯ, ಕೇನ. |
| ಅಥರ್ವವೇದ | ಮುಂಡಕ, ಪ್ರಶ್ನ, ಮಾಂಡೂಕ್ಯ. |

**वेदगर्भ ವೇದಗರ್ಭ** (ಪುಂ) 1. ಬ್ರಹ್ಮ, ಚತುರ್ಮುಖ. वेदाः गर्भे यस्य। "एतदेवात्मभूः राजान् नारदाय विपृच्छते। वेदगर्भोऽभ्यधात् साक्षात् यदाह हरिरात्मनः" भाग० २-४-२५। 2. ಬ್ರಾಹ್ಮಣ, ವೇದಾಧ್ಯಯನಸಂಪನ್ನ.

**वेदगुप्ति ವೇದಗುಪ್ತಿ** (ಸ್ತ್ರೀ०) ವೇದಗಳ ಸಂರಕ್ಷಣೆ. ವೇದಾಧ್ಯಯನಮಾಡದಿದ್ದರೆ ವೇದವು ಪ್ರಚಾರವಿಲ್ಲದೆ ಕ್ಷೀಣವಾಗುವುದು. ಬ್ರಾಹ್ಮಣನು ಅನವರತ ವೇದಾಧ್ಯಯನ ಮಾಡುವುದರಿಂದ ವೇದಗಳ ಸಂರಕ್ಷಣೆಯಾಗುವುದು. वेदानां गुप्तिः।

**वेदज्ञ ವೇದಜ್ಞ** (ಪುಂ) ವೇದಾಧ್ಯಯನಸಂಪನ್ನನಾದ ಬ್ರಾಹ್ಮಣ. वेदान् जानाति—ज्ञा (अवबोधने) "कः" (३-२-३)।

**वेदत्रय ವೇದತ್ರಯ** (ನಂ) ಋಗ್ಯಜುಃಸಾಮಗಳೆಂಬ ಮೂರು ವೇದಗಳು. ಕರ್ಮಕಾಂಡಕ್ಕೆ ಈ ಮೂರು ವೇದಗಳು ಮಾತ್ರ ಸೇರಿರುವುದರಿಂದ "**त्रयी**" ಎಂದು ವೇದಕ್ಕೆ ಹೆಸರಾಯಿತು. "यदृचैव होत्रम् क्रियते यजुषाध्वर्यवं साम्नोद्गीथं व्यारब्धा त्रयी विद्या भवति" ऐत० ब्रा०।

**वेदन ವೇದನ** (ನಂ) 1. ತಿಳಿಯುವುದು, ಅರಿತುಕೊಳ್ಳುವುದು. विद (ज्ञाने) "ल्युट्" (३-३-११५)। 2. ದೇಹದ ಮತ್ತು ಇಂದ್ರಿಯಾನುಭವಗಳ ಅರಿವು. (ಸ್ತ್ರೀ०) —ನಾ—ನಾ. विद्लृ (लाभे) "युच्" (वा० ३-३-१०७)। 3. ದುಃಖ, ಕಷ್ಟ. "प्रबलामात्मज्ञातेन

वेदनाम्" रघु० ८-५०। 4. ವಿವಾಹ, ಮದುವೆ. "वसनस्य दशा ग्राह्या शूद्रयोत्कृष्टवेदने" मनु० ३-४४।

**वेदनिन्दक ವೇದನಿಂದಕ** (पुं०) ವೇದವನ್ನು ದೂಷಿಸುವ ನಾಸ್ತಿಕ. वेदं निन्दति—णिदि (कुत्सायाम्) "ण्वुल्" (३-१-१३३)। ಇವನು ವೇದೋಕ್ತಕರ್ಮಗಳನ್ನು ನಂಬುವುದಿಲ್ಲವಾದುದರಿಂದ ದೂಷಿಸುವವನು. **-दूषकः -ದೂಷಕಃ.**

**वेदनीय ವೇದನೀಯ** (वि०) 1. ತಿಳಿಯಲ್ಪಡುವ. 2. ತಿಳಿಯಬೇಕಾದ. 3. ತಿಳಿಯಲು ಅರ್ಹವಾದ. 4. ತಿಳಿಯಲು ಶಕ್ಯವಾದ. विद (ज्ञाने) "अनीयर्" (३-१-९६)। "तव्यः"। **वेदितव्यः ವೇದಿತವ್ಯಃ.**

**वेदपारग ವೇದಪಾರಗ** (पुं०) ಸಂಪೂರ್ಣವೇದಾಧ್ಯಯನ ಮಾಡಿದವನು. वेदस्य पारं गच्छति—गम्लृ (गतौ) "डः" (३-२-४८)।

**वेदमातृ ವೇದಮಾತೃ** (स्त्री०) 1. ಗಾಯತ್ರೀ. वेदानां माता। "योऽधीतेऽहन्यहन्येतां सावित्रीं वेदमातरम्। विज्ञायार्थं ब्रह्मचारी स याति परमां गतिम्"। 2. ದುರ್ಗಾದೇವಿ.

**वेदवती ವೇದವತೀ** (स्त्री०) ಕುಶಧ್ವಜನ ಪುತ್ರಿ. [ಕುಶಧ್ವಜನು ಪ್ರತಿದಿನ ಪಾರಾಯಣಮಾಡುತ್ತಿದ್ದ ವೇದ ವಾಕ್ಯಗಳೇ ಒಂದು ಸ್ತ್ರೀರೂಪದಿಂದ ಬಂದುವು. ವೇದ ಸ್ವರೂಪಳಾದುದರಿಂದ ವೇದವತಿಯೆಂದು ಹೆಸರಾಯಿತು. ಬಹಳ ರೂಪವತಿಯಾದ ಇವಳನ್ನು ಶಂಖನೆಂಬ ದೈತ್ಯ ನೊಬ್ಬನು ತನಗೆ ಕೊಡಬೇಕೆಂದನು. ಮಹಾವಿಷ್ಣುವಿಗಲ್ಲದೆ ಯಾರೊಬ್ಬರಿಗೂ ಇವಳನ್ನು ಕೊಡುವುದಿಲ್ಲವೆಂದು ತಿಳಿಸಿ ದನು. ವೇದವತಿಯು ಶ್ರೀಮನ್ನಾರಾಯಣನನ್ನೇ ಮದುವೆಯಾಗಬೇಕೆಂದು ತಪಸ್ಸುಮಾಡುತ್ತಿದ್ದಾಗ ರಾವಣನು ಬಂದು ಬಲಾತ್ಕರಿಸಲು ಇವಳು ಸಂಮತಿಸದ ಕಾರಣ ಇವಳ ತಲೆಯ ಕೂದಲನ್ನು ಹಿಡಿದೆಳೆದನು. ಕುಪಿತಳಾದ ವೇದವತಿಯು ಮುಂದಿನ ಜನ್ಮದಲ್ಲಿ ಅಯೋನಿಜೆಯಾಗಿ ಜನಿಸಿ ಅವನ ಮರಣಕ್ಕೆ ಕಾರಣಳಾಗು ವುದಾಗಿ ಶಾಪವಿತ್ತು ಅಗ್ನಿಪ್ರವೇಶಮಾಡಿದಳು. ಬಳಿಕ ಲಂಕೆಯಲ್ಲಿ ಒಂದು ಸರೋವರದ ಕಮಲದಲ್ಲಿ ಜನಿಸಿದಳು. ಇದನ್ನು ಕಂಡು ಎಲ್ಲರೂ ಇದೊಂದು ಉತ್ಪಾತಕ ಸೂಚನೆ ಯೆಂದು ಹೇಳಲು ರಾವಣನು ಒಂದು ಪೆಟ್ಟಿಗೆಯಲ್ಲಿ ಈ ಶಿಶುವನ್ನು ಇಟ್ಟು ಸಮುದ್ರದಲ್ಲಿ ಬಿಡಲಾಗಿ ಅದು ತೇಲುತ್ತಾ ಬಂದು ಜನಕನ ಪಟ್ಟಣ ಸೇರಿತು. ಜನಕನು ಯಾಗಕ್ಕಾಗಿ ಭೂಶೋಧನೆ ಮಾಡುತ್ತಿದ್ದಾಗ ಈ ಶಿಶುವು ಅವನ ಕೈಸೇರಿತು. ನೇಗಿಲಿನಿಂದ ಹೊರಬಂದಕಾರಣ ಜನಕನು ಸೀತೆಯೆಂದು ನಾಮಕರಣಮಾಡಿದನು. ಶ್ರೀರಾಮನು ಶಿವಧನುರ್ಭಂಗಮಾಡಿ ಸೀತೆಯ ಪಾಣಿ ಗ್ರಹಣಮಾಡಿದನು. ಈ ಸೀತೆಯೇ ಕೊನೆಗೆ ರಾವಣನ ವಿನಾಶಕ್ಕೆ ಕಾರಣಳಾದಳು.]

**वेदवदन ವೇದವದನ** (न०) 1. ವೇದಕ್ಕೆ ವದನದಂತಿರುವ ವ್ಯಾಕರಣ. ಇದೊಂದು ವೇದಾಂಗ. ವ್ಯಾಕರಣವು ಯಾಗ ಗಳಲ್ಲಿ ಶುದ್ಧವಾದ ಪದಪ್ರಯೋಗ ಮಾಡಲು ಸಹಾಯಕ ವಾಗಿರುವುದರಿಂದ ವೇದಕ್ಕೆ ವದನಪ್ರಾಯವಾಯಿತು. "यो वेद वेदवदनं सदनं हि सम्यक् ब्राह्म्याः स वेदमपि वेद किमन्यशास्त्रम्"। 2. ಬ್ರಹ್ಮ, ಚತುರ್ಮುಖ. वेदाः वदने यस्य। "गायत्री वेदवदने पार्वती शिव-सन्निधौ"।

**वेदवास ವೇದವಾಸ** (पुं०) ವೇದಾಧ್ಯಯನಮಾಡಿದ ಬ್ರಾಹ್ಮಣ. वेदानां वासः यस्मिन्।

**वेदवित् ವೇದವಿತ್** (पुं०) 1. ವೇದವನ್ನು ಬಲ್ಲ ಬ್ರಾಹ್ಮಣ, ಸಾಂಗವೇದಾಧ್ಯಯನಮಾಡಿದ ಬ್ರಾಹ್ಮಣ. वेदान् वेत्ति—विद (ज्ञाने) "क्विप्" (३-२-६२)। 2. ವಿಷ್ಣು. "वेदो वेदविदव्यङ्गो वेदाङ्गो वेदवित्कविः" वि० स०।

**वेदव्यास ವೇದವ್ಯಾಸ** (पुं०) ಪರಾಶರಮುನಿಯ ಪುತ್ರ, ಬಾದರಾಯಣ, ಕೃಷ್ಣದ್ವೈಪಾಯನ ಋಷಿ. वेदं व्यस्यति पृथक् करोति—वि+असु (क्षेपणे) "अण्" (३-२-१)। ಅಖಂಡವೇದರಾಶಿಯನ್ನು ನಾಲ್ಕು ಭಾಗಮಾಡಿ ಬೇರೆ ಬೇರೆ ಶಾಖೆಗಳಾಗಿ ಮಾಡಿದುದರಿಂದ ಈ ಋಷಿಗೆ "**ವೇದವ್ಯಾಸ**" ಎಂದು ಹೆಸರಾಯಿತು. वेदमेकं चतुर्भागं कृत्वा शाखाशतैर्विभुः। करोति बहुलं भूयः वेदव्यासस्वरूपधृक्" विष्णुपु०। ಬ್ರಹ್ಮಾದಿ ದೇವತೆಗಳ ಪ್ರಾರ್ಥನೆಯಂತೆ ಪರಮಾತ್ಮನು ವೇದಗಳ ವಿಭಾಗಕ್ಕಾಗಿ ವೇದವ್ಯಾಸನಾಗಿ ಅವತರಿಸಿದನು.

**वेदाङ्ग ವೇದಾಂಗ** (न०) ವೇದಕ್ಕೆ ಅಂಗಭೂತವಾದ ಆರು ಶಾಸ್ತ್ರಗಳು. ಇವು (1) शिक्षा (2) व्याकरणम् (3) छन्दस् (4) निरुक्तम् (5) ज्योतिषम् ಮತ್ತು (6) कल्प ಗಳೆಂದು ಆರು ವೇದಾಂಗಗಳು. "शिक्षा व्याकरणं छन्दो निरुक्तं ज्योतिषं तथा। कल्पश्चेति षडङ्गानि वेदस्याहुर्मनीषिणः" अम०।

ಈ ಆರು ವೇದಾಂಗಗಳೂ ವೇದಗಳ ವಿಷಯವನ್ನು ತಿಳಿಯಲು ಸಹಕಾರಿಯಾಗಿರುವುದರಿಂದ ಅವಶ್ಯವಾಗಿ ಇವುಗಳನ್ನು ಅಭ್ಯಸಿಸಬೇಕು.

**ಶಿಕ್ಷಾ :** ಇದು ಸ್ವರವರ್ಣಗಳ ವೈಶಿಷ್ಟ್ಯ ಪ್ರಭೇದ ಅವುಗಳ ಪ್ರಯೋಜನ ಮೊದಲಾದುವನ್ನು ತಿಳಿಸುವುದು. ಸ್ವರವರ್ಣ ವ್ಯತ್ಯಾಸವಾದರೆ ಯಜಮಾನನಿಗೆ ಬಹಳ ಅನರ್ಥವನ್ನುಂಟುಮಾಡುವುದು.

**ವ್ಯಾಕರಣ :** ಇದು ಯಜ್ಞದಲ್ಲಿ ಶುದ್ಧವಾದ ಶಬ್ದಗಳ ಪ್ರಯೋಗ ಮತ್ತು ಶುದ್ಧವಾದ ವಿಭಕ್ತಿಗಳ ಜ್ಞಾನ ವುಂಟುಮಾಡುವುದು.

**ಛಂದಸ್ಸು :** ಮಂತ್ರಗಳ ಛಂದಸ್ಸು ಋಷಿ ದೇವತೆಗಳ ಪರಿಜ್ಞಾನವು ಅವಶ್ಯವಾದುದರಿಂದ ಛಂದೋಜ್ಞಾನವು ಮುಖ್ಯವಾದುದು.

**ನಿರುಕ್ತ :** ವೇದದ ಅರ್ಥಪರಿಜ್ಞಾನವಿಲ್ಲದೆ ಪುರುಷಾರ್ಥ ಸಾಧನೆಯಾಗುವುದಿಲ್ಲ. ಪುರುಷಾರ್ಥ ಸಾಧಕವಾದ ವೇದಗಳ ಅರ್ಥಪರಿಜ್ಞಾನವನ್ನುಂಟುಮಾಡುವುದರಿಂದ ನಿರುಕ್ತವು ಮುಖ್ಯವಾದ ವೇದಾಂಗವಾಯಿತು. निरुच्यते-ऽनेन इति निरुक्तिः।

**ಜ್ಯೋತಿಷ :** ವೇದವಿಹಿತವಾದ ಯಜ್ಞಯಾಗಾದಿ ಕರ್ಮಗಳನ್ನು ಆಚರಿಸಬೇಕಾದ ಕಾಲವನ್ನು ತಿಳಿಸುವುದರಿಂದ ಇದೂ ವೇದಾಂಗವಾಯಿತು.

**ಕಲ್ಪ :** ವೇದವಿಹಿತ ಕರ್ಮಗಳಲ್ಲಿ ಮಂತ್ರಗಳ ವಿನಿಯೋಗ ಕ್ರಮವನ್ನು ತಿಳಿಸಿ ಪ್ರಯೋಗಕ್ಕೆ ಸಹಕಾರಿಯಾದುದರಿಂದ ಕಲ್ಪವೂ ಒಂದು ವೇದದ ಅಂಗ.

ಈ ಕಾರಣದಿಂದ ವೇದಕ್ಕೆ ಶಿಕ್ಷೆಯು ಪ್ರಾಣ. ವ್ಯಾಕರಣವು ಮುಖ. ಛಂದಸ್ಸು ಪಾದಗಳು. ನಿರುಕ್ತವು ಶ್ರೋತ್ರ. ಜ್ಯೋತಿಷವು ಚಕ್ಷುಸ್ಸು. ಕಲ್ಪವು ಹಸ್ತಗಳು. ಹೀಗೆ ವೇದಾಂಗಗಳಾದವು. "छन्दः पादौ तु वेदस्य हस्तौ कल्पोऽथ पठ्यते। ज्योतिषामयनं चक्षुः निरुक्तं श्रोत्रमुच्यते। शिक्षा घ्राणं तु वेदस्य मुखं व्याकरणं स्मृतम्। तस्मात्साङ्गमधीत्यैव ब्रह्मलोके महीयते" पा० शि०।

**वेदादि ವೇದಾದಿ** (ಪುಂ) 1. ವೇದದ ಪ್ರಾರಂಭ. (ನಂ) 2. ವೇದದ ಪ್ರಾರಂಭದಲ್ಲಿ ಹೇಳಲ್ಪಡುವ ಪ್ರಣವ, ಓಂಕಾರ. वेदानमादि।

**वेदाधिप ವೇದಾಧಿಪ, –अधिपति –ಅಧಿಪತಿ** (ಪುಂ) ವೇದಗಳ ಅಧಿಪತಿ.

| | |
|---|---|
| ಋಗ್ವೇದಾಧಿಪತಿ | ಬೃಹಸ್ಪತಿ |
| ಯಜುರ್ವೇದಾಧಿಪತಿ | ಶುಕ್ರ |
| ಸಾಮವೇದಾಧಿಪತಿ | ಕುಜ |
| ಅಥರ್ವವೇದಾಧಿಪತಿ | ಬುಧ. |

**वेदान्त ವೇದಾನ್ತ** (ಪುಂ) ವೇದಗಳ ಕೊನೆಯ ಭಾಗವಾದ ಉಪನಿಷತ್ತು. वेदानामन्तः। ಕರ್ಮಕಾಂಡವಾದನಂತರ ಬ್ರಹ್ಮಪ್ರತಿಪಾದಕ ವಿಷಯ ವಿಚಾರಮಾಡುವುದರಿಂದ ಉಪನಿಷತ್ತು ವೇದಾನ್ತವಾಯಿತು. वेदानां ऋगादीनाम् अन्तः उपरितनभागः वेदान्तः इति, वेदानामन्तो निर्णयो यत्र इति वा। ಉಪನಿಷತ್ತುಗಳ ಅರ್ಥನಿರ್ಣಾಯಕವಾದುದರಿಂದ ಬ್ರಹ್ಮಸೂತ್ರಗಳೂ ವೇದಾನ್ತ. ವೇದಗಳ ಪೂರ್ವಭಾಗ (ಕರ್ಮಕಾಂಡ) ವಾದ ಸಂಹಿತೆ ಬ್ರಾಹ್ಮಣ ಮೊದಲಾದುವು ಕರ್ಮವಿಧಾನವನ್ನು ಬೋಧಿಸುವುದರಿಂದ ಕರ್ಮಪ್ರತಿಪಾದಕವಾದ ವೇದವನ್ನು ಮೊದಲು ಅಧ್ಯಯನ ಮಾಡಿ ಕರ್ಮವಿಚಾರಮಾಡಿ ಕರ್ಮಗಳನ್ನು ಆಚರಿಸಬೇಕು. "अथातो धर्मजिज्ञासा" जैमिनिसू०। ಇದಕ್ಕೆ ಕರ್ಮಮೀಮಾಂಸಾ ಅಥವಾ ಪೂರ್ವಮೀಮಾಂಸಾ ಎಂದು ವ್ಯವಹಾರ.

ತ್ರೈಗುಣ್ಯವಿಷಯವಾದ ವೇದವಿಹಿತಕರ್ಮಗಳ ಫಲವು ಕೇವಲ ಅಲ್ಪ ಮತ್ತು ಅಸ್ಥಿರ ಎಂದು ತಿಳಿದು ಮುಮುಕ್ಷುವು ಅನನ್ತಸ್ಥಿರಫಲವನ್ನು ಅಪೇಕ್ಷಿಸಿದಾಗ ಬ್ರಹ್ಮಜಿಜ್ಞಾಸೆಯುಂಟಾಗುವುದು. "वृत्तात्कर्माधिगमादनन्तरं ब्रह्मविविदिषा"। "अथातो ब्रह्मजिज्ञासा" ब्र० सू०। ಇದು "उत्तरमीमांसा" ಅಥವಾ "ब्रह्ममीमांसा"। ಆರು ಆಸ್ತಿಕದರ್ಶನಗಳಲ್ಲೊಂದಾದ ಈ ವೇದಾನ್ತ ದರ್ಶನವು द्वैतम् अद्वैतम् विशिष्टाद्वैतम् शक्तिविशिष्टा-द्वैतम् ಎಂಬ ಭೇದಗಳನ್ನೊಳಗೊಂಡಿರುವುದು. [ವಿವರಕ್ಕೆ ಆಯಾ ದರ್ಶನಗಳಲ್ಲಿ ನೋಡಿ]. ವೇದಾನ್ತಾರ್ಥ ವಿಚಾರ ಮಾಡುವ ನ್ಯಾಯನಿಬಂಧನರೂಪವಾದ ಶಾಸ್ತ್ರವೇ ಬ್ರಹ್ಮಮೀಮಾಂಸೆ. ವೇದಾಂತರೂಪವಾದ ಈ ಉಪನಿಷತ್ತು ಬ್ರಹ್ಮಕಾಂಡ. ವೈದಿಕಕರ್ಮಾಚರಣೆಯಿಂದ ಜ್ಞಾನೋತ್ಪತ್ತಿಗೆ ಪ್ರತಿಬಂಧಕವಾದ ಪ್ರಾಚೀನ ಕರ್ಮಗಳು ನಿವೃತ್ತಿಯಾದರೆ ಅನನ್ತರ ಜ್ಞಾನದಿಂದ ಬ್ರಹ್ಮಪ್ರಾಪ್ತಿಯಾಗುವುದು. "कषाये कर्मभिः पक्वे ततो ज्ञानं प्रवर्तते" "धर्मेण पापमपनुदति" ಇತ್ಯಾದಿ ಪ್ರಮಾಣ ವಾಕ್ಯಗಳಿಂದ ಇದು ಸಿದ್ಧವಾಗುವುದು. ಉಪನಿಷತ್ತುಗಳ ಅರ್ಥ ನಿರ್ಣಾಯಕವಾಗಿ ಶ್ರೀಬಾದರಾಯಣ ಮುನಿಗಳು ರಚಿಸಿದ ಬ್ರಹ್ಮಸೂತ್ರಗಳಿಗೆ ಪೂರ್ವಾಚಾರ್ಯರುಗಳಾದ ಶ್ರೀಶಂಕರಭಗವತ್ಪಾದಾಚಾರ್ಯರು ಅದ್ವೈತ ಪರವಾಗಿಯೂ ಶ್ರೀಭಗವದ್ರಾಮಾನುಜಾಚಾರ್ಯರು ವಿಶಿಷ್ಟಾದ್ವೈತ ಪರವಾಗಿಯೂ ಶ್ರೀಪೂರ್ಣಪ್ರಜ್ಞಾಚಾರ್ಯರು ದ್ವೈತ ಪರವಾಗಿಯೂ ಭಾಷ್ಯಗಳನ್ನು ರಚಿಸಿರುತ್ತಾರೆ.

8421–81, ಬೆಂಗಳೂರು ಪ್ರೆಸ್, ಬೆಂಗಳೂರು–560 018

श्रीः

# शब्दार्थकौस्तुभः

## (प्रायौगिक संस्कृत–कर्णाटक शब्दकोशः)

# ಸಂಸ್ಕೃತ - ಕನ್ನಡ ಶಬ್ದಕೋಶ

ಸಂಪುಟ ೬

ಪದಗಳು : वेदान्तिन्–ह्वेय

ಸಾಹಿತ್ಯ ವಿದ್ವಾನ್

ಚಕ್ರವರ್ತಿ ಶ್ರೀನಿವಾಸ ಗೋಪಾಲಾಚಾರ್ಯ

ಬಾಪ್ಕೊ ಪ್ರಕಾಶನ

ಬೆಂಗಳೂರು ಪ್ರೆಸ್, ಬೆಂಗಳೂರು

॥ श्रीः ॥

श्रीमते हयग्रीवाय नमः।

# शब्दार्थकौस्तुभः।

## (संस्कृत-कर्णाटक शब्दकोशः)

## ಸಂಸ್ಕೃತ-ಕನ್ನಡ ಶಬ್ದಕೋಶ

### ಷಷ್ಠ ಭಾಗ

---

लक्ष्मीं तनोतु व्यवधूय चित्ते वितर्कडोलां विविधार्थराशेः।
लक्ष्मीहयास्यः स्फुरिताक्षमालो लक्ष्मीलसद्वत्सतलः सदा नः॥

त्रयीचयसुधानिधिप्रचयभूतहेषारवा सुधोदधिसुतायुता प्रचितसर्वदोषापहा।
नतेष्टफलदायिका बुधहृदब्जमित्रायिता परिस्फुरतु मे सदा हयमुखी परा देवता॥

राकासुधाकरसुधामलदिव्यमूर्ते श्रीनाथ भव्यमतिदायक सैन्धवास्य।
अस्पृष्टसंशयकलङ्कपदार्थजातं वागीश तेऽद्य कृपया हृदि मे चकास्तु॥

नत्वा लक्ष्मीहयग्रीवौ गुरुवन्दनपूर्वकम्।
शब्दार्थकौस्तुभस्यास्य षष्ठो भागो विलिख्यते॥

---

**ान्तिन् ವೇದಾನ್ತಿನ್** (ಪುಂ) ವೇದಾನ್ತವನ್ನು ತಿಳಿದವನು, ಬ್ರಹ್ಮಜ್ಞಾನವನ್ನು ಪಡೆದವನು, ಬ್ರಹ್ಮಸ್ವರೂಪವನ್ನು ತಿಳಿದವನು. वेदान्तोऽस्यास्ति—वेदान्त "इनिः" (५-२-११५)।

**ाभ्यास ವೇದಾಭ್ಯಾಸ** (ಪುಂ) ವೇದಗಳ ಅಧ್ಯಯನ. वेदस्य वेदानां वा अभ्यासः। "वेदाभ्यासजडः कथं नु विषयव्यावृत्तकौतूहलः" विक्र० १-१०।

**ार ವೇದಾರ** (ಪುಂ) ಕೃಕಲಾಸ, ಓತಿಕೇತ, ಹೆಂಟೆಗೊದ್ದ. "स्याद्वेदारः क्रकचपात्कृकलासः तृणाञ्जनः" त्रिकाण्ड०।

**दि ವೇದಿ** (ಪುಂ) 1. ಪಂಡಿತ, ವಿದ್ವಾಂಸ. विद (ज्ञाने) "इन्" (उ० ४-११७)। (ಸ್ತ್ರೀಂ) 2. ಯಾಗಕ್ಕಾಗಿ ಪರಿಷ್ಕರಿಸಿ ಸಿದ್ಧಪಡಿಸಿದ ಭೂಮಿ. विद (ज्ञाने) "इन्" (उ० ४-११८)। "अमी वेदिं परितः क्लृप्तधिष्ण्याः समिद्वन्तः प्रान्तसंस्तीर्णदर्भाः" शाकु० ४-७। ಯಜ್ಞಪಶುಬಂಧನಕ್ಕೂ ಮತ್ತು ಯಾಗದ ಪಾತ್ರೆಗಳ ಸಾಧನಕ್ಕೂ ಪರಿಷ್ಕರಿಸಲ್ಪಟ್ಟ ಭೂಮಿಯು ವೇದಿ. 3. ಅಂಗುಲಿ ಮುದ್ರೆ, ಅಕ್ಷರಗಳನ್ನು ಕೆತ್ತಿರುವ ಉಂಗುರ. "वेदिः स्यात्पण्डिते पुमान्। स्त्रियामङ्गुलिमुद्रायां स्यात्परिष्कृतभूतले" मेदि०। वा "ङीप्" (ग० ४-१-४५)। **वेदी ವೇದೀ.** (ನಂ) 4. ಅಂಬಷ್ಠ.

**वेदिका ವೇದಿಕಾ** (ಸ್ತ್ರೀಂ) 1. ಯಾಗಕ್ಕಾಗಿ ಸಿದ್ಧಪಡಿಸಲ್ಪಟ್ಟ ಪರಿಷ್ಕೃತವಾದ ಭೂಮಿ. वेदिरेव स्वार्थे "कन्"। 2. ಜಗುಲಿ. "स देवदारुद्रुमवेदिकायां शार्दूलचर्मव्यवधानवत्याम्" कुमा० ३-४४। 3. ದಿಣ್ಣೆ, ಮಣ್ಣು

ಅಥವಾ ಮರಳಿನ ಗುಡ್ಡೆ. "मन्दाकिनीसैकतवेदिकाभिः सा कन्दुकैः कृत्रिमपुत्रकैश्च" कुमा० १-२९। 4. ಶುಭ ಕಾರ್ಯಗಳಿಗಾಗಿ ನಿರ್ಮಿತವಾದ ಹಸೆ.

**वेविजा ವೇದಿಜಾ** (स्त्री०) ದ್ರೌಪದಿ, ಯಾಜ್ಞಸೇನಿ. वेद्यां जायते— जनीं (प्रादुर्भावे) "डः" (३-२-९७)। ದ್ರುಪದರಾಜನ ಯಜ್ಞವೇದಿಕೆಯಿಂದ ಆವಿರ್ಭವಿಸಿದುದ ರಿಂದ ಈ ಹೆಸರು.

**वेदित ವೇದಿತ** (वि०) ತಿಳಿಸಲ್ಪಟ್ಟ. विद (ज्ञाने) + णिच् "क्तः" (३-२-१०२)।

**वेदितृ ವೇದಿತೃ** (वि०) ತಿಳಿದವನು, ಅರಿತವನು. विद (ज्ञाने) "तृच्" (३-१-१३३)। "न वेदानां वेदिता कश्चिदस्ति वेद्येन वेदं न विदुर्न वेद्यम्" भा० उद्योग० ४३-५२। स्त्रियां "ङीप्" (४-१-५)। **-त्री -ತ್ರೀ.**

**वेदीश ವೇದೀಶ** (पुं०) 1. ಅಗ್ನಿ. 2. ಬ್ರಹ್ಮ, ಪಂಡಿತರ ಅಧಿಪತಿ. वेदीनामीशः। "कञ्जः प्राणश्च वेदीश-वेदगर्भपुराणगाः" त्रिकाण्ड०।

**वेदोक्त ವೇದೋಕ್ತ** (वि०) ವೇದಗಳಲ್ಲಿ ಉಕ್ತವಾದ, ವೇದಗಳಲ್ಲಿ ಹೇಳಲ್ಪಟ್ಟ. वेदेषु उक्तम्। "वेदोक्तमेव कुर्वाणो निःसङ्गोऽर्पितुमीश्वरे। नैष्कर्म्यां लभते सिद्धिं रोचनार्था फलश्रुतिः"। **-उदितः ಉದಿತಃ.** "वेदोदितानां नित्यानां कर्मणां समतिक्रमे। स्नातकव्रतलोपे च प्रायश्चित्तमभोजनम्"।

**वेदोदय ವೇದೋದಯ** (पुं०) ಸೂರ್ಯ. वेदः ज्ञानं उदये यस्य। "वेदोदयः प्रतिदिवा भानुः पीतुस्तमोऽपहः" त्रिकाण्ड०।

**वेद्य ವೇದ್ಯ** (पुं०) 1. ಪರಮಾತ್ಮ. सर्वैरपि वेदितुं शक्यः विद (ज्ञाने) "ण्यत्" (३-१-१२४)। "सर्वैश्च वेदितुं शक्यः सौलभ्यात् वेद्य ईरितः" इति निरुक्तिः। "वेद्यो वैद्यः सदायोगी" वि० स०। (वि०) 2. ತಿಳಿಯಲ್ಪಡುವ. "वेद्यं वास्तवमत्र वस्तु शिवदं तापत्रयोन्मूलनम्" भाग० १-१-२। 3. ಮದುವೆಯಾಗಲು ಅರ್ಹನಾದವನು. 4. ಹೊಂದಲ್ಪಡುವ, ಪಡೆಯಲ್ಪಡುವ. 5. ವೇದಕ್ಕೆ ಹಿತವಾದ. 6. ವೇದಪ್ರತಿಪಾದ್ಯವಾದ, ವೇದಗಳಲ್ಲಿ ವರ್ಣಿಸಲ್ಪಡುವ. "वेद्यं च यत् वेदयते च वेद्यं विधिश्च यश्च श्रयते विधेयम्" भा० अनु० १५८-३६।

**वेध ವೇಧ** (पुं०) ತೂತು ಕೊರೆಯುವುದು, ವಜ್ಜ ಮಾಡುವುದು. विध (विधाने) "घञ्" (३-३-१८)। "बाणवेधे परं यत्नमकरोच्चैव गौतमः" भा० शान्ति० १६८-३६।

**वेधक ವೇಧಕ** (वि०) 1. ತೂತು ಕೊರೆಯುವವನು, ವಜ್ಜ ಕೊರೆಯುವವನು. विध (विधाने) "ण्वुल्" (३-१-१३३)। (पुं०) 2. ಕರ್ಪೂರ. "रेणुसारस्तु कर्पूरश्चन्द्रभस्म-हिमाह्वयः। वेधकः" त्रिकाण्ड०। (न०) 3. ಧನಿಯ, ಕೊತ್ತುಂಬರಿ.

**वेधत् ವೇಧತ್** (वि०) ತೂತು ಮಾಡುತ್ತಿರುವ, ವಜ್ಜ ಕೊರೆಯುತ್ತಿರುವ. विध (विधाने) "शतृ" (३-२-१२४)।

**वेधन ವೇಧನ** (न०) ತೂತು ಕೊರೆಯುವುದು. विध (विधाने) भावे "ल्युट्" (३-३-११५)।

**वेधनिका ವೇಧನಿಕಾ** (स्त्री०) ಮಣಿ ಮುತ್ತುಗಳನ್ನು ಕೊರೆದು ವಜ್ಜಮಾಡುವ ಸಾಧನ, –ಬೈರಿಗೆ. विध्यतेऽनया —विध (विधाने) "ल्युट्" (३-३-११७)। स्वार्थे "कन्" (५-४-५)।

**वेधनी ವೇಧನೀ** (स्त्री०) 1. ಆನೆಯ ಕಿವಿಯನ್ನು ಚುಚ್ಚುವ ಒಂದು ಆಯುಧ. 2. ಮುತ್ತು ಮತ್ತು ಆಭರಣಗಳಿಗೆ ತೂತು ಕೊರೆಯುವ ಮೊನಚಾದ ಒಂದು ಆಯುಧ, ಬೈರಿಗೆ. विध्यतेऽनया — विध (विधाने) "ल्युट्" (३-३-११७)।

**वेधनीय ವೇಧನೀಯ** (वि०) 1. ವಜ್ಜ ಕೊರೆಯಲ್ಪಡುವ. 2. ವಜ್ಜ ಮಾಡಬೇಕಾದ. 3. ವಜ್ಜ ಕೊರೆಯಲು ಸಾಧ್ಯವಾದ. विध (विधाने) "अनीयर्" (३-१-९६)। "तव्यः"। **वेधितव्यम् ವೇಧಿತವ್ಯಮ್.**

**वेधमुख्य (क) ವೇಧಮುಖ್ಯ (ಕ)** (पुं०) ಕಚೋರ. वेधे वेधने मुख्यः। स्वार्थे "कन्"। "कर्चूरको द्राविडकः काल्पको वेधमुख्यकः" अम०।

**वेधस् ವೇಧಸ್** (पुं०) 1. ಬ್ರಹ್ಮ, ಚತುರ್ಮುಖ. विदधाति—वि + डु धाञ् (धारणपोषणयोः) "असिः" वेधादेशश्च (उ० ४-२२४)। "वेधसा सह सनन्दनादयस्त्यक्तसंयमधियोऽवतस्थिरे" याद० १७-५२। 2. ವಿಷ್ಣು, ಪರಮಾತ್ಮ. अनन्तमङ्गलं महाविभवं विदधाति। "महाविभवकल्याणं सततं विदधाति यः। भक्तेभ्यः परमं वेधाः षडर्णो मङ्गलप्रदः"। 3. ಸೂರ್ಯ. 4. ಎಕ್ಕದ ಗಿಡ. 5. ಪಂಡಿತ, ವಿದ್ವಾಂಸ. "वेधाः पुंसि हृषीकेशे बुधे च परमेष्ठिनि" मेदि०। 6. ಶಿವ, ಪರಮೇಶ್ವರ. 7. ದಕ್ಷ ಮೊದಲಾದ ಪ್ರಜಾಪತಿಗಳು. "परतोऽपि परश्चासि विधाता वेधसामपि" कुमा० २-१४। 8. ಕವಿ.

**वेधस** ವೇಧಸ (ನಂ) ಅಂಗುಷ್ಠದ ಮೂಲ, ಹೆಬ್ಬೆರಳಿನ ಬುಡ.

**वेधित** ವೇಧಿತ (ವಿಂ) ರಂಧ್ರಮಾಡಲ್ಪಟ್ಟ. ತೂತು ಕೊರೆಯಲ್ಪಟ್ಟ. विध (विधाने) "क्तः" (३-२-१०२)।

**वेधितृ** ವೇಧಿತೃ (ವಿಂ) ರಂಧ್ರ ಮಾಡುವವನು, ತೂತು ಕೊರೆಯುವವನು. विध (विधाने) "तृच्" (३-१-१३३)।

**वेधिन्** ವೇಧಿನ್ (ವಿಂ) ತೂತು ಮಾಡುವವನು, ವಜ್ರ ಕೊರೆಯುವವನು. विधति—विध (विधाने) "णिनिः" (३-१-१३४)। "तेषामक्षीणि कर्णांश्च नासिकाश्चैव मायया। निमित्तवेधी स मुनिरीषिकाभिः समर्थयत्" भा० उद्योग० ९६-३०।

**वेध्य** ವೇಧ್ಯ (ವಿಂ) 1. ಲಕ್ಷ್ಯವಿಡಲ್ಪಡುವ, ಗುರಿಯಿಡಲ್ಪಡುವ. व्यध (ताडने) + "ण्यत्" (३-१-१२४)। 2. ಕೊರೆಯಲ್ಪಡುವ, ತೂತು ಮಾಡಲ್ಪಡುವ. (ನಂ) 3. ಲಕ್ಷ್ಯ, ಗುರಿ.

**वेन** ವೇನ (ಪುಂ) ಅಂಗದೇಶದ ಒಬ್ಬ ರಾಜ, ಅಂಗರಾಜನ ಪುತ್ರ. ಪೃಥುಮಹಾರಾಜನ ತಂದೆ. ವೇನನು ಬಹಳ ನಾಸ್ತಿಕನಾಗಿದ್ದುದರಿಂದ ಪ್ರಜೆಗಳು ಇವನ ಶರೀರವನ್ನು ಮಥನಮಾಡಿ ಪೃಥುಮಹಾರಾಜನನ್ನು ಪಡೆದರು.

**वेन्ना** ವೇನ್ನಾ (ಸ್ತ್ರೀಂ) ಒಂದು ನದಿ. "वेन्ना भीमरथी चोभे नद्यौ पापभयापहे" भा०।

**वेपथु** ವೇಪಥು (ಪುಂ) ಕಂಪನ, ನಡುಕ. टु वेपृ (कम्पने) "अथुच्" (३-३-८९)। "वेपथुश्च शरीरे मे रोमहर्षश्च जायते" गीता १-२९।

**वेपन** ವೇಪನ (ನಂ) ಕಂಪನ, ನಡುಕ. टु वेपृ (कम्पने) "ल्युट्" (३-३-११५)।

**वेम** ವೇಮ (ಪುಂ) ನೂಲನ್ನು ನೇಯುವ ಕೊಳವಿ, ತಾಕು ಹಲಗೆ.

**वेमन्** ವೇಮನ್ (ಪುಂ) ನೂಲನ್ನು ನೇಯುವ ಕೊಳವಿ, ತಾಕು ಹಲಗೆ. वयत्यनेन वेञ् (तन्तुसन्ताने) "मनिन्" (उ० ४-१)। "सितांशुवर्णैर्वयति स्म तद्गुणैर्महासिवेम्नः सहकृत्वरी बहुम्" नैष० १-१२।

**वेर** ವೇರ (ನಂ) 1. ಶರೀರ, ದೇಹ, ಮೈ. 2. ಬದನೆ ಗಿಡ. 3. ಕುಂಕುಮ ಕೇಸರಿ. "वेरं कलेवरे क्लीबं वार्ताकौ कुङ्कुमेऽपि च" मेदि०।

**वेरक** ವೇರಕ (ಪುಂ) ಕರ್ಪೂರ

**वेरट** ವೇರಟ (ಪುಂ) 1. ನಿಮ್ನವರ್ಗದವನು. 2. ಸಂಕರ ಜಾತಿಯವನು. (ನಂ) 3. ಬದರೀಫಲ, ಬೋರೆಹಣ್ಣು.

**वेल** ವೇಲ (ನಂ) ಉಪವನ, ಕೈತೋಟ.

**वेला** ವೇಲಾ (ಸ್ತ್ರೀಂ) 1. ವೇಳೆ, ಸಮಯ. वेल (कालोपदेशे) "अः" (३-३-१०४)। "वेलोपलक्षणार्थं प्रवासादुपावृत्तेन तत्रभवता काश्यपेनादिष्टोस्मि" शाकु० ४। 2. ಒಂದು ಗಂಟೆಯ ಕಾಲ. "चतुर्विंशतिवेलाभिरहोरात्रं प्रचक्षते" अग्निपु०। 3. ಸಮುದ್ರದ ತೀರ ಪ್ರದೇಶ, ಕಡಲ ದಡ. "स वेलावप्रवलयां परिखीकृतसागराम्" रघु० १-३०। 4. ಸೀಮೆ, ಎಲ್ಲೆ, ಗಡಿ. 5. ಈಶ್ವರನ ಭೋಜನ. ಧನಿಕನ ಸುಖಭೋಜನ. 6. ರಾಗ. 7. ಸುಖವಾದ ಮರಣ. 8. ರೋಗ. 9. ನೀರಿನ ಪ್ರವಾಹ. "वेला काले च सीमायामब्धेः कूलविकारयोः। अक्लिष्टमरणे रोगे ईश्वरस्य च भोजने" मेदि०। "अम्भोधेस्तीरनीरविकारयोः" हेम०। 10. ಮಾತು. 11. ಬುಧನ ಪತ್ನಿ. "वेला काले च रागे च सीम्नि वाचि बुधस्त्रियाम्" विश्व०। 12. ದಂತಮೂಲ.

**वेलाकूल** ವೇಲಾಕೂಲ (ನಂ) 1. ತಾಮ್ರಲಿಪ್ತ ದೇಶ. 2. ಸಮುದ್ರದ ತೀರ. "वेलाकूलं ताम्रलिप्तम्" त्रिकाण्ड०। "देशान् नागायुतप्राणो वेलाकूले न्यमज्जयत्" भाग०।

**वेल्ल** ವೇಲ್ಲ (ಪುಂ) 1. ಗಮನ, ಸಂಚಾರ. वेल्ल (चलने) "घञ्" (३-३-१८)। (ನಂ) 2. ವಾಯುವಿಳಂಗ. वेल्ल (चलने) "अच्" (३-१-१३४)। (ವಿಂ) 3. ನಡೆಯುವ, ಸಂಚರಿಸುವ. "अथो वेल्लममोघा चित्रतण्डुला" अम०। 4. ಹೊರಳಾಡುವ.

**वेल्लज** ವೇಲ್ಲಜ (ನಂ) ಮೆಣಸು. वेल्लं जायते — जनी (प्रादुर्भावे) "डः" (३-२-१०१)। "अथ वेल्लजम्। मरीचं कोलकं कृष्णमूषणं धर्मपत्तनम्" अम०।

**वेल्लन** ವೇಲ್ಲನ (ನಂ) 1. ನಡೆಯುವುದು, ಸಂಚರಿಸುವುದು. 2. ನಡುಗುವುದು, ಕಂಪನ. वेल्ल (चलने) भावे "ल्युट्" (३-३-११५)। 3. ಹೊರಳಾಡುವುದು.

**वेल्लि** ವೇಲ್ಲಿ (ಸ್ತ್ರೀಂ) ಲತೆ, ಬಳ್ಳಿ.

**वेल्लित** ವೇಲ್ಲಿತ (ನಂ) 1. ನಡೆಯುವುದು, ಗಮನ. 2. ನಡುಗುವುದು, ಕಂಪಿಸುವುದು. वेल्ल (चलने) "क्तः" (३-३-११४)। (ವಿಂ) 3. ಕುಟಿಲವಾದ, ವಕ್ರವಾದ. 4. ಅಲುಗಾಡಿಸಲ್ಪಟ್ಟ, ಕದಲಿಸಲ್ಪಟ್ಟ. वेल्ल (चलने) "क्तः" (३-२-१०२)। "वेल्लितं गमने क्लीबं कुटिले विधुते त्रिषु" मेदि०। "व्यवृणुत वेल्लितबाहुवल्लरीका" माघ० ७-७२।

**वेश** ವೇಶ (ಪುಂ०) 1. ವೇಷಹಾಕುವುದು, ಅಲಂಕರಿಸುವುದು, ಶೃಂಗರಿಸುವುದು. विशन्ति नयनान्यत्र—विश (प्रवेशने) "घञ्" (३-३-१२१)। 2. ಗೃಹ, ಮನೆ. 3. ವೇಶ್ಯೆಯ ಗೃಹ, ಸೂಳೆಯ ಮನೆ. विशन्त्यत्र — विश (प्रवेशने) "घञ्" (३-३-१२१)। "वेशो वेश्यागृहे गेहे नेपथ्ये च" हेम०। 4. ಕೂಲಿ. "सूना चक्रध्वजवतां वेशेनैव च जीवताम्" मनु० ४-८४। 5. ಪ್ರವೇಶ, ಒಳಗೆ ಹೋಗುವುದು. 6. ವಸ್ತ್ರಗೃಹ, ಡೇರೆ. "शकटापणवेशाश्च यानयुग्यं च सर्वशः" भा० उद्योग० १५१-५८।

**वेशक** ವೇಶಕ (ಪುಂ०) 1. ಗೃಹ, ಮನೆ. वेश स्वार्थे "कन्"। (वि०) 2. ವೇಷಹಾಕುವವನು, ಅಲಂಕರಿಸುವವನು.

**वेश(ष)धारिन्** ವೇಶ(ಷ)ಧಾರಿನ್ (ಪುಂ०) 1. ಆಷಾಢಭೂತಿ, ಕಪಟಿ. ಇತರರನ್ನು ವಂಚಿಸಲು ಕಪಟ ವೇಷವನ್ನು ತಾಳಿರುವವನು. वेशं तापसादिवेशं (लिङ्गं) धारयति — धृ (धारणे) + णिच् "णिनिः" (३-१-१३४)। (वि०) 2. ವೇಷವನ್ನು ಧರಿಸಿ ಅಭಿನಯಿಸುವವನು.

**वेशन** ವೇಶನ (ನ०) 1. ಗೃಹ, ಮನೆ. 2. ಪ್ರವೇಶ, ಒಳಗೆ ಹೋಗುವುದು. विश (प्रवेशने) "ल्युट्" (३-३-११५)।

**वेशनारी** ವೇಶನಾರೀ (ಸ್ತ್ರೀ०) ವೇಶ್ಯೆ, ಸೂಳೆ.

**वेशन्त** ವೇಶಂತ (ಪುಂ०) 1. ಕೊಳ, ಚಿಕ್ಕದಾದ ಸರೋವರ. विशन्त्यत्र भेकमीनादयः — विश (प्रवेशने) "झच्" (उ० ३-१२६)। "वेशन्तः पल्वलं चाल्पसरः" अम०। 2. ಅಗ್ನಿ.

**वेशर** ವೇಶರ (ಪುಂ०) ಹೇಸರಗತ್ತೆ.

**वेशवार** ವೇಶವಾರ (ಪುಂ०) ಸಂಬಾರ, ಮಸಾಲೆ, ಚಟ್ನಿ. (ಅನ್ನವು ರುಚಿಸುವುದಕ್ಕಾಗಿ ಉಪಯೋಗಿಸಲ್ಪಡುವ ವ್ಯಂಜನ.)

**वेश्मन्** ವೇಶ್ಮನ್ (ನ०) ಗೃಹ, ಮನೆ. विशन्त्यस्मिन् — विश (प्रवेशने) "मनिन्" (उ० ४-१४४)। "अरुणितमकठोरैर्वेश्म काश्मीरजाम्भःस्नपितमिव तदेतद्भानुभिर्भाति भानोः" माघ० ११-५३।

**वेश्मनकुल** ವೇಶ್ಮನಕುಲ (ಪುಂ०) ಗಂಧಮೂಷಿಕ, ಕಸ್ತೂರಿ ಇಲಿ, ಮೂಗಿಲಿ.

**वेश्मभू** ವೇಶ್ಮಭೂ (ಸ್ತ್ರೀ०) ಗೃಹನಿರ್ಮಾಣಕ್ಕೆ ಯೋಗ್ಯವಾದ ಭೂಮಿ, ಮನೆಯನ್ನು ಕಟ್ಟಲು ಸೂಕ್ತವಾದ ನಿವೇಶನ, ವಾಸ್ತು. वेश्मनो भूः। "वेश्मभूर्वास्तुरस्त्रियाम्" अम०।

**वेश्य** ವೇಶ್ಯ (ನ०) 1. ವೇಶ್ಯೆಗೆ ಯೋಗ್ಯವಾದ ಮನೆ, ಸೂಳೆಗೆ ಹಿತವಾದ ಮನೆ. वेश्यायै हितम् "यत्" (५-१-५)। (वि०) 2. ಪ್ರವೇಶಕ್ಕೆ ಯೋಗ್ಯವಾದ. वेशमर्हति — "यत्" (५-१-६३)।

**वेश्या** ವೇಶ್ಯಾ (ಸ್ತ್ರೀ०) ಸೂಳೆ, ವಾರಾಂಗನೆ. वेशेन नेपथ्येन शोभते "यत्" (५-१-१००)। "त्वं वापीव लतेव नौरिव जनं वेश्यासि सर्वं भज" मृच्छ० १-३२।

**वेश्याचार्य** ವೇಶ್ಯಾಚಾರ್ಯ (ಪುಂ०) ವೇಶ್ಯೆಯರಿಗೆ ಆಶ್ರಯಕೊಟ್ಟು ರಕ್ಷಿಸುವವನು, ತಲೆಹಿಡುಕ. वेश्यानामाचार्यः।

**वेश्याजनसमाश्रयः** ವೇಶ್ಯಾಜನಸಮಾಶ್ರಯಃ (ಪುಂ०) ವೇಶ್ಯೆಯರ ವಾಸಸ್ಥಾನ, ಸೂಳೆಯರ ಕೇರಿ.

**वेष** ವೇಷ (ಪುಂ०) 1. ವಸ್ತ್ರ ಆಭರಣ ಮೊದಲಾದುವುಗಳಿಂದ ಸೌಂದರ್ಯವನ್ನು ಅಧಿಕಗೊಳಿಸುವ ಕಾರ್ಯ, ಒಡವೆ ಮೊದಲಾದುವುಗಳಿಂದ ಅಲಂಕರಿಸುವುದು. विष्लृ (व्याप्तौ) "घञ्" (३-३-१८)। 2. ರೂಪವನ್ನು ಬದಲಾಯಿಸುವುದು. "विनीतवेषः कृपणः प्रणिपत्योपसृत्य च" रामा०।

**वेषणा** ವೇಷಣಾ (ಸ್ತ್ರೀ०) ಭೂಮ್ಯಾಮಲಕ, ನೆಲನೆಲ್ಲಿ ಗಿಡ.

**वेषवार** ವೇಷವಾರ (ಪುಂ०) "वेशवार" ಪದದ ಅರ್ಥ.

**वेष्ट** ವೇಷ್ಟ (ಪುಂ०) 1. ಸುತ್ತುಗಟ್ಟುವುದು. वेष्ट (वेष्टने) "घञ्" (३-३-१८)। 2. ಬೇಲಿ, ಸುತ್ತುಗೋಡೆ, ಆವರಣ. 3. ರುಮಾಲು, ಶಿರೋವೇಷ್ಟನ. 4. ಮರದ ರಸ, ಗೋಂದು.

**वेष्टक** ವೇಷ್ಟಕ (ಪುಂ०) 1. ಬೇಲಿ, ಸುತ್ತುಗೋಡೆ, ಆವರಣ. वेष्ट (वेष्टने) "ण्वुल्" (३-१-१३३)। 2. ಕೂಷ್ಮಾಂಡ, ಕುಂಬಳಕಾಯಿ ಗಿಡ. (ನ०) 3. ಶಿರೋವೇಷ್ಟನ, ರುಮಾಲು. 4. ಆವರಣ, ಹೊದಿಕೆ. (ವಿ०) 5. ಸುತ್ತುವ, ಹೊದಿಸುವ. 6. ಸುತ್ತುಗಟ್ಟುವ.

**वेष्टन** ವೇಷ್ಟನ (ನ०) 1. ಉಷ್ಣೀಷ, ರುಮಾಲು. वेष्टते— वेष्ट (वेष्टने) "ल्युः" (३-१-१३४)। 2. ಕರ್ಣದೊಳಗಿನ ರಂಧ್ರ, ಕಿವಿಯೊಳಗಿನ ವಿವರ. 3. ಆವರಣ, ಬೇಲಿ, ಸುತ್ತುಗೋಡೆ. "क्रीडाशैलः कनककदलीवेष्टनप्रेक्षणीयः" मेघ० २-१४। 4. ಸುತ್ತುವರೆಯುವುದು, ಸುತ್ತಿಕೊಳ್ಳುವುದು. "भोगिवेष्टनमार्गेषु चन्दनानां समर्पितम्। नास्रसत्करिणां ग्रैवं त्रिपदीच्छेदिनामपि" रघु० ४-४८। 5. ಮುಚ್ಚಳ, ಹೊದಿಕೆ. 6. ಕಿರೀಟ, ಉಷ್ಣೀಷ, ರುಮಾಲು. "रजोभिस्तुरगोत्कीर्णैरस्पृष्टा-

लकवेष्टनौ" रघु० १-४२। 7. ಸುತ್ತುವರೆಯುವುದು, ಮುತ್ತಿಗೆಹಾಕುವುದು, ಸುತ್ತುಗಟ್ಟುವುದು. 8. ತಡೆಯುವುದು.

**वेष्टनक ವೇಷ್ಟನಕ** (पुं०) ರತಿಬಂಧದ ಒಂದು ಭೇದ. "ऊर्ध्वगं पादमेकञ्च भुजान्तर्वेष्टयेद्यदि। कान्तकक्षाश्रितां नारीं बन्धो वेष्टनकः स्मृतः" रतिमं०।

**वेष्टवेष्टनक ವೇಷ್ಟವೇಷ್ಟನಕ** (पुं०) ರತಿಬಂಧದ ಒಂದು ಭೇದ. वेष्टनेन वेष्टते—वेष्ट (वेष्टने) "ण्वुल्" (३-१-१३३)।

**वेष्टित ವೇಷ್ಟಿತ** (वि०) 1. ಸುತ್ತುಗಟ್ಟಲ್ಪಟ್ಟ, ಸುತ್ತುವರೆಯಲ್ಪಟ್ಟ. वेष्ट (वेष्टने) "क्तः" (३-२-१०२)। 2. ಹೊದಿಸಲ್ಪಟ್ಟ, ಮುಚ್ಚಲ್ಪಟ್ಟ. 3. ತಡೆಯಲ್ಪಟ್ಟ. (न०) 4. ಸುತ್ತುಗಟ್ಟುವುದು, ಮುತ್ತಿಗೆಹಾಕುವುದು. 5. ಹೊದಿಸುವುದು, ಮುಚ್ಚುವುದು. वेष्ट भावे "क्तः" (३-३-११४)। 6. ತಡೆಯುವುದು, ಅಡ್ಡಿಯುಂಟುಮಾಡುವುದು. 7. ನರ್ತನದ ಒಂದು ಅವಸ್ಥೆ.

**वेष्प ವೇಷ್ಪ** (पुं०) ನೀರು, ಜಲ. विष्लृ (व्याप्तौ) "पः" (उ० ३-२३)। वेष्पः पानीयम् सि० कौ०।

**वेसन ವೇಸನ** (न०) ದ್ವಿದಳ ಧಾನ್ಯದ ಹಿಟ್ಟು, ಕಡಲೆ ಉದ್ದು ಹೆಸರು ಮುಂತಾದ ಧಾನ್ಯಗಳ ಬೇಳೆಯ ಚೂರ್ಣ. वेसृ (गतौ) "ल्युट्" (३-३-१९)। "दालयश्चण-कानान्तु निस्तुषा यन्त्रपेषिताः। तच्चूर्णं वेसनं प्रोक्तं पाकशास्त्रविशारदैः"।

**वेसर ವೇಸರ** (पुं०) ಹೇಸರಗತ್ತೆ. वेसृ (गतौ) "अरः" बाहु०। "तूर्णं प्रणेत्रा कृतनादमुच्चकैः प्रणोदितं वेसरयुग्यमध्वनि" माघ० १२-१९।

**वेसवार ವೇಸವಾರ** (पुं०) "वेशवार" ಪದದ ಅರ್ಥ.

**वेहत् ವೇಹತ್** (स्त्री०) ಗರ್ಭಪಾತವಾಗುವ ಹಸು, ಗರ್ಭ ಧರಿಸಿರುವಾಗ ವೃಷಭದ ಸಂಬಂಧದಿಂದ ಗರ್ಭದ ಪತನವಾಗುವ ಹಸು. विहन्ति गर्भं निपा० (उ० २-८५)।

**वेहार ವೇಹಾರ** (पुं०) (ಬಿ)ವಿಹಾರ. (ಬಿ)ಹಾರ ದೇಶ.

**वै ವೈ** (अव्य०) 1. ಇದೊಂದು ಪಾದಪೂರಣಕ್ಕಾಗಿ ಪ್ರಯೋಗಿಸುವ ಒಂದು ಅವ್ಯಯ. वा (गतिगन्धनयोः) "डैः" (उ० बाहु०)। "तु हि च स्म ह वै पादपूरणे" अम०। "सत्सङ्कल्पस्य ते ब्रह्मन् यद्वै ध्यायति ते वयम्" भाग० ४-१-३०। 2. ಅನುನಯ. 3. ಅವಧಾರಣ, ನಿಶ್ಚಯ. "सर्वं वै ब्राह्मणोऽर्हति" मनु०। 4. ಸಂಬೋಧನೆ. "वै स्यात्संबोधने पादपूरणेऽनुनयेऽपि च" मेदि०।

**वैंशतिक ವೈಂಶತಿಕ** (वि०) ಇಪ್ಪತ್ತರಿಂದ ಕೊಳ್ಳಲ್ಪಟ್ಟ. विंशत्या क्रीतः "ठन्" (५-१-३७)।

**वैकक्ष ವೈಕಕ್ಷ** (न०) ಕಂಠದಿಂದ ವಕ್ಷಃಸ್ಥಲದಲ್ಲಿ ಅಡ್ಡಲಾಗಿ ಹಾಕಿರುವ ಹಾರ. विशिष्टः कक्षोऽस्मात् विकक्षमुरःस्थलम्—तत्र भवम् "अण्" (४-३-५३)।

**वैकक्षक ವೈಕಕ್ಷಕ** (न०) ಯಜ್ಞೋಪವೀತದಂತೆ ಅಡ್ಡಲಾಗಿ ಹಾಕಿಕೊಳ್ಳುವ ಪುಷ್ಪದ ಹಾರ. विकक्ष स्वार्थे "कन्" (५-४-५)। "वैकक्षकं तु तत्। यत्तिर्यक् क्षिप्तमुरसि" अम०।

**वैकङ्कत ವೈಕಂಕತ** (पुं०) 1. ಹುಳಿಬೇಲದ ಮರ. विकङ्कत एव—स्वार्थे "कन्" (५-४-५)। (वि०) 2. ಹುಳಿಬೇಲದ ಮರದಿಂದ ನಿರ್ಮಿತವಾದ ಯಾಗದ ಪಾತ್ರೆ. विकङ्कतस्य विकारः "अञ्" (४-३-१४१)।

**वैकल्पिक ವೈಕಲ್ಪಿಕ** (वि०) ವಿಕಲ್ಪವಾಗಿ ಉಂಟಾದ. विकल्पेन भवम्। एवं च "इवेन समासः" इत्यादि वैकल्पिकमिति सिद्धम्।

**वैकल्य ವೈಕಲ್ಯ** (न०) 1. ನ್ಯೂನವಾಗಿರುವಿಕೆ, ಯಾವುದಾದರೊಂದು ವಿಷಯದಲ್ಲಿ ಕೊರತೆಯಿರುವಿಕೆ. विकलस्य भावः "ष्यञ्" (५-१-१२४)। 2. ದೋಷ, ಕಳಂಕ. 3. ಅಸಾಮರ್ಥ್ಯ, ಅಶಕ್ತತೆ. 4. ಅಂಗಹೀನನಾಗಿರುವಿಕೆ.

**वैकुण्ठ ವೈಕುಂಠ** (पुं०) 1. ಶ್ರೀಕೃಷ್ಣ, ಮಹಾವಿಷ್ಣು. विगता कुण्ठा नाशोऽस्य विकुण्ठं ज्ञानं स्थानं चास्ति स्वरूपत्वेनाश्रयत्वेन वास्य "अण्" (वा० ५-२-१०३)। विकुण्ठानां जीवानामयं नियन्ता ज्ञानदो वा "अण्" (४-३-१२०)। इति वा। विकुण्ठाया अपत्यम् "अण्" (४-१-११२) इति वा। "चाक्षुषस्यान्तरे देवो वैकुण्ठः पुरुषोत्तमः। विकुण्ठायामयं जज्ञे वैकुण्ठे दैवतैः सह" विष्णुपु०। "विलग्नदैत्येश्वरशोणितानां वैकुण्ठकेयूररजुषां मणीनाम्" याद० १८-३०। कुठि (प्रतिघाते) स चात्र संश्लेषणविघातः, स च विगतो येषां ते विकुण्ठाः, तेषामयम् वैकुण्ठः इति वा। "मया संश्लेषिता भूमिरद्भिर्व्योम च वायुना। वायुश्च तेजसा सार्धं वैकुण्ठत्वं ततो मम" भा० शान्ति०।

**ವೈಕುಂಠನ ನಾಮಮಹಿಮೆ :** ರಾಮ ನಾರಾಯಣ ಅನಂತ ಮುಕುಂದ ಮಧುಸೂದನ ಕೃಷ್ಣ ಕೇಶವ ಕಂಸಾರಿ ಹರಿ ವೈಕುಂಠ ವಾಮನ ಈ ಏಕಾದಶ ನಾಮಗಳನ್ನು ಪಠಿಸುವವನು ಕೋಟಿ ಜನ್ಮಗಳಲ್ಲಿ ಮಾಡಿದ ಪಾಪಗಳನ್ನು ಕಳೆದುಕೊಳ್ಳುವನು. "राम नारायणानन्त मुकुन्द मधुसूदन।

कृष्ण केशव कंसारे हरे वैकुण्ठ वामन। इत्येकादश नामानि पठेद्वा पाठयेद्यदि। जन्मकोटिसहस्राणां पातकादवमुच्यते" ब्रह्मवै०। ವೈಕುಂಠನ (ಪರಮಾತ್ಮನ) ಮಹಿಮೆಯು ಅನಂತವಾದುದು. ["विभूति" ಪದದಲ್ಲಿ ನೋಡಿರಿ] 2. ಇಂದ್ರ. "वैकुण्ठः कृष्णशक्रयोः" मेदि०। (ನ०) 3. ವೈಕುಂಠಲೋಕ, ವಿಷ್ಣುಲೋಕ, ಪರಮಪದ. ಭೂಮಿಯಿಂದ ಮೇಲಕ್ಕೆ ಎಂಟು ಕೋಟಿ ಯೋಜನಗಳ ದೂರದಲ್ಲಿ ಸತ್ಯಲೋಕವಿರುವುದು. ಸತ್ಯ ಲೋಕದಿಂದ ಮೇಲಕ್ಕೆ ಅನೇಕ ಯೋಜನಗಳ ದೂರ ದಲ್ಲಿಯೂ ಭೂರ್ಲೋಕದಿಂದ ಮೇಲಕ್ಕೆ ಹದಿನೆಂಟು (18) ಕೋಟಿ ಯೋಜನಗಳ ದೂರದಲ್ಲಿಯೂ ವೈಕುಂಠಲೋಕ ವಿರುವುದು. ಈ ವೈಕುಂಠಲೋಕದಲ್ಲಿ ಶ್ರೀ ಮಹಾಲಕ್ಷ್ಮೀ ಸಮೇತನಾದ ಶ್ರೀ ಮಹಾವಿಷ್ಣುವು ಸಮಸ್ತ ಭಾಗವತರ ಸೇವೆಯನ್ನು ಸ್ವೀಕರಿಸುತ್ತ ಸಕಲರಿಗೂ ಅಭಯಪ್ರದಾನ ಮಾಡುತ್ತ ವಿರಾಜಿಸುತ್ತಿರುವನು. ವೈಕುಂಠಲೋಕಕ್ಕೆ ಉತ್ತರ ದಿಕ್ಕಿನಲ್ಲಿ 16 ಕೋಟಿ ಯೋಜನಗಳ ದೂರದಲ್ಲಿ ಶಿವಲೋಕವಿರುವುದು. ಈ ಶಿವಲೋಕದಲ್ಲಿರುವ ಕೈಲಾಸ ಪರ್ವತದಲ್ಲಿ ಪರಶಿವನು ಪಾರ್ವತೀದೇವಿಯೊಡಗೂಡಿ ಸಮಸ್ತಪ್ರಮಥಗಣಗಳಿಂದ ಪರಿವೃತನಾಗಿ ಅವರಿಂದ ಸೇವೆಯನ್ನು ಸ್ವೀಕರಿಸುತ್ತಿರುವನು. "उपरिष्टात् क्षितेरष्टौ कोटयः सत्यमीरितम्। सत्यादुपरि वैकुण्ठो योजनानां प्रमाणतः। भूर्लोकात् परिसंख्यातः कोटिरष्टादश प्रभो। यत्रास्ते श्रीपतिः साक्षात् सर्वेषामभयप्रदः। वैकुण्ठादुत्तरे शैवो लोकः षोडशकोटयः। तिर्यगेव महाराज कैलासाख्यस्तु पर्वतः। पार्वत्या सहितः शम्भुः यत्रास्ते स्वगणैर्वृतः" पाद्म० स्वर्गखं० ६। ವೈಕುಂಠಲೋಕ ಪರಮಪದ ಪರಮವ್ಯೋಮ ಇತ್ಯಾದಿ ನಾಮಧೇಯ ಗಳನ್ನು ಹೊಂದಿರುವ ಶ್ರೀ ವೈಕುಂಠಲೋಕವು ಸನಕ ಸನಂದನ ಚತುರ್ಮುಖ ವಾಮದೇವಾದಿಗಳಿಗೂ ಅಚಿಂತ್ಯ ಸ್ವಭಾವದ ಮತ್ತು ಅದ್ಭುತ ಮಹಾಮಹಿಮರಾದ ನಿತ್ಯ ಸಿದ್ಧರಿಂದಲೂ ಭಗವದಾನುಕೂಲ್ಯವೇ ಪರಮಪುರುಷಾರ್ಥ ವೆಂದು ತಿಳಿದು ಅನವರತವೂ ಪರಮಪುರುಷನ ಕೈಂಕರ್ಯ ದಲ್ಲಿ ನಿರತರಾದ ಮಹಾತ್ಮರಾದ ಭಾಗವತರಿಂದಲೂ ತುಂಬಿ ಶೋಭಾಯಮಾನವಾಗಿರುವುದು. ಶ್ರೀ ವೈಕುಂಠ ಲೋಕದ ಪರಿಮಾಣ ಇದರ ಐಶ್ವರ್ಯ ಮತ್ತು ಸ್ವಭಾವ ಗಳು ಎಷ್ಟು ಎಂತಹುದು ಎಂದು ಈ ದಿವ್ಯಪುರುಷರಿಗೂ ಅಳೆಯಲೂ ತಿಳಿಯಲೂ ಸಾಧ್ಯವಾಗಲಾರದು. ಶ್ರೀ ವೈಕುಂಠಲೋಕದ ಮಧ್ಯದಲ್ಲಿ ಶತಸಹಸ್ರದಿವ್ಯಾವರಣ ಗಳಿಂದ ಆವೃತವಾಗಿಯೂ ಶತಸಹಸ್ರಕೋಟಿ ದಿವ್ಯೋ ದ್ಯಾನಗಳಿಂದ ಪರಿವೃತವಾಗಿಯೂ ಇರುವ ಒಂದು ದಿವ್ಯಾಯತನವೂ ಅದರ ಮಧ್ಯದಲ್ಲಿ ದಿವ್ಯರತ್ನಸ್ತಂಭ ಗಳಿಂದ ಪರಿಶೋಭಿತವಾದ ದಿವ್ಯ ರತ್ನಾಸ್ಥಾನಮಂಡಪವೂ ಇರುವುದು. ಅದರಲ್ಲಿರುವ ದಿವ್ಯ ಯೋಗಪರ್ಯಂಕದಲ್ಲಿ ತನ್ನ ದಿವ್ಯಕಾಂತಿಯಿಂದ ಸಮಸ್ತ ವೈಕುಂಠಲೋಕವನ್ನೂ ಆಪ್ಯಾಯನಗೊಳಿಸುತ್ತಿರುವ ಮತ್ತು ಅನಂತ ಗರುಡ ವಿಷ್ವಕ್ಸೇನಾದಿಗಳನ್ನು ಪರಮಾತ್ಮನ ಆಯಾ ಅವಸ್ಥೋ ಚಿತವಾದ ಸೇವಾಕೈಂಕರ್ಯದಲ್ಲಿ ಆಜ್ಞಾಪಿಸುತ್ತಿರುವ ಶ್ರೀ ಮಹಾಲಕ್ಷ್ಮಿಯೊಡನೆ ಶ್ರೀಮನ್ನಾರಾಯಣನು ವಿರಾಜಿಸುತ್ತಿರುವನು. ಅಲ್ಲಿ ಸಂಸಾರಧರ್ಮವೆಲ್ಲವನ್ನೂ ತ್ಯಜಿಸಿ ಭಗವತ್ಪರಿಚರ್ಯೆಯೇ ಪರಮಭೋಗ್ಯವೆಂದು ತಿಳಿದಿರುವ ನಿತ್ಯಸಿದ್ಧರಿಂದ ಅನವರತವೂ ಸೇವಿಸಲ್ಪಡುತ್ತ ದಿವ್ಯ ಗಾಂಭೀರ್ಯ ಔದಾರ್ಯ ಸೌಂದರ್ಯ ಮಾಧು ರ್ಯಾದಿ ಅನವಧಿಕ ಗುಣಗಣಾಲಂಕೃತವಾದ ತನ್ನ ಲೀಲಾ ಲಾಪಾಮೃತರಸದಿಂದ ಭಕ್ತವೃಂದದ ಹೃದಯಾಂತರಾಳ ವನ್ನು ತುಂಬುತ್ತಿರುವನು. "वैकुण्ठे तु परे लोके श्रिया सार्धं जगत्पतिः। आस्ते विष्णुरचिन्त्यात्मा भक्तैर्भागवतैः सह"॥ ಇಂತಹ ಸಕಲಗುಣಗಣವಿಭೂಷಿತ ವಾದ ಶ್ರೀ ವೈಕುಂಠವನ್ನು ಸೇರಿದವರಿಗೆ ಅಪುನರಾವೃತ್ತಿ ರೂಪವಾದ ಮೋಕ್ಷವು ಸಿದ್ಧ. "अमृतं शाश्वतं नित्यमनन्तं परमं पदम्। हिरण्मयं मोक्षप्रदं ब्रह्मानन्दसुखाह्वयम्। एवमादिगुणोपेतं तद्विष्णोः परमं पदम्। यद्गत्वा न निवर्तन्ते तद्धाम परमं हरेः। न हि वर्णयितुं शक्यं कल्पकोटिशतैरपि"॥

**वैकृत** ವೈಕೃತ (ನ०) 1. ವಿಕಾರ, ರೂಪಬದಲಾವಣೆ. विकृतमेव "अण्" (५-४-३८)। "दृश्यमानेषु वक्त्रेषु परं भवति वैकृतम्" रामा०। 2. ವ್ಯತ್ಯಾಸ, ಬದಲಾವಣೆ. 3. ಬೀಭತ್ಸ ರಸ. 4. ದುರ್ನಿಮಿತ್ತ, ದುಃಶಕುನ. "तत्प्रतीपपवनादिवैकृतं प्रेक्ष्य शान्तिमधिकृत्य कृत्यवित्" रघु० ११-६२। (ವಿ०) 5. ವಿಕಾರದಿಂದ ಉಂಟಾದ. "विधिः साधारणो यत्र सर्गाः प्राकृतवैकृताः" भाग०।

**वैकृतविवर्त** ವೈಕೃತವಿವರ್ತ (ಪು०) ಬದಲಾವಣೆಯ ಪರಿಣಾಮ. ಬದಲಾವಣೆಯಿಂದ ಉಂಟಾದ ಕಷ್ಟದ ಪರಿಸ್ಥಿತಿ. वैकृतस्य विवर्तः। "अचिरेण वैकृतविवर्तदारुणः कलभं कठोर इव कूटपाकलः" मालती० १-४२।

**वैकृत्य** ವೈಕೃತ್ಯ (ನ०) ವ್ಯತ್ಯಾಸ, ಬದಲಾವಣೆ. विकृत स्वार्थे "ष्यञ्" (वा० ५-१-१२४)।

**वैक्रान्त** ವೈಕ್ರಾಂತ (ನ०) ವಜ್ರದಂತಿರುವ ಮತ್ತು ವಜ್ರಕ್ಕಿಂತಲೂ ಕಡಿಮೆ ಗುಣವುಳ್ಳ ಒಂದು ಮಣಿ.

विक्रान्त्या दीव्यति—"अण्" (४-४-२)। "वैक्रान्तं वज्रसादृश्यं वज्रवद्रसवीर्यकम्। तथाप्यभावे वज्रस्य ग्राह्यं वैक्रान्तमुत्तमम्" राजनि०।

**वैक्लव्य ವೈಕ್ಲವ್ಯ** (न०) 1. ವ್ಯಥೆ, ನೋವು, ಸಂಕಟ. विक्लवस्य भाव: "ष्यञ्" (५-१-१२४)। "वैक्लव्यं मम तावदीदृशमिदं स्नेहादरण्यौकस: पीडयन्ते गृहिण: कथं नु तनयाविश्लेषदु:खैर्नवै:" शाकु० ४-५। 2. ಗಾಬರಿ, ದಿಗ್ಭ್ರಮೆ, ತಬ್ಬಿಬ್ಬು. 3. ಕ್ಷೋಭೆ, ದಂಗೆ, ವಿಪ್ಲವ.

**वैखरी ವೈಖರೀ** (स्त्री०) ಮೂಲಾಧಾರದಿಂದ ಹುಟ್ಟುವ ನಾದರೂಪವರ್ಣಕ್ಕೆ ಅರ್ಥಬೋಧಕಶಬ್ದನಿಷ್ಪತ್ತಿಯವರೆಗೆ ಉಂಟಾಗುವ ನಾಲ್ಕು ಅವಸ್ಥೆಗಳಲ್ಲೊಂದು. [ವಿವರಕ್ಕೆ "पश्यन्ती" ಪದದಲ್ಲಿ ನೋಡಿ.] ಇದು ಶಬ್ದನಿಷ್ಪತ್ತಿಯುಂಟಾಗುವ ಕೊನೆಯ (ನಾಲ್ಕನೆಯ) ಅವಸ್ಥೆ.

**वैखानस ವೈಖಾನಸ** (पुं०) 1. ವಾನಪ್ರಸ್ಥ, ಮೂರನೇ ಆಶ್ರಮ ಸ್ವೀಕರಿಸಿದವನು. विखनसं वेत्ति "अण्" (४-२-५९)। "वैखानसेभ्य:श्रुतरामवार्तास्ततो विशिञ्जानपतत्त्रिसङ्घम्" भट्टि० ३-४६। (वि०) 2. ವೈಖಾನಸಸಂಬಂಧವಾದ. वैखानसस्येदम् "अण्" (४-३-१२०)। "वैखानसं किमनया व्रतमाप्रदानात् व्यापाररोधि मदनस्य निषेवितव्यम्" शाकु० १-२३।

**वैगुण्य ವೈಗುಣ್ಯ** (न०) 1. ಸಾಮರ್ಥ್ಯವಿಲ್ಲದಿರುವಿಕೆ, ಗುಣವಿಲ್ಲದಿರುವಿಕೆ. विगुणस्य भाव: "ष्यञ्" (५-१-१२४)। "यत्रापवर्तते युग्यं वैगुण्यात्प्राजकस्य तु" मनु० ८-२९३। 2. ತಪ್ಪು, ದೋಷ. 3. ಗುಣವಿಲ್ಲದಿರುವಿಕೆ, ದೋಷದಿಂದ ಕೂಡಿರುವಿಕೆ.

**वैचक्षण्य ವೈಚಕ್ಷಣ್ಯ** (न०) ಜಾಣತನ, ಬುದ್ಧಿವಂತಿಕೆ, ನಿಪುಣತೆ. विचक्षणस्य भाव: "ष्यञ्" (५-१-१२४)। "धर्मार्थकाममोक्षेषु वैचक्षण्यं कलासु च" सा०द०।

**वैचित्त्य ವೈಚಿತ್ತ್ಯ** (न०) ಚಿತ್ತಭ್ರಮಣೆ, ಕಳವಳ, ಮನಸ್ಸು ಸ್ಥಿರವಾಗಿಲ್ಲದಿರುವುದು. विचित्तस्य भाव: "ष्यञ्" (५-१-१२४)। "व्रजति विरहे वैचित्त्यं न: प्रसीदति सन्निधौ" मालती० ३-१।

**वैचित्र्य ವೈಚಿತ್ರ್ಯ** (न०) 1. ಅನೇಕ ವಿಧವಾಗಿರುವುದು, ನಾನಾ ಬಗೆಯಾಗಿರುವುದು. विचित्रस्य भाव: "ष्यञ्" (५-१-१२४)। 2. ಆಶ್ಚರ್ಯ, ವಿಸ್ಮಯ. "वैचित्र्यं वितनोति वाचकविधौ वाचस्पतेरन्तिके"।

**वैजनन ವೈಜನನ** (पुं०) ಪ್ರಸವದ ತಿಂಗಳು, ಹೆರಿಗೆಯ ತಿಂಗಳು. विजायतेऽस्मिन्—वि + जनी (प्रादुर्भावे) अधि० "ल्युट्" (३-३-११७)। विजननस्य जन्मन: अयम् "अण्" (४-३-१२०)। इति वा।

**वैजयन्त ವೈಜಯನ್ತ** (पुं०) 1. ಇಂದ್ರನ ಅರಮನೆ. वैजयन्त्य: पताका: सन्त्यस्य "अच्" (५-२-१२७)। 2. ಇಂದ್ರನ ಧ್ವಜ. "वैजयन्तो महेन्द्रस्य ध्वजप्रासादयो: पुमान्" मेदि०। "एष ह्यैन्द्रो वैजयन्तो गुणैर्नित्यं समाहित:" भा०। 3. ಗುಹ. "वैजयन्तो गुहे ध्वजे। इन्द्रालये" हेम०।

**वैजयन्तिक ವೈಜಯನ್ತಿಕ** (वि०) ಧ್ವಜವನ್ನು ಹಿಡಿದಿರುವವನು. वैजयन्ती अस्त्यस्य "ठन्" (५-२-११६)।

**वैजयन्तिका ವೈಜಯನ್ತಿಕಾ** (स्त्री०) 1. ತಕ್ಕಿಲೆ ಗಿಡ. वैजयन्ती पताकेव "कन्" (५-३-९६)। "जया जयन्ती तर्कारी नादेयी वैजयन्तिका" अम०। 2. ನರುವಲು ಗಿಡ.

**वैजयन्ती ವೈಜಯನ್ತೀ** (स्त्री०) 1. ಪತಾಕೆ, ಧ್ವಜ, ಬಾವುಟ. विजयते—वि + जि (अभिभवे) "झच्" (उ० ३-१२८)। विजयन्तस्येयम् "अण्" (४-३-१२०)। "संचारिते चागुरुसारयोनौ धूपे समुत्सर्पति वैजयन्ती:" रघु० ६-८। 2. ನರುವಲು ಗಿಡ. "वैजयन्ती पताकायां जयन्तीपादपे स्त्रियाम्" मेदि०। 3. ಶ್ರೀ ಮಹಾವಿಷ್ಣುವಿನ ವನಮಾಲೆ, ಮಹಾವಿಷ್ಣುವು ಧರಿಸಿರುವ ಮಾಲೆ. "जयन्तीसंभवं धाम वैजयन्तीविभूषणम्" याद० १-१।

**वैजयिक ವೈಜಯಿಕ** (वि०) 1. ವಿಜಯ ಸಂಬಂಧವಾದ. 2. ವಿಜಯಕ್ಕೆ ನಿಮಿತ್ತವಾದ, ವಿಜಯಕ್ಕೆ ಸೂಚಕವಾದ. विजयस्य संयोग: निमित्तं वा "ठञ्" (५-१-३८)। "रणे प्रवेशसदृशं कर्म वैजयिकं कृतम्" हरिवं०।

**वैजात्य ವೈಜಾತ್ಯ** (न०) 1. ಬೇರೆ ಜಾತಿಯಾಗಿರುವಿಕೆ. 2. ವಸ್ತುಗಳಿಗಿರುವ ಪರಸ್ಪರ ಭೇದ. 3. ವಿಷಯಗಳಿಗಿರುವ ಪರಸ್ಪರ ಭೇದ, ವಿಷಯಗಳು ಭಿನ್ನವಾಗಿರುವಿಕೆ. विजातेर्भाव: "ष्यञ्" (५-१-१२४)।

**वैजिक ವೈಜಿಕ** (पुं०) 1. ಅಂಕುರ. ಮೊಳಕೆ. (न०) 2. ಕಾರಣ. 3. ನುಗ್ಗಿ ಎಣ್ಣೆ. "वैजिकं कारणे शिग्रुतैले च" हेम०।

**वैज्ञानिक ವೈಜ್ಞಾನಿಕ** (वि०) ನಿಪುಣ, ಬುದ್ಧಿವಂತ, ಜಾಣ. विज्ञाने नियुक्त: "ठक्" (४-४-६९)। "वैज्ञानिक: कृतमुख: कृती कुशल इत्यपि" अम०।

**वैडूर्य ವೈಡೂರ್ಯ** (न०) ವೈಡೂರ್ಯ ಮಣಿ, ನವರತ್ನಗಳಲ್ಲೊಂದು.

**वैण ವೈಣ** (पुं०) ಬಿದಿರಿನ ಕೆಲಸ ಮಾಡುವವನು.

**वैणव ವೈಣವ** (पुं०) 1. ವೇಣುವಿನ ಅವಯವ ಅಥವಾ ಅದರ ವಿಕಾರ, ಬಿದಿರಿನ ಒಂದು ಭಾಗ ಅಥವಾ ಅದರಿಂದ ತಯಾರಿಸಲ್ಪಟ್ಟ ವಸ್ತು. वेणोः अवयवो विकारो वा "अण्" (४-३-१३६)। 2. ಕೊಳಲು. "भेरीमृदङ्गनिनदैः शङ्खवैणवनिस्वनैः" भा० उद्योग० ९०-१५। (न०) 3. ಬಿದಿರಿನ ಅಕ್ಕಿ. (वि०) 4. ಬಿದಿರಿನ ಸಂಬಂಧವಾದ. वेणोरिदम् "अण्" (४-३-१२०)।

**वैणविक ವೈಣವಿಕ** (वि०) ವೇಣುವಾದನ ಮಾಡುವವನು, ಕೊಳಲನ್ನು ನುಡಿಸುವವನು. वैणवं शिल्पमस्य "ठक्" (४-४-५५)।

**वैणिक ವೈಣಿಕ** (वि०) ವೀಣಾವಾದನ ಮಾಡುವವನು, ವೀಣೆಯನ್ನು ನುಡಿಸುವವನು. वीणा शिल्पमस्य "ठक्" (४-४-५५)। "रक्तवैणिकहताधरतन्त्रीमण्डलक्वणितचारु चुकूजे" माघ० १०-६४।

**वैणुक ವೈಣುಕ** (वि०) 1. ವೇಣುವಾದನ ಮಾಡುವವನು, ಕೊಳಲು ನುಡಿಸುವವನು. वेणुना कायति शब्दं करोति— कै (शब्दे) "कः" (३-२-३)। स्वार्थे "अण्"। (न०) 2. ಆನೆಯನ್ನು ತಿವಿಯುವ ಕೋಲು. वेणुना निर्वृत्तम् "ठक्" (४-४-१९)। "तोत्रं वैणुकम्" अम०।

**वैणुकीय ವೈಣುಕೀಯ** (वि०) ವೇಣುವಾದ್ಯಸಂಬಂಧವಾದ. वेणुकस्यायम्—वेणुक "छण्" (वा० ४-२-१३८)।

**वैतंसिक ವೈತಂಸಿಕ** (वि०) ಮಾಂಸವನ್ನು ಮಾರುವವನು. वीतंसेन चरति—वीतंस "ठक्" (४-४-८)। "इमान् शाकुनिकान् राजन् हन्ति वैतंसिको यथा" भा० वन० ३३-३३।

**वैतथ्य ವೈತಥ್ಯ** (न०) ಸುಳ್ಳು, ಮಿಥ್ಯೆ. वितथस्य भावः।

**वैतनिक ವೈತನಿಕ** (वि०) ಕೂಲಿಯಿಂದ ಜೀವಿಸುವವನು. वेतनेन जीवति— "ठक्" (४-४-१२)।

**वैतरणी ವೈತರಣೀ** (स्त्री०) 1. ನರಕದ ನದಿ. वितरणेन तीर्यते—वितरण "अण्" (४-२-९२)। ಈ ನದಿಯು ಯಮಲೋಕದ ಮಾರ್ಗದಲ್ಲಿರುವುದು. ಇದು ಅಸ್ಥಿ ಕೇಶ ರಕ್ತಗಳಿಂದ ತುಂಬಿ ಬಹಳ ಭಯಂಕರವಾಗಿ ಹರಿಯುತ್ತಿರುವುದು. "नदी वैतरणी नाम दुर्गन्धा रुधिरावहा। उष्णतोया महावेगा अस्थिकेशतरङ्गिणी"। 2. ಓಢ್ರ ದೇಶದ ಒಂದು ನದಿ.

**वैतस ವೈತಸ** (पुं०) 1. ಹುಳಿ ಹಬ್ಬೆ. वेतस स्वार्थे "अण्" (५-४-३८)। (वि०) 2. ವೇತಸ ಸಂಬಂಧವಾದ. वेतसस्येदम् "अण्" (४-३-१२०)। स्त्रियां "ङीप्" (४-१-१५)। —सी—ಸೀ. "आत्मा संरक्षितः सुह्मैर्वृत्तिमाश्रित्य वैतसीम्" रघु० ४-३५।

**वैतान ವೈತಾನ** (वि०) 1. ಯಜ್ಞಸಂಬಂಧವಾದ. वितानस्य यज्ञस्येमे—वितान "अण्" (४-३-१२०)। "अमी वेदिं परितः क्लृप्तधिष्ण्याः समिद्वन्तः प्रान्तसंस्तीर्णदर्भाः। अपघ्नन्तो दुरितं हव्यगन्धैः वैतानास्त्वां वह्नयः पालयन्तु" शाकु० ४-७। (न०) 2. ಯಜ್ಞದ ಹವಿಸ್ಸು.

**वैतानिक ವೈತಾನಿಕ** (पुं०) 1. ಯಜ್ಞದ ಅಗ್ನಿ. वितानः यज्ञः प्रयोजनमस्य "ठञ्" (५-१-१०९)। "वैतानिकान् विधिवशेन विहृत्य वह्नीन् पुण्याशयाः परिचरन्ति पुरोधसस्ते" याद० १९-५। (वि०) 2. ಯಾಗಮಾಡುವವನು. "त्रय्या च विद्यया केचित् त्वां वै वैतानिका द्विजाः" भाग० १०-४०-५।

**वैतालिक ವೈತಾಲಿಕ** (पुं०) ಪ್ರಾತಃಕಾಲದಲ್ಲಿ ರಾಜನನ್ನು ಮಂಗಳವಾದ್ಯ ಗಾನಗಳಿಂದ ಎಬ್ಬಿಸುವವನು. विविधेन तालेन चरति— "ठक्" (४-४-८)। "वैतालिकाः स्फुटपदप्रकटार्थमुच्चैः भोगावलीः कलगिरोऽवसरेषु पेठुः" माघ० ५-६७।

**वैदग्धी ವೈದಗ್ಧೀ** (स्त्री०) ಶೋಭೆ, ರಮ್ಯತೆ, ಸೌಂದರ್ಯ. विदग्धस्य भावः "ष्यञ्" (५-१-१२४)। गौरा० "ङीष्" (४-१-४१)। "कालिन्दीजलजनितश्रियः श्रयन्ते वैदग्धीमिह सरितः सुरापगायाः" माघ० ४-२६।

**वैदग्ध्य ವೈದಗ್ಧ್ಯ** (न०) 1. ಪಾಂಡಿತ್ಯ. विदग्धस्य भावः "ष्यञ्" (५-१-१२४)। "वैदग्ध्यख्यातिलोभाय मम नैवायमुद्यमः" कथास०। 2. ನೈಪುಣ್ಯ, ಜಾಣತನ, ಕೌಶಲ್ಯ. 3. ಶಕ್ತಿ, ಸಾಮರ್ಥ್ಯ. "तच्चेदस्ति ततस्तदेव गमकं पाण्डित्यवैदग्ध्ययोः" मालती० १-१०। 4. ರಚನಾಚಾತುರ್ಯ. "वैदग्ध्यं जहति कपोलकुङ्कुमानि" मालती० १-४०।

**वैदर्भ ವೈದರ್ಭ** (पुं०) 1. ವಿದರ್ಭದೇಶದ ದೊರೆ. विदर्भो निवासोऽस्य "अण्" (४-३-८९)। 2. ಭೀಮನೃಪತಿ, ದಮಯಂತಿಯ ತಂದೆ. "वैदर्भदूतानुनयोपहूतैः शृङ्गारभङ्गैरनुभावयद्भिः" नैष० १०-३७। 3. ಭೋಜರಾಜ, ಇಂದುಮತಿಯ ತಂದೆ. "वैदर्भनिर्दिष्टमसौ कुमारः क्लृप्तेन सोपानपथेन मञ्चम्" रघु० ६-३। 4. ರುಕ್ಮಿಣಿಯ ತಂದೆಯಾದ ಭೀಷ್ಮಕರಾಜ. 5. ಮಾತಿನಲ್ಲಿ ವಕ್ರತೆ,

ಮಾತಿನಲ್ಲಿರುವ ಕಾಠಿನ್ಯ, -ಕಾಪಟ್ಯ. 6. ಅಗಸ್ತ್ಯ ಮಹರ್ಷಿಯ ಪತ್ನಿ ಲೋಪಾಮುದ್ರೆಯ ತಂದೆ. (ವಿ०) 7. ವಿದರ್ಭ ಸಂಬಂಧವಾದ.

**वैदर्भी ವೈದರ್ಭೀ** (स्त्री०) 1. ಭೀಮರಾಜನ ಪುತ್ರಿ ದಮಯಂತಿ. वैदर्भस्यापत्यं स्त्री "अण्" (४-१-९२)। "वैदर्भि दत्तस्तव तावदेष वरो दुरापः पृथिवीश एव" नैष० १४-७२। 2. ಭೀಷ್ಮಕರಾಜನ ಪುತ್ರಿ ರುಕ್ಮಿಣಿ. "भगवानपि गोविन्द उपयेमे कुरूद्वह। वैदर्भीं भीष्मकसुतां श्रियो मात्रां स्वयंवरे" भाग० १०-५२-१६। 3. ಕಾವ್ಯಕ್ಕೆ ಆತ್ಮವಾದ ರಸಗಳಿಗೆ ಅನುಗುಣವಾದ ಪದಗಳ ರಚನೆಯ ಒಂದು ಭೇದ, ಇದು ವೈದರ್ಭೀ ಗೌಡೀಯಾ ಮತ್ತು ಪಾಂಚಾಲೀ ಎಂಬ ಮೂರು ವಿಧ ರೀತಿಗಳಲ್ಲೊಂದು ಭೇದ. "रीतिरात्मा काव्यस्य। विशिष्टपदरचना रीतिः। सा त्रेधा वैदर्भी गौडीया पाञ्चाली चेति" काव्या० सू०। ವಿದರ್ಭದೇಶದ ಕವಿಗಳು ಈ ರೀತಿಯಲ್ಲಿ ಪ್ರಯೋಗಿಸಿರುವುದರಿಂದ ಇವಕ್ಕೆ ದೇಶದ ಹೆಸರಾಯಿತು. "विदर्भादिषु दृष्टत्वात्तत्समाख्या" काव्या० सू०। ಓಜಸ್ಸು ಪ್ರಸಾದ ಮೊದಲಾದ ಸಕಲ ಗುಣಗಳಿಂದಲೂ ಕೂಡಿದ ಪದರಚನೆಯು ವೈದರ್ಭೀ ರೀತಿ. "समग्रगुणोपेता वैदर्भी" काव्या० सू०।

**वैदल ವೈದಲ** (ಪುं०) 1. ರೊಟ್ಟಿ, ದ್ವಿದಳ ಧಾನ್ಯದ ಹಿಟ್ಟಿನಿಂದ ಮಾಡಿದ ಅಪೂಪ. "पूपोऽपूपः पिष्टकः स्यात् वैललो विदलोऽपि च"। (ನ०) 2. ಭಿಕ್ಷುಕನ ಪಾತ್ರೆ, ಸಂನ್ಯಾಸಿಯು ಭಿಕ್ಷೆಗಾಗಿ ಉಪಯೋಗಿಸುವ ಮಣ್ಣಿನ ಅಥವಾ ಮರದ ಪಾತ್ರೆ.

**वैदिक ವೈದಿಕ** (ಪುं०) 1. ವೇದಾಧ್ಯಯನ ಮಾಡಿದ ವಿಪ್ರ. ವೇದಾಧ್ಯಯನ ಸಂಪನ್ನನಾದ ಬ್ರಾಹ್ಮಣ. वेदं वेत्ति— "ठक्" (४-२-५९)। (ವಿ०) 2. ವೇದವಿಹಿತವಾದ, ವೇದೋಕ್ತವಾದ. "वैदिके कर्मयोगे तु सर्वाण्येतान्यशेषतः" मनु० १२-८७।

**वैदुष्य ವೈದುಷ್ಯ** (ನ०) ಪಾಂಡಿತ್ಯ, ಜ್ಞಾನ, ವಿದ್ವತ್ತು. विदुषो भावः "ष्यञ्" (५-१-१२४)।

**वैदूर्य ವೈದೂರ್ಯ** (ನ०) ನವರತ್ನಗಳಲ್ಲೊಂದು. विदूरात् प्रभवति—विदूर "ञ्यः" (४-३-८४)। "विम्बुबिडालेक्षणभीषणाभ्यो वैदूर्यकुड्चेषु शशिद्युतिभ्यः" माघ० ३-४५। **ನವರತ್ನಗಳು:** (1) ಮಾಣಿಕ್ಯ (2) ಮುತ್ತು (3) ಹವಳ (4) ಪಚ್ಚೆ (5) ಪುಷ್ಯರಾಗ (6) ವಜ್ರ (7) ನೀಲ (8) ಗೋಮೇದಕ ಮತ್ತು (9) ವೈದೂರ್ಯ.

**वैदेशिक ವೈದೇಶಿಕ** (ವಿ०) 1. ಬೇರೆ ದೇಶದಲ್ಲಿ ಹುಟ್ಟಿದವನು. विदेशे देशान्तरे भवः "ठञ्" (वा० ४-३-६०)। 2. ಅಪರಿಚಿತ, ಪರಿಚಯವಿಲ್ಲದವನು. "वैदेशिकोऽस्मीति पृच्छामि। कः पुनर्जामाता" उ० रा० १।

**वैदेह ವೈದೇಹ** (ಪುं०) 1. ವಿದೇಹದೇಶದ ರಾಜ. विदेहानां राजा—विदेह "अञ्" (वा० ४-१-१६६)। "वैदेहस्य वयं च ते च किमहो संबन्धिनो न प्रियाः" म० वी० २-८। 2. ವಿದೇಹದೇಶದಲ್ಲಿ ವಾಸಮಾಡುವವನು. 3. ವರ್ತಕ. 4. ವೈಶ್ಯನಿಗೆ ಬ್ರಾಹ್ಮಣಸ್ತ್ರೀಯಲ್ಲಿ ಜನಿಸಿದವನು. (ಪುं० ಬ० ವ०) 5. ವಿದೇಹದೇಶದ ಜನರು.

**वैदेहक ವೈದೇಹಕ** (ಪುं०) 1. ವರ್ತಕ, ಕ್ರಯ ವಿಕ್ರಯ ಮಾಡುವವನು. विदेहेषु भवः "वुञ्" (४-२-१२७)। 2. ಶೂದ್ರನಿಂದ ವೈಶ್ಯಸ್ತ್ರೀಯಲ್ಲಿ ಹುಟ್ಟಿದವನು. विदेहस्यापत्यम् "अञ्" (४-१-१६८)। स्वार्थे "कन्" (५-४-५)।

**वैदेही ವೈದೇಹೀ** (स्त्री०) 1. ಸೀತೆ, ಜಾನಕಿ. विदेहस्यापत्यं स्त्री "अण्" (४-१-९२)। "ङीप्" (४-१-१५)। "वैदेहीपरिरम्भ एष च मुहुश्चैतन्यमामीलयन्" म० वी० २-२२। 2. ವರ್ತಕನ ಪತ್ನಿ. 3. ಹಿಪ್ಪಲಿ ಗಿಡ. 4. ಗೋರೋಚನ. "वैदेही पिप्पलीसीतारोचनासु वणिक्स्त्रियाम्" हेम०।

**वैद्य ವೈದ್ಯ** (ಪುं०) 1. ವಿಷ್ಣು. "वेद्यो वैद्यःसदायोगी" वि० स०। 2. ಪಂಡಿತ, ರೋಗಗಳಿಗೆ ಚಿಕಿತ್ಸೆ ಮಾಡುವವನು. विद्यामधीते वेत्ति वा "अण्" (४-२-५९)। **ವೈದ್ಯನ ಲಕ್ಷಣ:** ರೋಗಗಳಿಗೆ ಚಿಕಿತ್ಸೆಮಾಡುವ ವೈದ್ಯನು ವೈದ್ಯಶಾಸ್ತ್ರವನ್ನು ಚೆನ್ನಾಗಿ ಅಧ್ಯಯನಮಾಡಿ ಶಾಸ್ತ್ರವನ್ನು ಮೈಗೂಡಿಸಿಕೊಂಡಿರಬೇಕು. ಶಾಸ್ತ್ರಕ್ರಮದಲ್ಲಿ ಚಿಕಿತ್ಸೆ ನಡೆಸಬೇಕು. ಶುಚಿಯಾಗಿಯೂ ಕೈ ಚುರುಕುಳ್ಳವನಾಗಿಯೂ ರೋಗಿಯ ಕಣ್ಣಿಗೆ ಆನಂದವುಂಟುಮಾಡುವ ಔಷಧ ಮತ್ತು ಸಲಕರಣೆಗಳಿಂದ ಕೂಡಿದವನಾಗಿಯೂ ರೋಗಿಯನ್ನು ಮೃದುವಾಕ್ಯಗಳಿಂದ ಸಮಾಧಾನಪಡಿಸುವ ಸ್ವಭಾವದವನಾಗಿಯೂ ಸತ್ಯ ಮತ್ತು ಧರ್ಮರತನಾಗಿಯೂ ಇತರರು ನಡೆಸಿದ ಚಿಕಿತ್ಸೆಯನ್ನು ನೋಡಿ ಅದರಿಂದ ಪರಿಣತಿಹೊಂದಿದವನಾಗಿಯೂ ಇರಬೇಕು. "चिकित्सां कुरुते यस्तु स चिकित्सक उच्यते। स च यादृक् समीचीनस्तादृशोऽपि निगद्यते॥ तत्त्वाधिगतशास्त्रार्थः दृष्टकर्मा स्वयं कृती। लघुहस्तः शुचिः शूरः स्वच्छोपस्करभेषजः। प्रत्युत्पन्नगतिर्धीमान्

व्यवसायी प्रियंवदः। सत्यधर्मपरो यश्च वैद्य ईदृक् प्रशस्यते"। ರೋಗಿಯಾಗಲಿ ಅವನ ಕಡೆಯವನಾಗಲಿ ರಿಕ್ತಹಸ್ತನಾಗಿ ಹೋಗಿ ವೈದ್ಯನನ್ನು ಕಾಣಕೂಡದು. "रिक्तहस्तो न पश्येत्तु राजानं भिषजं गुरुम्"॥ ವೈದ್ಯನು ರೋಗಿಯನ್ನು ಎಂಟು ವಿಷಯಗಳಲ್ಲಿ ಪರೀಕ್ಷಿಸಿ ಚಿಕಿತ್ಸೆಯನ್ನು ಪ್ರಾರಂಭಿಸಬೇಕು. (1) ನಾಡಿ (2) ಮೂತ್ರ (3) ಮಲ (4) ನಾಲಗೆ (5) ಮಾತಿನ ಧ್ವನಿ (6) ಸ್ಪರ್ಶ (7) ನೇತ್ರಗಳು ಮತ್ತು (8) ಆಕಾರ. ಇವು ಪರೀಕ್ಷೆಯ ವಿಷಯಗಳು. "रोगाक्रान्तशरीरस्य स्थानान्यष्टौ निरीक्षयेत्। नाडीं मूत्रं मलं जिह्वां शब्दस्पर्शदृगाकृती:" वैद्या०। ನಾಡೀ ಮೂತ್ರ ಮತ್ತು ನಾಲಗೆ ಇವುಗಳನ್ನು ಪರೀಕ್ಷಿಸದೆ ಚಿಕಿತ್ಸೆ ನಡೆಸುವ ವೈದ್ಯನು ಚಿಕಿತ್ಸೆಯಲ್ಲಿ ಯಶಸ್ಸನ್ನು ಪಡೆಯಲಾರನು. "नाड्या मूत्रस्य जिह्वायां लक्षणं यो न विन्दति। मारयत्याशु जन्तून् स वैद्यो न यशो लभेत्" वैद्या० अष्टस्थानप०। **ನಾಡೀ ಪರೀಕ್ಷಾಕ್ರಮ:** ಬಲಗೈ ಅಂಗುಷ್ಠದ (ಹೆಬ್ಬೆರಳಿನ) ಅಧೋಭಾಗದಲ್ಲಿ (ಮಣಿಕಟ್ಟಿನ ಬಲಭಾಗದಲ್ಲಿ) ವೈದ್ಯನು ತನ್ನ ಬಲಗೈಯಿಂದ ರೋಗಿಯ ನಾಡಿಯನ್ನು ಪರೀಕ್ಷಿಸಬೇಕು. "नाडीमङ्गुष्ठमूलाधः स्पृशेद्दक्षिणगे करे। ज्ञानार्थं रोगिणो वैद्यो निजदक्षिणपाणिना" वैद्या०। ವೈದ್ಯನು ಪ್ರಾತಃಕಾಲದಲ್ಲಿ (ಆಹಾರ ಸೇವನೆಗೆ ಮುಂಚೆ) ರೋಗಿಯ ನಾಡಿಯನ್ನು ಪರೀಕ್ಷಿಸಿ ರೋಗಸ್ವರೂಪವನ್ನು ತಿಳಿದುಕೊಳ್ಳಬೇಕು. "अङ्गुष्ठमूलपरिपश्चिमभागमध्ये नाडीं प्रभातसमये प्रथमं परीक्षेत्। वारत्रयं परीक्षेत धृत्वा धृत्वा विमुञ्चयेत्। विमृश्य बहुधा बुद्ध्या रोगव्यक्तिं विनिर्दिशेत्" वैद्या०। ವಾತ ಪಿತ್ತ ಮತ್ತು ಕಫಗಳ ವಾತಪಿತ್ತ ಪಿತ್ತಕಫ ವಾತಕಫಗಳ ಮತ್ತು ವಾತಪಿತ್ತಕಫಗಳ ಸ್ಥಿತಿಗಳನ್ನು ತಿಳಿಸಿ ಸಾಧ್ಯ ಅಥವಾ ಅಸಾಧ್ಯ—ಎಂಬುದನ್ನು ನಾಡಿಯು ತಿಳಿಸುವುದು. "वातं पित्तं कफं द्वन्द्वं त्रितयं सान्निपातकम्। साध्यासाध्य विवेकं च सर्वं नाड्या प्रकाश्यते" वैद्या०। ವೈದ್ಯನು ಹೆಂಗಸರ ಎಡಗೈ ಮತ್ತು ಎಡಗಾಲುಗಳಲ್ಲಿ ಶಾಸ್ತ್ರ ಸಂಪ್ರದಾಯ ಮತ್ತು ಸ್ವಾನುಭವ ಬಲದಿಂದ ಉಂಟಾದ ಅಭ್ಯಾಸದಿಂದ ನಾಡಿಯನ್ನು ಪರೀಕ್ಷಿಸಬೇಕು. "स्त्रीणां भिषग्वामहस्ते वामे पादे च यत्नतः। शास्त्रेण संप्रदायेन तथा स्वानुभवेन वै। परीक्षेद्बलवच्चासावभ्यासादेव जायते" वैद्या०। ವಾತನಾಡಿಯ ಅಧಿದೇವತೆಯು ಬ್ರಹ್ಮ. ಪಿತ್ತನಾಡಿಗೆ ಶಂಕರನು ಅಧಿದೇವತೆ. ವಿಷ್ಣುವು ಶ್ಲೇಷ್ಮ (ಕಫ) ನಾಡಿಯ ದೇವತೆ. "वातनाडी भवेद्ब्रह्मा पित्तनाडी च शङ्करः। श्लेष्मनाडी भवेद्विष्णुस्त्रिदेवा नाडिदेवता:" वैद्या०। 3. ಪಂಡಿತ, ವಿದ್ವಾಂಸ, ಜ್ಞಾನಿ. 4. ಬ್ರಾಹ್ಮಣನಿಗೆ ವೈಶ್ಯ ಹೆಂಗಸಿನಲ್ಲಿ ಹುಟ್ಟಿದ ಸಂಕರ ಜಾತಿಯವನು. (ವಿ೦) 5. ವೇದ ಸಂಬಂಧವಾದ.

**वैद्यक ವೈದ್ಯಕ** (ಪು೦) 1. ವೈದ್ಯ, ಚಿಕಿತ್ಸಕ. (ನ೦) 2. ವೈದ್ಯಶಾಸ್ತ್ರ, ಚಿಕಿತ್ಸಾಶಾಸ್ತ್ರ, ಆಯುರ್ವೇದಶಾಸ್ತ್ರ. ಚತುರ್ಮುಖನು ಋಗ್ಯಜುಃಸಾಮ ಮತ್ತು ಅಥರ್ವವೇದಗಳನ್ನು ಚೆನ್ನಾಗಿ ಪರ್ಯಾಲೋಚಿಸಿ ಅವುಗಳ ಅರ್ಥವನ್ನೂ ಆಯುರ್ವೇದವನ್ನೂ ರಚಿಸಿದನು. ಪಂಚಮ ವೇದವಾದ ಆಯುರ್ವೇದವನ್ನು ಸೂರ್ಯದೇವನಿಗೆ ಉಪದೇಶಿಸಿದನು. ಸೂರ್ಯನು ತನ್ನ ಶಿಷ್ಯರಿಗೆಲ್ಲಾ ಈ ಸಂಹಿತಾರೂಪವಾದ ಆಯುರ್ವೇದವನ್ನು ಉಪದೇಶಿಸಿದನು. **ಸೂರ್ಯನಿಂದ ಆಯುರ್ವೇದದ ಉಪದೇಶವನ್ನು ಪಡೆದು ಮುಂದೆ ಪ್ರಚಾರಮಾಡಿದವರ ಹೆಸರು:** ಧನ್ವಂತರಿ, ದಿವೋದಾಸ, ಕಾಶೀರಾಜ, ಅಶ್ವಿನಿ ದೇವತೆಗಳು, ನಕುಲ, ಸಹದೇವ, ಅರ್ಕಿ, ಚ್ಯವನ, ಜನಕ, ಬುಧ, ಜಾಬಾಲ, ಜಾಜಲಿ, ಪೈಲ, ಕವಥ, ಅಗಸ್ತ್ಯ ಇವರು ವೇದ ಮತ್ತು ವೇದಾಂಗಗಳಲ್ಲಿ ಅಭಿಜ್ಞರಾದವರು ಮತ್ತು ಆಯುರ್ವೇದಶಾಸ್ತ್ರ ಪ್ರವರ್ತಕರು. "ऋग्यजुःसामाथर्वाख्यान् दृष्ट्वा वेदान् प्रजापतिः। विचिन्त्य तेषामर्थं चैवायुर्वेदं चकार सः॥ कृत्वा तु पञ्चमं वेदं भास्कराय ददौ विभुः। स्वतन्त्रसंहितां तस्माद्भास्करश्च चकार सः॥ भास्करश्च स्वशिष्येभ्यः आयुर्वेदं स्वसंहिताम्। प्रददौ पाठयामास ते चक्रुः संहितास्ततः॥ तेषां नामानि विदुषां तन्त्राणि तत्कृतानि च। व्याधिप्रणाशबीजानि साध्वि मत्तो निशामय॥ धन्वन्तरिर्दिवोदासः काशीराजस्तयाश्विनौ। नकुलः सहदेवोऽर्किश्चच्यवनो जनको बुधः॥ जाबालो जाजलिः पैलः कवथोऽगस्त्य एव च। एते वेदाङ्गवेदज्ञाः षोडश व्याधिनाशनाः" ब्रह्मवै०।

**वैद्युत ವೈದ್ಯುತ** (ವಿ೦) ವಿದ್ಯುತ್ತಿನ ಸಂಬಂಧವಾದ. विद्युतः इदम्। "अण्" (४-३-१२०)। "व्यतिकर इव भीमस्तामसो वैद्युतश्च प्रणिहितमपि चक्षुर्ग्रस्तमुक्तं हिनस्ति" उ० रा० ५-१२।

**वैध ವೈಧ** (ವಿ೦) 1. ವಿಧಿ ಸಂಬಂಧವಾದ, ವಿಧಿಯಿಂದ ತಿಳಿಸಲ್ಪಟ್ಟ, ವಿಧ್ಯುಕ್ತವಾದ. विधेरिदम् "अण्" (४-३-१२०)। स्त्रियां "ङीप्" (४-१-१५)। "प्रियाक्षराली रसधारयापि वैधी विधेया मधुपर्कतृप्तिः" नैष० ८-२०। 2. ಶಾಸನಬದ್ಧವಾದ, ಕಾನೂನಿಗೊಳಪಡುವ.

**वैधनिका ವೈಧನಿಕಾ** (स्त्री०) ಬೈರಿಗೆ, ಕಂಡಿ ಕೊರೆಯುವ ಮೊಳೆ.

**वैधर्म्य ವೈಧರ್ಮ್ಯ** (न०) 1. ವ್ಯತ್ಯಾಸವಾಗಿರುವಿಕೆ, ಸಾದೃಶ್ಯವಿಲ್ಲದಿರುವಿಕೆ. विरुद्धो धर्मः, तस्य भावः "ष्यञ्" (५-१-१२४)। 2. ನ್ಯಾಯಕ್ಕೆ ವಿರುದ್ಧವಾಗಿರುವಿಕೆ.

**वैधवेय ವೈಧವೇಯ** (पुं०) ವಿಧವೆಯ ಮಗ. विधवाया अपत्यम् पुमान् "ढक्" (४-१-१२३)।

**वैधव ವೈಧವ** (पुं०) ಬುಧ. विधोः चन्द्रस्यापत्यम्।

**वैधव्य ವೈಧವ್ಯ** (न०) ಪತಿಯಿಲ್ಲದಿರುವಿಕೆ. विधवाया भावः "ष्यञ्" (५-१-१२४)।

**वैधात्र ವೈಧಾತ್ರ** (पुं०) 1. ಸನತ್ಕುಮಾರ, ಚತುರ್ಮುಖನ ಪುತ್ರ. विधातुरपत्यम् "अण्" (४-२-९२)। (वि०) 2. ಬ್ರಹ್ಮನ ಸಂಬಂಧವಾದ. विधातुरयम् "अण्" (४-३-१२०)।

**वैधात्री ವೈಧಾತ್ರೀ** (स्त्री०) ಬ್ರಾಹ್ಮೀಲತೆ, ಹೊನಗೊನ್ನೆ ಸೊಪ್ಪು. विधातुरियम्—विधातृ "अण्" (४-३-१२०)। "ङीप्" (४-१-१५)।

**वैधुर्य ವೈಧುರ್ಯ** (न०) ಅಗಲಿರುವಿಕೆ, ವಿಯೋಗ. ಪತಿ ಅಥವಾ ಪತ್ನಿಯ ಮೃತಿಯಿಂದ ಉಂಟಾಗುವ ಅವಸ್ಥೆ. विधुरस्य भावः "ष्यञ्" (५-१-१२४)।

**वैधृति ವೈಧೃತಿ** (स्त्री०) ವಿಷ್ಕಂಭ ಮೊದಲಾದ ಇಪ್ಪತ್ತೇಳು ಯೋಗಗಳಲ್ಲಿ ಕೊನೆಯ ಒಂದು ಯೋಗ. ವೈಧೃತಿ ಯೋಗದಲ್ಲಿ ಯಾವ ಶುಭಕಾರ್ಯವನ್ನೂ ಮಾಡಕೂಡದು. "परिघस्य त्यजेदर्धं सप्त शूले च नाडिकाः। गण्ड-व्याघातयोः षट् च नव हर्षणवज्रयोः। वैधृतिव्यतिपातौ च समस्तौ परिवर्जयेत्"।

**वैधेय ವೈಧೇಯ** (वि०) ಮೂರ್ಖ, ಅಜ್ಞ, ತಿಳಿಗೇಡಿ, ಏನನ್ನೂ ತಿಳಿಯದವನು, ಶಾಸ್ತ್ರಜ್ಞಾನವಿಲ್ಲದೆ ಸಂಪ್ರದಾಯದಂತೆ ಕಾರ್ಯಮಾಡುವವನು. विधेयं विधानम्—तस्यायम् "अण्" (४-३-१२०)। "अज्ञ मूढयथाजात-मूर्खवैधेयबालिशाः" अम०। "प्रलपत्वेष वैधेयः" शाकु० २।

**वैनतेय ವೈನತೇಯ** (पुं०) 1. ವಿನತೆಯ ಪುತ್ರ, ಗರುಡ. विनताया अपत्यं पुमान् "ढक्" (४-१-१२०)। "इति विज्ञापितोदन्तं दत्तहस्तं बलद्विषम्। विनिवर्त्य जगन्नाथो वैनतेयमथास्मरत्" याद० १६-५०। 2. ವಿನತೆಯ ಪುತ್ರ ಅರುಣ.

**वैनयिक ವೈನಯಿಕ** (पुं०) 1. ಶಸ್ತ್ರಾಭ್ಯಾಸ ಮಾಡುವ ರಥ, ಯುದ್ಧದ ತರಬೇತಿಯ ರಥ. 2. ವಿನಯ. विनय स्वार्थे "ठक्" (५-४-३४)। (वि०) 3. ವಿನಯಕ್ಕೆ ಸಂಬಂಧಿಸಿದ.

**वैनायक ವೈನಾಯಕ** (वि०) 1. ವಿನಾಯಕನ ಸಂಬಂಧವಾದ. विनायकस्यायम् "अण्" (४-३-१२०)। "न जातु वैनायकमेकमुद्धृतं विषाणमद्यापि पुनः प्ररोहति" माघ० १-६०। स्त्रियां "ङीप्" (४-१-१५)। **—यकी –ಯಕೀ.** "वैनायक्यश्चिरं वो वदनविधुतयः पान्तु चीत्कारवत्यः" मालती० १-१। 2. ಬುದ್ಧನ ಸಂಬಂಧವಾದ (ದರ್ಶನ), ಬೌದ್ಧದರ್ಶನ.

**वैनाशिक ವೈನಾಶಿಕ** (न०) 1. ಜನ್ಮನಕ್ಷತ್ರದಿಂದ ಇಪ್ಪತ್ತಮೂರನೆಯ ನಕ್ಷತ್ರ. विनाशः प्रयोजनं कारण-मस्य "ठक्" (५-१-१०९)। "वैनाशिके विनाशः स्यात् देहद्रविणसंपदाम्"। 2. ಬೌದ್ಧದರ್ಶನ, ಕ್ಷಣಿಕವಾದಗಳ ತತ್ತ್ವ. (पुं०) 3. ಜೇಡರ ಹುಳ. (वि०) 4. ಪರರ ಅಧೀನದಲ್ಲಿರುವವನು. "वैनाशिकः स्यात्-क्षणिके परतन्त्रोर्णनाभयोः" मेदि०। 5. ಕ್ಷಣಿಕ, ಕ್ಷಣಕಾಲ ಮಾತ್ರವಿರುವ.

**वैनीतक ವೈನೀತಕ** (पुंन०) 1. ವಾಹನಗಳ ಪರಂಪರೆ, ವಾಹನಗಳ ಸಾಲು. विनीयते स्म—वि+णीञ् (प्रापणे) "क्तः" (३-२-१०२)। "परम्परावाहनं यत् तद्वैनीतक-मस्त्रियाम्" अम०। (वि०) 2. ವಿನೀತನ ಸಂಬಂಧವಾದ.

**वैन्य ವೈನ್ಯ** (पुं०) ವೇನರಾಜನ ಮಗ. वेनस्यापत्यम् "ण्यः" (४-१-१५१)। ಇವನಿಗೆ ಪೃಥು ಮಹಾರಾಜನೆಂದು ಹೆಸರು. "वैन्यो नाम महीपालो यः पृथुः परिकीर्तितः। येन दुग्धा मही पूर्वं प्रजानां हित-कारणात्"। ವಿವರಕ್ಕೆ "पृथु" ಪದದಲ್ಲಿ ನೋಡಿ.

**वैपरीत्य ವೈಪರೀತ್ಯ** (न०) ವಿಪರೀತವಾಗಿರುವಿಕೆ, ವಿರುದ್ಧವಾಗಿರುವಿಕೆ, ವಿಪರ್ಯಯ. विपरीतस्य भावः "ष्यञ्" (५-१-१२४)।

**वैपुल्य ವೈಪುಲ್ಯ** (न०) 1. ವಿಸ್ತಾರವಾಗಿರುವಿಕೆ, ಅಗಲವಾಗಿರುವಿಕೆ. विपुलस्य भावः "ष्यञ्" (५-१-१२४)। 2. ಸಮೃದ್ಧಿ, ಹೇರಳ, ಪುಷ್ಕಳ.

**वैफल्य ವೈಫಲ್ಯ** (न०) ಪ್ರಯೋಜನವಿಲ್ಲದಿರುವಿಕೆ, ಫಲ ಲಭಿಸದಿರುವಿಕೆ. विफलस्य भावः "ष्यञ्" (५-१-१२४)।

**वैबोधिक ವೈಬೋಧಿಕ** (ಪುಂ) 1. ವೈತಾಳಿಕ, ನಿದ್ದೆಯಿಂದ ಎಚ್ಚರಗೊಳಿಸುವವನು, ಸ್ತುತಿ ಮತ್ತು ಸಂಗೀತಗಳಿಂದ ರಾಜನನ್ನು ಎಬ್ಬಿಸುವವನು. विबोध: प्रबोधनं शीलमस्य "ठक्" (४-४-६१)। "वैबोधिकध्वनिविभावित-पश्चिमार्धा" किरा० ९-७४। 2. ಕಾವಲುಗಾರ.

**वैभव ವೈಭವ** (न०) 1. ಐಶ್ವರ್ಯ, ಸಂಪತ್ತು. विभोर्भाव: "अण्"। 2. ಮಹಿಮೆ, ಘನತೆ, ಉತ್ಕರ್ಷ. 3. ಶಕ್ತಿ, ಪ್ರಭಾವ, ಸಾಮರ್ಥ್ಯ. "व्याप नगपतिरिव स्थिरतां महतां हि धैर्यमविभाव्यवैभवम्" किरा० १२-३। 4. ಅತಿಶಯ, ಆಧಿಕ್ಯ. "यत्सङ्गलब्धं निजवीर्यवैभवं तीर्थं मुहु: संस्पृशतां हि मानसम्" भाग० ५-१८-११।

**वैभ्राज ವೈಭ್ರಾಜ** (न०) ದೇವತೆಗಳ ಉದ್ಯಾನವನ.

**वैमत्य ವೈಮತ್ಯ** (न०) 1. ಭಿನ್ನಾಭಿಪ್ರಾಯ, ಅಭಿಪ್ರಾಯ ಭೇದ, ಮನಸ್ತಾಪ. विरुद्धा मति: विमति:— विमते: भाव: "ष्यञ्" (५-१-१२४)। 2. ಇಷ್ಟವಿಲ್ಲದಿರುವಿಕೆ.

**वैमनस्य ವೈಮನಸ್ಯ** (न०) 1. ದ್ವೇಷ, ಹಿತವಾದ ಮನಸ್ಸಿಲ್ಲದಿರುವಿಕೆ. 2. ಮನಸ್ಸಿಗೆ ನೆಮ್ಮದಿಯಿಲ್ಲದಿರುವಿಕೆ, ಚಿತ್ತಕ್ಷೋಭೆ. विमनसो भाव:। "अस्मात्प्रभवतो वैमनस्यादुत्सव: प्रत्याख्यात:" शाकु० ६।

**वैमात्रेय ವೈಮಾತ್ರೇಯ** (पुं०) ಮಲತಾಯಿಯ ಮಗ. विरुद्धा माता—विमातुरपत्यम् "ढक्" (४-१-१२३)। (स्त्री०) **–यी –ಯೀ.** "ङीप्" (४-१-१५)।

**वैमानिक ವೈಮಾನಿಕ** (पुं०) ವಿಮಾನದಿಂದ ಸಂಚರಿಸುವವನು. विमानेन चरति—विमान "ठक्" (४-४-८)। "त्रिविष्टपानोकहपुष्पवृष्टिं वैमानिकैरन्वभवन् विमुक्ताम्" याद० २०-५९।

**वैमुख्य ವೈಮುಖ್ಯ** (न०) 1. ಮುಖವನ್ನು ಹಿಂದಕ್ಕೆ ತಿರುಗಿಸುವುದು, ಎದುರಿಗೆ ನಿಂತು ಗೌರವಿಸದಿರುವುದು, ಮುಖ ಕೊಟ್ಟು ಮರ್ಯಾದೆಯಿಂದ ಮಾತಾಡಿಸದಿರುವುದು. विमुखस्य भाव: "ष्यञ्" (५-१-१२४)। 2. ಇಷ್ಟವಿಲ್ಲದಿರುವಿಕೆ, ವಿರೋಧವಾಗಿರುವಿಕೆ.

**वैयग्र्य ವೈಯಗ್ರ್ಯ** (न०) ವ್ಯಗ್ರತೆ, ಆಸಕ್ತನಾಗಿರುವಿಕೆ, ಶ್ರದ್ಧೆಯಿಂದ ಕೂಡಿರುವಿಕೆ, ಒಂದೇ ಕಾರ್ಯದಲ್ಲಿ ಮಗ್ನನಾಗಿರುವಿಕೆ. व्यग्रस्य भाव: "ष्यञ्" (५-१-१२४)। "यस्त्वान्ते संविमृष्टं तदनुगुणविधौ यच्च वैयग्र्यमासीत्" म० वी० ७-३८।

**वैयर्थ्य ವೈಯರ್ಥ್ಯ** (न०) ಪ್ರಯೋಜನವಿಲ್ಲದಿರುವಿಕೆ, ಫಲವಿಲ್ಲದಿರುವಿಕೆ. व्यर्थस्य भाव: "ष्यञ्" (५-१-१२४)।

**वैयधिकरण्य ವೈಯಧಿಕರಣ್ಯ** (न०) ಬೇರೆ ಬೇರೆ ಸ್ಥಳಗಳಲ್ಲಿರುವಿಕೆ, ವಿಭಿನ್ನ ದೇಶಗಳಲ್ಲಿರುವಿಕೆ. व्यधिकरणस्य भाव: "ष्यञ्" (५-१-१२४)।

**वैयाकरण ವೈಯಾಕರಣ** (पुं०) 1. ವ್ಯಾಕರಣ ಶಾಸ್ತ್ರವನ್ನು ಅಧ್ಯಯನ ಮಾಡುವವನು, ವ್ಯಾಕರಣ ಶಾಸ್ತ್ರವನ್ನು ಕಲಿಯುವವನು. 2. ವ್ಯಾಕರಣ ಶಾಸ್ತ್ರವನ್ನು ತಿಳಿದವನು. व्याकरणमधीते वेत्ति वा — व्याकरण "अण्" (४-२-५९)। "वैयाकरणकिरातादपशब्दमृगा: क्व यान्तु संत्रस्ता:"। (वि०) 3. ವ್ಯಾಕರಣ ಸಂಬಂಧವಾದ. स्त्रियां **वैयाकरणी ವೈಯಾಕರಣೀ.**

**वैयाकरणपाश ವೈಯಾಕರಣಪಾಶ** (पुं०) ವೈಯಾಕರಣನೆಂದು ಹೇಳಿಕೊಳ್ಳುವವನು, ವ್ಯಾಕರಣಜ್ಞಾನವಿಲ್ಲದಿದ್ದರೂ ಇದೆಯೆಂದು ಗರ್ವ ಹೊಂದಿರುವವನು.

**वैयाकरणभार्य ವೈಯಾಕರಣಭಾರ್ಯ** (पुं०) ವ್ಯಾಕರಣ ಶಾಸ್ತ್ರವನ್ನು ಅಧ್ಯಯನಮಾಡಿದ ಪತ್ನಿಯುಳ್ಳವನು. वैयाकरणी भार्या यस्य।

**वैयाघ्र ವೈಯಾಘ್ರ** (पुं०) 1. ಹುಲಿಯ ಚರ್ಮ ಹೊದಿಸಿದ ರಥ. व्याघ्रस्य अवयवो विकारो वा "अञ्" (४-३-१५४)। वैयाघ्रेण चर्मणा परिवृतो रथ: "अञ्" (४-२-१२)। (वि०) 2. ಹುಲಿಯ ಸಂಬಂಧವಾದ. व्याघ्रस्येदम् "अण्" (४-३-१२०)। "वैयाघ्रचर्मवसना सोर्ध्वमूर्धानिना सती"। 3. ಹುಲಿಯ ಚರ್ಮದಿಂದ ಹೊದಿಸಲ್ಪಟ್ಟ.

**वैयात्य ವೈಯಾತ್ಯ** (न०) ಧಾರ್ಷ್ಟ್ಯ, ದಿಟ್ಟತನ, ಲಜ್ಜೆಯಿಲ್ಲದಿರುವಿಕೆ. वियातस्य भाव: "ष्यञ्" (५-१-१२३)। "अन्यदा भूषणं पुंस: क्षमा लज्जेव योषित:। पराक्रम: परिभवे वैयात्यं सुरतेष्विव" माघ० २-४४।

**वैयासकि ವೈಯಾಸಕಿ** (पुं०) ವ್ಯಾಸಮಹರ್ಷಿಯ ಪುತ್ರ, ಶುಕಮಹರ್ಷಿ. व्यासस्यापत्यम्—"इञ्" "अकञ्" च (वा० ४-१-९७)। ऐजागम: (७-३-३)। "एवं निशम्य भृगुनन्दन साधुवादं वैयासकि: स भगवानथ विष्णुरातम्" भाग० १०-१-१४।

**वैयुष्ट ವೈಯುಷ್ಟ** (वि०) ಪ್ರಾತಃಕಾಲದಲ್ಲಿ ಕೊಡಲ್ಪಡುವ ಮತ್ತು ಮಾಡಲ್ಪಡುವ. व्युष्टे दीयते कार्यं वा "अण्" (५-१-९७)। ऐजागम: (७-३-३)।

**वैर ವೈರ** (न०) ದ್ವೇಷ, ಶತ್ರುತ್ವ, ಹಗೆತನ. वीरस्य भाव: "अण्" (५-१-१३०)। "विधाय वैरं सामर्षे नरोऽरौ य उदासते। प्रक्षिप्योदर्चिषं कक्षे शेरते तेऽभिमारुतम्" माघ० २-४२।

**वैरङ्गिक ವೈರಂಗಿಕ** (ವಿಂ) ಅನಾದರಕ್ಕೆ ಅರ್ಹವಾದ. विरागं नित्यमर्हति—"ठक्" विरङ्गादेशश्च (ग० ५-१-६४)।

**वैरनिर्यातन ವೈರನಿರ್ಯಾತನ** (ನಂ) ದ್ವೇಷವನ್ನು ತೀರಿಸಿಕೊಳ್ಳುವುದು, ಅಪಕಾರಕ್ಕೆ ತಕ್ಕ ಪ್ರತೀಕಾರ ಮಾಡುವುದು. वैरस्य निर्यातनम्। **वैरशुद्धिः ವೈರಶುದ್ಧಿಃ.**

**वैरल्य ವೈರಲ್ಯ** (ನಂ) 1. ವಿರಳವಾಗಿರುವಿಕೆ, ದಟ್ಟವಾಗಿಲ್ಲದಿರುವಿಕೆ, ಒತ್ತಾಗಿಲ್ಲದಿರುವಿಕೆ. विरलस्य भावः "ष्यञ्" (५-१-१२४)। 2. ಅಪೂರ್ವವಾಗಿರುವಿಕೆ, ದುರ್ಲಭವಾಗಿರುವಿಕೆ.

**वैराग्य ವೈರಾಗ್ಯ** (ನಂ) 1. ತತ್ತ್ವಜ್ಞಾನದಿಂದ ದೋಷವನ್ನು ಕಂಡು ಪ್ರಪಂಚದ ವಿಷಯಗಳಲ್ಲಿ ಆಸೆಯನ್ನು ತೊರೆದಿರುವಿಕೆ, ಯಾವ ವಿಷಯದಲ್ಲಿಯೂ ಅಪೇಕ್ಷೆಯಿಲ್ಲದಿರುವಿಕೆ. विरागस्य भावः "ष्यञ्" (५-१-१२४)। "अभ्यासेन तु कौन्तेय वैराग्येण च गृह्यते" ಗೀತಾ ६-३५। 2. ಅಪರಾಗ, ಅಸಮಾಧಾನ, ಅತೃಪ್ತಿ. "कामं प्रकृतिवैराग्यं सद्यः शमयितुं क्षमः" रघु० १७-५५।

**वैराज ವೈರಾಜ** (ವಿಂ) 1. ವಿರಾಟ್‌ಪುರುಷನ (ಬ್ರಹ್ಮನ) ಸಂಬಂಧವಾದ. विराजः इदम् "अण्" (४-३-१२०)। "वैराजा नाम ते लोकास्तैजसाः सन्तु ते शिवाः" उ० रा० २-१२। (ಪುಂ) 2. ವಿರಾಟ್‌ಪುರುಷನ ಅಂಶದಿಂದ ಆವಿರ್ಭವಿಸಿದ ಪುರುಷ. विराट् अनिरुद्धः तदंशसंभूतः पुरुषः वैराजः।

**वैराज्य ವೈರಾಜ್ಯ** (ನಂ) ವಿರಾಟ್‌ಪುರುಷನ ಭಾವ, ಅಣಿಮಾದಿ ಸಿದ್ಧಿಯನ್ನು ಹೊಂದಿರುವಿಕೆ. विराजो भावः "ष्यञ्" (५-१-१२४)।

**वैराट ವೈರಾಟ** (ಪುಂ) 1. ವಿರಾಟರಾಜನ ಪುತ್ರ, ಉತ್ತರಕುಮಾರ. विराटस्यायम् "अण्" (४-३-१२०)। (ನಂ) 2. ಮಹಾಭಾರತದ ವಿರಾಟಪರ್ವ. (ವಿಂ) 3. ವಿರಾಟರಾಜನ ಸಂಬಂಧವಾದ. विराटस्येदम् "अण्"। (स्त्री०) 4. **वैराटी ವೈರಾಟೀ.** ವಿರಾಟರಾಜನ ಪುತ್ರಿ, ಉತ್ತರೆ. "अभिमन्योर्वरा भार्या वैराटी चातिसुन्दरी"।

**वैरात्रिक ವೈರಾತ್ರಿಕ** (ವಿಂ) ಅಪರರಾತ್ರಿಯಲ್ಲಿ ನಡೆಯುವ, ರಾತ್ರಿಯ ಕೊನೆಯ ಜಾವದಲ್ಲಿ ನಡೆಯುವ. विगता रात्रिः विरात्रः "अच्" (५-४-८७)। रात्रशब्दस्य पुंस्त्वम् (२-४-२९)। विरात्रे भवम् "ठञ्"। "आवर्तयन्त्यतनुहेषितवीचिभेदैः वैरात्रिकं वटुभिरध्ययनं प्रवृत्तम्" याद० १९-५९।

**वैरिन् ವೈರಿನ್** (ಪುಂ) ಶತ್ರು, ಹಗೆ. वैरमस्यास्ति—"इनिः" (५-२-११५)। "ज्वलतस्तव जातवेदसः सततं वैरिकृतस्य चेतसि" किरा० २-२४।

**वैरूप्य ವೈರೂಪ್ಯ** (ನಂ) 1. ವಿಕಾರ ರೂಪವಾಗಿರುವಿಕೆ, ಕುರೂಪ. विरूपस्य भावः "ष्यञ्" (५-१-१२४)। "वैरूप्यमङ्गेषु कशाभिघातः मौण्ड्यं तथा लक्षणसंनिपातः" रामा०। "वैरूप्यपौनरुक्त्येन भीषणां तामयोजयत्" रघु० १२-४०। 2. ಸಮಾನವಾಗಿಲ್ಲದಿರುವಿಕೆ, ಏಕರೀತಿಯಲ್ಲಿಲ್ಲದಿರುವಿಕೆ. "एतच्चान्योन्यवैरूप्यम्" भा०।

**वैरोचन ವೈರೋಚನ** (ಪುಂ) 1. ವಿರೋಚನನ ಪುತ್ರನಾದ ಬಲಿಚಕ್ರವರ್ತಿ. विरोचनस्यायम् "अण्" (४-३-१२०)। 2. ಸೂರ್ಯನ ಪುತ್ರ.

**वैरोचनि ವೈರೋಚನಿ** (ಪುಂ) 1. ಬಲಿಚಕ್ರವರ್ತಿ. विरोचनस्यापत्यम् "इञ्" (४-१-९५)। "वैरोचने किमाश्रित्य शोचितव्ये न शोचसि" भा० शान्ति० २२७-१५। 2. ಬುದ್ಧದೇವ. 3. ಸೂರ್ಯನ ಪುತ್ರ. "वैरोचनिस्तु सुगते बलिदैत्यार्कपुत्रयोः" मेदि०।

**वैरोचि ವೈರೋಚಿ** (ಪುಂ) ಬಲಿಚಕ್ರವರ್ತಿಯ ಮಗ, ಬಾಣಾಸುರ. "वैरोचिर्बलिनन्दनः"।

**वैरोद्धार ವೈರೋದ್ಧಾರ** (ಪುಂ) ವೈರಪ್ರತೀಕಾರ, ದ್ವೇಷವನ್ನು ತೀರಿಸಿಕೊಳ್ಳುವುದು, ಅಪಕಾರಕ್ಕೆ ಮಾಡುವ ಪ್ರತೀಕಾರ. वैरस्योद्धारः।

**वैलक्षण्य ವೈಲಕ್ಷಣ್ಯ** (ನಂ) 1. ವ್ಯತ್ಯಾಸ, ಭೇದ. विलक्षणस्य भावः "ष्यञ्" (५-१-१२४)। "त्रेतादिष्वपि युगापचाररूपेण धर्मवैलक्षण्यम्"। 2. ಸಾಮ್ಯವಿಲ್ಲದಿರುವಿಕೆ.

**वैलक्ष्य ವೈಲಕ್ಷ್ಯ** (ನಂ) 1. ಮನಸ್ಸಿನಲ್ಲಿ ಉಂಟಾಗುವ ಸಂಕೋಚ, ಕಿರಿಕಿರಿ, ಪೇಚಾಟ. विलक्षस्य भावः "ष्यञ्" (५-१-१२४)। "पाषाणस्खलनविलोलमाशु नूनं वैलक्ष्यादयुरवरोधनानि सिन्धोः" माघ० ८-८। 2. ನಟನೆ, ಸೋಗು, ಅಸ್ವಾಭಾವಿಕತೆ. 3. ಲಜ್ಜೆ, ನಾಚಿಕೆ.

**वैवधिक ವೈವಧಿಕ** (ಪುಂ) 1. ಕಾವಡಿಯನ್ನು ಹೊತ್ತು ವ್ಯಾಪಾರ ಮಾಡುವವನು. विवधं वहति "ठक्" (४-४-१७)। 2. ತಿರುಗಾಡುತ್ತ ವ್ಯಾಪಾರಮಾಡುವವನು, ತಿರುಗುವ್ಯಾಪಾರಿ. विवधेन हरति "ठक्"।

**वैवर्ण्य ವೈವರ್ಣ್ಯ** (ನಂ) 1. ಬಣ್ಣದ ಬದಲಾವಣೆ, ಛಾಯೆ ಬದಲಾಯಿಸುವುದು, ವಿಷಾದ ಮದ ಕೋಪ ಮೊದಲಾದ

ಕಾರಣಗಳಿಂದ ಉಂಟಾಗುವ ದೇಹಸೌಂದರ್ಯದ ಬದಲಾವಣೆ. विवर्णस्य भाव: "ष्यञ्" (५-१-१२४)। "विषादमदरोषाद्यैर्वर्णान्यत्वं विवर्णता (वैवर्ण्यम्)" सा० द० ३-१३९। ಇದು ಎಂಟು ವಿಧ ಸಾತ್ತ್ವಿಕ ಗುಣಗಳಲ್ಲೊಂದು. 2. ಬೇರೆ ವರ್ಣಕ್ಕೆ ಸೇರುವುದು, ಒಂದು ಜಾತಿಯಿಂದ ಮತ್ತೊಂದು ಜಾತಿಗೆ ಬದಲಾವಣೆ ಹೊಂದುವುದು.

**वैवस्वत ವೈವಸ್ವತ** (ಪುಂ) 1. ಸೂರ್ಯನ ಪುತ್ರ— (1) ಯಮಧರ್ಮರಾಯ. (2) ಶನಿಮಹಾರಾಜ. (3) ಹದಿನಾಲ್ಕು ಮಂದಿ ಮನುಗಳಲ್ಲಿ ಏಳನೆಯ ಮನು. विवस्वत: अपत्यम् "अण्" (४-१-९२)। "वैवस्वतो मनुर्नाम माननीयो मनीषिणाम्" रघु० १-११। ಈಗ ನಡೆಯುತ್ತಿರುವ ಮನ್ವಂತರದ ಅಧಿಪತಿ. ಈ ವೈವಸ್ವತಮನ್ವಂತರದಲ್ಲಿ ಪುರಂದರನೆಂಬ ಇಂದ್ರನು ಸ್ವರ್ಗಾಧಿಪತಿ. (1) कश्यप: (2) अत्रि: (3) वसिष्ठ: (4) विश्वामित्र: (5) गोतम: (6) जमदग्नि: ಮತ್ತು (7) भरद्वाज: ಇವರು ಸಪ್ತರ್ಷಿಗಳು. (1) इक्ष्वाकु: (2) नृग: (3) शर्याति: (4) दिष्ट: (5) धृष्ट: (6) करूषक: (7) नरिष्यन्त: (8) पृषध्र: (9) नाभाग: ಮತ್ತು (10) कवि: ಈ ಹತ್ತು ಮಂದಿ ವೈವಸ್ವತ ಮನುವಿನ ಪುತ್ರರು. 2. ಏಕಾದಶ ರುದ್ರರಲ್ಲೊಬ್ಬ ರುದ್ರ.

**वैवस्वती ವೈವಸ್ವತೀ** (स्त्री०) 1. ಸೂರ್ಯನ ಪುತ್ರಿಯಾದ ಯಮುನಾ ನದಿ, ಕಾಳಿಂದೀ ನದಿ. विवस्वतोऽपत्यं स्त्री — "अण्" (४-१-९२)। "ङीप्" (४-१-१५)। 2. ದಕ್ಷಿಣ ದಿಕ್ಕು. विवस्वत: इयम् "अण्"(४-३-१२०)। "ङीप्" (४-१-१५)।

**वैवाहिक ವೈವಾಹಿಕ** (ವಿ०) 1. ವಿವಾಹ ಸಂಬಂಧವಾದ. विवाहस्येदम् "अण्" (४-३-१२०)। "पञ्चमे सप्तमे चैव येषां वैवाहिकी क्रिया। ते च सान्तानिन: सव पतिता: शूद्रतां गता:"। 2. ವಿವಾಹ ಕಾರ್ಯಕ್ಕೆ ಉಪಯೋಗಿಸುವ ವಸ್ತು. विवाह: प्रयोजनमस्य "ठक्" (५-१-१०९)। "वैवाहिकै: कौतुकसंविधानैर्गृहे गृहे व्यग्रपुरन्ध्रिवर्गम्" कुमा० ७-२। (ಪುಂ) 3. ಸಂಬಂಧಿ, ಮಗಳ ಮತ್ತು ಮಗನ ಮಾವ (ಶ್ವಶುರ), ಅಳಿಯನ ಅಥವಾ ಸೊಸೆಯ ತಂದೆ.

**वैशद्य ವೈಶದ್ಯ** (ನಂ) 1. ಸ್ವಚ್ಛತೆ, ನಿರ್ಮಲವಾಗಿರುವಿಕೆ. विशदस्य भाव: "ष्यञ्" (५-१-१२४)। 2. ತೀಕ್ಷ್ಣವಾಗಿರುವುದು, ಚುರುಕಾಗಿರುವುದು. शिष्यबुद्धिवैशद्याय। 3. ಬೆಳ್ಳಗಿರುವಿಕೆ, ಶುಭ್ರವಾಗಿರುವಿಕೆ. 4. ಚಿತ್ತಶಾಂತಿ, ಮನಸ್ಸಿನ ನೆಮ್ಮದಿ, ಚಿತ್ತಸ್ವಾಸ್ಥ್ಯ. 5. ಸ್ಪಷ್ಟವಾಗಿರುವಿಕೆ. "वैशद्यहृद्यैर्म्रदिमाभिरामै:" नैष० १४-६।

**वैशम्पायन ವೈಶಂಪಾಯನ** (ಪುಂ) 1. ವ್ಯಾಸಮಹರ್ಷಿಯ ಒಬ್ಬ ಶಿಷ್ಯ, ವೇದವ್ಯಾಸಮಹರ್ಷಿಯು ಯಜುರ್ವೇದವನ್ನು ಉಪದೇಶಿಸಿದ ಶಿಷ್ಯ. विशम्पस्य गोत्रापत्यं पुमान् "फञ्" (४-१-११०)। "वैशम्पायननामानं यजुर्वेदस्य चाग्रहीत्" विष्णुपु०। ["वेद" ಪದದಲ್ಲಿ ನೋಡಿ.] 2. ವೈವಸ್ವತ ಮನ್ವಂತರದ ಒಂದನೇ ಮಹಾಯುಗದಲ್ಲಿ ಜನಮೇಜಯನಿಗೆ ಮಹಾಭಾರತವನ್ನು ಹೇಳಿದ ಋಷಿ.

**वैशस ವೈಶಸ** (ನಂ) 1. ವ್ಯಸನ, ದುಃಖ. "धिगुच्छ्सितवैशसं मम यदित्थमेकाकिनो धिगेव" मालती० ९-३५। 2. ಹತ್ಯೆ, ಕೊಲೆ, ವಧೆ. विशसति हिनस्ति विशसो घातुक:। विशसस्य कर्म "अण्" (५-१-१३०)। वैशसम्। "एतद्वैशसवज्रघोरपतनं शश्वन्ममोत्पश्यत:" उ० रा० ४-२४।

**वैशाख ವೈಶಾಖ** (ಪುಂ) 1. ಹನ್ನೆರಡು ಮಾಸ (ತಿಂಗಳು) ಗಳಲ್ಲಿ ಒಂದು ಮಾಸ, ವೈಶಾಖ ಮಾಸ. विशाखानक्षत्रयुक्तचन्द्रमसा युक्ता वैशाखी पौर्णमास्यस्मिन् वैशाखो मास:। "विशाखातारकायुक्ता वैशाखी पूर्णिमा भवेत्। सा वैशाखी यत्र मासे स वैशाख: प्रकीर्तित:"। 2. ಮಂತು, ಕಡೆಗೋಲು. "द्रुततरकरदक्षा: क्षिप्तवैशाखशैले" माघ० ११-८।

**वैशाखी ವೈಶಾಖೀ** (स्त्री०) 1. ವೈಶಾಖ ಮಾಸದ ಹುಣ್ಣಿಮೆ, ವಿಶಾಖಾ ನಕ್ಷತ್ರದೊಡನೆ ಕೂಡಿದ ಹುಣ್ಣಿಮೆ. विशाखानक्षत्रेण युक्ता पौर्णमासी वैशाखी "अण्" (४-२-३)। "ङीप्" (४-१-१५)। 2. ಕೆಂಪು ಕೊಮ್ಮೆ ಗಿಡ.

**वैशिक ವೈಶಿಕ** (ಪುಂ) 1. ಅನೇಕ ವೇಶ್ಯೆಯರ ಸಹವಾಸದಲ್ಲಿರುವ ಒಬ್ಬ ನಾಯಕ. वेशेन जीवति — वेश "ठक्" (४-४-१२)। (1) पति: (2) उपपति: ಮತ್ತು (3) वैशिक: ಎಂದು ಶೃಂಗಾರ ನಾಯಕನು ಮೂರು ವಿಧ. (ನಂ) 2. ವೇಶ್ಯೆಯ ಕಲೆ, ವಾರಾಂಗನೆಯ ಚಾತುರ್ಯ. वेशे भवम् "ठक्" (वा० ४-३-६०)। (ವಿ०) 3. ವೇಶ್ಯೆಯಲ್ಲಿ ಇರುವ, ವಾರಾಂಗನೆಯಲ್ಲಿ ಸಹಜವಾಗಿರುವ. स्त्रियां "ङीप्" (४-१-१५)। —की —ಕೀ. "ऋग्वेदं सामवेदं गणितमथ कलां वैशिकीं हस्तिशिक्षाम्" मृच्छ० १-४।

**वैशिष्ट्य ವೈಶಿಷ್ಟ್ಯ** (ನಂ) 1. ಅಸಾಧಾರಣವಾಗಿರುವಿಕೆ. ತನ್ನದೇ ಆಗಿರುವಿಕೆ, ಹೆಚ್ಚುಗಾರಿಕೆ, ವಿಶೇಷ ಲಕ್ಷಣ. विशिष्टस्य भावः "ष्यञ्" (५-१-१२४)। "वैशिष्ट्या-दन्यमर्थं वा बोधयेत्सार्थसंभवा" सा० द० २-१७। 2. ಸಂಬಂಧ, ಸಂಯೋಗ. भूतलं घटविशिष्टम् ಎಂಬಲ್ಲಿ ಘಟ ಮತ್ತು ಭೂತಲಗಳಿಗಿರುವ ಸಂಬಂಧವು ವೈಶಿಷ್ಟ್ಯ. 3. ವೈಲಕ್ಷಣ್ಯ, ಭೇದ, ವ್ಯತ್ಯಾಸ. 4. ಉತ್ತಮವಾಗಿರುವಿಕೆ, ಶ್ರೇಷ್ಠವಾಗಿರುವಿಕೆ.

**वैशेषिक ವೈಶೇಷಿಕ** (ಪುಂ) 1. ಕಣಾದಮುನಿ ರಚಿತವಾದ ವೈಶೇಷಿಕ ದರ್ಶನವನ್ನು ತಿಳಿದವನು. (ನಂ) 2. ವೈಶೇಷಿಕ ದರ್ಶನ, ಆರು ವಿಧ ಆಸ್ತಿಕದರ್ಶನಗಳಲ್ಲೊಂದು ವಿಧ. विशेषं पदार्थभेदमधिकृत्य कृतो ग्रन्थः "ठक्" (४-३-८७)। ಇದು ಕಣಾದಮುನಿ ಪ್ರಣೀತವಾದ ಸೂತ್ರಾತ್ಮಕ ಹತ್ತು ಅಧ್ಯಾಯಗಳಿಂದ ಕೂಡಿದ ಒಂದು ತರ್ಕಶಾಸ್ತ್ರ. (ವಿಂ) 3. ಅಸಾಧಾರಣವಾದ. विशेष एव "ठक्" (५-४-३४)। 4. ಇತರ ವ್ಯವಚ್ಛೇದಕ. विशेषाय इतरेभ्यो व्यवच्छेदाय प्रभवति "ठक्" (५-१-१०१)।

**वैश्य ವೈಶ್ಯ** (ಪುಂ) 1. ತೃತೀಯ ವರ್ಣದವನು. विशति— विश (प्रवेशने) "क्विप्" (३-२-१७८)। स्वार्थे "ष्यञ्" (वा० ५-१-१२४)। ಇವನು ಪರಮಾತ್ಮನ ಊರು ಪ್ರದೇಶದಿಂದ ಜನಿಸಿದವನು. "ऊरू तदस्य यद्वैश्यः"। ವೈಶ್ಯನಿಗೆ ಕೃಷಿ ಗೋಸಂರಕ್ಷಣ ವಾಣಿಜ್ಯ ಇವು ಮೂರು ಸ್ವಭಾವಸಿದ್ಧವಾದ ಕರ್ಮಗಳು. "कृषिगोरक्षवाणिज्यं वैश्यस्यापि स्वभावजम्" गीता १८-४४। (ವಿಂ) 2. ವೈಶ್ಯನ ಸಂಬಂಧವಾದ. वैश्यस्येदम् "अण्" (४-३-१२०)। "क्षात्राणि वैश्यानि च सेवमानः शौद्राणि कर्माणि च ब्राह्मणः सन्। अस्मिल्लोके निन्दितो मन्दचेताः परे च लोके निरयं प्रयाति" भा० शान्ति० ६१-४। (स्त्री०) -श्या -ಶ್ಯಾ. ವೈಶ್ಯ ಜಾತಿಯ ಹೆಂಗಸು. "वैश्यश्चेत् क्षत्रियां गुप्तां वैश्यां वा क्षत्रियो व्रजेत्। यो ब्राह्मण्यामगुप्तायां तावुभौ दण्डमर्हतः" मनु० ८-३८२।

**वैश्यकर्मन् ವೈಶ್ಯಕರ್ಮನ್** (ನಂ) ವೈಶ್ಯನ ಕಾರ್ಯ, ವೈಶ್ಯನ ವೃತ್ತಿ. (1) ವಾಣಿಜ್ಯ, ವರ್ತಕತನ. (2) ಕೃಷಿ, ವ್ಯವಸಾಯ. "कृषिगोरक्षवाणिज्यं वैश्यं कर्म स्वभावजम्" १८-४४।

**वैश्रवण ವೈಶ್ರವಣ** (ಪುಂ) ಕುಬೇರ, ಧನಾಧಿಪ. विश्रवसोऽपत्यं पुमान् "अण्" विश्रवः शब्दस्य विश्रवणादेशश्च निपा० (४-१-११२)।

**वैश्रवणालय ವೈಶ್ರವಣಾಲಯ, -आवास -ಆವಾಸ** (ಪುಂ) ವಟವೃಕ್ಷ, ಆಲದ ಮರ.

**वैश्वदेव ವೈಶ್ವದೇವ** (ಪುಂ) 1. ಚಾತುರ್ಮಾಸ್ಯ ಯಾಗದ ನಾಲ್ಕು ಪರ್ವಗಳಲ್ಲೊಂದು. 2. ಪಂಚಮಹಾಯಜ್ಞಗಳಲ್ಲೊಂದಾದ ಭೂತಯಜ್ಞ. 3. ವಿಶ್ವೇದೇವ ಸಂಬಂಧವಾದ ಹೋಮ. विश्वदेवस्यायम् "अण्" (४-३-१२०)।

**वैश्वानर ವೈಶ್ವಾನರ** (ಪುಂ) 1. ಅಗ್ನಿ, ಬೆಂಕಿ. विश्वे नरो अस्य विश्वानरः, दीर्घः (६-३-१२९)। विश्वानरस्यापत्यम् "अण्" (४-१-११४)। 2. ಜಾಠರಾಗ್ನಿ, ದೇಹದೊಳಗೆ ಆಹಾರವನ್ನು ಜೀರ್ಣಮಾಡುವ ಒಂದು ಅಗ್ನಿ. ಈ ಅಗ್ನಿಯು ಖಾದ್ಯ ಚೋಷ್ಯ ಲೇಹ್ಯ ಮತ್ತು ಪೇಯ ರೂಪವಾದ ನಾಲ್ಕು ವಿಧ ಅನ್ನಗಳನ್ನು ಪಚನಮಾಡುವುದು. "अहं वैश्वानरो भूत्वा प्राणिनां देहमाश्रितः। प्राणापानसमायुक्तः पचाम्यन्नं चतुर्विधम्" गीता १५-१४। 3. ಚಿತ್ರಕ ವೃಕ್ಷ, ಚಿತ್ರಮೂಲದ ಗಿಡ.

**वैषम्य ವೈಷಮ್ಯ** (ನಂ) 1. ಭೂಮಿಯು ಸಮನಾಗಿಲ್ಲದಿರುವಿಕೆ, ನೆಲವು ಹಳ್ಳತಿಟ್ಟಾಗಿರುವಿಕೆ. विषमस्य भावः "ष्यञ्" (५-१-१२४)। "समतां वसुधायाश्च स सम्यगुदपादयत्। वैषम्यं हि परं भूमेरिति नः परमा श्रुतिः" भा० शान्ति० ५९-१२३। 2. ತಾರತಮ್ಯ, ಅಸಮತೆ, ಹೆಚ್ಚುಕಡಿಮೆ ಇರುವುದು. "महच्च फलवैषम्यं दृश्यते कर्मसन्धिषु" भा०। 3. ದುಃಖ, ಕಷ್ಟ. "वैषम्यं परमं प्राप्तो दुःखितो गतचेतनः। भर्ता तेऽहं निबोधेदं वचनं हितमात्मनः" भा० वन० ६१-२०। 4. ಕಠಿನತೆ, ಒರಟಾಗಿರುವಿಕೆ.

**वैषयिक ವೈಷಯಿಕ** (ವಿಂ) 1. ವಿಷಯಸಂಬಂಧವಾದ. (ಆಧಾರ). ಆಧಾರವು (1) औपश्लेषिकः (2) वैषयिकः ಮತ್ತು (3) अभिव्यापकः ಎಂದು ಮೂರು ವಿಧ. मोक्षे इच्छास्ति ಎಂಬಲ್ಲಿ ಮೋಕ್ಷವಿಷಯದಲ್ಲಿ ಇಚ್ಛೆಯಿರುವುದು ಎಂದು ಹೇಳಿರುವುದರಿಂದ ಇಲ್ಲಿ ವೈಷಯಿಕ ಆಧಾರ. विषयेण निर्वृत्तः "ठक्"। 2. ವಿಷಯಾಸಕ್ತ, ಭೋಗದಲ್ಲಿ ಆಸೆಯುಳ್ಳವನು.

**वैष्टुत ವೈಷ್ಟುತ** (ನಂ) ಹೋಮದ ಭಸ್ಮ.

**वैष्ट ವೈಷ್ಟ** (ಪುಂ) 1. ಆಕಾಶ. 2. ವಾಯು. 3. ಭುವನ, ಲೋಕ, ಜಗತ್ತು. विश (प्रवेशने) "ष्ट्रः" (उ० ४-१५९)।

**वैष्णव ವೈಷ್ಣವ** (ಪುಂ) 1. ವಿಷ್ಣುಭಕ್ತ, ವಿಷ್ಣುವಿನ ಉಪಾಸಕ. विष्णोरयम् "अण्" (४-३-१२०)। ಕಂಠ

ದಲ್ಲಿ ತುಲಸೀ ಮಾಲೆಯನ್ನೂ ಬಾಹುಮೂಲಗಳಲ್ಲಿ ಶಂಖ ಚಕ್ರ ಚಿಹ್ನೆಗಳನ್ನೂ ಲಲಾಟದಲ್ಲಿ ಊರ್ಧ್ವಪುಂಡ್ರವನ್ನೂ ಧರಿಸಿರುವವನು ವೈಷ್ಣವನು. "ये कण्ठलग्नतुलसी-नलिनाक्षमालाः ये बाहुमूलपरिचिह्नितशङ्खचक्राः। ये वा ललाटफलके लसदूर्ध्वपुण्ड्राः ते वैष्णवा भुवनमाशु पवित्रयन्ति"॥ "गुरुवक्त्राद्विष्णुमन्त्रो यस्य कर्णे प्रवेक्ष्यति। तं वैष्णवं महापूतं प्रवदन्ति मनीषिणः"॥ "संसारो वैष्णवाधीनो देवा वैष्णवपालिताः। अहं च वैष्णवाधीनस्तस्मात् श्रेष्ठाश्च वैष्णवाः"॥ "देवस्वं ब्राह्मणद्रव्यं परस्वं च चतुर्मुख। पश्यन्ति विषवद्ये च ज्ञेयास्ते वैष्णवा जनाः"॥ (न०) 2. ಹೋಮದ ಭಸ್ಮ. 3. ಶ್ರವಣ ನಕ್ಷತ್ರ. 4. ಶ್ರೀವೈಕುಂಠ. (वि०) 5. ವಿಷ್ಣುಸಂಬಂಧವಾದ. "गां गतस्य तव धाम वैष्णवं कोपितोह्यसि मया दिदृक्षुणा" रघु० ११-८५।

**वैष्णवपुराण ವೈಷ್ಣವಪುರಾಣ** (न०) ವ್ಯಾಸಮಹರ್ಷಿ ವಿರಚಿತ ಅಷ್ಟಾದಶ ಪುರಾಣಗಳಲ್ಲೊಂದು. ವಿವರಕ್ಕೆ "विष्णुपुराण" ಪದದಲ್ಲಿ ನೋಡಿ.

**वैष्णवाचार ವೈಷ್ಣವಾಚಾರ** (पुं०) ವಿಷ್ಣುಭಕ್ತನ ನಡವಳಿಕೆ, ವಿಷ್ಣುವಿನ ಉಪಾಸಕನು ನಡೆದುಕೊಳ್ಳಬೇಕಾದ ಸಂಪ್ರದಾಯ, ವಿಷ್ಣುಭಕ್ತನ ಕರ್ತವ್ಯ. वैष्णवस्य आचारः। ದೇವರು ಗೋವುಗಳು ಬ್ರಾಹ್ಮಣರು ಜ್ಞಾನ ವಯೋವೃದ್ಧರಾದ ಆಚಾರ್ಯರು ಇವರನ್ನು ಪ್ರತಿದಿನವೂ ಆರಾಧಿಸಬೇಕು. ಸಂಧ್ಯಾಕಾಲಗಳಲ್ಲಿ ಕರ್ತವ್ಯಲೋಪವಿಲ್ಲದೆ ನಡೆದುಕೊಳ್ಳಬೇಕು. ಅಗ್ನಿಕಾರ್ಯವನ್ನು ತಪ್ಪದೆ ಮಾಡಬೇಕು. ಇತ್ಯಾದಿ.

**वैष्णवी ವೈಷ್ಣವೀ** (स्त्री०) 1. ವಿಷ್ಣುಶಕ್ತಿ. विष्णोरियम् "अण्" (४-३-१२०)। "ङीप्" (४-१-१५)। "या विष्णो राजसी शक्तिः पालिनी चैव वैष्णवी" वराहपु०। 2 ದುರ್ಗಾದೇವಿ. 3. ಗಂಗೆ.

**वैसारिण ವೈಸಾರಿಣ** (पुं०) ಮತ್ಸ್ಯ, ಮೀನು. विविधं सरति—सृ (गतौ) "णिनिः" (३-१-१३४)। विसारी "अण्" (५-४-१६)। "मत्स्यो वैसारिणोऽण्डजः" अम०।

**वैसूचन ವೈಸೂಚನ** (न०) ನಾಟಕದಲ್ಲಿ ಪುರುಷನು ಸ್ತ್ರೀ ಪಾತ್ರವನ್ನು (ವೇಷವನ್ನು) ಹೊಂದುವುದು.

**वैहार्य ವೈಹಾರ್ಯ** (वि०) ವಿನೋದಕ್ಕಾಗಿ ಆಟವಾಡಲ್ಪಡುವ, ಪರಿಹಾಸ್ಯಪೂರ್ವಕ ಪ್ರೀತಿಸಲ್ಪಡುವ, ಪತ್ನಿಯ ಸಂಬಂಧಿ ಸ್ಯಾಲ ಮತ್ತು ಪತ್ನಿಯ ಬಂಧು.

**वैहासिक ವೈಹಾಸಿಕ** (पुं०) ನಕಲಿ, ಹಾಸ್ಯಗಾರ. विहास "ठक्" (५-१-१०९)। "भानुस्ताम्यद्वनरुहवनीकेलिवैहासिकोऽयम्" नैष० १९-६४।

**वोड्र ವೋಡ್ರ** (पुं०) 1. ಗೋನಸವೆಂಬ ದೊಡ್ಡ ಸರ್ಪ, ಮಂಡಲದ ಹಾವು 2. ಒಂದು ಜಾತಿಯ ಮೀನು. (स्त्री०) –ड्री –ಡ್ರೀ. 3. ಒಂದು ಪಣದ ನಾಲ್ಕನೆಯ ಒಂದು ಭಾಗ. "वोड्रीं स्त्री पणपादे ना गोनसाहौ झषान्तरे" मेदि०।

**वोढव्य ವೋಢವ್ಯ** (वि०) 1. ವಹಿಸಲು ಯೋಗ್ಯವಾದ. 2. ವಹಿಸಲ್ಪಡುವ. 3. ವಹಿಸಬೇಕಾದ. 4. ವಹಿಸಲು ಶಕ್ಯವಾದ. वह् (प्रापणे) "तव्यः" (३-१-९६)। "अनीयर्" (३-१-९६)। **वहनीयः ವಹನೀಯಃ.** 5. ವಿವಾಹವಾಗಲು ಅರ್ಹನಾದ. 6. ವಿವಾಹವಾಗಬೇಕಾದ. 7. ಮದುವೆ ಮಾಡಿಕೊಳ್ಳಲ್ಪಡುವ. "न चैतेभ्यः प्रदातव्या न वोढव्या तथाविधा" भा०।

**वोढृ ವೋಢೃ** (पुं०) 1. ವಹಿಸುವವನು, ಹೊರುವವನು. वह् (प्रापणे) "तृच्" (३-१-१३३)। ओत्वम् (६-३-११२)। "हे वोढारः साध्वतिक्रामत" भाग०। 2. ಮದುವೆಯಾದವನು, ಪತಿ, ಗಂಡ. "अखिलक्षद्भयचकितेक्षणं नवोढा वोढारं विपदि न दूषितातिभूमिः" माघ० ८-२०। 3. ಎತ್ತು, ವೃಷಭ. 4. ಸಾರಥಿ. (वि०) 5. ಒಯ್ಯುವವನು, ಸಾಗಿಸುವವನು. "भागीरथीनिर्झरशीकराणां वोढा मुहुः कम्पितदेवदारुः" कुमा० १-१५।

**वोद ವೋದ** (वि०) ಒದ್ದೆಯಾಗಿರುವ, [illegible]ಯಾಗಿರುವ. "वोद आर्द्रः स्यात्" त्रिकाण्ड०।

**वोदाल ವೋದಾಲ** (पुं०) ಒಂದು ಜಾತಿಯ ಮೀನು. वोदः आर्द्रः अलति — अल "अच्" (३-१-१३४)।

**वोरक ವೋರಕ** (पुं०) ಲೇಖಕ, ಬರವಣಿಗೆಯವನು.

**वौषट् ವೌಷಟ್** (अव्य०) ದೇವತೆಗಳಿಗೆ ಹವಿಸ್ಸನ್ನು ಅರ್ಪಿಸುವ ಮಂತ್ರದ ಘೋಷಣೆ. उह्यतेऽनेन हविः—वह (प्रापणे) "डौषट्" बाहु०।

**व्यंशक ವ್ಯಂಶಕ** (पुं०) ಪರ್ವತ, ಬೆಟ್ಟ.

**व्यंशुक ವ್ಯಂಶುಕ** (वि०) ವಸ್ತ್ರವನ್ನು ತೆಗದುಹಾಕಿರುವ, ಬಟ್ಟೆಯನ್ನು ಬಿಚ್ಚಿರುವ. विगतमंशुकं यस्य। "व्यंशुकस्फुटमुखीमतिजिह्मां व्रीडया नववधूमिव लोकः" किरा० ९-२४।

**व्यंसक ವ್ಯಂಸಕ** (वि०) ಧೂರ್ತ, ವಂಚಕ. मयूरव्यंसकः —व्यंसको धूर्तः— सि० कौ० ।

**व्यंसित ವ್ಯಂಸಿತ** (वि०) ವಂಚಿಸಲ್ಪಟ್ಟ, ಮೋಸಪಡಿಸಲ್ಪಟ್ಟ. "प्रतारितो व्यंसितः स्यात्" त्रिकाण्ड० ।

**व्यंसन ವ್ಯಂಸನ** (न०) ಮೋಸಪಡಿಸುವುದು, ವಂಚಿಸುವುದು. वि+अंस (समाघाते) "ल्युट्" (३-३-११५)।

**व्यक्त ವ್ಯಕ್ತ** (वि०) 1. ಸ್ಫುಟವಾದ, ಸ್ಪಷ್ಟವಾದ. व्यज्यते—वि+अञ्जू (व्यक्त्यादौ) "क्तः" (३-२-१०२)। "व्यक्तद्विरेफनिनदा विहिताभिमुख्या" याद० १९-६८। 2. ಸ್ಪಷ್ಟವಾದ, ದೃಷ್ಟಿಗೆ ಗೋಚರವಾಗುವ, ಕಣ್ಣಿಗೆ ಕಾಣಿಸುವ, ಚೆನ್ನಾಗಿ ತಿಳಿಯಬಹುದಾದ. "व्यक्तनृत्तहृदयं बलद्विषं वीक्ष्य विश्वमखिलं व्यलज्जत" याद० १७-७९। (क्रि० वि०) 3. ಸ್ಫುಟವಾಗಿ, ಸ್ಪಷ್ಟವಾಗಿ, ಚೆನ್ನಾಗಿ ತಿಳಿಯುವಂತೆ, ಕಣ್ಣಿಗೆ ಕಾಣಿಸುವಂತೆ. "व्यक्तोदितस्मितमयूखविभासितोष्ठः" किरा० २-५९। (पुं०) 4. ಪ್ರಾಜ್ಞ, ಪಂಡಿತ, ವಿದ್ವಾಂಸ.

**व्यक्तरूप ವ್ಯಕ್ತರೂಪ** (पुं०) ವಿಷ್ಣು. व्यक्तं रूपं यस्य। "अदृश्यो व्यक्तरूपश्च सहस्रजिदनन्तजित्" वि० स०।

**व्यक्ति ವ್ಯಕ್ತಿ** (स्त्री०) 1. ವಿವೇಚನೆಯಿಂದ ತೋರುವ ಭೇದ, ವಿಮರ್ಶೆಯಿಂದ ಕಂಡುಬರುವ ವ್ಯತ್ಯಾಸ. वि + अञ्जू (व्यक्त्यादौ) "क्तिन्" (३-३-९४)। "तं सन्तः श्रोतुमर्हन्ति सदसद्व्यक्तिहेतवः" रघु० १-१०। 2. ಸ್ಪಷ್ಟವಾಗಿ ತೋರುವಿಕೆ, ದೃಷ್ಟಿಗೆ ಗೋಚರವಾಗುವಿಕೆ. "सन्तानैस्तनुभावनष्टसलिला व्यक्तिं भजन्त्यापगाः" शाकु० ७-८। 3. ಸ್ಪಷ್ಟತೆ, ಸ್ಫುಟವಾಗಿರುವಿಕೆ. 4. ನಿಜಸ್ವರೂಪ, ಯಥಾರ್ಥವಾದ ರೂಪ, ವಾಸ್ತವವಾದ ರೂಪ. "न हि ते भगवन् व्यक्तिं विदुर्देवा न दानवाः" गीता १०-१४। 5. ಪ್ರತ್ಯೇಕವಾದ ಒಬ್ಬ ಮನುಷ್ಯ, ಪ್ರತ್ಯೇಕ ವಸ್ತು, ಚರಾಚರಭೂತಗಳು. "अव्यक्ताद्व्यक्तयः सर्वाः प्रभवन्त्यहरागमे। रात्र्यागमे प्रलीयन्ते तत्रैवाव्यक्तसंज्ञके" गीता ८-१८। 6. ಶಬ್ದಗಳಿಗಿರುವ ಪುಂಲಿಂಗ ಸ್ತ್ರೀಲಿಂಗ ನಪುಂಸಕಲಿಂಗ ಇವುಗಳ ಚಿಹ್ನೆ. "भाति रथाङ्गम्" ಎಂಬಲ್ಲಿ ರಥಾಂಗಪದವು ನಪುಂಸಕಲಿಂಗವಾಗಿರುವುದರಿಂದ ಚಕ್ರವೆಂಬ ಅರ್ಥವನ್ನು ಕೊಡುವುದು.

**व्यग्र ವ್ಯಗ್ರ** (वि०) 1. ವ್ಯಾಕುಲನಾದ, ಉತ್ಸಾಹದಿಂದ ಕಾರ್ಯನಿರತನಾದ. विविधे अग्रं यस्य। "वैवाहिकैः कौतुकसंविधानैर्गृहे गृहे व्यग्रपुरन्ध्रिवर्गम्" कुमा० ७-२। 2. ಆಸಕ್ತನಾದ, ಕಾರ್ಯನಿಷ್ಠನಾದ, ಕಾರ್ಯದಲ್ಲಿ ಶ್ರದ್ಧೆಯುಳ್ಳ. 3. ಸಂಭ್ರಮದಿಂದ ಕೂಡಿದ, ಸಡಗರದಿಂದ ಕೂಡಿದ. "तं व्यग्रचक्रं दितिजाधमेन स्वपार्षदमुख्येन विषज्जमानम्" भाग० ३-१९-६। (पुं०) 4. ವಿಷ್ಣು. "प्रग्रहो निग्रहो व्यग्रो नैकशृङ्गो गदाग्रजः" वि० स०।

**व्यङ्ग ವ್ಯಂಗ** (पुं०) 1. ಹೆಳವ, ಕುಂಟ. विगतमङ्गं यस्य। 2. ಮಂಡೂಕ, ಕಪ್ಪೆ. 3. ಮುಖದಲ್ಲಿ ಏಳುವ ಮಚ್ಚೆ, ಮಂತ್ತು. "क्रोधायासप्रकुपितो वायुः पित्तेन संयुतः। मुखमागत्य सहसा मण्डलं विसृजत्यतः। नीरुजं तनुकं श्यावं मुखे व्यङ्गं तमादिशेत्"। (वि०) 4. ಅಂಗಹೀನನಾದವನು, ಕುರೂಪವುಳ್ಳವನು.

**व्यङ्गित ವ್ಯಂಗಿತ** (वि०) ಅಂಗಹೀನನಾಗಿ ಮಾಡಲ್ಪಟ್ಟ. वि+अगि (गतौ) "क्तः" (३-२-१०२)। "सितकरवपुषासौ लक्ष्यते संप्रति द्यौर्विगलितकिरणेन व्यङ्गितेकेक्षणेव" माघ० ११-६३।

**व्यङ्गुल ವ್ಯಂಗುಲ** (न०) ಒಂದು ಅಂಗುಲದ 16ನೆಯ ಒಂದು ಭಾಗ.

**व्यङ्ग्य ವ್ಯಂಗ್ಯ** (वि०) ವ್ಯಂಜನಾವೃತ್ತಿಯಿಂದ ಬೋಧ್ಯವಾಗುವ (ಅರ್ಥ). वि + अञ्जू (व्यक्त्यादौ) "ण्यत्" (३-१-१२४)। ಅರ್ಥವು (1) वाच्यः (2) लक्ष्यः ಮತ್ತು (3) व्यङ्ग्यः ಎಂದು ಮೂರು ವಿಧ. "अर्थो वाच्यश्च लक्ष्यश्च व्यङ्ग्यश्चेति त्रिधा मतः" सा० द० २-२। ಅಭಿಧಾವೃತ್ತಿಯಿಂದ ತಿಳಿಯುವ ಅರ್ಥವು ವಾಚ್ಯ. ಲಕ್ಷಣಾವೃತ್ತಿಯಿಂದ ಬೋಧ್ಯವಾಗುವ ಅರ್ಥವು ಲಕ್ಷ್ಯ. ವ್ಯಂಜನಾವೃತ್ತಿಯಿಂದ ಬೋಧ್ಯವಾಗುವ ಅರ್ಥವು ವ್ಯಂಗ್ಯ. "वाच्योऽर्थोऽभिधया बोध्यो लक्ष्यो लक्षणया मतः। व्यङ्ग्यो व्यञ्जनया ताः स्युः तिस्रः शब्दस्य शक्तयः" सा० द० २-३।

**व्यज ವ್ಯಜ** (पुं०) ವ್ಯಜನ, ಬೀಸಣಿಗೆ. व्यजत्यनेन— वि + अज (गतिक्षेपणयोः) "घः" (३-३-११९)। निपा०।

**व्यजन ವ್ಯಜನ** (न०) ತಾಲವೃಂತ, ಬೀಸಣಿಗೆ. व्यजत्यनेन —वि + अज (गतिक्षेपणयोः) करं० "ल्युट्" (३-३-११७)। "व्यजनं तालवृन्तकम्" अम०। "पर्युपास्यन्त लक्ष्म्या च पद्मव्यजनहस्तया" रघु० १०-६२।

**व्यञ्जक ವ್ಯಂಜಕ** (वि०) 1. ವ್ಯಂಜನಾವೃತ್ತಿಯಿಂದ ತಿಳಿಯಪಡಿಸುವ. वि + अञ्जू (व्यक्त्यादौ) "ण्वुल्" (३-१-१३३)। ಶಬ್ದವು ಅಭಿಧಾ ಲಕ್ಷಣಾ ಮತ್ತು

ವ್ಯಂಜನಾರೂಪ ಮೂರುವಿಧವ್ಯಾಪಾರಗಳಿಂದ ಮೂರು ವಿಧವಾಗುವುದು. ವ್ಯಂಜನಾರೂಪವಾದ ಉಪಾಧಿ (ವ್ಯಾಪಾರ)ಯಿಂದ ಅರ್ಥವನ್ನು ಬೋಧಿಸುವ ಶಬ್ದವು ವ್ಯಂಜಕ. "अभिधादित्रयोपाधिवैशिष्ट्यात्त्रिविधो मतः। शब्दोऽपि वाचकस्तद्वल्लक्षको व्यञ्जकस्तथा" सा० द० २-१९। 2. ತಿಳಿಯಪಡಿಸುವ, ಪ್ರಕಾಶಪಡಿಸುವ. "उत्पत्तिव्यञ्जकः पुण्यः कर्मयोगं निबोधत" मनु० २-६८।

**व्यञ्जन ವ್ಯಂಜನ** (न०) 1. ಅನ್ನ ಮೊದಲಾದ ಆಹಾರವು ರುಚಿಸಲು ಬೇಕಾದ ಮಜ್ಜಿಗೆಪಳಿದ್ಯ ಪಲ್ಯ ಗೊಜ್ಜು ಮೊದಲಾದುವು. व्यज्यते अनेन—वि+अञ्जू (व्यक्त्यादौ) "ल्युट्" (३-३-११७)। "अशक्नुवद्भिर्बहुभुक्तवत्तया यदुज्झिता व्यञ्जनपुञ्जराशयः" नैष० १६-१०५। 2. ಶ್ಮಶ್ರು, ಮೀಸೆ, ಗಡ್ಡ. "बालमप्राप्तवयसमजात-व्यञ्जनादिकम्" भा० आदि० १७१-५३। 3. ಚಿಹ್ನ, ಲಿಂಗ, ಗುರುತು. 4. ವೇಷ, ಉಡುಪು, ಉಡಿಗೆ. "अमात्य-व्यञ्जना राज्ञां दूष्यास्ते शत्रुसंज्ञिताः" माघ० २-५६। 5. ಅಂಗ, ಅವಯವ. 6. ದಿವಸ, ಹಗಲು. 7. ಸ್ತ್ರೀ ಪುರುಷರ ಗುಹ್ಯಪ್ರದೇಶ. 8. ವ್ಯಂಜನ ವರ್ಣ, ವರ್ಣ ಮಾಲೆಯಲ್ಲಿ "क" ಕಾರದಿಂದ "ह" ಕಾರದ ವರೆಗಿನ ವರ್ಣಗಳು, ಅರ್ಧಮಾತ್ರೆಯುಳ್ಳ "हल्" ವರ್ಣಗಳು. "एकमात्रो भवेद्ध्रस्वः द्विमात्रो दीर्घ उच्यते। त्रिमात्रस्तु प्लुतो ज्ञेयः व्यञ्जनं त्वर्धमात्रकम्"। "व्यञ्जनं तेमने चिह्ने श्मश्रुण्यवयवेऽहनि" मेदि०।

**व्यञ्जना ವ್ಯಂಜನಾ** (स्त्री०) ಶಬ್ದದ ಮೂರು ವಿಧ ಉಪಾಧಿ (ವ್ಯಾಪಾರ)ಗಳಲ್ಲೊಂದು ವಿಧ, ವ್ಯಂಜನಾ ವೃತ್ತಿ. ಅಭಿಧಾ ಮತ್ತು ಲಕ್ಷಣಾವೃತ್ತಿಗಳಿಂದ ಬೋಧ್ಯ ವಾಗುವ ಅರ್ಥಕ್ಕಿಂತಲೂ ಅತಿಶಯವಾದ ಅರ್ಥವನ್ನು ಬೋಧಿಸುವ ವೃತ್ತಿಯು ವ್ಯಂಜನಾವೃತ್ತಿ. ಮುಖ್ಯಾರ್ಥ ಮತ್ತು ಲಕ್ಷ್ಯಾರ್ಥಗಳಿಗಿಂತ ಭಿನ್ನವಾದ ಅರ್ಥವನ್ನು ಕೊಡುವ ಒಂದು ವೃತ್ತಿ. "विरतास्वभिधाद्यासु ययार्थो बोध्यते परः। सा वृत्तिर्व्यञ्जना नाम शब्दस्यार्थादिकस्य च" सा० द० २-१२। ವ್ಯಂಗ್ಯಾರ್ಥವನ್ನು ಬೋಧಿಸುವ ಈ ವ್ಯಂಜನಾವೃತ್ತಿಯು ಶಾಬ್ದೀ (शब्दनिष्ठा) ಆರ್ಥೀ (अर्थनिष्ठा) ಎಂದು ಎರಡು ವಿಧ. ಶಾಬ್ದಿಯು ಅಭಿಧಾ-ಮೂಲಾ ಮತ್ತು ಲಕ್ಷಣಾಮೂಲಾ ಎಂದು ಎರಡು ವಿಧ. ಅನೇಕಾರ್ಥವುಳ್ಳ ಶಬ್ದದ ಒಂದು ಅರ್ಥವು ಸಂಯೋಗ ವಿಪ್ರಯೋಗ ಸಾಹಚರ್ಯಾದಿಗಳಿಂದ ನಿಯಂತ್ರಿತ ವಾಗಲು ಅತಿರಿಕ್ತವಾದ ಬೇರೊಂದು ಅರ್ಥವನ್ನು ಕೊಡುವ ವ್ಯಂಜನಾವೃತ್ತಿಯು ಅಭಿಧಾಮೂಲಾ। "अनेकार्थस्य शब्दस्य संयोगाद्यैर्नियन्त्रिते। एकत्रार्थेऽन्यधीहेतुः व्यञ्जना साऽभिधाश्रया" सा० द० २-१४। ಈ ವ್ಯಂಜನಾವೃತ್ತಿಯಿಂದ ಬೋಧ್ಯವಾಗುವ ವ್ಯಂಗ್ಯಾರ್ಥವು ನಿಯತವಾದುದಲ್ಲ. ಒಂದೇ ಶಬ್ದವು ಪ್ರಕರಣಾದಿಗಳಿಂದ ಬೇರೆ ಬೇರೆ ಅರ್ಥಗಳನ್ನು ಕೊಡುವುದು. "गतोऽस्तमर्कः" ಇಲ್ಲಿ ಸೂರ್ಯಾಸ್ತವಾಯಿತೆಂದು ವಾಚ್ಯಾರ್ಥವು ಬೋಧ್ಯ ವಾಗುವುದು. ಆದರೆ ವಕ್ತೃ ಪ್ರಕರಣ ಭೇದದಿಂದ ಬೇರೆ ಬೇರೆ ಅರ್ಥಗಳು ವ್ಯಂಜನಾವೃತ್ತಿಯಿಂದ ಬೋಧ್ಯವಾಗು ವುದರಿಂದ ಈ ಅರ್ಥಗಳು ಶಬ್ದಕ್ಕೆ ಅನಿಯತವಾದುವು. ಇದನ್ನು ರಾಜನು ಹೇಳುವುದಾದರೆ ಸೂರ್ಯಾಸ್ತ ವಾಯಿತು, ಶತ್ರುಗಳನ್ನು ಎಳೆದುಕೊಂಡು ಬನ್ನಿರಿ ಎಂದೂ ದೂತಿಯರು ಅಭಿಸರಣಕಾರ್ಯ ನಡೆಯಲಿ ಎಂದೂ ಕೂಲಿಕಾರರು ಮನೆಗೆ ಹೊರಡುವ ವೇಳೆಯಾಯಿತೆಂದೂ ಗೋವುಗಳು ಮನೆಗೆ ಬಂದು ಸೇರಲಿ ಎಂದೂ ಹೇಳುವುದ ರಿಂದ ಒಂದೇ ವಾಕ್ಯಕ್ಕೆ ವಕ್ತೃಪ್ರಕರಣಭೇದದಿಂದ ಬೇರೆ ಬೇರೆ ಅರ್ಥಗಳು ಅಭಿಧಾಮೂಲ ವ್ಯಂಜನಾವೃತ್ತಿ ಯಿಂದ ಬೋಧ್ಯವಾಗುವುವು. ಒಂದು ವಾಕ್ಯದಲ್ಲಿ ಶಬ್ದಕ್ಕಿರುವ ಮುಖ್ಯಾರ್ಥ (ವಾಚ್ಯಾರ್ಥ)ವು ಬಾಧಿತ ವಾಗಿ ಆ ಮುಖ್ಯಾರ್ಥದ ಶಕ್ಯ ಸಂಬಂಧದಿಂದ ಬೇರೊಂದು ಅರ್ಥವು ಲಕ್ಷಣೆಯಿಂದ ಬೋಧ್ಯವಾಗಿ ಈ ಎರಡು ಅರ್ಥಕ್ಕಿಂತಲೂ ಅತಿಶಯವಾದ ಲಕ್ಷಣಾಪ್ರಯೋಜನ ರೂಪವಾದ ಮತ್ತೊಂದು ಅರ್ಥವು ಪ್ರತೀತವಾಗುವಲ್ಲಿ ಲಕ್ಷಣಾಮೂಲಾ ವ್ಯಂಜನಾ। "लक्षणोपास्यते यस्य कृते तत्तु प्रयोजनम्। यया प्रत्याय्यते सा स्यात् व्यञ्जना लक्षणाश्रया" सा० द० २-१५। "गङ्गायां घोषः" ಎಂಬಲ್ಲಿ ಜಲಮಯ ರೂಪವಾದ ವಾಚ್ಯಾರ್ಥವೂ ತೀರ ರೂಪವಾದ ಲಕ್ಷಣಾರ್ಥವೂ ಬೋಧ್ಯವಾಗಿ ಈ ಲಕ್ಷಣೆಯ ಪ್ರಯೋಜನರೂಪವಾದ ಮತ್ತೊಂದು ಅರ್ಥಕ್ಕೆ ಪ್ರಯೋಜನವಾದ ಶೈತ್ಯಪಾವನತ್ವರೂಪವಾದ ಮತ್ತೊಂದು ಅರ್ಥವು ಲಕ್ಷಣಾಮೂಲ ವ್ಯಂಜನಾವೃತ್ತಿ ಯಿಂದ ಬೋಧ್ಯವಾಗುವುದು. ಆರ್ಥೀವ್ಯಂಜನೆಗೆ ಸಾಹಿತ್ಯ ದರ್ಪಣ ನೋಡಿ.

**व्यञ्जित ವ್ಯಂಜಿತ** (वि०) ವ್ಯಕ್ತವಾಗಿ ತಿಳಿಸಲ್ಪಟ್ಟ, ಸ್ಪಷ್ಟವಾಗಿ ತಿಳಿಸಲ್ಪಟ್ಟ. वि + अञ्जू (व्यक्त्यादौ)+ णिच् "क्तः" (३-२-१०२)। "तौ सन्निधेषु व्यञ्जित-वृत्तिभेदं रसान्तरेषु प्रतिबद्धरागम्" कुमा० ७-९१।

**व्यड ವ್ಯಡ** (न०) ಮಲ, ಪುರೀಷ.

**व्यडम्बक ವ್ಯಡಂಬಕ** (ಪುಂ०) ಏರಂಡವೃಕ್ಷ, ಹರಳು ಗಿಡ. व्यडं मलम् अम्बयति—अबि (स्रंसने)+णिच् "ण्वुल्" (३-१-१३३)। "चञ्चुः पञ्चाङ्गुलो मण्डवर्धमान-व्यडम्बकाः" अम०।

**व्यतिकर ವ್ಯತಿಕರ** (ಪುಂ०) 1. ಸಂಬಂಧ, ಸಂಪರ್ಕ. वि + अति + कॄ (विक्षेपे) "अप्" (३-३-५७)। "सितमणिविहितान् स यन्त्रधाराव्यतिकरशीतलिता-नभुङ्क्तसौधान्" याद० २४-३५। 2. ವ್ಯಸನ. 3. ಬದಲಾವಣೆ. 4. ಮಿಶ್ರಣ, ಬೆರಕೆ. "व्यतिकर इव भीमस्तामसो वैद्युतश्च" मालती० ९-५२।

**व्यतिकरित ವ್ಯತಿಕರಿತ** (ವಿ०) ಸಂಪೂರ್ಣ ಸಂಬಂಧ ಹೊಂದಿರುವ, ಎಲ್ಲಾ ಕಡೆಯಲ್ಲೂ ವ್ಯಾಪಿಸಿರುವ. व्यतिकरोऽस्य सञ्जातः "इतच्" (५-२-३६)। "व्यतिकरितदिगन्ताः श्वेतमानैर्यशोभिः सुकृतविलसितानां स्थानमूर्जस्वलानाम्" मालती० २-९।

**व्यतिक्रम ವ್ಯತಿಕ್ರಮ** (ಪುಂ०) 1. ಕ್ರಮವು ವ್ಯತ್ಯಾಸವಾಗಿರುವಿಕೆ. वि+अति+क्रमु (पादविक्षेपे) "घञ्" (३-३-१८)। "सर्वत्र प्राङ्मुखो दाता ग्रहीता च उदङ्मुखः। एष एव विधिदनि विवाहे च व्यतिक्रमः"। 2. ಅತಿಕ್ರಮಣ, ಉಲ್ಲಂಘನೆ, ನಿಯಮವನ್ನು ಮೀರಿ ನಡೆಯುವುದು. "प्रतिबध्नाति हि श्रेयः पूज्यपूजाव्यतिक्रमः" रघु० १-७९। 3. ದಾರಿ ತಪ್ಪಿ ನಡೆಯುವುದು, ಅಡ್ಡ ಮಾರ್ಗದಲ್ಲಿ ನಡೆಯುವುದು, ಆಜ್ಞೆ ಮೀರಿ ನಡೆಯುವುದು.

**व्यतिरिक्त ವ್ಯತಿರಿಕ್ತ** (ವಿ०) 1. ಭಿನ್ನವಾದ, ಬೇರೆಯಾದ. वि+अति+रिचिर् (विरेचने) "क्तः" (३-२-१०२)। "कामस्य पुष्पव्यतिरिक्तमस्त्रं बाल्यात्परं साथ वयः प्रपेदे" कुमा० १-३१। 2. ಅಧಿಕವಾದ, ಹೆಚ್ಚಾದ. विशेषेण अतिरिक्तः अधिकः।

**व्यतिरेक ವ್ಯತಿರೇಕ** (ಪುಂ०) 1. ಅಭಾವ. वि+अति+रिचिर् (विरेचने) "घञ्" (३-३-१८)। ಸಾಧ್ಯಾಭಾವ ಮತ್ತು ಹೇತ್ವಭಾವಗಳ ವ್ಯಾಪ್ತಿ (ಸಾಹಚರ್ಯ). "यत्र वह्न्यभावः तत्र धूमाभावः" ಇಲ್ಲಿ ಸಾಧ್ಯಾಭಾವವು ವಹ್ನ್ಯಭಾವ. ಧೂಮಾಭಾವವು ಹೇತ್ವಭಾವ. ಇವೆರಡರ ವ್ಯಾಪ್ತಿಯು ಹೃದದಲ್ಲಿರುವುದರಿಂದ ವ್ಯತಿರೇಕ (ಅಭಾವ) ವ್ಯಾಪ್ತಿಯೆನಿಸುವುದು. 2. ಕಾರಣವಿಲ್ಲದಿರುವಲ್ಲಿ ಕಾರ್ಯವಿಲ್ಲದಿರುವಿಕೆ, ಕಾರಣಾಭಾವಾಧಿಕರಣದಲ್ಲಿ ಕಾರ್ಯವಿಲ್ಲದಿರುವುದು. चक्रचीवरादिसहितस्य दण्डस्याभावे घटस्यासत्वम्। यदभावे यदभावः। 3. ವಿನಾ, ಹೊರತು, ಬಿಟ್ಟು. "न पतिव्यतिरेकेण सुस्त्रीणामपरा गतिः"। 4. ವಸ್ತುಗಳಲ್ಲಿರುವ ಸಜಾತೀಯ ಆಧಿಕ್ಯ. "वैश्येभ्यः क्षत्रियाः शूराः"। ವೈಶ್ಯರ ಶೌರ್ಯಕ್ಕಿಂತಲೂ ಕ್ಷತ್ರಿಯರ ಶೌರ್ಯವು ಅಧಿಕವಾದುದು ಎಂದು ಸಜಾತೀಯವಾದ ಶೌರ್ಯದ ಆಧಿಕ್ಯವು ಉಕ್ತವಾಗಿದೆ. 5. ಅರ್ಥಾಲಂಕಾರದ ಒಂದು ಭೇದ. ಉಪಮಾನ ಮತ್ತು ಉಪಮೇಯಗಳಲ್ಲಿ ವೈಲಕ್ಷಣ್ಯವರ್ಣನೆಯು "ವ್ಯತಿರೇಕ" ಅಲಂಕಾರ. "व्यतिरेको विशेषश्चेदुपमानोपमेययोः"। ಉದಾ: "पल्लवतः कल्पतरोरेष विशेषः करस्य ते वीर। भूषयति कर्णमेकः परस्तु कर्णं तिरस्कुरुते"। ಇಲ್ಲಿ ದಾನಾತಿಶಯದಿಂದ ಕರದಲ್ಲಿ ಪಲ್ಲವಕ್ಕಿಂತಲೂ ವೈಲಕ್ಷಣ್ಯವು ವರ್ಣಿತವಾಗಿದೆ. 6. ವ್ಯತ್ಯಾಸ, ತಾರತಮ್ಯ.

**व्यतिरेकव्याप्ति ವ್ಯತಿರೇಕವ್ಯಾಪ್ತಿ** (ಸ್ತ್ರೀ०) "व्यतिरेक" ಪದದಲ್ಲಿ ನೋಡಿ.

**व्यतिरेकि ವ್ಯತಿರೇಕಿ** (ನ०) ವ್ಯತಿರೇಕ ವ್ಯಾಪ್ತಿಯಿರುವ ಹೇತು.

**व्यतिषक्त ವ್ಯತಿಷಕ್ತ** (ವಿ०) 1. ಪರಸ್ಪರ ಸಂಬಂಧ ಹೊಂದಿರುವ, -ಸೇರಿಕೊಂಡಿರುವ. 2. ಬೆರಕೆಯಾಗಿರುವ, ಮಿಶ್ರವಾಗಿರುವ. वि + अति + षञ्ज (सङ्गे) "क्तः" (३-४-७२)।

**व्यतिषङ्ग ವ್ಯತಿಷಂಗ** (ಪುಂ०) 1. ಪರಸ್ಪರ ಸಂಬಂಧ. वि + अति + षञ्ज (सङ्गे) "घञ्" (३-३-१८)। "सेनयोर्व्यतिषङ्गेण जयः साधारणोऽभवत्" भा० शान्ति० १०३-५। 2. ವಿನಿಮಯ, ಬದಲಾವಣೆ. "अन्योन्यविसव्यतिषङ्गवृद्धवैरानुबन्धो विहरन् मिथश्च" भाग० ५-१३-१३। 3. ಒಟ್ಟಿಗೆ ಸೇರುವುದು, ಪರಸ್ಪರ ಸಮಾಗಮ.

**व्यतिहार ವ್ಯತಿಹಾರ** (ಪುಂ०) ವಿನಿಮಯ, ಬದಲಾವಣೆ, ಅದಲುಬದಲು. वि + अति + हृञ् (हरणे) "घञ्" (३-३-१८)। "परिदानं विनिमयो नैमेयः परिवर्तनम्। व्यतिहारः परावर्तो वैमेयो विमयोऽपि च" हेम०। "विक्रमव्यतिहारेण सामान्याभूत् द्वयोरपि। जयश्रीरन्तरा वेदिर्मत्तवारणयोरिव" रघु० १२-९३। "कर्मव्यतिहारे सर्वनाम्नो द्वे वाच्ये" वा० ८-१-१२।

**व्यतीत ವ್ಯತೀತ** (ವಿ०) 1. ಕಳೆದಿರುವ, ಅತಿಕ್ರಾಂತವಾದ, ಕಳೆದುಹೋಗಿರುವ. वि + अति + इण् (गतौ) "क्तः" (३-४-७२)। "व्यतीतकालस्त्वहमभ्युपेतस्त्वामर्थि-

भावादिति मे विषाद:" रघु० ५-१४। 2. ಬಿಟ್ಟು ಹೋಗಿರುವ, ಬಿಟ್ಟು ತೆರಳಿರುವ.

**व्यतीपात ವ್ಯತೀಪಾತ** (ಪುಂ) ವಿಷ್ಕಂಭ ಮೊದಲಾದ ಇಪ್ಪತ್ತೇಳು ಯೋಗಗಳಲ್ಲಿ ಹದಿನೇಳನೆಯ ಒಂದು ಯೋಗ.

**व्यतीहार ವ್ಯತೀಹಾರ** (ಪುಂ) ಪರಸ್ಪರ ಏಕಜಾತೀಯ ಕಾರ್ಯಗಳ ವಿನಿಮಯ, ಸಮಾನ ಕಾರ್ಯಗಳ ಅನ್ಯೋನ್ಯ ಬದಲಾವಣೆ. वि + अति + हृञ् (हरणे) "घञ्" (३-३-१८)। दीर्घ: (६-३-१२२)। केशाकेशि, दण्डादण्डि।

**व्यत्यय ವ್ಯತ್ಯಯ** (ಪುಂ) 1. ಪರಿವರ್ತನೆ, ಬದಲಾವಣೆ, ವ್ಯತ್ಯಾಸ. वि+अति+इण् (गतौ) "अच्" (३-३-५६)। "परावरेषां स्थानानां कालेन व्यत्ययो महान्" भाग० ७-१०-४४। 2. ವಿರೋಧ, ವ್ಯತ್ಯಾಸ. ಭ್ರಾಂತಿಯಿಂದ ತಪ್ಪಾದ ವರ್ತನೆ. "परावरतत्त्वव्यत्ययेन विनिवृत्त-सतत्वे" याद० २१-१३।

**व्यत्यस्त ವ್ಯತ್ಯಸ್ತ** (ವಿ೦) ವ್ಯತ್ಯಾಸ ಹೊಂದಿದ, ಪರಿವರ್ತನೆ ಹೊಂದಿದ, ಬದಲಾವಣೆ ಹೊಂದಿದ. वि + अति + असु (क्षेपणे) "क्त:" (३-४-७२)।

**व्यत्यास ವ್ಯತ್ಯಾಸ** (ಪುಂ) ವಿಪರ್ಯಯ, ಪರಿವರ್ತನೆ, ಬದಲಾವಣೆ. वि + अति + असु (क्षेपणे) "घञ्" (३-३-१८)। "मात्रासि वञ्चिता भद्रे चरुव्यत्यास-हेतुना" हरिवं०।

**व्यथक ವ್ಯಥಕ** (ವಿ೦) 1. ವ್ಯಥೆಯನ್ನುಂಟುಮಾಡುವ, ನೋಯಿಸುವ. व्यथयति — व्यथ (भयसंचलनयो:) + णिच् "ण्वुल्" (३-१-१३३)। 2. ಭಯಂಕರವಾದ, ಭೀತಿಯನ್ನುಂಟುಮಾಡುವ. "परिणामसुखे गरीयसि व्यथकेऽस्मिन् वचसि क्षतौजसाम्" किरा० २-४।

**व्यथन ವ್ಯಥನ** (ನ೦) 1. ನೋಯಿಸುವುದು, ದುಃಖವನ್ನು ಉಂಟುಮಾಡುವುದು. 2. ಭಯವನ್ನುಂಟುಮಾಡುವುದು. व्यथ (भयसंचलनयो:) "ल्युट्" (३-३-११५)।

**व्यथा ವ್ಯಥಾ** (ಸ್ತ್ರೀ೦) 1. ನೋವು, ದುಃಖ. व्यथ (भयसंचलनयो:) "अङ्" (३-३-१०४)। "स्नेहं दयां च सौख्यं च यदि वा जानकीमपि। आराधनाय लोकानां मुञ्चतो नास्ति मे व्यथा" उ० रा० १-१२। 2. ಭಯ. "अन्वयुङ्क्त गुरुमीश्वर: क्षिते: स्वन्तमित्य-लघयत् स तद्व्यथाम्" रघु० ११-६२।

**व्यथित ವ್ಯಥಿತ** (ವಿ೦) 1. ಪೀಡಿಸಲ್ಪಟ್ಟ, ನೋಯಿಸಲ್ಪಟ್ಟ. व्यथ (भयसंचलनयो:) + णिच् "क्त:" (३-२-१०२)। "कन्दर्पबाणनिकरैर्व्यथितं हि चेत:" ऋतुसं०। 2. ಭಯಪಡಿಸಲ್ಪಟ್ಟ. 3. ದುಃಖವುಂಟಾದ, ನೋವುಂಟಾದ. व्यथाऽस्य सञ्जाता "इतच्" (५-२-३६)। "अदत्तेत्यागता लज्जा दत्तेति व्यथितं मन:"। "व्यथितमपि भृशं मनो हरन्ती परिणतजम्बुफलोपभोग-हृष्टा" किरा० १०-२२। 4. ಭಯವುಂಟಾದ, ಭಯಗೊಂಡ.

**व्यध ವ್ಯಧ** (ಪುಂ) 1. ಹೊಡೆಯುವುದು, ಇರಿಯುವುದು, ತಿವಿಯುವುದು, ಭೇದಿಸುವುದು. व्यध (ताडने) "अप्" (३-३-६१)। "विदधति जनतामन:शरव्यव्यधपटु-मन्मथचापनादशङ्काम्" माघ० ७-२४। 2. ರಂಧ್ರ ಕೊರೆಯುವುದು, ತೂತು ಮಾಡುವುದು. 3. ಗಾಯ ಮಾಡುವುದು.

**व्यधिकरण ವ್ಯಧಿಕರಣ** (ನ೦) ಬೇರೆ ಬೇರೆ ಅಧಿಕರಣ, ವಿಭಿನ್ನವಾದ ಆಶ್ರಯ, —ಸ್ಥಾನ. विभिन्नमधिकरणम् आश्रय: स्थानं वा।

**व्यधिकरणत्व ವ್ಯಧಿಕರಣತ್ವ** (ನ೦) ಬೇರೆ ಬೇರೆ ಅಧಿಕರಣಗಳಲ್ಲಿರುವುದು, ಬೇರೆ ಬೇರೆ ಆಶ್ರಯ (ಸ್ಥಾನ) ಗಳಲ್ಲಿರುವುದು. व्यधिकरणस्य भाव: "त्व:" (५-१-११९)।

**व्यध्य ವ್ಯಧ್ಯ** (ಪುಂ) ಬಿಲ್ಲಿನ ಹೆದೆ, ಬಿಲ್ಲಿಗೆ ಕಟ್ಟುವ ಚರ್ಮದ ಹಗ್ಗ. व्यधाय हित: "यत्" (५-१-५)। "व्यध्यस्तु प्रतिकाय: स्याज्जीवास्या भारवं गुण:" त्रिकाण्ड०।

**व्यध्व ವ್ಯಧ್ವ** (ಪುಂ) ಕೆಟ್ಟ ಮಾರ್ಗ, ಸರಿಯಲ್ಲದ (ತಪ್ಪು) ಮಾರ್ಗ, ಸುಗಮವಲ್ಲದ ಹಾದಿ. विरुद्ध: अध्वा "अच्" (५-४-८५)।

**व्यन्तर ವ್ಯಂತರ** (ಪುಂ) ಸಕಲ ವಿಷಯಗಳಲ್ಲೂ ಶಕ್ತಿಹೊಂದಿರುವ ಒಂದು ದೇವತೆ. "अथ तत्र वृक्षे कश्चिद्व्यन्तर: समाश्रित आसीत्। तेनाभिहितम् "भो: मदाश्रितोऽयं वृक्ष: सर्वथा रक्षणीय: इति" पञ्चतं० ५।

**व्यपकर्षण ವ್ಯಪಕರ್ಷಣ** (ನ೦) 1. ದುರ್ಮಾರ್ಗಕ್ಕೆ ಎಳೆಯುವುದು, ತಪ್ಪುದಾರಿಗೆ ಒಯ್ಯುವುದು. वि+अप+कृष (विलेखने) "ल्युट्" (३-३-११५)। 2. ಎಳೆದು ಕಳುಹಿಸುವುದು. 3. ತಳ್ಳಿಹಾಕುವುದು.

**व्यपकृष्ट ವ್ಯಪಕೃಷ್ಟ** (ವಿ೦) 1. ತಳ್ಳಿಹಾಕಲ್ಪಟ್ಟ. 2. ಎಳೆದು ಕಳುಹಿಸಲ್ಪಟ್ಟ. वि + अप + कृष "क्त:" (३-२-१०२)।

**व्यपगत ವ್ಯಪಗತ** (ವಿ೦) 1. ಹೊರಟುಹೋದ, ಅದೃಶ್ಯನಾದ. वि+अप+गम्लृ (गतौ) "क्त:" (३-४-७२)।

"नाध्यास्यन्ति व्यपगतशुचः त्वामपि प्रेक्ष्य हंसाः" मेघ० २-१३। 2. ಕಳೆದುಹೋದ, ನಾಶವಾದ. "व्यपगत-मदयाऽह्लि व्रीडितं मुग्धवध्वा" माघ० ११-३९। 3. ತೆರಳಿದ, ಹೊರಟುಹೋದ.

**व्यपगम ವ್ಯಪಗಮ** (पुं०) 1. ಹೊರಟುಹೋಗುವುದು. 2. ತೆರಳುವುದು. 3. ನಾಶವಾಗುವುದು, ಅದೃಶ್ಯವಾಗುವುದು, ಕಳೆದುಹೋಗುವುದು. वि+अप+गम्लृ (गतौ) "अप्" (३-३-५८)।

**व्यपत्रप ವ್ಯಪತ್ರಪ** (वि०) ಲಜ್ಜೆಯಿಲ್ಲದವನು, ಧೂರ್ತ, ಮಾನಹೀನ. व्यपगता त्रपा यस्य।

**व्यपदिशत् ವ್ಯಪದಿಶತ್** (वि०) 1. ವ್ಯವಹರಿಸುತ್ತಿರುವ, ಹೆಸರು ಹೇಳುತ್ತಿರುವ. 2. ಗುರುತಿಸುತ್ತಿರುವ.

**व्यपदिष्ट ವ್ಯಪದಿಷ್ಟ** (वि०) 1. ಹೆಸರಿಸಲ್ಪಟ್ಟ, ವ್ಯವಹರಿಸಲ್ಪಟ್ಟ. वि + अप + दिश (अतिसर्जने) "क्तः" (३-२-१०२)। 2. ಗುರುತಿಸಲ್ಪಟ್ಟ, ತೋರಿಸಿ ಹೇಳಲ್ಪಟ್ಟ.

**व्यपदेश ವ್ಯಪದೇಶ** (पुं०) 1. ವಂಶ, ಕುಲ. वि+अप+दिश (अतिसर्जने) "घञ्" (३-३-१२१)। "व्यपदेश-माविलयितुं किमीहसे जनमिमं च पातयितुम्" शाकु० ५-२१। 2. ವ್ಯಾಜ, ಕಪಟ, ನಟನೆ. "यथैष मञ्जीर-शब्दस्तया जानामि तेन व्यपदेशेनानीता बुद्धरक्षितया मदयन्तिकेति" मालती० ७। 3. ಅಭಿಧಾನ, ಹೆಸರು, ಸಂಜ್ಞೆ. "चत्वारः किल भवन्त्येवं व्यपदेशभागिनस्तत्र-भवन्तो रामायणकथापुरुषाः" उ० रा० ६। 4. ಕೀರ್ತಿ, ಪ್ರಸಿದ್ಧಿ. 5. ವ್ಯಾಜ, ನೆಪ. 6. ಮುಖ್ಯ.

**व्यपरोपण ವ್ಯಪರೋಪಣ** (न०) ಕತ್ತರಿಸಿ ಕೆಳಗೆ ಹಾಕುವುದು. वि+अप+रुह (बीजजन्मादौ)+णिच् "ल्युट्" (३-३-११५)। "चुकोप तस्मै स भृशं सुरस्त्रियः प्रसह्य केशव्यपरोपणादिव" रघु० ३-५६।

**व्यपवर्ग ವ್ಯಪವರ್ಗ** (पुं०) ಪರಿಸಮಾಪ್ತಿ.

**व्यपवर्तन ವ್ಯಪವರ್ತನ** (न०) ಹಿಂತಿರುಗುವುದು, ಹಿಂದಕ್ಕೆ ಬರುವುದು.

**व्यपाकरण ವ್ಯಪಾಕರಣ** (न०) ಅಟ್ಟುವುದು, ದೂರಕ್ಕೆ ಓಡಿಸುವುದು. वि+अप+आङ्+डु कृञ् (करणे) "ल्युट्" (३-३-११५)।

**व्यपाकृति ವ್ಯಪಾಕೃತಿ** (स्त्री०) ಅಟ್ಟುವುದು, ದೂರಕ್ಕೆ ಓಡಿಸುವುದು. वि+अप+आङ्+डु कृञ् (करणे) "क्तिन्" (३-३-९४)।

**व्यपाय ವ್ಯಪಾಯ** (पुं०) ಅಂತ್ಯ, ಕೊನೆ, ಹೊರಟು ಹೋಗುವ ಕಾಲ. "हिमव्यपायाद्विशदाधराणामापाण्डरी-भूतमुखच्छवीनाम्" कुमा० ३-३३।

**व्यपाश्रय ವ್ಯಪಾಶ್ರಯ** (पुं०) 1. ಪರ್ಯಾಯ, ಅನುಕ್ರಮ, ಒಂದಾದ ಮೇಲೆ ಒಂದರಂತೆ ಅನೇಕ ಆಶ್ರಯಗಳನ್ನು ಪಡೆಯುವುದು. 2. ಆಶ್ರಯಿಸುವುದು, ಪ್ರಯೋಜನವನ್ನು ಉದ್ದೇಶಿಸಿ ಒಂದು ವಿಷಯವನ್ನು ಅಂಗೀಕರಿಸುವುದು, ಅರ್ಥಸಾಧನೆಗಾಗಿ ಒಂದರ ಆಶ್ರಯ ಪಡೆಯುವುದು. "नैव तस्य कृतेनार्थो नाकृतेनेह कश्चन। न चास्य सर्वभूतेषु कश्चिदर्थव्यपाश्रयः" गीता ३-१८। 3. ಆಶ್ರಯ, ಆಸರೆ, ಅವಲಂಬನ. "धर्मो रामव्यपाश्रयः" रामा०।

**व्यपेक्ष ವ್ಯಪೇಕ್ಷ** (वि०) 1. ಅಪೇಕ್ಷೆಯುಳ್ಳವನು, ಆಸೆ ಪಡುವವನು. 2. ಗಮನಿಸುವವನು, ಆಸಕ್ತಿಯಿಂದ ನೋಡುವವನು.

**व्यपेक्षा ವ್ಯಪೇಕ್ಷಾ** (स्त्री०) 1. ಆಸೆ, ಅಪೇಕ್ಷೆ, ಇಚ್ಛೆ. 2. ಆಶಯ, ಅಭಿಪ್ರಾಯ. "अथ काश्चिदजव्यपेक्षया गमयित्वा समदर्शनः समाः" रघु० ८-२४। 3. (ವ್ಯಾಕರಣ ಶಾಸ್ತ್ರದಲ್ಲಿ) ಪದಗಳಿಗೆ ಸಮಾಸಕಾರ್ಯ ವಿಧಿಸುವಾಗ ಇರಬೇಕಾದ ಸಾಮರ್ಥ್ಯ. ಈ ಸಾಮರ್ಥ್ಯವು (1) व्यपेक्षा ಮತ್ತು (2) एकार्थीभावलक्षणम् ಎಂದು ಎರಡು ವಿಧ. ಸ್ವಾರ್ಥವನ್ನು ಹೇಳಿ ಪರ್ಯವಸಾನ ಹೊಂದಿದ ಪದಗಳಿಗೆ ಆಕಾಂಕ್ಷಾದಿಗಳಿಂದ ಪರಸ್ಪರ ಅನ್ವಯವಿರುವಲ್ಲಿ व्यपेक्षा ರೂಪವಾದ ಸಾಮರ್ಥ್ಯ. "स्वार्थपर्यवसायिनां पदाना-माकाङ्क्षादिवशात् यः परस्परमन्वयः तत् व्यपेक्षाभिधं सामर्थ्यम्"।

**व्यपेत ವ್ಯಪೇತ** (वि०) 1. ರಹಿತವಾದ, ಶೂನ್ಯವಾದ. वि + अप + इण् (गतौ) "क्तः" (३-२-१०२)। "स्मृत्याचारव्यपेतेन मार्गेणाधर्षितः परैः" याज्ञ० २-५। 2. ತ್ಯಜಿಸಲ್ಪಟ್ಟ, ಬಿಡಲ್ಪಟ್ಟ. 3. ಬೇರ್ಪಡಿಸಲ್ಪಟ್ಟ. 4. ನಾಶವಾದ, ಕಳೆದುಹೋದ. "व्यपेतहर्षां परिदीन-मानसाम्। शुभां निमित्तानि शुभानि भेजिरे नरं श्रिया जुष्टमिवोपजीविनः रामा०"।

**व्यपोढ ವ್ಯಪೋಢ** (वि०) 1. ಎದುರುಬದುರಾಗಿರುವ, ಪರಸ್ಪರ ಅಭಿಮುಖವಾಗಿರುವ. वि+अप+वह (प्रापणे) "क्तः" (३-४-७२)। "व्यपोढपार्श्वैरपवर्तितत्रिका विकर्षणैः पाणिविहारहारिभिः" किरा० ४-१५। 2. ಓಡಿಸಲ್ಪಟ್ಟ, ದೂರಕ್ಕೆ ಅಟ್ಟಲ್ಪಟ್ಟ.

**व्यपोह ವ್ಯಪೋಹ** (ಪುಂ०) 1. ಪರಿತ್ಯಜಿಸುವುದು, ವರ್ಜಿಸು ವುದು, ಬಿಟ್ಟುಬಿಡುವುದು. वि + अप + ऊह (वितर्के) "घञ्" (३-३-१८)। 2. ಪರಿಹರಿಸುವುದು, ನಿವಾರಿಸು ವುದು.

**व्यभिचार ವ್ಯಭಿಚಾರ** (ಪುಂ०) 1. ದುರಾಚಾರ, ತಪ್ಪು ಮಾರ್ಗದಲ್ಲಿ ನಡೆಯುವುದು, ಕೀಳುಮಟ್ಟದ ವರ್ತನೆ. वि + अभि + चर (गतौ) "घञ्" (३-३-१८)। "मन्त्रश्रमव्यसनिनं व्यभिचारविवर्जितम्" हितो० ३-१६। 2. ಸ್ತ್ರೀ ಪುರುಷರ ದುರಾಚಾರ, ಜಾರತ್ವ. "व्यभिचारेण वर्णानामवेद्यावेदनेन च। स्वकर्मणां च त्यागेन जायन्ते वर्णसंकराः" मनु० १०-२४। "व्यभिचारात्तु भर्तुः स्त्री लोके प्राप्नोति निन्द्यताम्" मनु० ५-१६४। 3. ಕಾರ್ಯಕಾರಣಭಾವವಿಲ್ಲದಿರುವಿಕೆ. ಈ ವ್ಯಭಿಚಾರವು (1) अन्वयव्यभिचारः ಮತ್ತು (2) व्यतिरेकव्यभिचारः ಎಂದು ಎರಡು ವಿಧ. ಕಾರಣವಿದ್ದರೂ ಕಾರ್ಯಾ ನುತ್ಪತ್ತಿಯು ಅನ್ವಯವ್ಯಭಿಚಾರ. ಕಾರಣವಿಲ್ಲದಿರುವ ಕಡೆ ಕಾರ್ಯೋತ್ಪತ್ತಿಯಾಗುವುದು ವ್ಯತಿರೇಕವ್ಯಭಿಚಾರ. 4. ಸಾಧ್ಯವಿಲ್ಲದ ಕಡೆ ಹೇತುವಿರುವ ಒಂದು ದೋಷ. "साध्याभाववद्वृत्तित्वं व्यभिचारः"।

**व्यभिचारिन् ವ್ಯಭಿಚಾರಿನ್** (ಪುಂ०) 1. ಪರಸ್ತ್ರೀ ಸಂಭೋಗ ಮಾಡುವ ಪುರುಷ, ಜಾರ. व्यभिचरति—वि+अभि+चर (गतौ) "णिनिः" (३-२-७८)। 2. ನಿರ್ವೇದ ಮೊದಲಾದ ಮೂವತ್ತಮೂರು ಶೃಂಗಾರಭಾವಗಳು. ಈ ಭಾವಗಳು ರತ್ಯಾದಿ ಸ್ಥಾಯಿ ಭಾವಗಳಲ್ಲಿ ವಿಶೇಷವಾಗಿ ಪ್ರಾದುರ್ಭಾವ ತಿರೋಭಾವಗಳಿಂದ ಅಭಿಮುಖ್ಯದಿಂದ ಚರಿಸುವುದರಿಂದ ಇದಕ್ಕೆ ವ್ಯಭಿಚಾರಿ ಭಾವಗಳೆಂದು ಹೆಸರು. स्थिरतया वर्तमाने रत्यादौ प्रादुर्भावतिरोभावाभ्यामाभि-मुख्येन चरन्तीति व्यभिचारिणः। "विशेषादाभिमुख्येन चरणाद्व्यभिचारिणः। स्थायिन्युन्मग्ननिर्मग्नास्त्रय-स्त्रिंशच्च तद्भिदाः" सा० द० ३-१४०। (1) निर्वेदः (2) आवेगः (3) दैन्यम् (4) श्रमः (5) मदः (6) जडता (7) उग्रता (8) मोहः (9) विबोधः (10) स्वप्नः (11) अपस्मारः (12) गर्वः (13) मरणम् (14) आलस्यम् (15) अमर्षः (16) निद्रा (17) अवहित्था (18) औत्सुक्यम् (19) उन्मादः (20) शङ्का (21) स्मृतिः (22) मतिः (23) व्याधिः (24) त्रासः (25) लज्जा (26) हर्षः (27) असूया (28) विषादः (29) धृतिः (30) चपलता (31) ग्लानिः (32) चिन्ता ಮತ್ತು (33) वितर्कः ಇವು 33 ವ್ಯಭಿಚಾರಿಭಾವಗಳು. (ವಿ०) 3. ವ್ಯಭಿಚಾರ ರೂಪದೋಷದಿಂದ ಕೂಡಿದ. 4. ದುರಾಚಾರನಿರತ, ದುರ್ಮಾರ್ಗದ ನಡತೆಯುಳ್ಳವನು. 5. ಅನಿತ್ಯ, ಶಾಶ್ವತ ವಲ್ಲದ. "नात्मा जजान न मरिष्यति नैधतेऽसौ न क्षीयते सवनविद्व्यभिचारिणां हि" भाग० ११-३-३८।

**व्यय ವ್ಯಯ** (ಪುಂ०) 1. ಖರ್ಚು, ವೆಚ್ಚ, ಸಂಪಾದಿಸಿದ ಧನವನ್ನು ಬಳಸುವುದು. व्यय (वित्तसमुत्सर्गे) "घञ्" (३-३-१८)। ಧನ ಧಾನ್ಯಾದಿಗಳನ್ನು ಉಪಯೋಗಿಸು ವುದು ವ್ಯಯ. ಧನಧಾನ್ಯಗಳನ್ನು ಸಂಪಾದಿಸುವುದು ಆಯ. ಮನುಷ್ಯನಿಗೆ ಧನವನ್ನು ಸಂಪಾದಿಸುವುದೂ ಕ್ಲೇಶ. ಸಂಪಾದಿಸಿದ ಧನವನ್ನು ಖರ್ಚು ಮಾಡುವಾಗಲೂ ದುಃಖ. "आये दुःखं व्यये दुःखं धिगर्थाः कष्टसंश्रयाः" पञ्चतं०। ಆದರೆ ಉದಾರಹೃದಯರಾದ ಮಹಾತ್ಮರಿಗೆ ಸಂಪಾದಿಸಿದ ದ್ರವ್ಯವನ್ನು ಸದ್ವಿನಿಯೋಗ ಮಾಡುವುದರಿಂದ ಸಂತೋಷ, ತೃಪ್ತಿ ಮತ್ತು ಸಮಾಧಾನಗಳುಂಟಾಗುವುವು. "इत्यर्घ्य-पात्रानुमितव्ययस्य रघोरुदारामपि गां निशम्य" रघु० ५-१२। 2. ನಾಶ, ಕಳೆಯುವುದು. "भारव्ययाय च भुवः कृष्णौ यदुकुरूद्वहौ" भाग० ४-१-४९। 3. ಪರಿತ್ಯಾಗ, ಬಿಟ್ಟುಬಿಡುವುದು, ಕಳೆದುಕೊಳ್ಳುವುದು. "अङ्गव्यय-प्रार्थितकार्यसिद्धिः स्थाण्वाश्रमं हैमवतं जगाम" कुमा० ३-२३। 4. ವಿಘ್ನ, ತಡೆ, ಅಡ್ಡಿ. "भूयस्तपोव्ययो माभूद्वाल्मीकेरिति सोऽत्यगात्" रघु० १५-३७। 5. ಪ್ರಭವ ಮೊದಲಾದ ಅರವತ್ತು ಸಂವತ್ಸರಗಳಲ್ಲಿ ಇಪ್ಪತ್ತನೆಯ ಸಂವತ್ಸರ. (ನ०) 6. ಜಾತಕದಲ್ಲಿ ಲಗ್ನದಿಂದ 12 ನೆಯ ಸ್ಥಾನ, ಲಗ್ನದಿಂದ ಹನ್ನೆರಡನೆಯ ರಾಶಿ. "लग्नं धनं भ्रातृबन्धुपुत्रशत्रुकलत्रकाः। मरणं धर्मकर्मायव्यया द्वादशराशयः"।

**व्ययन ವ್ಯಯನ** (ನ०) ಖರ್ಚುಮಾಡುವುದು.

**व्ययित ವ್ಯಯಿತ** (ವಿ०) ಖರ್ಚುಮಾಡಲ್ಪಟ್ಟ. व्यय (वित्तसमुत्सर्गे) "क्तः" (३-२-१०२)।

**व्ययिन् ವ್ಯಯಿನ್** (ವಿ०) ವ್ಯಯಮಾಡುವವನು, ಖರ್ಚು ಮಾಡುವವನು. व्ययोऽस्यास्ति "इनिः" (५-२-११५)। "द्रविणं परिमितमधिकव्ययिनं जनमाकुलीकुरुते। क्षीणा-ञ्चलमिव पीनस्तनजघनायाः कुलीनायाः"।

**व्यर्थ ವ್ಯರ್ಥ** (ವಿ०) 1. ಪ್ರಯೋಜನವಿಲ್ಲದ, ಫಲವಿಲ್ಲದ. विगतोऽर्थः यस्य। "शैलात्मजापि पितुरुच्छिरसोऽभिलाषं व्यर्थं समर्थ्य ललितं वपुरात्मनश्च" कुमा० ३-७५। 2. ಅರ್ಥವಿಲ್ಲದ (ಶಬ್ದಜಾಲ).

**व्यर्थीकृत ವ್ಯರ್ಥೀಕೃತ** (ವಿ०) ಪ್ರಯೋಜನವಿಲ್ಲದಂತೆ ಮಾಡಲ್ಪಟ್ಟ. अव्यर्थः व्यर्थः संपद्यमानः कृतः—व्यर्थ+

कृञ् "च्वि:" (५-४-५०)। "ईत्" (७-४-३२)। "व्यर्थीकृतं पत्ररथेन तेन तथाऽवसाय व्यवसायमस्या:" नैष० ३-६।

**व्यर्थीभवत् ವ್ಯರ್ಥೀಭವತ್** (वि०) ವ್ಯರ್ಥವಾಗಿ ಆಗುತ್ತಿರುವ. व्यर्थ + भू "च्वि:" (५-४-५०)। "ईत्" (७-४-३२)। "व्यर्थीभवद्भावपिधानयत्ना स्वरेण साथ श्लथगद्गदेन" नैष० ८-१९।

**व्यलीक ವ್ಯಲೀಕ** (वि०) 1. ವಿಷಯಾಸಕ್ತ, ವಿಷಯ ಲಂಪಟ, ಭೋಗದಲ್ಲಿ ಆಸೆಯುಳ್ಳವನು. "व्यलीकं त्रिषु नागरे" त्रिकाण्ड०। 2. ಪ್ರಿಯವಲ್ಲದ, ಇಷ್ಟವಲ್ಲದ. 3. ಅಕಾರ್ಯ, ಮಾಡಲು ಅರ್ಹವಲ್ಲದ. 4. ಅನೃತವಲ್ಲದ, ಸುಳ್ಳಲ್ಲದ. "शुश्राव सूततनयस्य तदा व्यलीका:" माघ० ५-१। (न०) 5. ದುಃಖ, ಕಷ್ಟ. "सुतनु हृदयात्प्रत्यादेशव्यलीकमपैतु ते किमपि मनस: संमोहो मे महानभूत्" शाकु० ७-२४। 6. ಅಪರಾಧ, ತಪ್ಪು. "सुदृश: सरसव्यलीकतप्तस्तरसाश्लिष्टवत: सयौवनोष्मा" माघ० ९-८५। 7. ವಂಚನೆ, ಮೋಸ. "सर्वदेवमयो राजा मनुना संप्रकीर्तित:। तस्मात्तं देववत्पश्येत् न व्यलीकेन कर्हिचित्" पञ्चतं०। 8. ಅನೃತ, ಸುಳ್ಳು. 9. ಅಸಾಂಗತ್ಯ, ಅಸಂಬದ್ಧತೆ. 10. ವೈಲಕ್ಷ್ಯ, ಮನಸ್ಸು ನಲ್ಲಾಗುವ ಸಂಕೋಚ, ಕಿರಿಕಿರಿ, ಪೇಚಾಟ. "यस्मिन्ननैश्वर्यकृतव्यलीक: पराभवं प्राप्त इवान्तकोऽपि" किरा० ३-१९।

**व्यवकलन ವ್ಯವಕಲನ** (न०) ಕಳೆಯುವುದು, ತೆಗೆದು ಹಾಕುವುದು. वि + अव + कल (संख्याने) "ल्युट्" (३-३-११५)।

**व्यवकलित ವ್ಯವಕಲಿತ** (वि०) ಕಳೆಯಲ್ಪಟ್ಟ, ತೆಗೆದು ಹಾಕಲ್ಪಟ್ಟ. वि + अव + कल (संख्याने) "क्त:" (३-२-१०२)।

**व्यवच्छिन्न ವ್ಯವಚ್ಛಿನ್ನ** (वि०) 1. ಭೂಷಿಸಲ್ಪಟ್ಟ, ಅತಿಶಯವುಂಟುಮಾಡಲ್ಪಟ್ಟ, ಚಮತ್ಕಾರಜನಕವಾದ. "तै: शरीरं च काव्यानामलङ्काराश्च दर्शिता:। शरीरं तावदिष्टार्थव्यवच्छिन्ना पदावली" काव्या० १-१०। 2. ಪ್ರತ್ಯೇಕವಾಗಿ ಮಾಡಲ್ಪಟ್ಟ, ಬೇರ್ಪಡಿಸಲ್ಪಟ್ಟ. 3. ನಿರ್ದೇಶಿಸಿ ಹೇಳಲ್ಪಟ್ಟ, ಸ್ಪಷ್ಟವಾಗಿ ನಮೂದಿಸಿ ಹೇಳಲ್ಪಟ್ಟ. "भिन्नं व्यवच्छिन्नं विशेषितम्" त्रिकाण्ड०।

**व्यवच्छेद ವ್ಯವಚ್ಛೇದ** (पुं०) 1. ಬೇರೆಯಾಗಿರುವಿಕೆ, ಭಿನ್ನವಾಗಿರುವಿಕೆ. वि+अव+छिदिर् (द्वैधीकरणे) "घञ्" (३-३-१८)। 2. ನಿವೃತ್ತಿ, ವಿರಾಮ. "जीवस्य न व्यवच्छेद: स्याच्चेत्तत्तत्प्रतिक्रिया" भाग० ४-२९-३२। 3. ಬಾಣದ ಪ್ರಯೋಗ, ಬಾಣವನ್ನು ಬಿಡುವುದು. 4. ತುಂಡುಮಾಡುವುದು, ಕತ್ತರಿಸುವುದು. 5. ಬೇರ್ಪಡಿಸುವಿಕೆ, ಪ್ರತ್ಯೇಕಗೊಳಿಸುವುದು. 6. ನಿರ್ದೇಶಿಸಿ ಹೇಳುವುದು.

**व्यवच्छेदक ವ್ಯವಚ್ಛೇದಕ** (वि०) 1. ಇತರ ವಿಷಯಗಳಿಂದ ಬೇರ್ಪಡಿಸುವ. वि+अव+छिदिर् (द्वैधीकरणे) "ण्वुल्" (३-१-१३३)। 2. ಕತ್ತರಿಸುವ, ತುಂಡು ಮಾಡುವ. 3. ವಿರಾಮವನ್ನು ಕೊಡುವ. 4. ನಿರ್ದೇಶಿಸಿ ಹೇಳುವ.

**व्यवच्छेद्य ವ್ಯವಚ್ಛೇದ್ಯ** (वि०) 1. ಇತರ ವಿಷಯಗಳಿಂದ ಬೇರ್ಪಡಿಸಲ್ಪಡುವ. 2. ಕತ್ತರಿಸಲ್ಪಡುವ. 3. ಸ್ಪಷ್ಟವಾಗಿ ನಮೂದಿಸಲ್ಪಡುವ. वि + अव + छिदिर् (द्वैधीकरणे) "ण्यत्" (३-१-१२४)।

**व्यवधा ವ್ಯವಧಾ** (स्त्री०) 1. ಮರೆಯಾಗುವುದು. वि+अव+डु धाञ् (धारणपोषणयो:) "अङ्" (३-३-१०६)। 2. ಮುಚ್ಚಳ, ಮರೆ.

**व्यवधान ವ್ಯವಧಾನ** (न०) 1. ಮರೆಯಾಗಿರುವುದು, ಮಧ್ಯೆ ಇರುವುದು, ಅವಕಾಶ. ಇದು ದೈಶಿಕ ಮತ್ತು ಕಾಲಿಕ ಎಂದು ಎರಡು ವಿಧ. ಎರಡು ಪ್ರದೇಶಗಳಿಗೆ ಮಧ್ಯೆ ಇರುವುದು ದೈಶಿಕವ್ಯವಧಾನ. ಎರಡು ಕಾಲಗಳಿಗೆ ಮಧ್ಯೆ ಇರುವ ಅವಕಾಶವು ಕಾಲಿಕವ್ಯವಧಾನ. वि + अव+डु धाञ् (धारणपोषणयो:) "ल्युट्" (३-३-११५)। ಹೀಗೆಯೇ ಎರಡು ವಸ್ತುಗಳ ಮಧ್ಯೆ ಇರುವುದೂ ವ್ಯವಧಾನವಾಗುವುದು. ಅಂದರೆ ಮಧ್ಯೆ ಇರುವುದು ಈ ಎರಡು ಪ್ರದೇಶಗಳಿಗೆ ಎರಡು ಕಾಲಗಳಿಗೆ ಮತ್ತು ಎರಡು ವಸ್ತುಗಳಿಗೆ ಮರೆಯಾಗಿರುವುದು ಎಂದರ್ಥ. "दृष्टि विमानव्यवधानमुक्तां पुन: सहस्रार्चिषि संनिधत्ते" रघु० १३-४४। 2. ವಿಚ್ಛೇದ, ನಿಲುಗಡೆ, ಬಿಡುವು, ತಡೆ. "वपुरन्वलिप्त परिरम्भसुखव्यवधानभीरुकतया न वधू:" माघ० ९-५१। 3. ಸಮಾಪ್ತಿ, ಕೊನೆ. "यावदन्यं न विन्देत व्यवधानेन कर्मणाम्" भाग० ४-२९-७७। 4. ಭೇದ, ವ್ಯತ್ಯಾಸ. "परात्मनोर्यद्व्यवधानकं पुरस्तात्" भाग० ४-२२-२७। 5. ಆಚ್ಛಾದನ, ಹೊದಿಕೆ. "शार्दूलचर्मव्यवधानवत्याम्" कुमा० ३-४४।

**व्यवधि ವ್ಯವಧಿ** (पुं०) 1. ವ್ಯವಧಾನ, ಮಧ್ಯೆ ಬಂದು ಸೇರುವುದು, ಮಧ್ಯೆ ಬಂದು ಮರೆಮಾಡುವುದು. वि + अव + डु धाञ् (धारणपोषणयो:) "कि:" (३-३-९२)।

"व्यवधावपि वा विधोः कलां मृडचूडानिलयां न वेद कः" नैष० २-११। 2. ಮುಚ್ಚುವುದು. 3. ಸಮಾಪ್ತಿ, ಕೊನೆ. 4. ಆಚ್ಛಾದನ, ಹೊದಿಕೆ. 5. ಮುಚ್ಚಳ. 6. ವ್ಯವಧಾನ, ಕಾಲಾವಕಾಶ. "अवनतवदनेन्दुरिच्छतीव व्यवधिमधीरतया यदस्थितास्मै" माघ० ७-३८।

**व्यवसाय ವ್ಯವಸಾಯ** (पुं०) 1. ಉದ್ಯೋಗ, ಪ್ರಯತ್ನ. वि + अव + षो (अन्तकर्मणि) "घञ्" (३-३-१९)। "तदलं प्रतिपक्षमुन्नतेरवलम्ब्य व्यवसायवन्ध्यताम्" किरा० २-१५। 2. ನಿಶ್ಚಯ. "जयोऽस्मि व्यवसायोऽस्मि सत्त्वं सत्त्ववतामहम्" गीता १०-३६। 3. ಅನುಷ್ಠಾನ, ಆಚರಣೆ. 4. ವಿಷ್ಣು. वि + अव + षिञ् (बन्धने) "घञ्" (३-३-१९)। "ज्योतिश्चक्रं ध्रुवे नित्यं सीयते बध्यते यतः। व्यवसायस्ततो ज्ञेयो भगणाधारमूर्तिमान्" इति निरुक्तिः। "व्यवसायो व्यवस्थानः संस्थानः स्थानदो ध्रुवः" वि० स०। 5. ವಿಧೇಯತೆ.

**व्यवसायिन् ವ್ಯವಸಾಯಿನ್** (वि०) 1. ಉದ್ಯೋಗಶೀಲ, ಪ್ರಯತ್ನವುಳ್ಳವನು. व्यवसायोऽस्यास्ति "इनिः" (५-२-११५)। "कोऽतिभारः समर्थानां किं दूरं व्यवसायिनाम्" चाणक्य०। 2. ಆಚರಿಸುವವನು. ಅನುಷ್ಠಿಸುವವನು. 3. ವ್ಯಾಪಾರಮಾಡುವವನು, ವಾಣಿಜ್ಯ ವೃತ್ತಿಯುಳ್ಳವನು. 4. ಹಠದಿಂದ ಕಾರ್ಯ ಸಾಧಿಸುವವನು. "तुल्यार्थं तुल्यसामर्थ्यं मर्मज्ञं व्यवसायिनम्। अर्धराज्यहरं भृत्यं यो न हन्यात् स हन्यते" पञ्चतं०।

**व्यवसित ವ್ಯವಸಿತ** (न०) 1. ವಿವೇಚನೆ, ಸೂಕ್ಷ್ಮವಾಗಿ ಪರಿಶೀಲಿಸುವುದು. वि+अव+षो (अन्तकर्मणि) "क्तः" (३-३-११४)। 2. ನಿಶ್ಚಯ, ನಿರ್ಧಾರ. (वि०) 3. ನಿಶ್ಚಯಿಸಿದ, ನಿರ್ಧಾರಮಾಡಿದ. कर्तं "क्तः"। "तं समीक्ष्य व्यवसितं पितुर्निदेशपालने" रामा०। 4. ಅನುಷ್ಠಿಸಿದ, ಆಚರಿಸಿದ. 5. ಪ್ರಯತ್ನಮಾಡಿದ, ಯತ್ನಿಸಿದ. "इतः प्रत्यादेशात्स्वजनमनुगन्तुं व्यवसितां मुहुस्तिष्ठेत्युच्चैर्वदति गुरुशिष्ये गुरुसमे" शाकु० ६-९। 6. ವಂಚಿಸಲ್ಪಟ್ಟ, ಮೋಸಪಡಿಸಲ್ಪಟ್ಟ.

**व्यवस्था ವ್ಯವಸ್ಥಾ** (स्त्री०) 1. ಪರಿಹರಿಸುವುದು, ಬಗೆಹರಿಸುವುದು. वि + अव + ष्ठा (गतिनिवृत्तौ) "अङ्" (३-३-१०६)। 2. ಶಾಸ್ತ್ರ, ವಿಧಿ, ಕಟ್ಟಳೆ. "दीर्घकालं ब्रह्मचर्यं धारणं च कमण्डलोः। देवरेण सुतोत्पत्तिर्दत्तकन्या प्रदीयते। एतानि लोकगुप्त्यर्थं कलेरादौ महात्मभिः। निर्वर्तितानि कर्माणि व्यवस्थापूर्वकं बुधैः"। 3. ನಿಯತ, ನಿಶ್ಚಿತ. "भङ्क्त्वा जयं चाप्नुरव्यवस्थम्" रघु० ७-५४। 4. ವ್ಯವಸ್ಥೆ, ಏರ್ಪಾಡು, ಅಳವಡಿಸುವುದು. 5. ನಿಯಮ.

**व्यवस्थान ವ್ಯವಸ್ಥಾನ** (पुं०) 1. ವಿಷ್ಣು. कलामुहूर्तादात्मकः कालो व्यवतिष्ठतेऽस्मिन्—वि + अव + ष्ठा (गतिनिवृत्तौ) "ल्युट्" (३-३-११७)। "कलामुहूर्तादिमयः ध्रुवे कालोऽवतिष्ठते। यस्मात्तस्मात् व्यवस्थानो ह्यष्टार्णः स्थानदो मनुः" इति निरुक्तिः। "व्यवसायो व्यवस्थानः" वि० स०। 2. ವ್ಯವಸ್ಥೆ, ಏರ್ಪಾಡು. 3. ನಿರ್ಣಯ, ತೀರ್ಮಾನ. 4. ಕಾನೂನು, ಕಟ್ಟಳೆ, ವಿಧಿ. "चातुर्वर्ण्यव्यवस्थानं यस्मिन् देशे न विद्यते। तं म्लेच्छदेशं जानीयादार्यावर्तः ततः परम्"।

**व्यवस्थापक ವ್ಯವಸ್ಥಾಪಕ** (वि०) 1. ಏರ್ಪಾಡು ಮಾಡುವವನು, ಸಿದ್ಧಪಡಿಸುವವನು, ವ್ಯವಸ್ಥೆ ಮಾಡುವವನು. वि + अव + ष्ठा (गतिनिवृत्तौ) + णिच् "ण्वुल्" (३-१-१३३)। 2. ಶಾಸ್ತ್ರಕ್ರಮದಲ್ಲಿ ನಿರ್ಣಯಿಸುವವನು. 3. ಕಾನೂನು ಕ್ರಮದಲ್ಲಿ ಸಿದ್ಧಪಡಿಸುವವನು.

**व्यवस्थापन ವ್ಯವಸ್ಥಾಪನ** (न०) 1. ಸಿದ್ಧಪಡಿಸುವುದು. ಏರ್ಪಡಿಸುವುದು. 2. ನಿರ್ಣಯಿಸುವುದು.

**व्यवस्थापित ವ್ಯವಸ್ಥಾಪಿತ** (वि०) 1. ಸರಿಯಾದ ರೀತಿಯಲ್ಲಿ ಸಿದ್ಧಪಡಿಸಲ್ಪಟ್ಟ. वि+अव+ष्ठा (गतिनिवृत्तौ) + णिच् "क्तः" (३-२-१०२)। 2. ಕಾನೂನುಕ್ರಮದಲ್ಲಿ ಸಜ್ಜುಗೊಳಿಸಲ್ಪಟ್ಟ. 3. ಶಾಸ್ತ್ರರೀತಿಯಲ್ಲಿ ನಿರ್ಣಯಿಸಲ್ಪಟ್ಟ.

**व्यवस्थित ವ್ಯವಸ್ಥಿತ** (वि०) 1. ಸರಿಯಾದ ಕ್ರಮದಲ್ಲಿ ಸಿದ್ಧವಾಗಿರುವ. वि+अव+ष्ठा (गतिनिवृत्तौ) "क्तः" (३-४-७२)। "अथ व्यवस्थितान् दृष्ट्वा धार्तराष्ट्रान् कपिध्वजः" गीता १-२०। 2. ಕಾನೂನುಕ್ರಮದಲ್ಲಿ ಸಿದ್ಧವಾದ. 3. ಶಾಸ್ತ್ರಕ್ರಮದಲ್ಲಿ ನಿರ್ಣಯವಾದ.

**व्यवहरण ವ್ಯವಹರಣ** (न०) 1. ವ್ಯವಹರಿಸುವುದು, ಸಭ್ಯತೆಯಿಂದ ವಿವೇಚನೆಯಿಂದ ವಿಧೇಯತೆಯಿಂದ ನಡೆದುಕೊಳ್ಳುವುದು. वि + अव + हृञ् (हरणे) भावे "ल्युट्" (३-३-११५)। 2. ಕೋರ್ಟು ಕಛೇರಿಗಳಲ್ಲಿ ಕಾರ್ಯಕಲಾಪಗಳನ್ನು ನಡೆಸುವುದು. "सह मुनिभिरुपास्त धर्ममाद्यं व्यवहरणानि ददर्श वेदविद्भिः" याद० २४-७।

**व्यवहरत् ವ್ಯವಹರತ್** (वि०) 1. ವ್ಯವಹರಿಸುತ್ತಿರುವ, ಸರಿಯಾದ ರೀತಿಯಲ್ಲಿ ವ್ಯವಹರಿಸುತ್ತಿರುವ, ಸಭ್ಯತೆಯಿಂದ ನಡೆದುಕೊಳ್ಳುತ್ತಿರುವ. वि+अव+हृञ् (हरणे) "शतृ" (३-२-१२४)। "बहिः सर्वाकारप्रवणरमणीयं व्यवहरन्

पराग्भूहस्थानान्यपि तनुतराणि स्थगयति" मालती० १-१७। 2. ಕೋರ್ಟು ಕಛೇರಿಗಳಲ್ಲಿ ಸಂಬಂಧಿಸಿದ ಕಾರ್ಯ ಕಲಾಪ ನಡೆಸುವವನು. स्त्रियां "ङीप्" (४-१-६)। –हर्त्री –ಹರ್ತ್ರೀ.

**व्यवहर्तव्य ವ್ಯವಹರ್ತವ್ಯ** (वि०) 1. ವ್ಯವಹರಿಸಬೇಕಾದ. 2. ವ್ಯವಹರಿಸಲ್ಪಡುವ. वि + अव + हृञ् (हरणे) "तव्य:" (३-१-९६)। ವಿಚಾರಮಾಡುವುದು ವ್ಯಾಪಾರ ಮಾಡುವುದು ಮಾತಾಡುವುದು ಮೊದಲಾದ ವಿಷಯ ಗಳಲ್ಲಿ ಸರಿಯಾದ ರೀತಿಯಿಂದ ಸಭ್ಯತೆಯಿಂದ ನಡೆದು ಕೊಳ್ಳುವುದು ಹೆಚ್ಚು ಸಂಪರ್ಕಹೊಂದುವುದು ವ್ಯವಹಾರ ವೆನಿಸುವುದು. "अनीयर्" (३-१-९६)। –हरणीयम् –ಹರಣೀಯಮ್.

**व्यवहर्तृ ವ್ಯವಹರ್ತೃ** (वि०) 1. ವ್ಯಾಪಾರವಿಚಾರ ಮೊದಲಾದ ವಿಷಯಗಳಲ್ಲಿ ಮಾತುಕತೆ ನಡೆಸುವವನು. वि + अव + हृञ् (हरणे) "तृच्" (३-१-१३३)। 2. ನ್ಯಾಯಾಲಯದಲ್ಲಿ ವ್ಯಾಜ್ಯ ಹೂಡುವವನು. 3. ಮೊಕದ್ದಮೆಗಳನ್ನು ಪರಿಶೀಲಿಸಿ ತೀರ್ಪು ಕೊಡುವವನು, ನ್ಯಾಯಾಧೀಶ. 4. ಸಾಲ ಕೊಡುವವನು ಮತ್ತು ಪಡೆಯು ವವನು. स्त्रियां "ङीप्" (४-१-५)। –हर्त्री –ಹರ್ತ್ರೀ.

**व्यवहार ವ್ಯವಹಾರ** (पुं०) 1. ಮಾತುಕತೆಗಳಲ್ಲಿ ಸಂಪರ್ಕ ಹೊಂದುವುದು. 2. ವ್ಯಾಪಾರಮಾಡುವುದು. 3. ವಿವಾದ. 4. ನ್ಯಾಯಾಲಯದಲ್ಲಿ ವ್ಯಾಜ್ಯ ಹೂಡುವುದು. 5. ಮೊಕದ್ದಮೆ ನಡೆಸುವುದು, ವಾದಿಪ್ರತಿವಾದಿಗಳ ಪರವಾದ ವಾದಗಳನ್ನು ಪರಿಶೀಲಿಸುವುದು. ವಾದಿಪ್ರತಿವಾದಿಗಳ ಪರಸ್ಪರ ವಿರುದ್ಧವಾದ ವಾದಗಳಲ್ಲಿ ಸಂಭವಿಸುವ ಸಂದೇಹ ಗಳನ್ನು ಪರಿಹರಿಸುವುದು (ವ್ಯವಹಾರ). "नानासंदेह-हरणाद्व्यवहार इति स्मृत:" कात्यायन:। "परस्परं मनुष्याणां स्वार्थविप्रतिपत्तिषु। वाक्यान्न्यायाद्व्यवस्थानं व्यवहार उदाहृत:"। 6. ಸಾಲ ಕೊಡುವುದು ಮತ್ತು ಪಡೆಯುವುದು. "ददर्श संशयच्छेद्यान् व्यवहारा-नतन्द्रित:" रघु० १७-३९। 7. ಬಡ್ಡಿಗಾಗಿ ಹಣವನ್ನು (ಸಾಲವನ್ನು) ಕೊಡುವ ನಡವಳಿಕೆ. 8. ವಾಣಿಜ್ಯ, ವರ್ತಕತನ. ಕ್ರಯ ವಿಕ್ರಯ ವ್ಯಾಪಾರ. 9. ನಡವಳಿಕೆ, ಪರಸ್ಪರ ಒಡಂಬಡಿಕೆಯಿಂದ ನಡೆದುಕೊಳ್ಳುವುದು. "न विना पार्थिवो भृत्यैर्न भृत्या: पार्थिवं विना। तेषां च व्यवहारोऽयं परस्परनिबन्धन:" पञ्चतं० १-८७। 10. ಮಾಡುವ ಕಾರ್ಯ, ಕ್ರಿಯೆ, ನಡೆಸುವ ಕೆಲಸದ ರೀತಿ. "न कश्चित् कस्यचिन्मित्रं न कश्चित् कस्यचिद्रिपु:। व्यवहारेण जायन्ते मित्राणि रिपवस्तथा"। 11. ಶಬ್ದ ಪ್ರಯೋಗ. 12. ಸಹಭೋಜನ ಮತ್ತು ಸಹಾಸನ ಮುಂತಾದುವು. 13. ಲೋಕಯಾತ್ರೆ, ಲೋಕದಲ್ಲಿ ನಡೆಸುವ ಜೀವನ.

**व्यवहारज्ञ ವ್ಯವಹಾರಜ್ಞ** (पुं०) 1. ಲೋಕದಲ್ಲಿ ಎಲ್ಲ ರೊಡನೆ ನಡೆದುಕೊಳ್ಳುವ ರೀತಿಯನ್ನು ಅರಿತವನು, ಜನ ರೊಡನೆ ಹೊಂದಿಕೊಳ್ಳುವ ಕ್ರಮವನ್ನು ಬಲ್ಲವನು. व्यवहारं जानाति—ज्ञा (अवबोधने) "क:" (३-१-१३५)। 2. ವಾದವಿವಾದಗಳನ್ನು ಪರಿಶೀಲಿಸುವ ಜ್ಞಾನವುಳ್ಳವನು. 3. ಕ್ರಯ ವಿಕ್ರಯಾದಿ ವ್ಯಾಪಾರವನ್ನು ಮಾಡಬಲ್ಲವನು. 4. ಋಣದಾನಾದಾನಗಳ ವಿಷಯವನ್ನು ಬಲ್ಲವನು. 5. ಜನರ ಸಂಪರ್ಕ ಪಡೆದು ಸಮಂಜಸವಾಗಿ ಮಾತುಕತೆ ಗಳನ್ನು ನಡೆಸಬಲ್ಲವನು, ಪ್ರಾಪ್ತವಯಸ್ಕನಾದ ಬಾಲಕ. "बाल आषोडशाद्वर्षात् पौगण्डोऽपि निगद्यते। परतो व्यवहारज्ञ: स्वतन्त्र: पितरावृते"।

**व्यवहारतन्त्र ವ್ಯವಹಾರತಂತ್ರ** (न०) ಕುಟುಂಬ ಭರಣದ ಪರಿಜ್ಞಾನ, ಗೃಹಕೃತ್ಯವನ್ನು ನಡೆಸಬಲ್ಲ ಜಾಣ್ಮೆ. "तद्वत्स वाक्प्रतिष्ठानि देहिनां व्यवहारतन्त्राणि" मालती० ४।

**व्यवहारदर्शन ವ್ಯವಹಾರದರ್ಶನ** (न०) ನ್ಯಾಯಾಸ್ಥಾನ ದಲ್ಲಿ ನಡೆಯುವ ವಾದವಿವಾದಾತ್ಮಕ ನಡವಳಿಕೆಗಳ ಪರಿಶೀಲನೆ.

**व्यवहारपद ವ್ಯವಹಾರಪದ** (न०) ವ್ಯವಹಾರದ ವಿಷಯು. ಮನುಷ್ಯರಲ್ಲಿ ಉದ್ಭವಿಸಬಹುದಾದ ವ್ಯವಹಾರಗಳಿಗೆ ಅವಕಾಶವಿರುವ ವಿಷಯಗಳು ಹದಿನೆಂಟು. ["अष्टादश-विवादपद" ಪದದಲ್ಲಿ ನೋಡಿ.] "स्मृत्याचारव्यपेतेन मार्गेणाधर्षित: परै:। आवेदयति चेद्राज्ञि व्यवहारपदं हि तत्" याज्ञ० १-५।

**व्यवहारपाद ವ್ಯವಹಾರಪಾದ** (पुं०) ವ್ಯವಹಾರದ ನಾಲ್ಕು ಪಾದಗಳಲ್ಲೊಂದು. व्यवहारस्य पाद:। (१) पूर्वपक्ष: (२) उत्तरपक्ष: (३) क्रियापाद: ಮತ್ತು (४) निर्णयपाद: ಎಂದು ವ್ಯವಹಾರದ ಪಾದಗಳು ನಾಲ್ಕು.

**व्यवहारमार्ग ವ್ಯವಹಾರಮಾರ್ಗ** (पुं०) ವ್ಯವಹಾರದ ವಿಷಯು.

**व्यवहारविषय ವ್ಯವಹಾರವಿಷಯು** (पुं०) ಮನುಷ್ಯರಲ್ಲಿ ಉದ್ಭವಿಸಬಹುದಾದ ವ್ಯವಹಾರಗಳ ಅವಕಾಶ. ["अष्टादशविवादपद" ಪದದಲ್ಲಿ ನೋಡಿ.]

**व्यवहारिका ವ್ಯವಹಾರಿಕಾ** (स्त्री०) 1. ಲೋಕಯಾತ್ರೆ. 2. ಸಂಮಾರ್ಜನಿ, ಪೊರಕೆ. 3. ಇಂಗುದೀವೃಕ್ಷ.

**व्यवहारिन् ವ್ಯವಹಾರಿನ್** (वि०) 1. ವ್ಯವಹಾರವನ್ನು ಕೈಗೊಂಡಿರುವ, ವ್ಯವಹಾರದ ಮಾರ್ಗದಲ್ಲಿರುವ,

व्यवहारोऽस्यास्ति "इनिः" (५-२-११५)। 2. ಪ್ರಯೋಗಿಸುವವನು.

**व्यवहार्य ವ್ಯವಹಾರ್ಯ** (वि०) 1. ವ್ಯವಹರಿಸಲ್ಪಡುವ. 2. ವ್ಯವಹರಿಸಲು ಯೋಗ್ಯವಾದ. वि + अव + हृञ् (हरणे) "ण्यत्" (३-१-१२४)। 3. ವ್ಯವಹರಿಸಬೇಕಾದ. 4. ಪ್ರಯೋಗಿಸಲ್ಪಡುವ, ಪ್ರಯೋಗಿಸಲು ಅರ್ಹವಾದ.

**व्यवहित ವ್ಯವಹಿತ** (वि०) ಇನ್ನೊಂದರಿಂದ ಮಧ್ಯೆ ವ್ಯವಧಾನ ಹೊಂದಿರುವ, ವಸ್ತು ಅಥವಾ ಕಾಲ ಇವುಗಳಿಂದ ವ್ಯವಧಾನ ಹೊಂದಿರುವ, ಮರೆಯಾಗಿರುವ. "व्यवहितमविजानती किलान्तर्वणभुवि वल्लभमाभिमुख्यभाजम्" माघ० ७-३५।

**व्यवहृत ವ್ಯವಹೃತ** (वि०) 1. ವ್ಯವಹರಿಸಲ್ಪಟ್ಟ. 2. ವಿವೇಚನೆಯಿಂದ ಪರಿಶೀಲಿಸಲ್ಪಟ್ಟ. वि+अव+हृञ् (हरणे) "क्तः" (३-२-१०२)। 3. ಪ್ರಯೋಗಿಸಲ್ಪಟ್ಟ, ಉಪಯೋಗಿಸಲ್ಪಟ್ಟ.

**व्यवह्रियमाण ವ್ಯವಹ್ರಿಯಮಾಣ** (वि०) 1. ವ್ಯವಹರಿಸಲ್ಪಡುತ್ತಿರುವ. 2. ವಾದವಿವಾದ ಮಾಡಲ್ಪಡುತ್ತಿರುವ. 3. ವಾದವಿವಾದಗಳನ್ನು ಕೇಳಿದ ನ್ಯಾಯಾಧೀಶರಿಂದ ಪರಿಶೀಲಿಸಲ್ಪಡುತ್ತಿರುವ. 4. ಪ್ರಯೋಗಿಸಲ್ಪಡುತ್ತಿರುವ, ಉಪಯೋಗಿಸಲ್ಪಡುತ್ತಿರುವ. वि+अव+हृञ् (हरणे) कर्म० "शानच्" (३-२-१२४)।

**व्यवहृति ವ್ಯವಹೃತಿ** (स्त्री०) ವ್ಯವಹಾರ. "व्यवहार" ಪದದ ಅರ್ಥ. वि + अव + हृञ् (हरणे) "क्तिन्" (३-३-९४)।

**व्यवाय ವ್ಯವಾಯ** (पुं०) 1. ಮೈಥುನ, ಗ್ರಾಮ್ಯಧರ್ಮ, ಸಂಭೋಗ. वि+अव+अय (गतौ) "घञ्" (३-३-१८)। "व्यायामं च व्यवायञ्च स्नानं चंक्रमणं तथा। ज्वरमुक्तो न सेवेत यावन्न बलवान् भवेत्"। 2. ವ್ಯವಧಾನ, ಅಂತರ್ಧಾನ, ಮರೆ. "अट्कुप्वाङ्नुम्व्यवायेऽपि" पा० सू० ८-४-२। (न०) 3. ತೇಜಸ್ಸು, ಬೆಳಕು. "व्यवायः सुरतेऽन्तर्धौ पुंसि क्लीबं तु तेजसि" मेदि०।

**व्यवायिन् ವ್ಯವಾಯಿನ್** (पुं०) 1. ಕಾಮುಕ, ಸ್ತ್ರೀಸಂಭೋಗದಲ್ಲಿ ನಿರತನಾದವನು. व्यवैतुं शीलं यस्य "णिनिः" (३-२-७८)। (वि०) 2. ವ್ಯವಧಾನವನ್ನುಂಟುಮಾಡುವ, ಮರೆಮಾಡುವ. ಮಧ್ಯೆ ಅಂತರವನ್ನುಂಟುಮಾಡುವ. "व्यवायिनोऽन्तरम्" पा० सू० ६-२-१६६।

**व्यष्टि ವ್ಯಷ್ಟಿ** (स्त्री०) 1. ಪ್ರತ್ಯೇಕವಾಗಿರುವಿಕೆ, ಪ್ರತ್ಯೇಕವಾದ ಅಸ್ತಿತ್ವ. 2. ಎಲ್ಲಾ ಕಡೆಗಳಲ್ಲೂ ಹರಡುವಿಕೆ, ಸುತ್ತಲೂ ವ್ಯಾಪಿಸುವಿಕೆ. 3. ಅಂಡಾದಿಸೃಷ್ಟಿ. 4. ಮಹದಾದಿ ತತ್ತ್ವೋತ್ಪತ್ತಿಸಮಯದಲ್ಲೇ ಎಲ್ಲಾ ಇಂದ್ರಿಯಗಳೂ ಒಟ್ಟಿಗೆ ಸೇರಿರುವುದು. 5. ಜೀವಾತ್ಮರಿಗೆ ಇಂದ್ರಿಯ ಮತ್ತು ಕಳೇಬರಗಳನ್ನು ಸೇರಿಸುವುದು.

**व्यष्टिसृष्टि ವ್ಯಷ್ಟಿಸೃಷ್ಟಿ** (स्त्री०) ಅಂಡಸೃಷ್ಟಿಗೆ ಮೊದಲು ನಡೆಯುವ ಮಹದಾದಿ ತತ್ತ್ವಸೃಷ್ಟಿ.

**व्यसन ವ್ಯಸನ** (न०) 1. ಇಷ್ಟವಾದ ವಸ್ತುವು ಲಭಿಸದ ಕಾರಣ ಉಂಟಾಗುವ ದುಃಖ. 2. ಕಾಮಕ್ರೋಧಾದಿಗಳಿಂದ ಉಂಟಾಗುವ ಮನೋವ್ಯಥೆ. 3. ವಿಪತ್ತು, ಕಷ್ಟ. "व्यसनासारवेगानां वारणं न प्रकल्पते" याद० २२-१४। ಕಷ್ಟ ಪ್ರಾಪ್ತವಾದಾಗ ಅದರ ಪರಿಹಾರೋಪಾಯವನ್ನು ಹುಡುಕದೆ ದುಃಖದಿಂದ ಅಳುತ್ತ ಕುಳಿತರೆ ಆ ಕಷ್ಟವು ಹೆಚ್ಚುವುದಲ್ಲದೆ ಅದರಿಂದ ಪಾರಾಗುವುದಿಲ್ಲ. "व्यसनं प्राप्य यो मोहात् केवलं परिदेवयेत्। क्रन्दनं वर्धयत्येव तस्यान्तं नाधिगच्छति" पञ्चत० २-१९४। ಕಷ್ಟ ಬಂದಾಗ ಅದನ್ನು ಜಾಣ್ಮೆಯಿಂದ ಎದುರಿಸುವವನು ಆ ಕಷ್ಟಗಳನ್ನು ಪರಿಹರಿಸಿಕೊಳ್ಳುವನು. "व्यसनेष्वेव सर्वेषु यस्य बुद्धिर्न हीयते। स तेषां पारमभ्येति तत्प्रभावादसंशयम्" पञ्चत० २-६। 4. ಅಶುಭ, ಅಮಂಗಳ. 5. ಮದ್ಯಪಾನ ಬೇಟೆ ಸ್ತ್ರೀಸಂಗ ಮುಂತಾದವುಗಳಲ್ಲಿ ಆಸಕ್ತಿ. 6. ಪಾಪ. 7. ವ್ಯರ್ಥವಾದ ಪ್ರಯತ್ನ, ಪ್ರಯೋಜನ (ಫಲ) ವಿಲ್ಲದ ಪ್ರಯತ್ನ. 8. ಭ್ರಂಶ, ಪತನ, ಕೆಳಗೆ ಬೀಳುವುದು. 9. ಎಸೆಯುವುದು. 10. ಅವಗುಣ, ದೋಷ, ದುರ್ಗುಣ. "मिथ्यैव व्यसनं वदन्ति मृगयामीदृग्विनोदः कुतः?" शाकु० २-५। 11. ಆಸಕ್ತಿ, ತತ್ಪರತೆ, ಉತ್ಸಾಹ, ಉತ್ಸುಕತೆ. "विद्यायां व्यसनं स्वयोषिति रतिर्लोकापवादाद्भयम्" भर्तृ० १-५१। 12. ಕಷ್ಟಕಾಲ, ಕಷ್ಟವನ್ನು ಅನುಭವಿಸುವ ಸಮಯ. "स सुहृद् व्यसने यः स्यात् अन्यजात्युद्भवोऽपि सन्। वृद्धौ सर्वोऽपि मित्रं स्यात् सर्वेषामेव देहिनाम्" पञ्चत० १-३६७। 13. ದೌರ್ಬಲ್ಯ, ಅಶಕ್ತತೆ, ಅನರ್ಹತೆ, ಅಸಾಮರ್ಥ್ಯ. 14. ಹ್ರಾಸ, ಕೊರತೆ. "स्वबलव्यसनेऽपि पीड्यमानं गुणवन्मित्रमिवानतिं प्रपेदे" किरा० १३-१५।

**व्यसनार्त ವ್ಯಸನಾರ್ತ** (वि०) ಕಷ್ಟದಿಂದ ಪೀಡಿಸಲ್ಪಟ್ಟ, ದುಃಖದಿಂದ ಕೂಡಿದ. व्यसनेनार्तः पीडितः।

**व्यसनिन् ವ್ಯಸನಿನ್** (वि०) 1. ದುಃಖದಿಂದ ಕೂಡಿದ, ಕಷ್ಟವನ್ನು ಅನುಭವಿಸುವ. व्यसनमस्यास्ति "इनिः"

(೫-೨-೧೧೫)। 2. ಭ್ರಂಶವುಳ್ಳವನು, ಪತನವುಳ್ಳವನು, ನಾಶವುಳ್ಳವನು. "चिरस्य मित्रव्यसनी सुदमो दमघोषज:" माघ० २-६०।

**व्यस्त ವ್ಯಸ್ತ** (वि०) 1. ಎಸೆಯಲ್ಪಟ್ಟ, ಮುಂದೆ ಹಾರಿಸಲ್ಪಟ್ಟ, ವೇಗವಾಗಿ ಮುಂದೆ ಚಾಚಲ್ಪಟ್ಟ. वि + अस् (क्षेपणे) "क्त:" (३-२-१०२)। "विषज्योतिरुज्जृम्भणोड्डामरव्यस्तविस्तारिदो:खण्डपर्यासितक्ष्माधरम्" मालती० ५-२३। 2. ಬೇರೆ ಬೇರೆಯಾಗಿರುವ, ಪ್ರತ್ಯೇಕವಾಗಿರುವ, ಭಾಗವಾಗಿರುವ. "हिमवति जलधौ च व्यस्ततोयेव गङ्गा" विक्र० ५-२२। 3. ಕೆದರಿಸಲ್ಪಟ್ಟ, ಚೆದರಿಸಲ್ಪಟ್ಟ. "कल्पाक्षेपकठोरभैरवमरुद्व्यस्तै-रभिस्तीर्यते" उ० रा० ५-१४। 4. ಕಿಂಚಿತ್ತು, ಸ್ವಲ್ಪ. "वरेषु यद्बालमृगाक्षि मृग्यते तदस्ति किं व्यस्तमपि त्रिलोचने" कुमा० ५-७२। 5. ಬಿಡಿ ಬಿಡಿಯಾದ, ಸಮಸ್ತವಲ್ಲದ (ಪದ), 6. ವಿಪರೀತವಾದ, ವ್ಯತ್ಯಾಸಹೊಂದಿದ. "प्रतिपदाप्यमावास्यातिथ्योर्युग्मं महाफलम्। एतद्व्यस्तं महाघोरं हन्ति पुण्यं पुराकृतम्"॥ 7. ಕದಲಿಸಲ್ಪಟ್ಟ, ತಳ್ಳಲ್ಪಟ್ಟ, ಓಡಿಸಲ್ಪಟ್ಟ, ಹೊರದೂಡಲ್ಪಟ್ಟ. "कुनृपतिभवनद्वारसेवाकलङ्कव्यासङ्गव्यस्तधैर्यम्" भर्तृ० २-३१। 8. ವ್ಯಾಪ್ತವಾದ, ಸುತ್ತಲೂ ಹರಡಿರುವ. 9. ವಿಪರ್ಯಸ್ತವಾದ, ಹಿಂದುಮುಂದಾದ, ತಲೆಕೆಳಗಾದ. (अव्य०) 10. ಬೇರೆ ಬೇರೆಯಾಗಿ, ಪೃಥಕ್ಕಾಗಿ, ಒಂಟಿಯಾಗಿ.

**व्यस्तपद ವ್ಯಸ್ತಪದ** (न०) 1. (ವ್ಯವಹಾರದಲ್ಲಿ) ಗೊಂದಲವುಂಟುಮಾಡುವ ಹೇಳಿಕೆ, ತೊಡಕುಂಟುಮಾಡುವ ಹೇಳಿಕೆ. व्यस्तं पदं यस्मिन्। 2. ಸಮಾಸವಿಲ್ಲದ ಪದ, ಒಂಟಿಯಾದ ಪದ.

**व्याकरण ವ್ಯಾಕರಣ** (न०) 1. ಶಬ್ದಶಾಸ್ತ್ರ, ಶಬ್ದನಿಷ್ಪತ್ತಿಯನ್ನು ಹೇಳುವ ಶಾಸ್ತ್ರ, ಶಬ್ದದ ಉತ್ಪತ್ತಿಯನ್ನು ತಿಳಿಸುವ ಶಾಸ್ತ್ರ. व्याक्रियन्ते अर्था येन—वि+आ+कृञ् (करणे) "ल्युट्" (३-३-११७)। ಪ್ರಕೃತಿಪ್ರತ್ಯಯಗಳ ಯೋಗದಿಂದ ಶಬ್ದಸಾಧುತ್ವವನ್ನೂ ಅರ್ಥವತ್ತಾದ ಶಬ್ದಗಳನ್ನೂ ಪ್ರತಿಪಾದಿಸುವುದರಿಂದ ಇದು ವ್ಯಾಕರಣವಾಯಿತು. व्याक्रियन्ते व्युत्पाद्यन्ते अर्थवत्तया प्रतिपाद्यन्ते शब्दा: येन इति वा। "एक: शब्द: सम्यग्ज्ञात: सुष्ठु प्रयुक्त: स्वर्गे लोके कामधुग्भवति"। ಶಬ್ದಜ್ಞಾನವನ್ನು ಹೊಂದಿ ಸುಶಬ್ದಪ್ರಯೋಗಮಾಡುವುದು ಶ್ರೇಯಸ್ಕರವಾದುದರಿಂದ ಇದೇ ವ್ಯಾಕರಣಕ್ಕೆ ಮುಖ್ಯವಾದ ಫಲ. ಯಜ್ಞದಲ್ಲಿ ಶುದ್ಧವಾದ ಶಬ್ದಗಳ ಪ್ರಯೋಗ ಮತ್ತು ಶುದ್ಧವಾದ ವಿಭಕ್ತಿಜ್ಞಾನವುಂಟುಮಾಡುವುದರಿಂದ ವ್ಯಾಕರಣವು ಒಂದು ವೇದಾಂಗವಾಯಿತು. "अथ व्याकरणं वक्ष्ये कात्यायन समासत:। सिद्धशब्दविवेकाय बालव्युत्पत्तिहेतवे"। ಸುಬಂತಪದಗಳ ರೂಪನಿಷ್ಪತ್ತಿ ಅವುಗಳ ಸಪ್ತವಿಭಕ್ತಿ ಮತ್ತು ವಚನಗಳು ಸಪ್ತಕಾರಕಗಳು ಅವ್ಯಯೀಭಾವ ತತ್ಪುರುಷ ಬಹುವ್ರೀಹಿ ಮುಂತಾದ ಸಮಾಸಗಳು ಕೃತ್ ಮತ್ತು ತದ್ಧಿತ ಪ್ರತ್ಯಯಾಂತ ರೂಪಗಳು ತಿಙನ್ತರೂಪಗಳು ಅವುಗಳ ಪುರುಷ ಮತ್ತು ವಚನಗಳು ಇತ್ಯಾದಿ ಸಂಸ್ಕೃತಭಾಷಾವ್ಯವಹಾರೋಪಯೋಗಿ ಮತ್ತು ಅರ್ಥವತ್ತಾದ ಸುಬನ್ತ ತಿಙನ್ತ ರೂಪಗಳನ್ನು ತಿಳಿಸಿ ಶಬ್ದಜ್ಞಾನ ಮತ್ತು ಭಾಷಾಜ್ಞಾನವನ್ನು ಉಂಟುಮಾಡುವುದು ವ್ಯಾಕರಣಶಾಸ್ತ್ರದ ಮುಖ್ಯ ಫಲ. माहेशव्याकरणम् पाणिनीयव्याकरणम् कलापव्याकरणम् संक्षिप्तसारव्याकरणम् सुपद्मव्याकरणम् हरिनामामृतव्याकरणम् भट्टोजिदीक्षितकृतसिद्धान्तकौमुदी ಮುಂತಾದ ಅನೇಕ ವ್ಯಾಕರಣಗಳು ರಚಿತವಾಗಿವೆ. ಇವುಗಳಲ್ಲಿ ಈಗ ಪಾಣಿನಿಮಹರ್ಷಿಪ್ರಣೀತವ್ಯಾಕರಣವು ಪ್ರಸಿದ್ಧವಾಗಿದ್ದು ಇದಕ್ಕೆ ಭಟ್ಟೋಜಿದೀಕ್ಷಿತಪ್ರಣೀತಸಿದ್ಧಾಂತಕೌಮುದೀ ವ್ಯಾಕರಣವು (ವ್ಯಾಖ್ಯಾನ) ವ್ಯವಹಾರದಲ್ಲಿರುವುದು. 2. ವಿವರಿಸಿ ಹೇಳುವುದು, ವಿಸ್ತಾರವಾಗಿ ತಿಳಿಸುವುದು.

**व्याकार ವ್ಯಾಕಾರ** (पुं०) 1. ರೂಪ ಬದಲಾವಣೆ, 2. ವಿರೂಪ, ವಿಕಾರರೂಪ.

**व्याकीर्ण ವ್ಯಾಕೀರ್ಣ** (वि०) 1. ವ್ಯಾಪ್ತವಾದ, ಹರಡಲ್ಪಟ್ಟ. 2. ಎರಚಲ್ಪಟ್ಟ, ಎಸೆಯಲ್ಪಟ್ಟ. वि+आ+कृ (विक्षेपे) "क्त:" (३-२-१०२)। 3. ಕೆದರಿರುವ, ಸುತ್ತಲೂ ಚೆದರಿಕೊಂಡಿರುವ. "व्याकीर्णकेसरकरालमुखा मृगेन्द्रा:" पञ्चत० १-२०४।

**व्याकरणप्रक्रिया ವ್ಯಾಕರಣಪ್ರಕ್ರಿಯಾ** (स्त्री०) ಪ್ರಕೃತಿ ಪ್ರತ್ಯಯಗಳ ಯೋಗದಿಂದ ಉಂಟಾಗುವ ಶಬ್ದಗಳ ಉತ್ಪತ್ತಿಯ ಕ್ರಮವನ್ನು ನಿರೂಪಿಸುವುದು, ಶಬ್ದಗಳ ಹುಟ್ಟನ್ನು ವಿವರಿಸಿ ತಿಳಿಸುವುದು.

**व्याकुल ವ್ಯಾಕುಲ** (वि०) 1. ಕಷ್ಟ ದುಃಖ ಮೊದಲಾದುವುಗಳಿಂದ ಕರ್ತವ್ಯಜ್ಞಾನಶೂನ್ಯನಾದ. वि + आ + कुल (संस्त्याने बन्धुषु च) "क:" (३-१-१३५)। 2. ಕಾರ್ಯದಲ್ಲಿ ಪ್ರವೃತ್ತನಾದ, ಒಂದು ಕಾರ್ಯದಲ್ಲಿ ತೊಡಗಿರುವ. "आलोके ते निपतति पुरा सा बलिव्याकुला वा" मेघ० २-२२। 3. ತೊಂದರೆಗೊಳಗಾಗಿರುವ, ಗಾಬರಿಯಿಂದ ಭಯಗೊಂಡಿರುವ.

**व्याकृति ವ್ಯಾಕೂತಿ** (स्त्री०) ವಂಚನೆ, ಮೋಸ.

**व्याकृत ವ್ಯಾಕೃತ** (वि०) 1. ವಿವರಿಸಿ ಹೇಳಲ್ಪಟ್ಟ, ವಿಸ್ತಾರವಾಗಿ ತಿಳಿಸಲ್ಪಟ್ಟ. वि+आ+डु कृञ् (करणे) "क्तः" (३-२-१०२)। 2. ಬಿಡಿಸಿ ಹೇಳಲ್ಪಟ್ಟ, ಸೂಕ್ಷ್ಮವಾಗಿ ಪರಿಶೀಲಿಸಲ್ಪಟ್ಟ. 3. ವಿಕಾರಗೊಳಿಸಲ್ಪಟ್ಟ, ವಿರೂಪವುಂಟುಮಾಡಲ್ಪಟ್ಟ.

**व्याकृति ವ್ಯಾಕೃತಿ** (स्त्री०) 1. ಸೂಕ್ಷ್ಮವಾಗಿ ಪರಿಶೀಲಿಸಿ ಹೇಳುವುದು, ಬಿಡಿಸಿ ಹೇಳುವುದು, 2. ವಿವರಿಸಿ ಹೇಳುವುದು, ವಿಸ್ತಾರವಾಗಿ ಹೇಳುವುದು. 3. ವಿರೂಪಗೊಳಿಸುವುದು, ವಿಕಾರವಾಗಿ ಮಾಡುವುದು. वि+आ+डु कृञ् (करणे) "क्तिन्" (३-३-९४)। 4. ವ್ಯಾಕರಣ, ಶಬ್ದ ನಿಷ್ಪತ್ತಿ ಮೊದಲಾದುವನ್ನು ತಿಳಿಸುವುದು.

**व्याकोश ವ್ಯಾಕೋಶ** (पुं०) 1. ಪ್ರಫುಲ್ಲವಾದ, ವಿಕಸಿತವಾದ, ಅರಳಿರುವ. व्यावृत्तः कोशः संकोचोऽस्मात्। "दोषापि नूनमहिमांशुरसौ किलेति व्याकोशकोकनदतां दधते नलिन्यः" माघ० ४-४६। 2. ವೃದ್ಧಿ ಹೊಂದಿದ, ಬೆಳವಣಿಗೆ ಹೊಂದಿದ.

**व्याक्षिप्त ವ್ಯಾಕ್ಷಿಪ್ತ** (वि०) 1. ಬೇರೆಕಡೆಗೆ ತಿರುಗಿಸಲ್ಪಟ್ಟ, ಬೇರೆಕಡೆಗೆ ಗಮನ ಹರಿಸಲ್ಪಟ್ಟ. वि+आ+क्षिपु (निरसने) "क्तः" (३-२-१०२)। 2. ಮುಂದೂಡಲ್ಪಟ್ಟ, ಮುಂದಕ್ಕೆ ಹಾಕಲ್ಪಟ್ಟ. 3. ಎಸೆಯಲ್ಪಟ್ಟ. 4. ಮೇಲಕ್ಕೆ ಹಾರಿಸಲ್ಪಟ್ಟ. 5. ಅಡ್ಡಿಪಡಿಸಲ್ಪಟ್ಟ.

**व्याक्षेप ವ್ಯಾಕ್ಷೇಪ** (पुं०) 1. ಮೇಲಕ್ಕೆ ಎಸೆಯುವುದು. 2. ಮೇಲಕ್ಕೆ ಹಾರಿಸುವುದು. 3. ಮುಂದೂಡುವುದು. 4. ಅಡ್ಡಿ, ತಡೆ, ವಿಲಂಬ. वि + आ + क्षिपु (निरसने) "घञ्" (३-३-१८)। "अव्याक्षेपो भविष्यन्त्याः कार्यसिद्धेर्हि लक्षणम्" रघु० १०-६।

**व्याख्या ವ್ಯಾಖ್ಯಾ** (स्त्री०) 1. ವ್ಯಾಖ್ಯಾನ, ವಿವರಣೆ, ವಿವರಿಸಿ ಸಂಬಂಧಕಲ್ಪಿಸಿ ಹೇಳುವುದು. वि + आ + ख्या (प्रकथने) "अङ्" (३-३-१०६)। "न शिष्याननुबध्नीत ग्रन्थान्नैवाभ्यसेद्बहून्। न व्याख्यामुपयुञ्जीत नारम्भानारभेत् क्वचित्" भाग० ७-१३-८। 2. ಬೋಧನೆ, ಉಪದೇಶ. "व्याख्यामुद्रां करसरसिजैः पुस्तकं शङ्खचक्रे" हयग्री०।

**व्याख्यात ವ್ಯಾಖ್ಯಾತ** (वि०) 1. ವಿವರಿಸಲ್ಪಟ್ಟ, ಸಂಬಂಧಕಲ್ಪಿಸಿ ವಿವರವಾಗಿ ಹೇಳಲ್ಪಟ್ಟ. वि+आ+ख्या (प्रकथने) "क्तः" (३-२-१०२)। "निगमान्तेषु निगदव्याख्यातनिजवैभवः" पाद० १६-४। 2. ಬೋಧಿಸಲ್ಪಟ್ಟ, ಉಪದೇಶಿಸಲ್ಪಟ್ಟ.

**व्याख्यातव्य ವ್ಯಾಖ್ಯಾತವ್ಯ** (वि०) 1. ವಿವರಿಸಿ ಹೇಳಲ್ಪಡುವ. 2. ವಿವರಿಸಿ ಹೇಳಬೇಕಾದ. वि+आ+ख्या (प्रकथने) "तव्यः" (३-१-९६)। 3. ವಿವರಿಸಿ ಹೇಳಬಹುದಾದ. 4. ಉಪದೇಶಿಸಲ್ಪಡುವ. 5. ಉಪದೇಶಿಸಬೇಕಾದ. 6. ಉಪದೇಶಿಸಬಹುದಾದ.

**व्याख्यातृ ವ್ಯಾಖ್ಯಾತೃ** (वि०) 1. ವ್ಯಾಖ್ಯಾನ ಮಾಡುವವನು, ವಿಷಯವನ್ನು ವಿವರಿಸಿ ಹೇಳುವವನು, ಸಂಬಂಧ ಕಲ್ಪಿಸಿ ವಿವರಿಸುವವನು. वि + आ + ख्या (प्रकथने) "तृच्" (३-१-१३३)। 2. ಬೋಧಿಸುವವನು, ಉಪದೇಶಿಸುವವನು.

**व्याख्यान ವ್ಯಾಖ್ಯಾನ** (न०) 1. ವಿವರಿಸಿ ಹೇಳುವುದು, ಸಂಬಂಧಕಲ್ಪಿಸಿ ವಿವರಿಸುವುದು. 2. ಉಪದೇಶಿಸುವುದು, ಬೋಧಿಸುವುದು. वि + आ + ख्या (प्रकथने) "ल्युट्" (३-३-११५)।

**व्याख्येय ವ್ಯಾಖ್ಯೇಯ** (वि०) 1. ವಿವರಿಸಿ ಹೇಳಲ್ಪಡುವ. 2. ವಿವರಿಸಿ ಹೇಳಬೇಕಾದ. 3. ವಿವರಿಸಿ ಹೇಳಬಹುದಾದ. वि + आ + ख्या (प्रकथने) "यत्" (३-१-९७)। 4. ಬೋಧಿಸಬೇಕಾದ, ಉಪದೇಶಿಸಬೇಕಾದ. 5. ಉಪದೇಶಿಸಲ್ಪಡುವ. 6. ಉಪದೇಶಿಸಬಹುದಾದ.

**व्याघट्टन ವ್ಯಾಘಟ್ಟನ** (न०) ಉಜ್ಜುವುದು, ತಿಕ್ಕುವುದು, ಘರ್ಷಣೆ.

**व्याघात ವ್ಯಾಘಾತ** (पुं०) 1. ವಿಘ್ನ, ಅಡ್ಡಿ, ತಡೆ. वि + आ + हन (हिंसागत्योः) "घञ्" (३-३-१८)। 2. ಭಂಗಪಡಿಸುವುದು, ಮೀರಿ ನಡೆಯುವುದು, ಮುರಿಯುವುದು. "वृषल, ममापि खलु त्वदाज्ञाव्याघात एव कौमुदीमहोत्सवप्रतिषेधस्य प्रथमं प्रयोजनमिति" मुद्रा० ३। 3. ಏಟು, ಹೊಡೆತ, ಪೆಟ್ಟು. 4. ವಿಷ್ಕಂಭ ಮೊದಲಾದ 27 ಯೋಗಗಳಲ್ಲಿ 13 ನೆಯ ಒಂದು ಯೋಗ. 5. ಅರ್ಥಾಲಂಕಾರದ ಒಂದು ಭೇದ. ಈ ಅಲಂಕಾರವು (1) ಒಂದು ಕಾರ್ಯಕ್ಕೆ ಸಾಧನವಾದ ಲೋಕಸಿದ್ಧವಾದ ಒಂದು ವಸ್ತುವು ಅದಕ್ಕೆ ವಿರುದ್ಧವಾದ ಕಾರ್ಯಕ್ಕೆ ಸಾಧನವಾಗಿ ವರ್ಣಿಸುವಲ್ಲಿ ವ್ಯಾಘಾತಾಲಂಕಾರ. (2) ಒಂದು ಕಾರ್ಯದ ಸೌಕರ್ಯಕ್ಕಾಗಿ ನಿಯುಕ್ತವಾದ ಕ್ರಿಯೆಯು ಆ ಕಾರ್ಯಕ್ಕೆ ವಿರುದ್ಧವಾಗಿ ವರ್ಣಿತವಾಗುವಲ್ಲಿಯೂ ವ್ಯಾಘಾತಾಲಂಕಾರ ಈ ರೀತಿ ಎರಡು ವಿಧ. ಕ್ರಮವಾಗಿ **ಉದಾ:** (1) "यैर्जगत्प्रीयते हन्ति तैरेव कुसुमायुधः"। (2) "दया चेद्बाल इति मय्यपरित्याज्य एव ते"। "दृशा दग्धं मनसिजं जीवयन्ति दृशैव याः। विरूपाक्षस्य

जयिनीस्ता: स्तुवे वामलोचना:"। 6. ಅಸಂಬದ್ಧವಾದ ಮಾತು. "यावज्जीवमहं मौनी ब्रह्मचारी च मे पिता। माता तु मम बन्ध्यासीत् अपुत्रश्च पितामह:"॥

**व्याघूर्णत् ವ್ಯಾಘೂರ್ಣತ್** (वि०) ವೇಗವಾಗಿ ಸುತ್ತುತ್ತಿರುವ, ತಿರುಗುತ್ತಿರುವ, ಭ್ರಮಿಸುತ್ತಿರುವ. वि + आ + घूर्ण (भ्रमणे) तुदा० "शतृ" (३-२-१२४)। "व्याघूर्णन्माल्यभूषावसनपरिकरो मेघगम्भीरघोष:"। भ्वा० "शानच्" (३-२-१२४)। **-घूर्णमान: -ಘೂರ್ಣಮಾನಃ.**

**व्याघूर्णन ವ್ಯಾಘೂರ್ಣನ** (न०) ವಿಶೇಷವಾಗಿ ಸುತ್ತುವುದು, ವೇಗವಾಗಿ ತಿರುಗುವುದು. वि + आ + घूर्ण (भ्रमणे) "ल्युट्" (३-३-११५)।

**व्याघूर्णयत् ವ್ಯಾಘೂರ್ಣಯತ್** (वि०) ಸುತ್ತಿಸುತ್ತಿರುವ, ತಿರುಗಿಸುತ್ತಿರುವ. वि + आ + घूर्ण (भ्रमणे) + णिच् "शतृ" (३-२-१२४)। स्त्रियां "ङीप्" (४-१-६)। **-यन्ती -ಯಂತೀ.**

**व्याघूर्णित ವ್ಯಾಘೂರ್ಣಿತ** (वि०) 1. ವೇಗವಾಗಿ ಸುತ್ತಿಸಲ್ಪಟ್ಟ, ವೇಗವಾಗಿ ತಿರುಗಿಸಲ್ಪಟ್ಟ. वि+आ+घूर्ण (भ्रमणे) + णिच् "क्त:" (३-२-१०२)। 2. ವೇಗವಾಗಿ ತಿರುಗಿದ. वि + आ + घूर्ण कर्त० "क्त:" (३-४-७२)।

**व्याघ्र ವ್ಯಾಘ್ರ** (पुं०) 1. ಶಾರ್ದೂಲ, ಹುಲಿ. व्याजिघ्रति —वि+आ+घ्रा (गन्धोपादाने) "क:" (३-१-१३६)। "व्याघ्राघ्रातमृगीकृपाकुलमृगन्यायेन हिंसारुचे:" मालती० ५-२९। 2. ರಕ್ತ ಏರಂಡವೃಕ್ಷ, ಕೆಂಪು ಹರಳು ಗಿಡ. (वि०) 3. (ಸಮಾಸದಲ್ಲಿ ನರ ಪುರುಷ ಮೊದಲಾದ ಪದಗಳಿಗೆ ಉತ್ತರಪದವಾದಾಗ) ಶ್ರೇಷ್ಠ, ಉತ್ತಮ. "किं नु दु:खतरं शक्यं मया द्रष्टुमत: परम्। योऽहमद्य नरव्याघ्रान् सुप्तान् पश्यामि भूतले" भा०।

**व्याघ्रदल ವ್ಯಾಘ್ರದಲ** (पुं०) ಏರಂಡವೃಕ್ಷ, ಹರಳುಗಿಡ.

**व्याघ्रनख ವ್ಯಾಘ್ರನಖ** (न०) 1. ಹುಲಿಯುಗುರು ಗಿಡ. व्याघ्रस्य नखमिव। 2. ಸೂರಣದಗಡ್ಡೆ. 3. ನಖಿಯೆಂಬ ಒಂದು ಸುಗಂಧ ದ್ರವ್ಯ. 4. ನಖಕ್ಷತ, ಉಗುರಿನ ಗಾಯ. "भवेद्व्याघ्रनखं कन्दगन्धद्रव्यविशेषयो:। नखक्षतान्तरे क्लीबम्" मेदि०। (पुं०) 5. ಹುಲಿಯ ಕಾಲಿನ ಪಂಜ. 6. ಕಳ್ಳಿಮರ.

**व्याघ्रपाद् ವ್ಯಾಘ್ರಪಾದ್** (पुं०) 1. ಹುಳಿ ಚೇಲದ ಮರ. व्याघ्रस्य पादा इव पादा: मूलान्यस्य, पादशब्दस्य अकारलोप: (५-४-१३८)। "विकङ्कत: स्रुवावृक्ष: ग्रन्थिलो व्याघ्रपादपि" अम०। (वि०) 2. ಹುಲಿಯ ಕಾಲುಗಳಂತೆ ಕಾಲುಗಳುಳ್ಳವನು. व्याघ्रपादाविव पादौ यस्य — अकारलोप: (५-४-१३८)।

**व्याघ्रपुच्छ ವ್ಯಾಘ್ರಪುಚ್ಛ** (पुं०) 1. ಏರಂಡವೃಕ್ಷ, ಹರಳುಗಿಡ. व्याघ्रस्य पुच्छमिव पुच्छमस्य। (पुंन०) 2. ಹುಲಿಯ ಬಾಲ.

**व्याघ्राट ವ್ಯಾಘ್ರಾಟ** (पुं०) ಭರದ್ವಾಜ ಹಕ್ಕಿ. व्याघ्र इव अटति — अट (गतौ) "अच्" (३-१-१३४)। "व्याघ्राट:स्याद्भरद्वाज:" अम०।

**व्याघ्रास्य ವ್ಯಾಘ್ರಾಸ್ಯ** (पुं०) ಬಿಡಾಲ, ಮಾರ್ಜಾರ, ಬೆಕ್ಕು. व्याघ्रस्येव आस्यमस्य।

**व्याघ्री ವ್ಯಾಘ್ರೀ** (स्त्री०) 1. ಹೆಣ್ಣು ಹುಲಿ. व्याघ्र "ङीष्" (४-१-६३)। 2. ಹೆಗ್ಗುಳ್ಳದ ಗಿಡ. व्याजिघ्रति —वि+आ+घ्रा (गन्धोपादाने) "क:" (३-१-१३६)। "ङीष्" (४-१-४१)।

**व्याज ವ್ಯಾಜ** (पुं०) 1. ಕಪಟ, ಠಕ್ಕು, ಬೂಟಾಟಿಕೆ. व्यजन्ति क्षिपन्त्यनेन—वि+अज (गतिक्षेपणयो:) "घञ्" (३-३-१२१)। 2. ಅಪದೇಶ, ನೆಪ. ಒಂದು ಕಾರ್ಯವನ್ನು ಉದ್ದೇಶಿಸಿ ಹೊರಟು ಮತ್ತೊಂದು ಕಾರ್ಯದಲ್ಲಿ ಪ್ರವರ್ತಿಸುವುದು ವ್ಯಾಜ (ನೆಪ). ಶಾಲೆಗೆ ಹೋಗುವ ಕಾರಣವನ್ನು ಹೇಳಿ ಕ್ರೀಡಾಂಗಣಕ್ಕೆ ಹೋಗುವುದು. ಕ್ರೀಡಾಂಗಣ, ಚಲನ ಚಿತ್ರಮಂದಿರ ಮೊದಲಾದುವುಗಳಿಗೆ ಹೋಗಲು ಶಾಲಾಗಮನದ ಹೇಳಿಕೆಯು ವ್ಯಾಜವಾಗುವುದು. "शून्यं वासगृहं विलोक्य शयनादुत्थाय किञ्चिच्छनै: निद्राव्याजमुपागतस्य सुचिरं निर्वर्ण्य पत्युर्मुखम्" अमरु०। 3. ತಂತ್ರ, ಉಪಾಯ, ಯುಕ್ತಿ. "अमुं सहासप्रहितेक्षणानि व्याजार्धसंदर्शितमेखलानि" रघु० १३-४२। 4. ಕೃತ್ರಿಮ. "इदं, किलाव्याजमनोहरं वपु:" शाकु० १-१६। 5. ಶಾಠ್ಯ, ಮೂರ್ಖತನ, ದೌಷ್ಟ್ಯ. "व्याज: शाठ्ये" मेदि०।

**व्याजनिन्दा ವ್ಯಾಜನಿಂದಾ** (स्त्री०) ಒಬ್ಬನ ನಿಂದೆ (ದೂಷಣೆ)ಯಿಂದ ತೋರುವ ಮತ್ತೊಬ್ಬನ ನಿಂದೆ. व्याजेन एकस्य निन्दापदेशेन अन्यस्य निन्दा दूषणम्। ಇದು ಅರ್ಥಾಲಂಕಾರದ ಒಂದು ಭೇದ. "निन्दाया निन्दया व्यक्तिर्व्याजनिन्देति गीयते"। **उदा:** "विधे: स निन्द्यो यस्ते प्रागेकमेवाहरच्छिर:"। ಇಲ್ಲಿ ಹರನ ನಿಂದೆಯಿಂದ ಚತುರ್ಮುಖನ ನಿಂದೆಗೆ ಅಭಿವ್ಯಕ್ತಿಯುಂಟಾಗು

ವುದು. "विधिरेव विशेषगर्हणीयः करट त्वं रट कस्तवापराधः। सहकारतरौ चकार यस्ते सहवासं सरलेन कोकिलेन"॥

**व्याजस्तुति ವ್ಯಾಜಸ್ತುತಿ** (स्त्री०) ಒಂದು ಅರ್ಥಾಲಂಕಾರ. व्याजेन निन्दाव्याजेन स्तुतिः। व्याजरूपा स्तुतिः व्याजस्तुतिः। ನಿಂದೆಯ ನೆಪದಿಂದ ಸ್ತುತಿಯೂ ಸ್ತುತಿನೆಪದಿಂದ ನಿಂದೆಯೂ ಸ್ತುತಿಯಿಂದ ಸ್ತುತಿಯೂ ಅಭಿವ್ಯಕ್ತವಾಗುವಲ್ಲಿ "**ವ್ಯಾಜಸ್ತುತಿ**" ಅಲಂಕಾರ. "उक्तिर्व्याजस्तुतिर्निन्दास्तुतिभ्यां स्तुतिनिन्दयोः"। **ಉದಾ:** "कः स्वर्धुनि विवेकस्ते नयसे पापिनो दिवम्"। "साधु दूति पुनः साधु कर्तव्यं किमतः परम्। यन्मदर्थे विलूनासि दन्तैरपि नखैरपि"॥

**व्याजोक्ति ವ್ಯಾಜೋಕ್ತಿ** (स्त्री०) ಅರ್ಥಾಲಂಕಾರದ ಒಂದು ಭೇದ. ಬೇರೆ ಕಾರಣವನ್ನು ಹೇಳಿ ತನ್ನ ಸ್ವರೂಪ ಆಕಾರ ಇತ್ಯಾದಿಗಳನ್ನು ಗೋಪನಮಾಡುವುದು (ಮರೆ ಮಾಚುವುದು). व्याजस्य उक्तिः। "व्याजोक्तिरन्यहेतूक्त्या यदाकारस्य गोपनम्"। **ಉದಾ:** "सखि पश्य गृहारामपरागैरस्मि धूसरा"।

**व्याड ವ್ಯಾಡ** (पुं०) 1. ಸರ್ಪ, ಹಾವು. वि + आ + अड (उद्यमे) "अच्" (३-१-१३४)। 2. ಮಾಂಸತಿನ್ನುವ ಪಶು, ಮಾಂಸವೇ ಆಹಾರವಾಗಿರುವ ಹುಲಿ ಮೊದಲಾದ ಕ್ರೂರ ಪ್ರಾಣಿ. 3. ವಂಚಕ, ಮೋಸಗಾರ. 4. ಇಂದ್ರ. "व्याडौ हिंस्रपशूरगौ" नानार्थर०।

**व्याडायुध ವ್ಯಾಡಾಯುಧ** (न०) ಹುಲಿಯುಗುರು ಗಿಡ. व्याडस्य व्याघ्रस्य आयुधमिव। "व्याडायुधं व्याघ्रनखम्" अम०।

**व्याडि ವ್ಯಾಡಿ** (पुं०) ಒಬ್ಬ ಪ್ರಸಿದ್ಧ ವೈಯಾಕರಣ, ಒಬ್ಬ ನಿಘಂಟುಕಾರ. "कात्यवाचस्पतिव्याडिभागुर्यमरमङ्गलाः। साहसाङ्कमहेशाद्या विजयन्ते जिनान्तिमाः"।

**व्यात्त ವ್ಯಾತ್ತ** (वि०) ತೆರೆಯಲ್ಪಟ್ಟ, ವಿಸ್ತರಿಸಲ್ಪಟ್ಟ. वि + आ + दाञ् (दाने) "क्तः" (३-२-१०२)। घोरचः "तः" (७-४-४७)।

**व्यात्युक्षी ವ್ಯಾತ್ಯುಕ್ಷೀ** (स्त्री०) ಜಲಕ್ರೀಡೆಯಲ್ಲಿ ಪರಸ್ಪರ ನೀರನ್ನು ಎರಚಾಡುವುದು. व्यतिहारेण उक्षणम्—वि+आ+अति+उक्ष (सेचने) भावे "णच्" (३-३-४३)। "व्यात्युक्षीमिति तां प्राहुः यदन्योन्येन सेचनम्"। "ताः कान्तैः सह करपुष्करेरिताम्बुव्यात्युक्षीमभिसरणग्लहामदीव्यन्" माघ० ८-३२।

**व्यादान ವ್ಯಾದಾನ** (न०) ತೆರೆಯುವುದು, ಬಿಚ್ಚುವುದು, ಬಾಯಿಬಿಡುವುದು; (ಬಾಯನ್ನು) ವಿಸ್ತರಿಸುವುದು. वि+आ + डु दाञ् (दाने) "ल्युट्" (३-३-११५)। "कर्णाभ्यर्णविदीर्णसृक्कविकटव्यादानदीप्ताग्निभिः" मालती० ५-१३।

**व्यादिश ವ್ಯಾದಿಶ** (पुं०) ವಿಷ್ಣು. वि + आ + दिश (अतिसर्जने) "कः" (३-१-१३५)। "ब्रह्मादीनां तत्तत्स्थानसर्जनात् व्यादिशश्च सः" इति निरुक्तिः। "चतुरश्रो गभीरात्मा विदिशो व्यादिशो दिशः" वि० स०।

**व्याध ವ್ಯಾಧ** (पुं०) 1. ಬೇಡ, ಬೇಟೆಗಾರ. विध्यति मृगादीन्—व्यध (ताडने) "णः" (३-१-१४१)। 2. ದುಷ್ಟ, ಅಸಭ್ಯ. "व्याधस्याप्यनुकम्प्यानां स्त्रीणां देवः सतीपतिः" भाग० ३-१४-३४। "व्याधो मृगयुदुष्टयोः" मेदि०।

**व्याधि ವ್ಯಾಧಿ** (पुं०) 1. ರೋಗ, ಕಾಯಿಲೆ. विविधा आधयोऽस्मात्। वि+आ+धाञ् "किः" (३-३-९२) वा। "तद्दुःखसंयोगा व्याधय उच्यन्ते" सुश्रुत० सूत्र० १-२३। ವ್ಯಾಧಿಯು ಆಗಂತು ಶಾರೀರ ಮಾನಸ ಮತ್ತು ಸ್ವಾಭಾವಿಕ ಎಂದು ನಾಲ್ಕು ವಿಧ. "ते चतुर्विधा : (1) आगन्तवः (2) शारीराः (3) मानसाः (4) स्वाभाविकाश्चेति" सुश्रुत० सूत्र० १-२४। ["रोग" ಪದದಲ್ಲಿ ನೋಡಿ] 2. ಕುಷ್ಠ, ಚೆಂಗಲುಕೋಷ್ಟ. "व्याधिः कुष्ठे च रोगे च" मेदि०। 3. ಕುಷ್ಠರೋಗ.

**व्याधिघात ವ್ಯಾಧಿಘಾತ** (पुं०) ಕಕ್ಕೆಗಿಡ. व्याधीन् हन्ति—हन (हिंसागत्योः) "अण्" (३-२-१)। "आरेवतव्याधिघातकृतमालसुवर्णकाः" अम०।

**व्याधित ವ್ಯಾಧಿತ** (वि०) ರೋಗಿ, ಕಾಯಿಲೆಯವನು. व्याधिरस्य सञ्जातः "इतच्" (५-२-३६)। "दरिद्रान् भर कौन्तेय मा प्रयच्छेश्वरे धनम्। व्याधितस्यौषधं पथ्यं नीरुजस्य किमौषधैः" भा०।

**व्याधुत ವ್ಯಾಧುತ** (वि०) ಕೊಡವಲ್ಪಟ್ಟ, ಒದರಲ್ಪಟ್ಟ. वि + आ + धुञ् (कम्पने) "क्तः" (३-२-१०२)।

**व्याधुन्वत् ವ್ಯಾಧುನ್ವತ್** (वि०) ಒದರುತ್ತಿರುವ, ಕೊಡವುತ್ತಿರುವ. वि + आ + धुञ् (कम्पने) "शतृ" (३-२-१२४)। स्त्रियां "ङीप्" (४-१-६)। **–धुन्वती –ಧುನ್ವತೀ.** "करौ व्याधुन्वत्याः पिबसि रतिसर्वस्वमधरम्" शाकु० १-२०। "शानच्" (३-२-१२४)। **–धुन्वानः –ಧುನ್ವಾನಃ.**

**व्याधूत ವ್ಯಾಧೂತ** (वि०) ಕೊಡವಲ್ಪಟ್ಟ, ಒದರಲ್ಪಟ್ಟ. वि + आ + धूञ् (कम्पने) "क्तः" (३-२-१०२)। "एतस्मिन् मदकलमल्लिकाक्षपक्षव्याधूतस्फुरदुरुदण्डपुण्डरीकाः" उ० रा० १-३१।

**व्यान ವ್ಯಾನ** (पुं०) ಪಂಚ ಪ್ರಾಣವಾಯುಗಳಲ್ಲೊಂದು ವಾಯು. व्यानिति सर्वशरीरं व्याप्नोति—वि+आ+अन (प्राणने) "अच्" (३-१-१३४)। ವ್ಯಾನವಾಯುವು ಶರೀರದ ಎಲ್ಲಾ ಭಾಗಗಳಲ್ಲೂ ಇರುವುದು. ["प्राण" ಪದದಲ್ಲಿ ನೋಡಿ] "व्यानः सर्वशरीरगः" अम०।

**व्यापक ವ್ಯಾಪಕ** (वि०) 1. ಎಲ್ಲಾ ಕಡೆಯಲ್ಲೂ ವ್ಯಾಪಿಸುವ, ಸುತ್ತಲೂ ಹರಡುವ. वि + आप्लृ (व्याप्तौ) "ण्वुल्" (३-१-१३३)। "तिर्यगूर्ध्वमधस्ताच्च व्यापको महिमा हरेः। त्रिविक्रमोद्यतस्यासीत्स तु स्वाभाविकस्तव" कुमा० ६-७१। 2. ಎಲ್ಲಾ ಭಾಗಗಳ ಸಂಬಂಧವನ್ನೂ ಹೊಂದಿರುವ. 3. ಯಾವಾಗಲೂ ತಪ್ಪದೆ ಒಟ್ಟಿಗಿರುವ, ಯಾವಾಗಲೂ ಒಂದೇ ಕಡೆ ಇರುವ. 4. ಆಚ್ಛಾದಕ. स्त्रियां व्यापिका ವ್ಯಾಪಿಕಾ.

**व्यापत्ति ವ್ಯಾಪತ್ತಿ** (स्त्री०) 1. ಕಷ್ಟ, ತೊಂದರೆ. वि+आ + पद (गतौ) "क्तिन्" (३-३-९४)। "औदासीन्यं न युक्तं प्रियसुहृदि गते मत्कृते चातिघोरां व्यापत्तिं ज्ञातमस्य स्वतनुमहमिमां निष्क्रयं कल्पयामि" मुद्रा० ६-२१। 2. ನಿಧನ, ಮರಣ. "तयोस्तस्मिन्नवीभूतपितृव्यापत्तिशोकयोः" रघु० १२-५६। 3. ವ್ಯಾಧಿ, ರೋಗ.

**व्यापद् ವ್ಯಾಪದ್** (स्त्री०) 1. ಆಪತ್ತು, ವಿಪತ್ತು, ಕೇಡು. वि + आङ् + पद (गतौ) "क्विप्" (वा० ३-३-९४)। "पश्य श्वश्रूकृता व्यापदिहापि फलिता मम" कथास०। 2. ವ್ಯಾಧಿ, ರೋಗ. 3. ನಿಧನ.

**व्यापन ವ್ಯಾಪನ** (न०) 1. ಸುತ್ತಲೂ ಹರಡುವುದು, ಎಲ್ಲಾ ಕಡೆಯಲ್ಲೂ ವ್ಯಾಪಿಸುವುದು. 2. ಎಲ್ಲಾ ಭಾಗಗಳ ಸಂಬಂಧವನ್ನೂ ಹೊಂದುವುದು. 3. ಯಾವಾಗಲೂ ಒಟ್ಟಿಗೆ ಒಂದೇ ಕಡೆ ಇರುವುದು. वि+आप्लृ (व्याप्तौ) "ल्युट्" (३-३-११५)। 4. ಆಚ್ಛಾದನ, ಮುಚ್ಚುವುದು.

**व्यापन्न ವ್ಯಾಪನ್ನ** (वि०) 1. ಕಷ್ಟಕ್ಕೆ ಒಳಗಾದ, ತೊಂದರೆಗೆ ಸಿಲುಕಿರುವ. वि+आ+पद (गतौ) "क्तः" (३-२-१०२)। 2. ಮೃತನಾದ, ಅವಸಾನ ಹೊಂದಿದ.

**व्यापाद ವ್ಯಾಪಾದ** (पुं०) 1. ದ್ರೋಹವನ್ನು ಚಿಂತಿಸುವುದು, ಇನ್ನೊಬ್ಬನಿಗೆ ಕೇಡನ್ನು ಬಯಸುವುದು वि + आ + पद (गतौ) + णिच् "घञ्" (३-३-१८)। 2. ಕೊಲ್ಲುವುದು. "ल्युट्" (३-३-११५)। व्यापादनम् ವ್ಯಾಪಾದನಮ್.

**व्यापादित ವ್ಯಾಪಾದಿತ** (वि०) 1. ಕೊಲ್ಲಿಸಲ್ಪಟ್ಟ. वि+आ + पद (गतौ) + णिच् "क्तः" (३-२-१०२)। 2. ಕಷ್ಟಕ್ಕೆ ಸಿಲುಕಿಸಲ್ಪಟ್ಟ, ತೊಂದರೆಗೆ ಈಡುಮಾಡಲ್ಪಟ್ಟ.

**व्यापार ವ್ಯಾಪಾರ** (पुं०) 1. ಕಾರ್ಯ, ಕೆಲಸ. वि + आ+पृङ् (व्यायामे) "घञ्" (३-३-१८)। "वैखानसं किमनया व्रतमाप्रदानाद्व्यापाररोधि मदनस्य निषेवितव्यम्" शाकु० १-२३। 2. ಸಾಹಾಯ್ಯ, ಒತ್ತಾಸೆ, ಉಪಕಾರ, 3. ಪ್ರಯತ್ನ. "आर्याप्यरुन्धती तत्र व्यापारं कर्तुमर्हति" कुमा० ६-३२। 4. ಪ್ರಯೋಗಿಸುವುದು, ಉಪಯೋಗಿಸುವುದು. "वृष्णीनामिव नीतिविक्रमगुणव्यापारशान्तद्विषाम्" मुद्रा० २-४। 5. ಉದ್ಯೋಗ, ಉದ್ಯಮ. 6. ವೃತ್ತಿ, ಕಸಬು.

**व्यापारित ವ್ಯಾಪಾರಿತ** (वि०) 1. ಪ್ರಯೋಗಿಸಲ್ಪಟ್ಟ, ಉಪಯೋಗಿಸಲ್ಪಟ್ಟ. "व्यापारितं शिरसि शस्त्रमशस्त्रपाणेः" वेणी० ३-२१। 2. ಕೆಲಸ ಮಾಡಿಸಲ್ಪಟ್ಟ. 3. ಕ್ರಯ ವಿಕ್ರಯ ಮಾಡಿಸಲ್ಪಟ್ಟ.

**व्यापारिन् ವ್ಯಾಪಾರಿನ್** (वि०) 1. ಕೆಲಸವುಳ್ಳವನು. 2. ಪ್ರಯತ್ನವುಳ್ಳವನು. व्यापारोऽस्यास्ति "इनिः" (५-२-११५)। 3. ಕ್ರಯ ವಿಕ್ರಯವುಳ್ಳವನು, ಕೊಳ್ಳುವವನು ಮತ್ತು ಮಾರುವವನು.

**व्यापिन् ವ್ಯಾಪಿನ್** (वि०) 1. (ಸಮಾಸದ ಕೊನೆಯಲ್ಲಿ) ಎಲ್ಲಾ ಕಡೆಯಲ್ಲೂ ಹರಡುವ, ಸುತ್ತಲೂ ವ್ಯಾಪಿಸುವ. वि + आप्लृ (व्याप्तौ) "णिनिः" (३-२-७८)। 2. ಬಹಳ ದೂರ ವಿಸ್ತರಿಸುವ. "व्यापि प्रासङ्गिकं वृत्तं पताकेत्यभिधीयते" सा० द० ६-६७। 3. ಯಾವಾಗಲೂ ಒಟ್ಟಿಗಿರುವ, ಸರ್ವದಾ ಒಡನಿರುವ. 4. ಆಚ್ಛಾದಿಸುವ, ಮುಚ್ಚುವ. स्त्रियां "ङीप्" (४-१-५)। व्यापिनी ವ್ಯಾಪಿನೀ.

**व्यापृत ವ್ಯಾಪೃತ** (पुं०) 1. ಕರ್ಮಸಚಿವ, ರಾಜನ ಕಾರ್ಯಗಳನ್ನು ನಡೆಸುವ ಮಂತ್ರಿ, ರಾಜನ ಆದೇಶದಂತೆ ರಾಜ್ಯದ ವ್ಯವಹಾರಗಳನ್ನು ನಡೆಸುವ ಸಚಿವ. वि+आ+पृ (प्रीतौ) "क्तः" (३-२-१०२)। "नियोगी कर्मसचिव आयुक्तो व्यापृतश्च सः" हेम०। (वि०) 2. ಒಂದು ಕಾರ್ಯದಲ್ಲಿ ನಿರತನಾದವನು. "अबिज्यमिदमन्यस्मिन्

परिचयवत्यवधीरणा प्रिये" माल० ३-२०। 3. ದ್ವೇಷದಿಂದ ಅನರ್ಥದ ಕಾರ್ಯವನ್ನು ಮಾಡುವವನು, ಅಭಿಚಾರ (ಮಾಟ, ಶೂನ್ಯ ಮೊದಲಾದ) ಕಾರ್ಯ ಮಾಡುವವನು. "अयुक्तः प्राकृतः स्तब्धः शठो नैकृतिकोऽलसः" गीता १८-२८। 4. ವೇದದಲ್ಲಿ ನಂಬಿಕೆಯಿಲ್ಲದಿರುವವನು. "पाषण्डिनो विकर्मस्थान् बैडालव्रतिकान् शठान्" मनु० ४-३०। 5. ದತ್ತೂರಿ ಗಿಡ. (वि०) 6. ಮಧ್ಯವರ್ತಿ, ವಿರೋಧಿಗಳಾದ ಇಬ್ಬರಿಗೆ ಹಿತವನ್ನು ಹೇಳಿ ಮೈತ್ರಿಯನ್ನುಂಟುಮಾಡುವವನು. "शठो मध्यस्थपुरुषे धूर्तधुस्तूरयोरपि" मेदि०। 7. ಚತುರ, ಬುದ್ಧಿವಂತ, ನಿಪುಣ. (न०) 8. ಲೋಹ, ಕಬ್ಬಿಣ. 9. ತವರ. 10. ಕುಂಕುಮ ಕೇಸರಿ.

**शठता ಶಠತಾ** (स्त्री०) ವಂಚನೆ, ಮೋಸ. शठस्य भावः "तल्" (५-१-११९)।

**शण ಶಣ** (न०) ಸಣಬು. शणति—शण (दाने) "अच्" (३-१-१३४)।

**शणपुष्पिका ಶಣಪುಷ್ಪಿಕಾ** (स्त्री०) ಸಣಬಿನ ಗಿಡ.

**शणसूत्र ಶಣಸೂತ್ರ** (न०) ಸಣಬು ದಾರ, ಮತ್ಸ್ಯದ ಬಲೆಯನ್ನು ತಯಾರಿಸುವ ದಾರ. शण (गतौ) "अच्" (३-१-१३४)। शणस्य सूत्रम्। "शणसूत्रं पवित्रकम्" अम०।

**शणीर ಶಣೀರ** (न०) ಪ್ರವಾಹದಲ್ಲಿ ಬಂದು ಬಿದ್ದ ಶೋಣನದದ ಮರಳು ಅಥವಾ ಮೆಕ್ಕಲುಮಣ್ಣು.

**शण्ढ ಶಂಢ** (पुं०) 1. ನಪುಂಸಕ. शाम्यति मैथुनात्—शमु (उपशमे) "ढः" (उ० १-९९)। 2. ವೃಷಭ, ಗೂಳಿ.

**शत ಶತ** (न०) ಒಂದು ನೂರು, ಹತ್ತರಿಂದ ಗುಣಿಸಲ್ಪಟ್ಟ ಹತ್ತು ಸಂಖ್ಯೆ. दश दशतः परिमाणमस्य "त" प्रत्ययः प्रकृतेः शादेशश्च निपा० (५-१-५९)। "पुरमथ गमयित्वा भूषितं यादवाग्र्यैः शतसमधिकसंख्यं षोडशस्त्रीसहस्रम्" याद० १६-१४४। "निःस्वो वष्टि शतं शती दशशतम्" शान्तिशतकम्। ನೂರು ಎಂಬ ಅರ್ಥದಲ್ಲಿ ಶತ ಶಬ್ದವು ಯಾವಾಗಲೂ ಏಕವಚನದಲ್ಲೇ ಇರುವುದು. "विंशत्याद्याः सदैकत्वे" अम०। ಆದರೆ ಅನೇಕ ಶತ ಎಂಬ ಅರ್ಥದಲ್ಲಿ ದ್ವಿವಚನ ಮತ್ತು ಬಹುವಚನಗಳಲ್ಲೂ ಪ್ರಯೋಗವುಂಟು. "दासीनां सुकुमारीणां द्वे शते समलंकृते। दुहित्रे देवकः प्रादात् याने दुहितृवत्सलः" भाग० १०-१-३२।

**शतक ಶತಕ** (न०) 1. ನೂರು ಸಂಖ್ಯೆ. शत स्वार्थे "कः" (वा० ५-१-५८)। 2. ನೂರು ಸಂಖ್ಯೆಯುಳ್ಳ. शतं परिमाणमस्य "कन्" (५-१-५८)। ನೂರು ಪದ್ಯಗಳುಳ್ಳ ಒಂದು ಗ್ರಂಥ. अमरुशतकम्, नीतिशतकम्, दृष्टान्तशतकम्, चाणक्यशतकम् ಇತ್ಯಾದಿ. ನೂರು ಸಂಖ್ಯೆಯುಳ್ಳ ಒಂದು ಗುಂಪು. 3. ನೂರರಿಂದ ಕೊಳ್ಳಲ್ಪಟ್ಟ. शतेन क्रीतम् "कन्" (५-१-२२)।

**शतकुम्भ ಶತಕುಂಭ** (पुं०) ಒಂದು ಪರ್ವತ.

**शतकोटि ಶತಕೋಟಿ** (पुं०) 1. ವಜ್ರಾಯುಧ. शतं कोटयो धारा अग्रभागा अस्य। (स्त्री०) 2. ನೂರು ಕೋಟಿ ಸಂಖ್ಯೆ. (वि०) 3. ನೂರು ಧಾರೆ (ಅಗ್ರಭಾಗ) ಗಳುಳ್ಳ.

**शतक्रतु ಶತಕ್ರತು** (पुं०) ಮಹೇಂದ್ರ, ಶಕ್ರ, ದೇವರಾಜ. शतं क्रतवो यस्य। "शतक्रतूरजाख्याया विख्यातिर्नास्तिकाः कथम्" नैष० १७-१०४।

**शतखण्ड ಶತಖಂಡ** (न०) ಸುವರ್ಣ, ಚಿನ್ನ, ಬಂಗಾರ. "सौमेरुकं महाधातुः शतखण्डं मृदुल्लकम्"।

**शतग्रन्थि ಶತಗ್ರಂಥಿ** (स्त्री०) ಗರಿಕೆಹುಲ್ಲು. शतं ग्रन्थयोऽस्याः।

**शतघ्नी ಶತಘ್ನೀ** (स्त्री०) 1. ಕಬ್ಬಿಣದ ಕಂಟಕ (ಮುಳ್ಳು) ಗಳಿಂದ ಆವೃತವಾದ ಶಿಲೆಯ ಒಂದು ಆಯುಧ. शतं हन्ति—हन (हिंसागत्योः) "टक्" (३-२-५३)। "अयःशङ्कुचितां रक्षः शतघ्नीमथ शत्रवे" रघु० १२-९५। 2. ಕರಂಜಕವೃಕ್ಷ, ಹೊಂಗೆಮರ. 3. ಚೇಳು. 4. ಒಂದು ವಿಧ ಕಂಠವ್ಯಾಧಿ.

**शतच्छद ಶತಚ್ಛದ** (पुं०) 1. ಮರಗುಟುಕ ಹಕ್ಕಿ. शतं छदा अस्य। 2. ನೂರು ದಳಗಳುಳ್ಳ ಕಮಲ.

**शततम ಶತತಮ** (वि०) ನೂರನೆಯ. शतस्य पूरणः "डट्" (५-२-४८)। डटः तमडागमः (५-२-५७)। स्त्रियां "ङीप्" (४-१-१५)। —तमी—ತಮೀ.

**शततारा ಶತತಾರಾ** (स्त्री०) ಶತಭಿಷಾನಕ್ಷತ್ರ. शतं तारा यस्याम्।

**शतद्रु ಶತದ್ರು** (स्त्री०) ಪಂಜಾಬಿನಲ್ಲಿ ಹರಿಯುವ ಒಂದು ನದಿ. शतधा द्रवति—द्रु (गतौ) "कुः" स च डित् (उ० १-३५)। ಈ ನದಿಯು ಹಿಮಾಲಯದಲ್ಲಿ ಹುಟ್ಟಿ ಪಂಜಾಬಿನ ಮೂಲಕ ಹರಿದು ಸಿಂಧು ನದಿಯೊಡನೆ ಕಲೆತು ಅರಬ್ಬಿಸಮುದ್ರ ಸೇರುವುದು. "शतधा विद्रुता यस्मात् शतद्रुरिति विश्रुता" भा०।

**शतधा ಶತಧಾ** (अव्य०) 1. ನೂರು ವಿಧವಾಗಿ. 2. ನೂರು ಭಾಗವಾಗಿ. शत "धा" (५-३-४२)। (स्त्री०) 3. ಗರಿಕೆಹುಲ್ಲು.

**शतधार ಶತಧಾರ** (न०) 1. ಇಂದ್ರನ ವಜ್ರಾಯುಧ. शतं धारा: अस्य। "शतधारं शतारं चाश्रोत्यं भिदिरमम्बुजम्" त्रिकाण्ड०। (वि०) 2. ನೂರು ಧಾರೆ (ಅಲುಗು) ಗಳಿಂದ ಕೂಡಿದ.

**शतधृति ಶತಧೃತಿ** (पुं०) 1. ಬ್ರಹ್ಮ, ಚತುರ್ಮುಖ. 2. ಇಂದ್ರ, ಸುರಪತಿ. "शतधृतिर्धातरीन्द्रे" विश्व०। 3. ಸ್ವರ್ಗ, ದೇವಲೋಕ.

**शतपत्र ಶತಪತ್ರ** (पुं०) 1. ಸಾರಸ ಪಕ್ಷಿ, ನೀರು ಹಕ್ಕಿ, ತಾವರೆ ಹಕ್ಕಿ. 2. ಮರಕುಟಕ ಹಕ್ಕಿ. 3. ಮಯೂರ, ನವಿಲು. 4. ಶುಕ, ಗಿಳಿ. (न०) 5. ಪದ್ಮ, ಕಮಲ, ತಾವರೆ. शतं पत्राण्यस्य। "यान्त्या मुहुर्वलितकन्धरमाननं तदावृत्तवृन्तशतपत्रनिभं वहन्त्या" मालती० १-३२।

**शतपत्रक ಶತಪತ್ರಕ** (पुं०) ಮರಕುಟಕ ಹಕ್ಕಿ.

**शतपथ ಶತಪಥ** (पुं०) ಶುಕ್ಲಯಜುರ್ವೇದ ಬ್ರಾಹ್ಮಣ.

**शतपथिक ಶತಪಥಿಕ** (वि०) 1. ಶತಪಥಬ್ರಾಹ್ಮಣವನ್ನು ಅಧ್ಯಯನ ಮಾಡುವವನು ಅಥವಾ ತಿಳಿದವನು. शतपथमधीते वेद वा "टिकन्" (वा० ४-२-६०)। 2. ನಾನಾ ಮತಗಳನ್ನು ಅವಲಂಬಿಸಿರುವವನು. 3. ನೂರಾರು ಮಾರ್ಗಗಳನ್ನು ಹಿಡಿದು ನಡೆಯುವವನು. स्त्रियां "ङीप्" (४-१-१५)। **-पथिकी -ಪಥಿಕೀ.**

**शतपद ಶತಪದ** (न०) 1. ನಕ್ಷತ್ರದ ಪಾದಕ್ರಮದಲ್ಲಿ ನಾಮಕರಣಕ್ಕೆ ಬೇಕಾದ ಮೊದಲನೆಯ ಅಕ್ಷರವನ್ನು ಸೂಚಿಸುವ ಒಂದು ಚಕ್ರ. (स्त्री०) **-पदी -ಪದೀ.** 2. ಲಕ್ಷ್ಮೀಚೇಳು. 3. ಪಿಲ್ಲಪಿಚ್ಚರ.

**शतपद्म ಶತಪದ್ಮ** (न०) ಪದ್ಮ, ಕಮಲ, ತಾವರೆ.

**शतपर्वन् ಶತಪರ್ವನ್** (पुं०) 1. ಬಿದಿರು. 2. ಗೋಧಿ. शतं पर्वाण्यस्य। (स्त्री०) 3. ಗರಿಕೆಹುಲ್ಲು. 4. ಬಜೆ. 5. ಶುಕ್ರಾಚಾರ್ಯರ ಪತ್ನಿ. "शतपर्वा तु दूर्वायां वचाभार्गवयोषितोः" मेदि०। (न०) 6. ತಾವರೆದಂಟಿ ನೊಳಗಿನ ಸಣ್ಣ ತಂತು (ಎಳೆ). 7. ಬಿಲ, ರಂಧ್ರ. "वेणौ ना दूर्वावचयोः स्त्री बिले शतपर्व षण्" वैज०।

**शतपर्विका ಶತಪರ್ವಿಕಾ** (स्त्री०) 1. ಗರಿಕೆಹುಲ್ಲು. 2. ಬಜೆ. शतं पर्वाण्यस्याः "कप्" (५-४-१५४)। "शतपर्विका दूर्वायां वचायामपि योषिति" मेदि०।

**शतपाद् ಶತಪಾದ್** (पुं०) ಲಕ್ಷ್ಮೀಚೇಳು, ಜರಿ. शतं पादा यस्य। पादस्य अन्त्यलोपः (५-४-१४०)।

**शतपादिका ಶತಪಾದಿಕಾ** (स्त्री०) ಲಕ್ಷ್ಮೀಚೇಳು, ಜರಿ. शतं पादा यस्याः "कप्" (५-४-१५४)।

**शतपुष्प ಶತಪುಷ್ಪ** (पुं०) ಕಿರಾತಾರ್ಜುನೀಯ ಕಾವ್ಯವನ್ನು ರಚಿಸಿದ ಭಾರವಿ ಕವಿ. "भारविः शतपुष्पः स्यात्" त्रिकाण्ड०।

**शतपुष्पा ಶತಪುಷ್ಪಾ** (स्त्री०) ಕಾಡುಸಬ್ಬಸಿಗೆ. शतं पुष्पाणि यस्याः। "शतपुष्पा सितच्छत्रातिच्छत्रा मधुरा मिसिः" अम०। स्वार्थे "कन्"। **-पुष्पिका -ಪುಷ್ಪಿಕಾ.**

**शतप्रास ಶತಪ್ರಾಸ** (पुं०) ಗನ್ನೇರಳೆ ಗಿಡ.

**शतभिषज् ಶತಭಿಷಜ್** (स्त्री०) 1. ಶತಭಿಷಾ ನಕ್ಷತ್ರ. शतं भिषज इव तारा यत्र। "शतभिषजि शौण्डिकानामजैकभे चूतजीविनां पीडा" बृहत्सं० ९-३४। (वि०) 2. ಶತಭಿಷಾನಕ್ಷತ್ರದಲ್ಲಿ ಹುಟ್ಟಿದವನು. शतभिषजि जातः "अण्" (४-३-२५)। अणो वा लुक् (४-३-३६)। अण् वा डित् (वा० ४-३-३६)। लुगभावे **शातभिषजः।** डित्वपक्षे **शातभिषः।**

**शतभिषा ಶತಭಿಷಾ** (स्त्री०) ಶತಭಿಷಾ ನಕ್ಷತ್ರ. ಶತಭಿಷಾ ನಕ್ಷತ್ರಕ್ಕೆ ವರುಣನು ಅಧಿಪತಿ. (ಅಧಿಷ್ಠಾತೃ ದೇವತೆ). ಈ ನಕ್ಷತ್ರ ಅಧೋಮುಖವುಳ್ಳದ್ದು. ಇದರಲ್ಲಿ ಜನಿಸಿದವನಿಗೆ ರಾಹುದಶೆಯು ಪ್ರಾರಂಭವಾಗುವುದು. ರಾಹುದಶೆಯ ಪ್ರಮಾಣ ಹದಿನೆಂಟು ವರ್ಷಗಳು. ಈ ನಕ್ಷತ್ರವು ರಾಕ್ಷಸಗಣಕ್ಕೂ ಅಶ್ವಯೋನಿಗೂ ಸೇರಿದುದು. ಕುಂಭ ರಾಶಿಗೆ ಸೇರಿದ ನಕ್ಷತ್ರವಿದು.

**शतभीरु ಶತಭೀರು** (स्त्री०) ಮಲ್ಲಿಗೆ ಗಿಡ.

**शतमख ಶತಮಖ** (पुं०) 1. ಇಂದ್ರ, ದೇವರಾಜ. शतं मखा यागा अस्य। "स्वयं संराध्यैवं शतमखमखण्डेन तपसा" किरा० १०-६२। (वि०) 2. ನೂರು ಯಾಗಗಳನ್ನು ಮಾಡಿದವನು.

**शतमन्यु ಶತಮನ್ಯು** (पुं०) 1. ಇಂದ್ರ, ಸುರಪತಿ. शतं मन्यवो यज्ञाः अस्य। "प्रसहेत तवानुजान् रणे द्विषतां कः शतमन्युतेजसः" किरा० २-२३। 2. ಘೂಕ, ಗೂಬೆ. (वि०) 3. ನೂರು ಯಾಗಗಳನ್ನು ಮಾಡಿದವನು.

**शतमान ಶತಮಾನ** (पुंन०) 1. ಒಂದು ಪಲದ ತೂಕದ ಬೆಳ್ಳಿ. "धरणानि दश ज्ञेयः शतमानस्तु राजतः" मनु० ८-१३७। 2. ಅನೇಕರಿಂದ ಪೂಜಿಸಲ್ಪಡುವವನು, ನೂರಾರುಜನರ ಗೌರವಕ್ಕೆ ಪಾತ್ರನಾದವನು. शतानामनेकेषां मानं पूजा यस्मिन्। "शतमानं भवति शतायुः पुरुषः"।

**शतमुख** **ಶತಮುಖ** (वि०) 1. ನೂರು ಮಾರ್ಗವುಳ್ಳ. 2. ನೂರಾರು ಬಾಯಿ (ರಂಧ್ರ) ಗಳುಳ್ಳ. शतं मुखानि यस्य । 3. ನೂರಾರು ಅವಕಾಶವುಳ್ಳ, ಅನೇಕ ವಿಧವಾದ. "विवेकभ्रष्टानां भवति विनिपातः शतमुखः" भर्तृ० १-१०।

**शतमुखी** **ಶತಮುಖೀ** (स्त्री०) 1. ಸಂಮಾರ್ಜನಿ, ಕಸಪೊರಕೆ. शतं मुखानि यस्याः। 2. ಕೂರ್ಚೆ, ಕುಂಚ.

**शतमूली** **ಶತಮೂಲೀ** (स्त्री०) 1. ಗರಿಕೆಹುಲ್ಲು. शतं मूलान्यस्याः। 2. ಶತಾವರೀ ಗಿಡ, ಪಿಲ್ಲಿಬಿಚ್ಚುರ. "ङीष्" (४-१-६४)।

**शतयज्वन्** **ಶತಯಜ್ವನ್** (पुं०) ಇಂದ್ರ. शतेन मखानां यज्वा। "उपतस्थुरास्थितविषादधियः शतयज्वनो वनचरा वसतिम्" किरा० ७-२९।

**शतयष्टिक** **ಶತಯಷ್ಟಿಕ** (पुं०) ನೂರು ಎಳೆಗಳುಳ್ಳ ಹಾರ. ಇದಕ್ಕೆ "देवच्छन्द" ಎಂದು ಹೆಸರು. "देवच्छन्दोऽसौ शतयष्टिकः" अम०। ಆದರೆ ಬೃಹತ್ಸಂಹಿತೆಯಲ್ಲಿ 81 ಎಳೆಗಳ ಹಾರವು "देवच्छन्द" ಎಂದು ಹೇಳಿದೆ. "शतमष्टयुतं हारो देवच्छन्दो ह्यशीतिरेकयुता" बृहत्सं० ८१-३२।

**शतरूपा** **ಶತರೂಪಾ** (स्त्री०) 1. ಚತುರ್ಮುಖ ಬ್ರಹ್ಮನ ಕನ್ಯೆ. 2. ಚತುರ್ಮುಖ ಬ್ರಹ್ಮನ ಪತ್ನಿ. शतं रूपाणि यस्याः। "ततः संजपतस्तस्य भित्त्वा देहमकल्मषम्। स्त्रीरूपमर्धमकरोत् अर्धं पुरुषरूपवत्। शतरूपा च सा ख्याता सावित्री च निगद्यते। सरस्वत्यथ गायत्री ब्रह्माणी च परन्तप। दृष्ट्वा तां व्यथितस्तावत्काम-बाणार्दितो विभुः। उपयेमे च विश्वात्मा शतरूपा-मनिन्दिताम्। ततः कालेन महता ततः पुत्रोऽभवन्मनुः। स्वायंभुव इति ख्यातः स विराडिति नः श्रुतम्"।

**शतवीर्या** **ಶತವೀರ್ಯಾ** (स्त्री०) 1. ಬಿಳಿಯ ಗರಿಕೆಹುಲ್ಲು. शतं वीर्याण्यस्याः। 2. ಶತಾವರಿ.

**शतवेधिन्** **ಶತವೇಧಿನ್** (पुं०) ಹುಳಿಹಬ್ಬೆ. शतं वेधितुं शीलमस्य "णिनिः" (३-२-७८)। "सहस्रवेधी चुक्रोऽम्ल-वेतसः शतवेध्यपि" अम०।

**शतशस्** **ಶತಶಸ್** (अव्य०) 1. ನೂರು ಸಲ, ನೂರಾವೃತ್ತಿ. शत "शस्" (५-४-४२)। "बुद्धेभ्यः शतशः शपे यदि पुनः कुत्रापि कपालिनीपीनोत्तुङ्गकुचावगूहनभवः प्राप्तः प्रमोदोदयः" प्रबोध० ३-१८। 2. ನೂರು ನೂರಾಗಿ. शतं शतम्। 3. ನೂರಾರು ವಿಧವಾಗಿ, ಅನೇಕ ವಿಧವಾಗಿ. "पश्य मे पार्थ रूपाणि शतशोऽथ सहस्रशः" गीता ११-५। 4. ಅನೇಕಾವೃತ್ತಿ, ಅನೇಕ ಸಲ. "शतशःश्रुतिमागतैव सा त्रिजगन्मोहमहौषधि-र्मम" नैष० २-५४।

**शतसहस्र** **ಶತಸಹಸ್ರ** (न०) ನೂರು ಸಾವಿರ, ಒಂದು ಲಕ್ಷ. शतगुणितं सहस्रम्।

**शतसाहस्र** **ಶತಸಾಹಸ್ರ** (वि०) ನೂರು ಸಹಸ್ರ ಸಂಖ್ಯೆಯುಳ್ಳ. सहस्राणां समूहः "अण्" (४-२-३८)। शतं साहस्रं यत्र।

**शतह्रदा** **ಶತಹ್ರದಾ** (स्त्री०) 1. ವಿದ್ಯುತ್ತು, ಮಿಂಚು. शतं ह्रादाः शब्दाः यस्याः। पृषो० ह्रस्वः। "बलाकिनी नीलपयोदराजी दूरं पुरःक्षिप्तशतह्रदेव" कुमा० ७-३९। 2. ವಜ್ರಾಯುಧ. "शतह्रदा स्त्रियां वज्रे सौदामिन्यां च कीर्तिता" मेदि०। 3. ದಕ್ಷಬ್ರಹ್ಮನ ಒಬ್ಬ ಮಗಳು.

**शताक्षी** **ಶತಾಕ್ಷೀ** (स्त्री०) 1. ರಾತ್ರಿ. 2. ದುರ್ಗಾದೇವಿ. 3. ಕಾಡುಸಬ್ಬಸಿಗೆ.

**शताङ्ग** **ಶತಾಂಗ** (पुं०) 1. ರಥ, ಗಾಡಿ. शतमङ्गान्यवयवा यस्य। 2. ತಿನಿಶವೃಕ್ಷ, ನೆಮ್ಮಿಗಿಡ. 3. ಒಬ್ಬ ದಾನವ.

**शतानन्द** **ಶತಾನಂದ** (पुं०) 1. ಗೌತಮಮಹರ್ಷಿಯ ಪುತ್ರ, ಜನಕಮಹಾರಾಜನ ಪುರೋಹಿತ. 2. ವಿಷ್ಣು, ನಾರಾಯಣ, ಶ್ರೀಕೃಷ್ಣ. शतं अमितः आनन्दोऽस्य। परस्परप्रणयप्रवहदानन्दतया अपरिमितानन्द इत्यर्थः। "अन्योन्यप्रणयानन्दसिन्धोः समुदितो हि यः। शतानन्दः स विज्ञेयः" इति निरुक्तिः। "स्वक्षः स्वङ्गः शतानन्दः" वि० स०। 3. ಶ್ರೀಕೃಷ್ಣನ ರಥ. "स्यन्दनस्तु शतानन्दः सारथिश्चास्य दारुकः" त्रिकाण्ड०। 4. ಗೌತಮ ಮಹರ್ಷಿ. "गौतमस्तु शतानन्दः" त्रिकाण्ड०। "शतानन्दो मुनेर्भेदे देवकीनन्दनेऽपि च" मेदि०।

**शतानीक** **ಶತಾನೀಕ** (पुं०) 1. ಸುದಾಸರಾಜನ ಮಗ. 2. ಒಬ್ಬ ಋಷಿ. 3. ವೃದ್ಧ, ಮುದುಕ. 4. ನಕುಲನ ಪುತ್ರ. "पुत्रस्ते प्रतिविन्ध्यश्च सुतसोमस्तथा विभुः। श्रुतकर्मार्जुनिश्चैव शतानीकश्च नाकुलिः। सहदेवाच्च यो जातः श्रुतसेनस्तवात्मजः। सर्वे कुशलिनो वीराः कृतास्त्राश्च सुतास्तव" भा०। "शतानीकस्तु वृद्धे स्यान्मुनिराजप्रभेदयोः" मेदि०।

**शतायुस्** **ಶತಾಯುಸ್** (न०) 1. ನೂರು ವರ್ಷಗಳ ಕಾಲ ಆಯುಸ್ಸು (ಜೀವಿತಕಾಲ). शतमायुःवर्षकालः (जीवित-कालः)। (वि०) 2. ನೂರು ವರ್ಷ ಆಯುಸ್ಸುಳ್ಳವನು.

शतमायुर्जीवित (वर्ष) कालोऽस्य। "शतमानं भवति शतायुः पुरुषः"।

**शतार ಶತಾರ** (न०) ಇಂದ್ರನ ವಜ್ರಾಯುಧ. शतम् अराणि यस्य।

**शतारुस् ಶತಾರುಸ್** (न०) ಕುಷ್ಠರೋಗ. शतम् अरूंषि व्रणानि यत्र। "रक्तं श्यावं सदाहार्ति शतारुः स्याद् बहुव्रणम्" भावप्र०। (स्त्री०) **-अरुषी -ಅರುಷೀ.**

**शतावरी ಶತಾವರೀ** (स्त्री०) 1. ಶತಮೂಲಿ ಗಿಡ, ಆಪಾಢೀಬೇರು. शतेनावृणोति — आ + वृञ् (वरणे) "अच्" (३-१-१३४)। "ङीष्" (४-१-४१)। 2. ಶಚೀದೇವಿ, ಇಂದ್ರನ ಪತ್ನಿ. "पृतनाषाट् प्रियात्वस्य चारुधारा शतावरी" त्रिकाण्ड०। 3. ಕಚೋರ. 4. ಶುಂಠಿ.

**शतावर्त ಶತಾವರ್ತ** (पुं०) ಮಹಾವಿಷ್ಣು. शतमावर्ताः अस्य — आवर्ताः ऐश्वर्यविजृम्भितानि इति लक्षणया प्रतीयते। "ऐश्वर्यविजृम्भिताभिख्याः आवर्ता यस्य नित्यशः। शतं सन्ति शतावर्तः" इति निरुक्तिः। "अनुकूलः शतावर्तः पद्मी पद्मनिभेक्षणः" वि० स०। शतमावर्तते—आ+वृतु (वर्तने) "णिनिः" (३-१-१३४)। **-आवर्तिन् -ಆವರ್ತಿನ್.**

**शतिक ಶತಿಕ** (वि०) 1. ನೂರರಿಂದ ಕೊಳ್ಳಲ್ಪಟ್ಟ. शतेन क्रीतम्—शत "ठन्" (५-१-२१)। ठस्येकः (७-३-५०)। 2. ನೂರರ ಸಂಬಂಧವಾದ. 3. ನೂರರಿಂದ ಕೂಡಿರುವ, ನೂರು ಸಂಖ್ಯೆಯುಳ್ಳ. शतस्य विकारः "ठन्"। "यत्" (५-१-२१)। शत्यः ಶತ್ಯ [ "शत्य" ನೋಡಿ]. "शत्यस्तदर्धिकः पादनासाकर्णकरादिषु" याज्ञ० २-२०८।

**शतिन् ಶತಿನ್** (वि०) 1. ನೂರನ್ನು ಹೊಂದಿರುವವನು. शतमस्यास्ति "इनिः" (५-२-११५)। "निःस्वो वष्टि शतं शती दशशतं लक्षं सहस्राधिपः" शान्तिश० ६। 2. ನೂರರಷ್ಟಾಗಿರುವ, ನೂರ್ಮಡಿಯಾದ.

**शतपोन ಶತಪೋನ** (पुं०) ಜಲ್ಲಡಿ, ಒಂದರಿ.

**शतपोनक ಶತಪೋನಕ** (पुं०) ಗುದದ್ವಾರದ ಸುತ್ತಲೂ ರಂಧ್ರಗಳಾಗಿ ರಕ್ತಸೋರುವ ಒಂದು ವ್ಯಾಧಿ (Fistula).

**शतृ ಶತೃ** ಪರಸ್ಮೈಪದಿ ಧಾತುಗಳಿಗೆ ಸೇರಿಸುವ ವರ್ತಮಾನಾರ್ಥಕ ಒಂದು ಕೃತ್ ಪ್ರತ್ಯಯ.

**शतेर ಶತೇರ** (पुं०) 1. ಅರಿ, ಶತ್ರು, ವೈರಿ. शद्लृ (शातने) "एरक्" तकारादेशश्च (उ० १-६०)। 2. ಹಿಂಸೆ, ಪೀಡೆ, ತೊಂದರೆ.

**शत्य ಶತ್ಯ** (पुं०) ಒಂದು ನಿರ್ದಿಷ್ಟಕಾಲದಲ್ಲಿ ಕೊಡಲ್ಪಡುವ 1. ನೂರು ರೂಪಾಯಿಗಳ ಬಡ್ಡಿ. 2. ನೂರು ರೂಪಾಯಿಗಳ ಆದಾಯ. 3. ನೂರು ರೂಪಾಯಿಗಳ ಲಾಭ. 4. ನೂರು ರೂಪಾಯಿಗಳ ಸುಂಕ. 5. ನೂರು ರೂಪಾಯಿಗಳ ಲಂಚ. शतमस्मिन् दीयते वृद्धिः आयः लाभः शुल्कम् उपदा वा—शत "यत्" (५-१-२१)। "ठन्"। शतिकः ಶತಿಕಃ. 6. ನೂರರ ಸಂಬಂಧ, ಯಜಾಜನ ಶುಶ್ರೂಷೆ ಮೊದಲಾದ ಧನಪತಿಸಂಬಂಧ (ಸಂಪರ್ಕ). शतिकः शत्यो वा धनपतिसंबन्धः। 7. ನೂರರ ಆದಾಯ ಬರುವ ನಿಮಿತ್ತ (ಸೂಚನೆ). शत्यं शतिकं वा दक्षिणाक्षिस्पन्दनम्। शतस्य निमित्तमित्यर्थः। सि० कौ०। 8. ನೂರರಿಂದ ಕೊಳ್ಳಲ್ಪಟ್ಟ. शतेन क्रीतः "यत्" (५-१-२१)।

**शत्र ಶತ್ರ** (न०) 1. ಕೈತವ, ಕಪಟ. 2. ಬಲ, ಶಕ್ತಿ. "शत्रं स्यात्कैतवे बले" त्रिकाण्ड०।

**शत्रि ಶತ್ರಿ** (पुं०) ಗಜ, ಆನೆ. शद्लृ (शातने) "त्रिप्" (उ० ४-६७)।

**शत्रु ಶತ್ರು** (पुं०) 1. ಹಗೆ, ವೈರಿ. शातयति — शद्लृ (शातने) + णिच् "क्रुन्" (उ० ४-१०३)। "शत्रून् भीषयमाणं तं रामं विस्मापयेत कः" भट्टि० ५-५८। "क्षमा शत्रौ च मित्रे च यतिनामिह भूषणम्"। "ऋणकर्ता पिता शत्रुः माता च व्यभिचारिणी। भार्या रूपवती शत्रुः पुत्रः शत्रुरपण्डितः"। 2. (ರಾಜನೀತಿ) ತನ್ನ ರಾಜ್ಯಕ್ಕೆ (ಸೇರಿದಂತೆ) ಪಕ್ಕದಲ್ಲಿರುವ ರಾಜ್ಯದ ರಾಜ. "विषयानन्तरो राजा शत्रुर्मित्रमतः परम्" अम०।

**शत्रुघ्न ಶತ್ರುಘ್ನ** (पुं०) 1. ದಶರಥನ ಪುತ್ರ, ಲಕ್ಷ್ಮಣನ ತಮ್ಮ. शत्रून् हन्ति — हन (हिंसागत्योः) "कः" (वा० ३-२-५)। ಶತ್ರುಘ್ನನು ದಶರಥನ ಪತ್ನಿಯಾದ ಸುಮಿತ್ರೆಯಲ್ಲಿ ಜನಿಸಿದ ಅವಳಿ ಮಕ್ಕಳಲ್ಲಿ ಕಿರಿಯವನು. ಕುಶಧ್ವಜನ ಪುತ್ರಿಯಾದ ಶ್ರುತಕೀರ್ತಿಯು ಇವನ ಪತ್ನಿ. "ततो भरतशत्रुघ्नौ कुशध्वजनियोगतः। माण्डवीश्रुतकीर्तिभ्यामभूतां गृहमेधिनौ" चं० रा०। ಸುಬಾಹು ಮತ್ತು ಬಹುಶ್ರುತರು ಇವನ ಪುತ್ರರು. "शत्रुघातिनि शत्रुघ्नः सुबाहौ च बहुश्रुते। मधुराविदिशे सून्वोर्निदधे पूर्वजोत्सुकः" रघु० १५-३६। (वि०) 2. ಶತ್ರುಗಳನ್ನು ನಾಶಪಡಿಸುವವನು. "शत्रुघ्नान् युधि हस्तिघ्नः" भट्टि० ६-११३।

**शत्रुञ्जय ಶತ್ರುಂಜಯು** (ಪ್ಪುಂ) 1. ಒಂದು ಆನೆ. "नाग: शत्रुञ्जयो नाम मातुलोऽयं ददौ मम" रामा० । 2. ಒಂದು ಪರ್ವತ, ಬೆಟ್ಟ. (ವಿ०) 3. ಶತ್ರುವನ್ನು ಜಯಿಸುವ.

**शत्रुन्तप ಶತ್ರುಂತಪ** (ವಿ०) ವೈರಿಗಳಿಗೆ ಸಂತಾಪವುಂಟು ಮಾಡುವವನು, ಶತ್ರುಗಳನ್ನು ಬಡಿದು ಓಡಿಸುವವನು. शत्रून् तपति — तप (सन्तापे) "खच्" (३-२-४६) । मुमागमः (६-३-६७) ।

**शत्रुपक्ष ಶತ್ರುಪಕ್ಷ** (ಪುಂ) ಶತ್ರುಗಳ ಪಂಗಡ.

**शत्वरी ಶತ್ವರೀ** (स्त्री०) ರಾತ್ರಿ. "रात्री रक्षोजननी शत्वरी चक्रभेदिनी घोरा" त्रिकाण्ड० ।

**शद ಶದ** (ಪುಂ) ತಿನ್ನಬಹುದಾದ ಕಂದಮೂಲ ಫಲ ಮೊದಲಾದುವು. ತಿನ್ನಲು ಯೋಗ್ಯವಾದ ಗೆಡ್ಡೆ ಗೆಣಸು ಹಣ್ಣು ಮುಂತಾದುವು.

**शद्रि ಶದ್ರಿ** (ಪುಂ) 1. ಮೇಘ, ಮೋಡ. शद्लृ (शातने) "क्रिन्" (उ० ४-६५) । 2. ಅರ್ಜುನ. "शद्रिर्नाऽम्भोधरे जिष्णौ" मेदि० । (स्त्री०) 3. ಕಲ್ಲುಸಕ್ಕರೆ. 4. ವಿದ್ಯುತ್ತು, ಮಿಂಚು. "शद्रिजिष्णौ तडित्यपि" हेम० । "शद्रिः शर्करा" उणादिः ।

**शद्रु ಶದ್ರು** (ವಿ०) 1. ಹೋಗುವ, ನಡೆಯುವ, ಚಲಿಸುವ. शद्लृ (शातने) "रुः" (३-२-१५९) । 2. ಕೆಳಗೆ ತಳ್ಳುವ, ಕೆಳಗೆ ಬೀಳಿಸುವ.

**शनकैस् ಶನಕೈಸ್** (अव्य०) ಮೆಲ್ಲಗೆ, ನಿಧಾನವಾಗಿ. शनैरेव शनकैः — शनैः "अकच्" (५-३-७१) । "शनकैरथास्य तनुजालकान्तरस्फुरितक्षपाकरकरोत्करा-कृति" माघ० १३-२० ।

**शनि ಶನಿ** (ಪುಂ) ಶನಿದೇವ, ಶನಿಗ್ರಹ. ರವಿ ಮೊದಲಾದ ನವಗ್ರಹಗಳಲ್ಲಿ ಒಂದು ಗ್ರಹ. ಇವನು ಸೂರ್ಯನ ಪುತ್ರ. ಛಾಯಾದೇವಿಯ ಮಗ.

**ಶನಿದೇವನ ಉತ್ಪತ್ತಿ:** ಸೂರ್ಯನ ಪತ್ನಿಯಾದ ಸಂಜ್ಞಾದೇವಿಯು ಸೂರ್ಯನ ತಾಪವನ್ನು ತಡೆಯಲಾರದೆ ಮಾಯೆಯಿಂದ ತನಗೆ ಸಮಾನಳಾದ ಛಾಯೆಯನ್ನು ಸೃಷ್ಟಿಸಿ ತಾನು ತಂದೆಯಾದ ತ್ವಷ್ಟೃಪ್ರಜಾಪತಿಯ ಮನೆಯನ್ನು ಸೇರಿದಳು. ಈ ಛಾಯಾದೇವಿಯಲ್ಲಿ ಸೂರ್ಯನಿಗೆ ಸಾವರ್ಣಿಮನುವೂ ಶನಿದೇವನೂ ಜನಿಸಿದರು. ಶನಿಗ್ರಹಕ್ಕೆ ಯಮನು ಅಧಿಷ್ಠಾತೃದೇವತೆ. ಶನಿಯ ವರ್ಣ ನೀಲ. ಕೃಷ್ಣವರ್ಣದ ವಸ್ತ್ರ. ದಾನದ ಧಾನ್ಯ ಎಳ್ಳು. ಪುಷ್ಪವು ಮಲ್ಲಿಗೆ. ವಾಹನವು ಗೃಧ್ರ. ಮಕರ ಮತ್ತು ಕುಂಭರಾಶಿಗಳು ಶನಿಗ್ರಹದ ಕ್ಷೇತ್ರಗಳು. ತುಲಾರಾಶಿಯು ಉಚ್ಚಸ್ಥಾನ, ಮೇಷರಾಶಿಯು ನೀಚಸ್ಥಾನ. ಶನಿಗ್ರಹದ ದಶಾಕಾಲ ಹತ್ತೊಂಬತ್ತು (19) ವರ್ಷಗಳು. ಈ ಗ್ರಹವು ಒಂದೊಂದು ರಾಶಿಯಲ್ಲಿಯೂ ಸಂಚರಿಸುವ ಕಾಲ ಎರಡು ವರ್ಷಗಳು ಆರು ತಿಂಗಳು (30 ತಿಂಗಳು).

**ಶನಿದಶೆಯಲ್ಲಿ ತನ್ನ (ಸ್ವ) ಮತ್ತು ಇತರ ಗ್ರಹಗಳ ಅಂತರ್ದಶಾ (ಭುಕ್ತಿ) ಮಾನ:**

| ಭುಕ್ತಿ | ವರ್ಷ | ಮಾಸಗಳು | ದಿನಗಳು |
|---|---|---|---|
| ಸ್ವಭುಕ್ತಿ | 3 | 0 | 3 |
| ಬುಧಭುಕ್ತಿ | 2 | 8 | 9 |
| ಕೇತುಭುಕ್ತಿ | 1 | 1 | 9 |
| ಶುಕ್ರಭುಕ್ತಿ | 3 | 2 | 0 |
| ರವಿಭುಕ್ತಿ | 0 | 11 | 12 |
| ಚಂದ್ರಭುಕ್ತಿ | 1 | 7 | 0 |
| ಕುಜಭುಕ್ತಿ | 1 | 1 | 9 |
| ರಾಹುಭುಕ್ತಿ | 2 | 10 | 6 |
| ಗುರುಭುಕ್ತಿ | 2 | 6 | 12 |

**ಇತರ ಗ್ರಹಗಳ ದಶೆಗಳಲ್ಲಿ ಶನಿಗ್ರಹದ ಅಂತರ್ದಶಾ (ಭುಕ್ತಿ) ಮಾನ:**

| ದಶೆ | ವರ್ಷ | ಮಾಸಗಳು | ದಿನಗಳು |
|---|---|---|---|
| ರವಿದಶೆ | 0 | 11 | 12 |
| ಚಂದ್ರದಶೆ | 1 | 7 | 0 |
| ಕುಜದಶೆ | 1 | 1 | 9 |
| ರಾಹುದಶೆ | 2 | 10 | 6 |
| ಗುರುದಶೆ | 2 | 6 | 12 |
| ಶನಿದಶೆ | 3 | 0 | 3 |
| ಬುಧದಶೆ | 2 | 8 | 9 |
| ಕೇತುದಶೆ | 1 | 1 | 9 |
| ಶುಕ್ರದಶೆ | 3 | 2 | 0 |

ಶನಿದೇವನು ಆಯುಷ್ಯ ಜೀವನೋಪಾಯ ಮರಣ ಇವುಗಳಿಗೆ ಕಾರಕನು. ಮೂರು ಆರು ಮತ್ತು ಹನ್ನೊಂದನೆಯ ಸ್ಥಾನಗಳಲ್ಲಿರುವಾಗ ಶುಭಫಲಪ್ರದನು.

**शनिप्रसू ಶನಿಪ್ರಸೂ** (स्त्री०) ಸೂರ್ಯನ ಪತ್ನಿಯಾದ ಛಾಯಾದೇವಿ, ಶನಿದೇವನ ತಾಯಿ. शनेः प्रसूः ।

**शनिवार ಶನಿವಾರ** (ಪುಂ) ಶನಿಯು ಅಧಿಪತಿಯಾಗಿರುವ ದಿವಸ. शनेर्वारः ।

**शनैश्चर ಶನೈಶ್ಚರ** (ಪುಂ) 1. ಶನಿದೇವ, ಶನಿಗ್ರಹ. शनैः चरति — चर (गतौ) "अच्" (३-१-१३४) ।

[ಶನಿಗ್ರಹವು ಪಂಗುವಾದುದರಿಂದಲೂ ಎಲ್ಲಾ ಗ್ರಹಗಳ ಮೇಲುಭಾಗದಲ್ಲಿರುವುದರಿಂದಲೂ ಒಂದು ರಾಶಿಯಿಂದ ಮತ್ತೊಂದು ರಾಶಿಗೆ ಬರಲು ಹೆಚ್ಚು ಕಾಲ ಬೇಕಾಗುವುದರಿಂದ ಈ ಹೆಸರು.] "नीलाञ्जनचयप्रख्यं रविसूनुं महाग्रहम्। छायाया गर्भसंभूतं वन्दे भक्त्या शनैश्चरम् ॥ व्यासेनोक्तमिदं स्तोत्रं यःपठेत् प्रयतो नरः। दिवा वा यदि वा रात्रौ शान्तिस्तस्य न संशयः" ॥ (वि०) 2. ಮೆಲ್ಲಗೆ ಸಂಚರಿಸುವವನು, ನಿಧಾನವಾಗಿ ನಡೆಯುವವನು. शनैः चरति—चर (गतौ) "अच्" (३-१-१३४)।

**शनैस् ಶನೈಸ್** (अव्य०) 1. ಮೆಲ್ಲಗೆ, ನಿಧಾನವಾಗಿ, ಸಾವಕಾಶವಾಗಿ. शण (दाने) "ऐस्" पृषो०। "रथस्य तस्यां पुरि दत्तचक्षुर्विद्वान् विदामास शनैर्न यातम्" माघ० ३-३२। 2. ಸ್ವಲ್ಪ ಸ್ವಲ್ಪವಾಗಿ, ಕ್ರಮವಾಗಿ. "शनैः कृतप्राणविमुक्तिरीशः पर्यङ्कबन्धं निबिडं बिभेद" कुमा० ३-५९। 3. ಒಂದಾದಮೇಲೊಂದಾಗಿ, ಕ್ರಮವಾಗಿ. "विषयाणां ग्रहीतॄणि शनैः पञ्चेन्द्रियाणि च" मनु० १-१५। शनैः शनैः ಮೆಲ್ಲ ಮೆಲ್ಲಗೆ, ಬಹಳ ನಿಧಾನವಾಗಿ. "स्वगृहान् प्रति प्रतिययुः शनैः शनैः" माघ० १३-४८।

**शन्तनु ಶಂತನು** (पुं०) ಚಂದ್ರವಂಶದ ಒಬ್ಬ ದೊರೆ, ಭೀಷ್ಮಾಚಾರ್ಯರ ತಂದೆ. [ಶಂತನುಮಹಾರಾಜನು ಗಂಗೆಯನ್ನು ಮದುವೆಯಾಗಿ ಭೀಷ್ಮನೆಂಬ ಪುತ್ರನನ್ನು ಪಡೆದನು. ಒಮ್ಮೆ ಈತನು ಗಂಗಾತೀರದಲ್ಲಿ ಸಂಚರಿಸುತ್ತಿದ್ದಾಗ ದಾಶರಾಜನ ಮಗಳಾದ ಸತ್ಯವತಿಯನ್ನು ಕಂಡು ಮೋಹಗೊಂಡು ಅವಳ ತಂದೆಯ ಅಪೇಕ್ಷೆಯನ್ನು ಈಡೇರಿಸಲು ಅಸಮರ್ಥನಾಗಿ ಚಿಂತಾಕ್ರಾಂತನಾದನು. ಅವಳಲ್ಲಿ ಜನಿಸುವ ಮಗನಿಗೇ ರಾಜ್ಯವನ್ನು ಕೊಡಬೇಕೆಂಬ ದಾಶರಾಜನ ಅಪೇಕ್ಷೆಯಂತೆ ಭೀಷ್ಮನು ಬ್ರಹ್ಮಚಾರಿಯಾಗಿಯೇ ಇರಲು ಪ್ರತಿಜ್ಞೆ ಮಾಡಿದುದರಿಂದ ರಾಜನು ಸತ್ಯವತಿಯನ್ನು ಮದುವೆಯಾಗಿ ಅವಳಲ್ಲಿ ಚಿತ್ರಾಂಗದ ಮತ್ತು ವಿಚಿತ್ರವೀರ್ಯರೆಂಬ ಪುತ್ರರನ್ನು ಪಡೆದನು.]

**शप् ಶಪ್** (अव्य०) 1. ಸ್ವೀಕಾರ, ಅಂಗೀಕಾರ, ಒಪ್ಪಿಗೆ. 2. ಒಂದು ವಿಕರಣಪ್ರತ್ಯಯ. ಇದು ಸಾರ್ವಧಾತುಕ ಪರವಾದಾಗ ಧಾತುಗಳ ಮುಂದೆ ಕರ್ತೃರ್ಥದಲ್ಲಿ ವಿಧಿಸಲ್ಪಡುವ ಪ್ರತ್ಯಯ. "कर्तरि शप्" (३-१-६८)।

**शप – आक्रोशे** (भ्वा० उभ० सक० अनि०)। शपति, –ते। शशाप, शेपे। शप्ता। शप्स्यति, –ते। शपतु, –ताम्। अशपत्, –त। शपेत्, –त। शप्यात्। शप्सीष्ट। ಇತ್ಯಾದಿ. 1. ಶಪಿಸು, ಒಬ್ಬನಿಗೆ ಕೇಡನ್ನು ಬಯಸು, ಶಾಪಹಾಕು. "मत्प्रसूतिमनाराध्य प्रजेति त्वां शशाप सा" रघु० १-७७। 2. ಶಪಥಮಾಡು, ಆಣೆ ಇಡು. "कृष्णाय शपते गोपी"। "भरतेनात्मना चाहं शपे ते मनुजाधिप। यथा नान्येन तुष्येयमृते रामविवासनात्" रामा०। 3. ಹೆದರಿಸು.

**कर्मणि**:—शप्यते। शप्यताम्। अशप्यत। शप्येत। शेषं आत्मनेपदरूपवत्।

**कृत्सु**:—शप्तव्यम्। शपनीयम्। शप्यम्। शप्तः। शप्तवान्। शपन् –न्ती। शपमानः। शप्तम्। शपनम्। "शपतो यत्कृतं पुण्यं शप्यमानं तु गच्छति। शप्यमानस्य यत्पापं शपन्तमनुगच्छति" भा०। "न च तं तदेति शपमानमपि यदुनृपाः प्रचुक्रुधुः" माघ० १५-४१।

**शप – आक्रोशे** (दिवा० उभ० सक० अनि०)। शप्यति, –ते। शप्यतु, –ताम्। अशप्यत्, –त। शप्येत्, –त। ಉಳಿದ ರೂಪಗಳು ಭ್ವಾದಿ "शप" ಧಾತುವಿನ ರೂಪಗಳಂತಾಗುವುವು.

**कृत्सु**:—शप्यन्, –न्ती। शप्यमानः। ಉಳಿದುವು ಭ್ವಾದಿ ಧಾತುವಿನ ರೂಪಗಳಂತಾಗುವುವು. कर्मणि— "शप्यमानस्य यत्पापं शपन्तमनुगच्छति" भा०।

**शपत् ಶಪತ್** (वि०) 1. ಶಾಪಹಾಕುತ್ತಿರುವ, ಬಯ್ಯುತ್ತಿರುವ. शप (आक्रोशे) "शतृ" (३-२-१२४)। "शपतो यत्कृतं पुण्यं शप्यमानं तु गच्छति। शप्यमानस्य यत् पापं शपन्तमनुगच्छति" भा०। 2. ಹೆದರಿಸುತ್ತಿರುವ, ಭಯಪಡಿಸುತ್ತಿರುವ. 3. ಆಣೆಹಾಕಿಕೊಳ್ಳುತ್ತಿರುವ. शप "शानच्" (३-२-१२४)। **–मानः –ಮಾನಃ**. "न च तं तदेति शपमानमपि यदुनृपाः प्रचुक्रुधुः" माघ० १५-४१।

**शपथ ಶಪಥ** (पुं०) 1. ಶಪಥಮಾಡುವುದು, ಆಣೆ ಇಟ್ಟುಕೊಳ್ಳುವುದು. शप (आक्रोशे) "अथः" (उ० ३-११३)। "नैतन्मतं मत्कमिति ब्रुवाणः सहस्रशोऽसौ शपथानशप्यत्" भट्टि० ३-३२। 2. ಪ್ರಮಾಣಮಾಡುವುದು, ತನ್ನಲ್ಲಿ ಅಪರಾಧವಿಲ್ಲವೆಂಬುದನ್ನು ತೋರಿಸಲು ಮಾಡುವ ಅಗ್ನಿಪರೀಕ್ಷೆ ಮುಂತಾದುದು. 3. ಹೆದರಿಸುವುದು. 4. ಪ್ರತಿಜ್ಞೆಮಾಡುವುದು.

**शपन ಶಪನ** (न०) 1. ಆಕ್ರೋಶದಿಂದ ಮಾತಾಡುವುದು, ಬೈಯುವುದು, ಶಾಪಹಾಕುವುದು. शप (आक्रोशे) भावे "ल्युट्" (३-३-११५)। 2. ಆಣೆ ಇಟ್ಟುಕೊಳ್ಳುವುದು. 3. ಹೆದರಿಸುವುದು.

**शप्त ಶಪ್ತ** (वि०) ಶಪಿಸಲ್ಪಟ್ಟ, ಕೇಡು ಬಯಸಲ್ಪಟ್ಟ. शप (आक्रोशे) "क्तः" (३-२-१०२)। "क्रुद्धेनोशनसा शप्तो ययातिर्नाहुषस्तदा। पूर्वं वयःपरित्यज्य जरां सद्योऽन्वपद्यत" भा० आदि० ७७-५९।

**शप्यत् ಶಪ್ಯತ್** (वि०) "शपत्" ಪದದ ಅರ್ಥ. शप (आक्रोशे) दिवा० "शतृ" (३-२-१२४)।

**शप्यमान ಶಪ್ಯಮಾನ** (वि०) 1. "शपमान" ಪದದ ಅರ್ಥ. शप (आक्रोशे) दिवा० "शानच्" (३-२-१२४)। 2. ಶಪಿಸಲ್ಪಡುತ್ತಿರುವ. कर्म० "शानच्"। "शप्यमानस्य यत्पापं शपन्तमनुगच्छति" भा०।

**शफ ಶಫ** (न०) 1. ವೃಕ್ಷದ ಮೂಲ, ಮರದ ಬುಡ. शं फणति—फण (गतौ) "डः" (वा० ३-२-१०१)। 2. ಹಸು ಮೊದಲಾದ ಪ್ರಾಣಿಗಳ ಕಾಲಿನ ಗೊರಸು. "शफं मूले तरूणां स्यात् गवादीनां खुरेऽपि च" मेदि०।

**शफर ಶಫರ** (पुं०) ಒಂದು ಜಾತಿಯ ಮೀನು. शफं राति—रा (दाने) "कः" (३-२-३)। "शफरः श्वेतकोलः स्यात्" त्रिकाण्ड०। "मोघीकर्तुं चटुलशफरोद्वर्तनप्रेक्षितानि" मेघ० १-४०। स्त्रियां जाति० "ङीष्" (४-१-६३)। –री –ರೀ. "हृतप्रियादृष्टिविलासविभ्रमा मनोऽस्य जह्रुः शफरीविवृत्तयः" किरा० ४-३।

**शफराधिप ಶಫರಾಧಿಪ** (पुं०) ಇಲ್ಲೀಶವೆಂಬ ಒಂದು ಜಾತಿಯ ಮೀನು. "इल्लीशवारिकर्पूरगाङ्गेयशफराधिपाः" त्रिकाण्ड०।

**शबर ಶಬರ** (पुं०) 1. ಕಿರಾತ, ಬೇಡರವನು, ಬೆಟ್ಟಗುಡ್ಡಗಳಲ್ಲಿ ವಾಸಿಸುವವನು. शवत्यरण्यम्—शव (गतौ) "अरः" बाहु०। "राजन् गुञ्जाफलानां स्रज इति शबरा नैव हारं हरन्ति"। 2. ಈಶ್ವರ, ಶಂಕರ. 3. ಜಲ. "शबरो म्लेच्छभेदे च पानीये शंकरेऽपि च" मेदि०। 4. ಮೀಮಾಂಸಾಗ್ರಂಥದ ಒಬ್ಬ ಪ್ರಸಿದ್ಧ ವ್ಯಾಖ್ಯಾಕಾರರು. (स्त्री०) –री –ರೀ. 5. ಬೇಡರ ಜಾತಿಯ ಹೆಂಗಸು. 6. ಶ್ರೀರಾಮನ ಸಂದರ್ಶನಕ್ಕಾಗಿ ಅರಣ್ಯದಲ್ಲಿ ಪ್ರತೀಕ್ಷಿಸುತ್ತಿದ್ದ ಒಬ್ಬ ಬೇಡಿತಿ. "अवन्ध्यमहिममुनिजनभजनमुषितहृदयकलुषशबरीमोक्षसाक्षिभूत" रघु० ग०।

**शबरालय ಶಬರಾಲಯ** (पुं०) ಬೇಡರ ಮನೆ, ಕಿರಾತರ ವಾಸಸ್ಥಾನ. शबराणामालयः।

**शबरावास ಶಬರಾವಾಸ** (पुं०) ಬೇಡರ ಮನೆ.

**शबल ಶಬಲ** (पुं०) 1. ನಾನಾವರ್ಣ, ಚಿತ್ರವರ್ಣ. शप (आक्रोशे) "कलः" बत्वं च (उ० १-१०५)। (वि०) 2. ಚಿತ್ರವರ್ಣದ, ನಾನಾಬಣ್ಣಗಳಿಂದ ಕೂಡಿದ. "नीलोर्ध्वरेखाशबलेन शंसन् दन्तद्वयेनाश्मविकुण्ठितेन" रघु० ५-४४। (स्त्री०) –ली –ಲೀ. ಶಬಲವರ್ಣಗಳಿಂದ ಕೂಡಿದ ಆಕಳು, –ಹಸು. शबल "ङीष्" (४-१-४०)। "वर्णादिभेदात्संज्ञाः स्युः शबलीधवलादयः" अम०।

**शब्द ಶಬ್ದ** (पुं०) 1. ಧ್ವನಿ, ಸದ್ದು, ಆಕಾಶದ ಒಂದು ಗುಣ. शब्द (आविष्कारे) + णिच् "अच्" (३-३-५६)। "अथात्मनः शब्दगुणं गुणज्ञः पदं विमानेन विगाहमानः" रघु० १३-१। "अप्यन्यपुष्टाः प्रतिकूलशब्दाः" कुमा० १-४५। ಶಬ್ದವು ರೂಪ ರಸ ಗಂಧ ಸ್ಪರ್ಶ ಮೊದಲಾದ ಇಪ್ಪತ್ತನಾಲ್ಕು ಗುಣಗಳಲ್ಲೊಂದು. ಶಬ್ದವು ಶ್ರವಣೇಂದ್ರಿಯದಿಂದ ತಿಳಿಯಲ್ಪಡುವ ಒಂದು ಗುಣ. "श्रोत्रग्राह्यो गुणः शब्दः" त० सं०। ಈ ಗುಣವು ಆಕಾಶದಲ್ಲಿ ಮಾತ್ರವಿರುವುದು. "आकाशमात्रवृत्तिः" त० सं०। ಶಬ್ದವು ಧ್ವನ್ಯಾತ್ಮಕ ಮತ್ತು ವರ್ಣಾತ್ಮಕ ಎಂದು ಎರಡು ವಿಧ. ಭೇರಿ ಮೃದಂಗ ಮೊದಲಾದುವುಗಳ ಶಬ್ದವು ಧ್ವನ್ಯಾತ್ಮಕ. ಭಾಷಾರೂಪವಾದ ಶಬ್ದವು ವರ್ಣಾತ್ಮಕ. ಶಬ್ದವು ಆಕಾಶದ ವಿಶೇಷ ಗುಣ. "शब्दगुणकमाकाशम्" त० सं०। 2. ಒಂದು ಪದ, ಒಂದು ಶಬ್ದ. "शब्दार्थौ सत्कविरिव द्वयं विद्वानपेक्षते" माघ० २-८६। ವರ್ಣಾತ್ಮಕವಾದ ಈ ಶಬ್ದವು ಕಾವ್ಯಕ್ಕೆ ಶರೀರಪ್ರಾಯವಾದುದು. [ಶಬ್ದದ ಉತ್ಪತ್ತಿ ವಿಷಯಕ್ಕೆ "पश्यन्ती" ಪದದಲ್ಲಿ ನೋಡಿ]. ಶಬ್ದವು ಸಾರ್ಥಕ ಮತ್ತು ನಿರರ್ಥಕಗಳೆಂದು ಮತ್ತೆ ಎರಡು ವಿಧ. ಸಾರ್ಥಕ ಶಬ್ದವು ಪ್ರಕೃತಿ ಪ್ರತ್ಯಯ ಮತ್ತು ನಿಪಾತಗಳೆಂದು ಮೂರು ವಿಧ. क च ट त प ಇತ್ಯಾದಿ ಶಬ್ದಗಳು ನಿರರ್ಥಕ. 3. ಪ್ರಯೋಗಕ್ಕೆ ಅರ್ಹವಾದ ಅರ್ಥಜ್ಞಾನಜನ್ಯವಾದ ಪದ. ಇದು ಲೌಕಿಕ ಮತ್ತು ವೈದಿಕಗಳೆಂದು ಎರಡು ವಿಧ. ಲೌಕಿಕಶಬ್ದವು ವಿಧಿ ನಿಷೇಧ ಮತ್ತು ಅರ್ಥವಾದಗಳೆಂದು ಮೂರು ವಿಧ. (1) "पाकं कुर्यात्" ಇದು ವಿಧಿ. (2) "इदमनिष्टं न कुर्यात्" ಇದು ನಿಷೇಧ. (3) "अयं ब्राह्मणः स्वमहिम्ना सर्वं जगत् पवित्रं करोति" ಇದು ಅರ್ಥವಾದ. ವೈದಿಕಶಬ್ದವು (1) ವಿಧಿ (2) ಮಂತ್ರ (3) ನಾಮಧೇಯ (4) ನಿಷೇಧ ಮತ್ತು (5) ಅರ್ಥವಾದಗಳೆಂದು ಐದು ವಿಧ. ಆಪ್ತರಿಂದ ಉಕ್ತವಾದ ಲೌಕಿಕಶಬ್ದವು ಮಾತ್ರ ಪ್ರಮಾಣ

ವಾದುದು. ವೈದಿಕಶಬ್ದವಾದರೆ ಪರಮಾತ್ಮಪ್ರಣೀತ ವಾದುದರಿಂದ ಎಲ್ಲವೂ ಪ್ರಮಾಣಭೂತವಾದುವು. ನೈಯಾಯಿಕಮತದಲ್ಲಿ ಶಬ್ದವು ಅನಿತ್ಯವಾದುದು. ವ್ಯಾಕರಣಮತದಲ್ಲಿ ಶಬ್ದವು ನಿತ್ಯವಾದುದು. ಧ್ವನ್ಯಾತ್ಮಕ ಶಬ್ದವು ವೀಚೀತರಂಗನ್ಯಾಯದಂತೆ ಹುಟ್ಟುವುದೆಂದು ನೈಯಾಯಿಕರ ಮತ. ಇನ್ನು ಕೆಲವರು ಕದಂಬಕೋರಕ ನ್ಯಾಯದಂತೆ ಶಬ್ದವು ಉತ್ಪನ್ನವಾಗುವುದೆಂದು ಹೇಳು ವರು. ಪ್ರಥಮವಾಗಿ ಉಂಟಾದ ವೀಚಿಯಿಂದ ಇನ್ನೊಂದು ವೀಚಿ (ತರಂಗ) ಯು ಹುಟ್ಟುವುದು. ಆ ತರಂಗದಿಂದ ಇನ್ನೊಂದು ತರಂಗ. ಆದರಿಂದ ಮತ್ತೊಂದು ದೊಡ್ಡ ತರಂಗವು ಉತ್ಪನ್ನವಾಗುವುದು. ಆದರಂತೆ ಮೊದಲು ಹುಟ್ಟಿದ ಶಬ್ದದಿಂದ ಎಲ್ಲಾ ದಿಕ್ಕುಗಳಲ್ಲೂ ಶಬ್ದವು ಹುಟ್ಟುವುದು. ಆದರಿಂದ ಇನ್ನೊಂದು ಶಬ್ದ. ಆದರಿಂದ ಮತ್ತೊಂದು ಶಬ್ದ. ಹೀಗೆ ಉತ್ಪನ್ನವಾದ ಶಬ್ದವು ಶ್ರೋತ್ರೇಂದ್ರಿಯದ ಸಂಬಂಧ ಹೊಂದುವುದು. ಇದು ನೈಯಾಯಿಕರ ಮತ.

ಕದಂಬವೃಕ್ಷದಲ್ಲಿ ಎಲ್ಲಾ ಭಾಗಗಳಲ್ಲೂ ಏಕಕಾಲದಲ್ಲಿ ಕೋರಕ (ಮೊಗ್ಗು) ಗಳು ಹುಟ್ಟುವುವು. ಆದರಂತೆ ಭೇರಿಯ ಶಬ್ದವು ಮೊದಲು ಹುಟ್ಟಿ ಆದರಿಂದ ಎಲ್ಲಾ ದಿಕ್ಕುಗಳಲ್ಲೂ ಏಕಕಾಲದಲ್ಲಿ ಶಬ್ದಗಳು ಉತ್ಪನ್ನವಾಗು ವುವು. ಆ ಶಬ್ದಗಳಿಂದ ಪುನಃ ಹತ್ತಾರು ಶಬ್ದಗಳ ಉತ್ಪತ್ತಿ ಹೀಗೆ ಮೊದಲು ಹುಟ್ಟಿದ ಶಬ್ದದಿಂದ ಎಲ್ಲಾ ದಿಕ್ಕು ಗಳಲ್ಲೂ ಅನೇಕ ಶಬ್ದಗಳು ಹುಟ್ಟಿ ಶ್ರವಣೇಂದ್ರಿಯ ಗೋಚರವಾಗುವುದೆಂದು ಕೆಲವರ ಮತ.

**ಒಂದೊಂದರಿಂದ ಹೊರಡುವ ಶಬ್ದಗಳಿಗೂ ಬೇರೆ ಬೇರೆ ಹೆಸರುಗಳಿರುವುವು.**

| | |
|---|---|
| ಉದರದಿಂದ ಹೊರಡುವ ಶಬ್ದವು | ಕರ್ದನ |
| ಗುದದ್ವಾರದಿಂದ ,, ,, | ಪರ್ದನ |
| ಸಿಂಹದ ಗರ್ಜನೆಯು | ಕ್ಷ್ವೇಡಾ |
| ವಸ್ತ್ರ ತರಗೆಲೆಗಳ ಶಬ್ದವು | ಮರ್ಮರ |
| ಅಶ್ವದ ,, | ಹೇಷಾ |
| ಧನುಸ್ಸಿನ ,, | ವಿಸ್ಫಾರ |
| ಮೇಘದ ,, | ಸ್ತನಿತ |
| ತಿರ್ಯಕ್ಪ್ರಾಣಿಗಳ ,, | ವಾಶಿತ |
| ನಾಯಿಯ ,, | ಭಷಣ |
| ಪಕ್ಷಿಗಳ ,, | ಕೂಜಿತ |
| ಭೂಷಣಗಳ ,, | ಶಿಂಜಿತ |
| ರತಿಕಾಲದ ,, | ಮಣಿತ |

ಇತ್ಯಾದಿ.

**ಶಬ್ದಗಳ ಲಿಂಗ ನಿರ್ದೇಶನ:—**

**ಪುಂಲಿಂಗ ಶಬ್ದಗಳು:**

ಸ್ವರ್ಗ ಯಾಗ ಪರ್ವತ ಮೇಘ ಸಮುದ್ರ ವೃಕ್ಷ ಕಾಲ ಖಡ್ಗ ಬಾಣ ಶತ್ರು ಹಸ್ತ ಕಪೋಲ ಓಷ್ಠ ಬಾಹು ದಂತ ಕಂಠ ಕೇಶ ಸ್ತನ ಇವುಗಳ ಹೆಸರುಗಳು ಪುಂಲಿಂಗಗಳು. ಅಹ್ನಾಂತಗಳಾದ ಶಬ್ದಗಳೂ (पूर्वाह्णः अपराह्णः) ಅಹಾಂತ ಶಬ್ದಗಳೂ (द्व्यहः त्र्यहः) ಪುಂಲಿಂಗಗಳು.

कशेरु जतु ಮತ್ತು वस्तु ಶಬ್ದಗಳನ್ನು ಬಿಟ್ಟು ಉಳಿದ ತು ಮತ್ತು ರು ಅಂತವಾಗಿರುವ ಶಬ್ದಗಳು ಪುಂಲಿಂಗ ಗಳು. हेतुः सेतुः, चरुः गुरुः ಇತ್ಯಾದಿ.

क ष ण भ म र प थ न य स ट ಈ ವರ್ಣ ಉಪಾಂತ್ಯವಾಗಿರುವ ಅಕಾರಾಂತ ಶಬ್ದಗಳು ಪುಂಲಿಂಗ ಗಳು.

ಉದಾ: अर्कः स्फटिकः वृषः निकषः गणः गुणः कुम्भः कलभः व्यामः ग्रामः हारः सारः धूपः सूपः अर्थः शपथः स्तेनः जनः कुलायः तन्तुवायः रसः दासः घटः पटः ಇತ್ಯಾದಿ.

ಸಂಜ್ಞೆ, ಕರ್ತೃವ್ಯತಿರಿಕ್ತಕಾರಕ ಮತ್ತು ಭಾವಾರ್ಥ ಗಳಲ್ಲಿ ವಿಧಿಸಲ್ಪಟ್ಟ घञ् अच् अप् नङ् ण घ अघुच् ಈ ಪ್ರತ್ಯಯಾಂತ ಶಬ್ದಗಳು ಪುಂಲಿಂಗಗಳು.

ಉದಾ: ಕ್ರಮವಾಗಿ पाकः रागः, नयः जयः चयः, करः गरः, यज्ञः यत्नः, नादः, दन्तच्छदः, क्षवथुः वेपथुः ಇತ್ಯಾದಿ.

ಭಾವಾರ್ಥದಲ್ಲಿ ವಿಧಿಸಲ್ಪಟ್ಟ "क" प्रत्ययान्त ಶಬ್ದ ಗಳೂ ಘಞರ್ಥದಲ್ಲಿ ವಿಹಿತವಾದ "क" ಪ್ರತ್ಯಯಾಂತ ಶಬ್ದಗಳೂ "घु" ಸಂಜ್ಞಕಧಾತುವಿನ ಮುಂದೆ ವಿಹಿತ ವಾದ "कि" ಪ್ರತ್ಯಯಾಂತ ಶಬ್ದಗಳೂ ಪುಂಲಿಂಗಗಳು. आखूत्थः प्रस्थः निधिः उदधिः जलधिः ಇತ್ಯಾದಿ.

ಕರ್ತ್ರರ್ಥದಲ್ಲಿ ವಿಹಿತವಾದ "ल्यु" ಪ್ರತ್ಯಯಾಂತ ಶಬ್ದಗಳೂ ಭಾವಾರ್ಥದಲ್ಲಿ ವಿಹಿತವಾದ "इमनिच्" ಪ್ರತ್ಯಯಾಂತ ಶಬ್ದಗಳೂ ಪುಂಲಿಂಗಗಳು.

ಉದಾ: ಕ್ರಮವಾಗಿ नन्दनः रमणः गरिमा प्रथिमा लघिमा ಇತ್ಯಾದಿ.

ಸೂರ್ಯ, ಚಂದ್ರ ಪರ್ಯಾಯಶಬ್ದಗಳೂ अयस् ಶಬ್ದವೂ ಪೂರ್ವಪದವಾಗಿರುವ कान्त ಶಬ್ದಾಂತಪದ ಗಳೂ ಪುಂಲಿಂಗಗಳು. सूर्यकान्तः चन्द्रकान्तः ಇತ್ಯಾದಿ.

**ಸ್ತ್ರೀಲಿಂಗ ಶಬ್ದಗಳು:**

ಏಕಾಚ್ಕವಾದ ಈಕಾರಾಂತ ಮತ್ತು ಊಕಾರಾಂತ ಶಬ್ದಗಳು. ಸ್ತ್ರೀಲಿಂಗಗಳು. धीः भ्रूः भ्रूः ಇತ್ಯಾದಿ.

"स्त्रियामीदूद्विरामैकाच्" अम०। मातृ योषित् सुरभि करेणु ಮೊದಲಾದ ಸಯೋನಿ ಪ್ರಾಣಿಗಳ ಶಬ್ದಗಳು ಸ್ತ್ರೀಲಿಂಗಗಳು.

विद्युत् निशा वल्ली वीणा दिक् भू नदी ह्री ವಾಚಕ ಶಬ್ದಗಳು ಸ್ತ್ರೀಲಿಂಗಗಳು.

ಅಕಾರಾಂತೋತ್ತರಪದವುಳ್ಳ ಸಮಾಹಾರದ್ವಿಗು ಸಮಾಸವು ಸ್ತ್ರೀಲಿಂಗ. पञ्चमूली पञ्चवटी ಇತ್ಯಾದಿ.

"अदन्तोद्विगुरेकार्थः" अम०। पात्र युग ಮುಂತಾದ ಉತ್ತರ ಪದಗಳಿಂದ ಕೂಡಿದ ದ್ವಿಗುಸಮಾಸವು ಸ್ತ್ರೀಲಿಂಗವಲ್ಲ. पञ्चपात्रम् चतुर्युगम् ಇತ್ಯಾದಿ. "पात्राद्यन्तस्य न" (वा० २-४-१७)। "तल्" ಪ್ರತ್ಯಯಾಂತ ಶಬ್ದಗಳೂ य: इनिः कटचच् त्रा ಈ ಪ್ರತ್ಯಯಾಂತ ಶಬ್ದಗಳೂ ಸ್ತ್ರೀಲಿಂಗಗಳು. ग्रामता जनता बन्धुता, पाश्या, खलिनी, रथकटया, गोत्रा ಇತ್ಯಾದಿ.

"स्त्रियां क्तिन्" ಈ ಅಧಿಕಾರದಲ್ಲಿ ಭಾವಾರ್ಥ ಕರ್ತೃವ್ಯತಿರಿಕ್ತಕಾರಕದಲ್ಲಿ ವಿಹಿತವಾದ अनिः क्तिन् ण्वुल् ण्वुच् क्यप् युङ् अङ् अः निः शः ಈ ಪ್ರತ್ಯಯಾಂತ ಶಬ್ದಗಳು ಸ್ತ್ರೀಲಿಂಗಗಳು.

**ಉದಾ :** ಕ್ರಮವಾಗಿ अजननिः, कृतिः भूतिः, आसिका शायिका, इक्षुभक्षिका, व्रज्या इज्या, आसना मण्डना, भिदा मृजा, चिकीर्षा, ईहा ऊहा, ग्लानिः म्लानिः, क्रिया इच्छा।

ಉಣಾದಿಗಳಲ್ಲಿ ವಿಹಿತವಾದ निर् ऊर् ಮತ್ತು ईर् ಪ್ರತ್ಯಯಾಂತ ಶಬ್ದಗಳು ಸ್ತ್ರೀಲಿಂಗಗಳು.

**ಉದಾ:** निर्-श्रेणिः श्रोणिः। ऊर्-खर्जूः कण्डूः चमूः। ईर्-लक्ष्मीः तन्त्रीः।

ङीप् ङीष् ಮತ್ತು ङीन् ಮತ್ತು चाप् टाप् ಮತ್ತು डाप् ಮತ್ತು ऊङ् ಈ ಪ್ರತ್ಯಯಾಂತಶಬ್ದಗಳು ಸ್ತ್ರೀಲಿಂಗಗಳು. ಇವು ವಿಶೇಷ್ಯನಿಘ್ನಗಳು ಮತ್ತು ನಿಯತಲಿಂಗಗಳು. ವಿಶೇಷ್ಯನಿಘ್ನಗಳು. पौस्नी औपगवी। ನಿಯತ ಲಿಂಗಗಳು करिणी कर्त्री ಇವು ङीप् ಪ್ರತ್ಯಯಾಂತಗಳು. दाक्षायणी गौरी ಇಲ್ಲಿ "ङीप्"। अजा एडका ಇಲ್ಲಿ "टाप्"। सुराजा ಇಲ್ಲಿ "डाप्"। रम्भोरूः ಇಲ್ಲಿ "ऊङ्" ಇತ್ಯಾದಿ.

**ನಪುಂಸಕ ಲಿಂಗ ಶಬ್ದಗಳು :**

ಆಕಾಶ ಅರಣ್ಯ ಎಲೆ ಗರ್ತ (ಹಳ್ಳ ಗುಳಿ) ಹಿಮ ಜಲ ಶೀತ ಉಷ್ಣ ಮಾಂಸ ರಕ್ತ ಮುಖ ಕಣ್ಣು ಧನ ಬಲ (ಶಕ್ತಿ) ಫಲ ಸ್ವರ್ಣ ತಾಮ್ರ ಲೋಹ ಸುಖ ದುಃಖ ಶುಭ ಅಶುಭ ಜಲಪುಷ್ಪಗಳು ಲವಣ ವ್ಯಂಜನ ಈ ವಸ್ತು ವಾಚಕ ಶಬ್ದಗಳು ನಪುಂಸಕಲಿಂಗಗಳು.

त्र ಎಂಬ ಅಕ್ಷರಾಂತವಾದ ಶಬ್ದಗಳೂ ಸಕಾರ ಮತ್ತು ಲಕಾರೋಪಧವಾಗಿರುವ ಮತ್ತು ವಿಶೇಷ ಶಾಸ್ತ್ರದಿಂದ ಬಾಧಿತವಲ್ಲದ ಶಬ್ದಗಳೂ ನಪುಂಸಕಲಿಂಗಗಳು. पत्रम् गात्रम् कलत्रम्। बिसम् यवसम् कुलम् फलम् जलम् ಇತ್ಯಾದಿ ಶಬ್ದಗಳು ನಪುಂಸಕ ಲಿಂಗಗಳು. ಸಂಖ್ಯಾವಾಚಕ ಪದವು ಪೂರ್ವದಲ್ಲಿರುವ ರಾತ್ರಶಬ್ದವು ನಪುಂಸಕ. त्रिरात्रम् गणरात्रम्।

ಸಮಾಹಾರದ್ವಂದ್ವಸಮಾಸವೂ ಅವ್ಯಯೀಭಾವ ಸಮಾಸವೂ ನಪುಂಸಕ ಲಿಂಗಗಳು. पाणिपादम् उपकुम्भम्। ಇತ್ಯಾದಿ.

ಸಂಖ್ಯಾಪೂರ್ವ ಮತ್ತು ಅವ್ಯಯಪೂರ್ವ ಸಮಾಸಾಂತ पथ ಶಬ್ದವು ನಪುಂಸಕ.

**ಉದಾ :** त्रिपथम् चतुष्पथम्। विपथम् दुष्पथम् ಇತ್ಯಾದಿ.

ಅನೇಕ ವಸ್ತುಗಳ ಸಂಬಂಧವಾದ ಛಾಯಾ ಶಬ್ದಾಂತವಾದ ತತ್ಪುರುಷ ಸಮಾಸದ ಶಬ್ದವು ನಪುಂಸಕಲಿಂಗ.

वीनां छाया विच्छायम्, वृक्षच्छायम् ಇತ್ಯಾದಿ.

ಸಮೂಹಾರ್ಥಕ ಸಭಾಶಬ್ದಾಂತ ತತ್ಪುರುಷಸಮಾಸವು ನಪುಂಸಕಲಿಂಗ. दासीसभम्। ರಾಜ ಪರ್ಯಾಯವಾಚಕ ಮತ್ತು ರಕ್ಷಃಪಿಶಾಚಾದಿವಾಚಕ ಪೂರ್ವದಲ್ಲಿರುವ ಶಾಲಾರ್ಥಕ ಸಭಾಶಬ್ದವು (ತತ್ಪುರುಷ ಸಮಾಸ) ನಪುಂಸಕ ಲಿಂಗ.

नृपसभम् रक्षःसभम् ಇತ್ಯಾದಿ. ಈ ರೀತಿ ದಿಙ್ಮಾತ್ರ ಪ್ರದರ್ಶನ. 4. ಪದವಿ, ಬಿರುದು. "यस्यार्थयुक्तं गिरिराजशब्दं कुर्वन्ति बालव्यजनैश्चमर्यः" कुमा० १-१३। 5. ನಾಮಧೇಯ, ಹೆಸರು. 6. (ನೈಯಾಯಿಕರ ಮತದಲ್ಲಿ) ನಾಲ್ಕು ವಿಧ ಪ್ರಮಾಣಗಳಲ್ಲೊಂದು.

**शब्दकार ಶಬ್ದಕಾರ** (वि०) ಶಬ್ದವನ್ನು ಮಾಡುವವನು. शब्दं करोति — डु कृञ् (करणे) "अण्" (३-२-१)। "हन्तुं कलहकारोऽसौ शब्दकारः पपात खम्" भट्टि० ५-१००।

**शब्दकोश ಶಬ್ದಕೋಶ** (पुं०) ನಿಘಂಟು, ಶಬ್ದಗಳ ಅರ್ಥವನ್ನು ತಿಳಿಸುವ ಪುಸ್ತಕ. ಅಕಾರಾದಿ ಪದಗಳನ್ನು ವಿಂಗಡಿಸಿ ಅವುಗಳ ಅರ್ಥವನ್ನು ಸೋದಾಹರಣ ವಿವರಿಸಿ ಹೇಳುವ ನಿಘಂಟು.

**शब्दगत ಶಬ್ದಗತ** (वि०) ಶಬ್ದದೊಳಗೆ ಇರುವ, ಶಬ್ದದೊಳಗೆ ಸೇರಿಕೊಂಡಿರುವ.

**शब्दगुण ಶಬ್ದಗುಣ** (वि०) ಶಬ್ದವೇ ಗುಣವಾಗಿರುವ. शब्दो गुणो यस्य। "अथात्मनः शब्दगुणं गुणज्ञः पदं विमानेन विगाहमानः" रघु० १३-१।

**शब्दग्रह ಶಬ್ದಗ್ರಹ** (पुं०) 1. ಶ್ರೋತ್ರೇಂದ್ರಿಯ, ಕರ್ಣ, ಕಿವಿ. शब्दो गृह्यतेऽनेन—ग्रह (उपादाने) "अप्" (३-३-५८)। 2. ಶಬ್ದವನ್ನು ಗ್ರಹಿಸುವುದು, ಶಬ್ದವನ್ನು ಕಂಡುಹಿಡಿಯುವುದು. शब्दस्य ग्रहः ग्रहणम्।

**शब्दचातुर्य ಶಬ್ದಚಾತುರ್ಯ** (न०) ವಾಗ್ವೈಖರಿ, ವಾಕ್ಸಾಮರ್ಥ್ಯ, ಮಾತಿನಲ್ಲಿ ಜಾಣತನ.

**शब्दचित्र ಶಬ್ದಚಿತ್ರ** (न०) ಕಾವ್ಯಗಳಲ್ಲಿ ಒಂದು ಭೇದ. ಕಾವ್ಯವು ಶಬ್ದಚಿತ್ರ ಮತ್ತು ಅರ್ಥಚಿತ್ರಗಳೆಂದು ಎರಡು ವಿಧ. ಶ್ರೋತ್ರಕ್ಕೆ ಮಾತ್ರ ಆಪ್ಯಾಯಮಾನವಾಗಿರುವ ಶಬ್ದರಾಶಿಗಳಿಂದ ಗ್ರಥಿತವಾದ ಕಾವ್ಯವು ಶಬ್ದಚಿತ್ರಕಾವ್ಯ. ಇಂತಹ ಕಾವ್ಯಗಳಲ್ಲಿ ಶಬ್ದಕ್ಕೆ ಪ್ರಾಧಾನ್ಯವೇ ಹೊರತು ಅರ್ಥ ಮತ್ತು ಅಲಂಕಾರಗಳಿಗೆ ಸ್ಥಾನವಿರುವುದಿಲ್ಲ. ಇಂತಹ ಕಾವ್ಯವು ಅಧಮಕಾವ್ಯವೆಂದು ಪರಿಗಣಿತವಾಗಿದೆ. "शब्दचित्रं वाच्य (अर्थ) चित्रमव्यंग्यं त्ववरं स्मृतम्" काव्यप्र०। "मित्रात्रिपुत्रनेत्राय त्रयीशात्रवशत्रवे। गोत्रारिगोत्रजत्राय गोत्रात्रे ते नमो नमः"। ಇಲ್ಲಿ ಅರ್ಥಚಮತ್ಕೃತಿಯಿಂದ ಪೋಷಿತವಾದ ಶಬ್ದ ಚಮತ್ಕೃತಿಗೇ ಪ್ರಾಧಾನ್ಯವಿರುವುದರಿಂದ ಇದು ಅವರ ಕಾವ್ಯ.

**शब्दचोर ಶಬ್ದಚೋರ** (पुं०) ಶಬ್ದವನ್ನು ಕದಿಯುವವನು, ಇತರರ ಗ್ರಂಥಗಳಿಂದ ಪದಗಳನ್ನು ಅಪಹರಿಸಿ ಪ್ರಯೋಗಿಸುವವನು, ಇತರರು ಪ್ರಯೋಗಿಸಿದ ಪದಗಳನ್ನು ತನ್ನ ಗ್ರಂಥದಲ್ಲಿ ಪ್ರಯೋಗಿಸುವವನು.

**शब्दतन्मात्र ಶಬ್ದತನ್ಮಾತ್ರ** (न०) ತಾಮಸಾಹಂಕಾರ ಮತ್ತು ಆಕಾಶ ಇವೆರಡರ ಮಧ್ಯಮಾವಸ್ಥೆಯೊಡನೆ ಕೂಡಿರುವ ದ್ರವ್ಯ, ಉತ್ಕಟಾವಸ್ಥೆಯನ್ನು ಹೊಂದದ ಶಬ್ದಗುಣವುಳ್ಳ ಸ್ಪರ್ಶಶೂನ್ಯವಾದ ದ್ರವ್ಯ, ಆಕಾಶಕ್ಕೆ ಉಪಾದಾನಕಾರಣವಾದ ದ್ರವ್ಯ. ದಧಿರೂಪವಾಗಿ ಪರಿಣಮಿಸಲು ಆರಂಭಿಸಿರುವ ಕ್ಷೀರಕ್ಕೆ ಕ್ಷೀರತ್ವಾವಸ್ಥೆ ಮತ್ತು ದಧಿತ್ವಾವಸ್ಥೆ ಈ ಎರಡರ ಮಧ್ಯಕಾಲದ ಅವಸ್ಥೆಯಂತೆ ತಾಮಸಾಹಂಕಾರ ಮತ್ತು ಆಕಾಶಗಳ ಮಧ್ಯಮಾವಸ್ಥೆಯೊಡನೆ ಕೂಡಿದ ದ್ರವ್ಯವು "शब्दतन्मात्र" ವೆನಿಸುವುದು. ಇದರಿಂದ ಆಕಾಶದ ಉತ್ಪತ್ತಿಯಾಗುವುದು. ["तन्मात्र" ಪದದಲ್ಲಿ ನೋಡಿ.]

**शब्दन ಶಬ್ದನ** (वि०) 1. ಶಬ್ದಮಾಡುವವನು, ಕೂಗುವವನು, ಕೂಗುವ ಸ್ವಭಾವದವನು. शब्द (शब्दक्रियायाम्)+णिच् "युच्" (३-२-१४८)। (न०) 2. ಕೂಗುವುದು, ಶಬ್ದಮಾಡುವುದು. शब्द भावे "ल्युट्" (३-३-११५)।

**शब्दप्रमाण ಶಬ್ದಪ್ರಮಾಣ** (न०) ಶಬ್ದದ ಆಧಾರ, ವಸ್ತುವನ್ನು ಯಥಾರ್ಥವಾಗಿ ತಿಳಿದುಕೊಳ್ಳಲು ಒಂದು ಉಪಾಯ, ಯಥಾರ್ಥಾನುಭವಕ್ಕೆ ಇರಬೇಕಾದ ಒಂದು ಕಾರಣ. ಯಥಾರ್ಥಾನುಭವವು (1) प्रत्यक्षम् (2) अनुमितिः (3) उपमितिः ಮತ್ತು (4) शाब्दम् ಎಂದು ನಾಲ್ಕು ವಿಧ. ಈ ಯಥಾರ್ಥಾನುಭವಗಳಿಗೆ (1) प्रत्यक्षप्रमाणम् (2) अनुमानप्रमाणम् (3) उपमानप्रमाणम् ಮತ್ತು (4) शब्दप्रमाणम् ಎಂದು ನಾಲ್ಕು ವಿಧ ಅಸಾಧಾರಣ ಕಾರಣರೂಪಕರಣಗಳಿರುವುವು. "यथार्थानुभवश्चतुर्विधः। प्रत्यक्षानुमित्युपमितिशाब्दभेदात्। तत्करणमपि चतुर्विधम्। प्रत्यक्षानुमानोपमानशब्दभेदात्। असाधारणकारणं करणम्" त० स०।

**शब्दब्रह्मन् ಶಬ್ದಬ್ರಹ್ಮನ್** (न०) 1. ವಾಕ್‌ರೂಪವಾದ ಬ್ರಹ್ಮ, ಪರಬ್ರಹ್ಮ. शब्द एव ब्रह्म। "भगवान् प्राचेतसः प्रथमं मनुष्येषु शब्दब्रह्मणस्तादृशं विवर्तमितिहासं रामायणं प्रणिनाय" उ० रा० २। "शब्दब्रह्मविदः कवेः परिणतां प्राज्ञस्य वाणीमिमाम्" उ० रा० ७-२१। 2. ವೇದ.

**शब्दभेदिन् ಶಬ್ದಭೇದಿನ್** (पुं०) 1. ಅರ್ಜುನ. शब्दमनुसृत्य भेत्तुं शीलमस्य—भिदिर् (विदारणे) "णिनिः" (३-२-७८)। "सव्यसाची सुभद्रेशः शब्दभेदी कपिध्वजः" त्रिकाण्ड०। 2. ಅಸನದ್ವಾರ, ಗುದ. 3. ಬಾಣದ ಒಂದು ಭೇದ. (वि०) 4. ಶಬ್ದವನ್ನು ಕೇಳಿ ಆ ಕಡೆಗೆ ಗುರಿಯಿಟ್ಟು ಹೊಡೆಯುವವನು.

**शब्दयत् ಶಬ್ದಯತ್** (वि०) ಕೂಗುತ್ತಿರುವ, ಶಬ್ದ ಮಾಡುತ್ತಿರುವ, ಮಾತನಾಡುತ್ತಿರುವ. शब्दं करोति+णिच् "शतृ" (३-२-१२४)। स्त्रियां "ङीप्" (४-१-६)। **–यन्ती –ಯನ್ತೀ.** "विततमृदुकराग्रः शब्दयन्त्या वयोभिः परिपतति दिवोऽङ्के हेलया बालसूर्यः" माघ० ११-४७।

**शब्दयोनि ಶಬ್ದಯೋನಿ** (स्त्री०) ಶಬ್ದೋತ್ಪತ್ತಿಗೆ ಮೂಲವಾದ ಧಾತು. शब्दस्य योनिः।

**शब्दविद्या ಶಬ್ದವಿದ್ಯಾ** (स्त्री०) ಶಬ್ದಶಾಸ್ತ್ರ, ವ್ಯಾಕರಣ ವಿದ್ಯೆ, ಶಬ್ದನಿಷ್ಪತ್ತಿಯನ್ನು ತಿಳಿಸುವ ಶಾಸ್ತ್ರ. **–शास्त्रम् ಶಾಸ್ತ್ರಮ್.** "शब्दविद्येव नो भाति राजनीतिरपस्पशा" माघ० २-११२।

**शब्दवेधिन् ಶಬ್ದವೇಧಿನ್** (ವಿ೦) 1. ದೃಷ್ಟಿಗೆ ಗೋಚರವಾಗದಿದ್ದರೂ ಶಬ್ದವು ಬಂದ ಕಡೆಗೆ ಗುರಿಯಿಟ್ಟು ಹೊಡೆಯುವವನು. शब्दमनुसृत्य वेद्धुं शीलं यस्य। व्यध (ताडने) "णिनिः" (३-२-७८)। (ಪು೦) 2. ದಶರಥ. 3. ಅರ್ಜುನ. 4. ಧಾನುಷ್ಕ, ಬಿಲ್ಲುಗಾರ. 5. ಒಂದು ವಿಧ ಬಾಣ.

**शब्दशक्ति ಶಬ್ದಶಕ್ತಿ** (ಸ್ತ್ರೀ೦) ಶಬ್ದಕ್ಕೆ ಅಭಿಧಾವೃತ್ತಿಯಿಂದ ಅರ್ಥ ಕೊಡುವ ಒಂದು ಶಕ್ತಿ, ಪದಗಳ ಅರ್ಥಜ್ಞಾನಕ್ಕೆ ಅನುಕೂಲವಾದ ಅರ್ಥಸ್ಮರಣೆಗೆ ಸಾಧಕವಾದ ಪದಪದಾರ್ಥಗಳ ಸಂಬಂಧರೂಪವಾದ ಶಕ್ತಿ. शब्दस्य शक्तिः—अभिधावृत्तिरूपा।

**शब्दशासन ಶಬ್ದಶಾಸನ** (ನ೦) 1. ಶಬ್ದಶಾಸ್ತ್ರ, ವ್ಯಾಕರಣಶಾಸ್ತ್ರ. शासु (अनुशिष्टौ) "ल्युट्" (३-३-११७)। 2. ವ್ಯಾಕರಣದ ನಿಯಮ, ವ್ಯಾಕರಣಶಾಸ್ತ್ರದ ನಿಬಂಧನೆ. "शब्दशासनविदः समासयोः विग्रहं व्यवससुः स्वरेण ते" माघ० १४-२४।

**शब्दशुद्धि ಶಬ್ದಶುದ್ಧಿ** (ಸ್ತ್ರೀ೦) ಶಬ್ದಗಳ ಶುದ್ಧತೆ, ವ್ಯಾಕರಣದ ನಿಯಮಾನುಸಾರ ಶಬ್ದಗಳಲ್ಲಿ ದೋಷವಿಲ್ಲದಿರುವಿಕೆ. शब्दस्य शुद्धिः।

**शब्दश्लेष ಶಬ್ದಶ್ಲೇಷ** (ಪು೦) ಒಂದೇ ಆನುಪೂರ್ವಿಯ ಶಬ್ದದಲ್ಲಿ ಜತುಕಾಷ್ಠಗಳಂತೆ ಅನೇಕಾರ್ಥಗಳು ಸೇರಿಕೊಂಡಿರುವಿಕೆ. शब्दस्य श्लेषः। "शब्दविद्येव नो भाति राजनीतिरपस्पशा" ಎಂಬಲ್ಲಿ अपगतः स्पशः चारः यस्याः ಎಂದೂ अविद्यमानः पस्पशः कश्चन उपोद्घात ग्रन्थः यस्याः ಎಂದೂ ಒಂದೇ ಪದದಲ್ಲಿ ಎರಡು ಅರ್ಥಗಳು ಸೇರಿಕೊಂಡು ಶಬ್ದವು ಶ್ಲಿಷ್ಟವಾಗಿರುವುದರಿಂದ ಶಬ್ದಶ್ಲೇಷ.

**शब्दसौष्ठव ಶಬ್ದಸೌಷ್ಠವ** (ನ೦) ಶಬ್ದದ ಸೊಬಗು, ಸುಂದರವಾದ ಶೈಲಿ. सुष्ठु भावः "अञ्" (५-१-१२९)। शब्दस्य सौष्ठवम्।

**शब्दाधिष्ठान ಶಬ್ದಾಧಿಷ್ಠಾನ** (ನ೦) ಶಬ್ದಕ್ಕೆ ಆಶ್ರಯವಾದ ಕರ್ಣ, —ಕಿವಿ. —ಶ್ರೋತ್ರೇಂದ್ರಿಯ. शब्दस्याधिष्ठानम् आश्रयस्थानम्।

**शब्दाध्याहार ಶಬ್ದಾಧ್ಯಾಹಾರ** (ಪು೦) ಒಂದು ವಾಕ್ಯದ ಅರ್ಥವು ಪೂರ್ಣವಾಗಲು ಅದಕ್ಕೆ ಬೇಕಾಗಿರುವ ಪದವನ್ನು ಸೇರಿಸಿಕೊಳ್ಳುವುದು, —ಬಿಟ್ಟುಹೋಗಿರುವ ಪದವನ್ನು ಸೇರಿಸಿಕೊಳ್ಳುವುದು.

**शब्दानुशासन ಶಬ್ದಾನುಶಾಸನ** (ನ೦) ಶಬ್ದಶಾಸ್ತ್ರ, ವ್ಯಾಕರಣಶಾಸ್ತ್ರ, ಸಂಸ್ಕೃತವಾದ ಶಬ್ದಗಳ ಸ್ವರೂಪವನ್ನು ತಿಳಿಸುವ ಶಾಸ್ತ್ರ. शब्दाः वैदिका लौकिकाश्च अनुशिष्यन्ते व्युत्पाद्य संस्क्रियन्ते प्रकृतिप्रत्ययविभागवत्तया बोध्यन्ते।

**शब्दालङ्कार ಶಬ್ದಾಲಂಕಾರ** (ಪು೦) ಅಲಂಕಾರದ ಒಂದು ಭೇದ, ಶಬ್ದಚಮತ್ಕೃತಿಯಿಂದ ಕಾವ್ಯಕ್ಕೆ ಶೋಭೆಯನ್ನು ಉಂಟುಮಾಡುವ ಅಲಂಕಾರ. ಅನುಪ್ರಾಸ ಯಮಕಗಳು ಶಬ್ದಾಲಂಕಾರಗಳು. ಈ ಅಲಂಕಾರಗಳಲ್ಲಿ ಶಬ್ದಚಮತ್ಕಾರಕ್ಕೇ ಪ್ರಾಧಾನ್ಯವಿರುವುದರಿಂದ ಶಬ್ದಾಲಂಕಾರಗಳಾಗುವುವು.

**शब्दाख्येय ಶಬ್ದಾಖ್ಯೇಯ** (ನ೦) 1. ಬಾಯಿಮಾತು, ಸಂದೇಶದ ಮಾತು. शब्देन आख्येयम्। (ವಿ೦) 2. ಶಬ್ದಗಳಿಂದ ಹೇಳಲು ಯೋಗ್ಯವಾದ, ಮಾತುಗಳಿಂದ ಹೇಳಬಹುದಾದ. "शब्दाख्येयं यदपि किल ते यः सखीनां पुरस्तात् कर्णे लोलः कथयितुमभूत् आननस्पर्शलोभात्" मेघ० २-४०।

**शब्दायमान ಶಬ್ದಾಯಮಾನ** (ವಿ೦) ಶಬ್ದಮಾಡುತ್ತಿರುವ, ಕೂಗಾಡುತ್ತಿರುವ. शब्द+क्यच् (३-१-१७)। "शानच्" (३-२-१२४)। दीर्घः (७-४-२५)। "शब्दायमानमव्यात्सीद्भुयदं क्षणदाचरम्" भट्टि० ५-५२।

**शब्दित ಶಬ್ದಿತ** (ವಿ೦) 1. ಶಬ್ದಮಾಡಿಸಲ್ಪಟ್ಟ. 2. ಉಚ್ಚಸ್ವರದಿಂದ ಕರೆಯಲ್ಪಟ್ಟ, ಉಚ್ಚಸ್ವರದಿಂದ ಹೇಳಿ ಪ್ರಕಾಶಪಡಿಸಲ್ಪಟ್ಟ. शब्द (संशब्दने) + णिच् कर्म० "क्तः" (३-२-१०२)। "शब्दितामनपशब्दमुच्चकैः वाक्यलक्षणविदोऽनुवाक्यया" माघ० १४-२०।

**शम ಶಮ** (ಪು೦) 1. ಶಾಂತಿ, ಅಂತರಿಂದ್ರಿಯನಿಗ್ರಹ. शमु (उपशमे) "घञ्" (३-३-१८)। "शमप्रधानेषु तपोधनेषु गूढं हि दाहात्मकमस्ति तेजः" शाकु० २-७। 2. ಚಿತ್ತಶಾಂತಿ, ಮನಸ್ಸಿನ ನೆಮ್ಮದಿ. 3. ಕ್ಷಮೆ, ಸಹನೆ, ತಾಳ್ಮೆ. "अनुपमशमदीप्ततागरीयान् कृतपदपङ्क्तिरथर्वणेव वेदः" किरा० १०-१०। 4. ಶಾಂತವಾಗುವುದು, ಕಡಮೆಯಾಗುವುದು. "शममेष्यति मम शोकः कथं नु वत्से त्वया रचितपूर्वम्" शाकु० ४-२०। 5. ಬಾಹ್ಯೇಂದ್ರಿಯನಿಗ್ರಹ. "सत्यं शौचं दया मौनं बुद्धिः ह्रीः श्रीर्यशः क्षमा। शमो दमो भगश्चेति यत्सङ्गाद्याति संक्षयम्" भाग० ३-३२-३३। 6. ನಿವೃತ್ತಿ, ನಾಶ. "अभवन्निर्मलं व्योम देवीकृत्यैःसह क्रमात्। साकं भूपालशोकेन दुर्भिक्षं च शमं ययौ" राजत०। 7. ಮೋಕ್ಷ.

**शमक ಶಮಕ** (वि०) 1. ಶಾಂತಿಗೊಳಿಸುವ, ಕಡಮೆ ಮಾಡುವ. 2. ಸಹನೆಯುಂಟುಮಾಡುವ. 3. ಸಂಪೂರ್ಣವಾಗಿ ನಿವಾರಿಸುವ. शम् (उपशमे)+णिच् "ण्वुल्" (३-१-१३३)। उपधाया न दीर्घः (७-३-३४)।

**शमथ ಶಮಥ** (पुं०) 1. ಶಾಂತಿ. 2. ಕ್ಷಮೆ, ಸಹನೆ. 3. ಮಂತ್ರಿ, ಸಚಿವ. शम् (उपशमे) "अथः" बाहु०।

**शमथु ಶಮಥು** (पुं०) 1. ಅಜಗರ, ಹೆಬ್ಬಾವು. 2. ನಿದ್ದೆ ಮಾಡುವವನು. 3. ಮರಣ.

**शमन ಶಮನ** (न०) 1. ಶಾಂತಗೊಳಿಸುವುದು. "ज्वलतः शमनाय चित्रभानोः प्रलयाप्लावमिवाभिदर्शयन्तः" माघ० २०-७०। 2. ಕಡಮೆಮಾಡುವುದು. 3. ನಾಶಗೊಳಿಸುವುದು. शमु (उपशमे) + णिच् "ल्युट्" (३-३-११५)। 4. ಯಾಗಕ್ಕಾಗಿ ಮಾಡುವ ಪಶುವಧೆ. 5. ಪ್ರತಿಸಂಹಾರ, ಹಿಂದಕ್ಕೆ ತೆಗೆದುಕೊಳ್ಳುವುದು. 6. ಪಿತೃಪತಿ, ಯಮಧರ್ಮರಾಯ. शमयति — शमु (उपशमे)+णिच् "ल्युः" (३-१-१३४)। शामयते — शम (आलोचने)+णिच् "ल्युः" (३-१-१३४) वा। "शमनं शान्तिवधयोः शमनः श्राद्धदेवते" मेदि०। "ददृशे तदसून् प्रसह्य पातुं शमनेनेव निवेशिता भुजङ्गी" याद० १५-१०१। 7. ಒಂದು ಜಾತಿಯ ಜಿಂಕೆ. 8. ನೆಲಗಡಲೆ. (वि०) 9. ಶಾಂತಿಯುಂಟುಮಾಡುವ. शमु कर० "ल्युट्"।

**शमनस्वसृ ಶಮನಸ್ವಸೃ** (स्त्री०) ಯಮಧರ್ಮರಾಯನ ತಂಗಿ, ಕಾಳಿಂದೀನದಿ, ಯಮುನಾನದಿ. शमनस्य स्वसा।

**शमनी ಶಮನೀ** (स्त्री०) ರಾತ್ರಿ. शमु (उपशमे) कर० "ल्युट्" (३-३-११७)। "ङीप्" (४-१-१५)।

**शमनीय ಶಮನೀಯ** (वि०) 1. ನಿಗ್ರಹಿಸಲ್ಪಡುವ. 2. ಅಡಗಿಸಲ್ಪಡುವ. 3. ನಿವಾರಿಸಲ್ಪಡುವ. 4. ಕಡಮೆ ಮಾಡಲ್ಪಡುವ. शमु (उपशमे) "अनीयर्" (३-१-९६)। 5. ನಿಗ್ರಹಿಸಬೇಕಾದ. 6. ಅಡಗಿಸಬೇಕಾದ. 7. ನಿವಾರಿಸಬೇಕಾದ. 8. ಕಡಮೆಮಾಡಬೇಕಾದ.

**शमनीषद ಶಮನೀಷದ** (पुं०) ರಾಕ್ಷಸ. शमन्यां सीदति —षद्लृ (विशरणादौ) "अच्" (३-१-१३४)। सस्य षत्वम् (५-३-३८)।

**शमयत् ಶಮಯತ್** (वि०) 1. ನಿಗ್ರಹಿಸುತ್ತಿರುವ, ಅಡಗಿಸುತ್ತಿರುವ. शमु (उपशमे) + णिच् "शतृ" (३-२-१२४)। "गदया सह भीममुज्जिहानं शमयन्नित्थमवोचदापगेयः" याद० १५-७९। 2. ನಿವಾರಿಸುತ್ತಿರುವ, ಹೋಗಲಾಡಿಸುತ್ತಿರುವ. "शमयन् धृतेन्द्रियशमैकसुखः शुचिभिर्गुणैरघमयं स तमः" किरा० ६-२०। 3. ಕಡಮೆಮಾಡುತ್ತಿರುವ, ಸಂಕ್ಷೇಪಗೊಳಿಸುತ್ತಿರುವ.

**शमल ಶಮಲ** (न०) 1. ವಿಷ್ಠೆ, ಅಮೇಧ್ಯ, ಮಲ. शमु (उपशमे) "कलः" (उ० १-१०९)। "शमलं शकृत्" अम०। 2. ಅಶುದ್ಧಿ, ಅಪವಿತ್ರತೆ. 3. ಪಾಪ, ದೋಷ.

**शमप्रधान ಶಮಪ್ರಧಾನ** (वि०) ಶಾಂತಿಯೇ ಪ್ರಧಾನವಾಗಿರುವ. शमः प्रधानं यस्य। "शमप्रधानेषु तपोधनेषु गूढं हि दाहात्मकमस्ति तेजः" शाकु० २-७।

**शमान्तक ಶಮಾಂತಕ** (पुं०) ಕಾಮ, ಮನ್ಮಥ.

**शमित ಶಮಿತ** (वि०) 1. ಶಾಂತವಾಗಿ ಮಾಡಲ್ಪಟ್ಟ, ನಿಶ್ಶಬ್ದವಾಗಿ ಮಾಡಲ್ಪಟ್ಟ. शमु (उपशमे) + णिच् "क्तः" (३-२-१०२)। 2. ನಿವಾರಿಸಲ್ಪಟ್ಟ, ಪರಿಹರಿಸಲ್ಪಟ್ಟ. "शमितनिगमखेदैः साधुभिःश्लाघनीयम्" याद० १४-८०। 3. ತಗ್ಗಿಸಲ್ಪಟ್ಟ, ಹಗುರ ಮಾಡಲ್ಪಟ್ಟ. "प्रह्लादं शमितपरिश्रमा दिशन्तः" किरा० ७-१५। 4. ಅಡಗಿಸಲ್ಪಟ್ಟ, ನಿಗ್ರಹಿಸಲ್ಪಟ್ಟ. 5. ಕಡಮೆ ಮಾಡಲ್ಪಟ್ಟ, ಚಿಕ್ಕದಾಗಿ ಮಾಡಲ್ಪಟ್ಟ. "शमितायाम इवातिरंहसा" किरा० १३-२७। 6. ಕುಗ್ಗಿಸಲ್ಪಟ್ಟ, ಶಕ್ತಿ ಕಡಮೆ ಮಾಡಲ್ಪಟ್ಟ. "गजान् जनः शमितरजश्रयानधः" माघ० १७-६८। स्त्रियां "ङीप्" (४-१-६)। **–यन्ती –ಯಂತೀ.**

**शमिन् ಶಮಿನ್** (वि०) 1. ಶಾಂತ, ಶಮಗುಣವುಳ್ಳವನು, ಕೋಪತಾಪವಿಲ್ಲದವನು. 2. ಕ್ಷಮೆಯುಳ್ಳವನು, ಸಹನಶೀಲ. शमोऽस्यास्ति — "इनिः" (५-२-११५)। "शमिनोऽपि तस्य नवसंगमने विभुतानुषङ्गि भयमेति जनः" किरा० ६-३५। 3. ಅಂತರಿಂದ್ರಿಯನಿಗ್ರಹವುಳ್ಳವನು. "भ्रमी कदम्बसंपन्नः पवनः शमिनामपि" भट्टि० ७-५।

**शमी ಶಮೀ** (स्त्री०) 1. ಶಮೀವೃಕ್ಷ, ಬನ್ನಿಮರ. शमयति रोगान्—शमु (उपशमे)+णिच् "अच्" (३-१-१३४)। गौरा० "ङीष्" (४-१-४१)। "अवेहि तनयां ब्रह्मन्नग्निगर्भां शमीमिव" शाकु० ४-३। 2. ಧಾನ್ಯಗಳ ಸಿಪ್ಪೆ. 3. ಬಾಹುಚಿಗೆ ಗಿಡ.

**शमीक ಶಮೀಕ** (पुं०) ಒಬ್ಬ ಮಹರ್ಷಿ. ಪರೀಕ್ಷಿತ್ ರಾಜನು ಒಂದು ದಿನ ಅರಣ್ಯಕ್ಕೆ ಬೇಟೆಗಾಗಿ ಹೋಗಿದ್ದಾಗ ಬಹಳ ಬಾಯಾರಿಕೆಯಿಂದ ಪೀಡಿತನಾಗಿ ಈ ಮುನಿಯ ಆಶ್ರಮಕ್ಕೆ ಹೋದನು. ಅಲ್ಲಿ ಸಮಾಧಿಸ್ಥನಾಗಿದ್ದ

ಮುನಿಯು ತನ್ನನ್ನು ಕಂಡು ಗೌರವಿಸಲಿಲ್ಲವೆಂಬ ಆಗ್ರಹ ದಿಂದ ಅಲ್ಲಿ ಸತ್ತುಬಿದ್ದಿದ್ದ ಒಂದು ಹಾವನ್ನು ಮುನಿಯ ಕೊರಳಿಗೆ ಹಾಕಿ ಹೊರಟುಹೋದನು. ಈ ವಿಷಯವನ್ನು ತಿಳಿದು ಕ್ರುದ್ಧನಾದ ಮುನಿಕುಮಾರನು "ಈ ನೀಚಕೃತ್ಯವನ್ನೆಸಗಿದವನು ಏಳುದಿನಗಳೊಳಗಾಗಿ ಸರ್ಪ ದಂಶನದಿಂದ ಮರಣಹೊಂದಲಿ" ಎಂದು ಶಪಿಸಿದನು. ["परिक्षित्" ಪದದಲ್ಲಿ ನೋಡಿ].

**शमीगर्भ ಶಮೀಗರ್ಭ** (पुं०) 1. ಅಗ್ನಿ. शम्या गर्भः। 2. ಬ್ರಾಹ್ಮಣ.

**शमीधान्य ಶಮೀಧಾನ್ಯ** (न०) ಉದ್ದು ಮೊದಲಾದ ದ್ವಿದಳ ಧಾನ್ಯ. "माषो मुद्गो राजमाषः कुलत्थश्चणकस्तिलः। काकाण्डश्चैवर इति शमीधान्यगणः स्मृतः" रत्न०।

**शमीर ಶಮೀರ** (पुं०) ಸಣ್ಣ ಬನ್ನಿಮರ. अल्पा शमी— "रः" (५-३-८८)। "अल्पा शमी शमीरः स्यात्" अम०।

**शम्पा ಶಂಪಾ** (स्त्री०) ವಿದ್ಯುತ್ತು, ಮಿಂಚು. शं सुखं पिबति—पा (पाने) "कः" (३-२-३)। टाप् (४-१-४)।

**शम्ब ಶಂಬ** (पुं०) 1. ವಜ್ರಾಯುಧ. 2. ಮುಸಲದ ಅಗ್ರಭಾಗದಲ್ಲಿರುವ ಲೋಹದ ವಲಯ, ಒನಕೆಯ ತುದಿಯಲ್ಲಿರುವ ಕಬ್ಬಿಣದ ಒಳೆ. "शम्बः पवी लोहकाञ्च्याम्" हेम०। 3. ದರಿದ್ರ, ಬಡವ. 4. ಟೊಂಕದ ಸುತ್ತಲೂ ಕಟ್ಟಿರುವ ಲೋಹದ ಸರಪಣಿ. 5. ನೆಲವನ್ನು ಎರಡನೆಯ ಸಲ ಉಳುವುದು, ಅನುಲೋಮವಾಗಿ ಉತ್ತ ನೆಲವನ್ನು ಪ್ರತಿಲೋಮವಾಗಿ ಉಳುವುದು. (वि०) 6. ಭಾಗ್ಯವಂತ, ಅದೃಷ್ಟಶಾಲಿ. "शम्बः स्यान्मुसलाग्रस्थ लोहमण्डलके पवौ। शुभान्विते त्रिषु" मेदि०।

**शम्बर ಶಂಬರ** (पुं०) 1. ಒಬ್ಬ ರಾಕ್ಷಸ. 2. ಒಂದು ಜಾತಿಯ ಜಿಂಕೆ. 3. ಒಬ್ಬ ಜಿನ. 4. ಚಿತ್ರಕ ವೃಕ್ಷ. 5. ಅರ್ಜುನ ವೃಕ್ಷ, ಕೆಂಪು ಮತ್ತಿ ಮರ. 6. ಲೋಧ್ರ ವೃಕ್ಷ. 7. ಒಂದು ಜಾತಿಯ ಮತ್ಸ್ಯ. 8. ಶೈಲ, ಬೆಟ್ಟ. (न०) 9. ಜಲ, ನೀರು. शं वृणोति—वृञ् (वरणे) "अच्" (३-१-१३४)। 10. ವಿತ್ತ, ಧನ. 11. ಮೇಘ, ಮೋಡ. 12. ವ್ರತ, ನಿಯಮ. "शम्बरो दानवान्तरे। मत्स्यैणगिरिभेदेषु" हेम०। "शम्बरं सलिले पुंसि मृगदैत्यविशेषयोः"। "शम्बरो दैत्यहरिणमत्स्यशैलजिनान्तरे" मेदि०।

**शम्बरकन्द ಶಂಬರಕಂದ** (पुं०) ವಾರಾಹೀ ಗೆಡ್ಡೆ, ಹಂದಿ ಗೆಡ್ಡೆ.

**शम्बरसूदन ಶಂಬರಸೂದನ** (पुं०) ಕಾಮದೇವ, ಪ್ರದ್ಯುಮ್ನ.

**शम्बरारि ಶಂಬರಾರಿ** (पुं०) ಕಾಮದೇವ, ಪ್ರದ್ಯುಮ್ನ. शम्बरस्य अरिः।

**शम्बरी ಶಂಬರೀ** (स्त्री०) 1. ಆಖುಪರ್ಣೀ, ಇಲಿ ಕಿವಿಯ ಗಿಡ. "शम्बरी चाखुपर्ण्यां स्यात्" मेदि०। 2. ಮಾಯೆ.

**शम्बल ಶಂಬಲ** (पुंन०) 1. ತಟ, ದಡ, ತೀರ. 2. ಪಾಥೇಯ, ಬುತ್ತಿ, ಪರಸ್ಥಳದ ಪ್ರಯಾಣಕಾಲದಲ್ಲಿ ತೆಗೆದುಕೊಳ್ಳುವ ಆಹಾರ ವಸ್ತು. 3. ಮತ್ಸರ, ಇತರರ ಶುಭವನ್ನು ದ್ವೇಷಿಸುವುದು, ಇತರರಿಗೆ ಒಳ್ಳೆಯದಾಗುವುದನ್ನು ಕಂಡು ಅಸೂಯೆ ಪಡುವುದು. "शम्बलोऽस्त्री सम्बलवत् कूलपाथेयमत्सरे" मेदि०।

**शम्बाकृत ಶಂಬಾಕೃತ** (वि०) ಅನುಲೋಮವಾಗಿ ಉತ್ತು ಮತ್ತೆ ಪ್ರತಿಲೋಮವಾಗಿ ಉಳಲ್ಪಟ್ಟ (ನೆಲ). शम्ब + कृञ् (करणे) "क्तः" (३-२-१०२)। "डाच्" (५-४-५८)। अनुलोमं कृष्टं क्षेत्रं पुनः प्रतिलोमं कर्षति शम्बाकरोति सि० कौ०। "द्विगुणाकृते तु सर्वं पूर्वं शम्बाकृतमपीह" अम०।

**शम्बूक ಶಂಬೂಕ** (पुंन०) 1. ಕಪ್ಪೆಚಿಪ್ಪು. शाम्यति—शमु (उपशमे) "ऊकः" (उ० ४-४१)। निपा०। बुक् च (ग० २००)। "शम्बूका जलशुक्तयः" अम०। (पुं०) 2. ಆನೆಯ ಕುಂಭಸ್ಥಳದ ತುದಿಯ ಭಾಗ. 3. ಬಸವನ ಹುಳ. 4. ಶಂಖ. 5. ಒಬ್ಬ ಶೂದ್ರತಪಸ್ವಿ. ಈತನು ತನಗೆ ವಿಹಿತವಲ್ಲದ ತಪಸ್ಸನ್ನಾಚರಿಸುತ್ತಿದ್ದುದರಿಂದ ಶ್ರೀರಾಮಚಂದ್ರನಿಂದ ಹತನಾದನು. "दत्ताभये त्वयि यमादपि दण्डधारे सञ्जीवितः शिशुरयं मम चेयमृद्धिः। शम्बूक एष शिरसा चरणौ नतस्ते सत्सङ्गजानि निधनान्यपि तारयन्ति" उ० रा० २-११।

**शम्भल ಶಂಭಲ** (पुं०) ಕಲಿಪುರುಷನ ಪ್ರಭಾವದಿಂದ ಅಧರ್ಮಭೂಯಿಷ್ಠವಾದ ಈ ಲೋಕದಲ್ಲಿ ದುಷ್ಟರಾಜರನ್ನು ನಿಗ್ರಹಿಸಿ ಧರ್ಮಸ್ಥಾಪನೆಗಾಗಿ ಪರಮಾತ್ಮನು ಕಲ್ಕಿರೂಪದಿಂದ ಅವತರಿಸುವ ಒಂದು ಗ್ರಾಮ. "शम्भलग्राममुख्यस्य ब्राह्मणस्य महात्मनः। भवने विष्णुयशसः कल्किःप्रादुर्भविष्यति" भाग० १२-२-१८।

**शम्भली ಶಂಭಲೀ** (स्त्री०) ಕುಟ್ಟನಿ, ತಲೆಹಿಡಕಿ. "कुट्टनी शम्भली समे" अम०।

**शम्भु ಶಂಭು** (पुं०) 1. ಪರಶಿವ, ಪರಮೇಶ್ವರ. शं भवति —भू (सत्तायाम्) अन्तर्भावितण्यन्तात् "डु:" (३-२-१८०)। "कल्पद्रुमप्रसववृष्टिरभून्नमस्तः शम्भोः सुतस्य शिरसि त्रिदशारिशत्रोः" कुमा० १७-५३। 2. ಬ್ರಹ್ಮ, ಚತುರ್ಮುಖ. "तामुवाच महाराज भूमिं भूमिपतिः प्रभुः। प्रभवः सर्वभूतानामीशः शम्भुः प्रजापतिः" भा० आदि० ६४-४५। 3. ಏಕಾದಶ ರುದ್ರರಲ್ಲಿ ಒಬ್ಬ. 4. ವಿಷ್ಣು. 5. ಸಿದ್ಧಪುರುಷ. "शम्भुर्ब्रह्मार्हतोः शिवे" हेम०। 6. ಬುದ್ಧದೇವ.

**शम्भुतनय ಶಂಭುತನಯ, -पुत्र -ಪುತ್ರ, -सुत -ಸುತ** (पुं०) ಪರಮೇಶ್ವರನ ಪುತ್ರ (1) ವಿನಾಯಕ. (2) ಸ್ಕಂದ, ಷಣ್ಮುಖ.

**शम्भुप्रिया ಶಂಭುಪ್ರಿಯಾ** (स्त्री०) 1. ಪಾರ್ವತಿ. 2. ಆಮಲಕ, ನೆಲ್ಲಿಗಿಡ.

**शम्भुवल्लभ ಶಂಭುವಲ್ಲಭ** (न०) 1. ಪದ್ಮ, ಬಿಳಿತಾವರೆ. (वि०) 2. ಈಶ್ವರನಿಗೆ ಪ್ರಿಯವಾದ.

**शम्या ಶಮ್ಯಾ** (स्त्री०) 1. ನೊಗದ ಕಣ್ಣಿಗೆ ಹಾಕುವ ಆಣಿ. शम्यतेऽनया—शमु (उपशमे) "यक्" (उ० ४-११२)। 2. ದಂಡ, ಯಷ್ಟಿ, ಕೋಲು. "शम्यापातास्त्रयो वापि त्रिगुणो नगरस्य तु" मनु० ८-२३७। 3. ಯಾಗದ ಒಂದು ಪಾತ್ರೆ.

**शम्याक्षेप ಶಮ್ಯಾಕ್ಷೇಪ** (पुं०) ವೇಗವಾಗಿ ಬೀಸಿ ಎಸೆದ ಕೋಲು ಬೀಳುವ ಪ್ರದೇಶ. शम्याः क्षेपो यत्र।

**शय ಶಯ** (पुं०) 1. ಹಸ್ತ, ಕೈ. शेतेऽत्र सर्वम्—शीङ् (स्वप्ने) "घः" (३-३-११८)। "पञ्चशाखः शयः पाणिः" अम०। 2. ಮಲಗುವುದು, ಮಲಗಿ ನಿದ್ರಿಸುವುದು. शीङ् भावे "घञ्" (३-३-१८)। 3. ಸರ್ಪ, ಹಾವು. 4. ನಿಂದನೆ, ದೂಷಣೆ. 5. ನಿದ್ರೆ. 6. ಹಾಸಿಗೆ. 7. ಕಂಬ, ಗೂಟ, ದಸಿ. (वि०) 8. ಮಲಗುವವನು, ನಿದ್ರಿಸುವವನು. (ಪ್ರಾಯಃ ಸಮಾಸಾಂತ್ಯದಲ್ಲಿ) "रात्रिजागरणपरो दिवाशयः" रघु० १९-३४।

**शयथ ಶಯಥ** (पुं०) 1. ಅಜಗರ, ಹೆಬ್ಬಾವು. शीङ् (स्वप्ने) "अथः" (उ० ३-११३)। 2. ಮೃತ್ಯು. 3. ಮತ್ಸ್ಯ. 4. ನಿದ್ರೆಮಾಡುವವನು. 5. ವರಾಹ, ಹಂದಿ.

**शयन ಶಯನ** (न०) 1. ಮಲಗುವುದು, ನಿದ್ರಿಸುವುದು. शीङ् (स्वप्ने) भावे "ल्युट्" (३-३-११५)। 2. ಮಂಚ. "सेवते स्म शयनं पराङ्मुखी सा तथापि रतये पिनाकिनः" कुमा० ८-२। 3. ಹಾಸಿಗೆ. "संनतिं दधति पेतुरजस्रं दृष्टयः प्रियतमे शयने च" माघ० १०-३९। 4. ಸುರತ, ರತಿ, ನಾಯಿಕಾನಾಯಕರು ಒಟ್ಟಿಗೆ ಸೇರುವಿಕೆ, ಸಂಭೋಗ. 5. ನಿದ್ರೆ. "शयनं सुरते निद्राशय्ययोश्च नपुंसकम्" मेदि०।

**शयनद्वादशी ಶಯನದ್ವಾದಶೀ** (स्त्री०) ಶ್ರೀ ಮಹಾವಿಷ್ಣುವು ಚಾತುರ್ಮಾಸ್ಯದ ಯೋಗನಿದ್ರೆಯನ್ನು ಕೈಗೊಳ್ಳಲು ಪ್ರಾರಂಭಿಸುವ ಆಷಾಢ ಶುಕ್ಲ ದ್ವಾದಶಿ.

**शयनीय ಶಯನೀಯ** (न०) 1. ತಲ್ಪ, ಹಾಸಿಗೆ. शेतेऽस्मिन्—शीङ् (स्वप्ने) अधि० "अनीयर्" (३-३-११३)। "दीयते स्म शयितुं शयनीये न क्षणः क्षणदयापि वधूभ्यः" माघ० १०-८९। (वि०) 2. ಮಲಗಬಹುದಾದ, ಮಲಗಲು ಯೋಗ್ಯವಾದ. शीङ् "अनीयर्" (३-१-९६)। 3. ಮಲಗಬೇಕಾದ. "शून्योऽयं शयनीयस्ते पर्यङ्को हेमभूषितः" रामा०। स्वार्थे "कन्"। **शयनीयकम् ಶಯನೀಯಕಮ್.** "तव्यः" (३-१-९६)। **शयितव्यम् ಶಯಿತವ್ಯಮ್.**

**शयनैकादशी ಶಯನೈಕಾದಶೀ** (स्त्री०) ಆಷಾಢ ಶುದ್ಧ ಏಕಾದಶಿ. (विष्णोः) शयनाय एकादशी। "मिथुनाभिगते सूर्ये शुक्लपक्षे तपोधन। एकादश्यां जगत्स्वामिशयनं परिकल्पयेत्"।

**शयान ಶಯಾನ** (वि०) ಮಲಗಿರುವ, ನಿದ್ರೆಮಾಡುತ್ತಿರುವ. शीङ् (स्वप्ने) "शानच्" (३-२-१२४)।

**शयानक ಶಯಾನಕ** (पुं०) 1. ಓತಿಕೇತ, ಹೆಂಟೆಗೊದ್ದ. 2. ಅಜಗರ, ದೊಡ್ಡಸರ್ಪ. शीङ् (स्वप्ने) "आनकः" (उ० ३-८२)।

**शयालु ಶಯಾಲು** (पुं०) 1. ಅಜಗರ, ದೊಡ್ಡ ಹಾವು, ಹೆಬ್ಬಾವು. शीङ् (स्वप्ने) "आलुच्" (वा० ३-२-१५८)। 2. ಕುಕ್ಕುರ, ನಾಯಿ. (वि०) 3. ನಿದ್ರಾಶೀಲ, ನಿದ್ರೆಯ ಸ್ವಭಾವದವನು, ತೂಗಡಿಸುವವನು. "हन्ति नोपशयस्थोऽपि शयालुर्मृगयुर्मृगान्" माघ० २-८०।

**शयित ಶಯಿತ** (न०) 1. ಶಯನ, ಮಲಗುವುದು, ನಿದ್ದೆ ಮಾಡುವುದು. शीङ् (स्वप्ने) "क्तः" (३-३-११४)। (वि०) 2. ಮಲಗಿರುವ, ನಿದ್ದೆಮಾಡುವ. शीङ् कर्त० "क्तः" (३-४-७२)। "कैतवेन शयिते कुतूहलात् पार्वती प्रति मुखं निपातितम्" कुमा० ८-३।

**शयितवत् ಶಯಿತವತ್** (वि०) ಮಲಗಿರುವವನು, ನಿದ್ದೆಮಾಡುವವನು. शीङ् (स्वप्ने) "क्तवतुः"

(३-२-१०२)। स्त्रियां "ङीप्" (४-१-६)। -वती -ವತೀ.

**शयु ಶಯು** (पुं०) ಹೆಬ್ಬಾವು, ದಾಸರ ಹಾವು. शेते—शीङ् (स्वप्ने) "उ:" (उ० १-७)। "शयुर्वाहस इत्युभौ" अम०।

**शय्या ಶಯ್ಯಾ** (स्त्री०) 1. ಹಾಸಿಗೆ. शीङ् (स्वप्ने) "क्यप्" (३-३-९९)। "महार्हशय्यापरिवर्तनच्युतैः स्वकेशपुष्पैरपि या स्म दूयते" कुमा० ५-१२। 2. ಶಬ್ದಗಳ ಗುಂಫನ, ಪದಗಳ ಜೋಡಣೆ. "शय्या तल्पे शब्दगुम्फे" हेम०।

**शर ಶರ** (पुं०) 1. ಬಾಣ. शृणाति—शॄ (हिंसायाम्) "अप्" (३-३-५७)। "लघु साधयितुं शरः प्रसेहे विधिनेवार्थमुदीरितं प्रयत्नः" किरा० १३-२८। 2. ಜಂಬುಹುಲ್ಲು. "परिणतशरकाण्डापाण्डुभिर्गण्डभागैः" माघ० ११-३०। 3. ಮೊಸರಿನ ಮೇಲಿನ ಕೆನೆ. 4. ಐದು ಸಂಖ್ಯೆ. (न०) 5. ಜಲ, ನೀರು. "शरस्तेजनके बाणे दध्यग्रे ना शरं जले" मेदि०।

**शरज ಶರಜ** (न०) 1. ಮೊಸರಿನ ಕೆನೆಯಿಂದ ಉಂಟಾದ ನವನೀತ, ಬೆಣ್ಣೆ. शरात् जायते—जनीं (प्रादुर्भावे) "ड:" (३-२-९८)। (पुं०) 2. ಕಾರ್ತಿಕೇಯ, ಷಣ್ಮುಖ.

**शरजन्मन् ಶರಜನ್ಮನ್** (पुं०) ಕಾರ್ತಿಕೇಯ, ಷಣ್ಮುಖ. शरे जन्म यस्य। "उमावृषाङ्कौ शरजन्मना यथा यथा जयन्तेन शचीपुरन्दरौ" रघु० ३-२३। "शरजन्मा षडाननः" अम०।

**शरण ಶರಣ** (न०) 1. ಗೃಹ, ಮನೆ. शृणाति—शॄ (हिंसायाम्) "ल्युट्" (३-३-११३)। "सन्दृश्य शरणं शून्यं भिक्षमाणो वनं प्रियाम्" भट्टि० ६-९। 2. ಆಶ್ರಯಸ್ಥಾನ, ಕಷ್ಟಕಾಲದಲ್ಲಿ ರಕ್ಷಣೆಕೊಡುವ ಸ್ಥಾನ. "प्रवालशय्याशरणं शरीरम्" कुमा० ३-८। 3. ಪವಿತ್ರಸ್ಥಳ, ಶುದ್ಧವಾಗಿ ರಕ್ಷಿಸಲ್ಪಟ್ಟ ಸ್ಥಳ. "वेत्रवति, अग्निशरणमार्गमादेशय" शाकु० ५। 4. ವಿಶ್ರಾಂತಿಗೃಹ, ಪ್ರಯಾಣಕಾಲದಲ್ಲಿ ತಂಗುವ ಸ್ಥಳ. (वि०) 5. ರಕ್ಷಿಸುವವನು, ಕಾಪಾಡುವವನು. "जितमृत्यवोऽजित भवन्ति भये ससुरासुरस्य जगतः शरणम्" किरा० १८-२२। 6. ರಕ್ಷಣೆ. 7. ವಧೆ, ಕೊಲ್ಲುವುದು. "शरणं गृहरक्षित्रोर्वधरक्षणयोरपि" मेदि०।

**शरणागत ಶರಣಾಗತ** (वि०) ರಕ್ಷಣೆಗಾಗಿ ಬಂದಿರುವವನು, ರಕ್ಷಿಸಬೇಕೆಂದು ಪ್ರಾರ್ಥಿಸಿ ಬಂದಿರುವವನು. शरणार्थमागतः शरणमागतो वा। "शरणागतरक्षां यः प्राणैरपि धनैरपि। कुरुते मानवो ज्ञानी तस्य पुण्यं निशामय॥ सर्वपापविनिर्मुक्तो ब्रह्महत्यामुखैरपि। आयुषोऽन्ते ब्रजन्मोक्षं योगिनामपि दुर्लभम्" पाद्मपु०। ಶರಣಾಗತನನ್ನು ರಕ್ಷಿಸದವನಿಗೆ ಪ್ರಾಯಶ್ಚಿತ್ತವೇ ಇಲ್ಲ. "शास्त्रेषु निष्कृतिर्दृष्टा महापातकिनामपि। शरणागतहातुस्तु न दृष्टा निष्कृतिः क्वचित्" वह्निपु०। "तरुणानपि रक्षति क्षमी स शरण्यः शरणागतान् द्विषः" माघ० १६-५४।

**शरणार्थिन् ಶರಣಾರ್ಥಿನ್** (वि०) ರಕ್ಷಣೆಯನ್ನು ಅಪೇಕ್ಷಿಸುವವನು, ರಕ್ಷಣೆಗಾಗಿ ಬೇಡುವವನು. शरणमर्थयते—अर्थं (उपयाच्ञायाम्) "णिनिः" (३-१-१३४)। "आगतस्य गृहं त्यागस्तथैव शरणार्थिनः। याचमानस्य च वधो नृशंसो गर्हितो बुधैः" भा० आदि०।

**शरणार्पक ಶರಣಾರ್ಪಕ** (वि०) ರಕ್ಷಣೆಗಾಗಿ ತನ್ನನ್ನು ಅರ್ಪಿಸಿಕೊಳ್ಳುವವನು. शरणार्थमर्पयत्यात्मानम्—शरण + ऋ (गतौ) + णिच् "ण्वुल्" (३-१-१३३)। पुगागमः (७-३-३६)।

**शरणोन्मुख ಶರಣೋನ್ಮುಖ** (वि०) ರಕ್ಷಣೆಯನ್ನು ಯಾಚಿಸಿ ಬಂದಿರುವವನು. शरणार्थम् उन्मुखः। "असौ शरण्यः शरणोन्मुखानामगाधसत्त्वो मगधप्रतिष्ठः" रघु० ६-२१।

**शरण्ड ಶರಂಡ** (पुं०) 1. ಧೂರ್ತ, ವಂಚಕ, ಮೋಸಗಾರ. 2. ಕೃಕಲಾಸ, ಹೆಂಟೆಗೊದ್ದ, ಓತಿಕೇತ. 3. ಒಂದು ವಿಧ ಆಭರಣ. "शरण्डस्तु पुमान् धूर्ते सरटे भूषणान्तरे" मेदि०।

**शरण्य ಶರಣ್ಯ** (वि०) ರಕ್ಷಕ, ರಕ್ಷಣೆಯನ್ನು ಕೊಡುವವನು, ಕಷ್ಟಕಾಲದಲ್ಲಿ ಕಾಪಾಡುವವನು. शरणे साधुः "यत्" (४-४-९८)। "अकिञ्चनोऽनन्यगतिः शरण्य त्वत्पादमूलं शरणं प्रपद्ये" स्तो० र०। "असौ शरण्यः शरणोन्मुखानाम्" रघु० ६-२१।

**शरण्यु ಶರಣ್ಯು** (पुं०) 1. ಮೇಘ, ಮೋಡ. 2. ವಾತ, ಗಾಳಿ. "शरण्युर्वारिदे वाते" विश्व०।

**शरद् ಶರದ್** (स्त्री०) 1. ಸಂವತ್ಸರ, ವರ್ಷ. शृणाति—शॄ (हिंसायाम्) "अदिः" (उ० १-१३०)। "ब्रह्मादयो ब्रह्महिताय तप्त्वा परः सहस्रं शरदां तपांसि" उ० रा० १-१५। 2. ಶರದೃತು, ಆಶ್ವಯುಜ-ಕಾರ್ತಿಕ ಮಾಸಗಳಿಂದ ಕೂಡಿದ ಋತು. "शरदमच्छगलद्वसनोपमा-

क्षमघनामघनाशनकीर्तनः" माघ० ६-४२। "यात्रायै चोदयामास तं शक्तेः प्रथमं शरत्" रघु० ४-२४।

**शरत्कामिन् ಶರತ್ಕಾಮಿನ್** (पुं०) ನಾಯಿ. शरदि शरत्काले कामयते — कमु (कान्तौ)+णिङ् "णिनिः" (३-२-७८)।

**शरत्काल ಶರತ್ಕಾಲ** (पुं०) ಆಶ್ವಯುಜ ಮತ್ತು ಕಾರ್ತಿಕ ಮಾಸಗಳ ಕಾಲ, ಶರದೃತು.

**शरत्पर्वन् ಶರತ್ಪರ್ವನ್** (न०) ಕೋಜಾಗರ ಹುಣ್ಣಿಮೆ, ಆಶ್ವಯುಜ ಮಾಸದ ಹುಣ್ಣಿಮೆ.

**शरदिज ಶರದಿಜ** (वि०) ಶರದೃತುವಿನಲ್ಲಿ ಹುಟ್ಟಿದ. शरदि जायते — जनी "डः" (३-२-९७)। सप्तम्या अलुक् (६-३-१५)।

**शरदुदाशय ಶರದುದಾಶಯ** (पुं०) ಶರತ್ಕಾಲದ ಸರೋವರ. "शरदुदाशये साधुजातसत्सरसिजोदरश्रीमुषा दृशा" गीतगो०।

**शरधि ಶರಧಿ** (पुं०) ಬತ್ತಳಿಕೆ, ಬಾಣಗಳ ಕೋಶ. शरा धीयन्तेऽत्र—शर+डु धाञ् (धारणपोषणयोः) "किः" (३-३-९३)।

**शरभ ಶರಭ** (पुं०) 1. ಕಡವೆ, ಎಂಟು ಕಾಲುಗಳು ಮತ್ತು ಎರಡು ತಲೆಗಳುಳ್ಳ ಒಂದು ಮೃಗ, ಸಿಂಹವನ್ನು ಕೊಲ್ಲುವ ಶಕ್ತಿಯುಳ್ಳ ಒಂದು ಮೃಗ. शॄ (हिंसायाम्) "अभच्" (उ० ३-१२२)। 2. ಒಂಟೆಯ ಮರಿ. 3. ಒಂದು ಜಾತಿಯ ವಾನರ. "शरभस्तु पशोर्भिदि। करभे वानरभिदि" मेदि०।

**शरभङ्ग ಶರಭಂಗ** (पुं०) ಒಬ್ಬ ಋಷಿ. ಈ ಋಷಿಯು ದಂಡಕಾರಣ್ಯದಲ್ಲಿ ತಪಸ್ಸನ್ನು ಮಾಡುತ್ತಿದ್ದು ವನವಾಸದಲ್ಲಿದ್ದ ಶ್ರೀ ಸೀತಾರಾಮ ಲಕ್ಷ್ಮಣರನ್ನು ಸತ್ಕರಿಸಿ ದೇಹವನ್ನು ತ್ಯಜಿಸಿ ಸದ್ಗತಿಯನ್ನು ಹೊಂದಿದನು.

**शरभू ಶರಭೂ** (पुं०) ಕಾರ್ತಿಕೇಯ, ಷಣ್ಮುಖ. शरे शरवणे भूः उत्पत्तिरस्य। ಜಂಬುಹುಲ್ಲಿನ ಮಧ್ಯದಲ್ಲಿ ಜನಿಸಿದುದರಿಂದ ಈ ಹೆಸರು.

**शरवण ಶರವಣ** (न०) ಜಂಬುಹುಲ್ಲಿನ ಪೊದೆ. शराणां वनम् — नकारस्य णत्वम् (८-४-५)। "ततः शरवणे सार्धं भयेन व्रीडया च ताः। तद्गर्भजातमुत्सृज्य स्वान् गृहानभिनिर्ययुः" कुमा० १०-५९।

**शरवणभव ಶರವಣಭವ** (पुं०) ಕಾರ್ತಿಕೇಯ, ಷಣ್ಮುಖ. शरवणे भवो जन्म यस्य। "आराध्यैनं शरवणभवं देवमुल्लङ्घिताध्वा" मेघ० १-४५।

**शरवर्ष ಶರವರ್ಷ** (पुं०) ಬಾಣಗಳ ಸುರಿಮಳೆ.

**शरवाणि ಶರವಾಣಿ** (पुं०) 1. ಬಾಣದ ತುದಿಯ ಭಾಗ. 2. ಪದಾತಿ, ಕಾಲಾಳು. (वि०) 3. ಬಾಣದಿಂದ ಜೀವಿಸುವವನು, ಬಾಣಗಳನ್ನು ಮಾಡಿ ಜೀವಿಸುವವನು. "शरवाणिः शरमुखे पदातौ शरजीविनि" हेम०।

**शरव्य ಶರವ್ಯ** (न०) ಬಾಣದ ಗುರಿ. शरवे हितम् "यत्" (५-१-२)। "विदधति जनतामनःशरव्यव्यधपटुमन्मथचापनादशङ्काम्" माघ० ७-२४।

**शराटि ಶರಾಟಿ** (पुं०) ಸರಕುಟ ಹಕ್ಕಿ. शरं नीरमटति —अट (गतौ) "इः" (उ० ४-१३९)। शराडिः ಶರಾಡಿಃ, शरारिः ಶರಾರಿಃ, शरालिः ಶರಾಲಿಃ.

**शराभ्यास ಶರಾಭ್ಯಾಸ** (पुं०) ಬಾಣಗಳ ಪ್ರಯೋಗ ಮತ್ತು ಉಪಸಂಹಾರಗಳ ಕಲಿಕೆ.

**शरारु ಶರಾರು** (वि०) ಹಿಂಸಿಸುವವನು, ಕೊಲ್ಲುವವನು. शॄ (हिंसायाम्) "आरुः" (३-२-१७३)। "शरारुर्घातुको हिंस्रः" अम०। "शरारुः श्रीशरीरेशः शुशूरैरिशिरः शरैः" माघ० १९-१०८।

**शराव ಶರಾವ** (पुंन०) 1. ಶ್ರಾವೆ, ಮಣ್ಣಿನ ಪಾತ್ರೆ. शरं नीरमवति—अव (रक्षणे) "अण्" (३-२-१)। "वृत्ते शरावसंपाते भिक्षां नित्यं यतिश्चरेत्" मनु० ६-५६। 2. ಎರಡು ಕುಡವ ಪ್ರಮಾಣ, ಒಂದು ಸೇರು ಅಳತೆ.

**शरावती ಶರಾವತೀ** (स्त्री०) 1. ಒಂದು ನದಿ. शराः तृणविशेषाः सन्त्यत्र—"मतुप्" (५-२-९५)। "शरावतीं पयोष्णीं च वेणां भीमरथीमपि" भा० भीष्म० ९-२०। 2. ಶ್ರೀರಾಮನ ಪುತ್ರನಾದ ಲವನ ರಾಜಧಾನಿ. "स निवेश्य कुशावत्यां रिपुनागाङ्कुशं कुशम्। शरावत्यां सतां सूक्तैः जनिताश्रुलवं लवम्" रघु० १५-९७।

**शराश्रय ಶರಾಶ್ರಯ** (पुं०) ಬತ್ತಳಿಕೆ, ಬಾಣಗಳನ್ನು ಇಡುವ ಕೋಶ. शराणामाश्रयः।

**शरासन ಶರಾಸನ** (न०) 1. ಧನುಸ್ಸು, ಬಿಲ್ಲು. शराः अस्यन्तेऽनेन — असु (क्षेपणे) "ल्युट्" (३-३-११७)। "भववीतये न हि तथा स विधिः क्व शरासनं क्व च विमुक्तिपथः" किरा० ६-४४। 2. ಧೃತರಾಷ್ಟ್ರನ ಒಬ್ಬ ಮಗ.

**शरास्य ಶರಾಸ್ಯ** (न०) ಧನುಸ್ಸು, ಬಿಲ್ಲು. शराः अस्यन्तेऽनेन — असु (क्षेपणे) "ण्यत्" (३-१-१२४)।

**शरिमन् ಶರಿಮನ್** (पुं०) ಪ್ರಸವ, ಹೆರಿಗೆ. शृणाति यौवनम्—शॄ (हिंसायाम्) "इमनिच्" (उ० ४-१४७)।

**शालीनता ಶಾಲೀನತಾ** (स्त्री०) ಸಂಕೋಚದ ಸ್ವಭಾವ, ದಿಟ್ಟತನವಿಲ್ಲದಿರುವಿಕೆ. शालीनस्य भाव: "तल्" (५-१-११९)।

**शालीय ಶಾಲೀಯ** (वि०) 1. ಶಾಲೆಯಲ್ಲಿ ಹುಟ್ಟಿದ. शालायां जात: "छ:" (४-२-११४)। 2. ಶಾಲೆಯಲ್ಲಿರುವ. शालायां भव: "छ:"। 3. ಶಾಲೆಯ ಸಂಬಂಧವಾದ. शालाया इदम्। "छ:"।

**शालु ಶಾಲು** (पुं०) 1. ಕಷಾಯ ದ್ರವ್ಯ. 2. ಭೇಕ, ಕಪ್ಪೆ. 3. ಒಂದು ಸುಗಂಧ ದ್ರವ್ಯ. (न०) 4. ತಾವರೆಯ ಗೆಡ್ಡೆ.

**शालूक ಶಾಲೂಕ** (पुं०) 1. ಭೇಕ, ಮಂಡೂಕ, ಕಪ್ಪೆ. 2. ತಾವರೆಯ ಗೆಡ್ಡೆ. शल (गतौ) "ऊकण्" (उ० ४-४२)। "शालूकमेषां कन्द: स्यात्" अम०।

**शालूर ಶಾಲೂರ** (पुं०) ಭೇಕ, ಮಂಡೂಕ, ಕಪ್ಪೆ. शल (गतौ) "ऊर:" (उ० ४-९०)।

**शालेय ಶಾಲೇಯ** (न०) 1. ಬತ್ತವನ್ನು ಬೆಳೆಯುವ ಭೂಮಿ. शालीनां भवनं क्षेत्रम् "ढक्" (५-२-२)। (पुं०) 2. ಸಬ್ಬಸಿಗೆಸೊಪ್ಪು. "क्षेत्रं व्रैहेयशालेयम्" अम०। "शालेय: स्यात् शीतशिवा छत्रा मधुरिका मिसि:" अम०।

**शालोत्तरीय ಶಾಲೋತ್ತರೀಯ** (पुं०) ಪಾಣಿನಿ ಮಹರ್ಷಿ. शालोत्तरे ग्रामे भव: "छ:" (४-२-११४)।

**शाल्मलि ಶಾಲ್ಮಲಿ** (पुंस्त्री०) 1. ಬೂರುಗದ ಮರ. शालयति — शलँ (सञ्चलने) "क्विप्" मल (धारणे) "इन्" (उ० ४-११८)। शाल् चासौ मलिश्च। 2. ಸಪ್ತದ್ವೀಪಗಳಲ್ಲೊಂದು ದ್ವೀಪ. ["द्वीप" ಪದದಲ್ಲಿ ನೋಡಿ]. 3. ಒಂದು ನರಕ. "शाल्मलि: तरुभेदे स्यात् द्वीपभेदेऽपि च द्वयो:" मेदि०।

**शाल्मलिन् ಶಾಲ್ಮಲಿನ್** (पुं०) ಗರುಡಪಕ್ಷಿ.

**शाल्मलिस्थ ಶಾಲ್ಮಲಿಸ್ಥ** (पुं०) ಗರುಡಪಕ್ಷಿ. "शाल्मलौ तिष्ठति — ष्ठा (गतिनिवृत्तौ) "क:" (३-२-४)।

**शाल्मली ಶಾಲ್ಮಲೀ** (स्त्री०) 1. ಬೂರುಗದ ಮರ. शाल्मलि—वा "ङीष्" (ग० ४-१-४५)। 2. ಒಂದು ನರಕ.

**शाल्मलीवेष्ट ಶಾಲ್ಮಲೀವೇಷ್ಟ** (पुं०) ಬೂರುಗದ ಮರದ ಅಂಟು.

**शाल्व ಶಾಲ್ವ** (पुं०) 1. ಒಂದು ದೇಶ. 2. ಶಾಲ್ವದೇಶದ ರಾಜ "ये चान्ये कालयवनशाल्वरुक्मिद्रुमादय:" माघ० २-९८।

**शाव ಶಾವ** (पुं०) 1. ಯಾವುದಾದರೂ ಪಶುಸಾಮಾನ್ಯದ ಮರಿ. शव (गतौ) "घञ्" (३-३-१९)। "क्व वयं क्व परोक्षमन्मथो मृगशावै: सममेधितो जन:" शाकु० २-१८। (वि०) 2. ಮೃತದೇಹಸಂಬಂಧವಾದ. शवस्यायम् "अण्" (४-३-१२०)। 3. ಮರಣನಿಮಿತ್ತವಾದ. "दशाहं शावमाशौचं सपिंडेषु विधीयते" मनु० ५-५९।

**शावक ಶಾವಕ** (पुं०) ಶಿಶು, ಮರಿ. शाव एव—स्वार्थे "कन्"।

**शाश्वत ಶಾಶ್ವತ** (पुं०) 1. ವಿಷ್ಣು, ನಾರಾಯಣ. शश्वदित्यव्युत्पन्नं प्रातिपदिकम्—तत्र भव: "अण्" (४-३-५३)। अनवरतजगद्व्यापारप्रवाहत्वेन शश्वद्भव: नित्य:। "अव्युच्छिन्नास्ततस्त्वेते सर्गस्थित्यन्तसंयमा:। अत: सदा प्रवाहत्वात् नित्य: शाश्वत उच्यते" इति निरुक्ति:। "अग्राह्य: शाश्वत: कृष्ण:" वि० स०। 2. ಪರಶಿವ, ಪರಮೇಶ್ವರ. "प्रवृत्तिश्च निवृत्तिश्च नियत: शाश्वतो ध्रुव:" भा०। (वि०) 3. ನಿತ್ಯವಾದ, ಸ್ಥಿರವಾದ, ಎಂದೆಂದಿಗೂ ಇರುವ. "त्वमेव हव्यं होता च भोज्यं भोक्ता च शाश्वत:" कुमा० २-१५। "शाश्वतस्तु ध्रुवो नित्यसदातनसनातना:" अम०। स्त्रियां "ङीप्" (४-१-१५)। "मा निषाद प्रतिष्ठां त्वमगम: शाश्वती: समा:" चं० रा०। (अव्य०) 4. ಶಾಶ್ವತವಾಗಿ, ಎಂದೆಂದಿಗೂ, ಸ್ಥಿರವಾಗಿ.

**शाष्कुलिक ಶಾಷ್ಕುಲಿಕ** (न०) ಚಕ್ಕುಲಿಗಳ ಸಮೂಹ, ಚಕ್ಕುಲಿಗಳ ರಾಶಿ. शष्कुलीनां समूह: "ठक्" (४-२-४७)।

**शासक ಶಾಸಕ** (वि०) 1. ಆಳುವವನು, ಪ್ರಭುತ್ವ ನಡಸುವವನು. शास्ति — शासु (अनुशिष्टौ) "ण्वुल्" (३-१-१३३)। "शाधि शासक जगत्त्रयस्य मामाश्रवोऽस्मि भवत: सहानुज:" माघ० १४-११। 2. ದಂಡಿಸುವವನು, ಶಿಕ್ಷಿಸುವವನು. 3. ಆಜ್ಞೆಮಾಡುವವನು. 4. ಸಲಹೆ ಕೊಡುವವನು.

**शासत् ಶಾಸತ್** (वि०) 1. ಆಳುತ್ತಿರುವ, ಪಾಲಿಸುತ್ತಿರುವ, ರಕ್ಷಿಸುತ್ತಿರುವ. शासु (अनुशिष्टौ) "शतृ" (३-२-१२४)। "पृथिवीं शासतस्तस्य पाकशासनतेजस:" रघु० १०-१। 2. ಆಜ್ಞೆಮಾಡುತ್ತಿರುವ. "इति शासति सेनान्यां गच्छतस्ताननेकधा" किरा० १५-२९। स्त्रियां "ङीप्" (४-१-६)। शासती ಶಾಸತೀ. 3. ದಂಡಿಸುತ್ತಿರುವ, ಶಿಕ್ಷಿಸುತ್ತಿರುವ.

**शासन ಶಾಸನ** (न०) 1. ಆಜ್ಞೆ, ಆದೇಶ, ಅಪ್ಪಣೆ. शासु (अनुशिष्टौ) भावे "ल्युट्" (३-३-११५)। "भेद्याः शत्रोरभिव्यक्तशासनैः सामवायिकाः" माघ० २-११३। "शासनेऽपि गुरुणि व्यवस्थितं कृत्यवस्तुषु नियुङ्क्ष्व कामतः" माघ० १४-१५। 2. ಶಿಕ್ಷೆ, ದಂಡನೆ. "तव शासनमाशु भूपतिः परवानद्य यतस्त्वयैव सः" माघ० १६-४। 3. ಕಾನೂನು, ಕಟ್ಟಳೆ, ಕಾಯಿದೆ. 4. ರಾಜನಿಂದ ಕೊಡಲ್ಪಟ್ಟ ಸನ್ನದು, ಭೂಮಿ ಮೊದಲಾದುವುಗಳ ವರ್ಗಪತ್ರ. 5. ಆಜ್ಞೆ, ಅಣತಿ, ವಿಧಿ. "इति क्षितीशो नवतिं नवाधिकां महाक्रतूनां महनीयशासनः" रघु० ३-६९। 6. ಸೇವೆಯ ಆಜ್ಞೆ. "शासनं पशुपतेः स कुमारः" कुमा० १२-५८। 7. ಅಧಿಕಾರ, ಪ್ರಭುತ್ವ. "अनन्यशासनामुर्वीं शशासैकपुरीमिव" रघु० १-३०। 8. ಸೂಚನೆ, ಸಲಹೆ. 9. ಕರಾರು, ಒಡಂಬಡಿಕೆ, ಒಪ್ಪಂದ. 10. ನಾಶಪಡಿಸುವುದು. 11. ಶಾಸ್ತ್ರ, ಆಧಾರಪೂರ್ವಕ ತಿಳಿವಳಿಕೆಯನ್ನು ಉಂಟುಮಾಡುವ ಗ್ರಂಥ. 12. ನಿಯಂತ್ರಣ, ಹತೋಟಿಯಲ್ಲಿಟ್ಟುಕೊಳ್ಳುವುದು. "शासनं राजदत्तोर्व्यां लेखाज्ञाशास्त्रशास्तिषु" विश्व०। 13. ಆಳುವುದು.

**शासनीय ಶಾಸನೀಯ** (वि०) 1. ಶಿಕ್ಷಿಸಲ್ಪಡುವ, ದಂಡಿಸಲ್ಪಡುವ. शासु (अनुशिष्टौ) "अनीयर्" (३-१-९६)। 2. ಆಳಲ್ಪಡುವವನು. 3. ಆಜ್ಞೆಮಾಡಲ್ಪಡುವವನು. 4. ಶಿಕ್ಷಿಸಬೇಕಾದ. 5. ಆಳಬೇಕಾದ. 6. ಆಜ್ಞಾಪಿಸಬೇಕಾದ. "तव्यः" (३-१-९६)। –सितव्यः–ಸಿತವ್ಯ।.

**शासित ಶಾಸಿತ** (वि०) 1. ಆಜ್ಞೆಮಾಡಲ್ಪಟ್ಟ. शासु (अनुशिष्टौ) "क्तः" (३-२-१०२)। 2. ಆಳಲ್ಪಟ್ಟ. 3. ಶಿಕ್ಷಿಸಲ್ಪಟ್ಟ. "सुशासिता स्त्री नृपतिः सुसेवितः"।

**शासितृ ಶಾಸಿತೃ** (वि०) 1. ಆಜ್ಞೆಮಾಡುವವನು, ಅಪ್ಪಣೆಮಾಡುವವನು. शासु (अनुशिष्टौ) "तृच्" (३-१-१३३)। "आदेशं देशकालज्ञः शिष्यः शासितुरानतः" रघु० १-९२। 2. ದಂಡಿಸುವವನು, ಶಿಕ್ಷಿಸುವವನು. "कः पौरवे वसुमतीं शासति शासितरि दुर्विनीतानाम्" शाकु० १-२१। 3. ಸಲಹೆ ಕೊಡುವವನು. 4. ಆಳುವವನು, ಪಾಲಿಸುವವನು. स्त्रियां "ङीप्" (४-१-५)। –त्री –ತ್ರೀ.

**शास्ति ಶಾಸ್ತಿ** (स्त्री०) 1. ಶಿಕ್ಷೆ, ದಂಡನೆ. शासु (अनुशिष्टौ) "क्तिन्" (३-३-९४)। 2. ಆಳುವುದು, ಪಾಲಿಸುವುದು. 3. ಆಜ್ಞೆಮಾಡುವುದು.

**शास्तृ ಶಾಸ್ತೃ** (पुं०) 1. ಬುದ್ಧದೇವ. शास्ति — शासु (अनुशिष्टौ) "तृन्" (उ० २-९४)। "मुनीन्द्रः श्रीघनः शास्ता" अम०। 2. ಆಳುವವನು, ಪ್ರಭುತ್ವ ನಡಸುವವನು, ರಾಜ, ದೊರೆ. 3. ಆಜ್ಞೆ ಮಾಡುವವನು. "शास्ता समन्तभद्रे ना शासके पुनरन्यवत्" मेदि०। 4. ದಂಡಿಸುವವನು, ಶಿಕ್ಷಿಸುವವನು. "राजर्षीणां जनयिता शास्ताचोत्पथगामिनाम्" भाग० १-१२-२६। 5. ಉಪದೇಶಕ, ಉಪಾಧ್ಯಾಯ. 6. ತಂದೆ. 7. ಜಿನದೇವ. "शास्ता जिने शासके च" हेम०। "शास्ता च शासके बुद्धे" विश्व०।

**शास्त्र ಶಾಸ್ತ್ರ** (न०) 1. ಆಜ್ಞೆ, ಆದೇಶ. शिष्यतेऽनेन — शासु (अनुशिष्टौ) "ष्ट्रन्" (उ० ४-१५८)। शास्ति त्रायते चेति शास्त्रम् इति वा। "ऋग्यजुःसामाथर्वा च भारतं पञ्चरात्रकम्। मूलरामायणं चैव शास्त्रमित्यभिधीयते" स्कान्द०। 2. ಜ್ಞಾನವನ್ನುಂಟುಮಾಡುವ ಗ್ರಂಥ, ಉಪದೇಶಿಸುವ ಗ್ರಂಥ. 3. ಆಜ್ಞಾರೂಪವಾದ ಗ್ರಂಥ. 4. ಸಾಧು ಮತ್ತು ಅಸಾಧು ಕರ್ತವ್ಯ ಮತ್ತು ಅಕರ್ತವ್ಯ ವಿಹಿತ ಮತ್ತು ನಿಷಿದ್ಧ ಗ್ರಾಹ್ಯ ಮತ್ತು ಅಗ್ರಾಹ್ಯವಿಷಯಗಳನ್ನೂ ತತ್ತ್ವಗಳನ್ನೂ ವಸ್ತುಸ್ವರೂಪವನ್ನೂ ಚರಾಚರಸಕಲವಸ್ತುಗಳ ಲಕ್ಷಣಗಳನ್ನೂ ಬೋಧಿಸುವ ಗ್ರಂಥ, ವೇದಗಳು ಪುರಾಣಗಳು ಅಧ್ಯಾತ್ಮಶಾಸ್ತ್ರ ಧರ್ಮಶಾಸ್ತ್ರ ನೀತಿಶಾಸ್ತ್ರ ರಾಜನೀತಿಶಾಸ್ತ್ರ ಅಶ್ವಶಾಸ್ತ್ರ ಗಜಶಾಸ್ತ್ರ ವೈದ್ಯಶಾಸ್ತ್ರ ಜ್ಯೋತಿಃಶಾಸ್ತ್ರ ಪಾಕಶಾಸ್ತ್ರ ತರ್ಕ ವ್ಯಾಕರಣ ಅಲಂಕಾರ ಪೂರ್ವೋತ್ತರ ಮೀಮಾಂಸಾಶಾಸ್ತ್ರಗಳು ಸಾಂಖ್ಯಯೋಗಶಾಸ್ತ್ರಗಳು ಅರ್ಥಶಾಸ್ತ್ರ ಗಣಿತಶಾಸ್ತ್ರ ಭೌತಶಾಸ್ತ್ರ ಸಸ್ಯಶಾಸ್ತ್ರ ರಸಾಯನಶಾಸ್ತ್ರ ಭೂವಿಜ್ಞಾನ ಗಾಂಧರ್ವ ನಾಟ್ಯಶಾಸ್ತ್ರಗಳು ಇತ್ಯಾದಿ. ಈ ಶಾಸ್ತ್ರಗಳನ್ನು ಸದಾಚಾರಸಂಪನ್ನರೂ ಆಯಾ ಶಾಸ್ತ್ರಗಳಲ್ಲಿ ಪರಿಣತರೂ ಆದ ಆಚಾರ್ಯರುಗಳಿಂದ ಉಪದೇಶ ಹೊಂದಿ ಆಯಾ ಶಾಸ್ತ್ರಗಳ ಜ್ಞಾನವನ್ನು ಪಡೆಯಬೇಕು. "इति गुह्यतमं शास्त्रमिदमुक्तं मयानघ" गीता १५-२०। "शुद्धमश्रुतिविरोधि बिभ्रतं शास्त्रमुज्ज्वलमवर्णसंकरैः" माघ० १४-३७। "विशेषविदुषः शास्त्रं यत्तवोद्ग्राह्यते पुरः" माघ० २-७५। "शास्त्रं हि निश्चितधियां क्व न सिद्धिमेति" माघ० ५-४७। "स किल सकलं शास्त्रं शास्त्रं विवेद विभूयया" कुमा० ११-५०। ಚತುರ್ಮುಖಬ್ರಹ್ಮನು ತಪಸ್ಸನ್ನಾಚರಿಸಿ ಮೊದಲು ಶತಕೋಟಿವಿಸ್ತರವಾದ ಸಕಲ ಶಾಸ್ತ್ರಗಳ ಪುರಾಣವನ್ನು ಸ್ಮರಿಸಿದನು.

ಅನಂತರ ಅವನ ವದನಗಳಿಂದ ವೇದಗಳೆಲ್ಲವೂ ಹೊರಟು ಬಂದುವು: "तपश्चचार प्रथमममराणां पितामहः। आविर्भूतास्ततो वेदाः साङ्गोपाङ्गपदक्रमाः।। पुराणं सर्वशास्त्राणां प्रथमं ब्रह्मणा स्मृतम्। नित्यशब्दमयं पुण्यं शतकोटिप्रविस्तरम्।। अनन्तरं च वक्त्रेभ्यो वेदास्तस्य विनिःसृताः। मीमांसा न्यायविद्याश्च प्रमाणं तर्कसंयुताः।। वेदाभ्यासरतस्यास्य प्रजाकामस्य मानसाः। मनसः पूर्वसृष्टा वै जाता ये तेन मानसाः" मत्स्यपु०। ಪರಮಾತ್ಮನು ವೇದಸ್ವರೂಪನಾದುದರಿಂದ ವೇದವನ್ನು ತ್ಯಜಿಸಿ ತದ್ವಿರುದ್ಧವಾದ ಶಾಸ್ತ್ರಗಳನ್ನು ಅವಲಂಬಿಸುವವರಿಗೆ ಪರಮಾತ್ಮಸ್ವರೂಪಜ್ಞಾನವುಂಟಾಗುವುದಿಲ್ಲ. "वेदमूर्तिरहं विप्रा नान्यशास्त्रार्थवादिभिः। ज्ञायते मत्स्वरूपं च त्यक्त्वा वेदं सनातनम्" कूर्मपु०। "शास्त्रेष्वव्याहता बुद्धिः मौर्वी धनुषि चातता" रघु० १-१९।

**शास्त्रकृत् ಶಾಸ್ತ್ರಕೃತ್** (पुं०) 1. ಶಾಸ್ತ್ರಗಳನ್ನು ರಚಿಸುವ ಋಷಿ. शास्त्रं करोति — डु कृञ् (करणे) "क्विप्" (३-२-७६)। (वि०) 2. ಶಾಸ್ತ್ರಗಳನ್ನು ರಚಿಸುವವನು.

**शास्त्रकोविद ಶಾಸ್ತ್ರಕೋವಿದ** (पुं०) ಶಾಸ್ತ್ರಜ್ಞ, ಶಾಸ್ತ್ರಗಳನ್ನು ಚೆನ್ನಾಗಿ ತಿಳಿದವನು, ಪಂಡಿತ, ಶಾಸ್ತ್ರಗಳಲ್ಲಿ ಹೆಚ್ಚು ಪರಿಶ್ರಮವುಳ್ಳವನು. शास्त्रेषु कोविदः।

**शास्त्रचक्षुस् ಶಾಸ್ತ್ರಚಕ್ಷುಸ್** (वि०) 1. ಶಾಸ್ತ್ರಗಳೇ ನೇತ್ರಗಳಾಗಿರುವವನು. शास्त्रमेव चक्षुर्यस्य। ಶಾಸ್ತ್ರಗಳ ಮೂಲಕ ಎಲ್ಲಾ ವಿಷಯಗಳೂ ಗೋಚರವಾಗುವುದರಿಂದ ಶಾಸ್ತ್ರಗಳು ನೇತ್ರಗಳಂತಿರುವುವು. (न०) 2. ಶಾಸ್ತ್ರಗಳೆಂಬ ನೇತ್ರ. शास्त्रमेव चक्षुः। 3. ವ್ಯಾಕರಣಶಾಸ್ತ್ರ. ವ್ಯಾಕರಣಶಾಸ್ತ್ರಜ್ಞಾನದಿಂದ ಎಲ್ಲಾ ಶಾಸ್ತ್ರಗಳ ಅರ್ಥಜ್ಞಾನವುಂಟಾಗುವುದರಿಂದ ವ್ಯಾಕರಣವು ನೇತ್ರದಂತಾಯಿತು. शास्त्रेषु चक्षुरिव।

**शास्त्रज्ञ ಶಾಸ್ತ್ರಜ್ಞ** (वि०) ಶಾಸ್ತ್ರಗಳನ್ನು ಬಲ್ಲವನು, ಶಾಸ್ತ್ರಜ್ಞಾನವುಳ್ಳವನು. शास्त्रं जानाति — ज्ञा (अवबोधने) "कः" (३-२-३)। —विद् —ವಿದ್.

**शास्त्रज्ञान ಶಾಸ್ತ್ರಜ್ಞಾನ** (न०) ಶಾಸ್ತ್ರಗಳ ಪರಿಚಯ, ಶಾಸ್ತ್ರಗಳ ಅರಿವು.

**शास्त्रतत्त्वज्ञ ಶಾಸ್ತ್ರತತ್ತ್ವಜ್ಞ** (पुं०) ಜ್ಯೋತಿಷ್ಯ, ಜೋಯಿಸ. शास्त्रस्य तत्त्वं जानाति— ज्ञा (अवबोधने) "कः" (३-२-३)।

**शास्त्रदर्शिन् ಶಾಸ್ತ್ರದರ್ಶಿನ್** (वि०) ಶಾಸ್ತ್ರಗಳನ್ನು ತಿಳಿದವನು, ಶಾಸ್ತ್ರಜ್ಞಾನವುಳ್ಳವನು. शास्त्रं द्रष्टुं शीलमस्य —दृशिर् (प्रेक्षणे) "णिनिः" (३-२-७८)।

**शास्त्रयोनि ಶಾಸ್ತ್ರಯೋನಿ** (स्त्री०) 1. ಶಾಸ್ತ್ರಗಳ ಮೂಲಸ್ಥಾನ, ಶಾಸ್ತ್ರಗಳ ಉತ್ಪತ್ತಿಸ್ಥಾನ. (वि०) 2. ಶಾಸ್ತ್ರಗಳೇ ಮೂಲವಾಗಿರುವ, ಶಾಸ್ತ್ರಗಳೇ ಕಾರಣ (ಪ್ರಮಾಣ) ವಾಗಿರುವ, ಶಾಸ್ತ್ರಜನ್ಯವಾದ. शास्त्रं योनिः कारणं यस्य। "शास्त्रयोनित्वात्" ब्र० सू० १-१-३।

**शास्त्रविरोध ಶಾಸ್ತ್ರವಿರೋಧ** (पुं०) ಶಾಸ್ತ್ರವಚನಕ್ಕೆ ಪ್ರತಿವಾದ, ಶಾಸ್ತ್ರಗಳಲ್ಲಿ ವಿಹಿತವಾದುದಕ್ಕೆ ಅಸಂಬದ್ಧವಾದ ಹೇಳಿಕೆ. शास्त्रस्य विरोधः।

**शास्त्रव्युत्पत्ति ಶಾಸ್ತ್ರವ್ಯುತ್ಪತ್ತಿ** (स्त्री०) ಶಾಸ್ತ್ರಗಳ ಯಥಾರ್ಥಜ್ಞಾನ, ಶಾಸ್ತ್ರೋಕ್ತ ವಿಷಯಗಳ ನಿಜವಾದ (ನಿಷ್ಕೃಷ್ಟವಾದ) ಜ್ಞಾನ, ಶಾಸ್ತ್ರಗಳಲ್ಲಿ ಪ್ರವೀಣತೆ.

**शास्त्रसिद्ध ಶಾಸ್ತ್ರಸಿದ್ಧ** (वि०) ಶಾಸ್ತ್ರವಚನಗಳಿಂದ ಸ್ಥಿರಪಟ್ಟಿರುವ. शास्त्रेण शास्त्रवचनेन सिद्धः।

**शास्त्रिन् ಶಾಸ್ತ್ರಿನ್** (वि०) ಶಾಸ್ತ್ರಜ್ಞಾನವುಳ್ಳವನು, ಶಾಸ್ತ್ರವನ್ನು ನಿಷ್ಕೃಷ್ಟವಾಗಿ ತಿಳಿದವನು. शास्त्रमस्यास्ति "इनिः" (५-२-११५)।

**शास्त्रीय ಶಾಸ್ತ್ರೀಯ** (वि०) ಶಾಸ್ತ್ರಸಂಬಂಧವಾದ, ಶಾಸ್ತ್ರವಿಹಿತವಾದ, ಶಾಸ್ತ್ರದಲ್ಲಿ ಉಕ್ತವಾದ. शास्त्रस्येदम् "छः" (४-२-११४)।

**शास्य ಶಾಸ್ಯ** (वि०) 1. ಉಪದೇಶಿಸಲ್ಪಡುವವನು. शासु (अनुशिष्टौ) "ण्यत्" (३-१-१२४)। 2. ಆಳಲ್ಪಡುವವನು. 3. ಶಿಕ್ಷಿಸಲ್ಪಡುವವನು, ದಂಡಿಸಲ್ಪಡುವವನು. 4. ಆಜ್ಞೆ ಮಾಡಲ್ಪಡುವವನು.

**शास्यमान ಶಾಸ್ಯಮಾನ** (वि०) 1. ಉಪದೇಶಿಸಲ್ಪಡುತ್ತಿರುವ. 2. ಆಜ್ಞೆ ಮಾಡಲ್ಪಡುತ್ತಿರುವ. 3. ದಂಡಿಸಲ್ಪಡುತ್ತಿರುವ. 4. ಆಳಲ್ಪಡುತ್ತಿರುವ. शासु (अनुशिष्टौ) कर्म० "शानच्" (३-२-१२४)। "शास्यमाना अपि त्रासाद्भेजुर्घूताङ्कुशा दिशः" कुमा० १६-२३।

**शि ಶಿ** (पुं०) 1. ಶಂಭು, ಪರಮೇಶ್ವರ. 2. ಮಂಗಳ. ಶುಭ. 3. ಶಾಂತಿ, ಚಿತ್ತಸ್ವಾಸ್ಥ್ಯ, ಮನಸ್ಸಿನ ನೆಮ್ಮದಿ, 4. ಮೋಕ್ಷ. 5. ಹಿಂಸೆ. 6. ನಿದ್ರೆ. "शिः शम्भौ शिवशान्तयोः। निर्वाणहिंसास्वापेषु" नानार्थर०।

**शिशपा ಶಿಂಶಪಾ** (स्त्री०) ಅಗುರು ಗಿಡ.

**शिक्कु ಶಿಕ್ಕು** (वि०) ಸೋಮಾರಿ, ಅಲಸ, ಯಾವ ಕಾರ್ಯದಲ್ಲೂ ಆಸಕ್ತಿಯಿಲ್ಲದವನು. "देशिकः शासिता शास्ता शिक्कुरव्यवसायवान्" त्रिकाण्ड०।

**शिक्य ಶಿಕ್ಯ** (न०) ಕಾವಡಿಯ ನಿಲುವು, ಕಾವಡಿಯ ಎರಡು ತುದಿಗಳಲ್ಲಿ ಕಟ್ಟಿರುವ ದಾರದ ನಿಲುವು. स्रंसु (अधःपतने)

धातोः शि: इत्यादेशः यत् तस्य कुडागमश्च (उ० ५-१६)। "छिद्रं ह्यन्तर्निहितवयुनः शिक्यभाण्डेषु तद्वित्" भाग० १०-८-३०।

**शिक्यित ಶಿಕ್ಯಿತ** (वि०) ಶಿಕ್ಯದಲ್ಲಿ ಇಡಲ್ಪಟ್ಟ ವಸ್ತು. शिक्य + णिच् "क्त:" (३-२-१०२)।

**शिक्षक ಶಿಕ್ಷಕ** (पुं०) ಉಪಾಧ್ಯಾಯ, ವಿದ್ಯೆಯನ್ನು ಕಲಿಸುವವನು, ಬೋಧಕ. शिक्ष (विद्योपादाने) "ण्वुल्" (३-१-१३३)। "शिष्टा क्रिया कस्यचिदात्मसंस्था संक्रान्तिरन्यस्य विशेषयुक्ता। यस्योभयं चास्ति स शिक्षकाणां धुरि प्रतिष्ठापयितव्य एव" माल० १-१६।

**शिक्षण ಶಿಕ್ಷಣ** (न०) 1. ವಿದ್ಯೆಯನ್ನು ಕಲಿಸುವುದು, ವಿದ್ಯಾದಾನ ಮಾಡುವುದು, ಬೋಧಿಸುವುದು. शिक्ष (विद्योपादाने) भावे "ल्युट्" (३-३-११५)। 2. ವಿದ್ಯೆಯನ್ನು ಕಲಿಯುವುದು, ವಿದ್ಯೆಯನ್ನು ಗ್ರಹಿಸುವುದು. 3. ಪಳಗಿಸುವುದು.

**शिक्षमाण ಶಿಕ್ಷಮಾಣ** (वि०) 1. ಬೋಧಿಸುತ್ತಿರುವ, ಕಲಿಸುತ್ತಿರುವ. 2. ಪಳಗಿಸುತ್ತಿರುವ. शिक्ष "शानच्" (३-२-१२४)।

**शिक्षा ಶಿಕ್ಷಾ** (स्त्री०) 1. ಉಪದೇಶ, ಶಿಕ್ಷಣ, ಕಲಿಸುವುದು. शिक्ष (विद्योपादाने) "अ:" (३-३-१०३)। "अभूच्च नम्रः प्रणिपातशिक्षया पितुर्मुदं तेन ततान सोऽर्भकः" रघु० ३-२५। 2. ಕಲಿಯುವುದು, ಅಭ್ಯಾಸ ಮಾಡುವುದು. "परिमोहयमाणेन शिक्षालाघवलीलया" किरा० १५-३६। 3. ಬಲಶಾಲಿಯಾಗುವ ಅಪೇಕ್ಷೆ, ಶಕ್ತಿಯುತನಾಗಿ ಆಗುವ ಆಸೆ. "पाण्डवः परिचक्राम शिक्षया रणशिक्षया" किरा० १५-३७। 4. ಆರು ವೇದಾಂಗಗಳಲ್ಲೊಂದು. ಇದು ಸ್ವರ ಮತ್ತು ವರ್ಣಗಳ ಉತ್ಪತ್ತಿಸ್ಥಾನ ಪ್ರಯತ್ನ ಮುಂತಾದುವನ್ನು ತಿಳಿಸುವುದರಿಂದ ಒಂದು ವೇದಾಂಗ. शिक्ष्यते अनेन स्थानप्रयत्नादिकम्—शिक्ष "अ:" (३-३-१०३)। "समीपवृक्षेष्विह बद्धनीडाः शिक्षोपपन्नां श्रुतिमुद्गृणन्तः" याद० १८-६१। 5. ವಿದ್ಯೆ, ಕಲೆ, ಶಾಸ್ತ್ರ. 6. ಪಳಗಿಸುವುದು.

**शिक्षाकर ಶಿಕ್ಷಾಕರ** (पुं०) ವೇದವ್ಯಾಸಮಹರ್ಷಿ.

**शिक्षागुरु ಶಿಕ್ಷಾಗುರು** (पुं०) ವಿದ್ಯೋಪದೇಶ ಮಾಡಿದ ಗುರು, ವಿದ್ಯೆಯನ್ನು ಕಲಿಸಿದ ಉಪಾಧ್ಯಾಯ.

**शिक्षित ಶಿಕ್ಷಿತ** (वि०) 1. ವಿದ್ಯಾಭ್ಯಾಸ ಮಾಡಿದವನು, ವಿದ್ಯೆ ಕಲಿತವನು. शिक्षा अस्य सञ्जाता — "इतच्" (५-२-३६)। "आपरितोषाद्विदुषां न साधु मन्ये प्रयोगविज्ञानम्। बलवदपि शिक्षितानामात्मन्यप्रत्ययं चेतः" शाकु० १-२। 2. ಅಭಿಜ್ಞ, ಪ್ರವೀಣ, ಕುಶಲ. "प्रवीणे निपुणाभिज्ञविज्ञनिष्णातशिक्षिताः" अम०। 3. ಕಲಿಸಲ್ಪಟ್ಟ, ಉಪದೇಶಿಸಲ್ಪಟ್ಟ. "स्त्रीणामशिक्षितपटुत्वममानुषीषु सन्दृश्यते किमुत याः प्रतिबोधवत्यः" शाकु० ५-२२। "शिक्षितं युवतिनैपुणं तया यत्तदेव गुरुदक्षिणीकृतम्" कुमा० ८-१७। 4. ಪಳಗಿಸಲ್ಪಟ್ಟ. "श्रुतिमधुरगिरां स्वशिक्षितानां अतिशयसिद्धिमदर्शयत्प्रियाम्यः" याद० २४-३१। 5. ಅಭ್ಯಾಸಮಾಡಲ್ಪಟ್ಟ. "सन्दानान्तादस्त्रिभिः शिक्षितास्त्रैराविश्याधः शातशस्त्रावलूनाः" माघ० १८-७१।

**शिखण्ड ಶಿಖಂಡ** (पुं०) 1. ನವಿಲಿನ ಪುಕ್ಕ. शिखिना अम्यते — अम (गत्यादिषु) "ड:" (उ० १-११४)। 2. ಕೇಶಪಾಶ, ಜುಟ್ಟು. 3. ಜುಲ್ಪಿಕೂದಲು.

**शिखण्डक ಶಿಖಂಡಕ** (पुं०) 1. ಜುಲ್ಪಿಕೂದಲು, ಕ್ಷತ್ರಿಯರು ಬಾಲ್ಯದಲ್ಲಿ ಕಿವಿಗಳ ಮೇಲುಗಡೆ ಬಿಡುವ ಜುಟ್ಟು. शिखण्ड इव "कन्" (५-३-९७)। "तौ पितुर्नयनजेन वारिणा किञ्चिदुक्षितशिखण्डकावुभौ" रघु० ११-५। (न०) 2. ನವಿಲಿನ ಪುಕ್ಕ.

**शिखण्डिन् ಶಿಖಂಡಿನ್** (पुं०) 1. ಮಯೂರ, ನವಿಲು. शिखण्डोऽस्यास्ति—"इनिः" (५-२-११५)। "मेखलातरुषु निद्रितानमून् बोधयत्यसमये शिखण्डिनः" कुमा० ८-६७। 2. ಕುಕ್ಕುಟ, ಕೋಳಿ. 3. ನವಿಲಿನ ಪುಕ್ಕ. 4. ಬಾಣ. 5. ವಿಷ್ಣು. शिखण्डः अपरिमिताप्रधृष्यैश्वर्यपरमतेजःकलापः अतिशयेन अस्यास्ति "इनिः" (५-२-११५)। "अत्यप्रधृष्यमैश्वर्यं परं यत्तेज आस्थितम्। तच्छिखण्डं तु यस्यास्ति तच्छिखण्डीति चक्ष्यते" इति निरुक्तिः। "शिखण्डी नहुषो वृषः" वि० स०। 6. ದ್ರುಪದರಾಜನ ಒಬ್ಬ ಮಗ. [ಭೀಷ್ಮನು ಕಾಶಿರಾಜನ ಮಗಳಾದ ಅಂಬೆಯನ್ನು ವಿಚಿತ್ರವೀರ್ಯನಿಗೆ ಮದುವೆಮಾಡಲು ಅಪಹರಿಸಿಕೊಂಡು ಹೋಗುತ್ತಿದ್ದಾಗ ಅವಳನ್ನು ಸೌಭರಾಜನಿಗೆ ಕೊಡಲು ನಿಶ್ಚಯಿಸಿದ್ದ ವಿಷಯವನ್ನು ತಿಳಿದು ಸೌಭರಾಜನಲ್ಲಿಗೇ ಕಳುಹಿಸಿದನು. ಸೌಭನೂ ಅಪಹೃತಳಾದ ಇವಳನ್ನು ತಿರಸ್ಕರಿಸಿದನು. ಮತ್ತೆ ಭೀಷ್ಮನಲ್ಲಿಗೆ ಬಂದು ತನ್ನನ್ನು ಅಂಗೀಕರಿಸುವಂತೆ ಪ್ರಾರ್ಥಿಸಿದಳು. ಭೀಷ್ಮನು ಆಜೀವ ಬ್ರಹ್ಮಚರ್ಯೆಯ ಕಾರಣ ಇವಳನ್ನು ತಿರಸ್ಕರಿಸಲು ಮುಂದಿನ ಜನ್ಮದಲ್ಲಿ ಈ ಸೇಡನ್ನು ತೀರಿಸಿಕೊಳ್ಳುವುದಾಗಿ ಪ್ರತಿಜ್ಞೆ ಮಾಡಿ ಈಶ್ವರನಿಂದ ವರ ಪಡೆದು ಶಿಖಂಡಿಯೆಂಬ ಹೆಸರಿನಿಂದ

ದ್ರುಪದರಾಜನ ಮಗಳಾಗಿ ಹುಟ್ಟಿ ಭೀಷ್ಮಾಚಾರ್ಯರ ಅವಸಾನಕ್ಕೆ ಕಾರಣಳಾದಳು. ಸ್ತ್ರೀಜನ್ಮ ಪಡೆದಿದ್ದ ಶಿಖಂಡಿಗೆ ಬಳಿಕ ಪುರುಷರೂಪ ಬರುವುದು.] 7. ಗುಲಗಂಜಿ. 8. ಪರಶಿವ, ಮಹಾದೇವ. "जटी चर्मी शिखण्डी च सर्वाङ्गः सर्वभावनः" भा० ।

**शिखण्डिनी ಶಿಖಂಡಿನೀ** (स्त्री०) 1. ಒಂದು ಜಾತಿಯ ಕಾಡುಮಲ್ಲಿಗೆ. 2. ಗುಲಗಂಜಿ. "शिखण्डिनी यूथिकायां गुञ्जायामपि योषिति" मेदि० । 3. ಹೆಣ್ಣು ನವಿಲು. "आयान्त्यां निजयुवतौ वनात्सशङ्कं बर्हिणामपरशिखण्डिनीं भरेण" माघ० ८-११ ।

**शिखर ಶಿಖರ** (पुंन०) 1. ಅಗ್ರಭಾಗ, ತುದಿ. 2. ಉನ್ನತ ಪ್ರದೇಶ. ಪರ್ವತಾಗ್ರ, ವೃಕ್ಷಾಗ್ರ ಇತ್ಯಾದಿ. शिखास्यास्ति—शिखा "रः" शिखाया ह्रस्वश्च (४-२-८०) । "अध्यासामासुरुत्तुङ्गहेमपीठानि यान्यमी । तैरूहे केसरिक्रान्तत्रिकूटशिखरोपमा" माघ० २-५ । 3. ಕಕ್ಷ, ಕಂಕುಳು. 4. ರೋಮಾಂಚ. 5. ಹಣ್ಣಾಗಿ ಕೆಂಪಗಿರುವ ದಾಳಿಂಬೆ ಬೀಜದಂತಿರುವ ಮಾಣಿಕ್ಯದ ಚೂರು. "शिखरोऽस्त्री द्रुमाग्रेऽद्रिशृङ्गे पुलककक्षयोः । पक्वदाडिमबीजाभमाणिक्यशकलाग्रयोः" मेदि० । 6. ಬಾಣದ ತುದಿ. 7. ಕತ್ತಿಯ ಅಲಗು.

**शिखरवासिनी ಶಿಖರವಾಸಿನೀ** (स्त्री०) ದುರ್ಗಾದೇವಿ. "अथार्या हिण्डी शिखरवासिनी" त्रिकाण्ड० ।

**शिखरा ಶಿಖರಾ** (स्त्री०) ಕುರಟಗೆ ಗಿಡ.

**शिखरिणी ಶಿಖರಿಣೀ** (स्त्री०) 1. ಉತ್ತಮಳಾದ ಹೆಂಗಸು, ಸ್ತ್ರೀರತ್ನ. 2. ಒಂದು ಜಾತಿಯ ಮಲ್ಲಿಗೆ ಗಿಡ. 3. ನಾಭಿಯ ಕೆಳಗಡೆಯ ರೋಮಪಙ್ಕ್ತಿ,—ರೋಮರಾಜಿ. 4. ವ್ಯೋಷ ಚತುರ್ಜಾತ ಗುಡ ಹಸಿಶುಂಠಿ ಮತ್ತು ಜೀರಿಗೆ ಇವುಗಳಿಂದ ಬೆರೆತ (ಹಸಿ) ಮೊಸರು. ["मार्जिता" ಪದದಲ್ಲಿ ನೋಡಿ.] 5. ವೃತ್ತರತ್ನಾಕರೋಕ್ತ ಹದಿನೇಳನೇ ಛಂದಸ್ಸಿನ ಒಂದು ವೃತ್ತ. **ಇದರ ಲಕ್ಷಣ:** ಯಗಣ ಮಗಣ ನಗಣ ಸಗಣ ಭಗಣ ಒಂದು ಲಘು ಮತ್ತು ಒಂದು ಗುರುವರ್ಣ. "रसै रुद्रैश्छिन्ना यमनसभलागः शिखरिणी" वृ० र० । **ಇದರ ಗಣವಿನ್ಯಾಸ:**

य म न स भ ल गु ।
।UU UUU ।।। ।।U U।। । U

6. ಕುರುಟಗೆ ಗಿಡ.

**शिखरिन् ಶಿಖರಿನ್** (पुं०) 1. ಪರ್ವತ, ಬೆಟ್ಟ. शिखरमस्यास्ति "इनिः" (५-२-११५) । "उदयशिखरिशृङ्गप्राङ्गणेष्वेव रिङ्गन् सकमलमखहासं वीक्षितः पद्मिनीभिः" माघ० ११-४७ । 2. ವೃಕ್ಷ, ಮರ. 3. ದುರ್ಗ, ಕೋಟೆ. 4. ನೀರುನಡಗೆಯ ಉದ್ದದ ಕಾಲುಗಳುಳ್ಳ ಬಿಳಿಯ ಕೊಕ್ಕರೆ. 5. ಅಪಾಮಾರ್ಗ, ಉತ್ತರಣೆ ಗಿಡ. "शिखरी कोटकोयष्टचोर्द्रुमेऽपामार्गशैलयोः" हेम० । (वि०) 6. ಮೊನಚಾದ ಅಗ್ರಭಾಗವುಳ್ಳ, ತುದಿಯಲ್ಲಿ ಮೊನೆಯಾಗಿರುವ. "तन्वी श्यामा शिखरिदशना पक्वबिम्बाधरोष्ठी मध्ये क्षामा चकितहरिणीप्रेक्षणा निम्ननाभिः" मेघ० २-१९ । ಒಳ್ಳೆಯ ಹೊಳಪಿನಿಂದ ಕೂಡಿ ತುದಿಯಲ್ಲಿ ಮೊನೆಯಾಗಿಯೂ ಸಮವಾಗಿಯೂ ಇರುವ ದಂತಗಳುಳ್ಳ ಸ್ತ್ರೀಯರ ಪತಿಗಳು ದೀರ್ಘಾಯುಷ್ಮಂತರಾಗಿ ಜೀವಿಸುವರು. "ताम्बूलरसरक्तेऽपि स्फुटभासः समोदयाः । दन्ताः शिखरिणो यस्याः दीर्घं जीवति तत्प्रियः" सामुद्रिकम् ।

**शिखा ಶಿಖಾ** (स्त्री०) 1. ಜುಟ್ಟು, ಕೇಶಪಾಶ. शेते—शीङ् (स्वप्ने) "खः" ह्रस्वश्च (उ० ५-२४) । "नन्दकुलकालभुजगीं कोपानलबहुललोलधूमलताम् । अद्यापि बध्यमानां बध्यः को नेच्छति शिखां मे" मुद्रा० १-९ । 2. ಶಿಖರ, ಪರ್ವತದ ಅಗ್ರಭಾಗ, ಬೆಟ್ಟದ ಎತ್ತರವಾದ ಭಾಗ. 3. ವೃಕ್ಷದ ಅಗ್ರಭಾಗ, ಮರದ ತುದಿ. "अधिरुह्य पुष्पभरनम्रशिखैः परितः परिष्कृततलां तरुभिः" किरा० ६-१७ । 4. ಕೊನೆಯ ಭಾಗ, ತುದಿ. "शृङ्गैः शिखाग्रगतलक्ष्ममलं हसद्भिः" माघ० ५-६३ । "मुखैरसौ विद्रुमभङ्गलोहितैः शिखाः पिशङ्गीः कलमस्य बिभ्रती" किरा० ४-३६ । 5. ಅಗ್ನಿಯ ಜ್ವಾಲೆ, ಬೆಂಕಿಯ ಉರಿ. "मुहुश्चलत्पल्लवलोहिनीभिरुच्चैः शिखाभिः शिखिनोऽवलीढाः" किरा० १६-५३ । 6. ಬೆಳಕಿನ ರಶ್ಮಿ, –ಕಿರಣ. "ज्वलन्मणिशिखाश्चैनं वासुकिप्रमुखा निशि" कुमा० २-३८ । 7. ನವಿಲಿನ ಜುಟ್ಟು, ನವಿಲಿನ ತಲೆಯ ಮೇಲಿನ ಜುಟ್ಟು. 8. ಕಾಲಿನ ತುದಿ. 9. ಕೋಳಿಕುಟುಕನ ಗಿಡ. 10. ಶಾಖೆ, ರೆಂಬೆ. 11. ವಸ್ತ್ರದ ಅಂಚು, ಸೆರಗು. "शिखा शाखाबर्हिचूडालाङ्गलिक्यग्रमात्रके । चूडामात्रे शिखायां च ज्वालायां प्रपदेऽपि च" मेदि० । 12. ಪ್ರಧಾನ, ಮುಖ್ಯ. "शिखाग्रमात्रे चूडायां केकिचूडाप्रधानयोः" हेम० । 13. ಕಾಮಜ್ವರ.

**शिखाधर ಶಿಖಾಧರ** (पुं०) ಮಯೂರ, ನವಿಲು. "न नानुकम्प्य विशिखाः शिखाधरजवाससः" किरा० १५-४२ ।

**शिखामूल ಶಿಖಾಮೂಲ** (न०) ಬೆಳ್ಳುಳ್ಳಿ. शिखासहितं मलमस्य ।

**शिखावत् ಶಿಖಾವತ್** (पुं०) 1. ವಹ್ನಿ, ಅಗ್ನಿ. शिखाः अस्य सन्ति "मतुप्" (५-२-९४)। "पराहतध्वस्तशिखे शिखावतो वपुष्यविक्षिप्तसमिद्धतेजसि" किरा० १६-५६। 2. ಕೇತುಗ್ರಹ. 3. ಹರಳುಗಿಡ. (वि०) 4. ಶಿಖೆಯಿಂದ ಕೂಡಿರುವ.

**शिखावल ಶಿಖಾವಲ** (पुं०) ಮಯೂರ, ನವಿಲು. शिखास्यास्ति "वलच्" (५-२-११३)।

**शिखावृद्धि ಶಿಖಾವೃದ್ಧಿ** (स्त्री०) ಮೂಲಧನದ ಮೇಲೆ ಬರುವ ವೃದ್ಧ್ಯಂಶ, ಮೂಲಧನದ ಬಡ್ಡಿ. शिखेव वृद्धिर्यस्याः।

**शिखिग्रीव ಶಿಖಿಗ್ರೀವ** (न०) ಮೈಲುತುತ್ತ.

**शिखिध्वज ಶಿಖಿಧ್ವಜ** (पुं०) 1. ಕಾರ್ತಿಕೇಯ, ಷಣ್ಮುಖ. शिखी मयूरो ध्वजोऽस्य। 2. ಧೂಮ, ಹೊಗೆ. शिखिनो वह्नेर्ध्वज इव।

**शिखिन् ಶಿಖಿನ್** (पुं०) 1. ಮಯೂರ, ನವಿಲು. शिखाऽस्यास्ति "इनिः" (५-२-११५)। "शिखिपिच्छकृतध्वजावचूडक्षणसाशङ्कविवर्तमानभोगाः" माघ० २०-४६। 2. ಅಗ್ನಿ. शिखाः ज्वालाः अस्य सन्ति "इनिः" (५-२-११५)। "तमन्वगच्छद्गिरिशृङ्गसोदरं मदोद्धतं मेघमधिष्ठितः शिखी" कुमा० १४-६। 3. ಬಲೀವರ್ದ, ವೃಷಭ, ಎತ್ತು. 4. ಶರ, ಬಾಣ. 5. ಕೇತುಗ್ರಹ. 6. ದ್ರುಮ, ವೃಕ್ಷ. 7. ಕುಕ್ಕುಟ, ಕೋಳಿ. 8. ಅಶ್ವ, ಕುದುರೆ. "शिखी त्वग्नौ वृक्षे केतुग्रहे शरे। चूडावति बलीवर्दे मयूरे कुक्कुटे हये" हेम०। 9. ದೀಪ. 10. ಬ್ರಾಹ್ಮಣ. 11. ಪರ್ವತ, ಬೆಟ್ಟ. 12. ಮೂರು ಸಂಖ್ಯೆ. (वि०) 13. ಶಿಖೆಯುಳ್ಳ.

**शिखिवर्धक ಶಿಖಿವರ್ಧಕ** (पुं०) ಕುಂಬಳಕಾಯಿ. शिखिनं जाठराग्निं वर्धयति—वृधु (वृद्धौ)+णिच् "ण्वुल्" (३-१-१३३)।

**शिखिवाहन ಶಿಖಿವಾಹನ** (पुं०) ಕಾರ್ತಿಕೇಯ, ಷಣ್ಮುಖ. शिखी वाहनमस्य।

**शिग्रु ಶಿಗ್ರು** (पुं०) 1. ನುಗ್ಗೆಮರ. शिनोति—शिञ् (निशाने) "रुः" निपा० (उ० ४-१०२)। 2. ತರಕಾರಿ, ಕಾಯಿಪಲ್ಯ. "शिग्रुर्ना शाकमात्रे च शोभाञ्जनमहीरुहे" मेदि०।

**शिग्रुज ಶಿಗ್ರುಜ** (न०) 1. ನುಗ್ಗೆಯ ಬೀಜ. शिग्रोर्जायते—जनी (प्रादुर्भावे) "डः" (३-२-९८)। (वि०) 2. ನುಗ್ಗೆಮರದಲ್ಲಿರುವ.

**शिङ्घाण ಶಿಂಘಾಣ** (न०) 1. ಗಾಜಿನ ಪಾತ್ರೆ. शिघि (आघ्राणे) "आणकः" (उ० ३-८३)। पृषो०। 2. ಕಬ್ಬಿಣದ ಮಲ, ಕಬ್ಬಿಣದ ತುಕ್ಕು. 3. ನಾಸಾಮಲ, ಸಿಂಬಳ. "शिङ्घाणं काचपात्रे च लोहनासिकयोर्मलम्" मेदि०। (पुं०) 4. ಕಫ, ಶ್ಲೇಷ್ಮ. 5. ನೊರೆ.

**शिञ्जा ಶಿಂಜಾ** (स्त्री०) 1. ಆಭರಣಗಳ ಅವ್ಯಕ್ತ ಶಬ್ದ. 2. ಮೌರ್ವಿ, ಧನುಸ್ಸಿನ ಹೆದೆ, ಧನುಸ್ಸಿಗೆ ಕಟ್ಟುವ ತೊಗಲಿನ ಹಗ್ಗ. शिजि (अव्यक्ते शब्दे) "अः" (३-३-१०३)।

**शिञ्जान ಶಿಂಜಾನ** (वि०) ಅವ್ಯಕ್ತ ಶಬ್ದಮಾಡುತ್ತಿರುವ, ಅಸ್ಪಷ್ಟವಾಗಿ ಧ್ವನಿಮಾಡುತ್ತಿರುವ. शिजि (अव्यक्ते शब्दे) "शानच्" (३-२-१२४)। "शिञ्जानभ्रमरकुलाकुलाग्रपुष्पाः शीताम्भःप्रविलयसंप्लवाभिलीनाः" भट्टि० २२-२७।

**शिञ्जित ಶಿಂಜಿತ** (न०) ಆಭರಣಗಳ ಅವ್ಯಕ್ತ ಶಬ್ದ. शिजि (अव्यक्ते शब्दे) "क्तः" (३-३-११४)। "ध्वनिरगविवरेषु नूपुराणां पृथुरशनागुणशिञ्जितानुयातः" किरा० १०-४।

**शिञ्जिनी ಶಿಂಜಿನೀ** (स्त्री०) 1. ಬಿಲ್ಲಿನ ಹೆದೆ, ಬಿಲ್ಲಿಗೆ ಕಟ್ಟುವ ಚರ್ಮದ ಹಗ್ಗ. शिङ्क्ते—शिजि (अव्यक्ते शब्दे) "णिनिः" (३-३-१७०)। "तेषां विहरतां तत्र शिञ्जिनीबद्धरावणाम्" याद० २२-२२०। 2. ನೂಪುರ, ಕಾಲಿನ ಆಭರಣ.

**शित ಶಿತ** (वि०) 1. ಹರಿತವಾದ, ತೀಕ್ಷ್ಣವಾಗಿ ಮಾಡಲ್ಪಟ್ಟ. शो (तनूकरणे) "क्तः" (३-२-१०२)। "महाहवे नाथ तवास्य सूनोः शस्त्रैः शितैः कृत्तशिरोधराणाम्" कुमा० १२-५१। 2. ದುರ್ಬಲ, ಶಕ್ತಿಯಿಲ್ಲದವನು. 3. ತೆಳುವಾಗಿ ಮಾಡಲ್ಪಟ್ಟ, ಸೂಕ್ಷ್ಮವಾಗಿ ಮಾಡಲ್ಪಟ್ಟ. 4. ಕೃಶವಾಗಿ ಮಾಡಲ್ಪಟ್ಟ. "शितशातौ कृशे तीक्ष्णे" हेम०।

**शितशूक ಶಿತಶೂಕ** (पुं०) 1. ಗೋಧೂಮ, ಗೋಧಿ. 2. ಜವೆಗೋಧಿ, ಯವಧಾನ್ಯ. शितं निशितं शूकं यस्य।

**शिति ಶಿತಿ** (पुं०) 1. ಭೂರ್ಜವೃಕ್ಷ, ಭೂಜಪತ್ರೆ ಗಿಡ. शिञ् (निशाने) "क्तिन्" (३-३-९४)। (वि०) 2. ಶುಕ್ಲವರ್ಣದ, ಬಿಳಿಯ ಬಣ್ಣದ. 3. ಕೃಷ್ಣವರ್ಣದ, ಕಪ್ಪು ಬಣ್ಣದ, ನೀಲವರ್ಣದ. "लयनेषु लोहितकनिर्मिता भुवः शितिरत्नरश्मिहरितीकृतान्तराः" माघ० १३-५२। "शितिर्भूर्जे सितेऽसिते" हेम०।

**शितिकण्ठ-ಶಿತಿಕಂಠ** (पुं०) 1. ಮಹಾದೇವ, ಪರಮೇಶ್ವರ. शितिः कालः कण्ठोऽस्य । "अगोचरे वागिव चोपरेमे शक्तिः शराणां शितिकण्ठकाये" किरा० १७-११ । 2. ಮಯೂರ, ನವಿಲು. "अवनतशितिकण्ठकण्ठलक्ष्मीमिह दधति स्फुरिताणुरेणुजालाः" माघ० ४-५६ ।

**शितिच्छद ಶಿತಿಚ್ಛದ** (पुं०) ಹಂಸಪಕ್ಷಿ. शिती छदौ यस्य ।

**शितिवासस् ಶಿತಿವಾಸಸ್** (पुं०) ಬಲರಾಮ. शिति वासोऽस्य । "सुवर्णसूत्राकलिताधराम्बरां विडम्बयन्तं शितिवाससस्तनुम्" माघ० १-६ ।

**शिथिल ಶಿಥಿಲ** (वि०) 1. ಸಡಿಲವಾದ, ಬಿಗಿಯಾಗಿಲ್ಲದ. श्रथ (मोचने) "किरच्" उपधाया इत्वम् रेफलोपः प्रत्ययरेफस्य लत्वं च निपा० (उ० १-५३) । "धृतोत्पलापीड इव प्रियायाः शिरोरुहाणां शिथिलः कलापः" किरा० १६-१५ । 2. ಸಡಿಲವಾದ, ಗಟ್ಟಿಯಾಗಿ ಅಂಟಿಕೊಂಡಿಲ್ಲದೆ ಬಿದ್ದಿರುವ. "अर्कस्योपरि शिथिलं च्युतमिव नवमालिकाकुसुमम्" शाकु० २-८ । 3. ದುರ್ಬಲವಾದ, ಚುರುಕಿಲ್ಲದ, ಶಕ್ತಿಯನ್ನು ಕಳೆದುಕೊಂಡಿರುವ. "अभवद्गतः परिणतिं शिथिलः परिमन्दसूर्यनयनो दिवसः" माघ० ९-३ । 4. ಜೋತುಬಿದ್ದಿರುವ, ಜೋಲಾಡುವ, ಸಡಿಲವಾದ, ಗಳಿತವಾದ. 5. ದೃಢವಾಗಿಲ್ಲದ, ಭದ್ರವಾಗಿಲ್ಲದ. "शिथिलं कूलमिवापगारयः" किरा० २-५३ । 6. ಸಡಿಲವಾಗಿ ಮಾಡಲ್ಪಟ್ಟ. (ಗಂಟು) ಬಿಚ್ಚಲ್ಪಟ್ಟ. "विश्रामं लभतामिदं च शिथिलज्याबन्धमस्मद्धनुः" शाकु० २-६ । 7. ಚಟುವಟಿಕೆಯಿಲ್ಲದ, ಜಡವಾದ. (क्रि० वि०) 8. ಮಂದವಾಗಿ, ಮೆಲ್ಲಗೆ, ನಿಧಾನವಾಗಿ. "शिथिलाक्रुष्टशिलीमुखोऽवतस्थे" याद० १५-१२६ ।

**शिथिलता ಶಿಥಿಲತಾ** (स्त्री०) 1. ಶೈಥಿಲ್ಯ, ಸಡಿಲವಾಗಿರುವಿಕೆ, ಗಂಟು ಬಿಚ್ಚಿರುವಿಕೆ. शिथिलस्य भावः "तल्" (५-१-११९)। "वाससां शिथिलतामुपनाभि ह्रीनिरासमपदे कुपितानि । योषितां विदधती गुणपक्षे निर्ममार्ज मदिरा वचनीयम्" किरा० ९-६५ । 2. ಭದ್ರವಾಗಿಲ್ಲದಿರುವಿಕೆ, ದೃಢವಾಗಿಲ್ಲದಿರುವುದು.

**शिथिलयत् ಶಿಥಿಲಯತ್** (वि०) ಸಡಿಲವಾಗಿ ಮಾಡುತ್ತಿರುವ. शिथिलं कुर्वत्—तत्करोति० "णिच्" । "शतृ" (३-२-१२४) । स्त्रियां "ङीप्" (४-१-६) । —यन्ती —ಯಂತೀ.

**शिथिलित ಶಿಥಿಲಿತ** (वि०) 1. ಗಂಟು ಬಿಚ್ಚಿ ಸಡಿಲವಾಗಿ ಮಾಡಲ್ಪಟ್ಟ. शिथिलं कृतम्—तत्करोति० "णिच्" । "क्तः" (३-२-१०२)। 2. ಕಡಮೆಯಾಗಿ ಮಾಡಲ್ಪಟ್ಟ, ದುರ್ಬಲವಾಗಿ ಮಾಡಲ್ಪಟ್ಟ. "स्वयमिति हि दये त्वं स्वीकृतश्रीनिवासा शिथिलितभवभीतिः श्रेयसे जायसे नः" दयाश० ।

**शिपि ಶಿಪಿ** (पुं०) 1. ರಶ್ಮಿ, ಕಿರಣ. 2. ಪಶು.

**शिपिविष्ट ಶಿಪಿವಿಷ್ಟ** (पुं०) 1. ವಿಷ್ಣು. शिपयो रश्मयः —तैः सर्वमाविष्टः व्याप्तवान् इति शिपिविष्टः । "शिपयो रश्मयः प्रोक्ताः व्याप्य तेष्वपि वर्तनात् । शिपिविष्टः समाख्यातः सूर्येन्द्वग्न्यादिरूपवत्" इति निरुक्तिः । "नैकरूपो बृहद्रूपः शिपिविष्टः प्रकाशनः" वि० स० । 2. ಶಿವ, ಈಶ್ವರ. (वि०) 3. ಬಟ್ಟೆತಲೆಯುಳ್ಳವನು, ತಲೆಯಲ್ಲಿ ಕೂದಲಿಲ್ಲದವನು. 4. ಕುಷ್ಠರೋಗವುಳ್ಳವನು. "शिपिविष्टस्तु खलतौ शिवे दुश्चर्मणि स्मृतः" मेदि० ।

**शिप्र ಶಿಪ್ರ** (पुं०) ಒಂದು ಸರೋವರ.

**शिप्रा ಶಿಪ್ರಾ** (स्त्री०) ಶಿಪ್ರಸರೋವರದಿಂದ ಉತ್ಪನ್ನವಾದ ಒಂದು ನದಿ.

**शिफा ಶಿಫಾ** (स्त्री०) 1. ಮರದ ರೆಂಬೆಯಿಂದ ಕೆಳಕ್ಕೆ ಇಳಿದಿರುವ ಜಟೆಯಂತಿರುವ ಬೇರು, ಬಿಳಿಲು. शीङ् (स्वप्ने) फक् ह्रस्वश्च बाहु० । 2. ಮೂಲ, ಬೇರು. 3. ಹರಿದ್ರೆ, ಅರಿಸಿನ. 4. ಜಟಾಮಾಂಸಿ. 5. ತಾಯಿ. 6. ನದಿ, ಹೊಳೆ. "शिफा मातरि मांस्यां च जटायां च सरित्यपि" हेम० । 7. ತಾವರೆಗಿಡದ ಬೇರು.

**शिफाक ಶಿಫಾಕ** (पुं०) ತಾವರೆಯ ಬೇರು. शिफा इव "कन्" (५-३-९६) ।

**शिफाकन्द ಶಿಫಾಕಂದ** (पुं०) ತಾವರೆಗಿಡದ ಬೇರು. शिफायुक्तः कन्दो यस्य ।

**शिफाधर ಶಿಫಾಧರ** (पुं०) ರೆಂಬೆ, ಕೊಂಬೆ. शिफाया: धरः ।

**शिबि ಶಿಬಿ** (पुं०) ಒಬ್ಬ ಚಕ್ರವರ್ತಿ. ಈತನು ಶರಣಾಗತರಕ್ಷಕನೆಂದು ಪ್ರಸಿದ್ಧಿ ಪಡೆದಿದ್ದನು. ಇವನನ್ನು ಪರೀಕ್ಷಿಸಲು ಇಂದ್ರ ಮತ್ತು ಅಗ್ನಿ ಇಬ್ಬರೂ ಗಿಡುಗ ಮತ್ತು ಪಾರಿವಾಳಗಳ ವೇಷವನ್ನು ತಾಳಿ ಇವನಲ್ಲಿಗೆ ಬಂದರು. ಗಿಡುಗನು ಪಾರಿವಾಳವನ್ನು ಅಟ್ಟಿಸಿಕೊಂಡು ಬಂದಾಗ ಪಾರಿವಾಳವು ಶಿಬಿಚಕ್ರವರ್ತಿಯನ್ನು ಮರೆಹೊಕ್ಕಿತು. ಅದನ್ನು ರಕ್ಷಿಸುವುದಕ್ಕಾಗಿ ಶಿಬಿಯು ಗಿಡುಗನಿಗೆ ತನ್ನ ಶರೀರದಿಂದ ಮಾಂಸವನ್ನು ಕೊಡುವುದಾಗಿ ಹೇಳಿ ತನ್ನ ಶರೀರವನ್ನು ಕಡಿದು ಪಾರಿವಾಳದ ತೂಕದ ಮಾಂಸವನ್ನು ತ್ರಾಸಿನಲ್ಲಿಟ್ಟಾಗ ಇವನ ಶರಣಾಗತ ರಕ್ಷಣೆಯ ವ್ರತಕ್ಕೆ ಮೆಚ್ಚಿದ ಇಂದ್ರಾಗ್ನಿ

ಗಳು ಸ್ವಸ್ವರೂಪದಿಂದ ಕಾಣಿಸಿಕೊಂಡು ಇವನಿಗೆ ಅನೇಕ ವರಗಳನ್ನು ಕೊಟ್ಟರು. भा० अनु० ६७।

**शिबिका ಶಿಬಿಕಾ** (स्त्री०) ಪಲ್ಲಕ್ಕಿ, ಮನುಷ್ಯರು ಹೊರುವ ಒಂದು ವಾಹನ, ಮನುಷ್ಯರಿಂದ ಹೊರಲ್ಪಡುವ ಒಂದು ವಾಹನ, ಮೇನಾ. शिबं करोति — तत्करोति...... "णिच्" (वा० ७-४-९३)। "ण्वुल्" (३-१-१३३)।

**शिबिर ಶಿಬಿರ** (न०) 1. ಸೇನೆಯ ವಾಸಸ್ಥಾನ, ಸೇನೆಯು ತಂಗುವ ಸ್ಥಳ. ಸೇನೆಯು ಇಳಿದುಕೊಳ್ಳುವ ಸ್ಥಳ. शवन्त्यत्र — शव (गतौ) "किरच्" बाहु०। "मौलौ पाणिं पलितधवले न्यस्य कृत्वा नृशंसं धृष्टद्युम्नः स्वशिबिरमयं याति सर्वे सहध्वम्" वेणी० ३-२०। 2. ರಾಜನ ಬಿಡಾರ, ರಾಜನು ಪ್ರವಾಸಕಾಲದಲ್ಲಿ ತಂಗುವ ಗೃಹ. "सन्ध्यांशुभिन्नघनकर्बुरितान्तरिक्षलक्ष्मीविडम्बि शिबिरं शिवकीर्तनस्य" माघ० ५-६८। 3. ಸೇನೆಯ ರಕ್ಷಣೆಗಾಗಿ ಕಂದಕಗಳನ್ನು ತೋಡುವುದು.

**शिम्बा ಶಿಂಬಾ, शिम्बि ಶಿಂಬಿ, शिम्बी ಶಿಂಬೀ** (स्त्री०) ದ್ವಿದಳಧಾನ್ಯದ ಸಸ್ಯದ ಕಾಯಿ, ಬೀಜಕೋಶ, ಬೀಜ.

**शिर ಶಿರ** (पुं०) 1. ಹಿಪ್ಪಲಿಯ ಬೇರು. 2. ಮಸ್ತಕ, ತಲೆ. –रा –ರಾ. 3. ಧಮನಿ, ಸಿರೆ, ನರ. "शिरो ना पिप्पलीमूले स्यात् धमन्यां च योषिति" मेदि०।

**शिरस् ಶಿರಸ್** (न०) 1. ಮಸ್ತಕ, ತಲೆ. श्रीयते उष्णीषादिना — श्रिञ् (सेवायाम्) "असुन्" धातोः शिर आदेशश्च (उ० ४-१९३)। "न लङ्घयामास महाजनानां शिरांसि नैवोद्धतिमाजगाम" माघ० ३-२८। 2. ಶಿಖರ, ಪರ್ವತದ ಅತ್ಯಂತ ಎತ್ತರ ಪ್ರದೇಶ. "समीरशिशिरः शिरःसु वसतां सतां जवनिका निकामसुखिनाम्" माघ० ४-५४। 3. ವೃಕ್ಷಗಳ ತುದಿಯ ಭಾಗ. 4. ಅಗ್ರಭಾಗ, ತುದಿಯ ಭಾಗ. 5. ಯುದ್ಧದಲ್ಲಿ ತೊಡಗಿರುವ ಸೈನ್ಯದ ಮುಂಭಾಗ. "पुत्रस्य ते रणशिरस्ययमग्रयायी दुष्यन्त इत्यभिहितो भुवनस्य भर्ता" शाकु० ७-२६। 6. ಮುಖ್ಯ, ಪ್ರಧಾನ. "शिरः प्रधाने सेनाग्रे शिखरे मस्तकेऽपि च" मेदि०।

**शिरःकपालिन् ಶಿರಃಕಪಾಲಿನ್** (पुं०) ನರಕಪಾಲ (ತಲೆ ಬುರುಡೆ) ವನ್ನು ಹಿಡಿದಿರುವ ಸಂನ್ಯಾಸಿ. शिरःकपालोऽस्यास्ति "इनिः" (५-२-११५)।

**शिरश्शूल ಶಿರಶ್ಶೂಲ** (न०) ಶಿರೋವೇದನೆ, ತಲೆನೋವು.

**शिरज ಶಿರಜ** (पुं०) ತಲೆಯ ಕೂದಲು, ಕೇಶ. शिरे जायते — जनी (प्रादुर्भावे) "डः" (३-२-९७)।

**शिरसिज ಶಿರಸಿಜ** (पुं०) ತಲೆಯ ಕೂದಲು, ಕೇಶ. शिरसि जायते — जनी (प्रादुर्भावे) "डः" (३-२-९७)। सप्तम्या अलुक् (६-३-१४)। "शिरसिजसंयमनाकुलैकपाणिः" किरा० १०-५२।

**शिरसिरुह ಶಿರಸಿರುಹ** (पुं०) ತಲೆಯ ಕೂದಲು, ಕೇಶ. शिरसि रोहति—रुह (बीजजन्मादौ) "कः" (३-१-१३५)। सप्तम्याः वा अलुक् (६-३-१४) पक्षे शिरोरुहः।

**शिरस्त्र ಶಿರಸ್ತ್ರ** (न०) ರುಮಾಲು, ಪೇಟ. शिरः त्रायते —त्रैङ् (पालने) "कः" (३-२-३)। "शिरस्त्रनिष्कर्षणभिन्नमौलिः" रघु० ७-६६।

**शिरस्तस् ಶಿರಸ್ತಸ್** (अव्य०) ತಲೆಯಿಂದ. "ज्योतिः प्ररोहैरुदितैः शिरस्तः" कुमा० ३-४९।

**शिरस्त्राण ಶಿರಸ್ತ್ರಾಣ** (न०) ರುಮಾಲು, ಪೇಟ. शिरः त्रायतेऽनेन — त्रैङ् (पालने) "ल्युट्" (३-३-१७)। "अपनीतशिरस्त्राणाः शेषास्तं शरणं ययुः" रघु० ४-६४।

**शिरस्य ಶಿರಸ್ಯ** (वि०) 1. ತಲೆಯಲ್ಲಿರುವ, ತಲೆಯ ಸಂಬಂಧವಾದ. शिरसि भवम् "यत्" (४-३-५५)। "यः" (५-३-१०३) वा। 2. ತಲೆಗೆ ಹಿತವಾದ. शिरसे हितम् — "यत्" (५-१-६)। (पुं०) 3. ಒಂದ ಕ್ಕೊಂದು ಸೇರದಂತೆ ಬಿಡಿಸಿದ ತಲೆಯ ಕೂದಲು.

**शिरा ಶಿರಾ** (स्त्री०) ನರ, ಶರೀರದೊಳಗಿರುವ ಸಿರೆ, ಧಮನಿ. शिनोति — शिञ् (निशाने) "रक्" बाहु०। सिरा इत्यपि पाठः।

**शिराल ಶಿರಾಲ** (वि०) ಸಿರೆಗಳಿಂದ ಕೂಡಿದ. शिराः सन्त्यस्य "लच्" (५-२-९६)। "आपिङ्गरूक्षोर्ध्वशिरस्यवालैः शिरालजङ्घैर्गिरिकूटदघ्नैः" भट्टि० २-३०।

**शिरि ಶಿರಿ** (पुं०) 1. ಖಡ್ಗ, ಕತ್ತಿ. शॄ (हिंसायाम्) "इः" (उ० ४-१४२)। 2. ಬಾಣ. 3. ಶಲಭ, ಪತಂಗದ ಹುಳ. (वि०) 4. ಹಿಂಸಿಸುವವನು.

**शिरीष ಶಿರೀಷ** (पुं०) ಬಾಗೆಮರ. शॄ (हिंसायाम्) "ईषन्" (उ० ४-२७)। "पदं सहेत भ्रमरस्य पेलवं शिरीषपुष्पं न पुनः पतत्रिणः" कुमा० ५-४।

**शिरोगृह ಶಿರೋಗೃಹ** (न०) ಮೇಲಿನ ಮಹಡಿ, ಉಪ್ಪರಿಗೆ. शिरसि गृहम्।

**शिरोधर ಶಿರೋಧರ** (पुं०) ಕಂಠ, ಕುತ್ತಿಗೆ.

**शिरोधरा ಶಿರೋಧರಾ** (स्त्री०) ಕುತ್ತಿಗೆ, ಕೊರಳು. शिरसो धरा। "अन्तरावर्तिभिर्गृहकपोतशिरोधराभैः" माघ० ४-५२।

**शिरोधि ಶಿರೋಧಿ** (स्त्री०) ಕಂಠ, ಕುತ್ತಿಗೆ, ಕೊರಳು. शिरो धीयतेऽनया—डु धाञ् (धारणे) "कि:" (३-३-९३)।

**शिरोभूषण ಶಿರೋಭೂಷಣ** (न०) ತಲೆಯ ಆಭರಣ, ತಲೆಯನ್ನು ಅಲಂಕರಿಸುವ ಒಡವೆ. शिरसो भूषणम्।

**शिरोमणि ಶಿರೋಮಣಿ** (पुंस्त्री०) 1. ತಲೆಯಲ್ಲಿ ಧರಿಸುವ ರತ್ನಾಭರಣ, ಚೂಡಾಮಣಿ.–रत्नम्–ರತ್ನಮ್. 2. ಪಂಡಿತರಿಗೆ ಕೊಡುವ ಗೌರವದ ಪದವಿ.

**शिरोमर्मन् ಶಿರೋಮರ್ಮನ್** (न०) ಶಿರಸ್ಸೇ ಪ್ರಾಣಾಧಾರಸ್ಥಾನವಾಗಿರುವ ವರಾಹ, ಸೂಕರ, ಹಂದಿ. शिर एव मर्म जीवाधारस्थानं यस्य।

**शिरोरुजा ಶಿರೋರುಜಾ** (स्त्री०) ತಲೆಯ ನೋವು. शिरसि रुजति — रुजो (भङ्गे) "क:" (३-१-१३५)। –रोग: –ರೋಗಃ.

**शिरोरुट् ಶಿರೋರುಟ್** (पुं०) ಕೇಶ, ತಲೆಯ ಕೂದಲು. शिरसि रोहति — रुह (बीजजन्मादौ) "क्विप्" (३-२-६१)।

**शिरोरुह ಶಿರೋರುಹ** (पुं०) ಕೇಶ, ತಲೆಯ ಕೂದಲು. शिरसि रोहति— रुह (बीजजन्मादौ) "क:" (३-१-१३५)। "धृतोत्पलापीड इव प्रियाया: शिरोरुहाणां शिथिल: कलाप:" किरा० १६-१५।

**शिरोवेष्टन ಶಿರೋವೇಷ್ಟನ** (न०) ಉಷ್ಣೀಷ, ರುಮಾಲು. शिरो वेष्टयतेऽनेन — वेष्ट (वेष्टने) करं० "ल्युट्" (३-३-११७)।

**शिरोऽस्थि ಶಿರೋಽಸ್ಥಿ** (न०) ತಲೆಯ ಎಲುಬು. शिरस: अस्थि।

**शिल ಶಿಲ** (न०) ಜೀವನಕ್ಕಾಗಿ ಗದ್ದೆಗಳಲ್ಲಿ ಉದುರಿ ಬಿದ್ದಿರುವ ಧಾನ್ಯಗಳನ್ನು ಆರಿಸಿಕೊಳ್ಳುವುದು. शिल (उञ्छे) "घञ्" (३-३-१८)।

**शिला ಶಿಲಾ** (स्त्री०) 1. ಪಾಷಾಣ, ಕಲ್ಲು, ಬಂಡೆ. शिलति — शिल (उञ्छे) "क:" (३-१-१३५)। "उत्पातवातप्रतिकूलपातिनीरूपत्यकाभ्यो बृहती: शिला इव" माघ० १२-५०। 2. ವಾಸಕಾಲಿನ ಕೆಳಗಿನ ಮರ, ದೇಹಳಿ, ಹೊಸ್ತಿಲುಮರದ ಪಟ್ಟಿ, ಬಾಗಿಲಿನಕೆಳಗಿನಪಟ್ಟಿ. 3. ಮಣಶಿಲೆ. "शिला तु प्रस्तरे मता। तथा मन:-शिलायां च द्वाराध:स्थितदारुणि" मेदि०। 4. ಕಂಬದ ತುದಿಯ ಭಾಗ. "स्तम्भशीर्षे शिलाशिल्यौ" मेदि०।

**शिलाकर्णी ಶಿಲಾಕರ್ಣೀ** (स्त्री०) ಸಲ್ಲಕೀವೃಕ್ಷ, ಆನೆ ಬೇಲದ ಮರ.

**शिलाकुट्टक ಶಿಲಾಕುಟ್ಟಕ** (पुं०) ಶಿಲೆಯನ್ನು ಒಡೆಯುವ ಉಳಿ, ಕಲ್ಲುಳಿ. शिलां कुट्टयति—कुट्ट (छेदने) "ण्वुल्" (३-१-१३३)।

**शिलाजतु ಶಿಲಾಜತು** (न०) 1. ಒಂದು ಗೈರಿಕ ಧಾತು, ಕಪ್ಪು ಬಣ್ಣದ ಒಂದು ಖನಿಜ. 2. ಪರ್ವತದ ಬಂಡೆಗಳು ಹೊರಗೆಡಹುವ ಧಾತುಸಾರ. ಈ ಬಂಡೆಗಳು ಬೇಸಿಗೆಯಲ್ಲಿ ಚೆನ್ನಾಗಿ ಕಾದುಹೋಗಿ ಆದರಿಂದ ರಸವು ಹೊರಬಂದು ಅದು ಘನೀಭೂತವಾಗುವುದು. ಇದು (1) ಸೌವರ್ಣ (2) ರಾಜತ (3) ತಾಮ್ರ ಮತ್ತು (4) ಅಯಸ ಎಂದು ನಾಲ್ಕು ವಿಧ. "निदाघे घर्मसन्तप्ता धातुसारं धराधरा:। निर्यासवत्प्रमुञ्चन्ति तच्छिलाजतु कीर्तितम्। सौवर्णं राजतं ताम्रं आयसं तच्चतुर्विधम्" भावप्र०।

**शिलापट्ट ಶಿಲಾಪಟ್ಟ, –पुत्र –ಪುತ್ರ** (पुं०) 1. ಅರೆಯುವ ಕಲ್ಲು. 2. ಕೂಡಲು ಉಪಯೋಗಿಸುವ ಅಗಲವಾದ ಶಿಲೆ, –ಚಪ್ಪಡಿಕಲ್ಲು. शिलाया: पुत्र इव।

**शिलापुष्प ಶಿಲಾಪುಷ್ಪ** (न०) ಗೈರೇಯ. ಗೈರಿಕ ಧಾತು. शिलाया: पुष्पमिव।

**शिलाभेद ಶಿಲಾಭೇದ** (पुं०) ಕಲ್ಲುಳಿ, ಕಲ್ಲನ್ನು ತುಂಡು ಮಾಡಲು ಉಪಯೋಗಿಸುವ ಕಲ್ಲುಕುಟ್ಟಿಗನ ಒಂದು ಆಯುಧ. शिलां भिनत्ति—भिदिर् (विदारणे) "अच्" (३-१-१३४)।

**शिलावृष्टि ಶಿಲಾವೃಷ್ಟಿ** (स्त्री०) ಕಲ್ಲುಗಳ ಮಳೆ.

**शिलासन ಶಿಲಾಸನ** (न०) ಕಲ್ಲಿನ ಕಾಲುಮಣೆ, ಕಲ್ಲಿನಿಂದ ತಯಾರಿಸಿದ ಒಂದು ಆಸನ, ಕಲ್ಲುಚಪ್ಪಡಿಯ ಆಸನ (ಕಲ್ಲುಬೆಂಚು).

**शिलासार ಶಿಲಾಸಾರ** (न०) ಲೋಹ, ಕಬ್ಬಿಣ. शिलावत् सारोऽस्य।

**शिलाह्व ಶಿಲಾಹ್ವ** (न०) ಶಿಲಾಜತು.

**शिलि ಶಿಲಿ** (पुं०) 1. ಭೂರ್ಜಪತ್ರೆ ಗಿಡ. (स्त्री०) 2. ದ್ವಾರದ ಕೆಳಗಿನ ಮರ.

**शिली ಶಿಲೀ** (स्त्री०) 1. ಕಂಬದ ಮೇಲಿನ ಭಾಗ, ಕಂಬದ ತುದಿಯ ಭಾಗ. 2. ಹೆಣ್ಣು ಎರೆಹುಳ. "गण्डूपद्यां शिली मता। स्तम्भशीर्षे शिलाशिल्यौ" मेदि०। 3. ದ್ವಾರದ ಕೆಳಗಿನ ಮರ.

**शिलीन्ध्र ಶಿಲೀಂಧ್ರ** (पुं०) 1. ಒಂದು ಜಾತಿಯ ಮೀನು. 2. ಒಂದು ವೃಕ್ಷ. (न०) 3. ಬಾಳೆಯ ಹೂವು. "नवकदम्बरजोरुणिताम्बरैरधिपुरन्ध्रि शिलीन्ध्रसुगन्धिभि:" माघ० ६-३२।

**शिलीन्ध्री ಶಿಲೀಂಧ್ರೀ** (स्त्री०) 1. ಹೆಣ್ಣು ಎರುಬುಹುಳ. 2. ಮೃತ್ತಿಕೆ, ಮಣ್ಣು.

**शिलीमुख ಶಿಲೀಮುಖ** (पुं०) 1. ಬಾಣ, ಶರ, ಅಂಬು. शिलीव मुखं यस्य। "अतीतसंख्या विहिता ममाग्निना शिलीमुखाः खाण्डवमत्तुमिच्छता" किरा० १४-१०। 2. ಭ್ರಮರ, ದುಂಬಿ. "उपागमे दुश्चरिता इवापदां गतिं न निश्चेतुमलं शिलीमुखाः" किरा० ४-३५। 3. ಯುದ್ಧ, ಕಾಳಗ. 4. ಮೂರ್ಖ.

**शिलेय ಶಿಲೇಯಂ** (न०) 1. ಕಲ್ಲುಹೂವು. शिलेव—शिला "ढः" (५-३-१०२)। (वि०) 2. ಶಿಲಾಸಂಬಂಧವಾದ. 3. ಶಿಲಾಸದೃಶವಾದ, ಶಿಲೆಯಂತಿರುವ. 4. ಶಿಲಾಮಯವಾದ.

**शिलोच्चय ಶಿಲೋಚ್ಚಯ** (पुं०) 1. ಪರ್ವತ, ಬೆಟ್ಟ. शिलाभिरुच्चीयते — उद् + चिञ् (चयने) "अच्" (३-३-५६)। "न पादपोन्मूलनशक्ति रंहः शिलोच्चये मूर्च्छति मारुतस्य" रघु० २-३४। 2. ಬಂಡೆಗಳ ರಾಶಿ.

**शिलोत्थ ಶಿಲೋತ್ಥ** (न०) ಒಂದು ಸುವಾಸನೆಯ ದ್ರವ್ಯ, ಸಾಂಬ್ರಾಣಿ ಮೊದಲಾದುದು.

**शिलौकस् ಶಿಲೌಕಸ್** (पुं०) ಗರುಡ. शिला ओको वासस्थानमस्य।

**शिल्प ಶಿಲ್ಪ** (न०) 1. ಕಲೆ, ಕುಶಲವಿದ್ಯೆ. ಚಿತ್ರ ನೃತ್ಯ ಗೀತ ಮೊದಲಾದುವು. ಇವು 64. ["कला" ಪದದಲ್ಲಿ ನೋಡಿ.] शील (समाधौ) "पः" धातोः ह्रस्वश्च निपा० (उ० ३-२८)। "पात्रविशेषे न्यस्तं गुणान्तरं व्रजति शिल्पमाधातुः" माल० १-६। (पुं०) 2. ಸ್ರುವ, ಯಜ್ಞದ ಪಾತ್ರೆ. 3. ಕೈಗಾರಿಕೆ.

**शिल्पकार ಶಿಲ್ಪಕಾರ** (पुं०) 1. ಶಿಲ್ಪಿ, ಕೈಕೆಲಸಗಾರ. शिल्पं करोति — डुकृञ् (करणे) "अण्" (३-२-१)। 2. ಯಂತ್ರಗಳ ಕೆಲಸದವನು, ಯಂತ್ರಗಳನ್ನು ತಯಾರಿಸುವವನು. "णिनिः" (३-२-७८)। —कारिन् —ಕಾರಿನ್.

**शिल्पविद्या ಶಿಲ್ಪವಿದ್ಯಾ** (स्त्री०) ಕುಶಲವಿದ್ಯೆ.

**शिल्पशाला ಶಿಲ್ಪಶಾಲಾ** (स्त्री०) 1. ಕುಶಲವಿದ್ಯೆಯ ಶಾಲೆ, ಕೈಗಾರಿಕೆಯ ಶಾಲೆ, ತಾಂತ್ರಿಕ ಶಾಲೆ. शिल्पानां शाला। 2. ನೃತ್ಯ ಗೀತ ಮೊದಲಾದುವನ್ನು ಕಲಿಸುವ ಶಾಲೆ.

**शिल्पशास्त्र ಶಿಲ್ಪಶಾಸ್ತ್ರ** (न०) ಕುಶಲವಿದ್ಯೆ, ಕುಶಲಕಾರ್ಯಗಳನ್ನು ತಿಳಿಸುವ ಶಾಸ್ತ್ರ. शिल्पस्य शास्त्रम्। ವಾಸ್ತುಶಿಲ್ಪ ಯಂತ್ರಗಳ ತಯಾರಿಕೆ ಸುವರ್ಣಾದಿ ಆಭರಣಗಳನ್ನು ತಯಾರಿಸುವುದು ಬಿಲ್ಲು ಬಾಣಗಳನ್ನು ತಯಾರಿಸುವುದು ಇತ್ಯಾದಿ ಕುಶಲಕಾರ್ಯಗಳನ್ನು ತಿಳಿಸುವ ಶಾಸ್ತ್ರ.

**शिल्पिन् ಶಿಲ್ಪಿನ್** (पुं०) 1. ಕೈಕೆಲಸಗಾರ, ಕುಶಲಕಾರ್ಯಗಳನ್ನು ಮಾಡುವವನು. शिल्पं कुशलकर्मास्यास्ति "इनिः" (५-२-११५)। 2. ಯಂತ್ರಗಳನ್ನು ತಯಾರಿಸುವವನು. 3. ಗೃಹನಿರ್ಮಾಣ ಮಾಡುವವನು. 4. ನೃತ್ಯ ಗೀತಾದಿಗಳನ್ನು ಕಲಿಸುವವನು. (वि०) 5. ಕುಶಲವಿದ್ಯೆಯನ್ನು ತಿಳಿದವನು.

**शिल्पिशाला ಶಿಲ್ಪಿಶಾಲಾ** (स्त्री०) ಕೈಗಾರಿಕೆಯ ಗೃಹ, ಶಿಲ್ಪ ಕಾರ್ಯದ ಕಾರ್ಖಾನೆ, ಯಂತ್ರಗಳನ್ನು ತಯಾರಿಸುವವನ ಗೃಹ. शिल्पिनां शाला। "आवेशनं शिल्पिशाला" अम०।

**शिव ಶಿವ** (पुं०) 1. ಪರಮೇಶ್ವರ, ಶಂಕರ, ಮಹಾದೇವ. शिवं मङ्गलमस्यास्ति "अच्" (५-२-१२७)। श्यति पापम् — शो (तनूकरणे) "वन्" पृषो०। शेतेऽस्मिन् सर्वम् — शीङ् (स्वप्ने) "वन्" (उ० १-१५१) निपा०। इति वा। शेरतेऽवतिष्ठन्ते अणिमादयोऽष्टौ गुणाः अस्मिन् इति वा। ಬ್ರಹ್ಮ ವಿಷ್ಣು ಮಹೇಶ್ವರರೆಂಬ ತ್ರಿಮೂರ್ತಿಗಳಲ್ಲಿ ಪರಮೇಶ್ವರನು ಒಬ್ಬ. ಪರಮೇಶ್ವರನು ಚತುರ್ಮುಖನ ಹಣೆಯಿಂದ ಜನಿಸಿದನು. "वैजयन्त इति ख्यातः पर्वतप्रवरो नृप। तत्राध्यात्मगतिं देव एकाकी प्रविचिन्तयन्। वैराजसदनान्नित्यं वैजयन्तं निषेवते॥ अथ तत्रासतस्तस्य चतुर्वक्त्रस्य धीमतः। ललाटप्रभवः पुत्रः शिव आगच्छद्यदृच्छया। आकाशेन महायोगी पुरा त्रिनयनः प्रभुः" भा० शान्ति० ३६०। ಪರಮೇಶ್ವರನು ಋಷಿಗಳೊಡನೆ ಹಿಮವತ್ಪರ್ವತದಲ್ಲಿ ಕುಳಿತಿದ್ದಾಗ ಪಾರ್ವತಿಯು ಹಿಂದಿನಿಂದ ಬಂದು ಕ್ರೀಡಾರ್ಥವಾಗಿ ಪರಮೇಶ್ವರನ ಎರಡು ಕಣ್ಣುಗಳನ್ನೂ ತನ್ನ ಕೈಗಳಿಂದ ಮುಚ್ಚಲಾಗಿ ಜಗತ್ತೆಲ್ಲವೂ ಕುರುಡಾಯಿತು. ಆಗ ಪರಶಿವನು ತನ್ನ ಲಲಾಟದಲ್ಲಿ ನೇತ್ರವೊಂದನ್ನು ಸೃಷ್ಟಿಸಿದನು. "आगम्य तु गिरेः पुत्री देवदेवस्य चान्तिकम्। मनःप्रियं चिकीर्षन्ती क्रीडार्थं शङ्करान्तिके॥ मनोहराभ्यां पाणिभ्यां हरनेत्रे पिधाय तु। अवेक्ष्य हृष्टा स्वगणान् स्मयन्ती पृष्ठतः स्थिता॥ देव्या चान्धीकृते देवे कश्मलं समपद्यत। निमीलिते भूतपतौ नष्टचन्द्रार्कतारकम्॥ विषण्णं भयवित्रस्तं जगदासीद्भयाकुलम्। तमोऽभिभूते सम्भ्रान्ते लोके जीवनसंक्षये॥ तृतीयं चास्य संभूतं ललाटे नेत्रमायतम्" भा० अनु० २०५।

**ಪಾರ್ವತೀವಿವಾಹ:** ಪರಶಿವನು ದಕ್ಷಬ್ರಹ್ಮನ ಪುತ್ರಿಯಾದ ದಾಕ್ಷಾಯಣಿಯನ್ನು ಮದುವೆಯಾಗಿದ್ದನು. ಒಮ್ಮೆ ದೇವಲೋಕದಲ್ಲಿ ನಡೆದ ಯಾಗಕ್ಕಾಗಿ ದಕ್ಷನು ಹೋಗಿದ್ದಾಗ ಶಿವನು ಆತನನ್ನು ಗೌರವಿಸಲಿಲ್ಲವೆಂಬ ಕಾರಣದಿಂದ ದಕ್ಷನು ಕ್ರುದ್ಧನಾಗಿ ಶಿವನಿಗೆ ಯಾಗದಲ್ಲಿ ಹವಿರ್ಭಾಗವನ್ನು ಕೊಡಕೂಡದೆಂದು ಹೇಳಿದನು. ದಕ್ಷನು ಮಾಡಿದ ವಾಜಪೇಯಯಾಗಕ್ಕೆ ಈಶ್ವರನಿಗೆ ಆಹ್ವಾನ ಕೊಡದಿದ್ದರೂ ಸತಿಯು ಈಶ್ವರನ ಮಾತನ್ನು ಲಕ್ಷಿಸದೆ ತಂದೆಯ ಯಾಗಕ್ಕೆ ಹೋದಾಗ ಯಾರೂ ಅವಳನ್ನು ಸತ್ಕರಿಸಲಿಲ್ಲವಾಗಿ ಕೋಪಗೊಂಡು ಈಶ್ವರನೇ ತನಗೆ ಮುಂದಿನ ಜನ್ಮದಲ್ಲಿಯೂ ಪತಿಯಾಗಬೇಕೆಂದು ಪ್ರಾರ್ಥಿಸುತ್ತ ಯೋಗದಿಂದ ಶರೀರತ್ಯಾಗ ಮಾಡಿದಳು. ಈ ವಿಷಯವನ್ನು ತಿಳಿದ ಪರಮೇಶ್ವರನು ತನ್ನ ಜಟಾಜೂಟದಿಂದ ವೀರಭದ್ರನನ್ನು ಸೃಷ್ಟಿಸಲು ವೀರಭದ್ರನು ಎಲ್ಲಾ ಪ್ರಮಥಗಣಗಳೊಡನೆ ಹೋಗಿ ದಕ್ಷನ ಯಜ್ಞವನ್ನು ಧ್ವಂಸ ಮಾಡಿದನು. ಶರೀರತ್ಯಾಗ ಮಾಡಿದ ಸತೀದೇವಿಯು ಮೇನಕಾ–ಹಿಮವಂತರ ಪುತ್ರಿಯಾಗಿ (ಪಾರ್ವತಿಯಾಗಿ) ಜನಿಸಿ ಪರಮೇಶ್ವರನನ್ನು ಮದುವೆಯಾದಳು.

**ಶಿವನಿಂದ ಅರ್ಜುನನಿಗೆ ಪಾಶುಪತಾಸ್ತ್ರ ಪ್ರದಾನ:** ಕೌರವರಿಂದ ಪರಾಜಿತರಾದ ಪಾಂಡವರು ವನವಾಸವನ್ನನುಭವಿಸುತ್ತಿದ್ದಾಗ ಅಲ್ಲಿಗೆ ಆಗಮಿಸಿದ ವೇದವ್ಯಾಸರು ಉಪದೇಶಿಸಿದ ಮಂತ್ರದ ಪ್ರಭಾವದಿಂದ ಅರ್ಜುನನು ಇಂದ್ರಕೀಲಪರ್ವತದಲ್ಲಿ ತಪಸ್ಸು ಮಾಡುತ್ತಿದ್ದಾಗ ಅವನನ್ನು ಪರೀಕ್ಷಿಸಲು ಪರಮೇಶ್ವರನು ಕಿರಾತ ವೇಷದಿಂದ ಅಲ್ಲಿಗೆ ಬಂದು ಅರ್ಜುನನೊಡನೆ ಯುದ್ಧಮಾಡಿ ಅವನ ಭಕ್ತಿಗೆ ಮೆಚ್ಚಿ ಶತ್ರುನಿಗ್ರಹಕ್ಕಾಗಿ ಪಾಶುಪತಾಸ್ತ್ರವನ್ನು ಅನುಗ್ರಹಿಸಿದನು. "ददामि तेऽस्त्रं दयितमहं पाशुपतं विभो। समर्थो धारणे मोक्षे संहारेऽपि च पाण्डव। न त्वया सहसा पार्थ मोक्तव्यं पुरुषे क्वचित्। जगद्विनिर्दहेत्सर्वमल्पतेजसि पातितम्। तत् श्रुत्वा त्वरितः पार्थः शुचिर्भूत्वा समाहितः। ततस्त्वध्यापयामास सरहस्यनिवर्तनम्। तदस्त्रं पाण्डवश्रेष्ठं मूर्तिमन्तमिवान्तिकम्। उपतस्थे महात्मानं यथा त्र्यक्षमुमापतिम्" भा० वन० ४०।

**ತ್ರಿಪುರಸಂಹಾರ:** ಚತುರ್ಮುಖನಿಂದ ವರವನ್ನು ಪಡೆದು ಮಯನು ನಿರ್ಮಿಸಿದ ಆಯಸ ರಾಜತ ಮತ್ತು ಸೌವರ್ಣಪುರಗಳಲ್ಲಿ ತಾರಕಾಸುರನ ಮಕ್ಕಳಾದ ವಿದ್ಯುನ್ಮಾಲಿ ಕಮಲಾಕ್ಷ ಮತ್ತು ತಾರಾಕ್ಷರು ಸಂತೋಷದಿಂದ ಸ್ವರ್ಗಸೌಖ್ಯವನ್ನು ಅನುಭವಿಸುತ್ತಿದ್ದರು. ಕಾಲಕ್ರಮದಲ್ಲಿ ಅವರು ದೇವತೆಗಳನ್ನು ಬಹಳವಾಗಿ ಪೀಡಿಸತೊಡಗಲಾಗಿ ದೇವತೆಗಳ ಪ್ರಾರ್ಥನೆಯಂತೆ ತ್ರಿಪುರಾಸುರರನ್ನು ಸಂಹರಿಸಲು ಪರಮೇಶ್ವರನು ಭೂಮಿಯನ್ನು ರಥವನ್ನಾಗಿಯೂ ನಾಲ್ಕು ವೇದಗಳನ್ನು ಅಶ್ವಗಳನ್ನಾಗಿಯೂ ಬ್ರಹ್ಮನನ್ನು ಸಾರಥಿಯನ್ನಾಗಿಯೂ ಮಂದರಪರ್ವತವನ್ನು ಬಿಲ್ಲನ್ನಾಗಿಯೂ ಯಮನನ್ನು ಬತ್ತಳಿಕೆಯನ್ನಾಗಿಯೂ ಆದಿಶೇಷನನ್ನು ಬಿಲ್ಲಿನ ಹೆದೆಯನ್ನಾಗಿಯೂ ವಿಷ್ಣುವನ್ನು ಬಾಣವನ್ನಾಗಿಯೂ ಕಲ್ಪಿಸಿಕೊಂಡು ಆ ಮೂರು ಪುರಗಳೂ ಒಂದೇ ಕಡೆ ಸೇರಿದ್ದನ್ನು ಕಂಡು ಒಂದೇ ಬಾಣದಿಂದ ಅವರನ್ನು ಸಂಹರಿಸಿದನು. "असुराणां पुराण्यासन् त्रीणि वीर्यवतां दिवि। आयसं राजसं चैव सौवर्णमपि चापरम्। नाशकत्तानि मघवा भेत्तुं सर्वायुधैरपि। अथ सर्वेऽमरा रुद्रं जग्मुः शरणमर्दिताः। तत ऊचुर्महात्मानो देवाः सर्वे समागताः। रुद्र रौद्रा भविष्यन्ति पशवः सर्वकर्मसु। जहि दैत्यान् सह पुरैः लोकांस्त्रायस्व मानद। स तथोक्तस्तथेत्युक्त्वा कृत्वा विष्णुं शरोत्तमम्। ब्रह्माणं सारथिं कृत्वा विनियुज्य च सर्वशः। शरेणादित्यवर्णेन कालाग्निसमतेजसा। तेऽसुराः सपुरास्तत्र दग्धा रुद्रेण भारत" भा० अनु० २६५। ಪರಮಾತ್ಮನೊಬ್ಬನೇ ಬ್ರಹ್ಮ ವಿಷ್ಣು ಮಹೇಶ್ವರರೆಂಬ ನಾಮರೂಪಗಳನ್ನು ಹೊಂದಿ ಸೃಷ್ಟಿ ಸ್ಥಿತಿ ಮತ್ತು ಲಯರೂಪ ಕಾರ್ಯಗಳನ್ನು ನಡೆಸುವನು. "सृष्टिस्थित्यन्तकरणीं ब्रह्मविष्णुशिवात्मिकाम्। स संज्ञां याति भगवानेक एव जनार्दनः" विष्णुपु०। "न ब्रह्मा भवतो भिन्नो न शम्भुर्ब्रह्मणस्तथा। न चाहं युवयोर्भिन्नो ह्यभिन्नत्वं सनातनम्" कालिकापु०। "सृष्टिस्थित्यन्तकरणादेक एव महेश्वरः। ब्रह्मा विष्णुः शिवश्चेति संज्ञामाप पृथक् पृथक्। अतस्त्वं च विधाता च तथाहमपि न पृथक्। एवं शरीरं रूपं च ज्ञानमस्माकमन्तरम्" कालिकापु०। ವಿಷ್ಣು ಮಹೇಶ್ವರರು ಅಭಿನ್ನರಾದುದರಿಂದ ವಿಷ್ಣುವನ್ನು ಭಜಿಸುವವರು ಈಶ್ವರನನ್ನೂ ಈಶ್ವರನನ್ನು ಭಜಿಸುವವರು ವಿಷ್ಣುವನ್ನೂ ಹೊಂದುವರು. "तं ये विन्दन्ति ते देवि नूनं मामेव विन्दति। ये मां विन्दन्ति देवेशि ते विन्दन्ति परं शिवम्" कूर्मपु०। "परात्परतरं यान्ति नारायणपरा जनाः। न ते तत्र गमिष्यन्ति ये द्विषन्ति महेश्वरम्"। "शिवेन भर्त्रा सह धर्मचर्या कार्या त्वया मुक्तविचारयेति" कुमा० ७-८३।
2. ಮೋಕ್ಷ. 3. ಹಸುಗಳನ್ನು ಕಟ್ಟುವ ಗೂಟ. 4. ಒಂದು ಶುಭಯೋಗ. 5. ಸುರುಸುರಿಕೆ ಗಿಡ. 6. ಗುಗ್ಗುಳ. 7. ವೇದ. 8. ಪಾದರಸ. 9. ಕಾಡು

ಸಬ್ಬಸಿಗೆ ಗಿಡ. "शिवो मोक्षे महादेवे कीलकग्रहयोगयोः। वालुके गुग्गुली वेदे पुण्डरीकद्रुमे पुमान्" मेदि०। 10. ಕರಿದತ್ತೂರಿ ಗಿಡ. [ಅಪಾರಮಹಿಮನಾದ ಪರಮೇಶ್ವರನ ವಿಭೂತಿಗಳನ್ನು ವರ್ಣಿಸುವುದಾದರೆ ಅದಕ್ಕೇ ಒಂದು ಸಂಪುಟ ಬೇಕಾಗುವುದು. ವಿಸ್ತರ ಭಯದಿಂದ ಸಾಧ್ಯವಾಗಲಿಲ್ಲವಾಗಿ ಹೆಚ್ಚು ವಿವರಕ್ಕೆ ಶಿವಪುರಾಣ ಲಿಂಗಪುರಾಣಾದಿಗಳನ್ನು ನೋಡಿ.] 11. ಶುಭ, ಮಂಗಳ, ಕಲ್ಯಾಣ, ಕ್ಷೇಮ. "उपपन्नं ननु शिवं सप्तस्वङ्गेषु यस्य मे। दैवीनां मानुषीणां च प्रतिहर्ता त्वमापदाम्" रघु० १-६०। 12. ಸುಖ. 13. ಜಲ, ನೀರು. "सुखक्षेमजले क्लीबम्" मेदि०। (वि०) 14. ಮಂಗಳಕರವಾದ. 15. ಸೌಖ್ಯವನ್ನು ಉಂಟುಮಾಡುವ. "शिवास्ते पन्थानः सन्तु"। "महते फलाय तदवेक्ष्य शिवम्" किरा० ६-२८। 16. ರಮ್ಯವಾದ, ಮನೋಹರವಾದ. "शिवं नभोवर्त्म सरोजवायुभिः" किरा० ४-२९।

**शिवक ಶಿವಕ** (पुं०) 1. ಹಸುಗಳನ್ನು ಕಟ್ಟುವ ಗೂಟ. 2. ಹಸುಗಳು ಮೈ ಕೆರೆದುಕೊಳ್ಳಲು ಕೊಟ್ಟಿಗೆಯಲ್ಲಿ ನೆಟ್ಟಿರುವ ಕಂಬ. 3. ಹಾಲು ಕರೆಯಲು ಹಸುಗಳನ್ನು ಕಟ್ಟುವ ಗೂಟ.

**शिवकीर्तन ಶಿವಕೀರ್ತನ** (पुं०) 1. ವಿಷ್ಣು. शिवं सुखकरं कीर्तनं यस्य। "सन्ध्यांशुभिन्नघनकर्बुरितान्तरिक्षलक्ष्मीविडम्बि शिबिरं शिवकीर्तनस्य" माघ० ५-६८। 2. ಪರಮೇಶ್ವರನ ಒಬ್ಬ ಅನುಚರ, –ಸೇವಕ.

**शिवङ्कर ಶಿವಂಕರ** (वि०) 1. ಕ್ಷೇಮವನ್ನುಂಟುಮಾಡುವ. 2. ಸೌಖ್ಯವನ್ನುಂಟುಮಾಡುವ करोति—डु कृञ् (करणे) "अच्" (३-२-१३४)। शिवस्य करः। "क्षेमङ्करोऽरिष्टतातिः शिवतातिः शिवङ्करः" अम०।

**शिवताति ಶಿವತಾತಿ** (वि०) 1. ಸುಖಕರವಾದ. 2. ಮಂಗಳಕರವಾದ. "प्रयत्नः कृत्स्नोऽयं फलतु शिवतातिश्च भवतु" मालती० ६-७।

**शिवदारु ಶಿವದಾರು** (न०) ದೇವದಾರು ವೃಕ್ಷ.

**शिवदूती ಶಿವದೂತೀ** (स्त्री०) 1. ದುರ್ಗಾದೇವಿ. 2. ಒಬ್ಬ ಯೋಗಿನಿ.

**शिवद्रुम ಶಿವದ್ರುಮ** (पुं०) ಬಿಲ್ವಪತ್ರೆ ಗಿಡ. शिवप्रियो द्रुमः।

**शिवद्विष्टा ಶಿವದ್ವಿಷ್ಟಾ** (स्त्री०) ಕೇತಕೀವೃಕ್ಷ, ತಾಳೆ ಮರ. शिवेन द्विष्टा। ಕೇತಕೀಪುಷ್ಪವು ಈಶ್ವರನ ಪೂಜೆಗೆ ಅನರ್ಹವಾದುದರಿಂದ ಈ ಹೆಸರು.

**शिवधातु ಶಿವಧಾತು** (पुं०) ಪಾರದ, ಪಾದರಸ. ಪಾದರಸವು ಶಿವನ ವೀರ್ಯವಾದುದರಿಂದ ಈ ಹೆಸರು.

**शिवपुराण ಶಿವಪುರಾಣ** (न०) ವ್ಯಾಸಮಹರ್ಷಿಪ್ರಣೀತ ಅಷ್ಟಾದಶ ಪುರಾಣಗಳಲ್ಲೊಂದು.

**शिवपुरी ಶಿವಪುರೀ** (स्त्री०) ಕಾಶೀಕ್ಷೇತ್ರ. ಕಾಶೀ ವಿಶ್ವನಾಥನ ಸಾನ್ನಿಧ್ಯವಿರುವುದರಿಂದ ಈ ಹೆಸರು.

**शिवप्रिय ಶಿವಪ್ರಿಯ** (पुं०) 1. ಸ್ಫಟಿಕ. 2. ದತ್ತೂರಿ ಗಿಡ. 3. ಬಕವೃಕ್ಷ. (न०) 4. ರುದ್ರಾಕ್ಷ. –या –ಯಾ. 5. ದುರ್ಗಾದೇವಿ, ಪಾರ್ವತಿ.

**शिवमल्ली ಶಿವಮಲ್ಲೀ** (स्त्री०) ಬಕಪುಷ್ಪ.

**शिवरात्रि ಶಿವರಾತ್ರಿ** (स्त्री०) ಮಾಘ ಬಹುಳ ಚತುರ್ದಶಿ. "माघमासस्य शेषे या प्रथमे फाल्गुनस्य च। कृष्णा चतुर्दशी सा तु शिवरात्रिः प्रकीर्तिता"। ಈ ಶಿವರಾತ್ರಿಯ ದಿನ ರಾತ್ರಿಯೆಲ್ಲಾ ಪೂಜೆ ನಡೆದರೂ ಆ ದಿನ ಉಪವಾಸವೇ ಪ್ರಧಾನವಾದುದು. "न स्नानेन न वस्त्रेण न धूपेन न चार्चया। तुष्यामि न तथा पुष्पैः यथा तत्रोपवासतः"॥ ಶಿವರಾತ್ರಿಯ ಪೂಜೆಯನ್ನು ರಾತ್ರಿ ಪ್ರತಿ ಯಾಮ (ಜಾವ) ದಲ್ಲೂ ಆಚರಿಸಬೇಕು. "ततो रात्रौ प्रकर्तव्यं शिवप्रीणनतत्परैः। प्रहरे प्रहरे स्नानं पूजां चैव विशेषतः"॥ ಪ್ರಥಮ ಯಾಮ (ಜಾವ) ದಲ್ಲಿ ಕ್ಷೀರಸ್ನಾನ, ದ್ವಿತೀಯ ಯಾಮದಲ್ಲಿ ದಧಿಸ್ನಾನ. ತೃತೀಯ ಯಾಮದಲ್ಲಿ ಆಜ್ಯಸ್ನಾನ. ಚತುರ್ಥ ಯಾಮದಲ್ಲಿ ಮಧು ಸ್ನಾನ.—ಈ ರೀತಿಯಲ್ಲಿ ಪರಮೇಶ್ವರನಿಗೆ ಸ್ನಾನ ಪೂಜಾದಿಗಳನ್ನು ಆಚರಿಸಬೇಕು. "दुग्धेन प्रथमं स्नानं दध्ना चैव द्वितीयके। तृतीये च तथाज्येन चतुर्थे मधुना तथा"॥ ಪ್ರತಿ ಜಾವದಲ್ಲೂ ಪರಮಾತ್ಮನನ್ನು ಪೂಜಿಸಿ ಅರ್ಘ್ಯ ಪ್ರದಾನ ಮಾಡಬೇಕು.

**ಮೊದಲನೆಯ ಯಾಮದಲ್ಲಿ**—ಕ್ಷೀರಸ್ನಾನಪೂರ್ವಕ "शिवरात्रिव्रतं देव पूजाजपपरायणः। करोमि विधिवद्दत्तं गृहाणार्घ्यं महेश्वर"॥

**ದ್ವಿತೀಯ ಯಾಮದಲ್ಲಿ** — ದಧಿಸ್ನಾನಪೂರ್ವಕ "नमः शिवाय शान्ताय सर्वपापहराय च। शिवरात्रौ ददाम्यर्घ्यं प्रसीद उमया सह"॥

**ತೃತೀಯ ಯಾಮದಲ್ಲಿ** — ಘೃತಸ್ನಾನಪೂರ್ವಕ "दुःखदारिद्र्यशोकेन दग्धोऽहं पार्वतीश्वर। शिवरात्रौ ददाम्यर्घ्यमुमाकान्त गृहाण मे"॥

**ಚತುರ್ಥ ಯಾಮದಲ್ಲಿ** — ಮಧುಸ್ನಾನ ಪೂರ್ವಕ "मया कृतान्यनेकानि पापानि हर शङ्कर। शिवरात्रौ

ददाम्यर्घ्यमुमाकान्त गृहाण मे" ।। ಈ ರೀತಿ ಅರ್ಘ್ಯ ಪ್ರದಾನ ಮಾಡಬೇಕು.

**शिवलोक ಶಿವಲೋಕ** (ಪುಂ) ಪರಶಿವನ ಲೋಕ, ಕೈಲಾಸ. शिवस्य लोकः। ಶಿವಲೋಕವು ವೈಕುಂಠ ಲೋಕಕ್ಕೆ 16 ಕೋಟಿ ಯೋಜನಗಳ ದೂರದಲ್ಲಿರುವುದು. ಇಲ್ಲಿರುವ ಕೈಲಾಸದಲ್ಲಿ ಪರಶಿವನು ಪಾರ್ವತೀದೇವೀಸಮೇತನಾಗಿ ಸಮಸ್ತಪ್ರಮಥಗಣಗಳಿಂದ ಪರಿವೃತನಾಗಿ ಅವರಿಂದ ಸೇವೆಯನ್ನು ಸ್ವೀಕರಿಸುತ್ತಿರುವನು. "वैकुण्ठादुत्तरे शैवो लोकः षोडशकोटयः। तिर्यगेव महाराज कैलासाख्यस्तु पर्वतः। पार्वत्या सहितः शम्भुः यत्रास्ते स्वगणैर्वृतः" पाद्म०।

**शिववल्लभा ಶಿವವಲ್ಲಭಾ** (ಸ್ತ್ರೀಂ) ಪಾರ್ವತಿ.

**शिवसायुज्य ಶಿವಸಾಯುಜ್ಯ** (ನಂ) ಪರಮೇಶ್ವರನೊಡನೆ ಸೇರುವುದು. ಪರಮೇಶ್ವರನು ಅನುಭವಿಸುವ ಸಕಲ ಭೋಗಗಳನ್ನೂ ಅನುಭವಿಸುವಂತೆ ಅವನ ಸಂಬಂಧ ಹೊಂದುವುದು, ಮೋಕ್ಷ. शिवस्य सायुज्यम्। "उपवासप्रभावेण बलादपि च जागरात्। शिवरात्रेस्तथा तस्य लिङ्गस्यापि प्रपूजया। अक्षयान् लभते लोकान् शिवसायुज्यमाप्नुयात्"।

**शिवसुन्दरी ಶಿವಸುಂದರೀ** (ಸ್ತ್ರೀಂ) ಪಾರ್ವತಿ.

**शिवा ಶಿವಾ** (ಸ್ತ್ರೀಂ) 1. ಪಾರ್ವತಿ. शिवः भर्तृत्वेनास्त्यस्याः "अच्" (५-२-१२७)। 2. ಶಮೀವೃಕ್ಷ. 3. ಅಳಲೆ ಗಿಡ. 4. ಭೂಮ್ಯಾಮಲಕ, ನೆಲನೆಲ್ಲಿ ಗಿಡ. 5. ಹೆಣ್ಣುನರಿ. "स्त्रियां शिवा भूरिमायगोमायुमृगधूर्तकः" अम०। "शिवाघोरस्वनां पश्चाद्बुबुधे विकृतेति ताम्" रघु० १२-३९। 6. ಮೋಕ್ಷ. 7. ಒಂದು ಹಳದಿ ಬಣ್ಣದ ವಸ್ತು. 8. ಅರಿಶಿನ. "शिवा झाटामलोषधौ। अभयामलकीगौरीफेरुसक्तुफलास्वपि" मेदि०।

**शिवाक्ष ಶಿವಾಕ್ಷ** (ನಂ) ರುದ್ರಾಕ್ಷ. शिवस्य अक्षि कारणत्वेनास्त्यस्य "अच्" (५-२-१२७)। "रुद्राक्षं शिवलिङ्गं च स्थूलं स्थूलं विशिष्यते" मेरुतन्त्रम्।

**शिवाद्वैतदर्शन ಶಿವಾದ್ವೈತದರ್ಶನ** (ನಂ) ವೀರಶೈವ ಸಿದ್ಧಾಂತವು ವೇದಾಂತದರ್ಶನದ ಒಂದು ಭೇದ. ಇದು ವೀರಶೈವರ ತತ್ತ್ವಜ್ಞಾನ. ಈ ತತ್ತ್ವಜ್ಞಾನಕ್ಕೆ ಶಿವಾದ್ವೈತ ವಿಶೇಷಾದ್ವೈತ ಶೈವಸಿದ್ಧಾಂತ ಶಕ್ತಿವಿಶಿಷ್ಟಾದ್ವೈತ ಮುಂತಾದ ಹೆಸರುಗಳು ಇರುವುವು. ಈ ದರ್ಶನದಲ್ಲಿ ಶಿವನೇ ಮುಖ್ಯ ತತ್ತ್ವವಾದುದರಿಂದ ಇದಕ್ಕೆ ಶಿವಾದ್ವೈತವೆಂದೂ ಸಮರಸವೆಂಬ ವಿಶೇಷವಾದ ಅದ್ವೈತವಿರುವುದರಿಂದ ವಿಶೇಷಾದ್ವೈತವೆಂದೂ ಶಕ್ತಿಯಿಂದ ವಿಶಿಷ್ಟವಾದ ಅದ್ವೈತವಾದುದರಿಂದ ಶಕ್ತಿವಿಶಿಷ್ಟಾದ್ವೈತವೆಂದೂ ಹೆಸರುಗಳಿರುವುವು.

ಈ ಶಕ್ತಿವಿಶಿಷ್ಟಾದ್ವೈತದಲ್ಲಿ ಶಿವೋತ್ಕರ್ಷವನ್ನು ನಿರೂಪಿಸಿ ಶ್ರೀಕಂಠಶಿವಾಚಾರ್ಯರು ಉಪನಿಷತ್ತುಗಳಿಗೂ ಬಾದರಾಯಣಸೂತ್ರಗಳಿಗೂ ಭಾಷ್ಯಗಳನ್ನು ರಚಿಸಿರುತ್ತಾರೆ. ಇದಕ್ಕೆ ಅಪ್ಪಯ್ಯದೀಕ್ಷಿತರು ಶಿವಾರ್ಕಮಣಿದೀಪಿಕೆಯೆಂಬ ವ್ಯಾಖ್ಯಾನವನ್ನು ರಚಿಸಿರುತ್ತಾರೆ. ಈ ದರ್ಶನದಲ್ಲಿ ಪತಿ ಪಶು ಪಾಶವೆಂದು ವಿಷಯವು ಮೂರು ವಿಧ. ಪತಿಯೇ ಪರಶಿವನು, ಪರಮಾತ್ಮ ಮತ್ತು ಸರ್ವಶಕ್ತಿಯುಕ್ತ. ಪಶುವೇ ಪುರುಷ ಜೀವಾತ್ಮನು. ಜ್ಞಾತೃತ್ವ ಕರ್ತೃತ್ವ ಭೋಕ್ತೃತ್ವ ಶಕ್ತಿಯುಳ್ಳವನು.

**ಈ ಮತದಲ್ಲಿ ತತ್ತ್ವಗಳು:** ಪುರುಷ ಪ್ರಕೃತಿ ಮಹತ್ ಅಹಂಕಾರ ಮನಸ್ಸು 5 ಜ್ಞಾನೇಂದ್ರಿಯಗಳು 5 ಕರ್ಮೇಂದ್ರಿಯಗಳು 5 ತನ್ಮಾತ್ರಗಳು 5 ಮಹಾಭೂತಗಳು ಇವುಗಳೊಡನೆ ಶಿವ ಶಕ್ತಿ ಸಾದಾಖ್ಯ ಈಶ್ವರ ಸದ್ವಿದ್ಯೆ ಮಾಯೆ ಕಾಲ ನಿಯತಿ ಕಲೆ ವಿದ್ಯೆ ರಾಗ ಈ ಹನ್ನೊಂದು ತತ್ತ್ವಗಳೂ ಸೇರಿ ಒಟ್ಟು 36 ತತ್ತ್ವಗಳು.

ಎಲ್ಲ ಮತಗಳಿಗಿಂತಲೂ ಶೈವಮತವೇ ಶ್ರೇಷ್ಠವಾದುದು. ಅದರಲ್ಲೂ ವೀರಶೈವಮತವು ಸರ್ವಶ್ರೇಷ್ಠ. ಶೈವಶಾಸ್ತ್ರವನ್ನು ನಿಂದಿಸುವವರು ನರಕದಲ್ಲಿ ದುಃಖಭಾಗಿಗಳಾಗಿ ಕ್ರಿಮಿಕೀಟಗಳಾಗಿ ಹುಟ್ಟುವರು. ಶಿವನನ್ನು ನಿಂದಿಸುವವರನ್ನು ಶೈವರು ಶಿಕ್ಷಿಸಿದರೆ ಅವರಿಗೆ ಯಾವ ದೋಷವೂ ಉಂಟಾಗುವುದಿಲ್ಲ. ಹೀಗೆ ಶಿಕ್ಷಿಸಿದವರು ಶಿವಲೋಕವನ್ನು ಹೊಂದುವರು. ಇದು ಇವರ ಅಭಿಪ್ರಾಯ.

ಇವರು ಜೀವಾತ್ಮಪರಮಾತ್ಮರಿಗೆ ಭೇದವನ್ನು ಹೇಳುವರು.

**ಜೀವಾತ್ಮ:** ಜೀವಾತ್ಮನು ಚೈತನ್ಯಸ್ವರೂಪನು. ಅವನು ಮಾಯೆಯಿಂದ ಅಲ್ಪಜ್ಞನೂ ಅಲ್ಪಶಕ್ತಿಯುಳ್ಳವನೂ ಅಹಂಕಾರಿಯೂ ಆಗಿ ಸುಖ ದುಃಖಾದಿಗಳನ್ನು ಅನುಭವಿಸುವನು. ಜೀವನು ಆಣವಮಲ ಮಾಯಾಮಲ ಕಾರ್ಮಿಕಮಲ ಮತ್ತು ಅಹಂಕಾರಗಳ ಮೂಲಕ ಕರ್ಮಬದ್ಧನಾಗಿ ಜನ್ಮಾಂತರಗಳನ್ನು ತಾಳುವನು. ಈ ಮೂರು ಮಲಗಳೇ ಜೀವನಪಾಶಗಳು. ಜೀವನು ಈ ಪಾಶಗಳಿಂದ ಬದ್ಧನಾದರೆ ಶಿವಭಾವವನ್ನು ಕಳೆದುಕೊಂಡು ಜೀವಭಾವವನ್ನು ತಾಳುವನು.

**ಈ ಪಾಶದಿಂದ ಮುಕ್ತನಾಗಲು ಸಾಧನ:** ಶಿವಸ್ಮರಣೆ ಧ್ಯಾನ ಸ್ತೋತ್ರ ಪೂಜೆಗಳು ಬಹಳ ಮುಖ್ಯವಾದುವು. ಆದರೆ ಅಶಕ್ತರಿಗೆ ಭಕ್ತಿಯೋಗವು ಸಹಕಾರಿ

ಯಾಗುವುದು. ನವವಿಧ ಭಕ್ತಿಗಳಲ್ಲಿ ಆತ್ಮಾರ್ಪಣ ಮತ್ತು ಆತ್ಮನಿವೇದನ ಇವು ಶ್ರೇಷ್ಠವಾದುವು. ಮಾಡುವ ಎಲ್ಲ ಕಾರ್ಯಗಳೂ ಶಿವನ ಪ್ರೀತ್ಯರ್ಥವೇ ಮಾಡುವುದು ಮತ್ತು ಜಪತಪಾದಿಗಳನ್ನು ಶಿವಾರ್ಪಣ ಬುದ್ಧಿಯಿಂದಲೇ ಮಾಡುವುದು ಇವು ಸರ್ವಾರ್ಪಣವಾಗುವುವು. ಕರ್ಮವು ಸಕಾಮ ಮತ್ತು ನಿಷ್ಕಾಮ ಎಂದು ಎರಡು ವಿಧ ಹೇಳಿ ನಿಷ್ಕಾಮಕರ್ಮದಿಂದಲೇ ಜ್ಞಾನಪ್ರಾಪ್ತವಾಗುವುದೆಂದು ಈ ದರ್ಶನಕಾರರ ಅಭಿಪ್ರಾಯ.

**ಪರಮಾತ್ಮ :** ಪರಶಿವನೇ ಪರಮಾತ್ಮ. ಶಿವನು ನಿಷ್ಕಲ ಪರಾತ್ಪರ ಸೂಕ್ಷ್ಮ ನಿತ್ಯ ಅವ್ಯಯ ಸರ್ವಗತ ಕಾರಣ ಕಾರಣ ಸರ್ವಶಕ್ತ ಸಚ್ಚಿದಾನಂದಸ್ವರೂಪ. ನಿರ್ಗುಣ ನಿರುಪಾಧಿಕ ಪರಂಜ್ಯೋತಿ ಸನಾತನ ವೇದವೇದಾಂತ ಗೋಚರ. ಪರಶಿವನು ಚಿದ್ಘನಸ್ವರೂಪನು. ಶುದ್ಧವಾದ ಜ್ಞಾನಸ್ವರೂಪನು. ಶುದ್ಧಸೃಷ್ಟಿಯಲ್ಲಿ ಪರಶಿವನು ಸಾಕ್ಷಾತ್ ನಿಮಿತ್ತಕಾರಣನು. ಶಿವತತ್ತ್ವವು ಉಪಾದಾನ ಕಾರಣ.

**ಮೋಕ್ಷೋಪಾಯ ಮತ್ತು ಮುಕ್ತಿ :** ಜೀವನು ಲಿಂಗಧಾರಣಾತ್ಮಕ ಶಿವದೀಕ್ಷೆಯಿಂದ ಭಕ್ತ ಮಹೇಶ ಪ್ರಸಾದಿ ಪ್ರಾಣಲಿಂಗಿ ಶರಣ ಮತ್ತು ಐಕ್ಯಗಳೆಂಬ ಷಟ್ ಸೋಪಾನಗಳ ಮೂಲಕ ಮಲತ್ರಯನಿವೃತ್ತಿಹೊಂದಿ ತತ್ತ್ವಜ್ಞಾನದ ಮೂಲಕ ಬ್ರಹ್ಮಸಾಕ್ಷಾತ್ಕಾರವಾಗಿ ಮುಕ್ತಿ ಹೊಂದುವನು. ಈ ಪಾಶಗಳಿಂದ ಬದ್ಧನಾದರೆ ಜೀವನು. ಇವುಗಳಿಂದ ಮುಕ್ತನಾದರೆ ಸದಾಶಿವನಾಗುತ್ತಾನೆ. ಹೀಗೆ ಪಾಶಗಳಿಂದ ಮುಕ್ತನಾಗುವುದೇ ಮುಕ್ತಿ.

**शिवाराति ಶಿವಾರಾತಿ** (पुं०) ಕುಕ್ಕುರ, ನಾಯಿ.

**शिवालु ಶಿವಾಲು** (पुं०) ಶೃಗಾಲ, ನರಿ.

**शिवि ಶಿವಿ** (पुं०) ಭೂಜಪತ್ರ ಗಿಡ.

**शिशिर ಶಿಶಿರ** (पुंन०) 1. ಶಿಶಿರ ಋತು, ಮಾಘ ಫಾಲ್ಗುನ ಮಾಸಗಳಿಂದ ಕೂಡಿದ ಒಂದು ಋತು. शशन्ति धावन्ति यस्मिन् पथिका:—शश (प्लुतगतौ) "किरच्" (उ० १-५३)। निपा०। "कण्ठेषु स्खलितं गतेऽपि शिशिरे पुंस्कोकिलानां रुतम्" शाकुं० ६-४। (पुं०) 2. ಹಿಮ, ಮಂಜು, ಇಬ್ಬನಿ. "जातां मन्ये शिशिरमथितां पद्मिनीं वान्यरूपाम्" मेघ० २-२०। 3. ವಿಷ್ಣು. आर्तशब्दश्रवणसमनन्तरमेव शशति त्वरया गच्छति—शश "किरच्"। "गजेन्द्रपालनार्थं य: शिशिर: त्वरया गत:" इति निरुक्ति:। "शब्दातिग: शब्दसह: शिशिर: शर्वरीकर:" वि० स०। (वि०) 4. ಶೀತಲವಾಗಿರುವ, ತಣ್ಣಗಿರುವ. "शीतं गुणे तद्वदर्था: सुषीम: शिशिरो जड:। तुषार: शीतल: शीतो हिम: सप्तान्यलिङ्गका:" अम०। "शम्भो: शिरोऽन्त:सरितस्तरङ्गान् विगाह्य गाढं शिशिरान् रसेन" कुमा० ११-४७।

**शिशिरकिरण ಶಿಶಿರಕಿರಣ** (पुं०) ಚಂದ್ರ.

**शिशिरात्यय ಶಿಶಿರಾತ್ಯಯ** (पुं०) ಶಿಶಿರಋತುವು ಕಳೆದುಹೋಗುವುದು, ವಸಂತಋತು. शिशिरस्य अत्यय: नाश:। "तस्या: सखीभ्यां प्रणिपातपूर्वं स्वहस्तलून: शिशिरात्ययस्य। व्यकीर्यत त्र्यम्बकपादमूले पुष्पोच्चय: पल्लवभङ्गभिन्न:" कुमा० ३-६१। **-अपगम: -ಅಪಗಮ:.**

**शिशु ಶಿಶು** (पुं०) 1. ಮಗು. श्यति—शो (तनूकरणे) "उ:" धातो: इत्वं द्वित्वं च (उ० १-२०)। "धैर्यमभिनदुदितं शिशुना जननीनिर्भर्त्सनविवृद्धमन्युना" माघ० १५-८७। ಅನ್ನಪ್ರಾಶನಕ್ಕೆ ಮೊದಲಿನ ವಯಸ್ಸಿನ ವರೆವಿಗೂ ಶಿಶು. ಅನಂತರ ಬಾಲಕ. "प्राक् चूडाकरणाद्बाल: प्रागन्नप्राशनाच्छिशु:। कुमारस्तु स विज्ञेय: यावत् मौञ्जी न बन्धनम्"। 2. ಚತುಷ್ಪಾತ್ ಪ್ರಾಣಿಗಳ ಮರಿ. "प्रक्रीडितुं सिंहशिशुं बलात्कारेण कर्षति" शाकुं० ७-१४।

**शिशुक ಶಿಶುಕ** (पुं०) 1. ಮಗು. 2. ಕಡಲ ಹಂದಿ. 3. ಒಂದು ಜಾತಿಯ ಮೀನು. 4. ನೀರುಬೆಕ್ಕು. "शिशुक: शिशुमारे स्यात् बालकोलूपिनोरपि" मेदि०।

**शिशुता ಶಿಶುತಾ** (स्त्री०) ಶೈಶವ, ಬಾಲ್ಯ, ಬಾಲ್ಯಾವಸ್ಥೆ. शिशोर्भाव: "तल्" (५-१-११९)।

**शिशुत्व ಶಿಶುತ್ವ** (न०) ಶೈಶವ, ಬಾಲ್ಯ, ಬಾಲ್ಯಾವಸ್ಥೆ. शिशोर्भाव: "त्व:" (५-१-११९)।

**शिशुपाल ಶಿಶುಪಾಲ** (पुं०) ಚೇದಿದೇಶದ ದೊರೆ, ವಸುದೇವನ ತಂಗಿಯಾದ ಶ್ರುತಶ್ರವೆ ಮತ್ತು ದಮಘೋಷ ಇವರ ಮಗ. शिशून् पालयति—पाल (रक्षणे) + णिच् "अण्" (३-२-१)। "समरेषु रिपून् विनिघ्नता शिशुपालेन समेत्य संप्रति" माघ० १६-१४। [ಶಿಶುಪಾಲನು ಹಿರಣ್ಯಕಶಿಪುವಿನ ಅಂಶದಿಂದ ಹುಟ್ಟಿದನು. ಶಾಪಗ್ರಸ್ತರಾದ ಜಯ ವಿಜಯರು ಮೂರನೆಯ ಜನ್ಮದಲ್ಲಿ ಶಿಶುಪಾಲ ದಂತವಕ್ತ್ರರಾಗಿ ಹುಟ್ಟಿದರು. ಶಿಶುಪಾಲನು ಹುಟ್ಟಿದಾಗ ಇವನಿಗೆ ಮೂರು ಕಣ್ಣುಗಳೂ ನಾಲ್ಕು ತೋಳುಗಳೂ ಇದ್ದುವು. ಈ ಭಯಂಕರ ರೂಪವನ್ನು ನೋಡಿದ ತಾಯಿ ತಂದೆಗಳು ಬಹಳ ಹೆದರಿದರು. ಒಬ್ಬ ಮಹಾತ್ಮನ ಶರೀರಸ್ಪರ್ಶದಿಂದ ಈ ವಿಕಾರರೂಪವು

ಹೋಗುವುದೆಂದೂ ಅವನಿಂದಲೇ ಇವನಿಗೆ ಮೃತ್ಯುವೆಂದೂ ಆಕಾಶವಾಣಿಯಿಂದ ತಿಳಿಯಿತು. ಈತನು ಮಗುವಾಗಿದ್ದಾಗ ಎಲ್ಲರೂ ಬಂದು ಇವನನ್ನು ಮುದ್ದಾಡುತ್ತ ಹೋಗುತ್ತಿರಲು ಶ್ರೀಕೃಷ್ಣನೂ ಬಂದು ಇವನನ್ನು ಎತ್ತಿಕೊಳ್ಳಲು ಇವನ ಮೂರನೇ ಕಣ್ಣೂ ಮತ್ತು ಎರಡು ತೋಳುಗಳೂ ತಾವಾಗಿಯೇ ಇಂಗಿಹೋದವು. ಆಗ ಶಿಶುಪಾಲನ ತಾಯಿಗೆ ಇದರಿಂದ ಸಂತೋಷವುಂಟಾದರೂ ಶ್ರೀಕೃಷ್ಣನೇ ಇವನಿಗೆ ವೈರಿಯಾಗಬಹುದೆಂದು ಹೆದರಿ ಇವನು ಎಷ್ಟೇ ಅಪರಾಧ ಮಾಡಿದರೂ ಕ್ಷಮಿಸಬೇಕೆಂದು ಶ್ರೀಕೃಷ್ಣನನ್ನು ಕೇಳಿಕೊಳ್ಳಲು ಶ್ರೀಕೃಷ್ಣನು ಒಂದು ನೂರು ಅಪರಾಧಗಳನ್ನು ಕ್ಷಮಿಸುವುದಾಗಿ ಮಾತುಕೊಟ್ಟನು. ಧರ್ಮರಾಜನು ರಾಜಸೂಯಯಾಗ ಮಾಡಿದಾಗ ಭೀಷ್ಮನು ಶ್ರೀಕೃಷ್ಣನಿಗೆ ಅಗ್ರಮರ್ಯಾದೆಯನ್ನು ಮಾಡಿಸಲು ಇವನು ಭೀಷ್ಮನನ್ನೂ ಅಗ್ರಪೂಜೆಯನ್ನು ಸ್ವೀಕರಿಸಿದ ಶ್ರೀಕೃಷ್ಣನನ್ನೂ ಬಹಳ ನಿಂದಿಸುತ್ತಿರಲು ಸಭೆಯಲ್ಲಿದ್ದವರೆಲ್ಲರೂ ಶಿಶುಪಾಲನನ್ನು ಆಯುಧಗಳಿಂದ ಪ್ರಹರಿಸಲು ಹೋದಾಗ ಶ್ರೀಕೃಷ್ಣನು ಚಕ್ರಾಯುಧದಿಂದ ಶಿಶುಪಾಲನ ಶಿರಶ್ಛೇದ ಮಾಡಿದನು. "इत्थं सभाजितं वीक्ष्य सर्वे प्राञ्जलयो जनाः। नमो जयेति नेमुस्तं निपेतुः पुष्पवृष्टयः।। इत्थं निशम्य दमघोषसुतः स्वपीठात् उत्थाय कृष्णगुणवर्णनजातमन्युः। उत्क्षिप्य बाहुमिदमाह सदस्यमर्षी संश्रावयन् भगवते परुषाण्यभीतः।। यूयं पात्रविदां श्रेष्ठा मा मन्ध्वं बालभाषितम्। सदसस्पतयः सर्वे कृष्णो यत्संमतोऽर्हणे।। तपोविद्याव्रतधरान् ज्ञानविध्वस्तकल्मषान्। परमर्षीन् ब्रह्मनिष्ठान् लोकपालैश्च पूजितान्।। सदसस्पतीनतिक्रम्य गोपालः कुलपांसनः। यथा काकः पुरोडाशं सपर्यां कथमर्हति।। एवमादीनभद्राणि बभाषे नष्टमङ्गलः। नोवाच किञ्चिद् भगवान् यथा सिंहः शिवारुतम्।। निन्दां भगवतः शृण्वन् तत्परस्य जनस्य च। ततः पाण्डुसुताः क्रुद्धाः मत्स्यकैकयसृञ्जयाः।। उदायुधाः समुत्तस्थुः शिशुपालजिघांसवः। तावदुत्थाय भगवान् स्वान् निवार्य स्वयं रुषा। शिरः क्षुरान्तचक्रेण जहारापततो रिपोः" भाग० १०-७४।

**शिशुमार ಶಿಶುಮಾರ** (पुं०) ನೀರುಬೆಕ್ಕು.

**शिशुवाहक ಶಿಶುವಾಹಕ** (पुं०) 1. ಕಾಡುಮೇಕೆ. शिशुं वहति—वह (प्रापणे) "ण्वुल्" (३-१-१३३)। (वि०) 2. ಶಿಶುವನ್ನು ಎತ್ತಿಕೊಳ್ಳುವವನು.

**शिश्न ಶಿಶ್ನ** (पुं०) ಪುರುಷನ ಜನನೇಂದ್ರಿಯ. शशति—शश (प्लुतगतौ) "नक्" बाहु०। पृषो०।

**शिश्विदान ಶಿಶ್ವಿದಾನ** (वि०) ಅಕಾರ್ಯ ಮಾಡುವವನು, ನೀಚಕಾರ್ಯ ಮಾಡುವವನು. श्विता (वर्णे) + सन् "आनच्" (उ० २-९२)। सनो लुक् तस्य दः। "शिश्विदानः कृष्णकर्मा" अम०।

**शिष्ट ಶಿಷ್ಟ** (वि०) 1. ಉಳಿದಿರುವ, ಕಳೆದು ಉಳಿದಿರುವ. शिष (असर्वोपयोगे) "क्तः" (३-४-७२)। 2. ಉಪಯೋಗಿಸಿ ಉಳಿದಿರುವ. "यज्ञशिष्टामृतभुजो यान्ति ब्रह्म सनातनम्" गीता ४-३०। 3. ತಿಳಿದವನು, ಅಭಿಜ್ಞ, ಶಾಸ್ತ್ರಜ್ಞಾನವುಳ್ಳವನು, ನೀತಿಶಾಸ್ತ್ರವಿಶಾರದ. "समो हि शिष्टैराम्नातौ वत्स्यंन्तावामयः स च" माघ० २-१०। 4. ಸುಶಿಕ್ಷಿತ, ಚೆನ್ನಾಗಿ ಪಳಗಿದವನು, ತರಬೇತಿ ಪಡೆದವನು. शासु (अनुशिष्टौ) "क्तः" (३-४-७२)। 5. ಶಾಂತಿಗುಣವುಳ್ಳ, ಉತ್ತಮ ಗುಣವುಳ್ಳ, ಧರ್ಮಶೀಲ, ಯೋಗ್ಯನಾದ, ಶ್ರೇಷ್ಠನಾದ. "द्वेष्योऽपि संमतः शिष्टः तस्यार्तस्य यथौषधम्" रघु० १-२८। 6. ಆಜ್ಞೆ ಮಾಡಲ್ಪಟ್ಟವನು. "न पाणिपादचपलः न नेत्रचपलो मुनिः। न च वागङ्गचपलः इति शिष्टस्य लक्षणम्" भा०।

**शिष्टाचार ಶಿಷ್ಟಾಚಾರ** (पुं०) ಧರ್ಮಾತ್ಮರು ನಡೆಸಿದ ವ್ಯವಹಾರ, ಮಹಾತ್ಮರ ಅನುಷ್ಠಾನ, ಶ್ರೇಷ್ಠಜನರ ಕಾರ್ಯಾಚರಣೆ. शिष्टानामाचारः। "शिष्टैराचर्यते यस्मात् शिष्टाचारः स शाश्वतः"। "दानं सत्यं तपो लोभो विद्येज्या पूजनं दमः। अष्टौ तानि चरित्राणि शिष्टाचारस्य लक्षणम्"।।

**शिष्टि ಶಿಷ್ಟಿ** (स्त्री०) 1. ಆಜ್ಞೆ, ಅಪ್ಪಣೆ. शासु (अनुशिष्टौ) "क्तिन्" (३-३-९४)। "अन्यत्र पुत्रात् शिष्याद्वा शिष्टयर्थं ताडयेत्तु तौ" मनु० ४-१६४। 2. ಶಿಕ್ಷೆ, ದಂಡನೆ.

**शिष्य ಶಿಷ್ಯ** (पुं०) 1. ಕಲಿಯುವವನು, ಶಿಕ್ಷಣ ಪಡೆಯುವವನು. शासु (अनुशिष्टौ) "क्यप्" (३-१-१०९)। "शिष्याः कलाविधिषु भीमभुवो वयस्याः" नैष० २१-१२४। 2. ಉಪದೇಶ ಹೊಂದಲು ಯೋಗ್ಯನಾದವನು. "यच्छ्रेयः स्यान्निश्चितं ब्रूहि तन्मे शिष्यस्तेऽहं शाधि मां त्वां प्रपन्नम्" गीता २-७।

**शी ಶೀ** (स्त्री०) 1. ಶಯನ, ಮಲಗುವುದು, ನಿದ್ರಿಸುವುದು. शीङ् (स्वप्ने) "क्विप्" (३-२-१७८)। "शीश्च शयनमित्याहुः" मेदि०। 2. ನೆಮ್ಮದಿ, ಶಾಂತತೆ.

**ಸಂಕ್ರಾಂತಿಗಳ ವಿವರ:** ಮೇಷ ಮತ್ತು ತುಲಾರಾಶಿಗಳಲ್ಲಿ ಸಂಚರಿಸುವಾಗ ಅವುಗಳಿಗೆ ವಿಷುವತ್ ಎಂದೂ ಕರ್ಕಾಟಕ ಮತ್ತು ಮಕರರಾಶಿಗಳಲ್ಲಿ ಸಂಚರಿಸುವಾಗ ದಕ್ಷಿಣಾಯನ ಮತ್ತು ಉತ್ತರಾಯಣಗಳೆಂದೂ ಮಿಥುನ ಕನ್ಯಾ ಧನುಸ್ಸು ಮತ್ತು ಮೀನ ಸಂಕ್ರಾಂತಿಗಳಿಗೆ ಷಡಶೀತಿಯೆಂದೂ ವೃಷಭ ವೃಶ್ಚಿಕ ಸಿಂಹ ಮತ್ತು ಕುಂಭರಾಶಿಗಳಲ್ಲಿದ್ದಾಗ ಈ ಸಂಕ್ರಾಂತಿಗಳಿಗೆ ವಿಷ್ಣುಪದಿಯೆಂದೂ ಹೆಸರು. "मृगकर्कटसंक्रान्ती द्वे तूदग्दक्षिणायने। विषुवती तुलामेषे गोलमध्ये तथापराः॥ धनुर्मिथुनकन्यासु मीने च षडशीतयः। वृषवृश्चिकसिंहेषु कुम्भे विष्णुपदी स्मृता"॥ 2. ಇನ್ನೊಂದು ಕಡೆ ಸಂಬಂಧ ಹೊಂದುವುದು, ಇನ್ನೊಂದು ವಸ್ತುವಿನಲ್ಲಿ ಹೋಗಿ ಸೇರುವುದು. "शशंस यः पात्रगुणाद्गुणानां संक्रान्तिमाक्रान्तगुणातिरेकम्" ಮಾಘ० ४-१६। 3. ಇನ್ನೊಂದು ಕಡೆ ಸೇರಿಸುವುದು, ಇನ್ನೊಂದರಲ್ಲಿ ಸಂಬಂಧಪಡಿಸುವುದು. सम् + क्रमु + णिच् "क्तिन्" (३-३-९४)। "शिष्टा क्रिया कस्यचिदात्मसंस्था सङ्क्रान्तिरन्यस्य विशेषयुक्ता" ಮಾಲ० १-१६।

**सङ्क्राम ಸಂಕ್ರಾಮ** (पुं०) 1. ದುರ್ಗಸಂಚರ, ಹೊಳೆ ಕೋಟೆ ಕಂದಕ ಮೊದಲಾದುವನ್ನು ದಾಟಲು ಸಾಧನವಾದ ಸೇತುವೆ ಕಟ್ಟೆ ಮೊದಲಾದುವು. सम् + क्रमु (पादविक्षेपे) "घञ्" (३-३-१२१)। 2. ಸಂಚರಿಸುವುದು. भावे "घञ्" (३-३-१८)। 3. ಸ್ವಾಧೀನಪಡಿಸಿಕೊಳ್ಳುವುದು.

**सङ्क्रामत् ಸಂಕ್ರಾಮತ್** (वि०) 1. ಸಂಚರಿಸುತ್ತಿರುವ. 2. ದಾಟುತ್ತಿರುವ. सम्+क्रमु (पादविक्षेपे) "शतृ" (३-२-१२४)। 3. ಸೇರಿಕೊಳ್ಳುತ್ತಿರುವ, ಸಂಬಂಧ ಹೊಂದುತ್ತಿರುವ. 4. ಪ್ರತಿಬಿಂಬಿಸುತ್ತಿರುವ, ಪ್ರತಿಫಲಿಸುತ್ತಿರುವ. स्त्रियां "ङीप्" (४-१-६)। **-क्रामन्ती -ಕ್ರಾಮಂತೀ.**

**सङ्क्रमित ಸಂಕ್ರಮಿತ** (वि०) ಸೇರಿಸಲ್ಪಟ್ಟ, ಸಂಬಂಧ ಕಲ್ಪಿಸಲ್ಪಟ್ಟ. सम्+क्रमु (पादविक्षेपे)+णिच् "क्तः" (३-२-१०२)।

**सङ्क्रीडत् ಸಂಕ್ರೀಡತ್** (वि०) 1. ಕಲೆತು ಆಡುತ್ತಿರುವ. सम्+क्रीडृ (विहारे) "शतृ" (३-२-१२४)। 2. ಶಬ್ದ ಮಾಡುತ್ತಿರುವ, ಸದ್ದುಮಾಡುತ್ತಿರುವ. स्त्रियां "ङीप्" (४-१-६)। **-क्रीडन्ती -ಕ್ರೀಡಂತೀ.** "सङ्क्रीडन्ती तेजिताश्वस्य रागादुद्यम्या रामग्रकायोत्थितस्य" ಮಾಘ० १८-७।

**सङ्क्रीडन ಸಂಕ್ರೀಡನ** (न०) ಒಟ್ಟಿಗೆ ಕಲೆತು ಆಟವಾಡುವುದು. सम्+क्रीडृ (विहारे) "ल्युट्" (३-३-११५)।

**सङ्क्रीडित ಸಂಕ್ರೀಡಿತ** (न०) ರಥದ ಶಬ್ದ, ರಥ ಓಡುವಾಗ ಆಗುವ ರಟರಟ ಶಬ್ದ. सम्यक् क्रीडितम्। "रथाङ्गसङ्क्रीडितमश्वहेषा बृहन्ति मत्तद्विपबृंहितानि" ಕಿರಾ० १६-८।

**सङ्क्लेद ಸಂಕ್ಲೇದ** (पुं०) ತೇವ, ಒದ್ದೆ, ಆರ್ದ್ರವಾಗಿರುವಿಕೆ. सम्+क्लिदू (आर्द्रीभावे) "घञ्" (३-३-१८)।

**सङ्क्षय ಸಂಕ್ಷಯ** (पुं०) ಪ್ರಳಯ, ಜಗತ್ತಿನ ನಾಶ. सम् + क्षि (क्षये) "अच्" (३-३-५६)।

**सङ्क्षिपत् ಸಂಕ್ಷಿಪತ್** (वि०) 1. ಸಂಗ್ರಹಿಸುತ್ತಿರುವ, ಸಂಕ್ಷೇಪಮಾಡುತ್ತಿರುವ, ಕಡಮೆಮಾಡುತ್ತಿರುವ. सम्+क्षिप (प्रेरणे) "शतृ" (३-२-१२४)। 2. ಎಸೆಯುತ್ತಿರುವ.

**सङ्क्षिप्त ಸಂಕ್ಷಿಪ್ತ** (वि०) 1. ಸಂಗ್ರಹಿಸಲ್ಪಟ್ಟ, ಸಂಕ್ಷೇಪವಾಗಿ ಹೇಳಲ್ಪಟ್ಟ. सम् + क्षिप (प्रेरणे) "क्तः" (३-२-१०२)। "सङ्क्षिप्तस्याप्यतोऽस्यैव वाक्यस्यार्थगरीयसः। सुविस्तरतरा वाचो भाष्यभूता भवन्तु मे" ಮಾಘ० २-२४। 2. ಕೂಡಿಹಾಕಲ್ಪಟ್ಟ, ರಾಶಿಹಾಕಲ್ಪಟ್ಟ. "आतपात्ययसङ्क्षिप्तनीवारासु निषादिभिः" ರಘು० १-५२। 3. ಎಸೆಯಲ್ಪಟ್ಟ. सम् + क्षिप "क्तः"। 4. ಕಡಮೆ ಮಾಡಲ್ಪಟ್ಟ, ಸಂಕೋಚ ಮಾಡಲ್ಪಟ್ಟ, ಕುಗ್ಗಿಸಲ್ಪಟ್ಟ.

**सङ्क्षिप्ति ಸಂಕ್ಷಿಪ್ತಿ** (स्त्री०) 1. ಕಡಮೆ ಮಾಡುವುದು, ಕುಗ್ಗಿಸುವುದು. सम्+क्षिप (प्रेरणे) "क्तिन्" (३-३-९४)। 2. ಎಸೆಯುವುದು, ಪ್ರಯೋಗಿಸುವುದು. 3. ಸಂಗ್ರಹ ಮಾಡುವುದು, ಸಂಕ್ಷೇಪಮಾಡುವುದು. 4. ಕೂಡಿಹಾಕುವುದು, ರಾಶಿಹಾಕುವುದು.

**सङ्क्षेप ಸಂಕ್ಷೇಪ** (पुं०) 1. ಕಡಮೆಮಾಡುವುದು, ಸಂಗ್ರಹ ಮಾಡುವುದು. सम्+क्षिप (प्रेरणे) "घञ्" (३-३-१८)। 2. ಸಂಗ್ರಹವಾದ ವಿವರಣೆ, ಸಂಗ್ರಹವಾಗಿ ಪ್ರತಿಪಾದಿಸುವುದು. "सङ्क्षेपात् कथ्यते धर्मो जनाः किं विस्तरेण वः" ಪಞ್ಚತಂ० ३-१०१। 3. ಎಸೆಯುವುದು, ಬಿಸಾಡುವುದು. 4. ಕೂಡಿಹಾಕುವುದು, ರಾಶಿಹಾಕುವುದು. "ल्युट्" (३-३-११५)। **-क्षेपणम् -ಕ್ಷೇಪಣಮ್.**

**सङ्क्षुभित ಸಂಕ್ಷುಭಿತ** (वि०) 1. ಕ್ಷೋಭೆಗೊಂಡ, ರೇಗಿದ. सम् + क्षुभ (संचलने) "क्तः" (३-४-७२)। 2. ಚಲಿಸಿದ, ಅಲುಗಾಡಿದ. 3. ಚಿತ್ತವಿಕಾರ ಹೊಂದಿದ, ಕಳವಳಗೊಂಡ. 4. ಚೆನ್ನಾಗಿ ಕಡೆಯಲ್ಪಟ್ಟ.

**सङ्क्षोभ ಸಂಕ್ಷೋಭ** (ಪುಂ) 1. ಚಲನೆ, ಅಲುಗಾಡುವುದು. 2. ಚಿತ್ತವಿಕಾರ, ಮನಸ್ಸು ಕೆರಳುವುದು. सम्+क्षुभ (सञ्चलने) "घञ्" (३-३-१८)। "गाम्भीर्यं दधदपि रत्नुमङ्गनाभिः सङ्क्षोभं जघनविघट्टनेन नीतः" माघ० ८-२६। 3. ಔದ್ಧತ್ಯ, ಗರ್ವ, ದರ್ಪ. "एतस्मिन्नधिकपयःश्रियं वहन्त्यः सङ्क्षोभं पवनभुवा जवेन नीताः" माघ० ४-५९। 4. ಪಲ್ಲಟಗೊಳ್ಳುವುದು, ತಲೆಕೆಳಗಾಗುವುದು. "सङ्क्षोभं पयसि मुहुर्महेभकुम्भश्रीभाजा कुचयुगलेन नीयमाना" माघ० ८-१८।

**सङ्क्ष्णुत ಸಂಕ್ಷ್ಣುತ** (ವಿ०) ಉತ್ತೇಜನಗೊಂಡ, ಹುರಿದುಂಬಿದ, ಪ್ರೋತ್ಸಾಹ ಹೊಂದಿದ. सम्+क्ष्णु (तेजने) "क्तः" (३-४-७२)।

**सङ्क्ष्णुवान ಸಂಕ್ಷ್ಣುವಾನ** (ವಿ०) ಉತ್ತೇಜನಗೊಳಿಸುತ್ತಿರುವ, ಹುರಿದುಂಬಿಸುತ್ತಿರುವ. सम् + क्ष्णु (तेजने) "शानच्" (३-२-१२४)। आत्मनेपदम् (१-३-६५)। "सङ्क्ष्णुवान इवोत्कण्ठामुपाभुङ्क्त सुरामलम्" भट्टि० ८-४०।

**सङ्ख्य ಸಂಖ್ಯ** (ನಂ) ಸಮರ, ಯುದ್ಧ, ಕಾಳಗ. सम्यक् ख्यायतेऽस्मिन्—सम्+ख्या (प्रकथने) "कः" बाहु०। "रक्ताम्भोभिः तत्क्षणादेव तस्मिन् सङ्ख्येऽसङ्ख्याः प्रावहन् द्वीपवत्यः" माघ० १८-७०।

**सङ्ख्या ಸಂಖ್ಯಾ** (स्त्री०) 1. ಬುದ್ಧಿ. संख्यायतेऽनया—सम्+ख्या (प्रकथने) (३-३-१०६)। 2. ಅಂಕ, ಅಂಕಿ. ಒಂದು ಎರಡು ಮುಂತಾದ ಅಂಕಿ. 3. ಪ್ರಮಾಣಗಳಿಂದ ಚರ್ಚಿಸುವುದು, ಪ್ರಮಾಣವಚನಗಳಿಂದ ವಿಚಾರಮಾಡುವುದು. "चर्चा सङ्ख्या विचारणा" अम०। 4. ಎಣಿಕೆ, ಎಣಿಸುವುದು. "प्रत्येकनिक्षिप्तपदः सशब्दं संख्यामिवैषां भ्रमरश्चकार" रघु० १६-४७। "सङ्ख्यं समिति सङ्ख्या स्यादेकाद्यादिविचारयोः" मेदि०।

**सङ्ख्यात ಸಂಖ್ಯಾತ** (ವಿ०) 1. ಎಣಿಸಲ್ಪಟ್ಟ. सङ्ख्यायते स्म — सम् + ख्या (प्रकथने) "क्तः" (३-२-१०२)। 2. ಎಣಿಸಿ ಕಂಡುಹಿಡಿಯಲ್ಪಟ್ಟ ಮೊತ್ತ. "रजोभिः समसङ्ख्याताः पार्थिवैरिह जन्तवः। तेषां ये केचनेहन्ते श्रेयो वै मनुजादयः" भाग० ६-१४-३।

**सङ्ख्यान ಸಂಖ್ಯಾನ** (ನಂ) 1. ಸಂಖ್ಯೆ, ಅಂಕಿ. सम्+ख्या (प्रकथने) "ल्युट्" (३-३-११५)। "मिथ्यावादी च सङ्ख्याने दाप्योऽष्टगुणमत्ययम्" मनु० ८-४००। 2. ಪ್ರಕಾಶ.

**सङ्ख्यावत् ಸಂಖ್ಯಾವತ್** (ಪುಂ) 1. ಪಂಡಿತ, ವಿದ್ಯಾವಂತ. सङ्ख्या बुद्धिः विचारणा वास्त्यस्य "मतुप्" (५-२-९४)। (ವಿ०) 2. ಸಂಖ್ಯೆಯಿಂದ ಕೂಡಿದ.

**सङ्ख्यावाचक ಸಂಖ್ಯಾವಾಚಕ** (ವಿ०) ಸಂಖ್ಯೆಯನ್ನು ಹೇಳುವ (ಶಬ್ದ). सङ्ख्यां वक्ति बोधयति अभिधावृत्त्या —वच (परिभाषणे) "ण्वुल्" (३-१-१३३)। "साक्षात् सङ्केतितं योऽर्थमभिधत्ते स वाचकः" काव्यप्र०। एकः द्वौ त्रयः चत्वारः पञ्च षट् ಇತ್ಯಾದಿ.

**सङ्ख्येय ಸಂಖ್ಯೇಯ** (ವಿ०) ಸಂಖ್ಯೆಗೆ ಯೋಗ್ಯವಾದ, ಎಣಿಕೆಗೆ ಅರ್ಹವಾದ. सङ्ख्यातुं योग्यम् — सम् + ख्या (प्रकथने) "यत्" (३-१-९७)। आतः ईत् (६-४-६५)। ಒಂದರಿಂದ ಹತ್ತರವರೆಗಿನ (1–10) ಸಂಖ್ಯೆಗಳು ಸಂಖ್ಯೇಯವಾದಾಗ ತ್ರಿಲಿಂಗವಾಗುವುವು. एकः पटः एकं वस्त्रम् एका शाटी दश स्त्रियः दश पटाः दश वस्त्राणि। "सङ्ख्याः सङ्ख्येये ह्यादश त्रिषु" अम०। विंशति ಮೊದಲುಗೊಂಡ ಎಲ್ಲಾ ಸಂಖ್ಯೆಗಳೂ ಏಕವಚನದಲ್ಲೇ ಇರುವುವು. विंशतिः पटाः विंशतिः पटानाम् शतं गावः शतं गवाम् ಇತ್ಯಾದಿ. विंशति ಮೊದಲಾದುವು ಸಂಖ್ಯೆಯನ್ನು ಮಾತ್ರ ಹೇಳುವಾಗ ದ್ವಿವಚನ ಬಹುವಚನಗಳಾಗಿಯೂ ಆಗುವುವು. द्वे विंशती तिस्रो विंशतयः गवां विंशती गवां विंशतयः ಇತ್ಯಾದಿ. "विंशत्याद्याः सदैकत्वे सर्वाः सङ्ख्येयसङ्ख्ययोः। सङ्ख्यार्थे द्विबहुत्वे स्तः" अम०। विंशति ಮೊದಲುಗೊಂಡು नवति ವರೆಗಿನ (20–90) ಸಂಖ್ಯೆಗಳು ಸ್ತ್ರೀಲಿಂಗವಾಗಿರುವುವು. "तासु चानवतेः स्त्रियः" अम०।

**सङ्ग ಸಂಗ** (ಪುಂ) 1. ಸಂಬಂಧ, ಸ್ಪರ್ಶ. षञ्ज (सङ्गे) "घञ्" (३-३-१८)। "दिलष्यद्भिरन्योन्यमुखाग्रसङ्गस्खलत्खलीनं हरिभिर्विलोलैः" माघ० ३-६६। 2. ಸಹವಾಸ, ಒಟ್ಟಿಗೆ ಕಲೆತಿರುವುದು, ಸಂಗಡ ವಾಸಮಾಡುವುದು. "सङ्गः सर्वात्मना त्याज्यः स चेत्यक्तुं न शक्यते। स सद्भिः सह कर्तव्यः सन्तः सर्वस्य भेषजम्"। 3. ಆಸಕ್ತಿ, ಪ್ರೀತಿ. "ध्यायतो विषयान् पुंसस्सङ्गस्तेषूपजायते। सङ्गात् सञ्जायते कामः कामात्क्रोधोऽभिजायते" गीता २-६२। 4. ಒಟ್ಟಿಗೆ ಸೇರುವುದು, ಪರಸ್ಪರ ಸಂಬಂಧ ಹೊಂದುವುದು, ಒಬ್ಬರನ್ನೊಬ್ಬರು ಸಂಧಿಸುವುದು. 5. ಸಂಪರ್ಕ, ವ್ಯವಹಾರರೂಪ ಸಂಬಂಧ. "वर्जयन्त्या जनैः सङ्गमेकान्ततः तर्कयन्त्या सुखं सङ्गमे कान्ततः" माघ० ४-४२। "सङ्गेन वो गर्भतपस्विनः शिशुःवराक एषोऽन्तमवाप्स्यति ध्रुवम्"

कुमा० १५-४२। 6. ಸಂಸರ್ಗ. "दौर्मन्त्र्यात् नृपतिर्विनश्यति यतिः सङ्गात् सुतो लालनात्" भर्तृ० १-३३। ಮನುಷ್ಯನಿಗೆ ಸಂತ್ಸಂಗದಿಂದ ಸತ್ಫಲ, ದುಃಸಂಗದಿಂದ ದುಷ್ಫಲ. "सत्सङ्गः केशवे भक्तिः गङ्गाम्भसि निमज्जनम्। असारे खलु संसारे त्रीणि साराणि भावयेत्"। ದುರ್ಜನರ ಸಂಬಂಧದಿಂದ ಮನುಷ್ಯನ ಸದ್ಗುಣಗಳೆಲ್ಲವೂ ತಿರೋಹಿತವಾಗುವುವು. "अणुरप्यसतां सङ्गः सद्गुणं हन्ति विस्तृतम्"।।

**सङ्गत ಸಂಗತ** (ನ०) 1. ಸಮಂಜಸವಾದ ಮಾತು, ಯುಕ್ತಿಯಿಂದ ಕೂಡಿದ ಮಾತು. सम् + गम्लृ (गतौ) "क्तः" (३-४-७२)। "हला, शृणुतमिदानीं सङ्गतार्थं न वेति" शाकु० ३। 2. ಸೌಹಾರ್ದ, ಸ್ನೇಹ. "यतः सतां सन्नतगात्रि सङ्गतं मनीषिभिः साप्तपदीनमुच्यते" कुमा० ५-३९। (वि०) 3. ಸೇರಿಕೊಂಡಿರುವ, ಕೂಡಿಕೊಂಡಿರುವ. "सङ्गताभिरुचितैश्चलितापि प्रागमुच्यत चिरेण सखीव" माघ० १०-८१। 4. ಪರಸ್ಪರ ಒಟ್ಟುಗೂಡಿದ, ಜೊತೆಗೂಡಿದ. 5. ಸುರತಕ್ಕಾಗಿ ಒಟ್ಟುಗೂಡಿದ. "अतः परीक्ष्य कर्तव्यं विशेषात्सङ्गतं रहः" शाकु० ५-२४।

**सङ्गति ಸಂಗತಿ** (स्त्री०) 1. ಸಂಬಂಧ. सम् + गम्लृ (गतौ) "क्तिन्" (३-३-९४)। "मनो हि जन्मान्तरसङ्गतिज्ञम्" रघु० ७-१५। 2. ಸಹವಾಸ, ಜೊತೆಯಲ್ಲಿರುವುದು. "वाञ्छा सज्जनसङ्गतौ परगुणे प्रीतिर्गुरौ नम्रता विद्यायां व्यसनं स्वयोषिति रतिर्लोकापवादाद्भयम्" भर्तृ० १-५१। 3. ಸುರತ, ಸ್ತ್ರೀಪುರುಷರ ಸಂಗಮ. 4. ಪರಸ್ಪರ ಸಮಾಗಮ, ಪರಸ್ಪರ ಸಂಧಿಸುವುದು. "क्षणमिह सज्जनसङ्गतिरेका भवति भवार्णवतरणे नौका"। 5. ಉಪಾಯ, ಯುಕ್ತಿ. "त्वमद्य भव नो राजा राजपुत्र महायशः। सङ्गत्या नापराध्नोति राज्यमेतदनायकम्" रामा०। 6. ಏಕವಾಕ್ಯಗತವಾದ ಅನೇಕ ವಿಷಯಗಳಲ್ಲಿ ಮುಂದು ಮುಂದಿನ ವಿಷಯಗಳ ಜಿಜ್ಞಾಸೆ. ಈ ಸಂಗತಿಯು (1) प्रसङ्गः (2) उपोद्घातः (3) हेतुत्वम् (4) अवसरः (5) निर्वाहकत्वम् ಮತ್ತು (6) कार्यैक्यम् ಎಂದು ಆರು ವಿಧ. एकवाक्यतापन्नत्वे सति अनन्तराभिधानप्रयोजकजिज्ञासाजनकज्ञानविषयः। यथा प्रत्यक्षनिरूपणकार्यत्वम् अनुमाननिरूपणे सङ्गतिः। 7. ಜ್ಞಾನ, ತಿಳುವಳಿಕೆ. 8. ಸಮಂಜಸವಾಗಿರುವಿಕೆ, ಯುಕ್ತಯುಕ್ತವಾಗಿರುವಿಕೆ.

**सङ्गम ಸಂಗಮ** (पुं०) 1. ಸಂಧಿಸುವುದು, ಸೇರುವುದು, ಭೇಟಿಯಾಗುವುದು. सम् + गम्लृ (गतौ) "अप्" (३-३-५८)। "भूमिदेवनरदेवसङ्गमे पूर्वदेवरिपुरर्हणां हरिः" माघ० १४-५८। 2. ಸ್ತ್ರೀಪುರುಷರು ಒಟ್ಟುಗೂಡುವಿಕೆ, ಸ್ತ್ರೀಪುರುಷರು ಒಟ್ಟಿಗೆ ಸೇರುವಿಕೆ. "वर्जयन्त्या जनैः सङ्गमेकान्ततस्तर्कयन्त्या सुखं सङ्गमे कान्ततः" माघ० ४-४२। "अयं स ते तिष्ठति सङ्गमोत्सुकः" शाकु० ३-१४। 3. ನದಿ ಮೊದಲಾದುವು ಒಂದಕ್ಕೊಂದು ಸೇರುವುದು. ಗಂಗಾ ಯಮುನಾ ಸರಸ್ವತೀ ಸಂಗಮ, ತ್ರಿವೇಣೀ ಸಂಗಮ ಇತ್ಯಾದಿ.

**सङ्गर ಸಂಗರ** (पुं०) 1. ಯುದ್ಧ, ಕಾಳಗ. संगृणन्ति शब्दायन्ते वीरा अत्र — सम् + गृ (शब्दे) "अप्" (३-३-५७)। "अतरत् स्वभुजौजसा मुहुर्महतः सङ्गरसागरानसौ" माघ० १६-६७। 2. ವಾಗ್ದಾನ, ಭಾಷೆ, ಭರವಸೆ, ಪ್ರತಿಜ್ಞೆ. "तथेति तस्याऽवितथं प्रतीतः प्रत्यग्रहीत्सङ्गरमग्रजन्मा" रघु० ५-२६। 3. ಅಂಗೀಕಾರ, ಒಪ್ಪಿಗೆ, ಸಮ್ಮತಿ. 4. ವ್ಯಾಪಾರ, ವಾಣಿಜ್ಯ. 5. ಜ್ಞಾನ, ತಿಳುವಳಿಕೆ. 6. ಆಪತ್ತು. 7. ಕ್ರಿಯಾಕಾರ. 8. ವಿಷ. (ನ०) 9. ಶಮೀಫಲ. "सङ्गरो युधि चापदि। क्रियाकारे विषे चाङ्गीकारे क्लीबं शमीफले" मेदि०।

**सङ्गव ಸಂಗವ** (पुं०) ಹಗಲಿನ ಐದನೆಯ ಒಂದು ಭಾಗ, ಹಗಲಿನ ಐದು ಭಾಗಗಳಲ್ಲಿ ಎರಡನೆಯ ಭಾಗ, ಪ್ರಾತಃಕಾಲದ ನಂತರ ಮೂರು ಮುಹೂರ್ತಗಳ ಕಾಲ. सङ्गता गावो दोहनार्थं यत्र। "प्रातःकालो मुहूर्तान् त्रीन् सङ्गवस्तावदेव हि। मध्याह्नः त्रिमुहूर्तः स्यात् अपराह्णस्ततः परम्। सायाह्नस्त्रिमुहूर्तः स्यात् श्राद्धं तत्र न कारयेत्"।

**सङ्गिन् ಸಂಗಿನ್** (वि०) 1. ಸಂಬಂಧ ಹೊಂದಿರುವ. सङ्गोऽस्यास्ति—सङ्ग "इनिः" (५-२-११५)। "संपूर्णलब्धललनालपनोपमानमुत्सङ्गसङ्गिहरिणस्य मृगाङ्कमूर्तेः" माघ० ४-२२। 2. ಆಸಕ್ತಿಯುಳ್ಳ, ಪ್ರೀತಿಯುಳ್ಳ. "नवपयःकणकोमलमालतीकुसुमसन्ततिसन्ततसङ्गिभिः" माघ० ६-३६। 3. ಕಾಮಾಸಕ್ತಿಯುಳ್ಳ. 4. ಅನುಸ್ಯೂತವಾದ, ಅವಿಚ್ಛಿನ್ನವಾದ, ಎಡೆಬಿಡದ. स्त्रियां "ङीप्" (४-१-५)। —नी —ಸೀ०. "विधूनितं भ्रान्तिमियाय सङ्गिनी महानिलेनेव निदाघजं रजः" किरा० १४-५९।

**सङ्गीत ಸಂಗೀತ** (ನ०) 1. ಅನೇಕ ಮಂದಿ ಒಟ್ಟಿಗೆ ಹಾಡುವಂತೆ ಮಾಡಿರುವ ಗೀತ, ಗಾನ, ಹಾಡು. सम् + गै (शब्दे) "क्तः" (३-३-११३)। "मत्तमधुकरमुख-

झङ्कारमिलितकोकिलालापसङ्गीतसुखावहं मकरन्दोद्यानम्" रत्ना० १। 2. ತೌರ್ಯತ್ರಿಕ, ಪ್ರೇಕ್ಷಕರ ಸಂತೋಷಾರ್ಥವಾಗಿ ಏರ್ಪಡುವ ನೃತ್ಯ ಗೀತ ಮತ್ತು ವಾದ್ಯ. "गीतवाद्यनृत्यत्रयं नाट्यं तौर्यत्रिकं च तत्। सङ्गीतं प्रेक्षणार्थेऽस्मिन् शास्त्रोक्ते नाट्यधर्मिका"। "आन्ध्रेश्वरपुरन्ध्रीणां सङ्गीतैः प्रत्यनन्दत" याद० २२-१६०। 3. ನೃತ್ಯ ಗೀತ ಮತ್ತು ವಾದ್ಯಗಳ ಶಾಸ್ತ್ರ.

**सङ्गीति ಸಂಗೀತಿ** (स्त्री०) 1. ಹಾಡುವುದು, ಗಾನಮಾಡುವುದು. सम् + गै (शब्दे) "क्तिन्" (३-३-९५)। 2. ಸಂಗೀತ.

**सङ्गीर्ण ಸಂಗೀರ್ಣ** (वि०) ಅಂಗೀಕರಿಸಲ್ಪಟ್ಟ, ಒಪ್ಪಲ್ಪಟ್ಟ, ಸಮ್ಮತಿಸಲ್ಪಟ್ಟ. सम्+गॄ (निगरणे) "क्तः" (३-२-१०२)।

**सङ्गुप्त ಸಂಗುಪ್ತ** (वि०) 1. ಚೆನ್ನಾಗಿ ರಕ್ಷಿಸಲ್ಪಟ್ಟ. सम्+गुपू (रक्षणे) "क्तः" (३-२-१०२)। 2. ರಹಸ್ಯವಾಗಿಡಲ್ಪಟ್ಟ. गुप (गोपने) "क्तः"।

**सङ्गूढ ಸಂಗೂಢ** (वि०) 1. ಇನ್ನೊಂದು ಅಂಕಿಯೊಡನೆ ಸೇರಿಸಿ ಕೂಡಲ್ಪಟ್ಟ (ಅಂಕಿ). 2. ರಾಶಿಹಾಕಲ್ಪಟ್ಟ (ಧಾನ್ಯ). सम्+गुहू (संवरणे) "क्तः" (३-२-१०२)। "सङ्गूढः स्यात्सङ्कलितः" अम०।

**सङ्गोपन ಸಂಗೋಪನ** (न०) 1. ಚೆನ್ನಾಗಿ ರಕ್ಷಿಸುವುದು. 2. ರಹಸ್ಯವಾಗಿಡುವುದು. सम् + गुपू (रक्षणे), गुप (गोपने) वा "ल्युट्" (३-३-११५)।

**सङ्गोपनीय ಸಂಗೋಪನೀಯ** (वि०) 1. ಚೆನ್ನಾಗಿ ರಕ್ಷಿಸಲ್ಪಡುವ. 2. ಚೆನ್ನಾಗಿ ರಕ್ಷಿಸಬೇಕಾದ. 3. ರಕ್ಷಿಸಲು ಅರ್ಹವಾದ. सम् + गुपू (रक्षणे) "अनीयर्" (३-१-९६)। 4. ರಹಸ್ಯವಾಗಿಡಲ್ಪಡುವ. 5. ರಹಸ್ಯವಾಗಿಡಬೇಕಾದ. 6. ರಹಸ್ಯವಾಗಿಡಬಹುದಾದ.

**सङ्ग्रह ಸಂಗ್ರಹ** (पुं०) 1. ಕೂಡಿಡುವುದು, ಸಂಗ್ರಹಣ, ಶೇಖರಿಸುವುದು. सम् + ग्रह (उपादाने) "अप्" (३-३-५८)। "कोशेनाश्रयणीयत्वमिति तस्यार्थसङ्ग्रहः। अम्बुगर्भो हि जीमूतश्चातकैरभिनन्द्यते" रघु० १७-६०। 2. ಸಂಕ್ಷೇಪ, ವಿಸ್ತರವಾಗಿ ಉಕ್ತವಾದ ವಿಷಯಗಳನ್ನು ಕಡಮೆಮಾಡಿ ಹೇಳುವ ಗ್ರಂಥ. सङ्क्षेपेण गृह्यन्ते अर्थाः बुध्यन्तेऽनेन — सम् + ग्रह "अप्"। "विस्तरेणोपदिष्टानामर्थानां सूत्रभाष्ययोः। निबन्धो यः समासेन सङ्ग्रहं तं विदुर्बुधाः"। अर्थसङ्ग्रहः तर्कसङ्ग्रहः ಇತ್ಯಾದಿ. 3. ಕೂಡಿಡುವುದು, ದಾಸ್ತಾನು ಮಾಡುವುದು. 4. ಆದರಿಸುವುದು, ಸತ್ಕರಿಸುವುದು. "निग्रहेण च पापानां साधूनां सङ्ग्रहेण च। द्विजातय इवेज्याभिः पूयन्ते सततं नृपाः" मनु० ८-३११। 5. ಅನೇಕ ಗ್ರಂಥಗಳಲ್ಲಿ ಉಕ್ತವಾದ ವಿಷಯಗಳನ್ನು ಒಂದು ಕಡೆ ಸಂಕ್ಷೇಪವಾಗಿ ಹೇಳುವ ಗ್ರಂಥ. स्मृतिसङ्ग्रहः द्रव्यसङ्ग्रहः ಇತ್ಯಾದಿ. 6. ಸಾರಾಂಶ, ಸಂಕ್ಷಿಪ್ತ ವಿವರಣೆ. "यदिच्छन्तो ब्रह्मचर्यं चरन्ति तत्ते पदं सङ्ग्रहेण प्रवक्ष्ये" गीता ८-११। 7. ರಕ್ಷಣೆ, ಪಾಲನೆ. "राष्ट्रस्य सङ्ग्रहे नित्यं विधानमिदमाचरेत्। सुसङ्ग्रहीतराष्ट्रो हि पार्थिवः सुखमेधते" मनु० ७-११३। 8. ಒಟ್ಟು, ಮೊತ್ತ. "करणं कर्म कर्तेति त्रिविधः कर्मसङ्ग्रहः" गीता १८-१८। 9. ರಾಶಿಗೂಡುವುದು, ಮುದ್ದೆಯಾಗುವುದು. 10. ಬಿಗಿಮುಷ್ಟಿ, ದೃಢಮುಷ್ಟಿ. 11. ಅಂಗೀಕಾರ, ಸ್ವೀಕಾರ. 12. ಉಚ್ಛ್ರಾಯ, ಔನ್ನತ್ಯ, ಎತ್ತರ. 13. ಮಹಾಪ್ರಯತ್ನ. "स्वीकारोच्छ्रायसङ्क्षेपमहोद्योगेषु सङ्ग्रहः" नानार्थर०। 14. ಉಲ್ಲೇಖ. 15. ವಶಪಡಿಸಿಕೊಳ್ಳುವುದು. 16. ಸೇರಿಸಿಕೊಳ್ಳುವುದು, ತನ್ನದನ್ನಾಗಿ ಮಾಡಿಕೊಳ್ಳುವುದು. "तैः कृतप्रकृतिमुख्यसङ्ग्रहैराशु तस्य सहधर्मचारिणी" रघु० १९-५५।

**सङ्ग्रहण ಸಂಗ್ರಹಣ** (न०) 1. ಸ್ವಾಧೀನಪಡಿಸಿಕೊಳ್ಳುವುದು. 2. ಶೇಖರಿಸಿಡುವುದು, ಕೂಡಿಡುವುದು. 3. ಚಿನ್ನ ಬೆಳ್ಳಿ ಮೊದಲಾದುವುಗಳಲ್ಲಿ ಹುದುಗಿಸುವುದು, –ಕೆತ್ತುವುದು. सम् + ग्रह (उपादाने) भावे "ल्युट्" (३-३-११५)। "कनकभूषणसङ्ग्रहणोचितो यदि मणिस्त्रपुणि प्रतिबध्यते। न स विरौति न चापि न शोभते भवति योजयितुर्वचनीयता" पञ्चतं० १-८१। 4. ಸ್ತ್ರೀಸಂಗಮ, ಸಂಭೋಗ, ವ್ಯಭಿಚಾರ. "सीमाविवाद धर्मश्च पारुष्ये दण्डवाचिके। स्तेयं च साहसं चैव स्त्रीसङ्ग्रहणमेव च" मनु० ८-६। 5. ಅಂಗೀಕಾರ, ಸ್ವೀಕಾರ.

**सङ्ग्रहणी ಸಂಗ್ರಹಣೀ** (स्त्री०) ಗ್ರಹಣೀ ರೋಗ. संश्रिता ग्रहणी।

**सङ्ग्रहीतृ ಸಂಗ್ರಹೀತೃ** (वि०) ಶೇಖರಿಸುವವನು, ಕೂಡಿಡುವವನು.

**सङ्ग्राम ಸಂಗ್ರಾಮ** (पुं०) ಯುದ್ಧ, ಕದನ, ಕಾಳಗ. सङ्ग्राम (युद्धे) + णिच् "अच्" (३-३-५६)। "सङ्ग्राममृगयास्थायी जग्राह च जघान च" याद० २२-१३०। "सङ्ग्रामे तानधिष्ठास्यन् निषद्य पुरतोरणम्" भट्टि० ९-७२।

**सङ्ग्राह ಸಂಗ್ರಾಹ** (ಪುಂ०) 1. ಮುಷ್ಟಿಬಂಧ, ಗಟ್ಟಿಯಾಗಿ ಹಿಡಿದುಕೊಳ್ಳುವುದು. सम् + ग्रह (उपादाने) "घञ्" (३-३-३६)। "मुष्टिबन्धस्तु सङ्ग्राहः" अम०। 2. ಗುರಾಣಿಯ ಹಿಡಿ. "सङ्ग्राहो मुष्टिरस्य यः" अम०।

**सङ्ग्राहक ಸಂಗ್ರಾಹಕ** (वि०) 1. ಸಂಗ್ರಹಿಸುವವನು, ಶೇಖರಿಸುವವನು, ಕೂಡಿಡುವವನು. सम्+ग्रह (उपादाने) "ण्वुल्" (३-१-१३३)। 2. ಸಂಪಾದಿಸುವವನು. 3. ಸಂಕ್ಷೇಪಮಾಡುವವನು.

**सङ्ग्राहयत् ಸಂಗ್ರಾಹಯತ್** (वि०) ತಿಳಿಯಪಡಿಸುತ್ತಿರುವ, ತಿಳಿಯುವಂತೆ ಮಾಡುತ್ತಿರುವ, ಬೋಧಿಸುತ್ತಿರುವ. सम् + ग्रह (उपादाने) + णिच् "शतृ" (३-२-१२४)। "अकृत्स्नसंवेदिनि जीवलोके सङ्ग्राहयन् वर्मम् यथात्मवृत्त्या" याद० १३-७५। स्त्रियां "ङीप्" (४-१-६)। **-यन्ती -ಯಂತೀ.**

**सङ्ग्राहिन् ಸಂಗ್ರಾಹಿನ್** (पुं०) ಕುಟಜವೃಕ್ಷ, ಗಿರಿಮಲ್ಲಿಗೆ ಗಿಡ, ಬೆಟ್ಟಮಲ್ಲಿಗೆ.

**सङ्घ ಸಂಘ** (पुं०) 1. ಸಮೂಹ, ಗುಂಪು. संहननम्—सम् + हन (हिंसागत्योः) भावे "अप्" (३-३-८६)। निपा०। ಸಜಾತೀಯ ಅಥವಾ ವಿಜಾತೀಯ ಜಂತುಗಳ ಸಮೂಹ. "सङ्घसार्थौ तु जन्तुभिः" अम०। 2. ಸಂಗಡಿಗರ ಕೂಟ, ಸಂಸ್ಥೆ. सिद्धचारणसङ्घः, विद्यार्थिसङ्घः, कार्मिकसङ्घः, उपाध्यायसङ्घः ಇತ್ಯಾದಿ. "सिद्धचारणसङ्घानां बभूव प्रियदर्शनः" भा० आदि०। 3. ಮನುಷ್ಯರ ಅಥವಾ ದೇವತೆಗಳ ಸಮೂಹ.

**सङ्घचारिन् ಸಂಘಚಾರಿನ್** (पुं०) 1. ಮತ್ಸ್ಯ, ಮೀನು. सङ्घेन चरति—चर (गतौ) "णिनिः" (३-२-७८)। (वि०) 2. ಗುಂಪು ಗುಂಪಾಗಿ ಸಂಚರಿಸುವ.

**सङ्घजीविन् ಸಂಘಜೀವಿನ್** (वि०) ದಿನಗೂಲಿಯಿಂದ ಜೀವಿಸುವವನು, ಕೂಲಿಯಾಳು. सङ्घेन जीवति—जीव (प्राणधारणे) "णिनिः" (३-१-१३४)।

**सङ्घटना ಸಂಘಟನಾ** (स्त्री०) 1. ಒಟ್ಟುಗೂಡುವುದು, ಒಟ್ಟಿಗೆ ಸೇರುವುದು, ಒಂದು ಸಂಸ್ಥೆಯನ್ನು ರಚಿಸುವುದು, ಜೊತೆಗೂಡುವುದು. 2. ಸಂಯೋಗ, ಸಂಬಂಧ. सम्+घट (सङ्घाते) + णिच् "युच्" (३-३-१०७)। 3. ಪರಸ್ಪರ ಸೇರುವುದು, ಒಂದು ಕಡೆ ಸಂಧಿಸುವುದು. 4. ಒಟ್ಟುಗೂಡಿಸುವಿಕೆ. "सा देव्यन्यकलत्रसङ्घटनया दुःखं परं प्रापिता" रत्ना० ४-१९।

**सङ्घट्ट ಸಂಘಟ್ಟ** (पुं०) 1. ಸಂಘರ್ಷ, ತಿಕ್ಕಾಟ, ತೀಡುವುದು. सम्+घट्ट (चलने) "घञ्" (३-३-१२१)। "उद्वृत्तस्खलितकपालकण्ठमालासङ्घट्टक्वणितकरालकिङ्किणीकः" मालती० ५-३। 2. ತಾಗುವುದು, ಡಿಕ್ಕಿ ಹೊಡೆಯುವುದು, ಅಪಘಾತ. "वक्षस्यसङ्घट्टसुखं वसन्ती रेजे सपत्नीरहितेव लक्ष्मीः" रघु० १४-८६। "मातङ्गानां दन्तसंघट्टजन्मा हेमच्छेदच्छायचञ्चच्छिखाग्रः" माघ० १८-३४। 3. ಹೋರಾಟ, ಬಡಿದಾಟ, ಯುದ್ಧ.

**सङ्घट्टन ಸಂಘಟ್ಟನ** (न०) 1. ತಿಕ್ಕಾಟ, ಸಂಘರ್ಷ. सम्+घट्ट (चलने) भावे "ल्युट्" (३-३-११५)। 2. ತಾಗುವುದು, ಡಿಕ್ಕಿ ಹೊಡೆಯುವುದು. 3. ಹೋರಾಟ, ಬಡಿದಾಟ.

**सङ्घट्टयत् ಸಂಘಟ್ಟಯತ್** (वि०) ಉಜ್ಜುತ್ತಿರುವ, ಪರಸ್ಪರ ತಿಕ್ಕುತ್ತಿರುವ. सम् + घट्ट (चलने) + णिच् "शतृ" (३-२-१२४)। "ऐरावतास्फालनविश्लथं यः सङ्घट्टयन्नङ्गदमङ्गदेन" रघु० ६-७३। स्त्रियां "ङीप्" (४-१-६)। **-यन्ती -ಯಂತೀ.** "सङ्घट्टयन्त्यास्तरसात्मभूषाहीराङ्कुरप्रोतदुकूलहारी" नैष० ६-२८।

**सङ्घतल ಸಂಘತಲ** (पुं०) ಸಂಪೂರ್ಣವಾಗಿ ನೀಡಿ ಜೋಡಿಸಿದ ಎರಡು ಹಸ್ತಗಳು, ಒಟ್ಟಿಗೆ ಕೂಡಿದ ಎರಡು ಅಂಗೈಗಳು. सङ्घे तले यत्र।

**सङ्घतिथ ಸಂಘತಿಥ** (वि०) ಗುಂಪುಗುಂಪಾಗಿ ನಿಂತಿರುವ. सङ्घानां पूरणः "डट्" (५-२-४८)। डटः तिथुगागमः (५-२-५२)। "एकेषुणा सङ्घतिथान् द्विषो भिन्दन् द्रुमानिव" माघ० १९-१०७।

**सङ्घर्ष ಸಂಘರ್ಷ** (पुं०) 1. ತಿಕ್ಕಾಡುವುದು, ಉಜ್ಜಾಟ. सम् + घृषु (सङ्घर्षे) "घञ्" (३-३-१८)। 2. ಹೋರಾಟ, ಬಡಿದಾಟ. 3. ಸ್ಪರ್ಧೆ. "सङ्घर्षयोगिणः पादौ प्रणेमुस्त्रिदशद्विषः" भट्टि० ९-९७। "सङ्घर्षः स्यात् पुमान् घृष्टौ स्पर्धायामपि दृश्यते" मेदि०। भावे "ल्युट्" (३-३-११५)। **-घर्षणम् -ಘರ್ಷಣಮ್.**

**सङ्घाटिका ಸಂಘಾಟಿಕಾ** (स्त्री०) 1. ಯುಗ್ಮ, ಒಂದು ಜೊತೆ, ಒಂದು ಜೋಡಿ. सम्+घट (सङ्घाते) +णिच् "ण्वुल्" (३-१-१३३)। 2. ಕುಟ್ಟನಿ, ತಲೆಹಿಡುಕಿ, ಜಾರರನ್ನು ಒದಗಿಸುವವಳು. 3. ವಾಸನೆ ಕಂಡುಹಿಡಿಯುವ ಘ್ರಾಣೇಂದ್ರಿಯ, ಮೂಗು. "सङ्घाटिका तु युग्मे स्यात् कुट्टनीघ्राणयोरपि" विश्व०।

**सङ्घात ಸಂಘಾತ** (ಪುಂ) 1. ಸಮೂಹ, ಗುಂಪು. सम् + हन (हिंसागत्योः) "घञ्" (३-३-१९)। हस्य "घः" (७-३-५४)। "संवर्त इव नागानां सङ्घात इव रंहसाम्" यादं १६-६३। 2. ಹೊಡೆಯುವುದು, ಹಿಂಸಿಸುವುದು. 3. ಕೊಲ್ಲುವುದು. 4. ಒಂದು ನರಕ. "सङ्घातः पुंसि घाते च संहतौ नरकान्तरे" मेदिं। 5. ದಟ್ಟವಾಗಿ ಸೇರಿಕೊಂಡಿರುವಿಕೆ, ನಿಬಿಡವಾಗಿ ಕೂಡಿ ಕೊಂಡಿರುವಿಕೆ. "द्रवः सङ्घातकठिनः स्थूलः सूक्ष्मो लघुर्गुरुः" कुमां २-११।

**सङ्घुष्ट ಸಂಘುಷ್ಟ** (ಪುಂ) 1. ಶಬ್ದ, ಧ್ವನಿ, ಸದ್ದು. सम् + घुषिर् (अविशब्दने) "क्तः" (३-३-११४)। "महाकोकिलसन्दोहसङ्घुष्टविपिनान्तरे"। (ವಿಂ) 2. ಡಂಗೂರ ಹೊಡಿಸಲ್ಪಟ್ಟ, ಪ್ರಸಿದ್ಧಪಡಿಸಿ ಹೇಳಲ್ಪಟ್ಟ, ಬಹಿರಂಗವಾಗಿ ತಿಳಿಸಲ್ಪಟ್ಟ. कर्मं "क्तः" (३-२-१०२)।

**सचन ಸಚನ** (ನಂ) 1. ಗೌರವಿಸುವುದು, ಪುರಸ್ಕರಿಸುವುದು. षच (सेवने सेचने च) "ल्युट्" (३-३-११५)। 2. ಸೇವಿಸುವುದು. 3. ಸೇಚನೆಮಾಡುವುದು, ಸಿಂಪಡಿಸುವುದು.

**सचि ಸಚಿ** (स्त्रीं) ಶಚೀದೇವಿ, ಇಂದ್ರನ ಪತ್ನಿ. षच (समवाये) "इन्" (उं ४-११७)।

**सचिल्लक ಸಚಿಲ್ಲಕ** (ವಿಂ) ರೋಗದಿಂದ ನೀರು ಸೋರುತ್ತಿರುವ ಕಣ್ಣುಳ್ಳವನು.

**सचिव ಸಚಿವ** (ಪುಂ) 1. ಮಂತ್ರಿ, ಅಮಾತ್ಯ. षच (समवाये) "इन्" (उं ४-११७)। सचिं वाति—वा (गतिगन्धनयोः) "कः" (३-२-३)। ಸಚಿವರಲ್ಲಿ धीसचिवः कर्मसचिवः ಎಂದು ಎರಡು ವಿಧ. ಮಂತ್ರಾಲೋಚನೆಗೆ ಸಹಾಯಕನಾಗಿರುವವನಿಗೆ धीसचिवः ಎಂದೂ ಕರ್ತವ್ಯಗಳನ್ನು ನಿರ್ವಹಿಸುವವನಿಗೆ कर्मसचिवः ಎಂದೂ ಹೆಸರು. "मन्त्री धीसचिवोऽमात्योऽन्ये कर्मसचिवास्ततः" अमं। ರಾಜನಿಗೆ ಆಯಾ ವಿಷಯಗಳಲ್ಲಿ ಸಹಾಯಕನಾಗಿರುವವನು ಸಚಿವ (ಮಂತ್ರಿ). "मन्त्री सहायः सचिवौ" अमं। "अयमपरः कार्यान्तरसचिवोऽस्मानुपस्थितः" मालं १। 2. ಸಹಾಯಕ. 3. ಮಿತ್ರ, ಸುಹೃತ್ತು. 4. ಕಪ್ಪು ದತ್ತೂರಿ ಗಿಡ.

**सची ಸಚೀ** (स्त्रीं) 1. ಶಚೀದೇವೀ, ಇಂದ್ರನ ಪತ್ನಿ. सचि "ङीष्" (गं ४-१-४५)। 2. ಸ್ನೇಹ, ಮೈತ್ರಿ.

**सचीनन्दन ಸಚೀನಂದನ, —पुत्र —ಪುತ್ರ, —सुत —ಸುತ, —सूनु —ಸೂನು** (ಪುಂ) ಶಚೀದೇವಿಯ ಪುತ್ರ ಜಯಂತ. सच्याः पुत्रः सुतः सूनुर्वा।

**सचेतन ಸಚೇತನ** (ವಿಂ) ಬದುಕಿರುವ, ಜೀವಸಹಿತವಾದ, ಇಂದ್ರಿಯ ವ್ಯಾಪಾರವುಳ್ಳ.

**सचेतस् ಸಚೇತಸ್** (ವಿಂ) ಬದುಕಿರುವ, ಜೀವಸಹಿತನಾದ, ಇಂದ್ರಿಯ ಶಕ್ತಿಯುಳ್ಳ. चेतसा सह वर्तते। "शशाङ्कलेखामिव पश्यतो दिवा सचेतसः कस्य मनो न दूयते" कुमां ५-४८।

**सचेष्ट ಸಚೇಷ್ಟ** (ಪುಂ) ಆಮ್ರವೃಕ್ಷ, ಮಾವಿನ ಮರ.

**सच्चित् ಸಚ್ಚಿತ್** (ನಂ) ಪರಬ್ರಹ್ಮ, ಪರಮಾತ್ಮ.

**सच्चिदानन्द ಸಚ್ಚಿದಾನಂದ** (ಪುಂ) ಅಖಂಡಜ್ಞಾನ ಸುಖ ಸ್ವರೂಪನಾದ ಪರಮಾತ್ಮ.

**सच्छिद्र ಸಚ್ಛಿದ್ರ** (ವಿಂ) 1. ತೂತುಗಳುಳ್ಳ, ರಂಧ್ರಗಳಿರುವ. छिद्रैः सह वर्तते। 2. ದೋಷಗಳಿಂದ ಕೂಡಿದ.

**सजम्बाल ಸಜಂಬಾಲ** (ವಿಂ) ಕೆಸರಿನಿಂದ ಕೂಡಿದ, ಬಗ್ಗಡವಾಗಿರುವ. जम्बालेन सहितः। "सजम्बालस्तु पङ्किलः" अमं।

**सजाति ಸಜಾತಿ** (ವಿಂ) 1. ಸಮಾನ ಜಾತಿಯವನು. 2. ಒಂದೇ ಜಾತಿಯ ತಾಯಿ ತಂದೆಗಳ ಮಗ. समाना जातिर्यस्य।

**सजातीय ಸಜಾತೀಯ** (ವಿಂ) ಒಂದೇ ಜಾತಿಗೆ ಸೇರಿದ, ಸಮಾನ ಜಾತಿಯ ಧರ್ಮವುಳ್ಳ. समानो जातीयः।

**सजूष् ಸಜೂಷ್** (ವಿಂ) 1. ಪ್ರೀತಿಯಿಂದ ಕೂಡಿದ, ಪ್ರೀತಿಸುವ. जुषी (प्रीतिसेवनयोः) "क्विप्" (३-२-६१)। 2. ಸೇವಿಸುವ. 3. ಒಟ್ಟಿಗೆ ಸೇರಿರುವ, ಜೊತೆಗೂಡಿರುವ. (ಪುಂ) 4. ಸಂಗಡಿಗ, ಜೊತೆಗಾರ, ಸ್ನೇಹಿತ. (अव्यं) 5. ಸಂಗಡ, ಜೊತೆಯಲ್ಲಿ.

**सज्ज ಸಜ್ಜ** (ವಿಂ) 1. ಸಿದ್ಧವಾಗಿರುವ. षस्ज (गतौ) "अच्" (३-१-१३४)। 2. ಕವಚ ತೊಟ್ಟಿರುವ, ಯುದ್ಧದ ಅಂಗಿಯನ್ನು ತೊಟ್ಟಿರುವ. "सन्नद्धो वर्मितः सज्जो दंशितो व्यूढकङ्कटः" अमं। 3. ಉಡಿಗೆ ತೊಡಿಗೆಗಳಿಂದ ಸಜ್ಜಾಗಿರುವ. "सज्जः स्यात् सन्नद्धे सम्भृते त्रिषु" मेदिं। 4. ಯುದ್ಧದ ಎಲ್ಲಾ ಉಪಕರಣಗಳಿಂದ ಕೂಡಿದ. "साङ्ग्रामिकं ततः सर्वं सज्जं चक्रुः परन्तपाः" भां।

**सज्जन ಸಜ್ಜನ** (ನಂ) 1. ಸಿದ್ಧಗೊಳಿಸುವುದು, ಸರಿಯಾದ ಏರ್ಪಾಡುಮಾಡುವುದು. षस्ज (गतौ) "ल्युट्" (३-३-११५)। 2. ರಕ್ಷಣಾದಳ, ಕಾವಲು ಸೈನ್ಯ. 3. ಘಟ್ಟ, ನದಿ ಮೊದಲಾದುವುಗಳ ನೀರನ್ನು ದಾಟುವ

ಸ್ಥಳ. "सज्जनं तु भवेत् क्लीबमुपरक्षणघट्टयोः" मेदि० । (वि०) 4. ಸಜ್ಜನ, ಸತ್ಪುರುಷ. ಸತ್ಕುಲದಲ್ಲಿ ಜನಿಸಿದವನು. "सज्जनोऽसि विजहीहि चापलं सर्वदा क इव वा सहिष्यते" किरा० १३-६६ । (स्त्री०) —ना —ನಾ. 5. ಆನೆಯನ್ನು ಅಲಂಕರಿಸುವುದು, ದೊರೆಯು ಆನೆಯನ್ನು ಹತ್ತಲು ಅದನ್ನು ಸಿದ್ಧಗೊಳಿಸುವುದು. षस्ज+णिच् "युच्" (३-३-१०७) । "वाच्यलिङ्गं कुलीने स्यात् कल्पनायां तु योषिति" मेदि० ।

**सज्जा ಸಜ್ಜಾ** (स्त्री०) 1. ಸನ್ನಾಹ, ಉಪಕರಣ, ಸಾಧನ. षस्ज (गतौ) "अः" (३-३-१०३) । 2. ಯುದ್ಧ ಕವಚ.

**सज्जित ಸಜ್ಜಿತ** (वि०) 1. ಉಡುಪು ಧರಿಸಿರುವ, ಉಡಿಗೆ ತೊಟ್ಟಿರುವ. षस्ज (गतौ) "क्तः" (३-४-७२) । 2. ಅಲಂಕರಿಸಲ್ಪಟ್ಟ, ಶೃಂಗರಿಸಲ್ಪಟ್ಟ. "सज्जितानि सुरभीण्यथ यूनामुल्लसन्नयनवारिरुहाणि" माघ० १०-१ । 3. ಯುದ್ಧಕವಚ ತೊಟ್ಟಿರುವ. 4. ಸಿದ್ಧವಾಗಿರುವ.

**सज्य ಸಜ್ಯ** (वि०) ಮೌರ್ವೀಸಹಿತವಾದ, ಹೆದೆಯೇರಿಸಲ್ಪಟ್ಟ. ज्यया सहितम् । "न तेन सज्यं क्वचिदुद्यतं धनुः कृतं न वा कोपविजिह्ममाननम्" किरा० १-२१ ।

**सञ्च ಸಂಚ** (पुं०) ಗ್ರಂಥವನ್ನು ಬರೆಯುವ ಕಾಗದದ ಕಟ್ಟು. सञ्चिनोति अक्षराणि — सम् + चिञ् (चयने) "डः" (३-२-१०२) ।

**सञ्चय ಸಂಚಯ** (पुं०) 1. ಶೇಖರಣೆ, ಕೂಡಿಡುವುದು. सम् + चिञ् (चयने) "अच्" (३-३-५६) । "गुणाः खलु गुणा एव न गुणा भूतिहेतवः । अर्थसञ्चयकर्तॄणां भाग्यानि पृथगेव हि" । 2. ರಾಶಿಹಾಕುವುದು, ಒಟ್ಟುಗೂಡಿಸುವುದು. 3. ಗುಂಪು, ಸಮೂಹ. 4. ಅಂಗಗಳ ಸಂಧಿ, ಕೀಲು, ಎಲುಬುಗಳ ಕೀಲು. "दोर्निष्पेषविशीर्णसञ्चयदलत्कङ्कालमुन्मथ्नतः" मालती० ८-९ । भावे "ल्युट्" (३-३-११५) । —चयनम् —ಚಯನಮ್.

**सञ्चयिन् ಸಂಚಯಿನ್** (वि०) ಶೇಖರಿಸಿಡುವವನು, ಕೂಡಿಡುವವನು. सञ्चयोऽस्यास्ति "इनिः" (५-२-११५) ।

**सञ्चर ಸಂಚರ** (पुं०) 1. ಮಾರ್ಗ, ದಾರಿ, ರಸ್ತೆ. 2. ನದಿ ಮೊದಲಾದುವನ್ನು ದಾಟುವ ಸೇತುವೆ. सञ्चरन्त्यनेन— सम् + चर (गतौ) "घः" (३-३-११९) । निपा० । "यत्रौषधिप्रकाशेन नक्तं दर्शितसञ्चराः । अनभिज्ञास्तमिस्राणां दुर्दिनेष्वभिसारिकाः" कुमा० ६-४३ । 3. ದೇಹ, ಶರೀರ. 4. ಪ್ರವೇಶದ್ವಾರ.

**सञ्चरण ಸಂಚರಣ** (न०) ನಡೆಯುವುದು, ಸಂಚರಿಸುವುದು. सम् + चर (गतौ) "ल्युट्" (३-३-११५) ।

**सञ्चरत् ಸಂಚರತ್** (वि०) ಸಂಚರಿಸುತ್ತಿರುವ, ನಡೆಯುತ್ತಿರುವ. सम् + चर (गतौ) "शतृ" (३-२-१२४) । स्त्रियां "ङीप्" (४-१-६) । —चरन्ती —ಚರಂತೀ.

**सञ्चल ಸಂಚಲ** (वि०) 1. ಕಂಪಿಸುವ, ನಡುಗುವ. सम्+चल (कम्पने) "अच्" (३-१-१३४) । 2. ಚಲಿಸುವ.

**सञ्चलन ಸಂಚಲನ** (न०) ಕಂಪನ, ನಡುಗುವುದು. सम्+चल (कम्पने) "ल्युट्" (३-३-११५) ।

**सञ्चाय्य ಸಂಚಾಯ್ಯ** (पुं०) ಒಂದು ಯಾಗ. सञ्चीयतेऽसौ —सम्+चिञ् (चयने) कर्म० "ण्यत्" (३-१-१३०) । निपा० ।

**सञ्चार ಸಂಚಾರ** (पुं०) 1. ನಡೆಯುವುದು, ಸಂಚರಿಸುವುದು. सम्+चर (गतौ) "घञ्" (३-३-१८) । "सञ्चारपूतानि दिगन्तराणि कृत्वा दिनान्ते निलयाय गन्तुम् । प्रचक्रमे पल्लवरागताम्रा प्रभा पतङ्गस्य मुनेश्च धेनुः" रघु० २-१५ । 2. ಗ್ರಹಗಳು ರಾಶಿಯಿಂದ ರಾಶಿಗೆ ಹೋಗುವುದು. 3. ರಸ್ತೆ, ಮಾರ್ಗ. 4. ದೇಶ, ಪ್ರದೇಶ. "वनस्य तस्य सञ्चारं राक्षसैः समभिप्लुतम्" रामा० ।

**सञ्चारिका ಸಂಚಾರಿಕಾ** (स्त्री०) 1. ದೂತಿ. सञ्चरति— सम्+चर (गतौ) "ण्वुल्" (३-१-१३३) । "दूती-सञ्चारिके समे" अम० । 2. ಒಂದು ಜೊತೆ, ಒಂದು ಜೋಡಿ. 3. ಕುಟ್ಟನಿ, ತಲೆಹಿಡುಕಿ, ಜಾರರನ್ನು ಒದಗಿಸುವವಳು. 4. ಮೂಗು, ಘ್ರಾಣೇಂದ್ರಿಯ, ವಾಸನೆಯನ್ನು ಕಂಡುಹಿಡಿಯುವ ಇಂದ್ರಿಯ. "सञ्चारिका तु युगले कुट्टनीघ्राणयोरपि" मेदि० ।

**सञ्चारिन् ಸಂಚಾರಿನ್** (पुं०) 1. ವ್ಯಭಿಚಾರಿಭಾವ. रत्यादौ रसानुगुण्येन सञ्चरति संगच्छते—सम् + चर "णिनिः" । "नानाभिनयसम्बन्धान् भावयन्ति रसान् यतः । तस्माद्भावा अमी प्रोक्ताः स्थायिसञ्चारिसात्त्विकाः" सा० द० ३-१८१ । "स्थायिनोऽर्थे प्रवर्तन्ते भावाः सञ्चारिणो यथा" माघ० २-८७ । 2. ವಾಯು, ಗಾಳಿ. 3. ಸುವಾಸನೆಯನ್ನು ಕೊಡುವ ಧೂಪ. (वि०) 4. ನಡೆಯುವ, ಹೋಗುವ, ಸಂಚರಿಸುವ, ಚಲಿಸುವ. सञ्चरति—सम्+चर (गतौ) "णिनिः" (३-१-१३४) । "सञ्चारि-कैलासनिभेन तेन" याद० २०-४२ । स्त्रियां "ङीप्" (४-१-५) । —चारिणी —ಚಾರಿಣೀ. "पर्याप्तपुष्प-

स्तबकावनम्रा सञ्चारिणी पल्लविनी लतेव" कुमा० ३-५४।

**सञ्चाली ಸಂಚಾಲೀ** (स्त्री०) ಗುಲಗಂಜಿ.

**सञ्चित ಸಂಚಿತ** (वि०) 1. ಶೇಖರಿಸಿಡಲ್ಪಟ್ಟ, ಕೂಡಿಸಿಡಲ್ಪಟ್ಟ. सम्+चिञ् (चयने) "क्तः" (३-२-१०२)। "पिपीलिकार्जितं धान्यं मक्षिकासञ्चितं मधु। लुब्धेन सञ्चितं द्रव्यं समूलं च विनश्यति"। 2. ರಾಶಿಹಾಕಲ್ಪಟ್ಟ, ಒಟ್ಟುಗೂಡಿಸಲ್ಪಟ್ಟ. 3. ಜನ್ಮಾಂತರಕ್ಕೆ ಕಾರಣವಾದ ಹಿಂದಿನ ಜನ್ಮಗಳಲ್ಲಿ ಮಾಡಿದ ಕರ್ಮ.

**सञ्ज ಸಂಜ** (पुं०) 1. ಬ್ರಹ್ಮ, ಚತುರ್ಮುಖ. 2. ಶಿವ, ಪರಮೇಶ್ವರ.

**सञ्जवन ಸಂಜವನ** (न०) ಪರಸ್ಪರ ಅಭಿಮುಖವಾಗಿರುವ ನಾಲ್ಕು ಸಭಾಮಂದಿರಗಳಿಂದ ಕೂಡಿದ ಗೃಹ. सञ्जवन्ति संमिलन्त्यत्र — सम् + जु (गतौ) "सञ्जवनं त्विदम्। चतुःशालम्" अम०।

**सञ्जा ಸಂಜಾ** (स्त्री०) ಆಡು.

**सञ्जीवन ಸಂಜೀವನ** (न०) 1. ಪ್ರಾಣವನ್ನು ಚೆನ್ನಾಗಿ ಧರಿಸುವುದು, ಜೀವನವನ್ನು ಪೂರ್ವಸ್ಥಿತಿಗೆ ತರುವುದು. सम्+जीव (प्राणधारणे) भावे "ल्युट्" (३-३-११५)। "दैत्येन्द्रार्तिकरौषधं त्रिजगतां सञ्जीवनैकौषधम्" मु० मा०। 2. ಪರಸ್ಪರ ಅಭಿಮುಖವಾಗಿರುವ ನಾಲ್ಕು ಸಭಾಮಂದಿರಗಳಿರುವ ಗೃಹ. सञ्जीव्यतेऽस्मिन्—सम्+जीव अधि० "ल्युट्" (३-३-११७)। 3. ಒಂದು ನರಕ. "नरकं कालसूत्रं च महानरकमेव च। सञ्जीवनं महावीचिं तपनं सम्प्रतापनम्" मनु० ४-८९। (वि०) 4. ಪ್ರಾಣಧಾರಣೆಗೆ ಕಾರಣವಾದ, ಗತಪ್ರಾಯವಾದ ಪ್ರಾಣವು ಮತ್ತೆ ಪೂರ್ವಸ್ಥಿತಿಗೆ ಬರಲು ಕಾರಣವಾದ. "स्पर्शः पुरा परिचितो नियतं स एव सञ्जीवनश्च मनसः परितोषणश्च" उ० रा० ३-१२। (स्त्री०) **–जीविनी –ಜೀವಿನೀ.** 5. ಬದುಕಿಸುವ ವಿದ್ಯೆ, ಮೃತರು ಬದುಕುವಂತೆ ಮಾಡುವ ವಿದ್ಯೆ. सञ्जीवयति—सम्+जीव + णिच् "णिनिः" (३-१-१३४)। "अयमेहीति संशब्द्य मृतं सञ्जीवयाम्यहम्। ततः सञ्जीविनीं विद्यां प्रयुज्य कचमाह्वयत्" भा० आदि० ७६-३३।

**सञ्जीवयत् ಸಂಜೀವಯತ್** (वि०) ಬದುಕಿಸುತ್ತಿರುವ, ನಷ್ಟಪ್ರಾಯವಾದ ಪ್ರಾಣವನ್ನು ಮತ್ತೆ ಪೂರ್ವಸ್ಥಿತಿಗೆ ತರುತ್ತಿರುವ. सम् + जीव (प्राणधारणे) + णिच् "शतृ" (३-२-१२४)। "विप्लोषितं द्रौणिशरेण बालं सञ्जीवयन् पादरजःप्रभावात्" याद० २३-५४।

**सञ्जुघुक्षा ಸಂಜುಘುಕ್ಷಾ** (स्त्री०) ರಕ್ಷಿಸಲು ಅಪೇಕ್ಷೆ. सम् + गुहू (संवरणे) + सन् "अः" (३-३-१०२)।

**सञ्जुघुक्षु ಸಂಜುಘುಕ್ಷು** (वि०) ರಕ್ಷಿಸಿಕೊಳ್ಳಲು ಅಪೇಕ್ಷಿಸುವ. सम्+गुहू (संवरणे)+सन् "उः" (३-२-१६८)। "सञ्जुघुक्षव आयूंषि ततः प्रतिरुरूषवः" भट्टि० ९-१४।

**संज्ञपन ಸಂಜ್ಞಪನ** (न०) 1. ಮಾರಣ, ಕೊಲ್ಲುವುದು. 2. ಸಂತೋಷಪಡಿಸುವುದು. 3. ನೋಡುವುದು. सम्+ज्ञा (अवबोधने) + णिच् "ल्युट्" (३-३-११५)। मारणतोषणनिशामनेषु ज्ञा इति मित्त्वम्। मित्त्वात् ह्रस्वः।

**संज्ञप्ति ಸಂಜ್ಞಪ್ತಿ** (स्त्री०) 1. ತಿಳಿಸುವುದು, ವಿಜ್ಞಾಪಿಸುವುದು. सम् + ज्ञप (ज्ञाने ज्ञापने च) + णिच् "क्तिन्" (३-३-९४)। 2. ಕೊಲ್ಲುವುದು. ज्ञप मिच्च — ज्ञाने ज्ञापने च।

**संज्ञा ಸಂಜ್ಞಾ** (स्त्री०) 1. ಹೆಸರು. सम्+ज्ञा (अवबोधने) "अङ्" (३-३-१०६)। "यदृच्छाशब्दवत्पुंसः संज्ञायै जन्म केवलम्" माघ० २-४७। 2. ಜ್ಞಾನ, ವಿವೇಕ, ಪ್ರಜ್ಞೆ, ವಿವೇಚನೆ. 3. ಹಸ್ತ, ನೇತ್ರ ಮೊದಲಾದುವುಗಳಿಂದ ಅಭಿಪ್ರಾಯವನ್ನು ಸೂಚಿಸುವುದು. "मुखार्पितैकाङ्गुलिसंज्ञयैव मा चापलायेति गणान् व्यनैषीत्" कुमा० ३-४१। 4. ಸೂರ್ಯನ ಪತ್ನಿ, ವಿಶ್ವಕರ್ಮನ ಮಗಳು. [ಸಂಜ್ಞಾದೇವಿಯು ಸೂರ್ಯನಿಂದ ವೈವಸ್ವತ ಯಮ ಎಂಬ ಪುತ್ರರನ್ನೂ ಯಮುನೆಯೆಂಬ ಪುತ್ರಿಯನ್ನೂ ಪಡೆದಳು. ಇವಳು ಸೂರ್ಯನ ತೇಜಸ್ಸನ್ನು ತಡೆಯಲಾರದೆ ತನ್ನ ಆಕಾರದಲ್ಲೇ ಒಬ್ಬ ಹೆಂಗಸನ್ನು ಸೃಷ್ಟಿಸಿ ತಂದೆಯ ಮನೆಗೆ ಹೋದಳು. ಛಾಯಾದೇವಿಯು ಸೂರ್ಯನಿಂದ ಸಾವರ್ಣಿಮನು ಮತ್ತು ಶನೈಶ್ಚರರೆಂಬ ಇಬ್ಬರು ಪುತ್ರರನ್ನು ಪಡೆದಳು. ಸಂಜ್ಞಾದೇವಿಯ ಈ ಕಾರ್ಯವನ್ನು ಜ್ಞಾನದೃಷ್ಟಿಯಿಂದ ತಿಳಿದ ಸೂರ್ಯನು ಹೆಣ್ಣು ಕುದುರೆಯ ರೂಪದಿಂದ ಸಂಚರಿಸುತ್ತಿದ್ದ ಸಂಜ್ಞೆಯ ಬಳಿಗೆ ತಾನೂ ಕುದುರೆಯ ರೂಪದಿಂದ ಹೋಗಿದ್ದಾಗ ಅವಳಲ್ಲಿ ಅಶ್ವಿನೀದೇವತೆಗಳು ಜನಿಸಿದರು.] 5. ಜಾಗೃತಿ, ತನ್ನನ್ನು ಅರಿತಿರುವುದು, ಪ್ರಜ್ಞೆ, ಎಚ್ಚರ.

**संज्ञान ಸಂಜ್ಞಾನ** (न०) ಒಳ್ಳೆಯ ಜ್ಞಾನ, ಉತ್ತಮ ವಿಷಯದ ಜ್ಞಾನ, ಪರಮಾತ್ಮಜ್ಞಾನ, ಪರಬ್ರಹ್ಮದ ಸ್ವರೂಪದ ಜ್ಞಾನ.

**संज्ञित ಸಂಜ್ಞಿತ** (वि०) ಹೆಸರಿಡಲ್ಪಟ್ಟ. संज्ञाऽस्य संजाता "इतच्"।

**संज्ञिन् ಸಂಜ್ಞಿನ್** (वि०) 1. ಸಂಜ್ಞೆಯುಳ್ಳ, ಹೆಸರಿಸಿರುವ, ಹೆಸರು ಇಟ್ಟಿರುವ. संज्ञास्यास्ति "इनिः" (५-२-११६)। 2. ಪ್ರಜ್ಞೆಯುಳ್ಳ, ತನ್ನ ಅರಿವುಳ್ಳ, ಎಚ್ಚರವುಳ್ಳ.

**संज्ञु ಸಂಜ್ಞು** (वि०) ಒಂದಕ್ಕೊಂದು ಸೇರಿದಂತಿರುವ ಮೊಣಕಾಲುಗಳುಳ್ಳವನು, ಒಂದಕ್ಕೊಂದು ಉಜ್ಜುವಂತಿರುವ ಮೊಣಕಾಲುಗಳುಳ್ಳವನು. संहते जानुनी यस्य जानुनो "ज्ञुः" (५-४-१२९)। "संज्ञुः संहतजानुकः" अम०।

**सञ्ज्वर ಸಂಜ್ವರ** (पुं०) 1. ಸಂತಾಪ, ಅಗ್ನಿಜ್ವಾಲೆಯಿಂದ ಉಂಟಾದ ತಾಪ. संज्वरयति — सम् + ज्वर (रोगे) + णिच् "अच्" (३-१-१३४)। 2. ತಾಪ, ಉಷ್ಣತೆ, ಜ್ವರ. "यत्स्नेहसंज्वरवता हृदयेन नित्यमाबद्धवेपथु विनापि निमित्तयोगात्" मालती० १-३५।

**सञ्ज्वारिन् ಸಂಜ್ವಾರಿನ್** (वि०) ರೋಗದ ಸ್ವಭಾವವುಳ್ಳ, ಯಾವಾಗಲೂ ವ್ಯಾಧಿಯಿಂದ ಪೀಡಿಸಲ್ಪಟ್ಟ. सम्+ज्वर (रोगे) "घिनुण्" (३-२-१४२)। "सञ्ज्वारिणेव मनसा ध्वान्तमायासिना मया" भट्टि० ७-६।

**सटा ಸಟಾ** (स्त्री०) 1. ತಪಸ್ವಿಗಳ ಜಟೆ. सटति — षट (अवयवे) "अच्" (३-१-१३४)। 2. ಸಿಂಹದ ಕೇಸರ, ಸಿಂಹದ ಮುಖದ ಕೂದಲು. "सटाच्छटाभिन्नघनेन बिभ्रता नृसिंह सैंहीमतनुं तनुं त्वया" माघ० २-४७। 3. ಕಾಡುಹಂದಿಯ ಮೈಮೇಲಿನ ಕೂದಲು. 4. ಶಿಖೆ, ತಲೆಯ ಕೂದಲು. "क्रुद्धः सुदष्टौष्ठपुटः स धूर्जटिः जटां तडिद्वह्निसटोग्ररोचिषम्" भाग० ४-५-२।

**सटि(टी) ಸಟಿ(ಟೀ)** (स्त्री०) ಕಚೋರ.

**सट्टक ಸಟ್ಟಕ** (न०) ಪ್ರಾಕೃತಭಾಷಾತ್ಮಕ ಒಂದು ಉಪರೂಪಕ, ಅಷ್ಟಾದಶ (18) ಉಪರೂಪಕಗಳಲ್ಲೊಂದು ಉಪರೂಪಕ. ಇದು ಪ್ರಾಕೃತ ಭಾಷಾಮಯವಾದುದು. ಇದರಲ್ಲಿ ಪ್ರವೇಶಕ ಮತ್ತು ವಿಷ್ಕಂಭಕಗಳಿರುವುದಿಲ್ಲ. ರಸವು ಅದ್ಭುತ. ಉಳಿದೆಲ್ಲವೂ ನಾಟಿಕಾಲಕ್ಷಣದಂತಿರುವುವು. "सट्टकं प्राकृताशेषपाठ्यं स्यादप्रवेशकम्। न च विष्कम्भकोऽप्यत्र प्रचुरश्चाद्भुतो रसः। अङ्का जवनिकाख्याः स्युः स्यादन्यन्नाटिकासमम्" सा० द० ६।

**सठी ಸಠೀ** (स्त्री०) ಕಚೋರ.

**सण्डीन ಸಂಡೀನ** (न०) ಪಕ್ಷಿಗಳ ಹಾರಾಟದ ಒಂದು ಭೇದ. सङ्गतं डयनम् — सम् + डीङ् (विहायसा गतौ) भावे "क्तः" (३-३-११४)। "प्रडीनोड्डीनसण्डीनान्येताः खगगतिक्रियाः" अम०। ಆಕಾಶದಲ್ಲಿ ಹಕ್ಕಿಗಳು ಹಾರಾಡುವಾಗ ಮರಗಳ ಮೇಲೆ ಕುಳಿತುಕೊಳ್ಳಲು ಮೇಲಿನಿಂದ ಇಳಿಯುವುದು ಸಂಡೀನ.

**सत् ಸತ್** (पुं०) 1. ಒಳ್ಳೆಯ ಮನುಷ್ಯ, ಒಳ್ಳೆ ಗುಣಶಾಲಿಯಾದ ಮನುಷ್ಯ. अस्ति — अस (भुवि) "शतृ" (३-२-१२४)। अकारलोपः (६-४-१११)। "सन्तः श्रीरङ्गपृथ्वीशचरणत्राणशेखराः। जयन्ति भुवनत्राणपदपङ्कजरेणवः" पादु० स०। "सन्तः स्वयं परहिते विहिताभियोगाः" भर्तृ० १-६३। (वि०) 2. ಒಳ್ಳೆಯದಾದ, ಉತ್ತಮವಾದ, ಶ್ರೇಷ್ಠವಾದ. "सदसद्व्यक्तिहेतवः" रघु० १-१०। 3. ಪುಣ್ಯಶಾಲಿ, ಪುಣ್ಯಕಾರ್ಯ ಮಾಡಿದವನು. "समीरशिशिरः शिरःसु वसतां सतां जवनिका निकामसुखिनाम्" माघ० ४-५४। 4. ವಿದ್ಯಮಾನ, ಈಗ ಇರುವ. "प्राणानामनिलेन वृत्तिरुचिता सत्कल्पवृक्षे वने" शाकु० ७-१२। 5. ಪಂಡಿತ, ವಿದ್ವಾಂಸ. "तं सन्तः श्रोतुमर्हन्ति सदसद्व्यक्तिहेतवः" रघु० १-१०। 6. ಸತ್ಯವಾದ, ಯಥಾರ್ಥವಾದ, ನಿಜವಾದ. 7. ಸುಂದರವಾದ, ಚೆಲುವಾಗಿರುವ. 8. ಪೂಜ್ಯ, ಗೌರವಾರ್ಹ. (न०) 9. (1) ಪರಬ್ರಹ್ಮ. "ओं तत्सदिति निर्देशो ब्रह्मणः त्रिविधः स्मृतः। ब्राह्मणास्तेन वेदाश्च यज्ञाश्च विहिताः पुरा" गीता १७-२३। ಶ್ರೀಶಂಕರಾಚಾರ್ಯರ ಭಾಷ್ಯದಲ್ಲಿ ओं तत् सत् एवं त्रिविधो नामनिर्देशः ब्रह्मणः स्मृतः ಎಂದು ಬ್ರಹ್ಮಪರವಾಗಿ ಉಕ್ತವಾಗಿದೆ. (2) ವೇದ. ಶ್ರೀರಾಮಾನುಜಾಚಾರ್ಯರ ಭಾಷ್ಯದಲ್ಲಿ ಸತ್ ಶಬ್ದವಾಚ್ಯಬ್ರಹ್ಮಶಬ್ದಕ್ಕೆ ವೇದವೆಂದೂ ವೇದಶಬ್ದದಿಂದ ವೈದಿಕ ಕರ್ಮವೆಂದೂ ಯಜ್ಞಾದಿ ಕರ್ಮವು ಓಮ್ ತತ್ ಸತ್ ಶಬ್ದಾನ್ವಿತವೆಂದೂ ಉಕ್ತವಾಗಿದೆ. "ब्रह्म च वेदः वेद(ब्रह्म)शब्देन वैदिकं कर्मोच्यते — वैदिकं यज्ञादिकम् — यज्ञादिकं कर्म ओंतत्सदिति शब्दान्वितं भवति"। "सद्भावे साधुभावे च सदित्येतत् प्रयुज्यते। प्रशस्ते कर्मणि तथा सच्छब्दः पार्थ युज्यते" गीता १७-२६।

**सतत ಸತತ** (वि०) 1. ನಿತ್ಯವಾದ, ಶಾಶ್ವತವಾದ, ಎಂದೆಂದಿಗೂ ಇರುವ. सन्तन्यते स्म — सम् + तनु (विस्तारे) "क्तः" (३-४-७२)। नलोपः (६-४-३७)। समो मकारस्य वा लोपः (वा० ६-१-१४४)। पक्षे सन्ततम् ಸಂತತಮ್. "त्रिस्रोतसः सन्ततधारसम्भः" माघ० ३-१०। 2. ಅವಿಚ್ಛಿನ್ನವಾದ, ಎಡೆಬಿಡದ. "नेत्रा नीताः सततगतिना यद्विमानाग्रभूमीः" मेघ० २-६। (अव्य०) 3. ಅವಿಚ್ಛಿನ್ನವಾಗಿ, ಎಡೆಬಿಡದೆ. 4. ಯಾವಾ

ಗಲೂ, ನಿರಂತರವಾಗಿ, ಎಂದೆಂದಿಗೂ. "निलयः श्रियः सततमेतदिति प्रथितं यदेव जलजन्म तथा" माघ० ९-१६।

**सति ಸತಿ** (स्त्री०) 1. ದಾನ, ಕೊಡುಗೆ. षणु (दाने) "क्तिच" (३-३-१७४)। वा नलोपः (६-४-४५)। पक्षे सन्तिः ಸಂತಿಃ. 2. ಅಂತ್ಯ, ಅವಸಾನ, ಪ್ರಳಯ.

**सती ಸತೀ** (स्त्री०)1. ದುರ್ಗಾದೇವಿ, ಪಾರ್ವತಿ. (ಪೂರ್ವ ಜನ್ಮದ ಹೆಸರು). 2. ಪತಿವ್ರತೆಯಾದ ಹೆಂಗಸು, ಸಾಧ್ವಿ. [ದಕ್ಷನ ಯಾಗಕ್ಕಾಗಿ ಬಂದಿದ್ದ ಸತೀದೇವಿಯು (ದಕ್ಷನ ಪುತ್ರಿ ಮತ್ತು ಪರಮೇಶ್ವರನ ಪತ್ನಿ) ತನ್ನನ್ನು ಪ್ರೀತಿ ವಿಶ್ವಾಸಗಳಿಂದ ಕಾಣದೆ ತಿರಸ್ಕಾರಭಾವದಿಂದ ನೋಡಿದ ತಂದೆಯ ಮೇಲಿನ ಆಗ್ರಹದಿಂದ ಶರೀರತ್ಯಾಗಮಾಡಿ ಪರ್ವತರಾಜನ ಪುತ್ರಿಯಾಗಿ ಜನಿಸಿ ಮತ್ತೆ ಪರಮೇಶ್ವರ ನನ್ನು ಮದುವೆಯಾದಳು.] "अथावमानेन पितुः प्रयुक्ता दक्षस्य पुत्री भवपूर्वपत्नी। सती सती योगविसृष्टदेहा तां जन्मने शैलवधूं प्रपेदे" कुमा० १-२१।

**सतीन(क) ಸತೀನ(ಕ)** (पुं०) ನೆಲಗಡಲೆಕಾಯಿ. सति जीवे इनः प्रभुः। स्वार्थे "कन्"। "कलायस्तु सतीनकः। हरेणुखण्डिकौ चास्मिन्" अम०।

**सतीर्थ ಸತೀರ್ಥ** (पुं०) ಸಮಾನವಾದ ಗುರುವುಳ್ಳ ವಿದ್ಯಾರ್ಥಿಗಳು, ಸಹಾಧ್ಯಾಯಿ, ಒಬ್ಬ ಗುರುವಿನಲ್ಲೇ ವಿದ್ಯಾಭ್ಯಾಸ ಮಾಡಿದ ಜೊತೆಯ (ಸಂಗಡಿಗ) ವಿದ್ಯಾರ್ಥಿಗಳು. समानः तीर्थो गुरुर्यस्य।

**सतीर्थ्य ಸತೀರ್ಥ್ಯ** (पुं०) ಒಬ್ಬನೇ ಉಪಾಧ್ಯಾಯನುಳ್ಳ ವಿದ್ಯಾರ್ಥಿಗಳು. ಒಬ್ಬ ಗುರುವಿನಲ್ಲೇ ವಿದ್ಯಾಭ್ಯಾಸ ಮಾಡಿದ (ಸಂಗಡಿಗ) ವಿದ್ಯಾರ್ಥಿಗಳು. समाने तीर्थे गुरौ वसति — सतीर्थ "यत्" (४-४-१०७)। "सतीर्थ्या-स्त्वेकगुरवः" अम०। "स्यात् सतीर्थः सतीर्थ्योऽपि तथैकगुरुरित्यपि"।

**सतील(क) ಸತೀಲ(ಕ)** (पुं०) ನೆಲಗಡಲೆಕಾಯಿ. तीलेन तीलवत् श्लक्ष्णवर्णेन सह वर्तते — स्वार्थे "कन्"।

**सतेर ಸತೇರ** (पुं०) ತುಷ, ಧಾನ್ಯದ ಹೊಟ್ಟು, ಧಾನ್ಯದ ಸಿಪ್ಪೆ.

**सत्कर्तृ ಸತ್ಕರ್ತೃ** (पुं०) ವಿಷ್ಣು. सत्करोति सज्जनान् पूजयति—सज्जनप्रतिपूजकः इत्यर्थः। "सत्कर्ता यः स विज्ञेयः सज्जनप्रतिपूजकः" इति निरुक्तिः। "सत्कर्ता सत्कृतिः साधुः जह्नुर्नारायणो नरः" वि० स०।

**सत्कर्मन् ಸತ್ಕರ್ಮನ್** (न०) ಸತ್ಕಾರ್ಯ, ಶಾಸ್ತ್ರವಿಹಿತ ವಾದ ಒಳ್ಳೆಯ ಕಾರ್ಯ. सत् प्रशस्तं कर्म। "सत्कर्म-योग्यो न जनो नैवाप: शौचकारणम्। यस्मिन्ननुदिते तस्मै नमो देवाय भास्वते" विष्णुपु०।

**सत्काण्ड ಸತ್ಕಾಂಡ** (पुं०) ಗಿಡುಗ ಪಕ್ಷಿ, ಡೇಗೆ ಹಕ್ಕಿ.

**सत्कार ಸತ್ಕಾರ** (पुं०) 1. ಆದರಪೂರ್ವಕ ಮರ್ಯಾದೆ ಯಿಂದ ಕಾಣುವುದು, ಆತಿಥ್ಯ ನೀಡುವುದು, ಅತಿಥಿಯನ್ನು ಗೌರವಿಸಿ ಉಪಚರಿಸುವುದು. सत् + डुकृञ् (करणे) "घञ्" (३-३-१८)। "सत्कारमानपूजार्थं तपो दम्भेन चैव यत्। क्रियते तदिह प्रोक्तं राजसं चलम-ध्रुवम्" गीता १७-१८। "विधिप्रयुक्तसत्कारैः स्वयं मार्गस्य दर्शकः" कुमा० ६-५२। 2. ಉತ್ಸವ, ಹಬ್ಬ. ಸಂತೋಷಸಮಾರಂಭ. "तस्मादेताः सदा पूज्या भूषणाच्छादनाशनैः। भूतिकामैर्नरैर्नित्यं सत्कारेषूत्सवेषु च" मनु० ३-५९। 3. ಆದರ. "पुनरुद्दीपयामास सत्कारेण गरीयसा" याद० २२-८३।

**सत्कुल ಸತ್ಕುಲ** (न०) ಸದ್ವಂಶ, ಒಳ್ಳೆಯ ವಂಶ, ಸದಾಚಾರಸಂಪನ್ನರಾದವರ ವಂಶ. सतां कुलम्।

**सत्कुलीन ಸತ್ಕುಲೀನ** (वि०) ಸದ್ವಂಶದಲ್ಲಿ ಜನಿಸಿದವನು. सत्कुले जातः—सत्कुल "खः" (४-१-१३९)।

**सत्कृत ಸತ್ಕೃತ** (पुं०) 1. ವಿಷ್ಣು. सत् + कृञ् "क्तः" (३-२-१०२)। "अर्चादिभिः सज्जनैर्यः पूजितः सत्कृतः स्मृतः" इति निरुक्तिः। "सत्कर्ता सत्कृतः साधुः" वि० स०। (वि०) 2. ಆದರದಿಂದ ಗೌರವಿಸ ಲ್ಪಟ್ಟ. 3. ಗೌರವಿಸಿ ಉಪಚರಿಸಲ್ಪಟ್ಟ. सत् + डुकृञ् (करणे) "क्तः" (३-२-१०२)। "त्वयि भक्तिमता न सत्कृतः कुरुराजा गुरुरेव चेदिपः" माघ० १६-४५। 4. ಸಂಮಾನಿಸಲ್ಪಟ್ಟ, ಗೌರವಿಸಲ್ಪಟ್ಟ. "यावन्न सत्कृतै-र्भर्तुः स्नेहस्यानृण्यमिच्छुभिः" माघ० १९-५७।

**सत्क्रिया ಸತ್ಕ್ರಿಯಾ** (स्त्री०) 1. ದೋಷಪರಿಹಾರ ಪೂರ್ವಕ ಶುದ್ಧಿಗಾಗಿ ಮಾಡುವ ಪವಿತ್ರವಾದ ಕಾರ್ಯ. सती क्रिया। "व[illegible]रपूर्वमखिलासु सत्क्रियालब्धशुद्धिषु धनानि बीजवत्। [illegible]वि बिभ्रति फलं महद्द्विजक्षेत्रभूमिषु नराधिपोऽवपत्" माघ० १४-३४। 2. ಸಂಸ್ಕಾರ. "ततो नृपे तक्षकतेजसा हते प्रयुज्य सर्वाः परलोकसत्क्रियाः" भा० आदि०। 3. ಸಂಮಾನ, ಗೌರವಿಸುವುದು. 4. ಪರಿಷ್ಕರಿಸುವುದು, ಶುದ್ಧಿಕಾರ್ಯ.

**सत्तम ಸತ್ತಮ** (वि०) 1. ಬಹಳ ಶ್ರೇಷ್ಠನಾದ, ಎಲ್ಲರಿ ಗಿಂತಲೂ ಮಿಗಿಲಾದ, ಉತ್ತಮೋತ್ತಮನಾದ. अयमेषा-मतिशयेन सन्—सत् "तमप्" (५-३-५५)। "नायं

लोकोऽस्त्ययज्ञस्य कुतोऽन्यः कुरुसत्तम" गीता ४-३१। 2. ಹೆಚ್ಚಾಗಿ ಪೂಜಿಸಲ್ಪಡುವ, ಹೆಚ್ಚು ಗೌರವಕ್ಕೆ ಅರ್ಹನಾದ. 3. ಬಹಳ ಒಳ್ಳೆಯದಾದ. "सत्तमः स्यात्पूज्यतमे साधीयस्युत्तमे त्रिषु" मेदि०।

**सत्ता ಸತ್ತಾ** (स्त्री०) 1. ಸ್ಥಿತಿ, ಇರುವಿಕೆ. सतो भावः "तल्" (५-१-११९)। घटो भवति ಎಂಬಲ್ಲಿ भू ಧಾತುವಿನ ಅರ್ಥ. ಇಲ್ಲಿ ಕಾಲಸಂಬಂಧವಿರುವುದು. "सत्तामनन्यामिव सद्गणानां यथाश्रुतं प्रेक्षत यादवेन्द्रः" याद० १३-२। 2. ಸಾಧುತ್ವ, ಒಳ್ಳೆಯದಾಗಿರುವಿಕೆ. 3. ನಿಜವಾಗಿರುವಿಕೆ, ಯಥಾರ್ಥವಾಗಿರುವಿಕೆ, ಸತ್ಯವಾಗಿರುವಿಕೆ. 4. (ವಿಶಿಷ್ಟಾದ್ವೈತ ಮತದಲ್ಲಿ) ಆದ್ಯಕ್ಷಣ ಸಂಬಂಧ. 5. ಕಾಲದಲ್ಲಿರುವ ಅಧಿಕರಣತ್ವ. 6. ಉತ್ಪತ್ತಿ. 7. (ಅದ್ವೈತ ಮತದಲ್ಲಿ (1) ಪಾರಮಾರ್ಥಿಕ (2) ವ್ಯಾವಹಾರಿಕ ಮತ್ತು (3) ಪ್ರಾತಿಭಾಸಿಕ (ಪ್ರಾತೀತಿಕ) ಗಳೆಂದು ಸತ್ತೆಯು ಮೂರು ವಿಧ. ಕಾಲತ್ರಯದಲ್ಲೂ ಅಬಾಧಿತವಾದ ಬ್ರಹ್ಮದ ಸತ್ತೆಯು ಪಾರಮಾರ್ಥಿಕ. ವ್ಯವಹಾರಕಾಲದಲ್ಲಿ ಮಾತ್ರ ಅಬಾಧಿತವಾದ ಘಟಾದಿಗಳ ಸತ್ತೆಯು ವ್ಯಾವಹಾರಿಕ. ಪ್ರತಿಭಾಸಕಾಲದಲ್ಲಿ ಮಾತ್ರವಿರುವುದರಿಂದ ಶುಕ್ತಿಯಲ್ಲಿ ರಜತಾದಿಗಳ ಸತ್ತೆಯು ಪ್ರಾತಿಭಾಸಿಕ. 8. (ಬೌದ್ಧಮತದಲ್ಲಿ) ಕ್ಷಣಿಕ. 9. (ವೈಶೇಷಿಕಮತದಲ್ಲಿ) ಸಾಮಾನ್ಯ. ಇದು ದ್ರವ್ಯಗುಣ ಕರ್ಮನಿಷ್ಠವಾದುದು.

**सत्र ಸತ್ರ** (न०) 1. ಯಜ್ಞ, ಯಾಗ. सतः सत्पुरुषान् त्रायते—त्रैङ् (पालने) "कः" (३-२-३)। 2. ವಿಷ್ಣು. "क्रतुः सत्रं सतांगतिः" वि० स०। 3. ಔದಾರ್ಯ, ಧಾರಾಳವಾಗಿ ದಾನಮಾಡುವುದು. 4. ಆಚ್ಛಾದನ, ಮುಚ್ಚುವುದು. 5. ಅರಣ್ಯ, ಕಾಡು. "अयमेव मृगव्यसत्रकामः प्रहरिष्यन् मयि मायया शमस्थे" किरा० १३-९। 6. ಕಪಟ, ಕತ್ತಿರೋಪಾಯ, ವ್ಯಾಜ. "सत्रेण नूनं छन्नं हि चरन्तं पार्थमर्जुनम्। उत्तरः सारथिं कृत्वा निर्यातो नगराद्वहिः" भा० विरा० ३६-३८। "सत्रं यज्ञे सदादानाच्छादनारण्यकेतवे" मेदि०।

**सत्त्रिन् ಸತ್ರಿನ್** (पुं०) 1. ಗೃಹಸ್ಥ, ಗೃಹಪತಿ. सत्रमस्त्यस्य "इनिः" (५-२-११५)। (वि०) 2. ನಿತ್ಯವೂ ಅನ್ನದಾನಾದಿಗಳನ್ನು ಮಾಡುವವನು. 3. ನಿತ್ಯವೂ ಯಾಗಮಾಡುವವನು. 4. ಋತ್ವಿಕ್ಕು, ಯಾಗನಿರ್ವಾಹಕ. ಯಾಗದಲ್ಲಿ ಉಂಟಾಗಬಹುದಾದ ಲೋಪದೋಷಗಳನ್ನು ಗಮನಿಸಿ ಯಾಗವನ್ನು ಸರಿಯಾಗಿ ನಡೆಯಿಸಿಕೊಡುವವನು ಋತ್ವಿಕ್ಕು. सत्रं यज्ञतन्त्रमस्यास्ति "इनिः"। "सत्यमेतद्भवानाह स मां जानाति सत्रिणम्" भा०। "अत्यशेरत परस्परं धियः सत्रिणां नरपतेश्च संपदः" माघ० १४-३२।

**सत्त्व ಸತ್ತ್ವ** (न०) 1. ದ್ರವ್ಯ, ವಸ್ತು. सतो भावः "त्वः" (५-१-११९)। 2. ಬಲ, ವೀರ್ಯ, ಶಕ್ತಿ. "अन्यदुच्छृङ्खलं सत्त्वमन्यच्छास्त्रनियन्त्रितम्" माघ० २-६२। 3. ಗುಣತ್ರಯದಲ್ಲೊಂದಾದ ಸತ್ತ್ವಗುಣ. "सत्त्वं रजस्तम इति प्रकृतेर्गुणास्तैर्युक्तः परः पुरुष एक इहास्य धत्ते" भाग० १-२-२३। "आगताद्व्यवसितेन चेतसा सत्त्वसंपदविकारिमानसः" माघ० १४-४४। "सत्त्वात्सञ्जायते ज्ञानं रजसो लोभ एव च। प्रमादमोहौ तमसः भवतोऽज्ञानमेव च" गीता १४-१७। 4. ಪ್ರಾಣ, ಜೀವ. "चित्रे निवेश्य परिकल्पितसत्त्वयोगा रूपोच्चयेन मनसा विधिना कृता नु" शाकु० २-९। 5. ಪ್ರಕೃತಿ, ಸ್ವಭಾವ. "सत्त्वविहितमतुलं भुजयोर्बलमस्य पश्यत मृधेऽविकुप्यतः" किरा० १२-३९। 6. ವ್ಯವಸಾಯ, ಉದ್ಯೋಗ. 7. ಪಿಶಾಚ. (न०) 8. ಚಿತ್ತ, ಮನಸ್ಸು, ಅಂತಃಕರಣ. "आहारशुद्धौ सत्त्वशुद्धिः सत्त्वशुद्धौ ध्रुवा स्मृतिः" छान्दोग्य० ७-२६-२। 9. ಅಂತರ್ಗತವಾದ ಬಲ, ಧೈರ್ಯ, ಮನೋಬಲ. "जनस्य साकेतनिवासिनस्तौ द्वावप्यभूतामभिनन्द्यसत्त्वौ" रघु० ५-३१। "क्रियासिद्धिः सत्त्वे भवति महतां नोपकरणे"। 10. ಜ್ಞಾನ. "आयुःसत्त्वबलारोग्यसुखप्रीतिविवर्धनाः। रस्याः स्निग्धा स्थिरा हृद्या आहाराः सात्त्विकप्रियाः" गीता १७-८। "सत्त्वमन्तःकरणम्, अन्तःकरणकार्यं ज्ञानमिह सत्त्वशब्देनोच्यते" रामानुजभाष्यम्। 11. ಪ್ರಜ್ಞೆ, ವಿವೇಕ. 12. ಆಯುಸ್ಸು. 13. ಆತ್ಮ. 14. ಸತ್ತೆ, ಸ್ಥಿತಿ, ಇರುವಿಕೆ. ಇದು ಪಾರಮಾರ್ಥಿಕ ವ್ಯಾವಹಾರಿಕ ಮತ್ತು ಪ್ರಾತಿಭಾಸಿಕಗಳೆಂದು ಮೂರು ವಿಧ. (1) ಕಾಲತ್ರಯದಲ್ಲೂ ಅಬಾಧಿತವಾದ ಬ್ರಹ್ಮದ ಸತ್ತೆಯು ಪಾರಮಾರ್ಥಿಕಸತ್ತ್ವ. (2) ವ್ಯವಹಾರದ ಕಾಲದಲ್ಲಿ ಮಾತ್ರ ಅಬಾಧಿತವಾದ ಸತ್ತೆಯು ವ್ಯಾವಹಾರಿಕ ಸತ್ತ್ವ. (3) ಪ್ರತಿಭಾಸಕಾಲದಲ್ಲಿ ಮಾತ್ರವಿರುವುದರಿಂದ ಶುಕ್ತಿಯಲ್ಲಿ ರಜತಾದಿಗಳ ಸತ್ತೆಯು ಪ್ರಾತಿಭಾಸಿಕ ಸತ್ತ್ವ. "कालत्रये ज्ञातृकाले प्रतीतिसमये तथा। बाधाभावात्पदार्थानां सत्त्वत्रैविध्यमिष्यते॥ तात्त्विकं ब्रह्मणः सत्त्वं व्योमादेर्व्यावहारिकम्। रूप्यादेरर्थजातस्य प्रातिभासिकमिष्यते" स० द० सं०। 15. ಬ್ರಹ್ಮಜ್ಞಾನ. "अस्ति ब्रह्मेति चेद्वेद"। 16. ಶರೀರದ ಸಾರ.

17. ಧನ. 18. ಆತ್ಮಭಾವ. "सत्त्वं द्रव्ये गुणे चित्ते व्यवसायस्वभावयोः। पिशाचादावात्मभावे बले प्राणेषु जन्तुषु" हेम०। "सत्त्वं गुणे पिशाचादौ बले द्रव्यस्वभावयोः। आत्मत्वे व्यवसायासुचित्तेष्वस्त्री तु जन्तुषु" मेदि०। (ಪುಂನ०) 19. ಪ್ರಾಣಿ, ಚತುಷ್ಪಾಜ್ಜಂತು. "रक्षापदेशान्मुनिहोमधेनोर्वन्यान्विनेष्यन्निव दुष्टसत्त्वान्" रघु० २-८। (ನ०) 20. ಕುಬೇರ.

**सत्त्वलक्षण ಸತ್ತ್ವಲಕ್ಷಣ** (ನ०) ಗರ್ಭದ ಚಿಹ್ನೆ, ಗರ್ಭದ ಲಕ್ಷಣ. सत्त्वस्य लक्षणम्। "तत्कथमिमामभिव्यक्तसत्त्वलक्षणां प्रत्यात्मानं क्षेत्रिणमाशङ्कमानः प्रतिपत्स्ये" शाकु० ५।

**सत्त्ववत् ಸತ್ತ್ವವತ್** (ವಿ०) ವಿಷ್ಣು. सत्त्वं परमप्रकाशलाघवसुखसम्पदा मोक्षमूलं साक्षादधिष्ठेयमस्यास्ति— सत्त्व "मतुप्" (५-२-९४)। "प्रकाशलाघवसुखसम्पदा मोक्षसाधनम्। सत्त्वं साक्षादधिष्ठेयं यस्यासौ सत्त्ववान् श्रुतः" इति निरुक्तिः। "सत्त्ववान् सात्त्विकः सत्यः" वि० स०।

**सत्त्वविप्लव ಸತ್ತ್ವವಿಪ್ಲವ** (ಪುಂ०) ಸತ್ತ್ವಗುಣದ ನಾಶ, ಸತ್ತ್ವಗುಣವನ್ನು ಕಳೆದುಕೊಳ್ಳುವಿಕೆ. सत्त्वस्य विप्लवः।

**सत्त्वविहित ಸತ್ತ್ವವಿಹಿತ** (ವಿ०) ಸತ್ತ್ವಗುಣದಿಂದ ಉಂಟಾದ. सत्त्वेन सत्त्वगुणेन विहितम्।

**सत्त्ववृत्ति ಸತ್ತ್ವವೃತ್ತಿ** (ವಿ०) ಸತ್ತ್ವಗುಣದಲ್ಲೇ ಇರುವ, ಸತ್ತ್ವಗುಣದ ಕಾರ್ಯವನ್ನೇ ಮಾಡುವ. सत्त्वे वृत्तिः वर्तनं यस्य। "सत्त्ववृत्तिरनघः स जघान" याद० २१-३२।

**सत्त्वसम्पन्न ಸತ್ತ್ವಸಂಪನ್ನ** (ವಿ०) ಗುಣಶಾಲಿ, ಸುಶೀಲ, ಧರ್ಮಾತ್ಮ. सत्त्वं सम्पन्नः।

**सत्त्वसम्प्लव ಸತ್ತ್ವಸಂಪ್ಲವ** (ಪುಂ०) ಶಕ್ತಿಯು ಕಳೆದು ಹೋಗುವುದು, ವೀರ್ಯದ ನಾಶ, ಚೈತನ್ಯದ ನಾಶ. सत्त्वस्य सम्प्लवः।

**सत्त्वस्थ ಸತ್ತ್ವಸ್ಥ** (ವಿ०) ಸತ್ತ್ವಗುಣವನ್ನು ಹೊಂದಿರುವ, ಸತ್ತ್ವಗುಣವೇ ಪ್ರಧಾನವಾಗಿರುವ. सत्त्वे तिष्ठति— ष्ठा (गतिनिवृत्तौ) "कः" (३-२-४)। ಸತ್ತ್ವಗುಣವೇ ಪ್ರಧಾನವಾಗಿರುವವರು ಕ್ರಮವಾಗಿ ಸಂಸಾರ ಬಂಧನದಿಂದ ವಿಮುಕ್ತರಾಗಿ ಮೋಕ್ಷ ಹೊಂದುವರು. "ऊर्ध्वं गच्छन्ति सत्त्वस्थाः मध्ये तिष्ठन्ति राजसाः। जघन्यगुणवृत्तिस्था अधो गच्छन्ति तामसाः" गीता १४-१८।

**सत्पथ ಸತ್ಪಥ** (ಪುಂ०) ಒಳ್ಳೆಯಮಾರ್ಗ. संश्चासौ पन्थाश्च "अः" (५-४-७४)। "ज्ञानमज्ञाततत्त्वाय यो दद्यात् सत्पथेऽमृतम्"। "पण्डितप्रहतेनैव सत्पथेन सदोदिताः" याद० २२-१५।

**सत्पथाचार ಸತ್ಪಥಾಚಾರ** (ಪುಂ०) ವಿಷ್ಣು. सत्पथे सन्मार्गे स्वाभाविकसात्त्विकदास्यमार्गे आचारः आचरणं (ण्यन्तः) प्रवर्तनमस्य। "ऊर्ध्वगः सत्पथाचारः" वि० स०। "सत्पथाचार इत्युक्तः सन्मार्गे तत्प्रवर्तनात्" इति निरुक्तिः।

**सत्परायण ಸತ್ಪರಾಯಣ** (ಪುಂ०) ವಿಷ್ಣು. सन्तः स्वप्राणभूततया स्वात्मतया च परायणमस्य। ಪರಮಾತ್ಮನಿಗೆ ಸತ್ಪುರುಷರೆಲ್ಲರೂ ಪ್ರಾಣಸಮಾನರು. "मम प्राणा हि पाण्डवाः"। "पाण्डवानां भवान्नाथः भवन्तञ्चाश्रिता वयम्" भा० सभा०। "ज्ञानीत्वात्मैव मे मतम्" गीता ७-१८। "सद्गतिः सत्कृतिः सत्ता सद्भूतिः सत्परायणः" वि० स०।

**सत्पुत्र ಸತ್ಪುತ್ರ** (ಪುಂ०) ಸುಪುತ್ರ, ವೇದೋಕ್ತವಾದ ಪಿತೃಕಾರ್ಯಾದಿಗಳನ್ನು ಆಚರಿಸುವ ಪುತ್ರ. संश्चासौ पुत्रश्च। "पुत्" ಎಂಬ ನರಕದಿಂದ ರಕ್ಷಿಸುವವನಾದುದರಿಂದ ಪುತ್ರನಾದನು. "पुन्नाम्नो नरकाद्यस्मात् त्रायते पितरं सुतः। तस्मात् पुत्र इति प्रोक्तः स्वयमेव स्वयंभुवा" मनु० ९-१३८।

**सत्पुरुष ಸತ್ಪುರುಷ** (ಪುಂ०) ಸಜ್ಜನ, ಗೌರವಾರ್ಹನಾದ ಮನುಷ್ಯ, ಪೂಜ್ಯನಾದ ಪುರುಷ, ಇತರರ ಕ್ಷೇಮವನ್ನು ಬಯಸುವ ಮನುಷ್ಯ. संश्चासौ पुरुषश्च। "एकः सत्पुरुषो लोके लक्ष्मणः सह सीतया। योऽनुगच्छति काकुत्स्थं रामं परिचरन् वने" रामा०। "एते सत्पुरुषाः परार्थघटकाः स्वार्थान् परित्यज्य ये" भर्तृ० १-६४।

**सत्प्रतिग्रह ಸತ್ಪ್ರತಿಗ್ರಹ** (ಪುಂ०) ಸತ್ಪುರುಷರಿಂದ ಸ್ವೀಕರಿಸುವ ದಾನ. सद्भ्यः सत्पुरुषेभ्यः प्रतिग्रहो दानस्वीकारः।

**सत्प्रतिपक्ष ಸತ್ಪ್ರತಿಪಕ್ಷ** (ಪುಂ०) ದುಷ್ಟಹೇತು, ಐದು ವಿಧ ಹೇತ್ವಾಭಾಸಗಳಲ್ಲೊಂದು. संश्चासौ प्रतिपक्षश्च। बाधोपस्थितिसमर्थपरामर्शकालीनसाध्यसिद्धिसमर्थपरामर्शविषयः। यस्य साध्याभावसाधकं हेत्वन्तरं विद्यते स सत्प्रतिपक्षः। "पर्वतो वह्निमान् धूमात् महानसवत्" ಎಂಬಲ್ಲಿ ಸಾಧ್ಯಸಾಧಕವಾದ ಹೇತು ಧೂಮ. "पर्वतो

वह्न्यभाववान् पाषाणमयत्वात् कुडचवत्" ಇಲ್ಲಿ ಸಾಧ್ಯಾಭಾವ ಸಾಧಕವಾದ ಪಾಷಾಣಮಯತ್ವ ದುಷ್ಟಹೇತು.

**सत्य ಸತ್ಯ** (ಪುಂ) 1. ವಿಷ್ಣು. "यथार्थवैभव: सत्य: सर्वशास्त्रेषु विश्रुत:" इति निरुक्ति:। "सत्त्ववान् सात्त्विक: सत्य:" वि० स०। "औत्तरेऽप्यन्तरे विष्णु: सत्यै: सह स्वधोत्तमै:। सत्यायामभवत्सत्य: सत्यरूपो जनार्दन:" कूर्मपु०। ವಿಷ್ಣುವು ಸತ್ಯಸ್ವರೂಪನು, ಸತ್ಯಸಂಕಲ್ಪನು. ಸತ್ಯಸ್ವರೂಪವಾದ ಜಗತ್ತಿಗೆ ಕಾರಣನು. ಸಮಸ್ತ ಜಗತ್ತಿಗಿಂತಲೂ ವಿಲಕ್ಷಣನು. ಸೃಷ್ಟಿ, ಸ್ಥಿತಿ ಮತ್ತು ಪ್ರಳಯ ಕಾಲತ್ರಯದಲ್ಲೂ ಏಕರೂಪದಿಂದಿರುವವನು. "सत्यव्रतं सत्यपरं त्रिसत्यं सत्यस्य योनिं निहितं च सत्ये। सत्यस्य सत्यमृतसत्यनेत्रं सत्यात्मकं त्वां शरणं प्रपन्ना" भाग० १०-२-२६। 2. ಸತ್ಯಲೋಕ, ಬ್ರಹ್ಮಲೋಕ. **ಭೂಮಿಗೂ ಸತ್ಯಲೋಕಕ್ಕೂ ಇರುವ ಅಂತರ:** ಭೂಮಿಯ ಮೇಲುಗಡೆ ಒಂದು ಲಕ್ಷ ಯೋಜನ ದೂರದಲ್ಲಿ ಸೂರ್ಯಮಂಡಲ. ಅದು ಭುವರ್ಲೋಕ. ಭುವರ್ಲೋಕಕ್ಕೆ ಮೇಲುಗಡೆ ಚಂದ್ರಮಂಡಲ. ಅದಕ್ಕೆ ಮೇಲುಗಡೆ ನಕ್ಷತ್ರಲೋಕ. ಅಲ್ಲಿ ಬುಧ ಶುಕ್ರ ಅಂಗಾರಕ ಬೃಹಸ್ಪತಿ ಶನಿ ಮತ್ತು ಸಪ್ತರ್ಷಿ ಮಂಡಲಗಳು. ಅದಕ್ಕೆ ಮೇಲುಭಾಗದಲ್ಲಿ ಧ್ರುವಲೋಕ. ಸೂರ್ಯಮಂಡಲ ಮೊದಲುಗೊಂಡು ಧ್ರುವಲೋಕದವರೆಗೆ ಸ್ವರ್ಗಲೋಕ (ಸ್ವರ್ಲೋಕ). ಇದಕ್ಕೆ ಮೇಲುಗಡೆ ನಾಲ್ಕು ಲಕ್ಷ ಯೋಜನಗಳ ದೂರದಲ್ಲಿ ಕೋಟಿಯೋಜನ ವಿಸ್ತಾರವಾದ ಮಹರ್ಲೋಕವಿರುವುದು. ಇದಕ್ಕೆ ಎರಡರಷ್ಟು ವಿಸ್ತಾರವುಳ್ಳದ್ದು ಜನಲೋಕ. ಇದಕ್ಕೆ ನಾಲ್ಕರಷ್ಟು ವಿಸ್ತಾರವುಳ್ಳದ್ದು ತಪೋಲೋಕ. ಆ ತಪೋಲೋಕಕ್ಕೂ ಮೇಲುಗಡೆ ಹನ್ನೆರಡು ಕೋಟಿ ಯೋಜನದ ವಿಸ್ತಾರವುಳ್ಳದ್ದು ಸತ್ಯಲೋಕ. "भूमेरुपरि लक्षयोजनात् सूर्यमण्डलम्। तदेव भुवर्लोक:। तदुपरि चन्द्रमण्डलम्। तस्मादुपरि नक्षत्रबुधशुक्राङ्गारकबृहस्पतिशनिसप्तर्षिमण्डलानि। तदुपरि ध्रुव:। सूर्यमण्डलमारभ्य ध्रुवलोकपर्यन्तं स्वर्लोक:। चतुर्लक्षादुपरि कोटियोजनोच्छ्रायो महर्लोक:। तस्माद्द्विगुणो जनलोक:। ततश्चतुर्गुणस्तपोलोक:। तस्मात् द्वादश कोटयुच्छ्राय: सत्यलोक:" यतीन्द्रम० दी०। 3. ಶ್ರೀರಾಮ. "कौसल्यानन्दन: श्रीश: सत्यो दशमुखान्तक:"। 4. ಅಶ್ವತ್ಥವೃಕ್ಷ, ಅರಳಿ ಮರ. 5. ನಾಂದೀಮುಖಿಶ್ರಾದ್ಧ ದೇವತೆ. "सत्यो नान्दीमुखे वसु:"। (ನಂ) 6. ನಿಜ, ಯಥಾರ್ಥ. सते हितम् "यत्" (५-१-५)। सति साधु "यत्" (४-४-९८) वा। "सत्यं ब्रूह्यनुयाहि साधुपदवीं सेवस्व विद्वज्जनम्" भर्तृ० १-६९। 7. ಕೃತಯುಗ, ಸತ್ಯಯುಗ. 8. ಶಪಥ, ಪ್ರತಿಜ್ಞೆ. (ವಿಂ) 9. ನಿಜವಾದ, ಯಥಾರ್ಥವಾದ. "सत्यानुभावववसुदेवसुतप्रसत्यै सम्भूतदिक्पतिविभूतिरिवाबभासे" याद० २२-२४१।

**सत्यकाम ಸತ್ಯಕಾಮ** (ವಿಂ) ಯಥಾರ್ಥವಾದುದನ್ನು ಅಪೇಕ್ಷಿಸುವವನು. सत्यं कामयते — कम् (कान्तौ) + णिङ् "अण्" (३-२-१)।

**सत्यङ्कार ಸತ್ಯಂಕಾರ** (ವಿಂ) ಶಪಥಮಾಡುವವನು, ಪ್ರತಿಜ್ಞೆಮಾಡುವವನು. सत्यस्य कार: — कृञ् भावे "घञ्" (३-३-१८)। मुमागम: (६-३-७०)।

**सत्यनारायण ಸತ್ಯನಾರಾಯಣ** (ಪುಂ) ಪರಮಾತ್ಮ, ಶ್ರೀಮನ್ನಾರಾಯಣ.

**सत्यनारायणव्रत ಸತ್ಯನಾರಾಯಣವ್ರತ** (ನಂ) ಭಕ್ತಿ ಶ್ರದ್ಧೆಗಳಿಂದ ಆಚರಿಸುವ ಪರಮಾತ್ಮನ ಪೂಜಾರೂಪವಾದ ಒಂದು ವ್ರತ. **ಈ ಪೂಜಾರೂಪ ವ್ರತದ ಫಲ:** ಕಲಿಯುಗದಲ್ಲಿ ಮನುಷ್ಯನು ಪುಣ್ಯಕಾರ್ಯವಿಮುಖನಾಗಿ ಪಾಪಕಾರ್ಯಗಳಲ್ಲೇ ನಿರತನಾಗಿರುವುದರಿಂದ ಆಧ್ಯಾತ್ಮಿಕ ಶಕ್ತಿಯು ಸಂಪೂರ್ಣವಾಗಿ ನಶಿಸಿಹೋಗಿ ಕೇವಲ ಅನ್ನಗತ ಪ್ರಾಣನಾಗಿಯೇ ಉಳಿಯುವವನು. ಇದರಿಂದ ನಿರ್ಧನನಾಗಿಯೂ ಅಲ್ಪಾಯುಸ್ಸುಳ್ಳವನಾಗಿಯೂ ನಾನಾ ವ್ಯಾಧಿಗಳಿಂದ ಪೀಡಿತನಾಗಿಯೂ ಆಗಿ ನಾನಾ ವಿಧ ಸಂಕಷ್ಟಗಳನ್ನು ಅನುಭವಿಸಬೇಕಾಗುವುದು. ಈ ಕಷ್ಟಪರಿಹಾರಕ್ಕಾಗಿ ಸತ್ಯನಾರಾಯಣವ್ರತವನ್ನು ಆಚರಿಸಬೇಕು. "व्रतमस्ति महापुण्यं स्वर्गे च भुवि दुर्लभम्। तव स्नेहान्मया विप्र प्रकाशीक्रियतेऽधुना। सत्यनारायणस्यैतद्व्रतं सम्यग्विधानत:। कृत्वा सद्य: सुखं भुक्त्वा परत्र मोक्षमालभेत्"। **ಈ ವ್ರತದ ಫಲ:** "दु:खशोकादिशमनं धनधान्यविवर्धनम्। सौभाग्यसन्ततिकरं सर्वत्र विजयप्रदम्॥ यस्मिन् कस्मिन् दिने मर्त्य: भक्तिश्रद्धासमन्वित:। सत्यनारायणं देवं यजेत्तुष्टो निशामुखे। बान्धवैर्ब्राह्मणैश्चैव सहितो धर्मतत्पर:। नैवेद्यं भक्तितो दद्यात् सपादं भक्ष्यमुत्तमम्। सपादसर्वभक्ष्याणि एकीकृत्य निवेदयेत्" स्कान्द० रेवाखण्ड:।

**सत्यपुर ಸತ್ಯಪುರ** (ನಂ) ವಿಷ್ಣುಲೋಕ, ವೈಕುಂಠ. "ईप्सितञ्च फलं भुक्त्वा चान्ते सत्यपुरं वसेत्। इति व: कथितं विप्रा: सत्यनारायणव्रतम्" स्कान्द०।

**सत्यपूत ಸತ್ಯಪೂತ** (ವಿ೦) ಸತ್ಯದಿಂದ ಪರಿಶುದ್ಧವಾದ, ಸತ್ಯದಿಂದ ದೋಷರಹಿತವಾದ. सत्येन पूतम् । "दृष्टिपूतं न्यसेत्पादं वस्त्रपूतं जलं पिबेत् । सत्यपूतां वदेद्वाचं मनःपूतं समाचरेत्" मनु० ६-४६ ।

**सत्यप्रतिज्ञ ಸತ್ಯಪ್ರತಿಜ್ಞ** (ವಿ೦) ಮಾಡಿದ ಪ್ರತಿಜ್ಞೆಯನ್ನು ಈಡೇರಿಸಿದವನು, ಪ್ರತಿಜ್ಞೆಯಂತೆ ನಡೆದವನು. सत्या प्रतिज्ञा यस्य ।

**सत्यफल ಸತ್ಯಫಲ** (ಪುಂ) ಬಿಲ್ವಪತ್ರೆ ಮರ.

**सत्यभामा ಸತ್ಯಭಾಮಾ** (ಸ್ತ್ರೀ೦) ಶ್ರೀಕೃಷ್ಣನ ಅಷ್ಟ ಮಹಿಷಿಯರಲ್ಲಿ ಒಬ್ಬಳು. ಇವಳು ಸತ್ರಾಜಿತನ ಪುತ್ರಿ.

**सत्यभारत ಸತ್ಯಭಾರತ** (ಪುಂ) ವೇದವ್ಯಾಸಮಹರ್ಷಿ.

**सत्ययुग ಸತ್ಯಯುಗ** (ನಂ) ಸ್ವರ್ಣಯುಗ, ನಾಲ್ಕು ಯುಗಗಳಲ್ಲಿ ಮೊದಲನೆಯ (ಕೃತ) ಯುಗ. सत्यं युगम् । ಕೃತಯುಗದಲ್ಲಿ ಜನರೆಲ್ಲರೂ ಭಗವದ್ಧ್ಯಾನಪರರಾಗಿಯೂ ಧರ್ಮಾತ್ಮರಾಗಿಯೂ ವಿಪ್ರರೆಲ್ಲರೂ ಯಜ್ಞಯಾಗಗಳನ್ನು ಆಚರಿಸುವವರಾಗಿಯೂ ವೇದಾಭ್ಯಾಸಪರಾಯಣರಾಗಿಯೂ ಅದರಂತೆಯೇ ದೇವತೆಗಳೂ ತಕ್ಕ ಫಲಗಳನ್ನು ಕೊಡುವವರಾಗಿಯೂ ಭೂಮಿಯು ಫಲಪುಷ್ಪ ಸಮೃದ್ಧವಾಗಿಯೂ ಇದರಿಂದ ಜನರೆಲ್ಲರೂ ನಿತ್ಯ ಹೃಷ್ಟಪುಷ್ಟರಾಗಿಯೂ ಚೌರ್ಯ ವಂಚನೆ ಕಪಟ ಸುಳ್ಳು ಯಾವುದೂ ಇಲ್ಲದೆ ಜನರೆಲ್ಲರೂ ಸುಖ ಸಂತೋಷಗಳಿಂದ ಕೂಡಿದವರಾಗಿಯೂ ಇದ್ದುದರಿಂದ ಈ ಯುಗಕ್ಕೆ ಸ್ವರ್ಣಯುಗವೆಂದು ಪ್ರಸಿದ್ಧಿಯುಂಟಾಯಿತು. ಧರ್ಮಪುರುಷನು ನಾಲ್ಕು ಪಾದಗಳನ್ನೂ ಭೂಮಿಯಲ್ಲಿಟ್ಟು ರಕ್ಷಿಸುತ್ತಿದ್ದನು. ಇದರಿಂದ ಸಕಲ ವಿಧವಾದ ಸುಖ ಸಂಪತ್ತುಗಳೂ ಜನರಿಗೆ ಲಭಿಸಿದ್ದುವು. "धर्मश्चतुष्पाद-भवत् कृते पूर्णे जगत्त्रयम् । देवा यथोक्तफलदाश्चरन्ति भुवि सर्वदा । सर्वशस्या वसुमती हृष्टपुष्टजनावृता । विप्रा वेदविदः सुमङ्गलयुता नार्यस्तु चर्यावतीः पूजाहोमपराः पतिव्रतधरा यागोद्यताः क्षत्रियाः । वैश्या वस्तुषु धर्मतो विनिमयैः श्रीविष्णुपूजापराः शूद्रास्तु द्विजसेवनाद्धरिकथालापाः सपर्यापराः"। [ಕೃತಯುಗದ ಕಾಲ ಪರಿಮಾಣಕ್ಕೆ "अब्द" ಪದದಲ್ಲಿ ನೋಡಿ.]

**सत्यलोक ಸತ್ಯಲೋಕ** (ಪುಂ) ಬ್ರಹ್ಮಲೋಕ. "सत्य" ಪದದಲ್ಲಿ ನೋಡಿ.

**सत्यवचस् ಸತ್ಯವಚಸ್** (ಪುಂ) 1. ಋಷಿ. सत्यं वचो यस्य । (ವಿ೦) 2. ಸತ್ಯವಾದ ಮಾತನ್ನಾಡುವ, ನಿಜವನ್ನು ಹೇಳುವ.

**सत्यवत् ಸತ್ಯವತ್** (ಪುಂ) 1. ಸಾಲ್ವದೇಶಾಧಿಪತಿಯಾದ ದ್ಯುಮತ್ಸೇನನ ಪುತ್ರ. सत्यमस्यास्ति — "मतुप्" (५-२-९४) । मस्य वः (८-२-९) । ಇವನ ತಾಯಿ ಮತ್ತು ತಂದೆ ಇಬ್ಬರೂ ಯಾವಾಗಲೂ ಸತ್ಯವನ್ನೇ ಹೇಳುತ್ತಿದ್ದುದರಿಂದ ವಿಪ್ರರು ಇವನಿಗೆ ಸತ್ಯವಾನ್ ಎಂದು ನಾಮಕರಣ ಮಾಡಿದರು. "सत्यं वदत्यस्य पिता माता सत्यं प्रभाषते । ततोऽस्य ब्राह्मणाश्चक्रुः नामैतत् सत्यवानिति" भा० वन० । ಮದ್ರದೇಶದ ದೊರೆಯಾದ ಅಶ್ವಪತಿಯ ಮಗಳು ಸಾವಿತ್ರಿಯು ಇವನ ಪತ್ನಿ. ಸತ್ಯವಂತನ ತಂದೆಯು (ದ್ಯುಮತ್ಸೇನನು) ಕುರುಡನಾಗಿ ರಾಜ್ಯವನ್ನು ಕಳೆದುಕೊಂಡು ಅರಣ್ಯದಲ್ಲಿ ವಾಸಿಸುತ್ತಿದ್ದನು. ಸತ್ಯವಂತನು ಒಂದು ದಿನ ಸಾವಿತ್ರಿಯೊಡನೆ ಸೌದೆ ತರಲು ಹೋಗಿದ್ದಾಗ ಅಲ್ಲೇ ಅವನು ಮೃತಿಹೊಂದಲು ಯಮನು ಅವನ ಪ್ರಾಣವನ್ನು ಕೊಂಡೊಯ್ಯುವುದಕ್ಕಾಗಿ ಬಂದನು. ಸಾವಿತ್ರಿಯು ಯಮನೊಡನೆ ಬಹಳ ದೂರ ಹೋಗಿ ಪತಿಯನ್ನು ಬಿಟ್ಟು ಕೊಡಬೇಕೆಂದೂ ಇಲ್ಲದಿದ್ದರೆ ತಾನೂ ಜೊತೆಯಲ್ಲಿ ಬರುವುದಾಗಿಯೂ ಹಠಹಿಡಿದಾಗ ಯಮನು ಸತ್ಯವಂತನನ್ನು ಬದುಕಿಸಿ ಕಳುಹಿಸಿಕೊಟ್ಟನು. ದ್ಯುಮತ್ಸೇನನಿಗೆ ಕಣ್ಣುಗಳು ಬಂದು ರಾಜ್ಯವೂ ಲಭಿಸುವಂತೆ ಯಮನಿಂದ ವರ ಪಡೆದಳು. ಸತ್ಯವಂತನು ರಾಜ್ಯವನ್ನು ಪಡೆದನು. (ವಿ೦) 2. ಸತ್ಯವನ್ನು ನುಡಿಯುವವನು.

**सत्यवती ಸತ್ಯವತೀ** (ಸ್ತ್ರೀ೦) ವ್ಯಾಸಮಹರ್ಷಿಯ ತಾಯಿ. सत्यमस्त्यस्याः "मतुप्" (५-२-९४) । "ङीप्" (४-१-६) । [ಸತ್ಯವತಿಯು ಉಪರಿಚರ ವಸುವಿನ ಮಗಳು. ದಾಶರಾಜನ ಸಾಕುಮಗಳು. ಮತ್ಸ್ಯದ ಉದರದಲ್ಲಿ ಜನಿಸಿದುದರಿಂದ ಇವಳಿಗೆ ಮತ್ಸ್ಯಗಂಧಿಯೆಂದು ಹೆಸರಾಯಿತು. ಒಂದು ದಿನ ಪರಾಶರಮುನಿಯು ನದಿಯನ್ನು ದಾಟಬೇಕಾಯಿತು. ದಾಶರಾಜನು ಭೋಜನಕ್ಕೆ ಕುಳಿತಿದ್ದ ಕಾರಣ ಸತ್ಯವತಿಯು ಅವನ ಆದೇಶದಂತೆ ಮುನಿಯನ್ನು ನದಿಯ ಆಚೆ ತೀರಕ್ಕೆ ಸೇರಿಸಿದಳು. ಇವಳ ಸೌಂದರ್ಯವನ್ನು ನೋಡಿ ಪರಾಶರರು ಮೋಹಗೊಂಡು ತಮ್ಮ ಮನೋಗತವನ್ನು ತಿಳಿಸಿದರು. ಸತ್ಯವತಿಯು ಅಪೇಕ್ಷೆಯಂತೆ ಈ ವಿಷಯವು ಯಾರಿಗೂ ತಿಳಿಯಬಾರದಂತೆಯೂ ಅವಳ ಕನ್ಯಾಧರ್ಮಕ್ಕೆ ಲೋಪವುಂಟಾಗದಂತೆಯೂ ಅವಳ ದೇಹದಲ್ಲಿ ಯಾವಾಗಲೂ ಸೌಗಂಧ್ಯವೂ ಹೊಸ ಹೊಸ ತಾರುಣ್ಯವೂ ಚಿಮ್ಮುತ್ತಿರುವಂತೆಯೂ ಅವಳಉದರದಲ್ಲಿ ಅಮಾನುಷ ಶಕ್ತಿಸಂಪನ್ನನಾದ ಪುತ್ರನು ಜನಿಸುವಂತೆಯೂ ವರವನ್ನು ನೀಡಿದರು. ಆಗ ಅಪ್ರತಿಮ

ತೇಜಃಶಾಲಿಯಾದ ವ್ಯಾಸಮುನಿಯು ಜನಿಸಿದರು. ಅನಂತರ ಸತ್ಯವತಿಯು ಶಂತನುರಾಜನನ್ನು ಮದುವೆಯಾಗಿ ಚಿತ್ರಾಂಗದ ಮತ್ತು ವಿಚಿತ್ರವೀರ್ಯರೆಂಬ ಪುತ್ರರನ್ನು ಪಡೆದಳು. ಇವರಿಬ್ಬರೂ ಸಂತಾನಹೀನರಾಗಿ ಮೃತಿಹೊಂದಿದ್ದರಿಂದ ಸತ್ಯವತಿಯ ಸೂಚನೆಯಂತೆ ವಿಚಿತ್ರವೀರ್ಯನ ಪತ್ನಿಯರಾದ ಅಂಬಿಕೆ ಮತ್ತು ಅಂಬಾಲಿಕೆಯರಲ್ಲಿ ವ್ಯಾಸರಿಂದ ಧೃತರಾಷ್ಟ್ರ ಮತ್ತು ಪಾಂಡು ಇವರಿಬ್ಬರೂ ಜನಿಸಿದರು.]

**सत्यवतीसुत ಸತ್ಯವತೀಸುತ** (पुं०) ವೇದವ್ಯಾಸ ಮುನಿ.

**सत्यवाच् ಸತ್ಯವಾಚ್** (पुं०) 1. ಒಬ್ಬ ಋಷಿ. सत्या वाक् यस्य । 2. ಸಾವರ್ಣಮನುವಿನ ಪುತ್ರ. 3. ವಾಯಸ, ಕಾಗೆ. (वि०) 4. ಸತ್ಯವನ್ನು ನುಡಿಯುವವನು.

**सत्यवादिन् ಸತ್ಯವಾದಿನ್** (वि०) ನಿಜವನ್ನು ಹೇಳುವವನು, ವಾಸ್ತವವಾದ ವಿಷಯವನ್ನು ಹೇಳುವವನು. सत्यं वदति — वद (व्यक्तायां वाचि) "णिनिः" (३-२-७८)। स्त्रियां "ङीप्" (४-१-५)। **–वादिनी –ವಾದಿನೀ.**

**सत्यव्रत ಸತ್ಯವ್ರತ** (वि०) ಸತ್ಯವೇ ವ್ರತವಾಗಿ ಉಳ್ಳವನು, ಆಡಿದ ಮಾತಿನಂತೆ ನಡೆದುಕೊಳ್ಳುವವನು. सत्यमेव व्रतं यस्य ।

**सत्यसङ्गर ಸತ್ಯಸಂಗರ** (पुं०) ಕುಬೇರ. "कुतनुकुहेच्छावसवः पिशाचकी सत्यसङ्गरस्त्रिशिराः" त्रिकाण्ड० ।

**सत्यसन्ध ಸತ್ಯಸಂಧ** (पुं०) 1. ವಿಷ್ಣು. सत्या अकैतवा सन्धा प्रतिज्ञा अस्य । "सत्या प्रतिज्ञा यस्येति सत्यसन्धः स उच्यते" इति निरुक्तिः । "विनयो जयः सत्यसन्धो दाशार्हः सात्वतां पतिः" वि० स० । 2. ಜನಮೇಜಯ. 3. ಶ್ರೀರಾಮ. (वि०) 4. ಸತ್ಯವಾದ ಪ್ರತಿಜ್ಞೆಯುಳ್ಳವನು, ಆಡಿದ ಮಾತಿನಂತೆ ನಡೆದುಕೊಳ್ಳುವವನು. (स्त्री०) **–सन्धा –ಸಂಧಾ.** 5. ದ್ರೌಪದಿ.

**सत्या ಸತ್ಯಾ** (स्त्री०) 1. ಸೀತಾದೇವಿ. सत्यमस्या अस्ति "अच्" (५-२-१२७)। 2. ಸತ್ಯವತಿ, ವ್ಯಾಸಮಹರ್ಷಿಯ ತಾಯಿ. 3. ಸತ್ಯಭಾಮಾ, ಶ್ರೀಕೃಷ್ಣನ ಮಹಿಷಿಯರಲ್ಲೊಬ್ಬಳು. "आरुरुक्षू रथं सत्यामाह्वयामास केशवः" ।

**सत्याकृति ಸತ್ಯಾಕೃತಿ** (स्त्री०) ವಾಣಿಜ್ಯದ ಒಪ್ಪಂದವನ್ನು ಸ್ಥಿರಪಡಿಸುವುದು. सत्य+कृञ् "क्तिन्" (३-३-९४)। "डाच्" (५-४-६६)। ಅವಶ್ಯವಾಗಿ ಇದನ್ನು ವಿಕ್ರಯಿಸುವೆನೆಂದು ಸತ್ಯಮಾಡುವುದು.

**सत्यानृत ಸತ್ಯಾನೃತ** (न०) ವಾಣಿಜ್ಯ, ವ್ಯಾಪಾರ, ವರ್ತಕತನ. सत्यसहितमनृतम्—शाकपा० । ವ್ಯಾಪಾರದಲ್ಲಿ ಸತ್ಯ ಅಸತ್ಯ ಎರಡೂ ಇರುವುದರಿಂದ ಸತ್ಯಾನೃತವಾಯಿತು. "सत्यानृतं च वाणिज्यं तेन चैवापि जीव्यते" मनु० ४-६।

**सत्यापन ಸತ್ಯಾಪನ** (न०) 1. ವಾಣಿಜ್ಯದ ಒಪ್ಪಂದವನ್ನು ಸ್ಥಿರಪಡಿಸುವುದು. सत्यस्य करणम् — सत्य + णिच् "ल्युट्" (३-३-११५)। आपुक् आगमः । 2. ಮಾತಿನಂತೆ ನಡೆಯುವುದು, ಆಡಿದ ಮಾತನ್ನು ಪಾಲಿಸುವುದು. "युच्" । सत्यापना ಸತ್ಯಾಪನಾ.

**सत्योद्य ಸತ್ಯೋದ್ಯ** (वि०) ಸತ್ಯವಾಗಿ ಹೇಳಲ್ಪಟ್ಟ. सत्य+वद (व्यक्तायां वाचि) "क्यप्" (३-१-११४)।

**सत्रा ಸತ್ರಾ** (अव्य०) ಸಂಗಡ, ಜೊತೆ, ಕೂಡ. सह त्रायते — त्रैङ् (पालने) "क्विप्" (३-२-७६)। "साकं सत्रा समं सह" अम० ।

**सत्राजित् ಸತ್ರಾಜಿತ್** (पुं०) ಒಬ್ಬ ರಾಜ. ಸತ್ಯಭಾಮೆಯ ತಂದೆ. [ಸತ್ರಾಜಿತನು ಸೂರ್ಯನ ಭಕ್ತನಾಗಿದ್ದು ಅವನಿಂದ ಸ್ಯಮಂತಕರತ್ನವನ್ನು ಪಡೆದಿದ್ದನು. ಆ ರತ್ನವನ್ನು ಅಶುಚಿಯಾಗಿರುವಾಗ ಧರಿಸಿದರೆ ಅದು ಅವನನ್ನು ಕೊಲ್ಲುವುದೆಂದು ಸೂರ್ಯನು ಹೇಳಿದ್ದನು. ಈ ರತ್ನವು ಪ್ರತಿದಿನವೂ ಅಪಾರ ಸುವರ್ಣವನ್ನು ಕೊಡುವುದೆಂಬ ಅದರ ಮಹಿಮೆಯನ್ನು ತಿಳಿದ ಶ್ರೀಕೃಷ್ಣನು ತನಗಾಗಿ ಅದನ್ನು ಕೇಳಿದನು. ಆದರೆ ಸತ್ರಾಜಿತನು ಕೊಡಲಿಲ್ಲ. ಒಂದು ದಿನ ಅವನ ತಮ್ಮ ಪ್ರಸೇನನು ಅದನ್ನು ಧರಿಸಿ ಶ್ರೀಕೃಷ್ಣನೊಡನೆ ಅರಣ್ಯಕ್ಕೆ ಬೇಟೆಯಾಡಲು ಹೋದನು. ಒಂದು ಸಿಂಹವು ಬಂದು ಪ್ರಸೇನನನ್ನು ಕೊಂದಿತು. ಆ ರತ್ನಕ್ಕಾಗಿ ಶ್ರೀಕೃಷ್ಣನು ಪ್ರಸೇನನನ್ನು ಕೊಂದನೆಂದು ಕೃಷ್ಣನ ವಿಷಯದಲ್ಲಿ ಅಪವಾದ ಬಂದಾಗ ಶ್ರೀಕೃಷ್ಣನು ಅರಣ್ಯದಲ್ಲಿ ಮೃತನಾಗಿದ್ದ ಪ್ರಸೇನನನ್ನು ಕಂಡುಹಿಡಿದು ಮುಂದೆ ಜಾಂಬವಂತನ ಕೈಸೇರಿದ್ದ ಆ ರತ್ನವನ್ನು ತಂದು ಸತ್ರಾಜಿತಿಗೆ ಒಪ್ಪಿಸಿದನು.]

**सत्रि ಸತ್ರಿ** (पुं०) 1. ಮೇಘ, ಮೋಡ. 2. ಗಜ, ಆನೆ.

**सत्वर ಸತ್ವರ** (वि०) 1. ತ್ವರೆಯಿಂದ ಕೂಡಿದ, ವೇಗವುಳ್ಳ. त्वरया सह वर्तते । "त्रिंशद्वर्षोद्वहेत्कन्यां हृद्यां द्वादशवार्षिकीम् । त्र्यष्टवर्षोऽष्टवर्षां वा धर्मे सीदति सत्वरः" मनु० ९-९४। (अव्य०) 2. ವೇಗವಾಗಿ, ಶೀಘ್ರವಾಗಿ, ಜಾಗ್ರತೆಯಾಗಿ.

**सप्तदशन् ಸಪ್ತದಶನ್** (त्रि० ब० व०) 1. ಹದಿನೇಳು ಸಂಖ್ಯೆ. सप्तभिरधिका दश। (वि०) 2. ಹದಿನೇಳು ಸಂಖ್ಯೆಯುಳ್ಳ.

**सप्तदीधिति ಸಪ್ತದೀಧಿತಿ** (पुं०) ಅಗ್ನಿ. सप्त दीधितयोऽस्य। "स्वर्णरेतास्त्रवृतमन्त्रदीधितिः" त्रिकाण्ड०।

**सप्तद्वीपा ಸಪ್ತದ್ವೀಪಾ** (स्त्री०) ಪೃಥ್ವಿ, ವಸುಮತಿ, ಭೂಮಿ. सप्त द्वीपा यस्याम्। [ವಿವರಕ್ಕೆ "जम्बूद्वीप" ಪದದಲ್ಲಿ ನೋಡಿ.]

**सप्तधा ಸಪ್ತಧಾ** (अव्य०) ಏಳು ವಿಧವಾಗಿ, ಏಳು ಪ್ರಕಾರವಾಗಿ. सप्तन् "धा" (५-३-४२)। "स तान् गैरिकरक्ताङ्गान् सप्तधा स्तुगनिर्झरान्" याद० २२-१५२।

**सप्तधातु ಸಪ್ತಧಾತು** (पुं० ब० व०) ದೇಹದೊಳಗಿನ ರಸ ಮೊದಲಾದ ಏಳು ಧಾತುಗಳು. सप्तगुणिता धातवः।

**ಸಪ್ತಧಾತುಗಳು :** (1) ರಸ (2) ರಕ್ತ (3) ಮಾಂಸ (4) ಮೇದಸ್ಸು (5) ಅಸ್ಥಿ (6) ಮಜ್ಜೆ ಮತ್ತು (7) ವೀರ್ಯ (ಶುಕ್ರ). "रसासृङ्मांसमेदोऽस्थिमज्जानः शुक्रसंयुताः। शरीरस्था इमे ज्ञेयाः पण्डितैः सप्त धातवः"।

**सप्तन् ಸಪ್ತನ್** (त्रि०) ಏಳು ಸಂಖ್ಯೆ. षप (समवाये) "कनिन्" तुट् च (उ० १-१५५)।

**सप्तपदी ಸಪ್ತಪದೀ** (स्त्री०) ವಿವಾಹದಲ್ಲಿ ನಡೆಯುವ ಸಪ್ತಪದೀಶಾಸ್ತ್ರ, ವಿವಾಹದಲ್ಲಿ ವಧುವು ಏಳು ಹೆಜ್ಜೆಗಳನ್ನು ಮಂತ್ರಪೂರ್ವಕ ಇಡುವ ಶಾಸ್ತ್ರ. ಸಪ್ತ ಮಂಡಲವಾಗಿ ನಿರ್ಮಿತವಾದ ತಂಡುಲದ ಮೇಲೆ ವರನು ವಧುವಿನ ಪಾಣಿಯನ್ನು ಹಿಡಿದು ಮಂತ್ರಪೂರ್ವಕ ಅಗ್ನಿಪ್ರದಕ್ಷಿಣೆ ಮಾಡಿ ಏಳು ಹೆಜ್ಜೆಗಳನ್ನು ಇಡಿಸುವುದು ಸಪ್ತಪದೀ ಶಾಸ್ತ್ರ. सप्तानां पदानां समाहारः "ङीप्" (४-१-२१)।

**सप्तपर्ण ಸಪ್ತಪರ್ಣ** (पुं०) ಏಳೆಲೆ ಬಾಳೆಗಿಡ. सप्त पर्णान्यस्य। "प्रसवैः सप्तपर्णानां मदगन्धिभिराहताः। असूययेव तन्नागाः सप्तधैव प्रसुस्रुवुः" रघु० ४-२३।

**सप्तपाताल ಸಪ್ತಪಾತಾಳ** (न०) ಏಳು ಪಾತಾಳ ಲೋಕಗಳು, ಏಳು ಅಧೋಲೋಕಗಳು. सप्तानां पातालानां समाहारः। **ಸಪ್ತ ಪಾತಾಳಗಳು :** (1) अतलम् (2) वितलम् (3) सुतलम् (4) तलातलम् (5) रसातलम् (6) महातलम् ಮತ್ತು (7) पातालम्।

**सप्तप्रकृति ಸಪ್ತಪ್ರಕೃತಿ** (स्त्री० ब० व०) ರಾಜ್ಯದ ಏಳು ಅಂಗಗಳು. (1) ಸ್ವಾಮಿ (2) ಅಮಾತ್ಯ (3) ಸುಹೃತ್ತು (4) ಕೋಶ (ಬೊಕ್ಕಸ) (5) ರಾಷ್ಟ್ರ (6) ದುರ್ಗ ಮತ್ತು (7) ಬಲ (ಸೈನ್ಯ) ಇವು ಸಪ್ತ ಪ್ರಕೃತಿಗಳು. ಪೌರರೂ ಸೇರಿ ರಾಜ್ಯಾಂಗಗಳು ಎಂಟು.

**सप्तभद्र ಸಪ್ತಭದ್ರ** (पुं०) ಶಿರೀಷವೃಕ್ಷ. ಬಾಗೆಮರ. सप्तसु स्थानेषु भद्रमस्य।

**सप्तभूमिक ಸಪ್ತಭೂಮಿಕ** (वि०) ಏಳು ಮಹಡಿಗಳುಳ್ಳ ಮನೆ. सप्तभूमिका यस्य।

**सप्तम ಸಪ್ತಮ** (वि०) ಏಳನೆಯ. सप्तन् "डट्" (५-२-४८)। डटो मडागमः (५-२-४९)। "अद्भुतस्थितिरतान्तरबाह्यः सप्तमस्तु समयोऽयमपूर्वः" याद० २१-१६। स्त्रियां "ङीप्" (४-१-१५)। **सप्तमी ಸಪ್ತಮೀ.**

**सप्तमी ಸಪ್ತಮೀ** (स्त्री०) ಮಾಸದ ಶುಕ್ಲ ಮತ್ತು ಕೃಷ್ಣ ಪಕ್ಷಗಳ ಏಳನೇ ತಿಥಿ. सप्तम "ङीप्" (४-१-१५)। ಶುಕ್ಲಪಕ್ಷದಲ್ಲಿ ಚಂದ್ರನು ವೃದ್ಧಿಹೊಂದಲು ಏಳನೇ ಕಲೆಯು ತುಂಬುವುದು. ಕೃಷ್ಣಪಕ್ಷದಲ್ಲಿ ಕ್ಷಯಹೊಂದಲು ಏಳನೆಯ ಕಲೆಯು ಹ್ರಾಸವಾಗುವುದು.

**सप्तर्षि ಸಪ್ತರ್ಷಿ** (पुं० ब० व०) ಬ್ರಹ್ಮನ ಮಾನಸ ಪುತ್ರರಾದ ಏಳು ಮಂದಿ ಋಷಿಗಳು. सप्त ऋषयः।

**1. ಸ್ವಾಯಂಭುವಮನ್ವಂತರದ ಸಪ್ತರ್ಷಿಗಳು :** (1) मरीचिः (2) अत्रिः (3) पुलहः (4) पुलस्त्यः (5) क्रतुः (6) अङ्गिराः ಮತ್ತು (7) वसिष्ठः।

**2. ಸ್ವಾರೋಚಿಷಮನ್ವಂತರ**— "ऊर्जस्तम्भस्तथा प्राणो दत्तोलिऋषभस्तथा। निश्चरश्चार्ववीराश्च तत्र सप्तर्षयोऽभवन्"॥

**3. ಉತ್ತಮ ಮನ್ವಂತರ**— ವಸಿಷ್ಠಮಹರ್ಷಿಯ ಪುತ್ರರಾದ ಪ್ರಮದ ಮೊದಲಾದವರು. "स्वतेजसा हि तपसो वसिष्ठस्य महात्मनः। तनयाश्चान्तरे तस्मिन् सप्तसप्तर्षयोऽभवन्"॥

**4. ತಾಮಸಮನ್ವಂತರ**— "ज्योतिर्धामा पृथुः काव्यश्चैत्रोऽग्निर्बलकस्तथा। प्रवीरश्च तथा ब्रह्मन् सप्त सप्तर्षयोऽभवन्"॥

**5. ರೈವತಮನ್ವಂತರ**— "हिरण्यरेता वेदश्रीरूर्ध्वबाहुस्तथापरः। वेदबाहुः सुधामा च पर्जन्यश्च महामुनिः। वसिष्ठश्च महाभागो वेदवेदान्तपारगः। एते सप्तर्षयश्चासन् रैवतस्यान्तरे मनोः"॥

**6. ಚಾಕ್ಷುಷಮನ್ವಂತರ**— "सुमेधा विरजाश्चैव हविष्माानुन्नतो मधुः। अतिनामा सहिष्णुश्च सप्तासन्निति चर्षयः"॥

**7. ಈಗ ನಡೆಯುತ್ತಿರುವ ವೈವಸ್ವತಮನ್ವಂತರ**— "अत्रिश्चैव वसिष्ठश्च काश्यपश्च महानृषिः। गौतमश्च

भरद्वाजो विश्वामित्रोऽथ कौशिकः ॥ तथैव पुत्रो भगवान् ऋचीकस्य महात्मनः। जमदग्निस्तु सप्तैते मुनयोऽत्र तथान्तरे" ॥

8. **ಸಾವರ್ಣಿಮನ್ವಂತರ**—"रामो व्यासो गालवश्च दीप्तिमान् कृप एव च। ऋष्यशृङ्गस्तथा द्रौणिः तत्र सप्तर्षयोऽभवन्" ॥

9. **ದಕ್ಷಸಾವರ್ಣಿಮನ್ವಂತರ**—"मेधातिथिर्वसुः सत्यो ज्योतिष्मान् द्युतिमांस्तथा। सप्तर्षयोऽन्यः सबलस्तथान्यो हव्यवाहनः" ॥

10. **ಬ್ರಹ್ಮಸಾವರ್ಣಿಮನ್ವಂತರ**—"आपो मूर्तिर्हविष्मांश्च सुकृती सत्य एव च। नाभागोऽप्रतिमश्चैव वासिष्ठश्चैव सप्तमः" ॥

11. **ಧರ್ಮಸಾವರ್ಣಿಮನ್ವಂತರ**—"हविष्मांश्च वरिष्ठश्च ऋष्टिरन्यस्तथारुणिः। निश्चरश्चानघश्चैव विष्टिश्चान्यो महामुनिः। सप्तर्षयोऽन्तरे तस्मिन् अग्निदेवश्च सप्तमः" ॥

12. **ರುದ್ರಸಾವರ್ಣಿಮನ್ವಂತರ**—"द्युतिस्तपस्वी सुतपास्तपोमूर्तिस्तपोनिधिः। तपोरतिस्तथैवान्यः सप्तमस्तु तपोधृतिः ॥

13. **ದೇವಸಾವರ್ಣಿಮನ್ವಂತರ**—"धृतिमानव्ययश्चैव तत्त्वदर्शी निरुत्सुकः। निर्मोहः सुतपाश्चान्यो निष्प्रकम्पश्च सप्तमः" ॥

14. **ಇಂದ್ರಸಾವರ್ಣಿಮನ್ವಂತರ**—"अग्नीध्रश्चाग्निबाहुश्च शुचिर्मुक्तोऽथ माधवः। शुक्रोऽजितश्च सप्तैते तदा सप्तर्षयः स्मृताः" ॥

**सप्तला ಸಪ್ತಲಾ** (स्त्री०) 1. ವೀರಜಾಜಿ ಗಿಡ. 2. ಮುಂಡರಳ್ಳಿ. 3. ಗುಲಗಂಜಿ. 4. ಹಸುರು ಪಾದರಿ. सप्त लाति—ला (आदाने) "कः" (३-२-३)। "अथ सप्तला। नवमालीचर्मकषागुञ्जासु पाटलो स्त्रियाम्" मेदि०।

**सप्तलोक ಸಪ್ತಲೋಕ** (पुं०) ಏಳು ಊರ್ಧ್ವಲೋಕಗಳು. (1) ಭೂಲೋಕ (2) ಭುವರ್ಲೋಕ (3) ಸುವರ್ಲೋಕ (4) ಮಹರ್ಲೋಕ (5) ಜನಲೋಕ (6) ತಪೋಲೋಕ ಮತ್ತು (7) ಸತ್ಯಲೋಕ. "सप्तसामोपगीतं त्वां सप्तार्णवजलेशयम्। सप्तार्चिर्मुनिमाचख्युः सप्तलोकैकसंश्रयम्" रघु० १०-२१।

**सप्तविंश ಸಪ್ತವಿಂಶ** (वि०) ಇಪ್ಪತ್ತೇಳನೆಯ. सप्तविंशतेः पूरणः "डट्" (५-२-४८)।

**सप्तविंशति ಸಪ್ತವಿಂಶತಿ** (स्त्री०) ಇಪ್ಪತ್ತೇಳು. सप्ताधिका विंशतिः।

**सप्तसप्ति ಸಪ್ತಸಪ್ತಿ** (पुं०) "ಸಪ್ತ"ವೆಂಬ ಕುದುರೆಯುಳ್ಳ ಸೂರ್ಯ. सप्तभिर्नामभिरुपलक्षितः सप्तिरश्वो यस्य। "सप्त युञ्जन्ति रथमेकचक्रमेकोऽश्वो वहति सप्तनाम" श्रुतिः। "हविर्भुजामेधवतां चतुर्णां मध्ये ललाटंतपसप्तसप्तिः" रघु० १३-४१।

**सप्तसागर ಸಪ್ತಸಾಗರ** (पुं० ब० व०) ಏಳು ಸಮುದ್ರಗಳು. सप्तगुणिताः सागराः। (1) ಲವಣ (2) ಇಕ್ಷು (3) ಸುರಾ (4) ಸರ್ಪಿಃ (5) ದಧಿ (6) ಕ್ಷೀರ ಮತ್ತು (7) ಜಲ. ಇವು ಸಪ್ತಸಮುದ್ರಗಳು.

**सप्तार्चिस् ಸಪ್ತಾರ್ಚಿಸ್** (पुं०) 1. ಅಗ್ನಿ, ಬೆಂಕಿ. सप्त अर्चींषि यस्य। "सप्तसामोपगीतं त्वां सप्तार्णवजलेशयम्। सप्तार्चिर्मुखमाचख्युः सप्तलोकैकसंश्रयम्" रघु० १०-२१। 2. ಶನಿಗ್ರಹ. (वि०) 3. ಕ್ರೂರದೃಷ್ಟಿಯುಳ್ಳವನು. "सप्तार्चिः पावके पुंसि क्रूरचक्षुषि तु त्रिषु" मेदि०। "छायासुतोऽसितः सौरिः सप्तार्ची रेवतीभवः" अभि० चि०।

**सप्तार्णव ಸಪ್ತಾರ್ಣವ** (पुं० ब० व०) ಸಪ್ತಸಾಗರಗಳು, ಏಳು ಸಮುದ್ರಗಳು. सप्त अर्णवाः। "शशाङ्कं विस्मयाविद्धः सप्तार्णवसमाहृतिम्" याद० २२-२०३।

**सप्ताश्व ಸಪ್ತಾಶ್ವ** (पुं०) 1. ಸೂರ್ಯ, "ಸಪ್ತ"ವೆಂಬ ಕುದುರೆಯುಳ್ಳ ಭಾಸ್ಕರ. सप्तभिर्नामभिरुपलक्षितः अश्वो यस्य। ಸೂರ್ಯನ ರಥಕ್ಕೆ ಏಳು ಕುದುರೆಗಳೆಂದು ಕೆಲವರು ಹೇಳುವರು. ಶ್ರುತಿಯ ಪ್ರಕಾರ ಒಂದೇ ಕುದುರೆಗೆ ಸಪ್ತವೆಂದು ಹೆಸರು. ಈ ಒಂದೇ ಕುದುರೆಯು ಸೂರ್ಯನ ರಥವನ್ನು ಎಳೆಯುವುದು. ["सप्तसप्ति" ನೋಡಿ.] 2. ಎಕ್ಕದ ಗಿಡ.

**सप्ति ಸಪ್ತಿ** (पुं०) ಅಶ್ವ, ಕುದುರೆ. षप (समवाये) "क्तिच्" (३-३-१७४)।

**सफल ಸಫಲ** (वि०) 1. ಫಲಸಹಿತವಾದ, ಪ್ರಯೋಜನಸಹಿತವಾದ, ಅಮೋಘವಾದ. फलेन सह वर्तते। "सफलो राघवोद्योगः"। 2. ಫಲಸಹಿತವಾದ, ಹಣ್ಣು ಕಾಯಿಗಳಿಂದ ಕೂಡಿದ. "अरण्यदाश्रमपदं सफलस्निग्धपादपम्" कथास०।

**सबल ಸಬಲ** (वि०) 1. ಸೈನ್ಯಸಹಿತವಾದ, ಸೇನಾಸಮೇತನಾದ. बलेन सह वर्तते। 2. ಶಕ್ತಿಮಂತ, ಪರಾಕ್ರಮಶಾಲಿ, 3. ಸಾಮರ್ಥ್ಯಶಾಲಿ.

**सब्रह्मचर्यं ಸಬ್ರಹ್ಮಚರ್ಯ** (ನಂ) 1. ಸಮಾನ ಶಾಖೆಯಲ್ಲಿ ವೇದಾಧ್ಯಯನ ಮಾಡುವುದು, ಪರಸ್ಪರ ಒಂದೇ ಶಾಖೆಯ ವ್ರತ (ವೇದಾಧ್ಯಯನ) ವನ್ನು ಆಚರಿಸುವುದು. एकस्मिन् ब्रह्मणि व्रताचरणम्। सब्रह्म समानवेदः लक्षणया समानवेदाध्ययनम्, तस्य चर्यमनुष्ठानम्। "शकुन्तयःशोणमुखा भजन्ते सब्रह्मचर्यं सह तीक्ष्णधीभिः" याद० १८-६१। 2. ಸಹಾಧ್ಯಾಯಿಯಾಗಿರುವಿಕೆ, ಜೊತೆಯಲ್ಲಿ ವ್ಯಾಸಂಗ ಮಾಡುವುದು.

**सब्रह्मचारिन् ಸಬ್ರಹ್ಮಚಾರಿನ್** (ಪುಂ) 1. ಪರಸ್ಪರ ಸಮಾನ ವೇದಾಧ್ಯಯನ ರೂಪವಾದ ವ್ರತವನ್ನು ಆಚರಿಸುವ ವಿದ್ಯಾರ್ಥಿ, ಪರಸ್ಪರ ಒಂದೇ ಶಾಖೆಯ ವೇದಾಧ್ಯಯನ ಮಾಡುವ ವಿದ್ಯಾರ್ಥಿ. समानं ब्रह्म वेदः लक्षणया तदध्ययनरूपं व्रतम्, तच्चरति—चर (गतौ) "णिनिः" (३-२-८०)। ಒಬ್ಬ ಗುರುವಿನಲ್ಲಿ ಒಂದೇ ಶಾಖೆಯ ವೇದಾಧ್ಯಯನ ಮಾಡುವ ವಿದ್ಯಾರ್ಥಿಗಳು ಸಬ್ರಹ್ಮಚಾರಿಗಳು. "एकब्रह्मव्रताचारा मिथः सब्रह्मचारिणः" अम०। 2. ಸುಖ ದುಃಖಗಳಲ್ಲಿ ಸಮಾನ ಭಾಗವುಳ್ಳವನು. स्त्रियां "ङीप्" (४-१-५)। **-चारिणी -ಚಾರಿಣೀ.** "दुःखसब्रह्मचारिणी तरलिका क्व गता" काद०।

**सभर्तृका ಸಭರ್ತೃಕಾ** (ಸ್ತ್ರೀ०) ಪತಿಯುಳ್ಳ ಹೆಂಗಸು, ಪತಿಯೊಡನೆ ಇರುವ ಹೆಂಗಸು, ಸುಮಂಗಲಿ. भर्त्रा सह वर्तते। सहस्य सभावः। "कप्" (५-४-१५३)। "पतिवत्नी सभर्तृका" अम०।

**सभा ಸಭಾ** (ಸ್ತ್ರೀ०) 1. ಕಾರ್ಯಕಲಾಪ ಪರಿಶೀಲನೆಗಾಗಿ ಜನರು ಒಟ್ಟು ಸೇರುವುದು. सह भान्त्यत्र—भा (दीप्तौ) "अङ्" (३-३-१०६)। "व्यद्योतिष्ट सभावेद्यामसौ नरशिखित्रयी" माघ० २-३। 2. ಜನರ ಗುಂಪು, ಸಮಾರಂಭಕ್ಕಾಗಿ ಸೇರುವ ಜನರ ಸಮೂಹ. 3. ಸಮಾಲೋಚನೆಗಾಗಿ ಸೇರುವ ಜನರ ಸಮೂಹ. ರಾಜನ ಆಸ್ಥಾನ ಪ್ರಜಾಪ್ರತಿನಿಧಿ ಸಭೆ ಮುಂತಾದುದು. "न सा सभा यत्र न सन्ति वृद्धाः" हितो०। 4. ಸಾಮಾಜಿಕ, ಸಭಾಸದ. 5. ವಿದ್ವಾಂಸರ ಗೋಷ್ಠಿ, ಪಂಡಿತರ ಪರಿಷತ್ತು. 6. ಮಂದಿರ, ಗೃಹ. 7. ದ್ಯೂತ, ಜೂಜು. "सभा द्यूतसमूहयोः। गोष्ठ्यां सभ्येषु शालायाम्" हेम०। "सभा सामाजिके गोष्ठ्यां द्यूतमन्दिरयोरपि" मेदि०।

**सभाजन ಸಭಾಜನ** (ನಂ) 1. ಗೌರವಿಸಿ ಸಂತೋಷಪಡಿಸುವುದು, ಮರ್ಯಾದೆ ಮಾಡಿ ಆನಂದಪಡಿಸುವುದು. "सभाजनार्थं तनुते भवत्याः प्रायःपदन्यासपटीमुदन्वान्" याद० १८-११२। 2. ಆಲಿಂಗನ ಕುಶಲಪ್ರಶ್ನಾದಿಗಳಿಂದ ಪ್ರೀತಿ ತೋರಿಸುವುದು. सभाज (प्रीतिदर्शने) "ल्युट्" (३-३-११५)। "अथ द्वे आनन्दनसभाजने" अम०। "सभाजने मे भुजमूर्ध्वबाहुःसव्येतरं प्राध्वमितः प्रयुङ्क्ते" रघु० १३-४३। (ವಿ०) 3. ಪ್ರೀತಿಯನ್ನು ತೋರಿಸುವ. "प्रभूतनागाश्वरथं सभाजनं समृद्धियुक्तं बहुपानभोजनम्" भा० वन०।

**सभापति ಸಭಾಪತಿ** (ಪುಂ) 1. ಒಂದು ಸಭೆಯ ಅಧ್ಯಕ್ಷ, ಸಭೆಯ ಕಾರ್ಯಕಲಾಪಗಳನ್ನು ನಿರ್ವಹಿಸುವ ಯಜಮಾನ. सभायाः पतिः। 2. ಜೂಜಿನ ಮನೆಯ ಯಜಮಾನ.

**सभासद् ಸಭಾಸದ್** (ಪುಂ) ಸಭ್ಯ, ಸಭೆಯಲ್ಲಿರುವವನು, ಸಾಮಾಜಿಕ. सभायां सीदति—षद्लृ (विशरणादौ) "क्विप्" (३-२-६१)। "श्रुताध्ययनसंपन्नाः धर्मज्ञाः सत्यवादिनः। राज्ञा सभासदः कार्याः शत्रौ मित्रे च ये समाः" याज्ञ० २-२। "यथाक्रमं सात्यकिरुत्सवादी संभावयामास सभासदस्तान्" याद० १३-७६।

**सभास्तार ಸಭಾಸ್ತಾರ** (ಪುಂ) ಸಭ್ಯ, ಸಭೆಯಲ್ಲಿರುವವನು. सभां स्तृणाति—स्तृञ् (आच्छादने) "अण्" (३-२-१)।

**सभि(भी)क ಸಭಿ(ಭೀ)ಕ** (ಪುಂ) ಜೂಜನ್ನು ಆಡಿಸುವವನು, ಜೂಜಿನ ಮನೆಯ ಯಜಮಾನ. सभा द्यूतम् आश्रयत्वेनास्त्यस्य "ठन्" (५-२-११६)। "ग्लहे शतिकवृद्धेस्तु सभिकं पञ्चकं शतम्" याज्ञ० २-१९९।

**सभ्य ಸಭ್ಯ** (ಪುಂ) 1. ಸತ್ಪುರುಷ, ಸಾಧು. 2. ಸಭೆಗೆ ಅರ್ಹನಾದವನು, ಸಭೆಯಲ್ಲಿರಲು ಅರ್ಹನಾದವನು. सभायां साधुः "यः" (४-४-१०५)। "तस्मै सभ्याः सभार्याय गोप्त्रे गुप्ततमेन्द्रियाः। अर्हणामर्हते चक्रुः मुनयो नयचक्षुषे" रघु० १-५५। 3. ಜೂಜಾಡಿಸುವವನು, ಜೂಜಿನ ಮನೆಯ ಯಜಮಾನ. (ವಿ०) 4. ನಂಬಿಕೆಗೆ ಅರ್ಹನಾದವನು, ವಿಶ್ವಾಸಕ್ಕೆ ಯೋಗ್ಯನಾದವನು. 5. ಸಭೆಗೆ ಸಂಬಂಧಿಸಿದವನು.

**सभ्यता ಸಭ್ಯತಾ** (ಸ್ತ್ರೀ०) ಒಳ್ಳೆಯತನ, ಒಳ್ಳೆಯ ನಡತೆ. सभ्यस्य भावः "तल्" (५-१-११९)।

**सम् ಸಮ್** (ಅವ್ಯ०) ಇದೊಂದು ಉಪಸರ್ಗಾವ್ಯಯ. ಈ ಉಪಸರ್ಗವು ಸುಬಂತ ಮತ್ತು ತಿಙಂತ ಪದಗಳೊಡನೆ ಸೇರಿದಾಗ ಈ ಕೆಳಗಿನ ಅರ್ಥಗಳಿಗೆ ದ್ಯೋತಕವಾಗುವುದು. 1. ಶೋಭನ, ಕಲ್ಯಾಣ, ಮಂಗಳ. 2. ಸುಖ. "सम् कल्याणे सुखे सम् तु शोभनार्थसमर्थयोः"

ಮೇದಿ० । 3. ಸಮಾನ, ಸದೃಶ. 4. ಸಂಗತ, ಸಮಂಜಸ. 5. ಪ್ರಕೃಷ್ಟ, ಉತ್ತಮ. सम् सङ्गार्थे प्रकृष्टार्थे शोभनार्थ-समार्थयोः" हेम० । 6. ಸಮುಚ್ಚಯ. 7. ಸಂಗ, ಸಂಬಂಧ. 8. ಸಮ್ಯಕ್, ಚೆನ್ನಾಗಿ. "समेषितस्तस्य विवाहवह्निः पुरोधसा पुण्यपदप्रिमेण" याद० १३-८५ । "समीक्षिता ब्रह्मसुतस्य पत्नी सर्वैरभूत् सादरदर्शनीया" याद० १३-९६ ।

**सम ಸಮ** (ಪುಂ०) 1. ಮೇಷ ಮೊದಲಾದ ದ್ವಾದಶರಾಶಿಗಳಲ್ಲಿ 2 4 6 8 10 ಮತ್ತು 12ನೇ ರಾಶಿಗಳು, ವೃಷಭ ಕರ್ಕಾಟಕ ಕನ್ಯಾ ವೃಶ್ಚಿಕ ಮಕರ ಮತ್ತು ಮೀನ ರಾಶಿಗಳು. "क्रूरोऽथ सौम्यः पुरुषोऽङ्गना च ओजोऽथ युग्मं विषमः समश्च । चरस्थिरद्वयात्मकनामधेया मेषादयोऽमी क्रमशः प्रदिष्टाः" । 2. ಶತ್ರುತ್ವ ಮತ್ತು ಮಿತ್ರತ್ವ ಎರಡೂ ಇಲ್ಲದ ಗ್ರಹ. 3. (ಸಂಗೀತದಲ್ಲಿ) ಸಮತಾಳ, ಹಾಡು ಮತ್ತು ವಾದ್ಯಗಳಿಗೆ ಸಮಾನವಾಗಿ ಹಾಡುವವನು ಹಾಕುವ ತಾಳ. (ನ०) 4. ಸಮಸ್ಥಳ. "संनिपत्य शनकैरथ निम्नादन्वकारमुदवाप समानि" किरा० ९-११ । (ವಿ०) 5. ಸಮಾನವಾಗಿರುವ, ಹೋಲುವ, ಸದೃಶವಾದ. "स्त्रियश्च पत्यौ सुरसुन्दरीभिः समा नवप्रेमणि सानुरागाः" माघ० ३-२७ । 6. ಸರಿಸಮಾನವಾದ, ತಕ್ಕಂತಿರುವ. "अवैमि ते सारमतः खलु त्वां कार्ये गुरुण्यात्मसमं नियोक्ष्ये" कुमा० ३-१३ । 7. ಭೇದವಿಲ್ಲದ, ಒಂದೇ ರೀತಿಯಾಗಿರುವ. "सुखदुःखे समे कृत्वा लाभालाभौ जयाजयौ । ततो युद्धाय युज्यस्व नैवं पापमवाप्स्यसि" गीता २-३८ । 8. ಸಮವಾಗಿರುವ, ಹಳ್ಳತಿಟ್ಟುಗಳಿಲ್ಲದ. "सम्प्रति समदेशवर्तिनो न ते दुरासदो भविष्यति" शाकु० १ । (ಅವ್ಯ०) 9. ಸಮಕಾಲದಲ್ಲಿ, ಏಕಕಾಲದಲ್ಲಿ. "नवं पयो यत्र घनैर्मया च त्वद्विप्रयोगाश्रु समं विसृष्टम्" रघु० १३-२६ । 10. ಜೊತೆಯಲ್ಲಿ, ಕೂಡ, ಸಂಗಡ. "आहो निवर्त्स्यसि समं हरिणाङ्गनाभिः" शाकु० १-२३ । 11. ಸಮವಾಗಿ, ಸರಿಸಮವಾಗಿ. "यथा सर्वाणि भूतानि धरा धारयते समम्" मनु० ९-३११ ।

**समकाल ಸಮಕಾಲ** (ಪುಂ०) 1. ಅದೇ ಸಮಯ, ಏಕಕಾಲ. समः कालः । (ಅವ್ಯ०) 2. ಏಕಕಾಲದಲ್ಲಿ, ಅದೇ ಸಮಯದಲ್ಲಿ.

**समकालिक ಸಮಕಾಲಿಕ** (ವಿ०) ಸಮಾನಕಾಲದಲ್ಲಿರುವ, ಏಕಕಾಲದಲ್ಲಿರುವ. समकाल "ठञ्" (४-३-११) । समानकालीनः प्राक्कालीनः इत्यपभ्रंशा एव इति सि० कौ० ।

**समकोल ಸಮಕೋಲ** (ಪುಂ०) ಸರ್ಪ, ಹಾವು. "द्विरसनः समकोलश्च भेकभुक्" त्रिकाण्ड० ।

**समक्ष ಸಮಕ್ಷ** (ಅವ್ಯ०) ಮುಂಭಾಗದಲ್ಲಿ, ಕಣ್ಣಿನ ಎದುರಿಗೆ. अक्ष्णोः समीपे—अव्ययी० (२-१-६) । "तथा समक्षं दहता मनोभवं पिनाकिना भग्नमनोरथा सती" कुमा० ५-१ ।

**समग्र ಸಮಗ್ರ** (ವಿ०) ಸಂಪೂರ್ಣವಾದ. सङ्गतमग्रमस्य । "सर्वैरुस्रैः समग्रैस्त्वमिव नृपगुणैः दीप्यते सप्तसप्तिः" माल० २-१२ ।

**समङ्गा ಸಮಂಗಾ** (ಸ್ತ್ರೀ०) 1. ಮಂಜಿಷ್ಠ. 2. ಮುಟ್ಟಿದರೆ ಮುನಿ ಗಿಡ. समन्ततोऽङ्गति—अगि (गतौ) "अच्" (३-१-१३४) । "मञ्जिष्ठा विकसा जिङ्गी समङ्गा कालमेषिका" अम० । "नमस्कारी गण्डकाली समङ्गा खदिरेत्यपि" अम० ।

**समचित्त ಸಮಚಿತ್ತ** (ನ०) 1. ಒಂದೇ ವಿಷಯದಲ್ಲಿ ಇಡುವ ಮನಸ್ಸು. समं चित्तम् । (ವಿ०) 2. ಒಂದೇ ವಿಷಯದಲ್ಲಿ ನೆಟ್ಟ ಮನಸ್ಸುಳ್ಳವನು. 3. ಎಲ್ಲಾ ವಿಷಯಗಳಲ್ಲೂ ಒಂದೇ ವಿಧವಾದ ಮನಸ್ಸುಳ್ಳವನು, ಎಲ್ಲಾ ವಿಷಯಗಳನ್ನು ಒಂದೇ ರೀತಿ (ಸಮನಾಗಿ) ನೋಡುವವನು. समं सर्वेषु विषयेषु समानं चित्तं यस्य ।

**समज ಸಮಜ** (ಪುಂ०) 1. ಪಶುಗಳ ಗುಂಪು. सम् + अज (गतौ) "अप्" (३-३-६९) । "गुहाद्वारेण निर्यातः समजेन पशूनिव" भट्टि० ७-५९ । (ನ०) 2. ವನ, ಅರಣ್ಯ, ಕಾಡು. समजन्ति पशवो यत्र — सम् + अज "अप्" । "समजः पशुवृन्दे ना विपिने तु नपुंसकम्" मेदि० ।

**समज्ञा ಸಮಜ್ಞಾ** (ಸ್ತ್ರೀ०) ಯಶಸ್ಸು, ಕೀರ್ತಿ. समैः सर्वैर्ज्ञायते—ज्ञा (अवबोधने) "कः" (वा० ३-३-५८) । "यशः कीर्तिः समज्ञा च" अम० । ಈ ಅರ್ಥದಲ್ಲಿ समज्या समाज्ञा समाख्या ಎಂದೂ ಪಾಠಗಳುಂಟು.

**समज्या ಸಮಜ್ಯಾ** (ಸ್ತ್ರೀ०) 1. ಸಭೆ, ಪರಿಷತ್ತು, ಕಾರ್ಯಕಲಾಪಗಳ ಸಮಾಲೋಚನೆಗಾಗಿ ಜನರು ಒಟ್ಟುಗೂಡುವುದು. समजन्त्यस्याम्—सम्+अज (गतौ) "क्यप्" (३-३-९९) । "समज्या परिषद्गोष्ठी" अम० । 2. ಯಶಸ್ಸು, ಕೀರ್ತಿ.

**समञ्जस ಸಮಂಜಸ** (ವಿ०) ನ್ಯಾಯವಾದ, ಯುಕ್ತಿಯಿಂದ ಕೂಡಿರುವ, ಯೋಗ್ಯವಾಗಿರುವ, ಹೊಂದಿಕೆಯುಳ್ಳ, ಸಮ್ಮತಿಸಬಹುದಾದ. सम्यगञ्जोऽस्त्र—"अच्"

(५-४-७५)। "अभ्रेषन्यायकल्पास्तु देशरूपं समञ्जसम्" अम०। "गुणापवादेन तदन्यरोपणात् भृशाधिरूढस्य समञ्जसं जनम्" किरा० १४-१२।

**समता ಸಮತಾ** (स्त्री०) 1. ಎಲ್ಲರಲ್ಲೂ ಸಮನಾಗಿರುವಿಕೆ, ಹೆಚ್ಚುಕಡಿಮೆಯಿಲ್ಲದಿರುವಿಕೆ. समस्य भावः "तल्" (५-१-११९)। "समतया वसुवृष्टिविसर्जनैर्नियमनादसतां च नराधिपः" रघु० ९-६। 2. ಸಾದೃಶ್ಯ, ಹೋಲಿಕೆ. "आकर्णमुल्लसितमम्बु विकासिकाशनीकाशमाप समतां सितचामरस्य" माघ० ५-३५।

**समतिरिक्त ಸಮತಿರಿಕ್ತ** (वि०) ಬಹಳ ಹೆಚ್ಚಾಗಿರುವ. सम्यक् अतिरिच्यते—सम्+रिचिर् (विरेचने) "क्तः" (३-२-१०२)।

**समदर्शिन् ಸಮದರ್ಶಿನ್** (वि०) ಎಲ್ಲವನ್ನೂ ಸಮಾನವಾಗಿ ನೋಡುವ ಸ್ವಭಾವವುಳ್ಳವನು, ಎಲ್ಲರನ್ನೂ ತಾರತಮ್ಯವಿಲ್ಲದೆ ನೋಡುವವನು. समं पश्यति—दृशिर् (प्रेक्षणे) "णिनिः" (३-२-७८)। "विद्याविनयसम्पन्ने ब्राह्मणे गवि हस्तिनि। शुनि चैव श्वपाके च पण्डिताः समदर्शिनः" गीता ५-१८।

**समदृष्टि ಸಮದೃಷ್ಟಿ** (स्त्री०) 1. ಸಮಾನವಾದ ದೃಷ್ಟಿ, ತಾರತಮ್ಯವಿಲ್ಲದೆ ನೋಡುವುದು. समा दृष्टिः। "सुखे दुःखे च विप्रेन्द्र या दृष्टिर्वर्तते सदा। तथा शत्रौ च मित्रे च समदृष्टिश्च सा स्मृता"। (वि०) 2. ಎಲ್ಲರನ್ನೂ ಸಮಾನವಾಗಿ ನೋಡುವವನು, ಎಲ್ಲರನ್ನೂ ಭೇದಭಾವವಿಲ್ಲದೆ ನೋಡುವವನು. समा दृष्टिर्यस्य।

**समधिक ಸಮಧಿಕ** (वि०) ಬಹಳ ಹೆಚ್ಚಾಗಿರುವ. सम्यक् अधिकः। "प्रतिकृतिरचनाभ्यो दूतिसन्दर्शिताभ्यः समधिकतररूपाः शुद्धसन्तानकामैः" रघु० १८-५३।

**समधिगत ಸಮಧಿಗತ** (वि०) 1. ಸರಿಯಾಗಿ ತಿಳಿದುಕೊಳ್ಳಲ್ಪಟ್ಟ, ಸರಿಯಾಗಿ ಅರ್ಥಮಾಡಿಕೊಳ್ಳಲ್ಪಟ್ಟ. सम्+अधि+गम्लृ (गतौ) "क्तः" (३-२-१०२)। 2. ಹೊಂದಲ್ಪಟ್ಟ, ಸಂಪಾದಿಸಲ್ಪಟ್ಟ.

**समधिगम ಸಮಧಿಗಮ** (पुं०) 1. ಸರಿಯಾಗಿ ತಿಳಿದುಕೊಳ್ಳುವುದು, ಚೆನ್ನಾಗಿ ಅರ್ಥಮಾಡಿಕೊಳ್ಳುವುದು. सम्+अधि+गम्लृ (गतौ) "अप्" (३-३-५८)। 2. ಪ್ರಾಪ್ತಿ, ಹೊಂದುವಿಕೆ. "ल्युट्" (३-३-११५)। **-गमनम् -ಗಮನಮ್.**

**समनुकीर्तन ಸಮನುಕೀರ್ತನ** (न०) ಉನ್ನತವಮಟ್ಟದ ಪ್ರಶಂಸೆ. सम्+अनु+कृत (संशब्दने) "ल्युट्" (३-३-११५)।

**समनुकीर्तित ಸಮನುಕೀರ್ತಿತ** (वि०) ಬಹಳವಾಗಿ ಕೊಂಡಾಡಲ್ಪಟ್ಟ, ಹೆಚ್ಚು ಪ್ರಶಂಸಿಸಲ್ಪಟ್ಟ. सम्+अनु+कृत (संशब्दने) "क्तः" (३-२-१०२)।

**समनुगत ಸಮನುಗತ** (वि०) ಅನುಸರಿಸಿಹೋಗಿರುವವನು, ಅನಂತರ ಹೋದವನು. सम्+अनु+गम्लृ (गतौ) "क्तः" (३-४-७२)।

**समनुज्ञा ಸಮನುಜ್ಞಾ** (स्त्री०) 1. ಅನುಮತಿ, ಸಮ್ಮತಿ, ಒಪ್ಪಿಗೆ. 2. ಆಜ್ಞೆ.

**समनुज्ञात ಸಮನುಜ್ಞಾತ** (वि०) 1. ಅನುಮತಿ ಕೊಡಲ್ಪಟ್ಟ, ಒಪ್ಪಿಗೆ ನೀಡಲ್ಪಟ್ಟ. सम्+अनु+ज्ञा (नियोगे) "क्तः" (३-२-१०२)। 2. ಆಜ್ಞೆಮಾಡಲ್ಪಟ್ಟ.

**समनुज्ञान ಸಮನುಜ್ಞಾನ** (न०) 1. ಒಪ್ಪಿಗೆ, ಸಮ್ಮತಿ. सम्+अनु+ज्ञा (नियोगे) "ल्युट्" (३-३-११५)। 2. ಆಜ್ಞೆ, ಅಪ್ಪಣೆ.

**समन्त ಸಮಂತ** (पुं०) 1. ಎಲ್ಲೆ, ಗಡಿ. (वि०) 2. ಎಲ್ಲಾ ಕಡೆಯಲ್ಲೂ ಇರುವ.

**समन्ततस् ಸಮಂತತಸ್** (अव्य०) ಸುತ್ತಲೂ, ಎಲ್ಲಾ ಕಡೆಯಲ್ಲೂ. समन्तात् "तसिः" (वा० ५-४-४४)। "साटोपमुर्वीमनिशं नदन्तो यैः प्लावयिष्यन्ति समन्ततोऽमी" माघ० ३-७४।

**समन्तदुग्धा ಸಮಂತದುಗ್ಧಾ** (स्त्री०) ಸ್ನುಹೀವೃಕ್ಷ, ಕಳ್ಳಿಗಿಡ. समन्तात् दुग्धं क्षीरमस्याः।

**समन्तपञ्चक ಸಮಂತಪಂಚಕ** (न०) ಸುತ್ತಲೂ ಐದು ಹ್ರವ (ಮಡು) ಗಳುಳ್ಳ ಕುರುಕ್ಷೇತ್ರ. ಪರಶುರಾಮನು ಕ್ಷತ್ರಿಯರನ್ನು ಸಂಹರಿಸಿ ಅವರ ರಕ್ತದಿಂದ ಐದು ಮಡುಗಳನ್ನು ನಿರ್ಮಿಸಿದನು. ಕಾಲಾಂತರದಲ್ಲಿ ಇಲ್ಲಿ ಕೌರವ ಪಾಂಡವರಿಗೆ ಯುದ್ಧ ನಡೆದು ಇದಕ್ಕೆ ಕುರುಕ್ಷೇತ್ರವೆಂದು ಹೆಸರಾಯಿತು. "त्रिःसप्तकृत्वः पृथिवीं कृत्वा निःक्षत्रियां प्रभुः। समन्तपञ्चके पञ्च कृतवान् रुधिरैर्ह्रदान्"। "त्रेताद्वापरयोः सन्धौ रामः शस्त्रभृतां वरः। असकृत् पार्थिवं क्षत्रं जघानामर्षचोदितः"। "स सर्वं क्षत्रमुत्साद्य स्ववीर्येणानलद्युतिः। समन्तपञ्चके पञ्च चकार रुधिरह्रदान्" भा० आदि० २-३, ४।

**समन्तभद्र ಸಮಂತಭದ್ರ** (पुं०) ಬುದ್ಧದೇವ. समन्तात् भद्रमस्य। "समन्तभद्रो भगवान् मारजिल्लोकजिज्जिनः"।

**समन्तभुक्(ज्) ಸಮಂತಭುಕ್(ಜ್)** (पुं०) ಅಗ್ನಿ.

**समन्तात् ಸಮಂತಾತ್** (अव्य०) ಸುತ್ತಲೂ, ಎಲ್ಲಾ ಕಡೆಗಳಲ್ಲೂ. "हाराणां मणिभिरुपाश्रितौ समन्तात् उत्सूत्रैर्गुणवदुपघ्नकाम्ययेव" माघ० ५-५३।

**समन्वय ಸಮನ್ವಯ**(पुं०) 1. ಅರ್ಥದ ಸಂಬಂಧ, ಅರ್ಥದ ಹೊಂದಿಕೆ. सम्+अनु+इण् (गतौ) "अच्" (३-३-५६)। "यथासंख्यं क्रमेणैव क्रमिकाणां समन्वयः" चन्द्रा०। 2. ಸೇರಿಕೊಂಡಿರುವುದು, ಹೊಂದಿಕೊಂಡಿರುವುದು.

**समन्वित ಸಮನ್ವಿತ** (वि०) 1. ಸಂಬಂಧ ಹೊಂದಿರುವ. सम् + अनु + इण् (गतौ) "क्तः" (३-४-७२)। 2. ಸೇರಿಕೊಂಡಿರುವ, ಹೊಂದಿಕೊಂಡಿರುವ. 3. ಕೂಡಿಕೊಂಡಿರುವ. "इति मत्वा भजन्ते मां बुधा भावसमन्विताः" गीता १०-८।

**समपद ಸಮಪದ** (न०) 1. ಬೇಟೆಯ ಕಾಲದಲ್ಲಿ ಧಾನುಷ್ಕ (ಬಿಲ್ಲುಗಾರ) ನು ಎರಡು ಕಾಲುಗಳನ್ನೂ ಸಮವಾಗಿ ಇಟ್ಟುಕೊಂಡು ನಿಲ್ಲುವುದು. (पुं०) 2. ರತಿಬಂಧದ ಒಂದು ಭೇದ. "योषित्पादौ हृदि स्थाप्य कराभ्यां पीडयेत् स्तनौ। यथेष्टं ताडयेद्योनिं बन्धः समपदः स्मृतः" रतिमं०। —पादम् —ಪಾದವುಳ್ಳ.

**समबुद्धि ಸಮಬುದ್ಧಿ** (वि०) ಒಂದೇ ವಿಧವಾದ ಬುದ್ಧಿಯುಳ್ಳವನು, ಮಿತ್ರ ಶತ್ರು ಬಂಧು ಸಾಧು ಪಾಪಾತ್ಮ ಎಲ್ಲರ ವಿಷಯದಲ್ಲಿಯೂ ಪಕ್ಷಪಾತವಿಲ್ಲದವನು, ಯಾರಲ್ಲೂ ತಾರತಮ್ಯಬುದ್ಧಿಯಿಲ್ಲದವನು. समा समाना पक्षपातरहिता बुद्धिः यस्य। ಸುಹೃತ್ತು, ಮಿತ್ರ ಬಂಧು ಇವರಿಂದ ಯಾವ ಪ್ರಯೋಜನವನ್ನೂ ಅಪೇಕ್ಷಿಸದಿರುವುದರಿಂದಲೂ ಶತ್ರು ಪಾಪಾತ್ಮ ಇತ್ಯಾದಿಗಳಿಂದ ಯಾವ ವಿಧವಾದ ವಿರೋಧವಿಲ್ಲದಿರುವುದರಿಂದಲೂ ಎಲ್ಲರಲ್ಲಿಯೂ ಸಮಬುದ್ಧಿಯಿರುವವನು ಯೋಗಿಶ್ರೇಷ್ಠನೆನಿಸುವನು. "सुहृन्मित्रार्युदासीनमध्यस्थद्वेष्यबन्धुषु। साधुष्वपि च पापेषु समबुद्धिर्विशिष्यते" गीता ६-९।

**समभिव्याहार ಸಮಭಿವ್ಯಾಹಾರ** (पुं०) 1. ಒಟ್ಟಿಗೆ ಸೇರಿಸಿ ಹೇಳುವುದು, ಜೊತೆಯಲ್ಲಿ ಸೇರಿಸಿ ಉಚ್ಚರಿಸುವುದು. सम्+अभि+वि+आङ्+हृञ् (हरणे) "घञ्" (३-३-१८)। घटमानय ಎಂಬಲ್ಲಿ ದ್ವಿತೀಯಾಂತ ಘಟಪದ ಸಮಭಿವ್ಯಾಹಾರವು आनय ಎಂಬ ಕ್ರಿಯಾಪದಕ್ಕೆ ಇರುವುದು. 2. ಸಾಹಿತ್ಯ, ಜೊತೆಯಲ್ಲಿರುವುದು, ಒಟ್ಟಿಗೆ ಸೇರಿಕೊಂಡಿರುವುದು.

**समभिव्याहृत ಸಮಭಿವ್ಯಾಹೃತ** (वि०) 1. ಒಟ್ಟಿಗೆ ಸೇರಿಸಿ (ವ್ಯವಧಾನವಿಲ್ಲದೆ) ಹೇಳಲ್ಪಟ್ಟ. सम्+अभि+वि + आङ् + हृञ् (हरणे) "क्तः" (३-२-१०२)। 2. ಕೂಡಿಕೊಂಡಿರುವ, ಒಟ್ಟಿಗೆ ಸೇರಿಕೊಂಡಿರುವ.

**समभिहार ಸಮಭಿಹಾರ** (पुं०) 1. ಮತ್ತೆ ಮತ್ತೆ ಮಾಡುವುದು, ಮತ್ತೆ ಮತ್ತೆ ಹೇಳುವುದು. "क्रियासमभिहारे द्वे वाच्ये" वा०। पौनःपुन्यं भृशार्थश्च समभिहारः। 2. ಹೆಚ್ಚಿಗೆ, ಆಧಿಕ್ಯ, ಮಿತಿಮೀರಿರುವುದು. सम+अभि+हृञ् (हरणे) "घञ्" (३-३-१८)। "भवेत् समभिहारस्तु पौनःपुन्यभृशार्थयोः" मेदि०।

**समम् ಸಮಮ್** (अव्य०) 1. ಸಂಗಡ, ಕೂಡ, ಜೊತೆಯಲ್ಲಿ. "इत्थं व्रतं धारयतः प्रजार्थं समं महिष्या महनीयकीर्तिः" रघु० २-२५। 2. ಏಕರೂಪವಾಗಿ, ಒಂದೇ ರೀತಿಯಾಗಿ. "उदगीयत यत्तदा विधिज्ञैः समनुद्गातृगिरैकतानतारैः" याद० १५-८६। 3. ಏಕಕಾಲದಲ್ಲಿ, ಒಂದೇ ಸಮಯದಲ್ಲಿ. "सममेत्य तुल्यमहसः शिलाघनान् घनपक्षर्दाघतरबाहुशालिनः" माघ० १३-१५। 4. ಸಮಾನವಾಗಿ. "समं ददृशिरे देवैः ततज्जानपदैरपि" याद० २२-८०।

**समय ಸಮಯ** (पुं०) 1. ಕಾಲ, ವೇಳೆ. सम्यक् एति— इण् (गतौ) "अच्" (३-१-१३४)। "समय एव करोति बलाबलं प्रणिगदन्त इतीव शरीरिणाम्" माघ० ६-४४। 2. ಕ್ಲೃಪ್ತವಾದ ಕಾಲ, ಗೊತ್ತಾದ ಕಾಲ. "कुबेरगुप्तां दिशमुष्णरश्मौ गन्तुं प्रवृत्ते समयं विलङ्घ्य" कुमा० ३-२५। 3. ಗೊತ್ತುಮಾಡು, ಸಂಕೇತ. "जलधरावलिरप्रतिपालितस्वसमया समयाज्जगतीधरम्" माघ० ६-२५। 4. ಪ್ರತಿಜ್ಞೆ, ಶಪಥ. "न समयपरिरक्षणं क्षमं ते निकृतिपरेषु परेषु भूरिधाम्नः" किरा० १-४५। 5. ಸರಿಯಾದ ಕಾಲ, ಯೋಗ್ಯವಾದ ಕಾಲ. "समयोदयसम्भृतप्रसादस्त्रिगुणग्रन्थिचिकित्सकः श्रितानाम्" याद० १५-१२७। 6. ಆಚಾರ, ಸಂಪ್ರದಾಯ, ನಡವಳಿಕೆ, ನಿಯಮ. "वीराणां समयो हि दारुणरसः स्नेहक्रमं बाधते" उ० रा० ५-१९। 7. ನಿಯಮ, ಕಟ್ಟುಪಾಡು, ಕಟ್ಟಳೆ. "तथापि वक्तुं व्यवसाययन्ति मां निरस्तनारीसमया दुराधयः" किरा० १-२८। 8. ಸಿದ್ಧಾಂತ. 9. ಕವಿಗಳ ಸಂಪ್ರದಾಯ. 10. ಅವಕಾಶ, ಅನುಕೂಲವಾದ ಸಂದರ್ಭ. 11. ನಿರ್ದೇಶ, ಸಲಹೆ, ಉಪದೇಶ. 12. ಬುದ್ಧಿ. 13. ಕ್ರಿಯಾಕಾರ. 14. ಭಾಷೆ. 15. ವ್ಯವಹಾರ. "न तैः समयमन्विच्छेत् पुरुषो धर्ममाचरन्" मनु० १०-५३। 16. ಸಂಪತ್ತು. "समयः शपथे भाषासम्पदोः कालसंविदोः। सिद्धान्ताचार-

सङ्केतनियमावसरेषु च। क्रियाकारे च निर्देशे" हेम०। 17. ಈಶ್ವರಸಂಕೇತ. ಈ ಶಬ್ದಕ್ಕೆ ಇದೇ ಅರ್ಥವೆಂಬ ಒಂದು ನಿಯಮ. ಅಭಿಧಾಶಕ್ತಿ. ಶಬ್ದಾರ್ಥಗಳಿಗೆ ಈಶ್ವರೇಚ್ಛಾರೂಪ ಸಂಬಂಧ.

**समया ಸಮಯಾ** (अव्य०) 1. ಸಮೀಪದಲ್ಲಿ, ಹತ್ತಿರದಲ್ಲಿ. सम्+इण् (गतौ) "आ" (उ० ४-१७४)। "सैन्याश्च यात: समयापि विव्यथे कथं सुराजम्भवमन्यथाऽथ वा" माघ० १२-५२। 2. ಮಧ್ಯದಲ್ಲಿ, ನಡುವೆ. "समयान्तिकमध्ययो:" मेदि०।

**समयाचार ಸಮಯಾಚಾರ** (पुं०) ಸಂಪ್ರದಾಯದಂತೆ ನಡೆದುಕೊಳ್ಳುವುದು.

**समयाध्युषित ಸಮಯಾಧ್ಯುಷಿತ** (न०) ಸೂರ್ಯ ಮತ್ತು ನಕ್ಷತ್ರಗಳು ಗೋಚರವಾಗದಿರುವ ಕಾಲ, ನಕ್ಷತ್ರವಾವುದೂ ಕಣ್ಣಿಗೆ ಕಾಣದಿರುವ ಮತ್ತು ಇನ್ನೂ ಸೂರ್ಯೋದಯವಾಗದಿರುವ ಕಾಲ. "तथा प्रभातसमये नष्टे नक्षत्रमण्डले। रविर्यावन्न दृश्येत समयाध्युषितं च तत्"।

**समयानुवर्तन ಸಮಯಾನುವರ್ತನ** (न०) 1. ಸಮಯವನ್ನು ಅನುಸರಿಸಿ ನಡೆದುಕೊಳ್ಳುವುದು, ಕಾಲಕ್ಕೆ ತಕ್ಕಂತೆ ನಡೆದುಕೊಳ್ಳುವುದು. समयस्यानुवर्तनम्। 2. ಪ್ರತಿಜ್ಞೆಯಂತೆ ನಡೆದುಕೊಳ್ಳುವುದು. 3. ಹಿರಿಯರ ಸಂಪ್ರದಾಯದಂತೆ ನಡೆದುಕೊಳ್ಳುವುದು.

**समयानुवर्तिन् ಸಮಯಾನುವರ್ತಿನ್**(वि०) 1. ಸಮಯವನ್ನು ಅನುಸರಿಸಿ ನಡೆದುಕೊಳ್ಳುವವನು, ಕಾಲಕ್ಕೆ ತಕ್ಕಂತೆ ನಡೆದುಕೊಳ್ಳುವವನು. समयमनुवर्तते—सम्+अनु+वृतु (वर्तने) "णिनि:" (३-१-१३४)। 2. ಪ್ರತಿಜ್ಞೆಯಂತೆ ನಡೆದುಕೊಳ್ಳುವವನು. 3. ಹಿರಿಯರ ಸಂಪ್ರದಾಯದಂತೆ ನಡೆದುಕೊಳ್ಳುವವನು. स्त्रियां "ङीप्" (४-१-५)। –वर्तिनी –ವರ್ತಿನೀ.

**समयोचित ಸಮಯೋಚಿತ** (वि०) 1. ಆಯಾ ಕಾಲಕ್ಕೆ ಯೋಗ್ಯವಾದ, ಸಮಯಕ್ಕೆ ತಕ್ಕಂತಿರುವ. 2. ಸಂಪ್ರದಾಯಕ್ಕೆ ಯೋಗ್ಯವಾದ. 3. ಪ್ರತಿಜ್ಞೆಗೆ ತಕ್ಕಂತಿರುವ. (अव्य०) 4. ಕಾಲಕ್ಕೆ ತಕ್ಕಂತೆ. 5. ಸಂಪ್ರದಾಯಕ್ಕೆ ತಕ್ಕಂತೆ. 6 ಪ್ರತಿಜ್ಞೆಗೆ ತಕ್ಕಂತೆ.

**समर ಸಮರ** (पुंन०) ಯುದ್ಧ, ಕಾಳಗ. सम्+ऋ (गतौ) "घ:" (३-३-११८)। "समराय निकामकर्कशं क्षणमाकृष्टमुपैति यस्य च" माघ० १६-६३।

**समरभ ಸಮರಭ** (पुं०) ಸುರತ ಬಂಧದ ಒಂದು ಭೇದ. "स्वजङ्घाद्वयसंयुक्तं कृत्वा योषित्पदद्वयम्। स्तनौ धृत्वा रमेत् कामी बन्ध: समरभ: स्मृत:" रतिमं०।

**समरमूर्धन् ಸಮರಮೂರ್ಧನ್** (पुं०) ಯುದ್ಧದ ಮುಂಭೂಮಿ, ರಣಾಂಗಣದ ಮುಂಭಾಗ.

**समरेखा ಸಮರೇಖಾ** (स्त्री०) ನೇರವಾದ ಗೆರೆ, ನೇರವಾದ ಮಾರ್ಗ.

**समर्चन ಸಮರ್ಚನ** (न०) ಚೆನ್ನಾಗಿ ಪೂಜಿಸುವುದು, ಚೆನ್ನಾಗಿ ಆರಾಧಿಸುವುದು. सम् + अर्च (पूजायाम्) "ल्युट्" (३-३-११५)।

**समर्चनीय ಸಮರ್ಚನೀಯ** (वि०) 1. ಚೆನ್ನಾಗಿ ಪೂಜಿಸಲ್ಪಡುವ. 2. ಚೆನ್ನಾಗಿ ಪೂಜಿಸಬೇಕಾದ. 3. ಚೆನ್ನಾಗಿ ಪೂಜಿಸಬಹುದಾದ. सम्+अर्च (पूजायाम्) "अनीयर्" (३-१-९६)। "तव्य:"। –र्चितव्य: –ರ್ಚಿತವ್ಯ:.

**समर्चा ಸಮರ್ಚಾ** (स्त्री०) ಪೂಜೆ, ಆರಾಧನೆ. सम्+अर्च (पूजायाम्) "अ:" (३-३-१०३)।

**समर्थ ಸಮರ್ಥ** (वि०) 1. ಶಕ್ತ, ಸಾಮರ್ಥ್ಯವುಳ್ಳವನು. सम्+अर्थ (उपयाच्ञायाम्) "अच्" (३-१-१३४)। "हृतवत्यपि भीष्मकात्मजां त्वयि चक्षाम समर्थ एव यत्" माघ० १६-४८। 2. ಅರ್ಹ, ಯೋಗ್ಯ. "प्रतिग्रहसमर्थोऽपि प्रसङ्गं तत्र वर्जयेत्। प्रतिग्रहेण ह्यस्याशु ब्राह्मं तेज: प्रशाम्यति" मनु० ४-१८६। 3. ಸಮುಚಿತವಾದ, ಸಮಯಕ್ಕೆ ತಕ್ಕುದಾದ. "तद्धनुर्ग्रहणमेव राघव: प्रत्यपद्यत समर्थमुत्तरम्" रघु० ११-७९। 4. ಸಮಾನವಾದ ಅರ್ಥವುಳ್ಳ. 5. (ವ್ಯಾಕರಣದಲ್ಲಿ) ಸಂಗತವಾದ ಅರ್ಥವುಳ್ಳ (ಪದ), ಪರಸ್ಪರ ಸಂಬದ್ಧವಾದ ಅರ್ಥವುಳ್ಳ (ಪದ), ಪ್ರತ್ಯೇಕವಾದ ಅರ್ಥವುಳ್ಳ ಪದಗಳಿಗೆ ಸಮುದಾಯ ಶಕ್ತಿಯಿಂದ ವಿಶಿಷ್ಟವಾದ ಒಂದು ಅರ್ಥವನ್ನು ಕೊಡುವ ಶಕ್ತಿಯುಳ್ಳ (ಪದ). ["एकार्थीभावसामर्थ्य" ಪದದಲ್ಲಿ ನೋಡಿ.] "समर्थ: पदविधि:" पा० सू० २-१-१। 6. ಹಿತವಾದ. "नाहंसे मां सहस्राक्ष धुमं त्याजयितुं चिरात्। समर्थमुपजीव्येमं त्यजेयं कथमद्य वै" भा०।

**समर्थक ಸಮರ್ಥಕ** (वि०) 1. ಸ್ಥಿರಪಡಿಸುವವನು. 2. ನಿಶ್ಚಯಿಸುವವನು. 3. ಯಾಚಿಸಿದುದನ್ನು ಕೊಡುವವನು.

**समर्थता ಸಮರ್ಥತಾ** (स्त्री०) ಸಾಮರ್ಥ್ಯ, ಶಕ್ತಿಯಿಂದ ಕೂಡಿರುವಿಕೆ. समर्थस्य भाव: "तल्" (५-१-११९)।

**समर्थन ಸಮರ್ಥನ** (न०) 1. ದೃಢೀಕರಿಸುವುದು, ಸ್ಥಿರಪಡಿಸುವುದು. सम् + अर्थ (उपयाच्ञायाम्) "ल्युट्" (३-३-११५)। 2. ವಾದಮಾಡಿ ನ್ಯಾಯವನ್ನು ತೋರಿಸು

ವುದು, ಋಜುತ್ವವನ್ನು ಸ್ಥಾಪಿಸುವುದು (ಪ್ರದರ್ಶಿಸು ವುದು). 3. ಸಾಮರ್ಥ್ಯ, ಶಕ್ತಿ. "स तु ज्ञानगरीयस्त्वात् तपसश्च समर्थनात्। अवतस्थे महाप्राज्ञो धैर्येण परमेण ह" भा० आदि०। 4. ಇದೇ ಸರಿಯೆಂದು ನಿಶ್ಚಯಿಸು ವುದು. "—युच्" (३-३-१०७)। —ना —ನಾ.

**समर्थनीय ಸಮರ್ಥನೀಯ** (वि०) 1. ಸಮರ್ಥಿಸಿಕೊಳ್ಳಲ್ಪಡುವ. 2. ಸಮರ್ಥಿಸಿಕೊಳ್ಳಬೇಕಾದ. 3. ಸಮರ್ಥಿಸಿಕೊಳ್ಳಬಹುದಾದ. 4. ಸಮರ್ಥಿಸಿಕೊಳ್ಳಲು ಶಕ್ಯವಾದ. सम्+अर्थ (उपयाच्ञायाम्) "अनीयर्" (३-१-९६)। "समर्थनीयस्यार्थस्य काव्यलिङ्गं समर्थनम्" चन्द्रा०।

**समर्थित ಸಮರ್ಥಿತ** (वि०) 1. ಸ್ಥಿರಪಡಿಸಲ್ಪಟ್ಟ. 2. ನಿರ್ಣಯಿಸಲ್ಪಟ್ಟ. 3. ನ್ಯಾಯ ತೋರಿಸಲ್ಪಟ್ಟ. सम् + अर्थ (उपयाच्ञायाम्) "क्तः" (३-२-१०२)।

**समर्पण ಸಮರ್ಪಣ** (न०) ಅರ್ಪಿಸುವುದು, ಒಪ್ಪಿಸುವುದು, ಮರ್ಯಾದೆಯಿಂದ ಕೊಡುವುದು. सम् + ऋ (गतौ) + णिच् "ल्युट्" (३-३-११५)।

**समर्पणीय ಸಮರ್ಪಣೀಯ** (वि०) 1. ಅರ್ಪಿಸಲ್ಪಡುವ. 2. ಅರ್ಪಿಸಬೇಕಾದ, ಗೌರವದಿಂದ ಕೊಡಬೇಕಾದ. 3. ಅರ್ಪಿಸಬಹುದಾದ. सम्+ऋ (गतौ)+णिच् "अनीयर्" (३-१-९६)। "तव्यः"। —अर्पयितव्यः —ಅರ್ಪಯಿತವ್ಯಃ.

**समर्पयत् ಸಮರ್ಪಯತ್** (वि०) ಗೌರವಪೂರ್ವಕ ಅರ್ಪಿಸುತ್ತಿರುವ, ಮರ್ಯಾದೆಯಿಂದ ಒಪ್ಪಿಸುತ್ತಿರುವ. सम् + ऋ (गतौ) + णिच् "शतृ" (३-२-१२४)। स्त्रियां "ङीप्" (४-१-६)। —यन्ती —ಯಂತೀ.

**समर्पित ಸಮರ್ಪಿತ** (वि०) ಗೌರವಪೂರ್ವಕ ಒಪ್ಪಿಸಲ್ಪಟ್ಟ, ಮರ್ಯಾದೆಯಿಂದ ಅರ್ಪಿಸಲ್ಪಟ್ಟ. सम्+ऋ (गतौ)+ णिच् "क्तः" (३-२-१०२)।

**समवकार ಸಮವಕಾರ** (पुं०) ಹತ್ತು ವಿಧ ರೂಪಕಗಳಲ್ಲೊಂದು ರೂಪಕ. (1) नाटकम् (2) प्रकरणम् (3) भाणः (4) प्रहसनम् (5) डिमः (6) व्यायोगः (7) समवकारः (8) वीथी (9) अङ्कः ಮತ್ತು (10) ईहामृगः ಇವು ಹತ್ತು ರೂಪಕಗಳು. ಸಮವಕಾರದಲ್ಲಿ ಕಥಾವಸ್ತುವು ದೇವತೆಗಳ ಮತ್ತು ಅಸುರರ ವಿಷಯವಾಗಿ ಪ್ರಸಿದ್ಧವಾಗಿರಬೇಕು. ವಿಮರ್ಶಸಂಧಿಯಿರುವುದಿಲ್ಲ. ಮೂರು ಅಂಕಗಳಿರಬೇಕು. ಮೊದಲನೆಯ ಅಂಕದಲ್ಲಿ ಮುಖ ಮತ್ತು ಪ್ರತಿಮುಖ ಸಂಧಿಗಳೂ ಎರಡು ಮತ್ತು ಮೂರನೆಯ ಅಂಕಗಳಲ್ಲಿ ಒಂದೊಂದು ಸಂಧಿಗಳೂ ಇರಬೇಕು. ಪ್ರಖ್ಯಾತವಾದ ಹನ್ನೆರಡು ಮಂದಿ ಉದಾತ್ತ ದಿವ್ಯಾದಿವ್ಯನಾಯಕರು ಇದ್ದು ಅವರೆಲ್ಲರಿಗೂ ಪ್ರತ್ಯೇಕ ಫಲಪ್ರಾಪ್ತಿ ವರ್ಣನೆಯಿರಬೇಕು. ವೀರರಸವು ಪ್ರಧಾನವಾಗಿರಬೇಕು ಇತ್ಯಾದಿ. "वृत्तं समवकारे तु ख्यातं देवासुराश्रयम्। सन्धयो निर्विमर्शास्तु त्रयोऽङ्कास्तत्र चादिमे। सन्धी द्वावन्त्ययोस्तद्वदेक एको भवेत्पुनः। नायका द्वादशोदात्ताः प्रख्याता देवमानवाः। फलं पृथक्पृथक्तेषां वीरमुख्योऽखिलो रसः" ಇತ್ಯಾದಿ सा० द० ६।

**समवतार ಸಮವತಾರ** (पुं०) ನದಿ ಮೊದಲಾದುವುಗಳಲ್ಲಿ ಸ್ನಾನಾದಿಗಳಿಗೆ ಇಳಿಯುವ ಮಾರ್ಗ, —ಸ್ನಾನಘಟ್ಟದ ಸೋಪಾನ. सम्+अव+तॄ (प्लवनतरणयोः) "घञ्" (३-३-१२०)। "दधतमाकरिभिः करिभिः क्षतैः समवतारसमैरसमैस्तटैः" किरा० ५-७।

**समवधान ಸಮವಧಾನ** (न०) ಚೆನ್ನಾಗಿ ಗಮನಿಸುವುದು, ಹೆಚ್ಚು ಆಸಕ್ತಿಯಿಂದ ಲಕ್ಷ್ಯವಿಟ್ಟು ಕೇಳುವುದು. सम् + अव+डु धाञ् (धारणपोषणयोः) "ल्युट्" (३-३-११५)।

**समवधारण ಸಮವಧಾರಣ** (न०) ದೃಢವಾದ ನಿರ್ಧಾರ, ಅಚಲವಾದ ನಿರ್ಧಾರ. सम् + अव + धृञ् (धारणे) "ल्युट्" (३-३-११५)।

**समवर्तिन् ಸಮವರ್ತಿನ್** (पुं०) 1. ಯಮಧರ್ಮರಾಯ. समं वर्तितुं शीलमस्य — वृतु (वर्तने) "णिनिः" (३-२-७८)। "शासितारं च पापानां पितॄणां समवर्तिनम्। असृजत् सर्वभूतात्मा निधिपं च धनेश्वरम्" भा० शान्ति० २०६-३१। (वि०) 2. ಎಲ್ಲರಲ್ಲೂ ಸಮನಾಗಿ ನಡೆದುಕೊಳ್ಳುವವನು.

**समवस्था ಸಮವಸ್ಥಾ** (स्त्री०) 1. ಸಮಾನವಾದ ಅವಸ್ಥೆ, ಒಂದೇ ವಿಧವಾದ ಪರಿಸ್ಥಿತಿ. "त्वयोपस्थितवियोगस्य तपोवनस्यापि तावत्समवस्था दृश्यते" शाकु० ४। 2. ಸ್ಥಿರವಾದ ಪರಿಸ್ಥಿತಿ. "वदनेन सुवदनायास्ते समवस्थे क्षणाद्वहे" माल० ४-७।

**समवस्थित ಸಮವಸ್ಥಿತ** (वि०) 1. ಒಂದೇ ಸ್ಥಿತಿಯಲ್ಲಿರುವ. 2. ಸ್ಥಿರವಾಗಿರುವ, ದೃಢವಾಗಿರುವ. 3. ಒಂದೇ ರೀತಿಯಾಗಿರುವ. सम् + अव + ष्ठा (गतिनिवृत्तौ) "क्तः" (३-४-७२)।

**समवाय ಸಮವಾಯ** (पुं०) 1. ಸಮೂಹ. समवाय्यते — सम् + अव + अय (गतौ) "घञ्" (३-३-१९)। "अनध्यायो रुद्यमाने समवाये जनस्य च" मनु० ४-१०८। 2. ಸಂಬಂಧ, ಅಯುತಸಿದ್ಧವಾದವುಗಳ ಸಂಬಂಧ. ಅವಯವಾವಯವಿಗಳು ಗುಣ-ಗುಣಿಗಳು ಜಾತಿ-ವ್ಯಕ್ತಿ

ಗಳು ಇವುಗಳಿಗಿರುವ ನಿತ್ಯಸಂಬಂಧವು ಸಮವಾಯ ಸಂಬಂಧ. ಘಟ ಮತ್ತು ಕಪಾಲಗಳಿಗಿರುವ ತಂತು ಪಟ ಗಳಿಗಿರುವ ಸಂಬಂಧವು ಸಮವಾಯ ಸಂಬಂಧ. ಅಯುತ ಸಿದ್ಧವಾದ ಆಧಾರ್ಯ ಮತ್ತು ಆಧಾರಭೂತ ವಸ್ತುಗಳಿಗಿರುವ ಸಂಬಂಧವು ಸಮವಾಯ. "घटादीनां कपालादौ द्रव्येषु गुणकर्मणोः। तेषु जातेश्च सम्बन्धः समवायः प्रकीर्तितः" भाषाप० ११। 3. ಒಟ್ಟುಗೂಡುವುದು, ಒಟ್ಟಿಗೆ ಸೇರುವುದು, ಒಂದಾಗಿ ಸೇರುವುದು. "सर्वाविनयानामेकैकमप्येषामायतनं किमुत समवायः" काद०।

**समवायिन् ಸಮವಾಯಿನ್** (वि०) ನಿತ್ಯಸಂಬಂಧ ಹೊಂದಿರುವ, ಅಯುತಸಿದ್ಧವಾದ ಸಂಬಂಧವುಳ್ಳ.

**समवायिकारण ಸಮವಾಯಿಕಾರಣ** (न०) ಅಯುತ ಸಿದ್ಧಸಂಬಂಧದಿಂದ ಕಾರ್ಯವನ್ನುಂಟುಮಾಡುವ ಕಾರಣ. तन्तवः पटस्य समवायिकारणम्। ತಂತುಗಳು ಸಮವಾಯ ಸಂಬಂಧದಿಂದ ಪಟರೂಪ ಕಾರ್ಯಕ್ಕೆ ಕಾರಣವಾಗುವುದರಿಂದ ಸಮವಾಯಿಕಾರಣವಾಯಿತು. यस्मिन् समवायेन सम्बद्धं सत् कार्यमुत्पद्यते तत् समवायिकारणम्। अतः तन्तुः पटस्य समवायिकारणम् भवति।

**समवृत्त ಸಮವೃತ್ತ** (न०) ಪದ್ಯ (ಶ್ಲೋಕ)ದ ನಾಲ್ಕು ಪಾದಗಳಲ್ಲೂ ಸಮವಾದ ಅಕ್ಷರಗಳುಳ್ಳ ವೃತ್ತ, ನಾಲ್ಕು ಪಾದಗಳಲ್ಲೂ ಸಮಾನ ಲಕ್ಷಣವುಳ್ಳ ವೃತ್ತ. "अङ्घ्रयो यस्य चत्वारः तुल्यलक्षणलक्षिताः। तच्छन्दःशास्त्रतत्त्वज्ञाः समं वृत्तं प्रचक्षते" वृ० र०।

**समवृत्ति ಸಮವೃತ್ತಿ** (स्त्री०) 1. ಹೆಚ್ಚುಕಡಿಮೆಯಿಲ್ಲದ ಸ್ಥಿತಿ, ಯಾವಾಗಲೂ ಒಂದೇ ರೀತಿಯಾದ ಸ್ಥಿತಿ. 2. ಸಮವಾದ ಜೀವನ, ಏರುಪೇರಿಲ್ಲದ ಜೀವನ. (वि०) 3. ಸಮಾನವಾದ ವರ್ತನೆಯುಳ್ಳವನು, ಹೆಚ್ಚು ಮಾರ್ದವವೂ ಹೆಚ್ಚು ತೀಕ್ಷ್ಣತೆಯೂ ಇಲ್ಲದ ವರ್ತನೆಯುಳ್ಳವನು. समा नातिमृदुः नातितिग्मा च वृत्तिः यस्य। "समवृत्तिरुपैति मार्दवं समये यश्च तनोति तिग्मताम्" किरा० २-३८।

**समवेत ಸಮವೇತ** (वि०) 1. ಸಮವಾಯಸಂಬಂಧದಿಂದ ಇರುವ. सम्+अव+इण् (गतौ) "क्तः" (३-४-७२)। मृदा समवायेन उत्पाद्यं घटात्मकं कार्यं कपाले समवेतं भवति। 2. ಮಿಳಿತವಾಗಿರುವ, ಒಟ್ಟಿಗೆ ಸೇರಿರುವ. "धर्मक्षेत्रे कुरुक्षेत्रे समवेता युयुत्सवः। मामकाः पाण्डवाश्चैव किमकुर्वत सञ्जय" गीता १-१। 3. ಗುಂಪು ಗುಂಪಾಗಿ ಸೇರಿರುವ, ಗುಂಪಿನೊಡನೆ ಸೇರಿಕೊಂಡಿರುವ. "सेनायां समवेता ये सैन्यास्ते सैनिकाश्च ते" अम०।

**समष्टि ಸಮಷ್ಟಿ** (स्त्री०) 1. ಚೆನ್ನಾಗಿ ಎಲ್ಲಾ ಕಡೆಯಲ್ಲೂ ವ್ಯಾಪಿಸಿರುವಿಕೆ, ಒಟ್ಟುಗೂಡಿ ಎಲ್ಲಾ ಕಡೆಯಲ್ಲೂ ಹರಡಿರುವಿಕೆ. सम् + अश् (व्याप्तौ) "क्तिन्" (३-३-९४)। 2. (ಅದ್ವೈತಿಗಳ ಮತದಲ್ಲಿ) ಎಲ್ಲಾ ಒಟ್ಟುಗೂಡಿರುವ ವಸ್ತು. "समष्टिरीशः सर्वेषां स्वात्मतादात्म्यवेदनात्। तदभावात्तदन्ये तु ज्ञायन्ते व्यष्टिसंज्ञया" पञ्चद०। 3. (ವಿಶಿಷ್ಟಾದ್ವೈತಿಗಳ ಮತದಲ್ಲಿ) ಇಂದ್ರಿಯಗಳು ಆಯಾ ಶರೀರಗಳಲ್ಲಿ ಪ್ರತ್ಯೇಕವಾಗಿರುವಿಕೆ. 4. ಮಹದಾದಿ ಸೃಷ್ಟಿ. 5. ಪಂಚೀಕರಣವಾಗದಿರುವ ಭೂತಗಳು. 6. ಸಮೂಹ.

**समष्ठिला ಸಮಷ್ಠಿಲಾ** (स्त्री०) ಮಂಗರವಳ್ಳಿ.

**समसन ಸಮಸನ** (न०) 1. ಸಂಗ್ರಹಿಸುವುದು, ಸಂಕ್ಷೇಪ ಮಾಡುವುದು. सम्+असु(क्षेपणे)"ल्युट्"(३-३-११५)। "संक्षेपणं समसनम्" अम०। 2. ಸಮಾಸ, ಅನೇಕ ಪದಗಳನ್ನು ಸೇರಿಸಿ ಒಂದೇ ಪದವನ್ನಾಗಿ ಮಾಡುವುದು.

**समसुप्ति ಸಮಸುಪ್ತಿ** (पुं०) ಕಲ್ಪದ ಕೊನೆ, ಮಹಾ ಪ್ರಳಯ. समेषां सुप्तिर्यत्र।

**समस्त ಸಮಸ್ತ** (वि०) 1. ಸಂಪೂರ್ಣ, ಸಕಲ, ಎಲ್ಲ, ನಿಃಶೇಷವಾದ. सम्+असु (क्षेपणे) "क्तः" (३-२-१०२)। "सपदि कुमुदिनीभिर्मीलितं हा क्षपापि क्षयमगमदपेतास्तारकास्ताः समस्ताः" माघ० ११-२४। 2. ಎಸೆಯಲ್ಪಟ್ಟ. 3. ಅನೇಕ ಪದಗಳನ್ನು ಸೇರಿಸಿ ಒಂದಾಗಿ ಮಾಡಲ್ಪಟ್ಟ (ಪದ). 4. ಸಂಗ್ರಹಿಸಿ ಹೇಳಲ್ಪಟ್ಟ, ಸಂಕ್ಷೇಪವಾಗಿ ಹೇಳಲ್ಪಟ್ಟ.

**समस्थ ಸಮಸ್ಥ** (वि०) 1. ಸಮಸ್ಥಿತಿಯಲ್ಲಿರುವ. समे तिष्ठति — ष्ठा (गतिनिवृत्तौ) "कः" (३-२-४)। 2. ಸಮಾನವಾಗಿರುವ, ಏಕರೂಪವಾಗಿರುವ. 3. ಸಮವಾಗಿರುವ, ಹಳ್ಳತಿಟ್ಟಿಲ್ಲದ, ಒಂದೇ ಮಟ್ಟದಲ್ಲಿರುವ.

**समस्थल ಸಮಸ್ಥಲ** (न०) ಸಮಭೂಮಿ, ಹಳ್ಳತಿಟ್ಟಿಲ್ಲದ ನೆಲ.

**समस्थली ಸಮಸ್ಥಲೀ** (स्त्री०) ಗಂಗಾ-ಯಮುನಾ ನದಿಗಳ ಮಧ್ಯದಲ್ಲಿರುವ ದೇಶ, ಅಂತರ್ವೇದಿ.

**समस्या ಸಮಸ್ಯಾ** (स्त्री०) 1. ಶ್ಲೋಕಗಳನ್ನು ಪೂರ್ಣ ಮಾಡಲು ಕವಿಗಳಿಗೆ ಕೊಡುವ ಶ್ಲೋಕದ ಒಂದು ಪಾದ ಅಥವಾ ಶ್ಲೋಕದ ಅರ್ಧ ಭಾಗ, ಕವಿಗಳನ್ನು ಪರೀಕ್ಷಿಸಲು (ಶ್ಲೋಕ ಪೂರ್ತಿಮಾಡಲು) ಅವರಿಗೆ ಕೊಡುವ ಶ್ಲೋಕದ ಒಂದು ಭಾಗ. "समस्या तु समासार्था" अम०। 2. ಅಪೂರ್ಣವಾಗಿರುವುದನ್ನು ಪೂರ್ಣಮಾಡುವುದು.

**समा ಸಮಾ** (स्त्री०) ವರ್ಷ, ಸಂವತ್ಸರ. समन्ति विक्लवं कुर्वन्ति सर्वम्—षम (वैक्लव्ये) "अच्" (३-१-१३४)। "हायनोऽस्त्री शरत्समाः" ಎಂದು ಬಹುವಚನ ನಿರ್ದೇಶವಿರುವುದರಿಂದ ಇದು ನಿತ್ಯಬಹುವಚನಾಂತ ಶಬ್ದ. ಆದರೆ "समां समां विजायते" (५-२-१२) ಎಂದು ನಿರ್ದೇಶವಿರುವುದರಿಂದ ಏಕವಚನಾಂತವೂ ಉಂಟು. "मानिषाद प्रतिष्ठां त्वमगमः शाश्वतीः समाः। यत्क्रौञ्चमिथुनादेकमवधीः काममोहितम्" रामा०।

**समांश ಸಮಾಂಶ** (पुं०) ಸಮನಾದ ಭಾಗ, ಸಮಪಾಲು. समोंऽशः।

**समांशहारिन् ಸಮಾಂಶಹಾರಿನ್** (वि०) ಸಮಪಾಲನ್ನು ಪಡೆಯುವವನು, ಸಮವಾದ ಭಾಗವನ್ನು ಪಡೆಯಲು ಹಕ್ಕುಳ್ಳವನು. समांशं हरति— हृञ् (हरणे) "णिनिः" (३-१-१३४)।

**समांशिक ಸಮಾಂಶಿಕ** (वि०) ಸಮಪಾಲನ್ನು ಪಡೆಯಲು ಹಕ್ಕುಳ್ಳವನು. समांशोऽस्यास्ति "ठन्" (५-२-११५)। "यदि कुर्यात्समानांशान् पत्न्यः कार्याः समांशिकाः"।

**समांसमीना ಸಮಾಂಸಮೀನಾ** (स्त्री०) ಪ್ರತಿವರ್ಷವೂ ಕರುಹಾಕುವ ಹಸು, ವರ್ಷಕಂತಿ. समायां समायां विजायते प्रतिवर्षं गर्भं विमुञ्चति। समायां समायां विजायते "खः" (५-२-१२)। उत्तरदले टाब्विभक्त्योर्लोपः पूर्वदले यलोप एव। यलोपोऽवशिष्टविभक्तेरलुक् च निपा०। "समांसमीना सा यैव प्रतिवर्षं प्रसूयते" अम०।

**समाकर्षिन् ಸಮಾಕರ್ಷಿನ್** (पुं०) ಬಹಳ ದೂರದವರೆಗೂ ವ್ಯಾಪಿಸಿರುವ ಪರಿಮಳ. समाकर्षति मनः— सम्+आ+कृष (विलेखने) "णिनिः" (३-३-१७१)। "समाकर्षी तु निर्हारी सुरभिर्घ्राणतर्पणः" अम०।

**समाकीर्ण ಸಮಾಕೀರ್ಣ** (वि०) ತುಂಬಲ್ಪಟ್ಟ. सम्+आ+कॄ (विक्षेपे) "क्तः" (३-२-१०२)। "श्लोकसारसमाकीर्णं सर्गकल्लोलसंकुलम्"।

**समाकुल ಸಮಾಕುಲ** (वि०) 1. ಭಯಭ್ರಾಂತರಾದ, ಹೆದರಿದ. सम्+आ+कुल (संस्त्याने बन्धुषु च) "कः" (३-१-१३५)। "आगच्छतोऽनूचि गजस्य घण्टयोः स्वनं समाकर्ण्य समाकुलाङ्गनाः" माघ० १२-३४। 2. ವ್ಯಾಪ್ತವಾದ, ತುಂಬಿರುವ. "सहसा ससंभ्रमविलोलसकलजनतासमाकुलम्" माघ० १५-७४। 3. ಕ್ಷೋಭೆಗೊಂಡ, ಬೆರಳಿದ, ಉದ್ರೇಕಗೊಂಡ. "समाकुले सदसि तथापि विक्रियां मनोऽगमन्नमुरभिदः पुरोदितैः" माघ० १७-१८।

**समाक्रमण ಸಮಾಕ್ರಮಣ** (न०) ಮುತ್ತಿಗೆ ಹಾಕುವುದು, ಆಕ್ರಮಿಸುವುದು. सम्+आ+क्रमु (पादविक्षेपे) "ल्युट्" (३-३-११५)।

**समाख्या ಸಮಾಖ್ಯಾ** (स्त्री०) 1. ಯಶಸ್ಸು, ಕೀರ್ತಿ, ಪ್ರಖ್ಯಾತಿ. सम्+आ+ख्या (प्रकथने) "अङ्" (३-३-१०६)। 2. ಹೆಸರು, ನಾಮಧೇಯ.

**समाख्यात ಸಮಾಖ್ಯಾತ** (वि०) 1. ಪ್ರಸಿದ್ಧಿಪಡೆದಿರುವ, ಕೀರ್ತಿಯನ್ನು ಗಳಿಸಿರುವ. सम्+आ+ख्या (प्रकथने) "क्तः" (३-४-७२)। 2. ಚೆನ್ನಾಗಿ ಹೇಳಲ್ಪಟ್ಟ.

**समागत ಸಮಾಗತ** (वि०) 1. ಬಂದಿರುವ, ಬಂದು ತಲುಪಿರುವ. सम्+आ+गम्लृ (गतौ) "क्तः" (३-४-७२)। "शौरेः प्रतापोपनतैरितस्ततः समागतैः प्रश्रयनम्रमूर्तिभिः" माघ० १२-३३। 2. ಸಮೀಪಕ್ಕೆ ಬಂದಿರುವ. 3. ಒಟ್ಟಿಗೆ ಸೇರಿಬಂದಿರುವ. "स्वकेतुभिः पाण्डुरनीलपाटलैः समागताः शक्रधनुःप्रभाभिदः" किरा० १६-५८।

**समागति ಸಮಾಗತಿ** (स्त्री०) 1. ಆಗಮನ, ಬರುವುದು, ಬಂದು ಸೇರುವುದು. सम्+आ+गम्लृ (गतौ) "क्तिन्" (३-३-९४)। 2. ಒಟ್ಟಿಗೆ ಕಲೆತು ಬರುವುದು. 3. ಸಮೀಪಕ್ಕೆ ಬರುವುದು.

**समागम ಸಮಾಗಮ** (पुं०) 1. ಸಮೀಪಕ್ಕೆ ಬರುವುದು. सम्+आ+गम्लृ (गतौ) "अप्" (३-३-५८)। 2. ಬಂದು ಸೇರುವುದು, ತಲುಪುವುದು. 3. ಒಬ್ಬರನ್ನೊಬ್ಬರು ಸಂಧಿಸುವುದು, ಪರಸ್ಪರ ಒಟ್ಟುಗೂಡುವುದು. "वल्लभाभिरुपसृत्य चक्रिरे सामिभुक्तविषयाः समागमाः" रघु० १९-१६। 4. ಗ್ರಹಗಳು ಒಂದು ಕಡೆ ಸೇರುವುದು.

**समाघात ಸಮಾಘಾತ** (पुं०) 1. ಯುದ್ಧ, ಸಮರ. समाहन्यतेऽत्र—सम्+आ+हन (हिंसागत्योः) "घः" (३-३-११८)। 2. ವಧೆ, ಕೊಲ್ಲುವುದು. "समाघातो वधे युद्धे" मेदि०।

**समाचरण ಸಮಾಚರಣ** (न०) ಅನುಷ್ಠಾನ, ಆಚರಿಸುವುದು, ನಡಸುವುದು. सम्+आ+चर (गतौ) "ल्युट्" (३-३-११५)।

**समाचरणीय ಸಮಾಚರಣೀಯ** (वि०) 1. ಅನುಷ್ಠಿಸಲ್ಪಡುವ, ನಡಸಲ್ಪಡುವ. 2. ಅನುಷ್ಠಿಸಬೇಕಾದ. 3. ಅನುಷ್ಠಿಸಲು ಶಕ್ಯವಾದ. 4. ಆಚರಿಸಬಹುದಾದ. सम्+आ+चर (गतौ) "अनीयर्" (३-१-९६)।

**समाचरत् ಸಮಾಚರತ್** (ವಿಂ) ಅನುಷ್ಠಿಸುತ್ತಿರುವ, ಆಚರಿಸುತ್ತಿರುವ, ನಡಸುತ್ತಿರುವ. सम् + आ + चर (गतौ) "शतृ" (३-२-१२४)। स्त्रियां "ङीप्" (४-१-६)। **-चरन्ती -ಚರಂತೀ.**

**समाचार ಸಮಾಚಾರ** (ಪುಂ) ವಾರ್ತೆ, ವರ್ತಮಾನ. सम् + आ + चर (गतौ) "घञ्" (३-३-१८)। "पुण्यस्त्रीणां समाचारं श्रोतुमिच्छामि तत्त्वतः" मत्स्यपु०।

**समाज ಸಮಾಜ** (ಪುಂ) 1. ಪಶು ಪ್ರಾಣಿಗಳಿಗಿಂತಲೂ ಬೇರೆಯಾದ ದೇವ ಮನುಷ್ಯಾದಿಗಳ ಸಮೂಹ, ಗುಂಪು, ಸಂಘ. संवीयतेऽत्र—सम्+अज (गतिक्षेपणयोः) "घञ्" (३-३-१९)। "धर्मव्यतिक्रमो ह्यस्य समाजस्य ध्रुवं भवेत्। यत्राधर्मः समुत्तिष्ठेत् न स्थेयं तत्र कर्हिचित्" भाग० १०-४४-९। 2. ಗುಂಪು, ರಾಶಿ. "समाजमिव सिद्धीनां स तद्योवतमग्रहीत्" याद० १६-१४१। 3. ಕೂಟ, ಅಚಲವಾದ ವಸ್ತುಗಳ ಪುಂಜ. "समाजमिव शैलानां विश्वरूपमिव प्रभुम्" याद० २२-११५। 4. ಸಭೆ, ಗೋಷ್ಠಿ, ಪರಿಷತ್ತು. "विशेषतः तत्त्वविदां समाजे विभूषणं मौनमपण्डितानाम्" भर्तृ० १-७।

**समाज्ञा ಸಮಾಜ್ಞಾ** (ಸ್ತ್ರೀಂ) ಯಶಸ್ಸು, ಕೀರ್ತಿ. सम् + आ + ज्ञा (अवबोधने) "अङ्" (३-३-१०६)।

**समादान ಸಮಾದಾನ** (ನಂ) 1. ಸರಿಯಾಗಿ ಸ್ವೀಕರಿಸುವುದು, ಸಂಪೂರ್ಣವಾಗಿ ತೆಗೆದುಕೊಳ್ಳುವುದು. सम् + आ + डुदाञ् (दाने) "ल्युट्" (३-३-११५)। 2. ಯೋಗ್ಯವಾದ ದಾನವನ್ನು ಸ್ವೀಕರಿಸುವುದು. 3. ಬೌದ್ಧರ ನಿತ್ಯಕರ್ಮಾಚರಣೆ. "समादानं समीचीनग्रहणे सौगताह्निके" मेदि०।

**समादिशत् ಸಮಾದಿಶತ್** (ವಿಂ) ಆಜ್ಞೆಮಾಡುತ್ತಿರುವ, ಅಪ್ಪಣೆಮಾಡುತ್ತಿರುವ. सम्+आ+दिश (अतिसर्जने) "शतृ" (३-२-१२४)। स्त्रियां "ङीप्" (४-१-६)। **-दिशन्ती -ದಿಶಂತೀ.**

**समादेश ಸಮಾದೇಶ** (ಪುಂ) ಆಜ್ಞೆ, ಅಪ್ಪಣೆ. सम् + आ + दिश (अतिसर्जने) "घञ्" (३-३-१८)।

**समाधान ಸಮಾಧಾನ** (ನಂ) 1. ಸರಿಯಾಗಿ ಇಡುವುದು, ಸರಿಯಾದ ರೀತಿಯಲ್ಲಿ ಇರಿಸುವುದು. सम्+आ+डुधाञ् (धारणपोषणयोः) "ल्युट्" (३-३-११५)। 2. ಚಿತ್ತೈಕಾಗ್ರತೆ, ಪರಮಾತ್ಮನಲ್ಲಿ ಒಂದೇ ಮನಸ್ಸನ್ನು ಇಟ್ಟಿರುವುದು. 3. ನಿಶ್ಚಲವಾದ ಚಿತ್ತದಿಂದ ತಪಸ್ಸನ್ನಾಚರಿಸುವುದು. 4. ಚಿತ್ತಸ್ವಾಸ್ಥ್ಯ, ಮನಸ್ಸಿನ ನೆಮ್ಮದಿ, ಶಾಂತತೆ. 5. ಸಂದೇಹವನ್ನು ಪರಿಹರಿಸುವುದು, ಮಾಡಿದ ಪೂರ್ವಪಕ್ಷಕ್ಕೆ ಸಮಂಜಸವಾಗಿ ಉತ್ತರ ಹೇಳುವುದು. 6. ಸಮ್ಮತಿ, ಒಪ್ಪಿಗೆ. 7. ವಿವಾದವನ್ನು ನಿಲ್ಲಿಸುವುದು.

**समाधि ಸಮಾಧಿ** (ಪುಂ) 1. ಏಕವಸ್ತುವಿಷಯಕ ನಿರಂತರ ಧ್ಯಾನ. ಎಂಟು ವಿಧ ಯೋಗಾಂಗಗಳಲ್ಲೊಂದು. एकाग्रतया मनसः स्थापनरूपो ध्येयमात्रस्फुरणरूपः ध्यानविशेषः। समाधीयतेऽस्मिन् मनो जनैः—सम् + आ + डुधाञ् (धारणपोषणयोः) "किः" (३-३-९२)। ಸಮಾಧಿಯು सम्प्रज्ञातः ಮತ್ತು असम्प्रज्ञातः ಎಂದು ಎರಡು ವಿಧ. ["असम्प्रज्ञात" ಪದದಲ್ಲಿ ನೋಡಿ.] "आत्मेश्वराणां न हि जातु विघ्नाः समाधिभेदप्रभवो भवन्ति" कुमा० ३-४०। 2. ಧ್ಯಾನ. 3. ತಪಸ್ಸು. "अथोपयन्तारमलं समाधिना न रत्नमन्विष्यति मृग्यते हि तत्" कुमा० ५-४५। 4. ಅಂಗೀಕಾರ, ಸಮ್ಮತಿ. "अयाचतारण्यनिवासमात्मनः फलोदयान्ताय तपःसमाधये" कुमा० ५-६। 5. ಅಶಕ್ಯವಾದ ವಿಷಯದಲ್ಲಿ ಮಾಡುವ ಪ್ರಯತ್ನ. 6. ಮೌನ, ಮಾತನಾಡದಿರುವುದು. 7. ಧಾನ್ಯದ ಕೊರತೆಯ ನಿಮಿತ್ತ ಕೊಳ್ಳುವವರ ಪೈಪೋಟಿ. 8. ಕಾವ್ಯದಲ್ಲಿರಬೇಕಾದ ಶಬ್ದಗುಣಗಳಲ್ಲೊಂದು, ಕಾವ್ಯದಲ್ಲಿನ ಬಂಧ (ಪದರಚನೆ) ಗುಣ. "आरोहावरोहक्रमः समाधिः" काव्या० सू० ३-१२। ದೀರ್ಘಾದಿ ಗುರು ವರ್ಣಗಳು ಅಧಿಕವಾಗಿರುವುದು ಆರೋಹ. ಲಘು ವರ್ಣಗಳಿಂದ ಉಂಟಾಗುವ ಶೈಥಿಲ್ಯವು ಅವರೋಹ. ಆರೋಹವಿರುವಲ್ಲಿ ಅವರೋಹದ ಪರಿತ್ಯಾಗ. ಅವರೋಹವಿರುವಲ್ಲಿ ಆರೋಹದ ಪರಿತ್ಯಾಗವೇ ಸಮಾಧಿ. 9. ಕಾರಣ ವಸ್ತು. समाधीयतेऽनेन—सम्+आ+धाञ् कर० "किः" (३-३-९२)। "तं वेधा विदधे नूनं महाभूतसमाधिना" रघु० १-२९। 10. ಅರ್ಥಾಲಂಕಾರದ ಒಂದು ಭೇದ. ಕೈಗೊಂಡ ಕಾರ್ಯಕ್ಕೆ ಬೇರೆ ಕಾರಣಗಳಿಂದಲೂ ಸೌಕರ್ಯ ಏರ್ಪಡುವಲ್ಲಿ "समाधि" ಅಲಂಕಾರ. "समाधिः कार्यसौकर्यं कारणान्तरसन्निधेः"। ಉದಾ: "उत्कण्ठिता च कुलटा जगामास्तं च भानुमान्" चन्द्रा०। 11. ಕುತ್ತಿಗೆಯನ್ನು ಪ್ರಯಾಸವಿಲ್ಲದೆ ಸಮಸ್ಥಿತಿಯಲ್ಲಿಟ್ಟುಕೊಳ್ಳುವುದು. "असावनवष्टब्धनतो समाधिः शिरोधराया रहितप्रयासः" किरा० १६-२१। 12. ಸಮಾಧಾನ, ದೈವಾನುಗ್ರಹದಿಂದ ಉಂಟಾಗುವ ಸಂತೋಷ, ತೃಪ್ತಿ.

**समाधिस्थ ಸಮಾಧಿಸ್ಥ** (वि०) ತಪಸ್ಸಿನಲ್ಲಿರುವವನು, ಹೃದಯಕಮಲದಲ್ಲಿರುವ ಪರಮಾತ್ಮನ ಧ್ಯಾನದಿಂದ ತಲ್ಲೀನನಾಗಿರುವವನು. समाधौ तिष्ठति—ष्ठा (गतिनिवृत्तौ) "कः" (३-२-४)।

**समान ಸಮಾನ** (वि०) 1. ಏಕರೂಪವಾದ, ಸದೃಶವಾಗಿರುವ, ಸಮವಾಗಿರುವ. सह मानेन वर्तते समानं मानमस्य इति वा। "समानप्रेमाणं जनमसुलभं प्रार्थितवतो विधौ वामारम्भे मम समुचितैषा परिणतिः" मालती० ४-४। 2. ಸರ್ವರಿಗೂ ಸಮವಾದ, ಎಲ್ಲರಿಗೂ ಸೇರಿದ, ಸಾಮಾನ್ಯವಾದ. 3. ಅಭಿನ್ನವಾದ, ಅದೇ ಆಗಿರುವ, ಒಂದೇ ಆಗಿರುವ. "नोपगच्छेत् प्रमत्तोऽपि स्त्रियमार्तवदर्शने। समानशयने चैव न शयीत तया सह" मनु० ४-४०। (पुं०) 4. ಶರೀರದೊಳಗಿನ ಪಂಚಪ್ರಾಣವಾಯುಗಳಲ್ಲೊಂದು. समन्तादनित्यनेन — सम् + अन् (प्राणने) "घञ्" (३-३-१२१)। ಈ ಪ್ರಾಣವಾಯುವು ನಾಭಿ ಪ್ರದೇಶದಲ್ಲಿರುವುದು. "समानो नाभिसंस्थितः" अम०।

**समानकालिक ಸಮಾನಕಾಲಿಕ** (वि०) ಒಂದೇ ಕಾಲದಲ್ಲಿ ಉಂಟಾದ. समानकाले भवः "ठञ्" (४-३-११)।

**समानाधिकरण ಸಮಾನಾಧಿಕರಣ** (वि०) ಏಕಾಧಿಕರಣವುಳ್ಳ, ಒಂದೇ ವಿಭಕ್ತಿಯ ಸಂಬಂಧವುಳ್ಳ, ಒಂದೇ ಆಶ್ರಯವುಳ್ಳ. समानमधिकरणं ययोः। नीलो घटः ಎಂಬಲ್ಲಿ ನೀಲ ಮತ್ತು ಘಟ ಪದಗಳು ಏಕಧರ್ಮಿ (ಆಶ್ರಯ) ಬೋಧಕಪದಗಳಾಗಿರುವುದರಿಂದ ಇವು ಸಮಾನಾಧಿಕರಣ ಪದಗಳು. ಇಲ್ಲಿ ಕರ್ಮಧಾರಯ ಸಮಾಸ. "तत्पुरुषः समानाधिकरणः कर्मधारयः" पा० सू० १-२-४२।

**समानोदर्य ಸಮಾನೋದರ್ಯ** (पुं०) ಸಹೋದರ, ಒಡಹುಟ್ಟಿದವನು. समाने उदरे शयितः "यत्" (४-४-१०८)। "समानोदर्यमस्माकं जटायुं च स्तुथादरात्" भट्टि० ७-८६।

**समापक ಸಮಾಪಕ** (वि०) ಪೂರ್ಣವಾಗಿ ಮಾಡುವವನು, ಸಮಾಪ್ತಿಗೊಳಿಸುವವನು, ಪೂರೈಸುವವನು. सम्+आप्लृ (व्याप्तौ) "ण्वुल्" (३-१-१३३)। "एक एव वसु यद्ददौ नृपस्तत्समापकमतर्क्यत क्रतोः" माघ० १४-४०।

**समापत्ति ಸಮಾಪತ್ತಿ** (स्त्री०) 1. ಆಕಸ್ಮಿಕವಾಗಿ ಸಂಧಿಸುವುದು, ಯಾದೃಚ್ಛಿಕ ಸಮಾಗಮ. सम् + आ + पद (गतौ) "क्तिन्" (३-३-९४)। "तयोः समापत्तिषु कातराणि किञ्चिद्व्यवस्थापितसंहृतानि" कुमा० ७-७५। 2. ಸಂಧಿ, ಸಮಾಗಮ.

**समापन ಸಮಾಪನ** (न०) 1. ಪೂರ್ತಿಗೊಳಿಸುವುದು, ಸಮಾಪ್ತಿಗೊಳಿಸುವುದು. सम्+आप्लृ (व्याप्तौ)+णिच् "ल्युट्" (३-३-११५)। "आदिष्टी नोदकं कुर्यादाव्रतस्य समापनात्" मनु० ५-८८। 2. ಪರಿಚ್ಛೇದ, ಅಧ್ಯಾಯ, ಗ್ರಂಥದ ಒಂದು ಭಾಗ. 3. ವಧೆ. "समापनं परिच्छेदे समाप्तिवधयोरपि" मेदि०। 4. ಸಮಾಧಾನ. "समापनम्। परिच्छेदे समाप्तौ च समाधाने प्रमापणे" विश्व०।

**समापनीय ಸಮಾಪನೀಯ** (वि०) 1. ಪೂರ್ತಿಮಾಡಲ್ಪಡುವ, ಪೂರ್ಣವಾಗಿ ಮಾಡಲ್ಪಡುವ. 2. ಪೂರೈಸಬೇಕಾದ. 3. ಪೂರೈಸಬಹುದಾದ. 4. ಪೂರೈಸಲು ಸಾಧ್ಯವಾದ. सम् + आप्लृ (व्याप्तौ) "अनीयर्" (३-१-९६)। "तव्यः"। समापितव्यम् ಸಮಾಪಿತವ್ಯಮ್.

**समापन्न ಸಮಾಪನ್ನ** (वि०) 1. ಪೊಂದಲ್ಪಟ್ಟ, ಪಡೆಯಲ್ಪಟ್ಟ. सम्+आ+पद (गतौ) "क्तः" (३-२-१०२)। 2. ಕೊಲ್ಲಲ್ಪಟ್ಟ. 3. ಸಮಾಪ್ತಿಹೊಂದಿದ. 4. ಬಹಳ ಕಷ್ಟವಾದ. 5. ಸಂಭವಿಸಿದ. "समापन्नं समाप्ते स्यात्प्राप्ते क्लिष्टे वधेऽपि च" मेदि०। (न०) 6. ವಧೆ. 7. ಸಮಾಪ್ತಿ, ಕೊನೆ.

**समापिका ಸಮಾಪಿಕಾ** (स्त्री०) ವಾಕ್ಯವನ್ನು ಪೂರ್ತಿಮಾಡುವ ಕ್ರಿಯಾಪದ ಮೊದಲಾದುದು. ಕೆಲವೆಡೆ ಕ್ರಿಯಾಪದದಿಂದಲೂ ಕೆಲವೆಡೆ ಕೃದಂತಪದಗಳಿಂದಲೂ ವಾಕ್ಯ ಪೂರ್ತಿ ಆಗುವುದು. **ಕ್ರಿಯಾಪದ :** "रम्योमि त्रिदशनदी ययुर्बलानि" किरा० ७-९। "तद्दर्शिताः प्राञ्जलयः प्रणेमुः" कुमा० ७-४५। **ಕೃದಂತ :** "अनुष्ठितो गुरोः सन्देशः" शाकु० ५। "पश्चात् कोपयितुमायुष्मन्तं तथा कृतवानस्मि" शाकु० ६।

**समापित ಸಮಾಪಿತ** (वि०) ಪೂರ್ಣಮಾಡಲ್ಪಟ್ಟ, ಪೂರೈಸಲ್ಪಟ್ಟ. सम् + आप्लृ (व्याप्तौ) + णिच् "क्तः" (३-२-१०२)।

**समाप्त ಸಮಾಪ್ತ** (वि०) ಪೂರ್ಣವಾದ, ಪೂರ್ತಿಯಾದ. सम्+आप्लृ (व्याप्तौ), "क्तः" (३-४-७२)।

**समाप्तपुनरात्तत्व ಸಮಾಪ್ತಪುನರಾತ್ತತ್ವ** (न०) ಕಾವ್ಯಗಳಲ್ಲಿ ಸಂಭವಿಸುವ ಒಂದು ವಾಕ್ಯದೋಷ. ವಾಕ್ಯಾರ್ಥವು ಪೂರ್ಣವಾದನಂತರ ಆಕಾಂಕ್ಷಾರಹಿತವಾದ ವಿಶೇಷ್ಯ ಪದಕ್ಕೆ ಮತ್ತೆ ಆಕಾಂಕ್ಷೆಯಿಂದ ವಿಶೇಷಣ ಪದಗಳನ್ನು ಹೇಳುವಲ್ಲಿ "समाप्तपुनरात्तत्वम्" ಎಂಬ ವಾಕ್ಯದೋಷ. "नाशयन्तो घनध्वान्तं तापयन्तो वियोगिनः। पतन्ति

शशिन: पादा भासयन्त: क्षमातलम्" ಇಲ್ಲಿ भासयन्त:- क्षमातलम् ಎಂದು ವಿಶೇಷಣಾಂತರವನ್ನು ಹೇಳಿರುವುದು ಸಮಾಪ್ತಪುನರಾತ್ತತಾ ದೋಷಯುಕ್ತ.

**समाप्ति ಸಮಾಪ್ತಿ** (स्त्री०) 1. ಕೊನೆ, ಕಡೆ, ಸಮಗ್ರತೆ. सम् + आप्लृ (व्याप्तौ) "क्तिन्" (३-३-९४)। 2. ಅಭಿವೃದ್ಧಿ, ಬೆಳವಣಿಗೆ. "सद्य: प्रवालोद्गमचारुपत्रे नीते समाप्ति नवचूतबाणे" कुमा० ३-२७। 3. ಸಮರ್ಥನೆ, ಸ್ಥಿರಪಡಿಸುವುದು.

**समाप्लव ಸಮಾಪ್ಲವ** (पुं०) 1. ಸ್ನಾನ. सम्+आ+प्लुङ् (गतौ) "अप्" (३-३-५७)। वा "घञ्" (३-३-५०)। **–आप्लाव: –ಆಪ್ಲಾವ:**. 2. ನೀರನ್ನು ಚಿಮುಕಿಸುವುದು. **–आप्लवनम् –ಆಪ್ಲವನವ್**. भावे "ल्युट्" (३-३-११५)।

**समाप्लुत ಸಮಾಪ್ಲುತ** (वि०) 1. ಸ್ನಾನಮಾಡಿದವನು. सम् + आ + प्लुङ् (गतौ) "क्त:" (३-४-७२)। 2. ನೀರು ಚಿಮುಕಿಸಲ್ಪಟ್ಟ. "क्त:" (३-२-१०२)।

**समाभाषण ಸಮಾಭಾಷಣ** (न०) ಪರಸ್ಪರ ಮಾತನಾಡುವುದು. सम्+आ+भाष (व्यक्तायां वाचि) "ल्युट्" (३-३-११५)। "कश्चिद्विवृत्तत्रिकभिन्नहार: सुहृत्समाभाषणतत्परोऽभूत्" रघु० ६-१६।

**समाम्नाय ಸಮಾಮ್ನಾಯ** (पुं०) 1. ಸಾಂಪ್ರದಾಯಿಕ ವರ್ಣಗಳ ಸಮೂಹ, "अ" ಕಾರದಿಂದ "ह" ಕಾರದ ವರೆಗಿನ ಅಕ್ಷರಗಳ ಸಮೂಹ, ವರ್ಣಮಾಲೆ. 2. ಪುನರಾವೃತ್ತಿ, ಪುನರುಚ್ಚಾರ. सम् + आ + म्ना (अभ्यासे) "घञ्" (३-३-१८)। युक् (७-३-३३)। "येनाक्षरसमाम्नायमधिगम्य महेश्वरात्। कृत्स्नं व्याकरणं प्रोक्तं तस्मै पाणिनये नम:" सि० कौ०। 3. ಪದಗಳ ಸಮೂಹ, ಗುಂಪು. "अश्वोऽश्व इति नाम पशुसमाम्नाये सांग्रामिके च पठ्यते" उ० रा० ४।

**समायुक्त ಸಮಾಯುಕ್ತ** (वि०) 1. ಒಟ್ಟಿಗೆ ಸೇರಿಸಲ್ಪಟ್ಟ, ಸಂಬಂಧಪಡಿಸಲ್ಪಟ್ಟ. सम् + आ + युजिर् (योगे) "क्त:" (३-२-१०२)। 2. ತಯಾರಿಸಲ್ಪಟ್ಟ, ಸಿದ್ಧಗೊಳಿಸಲ್ಪಟ್ಟ. 3. ಬಾಣಸಂಧಾನ ಮಾಡಲ್ಪಟ್ಟ (ಧನುಸ್ಸು). 4. ಅಣಿಮಾಡಲ್ಪಟ್ಟ, ಸಜ್ಜುಗೊಳಿಸಲ್ಪಟ್ಟ. 5. ನಿಯಮಿಸಲ್ಪಟ್ಟ, ಒಂದು ಕಾರ್ಯಕ್ಕೆ ನೇಮಕ ಮಾಡಲ್ಪಟ್ಟ.

**समायुत ಸಮಾಯುತ** (वि०) ಮಿಶ್ರವಾಗಿರುವ, ಬೆರೆತಿರುವ. सम्+आ+यु (मिश्रणे) "क्त:" (३-४-७२)।

**समायोग ಸಮಾಯೋಗ** (पुं०) 1. ಸಂಯೋಗ, ಸಂಬಂಧ. सम् + आ + युजिर् (योगे) "घञ्" (३-३-१८)। "क्षेत्रबीजसमायोगात् सम्भव: सर्वदेहिनाम्" मनु० ९-३३। 2. ಅಣಿಮಾಡುವುದು, ಸಿದ್ಧಗೊಳಿಸುವುದು. 3. ಕಾರ್ಯಕಾರಣಗಳಿಗಿರುವ ಸಂಬಂಧ, ಅವಯವ-ಅವಯವಿ; ಗುಣ-ಗುಣಿ ಇವುಗಳಿಗಿರುವ ಸಂಬಂಧ, ಸಮವಾಯಸಂಬಂಧ. 4. ಪ್ರಯೋಜನ. "समायोगस्तु संयोगे समवाये प्रयोजने" मेदि०। 5. ಧನುಸ್ಸಿಗೆ ಬಾಣವನ್ನು ಹೂಡುವುದು. 6. ತಯಾರಿಸುವುದು, ಸಿದ್ಧಪಡಿಸುವುದು. 7. ಒಂದು ಕಾರ್ಯಕ್ಕೆ ನೇಮಕ ಮಾಡುವುದು.

**समारब्ध ಸಮಾರಬ್ಧ** (वि०) 1. ಪ್ರಾರಂಭಿಸಲ್ಪಟ್ಟ, ಉಪಕ್ರಮಿಸಲ್ಪಟ್ಟ. सम्+आ+रभ (राभस्ये) "क्त:" (३-२-१०२)। "वाजिन: शत्रुसैन्यस्य समारब्धनवाजिन:" माघ० १९-६२। 2. ಕೈಗೊಳ್ಳಲ್ಪಟ್ಟ.

**समारम्भ ಸಮಾರಂಭ** (पुं०) 1. ಉಪಕ್ರಮ, ಪ್ರಾರಂಭ, ತೊಡಗುವುದು. सम् + आ + रभ (राभस्ये) "घञ्" (३-३-१८)। 2. ಉದ್ಯಮ, ಪ್ರಯತ್ನ. 3. ಕಾರ್ಯ, ಕೆಲಸ. सम्+आ+रभ "घञ्" (३-३-१९)। "भव्यमुख्या: समारम्भा: प्रत्यवेक्ष्या निरत्यया:" रघु० १७-५३।

**समाराधन ಸಮಾರಾಧನ** (न०) 1. ಸೇವೆ, ಶುಶ್ರೂಷೆ, ಉಪಚಾರ. सम् + आ + राध (संसिद्धौ) "ल्युट्" (३-३-११५)। "अव्याहतै: स्वैरगतै: स तस्या: सम्राट् समाराधनतत्परोऽभूत्" रघु० २-५। 2. ಸಂತೋಷಪಡಿಸುವ ಉಪಾಯ, ತೃಪ್ತಿಪಡಿಸುವ ಸಾಧನ. सम् + आ+राध करं० "ल्युट्" (३-३-११७)। "त्रैगुण्योद्भवमत्र लोकचरितं नानारसं दृश्यते नाट्यं भिन्नरुचेर्जनस्य बहुधाप्येकं समाराधनम्" माल० १-४।

**समाराध्य ಸಮಾರಾಧ್ಯ** (वि०) ಪೂಜಿಸಲ್ಪಡುವವನು, ಆರಾಧಿಸಲ್ಪಡುವವನು. सम् + आ + राध (संसिद्धौ) "ण्यत्" (३-१-१२४)। "सर्वकर्मसमाराध्य, भवतपनतापितभक्तजनभद्राराम श्रीरामभद्र" रघु० ग०।

**समारुरुक्षा ಸಮಾರುರುಕ್ಷಾ** (स्त्री०) ಮೇಲಕ್ಕೆ ಹತ್ತಲು ಅಪೇಕ್ಷೆ. सम्+आ+रुह (बीजजन्मनि प्रादुर्भावे च)+ सन् "अ:" (३-३-१०२)।

**समारुरुक्षु ಸಮಾರುರುಕ್ಷು** (वि०) ಮೇಲಕ್ಕೆ ಏರಲು ಅಪೇಕ್ಷಿಸುವವನು. सम् + आ + रुह (बीजजन्मादौ)+ सन् "उ:" (३-२-१६८)।

**समारूढ ಸಮಾರೂಢ** (वि०) 1. ಮೇಲಕ್ಕೆ ಏರಿರುವವನು, ಮೇಲಕ್ಕೆ ಹತ್ತಿರುವವನು. सम् + आ + रुह (बीजजन्मादौ) "क्तः" (३-४-७२)। 2. ಹತ್ತಲ್ಪಟ್ಟ, ಏರಲ್ಪಟ್ಟ. कर्म० "क्तः" (३-२-१०२)।

**समारोप ಸಮಾರೋಪ** (पुं०) 1. ಮೇಲಕ್ಕೆ ಹತ್ತಿಸುವುದು, ಮೇಲಕ್ಕೆ ಏರಿಸುವುದು. सम् + आ + रुह (बीजजन्मादौ) + णिच् "घञ्" (३-३-१८)। पः (७-३-४३)। 2. ಒಂದು ವಸ್ತುವಿನಲ್ಲಿ ಮತ್ತೊಂದು ವಸ್ತುವಿನ ಜ್ಞಾನ, ಭ್ರಾಂತಿ, ಅದಲ್ಲದ ವಸ್ತುವನ್ನು ಅದನ್ನಾಗಿ ತಿಳಿಯುವುದು. ಶುಕ್ತಿಯನ್ನು ರಜತವನ್ನಾಗಿ ತಿಳಿಯುವುದು, ಶುಕ್ತಿಯಲ್ಲಿ ರಜತತ್ವ ಸಮಾರೋಪ. 3. ಸಮಾಪ್ತಿಗೊಳಿಸುವುದು. ಕೊನೆ ಮುಟ್ಟಿಸುವುದು. भावे "ल्युट्" (३-३-११५)। **–आरोपणम् –ಆರೋಪಣಮ್.**

**समारोपित ಸಮಾರೋಪಿತ** (वि०) 1. ಆರೋಪಿಸಲ್ಪಟ್ಟ, ಕಲ್ಪಿಸಲ್ಪಟ್ಟ. सम्+आ+रुह (बीजजन्मादौ)+ णिच् "क्तः" (३-२-१०२)। पः (७-३-४३)। 2. ಏರಿಸಲ್ಪಟ್ಟ, ಹತ್ತಿಸಲ್ಪಟ್ಟ. 3. ಭ್ರಾಂತಿಯಿಂದ ತಿಳಿಯಲ್ಪಟ್ಟ, ತಪ್ಪಾಗಿ ತಿಳಿಯಲ್ಪಟ್ಟ. 4. ಇಡಲ್ಪಟ್ಟ, ಸೇರಿಸಲ್ಪಟ್ಟ, ಹೊರಿಸಲ್ಪಟ್ಟ. "समस्य सम्पादयता गुणैरिमां त्वया समारोपितभार भारतीम्" किरा० १४-६।

**समारोह ಸಮಾರೋಹ** (पुं०) 1. ಹತ್ತುವುದು, ಮೇಲಕ್ಕೆ ಏರುವುದು. सम् + आ + रुह (बीजजन्मादौ) "घञ्" (३-३-१८)। 2. ಬೀಜವು ಅಂಕುರಿಸಿ ಮೇಲಕ್ಕೆ ಏಳುವುದು.

**समारोहण ಸಮಾರೋಹಣ** (न०) 1. ಹತ್ತುವುದು, ಮೇಲಕ್ಕೆ ಏರುವುದು. सम्+आ+रुह (बीजजन्मादौ) "ल्युट्" (३-३-११५)। 2. ಬೀಜವು ಅಂಕುರಿಸಿ ಬೆಳೆಯುವುದು.

**समालम्ब ಸಮಾಲಂಬ** (पुं०) ಆಧಾರ, ಆಸರೆ. सम् + आ+लबि (अवस्रंसने) "घञ्" (३-३-१८)। "ल्युट्" (३-३-११५)। **–आलम्बनम् –ಆಲಂಬನಮ್.**

**समालम्बित ಸಮಾಲಂಬಿತ** (वि०) ತೂಗುಹಾಕಲ್ಪಟ್ಟ.

**समालम्बिन् ಸಮಾಲಂಬಿನ್** (वि०) 1. ಆಸರೆ ಹೊಂದಿರುವ, ಆಶ್ರಯ ಪಡೆದಿರುವ. सम्+आ+लबि (अवस्रंसने) "णिनिः" (३-१-१३४)। 2. ಜೋಲಾಡುವ, ತೂಗಾಡುವ.

**समालम्भ ಸಮಾಲಂಭ** (पुं०) 1. ಸುಗಂಧದ್ರವ್ಯಗಳಿಂದ ಮೈಗೆ ಲೇಪನ ಮಾಡುವುದು. सम्+आ+डुलभष् (प्राप्तौ) "घञ्" (३-३-१८)। नुमागमः (७-१-६७)। "समालम्भो विलेपनम्" अम०। 2. ಮಾರಣ, ಕೊಲ್ಲುವುದು. "वृथा पशुसमालम्भं नैव कुर्यान्न कारयेत्" भा० अनु०।

**समालम्भन ಸಮಾಲಂಭನ** (न०) 1. ಸುಗಂಧ ದ್ರವ್ಯಗಳಿಂದ ಮೈಗೆ ಲೇಪನಮಾಡುವುದು. सम्+आ+डुलभष् (प्राप्तौ) "ल्युट्" (३-३-११५)। नुमागमः (७-१-६७)। "सज्जा भव। यावन्मङ्गलसमालम्भनं विरचयावः" शाकु० ४। 2. ಮಾರಣ, ಕೊಲ್ಲುವುದು.

**समालाप ಸಮಾಲಾಪ** (पुं०) ಸಂಭಾಷಣೆ, ಪರಸ್ಪರ ಮಾತಾಡುವುದು.

**समावर्तन ಸಮಾವರ್ತನ** (न०) ಬ್ರಹ್ಮಚಾರಿಯು ವೇದಾಧ್ಯಯನ ಪೂರ್ತಿಯಾದನಂತರ ಗುರುಕುಲದಿಂದ ಹೊರಟುಬರುವ ಸಮಾರಂಭ, –ಒಂದು ಸಂಸ್ಕಾರ. ಇದು ಷೋಡಶಸಂಸ್ಕಾರಗಳಲ್ಲೊಂದು. सम्+आ+वृतु (वर्तने) "ल्युट्" (३-३-११५)। ಇದು ವೇದಾಧ್ಯಯನಾನಂತರ ಗೃಹಸ್ಥಾಶ್ರಮಸ್ವೀಕಾರಕ್ಕಾಗಿ ಮಾಡುವ ಒಂದು ಕರ್ಮ. ಇದು ವಿವಾಹ ಸಮಯದಲ್ಲಿ ವಿವಾಹಕ್ಕೆ ಮುಂಚಿತವಾಗಿ ನಡೆಯುವ ವ್ರತಸಮಾವರ್ತನ.

**समावाय ಸಮಾವಾಯ** (पुं०) ಸಮೂಹ, ರಾಶಿ. "यस्मिन् कर्मसमावायो यथा येनोपगृह्यते। गुणानां गुणिनां चैव परिणाममभीप्सताम्" भाग० २-८-१३।

**समाविष्ट ಸಮಾವಿಷ್ಟ** (वि०) 1. ಒಳಗೆ ಪ್ರವೇಶಿಸಿದ. 2. ಆಕ್ರಮಿಸಿದ. 3. ವ್ಯಾಪಿಸಿದ. सम् + आ + विश (प्रवेशने) "क्तः" (३-४-७२)। 4. ಕೂಡಿಕೊಂಡಿರುವ, ಸೇರಿಕೊಂಡಿರುವ. 5. ಭೂತದಿಂದ ಹಿಡಿಯಲ್ಪಟ್ಟ. कर्म० "क्तः" (३-२-१०२)। "समाविष्टं ग्रहेणेव ग्राहेणेवाऽत्तमर्णवे" भट्टि० ६-८३।

**समावृत ಸಮಾವೃತ** (वि०) 1. ಸುತ್ತುವರೆಯಲ್ಪಟ್ಟ, ಸುತ್ತುಗಟ್ಟಲ್ಪಟ್ಟ. सम् + आ + वृञ् (वरणे) "क्तः" (३-२-१०२)। "जय त्वं कालि सर्वेशे सर्वभूतसमावृते"। 2. ಮರೆಮಾಡಲ್ಪಟ್ಟ, ಮುಚ್ಚಲ್ಪಟ್ಟ, ಆಚ್ಛಾದಿಸಲ್ಪಟ್ಟ. "नाहं प्रकाशः सर्वस्य योगमायासमावृतः" गीता ९-२५।

**समावृत्त ಸಮಾವೃತ್ತ** (वि०) ಸಾಂಗ ವೇದಾಧ್ಯಯನ ಮಾಡಿ ಗುರುಕುಲದಿಂದ ಹಿಂತಿರುಗಿದವನು, ಗುರುವಿನ

ಅಪ್ಪಣೆ ಪಡೆದು ಗುರುಕುಲವಾಸದಿಂದ ಮನೆಗೆ ಬಂದ ವನು. समावर्तते स्म—सम्+आ+वृतु (वर्तने) "क्तः" (३-४-७२)। ಅನಂತರ ಸ್ನಾತಕನಾಗಿದ್ದು ಗೃಹಸ್ಥಾಶ್ರಮ ವನ್ನು ಸ್ವೀಕರಿಸಬೇಕು. "अतः परं समावृत्तः कुर्याद्दार-परिग्रहम्"।

**समावेश ಸಮಾವೇಶ** (पुं०) 1. ಒಟ್ಟಿಗೆ ಸೇರುವುದು, ಒಂದು ಕಡೆ ಬಂದು ಸೇರುವುದು सम्+आ+विश (प्रवेशने) "घञ्" (३-३-१८)। 2. ಒಳಗೆ ಪ್ರವೇಶಿಸು ವುದು, ಒಳಕ್ಕೆ ನುಗ್ಗಿ ಹೋಗುವುದು. 3. ಮನೋ ವಿಕಾರ, ಭಾವೋದ್ರೇಕ. 4. ಭೂತದ ಆಕ್ರಮಣ, ದೆವ್ವ ಹಿಡಿಯುವುದು.

**समावेशित ಸಮಾವೇಶಿತ** (वि०) 1. ಒಳಗೆ ಪ್ರವೇಶ ಪಡೆದವನು, ಒಳಕ್ಕೆ ಪ್ರವೇಶಿಸಿದವನು. समावेशोऽस्य सञ्जातः "इतच्" (५-२-३६)। 2. ಒಟ್ಟಿಗೆ ಸೇರಿ ರುವ, ಒಂದು ಕಡೆ ಬಂದು ಸೇರಿರುವ.

**समाव्रजत् ಸಮಾವ್ರಜತ್** (वि०) ಆಗಮಿಸುತ್ತಿರುವ, ಬರುತ್ತಿರುವ. सम्+आ+व्रज (गतौ) "शतृ" (३-२-१२४)। स्त्रियां "ङीप्" (४-१-६)। **–आव्रजन्ती –ಆವ್ರಜಂತೀ.** "विधाय तार्क्ष्यं गगनाब्धिपोतं सार्धं मया देवि समाव्रजन्तीम्" यादः १८-११६।

**समाश्रय ಸಮಾಶ್ರಯ** (पुं०) 1. ಆಸರೆ, ಅವಲಂಬನ. सम्+आ+श्रिञ् (सेवायाम्) "अच्" (३-३-५६)। 2. ರಕ್ಷಣೆ. 3. ರಕ್ಷಣೆಯ ಸ್ಥಾನ. 4. ಆಶ್ರಯಿಸುವುದು, ರಕ್ಷಣೆಗಾಗಿ ಹೋಗಿ ಸೇರುವುದು. "तमरण्यसमाश्रयोन्मुखं शिरसा वेष्टनशोभिना नृपः" रघु० ८-१२। 5. ವಾಸ ಸ್ಥಾನ, ಗೃಹ, ಮನೆ.

**समाश्रयण ಸಮಾಶ್ರಯಣ** (नं०) 1. ಒಳ್ಳೆಯ ಆಶ್ರಯ ಪಡೆಯುವುದು. 2. ರಕ್ಷಣೆಗಾಗಿ ಒಳ್ಳೆಯ ಸ್ಥಾನ ಸೇರು ವುದು. सम्+आ+श्रिञ् (सेवायाम्) "ल्युट्" (३-३-११५)।

**समाश्रयणीय ಸಮಾಶ್ರಯಣೀಯ** (वि०) 1. ಆಶ್ರಯ ಪಡೆಯಬೇಕಾದ. 2. ಆಶ್ರಯ ಪಡೆಯಲು ಅರ್ಹವಾದ. 3. ಆಶ್ರಯಿಸಲ್ಪಡುವ. सम्+आ+श्रिञ् (सेवायाम्) "अनीयर्" (३-१-९६)। 4. ರಕ್ಷಣೆಗಾಗಿ ಸೇರಲು ಯೋಗ್ಯವಾದ. 5. ರಕ್ಷಣೆಗಾಗಿ ಸೇರಬೇಕಾದ. 6. ರಕ್ಷಣೆ ಗಾಗಿ ಸೇರಲ್ಪಡುವ.

**समाश्रित ಸಮಾಶ್ರಿತ** (वि०) 1. ಒಳ್ಳೆಯ ಆಶ್ರಯ ಪಡೆದವನು, ಒಳ್ಳೆಯ ಆಸರೆ ಪಡೆದವನು. सम्+आ+श्रिञ् (सेवायाम्) "क्तः" (३-४-७२)। 2. ಒಳ್ಳೆಯ ರಕ್ಷಣೆ ಪಡೆದವನು. 3. ಕಾರ್ಯವನ್ನು ಕೈಗೊಂಡವನು. "समाश्रितंराहवसत्रदीक्षाम्" यादः २०-६६।

**समाश्लिष्ट ಸಮಾಶ್ಲಿಷ್ಟ** (वि०) 1. ಆಲಿಂಗಿಸಲ್ಪಟ್ಟ, ಅಪ್ಪಿಕೊಳ್ಳಲ್ಪಟ್ಟ. सम्+आ+श्लिष (आलिङ्गने) "क्तः" (३-२-१०२)। 2. ಸಂಬಂಧ ಹೊಂದಿರುವ, ಬೆರೆತಿರುವ, ಚೆನ್ನಾಗಿ ಸೇರಿಕೊಂಡಿರುವ. कर्तं "क्तः" (३-४-७२)।

**समाश्लेष ಸಮಾಶ್ಲೇಷ** (पुं०) 1. ಆಲಿಂಗನ, ಚೆನ್ನಾಗಿ ಅಪ್ಪಿಕೊಳ್ಳುವುದು. सम्+आ+श्लिष (आलिङ्गने) "घञ्" (३-३-१८)। 2. ಚೆನ್ನಾಗಿ ಸೇರಿಕೊಂಡಿರು ವುದು, ಸಂಬಂಧ ಹೊಂದಿರುವುದು.

**समाश्वसत् ಸಮಾಶ್ವಸತ್** (वि०) 1. ಚೆನ್ನಾಗಿ ಉಸಿರಾಡು ತ್ತಿರುವ. सम्+आ+श्वस (प्राणने) "शतृ" (३-२-१२४)। 2. ಚೇತರಿಸಿಕೊಳ್ಳುತ್ತಿರುವ. 3. ಧೈರ್ಯ ತೆಗೆದು ಕೊಳ್ಳುತ್ತಿರುವ, ಸಮಾಧಾನಪಡುತ್ತಿರುವ. स्त्रियां "ङीप्" (४-१-६)। **–आश्वसन्ती –ಆಶ್ವಸಂತೀ.**

**समाश्वस्त ಸಮಾಶ್ವಸ್ತ** (वि०) 1. ಸಮಾಧಾನಗೊಂಡಿ ರುವ, ಧೈರ್ಯಹೊಂದಿರುವ. सम्+आ+श्वस (प्राणने) "क्तः" (३-४-७२)। 2. ಚೇತರಿಸಿಕೊಂಡಿರುವ.

**समाश्वास ಸಮಾಶ್ವಾಸ** (पुं०) 1. ರಕ್ಷಣೆಯ ಭರವಸೆ. सम्+आ+श्वस (प्राणने) "घञ्" (३-३-१८)। 2. ಚೆನ್ನಾಗಿ ಉಸಿರಾಡುವುದು. 3. ಚೇತರಿಸಿಕೊಳ್ಳು ವುದು. 4. ಸಮಾಧಾನ ಹೊಂದುವುದು, ಧೈರ್ಯ ಪಡೆಯುವುದು.

**समाश्वासन ಸಮಾಶ್ವಾಸನ** (नं०) 1. ಸಮಾಧಾನಗೊಳಿಸು ವುದು, ಸಂತೈಸುವುದು. सम्+आ+श्वस (प्राणने)+णिच् "ल्युट्" (३-३-११५)। 2. ಚೇತರಿಸಿಕೊಳ್ಳುವಂತೆ ಮಾಡುವುದು. 3. ರಕ್ಷಣೆಯ ಭರವಸೆ ಕೊಡುವುದು.

**समाश्वासयत् ಸಮಾಶ್ವಾಸಯತ್** (वि०) 1. ಸಮಾಧಾನ ಪಡಿಸುತ್ತಿರುವ, ಸಂತೈಸುತ್ತಿರುವ. 2. ಧೈರ್ಯವುಂಟು ಮಾಡುತ್ತಿರುವ. 3. ಉಸಿರಾಡುವಂತೆ ಮಾಡುತ್ತಿರುವ. सम्+आ+श्वस (प्राणने)+णिच् "शतृ" (३-२-१२४)। स्त्रियां "ङीप्" **–यन्ती –ಯಂತೀ.**

**समास ಸಮಾಸ** (पुं०) 1. ಅನೇಕ ಪದಗಳನ್ನು ಸೇರಿಸಿ ಒಂದು ಪದವನ್ನಾಗಿ ಮಾಡುವುದು. समस्यते एकीक्रियते अनेकपदमिति समासः—सम्+असु (क्षेपणे) कर्मं० "घञ्" (३-३-१९)। "पदसङ्घः समासः स्यात्

ऐकपद्यमुपाश्रितः"। "शब्दशासनविदः समासयोर्विग्रहं व्यवसुः स्वरेण ते" माघ० १४-२४। एकार्थीभावलक्षणसामर्थ्यविशिष्टपदसङ्घातः समासः। ಸಮಾಸವು ಸಾಮಾನ್ಯವಾಗಿ नित्यः अनित्यः ಎಂದು ಎರಡು ವಿಧ. प्रवरः कुम्भकारः ಇತ್ಯಾದಿ ನಿತ್ಯಸಮಾಸ. राज्ञः पुरुषः = राजपुरुषः, ब्राह्मणस्य कम्बलो ब्राह्मणकम्बलः ಇತ್ಯಾದಿ ಅನಿತ್ಯಸಮಾಸ. ಸಮಾಸವು ಮತ್ತೆ (1) अव्ययीभावः (2) तत्पुरुषः (3) कर्मधारयः (4) बहुव्रीहिः (5) द्विगुः ಮತ್ತು (6) द्वन्द्वः ಎಂದು ಆರು ವಿಧ. **ಅವ್ಯಯೀಭಾವಸಮಾಸವು** ನಾಮಪೂರ್ವಪದ ಮತ್ತು ಅವ್ಯಯಪೂರ್ವಪದ ಎಂದು ಎರಡು ವಿಧ.

**ಉದಾ:** शाकप्रति यथाशक्ति ಇತ್ಯಾದಿ.

**ತತ್ಪುರುಷಸಮಾಸವು** ಎಂಟು ವಿಧ.

(1) प्रथमातत्पुरुषः —पूर्वं कायस्य = पूर्वकायः

(2) द्वितीयातत्पुरुषः —कृष्णं श्रितः = कृष्णश्रितः

(3) तृतीयातत्पुरुषः —धान्येन अर्थः = धान्यार्थः

(4) चतुर्थीतत्पुरुषः —गवे हितम् = गोहितम्

(5) पञ्चमीतत्पुरुषः —वृकात् भीतः = वृकभीतः

(6) षष्ठीतत्पुरुषः —राज्ञः पुरुषः = राजपुरुषः

(7) सप्तमीतत्पुरुषः —स्थाल्यां पक्वः = स्थालीपक्वः

(8) नञ्तत्पुरुषः —न अश्वः = अनश्वः

**ಕರ್ಮಧಾರಯಸಮಾಸವು** ಏಳು ವಿಧ.

(1) विशेषणपूर्वपद-कर्मधारयः—नीलमुत्पलम् = नीलोत्पलम्

(2) विशेष्यपूर्वपद-कर्मधारयः—कृष्णश्चासौ सर्पश्च = कृष्णसर्पः

(3) विशेषणोभयपद-कर्मधारयः—शीतं च तत् उष्णं च = शीतोष्णम्

(4) उपमानोत्तरपद-कर्मधारयः—पुरुषो व्याघ्र इव = पुरुषव्याघ्रः

(5) उपमानपूर्वपद-कर्मधारयः—घन इव श्यामः = घनश्यामः

(6) सम्भावनापूर्वपद-कर्मधारयः—तमाल इति वृक्षः = तमालवृक्षः

(7) अवधारणापूर्वपद-कर्मधारयः—विनय एव धनम् = विनयधनम्

**ಬಹುವ್ರೀಹಿಸಮಾಸವು** ಏಳು ವಿಧ.

(1) द्विपदबहुव्रीहिः —ऊढः रथ येन = ऊढरथः

(2) बहुपदबहुव्रीहिः —नीलमुज्ज्वलं वपुर्यस्य = नीलोज्ज्वलवपुः

(3) सङ्ख्योभयपद-बहुव्रीहिः —पञ्च वा षड् वा = पञ्चषाः

(4) सङ्ख्योत्तरपद-बहुव्रीहिः —दशानां समीपे ये सन्ति ते उपदशाः

(5) सहपूर्वपदबहुव्रीहिः —पुत्रेण सह वर्तते = सपुत्रः

(6) दिगन्तराललक्षण-बहुव्रीहिः —उत्तरस्याश्च पूर्वस्याश्च दिशोर्यदन्तरालम् सा उत्तरपूर्वा

(7) व्यतिहारलक्षण-बहुव्रीहिः —केशेषु केशेषु गृहीत्वेदं युद्धं प्रवृत्तम् = केशाकेशि

**ದ್ವಂದ್ವಸಮಾಸವು** ನಾಲ್ಕು ವಿಧ.

(1) द्विपदेतरेतरयोगद्वन्द्वः—रामश्च कृष्णश्च रामकृष्णौ

(2) बहुपदेतरेतरयोगद्वन्द्वः—वापी च कूपश्च तटाकश्च वापीकूपतटाकाः

(3) द्विपदसमाहारद्वन्द्वः —शीतं च उष्णं च तयोः समाहारः शीतोष्णम्

(4) बहुपदसमाहारद्वन्द्वः —पाणी च पादौ च ग्रीवा च तेषां समाहारः पाणिपादग्रीवम्।

**ದ್ವಿಗುಸಮಾಸವು** ಎರಡು ವಿಧ.

ಇದು ಕರ್ಮಧಾರಯದಲ್ಲೇ ಅಂತರ್ಭಾವ ಹೊಂದುವುದು. पञ्चवटी षाण्मातुरः ಇತ್ಯಾದಿ. 2. ಸಂಕ್ಷೇಪ, ಸಂಗ್ರಹ. "एषा धर्मस्य वो योनिः समासेन प्रकीर्तिता" मनु० २-२५। 3. ಬೇರೆ ಬೇರೆ ಇರುವ ವಸ್ತುಗಳನ್ನು ಒಟ್ಟುಗೂಡಿಸುವುದು. 4. ವ್ಯಾಜ್ಯ ಮನಸ್ತಾಪ ಮೊದಲಾದುವನ್ನು ಬಗೆಹರಿಸುವುದು, –ಪರಿಹರಿಸುವುದು. 5. ಒಟ್ಟು, ಮೊತ್ತ.

**समासक्त ಸಮಾಸಕ್ತ** (वि०) 1. ಚೆನ್ನಾಗಿ ಸೇರಿಕೊಂಡಿರುವ, ಸಂಬಂಧ ಹೊಂದಿರುವ. सम्+आ+षञ्ज (सङ्ग) "क्तः" (३-४-७२)। 2. ಒಟ್ಟುಗೂಡಿರುವ, ಒಟ್ಟಿಗೆ ಸೇರಿರುವ. 3. ಶ್ರದ್ಧೆಯುಳ್ಳ, ಆಸಕ್ತನಾದ, ತತ್ಪರನಾದ.

**सर्वत्र ಸರ್ವತ್ರ** (अव्य०) 1. ಎಲ್ಲಾ ದಿಕ್ಕುಗಳಲ್ಲಿಯೂ. 2. ಎಲ್ಲಾ ಕಾಲಗಳಲ್ಲಿಯೂ. 3. ಎಲ್ಲಾ ಪ್ರದೇಶಗಳಲ್ಲಿಯೂ. सर्व "त्रल्" (५-३-१०)। "सर्वत्र दयिताधीनं सुव्यक्तं रामणीयकम्" भट्टि० ६-७५। "सर्वत्र संवादमबाधमानौ रूपश्रियातिथ्यकरं परं तौ" नैष० ६-५४। "तुतोष वीर्यातिशयेन वृत्रहा पदं हि सर्वत्र गुणैर्निधीयते" रघु० ३-६२।

**सर्वत्रग ಸರ್ವತ್ರಗ** (पुं०) 1. ವಾಯು. ಗಾಳಿ. सर्वत्र गच्छति — गम्लृ (गतौ) "डः" (वा० ३-२-४८)। (वि०) 2. ಎಲ್ಲಾ ಕಡೆಗಳಲ್ಲೂ ಹೋಗುವ, ಎಲ್ಲಾ ಪ್ರದೇಶ ಕಾಲ ಮತ್ತು ದಿಕ್ಕುಗಳಲ್ಲೂ ಸಂಚರಿಸುವ. "यथाकाशस्थितो नित्यं वायुः सर्वत्रगो महान्" गीता ९-६। **-गामिन् -ಗಾಮಿನ್**. गम्लृ "णिनिः" (३-१-१३४)। स्त्रियां "ङीप्" (४-१-५)। **-गामिनी -ಗಾಮಿನೀ.**

**सर्वथा ಸರ್ವಥಾ** (अव्य०) ಎಲ್ಲಾ ಪ್ರಕಾರಗಳಿಂದಲೂ, ಎಲ್ಲಾ ರೀತಿಗಳಿಂದಲೂ. सर्व "थाल्" (५-३-२३)। "सर्वथा व्यवहर्तव्यं कुतो ह्यवचनीयता। यथा स्त्रीणां तथा वाचां साधुत्वे दुर्जनो जनः" उ० रा० १-५।

**सर्वदमन ಸರ್ವದಮನ** (पुं०) 1. ಶಕುಂತಲೆಯ ಪುತ್ರ, ದುಷ್ಯಂತರಾಜನ ಕುಮಾರ, ಭರತಚಕ್ರವರ್ತಿ. सर्वान् दमयति—दमु (उपशमे) + णिच् "ल्युः" (३-१-१३४)। "हन्त, वर्धते तव संरम्भः। स्थाने खलु ऋषिजनेन सर्वदमन इति कृतनामधेयोऽसि" शाकु० ७। (वि०) 2. ಎಲ್ಲರನ್ನೂ ಶಿಕ್ಷಿಸುವವನು, ಎಲ್ಲರನ್ನೂ ದಂಡಿಸುವವನು.

**सर्वदर्शन ಸರ್ವದರ್ಶನ** (पुं०) 1. ಮಹಾವಿಷ್ಣು. सर्वं स्वमहिमानं दर्शयति—दृशिर् (प्रेक्षणे) + णिच् "ल्युः" (३-१-१३४)। "महिमानं सर्वसहं तेषां दर्शयतीति सः। सर्वदर्शन आख्यातो नवार्णो लोचनप्रदः" इति निरुक्तिः। "अहः संवत्सरो व्यालः प्रत्ययः सर्वदर्शनः" वि० स०। (वि०) 2. ಏಕಕಾಲದಲ್ಲಿ ಎಲ್ಲರನ್ನೂ ನೋಡುವ.

**सर्वदर्शनसङ्ग्रह ಸರ್ವದರ್ಶನಸಂಗ್ರಹ** (पुं०) ಮಾಧವಾಚಾರ್ಯವಿರಚಿತ ಸಕಲ ದರ್ಶನಗಳ ಸಾರರೂಪವಾದ ಒಂದು ಗ್ರಂಥ. सर्वदर्शनानां सङ्ग्रहोऽत्र।

**सर्वदर्शिन् ಸರ್ವದರ್ಶಿನ್** (पुं०) 1. ಮಹಾವಿಷ್ಣು. सर्वौ प्रवृत्तिनिवृत्तिधर्मौ द्रष्टुं शीलमस्य—दृशिर् (प्रेक्षणे) "णिनिः" (३-२-७८)। "सर्वदर्शी पश्यति यः सर्वेषां च कृताकृतम्" इति निरुक्तिः। "सर्वदर्शी निवृत्तात्मा" वि० स०। (वि०) 2. ಸಕಲವನ್ನೂ ನೋಡುವವನು.

**सर्वदा ಸರ್ವದಾ** (अव्य०) ಯಾವಾಗಲೂ, ಎಲ್ಲಾ ಕಾಲದಲ್ಲೂ. सर्व "दा" (५-३-१५)। "सर्वाभिः सर्वदा चन्द्रस्तं कलाभिर्निषेवते" कुमा० २-३४।

**सर्वदुःखक्षय ಸರ್ವದುಃಖಕ್ಷಯ** (पुं०) 1. ಮೋಕ್ಷ, ಸಕಲ ದುಃಖನಿವೃತ್ತಿಯುಳ್ಳ—, —ನಾಶವುಳ್ಳ ಮುಕ್ತಿ. सर्वदुःखानां क्षयो नाशो यत्र। 2. ಸಕಲ ವಿಧವಾದ ಕಷ್ಟಗಳ ನಾಶ.

**सर्वदृश् ಸರ್ವದೃಶ್** (पुं०) ಮಹಾವಿಷ್ಣು. सर्वान् अनुकूलप्रतिकूलतटस्थान् यथार्हं नियन्तुं पश्यति — दृशिर् (प्रेक्षणे) "क्विन्" (३-२-६०)। "अनुकूलान् तटस्थांश्च प्रतिकूलानपि स्वयम्। नियन्तुं च यथायोग्यं यः पश्यति स सर्वदृक्" इति निरुक्तिः। "अमृत्युः सर्वदृक् सिंहः" वि० स०।

**सर्वदेवमुख ಸರ್ವದೇವಮುಖ** (पुं०) ಅಗ್ನಿ. सर्वेषां देवानां मुखमिव।

**सर्वद्र्यञ्च् ಸರ್ವದ್ರ್ಯಂಚ್** (वि०) ಎಲ್ಲರನ್ನೂ ಪೂಜಿಸುವವನು, ಎಲ್ಲರನ್ನೂ ಗೌರವಿಸುವವನು. सर्वान् अञ्चति— सर्व+अञ्चु (गतौ पूजने च) अद्रिः आदेशः (६-३-९२)।

**सर्वधारिन् ಸರ್ವಧಾರಿನ್** (पुं०) 1. ಪ್ರಭವ ಮೊದಲಾದ ಅರುವತ್ತು ಸಂವತ್ಸರಗಳಲ್ಲಿ ಇಪ್ಪತ್ತೆರಡನೆಯ ಸಂವತ್ಸರ. (वि०) 2. ಎಲ್ಲವನ್ನೂ ಧರಿಸುವವನು. सर्वं धारयति— धृ (धारणे) + णिच् "णिनिः" (३-१-१३४)।

**सर्वधुरावह ಸರ್ವಧುರಾವಹ** (पुं०) ಸಕಲ ಭಾರವನ್ನೂ ಹೊರಲು ಸಮರ್ಥವಾದ ವೃಷಭ ಮೊದಲಾದುದು. सर्वा चासौ धूश्च सर्वधुरा—वहति— वह (प्रापणे) "अच्" (३-१-१३४)। सर्वधुराया वहः। "स तु सर्वधुरीणो यः भवेत्सर्वधुरावहः" अम०।

**सर्वधुरीण ಸರ್ವಧುರೀಣ** (पुं०) ಸಕಲ ಭಾರವನ್ನೂ ಹೊರಲು ಸಮರ್ಥವಾದ ವೃಷಭ ಮೊದಲಾದುದು. सर्वा चासौ धूश्च सर्वधुरा — सर्वधुरां वहति — "खः" (४-४-७८)।

**सर्वपथीन ಸರ್ವಪಥೀನ** (वि०) ಎಲ್ಲಾ ಮಾರ್ಗಗಳನ್ನೂ ವ್ಯಾಪಿಸಿರುವ, ಎಲ್ಲಾ ದಾರಿಗಳಲ್ಲೂ ಹರಡಿರುವ. सर्वपथान् व्याप्नोति—सर्वपथ "खः" (५-२-७)। "स व्याप्तवत्या परितोऽपथान्यपि स्वसेनया सर्वपथीनया तया" माघ० १२-५७।

**सर्वमङ्गला ಸರ್ವಮಂಗಳಾ** (स्त्री०) ಪಾರ್ವತಿ, ದುರ್ಗಾದೇವಿ. सर्वेभ्यः मङ्गला, सर्वाणि मङ्गलान्यस्याः इति वा। "सर्वमङ्गलशब्दश्च सम्पूर्णार्थवाचकः। आकारो दातृवचनः तस्मात् सा सर्वमङ्गला" ॥

**सर्वरस ಸರ್ವರಸ** (पुं०) 1. ಸರ್ಜರಸ, ಮತ್ತಿಮರದ ಹಾಲು. सर्वैरस्यते—रस (आस्वादने) + णिच् "घञ्" (३-३-१९)। "यक्षधूपः सर्जरसो रालसर्वरसावपि" अम०। 2. ಪಂಡಿತ, ವಿದ್ವಾಂಸ. सर्वो रसो यत्र। 3. ಸಿಹಿ ಮೊದಲಾದ ಆರು ಭೋಜ್ಯ ರಸಗಳು. "वाचां वह्नेर्मुखं क्षेत्रं छन्दसां सप्तधातवः। हव्यकव्यामृतान्नानां जिह्वा सर्वरसस्य च" भाग० २-६-१। 4. ಒಂದು ವಿಧ ವೀಣೆ. 5. ಶೃಂಗಾರಾದಿ ಎಲ್ಲಾ ರಸಗಳು. (वि०) 6. ಎಲ್ಲಾ ರಸಗಳಿಂದ ಕೂಡಿದ.

**सर्वरसोत्तम ಸರ್ವರಸೋತ್ತಮ** (पुं०) ಎಲ್ಲಾ ರಸಗಳಲ್ಲೂ ಪ್ರಧಾನವಾದ ಲವಣ ರಸ. सर्वरसेषु उत्तमः।

**सर्वरात्र ಸರ್ವರಾತ್ರ** (पुं०) ಸಂಪೂರ್ಣ ರಾತ್ರಿ. सर्वा रात्रिः "अच्" (५-४-८७)। पुंस्त्वम् (२-४-२९)।

**सर्वला ಸರ್ವಲಾ** (स्त्री०) ಈಟಿ, ತೋಮರವೆಂಬ ಒಂದು ಆಯುಧ. सर्वं लाति—ला (आदाने) "कः" (३-२-३)। "सर्वला तोमरोऽस्त्रियाम्" अम०। गौरा० "ङीष्" (४-१-४१)। —ली —ಲೀ.

**सर्वलिङ्गिन् ಸರ್ವಲಿಂಗಿನ್** (पुं०) ಪಾಷಂಡ, ವೇದ ವಿರುದ್ಧವಾದ ನಡವಳಿಕೆಯುಳ್ಳವನು, ಇತರರನ್ನು ವಂಚಿಸಲು ಇಷ್ಟಬಂದಂತೆ ವೇಷ ತಾಳುವವನು. सर्वेषां लिङ्गानि— सर्वलिङ्गानि सन्त्यस्य "इनिः" (५-२-११५)। "पाषण्डाः सर्वलिङ्गिनः" अम०।

**सर्वविद् ಸರ್ವವಿದ್** (पुं०) 1. ಮಹಾವಿಷ್ಣು. 2. ಪರಶಿವ, ಪರಮೇಶ್ವರ. सर्वं विन्दति—विद्लृ (लाभे) "क्विप्" (३-२-६१)। सर्वं वेत्ति—विद (ज्ञाने) "क्विप्" वा। "सर्वगः सर्वविद्भानुः" वि० स०।

**सर्ववेद ಸರ್ವವೇದ** (पुं०) ಎಲ್ಲಾ ವೇದಗಳನ್ನೂ ಅಧ್ಯಯನ ಮಾಡಿದ ವಿಪ್ರ. सर्ववेदानधीते—सर्ववेद "ठक्" (४-२-६०)। ठको लुक् (वा० ४-२-६०)।

**सर्ववेदस् ಸರ್ವವೇದಸ್** (पुं०) ಸರ್ವಸ್ವವನ್ನೂ ದಕ್ಷಿಣೆಯಾಗಿ ಕೊಟ್ಟು ಯಾಗಮಾಡಿದವನು, ವಿಶ್ವಜಿದ್ಯಾಗ ಮಾಡಿದವನು. सर्वं धनं वेदयति निवेदयति ऋत्विग्भ्यः — विद्लृ (लाभे) + णिच् "असुन्" (उ० ४-१८९)। "सर्ववेदाः स येनेष्टो यागः सर्वस्वदक्षिणः" अम०।

**सर्ववेशिन् ಸರ್ವವೇಶಿನ್** (पुं०) ನಟ, ಅಭಿನಯಕಾರ. सर्वेषां वेशोऽस्यास्ति "इनिः" (५-२-११५)।

**सर्वव्यापिन् ಸರ್ವವ್ಯಾಪಿನ್** (पुं०) 1. ಪಂಚ ಪ್ರಾಣವಾಯುಗಳಲ್ಲೊಂದಾದ ಧನಂಜಯ ವಾಯು (ವ್ಯಾನವಾಯು). ಈ ವಾಯುವು ದೇಹದ ಎಲ್ಲಾ ಕಡೆಯಲ್ಲೂ ವ್ಯಾಪಿಸಿರುವುದು. "न जहाति मृतं वापि सर्वव्यापी धनञ्जयः"। (वि०) 2. ಎಲ್ಲಾ ಕಡೆಯಲ್ಲೂ ಹರಡಿಕೊಂಡಿರುವ, ಎಲ್ಲಾ ಕಡೆಗೂ ವ್ಯಾಪಿಸಿರುವ.

**सर्वसंनहन ಸರ್ವಸಂನಹನ** (न०) ಎಲ್ಲಾ ಸೇನೆಗಳೂ ಒಂದು ಕಡೆ ಒಟ್ಟಿಗೆ ಸೇರಿ ಯುದ್ಧಕ್ಕಾಗಿ ಹೊರಡುವುದು. सर्वेषां संनहनम्।

**सर्वसह ಸರ್ವಸಹ** (पुं०) ಮಹಾವಿಷ್ಣು. स्वशासनेन सर्वदेवतान्तरमपि मन्दाधिकारिणामाराध्यतया सहते बिभर्ति —षह (मर्षणे) "अच्" (३-१-१३४)। "मन्दाधिकारिणां सर्वमाराध्यत्वेन दैवतम्। बिभर्ति सहते यस्तु स सर्वसह ईरितः" इति निरुक्तिः। "अपराजितः सर्वसहः" वि० स०।

**सर्वसिद्धि ಸರ್ವಸಿದ್ಧಿ** (पुं०) ಶ್ರೀಫಲ, ಬಿಲ್ವ ವೃಕ್ಷ. सर्वेषां सिद्धिरस्मात्।

**सर्वस्व ಸರ್ವಸ್ವ** (न०) 1. ಸ್ಥಿರ ಮತ್ತು ಚರ ರೂಪವಾದ ಸಕಲ ವಿಧವಾದ ಆಸ್ತಿ, ಸ್ವತ್ತು. सर्वं स्वम्। 2. ಸಾರಾಂಶ. "सर्वस्वमिव पुण्यानां साम्राज्यमिव सम्पदाम्" याद० १६-१४१।

**सर्वाङ्गीण ಸರ್ವಾಂಗೀಣ** (वि०) ಎಲ್ಲಾ ಅವಯವಗಳಲ್ಲೂ ವ್ಯಾಪಿಸಿರುವ, ಎಲ್ಲಾ ಅಂಗಗಳಲ್ಲೂ ಸೇರಿಕೊಂಡಿರುವ. सर्वाण्यङ्गानि व्याप्नोति सर्वाङ्ग "खः" (५-२-७)। "वसानस्तन्त्रकनिभे सर्वाङ्गीणे तरुत्वचौ" भट्टि० ४-१०।

**सर्वानुभूति ಸರ್ವಾನುಭೂತಿ** (स्त्री०) ಬಿಳಿಯ ತಿಗಡೆ.

**सर्वान्नभोजिन् ಸರ್ವಾನ್ನಭೋಜಿನ್** (वि०) ಎಲ್ಲಾ ವರ್ಣದವರ ಅನ್ನವನ್ನೂ ಭುಜಿಸುವವನು. सर्वेषामन्नानि भुङ्क्ते —भुज (परिपालनाभ्यवहारयोः) "णिनिः" (३-२-७८)। "सर्वान्नीनस्तु सर्वान्नभोजी" अम०।

**सर्वान्नीन ಸರ್ವಾನ್ನೀನ** (वि०) ಎಲ್ಲಾ ವರ್ಣದವರ ಅನ್ನವನ್ನೂ ಭುಜಿಸುವವನು. सर्वान्नानि भक्षयति "खः" (५-२-९)। "सर्वान्नीनस्तु सर्वान्नभोजी" अम०।

**सर्वाभिसन्धिन् ಸರ್ವಾಭಿಸಂಧಿನ್** (पुं०) ಕಪಟಸಂನ್ಯಾಸಿ. सर्वस्मिन् विषये अभिसन्धाऽस्त्यस्य "इनिः" (५-२-११६)। "बैडालव्रतिकः सर्वाभिसन्धी छद्मतापसः" त्रिकाण्ड०।

**सर्वाभिसार ಸರ್ವಾಭಿಸಾರ** (पुं०) ಚತುರಂಗ ಸೇನೆಯ ಸಿದ್ಧತೆ, ಎಲ್ಲಾ ಸೇನೆಗಳೂ ಸಜ್ಜಾಗಿ ಒಂದು ಕಡೆ ಸೇರಿ ಯುದ್ಧಕ್ಕಾಗಿ ಹೊರಡುವುದು. सर्वेषामभिसारो यत्र। "सर्वाभिसारः सर्वौघः सर्वसंनहनार्थकः" अम०।

**सर्वार्थसाधिका ಸರ್ವಾರ್ಥಸಾಧಿಕಾ** (स्त्री०) ದುರ್ಗಾ ದೇವಿ.

**सर्वार्थसिद्ध ಸರ್ವಾರ್ಥಸಿದ್ಧ** (पुं०) 1. ಬುದ್ಧದೇವ. 2. ಶಾಕ್ಯಮುನಿ. सर्वेषु अर्थेषु सिद्धः। सर्वोऽर्थः सिद्धोऽस्य इति वा। (वि०) 3. ಸಕಲ ಕಾರ್ಯಗಳೂ ಕೈಗೂಡಿರುವವನು, ಸಕಲ ಕಾರ್ಯಗಳ ಸಿದ್ಧಿಯುಳ್ಳವನು.

**सर्वासुनिलय ಸರ್ವಾಸುನಿಲಯ** (पुं०) ಪರಮಾತ್ಮ. सर्वेषामात्मनाम् असूनां प्राणानां निलयः आलम्बनम्। "सर्वासुनिलयः स स्यात् सर्वप्राणावलम्बनम्" इति निरुक्तिः। "भूतावासो वासुदेवः सर्वासुनिलयोऽनलः" वि० स०।

**सर्वेश्वर ಸರ್ವೇಶ್ವರ** (पुं०) 1. ಸಕಲ ಚರಾಚರ ಜಗತ್ತಿಗೂ ನಿಯಾಮಕನಾದ ಪರಮಾತ್ಮ. समर्थानामसमर्थानां च सर्वेषां शरणागतानां वैरूप्यं परिहर्तुं आशु तानश्नुते व्याप्नोति — अशू (व्याप्तौ) "वरट्" (उ० ५-५७)। उपधाया ईत्वं च। "अशक्तानां च शक्तानां वैरूप्यं शरणैषिणाम्। अश्नुते परिहर्तुं यः स सर्वेश्वर ईरितः" इति निरुक्तिः। "अजः सर्वेश्वरः सिद्धः" वि० स०। 2. ಶಿವ, ಮಹಾದೇವ. 3. ಸಾರ್ವಭೌಮ, ಚಕ್ರವರ್ತಿ, ರಾಷ್ಟ್ರದ ಸರ್ವಾಧಿಕಾರವನ್ನು ಹೊಂದಿರುವ ಪ್ರಭು.

**सर्वौघ ಸರ್ವೌಘ** (पुं०) ಸಕಲ ಸೇನೆಗಳ ಸಿದ್ಧತೆ. सर्वस्य ओघः। "सर्वाभिसारः सर्वौघः" अम०।

**सर्वौषधिगण ಸರ್ವೌಷಧಿಗಣ** (पुं०) ಸುರೆ ಜಟಾಮಾಂಸಿ ಮೊದಲಾದ ಓಷಧಿಗಳ ಸಮೂಹ. सर्वौषधीनां गणः।

**सर्षप ಸರ್ಷಪ** (पुं०) ಸಾಸಿವೆ (ಗಿಡ). सरति स्नेहोऽस्मात् — सृ (गतौ) "अपः" षुगागमश्च (उ० ३-१४१)। "अकारणस्नेहमनोहराननः शिखाललाटार्पितगौरसर्षपः" मालती० १०-६।

**सल ಸಲ** (न०) ಜಲ, ನೀರು. सरति — सृ (गतौ) "अच्" (३-१-१३४)। रस्य लः।

**सलिल ಸಲಿಲ** (न०) ನೀರು, ಜಲ. सलति गच्छति — सल (गतौ) "इलच्" (उ० १-५५)। "धुन्वाना करयुगमीक्षितुं विलासान् शीतालुः सलिलगतेन सिच्यते स्म" माघ० ८-१९।

**सलिलकुन्तल ಸಲಿಲಕುಂತಲ** (पुं०) ಪಾಚಿ, ಶೈವಾಲ. सलिलस्य कुन्तल इव।

**सलिलनिधि ಸಲಿಲನಿಧಿ** (पुं०) ಸಮುದ್ರ. सलिलस्य निधिः, सलिलानि निधीयन्तेऽत्र—नि+डुधाञ् (धारणे) "किः" (३-३-९३)। "कल्लोलाः सलिलनिधेरवाप्य पारं शीर्यन्ते न गुणमहोर्मयस्तदीयाः" माघ० १६-८२। —राशिः —ರಾಶಿ. सलिलानां राशिरत्र। "पयसि सलिलराशेर्नक्तमन्तर्निमग्नः स्फुटमनिशमतापि ज्वालया बाडवाग्नेः" माघ० ११-५५।

**सलिलाशय ಸಲಿಲಾಶಯ** (पुं०) ಜಲಾಶಯ, ನೀರನ್ನು ಶೇಖರಿಸಿಡಲು ಕಲ್ಲು ಇಟ್ಟಿಗೆ ಮೊದಲಾದುವುಗಳಿಂದ ಕಟ್ಟಿದ ತೊಟ್ಟಿ, ಕೆರೆ ಕಟ್ಟೆ ಮೊದಲಾದುವು. सलिलस्य आशयः।

**सलिलेन्धन ಸಲಿಲೇಂಧನ** (पुं०) ಬಡಬಾಗ್ನಿ. सलिलमेव इन्धनं यस्य। "वडवाग्नौ तु सलिलेन्धनः स्याद्वडवामुखम्" त्रिकाण्ड०।

**सलील ಸಲೀಲ** (वि०) 1. ಲೀಲೆಯಿಂದ ಕೂಡಿದ, ಕ್ರೀಡಾಸಕ್ತಿಯಿಂದ ಕೂಡಿದ, ಆಟದ ಸ್ವಭಾವದ. लीलया सह वर्तते। "सलीलयातानि न भर्तुरभ्रमोः न चित्रमुच्चैःश्रवसः पदक्रमम्" माघ० १-५२। (क्रि० वि०) 2. ಆಟದಿಂದ, ವಿನೋದದಿಂದ. "नागं पुनर्मृदु सलीलनिमीलिताक्षम्" माघ० ५-६।

**सलोकता ಸಲೋಕತಾ** (स्त्री०) ಸಾಲೋಕ್ಯ, ಪರಮಾತ್ಮನೊಡನೆ ಸಮಾನ ಲೋಕದಲ್ಲಿ (ವೈಕುಂಠದಲ್ಲಿ) ವಾಸ ಮಾಡುವಿಕೆ. समानो लोकः यस्य। तस्य भावः "तल्" (५-१-११९)। ಇದು ನಾಲ್ಕು ವಿಧ ಮೋಕ್ಷಗಳಲ್ಲೊಂದು ವಿಧ.

**सल्लकी ಸಲ್ಲಕೀ** (स्त्री०) ಆನೆಬೇಲದ ಮರ. सल्लक्यते — लक (आस्वादने) "क्वुन्" (उ० २-३३)। "महेरणा कुन्दुरुकी सल्लकी ह्लादिनीति च" अम०।

**सव ಸವ** (पुं०) 1. ಯಜ್ಞ, ಯಾಗ. सूयते सोमोऽत्र — षुञ् (अभिषवे) "अप्" (३-३-५७)। "राजसूयाश्वमेधाद्यैः सोऽयजद्बहुभिः सवैः" भा० आदि० ९४-२६। 2. ಸಂತಾನ, ಸಂತತಿ. "सवो यज्ञे च सन्ताने" मेदि०। 3. ಸೂರ್ಯ. 4. ಚಂದ್ರ. 5. ಅರ್ಕವೃಕ್ಷ, ಎಕ್ಕದ ಗಿಡ.

**सवन ಸವನ** (न०) 1. ಯಾಗ, ಯಜ್ಞ. षुञ् (अभिषवे) "ल्युट्" (३-३-११५)। "समरप्रियया सह स्वजिन्या सवनं तस्य जगाम तत्प्रतीक्ष्यः" याद० १५-३०।

2. ಯಾಗದ ನಿಯಮ ಸ್ನಾನ. "प्रविवेश गामिव कृशस्य नियमसवनाय गच्छत:" किरा० १२-१० । 3. ಸೋಮ ರಸವನ್ನು ತೆಗೆಯುವುದು, ಸೋಮಲತೆಯನ್ನು ಕುಟ್ಟಿ ರಸವನ್ನು ಹಿಂಡುವುದು. "सवनं त्वध्वरे स्नाने सोमनिर्दलनेऽपि च" मेदि० । 4. ಸೋಮರಸಪಾನ.

**सवयस् ಸವಯಸ್** (पुं०) 1. ಸಮಾನ ವಯಸ್ಸುಳ್ಳ ಮಿತ್ರ, ಗೆಳೆಯ. समानं वय: यस्य। (वि०) 2. ಸಮಾನ ವಯಸ್ಸುಳ್ಳವನು. "सूतात्मजा: सवयस: प्रथितप्रबोधं प्राबोधयन्नुषसि वाग्भिरुदारवाच:" रघु० ५-६५। (स्त्री०) 3. ಗೆಳತಿ, ಸಖಿ. समानं वयोऽस्या:।

**सवर्ण ಸವರ್ಣ** (पुं०) 1. ಸಮಾನಸ್ಥಾನ ಮತ್ತು ಪ್ರಯತ್ನವುಳ್ಳ ವರ್ಣ, ಒಂದೇ ಸ್ಥಾನದಲ್ಲಿ ಮತ್ತು ಒಂದೇ ಪ್ರಯತ್ನದಿಂದ ಹುಟ್ಟುವ ಅಕ್ಷರ. ताल्वादिस्थानमाभ्यन्तरप्रयत्नश्चेतद्द्वयं यस्य येन तुल्यं तन्मिथ: सवर्णसंज्ञं स्यात्। "तुल्यास्यप्रयत्नं सवर्णम्" पा० सू० १-१-९। ಈ ವರ್ಣಗಳು ಪರಸ್ಪರ ಸವರ್ಣಸಂಜ್ಞೆ ಹೊಂದುವುವು. (वि०) 2. ಸಮಾನವಾದ, ಸದೃಶವಾದ. "ग्रथितमौलिरसौ वनमालया तरुपलाशसवर्णतनुच्छद:" रघु० ९-५१। 3. ಸಮಾನ ವರ್ಣವುಳ್ಳ, ಒಂದೇ ವಿಧ ಬಣ್ಣವುಳ್ಳ. "उच्चैर्महारजतराजिविराजितासौ दुर्वर्णभित्तिरिह सान्द्रसुधासवर्णा" माघ० ९-२८। 4. ಸಮಾನ ಜಾತಿಯ, ಒಂದೇ ಜಾತಿಯ. "पाणिग्रहणसंस्कार: सवर्णासूपदिश्यते" मनु० ३-४३।

**सवर्णा ಸವರ್ಣಾ** (स्त्री०) ಸಮಾನ ಜಾತಿಯ ಹೆಂಗಸು. समानो वर्णो जाति: यस्या:। "उद्वहेत द्विजो भार्यां सवर्णां लक्षणान्विताम्" मनु० ३-४।

**सविकल्पक ಸವಿಕಲ್ಪಕ** (पुं०) ಸಮಾಧಿಯ ಒಂದು ಭೇದ, ಸಂಪ್ರಜ್ಞಾತ ಸಮಾಧಿ. ["सम्प्रज्ञात" ಪದದಲ್ಲಿ ನೋಡಿ.]

**सवितृ ಸವಿತೃ** (पुं०) 1. ರವಿ, ಸೂರ್ಯ. सुवति—षू (प्रेरणे) "तृच्" (३-१-१३३)। "मुहुरन्तरालभुवमस्तगिरे: सवितुश्च योषिदमिमीत दृशा" माघ० ९-२। "दिनान्ते निहितं तेज: सवित्रेव हुताशन:" रघु० ४-१। 2. ಅರ್ಕವೃಕ್ಷ, ಎಕ್ಕದ ಗಿಡ. 3. ಸೃಷ್ಟಿಕರ್ತನಾದ ಬ್ರಹ್ಮ. 4. ಶಿವ, ಪರಮೇಶ್ವರ. 5. ಇಂದ್ರ. 6. ವಿಷ್ಣು. सूर्यद्वारा सस्यादिकं सूते। "रविर्विरोचन: सूर्य: सविता रविलोचन:" वि० स०।

**सवितृदैवत ಸವಿತೃದೈವತ** (पुं०) ಹಸ್ತನಕ್ಷತ್ರ. सविता दैवतमस्य।

**सवित्र ಸವಿತ್ರ** (न०) ಪ್ರಸವಮಾಡಿಸುವ ಸಾಧನ. सूयतेऽनेन—षूङ् (प्राणिप्रसवे) करं० "इत्र:" (३-२-१८४)।

**सवित्री ಸವಿತ್ರೀ** (स्त्री०) 1. ತಾಯಿ, ಜನ್ಮವನ್ನು ನೀಡಿದ ಮಾತೆ. षूङ् (प्राणिगर्भविमोचने) "तृच्" (३-१-१३३)। "ङीप्" (४-१-५)। "तया दुहित्रा सुतरां सवित्री स्फुरत्प्रभामण्डलतया चकासे" कुमा० १-२४। 2. ಗೋವು, ಆಕಳು, ಹಸು.

**सविध ಸವಿಧ** (न०) 1. ಸಾಮೀಪ್ಯ, ಹತ್ತಿರ. समाना विधाऽस्य। "श्रीमुखेन्दुसविधेऽपि शोभते यस्य नाभिसरसीसरोरुहम्" माघ० १४-६९। (वि०) 2. ಹತ್ತಿರದ, ಸಮೀಪದ. "भूयो भूय: सविधनगरीरथ्यया पर्यटन्तं दृष्ट्वा दृष्ट्वा भवनवलभीतुङ्गवातायनस्था" मालती० १-१८।

**सव्य ಸವ್ಯ** (पुं०) 1. ವಿಷ್ಣು. सूते विश्वम्—षूङ् (प्राणिगर्भविमोचने) "य:" (उ० ४-१०९)। (वि०) 2. ಎಡಭಾಗದ, ಎಡಗಡೆಯ. "सव्ये भवत्यस्सरयूसमेता रम्येयमाभाति पुरी रघूणाम्" याद० १८-६५। 3. ಬಲಗಡೆಯ, ಬಲಭಾಗದ. "एकेन सव्यपाणिना विशिखमुत्खाय किमाह रावण:" अनर्घ०। 4. ಪ್ರತಿಕೂಲವಾದ, ವಿರುದ್ಧವಾದ. "सव्यं दक्षिणे। वामे च प्रतिकूले च" हेम०।

**सव्यसाचिन् ಸವ್ಯಸಾಚಿನ್** (पुं०) ಅರ್ಜುನ. सव्येन वामेनापि शरसचनशील:—षच (समवाये) "णिनि:" (३-२-७८)। "मयैवेते निहता: पूर्वमेव निमित्तमात्रं भव सव्यसाचिन्" गीता ११-३३। "उभौ मे दक्षिणौ पाणी गाण्डीवस्य विकर्षणे। तेन देवमनुष्येषु सव्यसाचीति मां विदु:" भा० विरा० ४४-१९।

**सव्येष्ठ ಸವ್ಯೇಷ್ಠ** (पुं०) ಸಾರಥಿ. सव्ये वामे तिष्ठति—ष्ठा (गतिनिवृत्तौ) "क:" (३-२-४)।

**सव्येष्ठृ ಸವ್ಯೇಷ್ಠೃ** (पुं०) ಸಾರಥಿ, ರಥವನ್ನು ನಡೆಸುವವನು. सव्ये वामे तिष्ठति—ष्ठा (गतिनिवृत्तौ) "ऋन्" (उ० २-१०१)। सप्तम्या अलुक् (६-३-९)।

**सस्य ಸಸ್ಯ** (न०) ಮರ ಗಿಡ ಮೊದಲಾದುವುಗಳ ಹಣ್ಣು, ಕಾಯಿ ಮತ್ತು ಧಾನ್ಯ. सस्ति—षस (स्वप्ने) "य:" (उ० ४-१०९)। "सुखेन लभ्या दधत: कृषीवलैरकृष्टपच्या इव सस्यसम्पद:" किरा० १-१७। "जीर्णमन्नं प्रशंसीयात् भार्यां च गतयौवनाम्। रणात् प्रत्यागतं शूरं सस्यं च गृहमागतम्" चाणक्य०।

**सस्यक ಸಸ್ಯಕ** (पुं०) 1. ಒಂದು ವಿಧ ಮಣಿ. 2. ಅಸಿ, ಖಡ್ಗ, ಕತ್ತಿ.

**सस्यमञ्जरी ಸಸ್ಯಮಂಜರೀ** (स्त्री०) ಧಾನ್ಯದ ತೆನೆ. सस्यस्य मञ्जरी ।

**सस्यमारिन् ಸಸ್ಯಮಾರಿನ್** (पुं०) 1. ಮಹಾಮೂಷಕ, ಹೆಗ್ಗಣ. सस्यं मारयति—मृङ् (प्राणत्यागे) + णिच् "णिनिः" (३-२-७८) । (वि०) 2. ಧಾನ್ಯಗಳನ್ನು ನಾಶಪಡಿಸುವ.

**सस्यशूक ಸಸ್ಯಶೂಕ** (न०) ಧಾನ್ಯದ ಅಗ್ರಭಾಗ, ಧಾನ್ಯದ ಮುಳ್ಳು. सस्यस्य शूकम् ।

**सस्यसंवर ಸಸ್ಯಸಂವರ** (पुं०) ಸಾಲವೃಕ್ಷ, ಮತ್ತಿಮರ. सस्यैः संव्रियते—सम्+वृञ् (वरणे) "अप्" (३-३-५८) ।

**सह ಸಹ** (पुं०) 1. ಅಗ್ರಹಾಯಣಿಕ ಮಾಸ, ಮಾರ್ಗಶೀರ್ಷ ಮಾಸ. सहते—षह (मर्षणे) "अच्" (३-१-१३४) । "मार्गे सहः सहाः" शब्दार्णवः । (पुंन०) 2. ಬಲ, ಶಕ್ತಿ. "सहो बले न स्त्रियां स्यात्" मेदि० । (वि०) 3. ಸಮರ್ಥ, ಶಕ್ತ. 4. (ಸಮಾಸದ ಅಂತ್ಯದಲ್ಲಿ) ಸಹಿಸಿಕೊಳ್ಳುವವನು, ತಾಳ್ಮೆಯುಳ್ಳವನು, ಸೈರಣೆಯುಳ್ಳವನು. भारसहः । (अव्य०) 5. ಕೂಡ, ಸಂಗಡ, ಒಂದಿಗೆ, ಜೊತೆಯಲ್ಲಿ. सहते—षह (मर्षणे) "अच्" (३-१-१३४) । "यदुपतिरधिरूढचन्द्रशालः सह दयिताभिरनन्यमानसाभिः" याद० २४-९ । 6. ಕಾರ್ತ್ಸ್ನ್ಯ, ಸಾಕಲ್ಯ, ಸಂಪೂರ್ಣತೆ. 7. ವಿದ್ಯಮಾನ. 8. ಸಂಬಂಧ. 9. ಸಾದೃಶ್ಯ. 10. ಏಕಕಾಲದಲ್ಲಿ, ಒಂದೇ ಸಮಯದಲ್ಲಿ. 11. ಯೌಗಪದ್ಯ, ಏಕಕಾಲದಲ್ಲಿರುವಿಕೆ. 12. ಸಮೃದ್ಧಿ. "सह सम्बन्धसादृश्ययौगपद्यसमृद्धिषु । साकल्ये विद्यमाने च" हेम० ।

**सहकार ಸಹಕಾರ** (पुं०) ಬಹಳ ಪರಿಮಳವುಳ್ಳ ಮಾವಿನ ಮರ, ಚೂತವೃಕ್ಷ. सह कारयति मेलयति द्वन्द्वम्—डुकृञ् (करणे) + णिच् "अच्" (३-१-१३४) । "मन्दोत्कण्ठाः कृतास्तेन गुणाधिकतया गुरौ । फलेन सहकारस्य पुष्पोद्गम इव प्रजाः" रघु० ४-९ ।

**सहकारिन् ಸಹಕಾರಿನ್** (वि०) ಜೊತೆಗೂಡಿ ಕೆಲಸ ಮಾಡುವವನು, ಒಟ್ಟಿಗೆ ಕಲೆತು ಕೆಲಸ ಮಾಡುವವನು. सह करोति—कृञ् (करणे) "णिनिः" (३-२-७८) । स्त्रियां "ङीप्" (४-१-५) । **–कारिणी –ಕಾರಿಣೀ.**

**सहगमन ಸಹಗಮನ** (न०) ಮೃತನಾದ ಪತಿಯೊಡನೆ [ತಾನೂ (ಪತ್ನಿಯೂ) ಚಿತೆಯನ್ನೇರಿ ಜೀವ ತ್ಯಜಿಸಿ] ಹೋಗುವುದು.

**सहचर ಸಹಚರ** (पुं०) 1. ಸುಹೃತ್ತು, ಗೆಳೆಯ. सह चरति—चर (गतौ) "अच्" (३-१-१३४) । "यावदिहोद्याने मुहूर्तं विश्रम्य मकरन्दसहचरं नाथं माधवं प्रेक्षिष्ये" मालती० १ । 2. ಪ್ರಿಯ, ಪತಿ. "सहचरमुच्छ्रितगुच्छवाञ्छयान्या" माघ० ७-४७ । 3. ಪ್ರತಿಬಂಧಕ. (पुंस्त्री०) 4. ನೀಲಿ ಹೂವಿನ ಗೋರಂಟಿ. 5. ಹಳದಿ ಹೂವಿನ ಗೋರಂಟಿ. "सहचरः पुन्झिण्ट्यां वयस्ये प्रतिबन्धके" हेम० । (वि०) 6. ಅನುಚರ, ಜೊತೆಗಾರ. "सहचरमधुहस्तन्यस्तचूताङ्कुरास्त्रः शतमखमुपतस्थे प्राञ्जलिः पुष्पधन्वा" कुमा० २-६४ । "भवेत् सहचरो झिण्ट्यां द्वयोरनुचरे त्रिषु" मेदि० । (स्त्री०) **–चरी –ಚರೀ.** 7. ಹಳದಿ ಹೂವಿನ ಗೋರಂಟಿ. 8. ಗೆಳತಿ, ಸಖಿ. 9. ಪತ್ನಿ. "लक्ष्यीकृतस्य हरिणस्य हरिप्रभावः प्रेक्ष्य स्थितां सहचरीं व्यवधाय देहम्" रघु० ९-५७ ।

**सहचार ಸಹಚಾರ** (पुं०) 1. ಸಾಮರಸ್ಯ, ಸಾಮಾನಾಧಿಕರಣ್ಯ, ಹೊಂದಿಕೆ. 2. ದೋಷರಹಿತವಾದ ಹೇತುವಿನ ಕಾರ್ಯಸಾಧನೆ.

**सहचारिन् ಸಹಚಾರಿನ್** (पुं०) ಪತಿ, ಗಂಡ. (स्त्री०) **–चारिणी –ಚಾರಿಣೀ.** ಪತ್ನಿ.

**सहज ಸಹಜ** (पुं०) 1. ಸಹೋದರ, ಒಡಹುಟ್ಟಿದವನು. सह जायते — जनी (प्रादुर्भावे) "डः" (३-२-१०१) । "सहजबलसमेतः शक्रुवैरजय्यः सनुदितविषमास्त्रस्तादृशानन्दहेतुः" याद० २४-१४ । 2. ಜನ್ಮಲಗ್ನದಿಂದ ಮೂರನೆಯ ಸ್ಥಾನ. (वि०) 3. ಸ್ವಾಭಾವಿಕವಾದ, ಸ್ವಭಾವಸಿದ್ಧವಾದ. 4. ಜೊತೆಯಲ್ಲಿ ಹುಟ್ಟಿದ, ಹುಟ್ಟುವಾಗಲೇ ಉತ್ಪನ್ನವಾದ. "सहजं नयनं च यत्तृतीयं भुजयुग्मं च तव स्थितातिरिक्तम्" याद० १५-५९ । 5. ಜನ್ಮಸಿದ್ಧವಾದ, ವಂಶಪರಂಪರೆಯಿಂದ ಬಂದ. "सहजं खलु यद्विनिन्दितं न खलु तत्कर्म विवर्जनीयम्" शाकु० ६-१ ।

**सहजमित्र ಸಹಜಮಿತ್ರ** (न०) ಸ್ವಭಾವವಾಗಿಯೇ ಮಿತ್ರನಾಗಿರುವವನು, ಉಪಕಾರ ಮೊದಲಾದ ಯಾವ ಕಾರಣವೂ ಇಲ್ಲದೆ ಮಿತ್ರನಾಗಿರುವವನು. सहजं मित्रम् । ಅಕ್ಕ ತಂಗಿಯರ ಮಕ್ಕಳು, ತಾಯಿಯ ಸಹೋದರಿಯರ ಮಕ್ಕಳು ಮತ್ತು ತಂದೆಯ ಸಹೋದರಿ (ಸೋದರತ್ತೆ) ಯರ ಮಕ್ಕಳು ಸಹಜಮಿತ್ರರು.

**सहजशत्रु ಸಹಜಶತ್ರು** (पुं०) ಸ್ವಾಭಾವಿಕ ಶತ್ರು, ಅಪಕಾರ ಯಾವುದೂ ಇಲ್ಲದೆ ಸ್ವಭಾವದಿಂದ ಆಗಿರುವ ಶತ್ರು.

सहजः शत्रुः। ಸವತ್ನೀ (ಸವತಿ) ಪುತ್ರರು, ತಂದೆಯ ಸಹೋದರರು ಮತ್ತು ಅವರ ಪುತ್ರರು ಸಹಜಶತ್ರುಗಳು.

**सहजात ಸಹಜಾತ** (पुं०) 1. ಜೊತೆಯಲ್ಲಿ ಹುಟ್ಟಿದವನು, ಅವಳಿಯಾಗಿ ಸಂಗಡ ಹುಟ್ಟಿದ ಸಹೋದರ. सह समं जातः। (वि०) 2. ಜೊತೆಯಲ್ಲಿ ಹುಟ್ಟಿದ.

**सहजारि ಸಹಜಾರಿ** (पुं०) "सहजशत्रु" ಪದದ ಅರ್ಥ.

**सहदेव ಸಹದೇವ** (पुं०) 1. ಮಾದ್ರಿಯ ಪುತ್ರ, ಐವರು ಪಾಂಡವರಲ್ಲಿ ಕಿರಿಯ ಸಹೋದರ, ನಕುಲನ ತಮ್ಮ, ಪಾಂಡುರಾಜನ ಐದನೆಯ ಮಗ. "विनयादवनम्य विश्वभर्तुः सहदेवः स्वयमाहरत्सपर्याम्" याद० १५-९४। (स्त्री०) **-देवा -ದೇವಾ.** 2. ಕಳ್ಳಂಗಡಲೆ. 3. ಸೊಗದೆ ಗಿಡ. 4. ದಂಡೋತ್ಪಲ. **-देवी -ದೇವೀ.** 5. ಸರ್ಪಾಕ್ಷಿ, ಈಶ್ವರೀ ಹಂಬು. "सहदेवा बलादण्डोत्पलयोश्शारिवौषधौ। सहदेवी तु सर्पाक्ष्यां पुंसि स्यात् पाण्डवे पुनः" मेदि०।

**सहधर्मचरी ಸಹಧರ್ಮಚರೀ** (स्त्री०) ಶಾಸ್ತ್ರೋಕ್ತ ಕ್ರಮದಲ್ಲಿ ಮದುವೆಯಾದ ಪತ್ನಿ, ಧರ್ಮಕಾರ್ಯಗಳ ಸಮಯದಲ್ಲಿ ಜೊತೆಯಲ್ಲಿದ್ದು ಭಾಗವಹಿಸುವ ಪತ್ನಿ. सह धर्मं चरति — चर (गतौ) "टः" (३-२-१७)। "ङीप्" (४-१-१५)। "सहधर्मचरीं सदानुवृत्तां स्वयमुद्दीपयता त्वयानुकम्पाम्" याद० १५-२६।

**सहधर्मचारिन् ಸಹಧರ್ಮಚಾರಿನ್** (पुं०) ಪತ್ನಿ, ಗಂಡ. सह धर्मं चरितुं शीलमस्य — चर (गतौ) "णिनिः" (३-२-७८)। स्त्रियां "ङीप्" (४-१-५)। **-चारिणी -ಚಾರಿಣೀ.**

**सहधर्मिणी ಸಹಧರ್ಮಿಣೀ** (स्त्री०) ವಿಧ್ಯುಕ್ತ ರೀತಿಯಲ್ಲಿ ಮದುವೆಯಾದ ಪತ್ನಿ, ಧರ್ಮ ಕಾರ್ಯಗಳಲ್ಲಿ ಜೊತೆಯಲ್ಲಿದ್ದು ಭಾಗವಹಿಸುವ ಪತ್ನಿ. सहधर्मोऽस्त्यस्याः "इनिः" (५-२-१३२)। "ङीप्" (४-१-५)। "पत्नी पाणिगृहीती च द्वितीया सहधर्मिणी" अम०।

**सहन ಸಹನ** (नं०) 1. ತಾಳ್ಮೆ, ಸೈರಣೆ, ಸೈರಿಸುವುದು. षह (मर्षणे) भावे "ल्युट्" (३-३-११५)। "कार्यार्थमपमानादेः सहनं खलु यद्भवेत्" सा० द० ६-१०७। (वि०) 2. ಸೈರಿಸುವವನು, ಸಹಿಸುವವನು. षह "युच्" (३-२-१४९)।

**सहपांशुकिल ಸಹಪಾಂಶುಕಿಲ** (पुं०) ಗೆಳೆಯ, ಸ್ನೇಹಿತ. सह पांशुना रेणुना किलति — किल (क्रीडायाम्) "कः" (३-१-१३५)। "सहपांशुकिलः स्नेही वयस्यः" त्रिकाण्ड०।

**सहभाविन् ಸಹಭಾವಿನ್** (वि०) ಸಹಾಯ ಮಾಡುವವನು, ಒತ್ತಾಸೆ ಮಾಡುವವನು. सह भवति — भू (सत्तायाम्) "णिनिः" (३-१-१३४)। "एकीयाः एकपक्षाः स्युः सहायाः सहभाविनः" त्रिकाण्ड०।

**सहभोजन ಸಹಭೋಜನ** (नं०) ಒಂದೇ ಕಡೆ ಕುಳಿತು ಊಟಮಾಡುವುದು, ಒಂದೇ ಗುಂಪಿನಲ್ಲಿ ಸೇರಿ ಊಟ ಮಾಡುವುದು. सह एकत्र मिलित्वा भोजनम्।

**सहयायिन् ಸಹಯಾಯಿನ್** (वि०) ಜೊತೆಯಲ್ಲಿ ಹೋಗುವವನು, ಸಂಗಡ ಹೋಗುವವನು. सह याति — या (प्रापणे) "णिनिः" (३-१-१३४)।

**सहवास ಸಹವಾಸ** (पुं०) ಜೊತೆಯಲ್ಲಿ ವಾಸಮಾಡುವುದು. सह + वस (निवासे) "घञ्" (३-३-१८)।

**सहवासिन् ಸಹವಾಸಿನ್** (वि०) ಜೊತೆಯಲ್ಲಿ ವಾಸ ಮಾಡುವ, ಯಾವಾಗಲೂ ಸಂಗಡ ಇರುವ. सह वसति — वस (निवासे) "णिनिः" (३-२-७८)। "संश्रय्य क्षणमिति निश्चिकाय कश्चिद्विब्बोकैर्बकसहवासिनां परोक्षैः" माघ० ८-२९।

**सहस् ಸಹಸ್** (पुं०) 1. ಮಾರ್ಗಶೀರ್ಷ ಮಾಸ. सह्यतेऽनेन —षह (मर्षणे) "असुन्" (उ० ४-१८९)। "श्लथयितुं क्षणमक्षमताङ्गना न सहसा सहसा कृतवेपथुः" माघ० ६-५७। (पुं०) 2. ಬಲ, ಶಕ್ತಿ, ಸಾಮರ್ಥ್ಯ. "द्रविणतरः सहोबलशौर्याणि स्थाम शुष्मं च" अम०। "सहो बले न स्त्रियां स्यात्" मेदि०।

**सहस ಸಹಸ** (वि०) ಹಾಸ್ಯದಿಂದ ಕೂಡಿದ. हसेन हास्येन सह वर्तते। "अयो हसः। हासो हास्यं च" अम०। "न सहसा सहसा कृतवेपथुः" माघ० ६-५७।

**सहसा ಸಹಸಾ** (अव्य०) 1. ಹಠಾತ್ತಾಗಿ, ನಿರೀಕ್ಷಣೆಯಿಲ್ಲದೆ, ಅಕಸ್ಮಾತ್ತಾಗಿ. "सहसोपगतः सविस्मयं तपसां सूतिरसूतिरापदाम्" किरा० २-५६। 2. ವಿಮರ್ಶೆಯಿಲ್ಲದೆ, ವಿಚಾರಮಾಡದೆ. "सहसेत्याकस्मिकाविमर्शयोः"। "सहसा विदधीत न क्रियामविवेकः परमापदां पदम्" किरा० २-३०। 3. ಶೀಘ್ರವಾಗಿ. "प्रियतमेन यया सरुषा स्थितं न सहसा सहसा परिरभ्य तम्" माघ० ६-५७। "ककुभां मुखानि सहसोज्ज्वलयन्" माघ० ९-४२।

**सहसान ಸಹಸಾನ** (पुं०) 1. ಮಯೂರ, ನವಿಲು. 2. ಯಜ್ಞ. सहते—षह (मर्षणे) "असानच्" (उ० २-८७)।

**सहस्य ಸಹಸ್ಯ** (पुं०) ಪೌಷಮಾಸ, ಪುಷ್ಯಮಾಸ. सहसि बले साधुः "यत्" (४-४-९८)। "पौषे तैषसहस्यौ द्वौ" अम०। "निनाय सात्यन्तहिमोत्किरानिलाः सहस्यरात्रीरुदवासतत्परा" कुमा० ५-२६।

**सहस्र ಸಹಸ್ರ** (न०) ಒಂದು ಸಾವಿರ, ಹತ್ತು ನೂರು ಸಂಖ್ಯೆ. "सहस्राणि दृशामीशः कृत्तिताङ्गं च सादरम्" कुमा० १०-२। "सहस्रसङ्ख्यैर्गगनं शिरोभिः पादैर्भुवं व्याप्य वितिष्ठमानम्" माघ० ४-४।

**सहस्रकिरण ಸಹಸ್ರಕಿರಣ** (पुं०) ಸೂರ್ಯ. सहस्रं किरणा यस्य। "किं वाऽभविष्यदरुणस्तमसां विभेत्ता तं चेत्सहस्रकिरणो धुरि नाकरिष्यत्" शाकु० ७-४।

**सहस्रगुण ಸಹಸ್ರಗುಣ** (वि०) ಒಂದು ಸಾವಿರದಷ್ಟು, ಒಂದು ಸಾವಿರ ಮಡಿ. सहस्रं गुणा यस्मिन्। "सहस्रगुणमुत्स्रष्टुमादत्ते हि रसं रविः" रघु० १-१८।

**सहस्रदंष्ट्र ಸಹಸ್ರದಂಷ್ಟ್ರ** (पुं०) ಸಾವಿರ ಕೋರೆಗಳುಳ್ಳ ಮತ್ಸ್ಯ, ಪಾಠೀನವೆಂಬ ಮೀನು. सहस्रं दंष्ट्रा यस्य।

**सहस्रधार ಸಹಸ್ರಧಾರ** (पुं०) ಮಹಾವಿಷ್ಣುವಿನ ಚಕ್ರ, ಸುದರ್ಶನ. सहस्रं धारा यस्य।

**सहस्रधारा ಸಹಸ್ರಧಾರಾ** (स्त्री०) ದೇವರಿಗೆ ಅಭಿಷೇಕ ಮಾಡುವ ಸಾವಿರ ರಂಧ್ರಗಳಿರುವ ಪಾತ್ರೆಯಿಂದ ಬೀಳುವ ಜಲಧಾರೆ. सहस्रं धारा जलधारा यत्र।

**सहस्रनयन ಸಹಸ್ರನಯನ** (पुं०) 1. ಒಂದು ಸಾವಿರ ಕಣ್ಣುಗಳುಳ್ಳ (ಇಂದ್ರ). सहस्रं नयनानि यस्य। —नेत्रः —ನೇತ್ರಃ. "क्रियाप्रबन्धादयमध्वराणामजस्रमाहूतसहस्रनेत्रः" रघु० ६-२३। 2. ಮಹಾವಿಷ್ಣು.

**सहस्रपत्र ಸಹಸ್ರಪತ್ರ** (न०) ಪದ್ಮ, ತಾವರೆ, ಕಮಲ. सहस्रं पत्राण्यस्य। "विलोलनेत्रभ्रमरैर्गवाक्षाः सहस्रपत्राभरणा इवासन्" रघु० ७-११।

**सहस्रपत्रासन ಸಹಸ್ರಪತ್ರಾಸನ** (पुं०) ಕಮಲವೇ ಆಸನವಾಗಿರುವ ಚತುರ್ಮುಖ, ಬ್ರಹ್ಮ. सहस्रपत्रं आसनं यस्य। "सहस्रपत्रासनपत्रहंसवंशस्य पत्राणि पतत्रिणः स्मः" नैष० ३-१६।

**सहस्रपात् ಸಹಸ್ರಪಾತ್** (पुं०) 1. ಮಹಾವಿಷ್ಣು. सहस्रं पादा अस्य—पादशब्दस्यान्त्यलोपः (५-४-१४०)। "सहस्रशीर्षा पुरुषः। सहस्राक्षः सहस्रपात्" श्रुतिः। 2. ಪರಮೇಶ್ವರ, ಪರಶಿವ.

**सहस्रपाद ಸಹಸ್ರಪಾದ** (पुं०) 1. ಕಾರಂಡವ ಪಕ್ಷಿ. 2. ರವಿ, ಸೂರ್ಯ. 3. ಮಹಾವಿಷ್ಣು. "सहस्रं पादा यस्य। "सहस्रपादः कारण्डे भास्करे यज्ञपूरुषे" हेम०।

**सहस्रबाहु ಸಹಸ್ರಬಾಹು** (पुं०) 1. ಕಾರ್ತವೀರ್ಯಾರ್ಜುನ. 2. ಬಾಣಾಸುರ. सहस्रं बाहवोऽस्य। "बाणः पुत्रशतज्येष्ठो बलेरासीन्महात्मनः। सहस्रबाहुर्वाद्येन ताण्डवेऽतोषयन्मृडम्" भाग० १०-६२-२। 3. ಪರಶಿವ. 4. ಮಹಾವಿಷ್ಣು.

**सहस्रभुज ಸಹಸ್ರಭುಜ** (पुं०) 1. ಮಹಾವಿಷ್ಣು. सहस्रं भुजा अस्य। "पश्यन्त्यदोरूपमदभ्रचक्षुषा सहस्रपादोरुभुजाननाद्भुतम्। सहस्रमूर्धश्रवणाक्षिनासिकं सहस्रमौल्यम्बरकुण्डलोल्लसत्" भाग० १-३-४। सहस्रपादः सहस्रभुजः सहस्राननः सहस्रमूर्धा सहस्रश्रवणः सहस्राक्षः सहस्रनासिकः सहस्रमौलिः ಇತ್ಯಾದಿ ಪದಗಳೆಲ್ಲವೂ ಮಹಾವಿಷ್ಣುವಾಚಕ ಪದಗಳು. 2. ಕಾರ್ತವೀರ್ಯಾರ್ಜುನ. 3. ಬಾಣಾಸುರ.

**सहस्रभुजा ಸಹಸ್ರಭುಜಾ** (स्त्री०) ಮಹಾಲಕ್ಷ್ಮಿ. सहस्रं भुजा यस्याः।

**सहस्ररश्मि ಸಹಸ್ರರಶ್ಮಿ** (पुं०) ರವಿ, ಸೂರ್ಯ. सहस्रं रश्मयो यस्य। "अशक्नुवन् सोढुमधीरलोचनः सहस्ररश्मेरिव यस्य दर्शनम्। प्रविश्य हेमाद्रिगुहागृहान्तरं निनाय बिभ्यद्दिवसानि कौशिकः" माघ० १-५३।

**सहस्रवदन ಸಹಸ್ರವದನ** (पुं०) ಮಹಾವಿಷ್ಣು. सहस्रं वदनानि यस्य।

**सहस्रवीर्या ಸಹಸ್ರವೀರ್ಯಾ** (स्त्री०) ಗರಿಕೆಹುಲ್ಲು. सहस्रं वीर्याण्यस्याः।

**सहस्रवेधिन् ಸಹಸ್ರವೇಧಿನ್** (न०) 1. ರಾಮಠ, ಹಿಂಗು. सहस्रं वेधितु शीलमस्य—विध (विधाने) "णिनिः" (३-२-७८)। "सहस्रवेधि जतुकं बाल्हिकं हिङ्गु रामठम्" अम०। (पुं०) 2. ಕಸ್ತೂರಿ. 3. ನೀರು ಹಬ್ಬೆ. "सहस्रवेधि क्लीबं स्यात् रामठे नाम्बुवेतसे" मेदि०।

**सहस्रांशु ಸಹಸ್ರಾಂಶು** (पुं०) ರವಿ, ಸೂರ್ಯ. सहस्रम् अंशवोऽस्य। "तदण्डमभवद्धैमं सहस्रांशुसमप्रभम्" मनु० १-९।

**सहस्रार ಸಹಸ್ರಾರ** (पुंन०) ಶಿರಸ್ಸಿನಲ್ಲಿ ಅಧೋಮುಖವಾಗಿರುವ ಸಹಸ್ರದಳ ಕಮಲ. सहस्रम् अराणि यस्य।

**सहस्रिन् ಸಹಸ್ರಿನ್** (पुं०) ಒಂದು ಸಾವಿರ ಸೈನಿಕರ ಬಲವುಳ್ಳವನು, ಒಂದು ಸಾವಿರ ಸೈನಿಕರ ಅಧಿಪತಿ. सहस्रं बलमस्य। "बलिनो ये सहस्रेण साहस्रास्ते सहस्रिणः" अम०।

**सहा ಸಹಾ** (स्त्री०) 1. ಸಣ ಗೋರಂಟೆ. सहते आतपम् —षह (मर्षणे) "अच्" (३-१-१३४)। "सहा कुमारी-तरणिः" अम०। 2. ಕಾಡು ಹೆಸರು ಗಿಡ. 3. ದಂಡೋತ್ಪಲ. 4. ಪೃಥ್ವಿ, ಭೂಮಿ. 5. ನಖಭೇಷಜ (?). "सहोर्व्यां सहदेवायां कुमार्यां नखभेषजे। मुद्गपर्ण्यां च" हेम०।

**सहाय ಸಹಾಯ** (वि०) ಅನುಕೂಲವಾಗಿರುವವನು, ಜೊತೆಯಲ್ಲಿರುವವನು, ಜೊತೆಯಲ್ಲಿದ್ದು ಹಿತವಾದ ಕಾರ್ಯ ಮಾಡುವವನು. सह अयते—अय (गतौ) "अच्" (३-१-१३४)। "सम्भाव्य त्वामतिभरक्षमस्कन्धं स बान्धवः। सहायमध्वरधुरां धर्मराजो विवक्षते" माघ० २-१०३।

**सहायता ಸಹಾಯತಾ** (स्त्री०) 1. ಸಹಾಯಕರ ಸಮೂಹ. सहायानां समूहः "तल्", (वा० ४-२-४३)। 2. ಸಾಹಾಯ್ಯ, ಒತ್ತಾಸೆ. सहायस्य भावः "तल्" (५-१-११९)। "स किल संयुगमूर्ध्नि सहायतां मघवतः प्रतिपद्य महारथः" रघु० ९-१९।

**सहायत्व ಸಹಾಯತ್ವ** (न०) ಸಾಹಾಯ್ಯ, ಒತ್ತಾಸೆ. सहायस्य भावः "त्वः" (५-१-११९)।

**सहार ಸಹಾರ** (पुं०) 1. ಆಮ್ರವೃಕ್ಷ, ಮಾವಿನ ಮರ. षह (मर्षणे) "आरन्" (उ० ३-१३९)। 2. ಜಗತ್ತಿನ ಮಹಾಪ್ರಳಯ. (वि०) 3. ಹಾರಸಹಿತವಾದ.

**सहित ಸಹಿತ** (वि०) 1. ಸೇರಿಕೊಂಡಿರುವ, ಕೂಡಿಕೊಂಡಿರುವ, ಜೊತೆಯಲ್ಲಿರುವ. सम्+डु धाञ् (धारण-पोषणयोः) "क्तः" (३-४-७२)। "अथ यादवयूथेन सहितः संयुगप्रियः। सात्यकिः प्रचितोत्तंसः प्रतस्थे भर्तुराज्ञया" याद० २२-५५। 2. ಸಹಿಸಿಕೊಂಡಿರುವ, ಸೈರಣೆಯಿಂದಿರುವ. (अव्य०) 3. ಸಂಗಡ, ಕೂಡ.

**सहित्र ಸಹಿತ್ರ** (न०) ಸಹಿಸಿಕೊಳ್ಳುವುದು, ಸೈರಣೆಯಿಂದಿರುವುದು. षह (मर्षणे) "इत्रः" (३-२-१८४)।

**सहिष्णु ಸಹಿಷ್ಣು** (वि०) ಸಹನೆಯ ಸ್ವಭಾವದವನು, ಸೈರಣೆಯುಳ್ಳವನು. षह (मर्षणे) "इष्णुच्" (३-२-१३६)। "सुकरस्तरुवत् सहिष्णुना रिपुरुन्मूल-यितुं महानपि" किरा० २-५०।

**सहिष्णुता ಸಹಿಷ್ಣುತಾ** (स्त्री०) ಸೈರಣೆ, ಸಹನೆ, ತಾಳ್ಮೆ. सहिष्णोर्भावः "तल्" (५-१-११९)।

**सहुरि ಸಹುರಿ** (पुं०) 1. ಸೂರ್ಯ. 2. ಪೃಥಿವಿ, ಭೂಮಿ. षह (मर्षणे) "उरिन्" (उ० २-७३)। "सहुरादित्यः पृथिवी च" सि० कौ०।

**सहृदय ಸಹೃದಯ** (वि०) 1. ಶುದ್ಧವಾದ ಮನಸ್ಸುಳ್ಳವನು, ಶುದ್ಧವಾದ ಅಂತಃಕರಣವುಳ್ಳವನು. हृदयेन सह वर्तते। (पुं०) 2. ವಿದ್ಯಾವಂತ. 3. ಒಳ್ಳೆಯ ಅನುಭವಶಾಲಿ, ರಸಿಕ. "परिष्कुर्वन्त्वर्थान् सहृदयधुरीणाः कतिपये" रसगं०।

**सहोक्ति ಸಹೋಕ್ತಿ** (स्त्री०) ಅರ್ಥಾಲಂಕಾರದ ಒಂದು ಭೇದ. ಸಹೃದಯರ ಹೃದಯಕ್ಕೆ ಆಹ್ಲಾದಕರವಾದ ಸಹಭಾವವು ವರ್ಣಿತವಾದಲ್ಲಿ "ಸಹೋಕ್ತಿ" ಅಲಂಕಾರ. "सहोक्तिः सहभावश्चेद्भासते जनरञ्जनः"। उदा: "दिगन्तमगमत्तस्य कीर्तिः प्रत्यर्थिभिः सह" चन्द्रा०।

**सहोढ ಸಹೋಢ** (पुं०) 1. ಹನ್ನೆರಡು ವಿಧ ಪುತ್ರರಲ್ಲೊಬ್ಬ. ಗರ್ಭಿಣಿಯಾಗಿರುವ ವಿಷಯ ತಿಳಿಯದೆ ಮದುವೆಯಾದ ಹೆಂಗಸಿನಲ್ಲಿ ಜನಿಸಿದವನು ಮದುವೆಯಾದವನ ಪುತ್ರನಾಗುವನು. ಈ ಪುತ್ರನು ಸಹೋಢನು. "या गर्भिणी संस्क्रियते ज्ञाताज्ञातापि वा सती। वोढुः स गर्भो भवति सहोढ इति चोच्यते" मनु० ९-१७३। (वि०) 2. ಕದ್ದ ವಸ್ತುವಿನೊಡನೆ ಇರುವ ಕಳ್ಳ, ಕದ್ದ ವಸ್ತುವಿನೊಡನೆಯೂ ಕಳಲು ಸಾಧನವಾದ ವಸ್ತುವಿನೊಡನೆಯೂ ಸಿಕ್ಕಿಬಿದ್ದ ಕಳ್ಳ. होढेन सह वर्तते। "न होढेन विना चौरं घातयेद्धार्मिको नृपः। सहोढं सोपकरणं घातयेदविचारयन्" मनु० ९-२७०।

**सहोदर ಸಹೋದರ** (पुं०) ಒಡಹುಟ್ಟಿದವನು, ಒಂದೇ ಗರ್ಭದಲ್ಲಿ ಜನಿಸಿದವನು. उदरेण सह वर्तते। समानम् उदरं यस्य इति वा। "सहोदरन्यस्तभरस्तदात्मा रुक्माणि रत्नानि च रौहिणेयः" याद० १३-७८।

**सहोर ಸಹೋರ** (वि०) ಸಾಧು, ಸತ್ಪುರುಷ. सहते सर्वम्—षह (मर्षणे) "ओरन्" (उ० १-६५)।

**सह्य ಸಹ್ಯ** (पुं०) 1. ಸಹ್ಯಾದ್ರಿ, ಸಪ್ತಕುಲ ಪರ್ವತಗಳ ಸಾಲಿನಲ್ಲಿ ಒಂದು ಪರ್ವತ. सह्यते—षह (मर्षणे) "यत्" (३-१-९७)। "असह्यविक्रमः सह्यं दूरान्मुक्त-मुदन्वता" रघु० ४-५२। (न०) 2. ಆರೋಗ್ಯ, ಶರೀರದಲ್ಲಿ ಯಾವ ವ್ಯಾಧಿಯೂ ಇಲ್ಲದಿರುವಿಕೆ. 3. ಪ್ರಿಯವಾದುದು, ಇಷ್ಟವಾದುದು. "ततस्तं प्रत्युवाचाथ मारीचो राक्षसेश्वरम्। किं ते सह्यं मया कार्यं करिष्याम्यवशोऽपि तत्" रामा०। (वि०) 4. ಸಹಿಸಲ್ಪಡುವ. 5. ಅವಶ್ಯವಾಗಿ ಸಹಿಸಬೇಕಾದ. 6. ಸಹಿಸಲು ಸಾಧ್ಯವಾದ. "सह्यः शैलान्तरे पुमान्। सोढव्ये वाच्यलिङ्गः स्यात् आरोग्ये तु नपुंसकम्" मेदि०।

**सा ಸಾ** (स्त्री०) 1. ಗೌರಿ, ಪಾರ್ವತಿ. 2. ಲಕ್ಷ್ಮಿ, ಜಗನ್ಮಾತೆ. "सा च लक्ष्मीर्बुधैः प्रोक्ता गौरी सा च स ईश्वरः" एका०। 3. ಪೂರ್ವೋಕ್ತ, ವಿಷಯಬೋಧಕ ಅಥವಾ ಪ್ರಸಿದ್ಧ ವಿಷಯಬೋಧಕ ತಚ್ಛಬ್ದದ ಸ್ತ್ರೀಲಿಂಗದ ಪ್ರಥಮೈಕ ವಚನದ ರೂಪ. "गिरिशमुपचचार प्रत्यहं सा सुकेशी नियमितपरिखेदा तच्छिरश्चन्द्रपादैः" कुमा० १-६०।

**सांयात्रिक ಸಾಂಯಾತ್ರಿಕ** (पुं०) ಹಡಗಿನ ವರ್ತಕ, ಹಡಗಿನ ವ್ಯಾಪಾರ ಮಾಡುವವನು. संयात्रा द्वीपान्तर-गमनम्—सा प्रयोजनमस्य "ठञ्" (५-१-१०९)। "सांयात्रिकः पोतवणिक्" अम०। "जाते समुद्रेऽपि च पोतभङ्गे सांयात्रिको वाञ्छति तर्तुमेव" पञ्चतं० १-३४५। "सांयात्रिकानावपतोऽभ्यनन्दत्" माघ० ३-७६।

**सांयुगीन ಸಾಂಯುಗೀನ** (वि०) ಯುದ್ಧದಲ್ಲಿ ಚೆನ್ನಾಗಿ ಹೋರಾಡುವ, ಯುದ್ಧದಲ್ಲಿ ಪರಿಣತನಾದ. संयुगे साधुः —संयुग "खञ्" (४-४-९९)। "सांयुगीनो रणे साधुः" अम०। "संयुगे सांयुगीनं तमुद्यतं प्रसहेत कः" कुमा० २-५७।

**सांराविण ಸಾಂರಾವಿಣ** (पुं०) 1. ಎಲ್ಲಾ ಕಡೆಗಳಲ್ಲೂ ಹರಡುವಂತೆ ಕೂಗಿಕೊಳ್ಳುವುದು, ಎಲ್ಲಾ ದಿಕ್ಕುಗಳಿಗೂ ಕೇಳಿಸುವಂತೆ ಶಬ್ದಮಾಡುವುದು. सम् + रु (शब्दे) भावे "इनुण्" (३-३-४४)। संराविन् "अण्" (५-४-१५)। "उत्तालाः कटपूतनाप्रभृतयः सांराविणं कुर्वते" मालती० ५-११। 2. ಉಚ್ಚ ಕಂಠದಿಂದ ಮಾತನಾಡುವುದು. "सांराविणं न कर्तव्यं यावन्नायाति दर्शनम्" भट्टि० ७-४३।

**सांवत्सर ಸಾಂವತ್ಸರ** (पुं०) 1. ಜ್ಯೋತಿಷಿಕ, ಜೋಯಿಸ, ಶುಭವೇಳೆ ಮತ್ತು ಮುಹೂರ್ತಗಳನ್ನು ತಿಳಿದವನು, ಸಂವತ್ಸರದ ಫಲಗಳನ್ನು ತಿಳಿಸುವ ಶಾಸ್ತ್ರವನ್ನು ಅಧ್ಯಯನ ಮಾಡಿದವನು ಮತ್ತು ಚೆನ್ನಾಗಿ ತಿಳಿದವನು. संवत्सरं तज्ज्ञानोपयोगि शास्त्रं वेत्ति अधीते वा—संवत्सर "अण्" (४-२-५९)। "मुहूर्तं तिथिनक्षत्रमृतवश्चायने तथा। सर्वाण्येवाकुलानि स्युर्न स्यात् सांवत्सरो यदि। तस्माद्राज्ञाऽभिगन्तव्यो विद्वान् सांवत्सरोऽग्रणीः। जयं यशः श्रियं भोगान् श्रेयश्च समभीप्सता" बृहत्सं० २-९, १०। (वि०) 2. ಸಂವತ್ಸರ ಸಂಬಂಧವಾದ.

**सांवत्सरिक ಸಾಂವತ್ಸರಿಕ** (वि०) ಪ್ರತಿಸಂವತ್ಸರದಲ್ಲೂ ಬರುವ. संवत्सरे भवः "ठञ्" (४-३-११)।

**सांशयिक ಸಾಂಶಯಿಕ** (वि०) ಸಂಶಯಾತ್ಮ, ಸಂಶಯದಿಂದ ಕೂಡಿದವನು, ಸಂಶಯ ಪಡುವವನು. संशयमापन्नः "ठक्" (५-१-७३)। "सांशयिकः संशयापन्नमानसः" अम०। ಆದರೆ ಸಂಶಯಕ್ಕೆ ಆಸ್ಪದವಾದ ವಿಷಯ "संशयविषयीभूतोऽर्थः" ಎಂದು ಸಿದ್ಧಾನ್ತಕೌಮುದಿ. "संशयाधारे सन्देग्धरि नायं प्रत्ययः" ಎಂದು ಬಾಲಮನೋರಮಾ ವ್ಯಾಖ್ಯಾನ.

**सांसारिक ಸಾಂಸಾರಿಕ** (वि०) ಪ್ರಾಪಂಚಿಕ, ಲೌಕಿಕವಾದ, ಈ ಜನ್ಮದ ಫಲವಾದ. संसारे भवः "ठञ्" (४-३-११)। "आरण्यकाश्च गृहिणश्च रताः स्वधर्मे सांसारिकेषु च सुखेषु वयं रसज्ञाः" उ० रा० २-२२।

**सांसिद्धिक ಸಾಂಸಿದ್ಧಿಕ** (वि०) ಸ್ವಾಭಾವಿಕವಾದ, ಸ್ವಭಾವಸಿದ್ಧವಾದ.

**सांस्थानिक ಸಾಂಸ್ಥಾನಿಕ** (वि०) ಸಂಸ್ಥಾನದಲ್ಲಿ ವ್ಯವಹರಿಸುವವನು. संस्थाने व्यवहरति—संस्थान "ठक्" (४-४-७२)। ಒಂದೇ ಸಂಸ್ಥಾನ (ದೇಶ) ದಲ್ಲಿ ವ್ಯವಹಾರ ನಡಸುವವನು ಸಾಂಸ್ಥಾನಿಕ.

**साकम् ಸಾಕಮ್** (अव्य०) 1. ಸಂಗಡ, ಕೂಡ, ಒಂದಿಗೆ, ಜೊತೆಯಲ್ಲಿ. सह अकनम्—"अम्" सहस्य सादेशः। आभीक्ष्ण्ये "णमुल्" (३-४-२२) वा। "अन्योन्यं स्पर्धमाना न च गृहविभवैः स्वामिनो मुक्तशङ्काः साकं स्त्रीभिर्भजन्ते विधिमभिलषितं पार्वणं पौरमुख्याः" मुद्रा० ३-१०। 2. ಏಕಕಾಲದಲ್ಲಿ, ಒಂದೇ ಸಮಯದಲ್ಲಿ.

**साकल्य ಸಾಕಲ್ಯ** (न०) ಸಮುದಾಯ, ಸಂಪೂರ್ಣತೆ, ಮೊತ್ತ, ಒಟ್ಟು. सकलस्य भावः "ष्यञ्" (५-२-८०)। "यो यदैषां गुणो देहे साकल्येनातिरिच्यते। स तदा तद्गुणप्रायं तं करोति शरीरिणम्" मनु० १२-२५।

**साकाङ्क्ष ಸಾಕಾಂಕ್ಷ** (वि०) 1. ಅಪೇಕ್ಷೆಯಿಂದ ಕೂಡಿದವನು, ಆಸೆಪಡುವವನು. आकाङ्क्षया सह वर्तते। 2. ಅಪೇಕ್ಷಿಸುವ, ಇನ್ನೊಂದರ ಸಂಬಂಧವು ಅವಶ್ಯವಾಗಿರಬೇಕಾದ. चैत्रस्य गुरुकुलम् मैत्रस्य दासभार्या ಇತ್ಯಾದಿ.

**साकार ಸಾಕಾರ** (वि०) 1. ಒಂದು ಆಕಾರವನ್ನು ಹೊಂದಿರುವ, ಒಂದು ರೂಪವನ್ನು ಪಡೆದಿರುವ. आकारेण सह वर्तते। 2. ಸುಂದರ ರೂಪವುಳ್ಳವನು, ಲಕ್ಷಣವಾದ ಶರೀರ ಸಂಪತ್ತುಳ್ಳವನು. "साकारो निःस्पृहो वाग्मी नानाशास्त्रविचक्षणः। परचित्तावगन्ता च राज्ञो दूतः स इष्यते" पञ्चतं० ३-८६।

**साकूत ಸಾಕೂತ** (वि०) 1. ಅರ್ಥಗರ್ಭಿತವಾದ, ಅಂತರಾರ್ಥವುಳ್ಳ, ಒಂದು ಆಶಯದಿಂದ ಕೂಡಿದ. आकूतेन सह वर्तते। (अव्य०) 2. ಅರ್ಥಗರ್ಭಿತವಾಗಿ, ಅಭಿಪ್ರಾಯದಿಂದ ಕೂಡಿ, ಭಾವಗರ್ಭಿತವಾಗಿ, ಅರ್ಥಸೂಚನೆಯೊಡನೆ.

**साकेत ಸಾಕೇತ** (न०) 1. ಅಯೋಧ್ಯಾ ನಗರ, ಕೋಸಲ ದೇಶದ ರಾಜಧಾನಿ. "जनस्य साकेतनिवासिनस्तौ द्वावप्यभूतामभिनन्द्यसत्त्वौ" रघु० ५-३१। (पुं०ब०व०) 2. ಸಾಕೇತ ನಗರದ ಜನರು, ಅಯೋಧ್ಯಾ ನಗರದಲ್ಲಿ ವಾಸಿಸುವ ಜನರು.

**साक्षात् ಸಾಕ್ಷಾತ್** (अव्य०) 1. ಪ್ರತ್ಯಕ್ಷವಾಗಿ, ಕಣ್ಣೆದುರಿಗೆ. अक्षेण सह वर्तते साक्षः— साक्षमतति— अत (सातत्यगमने) "क्विप्" (३-२-१७८)। "साक्षात्दृष्टोऽसि न पुनर्विद्मस्त्वां वयमञ्जसा" कुमा० ६-२२। 2. ಸ್ವಸ್ವರೂಪದಿಂದ, ನಿಜರೂಪದಿಂದ. "साक्षात्प्रियामुपगतामपहाय पूर्वं चित्रार्पितां पुनरिमां बहुमन्यमानः" शाकु० ६-१६। 3. ಮುಖತಃ, ನೇರವಾಗಿ, ಪ್ರತ್ಯಕ್ಷವಾಗಿ. "तत्साक्षात्प्रतिषेधः कोपाय शिवस्त्वयमुपायः" मालती० १-१४। 4. ಸದೃಶ, ತುಲ್ಯ.

**साक्षात्कार ಸಾಕ್ಷಾತ್ಕಾರ** (पुं०) 1. ಪ್ರತ್ಯಕ್ಷಾತ್ಮಕ ಜ್ಞಾನ. 2. ಪ್ರತ್ಯಕ್ಷವಾಗುವುದು.

**साक्षिन् ಸಾಕ್ಷಿನ್** (पुं०) 1. ಮಹಾವಿಷ್ಣು. "सोऽश्नुते सर्वान् कामान् सह। ब्रह्मणा विपश्चिता"। एवं मुक्तानानन्दयन् स्वयमपि तृप्यन् साक्षात्करोति इति साक्षी। साक्षात् इत्यव्ययात् "साक्षाद्द्रष्टरि" (५-२-९१) इति "इनिः"। "स्वयमानन्दयन् तृप्यन् साक्षी साक्षात्करोति सः" इति निरुक्तिः। "अव्ययः पुरुषः साक्षी" वि० स०। (वि०) 2. ನೇರವಾಗಿ ನೋಡಿದವನು, ಎದುರಿಗೆ ನೋಡಿದವನು, ಪ್ರತ್ಯಕ್ಷವಾಗಿ ನೋಡಿ ಸತ್ಯಾಂಶ ತಿಳಿದವನು. अक्षेण इन्द्रियेण सह वर्तते यत् तत् साक्षम्। साक्षमस्यास्ति इति साक्षी—साक्ष "इनिः" (५-२-११५)। "सभान्तः साक्षिणः प्राप्तानर्थिप्रत्यर्थिसन्निधौ। प्राड्विवाकोऽनुयुञ्जीत विधिनानेन सान्त्वयन्" मनु० ८-७९। 3. ಸ್ವರೂಪದಿಂದ ಅನುಸಂಧಾನ ಮಾಡುವವನು.

**साक्ष्य ಸಾಕ್ಷ್ಯ** (न०) ಸಾಕ್ಷಿಯ ಪ್ರಮಾಣ ವಚನ, ಸಾಕ್ಷಾತ್ತಾಗಿ ನೋಡಿ ತಿಳಿದುದನ್ನು ರುಜುವಾತುಪಡಿಸುವುದು. साक्षिणो भावः कर्म वा "ष्यञ्" (५-१-१२४)। साक्षिणि भवम् "यत्" (४-३-५४) वा। "तमेव चाधाय विवाहसाक्ष्ये वधूवरौ सङ्गमयांचकार" रघु० ७-२०। "सत्यं साक्ष्ये ब्रुवन् साक्षी लोकानाप्नोति पुष्कलान्" मनु० ८-८१।

**सागर ಸಾಗರ** (पुं०) 1. ಸಮುದ್ರ, ಕಡಲು. सगरस्य राज्ञोऽयम् "अण्" (४-३-१२०)। "यच्छालमुत्तुङ्गतया विजेतुं दूरादुदस्थीयत सागरस्य" माघ० ३-४०। 2. ಸಗರಚಕ್ರವರ್ತಿಯ ಮಗ. सगरस्यापत्यं पुमान् "अण्" (४-१-९२)। 3. ನಾಲ್ಕು ಸಂಖ್ಯೆ. 4. ಸಪ್ತಸಂಖ್ಯೆ. 5. ಹತ್ತು ಪದ್ಮ ಸಂಖ್ಯೆ, १००००००००००००००.

**सागरगामिनी ಸಾಗರಗಾಮಿನೀ** (स्त्री०) 1. ಸಮುದ್ರವನ್ನು ಸೇರುವ ನದಿ, ಹೊಳೆ, ಗಂಗಾನದಿ ಮೊದಲಾದುದು. सागरं गच्छति—गम्लृ (गतौ) "णिनिः" (३-१-१३४)। 2. ಸಮುದ್ರವನ್ನು ಸೇರುವ. "महीधरं मार्गवशादुपेतं स्रोतोवहा सागरगामिनीव" रघु० ६-५२।

**सागरनेमि ಸಾಗರನೇಮಿ** (स्त्री०) ಪೃಥ್ವಿ, ಭೂಮಿ. सागरो नेमिरिव यस्याः। **—मेखला —ಮೇಖಲಾ.**

**सागराम्बरा ಸಾಗರಾಂಬರಾ** (स्त्री०) ಪೃಥ್ವಿ, ಭೂಮಿ. सागरः अम्बरमिव यस्याः। "निधानगर्भामिव सागराम्बरां शमीमिवाभ्यन्तरलीनपावकाम्" रघु० ३-९।

**साङ्कर्य ಸಾಂಕರ್ಯ** (न०) ಒಂದಕ್ಕೊಂದು ಬೆರೆತಿರುವುದು, ಹಾಲು ಮತ್ತು ನೀರಿನಂತೆ ಮಿಶ್ರವಾಗಿರುವುದು. सङ्करस्य भावः "ष्यञ्"।

**साङ्केतिक ಸಾಂಕೇತಿಕ** (वि०) ಸಂಪ್ರದಾಯಾನುಸಾರ ನಡಸುವ, ಪದ್ಧತಿಯಂತೆ ಆಚರಿಸುವ.

**साङ्क्रामिक ಸಾಂಕ್ರಾಮಿಕ** (वि०) ಒಂದು ಕಡೆಯಿಂದ ಇನ್ನೊಂದು ಕಡೆಗೆ ಹೋಗಿ ಸೇರುವ, ಒಂದು ಕಡೆಯಿಂದ ಇನ್ನೊಂದು ಕಡೆಗೆ ಹೋಗಿ ಸಂಬಂಧ ಹೊಂದುವ (ವ್ಯಾಧಿ). सङ्क्रामः प्रयोजनं कारणमस्य "ठक्" (५-१-१०९)। प्रयोजनं फलं कारणं च सि० कौ०। ರೋಗವು ಒಬ್ಬನಿಂದ ಇನ್ನೊಬ್ಬನಿಗೆ ಹೋಗಿ ಸೇರುವುದು ಸಾಂಕ್ರಾಮಿಕ. ಇಂತಹ ರೋಗಕ್ಕೆ ರೋಗದ ಸಂಕ್ರಾಮವೇ ಕಾರಣವಾದುದರಿಂದ ಸಾಂಕ್ರಾಮಿಕವೆಂದು ಹೆಸರು. ಪರಸ್ಪರ ಶರೀರ ಸ್ಪರ್ಶ ರೋಗಿಯ ನಿಶ್ವಾಸ ಸಹಭೋಜನ ಸಹಶಯ್ಯೆ ಏಕಾಸನದಲ್ಲಿ ಕೂಡುವುದು ರೋಗಿಯ ವಸ್ತ್ರಾದಿಗಳನ್ನು ಧರಿಸುವುದು ಇತ್ಯಾದಿಗಳಿಂದ ಕುಷ್ಠ ಜ್ವರ ಕ್ಷಯ ನೇತ್ರಾಭಿಷ್ಯಂದ (ಕಣ್ಣು ಸೋರುವುದು) ಔಪಸರ್ಗಿಕ ರೋಗಗಳು (ಪೂರ್ವೋತ್ಪನ್ನವ್ಯಾಧಿಗಳಿಂದ ಉಂಟಾಗುವ ವ್ಯಾಧಿ) ಒಬ್ಬನಿಂದ ಇನ್ನೊಬ್ಬನ ಶರೀರವನ್ನು ಪ್ರವೇಶಿಸುವುವು.

"प्रसङ्गाद्गात्रसंस्पर्शात् निश्वासात् सहभोजनात्। सहशय्यासनाच्चापि वस्त्रमाल्यानुलेपनात्। कुष्ठं ज्वरश्च शोषश्च नेत्राभिष्यन्द एव च। औपसर्गिकरोगाश्च सङ्क्रामन्ति नरान्नरम्" सुश्रुत० निदान० ६-३३, ३४।

**साङ्ख्य ಸಾಂಖ್ಯ** (पुं०) 1. ಸಾಂಖ್ಯ ಶಾಸ್ತ್ರವನ್ನು ತಿಳಿದವನು, ಆತ್ಮಜ್ಞಾನ ಶಾಸ್ತ್ರವನ್ನು ತಿಳಿದವನು, ಜ್ಞಾನನಿಷ್ಠ. सङ्ख्या बुद्धिः — तद्युक्ताः साङ्ख्याः। (न०) 2. ಆತ್ಮಜ್ಞಾನಶಾಸ್ತ್ರ, ಜ್ಞಾನಯೋಗ, ಷಡ್ದರ್ಶನಗಳಲ್ಲೊಂದಾದ ಸಾಂಖ್ಯದರ್ಶನ, ಸಮ್ಯಗ್ದರ್ಶನ. सङ्ख्या सम्यग्ज्ञानम्—साऽस्त्यत्र। सङ्ख्यया बुद्ध्या अवधारणीयम् आत्मतत्त्वम् साङ्ख्यम्, तदवधारणरूपं साङ्ख्यम्। आत्मज्ञानशास्त्रम्। "बुद्धिर्मतिश्च मेधा सङ्ख्या संवित्तिरुपलब्धिः"। ವಸ್ತುಗಳನ್ನು ಸಂಖ್ಯೆಮಾಡಿ ತತ್ತ್ವಗಳು ಇಪ್ಪತ್ತೈದು ಪದಾರ್ಥಗಳು ಅರುವತ್ತು ಎಂದು ನಿರ್ಣಯಿಸಿರುವುದರಿಂದ ಇವರಿಗೆ (ಈ ಶಾಸ್ತ್ರಪ್ರವರ್ತಕರಿಗೆ) ಸಾಂಖ್ಯರೆಂದು ಪ್ರಸಿದ್ಧಿಯುಂಟಾಯಿತು. ಸಂಖ್ಯಾಪದಕ್ಕೆ ಜ್ಞಾನವೆಂಬ ಅರ್ಥವಿರುವುದರಿಂದ ಸಾಂಖ್ಯರೆಂದರೆ ಜ್ಞಾನಶಾಸ್ತ್ರವಾದಿಗಳು ಎಂದು ಹೆಸರಾಯಿತು. ಇವರು ಯುಕ್ತಿಯಿಂದಲೂ ಕಪಿಲಮಹರ್ಷಿಯ ಆಗಮಗ್ರಂಥಮೂಲಕವಾಗಿಯೂ ಸಿದ್ಧಾಂತಸ್ಥಾಪನೆ ಮಾಡಿರುತ್ತಾರೆ. ಆದುದರಿಂದ ಈ ಶಾಸ್ತ್ರಕ್ಕೆ ಕಾಪಿಲಸಿದ್ಧಾಂತವೆಂದು ಹೆಸರಾಯಿತು. ದೇವಹೂತಿಪುತ್ರನಾದ ಕಪಿಲಮಹರ್ಷಿ ಮತ್ತು ಯೋಗಶಾಸ್ತ್ರಪ್ರವರ್ತಕ ಪತಂಜಲಿ ಇವರಿಬ್ಬರೂ ಆಸ್ತಿಕರು. "पञ्चमः कपिलो नाम सिद्धेशः कालविप्लुतम्। प्रोवाचासुरये साङ्ख्यं तत्त्वज्ञानविनिर्णयम्" भाग० १-३-१०। ಈಶ್ವರವಾದಿಗಳಾದ ಕೆಲವು ದರ್ಶನಕಾರರು ನಿತ್ಯಸರ್ವಜ್ಞನಾದ ಒಬ್ಬ ವ್ಯಕ್ತಿಯನ್ನು ಅಂಗೀಕರಿಸಿ ಅವನೇ ಅನಂತ ಕೋಟಿಬ್ರಹ್ಮಾಂಡಗಳ ಸೃಷ್ಟಿಸ್ಥಿತಿನಾಶಗಳಿಗೆ ಕಾರಣನೆಂದು ಅಭಿಪ್ರಾಯಪಡುವರು. ನಿರೀಶ್ವರವಾದಿಗಳಾದ ಕೆಲವು ಸಾಂಖ್ಯರು ಪ್ರತಿಕಲ್ಪಕ್ಕೂ ಪ್ರಪಂಚನಿರ್ವಾಹಕರಾದ ಕಪಿಲಾದಿ ಯೋಗಿಗಳನ್ನು ಅಂಗೀಕರಿಸಿ ಅವರಿಂದ ಪ್ರಪಂಚದ ಅನುಗ್ರಹವುಂಟಾಗುವುದೆಂದು ಹೇಳುತ್ತಾರೆ. ಶಾಶ್ವತನಾದ ಒಬ್ಬನೇ ಪರಮೇಶ್ವರನಿದ್ದರೆ ಎಂತಹ ಜ್ಞಾನಿಗೂ ಅವನ ವಿಷಯದಲ್ಲಿ ಅಸೂಯೆ ಹುಟ್ಟುವುದೆಂದೂ ನಿತ್ಯೇಶ್ವರನಿಲ್ಲದಿದ್ದರೆ ಯಾರು ಬೇಕಾದರೂ ಸಿದ್ಧರಾಗಿ ಈಶ್ವರರಾಗಬಹುದೆಂದೂ ಈ ನಿರೀಶ್ವರವಾದಿಗಳು ಅಭಿಪ್ರಾಯಪಡುವರು. ಅಣಿಮಾದಿ ಸಿದ್ಧಿಯುಳ್ಳ ಕಪಿಲಮಹರ್ಷಿಯು ಲೋಕಕಲ್ಯಾಣಕ್ಕಾಗಿ ವೇದಾದಿ ಆಗಮಗಳನ್ನು ಪ್ರಕಾಶಪಡಿಸಿದಕಾರಣ ಈಶ್ವರನ ಸ್ಥಾನದಲ್ಲಿರುವನು. ಇಂತಹ ಸಿದ್ಧಪುರುಷರು ಪ್ರತಿಕಲ್ಪಕ್ಕೂ ಒಬ್ಬರು ಬರುವರು. ಶಾಶ್ವತವಾದ ಒಬ್ಬ ಈಶ್ವರನನ್ನು ಇವರು ಅಂಗೀಕರಿಸದಿರುವುದರಿಂದ ಇವರು ನಿರೀಶ್ವರವಾದಿಗಳಾದರು. ಇವರಲ್ಲಿ ಕೆಲವರು ಶಾಶ್ವತನಾದ ಈಶ್ವರನನ್ನು ಅಂಗೀಕರಿಸಿರುವುದರಿಂದ ಸೇಶ್ವರಸಾಂಖ್ಯರಾದರು. ಇವರೇ ಪಾತಂಜಲಯೋಗ ಸಿದ್ಧಾಂತದವರು.

**ತತ್ತ್ವಗಳು :** ಪ್ರಕೃತಿ ಮಹತ್ ಅಹಂಕಾರ ಪಂಚಜ್ಞಾನೇಂದ್ರಿಯಗಳು ಪಂಚಕರ್ಮೇಂದ್ರಿಯಗಳು ಮನಸ್ಸು ಪಂಚತನ್ಮಾತ್ರಗಳು ಆಕಾಶಾದಿ ಪಂಚಭೂತಗಳು ಜೀವಾತ್ಮ ಇವು ಇಪ್ಪತ್ತೈದು ತತ್ತ್ವಗಳು. ಇವನ್ನು ಭೂತಪಂಚಕ ತನ್ಮಾತ್ರಪಂಚಕ ಜ್ಞಾನೇಂದ್ರಿಯಪಂಚಕ ಕರ್ಮೇಂದ್ರಿಯ ಪಂಚಕ ಮತ್ತು ಅವಶಿಷ್ಟಪಂಚಕಗಳೆಂದು ಐದು ಪಂಚಕಗಳಾಗಿ ಹೇಳಿರುವರು. ಇವುಗಳಲ್ಲಿ ಮೂಲ ಪ್ರಕೃತಿಯು ಮೊದಲನೆಯದು. ಇದಕ್ಕೆ ಪ್ರಧಾನವೆಂದು ಹೆಸರು. ಇದು ಸತ್ತ್ವರಜಸ್ತಮೋಗುಣಾತ್ಮಕವಾಗಿರುವುದರಿಂದ ತ್ರಿಗುಣವೆಂದು ಹೇಳುತ್ತಾರೆ.

**ತತ್ತ್ವಜ್ಞಾನ :** ಮೂಲ ಪ್ರಕೃತಿಯಲ್ಲಿರುವ ಗುಣತ್ರಯವೂ ಸಕಲ ವಸ್ತುಗಳಲ್ಲಿಯೂ ಇದ್ದು ಸತ್ತ್ವದಿಂದ ಸೌಖ್ಯವೂ ರಜಸ್ಸಿನಿಂದ ದುಃಖವೂ ತಮಸ್ಸಿನಿಂದ ಮೋಹವೂ ಉಂಟಾಗುವುವು. ರಜೋಗುಣದಿಂದ ಸಂಭವಿಸುವ ಆಧ್ಯಾತ್ಮಿಕ ಆಧಿಭೌತಿಕ ಆಧಿದೈವಿಕವೆಂಬ ದುಃಖವೇ ತಾಪತ್ರಯವೆನ್ನಲ್ಪಡುವುದು. ವೈದ್ಯಶಾಸ್ತ್ರ ನೀತಿಶಾಸ್ತ್ರ ಮತ್ತು ಮಂತ್ರಶಾಸ್ತ್ರಗಳು ಈ ಮೂರು ವಿಧವಾದ ದುಃಖಗಳ ನಿವೃತ್ತಿಗೆ ಉಪಾಯಗಳು. ಅನೇಕಜನ್ಮಾಭ್ಯಾಸ ಮತ್ತು ಆಯಾಸಗಳಿಂದ ಪರಿಪೂರ್ಣವಾದ ತತ್ತ್ವಜ್ಞಾನವೇ ಅವಿವೇಕಜನ್ಯವಾದ ಈ ದುಃಖದ ಆತ್ಯಂತಿಕ ನಿವೃತ್ತಿಗೆ ಉಪಾಯವು.

**ಪುರುಷಾರ್ಥ :** ಪುರುಷಾರ್ಥವೆಂದರೆ ಸ್ವಾರ್ಥ. ಪ್ರಕೃತಿಯೆಂಬ ಮೂಲತತ್ತ್ವವು ಸ್ವಾರ್ಥಕ್ಕಾಗಿ ಯಾವ ವ್ಯಾಪಾರವನ್ನೂ ಮಾಡುವುದಿಲ್ಲ. ಪುರುಷಾರ್ಥಕ್ಕಾಗಿಯೂ ಪರಾರ್ಥಕ್ಕಾಗಿಯೂ ಮಾಡುವುದು. ಗೃಹ ವಸ್ತ್ರ ಪಾತ್ರೆ ಶಯನ ಮೊದಲಾದ ವಸ್ತುಗಳ ಉಪಯೋಗವು ಪರಾರ್ಥವೇ ಹೊರತು ಅವುಗಳಲ್ಲಿ ಸ್ವಾರ್ಥವಿಲ್ಲ. ಆದುದರಿಂದ ಪುರುಷನೆಂಬ ಜೀವಾತ್ಮನು ಇರಬೇಕು. ಸರ್ವವೂ ದೃಶ್ಯವಾಗಿರುವುದರಿಂದ ದೃಷ್ಟೃ ಒಬ್ಬನಿದ್ದೇ ಇರಬೇಕು. ಈ ಜೀವಾತ್ಮನು ಅವಿದ್ಯೆ ಮೊದಲಾದ ಐದು ವಿಧ ಕ್ಲೇಶಗಳಿಗೂ ಒಳಗಾಗುವನು. ["अविद्या" ಪದದಲ್ಲಿ ನೋಡಿ.] ಅವನ ಭೋಗಕ್ಕೂ ಮೋಕ್ಷಕ್ಕೂ ಸಕಲ ವಸ್ತುಗಳೂ ಇರುವುವು. ಪ್ರಕೃತಿ ಪುರುಷ ವಿವೇಕಖ್ಯಾತಿಯಿಂದ

ಅವಿವೇಕಖ್ಯಾತಿಮೂಲಕ ಉತ್ಪನ್ನವಾದ ಅಹಂಕಾರ ಮಮಕಾರಗಳನ್ನು ಸಂಪೂರ್ಣವಾಗಿ ಪರಿಹರಿಸಿಕೊಂಡು ವಿವೇಕಖ್ಯಾತಿಯಲ್ಲೂ ಮಮಕಾರವಿಲ್ಲದೆ ಅದನ್ನು ಪರಿತ್ಯಜಿಸಿ ಜೀವಾತ್ಮನು ಮುಕ್ತನಾಗುವನು ಎಂದು ಇವರ ಸಿದ್ಧಾಂತ. ಅಚೇತನವಾದ ಪ್ರಕೃತಿಯು (ಪ್ರಧಾನವು) ಪುರುಷ ರೂಪಚೇತನ ಸಂಬಂಧದಿಂದ ಮಹದಾದಿ ರೂಪ ವಾಗಿ ಪರಿಣಾಮಹೊಂದುವುದು. ಈ ಪ್ರಕೃತಿ ಪುರುಷ ಸಂಬಂಧವು ಪಂಗು ಮತ್ತು ಅಂಧ (ಹೆಳವ ಮತ್ತು ಕುರುಡ) ರಂತೆ ಪರಸ್ಪರ ಸಾಪೇಕ್ಷವಾಗಿ ಸೃಷ್ಟಿ ಮೊದಲಾದ ಕಾರ್ಯವನ್ನು ನಡಸುವುದು. "पुरुषस्य दर्शनार्थं कैवल्यार्थं तथा प्रधानस्य। पङ्ग्वन्धवदुभयोरपि सम्बन्धस्तत्कृतः सर्गः" साङ्ख्यकारिका।

**साङ्ख्यदर्शन ಸಾಂಖ್ಯದರ್ಶನ** (ನಂ) ಆರು ವಿಧ ಆಸ್ತಿಕ ದರ್ಶನಗಳಲ್ಲೊಂದು ದರ್ಶನ. ["साङ्ख्य" ಪದದಲ್ಲಿ ನೋಡಿ.]

**साङ्ख्ययोग ಸಾಂಖ್ಯಯೋಗ** (ಪುಂ) ಜ್ಞಾನಯೋಗ, ಬ್ರಹ್ಮವಿದ್ಯೆ. साङ्ख्यैरुक्तो योगः।

**साङ्ग ಸಾಂಗ** (ವಿಂ) 1. ಅಂಗಗಳಿಂದಕೂಡಿದ. 2. ಎಲ್ಲಾ ಭಾಗಗಳಿಂದಲೂ ಪೂರ್ಣವಾದ. अङ्गैः सह वर्तते।

**साङ्ग्रामिक ಸಾಂಗ್ರಾಮಿಕ** (ಪುಂ) 1. ಯುದ್ಧದಲ್ಲಿ ಕುಶಲ ನಾದವನು, ಯುದ್ಧಮಾಡುವುದರಲ್ಲಿ ನಿಪುಣನಾದವನು. सङ्ग्रामाय प्रभवति—"ठञ्" (५-१-१०१)। (ವಿಂ) 2. ಸಂಗ್ರಾಮ ಸಂಬಂಧವಾದ, ಯುದ್ಧಕ್ಕೆ ಸಂಬಂಧಿಸಿದ. "एष साङ्ग्रामिको न्यायः एष धर्मः सनातनः" उ० रा० ५-२२।

**साचि ಸಾಚಿ** (ಅವ್ಯಂ) ತಿರ್ಯಕ್ಕಾಗಿ, ವಕ್ರವಾಗಿ, ಅಡ್ಡ ವಾಗಿ. षच (समवाये) "इण्" (वा० ३-३-१०८)। "साचि लोचनयुगं नमयन्ती रुन्धती दयितवक्षसि पातम्" किरा० ९-४४।

**साचिव्य ಸಾಚಿವ್ಯ** (ನಂ) ಸಚಿವನ ಕಾರ್ಯ ಮತ್ತು ಸಚಿವತ್ವ. सचिवस्य भावः कर्म वा (५-१-१२४)। "चन्द्रोऽपि साचिव्यमिवास्य कुर्वन् तारागणैर्मध्यगतो विराजन्" रामा०।

**साचीकृत ಸಾಚೀಕೃತ** (ವಿಂ) ವಕ್ರವಾಗಿ ಮಾಡಲ್ಪಟ್ಟ, ತಿರ್ಯಕ್ಕಾಗಿ ಮಾಡಲ್ಪಟ್ಟ. असाचि साचि कृतम् "च्विः" (५-४-५०)। दीर्घः (७-४-२६)। "प्रालम्बमुत्कृष्य यथावकाशं निनाय साचीकृतचारुवक्त्रः" रघु० ६-१४।

**साजात्य ಸಾಜಾತ್ಯ** (ನಂ) ಒಂದೇ ಜಾತಿಯವನಾಗಿರುವಿಕೆ. ಸಮಾನ ವರ್ಣದವನಾಗಿರುವಿಕೆ. समाना जातिः—सजातेर्भावः "ष्यञ्" (५-१-१२४)।

**साटोप ಸಾಟೋಪ** (ವಿಂ) 1. ದರ್ಪದಿಂದ ಕೂಡಿದ, ಅಹಂಕಾರದಿಂದ ಕೂಡಿದ. आटोपेन सह वर्तते। 2. ಆಡಂಬರಸಹಿತನಾದ. 3. ಸಡಗರದೊಡನೆ ಕೂಡಿರುವ. (ಅವ್ಯಂ) 4. ದರ್ಪದೊಡನೆ. 5. ಆಡಂಬರ (ಪ್ರದರ್ಶನ) ದೊಡನೆ. 6. ಸಡಗರದೊಡನೆ, ಸಂರಂಭದೊಡನೆ. "साटोपमुर्वीमनिशं नदन्तो यैः प्लावयिष्यन्ति समन्ततोऽमी" ಮಾಘಂ ३-७४।

**सात ಸಾತ** (ನಂ) ಸುಖ.

**सातत्य ಸಾತತ್ಯ** (ನಂ) ಎಡೆಬಿಡದಿರುವುದು, ಅವಿಚ್ಛಿನ್ನ ವಾಗಿರುವುದು, ನಿರಂತರವಾಗಿರುವುದು. सततस्य भावः "ष्यञ्" (५-१-१२४)।

**सातला ಸಾತಲಾ** (ಸ್ತ್ರೀಂ) ಕೆಂಪು ಹಾಲಿನ ಮುಂಡಕಳ್ಳಿ.

**साति ಸಾತಿ** (ಸ್ತ್ರೀಂ) 1. ದಾನ, ಕೊಡುಗೆ. षणु (दाने) "क्तिन्" (३-३-९४)। आत्वम् (५-४-४२)। 2. ಸಂಪತ್ತು, ಐಶ್ವರ್ಯ. षण (सम्भक्तौ) "क्तिन्" (३-३-९४)। आत्वम् (६-४-४२)। 3. ಅವಸಾನ, ಕೊನೆ. "सातिस्त्ववसाने स्यात्" अम०। "सातिदानावसानयोः" अम०। 4. ತೀವ್ರವಾದ ವೇದನೆ.

**सात्त्विक ಸಾತ್ತ್ವಿಕ** (ಪುಂ) 1. ವಿಷ್ಣು. धर्मज्ञानवैराग्यैश्वर्यरूपफलनियमनेन च सत्त्वमर्हति—"ठक्" (५-१-६३)। "विज्ञानैश्वर्यवैराग्यधर्मरूपफलं स्वयम्। नियम्यार्हति सत्त्वं यः सात्त्विकः परिकीर्तितः" इति निरुक्तिः। "सत्त्ववान् सात्त्विकः सत्यः सत्यधर्मपरायणः" वि० स०। 2. ಸತ್ತ್ವಗುಣದ ಪ್ರಾಚುರ್ಯದಿಂದ ಮನಸ್ಸಿನಲ್ಲಿ ಉಂಟಾಗುವ ಭಾವ. सत्त्वेन निर्वृत्तः "ठञ्" (५-१-७९)। "सत्त्वोत्कटे मनसि ये प्रभवन्ति भावास्ते सात्त्विका इति विदुर्मुनिपुङ्गवास्ते"। "ये चैव सात्त्विका भावा राजसास्तामसाश्च ये। मत्त एवेति तान् विद्धि न त्वहं तेषु ते मयि" गीता ७-१२। 3. ಸತ್ತ್ವಗುಣದಿಂದ ಉಂಟಾಗುವ ನಾಯಕನ ಗುಣಗಳು. सत्त्वेन मनोवृत्त्या निर्वृत्तः "ठञ्"। (1) शोभा (2) विलासः (3) माधुर्यम् (4) गाम्भीर्यम् (5) धैर्यम् (6) तेजः (7) ललितम् ಮತ್ತು (8) औदार्यम् ಇವು ನಾಯಕನ ಎಂಟು ಸಾತ್ತ್ವಿಕ ಗುಣಗಳು. "शोभा विलासो माधुर्यं गाम्भीर्यं धैर्यतेजसी। ललितौदार्यमित्यष्टौ सत्त्वजाः पौरुषा गुणाः" सा० द०

३-५०। 4. ಸತ್ತ್ವಗುಣವಿಕಾರಭೂತವಾದ ನಾಯಿಕಾ ನಾಯಕ ಸಾಮಾನ್ಯವಾದ ಸಾತ್ತ್ವಿಕಗುಣಗಳು (1) स्तम्भ: (2) स्वेद: (3) रोमाञ्च: (4) स्वरभङ्ग: (5) वेपथु: (6) वैवर्ण्यम् (7) अश्रु ಮತ್ತು (8) प्रलय:। "तद्भूरिसात्त्विकविकारमपास्तधैर्यमाचार्यकं विजयि मान्मथमाविरासीत्" मालती० १-२९। (नं०)5. ಸಾತ್ತ್ವಿಕ ಶಾಸ್ತ್ರ, ಮಹಾವಿಷ್ಣು ವಿಷಯಕ ಶಾಸ್ತ್ರ. "यानि सत्त्वपदं विष्णुं वदन्ति परमेश्वरम्। तानि शास्त्राणि सर्वाणि सात्त्विकानि मतानि वै" वे० कौ०। (वि०)6. ಸತ್ತ್ವ ಗುಣದಿಂದ ಕೂಡಿದವನು, ಶುದ್ಧವಾದ ಸತ್ತ್ವಗುಣವುಳ್ಳವನು. "यजन्ते सात्त्विका देवान् यक्षरक्षांसि राजसा:। प्रेतान् भूतगणांश्चान्ये यजन्ते तामसा जना:" गीता १७-४।

**ಸಾತ್ತ್ವಿಕ ಕರ್ಮ**: ಅಭಿಮಾನ ರಾಗದ್ವೇಷಾದಿಗಳನ್ನು ಬಿಟ್ಟು ಫಲಾಪೇಕ್ಷೆಯಿಲ್ಲದೆ ಮಾಡುವ ಕರ್ಮ. "नियतं सङ्गरहितमरागद्वेषत: कृतम्। अफलप्रेप्सुना कर्म यत्तत्सात्त्विकमुच्यते" गीता १८-२३।

**ಸಾತ್ತ್ವಿಕ ತಪಸ್ಸು**: ಪರಮಪುರುಷನ ಆರಾಧನೆಯೆಂದು ತಿಳಿದು ಫಲಾಭಿಸಂಧಿಯಿಲ್ಲದೆ ಶ್ರದ್ಧೆಯಿಂದ ಆಚರಿಸುವ ತಪಸ್ಸು. "श्रद्धया परया तप्तं तपस्तत्त्रिविधं नरै:। अफलाकाङ्क्षिभिर्युक्तै: सात्त्विकं परिचक्षते" गीता १७-१७।

**ಸಾತ್ತ್ವಿಕ ದಾನ**: ದೇಶಕಾಲಪಾತ್ರಗಳನ್ನರಿತು ಪ್ರತ್ಯುಪಕಾರವನ್ನಪೇಕ್ಷಿಸದೆ ಮಾಡುವ ದಾನ. "दातव्यमिति यद्दानं दीयतेऽनुपकारिणे। देशे काले च पात्रे च तद्दानं सात्त्विकं स्मृतम्" गीता १७-२०।

**ಸಾತ್ತ್ವಿಕಾಹಾರ**: ಆಯುಸ್ಸು ಬಲ ಆರೋಗ್ಯ ಸುಖ ಸಂತೋಷ ಇವನ್ನು ಅಧಿಕಗೊಳಿಸುವ ಮತ್ತು ಆಸ್ವಾದ್ಯ, ಸ್ನಿಗ್ಧ ಮತ್ತು ರಮಣೀಯವಾದ ಆಹಾರ. "आयु:सत्त्वबलारोग्यसुखप्रीतिविवर्धना:। रस्या: स्निग्धा: स्थिरा हृद्या आहारा: सात्त्विकप्रिया:" गीता १७-८।

**सात्त्विकी ಸಾತ್ತ್ವಿಕೀ** (स्त्री०) ದುರ್ಗಾದೇವಿ.

**सात्यकि ಸಾತ್ಯಕಿ** (पुं०) ಯದುವಂಶದ ಸತ್ಯಕನ ಪುತ್ರ. ಇವನಿಗೆ ಯುಯುಧಾನನೆಂದು ಹೆಸರು.

**सात्यवत ಸಾತ್ಯವತ** (पुं०) ಸತ್ಯವತೀಪುತ್ರನಾದ ವ್ಯಾಸ ಮಹರ್ಷಿ. सत्यवत्या अयम् "अण्" (४-३-१२०)। त्रिकाण्ड०।

**सात्यवतेय ಸಾತ್ಯವತೇಯ** (पुं०) ಸತ್ಯವತೀಪುತ್ರನಾದ ವೇದವ್ಯಾಸಮಹರ್ಷಿ. सत्यवत्या अपत्यम् "ढक्" (४-१-१२०)।

**सात्वत् ಸಾತ್ವತ್** (पुं०) ಯಾದವ. "संहत्या सात्वतां चैद्यं प्रति भास्वरसेनया" माघ० १९-७२।

**सात्वत ಸಾತ್ವತ** (पुं०) 1. ಮಹಾವಿಷ್ಣು. "हेमशङ्ख: शतावर्ती मनुसात्वतवारिशा:"त्रिकाण्ड०। 2. ಶ್ರೀಕೃಷ್ಣ. 3. ಬಲರಾಮ. (पुं० ब० व०) 4. ಯಾದವರು. "यदवस्तु दशार्हा: स्यु: सात्वता: कुक्कुराश्च ते" त्रिकाण्ड०। 5. ಸಾತ್ವತದೇಶ. 6. ಸಾತ್ವತದೇಶದ ಜನರು. "सुचिरं सह सर्वसात्वतैर्भव विश्वस्तविलासिनीजन:" माघ० १६-१४।

**सात्वती ಸಾತ್ವತೀ** (स्त्री०) 1. ಕೈಶಿಕೀ ಮೊದಲಾದ ನಾಲ್ಕು ವೃತ್ತಿಗಳಲ್ಲೊಂದು. ವೃತ್ತಿಯು (1) कैशिकी (2) सात्वती (3) आरभटी ಮತ್ತು (4) भारती ಎಂದು ನಾಲ್ಕು ವಿಧ. ಸಾತ್ವತೀವೃತ್ತಿಯು ವೀರರಸ ಪ್ರತಿಪಾದಕವಾದುದು. "शृङ्गारे कैशिकी वीरे सात्वत्यारभटी पुन:। रसे रौद्रे च बीभत्से वृत्ति: सर्वत्र भारती" सा० द० ६-१२२। ಈ ವೃತ್ತಿಗಳು ನಾಟಕ ಪ್ರಕರಣ ಮೊದಲಾದುವುಗಳಲ್ಲಿ ನಾಯಕ ಮೊದಲಾದವರ ವ್ಯಾಪಾರಗಳು. "चतस्रो वृत्तयो ह्येता: सर्वनाट्यस्य मातृका:। स्युर्नायकादिव्यापारविशेषा नाटकादिषु" सा० द० ६-१२३। 2. ಶಿಶುಪಾಲನ ತಾಯಿ, ಶ್ರೀಕೃಷ್ಣನ ಸೋದರತ್ತೆ. "न दूये सात्वतीसूनुर्यन्मह्यमपराध्यति" माघ० २-११।

**साद ಸಾದ** (पुं०) 1. ಕಾರ್ಶ್ಯ, ಕೃಶವಾಗಿರುವಿಕೆ. षद्लृ (विशरणादौ) "घञ्" (३-३-१८)। "शरीरसादादसमग्रभूषणा मुखेन सालक्ष्यत लोध्रपाण्डुना" रघु० ३-२। 2. ಆಯಾಸ, ದಣಿವು. "उदितोरुसादमतिवेपथुमत्सुदृशोऽभिभर्तृ विधुरं त्रपया" माघ० ९-७७। 3. ಗತಿ, ಗಮನ, ಚಲನ, ನಡೆಯುವುದು.

**सादन ಸಾದನ** (नं०) 1. ಸದನ, ಗೃಹ, ಮನೆ. षद्लृ (विशरणादौ) + स्वार्थे णिच् "ल्युट्" (३-३-११७)। 2. ಉಡುವುದು, ತೊಡುವುದು. 3. ಆಯಾಸ, ಬಳಲಿಕೆ, ದಣಿವು. 4. ಅಳವಡಿಸುವುದು, ಕ್ರಮವಾಗಿಡುವುದು. 5. ನಾಶಪಡಿಸುವುದು.

**सादि ಸಾದಿ** (पुं०) 1. ಯುದ್ಧಮಾಡುವವನು. 2. ಸಾರಥಿ. षद्लृ (विशरणादौ) "इञ्" (उ० ४-१२४)। सादि: सारथि: सि० कौ०। 3. ವಾಯು, ಗಾಳಿ. (वि०) 4. ಕಷ್ಟಕ್ಕೆ ಒಳಗಾದವನು.

**सादित ಸಾದಿತ** (वि०) 1. ಕುಳ್ಳಿರಿಸಲ್ಪಟ್ಟವನು. षद्लृ (विशरणादौ) + णिच् "क्त:" (३-२-१०२)। 2. ಕಷ್ಟ

ಪಡಿಸಲ್ಪಟ್ಟ, ಪೀಡಿಸಲ್ಪಟ್ಟ. "यैः सादिता लक्षितपूर्वकेतून् तानेव सामर्षतया विजघ्नुः" रघु० ७-४४। 3. ನಡೆಸಲ್ಪಟ್ಟ. 4. ನಾಶಪಡಿಸಲ್ಪಟ್ಟ, ಜಯಿಸಲ್ಪಟ್ಟ. "सादिताखिलनृपं महन्महः सम्प्रति स्वनयसम्पदैव ते" माघ० १४-१३।

**सादिन् ಸಾದಿನ್** (पुं०) 1. ಅಶ್ವಾರೋಹ, ಕುದುರೆಯ ಸವಾರ. सीदन्त्यवश्यम्—षद्लृ (विशरणादौ) "णिनिः" (३-२-१७०)। "निम्नानि दुःखादवतीर्य सादिभिः सयत्नमाकृष्टकशाः शनैःशनैः" माघ० १२-३१। 2. ಮಾವಟಿಗ, ನಿಷಾದಿ, ಹಸ್ತಿಪಕ. 3. ಸಾರಥಿ, ರಥವನ್ನು ನಡೆಸುವವನು. "सादी तुरङ्गमातङ्गरथारोहेषु दृश्यते" मेदि०।

**सादृश्य ಸಾದೃಶ್ಯ** (न०) ಹೋಲಿಕೆ, ಸಾಮ್ಯ. सदृशस्य भावः "ष्यञ्" (५-१-१२४)। "परस्पराक्षिसादृश्यमदूरोज्झितवर्त्मसु। मृगद्वन्द्वेषु पश्यन्तौ स्यन्दनाबद्धदृष्टिषु" रघु० १-४०। **ಕವಿಸಮಯಸಿದ್ಧವಾದ ಕೆಲವು ಹೋಲಿಕೆಗಳು :**

| | |
|---|---|
| ಲಲಾಟಕ್ಕೆ (ಹಣೆಗೆ) | ಅರ್ಧಚಂದ್ರ, ಫಲಕ |
| ಹುಬ್ಬುಗಳಿಗೆ | ಖಡ್ಗ |
| ಕೇಶಪಾಶಕ್ಕೆ | ಅಂಧಕಾರ |
| ನೇತ್ರಗಳಿಗೆ | ಚಕೋರ ಮತ್ತು ಹರಿಣಗಳ ಕಣ್ಣು |
| ತುಟಿಗಳಿಗೆ | ಬಿಂಬಫಲ |
| ಸ್ಮಿತಕ್ಕೆ | ಚಂದ್ರಿಕೆ, ಅಮೃತ |
| ಸೀಮಂತಕ್ಕೆ | ರಸ್ತೆ, ಮಾರ್ಗ |
| ನಾಸಿಗೆ (ಮೂಗು) | ತಾಳೆಹೂವು, ಸಂಪಿಗೆ ಮೊಗ್ಗು |
| ಶ್ವಾಸ (ಉಸಿರು) ಕ್ಕೆ | ಕಮಲದ ವಾಸನೆ |
| ಮುಖಕ್ಕೆ | ಚಂದ್ರ, ಪದ್ಮ, ಕನ್ನಡಿ |
| ಕಂಠಕ್ಕೆ | ಶಂಖ |
| ಅಂಗುಳಿ (ಬೆರಳು) ಗಳಿಗೆ | ಪಲ್ಲವ (ಚಿಗುರು) |
| ನಾಭಿಗೆ | ಸುಳಿ (ಆವರ್ತ) |
| ಊರುಗಳಿಗೆ | ಕದಳೀಕಾಂಡ |
| ಪಾದಕ್ಕೆ | ಕಮಲ |
| ನಖಗಳಿಗೆ | ರತ್ನ ಇತ್ಯಾದಿ. |

**साद्ध ಸಾದ್ಧ** (वि०) 1. ಸಾಧಿಸಲ್ಪಟ್ಟ, ನೆರವೇರಿಸಲ್ಪಟ್ಟ. साध (संसिद्धौ) "क्तः" (३-२-१०२)। (न०) 2. ಸಾಧಿಸುವುದು, ನೆರವೇರಿಸುವುದು. साध भावे "क्तः" (३-३-९४)।

**साधक ಸಾಧಕ** (वि०) 1. ಕಾರ್ಯವನ್ನು ಸಾಧಿಸುವವನು, ಕೆಲಸವನ್ನು ಮಾಡಿಕೊಡುವವನು. साध (संसिद्धौ) + णिच् "ण्वुल्" (३-१-१३३)। "वज्रं तपोवीर्यमहत्सु कुण्ठं त्वं सर्वतोगामि च साधकं च" कुमा० ३-१२। 2. ಉಪಾಸನೆಯಿಂದ ಕಾರ್ಯವನ್ನು ನೆರವೇರಿಸುವವನು, ಅಲೌಕಿಕ ಮತ್ತು ಅದ್ಭುತ ಶಕ್ತಿಯುಳ್ಳ (ಯೋಗಿ). "अविचलितमनोभिः साधकैर्मृग्यमाणः स जयति परिणद्धः शक्तिभिः शक्तिनाथः" मालती० ५-१।

**साधका ಸಾಧಕಾ** (स्त्री०) ದುರ್ಗಾದೇವಿ, ಪಾರ್ವತಿ.

**साधन ಸಾಧನ** (न०) 1. ಕಾರ್ಯವನ್ನು ಸಾಧಿಸುವುದು, ಕೆಲಸವನ್ನು ಈಡೇರಿಸುವುದು, ಕೆಲಸವನ್ನು ಪೂರೈಸುವುದು. साध (संसिद्धौ) "ल्युट्" (३-३-११५)। "वार्षिकं सञ्जहारेन्द्रो धनुर्जैत्रं रघुर्दधौ। प्रजार्थसाधने तौ हि पर्यायोद्यतकार्मुकौ" रघु० ४-१६। 2. ಸಲಕರಣೆ, ಉಪಕರಣ. साध्यतेऽनेन— साध करणे "ल्युट्" (३-३-११७)। "अपि स्वशक्त्या तपसि प्रवर्तसे शरीरमाद्यं खलु धर्मसाधनम्" कुमा० ५-३३। 3. ಕಾರಣ, ಹೇತು. "औषधान्यगदो विद्या दैवी च विविधा स्थितिः। तपसैव प्रसिध्यन्ति तपस्तेषां हि साधनम्" मनु० ११-२३७। 4. ಮಾರಣ, ಕೊಲ್ಲುವುದು. "अथो शरस्तेन मदर्थमुज्झितः फलं च तस्य प्रतिकायसाधनम्" किरा० १४-१७। 5. ಮೃತಸಂಸ್ಕಾರ. 6. ಹೇತು, ಕಾರ್ಯಸಿದ್ಧಿಗೆ ಕಾರಣವಾದ ಲಿಂಗ. "साध्ये निश्चितमन्वयेन घटितं बिभ्रत्सपक्षे स्थितं व्यावृत्तं च विपक्षतो भवति यत् तत् साधनं सिद्धये" मुद्रा० ५-१०। 7. ಗಮನ, ಹೊರಗಡೆ ಹೋಗುವುದು, ಹೊರಟು ಬರುವುದು. 8. ಆಯುಧ, ಸಲಕರಣೆ. 9. ಭೂಮಿ ಮೊದಲಾದುವುಗಳನ್ನು ದಾನಮಾಡಿಸುವುದು. 10. ಸಿದ್ಧೌಷಧ. 11. ಮೇಢ್ರ, ಶಿಶ್ನ. ಪುರುಷರ ಜನನೇಂದ್ರಿಯ. 12. ಸಾಲದ ಮರುಪಾವತಿ ಮಾಡಿಸುವುದು. 13. ಅನುಗಮನ. 14. ಧನ, ಐಶ್ವರ್ಯ, ಸಂಪತ್ತು. 15. ಸೈನ್ಯ. "व्यावृत्तं च विपक्षतो भवति यत् तत् साधनं सिद्धये" मुद्रा० ५-१०। "साधनं मृतसंस्कारे सैन्ये सिद्धौषधौ गतौ। निर्वर्तनोपायमेढ्रे दापनेऽनुगमे धने" मेदि०। 16. ಮೈತ್ರಿ, ಸ್ನೇಹ. 17. ಪ್ರಮಾಣ. 18. ಉಪಾಯ. "तपोभिः साध्यतेऽभीष्टं नासाध्यं हि तपस्यतः। दुर्भगत्वं वृथा लोको वहते सति साधने"। 19. ಹಸು ಮೊದಲಾದುವುಗಳ ಕೆಚ್ಚಲು. 20. ಮೋಕ್ಷ, ಮುಕ್ತಿ. 21. ತಪಸ್ಸು. 22. ಸಾಹಾಯ್ಯ. 23. ಚಿಕಿತ್ಸೆಯಿಂದ

ಗುಣಾಪಡಿಸುವುದು. 24. ಜನ್ಮನಕ್ಷತ್ರದಿಂದ 6, 15 ಮತ್ತು 24 ನೆಯ ನಕ್ಷತ್ರಗಳು. "जन्मसम्पद्विपत् क्षेमे प्रत्यक् साधननैधनम्। मित्रं परममित्रं च जन्मक्षाद्गणयेत् त्रिधा"।

**साधनता ಸಾಧನತಾ** (स्त्री०) ಸಲಕರಣೆ ಹೊಂದಿರುವಿಕೆ, ಉಪಕರಣ ಸಹಿತವಾಗಿರುವಿಕೆ. साधनस्य भावः "तल्" (५-१-११९)। "प्रतिकूलतामुपगते हि विधौ विफलत्वमेति बहुसाधनता" माघ० ९-६।

**साधना ಸಾಧನಾ** (स्त्री०) 1. ಕಾರ್ಯವನ್ನು ಪೂರ್ಣವಾಗಿ ನೆರವೇರಿಸುವುದು, ಕೆಲಸವನ್ನು ಪೂರ್ತಿಯಾಗಿ ನಡಸುವುದು. साध (संसिद्धौ)+णिच् "युच्" (३-३-१०७)। 2. ಉಪಾಸನೆ. 3. ಸಮಾಧಾನಪಡಿಸುವುದು, ಪರಿಪರಿಸಿ ಒಲಿಸಿಕೊಳ್ಳುವುದು.

**साधनीय ಸಾಧನೀಯ** (वि०) 1. ಸಾಧಿಸಲ್ಪಡುವ. 2. ಸಾಧಿಸಬೇಕಾದ, ನೆರವೇರಿಸಬೇಕಾದ. 3. ಸಾಧಿಸಲು ಸಾಧ್ಯವಾದ. 4. ಸಾಧಿಸಬಹುದಾದ. साध (संसिद्धौ) "अनीयर्" (३-१-९६)। "तव्यः"। **साधव्यम् ಸಾಧ್ವವ್ಯಮ್.**

**साधन्त ಸಾಧನ್ತ** (पुं०) ಭಿಕ್ಷುಕ. साध (संसिद्धौ) "झच्" (उ० ३-१२८)। साधन्तो भिक्षुः सि० कौ०।

**साधयत् ಸಾಧಯತ್** (वि०) 1. ಕಾರ್ಯವನ್ನು ಸಾಧಿಸುತ್ತಿರುವ, ಕಾರ್ಯವನ್ನು ನೆರವೇರಿಸುತ್ತಿರುವ. साध (संसिद्धौ)+णिच् "शतृ" (३-२-१२४)। 2. ಉಪಾಸನೆ ಮಾಡುತ್ತಿರುವ. स्त्रियां "ङीप्" (४-१-६)। **–यन्ती –ಯನ್ತೀ.**

**साधर्म्य ಸಾಧರ್ಮ್ಯ** (न०) ಸಮಾನ ಧರ್ಮವಾಗಿರುವಿಕೆ, ಸಾದೃಶ್ಯ. कमलमिव सुन्दरं मुखम् ಎಂಬಲ್ಲಿ ಕಮಲ ಮತ್ತು ಮುಖಗಳಿಗೆ ಸೌಂದರ್ಯವು ಸಾಧರ್ಮ್ಯ. "वाल्मीकेररहितरामलक्ष्मणानां साधर्म्यं दधति गिरां महासरस्य:" माघ० ४-५९।

**साधारण ಸಾಧಾರಣ** (वि०) 1. ಸಮಾನವಾದ, ಸದೃಶವಾದ. आधारणम् अविशेषेण कार्यभारधारणम्—तेन सह वर्तते। "अन्योन्यशोभाजननाद्बभूव परस्परं भूषणभूष्यभावः" कुमा० १-४२। 2. ಸರ್ವಸಮವಾದ, ಎಲ್ಲರಿಗೂ ಅನ್ವಯಿಸುವ, ಎಲ್ಲರಿಗೂ ಸಂಬಂಧಿಸಿದ, ಸರ್ವಸಾಮಾನ್ಯವಾದ. 3. ಬೆರೆತಿರುವ, ಮಿಶ್ರವಾಗಿರುವ, ಕಲೆತಿರುವ. "अद्यैव शकुन्तला नीयते इत्युत्कण्ठासाधारणं परितोषमनुभवामि" शाकु० ४। 4. (ನೈಯಾಯಿಕಮತದಲ್ಲಿ) ಹೇತ್ವಾಭಾಸ, ದುಷ್ಟಹೇತು. ಸಪಕ್ಷ ವಿಪಕ್ಷಗಳೆರಡರಲ್ಲೂ ಇರುವ ಹೇತುವು ದುಷ್ಟಹೇತು. ಇದು ಹೇತ್ವಾಭಾಸ. "पर्वतो वह्निमान् प्रमेयत्वात्" ಎಂಬಲ್ಲಿ ಪ್ರಮೇಯತ್ವರೂಪಹೇತುವು ಸಪಕ್ಷವಾದ ಮಹಾನಸದಲ್ಲಿಯೂ ವಿಪಕ್ಷವಾದ ಮಹಾಹ್ರದದಲ್ಲಿಯೂ ಇರುವುದರಿಂದ ಹೇತ್ವಾಭಾಸ. ಇದು ಸಾಧಾರಣವಾಯಿತು. "यः सपक्षे च विपक्षे च स तु साधारणो मतः" भाषाप०।

**साधारणधर्म ಸಾಧಾರಣಧರ್ಮ** (पुं०) 1. ಜನಸಾಮಾನ್ಯಕ್ಕೂ (ಚಾತುರ್ವರ್ಣ್ಯಕ್ಕೂ) ಉಕ್ತವಾದ ಸಮಾನವಾದ ಧರ್ಮ, ಮನುಷ್ಯರೆಲ್ಲರಿಗೂ ಉಕ್ತವಾದ ಕರ್ತವ್ಯಕಾರ್ಯ.

**ಸಾಮಾನ್ಯಕರ್ತವ್ಯಗಳು:** (1) अहिंसा (2) सत्यम् (3) अस्तेयम् (4) शौचम् (5) इन्द्रियसंयमः (6) दमः (7) क्षमा (8) आर्जवम् ಮತ್ತು (9) दानम् ಎಂದು ಒಂಬತ್ತು ವಿಧ. 2. (ಅಲಂಕಾರಶಾಸ್ತ್ರದಲ್ಲಿ) ಉಪಮಾನ ಮತ್ತು ಉಪಮೇಯಗಳೆರಡರಲ್ಲೂ ಇರುವ ಸಮಾನ ಧರ್ಮ. मुखं कमलमिव ಎಂಬಲ್ಲಿ ಮುಖ-ಕಮಲಗಳೆರಡರಲ್ಲೂ ಇರುವ ಸೌಂದರ್ಯ ಮೊದಲಾದುದು ಸಾಧಾರಣ ಧರ್ಮ.

**साधारण्य ಸಾಧಾರಣ್ಯ** (न०) 1. ಸಾಮಾನ್ಯವಾಗಿರುವಿಕೆ. 2. ಸದೃಶವಾಗಿರುವಿಕೆ. साधारणस्य भावः "ष्यञ्"।

**साधिका ಸಾಧಿಕಾ** (स्त्री०) ಕಾರ್ಯವನ್ನು ಸಾಧಿಸುವ ಹೆಂಗಸು, ಕಾರ್ಯವನ್ನು ನಿರ್ವಹಿಸುವ ಹೆಂಗಸು. साधयति —साध (संसिद्धौ) + णिच् "ण्वुल्" (३-१-१३३)।

**साधित ಸಾಧಿತ** (वि०) ಕೊಡಿಸಲ್ಪಟ್ಟ (ತೆರಿಗೆ ಬಡ್ಡಿ ಮೊದಲಾದುವು). साध (संसिद्धौ) + णिच् "क्तः" (३-२-१०२)। "दायितो दापितोऽपि स्यात् साधितः शोधितोऽपि च" शब्दरत्नावलिः।

**साधिष्ठ ಸಾಧಿಷ್ಠ** (वि०) 1. ಅತಿಶಯವಾದ, ಅತ್ಯುತ್ತಮವಾದ, ಬಹಳ ಶ್ರೇಷ್ಠವಾದ. अतिशयेन बाढः "इष्ठन्" (५-३-५५)। बाढस्य साधादेशः (५-३-६३)। 2. ಬಹಳ ದೃಢವಾದ. "साधिष्ठोऽत्यर्थे दृढतमेऽपि च" हेम०। 3. ಎಲ್ಲದಕ್ಕಿಂತ ಸಾಧುವಾದ.

**साधीयस् ಸಾಧೀಯಸ್** (वि०) 1. ಹೆಚ್ಚು ಶ್ರೇಷ್ಠವಾದ, ಎರಡರಲ್ಲಿ ಶ್ರೇಷ್ಠವಾದ ಒಂದು. अतिशयेनानयोर्बाढः—"ईयसुन्" (५-३-५७)। साधादेशः (५-३-६३)। 2. ಹೆಚ್ಚು ಸಾಧುವಾದ, ಇನ್ನೊಂದಕ್ಕಿಂತ ಸಾಧುವಾದ. 3. ಬಹಳ ದೃಢವಾದ. "साधीयस्ते यद्गणायाद्रियन्ते"

माघ० १८-६३। स्त्रियां "ङीप्" (४-१-६)। -यसी -ಯಸೀ.

**साधु ಸಾಧು** (वि०) 1. ಸಭ್ಯ, ಸತ್ಪುರುಷ, ಸತ್ಕುಲದಲ್ಲಿ ಜನಿಸಿದವನು, ಇತರರ ಹಿತವನ್ನು ಸಾಧಿಸುವವನು. साध्नोति परकार्यम्—साध (संसिद्धौ) "उण्" (उ० १-१)। ಯಾರನ್ನೂ ದ್ವೇಷಿಸದವನು ದಯಾಳು ಶಾಂತಚಿತ್ತ ಜಂಬ ಅಹಂಕಾರಗಳಿಲ್ಲದವನು ಯಾವುದಕ್ಕೂ ಆಸೆಪಡದವನು ವೀತರಾಗನು ಸಾಧುವೆನಿಸುವನು. "निर्वैरः सदयः शान्तः दम्भाहङ्कारवर्जितः। निरपेक्षो मुनिर्वीतरागः साधुरिहोच्यते"॥ ತನ್ನನ್ನು ಗೌರವಿಸಿದಾಗ ಸಂತೋಷದಿಂದ ಹಿಗ್ಗದಿರುವವನೂ, ಅಪಮಾನ ಸಂಭವಿಸಿದಾಗ ಕುಗ್ಗಿ ಕೋಪಿಸಿಕೊಳ್ಳದವನೂ ಕೋಪದಿಂದ ಕಠಿನವಾದ ಮಾತಾಡದವನೂ ಸಾಧುವೆನಿಸುವನು. "न प्रहृष्यति सम्माने नावमानेन कुप्यति। न क्रुद्धः परुषं ब्रूयादेतत् साधोस्तु लक्षणम्"। "साधूनां हि परोपकारकरणे नोपाध्यपेक्षं मनः"। "साधूनां दर्शनं पुण्यं तीर्थभूता हि साधवः। कालेन फलते तीर्थं सद्यः साधुसमागमः"। 2. ಸರಿಯಾದ, ದೋಷವಿಲ್ಲದ. "साधु व्याकरणं हिताय विशदं काव्यं पिकीगीतवत् मीमांसा श्रुतितत्परा तदनुगं साङ्ख्यं सपातञ्जलम्"। 3. ಆಯಾ ಅರ್ಥಗಳಲ್ಲಿ ವ್ಯಾಕರಣನಿಯಮದಂತೆ ವ್ಯುತ್ಪನ್ನವಾದ ಶಬ್ದ, ಪ್ರಯೋಗಾರ್ಹವಾದ ಶಬ್ದ. 4. ಯೋಗ್ಯನಾದ, ಒಳ್ಳೆಯ ಸ್ವಭಾವದ, ಉದಾರಹೃದಯನಾದ, ಸತ್ಯಸಂಧನಾದ. "अद्धा श्रियं पालितसङ्गराय प्रत्यर्पयिष्यत्यनघां स साधुः" रघु० १३-६५। 5. ದಯಾಳು, ಆರ್ತರನ್ನು ರಕ್ಷಿಸುವವನು, ಕನಿಕರವುಳ್ಳವನು. "तदीयमाक्रन्दितमार्तसाधोर्गुहानिबद्धप्रतिशब्ददीर्घम्" रघु० २-२८। 6. ಪ್ರಿಯವಾದ, ಹಿತವಾದ, ಸಂತೋಷಕರವಾದ. "अतोऽर्हसि क्षन्तुमसाधु साधु वा हितं मनोहारि च दुर्लभं वचः" किरा० १-४। 7. ಧೈರ್ಯಶಾಲಿಯಾದವನು, ಕೆಚ್ಚೆದೆಯವನು. 8. ಬಡ್ಡಿಯಿಂದ ಜೀವಿಸುವವನು. 9. ಸುಂದರವಾದ, ಮನೋಹರವಾದ, ರಮ್ಯವಾದ. "साधुर्वार्धुषिके चारौ सज्जने चाभिधेयवत्" मेदि०। 10. ಜಿನದೇವ. 11. ಮುನಿ. (अव्य०) 12. ಚೆನ್ನಾಗಿ, ಸೊಗಸಾಗಿ, ಮನೋಹರವಾಗಿ. "आर्ये साधु गीतम्, अहो रागबद्धचित्तवृत्तिरालिखित इव सर्वतो रङ्गः" शाकु० १। 13. ಚೆನ್ನಾಗಿ, ಸರಿಯಾಗಿ, ಸಮೀಚೀನವಾಗಿ, ದೋಷರಹಿತವಾಗಿ. "आपरितोषाद्विदुषां न साधु मन्ये प्रयोगविज्ञानम्" शाकु० १-२।

**साधुज ಸಾಧುಜ** (वि०) ಸತ್ಕುಲದಲ್ಲಿ ಹುಟ್ಟಿದವನು. साधौ जायते — जनी "डः" (३-१-९७)।

**साधुता ಸಾಧುತಾ** (स्त्री०) 1. ಸುಂದರವಾಗಿರುವಿಕೆ. 2. ಸರಿಯಾಗಿರುವಿಕೆ. 3. ಶುದ್ಧವಾಗಿರುವಿಕೆ.

**साधुवाद ಸಾಧುವಾದ** (पुं०) ಒಳ್ಳೆಯದು ಒಳ್ಳೆಯದು ಎಂಬ ಮಾತು, ಸಾಧು ಸಾಧು ಎಂಬ ಮಾತು. साधु इति वादः। "एकौघेन स्वर्णपुङ्खद्विषन्तः सिद्धा माल्यैः साधुवादैर्द्वयेऽपि" माघ० १८-५५।

**साधुवाह ಸಾಧುವಾಹ** (पुं०) ಪಳಗಿದ ಕುದುರೆ, ತರಬೇತಿ ಕೊಡಲ್ಪಟ್ಟ ಕುದುರೆ. साधुरुत्तमो वाहः।

**साधुवाहिन् ಸಾಧುವಾಹಿನ್** (पुं०) ಚೆನ್ನಾಗಿ ಪಳಗಿದ ಕುದುರೆ, ಸರಿಯಾಗಿ ಸವಾರನನ್ನು ಕುಳ್ಳಿರಿಸಿಕೊಳ್ಳುವ ಕುದುರೆ. साधु वहति – वह (प्रापणे) "णिनिः" (३-२-७८)। "विनीताः साधुवाहिनः" अम०।

**साधुवृत्त ಸಾಧುವೃತ್ತ** (वि०) 1. ಸದಾಚಾರಸಂಪನ್ನನು, ಒಳ್ಳೆಯ ನಡತೆಯುಳ್ಳವನು. साधु वृत्तं वर्तनं यस्य। "प्रायेण साधुवृत्तानामस्थायिन्यो विपत्तयः" भर्तृ०। (न०) 2. ಒಳ್ಳೆಯ ನಡತೆ. साधु वृत्तम्।

**साधुवृत्ति ಸಾಧುವೃತ್ತಿ** (स्त्री०) 1. ಯೋಗ್ಯವಾದ ಜೀವನ, ಉತ್ತಮವಾದ ಜೀವನೋಪಾಯ. साध्वी वृत्तिः। 2. ಉತ್ತಮವಾದ ವಿವರಣೆ. 3. ಸತ್ಪುರುಷನ ಜೀವನ. साधोः वृत्तिः।

**साधृत ಸಾಧೃತ** (न०) 1. ಅಂಗಡಿ ಬೀದಿ. 2. ನವಿಲುಗಳ ಗುಂಪು. 3. ಛತ್ರಿ, ಕೊಡೆ.

**साध्य ಸಾಧ್ಯ** (पुं०) 1. ಒಂದು ಗಣದೇವತೆ. साध्यमस्यास्ति "अच्" (५-२-१२७)। "महाराजिकसाध्याश्च रुद्राश्च गणदेवताः" अम०। 2. ವಿಷ್ಕಂಭ ಮೊದಲಾದ 27 ಯೋಗಗಳಲ್ಲಿ 22 ನೆಯ ಯೋಗ. 3. ಒಂದು ಮಂತ್ರ. (न०) 4. ಕಾರ್ಯನಿರ್ವಹಣೆ, ಪೂರಯಿಕೆ. (वि०) 5. ಸಾಧಿಸಲ್ಪಡುವ. 6. ಸಾಧಿಸಬೇಕಾದ. 7. ಸಾಧಿಸಲು ಶಕ್ಯವಾದ. साध (संसिद्धौ) "ण्यत्" (३-१-१२४)। "पर्वतो वह्निमान् धूमात्" ಎಂಬಲ್ಲಿ ಪರ್ವತದಲ್ಲಿ ವಹ್ನಿಮತ್ತ್ವವು ಸಾಧ್ಯ. ಆದುದರಿಂದ ಪರ್ವತವು ಪಕ್ಷ. "सन्दिग्धसाध्यवान् पक्षः"। "प्रतिज्ञादोषनिर्मुक्तं साध्यं सत्कारणान्वितम्। निश्चितं लोकसिद्धं च पक्षं पक्षविदो विदुः"। "साध्यो योगे साधनीये गणदेवतभिद्यपि" हेम०। 8. ನೆರವೇರಿಸಲ್ಪಡುವ. 9. ನೆರವೇರಿಸಬೇಕಾದ.

**साध्वस ಸಾಧ್ವಸ** (न०) ಭಯ, ಹೆದರಿಕೆ. साधूनामसनम् । "पुनरुज्झितसाध्वसं द्विषामभिवत्ते स्म वचो वचोहरः" माघ० १६-३८।

**साध्वी ಸಾಧ್ವೀ** (स्त्री०) ಪತಿವ್ರತೆಯಾದ ಹೆಂಗಸು. साधु "ङीष्" (४-१-४४)। "अहं त्वया दूतमुखेन दूरात् साध्व्या समाहूत इहोपयातः" याद० १३-२०। "साध्वी स्त्री मातृतुल्या च सर्वथा हितकारिणी" ब्रह्मवै०।

**सानन्द ಸಾನಂದ** (वि०) 1. ಸಂತೋಷದಿಂದ ಕೂಡಿದವನು. आनन्देन सह वर्तते। (अव्य०) 2. ಆನಂದದಿಂದ, ಸಂತೋಷದಿಂದ. "सानन्दं नन्दिहस्ताहतमुरजरवाहूतकौमारबर्हित्रासान्नासाग्ररन्ध्रं विशति फणिपतौ भोगसङ्कोचभाजि" मालती० १-२।

**सानसि ಸಾನಸಿ** (पुं०) ಸ್ವರ್ಣ, ಚಿನ್ನ. सन्यते दीयते दक्षिणाद्यर्थं — षणु (दाने) "असिः" उपधावृद्धिश्च निपा० (उ० ४-१०७)। सानसि हिरण्यम् सि० कौ०।

**सानु ಸಾನು** (पुंस्त्री०) 1. ಪರ್ವತದ ಸಮಭೂಮಿ. सनोति — षणु (दाने) "ञुण्" (उ० १-३)। "पाश्चात्यभागमिह सानुषु सन्निषण्णाः पश्यन्ति शान्तमलसान्द्रतरांशुजालम्" माघ० ४-२२। 2. ಅರಣ್ಯ, ಕಾಡು. 3. ಬಿರುಗಾಳಿ. 4. ಮಾರ್ಗ, ರಸ್ತೆ. 5. ಅಗ್ರ, ತುದಿ. 6. ಪಂಡಿತ, ವಿದ್ವಾಂಸ. "सानुरस्त्री वने प्रस्थे वात्यामार्गाग्रकोविदे" मेदि०।

**सानुज ಸಾನುಜ** (न०) 1. ಬಿಳಿ ನೈದಿಲೆ ಗಿಡ್ಡೆ. सानौ जायते — जनी (प्रादुर्भावे) "डः" (३-२-९७)। (वि०) 2. ಅನುಜ (ತಮ್ಮ) ನೊಡನೆ ಕೂಡಿದವನು. अनुजेन सह वर्तते।

**सानुबन्ध ಸಾನುಬಂಧ** (वि०) ಅವಿಚ್ಛಿನ್ನವಾದ, ಎಡೆಬಿಡದ ಸಂಬಂಧವುಳ್ಳ, ನಿರಂತರವಾದ. अनुबन्धेन सह वर्तते। "सानुबन्धाः कथं न स्युः सम्पदो मे निरापदः" रघु० १-६४।

**सानुमत् ಸಾನುಮತ್** (पुं०) ಪರ್ವತ, ಬೆಟ್ಟ. सानुरस्यास्ति — "मतुप्" (५-२-९४)। "उपसन्ध्यमास्त तनु सानुमतः शिखरेषु तत्क्षणमशीतरुचः" माघ० ९-५।

**सान्तपन ಸಾಂತಪನ** (न०) 1. ಬಹಳ ಕಷ್ಟವಾದ ಒಂದು ವ್ರತ. सन्तापयति — सम् + तप (सन्तापे) + णिच् "ल्युः" (३-१-१३४)। स्वार्थे "अण्"। ಗೋಮೂತ್ರ ಗೋಮಯ ಕ್ಷೀರ ಮೊಸರು ತುಪ್ಪ ಮತ್ತು ಕುಶೋದಕ ಇವೆಲ್ಲವನ್ನೂ ಸೇರಿಸಿ ಒಂದು ದಿನ ಆಹಾರವಾಗಿ ತೆಗೆದುಕೊಂಡು ಮರುದಿನ ಉಪವಾಸವಿರಬೇಕು. ಇದು ಸಾಂತಪನ ವ್ರತ. "गोमूत्रं गोमयं क्षीरं दधि सर्पिः कुशोदकम्। एकरात्रोपवासश्च कृच्छ्रं सान्तपनं स्मृतम्" मनु० ११-२१२। (वि०) 2. ಸೂರ್ಯನ ಸಂಬಂಧವಾದ. सन्तपनस्य सूर्यस्येदम् "अण्" (४-३-१२०)।

**सान्तर ಸಾಂತರ** (वि०) ವಿರಳವಾಗಿರುವ, ನಡುವೆ ಸ್ಥಳ ಬಿಟ್ಟಿರುವ, ಮಧ್ಯೆ ಸಂದುಗಳುಳ್ಳ. अन्तरेण सह वर्तते। "यदि ताः स्युरेकरूपाः शुभास्ततः सान्तरास्तु न शिवाय" बृहत्सं० २२-३।

**सान्तानिक ಸಾಂತಾನಿಕ** (पुं०) 1. ಸಂತಾನಕ್ಕಾಗಿ ವಿವಾಹ ಮಾಡಿಕೊಳ್ಳುವ ವಿಪ್ರ. सन्तानं प्रयोजनमस्य "ठञ्" (५-१-१०९)। (वि०) 2. ಸುತ್ತಲೂ ಹರಡಿಕೊಳ್ಳುವ, ನಾಲ್ಕು ಕಡೆಗಳಲ್ಲೂ ವ್ಯಾಪಿಸುವ. 3. ಸಂತಾನ (ಕಲ್ಪವೃಕ್ಷ) ಕ್ಕೆ ಸಂಬಂಧಿಸಿದ.

**सान्त्व ಸಾಂತ್ವ** (न०) 1. ಬಹಳ ಮಧುರವಾದ ಮಾತು. सान्त्वयति — सान्त्व (सामप्रयोगे) + णिच् "अच्" (३-१-१३४)। "कानि सान्त्वानि गोविन्दः सूतपुत्रे प्रयुक्तवान्" भा० उद्योग० १४०-२। 2. ಸಾಮವಚನ, ಹಿತವಾದ ಮಾತು, ಸಾಮೋಪಾಯ. "चतुर्थोपायसाध्ये तु रिपौ सान्त्वमपक्रिया" माघ० २-५४।

**सान्त्वन ಸಾಂತ್ವನ** (न०) 1. ಸಮಾಧಾನಪಡಿಸುವುದು, ಶಾಂತಗೊಳಿಸುವುದು. सान्त्व (सामप्रयोगे) + णिच् "ल्युट्" (३-३-११५)। 2. ಸಾಮೋಪಾಯ, ಹಿತವಾದ ಮಾತನ್ನಾಡುವುದು, ಹಿತವಾದ ಕಾರ್ಯವನ್ನು ಮಾಡುವುದು. "नास्मै देयो ह्यनुनयो नायमर्हति सान्त्वनम्। लोकवृद्धतमे कृष्णे योऽर्हणां नाभिमन्यते" भा० सभा० ३८-६। सान्त्व + णिच् "युच्" (३-३-१०७)। —ना —ನಾ. "विमति भजतस्तदर्हणायां न च देयोऽनुनयो न सान्त्वना च" याद० १५-३९।

**सान्दीपनि ಸಾಂದೀಪನಿ** (पुं०) ಒಬ್ಬ ಋಷಿ. सन्दीपनस्य अपत्यं पुमान् "इञ्" (४-१-९५)। ಸಾಂದೀಪನಿ ಋಷಿಯು ಬಲರಾಮ ಮತ್ತು ಶ್ರೀಕೃಷ್ಣರಿಗೆ ವಿದ್ಯಾಗುರು. ಇಬ್ಬರೂ ಸಕಲ ಶಾಸ್ತ್ರಪಾರಂಗತರಾಗಿದ್ದರೂ ಲೋಕದಲ್ಲಿ ಆಚಾರ್ಯ–ಶಿಷ್ಯ ಭಾವವನ್ನು ಪ್ರಸಿದ್ಧಪಡಿಸಲು ಈ ಋಷಿಯಲ್ಲಿ ವಿದ್ಯಾಭ್ಯಾಸಮಾಡಿ ಅರುವತ್ತುನಾಲ್ಕು ದಿನಗಳಲ್ಲಿ ಸರಹಸ್ಯ ಧನುರ್ವೇದವನ್ನು ಕಲಿತು ತಮ್ಮ ಅದ್ಭುತ ಶಕ್ತಿಯನ್ನು ಪ್ರದರ್ಶಿಸಿದರು. ಅಮಾನುಷವಾದ ಈ ಅದ್ಭುತ ಶಕ್ತಿಯನ್ನು ಕಂಡು ಸಾಂದೀಪನಿಋಷಿಯು ಆ ದಿನ

ಪ್ರಾತಃಕಾಲದಲ್ಲಿ ಲವಣಾರ್ಣವದಲ್ಲಿ ಮೃತನಾದ ತನ್ನ ಪುತ್ರನನ್ನು ಬದುಕಿಸಿ ಗುರುದಕ್ಷಿಣೆಯಾಗಿ ಒಪ್ಪಿಸಬೇಕೆಂದು ಹೇಳಲು ಶಸ್ತ್ರಾಸ್ತ್ರಧಾರಿಗಳಾಗಿ ಹೊರಟ ಬಲರಾಮ ಶ್ರೀಕೃಷ್ಣರನ್ನು ನೋಡಿ ಸಮುದ್ರರಾಜನು ಸಾಂದೀಪನಿ ಪುತ್ರನನ್ನು ಪಂಚಜನನೆಂಬ ರಾಕ್ಷಸನು ಅಪಹರಿಸಿದನೆಂದೂ ಅವನು ಸಮುದ್ರದೊಳಗಿರುವನೆಂದೂ ತಿಳಿಸಿದನು. ಆಗ ಸಮುದ್ರದೊಳಗೆ ಪ್ರವೇಶಿಸಿ ಪಾಂಚಜನನನ್ನು ಸಂಹರಿಸಿ ಶ್ರೀಕೃಷ್ಣನು ಅವನ ಅಸ್ಥಿಯಿಂದ ನಿರ್ಮಿತವಾದ ಶಂಖ ವನ್ನು ಪಡೆದು ವೈವಸ್ವತನಗರಕ್ಕೆ ಹೋಗಿ ಸಾಂದೀಪನಿಯ ಪುತ್ರನನ್ನು ತಂದು ಗುರುದಕ್ಷಿಣೆಯಾಗಿ ಒಪ್ಪಿಸಿದನು. "तस्य शिष्यत्वमभ्येत्य गुरुवृत्तिपरौ हि तौ। दर्शयां चक्रतुर्वीरावाचारमखिले जने।। सरहस्यं धनुर्वेदं ससङ्ग्रहमधीयताम्। अहोरात्रैश्चतुःषष्टया तदद्भुतमभूद्द्विज ।। ऊचतुर्व्रियतां या ते दातव्या गुरुदक्षिणा। सोऽप्यतीन्द्रियमालोक्य तयोः कर्म महामतिः।। अयाचत मृतं पुत्रं प्रभाते लवणार्णवे।। गृहीतास्त्रौ ततस्तौ तु सार्घपात्रो महोदधिः। उवाच न मया पुत्रो हृतः सान्दीपनेरिति ।। इत्युक्तेऽन्तर्जलं गत्वा हत्वा पञ्चजनं च तम्। कृष्णो जग्राह तस्यास्थिप्रभवं शङ्खमुत्तमम् ।। बलदेवश्च बलवान् जित्वा वैवस्वतं यमम्। तं बालं यातनासंस्थं यथापूर्वशरीरणम् ।। पित्रे प्रदत्तवान् कृष्णो बलश्च बलिनां वरः" विष्णुपु० ५-२१।

**सान्दृष्टिक ಸಾಂದೃಷ್ಟಿಕ** (न०) ಸದ್ಯಃಫಲ, ಕೂಡಲೆ ಲಭಿಸುವ ಫಲ. सन्दृष्टौ प्रत्यक्षे भवम् "ठञ्" (वा० ४-२-६०)। "सान्दृष्टिकं फलं सद्यः" अम०।

**सान्द्र ಸಾಂದ್ರ** (वि०) 1. ನಿಬಿಡವಾದ, ನಿರಂತರವಾದ, ದಟ್ಟವಾದ. सह अन्द्रयते—अदि (बन्धने) "रक्" बाहु०। "सान्द्रैः सुरानीकरजोभिरम्बरे नवाम्बुदानीकनिर्भरभिश्रिते" कुमा० १४-३६। 2. ಒತ್ತಾಗೂಡಿದ, ಒಟ್ಟಿಗೆ ಸೇರಿ ಮಂದವಾದ, ದಪ್ಪವಾದ. "अथ सान्द्रसान्ध्यकिरणारुणितं हरिहेतिहूति मिथुनं पततोः" माघ० ९-१५। 3. ಅತಿಶಯವಾದ, ಬಲವತ್ತಾದ. "तासां मुखैरासवगन्धगर्भैर्व्याप्तान्तराः सान्द्रकुतूहलानाम्" रघु० ७-११। 4. ಮೃದುವಾದ, ಮೆತ್ತಗಿರುವ. (न०) 5. ವನ. "सान्द्रं वने घने मृदौ" मेदि०।

**सान्द्रस्निग्ध ಸಾಂದ್ರಸ್ನಿಗ್ಧ** (वि०) ದಟ್ಟವಾಗಿಯೂ ನುಣುಪಾಗಿಯೂ ಇರುವ. सान्द्रः स्निग्धश्च। "सान्द्रस्निग्धस्तु मेदुरः" अम०।

**सान्धिक ಸಾಂಧಿಕ** (वि०) ಮದ್ಯವನ್ನು ತಯಾರಿಸುವವನು, ಬಟ್ಟಿ ಇಳಿಸುವವನು. सन्धा मद्यसज्जीकरणं शिल्पमस्य —"ठक्" (४-४-५५)।

**सान्धिविग्रहिक ಸಾಂಧಿವಿಗ್ರಹಿಕ** (पुं०) ಸಂಧಿವಿಗ್ರಹ ಕಾರ್ಯಗಳಲ್ಲಿ ನಿಯುಕ್ತನಾದ ಅಧಿಕಾರಿ, ನೆರೆಹೊರೆಯ ರಾಜ್ಯಗಳೊಡನೆ ಸ್ನೇಹ ಮತ್ತು ಯುದ್ಧ ಈ ಕಾರ್ಯ ಗಳನ್ನು ನೋಡಿಕೊಳ್ಳುವ ವಿದೇಶ ವ್ಯವಹಾರಗಳ ಕಾರ್ಯ ದರ್ಶಿ. सन्धौ विग्रहे च (तन्निर्वाहकार्ये) नियुक्तः "ठक्" (४-४-६९)।

**सान्ध्य ಸಾಂಧ್ಯ** (वि०) ಸಂಧ್ಯಾಕಾಲಸಂಬಂಧವಾದ, ಸಂಧ್ಯಾ ಕಾಲದಲ್ಲಿ ವಿಹಿತವಾದ, ಸಂಧ್ಯಾಕಾಲದಲ್ಲಿ ಆಚರಿಸಬೇಕಾದ. सन्ध्यायां भवः "अण्" (४-३-१६)। "गुरोः सदारस्य निपीड्य पादौ समाप्य सान्ध्यं च विधिं दिलीपः" रघु० २-२३।

**सान्नहनिक ಸಾನ್ನಹನಿಕ** (वि०) ಯೋಧರು ಯುದ್ಧಕ್ಕೆ ಸಿದ್ಧರಾಗುವಂತೆ ಪ್ರೇರಿಸುವ. सन्नहनं प्रयोजनमस्य — "ठक्" (५-१-१०९)। "शैलकटकभिन्नरवः प्रणनाद सान्नहनिकोऽस्य वारिजः" माघ० १५-७२।

**सान्नाय्य ಸಾನ್ನಾಯ್ಯ** (न०) ಹೋಮಕ್ಕಾಗಿ ಅಗ್ನಿಯ ಸಮೀಪಕ್ಕೆ ತರಲ್ಪಡುವ ಹವಿಸ್ಸು. सम्यक् नीयते होमार्थमग्निं प्रति—सम्+णीञ् (प्रापणे) "ण्यत्" आयादेशः समो दीर्घश्च निपा० (३-१-१२९)। "कृतगुरुदुरितौघध्वंसमध्वर्युवर्यैर्हुतमयमुपलीढे साधु सान्नाय्यमग्निः" माघ० ११-४१।

**सान्निध्य ಸಾನ್ನಿಧ್ಯ** (न०) 1. ಸನ್ನಿಧಿ, ಸಾಮೀಪ್ಯ, ಹತ್ತಿರ. सन्निधिरेव—स्वार्थे "ष्यञ्" (वा० ५-१-१२४)। "अर्चकस्य तपोयोगात् अर्चनस्यातिशायनात्। आभिरूप्याच्च बिम्बानां देवः सान्निध्यमृच्छति"। 2. ಸಮ್ಮುಖ, ಎದುರಿಗಿರುವುದು, ಎದುರಿಗೆ ಬಂದಿರುವುದು, ಸಮೀಪದಲ್ಲಿರುವುದು, ಸನ್ನಿಧಾನ. "परिकल्पितसान्निध्या काले काले च वन्दिषु। स्तुत्यं स्तुतिभिरर्थ्याभिरुपतस्थे सरस्वती" रघु० ४-६।

**सान्निपातिक ಸಾನ್ನಿಪಾತಿಕ** (वि०) ಸನ್ನಿಪಾತಕ್ಕೆ ನಿಮಿತ್ತವಾದ, ಸನ್ನಿಪಾತಜ್ವರಕ್ಕೆ ಸೂಚಕವಾದ ವಿಕಾರ. सन्निपातस्य निमित्तम् "ठक्" (वा० ५-१-३८)। ವಾತ ಪಿತ್ತ ಶ್ಲೇಷ್ಮ ದೋಷಗಳ ಸಂಕರವು ಸನ್ನಿಪಾತಜ್ವರ. ಅದಕ್ಕೆ ಸೂಚಕವಾದ (ಕಾರಣವಾದ) ಅಪಥ್ಯಾಹಾರ ಸಂಬಂಧ ಮತ್ತು ಜಿಹ್ವಾಕಾಷ್ಣ್ಯಾದಿ ವಿಕಾರಗಳು

ಸಾನ್ನಿಪಾತಿಕ. "वीर्यवन्त्यौषधानीव विकारे सान्निपातिके" कुमा० २-४८।

**सांन्यासिक ಸಾಂನ್ಯಾಸಿಕ** (पुं०) ಸಂನ್ಯಾಸಿ, ನಾಲ್ಕನೆಯ ಆಶ್ರಮ ಸ್ವೀಕರಿಸಿದವನು. संन्यासः प्रयोजनमस्य "ठक्" (५-१-१०९)।

**सापत्न्य ಸಾಪತ್ನ್ಯ** (न०) 1. ಶತ್ರು, ರಿಪು, ವೈರಿ. सपत्न एव सापत्न्यः—स्वार्थे "ष्यञ्" (वा० ५-१-१२४)। 2. ಸಪತ್ನಿಯ ಪುತ್ರ, ಸವತಿಯ ಮಗ. सपत्न्या अपत्यम् "ष्यञ्"। "पित्रा सह विभक्ता ये सापत्न्या वा सहोदराः। जघन्यजाश्च ये तेषां पितृभागहरास्तु ते" दायतत्त्वम्। 3. ಸಪತ್ನೀತ್ವ, ಸಪತ್ನೀಭಾವ, ಸವತಿಯ ಕಾರ್ಯ. सपत्न्याः भावः कर्म वा "ष्यञ्" (५-१-१२४)। "व्यक्तत्वं नियतमनेन निन्युरस्याः सापत्न्यं क्षितिसुतविद्विषो महिष्यः" माघ० ८-१५।

**सापिण्ड्य ಸಾಪಿಂಡ್ಯ** (न०) ಸಮಾನ ಪಿಂಡತ್ವ. ಸಪಿಂಡತ್ವವು ಸಪ್ತಪುರುಷಪರ್ಯಂತವಿರುವುದು. ಸಪ್ತಮ ಪುರುಷಾನಂತರ ಅದು ನಿಲ್ಲುವುದು. "सपिण्डता तु पुरुषे सप्तमे विनिवर्तते" मनु० ५-६०। "सापिण्ड्यं साप्तपौरुषम्" मत्स्यपु०।

**साप्तपदीन ಸಾಪ್ತಪದೀನ** (न०) ಸಖ್ಯ, ಸ್ನೇಹ. सप्तभिः पदैरवाप्यम् "खञ्" (५-२-२२)। ಏಳು ಹೆಜ್ಜೆಗಳು ಜೊತೆಯಲ್ಲಿ ಇಡುವಷ್ಟರಲ್ಲಿ ಅಥವಾ ಏಳು ಪದಗಳು (ಏಳು ಮಾತುಗಳು) ಆಡುವಷ್ಟರಲ್ಲಿ ಸ್ನೇಹವು ಬೆಳೆಯುವುದು. "प्रयुक्तसत्कारविशेषमात्मना न मां परं सम्प्रतिपत्तुमर्हसि। यतः सतां सन्नतगात्रि सङ्गतं मनीषिभिः साप्तपदीनमुच्यते" कुमा० ५-३९।

**साप्तपौरुष ಸಾಪ್ತಪೌರುಷ** (वि०) ಏಳು ತಲೆಮೊರೆಯವರೆಗೂ ಸೇರಿದವನು. सप्त पूरुषेषु भवः "अण्" (४-३-५३)।

**साफल्य ಸಾಫಲ್ಯ** (न०) 1. ಸಫಲತ್ವ, ಫಲವು ದೊರಕುವಿಕೆ, ಯತ್ನವು ಫಲಿಸುವಿಕೆ. सफलस्य भावः "ष्यञ्" (५-१-१२४)। 2. ಫಲಸಹಿತವಾಗಿರುವಿಕೆ. "साफल्यमस्त्रे रिपुसायकस्य कृत्वा गते भाग्य इवापवर्गम्" किरा० १६-४९।

**सामक ಸಾಮಕ** (पुं०) 1. ಸಾಣೆಕಲ್ಲು, ಮಸೆಯುವ ಕಲ್ಲು. "तर्कुशाणस्तु सामकः" त्रिकाण्ड०। 2. ಸಾಮವೇದವನ್ನು ಅಧ್ಯಯನ ಮಾಡಿದವನು. साम अधीते वेद वा—सामन् "वुन्" (४-२-६१)। (न०) 3. ಸಾಲ ಪಡೆದ ಅಸಲು ಹಣ.

**सामग ಸಾಮಗ** (पुं०) 1. ಸಾಮವೇದಾಧ್ಯಾಯಿ ವಿಪ್ರ, ಸಾಮವೇದ ಗಾನಮಾಡುವವನು. साम गायति—गै (शब्दे) "टक्" (३-२-८)। 2. ಮಹಾವಿಷ್ಣು. "स्वयमपि स्वानुभवप्रीत्या सामानि तादृशि गायति—सामन् + गै (शब्दे) "टक्" (३-२-८)। "स्वयं स्वानुभवप्रीत्या गायतीति च सामगः" इति निरुक्तिः। "त्रिसामा सामगः साम निर्वाणं भेषजं भिषक्" वि० स०।

**सामग्री ಸಾಮಗ್ರೀ** (स्त्री०) 1. ಸಾಧನ, ಸಲಕರಣೆ, ಉಪಕರಣ. 2. ಕಾರಣ. समग्रस्य भावः "ष्यञ्" (५-१-१२४)। "ङीष्" (४-१-४१)। यलोपः (६-४-१५०)। ಪ್ರತ್ಯಕ್ಷಕ್ಕೆ ಸಾಮಗ್ರಿಯು ಇಂದ್ರಿಯ ಸನ್ನಿಕರ್ಷ. ಅನುಮಿತಿಗೆ ಸಾಮಗ್ರಿಯು ವ್ಯಾಪ್ತಿಜ್ಞಾನ ಪರಾಮರ್ಶಾದಿಗಳು. ಘಟ ಮೊದಲಾದ ಕಾರ್ಯಕ್ಕೆ ಕುಲಾಲದಂಡ ಚಕ್ರ ಮೊದಲಾದುವು. ಪಟಾದಿಕಾರ್ಯಕ್ಕೆ ಕುವಿಂದ ತಂತು ತುರೀಸಂಯೋಗ ಮೊದಲಾದುವು.

**साम्रग्य ಸಾಮಗ್ರ್ಯ** (न०) ಸಂಪೂರ್ಣತೆ, ಪೂರ್ಣವಾಗಿರುವಿಕೆ. समग्रस्य भावः "ष्यञ्" (५-१-१२४)। "प्रायेण सामग्र्यविधौ गुणानां पराङ्मुखी विश्वसृजः प्रवृत्तिः" कुमा० ३-२८।

**सामज ಸಾಮಜ** (पुं०) 1. ಗಜ, ಆನೆ. साम्नो सामवेदात् जायते—जनी (प्रादुर्भावे) "ड:" (३-२-९८)। "नानाविधाविष्कृतसामजस्वरः सहस्रवर्त्मा चपलैर्दुरध्ययः" माघ० १२-११। (वि०) 2. ಸಾಮವೇದದಿಂದ ಹುಟ್ಟಿದ, ಸಾಮವೇದದಿಂದ ಉತ್ಪನ್ನವಾದ. "सामजस्तु गजे पुंसि सामोत्थे पुनरन्यवत्" मेदि०। **—जात: —ಜಾತಃ.** "दन्ता दन्तैराहताः सामजानां भङ्गं जग्मुर्न स्वयं सामजाताः" माघ० १८-३३।

**ಸಾಮವೇದದಿಂದ ಗಜೋತ್ಪತ್ತಿ:** ಪ್ರಜಾಪತಿಯು ಸೂರ್ಯನ ಎರಡು ಅಂಡ ಕಪಾಲಗಳನ್ನು ಕೈಯಲ್ಲಿಟ್ಟುಕೊಂಡು ಸಪ್ತ ಸಾಮಗಳನ್ನು ಗಾನಮಾಡುತ್ತಿರಲು ಬ್ರಹ್ಮನಿಂದ ಗಜಗಳು ಹುಟ್ಟಿ ಹೊರಬಂದುವು. "सूर्यस्याण्डकपाले द्वे समानीय प्रजापतिः। हस्ताभ्यां परिगृह्याथ सप्तसामान्यगायत॥ गायतो ब्रह्मणस्तस्मात् समुत्पेतुर्मतङ्गजाः"॥

**सामञ्जस्य ಸಾಮಂಜಸ್ಯ** (न०) ಔಚಿತ್ಯ, ಹೊಂದಿಕೆ, ಯುಕ್ತವಾಗಿರುವಿಕೆ. समञ्जसस्य भावः "ष्यञ्" (५-१-१२४)।

**सामन् ಸಾಮನ್** (ನಂ) 1. ವೇದತ್ರಯದಲ್ಲೊಂದಾದ ಸಾಮವೇದ. स्यति छिनत्ति पापम्—षो (अन्तकर्मणि) "मनिन्" (३-२-७४)। ಸಾಮವೇದವು ಸೂರ್ಯನಿಂದ ಆವಿರ್ಭವಿಸಿತು. ಹಿಂದಿನ ಕಲ್ಪದಲ್ಲಿ ಸರ್ವಜ್ಞನಾದ ಪರಮಾತ್ಮಸ್ವರೂಪನಾದ ಬ್ರಹ್ಮನ ಸ್ಮೃತ್ಯಾರೂಢವಾದ ವೇದಗಳನ್ನೇ ಕಲ್ಪಾದಿಯಲ್ಲಿ ಬ್ರಹ್ಮನು ಋಗ್ಯಜುಃಸಾಮ ವೇದಗಳನ್ನು ಅಗ್ನಿ, ವಾಯು ಮತ್ತು ರವಿಗಳಿಂದ ಆಕರ್ಷಿಸಿದನು. "अग्निवायुरविभ्यस्तु त्रयं ब्रह्म सनातनम्। दुदोह यज्ञसिद्ध्यर्थमृग्यजुःसामलक्षणम्" मनु० १-२३। "अग्नेर्ऋग्वेदो वायोर्यजुर्वेद आदित्यात्सामवेदः" श्रुतिः। "सामभिः सहचराः सहस्रशः स्यन्दनाश्वहृदयङ्गमस्वनैः" कुमा० ८-४१। ವೇದಗಳಲ್ಲಿ ಸಾಮವೇದಕ್ಕೆ ವಿಶಿಷ್ಟವಾದ ಸ್ಥಾನವಿರುವುದು. ಗೀತಾಚಾರ್ಯನು "वेदानां सामवेदोऽस्मि" ಎಂದು ಸಾಮವೇದಕ್ಕೆ ಮಹತ್ತ್ವವನ್ನು ಹೇಳಿರುವುದರಿಂದ ಅದನ್ನು ನಾವು ತಿಳಿಯಬಹುದು. ಸಾಮವೇದದ ಸಾರವಾದ ಉದ್ಗೀಥವು ಪ್ರಣವಸ್ವರೂಪವನ್ನು ಮುಖ್ಯವಾಗಿ ಪ್ರತಿಪಾದಿಸುವುದು. ಸಾಮವೇದವು ಸಹಸ್ರ ಶಾಖೆಗಳಲ್ಲಿರುವುದೆಂದು ಉಕ್ತವಾಗಿದೆ. ಮಹಾಭಾಷ್ಯಕಾರರಾದ ಪತಂಜಲಿಮುನಿಯೂ "सहस्रवर्त्मा सामवेदः" ಎಂದು ಹೇಳಿರುತ್ತಾರೆ. ಸಹಸ್ರಶಾಖೆಗಳು ಎಂದು ಹೇಳಿದ್ದರೂ ಈಗ ಉಪಲಬ್ಧವಾಗಿರುವ ಹೆಸರುಗಳು : (1) ರಾಣಾಯನ (2) ಸತ್ಯಮುಗ್ರ (3) ವ್ಯಾಸಭಾಗುರಿ (4) ಔಲುಂಡಿ (5) ಗೌಲ್ಮುಲವಿ (6) ಭಾನುಮಾನೌಪಮನ್ಯವ (7) ಕಾರಾಟ (8) ಮಶಕ (9) ಗಾರ್ಗ್ಯ (10) ವಾರ್ಷಗಣ್ಯ (11) ಕೌಥುಮಿ (12) ಶಾಲಿಹೋತ್ರ ಮತ್ತು (13) ಜೈಮಿನಿ ಈ 13 ಮಾತ್ರ. ಆದರೆ ಇವುಗಳಲ್ಲಿ ರಾಣಾಯನೀಯ, ಕೌಥುಮ ಮತ್ತು ಜೈಮಿನೀಯ ಈ ಮೂರು ಶಾಖೆಗಳು ಮಾತ್ರ ಉಪಲಬ್ಧವಾಗಿವೆ. ಸಾಮವೇದದಲ್ಲಿ ಋಕ್ಕುಗಳ ಸಮೂಹವಾದ ಆರ್ಚಿಕಾ ಮತ್ತು ಉತ್ತರಾರ್ಚಿಕಾ ಎಂದು ಎರಡು ಭಾಗಗಳಿವೆ. ಮೊದಲನೆಯ ಆರ್ಚಿಕೆಯಲ್ಲಿ ಆರು ಪ್ರಪಾಠಕ (ಅಧ್ಯಾಯ) ಗಳಿವೆ. ಉತ್ತರಾರ್ಚಿಕೆಯಲ್ಲಿ ಒಂಬತ್ತು ಪ್ರಪಾಠಕ (ಅಧ್ಯಾಯ) ಗಳಿರುವುವು.

**ಸಾಮವೇದ ಬ್ರಾಹ್ಮಣಗಳು 9 :** (1) ತಾಂಡ್ಯ ಮಹಾಬ್ರಾಹ್ಮಣ (2) ಷಡ್ವಿಂಶ ಬ್ರಾಹ್ಮಣ (3) ಸಾಮವಿಧಾನ ಬ್ರಾಹ್ಮಣ (4) ಆರ್ಷೇಯ ಬ್ರಾಹ್ಮಣ (5) ದೈವತ ಬ್ರಾಹ್ಮಣ (6) ಉಪನಿಷದ್ಬ್ರಾಹ್ಮಣ (7) ಸಂಹಿತೋಪನಿಷದ್ಬ್ರಾಹ್ಮಣ (8) ವಂಶಬ್ರಾಹ್ಮಣ ಮತ್ತು (9) ಜೈಮಿನೀಯ ಬ್ರಾಹ್ಮಣ.

**ಸಾಮವೇದದ ಉಪನಿಷತ್ತುಗಳು :** (1) ಛಾಂದೋಗ್ಯ ಮತ್ತು (2) ಕೇನೋಪನಿಷತ್ತು. 2. ಸಾಮೋಪಾಯ, ಪ್ರಿಯವಾದ ಮಾತುಗಳಿಂದ ಕೋಪ ಶಮನಮಾಡುವುದು, ಒಳ್ಳೆಯ ಮಾತುಗಳಿಂದ ಸಮಾಧಾನಪಡಿಸುವುದು. ಇದು ನಾಲ್ಕು ಉಪಾಯಗಳಲ್ಲಿ ಮೊದಲನೆಯ ಉಪಾಯ. (1) गुणसङ्कीर्तनम् (2) सम्बन्धोपाख्यानम् (3) परस्परोपकारसन्दर्शनम् (4) आयतिप्रदर्शनम् ಮತ್ತು (5) आत्मोपनिधानम् ಎಂದು ಉಪಾಯವು ಐದು ವಿಧ. ಧಾರ್ಮಿಕ ಪುರುಷನನ್ನು ಅವನ ಜಾತಿ ವಂಶ ಶಾಸ್ತ್ರಜ್ಞಾನ (ವಿದ್ಯೆ) ಸಚ್ಚಾರಿತ್ರಗಳನ್ನೂ ಅವನ ಪೂರ್ವಜರು ಮಾಡಿದ ಉಪಕಾರವನ್ನೂ ಮತ್ತು ಅಪಕಾರಮಾಡದಿರುವುದನ್ನೂ ಹೊಗಳಿ ಸಾಮೋಪಾಯದಿಂದ ಸಮಾಧಾನಪಡಿಸಬೇಕು.

ಉತ್ಸಾಹಶೂನ್ಯನೂ ಯುದ್ಧದಿಂದ ಶ್ರಾಂತನೂ ಮಾಡಿದ ಸಾಮಾದ್ಯುಪಾಯಗಳ ವೈಫಲ್ಯವುಳ್ಳವನೂ ವ್ಯಯ ಮತ್ತು ಕ್ಷಯಗಳಿಂದ ಅಭಿಭೂತನೂ ಶುದ್ಧ ಮನಸ್ಕರಾದ ಮಿತ್ರಲಾಭದಲ್ಲಿ ಅಪೇಕ್ಷೆಯುಳ್ಳವನೂ ಎಲ್ಲರೊಡನೆಯೂ ಮೈತ್ರಿಯಿಂದಿರುವ ಅಭಿಲಾಷೆಯುಳ್ಳವನೂ ಆದ ಪುರುಷನನ್ನು ಸಾಮೋಪಾಯದಿಂದ ಸರಿಪಡಿಸಿಕೊಳ್ಳಬೇಕು. "धार्मिकं जातिकुलश्रुतिवृत्तस्तवेन सम्बन्धेन पूर्वेषां त्रैकाल्योपकारानपकाराभ्यां वा सान्त्वयेत्। निवृत्तोत्साहं विग्रहश्रान्तं प्रतिहतोपायं क्षयव्ययाभ्यां प्रवासेन च उपतप्तं शौचेनान्यं लिप्समानं मैत्रीप्रधानं वा कल्याणबुद्धिं साम्ना साधयेत्" अर्थशा०। "उपायमास्थितस्यापि नश्यन्त्यर्थाः प्रमाद्यतः। हन्ति नोपशयस्थोऽपि शयालुर्मृगयुर्मृगान्" माघ० २-८०।

**सामनी ಸಾಮನೀ** (स्त्री०) ಹಸುವನ್ನು ಕಟ್ಟುವ ಹಗ್ಗ.

**सामन्त ಸಾಮಂತ** (पुं०) 1. ಪಕ್ಕದ ರಾಜ್ಯದ ದೊರೆ. संलग्नोऽन्त एकदेशोऽस्याः—समन्तायाः स्वदेशाव्यवहितभूमेरयम् "अण्" (४-३-१२०)। समन्तात् भवः "अण्" वा। "सामन्तसम्भावनयैव धीरः कैलासनाथं तरसा जिगीषुः" रघु० ५-२८। (वि०) 2. ರಾಜ್ಯದ ಗಡಿಯೊಳಗೆ ವಾಸಿಸುವವನು. "साक्ष्यभावे तु चत्वारो ग्रामाः सामन्तवासिनः। सीमाविनिर्णयं कुर्युः प्रयता राजसन्निधौ" मनु० ८-२५८।

**सामन्य ಸಾಮನ್ಯ** (पुं०) ಸಾಮವೇದವನ್ನು ಅಧ್ಯಯನ ಮಾಡಿ ಪ್ರವೀಣನಾದ ಬ್ರಾಹ್ಮಣ. सामसु साधुः "यत्" (४-४-९८)। अनः प्रकृतिभावः (६-४-१६८)।

"ऋग्यजुषमधीयानान् सामन्याश्च समर्चयन्। बुभुजे देवसात् कृत्वा शल्यमुख्यं च होमवान्" भट्टि० ४-९।

**सामयाचारिक ಸಾಮಯಾಚಾರಿಕ** (वि०) ಸಂಪ್ರದಾಯದ ಅನುಷ್ಠಾನವೇ ಪ್ರಯೋಜನವಾಗಿರುವ. समयाचार: प्रयोजनमस्य "ठञ्" (५-१-१०९)।

**सामयिक ಸಾಮಯಿಕ** (वि०) 1. ಅನುಗುಣವಾದ ಸಮಯ ಒದಗಿರುವ, ಸಮಯ ಒದಗಿ ಬಂದಿರುವ. "समयोऽस्य प्राप्त: "ठञ्" (५-१-१०४)। "निज धर्माविरोधेन यस्तु सामयिको भवेत्" याज्ञ० २-१२६। "किमसामयिकं वितन्वता मनस: क्षोभमुपात्तरंहस:" किरा० २-४०। 2. ಸಂಪ್ರದಾಯಕ್ಕೆ ಅನುಗುಣವಾದ. 3. ನಿಯಮಕ್ಕೆ ಅನುಗುಣವಾದ.

**सामयोनि ಸಾಮಯೋನಿ** (पुं०) 1. ಗಜ, ಆನೆ. साम सामवेद: योनि: कारणं यस्य। 2. ಬ್ರಹ್ಮ. साम्न: योनि: कारणम्। (वि०) 3. ಸಾಮವೇದದಿಂದ ಹುಟ್ಟಿದ. "चतुर्भुजांशप्रभव: स तेषां दानप्रवृत्तेरनुपारतानाम्। सुरद्विपानामिव सामयोनिर्भिन्नोऽष्टधा विप्रससार वंश:" रघु० १६-३। "सामयोनिस्तु सामोत्थे ब्रह्मकुञ्जरयोरपि" मेदि०।

**सामरस्य ಸಾಮರಸ್ಯ** (न०) 1. ಸಮಾನ ರಸದಿಂದ ಕೂಡಿರುವಿಕೆ. समरसस्य भाव: "ष्यञ्" (५-१-१२४)। 2. ಸಾದೃಶ್ಯ, ಸಮಾನತೆ. "तरुणार्कप्रभासारसामरस्यजुषा त्विषा" याद० १६-५३।

**सामर्थ्य ಸಾಮರ್ಥ್ಯ** (न०) 1. ಕಾರ್ಯವನ್ನು ಸಾಧಿಸುವ ಶಕ್ತಿ, ದಕ್ಷತೆ, ಯೋಗ್ಯತೆ. समर्थस्य भाव: "ष्यञ्" (५-१-१२४)। 2. ಶಕ್ತಿ, ಬಲ, ಪರಾಕ್ರಮ. "निन्दन्तस्तव सामर्थ्यं ततो दु:खतरं नु किम्" गीता २-३६। 3. ಪ್ರತ್ಯೇಕವಾಗಿ ಅರ್ಥವನ್ನು ಕೊಡುವ ಪದಗಳಿಗೆ ಸಮುದಾಯ ಶಕ್ತಿಯಿಂದ ವಿಶಿಷ್ಟವಾದ ಒಂದು ಅರ್ಥವನ್ನು ಕೊಡುವ ಶಕ್ತಿ. राजपुरुष: ಎಂಬಲ್ಲಿ राजन् ಮತ್ತು पुरुष ಪದಗಳಿಗೆ ಸ್ವಾರ್ಥಪರ್ಯವಸಾಯಿಯಾದ ಅರ್ಥಗಳಿದ್ದರೂ ಸಮುದಾಯಶಕ್ತಿಯಿಂದ ರಾಜಪುರುಷನೆಂಬ ಅರ್ಥವನ್ನು ಕೊಡುವ ಶಕ್ತಿಯು ಏಕಾರ್ಥೀಭಾವ ಲಕ್ಷಣ ಸಾಮರ್ಥ್ಯ. सङ्गतोऽर्थ: समर्थ:। ಈ ಸಾಮರ್ಥ್ಯವು व्यपेक्षालक्षणम् ಮತ್ತು एकार्थीभावलक्षणम् ಎಂದು ಎರಡು ವಿಧ. [ವಿವರಕ್ಕೆ ಆಯಾ ಪದಗಳಲ್ಲಿ ನೋಡಿ.] "सामर्थ्यं योग्यतायां स्याच्छक्तावपि नपुंसकम्" मेदि०।

**सामवाद ಸಾಮವಾದ** (पुं०) ಮೃದುವಚನ, ಸಮಾಧಾನಪಡಿಸುವ ಮಾತು, ಪ್ರಿಯವಾದ ಮಾತು. साम्नो वाद:। "सामवादा: सकोपस्य तस्य प्रत्युत दीपका:। प्रतप्तस्येव सहसा सर्पिषस्तोयबिन्दव:" माघ० २-५५।

**सामवायिक ಸಾಮವಾಯಿಕ** (वि०) 1. ಗುಂಪನ್ನು ಸೇರಿಸುವ, ಸಮೂಹವನ್ನು ಒಟ್ಟಿಗೆ ಸೇರಿಸುವ. समवायान् समवैति "ठक्" (४-४-४३)। 2. ಒಂದು ಗುಂಪಿಗೆ ಸೇರಿದ. (पुं०) 3. ಒಂದು ಸಂಘದ ಯಜಮಾನ, ಒಂದು ಸಂಸ್ಥೆಯ ಮುಖಂಡ. "भेद्या: शत्रोरभिव्यक्तशासनै: सामवायिका:" माघ० २-११३।

**सामविद् ಸಾಮವಿದ್** (पुं०) 1. ಸಾಮವೇದವನ್ನು ತಿಳಿದವನು, ಸಾಮವೇದವನ್ನು ಅಧ್ಯಯನ ಮಾಡಿದ ಬ್ರಾಹ್ಮಣ. सामानि वेत्ति—विद (ज्ञाने) "क्विप्" (३-२-६१)। 2. ಸಾಮವೇದಿಯಾದ ಉದ್ಗಾತೃ. "अध्वर्यूद्गातृहोतारो यजु:सामर्ग्विद: क्रमात्" अम०। "सप्तभेदकरकल्पितस्वरं साम सामविदसङ्गमुज्जगौ" माघ० १४-२१।

**सामवेद ಸಾಮವೇದ** (पुं०) ವೇದತ್ರಯದಲ್ಲಿ ಮೂರನೆಯದಾದ ಸಾಮವೇದ. [ವಿವರಕ್ಕೆ "सामन्" ಪದದಲ್ಲಿ ನೋಡಿ.]

**सामाजिक ಸಾಮಾಜಿಕ** (पुं०) ಸಭೆಯಲ್ಲಿರುವವನು, ಸಭೆಯಲ್ಲಿ ಸೇರಿರುವವನು, ಸಭ್ಯ. समवायं समवेति—समाज "ठक्" (४-४-४३)। "अये, आवर्जितानि च मया सकलसामाजिकानां मनांसीति मे निश्चय:" रत्ना०।

**सामानाधिकरण्य ಸಾಮಾನಾಧಿಕರಣ್ಯ** (न०) ಸಮಾನವಾದ ಅಧಿಕರಣದಲ್ಲಿರುವಿಕೆ. समानमधिकरणं ययो:, तयोर्भाव: "ष्यञ्" (५-१-१२४)। ಎರಡು ವಸ್ತುಗಳು ಒಂದೇ ಅಧಿಕರಣ (ಆಧಾರ, ಆಶ್ರಯ) ದಲ್ಲಿರುವುದು ಸಾಮಾನಾಧಿಕರಣ್ಯ. ವಹ್ನಿ ಮತ್ತು ಧೂಮಗಳಿಗೆ ಮಹಾನಸ ಪರ್ವತಾದಿಗಳು ಆಶ್ರಯವಾಗಿರುವುದರಿಂದ ಸಾಮಾನಾಧಿಕರಣ್ಯ. ಸಾಮಾನಾಧಿಕರಣ್ಯವು ದೈಶಿಕ ಮತ್ತು ಕಾಲಿಕಗಳೆಂದು ಎರಡು ವಿಧ. ವಹ್ನಿ ಮತ್ತು ಧೂಮಗಳಿಗೆ ಸಾಮಾನಾಧಿಕರಣ್ಯವು ದೈಶಿಕ. ಘಟ ಪಟಾದಿಗಳು ಬೇರೆ ಬೇರೆ ಕಡೆಯಿದ್ದರೂ ಏಕಕಾಲದಲ್ಲಿರುವುದರಿಂದ ಅವುಗಳಿಗೆ ಕಾಲಿಕಸಾಮಾನಾಧಿಕರಣ್ಯ. "सामानाधिकरण्यं हि तेजस्तिमिरयो: कुत:" माघ० २-६२।

**सामान्य ಸಾಮಾನ್ಯ** (वि०) 1. ಸರ್ವರಿಗೂ ಸಮಾನವಾದ, ಸಾರ್ವಜನಿಕವಾದ, ಎಲ್ಲರಿಗೂ ಸೇರಿದ. 2. ಸಾಧಾರಣ

ವಾದ, ಏಕರೀತಿಯಾದ, ವಿಶೇಷರೀತಿಯದಲ್ಲದ. "एते सत्पुरुषाः परार्थघटकाः स्वार्थान् परित्यज्य ये सामान्यास्तु परार्थमुद्यमभृतः स्वार्थाविरोधेन ये" भर्तृ० १-६४। "सामान्यप्रतिपत्तिपूर्वकमियं दारेषु दृश्या त्वया" शाकु० ४-१६। 3. ಸಾಧಾರಣವಾದ, ಸಾರ್ವತ್ರಿಕವಾದ. "उक्तिरर्थान्तरन्यासः स्यात्सामान्यविशेषयोः" चन्द्रा०। 4. ಅಸಭ್ಯನಾದವನು, ಸಂಸ್ಕೃತಿಯಿಲ್ಲದವನು, ಕೀಳು ಮಟ್ಟದವನು. 5. ಸಾಧಾರಣವಾದ, ಸಮಾನವಾದ. "एकैव मूर्तिर्बिभिदे त्रिधा सा सामान्यमेषां प्रथमावरत्वम्" कुमा० ७-४४। (न०) 6. ಜಾತಿ, ಅನೇಕ ಸಮಾನ ವಸ್ತುಗಳಲ್ಲಿರುವ ಘಟತ್ವ ಗೋತ್ವ ಮೊದಲಾದ ಜಾತಿ. समानस्य भावः — समान "ष्यञ्" (५-१-१२४)। "जातिर्जातं च सामान्यं व्यक्तिस्तु पृथगात्मिका" अम०। "नित्यत्वे सति अनेकसमवेतं सामान्यम्"। 7. ಸಾದೃಶ್ಯ, ಸಮಾನತೆ. "सामान्यमृषिभिर्गत्वा ब्रह्मलोकनिवासिभिः" भा०। 8. ಸಾದೃಶ್ಯಪ್ರಯೋಜಕ ಧರ್ಮ. "मुखं पद्ममिव सुन्दरम्" ಎಂಬಲ್ಲಿ ಸೌಂದರ್ಯವು ಸಾಧಾರಣಧರ್ಮ. ಇದೇ ಸಾಮಾನ್ಯ. 9. ಅಧಿಕ ವಿಷಯುಗಳಿಗೆ ಅನ್ವಯಿಸುವ ಮಾತು. "ब्राह्मणाय दधि दीयताम् तक्रं कौण्डिन्याय" ಎಂಬಲ್ಲಿ ದಧಿದಾನವು ಅಧಿಕ ಬ್ರಾಹ್ಮಣ ವಿಷಯಕವಾದುದರಿಂದ ಸಾಮಾನ್ಯ. ತಕ್ರ ದಾನವು ವಿಶೇಷವಾಯಿತು. 10. ಸಾಮಾನ್ಯ ಶಾಸ್ತ್ರ, ಎಲ್ಲಾ ಕಡೆಗೂ ಅನ್ವಯಿಸುವ ಶಾಸ್ತ್ರ. ಈ ಸಾಮಾನ್ಯ ಶಾಸ್ತ್ರವು ವಿಶೇಷಶಾಸ್ತ್ರದಿಂದ ಬಾಧಿಸಲ್ಪಡುವುದು. ವಿಶೇಷ ಶಾಸ್ತ್ರವಿರುವಲ್ಲಿ ಸಾಮಾನ್ಯಶಾಸ್ತ್ರಕ್ಕೆ ಪ್ರವೃತ್ತಿಯಿರು ವುದಿಲ್ಲ. "मा हिंस्यात् सर्वा भूतानि" ಎಂಬ ಸಾಮಾನ್ಯ ಶಾಸ್ತ್ರಕ್ಕೆ "वायव्यं श्वेतमालभेत" ಎಂಬ ವಿಶೇಷ ಶಾಸ್ತ್ರದಿಂದ ಬಾಧೆಯುಂಟಾಗಿ ಅದು ವಿಶೇಷ ವಿಧಿಯಿರು ವಲ್ಲಿ ಪ್ರವರ್ತಿಸುವುದಿಲ್ಲ. 11. ಅರ್ಥಾಲಂಕಾರದ ಒಂದು ಭೇದ, ಸಾಮಾನ್ಯಾಲಂಕಾರ. ಉಪಮಾನ ಮತ್ತು ಉಪಮೇಯಗಳಲ್ಲಿ ಪರಸ್ಪರ ಸಾದೃಶ್ಯದಿಂದ ವ್ಯಾವರ್ತಕ ಧರ್ಮವಿಲ್ಲದೆ ವಿಶೇಷವು ತಿಳಿಯದಿರುವ ಕಡೆ **ಸಾಮಾನ್ಯಾಲಂಕಾರ.** "सामान्यं यदि सादृश्याद्विशेषो नोपलक्ष्यते"। **उदा:** "पद्माकरं प्रविष्टानां मुखं नालक्षि सुभ्रुवाम्" चन्द्रा०।

**सामान्या ಸಾಮಾನ್ಯಾ** (स्त्री०) ಮೂರು ವಿಧ ನಾಯಿಕೆಯ ರಲ್ಲಿ ಒಬ್ಬಳಾದ ಸಾಧಾರಣ ನಾಯಿಕೆ, ವೇಶ್ಯೆ. "अथ नायिका त्रिभेदा स्वान्या साधारणी स्त्रीति" सा० द० ३-५६। ಸುರತಕಾರ್ಯದಲ್ಲಿ ಅಭಿಜ್ಞಳೂ ನೃತ್ಯ ಗೀತ ಮೊದಲಾದ ಕಲೆಗಳಲ್ಲಿ ನಿಪುಣಳೂ ಆದವಳು ಸಾಮಾನ್ಯ ನಾಯಿಕೆ. ಇವಳಿಗೆ ಗುಣವಂತರಲ್ಲಿ ಅನುರಾಗವಿಲ್ಲ. ಅಸಭ್ಯರೆಂದು ತಿಳಿದೂ ಇವಳು ಅವರನ್ನು ದ್ವೇಷಿಸುವು ದಿಲ್ಲ. ಧನ ಸಂಪಾದನೆಯನ್ನೇ ಪ್ರಧಾನವಾಗಿಟ್ಟುಕೊಂಡು ಕೇವಲ ಧನಿಕರನ್ನೇ ಪ್ರೀತಿಸುವಳು. "धीरा कलाप्रगल्भा स्याद्वेश्या सामान्यनायिका। निर्गुणानपि न द्वेष्टि न रज्यति गुणिष्वपि ॥ वित्तमात्रं समालोक्य सा रागं दर्शयेद्बहिः" सा० द० ३-६७, ६८। ಇತ್ಯಾದಿ.

**सामासिक ಸಾಮಾಸಿಕ** (पुं०) 1. ತತ್ಪುರುಷ ಮೊದಲಾದ ಸಮಾಸಗಳ ಸಮೂಹ. समासानां समूहः "ठक्" (४-२-४७)। "अक्षराणामकारोऽस्मि द्वन्द्वः सामासिकस्य च" गीता १०-३३। 2. ಸಂಕ್ಷಿಪ್ತವಾದ, ಸಂಗ್ರಹ ವಾದ. 3. ಒಟ್ಟುಗೂಡಿಸಿರುವ, ಒಂದಾಗಿರುವ.

**सामि ಸಾಮಿ** (अव्य०) 1. ಅರ್ಧ. 2. ನಿಂದೆ, ದೂಷಣೆ. सामयति—साम (सान्त्वप्रयोगे) "इः" (उ० ४-१३८)। "सामि त्वर्धे जुगुप्सिते" अम०। "धनुषा शार्ङ्गभीमेन सामिविष्फारितेन सः" याद० २२-१८७। "सामि निन्दार्धयोर्मतम्" मेदि०।

**सामिकृत ಸಾಮಿಕೃತ** (वि०) ಅರ್ಧ ಮಾಡಲ್ಪಟ್ಟ, ಪೂರ್ಣವಾಗಿ ಮಾಡಲ್ಪಡದ. सामि कृतम्। "अभिवीक्ष्य सामिकृतमण्डनं यतीः कररुद्धनीविगलदंशुकाः स्त्रियः" माघ० १३-३१।

**सामिधेनी ಸಾಮಿಧೇನೀ** (स्त्री०) 1. ಸಮಿದಾಧಾನ ಮಾಡಿ ಅಗ್ನಿಯ ಪ್ರಜ್ವಲನೆಗೆ ಹೇಳುವ ಋಕ್ಕು (ಮಂತ್ರ). समिधामाधाने—समिध् "षेण्यण्" (वा० ४-३-१२०)। "ङीष्" (४-१-४१)। "विधिविहितविरिब्धैः सामिधेनीरधीत्य" माघ० ११-४१। 2. ಸಮಿತ್ತು. "सामिधेनी समिदृचोः" हेम०।

**सामीची ಸಾಮೀಚೀ** (स्त्री०) ವಂದನೆ, ಸ್ತುತಿ, ಸ್ತೋತ್ರ. "सामीची वन्दना मता" हारा०।

**सामीप्य ಸಾಮೀಪ್ಯ** (न०) 1. ಹತ್ತಿರ. समीपस्य भावः "ष्यञ्" (वा० ५-१-१२४)। 2. ಮುಕ್ತನಾದ ಜೀವನು ಪರಮಾತ್ಮನ ಕೈಂಕರ್ಯಕ್ಕಾಗಿ ಸಮೀಪದಲ್ಲಿರುವುದು. ಇದು ನಾಲ್ಕು ವಿಧ ಮೋಕ್ಷಗಳಲ್ಲೊಂದು ಮತ್ತು ಸಾಯುಜ್ಯ ರೂಪಮೋಕ್ಷದಲ್ಲಿ ಅಂತರ್ಗತವಾದ ಒಂದು ಧರ್ಮ.

**सामुद्र ಸಾಮುದ್ರ** (न०) 1. ಸಮುದ್ರದ ಉಪ್ಪು. समुद्रे भवम् "अण्" (४-३-५३)। 2. ಶರೀರದ ಲಕ್ಷಣ

ವನ್ನು ತಿಳಿಸುವ ಗ್ರಂಥ. समुद्रेण मुनिना कृतो ग्रन्थः —समुद्र "अण्" (४-३-११६)। 3. ಸಮುದ್ರದ ನೊರೆ. (ಪುಂ) 4. ಸಮುದ್ರದಲ್ಲಿ ಸಂಚರಿಸುವ ವರ್ತಕ. (ವಿಂ) 5. ಸಮುದ್ರದಲ್ಲಿ ಉಂಟಾದ. समुद्रे भवः "अण्"।

**सामुद्रक ಸಾಮುದ್ರಕ** (ನಂ) 1. ಸಮುದ್ರದ ಉಪ್ಪು. सामुद्रमेव स्वार्थे "कन्"। 2. ಮನುಷ್ಯನ ಶರೀರದ ಲಕ್ಷಣವನ್ನು ತಿಳಿಸುವ ಶಾಸ್ತ್ರ, ದೇಹದ ಲಕ್ಷಣವನ್ನು ತಿಳಿಸುವ ಒಂದು ಗ್ರಂಥ. ಮಹಾಪುರುಷನ ಲಕ್ಷಣಗಳು ಮೂವತ್ತೆರಡು. [ವಿವರಕ್ಕೆ "द्वात्रिंशल्लक्षण" ಪದದಲ್ಲಿ ನೋಡಿ.]

**सामुद्रिक ಸಾಮುದ್ರಿಕ** (ಪುಂ) ಸಾಮುದ್ರಕ ಶಾಸ್ತ್ರವನ್ನು ಅಧ್ಯಯನ ಮಾಡಿದವನು ಮತ್ತು ತಿಳಿದವನು. समुद्रेण प्रोक्तं शास्त्रमधीते वेत्ति वा "ठक्" (४-२-५९)।

**सामोद ಸಾಮೋದ** (ವಿಂ) 1. ಹರ್ಷದಿಂದ ಕೂಡಿದ. 2. ಪರಿಮಳದಿಂದ ಕೂಡಿದ. आमोदेन सह वर्तते। "सामोदपुष्पाशुगवासिताङ्गीम् देहोपदेहात्किरणैर्मणीनाम्" नैष० १०-९७।

**साम्परायिक ಸಾಂಪರಾಯಿಕ** (ನಂ) 1. ಯುದ್ಧ, ಕಾಳಗ, ಸಂಗ್ರಾಮ. सम्परायाय विपदे प्रभवति —सम्पराय "ठञ्" (५-१-१०१)। (ವಿಂ) 2. ಪಾರಲೌಕಿಕವಾದ, ಭವಿಷ್ಯತ್ತಿನಲ್ಲಿ ಹಿತವಾದ. सम्पराये उत्तरकाले हितम् "ठक्" (५-१-५)। "प्रभुः प्रथमकल्पस्य योऽनुकल्पेन वर्तते। न साम्परायिकं तस्य दुर्मतेर्विद्यते फलम्" मनु० ११-३०। 3. ಯುದ್ಧಕ್ಕೆ ಅರ್ಹವಾದ, ಯುದ್ಧ ಮಾಡಲು ಶಕ್ತವಾದ. सम्परायं युद्धमर्हति —सम्पराय "ठक्" (५-१-६३)। "पित्रा संवर्धितो नित्यं कृतास्त्रः साम्परायिकः। तस्य दण्डवतो दण्डः स्वदेहान्न व्यशिष्यत" रघु० १७-६२।

**साम्प्रतम् ಸಾಂಪ್ರತಮ್** (ಅವ್ಯಂ) 1. ಯುಕ್ತ, ಯೋಗ್ಯ. तनु (विस्तारे) "डम्" पृषो०। समो दीर्घः। "सम्प्रत्यसाम्प्रतं वक्तुमुक्ते मुसलपाणिना। निर्धारितेऽर्थे लेखेन खलूक्त्वा खलु वाचिकम्" माघ० २-७०। 2. ಈಗ, ಈವಾಗ. सम् च प्रति च अनयोः समाहारः, ततः प्रज्ञा० "अण्" (५-४-३८)। "त्वदीक्षणात्प्राप्तफलोऽस्मि साम्प्रतं जरन् पुनर्यौवनमाप्तवानिव" याद० १४-३२। (ವಿಂ) 3. ಈಗ ಇರುವ, ಈ ಕಾಲದಲ್ಲಿ ರುವ. "तस्य ते कीर्तयिष्यामि मनोर्वैवस्वतस्य च। विसर्गं भरतश्रेष्ठ साम्प्रतस्य महाद्युतेः" हरिवं०।

**साम्प्रतिक ಸಾಂಪ್ರತಿಕ** (ವಿಂ) ಈಗ ಉಂಟಾದ, ಈ ಕಾಲಕ್ಕೆ ಸಂಬಂಧಿಸಿದ, ಈಗಿನ ಕಾಲದ ಸಂಬಂಧವಾದ. सम्प्रति भवम् "ठक्" (४-३-५३)। "वत्से, साम्प्रतिकमेवैतत्। कर्तव्यानि खलु दुःखितैर्दुःखनिर्वापणानि" उ० रा० ३।

**साम्प्रदायिक ಸಾಂಪ್ರದಾಯಿಕ** (ವಿಂ) ಸಂಪ್ರದಾಯ ದಿಂದ ಬಂದ, ವಂಶಪರಂಪರೆಯಾಗಿ ಬಂದ.

**साम्मुख्य ಸಾಮ್ಮುಖ್ಯ** (ನಂ) 1. ಎದುರಿಗೆ ಬಂದಿರುವುದು, ಎದುರಾಗಿ ಕುಳಿತಿರುವುದು. सम्मुखस्य भावः "ष्यञ्" (५-१-१२४)। 2. ಅನುಕೂಲವಾಗಿರುವಿಕೆ.

**साम्य ಸಾಮ್ಯ** (ನಂ) 1. ಸಮಾನತೆ, ಒಂದೇ ರೀತಿಯಾಗಿರುವಿಕೆ. समस्य भावः "ष्यञ्" (५-१-१२४)। "भवन्ति साम्येऽपि निविष्टचेतसां वपुर्विशेषेष्वतिगौरवाः क्रियाः" कुमा० ५-३१। 2. ಸದೃಶವಾಗಿರುವಿಕೆ, ಹೋಲಿಕೆ, ಸಾದೃಶ್ಯ. "शृङ्गप्रोतप्रावृषेण्याम्बुदस्य स्पष्टं प्रापत् साम्यमुर्वीधरस्य" माघ० १८-३८। 3. ಸಮಭಾವ, ಭೇದಭಾವವಿಲ್ಲದೆ ಎಲ್ಲಾ ಆತ್ಮರಲ್ಲೂ ಒಂದೇ ವಿಧವಾದ ಭಾವನೆ. "इहैव तैर्जितस्सर्गो येषां साम्ये स्थितं मनः। निर्दोषं हि समं ब्रह्म तस्मात् ब्रह्मणि ते स्थिताः" गीता ५-१९।

**साम्राज्य ಸಾಮ್ರಾಜ್ಯ** (ನಂ) 1. ರಾಷ್ಟ್ರದ ಸರ್ವಾಧಿಕಾರ, ರಾಷ್ಟ್ರದ ಆಧಿಪತ್ಯ, ರಾಷ್ಟ್ರದ ಪ್ರಭುತ್ವ. सम्राजो भावः "ष्यञ्" (५-१-१२४)। "पद्मा पद्मातपत्रेण भेजे साम्राज्यदीक्षितम्" रघु० ४-५। (ಪುಂ) 2. ಸಾರ್ವಭೌಮನ ಮಗ, ಸಮ್ರಾಟನ ಪುತ್ರ, ರಾಷ್ಟ್ರಾಧಿಪತಿಯ ಪುತ್ರ. सम्राजोऽपत्यम् "ण्यः" (४-१-१५१)।

**सायम् ಸಾಯಮ್** (ಅವ್ಯಂ) 1. ಸಾಯಂಕಾಲ, ಹಗಲಿನ ಕೊನೆಯ ಭಾಗ. स्यति समापयति दिनम्—षो (अन्तकर्मणि) "णम्" युगागमः (७-३-३३)। "वधूर्भक्तिमती चैनामर्चितामातपोवनात्। प्रयता प्रातरन्वेतु सायं प्रत्युद्व्रजेदपि" रघु० १-९०। 2. ಸಂಧ್ಯಾಕಾಲ. "स दुष्प्रापयशाः प्रापदाश्रमं श्रान्तवाहनः। सायं संयमिनस्तस्य महर्षेर्महिषीसखः" रघु० १-४८। (ಪುಂ) –यः –ಯಃ. 3. ಬಾಣ. स्यति—षो (अन्तकर्मणि) "णः" (३-१-१४१)। "सायः काण्डे दिनान्ते च" मेदि०।

**सायंकाल ಸಾಯಂಕಾಲ** (ಪುಂ) ಹಗಲಿನ ಕೊನೆಯ ಭಾಗ, ಪ್ರಾತಃಕಾಲ ಮೊದಲಾದ ಹಗಲಿನ ಐದು ಭಾಗಗಳಲ್ಲಿ ಕೊನೆಯ ಭಾಗ, ಸಾಯಂ ಸಂಧ್ಯಾಕಾಲ. सायं सायाह्नः कालः। "सायंकाले वनान्ते कुसुमितसमये सैकते चन्द्रिकायां त्रैलोक्याकर्षणाङ्गं सुरनरगणिकामोहनापाङ्गमूर्तिम्" कृष्णकर्णामृतम्।

**सायंसन्ध्या ಸಾಯಂಸಂಧ್ಯಾ** (स्त्री०) 1. ಸಾಯಂಕಾಲದಲ್ಲಿ ಆಚರಿಸಬೇಕಾದ ಉಪಾಸನೆ. 2. ಸಾಯಂಕಾಲದಲ್ಲಿ ಉಪಾಸಿಸಲ್ಪಡುವ ದೇವತೆ. 3. ಸೂರ್ಯನ ಅಸ್ತಮಾನ ಕಾಲ. 4. ಸಂಧ್ಯಾವಂದನೆ ಮಾಡುವ ಕಾಲ. सम्यक् ध्यायन्त्यस्याम्—इति सन्ध्या—सायंकाले सन्ध्या।

**सायंसन्ध्यादेवता ಸಾಯಂಸಂಧ್ಯಾದೇವತಾ** (स्त्री०) ಸರಸ್ವತಿ.

**सायक ಸಾಯಕ** (ಪುಂ) 1. ಬಾಣ, ಶರ, ಅಂಬು. स्यति छिनत्ति—षो (अन्तकर्मणि) "ण्वुल्" (३-१-१३३)। युक् (७-३-३३)। "बाणानसूत निशितान्युधि यान्सुजैत्रांस्तैः सायका बिभिदिरे सहसा सुरारेः" कुमा० १७-२२। 2. ಖಡ್ಗ, ಕತ್ತಿ. 3. ಐದು ಸಂಖ್ಯೆ.

**सायन्तन ಸಾಯಂತನ** (वि०) ಸಾಯಂಕಾಲದಲ್ಲಿರುವ, ಸಾಯಂಕಾಲದ ಸಂಬಂಧವಾದ. सायं भवः "ट्युः" तुट् च (४-३-२३)। "अलिनाऽरमताऽलिनी शिलीन्ध्रे सह सायन्तनदीपपाटलाभे" माघ० ६-७२। स्त्रियां "ङीप्" (४-१-१५)। –तनी –ತನೀ. "सायन्तनीं तिथिप्रण्यः पङ्कजानां दिवातनीम्। कान्ति कान्त्या सदातन्या ह्रेपयन्ती शुचिस्मिता" भट्टि० ५-६५।

**सायाह्न ಸಾಯಾಹ್ನ** (ಪುಂ) ಪ್ರಾತಃಕಾಲ ಮೊದಲಾದ ಹಗಲಿನ ಐದು ಭಾಗಗಳಲ್ಲಿ ಕೊನೆಯ (ಐದನೆಯ) ಭಾಗ. अह्नः सायः सायाह्नः (६-३-११०)। **ಹಗಲಿನ ಐದು ಭಾಗಗಳು :** (1) प्रातः (2) सङ्गवः (3) मध्याह्नः (4) अपराह्णः ಮತ್ತು (5) सायाह्नः। ಒಂದೊಂದು ಭಾಗದ ಕಾಲ ಮೂರು ಮುಹೂರ್ತಗಳು : "प्रातःकालो मुहूर्तांस्त्रीन् सङ्गवस्तावदेव तु। मध्याह्नस्त्रिमुहूर्तं स्यादपराह्णस्ततःपरम्। सायाह्नस्त्रिमुहूर्तं स्यात् श्राद्धं तत्र न कारयेत्। राक्षसी नाम सा वेला गर्हिता सर्वकर्मसु" तिथ्यादितत्त्वम्।

**सायुज्य ಸಾಯುಜ್ಯ** (ನಂ) 1. ಮೋಕ್ಷ, ಸಹಯೋಗ, ಸಾಲೋಕ್ಯ ಮೊದಲಾದ ಐದು ವಿಧ ಮುಕ್ತಿಗಳಲ್ಲೊಂದು ವಿಧ ಮುಕ್ತಿ. ಪರಮಾತ್ಮನೊಡನೆ ಇದ್ದು ಪರಮಾತ್ಮನಿಗೆ ಸಮಾನವಾದ ಗುಣಗಳನ್ನು ಅನುಭವಿಸುವುದು ಸಾಯುಜ್ಯ ರೂಪ ಮೋಕ್ಷ. सयुजोर्भावः "ष्यञ्" (५-१-१२४)। ಇದು ಭಕ್ತಿಪೂರ್ವಕ ಪರಮಾತ್ಮನ ಉಪಾಸನೆಯಿಂದ ಮಾತ್ರ ಸಾಧ್ಯ. "सालोक्यसार्ष्टिसामीप्यसारूप्यैकत्वमप्युत। दीयमानं न गृह्णन्ति विना मत्सेवनं विना" भाग० ३-२९-१३। ಜೀವಾತ್ಮನು ಆಧೇಯತ್ವ ವಿಧೇಯತ್ವ ಶೇಷತ್ವ ಪರತಂತ್ರತ್ವ ಈ ಗುಣಗಳಿಂದ ಕೂಡಿರುವನು. ಪರಮಾತ್ಮನು ಸರ್ವಾಧಾರತ್ವ ಸರ್ವನಿಯಾಮಕತ್ವ ಸರ್ವೇಶ್ವರತ್ವ ಸರ್ವಶಕ್ತತ್ವ ದೋಷರಹಿತತ್ವ ಸರ್ವಜ್ಞತ್ವ ಮೊದಲಾದ ವಿಶೇಷ ಗುಣಗಳಿಂದ ವಿರಾಜಿಸುವನು. ಜೀವಾತ್ಮನಿಗೂ ಪರಮಾತ್ಮನಿಗೂ ಈ ಕೆಲವು ವಿಶೇಷ ಗುಣಗಳು ಹೊರತು ಉಳಿದೆಲ್ಲಾ ವಿಷಯಗಳಲ್ಲೂ ಸಾಮ್ಯವಿರುವುದು. "यतो वा इमानि भूतानि जायन्ते"। "एको ह वै नारायण आसीत्" ಇತ್ಯಾದಿ ಶ್ರುತಿ ವಾಕ್ಯಗಳಿಂದ ಜಗತ್ಕಾರಣತ್ವವನ್ನು ಪರಮಪುರುಷನಿಗೆ ಮಾತ್ರವೇ ಹೇಳಿರುವುದರಿಂದಲೂ ಮುಕ್ತನಿಗೆ ಎಲ್ಲೂ ಹೇಳದಿರುವುದರಿಂದಲೂ ಜಗತ್ಸೃಷ್ಟ್ಯಾದಿ ಕಾರ್ಯವು ಪರಮಪುರುಷನಿಗೇ ಅಸಾಧಾರಣ ಲಕ್ಷಣವಾಗಿರುವುದು. ಉಳಿದ ಆನಂದಾನುಭವ ಮೊದಲಾದ ವಿಷಯಗಳಲ್ಲಿ ಮುಕ್ತನಿಗೆ ಪರಮಾತ್ಮನೊಡನೆ ಅತ್ಯಂತ ಸಾಮ್ಯವಿರುವುದು. "भोगमात्रसाम्यलिङ्गाच्च" ब्र० सू०। "जगद्व्यापारवर्जं प्रकरणादसन्निहितत्वाच्च" ब्र० सू० ४-३-६। "निरञ्जनः परमं साम्यमुपैति"। "सायुज्यमुभयोरत्र भोक्तव्यस्याविशिष्टता"। "सोऽश्नुते सर्वान् कामान् सह, ब्रह्मणा विपश्चिता"। समानेन गुणेन युक् सयुक् ब्रह्मणा समानगुणः, तस्य भावः सायुज्यम्। 2. ಐಕ್ಯ. "सायुज्यमृच्छति भवस्य भवाब्धियादस्तां पत्युरेत्य नगरीं नगराजपुत्र्याः" नैष० ११-११७।

**सार ಸಾರ** (ಪುಂ) 1. ಬಲ, ವೀರ್ಯ, ಚೈತನ್ಯ, ದೇಹಶಕ್ತಿ. सरति—सृ (गतौ) "घञ्" (३-३-१७)। "भुजे भुजङ्गेन्द्रसमानसारे भूयः स भूमेर्धुरमाससञ्ज" रघु० २-७४। 2. ಸ್ಥಿರಾಂಶ, ಸಾರಾಂಶ, ತಿರುಳು. "यन्मां विधेयविषये सभवान्नियुङ्क्ते स्नेहस्य तत्फलमसौ प्रणयस्य सारः" मालती० १-१२। 3. ಕೆಚ್ಚು, ಸತ್ವ, ಮರದ ಚೇಗು. 4. ಎಲುಬಿನ ನೆಣ, ಮೂಳೆಯ ಪೊಳ್ಳು ಭಾಗದಲ್ಲಿರುವ ಕೊಬ್ಬು, ಶರೀರದೊಳಗಿನ ಒಂದು ಧಾತು, ಮಜ್ಜೆ. 5. ಮರದ ರಸ. 6. ಧೈರ್ಯ. 7. ಧನ. "राज्ञा हिमवतःसारो राज्ञःसारो हिमाद्रिणा" रघु० ४-७९। 8. ಅಮೃತ. "सारं पिबन्तस्त्रिदशाः कदापि

द्राघीयसीं नानुभवन्ति निद्राम्" याद० १८-१०१। 9. ನವನೀತ, ಹೊಸದಾಗಿ ತೆಗೆದ ಬೆಣ್ಣೆ. 10. ದೃಢತೆ. 11. ಮೊಸರಿನ ಮೇಲಿನ ಕೆನೆ. 12. ಶ್ರೇಷ್ಠತೆ, ಉತ್ತಮವಾಗಿರುವಿಕೆ. 13. ಗತಿ, ಗಮನ. "सारो दध्यग्रगत्योर्ना" मेदि०। 14. ವಾಯು, ಗಾಳಿ. 15. ಅರ್ಥಾಲಂಕಾರದ ಒಂದು ಭೇದ. ಪೂರ್ವ ಪೂರ್ವ ವಿಷಯಗಳಿಗಿಂತ ಉತ್ತರೋತ್ತರ (ಮುಂದು ಮುಂದಿನ) ವಿಷಯಗಳ ಶ್ರೇಷ್ಠತೆ (ಮೇಲ್ಮೆ)ಯು ವರ್ಣನೆಯಿರುವಲ್ಲಿ **"ಸಾರಾಲಂಕಾರ"**. "उत्तरोत्तरमुत्कर्षः सार इत्यभिधीयते"। उदा: "मधुरं मधु पीयूषं तस्मात्तस्मात् कवेर्वचः" चन्द्रा०। (न०) 16. ಜಲ, ನೀರು. 17. ನ್ಯಾಯ್ಯ, ಯುಕ್ತವಾಗಿರುವಿಕೆ. 18. ವ್ಯಾಧಿ, ರೋಗ. 19. ಲೋಹ, ಕಬ್ಬಿಣ. (वि०) 20. ದೃಢವಾದ. 21. ಶ್ರೇಷ್ಠವಾದ, ಉತ್ತಮವಾದ. "चूतमालिरलिनामतिरागादक्षमिष्ट मधुवासरसारम्" माघ० ६-६८। "सारो मज्जास्थिरांशयोः। बले श्रेष्ठे च सारं तु द्रविणन्यायवारिषु" हेम०।

**सारक ಸಾರಕ** (वि०) ವಿರೇಚನ ಮಾಡಿಸುವ, ಬೇಧಿ ಮಾಡಿಸುವ. सारयति मलम्—सृ (गतौ)+णिच् "ण्वुल्" (३-१-१३३)।

**सारगन्ध ಸಾರಗಂಧ** (पुं०) ಗಂಧದ ಮರ, ಚಂದನ ವೃಕ್ಷ. सारो गन्धो यस्य।

**सारग्राहिन् ಸಾರಗ್ರಾಹಿನ್** (वि०) ಸಾರವಾದ ವಿಷಯವನ್ನು ತಿಳಿದುಕೊಳ್ಳುವವನು. सारं गृह्णाति—ग्रह (उपादाने) "णिनिः" (३-२-७८)।

**सारघ ಸಾರಘ** (न०) ಮಧು, ಜೇನುತುಪ್ಪ. सरघाणामिदम् "अण्" (४-३-१२०)।

**सारङ्ग ಸಾರಂಗ** (पुं०) 1. ಮೈಮೇಲೆ ಚುಕ್ಕೆಗಳಿರುವ ಜಿಂಕೆ. सरति—सृ (गतौ) "अङ्गच्" वृद्धिश्च (उ० १-११९)। "तवास्मि गीतरागेण हारिणा प्रसभं हृतः। एष राजेव दुष्यन्तः सारङ्गेणातिरंहसा" शाकु० १-५। 2. ಹರಿಣ, ಜಿಂಕೆ. 3. ಗಜ, ಆನೆ. 4. ಭ್ರಮರ, ದುಂಬಿ. "सारङ्गास्ते जललवमुचः सूचयिष्यन्ति मार्गम्" मेघ० १-२१। "सारङ्गः पुंसि हरिणे चातके च मतङ्गजे। शबले त्रिषु" मेदि०। 5. ಚಾತಕ ಪಕ್ಷಿ. 6. ಮಯೂರ, ನವಿಲು. 7. ಛತ್ರಿ, ಕೊಡೆ. 8. ವಸ್ತ್ರ, ಬಟ್ಟೆ. 9. ಮನ್ಮಥ. 10. ಧನುಸ್ಸು. 11. ಕೇಶ, ಕೂದಲು. 12. ಶಂಖ. 13. ಪದ್ಮ, ಕಮಲ. 14. ಕರ್ಪೂರ. 15. ಮೇಘ, ಮೋಡ. 16. ಕೋಗಿಲೆ. 17. ಸಿಂಹ. 18. ಸ್ವರ್ಣ, ಚಿನ್ನ. 19. ಭೂಮಿ. 20. ಪುಷ್ಪ. 21. ರಾತ್ರಿ. 22. ಪ್ರಕಾಶ, ಬೆಳಕು. 23. ಹಂಸ. (वि०) 24. ಚಿತ್ರವರ್ಣದ. "सारङ्गो विहगान्तरे। चातके चञ्चरीके च द्विपेणशबलेषु च" हेम०।

**सारङ्गिक ಸಾರಂಗಿಕ** (पुं०) ಜಿಂಕೆಯನ್ನು ಬೇಟೆಯಾಡುವ ವ್ಯಾಧ, ಬೇಟೆಗಾರ. सारङ्गान् हन्ति—सारङ्ग "ठक्" (४-४-३५)।

**सारज ಸಾರಜ** (न०) ನವನೀತ, ಬೆಣ್ಣೆ. सारात् दध्यग्रात् जायते—जनी (प्रादुर्भावे) "डः" (३-२-९८)।

**सारण ಸಾರಣ** (पुं०) 1. ಅಮಟೆ ಮರ. 2. ರಾವಣನ ಒಬ್ಬ ಮಂತ್ರಿ. 3. ಅತಿಸಾರ ರೋಗ. "सारणः स्यादतीसारे दशकन्धरमन्त्रिणि" हेम०।

**सारणिक ಸಾರಣಿಕ** (पुं०) ಪಥಿಕ, ಪ್ರಯಾಣಿಕ. सरणि "ठन्" (५-१-७५)। "यदा सारणिकान् राजा पुत्रवत् परिरक्षति। भिनत्ति च न मर्यादां स राज्ञो धर्म उच्यते" भा० शान्ति०।

**सारणी ಸಾರಣೀ** (स्त्री०) 1. ಮುಳ್ಳುಗೆಣಿ ಗಿಡ. 2. ಸಣ್ಣ ನದಿ, ಚಿಕ್ಕ ಹೊಳೆ. सृ (गतौ)+णिच् "अनिः" (उ० २-१०२)। "सारणो राक्षसान्तरे। रुग्भेदे ना प्रसारण्यां स्वल्पनद्यां च योषिति (सारणी)" मेदि०। 3. ಕಾಲುವೆ. "केरलीचिकुरभङ्गिभङ्गुरं सारणीषु पुनरम्बु दृश्यते" अनर्घ०।

**सारण्ड ಸಾರಂಡ** (पुं०) ಹಾವಿನ ಮೊಟ್ಟೆ.

**सारथि ಸಾರಥಿ** (पुं०) ರಥವನ್ನು ನಡೆಸುವವನು, ಗಾಡಿ ಓಡಿಸುವವನು. सरत्यश्वान्—सृ (गतौ) (अन्तर्भावितणिच्) "अथिन्" (उ० ४-८९)। "गाढतां हरिरथस्य बिभ्रतः सारथिश्च तुरगाश्च साहसम्" याद० १७-५९। "मनोतिवेगेन रथेन सारथिप्रणोदितेन प्रचलन् महासुरः" कुमा० १५-४५।

**सारथ्य ಸಾರಥ್ಯ** (न०) 1. ಸಾರಥಿಯ ಕಾರ್ಯ, ರಥವನ್ನು ನಡೆಸುವ ಕಾರ್ಯ. सारथेः कर्म—सारथि "ष्यञ्" (५-१-१२४)। 2. ಸಾರಥಿಯಾಗಿರುವಿಕೆ. सारथेर्भावः "ष्यञ्"। "सारथ्यसंविदवधीरितहेतिजुष्टः सेनापरागपरिधूसरकुन्तलश्रीः" याद० २३-५१।

**सारद्रुम ಸಾರದ್ರುಮ** (पुं०) ಖದಿರ ವೃಕ್ಷ, ಕಗ್ಗಲಿ ಮರ.

**सारमिति ಸಾರಮಿತಿ** (स्त्री०) ವೇದ. सारो यथार्थो मीयते ज्ञायतेऽनेन—माङ् (माने) "क्तिन्" (३-३-९४)।

**सारमेय ಸಾರಮೇಯ** (पुं०) ಕುಕ್ಕುರ, ಶುನಕ, ನಾಯಿ. सरमाया अपत्यं "ढक्" (४-१-१२०)। "अन्योन्यस्या-वलुम्पन्ति सारमेया इवामिषम्" भा० भीष्म०।

**सारमेयी ಸಾರಮೇಯೀ** (स्त्री०) ಹೆಣ್ಣುನಾಯಿ. सरमाया अपत्यं स्त्री "ढक्" (४-१-१२०)। "ङीप्" (४-१-१५)।

**सारल्य ಸಾರಲ್ಯ** (न०) 1. ಸರಳತೆ, ಸರಳವಾಗಿರುವಿಕೆ, ನೇರವಾಗಿರುವಿಕೆ, ನೆಟ್ಟಗಿರುವಿಕೆ. सरलस्य भावः "ष्यञ्" (५-१-१२४)। 2. ಋಜುವಾಗಿರುವಿಕೆ, ಪ್ರಾಮಾಣಿಕ ನಾಗಿರುವಿಕೆ, ಕಪಟವಿಲ್ಲದಿರುವಿಕೆ.

**सारव ಸಾರವ** (वि०) ಸರಯೂನದಿಯಲ್ಲಿ ಹುಟ್ಟಿದ, ಸರಯೂನದಿಯಲ್ಲಿ ಬೆಳೆದು ಬಂದಿರುವ. सरय्वां भवः "अण्" (४-३-५३)। "देविकायां सरय्वां च भवे दाविकसारवौ" अम०।

**सारस ಸಾರಸ** (पुं०) 1. ನೀರು ಹಕ್ಕಿ, ತಾವರೆ ಹಕ್ಕಿ. सरसि भवः "अण्" (४-३-५३)। "श्रुतिपथमधुराणि सारसानामनुनदि सुश्रुविरे रुतानि तामिः" माघ० ७-२४। 2. ಹಂಸಪಕ್ಷಿ. "विभिद्यमाना विससार सारसानुदस्य तीरेषु तरङ्गसंहतिः" किरा० ८-३१। 3. ಚಂದ್ರ. (न०) 4. ಕಮಲ, ಪದ್ಮ, ತಾವರೆ ಹೂವು. सरसि भवम् "अण्" (४-३-५३)। "सारसः पक्षि-भेदेन्द्वोः क्लीबन्तु सरसीरुहे" मेदि०। 5. ಹೆಂಗಸರ ವಡ್ಯಾಣ, ಹೆಂಗಸರ ಸೊಂಟದ ಒಡವೆ (ಡಾಬು). (वि०) 6. ಸರಸ್ಸಿನಲ್ಲಿ ಹುಟ್ಟಿದ. 7. ಸರಸ್ಸಿನಲ್ಲಿರುವ ನೀರು ಮೊದಲಾದುದು. "क्षारं घनं वातकफानुकारि त्वग्दोष-कृत् तत्कटु दीपनञ्च। प्रोक्तं विपाके श्रमशोषकारि स्यात् सारसं नो सुखकारि वारि"।

**सारसन ಸಾರಸನ** (न०) 1. ಡಾಬು, ಹೆಂಗಸರ ವಡ್ಯಾಣ, ಹೆಂಗಸರ ಸೊಂಟದ ಒಡವೆ. सारमुत्कृष्टं सनमस्य—षण (सम्भक्तौ) "घः" (३-३-११८)। "तवोत्तरीयं करिचर्म साङ्गजं ज्वलन्मणिः सारसनं महानहिः" किरा० १८-३२। 2. ಕಟಿಸೂತ್ರ, ಉಡುದಾರ. "मुक्तामयं सारसनावलम्बि भाति स्म दामाप्रपदीनमस्य" माघ० ३-१०।

**सारसी ಸಾರಸೀ** (स्त्री०) ಹೆಣ್ಣು ಹಂಸ. सारस जाति० "ङीष्" (४-१-६३)। "सारस्य इव रासन्त्यः पतिताः पश्य भारत" भा० स्त्री०।

**सारस्वत ಸಾರಸ್ವತ** (पुं०) 1. ಬಿಲ್ವಪತ್ರೆ ವೃಕ್ಷದ ದಂಡ. सरस्वती देवताऽस्य — "अण्" (४-२-२४)। 2. ಸರಸ್ವತೀ ನದಿಯ ಸಮೀಪದ ಒಂದು ದೇಶ. सरस्वत्या अदूरभवः "अण्" (४-२-७०)। 3. ಸಾರಸ್ವತ ದೇಶದ ಬ್ರಾಹ್ಮಣ. "सारस्वताः कान्यकुब्जा गौडमैथिलकोत्कलाः। पञ्च गौडा इति ख्याता विन्ध्यस्योत्तर-वासिनः"। 4. ಸರಸ್ವತೀ ಪೂಜೆಯ ಒಂದು ಕಲ್ಪ. (पुं० ब० व०) 5. ಸಾರಸ್ವತ ದೇಶದ ಜನರು. (न०) 6. ವಾಕ್‌ಸಂಪತ್ತು, ವಾಗ್ವೈಖರಿ, ಸಂದರ್ಭೋಚಿತವಾಗಿ ಭಾಷೆಯನ್ನು ನಿರರ್ಗಳವಾಗಿ ಉಪಯೋಗಿಸುವುದು, ಭಾಷೆಯನ್ನು ಶಕ್ತಿಯುತವಾಗಿ ಉಪಯೋಗಿಸುವುದು. (वि०) 7. ಸರಸ್ವತೀದೇವೀ ಸಂಬಂಧವಾದ. 8. ಸರಸ್ವತೀ ನದೀ ಸಂಬಂಧವಾದ. सरस्वत्या इदम् "अण्"।

**सारिका ಸಾರಿಕಾ** (स्त्री०) ಒಂದು ಜಾತಿಯ ಹೆಣ್ಣುಹಕ್ಕಿ. सरति गच्छति—सृ (गतौ) "ण्वुल्" (३-१-१३३)। "पृच्छन्ती वा मधुरवचनां सारिकां पञ्जरस्थां कच्चिद्भर्तुः स्मरसि रसिके त्वं हि तस्य प्रियेति" मेघ० २-२२।

**सारूप्य ಸಾರೂಪ್ಯ** (न०) 1. ಪರಮಾತ್ಮನಿಗೆ ಸಮಾನವಾದ ರೂಪ (ಹೊಂದುವುದು). ಇದು ನಾಲ್ಕು ವಿಧ ಮೋಕ್ಷ ಗಳಲ್ಲೊಂದು. सरूपस्य भावः "ष्यञ्" (५-१-१२४)। ಇದು ಭಗವತ್ಸಾಯುಜ್ಯರೂಪಮೋಕ್ಷದಲ್ಲಿ ಅಂತರ್ಗತ ವಾದ ಒಂದು ಧರ್ಮ. 2. ಒಂದೇ ರೂಪದಿಂದಿರುವುದು, ಸಮಾನವಾಗಿರುವುದು, ಸದೃಶವಾಗಿರುವುದು, ಸಮಾನ ವಾದ ಆಕಾರವನ್ನು ಹೊಂದಿರುವುದು. 3. ಕಾರ್ಯವು ಕಾರಣದೊಡನೆ ಅನುರೂಪ್ಯ ಹೊಂದುವುದು, ಕಾರ್ಯವು ಕಾರಣಕ್ಕೆ ಅನುರೂಪವಾಗಿರುವುದು.

**सार्गल ಸಾರ್ಗಳ** (वि०) 1. ಅಗಳಿಮರದೊಡನೆ ಕೂಡಿರುವ. अर्गलेन सह वर्तते — इति सार्गलम्। 2. ಪ್ರತಿಬಂಧಕ ಸಹಿತವಾದ, ಅಡ್ಡಿಯಿಂದ ಕೂಡಿದ. "ईप्सितं तदव-ज्ञानाद्विद्धि सार्गलमात्मनः" रघु० १-७९।

**सार्थ ಸಾರ್ಥ** (पुं०) 1. ಸಮಾನ ಜಾತಿಯ ಪ್ರಾಣಿಗಳ ಸಮೂಹ, ಒಂದೇ ಜಾತಿಯ ಪ್ರಾಣಿಗಳ ಗುಂಪು. सरति —सृ (गतौ) "थन्" णिच्च (उ० २-५)। "सङ्घ-सार्थौ तु जन्तुभिः" अम०। "अथ कदाचित् तैरित-स्ततो भ्रमद्भिः सार्थात् भ्रष्टः क्रथनको नामोष्ट्रो दृष्टः" पञ्चतं० १। 2. ವರ್ತಕರ ಸಮೂಹ. "वापीष्विव स्रवन्तीषु वनेषूपवनेष्विव। सार्थाः स्वैरं स्वकीयेषु

चेद्वर्वेश्मस्विववाद्रिषु" रघु० १७-६४ । 3. ಜನರ ಗುಂಪು- "सर्वं एव विपर्यस्ता ग्राह्या: सार्थेषु योषिताम्" बृहत्सं० ८६। "अतिसन्धीयते कामिजनसार्थ:" शाकु० ३। 4. ಸಮೂಹ, ಗುಂಪು. "सार्थो वणिक्समूहे स्यादपि सङ्घातमात्रके" मेदि०। (वि०) 5. ಅರ್ಥದಿಂದ ಕೂಡಿದ (ಪದ), ಅರ್ಥವತ್ತಾದ (ಶಬ್ದ). अर्थेन सह वर्तते।

**सार्थक ಸಾರ್ಥಕ** (वि०) 1. ಅರ್ಥವತ್ತಾದ, ಅರ್ಥಸಹಿತ ವಾದ. अर्थेन सह वर्तते "कन्"। "शब्दान्तरमपेक्ष्यैव सार्थक: सार्थबोधकृत्। प्रकृति: प्रत्ययश्चैव निपातश्चेति स त्रिधा"। 2. ಫಲಸಹಿತವಾದ, ಪ್ರಯೋಜನದಿಂದ ಕೂಡಿದ, ಸಾಫಲ್ಯ ಹೊಂದಿದ.

**सार्थक्य ಸಾರ್ಥಕ್ಯ** (न०) ಫಲದಿಂದ ಕೂಡಿರುವಿಕೆ, ಯತ್ನವು ಸಫಲವಾಗಿರುವಿಕೆ. सार्थकस्य भाव: "ष्यञ्" (५-१-१२४)।

**सार्थवाह ಸಾರ್ಥವಾಹ** (पुं०) ವರ್ತಕ, ವರ್ತಕತನ ಮಾಡು ವವನು, ಕ್ರಯ ವಿಕ್ರಯ ರೂಪ ವ್ಯಾಪಾರಮಾಡುವವನು. सार्थं वहति — वह (प्रापणे) "अण्" (३-२-१)। "समुद्रव्यवहारी सार्थवाहो धनमित्रो नाम नौव्यसने विपन्न:" शाकु० ६।

**सार्द्र ಸಾರ್ದ್ರ** (वि०) ಒದ್ದೆಯಾದ, ತೇವವಾದ, ನೆನೆದ. आर्द्रेण सह वर्तते। "आर्द्रं सार्द्रं क्लिन्नं तिमितं समुन्नमुत्तं च" अम०।

**सार्ध ಸಾರ್ಧ** (वि०) 1. ಅರ್ಧಸಹಿತವಾದ, ಅರ್ಧದಿಂದ ಕೂಡಿದ. अर्धेन सह वर्तते। (अव्य०) 2. ಸಂಗಡ, ಕೂಡ, ಜೊತೆಯಲ್ಲಿ, ಒಂದಿಗೆ. "सार्धं कथंचिदुचितै: पिचुमर्दपत्रै-रास्यान्तरालगतमाम्रदलं म्रदीय:" माघ० ५-६६।

**सार्प ಸಾರ್ಪ** (पुं०) ಸರ್ಪದೇವತಾಕವಾದ ಆಶ್ಲೇಷಾ ನಕ್ಷತ್ರ. सर्पो देवता अस्य "अण्" (४-२-२४)।

**सार्पिष ಸಾರ್ಪಿಷ** (वि०) 1. ಘೃತ (ತುಪ್ಪ) ದಲ್ಲಿ ಬೇಯಿಸ ಲ್ಪಟ್ಟ. सर्पिषि संस्कृतम् "अण्" (४-२-१६)। 2. ಘೃತಸಂಬಂಧವಾದ. सर्पिष इदम् "अण्" (४-३-१२०)।

**सार्पिष्क ಸಾರ್ಪಿಷ್ಕ** (वि०) ತುಪ್ಪದಿಂದ ಸಂಸ್ಕರಿಸಲ್ಪಟ್ಟ. सर्पिषा संस्कृतम् "ठक्" (४-४-३)। ठस्य "क:" (७-३-५१)।

**सार्व ಸಾರ್ವ** (पु०) 1. ಬುದ್ಧದೇವ. 2. ಜಿನದೇವ. सर्वस्मै हित:। (वि०) 3. ಸರ್ವರಿಗೂ ಹಿತವಾದ. सर्वस्मै हितम् वा "ण:" (वा० ५-१-१०)। "सम्भवन्ति यददोषदूषिते सार्व! सर्वगुणसम्पदस्त्वयि" माघ० १४-४। पक्षे सर्वीयम्।

**सार्वकामिक ಸಾರ್ವಕಾಮಿಕ** (वि०) ಎಲ್ಲಾ ಇಷ್ಟಾರ್ಥ ಗಳೇ ಪ್ರಯೋಜನವಾಗಿರುವ. सर्वे कामा: प्रयोजनमस्य "ठञ्" (५-१-१०९)। "तीर्थमस्ति न भवार्णवबाह्यं सार्वकामिकमृते भवतस्तत्" किरा० १८-२५।

**सार्वकालिक ಸಾರ್ವಕಾಲಿಕ** (वि०) ಎಲ್ಲಾ ಕಾಲದಲ್ಲೂ ಇರುವ, ಎಲ್ಲಾ ಕಾಲದಲ್ಲೂ ಉಂಟಾಗುವ. सर्वेषु कालेषु भवम् "ठञ्" (४-३-११)।

**सार्वत्रिक ಸಾರ್ವತ್ರಿಕ** (वि०) 1. ಎಲ್ಲಾ ಕಡೆಯಲ್ಲೂ ಇರುವ, ಎಲ್ಲಾ ಕಡೆಯಲ್ಲೂ ಉಂಟಾಗುವ. सर्वत्र भव: "ठञ्" (वा० ४-३-६०)। 2. ಎಲ್ಲಾ ಕಾಲದಲ್ಲೂ ಇರುವ. 3. ಎಲ್ಲಾ ಕಡೆಗೂ ಅನ್ವಯಿಸುವ, ಎಲ್ಲರಿಗೂ ಸಂಬಂಧಿಸುವ.

**सार्वधातुक ಸಾರ್ವಧಾತುಕ** (न०) ಧಾತ್ವಧಿಕಾರದಲ್ಲಿ ಉಕ್ತವಾದ तिङ् ಮತ್ತು शित् (श ಕಾರಕ್ಕೆ ಇತ್ ಸಂಜ್ಞೆ ಯುಳ್ಳ) ಪ್ರತ್ಯಯಗಳು. "तिङ् शित् सार्वधातुकम्" पा० सू० ३-४-११३।

**सार्वजनिक ಸಾರ್ವಜನಿಕ** (वि०) ಎಲ್ಲಾ ಜನರಿಗೂ ಹಿತ ವಾದ. सर्वजनाय हितम् "ठञ्" (वा० ५-१-९)।

**सार्वजनीन ಸಾರ್ವಜನೀನ** (वि०) ಎಲ್ಲಾ ಜನರಿಗೂ ಹಿತವಾದ. सर्वजनाय हितम् "ख:" (वा० ५-१-९)। खस्य ईनादेश: (७-१-२)।

**सार्वभौम ಸಾರ್ವಭೌಮ** (पुं०) 1. ಚಕ್ರವರ್ತಿ, ಚಕ್ರಾಧಿ ಪತಿ, ರಾಷ್ಟ್ರದ ಅಧಿಪತಿ, ರಾಷ್ಟ್ರದ ಸರ್ವಾಧಿಕಾರ ಹೊಂದಿರುವವನು. सर्वभूमेरीश्वर: "अण्" (५-१-४२)। "आज्ञाभङ्गं सहन्ते नृवर नृपतय: त्वादृशा: सार्वभौमा:" मुद्रा० ५-२२। 2. ಅಷ್ಟದಿಗ್ಗಜಗಳಲ್ಲಿ ಒಂದು ದಿಗ್ಗಜ, ಉತ್ತರ ದಿಕ್ಕಿನ ಗಜ. सर्वस्यां भूमौ विदित: "अण्" (५-१-४३)। उभयपदवृद्धि: (७-३-२०)।

**सार्ववेद्य ಸಾರ್ವವೈದ್ಯ** (पुं०) ಎಲ್ಲಾ ವೇದಗಳನ್ನೂ ಅಧ್ಯಯನ ಮಾಡಿದ ವಿಪ್ರ. सर्ववेदानधीते "अण्" (४-२-५९)। अणो लुक् (वा० ४-२-५९)। सर्ववेद: — स एव सार्ववैद्य: स्वार्थे "ष्यञ्" (वा० ५-१-१२४)।

**साल ಸಾಲ** (पुं०) 1. ವೃಕ್ಷ, ಮರ. 2. ಸರ್ಜವೃಕ್ಷ, ಮತ್ತಿಮರ. 3. ಪ್ರಾಕಾರ, ಸುತ್ತುಗೋಡೆ, ಬೇಲಿ. 4. ಒಂದು ಜಾತಿಯ ಮೀನು. सल्यते — षल (गतौ)

"घञ्" (३-३-१९)। "सालः पादपमात्रे स्यात्प्राकारे सर्जपादपे" मेदि०।

**सालन ಸಾಲನ** (पुं०) 1. ಸರ್ಜ ರಸ. 2. ಮರದ ಹಾಲು. सालः कारणत्वेनास्त्यस्य "नः" (५-२-१००)।

**सालनिर्यास ಸಾಲನಿರ್ಯಾಸ** (पुं०) 1. ಮರದ ಹಾಲು. 2. ಸರ್ಜ ರಸ.

**सालपर्णी ಸಾಲಪರ್ಣೀ** (स्त्री०) ಮೂರೆಲೆ ಹೊನ್ನೆಮರ. सालस्य पर्णमिव पर्णमस्याः—"ङीष्" (४-१-६४)।

**सालभञ्जिका ಸಾಲಭಂಜಿಕಾ** (स्त्री०) ಪುತ್ಥಳಿಕೆ, ಬಟ್ಟೆ ಮರ ದಂತ ಮೊದಲಾದುವುಗಳಿಂದ ತಯಾರಿಸಲ್ಪಟ್ಟ ಬೊಂಬೆ. "पाञ्चालिका तु पाञ्चाली पुत्त्रिका सालभञ्जिका" कोशः। "दारुस्त्री सालभञ्जिका" त्रिकाण्ड०।

**सालवेष्ट ಸಾಲವೇಷ್ಟ** (पुं०) ಸರ್ಜ ರಸ.

**सालातुरीय ಸಾಲಾತುರೀಯ** (पुं०) ಪಾಣಿನಿ ಮುನಿ.

**साला ಸಾಲಾ** (स्त्री०) 1. ಗೃಹ, ಮನೆ. 2. ಗೋಡೆ.

**सालार ಸಾಲಾರ** (न०) ಧನವನ್ನು ರಹಸ್ಯವಾಗಿಡಲು ಗೋಡೆಯಲ್ಲಿ ಮಾಡಿದ ಬೀರುವಿನ ಬೀಗ.

**सालावृक ಸಾಲಾವೃಕ** (पुं०) 1. ಶ್ವಾನ, ನಾಯಿ. सालाया वृक इव। 2. ಜಂಬುಕ, ನರಿ. 3. ಮರ್ಕಟ, ಕಪಿ. "सालावृकाः कपिक्रोष्टुश्वानः" अम०।

**सालोक्य ಸಾಲೋಕ್ಯ** (न०) 1. ಸಮಾನ ಲೋಕದಲ್ಲಿರುವಿಕೆ, ಒಂದೇ ಲೋಕದಲ್ಲಿರುವಿಕೆ. समानो लोको यस्य—सलोकस्य भावः "ष्यञ्" (५-१-१२४)। 2. ನಾಲ್ಕು ವಿಧ ಮೋಕ್ಷಗಳಲ್ಲೊಂದು ವಿಧ ಮೋಕ್ಷ. ಪರಮಾತ್ಮನೊಡನೆ ಸಮಾನಲೋಕ (ವೈಕುಂಠ) ದಲ್ಲಿರುವುದು ಸಾಲೋಕ್ಯ. ಇದು ಸಾಯುಜ್ಯ ರೂಪವಾದ ಮೋಕ್ಷದಲ್ಲಿ ಅಂತರ್ಗತವಾದ ಒಂದು ಧರ್ಮ.

**सात्व ಸಾಲ್ವ** (पुं० ब० व०) 1. ಒಂದು ದೇಶ. 2. ಆ ದೇಶದ ಜನರು. (पुं०) 3. ಆ ದೇಶದ ರಾಜ. ಕಾಶಿರಾಜನ ಪುತ್ರಿಯಾದ ಅಂಬೆಯು ಈತನನ್ನು ವರಿಸಿದ್ದಳು. ಭೀಷ್ಮನು ಸ್ವಯಂವರ ಮಂಟಪದಿಂದ ಈಕೆಯನ್ನು ಅಪಹರಿಸಿಕೊಂಡು ಹೋಗುತ್ತಿದ್ದಾಗ ಸಾಲ್ವನು ಭೀಷ್ಮನೊಡನೆ ಯುದ್ಧ ಮಾಡಿ ಸೋತನು. 4. ಮಹಾವಿಷ್ಣುವಿನಿಂದ ಹತನಾದ ಒಬ್ಬ ರಾಕ್ಷಸ.

**सावकाश ಸಾವಕಾಶ** (वि०) 1. ಕಾಲದ ಅಂತರವುಳ್ಳ, ಅವಕಾಶದೊಡನೆ ಕೂಡಿದ, ಮಧ್ಯೆ ಬಿಡುವುಳ್ಳ, ಮಧ್ಯೆ ವಿರಾಮವುಳ್ಳ. अवकाशेन सहितः। 2. ಒಂದು ನೆಲೆಯುಳ್ಳ, ಒಂದು ಆಶ್ರಯವುಳ್ಳ. (अव्य०) 3. ವಿರಾಮವಾಗಿ, ಮಧ್ಯೆ ವಿರಾಮ ಮಾಡಿಕೊಂಡು.

**सावज्ञ ಸಾವಜ್ಞ** (वि०) ತಿರಸ್ಕಾರದಿಂದ ಕೂಡಿದ, ಉಪೇಕ್ಷೆಗೆ ಗುರಿಯಾದ, ಅಪಮಾನ ಹೊಂದಿದ. अवज्ञया सह वर्तते। "य सावज्ञो माधवश्रीनियोगे पुष्पैः शंसत्यादरं त्वत्प्रयत्ने" माल० ५-८।

**सावद्य ಸಾವದ್ಯ** (वि०) 1. ದೋಷದಿಂದ ಕೂಡಿದ. 2. ಪಾಪಸಹಿತವಾದ. 3. ಲಜ್ಜೆಯಿಂದ ಕೂಡಿದ. 4. ದೂಷಣೆಯಿಂದ ಕೂಡಿದ.

**सावधान ಸಾವಧಾನ** (वि०) 1. ಎಚ್ಚರಿಕೆಯಿಂದ ಕೂಡಿದ, ಲಕ್ಷ್ಯವಿಟ್ಟು ನೋಡುವ, ಸರಿಯಾಗಿ ಗಮನಿಸುವ. अवधानेन सहितः। 2. ಜಾಗರೂಕತೆಯಿಂದ ಕೂಡಿದ, ಮುಂಜಾಗ್ರತೆಯಿಂದ ಕೂಡಿದ. "सावधानमनसां समाधयः" याद० १७-१८।

**सावधि ಸಾವಧಿ** (वि०) 1. ಒಂದು ವಾಯಿದೆಯಿಂದ ಕೂಡಿದ, ಮುಂದಿನಕಾಲದ ಗಡುವುಳ್ಳ. अवधिना सह वर्तते। 2. ಒಂದು ಎಲ್ಲೆಯಿಂದ ಕೂಡಿದ, ಒಂದು ಮೇರೆಯುಳ್ಳ. "सावधिस्तोयराशिस्ते यशोराशेस्तु नावधिः"।

**सावन ಸಾವನ** (पुं०) 1. ಯಜ್ಞದ ಸಮಾಪ್ತಿ. सवनस्यायम् "अण्" (४-३-१२०)। 2. ಯಜಮಾನ, ಯಾಗಮಾಡುವವನು. 3. ವರುಣ. 4. ಹಗಲು ರಾತ್ರಿಗಳಿಂದ ಕೂಡಿದ ಒಂದು ದಿವಸ, ಸೂರ್ಯನ ಗತಿಯಿಂದ ಉಂಟಾಗುವ ಒಂದು ದಿವಸ. ಒಂದು ತಿಥಿಯಿಂದ ಕೂಡಿದ ಕಾಲವು ಚಾಂದ್ರಮಾನದ ದಿವಸ. ಸೂರ್ಯನ ಗತಿಯಿಂದ ಉಂಟಾಗುವ ಒಂದು ಹಗಲು ಮತ್ತು ಒಂದು ರಾತ್ರಿಯಿಂದ ಕೂಡಿದ ಕಾಲವು ಸಾವನ ದಿವಸ. "तिथिनैकेन दिवसश्चान्द्रमाने प्रकीर्तितः। अहोरात्रेण चैकेन सावनो दिवसः स्मृतः"। 5. ಮೂವತ್ತು ದಿವಸ (ಅಹೋರಾತ್ರ) ಗಳಿಂದ ಕೂಡಿದ ಮಾಸ (ತಿಂಗಳು). "त्रिंशता सौरदिवसैः सावनः परिकीर्तितः"।

**सावर्णि ಸಾವರ್ಣಿ** (पुं०) ಹದಿನಾಲ್ಕು ಮಂದಿ ಮನುಗಳಲ್ಲಿ ಎಂಟನೆಯ ಮನು, ಸೂರ್ಯನ ಪತ್ನಿಯಾದ ಸಂಜ್ಞಾದೇವಿಯ ಪ್ರತಿಬಿಂಬವಾದ ಛಾಯಾದೇವಿಯ ಪುತ್ರ. "विवस्वतश्च द्वे जाये विश्वकर्मसुते उभे। संज्ञा छाया च राजेन्द्र ये प्रागभिहिते तव। तृतीयां बडवामेके तासां संज्ञासुतास्त्रयः। यमो यमी श्राद्धदेवश्छायायाश्च सुतान् शृणु। सावर्णिस्तपती कन्या भार्या संवरणस्य या। अष्टमेऽन्तर आयाते सावर्णिर्भविता मनुः" भाग० ८-१३-९, १०।

**सावर्ण्य ಸಾವರ್ಣ್ಯ** (ನಂ) ಒಂದೇ ವರ್ಣದಿಂದ ಕೂಡಿರುವಿಕೆ, ಸಮಾನವರ್ಣವಾಗಿರುವಿಕೆ. सवर्णस्य भावः "ष्यञ्" (५-१-१२४)। "सावर्ण्यभाजां प्रतिमागतानां लक्ष्यैः स्मरापाण्डुतयाङ्गनानाम्" माघ० ३-४७।

**सावित्र ಸಾವಿತ್ರ** (पुं०) 1. ಬ್ರಾಹ್ಮಣ, ವಿಪ್ರ. सविता देवताऽस्य "अण्" (४-२-२४)। 2. ವಸು. 3. ಪರಮೇಶ್ವರ. 4. ಸೂರ್ಯ. 5. ಕರ್ಣ. सवितुरपत्यं पुमान् "अण्" (४-१-९२)। "सोऽब्रवीत् मेघगम्भीरस्वरेण वदतां वरः। भ्राता भ्रातरमज्ञातं सावित्रः पाकशासनिम्" भा० आदि० १४६-८। 6. ಗರ್ಭ, ಜನನಕ್ಕೆ ಮೊದಲಿನ ರೂಪ, ಭ್ರೂಣ. (ನಂ) 7. ಯಜ್ಞೋಪವೀತ. सविता देवताऽस्य "अण्" (४-२-२४)। (वि०) 8. ಸೂರ್ಯನ ಸಂಬಂಧವಾದ. सवितुरिदम् "अण्" (४-३-१२०)। 9. ಸೂರ್ಯನ ವಂಶದಲ್ಲಿ ಜನಿಸಿದವನು. "सावित्रः शङ्करे वसौ" मेदि०। "यत्सावित्रैर्दीपितं भूमिपालैः लोकश्रेष्ठैः साधु शुद्धं चरित्रम्" उ० रा० १-४२।

**सावित्री ಸಾವಿತ್ರೀ** (स्त्री०) 1. ಸಾಲ್ವದೇಶದ ರಾಜನಾದ ದ್ಯುಮತ್ಸೇನರಾಜನ ಪುತ್ರನಾದ ಸತ್ಯವಂತನ ಪತ್ನಿ, ಮದ್ರದೇಶದ ಅಶ್ವಪತಿರಾಜನ ಪುತ್ರಿ. ಅರಣ್ಯಕ್ಕೆ ಸೌದೆಯನ್ನು ತರಲು ಹೊರಟಿದ್ದ ಸತ್ಯವಂತನೊಡನೆ ತಾನೂ ಹೋಗಿ ಅಲ್ಲಿ ಮೃತನಾದ ತನ್ನ ಪತಿಯನ್ನು ಕೊಂಡೊಯ್ಯುತ್ತಿದ್ದ ಯಮನೊಡನೆ ಬಹಳ ಸಂವಾದಮಾಡಿ ಅವನನ್ನು ಪ್ರಸನ್ನನಾಗಿ ಮಾಡಿ ಪತಿಯನ್ನು ಬದುಕಿಸಿ ತನ್ನ ಮಾವನಿಗೆ ನೇತ್ರಶಕ್ತಿ ಬರುವಂತೆಯೂ ಶತ್ರುಗಳು ಅಪಹರಿಸಿದ್ದ ರಾಜ್ಯ ಲಭಿಸುವಂತೆಯೂ ತನಗೂ ತನ್ನ ತಂದೆಗೂ ಪುತ್ರಸಂತಾನವಾಗುವಂತೆಯೂ ಅವನಿಂದ ವರವನ್ನು ಪಡೆದು ಸತ್ಯವಂತನೊಡನೆ ಸುಖವಾಗಿ ಬಂದು ತನ್ನ ಅತ್ತೆ ಮತ್ತು ಮಾವನ ವಿಶ್ವಾಸಕ್ಕೆ ಪಾತ್ರಳಾದಳು. 2. ಪಾರ್ವತಿ. 3. ಬ್ರಹ್ಮನ ಪತ್ನಿ. "सावित्री सत्यवत्पत्न्यां ब्रह्मपत्न्युमयोरपि" मेदि०। 4. ಗಾಯತ್ರಿ. 5. ಉಪನಯನ ಸಂಸ್ಕಾರ, ಬ್ರಹ್ಮೋಪದೇಶ. ಉಪನಯನವು ಗಾಯತ್ರೀ ಮಂತ್ರೋಪದೇಶಕ್ಕೆ ಸಾಧನವಾದುದರಿಂದ ಸಾವಿತ್ರೀ ಶಬ್ದಕ್ಕೆ ಉಪನಯನ ರೂಪವಾದ ಕರ್ಮದಲ್ಲಿ ಲಕ್ಷಣೆ.

**सावित्रीव्रत ಸಾವಿತ್ರೀವ್ರತ** (नं०) ಜ್ಯೇಷ್ಠ ಕೃಷ್ಣ ಚತುರ್ದಶಿಯ ದಿನ ಹೆಂಗಸರು ಆಚರಿಸುವ ಒಂದು ವ್ರತ. "ज्येष्ठकृष्णचतुर्दश्यां सावित्रीमर्चयन्ति याः। वटमूले सोपवासा न ता वैधव्यमाप्नुयुः"। "ज्येष्ठे मासि चतुर्दश्यां सावित्रीव्रतमुत्तमम्। अवैधव्याय कुर्वन्ति स्त्रियःश्रद्धासमन्विताः"।

**सावित्रीसूत्र ಸಾವಿತ್ರೀಸೂತ್ರ** (नं०) ಬ್ರಹ್ಮಸೂತ್ರ, ಯಜ್ಞೋಪವೀತ. सावित्र्याः गायत्र्याः उपदेशकाले धृतं सूत्रम्।

**साशंस ಸಾಶಂಸ** (वि०) 1. ಆಸೆಯಿಂದ ಕೂಡಿದ, ಇಚ್ಛಿಸುವ, ಬಯಸುವ. आशंसया सह वर्तते। (क्रि० वि०) 2. ಸಂಪೂರ್ಣ ಭರವಸೆಯಿಂದ ಕೂಡಿ, ಬಹಳ ಆಸೆಯಿಂದ ಕೂಡಿ.

**साशङ्क ಸಾಶಂಕ** (वि०) ಭಯದಿಂದ ಕೂಡಿದ, ಶಂಕೆಪಡುವ, ಹೆದರುವ. आशङ्कया सह वर्तते।

**साशूक ಸಾಶೂಕ** (पुं०) ಕಂಬಳಿ.

**साश्रुधी ಸಾಶ್ರುಧೀ** (स्त्री०) 1. ಪತ್ನಿಯ ತಾಯಿ. 2. ಪತಿಯ ತಾಯಿ. "स्यालो वारकीरोऽथ साश्रुधीः। श्वश्रूः" त्रिकाण्ड०।

**साष्टाङ्ग ಸಾಷ್ಟಾಂಗ** (पुं०) ವಿಧೇಯತೆಯಿಂದ ಅಂಗಗಳನ್ನು ಬಗ್ಗಿಸುವುದು, ಎಂಟು ಅಂಗಗಳಿಂದ ಮಾಡುವ ನಮಸ್ಕಾರ, ಅಷ್ಟಾಂಗಗಳಿಂದ ಮಾಡುವ ನಮಸ್ಕಾರ. अष्टभिरङ्गैः सहितः। ನಮಸ್ಕಾರ ಮಾಡುವಾಗ ಎಂಟು ಅಂಗಗಳಿಗೂ ಭೂಸ್ಪರ್ಶವಾಗಬೇಕು. (1) ತೋಳುಗಳು (2) ಕಾಲುಗಳು (3) ಮಂಡಿಗಳು (4) ಎದೆ (5) ಶಿರಸ್ಸು (ತಲೆ) (6) ನೇತ್ರಗಳು (7) ಮನಸ್ಸು ಮತ್ತು (8) ವಚಸ್ಸು. ಇವು ಅಷ್ಟಾಂಗಗಳು. "दोर्भ्यां पद्भ्यां च जानुभ्यामुरसा शिरसा दृशा। मनसा वचसा चेति प्रणामोऽष्टाङ्ग ईरितः" वैद्यना० आह्निक०।

**सास ಸಾಸ** (वि०) ಧನುಸ್ಸನ್ನು ಹೊಂದಿರುವ, ಬಿಲ್ಲನ್ನು ಹಿಡಿದಿರುವ. आसेन धनुषा सह वर्तते। "स सासिः सासुसूः सासः येयायेयाययायय:" किरा० १५-५।

**सासुसू ಸಾಸುಸೂ** (वि०) ಬಾಣಗಳಿಂದ ಕೂಡಿರುವ. असून् सुवन्ति प्रेरयन्ति इति असुसुवो बाणाः, असुसूभिः सह वर्तते इति सासुसूः। "स सासिः सासुसूः सासः" किरा० १५-५।

**सासूय ಸಾಸೂಯ** (वि०) 1. ಈರ್ಷ್ಯೆಯಿಂದ ಕೂಡಿದ, ಅಸೂಯೆ ಪಡುವ, ಕರುಬುವ, ಹೊಟ್ಟೆಕಿಚ್ಚು ಪಡುವ. असूयया सह वर्तते। (अव्य०) 2. ಅಸೂಯೆಯಿಂದ, ಹೊಟ್ಟೆಕಿಚ್ಚಿನೊಡನೆ, ಅಸಹನೆಯೊಡನೆ. "मा गा इत्यपरुद्धया यदपि सा सासूयमुक्ता सखी" शाकु० २-२।

**सास्ना ಸಾಸ್ನಾ** (स्त्री०) ಗಂಗೆದೊಗಲು, ಹಸುಗಳ ಕತ್ತಿನಿಂದ ಜೋಲಾಡುವ ಚರ್ಮದ ಪದರ. सस्ति — षस (स्वप्ने) "न:" (उ० ३-१५)। निपा०। "रोमन्थमन्थरचलद्गुरुसास्नमासां चक्रे निमीलदलसेक्षणमौक्षकेण" माघ० ५-६२। "सास्ना तु गलकम्बल:" अम०।

**साहचर्यं ಸಾಹಚರ್ಯ** (न०) 1. ಜೊತೆಯಲ್ಲಿರುವುದು, ಸಂಗಡ ಓಡಾಡುವುದು, ಜೊತೆಯಲ್ಲಿ ವಾಸಮಾಡುವುದು. सहचरस्य भाव: कर्म वा — "ष्यञ्" (५-१-१२४)। "मधुश्च ते मन्मथ साहचर्यादसावनुक्तोऽपि सहाय एव" कुमा० ३-२१। 2. ಯಾವಾಗಲೂ ಜೊತೆಯಲ್ಲೇ ಇರುವುದು, ನಿರಂತರ ಸಂಬಂಧ ಹೊಂದಿರುವುದು. "तस्या: स्पृष्टे मनुजपतिना साहचर्याय हस्ते माङ्गल्योर्णावलयिनि पुर: पावकस्योच्छिखस्य" रघु० १६-८७।

**साहचर्यनियम ಸಾಹಚರ್ಯನಿಯಮ** (पुं०) ಸರ್ವದಾ ಜೊತೆಯಲ್ಲೇ ಇರಬೇಕೆಂಬ ಒಂದು ಕಟ್ಟಳೆ, ಕಟ್ಟುಪಾಡು. साहचर्यस्य नियम:। ಧೂಮವಿದ್ದಲ್ಲಿ ಅಗ್ನಿಯೂ ಇರಬೇಕು ಎಂಬ ಧೂಮ ಮತ್ತು ಅಗ್ನಿ ಇವೆರಡರ ಸಾಹಚರ್ಯವು ಅವಶ್ಯವಾಗಿರುವುದು. ಇದೇ ಸಾಹಚರ್ಯ ನಿಯಮ. ಇದೇ ವ್ಯಾಪ್ತಿ. "यत्र धूमस्तत्राग्निरिति साहचर्यनियमो व्याप्ति:" त० स०।

**साहय ಸಾಹಯ** (वि०) ಸಹನೆಯನ್ನು ಉಂಟುಮಾಡುವವನು, ತಾಳ್ಮೆಯನ್ನು ಮೂಡಿಸುವವನು. षह (मर्षणे) + णिच् "श:" (३-१-१३८)।

**साहस ಸಾಹಸ** (न०) 1. ದಂಡೋಪಾಯ, ಸಾಮ ಮೊದಲಾದ ನಾಲ್ಕು ಉಪಾಯಗಳಲ್ಲೊಂದು. सहसि बले भवम् "अण्" (४-३-५२)। सहसा बलेन निर्वृत्तम् "अण्" (४-२-६८) इति वा। 2. ಸುಲಿಗೆ, ದರೋಡೆ. "पैशुन्यं साहसं द्रोह ईर्ष्यासूयार्थदूषणम्। वाग्दण्डजं च पारुष्यं क्रोधजोऽपि गणोऽष्टक:" मनु० ७-४८। 3. ದುಡುಕು. "तृणमिव तत: प्राणान् मोक्तुं मनो विधृतं तया किमपरमतो निर्व्यूढं यत्करार्पणसाहसम्" मालती० ९-१०। 4. ಧೈರ್ಯ, ಧೃಷ್ಟತನ. 5. ಬಲಾತ್ಕಾರದಿಂದ ಮಾಡುವ ಕಾರ್ಯ, ತನ್ನ ಶಕ್ತಿಯನ್ನೂ ಮೀರಿ ನಡಸುವ ಕಾರ್ಯ. "वेगरोधात् क्षयाच्चैव साहसाद्विषमाशनात्। त्रिदोषो जायते यक्ष्मा गदो हेतुचतुष्टयात्"। 6. ಕ್ರೌರ್ಯ, ದಯೆಯಿಲ್ಲದಿರುವಿಕೆ, ಪರರನ್ನು ಪೀಡಿಸುವಿಕೆ, ವಿರುದ್ಧ ಕಾರ್ಯಾಚರಣೆ. "तव गोप्यते किमिव कर्तुमिदं न सहासि साहसमसाहसिकी" माघ० ९-५९। 7. ದಂಡನೆ, ಶಿಕ್ಷೆ, ಜುಲ್ಮಾನೆ. 8. ವಿಮರ್ಶಿಸದೆ ಮಾಡುವ ಕಾರ್ಯ, ವಿವೇಚನೆಯಿಲ್ಲದೆ ನಡಸುವ ಕೆಲಸ. "यद्येतत् साहसं तात यदि वा दुष्कृतं कृतम्। प्रियं वाप्यप्रियं वा ते वागुक्ता न मृषा भवेत्" भा० आदि०। 9. ದೋಷವೆಂದು ತಿಳಿಯದೆ ಮಾಡುವ ಕಾರ್ಯ, ಅಪರಾಧವೆಂದು ಆಲೋಚಿಸದೆ ಮಾಡುವ ಕಾರ್ಯ. "मनुष्यमारणं स्तेयं परदाराभिमर्षणम्। पारुष्यमनृतं चैव साहसं पञ्चधा स्मृतम्"। 10. ಅಕಾರ್ಯ, ನೀಚ ಕಾರ್ಯ, ಪಾಪಕಾರ್ಯ. "साहसं तु बलात्कारकृतकार्ये दमेऽपि च" मेदि०। "साहसं तु दमे दुष्करकर्मणि। अविमृश्य कृतौ धाष्टर्ये" हेम०।

**साहसिक ಸಾಹಸಿಕ** (वि०) 1. ಬಲಾತ್ಕಾರ ಮಾಡುವವನು, ಒತ್ತಾಯ ಮಾಡುವವನು, ನಿರ್ಬಂಧಿಸುವವನು, ಹಿಂಸಿಸುವವನು. सहसा बलेन वर्तते "ठक्" (४-४-२७)। "स्तेना: साहसिका धूर्ता: कितवा योधकाश्च ये। असाक्षिणस्तु ते दुष्टा: तेषु सत्यं न विद्यते" व्यवहारतत्त्वम्। 2. ಚೋರ, ಕಳ್ಳ, ಪ್ರಾಣಾಪಾಯವನ್ನು ಲಕ್ಷಿಸದೆ ಕಾರ್ಯಮಾಡುವವನು. सहसा व्याप्रियते — "ठक्" (४-४-२७)। 3. ಧೈರ್ಯಶಾಲಿ, ಶಕ್ತಿಮೀರಿ ಸಾಹಸ ಕಾರ್ಯ ಮಾಡುವವನು. "निर्व्यूढविषमव्यवसायनिष्ठापितप्रचण्डपाषण्डदोर्दण्डसाहस: साहसिक: खल्वेष:" मालती० ६। 4. ಸುಲಿಗೆ ಮಾಡುವವನು, ದರೋಡೆ ಮಾಡುವವನು. "नोपेक्षेत क्षणमपि राजा साहसिकं नरम्" मनु० ८-३४४।

**साहसिक्य ಸಾಹಸಿಕ್ಯ** (न०) 1. ಸಾಹಸಿಕನ ಕಾರ್ಯ, ಶಕ್ತಿಮೀರಿ ಮಾಡುವ ಕಾರ್ಯ. साहसिकस्य कर्म "ष्यञ्" (५-१-१२४)। "क्रामन् दन्तौ दन्तिन: साहसिक्यात् ईषादण्डौ मृत्युशय्यातलस्य" माघ० १८-४३। 2. ಒತ್ತಾಯಪಡಿಸುವುದು, ಬಲಾತ್ಕರಿಸುವುದು. 3. ಧೈರ್ಯದಿಂದ ಕೆಲಸಮಾಡುವುದು.

**साहसिन् ಸಾಹಸಿನ್** (वि०) 1. ಕಠಿನ, ನಿರ್ದಯ, ಕ್ರೂರ. साहसमस्यास्ति — "इनि:" (५-२-११५)। 2. ಶಕ್ತಿಮೀರಿ ಕಾರ್ಯ ಮಾಡುವವನು. 3. ಯೋಚಿಸದೆ ಕಾರ್ಯಮಾಡುವವನು, ವಿಮರ್ಶೆಯಿಲ್ಲದೆ ಕೆಲಸ ಮಾಡುವವನು. 4. ಧೈರ್ಯದಿಂದ ಕಾರ್ಯ ಮಾಡುವವನು.

**साहस्र ಸಾಹಸ್ರ** (पुं०) 1. ಸಾವಿರ ಸೈನಿಕರಿಂದ ಬಲಶಾಲಿಯಾದ ರಾಜ. सहस्र "अण्" (५-२-१०३)। (न०) 2. ಸಾವಿರಗಳ ಗುಂಪು, ಸಾವಿರಗಳ ರಾಶಿ. सहस्राणां

**सुग्रीवी ಸುಗ್ರೀವೀ** (स्त्री०) ಕಶ್ಯಪನಪತ್ನಿಯಾದ ತಾಮ್ರೆಯ ಮಗಳು. शोभना ग्रीवाऽस्याः "ङीप्"। "शुकी श्येनी च भासी च सुग्रीवी शुचिगृध्रिका। शुकी शुकानजनयत् उलूकी प्रत्युलूकिकान्। शुच्यौदकान् पक्षिगणान् सुग्रीवी तु व्यजायत"।

**सुग्ल ಸುಗ್ಲ** (वि०) ಬಹಳ ಬಳಲಿದವನು, ಆಯಾಸಪಟ್ಟವನು. ಉತ್ಸಾಹ ಕುಂದಿದವನು, ಬೇಸರಗೊಂಡವನು. सु + ग्लै (हर्षक्षये) "कः" (३-१-१३६)।

**सुचक्षुस् ಸುಚಕ್ಷುಸ್** (पुं०) 1. ಸೂಕ್ಷ್ಮಬುದ್ಧಿಯುಳ್ಳವನು, ಬಹಳ ಬುದ್ಧಿವಂತ, ಜ್ಞಾನಿ. (वि०) 2. ಸೂಕ್ಷ್ಮವಾದ ನೇತ್ರವುಳ್ಳವನು. शोभनं चक्षुर्यस्य।

**सुचरित ಸುಚರಿತ** (न०) 1. ಸದಾಚಾರ, ಒಳ್ಳೆಯ ವ್ಯಾಪಾರ, ಶ್ಲಾಘ್ಯವಾದ ಕಾರ್ಯ, ವಿಹಿತವಾದ ಕಾರ್ಯ. सु शोभनं चरितम्। "यः प्रीणयेत् सुचरितैः पितरं स पुत्रः यद्भर्तुरेव हितमिच्छति तत् कलत्रम्" भर्तृ० १-५१। 2. ಪುಣ್ಯ, ಭಾಗ್ಯ. "तव सुचरितमङ्गुलीय नूनम्" शाकु० ६-११। (वि०) 3. ಸದಾಚಾರಸಂಪನ್ನ. शोभनं चरितं यस्य।

**सुचरित्रा ಸುಚರಿತ್ರಾ** (स्त्री०) ಸಾಧ್ವಿ, ಪತಿವ್ರತೆ. सु शोभनं चरित्रं यस्याः। "सुचरित्रा तु सती साध्वी पतिव्रता" अम०।

**सुचित्रक ಸುಚಿತ್ರಕ** (पुं०) ಮೈಮೇಲೆ ಮಚ್ಚೆಗಳಿರುವ ಹಾವು.

**सुचिरम् ಸುಚಿರಮ್** (अव्य०) ಬಹಳ ದೀರ್ಘಕಾಲ. "अनितरजनलभ्यां प्रीतिमासेदुषीभिः सुचिरमनुबभूवे स्वर्गमोक्षातिशायी" याद० २४-९३।

**सुचिरायुस् ಸುಚಿರಾಯುಸ್** (पुं०) ದೇವತೆ. शुचिरम् आयुर्यस्य।

**सुचुटी ಸುಚುಟೀ** (स्त्री०) 1. ತಂಡಸ, ಇಕ್ಕುಳ. 2. ಚಿಮುಟ.

**सुचेलक ಸುಚೇಲಕ** (पुं०) 1. ಒಳ್ಳೆಯ ವಸ್ತ್ರ, ಸುಂದರವಾದ ವಸ್ತ್ರ. शोभनं चेलम्—स्वार्थे "कन्" (५-४-५)। "सुचेलकः पटोऽस्त्री स्यात्" अम०। (वि०) 2. ಸುಂದರವಾದ ವಸ್ತ್ರ ಧರಿಸಿರುವವನು.

**सुजन ಸುಜನ** (पुं०) 1. ಸತ್ಪುರುಷ, ಸತ್ಕುಲದಲ್ಲಿ ಜನಿಸಿದವನು, ಗೌರವಕ್ಕೆ ಅರ್ಹನಾದವನು. सु शोभनो जनः। "सत्यनियतवचसं वचसा सुजनं जनाश्चलयितुं क ईशते" माघ० १५-४०। (वि०) 2. ಉಪಕಾರದ ಬುದ್ಧಿಯುಳ್ಳವನು, ಧರ್ಮಬುದ್ಧಿಯುಳ್ಳವನು.

**सुजनता ಸುಜನತಾ** (स्त्री०). ಉಪಕಾರಬುದ್ಧಿ, ಧರ್ಮಬುದ್ಧಿ. सुजनस्य भावः "तल्" (५-१-११९)। "ऐश्वर्यस्य विभूषणं सुजनता शौर्यस्य वाक्संयमो ज्ञानस्योपशमः श्रुतस्य विनयो वित्तस्य पात्रे व्ययः" भर्तृ० १-८०। "धिगस्त्वेतां विद्यां धिगपि कवितां धिक् सुजनतां वयो रूपं वा धिक् धिगपि च यशो निर्धनवताम्। असौ जीयादेकः सकलगुणहीनोऽपि धनवान् बहिर्यस्य द्वारे तृणलवसमाः सन्ति गुणिनः" उद्भटः।

**सुजन्मन् ಸುಜನ್ಮನ್** (वि०) ಒಳ್ಳೆಯ ಜನ್ಮಪಡೆದಿರುವ, ಗೌರವಾನ್ವಿತ ವಂಶದಲ್ಲಿ ಹುಟ್ಟಿರುವ, ಪುಣ್ಯಮಾಡಿ ಹುಟ್ಟಿರುವ. "या कौमुदी नयनयोर्भवतः सुजन्मा तस्या भवानपि मनोरथबन्धबन्धुः" मालती० १-३७।

**सुजात ಸುಜಾತ** (वि०) 1. ಚೆನ್ನಾಗಿ ಬೆಳೆದು ನಿಂತಿರುವ. सु सुष्ठु जातः। 2. ಸುಂದರವಾದ, ರಮಣೀಯವಾದ. "तिरश्चकार भ्रमराभिलीनयोः सुजातयोः पङ्कजकोशयोः श्रियम्" रघु० ३-८।

**सुजाता ಸುಜಾತಾ** (स्त्री०) ತೊಗರಿ ಗಿಡ.

**सुत ಸುತ** (पुं०) 1. ಪುತ್ರ, ಮಗ. सूयते स्म—षू (प्रसवे) "क्तः" (३-२-१०२)। "अनन्यतन्त्रस्य पितुः पितामहः सुतस्य चारब्धमवेक्ष्य संयुगम्। समीहितोदर्कमिदं द्वयोरिति प्रबुध्यमानो न निरोधमादधे" याद० १४-९। 2. ರಾಜ, ದೊರೆ. "सुतः पुत्रे नृपे" मेदि०। (न०) 3. ಸೋಮರಸ. (वि०) 4. ಹಿಂಡಲ್ಪಟ್ಟ, ಹಿಂಡಿ ಹೊರಡಿಸಲ್ಪಟ್ಟ (ಸೋಮರಸ). 5. ಉತ್ಪನ್ನವಾದ, ಉತ್ಪತ್ತಿಹೊಂದಿದ.

**सुतङ्गम ಸುತಂಗಮ** (पुं०) ತಂದೆ

**सुतनु ಸುತನು** (स्त्री०) 1. ಕೋಮಲ ಶರೀರವುಳ್ಳ ಹೆಂಗಸು. शोभना तनुर्यस्याः। 2. ಸುಂದರವಾದ ಶರೀರ, ಕೋಮಲವಾದ ದೇಹ. (वि०) 3. ಸುಂದರವಾದ ಶರೀರವುಳ್ಳ. शोभना तनुः शरीरं यस्य। "स्मरसि सुतनु तस्मिन् पर्वते लक्ष्मणेन प्रतिविहितसपर्यासुस्थयोस्तान्यहानि" उ० रा० १-२६।

**सुतपस् ಸುತಪಸ್** (पुं०) 1. ತಪಸ್ವಿ, ಮುನಿ. सु शोभनं तपोऽस्य। 2. ಮಹಾವಿಷ್ಣು. "हिरण्यनाभः सुतपाः पद्मनाभः प्रजापतिः" वि० स०। 3. ಸೂರ್ಯ. सु सुष्ठु तपति—तप (सन्तापे) "असिः" (उ० ४-२२६)। (न०) 4. ಉಗ್ರವಾದ ತಪಸ್ಸು. (वि०) 5. ಉಗ್ರವಾದ ತಪಸ್ಸನ್ನಾಚರಿಸುವ.

**सुतराम् ಸುತರಾಮ್** (अव्य०) ಅತ್ಯಂತವಾಗಿ, ಬಹಳ ವಾಗಿ. सु + "तरप्" (५-३-५७)। आमु: (५-४-११)। "सितं सितिम्ना सुतरां मुनेर्वपुर्विसारिभि: सौधमिवास्य लम्भयन्" माघ० १-२५।

**सुतर्दन ಸುತರ್ದನ** (पुं०) ಕೋಗಿಲೆ. सुष्ठु तर्दति — तर्द (हिंसायाम्) "ल्यु:" (३-१-१३४)। "मधुकण्ठो घोषयित्नु: कामताल: सुतर्दन:" त्रिकाण्ड०।

**सुतल ಸುತಲ** (पुं०) 1. ಭೂಲೋಕದ ಕೆಳಗಿರುವ ಸಪ್ತ ಲೋಕಗಳಲ್ಲಿ ಆರನೆಯ ಲೋಕ. सु सुष्ठु तलं यस्य ॥ ಇದು ಬಲಿಚಕ್ರವರ್ತಿಯ ವಾಸಸ್ಥಾನ. ಪರಮಾತ್ಮನಾದ ಮಹಾವಿಷ್ಣುವು ಬಲಿಚಕ್ರವರ್ತಿಗೆ ಪಾತಾಲದಲ್ಲಿರುವಂತೆ ಆದೇಶ ನೀಡಿ ತಾನು ಅಲ್ಲಿ ದ್ವಾರಪಾಲಕನಾಗಿರುವನು. "इन्द्रादिष्वप्यलब्धा या सा श्रीस्तमनुवर्तते। तमेव देवदेवेशमाराधयति भक्तित:॥ व्यपेतसाध्वसोऽद्यापि वर्तते सुतलाधिप:। एवं दैत्यपति: सोऽयं बलि: परमपूजित:॥ सुतले वर्तते यस्य द्वारपालो हरि: स्वयम्" देवीभा०। 2. ದೊಡ್ಡ ಮಹಡಿಮನೆಯ ತಳಪಾಯ, –ಅಡಿಪಾಯ.

**सुतश्रेणी ಸುತಶ್ರೇಣೀ** (स्त्री०) ಇಲಿಯಾಲದ ಮರ, ಇಲಿಕಿವಿಯ ಗಿಡ. सुतानां श्रेणी यस्या:। "प्रत्यक्श्रेणी सुतश्रेणी रण्डा मूषिकपर्ण्यपि" अम०।

**सुतहिबुकयोग ಸುತಹಿಬುಕಯೋಗ** (पुं०) ವಿವಾಹಕ್ಕೆ ಬಹಳ ಶುಭವಾದ ಒಂದು ಯೋಗ, ವಿವಾಹಲಗ್ನ ಲಗ್ನ ದಿಂದ ನಾಲ್ಕನೆಯ ಸ್ಥಾನ ಐದನೆಯ ಒಂಬತ್ತನೆಯ ಅಥವಾ ಹತ್ತನೆಯ ಸ್ಥಾನಗಳಲ್ಲಿ ಗುರು ಅಥವಾ ಶುಕ್ರ ನಿದ್ದಲ್ಲಿ ಸುತಹಿಬುಕಯೋಗವಾಗುವುದು. ಇದು ಬಹಳ ಶುಭಕರ. "लग्ने तत्पञ्चमे तुर्ये नवमे दशमे तथा। गुरुर्भृगुर्वा दोषघ्नो विवाहे वर्धते शुभम्" ज्योतिस्तत्त्वम्।

**सुता ಸುತಾ** (स्त्री०) ಮಗಳು. सूयते स्म—षु (प्रसवे) "क्त:" (३-२-१०२)। "टाप्" (४-१-४)। "अयाचितारं न हि देवदेवमद्रि: सुतां ग्राहयितुं शशाक" कुमा० १-५२।

**सुतात्मज ಸುತಾತ್ಮಜ** (पुं०) 1. ಪೌತ್ರ, ಪುತ್ರನ ಪುತ್ರ. 2. ದೌಹಿತ್ರ, ಪುತ್ರಿಯ ಮಗ. सुतस्य सुताया वा आत्मज:। **–आत्मजा –ಆತ್ಮಜಾ.** 1. ಪೌತ್ರಿ, ಪುತ್ರನ ಮಗಳು. 2. ದೌಹಿತ್ರಿ, ಮಗಳ ಮಗಳು. सुतस्य सुताया वा आत्मजा।

**सुतिन् ಸುತಿನ್** (वि०) ಮಕ್ಕಳುಳ್ಳವನು, ಸಂತಾನಪಡೆದ ವನು. सुतोऽस्यास्ति "इनि:" (५-२-११५)। स्त्रियां "ङीप्" (४-१-५)। **–नी –ನೀ.** "गुणिगणगणनारम्भे न पतति कठिनी ससम्भ्रमाद्यस्य। तेनाम्बा यदि सुतिनी वद वन्ध्या कीदृशी भवति"॥

**सुतीक्ष्ण ಸುತೀಕ್ಷ್ಣ** (पुं०) 1. ಒಬ್ಬ ಋಷಿ. ದಂಡಕಾರಣ್ಯ ದಲ್ಲಿ ತಪಸ್ಸು ಮಾಡುತ್ತಿದ್ದ ಈ ಋಷಿಯ ಸೂಚನೆಯಂತೆ ಶ್ರೀರಾಮನು ಸೀತಾಲಕ್ಷ್ಮಣರೊಡನೆ ಅಗಸ್ತ್ಯಮಹರ್ಷಿಯ ಆಶ್ರಮಕ್ಕೆ ಹೋದನು. "हविर्भुजामेधवतां चतुर्णां मध्ये ललाटन्तपसप्तसप्ति:। असौ तपस्यत्यपरस्तपस्वी नाम्ना सुतीक्ष्णश्चरितेन दान्त:" रघु० १३-४१। (वि०) 2. ಬಹಳ ತೀಕ್ಷ್ಣವಾದ, ಬಹಳ ಉಗ್ರವಾದ. "सुतीक्ष्णदण्डो बलवांश्च वानर:" रामा०।

**सुतुङ्ग ಸುತುಂಗ** (पुं०) 1. ನಾರಿಕೇಳ ವೃಕ್ಷ, ತೆಂಗಿನ ಮರ. सुष्ठु तुङ्ग:। (वि०) 2. ಬಹಳ ಎತ್ತರವಾದ.

**सुतेजस् ಸುತೇಜಸ್** (वि०) 1. ಒಳ್ಳೆಯ ತೇಜಸ್ಸಿಯಾದ. 2. ಒಳ್ಳೆಯ ಪ್ರಕಾಶದಿಂದ ಕೂಡಿದ, ಪ್ರಕಾಶಮಾನ ವಾದ. सुष्ठु तेजो यस्य।

**सुत्या ಸುತ್ಯಾ** (स्त्री०) ಸೋಮರಸವನ್ನು ಹಿಂಡುವುದು, ಸೋಮಲತೆಯನ್ನು ಹಿಂಡಿ ರಸವನ್ನು ತೆಗೆಯುವುದು. षुञ् (अभिषवे) "क्यप्" (३-३-९९)। "सुत्याभिषव: सवनं च सा" अम०।

**सुत्रामन् ಸುತ್ರಾಮನ್** (पुं०) ಸುರಪತಿ, ದೇವೇಂದ್ರ. सुष्ठु त्रायते — त्रैङ् (पालने) "मनिन्" (३-२-७४)। "सुत्रामा गोत्रभिद्वज्री वासवो वृत्रहा वृषा" अम०।

**सुत्वन् ಸುತ್ವನ್** (पुं०) ಸ್ನಾತಕ, ಯಜ್ಞಾಂಗವಾದ ಅವಭೃಥ ಸ್ನಾನ ಮಾಡಿದವನು. षुञ् (अभिषवे) "ङ्वनिप्" (३-२-१०३)। तुक् (६-१-७१)। "सुत्वाभिषवे कृते" अम०।

**सुदक्षिण ಸುದಕ್ಷಿಣ** (वि०) ಸರಳ ಹೃದಯವುಳ್ಳವನು, ಪ್ರಾಮಾಣಿಕ, ಸತ್ಯಸಂಧ. सुष्ठु दक्षिण:।

**सुदक्षिणा ಸುದಕ್ಷಿಣಾ** (स्त्री०) ಸೂರ್ಯವಂಶದ ದಿಲೀಪ ಮಹಾರಾಜನ ಪತ್ನಿ.

**सुदण्ड ಸುದಂಡ** (पुं०) ವೇತ್ರ, ಬೆತ್ತ. सुष्ठु दण्डो यस्मात्।

**सुदत् ಸುದತ್** (वि०) ಒಳ್ಳೆಯ ಲಕ್ಷಣವಾದ ಎಲ್ಲಾ ದಂತ ಗಳುಳ್ಳವನು. सु शोभना: समस्ता दन्ता यस्य — दन्त "दतृ" (५-४-१४१)। स्त्रियां **सुदती ಸುದತೀ.** सु शोभना: समस्ता दन्ता: यस्या:। सुदत् "ङीप्" (४-१-६)। ಎಳೆಯ ವಯಸ್ಸು ತೋರುವಲ್ಲಿ दतृ ಆದೇಶ.

"वयसि दन्तस्य दतृ"। "सुदतीजनमज्जनार्पितैः घुसृणैर्यत्र कषायिताशया" नैष० २-७७।

**सुदन्त ಸುದಂತ** (ಪುಂ) 1. ಒಳ್ಳೆಯ ದಂತವುಳ್ಳ ಗಜ. 2. ಒಳ್ಳೆಯ ದಂತಗಳುಳ್ಳವನು. शोभना दन्ताः यस्य। ಎಳೆಯ ವಯಸ್ಸು ತೋರದಿರುವಲ್ಲಿ ದತೃ ಆದೇಶ ಬರುವುದಿಲ್ಲ.

**सुदर्शन ಸುದರ್ಶನ** (ಪುಂನಂ) 1. ಮಹಾವಿಷ್ಣುವಿನ ಚಕ್ರಾಯುಧ. शोभनं दर्शनमस्य। "तस्य नेष्यति वपुः कबन्धतां बन्धुरेष जगतां सुदर्शनः" माघ० १४-१६। ಈ ಚಕ್ರಚಿಹ್ನೆಯನ್ನು ವೈಷ್ಣವರು ತಮ್ಮ ದೇಹದಲ್ಲಿ ಧರಿಸಬೇಕು. "कृत्वा धातुमयीं मुद्रां तापयित्वा स्वकां तनुम्। चक्रादिचिह्नितां भूप धारयेद्वैष्णवो नरः" ब्रह्माण्डपु०। (ಪುಂ) 2. ಸುಮೇರು ಪರ್ವತ. 3. ಜಂಬು ವೃಕ್ಷ. ನೇರಳೆ ಮರ. 4. ಶಿವ. ಪರಮೇಶ್ವರ. "सुदर्शनो हरेश्चक्रे मेरुजम्बूद्रुमे पुमान्। न द्वयोः शक्रनगरे" मेदि०। (वि०) 5. ನೋಡಲು ರಮ್ಯವಾದ, ಸುಖವಾಗಿ ನೋಡಬಹುದಾದ, ಸುಂದರವಾಗಿ ಕಾಣುವ. (स्त्री०) —ना —ನಾ. 6. ಅಮರಾವತಿ.

**सुदर्शना ಸುದರ್ಶನಾ** (स्त्री०) 1. ಇಂದ್ರನ ನಗರ, ಅಮರಾವತಿ. 2. ಆಜ್ಞೆ, ಶಾಸನ, ಕಟ್ಟಳೆ. 3. ಅಮೃತಬಳ್ಳಿ. 4. ಮೇರುಪರ್ವತ. 5. ಜಂಬು ವೃಕ್ಷ. ಮೇದಿನೀ ಕೋಶದಲ್ಲಿ ಮೇರು ಮತ್ತು ಜಂಬು ಎರಡೂ ಪುಂಲಿಂಗದಲ್ಲಿವೆ. "मेरुजम्बूद्रुमे पुमान्" मेदि०। ವಿಶ್ವಕೋಶದಲ್ಲಿ ಸ್ತ್ರೀಲಿಂಗದಲ್ಲಿವೆ. "आज्ञायामोषधीभेदे मेरुजम्ब्वां सुदर्शना" विश्व०।

**सुदर्शनी ಸುದರ್ಶನೀ** (स्त्री०) ಅಮರಾವತಿ. ಇಂದ್ರನ ನಗರ. सुष्ठु दर्शनं यस्याः। सुदर्शना "ङीप्"।

**सुदामन् ಸುದಾಮನ್** (ಪುಂ) 1. ಕುಚೇಲ. ಬಲರಾಮ ಮತ್ತು ಶ್ರೀಕೃಷ್ಣ ಇಬ್ಬರೂ ಸಾಂದೀಪನಿಯಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದಾಗ ಸುದಾಮನೂ ಅವರ ಸಹಪಾಠಿಯಾಗಿದ್ದನು. ಇವರೆಲ್ಲರೂ ಸಹೋದರ ಪ್ರೇಮದಿಂದ ವಿದ್ಯಾಭ್ಯಾಸ ಮಾಡುತ್ತಿದ್ದರು. [ವಿವರಕ್ಕೆ "कुचेल" ಪದದಲ್ಲಿ ನೋಡಿ.] 2. ಮೇಘ, ಮೋಡ. सुष्ठु ददाति —डु दाञ् (दाने) "मनिन्" (३-२-७४)। 3. ಒಂದು ಪರ್ವತ. "सुदामा तु पुमान् वारिधरपर्वतभेदयोः" मेदि०। 4. ಐರಾವತ. ಇಂದ್ರನ ಗಜ. "हस्तिमल्लश्चतुर्दन्तो भद्ररेणुर्मदांवरः। श्वेतद्वीपः सुदामा" त्रिकाण्ड०। (वि०) 5. ಉದಾರವಾಗಿ ದಾನಮಾಡುವವನು. सुष्ठु ददाति — दाञ् "मनिन्"।

**सुदाय ಸುದಾಯ** (ಪುಂ) 1. ವಿವಾಹಕಾಲದಲ್ಲಿ ಮಗಳಿಗೂ ಅಳಿಯನಿಗೂ ಕೊಡುವ ಬಳುವಳಿ. सुष्ठु दीयते—डु दाञ् (दाने) "घञ्" (३-३-१९)। "यौतकादि तु यद्देयं सुदायो हरणं च तत्" अम०। 2. ದಾನ, ಕೊಡುಗೆ.

**सुदि ಸುದಿ** (अव्य०) ಶುಕ್ಲಪಕ್ಷ.

**सुदिन ಸುದಿನ** (नं०) ಶುಭ ದಿವಸ, ಪ್ರಶಸ್ತವಾದ ದಿವಸ. सु शोभनं दिनम्। ಸುದಿನ ದುರ್ದಿನಗಳು ಕರ್ಮದಿಂದ ಪ್ರಾಪ್ತವಾದುವು. "सुदिनं दुर्दिनं चैव सर्वं कर्मोद्भवं भव। तत्कर्म तपसा साध्यं कर्मणां च शुभाशुभम्" ब्रह्मवै०।

**सुदिनाह ಸುದಿನಾಹ** (नं०) ಶುಭದಿವಸ, ಪ್ರಶಸ್ತ ದಿವಸ. सुदिनं प्रशस्तमहः। सुदिनशब्दः प्रशस्तवाची सि० कौ० (५-४-९०)।

**सुदीर्घ ಸುದೀರ್ಘ** (वि०) ಬಹಳ ದೀರ್ಘವಾದ, ಬಹಳ ವಿಸ್ತಾರವಾದ. सुष्ठु दीर्घः।

**सुदीर्घा ಸುದೀರ್ಘಾ** (स्त्री०) ಸೌತೆಗಿಡ.

**सुदुःखित ಸುದುಃಖಿತ** (वि०) ಬಹಳ ದುಃಖದಿಂದ ಕೂಡಿದವನು.

**सुदुर्लभ ಸುದುರ್ಲಭ** (वि०) ಬಹಳ ಕಷ್ಟದಿಂದ ಹೊಂದಲು ಸಾಧ್ಯವಾದ. सु + दुर् + डु लभष् (प्राप्तौ) "खल्" (३-३-१२६)।

**सुदुर्वह ಸುದುರ್ವಹ** (वि०) ವಹಿಸಲು ಬಹಳ ಕಷ್ಟವಾದ. सुतरां दुःखेन वोढुं शक्यम्। "तदमोघं सुदुर्वहम्" कुमा० १०-१२।

**सुदुश्चर ಸುದುಶ್ಚರ** (वि०) ಬಹಳ ಕಷ್ಟದಿಂದ ಆಚರಿಸಲು ಸಾಧ್ಯವಾದ. सु + दुस् + चर (गतौ) "खल्" (३-३-१२६)।

**सुदुष्कर ಸುದುಷ್ಕರ** (वि०) ಬಹಳ ಕಷ್ಟದಿಂದ ಮಾಡಬಹುದಾದ. सु + दुस् + डु कृञ् (करणे) "खल्" (३-३-१२६)।

**सुदुस्तर ಸುದುಸ್ತರ** (वि०) ಬಹಳ ಕಷ್ಟದಿಂದ ದಾಟಬಹುದಾದ. सु + दुस् + तॄ (प्लवनतरणयोः) "खल्" (३-३-१२६)।

**सुदुस्त्यज ಸುದುಸ್ತ್ಯಜ** (वि०) ಬಹಳ ಕಷ್ಟದಿಂದ ಬಿಡಲು ಸಾಧ್ಯವಾದ, ತ್ಯಜಿಸಲು ಕಷ್ಟವಾದ. सु + दुस् + त्यज (हानौ) "खल्" (३-३-१२६)। "त्यक्त्वा सुदुस्त्यजसुरेप्सितराज्यलक्ष्मीं धर्मिष्ठ आर्यवचसा यदगादरण्यम्।

मायामृगं दयितयेप्सितमन्वधावद्वन्दे महापुरुष ते चरणारविन्दम्" भाग० ।

**सुदूर ಸುದೂರ** (वि०) ಬಹಳ ದೂರವಾದ. सु अत्यन्तं दूरम् ।

**सुदृढ ಸುದೃಢ** (वि०) 1. ಬಹಳ ದೃಢವಾದ, ಬಹಳ ಗಟ್ಟಿಯಾದ, ಸ್ಥಿರವಾದ, ಭದ್ರವಾದ. (न०) 2. ಅತಿಶಯ.

**सुदृश् ಸುದೃಶ್** (स्त्री०) 1. ಸುಂದರವಾದ ಕಣ್ಣುಗಳುಳ್ಳ ಹೆಂಗಸು. सु शोभना दृक् यस्याः । "विनयति सुदृशो दृशः परागं प्रणयिनि कौसुममाननानिलेन" माघ० ७-५७ । (वि०) 2. ಸುಂದರವಾದ ಕಣ್ಣುಗಳುಳ್ಳ.

**सुधन्वन् ಸುಧನ್ವನ್** (पुं०) 1. ಮಹಾವಿಷ್ಣು. सु शोभनं धनुर्यस्य—"अनङ्" (५-४-१३२) । "सुशोभनं धनुर्यस्य सुधन्वा परिकीर्तितः" इति निरुक्तिः । "सुधन्वा खण्डपरशुः" वि० स० । 2. ವಿಶ್ವಕರ್ಮ. "सुधन्वा प्रौढधानुष्के त्रिषु ना विश्वकर्मणि" मेदि० । (वि०) 3. ಒಳ್ಳೆಯ ಬಿಲ್ಲುಗಾರ, ಪರಿಣತನಾದ ಬಿಲ್ಲುಗಾರ. 4. ಒಳ್ಳೆಯ ಧನುಸ್ಸನ್ನು ಹಿಡಿದಿರುವ. "सुधन्वा सुरसुभ्रुवाम्" याद० १६-९३ ।

**सुधर्मन् ಸುಧರ್ಮನ್** (स्त्री०) ದೇವತೆಗಳ ಸಭೆ. सु शोभनो धर्मोऽस्याम् "अनिच्" (५-४-१२४) । सुधर्मा सुधर्माणौ सुधर्माणः । वा डाप् (४-१-१३) । पक्षे सुधर्मा सुधर्मे सुधर्माः । "ययावुदीरितालोकः सुधर्मानवमां सभाम्" रघु० १७-२७ ।

**सुधा ಸುಧಾ** (स्त्री०) 1. ಪೀಯೂಷ, ಅಮೃತ. सुखेन धीयते—धेट् (पाने) "अङ्" (३-३-१०३) । "सूचयन्तं स्वमूर्त्या च सुधां शुद्धानुभाव्यया" याद० १६-१३ । 2. ಗಂಗಾನದಿ. 3. ಸುಣ್ಣ, ಗೋಡೆಗೆ ಲೇಪಿಸುವ ಒಂದು ದ್ರವ್ಯ. "सेना सुधाक्षालितसौधसम्पदां पुरं बहूनां परभागमाप सा" माघ० १२-६२ । 4. ಇಟ್ಟಿಗೆ. 5. ಸ್ನುಹೀ ವೃಕ್ಷ, ಮುಂಡುಗಳ್ಳಿ ಗಿಡ. "सुधा स्त्रीलेपने मूर्व्यां स्नुहीगङ्गेष्टकामृते" मेदि० । 6. ಕುರಟಿಗೆ ಗಿಡ. 7. ವಿದ್ಯುತ್ತು, ಮಿಂಚು. 8. ಜಲ, ನೀರು. "रसायनमिवर्षीणां देवानाममृतं यथा । सुधेवोत्तमनागानां भैषज्यमिदमस्तु ते" सुश्रुत० सूत्र० ४३-२ । 9. ಮಕರಂದ, ಪುಷ್ಪರಸ. 10. ಮಧು, ಜೇನುತುಪ್ಪ. 11. ಆಳಲೆ ಕಾಯಿ. 12. ಆಮಲಕ, ನೆಲ್ಲಿಕಾಯಿ.

**सुधांशु ಸುಧಾಂಶು** (पुं०) 1. ಚಂದ್ರ. सुधायुक्ता अंशवो यस्य । "सुधांशुरेष प्रथमो भुवीति स्मरो द्वितीय किमसाविति्यमम् । दस्रस्तृतीयोऽयमिति क्षितीशाः स्तुतिच्छलान्मत्सरिणो निनिन्दुः" नैष० १०-४१ । 2. ಕರ್ಪೂರ.

**सुधांशुतैल ಸುಧಾಂಶುತೈಲ** (न०) ಕರ್ಪೂರ ತೈಲ.

**सुधांशुरत्न ಸುಧಾಂಶುರತ್ನ** (न०) ಚಂದ್ರನಿಗೆ ಪ್ರಿಯವಾದ ರತ್ನ. सुधांशोः प्रीतिकरं रत्नम् ।

**सुधाकर ಸುಧಾಕರ** (पुं०) ಚಂದ್ರ. सुधायुक्ताः करा अस्य ।

**सुधाजीविन् ಸುಧಾಜೀವಿನ್** (पुं०) ಸುಣ್ಣ ಬಳಿಯುವವನು, ಸುಣ್ಣ ಬಳಿದು ಜೀವಿಸುವವನು.

**सुधाधार ಸುಧಾಧಾರ** (पुं०) ಚಂದ್ರ. सुधाया आधारः । –निधिः –ನಿಧಿಃ.

**सुधापाणि ಸುಧಾಪಾಣಿ** (पुं०) ಧನ್ವಂತರಿ. सुधा पाणौ यस्य ।

**सुधाभुज् ಸುಧಾಭುಜ್** (पुं०) ದೇವತೆ. सुधां भुङ्क्ते—भुज (परिपालनाभ्यवहारयोः) "क्विप्" (३-२-७६) ।

**सुधामय ಸುಧಾಮಯ** (पुं०) 1. ರಾಜಗೃಹ, ರಾಜನ ಅರಮನೆ. सुधा "मयट्" (५-४-२१) । (वि०) 2. ಸುಧೆಯಿಂದ ಕೂಡಿದ, ಅಮೃತದಿಂದ ತುಂಬಿದ. "स्रोतोभिरस्याः परिपूर्यमाणः सुधामयं सिन्धुमिवादधानैः" याद० १८-४५ ।

**सुधामोदक ಸುಧಾಮೋದಕ** (पुं०) ಕರ್ಪೂರ.

**सुधायमान ಸುಧಾಯಮಾನ** (वि०) ಅಮೃತದಂತೆ ತೋರುತ್ತಿರುವ. सुधावदाचरन्—सुधा+क्यङ् "शानच्" (३-२-१२४) । "सुधायमानां धनदस्य सौधे स्वाभाविकीमस्य गिरेरभिख्याम्" याद० १८-२० ।

**सुधावर्षिन् ಸುಧಾವರ್ಷಿನ್** (पुं०) 1. ಬ್ರಹ್ಮ. 2. ಚಂದ್ರ. 3. ಕರ್ಪೂರ. सुधां वर्षति — वृषु (सेचने) "णिनिः" (३-१-१३४) ।

**सुधावास ಸುಧಾವಾಸ** (पुं०) 1. ಚಂದ್ರ. 2. ಕರ್ಪೂರ. सुधाया आवासः । "ज्योत्स्नायाः पतये तुभ्यं ज्योतिषां पतये नमः । नमस्ते रोहिणीकान्त सुधावास नमोऽस्तु ते" ॥

**सुधासित ಸುಧಾಸಿತ** (वि०) 1. ಅಮೃತದಂತೆ ಸ್ವಚ್ಛವಾಗಿರುವ. 2. ಸುಣ್ಣದಂತೆ ಬೆಳ್ಳಗಿರುವ. 3. ಅಮೃತದಿಂದ ಬದ್ಧನಾದ, ಅಮೃತಪ್ರಿಯನಾದ. सुधावत् सितः स्वच्छः, सुधावत् लेपनद्रव्यवत् सितः धवलः, सुधया सितः बद्धः— षिञ् (बन्धने) "क्तः" (३-२-१०२) ।

"जगतीशरणे युक्तो हरिकान्तः सुधासितः। दानवर्षी कृताशंसो नागराज इवाबभौ" किरा० १५-४५।

**सुधासार ಸುಧಾಸಾರ** (वि०) ಅಮೃತಮಯವಾದ. "सुधासारैरिवाम्भोभिरभिषिक्तो हुताशनः" कुमा० १०-३९।

**सुधासिन्धु ಸುಧಾಸಿಂಧು** (पुं०) ಸುಧಾಸಾಗರ, ಅಮೃತ ಸಮುದ್ರ. सुधायाः सिन्धुः। "वृषगिरिसुधासिन्धौ जन्तुर्दये निहितस्त्वया भवभयपरीतापच्छित्त्यै भजन्नघमर्षणम्" दयाश०।

**सुधासूति ಸುಧಾಸೂತಿ** (पुं०) 1. ಚಂದ್ರ. सुधायाः सूतिर्यस्मात्। 2. ಯಜ್ಞ. "सुधासूतिः पुमान् मखे। चन्द्रे" मेदि०। 3. ಪದ್ಮ, ಕಮಲ.

**सुधास्यन्दिन् ಸುಧಾಸ್ಯಂದಿನ್** (वि०) ಅಮೃತವನ್ನು ಸುರಿಸುವ, ಅಮೃತವನ್ನು ಹರಿಸುವ. सुधां स्यन्दयति— स्यन्दू (प्रस्रवणे) + णिच् "णिनिः" (३-१-१३४)। "माधुर्यं मधुबिन्दुना रचयितुं क्षीराम्बुधेरीहते मूर्खान् यः प्रतिनेतुमिच्छति बलात् सूक्तैः सुधास्यन्दिभिः" भर्तृ० १-६।

**सुधास्रवा ಸುಧಾಸ್ರವಾ** (स्त्री०) ಕಿರುನಾಲಗೆ. सुधायाः स्रवा।

**सुधाहर ಸುಧಾಹರ** (पुं०) ಗರುತ್ಮಂತ, ಗರುಡ. हरति — हृञ् (हरणे) "अच्" (३-१-१३४)। सुधाया हरः। "पक्षिसिंह उन्नतीशो वज्रतुण्डः सुधाहरः" त्रिकाण्ड०। **–हृत् –ಹೃತ್.**

**सुधी ಸುಧೀ** (पुं०) 1. ಪಂಡಿತ, ವಿದ್ವಾಂಸ. सुष्ठु ध्यायति — ध्यै (चिन्तायाम्) "क्विप्" सम्प्रसारणं च (वा० ३-२-१७७)। सु शोभना धीर्यस्य इति वा। (वि०) 2. ಒಳ್ಳೆಯ ಬುದ್ಧಿಶಾಲಿಯಾದವನು, ಚುರುಕುಬುದ್ಧಿಯುಳ್ಳವನು. "मात्रातिमात्रं शुभयैव बुद्ध्या चिरं सुधीरभ्यधिकं समाधात्" भट्टि० १२-६। (स्त्री०) 3. ಒಳ್ಳೆಯ ಬುದ್ಧಿ. शोभना बुद्धिः।

**सुधोद्भव ಸುಧೋದ್ಭವ** (पुं०) 1. ಧನ್ವಂತರಿ. (स्त्री०) **–उद्भवा –ಉದ್ಭವಾ.** 2. ಅಳಲೆಕಾಯಿ.

**सुनन्द ಸುನಂದ** (पुं०) 1. ಶ್ರೀಕೃಷ್ಣನ ಒಬ್ಬ ಪಾರ್ಷದ, ಸಂಗಡಿಗ, ಸಂಗಾತಿ. "सुनन्दनन्दप्रमुखैः स्वपार्षदैः चक्रादिभिर्मूर्तिधरैर्निजायुधैः" भाग० १०-८९-५६। (स्त्री०) **–नन्दा –ನಂದಾ.** 2. ಪಾರ್ವತಿ. 3. ಗೋರೋಚನ. "सुनन्दा रोचनोमयोः" मेदि०। 4. ದುಷ್ಯಂತರಾಜನ ಪುತ್ರನಾದ ಭರತನ ಪತ್ನಿ. 5. ಹೆಂಗಸು. "सुनन्दा रोचनानार्योः" विश्व०।

**सुनयन ಸುನಯನ** (पुं०) 1. ಮೃಗ, ಜಿಂಕೆ. सु शोभने नयने यस्य। (वि०) 2. ಸುಂದರವಾದ ಕಣ್ಣುಗಳುಳ್ಳವನು. (स्त्री०) **–नयना –ನಯನಾ.** 3. ಹೆಂಗಸು. शोभने नयने यस्याः।

**सुनाभ ಸುನಾಭ** (पुं०) 1. ಮೈನಾಕಪರ್ವತ. "इन्द्रकीलः सुनाभश्च तथा दिव्यौ च पर्वतौ" भा० वन०। (न०) 2. ಮಹಾವಿಷ್ಣುವಿನ ಚಕ್ರ. सु सुष्ठु नाभिश्चक्रमध्यमस्यास्ति। "सुतं मृधे खं वपुषा ग्रसन्तं दृष्ट्वा सुनाभोन्मथितं धरित्र्या। आमन्त्रितस्तत्तनयाय शेषं दत्त्वा तदन्तःपुरमाविवेश" भाग० ३-३-६। (वि०) 3. ಚಕ್ರದ ಸುಂದರವಾದ ಮಧ್ಯಭಾಗವುಳ್ಳ. "तत्तेजसा कृत चक्रं सुनाभं विश्वकर्मणा" भा० वन०।

**सुनार ಸುನಾರ** (पुं०) 1. ಹೆಣ್ಣುನಾಯಿಯ ಹಾಲು. 2. ಸರ್ಪದ ಮೊಟ್ಟೆ, ಹಾವಿನ ತತ್ತಿ. 3. ಚಟಕ, ಗುಬ್ಬಚ್ಚಿ. "सुनारस्तु शुनीस्तन्ये सर्पाण्डकलविङ्कयोः" मेदि०।

**सुनासिका ಸುನಾಸಿಕಾ** (स्त्री०) 1. ಸುಂದರವಾದ ಮೂಗು. सु शोभना नासिका। 2. ಕಾಗೆತೊಂಡೆ.

**सुनासीर ಸುನಾಸೀರ** (पुं०) ದೇವೇಂದ್ರ. सु सुष्ठु नासीरं सेनामुखं नासीरा अग्रेसरा वाऽस्य।

**सुनिभृत ಸುನಿಭೃತ** (वि०) 1. ಬಹಳ ರಹಸ್ಯವಾದ, ಬಹಳ ಗುಟ್ಟಾದ. सुष्ठु निभृतम्। (अव्य०) 2. ಬಹಳ ರಹಸ್ಯವಾಗಿ.

**सुनिषण्णक ಸುನಿಷಣ್ಣಕ** (न०) ನೀರು ಚಂಚಲಿ, ನಸುವಲು ಗಿಡ. "वितुन्नं सुनिषण्णकम्" अम०।

**सुनीति ಸುನೀತಿ** (स्त्री०) 1. ಒಳ್ಳೆಯ ನೀತಿ. सु शोभना नीतिः। "क्रियाफलानीव सुनीतिभाजं सैन्यानि सीमान्वयमन्वयुस्तम्" माघ० ३-२६। 2. ಧ್ರುವಕುಮಾರನ ತಾಯಿ. "जाये उत्तानपादस्य सुनीतिः सुरुचिस्तयोः। सुरुचिः प्रेयसी पत्युः नेतरा यत्सुतो ध्रुवः" भाग० ४-८-८। "सुनीतिः शोभननये ध्रुवमातरि योषिति" मेदि०।

**सुनीथ ಸುನೀಥ** (पुं०) 1. ಬ್ರಾಹ್ಮಣ. सु + णीञ् (प्रापणे) "क्थन्" (उ० २-२)। (वि०) 2. ಧರ್ಮ ಬುದ್ಧಿಯುಳ್ಳವನು. सुष्ठु नयति धर्मम् — णीञ् "क्थन्"।

**सुनील ಸುನೀಲ** (ಪುಂ) 1. ದಾಳಿಂಬೆ ಗಿಡ. (ನಂ) 2. ಲಾಮಂಚದ ಬೇರು. 3. ಒಳ್ಳೆಯ ನೀಲಿಬಣ್ಣ. सु अतिशयो नीलः।

**सुनीलक ಸುನೀಲಕ** (ಪುಂ) 1. ಗರಗದ ಸೊಪ್ಪು. सुनील स्वार्थे "कन्"। 2. ಹೊನ್ನೆ ಮರ.

**सुनीला ಸುನೀಲಾ** (स्त्री०) 1. ಅಗಸೆ ಗಿಡ. 2. ವಿಷ್ಣುಕ್ರಾಂತ.

**सुनु ಸುನು** (ನಂ) ಜಲ, ನೀರು. सु शोभना नीर्यत्र।

**सुन्द ಸುಂದ** (ಪುಂ) 1. ವಿಷ್ಣು. सु सुष्ठु असुरमनांसि उनत्ति — उन्दी (क्लेदने) "अच्" (३-१-१३४)। उकारलोपः। पृषो०। "उनत्ति सुष्ठु चेतांसि रक्षसां सुन्द ईरितः" इति निरुक्तिः। "उद्भवः सुन्दरः सुन्दः" वि० स०। 2. ಸುಗ್ರೀವನ ಸೈನ್ಯದಲ್ಲಿದ್ದ ಒಬ್ಬ ವಾನರ. "जाम्बवान् ऋषभः सुन्दः वम्भः शतबलिः पृथुः" रामा०। 3. ನಿಕುಂಭನೆಂಬ ರಾಕ್ಷಸನ ಮಗ. ಉಪಸುಂದನು ಇವನ ತಮ್ಮ. ಸುಂದೋಪಸುಂದರು ತಮಗೆ ತಮ್ಮಿಬ್ಬರ ಹೊರತು ಮತ್ತಾರಿಂದಲೂ ಸಾವು ಕೊಡದೆಂಬ ವರವನ್ನು ಬ್ರಹ್ಮನಿಂದ ಪಡೆದು ಅದರ ಬಲದಿಂದ ಎಲ್ಲರನ್ನೂ ಪೀಡಿಸತೊಡಗಿದರು. ಇಂದ್ರನು ಬಹಳ ಸುಂದರಿಯಾದ ತಿಲೋತ್ತಮೆಯನ್ನು ಇವರಲ್ಲಿಗೆ ಕಳುಹಿಸಿದಾಗ ಇವರಿಬ್ಬರೂ ಅವಳಿಗಾಗಿ ಪೈಪೋಟಿಯಿಂದ ಹೊಡೆದಾಡಿ ಅಸುವನ್ನು ನೀಗಿದರು.

**सुन्दर ಸುಂದರ** (ಪುಂ) 1. ವಿಷ್ಣು. विश्वातिशायिसौभाग्यशालितया दृष्टिमनोहरः। सु+दृ (विदारणे) "अप्" (३-३-५७)। पृषो०। "स स्यात् सुन्दर उद्दिष्टः तेषां दृष्टिमनोहरः" इति निरुक्तिः। "उद्भवः सुन्दरः सुन्दः" वि० स०। 2. ಕಾಮದೇವ, ಮನ್ಮಥ. (ವಿ०) 3. ಮನೋಹರವಾದ, ಚಿತ್ತವನ್ನು ಆಕರ್ಷಿಸುವ. सु सुष्ठु उनत्ति चित्तम्—उन्दी (क्लेदने) "अरः" बाहु०। शक०।

**सुन्दरी ಸುಂದರೀ** (स्त्री०) 1. ಸುಂದರ ಹೆಂಗಸು, ಚೆಲುವೆಯಾದ ಹೆಂಗಸು. सुन्दर गौरा० "ङीष्" (४-१-४१)। "व्रजन्ति विद्याधरसुन्दरीणामनङ्गलेखक्रिययोपयोगम्" कुमा० १-७। 2. ಹರಿದ್ರೆ, ಅರಿಶಿನ. 3. ಒಂದು ವೃಕ್ಷ. "सुन्दरी तरुभिन्नारीभिदोः स्त्री रुचिरेऽन्यवत्" मेदि०।

**सुन्वत् ಸುನ್ವತ್** (ವಿ०) ಸೋಮಯಾಜಿ, ಸೋಮರಸವನ್ನು ಹಿಂಡುತ್ತಿರುವವನು. षुञ् (अभिषवे) "शतृ" (३-२-१२४)। "एक एव सुसखैष सुन्वतां सौरिरित्यभिनयादिवोक्ष्वकैः" माघ० १४-५२।

**सुप् ಸುಪ್** ಇದು ङ्यन्त (ङीप् ङीष् ಮತ್ತು ङीन् ಪ್ರತ್ಯಯಾಂತ) आबन्त (टाप् डाप् ಮತ್ತು चाप् ಪ್ರತ್ಯಯಾಂತ) ಮತ್ತು ಪ್ರಾತಿಪದಿಕಗಳ ಮುಂದೆ ವಿಧಿಸಲ್ಪಡುವ ಏಕವಿಂಶತಿ ವಿಭಕ್ತಿಪ್ರತ್ಯಯಗಳ ಸಂಜ್ಞೆ. ಪ್ರಥಮಾವಿಭಕ್ತಿಯ ಏಕವಚನದ सु ಮತ್ತು ಸಪ್ತಮೀ ವಿಭಕ್ತಿಯ ಬಹುವಚನದ सुप् ಪ್ರತ್ಯಯದ प ಕಾರಗಳ ಪ್ರತ್ಯಾಹಾರದಿಂದ ಏಳು ವಿಭಕ್ತಿಗಳ 21 ಪ್ರತ್ಯಯಗಳಿಗೂ ಗ್ರಹಣ.

**ಏಕವಿಂಶತಿ ವಿಭಕ್ತಿಪ್ರತ್ಯಯಗಳು :**

| | | | |
|---|---|---|---|
| प्रथमा विभक्तिः | सु | औ | जस् |
| द्वितीया ,, | अम् | औट् | शस् |
| तृतीया ,, | टा | भ्यां | भिस् |
| चतुर्थी ,, | ङे | भ्यां | भ्यस् |
| पञ्चमी ,, | ङसि | भ्यां | भ्यस् |
| षष्ठी ,, | ङस् | ओस् | आम् |
| सप्तमी ,, | ङि | ओस् | सुप् |

ಹೀಗೆಯೇ ಧಾತುಗಳ ಮುಂದೆ ವಿಧಿಸಲ್ಪಡುವ तिङ् (ಪರಸ್ಮೈಪದದ 9 ಪ್ರತ್ಯಯಗಳು ಮತ್ತು ಆತ್ಮನೇಪದದ 9 ಪ್ರತ್ಯಯಗಳು) (18) ಹದಿನೆಂಟು ವಿಭಕ್ತಿ ಪ್ರತ್ಯಯಗಳ ಸಂಜ್ಞೆ. ಪ್ರಥಮಪುರುಷದ ಏಕವಚನದ ति ಮತ್ತು ಉತ್ತಮಪುರುಷದ ಬಹುವಚನದ महिङ् ಪ್ರತ್ಯಯದ ङ ಕಾರಗಳ ಪ್ರತ್ಯಾಹಾರದಿಂದ ಉಭಯ ಪದಗಳ 18 ಪ್ರತ್ಯಯಗಳಿಗೂ ಗ್ರಹಣ.

**ಹದಿನೆಂಟು ಪ್ರತ್ಯಯಗಳು :**

| | परस्मैपदम् | | | आत्मनेपदम् | | |
|---|---|---|---|---|---|---|
| | ए०व० | द्विव० | ब०व० | ए०व० | द्विव० | ब०व० |
| प्र०पु० | तिप् | तस् | झि | त | आताम् | झ |
| म०पु० | सिप् | थस् | थ | थास् | आथाम् | ध्वम् |
| उ०पु० | मिप् | वस् | मस् | इट् | वहि | महिङ् |

ಈ ಎಲ್ಲಾ ಪ್ರತ್ಯಯಗಳೂ ವಿಭಕ್ತಿ ಸಂಜ್ಞೆಯನ್ನು ಹೊಂದುವುವು. "विभक्तिश्च" (१-४-१०४)। सुप्तिङौ विभक्तिसंज्ञौ स्तः। सि० कौ०।

**सुपक्व ಸುಪಕ್ವ** (ವಿ०) 1. ಚೆನ್ನಾಗಿ ಬೇಯಿಸಲ್ಪಟ್ಟ. 2. ಚೆನ್ನಾಗಿ ಹಣ್ಣಾಗಿರುವ. (ಪುಂ) 3. ಒಳ್ಳೆಯ ವಾಸನೆಯುಳ್ಳ ಮಾವಿನ ಮರ.

**सुपथ ಸುಪಥ** (ಪುಂ) ಒಳ್ಳೆಯ ಮಾರ್ಗ, ಒಳ್ಳೆಯ ದಾರಿ. सु + पथिन् "अः" (५-४-७४)। "विषयाकृष्यमाणा हि तिष्ठन्ति सुपथे कथम्" कथास०।

**सुपथिन् ಸುಪಥಿನ್** (ಪುಂ) ಒಳ್ಳೆಯ ಮಾರ್ಗ, ಒಳ್ಳೆಯ ದಾರಿ. सु शोभनः पन्थाः । सुपन्थाः ।

**सुपर्ण ಸುಪರ್ಣ** (ಪುಂ) 1. ಗರುತ್ಮಂತ, ಗರುಡ. सु सुष्ठु पर्णं पक्षोऽस्य । "सुपर्णवेगानिलविप्रकीर्णैः सुरद्रुमैरन्तरितः सुमेरुः" याद० १८-४ । 2. ವಿಷ್ಣು. "मरीचिर्दमनो हंसः सुपर्णो भुजगोत्तमः" वि० स० । 3. ಕಕ್ಕೆಗಿಡ. 4. ಪಕ್ಷಿ, ಹಕ್ಕಿ. "नागान् सर्पान् सुपर्णांश्च पितॄणां च पृथग्गणान्" मनु० १-३७ । (ವಿಂ) 5. ಒಳ್ಳೆಯ ರೆಕ್ಕೆಗಳಿಂದ ಕೂಡಿದ. 6. ಸುಂದರವಾದ ಎಲೆಗಳಿಂದ ಕೂಡಿದ.

**सुपर्णक ಸುಪರ್ಣಕ** (ಪುಂ) 1. ಎಲೆಲಿ ಬಾಳೆ ಗಿಡ. 2. ಕಕ್ಕೆ ಗಿಡ. 3. ಗರುಡ.

**सुपर्णकेतु ಸುಪರ್ಣಕೇತು** (ಪುಂ) ವಿಷ್ಣು. सुपर्णः केतौ यस्य ।

**सुपर्णा ಸುಪರ್ಣಾ** (ಸ್ತ್ರೀಂ) 1. ವಿನತಾದೇವಿ, ಗರುತ್ಮಂತನ ತಾಯಿ. 2. ಪದ್ಮಿನಿ, ಕಮಲಗಳಿಂದ ಕೂಡಿದ ದೇಶ. सु शोभनानि पर्णान्यस्याः "इनिः" (५-२-१३५) । "सुपर्णा कमलिन्यां च वैनतेयस्य मातरि" मेदि० ।

**सुपर्वन् ಸುಪರ್ವನ್** (ಪುಂ) 1. ದೇವತೆ, ಸುರ. सु सुष्ठु पर्व अमावास्यादिचरितम् अङ्गुल्यादिग्रन्थिः उत्सवो वा यस्य । "सुपर्वणां यत्र सभां सुधर्मां भूमेरहं भूषणतामनैषम्" याद० १८-७० । 2. ಶರ, ಬಾಣ. 3. ಬಿದಿರು. 4. ಪರ್ವ, ಗೆಣ್ಣು. 5. ಧೂಮ, ಹೊಗೆ. 6. ಪರ್ವದಿನ, ಪ್ರತಿಯೊಂದು ಪಕ್ಷದ ಅಷ್ಟಮಿ ಚತುರ್ದಶಿ ಹುಣ್ಣಿಮೆ ಮತ್ತು ಅಮಾವಾಸ್ಯೆ. "सुपर्वा ना शरे वंशे पर्वधूमसुरेष्वपि" मेदि० । (ವಿಂ) 7. ಒಳ್ಳೆಯ ಗೆಣ್ಣುಗಳಿಂದ ಕೂಡಿದ.

**सुपर्वा ಸುಪರ್ವಾ** (ಸ್ತ್ರೀಂ) ಬಿಳಿಯ ಗರಿಕೆ. सु शोभनानि पर्वाणि यस्याः ।

**सुपात्र ಸುಪಾತ್ರ** (ನಂ) 1. ಯೋಗ್ಯನಾದವನು, ದಾನಾದಿಗಳಿಗೆ ಅರ್ಹನಾದವನು. सु सुष्ठु योग्यं पात्रम् । ಪಾತ್ರ ಶಬ್ದವು ನಿತ್ಯನಪುಂಸಕಲಿಂಗ. 2. ಯೋಗ್ಯವಾದ ಪಾತ್ರೆ.

**सुपार्श्व ಸುಪಾರ್ಶ್ವ** (ಪುಂ) 1. ಸಂಪಾತಿಯ ಪುತ್ರ, ಒಂದು ಪಕ್ಷಿ. सुष्ठु पार्श्वं यस्य । "चिरान्निपतितो वृद्धः क्षीणप्राणपराक्रमः । तं मामेवं गतं पुत्रः सुपार्श्वो नाम नामतः । आहारेण यथाकालं बिभर्ति पततां वरः" रामा० । 2. ಪ್ಲಕ್ಷವೃಕ್ಷ, ಬಸುರಿಮರ.

**सुपार्श्वक ಸುಪಾರ್ಶ್ವಕ** (ಪುಂ) ಬಸುರಿಮರ. सुष्ठु पार्श्वं यस्य । "गर्दभाण्डे कन्दरालकपीतनसुपार्श्वकाः" अम० ।

**सुपीडन ಸುಪೀಡನ** (ನಂ) 1. ಚೆನ್ನಾಗಿ ಹಿಂಡುವುದು. 2. ಬಹಳ ಹಿಂಸಿಸುವುದು.

**सुपीडित ಸುಪೀಡಿತ** (ವಿಂ) 1. ಚೆನ್ನಾಗಿ ಹಿಂಡಲ್ಪಟ್ಟ. सु+पीड (अवगाहने) + णिच् "क्तः" (३-२-१०२) । 2. ಚೆನ್ನಾಗಿ ಹಿಂಸಿಸಲ್ಪಟ್ಟ, ಬಹಳ ಪೀಡಿಸಲ್ಪಟ್ಟ.

**सुपीवन् ಸುಪೀವನ್** (ವಿಂ) ಚೆನ್ನಾಗಿ ಪಾನಮಾಡುವವನು, ಸರಿಯಾಗಿ ಕುಡಿಯುವವನು. सु पिबति—सु+पा (पाने) "वनिप्" (३-२-७४) ।

**सुपुष्प ಸುಪುಷ್ಪ** (ಪುಂ) 1. ಹವಳದ ಗಿಡ. 2. ಶಿರೀಷ ವೃಕ್ಷ, ಬಾಗೆ ಮರ. (ನಂ) 3. ಲವಂಗ. 4. ಸ್ತ್ರೀಯರ ರಜಸ್ಸು, ಮುಟ್ಟು.

**सुपूर ಸುಪೂರ** (ಪುಂ) 1. ಮಾದಳದ ಗಿಡ. (ವಿಂ) 2. ಸುಲಭವಾಗಿ ತುಂಬಲು ಸಾಧ್ಯವಾದ. "सुपूरा स्यात् कुनदिका सुपूरो मूषिकाञ्जलिः । सुसन्तुष्टः कापुरुषः स्वल्पकेनापि तुष्यति" पञ्चतं० १-२६ ।

**सुपूरक ಸುಪೂರಕ** (ಪುಂ) ಬಕಪುಷ್ಪವೃಕ್ಷ.

**सुप्त ಸುಪ್ತ** (ವಿಂ) 1. ನಿದ್ರಿಸಿದವನು, ನಿದ್ರೆಮಾಡಿದವನು. ञिष्वप् (शये) "क्तः" (३-४-७२) । "क्षुधितः तृषितः कामी विद्यार्थी कृषिकारकः । भाण्डारी च प्रवासी च सप्त सुप्तान् प्रबोधयेत्" । (ನಂ) 2. ನಿದ್ರೆ. ञि ष्वप् भावे "क्तः" (३-३-११४) । "नहि सुप्तस्य सिंहस्य निपतन्ति मुखे मृगाः" पञ्चतं० २-१३८ ।

**सुप्तजन ಸುಪ್ತಜನ** (ಪುಂ) 1. ಅರ್ಧರಾತ್ರಿ. सुप्ता जना यत्र । 2. ಮಲಗಿ ನಿದ್ರಿಸುವ ಜನ. सुप्तो जनः ।

**सुप्तज्ञान ಸುಪ್ತಜ್ಞಾನ** (ನಂ) ಸ್ವಪ್ನ, ಕನಸು. सुप्ते निद्रायां ज्ञानम् ।

**सुप्ति ಸುಪ್ತಿ** (ಸ್ತ್ರೀಂ) 1. ನಿದ್ರೆ. ञि ष्वप् (शये) "क्तिन्" (३-३-९४) । 2. ಮುಟ್ಟಿದರೂ ತಿಳಿಯದಿರುವಿಕೆ, ಸ್ಪರ್ಶದ ಜ್ಞಾನವಿಲ್ಲದಿರುವಿಕೆ. 3. ವಿಶ್ವಾಸ, ನಂಬಿಕೆ. 4. ಸ್ವಪ್ನ, ಕನಸು. 5. ಶಯನ, ಮಲಗುವುದು. "सुप्तिः स्पर्शाज्ञतानिद्राविस्रम्भे शयने स्त्रियाम्" मेदि० ।

**सुप्रतिभा ಸುಪ್ರತಿಭಾ** (ಸ್ತ್ರೀಂ) ಮದ್ಯ, ಹೆಂಡ. सु सुष्ठु प्रतिभा यस्याः ।

**सुप्रतिष्ठ ಸುಪ್ರತಿಷ್ಠ** (ವಿಂ) ಒಳ್ಳೆಯ ಖ್ಯಾತಿಯನ್ನು ಪಡೆದಿರುವ, ಒಳ್ಳೆಯ ಕೀರ್ತಿಯನ್ನು ಸಂಪಾದಿಸಿರುವ. सु सुष्ठु प्रतिष्ठा यस्य ।

**सुप्रतिष्ठा ಸುಪ್ರತಿಷ್ಠಾ** (स्त्री०) 1. ವೃತ್ತರತ್ನಾಕರೋಕ್ತವಾದ ಐದು ಅಕ್ಷರಗಳುಳ್ಳ ಒಂದು ಛಂದಸ್ಸು. "उक्तानुक्ता तथा मध्या प्रतिष्ठाऽन्या सुपूर्विका" वृ० र०। 2. ಖ್ಯಾತಿ, ಪ್ರಸಿದ್ಧಿ. 3. ಸ್ಥಿರವಾಗಿ ನಿಲ್ಲುವಿಕೆ, ಸ್ಥಿರವಾಗಿರುವಿಕೆ.

**सुप्रतिष्ठित ಸುಪ್ರತಿಷ್ಠಿತ** (पुं०) 1. ಉದುಂಬರ ವೃಕ್ಷ, ಅತ್ತಿಮರ. (वि०) 2. ಸ್ಥಿರವಾಗಿ ನಿಂತಿರುವ, ಸ್ಥಿರವಾಗಿ ನೆಲೆಗೊಂಡಿರುವ. सुष्ठु प्रतिष्ठितः। "येषामिन्दीवरश्यामो हृदये सुप्रतिष्ठितः"। 3. ಚೆನ್ನಾಗಿ ಪ್ರತಿಷ್ಠೆ ಮಾಡಲ್ಪಟ್ಟಿರುವ, ಮಂತ್ರಪೂರ್ವಕ ಆವಾಹನಾದಿಗಳಿಂದ ಸ್ಥಿರವಾಗಿರುವಂತೆ ಮಾಡಲ್ಪಟ್ಟಿರುವ. "अस्मापि याति देवत्वं महद्भिः सुप्रतिष्ठितः"।

**सुप्रतिष्णात ಸುಪ್ರತಿಷ್ಣಾತ** (वि०) ಶುದ್ಧವಾದ, ಪವಿತ್ರವಾದ. सु+प्रति+ष्णा (शौचे) "क्तः" (३-४-७२)। ಶುದ್ಧವಾದ ಸೂತ್ರ ಎಂಬ ಅರ್ಥದಲ್ಲಿ षत्व ಬರುವುದು (८-३-९०)। प्रतिष्णातं सूत्रम्। शुद्धमित्यर्थः सि० कौ०। "सुप्रतिष्णातसूत्राणां कपिष्ठलसमत्विषाम्। स्थितां वृत्ते द्विजातीनां रात्रावैक्षत मैथिलीम्" भट्टि० ९-८३।

**सुप्रतीक ಸುಪ್ರತೀಕ** (पुं०) 1. ಈಶಾನ್ಯ ದಿಕ್ಕಿನ ಗಜ, ಅಷ್ಟದಿಗ್ಗಜಗಳಲ್ಲೊಂದು. सु शोभनाः प्रतीकाः अङ्गानि यस्य। "मदपटुनिनदद्भिर्बोधितो राजहंसैः सुरगज इव गाङ्गं सैकतं सुप्रतीकः" रघु० ५-७५। 2. ಕಾಮ, ಮನ್ಮಥ. 3. ಶಿವ, ಮಹಾದೇವ. (न०) 4. ಸುಂದರವಾದ ಅಂಗ, ಅವಯವ. सु शोभनं प्रतीकम्। (वि०) 5. ಸುಂದರವಾದ ಅಂಗಗಳುಳ್ಳವನು.

**सुप्रभात ಸುಪ್ರಭಾತ** (न०) 1. ಒಳ್ಳೆಯದನ್ನು ಸೂಚಿಸುವ ಪ್ರಾತಃಕಾಲ, ಶುಭಸೂಚಕವಾದ ಪ್ರಾತಃಕಾಲ. सु शोभनं प्रभातम्। 2. ಪ್ರಾತಃಕಾಲದಲ್ಲಿ ಪಠಿಸಬೇಕಾದ ಮಂಗಳಕರ ಶ್ಲೋಕಗಳು. "ब्रह्मामुरारिस्त्रिपुरान्तकारी भानुः शशी भूमिसुतो बुधश्च। गुरुः सशुक्रः सह भानुजेन कुर्वन्तु सर्वे मम सुप्रभातम्"॥ "श्रीपद्मनाभ पुरुषोत्तम वासुदेव वैकुण्ठ माधव जनार्दन चक्रपाणे। श्रीवत्सचिह्न शरणागतपारिजात श्रीवेङ्कटाचलपते तव सुप्रभातम्"॥ "कथं रघुनाथ एव। दिष्टया सुप्रभातमद्य यदयं देवो दृष्टः" उ० रा० ६। "सुप्रभातमभूत्तासां सुदिनं च तमोपहम्" याद० १६-१३९।

**सुप्रभाता ಸುಪ್ರಭಾತಾ** (स्त्री०) 1. ಒಂದು ಮಹಾನದಿ. "अरुणा नम्दाऽऽङ्गिरसी सावित्री सुप्रभाता ऋतम्भरा सत्यम्भरेति महानद्यः" भाग० ५-२०-४। 2. ಒಳ್ಳೆಯ ಪ್ರಭಾತದಿಂದ ಕೂಡಿದ ರಾತ್ರಿ.

**सुप्रयुक्त ಸುಪ್ರಯುಕ್ತ** (वि०) 1. ಚೆನ್ನಾಗಿ ಗುರಿಯಿಟ್ಟು ಪ್ರಯೋಗಿಸಲ್ಪಟ್ಟ (ಬಾಣ). 2. ಶುದ್ಧವಾಗಿ ಉಪಯೋಗಿಸಲ್ಪಟ್ಟ (ಶಬ್ದ). "एकः शब्दः सुप्रयुक्तः सम्यग्ज्ञातः स्वर्गे लोके कामधुग्भवति"। 3. ಸರಿಯಾಗಿ ಉಪಯೋಗಿಸಲ್ಪಟ್ಟ, ಚತುರತೆಯಿಂದ ನಡೆಸಲ್ಪಟ್ಟ. "सुप्रयुक्तस्य दम्भस्य ब्रह्माप्यन्तं न गच्छति" पञ्चतं० १-२१८।

**सुप्रयुक्तविशिख ಸುಪ್ರಯುಕ್ತವಿಶಿಖ, -बाण -ಬಾಣ** (वि०) ಚೆನ್ನಾಗಿ ಗುರಿಯಿಟ್ಟು ಬಾಣಪ್ರಯೋಗ ಮಾಡಬಲ್ಲ (ಬಿಲ್ಲುಗಾರ). सुप्रयुक्तः विशिखः बाणो वा येन।

**सुप्रयोगविशिख ಸುಪ್ರಯೋಗವಿಶಿಖ, -बाण -ಬಾಣ** (वि०) ಚೆನ್ನಾಗಿ ಗುರಿಯಿಟ್ಟು ಬಾಣಪ್ರಯೋಗ ಮಾಡಬಲ್ಲ (ಬಿಲ್ಲುಗಾರ). शोभनः प्रयोगोऽस्य सुप्रयोगः, सुप्रयोगो विशिखो बाणो वाऽस्य।

**सुप्रलम्भ ಸುಪ್ರಲಂಭ** (पुं०) ಸುಖವಾಗಿ ಹೊಂದಲು ಸಾಧ್ಯವಾದ, ಕ್ಲೇಶವಿಲ್ಲದೆ ಪಡೆಯಲು ಶಕ್ಯವಾದ. सु+प्र+डुलभष् (प्राप्तौ) "खल्" (३-३-१२६)। नुम् (७-१-६७)।

**सुप्रलाप ಸುಪ್ರಲಾಪ** (पुं०) ಒಳ್ಳೆಯ ಮಾತು, ಮಂಗಳಕರವಾದ ಮಾತು. सुष्ठु प्रकृष्टं लपनम्। सु + प्र + लप (व्यक्तायां) वाचि "घञ्" (३-३-१८)। "सुप्रलापः सुवचनम्" अम०।

**सुप्रसन्न ಸುಪ್ರಸನ್ನ** (वि०) 1. ಸುಪ್ರೀತನಾದ, ಬಹಳ ಸಂತೋಷಗೊಂಡ. सु + प्र + षद्लृ (विशरणादौ) "क्तः" (३-४-७२)। 2. ದಯೆಯಿಂದ ಕೂಡಿದ, ಅನುಗ್ರಹದ ಬುದ್ಧಿಯುಳ್ಳ. 3. ಬಹಳ ತಿಳಿಯಾದ, ನಿರ್ಮಲವಾದ. 4. ಶುದ್ಧವಾದ. ಮೋಡ ಮೊದಲಾದುವುಗಳಿಂದ ಮುಚ್ಚಲ್ಪಡದಿರುವ (ಆಕಾಶ).

**सुप्रसरा ಸುಪ್ರಸರಾ** (स्त्री०) ಸಾರಣಿ ಗಿಡ, ಮುಳ್ಳುಗಸೆ ಗಿಡ.

**सुप्रसाद ಸುಪ್ರಸಾದ** (पुं०) 1. ವಿಷ್ಣು. शोभनः प्रसादोऽस्य। "प्रसादपरमत्वाच्च सुप्रसादः प्रकीर्तितः" इति निरुक्तिः। "सुप्रसादः प्रसन्नात्मा" वि० स०। 2. ಶಿವ, ಪರಮೇಶ್ವರ. सुष्ठु प्रसादोऽस्य। 3. ದಯೆ, ಅನುಗ್ರಹ. 4. ಒಳ್ಳೆಯ ಪ್ರೀತಿ, ಸಂತೋಷ. 5. ನೈರ್ಮಲ್ಯ, ತಿಳಿಯಾಗಿರುವಿಕೆ. (वि०) 6. ಪ್ರಸನ್ನತೆ

ಯಿಂದ ಕೂಡಿರುವ. "क्षिप्रकारी जितक्रोधः सुप्रसादो महामनाः" भा० शान्ति० ।

**सुप्रात ಸುಪ್ರಾತ** (वि०) ಒಳ್ಳೆಯ ಪ್ರಾತಃಕಾಲವುಳ್ಳ, ಯಾವ ವಿಧವಾದ ತೊಂದರೆಯೂ ಇಲ್ಲದ ಪ್ರಾತಃಕಾಲವು ಸುಪ್ರಾತ. शोभनं प्रातर्दिनमुखं यस्य निरुपद्रवत्वात् । "सुप्रातमासादितसम्मदं तद्वन्दारुभिः संस्तुतमम्ययोघ्यम्" भट्टि० २-४९ ।

**सुप्रिय ಸುಪ್ರಿಯ** (वि०) 1. ಬಹಳ ಪ್ರಿಯವಾದ, ಬಹಳ ಇಷ್ಟವಾದ. सुष्ठु प्रियः । (स्त्री०) **–प्रिया –ಪ್ರಿಯಾ.** 2. ಬಹಳ ಸುಂದರಿಯಾದ ಹೆಂಗಸು.

**सुफल ಸುಫಲ** (पुं०) 1. ದಾಳಿಂಬೆ ಗಿಡ. 2. ಎಲಚಿ ಗಿಡ. 3. ಹೆಸರು. 4. ಕಪಿತ್ಥ, ಬೇಲದ ಮರ. सुष्ठु फलं यस्य । (वि०) 5. ಒಳ್ಳೆಯ ಫಲಗಳಿಂದ ಕೂಡಿದ.

**सुफला ಸುಫಲಾ** (स्त्री०) 1. ಕುಂಬಳದ ಗಿಡ. 2. ಬಾಳೆ ಗಿಡ. 3. ಶೀವನೆಯ ಮರ. 4. ಹಾವುಮೆಕ್ಕೆ.

**सुबल ಸುಬಲ** (पुं०) 1. ಮಹಾಭಾರತದ ಶಕುನಿಯ ತಂದೆ. 2. ಶಿವ, ಪರಮೇಶ್ವರ. (वि०) 3. ಬಹಳ ಶಕ್ತಿವಂತ ನಾದ, ಬಹಳ ಬಲಿಷ್ಠನಾದ.

**सुबाहु ಸುಬಾಹು** (पुं०) ಒಬ್ಬ ರಾಕ್ಷಸ, ತಾಟಕೆಯ ಮಗ, ಮಾರೀಚನ ಸಹೋದರ. ವಿಶ್ವಾಮಿತ್ರಮಹರ್ಷಿಯು ಸಿದ್ಧಾಶ್ರಮದಲ್ಲಿ ಯಜ್ಞ ಮಾಡುತ್ತಿದ್ದಾಗ ಇವನು ಯಾಗಕ್ಕೆ ಬಹಳ ವಿಘ್ನವುಂಟುಮಾಡುತ್ತಿರಲು ವಿಶ್ವಾ ಮಿತ್ರನು ರಾಮನ ಮೂಲಕ ಇವನನ್ನು ಕೊಲ್ಲಿಸಿದನು.

**सुबोध ಸುಬೋಧ** (पुं०) 1. ಒಳ್ಳೆಯ ಸಲಹೆ, ಒಳ್ಳೆಯ ಉಪದೇಶ. 2. ಸುಖವಾಗಿ ಅರ್ಥವಾಗುವಿಕೆ, ಕ್ಲೇಶ ವಿಲ್ಲದೆ ತಿಳಿದುಕೊಳ್ಳುವುದು.

**सुब्रह्मण्य ಸುಬ್ರಹ್ಮಣ್ಯ** (पुं०) ಕಾರ್ತಿಕೇಯ, ಷಣ್ಮುಖ.

**सुभग ಸುಭಗ** (वि०) 1. ಅತಿಶಯವಾದ ಪ್ರಯತ್ನವುಳ್ಳ. सु अतिशयः भगः प्रयत्नो यत्र । "सुभगसलिलावगाहाः पाटलिसंसर्गिसुरभिवनवाताः" शाकु० १-३ । 2. ಒಳ್ಳೆಯ ಸೊಬಗಿನಿಂದ ಕೂಡಿದ, ನೋಡಲು ರಮಣೀಯವಾದ. सुष्ठु भगं श्रीः कान्तिर्यस्य । "केवलोऽपि सुभगो नवाम्बुदः किं पुनस्त्रिदशचापलाञ्छितः" रघु० ११-८० । 3. ವೀರ್ಯವಂತ, ಪರಾಕ್ರಮಶಾಲಿ. 4. ವಿರಕ್ತ, ವೈರಾಗ್ಯದಿಂದ ಕೂಡಿದ. 5. ಐಶ್ವರ್ಯವಂತ, ಧನಿಕ. 6. ಕೀರ್ತಿವಂತ. 7. ಜ್ಞಾನಿ, ಒಳ್ಳೆಯ ಜ್ಞಾನ ಸಂಪಾ ದಿಸಿದವನು. 8. ಮಹಾತ್ಮ. 9. ಅದೃಷ್ಟವಂತ, ಭಾಗ್ಯಶಾಲಿ. 10. ಇಚ್ಛಿಸುವವನು, ಬಯಸುವವನು. 11. ಧರ್ಮಬುದ್ಧಿಯುಳ್ಳವನು. 12. ಒಳ್ಳೆಯ ತಪಸ್ವಿ. "भगं श्रीयोनिवीर्येच्छाज्ञानवैराग्यकीर्तिषु । माहात्म्यै-श्वर्ययत्नेषु धर्मे मोक्षे च ना रवौ" मेदि० । "भगं योन्यां भगो यत्ने यशोवीर्यार्कभूतिषु । कान्तीच्छाज्ञान-वैराग्यधर्मैश्वर्यतपस्सु च" वैज० । (पुं०) 13. ಶಕುನಿಯ ಸಹೋದರ, ಸುಬಲನ ಮಗ. 14. ಚಂಪಕವೃಕ್ಷ, ಸಂಪಿಗೆ ಮರ. 15. ಅಶೋಕವೃಕ್ಷ.

**सुभगा ಸುಭಗಾ** (स्त्री०) 1. ಪತಿಯ ಪ್ರೀತಿಗೆ ಪಾತ್ರಳಾದ ಹೆಂಗಸು. 2. ಅದೃಷ್ಟಶಾಲಿನಿಯಾದ ಹೆಂಗಸು, ಭಾಗ್ಯವತಿ ಯಾದ ಹೆಂಗಸು. 3. ತುಲಸಿ. 4. ಅರಿಶಿನ. 5. ಪ್ರಿಯಂಗು ಲತೆ. 6. ಕಾಡುಮಲ್ಲಿಗೆ. 7. ತುಂಗಮುಸ್ತೆ, ಕೊನ್ನಾರಿಯ ಭೇದ. 8. ಮೂರೆಲೆ ಹೊನ್ನೆ.

**सुभगासुत ಸುಭಗಾಸುತ** (पुं०) ಭಾಗ್ಯವತಿಯಾದ ಹೆಂಗಸಿನ ಮಗ. सुभगायाः सुतः ।

**सुभद्रक ಸುಭದ್ರಕ** (पुं०) 1. ವಿಮಾನ, ದೇವತೆಗಳ ರಥ. सुष्ठु भद्रमस्मात् । "व्योमयानं दिव्यरथः विमानोऽस्त्री सुभद्रकः" शब्दर० । 2. ಬಿಲ್ವಪತ್ರೆ ಮರ. 3. ದೇವರ ಬ್ರಹ್ಮೋತ್ಸವದ ರಥ.

**सुभद्रा ಸುಭದ್ರಾ** (स्त्री०) ಅರ್ಜುನನ ಪತ್ನಿ, ಶ್ರೀಕೃಷ್ಣನ ತಂಗಿ, ದೇವಕಿ-ವಸುದೇವರ ಪುತ್ರಿ, ಅಭಿಮನ್ಯುವಿನ ತಾಯಿ. ಅರ್ಜುನನು ಶ್ರೀಕೃಷ್ಣನ ಸೂಚನೆಯಂತೆ ಯತಿ ರೂಪದಿಂದ ಸುಭದ್ರೆಯ ಅಂತಃಪುರದಲ್ಲಿ ವಾಸಮಾಡು ತ್ತಿದ್ದು ಅವಳನ್ನು ಅಪಹರಿಸಿಕೊಂಡು ಮದುವೆಯಾದನು. ಸುಭದ್ರೆಯು ಅಭಿಮನ್ಯುವೆಂಬ ವೀರಪುತ್ರನನ್ನು ಪಡೆದಳು.

**सुभाषित ಸುಭಾಷಿತ** (न०) 1. ಒಳ್ಳೆಯ ಮಾತು, ಹಿತ ವನ್ನು ಬೋಧಿಸುವ ಮಾತು, ಮನುಷ್ಯನ ಜೀವನ ವನ್ನು ಹಸನಾಗಿ ಮಾಡುವ ಮಾತು. सुष्ठु शोभनं भाषितम् । ಮಹಾವಿದ್ವಾಂಸರೂ ಜ್ಞಾನಿಗಳೂ ತಮ್ಮ ಕಷ್ಟಸುಖಮಯವಾದ ಜೀವನದ ಸುದೀರ್ಘ ಕಾಲದ ಅನುಭವಗಳನ್ನು ಸುಭಾಷಿತಗಳ ಮೂಲಕ ಜನತೆಯ ಸುಖಮಯ ಜೀವನ ಹಾಗೂ ವಿವೇಕಯುತ ಜೀವನದ ಸಲುವಾಗಿ ಕಾವ್ಯ ನಾಟಕ ಪುರಾಣೇತಿಹಾಸಗಳಲ್ಲಿ ಪ್ರತಿ ಪಾದಿಸಿರುತ್ತಾರೆ. ಸುಭಾಷಿತಗಳಲ್ಲಿ ಧರ್ಮ ನೀತಿ ಶೃಂಗಾರ ವೈರಾಗ್ಯ ಹಾಸ್ಯ ಮುಂತಾದ ನಾನಾ ವಿಷಯಗಳು ಸೇರಿರು ತ್ತವೆ. ಇವುಗಳ ಪಠನದಿಂದ ಮನುಷ್ಯನು ಧರ್ಮಶೀಲ ನಾಗಬಹುದು. ನೀತಿವಂತನಾಗಬಹುದು. ಶೃಂಗಾರಾದಿ ನವರಸಾನುಭವಗಳನ್ನು ಪಡೆಯಬಹುದು. ವಿವೇಕದ ಜೀವನ ನಡಸಬಹುದು. ಧರ್ಮ ಅರ್ಥ ಕಾಮ ಮೋಕ್ಷ

ರೂಪವಾದ ಪುರುಷಾರ್ಥಚತುಷ್ಟಯವನ್ನು ಸಂಪಾದಿಸಬಹುದು. ಆನಂದಪಡಬಹುದು. ಭಕ್ತಿ ಜ್ಞಾನ ವೈರಾಗ್ಯಗಳನ್ನು ಪಡೆಯಬಹುದು. ತತ್ತ್ವಜ್ಞಾನ ಸಂಪಾದಿಸಬಹುದು. ಈ ಸುಭಾಷಿತಗಳೆಲ್ಲವೂ ಬಹಳ ಮಧುರವಾಗಿರುವುದರಿಂದ ಮನಸ್ಸಿಗೆ ಎಷ್ಟು ಖೇದವಾಗಿದ್ದರೂ ಉಲ್ಲಾಸವುಂಟಾಗುವುದು. "भाषासु मुख्या मधुरा दिव्या गीर्वाणभारती। तस्माद्धि काव्यं मधुरं तस्मादपि सुभाषितम्॥ सुभाषितेन गीतेन युवतीनां च लीलया। मनो न भिद्यते यस्य स योगी ह्यथवा पशुः"॥ "हस्तस्य भूषणं दानं सत्यं कण्ठस्य भूषणम्। श्रोत्रस्य भूषणं शास्त्रं भूषणैः किं प्रयोजनम्॥ दानेन भोगी भवति मेधावी वृद्धसेवया। अहिंसया च दीर्घायुरिति प्राहुर्मनीषिणः॥ ममेति परमं दुःखं न ममेति परं सुखम्। द्वे हि बन्धस्य मोक्षस्य ममेति न ममेति च॥ अजीर्णे भेषजं वारि जीर्णे वारि बलप्रदम्। अमृतं भोजनार्धे तु भुक्तस्योपरि तद्विषम्॥ यथा चित्ते तथा वाचि यथा वाचि तथा क्रियाः। चित्ते वाचि क्रियायां च साधूनामेकरूपता"॥ (वि०) 2. ಒಳ್ಳೆಯ ಮಾತುಗಳನ್ನಾಡುವವನು. 3. ಚೆನ್ನಾಗಿ ಮಾತನಾಡುವವನು. सु शोभनं भाषितं यस्य।

**सुभिक्ष ಸುಭಿಕ್ಷ** (वि०) 1. ಚೆನ್ನಾಗಿ ಭಿಕ್ಷೆ ಲಭಿಸುವ (ಕಾಲ). 2. ಸುಖವಾಗಿ ಭಿಕ್ಷೆ ನೀಡಲು ಸಾಧ್ಯವಾಗುವ (ಧಾನ್ಯ). सु सुखेन लभ्या भिक्षा यत्र। (न०) 3. ಧಾನ್ಯದ ಸಮೃದ್ಧಿ, ಆಹಾರದ ದ್ರವ್ಯಗಳ ಸಮೃದ್ಧಿ. "सुभिक्षाणि विचित्राणि शिथिलाः पौरयोषितः। एको दोषो विदेशस्य स्वजातिर्यद्विरुध्यते" पञ्चतं० ४-७८।

**सुभिक्षा ಸುಭಿಕ್ಷಾ** (स्त्री०) ಅರೆಹೂವು, ಮರಾಟಿ ಮೊಗ್ಗು. सु सुष्ठु भिक्ष्यतेऽसौ—भिक्ष (भिक्षायामलाभे लाभे च) "घञ्" (३-३-१९)। "अग्निज्वालासुभिक्षे च धातकीधातुपुष्पिका" अम०।

**सुभीरक ಸುಭೀರಕ** (पुं०) ಪಲಾಶವೃಕ್ಷ, ಮುತ್ತುಗದ ಮರ.

**सुभूतिक ಸುಭೂತಿಕ** (पुं०) ಬಿಲ್ವಪತ್ರೆ ಮರ.

**सुभ्रू ಸುಭ್ರೂ** (स्त्री०) 1. ಸುಂದರವಾದ ಹುಬ್ಬು. सु सुष्ठु भ्रूः। 2. ಸುಂದರವಾದ ಹುಬ್ಬುಗಳುಳ್ಳ ಹೆಂಗಸು. सु शोभना भ्रूः यस्याः। "गूढसूचितरहस्यसहासः सुभ्रुवां प्रववृते परिहासः" माघ० १०-१२। "मुकुलयति च नेत्रे सर्वथा सुभ्रु खेदः" मालती० ३-८।

**सुम ಸುಮ** (पुं०) 1. ಚಂದ್ರ. 2. ಕರ್ಪೂರ. सुष्ठु माति सौन्दर्यम्—माङ् (माने) "कः" (३-१-१३५)। (न०) 3. ಪುಷ್ಪ, ಹೂವು.

**सुमङ्गला ಸುಮಂಗಲಾ** (स्त्री०) ಕಾಕೋಳೀ ಸೊಪ್ಪು. सुष्ठु मङ्गलं यस्याः।

**सुमङ्गली ಸುಮಂಗಲೀ** (स्त्री०) ಸುವಾಸಿನಿ, ಸೌಭಾಗ್ಯವತಿ, ಮಂಗಳಕರ ವೇಷಭೂಷಣಾದಿಗಳುಳ್ಳ ಹೆಂಗಸು. सुष्ठु मङ्गलं यस्याः—गौरा० "ङीष्" (४-१-४१)।

**सुमति ಸುಮತಿ** (स्त्री०) 1. ಒಳ್ಳೆಯ ಬುದ್ಧಿ, ಧರ್ಮಬುದ್ಧಿ, ಉಪಕಾರ ಮಾಡುವ ಬುದ್ಧಿ. सु शोभना मतिः। 2. ಸಗರಚಕ್ರವರ್ತಿಯ ಒಬ್ಬ ಪತ್ನಿ. "पुरीमयोध्यामध्यास्त सावित्रः सगरो नृपः। केशिनीसुमतिभ्यां च लङ्घितप्रथमाश्रमः" चं० रा०। 3. ವಿಷ್ಣುಯಶಸ್ಸಿನ ಪತ್ನಿ, ಕಲ್ಕಿಯ ಅವತಾರವೆತ್ತಿದ ವಿಷ್ಣುವಿನ ತಾಯಿ. "शम्भले विष्णुयशसो गृहे प्रादुर्भवाम्यहम्। सुमत्यां मातरि विभोः कन्यायां तन्निदेशतः। चतुर्भिर्भ्रातृभिर्देव करिष्यामि कलिक्षयम्"। (वि०) 4. ಧರ್ಮಬುದ್ಧಿಯುಳ್ಳವನು, ಉಪಕಾರದ ಬುದ್ಧಿಯುಳ್ಳವನು. सु शोभना मतिर्यस्य।

**सुमदन ಸುಮದನ** (पुं०) ಆಮ್ರವೃಕ್ಷ, ಮಾವಿನ ಮರ. सुष्ठु मदयति कोकिलादीन्।

**सुमधुर ಸುಮಧುರ** (वि०) 1. ಬಹಳ ಮಧುರವಾದ, ಬಹಳ ಸಿಹಿಯಾದ. 2. ಬಹಳ ಸೌಮ್ಯವಾದ, ಕಠಿನವಲ್ಲದ, ಮೃದುವಾದ (ಮಾತು).

**सुमध्यम ಸುಮಧ್ಯಮ** (वि०) 1. ತೆಳುವಾದ ಸೊಂಟವುಳ್ಳ. सु मध्यममवलग्नं यस्य। (स्त्री०) **–मा –ಮಾ.** 2. ತೆಳುವಾದ ಮತ್ತು ಸುಂದರವಾದ ಸೊಂಟವುಳ್ಳ ಹೆಂಗಸು. सु शोभनं मध्यममवलग्नं यस्याः। "सन्दृश्यते सागरमेखलायाः सुमध्यमे मध्यमिदं धरण्याः" याद० १८-१०।

**सुमन ಸುಮನ** (पुं०) 1. ಗೋಧಿ. सुष्ठु मन्यते — मन (ज्ञाने) "अच्" (३-१-१३४)। "गोधूमः सुमनः समौ" अम०। 2. ದತ್ತೂರಿ ಗಿಡ. (वि०) 3. ಮನೋಹರವಾದ, ಸುಂದರವಾದ.

**सुमनस् ಸುಮನಸ್** (पुं०) 1. ದೇವತೆ, ಸುರ. सु शोभनं मनो यस्य। "मधुमर्दनकार्मुकप्रणादःसुमनःश्रोत्रसुधारसायमानः" याद० १५-११५। 2. ಪಂಡಿತ. 3. ಗೋಧಿ. 4. ತಪಸಿ ಗಿಡ. 5. ಬೇವಿನ ಮರ. (त्रि०) 6. ಒಳ್ಳೆಯ

ಮನಸ್ಸುಳ್ಳವನು, ಒಳ್ಳೆಯ ಹೃದಯವುಳ್ಳವನು, ಧರ್ಮಶೀಲ.

**सुमनस् ಸುಮನಸ್** (स्त्री०ब०व०) 1. ಪುಷ್ಪ, ಕುಸುಮ, ಹೂವು. सुष्ठु मन्यन्ते आभिः—मन (ज्ञाने) "असुन्" (उ० ४-१८९)। "जगति सुमनसस्तदादि नूनं दधति परिस्फुटमर्थतोऽभिधानम्" माघ० ७-२८। (स्त्री०) 2. ಜಾಜಿ ಗಿಡ. "सुमनाः पुष्पमालत्योः स्त्रियां ना धीरदेवयोः" मेदि०। ಸುಮನಾ ಎಂದು ಆಕಾರಾಂತ ಪ್ರಯೋಗವೂ ಉಂಟು. "सुमनायाश्च पत्राणि पटोलारिष्टयोस्तथा" सुश्रुत०। 3. ಜಾಯಿಕಾಯಿ ಗಿಡ. (वि०) 4. ಒಳ್ಳೆಯ ಬುದ್ಧಿಯುಳ್ಳ, ಧರ್ಮಬುದ್ಧಿಯುಳ್ಳ. सु शोभनं मनो यस्य। "ततस्ते ब्राह्मणाः सर्वे बकं दाल्भ्यमपूजयन्। युधिष्ठिरे स्तूयमाने भूयः सुमनसोऽभवन्" भा० वन० २६-२१।

**सुमनःपत्रिका ಸುಮನಃಪತ್ರಿಕಾ** (स्त्री०) ಜಾಯಿಪತ್ರೆ.

**सुमनःफल ಸುಮನಃಫಲ** (न०) 1. ಜಾಯಿಕಾಯಿ. (पुं०) 2. ಕಪಿತ್ಥವೃಕ್ಷ, ಬೇಲದ ಮರ.

**सुमना ಸುಮನಾ** (स्त्री०) ಜಾಜಿಯ ಗಿಡ, ಮಾಲತೀ ಗಿಡ. "सुमनायाश्च पत्राणि पटोलारिष्टयोस्तथा" सुश्रुत०।

**सुमनोरजस् ಸುಮನೋರಜಸ್** (न०) ಪುಷ್ಪದ ಧೂಳು, ಪರಾಗ.

**सुमन्तु ಸುಮಂತು** (पुं०) ಅಥರ್ವವೇದದ ಶಾಖಾ ಪ್ರಚಾರಕರಾದ ಒಬ್ಬ ಮುನಿ. "तत्रर्ग्वेदधरः पैलः सामगो जैमिनिः कविः। वैशम्पायन एवैको निष्णातो यजुषामुत। अथर्वाङ्गिरसामासीत् सुमन्तुर्दारुणो मुनिः। इतिहासपुराणानां पिता मे रोमहर्षणः" भाग० १-४-२१, २२।

**सुमन्त्र ಸುಮಂತ್ರ** (पुं०) 1. ದಶರಥಚಕ್ರವರ್ತಿಯ ಒಬ್ಬ ಮಂತ್ರಿ ಮತ್ತು ಸಾರಥಿ. "तत् श्रुत्वा मन्त्रिणो वाक्यं राजा मन्त्रिणमब्रवीत्। सुमन्त्र रामं द्रक्ष्यामि शीघ्रमानय सुन्दरम्" रामा०। 2. ಕಲ್ಕಿಯ ಹಿರಿಯ ಸಹೋದರ. "कल्केर्ज्येष्ठास्त्रयः शूराः कविप्राज्ञसुमन्त्रकाः। तातमातृप्रियकरा गुरुविप्रप्रतिष्ठिताः" कल्किपु०।

**सुमर्षण ಸುಮರ್ಷಣ** (वि०) ಸುಖವಾಗಿ ಸಹಿಸಲು ಸಾಧ್ಯವಾದ, ಸುಖವಾಗಿ ಸಹಿಸಬಹುದಾದ. सुखेन मृष्यते —मृष (तितिक्षायाम्) "युच्" (वा० ३-३-१२८)। "द्विषतामुदयः सुमेधसा गुरुरस्वन्ततरः सुमर्षणः" किरा० २-८।

**सुमित्रा ಸುಮಿತ್ರಾ** (स्त्री०) ದಶರಥಚಕ್ರವರ್ತಿಯ ಒಬ್ಬ ಪತ್ನಿ, ಲಕ್ಷ್ಮಣ-ಶತ್ರುಘ್ನರ ತಾಯಿ.

**सुमुख ಸುಮುಖ** (पुं०) 1. ಗರುತ್ಮಂತನ ಪುತ್ರ. "वैनतेयसुतैःसूत षड्भिस्ततमिदं कुलम्। सुमुखेन सुनाम्ना च सुनेत्रेण सुवर्चसा। सुरुचा पक्षिराजेन सुबलेन च मातले" भा० उद्योग०। 2. ಗಣಪತಿ. 3. ಪಂಡಿತ, ವಿದ್ವಾಂಸ. 4. ಶಿವ, ಪರಮೇಶ್ವರ. (न०) 5. ಉಗುರಿನ ಗಾಯ, ನಖಕ್ಷತ. 6. ಸುಂದರವಾದ ಮುಖ. "सुमुखेन वदन्ति वल्गुना प्रहरन्त्येव शितेन चेतसा" पञ्चतं० १-१९१। (वि०) 7. ಸುಂದರವಾದ, ಮನೋಹರವಾದ, ರಮ್ಯವಾದ. 8. ಸುಂದರವಾದ ಮುಖವುಳ್ಳವನು. सुष्ठु मुखं यस्य।

**सुमुखा ಸುಮುಖಾ** (स्त्री०) ಸುಂದರ ಮುಖವುಳ್ಳ ಒಬ್ಬ ಹೆಂಗಸು. सु शोभनं मुखं यस्याः। ಸಂಜ್ಞೆಯಾದರೆ "ङीष्" ಪ್ರತ್ಯಯ ಬರುವುದಿಲ್ಲ. (४-१-५८)। ಸುಂದರವಾದ ಮುಖವುಳ್ಳವಳು ಎಂಬ ಅರ್ಥದಲ್ಲಿ "ङीष्" (४-१-५४) ವಿಕಲ್ಪವಾಗಿ ಬಂದು ಸುಮುಖಾ ಸುಮುಖೀ ಎಂದು ರೂಪಗಳಾಗುವುವು. "उमेति मात्रा तपसो निषिद्धा पश्चादुमाख्यां सुमुखी जगाम" कुमा० १-२६।

**सुमेखल ಸುಮೇಖಲ** (पुं०) 1. ಮುಂಜವೆಂಬ ಹುಲ್ಲು. सु शोभना मेखला यस्मात्। (वि०) 2. ಒಳ್ಳೆಯ ನಿತಂಬ ಪ್ರದೇಶವುಳ್ಳ, -ತಪ್ಪಲು ಪ್ರದೇಶವುಳ್ಳ.

**सुमेधस् ಸುಮೇಧಸ್** (पुं०) 1. ವಿಷ್ಣು. आराधकेषु सुसाधुबुद्धितया सुशोभना मेधा धारणावती मेधा वीरस्य—समासान्तः "असिच्" (५-४-१२२)। "बुद्धिः सुशोभना यस्य सुमेधाः परिकीर्तितः" इति निरुक्तिः। "सुमेधा मेधजो वन्द्यः" वि० स०। (वि०) 2. ಬುದ್ಧಿಶಾಲಿ, ಜಾಣ, ಪ್ರಜ್ಞಾವಂತ. सुष्ठु मेधा वीर्यस्य "असिच्" (५-४-१२२)। 3. ಸೂಕ್ಷ್ಮಬುದ್ಧಿಯುಳ್ಳವನು, ಚುರುಕುಬುದ್ಧಿಯುಳ್ಳವನು. "द्विषतामुदयः सुमेधसा गुरुरस्वन्ततरः सुमर्षणः" किरा० २-८।

**सुमेरु ಸುಮೇರು** (पुं०) ಮೇರುಪರ್ವತ, ಹೇಮಾದ್ರಿ, ಸ್ವರ್ಣಪರ್ವತ. सुष्ठु मिनोति उच्चत्वात्प्रक्षिपति ज्योतींषि—सु + डु मिञ् (प्रक्षेपणे) "रुः" (उ० ४-१०१)। "वज्राभिघातभीतस्य सुमेरोरुपदामिव" यादव० १६-१६। ಮೇರುಪರ್ವತವು ಸಪ್ತದ್ವೀಪಗಳಲ್ಲೊಂದಾದ ಮತ್ತು ಸಪ್ತ ಸಮುದ್ರಗಳ ಮಧ್ಯದಲ್ಲಿರುವ

ಜಂಬುದ್ವೀಪದ ಮಧ್ಯದಲ್ಲಿರುವುದು. "जम्बूद्वीपः समस्तानामेतेषां मध्यसंस्थितः । तस्यापि मेरुर्मैत्रेय मध्ये कनकपर्वतः" विष्णुपु० । ಈ ಮೇರುಪರ್ವತವು ಶಿಖರದಲ್ಲಿ ಮೂವತ್ತೆರಡುಸಹಸ್ರಯೋಜನವಿಸ್ತಾರವಾಗಿಯೂ ಬುಡದಲ್ಲಿ ಹದಿನಾರುಸಹಸ್ರಯೋಜನ ಮತ್ತು ಭೂಮಿಯೊಳಗೆ ಹದಿನಾರುಸಹಸ್ರ ಯೋಜನ ವಿಸ್ತೀರ್ಣವುಳ್ಳದ್ದಾಗಿಯೂ ಇರುವುದು. "सौवर्णः कनकगिरिराजो मेरुर्द्वीपायामसमुन्नाहः कर्णिकाभूतः कुवलयकमलस्य मूर्धनि द्वात्रिंशत्सहस्रयोजनविततः मूले षोडशसहस्रं तावतान्तर्भूम्यां प्रविष्टः" भाग० ५-१६-७ । "मुदे मुरारेरमरैः सुमेरोरानीय यस्योपचितस्य शृङ्गैः" माघ० ४-१० ।

**सुयामुन ಸುಯಾಮುನ** (ಪುಂ) 1. ವಿಷ್ಣು. सु शोभनं पावनं यामुनं यमुनासम्बन्धिजलकेलिपुष्पापचयरासक्रीडादिकमस्य । "गोपीभिर्यमुनायां तु शोभनं पावनं महत् । जलक्रीडादि यस्येति सुयामुन इतीरितः" इति निरुक्तिः । "शूरसेनो यदुश्रेष्ठः सन्निवासः सुयामुनः" वि० स० । 2. ಒಂದು ಪರ್ವತ. 3. ಪ್ರಾಸಾದ, ರಾಜಗೃಹ, ದೇವಸ್ಥಾನ. 4. ವತ್ಸರಾಜ. "सुयामुनो जनार्दने । प्रासादे वत्सराजेऽद्रिभेदे" हेम० । 5. ಒಂದು ಮೇಘ. "सुयामुनो वत्सराजे प्रासादेऽभ्रान्तरेऽच्युते" मेदि० ।

**सुयोधन ಸುಯೋಧನ** (ಪುಂ) ದುರ್ಯೋಧನ. सुखेन युध्यते—सु + युध (सम्प्रहारे) "युच्" (वा० ३-३-१२८)। [ವಿವರಕ್ಕೆ "दुर्योधन" ಪದದಲ್ಲಿ ನೋಡಿ.] "नलिनी निगूढसलिला च यत्र सा स्थलमित्यधःपतति या सुयोधने" माघ० १३-५९ ।

**सुर ಸುರ** (ಪುಂ) 1. ದೇವತೆ, ಗೀರ್ವಾಣ. सुरति—षुर (ऐश्वर्यदीप्त्योः) "कः" (१-१-१३५) । सुष्ठु राति ददात्यभीष्टम्—रा (दाने) "कः" (३-१-१३६) । सुरा अस्त्यस्य "अच्" (५-२-१२७)। सुष्ठु राजते—राज् (दीप्तौ) "डः" (३-२-१०१) । सुनोति—षुञ् (अभिषवे) "क्रन्" (उ० २-२४)। इति वा। "सुरैरशेषैरपि जातरोषैः स दुर्जयान् भीष्ममुखान् जिगाय । सहायशक्त्या युधि सव्यसाची किं दुष्करं केशवमाश्रितानाम्" याद० २३-४४। "सुराप्रतिग्रहाद्देवाः सुरा इत्यभिविश्रुताः" रामा० । 2. ಮೂವತ್ತು ಮೂರು ಸಂಖ್ಯೆ.

**सुरकारु ಸುರಕಾರು** (ಪುಂ) ದೇವತೆಗಳ ಶಿಲ್ಪಿ, ವಿಶ್ವಕರ್ಮ. सुराणां कारुः शिल्पी ।

**सुरक्त ಸುರಕ್ತ** (ವಿಂ) 1. ಬಹಳ ಅನುರಾಗಹೊಂದಿರುವ, ಬಹಳ ಪ್ರೀತಿಯುಳ್ಳ. 2. ಹೆಚ್ಚು ಕೆಂಪಗಿರುವ.

**सुरगुरु ಸುರಗುರು** (ಪುಂ) ದೇವತೆಗಳ ಗುರು, ಬೃಹಸ್ಪತ್ಯಾಚಾರ್ಯರು. सुराणां गुरुः ।

**सुरग्रामणी ಸುರಗ್ರಾಮಣೀ** (ಪುಂ) ದೇವೇಂದ್ರ, ದೇವತೆಗಳ ಒಡೆಯ. सुराणां ग्रामणीः नेता ।

**सुरङ्ग ಸುರಂಗ** (ಪುಂ) 1. ಹೆಳೆ ಗಿಡ. सुष्ठु रङ्गो यस्मात् । (स्त्री०) —ङ्गा —ಙ್ಗಾ. 2. ಕನ್ನ, ಕಳ್ಳನು ಒಳಗೆ ಪ್ರವೇಶಿಸಲು ಗೋಡೆಯಲ್ಲಿ ಕೊರೆಯುವ ರಂಧ್ರ. "लुण्टाको हारको मोषासुरङ्गा सन्धिरप्यथ" अम० । 3. ಭೂಮಿಯೊಳಗೆ ನಿರ್ಮಿಸಿರುವ ಮಾರ್ಗ, ಭೂಮಿಯೊಳಗೆ ತೋಡಿ ಮಾಡಿರುವ ದಾರಿ. "पुनरपि नन्दराज्यप्रत्यानयनाय सुरङ्गया बहिरपगतेषु युष्मासु" मुद्रा० २ ।

**सुरज्येष्ठ ಸುರಜ್ಯೇಷ್ಠ** (ಪುಂ) ಬ್ರಹ್ಮ, ಚತುರ್ಮುಖ. सुरेषु ज्येष्ठः। "ब्रह्माऽऽत्मभूः सुरज्येष्ठः" अम० ।

**सुरञ्जन ಸುರಂಜನ** (ಪುಂ) ಕ್ರಮುಕ ವೃಕ್ಷ, ಅಡಕೆ ಮರ. सुष्ठु रञ्जयति—रञ्ज (रागे) + णिच् "ल्युः" (३-१-१३४) ।

**सुरत ಸುರತ** (ನಂ) ರತಿಕ್ರೀಡೆ, ಸಂಭೋಗ. सुष्ठु रतम् यत्र। "प्राप्य मन्मथरसादतिभूमिं दुर्वहस्तनभराः सुरतस्य" माघ० १०-८० । —ता —ತಾ. ದೇವತ್ವ, ದೇವತೆಯ ಭಾವ. सुरस्य भावः "तल्" (५-१-११९)। "त्वः"। सुरत्वम् ಸುರತ್ವಮ್. "सुरतं स्यान्निधुवने देवत्वे सुरता स्मृता" मेदि० ।

**सुरताली ಸುರತಾಲೀ** (स्त्री०) 1. ದೂತಿ. सुरतं तालयति—तल (प्रतिष्ठायाम्) + णिच् "अण्" (३-२-१)। 2. ತಲೆಗೆ ಮುಡಿದುಕೊಳ್ಳುವ ಹೂವಿನ ಸರ. "भवेत् सुरताली तु दूतिकायां शिरःस्रजि" मेदि० ।

**सुरतरु ಸುರತರು** (ಪುಂ) ದೇವತೆಗಳ ವೃಕ್ಷ, ದೇವತೆಗಳ ಉದ್ಯಾನವನದ ವೃಕ್ಷ. —द्रुमः —ದ್ರುಮಃ. ಕಲ್ಪವೃಕ್ಷ.

**सुरतोषक ಸುರತೋಷಕ** (ಪುಂ) ಕೌಸ್ತುಭಮಣಿ.

**सुरदीर्घिका ಸುರದೀರ್ಘಿಕಾ** (स्त्री०) ಸ್ವರ್ಗನದಿ, ಗಂಗಾನದಿ. सुराणां दीर्घिकेव । "स्वर्णदी सुरदीर्घिका" अम० ।

**सुरद्विप ಸುರದ್ವಿಪ** (ಪುಂ) 1. ಐರಾವತ. 2. ದೇವತೆಗಳ ಆನೆ. "सुरद्विपास्फालनकर्कशाङ्गुली" रघु० ३-५५ ।

**सुरद्विष् ಸುರದ್ವಿಷ್** (पुं०) 1. ಅಸುರ, ದಾನವ. सुरान् द्वेष्टि — द्विष (अप्रीतौ) "क्विप्" (३-२-६१)। "सुरद्विषोपप्लुतमेवमेतद्वनं बलस्य द्विषतो गतश्रि" कुमा० १३-३४। 2. ರಾಹು. "सुरद्विषश्चान्द्रमसी सुधेव" रघु० २-३९।

**सुरधनुस् ಸುರಧನುಸ್** (न०) ಇಂದ್ರನ ಧನುಸ್ಸು. "सन्धानं सुरधनुषः प्रभा मणीनाम्" किरा० ७-१६।

**सुरनदी ಸುರನದೀ** (स्त्री०) ದೇವನದಿ, ಗಂಗಾನದಿ. सुराणां नदी। **-निम्नगा -ನಿಮ್ನಗಾ.**

**सुरपति ಸುರಪತಿ** (पुं०) 1. ದೇವತೆಗಳ ಪ್ರಭು, ದೇವತೆಗಳ ಒಡೆಯ, ದೇವೇಂದ್ರ. सुराणां पतिः। 2. ದೇವತೆಗಳ ಒಡೆಯರಾದ ಇಂದ್ರ ವರುಣ ಮೊದಲಾದವರು. "बहुविधमुपहारजातमग्र्यं सुरपतिभिः स्वयमाहृतं मुकुन्दः याद० २४-२०।

**सुरपथ ಸುರಪಥ** (न०) ಗಗನ, ಆಕಾಶ, ದೇವತೆಗಳು ಸಂಚರಿಸುವ ಮಾರ್ಗ. सुराणां पन्थाः — पथिन् "अः" (५-४-७४)।

**सुरपादप ಸುರಪಾದಪ** (पुं०) ದೇವೋದ್ಯಾನದ ವೃಕ್ಷ, ಕಲ್ಪವೃಕ್ಷ. सुराणां पादपः।

**सुरपुन्नाग ಸುರಪುನ್ನಾಗ** (पुं०) ಸುರಗಿಮರ, ಸುರಹೊನ್ನೆ ಮರ.

**सुरपुरी ಸುರಪುರೀ** (स्त्री०) ಇಂದ್ರನ ನಗರ, ಅಮರಾವತಿ. सुरस्य पुरी।

**सुरप्रिय ಸುರಪ್ರಿಯ** (पुं०) 1. ಇಂದ್ರ. 2. ಬೃಹಸ್ಪತಿ. सुराणां प्रियः। (स्त्री०) **-प्रिया -ಪ್ರಿಯಾ.** 1. ಜಾಜಿ ಹೂವು. 2. ರಂಭೆ.

**सुरभि ಸುರಭಿ** (पुं०) 1. ವಸಂತಋತು. 2. ಚಂಪಕ ವೃಕ್ಷ, ಸಂಪಿಗೆಮರ. 3. ಸುರುಸುರುಕೆ ಗಿಡ. 4. ಜಾಯಿಕಾಯಿ (ಗಿಡ). 5. ಶಮೀವೃಕ್ಷ, ಬನ್ನಿಮರ. 6. ಕದಂಬವೃಕ್ಷ. 7. ವಕುಳವೃಕ್ಷ, ಪವಳದ ಗಿಡ. 8. ರಾಳ, ಸರ್ಜರಸ. 9. ಚೈತ್ರಮಾಸ. सु+रभ (राभस्ये) "इन्" (उ० ४-११८)। 10. ಸುವಾಸನೆ, ಪರಿಮಳ. (स्त्री०) 11. ಸಲ್ಲಕೀವೃಕ್ಷ, ಆನೆಬೇಲ. 12. ಮುರೆಯೆಂಬ ಒಂದು ಗಂಧದ್ರವ್ಯ. 13. ಗೋವು, ಕಾಮಧೇನು. "सुतां तदीयां सुरभेः कृत्वा प्रतिनिधिं शुचिः। आराधय सपत्नीकः प्रीता कामदुघा हि सा" रघु० १-८१। (न०) 14. ಸ್ವರ್ಣ, ಚಿನ್ನ. 15. ಗಂಧಕ. (वि०) 16. ಪರಿಮಳವುಳ್ಳ, ಒಳ್ಳೆಯ ವಾಸನೆಯುಳ್ಳ. "सुरभिणि श्वसिते दधतस्तृषं नवसुधामधुरे च तवाधरे" माघ० ६-१२। 17. ರಮ್ಯವಾದ, ಸುಂದರವಾದ, ಮನೋಹರವಾದ. "निवर्त्य राजा दयितां दयालुस्तां सौरभेयीं सुरभिर्यशोभिः" रघु० २-३। 18. ಪ್ರಖ್ಯಾತನಾದ, ಕೀರ್ತಿಶಾಲಿಯಾದ.

**सुरभित्वच् ಸುರಭಿತ್ವಚ್** (स्त्री०) ದೊಡ್ಡ ಯಾಲಕ್ಕಿ ಕಾಯಿ. सुरभि त्वक् यस्याः।

**सुरभिदारु ಸುರಭಿದಾರು** (पुं०) ಸರಳ ದೇವದಾರು ವೃಕ್ಷ. सुरभि सुगन्धि दारु यस्य।

**सुरभिबाण ಸುರಭಿಬಾಣ** (पुं०) ಮನ್ಮಥ, ಕಾಮದೇವ.

**सुरभिमास ಸುರಭಿಮಾಸ** (पुं०) ಚೈತ್ರಮಾಸ, ವಸಂತಕಾಲ.

**सुरभी ಸುರಭೀ** (स्त्री०) 1. ಗುಗ್ಗುಳ, ಲೋಬಾನ. 2. ಕಾಮಧೇನು. 3. ಸಲ್ಲಕೀವೃಕ್ಷ, ಆನೆಬೇಲ.

**सुरभीरसा ಸುರಭೀರಸಾ** (स्त्री०) ಸಲ್ಲಕೀವೃಕ್ಷ, ಆನೆಬೇಲ.

**सुरभूय ಸುರಭೂಯ** (न०) ಸುರತ್ವ, ದೇವಭಾವ. सुराणां भावः—सुर+भू "क्यप्" (३-१-१०७)। "दधतोऽपि रणे भीममभीक्ष्णं भावमासुरम्। हताःपरैरभिमुखाः देवभूयमुपाययुः" माघ० १९-७३।

**सुरभूरुह ಸುರಭೂರುಹ** (पुं०) 1. ಕಲ್ಪವೃಕ್ಷ. 2. ದೇವದಾರು ವೃಕ್ಷ.

**सुरर्षि ಸುರರ್ಷಿ** (पुं०) ನಾರದ ಮೊದಲಾದ ದೇವಋಷಿಗಳು. सुराश्च ते ऋषयश्च। ಋಷಿಗಳು (1) ब्रह्मर्षिः (2) देवर्षिः (3) महर्षिः (4) परमर्षिः (5) काण्डर्षिः (6) श्रुतर्षिः ಮತ್ತು (7) राजर्षिः ಎಂದು ಏಳು ವಿಧ.

**सुरलता ಸುರಲತಾ** (स्त्री०) ಮಹಾಜ್ಯೋತಿಷ್ಮತೀಲತೆ.

**सुरलोक ಸುರಲೋಕ** (पुं०) ದೇವಲೋಕ, ಸ್ವರ್ಗ. सुराणां लोकः।

**सुरवर्त्मन् ಸುರವರ್ತ್ಮನ್** (न०) ಗಗನ, ಆಕಾಶ, ಅಂತರಿಕ್ಷ. सुराणां वर्त्म।

**सुरवल्लभा ಸುರವಲ್ಲಭಾ** (स्त्री०) ಬಿಳಿಗರಿಕೆ. सुराणां वल्लभा।

**सुरवल्ली ಸುರವಲ್ಲೀ** (स्त्री०) ತುಲಸಿ.

**सुरविद्विष् ಸುರವಿದ್ವಿಷ್** (पुं०) ದೇವತೆಗಳ ಶತ್ರು, ಅಸುರ, ದಾನವ. सुराणां विद्विट्। **-वैरिन् -ವೈರಿನ್, -शत्रु -ಶತ್ರು.**

**सुरशाखिन् ಸುರಶಾಖಿನ್** (पुं०) ದೇವತೆಗಳ ಉದ್ಯಾನವನದ ವೃಕ್ಷ, ಕಲ್ಪವೃಕ್ಷ.

**सुरस ಸುರಸ** (ಪುಂ) 1. ಬಿಳಿಯ ಗಿಡ. शोभनो रसो यस्य । 2. ತುಲಸಿ ಗಿಡ. "पित्तकृत् पार्श्वशूलघ्नः सुरसः समुदाहृतः" सुश्रुतं सूत्र० ४६-२३४ । (ನಂ) 3. ಕಮ್ಮಗಗ್ಗರ. 4. ಲವಂಗಪಟ್ಟೆ, ದಾಲ್ಚಿನ್ನಿ. 5. ಬಾಣಾಂತಿ ಬೋಳ. (ವಿಂ) 6. ಬಹಳ ಮಧುರವಾದ, ಬಹಳ ಸಿಹಿಯಾದ. "सुरसं तु त्रिषु स्वादौ पर्णासे तु नपुंसकम्" मेदि० ।

**सुरसद्मन् ಸುರಸದ್ಮನ್** (ನಂ) ಸ್ವರ್ಗಲೋಕ, ದೇವತೆಗಳ ವಾಸಸ್ಥಾನ. सुराणां सद्म ।

**सुरसरित् ಸುರಸರಿತ್** (स्त्री०) ದೇವನದಿ, ಗಂಗಾನದಿ. सुराणां सरित् ।

**सुरसा ಸುರಸಾ** (स्त्री०) 1. ತುಲಸಿ. शोभनो रसो यस्याः । 2. ಸಣ್ಣ ರಾಶ್ನೆ. 3. ಸರ್ಪಾಕ್ಷಿ, ಈಶ್ವರೀ ಹಂಬು. "नाकुली सुरसा नागसुगन्धा गन्धनाकुली । नकुलेष्टा भुजङ्गाक्षी" अम० । 4. ನಾಗಮಾತೆ. "स्त्री रास्नानागमात्रोश्च" मेदि० ।

**सुरसिन्धु ಸುರಸಿಂಧು** (ಪುಂ) ದೇವನದಿ, ಗಂಗಾನದಿ. सुराणां सिन्धुः । "शिरसौघमवत्त शङ्करः सुरसिन्धोर्भवुजितमङ्घ्रिणा" माघ० १६-४६ ।

**सुरसिन्धुसुत ಸುರಸಿಂಧುಸುತ** (ಪುಂ) ಗಂಗಾಪುತ್ರರಾದ ಭೀಷ್ಮಾಚಾರ್ಯರು. "सुरसिन्धुसुतं शशंसुरन्ये" याद० १५-७६ ।

**सुरसुन्दरी ಸುರಸುಂದರೀ** (स्त्री०) 1. ದೇವಾಂಗನೆ, ಸ್ವರ್ಗಲೋಕದ ಹೆಂಗಸು. सुराणां सुन्दरी । "स्त्रियश्च पत्यौ सुरसुन्दरीभिः समा नवप्रेमणि सानुरागाः" माघ० ४-२७ । 2. ಅಪ್ಸರಸ್ಸು.

**सुरा ಸುರಾ** (स्त्री०) 1. ಮದ್ಯ, ಹೆಂಡ. षुञ् (अभिषवे) "क्रन्" (उ० २-२५) । "आययुः सुघटितानि सुरायाः पात्रतां प्रियतमावदनानि" माघ० १०-१ । 2. ಚಷಕ, ಪಾನಪಾತ್ರೆ. सुष्ठु रायन्त्यनया—रै (शब्दे) "अङ्" (३-३-१०६) । "सुरा चषकमद्ययोः" मेदि० ।

**सुराः ಸುರಾಃ** (ಪುಂ) ಧನಿಕ, ಐಶ್ವರ್ಯವಂತ. सु शोभनो राः धनं यस्य ।

**सुराकर ಸುರಾಕರ** (ಪುಂ) 1. ತೆಂಗಿನ ಮರ. सुराया आकरः । 2. ಸುರಾರ್ಣವ, ಸುರಾಸಮುದ್ರ, ಸಪ್ತ ಸಮುದ್ರಗಳಲ್ಲೊಂದು ಸಮುದ್ರ. 3. ಮದ್ಯವನ್ನು ತಯಾರಿಸುವ ಸ್ಥಳ.

**सुराङ्गना ಸುರಾಂಗನಾ** (स्त्री०) 1. ದೇವತೆಗಳ ಪತ್ನಿಯರು. सुराणामङ्गनाः । "श्रीमद्भिः सरथगजैः सुराङ्गनानां गुप्तानामथ सचिवैस्त्रिलोकभर्तुः" किरा० ७-१ । "कुमति च" (८-४-१३) । ಸೂತ್ರದಿಂದ णत्व ವು ವಿಕಲ್ಪವಾಗಿ ಬಂದು सुराङ्गणा ಸುರಾಂಗಣಾ ಎಂದೂ ರೂಪವಾಗುವುದು. "सुराङ्गणानां जलकेलिभाजां प्रक्षालितैः सन्ततमङ्गरागैः" कुमा० १३-२४ । 2. ಅಪ್ಸರಸ್ಸು.

**सुराचार्य ಸುರಾಚಾರ್ಯ** (ಪುಂ) ದೇವತೆಗಳ ಗುರು, ಬೃಹಸ್ಪತ್ಯಾಚಾರ್ಯರು. सुराणामाचार्यः । "बृहस्पतिः सुराचार्यः" अम० ।

**सुराजन् ಸುರಾಜನ್** (ಪುಂ) 1. ಪ್ರಜಾಸಂರಕ್ಷಣಾದಿ ಗುಣಗಳುಳ್ಳ ಒಳ್ಳೆಯ ದೊರೆ, ಧರ್ಮಾತ್ಮನಾದ ರಾಜ. शोभनो राजा सुराजा — "न पूजनात्" (५-४-६९) । ಸಮಾಸಾಂತ "टच्" ಪ್ರತ್ಯಯವಿಲ್ಲ. "तत्सुराज्ञि भवति स्थिते पुनः कः क्रतुं यजतु राजलक्षणम्" माघ० १४-१४ । (ವಿಂ) 2. ಧರ್ಮಾತ್ಮನಾದ ರಾಜನನ್ನು ಹೊಂದಿರುವ ದೇಶ ಮೊದಲಾದುದು. सु शोभनो राजा यत्र । "सुराज्ञि देशे राजन्वान्" अम० ।

**सुराजीविन् ಸುರಾಜೀವಿನ್** (ಪುಂ) ಮದ್ಯದ ತಯಾರಿಕೆ ಮತ್ತು ಮಾರಾಟಮಾಡುವವನು. सुरया जीवति—जीव (प्राणधारणे) "णिनिः" (३-२-७८) ।

**सुराधिप ಸುರಾಧಿಪ** (ಪುಂ) ದೇವತೆಗಳ ಒಡೆಯ, ದೇವೇಂದ್ರ. सुराणामधिपः । "सुराधिपाधिष्ठितहस्तिमल्ललीलां दधौ राजतगण्डशैलः" माघ० ४-१३ । -अधिपतिः-ಅಧಿಪತಿಃ, -अधीशः-ಅಧೀಶಃ, -अधीश्वरः-ಅಧೀಶ್ವರಃ. "सुराःसुराधीशपुरःसराणां समीयुषां वः सममातुराणाम्" कुमा० १२-४० ।

**सुराप ಸುರಾಪ** (ಪುಂ) ಮದ್ಯಪಾನ ಮಾಡುವವನು, ಮದ್ಯಪಾನದಿಂದ ಮತ್ತನಾಗಿರುವವನು. सुरां पिबति — पा (पाने) "टक्" (वा० ३-२-८) । "सुरापैरिव घूर्णद्भिः शाखिभिः पवनाहतैः" भट्टि० ६-९० । स्त्रियां "ङीप्" (४-१-१५) । सुरापी ಸುರಾಪೀ. ಸುರಾಪಾನವಿಲ್ಲದ ಕಾರಣ सुरां पाति — पा (रक्षणे) "कः" (३-२-३) । सुरापा ಸುರಾಪಾ ಎಂದು ರೂಪವಾಗುವುದು.

**सुरापगा ಸುರಾಪಗಾ** (स्त्री०) ದೇವನದಿ, ಗಂಗಾನದಿ. सुराणामापगा । "कालिन्दीजलजनितश्रियः श्रयन्ते वैदग्धीमिह सरितः सुरापगायाः" माघ० ४-२६ ।

**सुरापाण ಸುರಾಪಾಣ** (पुं० ब० व०) ಪೂರ್ವದೇಶದವರು. सुरा पानं येषां ते—नस्य णत्वम् (८-४-९)। सुरापाणाः प्राच्याः। (न०) **–पानं –ಪಾನವು, –पाणम् –ಪಾಣವು.** वा णत्वम्। सुरायाः पानम्—भावे करणे च विकल्पेन णत्वम् (८-४-१०)। "सुरापाणपरिक्षीवं रिपुदर्पहरोदयम्" भट्टि० ९-९६।

**सुराभाण्डम् ಸುರಾಭಾಂಡವು** (न०) ಮದ್ಯದ ಪಾತ್ರೆ.

**सुरामण्ड ಸುರಾಮಂಡ** (न०) ಮದ್ಯದ ಮೇಲಿನ ಕೆನೆ.

**सुराराति ಸುರಾರಾತಿ** (पुं०)
**सुरारि ಸುರಾರಿ** (पुं०) } ದೈತ್ಯ, ದಾನವ, ರಾಕ್ಷಸ. सुराणामरातिः अरिर्वा। "सुरारिलक्ष्मीपरिकम्पहेतवो दिक्चक्रवालप्रतिनादमेदुराः" कुमा० १४-१७।

**सुरालय ಸುರಾಲಯ** (पुं०) 1. ಮೇರುಪರ್ವತ. 2. ಸ್ವರ್ಗ, ದೇವಲೋಕ. सुराणामालयः। "सुरालयप्राप्तिनिमित्तमम्भस्त्रैस्रोतसं नौलुलितं ववन्दे" रघु० १६-३४। 3. ದೇವಾಲಯ, ದೇವಸ್ಥಾನ. "पूर्तं सुरालयाराम-कूपाजीव्यादिलक्षणम्" भाग० ७-१५-४९। 4. ಮದ್ಯದ ಅಂಗಡಿ. सुराया आलयः।

**सुराष्ट्र ಸುರಾಷ್ಟ್ರ** (पुं०) ಸುರಾಷ್ಟ್ರದೇಶ. सु शोभनं राष्ट्रम्। ಈಗಿನ ಸೂರತ್. ಇದು ಭಾರತದ ಪಶ್ಚಿಮ ಭಾಗದಲ್ಲಿರುವುದು.

**सुराष्ट्रज ಸುರಾಷ್ಟ್ರಜ** (न०) 1. ತೊಗರಿ ಗಿಡ. सुराष्ट्रे देशे जायते – जनी (प्रादुर्भावे) "डः" (३-२-९७)। "काक्षी मृत्स्ना तुवरिका मृतालकसुराष्ट्रजे" अम०। (पुं०) 2. ಕರಿಯ ಹೆಸರುಕಾಳು. 3. ಒಂದು ವಿಧ ವಿಷ. **–जा –ಜಾ.** ತೊಗರಿಕಾಳು.

**सुराह्व ಸುರಾಹ್ವ** (पुं०) ದೇವದಾರು ವೃಕ್ಷ.

**सुरङ्गा ಸುರಂಗಾ** (स्त्री०) ಭೂಮಿಯೊಳಗೆ ತೋಡಿ (ಕೊರೆದು) ಮಾಡಿದ ಮಾರ್ಗ, ಸುರಂಗ. "ज्ञात्वा तु तद्गृहं सर्वमादीप्तं पाण्डुनन्दनाः। सुरुङ्गां विविशुस्तूर्णं मात्रा साकमरिन्दमाः" भा० आदि० १४६-११।

**सुरूप ಸುರೂಪ** (पुं०) 1. ವಿದ್ವಾಂಸ, ಪಂಡಿತ. सु शोभनं रूपं यस्य। "धीमान् सूरिः कृतिः कृष्टिर्लब्धवर्णो विचक्षणः। प्राप्तरूपसुरूपाभिरूपदूरदृशाः समाः" जटाधरः। (न०) 2. ಆಕಾಶ, ಪತ್ರ. (वि०) 3. ಸುಂದರವಾದ ಆಕಾರವುಳ್ಳ. (स्त्री०) **–रूपा –ರೂಪಾ.** 4. ಭಾರಂಗಿ ಗಿಡ. 5. ಮೂರೆಲೆ ಹೊನ್ನೆ ಮರ. राजनि०। "सुरूपस्तु बुधे रम्ये प्राप्तरूपाभि-रूपवत्" हेम०।

**सुरेज्य ಸುರೇಜ್ಯ** (पुं०) 1. ಬೃಹಸ್ಪತ್ಯಾಚಾರ್ಯರು. सुराणामिज्यः। "विष्णुः सुरेज्यो बलभिद्धुताश-स्त्वष्टोत्तरप्रोष्ठपदाधिपश्च" बृहत्सं० ८-२३। (स्त्री०) **–इज्या –ಇಜ್ಯಾ.** 2. ತುಲಸಿ.

**सुरेन्द्र ಸುರೇಂದ್ರ** (पुं०) 1. ದೇವೇಂದ್ರ, ದೇವತೆಗಳ ರಾಜ. सुरेषु इन्द्रः। 2. ಲೋಕಪಾಲ, ದಿಕ್ಪಾಲಕ. "सुरेन्द्रमात्राश्रितगर्भगौरवात् प्रयत्नमुक्तासनया गृहागतः" रघु० ३-११।

**सुरेन्द्रजित् ಸುರೇಂದ್ರಜಿತ್** (पुं०) 1. ಗರುಡ, ಗರುತ್ಮಂತ. 2. ಇಂದ್ರಜಿತ್ತು, ರಾವಣನ ಮಗ.

**सुरेश ಸುರೇಶ** (पुं०) 1. ದೇವತೆಗಳ ದೊರೆ, ಇಂದ್ರ. सुराणामीशः। 2. ವಿಷ್ಣು. ब्रह्मादीनां सुराणाम् ईशः। "ब्रह्मादीनां फलगुपदलिप्सूनां त्रिदिवौकसाम्। संविधाता सुरेशश्च प्रोच्यते विबुधोत्तमैः" इति निरुक्तिः। "सुरेशः शरणं शर्म" वि० स०। **–ईश्वरः –ಈಶ್ವರಃ.** "नरेन्द्रसूनुः प्रतिसंहरन्निषुं प्रियंवदः प्रत्यवदत्सुरेश्वरम्" रघु० ३-६४। 3. ರುದ್ರ, ಶಿವ, ಪರಮೇಶ್ವರ.

**सुरेश्वरी ಸುರೇಶ್ವರೀ** (स्त्री०) 1. ಗಂಗಾನದಿ. 2. ದುರ್ಗಾದೇವಿ.

**सुरेष्ट ಸುರೇಷ್ಟ** (पुं०) 1. ಸಾಲವೃಕ್ಷ, ಸರ್ಜತರು. सुराणामिष्टः 2. ಬಕಪುಷ್ಪ. 3. ಸುರಹೊನ್ನೆ. राजनि०। **–इष्टा –ಇಷ್ಟಾ.** ಹೊನಗೊನೆ ಸೊಪ್ಪು.

**सुरोत्तम ಸುರೋತ್ತಮ** (पुं०) ರವಿ, ಸೂರ್ಯ. सुरेषु उत्तमः। "सुरोत्तमो धामनिधिः" अम०।

**सुरोत्तर ಸುರೋತ್ತರ** (पुं०) ಶ್ರೀಗಂಧ, ಚಂದನ.

**सुरोद ಸುರೋದ** (पुं०) ಸುರಾಸಮುದ್ರ. "क्षारोदेक्षु-रसोदसुरोदघृतोदक्षीरोददधिमण्डोदशुद्धोदाः सप्त जलधयः सप्तद्वीपपरिखा इव" भाग० ५-१-३३।

**सुलक्षण ಸುಲಕ್ಷಣ** (वि०) ಒಳ್ಳೆಯ ಲಕ್ಷಣಗಳಿಂದ ಕೂಡಿದ. सु शोभनानि लक्षणानि यस्य।

**सुलभ ಸುಲಭ** (वि०) 1. ಸುಖವಾಗಿ ಹೊಂದಲ್ಪಡುವ, ಕ್ಲೇಶವಿಲ್ಲದೆ ಪ್ರಾಪ್ತವಾಗುವ. सुखेन लभ्यते — डु लभष् (प्राप्तौ) "खल्" (३-३-१२६)। "ज्वलनं त्विषः कथमिवेतरथा सुलभोऽन्यजन्मनि स एव पतिः" माघ० ९-१३। 2. ಯೋಗ್ಯವಾದ, ಅರ್ಹವಾದ, ಅನುರೂಪವಾದ. "निष्ठ्यूतश्चरणोपभोगसुलभो लाक्षारसः केनचित्" शाकु० ४-४। 3. ನಿಸರ್ಗವಾದ, ಸ್ವಭಾವಸಿದ್ಧವಾದ. "मानुषतासुलभो लघिमा" काद०।

**सुलोचन ಸುಲೋಚನ** (ನಂ) 1. ಕನ್ನಡಕ. सुष्ठु लोचनं यस्मात्। (पुं०) 2. ಹರಿಣ, ಜಿಂಕೆ. सु शोभनं लोचनं यस्य। (वि०) 3. ಸುಂದರವಾದ ಕಣ್ಣುಗಳುಳ್ಳವನು. (स्त्री०) **-लोचना -ಲೋಚನಾ.** 1. ಸುಂದರವಾದ ನೇತ್ರಗಳುಳ್ಳ ಹೆಂಗಸು. 2. ಇಂದ್ರಜಿತ್ತುನ ಹೆಂಡತಿ.

**सुलोहक ಸುಲೋಹಕ** (ನಂ) ಹಿತ್ತಾಳೆ. सुष्ठु लोहम्। "कन्"।

**सुलोहित ಸುಲೋಹಿತ** (ನಂ) 1. ಕೆಂಪುಬಣ್ಣ. सुष्ठु लोहितम्। (वि०) 2. ಬಹಳ ಕೆಂಪಗಿರುವ. (स्त्री०) **-लोहिता -ಲೋಹಿತಾ.** 3. ಅಗ್ನಿಯ ಸಪ್ತ ಜಿಹ್ವೆಗಳಲ್ಲೊಂದು ಜಿಹ್ವೆ. काली कराली च मनोजवा च सुलोहिता या च सुधूम्रवर्णा। स्फुलिङ्गिनी विश्वरूपी च देवी लोलायमाना इति सप्त जिह्वाः" मुण्डक०। ಅಗ್ನಿಯ ಜಿಹ್ವೆಯ ಹೆಸರುಗಳು ಒಂದೊಂದು ಗ್ರಂಥದಲ್ಲಿಯೂ ಬೇರೆ ಬೇರೆಯಾಗಿವೆ.

**सुवक्त्र ಸುವಕ್ತ್ರ** (वि०) ಸುಂದರವಾದ ಮುಖವುಳ್ಳವನು. सु शोभनं वक्त्रं यस्य।

**सुवचन ಸುವಚನ** (ನಂ) 1. ಒಳ್ಳೆಯ ಮಾತು, ಪರಿಶುದ್ಧವಾದ ಮಾತು, ದೋಷವಿಲ್ಲದ ಮಾತು. सु शोभनं वचनम्। "सुप्रलापः सुवचनम्" अम०। "एतानि ते सुवचनानि सरोरुहाक्षि कर्णामृतानि मनसश्च रसायनानि" उ० रा० १-३६। (वि०) 2. ಒಳ್ಳೆಯ ಮಾತನಾಡುವವನು.

**सुवचस् ಸುವಚಸ್** (ನಂ) 1. ಒಳ್ಳೆಯ ಮಾತು, ಪರಿಶುದ್ಧವಾದ ಮಾತು. सु शोभनं वचः। (वि०) 2. ಪರಿಶುದ್ಧವಾದ ಮಾತನಾಡುವವನು. सु शोभनं वचो यस्य।

**सुवन ಸುವನ** (पुं०) 1. ಸೂರ್ಯ. 2. ಅಗ್ನಿ, ವಹ್ನಿ. 3. ಚಂದ್ರ. सूते विश्वम् — षूङ् (प्राणिगर्भविमोचने) "क्युन्" (उ० २-८१)।

**सुवयस् ಸುವಯಸ್** (स्त्री०) ಪ್ರಾಪ್ತವಯಸ್ಸಿನ ಹೆಂಗಸು, ಪ್ರೌಢೆಯಾಗಿರುವ ಹೆಂಗಸು.

**सुवर्चला ಸುವರ್ಚಲಾ** (स्त्री०) 1. ಸೂರ್ಯನ ಪತ್ನಿ. "त्रसरेणुर्महावीर्यास्वातिसूर्या सुवर्चला" त्रिकाण्ड०। 2. ಅಗಸೆ ಗಿಡ. 3. ಹೊನಗೊನೆ ಸೊಪ್ಪು.

**सुवर्चस् ಸುವರ್ಚಸ್** (वि०) ಒಳ್ಳೆಯ ತೇಜಸ್ವಿಯಾದವನು, ಒಳ್ಳೆಯ ವರ್ಚಸ್ಸಿನಿಂದ ಕೂಡಿದವನು. सु शोभनं वर्चो यस्य।

**सुवर्ण ಸುವರ್ಣ** (ನಂ) 1. ಸ್ವರ್ಣ, ಚಿನ್ನ, ಕನಕ. सु शोभनो वर्णो यस्य। सुष्ठु वर्ण्यते — वर्ण (वर्णने) + णिच् "अच्" (३-३-५६)। "सुवर्णसूत्राकलिताधराम्बरां विडम्बयन्तं शितिवाससस्तनुम्" माघ० १-६। 2. ಒಂದು ಕರ್ಷ ಅಥವಾ 16 ಅದ್ಯ ಮಾಷಕಗಳ ತೂಕ. 3. ಒಂದು ಯಾಗ. 4. ಕೃಷ್ಣಾಗುರು. 5. ಸುವರ್ಣದ ನಾಣ್ಯ. 6. ವಿತ್ತ, ಧನ. सुवर्णं काञ्चने कर्षे सुवर्णालौ मखान्तरे। कृष्णागुरुणि वित्ते च" हेम०। (पुं०) 7. ದತ್ತೂರಿ ಗಿಡ. 8. ಒಳ್ಳೆಯ ಬಣ್ಣ. 9. ಉತ್ತಮ ವರ್ಣ. 10. ಸ್ವರ್ಣಪಾತ್ರೆ. (वि०) 11. ಒಳ್ಳೆಯ ಬಣ್ಣವುಳ್ಳ.

**सुवर्णक ಸುವರ್ಣಕ** (ನಂ) 1. ಹಿತ್ತಾಳೆ. सुवर्णमिव — "कन्" इवार्थे। 2. ಸ್ವರ್ಣ, ಚಿನ್ನ. स्वार्थे "कन्"। (पुं०) 3. ಕಕ್ಕೆಗಿಡ.

**सुवर्णकदली ಸುವರ್ಣಕದಲೀ** (स्त्री०) ಒಂದು ಜಾತಿಯ ಬಾಳೆಗಿಡ.

**सुवर्णकार ಸುವರ್ಣಕಾರ** (पुं०) ಅಕ್ಕಸಾಲೆ, ಚಿನ್ನ ಬೆಳ್ಳಿಯ ಕೆಲಸ ಮಾಡುವವನು. सुवर्णं सुवर्णाभरणादिकं करोति — डुकृञ् (करणे) "अण्" (३-२-१)। "राजान्नं तेज आदत्ते शूद्रान्नं ब्रह्मवर्चसम्। आयुः सुवर्णकारान्नं यशश्चर्मविकर्तिनः" मनु० ४-२१८।

**सुवर्णजीविक ಸುವರ್ಣಜೀವಿಕ** (पुं०) ಚಿನ್ನದ ವ್ಯಾಪಾರದಿಂದ ಜೀವಿಸುವ ವರ್ತಕ. सुवर्णं जीविका यस्य। "गान्धिकः शाङ्खिकश्चैव कांस्यको मणिकारकः। सुवर्णजीविकश्चैव पञ्चैते वणिजः स्मृताः"।

**सुवर्णप्रसर ಸುವರ್ಣಪ್ರಸರ** (ನಂ) ಸುರುಸುರುಕೆ ಗಿಡ.

**सुवर्णबिन्दु ಸುವರ್ಣಬಿಂದು** (पुं०) ವಿಷ್ಣು.

**सुवर्णवणिक् ಸುವರ್ಣವಣಿಕ್** (पुं०) ಚಿನ್ನದ ಮಾರಾಟ ಮಾಡುವ ವರ್ತಕ, ಸುವರ್ಣದ ಕ್ರಯ ವಿಕ್ರಯ ಮಾಡುವ ವಣಿಕ. ಇವನು ಅಂಬಷ್ಠನಿಂದ ವೈಶ್ಯ ಸ್ತ್ರೀಯಲ್ಲಿ ಹುಟ್ಟಿದ ಒಂದು ಸಂಕರ (ಬೆರಕೆ) ಜಾತಿಯವನು.

**सुवर्णयूथी ಸುವರ್ಣಯೂಥೀ** (स्त्री०) ಹೊಂಬಣ್ಣದ ಕಾಡುಮಲ್ಲಿಗೆ. "यूथिका गणिकाम्बष्ठा सा पीता हेमपुष्पिका" अम०।

**सुवर्णवर्ण ಸುವರ್ಣವರ್ಣ** (पुं०) 1. ವಿಷ್ಣು. कनकनिकषनिर्दोषोज्ज्वलवर्णतया सुवर्णस्येव वर्णो रूपगुणोऽस्य। "गुणरत्नवर्णनिकषनिर्दोषोज्ज्वलवर्णतः। सुवर्णवर्ण इत्युक्तः नवार्णो भक्तकामदः" इति निरुक्तिः। "सुवर्ण-

ಈ ರೀತಿ ಸೃಷ್ಟವಾದ ಮನುಷ್ಯ ತಿರ್ಯಕ್ ಸ್ಥಾವರಗಳ ಹೆಸರುಗಳನ್ನು ಗೋಜಾತಿಗೆ ಗೌಃ ಎಂದೂ ಅಶ್ವಜಾತಿಗೆ ಅಶ್ವಃ ಎಂದೂ ಕರ್ಮಗಳನ್ನು ಬ್ರಾಹ್ಮಣನಿಗೆ ವೇದಾಧ್ಯಯನಾದಿಕಾರ್ಯ ಕ್ಷತ್ರಿಯನಿಗೆ ಪ್ರಜಾಪರಿಪಾಲನಾದಿಕಾರ್ಯ ಎಂದೂ ಬೇರೆಬೇರೆಯಾಗಿ ವೇದಶಬ್ದಗಳಿಂದಲೇ ತೆಗೆದು ನಿರ್ಮಿಸಿದನು. "सर्वेषां स तु नामानि कर्माणि च पृथक् पृथक्। वेदशब्देभ्य एवादौ पृथक् संस्थाश्च निर्ममे" मनु० १-२१।

ಅನಂತರ ಯಜ್ಞಸಿದ್ಧಿಗಾಗಿ ಅಗ್ನಿಯಿಂದ ಋಗ್ವೇದವನ್ನೂ ವಾಯುವಿನಿಂದ ಯಜುರ್ವೇದವನ್ನೂ ರವಿಯಿಂದ ಸಾಮವೇದವನ್ನೂ ಆಕರ್ಷಿಸಿದನು. ಬಳಿಕ ಸೂರ್ಯಾದಿ ಗ್ರಹಗಳ ಸಂಚಾರ ರೂಪವಾದ ಕಾಲ ತಿಂಗಳು ಅಯನ ಮತ್ತು ಋತುಗಳ ರೂಪವಾದ ಕಾಲವಿಭಾಗ ನಕ್ಷತ್ರಗಳು ಗ್ರಹಗಳು ನದಿಗಳು ಪರ್ವತಗಳು ಮತ್ತು ಸಮ ಮತ್ತು ವಿಷಮಪ್ರದೇಶಗಳನ್ನೂ ಸೃಷ್ಟಿಸಿದನು. "अग्निवायुरविभ्यस्तु त्रयं ब्रह्म सनातनम्। दुदोह यज्ञसिद्धयर्थमृग्यजुःसामलक्षणम्" मनु० १-२३। "कालं कालविभक्तीश्च नक्षत्राणि ग्रहांस्तथा। सरितः सागराञ्छैलान् समानि विषमाणि च" मनु० १-२३, २४।

ಮುಂದೆ ಪ್ರಜೆಗಳನ್ನು ಸೃಷ್ಟಿಸುವ ಮೊದಲು ತಪಸ್ಸು ವಾಕ್ಕು ರತಿ (ಮನಃಪರಿತೋಷ) ಕಾಮ (ಇಚ್ಛೆ) ಕ್ರೋಧ ಇವುಗಳನ್ನು ಸೃಷ್ಟಿಸಿದನು. ಮನುಷ್ಯನು ವಿವೇಕದಿಂದ ಬಾಳಲು ಅವಶ್ಯವಾದ ಧರ್ಮ ಮತ್ತು ಅಧರ್ಮಗಳನ್ನು ಹೇಳಿ ಅವುಗಳನ್ನು ಧರ್ಮಾಧರ್ಮಗಳ ಫಲವಾದ ಸುಖ ದುಃಖಗಳ ದ್ವಂದ್ವದೊಡನೆ ಸೇರಿಸಿದನು. ಭೂಮಿ ಮೊದಲಾದ ಲೋಕಗಳ ಅಭಿವೃದ್ಧಿಗಾಗಿ ಮುಖದಿಂದ ಬ್ರಾಹ್ಮಣನನ್ನೂ ಬಾಹುಗಳಿಂದ ಕ್ಷತ್ರಿಯನನ್ನೂ ಊರು (ತೊಡೆ) ವಿನಿಂದ ವೈಶ್ಯನನ್ನೂ ಪಾದಗಳಿಂದ ನಾಲ್ಕನೆಯ ವರ್ಣದವನನ್ನೂ ಸೃಷ್ಟಿಸಿದನು. "ब्राह्मणोऽस्य मुखमासीत्। बाहू राजन्यः कृतः। ऊरू तदस्य यद्वैश्यः। पद्भ्यां शूद्रोऽजायत" श्रुतिः। ಅನಂತರ ಮನುಚಕ್ರವರ್ತಿಯು ಉದ್ಭವಿಸಿ ಪ್ರಜಾಸೃಷ್ಟಿಯ ಕಾರ್ಯಕ್ಕಾಗಿ ದಶಪ್ರಜಾಪತಿಗಳನ್ನು ಸೃಷ್ಟಿಸಿದನು.

**ದಶಪ್ರಜಾಪತಿಗಳು :** (1) मरीचिः (2) अत्रिः (3) अङ्गिराः (4) पुलस्त्यः (5) पुलहः (6) क्रतुः (7) प्रचेताः (8) वसिष्ठः (9) भृगुः ಮತ್ತು (10) नारदः। ಈ ಪ್ರಜಾಪತಿಗಳು ಸಪ್ತ ಮನುಗಳನ್ನೂ ದೇವತೆಗಳನ್ನೂ ದೇವತೆಗಳ ವಾಸಸ್ಥಾನವಾದ ಸ್ವರ್ಗವನ್ನೂ ಮಹರ್ಷಿಗಳನ್ನೂ ಯಕ್ಷರಕ್ಷಃಪಿಶಾಚಗಳು ಗಂಧರ್ವರು ಅಪ್ಸರಸ್ಸು ಅಸುರರು ವಾಸುಕಿ ಮೊದಲಾದ ಸರ್ಪಗಳು ಗರುಡ ಮೊದಲಾದ ಪಕ್ಷಿಗಳು ಪಿತೃಗಣಗಳು ವಿದ್ಯುತ್ತು ವಜ್ರಾಯುಧ ಮೇಘಗಳು ಇಂದ್ರಧನುಸ್ಸು ಉತ್ಪಾತಗಳು ಕಿನ್ನರರು ವಾನರ ಮತ್ಸ್ಯ ಪಕ್ಷಿಗಳು ಪಶು ಮೃಗ ಮನುಷ್ಯರು ಮುಂತಾದವರನ್ನೂ ಕ್ರಿಮಿಕೀಟಗಳು ಜರಾಯುಜ ಅಂಡಜ ಸ್ವೇದಜ ಮತ್ತು ಉದ್ಭಿಜ್ಜಗಳು ವನಸ್ಪತಿ ವೃಕ್ಷಗಳು ಮುಂತಾದುವನ್ನೂ ಸೃಷ್ಟಿಸಿದರು. ಈ ಸಂತತಿಯ ವಿವರಕ್ಕೆ ["कश्यप" ಪದ ಮತ್ತು "दक्ष" (2) ಪದಗಳಲ್ಲಿ ನೋಡಿ]. "कर्मणां च विवेकार्थं धर्माधर्मौ व्यवेचयत्। द्वन्द्वैरयोजयच्चेमाः सुखदुःखादिभिः प्रजाः॥ लोकानां तु विवृद्धयर्थं मुखबाहूरुपादतः। ब्राह्मणं क्षत्रियं वैश्यं शूद्रं च निरवर्तयत्"॥ "अहं (मनुः) प्रजाः सिसृक्षुस्तु तपस्तप्त्वा सुदुश्चरम्। पतीन् प्रजानामसृजं महर्षीनादितो दश॥ मरीचिमत्र्यङ्गिरसौ पुलस्त्यं पुलहं क्रतुम्। प्रचेतसं वसिष्ठं च भृगुं नारदमेव च॥ एते मनूंस्तु सप्तान्यानसृजन् भूरितेजसः। देवान् देवनिकायांश्च महर्षींश्चामितौजसः॥ यक्षरक्षःपिशाचांश्च गन्धर्वाप्सरसोऽसुरान्। नागान् सर्पान् सुपर्णांश्च पितॄणां च पृथग्गणान्॥ ಇತ್ಯಾದಿ मनु० १।

**ಸೃಷ್ಟಿಕ್ರಮ :** ಯೋಗನಿದ್ರೆಯಿಂದ ಎಚ್ಚರಗೊಂಡ ಪರಮಾತ್ಮನಿಂದ ಪ್ರಥಮತಃ ಮನಃಸೃಷ್ಟಿ. ಮನಸ್ಸಿನಿಂದ ಆಕಾಶ. ಆಕಾಶದಿಂದ ವಾಯು. ವಾಯುವಿನಿಂದ ಅಗ್ನಿ. ಅಗ್ನಿಯಿಂದ ಜಲ. ಜಲದಿಂದ ಪೃಥ್ವಿ (ಭೂಮಿ) ಯು ಸೃಷ್ಟಿಯಾಯಿತು. ಇದು ಸೃಷ್ಟಿಕ್ರಮ. "तस्य सोऽहर्निशस्यान्ते प्रसुप्तः प्रतिबुध्यते। प्रतिबुद्धश्च सृजति मनः सदसदात्मकम्॥ मनः सृष्टिं विकुरुते चोद्यमानं सिसृक्षया। आकाशं जायते तस्मात्तस्य शब्दं गुणं विदुः। आकाशात्तु विकुर्वाणात्सर्वगन्धवहः शुचिः। बलवान् जायते वायुः स वै स्पर्शगुणो मतः॥ वायोरपि विकुर्वाणाद्विरोचिष्णु तमोनुदम्। ज्योतिरुत्पद्यते भास्वत्तद्रूपगुणमुच्यते॥ ज्योतिषश्च विकुर्वाणादापो रसगुणाः स्मृताः। अद्भ्यो गन्धगुणा भूमिरित्येषा सृष्टिरादितः" मनु० १-७४, ७५, ७६, ७७, ७८। "तस्माद्वा एतस्मादात्मन आकाशः सम्भूतः। आकाशाद्वायुः। वायोरग्निः। अग्नेरापः। अद्भ्यः पृथिवी" तै० उप०। "एतस्माज्जायते प्राणो मनः सर्वेन्द्रियाणि च। खं वायुर्ज्योतिरापः पृथिवी विश्वस्य धारिणी" मुण्डक० २-१-३।

**सृष्टिकर्तृ ಸೃಷ್ಟಿಕರ್ತೃ** (ಪುಂ) ಪರಮಾತ್ಮ. ["सृष्टि" ಪದದಲ್ಲಿ ನೋಡಿ.]

**सेक ಸೇಕ** (ಪುಂ) 1. (ನೀರು) ಸುರಿಯುವುದು, ಗಿಡ ಮೊದಲಾದುವುಗಳಿಗೆ ನೀರು ಹಾಕುವುದು. षिच (क्षरणे) "घञ्" (३-३-१८)। "सेकान्ते मुनिकन्याभिः तत्क्षणोज्झितवृक्षकम्" रघु० १-५१। 2. ಚಿಮುಕಿಸುವುದು, ಸಿಂಪಿಸುವುದು. "श्लक्ष्णं यत्परिहितमेतयोः किलान्तर्घनार्थं तदुदकसेकसक्तमूर्वोः" माघ० ८-६५। 3. ಸ್ರವಿಸುವುದು, ಸೋರುವುದು. "तस्य द्विपानां मदवारिसेकात्खुराभिघाताच्च तुरङ्गमाणाम्" रघु० १६-३०। 4. ವೀರ್ಯಸ್ರಾವ, ರೇತಸ್ಸು ಸೋರುವುದು, ರೇತಸ್ಸಿನ ತಡೆಯಿಲ್ಲದ ಸೋರಿಕೆ.

**सेकपात्र ಸೇಕಪಾತ್ರ** (ನಂ) 1. ನೀರು ಸುರಿಯುವ ಪಾತ್ರೆ, ಗಿಡಗಳಿಗೆ ನೀರು ಹಾಕುವ ಬಾನೆ. सेकाय सेचनाय पात्रम्। 2. ಸಿಂಪಿಸುವ ಪಾತ್ರೆ, ಚಿಮುಕಿಸುವ ಪಾತ್ರೆ.

**सेकिम ಸೇಕಿಮ** (ವಿಂ) 1. ಜಲ ಸೇಚನೆಯಿಂದ ಉಂಟಾದ, ನೀರು ಹಾಕುವುದರಿಂದ ಉಂಟಾದ. सेकेन जलसेचनेन निर्वृत्तम् — सेक "इमप्" (वा० ४-४-२०)। (ನಂ) 2. ಮೂಲಂಗಿ.

**सेक्तृ ಸೇಕ್ತೃ** (ಪುಂ) 1. ಪತಿ, ಗಂಡ. सिञ्चति रेतः—षिच (क्षरणे) "तृच्" (३-१-१३३)। (ವಿಂ) 2. ಸೇಚನೆ ಮಾಡುವವನು, ನೀರು ಸುರಿಯುವವನು. 3. ನೀರು ಚಿಮುಕಿಸುವವನು, ಸಿಂಪಿಸುವವನು. 4. ನೀರು ಎರಚುವವನು. षिच (क्षरणे) "तृच्" (३-१-१३३)।

**सेक्त्र ಸೇಕ್ತ್ರ** (ನಂ) 1. ಸೇಚನ ಪಾತ್ರೆ, ನೀರೆರೆಯುವ ಪಾತ್ರೆ, ಗಿಡಗಳಿಗೆ ನೀರು ಹಾಕುವ ಪಾತ್ರೆ. सिञ्चत्यनेन—षिच (क्षरणे) करणे "ष्ट्रन्" (३-२-१८२)। 2. ಸಿಂಪಿಸುವ ಪಾತ್ರೆ, ಚಿಮುಕಿಸುವ ಪಾತ್ರೆ.

**सेचक ಸೇಚಕ** (ಪುಂ) 1. ಮೇಘ, ಮೋಡ. षिच (क्षरणे) "ण्वुल्" (३-१-१३३)। 2. ಪತಿ, ಗಂಡ. (ವಿಂ) 3. ನೀರು ಎರೆಯುವವನು, ಗಿಡಗಳಿಗೆ ನೀರು ಹಾಕುವವನು. 4. ನೀರು ಸಿಂಪಿಸುವವನು, ನೀರು ಚಿಮುಕಿಸುವವನು. 5. ನೀರನ್ನು ಎರಚುವವನು. "सेचकः स्यात् पुमान् मेघे वाच्यलिङ्गस्तु सेक्तरि" मेदि०।

**सेचन ಸೇಚನ** (ನಂ) 1. ನೀರನ್ನು ಎರೆಯುವುದು, ಗಿಡಗಳಿಗೆ ನೀರನ್ನು ಹಾಕುವುದು. षिच (क्षरणे) "ल्युट्" (३-३-११५)। "वृक्षसेचने द्वे धारयसि मे" शाकु० १। 2. ಸಿಂಪಿಸುವುದು, ಚಿಮುಕಿಸುವುದು, 3. ರಕ್ಷಣೆ. 4. ವೀರ್ಯಸೇಚನೆ. 5. ಸುರಿಯುವುದು. 6. ಹಡಗಿನಿಂದ ನೀರನ್ನು ಹೊರಗೆ ಚೆಲ್ಲುವ ಪಾತ್ರೆ. "सेचनं रक्षणे सेके नौकायाः सेकभाजने" मेदि०।

**सेचनीय ಸೇಚನೀಯ** (ವಿಂ) 1. ಸೇಚನೆಮಾಡಲ್ಪಡತಕ್ಕ. 2. ಸೇಚನೆ ಮಾಡಬೇಕಾದ. 3. ಸೇಚನೆ ಮಾಡಬಹುದಾದ. षिच (क्षरणे) "अनीयर्" (३-१-९६)। "तव्यः"। सेक्तव्यम् ಸೇಕ್ತವ್ಯಮ್.

**सेतु ಸೇತು** (ಪುಂ) 1. ಸಮುದ್ರ, ನದಿ ಮೊದಲಾದುವನ್ನು ದಾಟಲು ನಿರ್ಮಿಸುವ ಸೇತುವೆ. सिनोति—षिञ् (बन्धने) "तुन्" (उ० १-६९)। "मैनाकमहसा दीप्तं सेतुसीमन्तितोदकम्। दमितं रघुवीरेण ददर्शाब्धिं स दक्षिणम्" याद० २२-१७७। 2. ನದಿಯ ನೀರನ್ನು ತಡೆದಿಡಲು ಹಾಕುವ ಕಟ್ಟೆ, ಅಣೆಕಟ್ಟು. "समीयतुर्दूरविसर्पिघोषौ भिन्नैकसेतू पयसामिवौघौ" कुमा० ७-५२। "ललितं निगते नीरे सेतुमेषा चिकीर्षति" चन्द्रा०। 3. ವರುಣವೃಕ್ಷ, ವಲಸೆಗಿಡ.

**सेतुक ಸೇತುಕ** (ಪುಂ) ವಲಸೆಗಿಡ, ವರುಣವೃಕ್ಷ. सेतु स्वार्थे "कन्"।

**सेतुबन्ध ಸೇತುಬಂಧ** (ಪುಂ) ಸೇತುವೆಯನ್ನು ನಿರ್ಮಿಸುವುದು. सेतोर्बन्धः। ಶ್ರೀರಾಮನು ಸೈನ್ಯದೊಡನೆ ಲಂಕೆಗೆ ಪ್ರವೇಶಿಸಲು ಸಮುದ್ರದಲ್ಲಿ ನಿರ್ಮಿತವಾದ ಸೇತುವೆಯ ಬಂಧನ.

**सेतुवृक्ष ಸೇತುವೃಕ್ಷ** (ಪುಂ) ವರುಣವೃಕ್ಷ, ವಲಸೆಗಿಡ. सेतुनामा वृक्षः।

**सेत्र ಸೇತ್ರ** (ನಂ) ನಿಗಡ, ಆನೆಯನ್ನು ಕಟ್ಟಿಹಾಕುವ ಸರಪಣಿ. षिञ् (बन्धने) "ष्ट्रन्" (३-२-१८२)।

**सेदिवस् ಸೇದಿವಸ್** (ವಿಂ) ಕುಳಿತುಕೊಂಡಿರುವವನು. षद्लृ (विशरणादौ) "क्वसुः" (३-२-१०८)।

**सेदु ಸೇದು** (ಪುಂ) ಕರಬೂಜದ ಹಣ್ಣು. "लतापनसनाटाम्रौ सेदुरूर्व्वासितस्तु यः" त्रिकाण्ड०।

**सेन ಸೇನ** (ವಿಂ) ಒಬ್ಬ ಯಜಮಾನನನ್ನು ಹೊಂದಿರುವವನು, ಪ್ರಭುವಿನೊಡನೆ ಇರುವವನು. इनेन स्वामिना सह वर्तते।

**सेना ಸೇನಾ** (ಸ್ತ್ರೀಂ) 1. ದಂಡು, ಪಡೆ, ದಳ. इनेन प्रभुणा सह वर्तते। सिनोति — षिञ् (बन्धने) "नः" (उ० ३-१०)। "सेना मुरारेः पथ एव सा पुनर्महामहीध्रान् परितोऽध्यरोहयत्" माघ० १२-४६। 2. ರಾಜನ ಚತುರಂಗಬಲ. "सेना परिच्छदस्तस्य द्वयमेवार्थ-

साधनम्। शास्त्रेष्वव्याहता बुद्धिर्मौर्वी धनुषि चातता" रघु० १-१९।

**सेनाङ्ग ಸೇನಾಂಗ** (न०) ಗಜ ಅಶ್ವ ರಥ ಪದಾತಿ (ಕಾಲಾಳು) ರೂಪವಾದ ಚತುರಂಗಬಲದ ಸಮೂಹ. सेनाया अङ्गम्। "हस्त्यश्वरथपादातं सेनाङ्गं स्याच्चतुष्टयम्" अम०।

**सेनानिवेश ಸೇನಾನಿವೇಶ** (पुं०) ಸೇನೆಯ ಬಿಡಾರ, ಸೇನೆಯ ವಾಸಸ್ಥಾನ, ಬರುವ ಸೇನೆಯು ಇಳಿದುಕೊಳ್ಳುವ ಸ್ಥಳ. सेनाया निवेशः। "रामापरित्राणविहस्तयोधं सेनानिवेशं तुमुलं चकार" रघु० ५-४९।

**सेनानी ಸೇನಾನೀ** (पुं०) 1. ಸೇನೆಯ ಯಜಮಾನ, ಸೇನಾಧಿಪತಿ. सेनां नयति—णीञ् (प्रापणे) "क्विप्" (३-२-६१)। "सुनन्दनं नन्दनमात्मनो नः सेनान्यमेतं स्वयमादिश त्वम्" कुमा० १२-४९। 2. ಕಾರ್ತಿಕೇಯ, ಷಣ್ಮುಖ. "सेनानीरग्निभूर्गुहः" अम०। "सेनानीः सैन्यपे गुहे" हेम०। "अथैनमद्रेस्तनया शुशोच सेनान्यमालीढमिवासुरास्त्रैः" रघु० २-३७।

**सेनापति ಸೇನಾಪತಿ** (पुं०) 1. ಸೇನೆಯ ಯಜಮಾನ, ಸೇನೆಯ ಮುಂದಾಳು. सेनायाः पतिः। "सेनापतिं नन्दनमन्वकद्विषो युवे पुरस्कृत्य बलस्य शात्रवः" कुमा० १५-१। 2. ಕಾರ್ತಿಕೇಯ, ಷಣ್ಮುಖ.

**सेनामुख ಸೇನಾಮುಖ** (न०) ಸೇನೆಯ ಒಂದು ಗುಂಪು, ಪತ್ತಿಗೆ ಮೂರರಷ್ಟು ಸೇನೆಯ ಸಮೂಹ. **ಪತ್ತಿ:** ಒಂದು ಆನೆ ಒಂದು ರಥ ಮೂರು ಕುದುರೆಗಳು ಮತ್ತು ಐದು ಕಾಲಾಳುಗಳು ಸೇರಿದ ಸೇನೆಯ ಗುಂಪು. सेनाया मुखम् उपक्रमः। "एकेभैकरथत्र्यश्वा पत्तिः पञ्चपदातिका। पत्त्यङ्गैस्त्रिगुणैः सर्वैः क्रमादाख्या यथोत्तरम्। सेनामुखं गुल्मगणौ वाहिनी पृतना चमूः" अम०।

**सेनारक्ष ಸೇನಾರಕ್ಷ** (पुं०) ಸೇನೆಯನ್ನು ಕಾದಿರುವವನು, ದಂಡನ್ನು ಕಾದು ರಕ್ಷಿಸುವವನು. सेनां रक्षति—रक्ष (पालने) "अण्" (३-२-१)। "सेनारक्षास्तु सैनिकाः" अम०।

**सेमन्ती ಸೇಮಂತೀ** (स्त्री०) ಸೇವಂತಿಗೆ ಹೂವು. "चम्पकानां पुष्पशतात् अशोकं पुष्पमुत्तमम्। अशोकानां सहस्राद्धि सेमन्तीपुष्पमुत्तमम्"।

**सेराह ಸೇರಾಹ** (पुं०) ಅಮೃತದಂತೆ ಶುಭ್ರವಾಗಿರುವ ಅಶ್ವ, ಹಾಲಿನಂತೆ ಬೆಳ್ಳಗಿರುವ ಕುದುರೆ.

**सेरु ಸೇರು** (वि०) ಭದ್ರವಾಗಿ ಕಟ್ಟುವವನು, ಬಿಗಿಯಾಗಿ ಕಟ್ಟುಹಾಕುವವನು. षिञ् (बन्धने) "रुः" (३-२-१५९)।

**सेर्ष्य ಸೇರ್ಷ್ಯ** (वि०) 1. ಹೊಟ್ಟೆಕಿಚ್ಚುಪಡುವವನು, ಇತರರ ಏಳಿಗೆಯನ್ನು ಸಹಿಸದವನು. 2. ಅಸೂಯೆಯಿಂದ ಕೂಡಿದವನು. ईर्ष्यया सहितः।

**सेलु ಸೇಲು** (पुं०) ಶ್ಲೇಷ್ಮಾತಕವೃಕ್ಷ, ಚಳ್ಳೆಮರ.

**सेव ಸೇವ** (न०) 1. ಸೇಬಿನ ಹಣ್ಣು. 2. ಬದರ ಫಲ, ಬೋರೆಹಣ್ಣು.

**सेवक ಸೇವಕ** (पुं०) 1. ಚಾರಕ, ಭೃತ್ಯ, ಆಳು. षेवृ (सेवायाम्) "ण्वुल्" (३-१-१३३)। "सेवकः स्वामिनं द्वेष्टि कृपणं परुषाक्षरम्" पञ्चतं० १-५१। 2. ಬಿದಿರಿನ ತಟ್ಟೆ, ಮಕ್ಕರಿ, ಸಿಬ್ಬಲು. "सेवकोऽनुगे प्रसेवे" हेम०।

**सेवन ಸೇವನ** (न०) 1. ಸೇವೆ, ಶುಶ್ರೂಷೆ, ಉಪಚಾರ. षेवृ (सेवायाम्) "ल्युट्" (३-३-११५)। "पात्रीकृतात्मा गुरुसेवनेन स्पष्टाकृतिः पत्त्ररथेन्द्रकेतोः" रघु० १८-३०। 2. ಪೂಜೆ, ಆರಾಧನೆ, ಉಪಾಸನೆ. "कपिलो नारदो दत्तो योगेशाः सनकादयः। तमन्वीयुर्भगवता ये च तत्सेवनोत्सुकाः" भाग० ४-१९-६। 3. ಉಪಭೋಗ, ಅನುಭವಿಸುವುದು, ಇಂದ್ರಿಯ ಸೌಖ್ಯ ಹೊಂದುವುದು. "यत्करोत्येकरात्रेण वृषलीसेवनाद्द्विजः। तद्भैक्ष भुग्जपन्नित्यं त्रिभिर्वर्षैर्व्यपोहति" मनु० ११-१७८। 4. ನೀಚರ ಆಶ್ರಯಪಡೆಯುವುದು, ನೀಚರನ್ನು ಸೇರುವುದು. ನೀಚರ ಉಪಚಾರಮಾಡುವುದು. "सत्यानृतं वाणिज्यं श्ववृत्तिर्नीचसेवनम्। वर्जयेत्तां सदा विप्रो राजन्यश्च जुगुप्सिताम्" भाग० ७-११-२०। 5. ಸೂಜಿಯಿಂದ ಬಟ್ಟೆ ಮೊದಲಾದುವನ್ನು ಹೊಲಿಯುವುದು. षिवु (तन्तुसन्ताने) "ल्युट्" (३-३-११५)। "सेवनं सीवनोपास्त्योः" मेदि०।

**सेवनी ಸೇವನೀ** (स्त्री०) 1. ಸೂಜಿ, ಬಟ್ಟೆ ಮೊದಲಾದುವನ್ನು ಹೊಲಿಯುವ ಸಾಧನ. सीव्यत्यनया—षिवु (तन्तुसन्ताने) "ल्युट्" (३-३-११७)। "ङीप्" (४-१-१५)। 2. ಶರೀರದೊಳಗಿನ ಅವಯವಗಳ ಸಂಯೋಗ. ಅವಯವಗಳು ಸೇರುವ ಸಂದು, ಅವಯವಗಳ ಸೇರುವೆ. "सेवन्यः सप्त तासां तु भवेयुः पञ्च मस्तके। एकः शेफसि जिह्वायामेकः" भावप्र०। 3. ಬಟ್ಟೆಯ ಎರಡು ತುಂಡುಗಳ ಅಂಚುಗಳನ್ನೂ ಸೇರಿಸಿ ಹೊಲಿಯುವ ರೇಖೆ (ಸೇರುವೆ).

**सेवनीय ಸೇವನೀಯ** (वि०) 1. ಸೇವಿಸಲ್ಪಡುವ, ಉಪಚರಿಸಲ್ಪಡುವ. 2. ಸೇವಿಸಬೇಕಾದ, ಶುಶ್ರೂಷೆಮಾಡಬೇಕಾದ. 3. ಶುಶ್ರೂಷೆಮಾಡಬಹುದಾದ. षेवृ (सेवायाम्) कर्मादौ "अनीयर्" (३-१-९६)। 4. ಉಪಾಸಿಸಲ್ಪಡುವ, ಪೂಜಿಸಲ್ಪಡುವ, ಆರಾಧಿಸಲ್ಪಡುವ. 5. ಪೂಜಿಸಬೇಕಾದ, ಆರಾಧಿಸಬೇಕಾದ. 6. ಪೂಜಿಸಲು ಅರ್ಹನಾದ, ಆರಾಧಿಸಬಹುದಾದ. 7. ಉಪಯೋಗಿಸಲ್ಪಡುವ. 8. ಉಪಯೋಗಿಸಬೇಕಾದ. 9. ಉಪಯೋಗಿಸಬಹುದಾದ. 10. ಆಶ್ರಯಿಸಲ್ಪಡುವ. 11. ಆಶ್ರಯಿಸಬೇಕಾದ. 12. ಆಶ್ರಯಿಸಬಹುದಾದ. 13. ಹೊಲಿಯಲ್ಪಡುವ. 14. ಹೊಲಿಯಬೇಕಾದ. 15. ಹೊಲಿಯಬಹುದಾದ. 16. ಹೊಲಿಯಲು ಸಾಧ್ಯವಾದ. षिवु (तन्तुसन्ताने) कर्मादौ "अनीयर्" (३-१-९६)। तव्य:। सेवितव्यम् ಸೇವಿತವ್ಯ ನ್. "सेवितव्यो महावृक्षः फलच्छायासमन्वितः। यदि दैवात्फलं नास्ति च्छाया केन निवार्यते" हितो० ३-१०।

**सेवमान ಸೇವಮಾನ** (वि०) 1. ಸೇವೆಮಾಡುತ್ತಿರುವ, ಶುಶ್ರೂಷೆ ಮಾಡುತ್ತಿರುವ, ಉಪಚರಿಸುತ್ತಿರುವ. षेवृ (सेवायाम्) "शानच्" (३-२-१२४)। "प्रायो भृत्यास्त्यजन्ति प्रचलितविभवं स्वामिनं सेवमानाः" मुद्रा० ४-२२। 2. ಪೂಜಿಸುತ್ತಿರುವ, ಆರಾಧಿಸುತ್ತಿರುವ. 3. ಉಪಯೋಗಿಸುತ್ತಿರುವ. 4. ಮತ್ತೊಬ್ಬನ ಆಶ್ರಯ ಪಡೆಯುತ್ತಿರುವ.

**सेवा ಸೇವಾ** (स्त्री०) 1. ಶುಶ್ರೂಷೆ, ಉಪಚಾರ, ಸೇವೆ. षेवृ (सेवायाम्) "अः" (३-३-१०३)। "अहिंसा गुरुसेवा च निःश्रेयसकरं परम्" मनु० १२-८३। 2. ನೀಚರ ಸೇವೆ, ಅಧಮರಿಗೆ ಮಾಡುವ ಉಪಚಾರ, ಶ್ವವೃತ್ತಿ. "सेवां लाघवकारिणीम् कृतधियः स्थाने श्ववृत्तिं विदुः" मुद्रा० ३-१४। 3. ಪ್ರಶಂಸೆ, ಮುಖಸ್ತುತಿ, ಹೊಗಳಿಕೆ. "अलं सेवया, मध्यस्थतां परिगृह्य भण" माल० ३।

**सेवि ಸೇವಿ** (न०) ಎಲಚಿಹಣ್ಣು, ಬೋರೆಹಣ್ಣು.

**सेविका ಸೇವಿಕಾ** (स्त्री०) ದಾಸಿ, ಪರಿಚಾರಿಕೆ.

**सेवित ಸೇವಿತ** (वि०) 1. ಪೂಜಿಸಲ್ಪಟ್ಟ, ಆರಾಧಿಸಲ್ಪಟ್ಟ. षेवृ (सेवायाम्) "क्तः" (३-२-१०२)। 2. ಉಪಯೋಗಿಸಲ್ಪಟ್ಟ, ಉಪಭೋಗಿಸಲ್ಪಟ್ಟ. "अस्य नूनममृताधिकैः फलैः सेवितैरनुदिनं दिवौकसाम्" याद० १७-३७। 3. ಆಶ್ರಯಿಸಲ್ಪಟ್ಟ. 4. ಶುಶ್ರೂಷೆ ಮಾಡಲ್ಪಟ್ಟ, ಉಪಚರಿಸಲ್ಪಟ್ಟ.

**सेवितृ ಸೇವಿತೃ** (पुं०) 1. ಸೇವಿಸುವವನು, ಶುಶ್ರೂಷೆ ಮಾಡುವವನು. 2. ಆಶ್ರಯಿಸುವವನು. 3. ಪೂಜಿಸುವವನು. 4. ಉಪಯೋಗಿಸುವವನು. षेवृ (सेवायाम्) "तृच्" (३-१-१३३)। स्त्रियां "ङीप्" (४-१-५)।

**सेवित्री ಸೇವಿತ್ರೀ.**

**सेविन् ಸೇವಿನ್** (वि०) 1. ಸೇವಕ, ಆಳು. 2. ಪೂಜಿಸುವವನು. 3. ಉಪಯೋಗಿಸುವವನು. सेवते — षेवृ (सेवायाम्) "णिनिः" (३-१-१३४)।

**सेव्य ಸೇವ್ಯ** (वि०) 1. ಸೇವೆಗೆ ಅರ್ಹನಾದ. 2. ಪೂಜೆಗೆ ಅರ್ಹನಾದ, ಆರಾಧನೆಗೆ ಯೋಗ್ಯನಾದ. षेवृ (सेवायाम्) अर्हे "ण्यत्" (३-३-१६९)। "अहं तं सेव्यमन्येषां करिष्यामीश्वरं क्षणात्" कथास०। 3. ಆಶ್ರಯಿಸಲು ಅರ್ಹನಾದ. 4. ಉಪಯೋಗಿಸಲು ಅರ್ಹವಾದ. (पुं०) 5. ಅಶ್ವತ್ಥವೃಕ್ಷ, ಅರಳೀ ಮರ. 6. ನೀರುಹಲಸಿನ ಗಿಡ. (न०) 7. ಲಾಮಂಚದ ಬೇರು. "सेव्यं क्लीबमुशीरे स्यात्सेवार्हे पुनरन्यवत्" मेदि०। "अभयं नलदं सेव्यममृणालं जलाशयम्" अम०। 8. ಲಾಮಂಚ. –व्या –व्या. 9. ಬದನಿಕೆ ಗಿಡ.

**सेव्यमान ಸೇವ್ಯಮಾನ** (वि०) 1. ಸೇವಿಸಲ್ಪಡುತ್ತಿರುವ, ಉಪಚರಿಸಲ್ಪಡುತ್ತಿರುವ. षेवृ (सेवायाम्) कर्म० "शानच्" (३-२-१२४)। "सेव्यमानौ सुखस्पर्शैः सालनिर्यासगन्धिभिः" रघु० १-३८। 2. ಆಶ್ರಯಿಸಲ್ಪಡುತ್ತಿರುವ. 3. ಪೂಜಿಸಲ್ಪಡುತ್ತಿರುವ. 4. ಉಪಯೋಗಿಸಲ್ಪಡುತ್ತಿರುವ.

**सैंह ಸೈಂಹ** (वि०) ಸಿಂಹಸಂಬಂಧವಾದ. सिंहस्येदम् — सिंह "अण्" (४-३-१२०)। स्त्रियां "ङीप्" (४-१-१५)।

**सैंही ಸೈಂಹೀ.** "सटाच्छटाभिन्नघनेन बिभ्रता नृसिंह सैंहीमतनुं तनुं त्वया" माघ० १-४७।

**सैंहिक ಸೈಂಹಿಕ** (पुं०) ಸಿಂಹಿಕೆಯೆಂಬ ರಾಕ್ಷಸಿಯಲ್ಲಿ ಹುಟ್ಟಿದ ರಾಹು. सिंहिकायां भवः "अण्" (४-३-५३)।

**सैंहिकेय ಸೈಂಹಿಕೇಯ** (पुं०) ರಾಹು, ಸಿಂಹಿಕೆಯ ಮಗ. सिंहिकाया अपत्यम् "ढक्" (४-१-१२०)। "पुरः क्लिश्नाति सोमं हि सैंहिकेयोऽसुरद्रुहाम्" माघ० २-३५।

**सैकत ಸೈಕತ** (न०) 1. ಮರಳಿನಿಂದ ಕೂಡಿದ ದಡ, ಮರಳು ರಾಶಿಯಿಂದ ಕೂಡಿದ ತೀರಪ್ರದೇಶ. सिकताः सन्त्यत्र — सिकत "अण्" (५-२-१०४)। "सैकतं सिकतामयम्" अम०। "मन्दाकिनीसैकतवेदिकाभिः सा कन्दुकैः कृत्रिमपुत्रिकैश्च" कुमा० १-२९। (वि०)

2. ಮರಳಿನಿಂದ ತುಂಬಿರುವ, ಮರಳಿನಿಂದ ನಿರ್ಮಿತವಾದ. "भित्त्वा भित्त्वा प्रसरति बलात् कोऽपि चेतोविकारः तोयस्येवाप्रतिहतरयः सैकतं सेतुमोघः" उ० रा० ३-३६।

**सैकतिक ಸೈಕತಿಕ** (पुं०) 1. ಸಂನ್ಯಾಸಿ, ಭಿಕ್ಷು. 2. ತಪಸ್ವಿ. (न०) 3. ಮಂಗಲಸೂತ್ರ, ಕಂಕಣ. (वि०) 4. ಜೀವಿತದಲ್ಲಿ ಸಂಶಯವುಳ್ಳವನು, ಜೀವಮಾನದಲ್ಲಿ ಧೈರ್ಯ ಕಳೆದುಕೊಂಡವನು.

**सैकतेष्ट ಸೈಕತೇಷ್ಟ** (न०) ಹಸಿಶುಂಠಿ. सैकतं स्थानमिष्टमस्य।

**सैतवाहिनी ಸೈತವಾಹಿನೀ** (स्त्री०) ಬಾಹುದಾನದಿ. "बाहुदा सैतवाहिनी" अम०। सितवाहनस्यार्जुनस्येयम् "अण्" (४-३-१२०)।

**सैद्धान्तिक ಸೈದ್ಧಾನ್ತಿಕ** (वि०) 1. ಸಿದ್ಧಾನ್ತವನ್ನು ತಿಳಿದವನು, ನಿಜಾಂಶವನ್ನು ತಿಳಿದವನು, ತತ್ತ್ವವನ್ನು ತಿಳಿದವನು. सिद्धान्तं वेत्ति—सिद्धान्त "ठक्" (४-२-६०)। 2. ಜ್ಯೋತಿಷಸಿದ್ಧಾನ್ತವನ್ನು ತಿಳಿದವನು, ಜ್ಯೋತಿಷದ ಸಿದ್ಧಾನ್ತ ಗ್ರಂಥವನ್ನು ಅಧ್ಯಯನ ಮಾಡಿದವನು.

**सैनापत्य ಸೈನಾಪತ್ಯ** (न०) 1. ಸೇನಾಪತಿಯಾಗಿರುವಿಕೆ. 2. ಸೇನಾಪತಿಯ ಕಾರ್ಯ. सेनापतेः भावः कर्म वा—सेनापति "यक्" (५-१-१२८)। "सैनापत्येऽभिषिच्य भवन्तमिच्छामि समरभुवमवतारयितुम्" वेणी० ३। (वि०) 3. ಸೇನಾಪತಿ ಸಂಬಂಧವಾದ. सेनापति "ण्यः" (५-१-८५)।

**सैनिक ಸೈನಿಕ** (पुं०) 1. ಗಜ ಅಶ್ವ ರಥ ಮತ್ತು ಪದಾತಿ (ಕಾಲಾಳು) ರೂಪವಾದ ಸೇನೆಯನ್ನು ಸೇರಿರುವವನು, ಭಟ. सेनां समवैति—सेना "ठक्" (४-४-१)। "क्रतोरुवेगं युगपद्व्यजिगीषन्त सैनिकाः" माघ० १९-३२। 2. ಸೇನೆಯ ರಕ್ಷಕ, ಸೇನೆಯನ್ನು ಕಾದಿರುವವನು. "सेनारक्षास्तु सैनिकाः" अम०। (वि०) 3. ಸೇನೆಯ ಸಂಬಂಧವಾದ. "एवं तं निहतं सङ्ख्ये ददृशे सैनिको जनः" भा० द्रोण०।

**सैन्धव ಸೈಂಧವ** (पुं०) 1. ಜಯದ್ರಥ, ಸಿಂಧುದೇಶದ ರಾಜನಾದ ವೃದ್ಧಕ್ಷತ್ರನ ಮಗ, ದುರ್ಯೋಧನನ ತಂಗಿಯಾದ ದುಶ್ಶಳೆಯ ಗಂಡ. [ಇವನು ಪಾಂಡವರು ವಾಸ ಮಾಡುತ್ತಿದ್ದ ಕಾಮ್ಯಕ ವನಕ್ಕೆ ಹೋಗಿ ಅವರು ಬೇಟೆಗೆ ಹೋಗಿದ್ದ ಸಮಯದಲ್ಲಿ ದ್ರೌಪದಿಯನ್ನು ಬಲಾತ್ಕಾರದಿಂದ ಎತ್ತಿಕೊಂಡು ಹೋಗುತ್ತಿದ್ದಾಗ ಈ ವಿಷಯ ತಿಳಿದ ಭೀಮಸೇನನು ಅವನನ್ನು ನಿಗ್ರಹಿಸಿ ದ್ರೌಪದಿಯನ್ನು ಬಿಡಿಸಿಕೊಂಡು ಬಂದನು. ಯುಧಿಷ್ಠಿರನ ಮಾತಿನಂತೆ ಸೈಂಧವನನ್ನು ಜೀವಸಹಿತ ಕಳುಹಿಸಿದನು.] 2. ಅಶ್ವ, ಕುದುರೆ. सिन्धुरभिजनोऽस्य सिन्धु "अण्" (४-३-९३)। "स एकदा महाराज विचरन् मृगयां वने। वृतः कतिपयामात्यैरश्वमारुह्य सैन्धवम्" भाग० ९-१। (पुंन०) 3. ಸಿಂಧುದೇಶದ ಲವಣ. सिन्धुषु भवः "अण्" (४-२-१३३)। "सैन्धवोऽस्त्री शीतशिवं माणिमन्थं च सिन्धुजे" अम०। (वि०) 4. ಸಿಂಧುದೇಶದಲ್ಲಿ ಹುಟ್ಟಿದ. 5. ಸಿಂಧು ಸಂಬಂಧವಾದ. स्त्रियां "ङीप्" (४-१-१५)। सैन्धवी ಸೈಂಧವೀ.

**सैन्य ಸೈನ್ಯ** (पुं०) 1. ಸೇನೆಯನ್ನು ಸೇರಿರುವ ಭಟ. सेनां समवैति—सेना वा "ण्यः" (४-४-४५)। पक्षे "ठक्" (४-४-१)। सैनिकः ಸೈನಿಕಃ. ಗಜ ಅಶ್ವ ರಥ ಪದಾತಿಗಳಿಂದ ಕೂಡಿದ ಸೇನೆಯನ್ನು ಸೇರಿದ ಭಟನು सैन्यः ಮತ್ತು सैनिकः ಎನ್ನಲ್ಪಡುವನು. "सैन्याः श्रियामनुपभोगनिरर्थकत्वदोषप्रवादममृजन्नगनिम्नगानाम्" माघ० ५-२८। (न०) 2. ಸೇನೆ, ದಳ, ದಂಡು. सेनैव—सेना "ष्यञ्" (वा० ५-१-१२४)। "सैन्यैरुपैतीति सुरद्विषां पुरोऽभूत् किंवदन्ती हृदयप्रकम्पिनी" कुमा० १५-१।

**सैन्यपृष्ठ ಸೈನ್ಯಪೃಷ್ಠ** (न०) ವ್ಯೂಹಕ್ಕೆ ಹಿಂದಿರುವ ಸೇನೆ, ಸೇನೆಯ ಹಿಂಭಾಗ. सैन्यस्य पृष्ठं पश्चाद्भागः।

**सैरन्ध्री ಸೈರಂಧ್ರೀ** (स्त्री०) 1. ಅನ್ಯರ ಮನೆಯಲ್ಲಿ ಹೊಲಿಗೆ ಕಸೂತಿ ಮುಂತಾದ ಕರಕುಶಲಕಾರ್ಯವನ್ನು ಮಾಡುತ್ತ ಸ್ವತಂತ್ರಳಾಗಿರುವ ಹೆಂಗಸು. स्वैरं स्वाच्छन्द्यं धरति—धृञ् (धारणे) "कः" (वा० ३-२-५)। पृषो०। गौरा० "ङीष्" (४-१-४१)। "सैरन्ध्री परवेश्मस्था स्ववशा शिल्पकारिका" अम०। 2. ದ್ರೌಪದಿ. 3. ಒಬ್ಬ ಸಂಕರ ಜಾತಿಯ ಹೆಂಗಸು. 4. ರಾಜನ ಅಂತಃಪುರದಲ್ಲಿರುವ ಒಬ್ಬ ಸೇವಕಿ. "सैरन्ध्री परवेश्मस्थशिल्पकृत्स्ववशस्त्रियाम्। वर्णसङ्करसम्भूतस्त्रीमहल्लिकयोरपि" हेम०।

**सैरिक ಸೈರಿಕ** (पुं०) 1. ನೇಗಿಲಿನಿಂದ ನೆಲವನ್ನು ತೋಡುವವನು. सीरेण खनति—सीर "ठक्" (४-४-२)। 2. ನೇಗಿಲನ್ನು ಹೊರುವ ಎತ್ತು. सीरं वहति—सीर "ठक्" (४-४-८१)। (वि०) 3. ನೇಗಿಲ ಸಂಬಂಧವಾದ. सीरस्येदम्—सीर "ठक्" (४-३-१२४)। "खनति तेन तद्वोढास्येदं हालिकसैरिकौ" अम०।

**सैरिन्ध्री ಸೈರಿಂಧ್ರೀ** (स्त्री०) "सैरन्ध्री" ಪದದ ಅರ್ಥ. स्वैरं स्वातन्त्र्यं धरति—धृ (धारणे) "कः" (वा० ३-२-५)। पृषो०।

**सैरिभ ಸೈರಿಭ** (पुं०) 1. ಮಹಿಷ, ಎಮ್ಮೆ, ಕೋಣ. सीरिणां कर्षकाणामिभ इव। शक०। सीरिभ "अण्" स्वार्थे (५-४-३८)। "लुलायो महिषो वाहद्विषत्कासरसैरिभाः" अम०। 2. ಸ್ವರ್ಗ, ದೇವಲೋಕ. "मन्दरः सैरिभः शक्रभवनं खं दिवं नभः" त्रिकाण्ड०।

**सैरी(रे)यक ಸೈರೀ(ರೇ)ಯಕ** (पुं०) ಮುಳ್ಳು ಗೋರಂಟಿ.

**सैरेय ಸೈರೇಯ** (पुं०) ಮುಳ್ಳು ಗೋರಂಟಿ. सेर "ढक्" (४-२-९७)।

**सोढ ಸೋಢ** (न०) 1. ಸಹನೆ, ಸೈರಣೆ. (वि०) 2. ಸಹಿಸಲ್ಪಟ್ಟ, ಸೈರಿಸಲ್ಪಟ್ಟ. षह (मर्षणे) "क्तः" (३-२-१०२)। ओत् (६-३-११२)। "आहतं कुचतटेन तरुण्याः साधु सोढममुनेति पपात" माघ० १०-७४।

**सोढवत् ಸೋಢವತ್** (वि०) ಸಹಿಸಿಕೊಂಡಿರುವವನು. षह (मर्षणे) "क्तवतु:" (३-२-१०२)। "सोढवान्नो दशामन्त्यां ज्यायानेव गुणप्रियः। सुलभो हि द्विषां भङ्गो दुर्लभा सत्स्ववाच्यता" किरा० ११-५३।

**सोढव्य ಸೋಢವ್ಯ** (वि०) 1. ಸಹಿಸಲ್ಪಡುವ. 2. ಸಹಿಸಬೇಕಾದ. 3. ಸಹಿಸಿಕೊಳ್ಳಲು ಸಾಧ್ಯವಾದ. सह (मर्षणे) "तव्यः" (३-१-९६)। तस्य ओत् (६-३-११२)। "अपराधः स भर्त्रा सोढव्यः स्वप्रजाकृतः" भाग० १०-१६-५१।

**सोढृ ಸೋಢೃ** (वि०) ಸಹಿಸಿಕೊಳ್ಳುವವನು, ಸೈರಣೆಯುಳ್ಳವನು. षह (मर्षणे) "तृच्" (३-१-१३३)।

**सोत्कण्ठ ಸೋತ್ಕಂಠ** (वि०) ಉತ್ಸಾಹದಿಂದ ಕೂಡಿರುವವನು. उत्कण्ठया सह वर्तते। "सोत्कण्ठैरमरगणैरनुप्रकीर्णान्निर्याय ज्वलितरुचः पुरान्मघोनः" किरा० ७-२।

**सोत्प्रास ಸೋತ್ಪ್ರಾಸ** (पुं०) 1. ಗಟ್ಟಿಯಾಗಿ ನಗುತ್ತಾ ಮಾಡುವ ಹಾಸ್ಯ. उत्प्रासेन सह वर्तते। (न०) 2. ಉಪಹಾಸ್ಯದೊಡನೆ ಆಡುವ ಮಾತು, ವ್ಯಂಗ್ಯವಾಗಿ ಆಡುವ ಮಾತು, ಮುಗುಳುನಗೆಯೊಡನೆ ಆಡುವ ಮಾತು. "सोल्लुण्ठनं तु सोत्प्रासम्" अम०।

**सोत्साह ಸೋತ್ಸಾಹ** (वि०) ಉತ್ಸಾಹದೊಡನೆ ಕೂಡಿದ. उत्साहेन सह वर्तते।

**सोदर ಸೋದರ** (पुं०) ಒಡಹುಟ್ಟಿದವನು, ಒಬ್ಬ ತಾಯಿಯ ಗರ್ಭದಲ್ಲಿ ಜನಿಸಿದವನು. सह समानमुदरं यस्य। सहस्य वा सभावः (६-३-८२)। पक्षे सहोदरः। "अपन्थानं तु गच्छन्तं सोदरोऽपि विमुञ्चति"।

**सोदरा ಸೋದರಾ** (स्त्री०) ಒಡಹುಟ್ಟಿದವಳು, ಅಕ್ಕ ಅಥವಾ ತಂಗಿ. सह समानमुदरं यस्याः—सहस्य वा सभावः (६-३-८२)। पक्षे सहोदरा।

**सोदर्य ಸೋದರ್ಯ** (पुं०) ಒಡಹುಟ್ಟಿದವನು, ಒಬ್ಬ ತಾಯಿಯ ಗರ್ಭದಲ್ಲಿ ಜನಿಸಿದವನು. सोदर "यः" (४-४-१०९)। "स हत्वा लवणं वीरस्तदा मेने महौजसः। भ्रातुः सोदर्यमात्मानमिन्द्रजिद्वधशोभिनः" रघु० १५-२६।

**सोपद्रव ಸೋಪದ್ರವ** (वि०) ತೊಂದರೆಯಿಂದ ಕೂಡಿದ. ಹಿಂಸೆಯಿಂದ ಕೂಡಿದ. उपद्रवेण सहितः।

**सोपध ಸೋಪಧ** (वि०) 1. ಉಪಾಯದಿಂದ ಕೂಡಿದ. उपधया सह वर्तते। 2. ವಂಚನೆಯಿಂದ ಕೂಡಿದ, ಮೋಸದಿಂದ ಕೂಡಿದ.

**सोपधान ಸೋಪಧಾನ** (वि०) ವಿಶೇಷ ಗುಣಗಳುಳ್ಳ, ಯುಕ್ತಿಯಿಂದ ಕೂಡಿದ. उपधानेन सह वर्तते। "उपधानं विशेषे स्यात्" विश्व०। "सोपधानां धियं धीराः स्थेयसीं खट्वयन्ति ये। तत्रानिशं निषण्णास्ते जानन्ते जातु न स्वयम्" माघ० २-७७।

**सोपधि ಸೋಪಧಿ** (वि०) 1. ಮೋಸದಿಂದ ಕೂಡಿದ, ವಂಚನೆಯಿಂದ ಕೂಡಿದ. (अव्य०) 2. ಕಪಟದಿಂದ ಕೂಡಿ, ಮೋಸದಿಂದ ಕೂಡಿ, ವಂಚಿಸಿ, ಮೋಸಪಡಿಸಿ. उपधिना सह यस्मिन् कर्मणि भवति यथा तथा। "अरिषु हि विजयार्थिनः क्षितीशा विदधति सोपधि सन्धिदूषणानि" किरा० १-४५।

**सोपप्लव ಸೋಪಪ್ಲವ** (पुं०) 1. ರಾಹುಗ್ರಸ್ತ ಚಂದ್ರ ಮತ್ತು ಸೂರ್ಯ. उपप्लवेन सह वर्तते। "राहुग्रस्ते त्विन्दौ च पूष्णि च। सोपप्लवोपरक्तौ द्वौ" अम०। (वि०) 2. ಅನರ್ಥಕ್ಕೆ ಒಳಗಾಗಿರುವ, ವಿಪತ್ತಿಗೆ ತುತ್ತಾಗಿರುವ.

**सोपसर्ग ಸೋಪಸರ್ಗ** (वि०) 1. ಹಿಂಸೆಯಿಂದ ಕೂಡಿದ, ಪೀಡೆಯಿಂದ ಕೂಡಿದ. 2. ಉತ್ಪಾತದಿಂದ ಕೂಡಿದ, ಅಶುಭ ಫಲವನ್ನು ಸೂಚಿಸುವ ನಿಮಿತ್ತಗಳಿಂದ ಕೂಡಿದ, ದೊಡ್ಡ ವಿಪತ್ತಿಗೆ ಒಳಗಾಗಿರುವ. उपसर्गेण सह वर्तते।

**सोपाधि ಸೋಪಾಧಿ** (ವಿಂ) 1. ಧರ್ಮಚಿಂತೆಯುಳ್ಳವನು, ಧರ್ಮದ ವಿಚಾರಮಾಡುವವನು. उपाधिना सह वर्तते । "विनोपाधि शास्त्रं तृणतुषबुसप्रख्यमघुना"। 2. ಕಾರಣ ಸಹಿತವಾದ. 3. ಕಪಟದಿಂದ ಕೂಡಿದವನು.

**सोपान ಸೋಪಾನ** (ನಂ) ಮೆಟ್ಟಲು, ಕೆಳಗಿನಿಂದ ಮೇಲಕ್ಕೆ ಏರಿ ಹೋಗುವ (ಶಿಲೆ ಮೊದಲಾದುವುಗಳಿಂದ ನಿರ್ಮಿತವಾದ) ಮಾರ್ಗ. सह विद्यमानः उप उपरि आनो गमनमनेन। "आरोहणार्थं नवयौवनेन कामस्य सोपानमिव प्रयुक्तम्" कुमा० १-३९।

**सोम ಸೋಮ** (ಪುಂ) 1. ಚಂದ್ರ. सौति अमृतम् — षु (प्रसवैश्वर्ययोः) "मन्" (उ० १-१३७)। "स्त्रियः पूर्वं सुरैर्भुक्ताः सोमगन्धर्ववह्निभिः। भुञ्जते मानुषाः पश्चात् तस्माद्दोषो न विद्यते॥ सोमस्तासां ददौ शौचं गन्धर्वाः शिक्षितां गिरम्। पावकः सर्वमेध्यत्वं तस्मान्निष्कल्मषाः स्त्रियः" पञ्चतं० ३-२००। 2. ವಾನರ, ಕಪಿ. 3. ಕುಬೇರ. 4. ಯಮಧರ್ಮರಾಯ, ಪಿತೃದೇವತೆ. 5. ವಾಯು, ಗಾಳಿ. 6. ಅಷ್ಟವಸುಗಳಲ್ಲೊಬ್ಬ ವಸು. 7. ಕರ್ಪೂರ. 8. ಜಲ, ನೀರು. 9. ಸೋಮಲತೆ. "सोमस्तु हिमदीधितौ। वानरे च कुबेरे च पितृदेवे समीरणे। वसुप्रभेदे कर्पूरे नीरे सोमलतौषधौ" मेदि०।

**सोमकान्त ಸೋಮಕಾಂತ** (ಪುಂ) 1. ಚಂದ್ರಕಾಂತ ಶಿಲೆ. (ವಿಂ) 2. ಚಂದ್ರನಂತೆ ಸುಂದರವಾಗಿರುವ. सोम इव कान्तः।

**सोमक्षय ಸೋಮಕ್ಷಯ** (ಪುಂ) ಅಮಾವಾಸ್ಯೆ. सोमस्य क्षयो यत्र।

**सोमगर्भ ಸೋಮಗರ್ಭ** (ಪುಂ) ವಿಷ್ಣು. "सोमगर्भादिदेवादिवराहस्वर्णबिन्दवः" त्रिकाण्ड०।

**सोमधारा ಸೋಮಧಾರಾ** (ಸ್ತ್ರೀಂ) ಗಗನ, ಆಕಾಶ, ದೇವತೆಗಳ ಮಾರ್ಗ. "छायापथो देवपथः सोमधारा नभःसरित्" त्रिकाण्ड०।

**सोमपाः ಸೋಮಪಾಃ** (ಪುಂ) ಯಾಗದಲ್ಲಿ ಸೋಮರಸ ಪಾನಮಾಡುವವನು. सोमं पिबति—पा (पाने) "क्विप्" (३-२-७६)।

**सोमपीतिन् ಸೋಮಪೀತಿನ್** (ಪುಂ) ಸೋಮರಸವನ್ನು ಪಾನಮಾಡಿದವನು. सोमस्य पीतं पानमस्यास्ति— "इनिः" (५-२-११५)। **—पीथिन् —ಪೀಥಿನ್.** "सोमपीथिनयाद्ग्राह्या स्वधर्माध्वरमास्थितः" याद० २२-११।

**सोमबन्धु ಸೋಮಬಂಧು** (ಪುಂ) 1. ಬುಧಗ್ರಹ. 2. ಬಿಳಿಯ ನೈದಿಲೆ. 3. ಸೂರ್ಯ. सोमो बन्धुर्यस्य।

**सोमभू ಸೋಮಭೂ** (ಪುಂ) ಬುಧಗ್ರಹ. सोमात् भूरुत्पत्तिर्यस्य।

**सोमयाजिन् ಸೋಮಯಾಜಿನ್** (ಪುಂ) ಸೋಮಯಾಗವನ್ನು ಮಾಡಿದವನು. सोमेन यजते — यज (देवपूजायाम्) "णिनिः" (३-२-७८)।

**सोमराजिन् ಸೋಮರಾಜಿನ್** (ಪುಂ) ಬಾಹುಚಿಗೆ ಗಿಡ. सोमेन राजते—राजृ (दीप्तौ) "णिनिः" (३-१-१३४)।

**सोमराजी ಸೋಮರಾಜೀ** (ಸ್ತ್ರೀಂ) ಬಾಹುಚಿಗೆ ಗಿಡ. सोमेन राजते—राजृ (दीप्तौ) "अच्" (३-१-१३४)। गौरा० "ङीष्" (४-१-४१)। "श्वेतां संपूर्णकोशां कटम्भरात्रायमाणसहदेवीः। नागकुसुमं स्वगुप्तां शतावरीं सोमराजीं च" बृहत्सं० ४४-१०।

**सोमलता ಸೋಮಲತಾ** (ಸ್ತ್ರೀಂ) ಗುಡೂಚಿ, ಅಮೃತಬಳ್ಳಿ. सोम एव लता। इवार्थे "कन्" (५-३-९६)। **—लतिका —ಲತಿಕಾ.**

**सोमवंश ಸೋಮವಂಶ** (ಪುಂ) ಚಂದ್ರನ ಸಂತತಿ, ಚಂದ್ರನ ಪೀಳಿಗೆ. सोमस्य वंशः सन्तानः। ಚಂದ್ರವಂಶದ ವಿವರ — ಅತ್ರಿಮಹರ್ಷಿಯ ಪುತ್ರ ಸೋಮ (ಚಂದ್ರ). ಚಂದ್ರನ ಪುತ್ರ ಬುಧ. ಬುಧನ ಪುತ್ರ ಪುರೂರವಸ್ಸು.

ಪುರೂರವಸ್ಸಿನ ಪುತ್ರರು (1) ಶ್ರುತಾಯುಧ
(2) ವಿಶ್ವಾವಸು
(3) ಶತಾಯು
(4) ಧೀಮಂತ
(5) ಆಯು ಮತ್ತು
(6) ದೃಢಾಯು.

ಈ ರೀತಿ ಬೆಳೆದುಬಂದ ವಂಶದಲ್ಲಿ ಪಾಂಡುರಾಜ

ಪಾಂಡುರಾಜನ ಪುತ್ರರು (1) ಯುಧಿಷ್ಠಿರ
(2) ಭೀಮಸೇನ
(3) ಅರ್ಜುನ
(4) ನಕುಲ ಮತ್ತು
(5) ಸಹದೇವ.

ಅರ್ಜುನನ ಪುತ್ರ ಅಭಿಮನ್ಯು
ಅಭಿಮನ್ಯುವಿನ ,, ಪರೀಕ್ಷಿತ್ತು
ಪರೀಕ್ಷಿತ್ತಿನ ,, ಜನಮೇಜಯ

ಇತ್ಯಾದಿ ಸೋಮಸಂತತಿಯವರು.

**सोमवल्क ಸೋಮವಲ್ಕ** (पुं०) 1. ಬಿಳಿಯ ಕಗ್ಗಲಿ ಮರ. सोम इव वल्कोऽस्य । 2. ಕಿರಿಯ ಶಿವನಿ ಮರ. 3. ತಮಸಿ ಗಿಡ.

**सोमवल्लरी ಸೋಮವಲ್ಲರೀ** (स्त्री०) ಸೋಮಲತೆ, ಹೊನಗೊನ್ನೆ ಸೊಪ್ಪು. सोमस्य वल्लरी । "ब्राह्मी तु मत्स्याक्षी सोमवल्लरी" अम० ।

**सोमवल्लिका ಸೋಮವಲ್ಲಿಕಾ** (स्त्री०) ಬಾಹುಜಿಗೆ ಗಿಡ.

**सोमवल्ली ಸೋಮವಲ್ಲೀ** (स्त्री०) ಅಮೃತಬಳ್ಳಿ.

**सोमवार ಸೋಮವಾರ, -वासर -ವಾಸರ** (पुं०) ಚಂದ್ರನ ದಿವಸ, ವಾರದ ಎರಡನೆಯ ದಿನ. सोमस्य भोग्यो वासरः । "सोमवारेप्यमावास्या आदित्याह्ने च सप्तमी । चतुर्थी भानुवारे च अक्षयादपि चाक्षया" ॥

**सोमवृक्ष ಸೋಮವೃಕ್ಷ** (पुं०) 1. ಬಿಳಿಯ ಕಗ್ಗಲಿ ಮರ. 2. ಶಿವನಿಯ ಮರ.

**सोमसंज्ञ ಸೋಮಸಂಜ್ಞ** (न०) ಕರ್ಪೂರ. सोमस्य संज्ञा यस्य ।

**सोमेश्वर ಸೋಮೇಶ್ವರ** (पुं०) ಕಾಶಿಯಲ್ಲಿ ಚಂದ್ರನು ಪ್ರತಿಷ್ಠಿಸಿದ ಪರಮೇಶ್ವರ. सोमस्य ईश्वरः ।

**सोमोद्भवा ಸೋಮೋದ್ಭವಾ** (स्त्री०) ನರ್ಮದಾನದಿ. सोमादुद्भवति—भू (सत्तायाम्) "अच्" (३-१-१३४)। "तथेत्युपस्पृश्य पयः पवित्रं सोमोद्भवायाः सरितो नृसोमः" रघु० ५-५९ ।

**सोल्लुण्ठन ಸೋಲ್ಲುಂಠನ** (न०) ಮುಗುಳುನಗೆಯಿಂದ ಕೂಡಿದ ಮಾತು, ಉಪಹಾಸ್ಯದ ಮಾತು. उल्लुण्ठनेन सह वर्तमानम्। ಹಾಸ್ಯಪೂರ್ವಕವಾದ ನಿಂದನೆ. "दुर्वादः स्यादुपालम्भः तत्र यः स्तुतिपूर्वकः। सोल्लुण्ठनं सनिन्दस्तु यस्तत्र परिभाषणम्" ।

**सौकर ಸೌಕರ** (वि०) ಸೂಕರಸಂಬಂಧವಾದ, ವರಾಹ ಸಂಬಂಧವಾದ. सूकरस्येदम् "अण्" (४-३-१२०) । "पोत्रनिकषणविभिन्नभुवं दनुजं दधानमथ सौकरं वपुः" किरा० १२-५३ ।

**सौकरिक ಸೌಕರಿಕ** (पुं०) ವ್ಯಾಧ, ಬೇಟೆಗಾರ. सूकरान् हन्ति — सूकर "ठक्" (४-४-३५) ।

**सौकर्य ಸೌಕರ್ಯ** (न०) ಆಯಾಸವಿಲ್ಲದಿರುವಿಕೆ, ಕ್ಲೇಶ ವಿಲ್ಲದಿರುವಿಕೆ. सुकरस्य भावः "ष्यञ्" (५-१-१२४) ।

**सौकुमार्य ಸೌಕುಮಾರ್ಯ** (न०) ಬಹಳ ಕೋಮಲ ವಾಗಿರುವಿಕೆ, . ಬಹಳ ಮೆತ್ತಗಿರುವಿಕೆ, ಬಹಳ ಮೃದು ವಾಗಿರುವಿಕೆ. सुकुमारस्य भावः "ष्यञ्" (५-१-१२४)। "शिरीषपुष्पाधिकसौकुमार्यौ बाहू तदीयाविति मे वितर्कः" कुमा० १-४१ ।

**सौक्ष्म्य ಸೌಕ್ಷ್ಮ್ಯ** (न०) 1. ಬಹಳ ಸಣ್ಣದಾಗಿರುವಿಕೆ, ಚಿಕ್ಕದಾಗಿರುವಿಕೆ. 2. ಬಹಳ ತೆಳುವಾಗಿರುವಿಕೆ. सूक्ष्मस्य भावः "ष्यञ्" (५-१-१२४) ।

**सौखशायनिक ಸೌಖಶಾಯನಿಕ** (वि०) ಸುಖವಾಗಿ ನಿದ್ರೆ ಬಂದಿತೆ ಎಂದು ಕೇಳುವವನು. सुखशयनं पृच्छति— सुखशयन "ठक्" (७-३-७) । "योगनिद्रान्तविशदैः पावनैरवलोकनैः। भृग्वादीननुगृह्णन्तं सौखशायनिकानृषीन्" रघु० १०-१४ ।

**सौखसुप्तिक ಸೌಖಸುಪ್ತಿಕ** (वि०) 1. ಸುಖವಾಗಿ ಮಲಗಿದ್ದೆಯಾ ಎಂದು ಕೇಳುವವನು. 2. ವೈತಾಳಿಕ. सुखसुप्ति सुखशयनं पृच्छति—सुखसुप्ति "ठक्" (७-३-७) ।

**सौखिक ಸೌಖಿಕ** (वि०) ಸುಖವಾಗಿ ಜೀವಿಸುವವನು, ಸಂತೋಷದಿಂದ ಜೀವಿಸುವವನು. सुखेन जीवति—सुख "ठक्" (४-४-१२) ।

**सौख्य ಸೌಖ್ಯ** (न०) 1. ಸುಖ, ಸಂತೋಷ, ಆನಂದ. सुख स्वार्थे "ष्यञ्" (वा० ५-१-१२४)। "न किञ्चिदपि कुर्वाणः सौख्यैर्दुःखान्यपोहति। तत्तस्य किमपि द्रव्यं यो हि यस्य प्रियो जनः" उ० रा० २-१९। 2. ಸುಖವಾಗಿರುವಿಕೆ, ಆನಂದದ ಅನುಭವ. सुखस्य भावः "ष्यञ्" (५-१-१२४) ।

**सौगत ಸೌಗತ** (पुं०) 1. ಬುದ್ಧ. सुगत एव स्वार्थे "अण्" (५-४-३८)। 2. ಬೌದ್ಧ, ಬುದ್ಧಮತಾನುಯಾಯಿ. सुगतो भक्तिः भजनीयः यस्य "अण्" (४-३-९५)। "सौगतानामिवात्मान्यो नास्ति मन्त्रो महीभृताम्" माघ० २-२८।

**सौगन्ध ಸೌಗಂಧ** (न०) 1. ಪರಿಮಳ, ಸುವಾಸನೆ. सुष्ठु गन्धो यस्य सुगन्धः, सुगन्ध स्वार्थे "अण्" (५-४-३८)। 2. ಕಾಚಿ ಹುಲ್ಲು, ಗಣಿಕೆ ಹುಲ್ಲು. (वि०) 3. ಸುವಾಸನೆ ಯುಳ್ಳ, ಒಳ್ಳೆಯ ಪರಿಮಳವುಳ್ಳ.

**सौगन्धिक ಸೌಗಂಧಿಕ** (पुं०) 1. ಗಂಧಕ, ಗಂಧಪಾಷಾಣ. सु शोभनो गन्धोऽस्य सुगन्धः—स्वार्थे "ठक्" (५-४-३४)। "गन्धाश्मनि तु गन्धकः। सौगन्धिकश्च" अम० । 2. ಸುಗಂಧದ್ರವ್ಯಗಳ ವ್ಯಾಪಾರಮಾಡುವವನು. (न०) 3. ಬಿಳಿಯ ತಾವರೆ. ಆತ್ಮೃತ್ತಮ

ಪರಿಮಳವನ್ನು ಬೀರುತ್ತಿದ್ದ ಈ ಸೌಗಂಧಿಕಪುಷ್ಪವನ್ನು ತನಗೆ ತಂದುಕೊಡಬೇಕೆಂದು ದ್ರೌಪದಿಯು ಭೀಮಸೇನನನ್ನು ಕೇಳಿಕೊಳ್ಳಲು ಅವನು ಅದಕ್ಕಾಗಿ ಗಂಧಮಾದನ ಪರ್ವತಕ್ಕೆ ಹೋಗಿ ಸೌಗಂಧಿಕಸರೋವರವನ್ನು ಕಂಡು ಅದರೊಳಗೆ ಪ್ರವೇಶಿಸುತ್ತಿದ್ದಾಗ ಅಲ್ಲಿನ ಕಾವಲುಗಾರರು ಇವನನ್ನು ತಡೆದು ನಿಲ್ಲಿಸಿ ಕುಬೇರನಿಗೆ ತಿಳಿಸಿದರು. ಕುಬೇರನ ಸಮ್ಮತಿಯಿಂದ ಪುಷ್ಪಗಳನ್ನು ಸಂಗ್ರಹಿಸಿ ಕುಬೇರನಿಂದ ಸತ್ಕೃತನಾಗಿ ಬಂದು ಆ ಪುಷ್ಪಗಳನ್ನು ದ್ರೌಪದಿಗೆ ತಂದುಕೊಟ್ಟನು. भा० वन०। 4. ನೀಲೋತ್ಪಲ, ಕನ್ನೈದಿಲೆ. 5. ಕಾಚಿ ಹುಲ್ಲು. सुगन्धः प्रयोजनमस्य "ठञ्" (५-१-१०९)। 6. ಪದ್ಮರಾಗ. "सौगन्धिकं तु कह्लारे पद्मरागेऽपि कत्तृणे। पुंलिङ्गो गन्धपाषाणे सुगन्धिव्यवहारिणि" मेदि०।

**सौगन्ध्य ಸೌಗಂಧ್ಯ** (न०) ಸುವಾಸನೆ, ಒಳ್ಳೆಯ ಪರಿಮಳ. सुगन्धस्य भावः "ष्यञ्" (५-१-१२४)। "सौगन्ध्यं दधदपि काममङ्गनानाम्" माघ० ८-४८।

**सौगम्य ಸೌಗಮ್ಯ** (न०) 1. ಕ್ಲೇಶವಿಲ್ಲದೆ ಸುಲಭವಾಗಿ ತಿಳಿಯಲು ಸಾಧ್ಯವಾಗುವಿಕೆ. 2. ಕ್ಲೇಶವಿಲ್ಲದೆ ಹೋಗಲು (ನಡೆಯಲು) ಸಾಧ್ಯವಾಗುವಿಕೆ. सुगमस्य भावः "ष्यञ्" (५-१-१२४)।

**सौचि ಸೌಚಿ** (पुं०) ದರ್ಜಿ, ಹೊಲಿಗೆ ಕಾರ್ಯದವನು.

**सौचिक ಸೌಚಿಕ** (पुं०) ದರ್ಜಿ, ಹೊಲಿಗೆ ಕಾರ್ಯದವನು. सूची शिल्पमस्य "ठक्" (४-४-५५)। "तुन्नवायस्तु सौचिकः" अम०।

**सौजन्य ಸೌಜನ್ಯ** (न०) ಸೌಹಾರ್ದ, ಒಳ್ಳೆಯವನಾಗಿರುವಿಕೆ, ದೊಡ್ಡಸ್ತಿಕೆ. ಸಭ್ಯವಾದ ನಡವಳಿಕೆಯಿಂದ ಕೂಡಿರುವಿಕೆ. सुजनस्य भावः "ष्यञ्" (५-१-१२४)। "प्राप्य भीममसौ जन्यं सौजन्यं दधदानने" माघ० १९-१३।

**सौण्डी ಸೌಂಡೀ** (स्त्री०) ಹಿಪ್ಪಲಿ.

**सौत्रान्तिक ಸೌತ್ರಾಂತಿಕ** (पुं०) ನಾಲ್ಕು ವಿಧ ಬೌದ್ಧ ಸಂಪ್ರದಾಯಗಳಲ್ಲಿ ಒಂದು ಸಂಪ್ರದಾಯದವರು. ಇವರು ಬಾಹ್ಯಾಂತರವಸ್ತುಗಳನ್ನು ಅಂಗೀಕರಿಸಿ ಅವುಗಳಿಗೆ ಕ್ಷಣಿಕತ್ವವನ್ನು ಹೇಳುವರು. ["बौद्ध" ಪದದಲ್ಲಿ ನೋಡಿ.]

**सौदामनी ಸೌದಾಮನೀ** (स्त्री०) 1. ವಿದ್ಯುತ್ತು, ಮಿಂಚು. सुदाम्नि मेघे भवा "अण्" (४-३-५३)। सुदामा पर्वतः, तेन एकदिक् (एकस्यां दिशि विद्यमाना) "अण्" (४-३-११२)। "तडित्सौदामनी विद्युत्" अम०। "सौदामन्या कनकनिकषस्निग्धया दर्शयोर्वीम्" मेघ० १-३७। 2. ಒಂದು ವಿಧ ಮಿಂಚು. 3. ಒಬ್ಬ ಅಪ್ಸರಸ್ಸು. "सौदामन्यप्सरोभेदे तडित्तद्भेदयोः स्त्रियाम्" मेदि०। सौदामिनी सौदाम्नी ಎಂಬ ಪಾಠಗಳೂ ಉಂಟು.

**सौदायिक ಸೌದಾಯಿಕ** (वि०) ಸ್ತ್ರೀಧನ, ವಿವಾಹ ಕಾಲದಲ್ಲಿ ಕನ್ಯೆಗೆ ತಾಯಿ ತಂದೆ ಮತ್ತು ಬಂಧುಗಳಿಂದ ಬಂದ ಬಳುವಳಿ. सुदायेभ्यः पितृमातृबन्धुजनेभ्यः आगतम् "ठञ्" (४-३-७४)। "ऊढया कन्यया वापि पत्युः पितृगृहेऽथवा। भर्तुः सकाशात् पित्रोर्वा लब्धं सौदायिकं स्मृतम्"॥

**सौदास ಸೌದಾಸ** (पुं०) ಇಕ್ಷ್ವಾಕುವಂಶದ ಒಬ್ಬ ದೊರೆ. ಇವನಿಗೆ ಕಲ್ಮಾಷಪಾದನೆಂಬ ನಾಮಾಂತರವೂ ಉಂಟು. ["कल्माषपाद" ಪದದಲ್ಲಿ ನೋಡಿ.]

**सौध ಸೌಧ** (पुंन०) 1. ರಾಜನ ಗೃಹ, ಅರಮನೆ. सुधालेपोऽस्यास्ति "अण्" (वा० ५-२-१०३)। "स्फुरत्तुषारांशुमरीचिजालैर्विनिह्नुताः स्फाटिकसौधपङ्क्तीः" माघ० ३-४३। 2. ಸುಣ್ಣ ಬಳಿದಿರುವ (ಮನೆ). सुधया लिप्तम्। "कला दधानः सकलाः स्वभाभिरुद्भासयन् सौधसिताभिराशाः" माघ० ३-६०। 3. ರಜತ, ಬೆಳ್ಳಿ. 4. ಬೇರೆ ಬೇರೆ ಬಣ್ಣಗಳನ್ನು ತೋರುವ ಒಂದು ವಿಧ ಬೆಣಚುಕಲ್ಲು. (वि०) 5. ಸುಧಾಸಂಬಂಧವಾದ. "प्रासादमालासंयुक्ताः सौधप्राकारसंवृताः" रामा०।

**सौनन्द ಸೌನಂದ** (न०) ಬಲರಾಮನ ಮುಸಲಾಯುಧ.

**सौनन्दिन् ಸೌನಂದಿನ್** (पुं०) ಬಲರಾಮ. सौनन्दमस्यास्ति "इनिः" (५-२-११५)। "बलभद्रस्तु हालः स्यात् सौनन्दी हलतालभृत्" त्रिकाण्ड०।

**सौनिक ಸೌನಿಕ** (पुं०) ಪ್ರಾಣಿಹಿಂಸೆಯಿಂದ ಜೀವಿಸುವವನು, (ಪಶುಗಳ ವಧಸ್ಥಾನದಲ್ಲಿ ತಿರುಗುತ್ತ) ಪಶುಪಕ್ಷಿ ಮೊದಲಾದುವುಗಳ ಮಾಂಸವನ್ನು ಮಾರುವವನು. सूनया जीवति—सूना "ठक्" (४-४-१२)। "छद्मना परिददामि मृत्यवे सौनिके गृहशकुन्तिकामिव" उ० रा० १-४५।

**सौन्दर्य ಸೌಂದರ್ಯ** (न०) ಸೊಗಸು, ಅಂದ, ಲಾವಣ್ಯ, ರಮಣೀಯತೆ. सुन्दरस्य भावः "ष्यञ्" (५-१-१२४)। "सा निर्मिता विश्वसृजा प्रयत्नादेकस्थसौन्दर्यदिदृक्षयेव" कुमा० १-४९।

**सौपर्ण ಸೌಪರ್ಣ** (न०) 1. ಮರಕತಮಣಿ, ಪಚ್ಚೆ. सुपर्णं गरुडं तद्वर्णमर्हति "अण्"। 2. ಶುಂಠಿ. 3. ಗರುಡ

ಪುರಾಣ. 4. ಗರುತ್ಮಂತನ ಸಂಬಂಧವಾದ ಅಸ್ತ್ರ. "सौपर्णमस्त्रं प्रतिसञ्जहार प्रह्वेष्वनिर्बन्धरुषो हि सन्तः" रघु० १६-८०। (वि०) 5. ಗರುಡನ ಸಂಬಂಧವಾದ. सुपर्णस्येदम् "अण्" (४-३-१२०)। "सौपर्णं रूपमास्थाय भक्षयामास पन्नगान्" भा०।

**सौपर्णेय ಸೌಪರ್ಣೇಯ** (पुं०) ಸುಪರ್ಣಿಯ ಪುತ್ರ, ಗರುತ್ಮಂತ. सुपर्ण्याः अपत्यं पुमान् "ढक्" (४-१-१००)।

**सौप्तिक ಸೌಪ್ತಿಕ** (वि०) ರಾತ್ರಿಯಲ್ಲಿ ಮಲಗಿರುವಾಗ ನಡೆದ. सुप्तौ सुप्तिकाले भवम् "ठञ्" (४-३-५३)।

**सौभ ಸೌಭ** (न०) 1. ಹರಿಶ್ಚಂದ್ರನ ನಗರ. 2. ಯಕ್ಷಿಣಿಯಿಂದ ನಗರ ಮೊದಲಾದುವುಗಳ ನಿರ್ಮಾಣ.

**सौभद्र ಸೌಭದ್ರ** (पुं०) 1. ಸುಭದ್ರೆಯ ಪುತ್ರ, ಅಭಿಮನ್ಯು. सुभद्राया अयम् "अण्" (४-३-१२०)। "सौभद्रो द्रौपदेयाश्च सर्वे एव महारथाः" गीता १-६। 2. ಒಂದು ವಿಧ ಯುದ್ಧ. सुभद्रा प्रयोजनमस्य (सङ्ग्रामस्य) "अण्" (४-२-५६)। 3. ಸುಭದ್ರೆಯನ್ನು ಕುರಿತು ರಚಿತವಾದ ಒಂದು ಗ್ರಂಥ. सुभद्रामधिकृत्य कृतो ग्रन्थः "अण्" (४-४-८७)। (वि०) 4. ಸುಭದ್ರೆಯ ಸಂಬಂಧವಾದ. सुभद्राया इदम् "अण्" (४-३-१२०)।

**सौभद्रेय ಸೌಭದ್ರೇಯ** (पुं०) ಸುಭದ್ರಾಪುತ್ರನಾದ ಅಭಿಮನ್ಯು. सुभद्राया अपत्यं पुमान् "ढक्" (४-१-१२०)।

**सौभरि ಸೌಭರಿ** (पुं०) ಒಬ್ಬ ಮಹರ್ಷಿ. ಈ ಋಷಿಯು ನೀರಿನ ಮಧ್ಯದಲ್ಲಿ ತಪಸ್ಸು ಮಾಡುತ್ತಿದ್ದಾಗ ಅಲ್ಲಿ ಕ್ರೀಡಿಸುತ್ತಿದ್ದ ಎರಡು ಮತ್ಸ್ಯದಂಪತಿಗಳನ್ನು ನೋಡಿ ತಾನೂ ದಾಂಪತ್ಯಸೌಖ್ಯವನ್ನು ಅನುಭವಿಸಬೇಕೆಂದು ಆಸೆ ಹುಟ್ಟಿತು. ಆಗ ಮಾಂಧಾತರಾಜನ ಬಳಿ ಹೋಗಿ ತನ್ನ ಬಯಕೆಯನ್ನು ತಿಳಿಸಲು ಮಾಂಧಾತನು ತನ್ನ ಕನ್ಯೆಯರಲ್ಲಿ ಯಾರು ವರಿಸಿದರೂ ಅವಳನ್ನು ಮದುವೆಯಾಗಬಹುದೆಂದು ಹೇಳಿದನು. ಋಷಿಯು ತನ್ನ ತಪಃಶಕ್ತಿಯಿಂದ ಎಲ್ಲರನ್ನೂ ಮೋಹಗೊಳಿಸಿ ಐವತ್ತು ಮಂದಿ ಕನ್ಯೆಯರನ್ನೂ ಮದುವೆಯಾಗಿ ಎಲ್ಲರಿಗೂ ಪ್ರತ್ಯೇಕ ಭವನಗಳನ್ನು ನಿರ್ಮಿಸಿ ಬಹಳ ಕಾಲ ಅವರೊಡನೆ ಸುಖದಿಂದಿದ್ದು ಕಡೆಗೆ ವೈರಾಗ್ಯಹೊಂದಿದನು. "तस्मिन्नन्तरे बह्वृचश्च सौभरिर्नाम महर्षिरन्तर्जले द्वादशाब्दं कालमुवास। तत्र चान्तर्जले सम्मदो नामातिबहुप्रजोऽतिमात्रप्रमाणो मीनाधिपतिरासीत्। तस्य च पुत्रपौत्रदौहित्राः पृष्ठतोऽग्रतः पार्श्वयोः पक्षपुच्छशिरसां चोपरि भ्रमन्तः तेनैव सदाहर्निशमतिनिर्वृता रेमिरे। अन्तर्जलावस्थितः सौभरिरेकाग्रतः समाधिमपहाय अनुदिनं तस्य मत्स्यस्यात्मजपुत्रपौत्रदौहित्रादिभिः सहातिरमणीयतामवेक्ष्य अचिन्तयत्। अहो धन्योऽयमीदृशमनभिमतं योन्यन्तरमवाप्य एभिः सह रममाणोऽतीवास्माकं स्पृहामुत्पादयति। वयमप्येवं पुत्रादिभिः सह ललितं रंस्यामहे इत्येवमभिकाङ्क्षन् कन्यार्थं मान्धातारं राजानमगच्छत्। उवाच च राजानम् "शतार्धसङ्ख्यास्तव सन्ति कन्यास्तासां ममैकां नृपते प्रयच्छ" इति। अथ तस्य शापभीतस्तमुवाच राजा—"य एव कन्याभिरुचितो वरस्तस्मै कन्या दीयते" इति। "यद्येवं तदादिश्यतामस्माकं प्रवेशाय यदि कन्यैव काचिन्मामभिलषति तदाहं दारसङ्ग्रहं करिष्यामि" इति सौभरिरुक्त्वा विरराम। राजाज्ञप्तेन अन्तःपुरवर्षवरेण सह अन्तःपुरं प्रविशन्नेव महर्षिः कमनीयं रूपमकरोत्। अथ सर्वा एव कन्यकाः सानुरागाः तमृषिमहमहमिकया वरयांबभूवुः"। इत्यादि विष्णुपु० ४-२।

**सौभागिनेय ಸೌಭಾಗಿನೇಯ** (पुं०) ಅದೃಷ್ಟಶಾಲಿನಿಯ ಪುತ್ರ, ಸುಭಗಾಸುತ, ಭಾಗ್ಯವಂತೆಯ ಮಗ. सुभगाया अपत्यं पुमान्—सुभगा "ढक्" इनङादेशश्च (४-१-१२६)। उभयपदवृद्धिः (७-३-१९)।

**सौभाग्य ಸೌಭಾಗ್ಯ** (न०) 1. ಪತಿಯ ಪ್ರೀತಿಗೆ ಪಾತ್ರಳಾಗಿರುವಿಕೆ, ಪತಿಯ ಪ್ರೀತಿಯನ್ನು ಸಂಪಾದಿಸಿರುವಿಕೆ, ಪತಿಯ ವಾಲ್ಲಭ್ಯ. सुभगाया भावः "ष्यञ्" (५-१-१२४)। "निनिन्द रूपं हृदयेन पार्वती प्रियेषु सौभाग्यफला हि चारुता" कुमा० ५-१। 2. ವಿಷ್ಕಂಭ ಮೊದಲಾದ 27 ಯೋಗಗಳಲ್ಲಿ ನಾಲ್ಕನೆಯ ಯೋಗ. "सौभाग्यजन्मा सुभगो मनुष्यः श्लाघ्यो जनानां धनवान् गुणज्ञः"। 3. ಸಿಂದೂರ. 4. ಸೌಭಾಗ್ಯವನ್ನುಂಟುಮಾಡುವ ಒಂದು ವ್ರತ, ಫಾಲ್ಗುನ ಶುಕ್ಲ ತೃತೀಯಾದಿವಸ ಲಕ್ಷ್ಮೀಸಮೇತನಾದ ವಿಷ್ಣುವಿನ ಅಥವಾ ಪಾರ್ವತೀಸಮೇತನಾದ ಪರಮೇಶ್ವರನ ಪೂಜೆಮಾಡಿ ಈ ವ್ರತವನ್ನು ಆಚರಿಸಬೇಕು. "फाल्गुनस्य तु मासस्य तृतीया शुक्लपक्षगा। उपासितव्या नक्तेन शुचिना सत्यवादिना।। सश्रीकं च हरिं पूज्य रुद्रं वा चोमया सह। या श्रीः या गिरिजा प्रोक्ता यो हरिः स त्रिलोचनः" वराहपु०। 5. ಸೌಂದರ್ಯ. "हिमं न सौभाग्यविलोपि जातम्" कुमा० १-३।

**सौभाग्यतृतीया ಸೌಭಾಗ್ಯತೃತೀಯಾ** (स्त्री०) ಭಾದ್ರಪದ ಶುಕ್ಲ (ತೃತೀಯೆ) ತದಿಗೆ.

**सौभाग्यवती ಸೌಭಾಗ್ಯವತೀ** (स्त्री०) ಪತಿಯ ವಾಲ್ಲಭ್ಯವುಳ್ಳವಳು, ಪತಿಯ ಪ್ರೀತಿಗೆ ಪಾತ್ರಳಾದ ಹೆಂಗಸು. सौभाग्यमस्या अस्ति "मतुप्" (५-२-९४)। "ङीप्" (४-१-६)।

**सौभिक ಸೌಭಿಕ** (पुं०) ಇಂದ್ರಜಾಲ ವಿದ್ಯೆಯನ್ನು ಅರಿತವನು, ಯಕ್ಷಿಣಿಯವನು, ಗಾರುಡಿಗ. सौभं नगरादि-निर्माणं शिल्पमस्य "ठक्" (४-४-५५)।

**सौभ्रात्र ಸೌಭ್ರಾತ್ರ** (न०) ಭ್ರಾತೃಭಾವ, ಸೌಹಾರ್ದಯುತ ಸೋದರತ್ವ, ಅನ್ಯೋನ್ಯಪ್ರೀತಿವಿಶ್ವಾಸಗಳಿಂದ ಕೂಡಿದ ಸಹೋದರತ್ವ. सुभ्रातॄणां भावः "अण्" (५-१-१३०)। "समानेऽपि हि सौभ्रात्रे यथोभौ रामलक्ष्मणौ। तथा भरतशत्रुघ्नौ प्रीत्या द्वन्द्वं बभूवतुः" रघु० १०-८१। "सौभ्रात्रमेषां हि कुलानुसारि" रघु० १६-१।

**सौमनस ಸೌಮನಸ** (वि०) ಪುಷ್ಪ ಸಂಬಂಧವಾದ. सुमनसः कुसुमस्य इदम् "अण्" (४-३-१२०)। "अलमलेरिव गन्धरसावमू मम न सौमनसौ मनसो मुदे" माघ० ६-१२।

**सौमनसा ಸೌಮನಸಾ** (स्त्री०) ಜಾಯಿಪತ್ರೆ.

**सौमनस्य ಸೌಮನಸ್ಯ** (न०) 1. ಮನಸ್ಸು ಪ್ರಸನ್ನವಾಗಿರುವಿಕೆ, ತೃಪ್ತಿ, ಸಮಾಧಾನ, ಸಂತೋಷ. सुमनसो भावः "ष्यञ्" (५-१-१२४)। "रथचरणवराङ्गनाकराब्ज-व्यतिकरसम्पदुपात्तसौमनस्याः" माघ० ७-२८। 2. ದೇವತ್ವ, ದೇವಭಾವ. "सहसा नरदेवास्ते सौमनस्यं प्रपेदिरे" याद० २२-५१।

**सौमनस्यायनी ಸೌಮನಸ್ಯಾಯನೀ** (स्त्री०) ಜಾಜಿ ಹೂವಿನ ಮೊಗ್ಗು. सौमनस्यस्य प्रसन्नचित्तताया अयनी। "मालतीपुष्पकलिकां सौमनस्यायनीं विदुः" त्रिकाण्ड०।

**सौमित्र ಸೌಮಿತ್ರ** (पुं०) ಸುಮಿತ್ರೆಯ ಪುತ್ರ ಲಕ್ಷ್ಮಣ. सुमित्राया अयम् "अण्" (४-३-१२०)।

**सौमित्रि ಸೌಮಿತ್ರಿ** (पुं०) ಸುಮಿತ್ರೆಯ ಪುತ್ರ ಲಕ್ಷ್ಮಣ. सुमित्राया अपत्यं पुमान्—सुमित्रा "इञ्" (४-१-९६)। "सौमित्रेरपि पत्रिणामविषये तत्र प्रिये क्वासि मे" उ० रा० ३-४५।

**सौमेरव ಸೌಮೇರವ** (वि०) ಸುಮೇರುಪರ್ವತ ಸಂಬಂಧವಾದ. सुमेरोरयम् "अण्" (४-३-१२०)। स्त्रियां "ङीप्" (४-१-१५)। **-रवी -ರವೀ.** "सौमेरवी-मधिगतेन नितम्बशोभामेतेन भारतमिलावृतवद्विभाति" माघ० ४-३१।

**सौमेरुक ಸೌಮೇರುಕ** (न०) ಸುವರ್ಣ, ಚಿನ್ನ.

**सौम्य ಸೌಮ್ಯ** (पुं०) 1. ಬುಧಗ್ರಹ, ಸೋಮನ ಪುತ್ರ. सोम इव सोम्यः—सोम "यः" (५-३-१०३)। सोम्य "अण्" (५-४-३८)। 2. ಉದುಂಬರ ವೃಕ್ಷ, ಅತ್ತಿಮರ. 3. ಆಶೀರ್ವಾದ ಮಾಡುವಾಗ ಹಿರಿಯರು ಸಂಬೋಧಿಸಿ ಹೇಳುವ ಪದ. "आयुष्मान् भव सौम्येति विप्रो वाच्योऽभिवादने" मनु० २-१२५। 4. ಬ್ರಾಹ್ಮಣ, ವಿಪ್ರ. 5. ಚಂದ್ರ ಬುಧ ಗುರು ಮತ್ತು ಶುಕ್ರ ಗ್ರಹಗಳು. 6. ವೃಷಭ ಕರ್ಕಾಟಕ ಕನ್ಯಾ ವೃಶ್ಚಿಕ ಮಕರ ಮತ್ತು ಮೀನ ರಾಶಿಗಳು. "क्रूरोऽथ सौम्यः पुरुषोऽङ्गना च ओजोऽथ युग्मं विषमः समश्च। चरस्थिर-द्वयात्मकनामधेया मेषादयोऽमी क्रमशः प्रदिष्टाः"। 7. ಸೌಮ್ಯಕೃಚ್ಛ್ರವೆಂಬ ಒಂದು ವ್ರತ. 8. ಸೋಮರಸವನ್ನು ಪಾನಮಾಡುವ ಬ್ರಾಹ್ಮಣ. 9. ಒಂದು ಪಿತೃಗಣ. (वि०) 10. ಶಾಂತಚಿತ್ತನಾದ, ಪ್ರಸನ್ನವಾದ ಹೃದಯವುಳ್ಳ, ಕೋಪತಾಪಗಳಿಲ್ಲದ ಹೃದಯವುಳ್ಳ. "अपेत-युद्धाभिनिवेशसौम्यो हरिर्हरिप्रस्थमथ प्रतस्थे" माघ० ३-१। 11. ಸೋಮದೇವತಾಕವಾದ. सोमो देवताऽस्य-सोम "टयण्" (४-२-३०)। 12. ಸುಂದರವಾದ, ಅಂದವಾದ, ಮನೋಹರವಾದ. 13. ಭಕ್ತ. "नमस्तस्मै भगवते वासुदेवाय वेधसे। पपुर्ज्ञानमयं सौम्या यन्मुखा-म्बुरुहासवम्" भाग० २-४-२४। 14. ಪ್ರಕಾಶಮಾನವಾದ.

**सौम्यकृच्छ्र ಸೌಮ್ಯಕೃಚ್ಛ್ರ** (पुं०) ಒಂದು ವ್ರತ.

**सौम्यग्रह ಸೌಮ್ಯಗ್ರಹ** (पुं०) ಶುಭಗ್ರಹ. ಪಾಪಗ್ರಹ ಸಂಬಂಧವಿಲ್ಲದ ಬುಧ ಪೂರ್ಣಚಂದ್ರ ಗುರು ಮತ್ತು ಶುಕ್ರ ಇವರು ಶುಭ ಗ್ರಹಗಳು.

**सौम्यधातु ಸೌಮ್ಯಧಾತು** (पुं०) ಕಫ, ಶ್ಲೇಷ್ಮ.

**सौम्यवार ಸೌಮ್ಯವಾರ, -वासर -ವಾಸರ** (पुं०) ಬುಧವಾರ.

**सौम्या ಸೌಮ್ಯಾ** (स्त्री०) 1. ದುರ್ಗಾದೇವಿ. (पुं० ब० व०) 2. ಮೃಗಶೀರ್ಷನಕ್ಷತ್ರದ ಶಿರಸ್ಸಿನಲ್ಲಿರುವ ಒಂದು ನಕ್ಷತ್ರಪುಂಜ. सौम्याः सोमात्मजेऽन्यग्रे मनोज्ञे सोमदैवते। सौम्याः पुनर्मृगशिरःशिरस्थाः पञ्चतारकाः" हेम०।

**सौर ಸೌರ** (पुं०) 1. ಶನೈಶ್ಚರ, ಶನಿಗ್ರಹ. सूरस्य सूर्यस्य अपत्यं पुमान् "अण्" (४-१-९२)। "बहुलास्थ पीडयन्ते सौरेऽन्यपजीविनश्चमपाश्च। रोहिण्य कोसलमद्रकाशिपाञ्चालशाकटिकाः" बृहत्सं० १०-४।

2. ಸೂರ್ಯನಮಾಸ, ಸೂರ್ಯನು ಒಂದು ರಾಶಿಯಲ್ಲಿ ಇರುವಷ್ಟು ಕಾಲ. "आदित्यराशिभोगेन सौरो मासः प्रकीर्तितः"। 3. ಯಮಧರ್ಮರಾಯ. 4. ಸೂರ್ಯನ ಉಪಾಸನೆ ಮಾಡುವವನು. (ನ೦) 5. ಒಂದು ಉಪ ಪುರಾಣ. (ವಿ೦) 6. ಸೂರ್ಯನ ಸಂಬಂಧವಾದ. सूरस्येदम् "अण्" (४-३-१२०)। 7. ಸುರ ಸಂಬಂಧ ವಾದ, ದೇವತೆಗಳ ಸಂಬಂಧವಾದ. सुरस्येदम् "अण्" (४-३-१२०)। 8. ಸೂರ್ಯನೇ ದೇವತೆಯಾಗಿರುವ. सूरो देवताऽस्य।

**सौरदिन ಸೌರದಿನ** (ನ೦) ಸೂರ್ಯನು ಒಂದು ರಾಶಿಯ ಮೂವತ್ತನೆಯ ಒಂದು ಭಾಗದಲ್ಲಿರುವ ಕಾಲ.

**सौरभ ಸೌರಭ** (ನ೦) 1. ಸೌಗಂಧ್ಯ, ಸುವಾಸನೆ, ಪರಿಮಳ. "वदनसौरभलोभपरिभ्रमद्भ्रमरसम्भ्रमसम्भृतशोभया" माघ० ६-१४। "सममेणमदैर्यदापणे तुलयन् सौरभलोभनिश्चलम्" नैष० २-९२। 2. ಕುಂಕುಮ ಕೇಸರಿ. सौरभमस्यास्ति "अच्" (५-२-१२७)। (ವಿ೦) 3. ಪರಿಮಳದಿಂದ ಕೂಡಿದ, ಸುವಾಸನೆಯುಳ್ಳ. "सरित्सरोभिरच्छोदैः पुलिनैर्मणिवालुकैः। देवस्त्रीमज्जनामोदसौरभाम्ब्वनिलैर्युतः" भाग० ८-२-८।

**सौरभेय ಸೌರಭೇಯ** (ಪುं೦) ವೃಷಭ, ಎತ್ತು. सुरभ्याः अपत्यं पुमान्—सुरभि "ढक्" (४-१-१२०)। "मा सौरभेयात्र शुचो व्यतु ते वृषलाञ्छनम्" भाग० १-१७-९।

**सौरभेयी ಸೌರಭೇಯೀ** (स्त्री०) ಗೋವು, ಹಸು. सुरभेरपत्यम् "ढक्" (४-१-१२०)। "माहेयी सौरभेयी गौः" अम०। "निवर्त्य राजा दयितां दयालुः तां सौरभेयीं सुरभिर्यशोभिः" रघु० २-३।

**सौरभ्य ಸೌರಭ್ಯ** (ನ೦) 1. ಸೌಗಂಧ್ಯ, ಪರಿಮಳ. सुरभेर्भावः "ष्यञ्" (५-१-१२४)। "स्वाभाविकं परगुणेन विभातवायुः सौरभ्यमीप्सुरिव ते मुखमारुतस्य" रघु० ५-६९। 2. ರಾಮಣೀಯಕತೆ. 3. ಕೀರ್ತಿ, ಯಶಸ್ಸು, ಪ್ರಖ್ಯಾತಿ. "सौरभ्यं गुणगौरवे। सौगन्ध्ये चारुतायां च" हेम०। (ಪುं೦) 4. ಕುಬೇರ. सौरभ्यं गुणगौरवमस्यास्ति "अच्" (५-२-१२७)।

**सौरमास ಸೌರಮಾಸ** (ಪುं೦) ಸೂರ್ಯನು ಒಂದು ರಾಶಿಯಲ್ಲಿರುವಷ್ಟು ಕಾಲ. सौरः सूर्यस्य एकराशिभोगावच्छिन्नो मासः। "एकराशौ रविर्यावत्कालं मासः स भास्करः"।

**सौरसंवत्सर ಸೌರಸಂವತ್ಸರ** (ಪುं೦) ಸೂರ್ಯನು 12 ರಾಶಿಗಳಲ್ಲಿ ಸಂಚರಿಸುವಷ್ಟು ಕಾಲ. सौरः संवत्सरः। "सौरसंवत्सरस्यान्ते मानेन शशिजेन तु। एकादशातिरिच्यन्ते दिनानि भृगुनन्दन"।

**सौरसेय ಸೌರಸೇಯ** (ಪುं೦) 1. ಕಾರ್ತಿಕೇಯ, ಷಣ್ಮುಖ, ಸ್ಕಂದ. 2. ಸುರಸೆಯ ಮಗ. सुरसाया अपत्यं पुमान् "ढक्" (४-१-१२०)।

**सौरसैन्धव ಸೌರಸೈಂಧವ** (ಪುं೦) 1. ಸೂರ್ಯನ ಕುದುರೆ. सौरः सूर्यसम्बन्धी सैन्धवः। (ವಿ೦) 2. ಸುರಸಿಂಧು (ಗಂಗಾನದಿ) ಸಂಬಂಧವಾದ. सुरसिन्धोरिदम् "अण्" (४-३-१२०)। "रुरुचे हिमाचलगुहामुखोन्मुखः पयसां प्रवाह इव सौरसैन्धवः" माघ० १३-२७।

**सौराज्य ಸೌರಾಜ್ಯ** (ನ೦) ಒಳ್ಳೆಯ ರಾಜನನ್ನು ಹೊಂದಿರುವಿಕೆ, (ದೇಶದಲ್ಲಿ) ಒಳ್ಳೆಯ ರಾಜನಿರುವಿಕೆ. सु शोभनो राजा यस्य देशस्य स देशः सुराजा, तस्य भावः "ष्यञ्" (५-१-१२४)। "एको ययौ चैत्ररथप्रदेशान् सौराज्यरम्यानपरो विदर्भान्" रघु० ५-६०।

**सौराष्ट्र ಸೌರಾಷ್ಟ್ರ** (ಪುं೦) 1. ಒಂದು ದೇಶ. सुराष्ट्र स्वार्थे "अण्" (५-४-३८)। 2. ಕುಂದುರುಷ್ಕ ವೆಂಬ ಒಂದು ಗಂದಿಗರ ಸರಕು. (ಪುं೦ ಬ೦ ವ೦) 3. ಸೌರಾಷ್ಟ್ರದೇಶದ ಜನರು. (ನ೦) 4. ಕಂಚು (ಲೋಹ). "कांस्यं प्रभासं सौराष्ट्रं मादूराह्वयमित्यपि" अम०।

**सौराष्ट्रक ಸೌರಾಷ್ಟ್ರಕ** (ಪುं೦) ಕಂಚುಲೋಹ. सुराष्ट्रे भवः।

**सौराष्ट्रा ಸೌರಾಷ್ಟ್ರಾ** (स्त्री०) ತೊಗರಿ ಗಿಡ.

**सौराष्ट्रिक ಸೌರಾಷ್ಟ್ರಿಕ** (ಪುं೦) ಒಂದು ವಿಧ ವಿಷ. सौराष्ट्रे देशे भवः "ठञ्" (वा० ४-३-६०)। "सौराष्ट्रिकः शौक्लिकेयो ब्रह्मपुत्रः प्रदीपनः" अम०।

**सौरि ಸೌರಿ** (ಪುं೦) ಸೂರ್ಯನ ಪುತ್ರ. (1) ಶನೈಶ್ಚರ. "कृष्णद्रव्यैः सौरिः सौम्यो मणिरजततिलककुसुमैर्गुरुः परिपीतकैः" बृहत्सं० १०४-४७। (2) ಯಮಧರ್ಮ ರಾಯ. (3) ಕರ್ಣ. (4) ಸುಗ್ರೀವ. ಇವರು ಸೂರ್ಯನ ಪುತ್ರರು. सूरस्य सूर्यस्यापत्यं पुमान् "इञ्" (४-१-९५)।

**सौरिक ಸೌರಿಕ** (ಪುं೦) 1. ಸ್ವರ್ಗ, ದೇವಲೋಕ. सुरेभ्यो हितः। 2. ಶನಿಗ್ರಹ. 3. ಮದ್ಯದ ವ್ಯಾಪಾರ ಮಾಡುವವನು. (ವಿ೦) 4. ಸುರಾಸಂಬಂಧವಾದ, ಮದ್ಯನಿಮಿತ್ತವಾದ. "प्रातिभाव्यं वृथादानमाक्षिकं सौरिकं च यत्। दण्डशुल्कावशेषं च न पुत्रो दातुमर्हति" मनु० ८-१५९।

**सौरिरत्न ಸೌರಿರತ್ನ** (ನ೦) ನೀಲಮಣಿ, ಪ್ರಶಸ್ತವಾದ ಇಂದ್ರನೀಲಶಿಲೆ. सौरेः शनैश्चरस्य रत्नम्।

**सौरी ಸೌರೀ** (स्त्री०) ಸೂರ್ಯನ ಮಗಳು. सूर्यस्यापत्यं स्त्री—सूर्य "अण्" (४-१-९२)। यलोपः (६-४-१४९)। "ङीष्" (४-१-४१)।

**सौरीय ಸೌರೀಯ** (वि०) 1. ಸೂರ್ಯನಿಗೆ ಹಿತವಾದ. सूर्याय हितम्—सूर्य "छः" (५-१-५)। 2. ಸೂರ್ಯನ ಸಂಬಂಧವಾದ. सूर्यस्येदम् "अण्" (४-३-१२०)। सौर्यम् तेजः—सौर्ये भवः सौरीयः—यलोपः (६-४-१४९)।

**सौर्य ಸೌರ್ಯ** (वि०) ಸೂರ್ಯನ ಸಂಬಂಧವಾದ. सूर्यस्येदम् "अण्" (४-३-१२०)।

**सौव ಸೌವ** (वि०) 1. ತನ್ನ ಸಂಬಂಧವಾದ, ತನಗೆ ಸಂಬಂಧಿಸಿದ. स्वस्य इदम्—स्व "अण्" (४-३-१२०)। अत्र वकारात् पूर्वम् "ऐच्" आगमः— (७-३-३)। औकारः। सौवो भावः—स्वाभिप्राय इत्यर्थः। 2. ಸ್ವರ್ಗ ಸಂಬಂಧವಾದ. स्वः इदम् "अण्" (४-३-१२०)। अत्र न आदिवृद्धिः किन्तु ऐजागमः—वकारात् पूर्वम् औकारः (७-३-४)।

**सौवग्रामिक ಸೌವಗ್ರಾಮಿಕ** (वि०) ತನ್ನ ಗ್ರಾಮದಲ್ಲಿರುವ ವಸ್ತು. स्वग्रामे भवम् "ठक्"।

**सौवर ಸೌವರ** (वि०) ಸ್ವರಸಂಬಂಧವಾದ. स्वरस्य इदम् "अण्" (४-३-१२०)। ऐजागमः (७-३-३)।

**सौवर्ग ಸೌವರ್ಗ** (पुं०) ಸ್ವರ್ಗದಲ್ಲಿರುವ ದೇವತೆ. स्वर्गे भवः—स्वर्ग "अण्" (४-३-५३)। वकारस्य औकारः (७-३-३)। "सौवर्गवर्गैरमृतं निपीय कृतोऽह्नि तुच्छः शशलाञ्छनोऽयम्" नैष० २२-१२१।

**सौवर्चल ಸೌವರ್ಚಲ** (नं०) 1. ಸರ್ಜಕ್ಷಾರ. 2. ಒಂದು ಲವಣ. सुष्ठु वर्च्यते दीप्यते—वर्च (दीप्तौ) "कलच्" (उ० १-१०६)। "सौवर्चलं सर्जक्षारे लवणान्तरे" मेदि०।

**सौवर्ण ಸೌವರ್ಣ** (वि०) ಸ್ವರ್ಣಮಯವಾದ. ಸುವರ್ಣ (ಚಿನ್ನ) ಸಂಬಂಧವಾದ. सुवर्णस्येदम् "अण्" (४-३-१२०)। "सौवर्णं वलयमवागलत्कराग्रात् लावण्यश्रिय इव शेषमङ्गनायाः" माघ० ८-३४।

**सौवस्तिक ಸೌವಸ್ತಿಕ** (पुं०) 1. ಪುರೋಹಿತ. स्वस्तिकरणे साधुः "ठक्"। ऐजागमः (७-३-३)। (वि०) 2. ಸ್ವಸ್ತಿ ಸಂಬಂಧವಾದ.

**सौवास्तव ಸೌವಾಸ್ತವ** (वि०) 1. ಸುಂದರವಾದ ನಿವೇಶನ ಸಂಬಂಧವಾದ. सुवास्तोरिदम्—सुवास्तु "अण्" (४-२-७७)। 2. ಸುವಾಸ್ತುವಿಗೆ ಸಮೀಪದಲ್ಲಿರುವ. सुवास्तोरदूरभवम् "अण्"।

**सौविद ಸೌವಿದ** (पुं०) ರಾಜನ ಅಂತಃಪುರದ ದ್ವಾರಪಾಲಕ, ಅಂತಃಪುರವನ್ನು ರಕ್ಷಿಸುವವನು. सुष्ठु वेत्ति—विद (ज्ञाने) "कः" (३-१-१३५)। स्वार्थे "अण्" (५-४-३८)।

**सौविदल्ल ಸೌವಿದಲ್ಲ** (पुं०) ಕಂಚುಕಿ, ಅಂತಃಪುರ ರಕ್ಷಕ. सुष्ठु विदन्तं विद्वांसमपि लाति वशवर्तिनं करोति—सुविदत्+ला (आदाने) "कः" (३-२-३)। सुविदल्ला स्त्री—तस्या अयम् "अण्" (४-३-१२०)। "यानाज्जनः परिजनैरवतार्यमाणा राज्ञीर्नरापनयनाकुलसौविदल्लाः माघ० ५-१७।

**सौवीर ಸೌವೀರ** (नं०) 1. ಎಲಚಿಹಣ್ಣು, ಬೋರೆಹಣ್ಣು. सुवीरदेशे भवम् "अण्" (४-३-५३)। 2. ಸೌವೀರಾಂಜನ, ಸ್ರೋತೋಂಜನ. 3. ಗಂಜಿ, ಅಂಬಲಿ. (पुं०) 4. ಸೌವೀರದೇಶ. सुष्ठु वीरा यत्र। "सौवीरं काञ्जिके स्रोतोञ्जने च बदरीफले। ना तु नीवृति" मेदि०।

**सौवीरक ಸೌವೀರಕ** (पुं०) 1. ಎಲಚಿ ಮರ, ಬೋರೆ ಗಿಡ. सौवीर संज्ञायाम् "कन्"। (नं०) 2. ಗಂಜಿ, ಅಂಬಲಿ.

**सौवीर्य ಸೌವೀರ್ಯ** (नं०) ಹೆಚ್ಚು ವೀರ್ಯ, ಹೆಚ್ಚು ಪರಾಕ್ರಮ. सुवीरस्य भावः "ष्यञ्" (५-१-१२४)।

**सौशील्य ಸೌಶೀಲ್ಯ** (नं०) ಒಳ್ಳೆಯ ಸ್ವಭಾವ, ಉತ್ತಮವಾದ ಪ್ರಕೃತಿ, ಉತ್ತಮವಾದ ಮನೋಧರ್ಮ. सुशीलस्य भावः "ष्यञ्" (५-१-१२४)।

**सौष्ठव ಸೌಷ್ಠವ** (नं०) 1. ಉತ್ಕೃಷ್ಟತೆ, ಶ್ರೇಷ್ಠತೆ. सुष्ठु भावः "अञ्" (५-१-१२९)। 2. ಸೌಂದರ್ಯ, (ದೇಹ) ಕಾಂತಿ, (ದೇಹದ) ಸೊಬಗು. "ननु स्वाङ्गसौष्ठवातिशयमुभयोर्दृष्टवती भगवती" माल० १। 3. (ಶಬ್ದ) ಸಾಮರ್ಥ್ಯ, (ಶಬ್ದ) ಶಕ್ತಿ. "स सौष्ठवौदार्यविशेषशालिनीम्" किरा० १-३। 4. ಜಾಣತನ, ಬುದ್ಧಿವಂತಿಕೆ, ಕೌಶಲ್ಯ, ನೈಪುಣ್ಯ. "तुल्येष्वस्त्रोपदेशेषु सौष्ठवेन च वीर्यवान्। एकः सर्वकुमाराणां बभूवातिरथोऽर्जुनः" भा० आदि० १४२-७५।

**सौस्नातिक ಸೌಸ್ನಾತಿಕ** (वि०) ಶಾಸ್ತ್ರೋಕ್ತವಾದ ಸ್ನಾನವು ಆಯಿತೆ ಎಂದು ಕೇಳುವವನು. सुस्नातं पृच्छति—सुस्नात "ठक्" (वा० ७-३-७)। "प्रीत्याश्वमेधावभृथार्द्रमूर्तेः सौस्नातिको यस्य भवत्यगस्त्यः" रघु० ६-६१।

**सौहार्द ಸೌಹಾರ್ದ** (पुं०) 1. ಸುಹೃತ್ತಿನ ಪುತ್ರ, ಗೆಳೆಯನ ಮಗ. सुहृदोऽपत्यम् "अण्" (४-१-९२)। उभयपदवृद्धिः (७-३-१९)। (नं०) 2. ಸುಹೃದ್ಭಾವ, ಸಖ್ಯ, ಮೈತ್ರಿ, ಸ್ನೇಹ. सुहृदो भावः "अण्" (५-१-१३०)

उभयपदवृद्धिः (७-३-१९)। "एतत् कृत्वा प्रियमनुचित-प्रार्थनावर्तिनो मे सौहार्दाद्वा विधुर इति वा मय्यनुक्रोश-बुद्ध्या" मेघ० २-५२।

**सौहार्द ಸೌಹಾರ್ದ, सौहृद ಸೌಹೃದ, सौहृदय्य ಸೌಹೃದಯ್ಯ** (न०) ಸ್ನೇಹ, ಸಖ್ಯ, ಮೈತ್ರಿ. सौहृदस्य भावः "ष्यञ्"। वा हृद्भावः (६-३-५१)। पक्षे सौहृदय्यम्।

**सौहित्य ಸೌಹಿತ್ಯ** (न०) 1. ತೃಪ್ತಿ, ತುಷ್ಟಿ, ಸಮಾಧಾನ. सुहितस्य भावः "ष्यञ्" (५-१-१२४)। "उत्तीर्ण-भारलघुनाप्यलघूलपौघसौहित्यनिःसहतरेण तरोरधस्तात्" माघ० ५-६२। 2. ಪೂರ್ತಿ, ಪೂರ್ಣತೆ, ತುಂಬಿರುವುದು. "सौहित्यं तर्पणं तृप्तिः" अम०।

**सौहृद ಸೌಹೃದ** (न०) ಸ್ನೇಹ, ಸಖ್ಯ, ಮೈತ್ರಿ. सुहृदो भावः कर्म वा "अण्" (५-१-१३०)। "यदुपुङ्गव बन्धुसौहृदात् त्वयि पाता ससुरो न वासवः" माघ० १६-१२।

**स्कन्द ಸ್ಕಂದ** (पुं०) 1. ಷಣ್ಮುಖ, ಕಾರ್ತಿಕೇಯ. स्कन्दति —स्कन्दिर् (गतिशोषणयोः) "अच्" (३-१-१३४)। "यो हेमकुम्भस्तननिःसृतानां स्कन्दस्य मातुः पयसां रसज्ञः" रघु० २-३६। ["कार्तिकेय" ಪದದಲ್ಲಿ ನೋಡಿ.] 2. ಪಾರದ, ಪಾದರಸ. 3. ಶರೀರ, ದೇಹ. "पिण्डोऽस्त्रियां कलं क्षेत्रं शरीरं स्कन्दपञ्जरौ" त्रिकाण्ड०। 4. ನದಿಯ ತೀರ. 5. ಬುದ್ಧಿವಂತ, ಜಾಣ. 6. ಒಂದು ಬಾಲಗ್ರಹ. 7. ಪರಮೇಶ್ವರ. 8. ರಾಜ, ದೊರೆ. 9. ನೆಗೆಯುವುದು, ಎಗರುವುದು.

**स्कन्दत् ಸ್ಕಂದತ್** (वि०) 1. ನಡೆಯುತ್ತಿರುವ, ಹೋಗುತ್ತಿರುವ. स्कन्दिर् (गतिशोषणयोः) "शतृ" (३-२-१२४)। 2. ಒಣಗುತ್ತಿರುವ. 3. ಕಳಚಿ ಬೀಳುತ್ತಿರುವ, ಜಾರಿ ಬೀಳುತ್ತಿರುವ. स्त्रियां "ङीप्" (४-१-६)। —न्ती —ನ್ತೀ.

**स्कन्दन ಸ್ಕಂದನ** (न०) 1. ಗಮನ, ನಡೆಯುವುದು. स्कन्दिर् (गतिशोषणयोः) "ल्युट्" (३-३-११५)। 2. ಶೋಷಿಸುವುದು, ಒಣಗಿಸುವುದು. 3. ವಿರೇಚನ, ಭೇದಿಯಾಗುವುದು. "स्कन्दनरेचने" त्रिकाण्ड०। "चतु-र्विधं यदेतद्धि रुधिरस्य निवारणम्। सन्धानं स्कन्दनं चैव पाचनं दहनं तथा" सुश्रुत० सूत्र०।

**स्कन्दनीय ಸ್ಕಂದನೀಯ** (वि०) 1. ಒಣಗಬೇಕಾದ. 2. ಒಣಗಿಸಲ್ಪಡುವ. 3. ಒಣಗಿಸಬಹುದಾದ. स्कन्दिर् (गतिशोषणयोः) "अनीयर्" (३-१-९६)। 4. ನಡೆಯಬೇಕಾದ. 5. ನಡೆಯಬಹುದಾದ. 6. ನಡೆಯಲು ಶಕ್ಯವಾದ. "तव्यः" स्कन्तव्यः ಸ್ಕನ್ತವ್ಯ.

**स्कन्दषष्ठी ಸ್ಕಂದಷಷ್ಠೀ** (स्त्री०) ಚೈತ್ರಶುಕ್ಲ ಷಷ್ಠಿ.

**स्कन्द्य ಸ್ಕಂದ್ಯ** (वि०) 1. ಒಣಗಿಸಲ್ಪಡುವ. 2. ನಡೆಯಿಸಲ್ಪಡುವ. स्कन्दिर् (गतिशोषणयोः) कर्म० "ण्यत्" (३-१-१२४)।

**स्कन्ध ಸ್ಕಂಧ** (पुं०) 1. ಅಂಸಪ್ರದೇಶ, ಹೆಗಲು. स्कन्दत —स्कन्दिर् (गतिशोषणयोः) "घञ्" (३-३-१९)। धः बाहु०। "असुन्" (उ० ४-२०६)। सर्वे सान्ता अदन्ताश्च। 2. (ವೃಕ್ಷದ) ಬೇರಿನಿಂದ ಮೊದಲುಗೊಂಡು ರೆಂಬೆಗಳವರೆಗಿನ ವೃಕ್ಷದ ಮೂಲ. "तं चेद्वायौ सरति सरलस्कन्धसङ्घट्टजन्मा" मेघ० १-५३। 3. ರಾಜ, ದೊರೆ. 4. ಸಮೂಹ. 5. ಯುದ್ಧ. 6. ಅಧ್ಯಾಯ, ಗ್ರಂಥದ ಸರ್ಗ ಉಚ್ಛ್ವಾಸ ಉಲ್ಲಾಸ ಮೊದಲಾದುದು. 7. ಶರೀರ, ದೇಹ. 8. ವ್ಯೂಹ, ಗುಂಪು, ಸೈನ್ಯದ ಒಂದು ತಂಡ. "प्रतापोऽग्रे ततः शब्दः परागस्तदनन्तरम्। ययौ पश्चाद्रथादीति चतुस्कन्धेव सा चमूः" रघु० ४-३०। 9. ಬೌದ್ಧರು ಅಂಗೀಕರಿಸಿರುವ ಐಹಿಕವಾದ ಪ್ರಜ್ಞೆ (ಜ್ಞಾನ). ಇದು—(1) रूपस्कन्धः (2) वेदनास्कन्धः (3) विज्ञानस्कन्धः (4) संज्ञास्कन्धः ಮತ್ತು (5) संस्कार-स्कन्धः ಎಂದು ಐದು ವಿಧ. विषयप्रपञ्चो रूपस्कन्धः। तज्ज्ञानप्रपञ्चो वेदनास्कन्धः। आलयविज्ञानसन्तानो विज्ञानस्कन्धः। नामप्रपञ्चो संज्ञास्कन्धः। वासना-प्रपञ्चः संस्कारस्कन्धः। ಈ ಐದನ್ನು ಬಿಟ್ಟು ಬೇರೆ ಆತ್ಮನೇ ಇಲ್ಲವೆಂದು ಇವರ ಅಭಿಪ್ರಾಯ. "सर्वकार्य-शरीरेषु मुक्त्वाङ्गस्कन्धपञ्चकम्। सौगतानामिवात्मान्यो नास्ति मन्त्रो महीभृताम्" माघ० २-२८। 10. ಮಾರ್ಗ, ರಸ್ತೆ, ದಾರಿ. 11. ರೆಂಬೆ, ಶಾಖೆ, ಕೊಂಬೆ. 12. ಒಂದು ಛಂದಸ್ಸು.

**स्कन्धचाप ಸ್ಕಂಧಚಾಪ** (पुं०) ಅಡ್ಡ (ಶಿಕ್ಯ) ಯನ್ನು ತೂಗುಹಾಕುವ ಬಿದಿರಿನ ಅಡ್ಡಕೋಲು, ಕಾವಡಿಗೆ ಆಧಾರವಾಗಿರುವ ತೂಗಾಸರೆ. स्कन्धे चाप इव। "स्कन्ध-चापो विहङ्गिका" हारा०।

**स्कन्धतरु ಸ್ಕಂಧತರು** (पुं०) ನಾರಿಕೇಳವೃಕ್ಷ, ತೆಂಗಿನ ಮರ. स्कन्धप्रधानस्तरुः।

**स्कन्धदेश ಸ್ಕಂಧದೇಶ** (पुं०) ಹೆಗಲು, ಅಂಸಪ್ರದೇಶ. स्कन्धस्य देशः।

**स्कन्धफल ಸ್ಕಂಧಫಲ** (ನಂ) 1. ತೆಂಗಿನ ಮರ, ನಾರಿಕೇಳ ವೃಕ್ಷ. स्कन्धे फलमस्य। 2. ಬಿಲ್ವವೃಕ್ಷ.

**स्कन्धमल्लक ಸ್ಕಂಧಮಲ್ಲಕ** (ಪುಂ) ಉದ್ದದ ಕಾಲಿನ ಒಂದು ವಿಧ ನೀರಿನ ಹಕ್ಕಿ.

**स्कन्धरुह ಸ್ಕಂಧರುಹ** (ಪುಂ) ವಟವೃಕ್ಷ, ಆಲದಮರ. स्कन्धात् रोहति — रुह (बीजजन्मादौ) "कः" (३-१-१३५)।

**स्कन्धवाह ಸ್ಕಂಧವಾಹ** (ಪುಂ) ಹೆಗಲಿನಿಂದ ಗಾಡಿ ಮೊದಲಾದುವನ್ನು ಹೊತ್ತು ಸಾಗಿಸುವ ವೃಷಭ (ಎತ್ತು) ಮೊದಲಾದುವು. स्कन्धेन वाहयति — स्कन्ध + वह (प्रापणे) + णिच् "अच्" (३-१-१३४)। "स्कन्धवाहस्तु शङ्कुश्च शृङ्गी गौरक्षधूर्तिलः" हारा०।

**स्कन्धवाहक ಸ್ಕಂಧವಾಹಕ** (ಪುಂ) ಗಾಡಿ ಮೊದಲಾದುವನ್ನು ಹೆಗಲಿನಿಂದ ಹೊರುವ ವೃಷಭ (ಎತ್ತು). स्कन्धेन वहति—वह (प्रापणे) "ण्वुल्" (३-१-१३३)।

**स्कन्धशाखा ಸ್ಕಂಧಶಾಖಾ** (ಸ್ತ್ರೀಂ) ವೃಕ್ಷದ ಬುಡದಿಂದ ಮೊದಲು ಹೊರಟಿರುವ ರೆಂಬೆ. स्कन्धजा शाखा। "स्कन्धशाखाशाले" अम०। "यथा हि स्कन्धशाखानां तरोर्मूलावसेचनम्। एवमाराधने विष्णोः सर्वेषामात्मनश्च हि" भाग० ८-५-४९।

**स्कन्धावार ಸ್ಕಂಧಾವಾರ** (ಪುಂ) 1. ರಾಜಧಾನಿ, ರಾಜನ ಆವಾಸ. 2. ಸೈನ್ಯ. स्कन्धेन सैन्यव्यूहेन राज्ञा वा आव्रियते—आ+वृञ् (आवरणे) "घञ्" (३-३-१९)। "एतस्मिन्नन्तरे चक्रुः स्कन्धावारनिवेशनम्" रामा०। "अवस्कन्ध यदुश्रेष्ठः स्कन्धावारं न्यवीविशत्" याद० २२-१०५।

**स्कन्धिन् ಸ್ಕಂಧಿನ್** (ಪುಂ) 1. ವೃಕ್ಷ, ಮರ. स्कन्धोऽस्यास्ति "इनिः" (५-२-११५)। (ವಿಂ) 2. ರೆಂಬೆಗಳುಳ್ಳ.

**स्कन्न ಸ್ಕನ್ನ** (ವಿಂ) 1. ಜಾರಿಬಿದ್ದ, ಕಳಚಿಬಿದ್ದ. स्कद्यते —स्कन्दिर् (गतिशोषणयोः) "क्तः" (३-२-१०२)। 2. ಸ್ರವಿಸಿದ, ಸೋರಿದ. "स्कन्नमात्रं च तद्रेतो वृक्षपत्रेण भूमिपः। प्रतिजग्राह मिथ्या मे न पतेत् रेत इत्युत" भा० आदि० ६४-६४। 3. ಶುಷ್ಕವಾದ, ಒಣಗಿದ. 4. ಹೊರಟುಹೋದ. 5. ವಿಸರ್ಜಿಸಲ್ಪಟ್ಟ, ಹೊರಗೆ ಬಿಡಲ್ಪಟ್ಟ.

**स्कन्नवत् ಸ್ಕನ್ನವತ್** (ವಿಂ) 1. ಹೊರಟುಹೋದ. 2. ಜಾರಿಬಿದ್ದ, ಕಳಚಿಬಿದ್ದ. 3. ಸ್ರವಿಸಿದ, ಸೋರಿದ. स्कन्दिर् (गतिशोषणयोः) "क्तवतुः" (३-२-१०२)। 4. ಒಣಗಿದ, ಶುಷ್ಕವಾದ.

**स्कान्द ಸ್ಕಾಂದ** (ನಂ) ಸ್ಕಾಂದಪುರಾಣ. ಸ್ಕಾಂದಪುರಾಣವು ವ್ಯಾಸಮಹರ್ಷಿಯಿಂದ ರಚಿತವಾದ ಅಷ್ಟಾದಶಪುರಾಣಗಳಲ್ಲೊಂದು. स्कन्दस्येदम् "अण्" (४-३-१२०)। ಇದು ತಾಮಸಪುರಾಣಗಳ ವರ್ಗಕ್ಕೆ ಸೇರಿದುದು. "मात्स्यं कौर्मं तथा लैङ्गं शैवं स्कान्दं तथैव च। आग्नेयं च षडेतानि तामसानि निबोधत"॥ ಸ್ಕಾಂದಪುರಾಣವು ಸಪ್ತಖಂಡಗಳಲ್ಲಿ ಎಂಬತ್ತೊಂದು ಸಹಸ್ರಗ್ರಂಥಗಳಿಂದ (ಶ್ಲೋಕಗಳಿಂದ) ರಚಿತವಾಗಿರುವುದು. "स्कान्दाह्वयस्तत्र खण्डाः सप्तैव परिकल्पिताः। एकाशीतिसहस्रं तु स्कान्दं सर्वाघकृन्तनम्॥

**ಇದರ ಸಪ್ತಖಂಡಗಳು:** (1) माहेश्वरखण्डः (2) वैष्णवखण्डः (3) ब्रह्मखण्डः (4) काशीखण्डः (5) अवन्तीखण्डः (6) नागरखण्डः ಮತ್ತು (7) प्रभासखण्डः।

**ಮಾಹೇಶ್ವರಖಂಡದಲ್ಲಿ** — ಪುರಾಣೋಪಕ್ರಮ ಸ್ಕಂದನ ಮಾಹಾತ್ಮ್ಯವರ್ಣನೆ ದಕ್ಷಯಜ್ಞಕಥೆ ಶಿವಲಿಂಗಾರ್ಚನೆಯ ಫಲ ದೇವೇಂದ್ರನ ಚರಿತ್ರೆ ಸಮುದ್ರಮಥನಾಖ್ಯಾನ ಪಾರ್ವತಿಯ ಉಪಾಖ್ಯಾನ ಪಾರ್ವತೀಪರಮೇಶ್ವರರ ವಿವಾಹ. ಕುಮಾರೋತ್ಪತ್ತಿ ತಾರಕಾಸುರನೊಡನೆ ಯುದ್ಧ ಪಾಶುಪತಾಖ್ಯಾನ ಚಂಡಿಯ ಆಖ್ಯಾನ ನಾರದಸಮಾಗಮ ಕುಮಾರಮಾಹಾತ್ಮ್ಯ ನದೀಸಾಗರಕೀರ್ತನ ತಾರಕಾಸುರವಧೆ ವಾಸುದೇವಮಾಹಾತ್ಮ್ಯ ಅನೇಕ ತೀರ್ಥಗಳ ವರ್ಣನೆ ಪಾಂಡವರ ಪುಣ್ಯಕಥೆ ಇತ್ಯಾದಿ ವಿಷಯಗಳ ವರ್ಣನೆ.

**ವೈಷ್ಣವಖಂಡದಲ್ಲಿ**—ಭೂಮಿ-ವರಾಹೋಪಾಖ್ಯಾನ ಕಮಲಾ-ಶ್ರೀನಿವಾಸರ ಕಥೆ, ಭರದ್ವಾಜ ಕಥೆ ಮಾರ್ಕಂಡೇಯಾಖ್ಯಾನ ಪುರುಷೋತ್ತಮಮಾಹಾತ್ಮ್ಯ ಅಂಬರೀಷ ಕಥೆ ಇಂದ್ರದ್ಯುಮ್ನೋಪಾಖ್ಯಾನ ಜೈಮಿನಿಯ ಉಪಾಖ್ಯಾನ ನಾರದೋಪಾಖ್ಯಾನ ನೀಲಕಂಠೋಪಾಖ್ಯಾನ ನಾರಸಿಂಹ ವರ್ಣನೆ ಬ್ರಹ್ಮಲೋಕಗತಿ ರಥಯಾತ್ರಾವಿಧಿ ಶಯನೋತ್ಸವಕೀರ್ತನ ದಕ್ಷಿಣಾಮೂರ್ತಿಯ ಉಪಾಖ್ಯಾನ ಡೋಲೋತ್ಸವ ದಶಾವತಾರಕಥೆ ಬದರೀಕ್ಷೇತ್ರದ ಮಾಹಾತ್ಮ್ಯ ಕಾರ್ತಿಕ ಮಾಹಾತ್ಮ್ಯ ಪಂಚಾಮೃತ ಸ್ನಾನ ಪುಣ್ಯ ಘಂಟಾನಾದಾದಿ ಫಲ ನೈವೇದ್ಯಮಾಹಾತ್ಮ್ಯ ಹರಿವಾಸರ ಕೀರ್ತನ ಅಖಂಡೈಕಾದಶೀ ಪುಣ್ಯ ಜಾಗರಣೆಯ ಫಲ ಶ್ರೀಮದ್ಭಾಗವತಮಾಹಾತ್ಮ್ಯ ಮಾಘಮಾಹಾತ್ಮ್ಯ ಇತ್ಯಾದಿ ವರ್ಣನೆ.

**ಬ್ರಹ್ಮಖಂಡದಲ್ಲಿ**— ಸೇತುಮಾಹಾತ್ಮ್ಯ ಚಕ್ರತೀರ್ಥಾದಿ ಮಾಹಾತ್ಮ್ಯ ಬ್ರಹ್ಮಕುಂಡಾದಿ ವರ್ಣನೆ ರಾಮತೀರ್ಥ ಲಕ್ಷ್ಮೀತೀರ್ಥ ಶಂಖಾದಿ ತೀರ್ಥಗಳ ಮಹಿಮೆ. ಧನುಷ್ಕೋಟ್ಯಾದಿ ಮಹಿಮೆ. ರಾಮನಾಥನ ಮಹಿಮೆ ತತ್ವಜ್ಞಾನೋಪದೇಶ ಯಾತ್ರಾವಿಧಾನಕಥನ ವರ್ಣಗಳ ಮತ್ತು ಆಶ್ರಮಗಳ ಧರ್ಮತತ್ವನಿರೂಪಣೆ ದೇವಸ್ಥಾನ ವಿಭಾಗ ಜಾತಿಭೇದಕಥನ ಸ್ಮೃತಿಧರ್ಮಗಳ ನಿರೂಪಣೆ ವೈಷ್ಣವಧರ್ಮ ದಾನಪ್ರಶಂಸೆ ಇತ್ಯಾದಿ ವರ್ಣನೆ.

**ಬ್ರಹ್ಮಖಂಡೋತ್ತರ ಭಾಗದಲ್ಲಿ**— ಪರಶಿವನ ಅದ್ಭುತವಾದ ಮಹಿಮೆ ಪಂಚಾಕ್ಷರ ಮಹಿಮೆ ಗೋಕರ್ಣ ಮಹಿಮೆ ಶಿವರಾತ್ರಿಯ ಮಹಿಮೆ ಪ್ರದೋಷವ್ರತ ಕೀರ್ತನ ಉಮಾಮಾಹೇಶ್ವರ ವ್ರತ ರುದ್ರಾಕ್ಷಮಾಹಾತ್ಮ್ಯ ಇತ್ಯಾದಿ ವರ್ಣನೆ.

**ಕಾಶೀಖಂಡದಲ್ಲಿ**—ಪತಿವ್ರತಾಚರಿತ್ರ ಸಪ್ತರ್ಷಿಗಳ ಧ್ರುವಕುಮಾರನ ಮತ್ತು ತಪೋಲೋಕದ ವರ್ಣನೆ ವಾರಾಣಸೀಪ್ರಶಂಸೆ ಪಿಶಾಚಮೋಕ್ಷಾಖ್ಯಾನ ಇತ್ಯಾದಿ ವರ್ಣನೆ.

**ಅವಂತೀಖಂಡದಲ್ಲಿ**—ಮಹಾಕಾಲವನದ ಉಪಾಖ್ಯಾನ ಶಿವಸ್ತೋತ್ರ ನಾಗಪಂಚಮಿಯ ಮಹಿಮೆ ಗೌರೀವ್ರತೋಪಾಖ್ಯಾನ ನಾನಾತೀರ್ಥಗಳ ವರ್ಣನೆ ದುಂಧುಮಾರೋಪಾಖ್ಯಾನ ಇತ್ಯಾದಿ ವರ್ಣನೆ.

**ನಾಗರಖಂಡದಲ್ಲಿ** — ಲಿಂಗೋತ್ಪತ್ತಿಸಮಾಖ್ಯಾನ ಹರಿಶ್ಚಂದ್ರ ಕಥೆ ವಿಶ್ವಾಮಿತ್ರ ಮಾಹಾತ್ಮ್ಯ ತ್ರಿಶಂಕುವಿನ ಸ್ವರ್ಗಾರೋಹಣ ಹಾಟಕೇಶ್ವರ ಮಾಹಾತ್ಮ್ಯ ವೃಷಾಸುರ ವಧೆ ವಿಷ್ಣುಪಾದ ಗೋಕರ್ಣ ಜಮದಗ್ನಿವಧಾಖ್ಯಾನ ವಾರಣಾಸಿ ದ್ವಾರಕಾ ಅವನ್ತೀ ನಗರಗಳು ಬೃಂದಾವನ ಗಂಗಾ ನರ್ಮದಾ ಮತ್ತು ಸರಸ್ವತೀ ನದಿಗಳು ದ್ವಾದಶಾದಿತ್ಯರು ಇತ್ಯಾದಿ ವರ್ಣನೆ.

**ಪ್ರಭಾಸಖಂಡದಲ್ಲಿ**—ಸೋಮೇಶ ವಿಶ್ವೇಶ ಸಿದ್ಧೇಶ್ವರ ಮೊದಲಾದವರ ಆಖ್ಯಾನ ನರಕೇಶ್ವರ ಸಂವರ್ತೇಶ ನಿಧೀಶ್ವರರ ಕಥೆ ಇತ್ಯಾದಿ ವರ್ಣನೆ.

**स्कान्दपुराण ಸ್ಕಾಂದಪುರಾಣ** (ನಂ) "स्कान्द" ಪದದಲ್ಲಿ ನೋಡಿ.

**स्खदन ಸ್ಖದನ** (ನಂ) 1. ಅಟ್ಟುವುದು, ಓಡಿಸುವುದು. स्खद (स्खदने) स्खदनं विद्रावणम् । 2. ಕತ್ತರಿಸುವುದು. 3. ಹಿಂಸಿಸುವುದು. 4. ಸ್ಥೈರ್ಯ.

**स्खदनीय ಸ್ಖದನೀಯ** (ವಿಂ) 1. ಅಟ್ಟಲ್ಪಡುವ, ಓಡಿಸಲ್ಪಡುವ. 2. ಅಟ್ಟಬೇಕಾದ, ಓಡಿಸಬೇಕಾದ. 3. ಅಟ್ಟಬಹುದಾದ. 4. ಅಟ್ಟಲು ಸಾಧ್ಯವಾದ. स्खद (स्खदने) "अनीयर्" (३-१-९६)। "तव्य:"। **स्खदितव्यः ಸ್ಖದಿತವ್ಯ.**

**स्खदमान ಸ್ಖದಮಾನ** (ವಿಂ) 1. ಅಟ್ಟುತ್ತಿರುವ. स्खद (स्खदने) "शानच्" (३-२-१२४। 2. ಕತ್ತರಿಸುತ್ತಿರುವ. 3. ಹಿಂಸಿಸುತ್ತಿರುವ. 4. ಸ್ಥಿರಗೊಳಿಸುತ್ತಿರುವ.

**स्खन्न ಸ್ಖನ್ನ** (ವಿಂ) 1. ಅಟ್ಟಲ್ಪಟ್ಟ, ಓಡಿಸಲ್ಪಟ್ಟ. स्खद (स्खदने) "क्त:" (३-२-१०२)। धातोः दकारस्य दकारात् परस्य निष्ठातस्य च नः (८-२-४२)। 2. ಕತ್ತರಿಸಲ್ಪಟ್ಟ. 3. ಹಿಂಸಿಸಲ್ಪಟ್ಟ. 4. ಸ್ಥಿರಪಡಿಸಲ್ಪಟ್ಟ.

**स्खलत् ಸ್ಖಲತ್** (ವಿಂ) 1. ಜಾರುತ್ತಿರುವ, ನೆಲೆತಪ್ಪುತ್ತಿರುವ, ಜಾರಿ ಬೀಳುತ್ತಿರುವ. स्खल (स्खलने) "शतृ" (३-२-१२४)। "श्लिष्यद्भिरन्योन्यमुखाग्रसङ्गस्खलत्खलीनं हरिभिर्विलोलैः" माघ० ३-६६। 2. ಬಿಕ್ಕುತ್ತಿರುವ, ಉಗ್ಗುತ್ತಿರುವ. 3. ಎಡವುತ್ತಿರುವ, ಮುಗ್ಗರಿಸುತ್ತಿರುವ. "स्खलतो हि करालम्बः सुहृत्सचिवचेष्टितम्" हितो० ३-१३४। "स्खलन्महेभं प्रपतत्तुरङ्गमं परस्पराश्लिष्टजनं समन्ततः" कुमा० १५-२३। 4. ರೇಗುತ್ತಿರುವ, ಉದ್ರೇಕಗೊಳ್ಳುತ್ತಿರುವ. 5. ತಪ್ಪುದಾರಿಯಲ್ಲಿ ನಡೆಯುತ್ತಿರುವ, ವಿರುದ್ಧವಾಗಿ ನಡೆಯುತ್ತಿರುವ. 6. ಉಲ್ಲಂಘಿಸುತ್ತಿರುವ, ಮೀರಿ ನಡೆಯುತ್ತಿರುವ, ಆಜ್ಞಾಭಂಗಮಾಡುತ್ತಿರುವ. 7. ತೊದಲುತ್ತಿರುವ, ತೊದಲು ಮಾತಾಡುತ್ತಿರುವ. "वदनकमलकं शिशोः स्मरामि स्खलदसमञ्जसमञ्जुजल्पितं ते" उ० रा० ४-४। 8. ಕುಂಠಿತವಾಗುತ್ತಿರುವ, ಕುಗ್ಗುತ್ತಿರುವ. 9. ಚಲಿಸುತ್ತಿರುವ, ಹೊರಳಾಡುತ್ತಿರುವ. "व्यचलन् विशङ्कटकटीरकस्थलीशिखरस्खलन्मुखरमेखलाकुलाः" माघ० १३-३४। स्त्रियां "ङीप्" (४-१-६)। —**न्ती** —**ಸ್ತ್ರೀ.** "मालेवाज्ञा सपुष्पा ननृपतिशतैरुह्यते या शिरोभिः सा मय्येव स्खलन्ती प्रथयति विनयालङ्कृतं ते प्रभुत्वम्" मुद्रा० ३-२४। 10. ಉಪಾಯದಿಂದ ತಪ್ಪಿಸಿಕೊಳ್ಳುತ್ತಿರುವ.

**स्खलन ಸ್ಖಲನ** (ನಂ) 1. ಎಡವುವುದು, ಮುಗ್ಗರಿಸುವುದು. स्खल (स्खलने) भावे "ल्युट्" (३-३-११५)। 2. ವಿರುದ್ಧವಾಗಿ ನಡೆಯುವುದು, ತಪ್ಪುದಾರಿಯಲ್ಲಿ ನಡೆಯುವುದು. "यस्यामजिह्मा महतीमपङ्काः सीमानमत्यायतयोऽत्यजन्तः। जनैरजातस्खलनैर्न जातु द्वयेऽ-

प्यमुच्यन्त विनीतमार्गाः" माघ० ३-५७। 3. ಹೊಡೆತ, ಅಪ್ಪಳಿಸುವುದು. "फलभरपरिणामश्यामजम्बूनिकुञ्जस्खलनमुखरभूरिस्रोतसो निर्झरिण्यः" उ० रा० २-२०। 4. ಉಲ್ಲಂಘಿಸುವುದು, ಆಜ್ಞೆ ಮೀರಿ ನಡೆಯುವುದು. 5. ತೊದಲುವುದು, ತೊದಲು ಮಾತಾಡುವುದು. 6. ಜಾರುವುದು, ನೆಲೆತಪ್ಪಿ ಬೀಳುವುದು. 7. ಕುಂಠಿತವಾಗುವುದು, ಕುಗ್ಗುವುದು, ಕಡಮೆಯಾಗುವುದು. 8. ಚಲಿಸುವುದು, ಹೊರಳಾಡುವುದು, ಚಂಚಲವಾಗಿರುವುದು. 9. ಹರಿದಾಡುವುದು, ಮೆಲ್ಲಗೆ ನಡೆಯುವುದು, ಅಂಬೆಗಾಲಿಡುವುದು, ತೆವಳುವುದು. "श्रमस्खलनदोषघ्नं स्थविरे च प्रशस्यते। सत्त्वोत्साहबलस्थैर्यधैर्यवीर्यविवर्धनम्" सुश्रुत० चिकित्सा० २४-७७। 10. ಉಪಾಯದಿಂದ ತಪ್ಪಿಸಿಕೊಳ್ಳುವುದು.

**स्खलित ಸ್ಖಲಿತ** (ನಂ) 1. ಎಡವುವುದು, ಮುಗ್ಗರಿಸುವುದು. स्खल (सञ्चलने) भावे "क्तः" (३-३-११४)। 2. ಜಾರಿಬೀಳುವುದು. 3. ಉಪಾಯದಿಂದ ಜಾರಿಕೊಳ್ಳುವುದು, ತಪ್ಪಿಸಿಕೊಳ್ಳುವುದು. 4. ಕೆಳಗೆ ಸೋರುವುದು, ಸ್ರವಿಸುವುದು. 5. ತೆವಳುವುದು, ಅಂಬೆಗಾಲಿಡುವುದು. 6. ಅಪ್ಪಳಿಸುವುದು, ಹೊಡೆತ. "निजपाणिपल्लवतलस्खलनादभिनासिकाविवरमुत्पतितैः" माघ० ९-५२। 7. ಆಜ್ಞೆ ಮೀರಿ ನಡೆಯುವುದು, ಉಲ್ಲಂಘಿಸುವುದು. 8. ವಿರುದ್ಧವಾಗಿ ನಡೆದುಕೊಳ್ಳುವುದು. 9. ಮಾತಾಡುವಾಗ ತೊದಲುವುದು. 10. ಮಾರ್ಗ ತಪ್ಪಿ ನಡೆಯುವುದು, ತಪ್ಪುಮಾಡುವುದು. "उत गोत्रस्खलितेषु बन्धनम्" कुमा० ४-८। 11. ವಂಚನೆ, ಮೋಸ. (ವಿಂ) 12. ಚಲಿಸಿದ, ಸ್ಥಾನಬಿಟ್ಟು ಹೊರಟಿರುವ. स्खल कर्त० "क्तः" (३-४-७२)। 13. ಸೋರಿದ, ಸ್ರವಿಸಿದ, ಜಿನುಗಿದ. 14. ಕೆಳಗೆ ಜಾರಿಬಿದ್ದ. 15. ಎಡವಿದ, ಮುಗ್ಗರಿಸಿದ. "स्खलिताभिरप्यनुपदं प्रमदाः प्रणयातिभूमिमगमन् गतिभिः" माघ० ९-७८। 16. ತಡೆಯಲ್ಪಟ್ಟ. कर्म० "क्तः" (३-२-१०२)। "कलयन्नपि सव्यथोऽवतस्थेऽशकुनेन स्खलितः किलेतरोऽपि" माघ० ९-८३। "वलीषु तस्याः स्खलिताः प्रपेदिरे चिरेण नाभिं प्रथमोदबिन्दवः" कुमा० ५-२४।

**स्तन ಸ್ತನ** (ಪುಂ) ಎದೆ, ಸ್ತನ, ಮೊಲೆ, ಪಯೋಧರ. स्तनति कथयति यौवनोदयम् स्तन्यते शब्द्यते कामुकैरिति वा—ष्टन (शब्दे) "अच्" (३-१-१३४)। पुंसि संज्ञायां "घः" (३-३-११८) वा। "सुतनोः स्तनौ च दयितोपगमे तनुरोमराजिपथवेपथवे" माघ० ९-२२। "पन्थानमाशु विजहीहि पुरः स्तनौ ते पश्यन् प्रतिद्विरदकुम्भविशङ्किचेताः" माघ० ५-३४।

**स्तनत् ಸ್ತನತ್** (ವಿಂ) ಶಬ್ದಮಾಡುತ್ತಿರುವ. ष्टन (शब्दे) "शतृ" (३-२-१२४)। "उद्वेलवेगान् स्तनतो गभीरं और्वप्रतिच्छन्दविदीप्तदृष्टीन्" यादव० २०-१५।

**स्तनतट ಸ್ತನತಟ** (ತ್ರಿಂ) ಪಯೋಧರಗಳ ಮೇಲುಭಾಗ, ಸ್ತನಗಳ ಮೇಲಿನಿಂದ ಕೆಳಗಿನವರೆಗಿರುವ ಇಳಿಜಾರು ಪ್ರದೇಶ. स्तनयोः तटम् "सीमन्तं निजमनुबध्नती कराभ्यामालक्ष्यस्तनतटबाहुमूलभागा" माघ० ८-६९।

**स्तनन ಸ್ತನನ** (ನಂ) 1. ಶಬ್ದಮಾಡುವುದು. ष्टन (शब्दे) "ल्युट्" (३-३-११५)। 2. ಗುಡುಗು, ಮೇಘದ ಗರ್ಜನೆ. 3. ಸಂಕಟದಿಂದ ನರಳುವುದು. ष्टन + णिच् "ल्युट्"। 4. ಶಬ್ದಮಾಡುವುದು. 5. ನರಳಿಸುವುದು.

**स्तननीय ಸ್ತನನೀಯ** (ವಿಂ) 1. ಶಬ್ದಮಾಡಬೇಕಾದ. 2. ಶಬ್ದಮಾಡಲು ಅರ್ಹವಾದ. ष्टन (शब्दे) "अनीयर्" (३-१-९६)। 3. ಶಬ್ದಮಾಡಿಸಲ್ಪಡುವ. ष्टन + णिच् "अनीयर्" (३-१-९६)। 4. ಶಬ್ದಮಾಡಿಸಬಹುದಾದ. 5. ಶಬ್ದಮಾಡಿಸಬೇಕಾದ. "तव्यः"। **स्तनितव्यः ಸ್ತನಿತವ್ಯಃ.** णिच् + "तव्यः"। **स्तनयितव्यः ಸ್ತನಯಿತವ್ಯಃ.**

**स्तनन्धय ಸ್ತನಂಧಯ** (ಪುಂ) 1. ಸ್ತನ್ಯಪಾನ ಮಾಡುವ ಶಿಶು, ತಾಯಿಯ ಹಾಲನ್ನು ಕುಡಿಯುವ ಮಗು. स्तनं धयति पिबति—धेट् (पाने) "खश्" (३-२-२९)। मुम् (६-३-६७)। "असंशयं प्राक्तनयोपपत्तेः स्तनन्धयप्रीतिमवाप्स्यसि त्वम्" रघु० १४-७८। 2. ಹಾಲು ಕುಡಿಯುವ ಕರು. "प्रीत्या नियुक्ताँल्लिहतीः स्तनन्धयान् निगृह्य पारीमुभयेन जानुनोः। वर्धिष्णुधाराध्वनि रोहिणीः पयश्चिरं निदध्यौ दुहतः स गोदुहः" माघ० १२-४०। स्त्रियां "ङीप्" (४-१-१५)। **—धयी —ಧಯೀ.**

**स्तनप ಸ್ತನಪ** (ಪುಂ) 1. ತಾಯಿಯ ಹಾಲನ್ನು ಕುಡಿಯುವ ಶಿಶು. स्तनौ पिबति—पा (पाने) "कः" (३-२-३)। (ವಿಂ) 2. ಎದೆಯ ಹಾಲನ್ನು ಕುಡಿಯುವ. (स्त्री०) **—पा —ಪಾ** ತಾಯಿಯ ಹಾಲನ್ನು ಕುಡಿಯುವ ಹೆಣ್ಣುಶಿಶು.

**स्तनपान ಸ್ತನಪಾನ** (ನಂ) ತಾಯಿಯ ಎದೆಹಾಲನ್ನು ಕುಡಿಯುವುದು.

**स्तनपायिन् ಸ್ತನಪಾಯಿನ್** (ವಿಂ) ತಾಯಿಯ ಎದೆ ಹಾಲನ್ನು ಕುಡಿಯುವ. स्तनौ पिबति —पा (पाने)

"णिनिः" (३-१-१३४)। स्त्रियां "ङीप्" (४-१-५)। -पायिनी -ಪಾಯಿನೀ.

**स्तनभर ಸ್ತನಭರ** (ಪುಂ) (ಸ್ಥೂಲವಾದ) ಸ್ತನಗಳ ಭಾರ. स्तनयोः भरः भारः। "स्तनभरेण जितस्तबकानमन्नवलते वलतेऽभिमुखं तव" माघ० ६-११।

**स्तनभव ಸ್ತನಭವ** (ಪುಂ) ರತಿಬಂಧದ ಒಂದು ಭೇದ. "स्वजङ्घाद्वयमध्ये तु कृत्वा योषित्पदद्वयम्। स्तनौ धृत्वा रमेत्कामी बन्धः स्तनभवः स्मृतः" स्मरदी०।

**स्तनमुख ಸ್ತನಮುಖ** (ನಂ) ಕುಚಾಗ್ರ, ಚೂಚುಕ, ಸ್ತನಗಳ ಅಗ್ರಭಾಗ.

**स्तनयत् ಸ್ತನಯತ್** (ವಿಂ) ಶಬ್ದ ಮಾಡಿಸುತ್ತಿರುವ, ಸದ್ದು ಮಾಡಿಸುತ್ತಿರುವ. ष्टन (शब्दे) + णिच् "शतृ" (३-२-१२४)। स्त्रियां "ङीप्" (४-१-६)। -यन्ती -ಯಂತೀ.

**स्तनयित्नु ಸ್ತನಯಿತ್ನು** (ವಿಂ) 1. ಮೇಘ, ಮೋಡ. स्तन (देवशब्दे) + णिच् "इत्नुच्" (उ० ३-२९)। णेरयादेशः (६-४-५५)। "स्तनयित्नोर्मयूरीव चकितोत्कण्ठितं स्थिता" उ० रा० ३-७। 2. ಮೇಘದ ಶಬ್ದ, ಗುಡುಗು. "स्तनयित्नुः पुमान् वारिधरेऽपि स्तनितेऽपि च" मेदि०। 3. ವ್ಯಾಧಿ, ರೋಗ. 4. ಮೃತ್ಯು. "स्तनयित्नुः पयोमुचि। मृत्यौ स्तनिते रोगे च" हेम०। "यदवस्तत्र निस्त्रासा यवनैः स्तनयित्नुभिः" याद० २२-१२। 5. ಕೊನ್ನಾರಿ ಗೆಡ್ಡೆ.

**स्तनवृन्त ಸ್ತನವೃಂತ** (ನಂ) ಸ್ತನಾಗ್ರ, ಚೂಚುಕ.

**स्तनाग्र ಸ್ತನಾಗ್ರ** (ನಂ) ಚೂಚುಕ, ಸ್ತನಗಳ ತುದಿ.

**स्तनान्तर ಸ್ತನಾಂತರ** (ನಂ) ಸ್ತನಗಳ ಮಧ್ಯಭಾಗ, ಹೃದಯ. स्तनयोरन्तरम् मध्यभागः। "विभ्रत्या कौस्तुभन्यासं स्तनान्तरविलम्बितम्" रघु० १०-६२।

**स्तनाभोग ಸ್ತನಾಭೋಗ** (ಪುಂ) 1. (ಸ್ಥೂಲವಾದ) ಸ್ತನಗಳ ಭಾರ. स्तनयोराभोगः। 2. ಸ್ತನಗಳು ಪೂರ್ಣವಾಗಿ ಬೆಳೆದಿರುವಿಕೆ.

**स्तनित ಸ್ತನಿತ** (ನಂ) 1. ಮೇಘದ ಶಬ್ದ, ಗುಡುಗು. स्तन (देवशब्दे) भावे "क्तः" (३-३-११४)। "तोयोत्सर्गस्तनितमुखरो मास्म भूर्विक्लवास्ताः" मेघ० १-३७। (ವಿಂ) 2. ಶಬ್ದಮಾಡಿದ, ಕೂಗಾಡಿದ, ಗದ್ದಲಮಾಡಿದ. ष्टन (शब्दे) कर्त० "क्तः" (३-४-७२)। "वीचिक्षोभस्तनितविहगश्रेणिकाञ्चीगुणायाः संसर्पन्त्याः स्खलितसुभगं दर्शितावर्तनाभेः" मेघ० १-२८। 3. ಶಬ್ದ ಮಾಡಿಸಲ್ಪಟ್ಟ. ष्टन+णिच् कर्म० "क्तः" (३-२-१०२)।

**स्तनितवत् ಸ್ತನಿತವತ್** (ವಿಂ) 1. ಶಬ್ದಮಾಡಿದವನು, ಕೂಗಾಡಿದವನು, ಗದ್ದಲ ಮಾಡಿದವನು. ष्टन (शब्दे) "क्तवतुः" (३-२-१०२)। 2. ಶಬ್ದಮಾಡಿಸಿದವನು. ष्टन + णिच् "क्तवतुः" (३-२-१०२)।

**स्तन्य ಸ್ತನ್ಯ** (ನಂ) 1. ತಾಯಿಯ ಎದೆಹಾಲು. स्तने भवम् "यत्" (४-३-५५)। "अशेषलोकत्रयमातुरस्याः षाण्मातुरः स्तन्यसुधामधासीत्" कुमा० ११-२४। 2. ಕ್ಷೀರ, ಹಾಲು. "स नन्दिनीस्तन्यमनिन्दितात्मा सद्वत्सलो वत्सहुतावशेषम्" रघु० २-६९।

**स्तबक ಸ್ತಬಕ** (ಪುಂ) 1. ಗುಚ್ಛ, ಹೂವಿನ ಗೊಂಚಲು. ष्ठा (गतिनिवृत्तौ) "अबकः" धातोः स्तादेशश्च (उ० ४-९६)। "स्याद्गुच्छकस्तु स्तबकः" अम०। "नवकरनिकरेण स्पष्टबन्धूकसूनस्तबकरचितमेते शेखरं बिभ्रतीव" माघ० ११-४६। 2. ಗ್ರಂಥದ ಒಂದು ಭಾಗ, ಅಧ್ಯಾಯ, ಸರ್ಗ.

**स्तब्ध ಸ್ತಬ್ಧ** (ವಿಂ) 1. ಚಲಿಸದೆ ಇರುವ, ಅಲುಗಾಡದೆ ನಿಂತಿರುವ. स्तन्भु (रोधने) सौत्रो धातुः "क्तः" (३-४-७२)। 2. ಸ್ಥಿರವಾಗಿ ಒಂದೇ ಕಡೆ ಇರುವ, ಸಂಚರಿಸದೆ ಇರುವ. "स्तब्धस्य नश्यति यशो विषमस्य मैत्री" हितो० २-१०८।

**स्तब्धरोमन् ಸ್ತಬ್ಧರೋಮನ್** (ಪುಂ) ವರಾಹ, ಹಂದಿ. स्तब्धानि रोमाणि यस्य।

**स्तभ ಸ್ತಭ** (ಪುಂ) ಅಜ, ಆಡು, ಮೇಕೆ. स्तन्भु (रोधने) "कः" (वा० ३-२-५)। "स्तभच्छागबस्तच्छगलका अजे" अम०।

**स्तम्ब ಸ್ತಂಬ** (ಪುಂ) 1. ಹುಲ್ಲು ಮೊದಲಾದುವುಗಳ ಕಂತೆ. तिष्ठति—ष्ठा (गतिनिवृत्तौ) "अम्बच्" (उ० ४-९६)। "आरण्यकोपात्तफलप्रसूतिः स्तम्बेन नीवार इवावशिष्टः" रघु० ५-१५। 2. ಮಧ್ಯದಲ್ಲಿ ದೂಲವಿಲ್ಲದ ಗಿಡ. 3. ಹುಲ್ಲು ಮೊದಲಾದುವನ್ನು ಅಗೆಯುವ ಸಾಧನ, ಗುದ್ದಲಿ, ಕಳೆ ಗುದ್ದಲಿ.

**स्तम्बकरि ಸ್ತಂಬಕರಿ** (ಪುಂ) 1. ಧಾನ್ಯ. स्तम्बं करोति—स्तम्ब + डुकृञ् (करणे) "इन्" (३-२-२४)। "धान्यं व्रीहिः स्तम्बकरिः" अम०। (ವಿಂ) 2. ಹುಲ್ಲಿನ ಕಂತೆಗಳನ್ನು ಕಟ್ಟುವವನು. "अण्" (३-२-१)। -कारः -ಕಾರಃ.

**स्तम्बकरिता ಸ್ತಂಬಕರಿತಾ** (ಸ್ತ್ರೀಂ) 1. ಹುಲ್ಲುಗಳ ಕಂತೆಗಳನ್ನು ಕಟ್ಟುವುದು. स्तम्बकरेर्भावः "तल्" (५-१-११९)।

2. ಸೊಂಪಾಗಿ ಬೆಳೆಯುವುದು. "न शालेः स्तम्बकरिता वप्तुर्गुणमपेक्षते" मुद्रा० १-३ ।

**स्तम्बघन ಸ್ತಂಬಘನ** (पुं०) ಕಳೆ ಗುದ್ದಲಿ, ಕಳೆಗಳನ್ನು ಕೀಳುವ ಸಣ್ಣ ಗುದ್ದಲಿ. स्तम्बो हन्यते येन—स्तम्ब+हन (हिंसागत्योः) "अप्" घनादेशश्च (३-३-८३)।

**स्तम्बघ्न ಸ್ತಂಬಘ್ನ** (पुं०) ಕಳೆ ಗುದ್ದಲಿ, ಕಳೆಗಳನ್ನು ಕೀಳುವ ಸಣ್ಣ ಗುದ್ದಲಿ. स्तम्बो हन्यते येन—स्तम्ब+हन (हिंसागत्योः) "कः" (३-३-८३)।

**स्तम्बहनन ಸ್ತಂಬಹನನ** (पुं०) ಕಳೆ ಗುದ್ದಲಿ, ಕಳೆಗಳನ್ನು ಕೀಳುವ ಸಣ್ಣ ಗುದ್ದಲಿ. स्तम्बो हन्यतेऽनेन — स्तम्ब + हन (हिंसागत्योः) करं० "ल्युट्" (३-३-११७)।

**स्तम्बेरम ಸ್ತಂಬೇರಮ** (पुं०) ಗಜ, ಆನೆ. स्तम्बे रमते —रमु (क्रीडायाम्) "अच्" (३-२-१३)। "अचोदयन् दानवबप्रभङ्गे स्तम्बेरमान् सागरपोतकल्पान्" याद० २०-१५। "स्तम्बेरमः परिणिनंसुरसावुपैति" माघ० ५-३४।

**स्तम्भ ಸ್ತಂಭ** (पुं०) 1. ಸ್ತಂಭ, ಕಂಬ. स्तम्भु (रोधने) सौत्रो धातुः "अच्" (३-१-१३४)। "यस्यां कपोलैः कलधौतधामस्तम्भेषु भेजे मणिदर्पणश्रीः" माघ० ३-४७। 2. ಅಲುಗಾಡದೆ ಇರುವುದು, ಯಾವಕಾರ್ಯವನ್ನೂ ಮಾಡದೆ ಜಡವಾಗಿರುವುದು. "गात्रस्तम्भः स्तनमुकुलयोरुत्प्रबन्धः प्रकम्पः" मालती० २-५। 3. ಜಡವಾಗಿ ಮಾಡುವುದು, ಮಂಕುಮಾಡುವುದು. 4. ಅಡ್ಡಿ, ಪ್ರತಿಬಂಧ. "सोऽपश्यत् प्रणिधानेन सन्ततेः स्तम्भकारणम्" रघु० १-७४। 5. ಅಡ್ಡಿ, ನಿಗ್ರಹ, ಹತೋಟಿ. 6. ಕಾಂಡ, ದಂಟು. 7. ಕಾರ್ಯದ ಪ್ರತೀಘಾತ, ಕಾರ್ಯದ ಪ್ರತಿಬಂಧ. ಇದೊಂದು ಸಾತ್ತ್ವಿಕಭಾವ. "स्तम्भः चेष्टाप्रतीघातः भयहर्षामयादिभिः" सा० द० ३-१३६।

**स्तम्भन ಸ್ತಂಭನ** (न०) 1. ಜಡಗೊಳಿಸುವುದು, ಮಂಕುಮಾಡುವುದು, ನಿಶ್ಚೇಷ್ಟವಾಗಿ ಮಾಡುವುದು. स्तम्भु (रोधने) सौत्रो धातुः + णिच् "ल्युट्" (३-३-११५)। अग्निस्तम्भनम् जलस्तम्भनम् ಇತ್ಯಾದಿ. 2. ತಡೆಗಟ್ಟುವುದು, ಅಡ್ಡಿಪಡಿಸುವುದು. "वेलोल्लोलक्षुभितकरुणोज्जृम्भणस्तम्भनार्थम्" उ० रा० ३-३६। 3. ಸ್ವಾಸ್ಥ್ಯ, ಶಾಂತತೆ, ಸಮಾಧಾನ. "पराङ्मुखेऽपि दैवेऽत्र कृत्यं कार्यं विपश्चिता। आत्मदोषविनाशाय स्वचित्तस्तम्भनाय च" पञ्चतं० १-३९१। (पुं०) 4. ಮನ್ಮಥನ ಪಂಚಬಾಣಗಳಲ್ಲೊಂದು. स्तम्भयति—स्तम्भु+णिच् "ल्युः" (३-१-१३४)। ಮನ್ಮಥನ ಐದು ಬಾಣಗಳು—(1) उन्मादनः (2) शोषणः (3) तापनः (4) स्तम्भनः ಮತ್ತು (5) सम्मोहनः।

**स्तम्भनीय ಸ್ತಂಭನೀಯ** (वि०) 1. ತಡೆಗಟ್ಟಲ್ಪಡುವ, ಅಡ್ಡಿಯುಂಟುಮಾಡಲ್ಪಡುವ. 2. ತಡೆಗಟ್ಟಬೇಕಾದ. 3. ಅಡ್ಡಿಯುಂಟುಮಾಡಬಹುದಾದ. 4. ತಡೆಗಟ್ಟಲು ಶಕ್ಯವಾದ. स्तम्भु (रोधने) सौत्रो धातुः+णिच् "अनीयर्" (३-१-९६)। 5. ಜಡವಾಗಿ ಮಾಡಲ್ಪಡುವ, ಮಂಕುಹಿಡಿಸಲ್ಪಡುವ. 6. ಮಂಕುಹಿಡಿಸಬಹುದಾದ. 7. ಜಡವಾಗಿ ಮಾಡಲು ಶಕ್ಯವಾದ. 8. ಮಂಕುಹಿಡಿಸಬೇಕಾದ. "तव्यः" (३-१-९६)। **स्तम्भितव्यः ಸ್ತಂಭಿತವ್ಯಃ.**

**स्तम्भित ಸ್ತಂಭಿತ** (वि०) 1. ತಡೆಗಟ್ಟಲ್ಪಟ್ಟ, ಅಡ್ಡಿಯುಂಟುಮಾಡಲ್ಪಟ್ಟ. स्तम्भु (रोधने) "क्तः" (३-२-१०२)। "अवन्ध्यतपसा विन्ध्यः स्तम्भितः कुम्भजन्मना" याद० २२-२१८। 2. ಸಮಾಧಾನಗೊಳಿಸಲ್ಪಟ್ಟ, ಚಿತ್ತಸ್ವಾಸ್ಥ್ಯವುಂಟುಮಾಡಲ್ಪಟ್ಟ.

**स्तर ಸ್ತರ** (पुं०) 1. ಭೂಮಿಯಲ್ಲಿ ಕಲ್ಲು ಮಣ್ಣು ಮೊದಲಾದುವುಗಳ ಪದರ, ಮರಿಸೆ. स्तीर्यते—स्तृञ् (आच्छादने) "अप्" (३-३-५७)। 2. ಹಾಸಿಗೆ. (न०) 3. ಹರಡುವುದು.

**स्तरण ಸ್ತರಣ** (न०) ಹರಡುವುದು, ಹಾಸುವುದು. स्तृञ् (आच्छादने) भावे "ल्युट्" (३-३-११५)।

**स्तरिमन् ಸ್ತರಿಮನ್** (पुं०) ತಲ್ಪ, ಹಾಸಿಗೆ. स्तृञ् (आच्छादने) "इमनिच्" (उ० ४-१४७)।

**स्तरी ಸ್ತರೀ** (स्त्री०) 1. ಬಂಜೆ ಹಸು, ಗೊಡ್ಡು ಹಸು. 2. ಧೂಮ, ಹೊಗೆ. स्तृणाति—स्तृञ् (आच्छादने) "ईः" (उ० ३-१५८)।

**स्तव ಸ್ತವ** (पुं०) 1. ಕೊಂಡಾಡುವುದು, ಹೊಗಳುವುದು, ಸ್ತೋತ್ರ. ष्टुञ् (स्तुतौ) "अप्" (३-३-५७)। "तोषमेति वितथैः स्तवैः परस्ते च तस्य सुलभाः शरीरिभिः" माघ० १४-३। 2. ಪ್ರಶಂಸಿಸುವುದು, ಶ್ಲಾಘಿಸುವುದು. स्वार्थे "कः"। स्तवकः।

**स्तवन ಸ್ತವನ** (न०) ಸ್ತುತಿ, ಹೊಗಳುವುದು, ಕೊಂಡಾಡುವುದು. ष्टुञ् (स्तुतौ) भावे "ल्युट्" (३-३-११५)।

**स्तव्य ಸ್ತವ್ಯ** (वि०) 1. ಸ್ತುತಿಗೆ ಅರ್ಹನಾದ, ಹೊಗಳಲು ಅರ್ಹನಾದ, ಕೊಂಡಾಟಕ್ಕೆ ಅರ್ಹನಾದ. स्तवमर्हति — स्तव "यः" (५-१-६६)। 2. ಸ್ತೋತ್ರಮಾಡಲು ಅರ್ಹತೆಯುಳ್ಳ, ಸ್ತುತಿಸಲು ಯೋಗ್ಯತೆಯುಳ್ಳ. "तां

प्राप्य चित्रामिव तारकेशः स्तव्यैः स्तुतो वन्दिगणैरभौमैः" यादव० १३-७२ ।

**स्ताव** ಸ್ತಾವ (पुं०) ಸ್ತುತಿ, ಹೊಗಳುವುದು, ಕೊಂಡಾಡುವುದು. ष्टुञ् (स्तुतौ) "घञ्" (३-३-१८) ।

**स्तावक** ಸ್ತಾವಕ (वि०) ಸ್ತೋತ್ರಮಾಡುವವನು, ಹೊಗಳುವವನು, ಕೊಂಡಾಡುವವನು. ष्टुञ् (स्तुतौ) "ण्वुल्" (३-१-१३३) । "स्तावकांस्तानभिप्रेत्य पृथुर्वैन्यः प्रतापवान् । मेघनिर्ह्लादया वाचा प्रहसन्निदमब्रवीत्" भाग० ४-१५-२१ ।

**स्तिमित** ಸ್ತಿಮಿತ (वि०) 1. ಅಲುಗಾಡದಿರುವ, ಸ್ಥಿರವಾಗಿರುವ, ಚಲಿಸದಿರುವ, ಒಂದೇ ಕಡೆ ನಿಂತಿರುವ. "प्रसन्नसिंहस्तिमितं च वीक्षितं ध्वनिश्च माङ्गल्यमृदङ्गमांसलः" उ० रा० ६-२५ । 2. ಆರ್ದ್ರವಾಗಿರುವ, ಒದ್ದೆಯಾಗಿರುವ, ತೇವವಾಗಿರುವ. स्तिम्यति — ष्टिम (आर्द्रीभावे) "क्तः" (३-४-७२) । 3. ಪ್ರಶಾಂತವಾದ, ಆರ್ಭಟವಿಲ್ಲದ. "क्षुभितमुकलिकातरलं मनः पय इव स्तिमितस्य महोदधेः" मालती० ३-१० । 4. ಮುಚ್ಚಲ್ಪಟ್ಟ. "इति विज्ञापितो राज्ञा ध्यानस्तिमितलोचनः" रघु० १-७३ । "स्तिमितोऽचचलार्द्रयोः" मेदि० । "स्तिमितौ क्लिन्ननिश्चलौ" हेम० ।

**स्तिम्भि** ಸ್ತಿಂಭಿ (पुं०) 1. ಸಮುದ್ರ, ಸಾಗರ. स्तम्नाति— स्तन्भु (रोधने) सौत्रो धातुः "इन्" धातोरकारस्य इच्च (उ० ४-१२१) । स्तिम्भिः समुद्रः सि० कौ० । 2. ಗೊಂಚಲು, ಗೊನೆ. 3. ಅಡ್ಡಿ, ಅಡಚಣೆ, ತಡೆ.

**स्तीर्वि** ಸ್ತೀರ್ವಿ (पुं०) 1. ಅಧ್ವರ್ಯು, (ಯಾಗದಲ್ಲಿ) ಯಜುರ್ವೇದವನ್ನು ತಿಳಿದ ಋತ್ವಿಕ್ಕು. स्तृञ् (आच्छादने) "क्विन्" (उ० ४-५६)। 2. ಆಕಾಶ, ಗಗನ. 3. ರಕ್ತ. 4. ಜಲ, ನೀರು. 5. ಇಂದ್ರ.

**स्तुत** ಸ್ತುತ (वि०) 1. ಸ್ತೋತ್ರಮಾಡಲ್ಪಟ್ಟ, ಹೊಗಳಲ್ಪಟ್ಟ, ಕೊಂಡಾಡಲ್ಪಟ್ಟ. ष्टुञ् (स्तुतौ) "क्तः" (३-२-१०२)। "वचोभिर्मधुरैः सार्थैः विनम्रेण मया स्तुतः। प्रीतिमानभवद्देवः स्तोत्रं कस्य न तुष्टये" कुमा० १०-९ । 2. ಪ್ರಶಂಸಿಸಲ್ಪಟ್ಟ, ಶ್ಲಾಘಿಸಲ್ಪಟ್ಟ.

**स्तुति** ಸ್ತುತಿ (स्त्री०) 1. ಸ್ತೋತ್ರ, ಹೊಗಳುವುದು, ಕೊಂಡಾಡುವುದು. ष्टुञ् (स्तुतौ) "क्तिन्" (३-३-९४)। "स्तुत्या पुरास्माभिरुपासितेन पितामहेनेति निरूपितं नः। सेनापतिः संयति दैत्यमेतं पुरः स्मराराति सुतो निहन्ति" कुमा० १२-४७। 2. ಪ್ರಶಂಸೆ, ಶ್ಲಾಘನೆ, "स्तुत्यं स्तुतिभिरर्थ्याभिरुपतस्थे सरस्वती" रघु० ४-६। 3. ದುರ್ಗಾದೇವಿ.

**स्तुतिपाठक** ಸ್ತುತಿಪಾಠಕ (पुं०) ರಾಜನ ಹೊಗಳು ಭಟ. स्तुतिं पठति — पठ (व्यक्तायां वाचि) "ण्वुल्" (३-१-१३३) । —व्रतः— ವ್ರತಃ. स्तुतिरेव व्रतं यस्य ।

**स्तुत्य** ಸ್ತುತ್ಯ (वि०) 1. ಸ್ತುತಿಗೆ ಅರ್ಹನಾದ, ಹೊಗಳಿಕೆಗೆ ಯೋಗ್ಯನಾದ. स्तुतिमर्हति—स्तुति "यत्" (५-१-६६)। "स्तुत्यं स्तुतिभिरर्थ्याभिरुपतस्थे सरस्वती" रघु० ४-६ । 2. ಪ್ರಶಂಸೆಗೆ ಅರ್ಹನಾದ, ಶ್ಲಾಘನೆಗೆ ಯೋಗ್ಯನಾದ.

**स्तुभ** ಸ್ತುಭ (पुं०) ಅಜ, ಆಡು, ಹೋತ. स्तुभ्नाति— स्तुन्भु (रोधने) "कः" (वा० ३-२-५)।

**स्तुषेय्य** ಸ್ತುಷೇಯ್ಯ (पुं०) ಇಂದ್ರ. ष्टुञ् (स्तुतौ) "क्सेय्यः" (उ० ३-९९)।

**स्तूप** ಸ್ತೂಪ (पुं०) 1. ಮಣ್ಣಿನ ರಾಶಿ. स्तूयते — ष्टुञ् (स्तुतौ) "पः" धातोः दीर्घश्च (उ० ३-२५) । 2. ಬೌದ್ಧ ಸಾಧುಸಂತರ ಜ್ಞಾಪಕಾರ್ಥ ಪೂಜ್ಯವಸ್ತುವಾಗಿ ಕಾದಿಟ್ಟ ಅವರಿಗೆ ಸೇರಿದ ವಸ್ತುಗಳ ಭಾಗ. 3. ಸಮೂಹ, ರಾಶಿ, ಗುಂಪು. 4. ಶಕ್ತಿ, ಬಲ.

**स्तूयमान** ಸ್ತೂಯಮಾನ (वि०) 1. ಸ್ತುತಿಸಲ್ಪಡುತ್ತಿರುವ, ಹೊಗಳಲ್ಪಡುತ್ತಿರುವ. ष्टुञ् (स्तुतौ) कर्म० "शानच्" (३-२-१२४)। 2. ಹೊಗಳಲ್ಪಡುತ್ತಿರುವ, ಕೊಂಡಾಡಲ್ಪಡುತ್ತಿರುವ. "अथ समुदितहर्षैरादृतो मन्त्रिवृद्धैः सुरपतिदयिताभिः स्तूयमानापदानः" यादव० १३-१०८। 3. ಪ್ರಶಂಸಿಸಲ್ಪಡುತ್ತಿರುವ, ಶ್ಲಾಘಿಸಲ್ಪಡುತ್ತಿರುವ.

**स्तेन** ಸ್ತೇನ (पुं०) 1. ಚೋರ, ತಸ್ಕರ, ಕಳ್ಳ. स्तेनयति— स्तेन (चौर्ये) + णिच् "अच्" (३-१-१३४)। "न तं स्तेना न चामित्रा हरन्ति न च नश्यति। तस्माद्राज्ञा निधातव्यो ब्राह्मणेष्वक्षयो निधिः" मनु० ७-८३। 2. ದೇವರಿಗೆ ನಿವೇದನ ಮಾಡದೆ ಭುಜಿಸುವವನು. "इष्टान् भोगान् हि वो देवाः दास्यन्ते यज्ञभाविताः। तैर्दत्तानप्रदायैभ्यो यो भुङ्क्ते स्तेन एव सः" गीता ३-१२।

**स्तेम** ಸ್ತೇಮ (पुं०) ಒದ್ದೆಯಾಗಿರುವಿಕೆ, ತೇವ, ಆರ್ದ್ರತೆ. ष्टिम (आर्द्रीभावे) "घञ्" (३-३-१८)। "तेमस्तेमौ समुन्दने" अम०।

**स्तेय** ಸ್ತೇಯ (न०) ಕಳ್ಳತನ, ಕದಿಯುವುದು. स्तेनस्य भावः कर्म वा "यत्" नकारलोपश्च (५-१-१२५)।

"प्रत्यक्षं वा परोक्षं वा रात्रौ वा यदि वा दिवा। यत् परद्रव्यहरणं स्तेयं तत्परिकीर्तितम्"।

**स्तेयिन् ಸ್ತೇಯಿನ್** (पुं०) 1. ಚೋರ, ಕಳ್ಳ, ತಸ್ಕರ. स्तेयमस्यास्ति—"इनिः" (५-२-११५)। 2. ಸ್ವರ್ಣಕಾರ, ಅಕ್ಕಸಾಲಿಗ.

**स्तैन्य ಸ್ತೈನ್ಯ** (नं०) 1. ಚೌರ್ಯ, ಕಳ್ಳತನ. स्तेनस्य भावः कर्म वा "ष्यञ्" (५-१-१२४)। (पुं०) 2. ಚೋರ, ಕಳ್ಳ, ತಸ್ಕರ. स्तेन स्वार्थे "ष्यञ्"।

**स्तैमित्य ಸ್ತೈಮಿತ್ಯ** (नं०) 1. ಜಡವಾಗಿರುವಿಕೆ, ಯಾವ ಕಾರ್ಯವನ್ನೂ ಮಾಡದಿರುವಂತೆ ಮಂಕಾಗಿರುವಿಕೆ. स्तिमितस्य भावः "ष्यञ्" (५-१-१२४)। 2. ಆರ್ದ್ರವಾಗಿರುವಿಕೆ, ತೇವವಾಗಿರುವಿಕೆ. 3. ಅಲುಗಾಡದಿರುವಿಕೆ, ಚಲಿಸದಿರುವಿಕೆ. 4. ಶಾಂತತೆ, ನೆಮ್ಮದಿ, ಸಮಾಧಾನ.

**स्तोक ಸ್ತೋಕ** (पुं०) 1. ಅಲ್ಪಪ್ರಮಾಣ, ಬಿಂದು, ಹನಿ, ತೊಟ್ಟು. स्तुच्यते—ष्टुच (प्रसादे) "घञ्" (३-३-१९)। "स्पृशन्ति शरवत्तीक्ष्णाः स्तोकमन्तर्विशन्ति च" माघ० २-७८। 2. ಚಾತಕಪಕ್ಷಿ. (वि०) 3. ಅಲ್ಪವಾದ, ಸ್ವಲ್ಪವಾದ. स्तोकेनोन्नतिमायाति स्तोकेनायात्यधोगतिम्" पञ्चतं० १-१६१। 4. ಸಣ್ಣದಾದ, ಚಿಕ್ಕದಾದ. "भस्मस्तोकपवित्रलाञ्छनमुरो धत्ते त्वचं रौरवीम्" उ० रा० ४-२०। (क्रि० वि०) 5. ಅಲ್ಪವಾಗಿ, ಸ್ವಲ್ಪವಾಗಿ. "स्तोकावशेषितसदाभरणप्रबन्धा" याद० १९-१६। "स्तोकस्त्रिष्वल्पे चातके पुमान्" मेदि०।

**स्तोकक ಸ್ತೋಕಕ** (पुं०) ಚಾತಕಪಕ್ಷಿ. स्तोकं कायति —कै (शब्दे) "कः" (३-२-३)। स्तोकं कं जलमस्य इति वा। "स्तोककस्य खलु चञ्चूपुटेन म्लानिरुल्लसति तद्घनसङ्घे" नैष० ५-१२७।

**स्तोतव्य ಸ್ತೋತವ್ಯ** (वि०) 1. ಸ್ತುತಿಸಲ್ಪಡುವ, ಸ್ತೋತ್ರ ಮಾಡಲ್ಪಡುವ. 2. ಸ್ತುತಿಸಬೇಕಾದ. 3. ಸ್ತುತಿಗೆ ಅರ್ಹನಾದ, ಕೊಂಡಾಡಲು ಯೋಗ್ಯನಾದ. 4. ಸ್ತುತಿಸಬೇಕಾದ. ष्टुञ् (स्तुतौ) "तव्यः" (३-१-९६)।

**स्तोतृ ಸ್ತೋತೃ** (वि०) 1. ಸ್ತುತಿಸುವವನು, ಕೊಂಡಾಡುವವನು. ष्टुञ् (स्तुतौ) "तृच्" (३-१-१३३)। 2. ಪ್ರಶಂಸಿಸುವವನು, ಶ್ಲಾಘಿಸುವವನು.

**स्तोत्र ಸ್ತೋತ್ರ** (नं०) 1. ಸ್ತುತಿ, ಹೊಗಳುವುದು, ಕೊಂಡಾಡುವುದು. ष्टुञ् (स्तुतौ) "ष्ट्रन्" (३-२-१८२)। अस्ति नः स्तुतिवचोऽमृतं तव स्तोत्रयोग्य न च तेन तृप्यसि" माघ० १४-३। 2. ಪ್ರಶಂಸೆ, ಶ್ಲಾಘನೆ.

**स्तोभ ಸ್ತೋಭ** (पुं०) 1. ತಡೆಯುವುದು, ಅಡ್ಡಿಯುಂಟುಮಾಡುವುದು. स्तुम्भु (रोधने) "घञ्" (३-३-१८)। 2. ಸಾಮವೇದದ ಒಂದು ಭಾಗ.

**स्तोम ಸ್ತೋಮ** (पुं०) 1. ಸಮೂಹ, ಗುಂಪು. ष्टुञ् (स्तुतौ) "मन्" (उ० १-१३७)। "ऋषीणामुग्रतपसां यमुनातीरवासिनाम्। लवणत्रासितः स्तोमस्त्रातारं त्वामुपस्थितः" उ० रा० १-५१। 2. ಅಧ್ವರ, ಯಾಗ. 3. ಸ್ತೋತ್ರ, ಸ್ತುತಿ. "स्तोमः स्तोत्रेऽध्वरे वृन्दे" अम०। (नं०) 4. ಆಹುತಿ. 5. ಐಶ್ವರ್ಯ, ಸಂಪತ್ತು. 6. ಕಬ್ಬಿಣದ ಅಗ್ರಭಾಗವುಳ್ಳ ದಂಡ, ಕೋಲು. (वि०) 7. ವಕ್ರವಾದ, ಕುಟಿಲವಾದ.

**स्त्यान ಸ್ತ್ಯಾನ** (नं०) 1. ಸಾಂದ್ರತೆ, ಘನವಾಗಿರುವಿಕೆ, ವೃದ್ಧಿ, ವೈಪುಲ್ಯ. स्त्यै (शब्दसङ्घातयोः) "क्तः" (३-३-११४)। "दधति कुहरभाजामत्र मल्लूकयूनामनुरसितगुरूणि स्त्यानमम्बूकृतानि" उ० रा० २-२१। 2. ಪ್ರತಿಧ್ವನಿ. 3. ನುಣುಪು, ನಯ. 4. ಆಲಸ್ಯ, ಸೋಮಾರಿತನ. "स्त्यानं स्निग्धे प्रतिध्वाने घनत्वालस्ययोरपि" मेदि०। (वि०) 5. ತೇವವಾಗಿರುವ, ಒಣಗದೆ ಇರುವ. "स्त्यानापविद्धघनशोणितशोणपाणिरुत्तम्भयिष्यति कचान् तव देवि भीमः" वेणी० १-२१। 6. ನಯವಾಗಿರುವ, ನುಣುಪಾಗಿರುವ. स्त्यै कर्त० "क्तः" (३-४-७२)। 7. ಶಬ್ದ ಮಾಡುವವನು. 8. ಘನವಾಗಿರುವ, ದಪ್ಪವಾಗಿರುವ. 9. ರಾಶಿಹಾಕುವವನು, ಗುಂಪು ಕೂಡಿಸುವವನು.

**स्त्री ಸ್ತ್ರೀ** (स्त्री०) 1. ಹೆಂಗಸು, ವನಿತೆ, ಮಹಿಳೆ. स्त्यायति गर्भोऽस्याम्—स्त्यै (शब्दसङ्घातयोः) "ड्रट्" (उ० ४-१६५)। "स्त्रीणामशिक्षितपटुत्वममानुषीषु सन्दृश्यते किमुत याः प्रतिबोधवत्यः" शाकु० ५-२२। ಮಹಿಳೆಗೆ ಪತಿಯೇ ಪ್ರಿಯತಮ ಪತಿಯೇ ಮಿತ್ರ ಪತಿಯೇ ಸಕಲ ಬಂಧುವರ್ಗ. ಅಪೇಕ್ಷಿತವಾದ ಎಲ್ಲಾ ಇಷ್ಟವಿಷಯಗಳೂ ಪತಿಯೇ. ಪತಿಯೇ ನಿಧಿ. ಪತಿಯೇ ಅವಳ ಜೀವಿತ. ಹೀಗೆಯೇ ಪುರುಷನಿಗೂ ಧರ್ಮಪತ್ನಿಯೇ ಸರ್ವಸ್ವ. ಈ ವಿಷಯವನ್ನು ಸ್ತ್ರೀಪುರುಷರಿಬ್ಬರೂ ಅನ್ಯೋನ್ಯ ತಿಳಿದುಕೊಂಡಿರುವುದು ಆವಶ್ಯಕವಾದುದು. "प्रेयो मित्रं बन्धुता वा समग्रा सर्वे कामाः शेवधिर्जीवितं च। स्त्रीणां भर्ता धर्मदाराश्च पुंसामित्यन्योन्यं वत्सयोर्ज्ञातमस्तु" मालती० ६-१८। ["पद्मिनी" ಮೊದಲಾದ ನಾಲ್ಕು ವಿಧ (ಜಾತಿಯ) ಸ್ತ್ರೀಯರ ವಿವರಕ್ಕೆ "चित्रिणी" ಪದದಲ್ಲಿ ನೋಡಿ.] ಸ್ತ್ರೀಯರು ಯಾವಾಗಲೂ

ಅಸ್ವತಂತ್ರರು. ಅವರು ಕೆಲವು ನಿಯಮಗಳಿಗೆ ಬದ್ಧರಾಗಿದ್ದರೆ ಮಾತ್ರ ದಾಂಪತ್ಯ ಸೌಖ್ಯದ ಸವಿಯನ್ನು ಅನುಭವಿಸಬಹುದು. ಪತಿಯಾದವನು ಸ್ತ್ರೀಯನ್ನು ಸ್ವತಂತ್ರಳಾಗಿರಲು ಅವಕಾಶ ಕೊಡಕೂಡದು. "अस्वतन्त्राः स्त्रियः कार्याः पुरुषैः स्वैर्दिवानिशम् । विषयेषु च सज्जन्त्यः संस्थाप्या आत्मनो वशे" ಮನು॰ ೯-೨। ಪತಿಯು ತನ್ನ ಧರ್ಮಪತ್ನಿಗೆ ಅರ್ಥಸಂಗ್ರಹಣ (ಧನವನ್ನು ಕೂಡಿಡುವುದು) ಅದರ ವೆಚ್ಚ ದೇವರು ಮತ್ತು ಅತಿಥಿಗಳಿಗಾಗಿ ಪಾಕ ಮನೆಯಲ್ಲಿರುವ ಆಭರಣ ಶಯನ ಆಸನ ಮೊದಲಾದ ಗೃಹೋಪಕರಣಗಳ ಅವೇಕ್ಷಣ ಇತ್ಯಾದಿ ಗೃಹಕೃತ್ಯಕಾರ್ಯಗಳಲ್ಲಿ ನಿಯೋಜಿಸಿ ಆ ವಿಷಯಗಳಲ್ಲಿ ಅವಳಿಗೆ ಸಂಪೂರ್ಣ ಸ್ವಾತಂತ್ರ್ಯ ಕೊಡಬೇಕು. "अर्थस्य सङ्ग्रहे चैनां व्यये चैव नियोजयेत् । शौचे धर्मेऽन्नपक्त्यां च पारिणाह्यस्य चेक्षणे" ಮನು॰ ೯-೧೧। ಇದು ಈಚಿನ ಕಾಲದ ಮಹಿಳಾಮಣಿಗಳಿಗೆ ಕಹಿಯಾಗಿರಬಹುದು. ಆದರೆ ಪ್ರಾಚೀನರ ಉಕ್ತಿಯನ್ನು ಉಲ್ಲಂಘಿಸಿ ವರ್ತಿಸುವ ನಾರೀಮಣಿಯರು ಈಗ ಪ್ರತಿಕ್ಷಣದಲ್ಲೂ ಅನುಭವಿಸುತ್ತಿರುವ ಕಹಿಯು ಸರ್ವವಿದಿತವಾಗಿದೆ. ಶ್ರೀಮದ್ಭಗವದ್ಗೀತೆಗೆ ಮಾನ್ಯತೆ ಕೊಡುವವರಾದರೆ "अधर्माभिभवात् कृष्ण प्रदुष्यन्ति कुलस्त्रियः । स्त्रीषु दुष्टासु वार्ष्णेय जायते वर्णसंकरः" ಗೀತಾ ೧-೪೧। "संकरस्य च कर्ता स्यामुपहन्यामिमाः प्रजाः" ಗೀತಾ ೩-೨೪॥ ಇದನ್ನು ಅನುಸಂಧಾನಮಾಡುತ್ತಿರಬೇಕು. ಸ್ತ್ರೀಯರಿಗೆ ಸಕಲಧಾರ್ಮಿಕ ಕಾರ್ಯಗಳಲ್ಲೂ ಪ್ರಾಧಾನ್ಯವಿರುವುದು. ಅವಳ ಸಹಕಾರವಿಲ್ಲದಿದ್ದಲ್ಲಿ ಪುರುಷನು ಯಾವ ಧರ್ಮಕಾರ್ಯಕ್ಕೂ ಅರ್ಹನಲ್ಲ. ಇದರಿಂದ ಸ್ತ್ರೀಯು ಧರ್ಮಪತ್ನಿಯಾಗುವಳು. "सत्यामन्यां सवर्णायां धर्मकार्यं न कारयेत् । सवर्णासु विधौ धर्म्ये ज्येष्ठया न विनेतरा" ಯಾಜ್ಞ॰ ೧-೮೮।

**ಶುಭಲಕ್ಷಣವುಳ್ಳ ಹೆಂಗಸು :** ದೇಹದಲ್ಲಿ ಸುವರ್ಣ ಕಾಂತಿ ಹಸ್ತಗಳಲ್ಲಿ ನಸುಗೆಂಪು ಈ ಲಕ್ಷಣಗಳಿರುವ ಹೆಂಗಸರು ಬಹಳ ವಿರಳ. ಇದು ಶುಭಲಕ್ಷಣ. "या च काञ्चनवर्णाभा रक्तहस्तसरोरुहा । सहस्राणां तु नारीणां भवेत्सापि पतिव्रता" ॥ ಹಸ್ತದಲ್ಲಿ ಅಂಕುಶ ಕುಂಡಲ ಮತ್ತು ಚಕ್ರಗಳ ಚಿಹ್ನೆಯಿರುವ ಹೆಂಗಸು ರಾಜನನ್ನು ಮದುವೆಯಾಗುವಳು. "अङ्कुशं कुण्डलं चक्रं यस्याः पाणितले भवेत् । पुत्रं प्रसूयते नारी नरेन्द्रं लभते पतिम्" । ಬೆವರದೆಯೂ ಮೃದುವಾಗಿಯೂ ಇರುವ ಅಂಗಾಲುಗಳೂ ರೋಮರಹಿತವಾದ ಮೊಳಕಾಲುಗಳೂ ಆನೆಯ ಸೊಂಡಲಿನ ಆಕಾರದ ತೊಡೆಗಳೂ ಇರುವುದು ಸ್ತ್ರೀಯರ ಶುಭಲಕ್ಷಣ. "अस्वेदिनौ मृदुतलौ प्रशस्तौ चरणौ स्त्रियाः । शुभे जङ्घे विरोमे च ऊरू हस्तिकरोपमौ" ॥ ಪತಿಯು ಜೀವಿಸಿರುವಾಗ ಉಪವಾಸ ಮಾಡಿ ವ್ರತವನ್ನು ಆಚರಿಸುವ ಹೆಂಗಸು ಪತಿಯ ಆಯುಸ್ಸಿನ ಕ್ಷಯಕ್ಕೆ ಕಾರಣಳಾಗುವಳು. "पत्यौ जीवति या नारी उपोष्य व्रतमाचरेत् । आयुः संहरते पत्युः सा नारी नरकं व्रजेत्" ॥

**ಗೃಹಿಣೀಧರ್ಮ :** ಗೃಹಿಣಿಯು ಪ್ರಾತಃಕಾಲ ಎದ್ದು ಪತಿಯನ್ನು ನಮಸ್ಕರಿಸಿ ಅಂಗಳವನ್ನು ಗೋಮಯದ ನೀರಿನಿಂದ ಶುದ್ಧಮಾಡಿ ರಂಗವಲ್ಲಿಯಿಂದ ಅಲಂಕರಿಸಿ ಗೃಹಕೃತ್ಯವನ್ನು ಗಮನಿಸಬೇಕು. ಅನಂತರ ಮಡಿಯುಟ್ಟುಕೊಂಡು ಪತಿ ಗುರು ಮತ್ತು ಬ್ರಾಹ್ಮಣರನ್ನು ವಂದಿಸಿ ಗೃಹದೇವತೆಯನ್ನು (ಮನೆಯ ದೇವರನ್ನು) ಪೂಜಿಸಬೇಕು. ಗೃಹಕೃತ್ಯವನ್ನು ಚೆನ್ನಾಗಿ ನಿರ್ವಹಿಸಿ ಅತಿಥಿಗಳಿಗೂ ಪತಿಗೂ ಭೋಜನ ಮಾಡಿಸಿದ ನಂತರ ತಾನೂ ಭೋಜನ ಮಾಡಬೇಕು. "सा शुद्धा प्रातरुत्थाय नमस्कृत्य पतिं सुरम् । प्राङ्गणे मण्डलं दद्यात् गोमयेन जलेन च ॥ गृहकृत्यं च कृत्वा च स्नात्वागत्य गृहं सती । गुरुं विप्रं पतिं नत्वा पूजयेत् गृहदेवताम् ॥ गृहकृत्यं सुनिर्वृत्य भोजयित्वा पतिं सती । अतिथिं पूजयित्वा च स्वयं भुङ्क्ते सुखं सती" ಬ್ರಹ್ಮವೈ॰ । 2. ಎರಡನೇ ಛಂದಸ್ಸಿನ ಎರಡು ಅಕ್ಷರಗಳ ಒಂದು ವೃತ್ತ. अत्युक्तायाम् "गौ स्त्री" ವೃ॰ ೯॰। ಪ್ರತಿಪಾದದಲ್ಲಿಯೂ ಎರಡು ಗುರು ವರ್ಣಗಳಿರುವುದು ಸ್ತ್ರೀವೃತ್ತ. ಉದಾ : साध्वी या स्यात् । मान्या सा स्त्री । 3. ಸ್ತ್ರೀಲಿಂಗ. "श्रुतिः स्त्री वेद आम्नायः" ಅಮ॰ ।

**स्त्रीगवी ಸ್ತ್ರೀಗವೀ** (ಸ್ತ್ರೀ॰) ಧೇನು, ಆಕಳು, ಹಸು.

**स्त्रीगुरु ಸ್ತ್ರೀಗುರು** (ಪುಂ॰) ಮಂತ್ರಗಳನ್ನು ಉಪದೇಶಿಸುವ ಮತ್ತು ಮಂತ್ರಗಳ ವ್ಯಾಖ್ಯಾನ ಮಾಡುವ ಹೆಂಗಸು. स्त्री चासौ गुरुश्च ।

**स्त्रीघोष ಸ್ತ್ರೀಘೋಷ** (ಪುಂ॰) ಪ್ರಭಾತ, ಪ್ರಾತಃಕಾಲ. स्त्रीणां घोषो यत्र ।

**स्त्रीचिह्न ಸ್ತ್ರೀಚಿಹ್ನ** (ನ॰) ಸ್ತ್ರೀತ್ವದ ಲಕ್ಷಣ, ಯೋನಿ ಸ್ತನ ಮುಂತಾದುವು.

**स्त्रीचौर ಸ್ತ್ರೀಚೌರ** (ಪುಂ॰) 1. ಕಾಮುಕ, ಜಾರ. स्त्रियाश्चौरः । "स्त्रीचौरो रतहिण्डकः" त्रिकाण्ड॰ । (ವಿ॰) 2. ಹೆಂಗಸರನ್ನು ಅಪಹರಿಸುವವನು.

**स्त्रीता ಸ್ತ್ರೀತಾ** (स्त्री०) ಸ್ತ್ರೀತ್ವ, ಸ್ತ್ರೀಭಾವ, ಹೆಂಗಸಾಗಿರುವಿಕೆ. स्त्रियाः भावः "तल्" (५-१-११९)। "त्वः" **स्त्रीत्वम् ಸ್ತ್ರೀತ್ವಮ್.**

**स्त्रीधन ಸ್ತ್ರೀಧನ** (न०) ಹೆಂಗಸಿನ ಆಸ್ತಿ, ಎಲ್ಲಾ ವಿಷಯದಲ್ಲೂ ಹೆಂಗಸಿಗೆ ಅಧಿಕಾರವುಳ್ಳ ಧನ. स्त्रियाः धनम्। ಸ್ತ್ರೀಧನವು ಆರು ವಿಧ. "अध्यग्न्यध्यावाहनिकं दत्तं च प्रीतिकर्मणि। भ्रातृमातृपितृप्राप्तं षड्विधं स्त्रीधनं स्मृतम्" मनु० ९-१९४। (1) ವಿವಾಹಸಮಯದಲ್ಲಿ ಅಗ್ನಿಯ ಸನ್ನಿಧಿಯಲ್ಲಿ ತಂದೆ ಮೊದಲಾದವರಿಂದ ಕೊಡಲ್ಪಟ್ಟ ಧನ ಅಧ್ಯಗ್ನಿ. "विवाहकाले यत् स्त्रीभ्यो दीयते ह्यग्निसन्निधौ। तदध्यग्निकृतं सद्भिः स्त्रीधनं परिकीर्तितम्"। (2) ತಂದೆಯಮನೆಯಿಂದ ಪತಿಯ ಗೃಹಕ್ಕೆ ಹೊರಟುಬರುವಾಗ ಕೊಟ್ಟ ಧನ ಅಧ್ಯಾವಾಹನಿಕ. "यत्पुनर्लभते नारी नीयमना तु पैतृकात्। अध्यावाहनिकं नाम तत् स्त्रीधनमुदाहृतम्"। ಪ್ರೀತಿಯಿಂದ (3) ಪತಿ (4) ಸಹೋದರ (5) ತಾಯಿ ಮತ್ತು (6) ತಂದೆ ಇವರಿಂದ ಕೊಡಲ್ಪಟ್ಟ ಧನ. ಸ್ತ್ರೀಧನವನ್ನು ತೆಗೆದುಕೊಳ್ಳುವುದಕ್ಕಾಗಲಿ ಅದನ್ನು ಖರ್ಚುಮಾಡುವುದಕ್ಕಾಗಲಿ ಪತಿ ಸುತ ತಂದೆ ಸಹೋದರ ಇವರಾರಿಗೂ ಅಧಿಕಾರವಿಲ್ಲ. "न भर्ता नैव च सुतो न पिता भ्रातरो न च। आदाने वा विसर्गे वा स्त्रीधने प्रभविष्णवः" कात्यायनः। ಸಂತಾನವಿಲ್ಲದೆ ಮೃತಳಾದ ಹೆಂಗಸಿನ ಮಾತಾಪಿತೃದತ್ತವಾದ ಸ್ಥಿರಾಸ್ತಿಯು ಸಹೋದರರಿಗೆ ಸೇರತಕ್ಕದ್ದು. "पितृभ्यां चैव यद्दत्तं दुहितुः स्थावरं धनम्। अप्रजायामतीतायां भ्रातृगामि च सर्वदा" कात्यायनः।

**स्त्रीधर्म ಸ್ತ್ರೀಧರ್ಮ** (पुं०) 1. ಹೆಂಗಸಿನ ರಜಸ್ಸು, ಮುಟ್ಟು. स्त्रियाः धर्मः। 2. ಹೆಂಗಸಿನ ಕರ್ತವ್ಯ.

**स्त्रीधर्मिणी ಸ್ತ್ರೀಧರ್ಮಿಣೀ** (स्त्री०) ರಜಸ್ವಲೆ, ಋತುಮತಿಯಾದ ಹೆಂಗಸು. स्त्रीधर्मो रजोऽस्त्यस्याः "इनिः" (५-२-११५)। "ङीप्" (४-१-५)। "स्त्रीधर्मिणी वरारोहा शोणितेन परिप्लुता। एकवस्त्राथ पाञ्चाली पाण्डवानभ्यवैक्षत" भा० सभा० १०३-१४।

**स्त्रीपण्योपजीविन् ಸ್ತ್ರೀಪಣ್ಯೋಪಜೀವಿನ್** (पुं०) ಹೆಂಡತಿಯನ್ನು ವ್ಯಭಿಚಾರಕ್ಕೆ ಬಿಟ್ಟು ಆ ಹಣದಿಂದ ಜೀವಿಸುವವನು, ಹೆಂಗಸು ವ್ಯಭಿಚಾರದಿಂದ ಸಂಪಾದಿಸಿದ ದ್ರವ್ಯದಿಂದ ಜೀವನ ನಡಸುವವನು. स्त्रीपण्येन उपजीवति — उप + जीव (प्राणधारणे) "णिनिः" (३-२-७८)।

**स्त्रीपर ಸ್ತ್ರೀಪರ** (पुं०) ವಿಟ, ಕಾಮುಕ. स्त्रीषु परः।

**स्त्रीपुंधर्म ಸ್ತ್ರೀಪುಂಧರ್ಮ** (पुं०) ಸ್ತ್ರೀ ಮತ್ತು ಪುರುಷರ ವ್ಯವಹಾರ. स्त्री च पुमांश्च स्त्रीपुंसौ तयोर्धर्मः। ಇದು ಅಷ್ಟಾದಶ ವಿವಾದಪದಗಳಲ್ಲೊಂದು.

**स्त्रीपुंसलक्षणा ಸ್ತ್ರೀಪುಂಸಲಕ್ಷಣಾ** (स्त्री०) ಸ್ತನ ಮೀಸೆ ಮೊದಲಾದ ಸ್ತ್ರೀ ಪುರುಷರ ಲಕ್ಷಣವುಳ್ಳ ಹೆಂಗಸು. स्त्रीपुंसयोर्लक्षणं यस्याः।

**स्त्रीपुंसौ ಸ್ತ್ರೀಪುಂಸೌ** (पुं० द्विव०) 1. ಹೆಂಗಸು ಮತ್ತು ಗಂಡಸು. स्त्री च पुमांश्च स्त्रीपुंसौ "अच्" (५-४-७७) निपा०। "स्त्रीपुंसावात्मभागौ ते भिन्नमूर्तेः सिसृक्षया" कुमा० २-७। 2. ಹೆಂಗಸು ಮತ್ತು ಗಂಡಸು ಇವರ ಯುಗ್ಮ, ದ್ವಂದ್ವ. "एषोदिता लोकयात्रा नित्यं स्त्रीपुंसयोः शुभा" मनु० ९-८५।

**स्त्रीपूर्व ಸ್ತ್ರೀಪೂರ್ವ** (पुं०) ಎಲ್ಲಾ ಕಾರ್ಯಗಳಲ್ಲೂ ಹೆಂಗಸನ್ನು ಮುಂದಾಳಾಗಿ ಮಾಡಿಕೊಂಡಿರುವವನು. स्त्री पूर्वं प्राधान्येन अग्रगामिनी यस्य।

**स्त्रीरञ्जन ಸ್ತ್ರೀರಂಜನ** (न०) ತಾಂಬೂಲ. स्त्रियं रञ्जयति—रञ्ज (रागे) + णिच् "ल्युः" (३-१-१३४)।

**स्त्रीरत्न ಸ್ತ್ರೀರತ್ನ** (न०) ಶ್ರೇಷ್ಠ ಹೆಂಗಸು, ಉತ್ಕೃಷ್ಟ ಹೆಂಗಸು. "स्त्रीरत्नसृष्टिरपरा प्रतिभाति सा मे" शाकु० २-९।

**स्त्रीसभ ಸ್ತ್ರೀಸಭ** (न०) ಸ್ತ್ರೀಯರ ಸಭೆ. स्त्रीणां नारीणां सभा। सभाशब्दस्य नपुंसकत्वम् (२-४-२४)।

**स्त्रैण ಸ್ತ್ರೈಣ** (न०) 1. ಸ್ತ್ರೀಯರ ಸಮೂಹ. स्त्रीणां समूहः "नञ्" (४-१-८७)। 2. ಸ್ತ್ರೀಯರ ಸಂಬಂಧವಾದ, ಸ್ತ್ರೀಯರಿಗೆ ಸಹಜವಾದ. स्त्रीणामिदम् — स्त्री "नञ्" (४-१-८७)। "कर्णेजपैराहितराज्यलोभा स्त्रैणेन नीता विकृतिं लघिम्ना" भट्टि० ३-७। 3. ಸ್ತ್ರೀಯರಲ್ಲಿರುವ. स्त्रीषु भवः "नञ्" (४-१-८७)। 4. ಸ್ತ್ರೀಯರಿಂದ ಬಂದ. स्त्रीभ्यः आगतः—स्त्री "नञ्" (४-१-८७)। 5. ಸ್ತ್ರೀಯರಿಗೆ ಹಿತವಾದ. स्त्रीभ्यो हितम् "नञ्" (४-१-८७)।

**स्थग ಸ್ಥಗ** (वि०) ಧೂರ್ತ, ವಂಚಕ, ಮೋಸಗಾರ. स्थगे (संवरणे) "अच्" (३-१-१३४)।

**स्थगन ಸ್ಥಗನ** (न०) 1. ಮರೆಮಾಡುವುದು, ಮುಚ್ಚಿಡುವುದು. स्थगे (संवरणे) "ल्युट्" (३-३-११५)। स्थग (आच्छादने) "ल्युट्" वा। 2. ಅಂತರ್ಧಾನವಾಗುವುದು, ಮರೆಯಾಗುವುದು,

**स्थगनीय ಸ್ಥಗನೀಯ** (वि०) 1. ಮುಚ್ಚಿಡಲ್ಪಡುವ. 2. ಮುಚ್ಚಿಡಬೇಕಾದ. 3. ಮುಚ್ಚಿಡಬಹುದಾದ. स्थग (आच्छादने) "णिच्" "अनीयर्" (३-१-९६)। 4. ಮರೆಮಾಡಲ್ಪಡುವ. 5. ಮರೆಮಾಡಬೇಕಾದ. 6. ಮರೆಮಾಡಬಹುದಾದ.

**स्थगयत् ಸ್ಥಗಯತ್** (वि०) 1. ಮುಚ್ಚುತ್ತಿರುವ. 2. ಮರೆಮಾಡುತ್ತಿರುವ. स्थग (आच्छादने) + णिच् "शतृ" (३-२-१२४)। स्त्रियां "ङीप्" (४-१-६)। –यन्ती –ಯನ್ತೀ.

**स्थगित ಸ್ಥಗಿತ** (वि०) 1. ಮುಚ್ಚಿಡಲ್ಪಟ್ಟ. 2. ಮರೆಮಾಡಲ್ಪಟ್ಟ. स्थग (आच्छादने) + णिच् "क्तः" (३-२-१०२)। "न पुष्पितात्र स्थगितार्करश्मावनन्ततानेऽकतमा लताऽलम्" माघ० ४-३९। "स्थगिताम्बरक्षितितले परितस्तिमिरे जनस्य दृशमन्धयति" माघ० ९-२१। स्थग (आच्छादने) चौरादिकः इति माघ० ४-२४ व्याख्याने।

**स्थगी ಸ್ಥಗೀ** (स्त्री०) ತಾಂಬೂಲ ಕರಂಡ, ತಾಂಬೂಲದ ಪಾತ್ರೆ. स्थग्यतेऽनया — स्थग (आच्छादने) + णिच् "कः" (वा० ३-३-५८)। गौरा० "ङीष्" (४-१-४१)।

**स्थण्डिल ಸ್ಥಂಡಿಲ** (न०) 1. ಯಾಗಕ್ಕಾಗಿ ಮಂತ್ರದಿಂದ ಪರಿಷ್ಕರಿಸಲ್ಪಟ್ಟ ಭೂಮಿ. स्थलन्त्यस्मिन्—ष्ठल (स्थाने) "इलच्" (उ० १-५७)। निपा०। "यज्ञे परिष्कृतस्थाने स्यातां स्थण्डिलचत्वरे" शब्दर०। "नित्यं नैमित्तिकं कार्यं स्थण्डिले वा समाचरेत्। हस्तमात्रं तु तत्कुर्याच्चतुरस्रं समन्ततः"॥ 2. ದೇವರ ಧ್ಯಾನ (ತಪ) ಕ್ಕಾಗಿ ಪ್ರತ್ಯೇಕವಾಗಿ ಸಿದ್ಧಪಡಿಸಿದ ಸ್ಥಳ. "अशेत सा बाहुलतोपधायिनी निषेदुषी स्थण्डिल एव केवलम्" कुमा० ५-१२। 3. ಬಂಜರು ಭೂಮಿ.

**स्थण्डिलशायिन् ಸ್ಥಂಡಿಲಶಾಯಿನ್** (वि०) ವ್ರತಕ್ಕಾಗಿ ಕೇವಲ ಭೂಮಿಯ ಮೇಲೆ ಮಲಗುವವನು. स्थण्डिले शेते—शीङ् (स्वप्ने) "णिनिः" (३-२-८०)। सप्तम्या वा अलुक् (६-३-१४)। पक्षे **स्थण्डिलेशायी ಸ್ಥಂಡಿಲೇಶಾಯೀ.** "मण्डलत्यागमेवैच्छद्वीक्ष्य स्थण्डिलशायिनः" नैष० १७-१८८।

**स्थण्डिलेशय ಸ್ಥಂಡಿಲೇಶಯ** (पुं०) ವ್ರತಕ್ಕಾಗಿ ಕೇವಲ ಭೂಮಿಯ ಮೇಲೆ ಮಲಗುವವನು. स्थण्डिले शेते—शीङ् (स्वप्ने) "अच्" (३-२-१५)। सप्तम्या वा अलुक्। पक्षे **स्थण्डिलशयः ಸ್ಥಂಡಿಲಶಯಃ.**

**स्थपति ಸ್ಥಪತಿ** (पुं०) 1. ಬೃಹಸ್ಪತಿಯ ಯಾಗ ಮಾಡಿದವನು. ष्ठा (गतिनिवृत्तौ) "कः" (वा० ३-३-५८)। स्थः पतिः। 2. ಕಂಚುಕಿ. 3. ಶಿಲ್ಪಿ. 4. ರಾಜ, ದೊರೆ. 5. ಕುಬೇರ. 6. ಸಾರಥಿ. "स्थपतिः शिल्पिभेदेऽपि स्थपतिः कञ्चुकिन्यपि। जीवेष्टियाजके सूतेऽपि" विश्व०। (वि०) 7. ಮುಖ್ಯ, ಪ್ರಧಾನ, ಶ್ರೇಷ್ಠ. तिष्ठन्ति स्वधर्मे स्थाः सन्तः—तेषां पतिः। "बृहस्पतिसवेनेष्टं येनासौ स्थपतिर्मतः। प्रासादादिकरः शिल्पी स्थपतिः कञ्चुकी मतः" शाश्वत०।

**स्थपुट ಸ್ಥಪುಟ** (वि०) 1. ಬಹಳ ಕಷ್ಟಪರಿಸ್ಥಿತಿಯಲ್ಲಿರುವವನು, ವಿಷಮಸ್ಥಿತಿಯಲ್ಲಿದ್ದು ಜೀವಿಸುವವನು. 2. ಮೇಲಕ್ಕೆ ಎತ್ತಲ್ಪಟ್ಟು ಮತ್ತೆ ಕೆಳಕ್ಕೆ ತಳ್ಳಲ್ಪಟ್ಟವನು.

**स्थल ಸ್ಥಲ** (न०) 1. ಕೃತ್ರಿಮವಾದ ಭೂಪ್ರದೇಶ, ತೇವವಿಲ್ಲದೆ ಒಣಗಿಸಿದ ಭೂಮಿ. स्थलति — ष्ठल (स्थाने) "अच्" (३-१-१३४)। "नलिनी निगूढसलिला च यत्र सा स्थलमित्यधः पतति या सुयोधने" माघ० १३-५९। 2. ನೆಲ, ಭೂಮಿ. "पारसीकांस्ततो जेतुं प्रतस्थे स्थलवर्त्मना" रघु० ४-६०। 3. ಪ್ರದೇಶ, ಜಾಗ. "उवाच वाग्मी दशनप्रभाभिः संवर्धितोरःस्थलतारहारः रघु० ५-५२। 4. ಪಟವಾಸ, ವಸ್ತ್ರಗೃಹ, ಡೇರೆ, ಗುಡಾರ. "पटवासः पटमयं दूष्यं वस्त्रगृहं स्थलम्" त्रिकाण्ड०। (स्त्रीन०) –ला –ಲಾ. ಕೃತ್ರಿಮ ಭೂಮಿ. –ली –ಲೀ. ಅಕೃತ್ರಿಮಭೂಮಿ. स्थली अकृत्रिमा चेत्। स्थलान्या। सि० कौ०। "ङीष्" (४-१-४२)।

**स्थलकमल ಸ್ಥಲಕಮಲ** (न०) ನೆಲದಾವರೆ, ಬೆಟ್ಟದಾವರೆ. स्थलस्य कमलम्।

**स्थलकमलिनी ಸ್ಥಲಕಮಲಿನೀ** (स्त्री०) 1. ಬೆಟ್ಟದಾವರೆಯ ಬಳ್ಳಿ. 2. ಬೆಟ್ಟದಾವರೆ. "साभ्रेऽह्नीव स्थलकमलिनीं न प्रबुद्धां न सुप्ताम्" मेघ० २-२३।

**स्थलकुमुद ಸ್ಥಲಕುಮುದ** (पुं०) ಕರವೀರ ವೃಕ್ಷ, ಗನ್ನೇರಳೆ.

**स्थलचर ಸ್ಥಲಚರ** (वि०) ಭೂಮಿಯ ಮೇಲೆ ಸಂಚರಿಸುವವನು, ನೆಲದಲ್ಲಿ ತಿರುಗಾಡುವವನು. स्थले चरति—चर (गतौ) "टः" (३-२-१६)।

**स्थलपद्म ಸ್ಥಲಪದ್ಮ** (न०) ನೆಲದಾವರೆ, ಬೆಟ್ಟದಾವರೆ. "कूलानि सामर्षतयेव तेनुः सरोजलक्ष्मीं स्थलपद्महासैः" भट्टि० २-३।

**स्थलमार्ग ಸ್ಥಲಮಾರ್ಗ** (पुं०) ನೆಲದಲ್ಲಿ ಸಂಚರಿಸುವ ದಾರಿ. –वर्त्मन् –ವರ್ತ್ಮನ್. (न०) ಭೂಮಾರ್ಗ. "पारसीकांस्ततो जेतुं प्रतस्थे स्थलवर्त्मना" रघु० ४-६०।

**स्थलशुद्धि ಸ್ಥಲಶುದ್ಧಿ** (स्त्री०) ಭೂಶುದ್ಧಿ, ಅಶುದ್ಧವಾದ ನೆಲವನ್ನು ಶುದ್ಧಮಾಡುವುದು.

**स्थलशृङ्गाटक ಸ್ಥಲಶೃಂಗಾಟಕ** (पुं०) ನೆಗ್ಗಿಲು ಗಿಡ.

**स्थलसीमन् ಸ್ಥಲಸೀಮನ್** (पुं०) ಭೂಮಿಯ ಸರಹದ್ದು, ಮರ್ಯಾದೆ, ಎಲ್ಲೆ, ಗಡಿ. स्थलस्य सीमा।

**स्थला ಸ್ಥಲಾ** (स्त्री०) ಕೃತ್ರಿಮ ಭೂಮಿ, ಸಮಮಾಡಿ ಒಣಗಿಸಿದ ಭೂಮಿ. **-ली -ಲೀ.** ಅಕೃತ್ರಿಮ ಭೂಮಿ, ಸ್ವಭಾವವಾಗಿ ಒಣಗಿದ ಭೂಮಿ. "सैषा स्थली यत्र विचिन्वता त्वां भ्रष्टं मया नूपुरमेकमुर्व्याम्। अदृश्यत त्वच्चरणारविन्दविश्लेषदुःखादिव बद्धमौनम्" सा० द०।

**स्थलीदेवता ಸ್ಥಲೀದೇವತಾ** (स्त्री०) ಗ್ರಾಮದೇವತೆ, ಗ್ರಾಮಗಳಲ್ಲಿ ಪೂಜಿಸುವ ದೇವತೆ. स्थल्या देवता। "पश्यन्तीनां न खलु बहुशो न स्थलीदेवतानां मुक्तास्थूलास्तरुकिसलयेष्वश्रुलेशाः पतन्ति" मेघ० २-४३।

**स्थलेशय ಸ್ಥಲೇಶಯ** (वि०) 1. ನೆಲದ ಮೇಲೆ ಮಲಗುವವನು. स्थले शेते—शीङ् (स्वप्ने) "अच्" (३-२-१५)। सप्तम्या अलुक् (६-३-१८)। 2. ನೆಲದ ಮೇಲೆ ಮಲಗುವ ಪ್ರಾಣಿ.

**स्थवि ಸ್ಥವಿ** (पुं०) 1. ಕುಮಿದ, ನೇಯಿಗೆಯವನು. ष्ठा (गतिनिवृत्तौ) "क्विन्" (उ० ४-५६)। ह्रस्वो निपात्यते। स्थविः तन्तुवायः सि० कौ०। 2. ಸ್ವರ್ಗ. 3. ಜಂಗಮವಸ್ತು, ಸಂಚರಿಸುವ ವಸ್ತು, ಚಲಿಸಬಹುದಾದ ವಸ್ತು.

**स्थविर ಸ್ಥವಿರ** (पुं०) 1. ವೃದ್ಧ, ಹೆಚ್ಚು ವಯಸ್ಸಾದವನು, ಮುದುಕ. तिष्ठति—ष्ठा (गतिनिवृत्तौ) "किरच्" धातोः वुक् आकारस्य ह्रस्वश्च निपा० (उ० १-५३)। "ऊर्ध्वं प्राणाह्युत्क्रामन्ति यूनः स्थविर आगते। प्रत्युत्थानाभिवादाभ्यां पुनस्तान् प्रतिपद्यते" मनु० २-१२०। 2. ಬ್ರಹ್ಮ. 3. ಭಿಕ್ಷುಕ, ಯಾಚಕ. (वि०) 4. ಸ್ಥಿರವಾದ, ದೃಢವಾದ. (स्त्री०) **-रा -ರಾ.** ವೃದ್ಧೆ, ಮುದುಕಿ, ಹೆಚ್ಚು ವಯಸ್ಸಾಗಿರುವ ಹೆಂಗಸು.

**स्थविष्ठ ಸ್ಥವಿಷ್ಠ** (वि०) ಬಹಳ ದೊಡ್ಡದಾದ, ಅತಿ ದೊಡ್ಡದಾದ. अयमेषाम् अतिशयेन स्थूलः—स्थूल "इष्ठन्" (५-३-५५)। परमूतयणो लोपः पूर्वस्य गुणः (६-४-१५६)।

**स्थवीयस् ಸ್ಥವೀಯಸ್** (वि०) ಎರಡರಲ್ಲಿ ದೊಡ್ಡದಾದ ಒಂದು. अनयोरयमतिशयेन स्थूलः—स्थूल "ईयसुन्" (५-३-५७)। लस्य लोपः पूर्वस्य गुणः (६-४-१५६)। स्त्रियां "ङीप्" (४-१-६)। **-यसी -ಯಸೀ.** "मुहुः प्रतिस्खलितपरायुधा युधि स्थवीयसी रचलनितम्बनिर्झराः" माघ० १७-२१।

**स्थाणु ಸ್ಥಾಣು** (पुं०) 1. ಈಶ್ವರ, ಪರಶಿವ. तिष्ठति—ष्ठा (गतिनिवृत्तौ) "णुः" (उ० ३-३७)। "स्थाणुदग्धवपुषस्तपोवन प्राप्य दाशरथिरात्तकार्मुकः" रघु० ११-१३। "स स्थाणुः स्थिरभक्तियोगसुलभो निःश्रेयसायास्तु वः" विक्र० १-१। 2. ಬ್ರಹ್ಮ, ಚತುರ್ಮುಖ. "ब्रह्मा सुरगु : स्थाणुः मनुः कः परमेष्ठ्यथ" भा० आदि० १-४५। 3. ಗೂಟ, ಮೊಳೆ, ಅಣೆ. "स्थाणौ निषङ्गिण्यनसि क्षणं पुरः शुशोच लाभाय कृतक्रयो वणिक्" माघ० १२-२६। (पुंन०) 4. ರೆಂಬೆಗಳಿಲ್ಲದ ಮೋಟು ಮರ. "स्थाणुरस्त्री ध्रुवः शङ्कुः" अम०। 5. ಈಟಿ, ಭರ್ಜಿ. 6. ವಿಷ್ಣು. दृढानुग्रहस्तिष्ठति इति स्थाणुः। "संग[illegible] नवं विश्राण्यापि शिवं बहु। स्वयं न विश्राम्य[illegible] स स्थाणुः परिकीर्तितः" इति निरुक्तिः। "सर्वः शर्वः शिवः स्थाणुः" वि० स०। (वि०) 7. ಸ್ಥಿರವಾಗಿರುವ, ದೃಢವಾಗಿರುವ, ಚಲಿಸದಿರುವ. "अव्ययं च व्ययं चैव यदिदं स्थाणुजङ्गमम्। तत् ससर्ज तदा ब्रह्मा भगवानादिकृद्विभुः" विष्णुपु०।

**स्थाण्डिल ಸ್ಥಾಂಡಿಲ** (वि०) ವ್ರತಕ್ಕಾಗಿ ನೆಲದ ಮೇಲೆ ಮಲಗಿರುವವನು. स्थण्डिले शेते—स्थण्डिल "अण्" (४-२-१५)। "यः स्थण्डिले व्रतवशाच्छेते स्थण्डिलशाय्यसौ। स्थाण्डिलश्च" अम०।

**स्थातव्य ಸ್ಥಾತವ್ಯ** (वि०) 1. ಇರಬೇಕಾದ, ನಿಲ್ಲಬೇಕಾದ. 2. ಇರಲು ಯೋಗ್ಯವಾದ, ನಿಲ್ಲಲು ಅರ್ಹವಾದ. 3. ಇರಬಹುದಾದ, ನಿಲ್ಲಬಹುದಾದ. ष्ठा (गतिनिवृत्तौ) "तव्यः" (३-२-१०२)। "वाणिज्येन गतः स मे गृहपतिः वार्तापि न श्रूयते प्रातस्तज्जननी प्रसूततनया जामातृगेहं गता। बालाहं नवयौवना निशि कथं स्थातव्यमस्मद्गृहे सायं सम्प्रति वर्तते पथिक हे स्थानान्तरे गम्यताम्" शृङ्गारति०।

**स्थातृ ಸ್ಥಾತೃ** (वि०) ಚಲಿಸದೆ ನಿಲ್ಲುವವನು, ನಿಂತುಬಿಡುವವನು. ष्ठा (गतिनिवृत्तौ) "तृच्" (३-१-१३३)। "अचेष्टमानप्रकृतीन्ययासि स्थातान्ययस्कान्त इवाभिमुख्यात्" याद० २०-८२।

**स्थान ಸ್ಥಾನ** (न०) 1. ಸ್ಥಳ, ಪ್ರದೇಶ, ಜಾಗ. स्थीयतेऽत्र—ष्ठा (गतिनिवृत्तौ) "ल्युट्" (३-३-११७)।

"स्त्रीवत्ससंस्थानजुषा प्रकृत्या स्थानेन चिह्नेन च लक्षणीयौ" यादः १३-१०६। 2. ಗೃಹ, ಮನೆ. "यथार्थशौर्या यदुवीर योधाः स्थानानि चित्तानि च दानवानाम्" यादः २०-१८। 3. ಪ್ರದೇಶ, ಸನ್ನಿವೇಶ. "स्थानानुरूपं प्रसृतैः प्रवाहैः मह्यद्भिरेषा मधुरावदातैः" यादः १८-४७। 4. ಸ್ಥಿತಿ, ಇರುವಿಕೆ. "न खलु भवतां देव्याः स्थानं गृहेऽभिमतं ततः तृणमिव वने शून्ये त्यक्ता न चाप्यनुशोचिता" उ० रा० ३-२२। 5. ರಾಜನ ಉಪಚಯ ಮತ್ತು ಅಪಚಯಾಭಾವ, ರಾಜನೂ ಶತ್ರುವೂ ಸಮಾನಸ್ಥಿತಿಯಲ್ಲಿರುವಿಕೆ, ಸಾಮ್ಯಾವಸ್ಥಿತಿ. ರಾಜನೀತಿ ಶಾಸ್ತ್ರಜ್ಞರು ಹೇಳಿರುವ ತ್ರಿವರ್ಗದಲ್ಲಿ ರಾಜನ ಉಪಚಯಾ ಪಚಯಾಭಾವಗಳು ಸ್ಥಾನವೆನಿಸುವುದು. "क्षयः स्थानं च वृद्धिश्च त्रिवर्गो नीतिवेदिनाम्" अम०। ಷಾಡ್ಗುಣ್ಯ ಗಳಲ್ಲಿ ಯಾವುದರಿಂದ ವೃದ್ಧಿಯಾಗಲಿ ಕ್ಷಯವಾಗಲಿ ಉಂಟಾಗುವುದಿಲ್ಲವೋ ಆ ಗುಣಾನುಷ್ಠಾನವು, ಕೋಶ ದಂಡಗಳು ಇದ್ದದ್ದು ಇದ್ದಂತೆಯೇ ಇರುವುದಕ್ಕೆ ಕಾರಣ ವಾಗುವುದರಿಂದ ಅದು ಸ್ಥಾನವಾಗುವುದು. "यस्मिन् वा गुणे स्थितः स्वकर्मवृद्धिं क्षयं वा नाभिपश्येत् एतत् स्थानम्" अर्थशा० अधि० ७ अध्या० १। 6. ಸಾದೃಶ್ಯ. 7. ಯೋಗ್ಯವಾದ ಸ್ಥಳ, ತಕ್ಕುದಾದ ಸ್ಥಳ, ಅವರವರಿಗೆ ಅರ್ಹವಾದ ಸ್ಥಳ. "स्थानेष्वेव नियोक्तव्या भृत्याश्चाभरणानि च। न हि चूडामणिः पादे प्रभवामीति बध्यते" पञ्चतं० १-७८। 8. ಗ್ರಂಥದ ಒಂದು ಭಾಗ, ಅಧ್ಯಾಯ ಸರ್ಗ ಪಟಲ ಪರಿಚ್ಛೇದ ಆಶ್ವಾಸ ಇತ್ಯಾದಿ. "पटलः काण्डमस्त्रियाम्। स्थानं प्रकरणं पर्वाह्निकं च ग्रन्थसन्धयः" त्रिकाण्ड०। 9. ಶ್ರೇಣಿ, ದರ್ಜೆ, ವರ್ಗ. मण्डलाधिपतिस्थानम्। न्यायाधीशस्थानम्। प्रांशुपालस्थानम्। सचिवस्थानम् ಇತ್ಯಾದಿ. 10. ಕಾರಣ, ಪ್ರಯೋಜಕ. "गुणाः पूजास्थानं गुणिषु न च लिङ्गं न च वयः" उ० रा० ४-११। 11. ಅವಕಾಶ, ಸಂದರ್ಭ. "बहिः सर्वाकारप्रवणरमणीयं व्यवहरन् पराभ्यूहस्थानान्यपि तनुतराणि स्थगयति" मालती० १-१७। 12. ರಾಜ್ಯದ ದಂಡ ಕೋಶ ಪುರ ಮತ್ತು ರಾಷ್ಟ್ರ ಇವುಗಳ ಶಕ್ತಿ, ಸಾಮರ್ಥ್ಯ, ದಾರ್ಢ್ಯ, ಸತ್ತ್ವ. "तैः सार्धं चिन्तयेन्नित्यं सामान्यं सन्धिविग्रहम्। स्थानं समुदयं गुप्तिं लब्धप्रशमनानि च" मनु० ७-५६। 13. ಸಾಧ್ಯವಾಗುವ ವಿಷಯ. "स्थाने शमवतां शक्त्या व्यायामे वृद्धिरङ्गिनाम्। अयथाबलमारम्भो निदानं क्षयसम्पदः" माघ० २-९४। 14. ವರ್ಣ (ಅಕ್ಷರ) ಗಳ ಉಚ್ಚಾರಣೆಯ ಸ್ಥಳ. ಈ ಉಚ್ಚಾರಣೆಯ ಸ್ಥಾನಗಳು ಎಂಟು. (1) ಉರಸ್ಸು (ವಕ್ಷಃಸ್ಥಲ) (2) ಕಂಠ (3) ಶಿರಸ್ಸು (4) ಜಿಹ್ವಾಮೂಲ (5) ದಂತ (6) ನಾಸಿಕೆ (ಮೂಗು) (7) ಓಷ್ಠ (ತುಟಿ) ಮತ್ತು (8) ತಾಲು (ದವಡೆ). "अष्टौ स्थानानि वर्णानामुरः कण्ठः शिरस्तथा। जिह्वामूलं च दन्ताश्च नासिकोष्ठौ च तालु च" पा० शि०।

**स्थानक ಸ್ಥಾನಕ** (न०) 1. ಆಲವಾಲ, ಗಿಡಗಳ ಪಾತಿ, ಗಿಡಮರಗಳಿಗೆ ನೀರು ಹಾಕುವ ಸ್ಥಳ. स्थाने कं जलं यत्र। 2. ಸ್ಥಾನ ಪದದ ಅರ್ಥ. स्थान स्वार्थे "कन्"। 3. ನಗರ, ಪಟ್ಟಣ. 4. ನೊರೆ.

**स्थानच्युत ಸ್ಥಾನಚ್ಯುತ** (वि०) 1. ಸ್ಥಾನಭ್ರಷ್ಟ, ಪದವಿ ಯಿಂದ ಕೆಳಗಿಳಿದಿರುವ. स्थानात् च्युतः। 2. ಒಂದು ಸ್ಥಳದಿಂದ ಕೆಳಗೆ ಬಿದ್ದಿರುವ. –भ्रष्टः –ಭ್ರಷ್ಟ.

**स्थानपाल(क) ಸ್ಥಾನಪಾಲ(ಕ)** (पुं०) ಕಾವಲುಗಾರ, ಸ್ಥಳವನ್ನು ರಕ್ಷಿಸುವವನು. स्थानं पालयति—पाल (रक्षणे) + णिच् "अण्" (३-२-१)। "ण्वुल्" (३-१-१३३)। –पालकः –ಪಾಲಕ.

**स्थानमाहात्म्य ಸ್ಥಾನಮಾಹಾತ್ಮ್ಯ** (न०) ಸ್ಥಳದ ಮಹಿಮೆ, ಸ್ಥಳದ ಗೌರವ.

**स्थानाध्यक्ष ಸ್ಥಾನಾಧ್ಯಕ್ಷ** (पुं०) ಸ್ಥಳದ ಯಜಮಾನ, ಒಂದು ಸ್ಥಳದ ಯೋಗಕ್ಷೇಮವನ್ನು ನೋಡಿಕೊಳ್ಳು ವವನು. स्थानस्य अध्यक्षः।

**स्थानिक ಸ್ಥಾನಿಕ** (पुं०) ಸ್ಥಾನಾಧ್ಯಕ್ಷ, ಸ್ಥಳದ ಯಜ ಮಾನ. स्थानमस्त्यस्य "ठन्" (५-२-११५)।

**स्थानिन् ಸ್ಥಾನಿನ್** (वि०) ಸ್ಥಾನವಿಶಿಷ್ಟವಾದ, ಸ್ಥಾನದ ಧರ್ಮ ಹೊಂದಿರುವ. स्थानमस्यास्ति "इनिः" (५-२-११५)। ಯಾವುದರ ಸ್ಥಾನದಲ್ಲಿ ಮತ್ತೊಂದು ವಿಧಿಸಲ್ಪಡುವುದೋ ಅದು ಸ್ಥಾನಿ. "स्थानिवदादेशोऽनल्विधौ" (१-१-५६)।

**स्थानीय ಸ್ಥಾನೀಯ** (न०) 1. ನಗರ, ಪಟ್ಟಣ. स्थानाय हितम्—स्थान "छः" (५-१-५)। (वि०) 2. ಒಂದು ಸ್ಥಾನಕ್ಕೆ ಸಂಬಂಧಿಸಿದ.

**स्थाने ಸ್ಥಾನೆ** (अव्य०) 1. ಯುಕ್ತ, ನ್ಯಾಯ್ಯ, ಸರಿ. "स्थाने विधोर्वा मदनस्य सख्यं स शम्भुनेत्रे ज्वलति प्रलीनः" नैष० २२-८७। 2. ಕಾರಣ. 3. ಇನ್ನೊಂದರ ಜಾಗದಲ್ಲಿ. "धातोः स्थान इवादेशं सुग्रीवं संन्यवेशयत्" रघु० १२-५८। 4. ಸಾದೃಶ್ಯ. 5. ಸತ್ಯ, ನಿಜ.

**स्थापक ಸ್ಥಾಪಕ** (ವಿ०) 1. ಸೂತ್ರಧಾರ, ರಂಗಸ್ಥಳದ ವ್ಯವಸ್ಥಾಪಕ, ರಂಗಮಂಟಪದ ಕಾರ್ಯಕಲಾಪಗಳನ್ನು ಸಜ್ಜುಗೊಳಿಸುವವನು. स्थापयति—ष्ठा (गतिनिवृत्तौ) + णिच् "ण्वुल्" (३-१-१३३)। 2. ಒಂದು ಶಾಲೆ ಸಂಸ್ಥೆ ಮೊದಲಾದುವನ್ನು ಪ್ರಾರಂಭಿಸುವವನು. 3. ದೇವಾಲಯಗಳಲ್ಲಿ ದೇವರನ್ನು ಪ್ರತಿಷ್ಠೆ ಮಾಡಿಸುವವನು.

**स्थापत्य ಸ್ಥಾಪತ್ಯ** (ನ०) ಕಂಚುಕಿ, ರಾಜನ ಅಂತಃಪುರದ ದ್ವಾರಪಾಲಕ. तिष्ठन्त्येषु पुरुषाः—ष्ठा (गतिनिवृत्तौ) "कः" (वा० ३-३-५८)। स्थानां दाराणां पतयः पालकाः स्थपतयः —स्थपतय एव—स्वार्थे "ष्यञ्" (५-१-१२४)। "स्थापत्यैर्न स्म वित्तस्ते वर्षीयस्त्वचलत्करैः" नैष० २०-१३८।

**स्थापन ಸ್ಥಾಪನ** (ನ०) 1. ಪುಂಸವನ, ಗರ್ಭಿಣಿಸ್ತ್ರೀಗೆ ಪುತ್ರಸಂತಾನದ ಅಪೇಕ್ಷೆಯಿಂದ ನಡಸುವ ಒಂದು ಸಂಸ್ಕಾರ. 2. ಸರಿಯಾಗಿ ನಿಲ್ಲಿಸುವುದು, ಮೇಲಕ್ಕೆ ಏರಿಸಿ ನೆಟ್ಟಗೆ ನಿಲ್ಲಿಸುವುದು. 3. ಸಮಾಧಿ, ಮನಸ್ಸನ್ನು ಸ್ಥಿರವಾಗಿ ನಿಲ್ಲಿಸುವುದು, ಬಾಹ್ಯವಸ್ತುಗಳಿಂದ ಹಿಂತಿರುಗಿಸಿ ಮನಸ್ಸನ್ನು ಧ್ಯೇಯದೊಡನೆ ಸೇರಿಸುವುದು. ष्ठा (गतिनिवृत्तौ) + णिच् "ल्युट्" (३-३-११५)। "स्थापनं रोपणे पुंसवने" मेदि०। 4. ಇಡುವುದು, ಇರಿಸುವುದು. "नूनमस्य मणिभूभृता सह स्थापनं निजनिवेशनिष्कुटे" याद० १७-४०।

**स्थापना ಸ್ಥಾಪನಾ** (स्त्री०) 1. ಇರಿಸುವುದು. ष्ठा (गतिनिवृत्तौ) + णिच् "युच्" (३-३-१०७)। 2. ರಂಗಸ್ಥಳದ ಯಾಜಮಾನ್ಯ. 3. ಪ್ರತಿಷ್ಠಿಸುವುದು.

**स्थापनी ಸ್ಥಾಪನೀ** (स्त्री०) ಅಗರುಶುಂಠಿ. स्थाप्यतेऽनया—ष्ठा (गतिनिवृत्तौ) + णिच् "ल्युट्" (३-३-११७)। "ङीप्" (४-१-१५)। "पाठाम्बष्ठा विद्धकर्णी स्थापनी श्रेयसी रसा" अम०।

**स्थापनीय ಸ್ಥಾಪನೀಯ** (ವಿ०) 1. ಸ್ಥಾಪಿಸಲ್ಪಡುವ. 2. ಸ್ಥಾಪಿಸಬೇಕಾದ. 3. ಸ್ಥಾಪಿಸಲು ಅರ್ಹವಾದ. 4. ಸ್ಥಾಪಿಸಲು ಶಕ್ಯವಾದ. ष्ठा (गतिनिवृत्तौ) + णिच् "अनीयर्" (३-१-९६)। 5. ಇರಿಸಲ್ಪಡುವ 6. ಇರಿಸಬೇಕಾದ. 7. ಇರಿಸಬಹುದಾದ. 8. ಇರಿಸಲು ಸಾಧ್ಯವಾದ.

**स्थापयत् ಸ್ಥಾಪಯತ್** (ವಿ०) 1. ಇರಿಸುತ್ತಿರುವ. ष्ठा (गतिनिवृत्तौ) + णिच् "शतृ" (३-२-१२४)। 2. ಸಂಸ್ಥೆ ಶಾಲೆ ಮೊದಲಾದುವನ್ನು ಪ್ರಾರಂಭಿಸುತ್ತಿರುವ. 3. ಇನ್ನೊಂದರೊಡನೆ ಸೇರಿಸುತ್ತಿರುವ. स्त्रियां "ङीप्" (४-१-६)। —यन्ती —ಯಂತೀ.

**स्थापित ಸ್ಥಾಪಿತ** (ವಿ०) 1. ಸ್ಥಾಪಿಸಲ್ಪಟ್ಟ. 2. ಇರಿಸಲ್ಪಟ್ಟ. ष्ठा (गतिनिवृत्तौ) + णिच् "क्तः" (३-२-१०२)। "स्थापितामुपरि स्वस्य तां हृदा स मुदा वहन्" नैष० २०-१४४। 3. ಪ್ರಾರಂಭಿಸಲ್ಪಟ್ಟ (ಶಾಲೆ ಸಂಸ್ಥೆ ಮೊದಲಾದವು). 4. ಇಡಲ್ಪಟ್ಟ, ಇನ್ನೊಂದರಲ್ಲಿ ಸೇರಿಸಲ್ಪಟ್ಟ. "लोकश्रेष्ठे गुणवति वरे स्थापिता त्वं मयैव" मालती० १०-५।

**स्थाप्य ಸ್ಥಾಪ್ಯ** (ವಿ०) 1. ಇಡಲ್ಪಡುವ, ಇರಿಸಲ್ಪಡುವ. ष्ठा (गतिनिवृत्तौ) + णिच् "यत्" (३-१-९७)। 2. ಪ್ರಾರಂಭಿಸಲ್ಪಡುವ (ಶಾಲೆ ಸಂಸ್ಥೆ ಮೊದಲಾದುವು).

**स्थामन् ಸ್ಥಾಮನ್** (ನ०) 1. ಶಕ್ತಿ, ಸಾಮರ್ಥ್ಯ, ಬಲ. तिष्ठत्यनेन—ष्ठा (गतिनिवृत्तौ) "मनिन्" (उ० ४-१४५)। 2. ನಾದ, ಧ್ವನಿ. ಅಶ್ವತ್ಥಾಮನು ಜನಿಸಿದಾಗ ಕುದುರೆಯಂತೆ ಕೂಗಿದುದರಿಂದ ಅವನಿಗೆ ಈ ಹೆಸರಾಯಿತು. अश्वस्येव स्थाम नादः यस्य। ಈ ಅರ್ಥದಲ್ಲಿ ಅವನಿಗೆ ಈ ಹೆಸರುಂಟಾಯಿತು. "स जातमात्रो व्यनदद्यथैवोच्चैःश्रवा हयः। तच्छ्रुत्वान्तर्हितं भूतमन्तरीक्षस्थमब्रवीत्। अश्वस्येवास्य यत् स्थाम नदतः प्रदिशो गतम्। अश्वत्थामैव बालोऽयं तस्मान्नाम्ना भविष्यति" भा० आदि० १४०-४९।

**स्थायिन् ಸ್ಥಾಯಿನ್** (ಪುं०) 1. ಅಂತಃಕರಣವೃತ್ತಿರೂಪವಾದ ರತಿ ಮೊದಲಾದ ಭಾವಗಳು. तिष्ठति — ष्ठा (गतिनिवृत्तौ) "णिनिः" (३-२-७८)। ಚಿತ್ತವೃತ್ತಿರೂಪವಾದ ಈ ಭಾವವು ವಿನಾಶಹೊಂದುವ ಸ್ವಭಾವದ್ದಾಗಿದ್ದರೂ ಚಿರಕಾಲ ಇರುವುದರಿಂದಲೂ ರಸಪ್ರತೀತಿಯ ಕಾಲದವರೆಗೂ ಅನುಸಂಧಾನಮಾಡುವುದರಿಂದಲೂ ಇದು ಸ್ಥಾಯಿಭಾವ. ಇದು ವಿರುದ್ಧ ಮತ್ತು ಅವಿರುದ್ಧವಾದ ಯಾವ ಭಾವಗಳಿಂದಲೂ ವಿಚ್ಛಿತ್ತಿಹೊಂದುವುದಿಲ್ಲವಾದುದರಿಂದಲೂ ಇತರ ಭಾವಗಳನ್ನು ತನಗೆ ಉಪಷ್ಟಂಭಕ (ಪೋಷಕ) ವಾಗಿ ಮಾಡಿಕೊಳ್ಳುವುದರಿಂದಲೂ ಇದು ಸ್ಥಾಯಿಭಾವವಾಯಿತು. "अविरुद्धा विरुद्धा वा यं तिरोधातुमक्षमाः। आस्वादाङ्कुरकन्दोऽसौ भावः स्थायीति सम्मतः" सा० द० ३-१७४। "स्रक्सूत्रवृत्त्या भावानामन्येषामनुगामकः। न तिरोधीयते स्थायी तैरसौ पुष्यते परम्"।। "चिरं चित्तेऽवतिष्ठन्ते सम्बध्यन्तेऽनुबन्धिभिः। रसत्वं ये प्रपद्यन्ते प्रसिद्धाः स्थायिनोऽत्र ते"।। ಪ್ರಜೆಗಳಿಗೆ ರಾಜನಂತೆಯೂ ಶಿಷ್ಯರಿಗೆ ಗುರುವಿ

ನಂತೆಯೂ ಈ ಸ್ಥಾಯಿಭಾವವು ಎಲ್ಲಾ ಭಾವಗಳಿಗೂ ಪ್ರಧಾನವಾಗಿರುವುದು. "यथा नराणां नृपति: शिष्याणां च यथा गुरु:। एवं हि सर्वभावानां भाव: स्थायी महानिह" नाट्यशास्त्रम् । ಸ್ಥಾಯಿಭಾವವು (1) रति: (2) हास: (3) शोक: (4) क्रोध: (5) उत्साह: (6) भयम् (7) जुगुप्सा (8) विस्मय: ಎಂದು ಎಂಟು ವಿಧ. शम: ಎಂದು ಒಂಬತ್ತನೆಯ ಭಾವವನ್ನೂ ಕೆಲವರು ಅಂಗೀಕರಿಸಿರುತ್ತಾರೆ. "रतिर्हासश्च शोकश्च क्रोधोत्साहौ भयं तथा। जुगुप्सा विस्मयश्चेत्थमष्टौ प्रोक्ता: शमोऽपि च" सा० द० ३-१७५। "स्थायिनोऽर्थे प्रवर्तन्ते भावा: सञ्चारिणो यथा। रसस्यैकस्य भूयांस: तथा नेतुर्महीभृत:" माघ० २-८७। (1) ಸ್ತ್ರೀಪುರುಷರ ಪರಸ್ಪರ ಪ್ರೇಮರೂಪವಾದ ಚಿತ್ತವೃತ್ತಿಯು ರತಿ. ಇದು ಶೃಂಗಾರರಸದ ಸ್ಥಾಯಿಭಾವ. (2) ಮಾತು ಅಂಗಗಳ ವಿಕಾರದರ್ಶನದಿಂದ ಉಂಟಾಗುವ ಚಿತ್ತವಿಕಾಸವು ಹಾಸ. ಇದು ಹಾಸ್ಯರಸದ ಸ್ಥಾಯಿಭಾವ. (3) ಪುತ್ರಮಿತ್ರಾದಿ ವಿಯೋಗ ಮತ್ತು ಇಷ್ಟವಸ್ತುನಾಶದಿಂದ ಉಂಟಾಗುವ ಚಿತ್ತವೈಕ್ಲವ್ಯವು ಶೋಕ. ಇದು ಕರುಣರಸದ ಸ್ಥಾಯಿಭಾವ. (4) ಗುರು ಬಂಧುಗಳು ಮೊದಲಾದವರಲ್ಲಿ ಮಾಡುವ ಅಪರಾಧದಿಂದ ಉಂಟಾಗುವ ರಜೋಗುಣವು ಕ್ರೋಧವಾಗಿ ಪರಿಣಮಿಸುವುದು. ಇದು ರೌದ್ರರಸದ ಸ್ಥಾಯಿಭಾವ. (5) ಶತ್ರುವಿನ ಪರಾಕ್ರಮ ಇತರರ ಔದಾರ್ಯಾತಿಶಯ ಇವುಗಳಿಂದ ಉಂಟಾಗುವ ಚಿತ್ತವೃತ್ತಿಯ ಔನ್ನತ್ಯವು ಉತ್ಸಾಹ. ಇದು ವೀರರಸದ ಸ್ಥಾಯಿಭಾವ. (6) ವ್ಯಾಘ್ರ ಮೊದಲಾದ ದುಷ್ಟ ಪ್ರಾಣಿಗಳ ದರ್ಶನದಿಂದ ಉಂಟಾಗುವ ಚಿತ್ತವೈಕ್ಲವ್ಯವು ಭಯ. ಇದು ಭಯಾನಕರಸದ ಸ್ಥಾಯಿಭಾವ. (7) ಅಸಹ್ಯವಸ್ತು ದರ್ಶನದಿಂದ ಉಂಟಾಗುವ ವಿಚಿಕಿತ್ಸಾರೂಪ ಚಿತ್ತವೃತ್ತಿಯು ಜುಗುಪ್ಸೆ. ಇದು ಬೀಭತ್ಸರಸದ ಸ್ಥಾಯಿಭಾವ. (8) ಅಲೌಕಿಕವಸ್ತುದರ್ಶನದಿಂದ ಉಂಟಾಗುವ ಆಶ್ಚರ್ಯವು ವಿಸ್ಮಯ. ಇದು ಅದ್ಭುತರಸದ ಸ್ಥಾಯಿಭಾವ. (9) ಸಕಲ ವಿಷಯಗಳಲ್ಲೂ ನೈಸ್ಪೃಹ್ಯಹೊಂದಿ ಪರಮಾತ್ಮನ ಧ್ಯಾನದಿಂದ ಉಂಟಾಗುವ ಸೌಖ್ಯವು ಶಮ. ಇದು ಶಾಂತರಸದ ಸ್ಥಾಯಿಭಾವ. (वि०) 2. ಸ್ಥಿರವಾದ, ಚಿರಕಾಲವಿರುವ. 3. ಇರುವ, ನಿಂತಿರುವ, ಉಳಿದಿರುವ, ವಾಸಮಾಡಲು ಬಂದು ಸೇರಿರುವ. "सम्पत्स्यन्ते कतिपयदिनस्थायिहंसा दशार्णा:" मेघ० १-२३। स्त्रियां "ङीप्" (४-१-१५)।

**स्थायिनी ಸ್ಥಾಯಿನೀ.** "मदरुचिमरुणेनोद्गच्छता लम्भितस्य त्यजत इव चिराय स्थायिनीमाशु लज्जाम्" माघ० ११-१६।

**स्थायिभाव ಸ್ಥಾಯಿಭಾವ** (पुं०) "स्थायिन्" ಪದದಲ್ಲಿ ನೋಡಿ.

**स्थायुक ಸ್ಥಾಯುಕ** (पुं०) 1. ಗ್ರಾಮಾಧಿಪತಿ, ಒಂದು ಗ್ರಾಮದ ಯಜಮಾನ. स्थातुं शीलमस्य — ष्ठा (गतिनिवृत्तौ) "उकञ्" (३-२-१५४)। "स्थायुकोऽधिकृतो ग्रामे" अम०। (वि०) 2. ಇರುವ ಸ್ವಭಾವದ, ನಿಲ್ಲುವ ಸ್ವಭಾವದ. "आयोधने स्थायुकमन्त्रजातममोघमम्यर्णमहाहवाय" याद० २-२२।

**स्थाल ಸ್ಥಾಲ** (न०) 1. ದನ್ತಮೂಲದ ಅಸ್ಥಿ. स्थलति तिष्ठत्यन्नादिकमत्र—ष्ठल (स्थितौ) "घञ्" (३-३-१२१)। "स्थालै: सह चतु:षष्टिर्दन्ता वै विंशतिर्नखा:" याज्ञ० ३-८५। 2. ಲೋಹದ ಭೋಜನ ಪಾತ್ರೆ.

**स्थाली ಸ್ಥಾಲೀ** (स्त्री०) 1. ಅಡಿಗೆಯ ಪಾತ್ರೆ, ಅನ್ನ ಮೊದಲಾದುವನ್ನು ಬೇಯಿಸುವ ಪಾತ್ರೆ. तिष्ठत्यत्रौदनादि — ष्ठा (गतिनिवृत्तौ) "आलच्" (उ० १-११३)। "ङीष्" (४-१-६३)। "पिठर: स्थाल्युखा कुण्डम्" अम०। "स्थाल्यां वैडूर्यमय्यां पचति तिलखलं चान्दनैरिन्धनौघै: सौवर्णैर्लाङ्गलाग्रैर्विलिखति वसुधामर्कतूलस्य हेतो:। छित्वा कर्पूरखण्डान् वृतिमिह कुरुते कोद्रवाणां समन्तात्प्राप्येमां कर्मभूमिं न भजति मनुजो यस्तपो मन्दभाग्य:" भर्तृ० १-९६। 2. ಹಸಿರು ಪಾದರಿ. "स्थालं भाजनभेदेऽपि स्थाली स्यात् पाटलोखयो:" मेदि०।

**स्थालीपुलाक ಸ್ಥಾಲೀಪುಲಾಕ** (पुं०) ಸ್ಥಾಲಿಯಲ್ಲಿರುವ ಅನ್ನದ ಅಗಳು. स्थालीस्थ: पुलाक:।

**स्थालीपुलाकन्याय ಸ್ಥಾಲೀಪುಲಾಕನ್ಯಾಯ** (पुं०) ಸ್ಥಾಲೀಪುಲಾಕವೆಂಬ ಒಂದು ನ್ಯಾಯ. ಸ್ಥಾಲಿಯಲ್ಲಿರುವ ಅನ್ನದಲ್ಲಿ ಪಕ್ವವಾದ ಒಂದು ಪುಲಾಕವನ್ನು ನೋಡಿ ಅದರಂತೆಯೇ ಎಲ್ಲವೂ ಚೆನ್ನಾಗಿ ಪಕ್ವವಾಗಿರುವುದೆಂದು ತಿಳಿಯುವಂತೆ ಒಂದು ಸಮೂಹದಲ್ಲಿ ಶ್ರೇಷ್ಠವಾದ ಒಂದು ಭಾಗವನ್ನು ನೋಡಿ ಅದರಂತೆಯೇ ಎಲ್ಲವೂ ಸಮೀಚೀನವಾಗಿರುವುದೆಂದು ತಿಳಿಯುವ ಒಂದು ನ್ಯಾಯ. स्थालीस्थ: पुलाको भक्तगुलिका यत्र।

**स्थालीबिल ಸ್ಥಾಲೀಬಿಲ** (न०) ಅಡಿಗೆಯ ಪಾತ್ರದ ಒಳ (ಅವಕಾಶ) ಭಾಗ. स्थाल्या बिलम्।

**स्थालीबिलीय ಸ್ಥಾಲೀಬಿಲೀಯ** (पुं०) ಅಡಿಗೆಗೆ ಯೋಗ್ಯವಾದ ಅಕ್ಕಿ ಮೊದಲಾದುದು. स्थालीबिलमर्हति — स्थालीबिल "छ:" (५-१-७०)। "यत्" च।

**स्थालीबिल्य: ಸ್ಥಾಲೀಬಿಲ್ಯ:.**

**स्थावर** ಸ್ಥಾವರ (ಪುಂ) 1. ಸ್ಥಿರವಾಗಿ ಒಂದೇ ಕಡೆ ಇರುವ ಸ್ವಭಾವದ ಪರ್ವತ ವೃಕ್ಷ ಲತೆ ಮೊದಲಾದವು. ಚಲಿಸುವ (ಸಂಚರಿಸುವ) ಸ್ವಭಾವದ ಗೋವು ಅಶ್ವ ಗಜ ಮಹಿಷ ಮೊದಲಾದ ಪ್ರಾಣಿಗಳಿಗಿಂತ ಇವು ಭಿನ್ನವಾದವು. ष्ठा (गतिनिवृत्तौ) "वरच्" (३-२-१७५)। "यज्ञानां जपयज्ञोऽस्मि स्थावराणां हिमालयः" गीता १०-२५। "मान्यः स मे स्थावरजङ्गमानां सर्गस्थितिप्रत्यवहारहेतुः" रघु० २-४४। (ನಂ) 2. ಸ್ಥಿರವಾದ ಆಸ್ತಿ, ಗೃಹ ಕ್ಷೇತ್ರ ಮೊದಲಾದವು. ಸ್ಥಿರವಾದ ಆಸ್ತಿಯನ್ನು ಸಮೀಪದಲ್ಲಿರುವವರನ್ನು ಬಿಟ್ಟು ಬೇರೊಬ್ಬರಿಗೆ ಮಾರಕೂಡದು. "स्थावरं धनमन्यस्मै स्थिते सान्निध्यवर्तिनि। योग्ये क्रेतरि विक्रेतुं न शक्तः स्थावराधिपः"। (ವಿಂ) 3. ಸ್ಥಿರವಾಗಿರುವ, ಶಾಶ್ವತವಾಗಿರುವ. "रोदोरन्ध्रं व्यश्नुवानानि लोलैरङ्गस्यान्तर्मापितैः स्थावराणि" माघ० १८-१५। 4. ಸ್ಥಿರವಾಗಿ ಒಂದೇ ಕಡೆ ನಿಂತಿರುವ. "काठिन्यं स्थावरे काये भवता सर्वमर्पितम्। इदं तु ते भक्तिनम्रं सतामाराधनं वपुः" कुमा० ६-७३। 5. ಸ್ಥಾವರ ವಿಷ. ವಿಷವು ಸ್ಥಾವರ ಮತ್ತು ಜಂಗಮ ಎಂದು ಎರಡು ವಿಧ. ಸ್ಥಾವರ ವಿಷವು ಬೇರು ಎಲೆ ಫಲ ಪುಷ್ಪ ತ್ವಕ್ಕು (ತೊಗಟೆ) ಗಿಡದ ಹಾಲು ರಸ ಸಾರ ಧಾತು ಮತ್ತು ಗೆಡ್ಡೆ ಇವುಗಳಲ್ಲಿರುವುದು. "स्थावरं जङ्गमं चैव द्विविधं विषमुच्यते। दशाधिष्ठानमाद्यं तु द्वितीयं षोडशाश्रयम्॥ मूलं पत्रं फलं पुष्पं त्वक् क्षीरं सार एव च। निर्यासो धातवश्चैव कन्दश्च दशमः स्मृतः" सुश्रुत० कल्प० २-४। ಈ ಸ್ಥಾವರ ವಿಷವು ಐವತ್ತೈದು ವಿಧ. "इत्येवं पञ्चपञ्चाशत् स्थावरविषाणि भवन्ति" सुश्रुत० कल्प० २-५।

**स्थावरादि** ಸ್ಥಾವರಾದಿ (ನಂ) ವತ್ಸನಾಭವೆಂಬ ವಿಷ. स्थावरम् आदिः कारणं यस्य।

**स्थाविर** ಸ್ಥಾವಿರ (ನಂ) ಸ್ಥವಿರತ್ವ, ಮುದಿತನ, ಮುದುಕನಾಗಿರುವಿಕೆ. स्थविरस्य भावः "अण्" (५-१-१३०)। "गार्हस्थ्येऽप्यथवा बाल्ये यौवने स्थाविरेऽपि वा। यथा फलं समश्नाति तथा त्वं कथयस्व मे" भा०।

**स्थासक** ಸ್ಥಾಸಕ (ಪುಂ) 1. ಮೈಗೆ ಸುಗಂಧದ್ರವ್ಯಗಳನ್ನು ಬಳಿಯುವುದು. तिष्ठति — ष्ठा (गतिनिवृत्तौ) "सः" बाहु०। स्वार्थे "कन्" (५-४-५)। 2. ಜಲ ಮದ್ಯ ಮೊದಲಾದುವುಗಳ ನೊರೆಯ ಆಕಾರದಲ್ಲಿ ಬರೆಯುವ ಮಂಡಲ, ಬುದ್ಬುದಾಕಾರದ ಮಂಡಲ. "रौक्मा रेजुः स्थासका मूर्तिभाजो दर्पस्येव व्याप्तदेहस्य शेषाः" माघ० १८-५।

**स्थास्नु** ಸ್ಥಾಸ್ನು (ವಿಂ) 1. ಸ್ಥಿರವಾಗಿರುವ ಸ್ವಭಾವದ, ಹೆಚ್ಚು ಸ್ಥಿರವಾಗಿರುವ. तिष्ठति — ष्ठा (गतिनिवृत्तौ) "क्स्नुः" (३-२-१३९)। "षाड्गुण्यमुपयुञ्जीत शक्त्यपेक्षो रसायनम्। भवन्त्यस्यैवमङ्गानि स्थास्नूनि बलवन्ति च" माघ० २-९३। 2. ಶಾಶ್ವತವಾದ, ಎಂದೆಂದಿಗೂ ಇರುವ. "अभिमानधनस्य गत्वरैरसुभिः स्थास्नु यशश्चिचीषतः। अचिरांशुविलासचञ्चला ननु लक्ष्मीः फलमानुषङ्गिकम्" किरा० २-१९। 3. ಸ್ಥಾವರ, ವೃಕ್ಷ ಮೊದಲಾದುದು. "यदाणुमात्रिको भूत्वा बीजं स्थास्नु चरिष्णु च। समाविशति संसृष्टस्तदा मूर्ति विमुञ्चति" मनु० १-५६।

**स्थित** ಸ್ಥಿತ (ವಿಂ) 1. ಚಲಿಸದೆ ನಿಂತಿರುವ, ನಿಂತಲ್ಲಿಯೇ ನಿಂತಿರುವ. ष्ठा (गतिनिवृत्तौ) कर्त० "क्तः" (३-४-७२)। "स्थितः स्थितामुच्चलितः प्रयातां निषेदुषीमासनबन्धधीरः" रघु० २-६। 2. ಸ್ಥಿರವಾಗಿರುವ, ನೆಲಸಿರುವ. "ममात्र भावैकरसं मनः स्थितं न कामवृत्तिर्वचनीयमीक्षते" कुमा० ५-८२। 3. ನೆಲೆಮಾಡಿಕೊಂಡಿರುವ, ಸ್ಥಾನವನ್ನು ಪಡೆದಿರುವ. "धन्या केयं स्थिता ते शिरसि शशिकला किं नु नामैतदस्याः नामैवास्यास्तदेतत्परिचितमपि ते विस्मृतं कस्य हेतोः" मुद्रा० १-१। 4. ಇರುವ, ಕುಳಿತಿರುವ. "मृणालसूत्रामलमन्तरेण स्थितश्चलच्चामरयोर्द्वयं सः" माघ० ३-३। 5. ಉನ್ನತವಾದ, ಎತ್ತರವಾದ. 6. ಪ್ರತಿಜ್ಞೆಗೆ ಬದ್ಧನಾಗಿರುವ. "स्थितं प्रतिज्ञातवति चोर्ध्वनिश्चलयोरपि" मेदि०। (ನಂ) 7. ಇರುವಿಕೆ. ष्ठा भावे "क्तः" (३-३-११४)। "प्रियतमेन यया सरुषा स्थितं न सह सा सहसा परिरभ्य तम्" माघ० ६-५७।

**स्थितधी** ಸ್ಥಿತಧೀ (ವಿಂ) ಸ್ಥಿತಪ್ರಜ್ಞ, ದುಃಖಕ್ಕೆ ಎಷ್ಟೇ ಕಾರಣಗಳಿದ್ದರೂ ಮನಸ್ಸಿನಲ್ಲಿ ಉದ್ವೇಗವಿಲ್ಲದೆ ಸುಖ ಸಾಧನಗಳು ಸನ್ನಿಹಿತವಾಗಿದ್ದರೂ ಅವುಗಳಲ್ಲಿ ಕಿಂಚಿತ್ತೂ ಆಸೆಯಿಲ್ಲದೆ ರಾಗ ಭಯ ಕ್ರೋಧಗಳನ್ನು ತ್ಯಜಿಸಿ ಪರಮಾತ್ಮನಲ್ಲೇ ನೆಟ್ಟ ಮನಸ್ಸುಳ್ಳವನು. स्थिता परमात्मनि प्रतिष्ठिता धीः यस्य। "दुःखेष्वनुद्विग्नमनाः सुखेषु विगतस्पृहः। वीतरागभयक्रोधःस्थितधीर्मुनिरुच्यते" गीता २-५६।

**स्थितप्रज्ञ** ಸ್ಥಿತಪ್ರಜ್ಞ (ವಿಂ) ಮನಸ್ಸಿನಲ್ಲಿ ಪರಮಾತ್ಮನನ್ನೇ ಧ್ಯಾನಿಸುತ್ತ ಅದರಿಂದ ಸಂತೋಷಗೊಂಡು ವ್ಯತಿರಿಕ್ತವಾದ ಸಕಲ ಕಾಮನೆಗಳನ್ನೂ ತ್ಯಜಿಸಿದವನು. स्थिता

परमात्मनि प्रतिष्ठिता प्रज्ञा यस्य। "प्रजहाति यदा कामान् सर्वान्पार्थ मनोगतान्। आत्मन्येवात्मना तुष्टः स्थितप्रज्ञस्तदोच्यते" गीता २-५५।

**स्थितवत्** ಸ್ಥಿತವತ್ (वि०) 1. ನಿಂತಿರುವವನು. ष्ठा (गतिनिवृत्तौ) "क्तः" (३-४-७२)। 2. ಇರುವವನು, ಸ್ಥಿರವಾಗಿರುವವನು. "इत्युदीरितगिरं नृपस्त्वयि श्रेयसि स्थितवति स्थिरा मम" माघ० १४-१७। 3. ನೆಲೆ ಮಾಡಿಕೊಂಡಿರುವವನು, ಸ್ಥಾನವನ್ನು ಪಡೆದಿರುವವನು. 4. ಕುಳಿತಿರುವವನು.

**स्थिति** ಸ್ಥಿತಿ (स्त्री०) 1. ಅವಸ್ಥಾನ, ಇರುವಿಕೆ. ष्ठा (गतिनिवृत्तौ) "क्तिन्" (३-३-९५)। "रक्षोगृहस्थितिर्मूलमग्निशुद्धौत्वनिश्चयः" उ० रा० १-६। 2. ಚಲಿಸದೆ ನಿಲ್ಲುವುದು. "प्रस्थितायां प्रतिष्ठेथाः स्थितायां स्थितिमाचरेः" रघु० १-८९। 3. ಸ್ಥಿರತೆ, ಸ್ಥಿರವಾಗಿರುವಿಕೆ. "स मानसीं मेरुसखः पितॄणां कन्यां कुलस्य स्थितये स्थितिज्ञः" कुमा० १-१८। 4. ಸ್ವಭಾವ, ಪ್ರಕೃತಿ, ಹುಟ್ಟುಗುಣ. "देव, न शङ्कास्पदमेतत्। यतोऽसौ महाशयो दूरदर्शी। अथवा स्थितिरियं मन्दमतीनाम्" हितो० ४। 5. ಜೀವನೋಪಾಯ. "जग्दार्धैर्नव सल्लकीकिसलयैरस्याः स्थितिं कल्पयन्" मालती० ९-३२। 6. ಮರ್ಯಾದೆ, ಗೌರವ, ಸಭ್ಯತೆ, ವಿನಯ. "अमंस्त चानेन परार्ध्यजन्मना स्थितेरभेत्ता स्थितिमन्तमन्वयम्" रघु० ३-२७। 7. ಮರ್ಯಾದೆ, ಎಲ್ಲೆ, ಗಡಿ. "स्थितिः स्त्रियामवस्थाने मर्यादायां च सीमनि" मेदि०। 8. ಪರಿಸ್ಥಿತಿ, ಅವಸ್ಥೆ, ಸನ್ನಿವೇಶ, ಸಂದರ್ಭ. 9. ಕುಳಿತಿರುವಿಕೆ. "आस्यात्वासना स्थितिः" अम०। 10. ಪಾಲನೆ, ರಕ್ಷಣೆ, ಕಾಪಾಡುವುದು. "मान्यः स मे स्थावरजङ्गमानां सर्गस्थितिप्रत्यवहारहेतुः" रघु० २-४४। 11. ನಿಯಮ ಪಾಲನೆ, ಶಿಸ್ತಿನ ಪಾಲನೆ. "स्थित्यै दण्डयतो दण्ड्यान् परिणेतुः प्रसूतये। अप्यर्थकामौ तस्यास्तां धर्म एव मनीषिणः" रघु० १-२५। 12. ನ್ಯಾಯ್ಯಪರಿಸ್ಥಿತಿ. 13. ಶಾಸನ, ವಿಧಿ, ಕಟ್ಟಳೆ. 14. ಎಲ್ಲೆ, ಮೇರೆ, ಮಿತಿ. "चलन् समुद्रोऽपि समुज्झति स्थितिम्" माघ० १२-३६। 15. ಘನತೆ, ಗಾಂಭೀರ್ಯ, ಪ್ರಾಮಾಣಿಕತೆ.

**स्थितिमत्** ಸ್ಥಿತಿಮತ್ (वि०) 1. ಸ್ಥಿರವಾದ, ಅಚಲವಾದ, ಚಿರಸ್ಥಾಯಿಯಾದ. स्थितिरस्यास्ति "मतुप्" (५-२-९४)। "अमंस्त चानेन परार्ध्यजन्मना स्थितेरभेत्ता स्थितिमन्तमन्वयम्" रघु० ३-२७। 2. ಶೀಲವಂತ, ಪ್ರಾಮಾಣಿಕ.

**स्थिर** ಸ್ಥಿರ (पुं०) 1. ದೇವತೆ. 2. ಮೋಕ್ಷ, ಮುಕ್ತಿ. 3. ಶನಿಗ್ರಹ. 4. ವೃಷಭ, ಎತ್ತು. 5. ವೃಕ್ಷ. 6. ಕಾರ್ತಿಕೇಯ, ಷಣ್ಮುಖ. 7. ಪರ್ವತ, ಬೆಟ್ಟ. 8. (ಜ್ಯೋತಿಷದಲ್ಲಿ) ವೃಷಭ ಸಿಂಹ ವೃಶ್ಚಿಕ ಮತ್ತು ಕುಂಭರಾಶಿಗಳು. "चरस्थिरद्व्यात्मकनामधेया मेषादयोऽमी क्रमशः प्रदिष्टाः"।। (वि०) 9. ಶಾಶ್ವತವಾದ, ಅಲುಗಾಡದಿರುವ, ಅಚಲವಾದ. ष्ठा (गतिनिवृत्तौ) "किरच्" टिलोपश्च निपा० (उ० १-५३)। "इत्युदीरितगिरं नृपस्त्वयि श्रेयसि स्थितवति स्थिरा मम" माघ० १४-१७। 10. ಶಾಶ್ವತವಾದ, ಎಂದೆಂದಿಗೂ ನಾಶವಿಲ್ಲದೆ ಇರುವ. "जगदेकपतेरमुष्य पूजां स्थिरधर्मद्रुममूलसेककल्पाम्" याद० १५-३८। 11. ಪ್ರಾಮಾಣಿಕ, ನಂಬಿಕೆಗೆ ಅರ್ಹನಾದವನು. 12. ಗುಣಶಾಲಿ, ಒಳ್ಳೆಯ ಸ್ವಭಾವದವನು. 13. ಕಠಿನಹೃದಯವುಳ್ಳವನು. "अहो स्थिरः कोऽपि तवेप्सितो युवा चिराय कर्णोत्पलशून्यतां गते। उपेक्षते यः श्लथलम्बिनीर्जटाः कपोलदेशे कलमाग्रपिङ्गलाः" कुमा० ५-४७। 14. ದೃಢವಾದ, ನಿಶ್ಚಲವಾದ, ಭದ್ರವಾದ. "अधिकारविलम्बिता पवर्गस्थिरसङ्गादपकौतुकस्त्रिवर्गे" याद० १५-७। 15. ಚಲಿಸದೆ ಇರುವ, ಒಂದೇ ಸ್ಥಳದಲ್ಲಿರುವ, ಸ್ಥಾವರ. "स्थिरत्रसविभक्तं ते चिर्दाचड्रैदर्चित्रितम्। स्वसृष्टमिदमुद्यानं त्वदन्यो नास्ति रक्षितुम्" याद० १६-११६। 16. ಸ್ಥಿರವಾದ ವಸ್ತುಗಳು :—ಧರ್ಮ ಅಧರ್ಮ ಸತ್ಪುರುಷರ ಬುದ್ಧಿ ಪಾತಿವ್ರತ್ಯ ಕೀರ್ತಿ ಇತ್ಯಾದಿ. ಅಸ್ಥಿರವಾದ ವಸ್ತುಗಳು :—ಯೌವನ ಧನ (ಐಶ್ವರ್ಯ) ಪ್ರಾಣಿಗಳ ಜೀವಿತ ಇತ್ಯಾದಿ. ಪುತ್ರಕಳತ್ರಾದಿಗಳು. "अस्थिरं जीवितं लोके अस्थिरं धनयौवनम्। अस्थिरं पुत्रदाराद्यं धर्मः कीर्तिर्यशः स्थिरम्"।

**स्थिरचित्त** ಸ್ಥಿರಚಿತ್ತ (वि०) ದೃಢವಾದ ಮನಸ್ಸುಳ್ಳವನು. स्थिरं चित्तं यस्य।

**स्थिरतर** ಸ್ಥಿರತರ (वि०) ಎರಡರಲ್ಲಿ ದೃಢವಾದ ಒಂದು, ಇಬ್ಬರಲ್ಲಿ ಹೆಚ್ಚು ದೃಢನಾದ ಒಬ್ಬ. अनयोरतिशयेनायं स्थिरः—स्थिर "तरप्" (५-३-५७)।

**स्थिरता** ಸ್ಥಿರತಾ (स्त्री०) 1. ಎಂದೆಂದಿಗೂ ಇರುವಿಕೆ. ಶಾಶ್ವತವಾಗಿರುವಿಕೆ. स्थिरस्य भावः "तल्" (५-१-११९)। 2. ಧೈರ್ಯ, ಸ್ಥೈರ್ಯ. "उत्पक्ष्मणोर्नयनयोरुपरुद्धवृत्तिं बाष्पं कुरु स्थिरतया विहतानुबन्धम्" शाकु० ४-१४। "त्व:" (५-१-११९)। **स्थिरत्वम्** ಸ್ಥಿರತ್ವಮ್.

**स्थिरदंष्ट्र ಸ್ಥಿರದಂಷ್ಟ್ರ** (पुं०) 1. ವರಾಹಾವತಾರವನ್ನೆತ್ತಿದ ವಿಷ್ಣು. 2. ಸರ್ಪ, ಭುಜಂಗಮ. "स्थिरदंष्ट्रो भुजङ्गे च वराहाकृतिशार्ङ्गिणि" हेम०।

**स्थिरधी ಸ್ಥಿರಧೀ** (वि०) ನಿಶ್ಚಲವಾದ ಮನಸ್ಸುಳ್ಳವನು. स्थिरा धीर्यस्य। "न च योगविधेर्नवेतरःस्थिरधीरापरमात्मदर्शनात्" रघु० ८-२२।

**स्थिरपुष्प ಸ್ಥಿರಪುಷ್ಪ** (पुं०) 1. ಚಂಪಕ ವೃಕ್ಷ, ಸಂಪಿಗೆ ಮರ. स्थिराणि पुष्पाणि यस्य। 2. ಬಕುಳ ವೃಕ್ಷ.

**स्थिरप्रतिज्ञ ಸ್ಥಿರಪ್ರತಿಜ್ಞ** (वि०) 1. ತಾನು ಮಾಡಿದ ಪ್ರತಿಜ್ಞೆಯಂತೆ ನಡೆಯುವವನು. 2. ಮಾಡಿದ ಪ್ರತಿಜ್ಞೆಯಂತೆ ನಡೆದುಕೊಳ್ಳುವವನು, ಕೊಟ್ಟ ಮಾತಿಗೆ ತಪ್ಪದೆ ನಡೆದುಕೊಳ್ಳುವವನು. स्थिरा प्रतिज्ञा यस्य।

**स्थिरप्रतिबन्ध ಸ್ಥಿರಪ್ರತಿಬಂಧ** (वि०) ಶಾಶ್ವತವಾದ ಅಡಚಣೆಯುಳ್ಳ, ನಿರಂತರವಾದ ವಿಘ್ನವುಳ್ಳ. स्थिरः प्रतिबन्धो यस्य। "सखे, स्थिरप्रतिबन्धो भव। अहं तावत् स्वामिनः चित्तवृत्तिमनुवर्तिष्ये" शाकु० २।

**स्थिरबुद्धि ಸ್ಥಿರಬುದ್ಧಿ** (स्त्री०) 1. ನಿಶ್ಚಲವಾದ ಬುದ್ಧಿ. स्थिरा बुद्धिः। (वि०) 2. ನಿಶ್ಚಲವಾದ ಬುದ್ಧಿಯುಳ್ಳವನು. स्थिरा बुद्धिर्यस्य। **–मतिः –ಮತಿಃ.** "स्थिरमति सुमति कमनीयतां कुशलतां हि नृणामुपभोगिताम्"।

**स्थिरयौवन ಸ್ಥಿರಯೌವನ** (पुं०) 1. ವಿದ್ಯಾಧರ. स्थिरं यौवनं यस्य। "विद्याधरः कामरूपी खेचरः स्थिरयौवनः" त्रिकाण्ड०। (न०) 2. ಎಂದೆಂದಿಗೂ ಶಾಶ್ವತವಾಗಿರುವ ಪ್ರಾಯ. स्थिरं यौवनम्। "तस्य ते वै फलरसं पिबन्तः पुरुषाः सदा। स्थिरयौवनसम्पन्नाः स्त्रियश्चोत्पलगन्धिकाः" मार्क०। (वि०)3. ಸ್ಥಿರವಾದ ಪ್ರಾಯವುಳ್ಳ, ಎಂದೆಂದಿಗೂ ಶಾಶ್ವತವಾದ ಪ್ರಾಯವುಳ್ಳ. स्थिरं यौवनं यस्य। "सत्यभामोत्तमा स्त्रीणां सुभगा स्थिरयौवना। जरां न यास्यति वधूर्यावत्त्वं कृष्ण मानुषः" विष्णुपु०।

**स्थिरा ಸ್ಥಿರಾ** (स्त्री०) 1. ಭೂಮಿ, ಪೃಥಿವಿ. तिष्ठति — ष्ठा (गतिनिवृत्तौ) "किरच्" (उ० १-५३)। टिलोपो निपा०। 2. ಮೂರೆಲೆ ಹೊನ್ನೆ. "स्थिरा भूसालपर्ण्योश्च" कोशः। "सालपर्णी स्थिरा ध्रुवा" अम०।

**स्थिरायु ಸ್ಥಿರಾಯು** (पुं०) 1. ಶಾಲ್ಮಲಿ ವೃಕ್ಷ, ಬೂರುಗದ ಮರ. (वि०)2. ಪೂರ್ಣವಾದ ಆಯುಸ್ಸುಳ್ಳ. स्थिरं आयुर्यस्य। "षष्टिं वर्षसहस्राणि वने जीवति शाल्मलिः"।

**स्थुरी ಸ್ಥುರೀ** (स्त्री०) ಹೊರೆಯನ್ನು ಹೊರುವ ಕುದುರೆ.

**स्थुल ಸ್ಥುಲ** (वि०) ದೀರ್ಘವಾದ, ಉದ್ದವಾದ. "शुक्लैः सतारैर्मुकुलीकृतैः स्थुलैः कुमुद्वतीनां कुमुदाकरैरिव" माघ० १२-४।

**स्थूणा ಸ್ಥೂಣಾ** (स्त्री०) 1. ಮನೆಯ ಕಂಬ. तिष्ठति — ष्ठा (गतिनिवृत्तौ) "नः" धातोः ऊत्वं नस्य णत्वं च निपा० (उ० ३-१५)। "या काचित्सहसा महासुरगृहस्थूणा पितामहप्रभृत्" दशाव०। 2. ಲೋಹದ ಪ್ರತಿಮೆ, ಲೋಹದ ವಿಗ್ರಹ. "स्थूणा स्यात् सूर्म्यां स्तम्भे गृहस्य च" मेदि०।

**स्थूर ಸ್ಥೂರ** (पुं०) 1. ಮನುಷ್ಯ. ष्ठा (गतिनिवृत्तौ) "ऊरन्" (उ० ५-४)। स्थूरो मनुष्यः सि० कौ०। 2. ವೃಷಭ, ಎತ್ತು.

**स्थूरिन् ಸ್ಥೂರಿನ್** (पुं०) ಮೂಟೆ ಹೊರುವ ಕುದುರೆ.

**स्थूरीपृष्ठ ಸ್ಥೂರೀಪೃಷ್ಠ** (पुं०) ಹೊಸದಾಗಿ ಏರಲ್ಪಟ್ಟ ಕುದುರೆ, ತರಬೇತಿ ಪಡೆಯದಿರುವ ಕುದುರೆ. "भित्त्वा घोणामायसेनाधिवक्षः स्थूरीपृष्ठो गार्ध्रपक्षेण विद्धः" माघ० १८-२२।

**स्थूल ಸ್ಥೂಲ** (पुं०) 1. ವಿಷ್ಣು. सर्वमप्यवहितम् एकत्र स्थित्वा स्रष्टुं शक्तिः प्राप्तिः तयातिप्रकृष्टया विशिष्टः। "स्थित्वैकत्राखिलं स्रष्टुं शक्तिर्या महती सदा। तया प्रकृष्टया शक्त्या विशिष्टः स्थूल उच्यते" इति निरुक्तिः। "अणुर्बृहत्कृशः स्थूलः" वि० स०। 2. ಹಲಸಿನ ಮರ. (न०) 3. ಪರ್ವತದ ಶಿಖರ. (वि०) 4. ಬೃಹತ್ತಾದ, ದೊಡ್ಡದಾದ. "स्थूलेन्द्रनीलशकलावलिकोमलेन कण्ठे गुणत्वमलिनां वलयेन भेजे" माघ० ५-४६। 5. ದಪ್ಪನಾಗಿರುವ, ಕೊಬ್ಬಿದ, ಬೊಜ್ಜು ದೇಹದ. 6. ಮಂದ ಬುದ್ಧಿಯುಳ್ಳ, ಜಡ. "बहुस्पृशापि स्थूलेन स्थीयते बहिरश्मवत्" माघ० २-७८। 7. ಮಹತ್ತಾದ, ದೊಡ್ಡ ಸ್ವರೂಪದ. "स्थूलास्तावत् प्रावहन् दानकुल्याः" माघ० १८-२६। 8. ವಿಸ್ತಾರವಾದ, ಅಗಲವಾದ, ವ್ಯಾಪಕವಾದ. "उद्धृतामिव मुहूर्तमैक्षत स्थूलनासिकवपुर्वसुन्धराम्" माघ० १४-७१। 9. ಇಂದ್ರಿಯಗಳಿಗೆ ಗೋಚರವಾಗುವಷ್ಟು ಆಕಾರವುಳ್ಳ. "द्रवः सङ्घातकठिनः स्थूलः सूक्ष्मो लघुर्गुरुः" कुमा० २-११।

**स्थूलक ಸ್ಥೂಲಕ** (वि०) 1. ದೊಡ್ಡದಾದ, ಬೃಹತ್ತಾದ, ದೊಡ್ಡ ಆಕಾರದ. स्थूल स्वार्थे "कन्"। 2. ದೊಡ್ಡ ವಸ್ತುವಿನಂತಿರುವ, ಬೃಹದಾಕಾರವಾಗಿ ಕಾಣುತ್ತಿರುವ. स्थूल "कन्" (५-४-३)। "स्थूलादिभ्यः प्रकारवचने कन्" प्रकारो भेदः सादृश्यं च।

पीयमानम्" मेघ० १-४२। 4. ನೀರು, ಜಲ. 5. ನೀರು ಹೊರಗೆ ಹೋಗುವ ಮಾರ್ಗ. "स्रोतोऽम्बुनिर्गमद्वारे प्रवाहेन्द्रिययोर्जले" नानार्थर०।

**स्रोतईश ಸ್ರೋತಈಶ** (पुं०) ನದಿಗಳ ಪತಿ, ಸಮುದ್ರ.

**स्रोतसिक ಸ್ರೋತಸಿಕ** (पुं०) ಶೈವಮತಾನುಯಾಯಿ. "और्ध्वः स्रोतसिकः शैवः" त्रिकाण्ड०।

**स्रोतस्य ಸ್ರೋತಸ್ಯ** (पुं०) 1. ಶಿವ, ಪರಮೇಶ್ವರ. 2. ಚೋರ, ಕಳ್ಳ. स्रोतस् "ड्यः" (४-४-११३)। (वि०) 3. ನದಿಯಲ್ಲಿರುವ. 4. ಪ್ರವಾಹದಲ್ಲಿರುವ.

**स्रोतस्वत् ಸ್ರೋತಸ್ವತ್** (वि०) 1. ನದಿಗಳಿಂದ ಕೂಡಿರುವ. 2. ಪ್ರವಾಹದಿಂದ ಕೂಡಿರುವ. स्रोतोऽस्यास्ति "मतुप्" (५-२-९४)।

**स्रोतस्वती ಸ್ರೋತಸ್ವತೀ** (स्त्री०) ನದಿ, ಹೊಳೆ. स्रोतोऽस्त्यस्याम्—स्रोतस् "मतुप्" (५-२-९४)। "ङीप्" (४-१-६)।

**स्रोतस्विनी ಸ್ರೋತಸ್ವಿನೀ** (स्त्री०) ನದಿ, ಹೊಳೆ. स्रोतोऽस्त्यस्याम्—स्रोतस् "विनिः" (५-२-१२१)।

**स्रोतोऽञ्जन ಸ್ರೋತೋಂಜನ** (न०) ಸೌವೀರಾಂಜನ. स्रोतोजमञ्जनम्। शाकपा०। यमुनायाः स्रोतोभवत्वात् स्रोतोऽञ्जनम्।

**स्रोतोरन्ध्र ಸ್ರೋತೋರಂಧ್ರ** (न०) ಆನೆಯ ಘ್ರಾಣೇಂದ್ರಿಯದ ರಂಧ್ರ. स्रोतसो रन्ध्रम्। "स्रोतोरन्ध्रध्वनितसुभगं दन्तिभिः पीयमानम्" मेघ० १-४२।

**स्रोतोवहा ಸ್ರೋತೋವಹಾ** (स्त्री०) ನದಿ, ಹೊಳೆ. वहति—वह (प्रापणे) "अच्" (३-१-३४)। स्रोतसो वहा। "स्रोतोवहां पथि निकामजलामतीत्य जातः सखे प्रणयवान् मृगतृष्णिकायाम्" शाकु० ६-१६।

**स्व ಸ್ವ** (पुं०) 1. ಜ್ಞಾತಿ, ಬಂಧು. स्वनति—स्वन (शब्दे) "डः" (३-२-१०१)। 2. ಆತ್ಮ, ತಾನು. "सेयं स्वदेहार्पणनिष्क्रयेण न्याय्या मया मोचयितुं भवत्तः" रघु० २-५५। (पुंन०) 3. ಧನ, ವಿತ್ತ, ಐಶ್ವರ್ಯ. (वि०) 4. ಆತ್ಮೀಯ, ತನ್ನದಾದ, ತನಗೆ ಸಂಬಂಧಿಸಿದ. "प्रेयसामवररागरसेन स्वं किलाधरमुपालि ररञ्जुः" माघ० १०-२६। "प्राप धाम स्वमेव" माघ० ११-६०। "स्वो ज्ञातावात्मनि स्वं त्रिष्वात्मीये स्वोऽस्त्रियां धने" अम०।

**स्वक ಸ್ವಕ** (वि०) ತನ್ನದಾದ, ಆತ್ಮೀಯವಾದ. स्वमेव स्वार्थे "कन्"।

**स्वकम्पन ಸ್ವಕಂಪನ** (पुं०) ವಾಯು, ಗಾಳಿ. स्वेनैव कम्पते—कपि (चलने) "ल्युः" (३-१-१३४)।

**स्वकर्मन् ಸ್ವಕರ್ಮನ್** (न०) ತಾನು ಮಾಡಿದ ಕಾರ್ಯ, ತಾನು ಮಾಡಿದ ಪುಣ್ಯ ಮತ್ತು ಪಾಪಕರ್ಮ. स्वस्य कर्म। "स्वकर्मफलनिर्दिष्टां यां यां योनिं व्रजाम्यहम्। तस्यां तस्यां हृषीकेश त्वयि भक्तिर्दृढास्तु मे"।।

**स्वकीय ಸ್ವಕೀಯ** (वि०) 1. ತನ್ನದೇ ಆಗಿರುವ, ತನ್ನ ಸಂಬಂಧವಾದ. स्वस्येदम्—स्व "छः" (४-२-१३८)। कुक् च। -या -ಯಾ. (स्त्री०) 2. ತನ್ನ ಪತ್ನಿ, ಮೂರು ವಿಧ ನಾಯಿಕೆಯರಲ್ಲಿ ಒಬ್ಬ ನಾಯಿಕೆ.

**स्वक्ष ಸ್ವಕ್ಷ** (पुं०) 1 ವಿಷ್ಣು, ಪರಮಾತ್ಮ. सु शोभने अक्षिणी अस्य—"षच्" (५-४-११३)। शोभनमक्षि तदुपलक्षितं च करणजातमस्य इति वा। "श्रीसौन्दर्यसुधासिन्धुरपारकरुणो हि यः। "स्वक्षः" इति निरुक्तिः। "स्वक्षः स्वङ्गः शतानन्दः" वि० स०। (वि०) 2. ಸುಂದರವಾದ ಕಣ್ಣುಗಳುಳ್ಳವನು. सु शोभने अक्षिणी यस्य—"षच्" (५-४-११३)। 3. ಒಳ್ಳೆಯ ದೂರಿಯುಳ್ಳ ರಥ, -ಗಾಡಿ. 4. ಒಳ್ಳೆಯ ಇಂದ್ರಿಯಗಳುಳ್ಳ. "स्वक्षं सुपत्रं कनकोज्ज्वलद्युति जवेन नागान् जितवन्तमुच्चकैः" माघ० १२-२।

**स्वगत ಸ್ವಗತ** (न०) ಬೇರೆ ಯಾರಿಗೂ ತಿಳಿಯದಂತೆ ತನ್ನೊಳಗೇ ಮಾತನಾಡಿಕೊಳ್ಳುವುದು. स्वस्मिन् गतम्। ಇದೊಂದು ನಾಟ್ಯೋಕ್ತಿ. "सर्वश्राव्यं प्रकाशं स्यादश्राव्यं स्वगतं मतम्"। "राजा (स्वगतम्) राजभावस्त्वभिज्ञातो भवेत्। भवतु। एवं तावदभिधास्ये" शाकु० १।

**स्वङ्ग ಸ್ವಂಗ** (पुं०) 1. ವಿಷ್ಣು, ಪರಮಾತ್ಮ. सु स्पृहणीयदिव्यदेहतया शोभनमङ्गमस्य। "श्रियः स्पृहणीयदिव्याङ्गः स्वङ्ग उच्यते" इति निरुक्तिः। "स्वक्षः स्वङ्गः शतानन्दः" वि० स०। (वि०) 2. ಸುಂದರವಾದ ಅಂಗಗಳುಳ್ಳವನು. सु शोभनान्यङ्गानि यस्य।

**स्वच्छ ಸ್ವಚ್ಛ** (पुं०) 1. ಸ್ಫಟಿಕಮಣಿ, ಸ್ಫಟಿಕಶಿಲೆ. सु अच्छः निर्मलः। (वि०) 2. ಬಹಳ ನಿರ್ಮಲವಾದ. "आरूढं पतित इति स्वसम्भवोऽपि स्वच्छानां परिहरणीयतामुपैति" माघ० ८-५४। 3. ಬಿಳುಪಾಗಿರುವ. (न०) 4. ಮುತ್ತು.

**स्वच्छन्द ಸ್ವಚ್ಛಂದ** (पुं०) 1. ತನ್ನ ಅಭಿಪ್ರಾಯ, ಸ್ವಂತ ಅಭಿಪ್ರಾಯ. स्वस्य छन्दः अभिप्रायः। (वि०) 2. ತನ್ನ ಅಭಿಪ್ರಾಯದಂತೆ ನಡೆದ, ತನ್ನ ಇಷ್ಟಕ್ಕೆ ತಕ್ಕಂತೆ

ನಡೆದ. स्वस्य छन्दोभिप्रायो यत्र । "मन्ये स एव मदनस्य निशाचरस्य स्वच्छन्दसौप्तिकनिवृत्तिमभिव्यनक्ति" याद० १९-२१ । 3. ಸ್ವತಂತ್ರ, ಬೇರೆ ಯಾರಿಗೂ ಅಧೀನನಲ್ಲದವನು. (अव्य०)4. ತನಗೆ ಇಷ್ಟ ಬಂದಂತೆ, ಯಾವ ಅಡ್ಡಿ ಆತಂಕಗಳೂ ಇಲ್ಲದೆ. "स्वच्छन्दवनजातेन शाकेनापि प्रपूर्यते" हितो० १-६८ ।

**स्वच्छमणि ಸ್ವಚ್ಛಮಣಿ** (पुं०) ಸ್ಫಟಿಕಮಣಿ.

**स्वच्छा ಸ್ವಚ್ಛಾ** (स्त्री०) ಬಿಳಿಯ ಗರಿಕೆ.

**स्वज ಸ್ವಜ** (पुं०) 1. ಪುತ್ರ, ಮಗ. स्वस्माज्जायते — जनी (प्रादुर्भावे) "डः" (३-२-९८) । (वि०) 2. ತನ್ನಿಂದ ಉಂಟಾದ, ತನ್ನಿಂದ ಹುಟ್ಟಿದ. (स्त्री०) –जा –ಜಾ. ಪುತ್ರಿ, ಮಗಳು.

**स्वजन ಸ್ವಜನ** (पुं०) ಬಂಧು, ತನ್ನ ಕಡೆಯ ನೆಂಟರು. स्वः आत्मीयः जनः । "इतः प्रत्यादेशात् स्वजनमनुगन्तुं व्यवसिता मुहुस्तिष्ठेत्युच्चैर्वदति गुरुशिष्ये गुरुसमे" शाकु० ६-९ ।

**स्वञ्ज ಸ್ವಂಜ** (पुं०)1. ಬ್ರಹ್ಮ. 2. ರುದ್ರ. "स्वञ्जो विधौ रुद्रे" मेदि० ।

**स्वतन्त्र ಸ್ವತಂತ್ರ** (वि०) ಬೇರೆ ಯಾರಿಗೂ ಅಧೀನನಲ್ಲದವನು, ಒಬ್ಬನ ಅಧಿಕಾರಕ್ಕೆ ಒಳಪಡದವನು. स्वः आत्मा तन्त्रं प्रधानं यस्य ।

**स्वतस् ಸ್ವತಸ್** (अव्य०) 1. ತನ್ನಿಂದ, ತನ್ನವರಿಂದ, ತನ್ನ ಕಡೆಯಿಂದ. स्व "तसिः" (वा० ५-४-४४)। "स्वतः सिद्धं शुद्धस्फटिकमणिभूभृत्प्रतिभटं सुधासध्रीचीभिर्द्युतिभिरपतापत्रिभुवनम्" हयग्री० । 2. ಧನದಿಂದ, ಹಣದಿಂದ. "ग्रहीता यदि नष्टः स्यात् कुटुम्बार्थे कृतो व्ययः । दातव्यं बान्धवैस्तत्स्यात् प्रविभक्तैरपि स्वतः" मनु० ८-१६६ । 3. ನಿಸರ್ಗವಾಗಿ, ಸ್ವಭಾವವಾಗಿ. "स्वतः सिद्धं यस्मिन्नितरदुरवापं विजयते सुमित्रापुत्रत्वादपि जगति रामानुजपदम्" चं० रा० ।

**स्वतःसिद्ध ಸ್ವತಃಸಿದ್ಧ** (वि०) 1. ತನ್ನಿಂದಲೇ ಉಂಟಾದ, ತನ್ನಿಂದಲೇ ಉತ್ಪನ್ನವಾದ. स्वतः आत्मनः सिद्धम् । "स्वतःसिद्धं शुद्धस्फटिकमणिभूभृत्प्रतिभटं सुधासध्रीचीभिर्द्युतिभिरपतापत्रिभुवनम्" हयग्री० । 2. ತಾನಾಗಿಯೇ ಋಜುವಾತಾಗಿರುವ, ಸ್ವಭಾವವಾಗಿ ಸಿದ್ಧಪಡಿಸಲ್ಪಟ್ಟ. "स्वतःसिद्धं यस्मिन्नितरदुरवापं विजयते" चं० रा० ।

**स्वत्व ಸ್ವತ್ವ**(न०)1. ಯಜಮಾನನಾಗಿರುವಿಕೆ, ಸ್ವಾಮಿತ್ವ, ಒಡೆಯನಾಗಿರುವಿಕೆ. स्वस्य भावः "त्वः" (५-१-११९)। ಆಸ್ತಿಯ ನ್ಯಾಯಸಮ್ಮತವಾದ ವಿನಿಯೋಗದಲ್ಲಿ ಸಂಪೂರ್ಣವಾದ ಅಧಿಕಾರಹೊಂದಿರುವಿಕೆಯು ಸ್ವಾಮಿತ್ವ. "तल्" (५-१-११९) । स्वता ಸ್ವತಾ. "न केवलं यः स्वतया मुरारेरनन्यसाधारणतां दधानः" माघ० ३-१९ । 2. ಜ್ಞಾತಿತ್ವ. "व्रजति स्वतामनुचितोऽपि सविनयमुपासितो जनैः" माघ० १५-५ ।

**स्वदन ಸ್ವದನ** (न०) ಸವಿನೋಡುವುದು, ರುಚಿನೋಡುವುದು. ष्वद (आस्वादने) भावे "ल्युट्" (३-३-११५)।

**स्वदनीय ಸ್ವದನೀಯ** (वि०) 1. ರುಚಿನೋಡಲ್ಪಡುವ. 2. ರುಚಿನೋಡಬೇಕಾದ. 3. ರುಚಿನೋಡಬಹುದಾದ. ष्वद (आस्वादने) "अनीयर्" (३-१-९६)। "तव्यः" (३-१-९६)। स्वदितव्यम् ಸ್ವದಿತವ್ಯಮ್.

**स्वदमान ಸ್ವದಮಾನ** (वि०) ಸವಿನೋಡುತ್ತಿರುವ, ರುಚಿನೋಡುತ್ತಿರುವ. ष्वद (आस्वादने) "शानच्" (३-२-१२४) ।

**स्वदित ಸ್ವದಿತ** (वि०) 1. ರುಚಿನೋಡಲ್ಪಟ್ಟ. ष्वद (आस्वादने) "क्तः" (३-२-१०२)। (न०) 2. ಪಿತೃಕಾರ್ಯದಲ್ಲಿ ನಿಮಂತ್ರಿತರಾದವರು ಉತ್ತರರೂಪದಲ್ಲಿ ಹೇಳುವ ಮಾತು. स्वदितमिति ब्रूत ಎಂದು ಹೇಳಿದಾಗ अस्तु स्वदितम् ಎಂಬ ಉತ್ತರ.

**स्वधर्म ಸ್ವಧರ್ಮ** (पुं०) ತನಗೆ ವಿಹಿತವಾದ ಧರ್ಮ, ತಾನು ಅನುಷ್ಠಿಸಬೇಕಾದ ಆಚಾರ. स्वस्य धर्मः । ತನಗೆ ವಿಹಿತವಾದ ಆಚಾರವನ್ನು ತ್ಯಜಿಸಿ ಪರಧರ್ಮವನ್ನು ಆಚರಿಸುವುದು ಶ್ರೇಯಸ್ಸಿಗೆ ಕಾರಣವಾಗುವುದಿಲ್ಲ. ತನ್ನ ಧರ್ಮದಲ್ಲಿ ಕಿಂಚಿತ್ ನ್ಯೂನತೆಯಿದ್ದರೂ ಪರಧರ್ಮಾನುಷ್ಠಾನವು ಅಶ್ರೇಯಸ್ಸಿಗೆ ಕಾರಣ. "श्रेयान् स्वधर्मो विगुणः परधर्मात् स्वनुष्ठितात् । स्वधर्मे निधनं श्रेयः परधर्मो भयावहः" गीता ३-३५ ।

**स्वधा ಸ್ವಧಾ** (अव्य०) 1. ಇಂದ್ರಾದಿ ದೇವತೆಗಳಿಗೆ ಹವಿಸ್ಸನ್ನು ಅರ್ಪಿಸುವ ಮಂತ್ರ. स्वद्यते—ष्वद (आस्वादने) "आ" प्रत्ययः । दस्य धः पृषो० । "स्वाहा देवहविर्दाने श्रौषड्वौषड्वषट् स्वधा" अम० । 2. ಪಿತೃಗಳಿಗೆ ಆಹಾರವನ್ನು ಕೊಡುವ ಮಂತ್ರ. "नूनं मत्तः परं वंश्याः पिण्डविच्छेददर्शिनः । न प्रकामभुजः श्राद्धे स्वधासङ्ग्रहतत्पराः" रघु० १-६६ ।

**स्वधा ಸ್ವಧಾ** (स्त्री०) 1. ದಕ್ಷನ ಪುತ್ರಿ, ಪಿತೃದೇವತೆಗಳ ಪತ್ನಿ. 2. ಬ್ರಹ್ಮನ ಮಾನಸ ಪುತ್ರಿ. "ब्रह्मा च मानसीं कन्यां ससृजे तां मनोरमाम् । रूपयौवनसम्पन्नां शत-

चन्द्रसमप्रभाम् ॥ विद्यावतीं गुणवतीमतिरूपवतीं सतीम्। श्वेतचम्पकवर्णाभां रत्नभूषणभूषिताम् ॥ विशुद्धां प्रस्तुतेरंशां सस्मितां वरदां शुभाम्। स्वधाभिधानां सुदतीं लक्ष्मीलक्षणसंयुताम्।। पितृभ्यस्तां ददौ ब्रह्मा तुष्टेभ्य-स्तुष्टिरूपिणीम्" ब्रह्मवै०।

**स्वधाकार ಸ್ವಧಾಕಾರ** (पुं०) ಪಿತೃಕಾರ್ಯದಲ್ಲಿ ಹೇಳುವ ಸ್ವಧಾ ಶಬ್ದ, ಸ್ವಧಾ ಎಂದು ಎತ್ತರ ಧ್ವನಿಯಲ್ಲಿ ಹೇಳುವುದು.

**स्वधाप्रिय ಸ್ವಧಾಪ್ರಿಯ** (पुं०) 1. ಅಗ್ನಿ. 2. ಕರಿ ಎಳ್ಳು.

**स्वधाभुज् ಸ್ವಧಾಭುಜ್** (पुं०) ಪಿತೃಗಣ. स्वधां भुङ्क्ते — भुज (पालनाभ्यवहारयोः) "क्विप्" (३-२-७६)।

**स्वधिति ಸ್ವಧಿತಿ** (स्त्री०) ಪರಶು, ಕೊಡಲಿ. स्वं धियति — धि (धारणे) "क्तिच्" (३-३-१७४)।

**स्वधितिहेतिक ಸ್ವಧಿತಿಹೇತಿಕ** (पुं०) ಕೊಡಲಿಯೇ ಆಯುಧವಾಗಿರುವ ಯೋಧ.

**स्वन ಸ್ವನ** (पुं०) ಧ್ವನಿ, ಶಬ್ದ. स्वन (शब्दे) वा "अप्" (३-३-६२)। पक्षे "घञ्" (३-३-१८)। स्वानः। "अस्मिन् मृदुश्वसनगर्भतदीयरन्ध्रनिर्यत्स्वनश्रुतिसुखादिव नोत्सहन्ते" माघ० ४-४३।

**स्वनत् ಸ್ವನತ್** (वि०) ಶಬ್ದಮಾಡುತ್ತಿರುವ, ಸದ್ದುಮಾಡುತ್ತಿರುವ. स्वन (शब्दे) "शतृ" (३-२-१२४)। "आयासादलघुतरस्तनैः स्वनद्भिः श्रान्तानामविकचलोचनारविन्दैः" माघ० ८-१। स्त्रियां "ङीप्" (४-१-६)। —न्ती —ನ್ತೀ.

**स्वनन ಸ್ವನನ** (न०) ಶಬ್ದಮಾಡುವುದು, ಸದ್ದುಮಾಡುವುದು. स्वन (शब्दे) भावे "ल्युट्" (३-३-११५)।

**स्वननीय ಸ್ವನನೀಯ** (वि०) 1. ಶಬ್ದಮಾಡಬೇಕಾದ. 2. ಶಬ್ದಮಾಡಬಹುದಾದ. स्वन (शब्दे) "अनीयर्" (३-१-९६)। "तव्यः" **स्वनितव्यम् ಸ್ವನಿತವ್ಯಮ್.**

**स्वनित ಸ್ವನಿತ** (न०)1. ಶಬ್ದ, ಧ್ವನಿ. स्वन (शब्दे) "क्तः" (३-३-११४)। "स्रस्तभुजयुगगलद्वलयस्वनितं प्रतिक्षुतमिवोपशुश्रुवे" माघ० १५-९१। (वि०) 2. ಶಬ್ದಮಾಡಿದ,ಸದ್ದುಮಾಡಿದ. स्वन "क्तः" (३-४-७२)।

**स्वनितवत् ಸ್ವನಿತವತ್** (वि०) ಶಬ್ದಮಾಡಿದ, ಸದ್ದುಮಾಡಿದ. स्वन (शब्दे) "क्तवतुः" (३-२-१०२)। स्त्रियां "ङीप्" (४-१-६)। —वती —ವತೀ.

**स्वपक्ष ಸ್ವಪಕ್ಷ** (पुं०) ತನ್ನಪಕ್ಷ, ತನ್ನಕಡೆಯವರ ಗುಂಪು. स्वस्य आत्मनः पक्षः। "कामः स्त्रीरनुशयवानिव स्वपक्षव्याघातादिति सुतरां चकार चारुः" माघ० ८-६१।

**स्वपत् ಸ್ವಪತ್** (वि०) ಮಲಗಿರುವ, ನಿದ್ರೆಮಾಡುತ್ತಿರುವ. ञि ष्वप् (शये) "शतृ" (३-२-१२४)। "स्वपतः किल जाग्रतश्च तस्य त्वयि वैरेण विदीप्तचित्तवृत्तेः" याद० १५-२८।

**स्वपन ಸ್ವಪನ** (न०) ಮಲಗಿ ನಿದ್ರಿಸುವುದು. ञि ष्वप् (शये) भावे "ल्युट्" (३-३-११५)। "मेदःस्वेदकफरसरक्तक्षीणानां अजीर्णिनां च मुहूर्तं दिवास्वपनमप्रतिषिद्धम्" सुश्रुत० शारीर० ४।

**स्वप्न ಸ್ವಪ್ನ** (पुं०) 1. ನಿದ್ರೆ. ञि ष्वप् (शये) "नन्" (३-३-९१)। "तस्मान्न जागृयाद्रात्रौ दिवास्वप्नं च वर्जयेत्। ज्ञात्वा दोषकरावेतौ बुधः स्वप्नं मितं चरेत्" सुश्रुत० शारीर०। 2. ಕನಸು, ನಿದ್ರಿಸುವಾಗ ಪೂರ್ವಾನುಭೂತವಾದ ವಿಷಯಗಳ ಅನುಭವ. ನಿದ್ರಿಸುತ್ತಿರುವಾಗ ಪಾಂಚಭೌತಿಕಶರೀರಕ್ಕೆ ನಿಯಾಮಕನಾದ ಜೀವಾತ್ಮನು ಪೂರ್ವಜನ್ಮ ಮತ್ತು ಈ ಜನ್ಮಗಳಲ್ಲಿ ಅನುಭವಿಸಿದ ಶುಭಾಶುಭವಿಷಯಗಳನ್ನು ರಜೋಗುಣಪ್ರೇರಿತವಾದ ಮನಸ್ಸಿನಿಂದ ಅನುಭವಿಸುತ್ತಾನೆ. ಇದೇ ಕನಸು. "पूर्वदेहानुभूतांस्तु भूतात्मा स्वपतः प्रभुः। रजोयुक्तेन मनसा गृह्णात्यर्थान् शुभाशुभान्" सुश्रुत० शारीर० ४-३६। "स्वप्नो नु माया नु मतिभ्रमो नु क्लिष्टं नु तावत्फलमेव पुण्यम्" शाकु० ६-१०। 3. ದರ್ಶನ. "स्वप्नः स्वापे प्रसुप्तस्य विज्ञाने दर्शने पुमान्" मेदि०। **ಸ್ವಪ್ನವು ಫಲಕೊಡುವ ಕಾಲ :** ರಾತ್ರಿ ಪ್ರಥಮ ಯಾಮದ ಸ್ವಪ್ನವು ಒಂದು ವರ್ಷದಲ್ಲಿಯೂ ದ್ವಿತೀಯ ಯಾಮದ ಸ್ವಪ್ನವು ಎಂಟು ತಿಂಗಳಲ್ಲಿಯೂ ತೃತೀಯ ಯಾಮದ ಸ್ವಪ್ನವು ಮೂರು ತಿಂಗಳಲ್ಲಿಯೂ ತುರೀಯ ಯಾಮದ ಸ್ವಪ್ನವು 15 ದಿನಗಳಲ್ಲಿಯೂ ಫಲವನ್ನು ಕೊಡುವುದು. "स्वप्नस्तु प्रथमे यामे संवत्सरफलप्रदः। द्वितीये चाष्टभिर्मासैः त्रिभिर्मासैः तृतीयके।। चतुर्थे चार्धमासेन स्वप्नः स्यात्तु फलप्रदः"।। ಅರುಣೋದಯ ಕಾಲದ ಸ್ವಪ್ನವು ಹತ್ತು ದಿನಗಳೊಳಗೆ ಫಲವನ್ನು ಕೊಡುವುದು. "दशाहे फलदः स्वप्नोऽप्यरुणोदयदर्शने"। ಪ್ರಾತಃಕಾಲದಲ್ಲಿ ಸ್ವಪ್ನವನ್ನು ಕಂಡು ಕೂಡಲೆ ನಿದ್ರೆಯಿಂದ ಎಚ್ಚೆತ್ತರೆ ಅದು ಸದ್ಯಃ ಫಲವನ್ನು ಕೊಡುವುದು. "प्रातः स्वप्नश्च फलदस्तत्क्षणं यदि बोधितः"। ಮನಸ್ಸಿನಲ್ಲಿ ನಾನಾವಿಧ ಯೋಚನೆ ಮತ್ತು ರೋಗರುಜಿನಾದಿಗಳಿಂದ

ಕೂಡಿರುವಾಗ ಕಂಡ ಸ್ವಪ್ನವು ಫಲವನ್ನು ಕೊಡಲಾರದು. "चिन्ताव्याधिसमायुक्तो नरः स्वप्नं च पश्यति। तत्सर्वं निष्फलं तात प्रयात्येव न संशयः"॥ ರಾತ್ರಿ ಸ್ವಪ್ನವನ್ನು ಕಂಡು ಮತ್ತೆ ನಿದ್ರೆಮಾಡಿದರೂ ಆ ಸ್ವಪ್ನದ ವಿಷಯವನ್ನು ರಾತ್ರಿಯೇ ಯಾರೊಡನಾದರೂ ಹೇಳಿದರೂ ಅದಕ್ಕೂ ಫಲವಿಲ್ಲ. "दृष्ट्वा स्वप्नं च निद्रालुः यदि निद्रां प्रयाति च। विमूढो वक्ति चेद्रात्रौ न लभेत् स्वप्नजं फलम्"॥ ಕನಸಿನಲ್ಲಿ ಗಜ ರಾಜ ಸ್ವರ್ಣ ವೃಷಭ ಧೇನು ದೀಪ ಅನ್ನ ಹಣ್ಣು ಪುಷ್ಪ ಕನ್ಯೆ ಛತ್ರ ರಥ ಧ್ವಜ ಇವನ್ನು ನೋಡಿದರೆ ಅಪರಿಮಿತವಾದ ಐಶ್ವರ್ಯವನ್ನೂ ಕೀರ್ತಿಯನ್ನೂ ಪಡೆಯುತ್ತಾನೆ. "गजं नृपं सुवर्णं च वृषभं धेनुमेव च। दीपमन्नं फलं पुष्पं कन्यां छत्रं रथं ध्वजम्। कुटुम्बं लभते दृष्ट्वा कीर्तिं च विपुलां श्रियम्"॥ ಸ್ವಪ್ನದಲ್ಲಿ ಬ್ರಾಹ್ಮಣನು ಆಶೀರ್ವಾದ ಮಾಡಿದರೆ ಅವನು ಹೇಳಿದುದೆಲ್ಲಾ ಫಲಿಸುವುದು ಮತ್ತು ಅತುಲವಾದ ಐಶ್ವರ್ಯವನ್ನೂ ಹೊಂದುತ್ತಾನೆ. "यं स्वप्ने ब्राह्मणो नन्द करोति च शुभाशिषम्। यद्वदति भवेत्तस्य तस्यैश्वर्यं भवेद्ध्रुवम्"॥ ಸ್ವಪ್ನದಲ್ಲಿ ಬ್ರಾಹ್ಮಣನು ಪುಣ್ಯಶಾಲಿಯಾದವನೊಬ್ಬನಿಗೆ ಪುಸ್ತಕವನ್ನು ಕೊಟ್ಟರೆ ಅದನ್ನು ಪಡೆದವನು ಜಗದ್ವಿಖ್ಯಾತನಾದ ಪಂಡಿತನಾಗಿಯೂ ಉತ್ತಮ ಕವಿಯಾಗಿಯೂ ಆಗುವನು. "ददाति पुस्तकं स्वप्ने यस्मै पुण्यवते द्विजः। स भवेद्विश्वविख्यातः कवीन्द्रः पण्डितेश्वरः"॥ ಸ್ವಪ್ನದಲ್ಲಿ ದಿವ್ಯವನಿತೆಯು ನೀನು ನನಗೆ ಸ್ವಾಮಿಯಾಗಬೇಕೆಂದು ಹೇಳಿದಾಗ ಅವಳನ್ನು ನೋಡಿದವನು ಕೂಡಲೆ ಎಚ್ಚರಗೊಂಡರೆ ಸಂಶಯವಿಲ್ಲದೆ (ನಿಜವಾಗಿಯೂ) ರಾಜನಾಗುವನು. "दिव्या स्त्री यं प्रवदति मम स्वामी भवान् भव। स्वप्ने दृष्ट्वा च जागर्ति स च राजा भवेद् ध्रुवम्" ब्रह्मवै०।

**स्वप्नज् ಸ್ವಪ್ನಜ್** (वि०) ಯಾವಾಗಲೂ ನಿದ್ರೆಮಾಡುವ ಸ್ವಭಾವದವನು. ञिष्वप्(शये)"नजिङ्" (३-२-१७२)। "अहं स्वप्नक्प्रसादेन तव वन्दारुभिः सह। अभीरुरवसं स्त्रीभिर्भासुराभिरिहेश्वरः" भट्टि० ७-२५।

**स्वभाव ಸ್ವಭಾವ** (पुं०) 1. ಪ್ರಕೃತಿ, ಸಹಜವಾದ ಗುಣ, ಹುಟ್ಟುಗುಣ. स्वो भावः। स्वस्य भावो वा। "भवन्ति नम्रास्तरवः फलागमैः नवाम्बुभिर्दूरविलम्बिनो घनाः। अनुद्धताः सत्पुरुषाः समृद्धिभिः स्वभाव एवैष परोपकारिणाम्" शाकु० ५-१२। 2. ಇತರ ಯಾವ ಕಾರಣವನ್ನೂ ಅಪೇಕ್ಷಿಸದೆ ಆವಿರ್ಭವಿಸುವುದು. "बहिर्हेत्वनपेक्षी तु स्वभावोऽथ प्रकीर्तितः। निसर्गश्च स्वरूपञ्चेत्येषोऽपि भवति द्विधा"॥

**स्वभावोक्ति ಸ್ವಭಾವೋಕ್ತಿ** (स्त्री०) ಜಾತಿಕ್ರಿಯಾಗುಣಗಳಲ್ಲಿರುವ ಸ್ವಭಾವದ ವರ್ಣನೆಯು "ಸ್ವಭಾವೋಕ್ತಿ" ಅಲಂಕಾರ. "स्वभावोक्तिः स्वभावस्य जात्यादिस्थस्य वर्णनम्। **ಉದಾ :** "कुरङ्गैरुत्तरङ्गाक्षैः स्तब्धकर्णैरुदीक्षितम्" चन्द्रा०।

**स्वभू ಸ್ವಭೂ** (पुं०) 1. ವಿಷ್ಣು, ಪರಮಾತ್ಮ. स्वतो भवति —भू "क्विप्" (३-२-१७९)। 2. ಬ್ರಹ್ಮ, ಚತುರ್ಮುಖ. "तान्बभाषे स्वभूः पुत्रान् प्रजाः सृजत पुत्रकाः" भाग०। 3. ಶಿವ, ಪರಮೇಶ್ವರ.

**स्वयम् ಸ್ವಯಮ್** (अव्य०) ತಾನೇ. सु सुष्ठु अयते —अय (गतौ) "अम्" बाहु०। "विनिपातनिदानानि स्वयमन्वीक्ष्य सुष्यत" याद० २२-३५। 2. ತನ್ನಿಂದ. "सिक्तं स्वयमिव स्नेहात् वन्ध्यमाश्रमवृक्षकम्" रघु० १-७०। 3. ತಾನಾಗಿಯೇ, ಅವನಾಗಿಯೇ. "विषवृक्षोऽपि संवर्ध्य स्वयं छेत्तुमसाम्प्रतम्"।

**स्वयंकृत ಸ್ವಯಂಕೃತ** (वि०) ತನ್ನಿಂದಲೇ ಮಾಡಲ್ಪಟ್ಟ.

**स्वयंगुप्ता ಸ್ವಯಂಗುಪ್ತಾ** (स्त्री०) ಶೂಕಶಿಂಬಿ, ನಸುಗುನ್ನಿ ಗಿಡ.

**स्वयंग्राह ಸ್ವಯಂಗ್ರಾಹ** (वि०) ತಾನಾಗಿ ತನ ಕೈಗಳಿಂದ ಹಿಡಿದುಕೊಳ್ಳುವ. स्वयं गृह्णाति—ग्रह (उपादाने) वा "णः" (३-१-१४३)। "नितम्बिनीमिच्छसि मुक्तलज्जां कण्ठे स्वयंग्राहनिषक्तबाहुम्" कुमा० ३-७। पक्षे ग्रहः। ವರನನ್ನು ಆರಿಸಿಕೊಳ್ಳಲು ತಾನಾಗಿ ತನ್ನ ತೋಳುಗಳನ್ನು ವರನ ಹೆಗಲಿನ ಮೇಲೆ ಸ್ವೇಚ್ಛೆಯಿಂದ ಇಟ್ಟು ಹಿಡಿದುಕೊಳ್ಳುವವಳು ಸ್ವಯಂಗ್ರಾಹಳು.

**स्वयंवर ಸ್ವಯಂವರ** (पुं०) 1. ವಧುವು ವರನನ್ನು ವರಿಸುವ ಸಮಾರಂಭ. स्वयं वृणीतेऽत्र—वृङ् (संभक्तौ) "अप्" (३-३-५८)। "स्वयंवरं भीमनरेन्द्रजाया दिशः पतिः न प्रविवेश शेषः" नैष० १०-१५। 2. ವಧುವು ವರನನ್ನು ಆರಿಸುವುದು. स्वयं व्रियते—वृञ् (वरणे) "अप्" (३-३-५८)। "स्वयंवरमहे भैमीवरणाय त्वरामहे। तदस्माननुमन्यध्वमध्वने तत्र भाविने" नैष० १७-११४। (स्त्री०) **-वरा -ವರಾ.** ಪತಿಯನ್ನು ತಾನೇ ವರಿಸುವ (ಆರಿಸುವ) ಹೆಂಗಸು.

**स्वयंदत्त ಸ್ವಯಂದತ್ತ** (पुं०) ಹನ್ನೆರಡು ಮಂದಿ ಪುತ್ರರಲ್ಲೊಬ್ಬ, ತಾಯಿ ತಂದೆಗಳಿಂದ ಪರಿತ್ಯಜಿಸಲ್ಪಟ್ಟು ತಾನಾಗಿ

ಒಬ್ಬನ ಪುತ್ರನಾಗಿ ಹೋಗಿ ಸೇರಿಕೊಂಡಿರುವವನು. स्वयं आत्मना दत्तः।

**स्वयंभू ಸ್ವಯಂಭೂ** (पुं०) 1. ವಿಷ್ಣು. चतुर्मुखादिवत् ईश्वरान्तरेण कर्मादिभिर्वा परवत्तामन्तरेण स्वयमेव भवति—भू (सत्तायाम्) "क्विप्" (३-२-१७९)। "भवति स्वेच्छया योऽसौ स्वयंभूः परिकीर्तितः" इति निरुक्तिः। "स्वयंभूः शम्भुरादित्यः" वि० स०। 2. ಬ್ರಹ್ಮ, ಚತುರ್ಮುಖ. (वि०) 3. ತಾನಾಗಿಯೇ ಹುಟ್ಟುವ.

**स्वर् ಸ್ವರ್** (अव्य०) 1. ಸ್ವರ್ಗ. स्वरति अप्राप्त्या उपतापयति इति स्वः। स्वरादिपाठादव्ययत्वम्। "अदृश्यतादर्शतलामलेषु छायेव या स्वर्जलधेर्जलेषु" माघ० ३-३५। 2. ಒಂದು ವ್ಯಾಹೃತಿ. "अकारं चाप्युकारं च मकारं च प्रजापतिः। वेदत्रयान्निरदुहद्भूर्भुवः स्वरितीति च" मनु० २-७६। 3. ಆಕಾಶ. 4. ಪರ ಲೋಕ. "स्वर्गे परे च लोके स्वर्" अम०।

**स्वर ಸ್ವರ** (पुं०) 1. ಉದಾತ್ತ ಮೊದಲಾದ ಮೂರು ಸ್ವರಗಳು. ಉದಾತ್ತ ಅನುದಾತ್ತ ಮತ್ತು ಸ್ವರಿತಗಳೆಂದು ಸ್ವರವು ಮೂರು ವಿಧ. स्वरन्ति शब्दायन्ते—स्वृ (शब्दोपतापयोः) "अच्" (३-१-१३४)। उच्चैरादीयते उच्चार्यते इति उदात्तः। "निहन्त्यरीनेकपदे य उदात्तस्वरानिव" माघ० २-९५। नीचैरनुदात्तः। समाहारः स्वरितः। अचः स्वराः। "अनुदात्तो हृदि ज्ञेयः मूर्ध्न्युदात्त उदाहृतः। स्वरितः कर्णमूलीयः सर्वास्ये प्रचयः स्मृतः" पा० शि०। 2. ಸ್ವರವರ್ಣಗಳು, ಅಚ್ ವರ್ಣಗಳು. स्वरा अचः। तद्धर्मत्वादुदात्तादयोऽपि। स्वर्यते शब्द्यतेऽनेन व्यञ्जनम्—स्वृ (शब्दोपतापयोः) कर० "अच्"। "अ" ಕಾರಾದಿವರ್ಣಗಳು ಸ್ವರ ಅಥವಾ ಅಚ್‌ವರ್ಣಗಳು. ಪ್ರತಿಯೊಂದು ವರ್ಣಕ್ಕೂ ಹ್ರಸ್ವ ದೀರ್ಘ ಮತ್ತು ಪ್ಲುತಭೇದದಿಂದ ಮೂರು ಮೂರು ಮಾತ್ರೆಗಳಿರುವುವು. "एकमात्रो भवेद्ध्रस्वः द्विमात्रो दीर्घ उच्यते। त्रिमात्रस्तु प्लुतो ज्ञेयः व्यञ्जनं त्वर्धमात्रकम्॥ अ इ उ ऋ ವರ್ಣಗಳು ಹ್ರಸ್ವ ದೀರ್ಘ ಪ್ಲುತ ಭೇದದಿಂದ ಮೂರು ಮೂರು ವಿಧ. ಇವು ಅನುನಾಸಿಕ ಮತ್ತು ಅನನುನಾಸಿಕ ಭೇದದಿಂದ ಪ್ರತ್ಯೇಕ ಆರು ವಿಧ. ಈ ಆರು ವಿಧವೂ ಉದಾತ್ತ ಅನುದಾತ್ತ ಸ್ವರಿತ ಭೇದದಿಂದ ಪ್ರತ್ಯೇಕ ಹದಿನೆಂಟು ವಿಧಗಳಾಗುವುವು. ಈ ರೀತಿ अ इ उ ऋ ವರ್ಣಗಳು ಪ್ರತ್ಯೇಕ ಹದಿನೆಂಟು ವಿಧಗಳಾಗುವುವು. ऌ ವರ್ಣಕ್ಕೆ ದೀರ್ಘವಿಲ್ಲವಾದುದರಿಂದ ಹನ್ನೆರಡು ವಿಧ. एच् (ए ओ ऐ औ) ವರ್ಣಗಳಿಗೆ ಹ್ರಸ್ವವಿಲ್ಲವಾದುದರಿಂದ ಹನ್ನೆರಡು ವಿಧ. "अ इ उ ऋ वर्णानां प्रत्येकमष्टादशभेदाः। ऌ वर्णस्य द्वादश। तेषां दीर्घाभावात्। एचामपि द्वादश। तेषां ह्रस्वाभावात्" पा० शि०। [ವ್ಯಂಜನಾಕ್ಷರಗಳ ವಿವರಕ್ಕೆ "हल्" ಪದದಲ್ಲಿ ನೋಡಿ.] 3. ಮೂಗಿನಿಂದ ಹೊರಡುವ ಗಾಳಿ. "स्वरः शब्देऽपि षड्जादौ" हेम०। 4. ಷಡ್ಜ ಮೊದಲಾದ ಸಪ್ತಸ್ವರಗಳು. "कलतया वचसः परिवादिनीस्वरजिता रजिता वशमाययुः" माघ० ६-९। "स्युःषड्जर्षभगान्धारमध्यमाः पञ्चमस्तथा। धैवतश्च निषादश्च तन्त्रीकण्ठोद्भवाः स्वराः। ते केकिचातकाजकुञ्पिकभेकगजस्वराः" वैज०। 5. ನಾದ, ಕಂಠದಿಂದ ಹೊರಡುವ ಧ್ವನಿ. "स्वरेण तस्याममृतस्रुतेव प्रजल्पितायामभिजातवाचि" कुमा० १-४५। "स्वरो नासासमीरणे। उदात्तादावकारादौ षड्जादौ च ध्वनौ पुमान्" मेदि०। [ಸಪ್ತಸ್ವರಗಳ ವಿವರಕ್ಕೆ ಆಯಾ ಪದಗಳಲ್ಲಿ ನೋಡಿ.]

**स्वरग्राम ಸ್ವರಗ್ರಾಮ** (पुं०) ಪೂರ್ಣಸ್ವರಶ್ರೇಣಿ, ಶಾರೀರದ ಅಥವಾ ವಾದ್ಯದ ವ್ಯಾಪ್ತಿ.

**स्वरपत्तन ಸ್ವರಪತ್ತನ** (न०) ಸಾಮವೇದ. स्वराणां षड्जादीनां पत्तनमाश्रयस्थानम्।

**स्वरभङ्ग ಸ್ವರಭಂಗ** (पुं०) ಕಂಠದ ನಾದವನ್ನು ಮೊಟಕುಗೊಳಿಸುವ ಒಂದು ರೋಗ. स्वरस्य भङ्गो यस्मात्। –भेदः–ಭೇದಃ. ಸ್ವರಭಂಗವು ವಾತ ಪಿತ್ತ ಕಫ ಸನ್ನಿಪಾತ ಕ್ಷಯ ಮತ್ತು ಮೇದೋಭವಗಳೆಂದು ಆರು ವಿಧ.

**स्वरसंयोग ಸ್ವರಸಂಯೋಗ** (पुं०) 1. ಸ್ವರ (ಅಚ್) ವರ್ಣಗಳ ಸಂಬಂಧ, ಸ್ವರವರ್ಣಗಳು ಒಂದಕ್ಕೊಂದು ಸೇರಿರುವುದು. –सङ्क्रमः–ಸಂಕ್ರಮಃ. 2. ಧ್ವನಿಯ ಸಂಬಂಧ, ಕಂಠದಿಂದ ಹೊರಡುವ ಶಬ್ದದ ಸಂಬಂಧ. "आर्ये कौशिक्या इव स्वरसंयोगः श्रूयते" माल० ५।

**स्वरस ಸ್ವರಸ** (पुं०) 1. ಸ್ವಭಾವವಾದ ರುಚಿ. स्वस्य रसः। 2. ಕಾವ್ಯ ರಚನೆಯಲ್ಲಿ ತುಂಬಿರುವ ರಸಭಾವ. ಕಾವ್ಯಗಳಲ್ಲಿ ಕಂಡುಬರುವ ಸ್ವಭಾವವಾದ ಭಾವನೆ. –ಚಿತ್ತವೃತ್ತಿ. 3. ಒಂದು ವಿಧ ಕಷಾಯ.

**स्वरा ಸ್ವರಾ** (स्त्री०) ಬ್ರಹ್ಮನ ಹಿರಿಯ ಹೆಂಡತಿ.

**स्वरित ಸ್ವರಿತ** (पुं०) ಒಂದು ಸ್ವರ. ಉದಾತ್ತತ್ವ ಮತ್ತು ಅನುದಾತ್ತತ್ವ ಈ ಎರಡೂ ಧರ್ಮಗಳುಳ್ಳ ಒಂದು ಸ್ವರ ವರ್ಣ. स्वरोऽस्य सञ्जातः "इतच्" (५-२-३६)।

ಸ್ವರಿತದ ಆದಿಭಾಗ (ಪೂರ್ವಭಾಗ) ದಲ್ಲಿ ಅರ್ಧ ಹ್ರಸ್ವವು ಉದಾತ್ತ. ಉತ್ತರಭಾಗವು ಅನುದಾತ್ತ. स्वरितस्यादितोऽर्धमुदात्तम्। उत्तरार्धं तु परिशेषादनुदात्तम्." ಸಿ० कौ०। "उच्चैरुदात्तः" "नीचैरनुदात्तः" "समाहारः स्वरितः" (१-२-२९, ३०, ३१)।

**स्वराज् ಸ್ವರಾಜ್** (ಪುಂ) ಒಂದು ವೈದಿಕ ಛಂದಸ್ಸು.

**स्वरु ಸ್ವರು** (ಪುಂ) 1. ಇಂದ್ರನ ವಜ್ರಾಯುಧ. स्वरति—स्वृ (शब्दोपतापयोः) "उः" (उ० १-११)। 2. ಯಾಗದ ಯೂಪಸ್ತಂಭದ ತುಂಡು. 3. ಬಾಣ. 4. ಯಾಗ. "स्वरुः पुंसि यूपखण्डे भिदुरेऽप्यध्वरे शरे" मेदि०। 5. ಸೂರ್ಯನ ಪ್ರಕಾಶ.

**स्वरुस् ಸ್ವರುಸ್** (ಪುಂ) ಇಂದ್ರನ ವಜ್ರಾಯುಧ.

**स्वरूप ಸ್ವರೂಪ** (ನಂ) 1. ಸ್ವಭಾವ, ಪ್ರಕೃತಿ, ಸಹಜವಾದ ಗುಣ. स्वं रूपम्। 2. ತನ್ನ ನಿಜವಾದ ರೂಪ, ನಿಜವಾದ ಆಕೃತಿ. स्वस्य रूपमाकारः। 3. ಸ್ವಭಾವಸಿದ್ಧವಾದ ಪದವಿ, –ದರ್ಜೆ, –ಸ್ಥಿತಿ. "स्वरूपशोभैकफलानि नाकिनां गणैर्यमाशङ्क्य तदादि चक्रिरे" माघ० १-४५। (ವಿ०) 4. ವಿದ್ಯಾವಂತ. 5. ಸುಂದರವಾದ, ಮನೋಹರವಾದ. "प्राप्तरूपस्वरूपाभिरूपा बुधमनोज्ञयोः" अम०।

**स्वरेणु ಸ್ವರೇಣು** (ಸ್ತ್ರೀ०) ಸೂರ್ಯನ ಪತ್ನಿ. "स्वरेणुशुमयी त्वाष्ट्री प्रियाश्चैते विवस्वतः" त्रिकाण्ड०।

**स्वरोदय ಸ್ವರೋದಯ** (ಪುಂ) 1. ಧ್ವನಿಯ ಉತ್ಪತ್ತಿ, ಶಬ್ದವು ಹುಟ್ಟುವುದು. स्वरस्य शब्दस्य उदयः। 2. ಸಂಗೀತದ (ನಿಷಾದ ಮೊದಲಾದ) ಸಪ್ತಸ್ವರಗಳನ್ನು ತಿಳಿಸುವ ಗ್ರಂಥ.

**स्वर्ग ಸ್ವರ್ಗ** (ಪುಂ) 1. ಸುಖ. 2. ದೇವಲೋಕ, ದೇವತೆಗಳ ವಾಸಸ್ಥಾನ. सु सुष्ठु अर्ज्यते—अर्ज (अर्जने) "घञ्" (३-३-१९)। ಸ್ವರ್ಗಲೋಕವು ಭೂರಾದಿ ಸಪ್ತ ಊರ್ಧ್ವಲೋಕಗಳಲ್ಲಿ ಮೂರನೆಯ ಲೋಕ.

**ಸಪ್ತ ಊರ್ಧ್ವಲೋಕಗಳು:** (1) भूर्लोकः (2) भुवर्लोकः (3) स्वर्लोकः (4) महर्लोकः (5) जनलोकः (6) तपोलोकः ಮತ್ತು (7) सत्यलोकः। ಜ್ಯೋತಿಷ್ಟೋಮಯಾಗದಿಂದ ಸ್ವರ್ಗ ಪ್ರಾಪ್ತಿಯಾಗುವುದು. "ज्योतिष्टोमेन स्वर्गकामो यजेत"। ರೋಗ ಜರೆ ಶೋಕ ಮೊದಲಾದ ದುಃಖಸ್ಪರ್ಶವಿಲ್ಲದ ಸುಖಾನುಭವಕ್ಕಾಗಿ ಸ್ವರ್ಗಾಪೇಕ್ಷೆಯುಂಟಾಗುವುದು. ಸ್ವರ್ಗವು (ಸುಖವು) ಯಾಗ ದಾನ ಧರ್ಮ ತಪಸ್ಸು ಮೊದಲಾದ ಪುಣ್ಯಕಾರ್ಯಗಳಿಂದ ಲಭ್ಯ.

**ಸ್ವರ್ಗದ ಗುಣಗಳು:** ಸ್ವರ್ಗದಲ್ಲಿ ರೋಗ ಜರೆ ಮೃತ್ಯು ಶೋಕ ಕ್ಷುತ್ ಮತ್ತು ತೃಷ್ಣೆ ಹಿಮಾದಿಬಾಧೆ ಮುಂತಾದ ಯಾವ ದುಃಖಾನುಭವವೂ ಇರುವುದಿಲ್ಲ. ಮನುಷ್ಯರು ತಾವು ಮಾಡಿದ ಪುಣ್ಯಕಾರ್ಯಗಳ ಫಲವನ್ನು ಅನುಭವಿಸಲು ಸ್ವರ್ಗಕ್ಕೆ ತೆರಳುತ್ತಾರೆ. ಅಪ್ಸರಸ್ಸುಗಳೊಡನೆ ಸುಖವಾಗಿ ವಿಹರಿಸುತ್ತಾರೆ. ಸ್ವರ್ಗದಲ್ಲಿ ನಯನಾನಂದಕರವಾದ ದಿವ್ಯೋದ್ಯಾನಗಳೂ ಸಕಲ ಇಷ್ಟಾರ್ಥಗಳನ್ನೂ ನೀಡುವ ಫಲಪುಷ್ಪಸಮೃದ್ಧವಾದ ವೃಕ್ಷಗಳೂ ಚಂದ್ರಮಂಡಲದಂತೆ ಶುಭ್ರವಾದ ಸ್ವರ್ಣಮಯ ಮಂಚ ಮತ್ತು ಆಸನಗಳೂ ವಿರಾಜಿಸುವುವು. ಅಲ್ಲಿ ಪುಣ್ಯಶಾಲಿಗಳಾದ ಪುರುಷರೂ ಎಲ್ಲೆಲ್ಲೂ ಸಂಚರಿಸುತ್ತಿರುವರು. ನಾಸ್ತಿಕರು ತಸ್ಕರರು ಇಂದ್ರಿಯನಿಗ್ರಹವಿಲ್ಲದವರು ಘಾತುಕರು ಚಾಡಿಕೋರರು ಕೃತಘ್ನರು ಅಹಂಕಾರಿಗಳು ಇವರಾರಿಗೂ ಸ್ವರ್ಗಕ್ಕೆ ಪ್ರವೇಶವಿಲ್ಲ. "नन्दनादीनि दिव्यानि रम्याणि विविधानि च। तत्रोद्यानानि पुण्यानि सर्वकामशुभानि च॥ सर्वकामफलैर्वृक्षैः शोभितानि समन्ततः। चन्द्रमण्डलशुभ्राणि हेमशय्यासनानि च। सर्वकामसमृद्धाश्च सुखदुःखविवर्जिताः॥ नराः सुकृतिनस्ते तु विचरन्ति यथासुखम्। न तत्र नास्तिका यान्ति न स्तेया नाजितेन्द्रियाः। न नृशंसा न पिशुनाः कृतघ्ना न च मानिनः॥ यज्वानो दानशीलाश्च तत्र गच्छन्ति ते नराः। न रोगो न जरा मृत्युः न शोको न हिमादयः। न तत्र क्षुत्पिपासा च कस्य ग्लानिर्न दृश्यते॥ "स्वर्गे सतां शर्म परं न धर्मा भवन्ति भूमाविह तच्च ते च" नैष० ६-९८।

**ಸ್ವರ್ಗದಲ್ಲಿ ಸಂಭವಿಸುವ ದೋಷಗಳು:** ಮನುಷ್ಯನು ತಾನು ಮಾಡಿದ ಪುಣ್ಯಕಾರ್ಯಗಳ ಫಲವಾದ ಸಕಲಸೌಖ್ಯಗಳನ್ನೂ ಅನುಭವಿಸಿ ಅವೆಲ್ಲಾ ಸಂಪೂರ್ಣವಾಗಿ ಕ್ಷಯಿಸಿದ ನಂತರ ಮತ್ತೆ ಭೂಲೋಕಕ್ಕೆ ಬಂದು ಸೇರುವನು. "क्षीणे पुण्ये मर्त्यलोकं विशन्ति" श्रुतिः। "शुभस्य कर्मणः कृत्स्नं फलं तत्रैव भुज्यते। न चात्र क्रियते भूयः सोऽत्र दोषो महान् श्रुतः॥ असन्तोषश्च भवति दृष्ट्वा दीप्तां परश्रियम्। सम्प्राप्ते कर्मणामन्ते सहसा पतनं तथा॥ इह यत्क्रियते कर्म फलं तत्रैव भुज्यते। कर्मभूमिरियं राजन् फलभूमिस्त्वसौ स्मृता" पाद्मपु०। [ಸಪ್ತಲೋಕಗಳ ವಿವರಕ್ಕೆ "सत्य" ಪದದಲ್ಲಿ ನೋಡಿ.]

**स्वर्गङ्गा ಸ್ವರ್ಗಂಗಾ** (ಸ್ತ್ರೀ०) ಸ್ವರ್ಗಲೋಕದ ನದಿ, ಮಂದಾಕಿನೀ, ಗಂಗಾನದಿ. स्वः स्वर्गस्य गङ्गा। "हंसीव

कृष्ण ते कीर्तिः स्वर्गङ्गामवगाहते" चन्द्रा०। "स्वर्गङ्गाम्बुनि वन्दिनां कृतदिनारम्भाप्लुतिर्भूपतिः" नैष० १९-६६।

**स्वर्गतरु ಸ್ವರ್ಗತರು** (पुं०) ದೇವಲೋಕದ ವೃಕ್ಷ, ಕಲ್ಪವೃಕ್ಷ.

**स्वर्गपति ಸ್ವರ್ಗಪತಿ** (पुं०) ಸ್ವರ್ಗಲೋಕದ ಒಡೆಯ, ದೇವೇಂದ್ರ. स्वर्गस्य पतिः।

**स्वर्गलोकेश ಸ್ವರ್ಗಲೋಕೇಶ, –ईश्वरः –ಈಶ್ವರಃ** (पुं०) ಸ್ವರ್ಗಲೋಕದ ಅಧಿಪತಿ, ದೇವಲೋಕದ ಸ್ವಾಮಿಯಾದ ಇಂದ್ರ.

**स्वर्गवधू ಸ್ವರ್ಗವಧೂ** (स्त्री०) ಅಪ್ಸರಸ್ಸು.

**स्वर्गापगा ಸ್ವರ್ಗಾಪಗಾ** (स्त्री०) ಸ್ವರ್ಗಲೋಕದ ನದಿ. "स्वर्गापगासलिलसीकरिणी समन्तात्"कुमा० १७-५३।

**स्वर्गिन् ಸ್ವರ್ಗಿನ್** (पुं०) ದೇವತೆ. स्वर्गोऽस्त्यस्य भोग्यत्वेन —स्वर्ग "इनिः" (५-२-११५)। "भक्तिभारनतया सदोन्नतः स्वर्गिणां परिषदा यदूद्वहः" याद० १७-४।

**स्वर्गौकस् ಸ್ವರ್ಗೌಕಸ್** (पुं०) ದೇವತೆ. स्वर्गः ओको यस्य। "स्वर्गौकसः स्वर्गपरिच्युताः किं स्वपुण्यराशौ सुमहत्तमेऽपि" कुमा० १२-३६।

**स्वर्ग्य ಸ್ವರ್ಗ್ಯ** (वि०) 1. ಸ್ವರ್ಗಕ್ಕೆ ನಿಮಿತ್ತವಾದ, ಸ್ವರ್ಗವನ್ನು ಸಂಪಾದಿಸಿಕೊಡುವ, ಸ್ವರ್ಗದ ಪ್ರವೇಶವನ್ನು ಗಳಿಸಿಕೊಡುವ. स्वर्गस्य निमित्तं "यत्" (५-१-३९)। 2. ಸ್ವರ್ಗಸಂಬಂಧವಾದ. स्वर्गस्य संयोगः।

**स्वर्जिक ಸ್ವರ್ಜಿಕ** (पुं०) ಸದ್ಯಕ್ಷಾರ.

**स्वर्ण ಸ್ವರ್ಣ** (न०) 1. ಸುವರ್ಣ, ಚಿನ್ನ, ಬಂಗಾರ. ऋणु (गतौ) "घञ्" (३-३-१८)। अर्णः—शोभनोऽर्णो गतिरनेन। "स्वर्णैर्वितीर्णैः करवाम वामनेत्रे भवत्या किमुपासनासु। अङ्ग त्वदङ्गानि निपीतपीतदर्पाणि पाणिः खलु याचते नः" नैष० ८-९८।

**ಸ್ವರ್ಣದ ಉತ್ಪತ್ತಿ:** ಒಂದು ದಿನ ದೇವತೆಗಳೆಲ್ಲರೂ ಒಂದು ಸಭೆಯಲ್ಲಿ ಸೇರಿದ್ದಾಗ ಅಪ್ಸರಸ್ಸುಗಳು ನರ್ತನ ಮಾಡಿ ಗಾನಮಾಡಲು ತೊಡಗಿದರು. ಆಗ ಅಗ್ನಿದೇವನು ರಂಭೆಯನ್ನು ನೋಡಿ ಮೋಹಿಸಲು ರೇತಃಸ್ಖಲನವಾಯಿತು. ಆಗ ಲಜ್ಜೆಯಿಂದ ಅದನ್ನು ವಸ್ತ್ರದಿಂದ ಆಚ್ಛಾದನೆಮಾಡಿ ಮೇಲಕ್ಕೆ ಎದ್ದನು. ಆ ರೇತಸ್ಸು ಕ್ರಮೇಣ ದೊಡ್ಡದಾಗುತ್ತ ಕೊನೆಗೆ ಸುಮೇರುಪರ್ವತವಾಯಿತು. "एकदा सर्वदेवाश्च समूषुः स्वर्गसंसदि। तत्र कृत्वा च नृत्यं च गायन्त्यप्सरसां गणः। विलोक्य रम्भां सुश्रोणीं सकामो वह्निरेव च। पपात वीर्यं चच्छाद लज्जया वाससा तथा। उत्तस्थौ स्वर्णपुञ्जश्च वस्त्रं क्षिप्त्वा ज्वलत्प्रभः। क्षणेन वर्धयामास स सुमेरुर्बभूव ह। हिरण्यरेतसं वह्निं प्रवदन्ति मनीषिणः" ब्रह्मवै०। 2. ದತ್ತೂರಿ ಗಿಡ. 3. ನಾಗಕೇಸರ.

**स्वर्णकाय ಸ್ವರ್ಣಕಾಯ** (पुं०) 1. ಗರುಡ, ಗರುತ್ಮಂತ. स्वर्णमिव कायो देहो यस्य। (वि०) 2. ಸುವರ್ಣಮಯವಾದ ಶರೀರವುಳ್ಳ.

**स्वर्णकार ಸ್ವರ್ಣಕಾರ** (पुं०) ಅಕ್ಕಸಾಲಿಗ, ಚಿನ್ನದ ಆಭರಣಗಳನ್ನು ತಯಾರಿಸುವವನು. स्वर्णं स्वर्णाभरणादिकं करोति—डुकृञ् (करणे) "अण्" (३-२-१)।

**स्वर्णकृत् ಸ್ವರ್ಣಕೃತ್** (पुं०) ಸ್ವರ್ಣಕಾರ, ಅಕ್ಕಸಾಲಿಗ, ಚಿನ್ನದ ಆಭರಣಗಳನ್ನು ತಯಾರಿಸುವವನು. स्वर्णं स्वर्णालङ्कारं करोति—डुकृञ् (करणे) "क्विप्" (३-२-६१)।

**स्वर्णकेतकी ಸ್ವರ್ಣಕೇತಕೀ** (स्त्री०) ಹಳದಿಬಣ್ಣದ ತಾಳೆ ಹೂವು. स्वर्णवर्णा केतकी।

**स्वर्णक्षीरी ಸ್ವರ್ಣಕ್ಷೀರೀ** (स्त्री०) ಠಂಕೋಷ್ಠ, ಘಂಟಾಮಣಿ ಸೊಪ್ಪು. स्वर्णवर्णा क्षीरी।

**स्वर्णज ಸ್ವರ್ಣಜ** (न०) ತಗರ.

**स्वर्णदीधिति ಸ್ವರ್ಣದೀಧಿತಿ** (पुं०) ಅಗ್ನಿ. स्वर्णवत् दीधितिः किरणः यस्य।

**स्वर्णदी ಸ್ವರ್ಣದೀ** (स्त्री०) ದೇವಲೋಕದ ನದಿ, ಗಂಗಾನದಿ. स्वः स्वर्गस्य नदी।

**स्वर्णपुष्प ಸ್ವರ್ಣಪುಷ್ಪ** (पुं०) 1. ಚಂಪಕ ವೃಕ್ಷ, ಸಂಪಿಗೆ ಮರ. 2. ಕಕ್ಕೆಗಿಡ.

**स्वर्णवणिक्(ज्) ಸ್ವರ್ಣವಣಿಕ್(ಜ್)** (पुं०) ಚಿನ್ನದ ವ್ಯಾಪಾರ ಮಾಡುವವನು, ಒಬ್ಬ ಸಂಕರ ಜಾತಿಯವನು. स्वर्णस्य वणिक्।

**स्वर्णभृङ्गार ಸ್ವರ್ಣಭೃಂಗಾರ** (पुं०) 1. ಚಿನ್ನದ ಗಿಂಡಿ. 2. ಗರಗದ ಸೊಪ್ಪು.

**स्वर्णयूथी ಸ್ವರ್ಣಯೂಥೀ** (स्त्री०) ಹಳದಿಯ ತಾರೆಗಿಡ.

**स्वर्णलता ಸ್ವರ್ಣಲತಾ** (स्त्री०) ಜ್ಯೋತಿಷ್ಮತೀಲತೆ, ಕಂಗೊಂಗೆ ಗಿಡ.

**स्वर्णवर्णा ಸ್ವರ್ಣವರ್ಣಾ** (स्त्री०) ಹರಿದ್ರೆ, ಅರಿಶಿನ. स्वर्णवत् वर्णो यस्याः।

**स्वर्णाथ ಸ್ವರ್ಣಾಥ** (पुं०) ಸ್ವರ್ಗಾಧಿಪತಿಯಾದ ಇಂದ್ರ. स्वः नाथः। "स्वर्गुणास्फालभवैः स्मरस्य स्वर्णाथकर्णौ बधिरावभूताम्" नैष० ८-६८।

**स्वर्णारि ಸ್ವರ್ಣಾರಿ** (पुं०) ಗಂಧಕ.

**स्वर्भानु ಸ್ವರ್ಭಾನು** (पुं०) ರಾಹುಗ್ರಹ. स्वः आकाशे विपरीतलक्षणया भाति — भा (दीप्तौ) "नुः" (उ० ३-३२)। "तुल्येऽपराधे स्वर्भानुः भानुमन्तं चिरेण यत्। हिमांशुमाशु ग्रसते तन्म्रदिम्नः स्फुटं फलम्" माघ० २-४९।

**स्वर्लोक ಸ್ವರ್ಲೋಕ** (पुं०) ಸ್ವರ್ಗ, ದೇವಲೋಕ. स्वरेव लोकः। "स्वर्लोकमस्माभिरितः प्रयातैः केलीषु तद्गानगुणान्निपीय" नैष० ३-२७। "भूर्लोकः कल्पितः पद्भ्यां भुवर्लोकोऽस्य नाभितः। स्वर्लोकः कल्पितो मूर्ध्ना इति वा लोककल्पना" भाग० २-५-४२।

**स्वर्वधू ಸ್ವರ್ವಧೂ** (स्त्री०) ಅಪ್ಸರಸ್ಸು. स्वः वधूः।

**स्वर्वापी ಸ್ವರ್ವಾಪೀ** (स्त्री०) ಗಂಗಾನದಿ.

**स्वर्वेश्या ಸ್ವರ್ವೇಶ್ಯಾ** (स्त्री०) ಸ್ವರ್ಗಲೋಕದ ವೇಶ್ಯೆ, ಊರ್ವಶಿ ಮೊದಲಾದ ಅಪ್ಸರಸ್ಸುಗಳು. स्वः वेश्या। "स्त्रियां बहुष्वप्सरसः स्वर्वेश्या ऊर्वशीमुखाः" अम०।

**स्वर्वैद्यौ ಸ್ವರ್ವೈದ್ಯೌ** (पुं० द्वि० व०) ದೇವಲೋಕದ ವೈದ್ಯರು, ಅಶ್ವಿನೀ ಕುಮಾರರು. स्वः स्वर्गस्य वैद्यौ।

**स्वल्प ಸ್ವಲ್ಪ** (वि०) 1. ಬಹಳ ಕೊಂಚವಾದ. 2. ಬಹಳ ಸಣ್ಣದಾದ. सुष्ठु अल्पः। "नेहाभिक्रमनाशोऽस्ति प्रत्यवायो न विद्यते। स्वल्पमप्यस्य धर्मस्य त्रायते महतो भयात्" गीता २-४०। "सम्पदा सुस्थिरंमन्यो भवति स्वल्पयापि यः" माघ० २-३२।

**स्वल्पकेसरिन् ಸ್ವಲ್ಪಕೇಸರಿನ್** (पुं०) ಕೋವಿದಾರ ವೃಕ್ಷ, ಕೆಂಗಾಂಚಾಳ ಗಿಡ.

**स्वसृ ಸ್ವಸೃ** (स्त्री०) ಸಹೋದರಿ, ಒಡಹುಟ್ಟಿದವಳು, ಅಕ್ಕ ಅಥವಾ ತಂಗಿ. "दमस्वसुः पाणिममुष्य गृह्णतः पुरोधसा संविदधेतरां विधेः" नैष० १६-४५।

**स्वस्तनी ಸ್ವಸ್ತನೀ** (स्त्री०) ಭೂಮಿ. "रत्नगर्भा च मेदिनी। स्वस्तनी" त्रिकाण्ड०।

**स्वस्ति ಸ್ವಸ್ತಿ** (अव्य०) 1. ಕ್ಷೇಮ, ಕುಶಲ. स्वसति — सु + अस (दीप्तौ) "क्तिच्" (३-३-१७४)। "स्वस्ति वास्तोष्पते तुभ्यं शिखिन्नस्ति न खिन्नता" नैष० १७-११३। 2. ಆಶೀರ್ವಾದ, ಶುಭವನ್ನು ಕೋರುವುದು, ಹಿತವನ್ನು ಬಯಸುವುದು. "स्वस्त्यस्तु ते निर्गलिताम्बुगर्भं शरद्घनं नार्दति चातकोऽपि" रघु० ५-१७। 3. ಶುಭ, ಮಂಗಳ. 4. ಪುಣ್ಯ. "स्वस्ति स्यान्मङ्गले पुण्येऽप्याशंसायामपि क्वचित्" मेदि०। "स्वस्ति मङ्गलाशीर्वादपापनिर्णेजनादिषु" इति भागुरिः।

**स्वस्तिक ಸ್ವಸ್ತಿಕ** (पुं०) 1. ಮಂಗಳವಸ್ತು. स्वस्ति कायति — कै (शब्दे) "कः" (३-२-३)। 2. ವಕ್ಷಃಸ್ಥಲವು ಮುಚ್ಚುವಂತೆ ಎರಡು ತೋಳುಗಳನ್ನು ಒಂದರ ಮೇಲೆ ಒಂದು ಬರುವಂತೆ ಇಟ್ಟುಕೊಳ್ಳುವುದು. "रुचिरकनककुम्भश्रीमदाभोगतुङ्गस्तनविनिहितहस्तस्वस्तिकाभिर्वधूभिः" मालती० ४-१०। 3. ನಾಲ್ಕು ರಸ್ತೆಗಳು ಕೂಡುವ ಸ್ಥಲ. 4. ಧನಿಕರ ಗೃಹ. "स्वस्तिके मङ्गलद्रव्ये चतुष्कगृहभेदयोः" मेदि०। 5. ಬೆಳ್ಳುಳ್ಳಿ. "श्रीमस्तकः स्वस्तिकः स्याद्राहूच्छिष्टो रसोनकः" त्रिकाण्ड०। 6. ಸರ್ಪದ ಹೆಡೆಯಲ್ಲಿರುವ ನೀಲಿ ಬಣ್ಣದ ರೇಖೆ. "शिरोभिः पृथुभिर्नागाः व्यक्तस्वस्तिकलक्षणैः" रामा०। 7. ಅಪೂಪ, ರೊಟ್ಟಿ. 8. ಸ್ತ್ರೀಲೋಲ, ವ್ಯಭಿಚಾರಿ. 9. ಯೋಗಾಸನದ ಒಂದು ಭೇದ.

**स्वस्तिमत् ಸ್ವಸ್ತಿಮತ್** (वि०) ಕ್ಷೇಮದಿಂದ ಕೂಡಿದ, ಕುಶಲಿಯಾದ. स्वस्ति अस्यास्ति स्वस्ति "मतुप्" (५-२-९४)। स्त्रियां "ङीप्" (४-१-६)। -मती —ಮತೀ. "भूतानुकम्पा तव चेदियं गौरेका भवेत्स्वस्तिमती त्वदन्ते" रघु० २-४८।

**स्वस्तिमुख ಸ್ವಸ್ತಿಮುಖ** (पुं०) 1. ಲೇಖ, ಪತ್ರ, ಕುಶಲ ಪತ್ರ. स्वस्ति मुखे प्रारम्भे यस्य। ಕುಶಲಪತ್ರದ ಪ್ರಾರಂಭದಲ್ಲಿ स्वस्ति क्षेमम् ಇತ್ಯಾದಿ ಮಂಗಳಕರ ಶಬ್ದ ಪ್ರಯೋಗಿಸಬೇಕು. 2. ಬ್ರಾಹ್ಮಣ. स्वस्ति मुखे वदने यस्य। ಬ್ರಾಹ್ಮಣನು ಯಾವಾಗಲೂ ಮಂಗಳಕರ ಮಾತನ್ನು ಆಡುತ್ತಿರಬೇಕು. (वि०) 3. ಸ್ತುತಿಪಾಠಕ, ಹೊಗಳುಭಟ್ಟ. "भवेत् स्वस्तिमुखो लेखे ब्राह्मणे वन्दिनि त्रिषु" मेदि०।

**स्वस्तिवाचन ಸ್ವಸ್ತಿವಾಚನ** (न०) ಶುಭಕಾರ್ಯದ ಪ್ರಾರಂಭದಲ್ಲಿ ಹಿರಿಯರು ಮತ್ತು ಸುವಾಸಿನಿಯರಿಂದ ಸಾಂಪ್ರದಾಯಿಕವಾಗಿ ಪ್ರೀತ್ಯಭಿಮಾನಗಳಿಂದ ಹೇಳಿಸುವ ಆಶೀರ್ವಚನ, ಹಿರಿಯರಿಂದ ಆಶೀರ್ವಾದ ಮಾಡಿಸುವುದು. स्वस्ति मङ्गलस्य वाचनम्। "सम्पूज्य गन्धपुष्पाद्यैः ब्राह्मणान् स्वस्ति वाचयेत्। धर्मे कर्मणि माङ्गल्ये सङ्ग्रामाद्भुतदर्शने"॥ "अलक्षितोऽस्मिन् रहसि मामकैरपि गोव्रजे। कुरु द्विजातिसंस्कारं स्वस्तिवाचनपूर्वकम्" भाग० १०-८-१०।

**स्वस्तिवाचनिका ಸ್ವಸ್ತಿವಾಚನಿಕಾ** (स्त्री०) ವಂಶ ಪರಂಪರೆಯಾಗಿ ಸ್ವಸ್ತಿವಾಚನಕ್ಕೆ ಅಧಿಕಾರಿಣಿಯಾದ ಸುವಾಸಿನಿ. स्वस्तिवाचनमर्हति "ठक्" (५-१-६३)। "प्रतिष्ठितनीवारहस्ताभिः स्वस्तिवाचनिकाभिः तापसीभिरभिनन्द्यमाना शकुन्तला तिष्ठति" शाकु० ४।

**स्वस्थ ಸ್ವಸ್ಥ** (वि०) 1. ಸರಿಯಾದ ಸ್ಥಿತಿಯಲ್ಲಿರುವವನು, ಪರಾಧೀನತೆಯಿಲ್ಲದೆ ಸ್ವತಂತ್ರನಾಗಿರುವವನು. स्वस्मिन् तिष्ठति—ष्ठा (गतिनिवृत्तौ) "कः" (३-२-४)। 2. ಸರಿಯಾದ ಆರೋಗ್ಯದಿಂದಿರುವವನು, ವಾತ ಪಿತ್ತ ಕಫಗಳು ಸಮವಾಗಿದ್ದು ಅಗ್ನಿಶಕ್ತಿ ಸಮವಾದ ಧಾತುಬಲ ಆತ್ಮ ಇಂದ್ರಿಯಗಳು ಮತ್ತು ಮನಸ್ಸು ಇವುಗಳ ಪ್ರಸನ್ನತೆ ಇವುಗಳಿರುವವನು ಸ್ವಸ್ಥನು. "समदोषः समाग्निश्च समधातुमलक्रियः। प्रसन्नात्मेन्द्रियमनाः स्वस्थ इत्यभिधीयते" सुश्रुत० उत्तरतं० ६४।

**स्वस्रीय ಸ್ವಸ್ರೀಯ** (पुं०) ಒಡಹುಟ್ಟಿದವಳ ಮಗ, ಸಹೋದರಿಯ ಮಗ. स्वसुः अपत्यं पुमान्—स्वसृ "छः" (४-१-१४३)। "मातामहं मातुलं च स्वस्रीयं श्वशुरं गुरुम्। दौहित्रं विट्पतिं बन्धुमृत्विग्याज्यौ च भोजयेत्" मनु० ३-१४८। –या –ಯಾ. (स्त्री०) ಸಹೋದರಿಯ ಮಗಳು.

**स्वाक्षपाद ಸ್ವಾಕ್ಷಪಾದ** (पुं०) ನೈಯಾಯಿಕ, ನ್ಯಾಯ ಶಾಸ್ತ್ರವನ್ನು ಚೆನ್ನಾಗಿ ಅಧ್ಯಯನ ಮಾಡುವವನು. अक्षपादस्येदम् आक्षपादम् न्यायशास्त्रम्—सुष्ठु आक्षपादमधीते "अण्" (४-२-५९)।

**स्वाक्षर ಸ್ವಾಕ್ಷರ** (पुं०) 1. ತನ್ನ ಹಸ್ತಾಕ್ಷರ, ಸ್ವಂತ ಬರವಣಿಗೆ. स्वस्य अक्षराणि यत्र। 2. ಸಹಿ, ರುಜು.

**स्वागत ಸ್ವಾಗತ** (न०) ಸುಖವಾದ ಆಗಮನ, ಸುಖವಾಗಿ ಬರುವುದು. ಸ್ವಾಗತ ಪದವನ್ನು ಸಾಮಾನ್ಯವಾಗಿ ಬಂಧು ಮಿತ್ರರ ಆಗಮನದ ಸಮಯದಲ್ಲಿ ಕುಶಲಪ್ರಶ್ನೆ ಮಾಡುವಾಗ ಉಪಯೋಗಿಸುವ ವಾಡಿಕೆ. सुखेन आगतम्। "स प्रत्यग्रैः कुटजकुसुमैः कल्पितार्घाय तस्मै प्रीतः प्रीतिप्रमुखवचनं स्वागतं व्याजहार" मेघ० १-४।

**स्वागतसूक्ति ಸ್ವಾಗತಸೂಕ್ತಿ** (स्त्री०) ಕುಶಲಪ್ರಶ್ನೆ, ಸುಖಾಗಮನದ ಪ್ರಶ್ನೆ. स्वागतस्य सूक्तिः। "स्वकान्तिसाम्यादिव जातसङ्गैः शौरिस्तदा स्वागतसूक्तिगर्भैः" याद० १३-१२।

**स्वाङ्किक ಸ್ವಾಂಕಿಕ** (पुं०) ಮೃದಂಗವನ್ನು ಬಾರಿಸುವವನು, ಮದ್ದಲೆಯ ವಾದನ ಮಾಡುವವನು, ಮೃದಂಗವನ್ನು ತೊಡೆಯ ಮೇಲಿಟ್ಟು ವಾದಿಸುವವನು.

**स्वाच्छन्द्य ಸ್ವಾಚ್ಛಂದ್ಯ** (न०) ಸ್ವಾತಂತ್ರ್ಯ, ತನ್ನ ಇಚ್ಛೆಕ್ಕೆ ತಕ್ಕಂತೆ ನಡೆದುಕೊಳ್ಳುವುದು, ಅಡ್ಡಿ ಆತಂಕಗಳಿಲ್ಲದೆ ನಡೆದುಕೊಳ್ಳುವುದು. स्वस्य छन्दोऽभिलाषः यस्य स्वच्छन्दः स्वतन्त्रः—तस्य भावः "ष्यञ्" (५-१-१२४)। "स्वाच्छन्द्यमानन्दपरम्पराणां भैमी तमालोक्य किमप्यवाप" नैष० ८-८।

**स्वातन्त्र्य ಸ್ವಾತಂತ್ರ್ಯ** (न०) ಸ್ವತಂತ್ರನಾಗಿರುವಿಕೆ, ಇತರರಿಗೆ ಅಧೀನನಾಗಿಲ್ಲದಿರುವಿಕೆ. स्वतन्त्रस्य भावः "ष्यञ्" (५-१-१२४)। "पिता रक्षति कौमारे भर्ता रक्षति यौवने। पुत्रो रक्षति वार्धक्ये न स्त्री स्वातन्त्र्यमर्हति" मनु० ९-३। [ಇದು ಎರಡು ಶತಮಾನಗಳ ಹಿಂದಿನ ಮಾತು. ಈಗ ಎಲ್ಲರೂ ಸ್ವತಂತ್ರರು.]

**स्वाति ಸ್ವಾತಿ / स्वाती ಸ್ವಾತೀ** (स्त्री०) ಸ್ವಾತೀ ನಕ್ಷತ್ರ, ಅಶ್ವಿನಿ ಮೊದಲಾದ ಇಪ್ಪತ್ತೇಳು ನಕ್ಷತ್ರಗಳಲ್ಲಿ ಹದಿನೈದನೆಯ ನಕ್ಷತ್ರ. सु शोभनमतति—अत (सातत्यगमने) "इण्" (उ० ४-१३१)। "स्वाती सपत्नी किल तारकाणां मुक्ताफलानां जननीति रोषात्। सा रोहिणी नीलमसूत रत्नं कृतास्पदं गोपवधूकुचेषु" श्रीकृष्णक० २-६६। ಸ್ವಾತೀನಕ್ಷತ್ರವು ಮಹಾನಕ್ಷತ್ರಗಳಲ್ಲೊಂದು. ಇದು ವಾಯುಂದೇವತಾಕವಾದುದು. ಮಹಿಷಯೋನಿಗೂ ದೇವಗಣಕ್ಕೂ ಸೇರಿದುದು. ಈ ನಕ್ಷತ್ರದಲ್ಲಿ ಜನಿಸಿದವರಿಗೆ ಜನ್ಮಕಾಲದಲ್ಲಿ ರಾಹುದಶೆಯು ಪ್ರಾರಂಭವಾಗುವುದು. ಈ ದಶೆಯ ಪ್ರಮಾಣ 18 ವರ್ಷಗಳು. ಸ್ವಾತೀನಕ್ಷತ್ರವು ತುಲಾರಾಶಿಗೆ ಸೇರಿದುದು.

**स्वाद ಸ್ವಾದ** (पुं०) 1. ರಸವನ್ನು ಹೀರುವುದು, ರುಚಿ ನೋಡುವುದು. ष्वद (आस्वादने) "घञ्" (३-३-१८)। 2. ರುಚಿ, ಸವಿ. "अन्यमन्यदिव यन्मधु यूनः स्वादमिष्टमतनिष्ट तदेव" माघ० १०-७। 3. ಪ್ರೀತಿಸುವುದು. 4. ರಸ.

**स्वादन ಸ್ವಾದನ** (न०) 1. ರಸವನ್ನು ಹೀರುವುದು, ಕುಡಿದು ರುಚಿ ನೋಡುವುದು. ष्वद (आस्वादने)+स्वार्थे णिच् भावे "ल्युट्" (३-३-११५)। "स्वादनेन सुतनोरविचारादोष्ठतः समचरिष्ट रसोऽत्र" माघ० १०-७। 2. ಪ್ರೀತಿಸುವುದು.

**स्वादनीय ಸ್ವಾದನೀಯ** (वि०) 1. ರುಚಿನೋಡಲ್ಪಡುವ, ಸವಿಯಲ್ಪಡುವ. ष्वद (आस्वादने)+णिच् "अनीयर्" (३-१-९६)। 2. ರುಚಿನೋಡಬೇಕಾದ. 3. ರುಚಿನೋಡ

ಬಹುದಾದ. 4. ಪ್ರೀತಿಸಲ್ಪಡುವ. 5. ಪ್ರೀತಿಸಬೇಕಾದ. 6. ಪ್ರೀತಿಸಬಹುದಾದ.

**स्वादयत् ಸ್ವಾದಯತ್** (वि०) 1. ರುಚಿ ನೋಡುತ್ತಿರುವ, ರಸವನ್ನು ಹೀರುತ್ತಿರುವ. ष्वद (आस्वादने) + णिच् "शतृ" (३-२-१२४)। 2. ಪ್ರೀತಿಸುತ್ತಿರುವ. 3. ಅನುಭವಿಸುತ್ತಿರುವ. "स्वादयन् रसमनेकसंस्कृत-प्राकृतैरकृतपात्रसङ्करैः" माघ० १४-५०। "शानच्" (३-२-१२४)। -**यमानः** -**ಯಮಾನಃ**.

**स्वादवत् ಸ್ವಾದವತ್** (वि०) 1. ರಸಯುಕ್ತವಾದ. 2. ರುಚಿಯಾಗಿರುವ, ಸಿಹಿಯಾಗಿರುವ. स्वादोऽस्यास्ति — "मतुप्" (५-२-९४)।

**स्वादित ಸ್ವಾದಿತ** (वि०) 1. ಹೀರಲ್ಪಟ್ಟ, ಕುಡಿದು ರುಚಿ ನೋಡಲ್ಪಟ್ಟ. ष्वद (आस्वादने) + णिच् "क्तः" (३-२-१०२)। "स्वादितः सकृदिवासव एव प्रत्युत क्षणविदंशपदेऽभूत्" माघ० १०-१०। 2. ಪ್ರೀತಿಸಲ್ಪಟ್ಟ.

**स्वादीयस् ಸ್ವಾದೀಯಸ್** (वि०) ಹೆಚ್ಚು ರುಚಿಯಾಗಿರುವ, ಹೆಚ್ಚು ಮಧುರವಾಗಿರುವ. अतिशयेन स्वादुः— स्वादु "ईयसुन्" (५-३-५७)। स्त्रियां "ङीप्" (४-१-६)। -**यसी** -**ಯಸೀ**.

**स्वादु ಸ್ವಾದು** (पुं०) 1. ಮಧುರವಾದ ರಸ, ಸಿಹಿ. ष्वद (आस्वादने) "उण्" (उ० १-१)। 2. ಗುಡ, ಬೆಲ್ಲ. "गण्डोलं स्याद्गुडः स्वादुः" त्रिकाण्ड०। 3. ಶಾಕಂಬಿ, ಕಬ್ಬು ಸಕ್ಕರೆಯಿಂದ ಮಾಡಿದ ಪಾಕ. (स्त्री०) 4. ದ್ರಾಕ್ಷಿ. (वि०) 5. ಮಧುರವಾದ, ಸಿಹಿಯಾದ. "स्वादुनि प्रणदितालिनि शीते निर्ववार मधुनीन्द्रियवर्गः" माघ० १०-३। 6. ಶ್ರುತಿಗೆ ಮಧುರವಾದ, ಕೇಳಲು ಕಿವಿಗೆ ಇಂಪಾಗಿರುವ. "कृष्णसारमृगशृङ्गभङ्गुरा स्वादुरुज्ज्वल-रसैकसारिणी" नैष० १८-१९। 7. ಇಷ್ಟವಾದ, ಪ್ರೀತಿಕರವಾದ. 8. ಮನೋಹರವಾದ, ಮನಸ್ಸನ್ನು ಆಕರ್ಷಿಸುವ. "स्वादुस्तु सुन्दरे। मृष्टे" हेम०।

**स्वादुकण्टक ಸ್ವಾದುಕಂಟಕ** (पुं०) 1. ಹುಳಿಬೇಲ. 2. ನೆಗ್ಗಿಲು ಗಿಡ.

**स्वादुकन्दा ಸ್ವಾದುಕಂದಾ** (स्त्री०) ಕೊಳವಳಿಕೆ ಗಿಡ.

**स्वादुगन्धा ಸ್ವಾದುಗಂಧಾ** (स्त्री०) ನೆಲಗುಂಬಳ. स्वादु-र्गन्धो यस्याः।

**स्वादुधन्वन् ಸ್ವಾದುಧನ್ವನ್** (पुं०) ಮನ್ಮಥ, ಕಾಮದೇವ. स्वादु धनुर्यस्य।

**स्वादुपर्णी ಸ್ವಾದುಪರ್ಣೀ** (स्त्री०) ಹಾಲುತೊಟ್ಟಿನ ಗಿಡ.

**स्वादुपाक ಸ್ವಾದುಪಾಕ** (पुं०) ಕಾಚಿ ಗಿಡ, ಗಣಿಕೆ ಗಿಡ.

**स्वादुमूल ಸ್ವಾದುಮೂಲ** (न०) ಕೆಂಪು ಮೂಲಂಗಿ.

**स्वादुरसा ಸ್ವಾದುರಸಾ** (स्त्री०) ಕಾಕೋಳಿ ಸೊಪ್ಪು.

**स्वाद्वम्ल ಸ್ವಾದ್ವಮ್ಲ** (पुं०) ದಾಳಿಂಬೆ ಗಿಡ. "दाडिम्बः पर्वरुट्च स्यात्स्वाद्वम्लः शुकवल्लभः" त्रिकाण्ड०।

**स्वाद्वी ಸ್ವಾದ್ವೀ** (स्त्री०) ದ್ರಾಕ್ಷಿ. स्वद्यते—ष्वद (आस्वादने) "उण्" (उ० १-१)। "मृद्वीका गोस्तनी द्राक्षा स्वाद्वी मधुरसेति च" अम०।

**स्वाधिष्ठान ಸ್ವಾಧಿಷ್ಠಾನ** (न०) ದೇಹದೊಳಗಿರುವ ಆರು ಚಕ್ರಗಳಲ್ಲಿ ಎರಡನೆಯ ಚಕ್ರ.

**स्वाधीन ಸ್ವಾಧೀನ** (वि०) ಸ್ವತಂತ್ರನಾಗಿರುವವನು, ತನ್ನ ವಶದಲ್ಲೇ ತಾನಿರುವವನು, ತನಗೇ ಅಧೀನನಾಗಿರುವವನು. स्वस्य अधीनः। "प्राबोधिकीभिरुपसेदुरितीव वाग्भिः स्वाधीनमर्त्यतनयं श्रुतिवन्दिनस्तम्" याद० १९-१।

**स्वाधीनकुशल ಸ್ವಾಧೀನಕುಶಲ** (वि०) ಕುಶಲವನ್ನು ತಮ್ಮ ಅಧೀನದಲ್ಲಿಟ್ಟುಕೊಂಡಿರುವ. स्वाधीनं कुशलं यस्य। ಲೋಕೋತ್ತರವಾದ ತಪಃಶಕ್ತಿಯುಳ್ಳವರಿಗೆ ಎಂದೆಂದಿಗೂ ಕುಶಲವು ಕರಗತವಾಗಿರುವುದು. "स्वाधीन-कुशलाः सिद्धिमन्तः" शाकु० ५।

**स्वाधीनपतिका ಸ್ವಾಧೀನಪತಿಕಾ** (स्त्री०) ಪತಿಯನ್ನು ತನ್ನ ಅಧೀನದಲ್ಲಿಟ್ಟುಕೊಂಡಿರುವ ನಾಯಿಕೆ, ತನ್ನ ರತಿ ಚಾತುರ್ಯದಿಂದ ತನ್ನನ್ನು ಬಿಟ್ಟುಹೋಗದೆ ಯಾವಾಗಲೂ ತನ್ನ ಸಮೀಪದಲ್ಲೇ ಇರುವ ಪತಿಯನ್ನು ಹೊಂದಿರುವ ನಾಯಿಕೆ. स्वाधीनः रतिगुणेन आकृष्टः पतिः यस्याः। -**भर्तृका** -**ಭರ್ತೃಕಾ**. (स्त्री०) "कान्तो रतिगुणाकृष्टो न जहाति यदन्तिकम्। विचित्रविभ्रमा-सक्ता सा स्यात्स्वाधीनभर्तृका" सा० द० ३-७४।

**स्वाध्याय ಸ್ವಾಧ್ಯಾಯ** (पुं०) ಆವೃತ್ತಿಮಾಡಿ ವೇದಾಧ್ಯಯನ ಮಾಡುವುದು. ಆವೃತ್ತಿಯಿಂದ ಮಾಡುವ ವೇದಾಧ್ಯಯನ. सु सुष्ठु आवृत्त्या अध्यायः। "स्वाध्यायः स्याज्जपः" अम०।

**स्वाध्यायिन् ಸ್ವಾಧ್ಯಾಯಿನ್** (वि०) ವೇದಾಧ್ಯಯನ ಮಾಡುವವನು. स्वाध्यायोऽस्यास्ति "इनिः" (५-२-११५)। "ब्राह्मणाः साग्निहोत्राश्च तथैव च निरग्नयः। स्वाध्यायिनो भिक्षवश्च तथैव वनवासिनः" भा० वन०।

**स्वान ಸ್ವಾನ** (पुं०) ಶಬ್ದ, ಧ್ವನಿ. स्वननम् — स्वन (शब्दे) "घञ्" (३-३-१८)। "या बिभर्ति कल-वल्लकीगुणस्वानमानमतिकालिमाऽलया" माघ० ४-५७।

**स्वानम ಸ್ವಾನಮ** (ವಿ०) ಸುಖವಾಗಿ ಬಗ್ಗಿಸಲು ಶಕ್ಯವಾದ. सुखेनानमयितुं शक्यः — सु + आ + णम (प्रह्वत्वे) "खल्" (३-३-१२६)। "नाम्र कान्तमुपगीतया तया स्वानमा नमति काऽलिमालया" माघ० ४-५७।

**स्वान्त ಸ್ವಾಂತ** (ನ०) 1. ಮಾನಸ, ಮನಸ್ಸು, ಚಿತ್ತ. स्वन्यते स्म — स्वन (शब्दे) "क्तः" (७-२-१८)। निपा०। "अधिवह्नि पतङ्गतेजसो नियतस्वान्तसमर्थकर्मणः" माघ० १६-५। 2. ಗಹ್ವರ, ಗವಿ, ಗುಹೆ. "स्वान्तं चेतसि गह्वरे" मेदि०। (ವಿ०) 3. ಶಬ್ದ ಮಾಡಿದ.

**स्वाप ಸ್ವಾಪ** (ಪುं०) 1. ನಿದ್ರೆ, ನಿದ್ದೆ. ञिष्वप् (शये) "घञ्" (३-३-१८)। 2. ಶಯನ, ಮಲಗುವುದು. "स्वापहेतुरनुपाश्रितोऽन्यया रामबाहुरुपधानमेष ते" उ० रा० १-३७। 3. ಸ್ಪರ್ಶಮಾಡಿದರೂ ತಿಳಿಯದಿರುವಿಕೆ, ಮುಟ್ಟಿದರೂ ಅರಿವಾಗದಿರುವಿಕೆ. 4. ಅಜ್ಞಾನ, ತಿಳಿಗೇಡಿತನ. "स्वापः शयननिद्रयोः। स्पर्शाज्ञतायामज्ञाने" मेदि०।

**स्वापतेय ಸ್ವಾಪತೇಯ** (ನ०) ದ್ರವ್ಯ, ಧನ, ಐಶ್ವರ್ಯ, ಆಸ್ತಿ. स्वपतौ साधु—स्वपति "ढञ्" (४-४-१०४)। "स्वापतेयमधिगम्य धर्मतः पर्यपालयमवीवृधं च यत्। तीर्थगामि करवै विधानतः तज्जुषस्व जुहवानि चानले" माघ० १४-९।

**स्वाभाविक ಸ್ವಾಭಾವಿಕ** (ವಿ०) 1. ಸ್ವಭಾವಸಿದ್ಧವಾದ, ತಾನಾಗಿಯೇ ಹುಟ್ಟಿದ, ಹುಟ್ಟಿನಿಂದಲೇ ಬಂದಿರುವ. स्वभावे भवः "ठक्" (४-३-५३)। "स्वाभाविकानवधिकातिशयेशितृत्वम्" स्तो० २०। 2. ಒಂದು ವಿಧ ವ್ಯಾಧಿ. ವ್ಯಾಧಿಯು (1) आगन्तवः (2) शारीरः (3) मानसः ಮತ್ತು (4) स्वाभाविकः ಎಂದು ನಾಲ್ಕು ವಿಧಗಳಾಗಿರುವುವು. क्षुत् (ಹಸಿವು) पिपासा (ಬಾಯಾರಿಕೆ) जरा (ಮುದಿತನ) मृत्युः निद्रा ಮೊದಲಾದವು ಸ್ವಾಭಾವಿಕ ವ್ಯಾಧಿಗಳು. "स्वाभाविकाः क्षुत्पिपासाजरामृत्युनिद्राप्रभृतयः" सुश्रुत० सूत्र०।

**स्वामित्व ಸ್ವಾಮಿತ್ವ** (ನ०) 1. ಯಜಮಾನನಾಗಿರುವಿಕೆ, ಪ್ರಭುವಾಗಿರುವಿಕೆ. 2. ಪತಿಯಾಗಿರುವಿಕೆ. 3. ಆಚಾರ್ಯನಾಗಿರುವಿಕೆ. स्वामिनो भावः "त्वः" (५-१-११९)। 4. ರಾಜನಾಗಿರುವಿಕೆ.

**स्वामिन् ಸ್ವಾಮಿನ್** (ಪುं०) 1. ಪ್ರಭು, ಯಜಮಾನ, ಒಡೆಯ. स्वमस्यास्ति—स्व "आमिनच्" (५-२-१२६)। "स्वामिनो निष्क्रमं गन्तुमाविष्कृतबलः कपिः" भट्टि० ९-६१। 2. ಕಾರ್ತಿಕೇಯ, ಷಣ್ಮುಖ. "स्वामी प्रभौ गुहे" हेम०। "कुमारस्तु स्वामी द्वादशलोचनः" त्रिकाण्ड०। 3. ರಾಜ, ದೊರೆ. "स्वाम्यमात्यश्च राष्ट्रं च दुर्गं कोशो बलं सुहृत्। राज्याङ्गानि प्रकृतयः पौराणां श्रेणयोऽपि च"। "प्रकृतिः स्वामिनं त्यक्त्वा समृद्धापि न जीवति"। 4. ಪತಿ, ಗಂಡ. "स्वामी मुग्धतरो वनं घनमिदं बालाहमेकाकिनी क्षोणीमावृणुते तमालमलिनच्छाया तमःसन्ततिः। तन्मे सुन्दर मुञ्च कृष्ण सहसा वर्त्मेति गोप्या गिरः श्रुत्वा तां परिरभ्य मन्मथकलासक्तो हरिः पातु वः"। "स्वामी भर्तरि षण्मुखे" त्रिकाण्ड०। 5. ಪಂಡಿತ, ವಿದ್ವಾಂಸ. 6. ಪರಮೇಶ್ವರ, ಶಿವ. 7. ವಿಷ್ಣು, ನಾರಾಯಣ. 8. ಗುರು, ಆಚಾರ್ಯ. 9. ವಾತ್ಸ್ಯಾಯನಋಷಿ. "वात्स्यायनो मन्दनागः पक्षिलस्वामिनावपि" त्रिकाण्ड०। 10. ಗರುಡ. (ವಿ०) 11. ಪಾಲಕ. 12. ನಾಯಕ.

**स्वाम्य ಸ್ವಾಮ್ಯ** (ನ०) 1. ಯಾಜಮಾನ್ಯ, ಒಡೆತನ. स्वामिनो भावः "ष्यञ्" (५-१-१२४)। 2. ಪ್ರಭುತ್ವ, ಆಧಿಪತ್ಯ, ದೊರೆತನ, ಅಧಿಕಾರ.

**स्वायम्भुव ಸ್ವಾಯಂಭುವ** (ಪುं०) 1. ಮೊದಲನೆಯ ಮನು, ಹದಿನಾಲ್ಕು ಮಂದಿ ಮನುಗಳಲ್ಲೊಬ್ಬ ಮನು. ಈ ಮನುವು ಬ್ರಹ್ಮನ ದಕ್ಷಿಣಾಂಗುಷ್ಠ (ಬಲ ಹೆಬ್ಬೆರಳು) ದಿಂದ ಜನಿಸಿದನು. स्वयम्भुवोऽपत्यम् "अण्" (४-१-९२)। ಸ್ವಾಯಂಭುವಮನುವಿನ ಪತ್ನಿ ಶತರೂಪಾದೇವಿ. ಪ್ರಿಯವ್ರತ ಮತ್ತು ಉತ್ತಾನಪಾದ ಇವರಿಬ್ಬರು ಸ್ವಾಯಂಭುವ ಮನುವಿನ ಪುತ್ರರು. "शतरूपां च तां नारीं तपोनिर्धूतकल्मषाम्। स्वायम्भुवो मनुर्देवः पत्नीत्वे जगृहे प्रभुः॥ तस्माच्च पुरुषात् पुत्री शतरूपा व्यजायत। प्रियव्रतोत्तानपादौ प्रख्यातावात्मकर्मभिः"॥ (ವಿ०) 2. ಸ್ವಯಂಭುವಿನ ಸಂಬಂಧವಾದ. "तस्मिन् विप्रकृताः काले तारकेण दिवौकसः। तुरासाहं पुरोधाय धाम स्वायम्भुवं ययुः" कुमा० २-१।

**स्वारसिक ಸ್ವಾರಸಿಕ** (ವಿ०) ಸರ್ವಸಾಧಾರಣವಾದ, ಎಲ್ಲರಿಗೂ ಸಮ್ಮತವಾದ, ಸಕಲರಿಂದಲೂ ಅಂಗೀಕರಿಸಲ್ಪಟ್ಟ.

**स्वारस्य ಸ್ವಾರಸ್ಯ** (ನ०) 1. ಸೊಬಗು, ಸೊಗಸು, ಅಂದ, ಸ್ವರಸವಾಗಿರುವಿಕೆ. स्वरसस्य भावः "ष्यञ्" (५-१-१२४)। 2. ಸ್ವಭಾವಸಿದ್ಧವಾದ ಮೇಲ್ಮೆ, ಸಹಜವಾಗಿರುವ ಶ್ರೇಷ್ಠತೆ.

**स्वाराज्य ಸ್ವಾರಾಜ್ಯ** (ನಂ) ಸ್ವರ್ಗರೂಪವಾದ ರಾಜ್ಯ. "स्वाराज्यमजयसि न श्रियमेतदीयाम्" नैष० ११-२८।

**स्वाराट्(ज्) ಸ್ವಾರಾಟ್(ಜ್)** (ಪುಂ) ಇಂದ್ರ. स्वः स्वर्गे राजते। दीर्घः (६-३-१११)।

**स्वारोचिष ಸ್ವಾರೋಚಿಷ** (ಪುಂ) ಹದಿನಾಲ್ಕು ಮಂದಿ ಮನುಗಳಲ್ಲಿ ಎರಡನೆಯ ಮನು. स्वरोचिषोऽपत्यम् "अण्" (४-१-९२)। ಸ್ವಾರೋಚಿಷಮನ್ವಂತರದ ಇಂದ್ರ ರೋಚನ.

**स्वार्थ ಸ್ವಾರ್ಥ** (ಪುಂ) 1. ಅಭಿಧಾವೃತ್ತಿಯಿಂದ ಬೋಧ್ಯವಾಗುವ ವಾಚ್ಯಾರ್ಥ, ಶಬ್ದಶಕ್ತಿಯಿಂದ ಪ್ರತಿಪಾದ್ಯವಾದ ಮುಖ್ಯಾರ್ಥ. स्वस्य अर्थः। 2. ತನ್ನ ಸ್ವಂತ ಧನ. 3. ಸ್ವಪ್ರಯೋಜನ. 4. ತನ್ನ ವಸ್ತು. स्वस्य अर्थः अभिधया प्रतिपाद्योऽर्थः स्वस्य अर्थः धनम् स्वस्य अर्थः प्रयोजनम् स्वस्य अर्थः वस्तु वा। "यजतां पाण्डवः स्वर्गमवत्विन्द्रस्तपत्विनः। वयं हनाम द्विषतः सर्वः स्वार्थं समीहते" माघ० २-६५। 5. ಪ್ರತ್ಯಯಕ್ಕೆ ಇರುವ ಪ್ರಕೃತಿಯ ಅರ್ಥ. ಈ ಅರ್ಥದಲ್ಲಿ ವಿಹಿತವಾಗುವುದು ಸ್ವಾರ್ಥಪ್ರತ್ಯಯ. प्रज्ञ एव प्राज्ञः ಇಲ್ಲಿ प्रज्ञ ಶಬ್ದಕ್ಕೆ ವಿಹಿತವಾದ "अण्" ಪ್ರತ್ಯಯವು प्रज्ञ ಶಬ್ದದ ಅರ್ಥವನ್ನೇ ಹೇಳುವುದರಿಂದ "अण्" ಪ್ರತ್ಯಯವು ಸ್ವಾರ್ಥದಲ್ಲಿ ವಿಹಿತವಾಗಿದೆ. चोरयति ಇತ್ಯಾದಿ ಸ್ವಾರ್ಥ ಣಿಜಂತ.

**स्वार्थपर ಸ್ವಾರ್ಥಪರ** (ವಿಂ) ತನ್ನ ಹಿತವೇ ಮುಖ್ಯವಾಗಿರುವವನು, ತನ್ನ ಪ್ರಯೋಜನದಲ್ಲೇ ಆಸಕ್ತನಾಗಿರುವವನು. स्वार्थे स्वप्रयोजने परः। –परायणः –ಪರಾಯಣಃ "न विदध्युरशङ्कमप्रियं महतः स्वार्थपराः परे कथम्" माघ० १६-५५।

**स्वार्थपरता ಸ್ವಾರ್ಥಪರತಾ** (स्त्री०) ತನ್ನ ಪ್ರಯೋಜನದಲ್ಲಿ ಆಸಕ್ತನಾಗಿರುವಿಕೆ, ತನ್ನ ಹಿತದಲ್ಲೇ ಉದ್ದೇಶವಿರುವಿಕೆ. स्वार्थपरस्य भावः "तल्" (५-१-११९)। "परार्थानुष्ठाने जडयति नृपं स्वार्थपरता" मुद्रा० ३-४।

**स्वास्थ्य ಸ್ವಾಸ್ಥ್ಯ** (ನಂ) 1. ಮನಸ್ಸಿಗೆ ಉಂಟಾಗುವ ಹರ್ಷ, ಸಂತೋಷ, ನೆಮ್ಮದಿ. स्वस्थस्य भावः "ष्यञ्" (५-१-१२४)। "शकुन्तलां पतिकुलं विसृज्य लब्धमिदानीं स्वास्थ्यम्" शाकु० ४। 2. ಆರೋಗ್ಯ. 3. ಧೈರ್ಯ, ಸ್ಥೈರ್ಯ. 4. ಸುಖವಾಗಿರುವಿಕೆ. "वाञ्छाविच्छेदनं प्राहुः स्वास्थ्यं शान्ता महर्षयः" पञ्चतं० २-१६३।

**स्वाहा ಸ್ವಾಹಾ** (ಅವ್ಯಂ) ಅಗ್ನಿಪುರುಷನ ರಾಣಿ. –ಪತ್ನಿ. सुष्ठु आहूयन्ते देवा अनया। ಸ್ವಾಹಾದೇವಿಯು ದಕ್ಷಬ್ರಹ್ಮನ ಪುತ್ರಿ. ಅಗ್ನಿಯು ಸಪ್ತರ್ಷಿಗಳ ಪತ್ನಿಯರನ್ನು ಮೋಹಿಸಿದಾಗ ಸ್ವಾಹಾದೇವಿಯು ಅರುಂಧತಿಯ ಹೊರತು ಉಳಿದ ಋಷಿಪತ್ನಿಯರ ರೂಪವನ್ನು ತಾಳಿ ಅಗ್ನಿಯನ್ನು ತೃಪ್ತಿಪಡಿಸಿದಳು.

**स्वाहापति ಸ್ವಾಹಾಪತಿ** (ಪುಂ) ಅಗ್ನಿ. स्वाहायाः पतिः। –प्रियः –ಪ್ರಿಯಃ.

**स्वाहाभुक्(ज्) ಸ್ವಾಹಾಭುಕ್(ಜ್)** (ಪುಂ) ದೇವತೆ. स्वाहया भुङ्क्ते — भुज (परिपालनाभ्यवहारयोः) "क्विप्" (३-२-७६)। "स्वाहाभुजश्च वसुलाः पूजिताश्च चिरायुषः" त्रिकाण्ड०।

**स्वित् ಸ್ವಿತ್** (ಅವ್ಯಂ) 1. ಪ್ರಶ್ನೆ ಮಾಡುವುದು, ಕೇಳುವುದು. सुष्ठु एति—इण् (गतौ) "क्विप्" (३-२-७६)। "किं ब्राह्मणा वै श्रेयांसो दितिजाः स्विद्विरोचन" भा० उद्योग०। 2. ವಿತರ್ಕ, ಊಹೆ. "का स्विदवगुण्ठनवती नातिपरिस्फुटशरीरलावण्या" शाकु० ५-१३। 3. ಪಾದಪೂರಣಕ್ಕಾಗಿ ಉಪಯೋಗಿಸುವ ಪದ. "स्वित् प्रश्ने च वितर्के च तथैव पादपूरणे" मेदि०।

**स्विद्यत् ಸ್ವಿದ್ಯತ್** (ವಿಂ) ಬೆವರುತ್ತಿರುವ, ಬೆವರು ಸುರಿಯುತ್ತಿರುವ. ञिष्विदा (गात्रप्रक्षरणे) "शतृ" (३-२-१२४)। "स्विद्यत्कराङ्गुलीलुप्तकस्तूरीलेपमुद्रया। पूत्कार्यपीडनो चक्रे स सखीषु प्रियास्तनौ" नैष० २०-१४५।

**स्विन्न ಸ್ವಿನ್ನ** (ವಿಂ) 1. ಬೆವರಿನಿಂದ ಕೂಡಿದ, ಬೆವರಿನಿಂದ ತೇವವಾದ. ञिष्विदा (गात्रप्रक्षरणे) "क्तः" (३-४-७२)। "स्विन्नाङ्गुलिविनिवेशो रेखाप्रान्तेषु दृश्यते मलिनः" शाकु० ६-१५। 2. ಪಕ್ವವಾದ, ಚೆನ್ನಾಗಿ ಬೇಯಿಸಲ್ಪಟ್ಟ. "शस्यं क्षेत्रगतं प्राहुः सतुषं धान्यमुच्यते। आमं वितुषमित्युक्तं स्विन्नमन्नमुदाहृतम्"।।

**स्वीकरण ಸ್ವೀಕರಣ** (ನಂ) 1. ತನ್ನದಾಗಿ ಮಾಡಿಕೊಳ್ಳುವುದು, ತೆಗೆದುಕೊಳ್ಳುವುದು. 2. ಅಂಗೀಕರಿಸುವುದು, ಸಮ್ಮತಿಸುವುದು. 3. ವಿವಾಹ, ಮದುವೆ. "भोस्तपोधनाः! चिन्तयन्नपि न खलु स्वीकरणमत्रभवत्याः स्मरामि" शाकु० ५।

**स्वीकर्तृ ಸ್ವೀಕರ್ತೃ** (ವಿಂ) 1. ತೆಗೆದುಕೊಳ್ಳುವವನು, ತನ್ನದಾಗಿ ಮಾಡಿಕೊಳ್ಳುವವನು. 2. ಅಂಗೀಕರಿಸುವವನು, ಸಮ್ಮತಿಸುವವನು. स्व + डुकृञ् (करणे)

"तृच्" (३-१-१३३)। "च्विः" (५-४-५०)। दीर्घः (७-४-२६)। 3. ವಿವಾಹ ಮಾಡಿಕೊಳ್ಳುವವನು. स्त्रियां "ङीप्" (४-१-५)। –कर्त्री –ಕರ್ತ್ರೀ.

**स्वीकार ಸ್ವೀಕಾರ** (पुं०) "स्वीकरण" ಪದದ ಅರ್ಥ. स्व + डु कृञ् (करणे) "घञ्" (३-३-१८)। "च्विः" (५-४-५०)। दीर्घः (७-४-२६)। "क्तिन्"। स्वीकृतिः ಸ್ವೀಕೃತಿಃ.

**स्वीकुर्वत् ಸ್ವೀಕುರ್ವತ್** (वि०) 1. ತೆಗೆದುಕೊಳ್ಳುತ್ತಿರುವ. ತನ್ನದಾಗಿ ಮಾಡಿಕೊಳ್ಳುತ್ತಿರುವ. स्व+डु कृञ् (करणे) "शतृ" (३-२-१२४)। "च्विः" (५-४-५०)। दीर्घः (७-४-२६)। 2. ಸಮ್ಮತಿಸುತ್ತಿರುವ. 3. ವಿವಾಹ ಮಾಡಿಕೊಳ್ಳುತ್ತಿರುವ. स्त्रियां "ङीप्" (४-१-६)। –कुर्वती –ಕುರ್ವತೀ. "शानच्" (३-२-१२४)। –कुर्वाणः ಕುರ್ವಾಣಃ "भवादृशैर्दिशामीशैः मृग्यमाणां मृगेक्षणाम्। स्वीकुर्वाणः कथं सोढः कृतरीढस्तृणं नलः" नैष० १७-१२८।

**स्वीकृत ಸ್ವೀಕೃತ** (वि०) 1. ತನ್ನದಾಗಿ ಮಾಡಿಕೊಳ್ಳಲ್ಪಟ್ಟ. स्व+डु कृञ् (करणे) "क्तः" (३-२-१०२)। "च्विः" (५-४-५०)। दीर्घः (७-४-२६)। "स्वदेशादविशेषेण स्वीकृते शत्रुमण्डले। न योधा जगृहुस्तत्र किञ्चिदस्वामिसम्मतम्" याद० २२-७९। 2. ಸಮ್ಮತಿಸಲ್ಪಟ್ಟ, ಅಂಗೀಕರಿಸಲ್ಪಟ್ಟ. 3. ವಿವಾಹ ಮಾಡಿಕೊಳ್ಳಲ್ಪಟ್ಟ.

**स्वीय ಸ್ವೀಯ** (वि०) ತನ್ನದಾದ, ತನ್ನ ಸಂಬಂಧವಾದ. स्वस्य इदम् स्व "छः" (४-२-१३८)। स्वशब्दोऽपि गहादिः।

**स्वीया ಸ್ವೀಯಾ** (स्त्री०) ಮೂರು ವಿಧ ನಾಯಿಕೆಯರಲ್ಲಿ ಒಬ್ಬ ನಾಯಿಕೆ. ನಾಯಿಕೆಯು (1) स्वा (2) अन्या ಮತ್ತು (3) साधारणी ಎಂದು ಮೂರು ವಿಧ. ವಿನಯಾದಿ ಗುಣಸಂಪನ್ನಳಾಗಿ ಗೃಹಕೃತ್ಯಗಳನ್ನು ನಿರ್ವಹಿಸುತ್ತ ಪತಿವ್ರತೆಯಾಗಿರುವ ಹೆಂಗಸು ಸ್ವೀಯನಾಯಿಕೆ. "विनयार्जवादियुक्ता गृहकर्मपरा पतिव्रता स्वीया" सा० द० ३-५७। ಈ ಸ್ವೀಯನಾಯಿಕೆಯು (1) मुग्धा (2) मध्या ಮತ್ತು (3) प्रगल्भा ಎಂದು ಮೂರು ವಿಧ. "सापि कथिता त्रिभेदा मुग्धा मध्या प्रगल्भेति" सा० द० ३-५७। [मुग्धा मध्या ಮತ್ತು प्रगल्भा ಪದಗಳಲ್ಲಿ ಇವರ ವಿವರಕ್ಕೆ ನೋಡಿ.]

**स्वेच्छा ಸ್ವೇಚ್ಛಾ** (स्त्री०) 1. ತನ್ನ ಅಪೇಕ್ಷೆ, ತನ್ನ ಇಷ್ಟ. स्वस्य इच्छा। "आशितम्भवमुत्कृष्टं वल्गितं शयितं स्थितम्। बह्वमन्यत काकुत्स्थः कपीनां स्वेच्छया कृतम्" भट्टि० ६-१०६। 2. ತನ್ನ ಬಂಧ್ದಿ, ತನ್ನ ಪ್ರತಿಭೆ. "बह्वपि स्वेच्छया कामं प्रकीर्णमभिधीयते" माघ० २-७३।

**स्वेच्छाचार ಸ್ವೇಚ್ಛಾಚಾರ** (पुं०) ತನ್ನ ಇಷ್ಟದಂತೆ ಮಾಡುವುದು, ಇಷ್ಟಬಂದಂತೆ ನಡೆದುಕೊಳ್ಳುವುದು.

**स्वेद ಸ್ವೇದ** (पुं०) 1. ಬೆವರು. स्विद्यतेऽनेनाङ्गम्—ञि ष्विदा (गात्रप्रक्षरणे) "घञ्" (३-३-१२१)। "स्वेदाप्लवप्रणयिनी नवरोमराजी रत्यै यदा चरति जागरितव्रतानि"। "आभासि तेन नरनाथ मधूत्थसान्द्रमग्नासमेषुशरकेसरदन्तुराङ्गः" नैष० २१-१३७। "द्विषद्द्वेषोपरक्ताङ्गसङ्गिनीः स्वेदविप्रुषः" माघ० २-१८। 2. ವಾಯುವಿನಲ್ಲಿಯ ತೇವ, ಹಬೆ. 3. ಉಷ್ಣತೆ, ಬಿಸಿ, ಶಾಖ. 4. ತಾಪ. 5. ಬೆವರುವುದು. "स्वेदस्तु स्वेदने घर्मे" मेदि०।

**स्वेदचूषक ಸ್ವೇದಚೂಷಕ** (पुं०) ಶೀತಲವಾತ, ತಂಗಾಳಿ.

**स्वेदज ಸ್ವೇದಜ** (पुं०) ಶಾಖದಿಂದ ಹುಟ್ಟುವ ಕ್ರಿಮಿ ನೊಣ ಮುಂತಾದವು. स्वेदाज्जायते—जनी (प्रादुर्भावे) "डः" (३-२-९८)। "स्वेदजाः कृमिदंशाद्याः" अम०।

**स्वेदन ಸ್ವೇದನ** (न०) 1. ಬೆವರುವುದು. ञि ष्विदा (गात्रप्रक्षरणे) भावे "ल्युट्" (३-३-११५)। 2. ಬೆವರುವಂತೆ ಮಾಡುವುದು. ञि ष्विदा + णिच् "ल्युट्" (३-३-११५)। 3. ಬೆವರುವಂತೆ ಮಾಡುವ. ञि ष्विदा + णिच् "ल्युः" (३-१-१३४)।

**स्वेदनिका ಸ್ವೇದನಿಕಾ** (स्त्री०) 1. ಕಾವಲಿ. स्वेदनमस्त्यस्याः —स्वेदन "ठन्" (५-२-११५)। 2. ಹುರಿಯುವ ಓಡು, ಬಾಣಲಿ. 3. ಹುರಿಯುವ ಮನೆ.

**स्वेदनी ಸ್ವೇದನೀ** (स्त्री०) ಕಾವಲಿ. स्विद्यतेऽस्याम्—ञि ष्विदा (स्नेहने) "ल्युट्" (३-३-११७)। "कन्दुर्वा स्वेदनी स्त्रियाम्" अम०।

**स्वेदबिन्दु ಸ್ವೇದಬಿಂದು** (पुं०) ಬೆವರಿನ ಹನಿ, ಸ್ವೇದಜಲದ ಕಣ, –ತೊಟ್ಟು.

**स्वेदविप्रुट्(ष्) ಸ್ವೇದವಿಪ್ರುಟ್(ಷ್)** (स्त्री०) ಬೆವರಿನ ಬಿಂದು, –ಹನಿ. स्वेदस्य विप्रुट्।

**स्वेदाम्बु ಸ್ವೇದಾಂಬು** (न०) ಬೆವರಿನ ಜಲ. –उदकम् –ಉದಕಮ್. "नाजानादभिमतमन्तिकेऽभिवीक्ष्य स्वेदाम्बुद्रवमभवत्तरां पुनस्तत्" माघ० ८-६८।

**स्वेदिन् ಸ್ವೇದಿನ್** (वि०) ಬೆವರಿನಿಂದ ಕೂಡಿದ, ಸ್ವೇದದಿಂದ ನೆನೆದಿರುವ. स्वेदोऽस्यास्ति "इनिः" (५-२-११५)। "लीनचीनांशुकं स्वेदि दरालोकयं विलोकयन्" नैष० २०-१४९।

**स्वेद्य ಸ್ವೇದ್ಯ** (वि०) ದೇಹದಲ್ಲಿ ಬೆವರು ಉಂಟಾಗಲು ಅರ್ಹವಾದ, ದೇಹವು ಬೆವರುವಂತೆ ಮಾಡಲು ಅರ್ಹವಾದ. स्वेदं स्वेदनमर्हति—स्वेद "यत्" (५-१-६६)। "स्वेद्यमामज्वरं प्राज्ञः कोऽम्भसा परिषिञ्चति" माघ० २-५४।

**स्वैर ಸ್ವೈರ** (वि०) 1. ಸ್ವಾತಂತ್ರ್ಯದಿಂದ ನಡೆಯುವ. ತನ್ನ ಇಷ್ಟಕ್ಕೆ ಅನುಸಾರವಾಗಿ ನಡೆಯುವ. स्वेन स्वातन्त्र्येण ईर्ते—ईर (गतौ कम्पने च) "अच्" (३-१-१३४)। "अव्याहतैः स्वैरगतैः स तस्याः सम्राट् समाराधनतत्परोऽभूत्" रघु० २-५। 2. ಮಂದ, ಆಲಸ, ಸೋಮಾರಿ. 3. ನಿಧಾನವಾದ. "पादस्याविर्भवन्तीमवनतिमवनेरक्षतः स्वैरपातैः" मुद्रा० १-२। 4. ವ್ಯರ್ಥವಾದ ಮಾತು, ಪ್ರಯೋಜನವಿಲ್ಲದ ಮಾತು. "नाहं मृषा ब्रवीम्येव स्वैरेष्वपि कुतः शपन्" भा० विरा०। (अव्य०) 5. ಮೆತ್ತಗೆ, ನಿಧಾನವಾಗಿ. "गत्यूनमार्गगतयोऽपि गतोरुमार्गाः स्वैरं समाचचक्षिरे भुवि वेल्लनाय" माघ० ५-५३। 6. ಸ್ವಚ್ಛಂದವಾಗಿ, ಸ್ವತಂತ್ರವಾಗಿ. "स्वप्तुमाप्तशयनीययोस्तयोः स्वैरमाख्यत वचः प्रियां प्रियः" नैष० १८-१४३। 7. ತನಗೆ ಇಷ್ಟಬಂದಂತೆ, ತನಗೆ ತೋರಿದಂತೆ. "सार्थाः स्वैरं स्वकीयेषु चेरुर्वेश्मस्विवाद्रिषु" रघु० १७-६४। 8. ಮೆಲ್ಲಗೆ, ಮೆತ್ತಗೆ, ಸಣ್ಣಧ್ವನಿಯಲ್ಲಿ, ಕುಗ್ಗಿದ ಕಂಠದಲ್ಲಿ. "स्वैरं शेषे गज इति किल व्याहृतं सत्यवाचा" वेणी० ३-११।

**स्वैरता ಸ್ವೈರತಾ** (स्त्री०) ಸ್ವತಂತ್ರವಾಗಿರುವಿಕೆ, ತನ್ನ ಇಷ್ಟಾನುಸಾರವಾಗಿ ಇರುವಿಕೆ. स्वैरस्य भावः "तल्" (५-१-११९)।

**स्वैरिणी ಸ್ವೈರಿಣೀ** (स्त्री०) ವ್ಯಭಿಚಾರಿಣಿ, ಯಾರ ಅಧೀನದಲ್ಲೂ ಇಲ್ಲದೆ ಸ್ವತಂತ್ರವಾಗಿ ನಡೆದುಕೊಳ್ಳುವವಳು. स्वेन स्वातन्त्र्येण ईरितुं गन्तुं शीलमस्याः—ईर (गतौ) "णिनिः" (३-२-७८)। वृद्धिः (वा० ६-१-८९)। "अक्षता च क्षता चैव पुनर्भूः संस्कृता पुनः। स्वैरिणी या पतिं हित्वा सवर्णं कामतः श्रयेत्" याज्ञ० १-६७।

**स्वैरिता ಸ್ವೈರಿತಾ** (स्त्री०) ಸ್ವಚ್ಛಂದವಾಗಿ ನಡೆದುಕೊಳ್ಳುವಿಕೆ, ತನ್ನ ಇಷ್ಟದಂತೆ ವರ್ತಿಸುವಿಕೆ. स्वैरिणो भावः "तल्" (५-१-११९)। "यदृच्छा स्वैरिता" अम०।

**स्वैरिन् ಸ್ವೈರಿನ್** (वि०) ಸ್ವತಂತ್ರವಾಗಿರುವವನು, ತನ್ನ ಇಷ್ಟದಂತೆ ನಡೆದುಕೊಳ್ಳುವವನು. स्वेन ईरितुं शीलमस्य—ईर (गतौ) "णिनिः" (३-२-७८)। "सिद्धिवादेषु संसिद्धास्तथा वननिवासिनः। स्वैरिणो दारसंयुक्तास्तेषां धर्मः कथं स्मृतः" भा० अनु०।

**स्वैरन्ध्री ಸ್ವೈರಂಧ್ರೀ** (स्त्री०) ಪರಗೃಹದಲ್ಲಿ ಶಿಲ್ಪ ಕಾರ್ಯಗಳನ್ನು ಮಾಡುತ್ತ ಸ್ವತಂತ್ರಳಾಗಿರುವ ಹೆಂಗಸು. स्वैरं स्वाच्छन्द्यं धरति—इति स्वैरन्ध्री—धृञ् (धारणे) "कः" (वा० ३-२-५)। पृषो०। गौरा० "ङीष्" (४-१-४१)।

**स्वोपार्जित ಸ್ವೋಪಾರ್ಜಿತ** (वि०) ತನ್ನಿಂದಲೇ ಸಂಪಾದಿಸಲ್ಪಟ್ಟ. स्वेन उपार्जितम्। ಸ್ವಾರ್ಜಿತವು ಎರಡು ವಿಧ. ಪಿತ್ರಾರ್ಜಿತ ಆಸ್ತಿಯಿಂದ ಬಂದ ದ್ರವ್ಯದಿಂದ ಆದ ಆಸ್ತಿ, ಮತ್ತು ತನ್ನ ಸ್ವಂತ ಸಂಪಾದನೆಯಿಂದ ಮಾಡಿದ ಆಸ್ತಿ. ತನ್ನ ಸ್ವಂತ ಸಂಪಾದನೆಯಿಂದ ಮಾಡಿದ ಆಸ್ತಿಯಲ್ಲಿ ದಾಯಾದಿಗಳಿಗೆ ಪಾಲು ಕೊಡಬೇಕಾಗಿಲ್ಲ. "अनाश्रित्य पितुर्द्रव्यं स्वशक्त्याप्नोति यद्धनम्। दायादेभ्यो न तद्दद्यात् विद्यालब्धं च यद्भवेत्" इति व्यासः।

**स्वोवसीय ಸ್ವೋವಸೀಯ** (न०) 1. ಸಂತೋಷ. 2. ಮಂಗಳ, ಶುಭ, ಕಲ್ಯಾಣ. स्वः (श्वः) प्रशस्तः वसीयः (५-४-८०)। (वि०) 3. ಮಂಗಳಕರವಾದ. 4. ಸಂತೋಷಕರವಾದ.

इति "स" कारादिपदार्थनिरूपणम्।

# ह

**ह ಹ** ಇದು ವರ್ಣಸಮಾಮ್ನಾಯದಲ್ಲಿ ಅವರ್ಗೀಯ ವ್ಯಂಜನಾಕ್ಷರಗಳಲ್ಲಿ ಎಂಟನೆಯ ವರ್ಣ. ಈ ವರ್ಣವು ಕಂಠಸ್ಥಾನದಲ್ಲಿ ವಿವೃತಪ್ರಯತ್ನದಿಂದ ಹುಟ್ಟುವ ಒಂದು ಊಷ್ಮವರ್ಣ. "अकुहविसर्जनीयानां कण्ठः"। "शषसहा ऊष्माणः"। "विवृतमूष्मणां स्वराणां च" सि० कौ०।

**ह ಹ** (पुं०) 1. ವಿಷ್ಣು, ನಾರಾಯಣ. 2. ಪರಶಿವ, ಶಂಕರ, ಪರಮೇಶ್ವರ. 3. ಹಂಸ. 4. ರಣ, ಯುದ್ಧ. 5. ರೋಮಾಂಚ, ಮೈಮೇಲಿನ ಕೂದಲೇಳುವುದು. 6. ಅಶ್ವ, ಕುದುರೆ. 7. ಗರ್ವ, ಅಹಂಕಾರ. 8. ವರುಣ. "हः शङ्करे हरौ हंसरणरोमाञ्चवाजिषु। गर्वे प्रचेतसि" नानार्थर०। 9. ಕೋಪ. 10. ಗಜ, ಆನೆ. "हः कोपे वारणे हश्च तथा शूली प्रकीर्तितः" एका०। 11. ಜಲ, ನೀರು. 12. ಶೂನ್ಯ, ಸೊನ್ನೆ. 13. ಶುಭ, ಮಂಗಳ. 14. ರಕ್ತ, ನೆತ್ತರು. 15. ಸ್ವರ್ಗ. 16. ಧಾರಣ. 17. ಆಕಾಶ, ಗಗನ. 18. ನಕುಲೀಶ. "हः शिवे सलिले शून्ये धारणे मङ्गलेऽपि च। गगने नकुलीशे च रक्ते नाके च वर्ण्यते" मेदि०। (न०) 19. ಅಸ್ತ್ರ, ಆಯುಧ. 20. ಆನಂದ, ಹರ್ಷ, ಸುಖ. 21. ವೀಣಾನಾದ. 22. ರತ್ನಕಾಂತಿ. 23. ಪರಬ್ರಹ್ಮ. 24. ಆಮಂತ್ರಣ, ಕರೆ. "हं क्लीबमस्त्रसुखयोःक्वणिते मणिरोचिषि। परब्रह्मामन्त्रणयोस्त्रिषु तूत्तानहास्ययोः" नानार्थर०। (वि०) 25. ಮೇಲುಮುಖವಾದ. 26. ಹಾಸ್ಯಮಾಡುವ, ನಗುವ. (अव्य०) 27. ಸಂಬೋಧನೆ. 28. ಪಾದಪೂರಣ. 29. ನಿಯೋಗ. 30. ನಿಗ್ರಹ. 31. ನಿಂದೆ. 32. ಎಸೆಯುವುದು. "ह स्यात् सम्बोधने पादपूरणे च विनिग्रहे। नियोगे क्षिपायां स्यात् कुत्सायामपि दृश्यते" मेदि०।

**हंस ಹಂಸ** (पुं०) 1. ಹಂಸಪಕ್ಷಿ. हन्ति गच्छति — हन (हिंसागत्योः) "अच्" (३-१-१३४)। "भवेद्वर्णागमाद्धंसः सिंहो वर्णविपर्ययात्" इति सक्। "हंसं तनौ सन्निहितं चरन्तं मुनेर्मनोवृत्तिरिव स्विकायाम्" नैष० ३-४। ಜಲಮಿಶ್ರವಾದ ಹಾಲಿನಲ್ಲಿ ಹಾಲಿನ ಭಾಗವನ್ನು ಮಾತ್ರ ಎಳೆದುಕೊಳ್ಳುವ ಒಂದು ಅಸಾಧಾರಣ ಶಕ್ತಿಯನ್ನು ಹಂಸವು ಪಡೆದಿರುವುದು. "हंसो हि क्षीरमादत्ते तन्मिश्रा वर्जयन्त्यपः" शाकु० ६-२८। "हंसः श्वेतो बकः श्वेतः को भेदो बकहंसयोः। नीरक्षीरविभागे तु हंसो हंसो बको बकः"॥ 2. ಆಸೆಯಿಲ್ಲದ ರಾಜ, ಆಸೆಯನ್ನು ತೊರೆದಿರುವ ದೊರೆ. 3. ವಿಷ್ಣು. हन्ति मनोहरं गच्छति हसति स्मयते वा — हन (हिंसागत्योः) "सः" (उ० ३-२-७१)। "हंसः संसारबन्धस्य हन्ता तादात्म्यभावितः" इति निरुक्तिः। "मरीचिर्दमनो हंसः" वि० स०। 4. ಶಿವ, ಪರಮೇಶ್ವರ. 5. ರವಿ, ಸೂರ್ಯ. 6. ಪರಮಾತ್ಮ. 7. ಮನ್ಮಥ, ಕಾಮದೇವ. 8. ಮತ್ಸರ, ದ್ವೇಷ, ಹಗೆತನ. 9. ಒಂದು ಮಂತ್ರ. 10. ಪಂಚಪ್ರಾಣವಾಯುಗಳಲ್ಲೊಂದು ವಾಯು. 11. ಜೀವಾತ್ಮ. 12. ಒಂದು ಜಾತಿಯ ಕುದುರೆ. 13. ಯತಿ. 14. ಬಿಳಿಯ ಎತ್ತು. "हंसः स्मरे खगे विष्णौ यतौ निर्लेपभूभुजि। जीवेऽर्केऽश्वे श्वेतवृषे स्यान्मन्त्रपरमात्मनोः" नानार्थर०। "हंसः स्यान्मानसौकसि। निर्लोभनृपविष्वक्र्क परमात्मनि मत्सरे। योगिभेदे मन्त्रभेदे शरीरमरुदन्तरे। तुरङ्गमप्रभेदेऽपि" मेदि०। (वि०) 15. ಶ್ರೇಷ್ಠ.

**हंसक ಹಂಸಕ** (पुं०) 1. ಕಾಲುತೊಡಿಗೆ, ನೂಪುರ, ಕಾಲಿನ ಗೊಲಸು. हंस इव कायति — कै (शब्दे) "कः" (३-२-३)। 2. ಹಂಸಪಕ್ಷಿ. हंस एव स्वार्थे "कः"। "सरित इव सविभ्रमप्रयातप्रणदितहंसकभूषणा विरेजुः" माघ० ७-२३। 3. ಒಂದು ತಾಳದ ಭೇದ. "लघुर्गुरुर्लघुर्यत्र स तालो हंसकः स्मृतः" संगीतदामोदरः।

**हंसकीलक ಹಂಸಕೀಲಕ** (पुं०) ಸಂಭೋಗ ಕಾಲದ ಒಂದು ಬಂಧ.

**हंसकूट ಹಂಸಕೂಟ** (पुं०) ಹಿಮಾಲಯದ ಶಿಖರ.

**हंसगति ಹಂಸಗತಿ** (स्त्री०) 1. ಹಂಸದಂತೆ ಗಂಭೀರವಾದ ನಡಗೆ. (वि०) 2. ಹಂಸದಂತೆ ಗಂಭೀರವಾದ ನಡಗೆಯುಳ್ಳ. हंस इव गतिर्यस्य।

**हंसगद्गदा ಹಂಸಗದ್ಗದಾ** (स्त्री०) ಹಂಸದಂತೆ ಮಧುರವಾಗಿ ಮಾತನಾಡುವ ಹೆಂಗಸು.

**हंसगामिनी ಹಂಸಗಾಮಿನೀ** (स्त्री०) 1. ಹಂಸದಂತೆ ಮಂದಗಮನವುಳ್ಳ ಹೆಂಗಸು. हंस इव गच्छति — गम्लृ (गतौ) "णिनिः" (३-२-७८)। 2. ಬ್ರಹ್ಮನ ಪತ್ನಿ, ಸರಸ್ವತಿ. हंसेन गच्छति।

**हंसतूल ಹಂಸತೂಲ** (पुं०) ಬಾತುಕೋಳಿ ಅಥವಾ ಹಂಸಪಕ್ಷಿಯ ರೆಕ್ಕೆಯ ಒಳಭಾಗದ ಮೃದುವಾದ ಗರಿ.

**हंसतूलिका ಹಂಸತೂಲಿಕಾ** (स्त्री०) ಹಂಸದ ಮೆದುವಾದ ಗರಿಯಂತೆ ಇರುವ ಹಾಸಿಗೆ, ಹಂಸದ ಮೆದುವಾದ ಗರಿಯಂತೆ ಇರುವ ಹತ್ತಿಯಿಂದ ತಯಾರಿಸಿದ ಹಾಸಿಗೆ.

**हंसवाहन ಹಂಸವಾಹನ** (न०) ಅಗುರು.

**हंसनादिनी ಹಂಸನಾದಿನೀ** (स्त्री०) ಉತ್ತಮ ಲಕ್ಷಣಗಳಿಂದ ಕೂಡಿದ ಹೆಂಗಸು. हंस इव नदति — णद (अव्यक्ते शब्दे) "णिनिः" (३-१-१३४)। ಗಜದಂತೆ ಗಮನ ಕೋಕಿಲದಂತೆ ಕಂಠ ವಿಶಾಲವಾದ ನಿತಂಬ ಇವುಗಳಿಂದ ಕೂಡಿದ ಹೆಂಗಸು ಹಂಸನಾದಿನಿ. "गजेन्द्रगमना तन्वी कोकिलानां स्वरान्विता। नितम्बगर्विणी या सा कथ्यते हंसनादिनी"॥

**हंसपदी ಹಂಸಪದೀ** (स्त्री०) ಹಂಸಪಾದಿ ಲತೆ. हंसस्येव पादा अस्याः। —पादी —ಪಾದೀ.

**हंसमाला ಹಂಸಮಾಲಾ** (स्त्री०) ಹಂಸಪಕ್ಷಿಗಳ ಪಙ್ಕ್ತಿ, ಹಂಸಗಳ ತಂಡ, —ಗುಂಪು. हंसानां माला। "तां हंसमालाः शरदीव गङ्गां महौषधिं नक्तमिवात्मभासः" कुमा० १-३०।

**हंसमाष ಹಂಸಮಾಷ** (पुं०) ಮಾಷಪರ್ಣಿ, ಕಾಡುದ್ದಿನ ಗಿಡ.

**हंसरथ ಹಂಸರಥ** (पुं०) ಹಂಸವೇ ವಾಹನವಾಗಿರುವ ಬ್ರಹ್ಮ, ಚತುರ್ಮುಖ. हंसो रथो वाहनं यस्य। —वाहनः —ವಾಹನಃ. "तपन्तं तपसा लोकान् यथाभ्रापिहितं रविम्। विलक्ष्य विस्मितः प्राह प्रहसन् हंसवाहनः" भाग० ७-३-१६।

**हंसलोहक ಹಂಸಲೋಹಕ** (न०) ಹಿತ್ತಾಳೆ. हंसं श्रेष्ठं लोहमिव।

**हंसी ಹಂಸೀ** (स्त्री०) ಹೆಣ್ಣು ಹಂಸಪಕ್ಷಿ. हंसस्य स्त्री "ङीष्" (४-१-६३)। "हंसीव कृष्ण ते कीर्तिः स्वर्गङ्गामवगाहते" चन्द्रा०।

**हंहो ಹಂಹೋ** (अव्य०) 1. ಸಂಬೋಧನ. "हंहो ब्राह्मण! यदि तवोपाध्यायः सर्वं जानाति, जानातु तावत् कस्य चन्द्रोऽभिप्रेत इति" मुद्रा० १। 2. ಪ್ರಶ್ನೆ. 3. ನಿಂದೆ, ದೂಷಣೆ. 4. ದಂಭ, ಅಹಂಕಾರ.

**हक्क ಹಕ್ಕ** (पुं०) ಆನೆಯನ್ನು ಕರೆಯುವುದು. हक् इत्यव्यक्तशब्देन कायति — कै (शब्दे) "कः" (३-२-३)।

**हञ्जिका ಹಂಜಿಕಾ** (स्त्री०) ಭಾರಂಗಿ ಗಿಡ. "हञ्जिका ब्राह्मणी पद्मा भार्गी ब्राह्मणयष्टिका" अम०।

**हञ्जे ಹಂಜೆ** (अव्य०) (ನಾಟಕಗಳಲ್ಲಿ) ಚೇಟಿಯ ಸಂಬೋಧನ. "हण्डे हञ्जे हलाह्वाने नीचां चेटीं सखीं प्रति" अम०। "हञ्जे मदेण किलायमाणं अत्ताणं अज्जउत्तस्स दंसणे हिअअं तुवरेदि" माल० ३।

**हट्ट ಹಟ್ಟ** (पुं०) ಮಾರುಕಟ್ಟೆ, ಕ್ರಯ ಮತ್ತು ವಿಕ್ರಯದ ಜಾಗ, ಅಂಗಡಿಬೀದಿ. हटन्त्यत्र—हट (दीप्तौ) "तः" बाहु०। "हट्टक्रयारोहौ जन्यं ग्राममुखं च तत्" त्रिकाण्ड०।

**हट्टचौरक ಹಟ್ಟಚೌರಕ** (पुं०) ಅಂಗಡಿಬೀದಿಯಲ್ಲಿ ಕದಿಯುವ ಚೋರ.

**हट्टविलासिनी ಹಟ್ಟವಿಲಾಸಿನೀ** (स्त्री०) ನಖವೆಂಬ ಒಂದು ಸುಗಂಧದ್ರವ್ಯ. हट्टे विलसति — वि + लस (क्रीडायाम्) "णिनिः" (३-२-७८)।

**हठ ಹಠ** (पुं०) 1. ಬಲಾತ್ಕಾರ. हठ (प्लुतिशठत्वयोः) "घः" (३-३-११८)। "प्रसभं तु बलात्कारो हठः" अम०। 2. ಹಠಯೋಗ. "हठयोग" ಪದದಲ್ಲಿ ನೋಡಿ.

**हठयोग ಹಠಯೋಗ** (पुं०) ಪ್ರಾಣಾಯಾಮಾದಿ ಕ್ರಿಯಾಬಲದಿಂದ ಉಂಟಾಗುವ ಪರಮಾತ್ಮಸಾಕ್ಷಾತ್ಕಾರರೂಪವಾದ ಚಿತ್ತವೃತ್ತಿನಿರೋಧ. हठेन बलात्कारेण योगः चित्तवृत्तिनिरोधः। ಇದು ರಾಜಯೋಗವಿಲ್ಲದೆಯೂ ಸಾಧ್ಯವಾಗುವುದು. ಈ ಹಠಯೋಗವು ಆಧ್ಯಾತ್ಮಿಕಾದಿ ತಾಪತ್ರಯದಿಂದ ಸಂತಪ್ತರಾದವರಿಗೆ ಆಶ್ರಯವಾಗಿರುವುದು. ಮಂತ್ರಯೋಗ ಕರ್ಮಯೋಗಾದಿಯುಕ್ತರಾದವರಿಗೆ ಈ ಹಠಯೋಗವು ಆಧಾರವಾದ ಕಮಠಪ್ರಾಯವಾಗಿರುವುದು. "अशेषतापतप्तानां समाश्रयमठो हठः। अशेषयोगयुक्तानामाधारकमठो हठः" हठ० १-१०। ಅಣಿಮಾದಿ ಸಿದ್ಧಿಗಳನ್ನು ಅಥವಾ ಕೈವಲ್ಯವನ್ನು ಅಪೇಕ್ಷಿಸುವವರು ಈ ಹಠವಿದ್ಯೆಯನ್ನು ಬಹಳ ರಹಸ್ಯವಾಗಿ ರಕ್ಷಿಸಿಕೊಂಡಿದ್ದರೆ ಅದು ಬಹಳ ವೀರ್ಯವತ್ತಾಗಿ ಸಿದ್ಧಿಯುಂಟಾಗುವುದು. ಪ್ರಕಾಶಪಡಿಸಿದರೆ ಅದು ನಿರ್ವೀರ್ಯವಾಗುವುದು. "हठविद्या परं गोप्या योगिना सिद्धिमिच्छता। भवेद्वीर्यवती गुप्ता निर्वीर्या तु प्रकाशिता" हठ० १-११। **ಹಠಾಭ್ಯಾಸಕ್ಕೆ ಯೋಗ್ಯವಾದ ಪ್ರದೇಶ:** ಸ್ವಧರ್ಮಪರಾಯಣನಾದ ರಾಜನ ರಾಜ್ಯ ಧಾರ್ಮಿಕದೇಶ (ಅನುಕೂಲವಾದ ಆಹಾರಾದಿ ಲಾಭಕ್ಕಾಗಿ) ಸುಭಿಕ್ಷದೇಶ (ಅನಾಯಾಸವಾಗಿ ಆಹಾರಲಾಭಕ್ಕಾಗಿ) ಯಾವರೀತಿಯ ಉಪದ್ರವವೂ ಇಲ್ಲದ (ಚೋರ ವ್ಯಾಘ್ರಾದಿ ತೊಂದರೆಯಿಲ್ಲದ) ಸುತ್ತಲೂ ನಾಲ್ಕಾರು

ಮಾರುಗಳ ದೂರದವರೆಗೂ ಶಿಲೆ ಅಗ್ನಿ ಮತ್ತು ಜಲ ಇವು ಯಾವುದೂ ಇಲ್ಲದ ಮತ್ತು ವಿವಿಕ್ತವಾದ (ಕಲಹಾದಿಗಳಿಗೆ ಅವಕಾಶವಿಲ್ಲದ) ಪ್ರದೇಶವು ಹಠಾಭ್ಯಾಸಕ್ಕೆ ಯೋಗ್ಯವಾದುದು. "सुराज्ये धार्मिके देशे सुभिक्षे निरुपद्रवे। धनुःप्रमाणपर्यन्तं शिलाग्निजलवर्जिते ॥ एकान्तमठिकामध्ये स्थातव्यं हठयोगिना" हठ० १-१२। ಅಧಿಕವಾದ ಆಹಾರ ಆಯಾಸಕರವಾದ ಕಾರ್ಯ ಹೆಚ್ಚು ಮಾತನಾಡುವುದು ರಾತ್ರಿಭೋಜನ ಜನರ ಸಹವಾಸ ಚಿತ್ತಚಾಂಚಲ್ಯ ಇವೆಲ್ಲವೂ ಯೋಗಾಭ್ಯಾಸಕ್ಕೆ ಪ್ರತಿಬಂಧಕಗಳು. "अत्याहारः प्रयासश्च प्रजल्पो नियमग्रहः। जनसङ्गश्च लौल्यं च षड्भिर्योगो विनश्यति" हठ० १-१५। ಉತ್ಸಾಹ (ವಿಷಯಾಸಕ್ತವಾದ ಮನಸ್ಸನ್ನು ನಿರೋಧಿಸುವೆನೆಂಬ ಪ್ರಯತ್ನ) ಸಾಹಸ (ಸಾಧ್ಯತ್ವಾಸಾಧ್ಯತ್ವಗಳನ್ನು ವಿಮರ್ಶಿಸಿ ಪ್ರವರ್ತಿಸುವುದು) ಧೈರ್ಯ (ಯಾವಜ್ಜೀವವೂ ಇದು ಸಿದ್ಧಿಸುವುದು ಎಂಬ ಗುಂಡಿಗೆ) ತತ್ತ್ವಜ್ಞಾನ (ಪರಮಾತ್ಮ ಸತ್ಯತ್ವಜ್ಞಾನ) ಶಾಸ್ತ್ರ ಗುರುವಾಕ್ಯಗಳಲ್ಲಿ ವಿಶ್ವಾಸ ಜನತೆಯ ಸಹವಾಸಪರಿತ್ಯಾಗ ಇವುಗಳು **ಸಿದ್ಧಿಯನ್ನುಂಟುಮಾಡುವುವು.** "उत्साहात्साहसाद्धैर्यात् तत्त्वज्ञानाच्च निश्चयात्। जनसङ्गपरित्यागात् षड्भिर्योगः प्रसिद्ध्यति" हठ० १-१६।

**हुडि ಹುಡಿ** (पुं०) ಮರದ ಬೇಡಿ. "निगडो लोहबन्धेऽस्त्री हुडिः काष्ठस्य यन्त्रणे" शब्दमाला।

**हुण्डा ಹುಂಡಾ** (अव्य०) (ನಾಟಕಗಳಲ್ಲಿ) 1. ನೀಚಪಾತ್ರ ಸಂಬೋಧನ. (स्त्री०) 2. ದೊಡ್ಡದಾದ ಮೃತ್ಪಾತ್ರೆ, ಮಣ್ಣಿನ ಗುಡಾಣ. 3. ಹಂಡೆ, ಕಡಾಯಿ.

**हुण्डिका ಹುಂಡಿಕಾ** (स्त्री०) ಮಣ್ಣಿನ ಗುಡಾಣ, ದೊಡ್ಡದಾದ ಮೃತ್ಪಾತ್ರೆ.

**हुण्डे ಹುಂಡೇ** (अव्य०) (ನಾಟಕಗಳಲ್ಲಿ) ನೀಚಪಾತ್ರದ ಸಂಬೋಧನ. "हुण्डे हञ्जे हलाह्वाने नीचां चेटीं सखीं प्रति" अम०।

**हत ಹತ** (वि०) 1. ಮನಸ್ಸು ಕೆಟ್ಟಿರುವವನು, ಉತ್ಸಾಹ ಕುಗ್ಗಿರುವವನು. हन्यते स्म—हन (हिंसागत्योः) "क्तः" (३-२-१०२)। "करौ व्याधुन्वत्याः पिबसि रतिसर्वस्वमधरं वयं तत्त्वान्वेषान्मधुकर हतास्त्वं खलु कृती" शाकु० १-२०। 2. ಕೊಲ್ಲಲ್ಪಟ್ಟ. "हते हिडम्बरिपुणा राज्ञि द्वैमातुरे युधि" माघ० २-६०। 3. ಗುಣಿಸಲ್ಪಟ್ಟ, ಹೆಚ್ಚಿಸಲ್ಪಟ್ಟ. "गणना न बभूव कृष्णपक्षे हतभग्नादिविकल्पितेऽपि तस्मिन्" याद० १५-१२४। 4. ದುರದೃಷ್ಟವುಳ್ಳ, ಭಾಗ್ಯರಹಿತ. "अनुशयदुःखायेदं हतहृदयं सम्प्रति विबुद्धम्" शाकु० ६-७। 5. ನಾಶಪಡಿಸಲ್ಪಟ್ಟ. "लब्धस्तेष्वपि चक्षुरादिषु हताः स्वार्थावबोधक्रियाः" मुद्रा० ३-१। 6. ಅಡ್ಡಿಪಡಿಸಲ್ಪಟ್ಟ, ತಡೆಯಲ್ಪಟ್ಟ. 7. ಪೀಡಿಸಲ್ಪಟ್ಟ. (न०) 8. ಗುಣನ, ಹೆಚ್ಚಿಸುವಿಕೆ. 9. ಪೀಡೆ, ತೊಂದರೆ. 10. ಅಡ್ಡಿ, ತಡೆ. 11. ವಧೆ, ಕೊಲೆಮಾಡುವಿಕೆ. हन (हिंसागत्योः) हन भावे "क्तः" (३-३-११४)।

**हतक ಹತಕ** (वि०) ನೀಚ. हत एव हतकः। "दुरात्मन् दुर्योधनहतक, आगच्छागच्छ। अपनयामि ते गदाकौशलसम्भूतं भुजदर्पं शिलीमुखासारेण" वेणी० ६।

**हतत्विट्(ष्) ಹತತ್ವಿಟ್(ಷ್)** (वि०) ಕುಂದಿದ ಕಾಂತಿಯುಳ್ಳ, ಕಡಮೆಯಾದ ಪ್ರಕಾಶವುಳ್ಳ. हताः त्विषः यस्य। "निशीथदीपाः सहसा हतत्विषो बभूवुरालेख्यसमर्पिता इव" रघु० ३-१५।

**हतवीर्य ಹತವೀರ್ಯ** (वि०) ಕುಂದಿದ ಶಕ್ತಿಯುಳ್ಳ, ಶಕ್ತಿಯು ಕಡಮೆಯಾಗಿರುವ. हतं वीर्यं यस्य। "मन्त्रेण हतवीर्यस्य फणिनो दैन्यमाश्रितः" कुमा० २-२१।

**हतभाग्य ಹತಭಾಗ್ಯ** (वि०) ದುರದೃಷ್ಟದವನು, ಭಾಗ್ಯಶೂನ್ಯ. हतं भाग्यं यस्य।

**हतलक्षण ಹತಲಕ್ಷಣ** (वि०) ಶುಭಲಕ್ಷಣಗಳಿಲ್ಲದವನು, ಶುಭಸೂಚಕವಾದ ಚಿಹ್ನೆಗಳಿಲ್ಲದವನು. हतं लक्षणं यस्य।

**हतसम्पद् ಹತಸಂಪದ್** (वि०) ಐಶ್ವರ್ಯವನ್ನು ಕಳೆದುಕೊಂಡಿರುವ, ಬಡತನ (ದಾರಿದ್ರ್ಯ)ಕ್ಕೆ ಒಳಗಾಗಿರುವ. हता सम्पद् यस्य।

**हतसाध्वस ಹತಸಾಧ್ವಸ** (वि०) ಭಯವನ್ನು ತ್ಯಜಿಸಿದವನು, ಭಯವಿಲ್ಲದವನು. हतं साध्वसं यस्य।

**हताश ಹತಾಶ** (वि०) 1. ಆಶೆಯ ಭಂಗ ಹೊಂದಿದವನು, ಆಸೆಯಿಲ್ಲದವನು, ಆಸೆಯನ್ನು ಬಿಟ್ಟವನು. हता आशा यस्य। 2. ದಯೆಯಿಲ್ಲದವನು, ಕರುಣೆಯಿಲ್ಲದವನು. 3. ದುರ್ಜನ, ಚಾಡಿಕೋರ. 4. ಫಲ ಕೊಡದಿರುವ, ಬೆಳೆಯುಲಾಗದ, ಬಂಜರಾಗಿರುವ. "हताशो निर्दये चाशारहिते पिशुनेऽपि च" मेदि०।

**हति ಹತಿ** (स्त्री०) 1. ಅಪಕರ್ಷ, (ಗುಣದಲ್ಲಿ) ಕಡಮೆಯಾಗಿರುವುದು, ಹೀನವಾಗಿರುವುದು. हन (हिंसागत्योः) "क्तिन्" (३-३-९४)। 2. ವಧೆ, ಹತ್ಯೆ, ಕೊಲ್ಲುವುದು, ಕೊಲೆಮಾಡುವುದು. 3. ನಾಶ, ಅಳಿವು. "कर्माण्यारभमाणानां दुःखहत्यै सुखाय च। पश्येत्पाकविपर्यासं मिथुनीचारिणां नृणाम्" भाग० ११-३-१८। 4. ಏಟು,

ಹೊಡೆತ, ಪೆಟ್ಟು. 5. ಹೆಚ್ಚಿಸುವುದು, ವೃದ್ಧಿಪಡಿಸು ವುದು, ಅಧಿಕಪಡಿಸುವುದು.

**हत्नु ಹತ್ನು** (पुं०) 1. ವ್ಯಾಧಿ, ರೋಗ. हन्ति शरीरम्—हन (हिंसागत्योः) "क्नुः" (उ० ३-३०)। 2. ಅಸ್ತ್ರ, ಶಸ್ತ್ರ, ಆಯುಧ. हत्नुर्व्याधिः शस्त्रं च" सि० कौ०।

**हत्या ಹತ್ಯಾ** (स्त्री०) ಕೊಲ್ಲುವುದು, ಕೊಲೆಮಾಡುವುದು. हन (हिंसागत्योः) "यत्" (३-१-१०८)। निरुपपदं हत्येति तु असाध्वेव —बालमनोरमाव्याख्या। ಸೋಪ ಪದ हन ಧಾತುವಿನ ರೂಪ हत्या। "ब्रह्महत्या सुरापानं स्तेयं गुर्वङ्गनागमः। महान्ति पातकान्याहुः संसर्गश्चापि तैः सह"॥

**हथ ಹಥ** (पुं०) ದುಃಖಗೊಂಡವನು, ಖೇದವುಳ್ಳವನು, ಉತ್ಸಾಹ ಕುಗ್ಗಿದವನು. हन (हिंसागत्योः) "क्थः" (उ० २-२)।

**हदन ಹದನ** (न०) ಪುರೀಷೋತ್ಸರ್ಗ, ಮಲವಿಸರ್ಜನೆ. हद (पुरीषोत्सर्गे) "ल्युट्" (३-३-११५)।

**हद्दा ಹದ್ದಾ** (स्त्री०) ಮೇಷ ಮೊದಲಾದ ಲಗ್ನಗಳ ತ್ರಿಂಶಾಂಶ (ಮೂವತ್ತನೆಯ ಒಂದು ಭಾಗ.)

**हन – हिंसागत्योः** (अदा० पर० सक० अनि०)।

| | | |
|---|---|---|
| हन्ति | हतः | घ्नन्ति। |
| हंसि | हथः | हथ। |
| हन्मि | हन्वः | हन्मः। |
| जघान | जघ्नतुः | जघ्नुः। |
| जघनिथ<br>जघन्थ | जघ्नथुः | जघ्न। |
| जघान<br>जघन | जघ्निव | जघ्निम। |
| हन्ता | हन्तारौ | हन्तारः। |
| हनिष्यति | हनिष्यतः | हनिष्यन्ति। |
| हन्तु<br>हतात् | हताम् | घ्नन्तु। |
| जहि<br>हतात् | हतम् | हत। |
| हनानि | हनाव | हनाम। |
| अहन् | अहताम् | अघ्नन्। |
| हन्यात् | हन्याताम् | हन्युः। |
| वध्यात् | वध्यास्ताम् | वध्यासुः। |
| अवधीत् | अवधिष्टाम् | अवधिषुः। |
| अहनिष्यत् | अहनिष्यताम् | अहनिष्यन् |

1. ಕೊಲ್ಲು, ಕೊಲೆಮಾಡು. "हन्ति नोपशयस्थोऽपि शयालुर्मृगयुर्मृगान्" माघ० २-८०। 2. ಹೊಡೆ, ಏಟು ಕೊಡು. "जघानाविश्य वदनं निर्यात् भित्वोदरं द्रुतम्" भट्टि० ८-५। 3. ನಾಶಪಡಿಸು, ಅಳಿದುಹಾಕು. "क्षयपक्ष इवैन्दवीः कलाः सकला हन्ति स शक्तिसम्पदः" किरा० २-३७। आङ् ಪೂರ್ವಕ हन ಧಾತುವು ಆತ್ಮನೇಪದಿ ಯಾಗುವುದು.

आहते आघ्नाते आघ्नते ಇತ್ಯಾದಿ.

आजघ्ने आजघ्नाते आजघ्निरे ಇತ್ಯಾದಿ.

**कर्मणि** :—हन्यते। जघ्ने। घानिता, हन्ता। घानिष्यते, हनिष्यते। हन्यताम्। आहन्यत। हन्येत। घानिषीष्ट, वधिषीष्ट। अघानि, अवधि। अघानिष्यत।

**णिचि** :—घातयति, घातयते। घातयां –चकार, –चक्रे, –बभूव, –आस। घातयिता। घातयिष्यति, –ते। घातयतु, –ताम्। अघातयत्, –त। ಇತ್ಯಾದಿ.

**सनि** :—जिघांसति। जिघांसां चकार, –बभूव, –आस। जिघांसिता। जिघांसिष्यति। जिघांसतु। ಇತ್ಯಾದಿ.

**कृत्सु** :—हन्तव्यः। हननीयः। वध्यः, घात्यः। हतः। हतवान्। घ्नत्, घ्नती। हनिष्यत्, –न्ती। हन्तुम्। हतम्। हननम्। हत्वा। निहत्य। घातं घातम्। हत्वा हत्वा।

**हन ಧಾತುವಿಗೆ ಉಪಸರ್ಗಗಳ ಯೋಗದಿಂದ ಉಂಟಾಗುವ ಅರ್ಥಭೇದಗಳು :**

(1) **अभि + हन** = अभिहन्ति। अभिघातः। ಏಟು, ಎರಡು ವಸ್ತುಗಳ ಸಂಬಂಧದಿಂದ ಉಂಟಾಗುವ ಹೊಡೆತ. "अभिहन्ति हन्त कथमेष माधवम्" मालती० १-३९। "तटाभिघातादिव लग्नपङ्के धुन्वन् मुहुः प्रोतघने विषाणे" कुमा० ७-४९।

(2) **अव + हन** = अवहन्ति। अवहननम्। ಬತ್ತ ಮೊದಲಾದುವುಗಳ ಹೊಟ್ಟನ್ನು ತೆಗೆಯಲು ಕುಟ್ಟುವುದು. व्रीहीनवहन्ति। अवहननायोलूखलम्।

(3) **आ + हन** = आहते। आजघ्ने। आघातः। 1. ಏಟು, ಎರಡು ವಸ್ತುಗಳ ಸಂಬಂಧದಿಂದ ಉಂಟಾಗುವ ಹೊಡೆತ. "आजघ्ने विषमविलोचनस्य वक्षः" किरा० १७-६३। "अभ्यस्यन्ति तटाघातं निर्जितैरावता गजाः" कुमा० २-५०। 2. ಹೊಡೆಯುವುದು, ಬಡಿಯುವುದು. "त्वद्गम्भीरध्वनिषु शनकैः पुष्करेष्वाहतेषु" मेघ० २-३।

(4) प्रति + आ + हन = प्रत्याहन्ति । प्रत्याहतः । ಪ್ರತಿಬಂಧಿಸು, ತಡೆ, ಅಡ್ಡಿಯುಂಟುಮಾಡು. "प्रत्याहतास्त्रो गिरिशप्रभावात् आत्मन्यवज्ञां शिथिलीचकार" रघु० २-४१ ।

(5) वि + आ + हन = व्याहन्ति । व्याहतः । 1. ವ್ಯರ್ಥಪಡಿಸು. "महोर्मिभिर्व्याहतवाञ्छितार्थैः" माघ० ३-४० । 2. ಭಂಗಪಡಿಸು, (ಆಜ್ಞೆಯನ್ನು) ಮುರಿ, ಉಲ್ಲಂಘಿಸು. "राज्ञी राज्यं विधिवदशिषत् भर्तुरव्याहताज्ञा" रघु० १९-५७ ।

(6) उद् + हन = उद्धतिः । उद्धतः । 1. ಗರ್ವ ಹೊಂದು, ದರ್ಪ ತೋರಿಸು. "मदोद्धताः प्रत्यनिलं विचेरुर्वनस्थलीर्मर्मरपत्रमोक्षाः" कुमा० ३-३१ । 2. ಮೇಲಕ್ಕೆ ಹಾರು, ಮೇಲಕ್ಕೆ ನೆಗೆ. "न लङ्घयामास महाजनानां शिरांसि नैवोद्धतिमाजगाम" माघ० ३-२८ । 3. ಮೇಲಕ್ಕೆ ಎತ್ತು. "लाङ्गूलमुद्धतं धुन्वन्" भट्टि० ९-७ । 4. ಪ್ರಾರಂಭ, ಉಪಕ್ರಮ. "उद्घातः प्रणवो यासाम्" कुमा० २-१२।

(7) उप+उद्+हन=उपोद्घातः। 1. ಪ್ರಾರಂಭಿಸು, ಮೊದಲುಮಾಡು. 2. ಸಾಧನೆ, ಸಲಕರಣೆ, ಉಪಾಯ. "तत्प्रतिच्छन्दकमुपोद्घातेन माधवान्तिकमुपेयात्" मालती० १ ।

(8) नि + हन = निहन्ति। 1. ಕೊಲ್ಲು, ಕೊಲೆ ಮಾಡು, ನಾಶಪಡಿಸು. "निहन्त्यरीनेकपदे य उदात्तः स्वरानिव" माघ० २-९५ । 2. ಹೊಡೆ, ಏಟುಕೊಡು. "तानेव सामर्षतया निजघ्नुः" रघु० ७-४४ । 3. ನಿವಾರಿಸು, ಹೋಗಲಾಡಿಸು. "बद्धां बद्धां भित्तिशङ्कामुष्मिन् आवानावान्मातरिश्वा निहन्ति" किरा० ५-३६ । 4. ಎದುರಿಸು, ತಡೆಗಟ್ಟು. "वचसैव तयोर्वाक्यमस्त्रमस्त्रेण निघ्नतोः" रघु० १२-९२ । 5. ಹೊಡೆ, ಬಡಿ, ಬಾರಿಸು. "कम्बूनथ समादध्मुः कोणैर्भेरीर्निजघ्निरे" भट्टि० १४-२ ।

(9) प्रति+हन = प्रतिहन्ति । प्रतिहतः । 1. ತಡೆಗಟ್ಟು, ಪ್ರತಿಬಂಧಿಸು. "रम्यास्तपोधनानां प्रतिहतविघ्नाः क्रियाः समवलोक्य" शाकु० १-१३ । 2. ನಾಶಪಡಿಸು, ಹೋಗಲಾಡಿಸು, ನಿವಾರಿಸು. "यद्यत् पापं प्रतिजहि जगन्नाथ नम्रस्य तन्मे" मालती० १-३ ।

(10) सम् + हन = संहतः । संहतिः । ಗುಂಪು ಕಟ್ಟು, ಒಟ್ಟುಗೂಡಿಸು, ಒಟ್ಟಿಗೆ ಸೇರಿಸು. "दूत एव हि सन्धत्ते भिनत्त्येव च संहतान्" मनु० ७-६६ । "न संहतास्तस्य न भिन्नवृत्तयः प्रियाणि वाञ्छन्त्यसुभिः समीहितुम्" किरा० १-१९ ।

**हन** **ಹನ** (पुं०) ಕೊಲ್ಲುವವನು, ಕೊಲೆಮಾಡುವವನು हन (हिंसागत्योः) "अच्" (३-१-१३४)। वा द्वित्वम् अभ्यासस्य आक् च । अभ्यासस्य घत्वं उत्तरपदस्य कुत्वम् (७-३-५५) । घनाघनः। पक्षे हनः।

**हनन** **ಹನನ** (न०) ಕೊಲ್ಲುವುದು, ಕೊಲೆಮಾಡುವುದು. हन (हिंसागत्योः) "ल्युट्" (३-३-११५)। "रक्षोवधो जलधिबन्धनमस्त्रपूगैः किं तस्य शत्रुहनने कपयः सहायाः" माग० ।

**हनु** **ಹನು** (स्त्री०) 1. ನಖವೆಂಬ ಒಂದು ಸುಗಂಧದ್ರವ್ಯ. हन्ति — हन (हिंसागत्योः) "उः" (उ० १-१०) । 2. ರೋಗ, ವ್ಯಾಧಿ. 3. ಮೃತ್ಯು. 4. ಅಸ್ತ್ರ. (पुं०स्त्री०) 5. ಕಪೋಲದ—ಕೆನ್ನೆಯ ಕೆಳಭಾಗ. "हनुर्हट्टविलासिन्यां मृत्यावस्त्रे गदे स्त्रियाम् । द्वयोः कपोलावयवे" मेदि० ।

**हनुमत्** **ಹನುಮತ್** (पुं०) ಹನುಮಂತ, ಆಂಜನೇಯ. प्रशस्ता हनुरस्यास्ति—हनु प्रशंसायां "मतुप्" (५-२-९४)। "अन्येषामपि दृश्यते (६-३-१३७) इति सूत्रेण वा दीर्घः। **हनुमान्** **ಹನುಮಾನ್**. "मार्गौ सम्यङ्मम हनुमता वर्णितौ द्वौ तयोस्ते सह्यासन्नोऽप्यनघसुभगः पश्चिमो नित्यवर्षः" हंस० १-१८ । ಇಂದ್ರನ ವಜ್ರಾಯುಧದ ಪ್ರಹಾರದಿಂದ ಉಂಟಾದ ವೀರತ್ವಸೂಚಕ ಗಾಯದ ಗುರುತಿರುವುದರಿಂದ ಹನುಮಂತನೆಂಬ ಹೆಸರಾಯಿತು. "मत्करोत्सृष्टवज्रेण हनुस्तस्य तदा क्षतः। नाम्नैष हरिशार्दूलः भविता हनुमानिति" रामा० उत्तरकाण्डः ।

**हनू** **ಹನೂ** (स्त्री०) ಕಪೋಲದ—ಕೆನ್ನೆಯ ಕೆಳಭಾಗ. हनु पक्षे दीर्घः ।

**हनूमत्** **ಹನೂಮತ್** (पुं०) ಹನೂಮಂತ, ಆಂಜನೇಯ. प्रशस्ता हनूरस्यास्ति — हनू प्रशंसायां "मतुप्" (५-२-९४) । "ता हनूमान् पराकुर्वन् अगमत् पुष्पकं प्रति" भट्टि० ८-५० । "हनूमानपि विक्रान्तः सर्वं शुश्राव तत्त्वतः। सीतायास्त्रिजटायाश्च राक्षसीनां च तर्जनम्" रामा० ।

**हनूष** **ಹನೂಷ** (पुं०) ರಾಕ್ಷಸ. हन्ति मानुषान् — हन (हिंसागत्योः) "ऊषन्" (उ० ४-७३)। हनूषो राक्षसः सि० कौ० । "सन्ध्याबलो रात्रिमटो हनूषः शमनीषदः" त्रिकाण्ड० ।

**हन्त ಹಂತ** (अव्य०) 1. ಹರ್ಷ, ಸಂತೋಷ. हन्ति—हन (हिंसागत्योः) "तः" बाहु० । 2. ಖೇದ. ವ್ಯಸನ, ದುಃಖ. "भवादृशाश्चेदधिकुर्वते रतिं निराश्रया हन्त हता मनस्विता" किरा० १-४३ । 3. ಅನುಕಂಪ, ದಯೆ. "हन्त ते कथयिष्यामि विभूतीरात्मनः शुभाः" गीता १०-१९ । 4. ಸಂಭ್ರಮ, ಸಡಗರ. 5. ಆಯಾಸ, ದಣಿವು. 6. ವಾಕ್ಯಾರಂಭ. "हन्त हर्षेऽनुकम्पायां वाक्यारम्भविषादयोः" अम० । 7. ನಿಶ್ಚಯ. 8. ದಾನ. "हन्त दानेऽनुकम्पायां वाक्यारम्भविषादयोः । निश्चये च प्रमोदे च" हेम० ।

**हन्तकार ಹಂತಕಾರ** (पुं०) 1. ಅತಿಥಿಗೆ ಕೊಡುವ ದಾನ. 2. "हन्त" ಎಂದು ಗಟ್ಟಿಯಾಗಿ ಕೂಗುವುದು.

**हन्तु ಹಂತು** (पुं०) 1. ಕೊಲೆ, ವಧೆ. 2. ಮೃತ್ಯು. 3. ವಿನಾಶ, ಅಳಿವು.

**हन्तृ ಹಂತೃ** (वि०) 1. ಕೊಲ್ಲುವವನು, ಕೊಲೆಮಾಡುವವನು, ನಾಶಪಡಿಸುವವನು. हन (हिंसागत्योः) "तृच्" (३-१-१३३) । "त्रिःसप्तकृत्वो जगतीपतीनां हन्ता गुरुर्यस्य स जामदग्न्यः" किरा० ३-१८ । 2. ಹೊಡೆಯುವವನು. स्त्रियां "ङीप्" (४-१-५) । **—त्री —ತ್ರೀ.**

**हन्न ಹನ್ನ** (वि०) 1. ಪುರೀಷದ ವಿಸರ್ಜನೆ ಮಾಡಿದವನು, ಮಲವಿಸರ್ಜನೆ ಮಾಡಿದವನು. हद (पुरीषोत्सर्गे) "क्तः" (३-४-७२) । 2. ವಿಸರ್ಜನೆ ಮಾಡಲ್ಪಟ್ಟ ಮಲ. हद्यते स्म—हद (पुरीषोत्सर्गे) "क्तः" (३-२-१०२) । "गूनं हन्नं" अम० ।

**हन्यमान ಹನ್ಯಮಾನ** (वि०) 1. ಕೊಲ್ಲಲ್ಪಡುವ, ಕೊಲೆ ಮಾಡಲ್ಪಡುವ. 2. ಹೊಡೆಯಲ್ಪಡುವ. हन (हिंसागत्योः) कर्मं० "शानच्" (३-२-१२४) । "अजो नित्यः शाश्वतोऽयं पुराणो न हन्यते हन्यमाने शरीरे" गीता० २-३० ।

**हम् ಹಮ್** (अव्य०) 1. ಕೋಪದಿಂದ ಆಡುವ ಮಾತು. 2. ಅನುನಯ, ಅನುಸರಣೆ. "हम् रुषोक्तावनुनये" मेदि० ।

**हम्बा ಹಂಬಾ** (स्त्री०) ಗೋವಿನ ಶಬ್ದ, ಆಕಳುವಿನ ಕೂಗು. "क्रोधरक्तेक्षणा सा गौः हम्बारवघनस्वना । विश्वामित्रस्य तत्सैन्यं व्यद्रावयत सर्वतः" भा० आदि० ।

**हय ಹಯ** (पुं०) 1. ಅಶ್ವ, ಕುದುರೆ. हय (गतौ) "अच्" (३-१-१३४) । "हया जिहेषिरे हर्षाद्गभीरं जगर्जुर्गजाः" भट्टि० १४-५ । 2. ಸಪ್ತ (7) ಸಂಖ್ಯೆ. "हयदशभिर्नजौ भजजलागिति नर्कुटकम्" वृ० र० ।

**हयगन्धा ಹಯಗಂಧಾ** (स्त्री०) 1. ಅಶ್ವಗಂಧಿ ಗಿಡ. हयस्येव गन्धो यस्याः । 2. ಅಜವಾನ, ಓಮ, ವಾದಕ್ಕಿ.

**हयग्रीव ಹಯಗ್ರೀವ** (पुं०) 1. ಮಹಾವಿಷ್ಣುವಿನ ಒಂದು ಅವತಾರ. हयस्य ग्रीवेव ग्रीवा यस्य । ಮಧುಕೈಟಭ ರಾಕ್ಷಸರು ಅಪಹರಿಸಿದ ವೇದವನ್ನು ಉದ್ಧಾರಮಾಡಲು ಮಹಾವಿಷ್ಣುವು ಹಯಗ್ರೀವಾವತಾರವನ್ನು ತಾಳಬೇಕಾಯಿತು. ಪರಮೇಷ್ಠಿಯು ನಾಲ್ಕು ವೇದಗಳನ್ನು ಸುಂದರವಾದ ನಾಲ್ಕು ವಿಗ್ರಹಗಳನ್ನಾಗಿ ಸೃಷ್ಟಿಸಲು ಮಧುಕೈಟಭ ರಾಕ್ಷಸರು ಆ ವಿಗ್ರಹರೂಪವಾದ ವೇದಗಳನ್ನು ಅಪಹರಿಸಿ ಪಾತಾಳಕ್ಕೆ ಕೊಂಡೊಯ್ದರು. ಬ್ರಹ್ಮನು ಆಗ ಬಹಳ ದುಃಖಿತನಾಗಿ ಮಹಾವಿಷ್ಣುವನ್ನು ಸ್ತುತಿಸಲಾಗಿ ಪರಮಾತ್ಮನು ಹಯಗ್ರೀವಾವತಾರವೆತ್ತಿ ಆ ರಾಕ್ಷಸರನ್ನು ಸಂಹರಿಸಿ ವೇದಗಳನ್ನು ರಕ್ಷಿಸಿದನು. "ततो विग्रहवन्तौ तौ वेदान् दृष्ट्वासुरोत्तमौ । सहसा जगृहतुर्वेदान् ब्रह्मणः पश्यतस्तदा । अथ तौ दानवश्रेष्ठौ वेदान् गृह्य सनातनान् । रसां विविशतुस्तूर्णमुदक्पूर्वे महोदधौ ॥ ततो हृतेषु वेदेषु ब्रह्मा कश्मलमाविशत् । ततो वचनमीशानं प्राह वेदैर्विनाकृतः ॥ ओं नमस्ते ब्रह्महृदय नमस्ते मम पूर्वज । लोकाद्य भुवनश्रेष्ठ सांख्ययोगनिधे प्रभो ॥ त्वया विनिर्मितोऽहं वै वेदचक्षुर्वयोतिगः । ते मे वेदा हृताश्चक्षुरन्धो जातोऽस्मि जागृहि ॥ ददस्व चक्षूंषि मम प्रियोऽहं ते प्रियोऽसि मे । एवं स्तुतः स भगवान् पुरुषः सर्वतोमुखः ॥ अन्तर्दधौ स विश्वेशः विवेश च रसां प्रभुः । रसां पुनः प्रविष्टश्च योगं परममास्थितः । ततस्तावसुरौ कृत्वा वेदान् समयबन्धनान् ॥ रसातले विनिक्षिप्य यतः शब्दस्ततो गतौ । एतस्मिन्नन्तरे राजन् देवो हयशिरोधरः । जग्राह वेदानखिलान् रसातलगतान् हरिः । प्रादाच्च ब्रह्मणे भूयः ततः स्वां प्रकृतिं गतः ॥" ಆಗ ವೇದಗಳನ್ನಿಟ್ಟಿದ್ದ ಜಾಗದಲ್ಲಿ ವೇದಗಳನ್ನು ಕಾಣದೆ ಆ ರಾಕ್ಷಸರು ಪರಮಾತ್ಮನೊಡನೆ ಯುದ್ಧಮಾಡಿ ಹತರಾದರು. भा० शान्ति० ३४७ । 2. ಒಬ್ಬ ರಾಕ್ಷಸ. ಈ ರಾಕ್ಷಸನು ಆದಿಶಕ್ತಿಯನ್ನು ತಪಸ್ಸಿನಿಂದ ಮೆಚ್ಚಿಸಿ ತನಗೆ ಎಂದೆಂದಿಗೂ ಮರಣ ಬಾರದಂತೆ ವರವನ್ನು ಕೇಳಲು ದೇವಿಯು ಅದಕ್ಕೆ ಸಮ್ಮತಿಸಲಿಲ್ಲ. ಆಗ ತನ್ನ ಹೆಸರಿನವನಿಂದಲೇ ಮರಣವಾಗಬೇಕೆಂದು ಕೇಳಿಕೊಳ್ಳಲು ಆಗಲಿ ಎಂದು ದೇವಿಯು ವರವನ್ನಿತ್ತಳು. ಆದರಿಂದ ಕೊಬ್ಬಿದ ಈ ರಾಕ್ಷಸನು ದೇಶವನ್ನು ಕ್ಷೋಭೆಗೊಳಿಸಲು ಆರಂಭಿಸಿ

ದನು. ಆಗ ಮಹಾವಿಷ್ಣುವು ಹಯಗ್ರೀವಾವತಾರವೆತ್ತಿ ಈ ರಾಕ್ಷಸನನ್ನು ಸಂಹರಿಸಿದನು. 3. ಒಬ್ಬ ದೊರೆ. -ಗ್ರೀ (स्त्री०) -ग्रीवा -ಗ್ರೀವಾ. 4. ದುರ್ಗಾದೇವಿ.

**हयङ्कष ಹಯಂಕಷ** (पुं०) ಮಾತಲಿ, ಇಂದ್ರನ ಸಾರಥಿ. हयमुच्चैःश्रवसं कषति — कष (हिंसायाम्) "खच्" (बाहु०)। "मातलिस्तु हयङ्कषः" त्रिकाण्ड०।

**हयद्विषत् ಹಯದ್ವಿಷತ್** (पुं०) ಮಹಿಷ, ಎಮ್ಮೆ.

**हयपुच्छी ಹಯಪುಚ್ಛೀ** (स्त्री०) ಮಾಷಪರ್ಣೀಲತೆ, ಕಾಡುದ್ದಿನ ಗಿಡ. हयस्य पुच्छमिव आकारोऽस्याः।

**हयप्रिय ಹಯಪ್ರಿಯ** (पुं०) 1. ಜವೆ, ಯವಧಾನ್ಯ. हयस्य प्रियः। **-प्रिया -ಪ್ರಿಯಾ.** (स्त्री०) 2. ಖರ್ಜೂರದ ಗಿಡ. 3. ಅಶ್ವಗಂಧಿ ಗಿಡ.

**हयमारक ಹಯಮಾರಕ** (पुं०) ಗನ್ನೇರಳೆ ಗಿಡ. हयस्य मारकः। हयं मारयति — मृङ् (प्राणत्यागे) + णिच् "ण्वुल्" (३-१-१३३)। "ल्युः" (३-१-१३४)। **-मारणः -ಮಾರಣಃ.** ಅಶ್ವತ್ಥವೃಕ್ಷ, ಅರಳಿಮರ.

**हयमेध ಹಯಮೇಧ** (पुं०) ಅಶ್ವಮೇಧಯಾಗ. हयः मेध्यतेऽत्र प्रधानतया हिंस्यते — मेधृ (मेधाहिंसनयोः) "घञ्" (३-३-१२१)।

**हयवाहन ಹಯವಾಹನ** (पुं०) 1. ಸೂರ್ಯಪುತ್ರನಾದ ರೇವಂತ. हयो वाहनमस्य। "रेवन्तस्त्वर्करेतोजः प्लवगो हयवाहनः" अभि० चि०। (वि०) 2. ಕುದುರೆಯು ವಾಹನವಾಗಿರುವ.

**हयशाला ಹಯಶಾಲಾ** (स्त्री०) ಕುದುರೆಯ ಲಾಯ. हयानां शाला।

**हयशीर्ष ಹಯಶೀರ್ಷ** (पुं०) ಹಯಗ್ರೀವಾವತಾರವೆತ್ತಿದ ಮಹಾವಿಷ್ಣು.

**हया ಹಯಾ** (स्त्री०) ಅಶ್ವಗಂಧಿಲತೆ. हयः हयगन्धोऽस्त्यस्याः।

**हयाध्यक्ष ಹಯಾಧ್ಯಕ್ಷ** (पुं०) ಕುದುರೆಲಾಯದ ಯಜಮಾನ, ಕುದುರೆಯ ರಕ್ಷಣೆ ಮೊದಲಾದ ಕಾರ್ಯಕ್ಕಾಗಿ ನೇಮಿಸಲ್ಪಟ್ಟ ಅಧಿಕಾರಿ. हयानां रक्षणार्थं नियुक्तः अध्यक्षः।

**हयारि ಹಯಾರಿ** (पुं०) ಗನ್ನೇರಳೆ ಗಿಡ. हयानामरिः।

**हयारोह ಹಯಾರೋಹ** (पुं०) 1. ಕುದುರೆಯ ಸವಾರ. हयमारोहति — आ + रुह (बीजजन्मादौ) "अण्" (३-२-१)। 2. ಕುದುರೆಯ ಸವಾರಿ. भावे "घञ्" (३-३-१८)। (वि०) 3. ಕುದುರೆಯ ಸವಾರಿ ಮಾಡುವವನು. हयस्य आरोहः—आ + रुह "अच्" (३-१-१३४)। (स्त्री०) **-आरोहा -ಆರೋಹಾ.** ಅಶ್ವಗಂಧಿ ಗಿಡ.

**हयी ಹಯೀ** (स्त्री०) ಹೆಣ್ಣುಕುದುರೆ.

**हर ಹರ** (पुं०) 1. ಪರಶಿವ, ಪರಮೇಶ್ವರ, ರುದ್ರ. हरति पापानि — हृञ् (हरणे) "अच्" (३-१-१३४)। "श्रुताप्सरोगीतिरपि क्षणेऽस्मिन् हरः प्रसङ्ख्यानपरो बभूव" कुमा० ३-३९। 2. ಅಗ್ನಿ, ಬೆಂಕಿ. 3. ಗರ್ದಭ, ಕತ್ತೆ. "हरो रासभरुद्रयोः। वैश्वानरेऽपि" हेम०। "हर" ಪದವು ಸಮಾಸಾಂತ್ಯದಲ್ಲಿ ಕೂಡುವ ಅರ್ಥ: (1) ಹೋಗಲಾಡಿಸುವ, ನಿವಾರಿಸುವ. खेदहरः। शोकहरः। (2) ಸಂಪಾದಿಸಿ ಕೊಡುವ, ಹೊಂದಿಸುವ, ತರುವ. "तेषां शूर्पणखैवैका दुष्प्रवृत्तिहराऽभवत्" रघु० १२-५१। (3) ತೆಗೆದುಕೊಳ್ಳುವವನು. 3. ಪಾಲು ತೆಗೆದುಕೊಳ್ಳಲು ಹಕ್ಕುದಾರ. अंशहरः, भागहरः। स्त्रियां "टाप्" (४-१-४)। **-हरा -ಹರಾ.**

**हरगौरी ಹರಗೌರೀ** (स्त्री०) ಅರ್ಧನಾರೀಶ್ವರ ವಿಗ್ರಹ. हरेण युक्ता गौरी। ಯಾವಾಗಲೂ ನಿನ್ನ ಛಾಯೆಯಂತೆ ನಾನು ನಿನ್ನೊಡನಿರಲು ಸಾಹಚರ್ಯವನ್ನು ಕಲ್ಪಿಸಬೇಕೆಂದು ಪಾರ್ವತಿಯು ಕೇಳಿಕೊಳ್ಳಲು ಪರಮೇಶ್ವರನು ತನ್ನ ಅರ್ಧದೇಹವನ್ನು ಪಾರ್ವತಿಗೆ ಕೊಟ್ಟು ಪಾರ್ವತಿಯ ಅರ್ಧದೇಹವನ್ನು ತಾನು ಸ್ವೀಕರಿಸಿ ಅರ್ಧನಾರೀಶ್ವರನಾದನು. "यथा तवाहं सततं छायेवानुगता हर। भवेयं साहचर्येण तथा मां कर्तुमर्हसि॥ रोचते तन्महामपि यत्त्वमिच्छसि भामिनि। तत्रोपायमहं वक्ष्ये यदि शक्नोषि तत्कुरु॥ अर्धं मम शरीरस्य गृहाण त्वं मनोहरे। अर्धं भवतु मे नारी तथैवार्धं पुमानिति॥ ……… अथ गौरी तदा पूर्वमनुभूतं तपःस्थितौ। योगनिद्रास्वरूपं तत् आत्मनोऽचिन्तयत्तदा। हरं प्रणम्य प्रथमं ब्रह्माणं च ततः परम्। ततस्त्रिजगतामीशं हरिं नारायणं प्रभुम्। चिन्तयित्वा तथा तेषामेकतां सा जगन्मयी। दक्षिणे स्वशरीरस्य भागार्धं शशभृद्भृतः। शरीरस्य तथा वाममतिप्रेम्णा निजं हरे। हरोऽपि स्वशरीरार्धं गौरीकाये तदा स्वयम्। प्रेम्णा निवेशयत् तस्याश्चिकीर्षुः प्रियमद्भुतम्" कालिकापुराणम्।

**हरचूडामणि ಹರಚೂಡಾಮಣಿ** (पुं०) ಚಂದ್ರ. हरस्य चूडामणिरिव।

**हरण ಹರಣ** (नं०) 1. ಕನ್ಯೆಗೆ ತಾಯಿ ತಂದೆಗಳು ಬಳುವಳಿಯಾಗಿ ಕೊಡುವ ಧನ ಮೊದಲಾದುದು. ह्रियते — हृञ्

(हरणे) कर्म० "ल्युट्" (३-३-११३)। "यौतकादि तु यद्देयं सुदायो हरणं च तत्" अम०। "सत्वानुरूपाहरणीकृतश्रीः प्रस्थापयद्राघवमन्वगाच्च" रघु० ७-३२। 2. ಒಯ್ಯುವುದು, ಸಾಗಿಸುವುದು. 3. ಭಾಗಿಸುವುದು. हृञ् भावे "ल्युट्" (३-३-११५)। 4. ಭುಜ, ಹೆಗಲು. "हरणं यौतकादीनां द्रव्ये भुजे हृतावपि" मेदि०। 5. ಕಾಯಿಸಿ ತಣ್ಣಗಾದ ನೀರು. "हरणं यौतकद्रव्ये तप्तशीतजले हृतौ" नानार्थर०। 6. ಸ್ವೀಕಾರ. 7. ಕಳ್ಳತನ, ಕದಿಯುವುದು. 8. ನಾಶಪಡಿಸುವುದು. सि० कौ०।

**हरणि ಹರಣಿ** (स्त्री०) ನೀರಿನ ಕಾಲುವೆ. "पयोवहा। सरणी हरणिः" वैज०।

**हरणीय ಹರಣೀಯ** (वि०) ["हर्तव्य" ಪದದಲ್ಲಿ ನೋಡಿ].

**हरत् ಹರತ್** (वि०) 1. ಸ್ವೀಕರಿಸುತ್ತಿರುವ. हृञ् (हरणे) "शतृ" (३-२-१२४)। 2. ಹೋಗಲಾಡಿಸುತ್ತಿರುವ. "ईर्ष्ययेव हरता ह्रियमासां तद्गुणः स्वयमकारि मदेन" माघ० १०-३०। 3. ಕದಿಯುತ್ತಿರುವ. 4. ಒಯ್ಯುತ್ತಿರುವ, ಸಾಗಿಸುತ್ತಿರುವ. 5. ನಾಶಪಡಿಸುತ್ತಿರುವ. 6. ನಿವಾರಿಸುತ್ತಿರುವ, ಪರಿಹರಿಸುತ್ತಿರುವ. "शङ्काशतं वितरता हरता पुनस्तत् उन्मादिनेव मनसेयमिदं तदाह" नैष० १३-४१। 7. (ಮನಸ್ಸನ್ನು) ಆಕರ್ಷಿಸುತ್ತಿರುವ, ಮೋಹಗೊಳಿಸುತ್ತಿರುವ. 8. ಕಡಮೆ ಮಾಡುತ್ತಿರುವ. ಕಳೆಗುಂದಿಸುತ್ತಿರುವ, ಕುಗ್ಗಿಸುತ್ತಿರುವ. 9. ಭಾಗಿಸುತ್ತಿರುವ, ಭಾಗಮಾಡುತ್ತಿರುವ, ಪಾಲುಮಾಡುತ್ತಿರುವ. 10. ಮದುವೆಯಾಗುತ್ತಿರುವ, ವಿವಾಹ ಮಾಡಿಕೊಳ್ಳುತ್ತಿರುವ. "पित्रे न दद्यात् शुल्कं तु कन्यां ऋतुमतीं हरन्। स हि स्वाम्यादतिक्रामेत् ऋतूनां प्रतिरोधनात्" मनु० ९-९३। 11. ಕದ್ದು ಒಯ್ಯುತ್ತಿರುವ, ಅಪಹರಿಸಿ ಕರೆದುಕೊಂಡು ಹೋಗುತ್ತಿರುವ. "त्वया विप्रकृतश्चैद्यो रुक्मिणीं हरता हरे" माघ० २-३८। 12. ಸ್ವಾಧೀನಪಡಿಸಿಕೊಳ್ಳುತ್ತಿರುವ, ತನ್ನದಾಗಿ ಮಾಡಿಕೊಳ್ಳುತ್ತಿರುವ. स्त्रियां "ङीप्" (४-१-६)। —न्ती —ನ್ತೀ. "अवसरमधिगम्य तं हरन्त्यो हृदयमयत्नकृतोज्ज्वलस्वरूपाः" माघ० ७-३। "साक्षात्कृत्याऽभिमन्येऽहं त्वां हरन्तीं श्रियं श्रियः" भट्टि० ५-७१। "शानच्" (३-२-१२४)। हरमाणः ಹರಮಾಣಃ.

**हरतेजस् ಹರತೇಜಸ್** (न०) 1. ಪಾದರಸ. हरस्य तेजः। 2. ಪರಮೇಶ್ವರನ ವೀರ್ಯ. —बीजम् —ಬೀಜಮ್, —वीर्यम् —ವೀರ್ಯಮ್.

**हरनेत्र ಹರನೇತ್ರ** (न०) 1. ಪರಮೇಶ್ವರನ ಕಣ್ಣು. 2. ಮೂರು ಸಂಖ್ಯೆ. हरस्य नेत्रम्।

**हरशेखरा ಹರಶೇಖರಾ** (स्त्री०) ಗಂಗಾನದಿ.

**हरसुत ಹರಸುತ, —सूनु —ಸೂನು** (पुं०) ಪರಮೇಶ್ವರನ ಪುತ್ರನಾದ ಷಣ್ಮುಖ.

**हरि ಹರಿ** (पुं०) 1. ಮಹಾವಿಷ್ಣು. हरति पापानि—हृञ् (हरणे) "इः" (उ० ४-१३९)। "हरिर्हरति पापानि दुष्टचित्तैरपि स्मृतः। अनिच्छयापि संस्पृष्टो दहत्येव हि पावकः"। "इन्" (उ० ४-११८) वा। "अपेतयुद्धाभिनिवेशसौम्यो हरिर्हरिप्रस्थमथ प्रतस्थे" माघ० ३-१। 2. ಪರಶಿವ, ಪರಮೇಶ್ವರ, ರುದ್ರ. 3. ಬ್ರಹ್ಮ, ಚತುರ್ಮುಖ. 4. ಭರ್ತೃಹರಿ. 5. ದೇವೇಂದ್ರ, ಸ್ವರ್ಗದ ಪ್ರಭು. "ददृशे ललाटतटहारि हरेर्हरितो मुखे तुहिनरश्मिदलम्" माघ० ९-२८। 6. ಸಿಂಹ, ಮೃಗರಾಜ. "हरिराक्रमणेन संनतिं किल बिभ्रीत भियेत्यसम्भवः" माघ० १६-३४। 7. ರವಿ, ಸೂರ್ಯ. "दन्तालिकाधरणनिश्चलपाणियुग्ममर्धोदितो हरिरिवोद्गमितान्प्रकायः" माघ० ५-५६। 8. ಹಯ, ಕುದುರೆ. "श्लिष्यद्भिरन्योन्यमुखाग्रसङ्गस्खलत्खलीनं हरिभिर्विलोलैः" माघ० ३-६६। 9. ವಾಯು, ಗಾಳಿ. 10. ಶ್ರೀಕೃಷ್ಣ. "दमघोषसुतेन कश्चन प्रतिशिष्टः प्रतिभानवानथ। उपगम्य हरिं सदस्यदः" माघ० १६-१। "नित्यं हरेः संनिहिता निकामं कौमोदकी मोदयति स्म चेतः" माघ० ३-१८। 11. ಶುಕ, ಗಿಣಿ. 12. ಭೇಕ, ಕಪ್ಪೆ, ಮಂಡೂಕ. 13. ಯಮಧರ್ಮರಾಜ. 14. ವಾನರ, ಕಪಿ. "व्यर्थं यत्र कपीन्द्रसख्यमपि मे वीर्यं हरीणां वृथा प्रज्ञा जाम्बवतो न यत्र न गतिः पुत्रस्य वायोरपि" उ० रा० ३-४५। 15. ಸರ್ಪ, ಹಾವು. 16. ಕಿರಣ. 17. ಚಂದ್ರ. 18. ಅಗ್ನಿ. 19. ಮಯೂರ, ನವಿಲು. 20. ಹಸಿರುಬಣ್ಣ. 21. ಕೆಂಪುಬೆರತ ಹಳದಿ ಬಣ್ಣ. 22. ಹೆಸರುಕಾಳು. वैज०। (वि०) 23. ಹಸಿರುಬಣ್ಣದ. "शतैस्तमक्ष्णामनिमेषवृत्तिभिः हरिं विदित्वा हरिभिश्च वाजिभिः" रघु० ३-४३। 24. ಕೆಂಪುಬೆರತ ಹಳದಿಬಣ್ಣದ. "हरिश्चन्द्रार्कवाताश्वशुकभेकयमाहिषु। कपौ सिंहे हरेऽजेंशौ शक्रे लोकान्तरे पुमान्। वाच्यवत् पिङ्गहरितोः" मेदि०। ಬ್ರಹ್ಮ ವಿಷ್ಣು ಮಹೇಶ್ವರರಿಗೆ ಸತ್ತ್ವಾದಿ ಗುಣಗಳಿಂದ ಭೇದವೇ ಹೊರತು ಮೂರು ರೂಪಗಳಿಗೂ ಮತ್ತೆ ಯಾವ

ಭೇದವೂ ಇಲ್ಲ. ಅಭೇದವೇ ಹೇಳಲ್ಪಟ್ಟಿದೆ. "नारायणः परो देवः सत्त्वरूपो जनार्दनः। त्रिधात्मानं स भगवान् ससर्ज परमेश्वरः"॥ ರಜೋಗುಣ ಮತ್ತು ತಮೋಗುಣಗಳಿಂದ ಕೂಡಿದ ಪರಮಾತ್ಮನು ತನ್ನ ನಾಭಿಕಮಲದಿಂದ ರಜಸ್ಸು ಮತ್ತು ಸತ್ತ್ವಪ್ರಚುರ ವಾಗಿರುವ ಚತುರ್ಮುಖ (ಬ್ರಹ್ಮ)ನನ್ನು ಸೃಷ್ಟಿಸಿದನು. "रजस्तमोभ्यां युक्तोऽभूत् रजःसत्त्वाधिकं प्रभुः। ससर्ज नाभिकमलात् ब्रह्माणं कमलासनम्"॥ ರಜಸ್ಸು ಮತ್ತು ತಮಸ್ಸುಗಳಿಂದ ಕೂಡಿದ ನನ್ನನ್ನು (ಪರಮೇಶ್ವರನನ್ನು) ಆ ಪರಮಾತ್ಮನು ಸೃಷ್ಟಿಸಿದನು. "रजसा तमसा युक्तं सोऽपि मां (परमेश्वरम्) त्वसृजत् प्रभुः। ಸತ್ತ್ವಗುಣ ಪ್ರಚುರನಾಗಿರುವವನೇ ಶ್ರೀಹರಿ (ಮಹಾವಿಷ್ಣು). ಆದುದರಿಂದ ಈ ಮೂರು ಮೂರ್ತಿಗಳಲ್ಲಿ ಮತ್ತು ಪಾರ್ವತಿ ಮಹಾಲಕ್ಷ್ಮಿಗಳಲ್ಲಿ ಭೇದವನ್ನು ಗ್ರಹಿಸುವವನು ಪರಮನಾಸ್ತಿಕನೆನಿಸುವನು. "या श्रीः सा गिरिजा प्रोक्ता यो हरिः स त्रिलोचनः। एवं सर्वेषु शास्त्रेषु पुराणेषु च पठ्यते। एतस्मादन्यथा यस्तु ब्रूते शास्त्रं पृथक्तया। तं नास्तिकं विजानीयात् सर्वधर्मबहिष्कृतम्" वराहपु०। ತ್ರಿಮೂರ್ತಿಗಳಿಗೂ ಅಭೇದವು ವೇದಗಳಲ್ಲಿ ಉಕ್ತವಾಗಿರುವುದರಿಂದ ಭೇದವನ್ನು ಹೇಳುವವನು ಪರಮಪಾಪಿಯಾಗುವನು. "वेदत्रयेऽपि यज्ञेऽस्मिन् पण्डितेष्वेव निश्चयः। यो भेदं कुरुतेऽस्माकं त्रयाणां द्विजसत्तम॥ स पापकारी दुष्टात्मा दुर्गतिं समवाप्नुयात्" वराहपु०।

**हरिकेश ಹರಿಕೇಶ** (पुं०) ಪರಮೇಶ್ವರ.

**हरिक्रान्ता ಹರಿಕ್ರಾಂತಾ** (स्त्री०) ವಿಷ್ಣುಕ್ರಾಂತ ಗಿಡ.

**हरिचन्दन ಹರಿಚಂದನ** (पुन०) 1. ದೇವತೆಗಳ ಕಲ್ಪವೃಕ್ಷಗಳಲ್ಲೊಂದು. चन्दयति आह्लादयति—चदि (आह्लादने) + णिच् "ल्युः" (३-१-१३४)। "पञ्चैते देवतरवो मन्दारः पारिजातकः। सन्तानः कल्पवृक्षश्च पुंसि वा हरिचन्दनम्" अम०। 2. ಶ್ರೀಗಂಧದ ವೃಕ್ಷ. "इह मदस्नपितैरनुमीयते सुरगजस्य गतं हरिचन्दनैः" किरा० ५-४७। 3. ಶ್ರೀಗಂಧ. "ततः प्रकोष्ठे हरिचन्दनाङ्किते प्रमथ्यमानार्णवधीरनादिनीम्" रघु० ३-५९। (न०) 4. ಕುಂಕುಮಕೇಸರಿ. 5. ಜ್ಯೋತ್ಸ್ನೆ, ಚಂದ್ರಿಕೆ, ಬೆಳದಿಂಗಳು. 6. ತಾವರೆಯ ಕೇಸರ, ಪದ್ಮದ ಕುಸುರು. "हरिचन्दनमस्त्री स्यात् देवतानां महीरुहे। नपुंसकं तु गोशीर्षे ज्योत्स्ना कुङ्कुमयोरपि" मेदि०।

**हरिण ಹರಿಣ** (पुं०) 1. ಮೃಗ, ಸಾರಂಗ, ಜಿಂಕೆ. हरति मनः—हृञ् (हरणे) "इनच्" (उ० २-४६)। "रसनाग्रलग्नकिरणाङ्कुरान् जनो हरिणान् गृहीतकवलानिवैक्षत" माघ० १३-५६। ಜಿಂಕೆಗಳಲ್ಲಿ (1) ऋश्यः (2) खड्गः (3) रुरुः (4) पृषतः ಮತ್ತು (5) मृगः ಎಂದು ಐದು ಭೇದಗಳಿವೆ. "हरिणश्चापि विज्ञेयः पञ्चभेदोऽत्र भैरव। ऋश्यः खड्गो रुरुश्चैव पृषतश्च मृगस्तथा। एते बलिप्रदानेषु चर्मदाने च कीर्तिताः"॥ 2. ಶ್ವೇತವರ್ಣ, ಬಿಳಿಯ ಬಣ್ಣ. "हरिणः पाण्डुरः पाण्डुः" अम०। 3. ಸೂರ್ಯ. 4. ವಿಷ್ಣು. 5. ಪರಮೇಶ್ವರ. 6. ಹಂಸ. (वि०) 7. ಬಿಳಿಯ ಬಣ್ಣದ. 8. ಹಳದಿ ಬೆರತ ಬಿಳಿಯ ಬಣ್ಣದ. "कथितो धृतराष्ट्रस्य विवर्णो हरिणः कृशः" भा० आदि०।

**हरिणहृदय ಹರಿಣಹೃದಯ** (वि०) ಭೀರು, ಭಯದ ಸ್ವಭಾವದವನು. हरिणस्येव भीतं हृदयं यस्य। "भीरुस्तु भीलो हरिणहृदयः स्यात्पलंकटः" त्रिकाण्ड०।

**हरिणाक्षी ಹರಿಣಾಕ್ಷೀ** (स्त्री०) ಜಿಂಕೆಯಂತೆ ಸುಂದರವಾದ ನೇತ್ರಗಳುಳ್ಳ ಹೆಂಗಸು. हरिणस्य अक्षिणीव अक्षिणी यस्याः। "षच्" (५-४-११३)। "ङीष्" (४-१-४१)।

**हरिणाङ्क ಹರಿಣಾಂಕ** (पुं०) ಚಂದ್ರ. हरिणः अङ्कश्चिह्नं यस्य।

**हरिणी ಹರಿಣೀ** (स्त्री०) 1. ಹೆಣ್ಣು ಜಿಂಕೆ. हरिणस्य स्त्री "ङीष्" (४-१-४८)। "नृत्यं मयूराः कुसुमानि वृक्षाः दर्भानुपात्तान् विजहुर्हरिण्यः" रघु० १४-६९। 2. ಸುವರ್ಣದ ಪ್ರತಿಮೆ, ಚಿನ್ನದ ವಿಗ್ರಹ. 3. ಚಿತ್ರಿಣೀ ಜಾತಿಯ ಹೆಂಗಸು. 4. ಹಳದಿ ಜಾಜಿಯ ಹೂವು. 5. ಗರಿಕೆಹುಲ್ಲು. 6. ಚಿನದ ಬಣ್ಣದ ಹೆಂಗಸು. "हरिणी चारुयोषिति। सुवर्णप्रतिमायां च" हेम०। 7. ಹದಿನೇಳನೇ ಛಂದಸ್ಸಿನ ಒಂದು ವೃತ್ತ. ಇದರ ಲಕ್ಷಣ: "रसयुगहयैर्न्सौ म्रौ स्लौ गो यदा हरिणी तदा" वृ० र०। ಇದರ ಗಣವಿನ್ಯಾಸ:

न स म र स ल गु
III IIO OOO OIO IIO I O

ಆರು ನಾಲ್ಕು ಮತ್ತು ಏಳನೇ ಅಕ್ಷರಗಳಲ್ಲಿ ಯತಿ ಇರಬೇಕು. "हरिणी हरितायां च नारीभिद्वृत्तभेदयोः" मेदि०।

**हरित् ಹರಿತ್** (पुं०) 1. ಕಪ್ಪು ಮತ್ತು ಹಳದಿ ಮಿಶ್ರವಾದ ಬಣ್ಣ. हरति मनः—हृञ् (हरणे) "इतिः"

(उ० १-९७)। 2. ಹಸಿರು ಬಣ್ಣ. "सत्यम्, अतीत्य हरितो हरींश्च वर्तन्ते वाजिनः" शाकु० १। 3. ಅಶ್ವ, ಕುದುರೆ. 4. ಸೂರ್ಯ. 5. ಸೂರ್ಯನ ಕುದುರೆ. "उत्पाटच मेरुशृङ्गाणि क्षुण्णानि हरितां खुरैः" कुमा० २-४३। "हरित् सूर्ये च सूर्याश्वे वर्णे च हरिते दिशि" विश्व०। 6. ವಿಷ್ಣು. 7. ಸಿಂಹ. 8. ಹೆಸರುಕಾಳು, ಮುದ್ಗ. (स्त्री०) 9. ದಿಕ್ಕು. "ततार विद्याः पवनातिपातिभिः दिशो हरिद्भिर्हरितामिवेश्वरः रघु० ३-३०। 10. ಅರಿಶಿನ. (पुंन०) 11. ತೃಣ, ಹುಲ್ಲು. (वि०) 12. ಹಸಿರುಬಣ್ಣದ. 13. ಕಪ್ಪು ಹಳದಿ ಮಿಶ್ರವರ್ಣದ. "हरिद्दिशि स्त्रियां पुंसि हयवर्णविशेषयोः। अस्त्रियां स्यात्तृणे च" मेदि०।

**हरित ಹರಿತ** (पुं०) 1. ಹಸಿರು ಬಣ್ಣ. हरति मनः—हृञ् (हरणे) "इतन्" (उ० ३-९३)। 2. ಸಿಂಹ. "कण्ठीरवो मृगरिपुस्सुगन्धिर्हरितो हरित्" वैज०। 3. ಸೂರ್ಯನ ಕುದುರೆ. "स पञ्चभद्रः सूर्याश्वो वाताटहरितौ समौ" त्रिकाण्ड०। 4. ಹೆಸರುಕಾಳು. "मुद्गस्तु प्रथनो लोभ्यो बलाङ्गो हरितो हरिः" वैज०। 5. ಹಳದಿಬಣ್ಣ. 6. ನೀಲಿ ಮತ್ತು ಹಳದಿ ಬೆರತ ಬಣ್ಣ. वैज०। (वि०) 7. ಹಸಿರುಬಣ್ಣದ. "हरितपत्रमयीव मरुद्गणः स्रगवनद्धमनोरमपल्लवा" माघ० ६-५३। "हरिततृणोद्गमशङ्कया मृगीभिः" किरा० ५-३८। स्त्रियां वा "ङीप्" नकारादेशश्च (४-१-३९)। **हरिणी ಹರಿಣೀ**. पक्षे **हरिता ಹರಿತಾ**. (स्त्री०) **हरिता ಹರಿತಾ**. 8. ಗರಿಕೆ ಹುಲ್ಲು. "हरिता स्त्री च दूर्वायां हरिद्वर्णयुतेऽन्यवत्" मेदि०।

**हरितक ಹರಿತಕ** (न०) 1. ಕೀರೆಸೊಪ್ಪು. 2. ಗರಿಕೆ ಹುಲ್ಲು. हरितेन वर्णेन कायति—कै (शब्दे) "कः" (३-२-३)। "अश्वावि भूमिपतिभिः क्षणवीतनिद्रैरश्नन् पुरो हरितकं मुदमादधानः। ग्रीवाग्रलोलकलकिङ्किणिकानिनादमिश्रं दधद्दशनचर्चुरशब्दमश्वः" माघ० ५-५८।

**हरिताल ಹರಿತಾಲ** (न०) 1. ಹರಿದಳ, ಹಳದಿಬಣ್ಣದ ಒಂದು ಖನಿಜ, ಒಂದು ಉಪಧಾತು. हरितेन अलति—अल (भूषणादौ) "अच्" (३-१-१३४)। "अचल एष भवानिव राजते स हरितालसमाननवांशुकः" माघ० ४-२१। 2. ಹಳದಿಬಣ್ಣದ ಪಾರಿವಾಳ ಹಕ್ಕಿ. स्वार्थे "कः"। **—तालकम् —ತಾಲಕಮ್**,

**हरितालिका ಹರಿತಾಲಿಕಾ** (स्त्री०) 1. ಭಾದ್ರಪದ ಶುಕ್ಲಚತುರ್ಥಿ. 2. ಗರಿಕೆ ಹುಲ್ಲು.

**हरिताश्मन् ಹರಿತಾಶ್ಮನ್** (पुं०) 1. ಮರಕತಶಿಲೆ, ಪಚ್ಚೆ. हरितवर्णः अश्मा। (न०) 2. ರಸಾಂಜನ. "तृणवाञ्छया मुहुरवाञ्छितानना न्निचयेषु यत्र हरिताश्मवेश्मनाम्" माघ० १३-५६।

**हरिदश्व ಹರಿದಶ್ವ** (पुं०) 1. ರವಿ, ಸೂರ್ಯ. हरिद्वर्णोऽश्वोऽस्य। "प्रविघाटयिता समुत्पतन् हरिदश्वः कमलाकरानिव" किरा० २-४६। 2. ಅರ್ಕವೃಕ್ಷ, ಎಕ್ಕದ ಗಿಡ.

**हरिदास ಹರಿದಾಸ** (पुं०) ಶ್ರೀವಿಷ್ಣು ಭಕ್ತ, ವಿಷ್ಣುವನ್ನು ಆರಾಧಿಸುವವನು.

**हरिदिन ಹರಿದಿನ** (न०) ವಿಷ್ಣುವಿಗೆ ಪ್ರಿಯವಾದ ಏಕಾದಶೀ ಮತ್ತು ದ್ವಾದಶೀ ತಿಥಿಗಳು.

**हरिदेव ಹರಿದೇವ** (पुं०) 1. ಶ್ರವಣನಕ್ಷತ್ರ. ಶ್ರವಣ ನಕ್ಷತ್ರವು ವಿಷ್ಣುದೇವತಾಕವಾದುದು. हरिः देवो अधिष्ठातृदेवता यस्य। (वि०) 2. ವಿಷ್ಣುವೇ ಉಪಾಸ್ಯ ದೇವತೆಯಾಗಿ ಉಳ್ಳವನು. हरिर्देवो यस्य।

**हरिद्रा ಹರಿದ್ರಾ** (स्त्री०) ಅರಿಶಿನ. हरितं पीतवर्णं राति—रा (दाने) "कः" (३-२-३)।

**हरिद्रागणेश ಹರಿದ್ರಾಗಣೇಶ** (पुं०) ಹಳದಿಬಣ್ಣದ ಗಣಪತಿ. हरिद्रावर्णो गणेशः।

**हरिद्राङ्ग ಹರಿದ್ರಾಂಗ** (पुं०) ಹಳದಿಬಣ್ಣದ ಪಾರಿವಾಳ. हरिद्राया इव अङ्गमस्य।

**हरिद्राभ ಹರಿದ್ರಾಭ** (पुं०) 1. ಹೊನ್ನೆಮರ. हरिद्राया आभा इव आभास्य। 2. ಹೊಂಬಣ್ಣ, ಹಳದಿ ಬಣ್ಣ. हरिद्रेव आभाति—आ+भा (दीप्तौ) "कः" (३-२-४)। 3. ಶತಾವರಿ. (वि०) 4. ಹೊಂಬಣ್ಣದ, ಹಳದಿಯ ಬಣ್ಣದ. "हरिद्राभं चतुर्बाहुं हारिद्रवसनं विभुम्" तन्त्रसा०।

**हरिद्राराग ಹರಿದ್ರಾರಾಗ** (पुं०) 1. ಸ್ಥಿರವಾಗಿ ನಿಲ್ಲದ ಸ್ನೇಹ. हरिद्राया राग इव रागः। 2. ಹಳದಿಯ ಬಣ್ಣ. हरिद्राया रागः। (वि०) 3. ಅಸ್ಥಿರವಾದ ಸ್ನೇಹವುಳ್ಳವನು, ಬಹಳಕಾಲ ನಿಲ್ಲದ ಸ್ನೇಹವುಳ್ಳವನು. हरिद्राया राग इव रागो यस्य। "क्षणमात्रानुरागी च हरिद्राराग उच्यते" हला०।

**हरिद्वार ಹರಿದ್ವಾರ** (न०) ಒಂದು ಪುಣ್ಯಕ್ಷೇತ್ರ, ಒಂದು ಪ್ರಸಿದ್ಧ ಯಾತ್ರಾಸ್ಥಳ. हरेः हरिपदप्राप्तेः द्वारमिव।

ಈ ಕ್ಷೇತ್ರದಲ್ಲಿ ಪ್ರವಹಿಸುವ ಗಂಗಾನದಿಯಲ್ಲಿ ಮಾಡಿದ ಸ್ನಾನವು ಕಾಶಿಯಲ್ಲಿ ವಿಶ್ವೇಶ್ವರನ ಸನ್ನಿಧಿಯಲ್ಲಿ ಮಾಡಿದ ಗಂಗಾಸ್ನಾನದ ಫಲವನ್ನು ಕೊಡುವುದು. "गङ्गायां चैव यत्पुण्यं काश्यां विश्वेश्वराग्रतः। प्रयागे मुण्डनाच्चैव हरिद्वारे हरेर्गृहे" ॥ ಈ ಸ್ಥಳದಲ್ಲಿ ಗಂಗೆಯು ಅವತರಣವಾದುದರಿಂದ ಇದಕ್ಕೆ "गङ्गाद्वारम्" ಎಂಬ ಹೆಸರೂ ಪ್ರಸಿದ್ಧವಾಗಿದೆ.

**हरिनामन् ಹರಿನಾಮನ್** (पुं०) 1. ಮುದ್ಗ, ಹೆಸರುಕಾಳು. त्रिकाण्ड०। (न०) 2. ಶ್ರೀಹರಿಯ ನಾಮೋಚ್ಚಾರಣೆ. हरेः नाम नामोच्चारणम्। ಹರಿನಾಮಸಂಕೀರ್ತನಕ್ಕೆ ಕಾಲದೇಶಾದಿ ಯಾವ ನಿಯಮವೂ ಇಲ್ಲ. "न कालनियमस्तत्र न देशनियमस्तथा। नोच्छिष्टादौ निषेधोऽस्ति हरेर्नामनि लुब्धक। ज्ञानं देवार्चनं ध्यानं धारणा नियमो यमः। प्रत्याहारः समाधिश्च हरिनामसमं न च" पाद्मे।

"हरे राम हरे राम राम राम हरे हरे।
हरे कृष्ण हरे कृष्ण कृष्ण कृष्ण हरे हरे॥

**ಈ हरे ಮತ್ತು राम कृष्ण ನಾಮಗಳ ರಹಸ್ಯ:** "हकारस्तु सुतश्रेष्ठ शिवः साक्षान्न संशयः। रेफस्तु त्रिपुरादेवी मम मूर्तिमयी सदा॥ एकारश्च भगं विद्यात् साक्षाद्योनिं तपोधन। एकारः शून्यरूपी च रेफो विग्रहधारिणः। हरे तु त्रिपुरा साक्षात् मम मूर्तिर्न संशयः॥ ककारः कामदा कामरूपिणी स्फुरदव्ययम्। ऋकारश्च सुतश्रेष्ठ ज्येष्ठा शक्तिरितीरिता॥ ककारश्च ऋकारश्च कामिनी वैष्णवी कला। षकारश्चन्द्रमा देवः कलाषोडशसंयुतः॥ णकारश्च सुतवर साक्षान्निवतिरूपिणी"॥

**हरिनेत्र ಹರಿನೇತ್ರ** (न०) 1. ವಿಷ್ಣುವಿನ ಕಣ್ಣು. 2. ಶ್ವೇತ ಕಮಲ, ಬಿಳಿಯ ತಾವರೆ. हरेर्नेत्रमिव। "विबोधनार्थाय हरेर्हरिनेत्रकृतालयाम्। विश्वेश्वरीं जगद्धात्रीं स्थितिसंहारकारिणीम्" मार्क०। (पुं०) 3. ಘೂಕ, ಗೂಬೆ.

**हरिन्मणि ಹರಿನ್ಮಣಿ** (पुं०) ಮರಕತ, ಪಚ್ಚೆ. हरिद्वर्णो मणिः। "गोपानसीषु क्षणमास्थितानामालम्बिभिश्चन्द्रकिणां कलापैः। हरिन्मणिश्यामतृणाभिरामैर्गृहाणि नीध्रैरिव यत्र रेजुः" माघ० ३-४९।

**हरिपर्ण ಹರಿಪರ್ಣ** (न०) ಮೂಲಂಗಿ. हरिद्वर्णं पर्णमस्य।

**हरिप्रस्थ ಹರಿಪ್ರಸ್ಥ** (न०) ಇಂದ್ರಪ್ರಸ್ಥನಗರ, ಈಗಿನ ದೇಹಲಿ. ["इन्द्रप्रस्थ" ಪದದಲ್ಲಿ ನೋಡಿ.] "हरिर्हरिप्रस्थमथ प्रतस्थे" माघ० ३-१।

**हरिप्रिय ಹರಿಪ್ರಿಯ** (पुं०) 1. ಕದಂಬ ವೃಕ್ಷ, ಈಚಲು ಮರ. 2. ಶಂಖ. 3. ಗನ್ನೇರಳೆ. 4. ದಾಸಿವಾಳ. हरेः प्रियः। (न०) 5. ಲಾಮಂಚದ ಬೇರು. (स्त्री०) –प्रिया –ಪ್ರಿಯಾ. 6. ಮಹಾಲಕ್ಷ್ಮಿ. 7. ತುಲಸಿ. 8. ಪೃಥ್ವಿ, ಭೂಮಿ. 9. ದ್ವಾದಶೀ ತಿಥಿ.

**हरिभक्त ಹರಿಭಕ್ತ** (पुं०) ವಿಷ್ಣುಭಕ್ತ, ವಿಷ್ಣುವನ್ನು ಪೂಜಿಸುವವನು. हरेः भक्तः। "सर्वजीवेषु यो विष्णुं भावयेत् समताधिया। हरौ करोति भक्तिं च हरिभक्तः स च स्मृतः" ब्रह्मवै०। ಸಕಲ ಪ್ರಾಣಿಗಳಲ್ಲೂ ಸಮಭಾವನೆಯಿಂದಿರುವವನು ವಿಷ್ಣುಭಕ್ತನು.

**हरिभद्र ಹರಿಭದ್ರ** (न०) ಸುರಸುರುಕೆ ಗಿಡ.

**हरिभुक्(ज्) ಹರಿಭುಕ್(ಜ್)** (पुं०) ಸರ್ಪ, ಹಾವು. हरिं मण्डूकं भुङ्क्ते — भुज "क्विप्" (३-२-६१)।

**हरिमन्थक ಹರಿಮಂಥಕ** (पुं०) ಚಣಕ, ಕಡಲೆ. हरिभिः अश्वैः मथ्यते — मथे (विलोडने) कर्म० "घञ्" (३-३-१९)। स्वार्थे "कन्" (५-४-५)। "चणको हरिमन्थकः" अम०।

**हरिलोचन ಹರಿಲೋಚನ** (पुं०) 1. ಏಡಿ, ನಳ್ಳಿ. 2. ಘೂಕ, ಗೂಬೆ.

**हरिवंश ಹರಿವಂಶ** (पुं०) 1. ವ್ಯಾಸಮಹರ್ಷಿವಿರಚಿತ ಮಹಾಭಾರತದ ಒಂದು ಪರಿಶಿಷ್ಟ ಭಾಗ, ಶ್ರೀಕೃಷ್ಣನ ಸಂತತಿಯನ್ನು ವರ್ಣಿಸುವ ಒಂದು ಗ್ರಂಥ. हरेः वंशो वर्ण्यत्वेनास्त्यस्य "अच्" (५-२-१२७)। "वसुदेवात्तु देवक्यां वासुदेवो बलोऽभवत्। रुक्मिणी सत्यभामाद्या अष्टौ पत्न्यो हरेः पुरा। षोडशस्त्रीसहस्राणि अन्योन्यासन् महात्मनः। तासां पुत्राश्च पौत्राद्याः शतशोऽथ सहस्रशः॥ रुक्मिण्यां चैव प्रद्युम्नः न्यवधीत् शम्बरं च यः। तस्य पुत्रोऽनिरुद्धोऽभूत् उषा बाणसुतापतिः" ಇತ್ಯಾದಿ. 2. ಶ್ರೀಕೃಷ್ಣನ ಸಂತತಿ. हरेः श्रीकृष्णस्य वंशः।

**हरिवल्लभा ಹರಿವಲ್ಲಭಾ** (स्त्री०) 1. ಮಹಾವಿಷ್ಣುವಿನ ಪತ್ನಿ, ಲಕ್ಷ್ಮಿ. हरेः वल्लभा। 2. ತುಲಸಿ.

**हरिवासर ಹರಿವಾಸರ** (पुं०) ಹರಿದಿನ, ಏಕಾದಶೀ ಮತ್ತು ದ್ವಾದಶೀ ತಿಥಿಗಳು. हरेः वासरः। "एकादशी द्वादशी च प्रोक्ता श्रीचक्रपाणिनः। एकादशीमुपोष्यैव द्वादशीं समुपोषयेत्॥ न चात्र विधिलोपःस्यात् उभयोर्देवता हरिः"॥ ದ್ವಾದಶಿಯ ಮೊದಲ ನಾಲ್ಕನೆಯ ಒಂದು ಭಾಗವು ಹರಿವಾಸರ. "द्वादश्याः (प्रथमोभागः) प्रथमः पादः हरिवासरसंज्ञकः। तमतिक्रम्य कुर्वीत पारणं

विष्णुतत्पर:" वि० ध०। ಹರಿವಾಸರದಲ್ಲಿ ಬ್ರಹ್ಮಹತ್ಯೆ ಮೊದಲಾದ ಸಕಲ ಪಾಪಗಳೂ ಅನ್ನದಲ್ಲಿ ಸೇರಿರುವುವು. ಆ ಸಮಯದಲ್ಲಿ ಮಾಡುವ ಭೋಜನವು ಪಾಪವನ್ನು ಭುಜಿಸಿದಂತೆ. "यानि कानि च पापानि ब्रह्महत्यादिकानि च। अन्नमाश्रित्य सर्वाणि तिष्ठन्ति हरिवासरे। अघं स केवलं भुङ्क्ते यो भुङ्क्ते हरिवासरे"॥

**हरिवाहन ಹರಿವಾಹನ** (ಪುಂ) 1. ಗರುಡ, ವೈನತೇಯ. हरे: वाहन:। "वैनतेय: पक्षिसिंह: शाल्मली हरिवाहन:" हारा०। वाहन ಶಬ್ದವು "सर्वं स्याद्वाहनं यानं युग्यं पत्रं च धोरणम्" ಎಂದು ಅಮರಕೋಶದಲ್ಲಿ ನಪುಂಸಕವಾಗಿ ಉಕ್ತವಾಗಿದೆ. ಹಾರಾವಳಿಯಲ್ಲಿ ಪುಂಲಿಂಗವಾಗಿ ಉಕ್ತವಾಗಿದೆ. 2. ಇಂದ್ರ. हरि: उच्चै:श्रवा: (अश्व:) वाहनं यस्य। "एवं स्तुतस्तदा कद्र्वा भगवान् हरिवाहन:। नीलजीमूतसङ्घातै: सर्वमम्बरमावृणोत्" भा० आदि० २६-१। 3. ಸೂರ್ಯ. "हरिवाहनस्तु पुंसि स्यात् शचीपतिविवस्वतो:" मेदि०।

**हरिशयन ಹರಿಶಯನ** (ನಂ) ಮಹಾವಿಷ್ಣುವಿನ ಶಯನ, –ನಿದ್ರೆ. ಏಕಾದಶಿಯ ದಿನ ಮಧ್ಯಾಹ್ನ ಆದಿಶೇಷನ ಪರ್ಯಂಕವನ್ನು ಕಲ್ಪಿಸಿ ಪರಮಾತ್ಮನನ್ನು ಪೂಜಿಸಿ ದ್ವಾದಶಿಯ ದಿವಸ ರಾತ್ರಿ ಆ ತಲ್ಪದಲ್ಲಿ ಮಲಗಿಸಬೇಕು. ಆದುದರಿಂದ ಆ ಏಕಾದಶೀ ಮತ್ತು ದ್ವಾದಶೀ ತಿಥಿಗಳು ಶಯನೈಕಾದಶಿ ಮತ್ತು ಶಯನದ್ವಾದಶಿಗಳಾದುವು. "एकादश्यां जगत्स्वामिशयनं परिकल्पयेत्। शेषाहिभोगपर्यङ्कं कृत्वा संपूज्य केशवम्। अनुज्ञां ब्राह्मणेभ्यश्च द्वादश्यां प्रयत: शुचि:। लब्ध्वा पीताम्बरधरं देवं निद्रां समानयेत्॥" वामनपुराणम्। ಭವಿಷ್ಯಪುರಾಣದಲ್ಲಿ "मैत्राद्यपादे स्वपितीह विष्णु: वैष्णव्यमध्ये परिवर्तते च। पौष्णावसाने च सुरारिहन्ता प्रबुध्यते मासचतुष्टयेन" ಎಂದು ವಿಷ್ಣುವಿನ ಶಯನ ಮತ್ತು ಉತ್ಥಾನ ಕಾಲಗಳು ಉಕ್ತವಾಗಿವೆ. (मैत्रम्—अनूराधा, वैष्णव्यम्—श्रवणा, पौष्णं—रेवती) ಕಾರ್ತಿಕಶುಕ್ಲಪಕ್ಷದಲ್ಲಿ ಪರಮಾತ್ಮನನ್ನು ವಿಬೋಧಗೊಳಿಸಬೇಕು. ಅದರ ಮಂತ್ರ: "उत्तिष्ठोत्तिष्ठ गोविन्द त्यज निद्रां जगत्पते। त्वया चोत्थीयमानेन उत्थितं भुवनत्रयम्"॥

**हरिश्चन्द्र ಹರಿಶ್ಚಂದ್ರ** (ಪುಂ) ಸೂರ್ಯವಂಶದ ತ್ರಿಶಂಕುವಿನ ಪುತ್ರ, ಇಕ್ಷ್ವಾಕುವಂಶದ ಒಬ್ಬ ಚಕ್ರವರ್ತಿ. हरि:चन्द्र इव। ಹರಿಶ್ಚಂದ್ರನ ಪತ್ನಿ ಚಂದ್ರಮತಿ. ವರುಣನ ವರದಿಂದ ಚಂದ್ರಮತಿಯಲ್ಲಿ ರೋಹಿತನೆಂಬ ಪುತ್ರನು ಜನಿಸಿದನು. ಹರಿಶ್ಚಂದ್ರನು ಮೊದಲು ವಾಗ್ದಾನ ಮಾಡಿದ್ದಂತೆ ಅವನ ಪುತ್ರನನ್ನು ಪಶುವನ್ನಾಗಿ ಮಾಡಿ ಯಾಗ ಮಾಡಬೇಕೆಂದು ವರುಣನು ಅನೇಕ ಸಲ ಬಂದು ಕೇಳುತ್ತಿರಲು ಪುತ್ರಪ್ರೇಮದಿಂದ ಮಗನಿಗೆ ಹಲ್ಲು ಹುಟ್ಟಬೇಕು ಹಲ್ಲು ಬೀಳಬೇಕು ಇತ್ಯಾದಿ ಸಬೂಬುಗಳನ್ನು ಹೇಳುತ್ತ ಕಾಲ ತಳ್ಳುತ್ತಿದ್ದನು. ಆದರಿಂದ ಕುಪಿತನಾದ ವರುಣನ ಕ್ರೋಧಕ್ಕೆ ಪಾತ್ರನಾಗಿ ಜಲೋದರರೋಗಗ್ರಸ್ತನಾಗಿ ನರಳುತ್ತಿರಲು ಪುತ್ರನಾದ ರೋಹಿತಾಶ್ವನು ಅರಣ್ಯದಲ್ಲಿ ಸಂಚರಿಸಿ ಒಬ್ಬ ಶುನಃಶೇಫನನ್ನು ಕ್ರಯಕ್ಕೆ ತಂದು ತಂದೆಗೆ ಒಪ್ಪಿಸಿದನು. ಹರಿಶ್ಚಂದ್ರನು ನರಮೇಧ ಮಾಡಿ ವರುಣನನ್ನು ತೃಪ್ತಿಪಡಿಸಿ ರೋಗದಿಂದ ವಿಮುಕ್ತನಾದನು. ಹರಿಶ್ಚಂದ್ರನು ಪ್ರಾಮಾಣಿಕತೆ, ಔದಾರ್ಯ ಮತ್ತು ಸತ್ಯಸಂಧತೆ ಇವುಗಳಿಂದ ಒಳ್ಳೆಯ ಕೀರ್ತಿ ಪಡೆದಿದ್ದನು. ಒಂದು ಸಂದರ್ಭದಲ್ಲಿ ಇವನ ಕುಲಪುರೋಹಿತರಾದ ವಸಿಷ್ಠಮಹರ್ಷಿಯು ವಿಶ್ವಾಮಿತ್ರರ ಎದುರಿಗೆ ಇವನ ಗುಣಗಾನ ಮಾಡಿದರು. ವಿಶ್ವಾಮಿತ್ರಋಷಿಯು ಇವನನ್ನು ಪರೀಕ್ಷಿಸಿದರೆ ಗೆಲ್ಲಲಾರನೆಂದು ತಿಳಿದು ಬಹಳ ಕಠಿನವಾದ ಪರೀಕ್ಷೆಗೆ ಒಳಪಡಿಸಿ ನಾನಾ ವಿಧವಾದ ಕ್ಲೇಶಗಳನ್ನು ಅನುಭವಿಸುವಂತೆ ಮಾಡಿದರು. ಹರಿಶ್ಚಂದ್ರನು ತನ್ನ ಅಚಲವಾದ ಧೈರ್ಯಸ್ಥೈರ್ಯಗಳಿಂದ ಅವೆಲ್ಲವನ್ನೂ ಎದುರಿಸಿ ತನ್ನ ಸತ್ಯಸಂಧತೆಯನ್ನು ಪಾಲಿಸಲು ತಾನು ತನ್ನ ರಾಜ್ಯವನ್ನು ಬಿಟ್ಟುಹೋದ ಮೇಲೆ ಪತ್ನೀಪುತ್ರರನ್ನು ವಿಕ್ರಯಿಸಿ ಕೊನೆಗೆ ತನ್ನನ್ನೂ ಒಬ್ಬ ಚಂಡಾಲನಿಗೆ ಮಾರಿಕೊಂಡು ಸಹಿಸಲಸಾಧ್ಯವಾದ ಕಷ್ಟಕಾರ್ಪಣ್ಯಗಳಿಗೆ ಈಡಾಗಿ ವಿಶ್ವಾಮಿತ್ರಋಷಿಯ ಪರೀಕ್ಷೆಯಲ್ಲಿ ಜಯಶೀಲನಾದನು. ಹೀಗೆ ವಿಶ್ವಾಮಿತ್ರಋಷಿಯ ಮೆಚ್ಚುಗೆಗೆ ಪಾತ್ರನಾಗಿ ಮತ್ತೆ ರಾಜ್ಯವನ್ನು ಪಡೆದು ರಾಜಸೂಯಯಾಗ ಮಾಡಿ ಎಲ್ಲರೊಡನೆ ಸದ್ಗತಿಯನ್ನು ಪಡೆದನು. मार्क०।

**हरिश्चन्द्रनगर ಹರಿಶ್ಚಂದ್ರನಗರ** (ನಂ) ಸೌಭಪುರ.

**हरिसङ्कीर्तन ಹರಿಸಂಕೀರ್ತನ** (ನಂ) ಶ್ರೀಮಹಾವಿಷ್ಣುವಿನ ನಾಮಕೀರ್ತನೆ, ಮಹಾವಿಷ್ಣುವಿನ ನಾಮೋಚ್ಚಾರಣೆ. हरे: सङ्कीर्तनम्। "दानं व्रतं तपो यज्ञ: श्राद्धं वा पितृतर्पणम्। सकलं निष्फलं राजन् हरिसङ्कीर्तनं विना"॥

**हरिसुत ಹರಿಸುತ, –ಸೂನು –ಸೂನು** (ಪುಂ) ಅರ್ಜುನ.

**हरिहय ಹರಿಹಯ** (ಪುಂ) 1. ಇಂದ್ರ. हरिर्हयो यस्य। ತ್ವಕ್ಕು (ಚರ್ಮ) ಕೂದಲು ಬಾಲದ ಕೂದಲು ಎಲ್ಲವೂ ಸುವರ್ಣದಂತಿರುವುದರಿಂದ ಇಂದ್ರನ ಕುದುರೆಯು ಹರಿ. ಈ ಹರಿಯ (ಹಳದಿಯ ಬಣ್ಣದ) ಕುದುರೆಯುಳ್ಳ

ಇಂದ್ರನು ಹರಿಹಯನು. "त्वक्केशवालरोमाणि सुवर्णाभानि यस्य तु । हरिः स वर्णतोऽश्वस्तु पीतकौशेयसप्रभः" ।। "उपगतो विनिनीषुरिव प्रजा हरिहयोऽरिहयोगविचक्षणः" रघु० ९-१८। 2. ಸೂರ್ಯ. 3. ಕಾರ್ತಿಕೇಯ. 4. ಗಣಪತಿ.

**हरिहर ಹರಿಹರ** (ಪುಂ०) ವಿಷ್ಣು ಮತ್ತು ಈಶ್ವರ ಇವರ ಸಂಯುಕ್ತಮೂರ್ತಿ. हरिणा सह हरः। ದೇವತೆಗಳೆಲ್ಲರೂ ಒಟ್ಟುಗೂಡಿ ಬಂದು ಈಶ್ವರನೆಲ್ಲಿರುವನು ಅವನನ್ನು ನಾವು ಪೂಜಿಸಬೇಕು ಎಂದು ಕೇಳಲು ವಿಷ್ಣುವು ತನ್ನ ಹೃದಯಕಮಲದಲ್ಲಿ ಶಯನಿಸಿರುವನೆಂದು ಹೇಳಿ ತೋರಿಸಲು ಎಲ್ಲರೂ ಈಶ್ವರನಿಗೆ ಕ್ಷೀರಾಭಿಷೇಕಮಾಡಿ ಶಾಸ್ತ್ರೋಕ್ತವಾಗಿ ಪೂಜಿಸಿದರು. "विमुक्तपापा देवेशं वासुदेवमथाब्रुवन् । क्वासौ वद जगन्नाथ शम्भुस्तिष्ठति केशव ।। यं क्षीराद्यभिषेकेण स्नापयामो विधानतः। अथोवाच सुरान् विष्णुरेष तिष्ठति शङ्करः।। मद्देहे किं न पश्यध्वं योगप्रायं प्रतिष्ठितम्। तमूचुर्नैव पश्यामस्त्वत्तो वै त्रिपुरान्तकम् ।। सत्यं वद सुरेशान महेशानः क्व तिष्ठति। ततोऽव्ययात्मा स हरिः स्वहृत्पङ्कजशायिनम् ।। दर्शयामास देवानां मुरारिर्लिङ्गमैश्वरम् । ततः सुराः क्रमेणैव क्षीरादिभिरनन्तरम् ।। स्नापयांचक्रिरे लिङ्गं शाश्वतं ध्रुवमव्ययम्" वामनपुराणम् ।

**हरिहरात्मक ಹರಿಹರಾತ್ಮಕ** (ಪುಂ०) 1. ಗರುಡ. हरिहरौ आत्मानौ यस्य। 2. ಪರಮೇಶ್ವರನ ವೃಷಭ. (ನ०) 3. ಹರಿಹರಕ್ಷೇತ್ರ.

**हरीतकी ಹರೀತಕೀ** (स्त्री०) ಅಳಲೆ ಗಿಡ. हरिः पीतवर्णः इतो यस्याम् । संज्ञायां "कन्" (५-३-७५)। "ङीष्" (४-१-४१)। "हरीतकी हैमवती रेचकी श्रेयसी शिवा" अम०। ಅಳಲೆ ಗಿಡಗಳಲ್ಲಿ (1) विजया (2) रोहिणी (3) पूतना (4) अमृता (5) अभया (6) जीवन्ती ಮತ್ತು (7) चेतकी ಎಂದು ಏಳು ಭೇದಗಳಿರುವುವು. "विजया रोहिणी चैव पूतना चामृताभया। जीवन्ती चेतकी चेति नाम्ना सप्तविधा स्मृता"।। **ಹರೀತಕೀ ಪದದ ಅರ್ಥವಿವರಣೆ:** "हरते प्रसभं व्याधीन् भूयस्तकति यद्वपुः। हरीतकी तु सा प्रोक्ता तकतिर्दीप्तिवाचिका" राजनि०। **ಅಳಲೆಗಿಡದ ಉತ್ಪತ್ತಿ:** ಇಂದ್ರನು ಅಮೃತಪಾನ ಮಾಡುವಾಗ ಭೂಮಿಯಮೇಲೆ ಬಿದ್ದ ಅಮೃತದ ಬಿಂದುವು ಅಳಲೆಗಿಡವಾಗಿ ಹುಟ್ಟಿತು. ಈ ಅಳಲೆಗಿಡವು विजया रोहिणी ಮುಂತಾದ ಏಳು ಜಾತಿಗಳಲ್ಲಿರುವುದು. ಹರೀತಕಿ (ಅಳಲೆಕಾಯಿ)ಯು ಕಾಮಾಲೆ ಶೂಲ ಹೊಟ್ಟೆಯುಬ್ಬರ ಗುಲ್ಮವ್ಯಾಧಿ ಯಕೃತ್ತು (ಉದರದ ಬಲಭಾಗದ ಮಾಂಸಗ್ರಂಥಿ) ಮೂತ್ರರೋಗ ಮುಂತಾದ ವ್ಯಾಧಿಗಳನ್ನು ನಾಶಪಡಿಸುವುದು. "कामालां शूलमानाहं प्लीहानं च यकृत् तथा। अश्मरीमूत्रकृच्छ्रं च मूत्राघातं च नाशयेत्" भावप्र०।

**हरेणु ಹರೇಣು** (ಪುಂ०) 1. ನೆಲಗಡಲೆ ಗಿಡ. हृञ् (हरणे) "एणुः" (उ० २-१)। (स्त्री०) 2. ರೇಣುಕೆಯೆಂಬ ಒಂದು ಗಂಧದ್ರವ್ಯ. 3. ಕುಲವಧು, ಸತ್ಕುಲದಲ್ಲಿ ಜನಿಸಿದ ಹೆಂಗಸು, ಗೌರವಾನ್ವಿತ ಹೆಂಗಸು. "हरेणुर्ना सतीने स्यात् रेणुकाकुलयोषितोः" मेदि०।

**हर्तव्य ಹರ್ತವ್ಯ** (वि०) 1. ಒಯ್ಯಲ್ಪಡುವ, ಸಾಗಿಸಲ್ಪಡುವ. 2. ಒಯ್ಯಬೇಕಾದ, ಸಾಗಿಸಬೇಕಾದ. 3. ಒಯ್ಯಬಹುದಾದ, ಸಾಗಿಸಬಹುದಾದ. 4. ಒಯ್ಯಲು ಸಾಧ್ಯವಾದ, ಸಾಗಿಸಲು ಶಕ್ಯವಾದ. 5. ತೆಗೆದುಕೊಳ್ಳಲ್ಪಡುವ, ಸ್ವೀಕರಿಸಲ್ಪಡುವ. 6. ಸ್ವೀಕರಿಸಬಹುದಾದ. 7. ಸ್ವೀಕರಿಸಬೇಕಾದ. 8. ಕದಿಯಬಹುದಾದ, ಅಪಹರಿಸಬಹುದಾದ. 9. ಕದಿಯಲ್ಪಡುವ, ಅಪಹರಿಸಲ್ಪಡುವ. 10. ಕದಿಯಲು ಸಾಧ್ಯವಾದ, ಅಪಹರಿಸಲು ಶಕ್ಯವಾದ. 11. ನಾಶಪಡಿಸಲ್ಪಡುವ. 12. ನಾಶಪಡಿಸಬಹುದಾದ. हृञ् (हरणे) "तव्यः" (३-१-९६)। हरणं प्रापणं स्वीकारः स्तेयं नाशनं च सि० कौ०। "अनीयर्" (३-१-९६)। **हरणीयम् ಹರಣೀಯಮ್.**

**हर्तृ ಹರ್ತೃ** (ಪುಂ०) 1. ಸೂರ್ಯ. हरति ध्वान्तम्—हृञ् (हरणे) "तृच्" (३-१-१३३)। "लोकसाक्षी त्रिलोकेशः, कर्ता हर्ता तमिस्रहा । तपनस्तापनश्चैव शुचिः सप्ताश्ववाहनः" ।। 2. ಚೋರ, ಕಳ್ಳ. हरति अपहरति—हृञ् "तृच्"। (वि०) 3. ಒಯ್ಯುವವನು, ಸಾಗಿಸುವವನು. 4. ಸ್ವೀಕರಿಸುವವನು, ತೆಗೆದುಕೊಳ್ಳುವವನು. 5. ಕದಿಯುವವನು. "य इन्द्रमश्वहर्तारं विद्वानपि न जघ्निवान्" भाग० ४-२४-५। 6. ನಾಶಪಡಿಸುವವನು. "हरणं प्रापणम् स्वीकारः स्तेयम् नाशनं च" सि० कौ०। स्त्रियां "ङीप्" (४-१-६)। —त्री —ತ್ರೀ.

**हर्मट ಹರ್ಮಟ** (ಪುಂ०) 1. ಕಚ್ಛಪ, ಕಮಠ, ಆಮೆ. "हर्मटः कच्छपे प्रोक्तः सहस्रकिरणेऽपि च" हेम०। 2. ಸೂರ್ಯ.

**हर्मन् ಹರ್ಮನ್** (ನ०) ಜೃಂಭಣ, ಆಕಳಿಕೆ. हरति ग्लानिम्। हृञ् (हरणे) "मनिन्" (उ० ४-१४४)। बाहु०।

**हर्मित ಹರ್ಮಿತ** (वि०) 1. ಆಕಳಿಸಿದವನು. हर्मः सञ्जातमस्य "इतच्" (५-२-३६)। 2. ಎಸೆಯಲ್ಪಟ್ಟ. 3. ಸುಡಲ್ಪಟ್ಟ. "हर्मितं क्षिप्तदग्धयोः" हेम०।

**हर्म्य ಹರ್ಮ್ಯ** (न०) ಧನಿಕರ ವಾಸದ ಗೃಹ. हरति मनः—हृञ् (हरणे) "यक्" मुट् च (उ० ४-११२)। "हर्म्यादि धनिनां वासः" अम०। "यत्र स्फटिकहर्म्येषु नक्तमापानभूमिषु। ज्योतिषां प्रतिबिम्बानि प्राप्नुवन्त्युपहारताम्" कुमा० ६-४२।

**हर्यक्ष ಹರ್ಯಕ್ಷ** (पुं०) 1. ಸಿಂಹ. हरिणी पिङ्गले अक्षिणी यस्य—"षच्" (५-४-११३)। 2. ಕುಬೇರ. हरि पिङ्गमेकं अक्षि अस्य—"षच्" (५-४-११३)। (वि०) 3. ಹಳದಿಯ ಬಣ್ಣದ ಕಣ್ಣುಗಳುಳ್ಳವನು.

**हर्यत ಹರ್ಯತ** (पुं०) 1. ಅಶ್ವ, ಕುದುರೆ. हर्य (गतौ) "अतच्" (उ० ३-११०)। हर्यतोऽश्वः सि० कौ०। 2. ಅಶ್ವಮೇಧ ಯಾಗಕ್ಕೆ ಅರ್ಹವಾದ ಕುದುರೆ.

**हर्यश्व ಹರ್ಯಶ್ವ** (पुं०) 1. ಇಂದ್ರ. हरिः हरिवर्णोऽश्वो यस्य। "हरीन् दशशतान्याजौ हर्यश्वस्य बलः शरैः। [illegible]" 2. ಇಂದ್ರನ ಕುದುರೆ, ಉಚ್ಚೈಃಶ್ರವಸ್ಸು. हरिनामा अश्वः हरिवर्णो वा अश्वः।

**हर्ष ಹರ್ಷ** (पुं०) 1. ಸಂತೋಷ, ಆನಂದ. हृष (तुष्टौ) "घञ्" (३-३-१८)। "हर्षविस्मितसर्वाङ्गो हनुमन्तमथाब्रवीत्" रामा०। "हर्षविशेषनिर्भरेण मनसा त्वर्यमाणः" काद०। 2. ಇಷ್ಟವಾದ ವಸ್ತುವಿನ ಪ್ರಾಪ್ತಿಯಿಂದ ಮನಸ್ಸಿಗೆ ಉಂಟಾಗುವ ಉಲ್ಲಾಸ. "हर्षस्त्विष्टावाप्तेः मनःप्रसादोऽश्रुगद्गदादिकरः" सा० द० ३-१६५। ಇದು ಮೂವತ್ತಮೂರು ವ್ಯಭಿಚಾರಿಭಾವಗಳಲ್ಲೊಂದು. 3. ರೋಮಾಂಚ, ಮೈಮೇಲಿನ ಕೂದಲು ಎಚ್ಚರಗೊಳ್ಳುವುದು. 4. ರತ್ನಾವಳೀ ನಾಟಿಕಾಕಾರನಾದ ಶ್ರೀಹರ್ಷಕವಿ. **ರತ್ನಾವಳಿಯನ್ನು ರಚಿಸಿದ ಕವಿ ಯಾರು?** ಗ್ರಂಥದಲ್ಲಿ ಶ್ರೀಹರ್ಷದೇವನು ಇದನ್ನು ರಚಿಸಿದನೆಂದು ಹೇಳಲು "अस्मत्स्वामिना श्रीहर्षदेवेनापूर्ववस्तुरचनालङ्कृता रत्नावली नाम नाटिका कृतेयमित्यस्माभिः श्रोत्रपरम्परया श्रुता" ಮತ್ತು "श्रीहर्षो निपुणः कविः परिषदप्येषा गुणग्राहिणी लोके हारि च वत्सराजचरितं नाट्ये च दक्षा वयम्" रत्ना० १-५। ಈ ಪ್ರಜ್ಞೆಗಳು ಆಧಾರವಾಗಿರುವುವು. ಆದರೆ ಕಾವ್ಯಪ್ರಕಾಶಕಾರನಾದ ಮಮ್ಮಟ ಕವಿಯು "श्रीहर्षादेर्धावकादीनामिव धनम्" ಎಂಬ ಆಧಾರರಹಿತವಾದ ವಾಕ್ಯದಿಂದ ರತ್ನಾವಳಿಯನ್ನು ರಚಿಸಿದವನು ಧಾವಕಕವಿಯೆಂದೂ ಧನದ ಆಸೆಯಿಂದ ಕವಿಯು ಗ್ರಂಥದಲ್ಲಿ ಶ್ರೀಹರ್ಷ ರಾಜನ ಹೆಸರನ್ನು ಹೇಳಿರುವನೆಂದೂ ಅರ್ಥವಾಗುವುದು. ಆದರೆ ಕವಿಯ ಪಾಂಡಿತ್ಯಕ್ಕೆ ಮೆಚ್ಚಿದ ರಾಜನು ಕವಿಗೆ ಅತುಲವಾದ ಧನವನ್ನು ಕೊಟ್ಟು, ಗೌರವಿಸಿರಬಹುದೆಂದೂ ಗ್ರಂಥವನ್ನು ಶ್ರೀಹರ್ಷನೇ ರಚಿಸಿರುವನೆಂದೂ ತಿಳಿಯಬಹುದಾಗಿದೆ.

**हर्षक ಹರ್ಷಕ** (वि०) ಸಂತೋಷವನ್ನುಂಟುಮಾಡುವವನು. हर्षयति—हृष (तुष्टौ) + णिच् "ण्वुल्" (३-१-१३३)।

**हर्षण ಹರ್ಷಣ** (पुं०) 1. ವಿಷ್ಕಂಭಾದಿ 27 ಯೋಗಗಳಲ್ಲೊಂದು. ["योग" ಪದದಲ್ಲಿ ನೋಡಿ.] हर्षयति अभीष्टदानात्—हृष (तुष्टौ) + णिच् "ल्युः" (३-१-१३४)। (न०) 2. ಆನಂದ, ಸಂತೋಷ. हृष (तुष्टौ) भावे "ल्युट्" (३-३-११५)। "तच्छिरः सिन्धुराजस्य शरैर्बद्धमवाहयत्। दुर्हृदामपहर्षाय सुहृदां हर्षणाय च"॥ भा० द्रोण०। 3. ಒಂದು ವಿಧ ನೇತ್ರರೋಗ. 4. ಶ್ರಾದ್ಧದೇವ. (वि०) 5. ಸಂತೋಷವುಂಟುಮಾಡುವ. हृष + णिच् कर्त० "ल्युः" (३-१-१३४)। "हर्षणोऽक्षिरुगन्तरे। हर्षके योगभेदे च श्राद्धदेवेऽपि च क्वचित्" मेदि०।

**हर्षमाण ಹರ್ಷಮಾಣ** (वि०) ಸಂತೋಷದಿಂದ ಕೂಡಿ ಮನಸ್ಸುಳ್ಳವನು, ಸಂತೋಷಪಡುವ ಸ್ವಭಾವದವ[ನು]. हृषु (अलीके) "चानश्" (३-२-१२९)। "हर्षमा[णो] विकुर्वाणः प्रमना हृष्टमानसः" अम०।

**हर्षयित्नु ಹರ್ಷಯಿತ್ನು** (पुं०) 1. ಪುತ್ರ, ಮಗ. हर्षय—हृष (तुष्टौ) + णिच् "इत्नुच्" (उ० ३-२९) (न०) 2. ಸ್ವರ್ಣ, ಚಿನ್ನ. "हर्षयित्नुः पुमान् पु[त्रे] काञ्चने च नपुंसकम्" मेदि०। (वि०) 3. ಸಂತೋ[ಷ]ಪಡುವ ಸ್ವಭಾವದವನು.

**हर्षस्वन ಹರ್ಷಸ್ವನ** (पुं०) ಸಂತೋಷವನ್ನು ಸೂಚಿಸು[ವ] ಶಬ್ದ. हर्षसूचकः स्वनः।

**हर्षित ಹರ್ಷಿತ** (वि०) 1. ಸಂತೋಷಗೊಂಡಿರುವವ[ನು], ಆನಂದದಿಂದಿರುವವನು. हर्षोऽस्य सञ्जातः "इतच्" (५-२-३६)। 2. ಸಂತೋಷಗೊಳಿಸಲ್ಪಟ್ಟ. हृष+णि[च्] "क्तः" (३-२-१०२)।

**हर्षुल ಹರ್ಷುಲ** (पुं०) 1. ಮೃಗ. हृष (तुष्टौ) "उलच्" (उ० १-९८)। 2. ಕಾಮುಕ. "हर्षुलो मृगकामिनोः

ಸಿ० ಕೌ० । 3. ಬುಧಗ್ರಹ. "अथ हर्षुल: । बुध: श्यामाङ्ग एकाङ्ग:" वैज० । (स्त्री०) -ला -ಲಾ. 4. ರೋಗಗ್ರಸ್ತ ಕನ್ಯೆ, ವಿವಾಹಕ್ಕೆ ಯೋಗ್ಯಳಲ್ಲದ ಕನ್ಯೆ. "हर्षुला विकला सरुक्" वैज० ।

**हल् ಹಲ್** — ವ್ಯಂಜನವರ್ಣಗಳು, "क" ಕಾರದಿಂದ "ह" ಕಾರದವರೆಗಿನ ಅಕ್ಷರಗಳು. "अच्" (ಸ್ವರ) ವರ್ಣಗಳು ಅಸ್ಪೃಷ್ಟ ವರ್ಣಗಳು. ವ್ಯಂಜನವರ್ಣಗಳು ಸ್ಪೃಷ್ಟ ಪ್ರಯತ್ನದಿಂದ ಉಚ್ಚರಿಸಲ್ಪಡುವುವು. ವ್ಯಂಜನವರ್ಣಗಳಲ್ಲಿ यण् (य र ल व) ವರ್ಣಗಳು ಈಷತ್‌ಸ್ಪೃಷ್ಟ ವರ್ಣಗಳು. शर् (श ष स) ವರ್ಣಗಳು ಅರ್ಧಸ್ಪೃಷ್ಟ ವರ್ಣಗಳು. ಉಳಿದ ವರ್ಣಗಳು ಸ್ಪೃಷ್ಟವರ್ಣಗಳು. स्पृष्टं प्रयतनं स्पर्शानाम्—कादयो मावसानाः स्पर्शाः । ईषत्स्पृष्टमन्तस्थानाम्—यरलवा अन्तस्थाः सि० कौ० । "अचोऽस्पृष्टा यणस्त्वीषन्नेमस्पृष्टाः शरस्तथा । शेषाः स्पृष्टा हलः प्रोक्ता निबोधानुप्रदानतः" पा० शि० । ವರ್ಣಸಮಾಮ್ನಾಯ (ಚತುರ್ದಶ ಸೂತ್ರ) ದಲ್ಲಿ हयवरट् ಸೂತ್ರದಿಂದ हल् ಸೂತ್ರದವರೆಗಿನ हल् ಪ್ರತ್ಯಾಹಾರದಿಂದ ವ್ಯಂಜನವರ್ಣಗಳು ಬೋಧಿಸಲ್ಪಡುವುವು. ಆದುದರಿಂದ "हल्" ಎಂದರೆ ವ್ಯಂಜನವರ್ಣಗಳು. अचः अस्पृष्टाः । यणः (यवरलाः) ईषत्स्पृष्टाः । शरः (शषसाः) नेम (अर्धं) स्पृष्टाः । शेषाः स्पृष्टाः हलः प्रोक्ताः । पा० शि० ।

**हल ಹಲ** (ನ०) ನೇಗಿಲು. हलति — हल (विलेखने) "अच्" (३-१-१३४) । "लाङ्गलं हलम्" अम० । "हलहतिभीतिमिलितयमुनाभम्" गीतगो० । ಕೃಷಿಗಾಗಿ ನೇಗಿಲಿಗೆ ಎತ್ತು (ವೃಷಭ) ಗಳನ್ನು ಕಟ್ಟಿದಾಗ ಎತ್ತುಗಳು ಆಹಾರವನ್ನು ಸೇವಿಸಿದರೆ ಆ ಕ್ಷೇತ್ರದಲ್ಲಿ ದ್ವಿಗುಣವಾದ ಪೈರು ಬೆಳೆದು ಸಮೃದ್ಧವಾದ ಧಾನ್ಯವು ಲಭಿಸುವುದು. "हले तु योजिते यत्र क्षेत्रे ग्रासं करोति गौः । तत्र स्यात् द्विगुणं शस्यमवश्यं गर्गभाषितम्" कृत्यचि० ।'

**हलधर ಹಲಧರ** (ಪು०) 1. ಬಲರಾಮ. धरति — धृञ् (धारणे) "अच्" (३-१-१३४) । हलस्य धरः । "हलधरपरिधानश्यामलैरम्बुवाहैः" माघ० ४-६८। (ವಿ०) 2. ರೈತ, ಬೇಸಾಯಗಾರ. "सालङ्कारो हलधरः स्रग्भिश्च पूजितं हलम्" ज्योतिस्० ।

**हलभूति ಹಲಭೂತಿ** (ಸ್ತ್ರೀ०) ಕೃಷಿಕಾರ್ಯದಿಂದ ಲಭಿಸುವ ಸಂಪತ್ತು, ನೇಗಿಲುಗಳಿಂದ ಸಾಧ್ಯವಾಗಬಹುದಾದ ಐಶ್ವರ್ಯ. हलात् भूतिः — हलसाध्या भूतिः । "अथ सेवा श्ववृत्तिः स्यात् स्त्रियां कृषिश्च कर्षणम् । कर्षोऽमृतं च प्रकृतं हलभूतिर्महाधनम्" शब्दरत्नावली ।

**हलभृत् ಹಲಭೃತ್** (ಪು०) ಬಲರಾಮ. हलं बिभर्ति — डुभृञ् (धारणपोषणयोः) "क्विप्" (३-२-६१) । "शोभामद्रेः स्तिमितनयनप्रेक्षणीयां भवित्रीमंसन्यस्ते सति हलभृतो मेचके वाससीव" मेघ० १-५९ ।

**हला ಹಲಾ** (ಸ್ತ್ರೀ०) 1. ಪೃಥ್ವಿ, ಭೂಮಿ. 2. ಜಲ, ನೀರು. 3. ಸಖಿ, ಗೆಳತಿ. (ಅವ್ಯ०) (ನಾಟಕದಲ್ಲಿ) 4. ಸಖಿಯ ಸಂಬೋಧನೆ, ಸಖಿಯನ್ನು ಕರೆಯುವುದು. "हण्डे हञ्जे हलाह्वाने नीचां चेटीं सखीं प्रति" अम० ।

**हलायुध ಹಲಾಯುಧ** (ಪು०) 1. ಬಲದೇವ, ಬಲರಾಮ. हलमायुधमस्य । "कामपालो हलायुधः" अम० । "हलायुधोत्क्षिप्तरथौघपूर्णं समीक्ष्य देवाः सहसान्तरिक्षम्" याद० २०-४४ । 2. ಒಬ್ಬ ನಿಘಂಟುಕಾರ.

**हलाहल ಹಲಾಹಲ** (ಪು᠎ನ०) 1. ಒಂದು ವಿಷ, ವಿಷಗಳಲ್ಲಿ ಒಂದು ಭೇದ. हलमिव आसमन्तात् हलति — हल (विलेखने) "अच्" (३-१-१३४) । "पुंसि क्लीबे च काकोलकालकूटहलाहलाः" अम० । (ಪು०) 2. ಬ್ರಹ್ಮಸರ್ಪ. हलाहलोऽस्यास्ति "अच्" (५-२-१२७) ।

**हलि ಹಲಿ** (ಪು०) 1. ದೊಡ್ಡ ನೇಗಿಲು. हलति भूमिम् — हल (विलेखने) "इन्" (उ० ४-११८) । 2. ಕೃಷಿ ಕಾರ್ಯ, ಬೇಸಾಯ.

**हलिन् ಹಲಿನ್** (ಪು०) 1. ಬಲದೇವ, ಬಲರಾಮ. हलमायुधत्वेनास्यास्ति "इनिः" (५-२-११५) । 2. ಕೃಷಿ ಕಾರ್ಯ ಮಾಡುವವನು, ಬೇಸಾಯಗಾರ.

**हलिनी ಹಲಿನೀ** (ಸ್ತ್ರೀ०) ಬೆಣ್ಣೆಬಿದಿರುಸೊಪ್ಪು. हलमिवाकारोऽस्याः — "इनिः" (५-२-११५) । "ङीप्" (४-१-५) ।

**हलिप्रिय ಹಲಿಪ್ರಿಯ** (ಪು०) 1. ಕದಂಬ ವೃಕ್ಷ, ಕಡವಲು ಮರ. हलिनः प्रियः । (ಸ್ತ್ರೀ०) -प्रिया -ಪ್ರಿಯಾ. 2. ಮದಿರೆ, ಮದ್ಯ.

**हलीन ಹಲೀನ** (ಪು०) ತೇಗದ ಮರ.

**हलीशा (षा) ಹಲೀಶಾ (ಷಾ)** (ಸ್ತ್ರೀ०) ನೇಗಿಲಿನ ಉದ್ದದ (ಈಚು) ಮರ. हलस्य ईशा (षा) । "ईषा लाङ्गलदण्डः स्यात्" अम० ।

**हल्य ಹಲ್ಯ** (ನ०) ಉತ್ತ ಭೂಮಿ, ಕೃಷಿಮಾಡಲ್ಪಟ್ಟ ಕ್ಷೇತ್ರ. हलेन कृष्टम् — हल "यत्" (४-४-९७) ।

**हुल्या ಹಲ್ಯಾ** (स्त्री०) ಹಲಗಳ ಸಮೂಹ. हलानां समूहः "यः" (४-२-४९)।

**हल्लक ಹಲ್ಲಕ** (न०) ಕೆಂಪು ನೈದಿಲೆ. हल्लति — हल्ल (विकसने) "ण्वुल्" (३-१-१३३)। "हल्लकं रक्तसन्ध्यकम्" अम०।

**हल्लीश ಹಲ್ಲೀಶ** (न०) ಒಂದು ಉಪರೂಪಕ, ಒಂದು ಏಕಾಂಕ ಉಪರೂಪಕ.

**हल्लीशक ಹಲ್ಲೀಶಕ** (न०) 1. ಸ್ತ್ರೀಯರು ವರ್ತುಲಾಕಾರವಾಗಿ ನಿಂತು ಮಾಡುವ ನೃತ್ಯ. "मण्डलेन तु यन्नृत्यं स्त्रीणां हल्लीशकं तु तत्" हेमचन्द्रः। 2. ರಾಸಕ್ರೀಡೆ. ಒಬ್ಬ ಪುರುಷ ಮತ್ತು ಅನೇಕ ಸ್ತ್ರೀಯರು ಸೇರಿ ಆಡುವ ಕ್ರೀಡೆ. "गोपीनां मण्डलीनृत्यबन्धे हल्लीशकं विदुः"।

**हव ಹವ** (पुं०) 1. ಯಾಗ, ಯಜ್ಞ. हु (दानादनयोः) "अप्" (३-३-७५)। 2. ಆಹ್ವಾನ, ಕರೆ. ह्वेञ् (स्पर्धायां शब्दे च) "अप्" (३-३-७५)। सम्प्रसारणम् च। 3. ಆಜ್ಞೆ, ಅಪ್ಪಣೆ, ನಿದೇಶ. "हव आज्ञाध्वराह्वाने" मेदि०। 4. ಹೋಮ.

**हवन ಹವನ** (न०) 1. ಹೋಮ. हु (दानादनयोः) "ल्युट्" (३-३-११५)। 2. ಯಾಗ. 3. ಆಹ್ವಾನ, ಕರೆ. 4. ಪ್ರಾರ್ಥನೆ.

**हवनायुस् ಹವನಾಯುಸ್** (पुं०) ವಹ್ನಿ, ಅಗ್ನಿ. हवनमेवायुर्यस्य।

**हवनी ಹವನೀ** (स्त्री०) ಅಗ್ನಿಯ ಕುಂಡ.

**हवनीय ಹವನೀಯ** (न०) 1. ಹೋಮಕ್ಕೆ ಅರ್ಹವಾದ ದ್ರವ್ಯ, ಹೋಮದ್ರವ್ಯ. हु (दानादनयोः) "अनीयर्" (३-१-९६)। (वि०) 2. ಹೋಮಮಾಡಲ್ಪಡುವ. 3. ಹೋಮಕ್ಕೆ ಅರ್ಹವಾದ. 4. ಹೋಮಮಾಡಬಹುದಾದ. "प्राशुराशु हवनीयमत्र यत्तेन दीर्घममरत्वमध्यगुः" माघ० १४-३१।

**हवित्री ಹವಿತ್ರೀ** (स्त्री०) ಯಾಗದ ಅಗ್ನಿಯನ್ನು ಪ್ರತಿಷ್ಠಿಸುವ ಹೋಮಕುಂಡ.

**हविरशन ಹವಿರಶನ** (पुं०) 1. ಅಗ್ನಿ. हविरशनमस्य। (वि०) 2. ಹವಿಸ್ಸನ್ನು ತಿನ್ನುವವನು, ಹೋಮದ್ರವ್ಯವನ್ನು ನುಂಗುವವನು.

**हविर्गृह ಹವಿರ್ಗೃಹ** (न०) ಯಜ್ಞಶಾಲೆ, ಅಗ್ನಿಕಾರ್ಯ ಮಾಡುವ ಮನೆ. हविषो गृहम्।

**हविर्भुक्(ज्) ಹವಿರ್ಭುಕ್(ಜ್)** (पुं०) ಅಗ್ನಿ. हवींषि भुङ्क्ते — भुज (परिपालनाभ्यवहारयोः) "क्विप्" (३-२-१७८)। "वर्णसम्पदमतिस्फुटां दधन्नाम चोज्ज्वलमभूद्धविर्भुजः" माघ० १४-२६।

**हविष्मत् ಹವಿಷ್ಮತ್** (वि०) ಹವಿಸ್ಸಿನಿಂದ ಕೂಡಿದ (ಅಗ್ನಿ).

**हविष्य ಹವಿಷ್ಯ** (न०) ಹವಿಸ್ಸಿಗೆ ಯೋಗ್ಯವಾದ ಅನ್ನ ತುಪ್ಪ ಮೊದಲಾದುದು. हविषे हितम्—हविस् "यत्" (५-१-२)। "दर्भाः पवित्रं पूर्वाह्णो हविष्याणि च सर्वशः" मनु० ३-२५६।

**हविष्यान्न ಹವಿಷ್ಯಾನ್ನ** (न०) ವ್ರತಾಚರಣೆಯ ಕಾಲದಲ್ಲಿ ಭುಜಿಸಲು ಯೋಗ್ಯವಾದ ಆಹಾರ. हविष्यमन्नम्।

**हविस् ಹವಿಸ್** (न०) ಹೋಮದ್ರವ್ಯ, ಅನ್ನ ತುಪ್ಪ ಮೊದಲಾದುದು. हूयते — हु (दानादनयोः) "इसिः" (उ० २-१०८)। "तत्र मन्त्रपवितं हविः क्रतावश्नतो न वपुरेव केवलम्। वर्णसम्पदमतिस्फुटां दधन्नाम चोज्ज्वलमभूद्धविर्भुजः" माघ० १४-२६। "हविषां भोक्तरि दत्तसन्निधाने" याद० १५-३२।

**हव्य ಹವ್ಯ** (न०) ದೇವತೆಗಳಿಗೆ ಅರ್ಪಿಸುವ ಹೋಮದ್ರವ್ಯ, ದೇವತೆಗಳನ್ನು ಉದ್ದೇಶಿಸಿ ಹೋಮಮಾಡುವ ಅನ್ನ ಮೊದಲಾದುದು. हूयते प्रक्षिप्यते — हु (दानादनयोः) "यत्" (३-१-९७)। "नश्यन्ति हव्यकव्यानि नराणामविजानताम्। भस्मीभूतेषु विप्रेषु मोहाद्दत्तानि दातृभिः" मनु० ३-९७। "गन्धतोऽपि हुतहव्यसम्भवात् देहिनामहदोघमंहसाम्" माघ० १४-२७।

**हव्यकव्य ಹವ್ಯಕವ್ಯ** (न०) ದೇವತೆಗಳಿಗೆ ಅರ್ಪಿಸುವ ಅನ್ನ ಮತ್ತು ಪಿತೃಗಳಿಗೆ ಅರ್ಪಿಸುವ ಅನ್ನ (ಕ್ರಮವಾಗಿ).

**हव्यपाक ಹವ್ಯಪಾಕ** (पुं०) ಅಗ್ನಿಯಲ್ಲಿ ಹೋಮಮಾಡತಕ್ಕ ಪಕ್ವಾನ್ನ, ಚರು. हव्यस्य पाकः।

**हव्यवह ಹವ್ಯವಹ** (पुं०) ಅಗ್ನಿ. वहति — वह (प्रापणे) "अच्" (३-१-१३४)। हव्यस्य वहः। "विकचकिंशुकसंहतिरुच्चकैरुदवहद्धव्यवहश्रियम्" माघ० ६-२१।

**हव्यवाट्(ड्) ಹವ್ಯವಾಟ್(ಡ್)** (पुं०) ಅಗ್ನಿ.

**हव्यवाह ಹವ್ಯವಾಹ** (पुं०) ಅಗ್ನಿ. हव्यं वहति — वह (प्रापणे) "अण्" (३-२-१)। "हव्यवाह त्वयासादि दुर्दशेयं दशा कुतः" कुमा० १०-५।

**हव्यवाहन ಹವ್ಯವಾಹನ** (पुं०) ಅಗ್ನಿ. हव्यं वाहयति— वह (प्रापणे) + णिच् "ल्युः" (३-१-१३४)। "न ह्येतत् कारणं ब्रह्मन्नल्पं सम्प्रतिभाति मे। यद्ददाह सुसंक्रुद्धः खाण्डवं हव्यवाहनः" भा० आदि०।

**हव्याश ಹವ್ಯಾಶ** (ಪುಂ) ಅಗ್ನಿ. हव्यमश्नाति — अश (भोजने) "अण्" (३-२-१)।

**हव्याशन ಹವ್ಯಾಶನ** (ಪುಂ) ಅಗ್ನಿ. हव्यमशनमस्य।

**हस ಹಸ** (ಪುಂ) 1. ಮನಸ್ಸಿನ ಉಲ್ಲಾಸ, ನಗು, ನಗೆ. हसे (हसने) वा "अप्" (३-३-६२)। पक्षे "घञ्" (३-३-१८)। हासः ಹಾಸಃ. 2. ಹಾಸ್ಯರಸ. "अथो हसः। हासो हास्यं च" अम०। 3. ವಲಿವು, ವಿನೋದ.

**हसत् ಹಸತ್** (वि०) 1. ನಗುತ್ತಿರುವ. 2. ಹಾಸ್ಯಮಾಡುತ್ತಿರುವ. हसे (हसने) "शतृ" (३-२-१२४)। "लोलहेतिरसनाशतप्रभामण्डलेन लसता हसन्निव" माघ० १४-२५। स्त्रियां "ङीप्" (४-१-६)। -न्ती -ನ್ತೀ. "अस्तीहोज्जयिनी नाम नगरी भूषणं भुवः। हसन्तीव सुधाधौतैः प्रासादैरमरावतीम्" कथास०।

**हसन ಹಸನ** (पुंन०) 1. ನಗುವುದು. 2. ಹಾಸ್ಯಮಾಡುವುದು. हसे (हसने) "ल्युट्" (३-३-११५)। "हसनं न द्वयोर्हसिऽङ्गारधान्यां तु योषिति" मेदि०।

**हसनी ಹಸನೀ** (स्त्री०) 1. ಒಲೆ. 2. ಅಗ್ನಿಷ್ಟಿಕೆ. हसे (हसने) "ल्युट्" (३-३-११३)। "ङीप्" (४-१-१५)।

**हसन्ती ಹಸನ್ತೀ** (स्त्री०) 1. ಒಲೆ. 2. ಅಗ್ನಿಷ್ಟಿಕೆ. हसे (हसने) "शतृ" (३-२-१२४)। नुम् (७-१-८१)। "ङीप्" (४-१-१५)। 3. ಮಲ್ಲಿಗೆಯ ಒಂದು ಭೇದ. 4. ಶಾಕಿನಿ. "हसन्त्यङ्गारधान्यां च मल्लिकाशाकिनीभिदोः" मेदि०।

**हसित ಹಸಿತ** (न०) 1. ನಗು, ನಗೆ. हसे (हसने) भावे "क्तः" (३-३-११४)। "हावहारि हसितं वचनानां कौशलं दृशि विकारविशेषाः" माघ० १०-१३। 2. ಅಟ್ಟಹಾಸ, ಶಬ್ದವಾಗುವಂತೆ ನಗುವುದು. "कुपिताकृति प्रथममेव हसितमशनैरसूचयत्" माघ० १५-५२। 3. ಹಾಸ್ಯಮಾಡುವುದು, ಪರಿಹಾಸ, ಗೇಲಿಮಾಡುವುದು. "कीर्तितानि हसितेऽपि तानि यं व्रीडयन्ति चरितानि मानिनाम्" किरा० १३-४७। (वि०) 4. ವಿಕಾಸ ಹೊಂದಿದ, ಅರಳಿದ. 5. ಹಾಸ್ಯಮಾಡಿದ.

**हस्त ಹಸ್ತ** (ಪುಂ) 1. ಹಸ್ತ, ಕೈ, ಕರ. हसति — हसे (हसने) "तन्" (उ० ३-८६)। "हस्तौ विस्तारयन्निम्ये बिम्बदर्पपथस्थवाक्। सूचयन् काकुमाकूतैर्लोभस्तत्र व्यलोकि तैः" नैष० १७-२४। 2. ಒಂದು ಮೊಳ, ಮೊಳಕೈಯಿಂದ ಹಿಡಿದು ಚೆನ್ನಾಗಿ ಬಿಚ್ಚಿ ನೀಡಿದ ಹೆಬ್ಬೆರಳಿನ ತುದಿಯವರೆಗಿನ ಅಳತೆ. "प्रकोष्ठे विस्तृतकरे हस्तः" अम०। 3. ಆನೆಯ ಸೊಂಡಿಲು. "कीर्णं शनैरनुकपोलमनेकपानां हस्तैर्विगाढमदतापरुजः शमाय" माघ० ५-३५। 4. ಕೇಶಸಮೂಹ, ತಲೆಯ ಕೂದಲಿನ ಸಮೂಹ. "पाशः पक्षश्च हस्तश्च कलापार्थाः कचात्परे" अम०। 5. ಕೈಬರವಣಿಗೆ, ಹಸ್ತಾಕ್ಷರ, ಸಹಿ. "धनीवोपगतं दद्यात् स्वहस्तपरिचिह्नितम्" याज्ञ०। 6. ಸಾಹಾಯ್ಯ, ಒತ್ತಾಸೆ. "वात्या खेदं कृशाङ्ग्याः सुचिरमवयवैर्दत्तहस्ता करोति" वेणी० २-२२। "हस्तः करे करिकरे सप्रकोष्ठकरेऽपि च। ऋक्षे केशात् परे व्राते" मेदि०। (पुंस्त्री०) -स्तः, -स्ता -ಸ್ತಃ, -ಸ್ತಾ. ಹಸ್ತನಕ್ಷತ್ರ.

**हस्तकमल ಹಸ್ತಕಮಲ** (न०) ಕಮಲದಂತೆ ಸುಂದರವೂ ಕೋಮಲವೂ ಆದ ಕೈ. हस्तः कमलमिव।

**हस्तकौशल ಹಸ್ತಕೌಶಲ** (न०) ಹಸ್ತದ ನೈಪುಣ್ಯ, ಕೈಚಳಕ, -ಚಾತುರ್ಯ, -ಜಾಣ್ಮೆ. हस्तस्य कौशलम्।

**हस्तक्रिया ಹಸ್ತಕ್ರಿಯಾ** (स्त्री०) ಕೈಕೆಲಸ, ಕೈಗಾರಿಕೆ. हस्तस्य क्रिया।

**हस्तगत ಹಸ್ತಗತ** (वि०) ಕೈಸೇರಿದ, ಕೈಗೆಬಂದ, ಕೈಗೂಡಿದ. हस्तं गतः। -गामिन् -ಗಾಮಿನ್. "अथ तस्य विवाहकौतुकं ललितं बिभ्रत एव पार्थिवः। वसुधामपि हस्तगामिनीमकरोदिन्दुमतीमिवापराम्" रघु० ८-१।

**हस्ततल ಹಸ್ತತಲ** (न०) 1. ಹಸ್ತದ ಒಳಭಾಗ, ಮಣಿಕಟ್ಟಿಗೂ ಬೆರಳುಗಳಿಗೂ ಮಧ್ಯದ ಕೈಯ ಒಳಭಾಗ, ಅಂಗೈ. हस्तस्य तलम्। 2. ಆನೆಯ ಸೊಂಡಿಲಿನ ತುದಿಯ ಭಾಗ, -ಕೊನೆಯ ಭಾಗ.

**हस्तताल ಹಸ್ತತಾಲ** (ಪುಂ) ಕೈತಟ್ಟುವುದು, ಚಪ್ಪಾಳೆ ಹೊಡೆಯುವುದು. हस्तयोः तालः। "जयतु ललितवृत्ति शिक्षितो वल्लवीनां शिथिलवलयशिञ्जाशीतलैर्हस्ततालैः" गो० वि०।

**हस्ततुला ಹಸ್ತತುಲಾ** (स्त्री०) ಕೈ ಅಳತೆ, ಕೈತೂಕ, ಕೈಯಿಂದಲೇ ತೂಕಮಾಡುವುದು. "हस्ततुलयापि निपुणाः पलप्रमाणं विजानन्ति" पञ्चतं० २-८६।

**हस्तपाद ಹಸ್ತಪಾದ** (न०) ಕೈ ಮತ್ತು ಕಾಲುಗಳು. हस्तयोश्च पादयोश्च समाहारः—एकवत्त्वम् (२-४-१७)। "न मे हस्तपादं प्रसरति" शाकु० ४।

**हस्तपुच्छ ಹಸ್ತಪುಚ್ಛ** (न०) ಮಣಿಕಟ್ಟಿನಿಂದ ಹಿಡಿದು ಕೈಗಳ ಕೆಳಭಾಗಗಳು. हस्तयोः पुच्छम्।

**हस्तबिम्ब ಹಸ್ತಬಿಂಬ** (ನಂ) ಸ್ಥಾಸಕ, ಮೈಗೆ ಗಂಧ ಮೊದಲಾದುವುಗಳ ಲೇಪನ. हस्तस्य बिम्बं यत्र ।

**हस्तवारण ಹಸ್ತವಾರಣ** (ನಂ) ಕೊಲೆಮಾಡಲು ಬಂದವನನ್ನು ತಡೆದು ರಕ್ಷಿಸುವುದು. हस्तेन हस्तस्य वा वारणम् ।

**हस्तलाघव ಹಸ್ತಲಾಘವ** (ನಂ) 1. ಕೈಚಳಕ, ಕೈಕಾರ್ಯದಲ್ಲಿ ನಿಪುಣತೆ. हस्तस्य लाघवम् । 2. ಗಾರುಡಿ, ಇಂದ್ರಜಾಲ.

**हस्तसंवाहन ಹಸ್ತಸಂವಾಹನ** (ನಂ) ಕೈಗಳಿಂದ ತೀಡುವುದು, ನೀವುವುದು, ಮರ್ದನಮಾಡುವುದು. हस्तेन संवाहनम् । "संभोगान्ते मम समुचितो हस्तसंवाहनानाम्" मेघ० २-३३ ।

**हस्तसिद्धि ಹಸ್ತಸಿದ್ಧಿ** (स्त्री०) ಕೈಕಾರ್ಯಗಳಿಂದ ಬರುವ ಕೂಲಿ. हस्तस्य सिद्धिः ।

**हस्तसूत्र ಹಸ್ತಸೂತ್ರ** (ನಂ) ಉಪನಯನ ವಿವಾಹ ಮೊದಲಾದ ಶುಭಕರ್ಮಗಳಲ್ಲಿ ಕೈಗೆ ಕಟ್ಟುವ ಕಂಕಣ. हस्तस्य सूत्रम् । "बबन्ध चास्राकुलदृष्टिरस्याः स्थानान्तरे कल्पितसंनिवेशम् । धात्र्यङ्गुलीभिः प्रतिसार्यमाणमूर्णामयं कौतुकहस्तसूत्रम्" कुमा० ७-२५ ।

**हस्ता ಹಸ್ತಾ** (स्त्री०) ಅಶ್ವಿನೀ ಮೊದಲಾದ ಇಪ್ಪತ್ತೇಳು ನಕ್ಷತ್ರಗಳಲ್ಲಿ ಹದಿಮೂರನೆಯ ನಕ್ಷತ್ರ. ಇದು ಹಸ್ತದ ಆಕೃತಿಯಲ್ಲಿ ಐದು ನಕ್ಷತ್ರಗಳಿಂದ ಕೂಡಿರುವುದು. ಈ ನಕ್ಷತ್ರದಲ್ಲಿ ಜನಿಸಿದವನು ದಾನಶೀಲನೂ ಯಶಸ್ವಿಯೂ ಉದಾರವಾದ ಮನಸ್ಸುಳ್ಳವನೂ ದೇವಬ್ರಾಹ್ಮಣರ ಪೂಜಾನಿರತನೂ ನೀತಿಜ್ಞನೂ ಆಗಿರುವನು. ಸಕಲ ಸಂಪತ್ತೂ ಇವನಿಗೆ ಹಸ್ತಗತವಾಗಿರುವುದು. "दाता यशस्वी सुतरां मनस्वी भूदेवदेवार्चनकृन्नयज्ञः । प्रसूतिकाले किल यस्य हस्ता हस्तस्थिता तस्य समस्तसम्पत्" ॥

**हस्तामलक ಹಸ್ತಾಮಲಕ** (ನಂ) ಅಂಗೈಯಲ್ಲಿರುವ ನೆಲ್ಲಿಕಾಯಿ. हस्तस्थितमामलकम् । ಒಂದು ವಸ್ತುವನ್ನು ಅಥವಾ ವಿಷಯವನ್ನು ಸಂಪೂರ್ಣವಾಗಿ ನೋಡಲೂ ಮತ್ತು ತಿಳಿಯಲೂ ಸಾಧ್ಯವೆಂಬ ಅರ್ಥದಲ್ಲಿ ಈ ಪದ ಪ್ರಯೋಗ. "करतलामलकफलवदखिलं जगदवलोकयताम् ।

**हस्तावाप ಹಸ್ತಾವಾಪ** (ಪುಂ) ಬಿಲ್ಲಿನ ಹೆದೆಯು ಕೈಯನ್ನು ಕೊರೆಯದಂತೆ ಹಾಕಿಕೊಳ್ಳುವ ಚರ್ಮದ ಚೀಲ. "भर्तः एतद्धस्तावापसहितं शरासनम्" शाकु० ६ ।

**हस्ताहस्ति ಹಸ್ತಾಹಸ್ತಿ** (अव्य०) ಕೈಗಳಿಂದ ಪರಸ್ಪರ ಹೊಡೆದು ನಡೆದ ಯುದ್ಧ. हस्तेन हस्तेन परस्परं प्रहृत्य प्रवृत्तं युद्धम् । "इच्" (५-४-१२७) ।

**हस्तिकक्ष ಹಸ್ತಿಕಕ್ಷ** (ಪುಂ) 1. ಸಿಂಹ. 2. ವ್ಯಾಘ್ರ, ಹುಲಿ.

**हस्तिकर्ण ಹಸ್ತಿಕರ್ಣ** (ಪುಂ) 1. ಹರಳುಗಿಡ. 2. ಗಣದೇವತೆ. 3. ಒಂದು ಜಾತಿಯ ಪಲಾಶವೃಕ್ಷ. "हस्तिकर्णस्त्वोरुबके पलाशगणभेदयोः" मेदि० ।

**हस्तिकर्णक ಹಸ್ತಿಕರ್ಣಕ** (ಪುಂ) ಮುತ್ತುಗದ ಒಂದು ಭೇದ. हस्तिनः कर्ण इव पर्णमस्य । "कप्" ।

**हस्तिगिरि ಹಸ್ತಿಗಿರಿ** (ಪುಂ) 1. ಕಾಂಚೀಪುರ. हस्तिप्रधानो गिरिर्यत्र 2. ಕರಿಗಿರಿ. हस्तिप्रधानो गिरिः । **–शैलः –ಶೈಲಃ.** "तस्यास्तीरे सरसिजभुवस्सौम्यवैतानवेदिर्दिव्यं कुर्वन् द्रमिडविषयं दृश्यते हस्तिशैलः" हंस० १-३१ ।

**हस्तिघोषा ಹಸ್ತಿಘೋಷಾ** (स्त्री०) ಸಬ್ಬಸಿಗೆ. हस्तीव बृहती घोषा ।

**हस्तिघ्न ಹಸ್ತಿಘ್ನ** (ಪುಂ) ಆನೆಯನ್ನು ಕೊಲ್ಲುವ ಮನುಷ್ಯ, ಆನೆಯನ್ನು ಕೊಲ್ಲಲು ಶಕ್ತಿಯುಳ್ಳ ಮನುಷ್ಯ. हस्तिनं हन्तुं शक्तः—हस्तिन्+हन (हिंसागत्योः) शक्तौ "टक्" (३-२-५४) । हस्तिघ्नो ना सि० कौ० ।

**हस्तिदन्त ಹಸ್ತಿದಂತ** (ಪುಂ) 1. ಆನೆಯ ಕೊಂಬು. हस्तिनो दन्तः । 2. ಬಟ್ಟೆ ಅಂಗಿ ಮೊದಲಾದುವನ್ನು ತಗಲುಹಾಕಲು ಗೋಡೆಯಲ್ಲಿ ಹಾಕಿರುವ ಮರದ ಗೂಟ. (ನಂ) 3. ದಂತ.

**हस्तिन् ಹಸ್ತಿನ್** (ಪುಂ) ಗಜ, ಆನೆ. हस्तः शुण्डाऽस्यास्ति "इनिः" (५-२-१३३) । "निर्भीकत्वादाहवेऽनाहतेच्छो हृष्यन् हस्तीहृष्टरोमेव रेजे" माघ० १८-४१ । (1) ऐरावतः (2) पुण्डरीकः (3) वामनः (4) कुमुदः (5) अञ्जनः (6) पुष्पदन्तः (7) सार्वभौमः ಮತ್ತು (8) सुप्रतीकः ಈ ಎಂಟು ದಿಗ್ಗಜಗಳ ವಂಶಗಳಲ್ಲಿ ಹುಟ್ಟಿದ ಗಜಗಳು ಎಂಟು ವಿಧಗಳಾಗಿರುವುವು.

**हस्तिनख ಹಸ್ತಿನಖ** (ಪುಂ) ನಗರದ ಮಹಾದ್ವಾರ ಅಥವಾ ಕೋಟೆಬಾಗಿಲಲ್ಲಿ ಗಂಟುಮೂಟೆಗಳನ್ನು ಇಳಿಸಲು ಹಾಕಿರುವ ಮಣ್ಣಿನ ದಿಣ್ಣೆ. हस्तिनो नख इव । "कूटं पूर्द्वारि यद्धस्तिनखस्तस्मिन्" अम० । "शनैरनीयन्त रयात्पतन्तो रथाः क्षितिं हस्तिनखादखेदैः । सयत्नसूतायतरश्मिभुग्नग्रीवाग्रसंसक्तयुगैस्तुरङ्गैः" माघ० ३-६८ ।

**हस्तिनपुर ಹಸ್ತಿನಪುರ** (ನಂ) ಹಸ್ತಿನಾಪುರ.

**हस्तिनापुर ಹಸ್ತಿನಾಪುರ** (ನಂ) ಚಂದ್ರವಂಶದ ರಾಜನಾಗಿದ್ದ ಹಸ್ತಿಯಿಂದ ನಿರ್ಮಿತವಾದ ನಗರ. ಇದು ನವದೆಹಲಿಗೆ ಉತ್ತರ–ಪೂರ್ವ (ಈಶಾನ್ಯ) ದಿಕ್ಕಿನಲ್ಲಿ ನಿರ್ಮಿಸಲ್ಪಟ್ಟಿದೆ.

**हस्तिनी ಹಸ್ತಿನೀ** (स्त्री०) 1. ಹೆಣ್ಣು ಆನೆ. हस्तिनः स्त्री। हस्तः शुण्डाऽस्त्यस्याः "इनिः" (५-२-११५)। "ङीप्" (४-१-५)। 2. ನಾಲ್ಕು ಜಾತಿಯ ಹೆಂಗಸರಲ್ಲೊಬ್ಬಳು. चित्रिणी हस्तिनी शङ्खिनी ಮತ್ತು पद्मिनी ಎಂದು ಸ್ತ್ರೀಯರಲ್ಲಿ ನಾಲ್ಕು ವಿಧ. "स्थूलाधरा स्थूलनितम्बभागा स्थूलाङ्गुली स्थूलकुचा सुशीला। कामोत्सुका गाढरतिप्रिया च नितम्बखर्वा खलु हस्तिनी स्यात्।" रतिम०।

**हस्तिनीपुर ಹಸ್ತಿನೀಪುರ** (न०) ಹಸ್ತಿನಾಪುರ.

**हस्तिप ಹಸ್ತಿಪ** (पुं०) ಮಾವಟಿಗ, ಆನೆಯ ಸವಾರ. हस्तिनं पाति — पा (रक्षणे) "कः" (३-२-३)। स्वार्थे "कन्" (५-४-५)। हस्तिपकः — ಹಸ್ತಿಪಕಃ. "जज्ञे जनैर्मुकुलिताक्षमनाददाने संरब्धहस्तिपकनिष्ठुरचोदनाभिः" माघ० ५-४९।

**हस्तिपर्णी ಹಸ್ತಿಪರ್ಣೀ** (स्त्री०) ಕುರಟಿಗೆ ಗಿಡ.

**हस्तिमद ಹಸ್ತಿಮದ** (पुं०) ಆನೆಯ ಮದೋದಕ, ಆನೆಗೆ ಮದವೇರಿದಾಗ ಗಂಡಸ್ಥಲದಿಂದ ಸ್ರವಿಸುವ ಮದಜಲ. हस्तिनो मदः।

**हस्तिमल्ल ಹಸ್ತಿಮಲ್ಲ** (पुं०) 1. ಐರಾವತ, ಇಂದ್ರನ ಗಜ. हस्तिषु मल्लः। 2. ಗಣಪತಿ, ವಿನಾಯಕ.

**हस्तिवाह ಹಸ್ತಿವಾಹ** (पुं०) 1. ಅಂಕುಶ, ಆನೆಯನ್ನು ನಡೆಸಲು ಉಪಯೋಗಿಸುವ ಮುಳ್ಳುಕೋಲು. हस्तिनं वाहयति — वह (प्रापणे)+णिच् "अण्" (३-२-१)। 2. ಮಾವಟಿಗ.

**हस्तिशाला ಹಸ್ತಿಶಾಲಾ** (स्त्री०) ಆನೆಯ ಕರವಟ್ಟಿಗೆ. हस्तिनां शाला।

**हस्तिस्नान ಹಸ್ತಿಸ್ನಾನ** (न०) ಗಜಸ್ನಾನ. हस्तिनः स्नानम्। ನಿಷ್ಫಲವಾದ ಕಾರ್ಯಕ್ಕೆ ಗಜಸ್ನಾನದ ಸಾಮ್ಯ ಕೊಡುವುದುಂಟು. "अवशेन्द्रियचित्तानां हस्तिस्नानमिव क्रिया" हितो०।

**हस्त्य ಹಸ್ತ್ಯ** (वि०) 1. ಕೈಯಿಂದ ಮಾಡಲ್ಪಡುವ. हस्तेन कार्यम्। 2. ಕೈಯಿಂದ ಕೊಡಲ್ಪಡುವ. हस्तेन दीयते — हस्त "यत्" (५-१-९८)।

**हस्त्यध्यक्ष ಹಸ್ತ್ಯಧ್ಯಕ್ಷ** (पुं०) ಗಜಾಧ್ಯಕ್ಷ, ಆನೆಗಳ ಯೋಗಕ್ಷೇಮವನ್ನು ನೋಡಿಕೊಳ್ಳುವ ಅಧಿಕಾರಿ.

**हस्त्यायुर्वेद ಹಸ್ತ್ಯಾಯುರ್ವೇದ** (पुं०) ಆನೆಗಳ ಚಿಕಿತ್ಸೆಯನ್ನು ತಿಳಿಸುವ ಆಯುರ್ವೇದ. हस्तिनामायुर्वेदः।

**हस्त्यारोह ಹಸ್ತ್ಯಾರೋಹ** (पुं०) ಮಾವಟಿಗ, ಆನೆಯ ಸವಾರ. हस्तिनमारोहति—आ + रुह (बीजजन्मादौ) "अण्" (३-२-१)।

**हस्र ಹಸ್ರ** (वि०) ಮೂರ್ಖ, ಮೂಢ, ವಿವೇಕವಿಲ್ಲದವನು. हसति निरर्थकम्—हसे (हसने) "रक्" (उ० २-१३)। हस्रो मूर्खः सि० कौ०।

**हहल ಹಹಲ** (न०) ಹಲಾಹಲವೆಂಬ ವಿಷದ ಒಂದು ಭೇದ.

**हहा ಹಹಾ** (पुं०) ಹಹಾ ಎಂಬ ಒಬ್ಬ ಗಂಧರ್ವ.

**हा ಹಾ** (अव्य०) 1. ಶೋಕ, ದುಃಖ. 2. ಪೀಡೆ, ನೋವು. 3. ವಿಷಾದ. "हा विषादशुगार्तिषु" अम०। "हा शुग्दुःखविषादेषु" हेम०। 4. ನಿಂದೆ.

**हाटक ಹಾಟಕ** (न०) 1. ಸ್ವರ್ಣ, ಚಿನ್ನ, ಬಂಗಾರ. हटति शोभते — हट (दीप्तौ) "ण्वुल्" (३-१-१३३)। "नवहाटकेष्टकचितं ददर्श स क्षितिपस्य पस्त्यमथ तत्र संसदि" माघ० १३-६३। (पुं०) 2. ದತ್ತೂರಿ ಗಿಡ. (वि०) 3. ಸ್ವರ್ಣಮಯವಾದ, ಸುವರ್ಣದಿಂದ ನಿರ್ಮಿತವಾದ. "काकुत्स्थोऽप्यथ रक्षसामधिपतेः वाग्वागुरावेष्टिते कृत्वा हाटकवाटकेषहरिणे शार्दूलविक्रीडितम्" चं० रा०।

**हाटकमय ಹಾಟಕಮಯ** (वि०) ಸುವರ್ಣಮಯವಾದ. हाटक प्राचुर्ये "मयट्" (५-४-२१)।

**हाटकगिरि ಹಾಟಕಗಿರಿ** (पुं०) ಸುಮೇರು ಪರ್ವತ. –पर्वतः–ಪರ್ವತಃ, –शैलः–ಶೈಲಃ.

**हाटकेश्वर ಹಾಟಕೇಶ್ವರ** (पुं०) ಗೋದಾವರಿ ತೀರದಲ್ಲಿರುವ ಪರಮೇಶ್ವರ.

**हातव्य ಹಾತವ್ಯ** (वि०) 1. ತ್ಯಜಿಸಲ್ಪಡುವ, ತೊರೆದು ಬಿಡಲ್ಪಡುವ. ओ हाक् (त्यागे) "तव्यः" (३-१-९६)। 2. ತ್ಯಜಿಸಬೇಕಾದ. 3. ತ್ಯಜಿಸಬಹುದಾದ. "हातव्योऽयमसार एव विरसः संसार इत्यादिकं सर्वस्यैव हि वाचि चेतसि पुनः कस्यापि पुण्यात्मनः"॥ 4. ಹೋಗಬೇಕಾದ. 5. ಪಡೆಯಬೇಕಾದ. "अनीयर्"(३-१-९६)। हानीयः ಹಾನೀಯಃ.

**हात्र ಹಾತ್ರ** (पुं०) 1. ರಾಕ್ಷಸ. (न०) 2. ವೇತನ, ಕೂಲಿ. ओ हाक् (त्यागे) "ष्ट्रन्" (उ० ४-१५८)। 3. ಮರಣ, ನಿಧನ. हन (हिंसागत्योः) "ष्ट्रन्" वृद्धिश्च (उ० ४-१५१)। 4. ಕೊಲ್ಲುವುದು.

**हान ಹಾನ** (न०) 1. ತ್ಯಜಿಸುವುದು, ತೊರೆದುಬಿಡುವುದು. ओ हाक् (त्यागे) "क्तः" (३-३-११४)। 2. ಬಿಡು

ಗಡೆ, ವಿಮೋಚನೆ. 3. ಹೋಗುವುದು. 4. ಹೊಂದುವುದು, ಪಡೆಯುವುದು. ओ हाङ् (गतौ) "क्तः"।

**हानि ಹಾನಿ** (स्त्री०) 1. ತೊರೆದುಬಿಡುವುದು, ಬಿಟ್ಟುಬಿಡುವುದು. ओ हाक् (त्यागे) "निः" (उ० ४-५१)। 2. ನಾಶ, ವ್ಯರ್ಥ, ಹಾಳು. "मामक्षमं मण्डनकालहानेर्वेत्तीव बिम्बाधरबद्धतृष्णम्" रघु० १३-१६। 3. ಕೇಡು, ನಷ್ಟ, ಅಪಾಯ. 4. ಕೊರತೆ, ನ್ಯೂನತೆ, ಕೊರೆ. "अत्रामृतं सुरैः पीत्वा निहितं निहतारिभिः। अतः सोमस्य हानिश्च वृद्धिश्चैव प्रदृश्यते" भा० उद्योग० ९९-४।

**हानु ಹಾನು** (पुं०) ದಂತ, ಹಲ್ಲು. "दन्ताः खरवक्त्रकुरो जम्भो हानुर्द्विजस्तथा" त्रिकाण्ड०।

**हान्त्र ಹಾಂತ್ರ** (न०) ಮರಣ, ನಿಧನ. हन (हिंसागत्योः) "ष्ट्रन्" (उ० ४-१५९)।

**हापन ಹಾಪನ** (न०) ಓಡಿಸುವುದು, ಅಟ್ಟಿಸುವುದು, ಹೊರಗೆ ಹೊರಡಿಸುವುದು. ओ हाक् (त्यागे) + णिच् "ल्युट्" (३-३-११५)।

**हापुत्रिका ಹಾಪುತ್ರಿಕಾ** (स्त्री०) ಕಾಡಿಗೆಸೊಗಸಿನ ಹಕ್ಕಿ, ಕಂಬೂತದ ಹಕ್ಕಿ. "हापुत्रिका खञ्जनिका तुलिकास्फोटिके समे" त्रिकाण्ड०।

**हाफिका ಹಾಫಿಕಾ** (स्त्री०) ಆಕಳಿಕೆ.

**हायन ಹಾಯನ** (पुंन०) 1. ಸಂವತ್ಸರ, ವರ್ಷ. जहाति भावान्— ओ हाक् (त्यागे) "ण्युट्" (३-१-१४८)। "त्रस्तैकहायनकुरङ्गविलोलदृष्टेस्तस्याः परिस्फुरितगर्भभरालसायाः" उ० रा० ३-२८। (पुं०) 2. ಅಗ್ನಿಯ ಶಿಖೆ, ಅಗ್ನಿಯ ಜ್ವಾಲೆ. 3. ಒಂದು ವಿಧ ಧಾನ್ಯ (ಬತ್ತ). "हायनो न स्त्रियां वर्षे पुंस्यर्चिर्व्रीहिभेदयोः" मेदि०।

**हार ಹಾರ** (पुं०) 1. ಸರ, ಮಾಲೆ. ह्रियते मनोऽनेन— हृञ् (हरणे) "घञ्" (३-३-१९)। "आहतं कुचतटेन तरुण्याः साधु सोढममुनेति पपात। त्रुट्यतः प्रियतमोरसि हारात् पुष्पवृष्टिरिव मौक्तिकवृष्टिः" माघ० १०-७४। 2. ಯುದ್ಧ. ह्रियन्ते प्राणा यत्र— हृञ् (हरणे) "घञ्" (३-३-१२१)। "हारो मुक्तावली युधि" मेदि०। 3. ತಪ್ಪಿಸುವುದು, ನಿವಾರಣೆ ಮಾಡುವುದು. "हंस्युन्मार्गान् हिंसया वर्तमानान् जन्मैतत्ते भारहाराय भूमेः" भाग० १०-६३-२७। (वि०) 4. ಸಾಗಿಸುವವನು, ಒಯ್ಯುವವನು. 5. ನಾಶಪಡಿಸುವವನು, ನಿವಾರಿಸುವವನು. हरति— हृञ् (हरणे) "अच्" (३-१-१३४)। स्वार्थे "अण्" (५-४-३८)। 6. ಹರಿಯ ಸಂಬಂಧವಾದ. हरेरिदम्।

**हारक ಹಾರಕ** (पुं०) 1. ಕಪಟಿ, ವಂಚಕ, ಮೋಸಗಾರ. हरति— हृञ् (हरणे) "ण्वुल्" (३-१-१३३)। 2. ಚೋರ, ಕಳ್ಳ, ತಸ್ಕರ. 3. ಭಾಜಕ, ಶೇಷವಿಲ್ಲದಂತೆ ಮತ್ತೊಂದು ಸಂಖ್ಯೆಯನ್ನು ಭಾಗ ಮಾಡುವ ಸಂಖ್ಯೆ. 4. ಗದ್ಯದ ಒಂದು ಭೇದ. "हारकः कितवे चौरे गद्यविज्ञानभेदयोः" मेदि०। (वि०) 5. ಅಪಹರಿಸುವವನು, ಕದಿಯುವವನು. 6. ಒಯ್ಯುವವನು, ಸಾಗಿಸುವವನು.

**हारगुटिका ಹಾರಗುಟಿಕಾ** (स्त्री०) ಮುತ್ತು, ಮಣಿ, ರತ್ನ. "निर्धौतहारगुटिकाविशदं हिमाम्भः" रघु० ५-७०।

**हारयष्टि ಹಾರಯಷ್ಟಿ** (स्त्री०) ಕಂಠಾಭರಣ, ಮುಕ್ತಾಹಾರ. हारः यष्टिरिव।

**हारहारा ಹಾರಹಾರಾ** (स्त्री०) ಹೊಂಬಣ್ಣದ ದ್ರಾಕ್ಷಿ.

**हारहूरा ಹಾರಹೂರಾ** (स्त्री०) ದ್ರಾಕ್ಷಿ. "मृद्वीका हारहूरा च गोस्तनी चापि कीर्तिता" भावप्र०।

**हारावली ಹಾರಾವಳೀ** (स्त्री०) 1. ಮುತ್ತಿನ ಹಾರ, ಮುಕ್ತಾಹಾರದ ಸಮೂಹ. हारस्य आवली। "तरुणीस्तन एव दीप्यते मणिहारावलिरामणीयकम्" नैष० २-४४। 2. ಪುರುಷೋತ್ತಮ ಪಂಡಿತ ವಿರಚಿತ ಒಂದು ನಿಘಂಟು. "मुक्तामयातिमधुरा मसृणावदातच्छायाधिरागतरलामलसद्गुणश्रीः। साध्वी सतां भजतु कण्ठमसौ प्रियेव हारावली विरचिता पुरुषोत्तमेन" हारा०।

**हारि ಹಾರಿ** (स्त्री०) 1. ವರ್ತಕರ ಅಥವಾ ಪ್ರಯಾಣಿಕರ ತಂಡ. 2. ಜೂಜಿನಲ್ಲಿ ಪರಾಜಯ. हृञ् (हरणे) "इञ्" बाहु०। (वि०) 3. ಮನೋಹರವಾದ. 4. ಪ್ರಿಯವಾದ. 5. ಸಂತೋಷವುಂಟುಮಾಡುವ. "हारिः पथिकसन्तानद्यूतादिभङ्गयोः स्त्रियाम्" मेदि०।

**हारिकण्ठ ಹಾರಿಕಂಠ** (पुं०) 1. ಕೋಗಿಲೆ. हारी मनोहरः कण्ठोऽस्य। (वि०) 2. ಮುಕ್ತಾಹಾರದಿಂದ ಕೂಡಿದ ಕಂಠ, ಹಾರವನ್ನು ಧರಿಸಿರುವ ಕಂಠ. हारी हारयुक्तः कण्ठः। "हारिकण्ठः पिके पुंसि हारान्वितगले त्रिषु" मेदि०।

**हारिण ಹಾರಿಣ** (न०) 1. ಜಿಂಕೆಯ ಮಾಂಸ. (वि०) 2. ಜಿಂಕೆಯ ಸಂಬಂಧವಾದ. हरिणस्येदम् "अण्" (४-३-१२०)।

**हारिणिक ಹಾರಿಣಿಕ** (पुं०) ವ್ಯಾಧ, ಬೇಟೆಗಾರ. हरिणं हन्ति — हरिण "ठक्" (४-४-३५)।

**हारित ಹಾರಿತ** (पुं०) 1. ಪಾರಿವಾಳ ಪಕ್ಷಿಯ ಒಂದು ಭೇದ. 2. ಹಸಿರು ಬಣ್ಣ.

**हारितक ಹಾರಿತಕ** (नं०) ತರಕಾರಿ, ಕಾಯಿಪಲ್ಯ. हरितकमेव स्वार्थे "अण्"।

**हारिद्र ಹಾರಿದ್ರ** (पुं०) 1. ಕದಂಬ ವೃಕ್ಷ, ಈಚಲು ಮರ. (वि०) 2. ಅರಿಶಿನದಿಂದ ಬಣ್ಣಕಟ್ಟಲ್ಪಟ್ಟ (ವಸ್ತ್ರ). हरिद्रया रक्तम् "अञ्" (वा० ४-२-२)। "हारिद्रं हरिद्रारञ्जिते त्रिषु। ना नीपवृक्षे" मेदि०।

**हारिन् ಹಾರಿನ್** (वि०) 1. ಹಾರದಿಂದ ಕೂಡಿದವನು, ಹಾರ ಹಾಕಿಕೊಂಡಿರುವವನು. हारोऽस्त्यस्य—"इनिः" (५-२-११५)। 2. ಒಯ್ಯುವವನು, ಸಾಗಿಸುವವನು. 3. ಅಪಹರಿಸುವವನು. हरति—हृञ् (हरणे) "णिनिः" (३-१-१३४)। 4. ಮನೋಹರವಾದ, ಮನಸ್ಸನ್ನು ಆಕರ್ಷಿಸುವ. "तवास्मि गीतरागेण हारिणा प्रसभं हृतः। एष राजेव दुष्यन्तः सारङ्गेणातिरंहसा" शाकु० १-५।

**हारी ಹಾರೀ** (स्त्री०) ಮುತ್ತು.

**हारीत ಹಾರೀತ** (पुं०) 1. ಒಂದು ಜಾತಿಯ ಪಕ್ಷಿ, ಪಾರಿವಾಳದ ಹಕ್ಕಿ. "मारीचोद्भ्रान्तहारीता मलयाद्रेरुपत्यका" रघु० ४-४६। 2. ಧರ್ಮಶಾಸ್ತ್ರ ಪ್ರವರ್ತಕರಾದ ಒಬ್ಬ ಮುನಿ, ಒಬ್ಬ ಸ್ಮೃತಿಕಾರರು. 3. ಕೈತವ, ಕಪಟ. 4. ಆಯುರ್ವೇದ ಗ್ರಂಥವನ್ನು ರಚಿಸಿದ ಒಬ್ಬ ಋಷಿ. "हारीतो मुनिभेदे स्यात्कैतवे विहगान्तरे" हेम०। स्वार्थे "कन्"। **हारीतकः ಹಾರೀತಕಃ.**

**हार्द ಹಾರ್ದ** (नं०) 1. ಪ್ರೇಮ, ಸ್ನೇಹ. हृदयस्य भावः कर्म वा — हृदय "अण्" (५-१-१३०)। हृदयस्य हृदादेशः (६-३-५०)। "अमर्षशून्येन जनस्य जन्तुना न जातहार्देन न विद्विषादरः" किरा० १-३३। 2. ದಯೆ, ಅನುಕಂಪ, ಕನಿಕರ. 3. ಅಭಿಪ್ರಾಯ, ಆಶಯ. "अर्जुनः सहसाज्ञाय हरेर्हार्दमथासिना" भाग० १-७-५५। 4. ಇಚ್ಛೆ, ಅಪೇಕ್ಷೆ.

**हार्दिन् ಹಾರ್ದಿನ್** (वि०) ಪ್ರೇಮವುಳ್ಳ, ಸ್ನೇಹದಿಂದ ಕೂಡಿದ. हार्दमस्यास्ति "इनिः" (५-२-११५)।

**हार्य ಹಾರ್ಯ** (पुं०) 1. ವಿಭೀತಕವೃಕ್ಷ, ತಾರೆಗಿಡ. (वि०) 2. ಕದಿಯಲ್ಪಡುವ. हृञ् (हरणे) "ण्यत्" (३-१-१२४)। 3. ಒಯ್ಯಲ್ಪಡುವ, ಸಾಗಿಸಲ್ಪಡುವ. 4. ತೆಗೆದುಕೊಳ್ಳಲ್ಪಡುವ, ಸ್ವೀಕರಿಸಲ್ಪಡುವ. 5. ನಾಶಪಡಿಸಲ್ಪಡುವ. 6. ವಹಿಸಲ್ಪಡುವ. "यद्वया वारणराजहार्यया" कुमा० ५-७०।

**हाल ಹಾಲ** (पुं०) 1. ಶಾಲಿವಾಹನ ರಾಜ. 2. ಬಲರಾಮ. हलेन क्रीडति — "अण्"। हल (विलेखने) "णः" (३-१-१४०) वा। 3. ನೇಗಿಲು. 4. ಚಂದ್ರ. "हालो हले पुमान् हाला मदिरायां च योषिति" मेदि०।

**हालक ಹಾಲಕ** (पुं०) ಹಳದಿ ಮತ್ತು ಹಸಿರುಮಿಶ್ರ ವರ್ಣದ ಕುದುರೆ. "हरितः पीतहरितच्छायः स एव हालकः" हेम०।

**हालहल ಹಾಲಹಲ** (नं०) ವಿಷ. ["हालाहल" ಪದದಲ್ಲಿ ನೋಡಿ.]

**हाला ಹಾಲಾ** (स्त्री०) ಮದಿರೆ, ಮದ್ಯ. हल्यते कृष्यत इव मनोऽनया—हल (विलेखने) "घञ्" (३-३-१२१)। "योषिदित्यभिललाष न हालां दुस्त्यजः खलु सुखादपि मानः" माघ० १०-२१।

**हालाहल ಹಾಲಾಹಲ** (नं०) 1. ಒಂದು ವಿಷ. हालामपि हलति — हल (विलेखने) "अच्" (३-१-१३४)। "हालाहलं हालहलं वदन्त्यपि हलाहलम्" द्विरूप०। **उदा**: "स्निग्धं भवत्यमृततुल्यमहो कलत्रं हालाहलं विषमिवाप्रगुणं तदेव"। "काममपायि मयेन्द्रियकुण्डेर्यदपि दुष्कृतहालहलौघः"। "मधु तिष्ठति वाचि योषितां हृदये हालहलं महाविषम्"। "कस्य सह्यो हलाहलः"। 2. ಮದ್ಯ.

**हालाहलधर ಹಾಲಾಹಲಧರ** (पुं०) ಸರ್ಪ, ಹಾವು. धरति—धृञ् (धारणे) "अच्" (३-१-१३४)। हालाहलस्य धरः।

**हालाहला ಹಾಲಾಹಲಾ** (स्त्री०) ಸಣ್ಣ ಜಾತಿಯ ಇಲಿ, ಚಿಟ್ಟಿಲಿ.

**हालाहली ಹಾಲಾಹಲೀ** (स्त्री०) ಮದ್ಯ, ಮದಿರೆ.

**हालिक ಹಾಲಿಕ** (पुं०) 1. ನೇಗಿಲಿನಿಂದ ತೋಡುವವನು, ನೇಗಿಲಿನಿಂದ ಭೂಮಿಯನ್ನು ಉಳುವವನು. हलेन खनति — हल "ठक्" (४-४-२)। 2. ನೇಗಿಲನ್ನು ಹೊರುವವನು. हलं वहति — हल "ठक्" (४-४-८१)। (वि०) 3. ನೇಗಿಲಿನ ಸಂಬಂಧವಾದ. हलस्येदम् "ठक्" (४-३-१२४)। "खनति तेन तद्वोढाऽस्येदं हालिकसैरिकौ" अम०।

**हालिनी ಹಾಲಿನೀ** (स्त्री०) ದೊಡ್ಡ ಜಾತಿಯ ಹಲ್ಲಿ, —ಗೌಳಿ.

**हाली ಹಾಲೀ** (स्त्री०) ಪತ್ನಿಯ ಕಿರಿಯ ಸಹೋದರಿ.

**हालु ಹಾಲು** (पुं०) ದಂತ, ಹಲ್ಲು. हल्यतेऽनेन—हल "उण्" (उ० १-१)।

**हाव ಹಾವ** (पुं०) 1. ಸ್ತ್ರೀಯರ ಶೃಂಗಾರ ಭಾವದ ಕಾರ್ಯ, ಹೆಂಗಸರ ವಿಲಾಸ ಮೊದಲಾದ ಶೃಂಗಾರದ ಕ್ರಿಯೆ, ಶೃಂಗಾರದ ಚೇಷ್ಟೆ, ರತಿ ಮೊದಲಾದ ಭಾವಗಳಿಂದ ಉಂಟಾದ ಶಾರೀರ ಚೇಷ್ಟೆ. हवनम्—हु (दानादनयोः) "घञ्" (३-१-१८)। हूयन्ते रागिणोऽत्र—ह्वेञ् अधि० "घञ्" (३-३-१२१)। हूयन्ते युवानः कामाग्नावनेन—करणे "घञ्" वा। ಭ್ರೂ ನೇತ್ರ ಇವುಗಳ ವಿಕಾರಗಳಿಂದ ಸಂಭೋಗದ ಅಪೇಕ್ಷೆಯನ್ನು ತಿಳಿಸುವ ಭಾವವು ಹಾವ. "भ्रूनेत्रादिविकारैस्तु संभोगेच्छाप्रकाशकः। भाव एवाल्पसंलक्ष्यविकारो हाव उच्यते" सा० द० ३-१४। "आज्ञां प्रतीपुर्विनयादुपास्थुर्जगुः सरागं ननृतुः सहावम्" भट्टि० ३-४३। "स्त्रीणां विलासविब्बोकविभ्रमा ललितं तथा। हेला लीलेत्यमी हावाः क्रियाः शृङ्गारभावजाः" अम०। ಹಾವವು ಸ್ತ್ರೀಯರ ಯೌವನ ಕಾಲದಲ್ಲಿ ಸತ್ತ್ವದಿಂದ ಉಂಟಾಗುವ ಇಪ್ಪತ್ತೆಂಟು ಅಲಂಕಾರಗಳಲ್ಲೊಂದು. "यौवने सत्त्वजास्तासां (नायिकानां) अष्टाविंशतिसंख्यकाः। अलङ्कारास्तत्र भावहावहेलास्त्रयोऽङ्गजाः" सा० द० ३। 2. ಆಹ್ವಾನ, ಕರೆ.

**हास ಹಾಸ** (पुं०) 1. ಹಾಸ್ಯರಸ. हसे (हसने) "घञ्" (३-३-१८)। "अथो हसः। हासो हास्यं च" अम०। 2. ನಗೆ, ನಗು. "संरम्भं मैथिलीहासः क्षणसौम्यां निनाय ताम्। निवातस्तिमितां वेलां चन्द्रोदय इवोदधेः" रघु० १२-३६। 3. ಅಂಗವಿಕಾರಾದಿ ದರ್ಶನದಿಂದ ಉಂಟಾಗುವ ಚಿತ್ತವಿಕಾಸ. ಇದು ಹಾಸ್ಯರಸದ ಸ್ಥಾಯಿಭಾವ. "विकृताकारवाग्वेषचेष्टादेः कुहकाद्भवेत्। हास्यो हासस्थायिभावः श्वेतः प्रमथदैवतः" सा० द० ३-२१४। 4. ವಿಕಾಸ, ಅರಳುವುದು. "कूलानि सामर्षतयेव तेनुः सरोजलक्ष्मीं स्थलपद्महासैः" भट्टि० २-३। 5. ಉಲ್ಲಾಸ, ನಲಿವು, ವಿನೋದ. 6. ಪರಿಹಾಸ್ಯ, ಗೇಲಿ.

**हासकर ಹಾಸಕರ** (वि०) 1. ನಗುವನ್ನು ಉಂಟುಮಾಡುವ. 2. ವಿಕಾಸವನ್ನುಂಟುಮಾಡುವ, ಅರಳಿಸುವ. 3. ಉಲ್ಲಾಸವನ್ನುಂಟುಮಾಡುವ. 4. ಪರಿಹಾಸ್ಯವನ್ನುಂಟುಮಾಡುವ. हासं करोति—डुकृञ् (करणे) ताच्छील्ये "टः" (३-२-२०)। "हासकरमघटते नितरां शिरसीव कङ्कतमपेतमूर्धजे" माघ० १५-३३।

**हासस् ಹಾಸಸ್** (पुं०) ಚಂದ್ರ. ओ हाक् (त्यागे) "असुन्" (उ० ४-२२०)।

**हास्तिक ಹಾಸ್ತಿಕ** (न०) 1. ಗಜಗಳ ಸಮೂಹ, ಆನೆಗಳ ಹಿಂಡು. हस्तिनां समूहः—हस्तिन् "ठक्" (४-२-४७)। "खेदायतश्वसितवेगनिरस्तमुग्धमूर्धन्यरत्ननिकरैरिव हास्तिकानि" माघ० ५-३०। (वि०) 2. ಆನೆಯ ಮೇಲೆ ಕುಳಿತು ಸಂಚರಿಸುವವನು. हस्तिना चरति—हस्तिन् "ठक्" (४-४-८)।

**हास्तिन ಹಾಸ್ತಿನ** (न०) ಹಸ್ತಿನಾಪುರ. हस्तिना नृपतिना निर्वृत्तम्—हस्तिन् "अण्" (४-२-६८)।

**हास्तिनपुर ಹಾಸ್ತಿನಪುರ** (न०) ಹಸ್ತಿನಾಪುರ. "स गत्वा हास्तिनपुरं धृतराष्ट्रं समेत्य च। उक्तवान् वचनं तथ्यं हितं चैव विशेषतः" भा० शल्य०।

**हास्य ಹಾಸ್ಯ** (न०) 1. ನಗೆ, ನಗು. हसे (हसने) "ण्यत्" (३-१-१२४)। 2. ಉಲ್ಲಾಸ, ವಿನೋದ. "द्यूतमेतत् पुराकल्पे दृष्टं वैरकरं महत्। तस्माद्द्यूतं न सेवेत हास्यार्थमपि बुद्धिमान्" मनु० ९-२२७। 3. ಹಾಸ್ಯರಸ. ಹಾಸ್ಯರಸಕ್ಕೆ ಹಾಸವು ಸ್ಥಾಯಿಭಾವ. "विकृताकारवाग्वेषचेष्टादेः कुहकाद्भवेत्। हास्यो हासस्थायिभावः श्वेतः प्रमथदैवतः" सा० द० ३-२१४। (वि०) 4. ಪರಿಹಾಸಕ್ಕೆ ಯೋಗ್ಯವಾದ. "संरुद्धचेष्टस्य मृगेन्द्र कामं हास्यं वचस्तद्यदहं विवक्षुः" रघु० २-४३।

**हास्यरस ಹಾಸ್ಯರಸ** (पुं०) ಹಾಸ ಸ್ಥಾಯಿಭಾವವುಳ್ಳ ಹಾಸ್ಯರಸ, ಶೃಂಗಾರಾದಿ ಎಂಟು ರಸಗಳಲ್ಲೊಂದು ರಸ. ಹಾಸ್ಯರಸಕ್ಕೆ ಹಾಸವು ಸ್ಥಾಯಿಭಾವ. ವಿಕಾರವಾದ ಆಕಾರ ವಾಕ್ಯ ಚೇಷ್ಟೆ ಇವುಗಳುಳ್ಳ ವ್ಯಕ್ತಿಯು ಆಲಂಬನ ವಿಭಾವ. ಆಕಾರ ವೇಷ ಚೇಷ್ಟೆಗಳು ಉದ್ದೀಪನ ವಿಭಾವ. ಶ್ರಮಾದಿಗಳು ಸಂಚಾರಿಭಾವಗಳು. ಹಾಸ್ಯರಸವು ಶ್ವೇತವರ್ಣವುಳ್ಳದ್ದು. "विकृताकारवाग्वेषचेष्टादेः कुहकाद्भवेत्। हास्यो हासस्थायिभावः श्वेतः प्रमथदैवतः॥ विकृताकारवाक्चेष्टं यमालोक्य हसेज्जनः। तदत्रालम्बनं प्राहुस्तच्चेष्टोद्दीपनं मतम्॥ अनुभावोऽक्षिसंकोचवदनस्मेरतादयः। निद्रालस्यावहित्थाद्या अत्र स्युर्व्यभिचारिणः" सा० द० ३।

**हाहल ಹಾಹಲ** (न०) ಒಂದು ವಿಧ ವಿಷ.

**हाहा ಹಾಹಾ** (पुं०) ದೇವಗಂಧರ್ವ, ದೇವಗಾಯಕ. हा इति शोकव्यञ्जकं शब्दं जहाति—ओ हाक् (त्यागे) "विच्" (३-२-७२)।

हाहाकार ಹಾಹಾಕಾರ (ಪುಂ) 1. ಯುದ್ಧ ಕಲಹ ಮೊದಲಾದ ಸಮಯದಲ್ಲಿ ಕೇಳಿಬರುವ ಶಬ್ದ. हा हा इति शब्दस्य कारः। "हाहाकारः समभवत्तत्र तत्र सहस्रशः। अन्योन्यं छिन्दतां शस्त्रैरादित्ये लोहितायति" भा०। 2. ದುಃಖದ ಶಬ್ದ, ದುಃಖಸೂಚಕವಾದ ಧ್ವನಿ.

हि ಹಿ (अव्य०) 1. ಹೇತು, ಕಾರಣ. "विदितेङ्गिते हि पुर एव जने सपदीरिताः खलु लगन्ति गिरः" माघ० ९-६९। 2. ಅವಧಾರಣ, ನಿಶ್ಚಯ. "न हि कमलिनीं दृष्ट्वा ग्राहमवेक्षते मतङ्गजः" माल० ३। 3. ಪಾದಪೂರಣ, ಪಾದವನ್ನು ಪೂರ್ಣಗೊಳಿಸುವ ಒಂದು ಅವ್ಯಯ. "तु हि च स्म ह वै पादपूरणे" अम०। 4. ಪ್ರಶ್ನಾರ್ಥಕ. "किं च तोये तु भूमौ त्वं वत्स किं कुपितोऽह्यसि" रामा०। 5. ಉದಾಹರಣೆ. "सहस्रगुणमुत्स्रष्टुमादत्ते हि रसं रविः" रघु० १-१८। 6. ಸಂಭ್ರಮ. 7. ಅಸೂಯೆ. 8. ವಿಶೇಷ. "हि पादपूरणे हेतौ विशेषेऽप्यवधारणे। प्रश्ने हेत्वपदेशे च सम्भ्रमासूययोरपि" मेदि०।

हिंसक ಹಿಂಸಕ (ಪುಂ) 1. ಇತರ ಪ್ರಾಣಿಗಳನ್ನು ತಿನ್ನುವ ಹಿಂಸ್ರಪಶು. 2. ಶತ್ರು. (वि०) 3. ಹಿಂಸಿಸುವವನು, ಪೀಡಿಸುವವನು, ತೊಂದರೆಕೊಡುವವನು. हिनस्ति — हिसि (हिंसायाम्) "ण्वुल्" (३-१-१३३)। "भार्यां प्रियसखीं यस्तु साध्वीं हिंसति निर्घृणः। न तेऽमृतं प्राप्नुवन्ति हिंसका दुष्टयोनिजाः" वराहपु०।

हिंसन ಹಿಂಸನ (न०) 1. ಪೀಡಿಸುವುದು, ಹಿಂಸಿಸುವುದು, ತೊಂದರೆಕೊಡುವುದು. हिसि (हिंसायाम्) भावे "ल्युट्" (३-३-११५)। 2. ಕೊಲ್ಲುವುದು. "मेदान्ध्रचुञ्चुमद्गूनामारण्यपशुहिंसनम्" मनु० १०-४८।

हिंसा ಹಿಂಸಾ(स्त्री०)1. ಪೀಡೆ, ತೊಂದರೆ, ಕೇಡು. हिसि (हिंसायाम्) "अः" (३-३-१०३)। 2. ಬಂಧನ. 3. ಹೆದರಿಕೆ. 4. ಹೊಡೆಯುವುದು. 5. ಕಳ್ಳತನ.

हिंसाकर्मन् ಹಿಂಸಾಕರ್ಮನ್ (न०) ತೊಂದರೆ ಕೊಡುವ ಕಾರ್ಯ, ಇನ್ನೊಬ್ಬನಿಗೆ ಕೇಡುಂಟುಮಾಡುವ ಕಾರ್ಯ, ಅಭಿಚಾರಿಕಕರ್ಮ, ಮಾಟ ಶೂನ್ಯ ಮುಂತಾದುದು. हिंसाजनकं कर्म। "हिंसाकर्माभिचारः स्यात्" अम०।

हिंसारु ಹಿಂಸಾರು (ಪುಂ) ವ್ಯಾಘ್ರ, ಹುಲಿ. "हिंसारुः श्वापदो व्याघ्रः" त्रिकाण्ड०।

हिंसालु ಹಿಂಸಾಲು (वि०) 1. ಕೊಲ್ಲುವವನು. 2. ಪೀಡಿಸುವ ಸ್ವಭಾವದವನು.

हिंसालुक ಹಿಂಸಾಲುಕ (ಪುಂ) ಹಿಂಸಿಸುವ ಸ್ವಭಾವದ ನಾಯಿ. हिंसालु संज्ञायां "कन्"।

हिंसित ಹಿಂಸಿತ (वि०) 1. ಪೀಡಿಸಲ್ಪಟ್ಟ, ಹಿಂಸಿಸಲ್ಪಟ್ಟ. हिसि (हिंसायाम्) "क्तः" (३-२-१०२)। "यस्तु भागवतान् दृष्ट्वा भूत्वा भागवतः शुचिः। अभ्युत्थानं न कुर्वीत अहं तेनापि हिंसितः"। (न०) 2. ಹಿಂಸೆ, ಪೀಡೆ, ತೊಂದರೆ. हिसि भावे "क्तः" (३-३-११४)।

हिंसीर ಹಿಂಸೀರ(ಪುಂ)1. ದುಷ್ಟ, ದುರ್ಜನ 2. ವ್ಯಾಘ್ರ. ಹುಲಿ. हिसि (हिंसायाम्) "ईरन्" (उ० ५-१८)। "हिंसीरो व्याघ्रदुष्टयोः" सि० कौ०।

हिंस्य ಹಿಂಸ್ಯ (वि०) ಹಿಂಸಿಸಲ್ಪಡುವ, ಪೀಡಿಸಲ್ಪಡುವ. हिसि (हिंसायाम्) "ण्यत्" (३-१-१२४)।

हिंस्र ಹಿಂಸ್ರ (ಪುಂ) 1. ಹಿಂಸಿಸುವ ಸ್ವಭಾವದ ವ್ಯಾಘ್ರ ಮೊದಲಾದ ದುಷ್ಟ ಪ್ರಾಣಿ. हिनस्ति – हिसि (हिंसायाम्) "रः" (३-२-१६०)। "सा दुष्प्रधर्षा मनसापि हिंस्रैरित्यद्रिशोभाप्रहितेक्षणेन" रघु० २-२७। 2. ಭೀಮಸೇನ. 3. ಶಿವ, ಪರಮೇಶ್ವರ. (वि०)4. ಘಾತುಕ, ಕೊಲ್ಲುವವನು. "हिंस्रः स्याद्घातुके" हेम०।

हिंस्रा ಹಿಂಸ್ರಾ (स्त्री०) 1. ಗುಲಗಂಜಿ ಗಿಡ. 2. ಜಟಾಮಾಂಸಿ. 3. ಕೊಬ್ಬು. "हिंस्रा मांसी काकादनी वसा" हेम०। 4. ಕಾಡುಗೋಧಿ. 5. ನಾಡಿ, ಧಮನಿ.

हिक्का ಹಿಕ್ಕಾ(स्त्री०)ಬಿಕ್ಕಲು, ಬಿಕ್ಕಳಿಕೆ. हिक्क (अव्यक्ते शब्दे) "अः" (३-३-१०३)। हिनस्ति इति हिक्का पृषो०। हिगिति कायति शब्दं करोति इति वा। ವಾತವು ಊರ್ಧ್ವಮುಖವಾದಾಗ ಹೊರಡುವ ಶಬ್ದ. "सिध्मका सारिका हिक्का प्राचिकोल्का पिपीलिका" अम०। ಬಿಕ್ಕಳಿಕೆಗೆ ಔಷಧ. "कुलुत्थः श्वासहिक्कानुत् कफगुल्मानिलापहः। त्रिदोषघ्नं मधु प्रोक्तं वातलं च प्रकीर्तितम्"। **ಬಿಕ್ಕಳಿಕೆಗೆ ಕಾರಣ**: ಕಫದೊಡನೆ ಕೂಡಿದ ವಾಯುವು ಬಿಕ್ಕಳಿಕೆಯನ್ನು ಉಂಟುಮಾಡುವುದು. ಇದು (1) अन्नजा (2) यमला (3) क्षुद्रा (4) गम्भीरा ಮತ್ತು (5) महती ಎಂದು ಐದು ವಿಧ. "वायुः कफेनानुगतः पञ्च हिक्कां करोति हि। अन्नजां यमलां क्षुद्रां गम्भीरां महतीं तथा"।

**(1) अन्नजा हिक्का** :—ಕುಡಿದ ನೀರು ಮತ್ತು ಅನ್ನ ಇವು ಒಟ್ಟಿಗೆ ಸೇರಿದಾಗ ಒಡನೆ ಒತ್ತಡದಿಂದ ಪ್ರಾಣವಾಯುವು ಊರ್ಧ್ವಮುಖವಾಗಿ ಹೊರಡುವ ಶಬ್ದವು ಅನ್ನಜ ಬಿಕ್ಕಳಿಕೆ. "पानान्नैरतिसंयुक्तैः सहसा पीडितोऽनिलः। हिक्कायत्यूर्ध्वगो भूत्वा तां विद्यादन्नजां भिषक्"।।

(2) यमला :—ಬಹಳ ವೇಗವಾಗಿ ಹೊರಟ ವಾಯುವಿನಿಂದ ಕುತ್ತಿಗೆ ಮತ್ತು ತಲೆಗಳನ್ನು ನಡುಗಿಸಿ ಬರುವ ಬಿಕ್ಕಳಿಕೆಯು ಯಮಲಾ. "चिरेण यमलैर्वेगैः या हिक्का सम्प्रवर्तते। कम्पयन्ती शिरोग्रीवं यमलां तां विनिर्दिशेत्"।

(3) क्षुद्रा :—ಬಹಳ ಮಂದಗತಿಯಿಂದ ಜತ್ರುವಿನ (ಕಂಠ ಮತ್ತು ವಕ್ಷಸ್ಸುಗಳ ಸಂಧಿ) ಕೆಳಪ್ರದೇಶದಿಂದ ಹೊರಡುವ ಬಿಕ್ಕಳಿಕೆಯು ಕ್ಷುದ್ರಾ. "विकृष्टकालैर्या वेगैः मन्दैः समभिवर्तते। क्षुद्रिका नाम सा हिक्का जत्रुमूलात् प्रधावति"।

(4) गम्भीरा :—ಗಂಭೀರವಾದ ಶಬ್ದದೊಡನೆ ಅನೇಕ ಉಪದ್ರವಗಳಿಂದ ಕೂಡಿ ಘರ್ಜಯಂಕರವಾಗಿ ನಾಭಿಪ್ರದೇಶದಿಂದ ಹೊರಡುವ ಬಿಕ್ಕಳಿಕೆಯು ಗಂಭೀರಾ. "नाभिप्रवृत्ता या हिक्का घोरा गम्भीरनादिनी। अनेकोपद्रववती गम्भीरा नाम सा स्मृता"।

(5) महती :—ಬಸ್ತಿ, ಹೃದಯ ಶಿರಸ್ಸು ಮುಂತಾದುವುಗಳಿಗೆ ಬಹಳ ಹಿಂಸೆಯುಂಟುಮಾಡುತ್ತ ದೇಹವನ್ನು ನಡುಗಿಸುತ್ತ ಅನವರತವೂ ಹೊರಡುತ್ತಿರುವ ಬಿಕ್ಕಳಿಕೆಯು ಮಹತೀ. "मर्माण्यापीडयन्तीव सततं या प्रवर्तते। महाहिक्केति सा ज्ञेया सर्वगात्रप्रकम्पनी" भावप्र०।

**हिङ्कार** ಹಿಂಕಾರ (ಪುಂ०) ವ್ಯಾಘ್ರ, ಹುಲಿ. हिं इति अव्यक्तशब्दं करोति—डुकृञ् (करणे) "अण्" (३-२-१)।

**हिङ्गु** ಹಿಂಗು (ನಂ०) ಇಂಗು, ರಾಮಠ. हि (गतौ वृद्धौ च) "कुः" (उ० १-३७)।

**हिङ्गुनिर्यास** ಹಿಂಗುನಿರ್ಯಾಸ (ಪುಂ०) 1. ಬೇವಿನ ಮರ. हिङ्गुन इव निर्यासोऽस्य। "अरिष्टः सर्वतोभद्रहिङ्गुनिर्यासमालकाः" अम०। 2. ಹಿಂಗಿನ ರಸ.

**हिङ्गुपत्र** ಹಿಂಗುಪತ್ರ (ಪುಂ०) ಇಂಗುದೀವೃಕ್ಷ.

**हिङ्गुल** ಹಿಂಗುಲ (ಪುಂಸ್ತ್ರೀ०) ಕೆಂಪು ಬಣ್ಣದ ರಸಗಂಧಕ, ಸಿಂದೂರ, ಇಂಗಲೀಕ.

**हिङ्गुलिका** ಹಿಂಗುಲಿಕಾ (ಸ್ತ್ರೀ०) ಹಗುಳ್ಳದ ಗಿಡ.

**हिङ्गुली** ಹಿಂಗುಲೀ (ಸ್ತ್ರೀ०) ಬದನೆ ಗಿಡ.

**हिज्जल** ಹಿಜ್ಜಲ (ಪುಂ०) ನೀರುಹಲಸಿನ ಗಿಡ. "इज्जलो हिज्जलश्चापि निचुलश्चाम्बुजस्तथा। जलवेतसवद्वेद्यो हिज्जलोऽयं विषापहः"।

**हिञ्जीर** ಹಿಂಜೀರ (ಪುಂ०) ಆನೆಯ ಕಾಲಿಗೆ ಕಟ್ಟುವ ಹಗ್ಗ. "हिञ्जीरश्च पादपाशो वारिस्तु गजबन्धभूः" इति हेमचन्द्रः।

**हिडिम्ब** ಹಿಡಿಂಬ (ಪುಂ०) ಒಬ್ಬ ರಾಕ್ಷಸ, ಹಿಡಿಂಬಿಯ ಅಣ್ಣ.

**हिडिम्बजित्** ಹಿಡಿಂಬಜಿತ್ (ಪುಂ०) ಹಿಡಿಂಬ ರಾಕ್ಷಸನನ್ನು ಜಯಿಸಿದ ಭೀಮಸೇನ. –निषूदनः –ನಿಷೂದನಃ, –भिद् –ಭಿದ್.

**हिडिम्बा** ಹಿಡಿಂಬಾ (ಸ್ತ್ರೀ०) ಹಿಡಿಂಬರಾಕ್ಷಸನ ತಂಗಿ, ಭೀಮಸೇನನ ಹೆಂಡತಿ.

**हिंडन** ಹಿಂಡನ (ನಂ०) 1. ಅಲ್ಲಿಂದಿಲ್ಲಿಗೆ ತಿರುಗಾಡುವುದು, –ಅಡ್ಡಾಡುವುದು. हिडि (गतौ) "ल्युट्" (३-३-११५)। 2. ರತ, ರತಿಕ್ರೀಡೆ, ಸಂಭೋಗ. "हिण्डनं भ्रमणे रते" मेदि०।

**हिण्डिक** ಹಿಂಡಿಕ (ಪುಂ०) ಜೋಯಿಸ, ಜ್ಯೌತಿಷಿಕ, ದೈವಜ್ಞ.

**हिण्डी** ಹಿಂಡೀ (ಸ್ತ್ರೀ०) ದುರ್ಗಾದೇವಿ.

**हिण्डीर** ಹಿಂಡೀರ (ಪುಂ०) 1. ಸಮುದ್ರದ ನೊರೆ. हिण्डते इतस्ततो गच्छति—हिडि (गतौ) "ईरन्" (उ० ४-७०)। "हिण्डीरपिण्डरुचिशीतमरीचिबिम्बम्" सा० द०। 2. ಬದನೆ ಗಿಡ. 3. ಮನುಷ್ಯ. "हिण्डीरः फेनवार्ताकिपूरुषे" मेदि०। (ನಂ०) 4. ಸದೃಕ್ಷಾರ. 5. ದಾಳಿಂಬೆ ಹಣ್ಣು.

**हित** ಹಿತ (ವಿ०) 1. ಪಥ್ಯವಾದ, ಆರೋಗ್ಯಕರವಾದ, ಒಳ್ಳೆಯ ಪರಿಣಾಮವುಂಟುಮಾಡುವ. हि (गतौ वृद्धौ च) "क्तः" (३-४-७२)। "अतोऽर्हसि क्षन्तुमसाधु साधु वा हितं मनोहारि च दुर्लभं वचः" किरा० १-४। 2. ಅರ್ಹವಾದ, ಯೋಗ್ಯವಾದ, ತಕ್ಕುದಾದ. 3. ಆಪ್ತ, ಮಿತ್ರ. "हितगिरं न शृणोषि किमाश्रवे प्रसभमप्यव जीवितमात्मनः" नैष० ४-१०३। 4. ಅನುಕೂಲವಾದ. 5. ಪ್ರಯೋಜನಕರವಾದ. 6. ಹೊರಟುಹೋದ, ತೆರಳಿದ. 7. ಕಳುಹಿಸಲ್ಪಟ್ಟ. 8. ಇಡಲ್ಪಟ್ಟ. "हितं पथ्ये गते धृते" मेदि०। "हितं प्रहितपथ्ययोः" नानार्थर०। (ನಂ०) 9. ಪ್ರಯೋಜನ.

**हितक** ಹಿತಕ (ಪುಂ०) ಶಿಶು, ಮಗು. हितमर्हति—संज्ञायां "कन्"।

**हितकर** ಹಿತಕರ (ವಿ०) 1. ಹಿತವನ್ನು ಉಂಟುಮಾಡುವ ಸ್ವಭಾವದವನು. हितस्य करः। हितं करोति—डुकृञ् (करणे) "टः" (३-२-२०)। –कर्तृ, –कारकः, –कारिन्—डुकृञ् "तृच्" (३-१-१३३)। "ण्वुल्" (३-१-१३३)। "णिनिः" (३-२-७८)। 2. ಪ್ರಯೋಜನವನ್ನು ಉಂಟುಮಾಡುವ. 3. ಶುಭವನ್ನು ಉಂಟುಮಾಡುವ. 4. ಅನುಕೂಲಕರವಾದ.

**हितकाम** ಹಿತಕಾಮ (वि०) 1. ಒಳ್ಳೆಯದನ್ನು ಅಪೇಕ್ಷಿಸುವ. 2. ಪ್ರಯೋಜನವನ್ನು ಅಪೇಕ್ಷಿಸುವ. 3. ಉಪಕಾರವನ್ನು ಬಯಸುವ. 4. ಸ್ನೇಹವನ್ನು ಅಪೇಕ್ಷಿಸುವ.

**हितकाम्या** ಹಿತಕಾಮ್ಯಾ (स्त्री०) 1. ಹಿತವನ್ನು ಉಂಟುಮಾಡುವ ಅಪೇಕ್ಷೆ. 2. ಹಿತವನ್ನು ಅಪೇಕ್ಷಿಸುವುದು.

**हितप्रणी** ಹಿತಪ್ರಣೀ (पुं०) ಹಿತವನ್ನು ಉಂಟುಮಾಡುವ ಚಾರ. हितं प्रणयति — प्र + णीञ् (प्रापणे) "क्विप्" (३-२-६१)।

**हितवाक्य** ಹಿತವಾಕ್ಯ (न०) ಒಳ್ಳೆಯ ಮಾತು, ಸ್ನೇಹದಿಂದ ಹೇಳುವ ಮಾತು, ಪ್ರೀತಿಯಿಂದ ಮಾಡುವ ಸಲಹೆ.

**हितेच्छा** ಹಿತೇಚ್ಛಾ (स्त्री०) ಒಳ್ಳೆಯದನ್ನು ಬಯಸುವಿಕೆ.

**हितैषिन्** ಹಿತೈಷಿನ್ (वि०) ಹಿತವನ್ನು ಅಪೇಕ್ಷಿಸುವವನು. ಶುಭವನ್ನು ಕೋರುವವನು. हितमिच्छति—इषु (इच्छायाम्) "णिनिः" (३-२-७८)। "न विग्यथे तस्य मनो न हि प्रियं प्रवक्तुमिच्छन्ति मृषा हितैषिणः" किरा० १-२। स्त्रियां "ङीप्" (४-१-५)। **हितैषिणी** ಹಿತೈಷಿಣೀ.

**हितोक्ति** ಹಿತೋಕ್ತಿ (स्त्री०) 1. ಹಿತವನ್ನು ಉಂಟುಮಾಡುವ ಮಾತು, ಒಳ್ಳೆಯ ಪರಿಣಾಮವನ್ನು ಉಂಟುಮಾಡುವ ಮಾತು, ಪಥ್ಯವಾದ ಮಾತು. 2. ಮಿತ್ರನ ಮಾತು, ಸ್ನೇಹಿತನ ಒಳ್ಳೆಯ ಮಾತು.

**हितोपदेश** ಹಿತೋಪದೇಶ (पुं०) 1. ಹಿತವಾದ ಮಾತನ್ನಾಡುವುದು, ಅನುಕೂಲವಾದ ಸಲಹೆಯನ್ನು ಕೊಡುವುದು. हितः उपदेशः। 2. ಮಿತ್ರನ ಸಲಹೆ, ಸ್ನೇಹಿತನ ಪಥ್ಯವಾದ ಮಾತು. हितस्य उपदेशः। 3. ನಾರಾಯಣ ಪಂಡಿತನಿಂದ ರಚಿತವಾದ ಒಂದು ನೀತಿಶಾಸ್ತ್ರಗ್ರಂಥ. ಸುದರ್ಶನನೆಂಬ ರಾಜನು ವಿದ್ಯಾವಿಹೀನರಾಗಿ ಆದರಿಂದ ಉನ್ಮಾರ್ಗಗಾಮಿಗಳಾದ ತನ್ನ ಮಕ್ಕಳ ವಿಷಯದಲ್ಲಿ ಬಹಳ ನೊಂದ ಮನಸ್ಸಿನಿಂದ ತನ್ನ ಮಕ್ಕಳಿಗೆ ವಿದ್ಯಾದಾನ ಮಾಡಿ ಸನ್ಮಾರ್ಗಕ್ಕೆ ತರುವ ಸಮರ್ಥ ಪಂಡಿತರು ಯಾರು ಎಂದು ಪಂಡಿತರ ಸಭೆಯಲ್ಲಿ ಕೇಳಲು ನಾರಾಯಣ ಪಂಡಿತನೆಂಬ ಪಂಡಿತೋತ್ತಮನು ಎದ್ದು ನಿಂತು ಆರು ತಿಂಗಳಲ್ಲಿ ರಾಜಕುಮಾರರಿಗೆ ವಿದ್ಯಾಭ್ಯಾಸ ಮಾಡಿಸಿ ನೀತಿಶಾಸ್ತ್ರ ವಿಶಾರದರನ್ನಾಗಿ ಮಾಡುವ ವಿಶ್ವಾಸವನ್ನು ಪ್ರಕಟಿಸಿ (1) मित्रलाभः (2) सुहृद्भेदः (3) विग्रहः (4) सन्धिः ಎಂಬ ನಾಲ್ಕು ಕಥೆಗಳನ್ನೊಳಗೊಂಡ "हितोपदेशः" ಎಂಬ ಗ್ರಂಥವನ್ನು ರಚಿಸಿದನು. ಹಿತೋಪದೇಶವು ಪಂಚತಂತ್ರ ಮತ್ತು ಇತರ ಗ್ರಂಥಗಳಿಂದ ವಿಷಯಗಳನ್ನು ಸಂಗ್ರಹಿಸಿ ರಚಿಸಿದ ಗ್ರಂಥ. "मित्रलाभः सुहृद्भेदो विग्रहः सन्धिरेव च। पञ्चतन्त्रात्तथाऽन्यस्मात् ग्रन्थादाकृष्य लिख्यते" हितो० ९। "प्रालेयाद्रेः सुतायाः प्रणयनिवसतिः चन्द्रमौलिः स यावत् यावल्लक्ष्मीर्मुरारेर्जलद इव तडिन्मानसे विस्फुरन्ती। यावत् स्वर्णाचलोऽयं दवदहनसमो यस्य सूर्यः स्फुलिङ्गस्तावन्नारायणेन प्रचरतु रचितः सङ्ग्रहोऽयं कथानाम्" हितो० ४-१३३। ಇದು ಹಿತೋಪದೇಶದ ಉಪಾಂತ್ಯ ಶ್ಲೋಕ.

**हिन्ताल** ಹಿಂತಾಲ (पुं०) ಒಂದು ಜಾತಿಯ ತೃಣದ್ರುಮ. हीनोऽल्पस्तालः—पृषो०। "एते च हिन्तालसहितास्त्रयः। खर्जूरः केतकी ताली खर्जूरी च तृणद्रुमाः" अम०।

**हिन्दु** ಹಿಂದು (पुं०) ಒಂದು ಜಾತಿ. हीनं दूषयति — दुष (वैकृत्ये) "डुः"। पृषो०। "पञ्च खानाः सप्त मीरा नव शाहा महाबलाः। हिन्दुधर्मप्रलोप्तारो जायन्ते चक्रवर्तिनः।। हीनं च दूषयत्येव हिन्दुरित्युच्यते प्रिये। पूर्वाम्नाये नवशतं षडशीतिः प्रकीर्तिताः" मेरुतन्त्रम्।

**हिन्दोल** ಹಿಂದೋಲ (पुं०) ಶ್ರಾವಣ ಶುಕ್ಲಪಕ್ಷದಲ್ಲಿ ವಿಹಿತವಾದ ಒಂದು ಯಾತ್ರೆ.

**हिन्दोलक** ಹಿಂದೋಲಕ (पुं०) ಉಯ್ಯಾಲೆ.

**हिन्दोला** ಹಿಂದೋಲಾ (स्त्री०) ಉಯ್ಯಾಲೆ.

**हिम** ಹಿಮ (पुं०) 1. ಚಂದ್ರ. हन (हिंसागत्योः) "मक्" धातोः हिरादेशः (उ० १-१४४)। 2. ಹಿಮಾಚಲ, ಹಿಮವತ್‌ಪರ್ವತ. 3. ಕರ್ಪೂರ. राजनि०। 4. ಚಂದನವೃಕ್ಷ, ಗಂಧದ ಮರ. 5. ಹೇಮಂತ ಋತು. "हिमशिशिरवसन्तग्रीष्मवर्षाशरत्सु स्तनतपनतनाम्भोहर्म्यगोशीरपानैः" ऋतुसं०। (न०) 6. ಮಂಜು, ಇಬ್ಬನಿ. "ससुरचापमनेकमणिप्रभैरपपयोविशदं हिमपाण्डुभिः" किरा० ५-१२। "हिमगौरैरचलाधिपः शिरोभिः" किरा० ५-१७। "हिमं न सौभाग्यविलोपि जातम्" कुमा० १-३। (वि०) 7. ಕೊರೆಯುವ ಚಳಿಯಿಂದ ಕೂಡಿದ, ಶೀತವಾದ. "हिमं तु सारे शीते च हिमश्चन्दनपादपे" हेम०। 8. ತಣ್ಣಗಿರುವ, ಶೀತಲವಾಗಿರುವ. "वपुरम्बुविहारहिमं शुचिना रुचिरं कमनीयतरा गमिता" माघ० ६-७१।

**हिमक** ಹಿಮಕ (पुं०) ಹಲುಮಾಣಿಕ ಗಿಡ, ಹುಳಿ ಬೇಲದ ಮರ. हिमेन कायति।

**हिमकर** ಹಿಮಕರ (पुं०) 1. ಚಂದ್ರ. हिमः शीतलः करः किरणोऽस्य। "वने वा हर्म्ये वा समकरनिपातो हिमकरः" आनन्दल०। 2. ಕರ್ಪೂರ.

**हिमकूट** ಹಿಮಕೂಟ (पुं०) 1. ಶಿಶಿರಋತು. हिमस्य कूटो यत्र। 2. ಹಿಮವತ್ಪರ್ವತ. हिमस्य कूटः।

**हिमगिरि** ಹಿಮಗಿರಿ (पुं०) ಹಿಮಾಲಯಪರ್ವತ. हिमप्रधानो गिरिः। "आग्नेया विन्ध्यशैलाद्याः सौम्यो हिमगिरिर्मतः"।

**हिमगु** ಹಿಮಗು (पुं०) ಚಂದ್ರ. हिमा शीता गावोऽस्य।

**हिमज** ಹಿಮಜ (पुं०) ಹಿಮವಂತನ ಪುತ್ರನಾದ ಮೈನಾಕ ಪರ್ವತ. हिमात् हिमाचलात् जायते—जनी (प्रादुर्भावे) "डः" (३-२-९८)। –जा –ಜಾ. (स्त्री०) 1. ಪಾರ್ವತಿ, ಹಿಮವಂತನ ಪುತ್ರಿ. 2. ಶಚೀದೇವಿ. "हिमजा तु शचीगौर्योः पुंसि मैनाकपर्वते" मेदि०।

**हिमतैल** ಹಿಮತೈಲ (न०) ಕರ್ಪೂರ ತೈಲ. हिमाज्जातं तैलम्।

**हिमदीधिति** ಹಿಮದೀಧಿತಿ (पुं०) ಚಂದ್ರ. हिमाः शीतलाः दीधितयोऽस्य। "प्रथमं कलाऽभवदथार्धमथो हिमदीधितिर्महदभूदुदितः" माघ० ९-२९। –द्युतिः –ದ್ಯುತಿಃ. हिमा द्युतयोऽस्य।

**हिमदुग्धा** ಹಿಮದುಗ್ಧಾ (स्त्री०) ಹಾಲೆಗಿಡ.

**हिमदुर्दिन** ಹಿಮದುರ್ದಿನ (न०) ಹಿಮಪಾತದಿಂದ ಕಷ್ಟವಾದ ದಿವಸ, ಹಿಮದ ಚಳಿಯಿಂದ ಸಹಿಸಲು ಕಷ್ಟವಾದ ದಿವಸ. हिमपातेन दुर्दिनम्।

**हिमद्रुम** ಹಿಮದ್ರುಮ (पुं०) ಬೇವಿನ ಮರ.

**हिमधातु** ಹಿಮಧಾತು (पुं०) ಹಿಮಾಚಲ. हिमो धातुरिव यत्र।

**हिमध्वस्त** ಹಿಮಧ್ವಸ್ತ (वि०) ಹಿಮದಿಂದ ನಾಶಪಡಿಸಲ್ಪಟ್ಟ.

**हिमप्रस्थ** ಹಿಮಪ್ರಸ್ಥ (पुं०) ಹಿಮಾಚಲ. हिमाच्छादितः प्रस्थो यत्र।

**हिमरश्मि** ಹಿಮರಶ್ಮಿ (पुं०) ಚಂದ್ರ. हिमा रश्मयोऽस्य। "विकसति हि पतङ्गस्योदये पुण्डरीकं द्रवति च हिमरश्मावुद्गते चन्द्रकान्तः" उ० रा० ६-१२। –रुचिः –ರುಚಿಃ. "हिमरुचिररुणिम्ना राजते रज्यमानैः" माघ० ११-१४।

**हिमवत्** ಹಿಮವತ್ (पुं०) 1. ಹಿಮಾಚಲ. हिममस्यास्ति —हिम "मतुप्" (५-२-९४)। "राजा हिमवतः सारो राज्ञः सारो हिमाद्रिणा" रघु० ४-७९। (वि०) 2. ಹಿಮದಿಂದ ಕೂಡಿದ, ಇಬ್ಬನಿಯಿಂದ ತುಂಬಿರುವ.

**हिमवत्कुक्षि** ಹಿಮವತ್ಕುಕ್ಷಿ (पुं०) ಹಿಮಾಚಲದ ನಡುವಣ ಕಣಿವೆ, –ಕಂದರ.

**हिमवत्पुर** ಹಿಮವತ್ಪುರ (न०) ಹಿಮವಂತನ ನಗರ, ಓಷಧಿಪ್ರಸ್ಥ. "तत्प्रयातौषधिप्रस्थं सिद्धये हिमवत्पुरम्" कुमा० ६-३३।

**हिमवत्सुत** ಹಿಮವತ್ಸುತ (पुं०) ಹಿಮವಂತನ ಪುತ್ರನಾದ ಮೈನಾಕ ಪರ್ವತ. हिमवतः सुतः। –सुता –ಸುತಾ. 1. ಪಾರ್ವತಿ. 2. ಗಂಗಾನದಿ.

**हिमवालुक** ಹಿಮವಾಲುಕ (पुं०) ಕರ್ಪೂರ. "पुंसि क्लीबे च कर्पूरः सिताभ्रो हिमवालुकः" भावप्र०। "प्रनीरनीरं हिमवालुका च मित्रं नृणां स्यात् सति मूत्रकृच्छ्रे"। –वालुका –ವಾಲುಕಾ.

**हिमशैल** ಹಿಮಶೈಲ (पुं०) ಹಿಮವತ್ಪರ್ವತ, ಹಿಮಾಲಯ. हिमप्रधानः शैलः। –शैलजा –ಶೈಲಜಾ. ಪಾರ್ವತಿ. हिमशैलाज्जायते—जनी (प्रादुर्भावे) "डः" (३-२-९८)।

**हिमसंहति** ಹಿಮಸಂಹತಿ (स्त्री०) ಹಿಮದ ಸಮೂಹ, ಮಂಜಿನ ರಾಶಿ. हिमस्य संहतिः।

**हिमसरस्** ಹಿಮಸರಸ್ (न०) ಹಿಮದಿಂದ ತುಂಬಿದ ಸರೋವರ.

**हिमहासक** ಹಿಮಹಾಸಕ (पुं०) ಖರ್ಜೂರದ ಗಿಡ.

**हिमा** ಹಿಮಾ (स्त्री०) 1. ಸಣ್ಣ ಜಾತಿಯ ಯಾಲಕ್ಕಿ. 2. ರೇಣುಕಾ ಎಂಬ ಸುಗಂಧ ದ್ರವ್ಯ. 3. ಭದ್ರಮುಷ್ಠಿ, ಕೆಂಪು ಬಣ್ಣದ ಕೊನ್ನಾರಿ. 4. ಹೇಮಂತ ಋತು.

**हिमांशु** ಹಿಮಾಂಶು (पुं०) 1. ಚಂದ್ರ. हिमा अंशवोऽस्य। "विप्रकृष्टविवरं हिमांशुना चक्रवाकमिथुनं विडम्ब्यते" कुमा० ८-६१। 2. ಕರ್ಪೂರ.

**हिमांशुभिख्य** ಹಿಮಾಂಶುಭಿಖ್ಯ (न०) ರಜತ, ಬೆಳ್ಳಿ. हिमांशोरिव अभिख्या कान्तिरस्य।

**हिमागम** ಹಿಮಾಗಮ (पुं०) ಹೇಮಂತ ಋತು. हिमस्य आगमो यत्र। "कौमुदे मासि रेवत्यां शरदन्ते हिमागमे। स्फीतशस्यसुखे काले कल्यः सत्यवतां वरः" भा० उद्योग०।

**हिमाचल** ಹಿಮಾಚಲ (पुं०) ಹಿಮವತ್ಪರ್ವತ. हिमप्रधानोऽचलः। "रुरुचे हिमाचलगुहामुखोन्मुखः पयसां प्रवाह इव सौरसैन्धवः" माघ० १३-२७। –अद्रिः –ಅದ್ರಿಃ. "प्रस्थं हिमाद्रेर्मृगनाभिगन्धि किञ्चित् क्वणत्किन्नरमध्युवास" कुमा० १-५४। –आलयः –ಆಲಯಃ. "तामस्मदर्थे युष्माभिर्याचितव्यो हिमालयः" कुमा०

६-२९। "द्विरिव प्रतिशब्देन व्याजहार हिमालयः" कुमा० ६-६४।

**हिमाद्रिजा** ಹಿಮಾದ್ರಿಜಾ (स्त्री०) 1. ಪಾರ್ವತಿ. 2. ಗಂಗಾನದಿ. हिमाद्रौ जायते—जनी (प्रादुर्भावे) "डः" (३-२-९७)। -तनया -ತನಯಾ.

**हिमानी** ಹಿಮಾನೀ (स्त्री०) ಹಿಮದ ಸಮೂಹ, ಮಂಜಿನ ರಾಶಿ. महद्धिमं हिमानी—हिम आनुक् "ङीष्" च (वा० ४-२-४९)। "तमतनुवनराजिश्यामितोपत्यकान्तं नगमुपरि हिमानीगौरमासाद्य जिष्णुः" किरा० ४-३८।

**हिमाब्ज** ಹಿಮಾಬ್ಜ (न०) ನೈದಿಲೆ.

**हिमाराति** ಹಿಮಾರಾತಿ (पुं०) 1. ಅಗ್ನಿ, ಬೆಂಕಿ. 2. ಸೂರ್ಯ. हिमस्याराति:। "हिमाराति: पुमान् वीतिहोत्रे किरणमालिनि" मेदि०। 3. ಅರ್ಕವೃಕ್ಷ, ಎಕ್ಕದ ಗಿಡ. 4. ಪರಳುಗಿಡ.

**हिमावती** ಹಿಮಾವತೀ (स्त्री०) ಸ್ವರ್ಣಕ್ಷೀರಿ. ಘಂಟಾಪಾಣೆ ಸೊಪ್ಪು. हिममस्त्यस्याः "मतुप्" (५-२-९४)। दीर्घः (६-३-१२०)।

**हिमाह्व** ಹಿಮಾಹ್ವ (पुं०) ಕರ್ಪೂರ. हिममपि आह्वयते स्पर्धते वर्णेन—आ+ह्वेञ् (स्पर्धायाम् शब्दे च) "कः" (वा० ३-२-५)। -आह्वयः -ಆಹ್ವಯಃ.

**हिमिका** ಹಿಮಿಕಾ (स्त्री०) ಗಡ್ಡೆಕಟ್ಟಿದ ಹಿಮ, ಘನೀಭೂತವಾದ ಮಂಜು. "प्रालेयं हिमिका" अम०।

**हिमेलु** ಹಿಮೇಲು (वि०) ಹಿಮದಿಂದ ಪೀಡಿತನಾದವನು, ಹಿಮದಿಂದ ಕ್ಲೇಶಪಡುವವನು. हिमं न सहते—हिम "चेलुः" (वा० ५-२-१२१)।

**हिमोद्भवा** ಹಿಮೋದ್ಭವಾ (स्त्री०) ಕಚೋರ. हिमे हेमन्तऋतौ उद्भवो यस्याः।

**हिम्य** ಹಿಮ್ಯ (पुं०) ಪರ್ವತ, ಬೆಟ್ಟ. बहुलं हिममस्यास्ति—हिम "यप्" (वा० ५-२-१२०)। हिम्याः पर्वताः सि० कौ०।

**हिरङ्गु** ಹಿರಂಗು (पुं०) ರಾಹು.

**हिरण** ಹಿರಣ (न०) 1. ಸ್ವರ್ಣ, ಚಿನ್ನ. 2. ರೇತಸ್ಸು, ವೀರ್ಯ. 3. ಕವಡೆ. "हिरणं रेतसि स्वर्णे वराटे च नपुंसकम्" मेदि०।

**हिरण्मय** ಹಿರಣ್ಮಯ (पुं०) 1. ಬ್ರಹ್ಮ, ಚತುರ್ಮುಖ. (वि०) 2. ಸ್ವರ್ಣಮಯವಾದ, ಸ್ವರ್ಣವಿಕಾರವಾದ, ಚಿನ್ನದಿಂದ ತಯಾರಿಸಲ್ಪಟ್ಟ. हिरण्यस्य विकारः "मयट्" (६-४-१७४)। निपा०। "व्रजदपि लघुतां बभार सपदि हिरण्मयमण्डनं सपत्न्याः" माघ० ७-५९। "हिरण्मयः सुरज्येष्ठे ना सुवर्णमये त्रिषु" मेदि०। स्त्रियां "ङीप्" (४-१-१५)। -मयी -ಮಯೀ. "हिरण्मयी साललतेव जङ्गमा च्युता दिवः स्थास्नुरिवाऽचिरप्रभा" भट्टि० २-४७।

**हिरण्य** ಹಿರಣ್ಯ (न०) 1. ಸ್ವರ್ಣ, ಚಿನ್ನ. हर्यति—हर्य (गतिकान्त्योः) "कन्यन्" प्रकृतेः हिरच् (उ० ५-४४)। "हिरण्यधान्यरत्नानि यानानि विविधानि च। तथाऽन्यदपि यत्किञ्चित्प्रजाभ्यः स्यान्महीपतेः" पञ्चतं० १-२४७। 2. ವಿತ್ತ, ಧನ. "भूमिर्मित्रं हिरण्यं च विग्रहस्य फलत्रयम्। नास्त्येकमपि यद्येषां न तं कुर्यात् कथंचन" पञ्चतं० १-२४९। 3. ರಜತ, ಬೆಳ್ಳಿ. 4. ಚಿನ್ನ ಬೆಳ್ಳಿ ರೂಪವಾದ ಲೋಹ. 5. ವರಾಟಕ, ಕವಡೆ. 6. ರೇತಸ್ಸು, ವೀರ್ಯ. 7. ಒಂದು ಅಳತೆ. 8. ದತ್ತೂರಿಕಾಯಿ. 9. ಅಕ್ಷಯ. "हिरण्यं रेतसि द्रव्ये शातकुम्भवराटयोः। अक्षये मानभेदे स्यादकुप्ये च नपुंसकम्" मेदि०।

**हिरण्यकशिपु** ಹಿರಣ್ಯಕಶಿಪು (पुं०) ಕಶ್ಯಪನ ಮಗ, ದಿತಿಯ ಪುತ್ರ, ಒಬ್ಬ ರಾಕ್ಷಸ. ಹಿರಣ್ಯಕಶಿಪುವಿನ ಸಹೋದರ ಹಿರಣ್ಯಾಕ್ಷ. ಸಿಂಹಿಕೆಯು ಇವನ ತಂಗಿ. ಪತ್ನಿ ಕಯಾಧು. ಪ್ರಹ್ಲಾದ ಸಂಹ್ಲಾದ ಅನುಹ್ಲಾದ ಶಿಬಿ ಮತ್ತು ಬಾಷ್ಕಲ ಈ ಐವರೂ ಹಿರಣ್ಯಕಶಿಪುವಿನ ಮಕ್ಕಳು. ಈ ಐವರಲ್ಲಿ ಪ್ರಹ್ಲಾದನು ಪರಮವಿಷ್ಣುಭಕ್ತನಾಗಿದ್ದನು.

ವಿಷ್ಣುವಿನ ದ್ವಾರಪಾಲಕರಾಗಿದ್ದ ಜಯ ವಿಜಯರು ವೈಕುಂಠದ ದ್ವಾರದಲ್ಲಿ ದ್ವಾರವನ್ನು ಕಾಯುತ್ತ ನಿಂತಿದ್ದಾಗ ಮಹಾವಿಷ್ಣುವಿನ ಸಂದರ್ಶನಕ್ಕಾಗಿ ಆಗಮಿಸಿದ ಸನಕಾದಿ ಮುನಿಗಳನ್ನು ತಡೆದು ನಿಲ್ಲಿಸಿದುದರಿಂದ ಭೂಲೋಕದಲ್ಲಿ ರಾಕ್ಷಸರಾಗಿ ಹುಟ್ಟುವಂತೆ ಶಾಪ ಪಡೆದು ಒಂದನೇ ಜನ್ಮದಲ್ಲಿ ಹಿರಣ್ಯಾಕ್ಷ–ಹಿರಣ್ಯಕಶಿಪುಗಳಾಗಿಯೂ ಎರಡನೇ ಜನ್ಮದಲ್ಲಿ ರಾವಣ–ಕುಂಭಕರ್ಣರಾಗಿಯೂ ಮೂರನೇ ಜನ್ಮದಲ್ಲಿ ಶಿಶುಪಾಲ–ದಂತವಕ್ತ್ರರಾಗಿಯೂ ಹುಟ್ಟಿ ವಿಷ್ಣುವನ್ನು ದ್ವೇಷಿಸುತ್ತಾ ಆ ಪರಮಾತ್ಮನಿಂದಲೇ ಹತರಾದರು.

ಹಿರಣ್ಯಕಶಿಪುವು ಯಾವಾಗಲೂ ತನ್ನ ದ್ವೇಷಿಯಾದ ವಿಷ್ಣುವಿನ ನಾಮಸಂಕೀರ್ತನ ಮತ್ತು ಪೂಜೆಗಳನ್ನು ಮಾಡುತ್ತಿದ್ದ ಪ್ರಹ್ಲಾದನಿಗೆ ಶಂಬರಮಾಯೆ ಅಭಿಚಾರಿಕ ಕೃತ್ಯ ಸರ್ಪದಂಶನ ಸಮುದ್ರಪಾತನ ಮೊದಲಾದ ನಾನಾ ರೂಪವಾದ ಶಿಕ್ಷೆಗಳನ್ನು ಕೊಡುತ್ತಿದ್ದನು. ಹೇಗಾದರೂ ತನ್ನ ದಾರಿಗೆ ತರಬೇಕೆಂದು ಮಾಡಿದ ಪ್ರಯತ್ನಗಳೆಲ್ಲವೂ ವಿಫಲವಾದುದರಿಂದ ಕೊನೆಗೆ ಅವನನ್ನು ಕೊಲ್ಲುವುದ

ಕ್ಕಾಗಿ ಖಡ್ಗವನ್ನು ಮೇಲಕ್ಕೆ ಎತ್ತಿದಾಗ ಯಾವ ದೇವದಾನವಮನುಷ್ಯತಿರ್ಯಕ್ಪ್ರಾಣಿಗಳಿಂದಲೂ ತನಗೆ ಮರಣವುಂಟಾಗಕೂಡದೆಂದು ವರವನ್ನು ಪಡೆದಿದ್ದ ಹಿರಣ್ಯಕಶಿಪುವನ್ನು ಪರಮಾತ್ಮನು ನೃಸಿಂಹಾವತಾರವನ್ನು ತಾಳಿ ಸಂಹರಿಸಿದನು. "यस्त्वया मन्दभाग्यो मदन्यो जगदीश्वरः। क्वासौ यदि स सर्वत्र कस्मात् स्तम्भे न दृश्यते॥ सोऽहं विकत्थमानस्य शिरः कायाद्धरामि ते। गोपायेत हरिस्त्वाद्य यस्ते शरणमीप्सितम्॥ एवं दुरुक्तैर्मुहुरर्दयन् रुषा सुतं महाभागवतं महासुरः। खड्गं प्रगृह्योत्पतितो वरासनात् स्तम्भं तताडातिबलः स्वमुष्टिना॥ तदैव तस्मिन् निनदोऽतिभीषणो बभूव येनाण्डकटाहमस्फुटत्॥ सत्यं विधातुं निजभृत्यभाषितं व्याप्तिं च भूतेष्वखिलेषु चात्मनः। अदृश्यतात्यद्भुतरूपमुद्वहन् स्तम्भे सभायां न मृगं न मानुषम्॥ स सत्त्वमेनं परितोऽपि पश्यन् स्तम्भस्य मध्यादनु निर्जिहानम्। नायं मृगो नापि नरो विचित्रमहो किमेतन्नृमृगेन्द्ररूपम्॥ मीमांसमानस्य समुत्थितोऽग्रतो नृसिंहरूपस्तदलं भयानकम्। प्रतप्त-चामीकरचण्डलोचनं स्फुरत्सटाकेसरजृम्भिताननम्॥ ......प्रायेण मेऽयं हरिणोरुमायया वधः स्मृतोऽनेन समुद्यतेन किम्। एवं ब्रुवंस्त्वभ्यपतत् गदायुधो नदन् नृसिंहं प्रति दैत्यकुञ्जरः॥ अलक्षितोऽग्नौ पतितः पतङ्गमो यथा नृसिंहौजसि सोऽसुरस्तदा। विष्वक् स्फुरन्तं ग्रहणातुरं हरिः व्यालो यथाखुं कुलिशाक्षतत्वचम्॥ द्वार्यूर आपत्य ददार लीलया नखैर्यथाहि गरुडो महाविषम्" भाग० ७-८।

**हिरण्यकोश ಹಿರಣ್ಯಕೋಶ** (पुं०) ಕರಗಿಸಿದ ಮತ್ತು ಕರಗಿಸದೆ ಗಟ್ಟಿಯಾಗಿರುವ ಚಿನ್ನ ಮತ್ತು ಬೆಳ್ಳಿ. "स्यात्कोशश्च हिरण्यं च हेमरूप्ये कृताकृते" अम०।

**हिरण्यगर्भ ಹಿರಣ್ಯಗರ್ಭ** (पुं०) 1. ವಿಷ್ಣು, ನಾರಾಯಣ. हिरण्यसाम्यात् हितं रमणीयं वा हिरण्यं परमं धाम — तस्य गर्भभूतः तत्र नित्यवासात्। "हिरण्यं परमं धाम हिरण्यस्य समानतः। हिरण्यगर्भः स प्रोक्तः तस्मिन् वसति यः सदा" इति निरुक्तिः। "हिरण्यगर्भो भूगर्भः" वि० स०। 2. ಬ್ರಹ್ಮ, ಚತುರ್ಮುಖ. हिरण्यं हेममयाण्डं गर्भः उत्पत्तिस्थानमस्य। "सोऽभिध्याय शरीरात्स्वात् सिसृक्षुर्विविधाः प्रजाः। अप एव ससर्जादौ तासु वीर्यमवासृजत्॥ तदण्डमभवद्धैमं सहस्रांशुसमप्रभम्। तस्मिन् जज्ञे स्वयं ब्रह्मा सर्वलोकपितामहः" मनु० १-८, ९।

**हिरण्यद ಹಿರಣ್ಯದ** (पुं०) 1. ಸಮುದ್ರ, ಕಡಲು. हिरण्यं ददाति — डु दाञ् (दाने) "कः" (३-२-३)। (वि०) 2. ಸುವರ್ಣವನ್ನು ಕೊಡುವವನು. "भूमिदो भूमिमाप्नोति दीर्घमायुर्हिरण्यदः। गृहदोऽग्र्याणि वेश्मानि रूप्यदो रूपमुत्तमम्" मनु० ४-२३०। **-दा -ದಾ.** (स्त्री०) 3. ಪೃಥ್ವಿ, ಭೂಮಿ.

**हिरण्यनाभ ಹಿರಣ್ಯನಾಭ** (पुं०) 1. ವಿಷ್ಣು. हिरण्मेरुरूपं रुक्मं नाभावस्य — "अच्" (५-४-७५)। "हिरण्यनाभः सौन्दर्यनाभिरस्येति स स्मृतः" इति निरुक्तिः। "हिरण्यनाभः सुतपाः" वि० स०। 2. ಮೈನಾಕ ಪರ್ವತ. "हिरण्यनाभो मैनाकः सुदारुः पारियात्रकः" वैज०।

**हिरण्यबाहु ಹಿರಣ್ಯಬಾಹು** (पुं०) 1. ಶಿವ. 2. ಶೋಣ ನದ.

**हिरण्यरेतस् ಹಿರಣ್ಯರೇತಸ್** (पुं०) 1. ಅಗ್ನಿ. हिरण्यं रेतोऽस्य। "ज्वलितं न हिरण्यरेतसं चयमास्कन्दति भस्मनां रजः। अभिभूतिभयादसूनतः सुखमुज्झन्ति न धाम मानिनः" किरा० २-२०। 2. ಸೂರ್ಯ. "हिरण्यरेताः पुंसि स्याद्दिवाकरहविर्भुजोः" मेदि०। 3. ಶಿವ, ಈಶ್ವರ. 4. ಪರಳುಗಿಡ. 5. ಚಿತ್ರಮೂಲದ ಗಿಡ.

**हिरण्यवर्णा ಹಿರಣ್ಯವರ್ಣಾ** (स्त्री०) ನದಿ, ಹೊಳೆ. "नदी स्रोतस्विनी कुल्या स्रवन्ती निम्नगा सरित्। हिरण्यवर्णा गिरिजा रोधोवक्त्रा पयस्विनी" वैज०।

**हिरण्यवाह ಹಿರಣ್ಯವಾಹ** (पुं०) ಶೋಣನದ. हिरण्यं वहति—वह् (प्रापणे) "अण्" (३-२-१)। "शोणो हिरण्यवाहः स्यात्" अम०।

**हिरण्याक्ष ಹಿರಣ್ಯಾಕ್ಷ** (पुं०) ದಿತಿ–ಕಶ್ಯಪರ ಮಗ, ಹಿರಣ್ಯಕಶಿಪುವಿನ ಸಹೋದರ. ಇವನು ಉಗ್ರವಾದ ತಪಸ್ಸನ್ನು ಮಾಡಿ ಬ್ರಹ್ಮನಿಂದ ಅನೇಕ ವರಗಳನ್ನು ಪಡೆದು ಜಗತ್ತೆಲ್ಲವನ್ನೂ ಪೀಡಿಸುತ್ತಿದ್ದನು. ತನ್ನ ವೀರ್ಯಮದದಿಂದ ಇವನು ಭೂಮಿಯನ್ನು ಬಲಾತ್ಕಾರವಾಗಿ ಹಿಡಿದು ಸಮುದ್ರದೊಳಗಿರಿಸಿದನು. ಮಹಾವಿಷ್ಣುವು ವರಾಹಾವತಾರವನ್ನು ತಾಳಿ ಇವನನ್ನು ಸಂಹರಿಸಿ ಭೂಮಿಯನ್ನು ಉದ್ಧರಿಸಿದನು.

**हिरुक् ಹಿರುಕ್** (अव्य०) 1. ವಿನಾ, ಹೊರತು. 2. ಸಮೀಪ. 3. ಮಧ್ಯ. "हिरुक्शब्दो विनार्थे च मध्यार्थेऽपि च दृश्यते" मेदि०।

हिलमोचि ಹಿಲಮೋಚಿ
हिलमोचिका ಹಿಲಮೋಚಿಕಾ (स्त्री०) ಕೇರೆಸೊಪ್ಪು.
हिलमोची ಹಿಲಮೋಚೀ

हिल ಹಿಲ (पुं०) ಸರಕುಟ ಹಕ್ಕಿ.

हिल्लोल ಹಿಲ್ಲೋಲ (पुं०) 1. ಅಲೆ, ತೆರೆ. 2. ಒಂದು ವಿಧ ರತಿಬಂಧ.

हिवु(बु)क ಹಿವು(ಬು)ಕ (न०) ಒಂದು ಲಗ್ನದಿಂದ ಮುಂದಿನ ನಾಲ್ಕನೆಯ ಲಗ್ನ.

ही ಹೀ (अव्य०) 1. ವಿಸ್ಮಯ, ಆಶ್ಚರ್ಯ. "ही चित्रं लक्ष्मणेनोदे रावणिश्च तिरोदधे" भट्टि० १४-३९। 2. ಹೇತು, ಕಾರಣ. 3. ದಣಿವು, ಆಯಾಸ, ಬಳಲಿಕೆ. 4. ದುಃಖ, ಕಷ್ಟ. 5. ವಿಷಾದ. "ही दुःखे हेतावाख्यातो विषादे विस्मयेऽपि च" मेदि०।

हीन ಹೀನ (वि०) 1. ದುರ್ಬಲನಾದವನು, ಶಕ್ತಿ ಕುಂದಿದವನು. ओ हाक् (त्यागे) "क्तः" (३-४-७१)। "हीनः शत्रुर्निहन्तव्यो यावन्न बलवान् भवेत्" पञ्चत० ३-१२८। 2. ಊನವಾಗಿರುವ, ರಹಿತನಾಗಿರುವ, ಹೊರತಾಗಿರುವ. "तया हीनं विधातर्मां कथं पश्यन्न दूयसे। सिक्तं स्वयमिव स्नेहाद्वन्ध्यमाश्रमवृक्षकम्" रघु० १-७०। 3. ಬಿಡಲ್ಪಟ್ಟ, ತ್ಯಜಿಸಲ್ಪಟ್ಟ. 4. ಕಡಮೆಯಾಗಿರುವ, ನ್ಯೂನವಾಗಿರುವ, ಕೊರತೆಯಿರುವ. "हीनाङ्गीवाधिकाङ्गी वा या भवेत्कन्यका नृणाम्" पञ्चत० ५-९०। "हीनातिरिक्तगात्रो वा तमप्यपनयेत्पुनः" मनु० ३-२४२। 5. ಅಧಮನಾದ, ನೀಚನಾದ. 6. ಕಡಮೆಗುಣದ, ಕೆಳದರ್ಜೆಯ. "हीनान्नवस्त्रवेषः स्यात् सर्वदा गुरुसन्निधौ। उत्तिष्ठेत्प्रथमं चास्य चरमं चैव संविशेत्" मनु० २-१९४। 7. ಐದು ವಿಧ ಪ್ರತಿವಾದಿಗಳಲ್ಲೊಬ್ಬ ಪ್ರತಿವಾದಿ. (1) अन्यवादी (2) क्रियाद्वेषी (3) नोपस्थायी (4) निरुत्तरः ಮತ್ತು (5) आहूतप्रपलायी ಎಂದು ಪ್ರತಿವಾದಿಯು ಐದು ವಿಧ.

हीनकुल ಹೀನಕುಲ (न०) ನೀಚವಂಶ.

हीनकुलज ಹೀನಕುಲಜ (वि०) ನೀಚವಂಶದಲ್ಲಿ ಹುಟ್ಟಿದವನು. हीनकुले जायते—जनी (प्रादुर्भावे) "डः" (३-२-९७)।

हीनवर्ण ಹೀನವರ್ಣ (वि०) ನಿಮ್ನವರ್ಗದವನು.

हीनवाद ಹೀನವಾದ (पुं०) ಅಸಂಬದ್ಧವಾದ ವಾದ, ಅಸಂಗತವಾದ ವಾದ, ವಿರುದ್ಧವಾಗಿ ಸಾಕ್ಷ್ಯ ಹೇಳುವುದು.

हीनवादिन् ಹೀನವಾದಿನ್ (वि०) ಅಸಂಬದ್ಧವಾಗಿ ವಾದಿಸುವವನು, ಸಂಬಂಧವಿಲ್ಲದೆ ವಿರುದ್ಧವಾಗಿ ಮಾತಾಡುವವನು. हीनं वदति—वद (व्यक्तायां वाचि) "णिनिः" (३-२-७८)। ಪೂರ್ವಾಪರಸಂಬಂಧವಿಲ್ಲದೆ ವಿರುದ್ಧವಾಗಿ ಮಾತನಾಡುವುದು ಹೀನವಾದ. ಹಾಗೆ ವಿರುದ್ಧವಾಗಿ ಹೇಳಿ ಋಜುವಾತು ಮಾಡಲು ಯತ್ನಿಸುವವನು ಹೀನವಾದಿ. "पूर्ववादं परित्यज्य योऽन्यमालम्बते पुनः। वादसंक्रमणात् ज्ञेयो हीनवादी स वै नरः"।

हीनसख्य ಹೀನಸಖ್ಯ (न०) ನೀಚನೊಡನೆ ಸ್ನೇಹ, ಅಸಭ್ಯನೊಡನೆ ಮಾಡುವ ಸ್ನೇಹ.

हीनाङ्ग ಹೀನಾಂಗ (वि०) ಊನವಾದ ಅಂಗವುಳ್ಳವನು, ಅವಯವಗಳ ಕೊರತೆಯುಳ್ಳವನು. हीनमङ्गं यस्य। ಕೀಳುವರ್ಣದವನೆಂದು ದರಿದ್ರನೆಂದು ಕುರೂಪನೆಂದು ಅಸಮರ್ಥನೆಂದು ಅಂಗವಿಕಲನೆಂದು ಅಧಿಕಾಂಗನೆಂದು ತಿಳಿದು (ನೋಡಿ) ಯಾರನ್ನೂ ಪರಿಹಾಸ ಮಾಡಕೂಡದು. "जातिहीनं वित्तहीनं रूपहीनमदक्षिणम्। हीनाङ्गमतिरिक्ताङ्गं तेन दोषेण नाक्षिपेत्॥

हीनाङ्गी ಹೀನಾಂಗೀ (स्त्री०) ಸಣ್ಣಜಾತಿಯ ಇರುವೆ. हीनमङ्गं यस्य—वा "ङीप्" (४-१-५५)।

हीयमान ಹೀಯಮಾನ (वि०) ತ್ಯಜಿಸಲ್ಪಡುತ್ತಿರುವ, ತೊರೆಯಲ್ಪಡುತ್ತಿರುವ. ओ हाक् (त्यागे) कर्म० "शानच्" (३-२-१२४)।

हीर ಹೀರ (पुं०) 1. ಶಿವ, ಪರಮೇಶ್ವರ. हरति सर्वं प्रलये—हृञ् (हरणे) "अच्" (३-१-१३४)। पृषो०। 2. ಶ್ರೀಹರ್ಷನ ತಂದೆ. "श्रीहर्षं कविराजराजिमुकुटालङ्कारहीरः सुतं श्रीहीरः सुषुवे जितेन्द्रियचयं मामल्लदेवी च यम्" नैष० १-१४५। ಹೀಗೆ ಹೀರಕವಿಯ ಹೆಸರು ನೈಷಧಕಾವ್ಯದ ಪ್ರತಿಸರ್ಗದ ಕೊನೆಯ ಶ್ಲೋಕದ ಪೂರ್ವಾರ್ಧದಲ್ಲಿ ಉಕ್ತವಾಗಿದೆ. 3. ಸರ್ಪ, ಹಾವು. 4. ಹಾರ, ಸರ. (पुंन०) 5. ವಜ್ರಾಯುಧ. "हीरः शङ्करवज्रयोः" मेदि०। 6. ಸಿಂಹ.

हीरक ಹೀರಕ (पुं०) ವಜ್ರ. हीर स्वार्थे "कन्"। "वज्रोऽस्त्री हीरकः पुमान्" वैज०।

हीरा ಹೀರಾ (स्त्री०) 1. ಲಕ್ಷ್ಮಿ. 2. ಪಿಪೀಲಿಕೆ, ಇರುವೆ. "हीरा तैलाम्बुकालक्ष्म्योः पुंसि शङ्करवज्रयोः" मेदि०। 3. ಶೀವನೆಯ ಮರ. "काश्मीरी काश्मरी हीरा कश्मर्यः पीतरोहिणी," भावप्र०।

**हीराङ्ग** ಹೀರಾಂಗ (ಪುಂ) ಇಂದ್ರನ ವಜ್ರಾಯುಧ. हीरस्येव कठिनमङ्गं यस्य ।

**हील** ಹೀಲ (ನಂ) ವೀರ್ಯ, ರೇತಸ್ಸು.

**हीही** ಹೀಹೀ (अव्य०) 1. ಆಶ್ಚರ್ಯ. 2. ಹಾಸ್ಯ. "हीहीशब्दो विस्मयहास्ययोः" मेदि० ।

**हु** – दानादनयोः (जुहो० पर० सक० अनि०) ।

| | | |
|---|---|---|
| जुहोति | जुहुतः | जुह्वति । |
| जुहोषि | जुहुथः | जुहुथ । |
| जुहोमि | जुहुवः | जुहुमः । |

जुहवां चकार, –बभूव, –आस ।

| | | |
|---|---|---|
| जुहाव | जुहुवतुः | जुहुवुः । |
| जुहविथ / जुहोथ | जुहुवतुः | जुहुथ । |
| जुहाव / जुहव | जुहुविव | जुहुविम । |

होता । होष्यति । जुहोतु, जुहुतात् जुहुताम् जुह्वतु । जुहुधि, जुहुतात् जुहुतं जुहुत । जुहवानि जुहवाव जुहवाम । अजुहोत् । जुहुयात् । ಇತ್ಯಾದಿ. ಹೋಮ ಮಾಡು, ದೇವತೆಗಳಿಗೆ ಹವಿಸ್ಸನ್ನು ಅರ್ಪಿಸು. "विहाय-लक्ष्मीपतिलक्ष्म कार्मुकं जटाधरः सन् जुहुधीह पावकम्" किरा० १-४४ ।

कर्मणि:—हूयते । जुहवां चक्रे, –बभूवे, –आसे । जुहुवे । हाविता, होता । हाविष्यते, होष्यते । हूयताम् । अहूयत । ಇತ್ಯಾದಿ. "तैर्हवींषि जुहवां बभूविरे" माघ० १४-२२ ।

कृत्सु:—होतव्यम् । हवनीयम् । हव्यम्, हाव्यम् । हुतः । हुतवान् । जुह्वत्, –ती । हुतम् । हवनम् ।

**हुड** ಹುಡ (ಪುಂ) 1. ಮೇಷ, ಟಗರು. 2. ಕಳ್ಳರು ಪ್ರವೇಶಿಸದಂತೆ ತಡೆಯಲು ಭೂಮಿಯಲ್ಲಿ ನೆಟ್ಟಿರುವ ಚೂಪಾದ ಕಬ್ಬಿಣದ ಸಲಾಕಿ (ಗೂಟ) ಗಳು. 3. ಕೋಲು, ದೊಣ್ಣೆ. 4. ಮೇಘ, ಮೋಡ. 5. ಬೇಲಿ.

**हुडक्क** ಹುಡಕ್ಕ / **हुडुक्क** ಹುಡುಕ್ಕ (ಪುನಂ) 1. ಕಂಚಿನ ಗೋಮುಖವೆಂಬ ವಾದ್ಯ. 2. ಮದ್ದಳೆ. "वाद्यप्रभेदा डमरुमड्डुडिण्डिम-झर्झराः । मर्दलः पणवोऽन्ये च" अम० । "हुडुक्कस्तु हुडक्कोऽस्त्री समौ पणवमर्दलौ" वैज० । "विपञ्चिरा-च्छादि न वेणुभिर्न ते प्रणीतगीतैर्न च तेऽपि झर्झरैः । न ते हुडुक्केन न सोऽपि ढक्कया न मर्दलैः सापि न तेऽपि ढक्कया" नैष० १५-१७ । 3. ಮತ್ತ, ಮದಿಸಿದವನು. 4. ದಾತ್ಯೂಹ ಪಕ್ಷಿ, ನೀರುಕೋಳಿ. "हुडुक्को मदमत्ते स्याद्दात्यूहे वाद्यभिद्यपि" हेम० ।

**हुडत्** ಹುಡತ್ (ನಂ) 1. ವೃಷಭದ ಧ್ವನಿ, ಎತ್ತಿನ ಶಬ್ದ. 2. ಬೆದರಿಕೆಯ ಶಬ್ದ.

**हुडु** ಹುಡು (ಪುಂ) ಮೇಷ, ಟಗರು. पञ्चतं० १-१६२ ।

**हुडुम्ब** ಹುಡುಂಬ (ಪುಂ) ಹುರಿದ ಅವಲಕ್ಕಿ, ಅವಲಕ್ಕಿ ಪುರಿ.

**हुण** ಹುಣ (ಪುಂ) ವಿಷ್ಣು, ಶ್ರೀಪತಿ, ಅಚ್ಯುತ. "पीताम्बरो हृषीकेशो विष्वक्सेनश्चतुर्भुजः । श्रीवत्सः श्रीपतिः शार्ङ्गी श्रीवत्साङ्कोऽच्युतो हुणः" वैज० ।

**हुण्ड** ಹುಂಡ (ಪುಂ) 1. ವ್ಯಾಘ್ರ, ಹುಲಿ. 2. ಹಳ್ಳಿಯಲ್ಲಿ ಬೆಳೆದ ವರಾಹ, ಗ್ರಾಮ್ಯಸೂಕರ. 3. ಮೂರ್ಖ. 4. ಮೇಷ, ಟಗರು. 5. ಒಬ್ಬ ರಾಕ್ಷಸ.

**हुत** ಹುತ (ನಂ) 1. ಹೋಮ, ಆಹುತಿ, ನೈವೇದ್ಯ, ಬಲಿ. हु (दानादनयोः) "क्तः" (३-३-११४) । "मन्त्रोऽ-हमहमेवाज्यमहमग्निरहं हुतम्" गीता ९-१६ । "निधत्से हुतमर्काय स पर्जन्योऽभिवर्षति" कुमा० १०-२० । 2. ಹೋಮಮಾಡಲ್ಪಟ್ಟ, ಅರ್ಪಿಸಲ್ಪಟ್ಟ. हु "क्तः" (३-२-१०२) । "गन्धतोऽपि हुतहव्यसम्भवादेहिना-मदहदोघमंहसाम्" माघ० १४-२७ । 3. ತೃಪ್ತಿಪಡಿಸಲ್ಪಟ್ಟ. "प्रदक्षिणीकृत्य हुतं हुताशमनन्तरं भर्तुररुन्धतीं च । धेनुं सवत्सां च नृपः प्रतस्थे सन्मङ्गलोदग्रतर-प्रभावः" रघु० २-७१ ।

**हुतभुक्प्रिया** ಹುತಭುಕ್‌ಪ್ರಿಯಾ (ಸ್ತ್ರೀ०) ಅಗ್ನಿಯ ಪತ್ನಿ, ಸ್ವಾಹಾದೇವಿ. हुतभुजः प्रिया । "अग्नायी स्वाहा च हुतभुक्प्रिया" अम० ।

**हुतभुक्(ज्)** ಹುತಭುಕ್ (ಜ್) (ಪುಂ) 1. ಅಗ್ನಿ. हुतं भुनक्ति — भुज (परिपालनाभ्यवहारयोः) "क्विप्" (३-२-१७८) । "आविर्भूते शशिनि तमसा रिच्य-मानेव रात्रिः नैशस्यार्चिर्हुतभुज इव छिन्नभूयिष्ठधूमा" विक्र० १-९ । 2. ವಿಷ್ಣು, ನಾರಾಯಣ. 3. ಶಿವ, ಪರಮೇಶ್ವರ. 4. ಹರಳು ಗಿಡ.

**हुतवह** ಹುತವಹ (ಪುಂ) ಅಗ್ನಿ. वहति — वह (प्रापणे) "अच्" (३-१-१३४) । हुतस्य वहः । "तथापीदं शश्वत्परिचितविविक्तेन मनसा जनाकीर्णं मन्ये हुतवह-परीतं गृहमिव" शाकु० ५-१० ।

**हुताश** ಹುತಾಶ (ಪುಂ) 1. ಅಗ್ನಿ. हुतमश्नाति — अश (भोजने) "अण्" (३-२-१) । "हवींषि मन्त्रपूतानि हुताश त्वयि जुह्वतः । तपस्विनः तपस्सिद्धिं यान्ति त्वं तपनां प्रभुः" कुमा० १०-१९ । 2. ಅಗ್ನಿವೇಶಮುನಿ.

**हुताशन ಹುತಾಶನ** (पुं०) 1. ಅಗ್ನಿ. हुतं होमद्रव्यमशनमस्य । "स राज्यं गुरुणा दत्तं प्रतिपद्याधिकं बभौ । दिनान्ते निहितं तेजः सवित्रेव हुताशनः" रघु० ४-१। 2. ಶಿವ, ಪರಮೇಶ್ವರ.

**हुति ಹುತಿ** (स्त्री०) ಆಹುತಿದ್ರವ್ಯ, ಘೃತ.

**हुम् ಹುಮ್** (अव्य०) 1. ಪ್ರಶ್ನೆ. 2. ವಿತರ್ಕ, ಸಂಶಯ. "चैत्रो हुम् मैत्रो हुम्" । 3. ಪರಿಹಾಸ್ಯ. "वृद्धास्ते न विचारणीयचरितास्तिष्ठन्तु हुं वर्तते" उ० रा० ५-२४। 4. ನೆನಪು. "रामो नाम बभूव हुं तदबला सीतेति हुम् तौ पितुर्वाचा पञ्चवटीवने निवसतस्तामाहरद्रावणः"। 5. ಅಪಾಕರಣ. 6. ಅಭ್ಯನುಜ್ಞೆ, ಸಮ್ಮತಿ, ಒಪ್ಪಿಗೆ. 7. ಕೋಪ. 8. ಭಯ. 9. ಹೆದರಿಸುವುದು. 10. ಇಷ್ಟವಿಲ್ಲದಿರುವಿಕೆ. 11. ನಿಂದೆ, ತೆಗಳಿಕೆ. 12. ಲಜ್ಜೆ. "हुं वितर्के परिप्रश्ने हुं लज्जायां निवारणे। मयादौ भर्त्सने कोपेऽप्यनिच्छायां च कुत्सने" हेम० ।

**हुंकार ಹುಂಕಾರ** (पुं०)1. ಧನುಸ್ಸಿನ ಮೌರ್ವಿಯ ಶಬ್ದ. "हुंकारेणैव धनुषः स हि विघ्नानपोहति" शाकु० ३-२। 2. हुम् ಎಂದು ಶಬ್ದಮಾಡುವುದು, ಬೆದರಿಕೆಯ ಮಾತು. "रुद्राणामपि मूर्धानः क्षतहुंकारशंसिनः" कुमा० २-२६।

**हुंकृत ಹುಂಕೃತ**(न०) 1. ಕಾಡುಹಂದಿಯ ಗುರುಗುಟ್ಟುವ ಶಬ್ದ. (त्रि०) 2. ಹುಂಕಾರದಿಂದ ತಡೆಯಲ್ಪಟ್ಟ. "लज्जया प्रथममेव हुंकृतः साध्वसेन बलिनाथ तर्जितः" नैष० १८-४२। —कृतिः —ಕೃತಿ, हुं ಎಂಬ ಶಬ್ದ, ವೃಷಭಗಳ ಗುಟುರು ಶಬ್ದ. "वर्गादिगवां हुंकृतिचारु निर्यतीम्" माघ० १२-४१।

**हुर्च्छन ಹುರ್ಚ್ಛನ** (न०) ಕಪಟ, ಠಕ್ಕು, ಅಪ್ರಾಮಾಣಿಕತೆ. हुर्च्छा (मोहसमुच्छ्राययोः) "ल्युट्" (३-३-११५)।

**हुहु ಹುಹು** (पुं०) ಗಂಧರ್ವರಲ್ಲಿ ಒಂದು ಭೇದ. ह्वेञ् (स्पर्धायां शब्दे च) "क्विप्"। सम्प्रसारणम्। आभीक्ष्ण्ये द्वित्वम्। निपा०। वा ह्रस्वः।

**ಹೂ** (अव्य०) 1. ಆಹ್ವಾನ, ಕರೆ. 2. ನಿಂದೆ, ದೂಷಣೆ. 3. ತಿರಸ್ಕಾರ, ಧಿಕ್ಕಾರ, ತಾತ್ಸಾರ, ಅಲಕ್ಷ್ಯ. 4. ಗರ್ವ, ಅಹಂಕಾರ. 5. ಕೊರಗು, ದುಃಖ, ವ್ಯಥೆ.

**हूङ्कार ಹೂಂಕಾರ** (पुं०) ಬೆದರಿಕೆಯ ಧ್ವನಿ, ಭಯಂಕರವಾದ ಶಬ್ದ.

**हूण ಹೂಣ** (पुं०) ಮ್ಲೇಚ್ಛ ಜಾತಿಯವನು. "श्वपाकश्च तुरुष्कस्तु हूणो यवन इत्यपि। लोकबाह्यस्तु यो वाजिगवाश्वाद्याचारवर्जितः ।। म्लेच्छः किरातशबरपुलिन्दाद्यास्तु तद्भिदाः" ।।

**हूत ಹೂತ** (वि०)1. ಕರೆಯಲ್ಪಟ್ಟವನು. ह्वेञ् (स्पर्धायां च) "क्तः" (३-२-१०२)। सम्प्रसारणम् च। हूतायाः प्रियसखि कामिनान्यनाम्ना ह्रीमत्याः सरसि गलन्मुखेन्दुकान्तेः" माघ० ८-४१। 2. ಸ್ಪರ್ಧಿಸಲ್ಪಟ್ಟ, ಮೇಲಾದಲ್ಪಟ್ಟ.

**हूति ಹೂತಿ** (स्त्री०) 1. ಆಹ್ವಾನ, ಕರೆ. ह्वेञ् (स्पर्धायां शब्दे च) "क्तिन्" (३-३-९४)। "हरिहेतिहूति मिथुनं पततोः" माघ० ९-१५। 2. ಸ್ಪರ್ಧೆ.

**हूम् ಹೂಮ್** (अव्य०) 1. ಪ್ರಶ್ನೆ. 2. ಸಂಶಯ. 3. ಸಮ್ಮತಿ, ಒಪ್ಪಿಗೆ. 4. ಕೋಪ. 5. ಭಯ. 6. ನಿಂದೆ, ದೂಷಣೆ. 7. ಅವಜ್ಞೆ, ತಿರಸ್ಕಾರ, ಧಿಕ್ಕಾರ. 8. ಪರಿಹಾಸ್ಯ. "हूं स्यात्प्रश्नवितर्कयोः" मेदि०।

**हूयमान ಹೂಯಮಾನ** (वि०) ಅರ್ಪಿಸಲ್ಪಡುತ್ತಿರುವ, ಅಗ್ನಿಯಲ್ಲಿ ಹೋಮಮಾಡಲ್ಪಡುತ್ತಿರುವ. हु (दानादनयोः) कर्म० "शानच्" (३-२-१२४)। "नाकिनः कथमपि प्रतीक्षितु हूयमानमनले वियेहिरे" माघ० १४-२९।

**हूरव ಹೂರವ** (पुं०) ಸೃಗಾಲ, ನರಿ, ಜಂಬುಕ. हू इति रवोऽस्य।

**हूर्च्छन ಹೂರ್ಚ್ಛನ**(न०) ಕಪಟ, ಠಕ್ಕು, ಅಪ್ರಾಮಾಣಿಕತೆ.

**हूहु ಹೂಹು** / **हूहू ಹೂಹೂ** (पुं०) ಗಂಧರ್ವರಲ್ಲಿ ಒಂದು ಭೇದ. "हाहा हूहूश्चैवमाद्या गन्धर्वास्त्रिदिवौकसाम्" अम०।

**हृच्छय ಹೃಚ್ಛಯ** (पुं०) 1. ಕಾಮದೇವ, ಮನ್ಮಥ. हृदि शेते—शीङ् (स्वप्ने) "अच्" (३-२-१५)। 2. ಆತ್ಮ.

**हृच्छूल ಹೃಚ್ಛೂಲ** (न०) ಹೃದಯದ ವೇದನೆ.

**हृणीया ಹೃಣೀಯಾ** (स्त्री०) 1. ನಿಂದೆ, ಅಧಿಕ್ಷೇಪ. 2. ಲಜ್ಜೆ, ನಾಚಿಕೆ, ಅವಮಾನ. 3. ದಯೆ, ಅನುಕಂಪ, ಕನಿಕರ.

**हृत्(द्) ಹೃತ್(ದ್)** (न०) 1. ಹೃದಯ, ಮನಸ್ಸು. हरति—हृञ् (हरणे) "दुक्" (उ० ४-१००)। 2. ವಕ್ಷಸ್ಸು, ಎದೆ. "स्वानुरागमनघः कमलायां सूचयन्नपि हृदि न्यसनेन" नैष० २१-५०। 3. ಅಗ್ರಮಾಂಸ, ಹೃದಯದ ಮುಖ್ಯ ಮಾಂಸ. "अग्रमांसं तु हृदयं हृद्रसा स्वामिषो रसः" वैज०।

**हृत्कम्प ಹೃತ್ಕಂಪ** (पुं०) ಎದೆಯ ನಡುಕ, ಹೃದಯದ ಬಡಿತ.

**हृत ಹೃತ** (वि०) 1. ಒಯ್ಯಲ್ಪಟ್ಟ, ಸಾಗಿಸಲ್ಪಟ್ಟ. हृञ् (हरणे) "क्तः" (३-२-१०२)। 2. ಅಳಿಸಲ್ಪಟ್ಟ, ತೊಡೆಯಲ್ಪಟ್ಟ. "तुष्ट्वैवं सपदि हृतेऽपि तत्र तेपे कस्याश्चित्स्फुटनखलक्ष्मणः सपत्न्या" माघ० ८-४१। 3. ತೆಗೆದುಹಾಕಲ್ಪಟ್ಟ, ಕಳಚಿಹಾಕಲ್ಪಟ್ಟ. "पर्यच्छे सरसि हृतेंऽशुके पयोभिर्लोलाक्षे सुरतगुरावपत्रपिष्णोः" माघ० ८-४६। "हृतोत्तरीयां प्रसभं सभायामागतह्रियः। मर्मच्छिदा नो वचसा निरतक्षन्नरातयः" किरा० ११-४९। 4. ಅಪಹರಿಸಲ್ಪಟ್ಟ, ಕದಿಯಲ್ಪಟ್ಟ. "हृतरत्नश्च्युतोद्योगो रक्षोभ्यः करदो दिवि" भट्टि० ५-२८। 5. ತೆಗೆದುಕೊಳ್ಳಲ್ಪಟ್ಟ, ಸ್ವಾಧೀನಪಡಿಸಿಕೊಳ್ಳಲ್ಪಟ್ಟ. "हृतसर्वस्वदीनानां व्रीडामपनुदन्निव। अदिशत् क्षौममाशानां यशोभिर्हंसलक्षणैः" याद० २२-२३३। 6. ಸಮ್ಮತಿಸಲ್ಪಟ್ಟ, ಅಂಗೀಕರಿಸಲ್ಪಟ್ಟ, ಒಪ್ಪಲ್ಪಟ್ಟ. 7. ಆಕರ್ಷಿಸಲ್ಪಟ್ಟ, ಮೋಹಗೊಳಿಸಲ್ಪಟ್ಟ. 8. ದೂರಕ್ಕೆ ಒಯ್ಯಲ್ಪಟ್ಟ. "तवास्मि गीतरागेण हारिणा प्रसभं हृतः" शाकु० १-५। 9. ಹೋಗಲಾಡಿಸಲ್ಪಟ್ಟ, ಕಡಮೆಮಾಡಲ್ಪಟ್ಟ. "हृतेऽपि भारे महतस्त्रपाभरादुवाह दुःखेन भृशानतं शिरः" माघ० १-५७। 10. ನಾಶಪಡಿಸಲ್ಪಟ್ಟ. 11. ಭಾಗಮಾಡಲ್ಪಟ್ಟ. 12. ವಿವಾಹ ಮಾಡಿಕೊಳ್ಳಲ್ಪಟ್ಟ.

**हृतधन ಹೃತಧನ** (वि०) ಧನವೆಲ್ಲವನ್ನೂ ಕಳೆದುಕೊಂಡವನು. हृतं धनम् यस्य।

**हृतवत् ಹೃತವತ್** (वि०) 1. ಅಪಹರಿಸಿದವನು, ಕದ್ದೊಯ್ದವನು. हृञ् (हरणे) "क्तवतुः" (३-२-१०२)। "हृतवत्यपि भीष्मकात्मजां त्वयि चक्षाम समर्थ एव तत्" माघ० १६-४८। 2. ಸಾಗಿಸಿದವನು, ಸ್ಥಳಾಂತರಕ್ಕೆ ಒಯ್ದವನು. 3. ಆಕರ್ಷಿಸಿದವನು, ವಶಪಡಿಸಿಕೊಂಡವನು. 4. ಕಡಮೆಮಾಡಿದವನು. 5. ನಾಶಪಡಿಸಿದವನು. 6. ಸ್ವಾಧೀನಪಡಿಸಿಕೊಂಡವನು. 7. ತೆಗೆದುಹಾಕಿದವನು, ಕಳಚಿಹಾಕಿದವನು. 8. ಭಾಗಮಾಡಿದವನು. 9. ವಿವಾಹಮಾಡಿಕೊಂಡವನು. 10. ತೆಗೆದುಕೊಂಡವನು, ಸ್ವೀಕರಿಸಿದವನು. स्त्रियां "ङीप्" (४-१-६)। **–वती –ವತೀ.**

**हृताधिकार ಹೃತಾಧಿಕಾರ** (वि०) ಅಧಿಕಾರವನ್ನು ಕಳೆದುಕೊಂಡವನು, ಅಧಿಕಾರದಿಂದ ತೆಗೆಯಲ್ಪಟ್ಟವನು. हृतोऽधिकारो यस्य।

**हृत्कमल ಹೃತ್ಕಮಲ** (न०) ಹೃದಯಕಮಲ, ದೇಹದೊಳಗೆ ಷೋಡಶನಾಡೀ ಚಕ್ರದ ಮಧ್ಯಭಾಗ. **–पद्मम् –ಪದ್ಮಮ್.** ಈ ಹೃದಯಕಮಲದಲ್ಲಿರುವ ಪರಮಾತ್ಮನೇ ಧ್ಯೇಯ ವಸ್ತು. "नित्यं न्यस्तषडङ्गचक्रनिहितं हृत्पद्ममध्योदितं पश्यन्ती शिवरूपिणं लयवशादात्मानमभ्यागता" मालती० ५-२। **–पङ्कजम् –ಪಂಕಜಮ್.**

**हृद् ಹೃದ್** (न०) 1. ಚಿತ್ತ, ಮನಸ್ಸು, ಅಂತಃಕರಣ. हरति—हृञ् (हरणे) "क्विप्" (३-२-१७८)। तुक् (६-१-७१)। तस्य दः। "हृतस्य यन्मन्त्रयते रहस्त्वां तद्वयकमामन्त्रयते मुखं यत्" नैष० ३-१०७। 2. ಹೃದಯ, ಎದೆ, ವಕ್ಷಸ್ಸು. "स्वानुरागमनघः कमलायां सूचयन्नपि हृदि न्यसनेन" नैष० २१-५०। "हृदाख्या चित्तवक्षसोः" विश्व०।

**हृदय ಹೃದಯ** (न०) 1. ಮನಸ್ಸು, ಚಿತ್ತ, ಅಂತಃಕರಣ. ह्रियते विषयैः—हृञ् (हरणे) "कयन्" दुगागमश्च (उ० ४-१००)। "हृदय एव तवास्ति स वल्लभस्तदपि किं दमयन्ति विषीदसि" नैष० ४-१०८। 2. ವಕ್ಷಸ್ಸು, ಎದೆ. "विरहिणां हृदयस्य भिदाभृतः कपिशितं पिशितं मदनाग्निना" माघ० ६-५। 3. ಹೃದಯಕಮಲ, ನ್ಯಾಸದ ಷಡಂಗಗಳಲ್ಲೊಂದು, ಷೋಡಶನಾಡೀಚಕ್ರದ ಮಧ್ಯಭಾಗ. "षडधिकदशनाडीचक्रमध्यस्थितात्मा" मालती० ५-१। ನಾಡೀಚಕ್ರದ ಮಧ್ಯಭಾಗವೇ ಹೃದಯ. ಆ ಹೃದಯಕಮಲದಲ್ಲಿರುವ ಆತ್ಮನನ್ನೇ ಉಪಾಸಕರು ಧ್ಯಾನಮಾಡುವರು. "नित्यं न्यस्तषडङ्गचक्रनिहितं हृत्पद्ममध्योदितं पश्यन्ती शिवरूपिणं लयवशादात्मानमभ्यागता" मालती० ५-२।

**हृदयकम्प ಹೃದಯಕಂಪ** (पुं०) ಎದೆಯ ನಡುಕ.

**हृदयग्रन्थि ಹೃದಯಗ್ರಂಥಿ** (पुं०) ಹೃದಯದ ಬಂಧ, ಅವಿದ್ಯಾಸಂಬಂಧದಿಂದ ವಿಕಾಸಕ್ಕೆ ಪ್ರತಿಬಂಧಕವಾದ ಪ್ರಕೃತಿ ಸಂಬಂಧ, ಮನಸ್ಸಿಗೆ ಅಂಟಿಕೊಂಡಿರುವ ರಾಗಾದಿಗಳು. हृदयस्य ग्रन्थिरिव। "भिद्यते हृदयग्रन्थिः छिद्यन्ते सर्वसंशयाः। क्षीयन्ते चास्य कर्माणि दृष्ट एवात्मनीश्वरे" भाग० १-२-२१।

**हृदयग्राहिन् ಹೃದಯಗ್ರಾಹಿನ್** (वि०) ಮನಸ್ಸಿಗೆ ಒಪ್ಪುವ, ಸಂಗತವಾದ, ಮನೋಹರವಾದ. हृदयं गृह्णाति —ग्रह (उपादाने) "णिनिः" (३-१-१३४)। "अपवर्जित विप्लवे शुचौ हृदयग्राहिणि मङ्गलास्पदे" किरा० २-२६।

**हृदयङ्गम ಹೃದಯಂಗಮ** (वि०) 1. ಮನೋಹರವಾದ, ಸುಂದರವಾದ. हृदयं गच्छति—गम्लृ (गतौ)

"खच्" (३-२-४७)। मुमागमः (६-३-६७)। "अहं तु तस्याः सर्वाकारहृदयङ्गमायाः सम्भाव्यमान स्नेहरसेन संनिधिना विषयीकृतोऽपि" मालती० १। 2. ಮನಸ್ಸನ್ನು ಆಕರ್ಷಿಸುವ, ಮಧುರವಾದ, ಮನಸ್ಸಿಗೆ ಸಂತೋಷಕರವಾದ. "इति तेभ्यः स्तुतीः श्रुत्वा यथार्था हृदयङ्गमाः" कुमा० २-१६। 3. ಪ್ರಿಯ, ಪ್ರೀತಿ ಪಾತ್ರ. (न०) 4. ಸಂಗತವಾದ ಮಾತು, ಯುಕ್ತಿಯಿಂದ ಕೂಡಿದ ವಾಕ್ಯ, ಮನಸ್ಸಿಗೆ ಒಪ್ಪುವ ಮಾತು. "सङ्गतं हृदयङ्गमम्" अम०।

**हृदयच्छिद् ಹೃದಯಚ್ಛಿದ್** (वि०) ಎದೆಯನ್ನು ಭೇದಿಸುವ, ಎದೆ ಬಿರಿಯುವ, ಮನಸ್ಸನ್ನು ಕತ್ತರಿಸುವ. हृदयं छिनत्ति—छिदिर् (द्वैधीकरणे) "क्विप्" (३-२-६१)। **–वेधिन् –ವೇಧಿನ್.**

**हृदयवत् ಹೃದಯವತ್** (वि०) ಸಹೃದಯ, ಒಳ್ಳೆಯ ಮನಸ್ಸುಳ್ಳವನು, ಶುದ್ಧವಾದ ಅಂತಃಕರಣವುಳ್ಳವನು. प्रशस्तं हृदयमस्यास्ति — हृदय "मतुप्" (५-२-९४)।

**हृदयस्थान ಹೃದಯಸ್ಥಾನ** (न०) ವಕ್ಷಸ್ಸು, ಎದೆ. हृदयस्य स्थानम्।

**हृदयालु ಹೃದಯಾಲು** (वि०) ಸಹೃದಯ, ಒಳ್ಳೆಯ ಮನಸ್ಸುಳ್ಳವನು, ಶುದ್ಧವಾದ ಅಂತಃಕರಣವುಳ್ಳವನು. प्रशस्तं हृदयमस्त्यस्य — हृदय वा "आलुः" (वा० ५-२-१२१)। पक्षे इनिठनी मतुप् च। हृदयिन् हृदयिक हृदयवत्। हृदयी हृदयिकः हृदयवान्।

**हृदयिक ಹೃದಯಿಕ** (वि०) ಶುದ್ಧವಾದ ಅಂತಃಕರಣವುಳ್ಳವನು, ಒಳ್ಳೆಯ ಮನಸ್ಸುಳ್ಳವನು. प्रशस्तं हृदयमस्यास्ति "ठन्" (५-२-११५)।

**हृदयिन् ಹೃದಯಿನ್** (वि०) ಒಳ್ಳೆಯ ಮನಸ್ಸುಳ್ಳವನು, ಶುದ್ಧವಾದ ಅಂತಃಕರಣವುಳ್ಳವನು. प्रशस्तं हृदयमस्यास्ति — हृदय "इनिः" (५-२-११५)।

**हृदयेश ಹೃದಯೇಶ** (पुं०) ಪತಿ, ಯಜಮಾನ, ಗಂಡ. हृदयस्य ईशः। **–ईश्वरः –ಈಶ್ವರ.** "हृदयेशो रतगुरुः" त्रिकाण्ड०। "ग्रन्थिमुद्ग्रथयितुं हृदयेशे वाससः स्पृशति मानधनायाः" माघ० १०-६३।

**हृदयेशय ಹೃದಯೇಶಯ** (पुं०) ಕಾಮ, ಮನ್ಮಥ. हृदये शेते—शीङ् (स्वप्ने) अधि० "अच्" (३-२-१५)। सप्तम्या अलुक् (६-३-१८)। "उपनमन् सुहृदं हृदयेशयं विधुरिवाङ्कगतोडुपरिग्रहः" नैष० ४-२८।

**हृदयेशा ಹೃದಯೇಶಾ** (स्त्री०) ಪತ್ನಿ, ಹೆಂಡತಿ. हृदयस्य ईशा। **–ईश्वरा –ಈಶ್ವರಾ.** "हृदये हृदयेश्वरावकाशम्" किरा० १०-५५।

**हृदावर्त ಹೃದಾವರ್ತ** (पुं०) ಕುದುರೆಯ ಎದೆಯಲ್ಲಿರುವ ಸುಳಿ.

**हृदिस्पृक्(श्) ಹೃದಿಸ್ಪೃಕ್(ಶ್)** (वि०) 1. ಹೃದಯವನ್ನು ಮುಟ್ಟುವ, ಮನೋಹರವಾದ. 2. ಪ್ರಿಯವಾದ. हृदि हृदये स्पृशति — हृदयस्य हृदादेशः (६-१-६३)। सप्तम्या अलुक् (वा० ८-३-९५)। कर्मणि सप्तमी। 3. ಸುಂದರವಾದ.

**हृद्य ಹೃದ್ಯ** (पुं०) 1. ವೇದಮಂತ್ರ. (वि०) 2. ಮನೋಹರವಾದ. हृदयस्य प्रियः "यत्" (४-४-९५)। हृदादेशः (६-३-५०)। "आमत्तकोकिलरुतव्यथिता तु हृद्याम्" मालती० ८-४। 3. ಮನಸ್ಸಿಗೆ ಒಪ್ಪುವ, ಮನಸ್ಸಿಗೆ ಹಿತವಾದ, ಆಹ್ಲಾದಕರವಾದ. "हृद्यगन्धवह भोगवतीशः शेषरूपमपि बिभ्रदशेषः" नैष० २१-८५। 4. ಇಷ್ಟವಾದ, ಪ್ರಿಯವಾದ, ಹಿತವಾದ. "रस्याः स्निग्धाः स्थिरा हृद्याः" गीता १७-८। 5. ಮನಸ್ಸಿನಲ್ಲಿ ಉಂಟಾದ. (न०) 6. ಬಿಳಿಯ ಜೀರಿಗೆ. (स्त्री०) **–द्या –ದ್ಯಾ.** 7. ಬುದ್ಧಿಯೆಂಬ ಒಂದು ಗಂದಿಗೆಯ ವಸ್ತು, ಒಂದು ಔಷಧ. "हृद्यं जवनेऽय त्रिषु हृज्जहृद्वितहृत्प्रिये। वशाहृद्वेदमन्त्रे ना वृद्धिनामौषधे स्त्रियाम्" मेदि०।

**हृद्यगन्ध ಹೃದ್ಯಗಂಧ** (पुं०) 1. ಬಿಲ್ವವೃಕ್ಷ. (न०) 2. ಸಣ್ಣಜಾತಿಯ ಜೀರಿಗೆ. 3. ಸೌವರ್ಚಲ ಲವಣ. (स्त्री०) **–गन्धा –ಗಂಧಾ.** 4. ಜಾಜೀಗಿಡ.

**हृद्यगन्धि ಹೃದ್ಯಗಂಧಿ** (न०) ಸಣ್ಣಜಾತಿಯ ಜೀರಿಗೆ.

**हृल्लास ಹೃಲ್ಲಾಸ** (पुं०) ಬಿಕ್ಕಳಿಕೆ. हृदयस्य हृदादेशः (६-१-६३)। "धमनीस्थं सफेनं रक्तमीरयन्ननिलः सशब्दो निर्गच्छत्यङ्गमर्दः पिपासा हृल्लासश्च" सुश्रुत०।

**हृल्लेख ಹೃಲ್ಲೇಖ** (पुं०) 1. ಜ್ಞಾನ. 2. ತರ್ಕ, ಊಹೆ. 3. ಹೃದಯಶೂಲೆ, ಎದೆಯ ನೋವು. **–लेखा –ಲೇಖಾ.** 4. ತವಕ, ಕಾತರ, ಕಳವಳ. हृदयं लिखति — लिख (अक्षरविन्यासे) "अण्" (३-२-१)। हृदयस्य हृदादेशः (६-१-६३)।

**हृष – तुष्टौ** (दिवा० पर० अक० से०)। हृष्यति। जहर्ष। हर्षिता। हर्षिष्यति। हृष्यतु। अहृष्यत्। हृष्येत्। ಇತ್ಯಾದಿ. ಸಂತೋಷಪಡು, ಆನಂದಿಸು. "स्त्रीणां सपत्न्यो जहृषुः प्रभाते मन्दायमानाऽनुशयैर्मनोभिः" भट्टि० ११-२७।

क्रसु :—हृषितव्यम् । हृर्षणीयम् । हृष्यम् । हृषितः । हृषितवान् । हृष्टम् । हृषितम् निष्ठायां वा इट् । हृष्टो हृषितो मेत्रः । हृर्षणम् ।

**हृषु — अलीके** (भ्वा० पर० अक० से०) । हर्षति । जहर्ष । हर्षिता । हर्षिष्यति । हर्षतु । अहर्षत् । ಇತ್ಯಾದಿ. ಸುಳ್ಳಾಗಿ ಮಾಡು, ಮಿಥ್ಯೆಯಾಗಿ ಮಾಡು.

क्रसु :—हर्षितव्यम् । हर्षणीयम् । हृष्यम् । हृष्टः । हृष्टवान् निष्ठायां नेट् । हर्षन् । हर्षणम् ।

**हृषित ಹೃಷಿತ** (वि०) 1. ಆಶ್ಚರ್ಯಗೊಂಡವನು. 2. ಸಂತೋಷದಿಂದಿರುವವನು. 3. ರೋಮಾಂಚವೆದ್ದಿರುವ. 4. ಬಗ್ಗಿರುವ. 5. ಭಂಗಪಡಿಸಲ್ಪಟ್ಟ, ವಿಫಲಗೊಳಿಸಲ್ಪಟ್ಟ. "हृषितं विस्मिते प्रीते प्रहते हृष्टलोमनि" मेदि० । "हृषितं विस्मिते प्रीते प्रणते हृष्टरोमणि" हेम० ।

**हृषीक ಹೃಷೀಕ** (न०) ಇಂದ್ರಿಯ. हृष्यन्त्यनेन — हृष (तुष्टौ) "ईकन्" (उ० ४-१७) । "न भारती मेऽङ्ग मृषोपलक्ष्यते न वै क्वचिन्मे मनसो मृषा गतिः । न मे हृषीकाणि पतन्त्यसत्पथे यन्मे हृदौत्कण्ठ्यवता धृतो हरिः" भाग० २-६-३२ ।

**हृषीकेश ಹೃಷೀಕೇಶ** (पुं०) ವಿಷ್ಣು, ನಾರಾಯಣ. हृषीकाणामिन्द्रियाणामीशः । "एवमुक्तो हृषीकेशो गुडाकेशेन भारत । सेनयोरुभयोर्मध्ये स्थापयित्वा रथोत्तमम्" गीता १-२४ । हृष्टा जगत्प्रीतिकराः केशा रश्मयोऽस्य — ಸೂರ್ಯಚಂದ್ರರೂಪ ಪರಮಾತ್ಮ. पृषो० ।

**हृष्ट ಹೃಷ್ಟ** (वि०) 1. ಸಂತೋಷಗೊಂಡಿರುವ, ಪ್ರೀತನಾದ. हृष (तुष्टौ) "क्तः" (३-४-७२) । 2. ರೋಮಾಂಚಿತನಾದವನು. 3. ವಿಫಲನಾದವನು. 4. ಆಶ್ಚರ್ಯಗೊಂಡವನು. "हृष्टो रोमाञ्चितेऽपि च । जातहर्षे प्रतिहते विस्मितेऽप्यभिधेयवत्" मेदि० ।

**हृष्टमानस ಹೃಷ್ಟಮಾನಸ** (वि०) ಸಂತೋಷಗೊಂಡ ಮನಸ್ಸುಳ್ಳವನು. हृष्टं प्रमुदितं मानसं यस्य । "प्रमना हृष्टमानसः" अम० ।

**हृष्टरोमन् ಹೃಷ್ಟರೋಮನ್** (वि०) ರೋಮಾಂಚವೆದ್ದಿರುವ, ಮೈಕೂದಲು ಎಚ್ಚರಗೊಂಡಿರುವ.

**हृष्टि ಹೃಷ್ಟಿ** (स्त्री०) 1. ಜ್ಞಾನ. 2. ಆನಂದ, ಪ್ರಮೋದ. हृष (तुष्टौ) "क्तिन्" (३-३-९४) । 3. ಗರ್ವ, ಅಭಿಮಾನ. हृषु (अलीके) "क्तिन्" (३-३-९४) ।

**हृष्यत् ಹೃಷ್ಯತ್** (वि०) ಸಂತೋಷಪಡುತ್ತಿರುವ, ಆನಂದವನ್ನು ಅನುಭವಿಸುತ್ತಿರುವ. हृष (तुष्टौ) "शतृ" (३-२-१२४) । "विदर्भराजोऽपि समं तनूजया प्रविश्य हृष्यन्नवरोधमात्मनः" नैष० १५-५ । स्त्रियां "ङीप्" (४-१-६) । —न्ती — ಸ್ತ್ರೀ.

**हे ಹೇ** (अव्य०) ಸಂಬೋಧನೆ. हिनोति — हि (गतौ) "विच्" (३-३-७५) । "अथ सम्बोधनार्थकाः । स्युः पाट् प्याडङ्ग हे है भोः" अम० । "जाया वा जनयित्री वा सम्भवः स्त्रीकृतो नृणाम् । हे कृतघ्नास्तयोर्निन्दां कुर्वतां वः कुतः सुखम्" बृहत्सं० ।

**हेका ಹೇಕಾ** (स्त्री०) ಬಿಕ್ಕಳಿಕೆ.

**हेठ ಹೇಠ** (पुं०) 1. ಬಾಧೆ, ಹಿಂಸೆ. 2. ಅಡ್ಡಿ, ತಡೆ, ಆತಂಕ. "हेठो बाधाविहेठयोः" मेदि० ।

**हेड ಹೇಡ** (पुं०) ಅನಾದರ, ತಿರಸ್ಕಾರ, ಅಗೌರವ. हेडृ (अनादरे) "घञ्" (३-३-१८) ।

**हेडज ಹೇಡಜ** (पुं०) ಕ್ರೋಧ, ಕೋಪ. हेडाज्जायते— जनी (प्रादुर्भावे) "डः" (३-३-९८) ।

**हेडायुक्क ಹೇಡಾಯುಕ್ಕ** (पुं०) ಕುದುರೆಯ ವ್ಯಾಪಾರ ಮಾಡುವವನು.

**हेति ಹೇತಿ** (स्त्री०) 1. ಅಸ್ತ್ರ, ಆಯುಧ. हन्यतेऽनया— हन (हिंसागत्योः) "क्तिन्" (३-३-९४) । हन्ति हिनोति वा । हि (गतौ) "क्तिन्" (३-३-९७) वा । "अथाभिपश्यन्निव विद्विषः पुरः पुरोधसारोपितहेतिसंहतिः" किरा० ३-५६ । 2. ಸೂರ್ಯನ ಕಿರಣ. 3. ಅಗ್ನಿಯ ಜ್ವಾಲೆ. "हेतिः स्यादायुधज्वालासूर्यतेजःसु योषिति" मेदि० । 4. ತೇಜಸ್ಸು. 5. ಸಾಧನ, ಸಲಕರಣೆ. "सध्यङ् नियम्य यतयो यमकर्तहेतिं जहुः स्वराडिव निपानखनित्रमिन्द्रः" भाग० २-७-४८ । 6. ಪ್ರಕಾಶ, ಬೆಳಕು.

**हेतु ಹೇತು** (पुं०) 1. ಕಾರಣ. हिनोति व्याप्नोति कार्यम् —हि (गतौ) "तुन्" (उ० १-७३) । "मया मृगान् हन्तुरनेन हेतुना विरुद्धमाक्षेपवचस्तितिक्षितम्" किरा० १४-२५ । 2. ಮೂಲಸ್ಥಾನ, ಉತ್ಪತ್ತಿಸ್ಥಾನ. "स पिता पितरस्तासां केवलं जन्महेतवः" रघु० १-२५ । 3. (ನ್ಯಾಯ ಮತದಲ್ಲಿ) ಕರಣ, ಲಿಂಗ, ಜ್ಞಾಪಕ. पर्वतो वह्निमान् धूमात् ಎಂಬಲ್ಲಿ ಪರ್ವತದಲ್ಲಿ ವಹ್ನಿಯನ್ನು ಸಾಧಿಸಲು ಧೂಮವು ಕರಣ (ಹೇತು, ಲಿಂಗ). "हेतुरपदेशो लिङ्गम् प्रमाणम् करणमित्यनर्थान्तरम्"

वैं० सू० ९-२-४। ಈ ಹೇತುವು सद्धेतुः असद्धेतुः ಎಂದು ಎರಡು ವಿಧ. "पर्वतो वह्निमान् धूमात्" ಎಂಬಲ್ಲಿ ಧೂಮವು ಸದ್ಧೇತು. ಹೇತ್ವಾಭಾಸ (ದುಷ್ಟಹೇತು) ವು ಅಸದ್ಧೇತು. 4. ಕಾರಣ, ಉತ್ಪಾದಕ. ಘಟನಿರ್ಮಾಣ ಕಾರ್ಯದಲ್ಲಿ ಮೃತ್ತು ಉತ್ಪಾದಕ (ಕಾರಣ) ವಾಗುವುದು. मृत् घटस्य हेतुः। 5. (ವೈಯಾಕರಣರ ಮತದಲ್ಲಿ) ಫಲಸಾಧನಕ್ಕೆ ಕಾರಣವಾದ ವಸ್ತು. "धनेन कुशलम्" "विद्यया यशः" ಇತ್ಯಾದಿ ಸ್ಥಲಗಳಲ್ಲಿ ಕುಶಲ ಮತ್ತು ಯಶಸ್ಸು ಇತ್ಯಾದಿ ರೂಪ ಫಲಕ್ಕೆ ಕಾರಣವಾದುದು ತೃತೀಯಾರ್ಥ. ಹೇತ್ವರ್ಥದಲ್ಲಿ ತೃತೀಯಾವಿಭಕ್ತಿ ಬಂದಿರುವುದು. "दण्डेन घटः" "पुण्येन दृष्टो हरिः" ಇತ್ಯಾದಿ ಸ್ಥಲಗಳಲ್ಲಿ ಫಲವೂ ಹೇತುವಾಗುವುದು. "हेतौ" (२-३-२३)। अध्ययनेन वसति ಎಂಬಲ್ಲಿ ತೃತೀಯಾರ್ಥವಾದ ಫಲವು ಅಧ್ಯಯನ. 6. (ಆಲಂಕಾರಿಕರ ಮತದಲ್ಲಿ) ಅರ್ಥಾಲಂಕಾರದ ಒಂದು ಭೇದ. ಹೇತ್ವಲಂಕಾರ. ಕಾರ್ಯದೊಡನೆ ಕಾರಣದ ಸಂಬಂಧವರ್ಣನೆಯಿರುವಲ್ಲಿ **ಹೇತ್ವಲಂಕಾರ.**

**लक्षणम्** :—हेतोर्हेतुमता सार्धं वर्णनं हेतुरुच्यते"।

**उदा** :—"असावुदेति शीतांशुर्मानभेदाय सुभ्रुवाम्" चन्द्रा०। ಇಲ್ಲಿ ಚಂದ್ರನ ಉದಯರೂಪವಾದ ಕಾರಣಕ್ಕೆ ಸ್ತ್ರೀಯರ ಮಾನಭಂಗರೂಪವಾದ ಕಾರ್ಯದೊಡನೆ ಸಂಬಂಧವು ವರ್ಣಿತವಾಗಿರುವುದರಿಂದ ಹೇತ್ವಲಂಕಾರವಾಯಿತು.

ಕಾರ್ಯಕಾರಣಗಳಿಗೆ ಐಕ್ಯವರ್ಣನೆಯೂ ಹೇತ್ವಲಂಕಾರ. "कार्यकारणयोरैक्यं हेतुं केचित्प्रचक्षते। लक्ष्मीविलासा विदुषां कटाक्षा वेङ्कटप्रभोः" ಇಲ್ಲಿ ವೇಂಕಟೇಶ್ವರನ ಕಟಾಕ್ಷವೇ ಲಕ್ಷ್ಮೀವಿಲಾಸವೆಂದು ಕಾರ್ಯಕಾರಣಗಳಿಗೆ ಅಭೇದವು ಉಕ್ತವಾಗಿರುವುದರಿಂದ ಹೇತ್ವಲಂಕಾರ.

**हेतुक ಹೇತುಕ** (पुं०) 1. ಕಾರಣ. हेतुरेव स्वार्थे "कः"। (वि०) 2. ಕಾರಣಸಂಬಂಧವಾದ. हेतुरस्यास्ति—हेतु "ठन्" (५-२-११५)। ठस्य कः (७-३-५१)।

**हेतुता ಹೇತುತಾ** (स्त्री०) ಕಾರಣದ ಭಾವ, ಹೇತುತ್ವ. हेतोर्भावः "तल्" (५-१-११९)। "त्वः" (५-१-११९)।

**हेतुत्वम् ಹೇತುತ್ವಮ್.** "सप्रसङ्ग उपोद्घातो हेतुतावसरस्तथा। निर्वाहकैककार्यत्वे षोढा सङ्गतिरिष्यते"॥

**हेतुमत् ಹೇತುಮತ್** (वि०) ಕಾರಣವುಳ್ಳ, ಕಾರಣ ಸಹಿತವಾದ (ಕಾರ್ಯ). हेतुरस्यास्ति — हेतु "मतुप्" (५-२-९४)। "हेतुहेतुमतोरैक्यं हेतुं केचित्प्रचक्षते"।

**हेत्वाभास ಹೇತ್ವಾಭಾಸ** (पुं०) 1. ಹೇತು ದೋಷ. 2. ಅಸದ್ಧೇತು, ದುಷ್ಟಹೇತು. हेतुवदाभासते — आ + भासृ (दीप्तौ) "अच्" (३-१-१३४)। हेतोः हेतौ वा आभासः—हेतुदोष इत्यर्थः। "अनुमितिप्रतिबन्धकीभूतयथार्थज्ञानविषयत्वम् हेत्वाभासः। ಹೇತ್ವಾಭಾಸವು (1) सव्यभिचारः (2) विरुद्धः (3) सत्प्रतिपक्षितः (4) असिद्धः ಮತ್ತು (5) बाधितः ಎಂದು ಐದು ವಿಧ. ಈ ಐದು ಹೇತ್ವಾಭಾಸಗಳೂ ಕ್ರಮವಾಗಿ व्यभिचारः विरोधः सत्प्रतिपक्षः असिद्धिः बाधः ಎಂಬ ಐದು ದೋಷಗಳಿಂದ ಕೂಡಿರುತ್ತವೆ. ಇವುಗಳಲ್ಲಿ ಬಾಧವೂ ಸತ್ಪ್ರತಿಪಕ್ಷವೂ ಸಾಕ್ಷಾದನುಮಿತಿಗೂ ಉಳಿದುವು ಅದಕ್ಕೆ ಕಾರಣವಾದ ವ್ಯಾಪ್ತಿಜ್ಞಾನಕ್ಕೂ ಪ್ರತಿಬಂಧಕಗಳಾಗುವುವು. ಅನುಮಿತಿಗೆ ಪ್ರತಿಬಂಧಕವಾದ ಯಥಾರ್ಥಜ್ಞಾನದಲ್ಲಿ ವಿಷಯವಾಗಿ ತೋರುವುದೇ ಹೇತ್ವಾಭಾಸಗಳು. "अनुमितितत्करणान्यतरप्रतिबन्धकयथार्थज्ञानविषयत्वम्" इति हेत्वाभाससामान्यलक्षणम्।

| ಹೇತು ದೋಷಗಳು | | ದುಷ್ಟಹೇತುಗಳು |
|---|---|---|
| (1) व्यभिचारः | .. | सव्यभिचारः |
| (2) विरोधः | .. | विरुद्धः |
| (3) सत्प्रतिपक्षः | .. | सत्प्रतिपक्षितः |
| (4) असिद्धिः | .. | असिद्धः |
| (5) बाधः | .. | बाधितः |

(1) **सव्यभिचारः** — ಇದಕ್ಕೆ ಅನೈಕಾಂತಿಕ ಎಂದು ಹೆಸರು. ಇದು ಸಾಧಾರಣ ಅಸಾಧಾರಣ ಮತ್ತು ಅನುಪಸಂಹಾರಿ ಎಂದು ಮೂರು ವಿಧ. साध्याभाववद्वृत्तित्वं सव्यभिचारः। "पर्वतो वह्निमान् प्रमेयत्वात्" ಎಂಬಲ್ಲಿ ಪ್ರಮೇಯತ್ವವು ಹೇತುವಾಗುವುದು. ಪ್ರಮೇಯತ್ವವು ಎಲ್ಲಾ ಕಡೆಯಲ್ಲೂ ಇರುವುದರಿಂದ ಸಾಧ್ಯವಾದ ವಹ್ನಿಯು ಇಲ್ಲದಿರುವ ಜಲಾಶಯ (ಹ್ರದ) ದಲ್ಲಿ ವ್ಯಾಪ್ತಿಜ್ಞಾನ ಬಾರದಿರುವ ಕಾರಣ ಸಾಧ್ಯಾಭಾವವದ್ವೃತ್ತಿತ್ವರೂಪ ದೋಷ ಜ್ಞಾನದಿಂದ ವ್ಯಾಪ್ತಿಜ್ಞಾನ ಪ್ರತಿಬಂಧಕವಾಗುವುದು. ಇದು **ಸಾಧಾರಣ ಹೇತು.** (साधारणानैकान्तिकः)।

**असाधारणहेतुः**— पक्षमात्रवृत्तिरसाधारणानैकान्तिकहेतुः। "शब्दो नित्यः शब्दत्वात्" ಎಂಬಲ್ಲಿ ಶಬ್ದತ್ವವು ಆಕಾಶ ಘಟ ಮೊದಲಾದ ನಿತ್ಯಾನಿತ್ಯ ಎಲ್ಲದರಿಂದಲೂ ವ್ಯಾವೃತ್ತವಾಗಿ ಶಬ್ದಮಾತ್ರದಲ್ಲಿರುವುದರಿಂದ **ಅಸಾಧಾರಣಾನೈಕಾಂತಿಕ ಹೇತು.**

**अनुपसंहारी:**— "अन्वयव्यतिरेकव्याप्तिरहितोऽनुपसंहारी । "सर्वमनित्यं प्रमेयत्वात्" ಎಂಬಲ್ಲಿ ಅನ್ವಯ ಮತ್ತು ವ್ಯತಿರೇಕ ದೃಷ್ಟಾಂತಗಳಿಲ್ಲದಿರುವುದರಿಂದ ಅನ್ವಯ ವ್ಯಾಪ್ತಿಯಾಗಲಿ ವ್ಯತಿರೇಕವ್ಯಾಪ್ತಿಯಾಗಲಿ ಬರುವುದಿಲ್ಲ. "ಎಲ್ಲವೂ ಅನಿತ್ಯಪ್ರಮೇಯತ್ವದಿಂದ" ಎಂಬಲ್ಲಿ ಎಲ್ಲವೂ ಎಂಬುದು ಪಕ್ಷವಾಗಿ ಅದಕ್ಕಿಂತ ಬೇರೆಯಾದ ದೃಷ್ಟಾಂತವಿಲ್ಲದಿರುವುದರಿಂದ **ಅನುಪಸಂಹಾರೀ ಅನೈಕಾಂತಿಕ ಹೇತು.**

(2) **विरुद्ध:**—"साध्याभावव्याप्तो हेतुर्विरुद्ध:" । "शब्दो नित्य: कृतकत्वात्" ಎಂಬಲ್ಲಿ ನಿತ್ಯತ್ವಾಭಾವದಿಂದ ವ್ಯಾಪ್ಯವಾದ ಕೃತಕತ್ವರೂಪ ಹೇತುವು ಶಬ್ದದಲ್ಲಿದ್ದರೆ ಶಬ್ದವು ನಿತ್ಯ ಎಂಬ ಅನುಮಿತಿಯು ಉಂಟಾಗುವುದಿಲ್ಲವಾದ ಕಾರಣ ಕೃತಕತ್ವ ಹೇತುವು ವಿರುದ್ಧವಾಗಿ ಹೇತುವು ದುಷ್ಟವಾಯಿತು. ಇದು **ವಿರುದ್ಧ ಹೇತು.**

(3) **सत्प्रतिपक्षित:**—(ಹೇತ್ವಾಭಾಸದ ಒಂದು ಭೇದ.) ಸಮಾನಬಲವುಳ್ಳ ಸ್ಥಲದಲ್ಲಿ ಮಾತ್ರ ಸತ್ಪ್ರತಿಪಕ್ಷವಾಗುವುದರಿಂದ ಇದಕ್ಕೆ "ಪ್ರಕರಣಸಮ" ಎಂದು ಹೆಸರು. ಯಾವ ಹೇತುವಿಗೆ ಸಾಧ್ಯಾಭಾವವನ್ನು ಸಾಧಿಸುವ ಮತ್ತೊಂದು (ಪ್ರತಿಪಕ್ಷವಾಗಿರುವ) ಹೇತುವಿರುವುದೋ ಅದು ಸತ್ಪ್ರತಿಪಕ್ಷ. "सन् विद्यमान: प्रतिपक्षो विरोधिव्याप्त्यादिमत्तया परामृश्यमानो हेतु: यस्य परामृश्यमानस्य हेतो: असौ सत्प्रतिपक्ष:" । "शब्दो नित्य: श्रावणत्वात् शब्दवत्", शब्दोऽनित्य: कार्यत्वात् घटवत्" ಎಂಬಲ್ಲಿ ಶ್ರಾವಣತ್ವ ಹೇತುವಿನಿಂದ ಶಬ್ದದಲ್ಲಿ ನಿತ್ಯತ್ವವನ್ನು ಸಾಧಿಸಲು ಹೊರಟರೆ ಅನಿತ್ಯತ್ವರೂಪ ಸಾಧ್ಯಾಭಾವವನ್ನು ಸಾಧಿಸುವ ಕಾರ್ಯತ್ವರೂಪ ಪ್ರತಿಪಕ್ಷ ಹೇತುವು ಅಲ್ಲೇ ಇರುವುದರಿಂದ ಶ್ರಾವಣತ್ವವು ಸತ್ಪ್ರತಿಪಕ್ಷವಾಗುವುದು. ಶಬ್ದದಲ್ಲಿ ಸಾಧ್ಯಾಭಾವ ವ್ಯಾಪ್ಯವಾದ ಇನ್ನೊಂದು ಹೇತುವಿರುವುದರಿಂದ शब्दो नित्य: ಎಂಬ ಅನುಮತಿಯುಂಟಾಗುವುದಿಲ್ಲ. ಆದುದರಿಂದ ಇದಕ್ಕೆ "ಪ್ರಕರಣಸಮ" ಎಂಬ ಹೆಸರು. ಇದು **ಸತ್ಪ್ರತಿಪಕ್ಷ**ವೆಂಬ ದುಷ್ಟ ಹೇತು.

(4) **असिद्ध:**—ಅಸಿದ್ಧವು (1) ಆಶ್ರಯಾಸಿದ್ಧ, (2) ಸ್ವರೂಪಾಸಿದ್ಧ ಮತ್ತು (3) ವ್ಯಾಪ್ಯತ್ವಾಸಿದ್ಧಗಳೆಂದು ಮೂರು ವಿಧ.

(1) **आश्रयासिद्ध:**—"गगनारविन्दं सुरभि अरविन्दत्वात्, सरोजारविन्दवत्" ಎಂಬಲ್ಲಿ ಅರವಿಂದತ್ವಕ್ಕೆ ಆಶ್ರಯವಾಗಿರಬೇಕಾದ ಗಗನಾರವಿಂದವೇ ಇಲ್ಲದಿರುವುದರಿಂದ **ಆಶ್ರಯಾಸಿದ್ಧ**ರೂಪವಾದ ಹೇತುದೋಷ. ಈ ದೋಷದಿಂದ ಕೂಡಿರುವ ಹೇತುವು ದುಷ್ಟ ಹೇತು.

(2) **स्वरूपासिद्ध:**—ಪಕ್ಷದಲ್ಲಿ ಹೇತುವಿಲ್ಲದಿರುವುದು ಸ್ವರೂಪಾಸಿದ್ಧಿ. "शब्दो गुण: चाक्षुषत्वात्" ಎಂಬಲ್ಲಿ (ಶ್ರಾವಣತ್ವವಿರುವ) ಶಬ್ದದಲ್ಲಿ ಚಾಕ್ಷುಷತ್ವವಿಲ್ಲದಿರುವುದರಿಂದ ಸ್ವರೂಪಾಸಿದ್ಧಿರೂಪದೋಷ. ಈ ದೋಷದಿಂದ ಕೂಡಿರುವ ಹೇತುವು **ಸ್ವರೂಪಾಸಿದ್ಧ** ದುಷ್ಟಹೇತು. "असिद्ध ಮತ್ತು असिद्धि" ಪದಗಳಲ್ಲಿ ನೋಡಿ.

(3) **व्याप्यत्वासिद्ध:**—ಉಪಾಧಿಸಹಿತವಾದ ಹೇತುವು ವ್ಯಾಪ್ಯತ್ವಾಸಿದ್ಧವಾಗುವುದು. ಇದು ವ್ಯಾಪ್ತಿಜ್ಞಾನಕ್ಕೆ ಪ್ರತಿಬಂಧಕ. "साध्यव्यापकत्वे सति साधनाव्यापकत्वमुपाधि:" । "पर्वतो धूमवान् वह्निमत्त्वात्" ಎಂಬಲ್ಲಿ ಆರ್ದ್ರೇಂಧನಸಂಯೋಗ (ಹಸಿಕಟ್ಟಿಗೆಯ ಸಂಬಂಧ)ವು ಉಪಾಧಿ. ಹೇತುವಾದ ವಹ್ನಿಮತ್ತ್ವವು ಸೋಪಾಧಿಕ (ಆರ್ದ್ರೇಂಧನಸಂಯೋಗರೂಪವಾದ ಉಪಾಧಿಸಹಿತ)ವಾದುದರಿಂದ ಹೇತುವು ವ್ಯಾಪ್ಯತ್ವಾಸಿದ್ಧರೂಪ ದೋಷಾಕ್ರಾಂತವಾಯಿತು. ಈ ದೋಷದಿಂದ ಕೂಡಿರುವುದು **ವ್ಯಾಪ್ಯತ್ವಾಸಿದ್ಧ.** ಇದೊಂದು ಹೇತ್ವಾಭಾಸ.

(5) **बाधित:**—ಯಾವ ಹೇತುವಿನ ಸಾಧ್ಯಾಭಾವವು ಪ್ರಮಾಣಾಂತರಗಳಿಂದ ನಿಶ್ಚಿತವಾಗಿರುವುದೋ ಅದು ಬಾಧಿತ. "यस्य साध्याभाव: प्रमाणान्तरेण निश्चित: स: बाधित:" । "वह्निरनुष्णो द्रव्यत्वात् जलवत्" ಎಂಬಲ್ಲಿ ಉಷ್ಣತ್ವವಿಲ್ಲವೆಂದು ಸಾಧಿಸಲು ಉಪಾತ್ತವಾದ ದ್ರವ್ಯತ್ವರೂಪ ಹೇತುವಿಗೆ ಉಷ್ಣತ್ವವು ವಹ್ನಿಯಲ್ಲಿ ಇರುವುದೆಂದು ಸ್ಪರ್ಶಪ್ರತ್ಯಕ್ಷಪ್ರಮಾಣದಿಂದ ನಿಶ್ಚಿತವಾಗಿ ಪ್ರತ್ಯಕ್ಷವಾಗಿ ಸಾಧ್ಯಾಭಾವದ ನಿಶ್ಚಯವು ವಹ್ನಿಯಲ್ಲಿರುವಾಗ ಸಾಧ್ಯಾನುಮಿತಿಯು ಬರುವುದಿಲ್ಲ. "वह्निरनुष्ण:" ಎಂಬ ಅನುಮತಿಗೆ ಸಾಧ್ಯಾಭಾವದ ನಿಶ್ಚಯವು ಪ್ರತಿಬಂಧಕವಾಗಿದೆ. ಸಾಧ್ಯವು ಬಾಧಿತವಾಗಿರುವುದರಿಂದ ಹೇತುವು ಬಾಧಿತವಾಗಿ **ಬಾಧಿತ** ಹೇತ್ವಾಭಾಸವಾಗಿದೆ.

**हेम ಹೇಮ** (ಪುಂ०) 1. ಕೃಷ್ಣವರ್ಣದ ಕುದುರೆ. 2. ಒಂದು ಮಾಷೆತೂಕದ ಚಿನ್ನ. 3. ಬುಧಗ್ರಹ.

**हेमकन्दल ಹೇಮಕಂದಲ** (ಪುಂ०) ಪ್ರವಾಳ, ಹವಳ. हेमवर्णं कन्दलं नवाङ्कुरोऽस्य ।

**हेमकरक ಹೇಮಕರಕ** (ಪುಂ०) ಚಿನ್ನದ ಗಿಂಡಿ. "भृङ्गारो हेमकरक:" वैज० ।

**हेमकान्ति ಹೇಮಕಾಂತಿ** (ಸ್ತ್ರೀ०) 1. ದಾರುಹರಿದ್ರೆ, ಮರದರಿಶಿನ. हेमवत् कान्तिरस्या: । (ವಿ०) 2. ಚಿನ್ನದಂತೆ ಕಾಂತಿಯುಳ್ಳ. हेमवत् कान्तिर्यस्य । "हेमकान्तिरथवा शुकवर्ण: सस्यकेन मणिना सदृशो वा" बृहत्सं० ।

**हेमकार ಹೇಮಕಾರ** (ಪುಂ) ಸುವರ್ಣದ ಆಭರಣಗಳನ್ನು ತಯಾರಿಸುವ ಸ್ವರ್ಣಕಾರ, ಚಿನ್ನದ ಒಡವೆಗಳನ್ನು ತಯಾರಿಸುವ ಅಕ್ಕಸಾಲಿಗ. हेम हेममयमाभरणं करोति—डुकृञ् (करणे) "अण्" (३-२-१)।

**हेमकूट ಹೇಮಕೂಟ** (ಪುಂ) ಒಂದು ಪರ್ವತ. हेम्नः कूटो राशिर्यत्र। "एष खलु हेमकूटो नाम किंपुरुषपर्वतस्तपःसंसिद्धिक्षेत्रम्" शाकुं० ७।

**हेमकेलि ಹೇಮಕೇಲಿ** (ಪುಂ) ಅಗ್ನಿ. हेमवर्णः केलिर्यस्य।

**हेमकेश ಹೇಮಕೇಶ** (ಪುಂ) ಶಿವ, ಪರಮೇಶ್ವರ.

**हेमक्षीरी ಹೇಮಕ್ಷೀರೀ** (ಸ್ತ್ರೀಂ) ಘಂಟಾಮಣಿ ಸೊಪ್ಪು, ಶಂಕೋಷ್ಠ. हेमेव पीतवर्णं क्षीरं निर्यासो यस्याः।

**हेमगन्धिनी ಹೇಮಗಂಧಿನೀ** (ಸ್ತ್ರೀಂ) ರೇಣುಕೆಯೆಂಬ ಒಂದು ಸುಗಂಧ ದ್ರವ್ಯ.

**हेमघ्न ಹೇಮಘ್ನ** (ನಂ) ಸೀಸಲೋಹ. "यवनेष्टं समोल्कं हेमघ्नं भूतलोद्भवम्" वैजं०।

**हेमचन्द्र ಹೇಮಚಂದ್ರ** (ಪುಂ) ನಿಘಂಟುಕಾರನಾದ ಒಬ್ಬ ಜೈನ ಕವಿ. [ಈತನ ಗ್ರಂಥಗಳು ಮತ್ತು ಜೀವನಚರಿತ್ರೆಯ ವಿವರಕ್ಕೆ ಪರಿಶಿಷ್ಟ II ರಲ್ಲಿ ನೋಡಿ.]

**हेमज्वाल ಹೇಮಜ್ವಾಲ** (ಪುಂ) ಅಗ್ನಿ. हेमवर्णा ज्वालाऽस्य।

**हेमदुग्धक ಹೇಮದುಗ್ಧಕ** (ಪುಂ) ಉದುಂಬರ ವೃಕ್ಷ, ಅತ್ತಿಮರ. हेमवर्णं दुग्धमस्य। "उदुम्बरो जन्तुफलो यज्ञाङ्गो हेमदुग्धकः" अम०।

**हेमधारण ಹೇಮಧಾರಣ** (ನಂ) ಎಂಟು ಪಲಗಳ ಚಿನ್ನದ ತೂಕ. "धारणं तु पलान्यष्टौ हेम्नस्ताम्रस्य सप्ततिः" वैजं०।

**हेमदुग्धा ಹೇಮದುಗ್ಧಾ** (ಸ್ತ್ರೀಂ) ಘಂಟಾಮಣಿ ಸೊಪ್ಪು. हेमवर्णं दुग्धं निर्यासोऽस्याः। —दुग्धी —ದುಗ್ಧೀ.

**हेमन् ಹೇಮನ್** (ನಂ) 1. ಸುವರ್ಣ, ಚಿನ್ನ, ಬಂಗಾರ. हिनोति — हि (गतौ वृद्धौ च) "मनिन्" (उ० ४-१४४)। "हेम्नः संलक्ष्यते ह्यग्नौ विशुद्धिः श्यामिकापि वा" रघु० १-९। 2. ದತ್ತೂರಿ ಗಿಡ. "हेमनामकतरुप्रसवेन त्र्यम्बकस्तदुपकल्पितपूजः। आत्तया युधि विजित्य रतीशं राजितः कुसुमकाहलयेव" नैष० २१-३४। 3. ಹಿಮ. (ಪುಂ) 4. ಬುಧಗ್ರಹ. "बुधो हेमा राजपुत्र एकदेहः प्रहर्षणः" त्रिकाण्ड०।

**हेमन्त ಹೇಮನ್ತ** (ಪುಂನಂ) ಹೇಮಂತ ಋತು, ವಸಂತ ಮೊದಲಾದ ಆರು ಋತುಗಳಲ್ಲೊಂದು ಋತು, ಮಾರ್ಗಶಿರ-ಪುಷ್ಯ ಮಾಸಗಳಿಂದ ಕೂಡಿದ ಋತು. हन्ति लोकान् शैत्येन—हन (हिंसागत्योः) "झच्" हिरादेशः मुडागमश्च (उ० ३-१२९)। गुणः (७-३-८४)।

**हेमन्तनाथ ಹೇಮಂತನಾಥ** (ಪುಂ) ಕಪಿತ್ಥವೃಕ್ಷ, ಬೇಲದ ಮರ. हेमन्ते नाथ्यते—नाथृ कर्मं "घञ्" (३-३-१९)।

**हेमपर्वत ಹೇಮಪರ್ವತ** (ಪುಂ) ಸುಮೇರು ಪರ್ವತ, ಬಂಗಾರದ ಗಿರಿ. हेममयः पर्वतः।

**हेमपुष्प ಹೇಮಪುಷ್ಪ** (ಪುಂ) 1. ಅಶೋಕವೃಕ್ಷ. 2. ಲೋಧ್ರವೃಕ್ಷ. (ನಂ) 3. ಅಶೋಕಪುಷ್ಪ. 4. ದಾಸಿವಾಳದ ಹೂವು. "हेमपुष्पमशोकेऽपि जपापुष्पे नपुंसकम्" मेदि०।

**हेमपुष्पक ಹೇಮಪುಷ್ಪಕ** (ಪುಂ) 1. ಚಂಪಕ ವೃಕ್ಷ, ಸಂಪಿಗೆ ಮರ. 2. ಲೋಧ್ರವೃಕ್ಷ. हेमवर्णं पुष्पमस्य। —पुष्पिका —ಪುಷ್ಪಿಕಾ. ಕಾಡುಮಲ್ಲಿಗೆಯ ಒಂದು ವಿಧ. "स्याद्धेमपुष्पिका यूथ्याम्" मेदि०।

**हेमपुष्पी ಹೇಮಪುಷ್ಪೀ** (ಸ್ತ್ರೀಂ) ಮಂಜಿಷ್ಠೆ.

**हेममाला ಹೇಮಮಾಲಾ** (ಸ್ತ್ರೀಂ) 1. ಯಮಧರ್ಮರಾಯನ ಪತ್ನಿ. 2. ಬಂಗಾರದ ಮಾಲೆ, ಚಿನ್ನದ ಸರ.

**हेममालिन् ಹೇಮಮಾಲಿನ್** (ಪುಂ) ಸೂರ್ಯ. हेमेव किरणानां मालास्यास्ति — माला "इनिः" (५-२-११६)।

**हेमयूथिका ಹೇಮಯೂಥಿಕಾ** (ಸ್ತ್ರೀಂ) ಒಂದು ವಿಧ ಕಾಡುಮಲ್ಲಿಗೆ. हेमवर्णा यूथिका।

**हेमरागिणी ಹೇಮರಾಗಿಣೀ** (ಸ್ತ್ರೀಂ) ಹರಿದ್ರೆ, ಅರಿಶಿನ. "घर्षणी हेमरागिण्यां हरिद्रा पीतवालुका" त्रिकाण्ड०।

**हेमल ಹೇಮಲ** (ಪುಂ) 1. ಸ್ವರ್ಣಕಾರ, ಅಕ್ಕಸಾಲಿಗ, ಚಿನ್ನದ ಒಂದು ಭಾಗವನ್ನು ತೆಗೆದಿಟ್ಟುಕೊಳ್ಳುವವನು. हेम तदंशं लाति — ला (आदाने) "कः" (३-२-३)। 2. ಕೃಕಲಾಸ, ಓತಿಕೇತ. 3. ಒರೆಗಲ್ಲು. "हेमलः स्वर्णकारे स्यात् कृकलासे शिलान्तरे" मेदि०।

**हेमशङ्ख ಹೇಮಶಂಖ** (ಪುಂ) ಸ್ವರ್ಣದ ಶಂಖವನ್ನು ಹೊಂದಿರುವ ವಿಷ್ಣು.

**हेमशिखा ಹೇಮಶಿಖಾ** (ಸ್ತ್ರೀಂ) ಘಂಟಾಮಣಿ ಸೊಪ್ಪು, ಶಂಕೋಷ್ಠ. हेमवर्णा शिखास्याः।

**हेमसार ಹೇಮಸಾರ** (ನಂ) ಮೈಲತುತ್ತ. हेम सारयति — सृ (गतौ) + णिच् "अण्" (३-२-१)। "तुत्थके तु शिखिग्रीवं हेमसारं मयूरकम्" रसर्ण०।

**हेमाङ्ग ಹೇಮಾಂಗ** (पुं०) 1. ಮಹಾವಿಷ್ಣು. हेम हाटकम् तदुपलक्ष्यं च दिव्यसत्त्वमयं नित्यमङ्गं वर्णाधिष्ठानरूपमस्य । "वर्णाश्रयं तु यस्याङ्गं दिव्यसत्त्वमयं यतः । अतो हेमाङ्ग इत्युक्तः सप्तार्णो हेमवर्णदः" इति निरुक्तिः। "सुवर्णवर्णो हेमाङ्गः" वि० स० । 2. ಗರುಡ, ವೈನತೇಯ. 3. ಬ್ರಹ್ಮ. "हेमाङ्गो तार्क्ष्यवेधसो" नानार्थर० । "हेमाङ्गो गरुडे परमेष्ठिनि" मेदि० । 4. ಸಿಂಹ. 5. ಸುಮೇರುಪರ್ವತ. (न०) 6. ಸುವರ್ಣ ವರ್ಣದ ಶರೀರ. (वि०) 7. ಸುವರ್ಣವರ್ಣದ ಶರೀರವುಳ್ಳ.

**हेमाद्रि ಹೇಮಾದ್ರಿ** (पुं०) ಸುಮೇರು ಪರ್ವತ. हेम्नोऽद्रिः हेममयोऽद्रिर्वा ।

**हेमाह्व ಹೇಮಾಹ್ವ** (पुं०) 1. ಕಾಡುಸಂಪಿಗೆ ಗಿಡ. हेम हेमवर्णमाह्वयते—स्ववर्णेन स्पर्धते—आ+ह्वेञ् (स्पर्धायां शब्दे च) "कः" (३-२-३)। 2. ದತ್ತೂರಿ ಗಿಡ.

**हेय ಹೇಯ** (वि०) 1. ತ್ಯಜಿಸಲ್ಪಡುವ, ತೊರೆದುಬಿಡಲ್ಪಡುವ. ओ हाक् (त्यागे) "यत्" (३-१-९७)। ईकारः (६-४-६५) । 2. ತ್ಯಜಿಸಲು ಅರ್ಹವಾದ. ತೊರೆದುಬಿಡಲು ಯೋಗ್ಯವಾದ, ತುಚ್ಛವಾದ, ನಿಕೃಷ್ಟವಾದ.

**हेर ಹೇರ** (न०) 1. ಹರಿದ್ರಾ, ಅರಿಶಿನ. 2. ರಾಕ್ಷಸಮಾಯೆ. 3. ಮುಕುಟ, ಕಿರೀಟ, ಮುಡಿ.

**हेरम्ब ಹೇರಂಬ** (पुं०) 1. ಗಣಪತಿ, ವಿನಾಯಕ. हे शिवे रम्बते — रणे रम्बते वा — रबि (शब्दे) "अच्" (३-१-१३४)। 2. ಮಹಿಷ, ಎಮ್ಮೆ. (वि०) 3. ಶೌರ್ಯದಿಂದ ಗರ್ವಿತನಾದವನು, ಪರಾಕ್ರಮದಿಂದ ಕೊಬ್ಬಿದವನು. "हेरम्बो विघ्नराजे स्यान्महिषे शौर्यगर्विते" मेदि० ।

**हेरम्बजननी ಹೇರಂಬಜನನೀ** (स्त्री०) ಗಣಪತಿಯ ತಾಯಿ –ಪಾರ್ವತಿ. हेरम्बस्य जननी । –माता –ಮಾತಾ.

**हेरिक ಹೇರಿಕ** (पुं०) ಚರ, ದೂತ, ಗೂಢಚಾರ.

**हेरुक ಹೇರುಕ** (पुं०) 1. ಪರಮೇಶ್ವರನ ಪ್ರಮಥ ಗಣ. 2. ಒಬ್ಬ ಬುದ್ಧ. "हेरुको बुद्धभेदे स्यान्महाकालगणेऽपि च" मेदि० ।

**हेलच्ची ಹೇಲಚ್ಚೀ** (स्त्री०) ಚಕ್ಕೋತ ಸೊಪ್ಪು.

**हेलन ಹೇಲನ** (न०) ಅವಮಾನಗೊಳಿಸುವುದು, ತಿರಸ್ಕಾರದಿಂದ ಕಾಣುವುದು, ಮುಖಭಂಗ ಮಾಡುವುದು. हेडृ (अनादरे) भावे "ल्युट्" (३-३-११५)। "साङ्केत्यं पारिहास्यं वा स्तोभ्यं हेलनमेव च । वैकुण्ठनामग्रहणमशेषाघहरं विदुः" भाग० ।

**हेला ಹೇಲಾ** (स्त्री०) 1. ಸ್ತ್ರೀಯರ ಶೃಂಗಾರಭಾವದ ಕಾರ್ಯ, ರತ್ಯಾದಿಭಾವದಿಂದಲೂ ಮನೋವಿಕಾರದಿಂದಲೂ ಉಂಟಾಗುವ ಚೇಷ್ಟೆ, ವಿಲಾಸ. हिल (भावकरणे) "घञ्" (३-३-१८) । "हाव एव भवेद्धेला व्यक्तः शृङ्गारसूचकः" । 2. ಅವಜ್ಞೆ, ಅವಮಾನ, ತಿರಸ್ಕಾರ. "हेला स्त्रियामवज्ञायां विलासे वारयोषिताम्" मेदि० ।

**हेलावुक ಹೇಲಾವುಕ** (पुं०) ಕುದುರೆಯ ವ್ಯಾಪಾರ ಮಾಡುವವನು.

**हेलि ಹೇಲಿ** (पुं०) 1. ಸೂರ್ಯ. 2. ರತಿಕ್ರೀಡೆ.

**हेवाक ಹೇವಾಕ** (पुं०) ಔತ್ಸುಕ್ಯ, ಉತ್ಸಾಹ. ಅತಿಶಯವಾದ ಅಭಿಲಾಷೆ.

**हेवाकिन् ಹೇವಾಕಿನ್** (वि०) ಅತಿಶಯವಾದ ಅಭಿಲಾಷೆಯುಳ್ಳ, ಉತ್ಸಾಹದಿಂದಿರುವ. हेवाकोऽस्यास्ति—"इनिः" (५-२-११५) । "जायन्ते महतामहो निरुपमप्रस्थानहेवाकिनाम्" ।

**हेषा ಹೇಷಾ** (स्त्री०) ಕುದುರೆಯ ಶಬ್ದ. हेषृ (शब्दे) "अः" (३-३-१०३) । "रथाङ्गसंक्रीडितमश्वहेषा बृहन्ति मत्तद्विपबृंहितानि । सङ्घर्षयोगादिव मूर्च्छितानि ह्लादं निगृह्णन्ति न दुन्दुभीनाम्" किरा० १६-८ ।

**हेषित ಹೇಷಿತ** (न०) ಅಶ್ವದ ಶಬ್ದ, ಕುದುರೆಯ ಕೂಗು. हेषृ (शब्दे) भावे "क्तः" (३-३-११४) ।

**हेषिन् ಹೇಷಿನ್** (पुं०) ಅಶ್ವ, ಕುದುರೆ. हेषास्यास्ति — "इनिः" (५-२-११६) ।

**हेहे ಹೇಹೇ** (अव्य०) 1. ಸಂಬೋಧನೆ. 2. ಉಚ್ಚಕಂಠದಿಂದ ಕರೆಯುವುದು.

**है ಹೈ** (अव्य०) 1. ಸಂಬೋಧನೆ. 2. ಕರೆಯುವುದು. "है सम्बोधने आह्वाने होहोशब्दो तथैतयोः" मेदि० ।

**हैतुक ಹೈತುಕ** (वि०) 1. ಯುಕ್ತಿಯಿಂದ ವ್ಯವಹರಿಸುವವನು, ಸರಿಯಾದ ಕಾರಣ ತೋರಿಸಿ ವ್ಯವಹರಿಸುವವನು. हेतुना चरति—"ठक्" (४-४-८)। "त्रैविद्यो हैतुकस्तर्की नैरुक्तो धर्मपाठकः । त्रयश्चाश्रमिणः पूर्वे परिषत्स्याद्दशावरा" मनु० १२-१११। 2. ಮೀಮಾಂಸಕ. 3. ವಿಚಾರವಾದಿ, ವಿಮರ್ಶೆಮಾಡುವವನು, ಕೂಲಂಕಷವಾಗಿ ವಿಚಾರಮಾಡಿ ನಿರ್ಣಯಿಸುವವನು. 4. ಪಾಷಂಡಿ, ಸಂಪ್ರದಾಯ ಮೀರಿ ನಡೆಯುವವನು.

**हैम ಹೈಮ** (पुं०) 1. ಶಿವ, ಪರಮೇಶ್ವರ. "हैमो हेमकरो यज्ञः सर्वधारी परोत्तमः" भा० महाशा० । 2. ನೆಲಬೇವು.

(नं०) 3. ಮಂಜಾನೆಯ ಮಂಜಿನ ಜಲ. (ವಿ०) 4. ಹಿಮದಿಂದ ಉಂಟಾದ. "लब्धान्तरा सावरणेऽपि गेहे योगप्रभावो न च लक्ष्यते ते। बिभर्षि चाकारमनिर्वृतानां मृणालिनी हैममिवोपरागम्" रघु० १६-७। 5. ಸ್ವರ್ಣಮಯವಾದ, ಬಂಗಾರದಿಂದ ನಿರ್ಮಿತವಾದ. "तिर्यग्विसंसर्पिनखप्रभेण पादेन हैमं विलिलेख पीठम्" रघु० ६-१५। 6. ಹಿಮದಲ್ಲಿರುವ.

**हैमन ಹೈಮನ** (पुं०) 1. ಮಾರ್ಗಶಿರ ಮಾಸ. (पुंन०) 2. ಹೇಮಂತ ಋತು. (वि०) 3. ಹೇಮಂತ ಋತುವಿಗೆ ಅನುಕೂಲವಾದ. हेमन्ते साधुः — हेमन्त "अण्" वा तलोपश्च (४-३-२२)। "जह्नु राग्रथनमोक्षलोलुपं हैमनैर्निवसनैः सुमध्यमाः" रघु० १९-४१। 4. ಹೇಮಂತ ಋತುವಿನಲ್ಲಿ ಉಂಟಾದ. हेमन्ते जातः। 5. ಹೇಮಂತ ಋತುವಿನಲ್ಲಿರುವ. "अभ्युत्थितस्याद्रिपतेर्नितम्बमर्कस्य पादा इव हैमनस्य" किरा० १७-१२। 6. ಹೇಮಂತ ಋತು ಸಂಬಂಧವಾದ. हेमन्तस्येदम्। स्त्रियां "ङीप्" (४-१-१५)। **-मनी -ಮನೀ.** "प्रेम्णा मनःसु रजनीष्वपि हैमनीषु के शेरते स्म रसहासवतोषितेन" माघ० ६-७७। तलोपाभावे हैमन्तम् **ಹೈಮಂತಮ್.**

**हैमन्त ಹೈಮಂತ** (पुंन०) 1. ಹೇಮಂತ ಋತು. हेमन्त "अण्" (४-३-१६)। (वि०) 2. ಹೇಮಂತ ಋತು ಸಂಬಂಧವಾದ. हेमन्तस्येदम् "अण्" (४-३-१२०)।

**हैमन्तिक ಹೈಮಂತಿಕ** (नं०) 1. ಶಾಲಿಧಾನ್ಯ, ನೀರಿನಲ್ಲಿ ಬೆಳೆಯುವ ಬತ್ತ ಮೊದಲಾದ ಧಾನ್ಯ. (वि०) 2. ಹೇಮಂತ ಋತುವಿನಲ್ಲಿ ಉಂಟಾದ, —ಹುಟ್ಟಿದ.

**हैमवत ಹೈಮವತ** (पुं०) 1. ಒಂದು ವಿಧ ವಿಷ. 2. ಒಂದು ದೇಶ. हिमवतोऽदूरभवो देशः "अण्" (४-२-७०)। (नं०) 3. ಭಾರತವರ್ಷ. (वि०) 4. ಹಿಮವತ್ಪರ್ವತ ಸಂಬಂಧವಾದ. हिमवतः इदम् "अण्" (४-३-१२०)। स्त्रियां "ङीप्" (४-१-१५)। **-वती -ವತೀ.**

**हैमवती ಹೈಮವತೀ** (स्त्री०) 1. ಹಿಮವಂತನ ಪುತ್ರಿಯಾದ ಪಾರ್ವತಿ. हिमवतः अपत्यं स्त्री—हिमवत् "अण्" (४-१-९२)। "ङीप्" (४-१-१५)। 2. ಗಂಗಾನದಿ. हिमवतः प्रभवति प्रथमं प्रकाशते—हिमवत् "अण्" (४-३-८३)। हिमवतः प्रभवति हैमवती गङ्गा सि० कौ०। 3. ಸ್ವರ್ಣಕ್ಷೀರೀ, ಘಂಟಾಮಣಿ ಸೊಪ್ಪು. 4. ಬಿಳಿಯ ಬಜೆ. 5. ಅಳಲೆ ಗಿಡ. "हैमवत्यद्रिजा स्वर्णक्षीरी शुक्लवचाऽभया" हेम०। 6. ಹೊಂಬಣ್ಣದ ದ್ರಾಕ್ಷಿ. 7. ಅಗಸೆ ಗಿಡ. 8. ರೇಣುಕೆಯೆಂಬ ಗಂಧ ದ್ರವ್ಯ. "(वचा) शुक्ला हैमवती" अम०।

**हैयङ्गवीन ಹೈಯಂಗವೀನ** (नं०) ಸದ್ಯಃ ಕಡೆದ ಬೆಣ್ಣೆ, ಮೊದಲದಿನದ ಹಾಲಿನಿಂದ ಕಡೆದ ಬೆಣ್ಣೆ, ನವನೀತ. ह्योगोदोहोद्भवम्—ह्योगोदोह—हियङ्गुरादेशः विकारार्थे "खञ्" च निपा० (५-२-२३)। "हैयङ्गवीनमादाय घोषवृद्धानुपस्थितान्। नामधेयानि पृच्छन्तौ वन्यानां मार्गशाखिनाम्" रघु० १-४५।

**हैरिक ಹೈರಿಕ** (पुं०) ಚೋರ, ಕಳ್ಳ, ತಸ್ಕರ. हेरम् आसुरी माया तज्जानाति "ठक्"।

**हैहय ಹೈಹಯ** (पुं०) ಕಾರ್ತವೀರ್ಯಾರ್ಜುನ, ಹೈಹಯ ದೇಶದ ದೊರೆ. हैहयाः तद्देशवासिनः—तेषां राजा—हैहय "अञ्" (४-१-१६६)। "धेनुवत्सहरणाच्च हैहयस्त्वं च कीर्तिमपहर्तुमुद्यतः" रघु० ११-७४।

**हो ಹೋ** (अव्य०) 1. ಸಂಬೋಧನೆ. ह्वयते — ह्वेञ् (स्पर्धायां शब्दे च) डोप्रत्ययः। 2. ಕರೆಯುವುದು. "हे है व्यस्तौ समस्तौ च हूतिसम्बोधनार्थयोः। हो हौ चैवंविधौ ज्ञेयौ सम्बुद्ध्याह्वानयोरपि" विश्व०। 3. ವಿಸ್ಮಯ, ಆಶ್ಚರ್ಯ. "ननु हो मथना राघो घोरा नाथमहो नु न" किरा० १५-२०।

**होड ಹೋಡ** (पुं०) ತೆಪ್ಪ, ನೀರನ್ನು ದಾಟಲು ಮರದ ದಿಮ್ಮಿಗಳಿಂದ ತಯಾರಿಸಲ್ಪಟ್ಟ ತೇಲು ಚೌಕಟ್ಟು. होडते गच्छति — होडृ (गतौ) "अच्" (३-१-१३४)।

**होडृ ಹೋಡೃ** (पुं०) ತಸ್ಕರ, ಕಳ್ಳ, ಚೋರ.

**होतृ ಹೋತೃ** (पुं०) 1. ಋಗ್ವೇದವನ್ನು ತಿಳಿದ ಋತ್ವಿಕ್ಕು. जुहोति — हु (दानादनयोः) "तृन्" (उ० २-९५)। (वि०) 2. ಅಗ್ನಿಹೋತ್ರ ಮಾಡುವವನು, ಹೋಮ ಮಾಡುವವನು. "इति वादिन एवास्य होतुराहुतिसाधनम्। अनिन्द्या नन्दिनी नाम धेनुराववृते वनात्" रघु० १-८२। स्त्रियां "ङीप्" (४-१-६)। "या सृष्टिः स्रष्टुराद्या वहति विधिहुतं या हविर्या च होत्री" शाकु० १-१। होत्री यजमानरूपा।

**होत्र ಹೋತ್ರ** (नं०) 1. ಆಜ್ಯ (ತುಪ್ಪ) ಮೊದಲಾದ ಹವಿಸ್ಸು. हूयते — हु (दानादनयोः) "त्रन्" (उ० ४-१६७)। 2. ಹೋಮ.

**होत्रिन् ಹೋತ್ರಿನ್** (पुं०) ಹೋಮ ಮಾಡುವವನು, ಅಗ್ನಿಕಾರ್ಯ ಮಾಡುವವನು. होत्रमस्यास्ति "इनिः" (५-२-११५)। स्त्रियां "ङीप्" (४-१-५)।

–त्री –ತ್ರೀ. ಯಜಮಾನರೂಪವಾದ ಪರಮೇಶ್ವರನ ಮೂರ್ತಿ. "या हविर्या च होत्री" शाकु० १-१।

**होम ಹೋಮ** (ಪುಂ) ಒಂದು ಯಜ್ಞ, ಗೃಹಸ್ಥನು ಪ್ರತಿದಿನ ಆಚರಿಸಬೇಕಾದ ಪಂಚಮಹಾಯಜ್ಞಗಳಲ್ಲೊಂದು, ದೇವ ಯಜ್ಞ. हवनम् —हु (दानादनयोः) "मन्" (उ० १-१३७)। **ಪಂಚಮಹಾಯಜ್ಞಗಳು :** (1) ब्रह्मयज्ञः (अध्यापनम्) (2) पितृयज्ञः (तर्पणम्) (3) देवयज्ञः (होमः) (4) भूतयज्ञः (बलिः) ಮತ್ತು (5) नृयज्ञः (अतिथिपूजनम्)।

**होमक ಹೋಮಕ** (ಪುಂ) ಅಗ್ನಿಕಾರ್ಯ ಮಾಡುವವನು. होम संज्ञायां "कन्"।

**होमकुण्ड ಹೋಮಕುಂಡ** (ನಂ) ಯಾಗದ ಅಗ್ನಿಯನ್ನು ಪ್ರತಿಷ್ಠೆಮಾಡಲು ನೆಲದಲ್ಲಿ ತೋಡಿರುವ ಗುಳಿ. होमार्थं कुण्डम्।

**होमधान्य ಹೋಮಧಾನ್ಯ** (ನಂ) ತಿಲ, ಎಳ್ಳು.

**होमशाला ಹೋಮಶಾಲಾ** (ಸ್ತ್ರೀ०) ಯಜ್ಞಶಾಲೆ.

**होमाग्नि ಹೋಮಾಗ್ನಿ** (ಪುಂ) ಯಾಗಕ್ಕಾಗಿ ಪ್ರತಿಷ್ಠಿಸುವ ಅಗ್ನಿ.

**होमि ಹೋಮಿ** (ಪುಂ) 1. ಅಗ್ನಿ. हूयते अस्मिन् —हु (दानादनयोः) "इन्" मुडागमश्च। 2. ಘೃತ, ಆಜ್ಯ, ತುಪ್ಪ. हूयतेऽनेन —हु "इन्" मुडागमश्च। "होमिर्ना पावके घृते" मेदि०। 3. ಜಲ, ನೀರು.

**होमिन् ಹೋಮಿನ್** (ಪುಂ) ಹೋಮಮಾಡುವವನು, ಅಗ್ನಿಕಾರ್ಯ ಮಾಡುವವನು. होमोऽस्यास्ति—होम "इनिः" (५-२-११५)। जुहोति—हु (दानादनयोः) "मिनिः" (उ० ३-८४)। इति निपा० इति वा।

**होम्य ಹೋಮ್ಯ** (ನಂ) 1. ಘೃತ, ತುಪ್ಪ. होमाय हितम् —होम "यत्" (५-१-५)। 2. ಹೋಮದ ದ್ರವ್ಯ, ಹೋಮಕ್ಕೆ ಅರ್ಹವಾದ ಮತ್ತು ಹೋಮ ಸಂಬಂಧವಾದ ದ್ರವ್ಯ.

**होरा ಹೋರಾ** (ಸ್ತ್ರೀ०) 1. ಲಗ್ನ, ಮೇಷ ವೃಷಭ ಮೊದಲಾದ ರಾಶಿಗಳ ಉದಯ. हुल्यते —हुल (हिंसासंवरणयोः) "घञ्" (३-३-१९)। रलयोरभेदः। 2. ರಾಶಿಯ ಅರ್ಧಭಾಗ. 3. ರೇಖೆ, ಗೆರೆ, ಒಂದು ಗುರುತು. 4. ಒಂದು ಜ್ಯೋತಿಃಶಾಸ್ತ್ರ. "होरा लग्नेऽपि राश्यर्धे रेखाशास्त्रभिदोरपि" मेदि०।

**होलक ಹೋಲಕ** (ಪುಂ) ಅರ್ಧ ಹುರಿದಿರುವ ಶಮೀಧಾನ್ಯ, ಹುಲ್ಲಿನ ಕಾವಿನಲ್ಲಿ ಅರ್ಧಮಾತ್ರ ಹುರಿದಿರುವ ಉದ್ದು ಕಡಲೆ ಮೊದಲಾದ ಸಿಪ್ಪೆಯ ಧಾನ್ಯ. "अर्धपक्वैः शमीधान्यैः तृणभ्रष्टैश्च होलकः। होलकोऽल्पानिलो मेदः कफदोषश्रमापहः॥ भवेद्यो होलको यस्य स च तत्तद्गुणो भवेत्" भावप्र०।

**होलाका ಹೋಲಾಕಾ** (ಸ್ತ್ರೀ०) ವಸಂತೋತ್ಸವ, ಹೋಳಿ ಹಬ್ಬ. हु (दानादनयोः) "विच्" (३-२-७५)। हुं लाति—ला (आदाने) "कः" (३-२-३)। संज्ञायां कन्।

**होहो ಹೋಹೋ** (ಅವ್ಯ०) 1. ಸಂಬೋಧನೆ. हूयतेऽनेन—ह्वेञ् "डोः"। 2. ಆಹ್ವಾನ, ಕರೆಯುವುದು. "हैहे सम्बोधने हूतौ होहो शब्दौ तथैतयोः" मेदि०।

**हौतृक ಹೌತೃಕ** (ವಿ०) ಹೋತೃವಿನಿಂದ ಬಂದ, ಹೋತೃ ಸಂಬಂಧವಾದ. होतुरागतम्—होतृ "ठञ्" (४-३-७८)।

**हौत्र ಹೌತ್ರ** (ವಿ०) ಹೋತೃಸಂಬಂಧವಾದ. होतुरिदम् "अण्" (४-३-१२०)।

**ह्नव ಹ್ನವ** (ಪುಂ) ಮುಚ್ಚಿಡುವುದು, ಮರೆಮಾಚುವುದು, ಬಚ್ಚಿಡುವುದು. ह्नुङ् (अपनयने) "घञ्" (३-३-१८)।

**ह्नुति ಹ್ನುತಿ** (ಸ್ತ್ರೀ०) ಮುಚ್ಚಿಡುವುದು, ಬಚ್ಚಿಡುವುದು, ಮರೆಮಾಚುವುದು. ह्नुङ् (अपनयने) "क्तिन्" (३-३-९४)।

**ह्मल—चलने** (भ्वा० पर० अक० से०)। ह्मलति। जह्माल। ह्मलिता। ह्मलिष्यति। ह्मलतु। अह्मलत्। ಇತ್ಯಾದಿ. ಚಲಿಸು.

कृत्सु:—ह्मलितव्यम्। ह्मलनीयम्। ह्मलितः। ह्मलितवत्। ह्मलत्। ह्मलितम्। ह्मलनम्।

**ह्यस् ಹ್ಯಸ್** (ಅವ್ಯ०) ಕಳೆದ ದಿನ, ಹಿಂದಿನ ದಿನ, ನಿನ್ನೆಯ ದಿನ. यातमहः पृषो०। "ह्योऽतीते (अहनि)" अम०।

**ह्यस्तन ಹ್ಯಸ್ತನ** (ವಿ०) ನಿನ್ನೆಯ ದಿನದ, ನಿನ್ನೆ ದಿನ ನಡೆದ. ह्यो भवम्—ह्यस् "ट्युः" (४-३-२३)।

**ह्यस्त्य ಹ್ಯಸ್ತ್ಯ** (ವಿ०) ನಿನ್ನೆಯ ದಿನದ, ನಿನ್ನೆದಿನ ನಡೆದ. ह्यो भवम् "त्यप्" वा (४-२-१०५)। पक्षे ह्यस्तनम् ಹ್ಯಸ್ತನಮ್.

**ह्रणीया ಹ್ರಣೀಯಾ** (ಸ್ತ್ರೀ०) ನಿಂದೆ, ಆಕ್ಷೇಪಣೆ, ದೋಷಾರೋಪ.

**ह्रद ಹ್ರದ** (ಪುಂ) ನೀರಿನ ಮಡು, ಆಳವಾದ ನೀರಿನ ಮಡು, ಬಹಳ ಆಳವಾದ ಜಲಾಶಯ. ह्रादते ह्राद (अव्यक्ते शब्दे) "अच्" (३-१-१३४)। पृषो०। "ह्रदे गभीरे हृदि चावगाढे शंसन्ति कार्यावतरं हि सन्तः" नैष० ३-५३।

**ह्रदग्रह ಹ್ರದಗ್ರಹ** (पुं०) ಮೊಸಳೆ. ह्रदस्य ग्रहः।

**ह्रदिनी ಹ್ರದಿನೀ** (स्त्री०) ನದಿ, ಹೊಳೆ. ह्रदोऽस्या अस्ति "इनिः" (५-२-११५)। "ङीप्" (४-१-५)। "तच्छुद्धयेऽतिविषवीर्यविलोलजिह्वमुच्चाटयिष्यदुरगं विहरन् ह्रदिन्याम्" भाग० २-७-२८।

**ह्रसिमन् ಹ್ರಸಿಮನ್** (पुं०) ಹ್ರಸ್ವವಾಗಿರುವಿಕೆ, ಚಿಕ್ಕದಾಗಿರುವಿಕೆ, ತುಂಡಾಗಿರುವಿಕೆ. ह्रस्वस्य भावः वा "इमनिच्" (५-१-१२२)। वकारस्य लोपः (६-४-१५६)।

**ह्रसिष्ठ ಹ್ರಸಿಷ್ಠ** (वि०) ಬಹಳ ಹ್ರಸ್ವವಾಗಿರುವಿಕೆ, ಬಹಳ ಚಿಕ್ಕದಾಗಿರುವಿಕೆ, ಬಹಳ ತುಂಡಾಗಿರುವಿಕೆ. अयमेषाम् अतिशयेन ह्रस्वः— ह्रस्व "इष्ठन्" (५-३-५५)। वकारस्य लोपः (६-४-१५६)।

**ह्रसीयस् ಹ್ರಸೀಯಸ್** (वि०) ಸ್ವಲ್ಪ ಚಿಕ್ಕದಾಗಿರುವ, ಎರಡು ವಸ್ತುಗಳಲ್ಲಿ ಸ್ವಲ್ಪ ತುಂಡಾಗಿರುವ ಒಂದು ವಸ್ತು. अयमनयोरतिशयेन ह्रस्वः—ह्रस्व "ईयसुन्" (५-३-५७)। वकारलोपः (६-४-१५६)।

**ह्रस्व ಹ್ರಸ್ವ** (पुं०) 1. ವಾಮನ, ಕುಳ್ಳ, ಗಿಡ್ಡ. ह्रस (शब्दे) "वः" बाहु०। 2. ಏಕಮಾತ್ರಾಕಾಲದಲ್ಲಿ ಉಚ್ಚರಿಸಬಹುದಾದ ಸ್ವರವರ್ಣ. "एकमात्रो भवेद्ध्रस्वः"। (न०) 3. ಸಣ್ಣ ಪ್ರಮಾಣ, ಸಣ್ಣ ಅಳತೆ. "अनुदीर्घं महद्ध्रस्वम्"। (वि०) 4. ಚಿಕ್ಕದಾಗಿರುವ, ತುಂಡಾಗಿರುವ. ಸಣ್ಣದಾದ, ಪುಟ್ಟದಾದ.

**ह्रस्वगवेधुका ಹ್ರಸ್ವಗವೇಧುಕಾ** (स्त्री०) 1. ಬೋಳಂಗಡಲೆ. 2. ಹೀರೆ ಗಿಡ.

**ह्रस्वदर्भ ಹ್ರಸ್ವದರ್ಭ** (पुं०) ಬಿಳಿಯ ದರ್ಭೆ.

**ह्रस्वफला ಹ್ರಸ್ವಫಲಾ** (स्त्री०) ಜಂಬುವೃಕ್ಷ, ನೇರಳೆ ಮರ.

**ह्रस्वमूल ಹ್ರಸ್ವಮೂಲ** (पुं०) ಕೆಂಪುಜಾತಿಯ ಕಬ್ಬು.

**ह्रस्वा ಹ್ರಸ್ವಾ** (स्त्री०) 1. ಕಾಡುಹೆಸರಿನ ಗಿಡ. 2. ಬೋಳಂಗಡಲೆ. 3. ಹೀರೆ ಗಿಡ. 4. ಗಿಡ್ಡ ಹೆಂಗಸು, ಕುಳ್ಳ ಹೆಂಗಸು.

**ह्रस्वाग्नि ಹ್ರಸ್ವಾಗ್ನಿ** (पुं०) ಅರ್ಕವೃಕ್ಷ, ಎಕ್ಕದ ಗಿಡ. ह्रस्वोऽग्निरस्मात्।

**ह्रस्वाङ्ग ಹ್ರಸ್ವಾಂಗ** (पुं०) ವಾಮನ, ಕುಳ್ಳ, ಗಿಡ್ಡ. ह्रस्वान्यङ्गानि यस्य।

**ह्राद ಹ್ರಾದ** (पुं०) 1. ಶಬ್ದ, ಧ್ವನಿ. ह्राद (अव्यक्ते शब्दे) "घञ्" (३-३-१८)। "सङ्घर्षयोगादिव मूर्च्छितानि ह्रादं निगृह्णन्ति न दुन्दुभीनाम्" किरा० १६-८। "ह्रादेन गजघण्टानां शङ्खानां निनदेन च" भा० द्रोण०। 2. ಹಿರಣ್ಯಕಶಿಪುವಿನ ಒಬ್ಬ ಮಗ.

**ह्रादत् ಹ್ರಾದತ್** (वि०) 1. ಶಬ್ದಮಾಡುತ್ತಿರುವ, ಗರ್ಜಿಸುತ್ತಿರುವ. ह्राद (अव्यक्ते शब्दे) "शतृ" (३-२-१२४)। 2. ಅರಚುತ್ತಿರುವ, ಗದ್ದಲಮಾಡುತ್ತಿರುವ. स्त्रियां "ङीप्" (४-१-६)। –न्ती –ನ್ತೀ.

**ह्रादन ಹ್ರಾದನ** (न०) 1. ಶಬ್ದಮಾಡುವುದು, ಗರ್ಜಿಸುವುದು. ह्राद (अव्यक्ते शब्दे) "ल्युट्" (३-३-११५)। 2. ಅರಚುವುದು, ಕಿರಿಚುವುದು, ಗದ್ದಲಮಾಡುವುದು. (वि०) 3. ಶಬ್ದಮಾಡುವ, ಗರ್ಜಿಸುವ, ಭೋರ್ಗರೆಯುವ. ह्राद "ल्युः" (३-१-१३४)।

**ह्रादनीय ಹ್ರಾದನೀಯ** (वि०) 1. ಶಬ್ದಮಾಡಬೇಕಾದ. 2. ಶಬ್ದಮಾಡಬಹುದಾದ. ह्राद (अव्यक्ते शब्दे) "अनीयर्" (३-१-९६)। "तव्यः" (३-१-९६)। ह्रादितव्यः ಹ್ರಾದಿತವ್ಯಃ.

**ह्रादित ಹ್ರಾದಿತ** (वि०) 1. ಅವ್ಯಕ್ತ ಶಬ್ದಮಾಡಿದವನು. ह्राद (अव्यक्ते शब्दे) "क्तः" (३-४-७२)। 2. ಅರಚಿದ, ಕಿರಿಚಿದ. (न०) 3. ಶಬ್ದಮಾಡುವುದು. 4. ಅರಚುವುದು, ಕಿರಿಚುವುದು.

**ह्रादिन् ಹ್ರಾದಿನ್** (वि०) ಶಬ್ದದಿಂದ ಕೂಡಿದ, ಶಬ್ದಮಾಡುವ, ಸದ್ದುಮಾಡುವ. ह्रादोऽस्यास्ति — ह्राद "इनिः" (५-२-११५)। "रथाः पञ्चशता ह्यान्ये ह्रादिनश्च सुवर्मिणः" भा० कर्ण०।

**ह्रादिनी ಹ್ರಾದಿನೀ** (स्त्री०) 1. ಇಂದ್ರನ ವಜ್ರಾಯುಧ. ह्रादते—ह्राद (अव्यक्ते शब्दे) "णिनिः" (३-२-७८)। "ह्रादिनी वज्रमस्त्री स्यात्" अम०। 2. ವಿದ್ಯುತ್ತು, ಮಿಂಚು. "ह्रादिन्य इव मेघेभ्यः शल्यस्य न्यपतन् शराः" भा० शल्य०। 3. ಸಲ್ಲಕೀವೃಕ್ಷ, ಆನೆಬೇಲ. "महेरणा कुन्दुरुकी सल्लकी ह्रादिनीति च" अम०। 4. ನದಿ, ಹೊಳೆ. "तटिनी ह्रादिनी धुनी" अम०। "ह्रादिनी वज्रतडितोः" मेदि०।

**ह्रास ಹ್ರಾಸ** (पुं०) 1. ಶಬ್ದ, ಧ್ವನಿ, ಸದ್ದು. ह्रस (शब्दे) "घञ्" (३-३-१८)। 2. ಕಡಮೆಯಾಗುವುದು, ಕ್ಷಯಹೊಂದುವುದು. "अन्ये कृतयुगे धर्मास्त्रेतायां द्वापरेऽपरे। अन्ये कलियुगे नृणां युगह्रासानुरूपतः" मनु० १-८५।

**ह्रीणीया ಹ್ರೀಣೀಯಾ** (स्त्री०) 1. ಲಜ್ಜೆ, ನಾಚಿಕೆ 2. ನಿಂದೆ, ಆಕ್ಷೇಪಣೆ, ದೋಷಾರೋಪ.

**ह्री ಹ್ರೀ** (स्त्री०) 1. ಲಜ್ಜೆ, ತಪ್ಪುಮಾಡಿದ ಅರಿವಿನಿಂದ ಉಂಟಾದ ನಾಚಿಕೆ, ಹಿರಿಯರಲ್ಲಿ ಮರ್ಯಾದೆ ಮೀರಿ ನಡೆಯುದತ ಜ್ಞಾನದಿಂದ ಉಂಟಾಗುವ ನಾಚಿಕೆ. ह्री (लज्जायाम्) "क्विप्" (वा० ३-३-९४)। "तं विचिन्त्य विनयव्ययं ह्रिया न स्म वेद करवाणि कीदृशम्" नैष० १८-३१। 2. ಲಜ್ಜೆ, ಅವಮಾನ, ನಾಚಿಕೆ. "वासरे विरहनिःसहा निशां कान्तसङ्गसमयं समैहत। सा ह्रिया निशि पुनर्दिनोदयं वाञ्छति स्म पतिकेलिलज्जिता" नैष० १८-५५। 3. ಗಾಂಭೀರ್ಯ, ಗರ್ವವಿಲ್ಲದಿರುವಿಕೆ.

**ह्रीका ಹ್ರೀಕಾ** (स्त्री०) 1. ಭಯ, ಹೆದರಿಕೆ. ह्री (लज्जायाम्) "कन्" दीर्घः रेफस्य वा लः (उ० ३-४८)। पक्षे **ह्लीका ಹ್ಲೀಕಾ.** 2. ಲಜ್ಜೆ, ನಾಚಿಕೆ, ಅವಮಾನ.

**ह्रीकु ಹ್ರೀಕು** (पुं०) 1. ಮುಳ್ಳುಗಸೆ ಗಿಡ, ಸಾರಣೆ ಗಿಡ. 2. ಅರಗು. (वि०) 3. ನಾಚಿಕೆಗೊಂಡವನು, ಲಜ್ಜೆಯುಂಟಾದವನು. ह्री (लज्जायाम्) "कुक्" धातोः रेफस्य वा लः (उ० ३-८५)। पक्षे **ह्लीकुः ಹ್ಲೀಕುಃ.**

**ह्रीजित ಹ್ರೀಜಿತ** (वि०) ಲಜ್ಜೆಯಿಂದ ಜಯಿಸಲ್ಪಟ್ಟವನು. ह्रिया जितः।

**ह्रीण ಹ್ರೀಣ** (वि०) ಲಜ್ಜೆಯುಂಟಾದವನು, ನಾಚಿಕೆಗೊಂಡವನು. ह्री (लज्जायाम्) "क्तः" (३-२-१०२)। वा "नः" (८-२-५५)। पक्षे **ह्रीतः ಹ್ರೀತಃ.** "ह्रीणा च स्मयमाना च नमयन्ती पुनर्मुखम्। दमयन्ती मुदे पत्युरुच्चैरप्यभवत्तदा" नैष० २०-५२।

**ह्रीबेर ಹ್ರೀಬೇರ** (न०) ಮುಡಿವಾಳ.

**ह्रीमत् ಹ್ರೀಮತ್** (वि०) 1. ಲಜ್ಜೆಯುಳ್ಳವನು, ನಾಚಿಕೆಗೊಂಡವನು. ह्रीरस्यास्ति—ह्री "मतुप्" (५-२-९४)। "व्रीडमेति न तव प्रियं वदन् ह्रीमतामभवतैव भूयते" माघ० १४-२। 2. ಸಂಕೋಚವುಳ್ಳವನು. "ह्रीमानभूद्भूमिधरो हरेण त्रैलोक्यवन्द्येन कृतप्रणामः" कुमा० ७-५४। स्त्रियां "ङीप्" (४-१-६)। **-मती -ಮತೀ.** "ह्रीमती व्यतरदुत्तरं वधूः पाणिपङ्कजरुहि दर्पणार्पणाम्" नैष० १८-१२६।

**ह्रेतव्य ಹ್ರೇತವ್ಯ** (वि०) 1. ಲಜ್ಜೆ ಪಡಬೇಕಾದ, ನಾಚಿಕೆ ಪಡಬೇಕಾದ. 2. ಲಜ್ಜೆ ಪಡಬಹುದಾದ. 3. ನಾಚಿಕೆ ಪಡಲು ಅರ್ಹವಾದ. ह्री (लज्जायाम्) "तव्यः" (३-१-९६)। "अनीयर्" (३-१-९६)। **ह्रयणीयः ಹ್ರಯಣೀಯಃ.**

**ह्रेपण ಹ್ರೇಪಣ** (न०) ಲಜ್ಜೆಗೊಳಿಸುವುದು, ನಾಚಿಕೆಗೊಳಿಸುವುದು, ಅವಮಾನಪಡಿಸುವುದು. ह्री (लज्जायाम्) + णिच् "ल्युट्" (३-३-११५)।

**ह्रेपणीय ಹ್ರೇಪಣೀಯ** (वि०) 1. ನಾಚಿಕೆಗೊಳಿಸಲ್ಪಡುವ. 2. ನಾಚಿಕೆಪಡಿಸಲು ಅರ್ಹವಾದ. 3. ನಾಚಿಕೆಪಡಿಸಬೇಕಾದ. ह्री (लज्जायाम्) + णिच् "अनीयर्" (३-१-९६)। "तव्यः" (३-१-९६)। **ह्रेपयितव्यः ಹ್ರೇಪಯಿತವ್ಯಃ.**

**ह्रेपयत् ಹ್ರೇಪಯತ್** (वि०) ಲಜ್ಜೆಯುಂಟುಮಾಡುತ್ತಿರುವ, ನಾಚಿಕೆಪಡಿಸುತ್ತಿರುವ. ह्री (लज्जायाम्) + णिच् "शतृ" (३-२-१२४)। "ह्रेपयन्नहिमतेजसं त्विषा स त्वमित्यमुपपन्नपौरुषः" किरा० १३-४१। स्त्रियां "ङीप्" (४-१-६)। **-यन्ती -ಯಂತೀ.** "शानच्" (३-२-१२४)। **ह्रेपयमाणः ಹ್ರೇಪಯಮಾಣಃ.**

**ह्रेषा ಹ್ರೇಷಾ** (स्त्री०) ಕುದುರೆಯ ಶಬ್ದ, ಕುದುರೆಯು ಕೂಗುವ ಶಬ್ದ, ಕುದುರೆಯ ಕೆನೆತ. ह्रेषृ (अव्यक्ते शब्दे) "अः" (३-३-१०३)। "कश्यं तु मध्यमश्वानां हेषा ह्रेषा च निस्वनः" अम०।

**ह्लाद ಹ್ಲಾದ** (पुं०) ಆಹ್ಲಾದ, ಆನಂದ, ಸಂತೋಷ. ह्लादी (सुखे च) "घञ्" (३-३-१८)।

**ह्लादन ಹ್ಲಾದನ** (न०) 1. ಸಂತೋಷಪಡುವುದು, ಆನಂದಪಡುವುದು. ह्लादी (सुखे च) "ल्युट्" (३-३-११५)। 2. ಸಂತೋಷಪಡಿಸುವುದು, ಆನಂದವುಂಟುಮಾಡುವುದು. ह्लादी + णिच् "ल्युट्" (३-३-११५)। (वि०) 3. ಸಂತೋಷಪಡಿಸುವ, ಆನಂದವುಂಟುಮಾಡುವ. ह्लादी + णिच् "ल्युः" (३-१-१३४)।

**ह्लादनीय ಹ್ಲಾದನೀಯ** (वि०) 1. ಸಂತೋಷಪಡಿಸಬೇಕಾದ. ह्लादी (सुखे च) + णिच् "अनीयर्" (३-१-९६)। 2. ಸಂತೋಷಪಡಿಸಬಹುದಾದ. 3. ಸಂತೋಷಪಡಿಸಲು ಅರ್ಹವಾದ. 4. ಸಂತೋಷಪಡಬಹುದಾದ. 5. ಸಂತೋಷಪಡಲು ಅರ್ಹವಾದ. 6. ಸಂತೋಷಪಡಬೇಕಾದ. ह्लादी "अनीयर्" (३-१-९६)। "तव्यः" (३-१-९६)। **ह्लादितव्यः ಹ್ಲಾದಿತವ್ಯಃ, ह्लादयितव्यः ಹ್ಲಾದಯಿತವ್ಯಃ.**

**ह्लादमान ಹ್ಲಾದಮಾನ** (वि०) ಸಂತೋಷಪಡುತ್ತಿರುವ, ಆನಂದಪಡುತ್ತಿರುವ. ह्लादी (सुखे च) "शानच्" (३-२-१२४)। ह्लादी + णिच् "शतृ" (३-२-१२४)। **ह्लादयत् ಹ್ಲಾದಯತ್.** ಆನಂದಪಡಿಸುತ್ತಿರುವ.

**ह्लादित** ಹ್ಲಾದಿತ (वि०) 1. ಸಂತೋಷಪಟ್ಟಿರುವ. ह्लादी (सुखे च) "क्तः" (३-४-७२)। 2. ಸಂತೋಷವುಂಟಾಗಿರುವ. ह्लादोऽस्य सञ्जातः "इतच्" (५-२-३६)। 3. ಸಂತೋಷಪಡಿಸಲ್ಪಟ್ಟ. ह्लाद + णिच् "क्तः" (३-२-१०२)।

**ह्लादिन्** ಹ್ಲಾದಿನ್ (वि०) 1. ಆನಂದವುಳ್ಳ, ಸಂತೋಷವುಳ್ಳ. ह्लादोऽस्यास्ति—"इनिः" (५-२-११५)। 2. ಸಂತೋಷಪಡಿಸುವ. ह्लादी (सुखे च) + णिच् "णिनिः" (३-१-१३४)। स्त्रियां "ङीप्" (४-१-५)। **–दिनी –ದಿನೀ.**

**ह्लादिनी** ಹ್ಲಾದಿನೀ (स्त्री०) 1. ಇಂದ್ರನ ವಜ್ರಾಯುಧ. 2. ತಟಿತ್ತು, ವಿದ್ಯುತ್ತು, ಮಿಂಚು. "ह्लादिनी वज्रतडितोः" मेदि०।

**ह्लीका** ಹ್ಲೀಕಾ (स्त्री०) 1. ಭಯ, ಹೆದರಿಕೆ. 2. ಲಜ್ಜೆ, ನಾಚಿಕೆ. ह्री (लज्जायाम्) "कन्" दीर्घः रस्य वा लः (उ० ३-४८)। पक्षे **ह्रीका** ಹ್ರೀಕಾ.

**ह्लीकु** ಹ್ಲೀಕು (पुं०) 1. ಮುಳ್ಳುಗಸೆ ಗಿಡ, ಪಾರಣೆ ಗಿಡ. 2. ಅರಗು. 3. ತವರ. ह्री (लज्जायाम्) "कुक्" धातोः रेफस्य वा लः (उ० ३-८५)। पक्षे **ह्रीकुः** ಹ್ರೀಕುಃ.

**ह्वयत्** ಹ್ವಯತ್ (वि०) 1. ಕರೆಯುತ್ತಿರುವ, ಹೆಸರು ಹಿಡಿದು ಕೂಗುತ್ತಿರುವ. ह्वेञ् (स्पर्धायां शब्दे च) "शतृ" (३-२-१२४)। 2. ಮೇಲಾಡುತ್ತಿರುವ, ಸರಿಸಮಾನವಾಗಲು ಸ್ಪರ್ಧಿಸುತ್ತಿರುವ. 3. ಶಬ್ದಮಾಡುತ್ತಿರುವ. स्त्रियां "ङीप्" (४-१-६)। **–यन्ती –ಯಂತೀ.** "शानच्" (३-२-१२४)। **–मानः –ಮಾನಃ.**

**ह्वातव्य** ಹ್ವಾತವ್ಯ (वि०) 1. ಕರೆಯಲ್ಪಡುವ. 2. ಕರೆಯಬೇಕಾದ. 3. ಕರೆಯಬಹುದಾದ. ह्वेञ् (स्पर्धायां शब्दे च) "तव्यः" (३-१-९६)। "अनीयर्" (३-१-९६)। **–नीयः –ನೀಯಃ.** 4. ಸ್ಪರ್ಧಿಸಬೇಕಾದ. 4. ಸ್ಪರ್ಧಿಸಬಹುದಾದ.

**ह्वान** ಹ್ವಾನ (न०) 1. ಕರೆಯುವುದು, ಹೆಸರು ಹಿಡಿದು ಕೂಗುವುದು. 2. ಕರೆಯುವುದು, ಆಹ್ವಾನ ಕೊಡುವುದು. 3. ವಿವಾದಕ್ಕೆ ಎಳೆಯುವುದು. 4. ಸರಿಸಮಾನವಾಗಲು ಮೇಲಾಟವಾಡುವುದು. ह्वेञ् (स्पर्धायां शब्दे च) "ल्युट्" (३-३-११५)।

**ह्वेञ् – स्पर्धायां शब्दे च** (भ्वा० उभ० सक० अनि०)

ह्वयति, ह्वयते। जुहाव जुहुवतुः जुहुवुः।
जुहोथ / जुहविथ } जुहुवथुः जुहुव।
जुहाव / जुहव } जुहुविव जुहुविम।
जुहुवे जुहुवाते जुहुविरे।
जुहुविषे जुहुवाथे जुहुविढ्वे।
जुहुवे जुहुविवहे जुहुविमहे।
ह्वाता ह्वातारौ ह्वातारः।
ह्वास्यति, –ते। ह्वयतु, –ताम्।
अह्वयत्, अह्वयत।

1. ಕರೆ, ಆಹ್ವಾನಕೊಡು. 2. ಹೆಸರುಹಿಡಿದು ಕರೆ. "तां पार्वतीत्याभिजनेन नाम्ना बन्धुप्रियां बन्धुजनो जुहाव। उमेति मात्रा तपसो निषिद्धा पश्चादुमाख्यां सुमुखी जगाम" कुमा० १-२६।

**कर्मणि**:—हूयते। जुहुवे। ह्वायिता। हूयताम् ಇತ್ಯಾದಿ.

**कृत्सु**:—ह्वातव्यः। ह्वानीयः। ह्वेयः। हूतः। हूतवान्। ह्वयत्, –न्ती। हूयमानः। हुतम्। ह्वानम्। हूत्वा। आहूय। "आहूय रामं विनयाभिराममाविः प्रमोदः प्रभुरेवमूचे। तवोत्तमाङ्गे मुकुटं विधातुमह्वाय तिष्ये दिवसे यतिष्ये" चं० रा०।

**ह्वेय** ಹ್ವೇಯ (वि०) 1. ಕರೆಯಲ್ಪಡುವ, 2. ಕರೆಯಬೇಕಾದ. 3. ಕರೆಯಬಹುದಾದ. ह्वेञ् (स्पर्धायां शब्दे च) "यत्" (३-१-९७)। 4. ಸ್ಪರ್ಧಿಸಲ್ಪಡುವ. 5. ಮೇಲಾಟ ಮಾಡಬೇಕಾದ. 6. ಮೇಲಾಟವಾಡಬಹುದಾದ.

इति "ह" कारादिपदार्थनिरूपणम्।

श्रीः

# शब्दार्थकौस्तुभः

## संस्कृत-कर्णाटक शब्दकोशः

## ಸಂಸ್ಕೃತ-ಕನ್ನಡ ಶಬ್ದಕೋಶ

## SAMSKRITA-KANNADA DICTIONARY

---

### परिशिष्टभागः

I. ಬಿಟ್ಟುಹೋಗಿರುವ ಹೊಸ ಪದಗಳು.

II. ನಿಘಂಟುಗಳು ಮತ್ತು ನಿಘಂಟುಕಾರರು.

III. ಆಡಳಿತಕ್ಕೆ ಸಂಬಂಧಿಸಿದ ಪದಗಳು.

श्रीः

श्रीमते हयग्रीवाय नमः

# परिशिष्टम् १

## ಪರಿಶಿಷ್ಟ ೧

## APPENDIX I

ಸಂಸ್ಕೃತ ವಾಙ್ಮಯರತ್ನಾಕರವು ಅಪಾರವಾದುದು. ಅದರ ಇಯತ್ತೆಯನ್ನು ಕಂಡುಹಿಡಿಯಲು ಯಾರಿಗೂ ಸಾಧ್ಯವಾಗದು. ಗಭೀರವಾದ ಈ ರತ್ನಾಕರದಲ್ಲಿ ಎಷ್ಟೇ ಅವಗಾಹನ ಮಾಡಿ ನೋಡುತ್ತಿದ್ದರೂ ಅಕ್ಷಯವಾದ ಶಬ್ದರತ್ನರಾಶಿಗಳು ಸಿಗುತ್ತಲೇ ಇರುವುವು. ಸಂಸ್ಕೃತ ನಿಘಂಟನ್ನು ಬರೆಯುವ ಯಾರಾದರೂ ನಿಘಂಟು ಪರಿಸಮಾಪ್ತವಾಯಿತೆಂದು ಸಮಾಧಾನಪಡುವಂತಿಲ್ಲ. ಈ ಅಪಾರಶಬ್ದರಾಶಿಗೆ ಇಯತ್ತೆಯೇ ಇಲ್ಲ. ವ್ಯಾಕರಣಮಹಾಭಾಷ್ಯಕಾರರಾದ ಪತಂಜಲಿಮುನಿಯು "बृहस्पतिरिन्द्राय दिव्यं वर्षसहस्रं शब्दपारायणं प्रोवाच-नान्तं जगाम" ಎಂದು ಹೇಳಿರುತ್ತಾರೆ. ಆದುದರಿಂದ ಕೇವಲ ಪ್ರಾಯೋಗಿಕ ಶಬ್ದಗಳಿಗೆ ಮಾತ್ರ ವಿವರಣ ಕೊಟ್ಟು ಸಮಗ್ರವಾಯಿತೆಂದು ಸಮಾಧಾನಪಡುವುದಾದರೂ ಇನ್ನೂ ಅಂತಹ ಉಪಯುಕ್ತವಾದ ಕೆಲವು ಪದಗಳನ್ನು ಸೇರಿಸುವುದು ಆವಶ್ಯವೆಂದು ತೋರಿದುದರಿಂದ ಪರಿಶಿಷ್ಟ I ರಲ್ಲಿ ಆ ಪದಗಳನ್ನು ಸೇರಿಸಲಾಗಿದೆ.

# परिशिष्टम् १

## अ

**अटाटयमान ಅಟಾಟ್ಯಮಾನ** (वि०) ಬಹಳವಾಗಿ ಸಂಚರಿಸುತ್ತಿರುವ, ಅತಿಯಾಗಿ ತಿರುಗಾಡುತ್ತಿರುವ. अट (गतौ)+यङ् (वा० ७-४-८२)। "शानच्" (३-२-१२४)। "अटाटयमानोऽरण्यानीं ससीतः सहलक्ष्मणः" भट्टि० ४-२।

**अतिशयालु ಅತಿಶಯಾಲು** (वि०) ಮೀರುವ ಸ್ವಭಾವದ, ಶ್ರೇಷ್ಠವಾದ. अति+शीङ् (स्वप्ने) "आलुच्" (वा० ३-२-१५८)। "प्रासादशोभातिशयालुभिः पथि प्रभोर्निवासाःपटवेश्मभिर्बभुः" माघ० १२-६३।

**अधीयत् ಅಧೀಯತ್** (वि०) ಸುಖವಾಗಿ ಅಧ್ಯಯನ ಮಾಡುವ, ಶ್ರಮವಿಲ್ಲದೆ ಜಪಿಸುವ. अधि + इङ् (अध्ययने) कर्तरि "शतृ" (३-२-१३०)। "अधीयन्नात्मविद् विद्यां धारयन् मस्करिव्रतम्" भट्टि० ५-६३।

**अधीयान ಅಧೀಯಾನ** (वि०) ಅಧ್ಯಯನ ಮಾಡುತ್ತಿರುವ. अधि+इङ्(अध्ययने)"शानच्"(३-२-१२४)।

**अध्यापयितृ ಅಧ್ಯಾಪಯಿತೃ** (वि०) ಅಧ್ಯಯನ ಮಾಡಿಸುವವನು, ವಿದ್ಯೆಯನ್ನು ಕಲಿಸುವವನು. अधि + इङ् (अध्ययने) + णिच् "तृच्" (३-१-१३३)।

**अध्येतृ ಅಧ್ಯೇತೃ** (वि०) ಅಧ್ಯಯನ ಮಾಡುವವನು, ವಿದ್ಯೆಯನ್ನು ಕಲಿಯುವವನು, ವಿದ್ಯಾರ್ಥಿ. अधि + इङ् (अध्ययने) "तृच्" (३-१-१३३)। स्त्रियां "ङीप्" (४-१-६)। **-त्री -ತ್ರೀ.**

**अनुकम्पिन् ಅನುಕಂಪಿನ್** (वि०) ದಯೆಯುಳ್ಳವನು, ದಯೆತೋರಿಸುವವನು. अनु+कपि (चलने) "णिनिः" (३-१-१३४)।

**अनुगर्जन ಅನುಗರ್ಜನ** (न०) ಪ್ರತಿಶಬ್ದ ಕೊಡುವುದು, ಪ್ರತಿಧ್ವನಿಸುವುದು.

**अनुगर्जित ಅನುಗರ್ಜಿತ** (न०) 1. ಪ್ರತಿಧ್ವನಿ, ಮರುದನಿ, ಮಾರ್ದನಿ. अनुसृत्य गर्जितम्। अनु+गर्ज (शब्दे) भावे "क्तः" (३-३-११४)। "अनुगर्जितसन्दिग्धाः करणैर्मुरजस्वनाः" कुमा० ६-४०। (वि०) 2. ಪ್ರತಿಧ್ವನಿಕೊಡಲ್ಪಟ್ಟ, ಎದುರುಶಬ್ದ ಮಾಡಲ್ಪಟ್ಟ. अनु + गर्ज कर्म० "क्तः" (३-२-१२२)।

**अनुमोदिन् ಅನುಮೋದಿನ್** (वि०) ಅನುಮೋದಿಸುವವನು, ಸಮ್ಮತಿಸುವವನು, ಒಪ್ಪಿಗೆ ಕೊಡುವವನು. अनुमोदते—अनु+मुद (हर्षे) "णिनिः" (३-१-१३४)।

**अनुयान ಅನುಯಾನ** (न०) ಹಿಂಬಾಲಿಸಿ ಹೋಗುವುದು, ಅನುಸರಿಸಿ ಹೋಗುವುದು. अनु+या (प्रापणे) "ल्युट्" (३-३-११५)।

**अनुयोग ಅನುಯೋಗ** (पुं०) ಪ್ರಯತ್ನ. अनु + युजिर् (योगे) "घञ्" (३-३-१८)। "न दैवमिति सञ्चिन्त्य त्यजेन्नोद्योगमात्मनः। अनुयोगं विना तैलं तिलानां नोपजायते" पञ्चतं० २-१४७।

**अपजानान ಅಪಜಾನಾನ** (वि०) ಅಪಹ್ನವ ಮಾಡುತ್ತಿರುವ, ಮರೆಮಾಡುತ್ತಿರುವ, ಮರೆಮಾಚುತ್ತಿರುವ. अप + ज्ञा (अवबोधने) "शानच्" (३-२-१२४)। "आत्मानमपजानानः शशमात्रोऽनयद्दिनम्" भट्टि० ८-२६।

**अपवृत्त ಅಪವೃತ್ತ** (वि०) ಕೆಳಮುಖವಾದ, ತಲೆಕೆಳಗಾದ. अप + वृतु (वर्तने) "क्तः" (३-४-७२)। "संसक्तत्रुटितविवर्तितान्त्रजालव्याकीर्णस्फुरदपवृत्तरुण्डमुण्डाः" मालती० ३-१७।

**अपाक्य ಅಪಾಕ್ಯ** (वि०) ಪಾಕಮಾಡಬೇಕಾಗಿಲ್ಲದ, ಬೇಯಿಸಬೇಕಾಗಿಲ್ಲದ. डु पचष् (पाके) "ण्यत्" (३-१-१२४)। न० त०। "पितृणां कुरुषे कार्यमपाक्यैः स्वादुभिः फलैः" भट्टि० ६-६३।

**अमितम्पच ಅಮಿತಂಪಚ** (वि०) ಹೆಚ್ಚಾಗಿ ಅಡಿಗೆ ಮಾಡುವವನು, ಯಾಗಾದಿಗಳಲ್ಲಿ ಜನಸಮೂಹಕ್ಕೆ ಭೋಜನ ಮಾಡಿಸಲು ಹೆಚ್ಚು ಆಹಾರವನ್ನು ಬೇಯಿಸುವವನು. अमितं पचति—डु पचष् (पाके) "खश्" (३-२-३४)। "अमितम्पचमीशानं सर्वभोगिणमुत्तमम्। आवयोः पितरं विद्धि ख्यातं दशरथं भुवि" भट्टि० ६-९७।

**अरिसूदन ಅರಿಸೂದನ** (वि०) ಶತ್ರುಗಳನ್ನು ನಾಶಪಡಿಸುವವನು, ಶತ್ರುಗಳನ್ನು ಧ್ವಂಸಮಾಡುವವನು. अरीन् सूदयति—षूद (क्षरणे) + णिच् "ल्युः" (३-१-१३४)।

**अर्चत् ಅರ್ಚತ್** (वि०) ಪೂಜಿಸುತ್ತಿರುವ, ಆರಾಧಿಸುತ್ತಿರುವ. अर्च (पूजायाम्) "शतृ" (३-२-१२४)। स्त्रियां "ङीप्" (४-१-६)। **-न्ती -ನ್ತೀ.**

**अर्चनीय ಅರ್ಚನೀಯ** (वि०) 1. ಪೂಜೆಮಾಡಿಸಲ್ಪಡುವ. 2. ಪೂಜೆಮಾಡಿಸಬೇಕಾದ. 3. ಪೂಜೆಮಾಡಿಸಲು ಅರ್ಹ ನಾದ. अर्च (पूजायाम्)+णिच् "अनीयर्" (३-१-९६)। "तव्य:" (३-१-९६)। **-यितव्य: -ಯಿತವ್ಯ:.**

**अर्चयत् ಅರ್ಚಯತ್** (वि०) ಪೂಜೆಮಾಡಿಸುತ್ತಿರುವ. अर्च (पूजायाम्)+णिच् "शतृ" (३-२-१२४)। स्त्रियां "ङीप्" (४-१-६)। **-यन्ती -ಯಂತೀ.** "शानच्" (३-२-१२४)। **-यमान: -ಯಮಾನಃ.**

**अर्चितव्य ಅರ್ಚಿತವ್ಯ** (वि०) 1. ಪೂಜಿಸಲ್ಪಡುವ. 2. ಪೂಜಿಸಲು ಅರ್ಹನಾದ. 3. ಪೂಜಿಸಬೇಕಾದ. अर्च (पूजायाम्) "तव्य:" (३-१-९६)।

**अर्जत् ಅರ್ಜತ್** (वि०) ಸಂಪಾದಿಸುತ್ತಿರುವ. अर्ज (अर्जने) "शतृ" (३-२-१२४)। स्त्रियां "ङीप्" (४-१-६)। **-न्ती -ನ್ತೀ.**

**अर्जनीय ಅರ್ಜನೀಯ** (वि०) 1. ಸಂಪಾದಿಸಲ್ಪಡುವ. 2. ಸಂಪಾದಿಸಬೇಕಾದ. 3. ಸಂಪಾದಿಸಲು ಶಕ್ಯವಾದ. 4. ಸಂಪಾದಿಸಲು ಅರ್ಹವಾದ. अर्ज (अर्जने) "अनीयर्" (३-१-९६)। "तव्य:" (३-१-९६)। **अर्जितव्यम् ಅರ್ಜಿತವ್ಯಮ್.**

**अर्ज्य ಅರ್ಜ್ಯ** (वि०) 1. ಸಂಪಾದಿಸಲ್ಪಡುವ. 2. ಸಂಪಾದಿಸಬೇಕಾದ. अर्ज (अर्जने) "ण्यत्" (३-१-१२४)।

**अल्पम्पच ಅಲ್ಪಂಪಚ** (वि०) ಸ್ವಲ್ಪಮಾತ್ರ ಪಾಕಮಾಡುವವನು, ಕೊಂಚ ಅಡಿಗೆ ಮಾಡುವವನು (ಅಲ್ಪಾಹಾರದಿಂದ ತೃಪ್ತಿಪಡುವವನು). अल्पं पचति—डु पचष् (पाके) "खश्" (३-२-३४)। मुमागम:। "ऐव विद्वन् पितु: कामात्पान्तावल्पम्पचान्मुनीन्" भट्टि० ६-९६।

**अवकल्कन ಅವಕಲ್ಕನ** (न०) ಮಿಶ್ರಣ, ಬೆರಕೆ.

**अवश्यपाव्य ಅವಶ್ಯಪಾವ್ಯ** (वि०) ಅವಶ್ಯವಾಗಿ ಮಂತ್ರಾದಿಗಳಿಂದ ಪರಿಶುದ್ಧವಾಗಬೇಕಾದ. अवश्य+पूङ् (पवने) "ण्यत्" (३-१-१२५)। "अवश्यपाव्यं पवसे कच्चित् त्वं देवभाग्यवि:" भट्टि० ६-६४।

**अव्यर्ण ಅವ್ಯರ್ಣ** (वि०) ಪೀಡಿಸಲ್ಪಡದಿರುವ, ತೊಂದರೆ ಪಡಿಸಲ್ಪಡದಿರುವ. न व्यर्ण:। "अव्यर्णो गिरिकूटाभान्यर्णानादिवद्द्रुतम्" भट्टि० ९-११।

## आ

**आखुयान ಆಖುಯಾನ** (पुं०) ಮೂಷಿಕ ವಾಹನನಾದ ಗಣಪತಿ, ವಿನಾಯಕ. "द्वैमातुर: परशुभृदाखुयानो गणाधिप:" वैजं०।

**आघोर ಆಘೋರ** (पुं०) ಗ್ರೀಷ್ಮಕಾಲ, ಬೇಸಿಗೆಯ ಕಾಲ. "पुष्पकालोऽपीष्ममस्त्री ग्रीष्मस्त्वाघोर ऊष्मक:" वैजं०।

**आख्यायनी ಆಖ್ಯಾಯನೀ** (स्त्री०) ಸಂದೇಶ, ಹೇಳಿ ಕಳುಹಿಸಿದ ಬಾಯಿಮಾತು. "आख्यायनी तु सन्देशो दिष्टं संवदनं च तत्" वैजं०।

**आगर्जत् ಆಗರ್ಜತ್** (वि०) ಗಟ್ಟಿಯಾಗಿ ಗರ್ಜನೆ ಮಾಡುತ್ತಿರುವ, ಉಚ್ಚಕಂಠದಿಂದ ಶಬ್ದ ಮಾಡುತ್ತಿರುವ. आ+गृज (शब्दे) "शतृ" (३-२-१२४)। "आगर्जद्गिरिकुञ्जकुञ्जरघटानिस्तीर्णकर्णज्वरज्यानिर्घोषमममन्ददुन्दुभिरवैराध्मातमुज्जृम्भयन्" उ० रा० ५-६।

**आग्नीध्र ಆಗ್ನೀಧ್ರ** (पुं०) ಸ್ವಾಯಂಭುವಮನುವಿನ ಪುತ್ರನಾದ ಪ್ರಿಯವ್ರತರಾಜನ ಹತ್ತು ಮಂದಿ ಮಕ್ಕಳಲ್ಲೊಬ್ಬ. ["द्वीप" ಪದದಲ್ಲಿ ನೋಡಿ.]

**आघ्नान ಆಘ್ನಾನ** (वि०) ಹೊಡೆಯುತ್ತಿರುವ. आ+हन (हिंसागत्यो:) "शानच्" (३-२-१२४)। उपधालोप: (६-४-९८)। कुत्वम् (७-३-५४)। "आघ्नान इव सन्दीप्तैरलातै: सर्वतो मुहु:" भट्टि० ८-१५।

**आचाम्य ಆಚಾಮ್ಯ** (न०) ಆಚಮನ. आ+चमु (अदने) "ण्यत्" (३-१-१२६)। "आचाम्यं सन्ध्ययो: कच्चित् सम्यक् ते न प्रहीयते" भट्टि० ६-६५।

**आच्छिन्दत् ಆಚ್ಛಿಂದತ್** (वि०) ಬಲಾತ್ಕಾರದಿಂದ ಎಳೆದುಕೊಳ್ಳುತ್ತಿರುವ, ಬಲಾತ್ಕಾರವಾಗಿ ಅಪಾಯದಿಂದ ತಪ್ಪಿಸಿ ಕರೆದುಕೊಳ್ಳುತ್ತಿರುವ. आ+छिदिर् (द्वैधीकरणे) "शतृ" (३-२-१२४)। "राहोश्चन्द्रकलामिवाननचरीं दैवात्समासाद्य मे दस्योरस्य कृपाणपातविषयादाच्छिन्दत: प्रेयसीम्" मालती० ५-२८।

**आजानिक ಆಜಾನಿಕ** (वि०) ಸ್ವಭಾವಸಿದ್ಧವಾದ, ಸಹಜವಾದ. जननं जन:—न जनोऽजन:—अजनेन निर्वृत्त: "ठक्" (५-१-७९)। "विशेषतीर्थैरिव जह्नुनन्दिनी गुणैरिवाजानिकरागभूमिता" नैष० १५-५४।

**आजिहान ಆಜಿಹಾನ** (वि०) ಬರುತ್ತಿರುವ. आ+ओहाङ् (गतौ) "शानच्" (३-२-१२४)। "अत्राक्षुराजिहानं ते स्मरमप्रेसरं सुरा:" नैष० १७-१४।

**आटरूष ಆಟರೂಷ** (पुं०) ಆಡುಸೋಗೆ ಸೊಪ್ಪು. "वासके त्वाटरूष:स्यात् सिंहास्यो वाजिदन्तक:" वैजं०।

**आतिपातिक ಆತಿಪಾತಿಕ** (वि०) ಸದ್ಯಃ ವಿಕ್ರಯಿಸಬೇಕಾದ, ಕೂಡಲೇ ಮಾರಾಟವಾಗಬೇಕಾದ, ಕಾಲಾತಿಕ್ರಮವನ್ನು ಸಹಿಸದಿರುವ (ತರಕಾರಿ ಹಣ್ಣು ಮೊದಲಾ

ದಾವು). "आतिपातिकानां पथ्यानामन्यत्र विक्रेयमित्य-विरोधेनानुक्षयो देय:" अर्थशा० ३-१५।

**आददान** ಆದದಾನ (वि०) ಸ್ವೀಕರಿಸುತ್ತಿರುವ, ತೆಗೆದುಕೊಳ್ಳುತ್ತಿರುವ. आ+डु दाञ् (दाने) "शानच्" (३-२-१२४)। "जलाभिलाषी जलमाददानां छायेव तां भूपतिरन्वगच्छत्" रघु० २-६।

**आदेशित** ಆದೇಶಿತ (वि०) ಆದೇಶ ಹೊಂದಿರುವವನು, ಅಪ್ಪಣೆ ಪಡೆದವನು. आदेशोऽस्य सञ्जातः "इतच्" (५-२-३६)। "आदेशितामप्यवलोक्य मन्दं मन्दं नलस्यैव दिशा चलन्तीम्" नैष० १४-३८।

**आधानिक** ಆಧಾನಿಕ (न०) ಪುಂಸವನ ಸಂಸ್ಕಾರ, ಷೋಡಶ ಸಂಸ್ಕಾರಗಳಲ್ಲೊಂದು ಸಂಸ್ಕಾರ. "आधानिकं पुंसवनं पौंस्नमप्यथ गार्भिणम्" वैज०।

**आधारण** ಆಧಾರಣ (न०) ಹೆಚ್ಚು ಕಡಿಮೆಯಿಲ್ಲದ ಕಾರ್ಯವನ್ನು ವಹಿಸಿಕೊಳ್ಳುವುದು, ಸಮಾನವಾಗಿ ಕಾರ್ಯವನ್ನು ಹಂಚಿಕೊಳ್ಳುವುದು.

**आधिकारिक** ಆಧಿಕಾರಿಕ (वि०) ಅಧಿಕಾರವೇ ಪ್ರಯೋಜನವಾಗಿರುವ. "अधिकार: प्रयोजनं यत्र — अधिकार "ठञ्" (५-१-१०९)। "आधिकारिकपदेषु ते वयं स्वेषु यावदधिकारमाहिताः" माघ० १७-९४।

**आनूप्य** ಆನೂಪ್ಯ (वि०) ಜವುಗುಪ್ರದೇಶದಲ್ಲಿ ಹುಟ್ಟಿದ, ನೀರಿನಿಂದ ತುಂಬಿರುವ ಪ್ರದೇಶದಲ್ಲಿ ಬೆಳೆದ. अनूपे जलप्रायदेशे भवः। "महत्यवकाशे हि स्वाल्याश्चाऽऽनूप्याश्चौषधयो भवन्ति" अर्थशा० ७-११।

**आन्तर** ಆಂತರ (वि०) ಒಳಗಡೆ ಅಡಗಿಕೊಂಡಿರುವ, ಒಳಗಡೆ ಸೇರಿಕೊಂಡಿರುವ, ಹೃದಯದಲ್ಲಿ ಗೂಢವಾಗಿರುವ. अन्तः भवः — अन्तर् "अण्" (४-३-५३)। "व्यतिषजति पदार्थानान्तरः कोऽपि हेतुः न खलु बहिरुपाधीन् प्रीतयः संश्रयन्ते" मालती० १-२७।

**आपीडयत्** ಆಪೀಡಯತ್ (वि०) ಪೀಡಿಸುತ್ತಿರುವ, ತೊಂದರೆಕೊಡುತ್ತಿರುವ, ಹಿಂಸಿಸುತ್ತಿರುವ. आ + पीड (अवगाहने)+णिच् "शतृ" (३-२-१२४)। "आपीडयन् बलं शत्रोर्जिगीषुरतिशोषयेत्" हितो० ३-८-९१। स्त्रियां "ङीप्" (४-१-६)। —यन्ती –ಯಂತೀ.

**आमक** ಆಮಕ (वि०) ಜೀರ್ಣವಾಗದಿರುವ ಬೇಯಿಸಲ್ಪಡದ ಆಹಾರ, ಅಜೀರ್ಣವಸ್ತು. "क्षुत्पिपासा-व्यक्लान्तं अत्याशितं आमकाशितं दुर्बलं वा न कर्म कारयेत्" अर्थशा० ४-८।

**आमन्त्रणिक** ಆಮಂತ್ರಣಿಕ (न०) 1. ಪುಂಸವನಾನಂತರ ನಡೆಯಬೇಕಾದ ಸೀಮಂತ ಸಂಸ್ಕಾರ. 2. ನಾಮಕರಣ. "सीमन्तोन्नयनं नामकर्मामन्त्रणिके समे" वैज०।

**आमृशत्** ಆಮೃಶತ್ (वि०) ವಿಮರ್ಶಿಸಿ ನೋಡುತ್ತಿರುವ, ಚೆನ್ನಾಗಿ ದೃಷ್ಟಿಸಿ ನೋಡುತ್ತಿರುವ. आ+मृश (आमर्शने) "शतृ" (३-२-१२४)। "आमृशद्भिरभितो वलिवीची-लोलमानविततायतमुल्लिहस्तैः" माघ० १०-५९।

**आम्रेडयत्** ಆಮ್ರೇಡಯತ್ (वि०) ಹೆಚ್ಚಿಸುತ್ತಿರುವ, ಅಧಿಕಗೊಳಿಸುತ್ತಿರುವ.

**आयत्** ಆಯತ್ (वि०) ಆಗಮಿಸುತ್ತಿರುವ, ಎದುರಾಗಿ ಬರುತ್ತಿರುವ. आ+इण् (गतौ) "शतृ" (३-२-१२४)। स्त्रियां "ङीप्" (४-१-६)। —यन्ती –ಯಂತೀ. "आयन्तीनामविरततरथं राजकानीकिनीनाम्" माघ० १८-८०।

**आयात्** ಆಯಾತ್ (वि०) ಆಗಮಿಸುತ್ತಿರುವ, ಬರುತ್ತಿರುವ. आ+या (प्रापणे) "शतृ" (३-२-१२४)। स्त्रियां "ङीप्" (४-१-६)। —यान्ती –ಯಾಂತೀ. "आयान्त्यां निजयुवतौ वनात्सशङ्कं बर्हिणामपर-शिखण्डिनीं भरेण" माघ० ८-११।

**आयान** ಆಯಾನ (न०) 1. ಅಲಂಕಾರ, ಭೂಷಣ, ಒಡವೆ, ಆಭರಣ. "आयानं स्यादलङ्कारः" वैज०। 2. ಬರುವುದು.

**आराज्य** ಆರಾಜ್ಯ (न०) ರಾಜನಿಲ್ಲದಿರುವಿಕೆ, ಅರಾಜಕತೆ. "अनिष्टैरद्भुतोत्पातैः परस्योद्वेगमाचरेत्। आराज्यायेति निर्वादः समानः कोप उच्यते" अर्थशा० १४-२।

**आर्जन** ಆರ್ಜನ (न०) ಸಂಪಾದಿಸುವುದು, ಗಳಿಸುವುದು. आ + अर्ज (प्रतियत्ने)+ णिच् "ल्युट्" (३-३-११५)।

**आर्जित** ಆರ್ಜಿತ (वि०) ಸಂಪಾದಿಸಲ್ಪಟ್ಟ, ಗಳಿಸಲ್ಪಟ್ಟ. आ+अर्ज (प्रतियत्ने) + णिच् "क्त" (३-२-१०२)।

**आवाहित** ಆವಾಹಿತ (वि०) ಆವಾಹನೆ ಮಾಡಲ್ಪಟ್ಟ, ಶ್ರದ್ಧೆಯಾಗಿ ಮಂತ್ರಗಳಿಂದ ಕರೆಯಲ್ಪಟ್ಟ. आ+वह (प्रापणे)+णिच् "क्तः" (३-२-१०२)। "आवाहितां द्विजेस्तत्र गायत्रीमर्कमण्डलात्। स संनिदधतीं पश्यन्दृष्ट-नष्टोऽभवद्भ्रिया" नैष० १७-१७४।

**आशास्ति** ಆಶಾಸ್ತಿ (स्त्री०) ಅಭಿಲಾಷೆ, ಅಪೇಕ್ಷೆ. आ+शासु (इच्छायाम्) "क्तिन्" (३-३-९४)। "समेधा-शास्तिभिश्चाभिमतानामङ्गिकया शिष्यसंज्ञाभिश्च

कर्मण्यभिजनेऽवसितान्यादिशेदल्पलाभम्" अर्थशा० १-११।

**आष्टम** ಆಷ್ಟಮ (पुं०) ಎಂಟನೆಯ ಒಂದು ಭಾಗ. अष्टम वा "ञ:" (५-३-५०)। पक्षे अष्टम: ಅಷ್ಟಮಃ.

**आसाव्य** ಆಸಾವ್ಯ (वि०) ಯಾಗಕ್ಕೆ ಅರ್ಹವಾದ, ಯಜ್ಞಕ್ಕೆ ಅರ್ಹವಾದ. आ+षुञ् (अभिषवे) "ण्यत्" (३-१-१२६)। "आसाव्यमध्वरे सोमं द्विजै: कच्चिन्नमस्यसि" भट्टि० ६-६४।

**आसित** ಆಸಿತ (वि०) 1. ಕುಳಿತುಕೊಂಡವನು. आस (उपवेशने) कर्त० "क्त:" (३-४-७२)। "आसितो मुकुन्द:"। (न०) 2. ಆಸನ. आस्यते अस्मिन्—आस अधि० "क्त:" (३-४-७६)। "मुकुन्दस्यासितमिदमिदं यातं रमापते:। भुक्तमेतदनन्तस्येत्यूचुर्गोप्यो दिदृक्षव:"। 3. ಕುಳಿತುಕೊಳ್ಳುವುದು. आस भावे "क्त:" (३-३-११४)।

**आस्तरक** ಆಸ್ತರಕ (वि०) ಹಾಸಿಗೆಯನ್ನು ಸಜ್ಜುಗೊಳಿಸುವವನು, ಹಾಸಿಗೆಗೆ ಅಲಂಕಾರ ಮಾಡುವವನು. आ+स्तृञ् (आच्छादने) "ण्वुल्" (३-१-१३३)। "सूदारालिकस्नापकसंवाहकास्तरककल्पकप्रसाधकोदकपरिचारका रसदा:" अर्थशा० १-१२।

**आस्वादनी** ಆಸ್ವಾದನೀ (स्त्री०) ಆಸ್ವಾದನೆ ಮಾಡುವ, ರುಚಿ ನೋಡುವ, ನಾಲಗೆಯಿಂದ ನೆಕ್ಕುವ. आ + स्वद (आस्वादने) "ल्युट्" (३-३-११३)। "ङीप्" (४-१-१५)। "आस्वादनी दानवशोणितानामकुण्ठितामद्रिविदारणेऽपि" याद० २०-३१।

**आह्वायक** ಆಹ್ವಾಯಕ (वि०) ಆಹ್ವಾನಕೊಡುವವನು, ಕರೆಯುವವನು. आ+ह्वेञ् (स्पर्धायां शब्दे च) "ण्वुल्" (३-१-१३३)। "आर्य, किंनामधेयमाख्यातमाह्वायकै:" उ० रा० ५।

## इ

**इक्षुसूनिका** ಇಕ್ಷುಸೂನಿಕಾ (स्त्री०) ಕಬ್ಬಿನ ಜಲ್ಲೆಯನ್ನು ಅರೆಯುವ ಯಂತ್ರದ ಒಂದು ಉಪಕರಣ. "इक्षुपीडनयन्त्रस्य शालिकात्विक्षुसूनिका" वैज०।

**इङ्गत्** ಇಂಗತ್ (वि०) ಜಂಗಮ, ಚಲಿಸುವ. "जगत्त्रसचरप्राणमिषदिङ्गच्च जङ्गमम्" वैज०।

**इत्वास** ಇತ್ವಾಸ (पुं०) ಕೈವರ್ತಮುಸ್ತಕ, ತುಂಗಮುಸ್ತೆ, ಕೊನ್ನಾರಿಯ ಒಂದು ಭೇದ. "कैवर्तीमुस्तकेत्वासौ" वैज०।

**इन्द्रच्छन्द** ಇಂದ್ರಚ್ಛಂದ (पुं०) ಮುಕ್ತಾಹಾರದ ಒಂದು ಭೇದ. "यष्टीनामष्टसहस्रमिन्द्रच्छन्द:" अर्थशा० २-११।

## उ

**उग्रम्पश्य** ಉಗ್ರಂಪಶ್ಯ (वि०) 1. ಬಹಳ ಕ್ರೂರದೃಷ್ಟಿಯಿಂದ ನೋಡುವ. 2. ಪಾಪವೆಂದು ತಿಳಿಯುವ. उग्रं पश्यति—दृशिर् (प्रेक्षणे) "खश्" (३-२-३७)। पश्यादेश: (३-१-१३७)। "उग्रम्पश्येन सुग्रीवस्तेन भ्राता निराकृत:" भट्टि० ६-१००।

**उच्चूड** ಉಚ್ಚೂಡ (पुं०) ಊರ್ಧ್ವಮುಖವಾದ ಧ್ವಜ, ಮೇಲುಮುಖವಾದ ಪತಾಕೆ. "पताका तु ध्वजोऽस्त्रियाम्। अस्योच्चूडावचूडौ द्वावूर्ध्वाधोमुखचूडकौ" वैज०।

**उज्जिहान** ಉಜ್ಜಿಹಾನ (वि०) ಮೇಲಕ್ಕೆ ಹಾರಿ ಹೋಗುತ್ತಿರುವ. उद्+ओ हाङ् (गतौ) "शानच्" (३-२-१२४)। "श्वेतं शैलं फणिपतिमिव क्ष्मातलादुज्जिहानम्" हंस० १-३८।

**उत्कारिका** ಉತ್ಕಾರಿಕಾ (स्त्री०) ಹಿಟ್ಟಿನಿಂದ ಮಾಡಿದ ರೊಟ್ಟಿ. "उत्कारिका चूर्णपूपे" वैज०।

**उद्गाल** ಉದ್ಗಾಲ (पुं०) ವಮನ, ವಾಂತಿ. "उद्गालो वमथूद्गारौ" वैज०।

**उद्ध्य** ಉದ್ಧ್ಯ (पुं०) ನದ, ಗಂಡುಹೊಳೆ. उज्झत्युदकम्—उज्झ (उत्सर्गे) "क्यप्" (३-१-११५)। निपा०। "तोयदागम इवोद्ध्यभिद्ययोर्नामधेयसदृशं विचेष्टितम्" रघु० ११-८।

**उद्वेलन** ಉದ್ವೇಲನ (न०) ದಡವನ್ನು ಮೀರುವುದು, ದಡವನ್ನು ದಾಟಿ ಬರುವುದು. उद्+वेलृ (चलने) "ल्युट्" (३-३-११५)।

**उद्वेलयत्** ಉದ್ವೇಲಯತ್ (वि०) ತಟವನ್ನು ಮೀರಿಸಿ ಹೊರಡಿಸುತ್ತಿರುವ, ದಡವನ್ನು ದಾಟಿ ಬರುವಂತೆ ಮಾಡುತ್ತಿರುವ. उद् + वेलृ (चलने) + णिच् "शतृ" (३-२-१२४)।

**उद्वेलित** ಉದ್ವೇಲಿತ (वि०) ತಟವನ್ನು ಮೀರಿ ಬರುವಂತೆ ಮಾಡಲ್ಪಟ್ಟ, ದಡವನ್ನು ಉಲ್ಲಂಘಿಸಿ ಬರುವಂತೆ ಮಾಡಲ್ಪಟ್ಟ. उद्+वेलृ (चलने)+णिच् "क्त:" (३-२-१०२)। "उद्वेलिताश्चुक्षुभिरे महार्णवा: नभ:स्रवन्ती सहसाभ्यवर्धत" कुमा० १५-११।

**उपलिप्सु ಉಪಲಿಪ್ಸು** (ವಿ೦) ಹೊಂದಲು ಅಪೇಕ್ಷೆಯುಳ್ಳ, ಪಡೆಯಲು ಇಚ್ಛಿಸುವ. उपलब्धुमिच्छुः। "प्राविश-न्नाहवप्रज्ञा आहावमुपलिप्सवः" भट्टि० ७-६०।

**उपलिप्सित ಉಪಲಿಪ್ಸಿತ** (ವಿ೦) ಪಡೆಯಲು ಅಪೇಕ್ಷಿಸಲ್ಪಟ್ಟ. उपलब्धुमिष्टम्। "सावलेपमुपलिप्सिते परै-रभ्युपैति विकृतिं रजस्यपि" किरा० १३-५६।

**उपशायिका ಉಪಶಾಯಿಕಾ** (ಸ್ತ್ರೀ೦) ಸರದಿಯಿಂದ ಮಲಗುವುದು. "तवोपशायिका यावद्राक्षस्यश्चेतयन्ति न। प्रतिसन्दिश्यतां तावद्भर्तुः शार्ङ्गस्य मैथिलि" भट्टि० ८-१२३।

## ऊ

**ऊर्णवाहिन् ಊರ್ಣವಾಹಿನ್** (ಪುं೦) ಜೇಡರ ಹುಳ.

**ऊर्ध्वसूचिका ಊರ್ಧ್ವಸೂಚಿಕಾ** (ಸ್ತ್ರೀ೦) ಬಾಗಿಲಿನ ಮೇಲುಭಾಗ. "सूचिस्त्वयोऽर्गलेषा चेद् द्वारोर्ध्वे तूर्ध्व-सूचिका" वैज०।

**ऊवद्ध्य ಊವದ್ಧ್ಯ** (ನಂ೦) ಅಪಾನವಾಯು, ಗುದದಿಂದ ಹೊರಡುವ ವಾಯು. "स्थिरस्त्वाश्वास एती च स्यादूवद्ध्यं गुदानिले" वैज०।

## ऋ

**ऋश्यकेतु ಋಶ್ಯಕೇತು** (ಪುं೦) ಅನಿರುದ್ಧ, ಪ್ರದ್ಯುಮ್ನನ ಮಗ, ಉಷೆಯ ಪತಿ. "ब्रह्मसूरनिरुद्धः स्यादृश्यकेतु-रुषापतिः" वैज०।

**ऋषणी ಋಷಣೀ** (ಸ್ತ್ರೀ೦) ಸಬ್ಬಸಿಗೆ.

## ऐ

**ऐरण्डक ಐರಂಡಕ** (ಪುं೦) ಮನೆಯ ಬಾಗಿಲಿನ ಹೊಸ್ತಿಲು. "उत्तराङ्गं तूर्ध्वदारु द्वारस्यैरण्डकः पुनः। गृहावग्रहणी देहल्यम्बरोदुम्बरोम्बुरा" वैज०।

## ओ

**ओराल ಓರಾಲ** (ಪುं೦) ಹಳದಿ ಮತ್ತು ಕಪ್ಪು ಬೆರತ ಬಣ್ಣ. "पीतश्यामल ओरालो गौरः स्यात्पीतलोहितः" वैज०।

**ओलक ಓಲಕ** (ಪುं೦) 1. ಕೀರೆಸೊಪ್ಪು. "काणमारिष ओलकः" वैज०। 2. ಮಧುರರಸವನ್ನು ಬಿಟ್ಟು ಒಟ್ಟುಗೂಡಿದ ಉಳಿದ ರಸಗಳು. "स्वादुमेकं विहायान्ये युक्ताः पञ्च स्युरोलकः" वैज०। 3. ಕಾರರಸವನ್ನು ಬಿಟ್ಟು ಒಟ್ಟುಗೂಡಿದ ಉಳಿದ ಐದು ರಸಗಳು. "ओलकः कटुकं हित्वा"। 4. ಕಹಿರಸವನ್ನು ಬಿಟ್ಟು ಒಟ್ಟುಗೂಡಿದ ಇತರ ಐದು ರಸಗಳು. "विना तिक्तेन चोलकः" वैज०।

**ओसर ಓಸರ** (ಪುं೦) ಸಣ್ಣ ಜಾತಿಯ ಜೀರಿಗೆ. "सूक्ष्मोऽसौ कणजीरण ओसरः" वैज०।

## औ

**औपशायिक ಔಪಶಾಯಿಕ** (ಪುं೦) ಶಯನಗೃಹದ ಅಧಿಕಾರಿ. "पादपाशिककुटीरक्षकौपशायिकादिः" अर्थशा०।

**औपस्थायिक ಔಪಸ್ಥಾಯಿಕ** (ಪುं೦) ಕೂಲಿಯಾಳು, ಕೂಲಿಯಿಂದ ಜೀವಿಸುವವನು. "कुटीरक्षकौपशायिकादिः औपस्थायिकवर्गः" अर्थशा०।

**औप्तिका ಔಪ್ತಿಕಾ** (ಸ್ತ್ರೀ೦) ಜ್ಯೇಷ್ಠ ಸಹೋದರಿ, ಹಿರಿಯಕ್ಕ. "ज्येष्ठा स्वसौप्तिका" वैज०।

## क

**कक्खट ಕಕ್ಖಟ** (ವಿ೦) ಬಹಳ ದೃಢವಾದ, ಕಠಿನವಾದ. "कठोरनिष्ठुरक्रूरदृढदारुणकक्खटाः" वैज०।

**कटवानक ಕಟವಾನಕ** (ನಂ೦) ಮೃಗರೋಮದಿಂದ ನಿರ್ಮಿತವಾದ ಆರು ವಿಧ ವಸ್ತ್ರಗಳಲ್ಲೊಂದು. संपुटिका चतुरश्रिका लम्बरा कटवानकम् प्रावरकः सत्तलिका ಎಂದು ಮೃಗರೋಮಜವು ಆರು ವಿಧ. अर्थशा०।

**कण्डूर ಕಂಡೂರ** (ಪುं೦) ಸೂರಣ, ಚೂರಣದ ಗಿಡ. "ऊल्लः कण्डूरसूरणौ" वैज०।

**कन्थटिका ಕಂಥಟಿಕಾ** (ಸ್ತ್ರೀ೦) ಛಿಂದಿಬಟ್ಟೆ, ಹರುಕಂಬಟ್ಟೆ. "चीवरं भिक्षुसंघाटी कन्या कन्थटिके समे" वैज०।

**कर्णाक ಕರ್ಣಾಕ** (ಪುं೦) ಮೇಲಿನ ಕಿವಿಗೆ ಹಾಕಿಕೊಳ್ಳುವ ಚಂದ್ರಮುರುವೆಂಬ ಒಂದು ಆಭರಣ. "उत्क्षिप्तिका तु कर्णाकः" वैज०।

**कावारी ಕಾವಾರೀ** (ಸ್ತ್ರೀ೦) ತಾಳೆಗರಿ ಅಥವಾ ಹುಲ್ಲಿನಿಂದ ನಿರ್ಮಿತವಾದ ಕೊಡೆ. "कावारी जङ्गमकुटी भ्रमत्कुटी" त्रिकाण्ड०।

**किनाटक ಕಿನಾಟಕ** (ನಂ೦) ಸಾರ, ಸ್ಥಿರಾಂಶ, ಮಜ್ಜೆ. "मज्जा सारः किनाटकम्" वैज०।

अर्थानर्थौ वार्तायाम्। नयापनयौ दण्डनीत्याम्। एतासां बलाबले हेतुभिरन्वीक्षमाणा आन्वीक्षिकी लोकस्योपकरोति। व्यसने अभ्युदये च बुद्धिमवस्थापयति। प्रज्ञावाक्यक्रियावैशारद्यं च करोति" अर्थशा०। "प्रदीपः सर्वविद्यानामुपायः सर्वकर्मणाम्। आश्रयः सर्वधर्माणां शश्वदान्वीक्षिकी मता"॥ "धर्ममर्थं च कामं च प्रवर्तयति पाति च। अधर्मानर्थविद्वेषानिदं शास्त्रं निहन्ति च" अर्थशा०।

भाषा : ಜಗತ್ತಿನ ಎಲ್ಲಾ ಭಾಷೆಗಳಲ್ಲಿ ಸಂಸ್ಕೃತಕ್ಕೆ ಪರಮೋಚ್ಚಸ್ಥಾನವನ್ನು ಕೊಟ್ಟು ಎಲ್ಲಾ ದೇಶದ ವಿದ್ವಾಂಸರೂ ಗೌರವಿಸಿರುತ್ತಾರೆ. ಎಲ್ಲಾ ಭಾಷೆಗಳಲ್ಲೂ ಶಬ್ದಗಳು ಪರಿಪೂರ್ಣವಾಗಿರುವುದೆಂದು ಹೇಳಲಾಗುವುದಿಲ್ಲ. ಅನೇಕ ಭಾಷೆಗಳು ಸಂಸ್ಕೃತಜನ್ಯವೆಂದು ಹೇಳಿದರೂ ತಪ್ಪಾಗಲಾರದು. ಸಂಸ್ಕೃತ ಭಾಷಾಮಿಶ್ರಣವಿಲ್ಲದೆ ಕೆಲವು ಭಾಷೆಗಳು ಸ್ವತಂತ್ರವಾಗಿರಲು ಸಾಧ್ಯವಿಲ್ಲ. ಕೆಲವು ಭಾಷೆಗಳು ಪರಿಪೂರ್ಣವಾಗಿರುವುದೆಂದು ತಿಳಿದರೂ ಸಂಸ್ಕೃತ ಭಾಷೆಯ ಸಾಹಚರ್ಯದಿಂದ ಮಹತ್ವವನ್ನು ಪಡೆದಿರುವುವು. ಸಂಸ್ಕೃತ ಭಾಷೆಯಲ್ಲಿರುವ ಸೌಷ್ಠವ ಸೌಂದರ್ಯ ಮಾಧುರ್ಯ ಗಾಂಭೀರ್ಯ ಲಾಲಿತ್ಯ ಮುಂತಾದ ಗುಣಗಳೇ ಇತರ ಭಾಷಾಗ್ರಂಥಗಳು ಸಂಸ್ಕೃತ ಪದಗಳ ಸಾಹಚರ್ಯವನ್ನು ಪಡೆಯಲು ಕಾರಣ. ಕೆಲವು ಭಾಷೆಗಳಲ್ಲಿ ಶಬ್ದಗಳ ಕೊರತೆಯೂ ಸಂಸ್ಕೃತ ಪದಗಳ ಉಪಯೋಗಕ್ಕೆ ಕಾರಣವಾಗಿರಬಹುದು.

ಹಿಂದೀ ಭಾಷೆ : "परमदुर्लभ मनुष्ययोनिप्राप्तिके मुख्य साधन दो प्रकार के हैं। प्रथम कठोरतम तपश्चरणादि तथा द्वितीय सुखमयजीवन व्यतीत करते हुए सत्काव्य सेवन। इनमें-से प्रथमसाधन नानाविध विघ्न-बाधाओं से भरा हुआ अतिशय कष्टसाध्य है तथा सत्काव्य-सेवनरूप द्वितीय साधन पूर्वापेक्षया अधिक सरल एवं सुखसाध्य है"। ಇಲ್ಲಿ ಸಂಸ್ಕೃತ ಪದಗಳೆಷ್ಟಿವೆಯೆಂದು ನೋಡಬಹುದು.

ಕನ್ನಡ ಭಾಷೆ : ಕನ್ನಡಕುಲಮೂರ್ಧನ್ಯರಾಗಿದ್ದ ದಿ॥ ಶ್ರೀಮಾನ್ ವೆಂಕಣ್ಣಯ್ಯನವರು "ಕನ್ನಡದಲ್ಲಿ ಗ್ರಂಥರಚನೆಯಾಗುವ ಹೊತ್ತಿಗೆ ಸಂಸ್ಕೃತವು ಸಮಗ್ರ ಭರತಖಂಡದ ಸಂಸ್ಕೃತಿಯ ಭಾಷೆಯಾಗಿ ಏರ್ಪಟ್ಟು ವಿಶೇಷವಾದ ಪ್ರಾಬಲ್ಯವನ್ನು ಪಡೆದಿತ್ತು. ಸಂಸ್ಕೃತಸಾಹಿತ್ಯವೇ ಕನ್ನಡ ಸಾಹಿತ್ಯ ರಚನೆಗೆ ಪ್ರೇರಕವೂ ಪೋಷಕವೂ ಆಗಿತ್ತೆಂದು ಹೇಳಬಹುದು. ಕಾವ್ಯಕ್ಕೆ ತಕ್ಕ ವಿಷಯುವಾವುದು, ಅದನ್ನು ಕಾವ್ಯದಲ್ಲಿ ಯಾವ ರೀತಿ ನಿರೂಪಿಸಬೇಕು ಎಂಬುದನ್ನು ಕನ್ನಡ ಕವಿಗಳು ಸಂಸ್ಕೃತ ಕವಿಗಳಿಂದ ಕಲಿತರು. ಸಂಸ್ಕೃತ ಸಾಹಿತ್ಯವು ಕನ್ನಡ ಸಾಹಿತ್ಯಕ್ಕೆ ಸಾಹಿತ್ಯ ಭಂಡಾರವಾದದ್ದು ಮಾತ್ರವಲ್ಲದೆ ಕನ್ನಡ ಕವಿಗಳಿಗೆ ಕನ್ನಡಿಯೂ ಕೈದೀವಿಗೆಯೂ ಆಯಿತು"—ಹೀಗೆ ಕರ್ಣಾಟಕ ಕಾದಂಬರೀಸಂಗ್ರಹದ ಪೀಠಿಕೆಯಲ್ಲಿ ಸ್ಪಷ್ಟವಾಗಿ ಬರೆದಿರುತ್ತಾರೆ. ಈ ಕೆಳಗಿನ ಪದ್ಯದಲ್ಲಿ ಸಂಸ್ಕೃತ ಪದಗಳು ಎಷ್ಟಿವೆ ಎಂದು ನೋಡಬಹುದು.

ಶ್ರೀಮನ್ನಾಗೇಂದ್ರಭೋಗಸ್ಫುರದರುಣ-
ಮಣಿದ್ಯೋತಿ ಸಂಧ್ಯಾನಿಬದ್ಧ ಪ್ರೇಮಂ
ಪ್ರೋದ್ಯತ್ತರಂಗೋಚ್ಚರದಮರನದೀ
ಶೀಕರೋದಾರತಾರಾರಾಮಂ ಹೇಮಪ್ರಭಾ
ಪ್ರಸ್ಫುರಿತಗಿರಿಶಚಂಚಜ್ಜಟಾಜಾಲಜೂಟ-
ವ್ಯೋಮಪ್ರೋದ್ಭಾಸಿಚಂದ್ರಂ ತ್ರಿಭುವನ
ಜನಕಾನಂದಮಂ ಮಾಡುಗೆಂದುಂ ॥

---

# परिशिष्टम् २

## (2) ನಿಘಂಟುಕಾರರು

**ನಿಘಂಟು ಮತ್ತು ನಿರುಕ್ತ:** ಕ್ಲಿಷ್ಟವಾದ ಅನೇಕ ವೈದಿಕಶಬ್ದಗಳನ್ನೆಲ್ಲಾ ಪೃಥಕ್ಕಾಗಿ ಸಂಗ್ರಹಿಸಿ ರಚಿಸಿರುವ ಗ್ರಂಥವು ನಿಘಂಟು. ಯಾಸ್ಕಮುನಿ ರಚಿತವಾದ ನಿರುಕ್ತವು ವೈದಿಕ ಪದಗಳ ಅರ್ಥನಿರ್ವಚನಕ್ಕಾಗಿಯೇ ರಚಿತವಾದುದರಿಂದ ನಿಘಂಟುಗ್ರಂಥಕ್ಕೆ ಭಾಷ್ಯರೂಪವಾಗಿರುವುದು. ತ್ರೈಗುಣ್ಯ ವಿಷಯಾ ವೇದಾಃ ಎಂದು ಹೇಳಲ್ಪಟ್ಟಿರುವ ವೇದವು ಕರ್ಮಕಾಂಡ ಮತ್ತು ಜ್ಞಾನಕಾಂಡಗಳೆಂದು ಎರಡು ವಿಧವಾಗಿರುವುದು. ಗುಣತ್ರಯಾತ್ಮಕರಾದ ಜನರು ತಮಗೆ ಬೇಕಾದುದನ್ನು ಈ ವೇದದಿಂದ ಸಾಧಿಸಿಕೊಳ್ಳಬಹುದು. ಕರ್ಮಗಳನ್ನು ಆಚರಿಸಿ ಪರಿಮಿತಫಲಗಳನ್ನು ಕರ್ಮಕಾಂಡದಿಂದ ಪಡೆಯಬಹುದು. ಪರಿಮಿತ ಫಲಗಳಲ್ಲಿ ಅಪೇಕ್ಷೆಯಿಲ್ಲದವರು ಸ್ಥಿರವಾದ ಫಲವನ್ನು ಅಪೇಕ್ಷಿಸಿ ಅದನ್ನು ಜ್ಞಾನಕಾಂಡದಿಂದ ಪಡೆಯಬಹುದು. ಹೀಗೆ ಸಕಲ ಪುರುಷಾರ್ಥಸಾಧಕವಾದ ವೇದಗಳ ಪರಿಜ್ಞಾನವು ಸಕಲರಿಗೂ ಅವಶ್ಯವಾದುದು.

ಋಷಿಗಳು ತಪಃಶಕ್ತಿಯಿಂದ ಸಾಕ್ಷಾತ್ಕರಿಸಿಕೊಂಡ ದಿವ್ಯಜ್ಞಾನವನ್ನು ಅಜ್ಞಾನಿಗಳಾದ ಜನರಿಗೆ ಉಪದೇಶಿಸಿದರು. ಋಷಿಗಳಿಂದ ಉಪದಿಷ್ಟವಾದ ಈ ದಿವ್ಯಜ್ಞಾನವೇ ಅನಂತ ವೇದಗಳಾದುವು. ಈ ದಿವ್ಯಜ್ಞಾನದಿಂದ ಆತ್ಮಸಾಕ್ಷಾತ್ಕಾರವೂ ಲಭಿಸುತ್ತದೆ. ಕಾಲಕ್ರಮದಲ್ಲಿ ವೇದಗಳಲ್ಲಿ ಪ್ರತಿಪಾದ್ಯವಾದ ವಿಷಯಗಳು ಎಲ್ಲರಿಗೂ ತಿಳಿಯಲು ಸಾಧ್ಯವಾಗಲಿಲ್ಲ. ಆದುದರಿಂದ ವೇದಗಳಿಂದ ಲಭ್ಯವಾದ ಆ ದಿವ್ಯಜ್ಞಾನವನ್ನು ತಿಳಿಯಲು ಅಸಕ್ತರಾದವರಿಗಾಗಿ ಅನೇಕ ಮಾರ್ಗಗಳನ್ನು ಕಂಡುಹಿಡಿದರು. ಈ ಮಾರ್ಗ (ಉಪಾಯ) ಗಳೇ ವೇದಾಂಗಗಳು. ಇವುಗಳ ಸಾಹಾಯ್ಯದಿಂದ ವೇದಗಳಲ್ಲಿ ಅಡಗಿರುವ ಜ್ಞಾನವನ್ನು ಅರಿತುಕೊಳ್ಳಲು ಅವಕಾಶ ದೊರಕಿತು. ಪರಮಜ್ಞಾನಿಗಳಾದ ಮಹರ್ಷಿಗಳು ಕ್ಲಿಷ್ಟವಾದ ಅನೇಕ ವೈದಿಕ ಪದಗಳನ್ನು ಸಂಗ್ರಹಿಸಿ ರಚಿಸಿದ ನಿಘಂಟುವಿನ ಅರ್ಥಪರಿಜ್ಞಾನಕ್ಕಾಗಿ ಯಾಸ್ಕಮುನಿಯಿಂದ ನಿರುಕ್ತವು ರಚಿತವಾಯಿತು. ಇದು ಆರು ವೇದಾಂಗಗಳಲ್ಲೊಂದು.

ವೇದಾಂಗಗಳ ಪರಿಜ್ಞಾನವಿಲ್ಲದೆ ಸಕಲಪುರುಷಾರ್ಥಸಾಧಕವಾದ ವೇದಗಳನ್ನು ಅರ್ಥಮಾಡಿಕೊಳ್ಳುವುದೂ ಅಸಾಧ್ಯ. ಇದಕ್ಕಾಗಿಯೇ ಈ ಸಕಲಪುರುಷಾರ್ಥಸಾಧಕವಾದ ವೇದಗಳನ್ನು ಸಾಂಗವಾಗಿ ಅಧ್ಯಯನಮಾಡಬೇಕಾಯಿತು, (1) शिक्षा (2) व्याकरणम् (3) छन्दः (4) निरुक्तम् (5) ज्योतिषम् ಮತ್ತು (6) कल्पः ಇವು ಆರು ವೇದಾಂಗಗಳು. ಇವೆಲ್ಲವೂ ವೇದಗಳ ಅರ್ಥಪರಿಜ್ಞಾನಕ್ಕೆ ಸಹಾಯಕವಾಗಿರುವುವು. ಇವುಗಳಲ್ಲಿ ವೇದಗಳ ಅರ್ಥನಿರ್ವಚನಕ್ಕಾಗಿಯೇ ರಚಿತವಾದ ನಿರುಕ್ತದ ಅಧ್ಯಯನವು ಬಹಳ ಮುಖ್ಯವಾದುದು. ಈ ನಿರುಕ್ತವು ವೈದಿಕಶಬ್ದಗಳ ನಿಘಂಟುವಿನ ಭಾಷ್ಯ. ಈ ನಿರುಕ್ತವನ್ನು ರಚಿಸಿದ ಯಾಸ್ಕಮುನಿಯು ವ್ಯಾಕರಣಶಾಸ್ತ್ರಪ್ರವರ್ತಕರಾದ ಪಾಣಿನಿಮಹರ್ಷಿಗಿಂತಲೂ ಪ್ರಾಚೀನರು. ಇವರ ದೇಶಕಾಲಾದಿಗಳನ್ನು ತಿಳಿಯಲು ಸ್ಪಷ್ಟವಾದ ಯಾವ ಆಧಾರವೂ ಕಂಡುಬರುವುದಿಲ್ಲ. [ನಿರುಕ್ತದ ವಿವರಕ್ಕೆ "निरुक्त" ಪದದಲ್ಲಿ ನೋಡಿ.]

**ವೈದಿಕ ನಿಘಂಟುಗಳು:** ನಿಘಂಟುವನ್ನು ಯಾಸ್ಕರಿಗಿಂತಲೂ ಪ್ರಾಚೀನರು ರಚಿಸಿದ್ದರೆಂದು ಈ ಕೆಳಗಿನ ಪ್ರಮಾಣಗಳಿಂದ ತಿಳಿಯಬಹುದು. "तमिमं समाम्नायं निघण्टव इत्याचक्षते" ಎಂದು ಯಾಸ್ಕರು ಹೇಳಿರುವರು. ಈ ಪದಗಳ ಸಮಾಮ್ನಾಯವೇ ನಿಘಂಟು ಎಂದು ಅಭಿಯುಕ್ತರ ಅಭಿಪ್ರಾಯ. "ते निगन्तव एव सन्तः निगमनान्निघण्टव उच्यन्ते इति औपमन्यवः" ಎಂದು ಔಪಮನ್ಯವರೆಂಬ ಆಚಾರ್ಯರ ಮತ. ಇದರಿಂದ ಯಾಸ್ಕರಿಗಿಂತಲೂ ಪ್ರಾಚೀನವಾದುದು ನಿಘಂಟು ಎಂದು ಹೇಳಬಹುದು. "नमः पारस्कराय नमो यास्काय" ಎಂಬ ನಿರುಕ್ತದ ನಿಗಮನದ ಆಧಾರದಿಂದ ನಿಘಂಟುಕಾರರು ಯಾಸ್ಕರಿಗಿಂತಲೂ ಹಿಂದೆ ಇದ್ದರೆಂದೂ ಈ ಯಾಸ್ಕರಿಗಿಂತ ಅವರು ಭಿನ್ನರು ಎಂದೂ ತಿಳಿಯಬಹುದು. ನಿಘಂಟುಗಳಲ್ಲಿ ಪ್ರಥಮತಃ ರಚಿತವಾದುದು ವೈದಿಕ ನಿಘಂಟು. ಯಾಸ್ಕರು ರಚಿಸಿದ ನಿರುಕ್ತವು ಈ ವೈದಿಕ ನಿಘಂಟುವಿನ ಭಾಷ್ಯ. ಯಾಸ್ಕರು ಈ ನಿರುಕ್ತವನ್ನು ರಚಿಸುವುದಕ್ಕಿಂತಲೂ ಪೂರ್ವದಲ್ಲೇ ನಿಘಂಟು ರಚಿತವಾಗಿತ್ತೆಂದು ನಾವು ತಿಳಿಯಬಹುದಾಗಿದೆ. ["निघण्टु" ಪದದಲ್ಲಿ ನೋಡಿ.]

ಇದನ್ನು ವಿದ್ಯಾಇಲಾಖೆಯಲ್ಲಿ ಉಪನಿರ್ದೇಶಕರಾಗಿದ್ದು ನಿವೃತ್ತರಾಗಿರುವ ವೇದಾಂತವಿದ್ವಾನ್ ಡಾ॥ ಎನ್. ಎಸ್. ಅನಂತರಂಗಾಚಾರ್ಯ, B.A. (Hons.), B.Ed., Ph.D. ಇವರ ನಿರುಕ್ತಗ್ರಂಥದ ಆಧಾರದ ಮೇಲೆ ಬರೆಯಲಾಗಿದೆ.

ಯಾಸ್ಕಮುನಿಯಂತೆ ವೈದಿಕ ನಿಘಂಟುವಿಗೆ ದಕ್ಷಿಣಾಪಥ ದಲ್ಲಿರುವ ರಂಗೇಶಪುರಿಯ ವಾಸ್ತವ್ಯನಾದ ದೇವರಾಜಯಜ್ವ ನೆಂಬ ಪಂಡಿತನು ವ್ಯಾಖ್ಯಾನವನ್ನು ಬರೆದಿರುವನು ಎಂದು "यज्वा रङ्गेशपुरीपर्यन्तग्रामवास्तव्यः। विरचयति देवराजो नैघण्टुककाण्डनिर्वचनम्" ॥ "निगमश्च दक्षिणापथवासिभिरधीतेषु वेदेषु परिदृश्यमानस्तत्तद्भाष्याणि निरीक्ष्य तत्र तत्र प्रदर्श्यते" ॥ ಈ ವಾಕ್ಯಗಳಿಂದ ತಿಳಿಯಬಹುದಾಗಿದೆ.

**ಲೌಕಿಕ ಶಬ್ದಗಳ ನಿಘಂಟುಗಳು :** ವೈದಿಕಶಬ್ದಗಳ ನಿಘಂಟುವಿನಂತೆಯೇ ಲೌಕಿಕ ಶಬ್ದಗಳಿಗೂ ಅನೇಕ ವಿದ್ವಾಂಸರು ನಿಘಂಟುಗಳನ್ನು ರಚಿಸಿ ಸಂಸ್ಕೃತಭಾಷಾಭ್ಯಾಸಿಗಳಿಗೆ ಉಪಕಾರ ಮಾಡಿರುತ್ತಾರೆ. ಶಬ್ದಗಳನ್ನು ವರ್ಗೀಕರಿಸಿ ಆಯಾ ವರ್ಗಗಳಿಗೆ ಸಂಬಂಧಿಸಿದ ಪರ್ಯಾಯಪದಗಳನ್ನು ಲಿಂಗ ನಿರ್ದೇಶದೊಡನೆ ಸಂಗ್ರಹಿಸಿ ನಿಘಂಟುಗಳನ್ನು ರಚಿಸಿರುವುದು ಒಂದು ವಿಧ. नामलिङ्गानुशासनम् (ಅಮರಕವಿ ವಿರಚಿತ) ಹೇಮಚಂದ್ರವಿರಚಿತ अभिधानचिन्तामणि: ಪುರುಷೋತ್ತಮದೇವವಿರಚಿತ हारावलि: ಮತ್ತು त्रिकाण्डशेष: ಕೇಶವಪಂಡಿತ ವಿರಚಿತ कल्पद्रुकोश: ಇತ್ಯಾದಿ ಈ ಶ್ರೇಣಿಗೆ ಸೇರಿದುವು. ವರ್ಗಗಳ ಕ್ರಮವಿಲ್ಲದೆ क ಕಾರಾದಿ ವರ್ಣಾಂತ ಅನೇಕಾರ್ಥ ಪದಗಳನ್ನು ಸಂಗ್ರಹಿಸಿ कैकम् कद्विकम् कत्रिकम् ಈ ರೀತಿ ह್ಕಾರಾಂತಪರ್ಯಂತ ಲಿಂಗನಿರ್ದೇಶದೊಡನೆ ನಿಘಂಟುಗಳನ್ನು ರಚಿಸಿರುವುದು ಇನ್ನೊಂದು ವಿಧ. मेदिनीकोश: (नानार्थशब्दकोश:) विश्वप्रकाश: (ಮಹೇಶ್ವರ ವೈದ್ಯ ವಿರಚಿತ) ಇರುಗಪದಂಡಾಧಿನಾಥ ವಿರಚಿತ नानार्थरत्नमाला ಹೇಮಚಂದ್ರವಿರಚಿತ अनेकार्थसङ्ग्रह: ಶಾಶ್ವತವಿರಚಿತ अनेकार्थसमुच्चय: ಇತ್ಯಾದಿ. ಪರ್ಯಾಯಪದಗಳ ವರ್ಗೀಕರಣ ಮತ್ತು ಅನೇಕಾರ್ಥಶಬ್ದಗಳ ಸಂಗ್ರಹ ಈ ರೀತಿ ಉಭಯಾತ್ಮಕವಾದ ನಿಘಂಟುಗಳನ್ನು ಕೆಲವು ವಿದ್ವಾಂಸರು ರಚಿಸಿರುತ್ತಾರೆ. ಯಾದವ ಪ್ರಕಾಶಾಚಾರ್ಯರ वैजयन्ती ಕೋಶ ಮುಂತಾದುವು.

ಹೀಗೆಯೇ ಅನೇಕ ವಿದ್ವಾಂಸರು ನಾನಾರೀತಿಯಲ್ಲಿ ಲೌಕಿಕ ಸಂಸ್ಕೃತ ಶಬ್ದಗಳ ನಿಘಂಟುಗಳನ್ನು ರಚಿಸಿರುತ್ತಾರೆ. ["ನಿಘಂಟು ಮತ್ತು ನಿಘಂಟುಕಾರರು" ನೋಡಿ.]

ಈ ಲೌಕಿಕ ಸಂಸ್ಕೃತ ಶಬ್ದಗಳಿಗೆ ರಚಿತವಾದ ನಿಘಂಟುಗಳು ಮತ್ತು ನಿಘಂಟುಕಾರರಲ್ಲಿ ಮುಖ್ಯವಾದ ಕೆಲವು ನಿಘಂಟುಗಳ ವಿವರಗಳನ್ನು ಕೊಡಲಾಗಿದೆ.

नामलिङ्गानुशासनम् त्रिकाण्डशेष: हारावली ಮತ್ತು अनेकार्थसमुच्चय: ಇವುಗಳ ವಿವರಕ್ಕೆ "निघण्टु" ಪದದಲ್ಲಿ ನೋಡಿ.

### ಲೌಕಿಕ ಸಂಸ್ಕೃತ ನಿಘಂಟುಗಳು ಮತ್ತು ನಿಘಂಟುಕಾರರು

| | ನಿಘಂಟುಗಳು | | ನಿಘಂಟುಕಾರರು |
|---|---|---|---|
| (1) | अनेकार्थसङ्ग्रह: | .. | हेमचन्द्र: |
| (2) | अभिधानचिन्तामणि: | .. | " |
| (3) | अभिधानरत्नमाला | .. | हलायुध: |
| (4) | अनेकार्थध्वनिमञ्जरी | .. | गदसिंह: |
| (5) | अनेकार्थतिलकम् | .. | प्रदीप: |
| (6) | नानार्थरत्नमाला | .. | इरुगपदण्डाधिनाथ: |
| (7) | नानार्थसङ्ग्रह: | .. | अजयपाल: |
| (8) | अनेकार्थसमुच्चय: | .. | शाश्वत: |
| (9) | एकाक्षरकोश: | .. | पुरुषोत्तमदेव: |
| (10) | द्विरूपकोश: | .. | " |
| (11) | हारावली | .. | " |
| (12) | त्रिकाण्डशेष: | .. | " |
| (13) | कल्पद्रुकोश: | .. | केशव: |

| ನಿಘಂಟುಗಳು | | ನಿಘಂಟುಕಾರರು |
|---|---|---|
| (14) अव्ययकोश: | .. | महादेव: |
| (15) नामलिङ्गानुशासनम् | .. | अमरसिंह: |
| (16) शब्दचन्द्रिका | .. | चक्रपाणि: |
| (17) नाममाला | .. | धनञ्जय: |
| (18) शब्दरत्नावली | .. | मथुरेशपण्डित: |
| (19) नानार्थशब्दकोश: | .. | मेदिनीकर: |
| (20) विश्वप्रकाश: | .. | महेश्वरवैद्य: |
| (21) शब्दमाला | .. | रामेश्वरशर्मा |
| (22) राजनिघण्टु: | .. | नरसिंहकालीपण्डित: (नरहरि:) |
| (23) पर्यायनानार्थकोश: | .. | जटाधराचार्य: |
| (24) भावप्रकाश: | .. | भावमिश्र: |
| (25) लिङ्गानुशासनम् | .. | हेमचन्द्र: |
| (26) नाममालानिघण्टु: | .. | वरदराज: |
| (27) वैजयन्ती | .. | यादवप्रकाशाचार्य: |
| (28) नाममाला | .. | भोजराज: |
| (29) शब्दार्णव: | .. | दुर्गादास: |
| (30) शब्दसंग्रहनिघण्टु: | .. | अगस्त्य: |
| (31) लघुनिघण्टुसार: | .. | केशव: |
| (32) शब्दार्णव: | .. | काशीनाथ: |
| (33) नामावली | .. | गोवर्धन: |
| (34) शब्दसागर: | .. | गोविन्दशर्मा |
| (35) अभिधानतन्त्रम् | .. | जटाधराचार्य: |
| (36) मदनपालनिघण्टु: | .. | मदनपाल: |
| (37) लोकप्रकाश: | .. | क्षेमेन्द्र: |
| (38) नानार्थसमुच्चय: | .. | धरणीश: |
| (39) वर्णाभिधानम् | .. | नन्दनभट्टाचार्य: |
| (40) रत्नकोश: | .. | नरसिंहमुनि: |
| (41) भूरिप्रयोग: | .. | पद्मनाभ: |
| (42) शब्दचन्द्रिका | .. | बाणभट्ट: |
| (43) त्रिरूपकोश: | .. | बिह्लण: |
| (44) एकाक्षरनिघण्टु: | .. | माधव: |
| (45) उणादिकोश: | .. | रामशर्मा |

| ಗ್ರಂಥಗಳು | | ಗ್ರಂಥಕಾರರು |
|---|---|---|
| (46) | ऐन्द्रनिघण्टुः | .. वररुचिः |
| (47) | कविदीपिकानिघण्टुः | .. त्रिविक्रमादित्यः |
| (48) | शब्दार्थचिन्तामणिः | .. विठलाचार्यः |
| (49) | शब्दार्थकल्पतरुः | .. वेङ्कटः |
| (50) | कोशकल्पतरुः | .. विश्वनाथः |
| (51) | शिवकोशः | .. शिवदत्तः |
| (52) | एकाक्षरनिघण्टुः | .. सदाचार्यः |
| (53) | एकार्थनाममाला | .. सौभरिः |
| (54) | द्व्यक्षरनाममाला | .. " |
| (55) | द्विरूपकोशः | .. श्रीहर्षः |
| (56) | अनेकार्थतिलकम् | .. सोमभवः |
| (57) | शब्दरत्नाकरः | .. सुन्दरगणिः |
| (58) | मल्लकोशः | .. मल्लकविः |
| (59) | पदचन्द्रिका | .. मयूरभट्टः |
| (60) | नामसङ्ग्रहमाला | .. अप्पयदीक्षितः |
| (61) | शब्दभेदप्रकाशः | .. महेश्वरः |
| (62) | भुवनप्रदीपिका | .. सार्वभौममिश्रः |
| (63) | कविदर्पणनिघण्टुः | .. रामः |
| (64) | निघण्टुः | .. जैमिनिः |
| (65) | धन्वन्तरिनिघण्टुः (ವೈದ್ಯಗ್ರಂಥ) | .. धन्वन्तरिः |
| (66) | गणितरत्नमाला | .. हरदत्तः |
| (67) | पर्यायरत्नमाला | .. माधवकरः |
| (68) | रुग्विनिश्चयः | .. " |
| (69) | पर्यायमुक्तावली | .. — |
| (70) | निघण्टुशेषः | .. हेमचन्द्रः |
| (71) | न्यायकोशः | .. भीमाचार्यः |
| (72) | वाचस्पत्यम् | .. तारानाथतर्कवाचस्पतिः |
| (73) | शब्दकल्पद्रुमः | .. राधाकान्तदेव बहादुरः |

ಇವಲ್ಲದೆ ಕೋಶಕಾರರು ತಮ್ಮ ಹೆಸರನ್ನೇ ಗುರುತಿಸದ पदरत्नावली कोशसारः संसारावर्तः सरसशब्दसरणिः ಇನ್ನೂ ಅನೇಕ ಕೋಶಗಳಿರುವುವು. उत्पलिनी आनन्दकोशः चरककोशः शब्दतरङ्गिणी शब्दसारनिघण्टुः सारस्वताभि- कल्पतरुकोशः नानार्थनिधानम् शब्दाभिधानम् नवनामाभिधानम् धानम् त्रिकाण्डशेषनिघण्टुः ಇತ್ಯಾದಿ ಇತ್ಯಾದಿ.

**ಕೆಲವು ನಿಘಂಟುಗಳು ಮತ್ತು ನಿಘಂಟುಕಾರರ ವಿವರ :**

**ನಾಮಲಿಙ್ಗಾನುಶಾಸನಮ್–ಅಮರಸಿಂಹ:**–[ಇದು ನಿಘಂಟು ಪದದಲ್ಲಿ ವಿವರಿಸಲ್ಪಟ್ಟಿದ್ದರೂ ಇನ್ನೂ ಹೆಚ್ಚು ವಿಷಯಗಳನ್ನು ತಿಳಿಸಲು ಇಲ್ಲಿ ಪುನಃ ಪ್ರಸಕ್ತವಾಗಿದೆ.]

ಅಮರಸಿಂಹನು ರಚಿಸಿರುವ ನಾಮಲಿಂಗಾನುಶಾಸನವು ಮೂರು ಕಾಂಡಗಳಾಗಿ ವಿಂಗಡಿಸಲ್ಪಟ್ಟಿದೆ. ಪ್ರತಿಯೊಂದು ಕಾಂಡದಲ್ಲಿಯೂ ಶಬ್ದಗಳು ವರ್ಗೀಕೃತವಾಗಿ ಅನೇಕ ವರ್ಗಗಳಾಗಿರುವುವು. ಇದರಲ್ಲಿ ಪರ್ಯಾಯ ಪದಗಳೂ ನಾನಾರ್ಥ ಶಬ್ದಗಳೂ ಸೇರಿವೆ.

**ಪ್ರಥಮ ಕಾಂಡದಲ್ಲಿ :** ಸ್ವರ್ಗವರ್ಗ ವ್ಯೋಮವರ್ಗ ದಿಗ್ವರ್ಗ ಕಾಲವರ್ಗ ಧೀವರ್ಗ ವಾಗ್ವರ್ಗ ಶಬ್ದಾದಿವರ್ಗ ನಾಟ್ಯವರ್ಗ ಪಾತಾಳವರ್ಗ ಭೋಗಿವರ್ಗ ನರಕವರ್ಗ ಮತ್ತು ವಾರಿವರ್ಗಗಳೂ

**ದ್ವಿತೀಯ ಕಾಂಡದಲ್ಲಿ :** ಭೂವರ್ಗ ಪುರವರ್ಗ ಶೈಲವರ್ಗ ವನೌಷಧಿವರ್ಗ ಸಿಂಹಾದಿವರ್ಗ ಮನುಷ್ಯವರ್ಗ ಬ್ರಹ್ಮವರ್ಗ ಕ್ಷತ್ರಿಯವರ್ಗ ವೈಶ್ಯವರ್ಗ ಮತ್ತು ಶೂದ್ರವರ್ಗಗಳೂ

**ತೃತೀಯ ಕಾಂಡದಲ್ಲಿ :** ವಿಶೇಷ್ಯನಿಘ್ನವರ್ಗ ಸಂಕೀರ್ಣವರ್ಗ ನಾನಾರ್ಥವರ್ಗ ನಾನಾರ್ಥಾವ್ಯಯವರ್ಗ ಅವ್ಯಯವರ್ಗ ಲಿಂಗಾದಿಸಂಗ್ರಹವರ್ಗಗಳೂ ಇರುವುವು.

**ನಾಮಲಿಂಗಾನುಶಾಸನಕ್ಕೆ ಅನೇಕ ಪಂಡಿತರು ಮಾಡಿರುವ ವ್ಯಾಖ್ಯಾನ ಮತ್ತು ಟೀಕೆಗಳು :**

(1) अमरपञ्जिका
(2) रङ्गाचार्यकृत: अमरपदमुकुर:
(3) अमरविवेक:
(4) बृहद्वृत्ति:
(5) अच्युतोपाध्यायकृत: व्याख्याप्रदीप:
(6) अप्पयदीक्षितकृता टीका
(7) आशाधरकृत: क्रियाकलाप:
(8) काशीनाथस्य काशिका
(9) क्षीरस्वामिकृतम् अमरकोशोद्घाटनम्
(10) गोस्वामिकृता बालबोधिनी
(11) कौमुदी
(12) नारायणकृता अमरकोशपञ्जिका
(13) नारायणविद्याविनोदस्य शब्दार्थसन्दीपिका
(14) नीलकण्ठस्य सुबोधिनी
(15) अमरकोशमाला पद्मनाभकृता
(16) बृहस्पतिकृता अमरकोशमालापञ्जिका
(17) भरतसेनस्य मुग्धबोधिनी
(18) भानुजीदीक्षितरामाश्रमस्य व्याख्यासुधा
(19) गुरुबालप्रबोधिका
(20) गुरुबालप्रबोधिनी
(21) मथुरेशविद्यालङ्कारकृता सारसुन्दरी
(22) मल्लिनाथस्य अमरपारिजात:
(23) महादेवतीर्थस्य विद्वन्मनोहरा
(24) अमरकोशविवेको महेश्वरकृत:
(25) त्रिकाण्डचिन्तामणि: रघुनाथचक्रवर्तिन:
(26) रामनाथकृत: त्रिकाण्डविवेक:
(27) रामप्रसादकृता वैषम्यकौमुदी
(28) रामशर्मकृता टीका
(29) रामस्वामिकृता टीका
(30) रामेश्वरस्य प्रदीपमञ्जरी
(31) रायमुकुटबृहस्पते: पदचन्द्रिका
(32) लिङ्गभट्टकृता टीका
(33) लिङ्गमसूरिकृता टीका
(34) अमरकोशपदविवृति:
(35) लोकनाथकृता पदमञ्जरी
(36) श्रीकराचार्यस्य व्याख्यामृतम्
(37) श्रीधरकृता टीका
(38) सर्वानन्दस्य टीकासर्वस्वम्

ಈ ವ್ಯಾಖ್ಯಾನ ಮತ್ತು ಟೀಕೆಗಳಲ್ಲಿ ಕೆಲವು ಮಂಡನಾತ್ಮಕವಾಗಿಯೂ ಕೆಲವು ಖಂಡನಾತ್ಮಕವಾಗಿಯೂ ಇರುವುವು.

ವರರುಚಿ ಭಾಗುರಿ ಮೊದಲಾದವರ ಕೋಶಗಳು ಬಹಳ ದೊಡ್ಡದಾಗಿಯೂ ಬಹಳ ಗಹನವಾಗಿಯೂ ಇದ್ದುದರಿಂದ ಅವುಗಳನ್ನು ಸಂಗ್ರಹಿಸಿ ವರ್ಗೀಕರಿಸಿ ಈ ನಾಮಲಿಂಗಾನುಶಾಸನವು ರಚಿತವಾಗಿದೆ ಎಂದು ಅಮರಸಿಂಹನು ಹೇಳಿರುತ್ತಾನೆ. "समाहृत्यान्यतन्त्राणि संक्षिप्तै: प्रतिसंस्कृतै:। सम्पूर्णमुच्यते वर्गैर्नामलिङ्गानुशासनम्" अम०।

ಧನ್ವಂತರಿ ಮೊದಲಾದವರು ರಚಿಸಿರುವ ವೈದ್ಯಕೀಯ ಮತ್ತು ಸಸ್ಯವಿಜ್ಞಾನ ನಿಘಂಟುಗಳ ಸಾಹಾಯ್ಯದಿಂದ ನಾಮಲಿಂಗಾನುಶಾಸನವು ರಚಿತವಾಗಿದೆ. ನಾಮಲಿಂಗಾನುಶಾಸನದಲ್ಲಿ ಪುಂಸ್ತ್ರೀನಪುಂಸಕಲಿಂಗಗಳನ್ನು ಪ್ರಾಯಶಃ ವಿಸರ್ಗ ದೀರ್ಘ ಮತ್ತು ಅನುಸ್ವಾರಗಳಿಂದ ಕೂಡಿದ ಶಬ್ದಗಳ ರೂಪಭೇದಗಳಿಂದಲೂ ಕೆಲವು ಕಡೆ ಲಿಂಗವ್ಯವಸ್ಥೆಯುಳ್ಳ ಮತ್ತೊಂದು ಪದದ ಸಾಹಚರ್ಯದಿಂದಲೂ ಮತ್ತು ಇಂತಹ ಲಿಂಗವೆಂದು ಸ್ಪಷ್ಟವಾಗಿ ಹೇಳುವುದರಿಂದಲೂ ತಿಳಿಯಬಹು

ದಾಗಿದೆ. "प्रायशो रूपभेदेन साहचर्याच्च कुत्रचित्। स्त्रीनपुंसकं ज्ञेयं तद्विशेषविधेः क्वचित्" ಅಮ೦।

ಈ ಕೋಶದಲ್ಲಿ ಲಿಂಗನಿರ್ಣಯಕ್ಕಾಗಿ ದ್ವಂದ್ವಸಮಾಸವನ್ನಾಗಲಿ ಏಕಶೇಷವನ್ನಾಗಲಿ ಪ್ರಕೃತವಿಷಯಕ್ಕೆ ಸಂಬಂಧಿಸಿದ. ಪದಗಳ ಹೊರತು ಅಪ್ರಕೃತವಾದ ಪದಗಳ ಸಾಂಕರ್ಯವನ್ನಾಗಲಿ ಮಾಡಿರುವುದಿಲ್ಲ. "भेदाख्यानाय न द्वन्द्वो नैकशेषो न संकरः। कृतोऽत्र भिन्नलिङ्गानामनुक्तानां क्रमादृते" ಅಮ೦।

ತ್ರಿಲಿಂಗಗಳಲ್ಲಿಯೂ ಎಂದು ಹೇಳಲು त्रिषु ಎಂಬ ಪದವನ್ನೂ ಪುಂಸ್ತ್ರೀಲಿಂಗಗಳೆರಡರಲ್ಲೂ ಎಂದು ಹೇಳಲು द्वयोः ಎಂಬ ಪದವನ್ನೂ ಕೊಡಲಾಗಿದೆ. "त्रिलिङ्ग्यां त्रिष्विति पदं मिथुने तु द्वयोरिति"। अस्त्रियां ಎಂದು ನಿಷೇಧಿಸಲ್ಪಟ್ಟ ಲಿಂಗವು ಉಳಿದ ಲಿಂಗಗಳಿಗಾಗಿ ಉಕ್ತವಾಗಿದೆ. "निषिद्धलिङ्गं शेषार्थम्"। तु ಎಂಬ ಅವ್ಯಯವು ಕೊನೆಯಲ್ಲಿರುವ ಪದಗಳೂ अथ ಎಂಬ ಅವ್ಯಯವು ಆದಿಯಲ್ಲಿರುವ ಪದಗಳೂ ಹಿಂದಿನ ಪರ್ಯಾಯಪದಗಳಿಗೆ ಸಂಬಂಧಿಸುವುದಿಲ್ಲ. "त्वन्ताथादि न पूर्वभाक्" ಅಮ೦। ಈ ರೀತಿ ನಿಯಮಬದ್ಧವಾಗಿ ನಾಮಲಿಂಗಾನುಶಾಸನವು ರಚಿತವಾಗಿದೆ.

ನಾಮಲಿಂಗಾನುಶಾಸನಕ್ಕೆ ನಲವತ್ತಕ್ಕೂ ಹೆಚ್ಚುಮಂದಿ ವಿದ್ವಾಂಸರು ವ್ಯಾಖ್ಯಾನ ಬರೆದಿರುವುದರಿಂದ ಬಹು ಜನಪ್ರಿಯವಾಗಿರುವುದೆಂದೂ ವಿದ್ಯಾಭ್ಯಾಸಿಗಳಿಗೆ ಇದು ಹೆಚ್ಚು ಉಪಕಾರಕವಾಗಿರುವುದೆಂದೂ ತಿಳಿಯಬಹುದಾಗಿದೆ. ಸಂಸ್ಕೃತ ವಿದ್ಯಾರ್ಥಿಗಳು ವಿದ್ಯಾಭ್ಯಾಸದ ಪ್ರಾರಂಭದಲ್ಲಿ ಅವಶ್ಯವಾಗಿ ಕೋಶಗಳ ಕಂಠಪಾಠಮಾಡುವ ಪದ್ಧತಿಯು ಪ್ರಾಚೀನಕಾಲದಿಂದಲೂ ಇತ್ತೆಂದೂ ಇನ್ನೂ ಅನೇಕ ಕೋಶಗಳು ರಚಿತವಾಗಿದ್ದರೂ ಅಮರಸಿಂಹನ ನಾಮಲಿಂಗಾನುಶಾಸನವನ್ನೇ ಮುಖ್ಯವಾಗಿ ಕಂಠಪಾಠಮಾಡಿ ಶಬ್ದಾರ್ಥಜ್ಞಾನಸಂಪಾದಿಸುವ ಕ್ರಮವನ್ನು ಈಗಲೂ ಅನುಸರಿಸುತ್ತಿರುವುದರಿಂದ ಈ ಕೋಶದ ವೈಶಿಷ್ಟ್ಯ ಮತ್ತು ಸರ್ವೋತ್ತಮತ್ವದ ವಿಷಯದಲ್ಲಿ ಹೆಚ್ಚು ಹೇಳಬೇಕಾಗಿಲ್ಲ.

ಅಮರಸಿಂಹನು ಗ್ರಂಥದ ಪ್ರಾರಂಭದಲ್ಲಿ ದೇವತಾಸಾಮಾನ್ಯವಾಚಕಪದಗಳನ್ನು ಹೇಳಿ ದೇವತೆಗಳ ವಿಶೇಷನಾಮಗಳನ್ನು ಹೇಳುವಾಗ "सर्वज्ञः सुगतो बुद्धः धर्मराजस्तथागतः" ಎಂದು ಬುದ್ಧನ ಹೆಸರುಗಳನ್ನು ಹೇಳಿರುವುದರಿಂದ ಈತನು ಬೌದ್ಧಮತಾನುಯಾಯಿಯೆಂದು ತಿಳಿಯಬಹುದಾಗಿದೆ.

ಅಮರಸಿಂಹನು ವಿಕ್ರಮಾದಿತ್ಯನ ಆಸ್ಥಾನದಲ್ಲಿದ್ದ ನವಮಣಿಗಳಲ್ಲೊಬ್ಬ ಮಹಾಪಂಡಿತನಾಗಿದ್ದನು ಎಂದೂ ವಿಕ್ರಮಾದಿತ್ಯನ ಸಮಕಾಲಿಕನೆಂದೂ ತಿಳಿಯಬಹುದು. "धन्वन्तरिक्षपणकामरसिंहशङ्कुवेतालभट्टघटकर्परकालिदासाः। ख्यातो वराहमिहिरो नृपतेः सभायां रत्नानि वै वररुचिर्नव विक्रमस्य"।।

ಈ ಪಂಡಿತನು ಮಹಾವೈಯಾಕರಣನೆಂದು "इन्द्रश्चन्द्रः काशकृत्स्नापिशलिःशाकटायनः। पाणिन्यमरजैनेन्द्राः जयन्त्यष्टादिशाब्दिकाः" ಎಂಬ ಶ್ಲೋಕದಿಂದ ತಿಳಿದುಬರುವುದು. "अमरसिंहो हि पापीयान् सर्वं भाष्यमचूचुरत्" ಎಂಬ ಶ್ಲೋಕದಿಂದ ಈತನ ವೈಯಾಕರಣತ್ವವು ಪ್ರತೀತವಾಗುವುದು.

ನಾಮಲಿಂಗಾನುಶಾಸನದ ವ್ಯಾಖ್ಯಾನಗಳಲ್ಲಿ ಕ್ಷೀರಸ್ವಾಮಿಕೃತ ಅಮರಕೋಶೋದ್ಘಾಟನ ಭಟ್ಟೋಜಿದೀಕ್ಷಿತಕೃತ ವ್ಯಾಖ್ಯಾಸುಧಾ ಗುರುಬಾಲಪ್ರಬೋಧಿಕಾ ಮುಂತಾದ ಕೆಲವು ಮಾತ್ರ ಪ್ರಸಿದ್ಧವಾಗಿವೆ. ನಾಮಲಿಂಗಾನುಶಾಸನವು ಎಲ್ಲಾ ವಿಷಯಗಳಲ್ಲೂ ಸರ್ವೋಪಕಾರಕವಾಗಿ ಒಂದು ವಿಶಿಷ್ಟವಾದ ಸ್ಥಾನವನ್ನು ಪಡೆದಿರುವುದು ಎಂದು ಹೇಳಬಹುದು.

**व्याडिः :** ವ್ಯಾಡಿಯು ರಚಿಸಿರುವ ಲಿಂಗಾನುಶಾಸನವು ಅಮರಸಿಂಹಕೃತ ನಾಮಲಿಂಗಾನುಶಾಸನದಂತೆ ಪರ್ಯಾಯಪದಗಳ ವರ್ಗೀಕರಣ ರೀತಿಯಲ್ಲಿರುವುದು. "मृगो बिन्दुः पृषच्चैव पृषतश्च प्रकीर्तितः"। "आकरस्तु खनिः खानिः" ಇತ್ಯಾದಿ. ವ್ಯಾಡಿಯು ಕೆಲವೆಡೆ ಶಬ್ದಗಳ ವ್ಯುತ್ಪತ್ತಿ ಪ್ರದರ್ಶನಪೂರ್ವಕ ಅರ್ಥಗಳನ್ನು ವಿವರಿಸಿರುತ್ತಾನೆ. "अर्थान् निघण्टयत्यस्मात् निघण्टुः परिकीर्तितः" — ಹೇಮಚಂದ್ರನ ಅಭಿಧಾನಚಿಂತಾಮಣಿಯ ವ್ಯಾಖ್ಯಾನದಲ್ಲಿ ಇದು ಉಕ್ತವಾಗಿದೆ.

**त्रिकाण्डकोशः—भागुरिः**—ಸರ್ವಾನಂದ ರಾಯಮುಕುಟ ಮತ್ತು ಇತರರು ಉದ್ಧರಿಸಿರುವ ವಾಕ್ಯಗಳ ಆಧಾರದಿಂದ ತ್ರಿಕಾಂಡಕೋಶವು ಭಾಗುರಿಯಿಂದ ರಚಿತವಾದುದೆಂದು ತಿಳಿಯಬಹುದಾಗಿದೆ. ಭಾಗುರಿಯು ಉದ್ಧರಿಸಿರುವ ಕೆಲವು ವಿಷಯಗಳಿಗೂ ತ್ರಿಕಾಂಡಕೋಶಕ್ಕೂ ಇರುವ ಹಲವಾರು ಸಂವಾದಗಳಿಂದ ತ್ರಿಕಾಂಡಕೋಶವು ರಚಿತವಾದುದೆಂಬುದನ್ನು ತಳ್ಳಿಹಾಕುವಂತಿಲ್ಲ. ಸರ್ವಾನಂದನು ತ್ರಿಕಾಂಡಕೋಶದಲ್ಲಿ ಲಿಂಗನಿರ್ದೇಶನವಿಲ್ಲವೆಂದು ಹೇಳಿರುತ್ತಾನೆ. "अन्यतन्त्राणि व्याडिवररुचिप्रभृतीनां तन्त्राणि समाहृत्य एकीकृत्य। अत एव सम्पूर्णमिदम्, यतस्त्रिकाण्डोत्पलिन्यादिनाममात्रतन्त्राणि व्याडिवररुचिप्रभृतिभिः प्रणीतानि तु लिङ्गमात्रतन्त्राणि" इति सर्वानन्दः। ಭಾಗುರಿಯು ಹೇಳಿರುವ ವಾಕ್ಯಗಳಲ್ಲಿಯೂ ಲಿಂಗವನ್ನು ನಿರ್ದೇಶಿಸುವ ಪದಗಳೂ ಕಂಡುಬರುವುದಿಲ್ಲ. ಭಾಗುರಿಯು ಪರ್ಯಾಯಪದಗಳನ್ನು ಮಾತ್ರ ಸಂಗ್ರಹಿಸಿ ಅನುಷ್ಟುಪ್‌ವೃತ್ತದಲ್ಲಿ ತ್ರಿಕಾಂಡಕೋಶವನ್ನು ರಚಿಸಿರುತ್ತಾನೆ.

"महीरुहः कुजो वृक्षः वनस्पतिरनोकहः। अगो नगोऽगमश्चैव शाखी द्रुश्च तरुः स्मृतः" ಇತ್ಯಾದಿ. ಆದುದರಿಂದ ಪರ್ಯಾಯಪದಗಳೂ ಅನೇಕಾರ್ಥಪದಗಳೂ ಲಿಂಗನಿರ್ದೇಶನವೂ ಇರುವ ಅಮರಸಿಂಹನ ನಾಮಲಿಂಗಾನುಶಾಸನಕ್ಕಿಂತಲೂ ಕೇವಲ ಪರ್ಯಾಯಪದಗಳ ಸಂಕಲನವಿರುವ ತ್ರಿಕಾಂಡಕೋಶವು ಭಿನ್ನವಾದುದೆಂದು ಸ್ಪಷ್ಟವಾಗಿ ತಿಳಿಯಬಹುದು.

**शब्दार्णवः – वाचस्पतिः** — ಶಬ್ದಾರ್ಣವವು ವಾಚಸ್ಪತಿ ಪಂಡಿತ ವಿರಚಿತವಾದುದು. ಪುರುಷೋತ್ತಮದೇವನ "शब्दार्णवः उत्पलिनी संसारावर्तः इत्यादिकोशाः वाचस्पतिव्याडिविक्रमादित्यनिर्मिताः" ಎಂಬ ವಾಕ್ಯದಿಂದ ಶಬ್ದಾರ್ಣವವು ಈ ಕವಿರಚಿತವಾದುದೆಂದು ತಿಳಿಯಬಹುದಾಗಿದೆ. ಶಬ್ದಾರ್ಣವವೆಂಬ ಕೋಶದ ಹೆಸರಿಗೆ ತಕ್ಕಂತೆ ಕವಿಯು ಸಾಧ್ಯವಾದಷ್ಟು ಅನೇಕ ಪರ್ಯಾಯಪದಗಳನ್ನು ಸಂಗ್ರಹಿಸಿ ಅಲ್ಲಲ್ಲಿ ಕೆಲವು ಪದಗಳಿಗೆ ರೂಪಾಂತರಗಳನ್ನು ಕೊಟ್ಟು ಕೋಶವನ್ನು ರಚಿಸಿರುತ್ತಾನೆ. "अपि गन्धर्वगान्धर्वदिव्यगायनगातवः"। "कृष्णपाकफलः कृष्णफलपाको वनालकः। कृष्णपाकः पाककृष्णः फलकृष्णो वनालयः॥ पाककृष्णफलः पाकफलकृष्णकराम्लकः। फलपाकः पाकफलो बोलः कृष्णफलो रसः"॥ ಇತ್ಯಾದಿ. ವಾಚಸ್ಪತಿಯ ಕೋಶದಿಂದ ಉದ್ಧರಿಸಿದ ವಾಕ್ಯಗಳಲ್ಲಿಯೂ ಇದೇ ರೀತಿಯ ವೈಲಕ್ಷಣ್ಯವು ಕಂಡುಬರುವುದು.

**नाममाला–कात्यः**:–ಪುರುಷೋತ್ತಮದೇವನ ತ್ರಿಕಾಂಡಶೇಷದಲ್ಲಿ "अथ मेधाजित् कात्यः कात्यायनश्च सः। पुनर्वसुर्वररुचिः" ಎಂದು ಕಾತ್ಯ ಕಾತ್ಯಾಯನ ಮತ್ತು ವರರುಚಿ ಈ ಮೂರೂ ಪರ್ಯಾಯಪದಗಳೆಂದೂ ಒಬ್ಬರೇ ಮಹರ್ಷಿಯ ಹೆಸರೆಂದೂ ಉಕ್ತವಾಗಿದೆ. ವ್ಯಾಕರಣವಾರ್ತಿಕಕಾರರೇ ಈ ವರರುಚಿಯೆಂದೂ ಪ್ರಸಿದ್ಧಿಯಿದೆ. ಸಿದ್ಧಾಂತಕೌಮುದಿಯ ಬಾಲಮನೋರಮಾವ್ಯಾಖ್ಯಾನಕಾರರು ವ್ಯಾಖ್ಯಾನದ ಮಂಗಳಶ್ಲೋಕದಲ್ಲಿ ವರರುಚಿಗೆ ನಮಸ್ಕಾರ ಎಂದು ಹೇಳಿ ವಾರ್ತಿಕಕಾರರಾದ ವರರುಚಿಯನ್ನೇ ನಿರ್ದೇಶಿಸಿರುತ್ತಾರೆ. "वाक्यकारं वररुचिं भाष्यकारं पतञ्जलिम्"। ವ್ಯಾಕರಣಶಾಸ್ತ್ರಾಧ್ಯಯನದ ಪ್ರಾರಂಭದಲ್ಲಿ "ओं नमः पाणिनिकात्यायनपतञ्जलिभ्यो मुनिभ्यो महद्भ्यो गुरुभ्यः" ಎಂದು ಆಚಾರ್ಯರುಗಳಿಗೆ ಸಾಂಪ್ರದಾಯಿಕ ನಮಸ್ಕಾರ ಮಾಡಿ ಅಧ್ಯಯನ ಪ್ರಾರಂಭಿಸುವ ಪದ್ಧತಿಯು ಈಗಲೂ ಇದೆ. ವೈಜಯಂತೀಕೋಶದಲ್ಲೂ "कात्यायनो वररुचिः मेधजिच्च पुनर्वसुः" ಎಂದು ಎರಡನ್ನೂ ಪರ್ಯಾಯಪದಗಳಾಗಿ ಹೇಳಿರುತ್ತಾರೆ. ಕಲ್ಪದ್ರುಕೋಶದಲ್ಲೂ "कात्यायनो वररुचिः कात्योऽपि च पुनर्वसुः" ಎಂದು ಪರ್ಯಾಯಪದಗಳಾಗಿ ಉಕ್ತವಾಗಿದೆ. ಈ ಕಾರಣಗಳಿಂದ ಕಾತ್ಯ ಕಾತ್ಯಾಯನ ಮತ್ತು ವರರುಚಿ ಈ ಮೂರು ಪದಗಳೂ ಒಬ್ಬ ಮಹರ್ಷಿಯ ಹೆಸರೆಂದೇ ಸ್ಪಷ್ಟವಾಗುವುದು.

ಆದರೆ ಕ್ಷೀರಸ್ವಾಮಿ ಮತ್ತು ಹೇಮಚಂದ್ರರು ಕಾತ್ಯರ ಕೋಶದಿಂದಲೇ ಆಗಾಗ್ಗೆ ಉದ್ಧರಿಸಿರುವುದರಿಂದ ಇಬ್ಬರೂ ಕವಿಗಳು ಬೇರೆ ಬೇರೆಯೆಂದು ಹೇಳಬೇಕಾಗುವುದು. ಕಾತ್ಯರ ಕೋಶದಲ್ಲಿ ಅಮರಸಿಂಹನ ನಾಮಲಿಂಗಾನುಶಾಸನದಂತೆ ಪರ್ಯಾಯಪದಗಳನ್ನು ಸೇರಿದಂತೆ ಹೇಳದೆ ಅಲ್ಲಲ್ಲಿ ಪದಗಳ ಅರ್ಥ ವಿವರಣಪೂರ್ವಕ ಪರ್ಯಾಯಪದಗಳನ್ನೂ ನಾನಾರ್ಥಪದಗಳನ್ನೂ ಸಂಗ್ರಹಿಸಿ ಕೋಶವನ್ನು ರಚಿಸಲಾಗಿದೆ. "क्षुद्रच्छिद्रसमोपेतं चालनं तितउः पुमान्"।

"नाममाला" ಕೋಶವು ಕಾತ್ಯಾಯನಪ್ರಣೀತವಾದುದು. ವಾಮನನು ತನ್ನ ಕಾವ್ಯಾಲಂಕಾರಸೂತ್ರವೃತ್ತಿಯಲ್ಲಿ ನಾಮಮಾಲಾಕೋಶದ ಒಂದು ಭಾಗವಾದ "नीवीसंग्रथनं नार्या जघनस्थस्य वाससः" ಎಂಬುದನ್ನು ಉದ್ಧರಿಸಿ "नाममालाप्रतीकमपश्यतः" ಎಂದು ಹೇಳಿರುವುದರಿಂದ ನಾಮಮಾಲಾಕೋಶವು ಕಾತ್ಯಾಯನಪ್ರಣೀತವೆಂದು ತಿಳಿದುಬರುವುದು.

**पुरुषोत्तमदेवः-तस्य कोशाः**:–ಪುರುಷೋತ್ತಮದೇವನು ಪಾಣಿನಿಯ ಅಷ್ಟಾಧ್ಯಾಯಿಗೆ ಭಾಷಾವೃತ್ತಿಯೆಂಬ ವ್ಯಾಖ್ಯಾನವನ್ನು ಬರೆದಿರುತ್ತಾನೆ ಮತ್ತು हारावलिः त्रिकाण्डशेषः वर्णदेशना एकाक्षरकोशः ಮತ್ತು द्विरूपकोशः ಇವನ್ನು ರಚಿಸಿರುತ್ತಾನೆ. ದೊರೆಯಾದ ಲಕ್ಷ್ಮಣಸೇನನ ಆಜ್ಞೆಯ ಮೇರೆಗೆ ಪುರುಷೋತ್ತಮದೇವನು ಭಾಷಾವೃತ್ತಿಯನ್ನು ಬರೆದುದಾಗಿ ಸೃಷ್ಟಿಧರಾಚಾರ್ಯನು ಭಾಷಾವೃತ್ತಿಯ ಮೊದಲನೆಯ ಶ್ಲೋಕದ ವ್ಯಾಖ್ಯಾನದಲ್ಲಿ ತಿಳಿಸಿರುತ್ತಾನೆ. 1179 ರಿಂದ 1200 ರವರೆಗೆ ರಾಜ್ಯವಾಳಿದ ಲಕ್ಷ್ಮಣಸೇನನು 1169ರ ನಂತರ ಸಿಂಹಾಸನಾರೋಹಣಮಾಡಿ ರಾಜನಾದುದರಿಂದ ಅನಂತರ ಪುರುಷೋತ್ತಮದೇವನು ಭಾಷಾವೃತ್ತಿಯನ್ನು ರಚಿಸಿರಬಹುದೆಂದು ತಿಳಿದುಬರುವುದು. "वैदिकप्रयोगानर्थिनो राज्ञो लक्ष्मणसेनस्य आज्ञया प्रकृते कर्मणि प्रसज्जन् वृत्तेर्लघुतायां हेतुमाह भाषायामिति" भाषावृत्तिः।

**त्रिकाण्डशेषः** — ಇದು ಪುರುಷೋತ್ತಮದೇವರಚಿತವಾದುದು. ವಿವರಕ್ಕೆ "निघण्टु" ಪದದಲ್ಲಿ ನೋಡಿ.

**हारावलिः**:–ಹಾರಾವಳೀಕೋಶವು ಪುರುಷೋತ್ತಮದೇವವಿರಚಿತವಾದುದು. ಅನೇಕ ಪಂಡಿತರು ಕೋಶಗಳನ್ನು ರಚಿಸಿದ್ದರೂ ಅವೆಲ್ಲವೂ ಪ್ರಸಿದ್ಧವಿಷಯಗಳ ವ್ಯವಹಾರಕ್ಕೆ ಸಂಬಂಧಿಸಿದುದರಿಂದ ಸಭೆಯಲ್ಲಿ ಎಲ್ಲರಿಗೂ ವಿಸ್ಮಯವುಂಟುಮಾಡುವ ಪದಗಳನ್ನೊಳಗೊಂಡ ಕೋಶವನ್ನು ರಚಿಸುವುದಾಗಿ ಗ್ರಂಥಾರಂಭದಲ್ಲಿ ಕವಿಯು ಹೇಳಿರುತ್ತಾನೆ. "किं नैव सन्ति

सुधियामभिधानकोशा: किन्तु प्रसिद्धविषयव्यवहारभाज:। गोष्ठीषु वादपरमोहफलासु केषां हारावली न विदधाति विदग्धमानम्" हारा०। ಹಾರಾವಳಿಯಲ್ಲಿ 270 ಶ್ಲೋಕಗಳಿರುವುವು. ಈ ಕೋಶವು ಎರಡು ಭಾಗಗಳಾಗಿ ವಿಂಗಡಿಸಲ್ಪಟ್ಟು ರಚಿತವಾಗಿದೆ. ಮೊದಲನೆಯ ಭಾಗವನ್ನು ಮೂರಾಗಿ ವಿಂಗಡಿಸಿ 1ನೆಯ ಭಾಗದಲ್ಲಿ ಸಂಪೂರ್ಣ ಶ್ಲೋಕಗಳಿಂದಲೂ 2ನೆಯ ಭಾಗದಲ್ಲಿ ಅರ್ಧಶ್ಲೋಕಗಳಿಂದಲೂ 3ನೆಯ ಭಾಗದಲ್ಲಿ ಪಾದ (ನಾಲ್ಕನೆಯ ಒಂದು ಭಾಗ) ಶ್ಲೋಕಗಳಿಂದಲೂ ಪರ್ಯಾಯಪದಗಳನ್ನು ಸಂಗ್ರಹಿಸಿ ರಚಿಸಿರುತ್ತಾನೆ. "आव्याधशब्दत: श्लोकैरधैरातलिनात्तत:। शब्दा: पादैर्विबोद्धव्या: प्रागनेकार्थतस्तत:" हारा०। ಎರಡನೆಯ ಭಾಗವನ್ನು ಮೂರಾಗಿ ವಿಂಗಡಿಸಿ ಪ್ರತಿಯೊಂದು ಪದದ ಅನೇಕಾರ್ಥಗಳನ್ನು 1ನೆಯ ಭಾಗದಲ್ಲಿ ಅರ್ಧಶ್ಲೋಕಗಳಿಂದಲೂ 2ನೆಯ ಭಾಗದಲ್ಲಿ ಪಾದಶ್ಲೋಕಗಳಿಂದಲೂ 3ನೆಯ ಭಾಗದಲ್ಲಿ ಪ್ರತ್ಯೇಕಪದಗಳಿಂದಲೂ ತಿಳಿಸಲಾಗಿದೆ.

(1) ಪೂರ್ಣಶ್ಲೋಕಗಳಲ್ಲಿ ಪರ್ಯಾಯಪದಗಳು — "यद्दीयते तु देवेभ्य: मनोराज्यस्य सिद्धये। उपयाचितकं दिव्यदोहदं तद्विदुर्बुधा:"।

(2) ಅರ್ಧಶ್ಲೋಕಗಳಿಂದ ಪರ್ಯಾಯಪದಗಳು — "कूष्माण्डक: पुष्पफलो घनवासश्च वेष्टक:"।

(3) ಪಾದಶ್ಲೋಕಗಳಿಂದ ಪರ್ಯಾಯಪದಗಳು — "मेण्ठो हस्तिपक: स्मृत:"। ಇತ್ಯಾದಿ. ಕವಿಗೆ ಹಾರಾವಳಿಯನ್ನು ರಚಿಸಲು 12 ತಿಂಗಳ ಕಾಲ ಬೇಕಾಯಿತು.

**वर्णदेशना** — ಇದು ಗದ್ಯರೂಪದಲ್ಲಿರುವುದು. ಶಬ್ದ ಪ್ರಯೋಗದ ಪರಿಚಯವಿಲ್ಲದೆ ಅನುಭವಪಡೆಯದವರ ಭ್ರಾಂತಿನಿವಾರಣೆಗಾಗಿ ಸಂಪ್ರದಾಯಬದ್ಧವಾದ ವರ್ಣ (ಅಕ್ಷರ) ಗಳನ್ನು ಮಾರ್ಪಡಿಸಿ ಪದಗಳನ್ನು ಪ್ರಯೋಗಿಸುವ ವಿಷಯ ಇದರಲ್ಲಿ ನಿರೂಪಿಸಲ್ಪಟ್ಟಿದೆ. "अत्र हि प्रयोगेऽबहुदृश्वनां श्रुतिसाधारण्यमात्रेण गृह्णतां खुरक्षुरप्रादौ खकारक्षकारयो: शिहाशिङ्घाणकादौ हकारघकारयो: तथा गौडादिलिपिसाधारण्यात् हिण्डीरगुडाकेशादौ हकारडकारयो: भ्रान्तय उत्पद्यन्ते। अत: तद्विवेचनाय क्वचित् धातुपारायणे धातुवृत्तिपूजादिषु प्रव्यक्तलिखनेन प्रसिद्धोपदेशेन धातुप्रत्ययोणादिव्याख्यालिखनेन क्वचिदाप्तवचनेन वर्णदेशनेयमारभ्यते" ಎಂದು ಗ್ರಂಥಾರಂಭದಲ್ಲಿ ಗ್ರಂಥಕಾರನು ತಿಳಿಸಿರುತ್ತಾನೆ.

**अभिधानरत्नमाला – हलायुध:** — ಅಭಿಧಾನರತ್ನಮಾಲೆಯು ಹಲಾಯುಧಭಟ್ಟಕವಿಯಿಂದ ರಚಿತವಾದುದು. ಈ ಕೋಶವು ಐದು ಕಾಂಡಗಳಾಗಿ ವಿಂಗಡಿಸಲ್ಪಟ್ಟು ಮೊದಲನೆಯ ನಾಲ್ಕು ಕಾಂಡಗಳಲ್ಲಿ (1) ಸ್ವರ್ಗ (2) ಭೂಮಿ (3) ಪಾತಾಳ ಮತ್ತು (4) ಸಾಮಾನ್ಯ ವಿಷಯಗಳಿಗೆ ಸಂಬಂಧಿಸಿದ ಪರ್ಯಾಯಪದಗಳೂ 5ನೆಯ ಕಾಂಡದಲ್ಲಿ ಅನೇಕಾರ್ಥಪದಗಳೂ ಮತ್ತು ಅವ್ಯಯಗಳೂ ಸೇರಿಸಲ್ಪಟ್ಟಿವೆ.

ಕವಿಯು ಲಿಂಗನಿರ್ದೇಶನಕ್ಕಾಗಿ ಪದಗಳ ರೂಪಭೇದಗಳನ್ನು ಉಪಾಯವಾಗಿ ಇಟ್ಟುಕೊಂಡಿರುತ್ತಾನೆ. ಉಳಿದ ವಿಷಯಗಳಲ್ಲಿ ಅಮರಸಿಂಹನ ನಾಮಲಿಂಗಾನುಶಾಸನದ ಪದ್ಧತಿಯನ್ನೇ ಅನುಸರಿಸಿರುತ್ತಾನೆ. ಅಭಿಧಾನರತ್ನಮಾಲೆಯಲ್ಲಿ ಸುಮಾರು 900 ಶ್ಲೋಕಗಳಿರುವುವು. ಇವು ವಿವಿಧ ವೃತ್ತಗಳಲ್ಲಿ ರಚಿತವಾಗಿವೆ.

ಹಲಾಯುಧನ ಅಭಿಧಾನರತ್ನಮಾಲೆಯು ಅಮರದತ್ತ, ವರರುಚಿ ಭಾಗುರಿ ಬೋಪಾಲಿತ ಇವರ ಗ್ರಂಥಗಳನ್ನು ಪ್ರಮಾಣವಾಗಿಟ್ಟುಕೊಂಡು ರಚಿತವಾಗಿರುವುದೆಂದು ತಿಳಿಸಿರುತ್ತಾನೆ. "इयममरदत्तवररुचिभागुरिबोपालितादिशास्त्रेभ्य:। अभिधानरत्नमाला कविकण्ठविभूषणार्थमुद्ध्रियते"।

ಹಲಾಯುಧಭಟ್ಟಕವಿಯು ತನ್ನ ಗ್ರಂಥರಚನಾಕೌಶಲ್ಯದಿಂದ 10ನೆಯ ಶತಮಾನದ ಮಧ್ಯಭಾಗದಲ್ಲಿ ಒಳ್ಳೆಯ ಖ್ಯಾತಿಯನ್ನು ಪಡೆದಿದ್ದನು. ಈ ಕವಿಯು ಅಭಿಧಾನರತ್ನಮಾಲೆಯಲ್ಲದೆ ಮಾನ್ಯಖೇತದ ದೊರೆಯಾಗಿದ್ದ ಕೃಷ್ಣರಾಜನ ಗೌರವಾರ್ಥ "कविरहस्यम्" ಎಂಬ ಗ್ರಂಥವನ್ನೂ ಧಾರಾನಗರದ ಮುಂಜವಾಕ್ಪತಿರಾಜನ ಗೌರವಾರ್ಥ "मृतसञ्जीविनीवृत्ति:" ಎಂಬ ಗ್ರಂಥವನ್ನೂ ರಚಿಸಿದನು.

**वैजयन्ती – यादवप्रकाश:** – ವೈಜಯಂತೀಕೋಶವು ಯಾದವ ಪ್ರಕಾಶಾಚಾರ್ಯರಿಂದ ರಚಿತವಾದುದು. ಇದರಲ್ಲಿ ಪರ್ಯಾಯಪದಗಳು ಮತ್ತು ಅನೇಕಾರ್ಥಪದಗಳು ಎಂದು ಎರಡು ಭಾಗಗಳಿರುವುವು. ಪರ್ಯಾಯಪದಗಳು स्वर्ग: अन्तरिक्षम् भूमि: पातालम् ಮತ್ತು सामान्यम् ಎಂಬ ಐದು ಕಾಂಡಗಳಲ್ಲಿಯೂ ನಾನಾರ್ಥಪದಗಳು द्व्यक्षरम् त्र्यक्षरम ಮತ್ತು शेष: ಎಂದು ಮೂರು ಕಾಂಡಗಳಲ್ಲಿಯೂ ವಿವರಿಸಲ್ಪಟ್ಟಿವೆ. ಪ್ರತಿಯೊಂದು ಕಾಂಡದಲ್ಲಿಯೂ ಅನೇಕ ಅಧ್ಯಾಯಗಳಿರುವುವು.

ವೈಜಯಂತೀಕೋಶವು ಅಮರಸಿಂಹನ ನಾಮಲಿಂಗಾನುಶಾಸನಕ್ಕಿಂತಲೂ ಪರ್ಯಾಯಪದಗಳ ಮತ್ತು ನಾನಾರ್ಥಪದಗಳ ವಿಷಯದಲ್ಲಿ ಪರಿಪೂರ್ಣತೆಯನ್ನು ಪಡೆದಿರುವುದು.

ನಾನಾರ್ಥಗಳನ್ನು ವಿವರಿಸುವಾಗ ಕವಿಯು ಅಕಾರಾದಿ ಕ್ರಮದಲ್ಲಿ ಪದಗಳನ್ನು ಸೇರಿಸಿ ನೂತನಮಾರ್ಗವೊಂದನ್ನು ಅನುಸರಿಸಿರುತ್ತಾನೆ. ನಾನಾರ್ಥಪದಗಳು ದ್ವ್ಯಕ್ಷರ ತ್ರ್ಯಕ್ಷರ

ಮತ್ತು ಇನ್ನೂ ಅಧಿಕ ವರ್ಣಗಳ ಪದಗಳಲ್ಲಿ ಮೂರು ಕಾಂಡ ಗಳಾಗಿ ವಿಂಗಡಿಸಲ್ಪಟ್ಟಿವೆ. ಈ ಮೂರು ಕಾಂಡಗಳೂ ಮತ್ತೆ ಲಿಂಗಗಳಿಗನುಸಾರವಾಗಿ पुंलिङ्गाध्यायः स्त्रीलिङ्गाध्यायः ಮತ್ತು नपुंसकलिङ्गाध्यायः ಎಂದು ಪ್ರತ್ಯೇಕವಾಗಿ ವರ್ಗೀಕರಿಸಲ್ಪಟ್ಟಿವೆ. ಕೊನೆಯದಾದ ಐದನೆಯ ಕಾಂಡಕ್ಕೆ ಮತ್ತೆ ನಾಲ್ಕು ಅಧ್ಯಾಯಗಳನ್ನು ಸೇರಿಸಿ ಒಂದನೆಯ ಅಧ್ಯಾಯದಲ್ಲಿ ಸಂಬಂಧಿಸಿದ ಕೆಲವು ಪರ್ಯಾಯಪದಗಳನ್ನೂ ಎರಡನೆಯ ಅಧ್ಯಾಯದಲ್ಲಿ ನಾನಾರ್ಥಾವ್ಯಯಪದಗಳನ್ನೂ ಮೂರನೆಯ ಅಧ್ಯಾಯದಲ್ಲಿ ಅವ್ಯಯಪರ್ಯಾಯಪದಗಳನ್ನೂ ನಾಲ್ಕನೆಯ ಅಧ್ಯಾಯದಲ್ಲಿ ಲಿಂಗಗಳಿಗೆ ಸಂಬಂಧಿಸಿದ ಸಾಮಾನ್ಯ ನಿಯಮಗಳನ್ನೂ ಸೇರಿಸಲಾಗಿದೆ. ವೈಜಯಂತೀಕೋಶದಲ್ಲಿ ಪಾರಿಭಾಷಿಕಪದಗಳು ಅಮರಕೋಶದಂತೆಯೇ ಇದ್ದರೂ ನಪುಂಸಕಲಿಂಗವನ್ನು ಸೂಚಿಸಲು षण् क्ली नपुम् ಎಂಬ ಕೆಲವು ಸಂಕೇತ ಪದಗಳು ಉಪಯೋಗಿಸಲ್ಪಟ್ಟಿವೆ.

ವೈಜಯಂತೀಕೋಶಕಾರರಾದ ಯಾದವಪ್ರಕಾಶಾಚಾರ್ಯರು ಮೊದಲು ಅದ್ವೈತಿಗಳಾಗಿದ್ದು ಅನಂತರ ವಿಶಿಷ್ಟಾದ್ವೈತಮತವನ್ನು ಅವಲಂಬಿಸಿದರು. ಕಾಂಚೀಪುರದ ಸಮೀಪದಲ್ಲಿರುವ ಗೃಧ್ರಸರಸ್ಸು ಇವರ ಜನ್ಮಸ್ಥಳ. 11ನೆಯ ಶತಮಾನದ ಮಧ್ಯಭಾಗದಲ್ಲಿ ಇವರು ವೈಜಯಂತೀಕೋಶವನ್ನು ರಚಿಸಿದರು.

**हेमचन्द्रः**—ಜೈನಕವಿಯಾದ ಹೇಮಚಂದ್ರನು (1) अभिधानचिन्तामणिः (2) अनेकार्थसंग्रहः (3) निघण्टुशेषः ಮತ್ತು (4) देशीनाममाला ಎಂಬ ನಾಲ್ಕು ಕೋಶಗಳನ್ನು ರಚಿಸಿರುತ್ತಾನೆ. ಈ ಕೋಶಗಳಲ್ಲಿ ಮೊದಲನೆಯದು ಪರ್ಯಾಯಪದಗಳ ಕೋಶ. ಎರಡನೆಯದಾದ ಅನೇಕಾರ್ಥಸಂಗ್ರಹವು ನಾನಾರ್ಥಪದಗಳ ಕೋಶ. ಮೂರನೆಯದು ಸಸ್ಯವಿಜ್ಞಾನ ಕೋಶ. ನಾಲ್ಕನೆಯದು ಪ್ರಾಕೃತಶಬ್ದಗಳ ಕೋಶ.

(1) **अभिधानचिन्तामणिः**—ಅಭಿಧಾನಚಿಂತಾಮಣಿಯು देवाधिदेवकाण्डः देवकाण्डः मर्त्यकाण्डः भूमिकाण्डः नरककाण्डः ಮತ್ತು सामान्यकाण्डः ಎಂದು ಆರು ಕಾಂಡಗಳಾಗಿ ವಿಭಾಗಿಸಲ್ಪಟ್ಟಿದೆ.

| | |
|---|---|
| ಮೊದಲನೆಯ ಕಾಂಡದಲ್ಲಿ | ಜೈನದೇವತೆಗಳು ಮತ್ತು ಜೈನ ಮತ ಸಂಬಂಧವಾದ ವಿಷಯಗಳೂ |
| ಎರಡನೆಯ ಕಾಂಡದಲ್ಲಿ | ಬ್ರಾಹ್ಮಣ ಮತ್ತು ಬೌದ್ಧ ದೇವತೆಗಳೂ |
| ಮೂರನೆಯ ಕಾಂಡದಲ್ಲಿ | ಮನುಷ್ಯರಿಗೆ ಸಂಬಂಧಿಸಿದ ವಿಷಯಗಳೂ |
| ನಾಲ್ಕನೆಯ ಕಾಂಡದಲ್ಲಿ | ತಿರ್ಯಕ್ಪ್ರಾಣಿಗಳೂ |
| ಐದನೆಯ ಕಾಂಡದಲ್ಲಿ | ಪಾತಾಳಲೋಕಕ್ಕೆ ಸಂಬಂಧಿಸಿದ ವಿಷಯಗಳೂ |
| ಆರನೆಯ ಕಾಂಡದಲ್ಲಿ | ಸಾಮಾನ್ಯ ವಿಷಯಗಳು ಮತ್ತು ಅವ್ಯಯಗಳೂ |

ವಿವರಿಸಲ್ಪಟ್ಟಿವೆ. ಶಬ್ದಗಳ ಲಿಂಗಾದಿ ವಿವರಗಳಿಗೆ ಈ ಕವಿಯ ಲಿಂಗಾನುಶಾಸನವು ಪ್ರಮಾಣವಾಗಿದೆ. ಈ ಕೋಶಕಾರನಾದ ಹೇಮಚಂದ್ರನು ಈ ಕೋಶದ ವ್ಯಾಖ್ಯಾನದಲ್ಲಿ ಸುಮಾರು 80ಕ್ಕಿಂತಲೂ ಹೆಚ್ಚು ಪ್ರಮಾಣವಚನಗಳನ್ನು ಉದ್ಧರಿಸಿ ಹೇಳಿರುತ್ತಾನೆ. ಅವುಗಳಲ್ಲಿ ಮೂವತ್ತು ಕೋಶಗಳು ಪ್ರಮಾಣ ಗ್ರಂಥಗಳು. ಇವುಗಳಲ್ಲಿ ಮುಖ್ಯವಾದುವು ವಾಸುಕಿ ವ್ಯಾಡಿ ಧನಪಾಲ ಮತ್ತು ವಾಚಸ್ಪತಿ ಇವರ ಕೋಶಗಳು. ಈ ಕೋಶದ ರಚನೆಯಲ್ಲಿ ಅಮರಸಿಂಹ ಕಾತ್ಯ ದುರ್ಗ ಧನ್ವಂತರಿ ಭಾಗುರಿ ಭೋಜ ಶಾಶ್ವತ ಹಲಾಯುಧ ಮಾಲಾಕಾರ ಮತ್ತು ಯಾದವ ಇವರ ಕೃತಿಗಳನ್ನು ಉಪಯೋಗಿಸಿಕೊಂಡು ಅಭಿಧಾನಚಿಂತಾಮಣಿಯ ವ್ಯಾಖ್ಯಾನವನ್ನು ರಚಿಸಿರುತ್ತಾನೆ. ಈ ಕೋಶದ ವ್ಯಾಖ್ಯಾನಕ್ಕೆ ಈ ಕವಿಯ ಶೇಷಸಂಗ್ರಹದ ಶ್ಲೋಕಗಳು ಅನುಬಂಧ (ಪೂರಕ) ವಾಗಿರುವುವು. ಅಭಿಧಾನ ಚಿಂತಾಮಣಿಗೆ ಸೂರ್ಯಸಿಂಹರಾಜನ ಆಶ್ರಯದಲ್ಲಿದ್ದ ವಾಚನಾಚಾರ್ಯವಾದಿಶ್ರೀವಲ್ಲಭನ ಸಾರೋದ್ಧಾರ ದೇವಸಾಗರಗಣಿಯ ವ್ಯುತ್ಪತ್ತಿರತ್ನಾಕರಗಳೆಂಬ ಎರಡು ವ್ಯಾಖ್ಯಾನಗಳಿವೆ.

ಅಭಿಧಾನಚಿಂತಾಮಣಿಯ ಆಧಾರದಿಂದ ಶುಭಶೀಲಗಣಿಯ पञ्चवर्गनामसंग्रहः ಭಾನುಚಂದ್ರಗಣಿಯ विविक्तनामसंग्रहः ಮತ್ತು ಜಿನದೇವಮುನೀಶ್ವರನ अभिधानचिन्तामणिशिलोञ्छनम् ಎಂಬ ಈ ಮೂರೂ ಗ್ರಂಥಗಳು ರಚಿತವಾಗಿವೆ.

(2) **अनेकार्थसङ्ग्रहः**—ಹೇಮಚಂದ್ರನ ಅನೇಕಾರ್ಥ ಸಂಗ್ರಹಕೋಶದಲ್ಲಿ ಸುಮಾರು 2000 ಶ್ಲೋಕಗಳಿವೆ. ಇದು एकस्वरद्विस्वरत्रिस्वरचतुःस्वरपञ्चस्वरषट्स्वर ಗಳುಳ್ಳ ಪದಗಳಿಂದ ಕೂಡಿ ಆರು ಕಾಂಡಗಳಾಗಿ ವಿಂಗಡಿಸಲ್ಪಟ್ಟಿದೆ. ಕೊನೆಯಲ್ಲಿ ಅವ್ಯಯವರ್ಗವೂ ಸೇರಿಸಲ್ಪಟ್ಟಿದೆ. ಕೊನೆಯಲ್ಲಿ ಅಕಾರಾದಿಪದಗಳ ಸೂಚಿಯೂ ಇರುವುದು. ಅನೇಕಾರ್ಥಸಂಗ್ರಹದ ರಚನೆಯ ಪೂರ್ವದಲ್ಲೇ ಈ ಕವಿಯು "एकार्थशब्दसंग्रहः" ಎಂಬ ಕೋಶವನ್ನು ರಚಿಸಿದ್ದನೆಂದು ಈ ಗ್ರಂಥದ ಪ್ರಾರಂಭದಲ್ಲಿ "ध्यात्वार्हतः कृतैकार्थशब्दसन्दोहसंग्रहः । एकस्वरादिषट्काण्डया कुर्वेऽनेकार्थसंग्रहम्" ಎಂಬ ಶ್ಲೋಕದಿಂದ ತಿಳಿದುಬರುವುದು. ಕಲಿಕಾಲಸರ್ವಜ್ಞನೆಂದು ಪ್ರಸಿದ್ಧನಾಗಿದ್ದ ಹೇಮಚಂದ್ರಕವಿಯು ಈ ಮೇಲೆ ಹೇಳಿದ ಕೋಶಗಳಲ್ಲದೆ काव्यानुशासनम् लिङ्गानुशासनम्

शब्दानुशासनम् छन्दोऽनुशासनम् वादानुशासनम् योगशास्त्रम् ಇವೇ ಮೊದಲಾದ ಅನೇಕ ಗ್ರಂಥಗಳನ್ನು ರಚಿಸಿದ್ದನೆಂದೂ ಅನೇಕಾರ್ಥಸಂಗ್ರಹದ ಉಪೋದ್ಘಾತದಲ್ಲಿ ತಿಳಿಸಿರುತ್ತಾನೆ. ಮೂರೂವರೆ ಕೋಟಿ ಶ್ಲೋಕಗಳಿಂದ ಕೂಡಿ ಅನೇಕ ಗ್ರಂಥಗಳನ್ನು ರಚಿಸಿರುವುದಾಗಿಯೂ ಅನೇಕಾರ್ಥಸಂಗ್ರಹದ ಉಪೋದ್ಘಾತದಲ್ಲಿ ತಿಳಿಸಿರುತ್ತಾನೆ.

ಹೇಮಚಂದ್ರನ ಅನೇಕಾರ್ಥಸಂಗ್ರಹಕೋಶಕ್ಕೆ ಈತನ ಶಿಷ್ಯನಾದ ಮಹೇಂದ್ರಸೂರಿ ರಚಿತವಾದ "अनेकार्थकैरवाकर-कौमुदी" ಎಂಬ ವ್ಯಾಖ್ಯಾನವೊಂದಿರುವುದು. ಈ ವ್ಯಾಖ್ಯಾಕಾರನು ವ್ಯಾಖ್ಯಾನವನ್ನು ತನ್ನ ಗುರುವಿನ ಹೆಸರಿನಲ್ಲೇ ಮಾಡಿದುದಾಗಿ "श्रीहेमसूरिशिष्येण श्रीमहेन्द्रसूरिणा । भक्तिनिष्ठेन टीकेयं तन्नाम्नैव प्रतिष्ठिता" ಎಂಬ ಶ್ಲೋಕದಲ್ಲಿ ಹೇಳಿರುತ್ತಾನೆ. ಈ ವ್ಯಾಖ್ಯಾನಕ್ಕೆ ವಿಶ್ವಪ್ರಕಾಶ ಶಾಶ್ವತ ರಭಸ ಅಮರಸಿಂಹ ಮಂಖ ಹುಗ್ಗ ವ್ಯಾಡಿ ಧನಪಾಲ ಭಾಗುರಿ ವಾಚಸ್ಪತಿ ಯಾದವ ಮತ್ತು ಧನ್ವಂತರಿ ಇವರ ಗ್ರಂಥಗಳು ಮತ್ತು ಕೋಶಗಳನ್ನು ಪ್ರಮಾಣವಾಗಿಟ್ಟುಕೊಂಡು ವ್ಯಾಖ್ಯಾನ ರಚಿಸಿದುದಾಗಿ ಪ್ರಸ್ತಾವನೆಯ ಶ್ಲೋಕಗಳಲ್ಲಿ ತಿಳಿಸಿರುತ್ತಾನೆ.

(3) **निघण्टुशेषः** — ಹೇಮಚಂದ್ರರಚಿತವಾದ ಈ ನಿಘಂಟುಶೇಷವು ಸಸ್ಯವಿಜ್ಞಾನದ ಒಂದು ಕೋಶವಾಗಿರುವುದು. ಇದು ಅಭಿಧಾನಚಿಂತಾಮಣಿಗೆ ಒಂದು ಅನುಬಂಧರೂಪವಾಗಿರುವುದು. ಇದರಲ್ಲಿ 396 ಶ್ಲೋಕಗಳಿವೆ. ಈ ಕೋಶವು वृक्षकाण्डः गुल्मकाण्डः लताकाण्डः शाककाण्डः तृणकाण्डः ಮತ್ತು धान्यकाण्डः ಎಂದು ಆರು ಕಾಂಡಗಳಾಗಿ ವಿಭಾಗಿಸಲ್ಪಟ್ಟಿದೆ.

(4) **देशीनाममाला**— ಈ ಕೋಶವು ದೇಶಭೇದದಿಂದ ಉಂಟಾಗುವ ಪ್ರಾಕೃತಭಾಷೆಗಳ ಭೇದವನ್ನು ತತ್ಸಮ ಮತ್ತು ತದ್ಭವ ಪದಗಳಿಂದ ತಿಳಿಸುವುದು.

**विश्वप्रकाशः – महेश्वरः** — ವಿಶ್ವಪ್ರಕಾಶಕೋಶವು ಮಹೇಶ್ವರಪಂಡಿತ ವಿರಚಿತವಾದುದು. ಇದೊಂದು ನಾನಾರ್ಥಕೋಶ. ಇದು ಮೇದಿನೀಕೋಶದಂತೆ ಅಕಾರಾದಿ ಕ್ರಮದಲ್ಲಿ ಪದಗಳನ್ನು ಸಂಗ್ರಹಿಸಿ ರಚಿತವಾಗಿಲ್ಲ. ಈ ನಾನಾರ್ಥಸಂಗ್ರಹರೂಪವಾದ ಕೋಶವನ್ನು ರಚಿಸಿ ವಿದ್ವಾಂಸರಿಗೆ ಅನೇಕ ಪುಸ್ತಕಗಳ ಸಂಗ್ರಹದ ಭಾರವನ್ನು ತಪ್ಪಿಸಿದುದಾಗಿ ಕೋಶಕಾರನು ಗ್ರಂಥದಲ್ಲಿ ಹೇಳಿರುತ್ತಾನೆ. "सतां पुस्तक-सम्भारभारमोक्षः कृतो मया । नामानुशासनमिदं सम्पूर्णं तत्त्वतादभुतम्" विश्वं ।

ಕ ಕಾರಾಂತಾದಿ ವರ್ಗಗಳಿಂದ ಕೂಡಿರುವ ನಾನಾರ್ಥಸಂಗ್ರಹರೂಪವಾದ ಈ ಕೋಶವು एकद्वित्रिचतुःपञ्चषट् ವರ್ಣಗಳ ಅನುಕ್ರಮದಿಂದ ರಚಿತವಾಗಿದೆ. "एकद्वित्रिचतुः-पञ्चषड्वर्णानुक्रमोज्ज्वलः । कान्तादिवर्गनानार्थसङ्ग्रहोऽयं वितन्यते" विश्वं । ಯಾವುದೊಂದು ಕ್ರಮವನ್ನೂ ಅನುಸರಿಸದೆ ಪದಗಳನ್ನು ಒಂದರ ಹಿಂದೆ ಒಂದರಂತೆ ಜೋಡಿಸಲಾಗಿದೆ. ಕೋಶದ ಕೊನೆಯಲ್ಲಿ ಅವ್ಯಯಪದಗಳೂ ಇದೇ ಕ್ರಮದಲ್ಲಿ ಸಂಗ್ರಹಿಸಲ್ಪಟ್ಟಿವೆ. ಪದಗಳ ಲಿಂಗನಿರ್ದೇಶನಕ್ಕಾಗಿ ಅವಶ್ಯವಾದ ಕೆಲವು ಕಡೆ ಅವುಗಳ ಲಿಂಗಭೇದವನ್ನು ತೋರಿಸಲು ಪದಗಳನ್ನು ಪುನರಾವರ್ತನ ಮಾಡಲಾಗಿದೆ. "सुरतं स्यात्रिभुवने देवत्वे सुरता मता" । "गर्जितो मत्त-मातङ्गे गर्जितं जलदध्वनौ" । "त्रिगर्तः स्याज्जनपदे त्रिगर्तो गणितान्तरे । भवेद् घर्घरिकायां तु त्रिगर्ता कामुकस्त्रियाम्" । "शोभनो ग्रहयोगे स्यात् शोभनं सुन्दरेऽ-न्यवत्" ಇತ್ಯಾದಿ. "स्पष्टाय लिङ्गभेदस्य क्वाप्यत्र पुनरुक्तता" विश्वं । ಈ ಕೋಶದ ರಚನೆಗೆ ಭೋಗೀಂದ್ರ ಕಾತ್ಯಾಯನ ಸಾಹಸಾಂಕ ವಾಚಸ್ಪತಿ ವ್ಯಾಡಿ ವಿಶ್ವರೂಪ ಅಮರ ಮಂಗಳ ಬೋಪಾಲಿತ ಇವರ ಗ್ರಂಥಗಳಿಂದ ಪ್ರಭಾವಿತನಾಗಿ ಇವರನ್ನು ಪ್ರಮಾಣವಾಗಿಟ್ಟುಕೊಂಡು ಕೋಶವನ್ನು ರಚಿಸಿದುದಾಗಿ ವಿಶ್ವಪ್ರಕಾಶದ ಪೀಠಿಕಾಪ್ರಕರಣದಲ್ಲಿ ಹೇಳಿಕೊಂಡಿರುತ್ತಾನೆ. "भोगीन्द्रकात्यायनसाहसाङ्क-वाचस्पतिव्याडिपुरःसराणाम् । सविश्वरूपामरमङ्गलानां शुभाङ्गबोपालितभागुरीणाम् । कोशावकाशात् प्रकटप्रभाव-सम्भाविताऽनर्घ्यगुणः स एषः" विश्वं ।

ವಿಶ್ವಪ್ರಕಾಶಕೋಶಕ್ಕೆ ಅನುಬಂಧವಾಗಿ ಇದೇ ಕೋಶಕಾರನಿಂದ "शब्दभेदप्रकाशः" ಎಂಬ ಒಂದು ಗ್ರಂಥ ರಚಿತವಾಗಿದೆ. ಇದರಲ್ಲಿ शब्दभेदः बकारभेदः ऊष्मभेदः ಮತ್ತು लिङ्गभेदः ಎಂಬ ನಾಲ್ಕು ಭಾಗಗಳಿವೆ. ಇದಕ್ಕೆ ಜ್ಞಾನವಿಮಲಗಣಿಯಿಂದ ಒಂದು ವ್ಯಾಖ್ಯಾನ ರಚಿತವಾಗಿದೆ.

**नानार्थशब्दकोशः – मेदिनीकरः** — ನಾನಾರ್ಥಶಬ್ದಕೋಶವು ಮೇದಿನೀಕರ ಪಂಡಿತನಿಂದ ವಿರಚಿತವಾಗಿ ಈ ಪಂಡಿತನ ಹೆಸರಿನಿಂದಲೇ "मेदिनीकोशः" ಎಂದು ಪ್ರಸಿದ್ಧವಾಗಿದೆ. ಅನೇಕ ಪ್ರಾಚೀನಾಚಾರ್ಯರ ಗ್ರಂಥಗಳನ್ನೂ ಶಬ್ದಶಾಸ್ತ್ರವನ್ನೂ ಪರಿಶೀಲಿಸಿ ಈ ಕೋಶವನ್ನು ರಚಿಸಿದುದಾಗಿ ಗ್ರಂಥದ ಪೀಠಿಕೆಯಲ್ಲಿ ಕವಿಯು ಹೇಳಿರುತ್ತಾನೆ. "पूर्वाचार्यकृतीर्वीक्ष्य शब्दशास्त्रं निरूप्य च । नानार्थशब्दकोशोऽयं लिङ्गभेदेन कथ्यते" मेदिं । ಈ ಮೇದಿನೀಕೋಶವು ಯಾವುದೊಂದು ರೀತಿ ನಿಯಮಗಳಿಲ್ಲದೆ ಕೇವಲ ಶಬ್ದಸಂಗ್ರಹ ಮಾಡಿರುವ ವಿಶ್ವಪ್ರಕಾಶಕೋಶದ ಒಂದು ಪರಿಷ್ಕೃತ ಸುಂದರವಾದ ರೂಪದಂತಿರುವುದು. ವಿಶ್ವಪ್ರಕಾಶಕೋಶದಲ್ಲಿ ನಾನಾರ್ಥಶಬ್ದಗಳು ಎಲ್ಲಾ ಪ್ರಥಮಾಂತಗಳಾಗಿವೆ. ಲಿಂಗಭೇದವನ್ನು

ತಿಳಿಸಲು ಪದಗಳ ಪುನರಾವರ್ತನವಾಗಿರುವುದು. "स्पष्टाय लिङ्गभेदाय क्वाप्यत्र पुनरुक्तता" विश्व०। ಮೇದಿನೀ ಕೋಶದಲ್ಲಿ स्त्री पुमान् द्वयोः क्लीबे नपुंसके ಇತ್ಯಾದಿ ಪದಗಳಿಂದ ಲಿಂಗನಿರ್ದೇಶನ ಮಾಡಲಾಗಿದೆ. "क्लीबे नपुंसके पुंसि स्त्रियां योषिति च द्वयोः। त्रिषु चेत्यादि यद्रूपं तल्लिङ्गस्यैव वाचकम्। नानार्थः प्रथमान्तोऽत्र सर्वत्रादौ प्रदर्शितः" मेदि०। ವಿಶ್ವಪ್ರಕಾಶ–ಮೇದಿನೀಕೋಶಗಳೆರಡರಲ್ಲೂ कैकम् कद्विकम् कत्रिकम् कचतुष्कम् ಮುಂತಾದ ಕ್ರಮವು ಸಮಾನವಾಗಿದೆ. "कान्तादिवर्गैर्नानार्थसङ्ग्रहोऽयं वितन्यते" विश्व०। "स्वरकाद्यादिकाद्यान्तवर्गैर्नानार्थसङ्ग्रहः" मेदि०।

ನಾನಾರ್ಥಗಳ ಅನೇಕ ಕೋಶಗಳ ಸಂಗ್ರಹದ ಭಾರವನ್ನು ತಪ್ಪಿಸಲು ಈ ಕೋಶವನ್ನು ರಚಿಸಿದುದಾಗಿ ಇಬ್ಬರೂ ಕವಿಗಳು ಹೇಳಿರುತ್ತಾರೆ. "सतां पुस्तकसम्भारभारमोक्षः कृतो मया। नामानुशासनमिदं सम्पूर्णं तन्वताऽद्भुतम्" विश्व०। "नानार्थकोशपुस्तकभाराजर्नदुःखहानये कृतिनः। मेदिनीकरकृतकोशो विशुद्धलिङ्गोऽभिलिख्यतामेकः" मेदि०। ಮೇದಿನೀಕರಪಂಡಿತನು उत्पलिनी शब्दार्णवः संसारावर्तः नाममाला ಮತ್ತು ಭಾಗುರಿ ವರರುಚಿ ಶಾಶ್ವತ ಬೋಪಾಲಿತ ಮೊದಲಾದ ಕವಿಗಳ ಕೋಶಗಳನ್ನೂ ಕಾತ್ಯಾಯನ ವಾಮನ ಚಂದ್ರಗೋಮಿ ಮುಂತಾದವರಿಂದ ರಚಿತವಾದ ಲಿಂಗಶಾಸ್ತ್ರಗಳನ್ನೂ ಚೆನ್ನಾಗಿ ಪರಿಶೀಲಿಸಿ ಮೇದಿನೀಕೋಶವನ್ನು ರಚಿಸಿದುದಾಗಿಯೂ, 600 ಗಾದೆಗಳ ಕೋಶವೊಂದನ್ನು ರಚಿಸಿರುವುದಾಗಿಯೂ ಮೇದಿನೀಕೋಶದ ಉಪಸಂಹಾರ ಶ್ಲೋಕದಿಂದ ತಿಳಿದುಬರುವುದು. "उत्पलिनीशब्दार्णवसंसारावर्तनाममालाख्यान्। भागुरिवररुचिशाश्वतबोपालितरन्तिदेवहरकोशान्। हारावल्यभिधानं त्रिकाण्डशेषं च रत्नमालां च। अपि बहुदोषं विश्वप्रकाशकोशं च सुविचार्य। पाणिनिपदानुशासनपुराणकाव्यादिकं च सुनिरूप्य। षट्शतगाथाप्रणयनविख्यातकौशलेनाऽयम्। मेदिनीकरेण कोशः प्राणकरसूनुना रचितः" मेदि०। ಈ ಕಾರಣದಿಂದ ರಾಯಮುಕುಟನು ಮೇದಿನೀಕರನ ಕಾಲವು 1431 ಎಂದು ಹೇಳಿರುತ್ತಾನೆ. ಇಬ್ಬರೂ ಕವಿಗಳು ವಿಶ್ವಪ್ರಕಾಶ ಮತ್ತು ಮೇದಿನೀ ಕೋಶಗಳಲ್ಲಿ ನಾನಾರ್ಥಶಬ್ದಗಳ ನಿರೂಪಣಾನಂತರ ಕೊನೆಯಲ್ಲಿ ಅವ್ಯಯಪದಗಳನ್ನು ಸಂಗ್ರಹಿಸಿ ಅವ್ಯಯಕೋಶಗಳನ್ನು ರಚಿಸಿರುತ್ತಾರೆ.

**नानार्थरत्नमाला–इरुगपदण्डनाथः**–ಇದು ಇರುಗಪ ದಂಡನಾಥಪಂಡಿತನಿಂದ ರಚಿತವಾದುದು. ಈ ಕವಿಯು 14ನೆಯ ಶತಮಾನದ ಉತ್ತರಾರ್ಧದಲ್ಲಿ ವಿಜಯನಗರದ ಎರಡನೆಯ ಹರಿಹರರಾಜನ ಆಶ್ರಯದಲ್ಲಿದ್ದನೆಂದು ತಿಳಿದುಬರುವುದು. ನಾನಾರ್ಥರತ್ನಮಾಲೆಯಲ್ಲಿ ನಾನಾರ್ಥಶಬ್ದಗಳು ಸಲಿಂಗ ಮತ್ತು ನಿರ್ಲಿಂಗಗಳೆಂದು ಎರಡು ಭಾಗಗಳಾಗಿವೆ. "कथिताः केऽपि नानार्थशब्दाः तत्रान्तराध्वना। अमी सलिङ्गनिर्लिङ्गभेदात् द्वेधा भवन्ति हि"॥ ಪುಂಲಿಂಗ ಸ್ತ್ರೀಲಿಂಗ ನಪುಂಸಕಲಿಂಗಗಳಲ್ಲಿ स्त्रियां पुंसि पुंनपुंसके स्त्रीपुंसयोः क्लीबपुंसोः स्त्रीनपुंसकयोः त्रिषु ಎಂದು ಏಳು ವಿಧ ಸಲಿಂಗಶಬ್ದಗಳನ್ನೂ ಅಲಿಂಗ (ನಿಯತಲಿಂಗ) ಶಬ್ದಗಳನ್ನೂ ಏಕಾಕ್ಷರಕಾಂಡ ಮತ್ತು ಕಕಾರಾಂತಾದಿ ದ್ವ್ಯಕ್ಷರಕಾಂಡ ತ್ರ್ಯಕ್ಷರಕಾಂಡ ಚತುರಕ್ಷರಕಾಂಡ ಸಂಕೀರ್ಣ ಮತ್ತು ಅವ್ಯಯಕಾಂಡಗಳೆಂಬ ಆರು ಕಾಂಡಗಳಲ್ಲಿ ವಿವರಿಸಿರುತ್ತಾನೆ. "सलिङ्गान् सप्तधा कृत्वा स्त्रियां पुंसि नपुंसके। स्त्रीपुंसयोः क्लीबपुंसोः स्त्रीनपुंसकयोस्त्रिषु। शब्दान् पुंसः स्त्रियः क्लीबान् नानालिङ्गानलिङ्गकान्। प्रायः क्रमात् प्रवक्ष्यामि कान्तादीन् द्व्यक्षरादिषु" नानार्थर०। ಲಿಂಗಗಳನ್ನು ರೂಪಭೇದಗಳಿಂದಲೂ ಪದಗಳ ಸಾಹಚರ್ಯದಿಂದಲೂ ಸ್ಪಷ್ಟವಾಗಿ ಮಾಡಿರುವ ಲಿಂಗನಿರ್ದೇಶನದಿಂದಲೂ ತಿಳಿಯಬೇಕು. ಅಥಾದಿ ಮತ್ತು ತ್ವಂತ ಪದಗಳು ಹಿಂದಿನ ಪದಗಳೊಡನೆ ಸೇರುವುದಿಲ್ಲ. "रूपभेदात् साहचर्यात् कण्ठोक्त्या वा विभावयेत्। लिङ्गान्यथादित्वन्तं वा पदं पूर्वेण नान्वयि" नानार्थर०। त्रिषु ಎಂದಿರುವಲ್ಲಿ ಮೂರು ಲಿಂಗಗಳಲ್ಲಿಯೂ ಎಂದೂ ದ್ವಂದ್ವ ಎಂದಿರುವಲ್ಲಿ ಸ್ತ್ರೀಲಿಂಗ ಮತ್ತು ಪುಂಲಿಂಗಗಳೆರಡರಲ್ಲೂ ಎಂದೂ ಬೇರೆ ಲಿಂಗನಿಷೇಧವಿರುವಲ್ಲಿ ಉಳಿದ ಲಿಂಗಗಳಲ್ಲೆಂದೂ ತಿಳಿಯಬೇಕು. "त्रिष्विति त्रिषु लिङ्गेषु ज्ञेयं द्वन्द्वे द्वयोरिति। लिङ्गान्तरनिषेधोऽत्र शेषलिङ्गविधायकः" नानार्थर०।

**अनेकार्थकोशः–मङ्खकविः**–ಅನೇಕಾರ್ಥಕೋಶವು ಮಂಖಕವಿ ರಚಿತವಾದುದು. ಈ ಕೋಶವು ಭಾಗುರಿ ಕಾತ್ಯ ಹಲಾಯುಧ ಹುಗ್ಗ ಅಮರಸಿಂಹ ಶಾಶ್ವತ ಮತ್ತು ಧನ್ವಂತರಿ ಇವರ ಕೋಶಗಳನ್ನು ಚೆನ್ನಾಗಿ ಪರಿಶೀಲಿಸಿ ರಚಿಸಲ್ಪಟ್ಟಿದೆ. "भागुरिकात्यहलायुधहुग्गामरसिंहशाश्वतादिकृतान्। कोशान्निरीक्ष्य निपुणं धन्वन्तरिनिर्मितं निघण्टुं च"। ಈ ಕೋಶವು ಅಕಾರಾದಿವರ್ಣಕ್ರಮದಲ್ಲಿ ಪದಗಳನ್ನು ಸಂಗ್ರಹಿಸಿ ರಚಿತವಾಗಿದೆ. ಈ ಕೋಶಕ್ಕೆ ಮಂಖಕವಿ ಅಥವಾ ಅವನ ಶಿಷ್ಯನೊಬ್ಬನಿಂದ मङ्खटीका ಎಂಬ ವ್ಯಾಖ್ಯಾನವೊಂದು ರಚಿತವಾಗಿದೆಯೆಂದು ಮಹೇಂದ್ರಸೂರಿಯು ಹೇಮಚಂದ್ರನ ಅನೇಕಾರ್ಥಸಂಗ್ರಹದ ವ್ಯಾಖ್ಯಾನದಲ್ಲಿ ತಿಳಿಸಿರುತ್ತಾನೆ,

ಮಂಖಕವಿಯು (1129–1149) ಕಾಶ್ಮೀರದ ದೊರೆ ಜಯಸಿಂಹನ ಆಶ್ರಯದಲ್ಲಿದ್ದ ಶ್ರೀಕಂಠಚರಿತಗ್ರಂಥಕಾರನ ಸಮಕಾಲಿಕನೆಂದು ತಿಳಿದುಬರುವುದು.

**नानार्थार्णवसंक्षेपः–केशवस्वामी** – ಕೇಶವಸ್ವಾಮಿಯ ನಾನಾರ್ಥಾರ್ಣವಸಂಕ್ಷೇಪವು ಒಂದು ಅನೇಕಾರ್ಥಶಬ್ದಗಳ ಕೋಶವಾಗಿದೆ. ಇದರಲ್ಲಿ ಸುಮಾರು 5800 ಶ್ಲೋಕಗಳಿವೆ. ಈ ಕೋಶವು ಅಕ್ಷರಸಂಖ್ಯೆಗೆ ಅನುಗುಣವಾಗಿ ಆರು ಕಾಂಡಗಳಾಗಿ ವಿಭಾಗಿಸಲ್ಪಟ್ಟಿದೆ. ಪ್ರತಿಯೊಂದು ಕಾಂಡದಲ್ಲಿಯೂ ಸ್ತ್ರೀಲಿಂಗ ಪುಂಲಿಂಗ ನಪುಂಸಕಲಿಂಗ ವಾಚ್ಯಲಿಂಗ ಮತ್ತು ನಾನಾಲಿಂಗಗಳೆಂದು ಐದು ಅಧ್ಯಾಯಗಳಿವೆ. ಈ ಕ್ರಮವನ್ನು ನಾವು ವೈಜಯಂತೀಕೋಶದಲ್ಲಿಯೂ ಕಾಣಬಹುದು. ಸಂಸ್ಕೃತ ಸಾಹಿತ್ಯಕಾರರು ಕೋಶಕಾರರು ವೈಯಾಕರಣರು ಕವಿಗಳು ವೈದಿಕವಿದ್ವಾಂಸರು ಛಂದಃಶಾಸ್ತ್ರಕಾರರು ವೇದಗಳು ಮತ್ತು ಸಮಾಮ್ನಾಯ ಮೊದಲಾದ ಎಲ್ಲಾ ವಿಷಯಗಳಿಗೆ ಸಂಬಂಧಿಸಿದ ಸುಮಾರು ಮೂವತ್ತು ಮಂದಿ ವಿದ್ವಾಂಸರನ್ನು ಪ್ರಮಾಣವನ್ನಾಗಿಟ್ಟುಕೊಂಡು ತನ್ನ ಗ್ರಂಥದಲ್ಲಿ ಹೆಸರಿಸಿರುವುದು ಈ ಕೋಶದ ಒಂದು ವೈಶಿಷ್ಟ್ಯ. ಇಲ್ಲಿಯವರೆಗೂ ನಮಗೆ ತಿಳಿದುಬಂದಿರುವ ಅನೇಕ ಕೋಶಗಳಲ್ಲಿ ಇದೊಂದು ಅತಿಬೃಹತ್ತಾದ ನಾನಾರ್ಥಕೋಶವಾಗಿದೆ.

ಕೇಶವಸ್ವಾಮಿಯು ಕುಲೋತ್ತುಂಗಚೋಲರಾಜನ ಪುತ್ರನಾದ ರಾಜರಾಜಚೋಲನ ಆಶ್ರಯದಲ್ಲಿದ್ದನೆಂದು ತಿಳಿದುಬರುವುದು. ಈ ಕವಿಯು 12 ನೆಯ ಮತ್ತು 13 ನೆಯ ಶತಮಾನಗಳಲ್ಲಿದ್ದ ಈ ಇಬ್ಬರು ರಾಜರ ಕಾಲದಲ್ಲಿದ್ದಿರಬಹುದೆಂದು ತಿಳಿಯಬಹುದಾಗಿದೆ. ರಘುವಂಶದ ವ್ಯಾಖ್ಯಾಕಾರನಾದ ಮಲ್ಲಿನಾಥ ಮತ್ತು ಕುಮಾರಸಂಭವಕಾವ್ಯದ ವ್ಯಾಖ್ಯಾಕಾರನಾದ ಅರುಣಾಚಲನಾಥ ಇವರಿಬ್ಬರೂ ತಮ್ಮ ವ್ಯಾಖ್ಯಾನಗಳಲ್ಲಿ ಕೇಶವಸ್ವಾಮಿಯ ಹೆಸರನ್ನು ಎತ್ತಿ ಹೇಳಿರುತ್ತಾರೆ.

**कल्पद्रुकोशः–केशवः**–ಕೇಶವಪಂಡಿತವಿರಚಿತ ಕಲ್ಪದ್ರುಕೋಶವು ಇಲ್ಲಿಯವರೆಗೆ ನಾವು ನೋಡಿರುವ ಕೋಶಗಳಲ್ಲೆಲ್ಲಾ ಬೃಹತ್ತಮವಾದ ಕೋಶವಾಗಿದೆ. ಇದರಲ್ಲಿ 4000 ಶ್ಲೋಕಗಳಿವೆ. ಪರ್ಯಾಯಶಬ್ದಗಳ ಸಂಗ್ರಹವು ಬಹಳ ದೊಡ್ಡ ಪ್ರಮಾಣದಲ್ಲಿದೆ. ಭೂಮಿಯ ಪರ್ಯಾಯಪದಗಳು 64. ಅಗ್ನಿಯ ಪರ್ಯಾಯಪದಗಳು 114 ಇವೆ. ಈ ಕೋಶವು (1) भूमिस्कन्धः (2) भुवःस्कन्धः ಮತ್ತು (3) स्वर्गस्कन्धः ಎಂದು ಮೂರು ಸ್ಕಂಧಗಳಾಗಿ ವಿಭಾಗಿಸಲ್ಪಟ್ಟಿದೆ. ಈ ಮೂರು ಸ್ಕಂಧಗಳಲ್ಲೂ ಅನೇಕ ಪ್ರಕಾಂಡಗಳಿವೆ.

**ಭೂಮಿಸ್ಕಂಧದಲ್ಲಿ** देशप्रकाण्डः पुरप्रकाण्डः नरादिप्रकाण्डः ऋषिगोत्रब्रह्मप्रकाण्डः क्षत्रियप्रकाण्डः ಮೊದಲಾದ ಹದಿನೆಂಟು (18) ಪ್ರಕಾಂಡಗಳೂ

**ಭುವಃಸ್ಕಂಧದಲ್ಲಿ** साधारणप्रकाण्डः भूस्थदेवप्रकाण्डः नभःस्थदेवप्रकाण्डः कालप्रकाण्डः ಮತ್ತು नाट्यप्रकाण्डः ಎಂದು ಐದು (5) ಪ್ರಕಾಂಡಗಳೂ

**ಸ್ವರ್ಗಸ್ಕಂಧದಲ್ಲಿ** सूर्यादिप्रकाण्डः ब्रह्मप्रकाण्डः अव्ययप्रकाण्डः स्त्र्यादिलिङ्गप्रकाण्डः ಎಂದು ನಾಲ್ಕು (4) ಪ್ರಕಾಂಡಗಳೂ ಸೇರಿ ಒಟ್ಟು 27 ಪ್ರಕಾಂಡಗಳು ಇರುವುವು.

ಈ ಕೋಶದಲ್ಲಿ ಶಬ್ದಗಳ ರೂಪಭೇದದಿಂದಲೂ ಸಾಹಚರ್ಯದಿಂದಲೂ ವಿಶೇಷವಿಧಿಯಿಂದಲೂ ಸ್ತ್ರೀಲಿಂಗ ಪುಂಲಿಂಗ ನಪುಂಸಕಲಿಂಗಪ್ರಕೃತಿಗಳನ್ನು ತಿಳಿದುಕೊಳ್ಳಬೇಕು. "रूपोक्त्या साहचर्याद्वा विशेषविधितः क्वचित्। स्त्रीपुंक्लीबप्रकृतयो ज्ञेयास्तत्र स्त्रियां स्त्रियि।। स्त्री पुंसि ना नरि पुमान् पुं क्लीबे षण् नपुंसकम्। युग्मे द्वयोस्त्रिप्रकृतौ त्रिषु शेषार्थवाचकम्।। ಎಂದು ಲಿಂಗನಿರ್ದೇಶಕ ಸಂಕೇತಪದಗಳನ್ನು ಹೇಳಿರುತ್ತಾನೆ.

ಪರ್ಯಾಯಪದಗಳನ್ನು ಹೇಳುವಾಗ ಸಾಧ್ಯವಾದಷ್ಟು ಶಬ್ದಗಳನ್ನು ಕಡಮೆ ಮಾಡಲು ಸಮಸ್ತಪದದಲ್ಲಿರುವ ಪೂರ್ವಪದದ ಪರ್ಯಾಯಪದಗಳೊಡನೆ ಉತ್ತರಪದದ ಪರ್ಯಾಯಪದಗಳನ್ನು ಸೇರಿಸಿ ಹೇಳಿದರೆ ಅನೇಕ ಪರ್ಯಾಯಪದಗಳು ಆಗುವುವು ಎಂದು ಪದಗಳ ಸಂಗ್ರಹವನ್ನು ತೋರಿಸಿಕೊಟ್ಟಿರುತ್ತಾನೆ. ಉದಾ. :–"भूमिपर्यायदेवार्थौ माठरः कठभाडवौ" ಇಲ್ಲಿ भूमि ಪದದ ಪರ್ಯಾಯಪದಗಳಾದ भू धरा धरित्री क्षोणि: क्षिति: ಇತ್ಯಾದಿ ಪದಗಳೊಡನೆ ಸೇರಿಸಿ ಹೇಳುವ देव ಪದದ ಅರ್ಥಗಳು भूदेवः भूसुरः धरादेवः ಇತ್ಯಾದಿ ಅನೇಕ ಬ್ರಾಹ್ಮಣವಾಚಕ ಪರ್ಯಾಯಪದಗಳನ್ನು ಕೊಡುವುವು. ಹೀಗೆಯೇ "वक्षःपर्यायरुहरुट्जार्थौ कूचौ कुचावपि"। वक्षोरुहः वक्षोजः ಇತ್ಯಾದಿ ಪದಗಳೂ "राजपर्यायमार्गार्थाः स पुरस्योपनिष्करम्" ಎಂಬಲ್ಲಿ राजमार्गः नृपमार्गः ಇತ್ಯಾದಿ ಪದಗಳೂ "इन्द्रपर्यायजो वाली वालिर्दुन्दुभिदर्पहा" ಎಂಬಲ್ಲಿ इन्द्रजः पुरन्दरजः पुरुहूतजः ಇತ್ಯಾದಿ ಪದಗಳೂ "सूर्यपर्यायपुत्रार्थः सुग्रीवो वानरेश्वरः" ಎಂಬಲ್ಲಿ सूर्यपुत्रः सूर्यसूनुः रवितनयः रविसुतः ಇತ್ಯಾದಿ ಅನೇಕ ಪರ್ಯಾಯಪದಗಳೂ ಆಗುವುವು. ಕ್ರಮಬದ್ಧವಾದ ಈ ಪದ್ಧತಿಯು ಆಲಂಕಾರಿಕರ ಶೀಘ್ರಗತಿಗೆ ಅಡಚಣೆಯುಂಟುಮಾಡುವುದಾದರೂ ಪದಗಳ ಸಂಗ್ರಹಕ್ಕೆ ಬಹಳ ಉಪಯುಕ್ತವಾಗಿದೆ. "अथारम्भेऽपर्यायपरिवृत्तिप्रसञ्जतः। पर्यायपदमारभ्य ज्ञेयं नामात्र सर्वतः।। समस्तपदपर्यायपरिवर्तनमत्र तु। आलङ्कारिकसिद्धान्तासहत्वेऽपि विलोक्यताम्।। येषां नातिप्रसिद्धानां शब्दानामिह संग्रहः। तेषां महाकविग्रन्थैः संवादोऽन्वविषीयताम्" ಎಂದು ಕವಿಯು ಗ್ರಂಥದ ಪೀಠಿಕಾ

ಪ್ರಕರಣದಲ್ಲಿ ಹೇಳಿರುತ್ತಾನೆ. ಕಾತ್ಯ ವಾಚಸ್ಪತಿ ವ್ಯಾಡಿ ಭಾಗುರಿ ಅಮರಸಿಂಹ ಮಂಗಳ ಸಾಹಸಾಂಕ ಮಹೇಶ ಮತ್ತು ಜಿನ ಇವರ ಕೋಶಗಳನ್ನು ಚೆನ್ನಾಗಿ ಪರಿಶೀಲಿಸಿ ಪರ್ಯಾಲೋಚಿಸಿ ಇವುಗಳ ಆಧಾರದಿಂದ ಕಲ್ಪದ್ರುಕೋಶವನ್ನು ರಚಿಸಿದುದಾಗಿ ಕೇಶವಪಂಡಿತನು ಈ ಕೋಶದ ಪೀಠಿಕಾ ಪ್ರಕರಣದಲ್ಲಿ ಹೇಳಿರುತ್ತಾನೆ. "कात्यवाचस्पतिव्याडिभागुर्यमरमङ्गलाः । साहसाङ्कमहेशाद्याः विराजन्ते जिनान्तिमाः । समालोक्य मतान्येषां कल्पद्रुरखिलार्थदः । क्रियते केशवेनायं नामप्रकृतिबोधनः" कल्पद्रु० २-३ ।

**उणादिकोशाः** – ಉಣಾದಿಪ್ರತ್ಯಯಾಂತಪದಗಳನ್ನು ತಿಳಿಸಲು ಅನೇಕ ಪಂಡಿತರು ಉಣಾದಿಕೋಶಗಳನ್ನು ರಚಿಸಿರುತ್ತಾರೆ. ಅವುಗಳಲ್ಲಿ ಕೆಲವು ಕೋಶಗಳು ಮತ್ತು ಆ ಕೋಶಕಾರರ ಹೆಸರುಗಳನ್ನು ಇಲ್ಲಿ ಕೊಡಲಾಗಿದೆ :

(1) **लक्ष्मीनिवासाभिधानकोशः** — ಇದು 18 ನೆಯ ಶತಮಾನದಲ್ಲಿ ಶಿವರಾಮನೆಂಬ ಪಂಡಿತನಿಂದ ವಿರಚಿತವಾಗಿದೆ.

(2) **उणादिकोशः** — ಇದು ರಾಮಶರ್ಮ ಪಂಡಿತ ವಿರಚಿತ.

(3) **उणादिनाममाला**—ಇದು 15 ನೆಯ ಶತಮಾನದ ಉತ್ತರಾರ್ಧದಲ್ಲಿ ಶುಭಶೈಲಗಣಿಯಿಂದ ವಿರಚಿತವಾಗಿದೆ.

(4) **शब्दाब्धितरी**—ರಾಮಗೋವಿಂದ ವಿರಚಿತ.

(5) **नानार्थशब्दरत्नकोशः**—ಕಾಲಿದಾಸ ವಿರಚಿತ. ಇದಕ್ಕೆ ನಿಚುಲಯೋಗೀಂದ್ರನು ವ್ಯಾಖ್ಯಾನವನ್ನು ರಚಿಸಿರುವನು.

**शब्दकल्पद्रुमः**—ಇದು ರಾಜಾರಾಧಾಕಾಂತದೇವ ವಿರಚಿತ. ಆಧುನಿಕ ರೀತಿಯಲ್ಲಿ ರಚಿಸಿರುವ ಶಬ್ದಕೋಶಗಳಲ್ಲಿ ಇದು ಮೊದಲನೆಯದು. ಇದರಲ್ಲಿ ಶಬ್ದಗಳು ಅಕಾರಾದಿ ಕ್ರಮದಲ್ಲಿ ಸಂಗ್ರಹಿಸಲಾಗಿದೆ. ಗ್ರಂಥಕಾರನು ಎಲ್ಲಾ ಸಾಹಿತ್ಯ ಗ್ರಂಥಗಳ ಮತ್ತು ಶಾಸ್ತ್ರಗಳ ವಿಷಯಗಳನ್ನು ಬಹಳ ವಿವರವಾಗಿ ಕೊಟ್ಟಿರುತ್ತಾನೆ. ಈ ಕೋಶವು ಸಕಲಶಾಸ್ತ್ರಜ್ಞಾನವನ್ನು ನೀಡುವ ಒಂದು ವಿಶ್ವಕೋಶವಾಗಿರುವುದು. ಸಾಮಾನ್ಯವಾಗಿ ಈ ಕೋಶದಲ್ಲಿ ಬರುವ ಅನೇಕ ಶಬ್ದಗಳಿಗೆ ಪರ್ಯಾಯ ಪದಗಳನ್ನೂ ಮತ್ತು ಅವುಗಳಿಗಿರುವ ನಾನಾರ್ಥಗಳನ್ನೂ ಕೊಡಲಾಗಿದೆ. ಅವಶ್ಯವಾದ ಮತ್ತು ಮುಖ್ಯವಾದ ಪದಗಳಿಗೆ ಶಾಸ್ತ್ರಗಳ ಆಧಾರವನ್ನು ಕೊಟ್ಟು ಅವನ್ನು ವಿವರಿಸಲಾಗಿದೆ. ಅನೇಕ ಮುಖ್ಯವಾದ ಪದಗಳಿಗೆ ಪುರಾಣೇತಿಹಾಸ ಮತ್ತು ಶಾಸ್ತ್ರಗಳ ಆಧಾರದ ಮೇಲೆ ಪ್ರಾಮಾಣ್ಯವನ್ನು ಕೊಡಲಾಗಿದೆ. ಧಾತು ಮತ್ತು ಪ್ರತ್ಯಯಗಳ ನಿರೂಪಣೆಯೊಡನೆ ಮುಖ್ಯವಾದ ಕೆಲವು ಪದಗಳಿಗೆ ನಿಷ್ಪತ್ತಿಕ್ರಮವನ್ನು ಕೈಗೊಳ್ಳಲಾಗಿದೆ. ಈ ಗ್ರಂಥದಲ್ಲಿ ಲೌಕಿಕಸಂಸ್ಕೃತಶಬ್ದಗಳಿಗೇ ಪ್ರಾಧಾನ್ಯವೇ ಹೊರತು ವೈದಿಕಶಬ್ದಗಳನ್ನು ಸೇರಿಸಿರುವುದಿಲ್ಲ. ಸಾಧ್ಯವಾದಷ್ಟು ಶಬ್ದಗಳಿಗೆ ಅನೇಕ ಕಡೆ ಸಾಹಿತ್ಯ ಶಾಸ್ತ್ರ ಪುರಾಣ ಮತ್ತು ಇತಿಹಾಸಗಳಿಂದ ಉದಾಹರಣೆಗಳನ್ನು ಕೊಡಲಾಗಿದೆ. ಇದು ನಾನಾವಿಧದಲ್ಲಿಯೂ ಶಾಸ್ತ್ರ ಮತ್ತು ಸಾಹಿತ್ಯ ಗ್ರಂಥಕರ್ತರಿಗೂ ವಿದ್ಯಾರ್ಥಿಗಳಿಗೂ ಬಹಳ ಉಪಯುಕ್ತವಾಗಿರುವುದು.

**वाचस्पत्यम्** – ಇದು ತಾರಾನಾಥತರ್ಕವಾಚಸ್ಪತಿವಿರಚಿತವಾದುದು. ಈ ಕೋಶದಲ್ಲಿ ಶಬ್ದಕಲ್ಪದ್ರುಮದಂತೆಯೇ ವಿಷಯನಿರೂಪಣೆಯಿದ್ದರೂ ಅದಕ್ಕಿಂತಲೂ ಇದರಲ್ಲಿ ಹೆಚ್ಚು ಶಬ್ದಗಳನ್ನು ಸಂಗ್ರಹಿಸಲಾಗಿದೆ. ಪದಗಳ ರೂಪನಿಷ್ಪತ್ತಿ ನಾನಾರ್ಥಗಳು ಮತ್ತು ಅವುಗಳ ವಿಷಯನಿರೂಪಣೆ ಶಾಸ್ತ್ರ ಮತ್ತು ಸಾಹಿತ್ಯಗ್ರಂಥಗಳಿಂದ ಉದಾಹರಣೆಗಳು ಶಾಸ್ತ್ರ ಪುರಾಣ ಇತಿಹಾಸಗಳಿಂದ ಪ್ರಾಮಾಣ್ಯಪ್ರದರ್ಶನ ಎಲ್ಲವೂ ಶಬ್ದಕಲ್ಪದ್ರುಮದಂತೆಯೇ ಇರುವುವು. ಇದರಲ್ಲಿ ಅನೇಕ ವೈದಿಕಪದಗಳನ್ನು ಸೇರಿಸಿರುವುದು ಇದರ ಪ್ರಾಶಸ್ತ್ಯಕ್ಕೆ ಕಾರಣವಾಗಿರುವುದು. ಶಬ್ದಕಲ್ಪದ್ರುಮಕ್ಕಿಂತಲೂ ಶಬ್ದಗಳ ರೂಪನಿಷ್ಪತ್ತಿಯ ಕ್ರಮವು ಇದರಲ್ಲಿ ವಿಶೇಷವಾಗಿದೆ. ಇದೊಂದು ಆಧುನಿಕ ಕ್ರಮದಲ್ಲಿ ರಚಿತವಾದ ಬೃಹತ್ತಾದ ಶಬ್ದಕೋಶವಾಗಿದೆ.

**शब्दार्थचिन्तामणिः**—ಈ ಕೋಶವು ಸುಖಾನಂದನಾಥ ವಿರಚಿತವಾದುದು. ಶಬ್ದಾರ್ಥಚಿಂತಾಮಣಿಯು ಎಲ್ಲಾ ವಿಷಯದಲ್ಲೂ ರಾಧಾಕಾಂತದೇವನ ಶಬ್ದಕಲ್ಪದ್ರುಮ ಮತ್ತು ತಾರಾನಾಥತರ್ಕವಾಚಸ್ಪತಿಯ ವಾಚಸ್ಪತ್ಯವನ್ನು ಹೋಲುವ ಒಂದು ಶಬ್ದಕೋಶ. ಇದು 1864 ರಿಂದ 1885 ರ ಅವಧಿಯಲ್ಲಿ ರಚಿತವಾದುದೆಂದು ತಿಳಿದುಬರುವುದು.

**धन्वन्तरिनिघण्टुः–धन्वन्तरिः** – ವೈದ್ಯ ಮತ್ತು ಸಸ್ಯವಿಜ್ಞಾನಗಳ ವಿಷಯವಾಗಿ ಅನೇಕರು ನಿಘಂಟುಗಳನ್ನು ರಚಿಸಿರುತ್ತಾರೆ. ಈ ನಿಘಂಟುಗಳು ಅನೇಕ ವಿಧವಾದ ಗಿಡ ಮೂಲಿಕೆ ಬೇರು ಪ್ರಾಣಿಗಳು ಖನಿಜಗಳು ಮತ್ತು ಮನುಷ್ಯನ ದೇಹಕ್ಕೆ ಹಿತವಾದ ಆಹಾರ ಮತ್ತು ಔಷಧಗಳನ್ನು ಪರ್ಯಾಯಶಬ್ದಗಳಿಂದ ತಿಳಿಸುವುವು. ಈ ನಿಘಂಟುಗಳಲ್ಲಿ ಪರಮಪ್ರಾಚೀನವಾದುದು ಧನ್ವಂತರಿನಿಘಂಟು. ಈ ನಿಘಂಟು ಒಂಬತ್ತು (9) ಅಧ್ಯಾಯಗಳಲ್ಲಿ ರಚಿತವಾಗಿರುವುದು. ನಾಮಲಿಂಗಾನುಶಾಸನಕೋಶಕಾರನಾದ ಅಮರಸಿಂಹನು ಧನ್ವಂತರಿ ಮೊದಲಾದವರು ರಚಿಸಿದ ವೈದ್ಯಕೀಯ ಮತ್ತು ಸಸ್ಯವಿಜ್ಞಾನ ಗ್ರಂಥಗಳ ಸಹಾಯ್ಯದಿಂದ ತನ್ನ ಕೋಶವನ್ನು ರಚಿಸಿರುವುದಾಗಿ ಹೇಳಿರುವುದರಿಂದ ಧನ್ವಂತರಿಗಿಂತ ಅಮರಸಿಂಹನು ಅರ್ವಾಚೀನನೆಂದು ತಿಳಿದುಬರುವುದು. ಧನ್ವಂತರಿನಿಘಂಟು

ಇತ್ತೀಚಿನ ಎಲ್ಲಾ ನಿಘಂಟುಗಳಿಗೂ ಆಧಾರವಾಗಿದೆ. ಔಷಧೋಪಯುಕ್ತವಾದ ದ್ರವ್ಯಗಳ ಮತ್ತು ಔಷಧಗಳ ಸಂಖ್ಯೆಯು ಅನಂತವಾಗಿರುವುದರಿಂದ ನಾನಾನಿಘಂಟುಗಳ ಅತ್ಯುಪಯುಕ್ತ ವಿಷಯಗಳನ್ನು ಸಂಗ್ರಹಿಸಿ ಈ ನಿಘಂಟನ್ನು ರಚಿಸಿರುವುದಾಗಿ ಹೇಳಲಾಗಿದೆ. "अनेकदेशान्तरभाषितेषु सर्वेष्वथ प्राकृतसंस्कृतेषु । गूढेष्वगूढेषु च नास्ति संख्या द्रव्याभिधानेषु तथौषधीषु ॥ प्रयोजनं यस्य तु यावदेव तावत्स गृह्णाति यथाम्बुकूपात् । तथा निघण्टवम्बुनिधेरनन्तात् गृह्णाम्यहं किञ्चिदिहैकदेशम् " धन्व० नि० ।

ಈ ಮೇಲೆ ಹೇಳಿದ ಕೋಶಗಳಲ್ಲದೆ ಇನ್ನೂ ಅನೇಕ ವಿದ್ವಾಂಸರು ರಚಿಸಿರುವ ನಿಘಂಟುಗಳ ವಿವರವನ್ನು ಸಂಗ್ರಹವಾಗಿ ಈ ಮುಂದೆ ಕೊಡಲಾಗಿದೆ.

**शब्दरत्नाकरः**—ಇದು ಮಹೀಪವಿರಚಿತ. ಈ ಕೋಶದ ನಾನಾರ್ಥಶಬ್ದಗಳ ಭಾಗಕ್ಕೆ ಅನೇಕಾರ್ಥ ಅಥವಾ ನಾನಾರ್ಥ ತಿಲಕ ಎಂಬ ಹೆಸರನ್ನಿಡಲಾಗಿದೆ.

**भूरिप्रयोगः**—ಇದು ಪದ್ಮನಾಭಭಟ್ಟವಿರಚಿತ. ಇದರಲ್ಲಿ ಪರ್ಯಾಯಪದಗಳ ಭಾಗವು ಬಹಳ ಚಿಕ್ಕದಾಗಿಯೂ ನಾನಾರ್ಥಪದಗಳ ಭಾಗವು ವಿಸ್ತರವಾಗಿಯೂ ಇರುವುದು. ಈ ಕೋಶಕಾರನು ಪೃಷೋದರಾದಿವೃತ್ತಿಯನ್ನು ಬರೆದಿರುತ್ತಾನೆ.

**शब्दमाला** – ಇದು ರಾಮೇಶ್ವರಶರ್ಮವಿರಚಿತ. ಈ ಕೋಶವು ಎಲ್ಲಾ ವಿಷಯಗಳಲ್ಲೂ ಭೂರಿ ಪ್ರಯೋಗಕೋಶವನ್ನೇ ಹೋಲುವುದು.

**अभिधानतन्त्रम्** :– ಜಟಾಧರಕವಿವಿರಚಿತವಾದ ಈ ಕೋಶವು ಪರ್ಯಾಯಪದಗಳ ಮತ್ತು ನಾನಾರ್ಥಪದಗಳ ಒಂದು ನಿಘಂಟು. ಇದರ ಹೆಚ್ಚು ಭಾಗವು ಅಮರಸಿಂಹನ ನಾಮಲಿಂಗಾನುಶಾಸನದ ಶ್ಲೋಕಗಳಿಂದಲೇ ರಚಿತವಾಗಿದೆ.

**अनेकार्थः अथवा नानार्थध्वनिमञ्जरी** – ಇದು ಗದಸಿಂಹವಿರಚಿತವಾದುದು. ಸುಮಾರು 88 ಶ್ಲೋಕಗಳಲ್ಲಿ ರಚಿತವಾದ ಇದು ಒಂದು ನಾನಾರ್ಥಶಬ್ದಗಳ ಕೋಶ. ಈ ಕೋಶಕಾರನು ರುದ್ರ ಗಂಗಾಧರ ಧರಣಿ ಮತ್ತು ರತ್ನ ಕೋಶ ಈ ಎಲ್ಲಾ ಹೆಸರುಗಳನ್ನೂ ತನ್ನ ಕೋಶದಲ್ಲಿ ನಮೂದಿಸಿರುತ್ತಾನೆ. ಇದೇ ಹೆಸರಿನ ಇನ್ನೊಂದು ಕೋಶವು ಕಾಶ್ಮೀರದ ಮಹಾಕ್ಷಪಣಕನ ಹೆಸರಿನಲ್ಲಿರುವುದು. ಇದು ಶ್ಲೋಕಾಧಿಕಾರ ಅರ್ಧಶ್ಲೋಕಾಧಿಕಾರ ಮತ್ತು ಪಾದಶ್ಲೋಕಾಧಿಕಾರ ಎಂಬ ಮೂರು ಭಾಗಗಳಿಂದ ಕೂಡಿದೆ. ಇವುಗಳಲ್ಲಿ ಮೊದಲನೆಯ ಭಾಗವು ಗದಸಿಂಹನ ಕೃತಿಯು ಅನೇಕ ಶ್ಲೋಕಗಳನ್ನೊಳಗೊಂಡಿರುವುದು.

**ಏಕಾಕ್ಷರಕೋಶಗಳು** – ಏಕಾಕ್ಷರಕೋಶಗಳು ಅಕಾರಾದಿ ಒಂದೇ ಅಕ್ಷರದ ಶಬ್ದಗಳ ಅರ್ಥಗಳನ್ನು ಕೊಡುವುವು. ಇವುಗಳಲ್ಲಿ ಮುಖ್ಯವಾದ ಕೆಲವು ಕೋಶಗಳನ್ನು ಈ ಮುಂದೆ ವಿವರಿಸಲಾಗಿದೆ.

**एकाक्षरकोशः – पुरुषोत्तमदेवः** – ಈ ಕೋಶವು ಪುರುಷೋತ್ತಮದೇವವಿರಚಿತ. ಇದರಲ್ಲಿ ಏಕಾಕ್ಷರಪದಗಳ ಪರ್ಯಾಯ ಮತ್ತು ಅನೇಕಾರ್ಥಗಳು ವಿವರಿಸಲ್ಪಟ್ಟಿವೆ. "अकारो वासुदेवः स्यात् आकारस्तु पितामहः । पूजायामपि माङ्गल्ये आकारः परिकीर्तितः ॥ ईकारः कथ्यते कामो लक्ष्मीरीकार उच्यते । उकारः शङ्करः प्रोक्तः ऊकारश्चापि लक्षणे । रक्षणे चापि ऊकारः ऊकारो ब्रह्मणि स्मृतः" ಇತ್ಯಾದಿ. ಈ ಕೋಶವೂ ವರರುಚಿಯ ಏಕಾಕ್ಷರಾಭಿಧಾನ ಕೋಶವೂ ಅನೇಕ ವಿಷಯಗಳಲ್ಲಿ ಸಮಾನವಾಗಿವೆ.

**एकाक्षरनाममाला – सुधाकलशः** – ಈ ಕವಿಯು 14 ನೆಯ ಶತಮಾನದ ಪೂರ್ವಾರ್ಧದಲ್ಲಿ ಈ ಕೋಶವನ್ನು ರಚಿಸಿದನು.

**एकाक्षररत्नमाला–माधवः**– ಈ ಕೋಶವು ಮಾಧವ ಪಂಡಿತವಿರಚಿತ. ಈ ಮಾಧವಪಂಡಿತನು ಹರಿಹರದ ದೊರೆಯ ಮಂತ್ರಿಯಾಗಿದ್ದ ಮಾಯಣನ ಪುತ್ರ. ಈ ಕೋಶದಲ್ಲಿ स्वरकाण्डः व्यञ्जनकाण्डः ಮತ್ತು संयुक्तकाण्डः ಎಂಬ ಮೂರು ಕಾಂಡಗಳಿವೆ.

**अनेकार्थसारः – धरणिदासः** – ಧರಣಿದಾಸಕೃತವಾದ ಅನೇಕಾರ್ಥಸಾರವೆಂಬ ಈ ಕೋಶವು ಧರಣಿ ಅಥವಾ ಧರಣಿ ಕೋಶ ಎಂದು ವ್ಯವಹರಿಸಲ್ಪಟ್ಟಿದೆ. ವ್ಯಾಖ್ಯಾನಗಳಲ್ಲಿ इति धरणिः ಎಂದು ಕವಿಯ ಹೆಸರಿನಿಂದಲೇ ಈ ಕೋಶವನ್ನು ನಿರ್ದೇಶಿಸಿರುತ್ತಾರೆ. ಅಜಯಕೋಶದಂತೆ "क्ष" ವರ್ಣವನ್ನು ಪ್ರತ್ಯೇಕವರ್ಣವೆಂದೇ ಪರಿಗಣಿಸಲಾಗಿದೆ. ಸರ್ವಾನಂದನು ಈ ಕವಿಯನ್ನು ಅನೇಕ ಸಲ ಉಲ್ಲೇಖಿಸಿರುವುದರಿಂದ ಈ ಕವಿಯು 12 ನೇ ಶತಮಾನಕ್ಕಿಂತಲೂ ಪೂರ್ವದಲ್ಲೇ ಇದ್ದಿರಬಹುದೆಂದು ತಿಳಿಯಲು ಸಾಧ್ಯ.

**निगमाभिधानम्** – ಈ ಕೋಶದಲ್ಲಿ ಅಮರಕೋಶದಂತೆಯೇ ಪರ್ಯಾಯಪದಗಳೂ ಕೊನೆಯಲ್ಲಿ ನಾನಾರ್ಥ ಪದಗಳೂ ಇರುವುವು.

**बोपालितः** – ಬೋಪಾಲಿತನ ಹೆಸರಿನಲ್ಲೇ ಈ ಕೋಶವು ರಚಿತವಾಗಿದೆ. ಈ ಕವಿಯು ಹಲಾಯುಧ ಮಹೇಶ್ವರ ಮೇದಿನೀಕರ ಮತ್ತು ಅನೇಕ ವ್ಯಾಖ್ಯಾನಕಾರರಿಂದ ಪ್ರಮಾಣವಾಗಿ ಉಲ್ಲೇಖಿಸಲ್ಪಟ್ಟಿರುವನು. ಈತನ ಕೋಶವು ಲಿಂಗ ನಿರ್ದೇಶನಪೂರ್ವಕವಾಗಿಯೇ ರಚಿತವಾಗಿರುವುದು. "इषीकः

पटलप्रान्ते " ಎಂದು ಪುಂಸ್ಕಾಂಡದಲ್ಲಿಯೂ "गल्वर्की नरी छदे" ಎಂದು ಕ್ಲೀಬಕಾಂಡದಲ್ಲಿಯೂ ಲಿಂಗನಿರ್ದೇಶನಗಳು ಇರುವುವು. ಇದರ ಕೆಲವು ಭಾಗಗಳು ಆರ್ಯಾವೃತ್ತದಲ್ಲಿ ರಚಿತವಾಗಿದೆ.

**नानार्थसङ्ग्रहः – अजयपालः –** ನಾನಾರ್ಥಸಂಗ್ರಹವನ್ನು ರಚಿಸಿದ ಅಜಯಪಾಲನು ಒಬ್ಬ ಬೌದ್ಧಕವಿ. ಸರ್ವಾನಂದ ಕೇಶವಸ್ವಾಮಿ ಮತ್ತು ಇನ್ನೂ ಅನೇಕರು ಈ ಕವಿಯನ್ನು ಗಣರತ್ನಮಹೋದಧಿಯಲ್ಲಿ ಉಲ್ಲೇಖಿಸಿರುವರು. ಈ ಕೋಶದಲ್ಲಿ 1730 ಪದಗಳಿವೆ. ಇವುಗಳಲ್ಲಿ ಅನೇಕಪದಗಳು ಶಾಶ್ವತಕೋಶದಲ್ಲಿ ಕಂಡುಬರುವುವು. ಇದು ಅಧ್ಯಾಯಗಳಾಗಿ ವಿಂಗಡಿಸಲ್ಪಟ್ಟು ಪೂರ್ಣಶ್ಲೋಕಗಳಿಂದಲೂ ಅರ್ಧಶ್ಲೋಕಗಳಿಂದಲೂ ಅರ್ಥವು ವಿವರಿಸಲ್ಪಟ್ಟಿದೆ. ಅವ್ಯಯಪದಗಳು ಇತರ ಕೋಶಗಳಂತೆ ಗ್ರಂಥದ ಕೊನೆಯಲ್ಲಿರದೆ ಅಧ್ಯಾಯಗಳ ಕೊನೆಯಲ್ಲಿ ಸೇರಿಸಲ್ಪಟ್ಟಿವೆ. ಇದರಲ್ಲಿಯೂ "क्ष"ವು ಪ್ರತ್ಯೇಕವರ್ಣವೆಂದೇ ಪರಿಗಣಿಸಲ್ಪಟ್ಟಿದೆ.

**एकवर्णार्थसङ्ग्रहः – भरतसेनः –** ಏಕವರ್ಣಾರ್ಥಸಂಗ್ರಹ ಕೋಶವು ಭರತಸೇನಪಂಡಿತವಿರಚಿತವಾದುದು. ಈ ಪಂಡಿತನು 16ನೆಯ ಶತಮಾನದಲ್ಲಿ ಈ ಕೋಶವನ್ನು ರಚಿಸಿದುದಾಗಿ ತಿಳಿದುಬರುವುದು.

**अव्ययकोशः –** ಮಹಾದೇವಭಟ್ಟನ ಅವ್ಯಯಕೋಶ ಮತ್ತು ಜಯದೇವಭಟ್ಟಾರಕನ ಅವ್ಯಯಾರ್ಣವ ಇವು ಈ ಶ್ರೇಣಿಗೆ ಸೇರಿದುವು. ಅವ್ಯಯಾರ್ಣವ ಕೋಶವು ಮೂರು ತರಂಗಗಳಲ್ಲಿ ರಚಿತವಾಗಿದೆ.

**द्विरूपकोशः –** ಪುರುಷೋತ್ತಮದೇವನ ದ್ವಿರೂಪ ಕೋಶವು ಶಬ್ದಗಳ ಎರಡೆರಡು ರೂಪಗಳನ್ನು ತೋರಿಸುವುದು. ಹ್ರಸ್ವ ದೀರ್ಘ ಮತ್ತು ಅಕ್ಷರಗಳ ಭೇದಗಳಿಂದ ಈ ರೂಪಗಳಾಗುವುವು. ಇದಕ್ಕೆ 'शब्दभेदप्रकाशः' ಎಂದೂ ಹೆಸರು. "अटरूटश्चाटरूषोऽप्यवस्योऽवश्य एव च। प्रतिश्यायः प्रतीश्यायो भल्लूको भल्लुकोऽपि च।। ज्योतिषं ज्यौतिषं चापि ष्ठेवनं ष्ठीवनं तथा। सूत्रामापि च सुत्रामा हनूमान् हनुमानपि।। बन्धूरं बन्धुरं च स्यादूरीकृतमुरीकृतम्। बाह्लीकं बाह्लिकं चापि गाण्डीवं गाण्डिवं तथा" ಇತ್ಯಾದಿ.

**द्विरूपकोशः – श्रीहर्षः –** ಈ ದ್ವಿರೂಪಕೋಶವು ನೈಷಧೀಯ ಚರಿತಕಾರನಾದ ಶ್ರೀಹರ್ಷಕವಿ ವಿರಚಿತವಾದುದು.

**ऊष्मविवेकः–गदसिंहः–**ಗದಸಿಂಹವಿರಚಿತ ಈ ಊಷ್ಮವಿವೇಕವು ಊಷ್ಮ (शषसह) ವರ್ಣಗಳ ಪದಗಳ ವಿಷಯದಲ್ಲಿ 112 ಶ್ಲೋಕಗಳಿಂದ ರಚಿತವಾದ ಒಂದು ಕೋಶ.

**श्रीशब्दरत्नाकरः–साधुसुन्दरगणिः –** ಇದು 1000 ಕ್ಕಿಂತಲೂ ಹೆಚ್ಚು ಶ್ಲೋಕಗಳಿಂದ ರಚಿತವಾದ ಒಂದು ಕೋಶ. ಈ ಕೋಶದಲ್ಲಿ ಹೇಮಚಂದ್ರನ ಅಭಿಧಾನಚಿಂತಾಮಣಿಯಂತೆಯೇ ಕ್ರಮ ಮತ್ತು ವಿಭಾಗಗಳು ಇರುವುವು.

**नानार्थपदपेटिका–शब्दलिङ्गार्थचन्द्रिका–सुजनः–** ಈ ಎರಡು ಕೋಶಗಳೂ ಸುಜನಪಂಡಿತನಿಂದ ರಚಿತವಾದುವು. ಇವು ನಾನಾರ್ಥಶಬ್ದಗಳ ಕೋಶ. ಶಬ್ದಲಿಂಗಾರ್ಥಚಂದ್ರಿಕೆಯು एकलिङ्गकाण्डः द्विलिङ्गकाण्डः ಮತ್ತು त्रिलिङ्गकाण्डः ಎಂದು ಮೂರು ಕಾಂಡಗಳಾಗಿ ವಿಭಾಗಿಸಲ್ಪಟ್ಟಿದೆ.

**विश्वमेदिनी–सारस्वतमिश्रः–**ವಿಶ್ವಮೇದಿನೀಕೋಶವು ಸಾರಸ್ವತಮಿಶ್ರವಿರಚಿತ. ಇದರಲ್ಲಿ नानार्थकाण्डः पर्यायकाण्डः ಮತ್ತು अव्ययकाण्डः ಎಂದು ಮೂರು ಕಾಂಡಗಳಿವೆ. ಈ ಕವಿಯು ಇದರಲ್ಲಿ ತನ್ನ ಇನ್ನೊಂದು ಕೃತಿಯಾದ ಹೇಮಮೇದಿನೀಕೋಶವನ್ನು ಎತ್ತಿ ಹೇಳಿರುತ್ತಾನೆ.

ಇವಲ್ಲದೆ ಇನ್ನೂ ಅಸಂಖ್ಯಾತ ನಿಘಂಟುಗಳು ಹಲವಾರು ಕವಿಗಳಿಂದ ರಚಿತವಾಗಿವೆ. ಅವುಗಳಲ್ಲಿ ಕೆಲವು ಈ ಕೆಳಗೆ ಕೊಡಲ್ಪಟ್ಟಿವೆ :

कविदर्पणनिघण्टुः एकाक्षराभिधानम् धनञ्जयनाममाला कविजीवनकोशः ज्योतिषनिघण्टुः तद्धितकोशः अभिधानसमुच्चयः तन्त्रकोशः दामोदरकोशः द्रव्यगुणादर्शनिघण्टुः गणितनाममाला कविसञ्जीवनीकोशः देशीयराजशेखरकोशः गुणविज्ञाननिघण्टुः वर्णभैरवः शब्दाब्धिः संख्यारत्नकोशः सञ्जीवनीकोशः श्रौतपदार्थनिर्वचनम् शब्दशब्दार्थमञ्जूषा शब्दसंग्रहनिघण्टुः उक्तिरत्नाकरः ಇತ್ಯಾದಿ ಇನ್ನೂ ಅಸಂಖ್ಯ ಕೋಶಗಳು ರಚಿತವಾಗಿವೆ. ಗ್ರಂಥವಿಸ್ತರಭಯದಿಂದ ಕೋಶಗಳ ವಿವರಗಳ ಉಪಸಂಹಾರ ಮಾಡಲಾಗಿದೆ.

# परिशिष्टम् ३

## ಪರಿಶಿಷ್ಟ ೩

## APPENDIX III

ಆಡಳಿತಕ್ಕೆ ಸಂಬಂಧಿಸಿದ ಪದಗಳು :

ಇಂಗ್ಲಿಷ್–ಸಂಸ್ಕೃತ–ಕನ್ನಡ

**Administrative Words :**

**English—Samskrita—Kannada**

# APPENDIX III

ಆಡಳಿತಕ್ಕೆ ಸಂಬಂಧಿಸಿದ ಇಂಗ್ಲಿಷ್ ಪದಗಳಿಗೆ ಸಂಸ್ಕೃತ ಮತ್ತು ಕನ್ನಡಗಳಲ್ಲಿ ಅರ್ಥ ಬರೆಯಲು ಆಯಾ ಅರ್ಥಗಳು ಬರುವ ಯೌಗಿಕ ಮತ್ತು ರೂಢವಾದ ಕೆಲವು ಸಂಸ್ಕೃತದ ಪದಗಳನ್ನು ಕೊಡಬೇಕಾಗುವುದು ಅನಿವಾರ್ಯ. ಹಾಗೆಯೇ ಕನ್ನಡದಲ್ಲಿ ಅರ್ಥ ಬರೆಯುವಾಗ ಅನೇಕ ಪದಗಳಿಗೆ ಸಂಸ್ಕೃತ ಪದಗಳನ್ನೂ ಮಹಮ್ಮದೀಯರ ಆಳ್ವಿಕೆಯಲ್ಲಿ ಬಳಕೆಯಲ್ಲಿದ್ದ ಹಲವಾರು ಉರ್ದು ಪದಗಳನ್ನೂ ಉಪಯೋಗಿಸುವುದೂ ಅನಿವಾರ್ಯವಾಗುವುದು.

# APPENDIX III

## ಆಡಳಿತಕ್ಕೆ ಸಂಬಂಧಿಸಿದ ಪದಗಳು ಮತ್ತು ಅವುಗಳ ಸಮಾನಾರ್ಥಕ ಸಂಸ್ಕೃತ—ಕನ್ನಡ ಪದಗಳು

## ADMINISTRATIVE WORDS WITH THEIR EQUIVALENTS IN SAMSKRITA AND KANNADA LANGUAGES

# A

| *English* | *Samskrita* | *Kannada* |
|---|---|---|
| **Abatement** | उपशमनम् | ತಗ್ಗಿಸುವುದು, ಕಡಮೆ ಮಾಡುವುದು. |
| **Abbreviation** | संक्षेपणम् | ಚಿಕ್ಕದಾಗಿ ಮಾಡುವುದು, ಸಂಕ್ಷೇಪ ಮಾಡುವುದು. |
| **Abdication** | परित्यागः | ಹಕ್ಕನ್ನು ತೊರೆದುಬಿಡುವುದು. |
| **Abeyance** | स्थगनम् | ತಡೆಗಟ್ಟುವುದು, ಕಾರ್ಯಾಚರಣೆಗೆ ತರಡೆ ತಡೆಗಟ್ಟುವುದು. |
| **Abiding** | दृढविश्वासः | ಅಚಲವಾದ ನಂಬಿಕೆ. |
| **Ability** | सामर्थ्यम्, दक्षता | ಸಮರ್ಥನಾಗಿರುವಿಕೆ, ಬುದ್ಧಿಶಕ್ತಿಯಿಂದ ಕೂಡಿರುವಿಕೆ. |
| **Abkari** | मादकवस्तुनिर्माणम् | ಮದ್ಯ ಸಾರಾಯಿ ಮೊದಲಾದವುಗಳ ತಯಾರಿಕೆ |
| **Able** | समर्थः, दक्षः | ಬುದ್ಧಿಶಕ್ತಿಯಿಂದ ಕೂಡಿದವನು. |
| **Abode** | गृहम्, वसतिः | ಮನೆ, ವಾಸಸ್ಥಳ. |
| **Abolisher** | उच्छेदकः, उत्सादकः | ರದ್ದುಪಡಿಸುವವನು. |
| **Abolishment** | उत्सादनम् | ರದ್ದುಮಾಡುವುದು, ವಜಾಮಾಡುವುದು. |
| **Abolition** | " | |
| **Abolition of post** | स्थानोच्छेदनम् | ಸ್ಥಾನವನ್ನು ರದ್ದುಪಡಿಸುವುದು. |
| **Abolition of slavery** | दास्यनिर्मूलनम् | ಜೀತದ ಪದ್ಧತಿಯನ್ನು ತೊಡೆದುಹಾಕುವುದು. |
| **Aboriginal tribes** | मूलनिवासिनः | ಮೊದಲೇ ಅಲ್ಲಿ ವಾಸಮಾಡುತ್ತಿದ್ದವರು, ಆದಿವಾಸಿಗಳು. |
| **Abortion** | गर्भस्रावः | ಬಸುರನ್ನು ನಾಶಪಡಿಸುವುದು. |
| **Abortive** | अकालप्रसूतः | ಕಾಲಕ್ಕೆ ಮುಂಚೆ ಹುಟ್ಟಿದ. |
| **Abortive medicine** | गर्भस्रावकौषधम् | ಗರ್ಭವನ್ನು ನಾಶಪಡಿಸುವ ಔಷಧ. |
| **Abortive trial** | निष्फलः प्रयत्नः | ಪ್ರಯೋಜನವಿಲ್ಲದ ಪ್ರಯತ್ನ, ವ್ಯರ್ಥವಾದ ಪ್ರಯತ್ನ. |
| **Abortus** | अकालप्रसूतः शिशुः | ಪ್ರಸವಕಾಲ ತುಂಬುವ ಮುಂಚೆ ಹುಟ್ಟಿದ ಮಗು. |

| English | Samskrita | Kannada |
|---|---|---|
| Above | उपरि | ಮೇಲೆ, ಮೇಲುಗಡೆ. |
| Above cited | उपरि उद्धृतम् | ಮೇಲುಗಡೆ ಎತ್ತಿ ತೋರಿಸಲ್ಪಟ್ಟ. |
| Above mentioned | उपरि निर्दिष्टः | ಮೇಲುಗಡೆ ಸೂಚಿಸಲ್ಪಟ್ಟ, ಮೇಲೆ ತಿಳಿಸಲ್ಪಟ್ಟ. |
| Above said | उपर्युक्तः, पूर्वोक्तः | ಮೇಲೆ ಹೇಳಲ್ಪಟ್ಟ. |
| Abridgement | संक्षेपः, संग्रहः | ಸಂಗ್ರಹ, ಸಾರಾಂಶ, ಗೋಷ್ವಾರೆ. |
| Abrogated | निराकृतः | ತಳ್ಳಿಹಾಕಲ್ಪಟ್ಟ. |
| Abrogation | निराकरणम् | ನಿರಾಕರಿಸುವುದು, ತಳ್ಳಿಹಾಕುವುದು. |
| Abrogator | निराकर्ता | ತಳ್ಳಿಹಾಕುವವನು, ವಜಾ ಮಾಡುವವನು. |
| Absconded | पलायितः | ಪರಾರಿಯಾದವನು, ತಲೆ ಮರೆಸಿಕೊಂಡವನು. |
| Absconder | पलायनकर्ता | ಪರಾರಿಯಾಗುವವನು, ತಲೆಮರೆಸಿಕೊಂಡು ಓಡಿಹೋಗುವವನು. |
| Absconding offender | पलायितः अपराधी | ತಲೆಮರೆಸಿಕೊಂಡ ಅಪರಾಧಿ. |
| Absence | अनुपस्थितिः | ಗೈರುಹಾಜರಿ. |
| Absence without permission | अनुमतिं विना अनुपस्थितिः | ಅನುಮತಿಯಿಲ್ಲದೆ ಗೈರುಹಾಜರಿ. |
| Absent | अनुपस्थितः | ಗೈರುಹಾಜರಾದವನು, ಬಾರದೆ ಇರುವವನು. |
| Absent minded | अन्यमनस्कः | ಬೇರೆ ವಿಷಯದಲ್ಲಿ ಮನಸ್ಸುಳ್ಳವನು. |
| Absentee | अनुपस्थितः | ಹಾಜರಾಗಿಲ್ಲದವನು, ಬಾರದೆ ಇರುವವನು. |
| Absentee-statement | अनुपस्थितानां विवरणपत्रम् | ಗೈರುಹಾಜರಾದವರ ವಿವರಣ ಪಟ್ಟಿ. |
| Absent on tour | प्रवासनिमित्तमनुपस्थितः | ಪ್ರವಾಸನಿಮಿತ್ತ ಗೈರುಹಾಜರಾದವನು, ಪ್ರವಾಸ ನಿಮಿತ್ತ ಬಾರದಿರುವವನು. |
| Absent voter | अनुपस्थितवरिता (मतदाता) | ಹಾಜರಾಗದಿರುವ ಮತದಾರ. |
| Absent voting | अनुपस्थितस्य मतदानम् | ಹಾಜರಾಗದವನ ಮತದಾನ. |
| Absolute | निरपेक्षः, संपूर्णः, श्रेष्ठः | ಶುದ್ಧವಾದ, ಅಪ್ಪಟವಾದ, ಸಮಗ್ರವಾದ, ಶ್ರೇಷ್ಠವಾದ. |
| Absolute authority | (१) पूर्णाधिकारः<br>(२) वरिष्ठाधिकारी | (1) ಸ್ವತಂತ್ರವಾದ ಅಧಿಕಾರ.<br>(2) ಸ್ವತಂತ್ರಾಧಿಕಾರವುಳ್ಳವನು. |
| Absolute acceptance | सम्पूर्णाङ्गीकारः, सम्पूर्णानुमोदनम् | ಸಂಪೂರ್ಣವಾದ ಒಪ್ಪಿಗೆ, ಸಂಪೂರ್ಣ ಸಮ್ಮತಿ. |
| Absolute assignment | सम्पूर्णाधिकारप्रापणम् | ಸಂಪೂರ್ಣವಾಗಿ ಅಧಿಕಾರವನ್ನು ವಹಿಸಿಕೊಡುವುದು. |
| Absolute conviction | दृढविश्वासः | ದೃಢವಾದ ನಂಬಿಕೆ. |
| Absolute discretion | सम्पूर्णविवेचनम् | ಪೂರ್ಣವಾಗಿ ವಿವೇಚನೆ ಮಾಡುವುದು. |
| Absolute law | सम्पूर्णनियमः, निरङ्कुशनियमः | ಪಕ್ಕಾ ನಿಯಮ, ಪಕ್ಕಾ ಕಾನೂನು. |

